ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ಮೊದಲನೆಯ ಸಂಪುಟ

"ಶಬ್ದಪಾರಮಾರ್ಗಮಶಕ್ಯಂ"

-ಕೇಶಿರಾಜ

ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : ಬೆಂಗಳೂರು - ೧೮
೧೯೭೦

ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ಮೊದಲನೆಯ ಸಂಪುಟ



"ಶಬ್ದಪಾರಮಾರ್ಗಮಶಕ್ಯಂ"
–ಕೇಶಿರಾಜ

ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : : ಬೆಂಗಳೂರು–೧೮

೧೯೭೦

ಮೊದಲನೆಯ ಮುದ್ರಣ : ೧೯೭೦
ಪ್ರತಿಗಳು : ೧೦,೦೦೦



# ಕನ್ನಡ ನಿಘಂಟು ಸಂಪಾದಕ ಸಮಿತಿ

**ಅಧ್ಯಕ್ಷರು ಮತ್ತು ಪ್ರಧಾನ ಸಂಪಾದಕರು**

ಡಾ. ಡಿ.ಎಲ್. ನರಸಿಂಹಾಚಾರ್, ಎಂ.ಎ., ಡಿ.ಲಿಟ್.

**ಉಪಾಧ್ಯಕ್ಷರು**

ಶ್ರೀ ಕ. ವೆಂ. ರಾಘವಾಚಾರ್, ಎಂ.ಎ., ಬಿ.ಟಿ.

**ಸಂಪಾದಕರು**

ಶ್ರೀ ಎನ್. ಬಸವಾರಾಧ್ಯ, ಎಂ.ಎ.

ಸದಸ್ಯರು

ಪ್ರೊ. ಡಿ. ಜವರೇಗೌಡ, ಎಂ.ಎ.
ಡಾ. ರಂ. ಶ್ರೀ. ಮುಗಳಿ, ಎಂ.ಎ., ಬಿ.ಟಿ., ಡಿ.ಲಿಟ್.
ಶ್ರೀ ಎನ್. ಲಕ್ಷ್ಮೀನಾರಾಯಣರಾವ್, ಎಂ.ಎ.
ಶ್ರೀ ಕಾ. ಸ. ಧರಣೇಂದ್ರಯ್ಯ, ಎಂ.ಎ., ಬಿ.ಟಿ.
ಪ್ರೊ. ಸ. ಸ. ಮಾಳವಾಡ, ಎಂ.ಎ.
ಪ್ರೊ. ಎಂ. ಮರಿಯಪ್ಪಭಟ್ಟ, ಎಂ.ಎ., ಎಲ್.ಟಿ.
ಡಾ. ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ.
ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.
ಶ್ರೀ ಬಸವರಾಜ ಕಟ್ಟೀಮನಿ, ಎಂ.ಎಲ್.ಸಿ.
ಡಾ. ಜಿ.ಎಸ್. ಗಾಯಿ, ಪಿಎಚ್.ಡಿ.

**ಮೈಸೂರು ಸರ್ಕಾರದ ಪ್ರತಿನಿಧಿಗಳು**

ಪದ್ಮಶ್ರೀ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು
ಶ್ರೀ ಸಿದ್ಧಯ್ಯ ಪುರಾಣಿಕ, ಐ.ಎ.ಎಸ್.
ಶ್ರೀ ವಿ. ಬಿ. ನಾಯಕ, ಎಂ.ಎ., ಎಲ್‌ಎಲ್.ಬಿ.

**ಪರಿಷತ್ತಿನ ಅಧ್ಯಕ್ಷರು**

ಶ್ರೀ ಜಿ. ನಾರಾಯಣ

**ಪರಿಷತ್ತಿನ ಕಾರ್ಯದರ್ಶಿಗಳು ಮತ್ತು ಕೋಶಾಧಿಕಾರಿಗಳು**

ಶ್ರೀ ಹಂಪ. ನಾಗರಾಜಯ್ಯ, ಎಂ.ಎ.
ಶ್ರೀ ವೆಂಕಟೇಶ ಸಾಂಗಲಿ
ಶ್ರೀ ಎನ್. ವರದರಾಜನ್, ಬಿ.ಇ., ಎ.ಎಂ.ಐ.ಇ.

**ಮುದ್ರಕರು:**

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು–೧೮

# ಅಧ್ಯಕ್ಷರ ನುಡಿ

'ನಿಘಂಟು ಎಂದರೆ ಕನ್ನಡ ಸಾಹಿತ್ಯ ಪರಿಷತ್ತಿನ ಬೃಹನ್ನಿಘಂಟು' ಎಂದೇ ಖ್ಯಾತವಾಗಿರುವ ಈ ಮಹಾನಿಘಂಟಿನ ಎಂಟು ಸಂಪುಟಗಳನ್ನು ಅದು ಪ್ರಕಟವಾದ ೧೫ ವರ್ಷಗಳ ನಂತರ ಮತ್ತಷ್ಟು ಸುಂದರವಾಗಿ ಮರುಮುದ್ರಣಗೊಳಿಸಿ ಕನ್ನಡ ಕುಲಕೋಟಿಗೆ ಅರ್ಪಿಸಲು ನನಗೆ ಸಂತೋಷವೆನಿಸುತ್ತದೆ. ಕನ್ನಡ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ಪಡೆದುಕೊಂಡಿರುವುದು ಅದರ ಸಂಪನ್ನತೆ ಮತ್ತು ಅರ್ಹತೆಗಳಿಂದಾಗಿಯೇ ಎಂಬುದನ್ನು ಲೋಕದೆದುರು ಬಿಚ್ಚಿತೋರಿಸುವ ಸಾಧನಗಳಲ್ಲಿ ಮುಖ್ಯವಾದದ್ದು ಈ ಬೃಹತ್ ನಿಘಂಟು. ಕನ್ನಡದ ಸಮಸ್ತ ಜ್ಞಾನವನ್ನೂ ತನ್ನೊಳಗೆ ಐಕ್ಯಗೊಳಿಸಿಕೊಂಡಿರುವ ಈ ನಿಘಂಟಿನ ವಿವಿಧ ಸಂಪುಟಗಳಲ್ಲಿ ಶಬ್ದವೊಂದರ ಅರ್ಥ, ವಿವರಣೆ, ಉದಾಹರಣೆ ಒಮ್ಮೊಮ್ಮೆ ಅರ್ಧಪುಟವನ್ನು ದಾಟಿ ಒಂದು ಪುಟವನ್ನು ಆವರಿಸಿಕೊಂಡಿರುವುದುಂಟು.

ಕ್ರಿ.ಶ.೪೫೦ರ ಹಲ್ಮಿಡಿಶಾಸನದಿಂದ ಪ್ರಾರಂಭವಾಗಿ ಈ ಸಂಪುಟ ಯೋಜನೆ ಮುಕ್ತಾಯಗೊಂಡ ೧೯೯೫ರವರೆಗೆ ಕನ್ನಡದಲ್ಲಿ ಪ್ರಕಟವಾದ ಎಲ್ಲ ಬಗೆಯ ಸಾಹಿತ್ಯ ಪ್ರಕಾರಗಳಿಂದಲೂ ಉಲ್ಲೇಖಗಳನ್ನು ನೀಡಲಾಗಿರುವುದು, ಕೆಲವೊಮ್ಮೆ ಒಂದೇ ಶಬ್ದಕ್ಕೆ ಬೇರೆ ಬೇರೆ ಅರ್ಥಗಳು ಪ್ರಾಪ್ತವಾಗುವ ಸಂದರ್ಭಗಳನ್ನು ಜೊತೆಗಿರಿಸಿ ಕೊಟ್ಟಿರುವುದು, ಪ್ರತಿಯೊಂದು ಶಬ್ದವನ್ನೂ ನಾಮಪದ ಅಥವಾ ಕ್ರಿಯಾಪದವೆಂದು ಖಚಿತವಾಗಿ ವಿಂಗಡಿಸಿಕೊಂಡಿರುವುದು, ಅರ್ಥ ಸ್ಪಷ್ಟೀಕರಣಕ್ಕೆಂದು ಉದಾಹರಣೆಯಾಗಿ ಕೊಟ್ಟಿರುವ ವಾಕ್ಯ ಅಥವಾ ವಾಕ್ಯತುಂಡುಗಳೇ ಮೂಲಕಾವ್ಯವನ್ನು ಓದಬೇಕೆನ್ನುವ ಆಸಕ್ತಿಯನ್ನು ಹುಟ್ಟಿಸುವುದು – ಈ ಎಲ್ಲ ಅಂಶಗಳು ಇದರ ಅಪೂರ್ವತೆಯನ್ನು ಎತ್ತಿ ಹಿಡಿಯುವ ಸಾಕ್ಷಿಕಲ್ಲುಗಳಾಗಿವೆ. ನಿಘಂಟು ಎನ್ನುವುದೇ ತುಂಬ ವೈಜ್ಞಾನಿಕವಾದ, ಒಂದು ಭಾಷೆಯ ಸೃಜನ ಸಾಹಿತ್ಯದಷ್ಟೇ ಪ್ರಮುಖವಾದ, ಭಾಷೆಯಲ್ಲಿರುವ ಶಬ್ದಗಳನ್ನು ಶುದ್ಧವಾಗಿ ಉಚ್ಚರಿಸಬೇಕೆಂದು ತಿಳಿಸಿಕೊಡುವ ರಚನೆಯಾಗಿರುವುದರಿಂದ ಜ್ಞಾನೇಂದ್ರಿಯಗಳೆಲ್ಲದರ ಎಚ್ಚರದ ದುಡಿಮೆಯನ್ನು ಬಯಸುತ್ತದೆ. ಕನ್ನಡದ ಅಭಿಮಾನವನ್ನು ಮೈತುಂಬಿಕೊಂಡ ಘನ ವಿದ್ವಾಂಸರ ಸತತ ಪರಿಶ್ರಮದಿಂದ ಈ ಯೋಜನೆ ಶಿಸ್ತುಬದ್ಧವಾಗಿ ಯಶಕಂಡಿದೆ. ಮೊದಲ ಮುದ್ರಣದ ೧೦,೦೦೦ ಪ್ರತಿಗಳು ಕೆಲವೇ ವರ್ಷಗಳಲ್ಲಿ ಕನ್ನಡಿಗರ ಮನೆಯ ಕಪಾಟುಗಳನ್ನು, ಗ್ರಂಥಭಂಡಾರಗಳನ್ನು, ಶಾಲೆಕಾಲೇಜುಗಳನ್ನು ಅಲಂಕರಿಸಿದ್ದರಿಂದ ಕನ್ನಡ ಸಾಹಿತ್ಯ ಪರಿಷತ್ತು ಧನ್ಯತಾಭಾವವನ್ನು ತಳೆಯುವಂತಾಯಿತು. ಆದರೆ ನಿಘಂಟುವಿನ ಉಪಯುಕ್ತತೆಯನ್ನು ತಡವಾಗಿ ಅರ್ಥಮಾಡಿಕೊಂಡವರು ಅಂದಿನಿಂದ ಇಂದಿನವರೆಗೆ ಸಾಹಿತ್ಯ ಪರಿಷತ್ತಿಗೆ ದೂರವಾಣಿ ಕರೆ ಮಾಡಿ, ಮಾರಾಟ ವಿಭಾಗದಲ್ಲಿ ವಿಚಾರಿಸಿ, ಪುಸ್ತಕ ಮಳಿಗೆಗಳಲ್ಲಿ ಹುಡುಕಾಡಿ ಸಿಗದೆ ನಿರಾಶರಾಗಿದ್ದಾರೆ. ಮರುಪ್ರಕಟಿಸುವಂತೆ ಒತ್ತಾಯ ಮಾಡಿದ್ದಾರೆ.

ಎಂಟು ಸಂಪುಟಗಳಲ್ಲಿ, ಒಂಬತ್ತು ಸಾವಿರಕ್ಕಿಂತಲೂ ಅಧಿಕ ಪುಟಗಳ ವಿಸ್ತಾರದಲ್ಲಿ ಹರಡಿಕೊಂಡಿರುವ, ಎಲ್ಲರ ಮನೆಯನ್ನೂ ಬೆಳಗಬೇಕಾಗಿರುವ ಈ ನಿಘಂಟನ್ನು ಮುದ್ರಿಸುವುದಾಗಲೀ, ಮುದ್ರಿತ ಪ್ರತಿಗಳನ್ನು ಒಂದೆಡೆ ಜೋಡಿಸಿಡುವುದಾಗಲೀ, ಮಾರಾಟದ ವ್ಯವಸ್ಥೆ ಮಾಡುವುದಾಗಲೀ, ಹೆಚ್ಚಿನ ಪ್ರಮಾಣದಲ್ಲಿ ಒಂದು

ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವುದಾಗಲೀ ಅಷ್ಟೊಂದು ಸುಲಭವಾದ ಕೆಲಸವಲ್ಲ. ಈ ಅಸಾಧ್ಯವನ್ನು ಸಾಧ್ಯವಾಗಿಸುವ ಧೈರ್ಯೋತ್ಸಾಹಗಳು ಪರಿಷತ್ತಿನೊಡಲಲ್ಲಿ ಚಿಮ್ಮುವುದಕ್ಕೆ ಕರ್ನಾಟಕ ರಾಜ್ಯ ಸರ್ಕಾರ ಕಾರಣವಾಯಿತೆಂದರೆ ಅದನ್ನು ಯಾರೂ ಅತಿಶಯೋಕ್ತಿಯೆಂದು ಭಾವಿಸಬೇಕಾಗಿಲ್ಲ. ಕರ್ನಾಟಕ ರಾಜ್ಯ ಸರ್ಕಾರ ಕನ್ನಡ ಸಾಹಿತ್ಯ ಪರಿಷತ್ತಿನ ಮಾತುಗಳನ್ನು ಪ್ರೀತಿಯಿಂದ ಆಲಿಸುತ್ತಿರುವುದು, ಕನ್ನಡ ಸಾಹಿತ್ಯ ಪರಿಷತ್ತನ್ನು ಕನ್ನಡದ ಸಾರ್ವಭೌಮ ಪ್ರತಿನಿಧಿಯೆಂದೇ ಭಾವಿಸುತ್ತಿರುವುದು ಕನ್ನಡದ ಭಾಗ್ಯವೆಂದೇ ಹೇಳಬೇಕು. ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಹಲವು ಒತ್ತಡಗಳ ನಡುವೆಯೂ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳಲ್ಲಿ ಅತ್ಯಂತ ಪ್ರೀತಿಯಿಂದ ಭಾಗವಹಿಸುತ್ತಿರುವುದು, ಸಮಾರಂಭಗಳಲ್ಲಿ ಕೊಟ್ಟ ಆಶ್ವಾಸನೆಗಳನ್ನು ಅತಿಶೀಘ್ರವಾಗಿ ಅನುಷ್ಠಾನಗೊಳಿಸುತ್ತಿರುವುದು, ಪರಿಷತ್ತಿನ ಎಲ್ಲಾ ಯೋಜನೆಗಳಿಗೂ ಹಸಿರು ನಿಶಾನೆ ತೋರುತ್ತಿರುವುದು, ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳು ಮುಖ್ಯಮಂತ್ರಿ – ಕನ್ನಡ ಸಂಸ್ಕೃತಿ ಮಂತ್ರಿಗಳ ಕಚೇರಿಯ ಹೊರಗೆ ಕಡತಗಳೊಂದಿಗೆ ಗಂಟೆಗಟ್ಟಲೆ ಕಾಯುತ್ತಿದ್ದುದನ್ನು ತಪ್ಪಿಸಿರುವುದು, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಿಂದ ತಾಲ್ಲೂಕು ಸಮ್ಮೇಳನಗಳವರೆಗೆ ಎಲ್ಲವೂ ಅದ್ದೂರಿಯಾಗಿ ನಡೆಯಲು ಬೇಕಾದಷ್ಟು ಪ್ರಮಾಣದಲ್ಲಿ ಹಣ ಬಿಡುಗಡೆ ಮಾಡುತ್ತಿರುವುದು – ಇಂಥವನ್ನೆಲ್ಲಾ ಕಂಡಾಗ ಪರಿಷತ್ತಿನ ಅಧ್ಯಕ್ಷನಾಗಿ ನನಗೆ ಮನಸ್ಸು ತುಂಬಿ ಬರುತ್ತದೆ. ಆರುಕೋಟಿ ಕನ್ನಡಿಗರ ಪರವಾಗಿ ಅವರಿಗೆ ಕೃತಜ್ಞತಾ ಕುಸುಮಗಳನ್ನು ಅರ್ಪಿಸಬೇಕೆನ್ನಿಸುತ್ತದೆ. 'ಕನ್ನಡದ ಮುಖ್ಯಮಂತ್ರಿ' 'ಕನ್ನಡಿಗರ ಮುಖ್ಯಮಂತ್ರಿ' ಎಂದು ಅಭಿಮಾನದಿಂದ ನುಡಿಯಬೇಕೆನ್ನಿಸುತ್ತದೆ. ಸನ್ಮಾನ್ಯ ಮುಖ್ಯಮಂತ್ರಿಗಳ ಕನ್ನಡದ ಮೇಲಿನ, ಕನ್ನಡ ಸಾಹಿತ್ಯ ಪರಿಷತ್ತಿನ ಬಗೆಗಿನ ಈ ಅಖಂಡ ಪ್ರೀತಿ ಹೀಗೇ ಮುಂದುವರಿಯಲೆಂದು ಆಶಿಸುತ್ತೇನೆ.

ಕರ್ನಾಟಕ ಸರ್ಕಾರ ನಿಘಂಟು ಯೋಜನೆಯ ಮಹತ್ವವನ್ನು ಮನಗಂಡು ಒಂದು ಕೋಟಿ ರೂಪಾಯಿಗಳನ್ನು ಸಾಹಿತ್ಯ ಪರಿಷತ್ತಿಗೆ ಉದಾರವಾಗಿ ನೀಡಿದೆ. ಸರ್ಕಾರ ಹಣ ನೀಡಿರುವುದು ಪರಿಷತ್ತಿಗಾದರೂ ಇದು ಜನತೆಯ ಹಣ ಮತ್ತು ಇದರ ಅಂತಿಮ ಫಲಾನುಭವಿಗಳೂ ಜನತೆಯೇ. ಈ ಎಚ್ಚರವನ್ನಿರಿಸಿಕೊಂಡೇ ಸಾಹಿತ್ಯ ಪರಿಷತ್ತು ಬಹುಬೇಡಿಕೆಯ ಬೃಹನ್ನಿಘಂಟಿನ ಎಂಟು ಸಂಪುಟಗಳನ್ನು ಪುನರ್ಮುದ್ರಣಗೊಳಿಸುತ್ತಿದೆ. ಸರ್ಕಾರದ ಉದಾರ ಆರ್ಥಿಕ ನೆರವಿನ ಪರಿಣಾಮವಾಗಿ ನಿಘಂಟಿನ ಬೆಲೆಯನ್ನು ಸಾಮಾನ್ಯರೂ ಕೊಳ್ಳಲು ಮನಸ್ಸು ಮಾಡುವಂತೆ ಕಡಿಮೆಗೊಳಿಸಲಾಗಿದೆ. ಭಾಷೆ ಮತ್ತು ಸಾಹಿತ್ಯಾಭಿಮಾನದ ಸಂಕೇತವೆಂಬಂತೆ ಈ ಯೋಜನೆಯ ಯಶಸ್ಸಿನಲ್ಲಿ ಪ್ರಮುಖ ಪಾತ್ರ ನಿರ್ವಹಿಸಿರುವ ರಾಜ್ಯ ಸರ್ಕಾರಕ್ಕೂ ಕನ್ನಡ ಸಂಸ್ಕೃತಿ ಇಲಾಖೆಗೂ ನಿಘಂಟು ಯೋಜನೆ ಪ್ರಾರಂಭವಾದಾಗ ಪರಿಷತ್ತಿನ ಅಧ್ಯಕ್ಷರಾಗಿದ್ದ ಜಿ. ನಾರಾಯಣರಿಂದ ಮೊದಲಗೊಂಡು ಮುಕ್ತಾಯವಾದಾಗ ಅಧ್ಯಕ್ಷರಾಗಿದ್ದ ಸಾ.ಶಿ.ಮರುಳಯ್ಯನವರವರೆಗೆ ಇದನ್ನು ಆಸಕ್ತಿಯಿಂದ ಮುನ್ನಡೆಸಿಕೊಂಡು ಬಂದ ಎಲ್ಲ ಅಧ್ಯಕ್ಷರುಗಳಿಗೂ ನಿಘಂಟು ಸಮಿತಿಯ ಅಧ್ಯಕ್ಷರು, ಸದಸ್ಯರುಗಳು, ಸಂಪಾದಕರು, ಸಿಬ್ಬಂದಿ ವರ್ಗದವರಿಗೂ ಅಂದವಾಗಿ ಮುದ್ರಿಸಿಕೊಟ್ಟ ರಾಜಾ ಪ್ರಿಂಟರ್ಸ್‌ನವರಿಗೂ ಮತ್ತು ಅವರ ಸಿಬ್ಬಂದಿ ವರ್ಗದವರಿಗೂ ಕನ್ನಡ ಸಾಹಿತ್ಯ ಪರಿಷತ್ತು ತುಂಬಾ ಆಭಾರಿಯಾಗಿದೆ. ಮರುಮುದ್ರಣದ ಈ ನಿಘಂಟಿನ ಸಂಪುಟಗಳನ್ನು ಕನ್ನಡ ಜನತೆ ಪ್ರೀತಿ ವಿಶ್ವಾಸಗಳಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಬೆಂಗಳೂರು
೫–೬–೨೦೧೦

ಡಾ. ನಲ್ಲೂರು ಪ್ರಸಾದ್. ಆರ್.ಕೆ.
ಅಧ್ಯಕ್ಷರು

ಕೆ. ವಿ. ಶಂಕರಗೌಡ
ಶಿಕ್ಷಣ ಸಚಿವ
ಮೈಸೂರು ಸರ್ಕಾರ

ಶಿಕ್ಷಣ ಸಚಿವಾಲಯ
ವಿಧಾನಸೌಧ
ಬೆಂಗಳೂರು–೧

# ಅಭಿವಂದನೆ

ದ್ರಾವಿಡ ಭಾಷೆಗಳಲ್ಲಿ ಪ್ರಮುಖವಾದುದು ಕನ್ನಡ. ಇದಕ್ಕೆ ಸುಮಾರು ಎರಡು ಸಾವಿರ ವರ್ಷಗಳಿಗಿಂತಲೂ ಮಿಗಿಲಾದ ಪ್ರಾಚೀನತೆ ಇದೆಯೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಕನ್ನಡ ಅತ್ಯಂತ ಸಂಪದ್ಭರಿತವಾದ ಭಾಷೆ. ಈ ಭಾಷೆಯ ಸತ್ವವನ್ನೂ ವ್ಯಾಪಕತೆಯನ್ನೂ ಅರಿತುಕೊಂಡ ಮೈಸೂರು ಸರಕಾರವು ಕನ್ನಡವನ್ನು ಶಿಕ್ಷಣಮಾಧ್ಯಮವನ್ನಾಗಿಯೂ ಆಡಳಿತ ಭಾಷೆಯನ್ನಾಗಿಯೂ ಮಾಡಬೇಕೆಂದು ನಿರ್ಧರಿಸಿದೆ. ಈ ಕಾರ್ಯ ಸಮರ್ಪಕವಾಗಿ ನಡೆಯಬೇಕಾದರೆ ಕನ್ನಡಕ್ಕೆ ಒಂದು ಪ್ರಮಾಣಭೂತವಾದ ಅತ್ಯಾಧುನಿಕ ಕನ್ನಡ ನಿಘಂಟಿನ ಆವಶ್ಯಕತೆ ಬಹಳವಾಗಿದೆ.

ಮೈಸೂರು ಸರಕಾರ ನಿಘಂಟು, ವಿಶ್ವಕೋಶ ಈ ಮೊದಲಾದ ಕಾರ್ಯಗಳಿಗೆ ಅಪಾರವಾದ ಧನಸಹಾಯವನ್ನು ನೀಡಿದೆ. ನೀಡುತ್ತಿದೆ. ಕನ್ನಡ ಸಾಹಿತ್ಯ ಪರಿಷತ್ತು ಭಾಷಾಶಾಸ್ತ್ರ ನಿಯಮಗಳಿಗೆ ಅನುಸಾರವಾದ ಚಾರಿತ್ರಿಕ ವಿವರಣೆಯಿಂದ ಕೂಡಿದ ಒಂದು ಪ್ರಮಾಣಭೂತವಾದ ನಿಘಂಟನ್ನು ಸಿದ್ಧಪಡಿಸುತ್ತಿರುವುದು ನಾಡಿಗೆಲ್ಲ ತಿಳಿದ ವಿಷಯವಾಗಿದೆ. ಹಲವಾರು ವಿದ್ವಾಂಸರ ನೆರವಿನಿಂದ ಸಿದ್ಧವಾಗಬೇಕಾದುದು ನಿಘಂಟು. ಈ ಕೆಲಸವನ್ನು ಪರಿಷತ್ತು ಸರಕಾರದ ಪರವಾಗಿ ಕೈಗೊಂಡಿದೆ. ಇದಕ್ಕೆ ತಗಲುವ ಹದಿನೈದು ಲಕ್ಷ ರೂಪಾಯಿಗಳನ್ನು ಸರಕಾರ ಪರಿಷತ್ತಿಗೆ ಒದಗಿಸಿದೆ. ಸುಮಾರು ಐದುಸಾವಿರ ಪುಟಗಳಿರುವ ಈ ನಿಘಂಟು ಸುಮಾರು ಒಂದು ಸಾವಿರದ ಇನ್ನೂರೈವತ್ತು ಪುಟಗಳ ನಾಲ್ಕು ಸಂಪುಟಗಳಲ್ಲಿ ಪ್ರಕಟವಾಗುತ್ತಿದೆ. ಈಗ ಮೊದಲನೆಯ ಸಂಪುಟ ಸಿದ್ಧವಾಗಿ ಬಿಡುಗಡೆಯಾಗುತ್ತಿರುವುದು ನನಗೆ ತುಂಬ ಸಂತಸವನ್ನುಂಟುಮಾಡಿದೆ. ಕನ್ನಡ ಜನತೆಗೆ ನಿತ್ಯೋಪಯೋಗಿಯಾದ ಈ ಕನ್ನಡ ನಿಘಂಟಿನ ರಚನಾಕಾರ್ಯವನ್ನು ಪರಿಷತ್ತು ವಹಿಸಿಕೊಂಡು ತುಂಬ ಸಮರ್ಪಕವಾಗಿ ನಿರ್ವಹಿಸುತ್ತಿರುವುದು ನನಗೆ ಅತೀವ ಆನಂದವನ್ನುಂಟುಮಾಡಿದೆ. ಈ ಕಾರ್ಯದಲ್ಲಿ ನೆರವಾಗುತ್ತಿರುವ ಎಲ್ಲ ವಿದ್ವಾಂಸರಿಗೂ ಈ ಕಾರ್ಯಭಾರವನ್ನು ಹೊತ್ತಿರುವ ಪರಿಷತ್ತಿಗೂ ನನ್ನ ಕೃತಜ್ಞತೆಗಳು. ಸರಕಾರದ ಪರವಾಗಿ ಪರಿಷತ್ತು ಕೈಕೊಂಡಿರುವ ಈ ಮಹತ್ಕಾರ್ಯಕ್ಕೆ ಶ್ರೇಯಸ್ಸನ್ನು ಕೋರಿ ನಿಘಂಟಿನ ಉಳಿದ ಸಂಪುಟಗಳು ಶೀಘ್ರದಲ್ಲೇ ಹೊರಬರಲೆಂದು ಹಾರೈಸುತ್ತೇನೆ.

ಕೆ. ವಿ. ಶಂಕರಗೌಡ

# ಪರಿಷತ್ತಿನ ಕೃತಜ್ಞತೆಗಳು

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ ಕನ್ನಡ ನಿಘಂಟಿನ ಮೊದಲನೆಯ ಸಂಪುಟವನ್ನು ನಾಡಿನ ಜನತೆಗೆ ಅರ್ಪಿಸುತ್ತಿರುವುದು ನನಗೆ ಬಹಳ ಸಂತೋಷವನ್ನೂ ಹೆಮ್ಮೆಯನ್ನೂ ಉಂಟುಮಾಡಿದೆ. ಡೆಮ್ಮಿ ಚತುಷ್ಪತ್ರ ಆಕಾರದ ಸುಮಾರು ಐದುಸಾವಿರ ಪುಟಗಳಿರುವ ಈ ನಿಘಂಟು, ಸುಮಾರು ಒಂದು ಸಾವಿರದ ಇನ್ನೂರ ಐವತ್ತು ಪುಟಗಳ ನಾಲ್ಕು ಸಂಪುಟಗಳಲ್ಲಿ ಪ್ರಕಟವಾಗುವಂತೆ ಏರ್ಪಡಿಸಲಾಗಿದೆ.

ಕನ್ನಡಕ್ಕೆ ಒಂದು ಆಧಾರಭೂತವಾದ ಸಪ್ರಮಾಣವಾದ ಸಮಗ್ರ ನಿಘಂಟನ್ನು ಸಿದ್ಧಪಡಿಸಬೇಕೆಂಬ ಅಭಿಲಾಷೆ ಕನ್ನಡ ಸಾಹಿತ್ಯ ಪರಿಷತ್ತಿಗೆ ಆರಂಭಕಾಲದಿಂದಲೂ ಇತ್ತು. ಪರಿಷತ್ತಿನ ಸಾಹಿತ್ಯ ಸಮ್ಮೇಳನಗಳಲ್ಲಿ ಈ ವಿಷಯವಾಗಿ ತೀರ್ಮಾನಗಳನ್ನೂ ಕೈಕೊಳ್ಳಲಾಯಿತು. ಅದರಂತೆ ಪರಿಷತ್ತು ನಾಡಿನ ವಿದ್ವಾಂಸರ ನೆರವಿನಿಂದ ಈ ಕಾರ್ಯವನ್ನು ನಡೆಸುತ್ತಿತ್ತು. ಈ ನಿಘಂಟಿನ ಕಾರ್ಯಕ್ಕೆ ಸಾಕಷ್ಟು ಆರ್ಥಿಕ ನೆರವನ್ನು ಒದಗಿಸುವ ಚೈತನ್ಯ ಪರಿಷತ್ತಿಗೆ ಇಲ್ಲದಿದ್ದುದರಿಂದ ಆಗ ಪರಿಷತ್ತಿನ ಅಧ್ಯಕ್ಷರಾಗಿದ್ದ ದಿ|| ಎಂ. ಆರ್. ಶ್ರೀನಿವಾಸಮೂರ್ತಿಗಳು ಆಗ ಮೈಸೂರಿನ ಮುಖ್ಯ ಮಂತ್ರಿಗಳಾಗಿದ್ದ ಶ್ರೀ ಕೆಂಗಲ್ ಹನುಮಂತಯ್ಯನವರಿಗೆ ನಿಘಂಟಿನ ವಿಷಯವೆಲ್ಲವನ್ನೂ ವಿವರಿಸಿ ಈ ಕೆಲಸಕ್ಕೆ ಸರಕಾರದಿಂದ ಒಂದು ಲಕ್ಷರೂಪಾಯಿಗಳ ನೆರವನ್ನು ಪಡೆದರು. ಕ್ರಮೇಣ ನಿಘಂಟಿನ ಕಾರ್ಯವು ಬೆಳೆಯುತ್ತ ಹೋದದ್ದರಿಂದ ಈ ಹಿಂದೆ ಸರಕಾರ ಕೊಟ್ಟಿದ್ದ ಒಂದು ಲಕ್ಷರೂಪಾಯಿಗಳು ಸಾಕಾಗುವುದಿಲ್ಲವೆಂಬುದು ಸ್ಪಷ್ಟವಾಯಿತು. ೧೯೫೮ನೆಯ ಇಸವಿ ಜನವರಿಯಲ್ಲಿ ಶ್ರೀ ಬಿ. ಎಂ. ಕೃಷ್ಣನ್ ಸಮಿತಿಯವರು ೧೫ ಲಕ್ಷರೂಪಾಯಿಗಳ ಒಂದು ಯೋಜನೆಯನ್ನು ತಯಾರಿಸಿ ಸರಕಾರದ ಮುಂದಿಟ್ಟರು. ಸರಕಾರ ಈ ಯೋಜನೆಯನ್ನು ಅಂಗೀಕರಿಸಿತು. ಪರಿಷತ್ತಿಗೂ ಸರಕಾರಕ್ಕೂ ಒಂದು ಒಪ್ಪಂದವಾಯಿತು. ಈ ಯೋಜನೆಯನ್ನು ಕಾರ್ಯಗತಮಾಡಿದ ಆಗಿನ ವಿದ್ಯಾಸಚಿವರಾದ ಶ್ರೀ ವಿ. ವೆಂಕಟಪ್ಪನವರನ್ನೂ ಅರ್ಥಸಚಿವರಾದ ದಿ|| ಟಿ. ಮರಿಯಪ್ಪನವರನ್ನೂ ಇಂದು ಸ್ಮರಿಸುವುದು ಅಗತ್ಯವಾಗಿದೆ. ಅಲ್ಲಿಂದ ಈಚೆಗೆ ಈ ಕಾರ್ಯ ನಿರಂತರವಾಗಿ ನಡೆದುಕೊಂಡು ಬರುತ್ತಿದೆ. ಇಂದಿನ ಸರಕಾರ ನಿಘಂಟಿನ ಕೆಲಸಕ್ಕೆ ಎಲ್ಲ ತೆರನ ನೆರವನ್ನೂ ನೀಡುತ್ತಿದೆ. ಈ ಕೆಲಸಕ್ಕೆ ವಿಶೇಷವಾಗಿ ಪ್ರೋತ್ಸಾಹವನ್ನು ಕೊಡುತ್ತಿರುವ ಮೈಸೂರು ಸರಕಾರಕ್ಕೂ ಅದರಲ್ಲೂ ವಿದ್ಯಾಸಚಿವರಾದ ಮಾನ್ಯ ಶ್ರೀ ಶಂಕರಗೌಡರಿಗೂ ಪರಿಷತ್ತಿನ ಪರವಾಗಿ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ನಿಘಂಟಿನ ಕೆಲಸ ಒಬ್ಬಿಬ್ಬರಿಂದ ಆಗುವಂತಹುದಲ್ಲ; ಕೇವಲ ಹಣದಿಂದಲೂ ಆಗುವಂತಹುದಲ್ಲ; ವಿದ್ವಾಂಸರ ನೆರವಿನಿಂದ ಆಗುವಂತಹುದು. ಈ ನಿಘಂಟಿನ ಸಂಪಾದಕ ಸಮಿತಿಯಲ್ಲಿ ನಾಡಿನ ಎಲ್ಲ ಭಾಗದ ವಿದ್ವಾಂಸರೂ ಸದಸ್ಯರಾಗಿದ್ದುಕೊಂಡು ಅಮೌಲ್ಯವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಈ ವಿದ್ವಾಂಸರ ನಿಸ್ಪೃಹ ನಿಸ್ವಾರ್ಥ ಸೇವೆಯನ್ನು ಪರಿಷತ್ತು ತುಂಬುಹೃದಯದಿಂದ ನೆನೆಯುತ್ತದೆ. ಈ ಮಹನೀಯರಿಗೆ ಅನಂತ ಪ್ರಣಾಮಗಳು.

ಈ ನಿಘಂಟಿಗೆ ಅನುಪಮ ಸೇವೆಯನ್ನು ಸಲ್ಲಿಸಿ ಕಣ್ಮರೆಯಾಗಿರುವ ಹಿರಿಯ ವಿದ್ವಾಂಸರಾದ ಬೆಳ್ಳಾವೆ ವೆಂಕಟನಾರಣಪ್ಪ, ತೀ. ನಂ. ಶ್ರೀಕಂಠಯ್ಯ, ಡಾ|| ಎ. ಆರ್. ಕೃಷ್ಣಶಾಸ್ತ್ರೀ, ಕೆ. ಜಿ. ಕುಂದಣಗಾರ, ರಾಜಸೇವಾಸಕ್ತ ಡಿ. ಸಿ. ಸುಬ್ಬರಾಯಪ್ಪ, ಪ್ರೊ|| ಡಿ. ಕೆ. ಭೀಮಸೇನ ರಾವ್ ಈ ಮಹನೀಯರನ್ನು ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ.

ನಿಘಂಟು ಕಚೇರಿಯ ಕನ್ನಡ ವಿದ್ವಾಂಸರು ತುಂಬ ನಿಷ್ಠೆಯಿಂದ ಈ ಕಾರ್ಯವನ್ನು ಮಾಡುತ್ತಿದ್ದಾರೆ. ಇವರಿಗೂ ಅಚ್ಚುಕೂಟದ ಸಿಬ್ಬಂದಿ ವರ್ಗಕ್ಕೂ ಈ ಕಾರ್ಯದಲ್ಲಿ ಪ್ರತ್ಯಕ್ಷವಾಗಿ ಪರೋಕ್ಷವಾಗಿ ನೆರವಾದ ಎಲ್ಲರಿಗೂ ಪರಿಷತ್ತಿನ ಪರವಾಗಿ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

**ದೇಶಹಳ್ಳಿ ಜಿ. ನಾರಾಯಣ**
**ಅಧ್ಯಕ್ಷ**
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು

# ಅರಿಕೆ

ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪಿತವಾದುದು ೧೯೧೫ನೆಯ ಮೇ ೩ ರಂದು. ಅಂದು ಕನ್ನಡ ನಾಡಿನ ಪ್ರಮುಖ ವಿದ್ವಾಂಸರೆಲ್ಲ ಸಭೆಸೇರಿ ಪರಿಷತ್ತಿನ ಉದ್ದೇಶಗಳನ್ನು ವಿವರಿಸುವಾಗ ಕನ್ನಡ - ಕನ್ನಡ ನಿಘಂಟಿನ ರಚನೆಯೂ ಪರಿಷತ್ತಿನ ಮುಖ್ಯಉದ್ದೇಶಗಳಲ್ಲಿ ಒಂದಾಗಿರಬೇಕೆಂದು ತೀರ್ಮಾನವಾಯಿತು. ಪರಿಷತ್ತಿನ ನಿಬಂಧನೆಗಳಲ್ಲಿ ಇದರ ಉಲ್ಲೇಖವಿದೆ.

ಈ ದಿಕ್ಕಿನಲ್ಲಿ ನಡೆದ ಮೊದಲನೆಯ ಕಾರ್ಯವೆಂದರೆ ೧೯೧೯ ನೆಯ ಇಸವಿ ಜುಲೈ ೨೭ ರಲ್ಲಿ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು "ಕನ್ನಡ ಷಟ್ಪದಿಕಾವ್ಯಗಳಲ್ಲಿ ದೊರೆಯುವ ದೇಶ್ಯ ತದ್ಭವ ಶಬ್ದಗಳ ನಿಘಂಟಿ"ನ ನಿರ್ಮಾಣಮಾಡಬೇಕೆಂದು ಕೈಗೊಂಡ ತೀರ್ಮಾನ. ಇದರಂತೆ ೧೨ ಷಟ್ಪದಿಕಾವ್ಯಗಳನ್ನು ಆಯ್ದುಕೊಂಡು ಅವುಗಳಲ್ಲಿನ ಶಬ್ದಗಳನ್ನು ಸಂಗ್ರಹಿಸಿ ಅರ್ಥಗಳನ್ನು ಬರೆಯಲಾಯಿತು. ಕರ್ಣಾಟಕದ ಬೇರೆ ಬೇರೆ ಕಡೆಗಳಲ್ಲಿದ್ದ ಅನೇಕ ಕನ್ನಡ ಪಂಡಿತರ ಸಹಾಯವನ್ನು ಪಡೆದು ಈ ಕೆಲಸವನ್ನು ಮಾಡಲಾಯಿತು. ಪರಿಷತ್ತಿನಿಂದ ಈ ಎಲ್ಲ ಪಂಡಿತರಿಗೂ ಆಗಾಗ ಸೂಕ್ತ ಸೂಚನೆಗಳನ್ನೂ ನಿಯಮಗಳನ್ನೂ ಕಳುಹಿಸಿಕೊಡಲಾಗುತ್ತಿತ್ತು. ಹೀಗೆ ಶೇಖರಿಸಿದ ಪಟ್ಟಿಕೆಗಳನ್ನು ಪರಿಶೀಲಿಸಿದಾಗ ಕೆಲವು ನ್ಯೂನತೆಗಳು ಕಂಡುಬಂದುದರಿಂದ, ಆ ನಿಘಂಟನ್ನು ಮತ್ತೊಮ್ಮೆ ಸರಿನೋಡಿಸುವ ತನಕ ಅಚ್ಚುಮಾಡಿಸಬಾರದೆಂದು ಹಾಗೆಯೇ ಇಡಲಾಯಿತು. ಆದರೆ ಪ್ರತಿ ಪದವನ್ನೂ ಅದರ ಅರ್ಥವನ್ನೂ ಆಯಾ ವಿದ್ವಾಂಸರ ಬರವಣಿಗೆಯಲ್ಲಿ ಇದ್ದಂತೆಯೇ ಕತ್ತರಿಸಿ ತೆಗೆದು, ಅವುಗಳನ್ನು ಅಕಾರಾದಿಯಾಗಿ ವಿಂಗಡಿಸಿ ಎಲ್ಲವನ್ನೂ ಕ್ರಮವಾಗಿ ಒಂದು ಸಂಪುಟದಲ್ಲಿ ಅಂಟಿಸಲಾಗಿದೆ. ಇದೇ ಈಗ ಪರಿಷತ್ತಿನಲ್ಲಿ ಹಸ್ತಪ್ರತಿಯ ರೂಪದಲ್ಲಿಯೇ ಇರುವ "ಷಟ್ಪದಿ ಕಾವ್ಯಗಳ ಕನ್ನಡ - ಕನ್ನಡ ನಿಘಂಟು". ಈ ನಿಘಂಟು ತುಂಬ ಉಪಯುಕ್ತವಾದುದು. ಇಲ್ಲಿಯ ಶಬ್ದಗಳೆಲ್ಲವನ್ನೂ ಆಯಾ ಶಬ್ದಗಳು ಬರುವ ಗ್ರಂಥಗಳೊಡನೆ ತಾಳೆನೋಡಿ, ಈ ನಿಘಂಟನ್ನು ಮುದ್ರಿಸುವುದು ಅಗತ್ಯವಾಗಿದೆ.

ಇದಾದ ಮೇಲೆ ಕನ್ನಡದಲ್ಲಿರುವ ಪ್ರಾಚೀನ ನಿಘಂಟುಗಳಾದ 'ಕವಿಕಂಠಹಾರ,' 'ಚತುರಾಸ್ಯ ನಿಘಂಟು,' 'ಮಂಗರಾಜ ನಿಘಂಟು' ಇವೇ ಮೊದಲಾದ ನಿಘಂಟುಗಳಿಂದ "ನಿಘಂಟುಗಳ ನಿಘಂಟು" ಒಂದನ್ನು ಪರಿಷತ್ತು ಸಿದ್ಧಪಡಿಸಿತು. ಪಂಪಭಾರತದಲ್ಲಿ ಬರುವ ಎಲ್ಲ ಮುಖ್ಯಶಬ್ದಗಳ ಒಂದು ನಿಘಂಟನ್ನು ಆ ಬಳಿಕ ಸಿದ್ಧಮಾಡಲಾಯಿತು. ಈ ಎಲ್ಲ ನಿಘಂಟುಗಳನ್ನು ಸಿದ್ಧಪಡಿಸುವುದರಲ್ಲಿ ದಿ|| ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪನವರ ಪಾತ್ರ ಹಿರಿದಾಗಿತ್ತು.

೧೯೧೯ ರಿಂದ ೧೯೩೦ರ ವರೆಗೆ ಆದ ನಿಘಂಟಿನ ಕಾರ್ಯ ಇಷ್ಟು. ಮತ್ತೆ ಒಂದು ದಶಕ ಉರುಳಿದರೂ ನಿಘಂಟಿನ ಬಗ್ಗೆ ಪರಿಷತ್ತಿನಲ್ಲಿ ಯಾವ ಹೆಚ್ಚಿನ ಕೆಲಸವೂ ನಡೆಯಲಿಲ್ಲ.

ಆದರೆ ಕನ್ನಡ ವಿದ್ವಾಂಸರೆಲ್ಲರಿಗೂ ಕನ್ನಡ ಪದಗಳಿಗೆ ಕನ್ನಡದಲ್ಲ ಅರ್ಥವನ್ನು ಹೇಳುವ, ಆಧಾರಭೂತವಾಗಿರುವ, ಸಪ್ರಮಾಣವಾದ ಒಂದು ಉತ್ತಮ ನಿಘಂಟು ಇಲ್ಲದಿರುವುದು ಕೊರತೆಯೆಂದೇ ತೋರುತ್ತಿತ್ತು. ಈ ಕೊರತೆ ೧೯೪೧ ನೆಯ ಡಿಸೆಂಬರಿನಲ್ಲಿ ಹೈದರಾಬಾದಿನಲ್ಲಿ ಸೇರಿದ ಪರಿಷತ್ತಿನ ಸಕಲ ಸದಸ್ಯರ ವಾರ್ಷಿಕಾಧಿವೇಶನದಲ್ಲಿ ಮತ್ತೆ ವಿದ್ವಾಂಸರ ಗಮನವನ್ನು ಸೆಳೆಯಿತು. ಶ್ರೀ ರಂಗನಾಥ ಶ್ರೀನಿವಾಸ ಮುಗಳಿಯವರು ಆ ಸಭೆಯಲ್ಲಿ ಕನ್ನಡ ಕೋಶ ರಚನೆಯನ್ನು ಕುರಿತು ಒಂದು ನಿರ್ಣಯವನ್ನು ಮಂಡಿಸಿ, ಪರಿಷತ್ತು ನಿಘಂಟಿನ ಕಾರ್ಯವನ್ನು ಕೈಕೊಳ್ಳಬೇಕೆಂಬ ವಿದ್ವಜ್ಜನರ ಅಪೇಕ್ಷೆಯನ್ನು ಸೂಚಿಸಿದರು. ಅದರಂತೆ ಸಕಲ ಸದಸ್ಯರ ಸಭೆಯು ಆ ನಿರ್ಣಯವನ್ನು ಒಪ್ಪಿ ಒಂದು ಯೋಜನೆಯನ್ನು ಸಿದ್ಧಪಡಿಸಲು ಶ್ರೀ ಮುಗಳಿಯವರನ್ನು ಸಂಚಾಲಕರನ್ನಾಗಿ ಮಾಡಿ ಒಂದು ಉಪಸಮಿತಿಯನ್ನು ರಚಿಸಿತು. ಆ ಉಪಸಮಿತಿಯು ರಚಿಸಿದ ಯೋಜನೆಯು ಪರಿಷತ್ತಿನ ಕಾರ್ಯಸಮಿತಿಯ ಮುಂದೆ ಚರ್ಚೆಗೆ ಬಂದಿತು. ಪರಿಷತ್ತಿನ ಕಾರ್ಯ ಸಮಿತಿಯು ಈ ವಿಷಯವನ್ನು ಅನೇಕ ಸಲ ಚರ್ಚಿಸಿ ಒಂದು ಸಂಪಾದಕ ಸಮಿತಿಯನ್ನು ನೇಮಿಸಿತು. ಆ ಸಮಿತಿಯ ಸ್ವರೂಪ ಹೀಗಿತ್ತು :

೧. ಪ್ರೊ|| ಎ. ಆರ್. ಕೃಷ್ಣಶಾಸ್ತ್ರಿಗಳು (ಅಧ್ಯಕ್ಷರು)

೨. ಶ್ರೀ ಡಿ. ಎಲ್. ನರಸಿಂಹಾಚಾರ್ಯರು (ಸದಸ್ಯರು)

೩. ಶ್ರೀ ಕ. ವೆಂ. ರಾಘವಾಚಾರ್ಯರು (ಸದಸ್ಯರು)

೪. ಶ್ರೀ ತೀ. ನಂ. ಶ್ರೀಕಂಠಯ್ಯನವರು (ಕಾರ್ಯದರ್ಶಿಗಳು)

ಈ ಸಂಪಾದಕ ಸಮಿತಿಯ ಮೊದಲನೆಯ ಸಭೆಯು ೧೯೪೩ನೆಯ ಇಸವಿ ಡಿಸೆಂಬರ್ ೧೮ನೆಯ ತಾರೀಖು ಸಭೆ ಸೇರಿ ಒಂದು ಯೋಜನೆಯನ್ನು ಸಿದ್ಧಮಾಡಿತು. ಈ ಯೋಜನೆಯ ಪ್ರಕಾರ ಸಂಪಾದಕ ಸಮಿತಿಗೆ ವಿವಿಧಾಂಗಗಳಲ್ಲಿ ಒದಗಬಹುದಾದ ಸಂದೇಹಗಳನ್ನು ಪರ್ಯಾಲೋಚಿಸಿ ಸಲಹೆಮಾಡುವುದಕ್ಕೂ, ತೆಲುಗು, ಮಲಯಾಳ, ತುಳು, ಪ್ರಾಕೃತ, ಮರಾಠಿ ಮೊದಲಾದ ಭಾಷೆಗಳಿಗೆ ಸಂಬಂಧಪಟ್ಟ ವಿಶೇಷಾಂಶಗಳನ್ನು ತಿಳಿಸಿ ಉಪಕರಿಸುವುದಕ್ಕೂ ಒಂದು ಸಮಾಲೋಚನ ಸಮಿತಿಯು ಅಸ್ತಿತ್ವಕ್ಕೆ ಬಂದಿತು (ಅನುಬಂಧ I).

ಈ ಸಮಾಲೋಚನ ಸಮಿತಿಯ ಜೊತೆಗೆ, ಸಂಪಾದಕ ಸಮಿತಿಯ ಕೋರಿಕೆಯಂತೆ ಶಬ್ದಗಳನ್ನೂ ಪ್ರಯೋಗಗಳನ್ನೂ ಒದಗಿಸಿಕೊಟ್ಟು, ಉಪಯುಕ್ತವಾದ ಸಲಹೆಗಳನ್ನು ನೀಡಿ ಸಹಾಯಮಾಡಲು ಒಂದು ಸಹಾಯಕ ಸಮಿತಿ ಇರಬೇಕೆಂದು ಅನೇಕ ವಿದ್ವಾಂಸರ ಮತ್ತೊಂದು ಸಮಿತಿಯನ್ನು ಮಾಡಲಾಯಿತು. ಈ ಸಮಿತಿಯಲ್ಲಿ ನಾಡಿನ ಅನೇಕ ವಿದ್ವಾಂಸರ ಹೆಸರುಗಳಿವೆ.

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಿಘಂಟಿನ ಕಚೇರಿಯು ಪ್ರಾರಂಭವಾದುದು ೧೯೪೪ನೆಯ ಇಸವಿ ಜನವರಿ ೨೭ನೆಯ ತಾರೀಖು. ಅಂದು ಮೊದಲಾದ ಕೆಲಸ ಇಲ್ಲಿಯವರೆಗೂ ಬೆಳೆಯುತ್ತಾ ಹೆಚ್ಚು ಹೆಚ್ಚು ವ್ಯಾಪ್ತಿಯನ್ನು ಪಡೆಯುತ್ತಾ ಬಂದಿದೆ. ಈ ನಿಘಂಟಿನ ವ್ಯಾಪ್ತಿಯನ್ನು ಪೀಠಿಕೆಯಲ್ಲಿ ವಿಸ್ತಾರವಾಗಿ ತಿಳಿಸಲಾಗಿದೆ.

ನಿಘಂಟು ಕಚೇರಿಯು ಆರಂಭವಾದಮೇಲೆ ನಾಡಿನ ಅನೇಕ ಕಡೆಗಳಲ್ಲಿದ್ದ ವಿದ್ವಾಂಸರಿಗೆಲ್ಲ ಪತ್ರಗಳನ್ನು ಬರೆದು, ಅವರು ಸಹಾಯಕ ಸಮಿತಿಯ ಸದಸ್ಯರಾಗಿರಬೇಕೆಂದೂ ಶಬ್ದಗಳನ್ನೂ ಪ್ರಯೋಗಗಳನ್ನೂ ಸಂಗ್ರಹಿಸಿಕೊಟ್ಟು ಸಹಾಯಮಾಡಬೇಕೆಂದೂ ಅವರನ್ನು ಕೇಳಿಕೊಳ್ಳಲಾಯಿತು. ಅವರಲ್ಲಿ ೭೩ ಜನ ವಿದ್ವಾಂಸರು ನಿಘಂಟಿನ ಕಾರ್ಯದಲ್ಲಿ ಸಹಾಯಮಾಡಿದ್ದಾರೆ. (ಅನುಬಂಧ II). ಈ ವಿದ್ವಾಂಸರ ಜೊತೆಗೆ ನಿಘಂಟಿನ ಕಚೇರಿಯಲ್ಲಿ ಒಬ್ಬಿಬ್ಬರು ಒಪ್ಪೊತ್ತಿನ ಕೆಲಸಗಾರರು ತಿಂಗಳಿಗೆ ೨೦ ರೂಪಾಯಿಗಳ ಅಲ್ಪಸಂಭಾವನೆಯ ಮೇಲೆ ಈ ಕಾರ್ಯಕ್ಕಾಗಿ ದುಡಿಯುತ್ತಿದ್ದರು. ಕ್ರಮೇಣ ವಿದ್ವಾಂಸರ ಅಭಿಮಾನವೊಂದನ್ನೇ ಅವಲಂಬಿಸಿ ನಿಘಂಟು ರಚನೆಯಾಗಬೇಕಾದರೆ ಬಹುಕಾಲ ಬೇಕಾಗುವುದೆಂದು ಪರಿಷತ್ತಿಗೆ ಸ್ಪಷ್ಟವಾಯಿತು. ಪರಿಷತ್ತಿಗೆ ಆರ್ಥಿಕ ಬಲ ಎಂದೂ ಇರಲಿಲ್ಲ. ಆದರೂ ನಿಘಂಟಿನ ಕೆಲಸವನ್ನು ವೇಗಗೊಳಿಸುವುದು ಅತ್ಯಗತ್ಯವಾಗಿ ಕಂಡುಬಂದುದರಿಂದ ಈ ಕಷ್ಟಸ್ಥಿತಿಯಲ್ಲಿಯೂ ಮೈಸೂರು, ಧಾರವಾಡ, ಸಾಂಗ್ಲಿ ಮುಂತಾದ ಕಡೆಗಳಲ್ಲಿ ಪ್ರಸಿದ್ಧ ವಿದ್ವಾಂಸರ ಮೇಲ್ವಿಚಾರಣೆಯಲ್ಲಿ ಒಪ್ಪೊತ್ತಿನ ಸಹಾಯಕರಿಂದ ಪ್ರಯೋಗ ಸಂಗ್ರಹಣವನ್ನು ಪ್ರಾರಂಭಿಸಲಾಯಿತು. ಅಲ್ಲದೆ, ಕೆಲವರು ವಿದ್ವಾಂಸರಿಗೆ ಅಲ್ಪಸಂಭಾವನೆಗಳನ್ನು ಕೊಟ್ಟು, ತಾವಿದ್ದ ಕಡೆಗಳಿಂದಲೇ ಪ್ರಯೋಗಪಟ್ಟಿಕೆಗಳನ್ನು ಸಿದ್ಧಪಡಿಸಿ ಕಳಿಸುವ ಏರ್ಪಾಟು ಮಾಡಲಾಯಿತು. ಈ ಎಲ್ಲ ವಿದ್ವಾಂಸರೂ ಮೊದಲು ತಿಂಗಳಿಗೆ ೨೫ ರೂಪಾಯಿಗಳ ಮೇಲೂ ಆಬಳಿಕ ತಿಂಗಳಿಗೆ ೫೦ ರೂಪಾಯಿಗಳ ಮೇಲೂ ಕೆಲಸ ಮಾಡಿದರೆಂಬುದನ್ನು ಈಗ ನೆನೆದುಕೊಂಡರೆ ಈ ವಿದ್ವಾಂಸರ ಅಭಿಮಾನ ಸ್ಪಷ್ಟವಾಗುತ್ತದೆ. ೧೯೫೧ರ ವೇಳೆಗೆ ೯೦೩ ಗ್ರಂಥಗಳಿಂದ ಪ್ರಯೋಗಗಳನ್ನು ಸಂಗ್ರಹಿಸಿ ಪಟ್ಟಿಕೆಗಳಲ್ಲಿ ಬರೆದಿಡಲಾಗಿತ್ತು. ಈಗ ನಿಘಂಟಿಗಾಗಿ ಒಟ್ಟು ಸುಮಾರು ೧,೭೫೦ ಅಚ್ಚಾದ ಮತ್ತು ಅಚ್ಚಾಗದ ಗ್ರಂಥಗಳಿಂದಲೂ ಸುಮಾರು ೧೦,೦೦೦ ಕ್ಕೂ ಮಿಕ್ಕು ಶಾಸನಗಳಿಂದಲೂ ಪ್ರಯೋಗಗಳನ್ನು ಸಂಗ್ರಹಿಸಲಾಗಿದೆ. ೧೯೫೧ ರಲ್ಲಿ ಪಟ್ಟಿಕೆಗಳನ್ನು ಅಕಾರಾದಿ ಕ್ರಮದಲ್ಲಿ ವಿಂಗಡಿಸುವ ಕೆಲಸ ಪ್ರಾರಂಭವಾಯಿತು.

ದಿ|| ಪ್ರೊ|| ತೀ. ನಂ. ಶ್ರೀಕಂಠಯ್ಯನವರು ೧೯೪೬ನೆಯ ಇಸವಿಯಿಂದ ನಿಘಂಟಿನ ಗೌರವ ಸಂಪಾದಕರಾಗಿ ತಾವಿದ್ದ ಕಡೆಯಿಂದಲೇ (ಧಾರವಾಡದಿಂದಲೇ) ಕಾರ್ಯವನ್ನು ನಿರ್ವಹಿಸುತ್ತಿದ್ದರು. ಆದರೆ ನಿಘಂಟಿನ ಕಾರ್ಯವನ್ನು ವೇಗವಾಗಿ ನಡೆಸಬೇಕಾದರೆ ಗೌರವ ಸಂಪಾದಕರ ಸ್ಥಾನದಲ್ಲಿ ನಿಘಂಟಿನ ಕಚೇರಿಯಲ್ಲಿಯೇ ಪೂರ್ಣಕಾಲ ಕೆಲಸಮಾಡುವ ಒಬ್ಬ ಸಂಪಾದಕರೂ, ಅವರಿಗೆ ಸಹಾಯ ಮಾಡಲು ತಕ್ಕ ಒಂದು ಕಚೇರಿಯೂ ಅವಶ್ಯವಾಯಿತು. ಆಗ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ದಿ|| ಎಂ. ಆರ್. ಶ್ರೀನಿವಾಸ ಮೂರ್ತಿಗಳು ಮೈಸೂರಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಕೆಂಗಲ್ ಹನುಮಂತಯ್ಯನವರಿಗೆ ನಿಘಂಟಿನ ವಿಷಯವೆಲ್ಲವನ್ನೂ ವಿವರಿಸಿ, ನಿಘಂಟಿನ ಕೆಲಸಕ್ಕೆ ಸರಕಾರವು ಒಂದು ಲಕ್ಷ ರೂಪಾಯಿಗಳನ್ನು ಕೊಡುವಂತೆ ಮಾಡಿದರು. ಇದಕ್ಕೆ ೧೯೫೪ ನೆಯ ಇಸವಿ ಜೂನ್ ೧೬ ನೆಯ ತಾರೀಖು ಸರಕಾರದ ಅಪ್ಪಣೆ ದೊರೆಯಿತು. ಇದರಿಂದ ನಿಘಂಟಿನ ಕಚೇರಿಯನ್ನು ಪುನರ್ವ್ಯವಸ್ಥೆ ಮಾಡುವುದು ಸಾಧ್ಯವಾಯಿತು.

ಇದಾದ ಸ್ವಲ್ಪದಿನಗಳಲ್ಲಿಯೇ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಅ|| ಪ್ರೊ|| ಆಗಿದ್ದ ಶ್ರೀ ಡಿ. ಎಲ್. ನರಸಿಂಹಾಚಾರ್ಯರನ್ನು ಸಂಪಾದಕರನ್ನಾಗಿ ಆರಿಸಲಾಯಿತು. ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳೂ ಸರಕಾರದವರೂ ಶ್ರೀ ನರಸಿಂಹಾಚಾರ್ಯರ ಸೇವೆಯನ್ನು ನಿಘಂಟಿನ ಕಚೇರಿಗೆ ಎರವು ಕೊಟ್ಟರು. ಶ್ರೀ ನರಸಿಂಹಾಚಾರ್ಯರು ೧೯೫೪ ನೆಯ ಅಕ್ಟೋಬರ್ ೧೮ನೆಯ ತಾರೀಖು ನಿಘಂಟಿನ ಸಂಪಾದಕತ್ವವನ್ನು ವಹಿಸಿಕೊಂಡರು. ಅವರ ಸೂಚನೆಯ ಮೇರೆಗೆ ಮೈಸೂರು ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ ಶ್ರೀ ಎನ್. ಬಸವಾರಾಧ್ಯರನ್ನೂ ಕೋಲಾರದ ಹೈಸ್ಕೂಲಿನ ಕನ್ನಡ ಪಂಡಿತರಾಗಿದ್ದ ಶ್ರೀ ಹೆಮ್ಮಿಗೆ ದೇಶಿಕಾಚಾರ್ಯರನ್ನೂ ನಿಘಂಟಿನ ಕಚೇರಿಯಲ್ಲಿ ಸಹಾಯಕರನ್ನಾಗಿ ನೇಮಕ ಮಾಡಲಾಯಿತು.

ನಿಘಂಟಿನ ಕೆಲಸ ಈಗ ಒಂದು ಹದಕ್ಕೆ ಬಂದಿತು. ಸಂಪಾದಕ ಸಮಿತಿಯು ರಚಿಸಿದ್ದ ನಿಘಂಟಿನ ವಿಷಯದಲ್ಲಿ ನಾಡಿನ ವಿದ್ವಾಂಸರೆಲ್ಲರ ಅಭಿಪ್ರಾಯವನ್ನು ಶೇಖರಿಸುವ ಉದ್ದೇಶದಿಂದ ನಿಘಂಟಿನ ೮ ಮಾದರಿ ಪುಟಗಳನ್ನು ಅಚ್ಚುಮಾಡಿ ವಿದ್ವಾಂಸರುಗಳಿಗೂ, ಪತ್ರಿಕೆಗಳ ಸಂಪಾದಕರಿಗೂ, ವಿಧಾನಸಭೆ ಮತ್ತು ಶಾಸನಸಭೆಗಳ ಸದಸ್ಯರಿಗೂ ಇತರ ಜನಪ್ರಮುಖರಿಗೂ ಕಳುಹಿಸಿಕೊಡಲಾಯಿತು. ಅನೇಕರು ಈ ಕಾರ್ಯವನ್ನು ಮೆಚ್ಚಿ, ಪ್ರಶಂಸಿಸಿ ಪತ್ರಗಳನ್ನು ಬರೆದರು. ಮತ್ತೆ ಕೆಲವು ವಿದ್ವಾಂಸರು ಬಹು ವಿವರವಾದ ಚರ್ಚೆಗಳನ್ನು ಬರೆದು, ವಿಮರ್ಶಿಸಿ ಅನೇಕ ಸಲಹೆಗಳನ್ನು ಕೊಟ್ಟರು. ಈ ಎಲ್ಲ ಪತ್ರಗಳಲ್ಲಿ ಅಡಕವಾಗಿದ್ದ ಸೂಕ್ತಸೂಚನೆಗಳನ್ನು ಸಂಪಾದಕ ಸಮಿತಿಯು ಪರಿಶೀಲಿಸಿ ಉಚಿತವಾದವುಗಳನ್ನು ನಿಘಂಟಿನ ರಚನೆಯಲ್ಲಿ ಅಳವಡಿಸಿಕೊಂಡಿತು.

೧೯೫೬ ನೆಯ ಮೇ ತಿಂಗಳಿನಲ್ಲಿ ಶ್ರೀ ಡಿ. ಎಲ್. ನರಸಿಂಹಾಚಾರ್ಯರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿ ನೇಮಕಗೊಂಡುದರಿಂದ, ಅವರು ಮೈಸೂರಿಗೆ ಹಿಂತಿರುಗಿದರು. ಆ ಸಮಯದಲ್ಲಿ ಸಮಿತಿಯ ಅಧ್ಯಕ್ಷರಾಗಿದ್ದ ಪ್ರೊ|| ಎ. ಆರ್. ಕೃಷ್ಣಶಾಸ್ತ್ರಿಗಳವರೇ ಸಂಪಾದಕತ್ವವನ್ನು ವಹಿಸಿಕೊಂಡು ಕಾರ್ಯ ನಡೆಸಿಕೊಡಬೇಕೆಂದು ಪರಿಷತ್ತು ವಿಜ್ಞಾಪನೆ ಮಾಡಿದಮೇಲೆ, ಅವರು

ಪರಿಷತ್ತಿನ ಮತ್ತು ನಿಘಂಟಿನ ಮೇಲಿನ ಅತ್ಯಂತ ಅಭಿಮಾನದಿಂದ ಆ ಕಾರ್ಯವನ್ನು ನಿರ್ವಹಿಸಿದರು. ಶ್ರೀಮಾನ್ ಎಲ್. ಗುಂಡಪ್ಪನವರನ್ನು ನಿಘಂಟಿನ ಸಂಪಾದಕರಾಗಿ ೧೯೫೭ ನೆಯ ಜುಲೈ ತಿಂಗಳಲ್ಲಿ ನೇಮಕ ಮಾಡಲಾಯಿತು. ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ಈ ಮಧ್ಯದಲ್ಲಿ ಮಾದರಿ ಪುಟಗಳ ಮೇಲೆ ಬಂದ ಎಲ್ಲ ವಿಮರ್ಶೆಗಳನ್ನೂ ಗಮನಿಸಿ, ಅಕಾರಾದಿಯ ಕ್ರಮದಲ್ಲಿ ನಿಘಂಟಿನ ಮೊದಲ ೮ ಪುಟಗಳನ್ನು ಸಿದ್ಧಮಾಡಿ "ಕರಡು ಪ್ರತಿ" ಎಂಬ ಹೆಸರಿನಿಂದ ಪ್ರಕಟಿಸಿದರು. ವಿದ್ವಜ್ಜನರಿಂದ ಬರಬಹುದಾದ ಸೂಚನೆ, ಅಭಿಪ್ರಾಯ, ಸಲಹೆ ಮುಂತಾದುವುಗಳನ್ನು ಸಂಗ್ರಹಿಸಿ ನಿಘಂಟನ್ನು ಉತ್ತಮಪಡಿಸುವುದು ಸಾಧ್ಯವಾದರೆ ಹಾಗೆ ಮಾಡೋಣ ಎನ್ನುವ ದೃಷ್ಟಿಯಿಂದ ಶ್ರೀ ಕೃಷ್ಣಶಾಸ್ತ್ರಿಗಳು ಈ ಪ್ರತಿಯನ್ನು "ಕರಡು ಪ್ರತಿ" ಎಂಬ ಹೆಸರಿನಿಂದ ಕರೆದಿದ್ದಾರೆ. ನಿಘಂಟಿನ ಸ್ವರೂಪವನ್ನು ಬಹುಮಟ್ಟಿಗೆ ಹೀಗೆ ನಿರ್ಧಾರ ಮಾಡಿ ಶ್ರೀ ಕೃಷ್ಣಶಾಸ್ತ್ರಿಗಳು ಇನ್ನು ಮುಂದೆ ಸಂಪಾದಕತ್ವದ ಮತ್ತು ಅಧ್ಯಕ್ಷತೆಯ ಭಾರವನ್ನು ಹೊರುವುದು ತಮ್ಮ ಕೈಲಾಗುವುದಿಲ್ಲವೆಂದು ತಾ. ೬-೧-೧೯೫೮ ರಲ್ಲಿ ಪತ್ರವನ್ನು ಬರೆದರು. ಕನ್ನಡ ಕೋಶ ರಚನೆಯ ಪ್ರಯತ್ನಕ್ಕೆ ಮೊದಲಿನಿಂದಲೂ ಪ್ರೋತ್ಸಾಹಕರೂ, ಆ ಪ್ರಯತ್ನ ಕಾರ್ಯರೂಪಕ್ಕೆ ಬರುವ ಸಮಯದಲ್ಲಿ ಅದಕ್ಕೆ ಒಂದು ಖಚಿತರೂಪ ಕೊಟ್ಟವರೂ, ೬-೧-೧೯೫೮ ರ ವರೆಗೆ ಕೋಶ ಸಮಿತಿಯ ಅಧ್ಯಕ್ಷರೂ ಆಗಿದ್ದ ಶ್ರೀ ಕೃಷ್ಣಶಾಸ್ತ್ರಿಗಳ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸಿ, ಅನಿವಾರ್ಯವಾಗಿ ಅವರಿಗೆ ಬಿಡುವು ಮಾಡಿಕೊಡಲಾಯಿತು. ಅಲ್ಲಿಂದ ಮುಂದೆ ಶ್ರೀ ತೀ. ನಂ. ಶ್ರೀಕಂಠಯ್ಯನವರು ನಿಘಂಟು ಸಂಪಾದಕ ಸಮಿತಿಯ ಅಧ್ಯಕ್ಷರಾದರು. ಶ್ರೀ ಡಿ. ಎಲ್. ನರಸಿಂಹಾಚಾರ್ಯರು ಉಪಾಧ್ಯಕ್ಷರಾದರು. ಶ್ರೀ ಎಲ್. ಗುಂಡಪ್ಪನವರು ಸಂಪಾದಕತ್ವದಿಂದ ೧-೪-೧೯೬೩ ರಲ್ಲಿ ವಿಶ್ರಾಂತಿ ಹೊಂದಿದ ಮೇಲೆ ಶ್ರೀ ಎನ್. ಬಸವಾರಾಧ್ಯರು ಸಂಪಾದಕರಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ.

ನಿಘಂಟಿನ ಕಾರ್ಯಕ್ಕೆ ಸರ್ಕಾರದಿಂದ ೧೯೫೪ ರಲ್ಲಿ ಬಂದ ೧ ಲಕ್ಷ ರೂಪಾಯಿಗಳು ಸಾಲದೆಂಬುದು ಕ್ರಮೇಣ ಸ್ಪಷ್ಟವಾಯಿತು. ಸರಕಾರವು ಕೂಡ ಈ ವಿಚಾರವನ್ನು ಗಮನಕ್ಕೆ ತೆಗೆದುಕೊಂಡಿತು. ೧೯೫೮ ನೆಯ ಜನವರಿ ೨೫ ರಲ್ಲಿ ಸರಕಾರವು ನೇಮಿಸಿದ್ದ ಶ್ರೀ ಬಿ. ಎಂ. ಕೃಷ್ಣನ್ ಸಮಿತಿಯವರು ಈ ವಿಚಾರವನ್ನು ಗಮನಿಸಿ, ೧೯೬೬ರ ವೇಳೆಗೆ ನಿಘಂಟನ್ನು ಪೂರೈಸಬೇಕೆಂಬ ಉದ್ದೇಶದಿಂದ ೧೫ ಲಕ್ಷ ರೂಪಾಯಿಗಳ ಯೋಜನೆಯನ್ನು ತಯಾರಿಸಿ ಸರಕಾರಕ್ಕೆ ಒಪ್ಪಿಸಿದರು. ಪರಿಷತ್ತಿನ ಅಧಿಕಾರಿಗಳೂ ನಿಘಂಟಿನ ಸಮಿತಿಯ ಸದಸ್ಯರೂ ಸರಕಾರದೊಡನೆ ಸಮಾಲೋಚನೆಮಾಡಿ, ಪೂರ್ಣಸ್ವರೂಪದ ಯೋಜನೆಯನ್ನು ಸಿದ್ಧಪಡಿಸಿ, ೨೯-೫-೧೯೬೧ ರಲ್ಲಿ ಒಂದು ನಿರ್ಧಾರಕ್ಕೆ ಬಂದರು. ಸರಕಾರದೊಡನೆ ಪರಿಷತ್ತು ಆ ಬಳಿಕ ಒಂದು ಒಪ್ಪಂದವನ್ನು ಮಾಡಿಕೊಂಡಿತು. ಈ ಒಪ್ಪಂದದ ಪ್ರಕಾರ ಕನ್ನಡ ನಿಘಂಟು ಸುಮಾರು ಡೆಮ್ಮಿ ಕ್ವಾರ್ಟೋ ಆಕಾರದಲ್ಲಿ ೫೦೦೦ ಪುಟಗಳಷ್ಟು ಇರಬೇಕೆಂದೂ, ನಿಘಂಟಿನ ೧೦,೦೦೦ ಪ್ರತಿಗಳನ್ನು ಅಚ್ಚುಮಾಡಬೇಕೆಂದೂ, ಇದಕ್ಕೆ ತಗಲುವ ೧೫ ಲಕ್ಷ ರೂಪಾಯಿಗಳನ್ನು ಸರಕಾರವು ಕಂತುಗಳಲ್ಲಿ ಪರಿಷತ್ತಿಗೆ ಕೊಡಬೇಕೆಂದೂ ತೀರ್ಮಾನವಾಯಿತು. ಈ ತೀರ್ಮಾನವು ಕಾರ್ಯರೂಪಕ್ಕೆ ಬರಬೇಕಾದರೆ, ಅಂದು ಪರಿಷತ್ತಿನ ಅಧ್ಯಕ್ಷರಾಗಿದ್ದ ಪದ್ಮಶ್ರೀ ಪಂಡಿತರತ್ನಂ ಬಿ. ಶಿವಮೂರ್ತಿಶಾಸ್ತ್ರಿಗಳೂ ಇತರ ಅಧಿಕಾರಿಗಳೂ ಬಹುವಾಗಿ ಶ್ರಮಿಸಿದರು. ಅವರೆಲ್ಲರ ಸಂತತ ಪ್ರಯತ್ನದಿಂದ ಈ ಬೃಹತ್ ಯೋಜನೆ ಸಾಧ್ಯವಾಯಿತು. ಈ ಒಪ್ಪಂದಕ್ಕೆ ಪರಿಷತ್ತಿನ ಪರವಾಗಿ ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಸಹಿ ಹಾಕಿದ್ದಾರೆ. ೧-೪-೧೯೬೬ ರ ವೇಳೆಗೆ ನಿಘಂಟಿನ ಕಾರ್ಯ ಸಂಪೂರ್ಣವಾಗಬೇಕಾಗಿತ್ತು. ಆದರೆ ತಕ್ಕಷ್ಟು ಸಿಬ್ಬಂದಿಯನ್ನು ನೇಮಕ ಮಾಡಿಕೊಳ್ಳಲು ಸರಿಯಾದವರು ದೊರೆಯದೆಹೋದುದರಿಂದ, ನಿಘಂಟಿಗೆ ಬೇಕಾದ ಕಾಗದವು ತಯಾರಾಗಿ ಬರುವುದು ತಡವಾದುದರಿಂದ, ಮುದ್ರಣಕ್ಕೆ ಬೇಕಾದ ಅಚ್ಚುಮೊಳೆಗಳು ಸಿದ್ಧವಾಗುವುದಕ್ಕೆ ಕಾಲ ಬೇಕಾದುದರಿಂದ ನಿಘಂಟಿನ ಮುದ್ರಣ ಸ್ವಲ್ಪ ವಿಳಂಬವಾಯಿತು. ಈಗ ಮುದ್ರಣಕಾರ್ಯ ಮುಂದುವರಿಯುವುದು ಸುಲಭವಾಗಿದೆ. ನಿಘಂಟು ಖಚಿತ ಸ್ವರೂಪವನ್ನು ಪಡೆದಿದೆ. ನಿಘಂಟನ್ನು ಸಿದ್ಧಪಡಿಸಲು ಬೇಕಾದ ಎಲ್ಲ ಪೂರ್ವವಿಷಯ ಸಂಗ್ರಹವೂ ಪೂರೈಸಿದೆ. ಆದುದರಿಂದ ಇನ್ನು ಮುಂದೆ ನಿಘಂಟಿನ ಸಂಚಿಕೆಗಳು ಬೇಗ ಬೇಗ ಹೊರಬರುವುದರಲ್ಲಿ ಸಂಶಯವಿಲ್ಲ. ಸಂಪಾದಕ ಸಮಿತಿಯು ಕ್ರಮೇಣ ವಿಸ್ತಾರಗೊಂಡು ನಾಡುನುಡಿಗಳ ಸಂಪೂರ್ಣ ಪ್ರಾತಿನಿಧ್ಯವಿರುವಂತೆ ರಚಿತವಾಗಿದೆ.

**ನಿಘಂಟು ಸಂಪಾದಕ ಸಮಿತಿ ಈಗ ಹೀಗಿದೆ:**

ಡಿ. ಎಲ್. ನರಸಿಂಹಾಚಾರ್ಯರು (ಅಧ್ಯಕ್ಷರು)
ರಂ. ಶ್ರೀ. ಮುಗಳಿಯವರು (ಉಪಾಧ್ಯಕ್ಷರು)
ಎನ್. ಬಸವಾರಾಧ್ಯರು (ಸಂಪಾದಕರು)

ಸದಸ್ಯರುಗಳು :

ಡಿ. ಕೆ. ಭೀಮಸೇನರಾಯರು
ಕ. ವೆಂ. ರಾಘವಾಚಾರ್ಯರು
ಎಂ. ಮರಿಯಪ್ಪ ಭಟ್ಟ ಅವರು
ಆರ್. ಸಿ. ಹಿರೇಮಠ ಅವರು
ಸ. ಸ. ಮಾಳವಾಡ ಅವರು
ಎನ್. ಲಕ್ಷ್ಮೀನಾರಾಯಣರಾಯರು
ಕಾ. ಸ. ಧರಣೇಂದ್ರಯ್ಯನವರು
ಡಿ. ಜವರೇಗೌಡರು
ಜಿ. ವೆಂಕಟಸುಬ್ಬಯ್ಯನವರು
ಸಿದ್ಧಯ್ಯಪುರಾಣಿಕ ಅವರು
ವಿ. ಬಿ. ನಾಯಕ್ ಅವರು

ಮೈಸೂರು ಸರ್ಕಾರದ ಪ್ರತಿನಿಧಿಗಳು :

ರಾಜಸೇವಾಸಕ್ತ ಡಿ. ಸಿ. ಸುಬ್ಬರಾಯಪ್ಪನವರು
ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು
ವೆಂಕಟೇಶಸಾಂಗಲಿಯವರು (ಪರಿಷತ್ತಿನ ಕಾರ್ಯದರ್ಶಿಗಳು)
ಹಂ. ಪ. ನಾಗರಾಜಯ್ಯನವರು ,,
ಎನ್. ವರದರಾಜನ್ ಅವರು ( ,, ಕೋಶಾಧಿಕಾರಿಗಳು)

ನಿಘಂಟು ಸಂಪಾದಕ ಸಮಿತಿಯ ಸದಸ್ಯರು ಬೇರೆ ಬೇರೆ ವಿಶ್ವವಿದ್ಯಾನಿಲಯಗಳಲ್ಲಿಯೂ ಕಾಲೇಜುಗಳಲ್ಲಿಯೂ ಪ್ರಾಧ್ಯಾಪಕರಾಗಿಯೂ ಇತರ ಅಧಿಕಾರಗಳಲ್ಲಿ ನಿರತರಾಗಿಯೂ ಇದ್ದಾರೆ. ಇವರೆಲ್ಲರೂ ನಿಘಂಟಿನ ಸಂಪಾದಕ ಸಮಿತಿಯ ಸಭೆಗಳು ನಡೆದಾಗ ಅದರಲ್ಲಿ ಭಾಗವಹಿಸಲು ಆಯಾ ವಿಶ್ವವಿದ್ಯಾನಿಲಯಗಳೂ ಆಡಳಿತದವರೂ ಸರ್ಕಾರವೂ ಒಪ್ಪಿಗೆಯಿತ್ತು, ಆ ಸದಸ್ಯರೆಲ್ಲರೂ ಸಭೆ ನಡೆಯುವ ಕಾಲದಲ್ಲಿ ಅವರವರ ಕಾರ್ಯ (ಡ್ಯೂಟಿ) ಗಳಲ್ಲಿ ನಿರತರಾಗಿದ್ದಂತೆ ಪರಿಗಣಿಸಬೇಕೆಂದು ಅಪ್ಪಣೆ ಮಾಡಿರುವುದರಿಂದ, ನಿಘಂಟಿನ ಕೆಲಸಕ್ಕೆ ತುಂಬ ಸಹಾಯವಾಗಿದೆ.

ನಿಘಂಟಿನ ಮುನ್ನಡೆಗೆ ಕೆಲವು ಅನಿರೀಕ್ಷಿತವಾದ ಅಪಘಾತಗಳು ತಗುಲಿ ಕಾರ್ಯ ಸ್ವಲ್ಪಮಟ್ಟಿಗೆ ಕುಂಠಿತವಾಯಿತು. ಸಮಾಲೋಚನ ಸಮಿತಿಯ ಸದಸ್ಯರಾಗಿದ್ದ ಶ್ರೀ ಬಿ. ಎಂ. ಶ್ರೀಕಂಠಯ್ಯ, ಶ್ರೀ ಎಂ. ಗೋವಿಂದ ಪೈ, ಶ್ರೀ ಎಲ್. ವಿ. ರಾಮಸ್ವಾಮಿ ಅಯ್ಯರ್ ಅವರುಗಳು ನಿಧನಹೊಂದಿದುದರಿಂದ ಅವರೆಲ್ಲರ ವಿದ್ವತ್ಸಹಾಯ ನಿಘಂಟಿಗೆ ಇಲ್ಲದೆ ಹೋಯಿತು. ಅನೇಕ ವರ್ಷಗಳಿಂದ ಸಮಿತಿಯ ಸದಸ್ಯರಾಗಿದ್ದು ಸೂಕ್ತ ಸಲಹೆಗಳನ್ನು ಕೊಡುತ್ತಿದ್ದ ಪ್ರೊ|| ಕೆ. ಜಿ. ಕುಂದಣಗಾರರು ೨೨-೮-೧೯೬೫ ರಂದು ನಿಧನ ಹೊಂದಿದರು. ಪ್ರೊ|| ತೀ. ನಂ. ಶ್ರೀಕಂಠಯ್ಯನವರು ಭಾಷಾಶಾಸ್ತ್ರ ವಿಷಯದಲ್ಲಿಯೂ ಸಂಸ್ಕೃತ, ಕನ್ನಡ, ಇಂಗ್ಲಿಷ್ ಸಾಹಿತ್ಯದಲ್ಲಿಯೂ ಅಪಾರ ವಿದ್ವತ್ತನ್ನು ಪಡೆದವರಾಗಿದ್ದುದರಿಂದ ಕನ್ನಡ ನಿಘಂಟಿನ ಈ ಮೂರು ಸಂಚಿಕೆಗಳ ಸ್ವರೂಪವನ್ನು ಸಿದ್ಧಪಡಿಸುವುದರಲ್ಲಿ ಅವರ ಪಾತ್ರ ಪ್ರಮುಖವಾಗಿತ್ತು. ಪ್ರತಿಯೊಂದು ಪದವನ್ನೂ ಅದರ ಅರ್ಥವನ್ನೂ ನಿಷ್ಕೃಷ್ಟವಾಗಿ ನಿರ್ಧರಿಸುವುದರಲ್ಲಿ, ನಿಘಂಟಿನ ಸಂಚಿಕೆಯ ಅಚ್ಚಿನ ಕರಡು ಪ್ರತಿಗಳನ್ನು ೧೦—೨೦ ಸಲ ಸರಿನೋಡುವುದರಲ್ಲಿ, ನಿಘಂಟಿನ ರಚನೆಯ ಕಾರ್ಯ ಹೇಗೆ ನಡೆಯಬೇಕೆಂದು ಮಾರ್ಗದರ್ಶನ ಮಾಡುವುದರಲ್ಲಿ ಶ್ರೀ ತೀ. ನಂ. ಶ್ರೀಕಂಠಯ್ಯನವರು ಶ್ರೇಷ್ಠಕಾರ್ಯವನ್ನು ಮಾಡಿದ್ದಾರೆ. ಅವರು ತಾ. ೭-೯-೧೯೬೬ ರಲ್ಲಿ ಕಲ್ಕತ್ತೆಯಲ್ಲಿ ಅಕಸ್ಮಾತ್ ಹೃದಯಾಪಘಾತಕ್ಕೆ ಒಳಗಾಗಿ ದಿವಂಗತರಾದುದರಿಂದ ನಿಘಂಟಿನ ಕಾರ್ಯ ಮುಂದುವರಿಯುವುದು ಸ್ವಲ್ಪ ತಡವಾಯಿತು. ನಿಘಂಟಿಗೆ ನಿಷ್ಠೆಯಿಂದಲೂ ಆತ್ಮೀಯತೆಯಿಂದಲೂ ದುಡಿಯುತ್ತಿದ್ದ ಶ್ರೀಯುತ ಹೆಮ್ಮಿಗೆ ದೇಶಿಕಾಚಾರ್ಯರು ೧೦-೧೨-೧೯೬೬ ರಂದು ನಿಧನಹೊಂದಿದುದರಿಂದ ನಿಘಂಟು ರಚನೆಯ ಕಾರ್ಯಕ್ಕೆ ಪೆಟ್ಟು ಬಿದ್ದಂತಾಗಿದೆ. ಈ ಹಿರಿಯ ವಿದ್ವಾಂಸರ ನಿಸ್ವಾರ್ಥಸೇವೆಯನ್ನು ಪರಿಷತ್ತು ಅತ್ಯಂತ ಕೃತಜ್ಞತೆಯಿಂದ ಈ ಸಂದರ್ಭದಲ್ಲಿ ನೆನೆದುಕೊಳ್ಳುತ್ತದೆ.

ನಿಂಘಟಿನ ರಚನೆಯಲ್ಲಿ ಸಂಪಾದಕ ಸಮಿತಿಯ ಸದಸ್ಯರ ಕಾರ್ಯ ಬಹಳ ಜವಾಬ್ದಾರಿಯುತವಾಗಿದೆ. ಎಲ್ಲ ಸದಸ್ಯರೂ ನಾಡುನುಡಿಗಳ ಮೇಲಿನ ಅಭಿಮಾನದಿಂದ ಶ್ರಮಿಸುತ್ತಿದ್ದಾರೆ. ಪರಿಷತ್ತಿನ ಸಿಬ್ಬಂದಿಯವರೂ ನಿಘಂಟು ಕಚೇರಿಯ ಸಿಬ್ಬಂದಿಯವರೂ (ಅನುಬಂಧ III), ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದವರೂ ಬಹು ಅಭಿಮಾನದಿಂದ ದುಡಿಯುತ್ತಿದ್ದಾರೆ. ಇವರೆಲ್ಲರಿಗೂ ಪರಿಷತ್ತು ಕೃತಜ್ಞತೆಯನ್ನು ವ್ಯಕ್ತಪಡಿಸುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಈ ನಿಘಂಟು ಬಹು ಬೇಗ ಮುದ್ರಣಗೊಂಡು ಭಾಷಾಭ್ಯಾಸಿಗಳಿಗೆ ಸಹಾಯವಾಗಲೆಂದು ಪರಿಷತ್ತು ಹಾರೈಸುತ್ತದೆ.

**ಜಿ. ವೆಂಕಟಸುಬ್ಬಯ್ಯ**
ಅಧ್ಯಕ್ಷರು
**ಕನ್ನಡ ಸಾಹಿತ್ಯ ಪರಿಷತ್ತು**

## ಅನುಬಂಧ I

**ಸಮಾಲೋಚನ ಸಮಿತಿ :**

೧. ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್., ಬೆಂಗಳೂರು.
೨. ಶ್ರೀ ಎಂ. ಗೋವಿಂದ ಪೈ, ಮಂಜೇಶ್ವರ
೩. ಶ್ರೀ ಎಲ್. ವಿ. ರಾಮಸ್ವಾಮಿ ಅಯ್ಯರ್. ಎಂ.ಎ., ಬಿ.ಎಲ್., ಎರ್ನಾಕುಳಂ.
೪. ಡಾ|| ಎ. ಎನ್. ಉಪಾಧ್ಯೆ, ಎಂ.ಎ., ಡಿ. ಲಿಟ್., ಕೊಲ್ಲಾಪುರ.
೫. ಆಸ್ಥಾನ ವಿದ್ವಾನ್ ರಾ. ಅನಂತಕೃಷ್ಣಶರ್ಮ, ಮೈಸೂರು
೬. ಶ್ರೀ ಪಿ. ಎಂ. ಸೋಮಸುಂದರಂ, ಎಂ.ಎ., ಎಲ್.ಟಿ., ಬೆಂಗಳೂರು

## ಅನುಬಂಧ II

**೧. ಗ್ರಂಥಗಳಿಂದ ಶಬ್ದಗಳನ್ನೂ ಪ್ರಯೋಗಗಳನ್ನೂ ಸಂಗ್ರಹಿಸಿಕೊಟ್ಟ ಸಹಾಯಕರು :**

ಶ್ರೀಗಳಾದ :

೧. ಆರ್. ಎಸ್. ರಾಮರಾಯರು
೨. ಜಿ. ವರದರಾಜಾರಾಯರು

ಶ್ರೀಗಳಾದ :

೩. ಡಿ. ಜವರೇಗೌಡರು
೪. ಎನ್. ಪ್ರಹ್ಲಾದರಾಯರು

ಶ್ರೀಗಳಾದ :

೫. ಕೆ. ಎಸ್. ಕೃಷ್ಣಮೂರ್ತಿಯವರು
೬. ಟಿ. ಎಸ್. ಶಾಮರಾಯರು
೭. ಕೆ. ಜಿ. ಕುಂದಣಗಾರರು
೮. ಕುರುಗೋಡಪ್ಪನವರು
೯. ಐರಣಿಯವರು
೧೦. ಎಸ್. ಗುಂಡಪ್ಪನವರು
೧೧. ಡಿ. ರೇಣುಕಾಚಾರ್ಯರು
೧೨. ಎಚ್. ಶೇಷಯ್ಯಂಗಾರ್ಯರು
೧೩. ಎಲ್. ಆರ್. ಹೆಗ್ಗಡೆಯವರು
೧೪. ರಂ. ಶ್ರೀ. ಮುಗಳಿಯವರು
೧೫. ಚಿ. ನಾ. ವಿಶ್ವನಾಥಶಾಸ್ತ್ರಿಗಳವರು
೧೬. ಎಂ. ವಿ. ಗೋವಿಂದಯ್ಯನವರು
೧೭. ಎಂ. ಹನುಮಂತರಾಯರು
೧೮. ಟಿ. ವಿ. ಕೃಷ್ಣಪ್ಪನವರು
೧೯. ಎಚ್. ದೇವೀರಪ್ಪನವರು
೨೦. ಎಚ್. ಜಿ. ಆರ್. ಅಡಿಗ ಅವರು
೨೧. ಎಸ್. ಬಿ. ನಾಯಕರು
೨೨. ತೀ. ನಂ. ಶ್ರೀಕಂಠಯ್ಯನವರು
೨೩. ಡಿ. ಎಲ್. ನರಸಿಂಹಾಚಾರ್ಯರು
೨೪. ಎಲ್. ಗುಂಡಪ್ಪನವರು
೨೫. ಎಂ. ಆರ್. ವರದಾಚಾರ್ಯರು
೨೬. ಎನ್. ಕೆ. ನರಸಿಂಹಮೂರ್ತಿಯವರು
೨೭. ಎನ್. ಬಸವಾರಾಧ್ಯರು
೨೮. ಟಿ. ವಿ. ವೆಂಕಟಾಚಲ ಶಾಸ್ತ್ರಿಗಳು
೨೯. ಎಚ್. ದೇಶಿಕಾಚಾರ್ಯರು
೩೦. ಎಸ್. ವಿ. ವೆಂಕಟನಾರಾಯಣ ಶಾಸ್ತ್ರಿಗಳು
೩೧. ಟಿ. ಎಸ್. ರಘುನಾಥಾಚಾರ್ಯರು
೩೨. ಜಿ. ವೆಂಕಟಸುಬ್ಬಯ್ಯನವರು
೩೩. ಡಿ. ವಿ. ಶೇಷಗಿರಿರಾಯರು
೩೪. ಎಸ್. ಬಸಪ್ಪನವರು
೩೫. ಎಸ್. ಎನ್. ಕೃಷ್ಣಜೋಯಿಸರು

ಶ್ರೀಗಳಾದ :

೩೬. ಎನ್. ಅನಂತರಂಗಾಚಾರ್ಯರು
೩೭. ರಂಗನಾಥಾಚಾರ್ಯರು
೩೮. ಎ. ಕೆ. ಪುಟ್ಟರಾಮು ಅವರು
೩೯. ಕೆ. ಹನುಮಂತರಾಯರು
೪೦. ಆರ್. ಎಲ್. ಅನಂತರಾಮಯ್ಯನವರು
೪೧. ಡಾ|| ಕೆ. ಎಂ. ಕೃಷ್ಣರಾಯರು
೪೨. ಕೆ. ಶಿವರಾಮು ಐತಾಳರು
೪೩. ವಾ. ದ. ಬೇಂದ್ರೆ ಅವರು
೪೪. ಎಂ. ಚಂದ್ರಶೇಖರ ಅವರು
೪೫. ಮಿರ್ಜಿ ಅಣ್ಣಾರಾಯರು
೪೬. ಚಂದ್ರಶೇಖರ ಕಂಬಾರ ಅವರು
೪೭. ಜಿ. ಚಂದ್ರಶೇಖರ ಐತಾಳರು
೪೮. ಹೀ. ಚಿ. ಶಾಂತವೀರಯ್ಯನವರು
೪೯. ಎಚ್. ಎ. ಕುಲಕರ್ಣಿ ಅವರು
೫೦. ಅ. ರಾ. ಮಿತ್ರ ಅವರು
೫೧. ಟಿ. ಆರ್. ಮಹದೇವಯ್ಯನವರು
೫೨. ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟರು
೫೩. ಕೆ. ವೆಂಕಟೇಶಯ್ಯನವರು
೫೪. ಎಸ್. ಕೃಷ್ಣ ಭಟ್ಟರು
೫೫. ಸಿ. ಓಂಕಾರಪ್ಪನವರು
೫೬. ಟಿ. ಕೇಶವ ಭಟ್ಟರು
೫೭. ಕೆ. ರಾಘವೇಂದ್ರರಾಯರು
೫೮. ಜಿ. ಜಿ. ಮಂಜನಾಥನ್ ಅವರು
೫೯. ಬಿ. ಎಸ್. ಸಣ್ಣಯ್ಯನವರು
೬೦. ಎಚ್. ಎಂ. ಪರಮೇಶ್ವರಯ್ಯನವರು

ಶ್ರೀಮತಿಗಳಾದ :

೬೧. ಎ. ಎನ್. ಶಾಂತಾ ಅವರು
೬೨. ವಿ. ಅಮೃತ ಅವರು
೬೩. ಎಂ. ಜಿ. ಹಸ್ಮಕಲ್ ಅವರು
೬೪. ಗೌರಮ್ಮನವರು

**೨. ತಮ್ಮಕಡೆಯ ಜನಬಳಕೆಯ ಮಾತುಗಳನ್ನು ಸಂಗ್ರಹಿಸಿ ಕಳಿಸಿಕೊಟ್ಟಿರುವವರು :**

ಶ್ರೀಗಳಾದ :

೧. ಶಾಮಸುಂದರ ಕುಲಕರ್ಣಿಯವರು, ಬೆಳಗಾಂವಿ
೨. ಶ್ರೀ ಜೆ. ರುದ್ರಪ್ಪನವರು, ಬೆಂಗಳೂರು
೩. ಶ್ರೀ ಸುಬ್ಬರಾವ್ ಬಿ. ನಾಯಕರು, ಧಾರವಾಡ
೪. ಎಚ್. ಜಿ. ಬೆಂಗೇರಿಯವರು, ಹಾವೇರಿ
೫. ಯ. ನಾ. ಉಡುಪ ಅವರು, ಕೋಟೇಶ್ವರ

ಶ್ರೀಗಳಾದ :

೬. ಎಚ್. ವೆಂಕಣ್ಣಾಚಾರ್ಯರು, ಸಾಗರ
೭. ಹೀ. ಚಿ. ಶಾಂತವೀರಯ್ಯನವರು, ತಿಪಟೂರು
೮. ಎಂ. ಎ. ನಾಯ್ಕು, ಅಂಕೋಲ
೯. ರಾಮಕೃಷ್ಣ ಎ. ಪೈ., ಅಂಕೋಲ

# ಅನುಬಂಧ III

## ಕನ್ನಡ ನಿಘಂಟು ಕಚೇರಿಯ ಸಿಬ್ಬಂದಿ

**ಸಂಪಾದಕರು :**

೧. ಶ್ರೀ ಡಿ. ಎಲ್. ನರಸಿಂಹಾಚಾರ್, ಎಂ.ಎ. (೧೯೫೫-೫೬)
೨. ಶ್ರೀ ಎಲ್. ಗುಂಡಪ್ಪ, ಎಂ.ಎ. (೧೯೫೭-೬೩)
೩. ಶ್ರೀ ಎನ್. ಬಸವಾರಾಧ್ಯ, ಎಂ.ಎ. (೧೯೬೩- )

**ಸಹಾಯಕ ಸಂಪಾದಕರು :**

೧. ಶ್ರೀ ಎನ್. ಬಸವಾರಾಧ್ಯ, ಎಂ.ಎ. (೧೯೫೫-೫೬)
೨. ಪಂಡಿತ ಎಚ್. ದೇಶಿಕಾಚಾರ್ (೧೯೫೫-೬೬)
೩. ಶ್ರೀ ಜಿ. ಚಂದ್ರಶೇಖರ ಐತಾಳ, ಎಂ.ಎ. (೧೯೬೨-೬೩)
೪. ಶ್ರೀ ಹೀ. ಚಿ. ಶಾಂತವೀರಯ್ಯ, ಎಂ.ಎ., ಬಿ.ಇಡಿ. (೧೯೬೨- )
೫. ಶ್ರೀ ಎಚ್. ಎ. ಕುಲಕರ್ಣಿ, ಎಂ.ಎ. (೧೯೬೨-೬೩)
೬. ಶ್ರೀ ಸಿ. ಓಂಕಾರಪ್ಪ, ಎಂ.ಎ. (೧೯೬೩-೬೫)
೭. ಶ್ರೀ ಕೆ. ರಾಘವೇಂದ್ರರಾವ್, ಎಂ.ಎ. (೧೯೬೪-೬೫)
೮. ಶ್ರೀ ಜಿ. ಜಿ. ಮಂಜನಾಥನ್, ಎಂ.ಎ. (೧೯೬೪- )
೯. ಶ್ರೀ ಎಚ್. ಎಂ. ಪರಮೇಶ್ವರಯ್ಯ, ಎಂ.ಎ. (೧೯೬೫-೬೬)

**ಪ್ರತಿಕಾರರು :**

೧. ಆಸ್ಥಾನ ವಿದ್ವಾನ್ ಎಂ. ಆರ್. ವರದಾಚಾರ್
೨. ಶ್ರೀ ಎನ್. ಆರ್. ರಂಗಸ್ವಾಮಿ ಅಯ್ಯಂಗಾರ್

**ಕರಡಚ್ಚು ಓದಿದವರು :**

೧. ವಿದ್ವಾನ್ ಕೆ. ವೆಂಕಟೇಶಯ್ಯ

**ಟೈಪಿಸ್ಟ್‌ಗಳು :**

೧. ಶ್ರೀ ಜಿ. ದಿವಾಕರಯ್ಯ (೧೯೬೩-೬೪)
೨. ಶ್ರೀ ಎಸ್.ಜಿ.ರಾಮಚಂದ್ರಶರ್ಮ (೧೯೬೪-೬೫)
೩. ಶ್ರೀ ಅ. ರಾ. ಆನಂದ
೪. ಶ್ರೀ ಎ. ಎನ್. ಲಕ್ಷ್ಮೀಪತಿ

**ಒಪ್ಪೊತ್ತಿನ ಸಹಾಯಕರು :**

೧. ಶ್ರೀ ಟಿ. ಆರ್. ಮಹಾದೇವಯ್ಯ, ಎಂ.ಎ.
೨. ಶ್ರೀ ಬಿ. ಎಸ್. ಸಣ್ಣಯ್ಯ, ಎಂ.ಎ.

**ಪಟ್ಟಿಕೆ ವಿಂಗಡಣೆಕಾರರು :**

೧. ಶ್ರೀ ಕೆ. ರಾಮಣ್ಣ

**ಅಟೆಂಡರ್ :**

೧. ಶ್ರೀ ಕೆ. ಅನಂತರಾಮಯ್ಯ (೧೯೫೮-೬೫)
೨. ಶ್ರೀ ಎಂ. ಮುನಿರಾಮು (೧೯೬೪-೬೬)
೩. ಶ್ರೀ ರಾಘವೇಂದ್ರ

**ಜವಾನರು :**

೧. ಶ್ರೀ ಬಸಪ್ಪ
೨. ಶ್ರೀ ಮಾದಪ್ಪ

# ಪೀಠಿಕೆ

ಭಾಷಾಶಾಸ್ತ್ರ ತತ್ತ್ವಗಳಿಗೆ ಅನುಸಾರವಾಗಿ ಚಾರಿತ್ರಿಕ ವಿವರಣೆಯಿಂದ ಕೂಡಿರುವ ಪ್ರಮಾಣಭೂತವೂ ಸಮಗ್ರವೂ ಆದ ಕನ್ನಡ ನಿಘಂಟನ್ನು ಸಿದ್ಧಗೊಳಿಸುವ ಕಾರ್ಯವನ್ನು ಕನ್ನಡ ಸಾಹಿತ್ಯ ಪರಿಷತ್ತು ವಹಿಸಿಕೊಂಡಿದೆ. ಈ ನಿಘಂಟು ಸುಮಾರು ಐದು ಸಾವಿರ ಪುಟಗಳಷ್ಟಾಗಬಹುದೆಂದು ಅಂದಾಜು ಮಾಡಲಾಗಿದೆ. ಇದರಲ್ಲಿ ಸಾವಿರದ ಇನ್ನೂರೈವತ್ತು ಪುಟಗಳ ನಾಲ್ಕು ಸಂಪುಟಗಳಿರುತ್ತವೆ. ಪ್ರತಿ ಪುಟದಲ್ಲಿಯೂ ಎರಡೆರಡು 'ಕಾಲಂ' (ಸ್ತಂಭ)ಗಳಿರುತ್ತವೆ. ಒಂದೊಂದು 'ಕಾಲಂ' ನಲ್ಲೂ ನಲವತ್ತಾರು ಪಂಕ್ತಿಗಳಿರುತ್ತವೆ. ಈ ನಿಘಂಟಿನಲ್ಲಿ ಸುಮಾರು ಒಂದೂವರೆ ಲಕ್ಷ ಶಬ್ದಗಳು ಮುಖ್ಯ ಉಲ್ಲೇಖ (Main entries) ಗಳಾಗಿ ಎಡೆಪಡೆಯಬಹುದೆಂದು ನಿರೀಕ್ಷಿಸಲಾಗಿದೆ. ಈವರೆಗೆ ಒಟ್ಟು ಏಳು ಲಕ್ಷ ಪ್ರಯೋಗಗಳನ್ನು ಸಂಗ್ರಹಿಸಿ ಪಟ್ಟಿಕೆಗಳಲ್ಲಿ ಬರೆದಿಡಲಾಗಿದೆ.

ಈ ನಿಘಂಟು ಕಿಟೆಲ್ ಅವರ ಕನ್ನಡ–ಇಂಗ್ಲಿಷ್ ನಿಘಂಟಿನಿಂದ ಅತಿಶಯವಾಗಿ ಸಹಾಯವನ್ನು ಪಡೆದಿದ್ದರೂ ಇದು ಅದರ ಪ್ರತಿಕೃತಿಯಲ್ಲ. ಆ ನಿಘಂಟಿಗಿಂತಲೂ ಹಲವು ಹೆಜ್ಜೆಗಳನ್ನು ಮುಂದಿಟ್ಟಿದೆ. ಕಿಟೆಲ್ ಅವರಿಗೆ ದೊರೆಯದಿದ್ದ ಶಾಸನಗಳನ್ನೂ ಗ್ರಂಥಗಳನ್ನೂ ಲೇಖನಗಳನ್ನೂ ಇಲ್ಲಿ ಹೇರಳವಾಗಿ ಉಪಯೋಗಿಸಿಕೊಂಡಿದೆ. ಭಾಷಾಶಾಸ್ತ್ರದೃಷ್ಟಿಯ ಕಡೆ ವಿಶೇಷ ಗಮನವನ್ನು ಹರಿಸಲಾಗಿದೆ.

ಈ ನಿಘಂಟನ್ನು ಸಿದ್ಧಪಡಿಸುವಾಗ ಅನುಸರಿಸಿರುವ ಕ್ರಮ, ಶಬ್ದಗಳನ್ನೂ ಅವುಗಳ ಅರ್ಥಗಳನ್ನೂ ಅವಕ್ಕೆ ಸಂಬಂಧಿಸಿರುವ ಪ್ರಯೋಗಗಳನ್ನೂ ಉಲ್ಲೇಖಿಸಿರುವ ರೀತಿ, ನಿಷ್ಪತ್ತಿಭಾಗವನ್ನು ಬರೆಯುವಾಗ ಅವಲಂಬಿಸಿರುವ ವಿಧಾನ —ಈ ಮೊದಲಾದ ವಿವರಗಳನ್ನು ಮುಂದೆ ಸ್ಥೂಲವಾಗಿ ನಿರ್ದೇಶಿಸಿದೆ.

## ೧. ಶಬ್ದಸಂಗ್ರಹ

ಕನ್ನಡ ಸಾಹಿತ್ಯವನ್ನು ಚೆನ್ನಾಗಿ ಪರಿಶೋಧಿಸಿ ಪ್ರಯೋಗಗಳನ್ನು ವಿಪುಲವಾಗಿ ಸಂಗ್ರಹಿಸಿ ಗ್ರಾಮ್ಯವಲ್ಲದ ದೇಶ್ಯ, ಅನ್ಯದೇಶ್ಯ, ತತ್ಸಮ, ತದ್ಭವ ಶಬ್ದಗಳನ್ನು ಈ ನಿಘಂಟಿನಲ್ಲಿ ಸೇರಿಸಿಕೊಳ್ಳಲಾಗಿದೆ. ಶಬ್ದಸಂಗ್ರಹಣ ಕಾರ್ಯವು ಕನ್ನಡದ ಅತ್ಯಂತ ಪ್ರಾಚೀನ ಶಾಸನವಾದ ಕ್ರಿ. ಶ. ೪೫೦ ರ ಹಲ್ಮಿಡಿ ಶಾಸನದಿಂದ ಹಿಡಿದು ಸುಮಾರು ೧೯೬೫ ರಲ್ಲಿ ಪ್ರಕಟವಾದ ಪುಸ್ತಕಗಳವರೆಗೂ ಈವರೆಗೆ ನಡೆದಿದೆ. ಕ್ರಿ. ಶ. ೧೦೫೦ರ ಒಳಗೆ ರಚಿತವಾದ ಕನ್ನಡ ಗ್ರಂಥಗಳಲ್ಲೂ, ಶಾಸನಗಳಲ್ಲೂ ದೊರೆಯುವ ಸಂಸ್ಕೃತ, ದೇಶ್ಯ, ಅನ್ಯದೇಶ್ಯ, ತತ್ಸಮ, ತದ್ಭವ ಶಬ್ದಗಳನ್ನೂ ಅಲ್ಲಿಂದ ಮುಂದಕ್ಕೆ ಕ್ರಿ. ಶ. ೧೩೫೦ರ ಒಳಗೆ ರಚಿತವಾದ ಎಲ್ಲ ಗ್ರಂಥಗಳನ್ನೂ ಶಾಸನಗಳನ್ನೂ ಶೋಧಿಸಿ, ರೂಪ ಅರ್ಥ ಅಪೂರ್ವತೆ ಈ ಮೊದಲಾದ ದೃಷ್ಟಿಗಳಿಂದ ಗಮನಾರ್ಹವಾದ ಪದಗಳನ್ನು ಆರಿಸಿಕೊಂಡಿದೆ. ಆ ತರುವಾಯ ಕ್ರಿ. ಶ. ಸುಮಾರು ೧೮೦೦ರ ಒಳಗೆ ರಚಿತವಾದ ಗ್ರಂಥ ಶಾಸನಗಳಲ್ಲಿ **ಅಪೂರ್ವವಾದ ಮತ್ತು ಅತಿಮುಖ್ಯವಾದುವುಗಳನ್ನು** ಆರಿಸಿಕೊಂಡು ಅವುಗಳಲ್ಲಿ ದೊರೆಯುವ ಪದಗಳನ್ನು ಸಂಗ್ರಹಿಸಲಾಗಿದೆ. ಇದರ ಜೊತೆಗೆ ೧೮೦೦ ರಿಂದ ಈಚೆಗೂ ಗ್ರಂಥಸ್ಥವಾದ ಶಬ್ದಸಂಪತ್ತಿಯನ್ನು ಸಂಗ್ರಹಿಸಿ ಸೇರಿಸಿದೆ. ಕನ್ನಡ ಟೀಕು ಟಿಪ್ಪಣಿಗಳಿರುವ ಪ್ರಾಚೀನ ಗ್ರಂಥಗಳಿಂದಲೂ ಶಬ್ದಗಳನ್ನು ಸಂಗ್ರಹಿಸಲಾಗಿದೆ. ಮುದ್ರಿತ ಗ್ರಂಥಗಳೇ ಅಲ್ಲದೆ, ಮೈಸೂರು ಪ್ರಾಚ್ಯವಿದ್ಯಾಸಂಶೋಧನ ಸಂಸ್ಥೆಯಲ್ಲಿ ದೊರೆಯುವ ಕೈಬರಹದ ಅಮುದ್ರಿತ ಗ್ರಂಥಗಳಿಂದಲೂ ಶಬ್ದಗಳನ್ನು ಸಂಗ್ರಹಿಸಿ ಪಟ್ಟಿಕೆಗಳಲ್ಲಿ ಬರೆದಿಟ್ಟಿದೆ. ಕರ್ಣಾಟಕದ ಬೇರೆ ಬೇರೆ ಭಾಗಗಳಲ್ಲಿ ಪ್ರಚಾರದಲ್ಲಿರುವ ಕ್ರಮಿಕ ಪಠ್ಯಪುಸ್ತಕಗಳಲ್ಲಿ ದೊರೆಯುವ ಸ್ಥಳೀಯ ಶಬ್ದಗಳನ್ನೂ, ಜನಪದ ಸಾಹಿತ್ಯದಲ್ಲಿ ದೊರೆಯುವ ಪದಗಳನ್ನೂ ಸಂಗ್ರಹಿಸುವುದರ ಜೊತೆಗೆ ಬಳಕೆಯಲ್ಲಿರುವ ಹಲವಾರು ಶಬ್ದಗಳನ್ನೂ ನುಡಿಗಟ್ಟುಗಳನ್ನೂ ಅವಕ್ಕೆ ಗ್ರಂಥಾಧಾರ ದೊರೆಯದಿದ್ದರೂ, ಈ ನಿಘಂಟಿನಲ್ಲಿ ಸೇರಿಸಿಕೊಳ್ಳಲಾಗಿದೆ. ಕಿಟೆಲ್ ಅವರ ನಿಘಂಟಿನಲ್ಲಿ ಇರುವ ಪ್ರಯೋಗಾಧಾರವಿಲ್ಲದ ಶಬ್ದಗಳನ್ನೂ ಸಂಸ್ಕೃತ ಶಬ್ದಗಳನ್ನೂ ಉಳಿಸಿಕೊಂಡಿದೆ. ಜೊತೆಗೆ ಕನ್ನಡ ಕಾವ್ಯಗಳಲ್ಲಿ ದೊರೆಯುವ ಇತರ ಸಂಸ್ಕೃತ ಶಬ್ದಗಳು ಸಾಧ್ಯವಾದಷ್ಟು ಮಟ್ಟಿಗೂ ಸೇರ್ಪಡೆಯಾಗಿವೆ. ಕನ್ನಡದಲ್ಲಿ ಸ್ವತಂತ್ರವಾಗಿ ಪ್ರಯೋಗವಾಗದಂಥ ಸಂಸ್ಕೃತ ಶಬ್ದಗಳನ್ನು ಈ ನಿಘಂಟಿನಲ್ಲಿ ಸೇರಿಸಿಕೊಂಡಿಲ್ಲ. ಮುಖ್ಯವಾಗಿ ಕನ್ನಡ ಕಾವ್ಯಗಳಲ್ಲಿ ಪ್ರಯೋಗವಾಗಿರುವ, ಸಂಸ್ಕೃತದಲ್ಲಿರುವುದಕ್ಕಿಂತ ಬೇರೆ ಅರ್ಥವಿರುವ ಸಂಸ್ಕೃತ ಶಬ್ದಗಳನ್ನು ಮಾತ್ರ ಸೇರಿಸಿಕೊಳ್ಳಲಾಗಿದೆ. ಸಾಧಾರಣವಾಗಿ ಕನ್ನಡದಲ್ಲಿ ಪ್ರಯೋಗವಿಲ್ಲದ ಅಭಿಷುಃ, ಅಹಲ್ಲಕಃ, ನಿರ್ಲಯಿನೀ, ಮಂಕ್ಷು ಮುಂತಾದ ಸಂಸ್ಕೃತ ಶಬ್ದಗಳನ್ನು ಬಿಟ್ಟಿದೆ. ಅ–, ಅತಿಗಳಿಂದ ಮೊದಲಾಗುವ ಎಲ್ಲ ಸಂಸ್ಕೃತ ಶಬ್ದಗಳನ್ನೂ ಈ ನಿಘಂಟಿನಲ್ಲಿ ಕೊಟ್ಟಿಲ್ಲ. ಅರ್ಥವಿಶೇಷವಿರುವ ಅಖ್ಯಾತಿ, ಅಭಾವ, ಅತಿರೇಕ, ಅತಿವ್ಯಾಪ್ತಿ, ಅತ್ಯುಕ್ತಿ ಮುಂತಾದವನ್ನು ಉಳಿಸಿಕೊಳ್ಳಲಾಗಿದೆ. ರೀವ್, ಸ್ಯಾಂಡರ್ಸನ್, ಗ್ಯಾರೆಟ್, ಗಂಗಾಧರ ಮಡಿವಾಳೇಶ್ವರ ತೂರಮರಿ, ಗುರುರಾವ ವಿಠಲ ಮೋಹರೆ, ಪ್ರಭಣ್ಣ ಮುಂತಾದವರ ನಿಘಂಟುಗಳಲ್ಲಿನ ಶಬ್ದಾರ್ಥ ಪ್ರಯೋಗಗಳನ್ನು ವಿಚಾರಮಾಡಿ ಸೂಕ್ತವೆನ್ನಿಸಿದುವನ್ನು ಅಂಗೀಕರಿಸಲಾಗಿದೆ. ಹಾಗೆಯೇ ಇಲ್ಲಿ ಬಳಸಿಕೊಂಡಿರುವ ಉಳಿದ ಮುದ್ರಿತ ಅಮುದ್ರಿತ ನಿಘಂಟುಗಳನ್ನು ಸಂಕ್ಷಿಪ್ತಸೂಚಿಯಿಂದ ತಿಳಿದುಕೊಳ್ಳಬಹುದು.

ಜೈನ ವೀರಶೈವ ಬ್ರಾಹ್ಮಣ ಸಾಹಿತ್ಯಕ್ಕೆ ಸಂಬಂಧಪಟ್ಟ ಧಾರ್ಮಿಕ ಮತ್ತು ದಾರ್ಶನಿಕ ಶಬ್ದಗಳು, ಸಂಗೀತ ನೃತ್ಯ ಶಿಲ್ಪ ಮೊದಲಾದ ಕಲೆಗಳಿಗೆ ಸಂಬಂಧಿಸಿದ ಪ್ರಾಚೀನ ಪಾರಿಭಾಷಿಕ ಶಬ್ದಗಳು, ವ್ಯಾಕರಣ ಛಂದಸ್ಸು ಅಲಂಕಾರ ತರ್ಕ ವೈದ್ಯ ಜ್ಯೋತಿಷ

**ಕಾಮಶಾಸ್ತ್ರ** ಗಣಿತ ಮುಂತಾದ ಶಾಸ್ತ್ರಗಳಿಗೆ ಸಂಬಂಧಿಸಿದ ಶಬ್ದಗಳು, ಇತರ ವೈಜ್ಞಾನಿಕ ಪಾರಿಭಾಷಿಕ ಶಬ್ದಗಳು, ವಿದ್ಯಾ ಇಲಾಖೆಯವರು ಪ್ರೌಢಶಾಲೆಗಳಲ್ಲಿ ಪಠ್ಯಪುಸ್ತಕವಾಗಿ ನಿಯಮಿಸಿರುವ ಪುಸ್ತಕಗಳಲ್ಲಿ ಬಳಸಿರುವ ಪಾರಿಭಾಷಿಕ ಶಬ್ದಗಳು, ಕರ್ಣಾಟಕದ ಸುಪ್ರೌಢ ಪತ್ರಿಕೆಗಳಲ್ಲಿ ಬರುವ ಪ್ರಚಲಿತ ಶಬ್ದಗಳು —ಈ ತೆರನ ಶಬ್ದಗಳನ್ನು ಈ ನಿಘಂಟಿನಲ್ಲಿ ಸೇರಿಸಿಕೊಳ್ಳಲಾಗಿದೆ.

ಶಬ್ದಸಂಗ್ರಹ ಕಾರ್ಯವನ್ನು ಇಷ್ಟು ಎಚ್ಚರಿಕೆಯಿಂದ ವ್ಯಾಪಕವಾಗಿ ಮಾಡಿದ್ದರೂ ರೂಢಿಯಲ್ಲಿರುವ ಕೆಲವು ಶಬ್ದಗಳು ಹೇಗೋ ಕೈಬಿಟ್ಟುಹೋಗುತ್ತವೆ. ಜೀವಂತಭಾಷೆಗೆ ಇದು ಅನಿವಾರ್ಯ ಎಂದು ಕಾಣುತ್ತದೆ. ಏಕೆಂದರೆ ಸದಾ ಹೊಸ ಹೊಸ ಶಬ್ದಗಳು ಸೃಷ್ಟಿ ಯಾಗುತ್ತಲೇ ಇರುತ್ತವೆ. 'ಅಗ್ರಲೇಖನ' (Leader) ಎಂಬ ಶಬ್ದ ವಿಶೇಷವಾಗಿ ಇಂದು ಪ್ರಚಾರದಲ್ಲಿದೆ. ಆದರೆ ಇಲ್ಲಿ ಬಿಟ್ಟುಹೋಗಿದೆ. ಹಾಗೆಯೇ 'ಅಂದಗಾತಿ' ಎಂಬ ಶಬ್ದವೂ ಬಿಟ್ಟುಹೋಗಿದೆ. ಆದರೆ 'ಅಂದಗಾರ್ತಿ' ಎಂಬ ಶಬ್ದ ನಿಘಂಟಿನಲ್ಲಿ ಸೇರಿದೆ. ಈ ಶಬ್ದಕ್ಕೆ ಸಂಬಂಧಿಸಿದ ಭಾಗ ಅಚ್ಚಾದ ಮೇಲೆ 'ಅಂದಗಾತಿ' ಶಬ್ದ ಮತ್ತು ಪ್ರಯೋಗ ಸಿಕ್ಕಿದುವು. ಹೀಗೆ ಅನಿವಾರ್ಯವಾಗಿ ಬಿಟ್ಟುಹೋದಂಥ ಶಬ್ದಗಳನ್ನು ಅನುಬಂಧದಲ್ಲಿ ಕೊಡಲಾಗುವುದು.

ನಿಘಂಟಿನ ಶಬ್ದಸಂಗ್ರಹ ಕಾರ್ಯ ನಿರಂತರವಾಗಿ ನಡೆಯುತ್ತಲೇ ಇದೆ. ಈವರೆಗೆ ಕಣ್ಣುತಪ್ಪಿಸಿಕೊಂಡು ಹೋಗಿರಬಹುದಾದ ಶಬ್ದಗಳನ್ನೂ, ರೂಢಿಗೆ ಬಂದಿರುವ, ಬರಬಹುದಾದ ಶಬ್ದಗಳನ್ನೂ ಬಹಳ ಎಚ್ಚರಿಕೆಯಿಂದ ಸಂಗ್ರಹಿಸಲಾಗುತ್ತಿದೆ. ಒಟ್ಟಿನಲ್ಲಿ ಭಾಷೆಯಲ್ಲಿ ಇಂದು ಬಳಕೆಯಲ್ಲಿರುವ ಯಾವೊಂದು ಶಬ್ದವೂ ಬಿಟ್ಟುಹೋಗಬಾರದೆಂಬುದೇ ಮುಖ್ಯ ಉದ್ದೇಶವಾಗಿದೆ.

## ೨. ಮುಖ್ಯ ಉಲ್ಲೇಖಗಳು (Main entries)

ನಿಘಂಟಿನಲ್ಲಿ ಮುಖ್ಯ ಉಲ್ಲೇಖಗಳಾಗಿ ಕೊಡುವ ಶಬ್ದಗಳನ್ನು ಅವುಗಳ ಪ್ರಕೃತಿರೂಪದಲ್ಲಿಯೇ ಕೊಡಲಾಗುವುದು. ಉದಾ— **ಮರ, ನೆಲ, ಕರಿ.** ಅವು ಒಂದೇ ರೂಪದ ಶಬ್ದಗಳಾಗಿದ್ದರೆ ಅವುಗಳನ್ನು ಈ ಕೆಳಗಿನ ಆನುಪೂರ್ವಿಯಲ್ಲಿ ಕೊಟ್ಟಿದೆ:

I. **ಭಾಷೆ**:— ಕನ್ನಡ, ತದ್ಭವ, ಸಂಸ್ಕೃತ, ಅನ್ಯದೇಶ್ಯ.

II. **ಶಬ್ದಜಾತಿ**:— ಒಂದೇ ಶಬ್ದರೂಪ ವ್ಯಾಕರಣಕ್ಕನುಸಾರವಾಗಿ ಬೇರೆ ಬೇರೆಯಾಗಿದ್ದರೆ ಅದನ್ನು ಕ್ರಿಯಾವಾಚಕ, ನಾಮವಾಚಕ, ಗುಣವಾಚಕ, ಸರ್ವನಾಮ, ಅವ್ಯಯ, ಪ್ರತ್ಯಯ –ಈ ಆನುಪೂರ್ವಿಯಲ್ಲಿ ಕೊಟ್ಟಿದೆ. ಇವುಗಳನ್ನು ಕ್ರಮವಾಗಿ $_{1, 2, 3, 4}$ ಎಂಬ ಸಂಖ್ಯೆಗಳಿಂದ ನಿರ್ದೇಶಿಸಿದೆ. ಉದಾ— **ಅಂದು**$_1$ (ಕ್ರಿ). **ಅಂದು**$_2$ (ನಾ). **ಅಂದು**$_3$ (ಅ). ಸಂಖ್ಯಾವಾಚಕ, ಪರಿಮಾಣವಾಚಕ, ಪ್ರಕಾರವಾಚಕ ಇವೆಲ್ಲಾ ಗುಣವಾಚಕದ ಪ್ರಭೇದಗಳಾದ್ದರಿಂದ, ಇವುಗಳನ್ನು ಗುಣವಾಚಕದ ಸ್ಥಾನದಲ್ಲಿಯೇ ಕೊಟ್ಟಿದೆ.

ಅಂಕಿತನಾಮಗಳಲ್ಲಿ ಭಾಷಾಶಾಸ್ತ್ರದ ದೃಷ್ಟಿಯಿಂದ ಯಾವುದಾದರೊಂದು ವೈಶಿಷ್ಟ್ಯ ಕಂಡುಬಂದಲ್ಲಿ, ಅಂಥ ಹೆಸರುಗಳನ್ನು ನಿಘಂಟಿನಲ್ಲಿ ಸೇರಿಸಿಕೊಂಡು ಮುಖ್ಯ ಉಲ್ಲೇಖಗಳಾಗಿ ಪರಿಗಣಿಸಿದೆ. ಸಂಸ್ಕೃತದ ಅಂಕಿತನಾಮಗಳನ್ನು ಸಾಮಾನ್ಯವಾಗಿ ಬಿಟ್ಟಿದೆ. ಯಾವುದಾದರೂ ಒಂದು ಹೆಸರು ಕೇವಲ ಅಂಕಿತನಾಮವಾಗಿ ಮಾತ್ರ ನಿಲ್ಲದೆ ಅದರಲ್ಲಿ ವಿಶೇಷಾರ್ಥ ಬೆಳೆದುಬಂದಿದ್ದರೆ ಅಂತಹ ಶಬ್ದವನ್ನೂ ಅದರ ವಿಶೇಷಾರ್ಥವನ್ನೂ ನಿರ್ದೇಶಿಸಲಾಗುವುದು. ಉದಾ— **ಉತ್ತರಕುಮಾರ, ಕುಂಭಕರ್ಣ, ಹರಿಶ್ಚಂದ್ರ** ಇತ್ಯಾದಿ.

ಶಬ್ದಗಳ ಪ್ರಾದೇಶಿಕ ರೂಪಗಳನ್ನು (Dialectal forms) ಈ ನಿಘಂಟಿನಲ್ಲಿ ಸಾಮಾನ್ಯವಾಗಿ ಕೊಟ್ಟಿಲ್ಲ. ಆದರೆ ಕ್ರಿ. ಶ. ೧೮೦೦ ರ ವರೆಗಿನ ಶಾಸನಗಳಲ್ಲಿ (ಲಿಪಿಕಾರನ ಪ್ರಮಾದಗಳು ಹೊರತು) ಪ್ರಾದೇಶಿಕ ರೂಪಗಳು ಕಂಡುಬಂದಾಗ ಅವುಗಳನ್ನು ಸೇರಿಸಿಕೊಳ್ಳಲಾಗಿದೆ. ಉದಾ— **ಅಡ್ಕೆ, ಎತಿ.**

'ಎ' ಕಾರಾಂತ ಶಬ್ದಗಳಿಗೆ ಕ್ರಿ. ಶ. ೧೮೦೦ ಕ್ಕೆ ಹಿಂದೆ 'ಇ' ಕಾರಾಂತ ರೂಪಗಳೂ ಪ್ರಯೋಗವಾಗಿರುವುದು ಕಂಡುಬಂದರೆ ಈ ಎರಡು ರೂಪಗಳನ್ನೂ ನಿಘಂಟಿನಲ್ಲಿ ಉಲ್ಲೇಖಿಸಲಾಗುವುದು. ಕ್ರಿ. ಶ. ೧೮೦೦ ರಿಂದ ಈಚಿನ ಗ್ರಂಥಗಳಲ್ಲಿ ಕಾಣಬರುವ ಈ ಬಗೆಯ 'ಇ' ಕಾರಾಂತ ರೂಪಗಳನ್ನು ಸ್ವೀಕರಿಸಿಲ್ಲ. ಉದಾ— **ಎಡಿ, ಕುದರಿ, ತಲಿ, ಮನಿ.**

ಎಲ್ಲ ಸಂಸ್ಕೃತ ಸಮಾಸ ಪದಗಳನ್ನೂ ಈ ನಿಘಂಟಿನಲ್ಲಿ ಮುಖ್ಯ ಉಲ್ಲೇಖಗಳಾಗಿ ಕೊಟ್ಟಿಲ್ಲ. ಸಾಧಾರಣವಾಗಿ ಹೆಚ್ಚು ರೂಢಿಯಲ್ಲಿರುವ ಚಿಕ್ಕ ಚಿಕ್ಕ ಸಮಾಸ ಪದಗಳನ್ನು ಮಾತ್ರ ಸೇರಿಸಿಕೊಂಡಿದೆ. ಸಾಮಾನ್ಯವಾಗಿ ಎರಡಕ್ಕಿಂತ ಹೆಚ್ಚು ಶಬ್ದಗಳು ಕೂಡಿ ಆದ ಸಮಾಸ ಪದಗಳನ್ನು ಉಳಿಸಿಕೊಂಡಿಲ್ಲ. ಆದರೆ ಅರ್ಥಸೌಕರ್ಯಕ್ಕೋಸ್ಕರ ಅವಶ್ಯವೆಂದು ಕಂಡುಬಂದ ವಿಶೇಷ ಸಂದರ್ಭಗಳಲ್ಲಿ ಮಾತ್ರ ದೊಡ್ಡಸಮಾಸ ಪದಗಳನ್ನು ಕೊಡಲಾಗಿದೆ. ಸಮಾಸದ ಏಕದೇಶ (= ಭಾಗ ಅಥವಾ ಅಂಶ) ವಾದ ಶಬ್ದ ಸ್ವತಂತ್ರವಾಗಿ ಪ್ರಯೋಗವಾಗುವ ಸಾಧ್ಯತೆ ಇರುವುದರಿಂದ, ಸದ್ಯದಲ್ಲಿ ಅದಕ್ಕೆ ಸ್ವತಂತ್ರ ಪ್ರಯೋಗ ದೊರೆಯದಿದ್ದರೂ ಅದನ್ನು ಮುಖ್ಯ ಉಲ್ಲೇಖವಾಗಿ ಕೊಡಲಾಗುವುದು. ಉದಾ— **ಅಟ್ಟೆ**$_2$, **ಅಣ್ಣೆ**$_4$.

ಒಂದೇ ಅರ್ಥದ ಹಲವಾರು ಶಬ್ದಗಳು ಸಮಾಸದ ಪೂರ್ವೋತ್ತರ ಪದಗಳಾಗಿ ಸೇರಿ ಆದ ಸಂಸ್ಕೃತ ಶಬ್ದಗಳು ಕನ್ನಡ ಕಾವ್ಯಗಳಲ್ಲಿ ವಿಪುಲವಾಗಿ ಸಿಕ್ಕುತ್ತವೆ. ಆದರೆ ಅವನ್ನೆಲ್ಲಾ ಈ ನಿಘಂಟಿನಲ್ಲಿ ಕೊಟ್ಟಿಲ್ಲ. ಉದಾ— **ಅಗತನಯೆ, ಅಗತನುಜೆ, ಅಗತನೂಜೆ, ಅಗಪುತ್ರಿ;**

**ಅವನಿಪತಿ, ಕ್ಷ್ಮಾಪತಿ, ಧರಣಿಪತಿ; ಭೂಕಾಂತ, ಭೂಧವ, ಭೂಪತಿ, ಭೂರಮಣ; ರಾಜಕುಮಾರ, ರಾಜಪುತ್ರ, ರಾಜಸುತ, ರಾಜಸೂನು; ರಾಜಕುಮಾರಿ, ರಾಜಪುತ್ರಿ, ರಾಜಸುತೆ** ಈ ಸಮಾಸಪದಗಳಲ್ಲಿನ **ಅಗ, ಅವನಿ, ಕ್ಷ್ಮಾ, ಧರಣಿ, ಭೂ, ರಾಜ, ತನುಜೆ, ತನೂಜೆ, ತನಯೆ, ಪತಿ, ರಮಣ, ಕುಮಾರ, ಪುತ್ರ, ಸುತ, ಸೂನು, ಕುಮಾರಿ, ಪುತ್ರಿ, ಸುತೆ** — ಈ ಒಂದೊಂದು ಶಬ್ದಕ್ಕೂ ಈ ನಿಘಂಟಿನಲ್ಲಿ ಪ್ರತ್ಯೇಕವಾಗಿ ಅರ್ಥ ಕೊಟ್ಟಿರುವುದರಿಂದ ಇಂಥ ಸಮಾಸಪದಗಳನ್ನು ಮುಖ್ಯ ಉಲ್ಲೇಖಗಳಾಗಿ ಪರಿಗಣಿಸಿಲ್ಲ. ಆದರೆ ವಿಶೇಷ ಅರ್ಥವಿರುವ ಸಮಾಸಗಳನ್ನು ಮಾತ್ರ ಮುಖ್ಯ ಉಲ್ಲೇಖಗಳಾಗಿ ಕೊಡಲಾಗಿದೆ. ಉದಾ— **ರಾಜಪುತ್ರ** (ನಾ). ಒಂದು ಕ್ಷತ್ರಿಯ ಜಾತಿ. **ಭೂಪತಿ** (ನಾ). ಶ್ರೇಷ್ಠ ಗುಣಗಳುಳ್ಳ ವ್ಯಕ್ತಿ.

ಸುಲಭವಾದ ಕ್ರಿಯಾಸಮಾಸಗಳು, ಸಮಾಸಪದಗಳು ಇವನ್ನು ಈ ನಿಘಂಟಿನಲ್ಲಿ ಪ್ರತ್ಯೇಕ ಮುಖ್ಯ ಉಲ್ಲೇಖಗಳಾಗಿಯೇ ಕೊಟ್ಟಿದೆ. ಉದಾ— **ಅಂಚುಕಟ್ಟು, ಅಗಡುಕುದುರೆ, ಅಗಡುದನ, ಅಗಡುಮಾಡು, ಅಗ್ಗಳಪದಾತಿ, ಅಗ್ಗಳಬಲಾಢ್ಯ, ಅಗ್ಗಳಮಾಡು, ಅಡವಿಕಡಲೆ, ಅಡವಿಕೋಣ** ಇತ್ಯಾದಿ.

ಅವನು ಅವಳು ಎಂಬ ಸರ್ವನಾಮಗಳು ಸೇರಿ ಆದ ಶಬ್ದಗಳನ್ನೆಲ್ಲಾ ಮುಖ್ಯ ಉಲ್ಲೇಖಗಳಾಗಿಯಾಗಲಿ ಅಥವಾ ಆಯಾ ಶಬ್ದದ ಕೆಳಗಾಗಲೀ ಕೊಟ್ಟಿಲ್ಲ. ಮೂಲಶಬ್ದಗಳನ್ನು ವಿವರಿಸಿದ ಮೇಲೆ ಇಂಥ ಶಬ್ದಗಳನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಉದಾ— **ಅಗಸರವನು, ಅಗಸರವಳು, ಕೂಲಿಯವನು, ಕೂಲಿಯವಳು, ಕೆಲಸದವನು, ಕೆಲಸದವಳು.**

ಪ್ರಾಚೀನ ಗ್ರಂಥದ ಪ್ರತಿಗಳಲ್ಲಿ ಆಯಾ ಲೇಖಕರ ಮನೋಭಾವಕ್ಕನುಸಾರವಾಗಿ ಶಬ್ದಗಳ ಬೇರೆ ಬೇರೆ ರೂಪಗಳು ಕಂಡು ಬರುತ್ತವೆ. ಅವುಗಳಲ್ಲಿ ವ್ಯಾಕರಣ ಮತ್ತು ಭಾಷೆಯ ಜಾಯಮಾನಕ್ಕನುಸಾರವಾಗಿ ಅತ್ಯಂತ ಪ್ರಾಚೀನರೂಪವನ್ನು ಪ್ರಧಾನವೆಂದು ಅಂಗೀಕರಿಸಿ ಉಳಿದ ರೂಪಗಳನ್ನು ಅದರ ಕೆಳಗೆ ಸೂಚಿಸಲಾಗುವುದು. ಉದಾ— **ಅಂಗೆಯ್, ಅಂಗಯ್, ಅಂಗೈ** ಈ ಮೂರನ್ನೂ "ಅಂಗೆಯ್" ಕೆಳಗೆ ತೋರಿಸಲಾಗಿದೆ.

ಅಕ್ಕ ಪಕ್ಕ, ಅರಿವೆ ಅಂಚಟೆ, ಅರಿವೆ ಅಂಚಡಿ, ಎದುರು ಬದರು, ಬಟ್ಟೆ ಬರೆ, ಬಡ ಬಗ್ಗ ಮುಂತಾದ ಯಮಳ ಶಬ್ದಗಳು ಅಥವಾ ಕೂಡುನುಡಿಗಳು ಭಾಷೆಯಲ್ಲಿ ಕಾಣುತ್ತವೆ. ಇವುಗಳಲ್ಲಿ ಹೆಚ್ಚು ಕಡಮೆ ಸಮಾನಾರ್ಥಕವಾದ ಎರಡು ಶಬ್ದಗಳು ಸೇರಿ ಅದೇ ಅರ್ಥವೇ ಕಂಡುಬರುತ್ತದೆ. ಇವುಗಳಲ್ಲಿ ಮೂರು ವಿಧಾನಗಳಿವೆ:—

I. ಒಂದೇ ಭಾಷೆಗೆ ಸೇರಿದ ಎರಡು ಶಬ್ದಗಳು. ಉದಾ— **ಗೆಡ್ಡೆ ಗೆಣಸು, ತೋಟ ತುಡಿಕೆ** ಇತ್ಯಾದಿ.

II. ಬೇರೆ ಬೇರೆ ಭಾಷೆಗಳಿಗೆ ಸೇರಿದ ಎರಡು ಶಬ್ದಗಳು. ಉದಾ— **ಗೇಟ್ ಬಾಗಿಲು, ಹಣ್ಣುಹಂಪಲು.** ಇವಕ್ಕೆ Polyglot ಎಂದು ಕರೆಯುತ್ತಾರೆ.

III. ತಾತ್ಸಾರ ತಿರಸ್ಕಾರ ಇತ್ಯಾದಿ ಅರ್ಥಗಳಲ್ಲಿ ಗಿ ಗೀ ಎಂಬ ಎರಡು ಅಕ್ಷರಗಳಲ್ಲಿ ಯಾವುದಾದರೂ ಒಂದು ಎರಡನೆಯ ಶಬ್ದದ ಆದಿಯಲ್ಲಿ ಸೇರಿ ಬರುತ್ತದೆ. ಉದಾ— **ಜನ ಗಿನ; ಮನೆ ಗಿನೆ; ಸಂಗತಿ ಗಿಂಗತಿ; ಹೋದರೆ ಗೀದರೆ** ಇತ್ಯಾದಿ. ಈ ಯಮಳ ಶಬ್ದಗಳಲ್ಲಿ ಎರಡನೆಯದರ ಅರ್ಥ ಅಸ್ಪಷ್ಟವಾಗಿರುತ್ತದೆ. ಸ್ವತಂತ್ರವಾಗಿ ಅವಕ್ಕೆ ಪ್ರಯೋಗವಿಲ್ಲದಿದ್ದರೆ ಅವುಗಳನ್ನು ಪ್ರತ್ಯೇಕ ಮುಖ್ಯ ಉಲ್ಲೇಖಗಳಾಗಿ ಕೊಡುವುದಿಲ್ಲ. 'ಬಾಲವ್ಯಾಕರಣಮು' ಎಂಬ ತೆಲುಗು ವ್ಯಾಕರಣ ಗ್ರಂಥದಲ್ಲಿ ಈ ಸಂಬಂಧವಾಗಿ ಒಂದು ಸೂತ್ರವೇ ಇದೆ. "ನಿಂದಯಂದಾಮ್ರೇಡಿತಂಬುನಾದ್ಯಕ್ಷರಮುಲಕು ಹ್ರಸ್ವದೀರ್ಘಂಬುಲಕು ಗಿಗೀಲಗು." ಕುಂಭಕರ್ಣುಡು – ಗಿಂಭಕರ್ಣುಡು, ರಾವಣುಡು – ಗೀವಣುಡು.

ತದ್ಭವಗಳನ್ನು ಪ್ರತ್ಯೇಕವಾಗಿ ಮುಖ್ಯ ಉಲ್ಲೇಖಗಳಾಗಿಯೇ ಕೊಟ್ಟು ಅರ್ಥ ಪ್ರಯೋಗ ಮೊದಲಾದವುಗಳನ್ನು ತೋರಿಸಲಾಗಿದೆ. ಇವುಗಳನ್ನು ಮೂಲ ಸಂಸ್ಕೃತ ಶಬ್ದಗಳ ಜೊತೆಗೆ ಸೇರಿಸಿಲ್ಲ.

ಕನ್ನಡದಲ್ಲಿ ಬಳಸುವ ಸಂಸ್ಕೃತ ಶಬ್ದಗಳಲ್ಲಿ ವಿಕಾರವಿಲ್ಲದ ಅಥವಾ ಅಂತ್ಯದಲ್ಲಿ ಮಾತ್ರ ಅಲ್ಪವಿಕಾರವಿರುವ ಶಬ್ದರೂಪಗಳನ್ನು ಎಂದರೆ ಕೇಶಿರಾಜನು 'ಸಮಸಂಸ್ಕೃತ' ಎಂದು ಭಾವಿಸಿರುವ ಶಬ್ದಗಳನ್ನು [ಸಂ.] ಎಂದು ನಿರ್ದೇಶಿಸಲಾಗಿದೆ. ಉಳಿದವನ್ನು ಎಂದರೆ ಹೆಚ್ಚು ವಿಕಾರ ಹೊಂದಿರುವವನ್ನು ತದ್ಭವಗಳೆಂದು ಪರಿಗಣಿಸಲಾಗಿದೆ. ಉದಾ— [ಸಂ.] **ಗಂಗೆ, ಸುತೆ, ರಾಜ, ಶ್ರದ್ಧೆ, ಮನ, ಯಶ** (ದ್ಭ) **ಜಸ, ರಾಯ, ಸಡ್ಡೆ, ಮನಸ್ಸು, ಯಶಸ್ಸು.**

**ಕ್ರಿಯಾವಾಚಕ**:— ಕನ್ನಡದಲ್ಲಿನ ಸಹಜಧಾತು ಮತ್ತು ಸಂಯುಕ್ತಧಾತುಗಳನ್ನು ಮುಖ್ಯ ಉಲ್ಲೇಖಗಳಾಗಿ ಕೊಡಲಾಗಿದೆ. ಒಂದು ಧಾತುವಿನಿಂದ ನಿಷ್ಪನ್ನವಾದ ಎಲ್ಲ ಶಬ್ದಗಳನ್ನೂ ಪ್ರತ್ಯೇಕವಾಗಿ ಆಯಾ ಸ್ಥಾನದಲ್ಲಿ ಕೊಟ್ಟಿದೆ. –ಇಸು, –ಸು; –ಇಚು, –ಚು –ಈ ಪ್ರತ್ಯಯಗಳು ಸೇರಿದ ರೂಪಗಳಲ್ಲಿ –ಇಸು, –ಚು ಸೇರಿದ ರೂಪಗಳನ್ನು ಮೂಲವಾಗಿ ಇಟ್ಟುಕೊಂಡು ಅವುಗಳ ಕೆಳಗೆ –ಸು, –ಇಚು ಸೇರಿದ ರೂಪಗಳನ್ನು ಕೊಡಲಾಗಿದೆ.

ತಾಳ್ದು, ತೂಳ್ದು ಮುಂತಾದ ಕೆಲವು ಕ್ರಿಯಾರೂಪಗಳು ಸ್ವತಂತ್ರ ಧಾತುಗಳಾಗಿ ಹಳಗನ್ನಡದಲ್ಲಿ ಬಳಕೆಯಲ್ಲಿವೆ. ಕದಿ, ಕಿತ್ತು, ಗೆದಿ, ಮಿಕ್ಕು, ಸಿಗು ಮುಂತಾದ ಕ್ರಿಯಾರೂಪಗಳು ಸ್ವತಂತ್ರಧಾತುಗಳಾಗಿ ಈಚೆಗೆ ಬಳಕೆಗೆ ಬಂದಿವೆ. ಇವುಗಳಲ್ಲಿ ಗ್ರಾಂಥಿಕವೆಂದು

ಪರಿಗಣಿಸಬಹುದಾದ ರೂಪಗಳನ್ನು ಅಂಗೀಕರಿಸಿ ಪ್ರತ್ಯೇಕ ಮುಖ್ಯ ಉಲ್ಲೇಖಗಳಾಗಿ ಕೊಟ್ಟಿದೆ. ಅವುಗಳ ಅರ್ಥ ಪ್ರಯೋಗಾದಿಗಳನ್ನು ತಾಳ್, ತೂಳ್, ಕೀಳ್, ಗೆಲ್, ಮಿಗು ಮೊದಲಾದ ಮೂಲಧಾತುಗಳ ಕೆಳಗೆ ಕೊಟ್ಟು 'ನೋ' ಎಂದು ನಿರ್ದೇಶಿಸಿದೆ.

ಎಲ್ಲ ಕೃದಂತ ರೂಪಗಳನ್ನೂ ಮುಖ್ಯ ಉಲ್ಲೇಖಗಳಾಗಿ ಕೊಡುವುದಿಲ್ಲ. ಆಯಾ ಮೂಲಧಾತುವಿನ ಕೆಳಗೆ ಅವುಗಳನ್ನು ಸೂಚಿಸಲಾಗುವುದು. ಉದಾ— **ಅಟ್ಟ, ಅಟ್ಟು; ಬಂದ, ಬಂದಪ, ಬರ್ಪ** ಇತ್ಯಾದಿ ರೂಪಗಳನ್ನು **'ಅಡು' 'ಬರ್'** ಧಾತುಗಳ ಕೆಳಗೆ ಕೊಡಲಾಗಿದೆ.

ಭೂತ ಭವಿಷ್ಯದಾದಿ ರೂಪಗಳಲ್ಲಿ ವಿಶಿಷ್ಟವಾದುವನ್ನೂ ವಿಲಕ್ಷಣವಾದುವನ್ನೂ ನಿಘಂಟಿನಲ್ಲಿ ಮುಖ್ಯಉಲ್ಲೇಖಗಳಾಗಿ ಕೊಟ್ಟಿದೆ. ಮುಖ್ಯ ಉಲ್ಲೇಖಗಳ ಶ್ರೇಣಿಯಲ್ಲಿ ಅವನ್ನು ಕೊನೆಯವಾಗಿ ಪರಿಗಣಿಸಿದೆ. ಅವುಗಳ ಸ್ಥಾನದಲ್ಲಿ ಮೂಲಧಾತುವನ್ನು 'ನೋ' ಎಂದು ನಿರ್ದೇಶಿಸಿದೆ. ಉದಾ— **ಅಪ್ಪ**$_1$ (ನಾ). **ಅಪ್ಪ**$_2$ (ಗು). **ಅಪ್ಪ**$_3$ (ಭವಿಕೃ). **ಅಪ್ಪ**$_3$ 'ಆಗು' ನೋ.

ಒಂದು ಕೆಲಸವನ್ನು ತನಗಾಗಿ ತಾನು ಮಾಡು ಎಂಬ ಅರ್ಥದಲ್ಲಿ ಧಾತುವಿಗೆ ಹಳಗನ್ನಡ ಮತ್ತು ನಡುಗನ್ನಡದಲ್ಲಿ ಸೇರುವ ಕೊಳ್, ಕೊಳ್ಳು ಎಂಬ ಉಪಧಾತು ಹೊಸಗನ್ನಡದಲ್ಲಿ 'ಕೊ' ಎಂಬ ರೂಢಿಯ ರೂಪದಲ್ಲಿ ನಿಲ್ಲುತ್ತದೆ. ಈ ನಿಘಂಟಿನಲ್ಲಿ ಮುಖ್ಯ ಉಲ್ಲೇಖಗಳಾಗಿ ಕೊಡುವ ಸ್ಥಳದಲ್ಲಿ ಹಳಗನ್ನಡದಲ್ಲಿ 'ಕೊಳ್' ಎಂಬುದು ಸೇರಿದ ರೂಪವನ್ನೂ, ಹೊಸಗನ್ನಡದಲ್ಲಿ 'ಕೊ' ಕೊನೆಯಾದ ರೂಪವನ್ನೂ ಇಟ್ಟುಕೊಂಡು ಮುಖ್ಯ ಉಲ್ಲೇಖಗಳಾಗಿ ಕೊಟ್ಟಿದೆ. ಉದಾ— **ಅಕ್ಕಜಂಗೊಳ್, ಅಕ್ಕರುಗೊಳ್, ಅಗತುಕೊ.** ಭೂತಕೃದಂತರೂಪಗಳಿಗೆ 'ಕೊಳ್' ಮೊದಲಾದುವು ಸೇರಿ ಬಂದರೆ ಅವನ್ನು ಮುಖ್ಯ ಉಲ್ಲೇಖವಾಗಿ ಕೊಡುವುದಿಲ್ಲ. ಮೂಲಧಾತುವಿನ ಕೆಳಗೆ ಆ ರೂಪಗಳನ್ನು ಸೂಚಿಸಲಾಗುವುದು. ಉದಾ— **ಅಟ್ಟು** (ಕ್ರಿ). **ಅಟ್ಟಿಕೊ, ಅಟ್ಟಿಕೊಳ್.**

ಧಾತುಗಳಿಂದ ಸಾಧಿತವಾದ ಸಾಧಾರಣ ಕ್ರಿಯಾರೂಪಗಳನ್ನೆಲ್ಲಾ ಈ ನಿಘಂಟಿನಲ್ಲಿ ಕೊಡದೆ ವಿಶಿಷ್ಟವಾದುವುಗಳನ್ನು ಮಾತ್ರ ತೋರಿಸಲಾಗಿದೆ. ಮೇಲಾಗು, ಕೀಳಾಗು, ಉದ್ದವಾಗು ಮೊದಲಾಗಿ 'ಆಗು' ಧಾತು ಸೇರಿದ ರೂಪಗಳನ್ನೂ, -ಉದು, -ಇಕೆ ಸೇರಿ ಆಗುವ ಭಾವನಾಮರೂಪಗಳನ್ನೂ ಈ ನಿಘಂಟಿನಲ್ಲಿ ಮುಖ್ಯಉಲ್ಲೇಖಗಳಾಗಿ ಕೊಟ್ಟಿಲ್ಲ. ಉದಾ— **ಮಾಡುವುದು, ನೋಡುವುದು; ಹೋಗುವಿಕೆ, ಬರುವಿಕೆ.** ಇವುಗಳಲ್ಲಿ ವಿಶಿಷ್ಟವಾದ ರೂಪಗಳನ್ನೂ ಕ್ರಿ. ಶ. ೧೮೦೦ ಕ್ಕೆ ಹಿಂದಿನ ಪ್ರಯೋಗಗಳು ಸಿಕ್ಕಿದ ರೂಪಗಳನ್ನೂ ಮುಖ್ಯಉಲ್ಲೇಖಗಳಾಗಿ ಕೊಡಲಾಗಿದೆ.

ಕಿಟೆಲ್ ಅವರು ತಮ್ಮ ನಿಘಂಟಿನಲ್ಲಿ ಅಗಲಾಡು, ಅಗಳಾಡು, ಅಗುಳಾಡು, ಅಲ್ಲಾಡು, ಅಳ್ಳಾಡು ಎಂಬ ಧಾತುಗಳನ್ನು ಕೊಟ್ಟು ಅವುಗಳಿಂದ ಅಗಲ್, ಅಗಲು, ಅಗಳ್, ಅಗುಳು, ಅಲ್ಲು, ಅಳ್ಳು ಎಂಬ ಮೂಲರೂಪಗಳನ್ನು ನಿರ್ಮಿಸಿಕೊಂಡಿದ್ದಾರೆ. ಇವಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ. ಏಕದೇಶೀಯವಾಗಿ ಬರುವ ಇಂಥ ಶಬ್ದಗಳನ್ನು ಈ ನಿಘಂಟಿನಲ್ಲಿ ಸೇರಿಸಿಕೊಂಡಿಲ್ಲ. ಹಾಗೆಯೇ 'ಅಗಳ್ಯಾಡು' ಎಂಬಂಥ ಗ್ರಾಮ್ಯರೂಪಗಳನ್ನೂ ಈ ನಿಘಂಟಿನಲ್ಲಿ ಕೊಟ್ಟಿಲ್ಲ.

**ನಾಮವಾಚಕ**:— ಎಲ್ಲ ನಾಮವಾಚಕಗಳನ್ನೂ ಮುಖ್ಯ ಉಲ್ಲೇಖಗಳಾಗಿ ಪ್ರಕೃತಿರೂಪದಲ್ಲಿ ಕೊಡಲಾಗಿದೆ. ಬಹುವ್ರೀಹಿ ಸಮಾಸದಲ್ಲಿ -ಅಂ, -ಅನ್ ಅಂತವಾದ ನಾಮವಾಚಕಗಳನ್ನು ಅಕಾರಾಂತವಾಗಿಯೇ ತೋರಿಸಲಾಗಿದೆ. ಉದಾ— **ಅಗಲ್ದುರದ, ಕೆಂಗಣ್ಣ, ನೀಳ್ದೋಳ, ಬಟ್ಟೆದೊಡೆಯ** ಇತ್ಯಾದಿ.

**ಗುಣವಾಚಕ**:— ಕರಿ, ಕರಿದು, ಕರಿಯ, ಕರ್, ಕಾರ್, ಕರು; ಬಿಳಿ, ಬಿಳಿದು, ಬಿಳಿಯ, ಬೆಳ್, ಬೆಳು ಮುಂತಾದ ಗುಣವಾಚಕ ರೂಪಗಳಲ್ಲಿ ಕರಿದು, ಬಿಳಿದು ಎಂಬ ರೂಪಗಳನ್ನು ವ್ಯಾಕರಣಕಾರರು ಮೂಲರೂಪವೆಂದು ಅಂಗೀಕರಿಸಿದ್ದಾರೆ. ಈ ರೂಪಗಳನ್ನು ಮುಖ್ಯ ಉಲ್ಲೇಖಗಳಾಗಿ ಪರಿಗಣಿಸಿ ಅವುಗಳ ಕೆಳಗೆ ಉಳಿದ ರೂಪಗಳನ್ನು ತೋರಿಸಿದೆ. ಕರಿ, ಬಿಳಿ ಮುಂತಾದ ರೂಪಗಳನ್ನು ಪ್ರತ್ಯೇಕ ಉಲ್ಲೇಖಗಳಾಗಿ ಕೊಟ್ಟು ಅರ್ಥೋದಾಹರಣೆಗಳಿಗೆ 'ಕರಿದು' ನೋ. 'ಬಿಳಿದು' ನೋ. ಎಂದು ಮುಂತಾಗಿ ಸೂಚಿಸಿದೆ. ತಕ್ಕ, ಕೆಟ್ಟ ಎಂಬ ಶಬ್ದಗಳು ಧಾತುಗಳ ನಿಷ್ಪನ್ನ ರೂಪಗಳಾದರೂ ಗುಣವಾಚಕ ಪ್ರಯೋಗದಲ್ಲಿ ಅವು ಸ್ವತಂತ್ರ ಶಬ್ದಗಳು. ಇವಕ್ಕೆ ಪ್ರತ್ಯೇಕ ಸ್ಥಾನವುಂಟು. ಆದ್ದರಿಂದ ಇವುಗಳನ್ನು ಪ್ರತ್ಯೇಕ ಉಲ್ಲೇಖಗಳಾಗಿ ಕೊಡಲಾಗಿದೆ. ಹೀಗೆಯೇ ಸಲೆ ಮಿಗೆ ಮುಂತಾದ ಈ ತೆರನ ಇತರ ಶಬ್ದಗಳಿಗೂ ಈ ನಿಯಮವನ್ನೇ ಅನುಸರಿಸಿದೆ.

**ಸರ್ವನಾಮಗಳು**:— ಎಲ್ಲ ಸರ್ವನಾಮಗಳನ್ನೂ ಈ ನಿಘಂಟಿನಲ್ಲಿ ಮುಖ್ಯಉಲ್ಲೇಖಗಳಾಗಿ ಕೊಟ್ಟಿದೆ. ಅವುಗಳಲ್ಲಿ ಹಳಗನ್ನಡ ರೂಪಗಳನ್ನು ಮೂಲವಾಗಿಟ್ಟುಕೊಂಡು ಉಳಿದವುಗಳನ್ನು ಅವುಗಳ ಕೆಳಗೆ ಜೋಡಿಸಿದೆ. ವರ್ಣಾನುಕ್ರಮದಲ್ಲಿ ಬರಬೇಕಾದ ಕಡೆ ಆಯಾ ಶಬ್ದವನ್ನು ಕೊಟ್ಟು ಅರ್ಥೋದಾಹರಣೆಗಳಿಗೆ ಮೂಲಶಬ್ದವನ್ನು 'ನೋ' ಎಂದು ಸೂಚಿಸಿದೆ. ಉದಾ— **ಅದು, ಅವು, ಅವನ್, ಅವನು, ಅವಳ್, ಅವಳು; ಇದು, ಇವು, ಇವನ್, ಇವನು, ಇವಳ್, ಇವಳು. ಅವನ್** 'ಅದು' ನೋ. **ಅವನು** 'ಅದು' ನೋ. **ಇವನು** 'ಇದು' ನೋ. **ಇವಳು** 'ಇದು' ನೋ.

**ಅವ್ಯಯ**:— ಸಾಮಾನ್ಯವಾಗಿ ಎಲ್ಲ ಅವ್ಯಯಗಳನ್ನೂ ಈ ನಿಘಂಟಿನಲ್ಲಿ ಮುಖ್ಯಉಲ್ಲೇಖಗಳಾಗಿ ಸೇರಿಸಿಕೊಂಡಿದೆ. ಆದರೆ ಯಾವುದಾದರೊಂದು ಅವ್ಯಯ ಸ್ವತಂತ್ರವಾಗಿ ನಿಲ್ಲದೆ ಬೇರೊಂದು ಶಬ್ದಕ್ಕೆ ಹತ್ತುವ ಪಕ್ಷದಲ್ಲಿ ಆ ಅವ್ಯಯವನ್ನು ಪ್ರತ್ಯಯವೆಂದು ಭಾವಿಸಿ, ಅದರ ಹಿಂದೆ - ಚಿಹ್ನೆ (Hyphen) ಹಾಕಿ ಸೂಚಿಸಿದೆ. ಉದಾ— **-ಅ**$_3$, **-ಅ**$_4$, **-ಅ**$_5$.

**ಪ್ರತ್ಯಯ** :— ಪ್ರತ್ಯಯಗಳನ್ನು ಇತರ ಶಬ್ದಗಳಂತೆ ಮುಖ್ಯ ಉಲ್ಲೇಖಗಳಾಗಿ ಕೊಟ್ಟಿದೆ. ಪ್ರತ್ಯಯಗಳಲ್ಲಿ ಶಬ್ದದ ಆದಿಯಲ್ಲಿ ಸೇರುವುದಕ್ಕೆ ಪೂರ್ವಪ್ರತ್ಯಯವೆಂದೂ, ಮಧ್ಯದಲ್ಲಿ ಸೇರುವುದಕ್ಕೆ ಮಧ್ಯಪ್ರತ್ಯಯವೆಂದೂ, ಅಂತ್ಯದಲ್ಲಿ ಸೇರುವುದಕ್ಕೆ ಪರಪ್ರತ್ಯಯವೆಂದೂ ನಿರ್ದೇಶಿಸಿದೆ. ಈ ಪ್ರತ್ಯಯಗಳಲ್ಲಿ ಆಖ್ಯಾತ ಮತ್ತು ವಿಭಕ್ತಿ ಪ್ರತ್ಯಯಗಳನ್ನೂ ಅವುಗಳ ಸಂಬಂಧವಾಗಿ ಸೇರುವ ಆಗಮಗಳನ್ನೂ ಈ ನಿಘಂಟಿನಲ್ಲಿ ಸ್ವತಂತ್ರ ಉಲ್ಲೇಖಗಳಾಗಿ ತೋರಿಸಿಲ್ಲ. ಆದರೆ ಕೃತ್, ತದ್ಧಿತನಾಮ ಪ್ರತ್ಯಯಗಳನ್ನೂ ಧಾತುಸಾಧಕ -ಇಸು, -ಸು, -ಚು ಪ್ರತ್ಯಯಗಳನ್ನೂ ಪ್ರತ್ಯೇಕವಾಗಿ ಕೊಟ್ಟಿದೆ.

**ನುಡಿಗಟ್ಟು** :— ನುಡಿಗಟ್ಟುಗಳನ್ನು (Idioms) ಆಯಾ ಮುಖ್ಯಶಬ್ದದ ಕೆಳಗೆ ಬೇರೊಂದು 'ಪ್ಯಾರಾ' ದಲ್ಲಿ ಪ್ರತ್ಯೇಕವಾಗಿ ಬೇರ್ಪಡಿಸಿ ತೋರಿಸಲಾಗಿದೆ. ಉದಾ— **ಅಗುಳು ಗಂಜಿ ಬೇರೆಯಾಗು ; ಕಣ್ಣಿಗೆ ಎಣ್ಣೆ ಬಿಟ್ಟುಕೊ ; ಬೆಟ್ಟಕ್ಕೆ ಕಲ್ಲು ಹೊರು.** ಈ ನುಡಿಗಟ್ಟುಗಳನ್ನು ಅಗುಳ್, ಕಣ್ಣು, ಬೆಟ್ಟ ಎಂಬ ಮುಖ್ಯ ಶಬ್ದಗಳ ಕೆಳಗೆ ಕೊಟ್ಟಿದೆ. ಇವನ್ನೂ ಸಹ ಅಕಾರಾದಿ ಕ್ರಮದಲ್ಲೇ ಕೊಟ್ಟಿದೆ.

**ದ್ವಿರುಕ್ತಿ** :— ಎಲ್ಲ ದ್ವಿರುಕ್ತಿಗಳನ್ನೂ ಸಾಮಾನ್ಯವಾಗಿ ಈ ನಿಘಂಟಿನಲ್ಲಿ ಉಲ್ಲೇಖಿಸಿಲ್ಲ. ಉಲ್ಲೇಖಿಸಿರುವ ದ್ವಿರುಕ್ತಿಗಳನ್ನೂ ಮುಖ್ಯ ಉಲ್ಲೇಖದ ಕೆಳಗೆ ಸೂಚಿಸಲಾಗಿದೆ. ವಿಶಿಷ್ಟವಾದಂಥ ದ್ವಿರುಕ್ತಿಗಳನ್ನು ಮಾತ್ರ ಉದಹರಿಸಲಾಗಿದೆ. ಉದಾ— **ಅಕಟಕಟ, ಅಯ್ಯಯ್ಯೋ, ರಾಮರಾಮ.**

## ೩. ಚಾರಿತ್ರಿಕ ವಿಧಾನ (Historical principle)

ಒಂದು ಶಬ್ದಕ್ಕೆ ಹಲವು ರೂಪಗಳಿದ್ದಾಗ ಅವುಗಳಲ್ಲಿ ಭಾಷಾಶಾಸ್ತ್ರ ದೃಷ್ಟಿಯಿಂದ ಅತಿಪ್ರಾಚೀನವೆಂದು ಕಂಡುಬಂದ ರೂಪದಿಂದ ಆರಂಭಿಸಿ ಅರ್ಥಗಳನ್ನೂ ಪ್ರಯೋಗಗಳನ್ನೂ ಕಾಲಾನುಕ್ರಮದಲ್ಲಿ ಆ ಪ್ರಾಚೀನರೂಪದ ಅಡಿಯಲ್ಲಿಯೇ ಕಾಣಿಸಲಾಗಿದೆ. ಮಿಕ್ಕ ರೂಪಗಳನ್ನು ಆಯಾ ಸ್ಥಾನಗಳಲ್ಲಿ ಕೊಟ್ಟು ಮೂಲಶಬ್ದಕ್ಕೆ ಸಂಬಂಧವನ್ನು 'ನೋಡಿ' ಎಂದು ಸೂಚಿಸಿದೆ. ಉದಾ— **ಅಟ್ಕಱ್, ಅಕ್ಕಱ್, ಅಕ್ಕರು, ಅಕ್ಕರೆ** (ನಾ). ಅಕ್ಕರೆ 'ಅಟ್ಕಱ್' ನೋ. **ಅಚ್ಚರಸಿ, ಅಚ್ಚರಸೆ, ಅಚ್ಚರ್ರಿ₂, ಅಚ್ಚರಿಸಿ, ಅಚ್ಚರೆ** (ನಾ). **ಅಚ್ಚರೆ** 'ಅಚ್ಚರಸಿ' ನೋ.

ಶಬ್ದಗಳನ್ನು ಒಟ್ಟುಗೂಡಿಸುವಾಗ ಒಂದು ಶಬ್ದದ ನೇರ ರೂಪಾಂತರಗಳನ್ನು ಒಂದು ಕಡೆ ಸೇರಿಸಿದೆ. ಆದರೆ ಬೇರೆ ಬೇರೆ ಪ್ರತ್ಯಯಾದಿಗಳು ಸೇರಿ ಆದ ಶಬ್ದಗಳೆಲ್ಲವನ್ನೂ ಒಟ್ಟುಗೂಡಿಸಿಲ್ಲ. ಉದಾ— **ಪೆರ್ಮೆ, ಹೆಮ್ಮೆ** ಇವುಗಳನ್ನು ಒಂದೇ ಕಡೆ ಕೊಟ್ಟಿದೆ. ಆದರೆ 'ಪೆಂಪು' ಎಂಬ ಶಬ್ದವನ್ನು 'ಪೆರ್ಮೆ' ಶಬ್ದದ ಕೆಳಗೆ ಸೂಚಿಸದೆ ಪ್ರತ್ಯೇಕವಾಗಿಯೇ ಉಲ್ಲೇಖಿಸಿದೆ. ಹಾಗೆಯೇ ಅಗಸ, ಅಗಸಿತಿ ಶಬ್ದಗಳನ್ನೂ ಒಟ್ಟಿಗೆ ಸೇರಿಸಿಲ್ಲ. ಆದರೆ **ಅಗಸೆ, ಅಗುಸೆಗಳನ್ನು** ಒಂದೇ ಕಡೆ ವಿವೇಚಿಸಿದೆ.

ಸಂಸ್ಕೃತ ಶಬ್ದಗಳಿಗೆ ಈ ಕ್ರಮವನ್ನು ಅನುಸರಿಸಿಲ್ಲ. ಒಂದು ಸಂಸ್ಕೃತ ಶಬ್ದಕ್ಕೆ ಹಲವು ರೂಪಗಳಿದ್ದಾಗ ಅವುಗಳನ್ನೆಲ್ಲಾ ಒಂದೇ ಕಡೆ ವಿವೇಚಿಸುವುದಿಲ್ಲ. ಉದಾ— **ಅಕೃತ - ಅಕೃತಕ ; ಅಕ್ಷಿಸ್ಪಂದ - ಅಕ್ಷಿಸ್ಪಂದನ** ಇತ್ಯಾದಿ. ಅವುಗಳೆಲ್ಲ ಆಯಾ ಸ್ಥಳಗಳಲ್ಲಿ ಮುಖ್ಯ ಉಲ್ಲೇಖಗಳಾಗಿ ಬರುತ್ತವೆ. ಆದರೆ ಅಲ್ಪ ಸ್ವಲ್ಪ ವಿಕೃತವಾಗಿ ಮಾರ್ಪಾಟಾದ ತದ್ಭವಗಳನ್ನು ಒಂದೇ ಕಡೆ ವಿವೇಚಿಸಲಾಗಿದೆ. ಉದಾ— **ಅರ್ಚನೆ, ಅಚ್ಚನ, ಅಚ್ಚನೆ** (ನಾ). [ಸಂ. ಅರ್ಚನಾ]

ಬಿಂದುಸಹಿತವಾದ ಶಬ್ದರೂಪವು ಪ್ರಾಚೀನವಾದುದೆಂದು ಪರಿಗಣಿಸಿ ಅದನ್ನು ಮುಖ್ಯ ಶಬ್ದವಾಗಿ ಕೊಟ್ಟು ಬಿಂದು ರಹಿತವಾದ ಶಬ್ದವನ್ನು ಅದರ ರೂಪಪ್ರಭೇದ (Variant form) ವೆಂದು ಭಾವಿಸಿ ಬಿಂದುಸಹಿತವಾದ ಶಬ್ದದ ಕೆಳಗೆ ಕಾಣಿಸಿದೆ. ಉದಾ— **ಅಡಂಗು₁, ಅಡಗು₁ ; ಅಕ್ಕಜಂಗೊಳ್, ಅಕ್ಕಜಗೊಳ್.** ಆದರೆ ಬಿಂದುರಹಿತವಾದ ರೂಪಕ್ಕೆ ಪ್ರಾಚೀನ ಪ್ರಯೋಗಗಳ ಆಧಾರವಿದ್ದು ಈಚಿನ ಪ್ರಯೋಗಗಳು ಬಿಂದುಸಹಿತವಾಗಿದ್ದರೆ ಆಗ ಪ್ರಾಚೀನತೆಯ ಆಧಾರದ ಮೇಲೆ ಬಿಂದುರಹಿತವಾದ ರೂಪವನ್ನೇ ಮುಖ್ಯಶಬ್ದವಾಗಿ ಕೊಟ್ಟಿದೆ. ಉದಾ— **ಅಡಗು₃, ಅಡಂಗು₃. ಅಡುಕು, ಅಡುಂಕು.**

**ಅರ್ಥನಿರೂಪಣೆ** :— ಶಬ್ದಗಳಿಗೆ ಲಕ್ಷಣವನ್ನು ಹೇಳಿ ವಿವರಿಸುವಾಗ, ಸಾಮಾನ್ಯವಾಗಿ ಆಕ್ಸ್‌ಫರ್ಡ್ ಇಂಗ್ಲಿಷ್ ನಿಘಂಟನ್ನು ಮಾದರಿಯಾಗಿಟ್ಟುಕೊಳ್ಳಲಾಗಿದೆ. ಶಬ್ದಗಳಿಗೆ ತಿಳಿದಮಟ್ಟಿಗೆ ಮೊದಲು ವಾಚ್ಯಾರ್ಥವನ್ನೂ ಆಮೇಲೆ ಲಕ್ಷ್ಯಾರ್ಥವನ್ನೂ ಕೊಡಲಾಗಿದೆ. ಎಲ್ಲ ಅರ್ಥಗಳಿಗೂ ಪ್ರಯೋಗಗಳನ್ನು ಕಾಲಾನುಕ್ರಮದಲ್ಲಿ ತೋರಿಸಲಾಗಿದೆ. ಅರ್ಥದ ಪೌರ್ವಾಪರ್ಯ ಖಚಿತವಾಗಿ ಗೊತ್ತಾಗದ ಕಡೆ ಪ್ರಯೋಗಗಳ ಪ್ರಾಚೀನತೆಯನ್ನು ಅನುಸರಿಸಿ ಅರ್ಥವನ್ನು ಬರೆದಿದೆ. ಶಬ್ದದ ಅರ್ಥ ಸ್ಪಷ್ಟವಾಗುವಂತೆ ಬೇರೆ ಬೇರೆ ಮಾತುಗಳಿಂದ ಆದಷ್ಟೂ ಸಂಕ್ಷೇಪವಾಗಿ ನಿರೂಪಿಸಿ, ಅದೇ ಅರ್ಥ ಬರುವ ಬೇರೆ ಶಬ್ದಗಳನ್ನೂ, ಸಂಸ್ಕೃತದ ಪರ್ಯಾಯ ಶಬ್ದಗಳನ್ನೂ ಯಥೋಚಿತವಾಗಿ ಕೊಡಲಾಗಿದೆ. ಒಂದಕ್ಕಿಂತ ಹೆಚ್ಚು ಅರ್ಥಗಳಿದ್ದರೆ ೧, ೨, ೩ ಮುಂತಾಗಿ ಸಂಖ್ಯೆಗಳನ್ನು ಕೊಟ್ಟು ವಿವರಿಸಿ ಅರ್ಥಭೇದಗಳನ್ನು ತೋರಿಸಲಾಗಿದೆ. ಉದಾ— **ಅಂಕ₃** (ನಾ). **೧.** ಕೊಕ್ಕೆ. **೨.** ಡೊಂಕಾಗಿ ಬಾಗಿರುವ ಆಯುಧ ; ಅಂಕುಶ. **೩.** ಕೊಂಕು ; ಡೊಂಕು. **೪.** ಕುದುರೆಯನ್ನು ಹತ್ತುವಾಗ ಕಾಲನ್ನು ಇಟ್ಟುಕೊಳ್ಳುವ ಬಳೆ ; ಅಂಕವಣಿ ; ರಿಕಾಪು ಇತ್ಯಾದಿ.

ಮುಖ್ಯ ಶಬ್ದಗಳಿಗಿರಬಹುದಾದ ಸಾದೃಶ್ಯ ವೈದೃಶ್ಯಗಳನ್ನು ಇತರ ಶಬ್ದಗಳೊಂದಿಗೆ ಹೋಲಿಸು, ಪರಾಮರ್ಶಿಸು ಮುಂತಾದ ಶಬ್ದಗಳ ಮೂಲಕ ಗಮನವನ್ನು ಸೆಳೆಯಲಾಗಿದೆ. ಹೋಲಿಸು ಪರಾಮರ್ಶಿಸು ಇವುಗಳಿಗಿರುವ ವ್ಯತ್ಯಾಸವನ್ನು 'ಇತರ ಅಂಶಗಳು' ವಿಭಾಗದಲ್ಲಿ ಕೊಟ್ಟಿದೆ. ಉದಾ— **ಅಂಕಕಾಱ** (ನಾ). 'ಸಮರಂಗಾಱ' ಪರಾ. **ಅಂಶಗಣ** (ನಾ). 'ದೇವಗಣ' ಪರಾ. **ಅಕ್ಕಾಜಿ** (ನಾ). ಅಣ್ಣಾಜಿ,

ಭಾವಾಜಿ, ಮಾವಾಜಿ ಇತ್ಯಾದಿ ಹೋ. ತದ್ಭವ ಮತ್ತು ಸಂಸ್ಕೃತ ಶಬ್ದಗಳ ಅರ್ಥವಿವರಣೆಯಲ್ಲಿ ಮೂಲಶಬ್ದದ ಎಲ್ಲ ಅರ್ಥಗಳೂ ತದ್ಭವ ಶಬ್ದಕ್ಕೆ ಇದ್ದರೆ = ಚಿಹ್ನೆಯನ್ನು ಬಳಸಿ ಮೂಲಶಬ್ದವನ್ನು ಅದರ ಮುಂದೆ ಸೂಚಿಸಿದೆ. ಕೆಲವು ಅರ್ಥಗಳು ಮಾತ್ರ ಸಮಾನವಾಗಿದ್ದರೆ =೧, =೨, =೩ ಮುಂತಾದ ಸಂಖ್ಯೆಗಳ ಮೂಲಕ ಸೂಚಿಸಲಾಗುವುದು. ಹೆಚ್ಚಿನ ಅಥವಾ ಮಾರ್ಪಾಟು ಹೊಂದಿದ ಅರ್ಥವನ್ನು ಪೂರ್ತಿಯಾಗಿ ಬರೆದು ತೋರಿಸಲಾಗುವುದು. ಇದೇ ಕ್ರಮವನ್ನು ಇತರ ಶಬ್ದಗಳಿಗೂ ಅನುಸರಿಸಲಾಗಿದೆ. ಹಾಗೆಯೇ ಅರ್ಥವನ್ನು ಕೊಡುವಾಗ ಶಬ್ದದ ಒಂದು ಅರ್ಥ ಅದರ ಜ್ಞಾತಿಶಬ್ದದ ಅಥವಾ ಬೇರೊಂದು ಶಬ್ದದ ಅರ್ಥಕ್ಕೆ ಸಮಾನವಾಗಿದ್ದರೆ ಆ ಎರಡನೆಯ ಶಬ್ದದ ಅರ್ಥವನ್ನು ಮತ್ತೆ ಉಲ್ಲೇಖಿಸದೆ ಅದರ ಹಿಂದೆ ಸಮಾನಾರ್ಥಕ ಚಿಹ್ನೆ (=) ಯನ್ನು ಹಾಕಿ ಸೂಚಿಸಲಾಗುವುದು. ಉದಾ— **ಅಂಕುಸ$_1$** (ನಾ). = **ಅಂಕುಶ. ಅಂಬುನಿಧಾನ** (ನಾ). = **ಅಂಬುಧಿ.**

ಅಕ್ಕ, ಅಪ್ಪ, ಅಮ್ಮ, ಅಣ್ಣ, ತಾಯಿ, ತಂದೆ, ಮಗು, ಹಸು, ಕುದುರೆ, ಕತ್ತೆ, ಬೆಕ್ಕು, ಇಲಿ, ಮಣ್ಣು, ಕಲ್ಲು, ಊರು, ಕೇರಿ, ಮನೆ, ಬಾಗಿಲು, ಮರ, ಗಿಡ, ಹೊಳೆ, ಹಳ್ಳ, ಬಾವಿ, ಅಗಸ, ಕಮ್ಮಾರ, ಕುಂಬಾರ ಮುಂತಾದ ದಿನಬಳಕೆಯ ಶಬ್ದಗಳಿಗೆ ಅರ್ಥಗಳನ್ನು ಕೊಡುವ ಅವಶ್ಯಕತೆಯಿಲ್ಲದಿದ್ದರೂ ಅವುಗಳಿಗೂ ವಿವರಣಾತ್ಮಕವಾದ ಅರ್ಥವನ್ನು ಕೊಟ್ಟಿದೆ. ಸಂಸ್ಕೃತದ ಪರ್ಯಾಯ ಶಬ್ದಗಳನ್ನೂ ಸೂಚಿಸಿದೆ.

ಗುಣವಾಚಕಗಳೆಲ್ಲ ನಾಮವಾಚಕಗಳ ಪ್ರಭೇದಗಳಾದುದರಿಂದ ಗುಣವಾಚಕಗಳಿಗೆ ಉದಾಹರಣೆಗಳಾಗಿ ಕೊಡುವ ಪ್ರಯೋಗಗಳನ್ನು ಸಂದರ್ಭಕ್ಕೆ ತಕ್ಕಂತೆ (ವಿಶೇಷ್ಯಗಳ ಲಿಂಗವಚನಾದಿಗಳಿಗನುಸಾರವಾಗಿ) ಅವುಗಳಿಗೆ ಕೊಟ್ಟಿರುವ ಅರ್ಥಗಳೊಂದಿಗೆ ಹೊಂದಿಸಿಕೊಳ್ಳಬೇಕು. ಉದಾ— **ಅಕಂಪಿತಶರೀರ** (ಗು). ನಡುಗದ ಮೈಯುಳ್ಳ ; ಸ್ಥೈರ್ಯವುಳ್ಳ : ಪರಮಯೋಗಿಯಿರ್ಪಂದದಿಂದಕಂಪಿತಶರೀರನಿರ್ದುದು ಜಲಾಶಯೋಪಾಂತದೊಳ್ ಬಕಂ (ಪಂರಾಮಾ. ೭–೯೧). **ಅಕರ್ಣಹೃದಯ** (ಗು). **೧.** ಕಿವಿ ಹೃದಯಗಳಿಲ್ಲದ ; ಕಿವಿಯಿಂದ ಕೇಳಿ ಹೃದಯದಲ್ಲಿ ಆನಂದಿಸಿ ಅನುಭವಿಸಲಾರದ. **೨.** ಹಾವಿನ ಹೃದಯವುಳ್ಳ. **೧, ೨** : ಕವಿತಾವಿಷಯಮಕರ್ಣಹೃದಯನಪ್ಪ ಜಡಾತ್ಮಂಗೇವುದೋ (ಮಲ್ಲಿಪು. ೧–೩೬). ಈ ಪ್ರಯೋಗಗಳಲ್ಲಿ 'ಅಕಂಪಿತ ಶರೀರ' ಶಬ್ದಕ್ಕೆ ಕೊಟ್ಟಿರುವ ಪ್ರಯೋಗ ನಪುಂಸಕಲಿಂಗದ ಅರ್ಥವುಳ್ಳದು. 'ಅಕರ್ಣಹೃದಯ' ಶಬ್ದದ ಪ್ರಯೋಗ ಪುಲ್ಲಿಂಗದ ಅರ್ಥವುಳ್ಳದು. ಆದರೆ ಈ ಬೇರೆ ಬೇರೆ ಸಂದರ್ಭಗಳಲ್ಲಿ ಇವುಗಳ ಲಿಂಗವ್ಯತ್ಯಯಕ್ಕೆ ಅವಕಾಶವುಂಟಾಗುವುದರಿಂದ ಗುಣವಾಚಕಗಳ ಅರ್ಥವನ್ನೇ ಇಲ್ಲಿ ಕೊಟ್ಟಿದೆ. ಸಂಸ್ಕೃತ ವಿಶೇಷಣಗಳನ್ನು ಇಲ್ಲಿ ಗುಣವಾಚಕಗಳೆಂದೇ ಪರಿಗಣಿಸಲಾಗಿದೆ.

ಈ ಹಿಂದೆ ತಿಳಿಸಿರುವಂತೆ ಸುಮಾರು ಕ್ರಿ. ಶ. ೧೦೦೦ಕ್ಕೆ ಈಚಿನ ಅಂಕಿತನಾಮಗಳನ್ನು ಈ ನಿಘಂಟಿನಲ್ಲಿ ಕೊಟ್ಟಿಲ್ಲ. ಆದರೆ ಒಂದು ಅಂಕಿತನಾಮಕ್ಕೆ ರೂಢಿಯಲ್ಲಿ ಬೇರೆ ಅರ್ಥವೂ ಸಾಧಾರಣವಾಗಿ ಇರುವ ಪಕ್ಷದಲ್ಲಿ ಅಂಥ ಅಂಕಿತನಾಮಗಳನ್ನು ಕೊಡಲಾಗಿದೆ. ಉದಾ— **ಅಂಗದ** (ನಾ). **೧.** ತೋಳಿನ ಬಳೆ. **೨.** ವಾಲಿಯ ಮಗ. **ಶಕುನಿ** (ನಾ). **೧.** ಒಂದು ಜಾತಿಯ ಹಕ್ಕಿ. **೨.** ದುರ್ಯೋಧನನ ಸೋದರಮಾವ.

ಶಬ್ದಮಣಿದರ್ಪಣದಲ್ಲಿ ಉಕ್ತವಾದ ಧಾತುಗಳಿಗೆ ಅರ್ಥಗಳನ್ನು ಕೊಡುವಾಗ ಅಲ್ಲಿಯ ಕ್ರಮವನ್ನೇ ಅನುಸರಿಸಿದೆ. ಉದಾ— **ಅಗಿ$_1$** (ಕ್ರಿ). ಹೆದರು ; ಹಿಗ್ಗು ; ಜಗಿ : "ಸಂತ್ರಾಸ, ಹರ್ಷ, ಚರ್ವಣೇಷು" (ಶಮುಧಾ).

## ೪. ಪ್ರಯೋಗಗಳನ್ನು ಸೂಚಿಸಿರುವ ರೀತಿ

ಶಬ್ದಗಳಿಗೆ ಅರ್ಥಗಳನ್ನು ಸೂಚಿಸುವಾಗ ಪ್ರತಿಯೊಂದು ಅರ್ಥಕ್ಕೂ ಶಾಸನಗಳಿಂದಲೂ ಕಾವ್ಯಗಳಿಂದಲೂ ಸಾಧ್ಯವಾದಷ್ಟು ಪ್ರಯೋಗಗಳನ್ನು ಎತ್ತಿಕೊಡಲಾಗಿದೆ. ಶಾಸನಗಳಿಂದ ಪ್ರಯೋಗಗಳನ್ನು ಉದ್ಧರಿಸುವಾಗ ಅವುಗಳ ಆಕರಗಳನ್ನೂ ಜೊತೆಯಲ್ಲಿಯೇ ಕಾಲವನ್ನೂ ಸೂಚಿಸಿದೆ. ಕಾವ್ಯಗಳಿಂದ ಪ್ರಯೋಗಗಳನ್ನು ಉದ್ಧರಿಸುವಾಗ ಆಕರಗಳನ್ನು ಮಾತ್ರ ಕೊಟ್ಟಿದೆ. ಅವುಗಳ ಕಾಲವನ್ನು ಸಂಕ್ಷಿಪ್ತ ಸೂಚಿಯಿಂದ ತಿಳಿದುಕೊಳ್ಳಬಹುದು. ದೇಶ್ಯಶಬ್ದಗಳಿಗೆ ಪ್ರಯೋಗಗಳನ್ನು ಕೊಡುವಾಗ ಅರ್ಥ ಸ್ಪಷ್ಟವಾಗಿರುವ ಕಡೆ ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಪ್ರಯೋಗಗಳನ್ನು ಕೊಡಲಾಗಿದೆ. ಪ್ರಯೋಗಗಳು ವಿಪುಲವಾಗಿದ್ದು ಸ್ವಾರಸ್ಯವಾಗಿದ್ದರೆ ಶತಮಾನಕ್ಕೆ ಒಂದರಂತೆ ವಿವೇಚಿಸಿ ಉದ್ಧರಿಸಿದೆ. ಅದರ ಜೊತೆಗೆ ಕೆಲವು ಪ್ರಯೋಗಗಳಿಗೆ ಸಂಬಂಧಿಸಿದಂತೆ ಆಕರಗಳನ್ನು ಮಾತ್ರ ಸೂಚಿಸಿ ಆಯಾ ಗ್ರಂಥಗಳನ್ನು ನೋಡಿಕೊಳ್ಳಿ ಎಂದು ನಿರ್ದೇಶಿಸಿದೆ. ಅರ್ಥ ಸಂದಿಗ್ಧವಾಗಿದ್ದರೆ ಅರ್ಥಪುಷ್ಟಿಗಾಗಿ ಹೆಚ್ಚು ಪ್ರಯೋಗಗಳನ್ನು ಕೊಡಲಾಗುವುದು. ಉದಾ— **ಅಕ್ಕ$_1$**, ಅಕ$_1$, ಅಕ್ಕಳ್ (ನಾ). **೧.** ಹಿರಿಯ ಸಹೋದರಿ : ತಮ್ಮಕ್ಕನಂ ಕಾಣಲ್ ಪೋದಾತಂ (ಪಂಪಭಾ. ೮–೫೮ ವ) ; ತಮ್ಮಕ್ಕನತ್ತಿಮಬ್ಬೆಯಲ್ಲಿಗೆ ಗುಂಡಮಬ್ಬೆ ಬಂದು (ಅಜಿಪು. ೧–೪೬) ; ಆತನ ಅಕ್ಕ ಸಿರಿಯಬ್ಬೆ ಪರಲೋಕ ವಿನೆಯಂ ಮಾಡಿ (ಎಕ. VIII, ಸೊರಬ, ೪೬–೬ ; 1008) ; ಹಿಂಗದೆಯಕ್ಕತಂಗಿಯರ ಮೇಳದಲಿ ಪುರಾಂಗನಾಜನವೈದಿದುದು (ಕಂನವಿ. ೨೧–೨೨) ; ಅಕ್ಕನ ಹಗೆ ಭಾವನ ನಂಟು (ಗಾದೆ) ; ಅಕ್ಕನ ಬಂಗಾರವಾದರೂ ಅಕ್ಕಸಾಲೆ ಬಿಡ (ಗಾದೆ). **೨.** (ಗೌರವಾರ್ಥದಲ್ಲಿ) ಹೆಂಗಸು : ಗಾಂಧಾರಿಪೆಸರಿನಕ್ಕಂಗಳು ತಾಂ (ಪುಣ್ಯಾಸ್ರ. ೨–೪೬) ; ಮನೆಯೊಳಗಕ್ಕಂದಿರನುವೆ (ಜಯಕಾ. ೧–೨೦). **೩.** ಹೆಂಗಸರನ್ನು ಸಂಬೋಧಿಸುವಾಗ ಸರ್ವಸಾಧಾರಣವಾಗಿ ಉಪಯೋಗಿಸುವ ಮಾತು (ಅವ್ವ, ಅಮ್ಮ ಎಂಬಂತೆ) : ಅಕ್ಕ ಪೇಟೂರೊಳಿಂ ನುಡಿವೋ ಬೇಸಜಂ (ಆದಿಪು. ೩–೩೧) ; ಲತಾಂಗಿ ನೊಂದಿನಿಸುಮಲ್ಲಿರದಕ್ಕನ ಬರ್ಪ ಬಟ್ಟೆಯಂ ನೋಡುವಮೇಟಿಮೆಂದು (ಕಾದಂಉ. ೯೫) ; ಅಕ್ಕ ನಿನ್ನಂತಾರೀ ಜಗದೊಳಡಬಲ್ಲರ್ (ಧರ್ಮಾಮೃ. ೫–೯೮) ; ಬನ್ನಿರೆ ಅಕ್ಕಗಳು, ಹೋಗಿರೆ ಆಲದ ಮರಕ್ಕೆ (ಬಸವ. ೫೬೨) ; ಅಕ್ಕ ಕೇಳವ್ವ ಅಕ್ಕಯ್ಯ ನಾನೊಂದ ಕನಸ ಕಂಡೆ (ಮುಹದೇ. ೧೫–೨) ; ತರಳೆ ನಿನ್ನಂ ನಂಬಿ ಹೋದಪೆವಕ್ಕ ಚೆನ್ನಕ್ಕ (ಬಸಪು. ೧೪–೩) ; ಅಕ್ಕ ಬಪ್ಪೆನು ಬಿಡು ಸೆಜಗ (ಭರಚ. ೩೬–೩೫). **೪.** ಹೆಂಗಸಿನ ಹೆಸರಿನ ಕೊನೆಯಲ್ಲಿ

(ಅವ್ವ, ಅಮ್ಮ ಎಂಬಂತೆ) ಸೇರುವ ಮಾತು. ಉದಾ— ನಂಬಿಯಕ್ಕ, ಮಹದೇವಿಯಕ್ಕ, ರಾಮಕ್ಕ. **೫.** ಅಪೂರ್ವವಾಗಿ ಗಂಡಸರ ಹೆಸರಿನ ಕೊನೆಯಲ್ಲಿ ಸೇರುವ ಮಾತು : ಮಾರಕ್ಕ ಅರಸರ್ ಬನವಾ(ವಾ)ಸಿ ಪನ್ನಿಚ್ಛಾಸಿರಮುನಾಳೆ (ಎಇ. VI, ೧೬೩–೧ ; 780). **ಅಕ್ಕೆ₁ : ೧.** ಬೆರಲ್ಗಳೊಪ್ಪಿರ್ದು ವಾಯಕನಂಘ್ರಿಯುಗಳ ಪಲ್ಲವದಿ (ಮೋಹತ. ೨೩–೧೪) ; (ಮೋಹತ. ೧೩–೩೬, ೨೪–೧೯, ೨೫–೫, ೩೧–೨೧, ೩೩–೫೨, ೩೩–೬೩, ೪೦–೨೬ ನೋ.). [ಆ + ಅಕ = ಆಯಕ] ; ನಿರುತದಿಂದವರು ಶುಚಿಯಾಗಿ ಹಾಸುತಲಾಯಕನ ಕುಳ್ಳಿರಿಸಿ ಬಳಿಕ್ಕಂ (ಪ್ರಭುಪು. ೮–೬೬) ; ಮುಪ್ಪೊಳಲ ಜೈಸಿದ ಸದಾಶಿವನ ಪತ್ನಿ ಗಂತಃಕರಣದನ್ನೆಯಿಾಯಕನೆನಿಪ್ಪುದನುದಾಹರಿಸುವಂತೆ (ಸೌಂದಪು. ೧೩–೪೦) ; [ಈ + ಅಕ = ಈಯಕ]. **ಅಕ್ಕಳ್ : ೧.** 'ಅಕ್ಕಳ್ಮಗ' ಪರಾ. **೨.** ಸೂಳೆಯರ ನೆಗಟ್ತೆ ನಾಡೆ ತನಗಟ್ತುದಲಕ್ಕಳೆ ಸೂಳೆಯಾಗಳೇ (ಪಂಪಭಾ. ೪–೯೪) ; ಕೊಂತಿಮಾದೇವಿಗವೊಂದುತ್ತರಮಾದಳ್ ಕರ್ಣಂಬೆತ್ತಕ್ಕಳೆ [ಪಾಠಾಂ. ಕ್ಕನೆ, ಕ್ಕಳೆ] (ಪಂಪಭಾ. ೧೨–೧೨೫). ℙ (ಬಹುವ) ಅಕ್ಕಂಗಳ್, ಅಕ್ಕಗಳು, ಅಕ್ಕಂದಿರ್, ಅಕ್ಕದಿರು, ಅಕ್ಕನವರು ಇತ್ಯಾದಿ. ℙ ಗೌರವವನ್ನು ಅಥವಾ ಪ್ರೀತಿಯನ್ನು ತೋರಿಸುವಾಗ ಅಕ್ಕಚ್ಚಿ, ಅಕ್ಕಣ್ಣಿ, ಅಕ್ಕಮ್ಮ, ಅಕ್ಕಯ್ಯ, ಅಕ್ಕವ್ವ ಮುಂತಾದ ಸಮಾಸ ರೂಪಗಳೂ ಉಂಟು.

ದೇಶ್ಯ ಶಬ್ದಗಳಿಗೆ ಕೊಟ್ಟಿರುವಂತೆ ಸಂಸ್ಕೃತ ಶಬ್ದಗಳಿಗೆ ಸಾಮಾನ್ಯವಾಗಿ ಪ್ರಯೋಗಗಳನ್ನು ಕಾಣಿಸಿಲ್ಲ. ಆದರೆ ಸಂಸ್ಕೃತದಲ್ಲಿಲ್ಲದ ಅರ್ಥ ಕನ್ನಡದಲ್ಲಿ ಕಂಡುಬಂದರೆ ಆ ಅರ್ಥಸಮರ್ಥನೆಗಾಗಿ ಪ್ರಯೋಗಗಳನ್ನು ಕೊಡಲಾಗಿದೆ. ಅಲ್ಲದೆ ಶಬ್ದ ಅಪೂರ್ವದ್ದಾಗಿದ್ದರೆ, ವಿಶೇಷ ಅರ್ಥವುಳ್ಳದ್ದಾಗಿದ್ದರೆ, ಅಥವಾ ಶಾಸ್ತ್ರಪರಿಭಾಷೆಯದಾಗಿದ್ದರೆ ಅರ್ಥವನ್ನು ಖಚಿತಪಡಿಸಲು ಉಚಿತವರಿತು ಪ್ರಯೋಗಗಳನ್ನು ತೋರಿಸಿದೆ. ಉದಾ— **ಅಂಗಾರ** (ನಾ). **೧.** ಕೆಂಡ. **೨.** ಇದ್ದಲು. **೩.** ಮಂಗಳಗ್ರಹ; ಅಂಗಾರಕ. **೪.** ದೇವರ ಧೂಪಾರತಿಯ ಕೆಂಡವನ್ನು ನೀರಿನಲ್ಲಿ ಆರಿಸಿ, ಅದರಿಂದ ಮಾಧ್ವರು ಹಣೆಯಲ್ಲಿ ಧರಿಸುವ ಊರ್ಧ್ವರೇಖೆ : ತಲೆಭಾರ ಇಳಿದಿತ್ತು ; ಅಂಗಾರ ಬೆಳೆದಿತ್ತು ; ಮೈಯನ್ನು ಮುಚ್ಚಿತ್ತು ಕೆಂಪು ಸೀರೆ (ಸಖೀಗೀ. ೫೪–೯) ; ವೈಷ್ಣವರ ಮಕ್ಕಳಿಗೆ ಅಂಗಾರವೇ ಬಂಗಾರ, ಸ್ಮಾರ್ತರ ಮಕ್ಕಳಿಗೆ ಗಂಧವೇ ಚಂದ (ಗಾದೆ). **೫.** (ಉಕ). "ಬೂದಿ" (ಕಸ್ತೂಕೋ.). **೬.** (ಉಕ). ದೇವರ ಧೂಪಾರತಿಯ ಬೂದಿ; ದೇವಸ್ಥಾನದಲ್ಲಿ ಅಭಿಮಂತ್ರಿಸಿ ಇಟ್ಟಿರುವ ಬೂದಿ; ಪುರೋಹಿತರು, ಜೋಯಿಸರು ಮೊದಲಾದವರು ಅಭಿಮಂತ್ರಿಸಿ ಕೊಟ್ಟ ಬೂದಿ : ರಾಯರ ಸನಾತನಿ ಬಾಲಮಿತ್ರ ಅವರಿಗೆ ದೇವರ ಅಂಗಾರ ಕೊಡ ಹಚ್ಚಿಹೋದ (ನಿರಾಘ. ೬೪–೭) ; ದನಗಳಿಗೆ ಬೇನೆ ಬಂದರೆ ಭಟ್ಟರ ಅಂಗಾರದಿಂದ ಅವಕ್ಕೆ ಗುಣವಾಗುತ್ತಿತ್ತು (ಹಬ್ಬಿಬ. ೨೫). **೭.** ಇಂಗಾಲ (Carbon) : ನಿಜವಾದ ವಜ್ರವು ಬರೀ ಅಂಗಾರದ ಪರಮಾಣುಗಳ ಸಮೂಹವಾದುದರಿಂದ, ಅವು ಎಕ್ಸ್‌ರೇಗೆ ಸಂಪೂರ್ಣ ಪಾರದರ್ಶಕಗಳು (ಎಕ್ಸ್‌ರೇ. ೫೪) ; ಇದ್ದಲು ಒಲೆಯಲ್ಲಿ ಹೊಗೆಯೇಳದಿದ್ದರೂ, ಸರಿಯಾಗಿ ಉರಿಯದೆ ಅಂಗಾರ ಉತ್ಪನ್ನವಾಗಿ, ವಾಯುಸಂಚಾರದ ವ್ಯವಸ್ಥೆಯಿಲ್ಲದಿದ್ದರೆ ವಾತಾವರಣ ವಿಷಮಯವಾಗುವ ಸಂಭವವಿದೆ (ಅಡುಸಾ. ೧೬). ಈ ಮೇಲಿನ ಅರ್ಥಗಳಲ್ಲಿ ಮೊದಲ ೩ ಸಂಸ್ಕೃತದಲ್ಲಿ ಪ್ರಸಿದ್ಧವಾದುವು. ಉಳಿದವು ಕನ್ನಡದಲ್ಲಿ ಬೆಳದು ಬಂದವು. ಇವಕ್ಕೆ ಪ್ರಯೋಗಗಳನ್ನು ಕಾಣಿಸಿದೆ.

ಅನ್ಯದೇಶ್ಯ ಶಬ್ದಗಳಿಗೆ ದೊರೆತಿರುವ ಪ್ರಯೋಗಗಳನ್ನು ಸಾಧ್ಯವಾದಷ್ಟು ಮಟ್ಟಿಗೂ ಉದ್ಧರಿಸಲಾಗಿದೆ. ಉದಾ— **ಅಂಗೀಜು,** ಅಂಗೇಜು (ನಾ). **೧.** ಇತರರಿಂದ ಬರಬಹುದಾದ ತೊಂದರೆ ; ಕಾಟ ; ಅಪಾಯದ ಆತಂಕ : ರಾಜರವರು ಆತಂಕವಿಲ್ಲದೆ ಸ್ವತಂತ್ರರಾಗಿ ಟೀಪೂ ಸುಲ್ತಾನರ ಅಂಗೀಜು ಇಲ್ಲದೆ ಇರಬೇಕು ಯಂತಾ ನಿಶ್ಚೈಸಿ (ರಾಜೇಂದ್ರ. ೫೩). **೨.** ಧೈರ್ಯ ; ಶೌರ್ಯ ;ಸಾಹಸ (ಸ್ಯಾಂಡರ್). **ಅಟೋಪ, ಅಟಾಪ, ಅಟೋಪು, ಆಟೋಪ್ಪ, ಆಟೋಪು** (ನಾ). **೧.** ಸಾಮರ್ಥ್ಯ; ಶಕ್ತಿ : ದೈತ್ಯನಟೋಪವನು ಕಡಿಖಂಡ ಮಾಡಿಯೆ ತಹೆನು ಮೇದಿನಿಯ (ಸಂಭಪ. ೭–೩೫). **ಅಟಾಪ :** ". . . ನಿಮಗ ಈ ನೌಕರಿ ಮಾಡುವ ಅಟಾಪಃ ಸಿಕ್ಕಿಲ್ಲ" (ನಡೆದಾ. II, ೧೧೫೮). **ಅಟೋಪು : ೨.** ಅಂಕೆ ; ಅಧೀನ : ಇವನು ನನ್ನ ಅಟೋಪಿನಲ್ಲಿ ಇಲ್ಲ (ಸ್ಯಾಂಡರ್); ಆ ಕುದುರೆ ನನ್ನ ಅಟೋಪಿಗೆ ಬರುವುದಿಲ್ಲ (ಸ್ಯಾಂಡರ್). **ಆಟೋಪ್ಪ : ೨.** ಸೆಳವಿಗೆ ಸಿಕ್ಕ ನಾವೆ ಅಂಬಿಗರ ಆಟೋಪ ತಪ್ಪಿ ಸಾಗುತ್ತದೋ ಎಂದು ವಿವಂಚನೆಗೆ ಒಳಗಾಗಿದ್ದರು (ಗ್ರಾಮಾಯ. ೪೪೯). **ಆಟೋಪು : ೨.** ಇತ್ತ ರೇಗಿ ನಿಂತಿದ್ದ ಮೊಗಲರು ಪ್ರತಾಪನು ಆಟೋಪಿನಲ್ಲಿ ಬಂದನೆಂದು ಮನ್ನಾಜಿಯನ್ನೇ ಪ್ರತಾಪನೆಂದು ಭಾವಿಸಿ ನಾಲ್ಕು ದಿಕ್ಕಿನಿಂದ ಬಾಣಗಳ ಮಳೆ ಸುರಿಸತೊಡಗಿದರು (ಮಾತೃಭೂ. ೧೬).

ನಿಘಂಟು ವ್ಯಾಕರಣಗಳಿಂದ ತೆಗೆದುಕೊಂಡ ಉದ್ಧರಣಗಳನ್ನೆಲ್ಲಾ ಸಂಬಂಧಪಟ್ಟ ಶಬ್ದದ ಅರ್ಥವಿವರಣೆ ಮುಗಿದ ಕೂಡಲೆ ಒಂದೇ ಕಡೆ ಮೊದಲಲ್ಲೇ ಉದ್ಧರಣ ಚಿಹ್ನೆಗಳಲ್ಲಿ ಸೂಚಿಸಲಾಗಿದೆ. ಎಲ್ಲ ನಿಘಂಟುಗಳಿಂದಲೂ ಉಲ್ಲೇಖಿಸಿಲ್ಲ. ಉದಾ— **ಅಗುಂದಲೆ** (ನಾ). ಅತಿಶಯ ; ಹೆಚ್ಚಳ: "ಅಗುಂದಲೆ = ಪಿರಿದು" (ಶಮದ. ಪರಿ. ೨–೧); "ಅಗುಂದಲೆಂದು ಬಹುಳಂ" (ಕರ್ಣಾನಿ. ೨೧); "ಮೊಕ್ಕಳಮಗುಂದಲೆ ಕರಂ ನೆಱೆ" (ಕಬ್ಬಿಕೈ. ೪೮).

ಹೊಸಗನ್ನಡದಲ್ಲಿ ಪ್ರಚಲಿತವಾಗಿರುವ ಶಬ್ದಕ್ಕೆ ಪ್ರಯೋಗ ಸಿಕ್ಕದಿದ್ದಲ್ಲಿ ರೂಢಿಯ ಒಂದು ವಾಕ್ಯವನ್ನು ನಿಯೋಜಿಸಿದೆ. ಉದಾ— **ಅಂಟು₁** (ಕ್ರಿ). **೨.** ಆ ಪುಸ್ತಕದಲ್ಲಿ ಹಾಳೆಗಳು ಒಂದಕ್ಕೊಂದು ಅಂಟಿಕೊಂಡಿವೆ (ರೂಢಿ).

## ೫. ನಿಷ್ಪತ್ತಿ ವಿಧಾನ (Derivation)

ನಿಷ್ಪತ್ತಿಯನ್ನು ಮುಖ್ಯ ಉಲ್ಲೇಖಕ್ಕೆ ಮಾತ್ರ ಕೊಡಲಾಗಿದೆ. ಪ್ರತಿಯೊಂದು ಮುಖ್ಯ ಶಬ್ದದ ನಿಷ್ಪತ್ತಿಯನ್ನೂ ಆ ಶಬ್ದದ ಕೆಳಗೆ ಪ್ರತ್ಯೇಕವಾಗಿ ಸೂಚಿಸಿದೆ. ನಿಷ್ಪತ್ತಿ ತಿಳಿಯದಿರುವ ಕಡೆ ಪ್ರಶ್ನೆಯನ್ನು ಹಾಕಿದೆ.

**ಸಂಸ್ಕೃತ ಶಬ್ದಗಳು** :— ಸಂಸ್ಕೃತ ಶಬ್ದಗಳ ರಚನೆಯಲ್ಲಿ ಸೇರಿರುವ ಪ್ರಕೃತಿ ಪ್ರತ್ಯಯಗಳನ್ನು ಬಿಡಿಸಿ ತೋರಿಸುವುದಿಲ್ಲ. ಸಿದ್ಧವಾದ ಶಬ್ದರೂಪಗಳನ್ನು ಮಾತ್ರ ಕೊಡಲಾಗುವುದು. ಹಾಗೆಯೇ ನಿಷೇಧರೂಪಗಳನ್ನೂ ಉಪಸರ್ಗ ಸೇರಿದ ರೂಪಗಳನ್ನೂ ಬಿಡಿಸಿ ತೋರಿಸುವುದಿಲ್ಲ. ಕನ್ನಡದಲ್ಲಿ ಬಳಕೆಯಲ್ಲಿರುವ ಸಂಸ್ಕೃತ ಶಬ್ದದ ರೂಪಕ್ಕೂ ಸಂಸ್ಕೃತದಲ್ಲೇ ಬಳಕೆಯಲ್ಲಿರುವ ಆ ಶಬ್ದದ ರೂಪಕ್ಕೂ ಯಾವ ವ್ಯತ್ಯಾಸವೂ ಇಲ್ಲದ ಪಕ್ಷದಲ್ಲಿ [ಸಂ.] ಎಂದು ಮಾತ್ರ ತೋರಿಸಲಾಗುವುದು. ಇವಕ್ಕೆ ವ್ಯತ್ಯಾಸವೇನಾದರೂ ಇದ್ದಲ್ಲಿ [ಸಂ.] ಎಂಬ ಸಂಕೇತದ ಜೊತೆಗೆ ಸಂಸ್ಕೃತದ ರೂಪವನ್ನೂ ತೋರಿಸಲಾಗುವುದು.

I. ರೂಪಭೇದವಿಲ್ಲದ ಶಬ್ದಗಳು : **ಅಂಗ್ಯ** (ನಾ). [ಸಂ.]; **ಫಲ** (ನಾ). [ಸಂ.]; **ಗಣಿತ** (ನಾ). [ಸಂ.]; **ಪ್ರಯತ್ನ** (ನಾ). [ಸಂ.]

II. ಅಂತ್ಯದಲ್ಲಿ ಸ್ವಲ್ಪ ಮಾತ್ರ ವ್ಯತ್ಯಾಸವಿರುವ ಶಬ್ದಗಳು : **ಅಂಕೆ**$_4$ (ನಾ). [ಸಂ. ಅಂಕ] ; **ವಿದ್ವಾಂಸ** (ನಾ). [ಸಂ. ವಿದ್ವಸ್] ; **ಹನುಮಂತ** (ನಾ). [ಸಂ. ಹನುಮತ್] ; **ಧನವಂತ** (ನಾ). [ಸಂ. ಧನವತ್].

III. ನಞ್ ಪ್ರತ್ಯಯ ಸಮನ್ವಿತವಾದ ಶಬ್ದಗಳು : **ಅಜ್ಞಾನ** (ನಾ). **ಅಜೀರ್ಣ** (ಗು). [ಸಂ. (ಅ– + ಜ್ಞಾನ)] ; [ಸಂ. (ಅ– + ಜೀರ್ಣ)] ಮುಂತಾಗಿ ಬಿಡಿಸಿ ತೋರಿಸುವುದಿಲ್ಲ. **ಅಜ್ಞಾನ** (ನಾ). [ಸಂ.] ; **ಅಜೀರ್ಣ** (ನಾ). [ಸಂ.] ಎಂದು ಸೂಚಿಸಿದೆ.

IV. ಉಪಸರ್ಗ ಸೇರಿದ ರೂಪಗಳು : **ದುರಭಿಮಾನ** (ನಾ). [ಸಂ.] ; **ನಿಷ್ಕಾರಣ** (ನಾ). [ಸಂ.] ; **ಸಕಾರಣ** (ನಾ). [ಸಂ.] ; **ನಿರಂತರ** (ನಾ). [ಸಂ]. ಇವನ್ನು [ದುರ್ + ಅಭಿಮಾನ] ; [ನಿಃ + ಕಾರಣ] ಎಂದು ಮುಂತಾಗಿ ಬಿಡಿಸಿ ತೋರಿಸುವುದಿಲ್ಲ. ನಿತ್ಯಸಮಾಸಗಳನ್ನು ಬಿಡಿಸಿ ತೋರಿಸುವುದಿಲ್ಲ. ಉದಾ— **ದಂಪತಿ** [ಸಂ. ದಂಪತೀ].

ಸಂಸ್ಕೃತ ಸಮಾಸಗಳಲ್ಲಿ ಸೇರಿರುವ ಬೇರೆ ಬೇರೆ ಶಬ್ದರೂಪಗಳನ್ನು ಮಾತ್ರ ಬಿಡಿಸಿ ತೋರಿಸಿದೆ. ಆದರೆ ರೂಪಸಿದ್ಧಿಗೆ ಸಹಾಯಕವಾದ ಪ್ರತ್ಯಯವೇ ಮೊದಲಾದ ಇತರ ಅಂಶಗಳನ್ನು ನಿರ್ದೇಶಿಸಿಲ್ಲ. ಅಂಥ ಕಡೆ ಯಾವುದೋ ಅಂಶವನ್ನು ಹೇಳದೆ ಬಿಟ್ಟಿದೆಯೆಂದು ಸೂಚಿಸುವ ಸಲುವಾಗಿ ಸಣ್ಣ ಅಡ್ಡಗೆರೆ(– Hyphen) ಯನ್ನು ಹಾಕಿದೆ. ಉದಾ— **ಕಂಜಾಕ್ಷ** (ನಾ). [ಸಂ. (ಕಂಜ + ಅಕ್ಷಿ + –)]. **ಪದ್ಮನಾಭ** (ನಾ). [ಸಂ. (ಪದ್ಮ + ನಾಭಿ + –)]. ಈ ಉದಾಹರಣೆಗಳಲ್ಲಿ [ಕಂಜ + ಅಕ್ಷಿ] ; [ಪದ್ಮ + ನಾಭಿ] ಎಂಬ ಶಬ್ದಗಳು ಕೂಡಿದಾಗ ಅವುಗಳ ಜೊತೆಗೆ ಬೇರೆ ಯಾವುದೋ ಪ್ರತ್ಯಯ ಸೇರಿದೆ. ಕಂಜದಂತೆ ಅಕ್ಷಿಯುಳ್ಳವನು ಯಾವನೋ ಅವನು, ಪದ್ಮದಂತೆ ನಾಭಿಯುಳ್ಳವನು ಯಾವನೋ ಅವನು ಎಂಬ ಅರ್ಥ ಬರುವಂತೆ ಸೇರಿರುವ ಆ ಪ್ರತ್ಯಯವನ್ನು ಇಲ್ಲಿ ಕೊಡದೆ ಬಿಟ್ಟಿದೆಯೆಂದು ಈ ಸಣ್ಣ ಅಡ್ಡಗೆರೆ ಸೂಚಿಸುತ್ತದೆ.

ಈ ಕೆಳಗಿನ ಉದಾಹರಣೆಗಳಿಂದ ಮತ್ತೆ ಕೆಲವು ಅಂಶಗಳನ್ನು ಸ್ಪಷ್ಟಪಡಿಸಬಹುದು. 'ಅಗ್ರೇಸರ' ಶಬ್ದದ ನಿಷ್ಪತ್ತಿವಿಭಾಗದಲ್ಲಿ [ಸಂ.] ಎಂದು ಮಾತ್ರ ಸೂಚಿಸಿದೆ. ಆದರೆ 'ಅಗ್ರೇದಿಧಿಷು' ಶಬ್ದದ ನಿಷ್ಪತ್ತಿಯಲ್ಲಿ [ಸಂ. ಅಗ್ರೇದಿಧಿಷೂ (ಅಗ್ರೇ + ದಿಧಿಷೂ)] ಎಂದು ಬಿಡಿಸಿ ಕೊಟ್ಟಿದೆ. ಇಲ್ಲಿ ದುಂಡು ಕಂಸದೊಳಗೆ ಬಿಡಿಸಿ ತೋರಿಸಿರುವ 'ಅಗ್ರೇ' ಮತ್ತು 'ದಿಧಿಷೂ' ಇವು ಈ ರೂಪಗಳಲ್ಲಿ ಮುಖ್ಯ ಉಲ್ಲೇಖಗಳಾಗಿ ಈ ನಿಘಂಟಿನಲ್ಲಿ ಬಂದಿಲ್ಲ. ಅಗ್ರ, ದಿಧಿಷು ಈ ರೂಪದಲ್ಲಿ ಮುಖ್ಯಉಲ್ಲೇಖವಾಗಿ ಬಂದಿವೆ. ನಿಷ್ಪತ್ತಿಭಾಗದಲ್ಲಿ ದುಂಡುಕಂಸದೊಳಗೆ ಬಂದಿರುವ ಎಲ್ಲ ಶಬ್ದಗಳೂ ಈ ನಿಘಂಟಿನಲ್ಲಿ ಮುಖ್ಯ ಶಬ್ದಗಳಾಗಿ ಎಡೆಪಡೆಯದಿರಬಹುದು. ಉದಾ— **ಅಂತರ್ವಾಸ** (ನಾ). [ಸಂ. (ಅಂತರ್ + ವಾಸ್ಯ)]. ಈ ಉದಾಹರಣೆಗಳಿಂದ ಈ ರೀತಿಯ ಶಬ್ದಗಳು ಸಮಾಸದ ಪೂರ್ವಪದಗಳಾಗಿ ಬಂದಾಗ ಯಾವ ರೂಪದಲ್ಲಿ ನಿಲ್ಲುತ್ತವೆ ಎಂಬುದನ್ನು ಅರಿತುಕೊಳ್ಳಬಹುದು. ಸಮಾಸದ ಪೂರ್ವಪದಗಳಾಗಿ ಬರುವ ಇಂಥ ಶಬ್ದಗಳಿಗೆ ಸ್ವತಂತ್ರ ಅಸ್ತಿತ್ವವಿಲ್ಲದ ಪಕ್ಷದಲ್ಲಿ ಅಂತಹ ಶಬ್ದಗಳನ್ನು ಮುಖ್ಯ ಶಬ್ದಗಳಾಗಿ ಕೊಡುವುದಿಲ್ಲ. ನಿಷ್ಪತ್ತಿಭಾಗದಲ್ಲಿ ಆ ಶಬ್ದಗಳ ಮುಂದೆ ಒಂದು ಬಿಂದುವನ್ನು ಹಾಕಿ ಸೂಚಿಸಲಾಗಿದೆ. ಉದಾ— **ಅಸ್ಮತ್**$_0$, **ಅಸ್ಮದ್**$_0$.

**ದೇಶ್ಯಶಬ್ದಗಳು** :— ದೇಶ್ಯಶಬ್ದಗಳಿಗೆ ಅವುಗಳ ರಚನೆ ಸ್ಪಷ್ಟವಾಗುವಂತೆ ಪ್ರಕೃತಿ ಪ್ರತ್ಯಯಾದಿಗಳನ್ನು ವಿಭಜಿಸಿ ತೋರಿಸಿದೆ. ಉದಾ— **ಅಗಸಗಿತ್ತಿ** (ನಾ). [ಅಗಸ + –ಗಿತ್ತಿ] ; **ನೋಂಪಿ** (ನಾ). [ನೋನ್ + –ಪಿ] ; **ಅಣ್ಕೆ** [ಅಣ್ + –ಕೆ].

ಸಮಾಸಗಳಲ್ಲಿ ಸೇರಿರುವ ಬೇರೆ ಬೇರೆ ಪ್ರಕೃತಿರೂಪಗಳನ್ನೂ ಕೊನೆಯಲ್ಲಿ ಸೇರುವ ಅಂತ್ಯ ಪ್ರತ್ಯಯಗಳನ್ನೂ ನಿರ್ದೇಶಿಸಲಾಗಿದೆ. ಇದು ವ್ಯಾಕರಣಸಮ್ಮತವಾದ ವಿಗ್ರಹವಾಕ್ಯವೆಂದು ಭಾವಿಸಲಾಗದು. ಖಚಿತವಾಗಿರುವಷ್ಟು ಭಾಗವನ್ನು ಮಾತ್ರ ತೋರಿಸಿ ಉಳಿದಿದ್ದನ್ನು ಅಡ್ಡಗೆರೆಯ ಮೂಲಕವಾಗಲಿ ಪ್ರಶ್ನಾರ್ಥಕ ಚಿಹ್ನೆಯ ಮೂಲಕವಾಗಲಿ ಸೂಚಿಸಲಾಗುವುದು. ಲೋಪಾಗಮಾದಿ ಸಂಧಿಕಾರ್ಯಗಳನ್ನೂ ಮಧ್ಯದಲ್ಲಿಯ ಆಗಮಗಳನ್ನೂ ತೋರಿಸುವುದಿಲ್ಲ. ಉದಾ— **ತೂಗುಂಜೊಡರ್** (ನಾ). [ತೂಗು + ಸೊಡರ್] ; **ಅಕ್ಕಜಂಗೊಳ್** (ಕ್ರಿ). [ಅಕ್ಕಜ + ಕೊಳ್] ; **ಅದಿರುದುಟಿ** (ನಾ). [ಅದಿರು + ತುಟಿ] ; **ನಾಣಿಲಿ** (ನಾ). [ನಾಣ್ + –ಇಲ್ಲಿ$_2$] ; **ಬಳೆಗಾಱಿತಿ** (ನಾ). [ಬಳೆಗಾಱ + –ಇತಿ].

ಸಮಾಸಶಬ್ದಗಳು ರೂಪದಲ್ಲಿ ಒಂದೇ ಆದರೂ ಬೇರೆ ಬೇರೆ ಮೂಲದವಾಗಿದ್ದು ಒಂದಕ್ಕಿಂತ ಹೆಚ್ಚು ಉಲ್ಲೇಖಗಳಾಗಿ ನಿಘಂಟಿನಲ್ಲಿ ಪ್ರತ್ಯೇಕ ಸ್ಥಾನ ಪಡೆದಿದ್ದ ಸಂದರ್ಭದಲ್ಲಿ ಆಯಾ ಉಲ್ಲೇಖದ ಸಂಖ್ಯೆಯನ್ನು ಜೊತೆಯಲ್ಲಿಯೇ ಕೊಡಲಾಗುವುದು. ಉದಾ— **ಅಚ್ಚುಕಟ್ಟು**$_2$ (ನಾ). [ಅಚ್ಚು$_3$ ? + ಕಟ್ಟು$_2$] ; **ಅಚ್ಚರಿವಡೆ** (ಕ್ರಿ). [ಅಚ್ಚರಿ$_3$ + ಪಡೆ$_1$] ; **ಅಚ್ಚರಿಗವಿ** (ಕ್ರಿ). [ಅಚ್ಚರಿ$_3$ + ಕವಿ$_1$] ; **ಅಚ್ಚಮುತ್ತು** (ನಾ). [ಅಚ್ಚ$_1$ + ಮುತ್ತು$_3$] ; **ಅಚ್ಚುಮೆಚ್ಚು** (ನಾ). [ಅಚ್ಚು$_4$ + ಮೆಚ್ಚು$_2$].

**ತದ್ಭವ ಶಬ್ದಗಳು** :— ಸಂಸ್ಕೃತ ಅಥವಾ ಪ್ರಾಕೃತದಿಂದ ಬಂದ ಶಬ್ದಗಳನ್ನು ಮಾತ್ರ ತದ್ಭವ ಎಂದು ಪರಿಗಣಿಸಲಾಗಿದೆ. ತದ್ಭವಗಳ ಮೂಲವನ್ನು ನಿಷ್ಪತ್ತಿಚಿಹ್ನೆ(<)ಯ ಮೂಲಕ ಸೂಚಿಸಿದೆ. ಉದಾ— **ಬಕುತಿ** (ನಾ). [< ಸಂ. ಭಕ್ತಿ] ; **ಜತನ** (ನಾ). [< ಸಂ. ಯತ್ನ]. ಕನ್ನಡದಲ್ಲಿ ಬಳಕೆಯಲ್ಲಿರುವ ತದ್ಭವ ಮೂಲಭಾಷೆಯಿಂದ ನೇರವಾಗಿ ಬಾರದೆ ಬೇರೆ ಭಾಷೆಯ ಮೂಲಕ ಬಂದಿರುವ ಪಕ್ಷದಲ್ಲಿ ನೇರ ಸಂಪರ್ಕವುಳ್ಳ ಶಬ್ದವನ್ನು ನಿಷ್ಪತ್ತಿಚಿಹ್ನೆಯಿಂದ ಸೂಚಿಸಿ ಆ ಶಬ್ದದ ಮುಂದೆ ಓರೆಯಾದ ಲಂಬಗೆರೆ ( / ) ಯನ್ನು ಕೊಟ್ಟು ಮೂಲಶಬ್ದವನ್ನು ಸೂಚಿಸಿದೆ. ಉದಾ— **ಕಂಬ** (ನಾ). [< ಪ್ರಾ. ಕಂಭೋ. / ಸಂ. ಸ್ಕಂಭ] ; **ಅರಸ** (ನಾ). [< ತಮಿ. ಅರಶನ್ / ಸಂ. ರಾಜನ್]. ಸಂಸ್ಕೃತ ಭಾಷೆಯಲ್ಲಿನ ಸ್ಕಂಭ ಎಂಬ ಶಬ್ದ ಪ್ರಾಕೃತದಲ್ಲಿ ಕಂಭೋ ಎಂದಾಗಿ, ಪ್ರಾಕೃತದ ಮೂಲಕ ಕನ್ನಡಕ್ಕೆ ಬಂದು ಕಂಬ ಆಯಿತು ; ಸಂಸ್ಕೃತದ ರಾಜನ್ ಶಬ್ದ ತಮಿಳಿನಲ್ಲಿ ಅರಶನ್ ಎಂದಾಗಿ, ತಮಿಳಿನ ಮೂಲಕ ಕನ್ನಡಕ್ಕೆ ಬಂದು ಅರಸ ಆಯಿತು ಎಂದು ಅಭಿಪ್ರಾಯ.

**ಅನ್ಯದೇಶ್ಯ ಶಬ್ದಗಳು** :— ಮುಖ್ಯ ಶಬ್ದ ಯಾವ ಭಾಷೆಯದೆಂದು ಗೊತ್ತಿರುವಾಗ ಆ ಭಾಷೆಯ ಹೆಸರನ್ನು ಸೂಚಿಸಲಾಗುವುದು. ಮೂಲಭಾಷೆ ಗೊತ್ತಿಲ್ಲದಾಗ 'ಅನ್ಯದೇ.' ಎಂದು ಹೇಳಲಾಗುವುದು. ಈ ಅನ್ಯದೇಶ್ಯ ಶಬ್ದಗಳಿಗೂ ಆಯಾ ಶಬ್ದಕ್ಕೆ ಸಂಬಂಧಪಟ್ಟಂತೆ ಮುಖ್ಯವಾದ ಕೆಲವು ಇತರ ಭಾಷೆಗಳಿಂದ ಮಾತ್ರ ಸಂವಾದಿ (Equivalent) ಶಬ್ದಗಳನ್ನು ಕೊಡಲಾಗುವುದು. ಹೀಗೆ ಕೊಡುವಾಗ ಕನ್ನಡಕ್ಕೆ ನೇರ ಸಂಪರ್ಕವಿರಬಹುದೆಂದು ತೋರುವ ಶಬ್ದಗಳನ್ನು ಮೊದಲೂ ಉಳಿದುವನ್ನು ಆಮೇಲೂ ನಿರ್ದೇಶಿಸಲಾಗುವುದು. ಉದಾ— **ಅಕ್ಕಲು**$_2$ (ನಾ). [← **ಅರ. ಪಾರ. ಹಿಂ.** ಅಕ್ಲ್ ; **ಮರಾ.** ಅಕ್ಕಲ್ / **ತುಳು.** ಅಕಲು, ಅಕ್ಕಲು]. **ಅಂಗ್ರೇಜಿ** (ನಾ). (ಉಕ). [← ಹಿಂ. ಅಂಗ್ರೇಜೀ ; **ಮರಾ.** ಅಂಗ್ರೇಜ್, ಅಂಗ್ರೇಜೀ < ಇಂ. English] **ಅಂಬರು** (ನಾ). [← ಇಂ. Amber < **ಅರ.** ಅಂಬರ್ / **ಹಿಂ.** ಅಂಬರ್]. **ಅಜಾರಿ** (ನಾ). [← **ಅರ. ಪಾರ. ಹಿಂ. ಮರಾ.** ಅಜಾರ್, ಅಜಾರ್].

ಅನ್ಯದೇಶ್ಯ ಶಬ್ದಗಳಿಗೆ 'ಆಗು' ಎಂಬ ಧಾತುವೂ, -ಇಸು ಮುಂತಾದ ಪ್ರತ್ಯಯವೂ ಸೇರಿ ಆಗುವ ರೂಪಗಳಿಗೆ ನಿಷ್ಪತ್ತಿಯನ್ನು ಕೊಡುವಾಗ ಈ ಮುಂದಿನ ಕ್ರಮವನ್ನು ಅನುಸರಿಸಿದೆ. ಉದಾ— **ಅಜಪ್‌ಆಗು** (ಕ್ರಿ). [ಅಜಪ್$_0$ + ಆಗು$_1$. P ಅಜಪ್ ← **ಅರ. ಪಾರ. ಹಿಂ. ಮರಾ.** ಅಜಬ್ = ಆಶ್ಚರ್ಯಕರ, ವಿಚಿತ್ರ]. **ಅಟಕಾಯಿಸು** (ಕ್ರಿ). [ಅಟಕ್ಕಾ$_0$ + -ಇಸು$_3$. P ಅಟಕಾ ← **ಹಿಂ.** ಅಟಕಾನಾ].

**ಜ್ಞಾತಿಶಬ್ದಗಳು** :— ದೇಶ್ಯ ಶಬ್ದಗಳಿಗೆ ಇತರ ಸೋದರ ಭಾಷೆಗಳಲ್ಲಿ ದೊರೆಯುವ ಜ್ಞಾತಿ ಶಬ್ದಗಳನ್ನು ಕೊಟ್ಟಿದೆ. ಅರ್ಥಭೇದವಿದ್ದಲ್ಲಿ ಮಾತ್ರ ಅರ್ಥವನ್ನು ಬರೆದು ತೋರಿಸಿದೆ. ಜ್ಞಾತಿ ಶಬ್ದಗಳನ್ನು ಈ ಕೆಳಗಿನ ಅನುಕ್ರಮದಲ್ಲಿ ಕಾಣಿಸಿದೆ. **ತಮಿ.** (ತಮಿಳು) ; **ಮಲ.** (ಮಲಯಾಳ) ; **ತುಳು.** ; **ಕೊಡ.** (ಕೊಡಗು) ; **ತೆಲು.** (ತೆಲುಗು) ; **ಕೊಲಾ.** (ಕೊಲಾಮಿ) ; **ನಾಯ್ಕಿ. ಪರ್ಜಿ. ಗಡಬ. ಗೊಂಡಿ. ಕುಇ. ಕುವಿ. ಕುರುಖ್. ಮಲ್ತೊ. ಬ್ರಾಹುಈ.**

ತಮಿಳು ಶಬ್ದಗಳನ್ನು ಕನ್ನಡ ಅಕ್ಷರಗಳಲ್ಲಿ ಬರೆದು ತೋರಿಸುವಾಗ ಈಗಿನ ಶಿಷ್ಟರ ಉಚ್ಚಾರಣೆಯನ್ನು ಗಮನಿಸಿ ಬರೆಯಲಾಗಿದೆ. ತಮಿಳು ನಿಘಂಟಿನಲ್ಲಿ ಕೊಟ್ಟಿರುವ ಕಾಗುಣಿತಗಳನ್ನೇ ಕೊಡಲಾಗಿದೆ.

ಮೊದಲು ನಿಷ್ಪತ್ತಿಯನ್ನೂ ಆಮೇಲೆ ಜ್ಞಾತಿ ಅಥವಾ ಸಂವಾದಿ ಶಬ್ದಗಳನ್ನೂ ಕೊಟ್ಟಿದೆ. ಜ್ಞಾತಿಶಬ್ದಗಳನ್ನು ಪ್ರಾರಂಭಿಸುವ ಮೊದಲು ಎರಡು ಲಂಬರೇಖೆ (॥) ಗಳಿಂದ ಭೇದವನ್ನು ಸೂಚಿಸಿದೆ. ಉದಾ— **ಅಚ್ಚಾಳ್** (ನಾ). [ಅಚ್ಚು$_1$ + ಆಳ್$_2$. ॥ **ತೆಲು.** ಅಚ್ಚಾಳಿ, ಅಚ್ಚಾಳು = ಒಂಟಿ ಮನುಷ್ಯ, ತೊಂದರೆಯಿಲ್ಲದವನು]. **ಅಡಂಗು**$_1$ (ನಾ). [**ದೇ.** ॥ **ತಮಿ.** ಅಡಙ್ಗು ; **ತುಳು.** ಅಡೆಂಗು, ಡೆಂಗುನಿ ; **ತೆಲು.** ಅಡಗು ; **ಕೋಲಾ.** ಡಾಂಗ್].

ಶಬ್ದಗಳಿಗೆ ನಿಷ್ಪತ್ತಿ ಕೊಡುವಾಗ ಇದುವರೆಗಿನ ಸಂಶೋಧನೆಗಳಿಂದ ಖಚಿತವಾಗಿರುವಷ್ಟನ್ನು ಮಾತ್ರ ನಿಘಂಟಿನಲ್ಲಿ ತೋರಿಸಿದೆ. ನಿಷ್ಪತ್ತಿ ಭಾಗದಲ್ಲಿ ಜ್ಞಾತಿ ಅಥವಾ ಸಂವಾದಿ ಶಬ್ದಗಳ ರೂಪಗಳನ್ನು ತೋರಿಸುವಾಗ ಅವುಗಳ ಪ್ರಕೃತಿರೂಪದಲ್ಲೇ ತೋರಿಸಲಾಗುವುದು.

ಆಧಾರ ಅಥವಾ ಪ್ರಯೋಗವಿಲ್ಲದ ಶಬ್ದಮೂಲಗಳು ಪುನರ್ರಚಿತ (Re-constructed) ವಾದುವೆಂದು ಭಾವಿಸಿ ಅಂಥ ಶಬ್ದಗಳ ಎಡಪಕ್ಕದಲ್ಲಿ ನಕ್ಷತ್ರ (*) ಚಿಹ್ನೆಯನ್ನು ಹಾಕಿದೆ. ಉದಾ— **ಅಂಗಚಿತ್ತ** (ನಾ). [**ಪ್ರಾ.** ಅಂಗಛಿತ್ತ (< **ಸಂ.** * ಅಂಗಕ್ಷಿಪ್ತ)].

ದೇಶ್ಯ ಶಬ್ದಗಳಿಗೆ '**ದೇ**' ಎಂದೂ, ಸಂಸ್ಕೃತ ಶಬ್ದಗಳಿಗೆ '**ಸಂ**' ಎಂದೂ, ಬೇರೆ ಬೇರೆ ಭಾಷೆಗಳ ಶಬ್ದಗಳಿಗೆ '**ಅನ್ಯದೇ**' ಎಂದೂ ಸೂಚಿಸಿದೆ. ವ್ಯುತ್ಪತ್ತಿ ಗೊತ್ತಿಲ್ಲದಿರುವಾಗ ಪ್ರಶ್ನ (?) ಚಿಹ್ನೆಯನ್ನು ಹಾಕಿದೆ.

## ೬. ವಿರಾಮ ಚಿಹ್ನೆಗಳು (Punctuation marks)

### I. (.) **ಪೂರ್ಣವಿರಾಮ** (Full stop)

ಮುಖ್ಯ ಉಲ್ಲೇಖಗಳ ವಾಚಕ ನಿರ್ದೇಶನವಾದ ಅನಂತರವೂ, ಅರ್ಥಚ್ಛಾಯೆಯನ್ನು ತೋರಿಸುವ ೧, ೨ ಮುಂತಾದ ಸಂಖ್ಯೆಗಳ ಮುಂದೆಯೂ, ಅರ್ಥಪ್ರಯೋಗಗಳೇ ಮೊದಲಾದ ಎಲ್ಲ ವಿವರಗಳೂ ಮುಗಿದು ನಿಷ್ಪತ್ತಿಯನ್ನು ಪ್ರಾರಂಭಿಸುವ ಮೊದಲೂ, ಉದ್ಧರಿಸಿದ ಪ್ರಯೋಗಗಳ ಆಕರಗಳ ಸಂಕ್ಷಿಪ್ತ ಸೂಚನೆ ಮುಗಿದ ಮೇಲೆಯೂ, 'ನೋ', 'ಪರಾ', ಹೋ ಮುಂತಾದ ಸಂಕೇತಗಳ ಮುಂದೆಯೂ, ನಿಷ್ಪತ್ತಿಯಲ್ಲಿ ಸಮಾಸಗಳನ್ನು ಬಿಡಿಸಿ ತೋರಿಸಿದ ಮೇಲೆ ಜ್ಞಾತಿ ಅಥವಾ ಸಂವಾದಿ ಶಬ್ದಗಳನ್ನು ಕೊಡುವುದಕ್ಕೆ ಮೊದಲೂ ಪೂರ್ಣವಿರಾಮ ಚಿಹ್ನೆಯನ್ನು ಬಳಸಿದೆ. ಉದಾ— **ಅಂಟರಳೆ** (ನಾ). ಒಂದು ಜಾತಿಯ ಗಿಡ ; ಅಂಟವಾಳ. **ಅಂಟಿಕ್ಕು** (ಕ್ರಿ). ೧. ಅಂಟಿಸು. ೨. ನಾಟಿಹಾಕು ; ಕಸಿಮಾಡು (ಕ). ೩. ಬೆಂಕಿಹಚ್ಚು (ಸ್ಯಾಂಡರ್). **ಅಕ್ಕಯ್ಯ** (ನಾ). ಅಕ್ಕನನ್ನು ಪ್ರೀತಿಯಿಂದ ಕರೆಯುವ ಮಾತು : ಅಕ್ಕ ಕೇಳವ್ವ, ಅಕ್ಕಯ್ಯ ನಾನೊಂದ ಕನಸ ಕಂಡೆ (ಮಹದೇ. ೧೫-೨). **ಅಟ್ಟುಕುಳಿ** 'ಅಟ್ಟುಗುಳಿ' ನೋ. **ಅಟ್ಟೆ**$_3$ (ಗು). ದಟ್ಟವಾದ ; ಒತ್ತಾದ (?). 'ಅಟ್ಟಾಗು' ಪರಾ. **ಅಚ್ಚುಬೆಲ್ಲ** (ನಾ). ಉಂಡೆ ಬೆಲ್ಲ ಹೋ. **ಅಕ್ಕಾಜಿ** (ನಾ). P ಅಣ್ಣಾಜಿ, ಭಾವಾಜಿ, ಮಾವಾಜಿ ಇತ್ಯಾದಿ ಹೋ. **ಅಟಮುಟಿಸು** (ಕ್ರಿ). [ಅಟಮುಟ + -ಇಸು. / **ತೆಲು.** ಅಟಮುಟಂಚು].

II. (,) **ಅಲ್ಪವಿರಾಮ** (Comma)

೧. ಪ್ರಧಾನ ಶಬ್ದ ಮತ್ತು ಅದರ ಇತರ ರೂಪಗಳನ್ನು ಒಂದೆಡೆ ಉಲ್ಲೇಖಿಸುವಾಗ ಮಧ್ಯದಲ್ಲಿ ಅಲ್ಪವಿರಾಮವನ್ನು ಬಳಸಲಾಗಿದೆ. ಉದಾ— **ಅಕ್ಕಲ್ಲು$_2$, ಅಖಿಲು. ಅಂಕೆಕಾಱ,** ಅಂಕಂಗಾಱ, ಅಂಕಗಾಱ.

೨. ಸಂಕೇತಸೂಚನೆಗಳಲ್ಲಿ ಸಂಪುಟ ಭಾಗಗಳನ್ನು ಸೂಚಿಸುವ ಅಂಕಿಗಳ ಮುಂದೆ ಅಲ್ಪವಿರಾಮವನ್ನು ಬಳಸಲಾಗಿದೆ. ಉದಾ— **ಅಂಕೆ** (ಮೈಆರಿ. ೧೯೩೪, ೧೬–೧೦ ; 1762). **ಅಕೆಯ್ಯ** (ಎಕ. XIV, ನಾಗಮಂ. ೧೧೧–೩ ; 961). **ಅಂಬಲಗೊಟ್ಟಿಗೆ** (ಸೌಇಇ. IX–ii, ೪೪೭–೬೦ ; 1436).

III. (;) **ಅರ್ಧವಿರಾಮ** (Semicolon)

೧. ಒಂದೇ ಬಗೆಯ ಅರ್ಥವಿರುವಲ್ಲಿಯೂ, ಅರ್ಥದ ಛಾಯೆ ಸ್ವಲ್ಪಮಟ್ಟಿಗೆ ಭಿನ್ನವಾಗಿರುವಾಗಲೂ ನಡುವೆ ಅರ್ಧವಿರಾಮವನ್ನು ಬಳಸಲಾಗಿದೆ. ಉದಾ— **ಅಗಣಿತ** (ಗು). **೧.** ಎಣಿಸಿಲ್ಲದ; ಲೆಕ್ಕವಿಲ್ಲದ; ಲೆಕ್ಕಕ್ಕೆ ಮೀರಿದ. **ಅಕ್ಕರಗೊಟ್ಟಿ** (ನಾ). ವಿದ್ವಾಂಸರ ಸಭೆ; ವಿದ್ವಾಂಸರೊಡನೆ ಮಾಡುವ ಚರ್ಚೆ ಸಲ್ಲಾಪ ಮುಂತಾದವು.

೨. ಪ್ರಯೋಗವನ್ನು ಕೊಡುವಾಗ ಒಂದು ಪ್ರಯೋಗ ಮುಗಿದು ಮತ್ತೊಂದು ಪ್ರಯೋಗ ಪ್ರಾರಂಭವಾಗುವ ಮುನ್ನ ಅವುಗಳ ನಡುವೆ, ಅರ್ಧವಿರಾಮವನ್ನು ಬಳಸಲಾಗಿದೆ. 'ಅಕ್ಕ' ಮೊದಲಾದ ಶಬ್ದಗಳಿಗೆ ಕೊಟ್ಟಿರುವ ಉದಾಹರಣೆಗಳನ್ನು ನೋಡಿ.

೩. ಸಂಕೇತಸೂಚನೆಗಳಲ್ಲಿ ಎಲ್ಲಾ ವಿವರಗಳು ಮುಗಿದ ಮೇಲೆ ಕಾಲನಿರ್ದೇಶಕ್ಕೆ ಮೊದಲು ಈ ಚಿಹ್ನೆಯನ್ನು ಬಳಸಲಾಗಿದೆ. ಉದಾ— **ಅಕೆಸಾಲೆವಾಳು** (ನಾ). . . (ಸೌಇಇ. IX–i, ೧೨೩–೨೬ ; 1059).

IV. (:) **ವಿವರಣವಿರಾಮ** (Colon)

ಶಬ್ದಕ್ಕೆ ಅರ್ಥವನ್ನು ಕೊಟ್ಟ ಮೇಲೆ ಪ್ರಯೋಗಗಳನ್ನು ಪ್ರಾರಂಭಿಸುವ ಮೊದಲು ವಿವರಣವಿರಾಮವನ್ನು ಉಪಯೋಗಿಸಲಾಗಿದೆ. ಉದಾ— **ಅಂಕಿಸು$_2$** (ಕ್ರಿ). ಬಳಿ; ಲೇಪಿಸು : ಕುಂಕುಮದೊಳ್ಪುಡಿವೆರೆದಿರ್ದ ಕಮ್ಮೆಣ್ಣೆಯ ಪಂಕವನುತ್ತಮಾಂಗದೊಳು ಅಂಕಿಸಿಕೊಂಡಿರ್ದಳವಳು (ಕುರಾಸಾಂ. ೩೩–೯೨). **ಅಕರ$_2$** (ಅ). ತೆರಿಗೆಯಿಲ್ಲದೆ : ಭಟ್ಟಗ್ರ್ಗೀ ಗಟ್ಟಿ ಒಡ್ಡಲಿ ಅಪತ್ತೊನ್ನಿ ವಿಟ್ಟಾರಕರ (ಮೈಆರಿ. ೧೯೩೬, ೧೬–೧೬ ; ಸು. 450).

V. (" " ' ') **ಉದ್ಧರಣಚಿಹ್ನೆಗಳು** (Quotation marks)

ನಿಘಂಟು, ವ್ಯಾಕರಣ, ಲಕ್ಷಣಗ್ರಂಥಗಳಿಂದ ಅರ್ಥಕ್ಕೆ ಆಧಾರವನ್ನು ಸೂಚಿಸುವಾಗ ಎರಡೆರಡಿರುವ ಉದ್ಧರಣಚಿಹ್ನೆಗಳನ್ನು ಬಳಸಲಾಗಿದೆ. **ಅಂಕೆ$_2$** (ನಾ). **೫.** ಭಾರವನ್ನು ಎತ್ತುವುದಕ್ಕೆ ಉಪಯೋಗಿಸುವ ಹಾರೆ; ಸನ್ನೆಕೋಲು : "ಅಂಕವೆನೆ ಭಾರವೆತ್ತುವದಕ್ಕುಂ" (ಕಶರ. ೧೦). **೬.** ತೊಡೆ : "ಅಂಕಮುತ್ಸಂಗಮಕ್ಕು" (ಮಂಗರಾ. ೯೩–೧೭). 'ನೋ' 'ಪರಾ' ಇವುಗಳನ್ನು ಸೂಚಿಸುವಲ್ಲಿ ಒಂದೊಂದು ಇರುವ ಉದ್ಧರಣಚಿಹ್ನೆಗಳನ್ನು ಬಳಸಲಾಗಿದೆ. **ಅಂಕೆಕಾತಿ** 'ಅಂಕಕಾರ್ತಿ' ನೋ. **ಅಂಕೆಗದ್ಯಾಣ** (ನಾ). 'ಅಂಕದೆಱೆ', 'ಅಂಕವಣ', 'ಅಂಕಸುಂಕ' ಪರಾ.

VI. [ ] **ಚೌಕಕಂಸ** (Square bracket)

ನಿಷ್ಪತ್ತಿಭಾಗವನ್ನು ಚೌಕಕಂಸದಲ್ಲಿ ತೋರಿಸಲಾಗುವುದು. ಉದಾ— **ಅಂಕುರಿಸು** (ಕ್ರಿ). [ಅಂಕುರ + -ಇಸು$_3$] ಪ್ರಯೋಗಗಳಲ್ಲಿ ಪಾಠಾಂತರಗಳನ್ನು ಸೂಚಿಸುವಲ್ಲಿ ಚೌಕಕಂಸವನ್ನು ಬಳಸಿದೆ. ಉದಾ— **ಅಂಗಜಾವ** (ನಾ). ಏನು ಕಾರಣ ನೀವು ಬಾಣನ ಬಾಗಿಲ ಕಾಯ್ದಿರಿ? ಡಿಂಗರಿಗನ ಮನೆಗೆ ಅಂಗಜಾವ [ಪಾಠಾಂ. ಜಾಹವ, ಜಾವಹ]ಕ್ಕೆ ಹೋಗಿದ್ದರೊಳರೆ ಕೂಡಲ ಸಂಗಮದೇವಾ (ಬಸವ. ೭೪೨). ಶಾಸನ ಮತ್ತು ಕಾವ್ಯಗಳಿಂದ ಪ್ರಯೋಗಗಳನ್ನು ಉದ್ಧರಿಸುವಾಗ ಅವುಗಳ ಸಂಪಾದಕರು ಚೌಕಕಂಸವನ್ನು ಬಳಸಿದ್ದರೆ ಅವುಗಳನ್ನು ಯಥಾವತ್ತಾಗಿ ಉಳಿಸಿಕೊಳ್ಳಲಾಗಿದೆ. ಉದಾ— **ಅಗುರ್** (ಕ್ರಿ). ಧರೆಯೆಲ್ಲಂ ಪೊಗೞ್ವನ್ನಿರೆ [ಪುರಿ]ಗೆರೆಯೊಳಗುರ್ತುರ್ ರೋಣಮಂ ಕಾದಮರೇಶ್ವರ ಪುರಮನೆಯ್ದಿದೋಂ . . . ಪಂಪಯ್ಯಂ (ಸೌಇಇ. XI–i, ೩೬–೨೩ ; 942).

VII. ⌈ ⌉ ಇ **ಕಂಸ** (Editorial bracket)

⌈ ⌉ ಇ ಕಂಸವು ಸಂಪಾದಕರು ಸಂಯೋಜಿಸಿದ ಪಾಠವನ್ನು ಸೂಚಿಸುವಲ್ಲಿ ಬಳಸಿದೆ. ಇದನ್ನು ಸಾಮಾನ್ಯವಾಗಿ ಪ್ರಕೃತ ಶಬ್ದಕ್ಕೆ ಮಾತ್ರ ಉಪಯೋಗಿಸಿದೆ. ಶಾಸನಗಳಿಂದ ಪ್ರಯೋಗಗಳನ್ನು ಎತ್ತಿಕೊಂಡಾಗ ಅವುಗಳನ್ನು ತಿದ್ದಬೇಕಾದ ಸಂದರ್ಭಗಳಲ್ಲಿ ⌈ ⌉ ಇ ಕಂಸವನ್ನು ಹಾಕಿದೆ. ಉದಾ— **ಅಚ್ಚವೊ ⌈ವ ?⌉ ತ್ತಳಿಕೆ, ಅಜ್ಜವ ⌈ವೊ⌉ ಡೆಯ, ಅಡಗುಶೇ ⌈ಸೇ⌉ ಕೆ.** ಮುಖ್ಯ ಉಲ್ಲೇಖಕ್ಕೆ ಸಂಬಂಧಿಸಿದಂತೆ ಪ್ರಯೋಗದಲ್ಲಿ ಕ್ವಚಿತ್ತಾಗಿ ಅರ್ಥವಿವರಣೆ ಮಾಡಬೇಕಾದ

ಸಂದರ್ಭದಲ್ಲಿ [ ] ಇ ಕಂಸವನ್ನು ಬಳಸಲಾಗಿದೆ. ಉದಾ— **ಅಂಕ$_2$** (ನಾ). **೧೩.** ಹೆಸರು : ಚೇರಮಾಂಕಂಗೆ ಬೆಸಸಿದ ಭಕ್ತ ಸತ್ಯೇಂದ್ರ ಚೋಳ ಕೃತಿ (ಭಾವಚಂ. ೧-೪೬). [ಚೇರಮಾಂಕ= ಚೇರಮ ಎಂಬ ಹೆಸರುಳ್ಳವನು]. **ಅಂಕಕಾಱ** (ನಾ). **೨.** ಬಿರುದುಳ್ಳ ವೀರ (ಇದು ಬಿರುದಿನ ಭಾಗವಾಗಿ ಬರುವುದೂ ಉಂಟು) : ನೆಲನದಿರೆವಂದು ತಾಗಿದ ಕಕ್ಕಲನ ತಮ್ಮನಪ್ಪ ಬಪ್ಪುವನಂಕಕಾಱನನೊಂದೆ ಮದಾಂಧಗಂಧಸಿಂಧುರದೊಳೋಡಿಸಿದ (ಪಂಪಭಾ. ೯-೫೨ ವ) ; [ ಬಪ್ಪುವನಂಕಕಾಱ : ಬಪ್ಪುವಂ + ಅಂಕಕಾಱ = ಬಪ್ಪುವನೆಂಬ ಅಂಕಕಾಱ ; ಇದನ್ನು ಬಪ್ಪುವನ + ಅಂಕಕಾಱ (= ಬಪ್ಪುವ ಎಂಬ ಒಡೆಯನ ಆಶ್ರಯದಲ್ಲಿರುವ ಅಂಕಕಾಱ) ಎಂದು ಬಿಡಿಸುವುದೂ ಸಾಧ್ಯ].

**VIII.** ( ) **ದುಂಡುಕಂಸ** (Round bracket)

ಮುಖ್ಯ ಉಲ್ಲೇಖಗಳ ಶಬ್ದಜಾತಿಯನ್ನು, ಸಂಕ್ಷಿಪ್ತಗಳನ್ನು, ಆಕರಗಳನ್ನು, ಪರ್ಯಾಯಶಬ್ದಗಳ ಮೂಲರೂಪಗಳನ್ನು ಸೂಚಿಸುವಲ್ಲಿ ದುಂಡುಕಂಸವನ್ನು ಬಳಸಲಾಗಿದೆ.

೧. ಮುಖ್ಯ ಉಲ್ಲೇಖಗಳ ಶಬ್ದಜಾತಿ :— **ಅಕ್ಕ** (ನಾ). **ಅಕ್ಕಚ್ಚಿ** (ನಾ). **ಅಗಲ್ಚು** (ಕ್ರಿ). **-ಅ$_3$** (ಅ). **ಅಕ್ಕುಡ$_2$** (ಗು).
೨. ಸಂಕ್ಷಿಪ್ತ :— **ಅಗಡೀದಿಗಡೀ** (ಗು). (ಉಕ).
೩. ಆಕರ :— **ಅಕ್ಕನ ಚೌರಿ** (ನಾ). ಒಂದು ಬಗೆಯ ಕಾಯಿಪಲ್ಯ (ಸ್ಯಾಂಡರ್).
೪. ಪರ್ಯಾಯ ಶಬ್ದಗಳ ಮೂಲರೂಪ :— **ಅಕ್ಕರೆಮುಗ** (ನಾ). [ಅಕ್ಕರೆ$_1$ (< ಅಟ್ಕುಜ್ಯ$_2$) + ಮುಗ].

**IX.** - (Hyphen)

ಈ ಚಿಹ್ನೆ ಅಕ್ಷರ ಅಥವಾ ಅಕ್ಷರಗಳ ಹಿಂದಿದ್ದರೆ ಪ್ರತ್ಯಯವನ್ನು ಸೂಚಿಸುತ್ತದೆ; ಮುಂದಿದ್ದರೆ ಶಬ್ದದ ಆದ್ಯಂಶವನ್ನು ಸೂಚಿಸುತ್ತದೆ. ಉದಾ— **-ಅ$_2$**, **-ಅ$_3$**, **ಅಗ-$_1$**.

**X.** — (Dash)

ಈ ಚಿಹ್ನೆ ಹಿಂದೆ ಕೊಟ್ಟಿರುವ ಶಬ್ದವನ್ನು ಸೇರಿಸಿಕೊಂಡು ಓದಬೇಕೆಂಬುದನ್ನು ಸೂಚಿಸುತ್ತದೆ. ಉದಾ— **ಅಡಕೆ ತಾಳಿಲ, ಅಡಕೆದಾಳಿಲ** (ನಾ). ಒಂದು ಬಗೆಯ ಪಲ್ಯ, —ತಾಳಿದ. ಇಲ್ಲಿ —ತಾಳಿದ ಎಂಬುದರ ಹಿಂದೆ ಒಂದು ಬಗೆಯ ಎಂಬುದನ್ನೂ ಸೇರಿಸಿಕೊಂಡು, ಒಂದು ಬಗೆಯ ತಾಳಿದ ಎಂದು ಅರ್ಥಮಾಡಿಕೊಳ್ಳಬೇಕು.

## ೭. ಅಕ್ಷರಗಳ ಗಾತ್ರ

**೧೨ ಪಾಯಿಂಟ್ ದಪ್ಪ ಅಕ್ಷರ** (12 Point antic)

೧. ನಿಘಂಟಿನಲ್ಲಿ ಬರುವ ಮುಖ್ಯ ಶಬ್ದಗಳನ್ನು ಉಲ್ಲೇಖಿಸುವಲ್ಲಿ ಈ ಅಳತೆಯ ಅಕ್ಷರಗಳನ್ನು ಬಳಸಲಾಗಿದೆ.
೨. ಮುಖ್ಯ ಶಬ್ದದ ಜೊತೆಯಲ್ಲಿ ಕೊಟ್ಟಿರುವ ಅದರ ಇತರ ರೂಪಗಳಿಗೆ ಅರ್ಥ ಪ್ರಯೋಗಗಳನ್ನು ಕೊಡುವಾಗ ಆ ಒಂದೊಂದು ರೂಪಕ್ಕೂ ಈ ಅಳತೆಯ ಅಕ್ಷರವನ್ನು ಬಳಸಲಾಗಿದೆ. ಉದಾ— **ಅಕ್ಕಸಾಲೆ** ಶಬ್ದದಲ್ಲಿ ಅಕಸಾಲ, ಅಕಸಾಲೆ, ಅಕ್ಕಸಾಲ, ಅಕ್ಕಸಾಲಿ, ಅಗಸಾಲ, ಅಗಸಾಲೆ, ಅರ್ಕಸಾಲೆ.

**೧೨ ಪಾಯಿಂಟ್ ಸಾದಾ ಅಕ್ಷರ** (12 Point Roman)

೧. ಮುಖ್ಯ ಶಬ್ದಗಳಿಗೆ ಅರ್ಥಗಳನ್ನು ಕೊಡುವಾಗ ಈ ಅಳತೆಯ ಅಕ್ಷರಗಳನ್ನು ಬಳಸಿದೆ. ಉದಾ— **ಅಡಕೆನಗೆ** (ನಾ). ಅದುಮಿಟ್ಟುಕೊಂಡ ನಗೆ; ಪರಿಮಿತವಾದ ನಗೆ.
೨. ಮುಖ್ಯ ಶಬ್ದದ ಜೊತೆಯಲ್ಲಿ ಕೊಡುವ ಅದರ ಇತರ ರೂಪಗಳಿಗೆ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಿದೆ. ಉದಾ— **ಅಕ್ಕ$_1$**, ಅಕ$_1$, ಅಕ್ಕಳ್ (ನಾ).
೩. ಒಂದು ಶಬ್ದದ ಅರ್ಥಕ್ಕೆ ಬೇರೆ ಕಡೆ 'ಆ ಶಬ್ದದ ಮುಖ್ಯ ರೂಪದ ಕೆಳಗಡೆ ನೋಡಿ' ಎಂದು ನಿರ್ದೇಶಿಸುವಾಗ ಈ ಅಳತೆ ಅಕ್ಷರಗಳನ್ನು ಬಳಸಿದೆ. ಉದಾ— **ಅಕ್ಕಡ$_1$** 'ಅಕ್ಕಡ' ನೋ. **ಅಕಲು** 'ಅಕ್ಕಲ್ಲು' ನೋ.
೪. ಬೇರೆ ರೀತಿ ಗೊತ್ತುಮಾಡಿಲ್ಲದ ಎಲ್ಲ ಕಡೆಗಳಿಗೂ ಈ ಅಳತೆಯ ಅಕ್ಷರಗಳನ್ನು ಬಳಸಿದೆ. ಉದಾ— [ಜೈನ]. [ವೀಶೈ]. (ಕರಾ). (ದಕ). (ಉಕ). ನೋ. ಪರಾ. ಹೋ. (ಕ್ರಿ). (ನಾ). (ಗು). (ಪ್ರ). ಇತ್ಯಾದಿ.
೫. ವಿಶೇಷಾಂಶಗಳನ್ನು ವಿವರಿಸುವ ಕಡೆ ℙ ಈ ಚಿಹ್ನೆಯ ಮುಂದೆ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಿದೆ.

**೧೦ ಪಾಯಿಂಟ್ ದಪ್ಪ ಅಕ್ಷರ** (10 Point antic)

೧. ನುಡಿಗಟ್ಟುಗಳನ್ನೂ ವಿಶಿಷ್ಟರೂಪಭೇದಗಳನ್ನೂ ನಿರ್ದೇಶಿಸುವಲ್ಲಿ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಲಾಗಿದೆ. ಉದಾ— **ಅಕ್ಕರ** ಶಬ್ದದ ಕೆಳಗೆ **ಅಕ್ಕರದ ಹೊಲಿಗೆ.** **ಅಟ್ಟೆ** ಶಬ್ದದ ಕೆಳಗೆ **ಅಟ್ಟಕ್ಕೇರು.**

೨. ನಿಷ್ಪತ್ತಿ ವಿಭಾಗದಲ್ಲಿ ಭಾಷೆಗಳ ಹೆಸರುಗಳನ್ನು ನಿರ್ದೇಶಿಸುವಲ್ಲಿ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಲಾಗಿದೆ. ಉದಾ— **ತಮಿ. ಮಲ. ತುಳು. ತೆಲು. ಹಿಂ.**

**೧೦ ಪಾಯಿಂಟ್ ಸಾದಾ ಅಕ್ಷರ** (10 Point Roman)

೧. ಮುಖ್ಯ ಶಬ್ದಗಳಿಗೆ ಅರ್ಥಗಳನ್ನು ಕೊಟ್ಟ ಮೇಲೆ ಪ್ರಯೋಗಗಳನ್ನು ಉದ್ಧರಿಸುವಾಗ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಲಾಗಿದೆ. ಉದಾ— **ಅಂಗವಟ್ಟ**$_1$ (ನಾ). ಅಗಳಾ ತುಂಗಸ್ತನೆಯ ಮಂಗಳಮಾದಂಗದೊಳಂಗವಟ್ಟಮಂ ಸಂಗಡಿಸಿದಂ ಬಱಿಯಂ (ಬಾಥಪು. ೧–೧೦೪ ವ).

೨. ನಿಷ್ಪತ್ತಿವಿಭಾಗದಲ್ಲಿ ಜ್ಞಾತಿಶಬ್ದಗಳನ್ನೂ, ಆ ಶಬ್ದಗಳ ಅರ್ಥಗಳನ್ನೂ ವಿವರಿಸುವಲ್ಲಿ ಈ ಅಳತೆಯ ಅಕ್ಷರಗಳನ್ನು ಬಳಸಿದೆ. ಉದಾ— **ಅಕ್ಕಿ**$_1$ (ನಾ). [ದೇ. < * ಅರ್ಕಿ. ‖ **ತಮಿ.** ಅರಿ, ಅರಿಚಿ ; **ಮಲ. ತುಳು.** ಅರಿ ; **ಕೊಡ.** ಅರಿ, ಅಕ್ಕಿ ; **ತೆಲು.** ಅಕ್ಕುಳ್ಲು].

**೮ ಪಾಯಿಂಟ್ ಸಾದಾ ಅಕ್ಷರ** (8 Point Roman)

ಮುಖ್ಯ ಶಬ್ದಗಳಿಗೆ ಕೊಡುವ ಪ್ರಯೋಗಗಳ ಆಕರಗಳನ್ನು ಸೂಚಿಸುವಾಗ ಈ ಅಳತೆಯ ಅಕ್ಷರಗಳನ್ನು ಬಳಸಲಾಗಿದೆ. ಉದಾ— **ಅಂಕೆ** ಶಬ್ದದಲ್ಲಿ (ಶ್ರೀಪಾಲ. ೪–೧೬) ; (ಎಕ. X, ಶ್ರೀನಿವಾ. ೨೭–೨೨ ; 870).

## ೮. ಇತರ ಅಂಶಗಳು

೧. ವರ್ಗಪಂಚಮಾಕ್ಷರಗಳಿಂದ ಕೂಡಿದ ಶಬ್ದಗಳಲ್ಲಿ ಬಿಂದುಸಹಿತವಾದ ರೂಪಗಳನ್ನು ಮಾತ್ರ ಈ ನಿಘಂಟಿನಲ್ಲಿ ಮುಖ್ಯ ಶಬ್ದಗಳಾಗಿ ಅಂಗೀಕರಿಸಲಾಗಿದೆ. ಕನ್ನಡ ವರ್ಣಮಾಲೆಯಲ್ಲಿ ಬಿಂದುವಿಗಿರುವ ಸ್ಥಾನಕ್ಕೆ ಅನುಗುಣವಾಗಿ ಶಬ್ದರೂಪಗಳನ್ನು ಅಳವಡಿಸಿದೆ. ಇದರಂತೆ ಅಂಕ, ಅಂಗ, ಅಂಚೆ, ಅಂಜು, ಅಂಟು, ಅಂಡ, ಅಂತ, ಅಂದ, ಅಂಪು, ಅಂಬು, ಅಂಶ, ಅಂಸ, ಅಕಟ, ಅಕಾರ, ಅಕ್ಕ, ಅಕ್ಕು ಈ ಕ್ರಮದಲ್ಲಿ ಮುಖ್ಯ ಶಬ್ದಗಳು ನಿಘಂಟಿನಲ್ಲಿ ಬಂದಿವೆ.

೨. ಶಾಸನಗಳಿಂದ ಪ್ರಯೋಗಗಳನ್ನು ಉದ್ಧರಿಸುವಾಗ ಅಲ್ಲಿ ಶಬ್ದರೂಪವು ವರ್ಗಪಂಚಮಾಕ್ಷರ ಸಹಿತವಾಗಿದ್ದರೆ, ವರ್ಗ ಪಂಚಮಾಕ್ಷರ ಸಹಿತವಾಗಿಯೂ, ಬಿಂದುಸಹಿತವಾಗಿದ್ದರೆ ಬಿಂದುಸಹಿತವಾಗಿಯೂ ಉಳಿಸಿಕೊಳ್ಳಲಾಗಿದೆ.

೩. ಪದಗಳಲ್ಲಿ ವಿಸರ್ಗದ ಮುಂದೆ ಶ, ಷ, ಸ ಕಾರಗಳು ಬಂದಾಗ ಅವುಗಳಲ್ಲಿ ವಿಸರ್ಗವಿರುವಾಗಲೂ, ವಿಸರ್ಗವಿಲ್ಲದೆ ದ್ವಿತ್ವವಾಗಿರುವಾಗಲೂ ಉಚ್ಚಾರದಲ್ಲಿ ಯಾವ ಭೇದವೂ ಕಾಣುವುದಿಲ್ಲ. ಆದ್ದರಿಂದ ಅವುಗಳನ್ನು ಈ ನಿಘಂಟಿನಲ್ಲಿ ಒಂದುಗೂಡಿಸಲಾಗಿದೆ. ಶ, ಷ, ಸ ಕಾರ ದ್ವಿತ್ವವುಳ್ಳ ರೂಪಗಳನ್ನು ಮುಖ್ಯ ಉಲ್ಲೇಖಗಳಾಗಿ ತೋರಿಸಲಾಗಿದೆ. ವಿಸರ್ಗ ಸಮೇತವಾದ ರೂಪಗಳನ್ನು ವರ್ಣಾನು ಕ್ರಮದಲ್ಲಿ ತೋರಿಸಿ ಮುಖ್ಯ ಉಲ್ಲೇಖಕ್ಕೆ 'ನೋ' ಎಂದು ನಿರ್ದೇಶಿಸಲಾಗಿದೆ. ಉದಾ— **ಅಂತಃಶುದ್ಧಿ** ≡ ಅಂತಶ್ಶುದ್ಧಿ. **ಅಂತಃಸತ್ತ್ವ** ≡ ಅಂತಸ್ಸತ್ತ್ವ. **ದುಃಶೀಲ** ≡ ದುಶ್ಶೀಲ. **ದುಃಸಂಗ** ≡ ದುಸ್ಸಂಗ. **ನಿಃಕಲ** ≡ ನಿಷ್ಕಲ.

೪. ರಕಾರವಿರುವ ಸಂಯುಕ್ತಾಕ್ಷರಗಳನ್ನು ಬರೆಯುವಾಗ ರಕಾರಕ್ಕೆ ಒತ್ತು ಕೊಟ್ಟಾಗಲಿ, ಅರ್ಕಾವೊತ್ತನ್ನು (ೖ) ಸೇರಿಸಿಯಾಗಲಿ ಬರೆಯಲಾಗಿದೆ. ಉದಾ— **ಆರ್ಯ** = ಆರ್ಯ. **ಸೂರ್ಯ** = ಸೂರ್ಯ.

೫. ಕೆಲವು ಶಬ್ದಗಳು ಒಂದೇ ಮೂಲದಿಂದ ಬಾರದಿದ್ದರೂ, ಕೆಲವಂಶಗಳಲ್ಲಿ ಮಾತ್ರ ಪರಸ್ಪರ ಹೋಲುವಂತೆ ಕಂಡುಬಂದಾಗ ಆ ಬಗ್ಗೆ ಗಮನವನ್ನು ಸೆಳೆಯುವುದಕ್ಕಾಗಿ 'ಪರಾ' = ಪರಾಮರ್ಶಿಸಿ ಎಂದು ಸೂಚಿಸಲಾಗಿದೆ. ಒಂದೇ ಮೂಲದ ಶಬ್ದಗಳನ್ನು 'ನೋ' = ನೋಡಿ ಎಂದು ನಿರ್ದೇಶಿಸಲಾಗಿದೆ. ಉದಾ— **ಅಟ್ಟವಣೆ** 'ಟವಣೆ' ಪರಾ. **ಅಕಸಾಲ** 'ಅಕ್ಕಸಾಲೆ' ನೋ. **ಅಗಸೆವೂ** (ನಾ). ಅಗಸೆಮರದ ಹೂವು. 'ಅಗಸೆವೂಗೊಂಬು' ಪರಾ. ಇಲ್ಲಿ 'ಅಗಸೆವೂ' ಎಂಬ ಶಬ್ದಕ್ಕೆ ಪ್ರಯೋಗವನ್ನು ಕೊಟ್ಟಿಲ್ಲ. ಆದರೆ ಆ ಶಬ್ದವಿರುವ ಪ್ರಯೋಗವನ್ನು 'ಅಗಸೆವೂಗೊಂಬು' ಎಂಬ ಶಬ್ದದ ಕೆಳಗೆ ಕೊಟ್ಟಿದೆ. ಅಲ್ಲಿ ನೋಡಿಕೊಳ್ಳಿ ಎಂದು ಅಭಿಪ್ರಾಯ. 'ಪರಾ,' 'ನೋ' ಎಂದು ನಿರ್ದೇಶಿಸಿರುವ ಶಬ್ದಗಳು ಅವುಗಳ ಸ್ಥಾನದಲ್ಲಿ ಮುಖ್ಯ ಉಲ್ಲೇಖಗಳಾಗಿ ನಿಘಂಟಿನಲ್ಲಿ ಬಂದಿರುತ್ತವೆ.

'ಹೋ' = ಹೋಲಿಸು. ಒಂದು ಶಬ್ದಕ್ಕೂ ಇನ್ನೊಂದು ಶಬ್ದಕ್ಕೂ ರೂಪ ರಚನೆಗಳಲ್ಲಿ ಅಥವಾ ಆ ಮೂಲಕ ಅರ್ಥದಲ್ಲಿ ಸಾಮ್ಯ ವೈಷಮ್ಯಗಳು ಕಂಡುಬರಬಹುದಾದಲ್ಲಿ ಅಂಥ ಶಬ್ದವನ್ನು 'ಹೋ' = ಹೋಲಿಸು ಎಂಬ ಸಂಕೇತದಿಂದ ಸೂಚಿಸಲಾಗಿದೆ. ಆ ಎರಡು

ಶಬ್ದಗಳನ್ನು ಹೋಲಿಸಿ ನೋಡಿ ಎಂದು ಅಭಿಪ್ರಾಯ. ಉದಾ— –**ಅಟಿಗ** –ಅಡಿಗ ಹೋ. ಇಲ್ಲಿ ಅರ್ಥವೊಂದೇ ಆಗಿದ್ದರೂ ಮಧ್ಯವರ್ಣ ವ್ಯತ್ಯಾಸವಾಗಿದೆ. **ಅಡಾಯುಧ** ಅಡಾಯ್ದ ಹೋ. ಇಲ್ಲಿ ಅರ್ಥಸಾಮ್ಯವಿರುವುದರ ಜೊತೆಗೆ ರೂಪದಲ್ಲಿಯೂ ಸ್ವಲ್ಪ ಹೋಲಿಕೆಯಿದೆ. **ಅಡಿ**, ಆರಡಿ, ಎಂಟಡಿ ಹೋ. ಇಲ್ಲಿ 'ಅಡಿ'ಗೆ ಕೊಟ್ಟಿರುವ ಅರ್ಥ ಆ ಶಬ್ದಗಳಲ್ಲಿ ಅನ್ವಯವಾಗಿದೆ.

೬. ಸುಮಾರು ೧೨೦೦ ರ ವರೆಗಿನ ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಪ್ರಯೋಗವಾಗಿರುವ 'ೞ' ಕಾರವನ್ನು ಉಳಿಸಿಕೊಳ್ಳಲಾಗಿದೆ. ಸುಮಾರು ಸಾವಿರದ ಏಳುನೂರರ ವರೆಗಿನ ಗ್ರಂಥಗಳಲ್ಲಿ ಶಕಟರೇಫ (ಱ) ವನ್ನು ಇಟ್ಟುಕೊಳ್ಳಲಾಗಿದೆ. ಅಲ್ಲದೆ ಈಚಿನ ಕೆಲವು ವಿದ್ವಾಂಸರು ಬರೆದಿರುವ ಹಳಗನ್ನಡ ಕಾವ್ಯಗಳಲ್ಲಿಯ 'ಱ' 'ೞ'ಗಳನ್ನು ಉಳಿಸಿಕೊಳ್ಳಲಾಗಿದೆ. ಉದಾ— ನೀತಿಮಂಜರಿ, ಅಶ್ವತ್ಥಾಮನ್, ಅಂತಿಗೊನೆ ಮುಂತಾದ ಗ್ರಂಥಗಳು.

೭. ಪ್ರಕೃತ ಶಬ್ದಕ್ಕೆ ಸಂಬಂಧಿಸಿದಂತೆ ಶಾಸನಗಳಲ್ಲಿ ಕುಳ (ಳ) ವಿರಬೇಕಾದ ಕಡೆಗಳಲ್ಲಿ ಱೞ (ೞ) ಬರೆದಿದ್ದರೆ, ಅವುಗಳನ್ನು ಯಥಾವತ್ತಾಗಿ ಉದ್ಧರಿಸಿ ಪಕ್ಕದಲ್ಲಿ [ ] ಇ ಕಂಸದಲ್ಲಿ ತಿದ್ದಿ ತೋರಿಸಲಾಗುವುದು.

೮. ವಿತ್ತು, ವೆಟ್ಟ, ವೆಳೆ ಮುಂತಾದ ವಕಾರಾದಿಯಾದ ಪೂರ್ವದ ಹಳಗನ್ನಡ ರೂಪಗಳನ್ನು ಬಿತ್ತು, ಬೆಟ್ಟ, ಬೆಳೆ ಮುಂತಾದ ಬಕಾರಾದಿಯಾದ ಹಳಗನ್ನಡ ರೂಪಗಳ ಕೆಳಗೆ ಕೊಟ್ಟು ವಿವರಿಸಿದೆ.

೯. ಪ್ರಾದೇಶಿಕವೆಂದು ಸ್ಪಷ್ಟವಾಗಿ ಗೊತ್ತಿರುವ ಶಬ್ದಗಳನ್ನು ನಿರ್ದೇಶಿಸುವಲ್ಲಿ (ಉಕ) = ಉತ್ತರ ಕರ್ನಾಟಕ, (ದಕ) = ದಕ್ಷಿಣ ಕರ್ನಾಟಕ, (ಕರಾ) = ಕರಾವಳಿ ಎಂಬ ಸಂಕೇತಗಳನ್ನು ಬಳಸಲಾಗಿದೆ. ಉದಾ— **ಅಂಗಲು** (ನಾ). (ಉಕ); **ಅಂಡಕ್ಕ** (ಗು). (ಉಕ). ; **ಅಜೀಬಾತು** (ಅ). (ಉಕ); **ಅಟ್ಟಣೆ** (ನಾ). (ಕರಾ); **ಅಣ್ಣಾವಟ್ಟಿಗಾರ, ಅಣ್ಣಾವಂಟಿಗಾರ** (ನಾ). (ದಕ). ಒಂದು ಶಬ್ದ ಪ್ರಾದೇಶಿಕವಾಗಿದ್ದರೂ ಅದು ಆ ಪ್ರದೇಶದಲ್ಲಿ ಸರ್ವತ್ರ ಪ್ರಯೋಗದಲ್ಲಿಲ್ಲದಿದ್ದರ ಆಗ ಅದನ್ನು (ಉಕ – ಪ್ರಾದೇ); (ದಕ – ಪ್ರಾದೇ); (ಕರಾ – ಪ್ರಾದೇ) ಎಂದು ಸೂಚಿಸಲಾಗಿದೆ. ಉದಾ— **ಅಚ್ಚಮಣೆ** (ನಾ). (ದಕ – ಪ್ರಾದೇ); **ಅಣ್ಣಿ** (ನಾ). (ದಕ – ಪ್ರಾದೇ).

೧೦. ಶಬ್ದಸಮುದಾಯವನ್ನು ತಪ್ಪಾಗಿ ಬಿಡಿಸುವುದು, ಲೇಖಕ ಸ್ಖಾಲಿತ್ಯಗಳು, ಅಚ್ಚಿನ ತಪ್ಪುಗಳು –ಇವೇ ಮೊದಲಾದವುಗಳಿಂದ ಸಂಭವಿಸಿರಬಹುದಾದ ಮಿಥ್ಯಾಶಬ್ದಗಳನ್ನು (Ghost words) ಈ ನಿಘಂಟಿನಲ್ಲಿ ಕಾಣಿಸಿಲ್ಲ. ಆದರೆ ಈ ತೆರನ ಶಬ್ದಗಳನ್ನು ನಿಘಂಟಿನಲ್ಲಿ ಕಡೆಯ ಅನುಬಂಧವಾಗಿ ಕೊಡಬೇಕೆಂದು ಉದ್ದೇಶಿಸಲಾಗಿದೆ. ಉದಾ— **ಅಂಗಳಿ** (ಮಿಥ್ಯಾಶಬ್ದ). **ಅಗಲ್ತೆ** (ನಾ)... ☞ ಈ ಶಬ್ದವು ಅಗಲ್ಕೆ ಎಂಬುದರ ಅಪಲಿಖಿತವಿರಬಹುದು. **ಅಗ್ಗಾಯಿತಿ** (ನಾ)... ☞ ಇದು ಅಗ್ಗಾಯಿಲೆ ಎಂಬ ಶಬ್ದದ ಅಪಲಿಖಿತವಾಗಿರಬಹುದು. **ಅಡಕಿಲ್ದಟ್ಟಿ** (ನಾ)... ☞ ಈ ಪ್ರಯೋಗದಲ್ಲಿ 'ಅಡಕಿಲ್ವಟ್ಟಿ' ಎಂದು ಕೆಲವು ಮುದ್ರಣಗಳಲ್ಲಿ ಕಾಣಬರುವುದು ಅಪಪಾಠ.

೧೧. ಷಷ್ಠ್ಯಂತವಾದ ಕೆಲವು ಶಬ್ದಗಳಿಗೆ ಪ್ರತ್ಯಯ '–ಅ' ಕ್ಕೆ ಬದಲಾಗಿ ಇಕಾರದ ಅಥವಾ ಎಕಾರದ ದೀರ್ಘರೂಪ ಕಂಡುಬರುತ್ತದೆ. ಉದಾ— **ಅಡವೀಸಿಂಗ, ಅಡವಿಯಸಿಂಗ.** ಇವುಗಳಲ್ಲಿ ಅಡವಿಯಸಿಂಗ ಎಂಬ ರೂಪವನ್ನು ಈ ನಿಘಂಟಿನಲ್ಲಿ ಮುಖ್ಯ ಉಲ್ಲೇಖವಾಗಿ ಕೊಟ್ಟಿಲ್ಲ. ಆದರೆ 'ಅಡವೀಸಿಂಗ' ಎಂಬ ರೂಪವನ್ನು ಮುಖ್ಯ ಉಲ್ಲೇಖವಾಗಿ ಕೊಟ್ಟಿದೆ. ನಿಷ್ಪತ್ತಿಯಲ್ಲಿ ಇದನ್ನು [ಅಡವಿ + ಸಿಂಗ] ಎಂದು ಬಿಡಿಸಿ ತೋರಿಸಲಾಗುವುದೇ ಹೊರತು ದೀರ್ಘರೂಪವನ್ನು (ೀ) ನಿರ್ದೇಶಿಸುವುದಿಲ್ಲ. ಹೀಗೆಯೇ **'ಅದ್ದೇ ಕೆಲಸ,' 'ಅದ್ದೇ ಚಾಕರಿ'** ಮುಂತಾದ ಶಬ್ದಗಳಲ್ಲಿಯ ದೀರ್ಘರೂಪ (ೀ) ಗಳನ್ನು ನಿಷ್ಪತ್ತಿಭಾಗದಲ್ಲಿ ಬಿಡಿಸಿ ತೋರಿಸುವುದಿಲ್ಲ.

೧೨. ಶಾಸನಗಳಿಗೆ ಕಾಲವನ್ನು ಸೂಚಿಸುವಾಗ ಅವುಗಳ ಸಂಪಾದಕರು ಕೊಟ್ಟಿರುವ ಕಾಲವನ್ನೇ ಸಾಧಾರಣವಾಗಿ ಸ್ವೀಕರಿಸಿದೆ. ಸಂದೇಹ ಬಂದ ಕಡೆ ಕಾಲವನ್ನು ಸೂಚಿಸಿ ಪ್ರಶ್ನಾರ್ಥಕ ಚಿಹ್ನೆಯನ್ನು ಬಳಸಿರುವುದರ ಜೊತೆಗೆ ಕೆಲವು ಕಡೆ ಸು = ಸುಮಾರು ಎಂದು ನಿರ್ದೇಶಿಸಿದೆ. ಉದಾ— **ಅಂಕಣ** (ನಾ). (ಎಕ. XIV, ಕೃಷ್ಣರಾ. ೮೬–೪; 1341 ?). **ಅಂಬಲ$_1$** (ನಾ). (ಮೈಆರಿ. ೧೯೨೬, ೧೦೦–೮; ಸು. 900).

೧೩. [ತಥಾ] ಈ ಸಂಕೇತವನ್ನು ಇಂಗ್ಲೀಷಿನ Sic ಎಂಬುದಕ್ಕೆ ಪರ್ಯಾಯವಾಗಿ ಉಪಯೋಗಿಸಿದೆ. ಒಂದು ಉದಾಹರಣೆಯಿಂದ ಈ ಅಂಶವನ್ನು ಸ್ಪಷ್ಟಪಡಿಸಬಹುದು. **ಅಕ್ಕರೆ$_2$** (ನಾ). ಆಚೆಯ ದಡ: ನಾನು ನಿನ್ನನ್ನು ಈ ನದಿಯಿಂದ ದಾಟಿಸುವೆನು. ಅಕ್ಕರೆಯಲ್ಲಿ (ಅತ್ತ [ತಥಾ] + ಕರೆ = ಅಕ್ಕರೆ) ಸೂರ್ಯದೇವನ ಅರಮನೆಗೆ ಹೋಗುವ ದಾರಿಯಿದೆ (ಪಂಚಾಮೃ. ೪೯). ಈ ಪ್ರಯೋಗದಲ್ಲಿ ಅಕ್ಕರೆಯಲ್ಲಿ (ಅತ್ತ + ಕರೆ = ಅಕ್ಕರೆ) ಎಂದಿರುವುದನ್ನು, ಯಾವೊಂದು ಬದಲಾವಣೆಯನ್ನೂ ಮಾಡದೆ, ಇರುವುದನ್ನು ಇರುವ ಹಾಗೆ ಉದ್ಧರಿಸಿದೆ ಎಂದು ಈ ಸಂಕೇತ ಸೂಚಿಸುತ್ತದೆ.

೧೪. ಈ ನಿಘಂಟಿನಲ್ಲಿ ಪ್ರಯೋಗಗಳನ್ನು ಉದ್ಧರಿಸುವಾಗ ಪದ್ಯಕಾವ್ಯಗಳಿಗೆ ಆಶ್ವಾಸ ಮತ್ತು ಪದ್ಯಗಳ ಸಂಖ್ಯೆಯನ್ನಾಗಲೀ, ಪರ್ವ, ಕಾಂಡ, ಸಂಧಿ, ಪದ್ಯಗಳ ಸಂಖ್ಯೆಯನ್ನಾಗಲೀ ಯಥೋಚಿತವಾಗಿ ಸೂಚಿಸಿದೆ. ಹಳಗನ್ನಡ ಗದ್ಯ ಕಾವ್ಯಗಳಿಗೆ ಪುಟ ಮತ್ತು ಸಾಲುಗಳ ಸಂಖ್ಯೆಯನ್ನೂ, ಆಧುನಿಕ ಗದ್ಯ ಕಾವ್ಯಗಳಿಗೆ ಪುಟಸಂಖ್ಯೆಯನ್ನೂ ಕೊಟ್ಟಿದೆ. ಶಾಸನಗಳಿಗೆ ಸಂಪುಟ, ಸಂಚಿಕೆ, ತಾಲ್ಲೂಕು, ಶಾಸನ ಸಂಖ್ಯೆ, ಸಾಲು ಮತ್ತು ಕಾಲವನ್ನು ಸೂಚಿಸಿದೆ.

| ಡಿ. ಎಲ್. ನರಸಿಂಹಾಚಾರ್ | ಡಾ॥ ರಂ. ಶ್ರೀ. ಮುಗಳಿ | ಎಸ್. ಬಸವಾರಾಧ್ಯ |
|---|---|---|
| ನಿಘಂಟು ಸಮಿತಿಯ ಅಧ್ಯಕ್ಷರು ಮತ್ತು ಪ್ರಧಾನ ಸಂಪಾದಕರು | ಉಪಾಧ್ಯಕ್ಷರು | ಸಂಪಾದಕರು |

ನಿಘಂಟಿನಲ್ಲಿ ಉದಾಹರಿಸಿರುವ ಗ್ರಂಥ, ಶಾಸನ ಮೊದಲಾದವುಗಳ

# ಸಂಕ್ಷಿಪ್ತ ಸೂಚಿ

**ಸೂಚನೆ :—** ಇಲ್ಲಿ "ಇತರ ವಿವರಗಳು" ಎಂಬುದರ ಕೆಳಗೆ ಪ್ರಕಾಶನದ ವಿವರಗಳನ್ನೂ, ಹಸ್ತಪ್ರತಿಯಿಂದ ಶಬ್ದಸಂಗ್ರಹವನ್ನು ಮಾಡಿದ್ದರೆ ಅದರ ವಿವರಗಳನ್ನೂ ಸಾಧ್ಯವಾದಮಟ್ಟಿಗೂ ಕೊಡಲಾಗಿದೆ.

ವಿಶೇಷಾಂಶಗಳನ್ನು ಹೇಳಬೇಕಾಗಿರುವ ಕಡೆಗಳಲ್ಲಿ ಮೇಲಂಕೆಗಳಿಂದ ಗುರುತುಮಾಡಿ, ಅಂಥ ಹೆಚ್ಚಿನ ವಿವರಗಳನ್ನು ಸೂಚಿಯ ಕೊನೆಯಲ್ಲಿ ಕೊಡಲಾಗಿದೆ. ಉದಾಹರಣೆಗೆ, ಹರಿಹರ[1*] ನೋಡಿ.

ಅನು= ಅನುವಾದಕ; ಓರಿಇ= ಓರಿಯೆಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್; ಓರಿಲೈ= ಗವರ್ನ್‌ಮೆಂಟ್ ಓರಿಯೆಂಟಲ್ ಲೈಬ್ರರಿ; ಸಂ= ಸಂಪಾದಕ.

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿವರಗಳು |
|---|---|---|---|---|---|
| ೧ | **ಅಂಜಚ.** | ಅಂಜನಾ ಚರಿತ್ರೆ | ಶಿಶುಮಾಯಣ | ಸು. ೧೨೩೩ | ಹಸ್ತಪ್ರತಿ: ಕೆ.ಬಿ.೨೫೫, ಓರಿಇ., ಮೈಸೂರು |
| ೨ | **ಅಂತರಾ.** | ಅಂತರಾತ್ಮನಿಗೆ | ರಂ. ರಾ. ದಿವಾಕರ | ೧೯೫೮ | ೫ನೆಯ ಮುದ್ರಣ, ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ |
| ೩ | **ಅಂತಿಗೊ.** | ಅಂತಿಗೊನೆ | ಅನು॥ ಕೆ. ವೆಂ. ರಾಘವಾಚಾರ್ | ೧೯೩೮ | ವೆಸ್ಲಿ ಪ್ರೆಸ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು |
| ೪ | **ಅಂಬಿಕಾ.** | ಅಂಬಿಕಾವಿಜಯ | ಬೊಬ್ಬೂರು ರಂಗ | ಸು. ೧೭೫೦ | ಸತ್ಸಂಪ್ರದಾಯ ಕಳಾನಿಧಿ ಮುದ್ರಾಕ್ಷರ ಶಾಲೆ, ಬೆಂಗಳೂರು, ೧೯೯೨ |
| ೫ | **ಅಂಬಿಕೆ.** | ಅಂಬಿಕೆ | ಬಿ. ಪಿ. ಕಾಳೆ | ೧೯೬೧ | ೫ನೆಯ ಮುದ್ರಣ, ಶೇಷಾಚಲ ಗ್ರಂಥಮಾಲೆ, ಧಾರವಾಡ |
| ೬ | **ಅಂಬಿವ.** | ಅಂಬಿಗರ ಚೌಡಯ್ಯನ ವಚನಗಳು | ಅಂಬಿಗರ ಚೌಡಯ್ಯ | ಸು. ೧೧೬೦ | ಹಸ್ತಪ್ರತಿ: ಕೆ.ಬಿ.೪೪೮, ಓರಿಇ., ಮೈಸೂರು |
| ೭ | **ಅಂಬುಜಾ.** | ಅಂಬುಜಾಕ್ಷಿ | ಎಸ್. ವೆಂಕಟರಾಜ | ೧೯೫೫ | ಶ್ರೀಕೃಷ್ಣಪ್ರಕಾಶನ, ಉಡುಪಿ |
| ೮ | **ಅಕಾನಿ.** | ಅಕಾರಾದಿ ನಿಘಂಟು | ಲಕ್ಷ್ಮಣ ಪಂಡಿತ | ಸು. ೧೭೭೫ | ಹಸ್ತಪ್ರತಿ: ಕೆ.ಎ.೧೩೨, ಓರಿಇ., ಮೈಸೂರು |
| ೯ | **ಅಕ್ಕತಂ.** | ಅಕ್ಕ–ತಂಗಿ | ನಾರಾಯಣ ಸಂಗಮ | ೧೯೪೩ | ಸಾಹಿತ್ಯ ಭಾಂಡಾರ, ಹುಬ್ಬಳ್ಳಿ |
| ೧೦ | **ಅಕ್ಕಾಜಿ.** | ಅಕ್ಕಾಜಿ | ಅನು॥ ಮಲ್ಹಾರಿ | ೧೯೪೨ | ಲಲಿತ ಸಾಹಿತ್ಯಮಾಲೆ, ಧಾರವಾಡ |
| ೧೧ | **ಅಕ್ಬರ.** | ಅಕ್ಬರ ಚಕ್ರವರ್ತಿಯ ಚರಿತ್ರ | ರಾ. ಹ. ದೇಶಪಾಂಡೆ | ೧೯೧೯ | ರಾಮಚಂದ್ರ ಎಚ್. ದೇಶಪಾಂಡೆ, ಧಾರವಾಡ |
| ೧೨ | **ಅಕ್ರೂಚ.** | ಅಕ್ರೂರ ಚರಿತ್ರೆ | ಸೋಮನಾಥ (ಸಂ॥ ಆರ್. ಶಾಮಶಾಸ್ತ್ರಿ) | ಸು. ೧೬೦೦ | ಓರಿಇ., ಮೈಸೂರು, ೧೯೨೩ |
| ೧೩ | **ಅಗ್ನಿಹಂ.** | ಅಗ್ನಿಹಂಸ | ಕುವೆಂಪು | ೧೯೪೬ | ಕಾವ್ಯಾಲಯ, ಮೈಸೂರು |
| ೧೪ | **ಅಜಚ.** | ಅಜನೃಪ ಚರಿತೆ | ಎಸ್. ಜಿ. ನರಸಿಂಹಾಚಾರ್ | ೧೮೯೭ | ಕರ್ಣಾಟಕ ಗ್ರಂಥಮಾಲೆ, ಮೈಸೂರು |
| ೧೫ | **ಅಜಿತ.** | ಅಜಿತಕುಮಾರ | ಕೆ. ಬಿ. ರಾಮಕೃಷ್ಣ | ೧೯೨೭ | ಸಾಹಿತ್ಯಮಂಡಲ ಲಿ., ಮಂಗಳೂರು |
| ೧೬ | **ಅಜಿಪು.** | ಅಜಿತತೀರ್ಥಕರ ಪುರಾಣ ತಿಲಕಂ | ರನ್ನ (ಸಂ॥ (i) ಮಂ. ಆ. ರಾಮಾನುಜಯ್ಯಂಗಾರ್; | ೯೯೩ | ಕರ್ಣಾಟಕ ಕಾವ್ಯಕಲಾನಿಧಿ, ಮೈಸೂರು, ೧೯೧೦ |
| | | | (ii) ಎಚ್. ದೇವೀರಪ್ಪ, ದೇ. ಜವರೇಗೌಡ) | ,, | ಜೈನ ಸಾಹಿತ್ಯ ಪ್ರಚಾರ ಸಂಘ, ಮೈಸೂರು, ೧೯೫೯ |
| ೧೭ | **ಅಡುಸೌ.** | ಅಡುಗೆ ಮನೆಯ ಸೌಭಾಗ್ಯ | ಅನು॥ ಬಿ. ಈಶ್ವರಭಟ್ಟ | ೧೯೫೭ | ಕನ್ನಡ ಪ್ರಪಂಚ ಪ್ರಕಾಶನ, ಮಂಗಳೂರು |
| ೧೮ | **ಅತಿರ.** | ಅತಿಭಕ್ತನ ರಗಳೆ | ಹರಿಹರ[1*] | ಸು. ೧೨೦೦ | ಹಸ್ತಪ್ರತಿ: ಕೆ. ೩೫೮, ಓರಿಇ., ಮೈಸೂರು |
| ೧೯ | **ಅದೂಟ.** | ಅವರಿಲ್ಲದೂಟ | ಎಂ. ಎಸ್. ಪುಟ್ಟಣ್ಣ | ೧೯೫೯ | ಕಾವ್ಯಾಲಯ, ಮೈಸೂರು |
| ೨೦ | **ಅದ್ಭುತ.** | ಅದ್ಭುತ ರಾಮಾಯಣಂ | ಮುದ್ದಣ (ಸಂ॥ ಎಸ್. ವಿ. ಪರಮೇಶ್ವರಭಟ್ಟ) | ೧೮೯೪ | ಉಷಾ ಸಾಹಿತ್ಯಮಾಲೆ, ಮೈಸೂರು, ೧೯೫೧ |
| ೨೧ | **ಅಧಿಕಾ.** | ಅಧಿಕಾರ | ಕೆ. ವೆಂಕಟರಾಮಯ್ಯ | ೧೯೫೦ | ೫ನೆಯ ಮುದ್ರಣ, ಸವಿತಾ ಗ್ರಂಥಮಾಲಾ, ತುಮಕೂರು |
| ೨೨ | **ಅಧ್ಯಾತ್ಮ.** | ಲಘುಅಧ್ಯಾತ್ಮಮಾಲಾ | ಆರ್ಯಾಚಾರ್ಯ | ಸು. ೧೮೫೦ | ವರ್ತಮಾನ ತರಂಗಿಣಿ ಮುದ್ರಾಕ್ಷರ ಶಾಲೆ, ಮದರಾಸು, ೧೮೯೫ |
| ೨೩ | **ಅಧ್ಯಾಮಾ.** | ಅಧ್ಯಾತ್ಮಮಾಲ | ತಮ್ಮಣ್ಣದಾಸ | ೧೮೯೬ | ಶ್ರೀನಿಕೇತನ ಮುದ್ರಾಕ್ಷರ ಶಾಲಾ, ಮದರಾಸು |
| ೨೪ | **ಅಧ್ಯಾರಾ.** | ಅಧ್ಯಾತ್ಮರಾಮಾಯಣ | ಶಾಳ್ವದ ಕೃಷ್ಣರಾಜ | ೧೭೪೮–೭೫ | ಹಸ್ತಪ್ರತಿ: ಕೆ.೫೦೩, ಓರಿಇ., ಮೈಸೂರು |

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿವರಗಳು |
|---|---|---|---|---|---|
| ೨೫ | ಅನಂಚ. | ಅನಂತನಾಥ ಚರಿತ್ರೆ | ಚಿಕ್ಕಪದ್ಮಣ್ಣ ಶೆಟ್ಟಿ | ೧೫೮೨ | ಹಸ್ತಪ್ರತಿ: ಕೆ. ಎ. ೩೦೨, ಓರಿಇ., ಮೈಸೂರು |
| ೨೬ | ಅನಂತ. | ಅನಂತ | ಸತ್ಯಬೋಧ | ೧೯೪೫ | ಮನೋಹರ ಗ್ರಂಥಮಾಲಾ, ಧಾರವಾಡ |
| ೨೭ | ಅನಂನಾ. | ಶಬ್ದಾರ್ಥಸಂಗ್ರಹ | ಟಿ. ಕೆ. ಅನಂತನಾರಾಯಣ | ೧೯೩೩ | ಹಸ್ತಪ್ರತಿ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೬೦ |
| ೨೮ | ಅನಂಪು. | ಅನಂತನಾಥ ಪುರಾಣಂ | ಜನ್ನ (ಸಂ॥ ಡಿ. ಶ್ರೀನಿವಾಸಾಚಾರ್, ಎಚ್. ಆರ್. ರಂಗಸ್ವಾಮಿ ಅಯ್ಯಂಗಾರ್) | ೧೨೩೦ | ಓರಿಇ., ಮೈಸೂರು, ೧೯೩೦ |
| ೨೯ | ಅನಾಥೆ. | ಅನಾಥೆ | ಎಂ. ಗೋಪಾಲಕೃಷ್ಣ ಅಡಿಗ | ೧೯೫೪ | ಶಾರದಾ ಪ್ರಕಟನಾಲಯ, ಬೆಂಗಳೂರು |
| ೩೦ | ಅನಾದಿ. | ಅನಾದಿ | ಶ್ರೀರಂಗ | ೧೯೫೩ | ಲಲಿತ ಸಾಹಿತ್ಯಮಾಲೆ, ಧಾರವಾಡ |
| ೩೧ | ಅನಾಮಿ. | ಅನಾಮಿಕಾ ಮತ್ತು ಇತರ ಕತೆಗಳು | ಸಿ. ಎನ್. ಜಯಲಕ್ಷ್ಮೀದೇವಿ | ೧೯೫೭ | ಮಹಿಳಾ ಸೇವಾ ಸಮಾಜ, ಕೃಷ್ಣರಾಜಪೇಟೆ |
| ೩೨ | ಅನಾಸ. | ಅನಾಸಕ್ತಿಯೋಗ | ದ. ಕೃ. ಭಾರದ್ವಾಜ | ೧೯೩೦ | ಶ್ರೀ ತುಲಸೀದಾಸ ರಾಮಾಯಣ ಕಾರ್ಯಾಲಯ, ಬೆಂಗಳೂರು |
| ೩೩ | ಅನಿಕೇ. | ಅನಿಕೇತನ | ಕುವೆಂಪು | ೧೯೬೩ | ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು |
| ೩೪ | ಅನೀರ. | ಅಮರನೀತಿಯ ರಗಳೆ | ಹರಿಹರ | ಸು. ೧೨೦೦ | ಹಸ್ತಪ್ರತಿ: ಕೆ. ೩೫೮, ಓರಿಇ., ಮೈಸೂರು |
| ೩೫ | ಅನುಪ್ರೇ. | ಅನುಪ್ರೇಕ್ಷೆ | ಕಲ್ಯಾಣಕೀರ್ತಿ | ೧೪೩೯ | ಹಸ್ತಪ್ರತಿ: ಕೆ. ೨೦, ಓರಿಇ., ಮೈಸೂರು |
| ೩೬ | ಅನುಮು. | ಅನುಭವ ಮುಕುರ | ಜನ್ನ (ಸಂ॥ ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರಿ) | ಸು. ೧೨೦೦ | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೫೬ |
| ೩೭ | ಅನುರ. | ಅನುರಕ್ತೆ | ವ್ಯಾಸರಾಯ ಬಲ್ಲಾಳ | ೧೯೫೩ | ಲಲಿತ ಸಾಹಿತ್ಯಮಾಲೆ, ಧಾರವಾಡ |
| ೩೮ | ಅನುಸಾ. | ಅನುಭವಸಾರ | ನಿಜಗುಣ ಶಿವಯೋಗಿ (ಸಂ॥ ಪಿ. ಆರ್. ಕರಿಬಸವಶಾಸ್ತ್ರಿ) | ಸು. ೧೫೦೦ | ವೆಸ್ಲಿಯನ್ ಮಿಷನ್ ಪ್ರೆಸ್, ಮೈಸೂರು, ೧೯೦೪ |
| ೩೯ | ಅನ್ನ. | ಅನ್ನ | ರಂ. ಶ್ರೀ. ಮುಗಳಿ | ೧೯೪೮ | ಮನೋಹರ ಗ್ರಂಥಮಾಲಾ, ಧಾರವಾಡ |
| ೪೦ | ಅನ್ನದಾ. | ಅನ್ನದಾತ | ವೀ. ಚ. ಹಿತ್ತಲಮನಿ | ೧೯೪೭ | ಮಾಧವ ಬಲ್ಲಾಳ ಬಂಧುಗಳು, ಸಾಧನಕೆರೆ, ಧಾರವಾಡ |
| ೪೧ | ಅನ್ನಪೂ. | ಅನ್ನಪೂರ್ಣ | ನಿರಂಜನ | ೧೯೫೩ | ಸಮಾಜ ಪುಸ್ತಕಾಲಯ, ಧಾರವಾಡ |
| ೪೨ | ಅನ್ನಾವ. | ಅನ್ನಾವತಾರ | ತ. ರಾ. ಸು. | ೧೯೫೪ | ಮಿತ್ರವೃಂದ ಪ್ರಕಾಶನ, ಕಾಸರಗೋಡು |
| ೪೩ | ಅಪಜ. | ಅಪಜಯ | ತ್ರಿವೇಣಿ | ೧೯೫೬ | ಸುದರ್ಶನ ಪ್ರಕಾಶನ, ತಿಪಟೂರು |
| ೪೪ | ಅಪನಾ. | ಅಪರಾಧಿ ನಾನಲ್ಲ | ಧೀರೇಂದ್ರ ಕುಲಕರ್ಣಿ | ೧೯೫೭ | ಸಮಾಜ ಪುಸ್ತಕಾಲಯ, ಧಾರವಾಡ |
| ೪೫ | ಅಪವಾ. | ಅಪವಾದ | ಶ್ರೀಕೃಷ್ಣ ಪಾಟೀಲ | ೧೯೫೫ | ಸುದರ್ಶನ ಪ್ರಕಾಶನ, ತಿಪಟೂರು |
| ೪೬ | ಅಪಶ. | ಅಪರಾಜಿತೇಶ್ವರ ಶತಕಂ | ರತ್ನಾಕರವರ್ಣಿ (ಸಂ॥ ಎಸ್. ಜಿ. ನರಸಿಂಹಾಚಾರ್, ಮಂ. ಆ. ರಾಮಾನುಜಯ್ಯಂಗಾರ್) | ೧೫೫೭ | ಕರ್ಣಾಟಕ ಕಾವ್ಯಮಂಜರಿ, ಮೈಸೂರು, ೧೮೯೩ |
| ೪೭ | ಅಪೂಪ. | ಅಪೂರ್ವ ಪಶ್ಚಿಮ | ಶಿವರಾಮ ಕಾರಂತ | ೧೯೫೩ | ಹರ್ಷ ಪ್ರಕಟನಾಲಯ, ಪುತ್ತೂರು |
| ೪೮ | ಅಪ್ರತಿ. | ಅಪ್ರತಿಮವೀರ ಚರಿತಂ | ತಿರುಮಲಾರ್ಯ (ಸಂ॥ ಎಸ್. ಜಿ. ನರಸಿಂಹಾಚಾರ್, ಮಂ. ಆ. ರಾಮಾನುಜಯ್ಯಂಗಾರ್) | ೧೬೪೫–೧೭೦೬ | ಕರ್ಣಾಟಕ ಕಾವ್ಯಮಂಜರಿ, ಮೈಸೂರು, ೧೮೯೩ |
| ೪೯ | ಅಪ್ರಶ. | ಅಪ್ರಸ್ತುತ ಪ್ರಶಂಸಾ ಶತಕ | ಶಾಲ್ಯದ ಕೃಷ್ಣರಾಜ | ೧೭೪೮–೭೫ | ಹಸ್ತಪ್ರತಿ: ಕೆ. ೧೨೭, ಓರಿಇ., ಮೈಸೂರು |
| ೫೦ | ಅಪ್ರೇಮ. | ಅದ್ಭುತ ಪ್ರೇಮ | ಗದಿಗೆಯ್ಯಾ ಹುಚ್ಚಯ್ಯಾ ಹೊನ್ನಾಪುರಮಠ | ೧೯೧೮ | ಚಂದ್ರೋದಯ ಮುದ್ರಾಲಯ, ಧಾರವಾಡ |
| ೫೧ | ಅಬಲಾ. | ಅಬಲಾ | ರಾ. ಭೀ. ಮನಸಬ್ದಾರ | ೧೯೪೬ | ಸತ್ಯಶೋಧನ ಪ್ರಕಟನ ಮಂದಿರ, ಬೆಂಗಳೂರು |
| ೫೨ | ಅಭಿಕಾ. | ಅಭಿಮನ್ಯು ಕಾಳಗ | ಹೊಳೆಕಲ್ಲು ನರಸಿಂಹಯ್ಯ | ೧೮೭೪ | ಮುದ್ರಣ (?), ಬೆಂಗಳೂರು |
| ೫೩ | ಅಮಗಾಂ. | ಅಮರ ಗಾಂಧೀಜಿ | ಎಂ. ಎಂ. ವಡ್ಡರ | ೧೯೫೦ | ಪಿ. ಸಿ. ಶ್ಯಾಬಾದಿಮಠ, ಗದಗ |
| ೫೪ | ಅಮತಂ. | ಅಮರನಾದ್ಯೆ ತಂದೆ | (ಸಂ॥ ಪ. ಸು. ಭಟ್ಟ) | ೧೯೫೨ | ಗೆಳೆಯರ ಗುಂಪು, ಶಿರಸಿ |
| ೫೫ | ಅಮರ. | ಅಮರಕೋಶವೆಂಬ ನಾಮಲಿಂಗಾನುಶಾಸನವು | (ಸಂ॥ ಲೂಯಿ ರೈಸ್) | ಸು. ೫೦೦ | ಗವರ್ನ್‌ಮೆಂಟ್ ಬ್ರಾಂಚ್ ಪ್ರೆಸ್, ಮೈಸೂರು, ೧೮೮೩ |

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿವರಗಳು |
|---|---|---|---|---|---|
| ೫೬ | **ಅಮಶ.** | ಅಮರೇಶ್ವರ ಶತಕಂ | ಗುಂಜಿಹಳ್ಳಿ ಷಡಕ್ಷರಕವಿ | ೧೯೪೬ | ಜೋಣಮರಡಿ ಸಾಹುಕಾರ ಗೊರವಾ ಶಿವನಪ್ಪನವರು, ರಾಯಿಚೂರ |
| ೫೭ | **ಅಮಾನಂ.** | ಅಮಾತ್ಯನಂದಿನಿ | ಭಾರತೀಸುತ | ೧೯೩೮ | ಶೇಷಾಚಲ ಗ್ರಂಥಮಾಲೆ, ಧಾರವಾಡ |
| ೫೮ | **ಅಮಾರಾ.** | ಅಮಾತ ರಾಕ್ಷಸ | ನಾಗೇಶ ರಂಗೋ ಕುಲಕರ್ಣಿ | ೧೯೩೨ | ಯ. ಗು. ಕುಲಕರ್ಣಿ, ಮ್ಯಾನೇಜರ್, ಸ. ಜ., ಆನಂದವನ |
| ೫೯ | **ಅಮೃತ.** | ಅ. ಭವಾಮೃತ | ಮಹಲಿಂಗರಂಗ (ಸಂ॥ ಹೊಸಕೆರೆ ಚಿದಂಬರಯ್ಯ) | ಸು. ೧೬೭೫ | ಭಕ್ತಬಂಧು ಕಾರ್ಯಾಲಯ, ಬಸವನಗುಡಿ, ಬೆಂಗಳೂರು ಸಿಟಿ, ೧೯೨೫ |
| ೬೦ | **ಅಮೇವಿ.** | ಅಮೇರಿಕೆಯೊಳಗಿನ ಬಡವಿದ್ಯಾರ್ಥಿಗಳು | ಶ್ರೀನಿವಾಸ ಪಾಂಡುರಂಗ ಕೋಟ | ೧೯೨೦ | ವಾಗ್ಭೂಷಣ ಗ್ರಂಥಮಾಲೆ, ಧಾರವಾಡ |
| ೬೧ | **ಅಯ್ಯಾಶಾ.** | ಜಗನ್ನಾಥವಿಜಯಹ ನಿಘಂಟು | ಸೋಸಲೆ ಅಯ್ಯಾಶಾಸ್ತ್ರಿ | ೧೮೫೪–೧೯೩೪ | ಹಸ್ತಪ್ರತಿ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |
| ೬೨ | **ಅರಗಿ.** | ಅರಗಿನ ಮನೆ | ಅನು॥ ಮೇವುಂಡಿ ಮಲ್ಲಾರಿ | ೧೯೪೪ | ೨ನೆಯ ಮುದ್ರಣ, ಸಮಾಜ ಪುಸ್ತಕಾಲಯ, ಧಾರವಾಡ |
| ೬೩ | **ಅರರೋ.** | ಅರಣ್ಯರೋದನ | ವಿ. ಜಿ. ಭಟ್ಟ | ೧೯೫೭ | ಜನತಾ ಪ್ರಕಾಶನ, ಅಂಕೋಲ |
| ೬೪ | **ಅರಸಾ.** | ಅನುಭವ ರಸಾಯನ | ಶಾಲ್ಯದ ಕೃಷ್ಣರಾಜ | ೧೭೪೮–೭೫ | ಹಸ್ತಪ್ರತಿ: ಕೆ.ಬಿ.೩೭೭, ಓರಿಇ., ಮೈಸೂರು |
| ೬೫ | **ಅರಳು.** | ಅರಳುಮರಳು | ಅಂಬಿಕಾತನಯದತ್ತ | ೧೯೫೭ | ಸಮಾಜ ಪುಸ್ತಕಾಲಯ, ಧಾರವಾಡ |
| ೬೬ | **ಅರಿಕಾ.** | ಅರಿಸ್ಟಾಟಲನ ಕಾವ್ಯಮೀಮಾಂಸೆ | ಎನ್. ಬಾಲಸುಬ್ರಹ್ಮಣ್ಯ | ೧೯೫೯ | ಕಾವ್ಯಾಲಯ, ಮೈಸೂರು |
| ೬೭ | **ಅರಿರ.** | ಅರಿವಾಳ್ತಾಂಡರ ರಗಳೆ | ಹರಿಹರ | ಸು. ೧೨೦೦ | ಹಸ್ತಪ್ರತಿ: ಕೆ. ೩೫೮, ಓರಿಇ., ಮೈಸೂರು |
| ೬೮ | **ಅರುಣ.** | ಅರುಣ | ಶ್ರೀನಿವಾಸ | ೧೯೨೪ | ಬೆಂಗಳೂರು ಪ್ರೆಸ್, ಬೆಂಗಳೂರು |
| ೬೯ | **ಅರೆಯಾ.** | ಅರೆಯಾಳು | ಕುಲಕರ್ಣಿ ಬಿಂದುಮಾಧವ | ೧೯೫೦ | ಶಾಂತಿ ಸಾಹಿತ್ಯ ಮಾಲೆ, ಬಾದಾಮಿ |
| ೭೦ | **ಅರ್ಚಾವಿ.** | ಅರ್ಚಾವತಾರ ವಿಳಾಸ | ಶ್ರೀನಿವಾಸ | ೧೮೭೧ | ಓರ್ವ ಮುದ್ರಾಕ್ಷರಶಾಲಾ, ಬೆಂಗಳೂರು, ೧೮೮೪ |
| ೭೧ | **ಅರ್ಥಪಂ.** | ಅರ್ಥಪಂಚಕ | ಚಿಕ್ಕುಪಾಧ್ಯಾಯ | ೧೬೭೨–೧೭೦೪ | ಹಸ್ತಪ್ರತಿ: ಕೆ.ಬಿ.೪೭, ಓರಿಇ., ಮೈಸೂರು |
| ೭೨ | **ಅರ್ಧನೇ.** | ನೇಮಿನಾಥ ಪುರಾಣ | ನೇಮಿಚಂದ್ರ (ಸಂ॥ (i) ಮಂ. ಆ. ರಾಮಾನುಜಯ್ಯಂಗಾರ್ ; | ಸು. ೧೧೭೦ | ಕರ್ಣಾಟಕ ಕಾವ್ಯಕಲಾನಿಧಿ, ಮೈಸೂರು, ೧೯೧೪ |
| | | | (ii) ಬಿ. ಎಸ್. ಸಣ್ಣಯ್ಯ) | ,, | ಸಾಧನ ಸಾಹಿತ್ಯಮಂದಿರ, ಮೈಸೂರು, ೧೯೬೧ |
| ೭೩ | **ಅಲೆಮ.** | ಅಲೆಯುವ ಮನ | ಎ. ಎನ್. ಮೂರ್ತಿರಾವ್ | ೧೯೫೭ | ಕಾವ್ಯಾಲಯ, ಮೈಸೂರು |
| ೭೪ | **ಅಲ್ಪವಿ.** | ಅಲ್ಪವಿರಾಮ | ಸರಸ್ವತೀದೇವಿ ಗೌಡರ | ೧೯೫೮ | ಸಹಜೀವನ ಪ್ರಕಾಶನ, ಕೋಟಿ, ಧಾರವಾಡ |
| ೭೫ | **ಅವಚಂ.** | ಅಲ್ಲಮನ ವಚನ ಚಂದ್ರಿಕೆ | ಪ್ರಭುದೇವ (ಸಂ॥ ಎಲ್. ಬಸವರಾಜು) | ಸು. ೧೧೬೦ | ನಳಿನೀಶಂಕರ ಪ್ರಕಾಶನ, ಮೈಸೂರು, ೧೯೬೦ |
| ೭೬ | **ಅವತಂ.** | ಅವಳ ತಂಗಿ | ನರೇಂದ್ರಬಾಬು | ೧೯೫೦ | ಹಂಸ ಸಾಹಿತ್ಯಮಾಲೆ, ಮೈಸೂರು |
| ೭೭ | **ಅವಧೂ.** | ಅವಧೂತಗೀತೆ | ಗುರುಬಸವ | ಸು. ೧೪೩೦ | ಹಸ್ತಪ್ರತಿ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |
| ೭೮ | **ಅವರೇ.** | ಅವಸರದ ರೇಕಣ್ಣಗಳ ವಚನ | ಅವಸರದ ರೇಕಣ್ಣ | ಸು. ೧೧೬೦ | ಹಸ್ತಪ್ರತಿ : ಕೆ. ೫೦೪, ಓರಿಇ., ಮೈಸೂರು |
| ೭೯ | **ಅಶಾಂತಿ.** | ಅಶಾಂತಿಪರ್ವ | ಆನಂದಕಂದ | ೧೯೩೫ | ಕರ್ಣಾಟಕ ಸಾಹಿತ್ಯ ಮಂದಿರ, ಧಾರವಾಡ |
| ೮೦ | **ಅಶ್ವತ್ಥಾ.** | ಅಶ್ವತ್ಥಾಮರ್ | "ಶ್ರೀ" | ೧೯೨೯ | ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು |
| ೮೧ | **ಅಶ್ವಮೇ.** | ಅಶ್ವಮೇಧ | ಶ್ರೀರಂಗ | ೧೯೫೬ | ಲಲಿತ ಸಾಹಿತ್ಯಮಾಲೆ, ಧಾರವಾಡ |
| ೮೨ | **ಅಶ್ವಶಾ.** | ಅಶ್ವಶಾಸ್ತ್ರಂ | ಅಭಿನವಚಂದ್ರ (ಸಂ॥ ಪಿ. ಶ್ರೀನಿವಾಸ ರಾವ್, ಎಚ್. ಶೇಷಅಯ್ಯಂಗಾರ್) | ಸು. ೧೪೦೦ | ಓರಿಲೈ., ಮದರಾಸು, ೧೯೫೦ |
| ೮೩ | **ಅಷ್ಟಾಂಗ.** | ಅಷ್ಟಾಂಗಹೃದಯ, ಭಾಗ ೧ | ಆದ್ಯ ಅನಂತಾಚಾರ್ಯ | ೧೯೪೧ | ಆರ್ಯವೈದ್ಯಕ ಗ್ರಂಥಮಾಲೆ, ವಿಜಾಪುರ |
| ೮೪ | **ಅಷ್ಟಾವಿ.** | ಅಷ್ಟಾವರಣ ವಿಚಾರ ದರ್ಪಣ | ಎಸ್. ವೀರಪ್ಪಶಾಸ್ತ್ರಿ | ೧೯೨೦ | ಓರ್ವ ಮುದ್ರಣಾಲಯ, ಬೆಂಗಳೂರು |
| ೮೫ | **ಅಷ್ಟಾಸ್ತೋ.** | ಅಷ್ಟಾವರಣ ಸ್ತೋತ್ರಗೀತೆ | ಸಿದ್ಧರಾಮ (ಸಂ॥ ಶಿವಬಸವಸ್ವಾಮಿಗಳು) | ಸು. ೧೧೬೦ | ಶಿವಶರಣ ವಾಙ್ಮಯ ಪ್ರಕಾಶ ಕಾರ್ಯಾಲಯ, ಮೈಸೂರು, ೧೯೫೪ |
| ೮೬ | **ಅಸ್ಥಿಪಂ.** | ಅಸ್ಥಿಪಂಜರ | ಅರ್ಚಿಕ ವೆಂಕಟೇಶ | ೧೯೪೭ | ಉಷಾಸಾಹಿತ್ಯಮಾಲೆ, ಮೈಸೂರು |

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿವರಗಳು |
|---|---|---|---|---|---|
| ೮೭ | ಅಹಲ್ಯೆ. | ಅಹಲ್ಯೆ | ಪು. ತಿ. ನರಸಿಂಹಾಚಾರ್ | ೧೯೪೯ | ೨ನೆಯ ಮುದ್ರಣ, ಕಾವ್ಯಾಲಯ, ಮೈಸೂರು |
| ೮೮ | ಅಹಲ್ಯೋ. | ಅಹಲ್ಯೋದ್ಧಾರ | ನಾರಾಯಣ ವೆಂಕಟೇಶ ಕುರಡಿ | ೧೯೩೪ | ಕರ್ನಾಟಕ ಪ್ರಿಂಟಿಂಗ್ ಪ್ರೆಸ್, ಬೊಂಬಾಯಿ |
| ೮೯ | ಅಜುಮಾ. | ಅಜುವಿನ ಮಾರಯ್ಯಗಳ ವಚನ | ಅಜುವಿನ ಮಾರಯ್ಯ | ಸು. ೧೧೬೦ | ಹಸ್ತಪ್ರತಿ: ಕೆ.ಬಿ.೪೪೮, ಓರಿಇ., ಮೈಸೂರು |
| ೯೦ | ಅಜುಪು. | ಅಜುವತ್ತುಮೂಜು ಮಂದಿ ಪುರಾತನರ ಸ್ತೋತ್ರ | ನಿಜಗುಣ ಶಿವಯೋಗಿ | ಸು. ೧೫೦೦ | ಸಿದ್ಧವಿಲಾಸ ಪ್ರೆಸ್, ಬೆಂಗಳೂರು, ೧೯೫೫ |
| ೯೧ | ಆಕಾಶ. | ಆಕಾಶದಲ್ಲಿಯ ಅದ್ಭುತಗಳು | ಬಿ. ಪಾಂಡುರಂಗರಾವ್ | ೧೯೬೨ | ಉಷಾಸಾಹಿತ್ಯಮಾಲೆ, ಮೈಸೂರು |
| ೯೨ | ಆಗರ. | ಗರತಿ | ಆತ್ಮಾರಾಮ | ೧೯೫೧ | ಸದ್ಗುರು ಸೇವಾ ಸಾಹಿತ್ಯ ಮಾಲೆ, ಪರಮಾನಂದಮಠ, ಶೀಗೇಹಳ್ಳಿ, ಸಿರಸಿ |
| ೯೩ | ಆಗಸ್ಟ್. | ಆಗಸ್ಟ್ ಒಂಭತ್ತು ಮತ್ತು ಇತರ ಕಥೆಗಳು | ಬಸವರಾಜ ಕಟ್ಟೀಮನಿ | ೧೯೫೬ | ೨ನೆಯ ಮುದ್ರಣ, ಶಾರದಾ ಪ್ರಕಟನಾಲಯ, ಬೆಂಗಳೂರು |
| ೯೪ | ಅಗ್ರಹ. | ಅಗ್ರಹ | ವಿ. ಸೀತಾರಾಮಯ್ಯ | ೧೯೫೧ | ೨ನೆಯ ಮುದ್ರಣ, ಸತ್ಯಶೋಧನ ಪ್ರಕಟನಾಲಯ, ಬೆಂಗಳೂರು |
| ೯೫ | ಆದರ. | ಆದಯ್ಯನ ರಗಳೆ | ಹರಿಹರ | ಸು. ೧೨೦೦ | ಹಸ್ತಪ್ರತಿ: ಕೆ. ೩೫೮, ಓರಿಇ., ಮೈಸೂರು |
| ೯೬ | ಆದವ. | ಆದಯ್ಯನ ವಚನಗಳು | ಆದಯ್ಯ (ಸಂ॥ ಫ. ಗು. ಹಳಕಟ್ಟಿ) | ಸು. ೧೧೬೦ | ಶಿವಾನುಭವ ಗ್ರಂಥಮಾಲಾ, ವಿಜಾಪುರ, ೧೯೩೧ |
| | ,, | ,, | — | ,, | ಹಸ್ತಪ್ರತಿ: ಕೆ. ೬೦೪, ಓರಿಇ., ಮೈಸೂರು |
| ೯೭ | ಆದಿಪು. | ಆದಿಪುರಾಣ | ಪಂಪ (ಸಂ॥ (i) ಎಸ್. ಜಿ. ನರಸಿಂಹಾಚಾರ್; | ೯೪೧ | ಓರಿಇ., ಮೈಸೂರು, ೧೯೦೦ |
| | | | (ii) ಕೆ. ಜಿ. ಕುಂದಣಗಾರ, ಎ. ಪಿ. ಚೌಗುಲೆ) | ,, | ಅನಂತ ಅಣ್ಣಾರಾವ ಚೌಗುಲೆ, ಬೆಳಗಾವಿ, ೧೯೫೩ |
| ೯೮ | ಆನಂರಾ. | ಆನಂದರಾಮಾಯಣ | ತಿಮ್ಮಾಮಾತ್ಯ (ಸಂ॥ ಕುಮಾಂಡೂರು ರಾಮಸ್ವಾಮಯ್ಯಂಗಾರ್) | ಸು. ೧೭೫೦ | ವಿಚಾರದರ್ಪಣ ಮುದ್ರಾಕ್ಷರ ಶಾಲೆ, ಬೆಂಗಳೂರು, ೧೮೮೭ |
| ೯೯ | ಆನಾರ. | ಆನಾಯನಾರರ ರಗಳೆ | ಹರಿಹರ | ಸು. ೧೨೦೦ | ಹಸ್ತಪ್ರತಿ: ಕೆ. ೩೫೮, ಓರಿಇ., ಮೈಸೂರು |
| ೧೦೦ | ಆಪ್ರಭು. | ಆತ್ಮಜ್ಞಾನಿ ಅಲ್ಲಮಪ್ರಭು | ಓ. ಎಸ್. ಲಿಂಗಣ್ಣಯ್ಯ | ೧೯೪೫ | ಶ್ರೀಶೈಲ ಕುಮಾರೀ ಗ್ರಂಥಮಾಲೆ, ಕೃಷ್ಣರಾಜಪುರ, ಬೆಂಗಳೂರು |
| ೧೦೧ | ಆಬೂಬ. | ಆಬೂವಿಂದ ಬರಾಮಕ್ಕೆ | ಶಿವರಾಮ ಕಾರಂತ | ೧೯೫೦ | ಹರ್ಷಮುದ್ರಣಪ್ರಕಟನಾಲಯ, ಪುತ್ತೂರು |
| ೧೦೨ | ಆಬೋಲೀ. | ಆಬೋಲೀನ | ಯಶವಂತ ಚಿತ್ತಾಲ | ೧೯೬೦ | ಮನೋಹರ ಗ್ರಂಥಮಾಲಾ, ಧಾರವಾಡ |
| ೧೦೩ | ಆಮನಿ. | ಆಮನಿ | ಕೀರ್ತಿನಾಥ ಕುರ್ತಕೋಟಿ | ೧೯೫೬ | ಮನೋಹರ ಗ್ರಂಥಮಾಲಾ, ಧಾರವಾಡ |
| ೧೦೪ | ಆರಾಚ. | ಆರಾಧ್ಯ ಚಾರಿತ್ರ | ನೀಲಕಂಠಾಚಾರ್ಯ | ಸು. ೧೪೮೫ | ಹಸ್ತಪ್ರತಿ: ಕೆ.ಎ.೨೩, ಓರಿಇ., ಮೈಸೂರು |
| ೧೦೫ | ಆರ್ಯಕ. | ಆರ್ಯಕ | ಅನು॥ ಎಸ್. ಜಿ. ಶಾಸ್ತ್ರಿ | — | ಬಿ. ಶ್ರೀನಿವಾಸಯ್ಯಂಗಾರ್, ಪ್ರಿಂಟರ್, ಬೆಂಗಳೂರು ಸಿಟಿ |
| ೧೦೬ | ಆರ್ಯಕೀ. | ಆರ್ಯಕೀರ್ತಿ | ಚ. ವಾಸುದೇವಯ್ಯ | ೧೯೪೯ | ೬ನೆಯ ಮುದ್ರಣ, ಚ. ವಾ. ರಾಘವೇಂದ್ರಯ್ಯ, ಬೆಂಗಳೂರು |
| ೧೦೭ | ಆರ್ಯಧ. | ಆರ್ಯಧರ್ಮ | ಸಿ. ಯರ್. ಶಾಸ್ತ್ರಿ | ೧೯೫೫ | ಸಂಸ್ಕೃತಿ ಪ್ರಸಾರ ಶಾಖೆ, ಬೆಂಗಳೂರು |
| ೧೦೮ | ಆಲಹೂ. | ಆಲದ ಹೂ | ಎಸ್. ಅನಂತನಾರಾಯಣ | ೧೯೪೯ | ಶಾರದಾ ಪ್ರಕಟನಾಲಯ, ಬೆಂಗಳೂರು |
| ೧೦೯ | ಆಶ್ರಮ. | ಆಶ್ರಮವಾಸಿ | ಬಸವರಾಜ ಕಟ್ಟೀಮನಿ | ೧೯೫೬ | ಸಮಾಜ ಪುಸ್ತಕಾಲಯ, ಧಾರವಾಡ |
| ೧೧೦ | ಆಷಾಭೂ. | ಆಷಾಢಭೂತಿ | ಎ. ಎನ್. ಮೂರ್ತಿರಾವ್ | ೧೯೬೦ | ೩ನೆಯ ಮುದ್ರಣ, ಕಾವ್ಯಾಲಯ, ಮೈಸೂರು |
| ೧೧೧ | ಆಳೌಕ. | ಆಳೌ ಕರ್ಣಾಟಕದೇವಿ | ವಸುದೇವ ಭೂಪಾಲಂ | — | ಸತ್ಯಶೋಧನ ಪ್ರಕಟನ ಮಂದಿರ, ಬೆಂಗಳೂರು |
| ೧೧೨ | ಇಅ. | The Indian Antiquary, I-LXII | — | ೧೮೭೨–೧೯೩೩ | ಬಾಂಬೆ ಎಜ್ಯುಕೇಷನಲ್ ಸೊಸೈಟಿ, ಬಾಂಬೆ |
| ೧೧೩ | ಇಂಕನಿ. | ಇಂಗ್ಲಿಷ್–ಕನ್ನಡ ನಿಘಂಟು | — | ೧೯೪೬ | ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| ೧೧೪ | ಇಂಗೀತ. | ಇಂಗ್ಲಿಷ್ ಗೀತಗಳು | ಬಿ. ಎಂ. ಶ್ರೀಕಂಠಯ್ಯ | ೧೯೨೬ | ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು |
| ೧೧೫ | ಇಂಗ್ಲಇ. | ಇಂಗ್ಲಂಡದ ಅರ್ವಾಚೀನ ಇತಿಹಾಸ, ಭಾಗ ೧–೨ | ಶಿ. ಶಿ. ಬಸವನಾಳ, ಹ. ಚ. ಗಲಗಲಿ | ೧೯೨೬ | ಸರಸ್ವತಿ ಬುಕ್ ಡಿಪೋ, ಧಾರವಾಡ, ಭಾಗ I ೧೯೨೬, ಭಾಗ II ೧೯೨೮ |

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿವರಗಳು |
|---|---|---|---|---|---|
| ೧೧೬ | ಇಂಗ್ಲಂಡ. | ಇಂಗ್ಲಂಡ ದೇಶದ ಇತಿಹಾಸ | ಫ. ಗು. ಹಳಕಟ್ಟಿ | ೧೮೯೬ | ಕೊಡಿಯಾಲ್ ಬೈಲ್ ಛಾಪಾಖಾನೆ, ಮಂಗಳೂರು |
| ೧೧೭ | ಇಂದಿರೆ. | ಇಂದಿರೆ | ಕೆರೂರ ವಾಸುದೇವಾಚಾರ್ | ೧೯೨೭ | ಗ್ರ್ಯಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್, ಮೈಸೂರು |
| ೧೧೮ | ಇಂದುಮು. | ಇಂದುಮುಖಿ | ಬಿ. ಪಿ. ಕಾಳೆ | ೧೯೪೬ | ೪ನೆಯ ಮುದ್ರಣ, ಶ್ರೀ ಶೇಷಾಚಲ ಗ್ರಂಥಮಾಲೆ, ಧಾರವಾಡ |
| ೧೧೯ | ಇಂದ್ರಚಾ. | ಇಂದ್ರಚಾಪ | ಅನು॥ ರಂಗರಾವ್ ತಲಚೇರಕರ | ೧೯೫೧ | ಮನೋಹರ ಗ್ರಂಥಮಾಲಾ, ಧಾರವಾಡ |
| ೧೨೦ | ಇಂದ್ರಜಿ. | ಇಂದ್ರಜಿತು ಕಾಳಗವು | ಬಿ. ರಾಮರಾಯ | ೧೯೨೯ | ಮುದ್ರಣ (?), ಉಡುಪಿ, ೧೯೨೯ |
| ೧೨೧ | ಇಣಿಸೋ. | ಇಣಿಕುನೋಟ | ಚದುರಂಗ | ೧೯೫೦ | ಹಂಸ ಲಿಮಿಟೆಡ್, ಮೈಸೂರು |
| ೧೨೨ | ಇತಿಶ್ರೀ. | ಇತಿಶ್ರೀ | ವರದರಾಜ ಹುಯಿಲಗೋಳ | ೧೯೫೪ | ಪ್ರತಿಭಾ ಗ್ರಂಥಮಾಲೆ, ಧಾರವಾಡ |
| ೧೨೩ | ಇಪ್ಪಕ. | ಇಪ್ಪತ್ತೊಂದು ಕಥೆಗಳು | ಅನು॥ ನಾರಾಯಣ ಸಂಗಮ | ೧೯೬೧ | ಸಾಹಿತ್ಯ ಅಕಾಡೆಮಿ, ನವದೆಹಲಿ |
| ೧೨೪ | ಇಬದು. | ಇದ್ದರೂ ಇರಬಹುದು | ಎಸ್. ಜಿ. ಶಾಸ್ತ್ರಿ | ೧೯೪೬ | ಕಾವ್ಯಾಲಯ, ಮೈಸೂರು |
| ೧೨೫ | ಇಸೋಪ. | ಇಸೋಪನ ಚರಿತ್ರೆ | ಅಮೀನಬಾವಿ | ೧೯೨೦ | ವಾಗ್ಭೂಷಣ ಗ್ರಂಥಮಾಲೆ, ಧಾರವಾಡ |
| ೧೨೬ | ಇಸ್ಲಾಂಸಂ. | ಇಸ್ಲಾಂ ಸಂಸ್ಕೃತಿ | ಅನು॥ ಬಿ. ಎಂ. ಶ್ರೀಕಂಠಯ್ಯ | ೧೯೪೮ | ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| ೧೨೭ | ಇಹರ. | ಇಹಃಪಗೆಯಾಂಡರ ರಗಳೆ | ಹರಿಹರ | ಸು. ೧೨೦೦ | ಹಸ್ತಪ್ರತಿ : ಕೆ. ೩೫೮, ಓರಿಇ., ಮೈಸೂರು |
| ೧೨೮ | ಇಳೆರ. | ಇಳೆಯಾಂಡ ಗುಡಿಮಾರರ ರಗಳೆ | ಹರಿಹರ | ಸು. ೧೨೦೦ | ,, |
| ೧೨೯ | ಇಜುರ. | ಇಜುಂಭಕ್ತರ ರಗಳೆ | ಹರಿಹರ | ಸು. ೧೨೦೦ | ,, |
| ೧೩೦ | ಈಕಥೆ. | ಈರೇಳು ಕಥೆಗಳು | ಗೋಪಾಲಕೃಷ್ಣ | — | — |
| ೧೩೧ | ಈಚಕೆ. | ಈಚಲು ಮರದ ಕೆಳಗೆ | ಪು. ತಿ. ನರಸಿಂಹಾಚಾರ್ | ೧೯೪೯ | ಕಾವ್ಯಾಲಯ, ಮೈಸೂರು |
| ೧೩೨ | ಈಪಸೊ. | ಈ ಪರಿಯ ಸೊಬಗು | ವಿ. ಎಂ. ಇನಾಂದಾರ | ೧೯೫೩ | ಲಲಿತ ಸಾಹಿತ್ಯ ಮಾಲೆ, ಧಾರವಾಡ |
| ೧೩೩ | ಈಶಸಂ. | ಈಶಸಂಕಲ್ಪ | ನಾಗೇಶ | ೧೯೩೩ | ಶ್ರೀ ಶೇಷಾಚಲ ಗ್ರಂಥಮಾಲೆ, ಧಾರವಾಡ |
| ೧೩೪ | ಉಡುಗೊ. | ಉಡುಗೊರೆ | ಕೆ. ಗೋಪಾಲಕೃಷ್ಣರಾಯ | ೧೯೩೩ | ವಿ. ಜಿ. ಟಿ. ಜನರಲ್ ಏಜನ್ಸಿ, ಬಳೇಪೇಟೆ, ಬೆಂಗಳೂರು |
| ೧೩೫ | ಉತ್ತಗೃ. | ಉತ್ತಮ ಗೃಹಿಣಿ | ಶಾಂತಾಬಾಯಿ ನೀಲಗಾರ | ೧೯೦೮ | ವಾಗ್ಭೂಷಣ ಗ್ರಂಥಮಾಲೆ, ಬೆಂಗಳೂರು |
| ೧೩೬ | ಉತ್ತರಾ. | ಉತ್ತರ ರಾಮಾಯಣ | ನಾರಾಯಣ | ಸು. ೧೬೦೦ | ಹಸ್ತಪ್ರತಿ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |
| ೧೩೭ | ಉದಯಾ. | ಉದಯಾದಿತ್ಯಾಲಂಕಾರ | ಉದಯಾದಿತ್ಯ (ಸಂ॥ ಮಂ. ಆ. ರಾಮಾನುಜಯ್ಯಂಗಾರ್, ಎಸ್. ಜಿ. ನರಸಿಂಹಾಚಾರ್) | ಸು. ೧೧೫೦ | ಸದ್ವಿದ್ಯಾಮಂದಿರ ಮುದ್ರಶಾಲಾ, ಮೈಸೂರು, ೧೮೯೪ |
| ೧೩೮ | ಉದರಾ. | ಉದಯರಾಗ | ಅ. ನ. ಕೃಷ್ಣರಾವ್ | ೧೯೪೪ | ೨ನೆಯ ಮುದ್ರಣ, ಎಸ್. ಎಸ್. ಎನ್. ಬುಕ್ ಡಿಪೋ, ಬೆಂಗಳೂರು |
| ೧೩೯ | ಉದವೈ. | ಉದರವೈರಾಗ್ಯ | ರಂ. ವಾ. ಜಾಹಗಿರದಾರ | ೧೯೩೦ | ಕರ್ಣಾಟಕ ಕಾಲೇಜ, ಧಾರವಾಡ |
| ೧೪೦ | ಉದ್ಭಟ. | ಉದ್ಭಟಕಾವ್ಯ | ಸೋಮರಾಜ (ಸಂ॥ ಆರ್. ಶಾಮಶಾಸ್ತ್ರೀ) | ೧೨೨೨ | ಓರಿಇ., ಮೈಸೂರು, ೧೯೨೧ |
| ೧೪೧ | ಉದ್ಭದೇ. | ಉದ್ಭಟದೇವ ಚರಿತೆ | ಬಸವಾಂಕ (ಸಂ॥ ಎನ್. ಬಸವಾರಾಧ್ಯ) | ಸು. ೧೫೫೦ | ಕನ್ನಡ ಸಾಹಿತ್ಯ ಪರಿಷತ್ತು, ೧೯೫೭ |
| ೧೪೨ | ಉದ್ಭರ. | ಉದ್ಭಟನ ರಗಳೆ | ಹರಿಹರ | ಸು. ೧೨೦೦ | ಹಸ್ತಪ್ರತಿ : ಕೆ. ೩೫೮, ಓರಿಇ., ಮೈಸೂರು |
| ೧೪೩ | ಉಮಾಶ. | ಉಮಾಮಹೇಶ್ವರ ಶತಕ | ವೀರಭದ್ರರಾಜ | ಸು. ೧೫೫೦ | ಹಸ್ತಪ್ರತಿ : ಕೆ. ೩೫, ಓರಿಇ., ಮೈಸೂರು |
| ೧೪೪ | ಉಮಾಶಿ. | ಉಮಾಶಶಿ | ಚಿ. ಸದಾಶಿವಯ್ಯ | ೧೯೫೨ | ಅನಂದ್ ಬ್ರದರ್ಸ್, ಬೆಂಗಳೂರು |
| ೧೪೫ | ಉಯ್ಯಾಲೆ. | ಉಯ್ಯಾಲೆ | ಅಂಬಿಕಾತನಯದತ್ತ | ೧೯೩೮ | ಪ್ರತಿಭಾ ಗ್ರಂಥಮಾಲೆ, ಧಾರವಾಡ |
| ೧೪೬ | ಉರರಾ. | ಉತ್ತರ ರಾಮಾಯಣ | ತಿರುಮಲೆ ವೈದ್ಯ (ಸಂ॥ ಮಂ. ಆ. ರಾಮಾನುಜಯ್ಯಂಗಾರ್) | ಸು. ೧೬೫೦ | ಕಾವ್ಯಕಲಾನಿಧಿ, ಮೈಸೂರು, ೧೯೧೦ |
| ೧೪೭ | ಉರಾಚ. | ಉತ್ತರರಾಮಚರಿತ್ರ ನಾಟಕ | ಧೋಂಡೋ ನರಸಿಂಹ ಮುಳಬಾಗಲ | ೧೯೨೪ | ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ |
| ೧೪೮ | ಉರಿಪೆ. | ಉರಿಲಿಂಗಪೆದ್ದಿಯ ವಚನಗಳು | ಉರಿಲಿಂಗಪೆದ್ದಿ (ಸಂ॥ ಫ. ಗು. ಹಳಕಟ್ಟಿ) | ಸು. ೧೧೮೦ | ಶಿವಾನುಭವ ಗ್ರಂಥಮಾಲಾ, ವಿಜಾಪುರ, ೧೯೩೬ |
| ೧೪೯ | ಉರಿವ. | ಉರಿಲಿಂಗದೇವನ ವಚನಗಳು | ಉರಿಲಿಂಗದೇವ (ಸಂ॥ ಬಿ. ಎಸ್. ಸಣ್ಣಯ್ಯ) | ಸು. ೧೧೬೦ | ಪ್ರಬುದ್ಧ ಕರ್ಣಾಟಕ ೪೫-೩, ಪ್ರಸಾರಾಂಗ, ಮೈಸೂರು, ೧೯೬೪ |

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿವರಗಳು |
|---|---|---|---|---|---|
| ೧೫೦ | **ಉಸಾರ.** | ಉದ್ಯೋಗಸಾರ | ಬಾಲಚಂದ್ರ ? | ೧೨೮೨ ? | ಹಸ್ತಪ್ರತಿ: ಕೆ.ಎ. ೨೧೧, ಓರಿಇ., ಮೈಸೂರು |
| ೧೫೧ | **ಎಆಗ್ನೇ.** | ಎಚ್ಚೆತ್ತ ಆಗ್ನೇಯ ಏಶಿಯಾ | ಎಂ. ಹರಿದಾಸರಾಯ | ೧೯೪೬ | ಸಾಹಿತ್ಯ ಭಂಡಾರ, ಹುಬ್ಬಳ್ಳಿ |
| ೧೫೨ | **ಎಇ.** | Epigraphia Indica, I—XXVI | — | ೧೮೯೨– | ಸೂಪರಿಂಟೆಂಡೆಂಟ್ ಆಫ್ ಗವರ್ನ್‌ಮೆಂಟ್ ಪ್ರಿಂಟಿಂಗ್ಸ್, ಇಂಡಿಯ, ಕಲ್ಕತ್ತ |
| ೧೫೩ | **ಎಂ.ಎ.** | ಎಮ್. ಎ. | ಬಂಡೆಪ್ಪ ಕೌಜಲಗಿ | ೧೯೩೦ | ಸ್ವಧರ್ಮ ಕಾರ್ಯಾಲಯ, ಧಾರವಾಡ |
| ೧೫೪ | **ಎಕ.** | Epigraphia Carnatica, I—XVI | ಲೂಯಿ ರೈಸ್ ಮತ್ತು ಇತರರು | ೧೮೮೬– ೧೯೫೮ | ಆರ್ಕಿಯಲಾಜಿಕಲ್ ಸರ್ವೆ ಆಫ್ ಮೈಸೂರ್, ಬೆಂಗಳೂರು |
| ೧೫೫ | **ಎಕ್ಸ್‌ರೇ.** | ಎಕ್ಸ್‌ರೇ | ಯು. ರಾಘವೇಂದ್ರ ಆಚಾರ್ಯ | ೧೯೪೦ | ಲೊಯೋಲಾ ಕಾಲೇಜ್, ಮದರಾಸು |
| ೧೫೬ | **ಎಚ್ಚಸಾ.** | ಎಚ್ಚೆತ್ತ ಭಾರತ ಎತ್ತ ಸಾಗಿದೆ ? | ಗ. ಸ. ಹಾಲಪ್ಪ | ೧೯೪೬ | ೨ನೆಯ ಮುದ್ರಣ, ವಿಚಾರ ಸಾಹಿತ್ಯ ಲಿ., ಬೆಂಗಳೂರು |
| ೧೫೭ | **ಎಡಹೆ.** | ಎಡವಿದ ಹೆಣ್ಣು | 'ಜೀವನ' | ೧೯೫೫ | ತರಂಗ ಪ್ರಕಟನಾಲಯ, ಗದಗ |
| ೧೫೮ | **ಎತ್ತಿಕೈ.** | ಎತ್ತಿದ ಕೈ | ರಂ. ಶ್ರೀ. ಮುಗಳಿ | ೧೯೪೬ | ಉಷಾಸಾಹಿತ್ಯ ಮಾಲೆ, ಮೈಸೂರು |
| ೧೫೯ | **ಎದಿರೇ.** | ಎದಿರೇಟು | ನಾಡಿಗೇರ ಕೃಷ್ಣರಾಯ | ೧೯೫೦ | ಶಾರದಾ ಪ್ರಕಟನಾಲಯ, ಬೆಂಗಳೂರು |
| ೧೬೦ | **ಎಧ್ರುವ.** | ಎರಡು ಧ್ರುವ | ವಿ. ಎಂ. ಇನಾಂದಾರ | ೧೯೩೯ | ಮನೋಹರ ಗ್ರಂಥಮಾಲಾ, ಧಾರವಾಡ |
| ೧೬೧ | **ಎಮುಕ.** | ಎಂದೆಂದೂ ಮುಗಿಯದ ಕಥೆ | ಯು. ಆರ್. ಅನಂತಮೂರ್ತಿ | ೧೯೫೫ | ಸುರುಚಿ ಪ್ರಕಾಶನ, ಮೈಸೂರು |
| ೧೬೨ | **ಎರಸೆ.** | ಎರಡು ಸೆಳೆತ | ಅನು॥ ಮೇವುಂಡಿ ಮಲ್ಲಾರಿ | ೧೯೪೭ | ಪ್ರತಿಭಾ ಗ್ರಂಥಮಾಲೆ, ಧಾರವಾಡ |
| ೧೬೩ | **ಎಸಮೈ.** | The Ethnographical Survey of Mysore | ಎಚ್. ವಿ. ನಂಜುಂಡಯ್ಯ | ೧೯೦೬– | ಗವರ್ನ್‌ಮೆಂಟ್ ಪ್ರೆಸ್, ಬೆಂಗಳೂರು |
| ೧೬೪ | **ಎಳೆಕ.** | ಎಳೆಯ ಕನಸುಗಳು | ವೈ. ಎಂ. ಷಣ್ಮುಖಯ್ಯ | ೧೯೫೦ | ಎಸ್. ಎಸ್. ಎ೯. ಬುಕ್ ಡಿಪೋ, ಬೆಂಗಳೂರು |
| ೧೬೫ | **ಏಕಾಂಗಿ.** | ಏಕಾಂಗಿನಿ | ನಿರಂಜನ | ೧೯೫೫ | ರಸಿಕರಂಜನಿ ಪ್ರಕಾಶನ, ಅರಸೀಕೆರೆ |
| ೧೬೬ | **ಏಕಾಂರ.** | ಏಕಾಂತದ ರಾಮಯ್ಯನ ರಗಳೆ | ಹರಿಹರ | ಸು. ೧೨೦೦ | ಹಸ್ತಪ್ರತಿ: ಕೆ.೩೫೮, ಓರಿಇ., ಮೈಸೂರು |
| ೧೬೭ | **ಏಣಾರ.** | ಏಣಾದಿನಾಥನ ರಗಳೆ | ಹರಿಹರ | ಸು. ೧೨೦೦ | ,, |
| ೧೬೮ | **ಏಲೇಶ್ವ.** | ಏಲೇಶ್ವರ ಕೇತಯ್ಯನ ವಚನಗಳು | ಏಲೇಶ್ವರ ಕೇತಯ್ಯ | ಸು. ೧೧೬೦ | ಹಸ್ತಪ್ರತಿ: ಕೆ. ೫೦೪, ಓರಿಇ., ಮೈಸೂರು |
| ೧೬೯ | **ಏಶಿಸಂ.** | ಏಶಿಯದ ಸಂಪತ್ತು | ಕು. ಶಿ. ಹರಿದಾಸಭಟ್ಟ | ೧೯೫೪ | ನವಯುಗ ಎಂಟರ್‌ಪ್ರೈಸ್ ಲಿ., ಉಡುಪಿ |
| ೧೭೦ | **ಐಳಜೀ.** | ಐಳನೆಯ ಜೀವ | ರಾಮಚಂದ್ರ ಶರ್ಮ | ೧೯೫೫ | ರಸಿಕರಂಜನಿ ಪ್ರಕಾಶನ, ಅರಸೀಕೆರೆ |
| ೧೭೧ | **ಒಂದೇರಾ.** | ಒಂದೇ ರಾತ್ರಿ, ಒಂದೇ ಹಗಲು | ಶಿವರಾಮ ಕಾರಂತ | ೧೯೪೮ | ಹರ್ಷಮುದ್ರಣ ಪ್ರಕಟನಾಲಯ, ಪುತ್ತೂರು |
| ೧೭೨ | **ಒಡೆಕ.** | ಒಡೆಯರ ಕಾಲದ ಕಥೆಗಳು | ಕಂದಾಡೆ ಕೃಷ್ಣಯ್ಯಂಗಾರ್ | — | ಕರ್ಣಾಟಕ ಸಾಹಿತ್ಯ ಪ್ರಕಟನ ಮಂದಿರ, ಬೆಂಗಳೂರು ನಗರ |
| ೧೭೩ | **ಒಡೆಮು.** | ಒಡೆದ ಮುತ್ತು | ದೇವುಡು ನರಸಿಂಹ ಶಾಸ್ತ್ರಿ | ೧೯೫೨ | ಡಿ. ವಿ. ಕೆ. ಮೂರ್ತಿ, ಮೈಸೂರು |
| ೧೭೪ | **ಒಡ್ಡಿಉ.** | ಒಡ್ಡಿದ ಉರುಳು | ಅ. ಗೌ. ಕಿನ್ನಿಗೋಳಿ | ೧೯೫೭ | ವಿವೇಕ ಸಾಹಿತ್ಯಮಾಲೆ, ಮಂಗಳೂರು |
| ೧೭೫ | **ಒಲರ.** | ಒಲಘಾಂಡರ ರಗಳೆ | ಹರಿಹರ | ಸು. ೧೨೦೦ | ಹಸ್ತಪ್ರತಿ: ಕೆ.೩೫೮, ಓರಿಇ., ಮೈಸೂರು |
| ೧೭೬ | **ಒಲುಮೆ.** | ಒಲುಮೆ | ತೀ. ನಂ. ಶ್ರೀಕಂಠಯ್ಯ | ೧೯೫೩ | ೨ನೆಯ ಮುದ್ರಣ, ಶಾರದಾ ಮಂದಿರ, ಮೈಸೂರು |
| ೧೭೭ | **ಓಷಧಿ.** | ಓಷಧಿಕೋಶಂ | (ಸಂ॥ ಎ. ವೆಂಕಟರಾವ್, ಎಚ್. ಶೇಷ ಅಯ್ಯಂಗಾರ್) | ? | ಮದರಾಸು ವಿಶ್ವವಿದ್ಯಾನಿಲಯ, ಮದರಾಸು, ೧೯೪೦ |
| ೧೭೮ | **ಓಹಿರ.** | ಓಹಿಲಯ್ಯನ ರಗಳೆ | ಹರಿಹರ | ಸು. ೧೨೦೦ | ಹಸ್ತಪ್ರತಿ: ಕೆ.೩೫೮, ಓರಿಇ., ಮೈಸೂರು |
| ೧೭೯ | **ಔದಾಉ.** | ಔದಾರ್ಯದ ಉರುಳಲ್ಲಿ | ಶಿವರಾಮ ಕಾರಂತ | ೧೯೪೭ | ಹರ್ಷಮುದ್ರಣಪ್ರಕಟನಾಲಯ, ಪುತ್ತೂರು |
| ೧೮೦ | **ಔರಂಗ.** | ಔರಂಗಜೇಬ | ಕೆರೂರ ವಾಸುದೇವಾಚಾರ್ಯ | ೧೯೪೬ | ವಾಸುದೇವ ಸಾಹಿತ್ಯ ರತ್ನಮಾಲೆ, ಬಾಗಿಲಕೋಟೆ |
| ೧೮೧ | **ಔಷಧೀ.** | ಆಯುರ್ವೇದೀಯ ಔಷಧೀ ಗುಣಧರ್ಮಶಾಸ್ತ್ರ ಭಾಗ I | ಅನು॥ ಆದ್ಯ ಅನಂತಾಚಾರ್ಯ | ೧೯೩೩ | ಆರ್ಯವೈದ್ಯಕ ಗ್ರಂಥಮಾಲೆ, ಬಿಜಾಪುರ |
| ೧೮೨ | **ಕಇ.** | Karnatak Inscriptions, I—IV | (ಸಂ॥ (i-iii) ಆರ್. ಎಸ್. ಪಂಚಮುಖಿ; (iv) ಎ. ಎಂ. ಅಣ್ಣಿಗೇರಿ) | ೧೯೪೧–೬೧ | ಕನ್ನಡ ರಿಸರ್ಚ್ ಇನ್‌ಸ್ಟಿಟ್ಯೂಟ್, ಧಾರವಾಡ |

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿವರಗಳು |
|---|---|---|---|---|---|
| ೧೮೩ | **ಕಇಆ.** | Kannada Inscriptions of Andhra Pradesh | (ಸಂ॥ ಪಿ. ಶ್ರೀನಿವಾಸಾಚಾರ್, ಪಿ. ಬಿ. ದೇಸಾಯಿ) | | ಗವರ್ನ್‌ಮೆಂಟ್ ಆಫ್ ಆಂಧ್ರ ಪ್ರದೇಶ್, ಹೈದರಾಬಾದ್, ೧೯೬೧ |
| ೧೮೪ | **ಕಎಪು.** | ಕನ್ನಡ ಎರಡನೆಯ ಪದ್ಯಪುಸ್ತಕ | (ಸಂ॥ ಪ. ಮಂಗೇಶರಾವ್) | ೧೯೨೫ | ಕೆನರೀಸ್ ಮಿಷನ್ ಪ್ರೆಸ್ ಅಂಡ್ ಬುಕ್ ಡಿಪೋ, ಮಂಗಳೂರು |
| ೧೮೫ | **ಕಒಸಾ.** | ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಭಾಗ I—II | ಬಿ. ಎಂ. ಶ್ರೀ. | ೧೯೫೧ | ೨ನೆಯ ಮುದ್ರಣ, ಕಾವ್ಯಾಲಯ, ಮೈಸೂರು |
| ೧೮೬ | **ಕಂಕಕೂ.** | ಕಂಕಣ ಕೂಡ್ಬಂತು | ಕೆ. ಸಿ. ಚೌಡಪ್ಪ ರೆಡ್ಡಿ | ೧೯೪೭ | ಕೇತನೂರನಹಳ್ಳಿ, ಬೆಂಗಳೂರು |
| ೧೮೭ | **ಕಂಕಣ.** | ಕಂಕಣ | ತ್ರಿವೇಣಿ | ೧೯೫೭ | ಡಿ. ವಿ. ಕೆ. ಮೂರ್ತಿ, ಮೈಸೂರು |
| ೧೮೮ | **ಕಂದಕೊ.** | ಕಂದರ್ಪ ಕೊರವಂಜಿ | ಬ್ರಹ್ಮಣಾಂಕ | ಸು. ೧೮೦೦ | ಹಸ್ತಪ್ರತಿ: ಕೆ. ೫೬, ಓರಿಇ., ಮೈಸೂರು |
| ೧೮೯ | **ಕಂದಶ.** | ಕಂದಶತಕ | ವೀರಭದ್ರರಾಜ | ಸು. ೧೫೩೦ | ಹಸ್ತಪ್ರತಿ: ಕೆ. ೩೫, ಓರಿಇ., ಮೈಸೂರು |
| ೧೯೦ | **ಕಂನವಿ.** | ಕಂಠೀರವ ನರಸರಾಜ ವಿಜಯಂ | ಗೋವಿಂದ ವೈದ್ಯ (ಭಾರತಿ ನಂಜ) (ಸಂ॥ ಆರ್. ಶಾಮಶಾಸ್ತ್ರಿ) | ೧೬೪೮ | ಓರಿಇ., ಮೈಸೂರು, ೧೯೨೬ |
| ೧೯೧ | **ಕಂನಾಸಾ.** | ಕಂನಾಡ ಸಾಹಿತ್ಯಜ್ಞರ ಆತ್ಮಕಥನ | ವಿವಿಧ ಲೇಖಕರು | ೧೯೪೬ | ಮಿಂಚಿನ ಬಳ್ಳಿ, ಧಾರವಾಡ |
| ೧೯೨ | **ಕಂನುಹು.** | ಕಂನುಡಿಯ ಹುಟ್ಟು | ಶಂ. ಬಾ. ಜೋಶಿ | ೧೯೬೨ | ೩ನೆಯ ಮುದ್ರಣ, ಸಮಾಜ ಪುಸ್ತಕಾಲಯ, ಧಾರವಾಡ |
| ೧೯೩ | **ಕಕುಲ.** | The Kadamba Kula | ಜಾರ್ಜ್ ಎಂ. ಮೋರೇಸ್ | ೧೯೩೧ | ಇಂಡಿಯನ್ ಹಿಸ್ಟಾರಿಕಲ್ ರಿಸರ್ಚ್ ಇನ್‌ಸ್ಟಿಟ್ಯೂಟ್, ಬೊಂಬಾಯಿ |
| ೧೯೪ | **ಕಗದ್ಯ.** | ಕನ್ನಡ ಗದ್ಯಮಾಲೆ (೨) | (ಸಂ॥ ಸ. ಸ. ಮಾಳವಾಡ) | ೧೯೪೭ | ೨ನೆಯ ಮುದ್ರಣ, ಸ್ಟೂಡೆಂಟ್ಸ್ ಓನ್ ಬುಕ್ ಡಿಪೋ, ಧಾರವಾಡ |
| ೧೯೫ | **ಕಗವಿ.** | ಕನ್ನಡ ಗದ್ಯವಿಕಾಸ | (ಸಂ॥ ಎನ್. ಬಸವಾರಾಧ್ಯ) | ೧೯೬೧ | ಪ್ರಾಚ್ಯಕಾವ್ಯಪ್ರಕಾಶನ ಮಂದಿರ, ಬೆಂಗಳೂರು |
| ೧೯೬ | **ಕಗವೈ.** | ಕರ್ನಾಟಕ ಗತವೈಭವ | ಆಲೂರ ವೆಂಕಟರಾಯ | ೧೯೫೬ | ೭ನೆಯ ಮುದ್ರಣ, ಸಮಾಜ ಪುಸ್ತಕಾಲಯ, ಧಾರವಾಡ |
| ೧೯೭ | **ಕಜಾಗೀ.** | ಕರ್ನಾಟಕ ಜಾನಪದ ಗೀತೆಗಳು | (ಸಂ॥ ಆರ್. ಎಸ್. ಪಂಚಮುಖಿ) | ೧೯೫೩ | ಕನ್ನಡ ರಿಸರ್ಚ್ ಇನ್‌ಸ್ಟಿಟ್ಯೂಟ್, ಧಾರವಾಡ |
| ೧೯೮ | **ಕಣ್ಣರ.** | ಕಣ್ಣಪ್ಪನ ರಗಳೆ | ಹರಿಹರ | ಸು. ೧೨೦೦ | ಹಸ್ತಪ್ರತಿ: ಕೆ.೩೫೮, ಓರಿಇ., ಮೈಸೂರು |
| ೧೯೯ | **ಕಣ್ಣುಮು.** | ಕಣ್ಣುಮುಚ್ಚಾಲೆ | ಅ. ನ. ಕೃಷ್ಣರಾಯ | ೧೯೫೦ | ಸುದರ್ಶನ ಪ್ರಕಾಶನ, ತಿಪಟೂರು |
| ೨೦೦ | **ಕಣ್ಮಣಿ.** | ಕಣ್ಮಣಿ | ಅನುಪಮಾ | ೧೯೫೨ | ಪುರೋಗಾಮಿ ಪ್ರಕಾಶನ, ಬೆಂಗಳೂರು |
| ೨೦೧ | **ಕತೆಗಾ.** | ಕತೆಗಾರ್ತಿ | (ಸಂ॥ ಮಣೂರು ಜಯದೇವಾರ್ಯ) | ೧೯೪೬ | ಭಾಗ್ಯೋದಯ ಗ್ರಂಥಮಾಲೆ, ಗದ್ವಾಲ |
| ೨೦೨ | **ಕತ್ತಬೆ.** | ಕತ್ತಲ ಬೆಳಕು | ಹ. ವೆಂ. ನಾಗರಾಜರಾಯ | ೧೯೫೧ | ಆನಂದ್ ಬ್ರದರ್ಸ್, ಬೆಂಗಳೂರು |
| ೨೦೩ | **ಕಥಾಮಂ.** | ಕಥಾಮಂಜರಿ | — | ೧೮೭೭ | — |
| ೨೦೪ | **ಕಥಾಸಾ.** | ಕಥಾಸರಿತ್ಸಾಗರ | ಸಿದ್ಧಾಂತಿ ಶಿವಶಂಕರ ಶಾಸ್ತ್ರಿ | ೧೯೦೬ | ವಾಗ್ಭೂಷಣ ಗ್ರಂಥಮಾಲೆ, ಧಾರವಾಡ |
| ೨೦೫ | **ಕದಂಪು.** | ಕದಂಬಪುರಾಣ | ಚಂದ್ರಸಾಗರವರ್ಣಿ | ಸು. ೧೮೧೦ | ವಿಚಾರದರ್ಪಣ ಮುದ್ರಣಾಲಯ, ಬೆಂಗಳೂರು |
| ೨೦೬ | **ಕದಂಬ.** | ಕದಂಬ | ಸರಸ್ವತೀಬಾಯಿ ರಾಜವಾಡೆ | ೧೯೪೭ | ಕಿರಿಯರ ಪ್ರಪಂಚ, ಉಡುಪಿ |
| ೨೦೭ | **ಕನಕ.** | ಶ್ರೀ ಕನಕದಾಸರ ಕೀರ್ತನೆ | ಕನಕದಾಸ | ಸು. ೧೫೫೦ | ಶ್ರೀಮನ್ಮಧ್ವಸಿದ್ಧಾಂತ ಗ್ರಂಥಮಾಲಾ, ಉಡುಪಿ, ೧೯೫೫ |
| ೨೦೮ | **ಕನಕಾಂ.** | ಕನಕಾಂಗೀ ಕಲ್ಯಾಣ | ನಿತ್ಯಾನಂದಾವಧೂತ | ಸು. ೧೯೦೦ | ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ, ಉಡುಪಿ, ೧೯೨೯ |
| ೨೦೯ | **ಕನಕೆ.** | ಕನಸಿನ ಕೆಳದಿ | ರಂ. ಶ್ರೀ. ಮುಗಳಿ | ೧೯೪೩ | ಮನೋಹರ ಗ್ರಂಥಮಾಲಾ, ಧಾರವಾಡ |
| ೨೧೦ | **ಕನನೆ.** | ಕನಸು-ನೆನಸು | ಚಿದಾನಂದ | ೧೯೪೯ | ಮನೋಹರ ಗ್ರಂಥ ಭಾಂಡಾರ, ಧಾರವಾಡ |
| ೨೧೧ | **ಕನಸಿ.** | ಕನಸಿನ ಕನ್ನಡಿ | ವೆಂ. ಮು. ಜೋಶಿ | ೧೯೫೬ | ಪ್ರತಿಭಾ ಗ್ರಂಥಮಾಲೆ, ಧಾರವಾಡ |
| ೨೧೨ | **ಕನ್ನಕ.** | ಕನ್ನಡಕ | ಅರುಣ | ೧೯೪೦ | ರಂಗ ಮಂಗ ಪ್ರಕಾಶನ, ಧಾರವಾಡ |
| ೨೧೩ | **ಕನ್ನಗಾ.** | ಕನ್ನಡ ಗಾದೆಗಳು | ಎಚ್. ಎಸ್. ಅಚ್ಚಪ್ಪ | ೧೯೪೪ | ಶಾರದಾ ಎಲೆಕ್ಟ್ರಿಕ್ ಪ್ರೆಸ್, ಮೈಸೂರು |
| ೨೧೪ | **ಕನ್ನಡಿ.** | ಕನ್ನಡಿಗರ ಕರ್ಮಕಥೆ ಅಥವಾ ವಿಜಯನಗರರಾಜ್ಯದ ನಾಶ | ಗಳಗನಾಥ | ೧೯೫೦ | ೩ನೆಯ ಮುದ್ರಣ, ಸಮಾಜ ಪುಸ್ತಕಾಲಯ, ಧಾರವಾಡ |
| ೨೧೫ | **ಕನ್ನನು.** | ಕನ್ನಡ ನುಡಿ (ಪತ್ರಿಕೆ) | | ೧೯೩೮ | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿವರಗಳು |
|---|---|---|---|---|---|
| ೨೧೬ | **ಕನ್ನಸಂ.** | ಕನ್ನಡ ಗ್ರಂಥಸಂಪಾದನೆ | ಡಿ. ಎಲ್. ನರಸಿಂಹಾಚಾರ್ | ೧೯೬೪ | ಶಾರದಾ ಮಂದಿರ, ಮೈಸೂರು |
| ೨೧೭ | **ಕನ್ನಸಾ.** | ಕನ್ನಡಿಗರ ಜನ್ಮಸಾರ್ಥಕತೆ | ವಲ್ಲಭ ಮಹಲಿಂಗ ತಟ್ಟಿ | ೧೮೯೯ | ವಾಗ್ಭೂಷಣ ಗ್ರಂಥಮಾಲೆ, ಧಾರವಾಡ |
| ೨೧೮ | **ಕನ್ಯಾಬ.** | ಕನ್ಯಾಬಲಿ | ಶಿವರಾಮ ಕಾರಂತ | ೧೯೪೮ | ಹರ್ಷಮುದ್ರಣಪ್ರಕಟನಾಲಯ, ಪುತ್ತೂರು |
| ೨೧೯ | **ಕಪಪು.** | ಕನ್ನಡ ಪಠ್ಯಪುಸ್ತಕ I-VII | — | ೧೯೫೯–೬೧ | ಮೈಸೂರು ವಿದ್ಯಾ ಇಲಾಖೆ, ಬೆಂಗಳೂರು |
| ೨೨೦ | **ಕಪ್ಪುಹು.** | ಕಪ್ಪು ಹುಡುಗಿ | ದ. ಬಾ. ಕುಲಕರ್ಣಿ | ೧೯೫೬ | ಲಲಿತ ಸಾಹಿತ್ಯ ಮಾಲೆ, ಧಾರವಾಡ |
| ೨೨೧ | **ಕಬ್ಬಿಕಾ.** | ಕಬ್ಬಿಗರ ಕಾವ | ಆಂಡಯ್ಯ (ಸಂ॥ (i) ಮಂ. ಆ. ರಾಮಾನುಜಯ್ಯಂಗಾರ್, (ii) ದೇ. ಜವರೇಗೌಡ) | ಸು. ೧೨೩೫ | ಕರ್ಣಾಟಕ ಕಾವ್ಯಕಲಾನಿಧಿ, ಮೈಸೂರು, ೧೯೩೦<br>ಶಾರದಾ ಮಂದಿರ, ಮೈಸೂರು, ೧೯೬೪ |
| ೨೨೨ | **ಕಬ್ಬಿಕೈ.** | ಕಬ್ಬಿಗರ ಕೈಪಿಡಿ | ಲಿಂಗಮಂತ್ರಿ | ಸು. ೧೫೩೦ | ವಿಚಾರದರ್ಪಣ ಮುದ್ರಾಕ್ಷರ ಶಾಲೆ, ಬೆಂಗಳೂರು |
| ೨೨೩ | **ಕಭವಿ.** | ಕರ್ನಾಟಕ ಭಕ್ತವಿಜಯ, ಭಾಗ I-II | ಬೇಲೂರು ಕೇಶವದಾಸ | ೧೯೩೨ | ಸುಬೋಧ ಪ್ರಕಟನಾಲಯ, ಬೆಂಗಳೂರು |
| ೨೨೪ | **ಕಭಾಗೆ.** | ಗ್ಯಾಝೆಟೀಯರು (ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು) | ವೆಂಕಟ ರಂಗೋ ಕಟ್ಟಿ | ೧೮೯೩ | ಗವರ್ನ್‌ಮೆಂಟ್ ಸೆಂಟ್ರಲ್ ಬುಕ್ ಡಿಪೋ, ಮುಂಬಯಿ |
| ೨೨೫ | **ಕಮುಕ.** | ಕಮಲಾಕಾಂತನ ಕಡತ | ಅನು॥ ದ. ಕೃ. ಭಾರದ್ವಾಜ | ೧೯೫೧ | ಆನಂದ್ ಬ್ರದರ್ಸ್, ಬೆಂಗಳೂರು |
| ೨೨೬ | **ಕಮುಕು.** | ಕಮಲಾ ಕುಸುಮ | ಅನು॥ ಎ. ವಿ. ನಂಜಮ್ಮ | ೧೯೫೫ | ಶಾರದಾ ಪ್ರಕಟನಾಲಯ, ಬೆಂಗಳೂರು |
| ೨೨೭ | **ಕಮನೆ.** | ಕನಸಿನ ಮನೆ | ವಿ. ಎಂ. ಇನಾಂದಾರ | ೧೯೫೮ | ಉಷಾ ಸಾಹಿತ್ಯ ಮಾಲೆ, ಮೈಸೂರು |
| ೨೨೮ | **ಕಮಮಾ.** | ಕಮಲಾಚಲ ಮಾಹಾತ್ಮ್ಯಂ | ಚಿಕ್ಕುಪಾಧ್ಯಾಯ | ೧೬೭೨–೧೭೦೪ | ಹಸ್ತಪ್ರತಿ: ಕೆ. ಬಿ. ೩೮, ೪೨, ಓರಿಇ., ಮೈಸೂರು |
| ೨೨೯ | **ಕಮಲ.** | ಕಮಲಕುಮಾರಿ | ಗಳಗನಾಥ | ೧೯೪೮ | ೬ನೆಯ ಮುದ್ರಣ, ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ |
| ೨೩೦ | **ಕಮಿಂಚಿ.** | ಕನ್ನಡ ನಾಡಿನ ಮಿಂಚಿದ ಮಹಿಳೆಯರು | ದೇಸಾಯಿ ಪಾಂಡುರಂಗರಾಯ | ೧೯೪೬ | ಮಿಂಚಿನ ಬಳ್ಳಿ, ಧಾರವಾಡ |
| ೨೩೧ | **ಕಮೇಘ.** | ಕನ್ನಡ ಮೇಘಸಂದೇಶ | ಅನು॥ ದ. ರಾ. ಬೇಂದ್ರೆ | ೧೯೪೩ | ಬಳವಂತ ನಾರಾಯಣ ಬಾಗಲವಾಡಿ, ಧಾರವಾಡ |
| ೨೩೨ | **ಕಮ್ಮಟ.** | ಕರ್ತಾರನ ಕಮ್ಮಟ | ಶ್ರೀರಂಗ | ೧೯೫೫ | ಸೌ. ಶಾರದಾಬಾಯಿ ಆದ್ಯ, ಧಾರವಾಡ |
| ೨೩೩ | **ಕಯಾತ್ರೆ.** | ಕನ್ನಡ ಯಾತ್ರೆ | ಮ್ಯಾನ್ವಿ ನರಸಿಂಗರಾವ್ | ೧೯೪೫ | ಕರ್ನಾಟಕಸಾಹಿತ್ಯಮಂದಿರ, ಹೈದರಾಬಾದು |
| ೨೩೪ | **ಕರವೀ.** | ಕರಸಿರಾಕರಣೆಯ ವೀರಕಥೆ | ರಂ. ರಾ. ದಿವಾಕರ | ೧೯೫೫ | ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ |
| ೨೩೫ | **ಕರಹ.** | ಕರಣಹಸುಗೆ | ಚನ್ನಬಸವ | ಸು. ೧೧೬೦ | ಹಸ್ತಪ್ರತಿ: ಕೆ. ೧೮೮, ಓರಿಇ., ಮೈಸೂರು |
| ೨೩೬ | **ಕರಿಕಂ.** | ಕರಿಯ ಕಂಬಳಿ | ಜಿ. ಪಿ. ರಾಜರತ್ನಂ | ೧೯೫೧ | ಆನಂದ್ ಬ್ರದರ್ಸ್, ಬೆಂಗಳೂರು |
| ೨೩೭ | **ಕರುಕ.** | ಕರುಳಿನ ಕರೆ | ಶಿವರಾಮ ಕಾರಂತ | ೧೯೪೯ | ಹರ್ಷಮುದ್ರಣಪ್ರಕಟನಾಲಯ, ಪುತ್ತೂರು |
| ೨೩೮ | **ಕರ್ಣಪಿ.** | ಕರ್ಣಪಿಶಾಚಿ | ಮುರಲಿ | ೧೯೫೮ | ೨ನೆಯ ಮುದ್ರಣ, ಶೇಷಾಚಲ ಗ್ರಂಥಮಾಲೆ, ಧಾರವಾಡ |
| ೨೩೯ | **ಕರ್ಣವೃ.** | ಕರ್ಣವೃತ್ತಾಂತ ಕಥೆ | ಪ್ರಧಾನಿ ತಿರುಮಲಾರ್ಯ (ಸಂ॥ ಮಂ. ಆ. ರಾಮಾನುಜಯ್ಯಂಗಾರ್) | ಸು. ೧೬೦೦ | ೨ನೆಯ ಮುದ್ರಣ, ಕರ್ಣಾಟಕ ಕಾವ್ಯಕಲಾನಿಧಿ, ಮೈಸೂರು, ೧೯೧೭ |
| ೨೪೦ | **ಕರ್ಣಾಕಾ.** | ಕರ್ಣಾರ್ಜುನರ ಕಾಳಗ | (ಸಂ॥ ಸೂರಪ್ಪ) | — | ವಿಚಾರದರ್ಪಣ ಮುದ್ರಾಕ್ಷರಶಾಲೆ, ಬೆಂಗಳೂರು, ೧೮೭೪ |
| ೨೪೧ | **ಕರ್ಣಾನಿ.** | ಕರ್ಣಾಟಕ ನಿಘಂಟು | (ಸಂ॥ ಎಸ್. ಜಿ. ನರಸಿಂಹಾಚಾರ್, ಮಂ. ಆ. ರಾಮಾನುಜಯ್ಯಂಗಾರ್) | ಸು. ೧೪೦೦ | ಕರ್ಣಾಟಕ ಕಾವ್ಯಮಂಜರಿ, ಮೈಸೂರು, ೧೮೯೩ |
| ೨೪೨ | **ಕರ್ಣಾಭಾ.** | ಕರ್ಣಾಟ ಭಾಷಾಕರಂ | ಜಯರಾಯಾಚಾರ್ಯ | ೧೮೯೧ | ಬೆಂಗಳೂರು |
| ೨೪೩ | **ಕರ್ಣಾಸಂ.** | ಕರ್ಣಾಟಕ ಸಂಸ್ಕೃತಿ | ದೇವುಡು ನರಸಿಂಹಶಾಸ್ತ್ರಿ | ೧೯೩೫ | ಬೆಂಗಳೂರು ಪ್ರೆಸ್, ಬೆಂಗಳೂರು |
| ೨೪೪ | **ಕರ್ನಾಇ.** | ಕರ್ನಾಟಕದ ವರ್ಣನೆಯೂ ಇತಿಹಾಸವೂ | ವೆಂಕಟೇಶ ನರಸಿಂಗರಾವ ಮುಗದಾಳ | ೧೯೩೪ | ೧೬ನೆಯ ಮುದ್ರಣ, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು |
| ೨೪೫ | **ಕರ್ಮವೀ.** | ಕರ್ಮವೀರ (ಪತ್ರಿಕೆ) | — | ೧೯೨೧– | ಲೋಕಶಿಕ್ಷಣ ಟ್ರಸ್ಟ್, ಬೆಂಗಳೂರು |
| ೨೪೬ | **ಕಲಾಜ್ಯೋ.** | ಕಲಾಜ್ಯೋತಿ | ಕುಲಕರ್ಣಿ ಬಿಂದುಮಾಧವ | ೧೯೫೪ | ಎಸ್. ಎಸ್. ಎನ್. ಬುಕ್ ಡಿಪೊ, ಬೆಂಗಳೂರು |
| ೨೪೭ | **ಕಲಾಧ.** | ಕಲಾಧರ ಮತ್ತು ಇತರ ಕಥೆಗಳು | ಬೆಳ್ಳಾವೆ ನರಹರಿಶಾಸ್ತ್ರಿ | ೧೯೫೬ | ಬೆಳ್ಳಾವೆ ಪುಸ್ತಕಾಲಯ, ಬೆಂಗಳೂರು |

## ೩. ಇತರ

| | |
|---|---|
| ಅರಕ. | ಅರಕಲಗೂಡು |
| ಅರಸೀ. | ಅರಸೀಕೆರೆ |
| ಆನೆಕ. | ಆನೆಕಲ್ |
| ಇಂಡಿ. | ಇಂಡಿ |
| ಉಡುಪಿ. | ಉಡುಪಿ |
| ಎಡತೊ. | ಎಡತೊರೆ |
| ಎಳಂದೂ. | ಎಳಂದೂರು |
| ಕಡೂರು. | ಕಡೂರು |
| ಕಾನಕಾ. | ಕಾನಕಾನಹಳ್ಳಿ |
| ಕುಂದಾಪು. | ಕುಂದಾಪುರ |
| ಕುಣಿಗ. | ಕುಣಿಗಲ್ |
| ಕೃಷ್ಣರಾ. | ಕೃಷ್ಣರಾಜಪೇಟೆ |
| ಕೊಪ್ಪ. | ಕೊಪ್ಪ |
| ಕೋಲಾರ. | ಕೋಲಾರ |
| ಗುಂಡ್ಲುಪೇ. | ಗುಂಡ್ಲುಪೇಟೆ |
| ಗುಬ್ಬಿ. | ಗುಬ್ಬಿ |
| ಗೋರೀಬಿ. | ಗೋರೀಬಿದನೂರು |
| ಚನ್ನಗಿ. | ಚನ್ನಗಿರಿ |
| ಚನ್ನಪ. | ಚನ್ನಪಟ್ಟಣ |
| ಚನ್ನರಾ. | ಚನ್ನರಾಯಪಟ್ಟಣ |
| ಚಳ್ಳಕೆ. | ಚಳ್ಳಕೆರೆ |
| ಚಾಮರಾ. | ಚಾಮರಾಜನಗರ |
| ಚಿಂತಾಮ. | ಚಿಂತಾಮಣಿ |
| ಚಿಕ್ಕನಾ. | ಚಿಕ್ಕನಾಯಕನಹಳ್ಳಿ |
| ಚಿಕ್ಕಬ. | ಚಿಕ್ಕಬಳ್ಳಾಪುರ |
| ಚಿಕ್ಕಮ. | ಚಿಕ್ಕಮಗಳೂರು |
| ಚಿತ್ರದು. | ಚಿತ್ರದುರ್ಗ |
| ಜಗಳೂ. | ಜಗಳೂರು |
| ತರೀಕೆ. | ತರೀಕೆರೆ |
| ತಿಪಟೂ. | ತಿಪಟೂರು |
| ತಿರುಮ. | ತಿರುಮಕೂಡ್ಲು ನರಸೀಪುರ |
| ತೀರ್ಥಹ. | ತೀರ್ಥಹಳ್ಳಿ |
| ತುಮಕೂ. | ತುಮಕೂರು |
| ದಾವಣ. | ದಾವಣಗೆರೆ |
| ದೇವನ. | ದೇವನಹಳ್ಳಿ |
| ದೊಡ್ಡಬ. | ದೊಡ್ಡಬಳ್ಳಾಪುರ |
| ನಂಜನ. | ನಂಜನಗೂಡು |
| ನಗರ. | ನಗರ |
| ನಾಗಮಂ. | ನಾಗಮಂಗಲ |
| ನೆಲಮಂ. | ನೆಲಮಂಗಲ |
| ಪಾವುಗ. | ಪಾವುಗಡ |
| ಪುಂಗನೂ. | ಪುಂಗನೂರು |
| ಬಂಕಾಪು. | ಬಂಕಾಪುರ |
| ಬಾಗೆಪ. | ಬಾಗೆಪಲ್ಲಿ |
| ಬಾಗೇವಾ. | ಬಾಗೇವಾಡಿ |
| ಬೆಂಗಳೂ. | ಬೆಂಗಳೂರು |
| ಬೇಲೂರು. | ಬೇಲೂರು |
| ಬೌರಿಂಗ್. | ಬೌರಿಂಗ್‌ಪೇಟೆ |
| ಮಂಗಳೂ. | ಮಂಗಳೂರು |
| ಮಂಜರಾ. | ಮಂಜರಾಬಾದ್ |
| ಮಂಡ್ಯ. | ಮಂಡ್ಯ |
| ಮದ್ದಗಿ. | ಮದ್ದಗಿರಿ |
| ಮಳವ. | ಮಳವಳ್ಳಿ |
| ಮಾಗಡಿ. | ಮಾಗಡಿ |
| ಮಾಲೂರು. | ಮಾಲೂರು |
| ಮುಳಬಾ. | ಮುಳಬಾಗಲು |
| ಮೂಡಗೆ. | ಮೂಡಗೆರೆ |
| ಮೈಸೂರು. | ಮೈಸೂರು |
| ಮೊಳಕಾ. | ಮೊಳಕಾಲುಮುರು |
| ಲಕ್ಷ್ಮೇಶ್ವ. | ಲಕ್ಷ್ಮೇಶ್ವರ |
| ಶಿಕಾರಿ. | ಶಿಕಾರಿಪುರ |
| ಶಿಡ್ಲಘ. | ಶಿಡ್ಲಘಟ್ಟ |
| ಶಿರಾ. | ಶಿರಾ |
| ಶಿವಮೊ. | ಶಿವಮೊಗ್ಗ |
| ಶೃಂಗೇರಿ. | ಶೃಂಗೇರಿ |
| ಶ್ರೀನಿವಾ. | ಶ್ರೀನಿವಾಸಪುರ |
| ಶ್ರೀರಂಗ. | ಶ್ರೀರಂಗಪಟ್ಟಣ |
| ಸಾಗರ. | ಸಾಗರ |
| ಸೊರಬ. | ಸೊರಬ |
| ಹಾವೇರಿ. | ಹಾವೇರಿ |
| ಹಾಸನ. | ಹಾಸನ |
| ಹಿರಿಯೂ. | ಹಿರಿಯೂರು |
| ಹುಣಸೂ. | ಹುಣಸೂರು |
| ಹೆಗ್ಗಡ. | ಹೆಗ್ಗಡದೇವನ ಕೋಟೆ |
| ಹೊನ್ನಾಳಿ. | ಹೊನ್ನಾಳಿ |
| ಹೊಸಕೋ. | ಹೊಸಕೋಟೆ |
| ಹೊಳಲ್ಕೆ. | ಹೊಳಲ್ಕೆರೆ |
| ಹೊಳೆನ. | ಹೊಳೆನರಸೀಪುರ |

ಶ್ರೀ

## ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ಶ್ರೀವಾಗ್ದೇವಿಗೆ ಶಬ್ದದಿ-
ನಾನಾವಿಂದ್ರಿಯದ ವಿಷಯಮುಮಂ ಶ್ರೋತ್ರದೊಳು-।
ದ್ಭಾವಿಪ ನಿರ್ಮಳಮೂರ್ತಿಗಿ-
ಳಾವಂದ್ಯೆಗೆ ಶಾಸ್ತ್ರಮುಖದೊಳವನತನಪ್ಪೆಂ ॥

— ಕೇಶಿರಾಜ

ಸರ್ವಜ್ಞಂ ತದಹಂ ವಂದೇ ಪರಂಜ್ಯೋತಿಸ್ತಮೋಪಹಂ ।
ಪ್ರವೃತ್ತಾ ಯನ್ಮುಖಾದ್ದೇವೀ ಸರ್ವಭಾಷಾಸರಸ್ವತೀ ॥

— ನಾಗವರ್ಮ

ಇದಂ ಕವಿಭ್ಯಃ ಪೂರ್ವೇಭ್ಯೋ ನಮೋವಾಕಂ ಪ್ರಶಾಸ್ಮಹೇ ।
ವಂದೇಮಹಿ ಚ ತಾಂ ವಾಣೀಮಮೃತಾಮಾತ್ಮನಃ ಕಲಾಂ ॥

— ಭವಭೂತಿ



ಅ$_1$ (ನಾ). ಕನ್ನಡ ವರ್ಣಮಾಲೆಯ ಮೊದಲನೆಯ ವರ್ಣ; ಅಕಾರ.

-ಅ$_2$, -ಆ$_4$ (ಅ). ಸಂಸ್ಕೃತದ 'ಕಿಲ' ಎಂಬುದರ (= ಅಂತೆ, ಅಲ್ಲವೆ ಇತ್ಯಾದಿ) ಅರ್ಥದಲ್ಲಿ ಬರುವ ಭಾವಸೂಚಕ ಅವ್ಯಯ ('ಶಬ್ದಾನುಶಾಸನ'ದಲ್ಲಿ ಉಕ್ತವಾಗಿರುವ ಮೇರೆಗೆ). -ಆ$_4$ : "ಅ, ಆ-ಕಿಲಾರ್ಥೌ" (ಶಬ್ದಾನು. ೨೧ ವ್ಯಾಖ್ಯಾ).

-ಅ$_3$ (ಅ). ವಿಧಿರೂಪದ ಧಾತುವಿನ ಮೇಲೆ ಅನುನಯ ಸೂಚನೆಗಾಗಿ ಸೇರುವ ಅವ್ಯಯ : ಕೃಪಾ ಕೇಳ (ಪಂಪಭಾ. ೭-೧೫) ; ಎನ್ನ ಭಕ್ತರ ಸುಖವದೆನ್ನಯ ಸುಖಂ ಕೇಳ (ನಂಬಿರ. ೧೯-೧೬೯) ; ಬಾರ ಮರಾಳಿಕಾಗಮನೆ (ಶಮದ. ೧೨೫ ಪ್ರಯೋ) ; ಏತಕವ್ವಾ ನಿನ್ನೊಡನೆ ಮುನಿದಿರ್ದಹನು ಹೇಳ (ಬಸವು. ೪೭-೧೨).

-ಅ$_4$, -ಆ$_7$ (ಅ). ಪ್ರಶ್ನಾರ್ಥದಲ್ಲಿ ಕ್ರಿಯಾರೂಪದ ಕೊನೆಗೆ ಹತ್ತುವ ಅವ್ಯಯ : ನೋಡುವುದಱೊಳೇನಟ್ಟಿಯೊಳಾಡುತ್ತಿರಲಾಗ ತಮ್ಮತಿರ್ವರುಂ (ಪಂಪಭಾ. ೬-೭೦) [ಆಗ = ಆಗದೇ ?] ; ಇಂದುನೃಸಿಂಹ ಕ್ಷಿತಿಪಾಲನಲ್ಲಿ ಕಟಕೋಪಾಧ್ಯಾಯನಾರೆಂಬ ಸೂಕ್ತಿನವೀನೋಜ್ವಲಬಾಣನಪ್ಪ ಸುಮನೋಬಾಣಂ (ಅನಂಪು. ೧-೩೪) [ಎಂಬ=ಎಂಬೆಯಾ?]; ಪುರಂದರವಿಟ್ಠಲನ ಚರಣವಂ ಭಜಿಸು ಕಂಡ್ಯ ಮನವೆ (ಪುರಂದ. ೫-೧೦೭-೩) [ಕಂಡ್ಯ = ಕಂಡೆಯಾ ?]. -ಆ$_7$ : ಕೂಸನೋದಿಸಿದಾ ಎಂದೊಡೆ (ವಡ್ಡಾರಾ. ೨೩-೧೮) [ಓದಿಸಿದಾ = ಓದಿಸಿದೆಯಾ ?] ; ಗುರುವಿಲ್ಲಾ ಕರ್ಣನಿಲ್ಲಾ ಗುರುವಿನ ಮಗನಿಲ್ಲಾ . . . ತಂದವಂ ಪಾರ್ಥನಲ್ಲಾ (ಪಂಪಭಾ. ೯-೫೫) [ಇಲ್ಲಾ = ಇರಲಿಲ್ಲವೆ? ಅಲ್ಲಾ = ಅಲ್ಲವೆ ?].

-ಅ$_5$ (ಅ). ನೀನ್, ಆನ್, ತಾನ್ – ಇವುಗಳ ಷಷ್ಠೀವಿಭಕ್ತಿಯ ರೂಪಗಳ ಮೇಲೆ ಅವಧಾರಣಾರ್ಥದಲ್ಲಿ ಹತ್ತುವ ಅವ್ಯಯ : ಉದಾ— ಎನ್ನಯ, ಎಮ್ಮಯ, ತನ್ನಯ, ತಮ್ಮಯ, ನಿನ್ನಯ, ನಿಮ್ಮಯ: ನುಡಿ ನಿನಗಂ ದಿನೇಶತನಯಂಗಮದೆನ್ನಯ ಪಕ್ಕದಾದೊಡಂ (ಪಂಪಭಾ. ೧೩-೨೮) ; ಇಡುಗುಡಿಯಸ್ಯೆನಾರು ತನ್ನಯ ಮಡದಿಯಂಬರವಂ ಸುಗಿದು ತಾಂ ಕೊಡನೆ (ಬಸವು. ೧೧-೩೬) ; ನಿನ್ನಯ ವೀರರ್ಕೈವರ ನೋಯಿಸೆನು ರಾಜೀವಸಖನಾಣೆ (ಕುವ್ಯಾಉ. ೧೦-೨೦). ☞ ಇದು ಹೊಸಗನ್ನಡದಲ್ಲಿಲ್ಲ.

-ಅ$_6$ (ಪ್ರ). ಕೆಲವು ಧಾತುಗಳಿಂದ ಭಾವನಾಮ ಅನ್ವರ್ಥನಾಮ ಮುಂತಾದವನ್ನು ಸಾಧಿಸಲು ಹತ್ತುವ ಪ್ರತ್ಯಯ : (i) ಭಾವನಾಮಕ್ಕೆ— ಆಟ, ಊಟ, ಎಱಕ, ನಡುಕ, ಸಾಲ, ಸೋಲ ಇತ್ಯಾದಿ : ನವಿಲಾಟಂ ಸೊಗಯಿಸುಗುಂ (ಕವಿರಾ. ೩-೭) ; ಸೋಲಮನೀವುದೆಂದು ಕಾಡುತ್ತಿರೆ (ಪಂಪಭಾ. ೯-೬೯) ; ಆಟವಾರಂಭಿಸದು ಬಱಿಬೊಬ್ಬಾಟವೇತಕೆ (ಕುವ್ಯಾಸ. ೧೩-೪೬) ; ಸಾಲವನು ಕೊಂಬಾಗ ಹಾಲೋಗರುಂಡಂತೆ ಸಾಲಿಗನು ಬಂದು ಎಳೆವಾಗ ಕಿಬ್ಬದಿಯ ಕೀಲು ಮುಱಿದಂತೆ (ಸರ್ವಜ್ಞ. ೧೩೯೧) ; ಅವನಿಗೆ ಆಟಪಾಟಗಳಲ್ಲಿ ಕೊಂಚವೂ ಆಸಕ್ತಿಯಿರಲಿಲ್ಲ (ರೂಢಿ). (ii) ಅನ್ವರ್ಥನಾಮಕ್ಕೆ— ಕಳ್ಳ, ಕುಂಟ, ಕೂನ, ಜಱುಚ ಇತ್ಯಾದಿ : ಎಲ್ಲಮಂ ಕಳ್ಳರ್ ಕೊಂಡುಪೋದರ್ (ವಡ್ಡಾರಾ. ೭೦-೧೧) ; ಕುರುಡರುಮಂ ಕುಂಟರುಮಂ ತಿರಿಕರುಮಂ ಕಂಡೊಡೆ (ಧರ್ಮಾಮೃ. ೯-೫೫) ; ಮದನನದ್ಭುವಂ ಭಿಸುಟ್ಟು ಕೂನನುಂ

ಕುಬ್ಜನುಮಾಗಿ ಬರೆ (ನೇಮಿಪು. ೭–೧೮೨ ವ); ತಪ್ಪಂ ಮಱಸಿ ಪುಸಿನುಡಿವ ಜಜ್ಜುಚರ ತೆಜನಂ ಕಂಡಱಿಯದಂತು ಕುಳಿಯುರುಮೊಳರೇ (ಕಾವ್ಯಾವ. ೩೯೩); ಜಾತ್ರೆಗೆ ಮುಂಚೆ ಕಳ್ಳರು ನೆರೆದರು (ಗಾದೆ).

**-ಅ₇** (ಪ್ರ). ಕೆಲವು ಬಹುವ್ರೀಹಿ ಸಮಾಸಗಳ ಅಂತ್ಯದಲ್ಲಿ ಹತ್ತುವ ಪ್ರತ್ಯಯ: ಉದಾ—ಅಂಚೆದೇರ, ಮುಕ್ಕಣ್ಣ ಇತ್ಯಾದಿ.

**ಅ₈** (ನಾ). ವಿಷ್ಣು. [ಸಂ.]

**ಅಅಃ** (ಅ). ದುಃಖಸೂಚಕವಾದ ಅವ್ಯಯ: "ಆಅಃ ದುಃಖ ಸೂಚನೇ": ಆಅಃ ವಿಧಾತ್ರಾ (ಭಾಷಾಭೂ. ೨೩೪, ಉದಾ).

**-ಅಂ** '-ಅಮ್' ನೋ.

**ಅಂಕ₁** (ನಾ). ಒಬ್ಬನ ಹೆಸರು: ಕರುಣದಿಂದ ಅಂಕನು ತಂನ ಮನಸು ಹರ್ಷವಾಗಿ (ಎಕ. VII, ಶಿವಮೊ. ೧೦೪–೧೩; 1558?). [ಸಂ. ?]

**ಅಂಕ₂** (ನಾ). ೧. ಕೊಕ್ಕೆ. ೨. ಡೊಂಕಾಗಿ ಬಾಗಿರುವ ಆಯುಧ; ಅಂಕುಶ. ೩. ಕೊಂಕು; ಡೊಂಕು. ೪. ಕುದುರೆಯನ್ನು ಹತ್ತುವಾಗ ಕಾಲನ್ನು ಇಟ್ಟುಕೊಳ್ಳುವ ಬಳೆ; ಅಂಕವಣಿ; ರಿಕಾಪು: ವಾಜಿಯ ಮೊಗವ ತಡವಿಯಂಕವ ಮೆಟ್ಟಿಯೋಜೆಯಿಂದವೆ ಲಂಘಿಸಿದ (ಶ್ರೀಪಾಲ. ೪–೧೬). ೫. ಭಾರವನ್ನು ಎತ್ತುವುದಕ್ಕೆ ಉಪಯೋಗಿಸುವ ಹಾರೆ; ಸನ್ನೆಕೋಲು: "ಅಂಕವೆನೆ ಭಾರವೆತ್ತುವದಕ್ಕುಂ" (ಕಶಠ. ೧೦). ೬. ತೊಡೆ: "ಅಂಕಮುತ್ಸಂಗಮಕ್ಕು" (ಮಂಗರಾ. ೯೭–೧೩). ೭. ಪಾರ್ಶ್ವ; ಮಗ್ಗುಲು. ೮. ಶರೀರ; ಮೈ. ೯. ಗೆರೆ; ರೇಖೆ. ೧೦. ಅಂಕಿ: ಕೆಯಿ ಮತ್ತರಯ್ವತ್ತಾಱು ಅ[೦]ಕದೊಳಂ ಮತ್ತರ್ ೫೬ (ಎಇ. XIX, ೨೧೯–೭; 1037). ೧೧. ಗುರುತು; ಕುರುಹು; ಚಿಹ್ನೆ: "ಅಂಕಮುದಭಿಜ್ಞಾನಮೆನೆ ಲಕ್ಷ್ಮಿಸಲು ಕುಱುವು" (ಮಂಗರಾ. ೧೧–೫); ತನ್ನಂಕದೊಂದುಗ್ರಸಾಯಕದಿಂ ನಾಯಕರಂ ಪಡಲ್ವಡಿಸುತುಂ (ಪಂಪಭಾ. ೧–೭೪). ೧೨. ಕಳಂಕ; ಕುಂದು; ಕೊರತೆ: ಶಂಕರನು ತಾನೆಂಬವರಿಗೇನಂಕ (ನಿಭಾಗ. ೪–೨–೩); ಈತನ ಅಂಗದಲ್ಲಿ ನಲವತ್ತೊಂಭತ್ತು ಅಂಕಗಳಿದ್ದಂತೆಯೂ ಅವುಗಳಲ್ಲಿ ಒಂದೊಂದು ಅಂಕಕ್ಕೇ ದೇಹಕ್ಕೆ ಎಷ್ಟೋ ವಿಕಾರವನ್ನುಂಟುಮಾಡತಕ್ಕದ್ದಾಗಿತ್ತೆಂತಲೂ ಹೇಳುವರು (ಕಾಂಪೂಚ. ೫೫). ೧೩. ಹೆಸರು: ಚೇರಮಾಂಕಂಗೆ ಬೆಸಸಿದ ಭಕ್ತಸತ್ಯೇಂದ್ರ ಚೋಳ ಕೃತಿ (ಭಾವಚಿಂ. ೧–೪೬). [ಚೇರಮಾಂಕ = ಚೇರಮ ಎಂಬ ಹೆಸರುಳ್ಳವನು]. ಅಣ್ಣಮಾಂಕ, ಪದ್ಮಣಾಂಕ, ರಾಘವಾಂಕ ಇತ್ಯಾದಿ ಹೋ. ೧೪. ಬಿರುದು: ದನುಜಾಂತಕನೆಂಬೀ ನಿನ್ನ ನಚ್ಚುವೋದಂಕಮೆಲವೊ ಮುನ್ನೆನ್ನನ್ನಂ ದನುಜಂ ಪುಟ್ಟದೆ ಸಂದುದು (ಪಂಪಭಾ. ೬–೫೪); ಪೂಜಿಸುವಂಕದಾನೆ ವಾಜಿಗಳೆಮಗಿಲ್ಲ (ಪಂಪಭಾ. ೧೦–೩೩). ೧೫. ಹೆಸರುವಾಸಿ; ಪ್ರಸಿದ್ಧಿ: ಅಂಕದಚ್ಚರಸೆಯರ್ . . . ಕೂಡೆ ಕುಣಿದರ್ (ಆದಿಪು. ೭–೧೨೩); ಅಂಕದ ಕಲಿ ಕುರುವಂಶಶಶಾಂಕನೆ ದುರ್ಯೋಧನಾಂಕನೆನೆ (ಗದಾಯು. ೭–೨). ೧೬. ನಾಟಕದ ಒಂದು ವಿಭಾಗ: ಶಾಕುಂತಲನಾಟಕದಲ್ಲಿ ಏಳು ಅಂಕಗಳಿವೆ (ರೂಢಿ). ೧೭. ದಶರೂಪಕಗಳಲ್ಲಿ ಒಂದು. ೧೮. ಯುದ್ಧ; ಹೋರಾಟ; ಕಾಳಗ: ಬಿದಿರೂರ ಅಗ್ಗಳಮಿಳಿವಲ್ಲಿ ಅಜ್ಜಕೆ ಕಾದಿದ ಬಿದೆಯಿತ ಸತ್ತನ್ (ಎಕ. X, ಶ್ರೀನಿವಾ. ೨೭–೨೨; 870); ಅಂಕದ ಕಳನಲ್ಲಿ ಬಿನ್ನಣದ ಬೀರರಿಳಾಪತಿ ಮೆಚ್ಚೆ ಕಾದುವರ್ (ಪುಷ್ಪಪು. ೨–೬೦); ಈ ಕೌರವ ವೃಕೋದರರಂಕ ಮಸೆದುತ್ಸವದಿ ಕಳನೇಱದರು (ಕುವ್ಯಾಗ. ೬–೧೨); ತಂದೆಗಳಿಬ್ಬರಂಕವ ಕಾಂಬ ಪಾತಕ ಬಂದಿತೆ (ಭರತಚ. ೫೧–೭೪). ೧೯. ಮಲ್ಲಯುದ್ಧವೇ ತನ್ನ ವೃತ್ತಿಯಾಗಿ ಉಳ್ಳ ವೀರ; ಜಟ್ಟಿ: ಕೋಲಾಹಲಮಾಗೆ ಸುರಿಗೆಯಿನ್ಸಿಱದು ಸತ್ತೊನ್ನೈಱಿಲೆಯನ್ನರ್ಯಮಲ್ಲನಜ್ಜನ್ತೇಜಮಾನಿಯೆ ಸ್ಟೋನ್ (ಸೌಇಇ. IX-i, ೨೦–೧೧; 900). ಅಂಕ ಕಳನೇಱ ಕೈಮಱದಿರ್ದೊಡೆ ಮಾಱಂಕ ಬಂದಿಱವುದ ಮಾಣ್ಬನೆ (ಬಸವ. ೧೭೪); ಅಂಕ ಓಡಿದರೆ ತೆತ್ತಿಗಂಗೆ ಭಂಗವಯ್ಯ (ಬಸವ. ೨೯೯). ೨೦. ಹುರುಡು; ಸ್ಪರ್ಧೆ: ರಾಜಕುಮಾರರಂಕದ ತಗರ್ಗಳಾಗಿ ಪೋರ್ದು ಸತ್ತು (ಚಾವುಂಉ. ೫೦). ೨೧. ಒಂಬತ್ತು ಎಂಬ ಸಂಖ್ಯೆ. ೨೨. ಧರ್ಮ. ೨೩. ಕಡೆ. ೨೪. ಇಂದ್ರ. ೨೫. ಒಳಗು. ೨೬. ಹಳೆಯದು. ೨೭. ಪದದ ಅರ್ಥ. ೨೮. ಎಡೆ; ಸ್ಥಳ. ೨೯. ಸಂತಾಪ; ಸಂಕಟ. ೩೦. ಚಿತ್ರ; ವಿಚಿತ್ರ. ೩೧. ಕಿರಣ. ೩೨. ಸಿಂಗಾರ; ಅಲಂಕಾರ. ೩೩. ಮುರಜ, ಜಯಘಂಟೆ, ಡೌಡೆ ಮುಂತಾದವುಗಳ ಧ್ವನಿ: "ಅತುಲ ಧುರದೊಳು ಚಿತ್ರದೊಳು ಕಳಂಕದೊಳಲಂಕಾರದೊಳು ಅಂಕವಕ್ಕುಂ" (ಮಂಗರಾ. ೧೫೨–೫೪); "ಸಂಖ್ಯೆಯೊಳು ಸಂತಾಪದೊಳು ಮುರಜ ಜಯಘಂಟೆ ಡೌಡೆಯ ನುಡಿಗಳಲಿ ಅಂಕವೆನಿಸಿಕ್ಕು" (ಮಂಗರಾ. ೧೫೩–೬೩); "ಧರ್ಮ ಸಮೀಪಂ ಸತ್ವಂ ಕರ್ಮಂ ಕಡೆ ಸುರಪಗೊಳಗೆ ಹಳದು ಪದಾರ್ಥಂ ಪೆರ್ಮೆಯೊಳೀಪೊಂಭತ್ತುಂ ಭೂಮಿಯೊಳೀಕ್ಷಿಸಲು ಅಂಕಶಬ್ದಮೆನಿಕ್ಕುಂ" (ನಾನಾಕಂ. ೧೧೫).

[ಸಂ. ? ℙ 'ಶಬ್ದಮಣಿದರ್ಪಣ'ದ ಮೇರೆಗೆ "ತತ್ಸಮ" ಶಬ್ದಗಳಲ್ಲಿ ಒಂದು (ಶಮದ. ೨೯೭, ೨೯೮)]

**ಅಂಕಂಗಾಱ** 'ಅಂಕಕಾಱ' ನೋ.

**ಅಂಕಂಗುಡು** (ಕ್ರಿ). ರಿಕಾಪಿನಿಂದ (ಕುದುರೆಯ) ಮೈಯನ್ನು ಒತ್ತಿ ಸೂಚನೆ ಕೊಡು: ತುರಂಗರತ್ನಮನವಯವದೊಳಿನಿಸಾನುಂ ಕಣ್ಕೆತ್ತಿದಂತೆ ಅಂಕಂಗುಡಲೊಡಮದು ನಿಶ್ಶಂಕಂ ಪನ್ನೆರಡು ಯೋಜನಂ ಪಾಱದುದು (ಶಾಂತಿಪು. ೧೧–೪೧ ವ, ೪೨).

[ಅಂಕ₂ + ಕುಡು₁ (< ಕೊಡು₁)]

**ಅಂಕಂಗೊಳ್** (ಕ್ರಿ). ರಿಕಾಪಿನಿಂದ (ಕುದುರೆಯ) ಪಕ್ಕವನ್ನು ತಿವಿ: ವಾಮಾಂಘ್ರಿಯಂ ಪತ್ತಿಸಿ ದಕ್ಷಿಣಚರಣದಿಂ ನಿಶ್ಶಂಕೆಯಿನಂಕಂಗೊಂಡು ಭೋಂಕೆನೆಡದ ಕೊಸೆಯಂ ತೆಗೆದು ನಿರ್ವರ್ತಿಸಲೆಂದು ನೆಗಪಿ ಮುರಿವುದುಂ (ನೇಮಿಪು. ೪–೧೦೪ ವ). [ಅಂಕ₂ + ಕೊಳ್₁]

**ಅಂಕಕರಣ** (ನಾ). [ಗಣಿತ] ಅಕ್ಷರದಲ್ಲಿ ಬರೆದ ಅಥವಾ ಬಾಯಲ್ಲಿ ಹೇಳಿದ ಸಂಖ್ಯೆಯನ್ನು ಅಂಕಿಯಲ್ಲಿ ಬರೆಯುವುದು.

[ಅಂಕ₂ + ಕರಣ]

**ಅಂಕಕಹಳೆ** (ನಾ). ಯುದ್ಧವನ್ನು ಸೂಚಿಸುವ ಕಹಳೆ; ರಣಕಹಳೆ: ನೆರೆ ಸಾರೆಂದು ಕೂಗಿದವಂಕಕಹಳೆಗಳು (ಪಶುಭಾ. ೧–೨೩).

[ಅಂಕ₂ + ಕಹಳೆ]

**ಅಂಕಕಾತಿ** 'ಅಂಕಕಾರ್ತಿ' ನೋ.

**ಅಂಕಕಾರ್ತಿ**, ಅಂಕಕಾತಿ (ನಾ). ವೀರರಮಣಿ. (ಇದು ಬಿರುದಿನ ಭಾಗವಾಗಿ ಬರುವುದೂ ಉಂಟು. 'ಅಂಕಕಾಱ' ಪರಾ): ಕಲಿಯೆನೆ ನೆಗಟ್ದ್ಬಳ್ ಕಸವರಗಲಿಯೆನೆ ಗುಣದಂಕಕಾರ್ತಿ ಮೊನೆಯೊಳ್ ಮನೆಯೊಳ್ (ಅಜಿಪು. ೧–೬೬); ತರುಣಿ ಮನ್ಮಥನಂಕಕಾರ್ತಿಯೊ (ಬಸಪು. ೧೨–೬). **ಅಂಕಕಾತಿ**: ಬಿರುದಂಕಕಾತಿಯರಿಂದ್ರನೋಲಗದ (ಕುವ್ಯಾಅ. ೭–೪೯). [ಅಂಕಕಾಱ + -ತಿ (< -ಇತಿ)]

**ಅಂಕಕಾಱ**, ಅಂಕಂಗಾಱ, ಅಂಕಗಾಱ (ನಾ). ೧. ಮಲ್ಲಯುದ್ಧವೇ ತನ್ನ ವೃತ್ತಿಯಾಗಿ ಉಳ್ಳ ವೀರ; ಜಟ್ಟಿ; ಯುದ್ಧವೀರ: ನುಡಿಯಲಱಯದಂಕಕಾಱನಾಕಾಶಮುಂ ನೋಡಿದನೆಂಬಂತೆ (ಧರ್ಮಾಮೃ. ೯–೧೨೦); ನಿಮ್ಮ ಶರಣರ ಮನೆಯ ಬಿರುದಿನ ಅಂಕಕಾಱ ಓಡದಿರು ಓಡದಿರು (ಬಸವ. ೭೦೦); ಅಂಕಕಾಱಂ ತಾನಾಗಿ ಶಿವನಾಜ್ಞೆಯಿಂ ಬಿಂಕದಿಂ ಮಾಸಾಳ್ಗಳಂ ಗೆಲುತೆ (ಮೊನೆರ. ೧೪೦–೨೨); ಮುಂಕುಡಿಯ ನಾಯಕರಿವರು ಪತಿಯುಂಕಕಾಱರು (ಕುವ್ಯಾಭೀ. ೨–೧೦). ೨. ಬಿರು

ದುಳ್ಳ ವೀರ (ಇದು ಬಿರುದಿನ ಭಾಗವಾಗಿ ಬರುವುದೂ ಉಂಟು) : ನೆಲನದಿರೆವಂದು ತಾಗಿದ ಕಕ್ಕಲನ ತಮ್ಮನಪ್ಪ ಬಪ್ಪುವನಂಕಕಾಱನ ನೊಂದೆ ಮದಾಂಧಗಂಧಸಿಂಧುರದೊಳೋಡಿಸಿದ (ಪಂಪಭಾ. ೯-೫೨ ವ) [ಬಪ್ಪುವನಂಕಕಾಱ : ಬಪ್ಪುವಂ + ಅಂಕಕಾಱ = ಬಪ್ಪುವನೆಂಬ ಅಂಕಕಾಱ ; ಇದನ್ನು ಬಪ್ಪುವನ + ಅಂಕಕಾಱ (= ಬಪ್ಪುವ ಎಂಬ ಒಡೆಯನ ಆಶ್ರಯದಲ್ಲಿರುವ ಅಂಕಕಾಱ) ಎಂದು ಬಿಡಿಸುವುದೂ ಸಾಧ್ಯ] ; ಕದನೈಕಸೂದ್ರಕಂ ಬೂತುಗನಙ್ಕಕಾಱ ಶ್ರೀಮತ್ ಮನಾಲರಂಗನುವರದೊಳ್ (ಎಕ. III, ಮಂಡ್ಯ. ೪೧-೯ ; 950) [ಬೂತುಗನಂಕಕಾಱ : ಬೂತುಗನ + ಅಂಕಕಾಱ = ಬೂತುಗ ಎಂಬ ಒಡೆಯನ ಆಶ್ರಯದಲ್ಲಿರುವ ಅಂಕಕಾಱ] ; ಈ ದೊರೆತೆನೆ ಬಣ್ಣಿಸಲ್ಕೆಱಿವರಾರಳವಂ ಚಲದಂಕಕಾಱನ (ಎಕ. II, ೧೩೩-೩೦ ; 982) [ಚಲದಂಕಕಾಱ : ಚಲದ + ಅಂಕಕಾಱ = ಹಿಡಿದ ಹಠವನ್ನು ಬಿಡದೆ ಸಾಧಿಸುವ ಅಂಕಕಾಱ] ; ಸೇನೆಯಂಕಕಾಱ (ಎಕ. II, ೨೬೨-೨ ; 1160) [ಸೇನೆಯಂಕಕಾಱ : ಸೇನೆಯ + ಅಂಕಕಾಱ = ಸೇನೆಯಲ್ಲಿ ಹೆಸರುವಾಸಿಯಾದ ವೀರ]. **ಅಂಕಂಗಾಱ :** ಅಂಕಂಗಾಱನ ಗಂಡುತನಂ ಕೂರಿತೆ ತುಮುಲಯುದ್ಧದೊಳ್ ಪಟುಭಟರಂ ನೂಂಕುವ ಸಮರಂಗಾಱನ ಮಾಂಕರಣೆಯೆ ಗಂಡುತನದ ತಿರುಳಿನ ವೇೞ್ಕುಂ (ಶಬ್ದಾನು. ೩೪೪ ಪ್ರಯೋ). **ಅಂಕಗಾಱ :** ಆಹವಮಲ್ಲನಂಕಗಾಱಂ ಪರಮಂಡಳಸೂಱೆಕಾಱಂ (ಸೌಇಇ. IX-i, ೧೨೬-೬ ; 1064). 'ಸಮರಂಗಾಱ' ಪರಾ. [ಅಂಕ$_2$ + -ಕಾಱ]

**ಅಂಕಕಾಱದೇವ** (ನಾ). ಒಬ್ಬನ ಹೆಸರು : ತೊಳಞ್ಞಿಯ ಅಙ್ಕಕಾಱದೇವರು ನಗರೀಸ್ವರ ದೇವರ್ಗ್ಗೆ ಕೊಟ್ಟ ಧರ್ಮ್ಮವ್ (ಮೈಆರಿ. ೧೯೧೫, ೨೧-೧೧ ; 1047). [ಅಂಕಕಾಱ + ದೇವ]

**ಅಂಕಗಣಿತ** (ನಾ). ಸಂಖ್ಯೆಗಳ ಮೂಲಕ ಮಾಡುವ ಗಣಿತ ; ಗಣಿತಶಾಸ್ತ್ರದ ಒಂದು ಭೇದ : ಮೊದಲನೆಯ ವಾರ ಆಟ, ಎರಡನೆಯ ವಾರ ಸಂಗೀತ, ಮೂರನೆಯ ವಾರ ರಷ್ಯನ್, ಹೀಗೆ – ಕೊನೆಗೆ ಅಂಕಗಣಿತ ಬರುವವರೆಗೆ (ಶಾಲಿಮ. ೧೧). [ಅಂಕ$_2$ + ಗಣಿತ]

**ಅಂಕಗದ್ಯಾಣ** (ನಾ). ಮಲ್ಲಯುದ್ಧವೇ ವೃತ್ತಿಯಾಗಿ ಉಳ್ಳ ವೀರರ, ಜಟ್ಟಿಗಳ ಮೇಲೆ ಹಾಕುವ ತೆರಿಗೆ (?) : ಪೊಳಲ್ಗುನ್ದೆಯುಮಂ ಸಪ್ತಾರ್ಧಲಕ್ಷೆಯೊಳಿಲ್ಲವಂಕಗದ್ಯಾಣಮುಮ (೦) ನರಮನೆಯಂಕಂಗಳ ಜೀವಿತದೊಳು ದಶವನ್ಧಮುಮಂ (ಸೌಇಇ. IX-i, ೧೬೩-೧೯ ; 1093). 'ಅಂಕದೆಱೆ', 'ಅಂಕವಣ', 'ಅಂಕಸುಂಕ' ಪರಾ. [ಅಂಕ$_2$ + ಗದ್ಯಾಣ]

**ಅಂಕಗವುಂಡ** (ನಾ). ಒಬ್ಬನ ಹೆಸರು : ಅಙ್ಕಗವುಣ್ಡಗೆ ಪಲಮ್ಮೆಚೆಗಾವಣ್ಡಂ (ಎಕ. IV, ಹೆಗ್ಗಡ. ೧೦೪-೧೭ ; 1037). [ಅಂಕ$_1$ + ಗವುಂಡ (< ಗಾಮುಂಡ)]

**ಅಂಕಗಾಱ** 'ಅಂಕಕಾಱ' ನೋ.

**ಅಂಕಚೇಯ** 'ಅಂಕಜೇಯ' ನೋ.

**ಅಂಕಜೇಯ,** ಅಂಕಚೇಯ (ನಾ). ಯುದ್ಧವೀರ (?) : ನೃಪಕಾಮನ ಕೋಟಿಯೊಳ್ ರಾಜನೆಂಬದಟನುಮಂ ಬಾಸನೆಂಬಂಕಜೇಯನುಮಂ (ಚಾವುಂಉ. ೪೬೩). **ಅಂಕಚೇಯ :** ಮಱೆವುಗದಂಕಚೆ[ಜೆ]ೕಯರಿಳಿದೋಡದ ದುರ್ಗದ ಗಂಡರಳ್ಕಿ ಬೆಳ್ಕುಱದ ಮದಾಂಧರಿಲ್ಲ (ಎಕ. VII, ಶಿಕಾರಿ. ೧೧೪-೧೧ ; 1054). [ಅಂಕ$_2$ + ಆಜೇಯ ?]

**ಅಂಕಝುಂಕೆ** (ನಾ). ಯುದ್ಧದ ಭಯ (?) : ಯದುಕುಲದಂಕಕಾಱನು ನಿಂದನನಿಬರಿಗಂಕಝುಂಕೆಯನೇನನೆಂಬೆನು ಸಾತ್ಯಕಿಯ ಮನದ (ಕುವ್ಯಾಕ. ೩-೧೪). [ಅಂಕ$_2$ + ಝುಂಕೆ]

**ಅಂಕಟ** (ನಾ). (?). 'ಅಂಕಟಗದ್ದೆ' ಪರಾ. ℙ ಸಂಸ್ಕೃತದ 'ಅಂಕತಿ' (= ಅಗ್ನಿಹೋತ್ರಿ) ಎಂಬ ಶಬ್ದದೊಡನೆ ಸಂಬಂಧವೇನಾದರೂ ಉಂಟೆ ? [?]

**ಅಂಕಟಂಕ** (ನಾ). ತಮ್ಮ ಗುರುತಿನ ನಾಣ್ಯವನ್ನು ಮುದ್ರಿಸುವ ಅಧಿಕಾರ (?); ತಮ್ಮ ಹೆಸರಿನ ಮುದ್ರೆ ಹಾಕಿಸುವ ಅಧಿಕಾರ (?): ಪಂಚಾಂಗ ಪಸಾಯ ಛತ್ರ ಸುಖಾಸನ ಬಲರಗದ್ದಿಗೆ ಅಂಕಟಂಕ ದಂಡ ಖಂಡನ ಅಷ್ಟಭೋಗ ತೇಜಸ್ವಾಮ್ಯವಂನ್ನು (ಎಕ. VII, ಶಿಕಾರಿ. ೧೨-೧೪ ; 1192 ?). [ಅಂಕ$_2$ + ಟಂಕ]

**ಅಂಕಟಗದ್ದೆ** (ನಾ). ಅಂಕಟದ ಸಲುವಾಗಿ ಬಿಟ್ಟ ಗದ್ದೆ(?) : ಬೆಂಮರಹಾಳಿಯ ಗದ್ದೆ ಅಂಕಟಗದ್ದೆ ಕಾರಡಿಯ ಗದ್ದೆಯ ಮೇಲಣ (ಸೌಇಇ. ೧೯೩೦, ಕುಂದಾಪು. ೫೩೬-೧೦ ; 1449). [ಅಂಕಟ + ಗದ್ದೆ (< ಗಟ್ಟಿ)]

**ಅಂಕಟೆಂಕೆ** (ನಾ). = ಅಂಕಟಂಕ : ಕೊಡೆ ಹಡಪ ದೀಪಮಾಲೆಯ ಕಂಭ ಅಂಕಟೆಂಕೆ ಮುಂತ್ತಾದ ತೇಜಮಾನ್ಯವನುಳ್ಳ ಹೈವಣ್ಣನಾಯಕರು (ಎಕ. VIII, ಸಾಗರ. ೬೦-೮ ; 1472). [ಅಂಕ$_2$ + ಟೆಂಕೆ]

**ಅಂಕಡೊಂಕ** (ಗು). ಅತಿವಕ್ರವಾದ : ಅಂಕಡೊಂಕ ದಾರಿಯಲ್ಲಿ ಸುತ್ತಿ ಸುತ್ತಿ ಬೆಟ್ಟ ಹತ್ತಬೇಕಾಯಿತು (ರೂಢಿ) ; ಅಂಕಡೊಂಕ ಸಂಕಪಾಲ ಮೂರು ತಲೆಗೆ ಹತ್ತು ಕಾಲು (ಒಗಟು). [ಅಂಕ$_3$ + ಡೊಂಕ]

**ಅಂಕಣ** (ನಾ). ೧. ಮನೆಯ ಎರಡು ಕಂಬಗಳ ಅಥವಾ ಎರಡು ತೊಲೆಗಳ ನಡುವೆ ಇರುವ ಪ್ರದೇಶದ ಪರಿಮಿತಿ : ಅಱಂಕಣದ ಮನೆಯ ಬಾಡಗೆಯ ಹಿಡಿದು ಘನ ಕೆಱಿದೆಂದು ಹೊಯಿದಾಡುನರಂತೆ (ಮೋಳಿಮಾ. ೫೫೪). ೨. ಒಂದು ಅಂಕಣದಷ್ಟು ದಾಯವಿರುವ ಮನೆ ಅಥವಾ ಕಟ್ಟಡದ ಭಾಗ : ಪಟ್ಟಣೋಜನ ಮಗ ಚಕಬಾಚೆಯನ ಅಂಕಣ (ಎಕ. XIV, ಕೃಷ್ಣರಾ. ೮೬-೪ ; 1341 ?). ೩. ಸ್ಥಳ ; ಪ್ರದೇಶ : ಸೊಕ್ಕಾನೆ ಕುದುರೆಯ ವೈಹಾಳಿಯಂಕಣದಿಕ್ಕೆ ಕಣ್ಮನಕೆ ರಂಜಿಸಿತು (ಮೋಹತ. ೨-೫೫). ೪. ಅರೆ ; ಸೆಳೆಖಾನೆ : ಮೇಜಿನ ಕೆಳಗಡೆ ಅಂಕಣಗಳ ಮತ್ತು ಕಪಾಟುಗಳ ವ್ಯವಸ್ಥೆಯಿದ್ದರೆ ಮತ್ತು ಸಾಧ್ಯವಾದರೆ ನೊಣಗಳು ಒಳಹೊಗದಂತೆ ಬಾಗಿಲುಗಳೂ ಇದ್ದರೆ (ಅಡುಸಾ. ೧೪). ೫. ಪತ್ರಿಕೆಯಲ್ಲಿನ ಉದ್ದಸಾಲು ; "ಕಾಲಂ" : ದಿನಪತ್ರಿಕೆಯಿಂದ ಮೊದಲುಮಾಡಿ ಎಲ್ಲ ನಿಯತಕಾಲಿಕಗಳಲ್ಲಿಯೂ ಇಂದು ಸಣ್ಣಕಥೆಗಳು ಅಂಕಣಗಳನ್ನು ತುಂಬಬೇಕಾಗಿರುವುದರಿಂದ ಪ್ರಕಾಶಕರಿಂದಲೂ ಸಣ್ಣಕಥೆಗಳ ಬೇಡಿಕೆ ಹೆಚ್ಚಾಗಿದೆ (ಕೊಸೆಕಾ. ಮು. ೧). [‖ ತಮಿ. ಅಙ್ಕಣಮ್ ; ತೆಲು. ಅಂಕಣಮು. ℙ 'ಅಂಗಣ' ಶಬ್ದದ ನಿಷ್ಪತ್ತಿಭಾಗವನ್ನು ನೋಡಿ.]

**ಅಂಕಣದಾಯ** (ನಾ). "ಮನೆಯ ಅಂಕಣದ ಅಳತೆ, ಒಂದು ಅಂಕಣದಷ್ಟು ಅಳತೆ" (ಅನಂನಾ. ೧೭). [ಅಂಕಣ + ದಾಯ$_1$]

**ಅಂಕಣಬಲಿ** (ನಾ). ಅಂಕಣಕ್ಕೊಂದರಂತೆ ಪ್ರತಿಯೊಂದು ಅಂಕಣದಲ್ಲಿಯೂ ಕೊಡುವ ಬಲಿ : ಕಂಧರವ ಕತ್ತರಿಸಿ ನೂರ್ವರಂ ಕಾಲಗಂಕಣಬಲಿಯ ಮಾಡಿಸುವೆ (ತುರಂಗ. ೫೦-೩೨). [ಅಂಕಣ + ಬಲಿ$_2$]

**ಅಂಕಣಿ** 'ಅಂಕವಣಿ$_1$' ನೋ.

**ಅಂಕಣೆಯೊಕ್ಕು** (ಕ್ರಿ). ಸದೆಬಡಿ ; ಸಂಪೂರ್ಣವಾಗಿ ಸೋಲಿಸಿಬಿಡು (?) : ಧಾಳಿಯನಿಟ್ಟು ಕೊಂಕಣಮನಂಕಣೆಯೊಕ್ಕಿದಪಂ (ಎಕ. VII, ಶಿಕಾರಿ. ೧೩೬-೨೫ ; 1068). [ಅಂಕಣೆ (< ಅಂಕವಣೆ) + ಒಕ್ಕು$_1$]

**ಅಂಕಣೆ** 'ಅಂಕವಣಿ$_1$' ನೋ.

**ಅಂಕಣೆದೊಡಕು** (ನಾ). ರಿಕಾಪಿನಲ್ಲಿ ಸಿಕ್ಕಿಕೊಂಡಿರುವ ಸ್ಥಿತಿ : ವಾಘೆಯಲಿ ಕೈ ಬಿಗಿದುದಂಕಣೆದೊಡಕಿನಲಿ ಮರನಾದವಂಘ್ರಿಗಳು (ಕುವ್ಯಾಗ. ೨-೧೩). [ಅಂಕಣೆ (< ಅಂಕವಣ$_2$) + ತೊಡಕು (< ತೊಡಂಕು$_2$)]

**ಅಂಕೆತಳ** (ನಾ). ತೊಡೆಯ ಮೇಲುಭಾಗ: ಮನೋರಮಾಂಕೆತಳದೊಳ್ ತಂದಿಕ್ಕಿದಂ ಸ್ವಪ್ನದೊಳ್ (ಕಾದಂಪೂ. ೩೭೩). [ಅಂಕ್ಕ$_2$+ತಳ್$_1$]

**ಅಂಕೆತಿಕೆ** (ನಾ). ಒಂದು ಬಗೆಯ ಕತ್ತಿವರಸೆ: ಗತಿಪಸರವಡ್ಡಾಯುವಂಕೆತಿಕೆ . . . ಎಂಬ ಚತುರಠಾಣದ ತರಹರದೊಳ್ . . . ಖಡ್ಗಮಂ ಜಡಿದರು (ಸೋಮಚ. ೫–೧೪). [< ಪ್ರಾ. ?]

**ಅಂಕೆತ್ರಿಣೇತ್ರ** (ನಾ). ಯುದ್ಧದಲ್ಲಿ ಮುಕ್ಕಣ್ಣನಂತೆ ಪರಾಕ್ರಮಶಾಲಿಯಾದವನು (ಇದು ಒಂದು ಬಿರುದು): ಬಿರುದಿಂಗೆ–ಗಜದುಟಿ . . . ಅಂಕೆತ್ರಿಣೇತ್ರಂ (ಶಮದ. ೧೭೪ ಪ್ರಯೋ). 'ಕದನತ್ರಿಣೇತ್ರ' ಪರಾ. [ಅಂಕ್ಕ$_2$ + ತ್ರಿಣೇತ್ರ]

**ಅಂಕೆದುವರ** (ನಾ). ವಿಶಾಲವಾದ ಬಾಗಿಲು; ಹೆಬ್ಬಾಗಿಲು: ಜವಳಿಗದವಂ ದ್ವಾರಬಂಧದ ಹವಣಿಗಾ ಬಾಗಿಲೊಳಮರ್ಚಿಸಿಯವಕಗುಸೆಯಂ ನಿಲಿಸಿದನು ಬಲುವಂಕೆದುವರದಲಿ [ಪಾಠಾಂ. ನವಕವಾಟವದೆಸೆಯೆ ನಿಲಿಸಿದ ದ್ವಾರದ್ವಾರದಲಿ] (ಬಸವು. ೧೬–೯).
[ಅಂಕ್ಕ$_2$ + ದುವರ$_0$ (< ದ್ವಾರ)]

**ಅಂಕೆದೇಜಿ** (ನಾ). = ಅಂಕಗದ್ಯಾಣ. [ಅಂಕ್ಕ$_2$ + ತೆಜಿ$_3$]

**ಅಂಕೆನ** (ನಾ). ೧. ಗುರುತು ಮಾಡುವುದು; ಮುದ್ರೆಯೊತ್ತುವುದು. ೨. ಕಾಯಿಸಿದ ಉಪಕರಣದಿಂದ ಬರೆ ಹಾಕುವುದು. ೩. ಅಂಕಿಯ ರೂಪದಲ್ಲಿ ಬರೆಯುವುದು. ಉದಾ—ಎಂಟು = ೮. ೪. ಗುರುತು; ಮುದ್ರೆ. [ಸಂ.]

**ಅಂಕೆನಂಗೆಯ್** (ಕ್ರಿ). ಗುರುತು ಮಾಡು; ಮುದ್ರೆಯನ್ನು ಒತ್ತು: ತನ್ನ ದೇಹದೊಳ್ ಪರರ ದೇಹದೊಳಾದೊಡಂ ಶಂಖಚಕ್ರಮೆಂಬುರು ಮುದ್ರೆಗಳನಂಕೆನಂಗೆಯ್ವಂ (ನೀಆಚಾ. ೨–೩೭).
[ಅಂಕೆನ + ಗೆಯ್ (< ಕೆಯ್$_1$)]

**ಅಂಕೆಪಟ್ಟಿಕೆ** (ನಾ). ತೊಡೆಗೆ ಕಟ್ಟಿಕೊಳ್ಳುವ ಬಟ್ಟೆ (ಸ್ಯಾಂಡರ್).
[ಅಂಕ್ಕ$_2$ + ಪಟ್ಟಿಕೆ]

**ಅಂಕೆಪಟ್ಟೆ** (ನಾ). = ಅಂಕೆಪಟ್ಟಿಕೆ (ಸ್ಯಾಂಡರ್). [ಅಂಕ್ಕ$_2$ + ಪಟ್ಟೆ$_2$]

**ಅಂಕೆಪರದೆ** (ನಾ). ನಾಟಕದಲ್ಲಿ ಅಂಕದ ಕೊನೆಯಲ್ಲಿ ಬಿಡುವ ತೆರೆ. **ಅಂಕೆಪರದೆ ಬೀಳು, ಅಂಕೆಪರದೆ ಬಿದ್ದುಹೋಗು** = ಮುಗಿದು ಹೋಗು; ಕೊನೆಗಾಣು: ಅವನ ಜೀವನದ ಅಂಕೆಪರದೆ ಬಿದ್ದು ಹೋಗಿತ್ತು (ಎಡಹೆ. ೧೧೭). [ಅಂಕ್ಕ$_2$ + ಪರದೆ]

**ಅಂಕೆಪಾಲಿ** (ನಾ). ೧. ಅಪ್ಪುಗೆ; ಆಲಿಂಗನ. ೨. ದಾದಿ. 'ಅಂಗಪಾಳಿ' ಪರಾ. [ಸಂ.]

**ಅಂಕೆಬೋಯ** (ನಾ). ಒಬ್ಬನ ಹೆಸರು: ಶ್ರೀಮದಂಕೆಬೋಯ (ಎಕ. II, ೪೧; 1000). [ಅಂಕ್ಕ$_1$ + ಬೋಯ]

**ಅಂಕೆಮಂಡಣೆ** (ನಾ). ಕುಳಿತುಕೊಳ್ಳುವ ಒಂದು ಭಂಗಿ (ಸ್ಯಾಂಡರ್).
[ಅಂಕ್ಕ$_2$ + ಮಂಡಣೆ]

**ಅಂಕೆಮಯ್ಯ** (ನಾ). ಒಬ್ಬನ ಹೆಸರು: ವಿಶಿಷ್ಟರಪ್ಪ ಅಂಕಮಯ್ಯ ನಾಯಕರುಂ ಭಾಸ್ಕರಸೆಟ್ಟಿಯರುವಾ ಕೋಟಿಯ (ಎಕ. VII, ಶಿವಮೊ. ೯೯–೨೨; 1127).
[ಅಂಕ + –ಮ್ಮ (< ಅಮ್ಮ$_1$) + ಅಯ್ಯ$_1$]

**ಅಂಕೆಮಾಲೆ** (ನಾ). ೧. ಹೆಸರು ಅಥವಾ ಬಿರುದುಗಳ ಮಾಲಿಕೆ; ಬಿರುದಾವಳಿ: ಕನಕಶ್ರೀಯಂ ಕುಣಿಯಿಸಲು ತಗುಳ್ದಾಕೆಯಂಕಮಾಲೆಗಳುಮಂ ರೂಪಸೌಂದರ್ಯಮುಮಂ . . . ಅಜಿಪುತ್ತ್ರಮಿರೆ (ಚಾವುಂಉ. ೨೧೫). ೨. ಬಿರುದಾವಳಿಯುಳ್ಳ ಹಾಡು: ಚೆಂಡಂ ಹೊಯ್ಯುತಿರ್ದ ಕೊಬ್ಬಳು ಕಾಮನಂಕಮಾಲೆಯ ಪಾಡುತ (ಹಚಕಾ. ೪–೧೩); ಆಹವದೊಳ್ ನಲಿದಾಡಿ ಪಾಡಿದರ್ ಸೂಳೆಮರುಳ್ಗಳುಗ್ಘಡಿಸಿ ಹೆಗ್ಗಡೆ ಬಾಳೆಗನಂಕಮಾಲೆಯಂ (ಎಕ. VIII, ಸಾಗರ. ೧೫–೫೩; 1218).
[ಅಂಕ್ಕ$_2$ + ಮಾಲೆ]

**ಅಂಕೆಮುಖ** (ನಾ). = ಅಂಕಾಸ್ಯ. [ಅಂಕ್ಕ$_2$ + ಮುಖ]

**ಅಂಕೆರಣಿ** (ನಾ). "ಕೆಲಸಕ್ಕೆ ಬಾರದ ಮೈಗಳ್ಳ" (ಅನಂನಾ. ೧೭). [?]

**ಅಂಕೆರಿಕೆ** (ನಾ). "ನೀರು ಸೇದುವ ಬಾವಿಯ ಮೆಟ್ಟಿಲುಗೋಡೆಯ ಬುಡದಲ್ಲಿ ಸ್ವಲ್ಪ ದಪ್ಪ ಮಾಡಿ ಕೆಮ್ಮಣ್ಣು ಬಳಿದು ಬರೆದ ಭಾಗ" (ಅನಂನಾ. ೧೭). [?]

**ಅಂಕೆಲಿಗ** (ನಾ). ಅಂಕೋಲೆ ಗಿಡ (ಪಂಡಿತ. ೮).
[ಸಂ. ಅಂಕೋಲಿಕ]

**ಅಂಕೆಲಿಪಿ** (ನಾ). (ಉಕ) ಅಂಕಿಗಳನ್ನೂ ಅಕ್ಷರಗಳನ್ನೂ ಕಲಿಸುವ ಪುಸ್ತಕ: ಕಿಟ್ಟೂನ ಶರ್ಟು, ಚಣ್ಣ, ಕೋಟು, ಅವನಿಗೆ ತಾನು ಕೊಡಿಸಿದ್ದ ಪಾಟಿ, ಅಂಕೆಲಿಪಿ – ಎಲ್ಲವೂ ಅಲ್ಲಿ ಮೂಲೆಗುಂಪಾಗಿ ಬಿದ್ದಿದ್ದವು (ಸಮುಜೀ. ೫೦೦). [ಅಂಕ್ಕ$_2$ + ಲಿಪಿ]

**ಅಂಕೆವಣ** (ನಾ). = ಅಂಕಗದ್ಯಾಣ: ಪ್ರಾಯಶ್ಚಿತ್ತ ದಕ್ಷಿಣೆಯಂಕೆವಣಂ ಪಸುಂಬೆವಣಮೆಂಬಿನಿತಜಿಗೊಳ್ ಮಾದ್ದರ್ತ್ವಪ್ತಿಯಂ (ಎಇ. XIII, ೩೩೩–೭೦; 929). [ಅಂಕ್ಕ$_2$ + ಪಣ$_1$]

**ಅಂಕೆವಣೆ$_1$**, ಅಂಕಣೆ, ಅಂಕಣೆ, ಅಂಕವಣೆ, ಅಂಕೋಣಿ, ಅಂಗವಡಿ (ನಾ). ಕುದುರೆಯನ್ನು ಹತ್ತುವುದಕ್ಕಾಗಿ ಅದರ ಮಗ್ಗುಲಲ್ಲಿ ನೇತುಬಿಟ್ಟಿರುವ ಬಳೆ; ರಿಕಾಪು: ಅನ್ನೆಗಂ ನಕುಳನುಮಂಕವಣಿಯುಂ ಬಾಳುಂ ಬಾರುಂ ಚಮ್ಮಟಿಗೆಯುಮನೊರ್ವ ಕೀಟಾಳಿಂ ಪಿಡಿಯಿಸಿಕೊಂಡು ಬಂದು ವಿರಾಟನಂ ಕಂಡು (ಪಂಪಭಾ. ೮–೫೪ ವ); ಉಂಗುಟಮನಂಕವಣಿಗೆ ಕರಾಂಗುಳಿಯಂ ಸ್ಕಂಧಸಂಧಿಗುಯ್ದೇಜಿದನುತ್ತುಂಗ ತುರಂಗಮಮಂ (ಪಂರಾಮಾ. ೪–೧೨೦); ಮರದ ಹರಿಯಣದೊಳುಂಡಂ ಮುರದೊಳ್ ಸಮೆದಂಕವಣಿಯನೇಜಿದಂ (ಶಮದ. ೨೪೧ ಪ್ರಯೋ); ಆಗ ಮಡೆಯನು ಗುರುಗಳ ದೊಣ್ಣೆಯನ್ನು ನೋಡಿ ತನ್ನ ಜತೆಗಾರರೊಂದಿಗೆ, "ಏಕೆ ಎಣಿಕೆಗೊಳ್ಳುವಿರಿ? ಅಂಕವಣಿಗಳು ಸಿಕ್ಕಿದುವು! ಸಿಕ್ಕಿದುವು!" ಎಂದು ಕುಣಿದಾಡತೊಡಗಿದನು (ನಗೆಗ. ೫೧). **ಅಂಕಣಿ:** ಸ್ವರವೆಂಬ ಕುದುರೆಗೆ ವಿಷ್ಣುವೆಂಬ ಕಡಿವಾಣ ಚಂದ್ರಸೂರ್ಯರೆಂಬ ಅಂಕಣಿ ಬ್ರಹ್ಮನೆ ಹಲ್ಲಣ (ಅವಚಂ. ೫೯–೨೫೯); ಗಗನಮನಡರ್ವ ಜಾತ್ಯಶ್ವಂಗಳಂ ವಳಯಮಂ ಸೋಂಕದಂಕಣಿಯ ಹಂಗಿಲ್ಲದೆ ಘೋಂಕನೇಜಿ (ಗಿರಿಕ. ೬–೫೫ ವ); ಅಗ್ಗರಣೆ ಜೊತ್ತಿಗೆ ಜೀನವಂಕಣಿ [ಪಾಠಾಂ. ಜಾನುವಂಕಣೆ] ತಿರಿಚಿ . . . ವೊಗರಂಬದ ವಿಲಾಸದಿನೆಸೆದುದಾದಂತಿ (ತೊರರಾ. ೬–೨೯–೧೯). **ಅಂಕಣೆ:** ವಾಘೆಯಲಿ ಕೈಬಿಗಿದುದಂಕಣೆ ದೊಡಕಿನಲಿ ಮರನಾದವಂಘ್ರಿಗಳು (ಕುವ್ಯಾಗ. ೨–೧೩). **ಅಂಕವಣೆ:** ರತ್ನಾಂಶುಭಾಸುರಮಂ ಲಾಘವದಿಂದಮಂಕವಣೆಯಂ ಪಾದಾಗ್ರದಿಂ ಮೆಟ್ಟಿ ತತ್ತುರಗಾಧೀಶನ ಬೆನ್ನೆ ವಂದಂ (ಮಲ್ಲಿಪು. ೮–೧೭೦); ಕಾರ್ಮುಗಿಲೆಂಬಾನೆಯ ರನ್ನದಂಕವಣೆ [ಪಾಠಾಂ. ದಗ್ಗರಣೆ, ದಗ್ಗವಣೆ, ದಂಕವಣೆ] ಯೆಂಬಂತೆ ಚೆಲ್ವಾಯ್ತು . . . ಗೀರ್ವಾಣ ಬಾಣಾಸನಂ (ಜಗವಿ. ೪–೧೬). **ಅಂಕೋಣಿ** (೬). **ಅಂಗವಡಿ** (೬).
[ಅಂಕ್ಕ$_2$ + ?. ‖ **ತಮಿ. ಮಲ.** ಅಜ್ಜಪಡಿ, ಅಜ್ಜವಡಿ; **ತುಳು.** ಅಂಕೋಲೆ; **ತೆಲು.** ಅಂಕವನ್ನಿಯ, ಅಂಕವನ್ನೆ]

**ಅಂಕೆವಣೆ$_2$** (ನಾ). ಯುದ್ಧದಲ್ಲಿ ಬಡಿಯುವ ತಮಟೆ; ರಣಹಲಗೆ (ಉಕ). 'ಅಂಕವಜಿ$^3$' ಪರಾ. [< ಅಂಕ್ಕ$_2$ + ಮಣಿ?]

**ಅಂಕೆವಣೆ** 'ಅಂಕವಣಿ$_1$' ನೋ.

**ಅಂಕೆವರೆ** (ನಾ). ಶರೀರದ ಮೇಲೆ ಇರುವ ಒಂದು ಗುರುತು (ಗ್ಯಾರಿಟ್). [ಅಂಕ್ಕ$_2$ + ಬರ್$_2$]

**ಅಂಕವಲ** (ನಾ). ಗುರುತು ಮಾಡಿದ ಪ್ರದೇಶ ; ಮೀಸಲು ಹೊಲ : ಮಹಾದೇವರಿಗೆ ಅಂಕನಾಥವೆಸರಿಂ ಅಂಕವಲ ತಳವೃತ್ತಿ . . . ಪಾರಣೆಯ ಜಂಗಮಾರಾಧನೆಗಂ ಕೊಟ್ಟಸಿ ಕುಱಿವನಿಗೆ ತಳವೃತ್ತಿ ಅಂಕವಲ ಕೂಂಡಿ ನಾಡೊಳು ಸಲುವಂತೆ ಹೆಜ್ಜುಗ್ಗಿಯ ಹಬ್ಬವೊಂಭತ್ತು ದಿನ ಸುಂಕ ಸೂಱೆತ್ತಿನ ಪರಿಹಾರ (ಎಇ. XXI, ೧೪–೫೫, ೬೧ ; 1260).
[< *ಅಂಕವೊಲ (ಅಂಕ₂ + ಪೊಲ)]

**ಅಂಕವಲೆ** 'ಅಂಕೋಲೆ' ನೋ.

**ಅಂಕವಱೆ** (ನಾ). ರಣಭೇರಿ ; ರಣಹಲಗೆ : ಅಂಕವಱೆ, ಅಂಕವಾತು (ಶಮದ. ೨೯೮ ಪ್ರಯೋ) ; ಡಂಗುರಮಂ ಸಾಱುವಂತಿರಂಕವಱೆ ಮೊಱಗ ಲೊಡಂ (ರಾಮಾಶ್ವ. ೭೮–೧೧). [ಅಂಕ₂ + ಪಱೆ₁]

**ಅಂಕವಾಡಿ** (ನಾ). ಜಟ್ಟಿಗಳ ಕೇರಿ (?) : ಯಿಂತಪ್ಪದನಂ ಮಹಾಜ [ನಂ] ಆಚಾರವ ತಾಉ ಮಾಡಿಕೊಂಬ × ರೆ ಅರಸು ಅಧಿಕಾರಿ ಸುಂಕಿತಳ × × ಯಂಕವಾಡಿ ಆವನಾನೊಬನೂ × × × × ಮಾಡಿದವನೂ (ಸೌಇಇ. IX-ii, ೪೩೮–೨೪ ; 1418). [ಅಂಕ₂ + ಪಾಡಿ₁]

**ಅಂಕವಾತು** (ನಾ). ೧. ಯುದ್ಧದ ಮಾತು. ೨. ವೀರವಚನ. ೩. ಬಿರುದಿನ ಅಥವಾ ಹೊಗಳಿಕೆಯ ಮಾತು : ಅಂಕಕ್ಕೆ– ಅಂಕವಱೆ, ಅಂಕವಾತು (ಶಮದ. ೨೯೮ ಪ್ರಯೋ). ೪. ಸಂಕೇತದ ಬರೆವಣಿಗೆಯಲ್ಲಿ ಉಪಯೋಗಿಸುವ ಮಾತು (*). [ಅಂಕ₂ + ಮಾತು₁]

**ಅಂಕವಿರಾಮ** (ನಾ). ೧. "ನಾಟಕದ ಅಂಕಗಳ ಮಧ್ಯದ ವಿರಾಮ" (ಇಂಕನಿ. ೩೬೫). ೨. "ಈ ವಿರಾಮ ಕಾಲದಲ್ಲಿ ನಡಸುವ ನೃತ್ಯ, ಗೀತ ಮೊದಲಾದುದು" (ಇಂಕನಿ. ೩೬೫). [ಅಂಕ₂ + ವಿರಾಮ]

**ಅಂಕವೀರ** (ನಾ). ಯುದ್ಧವೀರ ; ಪ್ರಸಿದ್ಧವೀರ (*).
[ಅಂಕ₂ + ವೀರ]

**ಅಂಕವೇಱು** (ಕ್ರಿ). ೧. ಯುದ್ಧರಂಗವನ್ನು ಪ್ರವೇಶಿಸು ; ಕಾಳಗಕ್ಕೆ ಹೋಗು. ೨. ತೊಡೆಯನ್ನು ಏರು : ಇಂದುಮಂಡಲದ ಸಿರಿಯಂ ಸೂಱೆಮಾಡಿದರ್ ಬಂದು ವಿಷಯದೊಳೂರುಗಳನೆಱೆದರ್. . .ಮುಂದು ವರಿದಂಕವೇಱಿದರೀಗ ವರಸುಭಟರೆಂದು ಪೊ ಸ ವಾ ರ್ತೆ ಯ ಂ ಪ್ರೌಢೆಯೊರ್ವಳ್ ಪೇಳ್ದೊಡೆ (ಜೈಮಿಭಾ. ೧೦–೫೩). [ಅಂಕ₂ + ಏಱು₁]

**ಅಂಕಶಾಲೆ** (ನಾ). ಗರುಡಿಯ ಮನೆ (?) : ಕಂಗೊಳಿಪ ಗೋಪುರಾಗ್ರಂಗಳ ಪರಿವ್ರಾ[ಭ್ರಾ]ಜಿಸುವ ಕೋಟೆ ಕೊತ್ತಳಾಳ್ವೇರಿ ಹುಲಿಮುಖದಂಕ ಶಾಲೆಯಿಂದ (ರುಕ್ಮಾಂಗ. ೧೩–೨೫). [ಅಂಕ₂ + ಶಾಲೆ₁]

**ಅಂಕಶೂನ್ಯಗಾಜ** (ನಾ). ಪ್ರಸಿದ್ಧನಾದ ಮಾಟಗಾರ (?): ಲೀಲೆಯ ಕುಱಿತು ಆಡುವರೆಲ್ಲರು ಕಾಲಸಂಹರನ ಬಂಧುಗಳು. ಲೀಲಾಂಗನಾ ಸುಖವ ಕುಱಿತು ಆಡುವವರೆಲ್ಲರು ಲೋಲುಪೆಯ ಬಂಧುಗಳು. ಕೈಲಾಂಗನೆಯ ಲೀಲೆಯಲಾಡುವರೆಲ್ಲರು ಕಾಲಬಂಧುಗಳು. ಈ ಲೀಲೆಯ ಜಾಳಿಸಾ ಅಂಕಶೂನ್ಯಗಾಜ ನಿಃಕಳಂಕ ಮಲ್ಲಿಕಾರ್ಜುನ (ಮೋಳಿಮಾ. ೧೨–೧೪). [ಅಂಕ₂ + ಶೂನ್ಯಗಾಜ]

**ಅಂಕಸುಂಕ** (ನಾ). = ಅಂಕಗದ್ಯಾಣ : ಬೆಸವೊಕ್ಕಲು ಅಜ್ಜಸುಜ್ಜ ಟಜ್ಜಸಾಲೆ ತಳವಾಱಿಕೆ ನಿಧಿನಿಕ್ಷೇಪ . . . ಸರ್ವಾದಾಯಪ್ರಾಪ್ತಿ ಸಹಿತ ಮಾಗಿ (ಎಕ. VIII, ಸಾಗರ. ೧೬೩–೨೩ ; 1488). [ಅಂಕ₂ + ಸುಂಕ]

**ಅಂಕಾವತಾರ** (ನಾ). "ಒಂದು ಅಂಕದ ಕೊನೆಯಲ್ಲಿ ಪಾತ್ರಗಳು ಹೋಗುವಾಗ ಸೂಚಿಸುವ ವಿಷಯದಿಂದಲೇ ಮತ್ತು ಅದೇ ಪಾತ್ರಗಳಿಂದಲೇ ಮುಂದಿನ ಅಂಕವು ಪ್ರಾರಂಭವಾಗುವುದು" (ಕೈಪಿಡಿ. ೨೯೯). [ಅಂಕ₂ + ಅವತಾರ]

**ಅಂಕಾಸ್ಯ** (ನಾ). "ಒಂದು ಅಂಕದ ಕೊನೆಯಲ್ಲಿ ಪಾತ್ರಗಳು ಹೋಗುವಾಗ ಮುಂದಿನ ಅಂಕದ ಆರಂಭದಲ್ಲಿ ಬರುವ ಬೇರೊಂದು ವಿಷಯವನ್ನು ಸೂಚಿಸುವುದು" (ಕೈಪಿಡಿ. ೨೦೬).
[ಅಂಕ₂ + ಆಸ್ಯ]

**ಅಂಕಾಳಿ** 'ಅಕ್ಕಾಳಿ' ನೋ.

**ಅಂಕಿ₁** (ನಾ). ಒಬ್ಬನ ಹೆಸರು. 'ಅಂಕಿಸೆಟ್ಟಿ' ಪರಾ.
[ಅಂಕ₁ + –ಇ₃]

**ಅಂಕಿ₂** 'ಅಂಕೆ₄' ನೋ.

**ಅಂಕಿ-ಅಂಶ** (ನಾ). ಒಂದು ವಿಷಯವನ್ನು ಕುರಿತ ಸಂಖ್ಯಾವಿವರಗಳ ಸಂಗ್ರಹ : ಅಂಕಿ-ಅಂಶಗಳ ಶಾಸ್ತ್ರ=ಸಂಖ್ಯಾಶಾಸ್ತ್ರ (Statistics).
[ಅಂಕಿ₂ (< ಅಂಕೆ₄) + ಅಂಶ]

**ಅಂಕಿತ** (ಗು). ೧. ಗುರುತು ಮಾಡಿದ ; ಗುರುತುಳ್ಳ. ೨. ಅಂಕಿಯನ್ನು ಗುರುತು ಹಾಕಿದ. (ನಾ). ೩. ಗುರುತು ; ಹೆಸರು ; ಮುದ್ರಿಕೆ. ೪. ರುಜು ; ಸಹಿ. ೫. (ಗ್ರಂಥ ಮೊದಲಾದವುಗಳ) ಅರ್ಪಣೆ ; ಸಮರ್ಪಣೆ. ೬. ವಶದಲ್ಲಿರುವವನು : ಧರ್ಮದ್ರೋಹಿಯಾಗಿರುವ ಚಕ್ರೇಶ್ವರನಿಗೆ ಅಂಕಿತರಾಗಿದ್ದೇವೆಂದು ಹೇಳಿಕೊಳ್ಳುತ್ತ . . . ಗುಲಾಮರಾಗಿ ನಡೆಯುತ್ತಾ ನೂರು ವರ್ಷಗಳು ಜೀವಂತರಾಗಿರುವುದಕ್ಕಿಂತಲೂ ಇಂದೇ ರಣಭೂಮಿಯಲ್ಲಿ ಮಡಿಯುವುದು ಶ್ರೇಯಸ್ಕರವಾದುದು (ಶ್ರೀರಾಯ. ೧೬೨). ೭. ಕುದುರೆಯ ಓಟಗಳಲ್ಲಿ ಒಂದು ಬಗೆ : ಬಿಂಕಂಬಡೆದುದು ವಿಕ್ರಮಮಂಕಿತಮುಪಕಂಠಮುಪಜಮುಪಜನ ಮೆಂಬಯ್ದುಂ ಕಣ್ಗೊಳಿಸುವ ಧಾರೆಗಳಿಂ ಕುದುರೆಯ ಕಾಲ್ಗೆ ಕೋಡಗಱೆಯೊಳವಕ್ಕುಂ (ಮಲ್ಲಿಪು. ೯–೩೬). 'ಪಂಚಧಾರೆ' ಪರಾ. [ಸಂ.]

**ಅಂಕಿತಗೈ** (ಕ್ರಿ). ಗುರುತಿಸಿ ತೋರಿಸು ; ಕುರುಹಿಟ್ಟು ತೋರಿಸು : ತೋರಿದುಮೊಲೆವೆಣ್ಗೆ ತಾ ನ ಲ್ಲ ದೆ ಮಿಕ್ಕ ನಾರಿಯರ್ಗೊಲಿಯನೆಂದೆನುತ ಕೋರಿದ ಕೃ ಷ್ಣ ನ ಂ ಕಿ ತ ಗೈ ವ ತೆಱದಿ ಕಠಾರಿಯ ಪಿಡಿದೊರ್ವಳಿಹಳು (ಮೋಹತ. ೪–೧೩). [ಅಂಕಿತ + ಗೈ (< ಕೆಯ್₁)]

**ಅಂಕಿತನಾಮ** (ನಾ). ಒಬ್ಬನಿಗೆ ಇಟ್ಟ ಅಥವಾ ಕೊಟ್ಟ ಹೆಸರು : ಅಂಕಿತನಾಮಂ ಪೆಸರನಿಡುವನಿಷ್ಟದಿನೆಂತಾದೊಡಮಿರ್ಪುದು (ಶ ಮ ದ. ೬೬ ವೃತ್ತಿ). [ಅಂಕಿತ + ನಾಮ]

**ಅಂಕಿತಹಾಕು** (ಕ್ರಿ). ೧. ಹೆಸರು ಬರೆ ; ರುಜು ಹಾಕು (ಸ್ಯಾಂಡರ್). ೨. ಅರ್ಪಣೆಮಾಡು (ಸ್ಯಾಂಡರ್).
[ಅಂಕಿತ + ಹಾಕು (< ಪಾಯ್ಕು₁)]

**ಅಂಕಿಮ** (ನಾ). ಒಬ್ಬನ ಹೆಸರು. 'ಅಂಕಿಮಗೆಯ್' ಪರಾ.
[ಅಂಕಿ₁ + –ಮ₀ (< ಅಮ್ಮ₁)]

**ಅಂಕಿಮಗೆಯ್** (ನಾ). ಅಂಕಿಮ ಎಂಬ ಹೆಸರಿನವನ ಹೊಲ : ಮತ್ತಂ ಅಂಕಿಮಗೆಯಿಂ ತೆಂಕಲು ಸೇನಬೋವ ರಾಮಯ್ಯನವರ ಕೆಯಿಂ ಬಡಗಲು (ಸೌಇಇ. IX-i, ೩೭೧–೪೪ ; 1258). [ಅಂಕಿಮ + ಕೆಯ್₃]

**ಅಂಕಿಯ** (ನಾ). ಒಬ್ಬನ ಹೆಸರು. 'ಅಂಕಿಯನಾಯಕ' ಪರಾ.
[ಅಂಕಿ₁ + –ಯ₀ (< ಅಯ್ಯ) ? ಅಥವಾ < ಅಂಕೆಯ ?]

**ಅಂಕಿಯನಾಯಕ** (ನಾ). ಒಬ್ಬನ ಹೆಸರು : ಬಲವಂಕದ ಅಂಕಿಯ ನಾಯಕರ ಕುಮಾರ ತಿಮುಯನಾಯಕರು (ಎಕ. X, ಚಿಂತಾಮ. ೮೧–೯ ; 1413). [ಅಂಕಿಯ + ನಾಯಕ]

**ಅಂಕಿಸು₁** (ಕ್ರಿ). ೧. ವ್ಯಕ್ತಪಡು ; ತೋರ್ಪಡು : ಭಕ್ತರ ಭಾಗ್ಯದ ಹೆಬ್ಬೆಳೆಯಾ ಹೊಸರಾಶಿಯೊ ವಸುಧೆಯ ಸಂತೆಯೊ ಎಂದಿರದಂಕಿಸಿ ಮೆಱೆದುದು ಕೈಲಾಸಂ (ವೀರೇಶ. ೧–೧೧). ೨. ವಶಪಡಿಸಿಕೊ ; ಅಧೀನ ಮಾಡಿಕೊ : ಅಲರ್ವಂಗೆ ತೀವಿ ತೆಗೆದಂಬು ತಡಂಬರಿವಂಗೆ ಕಂಟಕಪ್ರಳಿಯಮವುಂಕುವಂಗೆ ಜವನಂಕಿಸುವಂಗೆ ಸಿಡಿಲ್ಸಿಡಿಲ್ದಿಟಂ . . . ಚ ಟ್ಟ ಮ ನೆ ಂ ಬ ಜೆಟ್ಟಿಗಂ (ಎಕ. XI, ದಾವಣ. ೪೩–೪೮ ; 1164) ; ಈ

ಯತಿವರ್ತಿಯಂ ವಶವರ್ತಿಮಾಡಲುಮಂಕುಶಮಿಲ್ಲದಂಕಿಸಲುಂ ನಿನಗೆ ತೀರ್ವುದು (ಅರ್ಥನೇ. ೫–೧೧೫ ವ). ೩. ಎಣಿಸು ; ಲೆಕ್ಕ ಹಾಕು : ತಳಪಟದೊಳಾಯುಷ್ಯರಾಶಿಯನಳೆವ ಕೊಳಗವು ಸೂರ್ಯನೆಂಬುದ ತಿಳಿದಹೋರಾತ್ರಿಗಳ ಸಂಖ್ಯೆಯ ಸಲುಗೆಯಂಕಿಸದೆ [ಪಾಠಾಂ. ಯಂಕಿಪುದು] ಬಳಸುವುದು ಸನ್ಮಾರ್ಗದೊಳು (ಕುವ್ಯಾಉ. ೪–೨೧) ; ಆ ಯೊ ೕ ಧ್ಯೆ ಅಂಕಿಸಲಿನ್ನೆರಳ್ನೂಱುಗಾವುದವೆನೆ ಸೋಂಕಿಗೆಯ್ತಂದನಾ ಕುವರ (ಭರಚ. ೫೮–೧೯). ೪. ಲಕ್ಷಿಸು ; ನಿರ್ದೇಶಿಸು : ನಸು ಮುಸುಳ್ದಂಗಲೇಖೆ ಪೊಱಮಟ್ಟಿಡಗಾಲ್ ಪೊಱವಾಱಮೇಲೆ ಪತ್ತಿಸಿದ ಮಡಂ ಕರದ್ವಯದೆ ಬಿದ್ದೆಸೆದೆತ್ತಿದ ಮಾಲೆ ಮುಂಡ[ಮುಂದ]ನಂಕಿಸುವ ಮುಖೇಂದು ಮುಂಚಲನುಗೆಯ್ದ ಕುಚಂ ಮುರಿ ಕಲ್ಪಭಂಗಿ ಕಣ್ಗೆಸೆದಿರೆ ಪಾಱಿದಳ್ ಪೊಳೆದು ಖೇಚರಿ ಮಿಂಚಿನ ಬೊಂಬೆಯೆಂಬಿನಂ (ಅರ್ಥನೇ. ೩–೧೭) ; ಚೆನ್ನಬಸವನ ಮುಸುಡನೀಕ್ಷಿಸಿ ಮಿಂಡಸಂಗಯ್ಯಗಳನಂಕಿಸುತ ಉಸುರಿದಂ (ಬಸಪು. ೧೨–೫೭). ೫. ಗುರುತು ಮಾಡು; ಮುದ್ರೆಯೊತ್ತು: ಮನೆಯೆಂದುಂ ಮನುಜರೆಂದುಂ ಮನೆವಾರ್ತೆಯೆಂದುಂ ಮನಂ ತನ್ನ ಪೆಸರನಂಕಿಸಿ ಸಕಲ ಜಗದರಸುತನಂ ತನ್ನದೆಂಬಹಂಕಾರದಲ್ಲಿ (ಮನೋವಿ. ೧–೧೯ ಟೀಕು) ; ಸಿಂಹಾಕಾರಮನಂಕಿಸಲ್ ನರರ ಬೆನ್ನೊಳ್ ಹಸ್ತಿ ರೋ ೕ ಗ ೦ ಹರಂ (ರತ್ನಾಶ. ೧೧೧). ೬. ವ್ಯಕ್ತಪಡಿಸು ; ತೋರ್ಪಡಿಸು : ಬಳವೈರಿಯೊಳ್ ಪಳಂಚಲೆಂದು ನೀಲಾಚಲಂಗಳ್ ಸಾಲಿಟ್ಟುವೆಂಬ ಬಿಂಕಮನಂಕಿಸಿ ಕಣ್ಗೆ ವಂದ ಗಂಧಸಿಂಧುರಸಮೂಹದಿಂ (ರಾಜಶೇ. ೬–೧೧ ವ). ೭. ಸೇರಿಸು ; ಇಡು ; ತೊಡಿಸು : ಭುಜಕೀರ್ತಿಗಳನಂಕಿಸಿ ಕಡಗ ಕಂಕಣ ಸೂಡಗವನಿಕ್ಕಿ (ಬಸಪು. ೪–೩೬) ; ಕಂಕಣವನು ಕಾಲಿಗಂದುಗೆಯನು ಕೈಗಂಕಿಸುತಂಬುಜಾಕ್ಷಿಯರು (ಕುರಾಸಾಂ. ೩೧–೭). ೮. ಸೇರಿ ಹೋಗು : ಅಹಂಕೃತಿಯ ಪಾಶವನು ಹಱಿದಿಹಪರವಿರಾಗದಲಿ ಅಂಕಿಸಿದುದೀ ತನ್ನ ಮನವು (ನಿಭಾಗ. ೬–೧೦–೪೦). ೯. ಸ್ತೋತ್ರಮಾಡು ; ಹೊಗಳು : ಪಾಠಕರು ಭಟ್ಟರುಗಳಂಕಿಸಲು (ಬಸಪು. ೨೬–೭) ; ಜಯ ಜಯಯೆಂದು ಪಾಠಕಾದ್ಯರನೇಕವಿಧದೊಳಂಕಿಸಿದರಾಗಳ್ (ಪದ್ಮರಾ. ೧೧–೧೮೭). [ಅಂಕ₂ + –ಇಸು₃]

**ಅಂಕಿಸು₂** (ಕ್ರಿ). ಬಳಿ ; ಲೇ ಪಿ ಸು : ಕುಂಕುಮದೊಳ್ಳುಡಿವೆರೆದಿರ್ದ ಕಮ್ಮೆಣ್ಣೆಯ ಪಂಕವನುತ್ತಮಾಂಗದೊಳು ಅಂಕಿಸಿಕೊಂಡಿರ್ದಳವಳು (ಕುರಾಸಾಂ. ೩೩–೯೨). [ಅಂಕೆ₂ (< ಅಣ್ಕೆ) + –ಇಸು₃]

**ಅಂಕಿಸೆಟ್ಟಿ** (ನಾ). ಒಬ್ಬನ ಹೆಸರು : ವರಿಸ ನಿಬಂಧಿಯಾಗಿ ಕೊಡುವ ಪಡಿ . . . ಪಟ್ಟಣಸಾಮಿ ಅಂಕಿಸೆಟ್ಟಿ ಮಾಳಿಸೆಟ್ಟಿ ಪ ೩ (ಎಕ. II, ೨೩೫–೧೯ ; 1185); ಶ್ರೀಬಾಳಚಂದ್ರ ದೇವರ ಗುಡ್ಡ ಅಂಕಿಸೆಟ್ಟಿ ಅಭಿನಂದನ ದೇವರಂ ಮಾಡಿಸಿದಂ (ಎಕ. II, ೧೯೩–೨ ; 1200). [ಅಂಕಿ₁ + ಸೆಟ್ಟಿ]

**ಅಂಕು₁** (ಕ್ರಿ). ಸೊಟ್ಟಾಗು ; ವಕ್ರವಾಗು : ತಾಱಿದಂಕಿದ ನಱುಂಕಿದ ಕೊ ೦ ಬೊ ಣ ಗಿ ರ್ದ ಪೊಟ್ಟೆವೋದೊಱಗಿದ ವೃಕ್ಷದಿಂದಱಿವುದಾಯೆಡೆಯೊಳ್ ಜಳಮಾಗದೆಂಬುದಂ (ಲೋಕೋಪ. ೫–೪). [~ ಅಂಕ₂ ?]

**ಅಂಕು₂** (ನಾ). ಡೊಂಕಾಗಿರುವುದು. ‘ ಅಂಕುಡೊಂಕು ’ ಪರಾ. [ಅಂಕ₂ + –ಉ₁]

**ಅಂಕು₃** (ನಾ). (ಉಕ) ನಾಟಕದ ಅಂಕ : ಬಾಯ ಬಂಡಾಯ ಅಂಕು ೧ ಪ್ರವೇಶ ೧ (ಬಂಡಾಯ. ೧). [ಸಂ. ಅಂಕ₂]

**ಅಂಕುಡೊಂಕು** (ನಾ). ೧. ನೇರವಾಗಿಲ್ಲದಿರುವಿಕೆ ; ವಕ್ರತೆ : ಅಂಕು-ಡೊಂಕುಗಳು ಯಾರಲ್ಲಿ ಸಿಗುವುದಿಲ್ಲ ? (ಸೇನಾಹ. ೧೦೮). (ಗು). ೨. ವಕ್ರವಾಗಿರುವ. ೩. ರೂಪ ಸರಿಯಾಗಿಲ್ಲದ : ನಾ ನೇ ನೋ ೕ ಬಾಯಿಗೆ ಬಂದಹಾಗೆ ಅಂಕುಡೊಂಕು ಶಬ್ದಗಳನ್ನೇ ಎಳೆದು ಭಜನೆ ಮಾಡುತ್ತೇನೆ (ಪ್ರತಿಬಿಂ. ೯). [ಅಂಕು₂ + ಡೊಂಕು₂]

**ಅಂಕುಪರದೆ** (ನಾ). = ಅಂಕಪರದೆ : ಮುಂದು ಮುಂದು ಕಾಂಡಪಟ ಹಿಂದೆ ಹಿಂದೆ ಅಂಕುಪರದೆ (ನವ್ಯಕಾ. ೩೪). [ಅಂಕು₃ + ಪರದೆ]

**ಅಂಕುರ** (ನಾ). ೧. ಮೊಳಕೆ ; ಅಗೆ. ೨. ಮೈಮೇಲಿನ ಕೂದಲು ; ರೋಮ. ೩. ರಕ್ತ. ೪. ನೀರು. ೫. ಮೊನಚು ; ತುದಿ. ೬. ಗೆಡ್ಡೆ ; ಬಾವು ; ಊತ. [ಸಂ.]

**ಅಂಕುರವಡೆ** (ಕ್ರಿ). ಮೊಳಕೆಯಾಗು ; ಮೊಳೆ ; ಚಿಗುರು : ಅಂಕುರವಡೆದ ಪೂಗಿಡು ವೃಕ್ಷ ಲತೆವೇರ್ಗೆ ಬೆಂಕಿಯು ಹ ರ ಹಿ ದ ೦ ತಾ ಯ್ತು (ಮೋಹತ. ೨೮–೨೦). [ಅಂಕುರ + ಪಡೆ₁]

**ಅಂಕುರವೇಱು** (ಕ್ರಿ). ರೋಮಾಂಚವಾಗು ; ಮೈನವಿರೇಳು ; ಪುಲಕಿತವಾಗು : ಲೋಚನಯುಗಂ ನೀರೇಱೆ ಮೈಯೆಲ್ಲವಂಕುರವೇಱಲ್ (ಪಂಪಾಶ. ೧೮). [ಅಂಕುರ + ಏಱು₁]

**ಅಂಕುರಾರ್ಪಣ** (ನಾ). ೧. ಅಗೆ ಹಾಕುವುದು ; ಉತ್ಸವಾಂಗವಾಗಿ ಮೊಟ್ಟಮೊದಲು ಧಾನ್ಯಗಳನ್ನು ಮೊಳೆಯ ಹಾಕುವ ಶುಭಕರ್ಮ. ೨. ಪ್ರಾರಂಭ. ಅಂಕುರಾರ್ಪಣ ಮಾಡು = ಪ್ರಾರಂಭಿಸು. [ಅಂಕುರ + ಅರ್ಪಣ]

**ಅಂಕುರಿತ** (ಗು). ೧. ಮೊಳಕೆಯಾದ ; ಚಿಗುರಿದ. ೨. ತಲೆದೋರಿದ ; ಉದ್ಭವಿಸಿದ. [ಸಂ.]

**ಅಂಕುರಿಸು** (ಕ್ರಿ). ೧. ಮೊಳೆ ; ಮೊಳಕೆಯಾಗು : ಇಳೆಯೊಳಂದಂಕುರಿಸಿ ಹರಿತ್ಕುಳದೊಳ್ ವರ್ಧಿಸಿಯೆ ನೀಳ್ದು ಗಗನಕ್ಕಸುಹೃತ್ಕುಳನಾರೀ [ನಯನಾಂ]ಬುವೆ ಬೆಳಸಿದುದೆನೆ ಕೀರ್ತಿವಲ್ಲಿಯಂ ಸತ್ತಿಗನಾ (ಗದಾಯು. ೧೦–೭) ; ಶಿವನ ದಯೆಗೆ ಚಿತ್ತವಂಕುರಿಸಿ ಬುದ್ಧಿ ಪಲ್ಲವಿಸಿ ಮನಂ ಮುಗುಳೊತ್ತಿ (ಬಸರ. ೨–೬೨) ; ಭೀಮನು ಮಲಗಿದನು ಮೋಹಾತಿರೇಕದ ಬೀಜವಂಕುರಿಸೆ (ಕುವ್ಯಾದ್ರೋ. ಪರಿ. ೨೮೨). ೨. ಚಿಗುರು ; ಚಿ ಗು ರಿ ಸು : ಪೊಸತಲರ್ದಂಕುರಿಸಿರ್ದ ಕಲ್ಪಲತೆಯನೆ ಪೋಲ್ತಳ್ (ಆದಿಪು. ೭–೪೭) ; ಕುರವಕವನಪ್ಪಿ ಅಂಕುರಿಸೆಂಬ (ನಂಬಿರ. ೧೪–೩೮). ೩. ಉಂಟಾಗು ; ಕಾಣಿಸಿಕೊ ; ತಲೆದೋರು : ತೆಂಬೆಲರಲೆಪದ ಪೂಲತೆಯೆಂಬಿನಮಂಕುರಿಸೆ ಪುಳಕಂ (ಶಾಂತಿಪು. ೧೦–೭); ಅಂಕುರಿಪುದು ವಿಧಿಯಾ ಕ್ರಿಯಾಸಮಭಿಹಾರದೊಳಂ (ಶಮದ. ೨೩೦) ; ಹರಿಯ ಸಾರಥಿತನದಿ ಜಯವಂಕುರಿಸಿತವರಿಗೆ (ಕುವ್ಯಾಕ. ೮–೧). ೪. ನ ವಿ ರೇ ಳು ; ರೋಮಾಂಚವಾಗು : ಬೇಟದೊಳ್ ಬಿರಿವೊಡಲೊಯ್ಯನಂಕುರಿಸೆ . . . ಕಾಣಲಕ್ಕುಮೊ ಮದೀಯಮನೋರಥಜನ್ಮಭೂಮಿಯಂ (ಪ ೦ ಪ ಭಾ. ೫–೧೪). ೫. ನ ವಿ ರೇ ಳಿ ಸು ; ರೋಮಾಂಚವುಂಟುಮಾಡು : ತುಂಬುರು ನಾರದರೊಂದು ಗೇಯದಿಂಚರಮೆರ್ದೆಯಂ ಪಳಂಚಲೆಯೆ ವೀರಲತಾಂಗಿಯ ಸೋಂಕು ಮೆಯ್ಯೊಳಂ [ಪಾಠಾಂ. ಸೊಂಪನಂ] ಕುರಿಸೆ ನಿರಾಕುಳಂ ಕಳೆದನಾಜಿಪರಿಶ್ರಮಮಂ ಗುಣಾರ್ಣವಂ (ಪ ೦ ಪ ಭಾ. ೧೧–೧೫೫). ೬. ಏಳಿಗೆಹೊಂದು ; ತಲೆಯೆತ್ತು : ಅರಸು ಮುನಿದೂರೊಳಂಕುರಿಸಿರುವದತಿಕಷ್ಟ ಸರಸವಿಲ್ಲದ ಠಾಣ್ಯದಿಂ ಬಾಣದ ಬಿಱುಸು ಲೇಸೆಂದ (ಸರ್ವಜ್ಞ. ೭೩೪). [ಅಂಕುರ + –ಇಸು₃]

**ಅಂಕುಲಗೆ** (ನಾ). ಒಂದು ಊರಿನ ಹೆಸರು : ಧಾರಾಪೂರ್ವಕಂ ಸರ್ವನಮಸ್ಯವಾಗಿ ಆಣನ್ದೂರು ಮೂನೂಱಱ ಬಳಿಯಂಕುಲಗೆಯಯ್ವತ್ತಱೊಳಗಣ[ಬಿ]ಟ್ಟಿಯನ ಕರಂಜಿಗೆಯ[ತೆ]ಂಕವೊಲದಲು (ಎಇ. XXVII, ೭೩–೪೪ ; 1114). [?]

**ಅಂಕುಶ** (ನಾ). ೧. ಆನೆಯನ್ನು ನಡಸುವಾಗ ಅದನ್ನು ಹದ್ದಿನಲ್ಲಿಡಲು ಉಪಯೋಗಿಸುವ ಆಯುಧ ; ಸೃಣಿ. ೨. ಮಲ್ಲಯುದ್ಧದ ಒಂದು ಪಟ್ಟು : ಬಾಹುದಣೆ ಖಮ್ಮರಿ ಕತ್ತರಿ ಖೋಡವಂಕುಶಂ ಸಸಿಕುವೆನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (ಚಂದ್ರಪು. ೫–೭೮).

೩. ಒಂದು ಗುರುತು : ಎಂದಿಂತು ನಾಲ್ಕು ದಿಕ್ಕಿನೊಳಂ ಅಂಕುಶಮಂ ದೊಡೆ ಕ್ರೋಂಕಾರಮಂ ಬರೆವುದು (ಪ್ರತಿಷ್ಠಾ. ೯–೨೨). [ಸಂ.]

**ಅಂಕುಶಚಾರಣ** (ನಾ). ಅಂಕುಶದಿಂದ ಆನೆಯನ್ನು ನಡಸುವುದು : "ಅಂಕುಶ(ವಾ)ಚಾರಣಮಂ ಯಾತಮೆಂಬುದು" (ಹಲಾಯು. ೩೭–೬೯). [ಅಂಕುಶ + ಚಾರಣ]

**ಅಂಕುಶಹಾಕು** (ಕ್ರಿ). ತಡೆಮಾಡು ; ಅಡ್ಡಿಪಡಿಸು : ನೀನು ಈ ಹೊಸ ಸುದ್ದಿಯನ್ನು ನನಗೆ ಹೇಳಿ ನನ್ನ ಪ್ರಯಾಣಕ್ಕೆ ಅಂಕುಶಹಾಕಿ ಬಿಟ್ಟೆ (ರೂಢಿ). [ಅಂಕುಶ + ಹಾಕು (< ಪಾಯ್ಯು$_1$)]

**ಅಂಕುಶಿ** (ನಾ). ಅಂಕುಶ ಹಿಡಿದವನು ; ಮಾವುತ ; ಮಾವಟಿಗ. [ಸಂ. ಅಂಕುಶಿನ್]

**ಅಂಕುಶೀ** (ನಾ). ಹಿಂದಿನ ಕಾಲದಲ್ಲಿ ಪ್ರಚಾರದಲ್ಲಿದ್ದ ರೂಪಾಯಿ ನಾಣ್ಯಗಳ ಹದಿನಾರು ಬಗೆಗಳಲ್ಲಿ ಒಂದು : ಬ್ರಿಟಿಶ ಸರಕಾರದ ಆಮಲು ಆದ ಬಳಿಕ ಸಹ ಸನ್ ೧೮೪೦ ರ ವರೆಗೆ ಹದಿನಾರು ಪ್ರಕಾರದ ರೂಪಾಯಿಗಳು ನಡಿಯುತ್ತಿದ್ದುವು. ಅವು – ೧. ಔರಂಗಾಬಾದಿ ೨. ಬಾಗಲಕೋಟಿ ಅಥವಾ ಮಲ್ಹಾರಶಾಯಿ ೩. ಅಂಕುಶೀ ೪. ಹಲ್ಲಿಶಿಕ್ಕಾ (ಕಭಾಗ. ೨೮೦). [ಸಂ.]

**ಅಂಕುಸ** (ನಾ). ೧. = ಅಂಕುಶ ೧. : ಆನೆಯಂ ಸೇದೆಗೆಡಿಸಿ ತನ್ನ ಬಸಕ್ಕೆ ಮಾಡಿಯೇಱಿಯಂಕುಸಮಂ ಪೊಳೆಯಿಸುತ್ತ ಮರಸಿಯಲ್ಲಿಗೆ ವಂದು (ವಡ್ಡಾರಾ. ೨೯–೧೭) ; ಮನಮೆಂಬಂಕುಸದಿನ್ದಯ್ದಿನೆಯಿಂದ್ರಿಯಗಜಮ ನುಗಿದು (ಸೌಇಇ. XI-i, ೯೭–೩೪ ; 1062). ೨. ಅಂಕುಶದಂತಿರು ವವನು ; ನಿಯಾಮಕ (ಮುಖ್ಯವಾಗಿ ಬಿರುದುಗಳಲ್ಲಿ) : ಪಾಣ್ಬ ರಂಕುಸಂ (ಪಂಪಭಾ. ೧–೧೪೮ ವ) ; ಕಲಿಗಳಂಕುಸಂ ಶ್ರೀವೀರಕಾವ ದೇವರಸರು (ಎಇ. XXVII, ೧೬೧–೨೪ ; 1256). [ಸಂ. ಅಂಕುಶ]

**ಅಂಕುಸವಿಡು** (ಕ್ರಿ). ಅಂಕುಶ ಹಾಕು ; ಅಡ್ಡಿಮಾಡು ; ತಡೆ : ಆರಂಕುಸವಿಟ್ಟೊಡಂ ನೆನೆವುದೆನ್ನ ಮನಂ ವನವಾಸಿ ದೇಶಮಂ (ಪಂಪಭಾ. ೪–೩೦). [ಅಂಕುಸ + ಇಡು$_1$]

**ಅಂಕುಸಸಾರಣೆ** (ನಾ). = ಅಂಕುಶಚಾರಣ : ಎರಡು ಪದಂಗಳಪ ಭ್ರಂಶಕ್ಕೆ–ಅಂಕುಶ ಚಾರಣ–ಅಂಕುಸಸಾರಣೆ (ಶಮದ. ೨೪೯ ಪ್ರಯೋ). [ಅಂಕುಸ + ಸಾರಣೆ$_2$]

**ಅಂಕೂರ** (ನಾ). = ಅಂಕುರ ೧. : ಜನಿಸಿನ ಕರಂಡಗಳ ನೂತನಾಂಕೂರ ಗಳ ವನಜಕುಸುಮಂಗಳಿಂದಲಿ ಪುದಿದ ಭಾಜನಗಳನು ಪಿಡಿದು (ವೆಂಕಾರಾ. ೧–೨೨–೬). [ಸಂ.]

**ಅಂಕೆ$_1$** (ನಾ). ೧. ಆಜ್ಞೆ ; ಅಪ್ಪಣೆ : "ನೆಮ್ಮುಗೆಯಾಜ್ಞೆಯೊಳ ಗಂಕೆಯು" (ಶಬ್ದಮಂ. ೮೧) ; ಪಾಂಡವರಂಕೆಯಲಿ ದಳ ಜೋಡಿಸಿತು (ಕುವ್ಯಾಸ. ೧೦–೬೪) ; ಅಂಕೆಯಿಂದರ್ಜುನಂಗಂದು ಯಾದವಸೈನ್ಯಮಂ ಕೂಡಿಕೊಟ್ಟು . . . ಪಂಕರುಹಲೋಚನಂ ಪೊಱಮಟ್ಟನು (ಜೈಮಿಭಾ. ೮–೧೩). ೨. ಅಧೀನ ; ಹಿಡಿತ ; ಹತೋಟಿ : ಅಂಕದೊಳ್ ಬಳಿಕಿಂದ್ರ ಜಿತುವಿನುರುಬ್ರಹ್ಮಾಸ್ತ್ರದಂಕೆಯಿಂ ನಿಂದು (ಜೈಮಿಭಾ. ೧೮–೬) ; ಅ ವ್ಯಾಜದೆ ಅಂಕೆಯಲ್ಲಿಡಲನಿಬರೊಂದಾಗಿ ಪಿಡಿದವನ ಶಂಕಿಸದೆ ಮರ್ದಿಸಿ (ಪರಶು. ೪–೨೮) ; ಅಂಕುಶದಿಂದ ಆನೆಯನ್ನು ತನ್ನ ಅಂಕೆಯೊಳಗೆ ಇಟ್ಟುಕೊಳ್ಳುತ್ತಾನೆ (ಮುಂಬಯಿ. ೪–೨೪. ಕಿ) ; ಅರಸನ ಅಂಕೆಯಿಲ್ಲ ದೈವದ ಕಾಟವಿಲ್ಲ (ಗಾದೆ) ; ಅಂಕೆಯಿಲ್ಲದ ಕಪಿ ಲಂಕೆಯನ್ನು ಸುಟ್ಟಿತು (ಗಾದೆ). ೩. ಬೆದರಿಕೆ ; ಬಲಾತ್ಕಾರ : ಬರೆಸಿ ಇಟ್ಟು ಇದ್ದ ಕಾಗದಕ್ಕೆ ಅಂಕೆಯಲ್ಲಿ ವಂದು ಗುರ್ತು ಹಾಕಿಸಿಕೊಂಡದ್ದೇ ಹೊರ್ತು (ರಾಜೇಂದ್ರ. ೧೯). ೪. ದರ್ಪ ; ಠೀವಿ : ಕಟ್ಟುಬ್ಬಟೆಯ ಕಾದಾಳ್ಗಳ್ ಬೆರಸಂಕೆಯಿಂ ಬೀದಿವರಿದು ನುರ್ಗಿವರ್ಪ ಸೌಮಿತ್ರಿಯಂ ನೆಟ್ಟನೆ ಕಂಡು (ರಾಮಾಶ್ವ. ೯೭–೨೧). ಅಂಕೆಮಾಡಿಕೊ = ಅಧೀನ ಮಾಡಿಕೊ : ಉಪದ್ರಪಡಿಸಿ ಗ್ರಾಮಗಳನ್ನು ಅಂಕ್ಕೆ[ಕೆ]ಮಾಡಿಕೊಂಡು ಮತ್ತು ನಾನಾ ಬಗೆ ಕಿರು ಕುಳ ಉಪದ್ರಗಳ ನಡಸುವದಾಗಿ ಕೇಳಪಟ್ಟುಯಿಧೀತು (ಮೈಆರಿ. ೧೯೩೪, ೧೬–೧೦ ; 1762). [~ ಅಂಕ$_2$ ?]

**ಅಂಕೆ$_2$** 'ಅಣ್ಕೆ' ನೋ.

**ಅಂಕೆ$_3$** 'ಆನ್ಕೆ' ನೋ.

**ಅಂಕೆ$_4$**, ಅಂಕೆ$_2$ (ನಾ). ೧. ಸಂಖ್ಯೆಯನ್ನು ಬರೆಹದಲ್ಲಿ ತೋರಿಸುವ ಚಿಹ್ನೆ ; ಅಂಕ : ೫೪೯ ಎಂಬ ಸಂಖ್ಯೆಯಲ್ಲಿ ಮೂರು ಅಂಕೆಗಳಿವೆ (ರೂಢಿ). ೨. ಎಣಿಕೆ ; ಲೆಕ್ಕ : ಇಂದಿಗೆಂಟನೆಯ ದಿನದಲ್ಲಿಯಾ ಕಳ್ಳರಂ ತಂದೀವೆನೆಂದೆಮ್ಮೊಳುಸಿರಿದಂಕೆಯ ದಿನಂ ಬಂದಿತ್ತು (ಸಮ್ಯಕೌ. ೨–೯೦) ; ಅಂಕೆ ತಿಳಿಯದವ ಮುಂಕಗಿಂತ ಕಡೆ (ಗಾದೆ). ೩. ಅಳತೆ : ಖಂಡುಗ ದಂಕೆ (ಸ್ಯಾಂಡರ್). ೪. ವಿವರ (?) : ಅಂಕೆಯಿದು ಪಾರ್ಥಿವರ ವಿಭವಾ ಲಂಕೃತಿಯನದನೇನ ಹೇಳುವೆನಂಕವಿದು (ಕುವ್ಯಾಆ. ೧೩–೭) ; ಅಗಳಾ ಳ್ವೇರಿ ಕೊತ್ತಳ ಹುಲಿಮುಖದೊಳು ಜಗಳದಂಕೆಯ ಬಲ್ಲ ಭಟರ ಮಿಗೆ ಬಲಿದು (ಕಂನವಿ. ೧೧–೧೪೯) ; ಶಂಕರನು ಷಣ್ಮುಖಗೆ ಚಿತ್ತಿನ ಅಂಕಿತದ ಕುರುಹುಗಳ ಲಕ್ಷ್ಯವ ಅಂಕೆಯೆಲ್ಲವ ಹೇಳಿ (ಜ್ಞಾನಸಿಂ. ೧೮–೯೩). ೫. ಅಭಿಪ್ರಾಯ : ಮಡಸೋಂಕಂ[ಕಿಂ] ಮನದಂಕೆಯಂ ತಿಳಿದು . . . ಪವನಂ ಜಯಾಶ್ವನೆನಸುಂ ವಿಭ್ರಾಜಿಸಿತ್ತೋಜೆಯಿಂ (ಕುಸುಮಾ. ೮–೬೩). ೬. ಗುರುತು ; ಕುರುಹು : ನೋಡೆ ವಿಭ್ರಾಂತಿಯೆಂಬಾ ಅಂಕೆಯಂ ಪೇಳ್ವುದು – "ಆವ ಬಗೆಯಿಂ ಭ್ರಾಂತಿಯೆಂಬ ಕುಱು ಪಾದುದು" (ಮನೋವಿ. ೪–೭, ಟೀಕು). **ಅಂಕೆ$_2$** : ೧. ಈ ಪುಟದ ತುಂಬ ಅಂಕಿಗಳೇ ಇವೆ (ರೂಢಿ). [ಸಂ. ಅಂಕ]

**ಅಂಕೆಗ** (ನಾ). ಗುರುತು ಉಳ್ಳವನು : ಮಿಗದ ಅಂಕೆಗ (= ಚಂದ್ರ) (ಕಿ). [ಅಂಕೆ$_4$ + –ಗ$_1$]

**ಅಂಕೆಗೆಯ್** (ಕ್ರಿ). ಗುರುತುಮಾಡು : ತರುತತಿಯೊಳ್ ತ್ರಿಲೋಚ ನಮಿದಿಂದರವಿಂದನಿವಾಸನಟ್ಟಿಯಿಂ ಸರಳತಳಾಂಗುಳಿತ್ರಿತಯದಿಂ ಫಲ ವಕ್ತ್ರದೊಳಂಕೆಗೆಯ್ದು ತತ್ಕರಕಪುಟಾಂಬುವಂ ಪುದಿದಂ (ಕುಸುಮಾ. ೯–೨೬). [ಅಂಕೆ$_4$ + ಗೆಯ್$_1$ (< ಕೆಯ್$_1$)]

**ಅಂಕೆಗೇಡು** (ನಾ). ಒಂದು ಊರಿನ ಹೆಸರು : ಪೆರ್ವ್ವಯಲ್ಪನ್ನೆರಡಱ ಕಿಱುದೆಱೆ ಬಿಟ್ಟಯುಮುಮಂ ಕಾದು ಪರಿಹಾರಂ ಬಿಟ್ಟಂಕೆಗೇಡು ಕಲ್ನಾಡು (ಮೈಆರಿ. ೧೯೩೧, ೭೪–೮೮ ; 1053). [?]

**ಅಂಕೆ[ಕೆ]ಟಂಕೆ** (ನಾ). = ಅಂಕಟಂಕ : ಕವಿಳಾಸಪುರದಲ್ಲಿ ಸುಂಕ ಸಾದ ತಳಸಾರಿಗೆ ಬಟ್ಟೆಯ ಬಾಧೆ ಗ್ರಾಮಬ್ರಯ ನಿಧಿ ನಿಕ್ಷೇಪ ಅಂಕೆ[ಕೆ] ಟಂಕ ಆಣೆ ಗೋಸನೆ ಮುದ್ರೆ ನಾಗೇಶ್ವರಕ್ಕೆ (ಎಇ. XXI, ೧೪–೭೩ ; 1260). [ಅಂಕ$_2$ + ಟಂಕ]

**ಅಂಕೆದೋಱು** (ಕ್ರಿ). ಸೂಚಿಸು ; ಕುರುಹುದೋರು : ಸೋಂಕಿ ಚೆಂದುಟಿಗಚ್ಚಿದಿನೆಯಗೆ ಮುಗ್ಧೆ ತೊಡಂಕು ಸಾಕೆಂದು ಕೈಯೊದರ್ವ ಕಂಕಣದುಲುಹೊಯೆಂಬಂತೆ ಕೊರಳು ಕುಣಿದಂಕೆದೋಱಿದಳು ತಾನಗಳ (ಭರಚ. ೧೧–೧೬). [ಅಂಕೆ$_4$ + ತೋಱು$_1$]

**ಅಂಕೆಮಿಾರು** (ಕ್ರಿ). ಹತೋಟಿ ಮಿಾರು ; ಸ್ವಾಧೀನ ತಪ್ಪು : ಅವನು ತಮ್ಮ ಅಂಕೆ ಮಿಾರಿ ಹೋದನೆಂಬ ಗಾಬರಿ ಶಾಸ್ತ್ರಿಗಳಿಗುಂಟಾಗಿತ್ತು (ನಿರಾತೆ. ೫೯). [ಅಂಕೆ$_1$ + ಮಿಾರು (< ಮಿಾಱು)]

**ಅಂಕೆಯ** (ನಾ). ಒಬ್ಬನ ಹೆಸರು : ಮಹಾಪ್ರಧಾನಂ ಅಂಕೆಯ ದಂಡಾಯಕರ ಅಳಿಯ ಮಾಚಯ ದಂಡಾಯಕರು (ಎಕ. V, ಹಾಸನ. ೧೮೨–೧೨ ; 1314). [< ಅಂಕೆ$_1$ + ಅಯ್ಯ$_1$ ? ]

**ಅಂಕೊ[ಕೋ]ಲೆಗಾಲೆ** (ನಾ). ಅಂಕೋಲೆಯ ಮೆಳೆಯ ಪಕ್ಕದಲ್ಲಿ

ಹರಿಯುವ ಕಾಲುವೆ (?) : ತಸ್ಯ ಸೀಮಾನ್ತರಂ ಪೂರ್ವಸ್ಯಾನ್ದಿಶಿ ತುಬ್ಬಿಲ್ಲಾಗೆ ಅನ್ತೆ ಬನ್ದು ಕಳರಾ ಬಾಯ್ಕಾಲುಳ್ ಕೂಡಿ ಅನ್ತೆ ಬನ್ದು ನೆ[ನೇ]ಱಿಲ್ಲಾಗೆ ಅನ್ತೆ ಬನ್ದು ಕೊಣ್ಣಿನ್ದಗಾಲೆ ಅನ್ತೆ ಅಂಕೊ[ಕೋ]ಲೆಗಾಲೆ ಅನ್ತೆ ಬನ್ದು ತೊಱೆಯುಳ್ ಕೂಡಿತ್ತು (ಮೈಆರಿ. ೧೯೩೬, ೫೩–೨೫ ; ಸು. 700). [ಅಂಕೋಲೆ + ಕಾಲೆ (< ಕಾಲ್)]

**ಅಂಕೊಲ್ಲ** (ನಾ). = ಅಂಕೋಲ. 'ಅಂಕೊಲ್ಲಜಲ' ಪರಾ. [ಸಂ.]

**ಅಂಕೊಲ್ಲಜಲ** (ನಾ). ಅಂಕೋಲೆಯ ರಸ : ಪುಲ್ಲೆಯ ಪಂದಿಯ ನೆಣ ನಂಕೊಲ್ಲಜಲಂ ಮಧುಘೃತಂಗಳೆಂಬಿವನೆಱೆ ಬೇರಲ್ಲಿರಲಾ ತರು ಸದ್ಯಃ ಪಲ್ಲವದಿಂ ಪುಷ್ಪದಿಂ ಫಲಂಗಳಿನೆಸೆಗುಂ (ಲೋಕೋಪ. ೬–೧೯).
[ಅಂಕೊಲ್ಲ + ಜಲ]

**ಅಂಕೋಣೆ** 'ಅಂಕವಣ್ಣಿ$_1$' ನೋ.

**ಅಂಕೋಲ** (ನಾ). ಒಂದು ಬಗೆಯ ಗಿಡ ; ಅಂಕೋಲೆ ಗಿಡ. [ಸಂ.]

**ಅಂಕೋಲಜಲ** (ನಾ). = ಅಂಕೊಲ್ಲಜಲ : ಪಂದಿಯ ನೆಣನಂಕೋಲ ಜಲಂ ದುಗ್ಧಂ ಮಧುಘೃತಂಗಳೆಂಬಿವನೆಱೆ ಮಾಕಂದದ ಮೂಲದೊಳ್ (ಲೋಕೋಪ. ೬–೨೫). [ಅಂಕೋಲ + ಜಲ]

**ಅಂಕೋಲಸಾರ** (ನಾ). ಅಂಕೋಲೆ ಗಿಡದಿಂದ ತಯಾರಿಸಿದ ಒಂದು ವಿಷ. [ಅಂಕೋಲ + ಸಾರ]

**ಅಂಕೋಲೆ,** ಅಂಕವಲೆ (ನಾ). = ಅಂಕೋಲ : ಅನ್ತೆ ಬರೆ ಅಱಿಕ್ಕೋಲೆಯ ಪೆರ್ಮೊಳೆ (ಮೈಆರಿ. ೧೯೨೧, ೧೦–೧೮೧ ; 967) ; ತೆಂಕಣ ದೆಸೆಯೊಳ್ಸೆನ್ದೆಯ ಬಾವಿಯಂಕೋಲೆಯ ಮೆಳೆ (ಸೌಇಇ. XI-i, ೧೧೬–೨೭ ; 1075) ; ಹಾಲೆಯಂಕೋಲೆ ದಿಂಡಂ (ಸೋಮಚ. ೩–೭) ; ಗಂಗ್ವಾಡೀಕೆರೆಗೆ ಬೀಳನೀರಗಾಲ್ವೆ ಅಂಕೋಲೆ ಬಡಗ ವತ್ತು ತೆವರ ಮೇಲೆ (ಎಕ. III, ತಿರುಮ. ೬೩–೮೫ ; 1748). 'ಮುಳ್ಳಂಕೋಲೆ' ಪರಾ. **ಅಂಕವಲೆ** : ತಾರೆ ನೇಱಿಲಂಕವಲೆ ಶರ್ಕರೆ ಪಾಲ್ಮರದಾ ಪ್ರಸೂನಂ (ಖಮದ. ೨–೫೩). [ಸಂ. ಅಂಕೋಲ]

**ಅಂಕೋಲೆವಿತ್ತು** (ನಾ). ಅಂಕೋಲೆಯ ಬೀಜ : ಅಗ್ಗಳಿಕೆಯಿಂ ದಂಕೋಲೆವಿತ್ತು ಮರದೊಳಡಂಗುವೊಲು ಲಿಂಗದಿಂದುದಯವಾದ ಶರಣರ್ ಲಿಂಗಮಂ ಬೆರಸುವರ್ ಸಂತತಂ (ಪಾಸೋಪು. ೧೫–೧೬).
[ಅಂಕೋಲೆ + ಬಿತ್ತು$_2$]

**ಅಂಕ್ಯ** (ಗು). ೧. ಗುರುತಿಸಲು ಯೋಗ್ಯವಾದ. ೨. ಎಣಿಸಬಹುದಾದ. (ನಾ). ೩. ಒಂದು ಬಗೆಯ ಸಣ್ಣ ಮದ್ದಳೆ. [ಸಂ.]

**ಅಂಗ$_1$** (ನಾ). ೧. ರೀತಿ ; ವಿಧ ; ಪ್ರಕಾರ : ಲಿಂಗಸಂಗದಂಗವಿದೆನುತಂ ಜಂಗಮವಿದಱಿಂದಂ ಮಿಗಿಲೆನುತಂ (ದೀಕ್ಷಾಬೋ. ೧೧೧–೩) ; ವೀರ ರಂಗವನೆತ್ತಬಲ್ಲರು ಹಾರುವರು (ಕುವ್ಯಾದ್ರೋ. ೫–೩೮) ; ದೇವೋತ್ತುಂಗ ಕಾಯದಿರೆ ಉಳಿವಂಗವನ್ನು ಕಾಣೆವಮ್ಮ (ವಾದಿಕೀ. ೧–೧೧೧–೧). 'ಹಲವಂಗ' ಪರಾ. ೨. ತರ; ಯೋಗ್ಯ: ಜನಕಾಜ್ಞೆ ಮಿಾಱಲಂಗಮೆ ತನುವಿಂತವರೊಡವೆಯಾಗಿ ಸಲ್ಗೆಮ (ಕಾದಂಉ. ೨೬೩) ; ಸಂಪ್ರತಿಯ ನುಡಿ ತನಗಂಗವಲ್ಲೆಂದ (ಕುವ್ಯಾದ್ರೋ. ೧–೩೧) ; ಹೆಂಗುಸಿವಳಿವಳಸುವ ನುಚ್ಚುವುದಂಗವೇ ಕ್ಷತ್ರಿಯರಿಗೆ (ತೊರರಾ. ೧–೧೧–೯).
[ದೇ. ? ‖ ತೆಲು. ಅಂಗು = ವಿಧ, ರೀತಿ]

**ಅಂಗ$_2$** (ನಾ). ೧. ದೇಹದ ಒಂದು ಭಾಗ ; ಅವಯವ. ೨. (i) (ಯಾವುದಾದರೊಂದರ) ಭಾಗ ; ಅಂಶ. 'ಚತುರಂಗ', 'ಪಂಚಾಂಗ', 'ಷಡಂಗ', 'ಸಪ್ತಾಂಗ', 'ಅಷ್ಟಾಂಗ', 'ದಶಾಂಗ' ಪರಾ. (ii) ಯಾವುದಾದರೊಂದು ಮುಖ್ಯ ವಿಷಯಕ್ಕೆ ಪೂರಕವಾದ ಅಥವಾ ಸಹಾಯಕವಾದ ಶಾಸ್ತ್ರ ಅಥವಾ ವಿಷಯ. 'ವೇದಾಂಗ' ಪರಾ. ೩. ಆರು ಎಂಬ ಸಂಖ್ಯೆಗೆ ಸಂಕೇತ. ೪. ಪದ್ಯದ ಒಂದು ಸಾಲು; ಚರಣ : ಏಳೆರಡುಮಾತ್ರೆಗಳು ಚರಣಗಳೋಳಿಯೆರಡಱೊಳಿರ್ಕೆ ಸಂತತವಾಳೆ ನವಲಘುಗಳನೆ ಮೂಱನೆಯಂಗವೆಗ್ಗಳಿಸಿ (ಕವಿಜಿ. ೪–೫೯). ೫. ದೇಹ ; ಶರೀರ. ೬. ಒಂದು ದೇಶದ ಹೆಸರು ; ಆ ದೇಶದ ಜನ ಅಥವಾ ರಾಜ. ೭. [ಜೈನ] ಜೈನಾಗಮದ ಒಂದು ವಿಭಾಗ (ಅಂಗಗಳು ಹನ್ನೆರಡು) : ಅಂತು ಜೈನ ದೀಕ್ಷೆಯಂ ಕೈಕೊಂಡು ಗುರುವಿನನುಮತದಿಂ ದ್ವಾದಶಾಂಗ ಚತುರ್ದಶ ಪೂರ್ವಂಗಳಂ ಕಲ್ತು (ಆದಿಪು. ೧೪–೧೩೯ ವ). ೮. [ವೀಶೈ] ಶುದ್ಧ ಜೀವ : ಲಿಂಗವೆಂದೊಡೆ ನಾದಂ, ಆ ನಾದದ ಅಂಗವೆಂದೊಡೆ ಚಿದ್ಬಿಂದುವಾದ ಜೀವಂ (ಮನೋವಿ. ೨–೩೧ ಟೀಕು). ೯. [ವೀಶೈ] ಗುರುಸೇವೆಯಲ್ಲಿ ಒಂದು ಬಗೆ : ಅಪ್ತ ಅಂಗಸ್ಥಾನ ಸದ್ಭಾವವುಳ್ಳಾತನಾಗಿ . . . ಆ ನಾಲ್ಕು ತೆಱದ ಸದ್ಗುರುಸೇವೆಯೆಂತೆಂದೊಡೆ – ಗುರುವಿಂಗನುಕೂಲ ವೃತ್ತಿಯೆ ಆಪ್ತನೆನಿಪುದು. ಗುರುಪಾದಪ್ರಕ್ಷಾಳನಾದಿಕವೆ ಅಂಗವೆನಿಪುದು (ಮನೋವಿ. ೨–೨೧ ಟೀಕು). [ಸಂ.]

**ಅಂಗಂಗೊಳ್** (ಕ್ರಿ). ಅಂಗೀಕರಿಸು ; ಅವಲಂಬಿಸು : ಆವ ಸ್ಥಲವನಂಗಂಗೊಂಡಿದ್ದರು ಆ ಸ್ಥಲಕ್ಕೆ ತಕ್ಕ ತಕ್ಕ ರೂಪಾಗಿ ಷಡ್ವಿಧಲಿಂಗವನು ಬೆರಸಿಪ್ಪ ಭೇದವನು . . . ತೋಱುವೆವೆಂದು ಚೆನ್ನಬಸವೇಶ್ವರ ದೇವರು ನಿರೂಪಿಸಿದ ವಾಕ್ಯವು (ಚೆನ್ನವ. ೨–೧) ; ಇಂತಪ್ಪ ಸದ್ಭಕ್ತಸ್ಥಲವನಂಗಂಗೊಂಡು ಇಪ್ಪಾತಂಗೆ ಷಡ್ವಿಧಲಿಂಗವು ಹೇಗೆ ಬೆರಸಿರ್ಪವೆಂದಡೆ (ಚೆನ್ನವ. ೫–೪). [ಅಂಗ$_2$ + ಕೊಳ್$_1$]

**ಅಂಗಂದುಂಬು** (ಕ್ರಿ). ಮೈಯೆಲ್ಲಾ ತುಂಬು ; ಅಂಗಾಂಗಗಳಲ್ಲೆಲ್ಲಾ ವ್ಯಾಪಿಸು : ಮೇಲೆ ಮೇಲೀಶ್ವರಂ ಮಲಯಜೋದಕಮನಾ ಕಾಳಿಯಂಗಂದುಂಬಿ ಸೂಸೆ (ಚಿಬಪು. ೪೫–೫೭). [ಅಂಗ$_2$ + ತುಂಬು]

**ಅಂಗಂಬಡೆ,** ಅಂಗವಡೆ (ಕ್ರಿ). ಆಕಾರ ಧರಿಸು; ಮೂರ್ತಿವತ್ತಾಗು : ಶೃಂಗಾರಲಕ್ಷ್ಮಿಯಂಗಂಬಡೆ [ಪಾಠಾಂ. ಅಂಗವಡೆ (ಕ)] ದನೇಕರೂಪದಿಂ ನಿಂದಂತೆ (ಶಬಶಂ. ೧–೭೯ ವ). **ಅಂಗವಡೆ** (ಕ). [ಅಂಗ$_2$ + ಪಡೆ$_1$]

**ಅಂಗಕೊಳ** (ನಾ). (?) : ಚದುರಕಬ್ಬಿಗರಂಗಕೊಳ [ಪಾಠಾಂ. ಖೂಳ] ರೀಶನ ಕೃತಿಯೊಳದು ಲೇಸು ಯಿದು ದೋಷವೆಂಬರೆಮ್ಮಭವಂಗೆ ಯಿದಿರುಂಟೆ (ಗುಭಚ. ೧–೧೫). 'ಪರಮುಕೂಳ' ಪರಾ.
[ಅಂಗ$_2$ + ಕೊಳ$_1$ ?]

**ಅಂಗಕ್ರಿಯೆ** (ನಾ). ದೇಹಕ್ಕೆ ಸಂಬಂಧಿಸಿದ ಉಪಚಾರ : ಅಂಗಾಶ್ರಮವಳಿದು ಲಿಂಗಾಶ್ರಮವಾದ ಬಳಿಕ ಆ ಅಂಗಕ್ಕೆ ಲಿಂಗಾಚಾರವಲ್ಲದೆ ಅಂಗಕ್ರಿಯೆಯೆಂಬುದನಂಗೈಸರು ನೋಡಾ (ಚೆನ್ನವ. ೬–೩).
[ಅಂಗ$_2$ + ಕ್ರಿಯೆ]

**ಅಂಗಗುಣ** (ನಾ). ಶರೀರದ ಸ್ವಭಾವ : ತನುವ ಕರಗಿಸಿ ಹರಿವ ಮನವ ನಿಲಿಸಿ ಅಂಗಗುಣವನೆ ಅಳಿದು ಲಿಂಗಗುಣವನೆ ನಿಲಿಸಿ . . . ಮಹಾದೇವನಾದ ಶರಣರ ಜಗದ ಮಾನವರೆತ್ತ ಬಲ್ಲರು (ಲಿಂಗವ. ೧೨–೪೨).
[ಅಂಗ$_2$ + ಗುಣ]

**ಅಂಗಚಿತ್ತ** (ನಾ). ಯಾರಾದರೊಬ್ಬರಿಗೆ ಪಾರಿತೋಷಿಕವಾಗಿ ತನ್ನ ಮೈಮೇಲಿನಿಂದ ತೆಗೆದುಕೊಡುವ ವಸ್ತ್ರ, ಆಭರಣ ಇತ್ಯಾದಿ : ತನ್ನ ತೊಟ್ಟ ತೊಡಿಗೆಗಳೆಲ್ಲಮನೆನಗಂಗಚಿತ್ತಮನಿತ್ತು (ಕಾದಂಉ. ೩೨೪) ; ಆವಯವದಿಂದಾಗಳ್ ಋಷಿನಿವೇದಕಂಗಿತ್ತನಂಗಚಿತ್ತಮನರಸಂ (ಸುಕುಮಾ. ೮–೪೭) ; ಆಗಳಾ ವಿಯಚ್ಚರಾಧಿರಾಜನತಿಹರ್ಷಚಿತ್ತನಂಗಚಿತ್ತಮನಿತ್ತು (ಪಂರಾಮಾ. ೫–೧೩ ವ) ; ಸಂಪ್ರಥಿತಸಾಹಸನಾದೆ ನೀನೆನೆ ಶಿಥಿಲ ಸಂಶಯನಂಗಚಿತ್ತವನಿತ್ತನಾತಂಗೆ (ಕುವ್ಯಾಉ. ೨–೩) ; ಬಂದು ದೂತರಿಗಂಗಚಿತ್ತವನಿತ್ತು (ನಿಭಾಗ. ೪–೮–೪೦).
[ಪ್ರಾ. ಅಂಗಚಿತ್ತ (< ಸಂ. *ಅಂಗಕ್ಷಿಪ್ತ)]

**ಅಂಗಚೇಷ್ಟೆ** (ನಾ). ದೇಹದ ಅವಯವಗಳನ್ನು ಮನಸ್ಸಿಗೆ ತೋರಿದಂತೆ ಆಡಿಸುವುದು. [ಅಂಗ₂ + ಚೇಷ್ಟೆ]

**ಅಂಗಚ್ಛದನ** (ನಾ). ಮೈಹೊದಿಕೆ ; ಕವಚ. [ಅಂಗ₂+ ಛದನ]

**ಅಂಗಜ** (ನಾ). ೧. ದೇಹದಲ್ಲಿ ಹುಟ್ಟಿದ್ದು. ೨. ಕೂದಲು ; ರೋಮ. ೩. ಮಗ. ೪. ಮನ್ಮಥ. ೫. ಪ್ರೀತಿ (೬). ೬. ರೋಗ (೬). ೭. ರಕ್ತ. ೮. ಇಂದ್ರಿಯ ; ರೇತಸ್ಸು. ೯. ನೀರು : "ಮದನಂ ರೋಮೇಂದ್ರಿಯ ಸುತ ರುಧಿರಂ ಜಲಕಾರುಶಬ್ದಮಂಗಜಮೆನಿಕುಂ" (ನಾನಾಕಂ. ೯೧). [ಸಂ.]

**ಅಂಗಜನ್ಮ** (ನಾ). = ಅಂಗಜಾತ. [ಅಂಗ₂ + ಜನ್ಮ]

**ಅಂಗಜರಾಗ** (ನಾ). ಪ್ರಣಯ ; ಪ್ರೇಮ. [ಅಂಗಜ + ರಾಗ]

**ಅಂಗಜರೂಪು** (ನಾ). ಮನ್ಮಥನಂಥ ಆಕಾರ. [ಅಂಗಜ + ರೂಪು]

**ಅಂಗಜಾತ** (ನಾ). ಮನ್ಮಥ. [ಅಂಗ₂ + ಜಾತ]

**ಅಂಗಜಾರಿ** (ನಾ). ಮನ್ಮಥನ ಶತ್ರು ; ಶಿವ. [ಅಂಗಜ + ಅರಿ₆]

**ಅಂಗಜಾಲ** (ನಾ). ಅಂಗರಕ್ಷಕ ; ಕಾವಲುಗಾರ : ಷಡೂರ್ಮಿಗಳೆಂಬ ಬೇಗಾರಮಂ ಕಳೆದು ಅಂಗಜಾಲನ ಕಣ್ಣ ಮುಚ್ಚಿ ಚಿತ್ರಗುಪ್ತರೆಂಬ ಕರಣಿಕರ ಸಂಪುಟಕ್ಕೆ ಬರಿಸದೆ ಯಮರಾಜನೆಂಬ ಅರಸಿಗೆ ಕೋರನಿಕ್ಕದೆ (ಕೃಷಿಪ್ರ. ೨೯೪). 'ಅಂಗಜಾವ' ಪರಾ.
[ಅಂಗ₂+ ? ॥ ತೆಲು. ಅಂಗಜಾಲಲು=ಅಂಗರಕ್ಷಕರು, ರಾಜಭಟರು]

**ಅಂಗಜಾವ** (ನಾ). ಪಹರೆ; ಸರದಿಯ ಕಾವಲು: ಅಂಗಜಾವದ ತುಳುವ ತಂತ್ರಕ್ಕಧಿಷ್ಠಾಯಕ (ಸೌಇಇ. ೧೯೪೦, ೯೧-೧ ; 12 ನೆಯ ಶತ. ಪೂರ್ವಭಾಗ) ; ಏನು ಕಾರಣ ನೀವು ಬಾಣನ ಬಾಗಿಲ ಕಾಯ್ದಿರಿ ? ಡಿಂಗರಿಗನ ಮನೆಗೆ ಅಂಗಜಾವ [ಪಾಠಾಂ. ಜಾಹವ, ಜಾವಹ]ಕ್ಕೆ ಹೋಗಿದ್ದರೊಳರೆ ಕೂಡಲ ಸಂಗಮದೇವಾ (ಬಸವ. ೭೪೨) ; ಭರದಿಂದವರ್ಗಳ ಬೇಂಟಮನಿರುಳಿಂದು ಪಗಲ್ ವಸಂತನಿರುಳುಂ ಪಗಲುಂ ಸುರಭಿಶರನಂಗಜಾವಂಗರಟಿಗೆ ಮೆಯ್ಯಾಪು ಮೆಱೆಯೆ ಬಿಡದೋಲಗಿಪರ್ (ಯಶೋಚ. ೨-೪).
[ಸಂ. *ಅಂಗಯಾಮ ? ]

**ಅಂಗಜಾವಿಗೆ** (ನಾ). ಸರದಿಯ ಕಾವಲುಗಾರಿಕೆ : ಬಿಟ್ಟ ಕೊಟ್ಟಣ ಹಾಲು ಕೂಡು ಬಿಡಾರ ಅಂಗಜಾವಿಗೆ ಮಾದಾಱಿಕೆ ಅಧಿಕಾರಿಯ ಉಡುಗೊಱೆ ಸೇನಬೋಯಿಕೆ ಬಾದಿನ ವರ್ತನೆ ಅಧಿಕಮಾಸ ಮುಂತಾಗಿ ಯೇನುಳ ಸರ್ವಸ್ವಾಮ್ಯವನೂ ನೀಉ ಆಗುಮಾಡಿಕೊಂಡು . . . ಭೋಗಿಸಿ ಬಹುದು (ಸೌಇಇ. IX–ii, ೪೪೦-೨೬ ; 1419).
[ಅಂಗಜಾವ + –ಇಗೆ]

**ಅಂಗಜಾಹವ** (ನಾ). ಕಾಮಕ್ರೀಡೆ : ಪರಿಯಂಕಮಂ ಸಾರ್ದೊಡಂಗಜಾಹವದೊಳಗಪರಿಮಿತಸುಖಾವಹದ ಸುರತತಂತ್ರದ ಕಲೆಯ ಪರಿವಿಡಿಗಳಂ ತೋಱಿಸುವೆ (ಜೈಮಿಭಾ. ೧೬-೧೧). [ಅಂಗಜ + ಆಹವ]

**ಅಂಗಜೀವಿ** (ನಾ). ದೇಹದ ಸಲುವಾಗಿಯೇ ಜೀವಿಸುವವನು : ಕಂಗಳ ತೂಕ ಲಿಂಗಕ್ಕೆ ಭಾರ ಅಂಗಜೀವಿಗಳ ಕೂಡೆ ನುಡಿವನೆ ಶರಣನು ? ನಡೆ ನುಡಿ ಮುಗ್ಧ, ಗುಹೇಶ್ವರ, ನಿಮ್ಮ ಶರಣನು (ಅವಚಂ. ೩೬೪).
[ಅಂಗ₂ + ಜೀವಿ]

**ಅಂಗಝುಡತಿ** (ನಾ). ಶರೀರದ ಅವಯವಗಳ ತಪಾಸಣೆ; ಶೋಧನೆ: ಈಗ ಇಲ್ಲಿದ್ದವರೆಲ್ಲರ ಅಂಗಝುಡತಿ ಮಾಡುವುದೇ ಉತ್ತಮ ಉಪಾಯವು (ಕಳ್ಳಕಾ. ೪೩). [ಅಂಗ₂ + ಝುಡತಿ]

**ಅಂಗಟೆ** (ನಾ). = ಅಂಕುಶ (ಗ್ಯಾರಿಟ್). [?]

**ಅಂಗಡಿ** 'ಅಂಗಾಡಿ' ನೋ.

**ಅಂಗಡಿಕಾಱ**, ಅಂಗಡಿಗಾಱ (ನಾ). ಅಂಗಡಿಯನ್ನು ಇಟ್ಟಿರುವವನು ; ವರ್ತಕ : ಅಂಗಡಿಗಳು ಸೂಱೆಹೋಹುದ ಮಱೆದೇಳ್ದಂಗಡಿಕಾಱರಾತುರದಿ (ನೇಮಿಸಂ. ೨೧-೮೧) ; ಕೂರಾಳ್ಗಳಂಗಡಿಕಾಱರು ಗಣಿಕೆಯರಾರೋಹಕರು . . . ಕೈಮುಗಿಯೆ (ಭರತೇ. ೨೪-೪೫). **ಅಂಗಡಿಗಾಱ** (೬). [ಅಂಗಡಿ (< ಅಂಗಾಡಿ) + –ಕಾಱ]

**ಅಂಗಡಿಕೇರಿ**, ಅಂಗಡಿಗೇರಿ (ನಾ). ಅಂಗಡಿಗಳೇ ಮುಖ್ಯವಾಗಿ ಇರುವ ಕೇರಿ ; ಅಂಗಡಿಗಳ ಸಾಲು. **ಅಂಗಡಿಗೇರಿ** : ಮಲಯಜದಂಗಡಿಗೇರಿಯೊತ್ತಿಲಿ . . . ಪರಿಮಳದಂಗಡಿಗಳು ಚೆಲುವಿಗೆ ನೆಲೆಯಾಗಿಹವು (ಅಂಜಚ. ೩-೭೬) ; ಬಹುವಸ್ತು ಪರಿಶೋಭಿಪಂಗಡಿಗೇರಿ ಮೆಱೆದುವು (ಕಂಸವಿ. ೧೯-೨೧). [ಅಂಗಡಿ (< ಅಂಗಾಡಿ) + ಕೇರಿ]

**ಅಂಗಡಿಗಾಱ** 'ಅಂಗಡಿಕಾಱ' ನೋ.

**ಅಂಗಡಿಗೇರಿ** 'ಅಂಗಡಿಕೇರಿ' ನೋ.

**ಅಂಗಡಿಚೀಟಿ** (ನಾ). ಅಂಗಡಿಯ ಸಾಮಾನಿನ ಪಟ್ಟಿ (ಉಕ. ೬).
[ಅಂಗಡಿ (< ಅಂಗಾಡಿ) + ಚೀಟಿ₂]

**ಅಂಗಡಿತೆರಿಗೆ** (ನಾ). ಅಂಗಡಿಯ ಮೇಲೆ ಹಾಕುವ ತೆರಿಗೆ (ಮೈಗಜೆ. IV, ೭೬೨). [ಅಂಗಡಿ (< ಅಂಗಾಡಿ) + ತೆರಿಗೆ (< ತೆಱಿಗೆ)]

**ಅಂಗಡಿದಪ್ಪು** (ಕ್ರಿ). ಅಂಗಡಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಬಿಟ್ಟುಬಿಡು. **ಅಂಗಡಿದಪ್ಪದೆ** = ಒಂದು ಅಂಗಡಿಯನ್ನೂ ಬಿಡದೆ : ದೇವರ್ಗ್ಗೆ ಅಂಗಡಿದಪ್ಪದೊನ್ದು ಮಾನ ಲೆಕ್ಕದೆ ಸೊಂಟಿಗೆ ಜೋಳಮಂ ಕೊಟ್ಟರ್. (ಸೌಇಇ. XI–i, ೧೧೬-೩೯ ; 1075).
[ಅಂಗಡಿ (< ಅಂಗಾಡಿ) + ತಪ್ಪು₁]

**ಅಂಗಡಿದೆಱು** (ನಾ). ಅಂಗಡಿಯಿಟ್ಟಿರುವುದಕ್ಕಾಗಿ ಕೊಡಬೇಕಾದ ತೆರಿಗೆ : ಅಂಗಡಿದೆಱು ಮನೆದೆಱು ಗಾಣದ ಯೆಂಣೆ ಮುಂತಾದ ಸರ್ವಆದಾಯಕೆ (ಎಕ. VIII, ಸಾಗರ. ೧೬೩-೫೮ ; 1488).
[ಅಂಗಡಿ (< ಅಂಗಾಡಿ) + ತೆಱು₂]

**ಅಂಗಡಿದೆಱೆ** (ನಾ). = ಅಂಗಡಿದೆಱು : ದೋರಸಮುದ್ರದ ಅಂಗಡಿದೆಱೆಯೊಳಗೆ ಪ್ರೀತಿಯಿಂದಂ . . . ಕೊಟ್ಟ ಗದ್ಯಾಣಂ ೧೫ (ಮೈಆರ. ೧೯೪೩, ೧೯-೫೦ ; 1221). [ಅಂಗಡಿ (< ಅಂಗಾಡಿ) + ತೆಱೆ₃]

**ಅಂಗಡಿಪಟ್ಟಡಿ** (ನಾ). ಅಡಿಗಲ್ಲನ್ನು ಇಟ್ಟುಕೊಂಡು ಕೆಲಸಮಾಡುವ (ಅಕ್ಕಸಾಲೆ ಕಮ್ಮಾರರ) ಅಂಗಡಿಯ ಮೇಲೆ ಹಾಕುವ ತೆರಿಗೆ (?) : ಮನೆದೆರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು. (೧) ಮನೆದೆರಿಗೆ . . . (೧೨) ಅಂಗಡಿ ಪಟ್ಟಡಿ . . . (೧೯) ಕಾದಿಯ ತೆರಿಗೆ (ಮಹಾವಂ. I, ೧೨೪). ಅಂಗಡಿಪಸರ ಹೋ.
[ಅಂಗಡಿ (< ಅಂಗಾಡಿ) + ಪಟ್ಟಡಿ]

**ಅಂಗಡಿಪಸರ**, ಅಂಗಡಿವಸರ (ನಾ). ಅಂಗಡಿಬೀದಿಯಲ್ಲಿ ಅಂದಂದು ಹಸರವಾಗಿ ಇಟ್ಟುಕೊಂಡು ಮಾರುವ ಪದಾರ್ಥಗಳ ಮೇಲಿನ ಸುಂಕ (ಮೈಗಜೆ. IV, ೧೮). **ಅಂಗಡಿವಸರ** : ಮನೆದೆರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು. (೧) ಮನೆದೆರಿಗೆ . . . (೯) ಅಂಗಡಿವಸರ (ಮಹಾವಂ. I, ೧೨೪).
[ಅಂಗಡಿ (< ಅಂಗಾಡಿ) + ಪಸರ]

**ಅಂಗಡಿಬೀದಿ** (ನಾ). ಅಂಗಡಿಗಳ ಬೀದಿ ; ಪೇಟೆ : ಸಮುದ್ರದಂತೆ ನಾನಾರತ್ನವಾಸಭೂತಮಾದ ಅಂಗಡಿಬೀದಿಗಳಿಂ (ಸೌಗಂಧಿ. ೨೮೫-೧೩).
[ಅಂಗಡಿ (< ಅಂಗಾಡಿ) + ಬೀದಿ]

**ಅಂಗಡಿಮುಂಡ** (ನಾ). "ಅಂಗಡಿಯಲ್ಲಿ ಹಣವಿಡುವ ಮೇಜು" (ಅಸಂನಾ. ೧೦). [ಅಂಗಡಿ (< ಅಂಗಾಡಿ) + ಮುಂಡ]

**ಅಂಗಡಿಮುದ್ದು** (ನಾ). (ಕರಾ). = ಅಂಗಡಿಮೂಲಿಕೆ.
[ಅಂಗಡಿ (< ಅಂಗಾಡಿ) + ಮುದ್ದು₁ (< ಮುರ್ದು₁)]

**ಅಂಗಡಿಮನೆ** (ನಾ). ಅಂಗಡಿಯಿರುವ ಮನೆ : ಮನೆಗಳೊಳು ಬಸದಿ

ಗಳೊಳೋದುವ ಮನೆಗಳೊಳು ಕೇರಿಗಳೊಳಂಗಡಿಮನೆಗಳೊಳು (ಬಸಪು. ೫೨-೧೧). [ಅಂಗಡಿ (< ಅಂಗಾಡಿ) + ಮನೆ]

**ಅಂಗಡಿಮಳಿಗೆ** (ನಾ). ಅಂಗಡಿಯಲ್ಲಿ ಮುಂದುಗಡೆ ಸಾಮಾನುಗಳನ್ನು ಮಾರುವುದಕ್ಕಾಗಿ ಇಟ್ಟುಕೊಳ್ಳುವ ಸ್ಥಳ (ಕ). [ಅಂಗಡಿ (< ಅಂಗಾಡಿ) + ಮಳಿಗೆ]

**ಅಂಗಡಿಮೂಲಿಕೆ** (ನಾ). ಅಂಗಡಿಯಲ್ಲಿ ಮಾರುವ ಬೇರು, ನಾರು ಮೊದಲಾದ ಔಷಧವಸ್ತು. [ಅಂಗಡಿ (< ಅಂಗಾಡಿ) + ಮೂಲಿಕೆ]

**ಅಂಗಡಿಯಿಕ್ಕು** (ಕ್ರಿ). ೧. = ಅಂಗಡಿಯಿಡು. ೨. ಅಂಗಡಿಯ (ಬಾಗಿಲ)ನ್ನು ಮುಚ್ಚು (ಉಕ). [ಅಂಗಡಿ (< ಅಂಗಾಡಿ) + ಇಕ್ಕು$_1$]

**ಅಂಗಡಿಯಿಡು** (ಕ್ರಿ). ೧. ಅಂಗಡಿಯನ್ನು ಪ್ರಾರಂಭಿಸು; ವಸ್ತುಗಳನ್ನು ಮಾರಾಟಕ್ಕಾಗಿ ಸಿದ್ಧಪಡಿಸಿಟ್ಟುಕೊ. ೨. ವಸ್ತುಗಳನ್ನು ಹರಡಿಕೊಂಡಿರು; ಪ್ರದರ್ಶಿಸು. [ಅಂಗಡಿ (< ಅಂಗಾಡಿ)+ ಇಡು$_1$]

**ಅಂಗಡಿವಸರ** 'ಅಂಗಡಿಪಸರ' ನೋ.

**ಅಂಗಡಿಸಾಲ** (ನಾ). ಅಂಗಡಿಯಲ್ಲಿ ನಗದು ಹಣ ಕೊಡದೆ ಸಾಮಾನನ್ನು ಕೊಂಡು ಮಾಡುವ ಸಾಲ; ಉದ್ದರಿ: ಪೊಜಬೇಡಂಗಡಿ ಸಾಲವೂರ ಹೊಣೆಯಂ (ಸೋಮೇಶ. ೮೨). [ಅಂಗಡಿ (< ಅಂಗಾಡಿ) + ಸಾಲ$_1$]

**ಅಂಗಡಿಸೂಱೆ** (ನಾ). ಇಡಿ ಅಂಗಡಿಗಳನ್ನೇ ಸೂರೆಮಾಡುವುದು; ಭಾರಿಯ ಕೊಳ್ಳೆ: ಕಲಪಿಕನಾಯಕರ್ಗೆ ಪೊಸಮಾಂಗೊನರಂಗಡಿ ಸೂಱೆಯಂ ಶುಕಾವಲಿಯ ಪದಾತಿಗಿತ್ತು ತನಿವಣ್ಗಳ ಪೊಟ್ಟಣಮಂ (ಅನಂಪು. ೬-೮೫). [ಅಂಗಡಿ (< ಅಂಗಾಡಿ) + ಸೂಱೆ]

**ಅಂಗಡಿಹಚ್ಚು** (ಕ್ರಿ). = ಅಂಗಡಿಯಿಡು. [ಅಂಗಡಿ (< ಅಂಗಾಡಿ) + ಹಚ್ಚು$_1$]

**ಅಂಗಡಿಹಾಕು** (ಕ್ರಿ). ೧. = ಅಂಗಡಿಯಿಡು: ಆವನು ಕಾಗದ ಮಸಿ ಮುಂತಾದ ಒಡಿವೆಗಳ ಅಂಗಡಿಯನ್ನು ಹಾಕಿ (ಮುಂಬಯಿ. ೫-೨೧೮. ಕ). ೨. ಅಂಗಡಿಯ (ಬಾಗಿಲ)ನ್ನು ಮುಚ್ಚು. [ಅಂಗಡಿ$_1$ (< ಅಂಗಾಡಿ) + ಹಾಕು (< ಪಾಯ್ಕು$_1$)]

**ಅಂಗಡಿಹೂಡು** (ಕ್ರಿ) = ಅಂಗಡಿಯಿಡು. [ಅಂಗಡಿ (< ಅಂಗಾಡಿ) + ಹೂಡು (< ಪೂಡು)]

**ಅಂಗಣ** (ನಾ). ೧. ಮನೆಗೆ ಸೇರಿರುವ, ಆವರಣವುಳ್ಳ ಅಥವಾ ಇಲ್ಲದ ಬಯಲು: ಮನೆಯಂಗಣದೊಳ್ ಮನನೊಸೆದಾಡುವ ಮಕ್ಕಳ ವಿನೋದಮಂ ಕಾಣ್ಬ ದಿವಸಮೆಂದಾದಪುದೋ (ಸುಕುಮಾ. ೯-೧೧೧); ನಿಮ್ಮ ಭಕ್ತರ ಮನೆಯಂಗಣ ಪ್ರಯಾಗದಿಂದಧಿಕ ನೋಡಾ (ಮಹದೇ. ೪೦-೪); ಘಟವಾರಿಸಂಭವನ ಅಂಗಣವ ಸಾರಿದಿರಿ ಗಡ (ತೊರೆರಾ. ೫-೩-೮೭). ೨. ಮಧ್ಯಸ್ಥಳ; ಸ್ಥಳ: ಅಮಿತೈಶ್ವರ್ಯದಂಗಣವಾಗಿ ಮಹೇಂದ್ರ ರಮಣಿಯ ಪುರಮೊಪ್ಪುತಿಹುದು (ಅಂಜಚ. ೩-೨); ಗಾಂಧಾರವಿಷಯಾಂಗಣದಿ ನಿತ್ಯಾಲೋಕಪುರವುಂಟಲ್ಲಿ (ಜೀವಂಚ. ೭-೧೧). 'ಅಂಗಳ$_2$' ಪರಾ.

[ ‖ **ತುಳು.** ಅಜ್ಜಣ. ℙ ಓಡಾಡುವ ಜಾಗ, ಪ್ರದೇಶ, ಅಂಗಳ ಎಂಬ ಅರ್ಥದಲ್ಲಿ ಅಂಗಣ ಶಬ್ದ ಸಂಸ್ಕೃತದಲ್ಲಿ ಉಂಟು: ರಾಜಾಂಗಣ, ಸಭಾಂಗಣ, ಸಮರಾಂಗಣ ಇತ್ಯಾದಿಗಳನ್ನು ಹೋಲಿಸಿ. 'ಶಬ್ದಮಣಿದರ್ಪಣ'ದ ಮೇರೆಗೆ, ಅಂಗಣ < ಸಂ. ಅಂಕನ (ಶಮದ. ೨೭೮ ಪ್ರಯೋ); ಇನ್ನೊಂದು ಸೂತ್ರದ ಮೇರೆಗೆ, ಅಂಗಣ ಎಂಬುದು "ತತ್ಸಮ" ಶಬ್ದಗಳಲ್ಲಿ ಒಂದು (ಶಮದ. ೨೯೮ ಪ್ರಯೋ). ಅಂಕಣ, ಅಂಗಣ, ಅಂಗಳ ಈ ಮೂರಕ್ಕೂ ಮೂಲಸಂಬಂಧವುಂಟೆಂದು ತೋರುತ್ತದೆ. ಮೂಲ ಶಬ್ದವು ದೇಶ್ಯವೆ, ಸಂಸ್ಕೃತದಿಂದ ಬಂದದ್ದೆ ಎಂಬುದು ನಿರ್ಧರವಾಗಬೇಕಾಗಿದೆ. ಅಂ-$_0$ (< ಅಗಂ) + ಕಳ ಎಂದು ಅಂಗಳ ಶಬ್ದಕ್ಕೆ ನಿಷ್ಪತ್ತಿ ಹೇಳುವುದೂ ಉಂಟು; "ಅಗಂ" ಎಂಬುದಕ್ಕೆ 'ಅಗ-$_1$' ಪರಾ.]

**ಅಂಗಣವಲಯ** (ನಾ). ಅಂಗಳದ ಸುತ್ತು; ಆವರಣ; ಅದರೊಳಗಿನ ಪ್ರದೇಶ: ಅಂಗಣಕ್ಕೆ- ಅಂಗಣವಲಯ, ಅಂಗಣವಾವಿ, ಅಂಗಣವೆಟ್ಟು (ಶಮದ. ೨೯೮ ಪ್ರಯೋ). [ಅಂಗಣ + ವಲಯ]

**ಅಂಗಣವಾವಿ** (ನಾ). ಅಂಗಳದಲ್ಲಿರುವ ಬಾವಿ: ಅಂಗಣವಾವಿಯೆಂದಚ್ಚಗನ್ನಡದ ಸಮಾಸಮುಂಟು (ಶಮದ. ೨೭೮). [ಅಂಗಣ + ಬಾವಿ]

**ಅಂಗಣವೆಟ್ಟು** (ನಾ). ಅಂಗಳದಲ್ಲಿ ಮಾಡಿರುವ ಆಟದ ಬೆಟ್ಟ; ಕ್ರೀಡಾಶೈಲ: ಅಂಗಣಕ್ಕೆ – ಅಂಗಣವಲಯ, ಅಂಗಣವಾವಿ, ಅಂಗಣವೆಟ್ಟು (ಶಮದ. ೨೯೮ ಪ್ರಯೋ); ಅಂಗಣವೆಟ್ಟುವಂಗಣವಲಯವೆಂಬವು (ಕಬ್ಬಕ್ಕೆ. ೯೬). [ಅಂಗಣ + ಬೆಟ್ಟು$_2$]

**ಅಂಗತ$_1$** (ನಾ). ಅಂತಃಕರಣ; ಕಳಕಳಿ: ಅಂಗತವಿಲ್ಲದ ಸಂಗವು ಅಳಲಿಲ್ಲದ ಹುಯ್ಯಲಂತೆ (ಬಸವ. ೪೫೫). [**ಸಂ.** ಅಂಗತಃ ?]

**ಅಂಗತ$_2$**, 'ಅಂಗತ್ತ' ನೋ.

**ಅಂಗತಂಗನೆ** (ಅ). = ಅಂಗತ್ತ: ಆತನು ಕೈಗಳನ್ನು ಕಟ್ಟಿಕೊಂಡು ಅಂಗತಂಗನಾಗಿ ಬೀಳಲು (ಕೃವಾಕ. ೧೩). [< ಅಂಗತ್ತ + ?]

**ಅಂಗತಕ್ಕಲು**, ಅಂಗತಕ್ಕಲೆ (ಅ). = ಅಂಗತ್ತ (ಕ). **ಅಂಗತಕ್ಕಲೆ** (ಕ). [< ಅಂಗತ್ತ + ?]

**ಅಂಗತಕ್ಕಲೆ** 'ಅಂಗತಕ್ಕಲು' ನೋ.

**ಅಂಗತನೆ** 'ಅಂಗತ್ತನೆ' ನೋ.

**ಅಂಗತಳಕನೆ** (ಅ). = ಅಂಗತ್ತ: ಭೀಮನು . . . ಕೀಚಕನ ನಡುವನ್ನೆಳೆದು ಅಂಗತಳಕನಾಗುವ ಹಾಗೆ ಕೆಡಹಿ (ಕೃವಾವಿ. ೪೫). [< ಅಂಗತ್ತ + ?]

**ಅಂಗತಾಕನೆ** (ಅ). = ಅಂಗತ್ತ: ಬಹಳ ಹಳ್ಳವಾದ ಬಾವಿಯ ನೋಟ, ಮದ್ಯ, ಮಾಂಸ, ಅಂಗತಾಕನೆಯಾದ ನಿದ್ರೆ ಇವಿಷ್ಟನು ಗರ್ಭಿಣಿಯರು ವರ್ಜಿಸುವುದು (ವೈದ್ಯಸಾ. ೪೮೯-೩೬೩ ಟೀಕೆ). [< ಅಂಗತ್ತ + ?]

**ಅಂಗತ್ತ**, ಅಂಗತ$_2$, ಅಂಗಾತ (ಅ). ಮುಖ ಮೇಲೆ, ಬೆನ್ನು ಕೆಳಗೆ ಇರುವ ರೀತಿಯಲ್ಲಿ (ಬೋರಲಾಗಿ ಎಂಬುದಕ್ಕೆ ವಿರುದ್ಧ): ಅಂಗತ್ತವಾಗಿ ಅವಳ ಶವ ತೇಲುತ್ತಾ ಹೊರಟಿತ್ತು (ಮುಳ್ಳಿಹಾ. ೩೧೮). **ಅಂಗತ$_2$**: ಅಂಗತ ಮಲಂಗಿದೋಪಳ (ಮನ್ಮವಿ. ೧೪-೬). **ಅಂಗಾತ**: ಕಡಲೆಲರಿಗೊಡಲೊಡ್ಡಿದರು ಚಾಚುತಂಗಾತ (ಶ್ರೀರಾಮಾ. ೫೪೪-೧೨೪); ಹ್ಯಾಂಗಾರೆ ಕುಣಿಕುಣಿದು ಮಂಗಾಟ ನಡೆದಾಗ ಅಂಗಾತ ಬಿತ್ತೋ, ಹೆಗಲಲಿ ಎತ್ತೋ (ನಾದಲೀ. ೨೪). [?]

**ಅಂಗತ್ತನೆ**, ಅಂಗತನೆ (ಅ). ಮುಖ ಮೇಲೆ, ಬೆನ್ನು ಕೆಳಗೆ ಇರುವ ರೀತಿಯಲ್ಲಿ: ಅವನು ಅಂಗತ್ತನಾಗಿ ಮಲಗಿಕೊಂಡಿದ್ದಾನೆ (ರೂಢಿ). **ಅಂಗತನೆ**: ಮಗು ತೊಟ್ಟಿಲಲ್ಲಿ ಅಂಗತನಾಗಿ ಮಲಗಿಕೊಂಡು ನಿದ್ದೆ ಮಾಡುತ್ತಿದೆ (ರೂಢಿ). [ಅಂಗತ್ತ + -ಅನೆ]

**ಅಂಗದ** (ನಾ). ೧. ತೋಳಿನ ಬಳೆ. ೨. ವಾಲಿಯ ಮಗ. [**ಸಂ.**]

**ಅಂಗದಂಡಿ** (ನಾ). ೧. ಬೆನ್ನುಮೂಳೆ (ಸ್ಯಾಂಡರ್; ಗ್ಯಾರೆಟ್). ೨. ಬ್ರಹ್ಮದಂಡಿ ಗಿಡ (ಓಷಧಿ. ೬). [ಅಂಗ$_2$ + ದಂಡಿ]

**ಅಂಗದಟ್ಟೆ** (ನಾ). ಗೌರವಾರ್ಹರಾದವರ ಪಾದವನ್ನು ತೊಳೆದ ಬಳಿಕ, ತನ್ನ ಮೈಮೇಲಿನಿಂದ ತೆಗೆದು ಅವರ ಪಾದದ ಕೆಳಗೆ ಹಾಸುವ ಬಟ್ಟೆ: ಉತ್ತುಂಗವಿಕ್ರಮನ ಪಾದವನು ಅಂಗನೆಯರು ತೊಳೆದಿರದಂಗದಟ್ಟೆಮಂ ಸಂಗಡಿಸಿದರತಿಮುದದಿಂ (ಅಂಜಚ. ೮-೩೫); ಪಾದವ ತೊಳೆದಂಗದಟ್ಟೆವನಿಕ್ಕಿದರಾದರದಿಂದೊಳಹೊಕ್ಕು (ಭರಚ. ೪-೧೫); ಮಜ್ಜನವಿಷ್ಟರ ಸುರಗಿರಿ ಸುರಪತಿ ಮಜ್ಜನವಳ ಪಾಲ್ಗಡಲೆ

ಮಜ್ಜನಜಲವಮರರು ಸೇವಕರು ಜಿನಮಜ್ಜನ ನಿರ್ವಾಣಮಾಯ್ತು ಅಂಗದಟ್ಟವನಿಟ್ಟು ಶಚಿ ಬಾಲದೊಡಿಗೆಯೊಳ್ ಮಂಗಳಾತ್ಮಕನ ಸಿಂಗರಿಸೆ (ವರ್ಧಚ. ೧೦–೧೦೨, ೧೦೩). [ಅಂಗ$_2$ + ದಟ್ಟ$_1$. ‖ ತೆಲು. ಅಂಗದಟ್ಟಮು = ದೇಹಕ್ಕೆ ಹೊದಿಸುವ ಬಟ್ಟೆ]

**ಅಂಗದಟ್ಟವಿಕ್ಕು** (ಕ್ರಿ). ಪಾದದ ಕೆಳಗೆ ವಸ್ತ್ರವನ್ನು ಹಾಸು: ಉಟ್ಟ ದುಕೂಲದ ಸೆಜಗಿಂದ ಪತಿಗಂಗದಟ್ಟವಿಕ್ಕಿದಳು ಭಕ್ತಿಯೊಳು (ಭರಚ. ೯–೩೩). [ಅಂಗದಟ್ಟ + ಇಕ್ಕು$_1$]

**ಅಂಗದಟ್ಟು** (ನಾ). (ಉಕ) ಲಿಂಗವಂತ ಶರಣರು ಧೋತ್ರವನ್ನು ಕಟ್ಟಿಕೊಳ್ಳುವ ಒಂದು ವಿಶೇಷ ರೀತಿ. [ಅಂಗ$_2$ + ತಟ್ಟು$_3$ ?]

**ಅಂಗದಾಳ** (ನಾ). ಗ್ರಾಮಸೇವಕ (ಗ್ಯಾರಿಟ್). [?]

**ಅಂಗದುಡಿಗೆ** (ನಾ). ಉಡುವ ಬಟ್ಟೆ ಅಥವಾ ತೊಡುವ ಆಭರಣ; ಉಡಿಗೆತೊಡಿಗೆ (ಕಿ). [ಅಂಗ$_2$ + ತುಡಿಗೆ (< ತುಡುಗೆ)]

**ಅಂಗನ** (ನಾ). ೧. ನಡೆಯುವುದು; ನಡಗೆ. ೨. ಅಂಗಳ. [ಸಂ.]

**ಅಂಗನಾಜೀವಿ** (ನಾ). ೧. ಹೆಂಗಸಿನ (ಹೆಂಡತಿಯ) ಸಂಪಾದನೆಯಿಂದ ಜೀವನ ಮಾಡುವವನು. ೨. ನಟ: "ಶೈಲೂಷನಂಗನಾಜೀವಿ ಭರತಂ ನಟ ಶಿಲಾಲಿಯೆನೆ ನಟ್ಟುವಂ" (ಮಂಗರಾ. ೧೧೧–೩). [ಸಂ. ಅಂಗನಾಜೀವಿನ್ (ಅಂಗನಾ + ಜೀವಿನ್)]

**ಅಂಗನೆ** (ನಾ). ೧. ಸುಂದರವಾದ ಅಂಗಗಳುಳ್ಳವಳು; ಹೆಂಗಸು. ೨. ಉತ್ತರ ದಿಕ್ಕಿನ ದಿಗ್ಗಜದ ಪತ್ನಿಯ ಹೆಸರು. ೩. ಕನ್ಯಾರಾಶಿ (ಜಾತತಿ. ಪರಿ. ೩೯). [ಸಂ. ಅಂಗನಾ]

**ಅಂಗನ್ಯಾಸ** (ನಾ). ದೇಹದ ಕೆಲವು ಭಾಗಗಳನ್ನು ಮಂತ್ರಪೂರ್ವಕವಾಗಿ ಮುಟ್ಟಿಕೊಳ್ಳುವುದು. 'ಕರನ್ಯಾಸ' ಪರಾ. [ಅಂಗ$_2$ + ನ್ಯಾಸ]

**ಅಂಗಪಾತ** (ನಾ). ಶರೀರದ ಭಾಗ ಬಿದ್ದುಹೋಗುವುದು. [ಅಂಗ$_2$ + ಪಾತ]

**ಅಂಗಪಾಳಿ** (ನಾ). ಆಲಿಂಗನ; ತಬ್ಬಿಕೊಳ್ಳುವಿಕೆ: 'ಅಂಕಪಾಲಿ' ಪರಾ. [ಸಂ. ಅಂಗಪಾಲಿ]

**ಅಂಗಪೂಜೆ** (ನಾ). ದೇವತೆಯ ಪ್ರತಿಯೊಂದು ಅಂಗವನ್ನೂ ಉದ್ದೇಶಿಸಿ ಮಾಡುವ ಪೂಜೆ. [ಅಂಗ$_2$ + ಪೂಜೆ]

**ಅಂಗಪ್ರದಕ್ಷಿಣ** (ನಾ). (ದೇಹವನ್ನು ನೆಲದ ಮೇಲೆ ಚಾಚಿ) ಉರುಳಿಕೊಂಡು ಪ್ರದಕ್ಷಿಣೆ ಮಾಡುವುದು; ಉರುಳುಸೇವೆ; ದಿಂಡುರುಳಿಕೆ. [ಅಂಗ$_2$ + ಪ್ರದಕ್ಷಿಣ]

**ಅಂಗಪ್ರಭೆ** (ನಾ). ಶರೀರದ ಕಾಂತಿ. [ಅಂಗ$_2$ + ಪ್ರಭೆ]

**ಅಂಗಫಲ** (ನಾ). ಮುಖ್ಯವಾದ ಫಸಲು ಅಲ್ಲದ, ಬೇರೆಯ ಫಸಲು (?): ಗದ್ದೆ ಬೆದ್ದಲು ಮುಕ್ಕಿ ಹಕ್ಕಲು ಬೆಟ್ಟು ತಿಟ್ಟೆ ಕಾನು ಕಾಡಾರಂಭ ಅಂಗೋಡು ಅಂಗಫಲ ನೀರ ದಾರಿ ನಿಧಿ ನಿಕ್ಷೇಪ ಜಲ ಪಾಷಾಣ . . . ಸರ್ವಾಂಗೋಡು ಸಹವಾದ ಭೂಮಿಮನೆಯಂನು (ಎಕ. VIII, ತೀರ್ಥಹ. ೯೮–೬೫; 1668.) 'ಅಂಗಸಸಿ' ಪರಾ. [ಅಂಗ$_2$ + ಫಲ]

**ಅಂಗಭಂಗ** (ನಾ). ಅವಯವಗಳು ಊನವಾಗುವುದು: ಒಂದೊಂದು ಮಗುವಿಗೂ ಒಂದೊಂದು ಬಗೆಯ ಅಂಗಭಂಗ; ಕುಂಟು ಕೆಲವಕ್ಕೆ, ಕುರುಡು ಕೆಲವಕ್ಕೆ (ವಿಳಜೀ. ೩). [ಅಂಗ$_2$ + ಭಂಗ]

**ಅಂಗಭಕ್ತ** (ನಾ). ಅಂತರಂಗಭಕ್ತ (?): ಹಾವ ಬೇಡುವ ಸುತೆಗೆ ಈವಳೆ ನಿಜಮಾತೆ ಭಾವಜಹರನು ತನ್ನಂಗಭಕ್ತಂಗೆ ಈವುದೇ ಮುಕ್ತಿ (ಸರ್ವಜ್ಞ. ೨೪೨). [ಅಂಗ$_2$ + ಭಕ್ತ]

**ಅಂಗಭೇದ** (ನಾ). ೧. ಶರೀರದ ಒಂದು ಅವಯವ. ೨. ಮೈಯ ಒಡೆತ, — ನೋವು. [ಅಂಗ$_2$ + ಭೇದ]

**ಅಂಗಭೋಗ** (ನಾ). ದೇವರ ವಿಗ್ರಹಕ್ಕೆ ಅಭಿಷೇಕವಾದ ಬಳಿಕ ಅಗರು, ಕರ್ಪೂರ, ಕುಂಕುಮಕೇಸರಿ ಇತ್ಯಾದಿಗಳನ್ನು ಲೇಪಿಸುವ ಉಪಚಾರ: ಶ್ರೀ ರಾಮೇಶ್ವರದೇವರ ಮುಂದಣ ಲಕ್ಷ್ಮೀಶ್ವರ ದೇವರ ಅಂಗಭೋಗಕ್ಕಂ ನಿವೇದ್ಯಕ್ಕಂ (ಕಇಅ. ೧–೧–೧೮; 1092); ದೇವರ ಅಂಗಭೋಗ ರಂಗಭೋಗ ಚೈತ್ರ ಪವಿತ್ರ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಂ (ಕಇ. IV, ೧–೧೦೨; 1204). [ಅಂಗ$_2$ + ಭೋಗ]

**ಅಂಗಮುಚ್ಚ** (ನಾ). ದೇಹಕ್ಕೆ ಸಂಬಂಧಿಸಿದ ಗುರುತಿನ ವಸ್ತು; ರುಜುವಾತು: ಅಂಗಮುಚ್ಚವು ಶಿಕ್ಕಿತೀ ದುಪ್ಪಟಿಯ ತೋರಿ ನಿನ್ನನು ಭಂಗಿಕಿಕ್ಕದೆ ಬಿಡುವೆನೆ ಭೂಪತಿಗೆ ಪೇಳಿ (ಸಾರಂಗ. ೧೨–೩). [ಅಂಗ$_2$ + ಮುಚ್ಚ. ‖ ತೆಲು. ಅಂಗಮುಚ್ಚಮು]

**ಅಂಗಮಣಿ** (ನಾ). ೧. ಮದುವೆಯಲ್ಲಿ ವಧುವಿಗೆ ಕೊಡುವ ಪಾತ್ರೆ ಪಡಿಗಗಳು. ೨. ಪ್ರೀತಿ ಗೌರವಗಳನ್ನು ಸೂಚಿಸಲು ಒಪ್ಪಿಸುವ ವಸ್ತುಗಳು: ಕೃಷ್ಣನು ತಂಗುವ ಸಲುವಾಗಿ ಸೊಗಸಾದ ಮಂಟಪವನ್ನು ಕಟ್ಟಿಸಿ ಅಲ್ಲಿ ಅಂಗಮಣಿ ಇಡುವುದಕ್ಕೆ ಬಹುರತ್ನಗಳನ್ನು ಕಳುಹಿಸಿ ಕೊಟ್ಟನು (ಭೀಷ್ಮಚ. ೧೪೫). [?. ‖ ತಮಿ. ಅಙ್ಗಮಣಿ]

**ಅಂಗಮದ** (ನಾ). ಹೆಚ್ಚಾಗಿ ಕುಡಿಯುವುದರಿಂದಾಗಲಿ ಮಿತಿಮೀರಿ ತಿನ್ನುವುದರಿಂದಾಗಲಿ ಉಂಟಾಗುವ ಪ್ರಮಾದ, —ಮೈಮರವು (ಸ್ಯಾಂಡರ್). [?]

**ಅಂಗಮರ್ದ** (ನಾ). ೧. ಮೈಯನ್ನು ನೀವುವವನು; ಮೈಯೊತ್ತುವವನು. ೨. ಸಂಧಿವಾತರೋಗ. [ಸಂ.]

**ಅಂಗಮರ್ದನ** (ನಾ). ಕೈಕಾಲೊತ್ತುವುದು; ಮೈ ಹಿಸುಕುವುದು. [ಅಂಗ$_2$ + ಮರ್ದನ]

**ಅಂಗಮರ್ದನೆ** (ನಾ). = ಅಂಗಮರ್ದನ: ಅಂಗಮರ್ದನೆ . . . ಮೊದಲಾದ ಆಹಾರವಿಹಾರಗಳಿಂದ ವಾತಶಾಂತಿಯಹುದು (ವೈದ್ಯಸಾ. ೩೩ ಟೀಕು). [ಅಂಗ$_2$ + ಮರ್ದನೆ]

**ಅಂಗಮರ್ದಿ** (ನಾ). = ಅಂಗಮರ್ದ. [ಸಂ. ಅಂಗಮರ್ದಿನ್]

**ಅಂಗಮುದ್ರೆ** (ನಾ). ಶರೀರದ ರೀತಿ: ಬೆದರಿದೋಲಿದೆ ಭದ್ರೆ, ನಿನ್ನಂಗಮುದ್ರೆ (ಶ್ರೀರಾಮಾ. ೨೪೪–೪೪೦). [ಅಂಗ$_2$ + ಮುದ್ರೆ]

**ಅಂಗಯ್** 'ಅಂಗೆಯ್' ನೋ.

**ಅಂಗಯಷ್ಟಿ** (ನಾ). ಯಷ್ಟಿಯಂತೆ (ತೆಳ್ಳಗೆ) ಇರುವ ಅಂಗ; ಸೆಳೆಯಂತಿರುವ ಶರೀರ. [ಅಂಗ$_2$ + ಯಷ್ಟಿ]

**ಅಂಗಯಿಸು** 'ಅಂಗವಿಸು' ನೋ.

**ಅಂಗಯ್ಮುಟ್ಟು** (ಕ್ರಿ). ಕೈಮೇಲೆ ಕೈಹಾಕು; ಕೈಮುಟ್ಟಿ ವಾಗ್ದಾನ ಮಾಡು; ಪ್ರತಿಜ್ಞೆ ಮಾಡು: ರಣಧೀರನೆಂಬ ದುಷ್ಟ ಕಳ್ಳನನ್ನು ನಿಮಗೆ ಹಿಡಿದುಕೊಡುವುದಕ್ಕೆ, ಅದು ತಪ್ಪಿದರೆ ಅವನನ್ನು ಕೊಂದುಹಾಯ್ಕಿ ಬಿಡುವುದಕ್ಕೆ, ಅಂಗಯ್ಮುಟ್ಟಿರುವವನು ನಾನು (ಮಂತ್ರಶ. ೩೮–೫). [ಅಂಗಯ್ (< ಅಂಗೆಯ್) + ಮುಟ್ಟು$_1$]

**ಅಂಗಯ್ಸು** 'ಅಂಗವಿಸು' ನೋ.

**ಅಂಗರ$_1$** (ನಾ). ಒಬ್ಬನ ಹೆಸರು: ಅವರೊಡನಡದ್ದುರ್ಗ ಸ್ವತ್ತ್ರೋನ್ ಅಙ್ಗರನೂ (ಎಕ. VIII, ಸೊರಬ. ೧–೭; 792 ?). [?]

**ಅಂಗರ$_2$** (ನಾ). ೧. ಕೆಂಡ: "ಅಂಗಾರನಾಮದೊಳಗಂಗರಂ ಕೆಂಡವಿಂಗಳವೆನಿಪುದು" (ಶಬ್ದಮಂ. ೧೨). ೨. "ಅಮಕೀರೆ ಗೆಡ್ಡೆ" (ಶಾಮಣ್ಣ). [ಸಂ. ಅಂಗಾರ]

**ಅಂಗರಂಗಭೋಗ** (ನಾ). ಅಂಗಭೋಗ ಮತ್ತು ರಂಗಭೋಗ: ಸರ್ವ್ವಸ್ವಾಂಮ್ಯವನು ಆಗುಮಾಡಿಕೊಂಡು ವೀರಭದ್ರದೇವರ ಅ[ಅ]ಂಗ

ರಂಗ ಭೋಗಕೆ ಸಲುದು (ವೈಆರಿ. ೧೯೪೬, ೧೮–೨೩ ; 1488).
[ಅಂಗ$_2$ + ರಂಗ$_1$ + ಭೋಗ]

**ಅಂಗರಂಗವೈಭೋಗ** (ನಾ). = ಅಂಗರಂಗಭೋಗ : ಈ ನಂಜನಗೂಡಿನ ಶ್ರೀ ನಂಜುಂಡೇಶ್ವರ ಸ್ವಾಮಿಯವರ ಮಹಾಸನ್ನಿಧಾನಕ್ಕೆ ಅಂಗ ರಂಗವೈಭೋಗ ಪಡಿತರ ದೀಪಾರಾಧನೆ . . . ಕಟ್ಟಳೆಗಳಿಗೋಸ್ಕರವಾಗಿ (ಬಿರುಗಂ. ೨೭–೬). [ಅಂಗ$_2$ + ರಂಗ$_1$ + ವೈಭೋಗ]

**ಅಂಗರಕ್ಕ**, ಅಂಗರಿಕ, ಅಂಘರಿಕ (ನಾ). ೧. ಮೈಗಾವಲಿನವನು ; ಅಂಗರಕ್ಷಕ : ಅಂಗರಕ್ಕರ ನೆರದೊಳ್ . . . ಬರೆ ನೃಪಾಂಗನೆಯರ್ಕಳ್ (ಶಾಂತಿಪು. ೧೦–೧೪೮) ; ಬಲವಕ್ಕದೆಡವಕ್ಕದಂಗರಕ್ಕರ ನೆರವಿಯುಮ ನೀಕ್ಷಿಸುತ್ತುಂ (ವರ್ಧಪು. ೯–೬೦ ವ). ಬೆಜ್ಜರುಮುಜ್ಜರುಮಂಗರಕ್ಕರುಂ . . . ಇರ್ಕೆಲಂಗಳೊಳ್ ಬರೆ ನಡೆತಂದರಂದಿರದೆ ರಾಜಕುಮಾರರ್ (ಪುಷ್ಪಪು. ೮–೪೨). **ಅಂಗರಿಕೆ** : ೧. ಸಂಗರದೊಳ್ ಜವನೊಕ್ಕಲಿಕ್ಕ ದನ್ನಿರೆ ನೆಜಿ ಮಾಡಿದಂಗರಿಕ ಕಲ್ಲೆಯನಾಯಕನಂ (ಎಕ. VII, ಹೊನ್ನಾಳಿ. ೫೧–೫ ; 1195). ೨. ಕಾವಲುಗಾರ : ದವಸಿಗರಿಗೆ ಗ ೬ ಅಂಗರಿಕಂಗೆ ಗ ೩ ಕುಂಭಾರಂಗೆ ಗ ೧ (ಎಕ. III, ಮಂಡ್ಯ. ೧೨೨–೬೫ ; 1237). **ಅಂಘರಿಕೆ** : ೨. ಅಂ[ಅಂ]ಘರಿಕರ ಆಳು ೯ಕ್ಕಂ ಗ ೩೬ ಅ ನಾಯಕಂಗೆ ಗ ೧೦ ಹೊಳೆಯ ತಳೆಯ ನಾರಸಿಂಗೇಶ್ವರ ದೇವರ ಅಂಘರಿಕರ ಆಳು ೩ ಕ್ಕಂ ಗ ೧೨ (ಎಕ. III, ತಿರುಮ. ೧೧೧–೮೫ ; 1276).
[ಸಂ. ಅಂಗರಕ್ಷ]

**ಅಂಗರಕ್ಕೆ** (ನಾ). ಮೈಗೆ ರಕ್ಷಣೆ ಕೊಡುವ ವಸ್ತು ; ಮೈಗಾಪು ; ಕವಚ : ಸಂಗರಕ್ಕೆ ತಾನಂಗರಕ್ಕೆ ರಘುಜಂಗೆಂಬಂತೆ . . . ಇರ್ದನುಜ ದಂಗದಂ (ಪಂಪರಾಮಾ. ೧೪–೩೭). [ಅಂಗ$_2$ + ರಕ್ಕೆ]

**ಅಂಗರಕ್ಷ** (ನಾ). ೧. ಅಂಗರಕ್ಷಕ. ೨. ಅಂಗವನ್ನು ರಕ್ಷಿಸುವ ವಸ್ತು ; ಕವಚ : "ಕವಚಮುರುಪತತ್ರಂ ಜಗರಮಂಗರಕ್ಷಂ ಕಟಕ ಮೆನೆ ಜೋಡು" (ಮಂಗರಾ. ೮೭–೩೧). [ಸಂ.]

**ಅಂಗರಕ್ಷಕ** (ನಾ). ಮೈಗಾವಲಿನವನು : ಸಾವಾಸಿಗಳಿಗೆಜಿದಂಗರಕ್ಷಕ ರಿಂಗೆಜಿದು (ಬಸಪು. ೫೯–೨೮). [ಅಂಗ$_2$ + ರಕ್ಷಕ]

**ಅಂಗರಕ್ಷಣೆ** (ನಾ). ಶರೀರವನ್ನು ಕಾಪಾಡುವುದು ; ಮೈಗಾವಲು.
[ಅಂಗ$_2$ + ರಕ್ಷಣೆ]

**ಅಂಗರಕ್ಷೆ** (ನಾ). ೧. = ಅಂಗರಕ್ಷಣೆ : ಅರಸು ತನ್ನ ಅಂಗರಕ್ಷೆಗೋಸ್ಕರ ಅನೇಕ ರಾಣುವೆಯನ್ನು ಇಟ್ಟುಕೊಂಡಿದ್ದಾನೆ (ಸ್ಯಾಂಡರ್). ೨. ರಕ್ಷಣೆಗಾಗಿ ಕಟ್ಟಿಕೊಳ್ಳುವ ತಾಯಿತಿ ಮೊದಲಾದ ಕಾಪು ; ರಕ್ಷೆ. ೩. ಮೈಜೋಡು ; ಕವಚ (ಕ). [ಅಂಗ$_2$ + ರಕ್ಷೆ]

**ಅಂಗರಖಾ** 'ಅಂಗರೇಕು' ನೋ.

**ಅಂಗರಗಡ್ಡೆ** (ನಾ). ಅಮುಕೀರೆ (ಕ). [ಅಂಗರ$_2$ + ಗಡ್ಡೆ$_1$]

**ಅಂಗರಬೇರು** (ನಾ). ಅಶ್ವಗಂಧಿಯ ಬೇರು. [ಅಂಗರ$_2$ + ಬೇರು]

**ಅಂಗರವಳಿಗೆ** 'ಅಂಗರವೋಳಿಗೆ' ನೋ.

**ಅಂಗರವೋಳಿಗೆ**, ಅಂಗರವಳಿಗೆ, ಅಂಗರಹೋಳಿಗೆ, ಅಂಗರೋಳಿಗೆ (ನಾ). ಒಂದು ಬಗೆಯ ಭಕ್ಷ್ಯ ; ಕೆಂಡದಮೇಲೆ ಸುಟ್ಟ ರೊಟ್ಟಿ ; ಉಬ್ಬುರೊಟ್ಟಿ : "ಅಂಗರವೋಳಿಗೆಯುಮೆಂದು ಕವಿಗಳ್ ಪೇಟಲ್ಕಂ ಗಾರಸ್ಫೋಟಿಕೆ" (ಕವಿಕಂ. ೨೬೪) ; "ಅಂಗಾರಸ್ಫೋಟಿಕೆಯೆನಲಂಗರ ವೋಳಿಗೆ" (ಚತುನಿ. ೫೯) ; ಪೊಂಗಿರ್ದಂಗರವೋಳಿಗೆಯಂ ಗರಗರನಪ್ಪ ತುಪ್ಪಮಂ (ಪಾರ್ಶ್ವಪು. ೮–೫೩). **ಅಂಗರವಳಿಗೆ** : ಬಿಳಿಯಸೊಜ್ಜಿಗೆಯೊಳಂಗರವಳಿಗೆಯಂ ಮಾಡಿ ಬಳಿಕ ಬೇಯಿಸಿ ನುಗ್ಗುಗೆಯ್ದು ಕರ್ಪೂರ ವುಡಿಯ ತಳಿದು . . . ರೊಟ್ಟಿಯ ಮಾಡಿ (ಸೂಪಶಾ. ೧–೧೫). **ಅಂಗರಹೋಳಿಗೆ** : ಉದಯಿಪ ರಾಕೇಂದುವ ಬಿಂಬದ ಪೋಲ್ವೆಯನಪ್ಪುಕೆಯ್ದು ಬೆಳಗೆಂಪೆನಸುಂ ಪುದಿದಂಗರಹೋಳಿಗೆಗಳನೊದವೆ ಮುದಂ ತಂದು ಬಡ್ಡಿಸಿದರಂಗನೆಯರ್ (ಶಾಂತೀಶ್ವ. ೧೫–೬೩). **ಅಂಗರೋಳಿಗೆ** : ಅತಿ ರಸಂ ಸುಖಿಯಪ್ಪ ಪೋರಣದ ಮುರಿಯಂಗರೋಳಿಗೆಯೆನಿಪ್ಪವಂ . . . ಗಡಣಿಸಿದಳಾಗ (ಚೀರಮು. ೧೦–೨೮). [ಅಂಗರ$_2$ + ಪೋಳಿಗೆ]

**ಅಂಗರಹೋಳಿಗೆ** 'ಅಂಗರವೋಳಿಗೆ' ನೋ.

**ಅಂಗರಾಗ** (ನಾ). ೧. ಮುಖ್ಯವಾಗಿ, ಸ್ನಾನಮಾಡಿದ ಮೇಲೆ ಮೈಗೆ ಪರಿಮಳ ವಸ್ತುಗಳನ್ನು ಲೇಪಿಸಿಕೊಳ್ಳುವುದು ; ಸುಗಂಧ ಲೇಪನ. ೨. ಸುಗಂಧಲೇಪನ ದ್ರವ್ಯ. [ಅಂಗ$_2$ + ರಾಗ]

**ಅಂಗರಾಜ** (ನಾ). ಅಂಗದೇಶದ ಒಡೆಯ ; ಕರ್ಣ.
[ಅಂಗ$_2$ + ರಾಜ]

**ಅಂಗರಿಕೆ** 'ಅಂಗರಕ್ಕ' ನೋ.

**ಅಂಗರುಚ** (ನಾ). [ಛಂದ] ಪಾದದಲ್ಲಿ ಹದಿನಾರು ಅಕ್ಷರಗಳುಳ್ಳ ಒಂದು ಅಕ್ಷರವೃತ್ತದ ಹೆಸರು : ಐದಿರೆ ಭಂಗಳುಮೊರ್ಗುರುವುಂ ಬರಲಂಗರುಚಂ ; ಇದಕ್ಕೆ ಜಗದ್ವಂದಿತ ಎಂದು ಬೇರೊಂದು ಹೆಸರು (ಕೈಪಿಡಿ. ೮೪). [ಸಂ.]

**ಅಂಗರುಚಿ** (ನಾ). ಶರೀರದ ಕಾಂತಿ ; ಕಳೆ : ಅಂದಿನಂಗರುಚಿ ಕಣ್ಣಿಳಿದಾಯ್ತು (ಆದಿಪು. ೩–೩). [ಅಂಗ$_2$ + ರುಚಿ]

**ಅಂಗರುಹ** (ನಾ). ಶರೀರದ ಮೇಲೆ ಬೆಳೆಯುವ ಕೂದಲು, ಉಣ್ಣೆ ಇತ್ಯಾದಿ. [ಸಂ.]

**ಅಂಗರೇಕು**, ಅಂಗರಖಾ, ಅಂಗರೇಖು, ಅಂಗರೇಖೆ (ನಾ). ನೀಳವಾದ ಅಂಗಿ ; ನಿಲುವಂಗಿ (ಕ) : ಕಸೆ ಅಂಗರೇಕು ಬಿಚ್ಚುತ್ತಿದ್ದ (ಮಲ್ಲಿ. ೧೨) ; ಅವರೆಲ್ಲರಿಗೂ ಅಂಗರೇಕು ದಿರಸುಗಳೂ . . . ಸರಪರಾಜುಮಾಡಲ್ಪಟ್ಟಿದ್ದುವು (ಶ್ರೀರಾಯ.೧೧೭). **ಅಂಗರಖಾ** : ನಮ್ಮ ಮನ್ಯಾಗಿನ ಅಂಗರಖಾ ನಿನಗೆ ತೊಡಾಕ್ ಕೊಡತಾವ್ (ಮೋಹಿನಿ. ೪೨). **ಅಂಗರೇಖು** : ಅರಸು ಮಕ್ಕಳಂತೆ ಅಂಗರೇಖು ಮುಂಡಾಸುಗಳನ್ನು ಧರಿಸುತ್ತಿದ್ದುದು ಶಿಷ್ಟ ಸಂಪ್ರದಾಯಸ್ಥರಿಗೆ ಸಮ್ಮತವಿರಲಿಲ್ಲ (ಕಥನಿ. ೨–೩೩೧–೧೯) ; ರಾಣಿಯು ಸ್ಪರ್ಶಮಾಡಿಕೊಟ್ಟ ರೊಟ್ಟಿಯ ಚೂರೊಂದನ್ನು ರುಮಾಲಿನ ತುದಿಯಲ್ಲೊ ಅಥವಾ ಅಂಗರೇಖಿನ ತುದಿಯಲ್ಲೊ ಬಿಗಿದು ಕಟ್ಟಿಕೊಂಡರು (ಝಾರಾಣಿ. ೩೮೮). **ಅಂಗರೇಖೆ** : ತೊಟ್ಟಿದ್ದ ಅಂಗರೇಖೆಯನ್ನು ಬಿಚ್ಚಿ (ಜ್ಯೋತಿರ್ವಿ. ೨೩೬) ; ಒಬ್ಬ ಸಾರ್ವಜನಿಕ ಮನುಷ್ಯನು ತನ್ನ (ಕೋಟ್) ಅಂಗರೇಖೆಯ ಒಂದು ಮುಖಕ್ಕೆ ಖಾದಿಬಟ್ಟೆಯನ್ನು ಇನ್ನೊಂದು ಮುಖಕ್ಕೆ ವಿಲಾಯಿತಿಯ ಸರ್ಜುಬಟ್ಟೆಯನ್ನು ಹಾಕಿಸಿಕೊಂಡಿದ್ದನಂತೆ (ರಾಜ್ಯಶಾ. ೩೦೮).
[← ಹಿಂ. ಅಂಗರಖಾ (< ಪ್ರಾ. ಅಂಗರಕ್ಖ < ಸಂ. ಅಂಗರಕ್ಷ). / **ತೆಲು.** ಅಂಗರೇಕು ; **ತುಳು.** ಅಂಗರೇಕಿ]

**ಅಂಗರೇಖು** 'ಅಂಗರೇಕು' ನೋ.

**ಅಂಗರೇಖೆ** 'ಅಂಗರೇಕು' ನೋ.

**ಅಂಗರೋಳಿಗೆ** 'ಅಂಗರವೋಳಿಗೆ' ನೋ.

**ಅಂಗಲ** 'ಅಗಲ್$_2$' ನೋ.

**ಅಂಗಲಾಚಿಕೆ** (ನಾ). = ಅಂಗಲಾಚಿತನ. [ಅಂಗಲಾಚು + -ಇಕೆ]

**ಅಂಗಲಾಚಿತನ** (ನಾ). ಅಂಗಲಾಚುವಿಕೆ : ಜೀವನದಲ್ಲಿ ನೆಮ್ಮದಿಯೂ ಕಾಂತಿಯೂ ಕಾಣಿಸಬೇಕಾದರೆ ಜನದಲ್ಲಿ ಒಂದು ನೀತಿಸಮುನ್ನತಿ ಇರಬೇಕು. ಆ ನೀತಿ ಕಚ್ಚದೆ ಒದೆಯದೆ ಇರುವ ಅಂಗಲಾಚಿತನವಲ್ಲ. ಅದು ಒಂದು ಬುದ್ಧಿಯ ಎಚ್ಚರಿಕೆಯ ಮತ್ತು ಒಂದು ಎದೆಯ ಗಟ್ಟಿತನದ ಸಂಯೋಗದ ಫಲಿತ (ಮಹಾಗ. ಪೀ. ೬).
[ಅಂಗಲಾಚ್ಚಿ + -ತನ]

**ಅಂಗಲಾಚಿಸು** (ಕ್ರಿ). ೧. ಅಂಗಲಾಚುವಂತೆ ಮಾಡು (ಕ). ೨.

ದೈನ್ಯದಿಂದ ಬೇಡು : ತಾಯಿಯೆಂದು ಬೇಡಿಕೊಳ್ಳುವೆ. ದೇವಿಯೆಂದು ಅಂಗಲಾಚಿಸುವೆ (ದಾದಿ. ೩೩). [ಅಂಗಲಾಚು + –ಇಸು$_3$]

**ಅಂಗಲಾಚು,** ಅಂಗಲಾರ್ಚು (ಕ್ರಿ). ೧. ದುಃಖದಿಂದಾಗಲಿ ಭಯದಿಂದಾಗಲಿ ಕೂಗಿಕೊಂಡು ಅಳು : ಅಂಗಲಾಚುತ್ತಳಲುವುದು . . . ಜಂಗಮಪ್ರಾಣಿಗಳ ಗುಣವೇನಲ್ಲವೋ ಬಸವಾ (ಬಸಪು. ೩೬–೧೪) ; ಆ ಮನೆಗೆ ಕಿಚ್ಚಿಕ್ಕಿಸಲ್ ಧಗಧಗೆಂದುರಿಯಲದ ಕಾಣುತವರು ಅಂಗಲಾಚುತ್ತೆದ್ದು ಬಿದ್ದು ಕೈಕಾಲೊಡೆದು ಮುಂಗಾಣದೋಡುತಿರಲು (ಚಬಪು. ೬–೧೯) ; ತಿಂಗಳೊಳು ನಿಮ್ಮ ರಘುಪುಂಗವನ ಕರೆತರುವೆನಂಗಲಾಚದಿರಮ್ಮ ಮಂಗಳತರಾಂಗಿ (ಹನುಮ. ೮೮). ೨. ದೈನ್ಯದಿಂದ ಬೇಡು ; ಮೊರೆಯಿಡು : ಈ ಕೆಡುವೊಡಲು ಬೀಳಲಿಕಂಗಲಾಚಿದೆ ದೇವ (ತೊರರಾ. ೪–೪–೫೯). **ಅಂಗಲಾರ್ಚು** (ಕ).

[?. ‖ **ತಮಿ.** ಅಙ್ಗಲಾಯ್ ; **ಮಲ.** ಅಙ್ಗಲಾಯ್ಕ ; **ತುಳು.** ಅಂಗಲಾಪು ; **ತೆಲು.** ಅಂಗಲಾರ್ಚು]

**ಅಂಗಲಾಪ** (ನಾ). = ಅಂಗಲಾಪು (ಸ್ಯಾಂಡರ್). [< ಅಂಗಲಾಪು]

**ಅಂಗಲಾಪು** (ನಾ). ದುಃಖ ; ಗೋಳಾಟ.

[← ? **ತಮಿ.** ಅಙ್ಗಲಾಯ್ಪು ; **ತೆಲು.** ಅಂಗಲಾರ್ಪು]

**ಅಂಗಲಾರ್ಚು** 'ಅಂಗಲಾಚು' ನೋ.

**ಅಂಗಲಿಂಗಸ್ಥಲ** (ನಾ). [ವೀಶೈ] ಅಂಗಾಂಗಗಳಲ್ಲೆಲ್ಲಾ ಲಿಂಗದ ಭಾವವೇ ತುಂಬಿರುವುದು (?) : ಈ ಪ್ರಕಾರದಿಂದ ಲಿಂಗನಿಜಜ್ಞಾನವುಳ್ಳ ಪ್ರಾಣಲಿಂಗಿಯ ಸಕಲಾವಯವಂಗಳ ಲಿಂಗಭಾವದಲ್ಲಿ ಮಾರ್ಗವು . . . ಅಂಗಲಿಂಗಸ್ಥಲವೆಂದು ಹೇಳಲ್ಪಡುತ್ತಿದ್ದಿತು (ಕೈವಟೀ. ೨೬).

[ಅಂಗ$_2$ + ಲಿಂಗ + ಸ್ಥಲ]

**ಅಂಗಲು** (ನಾ). (ಉಕ) ನಡು ನಡುವೆ ಸ್ಥಳ ಬಿಟ್ಟಿರುವುದು ; ಬೇರೆ ಬೇರೆಯಾಗಿ ಇರುವಿಕೆ ; ವಿರಳ : ಅಡವು ಆಗದ ಹಾಗೆ ಅಂಗಲು ಆಗದ ಹಾಗೆ ಜಾಣತನದಿಂದ ಬಿತ್ತಬೇಕು (ಕೃಷಿಪ್ರ. ೭೭) ; ಆ ಹೊಲದ ಪೈರು ಬಹು ಅಂಗಲು (ಸ್ಯಾಂಡರ್) ; ಅಂಗಲು ಅಂಗಲು ಚಿಕಿ ಚಿಕ್ಕಿ ತಿಂಗಳು ಉಸಿರಾಸೆ ಹಿಂಗಲು ಕುಣಿಯೋಣು ಬಾ (ಗರಿ. ೧೨೫). **ಅಂಗಲಾಗು** = ವಿರಳವಾಗು : ಶಾಹಾಮೃಗದ ಗೋಣಿನ ಮೇಲೆ ಬಿರುಸುಗೂದಲು ಅಂಗಲಾಗಿ ಬೆಳೆದಿರುತ್ತವೆ (ಮುಂಬಯಿ. ೪–೧೮೭) ; ಅಂಗಲಾಗಿ ಬಿತ್ತಿದ್ದು ಆಗಲವಾಗಿ ಏಳುವುದು (ಗಾದೆ). **ಅಂಗಂಗಲು** = ಅಂಗಲು ಅಂಗಲು ; ತುಂಬ ವಿರಳ (ಸ್ಯಾಂಡರ್). [< ಹಕ್ಕಲು ?]

**ಅಂಗವಟೆ[ಟ್ಟೆ]** (ನಾ). ಅಂಗಸೌಷ್ಠವವುಳ್ಳವಳು; ರೂಪವತಿ (?) : ಗಂಗಾಸಂಗಮೆ ಘನತರಂಗಿಣಿ ಅಂಗವಟೆ[ಟ್ಟೆ] ಅತಿಚೆಲುವೆ (ವಿಪಕೀ. ೧–೧೧–೯). [ಅಂಗವಟ್ಟ$_2$ + –ಎ$_4$]

**ಅಂಗವಟ್ಟ$_1$** (ನಾ). ಮೈಮೇಲೆ ಹೊದೆಯುವ ಬಟ್ಟೆ ; ವಲ್ಲಿ : ಅಗಳಾ ತುಂಗಸ್ತನೆಯ ಮಂಗಳಮಾದಂಗದೊಳಂಗವಟ್ಟಮಂ ಸಂಗಡಿಸಿದಂ ಬಟಿಯಂ (ಬಾಧಪು. ೧–೧೦೪ ವ). [ಅಂಗ$_2$ + ಪಟ್ಟ]

**ಅಂಗವಟ್ಟ$_2$** (ನಾ). ೧. ಶರೀರ ; ಮೈಕಟ್ಟು : ಅನಿಲಜನಂಗವಟ್ಟದ ಕಡುಹು ಕಂಪಿಸದು (ಕುವ್ಯಾಅ. ೧೦–೨೦) ; ಅಂಗವಟ್ಟದಿ ಪರಿಮಳವ ಬೀಱುತ್ತ . . . ಪದ್ಮಿನಿ ಬಂದಳೊಲವಿನಲಿ (ಜೀವಂಚ. ೮–೬೨) ; ಅಂಗವಟ್ಟದ ಸುರಭಿ ಸೆಳೆದಾಲಿಂಗಿಸಿತು ಗಗನದಲಿ ಸುಳಿವ ಸುರಾಂಗನೆಯರನು (ತೊರರಾ. ೩–೪–೭). ೨. ಅಂಗಸೌಷ್ಠವ ; ಸೌಂದರ್ಯ : ನಿಮ್ಮಾಯಂಗವಟ್ಟವ ಕಂಡ ಬಳಿಕೀ ಕಂಗಳಿತರವ ಕಾಣಲಾಗದು (ಕುವ್ಯಾಉ. ೧೦–೩೮) ; ಕಂಗಳಹಮುಹಮಿಕೆ[ಯಿ]ನಚ್ಯುತನಂಗವಟ್ಟವನೌಕಿ ಮರಳವೆ (ನಿಭಾಗ. ೮–೨೧–೪೪). [ಅಂಗ$_2$ + ಬಟ್ಟ$_1$ (< ವೃತ್ತ) ?]

**ಅಂಗವಡಿ** 'ಅಂಕವಣಿ$_1$' ನೋ.

**ಅಂಗವಡೆ** 'ಅಂಗಂಬಡೆ' ನೋ.

**ಅಂಗವಣೆ$_1$,** ಅಂಘವಣೆ (ನಾ). ೧. ರೀತಿ ; ವಿಧಾನ ; ಸಾಧನೆ : ಈ ಪರಿಯಲಿರಬೇಕು ಮನದಾಳಾಪದಂಗವಣೆಗಳು (ಪ್ರಭುಲೀ. ೧೩–೨೭) ; ಸಾಂಗಭಲ್ಲೆಯ ಬಾಕು ಹಿಂಗದೆ ಕಠಾರಿ ಮಂಗಳಕರ ಚಕ್ರಾಯುಧದ ಅಂಗವಣೆಯ ಕಲಿತರು (ಚಂನವಿ. ೪–೮೬) ; ಬಾಕು, ಕಠಾರಿ ಮುಂತಾದ ಶಸ್ತ್ರಪ್ರಯೋಗ ಇವುಗಳಲ್ಲಿ ಅವನು ಅಂಗವಣೆಯನ್ನು ಕಲಿತನು (ಕವೀರ. ೧೨೮). ೨. ಧೈರ್ಯ ; ಸಾಹಸ ; ಪರಾಕ್ರಮ : ಅಂಗವಣೆಯನು ನೋಡು ನೀನೇಕಾಂಗದಲಿ ನಿರ್ವಹಿಸುವೆನು (ಕುವ್ಯಾಅ. ೨೦–೧೮) ; ಆಳುತನದಂಗವಣೆಯೊಳ್ಳಿತು (ಕುವ್ಯಾಭೀ. ೯–೧೯) ; ಸಂಗರಕೆ ನಡೆತಂದ ದಾನವನಂಗವಣೆಯನು ಕೇಳ್ದು (ಉರರಾ. ೬–೩೩). ೩. ಬಯಕೆ ; ಉದ್ದೇಶ ; ಅಭಿಪ್ರಾಯ : ಜಂಗಮನಿಂದೆಯ ಮಾಡಿ ಲಿಂಗವ ಪೂಜಿಸುವ ಭಕ್ತನ ಅಂಗವಣೆ[ಣೆ]ಯೆಂತೋ ? (ಬಸವ. ೪೨೪) ; ನಿಮ್ಮ ಗೆಲವಿಂಗೆಱಗುವವನವನಲ್ಲ ಬೇಱಿಹುದಾತನಂಗವಣೆ (ಕುವ್ಯಾಅ. ೫–೨೬) ; ಹಳಿವನು ಹೊಱಿಸದಿಹ ಮನದಂಗವಣೆಯುಂಟಾಗೆ (ಕುವ್ಯಾದ್ರೋ. ೧೮–೧೪). ೪. ಕಾರ್ಯ ; ಚಟುವಟಿಕೆ : ಕಗ್ಗತ್ತಲೆಯ ಬಲು ಬಂದಿಯಲಿ ಸಿಲುಕಿತು ಕಂಗಳಂಗವಣೆ (ಕುವ್ಯಾದ್ರೋ. ೧೭–೬). **ಅಂಘವಣೆ** : ೧. ಅಂಘವಣೆಯುಳ್ಳವನೆ ಸಾರಥಿತನದ ಕೈಮೆಯಲಿ (ಕುವ್ಯಾವಿ. ೫–೨೯) ; ಆ ವಾತಾಯುವಿನ ಮೈಲಾಗುಲಂಘನೆಗೊಡನೆ ಲಂಘಿಸುತಂಘವಣೆ ಮಿಗಲು (ತೊರರಾ. ೩–೮–೫೨) ; ಗಂಗೆಯಾತ್ಮಜ ಪೇಳ್ದನಿಂದ್ರಮತಂಗವಾದವ ದೈವಪೌರುಷದಂಘವಣೆಗಳ (ತಿಮ್ಮಅ. ೨ ಸೂ). ೨. ಭೂರಿ ಭಟರಂಘವಣೆ ಬೀತುದು (ಕುವ್ಯಾದ್ರೋ. ೧೫–೩೧) ; ನಿಖಿಳ ಕುಮಾರರಂಘವಣೆಗಳ ಸೆಳೆದುದು ಭೀತಿರಸಜಲಧಿ (ಕುವ್ಯಾಕ. ೨೦–೨೨). ೩. ಯುವತಿಯರ ನುಡಿಯೊಂದು ಮನದಂಘವಣೆ ಬೇಱೊಂದು (ಜೀವಂಚ. ೧೨–೪೦) ; ಪವನಸುತನಿಂಗಿತವ ಮನದಂಘವಣೆಯನು ಮಾದ್ರೇಶ ಕಂಡನು (ಕುವ್ಯಾಕ. ೧೨–೧೪) ; ತಾಂ ಗೈದ ಪಾತಕಗಳನ್ನೈರುಂಬುದು ಶಾಸ್ತ್ರದಂಘವಣೆಯಲ್ಲ (ವೆಂಕಾರಾ. ೨–೧೯–೨೮) ; ನಿನ್ನ ಮನದಂಘವಣೆಯನ್ನರಿದೆ ರಾಯ ಕೇಳಿನ್ನು (ತುರಂಗ. ೬೦–೩೭).

[ಅಂಗವಿಸು + –ಅಣೆ$_5$ ]

**ಅಂಗವಣೆ$_2$** (ನಾ). ಕಾಲುಮಣೆ : "ಅಂಗವಣೆ ಕಾಲುಮಣೆ ತಾನ್" (ಕವಿಕಂ. ೨೬೪). [ಅಂಗ$_2$ + ಮಣೆ]

**ಅಂಗವರ್ಮ** (ನಾ). ೧. ಮೈಜೋಡು ; ಕವಚ. ೨. ಒಳಗೊಳಗೇ ಬೆಳಸಿಕೊಂಡ ದ್ವೇಷ (ಸ್ಯಾಂಡರ್). [ಅಂಗ$_2$ + ವರ್ಮ]

**ಅಂಗವಲ್ಲಿ** (ನಾ). "ಸೂಳೆಯರ ಪಾಯಿಜಾಮ" (ಅನಂನಾ).

[ಅಂಗ$_2$ + ವಲ್ಲಿ ? ]

**ಅಂಗವಸ್ತ್ರ$_1$** (ನಾ). ೧. ಒರಸಿಕೊಳ್ಳುವ ಸಣ್ಣ ಬಟ್ಟೆ ; ಕೈಚೌಕ ; ಹಸ್ತಪಾವುಡ. ೨. ಉತ್ತರೀಯ ; ವಲ್ಲಿ : ಲಿಂಗಮೂರ್ತಿಗೆ ಮಜ್ಜನಕ್ಕೆಱೆದಂಗವಸ್ತ್ರದಿನೊತ್ತಿ ಶಿವನಖಿಳಾಂಗಮಂ ಶ್ರೀಗಂಧಮಂ ತೇಯ್ದಂಗದಲಿ ಪೂಸಿ (ಬಸಪು. ೪೩–೩೦) ; ಐದು ನಿಮಿಷಗಳಲ್ಲೇ ಅಡ್ಡಪಂಚೆಯುಟ್ಟು ಎದೆಯಮೇಲೊಂದು ಅಂಗವಸ್ತ್ರ ಹಾಕಿಕೊಂಡು ಸುಬ್ಬುಕೃಷ್ಣಯ್ಯ ಒಳಕ್ಕೆ ಬಂದ (ರಂಗವ. ೭೭) ; ಅಂಗವಸ್ತ್ರ ಇಲ್ಲದಿದ್ದರೆ ಅಂಗಾರ ಇಡಬಾರದೆ (ಗಾದೆ). [ಅಂಗ$_2$+ ವಸ್ತ್ರ]

**ಅಂಗವಸ್ತ್ರ$_2$** (ನಾ). (ಉಕ) ಉಪಪತ್ನಿ : ಖಂಡೇರಾಯ ವಾಡೆಯೊಳಗೆ ತನ್ನ ಅಂಗವಸ್ತ್ರವಾಗಿದ್ದ ಭವಾನಿಯ ಮಹಾಲಿಗೆ ಹೋದ. ಆಗಿನ ಕಾಲದಲ್ಲಿ ಪುರುಷರು ಉಪಪತ್ನಿಗಳನ್ನಿಟ್ಟುಕೊಳ್ಳುವದೊಂದು ದೊಡ್ಡಸ್ತಿಕೆಯ ಲಕ್ಷಣವಾಗಿತ್ತು (ಹಂಸಾ. ೬೪). [← ಮರಾ.]

**ಅಂಗವಾಸು** (ಕ್ರಿ). ದೇಹವನ್ನು ತಾಳು ; ಸಾಕಾರವಾಗು : ಭಾವ

ಜನ ಮಚ್ಚುಮದ್ದೇನಂಗವಾಂತುದೆನಿಸುವ ಹೆಂಗಳರಸಿಯನದೇನೆಂಬೆ (ಸಾಳ್ವಭಾ. ೧೪–೧೫). [ಅಂಗ$_2$ + ಆನು$_1$ (< ಆನ್$_1$)]

**ಅಂಗವಿಕಲ** (ನಾ). ಕೈಕಾಲು ಮುಂತಾದ ಅಂಗ ಊನವಾದವನು; ಕುರೂಪಿ. [ಅಂಗ$_2$ + ವಿಕಲ]

**ಅಂಗವಿಕಾರ** (ನಾ). ೧. ಶರೀರದ ಅವಯವಗಳು ರೂಪುಗೆಡುವುದು ; ಶರೀರದ ವಿರೂಪ. ೨. ಅಸ್ವಾಸ್ಥ್ಯ ; ರೋಗ. ೩. ಮೂರ್ಛೆ ; ಅಪಸ್ಮಾರ. ೪. [ವೀಶೈ] ದೇಹದ ಮೇಲಿನ ವ್ಯಾಮೋಹ : ಲಿಂಗ ವಿಕಾರಿಗೆ ಅಂಗ[ಪಾಠಾಂ. ಅನ್ನ]ವಿಕಾರವೆಂಬುದಿಲ್ಲ, ಜಂಗಮವಿಕಾರಿಗೆ ಧನವಿಕಾರವೆಂಬುದಿಲ್ಲ; ಪ್ರಸಾದವಿಕಾರಿಗೆ ಮನವಿಕಾರವೆಂಬುದಿಲ್ಲ (ಬಸವ. ೭೯೫). [ಅಂಗ$_2$ + ವಿಕಾರ]

**ಅಂಗವಿಕಾರಿ** (ನಾ). ದೇಹಾಭಿಮಾನಕ್ಕೆ ಒಳಗಾದವನು: ಗೊಹೇಶ್ವರ ಲಿಂಗದ ಬೆಳಕಿನ ಮೂಲವ ಲಿಂಗಸಂಗಿಗಳಲ್ಲದೆ ಮಿಕ್ಕಿನ ಅಂಗವಿಕಾರಿ ಗಳೆತ್ತ ಬಲ್ಲರು (ಅವಚಂ. ೭೩೯).
[ಸಂ. ಅಂಗವಿಕಾರಿನ್ (ಅಂಗ$_2$ + ವಿಕಾರ + –)]

**ಅಂಗವಿಕೃತಿ** (ನಾ). = ಅಂಗವಿಕಾರ. [ಅಂಗ$_2$ + ವಿಕೃತಿ]

**ಅಂಗವಿಕ್ಷೇಪ** (ನಾ). ೧. ಕೈಕಾಲುಗಳನ್ನು ಆಡಿಸುವುದು. ೨. ಅಂಗ ಗಳನ್ನು ಆಡಿಸುವುದರ ಮೂಲಕ ಭಾವವನ್ನು ಸೂಚಿಸುವುದು ; ಅಭಿನಯ. [ಅಂಗ$_2$ + ವಿಕ್ಷೇಪ]

**ಅಂಗವಿದ್ಯೆ** (ನಾ). ೧. ಪ್ರಧಾನ ವಿದ್ಯೆಗೆ ಅಂಗವಾದ ವಿದ್ಯೆ. ೨. ಶರೀರದ ಅಂಗಗಳ ಮೇಲಿನ ಗೆರೆ ಗುರುತುಗಳ ಆಧಾರದಿಂದ ಶುಭಾ ಶುಭಗಳನ್ನು ತಿಳಿದು ಹೇಳುವ ವಿದ್ಯೆ; ಸಾಮುದ್ರಿಕಶಾಸ್ತ್ರ : ಮನೆಯ ಗಂಡನ ಮನೆವಾರ್ತೆಯನೇನ ಹೇಳುವೆನವ್ವಾ ! ಅಂಗವಿದ್ಯೆಯ ನೊಲ್ಲ; ಕಣ್ಗಳೊಳಗಣ ಕಸವ ಕಳೆದಲ್ಲದೆ ನೋಡಲೀಯ . . . ಇಂತೀ ಸರ್ವಾಂಗ ತಲೆದೊಳೆದ ಕಾರಣ ಕೂಡಲಸಂಗಮದೇವನೆನ್ನ ಕೂಡಿಕೊಂಡ ನವ್ವಾ ! (ಬಸವ. ೯೧೧). [ಅಂಗ$_2$ + ವಿದ್ಯೆ]

**ಅಂಗವಿಸು**, ಅಂಗಯಿಸು, ಅಂಗಯ್ಸು, ಅಂಗೈಸು, ಅಂಘವಿಸು ; ಅಂಘೈಸು (ಕ್ರಿ). ೧. ಒಪ್ಪು ; ಸಮ್ಮತಿಸು ; ಅಂಗೀಕರಿಸು : ಶಿವಭಕ್ತನಾದ ಬಳಿಕ ಭವಿಮಿಶ್ರವ ನಡೆಯಲಾಗದು . . . ಕೂಡಲ ಚೆನ್ನ ಸಂಗಯ್ಯ ನಿಮ್ಮ ಲಿಂಗಸಂಗಿಗಳಂಗವಿಸರು (ಚೆನ್ನವ. ೨೩–೭) ; ಲಿಂಗವೇ ಪ್ರಾಣಸ್ವರೂಪೆಂದಂಗವಿಸಿ ತಾನೋತು ಬಳಿಕಾ ಲಿಂಗವನು ಬೇಱಿರಿಸಲಾ ಗದು (ಪ್ರಭುಲೀ. ೧೬–೨೭). ೨. ಬಯಸು ; ಅಪೇಕ್ಷಿಸು ; ಇಷ್ಟಪಡು: ಲಿಂಗವ ಮುಟ್ಟದ ದ್ರವ್ಯಂಗಳಿಗಂ ಅಂಗವಿಸಲು ಅಘವು (ದೀಕ್ಷಾಬೋ. ೧೨೩–೨) ; ಬೇಱೂರ್ಗೆಯ್ದಲ್ಕೆ ಅಂಗವಿಸುವ ನೇಹದಿ ಬಲ್ಲಹನ ಮನಂಗರ ಗುವವೊಲ್ ದೈನ್ಯವೆರೆದ ವಚನಂಗಳನುಸಿರುವ ಮನೆವೆಣ್ಗಳ್ (ಜಯಕಾ. ೧೨–೧೫) ; ಅಂಗನಾಮಣಿ ನೀನು ಬಾರೆಂದು ಅಂಗವಿಸಿ ಗೊಲ್ಲ ಕರೆದನು (ಗೋಹಾಡು. ೩೫). ೩. ತೆಗೆದುಕೊ ; ಸ್ವೀಕರಿಸು : ಘಂಗರಕೆ ಬಂದು ಬಱುವಾತುಂಗುಟ್ಟದಿರೆನ್ನ ಮಸ್ತಕಂ ದುರ್ಮತಿ ಯುದ್ಧಾಂಗಣದೊಳ್ ಬಿಳ್ದ ಬಳಿಕ್ಕಂಗವಿಪುದು ನಿನ್ನ ತುತ್ತನೆಂದವನುಸಿರ್ದಂ (ವೀರವಿ. ೧೧–೧೫). ೪. ಹವಣಿಸು ; ಪ್ರಯತ್ನಿಸು ; ಉದ್ಯೋಗಿಸು : ನಾಳೆ ಬೇಂಟೆ ಯುತ್ಸವಕೆ ಬಿಜಯಂಗೆಯ್ವಿರಾದೊಡೂರ್ವರೆಯ ನಾನಾ ಖಗಮೃಗಂಗ ಳೆಲ್ಲವನಿಱಿದು ಜನದ ಹಸವಂ ಹಱಿದು ರಾಜ್ಯದಳವಱಿದಲ್ಲದೆ ಅಂಗವಿಸ ಬಾರದಿದು ನಿರುತ (ಹಚಕಾ. ೩–೯೨) ; ಜೀವಮಂ ತೊಱೆವೆನೆನುತ್ತಂಗ ವಿಸಿ ಬೀಳುತಿರ್ದನನಂಗೆಯ್ಯಿಂದಾಂತೆಂ (ದಶಕು. ೪–೩೭) ; ಸಿಂಗದೊಳ್ ಕಾದಲಂಗವಿಪ ಜಾಯಿಲಂಗಳ ಜಂಗುಳಿಯಂತೆ (ಚಿಕವಂ. ೧೦–೧೦). ೫. ಮೇಲೆ ಬೀಳು ; ಕವಿ ; ಮುತ್ತು : ನಿರಾಯುಧದೊಳರಿಗಂಗವಿಪ ಬಿರುದರ್ಗೆ ನಿಶಿತಾಸಿಫಳಕಂಗಳೊಡನೆ . . . ಪರಾಕ್ರಮವನೀಶಂ ಕೊಟ್ಟನವರಿಗಿನ್ನರಿದಾವುದು (ಸೋಮಚ. ೫–೧೨) ; ಕೆಂಗಱಿಯ ಮಱಿದುಂಬಿ ತಾವರೆಗಂಗವಿಸುವವೊಲಸುರರಿಪುವಿನ ಮಂಗಳಾನನ ಕಮಲದಲಿ ಶರವಾಳಿ (ಕುವ್ಯಾಭೀ. ೬–೨೫) ; ಪತಂಗಮಂಡಲಕ್ಕೆ ಕೈನೀಡುತ್ತಂಗವಿಪ ಮಱಿಸಿಂಗಮಂ ಪೋಲ್ವ ಚೆಲ್ವಂ (ಚಿಕವಿ. ೪–೮೮ ವ). ೬. ಎದುರಾಗಿ ನಿಲ್ಲು; ಪ್ರತಿಭಟಿಸು : ಮುನ್ನಿನ ಕರ್ಮಕಿನ್ನಾರಂಗವಿಸುವವರು (ಬಸವು. ೪೫–೪೦) ; ತುಂಗಗಜಘಟೆ ಕವಿದವಿದಕಿನ್ನಂಗವಿಸುವವರಾರೆನುತ (ಕುವ್ಯಾದ್ರೋ. ೨–೭೮). ೭. ಹೊಂದಿಕೆಯಾಗು ; ಕೂಡು : ಪವಣಿಗೆ ಯೊಪ್ಪೆ ಪುರುಳು ಪೊಗರೇರೆಯಂಗವಿಸೆಯಲಂಕಾರಗಳು . . . ಕವಿತೆ ಯೊಂದನು ಪೇಳಿಸಿಂದು (ಹದಿಬ. ೧–೨೬). ೮. ಸಾರು ; ಘೋಷಿಸು : ತಿಂಗಳೀಯೆಡೆಗೆ ಬಾರದ ಮುನ್ನ ಸುಧೆಯನೀ ಲಿಂಗದವಸರಕೆಂದು ತಪ್ಪೆ ನೆಂದಂಗವಿಸಿ ಹಿಂಗದೆ ಛಲವ ಹಿಡಿದು ನಡೆಕೊಂಡನಾಗಳ್ (ಸಿದ್ಧರಾ. ೬–೩೮); ಕುಮಾರನ ರಣವಿಜಯನಾಗೆಂದು ಬಿರುದಾವಳಿಯನಂಗವಿಸುತ್ತ ಮಂಗಳರಭಸ ಮೊಳಗುತಿರೆ (ಕುವ್ಯಾದ್ರೋ. ಪರಿ. ೨೭೮). **ಅಂಗಯಿಸು:** ೨. ನೋಡೆನೆ ಕಣ್ಗಳಂಗಯಿಸಲಾರ್ಪೊಡೆ ಗಂಡರ ಗಾಡಿಗೊಲ್ದು ಮಾತಾಡೆನೆ ಬೆಂದ ಬಾಯ್ ಪೆಱರ್ಗೆ ಮುಚ್ಚಿ ಮುಸುಂಕದೊಡೆ (ಅನಂಪು. ೮–೨೭). ೫. ಅಂಗಜಾರಿಯ ಭವನಮಂ ಕಂಡು ಭೀತಾಳಿಯಂಗಯಿಸಲಮ್ಮದೆ ತಲೆವಾಗಿಲೊಳ್ ನಿಂದು ತಲೆದೂಗುತಿರ್ದುದಾಗ (ಸಮ್ಯಕೌ. ೫–೪೨). ೯. ಒಪ್ಪುವಂತೆ ಮಾಡು : ತ್ರಿಪಥಗಾಮಿನಿಯಾಗಿದನುಡುಗು ಭೋಂಕ ನೆಂದಂಗಯಿಸಿ ಗಂಗೆಯನೀಕ್ಷಿಸುತ್ತಗಜೆಗೂಡಿ (ಪದ್ಮರಾ. ೧೦–೨೧೨). **ಅಂಗಯ್ಸು** : ೩. ತನಯ ಬಹುವಿದ್ಯೆಗಳುಮಾ ಜನಪದರಾಜ್ಯಮುಮಿ ವಿರ್ದುವಿವಱೊಳ್ ನೀನಿಂ ಮನಮೊಲ್ದುದನಂಗಯ್ಸೆನಲನುನಯದಿಂ ದಂದು ತಾಳ್ದಿದಂ ವಿದ್ಯೆಗಳಂ (ನೇಮಿಪು. ೪–೪). **ಅಂಗೈಸು** : ೧. ಪ್ರಾಣ ಪ್ರಕೃತಿಗಳ ಕಳೆಯ ಲಿಂಗವೆಂದಱಿದು ಅಂಗೈಸಿ ಅನುಭವಿಸಬಲ್ಲ ವರ ಲೆಂಕ ನಾನಾಗಿಪ್ಪೆನಯ್ಯ (ದೇದಾಪ್ರ. ೧೨೪–೧೧೪) ; ಅಂಗಾಶ್ರಮ ವಳಿದು ಲಿಂಗಾಶ್ರಮವಾದ ಬಳಿಕ ಆ ಅಂಗಕ್ಕೆ ಲಿಂಗಾಚಾರವಲ್ಲದೆ ಅಂಗ ಕ್ರಿಯೆಯೆಂಬುದನಂಗೈಸರು ನೋಡಾ (ಚೆನ್ನವ. ೬–೩). ೨. ಕೆಡು ವೈಶ್ವರ್ಯಕೋಸುಗ ಕೊಲೆಗೆಲಸಕಂಗೈಸಿ ನರಕದೊಳಿಳಿವುದನುಚಿತ (ಜೀವಂಚ. ೪–೯೫) ; ದುರಾತ್ಮರು ಬೇರುಗೊಲೆಗಂಗೈಸಿದರು ಕುರುವಂಶ ಸುರಕುಜದ (ನಿಭಾಗ. ೩–೧–೧೧) ; ೪. ಆವ ನೇಮವಾದರೇನು ಹೇಮ ವಿಲ್ಲದಂಗೈಸಬಹುದೆ . . . ಬೇಡುವವರ ನೋಡಿ ನೋಡಿ ಈಯಲಿಲ್ಲದ ವನ ಜೀವನವದೇತಕೊ (ಬಸವ. ೪೩೮) ; ಸುರಿವ ಮುತ್ತುಗಳಂ ಕಾರ ಮುಂಬನಿಯ ತಂದಲೆಂದು ಬಂದು ನುಂಗಲಂಗೈಸುವ ಚಾದಗೆಯ ಮಱಿ ಗಳುಮಂ (ಕಬ್ಬಿಕಾ. ೨೩೪) ; ಎಲೆಲೆ ಪಾತಕಿ ಹೆಣನ ಹೊಯ್ದರೆ ಬಲು ಗಡಿಯ ನೀನೆಂಬರೇ ಸುಡು ಹೊಲೆಯರಿದಕಂಗೈಸುವರೆ ತಾ ರಾಜಸೂನು ಗಡ (ಕುವ್ಯಾದ್ರೋ. ೧೯–೩) ; ಶರಧಿಯೊಳ್ ನೀರಾಟವಾಡಲುಜ್ಜುಗಿ ಸುವಂ ಸಿಡಿಲ ತೊಡಲಂಗೈಸುವಂ (ಚಬಪು. ೩೮–೧೭). ೫. ಮುಂಗಾರ ಮುಗಿಲೊಡ್ಡಿನಂತೆ ಮದಂಗಳಿಗಂಗೈಸುವ ತುಂಬಿವಿಂಡ (ಕಂನವಿ. ೨–೫೬). ೬. ಕಾಳೆಗದೊಳಂಗೈಸಲಮ್ಮದೆ ಬಾಲಕನ ನೂಕಿದಿರಲಾ (ಕುವ್ಯಾದ್ರೋ. ೮–೨೪). ೭. ಶಾಂತಿಶೃಂಗಾರಂಗಳೆರಡುಮಂಗೈಸುವಿನಂ ಸಿಂಗರಕಿನಿಯನ ದಿಟ್ಟೆ ನೆರಂಗೆಯೆ ತಾಂ ಪೊಣ್ಮೆ ಪೂಣ್ದು ಪೊಂಗಿತ್ತಾಗಳ್ (ಚಿಕವಿ. ೬–೨೪೨ವ, ೨೪೩). ೮. ತುಡುಕಿದಲ್ಲದೆ ಮಾಣೆನೆಂದಂಗೈಸಿದಳು ಮಾಯೆ (ಪ್ರಭುಲೀ. ೭–೮೫). **ಅಂಘವಿಸು** : ೧. ನಮಗೆ ದೀಕ್ಷೆಗೊಳಲು ಅಂಘವಿಸಿ ತಕ್ಕ ದಿನವಂ ಬೆಸಸಿ (ತುರಂಗ. ೮೧–೫). ೫. ಅಂಘವಿಸಿದನು ಬಳಿಕ ರಿಪುಗಳ ನುಂಗುವತಿಬಲದಾಯತದಲುರಿಗಂಗಳಲಿ (ತೊರರಾ. ೬–೨೮–೭). ತುಪ್ಪ ತೈಲಂಗಳನ್ನರಮನೆಗೆ ತರುವರಂ ಬರುವರನಂಘವಿಸಿ ಪಿಡಿದವರ ಬಿಟ್ಟಗಂ ಪೊಯ್ದರ್ (ತುರಂಗ. ೮೨–೩). ೬. ಮುಂಗುಡಿಯ

ಮುಜಿದೌಕಿ ಭೀಮಂಗಂಘವಿಸಿದನು ಕ್ಷೇಮಧೂರ್ತಿ (ಕುವ್ಯಾಕ. ೨–೧೬); ಒತ್ತಿ ಮುಂದಕೆ ತೂಳಿ ದೇವಿಗಗತ್ಯದಿಂದಂಘವಿಸೆ ಹೂಂಕೃತಿವೆತ್ತು ಘರ್ಜಿಸಲುದಿಸಿತುರುಚಾಮುಂಡತರ ಶಕ್ತಿ (ಅಂಬಿಕಾ. ೧೮–೫೯). ೧೦. ಆಶ್ರಯಿಸು; ಹಿಡಿ: ಅಂಘ[ಪಾಠಾಂ. ಅಂಗ]ವಿಸುವುದು ಬಂಡ ಬಟ್ಟೆಯ ಸಂಗದಲಿ ನೀವೆನಲು (ತೊರರಾ. ೪–೧೦–೨೬). **ಅಂಘೈಸು**: ೨. ನೆಲನ ರಾಜ್ಯಶ್ರೀಯ ತುಱುಬಿಂಗಳುಕದಂಘೈಸಿದ ವಿರೋಧಿಯ ಲಲನೆಯರ ಶ್ರುತಿಪತ್ರ ಸೀಳಲಿ (ಕುವ್ಯಾಕ. ೨೧–೨೩); ಮೊದಲೇ ಕಾಳ ಗಕ್ಕಂಘೈಸ ಸಲ್ಲದು (ತಿಮ್ಮಶಾಂ. ೩–೪೫) ೪. ರಾಜಸೂಯದ ಹದನ ನಂಘೈಸುವರದಾರೀ ವರ್ತಮಾನದಲಿ (ಕುವ್ಯಾಸ. ೨–೧೫); ಕೊರಳಿನ ಬಲುಹನಜಿಯದೆ ಗಿರಿಯ ಹೊಜಲಂಘೈಸುವರೆ ಭಟರು (ಕುವ್ಯಾದ್ರೋ. ೪–೫೪); ಅವರಿಜಿತಕಂಘೈಸಿದರೆ ತೋಱುವೆನೆನ್ನ ಕೈಗುಣವ (ತೊರರಾ. ೫–೪–೨). ೬. ಅವನಂಘೈಸುವನು ಪಾರ್ಥನೊ ಪಾವಮಾನಿಯೊ (ಕುವ್ಯಾಶ. ೧–೨೯). ನಾವು ನಾಲ್ವರು ಕಾಳಗದೊಳಂಘೈಸುವೆವು ಬಿಡು ಬಿಡು ಸರೋವರವ (ಕುವ್ಯಾಗ. ೪–೫೭). ೧೧. ಎದುರಾಗಿ ನಡಸು: ಆರ ರಥವಿದು ಸೈನ್ಯಪಾರಾವಾರಕಿದನಂಘೈಸುವನು ತ್ರಿಪುರಾರಿಯೋ (ಕುವ್ಯಾದ್ರೋ. ೪–೫೯).

[ಅಂಗ₂? + –ಇಸು₃. ‖ ತೆಲು. ಅಂಗವಿಂಚು. / ಮರಾ. ಅಂಗವಣೇಂ, ಅಂಗವಿಣೇಂ]

**ಅಂಗವೈಕಲ್ಯ** (ನಾ). ಶರೀರದ ಯಾವುದಾದರೂ ಅವಯವ ಊನವಾಗಿರುವುದು; ಅಂಗದ ಕೊರತೆ. [ಅಂಗ₂ + ವೈಕಲ್ಯ]

**ಅಂಗವ್ವೆ** (ನಾ). ಒಂದು ಹೆಸರು: ಅಙ್ಗವ್ವೆ ಪೆರ್ಗ್ಗಡೆ (ಸೌಇಇ. XI–i, ೯–೪೫; 862). [ಅಂಗ₂? + ಅವ್ವೆ]

**ಅಂಗಶಾಸ್ತ್ರ** (ನಾ). ಮುಖ್ಯವಾದ ಶಾಸ್ತ್ರಕ್ಕೆ ಅಂಗವಾಗಿರುವ ಶಾಸ್ತ್ರ. [ಅಂಗ₂ + ಶಾಸ್ತ್ರ]

**ಅಂಗಶುದ್ಧಿ** (ನಾ). ೧. ಶರೀರ ನೈರ್ಮಲ್ಯ. ೨. [ಅಶಿಷ್ಟ] ಹೊಡೆತ; ಬಡಿತ: ಚೆನ್ನಾಗಿ ಅಂಗಶುದ್ಧಿಯನ್ನು ಮಾಡಿದನು (ಸ್ಯಾಂಡರ್). [ಅಂಗ₂ + ಶುದ್ಧಿ]

**ಅಂಗಶೋಧನೆ** (ನಾ). = ಅಂಗಝುಡತಿ (ಕಿಸಂಗ್ಲಾ). [ಅಂಗ₂ + ಶೋಧನೆ]

**ಅಂಗಸಂಗ** (ನಾ). ಕೂಟ; ಸಂಭೋಗ: ನಿನ್ನಂಗಸಂಗಮನಗಲ್ದಾಯ್ತು ಪಲಕಾಲಂ (ಜೈಮಿಭಾ. ೨೩–೫೯). [ಅಂಗ₂ + ಸಂಗ]

**ಅಂಗಸಂಗಿ** (ನಾ). [ವೀಶೈ] ಶರೀರವ್ಯಾಮೋಹವುಳ್ಳವನು: ಶರೀರ ರೂಹಿಸಿದ ರೂಹಿಂಗೆ ಮಾಯದ ಬಲೆಯಲ್ಲಿ ಸಿಲುಕಿ ಅಂಗಸಂಗಿಗಳೆಲ್ಲರೂ ಮಹಾಘನವನಜಿಯದೇ ಹೋದಿರೋ (ಅವಚಂ. ೮೪೧). [ಸಂ. ಅಂಗಸಂಗಿನ್ (ಅಂಗ₂ + ಸಂಗ + –)]

**ಅಂಗಸಂಜ್ಞೆ** (ನಾ). ಕಣ್ಣು, ಬೆರಳು ಮೊದಲಾದವುಗಳನ್ನು ಅಲುಗಿಸಿ ಮಾಡುವ ಸನ್ನೆ. [ಅಂಗ₂ + ಸಂಜ್ಞೆ]

**ಅಂಗಸಂಸಾರ** (ನಾ). ಶರೀರಸಂಬಂಧವಾದ ವ್ಯಾಪಾರ: ಅಂಗಸಂಸಾರ ಲಿಂಗದಲಜತು, ಕಾಯವೆಂಬ ಸಂದು ಸಂಶಯವಿಲ್ಲದೆ ನಿಸ್ಸಂದೇಹಿಯಾಗಿಪ್ಪನು ನೋಡಾ ಬಸವಣ್ಣನು (ಅವಚಂ. ೮೯೮). [ಅಂಗ₂ + ಸಂಸಾರ]

**ಅಂಗಸಂಸಾರಿ** (ನಾ). ಶರೀರಸಂಬಂಧವಾದ ವ್ಯಾಪಾರದಲ್ಲಿಯೇ ನಿರತನಾಗಿರುವವನು: ಕಲ್ಪಿತದುದಯ ಸಂಕಲ್ಪಿತದ ಸುಳುಹು ಪವನಭೇದವನಜಿಯದೆ ಪ್ರಾಣಲಿಂಗವೆಂಬುದು ಅಂಗಸಂಸಾರಿ ಜಂಗಮವೆಂಬುದು ಲಿಂಗಸಂಸಾರಿ (ಅವಚಂ. ೨೨೧). [ಸಂ. ಅಂಗಸಂಸಾರಿನ್ (ಅಂಗ₂ + ಸಂಸಾರ + –)]

**ಅಂಗಸಂಸ್ಕಾರ** (ನಾ). ಮೈಯನ್ನು ಅಂದಗೊಳಿಸುವ ಸ್ನಾನ, ವಿಲೇಪನ, ಅಲಂಕಾರ ಮುಂತಾದ ಉಪಚಾರ. [ಅಂಗ₂ + ಸಂಸ್ಕಾರ]

**ಅಂಗಸಸಿ** (ನಾ). ಮುಖ್ಯವಾದ ಪೈರು ಅಲ್ಲದ, ಬೇರೆಯ ಪೈರು (?): ಆ ಗಡಿಯಿಂದೊಳಗುಳ ಮನೆ ಮನೆತಾಣ ಅಂಗೋಡು ಅಂಗಸಸಿ ನೆಲ ಹೊಲ ಮರ ಫಲ . . . ಸರ್ವಾಂಗೋಡು ಸಹಿತವಾದ (ಕಇ. III, ೭–೧೯; 1527). 'ಅಂಗಫಲ' ಪರಾ. [ಅಂಗ₂ + ಸಸಿ₁]

**ಅಂಗಸಾಕ್ಷಿ** (ನಾ). ಕಣ್ಣಾರೆ ಕಂಡ ಸಾಕ್ಷಿ; ಅನುಭವ (ಸ್ಯಾಂಡರ್). [ಅಂಗ₂ + ಸಾಕ್ಷಿ]

**ಅಂಗಸಾಧಕ** (ನಾ). ೧. = ಅಂಗಸಾಧನೆ. ೨. ಅಂಗಸಾಧನೆಯನ್ನು ಮಾಡಿದವನು. [ಅಂಗ₂ + ಸಾಧಕ]

**ಅಂಗಸಾಧನೆ** (ನಾ). ವ್ಯಾಯಾಮ: ಕೂಡಲೇ ನೆಟ್ಟಗೆ ಗರಡಿಯ ಮನೆಗೆ ಹೋಗಿ ಮೈಗೆಲ್ಲಾ ಚೆನ್ನಾಗಿ ಎಣ್ಣೆಯನ್ನು ಹಚ್ಚಿಕೊಂಡು ಅಂಗಸಾಧನೆಯಲ್ಲಿ ನಿರತನಾಗುತ್ತಿದ್ದನು (ಕೃದೇವ. ೧೦). [ಅಂಗ₂ + ಸಾಧನೆ]

**ಅಂಗಸೂತ್ರ** (ನಾ). ನಾಡಿ (ಸ್ಯಾಂಡರ್). [ಅಂಗ₂ + ಸೂತ್ರ]

**ಅಂಗಸೋಂಕು** (ನಾ). [ವೀಶೈ] ಲಿಂಗವನ್ನು ಧರಿಸುವ ಒಂದು ಸ್ಥಾನ; ಎದೆ: ಕಂಕುಳೆಂಬುದು ಕವುಚಿನ ತವರುಮನೆ ಕರಸ್ಥಲವೆಂಬುದು ಕೈಕೆಟ್ಟ ಹುಣ್ಣು. ಅಮಳೋಕ್ಯವೆಂಬುದು ಬಾಯ ಬಗದಳ. ಅಂಗಸೋಂಕೆಂಬುದು ಪಾಪದ ತವರ್ಮನೆ (ಅವಚಂ. ೬೨೪); ಅಜ್ಞಾನ ಅಳಿಯದೆ ಕಕ್ಷೆ, ಕರಸ್ಥಲ, ಅಮಳೋಕ್ಯ, ಅಂಗಸೋಂಕು, ಉತ್ತಮಾಂಗ, ಕಂಠವೆಂಬ ಆರುಸ್ಥಾನದಲ್ಲಿ ಅಂ[ಲಿಂ]ಗವ ಧರಿಸಿಕೊಂಡಿಪ್ಪವರೆಲ್ಲರು (ಪ್ರಭುವ. ೨೨೮–೧೬೪ ಟೀಕು). [ಅಂಗ₂ + ಸೋಂಕು₁]

**ಅಂಗಸ್ಥಲ** (ನಾ). [ವೀಶೈ] ಶಿವತತ್ತ್ವವು ಸ್ವಶಕ್ತಿಯ ಸ್ಫುರಣೆಯಿಂದ ತಾಳಿದ ಎರಡು ಪ್ರಕಾರಗಳಲ್ಲಿ ಒಂದು: ಕಾಸಿ ಕಮ್ಮಾಜನಾದ ಬೀಸಿ ಮಡಿವಾಳನಾದ . . . ಇದು ಕಾರಣ, ಕೂಡಲಸಂಗಮದೇವಾ, ಅಂಗಸ್ಥಲವನಜಿದವನೇ ಕುಲಜನು (ಬಸವ. ೫೯೧); ಅಖಂಡ ಪರಿಪೂರ್ಣ ಗೋಳಕಾಕಾರ ಮಹಾಲಿಂಗವು ತನ್ನ ಸ್ವಲೀಲೆಯಿಂದ ಲಿಂಗಸ್ಥಲ ಅಂಗಸ್ಥಲವೆಂದು ಎರಡು ಪ್ರಕಾರವಾಯಿತ್ತು (ಸಿದ್ಧೇವ. ೧೨–೩೭ ಟ); ಅಂತು ತನ್ನ ಸ್ವಲೀಲೆಯಿಂದ ಲಿಂಗಾಂಗವೆರಡಾಗಿ ಪೂಜ್ಯ ಪೂಜಕನಾದುದು ಒಂದೇ ವಸ್ತು. ಅಂತು ಶಿವಾಂಶಿಕನಾದ ಆತ್ಮನೇ ಆ ಲಿಂಗಕ್ಕೆ ಅಂಗವಾದುದಾಗಿ ಅಂಗಸ್ಥಲವೆಂದು ಹೇಳಲಾದುದು (ಲಿಂಗಲೀ. ೪೦). ℙ ಏಕೋತ್ತರ ಶತಸ್ಥಲಗಳಲ್ಲಿ ಅಂಗಸ್ಥಲಕ್ಕೆ ಸೇರಿದವು ೪೪. 'ಏಕೋತ್ತರ ಶತಸ್ಥಲ', 'ಲಿಂಗಸ್ಥಲ' ಪರಾ. [ಅಂಗ₂ + ಸ್ಥಲ]

**ಅಂಗಹಾರ** (ನಾ). [ನಾಟ್ಯ] ಅಂಗಗಳನ್ನು ಉಚಿತ ರೀತಿಯಲ್ಲಿ ಚಲಿಸುವುದರಿಂದ ಭಾವಗಳನ್ನು ವ್ಯಕ್ತಪಡಿಸುವುದು; ಅಭಿನಯ ಮುದ್ರೆ: ಭರತಾಗಮದೊಳ್ ಮೂವತ್ತೆರಡೆನೆ ನೆಗಟ್ದಂಗಹಾರಮುಂ (ಆದಿಪು. ೯–೨೯). [ಸಂ.]

**ಅಂಗಹೀನ** (ನಾ). ಅಂಗದಲ್ಲಿ ಕೊರೆಯುಳ್ಳವನು; ವಿಕಲಾಂಗ. [ಅಂಗ₂ + ಹೀನ]

**ಅಂಗಳ₁** 'ಅಂಗುಳ್' ನೋ.

**ಅಂಗಳ₂**, ಅಂಗಳು₂ (ನಾ). ೧. ಮನೆಗೆ ಸೇರಿರುವ ಆವರಣವುಳ್ಳ ಅಥವಾ ಇಲ್ಲದ ಬಯಲು: "ಅಂಗಳಮೆಂದಂಗಣಕ್ಕೆ ನಾಮಂ" (ಕವಿಕಂ. ೨೮೪); ಸತ್ಯಶರಣರ ಅಂಗಳದೊಳಗೆ ಬಿದ್ದ ಅಗುಳನೆತ್ತಿಕೊಂಡಿಪ್ಪೆ (ಶೂನ್ಯಸಂ. ೧೨೩–೫); ಲಿಂಗವಿರಹಿತರಂಗಳವ ಮೆಟ್ಟದಿರಬೇಕು (ದೀಕ್ಷಾಬೋ. ೯೨–೧೪); ಕಿಱುವರೆಯದಂದಂಗಳದೊಳಾಡುತಲು ಹರಿಯಿರಲು (ಸಾಳ್ವಭಾ. ೧೧–೪೩); ಅರಮನೆಯ ತಲೆವಾಗಿಲಿನಂಗಳ ಮುಮಂ ಬೆಂಗಳೆದು (ಚಿಕವಿ. ೬–೧೧೮ವ); ತಿಂಗಳು ಹೋದರೂ ಅಂಗಳ

ದಾಟಲಿಲ್ಲ (ಗಾದೆ). **ಅಂಗಳು$_2$** : ಹೈಗರ ಮನೆಗಳ ಮುಂದೆ ಅಂಗಳು ವೊಂದು ಚಪ್ಪರಸಹಿತ ಇರುತ್ತದೆ (ಕಭಾಗೆ. ೮೫) ; ಮಸೀದಿಯ ಒಳ ವ್ಯೆಯಲ್ಲಿ ವಿಸ್ತಾರವಾದ ಅಂಗಳಿನೊಳಗೆ (ಕಭಾಗೆ. ೫೩೬).

[ P 'ಅಂಗಣ' ಶಬ್ದದ ನಿಷ್ಪತ್ತಿ ಭಾಗವನ್ನು ನೋಡಿ]

**ಅಂಗಳ್$_3$** (ನಾ). ಕೆಂಡ : ಮಂಗಳದ ಬೆಳಗೆಯ್ಯಲಕಟಕಟಂಗಳದ ಮಳೆ ಗಱೆದ ತೆಱನಾಯ್ತು (ನಿಭಾಗ. ೧೦-೨-೯). [ಸಂ. ಅಂಗಾರ]

**ಅಂಗಳತಳಿ** (ನಾ). ಅಂಗಳಕ್ಕೆ ನೀರು ಚಿಮುಕಿಸುವುದು ; ಅಂಗಳ ವನ್ನು ಸಾರಿಸುವುದು : ಅಂಗಳತಳಿಯನ್ನು ಹಾಕಿ ರಂಗವಾಲಿಯಿಂದ ಗೋಪದ್ಮಗಳನ್ನಿಟ್ಟು ಅಂಗಳವನ್ನು ಶೃಂಗರಿಸಿ (ವಿಜಯ. ೧೦೬).

[ಅಂಗಳ್$_2$ + ತಳಿ$_1$]

**ಅಂಗಳಾಂತಿರೋಗ** (ನಾ). ಶ್ವಾಸಕೋಶಗಳ ಊತ; ಬಾವು (ಕಿಸಂಗ್ಲ). [< ಅಂಗುಳ್ + ? + ರೋಗ]

**ಅಂಗಳಿಸು** (ಕ್ರಿ). "ಬಾಯಿತೆರೆ" (ಜಾನಕೋ).

[ಅಂಗಳು$_1$ (< ಅಂಗುಳ್) + -ಇಸು$_3$]

**ಅಂಗಳು$_1$** 'ಅಂಗುಳ್' ನೋ.

**ಅಂಗಳು$_2$** 'ಅಂಗಳ್$_2$' ನೋ.

**ಅಂಗಾಂಗಿಕ** (ನಾ). ('ಉದಯಾದಿತ್ಯಾಲಂಕಾರ'ದ ಮೇರೆಗೆ) ಸಂಕೀರ್ಣವೆಂಬ ಕಾವ್ಯಾಲಂಕಾರದಲ್ಲಿ ಒಂದು ಬಗೆ: ಮುಖ ಚಂದ್ರನಿಂ ಕುಮುದಮೊಳ್ಪಾಯ್ತೆಂಬುದಂಗಾಂಗಿಕಂ (ಉದಯಾ. ೬೬).

[ಸಂ.]

**ಅಂಗಾಂಗಿಭಾವ** (ನಾ). ಅಂಗಕ್ಕೂ ಅದು ಯಾವುದರ ಅಂಗವಾಗಿದೆಯೋ ಅದಕ್ಕೂ, ಎಂದರೆ ಅಂಗಿಗೂ, ಇರುವ ಪರಸ್ಪರ ಸಂಬಂಧ ; ಸಾಮಾನ್ಯ-ಮುಖ್ಯ ಎಂಬ ಭಾವ ; ಉಪಕಾರ್ಯ-ಉಪಕಾರಕಭಾವ. [ಅಂಗ$_2$ + ಅಂಗಿ$_2$ + ಭಾವ]

**ಅಂಗಾಡಿ**, ಅಂಗಡಿ (ನಾ). ೧. ಪದಾರ್ಥಗಳನ್ನು ಮಾರುವ ಮನೆ ಅಥವಾ ಸ್ಥಳ ; ವಿಕ್ರಯಶಾಲೆ : ಅಂಗಾಡಿಯುಳಿವರ್ಮ್ಮಾನ[ಮೆಣ್ಣೆಯು] ಮುಮುರಿಸಿನಮುಂ (ಕಇ. I, ೨-೧೧ : 699) ; **ಅಂಗಡಿ** : ೧. "ಪಣ್ಯಂ, ವಿಕ್ರಯಶಾಲಾ, ಅಪಣಃ, ವಿಪಣಿಃ-ಈ ೪ ಅಂಗಡಿ" (ಹಲಾಯು. ೫೦-೧೪೧) ; ನೆಲ್ಲಂ ಪುರಿದು ಮಾಱದೆ ಕಾಣದಂತಿರಿಸಂ[ಪಾಠಾಂ. ಸುಂ]ಗಡಿಯೊಳ್ (ಕವಿರಾ. ೨-೧೩೫) ; ದೇವಗ್ಗೆ ಅಂಗಡಿಪಪ್ಪದೊನ್ದು ಮಾನ ಲೆಕ್ಕದ ಸೊಂಟಗೆ ಜೋಳಮಂ ಕೊಟ್ಟರ್ (ಸೌಇಇ. XI-i, ೧೧೬-೩೯ ; 1075) ; ಭಂಡಮಿಲ್ಲದಂಗಡಿಯುಂ ಗಂಡನಿಲ್ಲದ ಸತಿಯುಂ (ಧರ್ಮಾವ್ಯ. ೧-೭೫ವ); ಯಮನಂಗಡಿಯ ಪಸರವಿದೆನಲು ಮೆಱೆದುದು ಕೊಡೆ ರಣಭೂಮಿ (ಕುವ್ಯಾಕ. ೧೫-೩೦); ಕಟುಕರಂಗಡಿಯಂತೆ ರಣರಂಗ ಸಲೆ ಜಿಗುಪ್ಸೆಯ ತೋಱಿಸಿತು (ಮೋಹತ. ೪೦-೭೭) ; ಅಂಗಡಿ ಮಾರಿ ಗೊಂಗಡಿ ಹೊದ್ದ ಹಾಗೆ (ಗಾದೆ). ೨. ಹೊರಗಿನ ಆಡಂಬರ ; ತೋರಿಕೆ : ಬಹಿರಂಗ ಮಿಂಚಾಗಿ ನುಡಿ ನಡತೆ ತಿಳುಪಿ ಅಂಗಡಿ ಅಧಿಕವಾಗಿ ರಚಿಸಿದರೇ ನಾಹದೋ (ವಿಸಾಸು. ೨-೮೭-೧). ೩. ಒರಳಿನ ಕುಳಿಯ ಸುತ್ತಣ ಪ್ರದೇಶ : ಈ ಒರಳಿನ ಅಂಗಡಿ ಅಗಲವಾಗಿಲ್ಲ (ರೂಢಿ). **ಅಂಗಡಿಯ ನಿಕ್ಕು** = ಬಯಲಿಗೆ ಎಳೆ ; ಬೀದಿಗೆ ಎಳೆ : ಅರಸ ಕೇಳೆನ್ನನಿಷ್ಟಂಗಡಿಯ ನಿಕ್ಕುವರೆ ಸರಿಯ ಗರತಿಯರೊಳಗೆ ಸತ್ತ ಸಾವಾಯ್ತು (ಸಾರಂಗ. ೨೦-೧). **ಅಂಗಡಿಯಲವಡ** (= ಅಂಗಡಿಯ + ಅಲವಡ) = ಅಂಗಡಿಬೀದಿಯಲ್ಲಿ ಅಲೆಯುವವನು : ಈತನಂಗಡಿಯಲವಡಂ[ಪಾಠಾಂ. ಗದಿಯಲವಟು ; ಗಡಿಯಲವಟು] ಪೆಱುಕಿ ತಿಂದು ಬಾಱೆರ್ವಂ (ವಡ್ಡಾರಾ. ೪೧-೧೩). **ಅಂಗಡಿಯ ಹೊರಿಗೆಯ ಬಳ್ಳ** = ಅಂಗಡಿಯಲ್ಲಿ ಬಳಸಲು ಅಂಗೀಕೃತವಾದ ಅಳತೆಯ ಬಳ್ಳ : ಯೀ ಹೊನ್ನಿಗೆ ಯೆರಡು ಬೆಳೆಯಲು ಸಹ ವರ್ಷ ೧ಕ್ಕೆ ಬಹ ಅಕ್ಕಿ ಅಂಗಡಿಯ ಹೊರಿಗೆಯ ಬಳ್ಳ ಅಯ್ವತ್ತರ ಲೆಕ್ಕದ ಅಕ್ಕಿ ಮೂಡೆ ೨೪ (ಎಇ. XX, ೯೪-೪೪ ; 1556). 'ಅಂಗಡಿಯಿಕ್ಕು', 'ಅಂಗಡಿಯಿಡು' ಪರಾ.

[ದೇ. ‖ ತಮಿ. ಅಙ್ಗಾಡಿ ; ಮಲ. ಅಙ್ಙಾಡಿ ; ತುಳು. ಅಂಗಾಡಿ ; ಕೊಡ. ತೆಲು. ಅಂಗಡಿ ; ಕೋಲಾ. ಅಂಗಡಿ ; ನಾಯ್ಕಿ. ಅಂಗಾಡಿ ; ಪರ್ಜಿ. ಅಂಗೋಡ್ = ಅಂಗಳ. ~ ಅಂಗಣ?]

**ಅಂಗಾತ** 'ಅಂಗತ್ತ' ನೋ.

**ಅಂಗಾದಿ** (ನಾ). ಒಬ್ಬ ಅಧಿಕಾರಿಯ ಅಥವಾ ಒಬ್ಬನ ಹೆಸರು (?) : ಮೂನೂರ್ವ್ವರು ಅತ್ತಾಣಿಯುಂ ಅಂಗಾದಿಯೂವ್ವಿಳ್ಳೆಲ್ಲಿಯಮಳಣ್ವರೆನ್ವ ಇವರಾನುಳ್ಳಿಟ್ಟ ಮೂನೂರ್ವ್ವರುಂ (ಎಕ. X, ಶ್ರೀನಿವಾ. ೧೬-೪ ; ?).

[?]

**ಅಂಗಾರ** (ನಾ). ೧. ಕೆಂಡ : ಹಿಂದಿರುವ ಹಗೆಯಿಾಗ ಅಂಗಾರವಾಯ್ತು (ಗಧಿ. ೪೧-೧೭). ೨. "ದೇವರ ಧೂಪಾರತಿಯ ಬೂದಿ ; ಬೆಂಕಿ" (ಜಾನಕೋ) : ದನಗಳಿಗೆ ಬೇನೆ ಬಂದರೆ ಭಟ್ಟರ ಅಂಗಾರದಿಂದ ಅವಕ್ಕೆ ಗುಣವಾಗುತ್ತಿತ್ತು (ಹಬ್ಬಬ. ೨೫). ೩. ಇದ್ದಲು. ೪. ದೇವರ ಧೂಪಾರತಿಯ ಕೆಂಡವನ್ನು ನೀರಿನಲ್ಲಿ ಆರಿಸಿ ಅದರಿಂದ ಮಾಧ್ವರು ಹಣೆಯಲ್ಲಿ ಧರಿಸುವ ಕರಿಯ ಊರ್ಧ್ವರೇಖೆ : ರಾಯರ ಸನಾತನಿ ಬಾಲಮಿತ್ರ ಅವರಿಗೆ ದೇವರ ಅಂಗಾರ ಕೂಡ ಹಚ್ಚಿ ಹೋದ (ನಿರಾಭ. ೬೪-೭) ; ವೈಷ್ಣವರ ಮಕ್ಕಳಿಗೆ ಅಂಗಾರವೇ ಬಂಗಾರ, ಸ್ಮಾರ್ತರ ಮಕ್ಕಳಿಗೆ ಗಂಧವೇ ಚಂದ (ಗಾದೆ). ೫. ಮಂಗಳಗ್ರಹ. ೬. ಇಂಗಾಲ (Carbon) : ನಿಜವಾದ ವಜ್ರವು ಬರೀ ಅಂಗಾರದ ಪರಮಾಣುಗಳ ಸಮೂಹವಾದುದರಿಂದ ಅವು ಎಕ್ಸ್‌ರೇಗೆ ಸಂಪೂರ್ಣ ಪಾರದರ್ಶಕಗಳು (ಎಕ್ಸ್‌ರೇ. ೫೪) ; ಇದ್ದಲುಒಲೆಯಲ್ಲಿ ಹೊಗೆಯೇಳದಿದ್ದರೂ, ಸರಿಯಾಗಿ ಉರಿಯದೆ ಅಂಗಾರ ಉತ್ಪನ್ನವಾಗಿ, ವಾಯು ಸಂಚಾರದ ವ್ಯವಸ್ಥೆಯಿಲ್ಲದಿದ್ದರೆ ವಾತಾವರಣ ವಿಷಮಯವಾಗುವ ಸಂಭವವಿದೆ (ಅಡುಸಾ. ೧೬). [ಸಂ.]

**ಅಂಗಾರಕ** (ನಾ). ೧. ಕೆಂಡ. ೨. ಮಂಗಳಗ್ರಹ ; ಕುಜ. ೩. = ಅಂಗಾರ ೪ : ಅಂಗವಸ್ತ್ರ ಇಲ್ಲದಿದ್ದರೆ ಅಂಗಾರಕ ಇಡಬಾರದೆ (ಗಾದೆ. ೬). ೪. ಗರುಗದ ಸೊಪ್ಪು : "ಗರುಗಮಂಗಾರಕಂ" (ಮಂಗರಾ. ೩೯-೨೮). [ಸಂ.]

**ಅಂಗಾರಕಟ್ಟು** (ಕ್ರಿ). (ಉಕ) ಕಪ್ಪುಬೂದಿಯಿಂದ ಜೋಳದ ರಾಶಿಯ ಮೇಲೆ ಸೂರ್ಯ, ಚಂದ್ರ, ಗಿಡ ಮೊದಲಾದವುಗಳನ್ನು ರಚಿಸು : ಕಾಳಿಗೆ ಅಂಗಾರ ಕಟ್ಟಿದರು (ರೂಢಿ). [ಅಂಗಾರ + ಕಟ್ಟು$_1$]

**ಅಂಗಾರಕಮಣಿ** (ನಾ). = ಅಂಗಾರಮಣಿ. [ಅಂಗಾರಕ + ಮಣಿ]

**ಅಂಗಾರಗಂಧಿ** (ನಾ). "ಇಂಗು" (ಅನಂನಾ. ೨೦).

[ಸಂ. ಅಂಗಾರಗಂಧಿನ್ (ಅಂಗಾರ + ಗಂಧ + -)]

**ಅಂಗಾರಗಡ್ಡೆ** (ನಾ). = ಅಂಗರಗಡ್ಡೆ. [ಅಂಗಾರ + ಗಡ್ಡೆ$_1$]

**ಅಂಗಾರಚೂಡ** (ನಾ). ೧. ಪಾರಿವಾಳ (ಓಷಧಿ. ೮). ೨. ಮುಳ್ಳುಮುತ್ತುಗ (ಓಷಧಿ. ೮). [ಅಂಗಾರ + ಚೂಡ]

**ಅಂಗಾರದಾನಿಕೆ** 'ಅಂಗಾರಧಾನಿಕೆ' ನೋ.

**ಅಂಗಾರಧಾನಿಕೆ**, ಅಂಗಾರದಾನಿಕೆ (ನಾ). ಅಗ್ಗಿಷ್ಟಿಕೆ. **ಅಂಗಾರದಾನಿಕೆ**: ಪೊಗೆಯುರಿವೆರಸಿದಂಗಾರದಾನಿಕೆಯಂತೆ (ಕುರಾಸಾಂ. ೮-೧೧).

[ಸಂ. ಅಂಗಾರಧಾನಿಕಾ (ಅಂಗಾರ + ಧಾನಿಕಾ)]

**ಅಂಗಾರಪರ್ಣಿ** (ನಾ). ಖಾರವಾದ ಒಂದು ಬಗೆಯ ಔಷಧಿಯ ಗಿಡ (ಸ್ಯಾಂಡರ್). [ಸಂ. ಅಂಗಾರಪರ್ಣಿನ್ (ಅಂಗಾರ + ಪರ್ಣ + -)]

**ಅಂಗಾರಮಣಿ** (ನಾ). ಹವಳ (ಓಷಧಿ. ೮). [ಅಂಗಾರ + ಮಣಿ]

**ಅಂಗಾರವಲ್ಲರಿ** (ನಾ). ೧. ಹೊಂಗೆಯ ಮರ. ೨. ಹುಲಿಗಿಲಿಗಿಡ. (ಅಮರ. ಟೀಕೆ). [ಅಂಗಾರ + ವಲ್ಲರಿ]

**ಅಂಗಾರವಲ್ಲಿ** (ನಾ). ಗಂಟುಭಾರಂಗಿ (ಅಮರ. ಟೀಕೆ); ಗುಂಜಿ; "ಒಂದು ಬಗೆಯ ಬಳ್ಳಿ" (ಕಸ್ತೂರಿ). [ಅಂಗಾರ + ವಲ್ಲಿ₂]

**ಅಂಗಾರಶಕಟಿ** (ನಾ). ೧. ಕರಿಯುವ ಬಾಣಲೆ, —ಬಾಂಡಲೆ, —ಬಾಳಿಗೆ: "ಅಂಗಾರಶಕಟೀ, ಹಸಂತೀ, ಹಸಂತಿಕಾ–ಈ ೩ ಬೆಸಳಿಗೆ" (ಹಲಾಯು. ೫೨–೧೫೫); "ಅಂಗಾರಶಕಟಿಯೆಂದರೆ ಬಾಣಲೆಯೆನಿಕ್ಕು" (ಮಂಗರಾ. ೬೩–೨೪). ೨. ಅಗ್ಗಿಷ್ಟಿಕೆ. [ಸಂ. ಅಂಗಾರಶಕಟೀ (ಅಂಗಾರ + ಶಕಟೀ)]

**ಅಂಗಾರಸ್ಫೋಟಿಕ** (ನಾ). = ಅಂಗರವೋಳಿಗೆ. [ಅಂಗಾರ + ಸ್ಫೋಟಕ]

**ಅಂಗಾರಹೋಳಿಗೆ** (ನಾ). = ಅಂಗರವೋಳಿಗೆ: ಅದಕೆ ಹೊಸ ಕಣಿಕ ದಂಗಾರಹೋಳಿಗೆಗಳಂ ಹೊದಿಸಿ ಕೋಲಂ ಮುಚ್ಚಿ ತಱಿಗೆಂಡದೊಳಗೆ ಕೆಂಪಾಗುವಂದದಿ ಕಾಸಿ (ಸೂಪಶಾ. ೫–೪೬). [ಅಂಗಾರ + ಹೋಳಿಗೆ (< ಪೋಳಿಗೆ)]

**ಅಂಗಾರಾಮ್ಲ** (ನಾ). = ಇಂಗಾಲಾಮ್ಲ: ನಾವು ಒಳಕೊಂಡ ವಾಯು ವಿಗಿಂತ ಹೆಚ್ಚು ಅಂಗಾರಾಮ್ಲವೂ ಕಡಿಮೆ ಆಮ್ಲಜನಕವೂ ಇವೆಯೆಂದು ಗೊತ್ತಾಗುವುದು (ಪ್ರಾಣಿಶಾ. ೪). [ಅಂಗಾರ + ಅಮ್ಲ]

**ಅಂಗಾರಿಕ** (ನಾ). ೧. ಮುತ್ತುಗದ ಮೊಗ್ಗು. ೨. ಕಬ್ಬಿನ ದಂಟು. [ಸಂ. ಅಂಗಾರಿಕಾ]

**ಅಂಗಾರ್ಚನೆ** (ನಾ). ೧. ಪ್ರಧಾನಪೂಜೆ (ಸ್ಯಾಂಡರ್). ೨. ಅಂಗಗಳ ಪೂಜೆ (ಸ್ಯಾಂಡರ್). [ಅಂಗ₂ + ಅರ್ಚನೆ]

**ಅಂಗಾಲ್**, ಅಂಗಾಲು (ನಾ). ಕಾಲ ಅಡಿ; ಹೆಜ್ಜೆಯ ಕೆಳಭಾಗ; ಪಾದದ ಕೆಳಭಾಗ: "ಚರಣತಳಮೆಂದೊಡಂಗಾಲೆನಿಕುಂ" (ಮಂಗರಾ. ೯೪–೧೮); ನರಪತಿ ನಿನ್ನಂಗಾಲೊಳ್ ನರೆ ಬರ್ಪಿನಮುತ್ತರೋತ್ತರಂ ಪುದುವಾೞ್ಗಾ (ಶಾಂತಿಪು. ೯–೫೨); ಅಂಗಾಲೊಳ್ ಮುಳ್ ನಡೆಯುಂ ತಾನೆಂತು ಮಱುಗುವನಂತು (ಸಮುಪ. ೫–೬). **ಅಂಗಾಲು**: ನಿನ್ನಂ ಗಾಲು ದಸಿ ನಟ್ಟು ನಿನಗೆ ನಡೆಯಲು ಬಹುದೆ (ಬಸಪು. ೪೪–೮); ಅಂಗಾಲ ತೊಳೆದೊಳಗೈತನ್ನಿರಿ (ಭರಚ. ೪–೪೬); ಅಡಿ ಬಾ ನನ್ನಯ್ಯ ಅಂಗಾಲ ತೊಳೆದೇನು (ಹೆಮುಪ. ೮); ಅಂಗಾಲಿಗೆ ತ್ರಾಣವಿದ್ದರೆ ಬಂಗಾಳಕ್ಕೆ ಹೋಗಬಹುದು (ಗಾದೆ). [ಅಂ–$_0$ (< ಅಗಂ) + ಕಾಲ್. "ಅಗಂ" ಎಂಬುದಕ್ಕೆ 'ಅಗ–$_1$' ನೋಡಿ. ℙ ಹಳಗನ್ನಡದ ವ್ಯಾಕರಣಗಳ ಮೇರೆಗೆ, ಅಡಿ + ಕಾಲ್ (ಭಾಷಾಭೂ. ೧೨೯ ಉದಾ; ಶಮದ. ೧೬೬ ಪ್ರಯೋ; ಶಬ್ದಾನು. ೩೦೬ ಪ್ರಯೋ). ‖ ತುಳು. ಅಂಗಾರ್]

**ಅಂಗಾಲು** 'ಅಂಗಾಲ್' ನೋ.

**ಅಂಗಾವಬದ್ಧ** (ನಾ). [ತತ್ತ್ವಶಾ] ಅಂಗಕ್ಕೆ ಅಂಟಿಕೊಂಡಿರುವವನು: ಶ್ರೀ ಪರಬ್ರಹ್ಮನ ಅತಿವಿಮಲವಾದ ಅಂಗಗಳನ್ನು ಆಶ್ರಯಿಸಿ ಕೊಂಡಿರುವುದರಿಂದ ಅಂಗಾವಬದ್ಧರೆಂದು ಬ್ರಹ್ಮಾದಿ ತತ್ವೇಶರಿಗೆ ಹೆಸರು (ಹಸಾರ. ೧೦–೧. ಟೀಕೆ. ೫೫೫). [ಸಂ. (ಅಂಗ₂ + ಅವಬದ್ಧ)]

**ಅಂಗಾಶ್ರಮ** (ನಾ). [ವೀಶೈ] ದೀಕ್ಷೆಯಿಲ್ಲದೆ ಕೇವಲ ಜೀವಭಾವದಲ್ಲೇ ಇರುವ ಸ್ಥಿತಿ: ಅಂಗಾಶ್ರಮವಳಿದು ಲಿಂಗಾಶ್ರಮವಾದ ಬಳಿಕ ಆ ಅಂಗಕ್ಕೆ ಲಿಂಗಾಚಾರವಲ್ಲದೆ ಅಂಗಕ್ರಿಯೆಯೆಂಬುದನಂಗೈಸರು ನೋಡಾ (ಚೆನ್ನವ. ೬–೩). [ಅಂಗ₂ + ಆಶ್ರಮ]

**ಅಂಗಿ₁** (ನಾ). ಒಂದು ಜಾತಿಯ ಮರ: ತುಂಗಿಯಿಂ ಅಂಗಿಯಿಂ ಪೊರಲೆಯಿಂ . . . ಕಾಡಿಸೆದುದು (ನಂದಿನಾ. ೧೩–೧೨). [?]

**ಅಂಗಿ₂** (ಗು). ೧. ಅಂಗಗಳುಳ್ಳ; ಅವಯವಗಳುಳ್ಳ; ದೇಹವುಳ್ಳ. ೨. ಮುಖ್ಯವಾದ; ಪ್ರಧಾನವಾದ. (ನಾ). ೩. ಮೈಗೆ ತೊಟ್ಟುಕೊಳ್ಳುವ, ತೋಳುಗಳುಳ್ಳ ಒಂದು ಉಡುಪು; ಕವಚ: ಹರಿ ಕರುಣವೆ ಅಂಗಿ ಗುರುಕರುಣ ಮುಂಡಾಸು (ಪುರಂದ. ೨–೧೫–೧); ಅವಳಾ ಕುಶಂಗೊಳಗಣಿಂದಂಗಿಯಂ ತಂದಳವಡಿಸಿ ಪರಸಿ ಬೀಳ್ಕೊಟ್ಟಳು (ಜೈಮಿಭಾ. ೨೦–೨೨); ಅಂಗಿಯ ತೊಟ್ಟರೆ ರಂಗನ ಸರಿಯೆಂಬೆ ಚುಂಗು ಬಿಟ್ಟರೆ ನವಿಲೆಂಬೆ (ಜೋಗುಳ); ಅಂಗಿ ಕೊಟ್ಟು ಭಂಗಿ ಸೇದಿ ಮಂಗನಾದ (ಗಾದೆ). 'ನಿಲುವಂಗಿ', 'ಬಗಲಂಗಿ' ಪರಾ. [ಸಂ. ಅಂಗಿನ್]

**ಅಂಗಿಕೆ** 'ಅಂಗಿಗೆ' ನೋ.

**ಅಂಗಿಗೆ**, ಅಂಗಿಕೆ (ನಾ). ಅಂಗಿ; ಕವಚ: ತೊಟ್ಟಂಗಿಗೆ ತನ್ನೊಳಮರೆ ಬೇಂಟೆಯನೊರ್ವಂ ಬಂದು ಪೊಡೆವಟ್ಟು ಕಂಡಿಂತೆಂದಂ (ಪಂಪಭಾ. ೫–೩೬, ೩೭); ತೊಟ್ಟ ಪೂವಿನಂಗಿಗೆ ಪೊಳೆದೊಪ್ಪಿ (ಅರ್ಧನೇ. ೪–೧೩೮); ಉದಯರಾಗದಂಗಿಗೆಯಂ ತೊಟ್ಟು (ಪಾರ್ಶ್ವಪು. ೮–೩೦೭); ತೊಟ್ಟಿರ್ದ ದುಕೂಲದಂಗಿಗೆ ಕರಂ ಕಣ್ಗೊಪ್ಪೆ ನಿಂದಿರ್ದನಂ (ಮಹಾನೇ. ೬–೪೨). **ಅಂಗಿಕೆ**: ಇತ್ತಂಗಿಕೆಯಂ ಕೊಂಡದನತ್ತಿತ್ತಲು ಮಗುಚುತಲರ್ಜುನ ತೊಡೆ (ಯವಿಪ. ೩೯). [ಸಂ. ಅಂಗಿಕಾ]

**ಅಂಗೀಕರಣ** (ನಾ). = ಅಂಗೀಕಾರ. [ಸಂ.]

**ಅಂಗೀಕರಿಸು** (ಕ್ರಿ). ೧. ತನ್ನದಾಗಿ ಮಾಡಿಕೊ; ಸ್ವೀಕರಿಸು: ಅದೇನೆಂದು ಗಡೆನ್ನನೀಗಳಂಗೀಕರಿಪಳ್ (ಕಾದಂಉ.೪೦೨); ಸಂಗತಿ ಮಾಡಿದಳ ಮರಾಜ ನಾನದನಂಗೀಕರಿಸಿ ಬರೆದೆನು (ಭರಚ. ೮–೫). ೨. ಆಯ್ದುಕೊ; ವರಿಸು: ಇವರೊಳಾರಲಿ ಚಿತ್ತ ನಿನಗುಂಟವರನಂಗೀಕರಿಸು (ತೊರರಾ. ೧–೧೪–೩೨); ಮಗಳನಂಗೀಕರಿಸಿದ ದೋಷವೊಂದು ನಾಲ್ಕೊಗನಿಂಗೆ ಬಂದುದ ಕಂಡು (ಮೋಹತ. ೨೬–೨೪). ೩. ತಾಳು; ಧರಿಸು: ಮರಳಿ ಮುನ್ನಿನ ರೂಪನಂಗೀಕರಿಸಿ ವಾಘೆಯ ಕೊಂಡು (ಕುವ್ಯಾಭೀ. ೩–೯೨); ರಂಜಿಸಿದಂ ಬಾಲಸಮೀರಸಖನ ಭಂಗಿಯನಂಗೀಕರಿಸಿ (ಜಯಕಾ. ೨–೬೪). ೪. ಒಪ್ಪು; ಅನುಮತಿಸು: ಐಸೆ ಮತ್ತೇನೆನುತ ಸೇನಾಧೀಶನಂಗೀಕರಿಸಿದನು (ತೊರರಾ. ೨–೩–೨೫). [ಅಂಗೀಕರಣ + –ಇಸು₃]

**ಅಂಗೀಕಾರ** (ನಾ). ಒಪ್ಪಿಗೆ; ಸಮ್ಮತಿ; ಅನುಮತಿ. [ಸಂ.]

**ಅಂಗೀಕೃತ** (ಗು). ಒಪ್ಪಿಗೆ ಪಡೆದ; ಸ್ವೀಕೃತವಾದ. [ಸಂ.]

**ಅಂಗೀಕೃತಿ** (ನಾ). = ಅಂಗೀಕಾರ. [ಸಂ.]

**ಅಂಗೀಜು**, ಅಂಗೇಜು (ನಾ). ೧. ಇತರರಿಂದ ಬರಬಹುದಾದ ತೊಂದರೆ; ಕಾಟ; ಅಪಾಯದ ಆತಂಕ: ರಾಜರವರು ಆತಂಕವಿಲ್ಲದೆ ಸ್ವತಂತ್ರರಾಗಿ ಟೀಪುಸುಲ್ತಾನರ ಅಂಗೀಜು ಇಲ್ಲದೆ ಇರಬೇಕು ಯಂತಾ ನಿಶ್ಚೈಸಿ (ರಾಜೇಂದ್ರ. ೫೩). ೨. ಧೈರ್ಯ; ಶೌರ್ಯ; ಸಾಹಸ (ಸ್ಯಾಂಡರ್). ಅಂಗೀಜು ಮಾಡು = ಸಾಹಸ ಮಾಡು; ಅಪಾಯವನ್ನು ಎದುರಿಸು (ಸ್ಯಾಂಡರ್). **ಅಂಗೇಜು** (ಸ್ಯಾಂಡರ್). [← ಪಾರ. ಹಿಂ. –ಅಂಗೇಜ್ = ಉದ್ರೇಕಗೊಳಿಸತಕ್ಕ; ಮರಾ. ಅಂಗೀಜ್, ಅಂಗೇಜ್]

**ಅಂಗು** (ನಾ). ೧. ಮರ್ಮ; ಒಳಗುಟ್ಟು: ಒಮ್ಮೆ ಯೇಳುತ ಕವಳಗೊಳ್ಳುತ ತಮ್ಮತಮ್ಮಂಗುಗಳ ಕೊಡದಲೆ ಹಮ್ಮಿನಿಂ ತಿರುಗುತ್ತ (ಅರ್ಜಾವಿ. ೧೫–೪೬); ಇಂತಿರಲು ವಂಗೇಶನಂಗನದೆಂತು ಕಂಡನೊ ಚಿತ್ರವರ್ಮನು (ಅರ್ಜಾವಿ. ೧೫–೪೭). ೨. ಹೆಂಗಸಿನ ಜನನೇಂದ್ರಿಯದ ಅಗ್ರಭಾಗ; ಭಗಾಂಕುರ: ಅಂಗಜಗೃಹಂ ಭಗಮುಪಸ್ಥಂ ವರಾಂಗಮೆನಲಂಗನೆಯ ಯೋನಿಯಕ್ಕದಱಂಕುರಂ ಶಿಖಮದಂಗು (ಮಂಗರಾ. ೯೭–೧೪). [~ ಅಂಗ₃ ?]

**ಅಂಗುಟ** (ನಾ). ಪಾದದ ಹೆಬ್ಬೆರಳು: ತಪೋಬಲವೃದ್ಧಿಯಿಂದಾ

ಪರ್ವತಮನೆಡೆದ ಪಾದದಂಗುಟದ ಕೊನೆಯಿಂದೊಯ್ಯನೊತ್ತುವುದುಂ (ಪುಣ್ಯಾಸ್ರ. ೫-೫೫ ವ) ; ಸೊಬಗ ಬೀಜುತಂಗುಟದುದಿಗಳಲಿ ನಿಂದು (ನಂದಿಮಾ. ೪-೧೬) ; ಕೆಂದಳಿರೆಸಳ ದೀಧಿತಿ ತಮ್ಮ ಚರಣಾರವಿಂದದಂ ಗುಳಿಯ ಚೆಲ್ವಿಕೆಗೆ ಮುಂದೆಣೆಯಿಲ್ಲೆಂದು ವೀರಮುದ್ರೆಯ ನಗುತೊಂದಿಸಿ ಮೆಜೆದರಂಗುಟಕೆ (ಕಂಸವಿ. ೨೪-೨೨). 'ಉಂಗುಟ' ಪರಾ.
[ಸಂ. ಅಂಗುಷ್ಠ]

**ಅಂಗುಡಿ** (ನಾ). ಕುದುರೆಯ ಕಡಿವಾಣಕ್ಕೆ ಜೋಡಿಸಿರುವ ಉಂಗುರ (ಸ್ಯಾಂಡರ್). [?]

**ಅಂಗುರ್**, ಅಂಗುರ, ಅಂಗುರು (ನಾ). ಹಿರಿಮದ್ದಿನ ಬೇರು ; ಅಂಗರ ಬೇರು ; ಅಶ್ವಗಂಧಿ : "ಅಂಗುರುಮಶ್ವಗಂಧಮುಕ್ಕು" (ಮಂಗರಾ. ೩೯-೨೭) ; ಆಳಿಯೊಳ್ ಬೋಟಿತರಂ ಸಿತಾಜ್ಯದೊಳಮಂಗುರ್ ಬೆಲ್ಲದೊಳ್ ನಾಗರಂ . . . ಒಂದೊಂದೆ ಕೇವಳಮಾಯುಷ್ಯಕರಂ (ಲೋಕೋಪ. ೯-೪೩). **ಅಂಗುರ** : ಶೂಲೆ ತೋಜೆತೆಂದಿರದೊಡಗೂಡಿ . . . ಹಿಂಗುಮಂಗುರ ಗುಡವೋವು . . . ಇವನಿಕ್ಕೆ ಮಟ್ಟುಗುಂ (ಲೋಕೋಪ. ೯-೨೦೪) ; ಅಂಗುರದ ಬೇರಂ ಮೊಸರೊಳು ತಿನ್ನೆ ಕಾಮಾಲೆ ತೀರ್ಗುಂ (ವಿವೈವಿ. ೯೩). **ಅಂಗುರು** : ಪರಿಹರಿಕು ಮೇಣ್ ಶೃಂಗಿಯ ಗರಳಮನಂಗುರುವಿದೊಂದೆ ಕಳೆಗುಮವೋಘಂ (ಖಮುದ. ೨-೨೬). [?]

**ಅಂಗುರ** 'ಅಂಗುರ್' ನೋ.

**ಅಂಗುರು** 'ಅಂಗುರ್' ನೋ.

**ಅಂಗುಲ**, ಅಂಗುಳ$_2$ (ನಾ). ೧. ಬೆರಳು. ೨. ಹೆಬ್ಬೆರಳು : ಆ ನಿರೂಢಿಯ ಶಂಭು ಜನಿಸಿದನತ್ರಿಯಂಗುಲದಿ (ಸಂಭಪ. ೯-೧೫). ೩. ಒಂದು ಬೆರಳಿನ ಅಗಲದ ಅಳತೆ. ೪. ಒಂದು ಇಂಚು (Inch). **ಅಂಗುಳ$_2$** : ೧. ಅಂಗುಳಿಯ ಮುಳ್ಳಂ ಸುದತಿ ತನ್ನಂಗುಳದಿನೊತ್ತುವಳು (ಬಸಪು. ೧೫-೧೧). [ಸಂ.]

**ಅಂಗುಲಿ**, ಅಂಗುಳಿ$_2$ (ನಾ). ೧. ಬೆರಳು. ೨. ಹೆಬ್ಬೆರಳು. ೩. ಆನೆಯ ಸೊಂಡಿಲಿನಲ್ಲಿ ಬೆರಳಿನ ಹಾಗಿರುವ ತುದಿ. ೪. "ಆನೆಯ ಕಿವಿಯೊಳಗಿನ ಆಭರಣ" (ಗಂಗಾನು). ೫. ಅಂಗುಲೀಯ (ಕಿ). ೬. ಗಜಕರ್ಣಿಕೆಯ ಗಿಡ. ೭. ಅರಿದಾಳ : ಅಂಗುಲಿ ಕಟೋರವೆನಲರಿದಾಳಮೆನಿಸಿಕ್ಕು (ಮಂಗರಾ. ೩೧-೭). **ಅಂಗುಳಿ$_2$** : ೧. ಅಂಗುಳಿ ಮಡಿದ ಕುಡಿತೆಯಂ ಪ್ರಸೃತಿಯೆಂಬುದು (ಹಲಾಯು. ೮೮-೩೮೩). [ಸಂ.]

**ಅಂಗುಲಿಕ್ರಿಯೆ** (ನಾ). ಬೆರಳಿನಿಂದ ಮಾಡುವ ಕೆಲಸ (ಮುಟ್ಟುವುದು, ತುರಿಸುವುದು ಇತ್ಯಾದಿ) : "ಬೆರಂಟು – ಅಂಗುಲಿಕ್ರಿಯಾಯಾಂ" (ಶಮಧಾ). [ಅಂಗುಲಿ + ಕ್ರಿಯೆ]

**ಅಂಗುಲಿತ್ರಾಣ** (ನಾ). ಬೆರಳನ್ನು ರಕ್ಷಿಸುವ ಸಾಧನ ; ಬೆರಳು ಕಾಪು. [ಅಂಗುಲಿ + ತ್ರಾಣ]

**ಅಂಗುಲಿನಿ** (ನಾ). ಮೈಮೇಲೆ ವಿಶೇಷವಾಗಿ ಕೂದಲು ಇರುವ ಹೆಂಗಸು (?) : ಮೊಜೆಯಿಲ್ಲದಳಂಗುಲಿನಿಯನಜೆದುಂಬೆಯ ಹೊಕ್ಕದಿರ್ದಳಂ ಯೋಗಿನಿಯಂ ನೆಜೆ ಮಾಹಂದಪ್ಪಿದಳಂ ಪೆಜತೇನೊ ವಯೋಧಿಕೆಯುಮಾಗದು ಕೂಡಲ್ (ಮದತಿ. ೯-೩).
[~ ಅಂಕುರ ?]

**ಅಂಗುಲಿಪ್ರಹರಣ** (ನಾ). ಬೆರಳಿನಿಂದ ಹೊಡೆಯುವುದು : "ಅಡೆ–ಅಂಗುಲಿಪ್ರಹರಣೇ" (ಶಮಧಾ). [ಅಂಗುಲಿ + ಪ್ರಹರಣ]

**ಅಂಗುಲಿಮುದ್ರಿಕೆ** (ನಾ). ಮುದ್ರೆಯುಂಗುರ.
[ಅಂಗುಲಿ + ಮುದ್ರಿಕೆ]

**ಅಂಗುಲಿಮುದ್ರೆ** (ನಾ). = ಅಂಗುಲಿಮುದ್ರಿಕೆ.
[ಅಂಗುಲಿ + ಮುದ್ರೆ]

**ಅಂಗುಲಿಮೋಟನ** (ನಾ). (ಬೆರಳಿನಿಂದ) ನೆಟ್ಟಿಕೆ ಮುರಿಯುವುದು ; ಚಿಟಿಕೆ ಹೊಡೆಯುವುದು ; ನೆಟ್ಟಿಕೆ ; ಚಿಟಿಕೆ.
[ಸಂ. (ಅಂಗುಲಿ + ಮೋಟನ)]

**ಅಂಗುಲೀಯ** (ನಾ). = ಅಂಗುಲೀಯಕ. [ಸಂ.]

**ಅಂಗುಲೀಯಕ** (ನಾ). ಉಂಗುರ. [ಸಂ.]

**ಅಂಗುಲ್ಯಾಭರಣ** (ನಾ). ಬೆರಳಿನಲ್ಲಿ ಧರಿಸಿಕೊಳ್ಳುವ ಆಭರಣ ; ಉಂಗುರ. [ಅಂಗುಲಿ + ಆಭರಣ]

**ಅಂಗುಷ್ಠ** (ನಾ). ೧. ಹೆಬ್ಬೆರಳು : ಅಂಗುಷ್ಠ ಬಾತರೆ ಪರ್ವತವಾದೀತೆ ? (ಗಾದೆ). ೨. ಹೆಬ್ಬೆರಳಿನ ಅಗಲದ ಅಳತೆ (ಒಂದು ಅಂಗುಲಕ್ಕೆ ಸಮವೆಂದು ಎಣಿಕೆ). [ಸಂ.]

**ಅಂಗುಷ್ಠಪ್ರಸೇನ** (ನಾ). [ಜೈನ] ಒಂದು ಅಪ್ರಧಾನವಾದ ವಿದ್ಯೆ : ಅಂಗುಷ್ಠಪ್ರಸೇನಾದಿ ಸಪ್ತಶತ ಕ್ಷುಲ್ಲಕವಿದ್ಯೆಗಳುಮಂ (ತತ್ತ್ವಪ್ರ. ೬೩).
[ಸಂ. (ಅಂಗುಷ್ಠ + ಪ್ರಸೇನ)]

**ಅಂಗುಸ್ತಾನಿ** 'ಅಂಗುಸ್ತಾನು' ನೋ.

**ಅಂಗುಸ್ತಾನು**, ಅಂಗುಸ್ತಾನಿ (ನಾ). ಹೊಲಿಯುವಾಗ ಬೆರಳಿಗೆ ಹಾಕಿಕೊಳ್ಳುವ ಲೋಹದ ರಕ್ಷೆ ; ಬೆರಳುಕಾಪು ; ಬೆರಳುಟೋಪಿ. **ಅಂಗುಸ್ತಾನಿ** (ಕಿ).
[← ಪಾರ. ಅಂಗುಷ್ತ್‌ದಾನ್ ; ಹಿಂ. ಅಂಗುಶ್ತಾನಾ ; ಮರಾ. ಅಂಗುಷ್ಠಾಣ್, ಅಂಗುಸ್ತಾನ್, ಅಂಗುಸ್ಥಾನ್]

**ಅಂಗುಳ್**, ಅಂಗಳ$_1$, ಅಂಗುಳ$_1$, ಅಂಗುಳಿ$_1$, ಅಂಗುಳು (ನಾ). ೧. ಗಂಟಲಿನಲ್ಲಿ ಮೂಗಿನ ದ್ವಾರವನ್ನೂ ಬಾಯನ್ನೂ ಪ್ರತ್ಯೇಕಿಸುವ ಕಿರುನಾಲಗೆಯ ಪ್ರದೇಶ ; ಗಂಟಲ ಮೇಲಟ್ಟ ; ಅಟ್ಟಣ : ಅಂಗುಳೊಳಡಸಿದ ವಿಷಮುಂ . . . ಅಮರ್ದಿರೆ ಮದನಹರಂಗೆಣೆಯೆನಿಪುದಜೆನಮಗೆ ಖಳರಭಿವಂದ್ಯರ್ (ಕಾವ್ಯಾವ. ೭೬೩) ; ಅಂಗುಳ್ಮುಟ್ಟದೆ ಜಗಮಂ ನುಂಗುವ ಲಯಕಾಲಕಾಲಸಾರಭಟಿಯುಂ (ಜಗವಿ. ೧೨-೪೯) ; ಅಂಗುಳೊಳ್ ವಿಷಮಾಂತು ವಿವರದಲ್ಲಿರ್ದು ತನ್ನಂಗಮಂ ತುಳಿಯೆ ಕೆಡಿದು (ಸಿದ್ಧೇಪು. ೧-೧೭). **ಅಂಗಳ$_1$** : ೧. ಆ ಬಕಪಕ್ಷಿಯ ಅಂಗಳದಲ್ಲಿ ಉರುಪನ್ನು ಹುಟ್ಟಿಸಿದನು (ಭಾಮೃತ. ೩೧೩). ೨. ಕಿರುನಾಲಗೆ (ಉಕ). **ಅಂಗುಳ$_1$** : ೧. ನೀರಿಲ್ಲದಂಗುಳಗಳೊಣಗುತುಂ (ಚಬಪು. ೫೬-೨೪). **ಅಂಗುಳಿ$_1$** : ೧. ಅಂಗುಳಿಯ ಮುಳ್ಳಂ ಸುದತಿ ತನ್ನಂಗುಳದಿನೊತ್ತುವಳು (ಬಸಪು. ೧೫-೧೧). **ಅಂಗುಳು** : ೧. ಮಗುವು ಸತ್ತು ಕೊರಳು ಕುಗ್ಗದು, ಅಂಗುಳಾಜದು (ಮೋಳಿವಾ. ೮೦೦) ; ಕೂಳಿಲ್ಲದೆ . . . ಹೂಳಿದಂಗುಳು ಸಾರವಜತ ಬಾಯಿ (ಸಮ್ಯಕೌ. ೧೦-೪೮). ೨. ನಾಲಿಗೆ ಅಂಗುಳುಗಳಿಂದ ಸ್ವಾದ ತಿಳಿಯುತ್ತದೆ (ಮುಂಬಯಿ. ೪-೮೬). **ಅಂಗಳದ ಮುಳ್ಳು** = ಅಂಗುಳಿಮುಳ್ (ಕಿ). [ದೇ. ?. ॥ ತೆಲು. ಅಂಗಿಲಿ]

**ಅಂಗುಳ$_1$** 'ಅಂಗುಳ್' ನೋ.

**ಅಂಗುಳ$_2$** 'ಅಂಗುಲ' ನೋ.

**ಅಂಗುಳಿ$_1$** 'ಅಂಗುಳ್' ನೋ.

**ಅಂಗುಳಿ$_2$** 'ಅಂಗುಲಿ' ನೋ.

**ಅಂಗುಳಿಮುಳ್** (ನಾ). ಕಿರುನಾಲಗೆಗೆ ಬರುವ ಒಂದು ರೋಗ ; ಕಿರುನಾಲಗೆ ಊದಿಕೊಂಡು ನುಂಗುವುದಕ್ಕೂ ಉಸಿರಾಡುವುದಕ್ಕೂ ಕಷ್ಟವಾಗುವಂತೆ ಮಾಡುವ ರೋಗ : ಬೊಪ್ಪಂಗೆ ಬೆಟ್ಟಿತಂಗುಳಿ[ಪಾಠಾಂ. ಳಿ]ಮುಳ್ಳದಾಯಿತು ಕೆಟ್ಟೆನಿನ್ನೇಗುವೆನೆನುತಳಲ್ಮುಟ್ಟೆ ಸತಿ ಸುಕುಮಾರನಿರ್ದಾ ಚೇಷ್ಟೆಯಂ ನೋಡಿ (ಬಸಪು. ೧೫-೨೨).
[ಅಂಗುಳಿ$_1$ (< ಅಂಗುಳ್) + ಮುಳ್]

**ಅಂಗುಳು** 'ಅಂಗುಳ್' ನೋ.

**ಅಂಗೂರ** (ನಾ). ದ್ರಾಕ್ಷಿ.
[← **ಪಾರ. ಹಿಂ.** ಅಂಗೂರ್ ; **ಮರಾ.** ಅಂಗುರ್, ಅಂಗೂರ್]

**ಅಂಗೂಷ** (ನಾ). ೧. ಮುಂಗುಸಿ. ೨. ಬಾಣ. [ಸಂ.]

**ಅಂಗೆಯ್**, ಅಂಗಯ್, ಅಂಗೈ (ನಾ). ಕೈಯ ಒಳಭಾಗ; ಕರತಲ : ತಾನಂಗೆಯ್ಯ ಪದ್ಮದಿಂ ಚರಣಂಗಳ ಪದ್ಮಂಗಳಿಂದೆ ಗಿರಿಸುತೆಯೆಸೆದಳ್ (ಗಿರಿಕ. ೩–೫೮); ಗಂಗಾಜೂಟ ಲಲಾಟಾಕ್ಷ ಜಯಯೆನುತಂಗೆಯ್ಯ ನಿಖಿಲಾಂಗುಲಿಯ ಮಂಗಳ ವೃಷಭಮುದ್ರೆಯ ನಮಿಸಿದ ಮೇಲೆ (ಮೋಹತ. ೨೨–೩೭). **ಅಂಗಯ್** : ಮನಮನಂಗಯ್ಯಲ್ಲಿಕ್ಕಿ ತೋರ್ಪೆನೆಂಬಂತೆ (ಕಾದಂಪೂ. ೬೪೬); ಆದಿತ್ಯನನಂಗಯ್ಯೊಳ್ ಮುಚ್ಚಲಾರ್ಗಮೇಂ ಬಂದಪುದೇ (ಸಮಪ. ೨–೯೨); ಅಂಗಯ್ಯ ಲಿಂಗಮಂ ನಿನ್ನ ಸರ್ವಾಂಗದೊಳು ಸಂಗವೆಂಬುದು ಸಂಶಯವೆ ನಿನ್ನ ಚಿತ್ತದೊಳು (ದೀಕ್ಷಾಬೋ. ೧೩೭–೧೬); ಅಂಗಯ್ಯಲಾಡುವ ಗಿಳಿ ಮುಂಗಯ್ಯ ಮೇಲಣ ಗಿಳಿ (ಪುರಂದ. ೧–೧೧೨–೬). **ಅಂಗೈ** : ಅಂಗೈಯೊಳಗಣ ಹಂಸೆ ಹಾಲನೊಲ್ಲದೆ ನೀರ ಕುಡಿಯಿತ್ತು (ಆದವ. ೧೧೪); ಸೋಗಿಲ ಸುಧಾಕಿರಣವಂಗೈಯ ಮಾಣಿಕಂ (ಬಸರ. ೧–೧೪೩); ಕೊರಂಬಿನಲಿ ನೃಪನಂಗೈಯನೆಚ್ಚನು (ಕುವ್ಯಾದ್ರೋ. ೧೧–೫೭); ಅಂಗೈತೋರಿಸಿ ಅವಲಕ್ಷಣ ಅನ್ನಿಸಿಕೊಂಡ (ಗಾದೆ); ಅಂಗೈ ಹುಣ್ಣಿಗೆ ಕನ್ನಡಿ ಯಾಕೆ ? (ಗಾದೆ). **ಅಂಗೆಯ್ಯ ನೆಲ್ಲಿ** = ಅಂಗೈನೆಲ್ಲಿ : ಎಲ್ಲಾ ಪುರುಳ್ಗಳನಂಗೆಯ್ಯನೆಲ್ಲಿಯವೋಲ್ ತಿಳಿದಿರ್ಕುಂ (ಚಕವಂ. ೧೧೧–೨೧). **ಅಂಗೈಯ ನೆಲ್ಲಿಕಾಯಿ** = ಅಂಗೈನೆಲ್ಲಿ : ನಿನ್ನ ತಪ್ಪು ಅಂಗೈಯ ನೆಲ್ಲಿಕಾಯಿಯಷ್ಟು ಸ್ಪಷ್ಟವಾಗಿದೆ (ರೂಢಿ).
[ಅಂ–$_0$ (< ಅಗಂ) + ಕೆಯ್ ; "ಅಗಂ" ಎಂಬುದಕ್ಕೆ 'ಅಗ–$_1$' **ನೋಡಿ. P** ಹಳಗನ್ನಡದ ವ್ಯಾಕರಣಗಳ ಮೇರೆಗೆ, ಅಡಿ + ಕೆಯ್ (ಭಾಷಾಭೂ. ೧೨೯ ಉದಾ ; ಶಮದ. ೧೬೬ ಪ್ರಯೋ ; ಶಬ್ದಾನು. ೩೦೬ ಪ್ರಯೋ). ‖ **ತಮಿ.** ಅಙ್ಗೈ ; **ತುಳು.** ಅಂಗೈ]

**ಅಂಗೈಗೆರೆ** (ನಾ). ಅಂಗೈಯಲ್ಲಿರುವ ಗೆರೆ, —ರೇಖೆ.
[ಅಂಗೈ (< ಅಂಗೆಯ್) + ಗೆರೆ]

**ಅಂಗೈತಳ** (ನಾ). ಅಂಗೈಯ ಪ್ರದೇಶ : ನಿರ್ದ್ವೈವರಂಗೈತಳಕೆ ಬಂದರೆ ಪರುಷ ಪಾಷಾಣ (ಕುವ್ಯಾದ್ರೋ. ೧೪–೪೬); ನುಡಿದರಂಗೈತಳದ ಬಾಯ್ಗಳಲಿ (ಕುವ್ಯಾಸ. ೧೨–೯); ಬೊಬ್ಬಿಟ್ಟನಂಗೈತಳದ ನೊಸಲಿನಲಿ (ಕುವ್ಯಾಅ. ೨೫–೩೪). **ಅಂಗೈತಳದ ಬಾಯ್ಗಳಲಿ** = (ಭಯ ವಿನಯ ಸೂಚಕವಾಗಿ) ಬಾಯ ಮೇಲೆ ಕೈಯಿಟ್ಟು ಮುಚ್ಚಿಕೊಂಡು. **ಅಂಗೈತಳದ ನೊಸಲಿನಲಿ** = ಹಿಂದೆ ಮುಂದೆ ತೋರದೆ, ದಿಗ್ಭ್ರಾಂತಿಯಿಂದ. [ಅಂಗೈ (< ಅಂಗೆಯ್) + ತಳ]

**ಅಂಗೈನೆಲ್ಲಿ** (ನಾ). ೧. ಅಂಗೈಯಲ್ಲಿರುವ ನೆಲ್ಲಿಕಾಯಿ. ೨. [ಆಲಂ] ಅತ್ಯಂತ ಸ್ಪಷ್ಟವಾದ ವಿಷಯ ; ಕರತಳಾಮಲಕ : ಮಾಯದ ಕಣ್ಣಿಗೆಲ್ಲವೂ ಅಂಗೈನೆಲ್ಲಿ (ನಡೆದಾ. I, ೪೩೭).
[ಅಂಗೈ (< ಅಂಗೆಯ್) + ನೆಲ್ಲಿ]

**ಅಂಗೈಬುತ್ತಿ** (ನಾ). ಕೈತುತ್ತು : ಅವನ ಮಕ್ಕಳು ಅಜ್ಜಿಯ ಅಂಗೈಬುತ್ತಿಗಾಗಿ ತನ್ನ ಸುತ್ತು ಸುಳಿದಾಡಬೇಕು (ಗಂಮಾಯಿ. ೩).
[ಅಂಗೈ (< ಅಂಗೆಯ್) + ಬುತ್ತಿ]

**ಅಂಗೈಸು** 'ಅಂಗವಿಸು' ನೋ.

**ಅಂಗೋಟಿ** (ನಾ). ಲಂಗೋಟಿ. (ಕ). [ಸಂ. ಅಂಗಪಟ್ಟಿಕಾ ?]

**ಅಂಗೋಡು** (ನಾ). ಅಂಗವಾಗಿ ಸೇರಿದ್ದು ; ಸಂಬಂಧಪಟ್ಟದ್ದು (?) : ಅದಕೆ ಬಂದ ಮನೆ ನೆಲ ಐರಾಲ ಅಂಗೋಡು ಸಹಿತ . . . ತನಗೆ ಬಂದ ತೋಟ ಮನೆ ನೆಲ ಹೊಲ ಅಂಗೋಡು ಸಹಿತ (ಕಇ. III–i, ೬–೧೨, ೨೦ ; 1348); ಮನೆ ಮನೆ ಠಾಉ ಅಂಗೋಡು ಅಂಗಸಸಿ ನೀರು ದಾರಿ ನಿಧಿ ನಿಕ್ಷೇಪ ಜಲ ಪಾ[ಷಾ]ಣ ಅಕ್ಷೀಣಿ ಅಗಾಮಿ ಸಿದ್ಧ ಸಾಧ್ಯಸಹಿತವಾಗಿ (ಕಇ. I, ೫೩–೧೯ ; 1433); ಆ ಗಡಿಯಿಂದೊಳಗುಳ ಮನೆ ಮನೆತಾಣ ಅಂಗೋಡು ಅಂಗಸಸಿ ನೆಲ ಹೊಲ ಮರ ಫಲ ಬೆ[ಣ] ಬಿಳಿರು ಬೆಟು ಬಿಟಿ ಮುಂತ್ತಾಗಿ ಸರ್ವಾಂಗೋಡು ಸಹಿತವಾದ (ಕಇ. III–i, ೬–೧೯, ೨೦ ; 1527); ಲಿಂಗಮುದ್ರೆಕಲ್ಲಿಂದ ಒಳಗಾದ ಗದ್ದೆ ಬೆದ್ದಲು ಮಕ್ಕಿ ಹಕ್ಕಲು ಬೆಟ್ಟು ತಿಟ್ಟು ಕಾನು ಕಾಡಾರಂಭ ಅಂಗೋಡು ಅಂಗಫಲ ನೀರದಾರಿ ನಿಧಿ ನಿಕ್ಷೇಪ ಜಲ ಪಾಷಾಣ ಅಕ್ಷೀಣ ಅಗಾಮಿ ಸಿದ್ಧ ಸಾಧ್ಯ ನವಕ್ರುತ ಕಿರುಕುಳ ಸುವರ್ನಾದಾಯ ಸರ್ವಾಂಗೋಡು ಸಹವಾದ ಭೂಮಿ ಮನೆಯಂನು ಗೈಸಿ ರೂಪಮಾಡಿಕೊಂಡು (ಎಕ. VIII, ತೀರ್ಥಹ. ೯೮–೬೨ ; 1668).
[< ಅಂಗ$_2$ + ?]

**ಅಂಗೋಪಾಂಗ** (ನಾ). ೧. ದೇಹ ಮತ್ತು ಅವಯವಗಳು. ೨. ಅಂಗ ಮತ್ತು ಅದರ ಉಪಭಾಗ : ಒಡಲನಾವರಿಸಿದಂಗೋಪಾಂಗಸಂಕುಳದ ನಡುವೆ ನಯನದ್ವಯಂಗಳು (ಹಚಕಾ. ೨–೫). [ಅಂಗ$_2$ + ಉಪಾಂಗ]

**ಅಂಗ್ರೇಜಿ** (ನಾ). (ಉಕ) ಇಂಗ್ಲಿಷ್ ಭಾಷೆ : ನಮಗ ಅಂಗ್ರೇಜಿ ತಿಳಿಯೂದಿಲ್ಲೇನು (ಎತ್ತಿಕೈ. ೫೬).
[← **ಹಿಂ.** ಅಂಗ್ರೇಜೀ ; **ಮರಾ.** ಅಂಗ್ರೇಜ್, ಅಂಗ್ರೇಜೀ (< ಇಂ. English)]

**ಅಂಘರಿಕೆ** 'ಅಂಗರಕ್ಕ' ನೋ.

**ಅಂಘವಣೆ** 'ಅಂಗವಣೆ$_1$' ನೋ.

**ಅಂಘವಿಸು** 'ಅಂಗವಿಸು' ನೋ.

**ಅಂಘಾ[ಘೋ]ಬಳ** (ನಾ). ಪಾಪದ ಶಕ್ತಿ, —ಪ್ರಭಾವ : ಅಂಘಾ[ಘೋ]ಬಳದಿಂ ದುರ್ವ್ಯಸನಂ ಘಟಿಯಿಸೆ ಸುಪೂಜಿತಾರ್ಥ ಶಾಸ್ತ್ರಂಗಳ ನುಲ್ಲಂಘಿಸಿ ಕಠೋರವಾಣಿಗಳಿಂ ಘಾತಿಸುತಿರ್ದೆಮಿನ್ನೆವರೆಗಂ ನಿಮ್ಮಂ (ಸುಕುಮಾ. ೨–೩೩). [**ಸಂ.** ಅಂಘೋಬಲ (ಅಂಘಸ್ + ಬಲ)]

**ಅಂಘೈಸು** 'ಅಂಗವಿಸು' ನೋ.

**ಅಂಘ್ರಿ** (ನಾ). ೧. ಕಾಲು ; ಹೆಜ್ಜೆ. ೨. ಮರದ ಬೇರು. 'ಅಂಘ್ರಿಪ' ಪರಾ. ೩. ಪದ್ಯದ ಒಂದು ಪಾದ : ಪೋಳೆವ ಮೊದಲಿನೆರಡು ಪದದ ಬಚಿಕ ಚರಣದೆರಡುವೆಡೆಗೆ ಕಳೆಗಳರ್ಕಸಂಖ್ಯೆಯಾಜು ಮೂಱಣಂ [ಪಾಠಾಂ. ಜಂ]ಘ್ರಿಗೆ (ಛಂದೋಂಬು. ಕ. ೫–೨೧ ಅಡಿಟ). [**ಸಂ.**]

**ಅಂಘ್ರಿತಲ** (ನಾ). ಅಡಿ ; ಅಂಗಾಲು. [ಅಂಘ್ರಿ + ತಲ]

**ಅಂಘ್ರಿತ್ರಾಣ** (ನಾ). ಪಾದರಕ್ಷೆ; ಎಕ್ಕಡ. [ಅಂಘ್ರಿ + ತ್ರಾಣ]

**ಅಂಘ್ರಿಪ** (ನಾ). ಪಾದದಿಂದ (ಎಂದರೆ ಬೇರಿನಿಂದ) ನೀರನ್ನು ಕುಡಿಯುವುದು ; ಮರ; ಗಿಡ. [ಸಂ.]

**ಅಂಘ್ರಿಪರ್ಣಿಕೆ** (ನಾ). = ಅಂಘ್ರಿವಲ್ಲಿಕೆ.
[**ಸಂ.** ಅಂಘ್ರಿಪರ್ಣಿಕಾ (ಅಂಘ್ರಿ + ಪರ್ಣ + –)]

**ಅಂಘ್ರಿಫಲ** (ನಾ). ಪಿತ್ತಕೋಶ ; ಯಕೃತ್ತು : ಕರ್ಕಂಡಮಂಘ್ರಿಫಲ ಮೆನೆ ಕಾಲಖಂಡಮೆನಿಸಿಕ್ಕು (ಮಂಗರಾ. ೧೧೪–೭). [ಅಂಘ್ರಿ + ಫಲ]

**ಅಂಘ್ರಿವಲಯ** (ನಾ). ಹೆಜ್ಜೆಯ ಸುತ್ತು ; ಪಾದದ ಹೊರಮೈ ; ಗೊರಸಿನ ಸುತ್ತು : ಜಾತಿವರ್ಣದ ಹಯಕ್ಕಂಘ್ರಿವಳಯಂ ವಾಲಮೋತು ಕಪ್ಪಾಗೆ ಸತ್ವಾಧಿಕಂ (ಮಂಗರಾ. ೮೨–೧೭).
[ಅಂಘ್ರಿ + ವಲಯ]

**ಅಂಘ್ರಿವಲ್ಲಿಕೆ** (ನಾ). "ನರಿಹೊನ್ನೆ ಗಿಡ; ಕೋಲು ಹೊನ್ನೆ" (ಸಿದ್ಧಾಂತಿ). [**ಸಂ.** ಅಂಘ್ರಿವಲ್ಲಿಕಾ (ಅಂಘ್ರಿ + ವಲ್ಲೀ + –)]

**ಅಂಚಟೆ** (ನಾ). ಬತ್ತಲೆಯಾಗಿ ಇರುವವನು (?) : ಅಂಚಟೆಗಳಜೀವರುಳರುಂ ಭವಂಬಡೆದ ಪೊಡೆಗಂಡುಗಳ್ ಮಲಿನದೇಹದ ಮರ್ಕಟರ್ (ಮದೇಪು. ೨೪–೨೭). [**ಸಂ.** ಅಚ್ಛದ ?]

**ಅಂಚಡಿ** (ನಾ). (ಉಕ) ವಸ್ತ್ರವಿಶೇಷ. 'ಅಱುವೆ' ಪರಾ.
[< ಹಚ್ಚಡ (< ಪಚ್ಚವಡ) ? ಅಥವಾ < ಅಂಚು₂ ?]

**ಅಂಚಲ,** ಅಂಚಳ (ನಾ). (ಬಟ್ಟೆಯ, ಮುಖ್ಯವಾಗಿ ಸೀರೆಯ) ಸೆರಗು. **ಅಂಚಳ** : "ಅಂಚಳಮೆಂಬುದು ಸೀರೆಯ ಸೆಱಗು" (ಹಲಾಯು. ೯೦–೩೯೬) ; "ಅಂಚಳಂ ಸೆಱಗೆನಿಕ್ಕುಂ" (ಮಂಗರಾ. ೧೧೧–೨೮). [ಸಂ.]

**ಅಂಚಲಗಪ್ಪು** (ನಾ). ನೀಲವರ್ಣದ ಸೆರಗುಳ್ಳ ವಸ್ತ್ರ (?) : ನವೀನ ಚೀನದುಜ್ಜ್ವಳಿಪ ದಳಿಂಬವಾವರಿಸಿದಂಚಲಗಪ್ಪುರದೊಪ್ಪುವಾರಮಾರಳ ವಿಯ ಮುತ್ತಿನೆಕ್ಕಸರದೋಲೆ ವಿಲಾಸಮುನೀಯೆ (ಚಂದ್ರಪು. ೮–೪೪).
[ಅಂಚಲ + ಕಪ್ಪು₆ (< ಕರ್ಪು₁)]

**ಅಂಚಳ** 'ಅಂಚಲ' ನೋ.

**ಅಂಚಿತ₁** (ಗು). ೧. ಗತವಾದ ; ಕಳೆದ. ೨. ಬಾಗಿದ ; ಕೊಂಕಿದ ; ವಕ್ರವಾದ. ೩. ಗೌರವಿಸಲ್ಪಟ್ಟ ; ಪೂಜಿಸಲ್ಪಟ್ಟ. ೪. ಮನೋಹರ; ಸುಂದರ. ೫. ಪ್ರಸಿದ್ಧ ; ಶ್ರೇಷ್ಠ. ೬. ಸ್ಪಷ್ಟ ; ಹೊಳೆಯುವ: "ವಿಶದಂ ಸ್ಪಷ್ಟಂ ಪ್ರಕಾಶಮಂಚಿತ[ಂ] ಪ್ರಕಟಂ ಸ್ಫುಟಂ ಕಾಣ್ಬುದಕ್ಕುಂ" (ಮಂಗರಾ. ೧೩೩–೨೬). (ನಾ). ೭. ಅಭಿನಯದ ಒಂದು ಬಗೆ. [ಸಂ.]

**ಅಂಚಿತ₂** (ನಾ). "ಹೊಲಿದದ್ದು ; ಚೀಲ" (ಸರ್ವಜ್ಞ. ಕೋಶ) : ಸಂಚಕವನೀಯದಲೆ ಲಂಚಕರ ಹೊಗಿಸದಲೆ ಅಂಚಿತವನೊದಱಿ ಕಳುಹಿದರೆ ಅಕಸಾಲೆ ವಂಚಿಸಲಿಕಱಿಯ (ಸರ್ವಜ್ಞ. ೧೪೧೭). [?]

**ಅಂಚಿರ** (ಗು). ಅಸ್ಥಿರ ; ಚಂಚಲ : ಪೊಸನನೆಯೊಳ್ ಪಸುರ್ಪಲರೊಳಂಚಿರಮಲ್ಲದ ಬೆಳ್ಪು (ಆದಿಪು. ೧–೬೬) ; ಅಂಚಿರಮಲ್ಲದೆ ಬೆಳಗುವ ಚಂಚದ್ಭೂಷಣ ಮಣಿಪ್ರಭಾಪ್ರಚುರತೆಯಿಂ ಸಂಚಳಿಸಿ ಪೊಳೆವ ಮಿಂಚಿನ ಗೊಂಚಲ್ ಬರ್ಪಂತೆ ಬಂದರಮರಾಂಗನೆಯರ್ (ಸುಕುಮಾ. ೮–೬೫) ; ಮುಗುಳ ತೊಡಂಬೆ ಗಂಟೊಡೆಯೆ ಮೊಲ್ಲೆಗೆ ಬೆಳ್ಸುಱಿ ಪುಟ್ಟಿ ಪುಟ್ಟಿ ಕೇದಗೆಗೆಳಸೊರ್ಕು ಚೀತರಿಸೆ ಚಾದಗೆಗಂಚಿರಮೂಗೆ ರಾಗಮುಂಚೆಗೆ . . . ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ (ಮಲ್ಲಿಪು. ೮–೬೬) ; ಅಂಚಿರಮಲ್ಲದೆ ಮೂಡಲ್ ಮಿಂಚುವೊಡಂ (ಜಟ್ಟಮು. ೮–೨೦) [ಅಂಚಿರಮಲ್ಲದೆ = ಒಂದೇ ಸಮನೆ]. [ಸಂ. ಅಸ್ಥಿರ ?]

**ಅಂಚಿರಿಸು** (ಕ್ರಿ). ಅಂಚು ಆಗುವಂತೆ ಇರಿಸು : ಪ್ರೇಮ ಪುಷ್ಪಕೆ ಮೊನಚು ಗರಗಸವನಂಚಿರಿಸಿ ಏಂ ಮಾಡಿದನೊ ಬೊಮ್ಮ (ಮಂಕುತ. ೪೧೬). [ಅಂಚು₂ + ಇರಿಸು]

**ಅಂಚು₁** (ಕ್ರಿ). ತುಳಿ ; ಅದುಮು : ತೋರಿತು ಆವನಂಗವು ಪರ್ವತದೊಲು ತೋರವು ಅತಿಬ್ಯಾಗೆ ಅನಂತಬಲಾತ್ಮಕ ಹಿಡಿದಂಚಲು ಅವ ನಾನಾ ಯತ್ನದಲಿ ದಾನವರಿಗೆ ಶಕ್ತಿ ಸಾಲದು ಶ್ರೀಹರಿ ಅನಾಯಾಸದಲಿ (ಪ್ರಸಭಾ. ೧೩೬–೪, ೫). [← ? **ತೆಲು.** ಅಂಚು = ತುಳಿ, ಬಾಧಿಸು]

**ಅಂಚು₂** (ನಾ). ೧. ಒಂದು ಕ್ಷೇತ್ರದ ಅಥವಾ ವಸ್ತುವಿನ ಕೊನೆಯ ಮೇರೆಯ ಗೆರೆ ; ಮೇರೆ ; ತುದಿ ; ಅರುಗು ; ತೀರ : ಪಿಟ್ಟೆಯನೊತ್ತಿ ಲತೆಯಿಱಿದೆರಡು ಬಟ್ಟಲ ನಡುವೆಯಿರಿಸಿಯೆರಡಱಂಚುಗಳ ಮುಱಿದು (ಸೂಪಶಾ. ೧–೧೧) ; ಹಾಲೊಳಗೆ ಅಂಚಿನೊಳು ಸುಣ್ಣದ ಕುಱುಹನಿಕ್ಕಿ (ಸೂಪಶಾ. ೨–೯) ; ಮಿಂಚಿನ ಕೊಡೆ ಸಾಧಿಸಿದರೊ ತಂಗಾಳಿಯಂಚಿನೊಳಾಡಿ ಕಲಿತರೊ (ಭರಚ. ೧೩–೧೫೨) ; ಪ್ರಥಮ ಕಂಕಣದಲ್ಲಿ ಒಪ್ಪುವ ಅಂಚು ಅಗಲವು ಮೂರು ಸಾವಿರ ಅಸುರರಾಶ್ರಯವು (ಶರಲೀ. ೧೭–೨) ; ಅಂಚಿನಲ್ಲಿ ಹೋದರೆ ಮಿಂಚಿನ ಭಯ ತಪ್ಪೀತೆ ? (ಗಾದೆ) ; ಅಂಚು ಇಲ್ಲದ ಹೊಲವಿಲ್ಲ ಸಂಚು ಇಲ್ಲದ ಮಾತು ಇಲ್ಲ (ಗಾದೆ). ೨. ಬಟ್ಟೆಯ, ಮುಖ್ಯವಾಗಿ ಸೀರೆ ಧೋತ್ರಗಳ, ಉದ್ದದ ಕಡೆಯಭಾಗ, — ಕರೆ : "ವಸನಾಂತಮಂಚಳಂ ವರ್ತಿಸಿಚಂದಶೆಯಂಚು ವಸ್ತ್ರಿಯಕ್ಕುಂ ಕರೆಗಳ್" (ವಸ್ತುಕೋ. ೭೭–೧೭) ; ಆಕೆಗೆ ದೊಡ್ಡಂಚಿನ ಸೀರೆಯ ಮೇಲೆ ಬಹಳ ಪ್ರೀತಿ (ರೂಢಿ). ▷ ಕಡ್ಡಿಯಂಚು, ರೇಷ್ಮೆಯಂಚು, ಗುಂಡಂಚು, ನೂಲಂಚು, ಜರತಾರಿಯಂಚು ಇತ್ಯಾದಿ ಹೋ. ೩. ಹತ್ತಿರ ; ಸಮೀಪ : ಬಟ್ಟಹೊಂಬರಿವಾಣದಂಚಿನೊಳಗೆ ಸಾಲು ಬಟ್ಟಲು ಕೆಲವು ಬಟ್ಟಲೊಳು ಇಟ್ಟ ಮಾಣಿಕದ ಸೋಟಿಗೆಗಳೆಸೆಯೆ (ಭರಚ. ೪–೬೩) ; ಅವರ ಮನೆ ನಮ್ಮ ಮನೆಯ ಅಂಚಿನಲ್ಲೇ ಇದೆ (ರೂಢಿ).
[ಸಂ. ಅಂಶು ?. / ತೆಲು. ಅಂಚು]

**ಅಂಚುಕಟ್ಟಿಸು** (ಕ್ರಿ). ಬಟ್ಟೆಗೆ ಅಂಚನ್ನು ಸೇರಿಸಿ ಹೊಲಿಸು ; ಕರೆ ಕಟ್ಟಿಸು. [ಅಂಚುಕಟ್ಟು + -ಇಸು₃]

**ಅಂಚುಕಟ್ಟು,** ಅಂಚುಗಟ್ಟು (ಕ್ರಿ). ೧. ಎಲ್ಲೆಯನ್ನು ಗುರುತಿಸು ; ಬದುಹಾಕು. ೨. ಬಟ್ಟೆಯ ತುದಿಯನ್ನು ಮಡಿಸಿ ಹೊಲಿದು ಅಥವಾ ಹೆಣೆದು ಕೂಡಿಸು ; ಕರೆಕಟ್ಟು. **ಅಂಚುಗಟ್ಟು** (೬).
[ಅಂಚು₂ + ಕಟ್ಟು₁]

**ಅಂಚುಕೂಡಿಸು** (ಕ್ರಿ). = ಅಂಚುಕಟ್ಟು ೨. [ಅಂಚು₂ + ಕೂಡಿಸು]

**ಅಂಚುಗಟ್ಟು** 'ಅಂಚುಕಟ್ಟು' ನೋ.

**ಅಂಚುಗಾಱ** (ನಾ). ಬಟ್ಟೆಗೆ ಅಂಚುಕಟ್ಟುವವನು ; ಕರೆಕಟ್ಟುವವನು : ಸಂಚುಗಾಱರ ಕಮ್ಮಱರ ಅಂಚುಗಾಱರ ಸಮ್ಮಗಾಱರ ಸದನದ ಸಂಚಯವೆಸೆದುದದಱಕೊಳು (ಕುರಾಸಾಂ. ೪–೧೧೪).
[ಅಂಚು₂ + -ಗಾಱ (< -ಕಾಱ)]

**ಅಂಚೆ₁** (ನಾ). ೧. ದಾರಿ ; ಮಾರ್ಗ ; ಜಾಡು : "ಪಥಭೇದದೊಳಗಂಚೆಯು" (ಕಶಮಂ. ೮೬) ; ಸಂಚಿತ ದುಷ್ಕರ್ಮಗಳ ಪಂತಿಯಲ್ಲಿ ಕುಳ್ಳಿರದೆ ಇದರಂಚೆ[ಪಾಠಾಂ. ರಚ್ಚೆ]ಯ ತಿಳಿ (ಮೋಳಿಮಾ. ೪೫೭). ೨. ವಸ್ತುಗಳನ್ನು ಮಜಲು ಮಜಲಾಗಿ ಸಾಗಿಸುವ ಮಾರ್ಗ ; ಟಪಾಲು ; ಮಜಲು ಪ್ರಯಾಣ ; ಮಜಲು ಸಾಗಣೆ : ಮಹೀಪತಿ ತನ್ನ ಅಂಚೆಗಮನೆಯ ನೆನೆದು ಬಂದು ಹೊಕ್ಕನಂದಂಚೆಯ ಮೇಲೆ ದುರ್ಗವನು (ಕುರಾಸಾಂ. ೩೪–೮). **ಅಂಚೆಯ ಊಳಿಗ** = ಅಂಚೆಯ ವ್ಯವಹಾರಗಳನ್ನು ನಡಸುವ ಕೆಲಸ ; ಟಪಾಲು ಇಲಾಖೆಯ ಕೆಲಸ : ಅಂಚೆ[ಯ] ಊಳಿಗದವರಿಗೆ ಗೊತ್ತುಗಾರನಾಗಿ ಒಬ್ಬ ಅಂಚೆ ಮುತ್ಸದ್ದಿ (ಮಹಾಪಂ. II, ೪೨). **ಅಂಚೆಯ ಮೇಲೆ ಹೋಗು**=ಟಪಾಲು ಮೂಲಕ ಹೋಗು ; ಮಜಲು ಮಜಲಾಗಿ ಪ್ರಯಾಣ ಮಾಡು. 'ಅಂಚೆಕಚೇರಿ', 'ಅಂಚೆಕಾಗದ' ಪರಾ.
[**ದೇ.** ‖ **ತಮಿ. ಮಲ.** ಅಞ್ಚಲ್ ; **ತುಳು.** ಅಂಚಲ್ ; **ತೆಲು.** ಅಂಚೆ, ಅಂಚಿಯ]

**ಅಂಚೆ₂** (ನಾ). ಅಂಚು ; ತುದಿ ; ಕೊನೆಯ ಭಾಗ : ಮಿಂಚುವ ಚಂದ್ರಂ ಗಂಚೆಯ[ಪಾಠಾಂ. ಗಂಚಿತ]ರುದ್ರರ್ ಸಂಚಿಸೆ ವೃತ್ತಂ ಕಾಂಚನಮಾಲೇ (ಛಂದೋಂಬು. ೬. ೨–೮೭) ; ಮಿಂಚಿನಂಚೆವೆರಸು ಕಾರ್ಮುಗಿಲ ಬಿಬಲು ಕಾಲೂಱಿದಂತೆ ಮೇಲೆ ಮೆಱೆಯೆಯುಂ (ಅನಂಪು. ೨–೨೯ ವ).
[~ ಅಂಚು₂ ?]

**ಅಂಚೆ₃** (ನಾ). ಹಂಸ ; ಹಂಸಪಕ್ಷಿ : "ಅಂಚೆ ಸಿತಚ್ಛದ ಖಗಂ ಮರಾಳಂ ಹಂಸಂ" (ವಸ್ತುಕೋ. ೪೩–೧೮) ; "ಅಂಚೆಗಳೆಂದು ಹಂಸೆಗಳೊಳಂ" (ಕರ್ಣಾಶಿ. ೩೧) ; "ಸತ್ವಕ್ಕೆ ಚತ್ವಂ : ಹಂಸ – ಅಂಚೆ" (ಶಮದ. ೨೬೩, ಪ್ರಯೋ.) ; "ಅಸ್ವರ ಹಕಾರ ಲೋಪಕ್ಕೆ : ಹಂಸ – ಅಂಚೆ" (ಶಮದ. ೨೭೧, ಪ್ರಯೋ.) ; ಕೋಗಿಲೆ ಚಾದಗೆ ಪೋದಗೆ ಮೂಗಿಗಲಿಂಜಂಚೆ ಕೊಂಚೆ . . . ಬಲಾಕೆ ಲಾವುಗೆ ಸೇನಂ (ಕಾವ್ಯಸಾ. ಶೂದ್ರಕ. ೧೦೪೪) ; ಅಂಚೆಯುರ್ಕು ಪೊಸತಾಯ್ತು (ಪಂಪಭಾ. ೭–೬೯) ; ಬಿಜ್ಜಮೈತ್ರೆಸೆವಱಚ್ಚಿಯ ಸಜ್ಜುಕಳಮುಂ (ಕಾವ್ಯಾವ. ೧೮) ; ಇಳಿದನಂಚೆಯಲಂಬರದಿ ನಂಬರಮಣಿಪ್ರತಿಬಿಂಬವೆನೆ ನಾರದನು (ತೊರರಾ. ೧–೫–೨೧) ; ಆ ಕೆರೆಯ

ಸೀರಿನೊಡನೆ ಆಟವಾಡುವ ಅಂಚೆಯೊಂದನ್ನು ಕೋವಿಗೆ ಗುರಿಮಾಡಿದ್ದ (ನೂರಜ. ೬೬). [ಸಂ. ಹಂಸ]

**ಅಂಚೆ₄** (ನಾ). ಬಟ್ಟೆ; ವಸ್ತ್ರ: "ಅಂಚೆಯೆಂದು ಕಪ್ಪಡಂ" (ಶಬ್ದಸಾ. ೨೦-೩೯೩); ಒಂದಂಚೆಯಂ ಪೊದೆದೊ[ದೊ]ಂದಂಚೆಯನುಟ್ಟ ನಿನ್ನಿರವಿದೇನಂಭೋಜಪತ್ರೇಕ್ಷಣೇ (ಪಂಪಭಾ. ೮-೬೬); ಅರುಣಾಂಬುಜದುಳ್ಳಲರೆಸಳ್ಗಳಂಚೆಯೊಳ್ ಸಂಚಲಿಸದೆ ಜಲಬಿಂದು ನಿಂದುವೆನೆ ಸೊಗಯಿಸುಗುಂ (ಮಲ್ಲಿಪು. ૩-೫೮); ಅರಿಸಿನದಂಚೆಯನಿನಿಸೋಸರಿಸಲುಮಿಾಯದೆ ಯಶೋದೆಯಾತಂ ಪೀತಾಂಬರನೆಂದು ಧರೆಗೆ ಪೇೞ್ವಂತಿರೆ (ಅರ್ಧನೇ. ೭-೫೩). [ಸಂ. ಅಂಶುಕ?]

**ಅಂಚೆಕಚೇರಿ** (ನಾ). ಅಂಚೆಯ ವ್ಯವಹಾರಗಳನ್ನು ನಡಸುವ ಕಚೇರಿ; ಟಪಾಲು ಕಚೇರಿ: ಅಂಚೆಕಚೇರಿ ಇಲ್ಲಿಗೆ ಬಹಳ ಸಮೀಪದಲ್ಲಿದೆ (ರೂಢಿ). [ಅಂಚೆ₁ + ಕಚೇರಿ (< ಕಛೇರಿ)]

**ಅಂಚೆಕಟ್ಟೆ** (ನಾ). ೧. = ಅಂಚೆಕಚೇರಿ: ಹೈಮವತಿಯ ಹೆಸರಿನಲ್ಲಿ ಒಂದು ವಿಮೆಯಿಳಿಸಿದ ಕಟ್ಟು ಬಂದಿತ್ತು. ಅದನ್ನು ಅಂಚೆಕಟ್ಟೆಗೆ ಹೋಗಿ ಪಡೆಯಬೇಕು (ಎರಸೆ. ೮೦). ೨. ಮಜಲು ಪ್ರಯಾಣದ ಒಂದು ಹಂತ; ಮಜಲು. [ಅಂಚೆ₁ + ಕಟ್ಟೆ]

**ಅಂಚೆಕಾಗದ** (ನಾ). ಅಂಚೆಯಲ್ಲಿ ಸಾಗಿಸುವ ಕಾಗದ; ಟಪಾಲಿನ ಮೂಲಕ ಬಂದ ಕಾಗದ: ಅಂಚೆಕಾಗದ ಮುಂಚೆ ಬಂದರೆ ಲಂಚ ಯಾಕೆ? (ಗಾದೆ). [ಅಂಚೆ₁ + ಕಾಗದ]

**ಅಂಚೆಗಮನೆ** (ನಾ). ಹಂಸದ ನಡಗೆಯಂತೆ ನಡಗೆಯುಳ್ಳವಳು: ಮಹೀಪತಿ ತನ್ನ ಅಂಚೆಗಮನೆಯ ನೆನೆದು ಬಂದು ಹೊಕ್ಕನಂದಂಚೆಯ ಮೇಲೆ ದುರ್ಗವನು (ಕುರಾಸಾಂ. ૩೪-೮); ಅಂಚೆಗಮನೆ ನೋಡಿ ಮೊಗದಿರುಹಿದಳು (ಭರಚ. ೫೬-೮); ಅಂಚೆಗಮನೆಯೊರ್ವಳು ನವರತ್ನದ ಕುಂಚವ ಬೀಸಿದಳೊಲೆದು (ಕಂನವಿ. ೨೪-೭೮).
[ಸಂ. ಹಂಸಗಮನಾ (ಹಂಸ + ಗಮನ + -)]

**ಅಂಚೆಗಾಮಿನಿ** (ನಾ). ಹಂಸದ ಮೇಲೆ ಕುಳಿತು ಸಂಚಾರಮಾಡುವವಳು; ಸರಸ್ವತಿ: ಅಂಚೆಗಾಮಿನಿಯೆನ್ನ ಹೃದಯದಿ ಚಂಚಲಿಸದನವರತ ನಿಂತು ಪ್ರಪಂಚವೆಲ್ಲವ ತಿಳಿಸು ತ್ರೈಜಗದಂಬೆ ಸುಜನಾಂಬೆ (ಮುಲ್ಲಾಶಾ. ೬). [ಸಂ. ಹಂಸಗಾಮಿನೀ]

**ಅಂಚೆಗಾರ** (ನಾ). ಅಂಚೆಯವನು; ಟಪಾಲನ್ನು ಹಂಚುವವನು: ಮುತ್ತಲದ ನೆತ್ತರವ ಚಿಮ್ಮಿ ಚಿತ್ರಿಸುವ ಹೂ ಸುಗ್ಗಿಯೊಲುಮೆಯ ತಂದ ಅಂಚೆಗಾರ (ಉಯ್ಯಾಲೆ. ೫೭-೨). [ಅಂಚೆ₁ + -ಗಾರ (< ಕಾಱ)]

**ಅಂಚೆಚೀಲ** (ನಾ). ಟಪಾಲಿನ ಕಾಗದ ಮುಂತಾದವನ್ನು ಹಾಕುವ ಚೀಲ (ಮೈಗೆಜೆ. IV, ೭೬೨). [ಅಂಚೆ₁ + ಚೀಲ]

**ಅಂಚೆಜವಾನ** (ನಾ). = ಅಂಚೆಯಾಳು: ಹೊಸ ಹೆಂಡತಿಯನ್ನು ಮೊದಲಬಾರಿಗೆ ತವರಿಗೆ ಕಳುಹಿದ ಗಂಡನಂತೆ ಉಶ್ ಉಶ್ ಎಂದು ಉಸಿರುಬಿಡುತ್ತಾ ಕಂಡ ಕಂಡವರ ಮೇಲೆ ಹರಿಹಾಯುತ್ತ ಅಂಚೆಜವಾನನಿಗಾಗಿ ತಪಸ್ಸು ಮಾಡಿದ (ಹುಚ್ಚುಹು. ೧೭). [ಅಂಚೆ₁ + ಜವಾನ]

**ಅಂಚೆಟಪಾಲು** (ನಾ). ಊರಿಂದ ಊರಿಗೆ ಅಂಚೆಯ ವ್ಯವಸ್ಥೆಯ ಮೂಲಕ ಬರುವ ಕಾಗದಪತ್ರಗಳು.
[ಅಂಚೆ₁ + ಟಪಾಲು (< ಟಪ್ಪಾಲು)]

**ಅಂಚೆಡಬ್ಬ** (ನಾ). ಟಪಾಲು ಪೆಟ್ಟಿಗೆ: ಈ ಕಾಗದವನ್ನು ಈಗಲೇ ಹೋಗಿ ಅಂಚೆಡಬ್ಬಕ್ಕೆ ಹಾಕಿ ಬಾ (ರೂಢಿ). [ಅಂಚೆ₁ + ಡಬ್ಬ]

**ಅಂಚೆಡಬ್ಬಿ** (ನಾ). (ಉಕ) = ಅಂಚೆಡಬ್ಬ: ಉಳಿದೊಂದು ನಾಲ್ಕಾಣೆಯನ್ನು ಅಂಚೆಡಬ್ಬಿಯಲ್ಲಿಯೇ ಲಂಚವಾಗಿ ಹಾಕಿ ಕೈಮುಗಿದು ಅರ್ಜೆಂಟಾಗಿ ಹೋಗಲೆ ಎಂದು ವಿಜ್ಞಾಪಿಸಿದ (ಹುಚ್ಚುಹು. ೧೮). [ಅಂಚೆ₁+ಡಬ್ಬಿ]

**ಅಂಚೆದಾರ** (ನಾ). ಅಂಚೆಯ ನೌಕರ; ಅಂಚೆಯ ಅಧಿಕಾರಿ (?).
[ಅಂಚೆ₁ + -ದಾರ₄]

**ಅಂಚೆದಿಪ್ಪುಳ್** (ನಾ). ಹಂಸಪಕ್ಷಿಯ ಗರಿಯ ನವಿರು: ಅಂಚೆದಿಪ್ಪುಳ್‌ಸಜ್ಜೆಯೊಳ್ ಪವಡಿಪಾತನಂ (ಶ್ರೀರಾಮಾ. ೭೨-೫೦೧).
[ಅಂಚೆ₃ + ತಿಪ್ಪುಳ್ (< ತಿಪ್ಪುೞ್)]

**ಅಂಚೆದುಪ್ಪುಳು** (ನಾ). = ಅಂಚೆದಿಪ್ಪುಳ್: ಕನಕಮಯಮಂಚಾಗ್ರದಂಚೆದುಪ್ಪುಳಿನ ಪಾಸಿನಲಿ ಕುಳ್ಳಿರಿಸಿ (ಸೌಂದಪು. ೮-೧೯).
[ಅಂಚೆ₃ + ತುಪ್ಪುಳು (< ತುಪ್ಪುೞ್)]

**ಅಂಚೆದುಪ್ಪುಳುವಾಸು** 'ಅಂಚೆದುಪ್ಪುಳ್ವಾಸು' ನೋ.

**ಅಂಚೆದುಪ್ಪುಳ್ವಾಸು,** ಅಂಚೆದುಪ್ಪುಳುವಾಸು (ನಾ). ಹಂಸಪಕ್ಷಿಯ ಮೃದುವಾದ ಗರಿಯನ್ನು, ತುಪ್ಪುಳನ್ನು, ತುಂಬಿ ಮಾಡಿದ ಹಾಸಿಗೆ; ಹಂಸತೂಲಿಕಾತಲ್ಪ: ಅಂಚೆದುಪ್ಪುಳ್ವಾಸಿನ ಮೇಲೆ ಸತಿಗೂಡಿ ಪಂಚಾಸ್ತ್ರ ಕುಳಿತನುತ್ಸವದಿ (ಮೋಹತ. ೧೬-೧೮); **ಅಂಚೆದುಪ್ಪುಳುವಾಸು**: ಕಪ್ಪುರವುಡಿ ಕುಂಕುಮ್ಮವೆರಸಿರ್ದಂಚೆದುಪ್ಪುಳುವಾಸಿನಿಂದೆಸೆವ (ಕುರಾಸಾಂ. ೨೬-೬೫); ಅಂಚೆದುಪ್ಪುಳುವಾಸು ಕೌಳುಡೆ ಮಲಗು ಪೊಣ್ಮಂಚಿಯ ಮೇಲ್ಗಟ್ಟು (ಭರಚ. ೧೫-೨೭); ಸೆಳೆಮಂಚದಂಚೆದುಪ್ಪುಳುವಾಸಿನ ಮೇಲೆ ನಳಿನಾಕ್ಷಿಯವನ ಕುಳ್ಳಿರಿಸಿ (ಕಂನವಿ. ೧೦-೩೦). [ಅಂಚೆ₃ + ತುಪ್ಪುಳ್ (< ತುಪ್ಪುೞ್) + ಪಾಸು₂]

**ಅಂಚೆದೇರ** (ನಾ). ಹಂಸವನ್ನು ವಾಹನವಾಗಿ ಹೊಂದಿರುವವನು; ಹಂಸವನ್ನು ಏರಿ ಹೋಗುವವನು; ಬ್ರಹ್ಮ: "ಪೊಂಬಸಿಜನಂಚೆದೇರಂ ತಾಂ ತಾವರೆವನೆಯ ಬಿದಿಯು ಬೊಮ್ಮಂ" (ಕವಿಕಂ. ೨೯); ಅಂಚೆದೇರಂ ಮನಮೆಚ್ಚಿ ಗಾನಯೋಗದೊಳವಂಗೆಣೆ ಇಲ್ಲೆನುತೆ ಪೊಗೞ್ದಂ (ಅದ್ಭುತ. ೨೭-೫). [ಅಂಚೆ₃ + ತೇರ್₂ + -ಅ₇]

**ಅಂಚೆನಡೆಯಳ್** (ನಾ). ಅಂಚೆಯ ನಡೆಯಂತೆ ನಡೆಯುಳ್ಳವಳು; ಹಂಸಗಮನೆ: ಮತ್ಕೃತಿ ರಸವಜಿತ ಬೆಂಚೆಯೆಂದೆನವೇಡ ಶೃಂಗಾರರಸಪೂರ್ಣವಂಚೆನಡೆಯಳೆ ವಿಶ್ರಮಿಸೆ (ಮೋಹತ. ೧೯-೨).
[ಅಂಚೆ₃ + ನಡೆ₂ + -ಅಳ್]

**ಅಂಚೆನೌಕರ** (ನಾ). ಟಪಾಲು ಇಲಾಖೆಯ ಕೆಲಸಗಾರ.
[ಅಂಚೆ₁ + ನೌಕರ]

**ಅಂಚೆಬಸ್ತು** (ನಾ). = ಅಂಚೆಚೀಲ (ಮೈಗೆಜೆ. IV, ೭೬೨).
[ಅಂಚೆ₁ + ಬಸ್ತು (< ಪಾರ. ಬಸ್ತ)]

**ಅಂಚೆಮನೆ** (ನಾ). ಟಪಾಲು ಕಚೇರಿ (ಮೈಗೆಜೆ. IV, ೭೬೨).
[ಅಂಚೆ₁ + ಮನೆ]

**ಅಂಚೆಮಾರ್ಗ** (ನಾ). ಮಜಲುಪ್ರಯಾಣದ ದಾರಿ; ಟಪಾಲು ಸಾಗಿಸುವ ರಸ್ತೆ. [ಅಂಚೆ₁ + ಮಾರ್ಗ]

**ಅಂಚೆಮುತ್ಸದ್ದಿ** (ನಾ). ಅಂಚೆಯ ಚಾವಡಿಯ ಮೇಲ್ವಿಚಾರಕ: ಅಂಚೆಊಳಿಗದವರಿಗೆ ಗೊತ್ತುಗಾರನಾಗಿ ಒಬ್ಬ ಅಂಚೆಮುತ್ಸದ್ದಿ, ಕೊತ್ವಾಲ್‌ಚಾವಡಿ ಮೊದಲಾದ ಹಲವು ಚಾವಡಿಗಳು (ಮಹಾವಂ. II, ೯೨). [ಅಂಚೆ₁ + ಮುತ್ಸದ್ದಿ]

**ಅಂಚೆಯಾಳು** (ನಾ). ಅಂಚೆಯನ್ನು ಹೊತ್ತುಕೊಂಡು ಓಡುವವನು; ಟಪಾಲು ಸಾಗಿಸುವವನು; ಕಾಗದಗಳನ್ನು ಹಂಚುವವನು; ಸುದ್ದಿಯನ್ನು ಮುಟ್ಟಿಸುವವನು: ಚವರ ಬಂಬಾಳದ ಮೇಲೆ ರಾಮನನು ಲೀಲೆಯಿಂದೊಯಿದನು ಕರ್ತಾರನೆಂದಂಚೆಯಾಳು ರಾಯಗೆ ಪೇಳಿದುದು (ಕುರಾಸಾಂ. ೪೭-೪೮); ಅಂಚೆಯಾಳು ಬಂದು ಕೆಲವು ಓಲೆಗಳನ್ನು ಮಾಧವನ ಕೈಗೆ ಕೊಟ್ಟು ಹೋದ (ತೇಮೋಡ. ૩೦); ಬುದ್ಧಿ, ಬೇಟೆಗೆ ಹೋಗೋ ಆಳುಗಳನ್ನೆಲ್ಲಾ ಉಳಿಯಾಳು ಅಟ್ಟುಳಿಯಾಳು,

ಅಂಚೆಅ[ಯಾ]ಳು ಅಂತ ವಿಭಾಗ ಮಾಡ್ತೀವಿ (ಬೈಸರ್ವೆ. ೧೦೨–೪).
[ಅಂಚೆ₁ + ಆಳು (< ಆಳ್₂)]

**ಅಂಚೆಯಿಡು** (ಕ್ರಿ). ಮಾರ್ಗದಲ್ಲಿ ಪರಿಮಿತವಾದ ದೂರದಲ್ಲಿ ವಾಹನ ಬದಲಾಯಿಸಲು ಅನುಕೂಲವಾಗುವಂತೆ ಕುದುರೆ ಮೊದಲಾದ ವನ್ನು ಇಡು ; ಟಪ್ಪೆಯನ್ನು ಇಡು : ಪಡೆದಬುಜಕೆ ರಾಜಂ ದಾಳಿಡುವಂ ಗಡ ರಾತ್ರಿಗೆಂದಜಂ ಜವದಿಂದಾ ಯೆಡೆಗಯ್ದಲಂಚೆಯಿಟ್ಟವೊಲೆಡೆಗೆಡೆಗರ ಸಂಚೆ ಪೊಳೆಯ ತೀರದೊಳೆಸೆಗುಂ (ವೃಷವಿ. ೪–೧೦).
[ಅಂಚೆ₁ + ಇಡು₁]

**ಅಂಚೆವಱಿ** (ನಾ). ಹಂಸದ ಮರಿ ; ಮರಿ ಹಂಸ : ಗೆಜ್ಜೆಮೆಟ್ಟೆಂದಂಚೆ ವಱಿಗಳ್ಗೆ ಬಲ್ಸೋಲವೀವ ಬೆಲೆವೆಣ್ಣುಗಳ್ ಕಾವನಿರ್ಕಣ್ಣುಗಳ್ ನಡೆತಂದರು (ಉದ್ಭದೇ. ೫–೧೯) ; ಪಾಡುವ ಪಱಮೆಗಳಿಂದೊಲ್ದಾಡುವ ಮುದ್ದಂಚೆವಱಿಗಳಿಂ (ರಾಜಶೇ. ೧೨–೨೩). [ಅಂಚೆ₂ + ಮಱಿ]

**ಅಂಚೆವಾಸು** (ನಾ). ಹಂಸದ ತುಪ್ಪುಳಿನಿಂದ ಮಾಡಿದ ಹಾಸಿಗೆ ; ಹಂಸತೂಲಿಕಾತಲ್ಪ : ಅಂಚೆವಾಸಿನ ಮೇಲೆ ಪವಡಿಸುವ (ಜೀವಂಚ. ೫–೨೭). [ಅಂಚೆ₂ + ಪಾಸು₂]

**ಅಂಚೆವಾಳತಿ** (ನಾ). ಬಾಣಂತಿಯಾಗಿರುವ ಹಂಸಪಕ್ಷಿ; ಎಳೆಯ ಮರಿಯುಳ್ಳ ಹೆಣ್ಣುಹಂಸ : ಮಱಿಯಂಚೆಯ ಮುದ್ದುಗೆಯ್ತುಮುಮ ನಂಚೆವಾಳ[ಪಾಠಾಂ. ೞ]ತಿಯಾ ಮಱಿಯೊಳಾದೆಱಕಮುಮಂ ಕಂಡು (ಮಲ್ಲಿಪು. ೪–೨೨ ವ). [ಅಂಚೆ₂ + ಬಾಳತಿ (< ಬಾಳಂತಿ)]

**ಅಂಚೆವಿಂಡು** (ನಾ). ಹಂಸಗಳ ಹಿಂಡು, —ಸಮೂಹ : "ಹಂಸಪಿಂಡ –ಅಂಚೆವಿಂಡು" (ಶಮುದ. ೨೯೨ ಪ್ರಯೋ) ; ರತ್ನನೂಪುರಕಲಾಪಕಲಧ್ವನಿ ಗಂಚೆವಿಂಡು ತಂಡದಿನುಲಿವುತ್ತಿರಲ್ (ಕಾದಂಉ. ೧೯೮) ; ನಡೆಯ ಕಲಿಸಿ ದಳಂಚೆವಿಂಡಿಗೆ (ಪ್ರಭುಲೀ. ೩–೩೨) ; ಪೊಸಬಗೆಯ ನಡೆಯಂಚೆವಿಂಡ ನೊದವಿಸೆ ಮೆಯ್ಯ ಬಿಸಜಗಂಧಂ ತುಂಬಿವಿಂಡುಮಂ ನೆರಪೆ ತಾವಸಮಾಸ್ತ್ರ ನಸ್ತ್ರಂಗಳೆಡೆಯಾಡುವಂತೆ ಬರುತಿರ್ದರಖಿಳಸ್ತ್ರೀಯರು (ಚೆಬಪು. ೫–೧೨).
[ಅಂಚೆ₂ + ಪಿಂಡು₂]

**ಅಂಚೆವೆಣ್ಣು** (ನಾ). ಹೆಣ್ಣು ಹಂಸ : ಮೆಱೆದುದು ಕಮಲಭವಾಂಡ ಮಿಱುಪಂಚೆವೆಣ್ಣಿನ ಗರ್ಭದ ತತ್ತಿಯ ತೆಱದಂತೇನ ಬಣ್ಣಿಪೆನು(ಕುರಾಸಾಂ. ೫–೧೯). [ಅಂಚೆ₂ + ಪೆಣ್ಣು (<ಪೆಣ್)]

**ಅಂಚೆಹುಲ್ಲು** (ನಾ). ಒಂದು ಬಗೆಯ ಹುಲ್ಲು (ಮೈಡಿಗಿ. ೨೭–೫೧೭). 'ಅಂಜಿಹುಲ್ಲು' ಪರಾ. [ಅಂಚೆ₀ + ಹುಲ್ಲು (< ಪುಲ್)]

**ಅಂಜನ** (ನಾ). ೧. (ಮುಲಾಮು, ಕಾಡಿಗೆ ಮೊದಲಾದದ್ದನ್ನು) ಬಳಿಯುವುದು; ಲೇಪನ; ಎಚ್ಚುವುದು. ೨. ಕಣ್ಣಿಗೆ ಎಚ್ಚಿ ಕೊಳ್ಳುವ ಕಪ್ಪು, —ಕಾಡಿಗೆ, —ಮುಲಾಮು : "ವಾಮಾಹ್ವಯ ವಸ್ತ್ರಂ ಕರಿಯುಂ ಕಪ್ಪುಮಂಜನಾಹ್ವಯಮಕ್ಕುಂ" (ನಾನಾಕಂ. ೬೧) ; "ಕಜ್ಜಳಮದಂ[ಜನಂ]" (ಮಂಗರಾ. ೯೯–೨೩). ೩. ಕಾಡಿಗೆಯನ್ನು ತಯಾರಿಸಲು ಉಪಯೋಗಿಸುವ ವಸ್ತು ; ದೀಪದ ಮಸಿ ಇತ್ಯಾದಿ. ೪. ನಿಧಿ ನಿಕ್ಷೇಪಾದಿಗಳನ್ನು ಕಂಡುಹಿಡಿಯಲು ಕಣ್ಣಿಗೆ ಎಚ್ಚಿಕೊಳ್ಳುವ ಕಪ್ಪು, —ಮುಲಾಮು ; ಬೇರೆ ಕೆಲವು ಅದ್ಭುತ ಶಕ್ತಿಗಳನ್ನು ಕೊಡುವ ಮುಲಾಮು ; ಅದೃಶ್ಯಾಂಜನ ಇತ್ಯಾದಿ : ಅಂಜನ ಹಾಕಿಕೊಂಡು ಹುಡುಕಿದರೂ ಸಿಕ್ಕಲಿಲ್ಲ (ರೂಢಿ). 'ಅಂಜನ ಸಿದ್ಧ' ಪರಾ. ೫. ಶಾಯಿ ; ಮಸಿ. ೬. ರಾತ್ರಿ; ಇರುಳು. ೭. ಬೆಂಕಿ. ೮. ಪಶ್ಚಿಮ ದಿಕ್ಕಿನ ದಿಗ್ಗಜ. ೯. ಒಂದು ಬಗೆಯ ಹಲ್ಲಿ (ಕಿ). ೧೦. ಒಂದು ಬಗೆಯ ಮರ. ೧೧. (ಕರಿಯ) ಬಟ್ಟೆ. [ಸಂ.]

**ಅಂಜನಕರಂಡಕ** (ನಾ). ಕಪ್ಪಿನ ಭರಣಿ. [ಅಂಜನ + ಕರಂಡಕ]

**ಅಂಜನಕೇಶಿ** (ನಾ). ಹಟ್ಟವಿಲಾಸಿನಿ ಎಂಬ ವನಸ್ಪತಿ ; ಇದರಿಂದ ತಯಾರಿಸಿದ ಪರಿಮಳ ದ್ರವ್ಯ. ℙ ಇದು ಕೂದಲಿನ ಕಪ್ಪುಬಣ್ಣ ವನ್ನು ಹೆಚ್ಚುಮಾಡುತ್ತದೆ ಎಂದು ಹೇಳುತ್ತಾರೆ.
[ಸಂ. ಅಂಜನಕೇಶೀ (ಅಂಜನ + ಕೇಶ + –)]

**ಅಂಜನಕ್ರಿಯೆ** (ನಾ). ೧. ಕಾಡಿಗೆಯನ್ನು ಬಳಿಯುವುದು ; ಮುಲಾಮು ಹಚ್ಚುವುದು ; ಲೇಪನ. ೨. ನಿಧಿನಿಕ್ಷೇಪಾದಿಗಳನ್ನು ಕಂಡುಹಿಡಿಯಲು ಮಂತ್ರಜ್ಞರು ಅನುಸರಿಸುವ ಒಂದು ವಿಧಾನ.
[ಅಂಜನ + ಕ್ರಿಯೆ]

**ಅಂಜನಗಾರ** (ನಾ). ಅಂಜನವನ್ನು ಹಚ್ಚಿಕೊಂಡವನು: ಅಂಜನ ಗಾರನು ಅಂಜನದಿಂದ ಪಬ್ಬರು ಕಾಣದಂತೆ ಅಲ್ಲಿಯಿರುವ ವಸ್ತುಗಳಂ ಗ್ರಹಿಸಲು (ಸೌಗಂಧಿ. ೬೩–೧). [ಅಂಜನ + –ಗಾರ (< –ಕಾಱ)]

**ಅಂಜನಚೋರ** (ನಾ). ಅಂಜನವನ್ನು ಹಚ್ಚಿಕೊಂಡು ಕಳ್ಳತನ ಮಾಡುವವನು : ಅಂಜನಚೋರಂ ಘುಟಿಕಾಪ್ರಯೋಗದಿಂದದೃಶ್ಯ ರೂಪದಿಂ ಪೋಗಿ ಕಳ್ದು ತಂದು ಕುಡುವ ಸಮರ್ಥನೆಂಬುದಂ ತಾಂ ಬಲ್ಲಳಪ್ಪುದಱಿಂದೆ (ಧರ್ಮಾಮೃ. ೨–೧೧೭ ವ). [ಅಂಜನ + ಚೋರ]

**ಅಂಜನವಣ್ಣ** (ನಾ). ಕಾಡಿಗೆಯ ಬಣ್ಣ ; ಕಪ್ಪುಬಣ್ಣ : ಅಂಜನ ವಣ್ಣವೆ ಮೊಲೆದುದಿಗಿಲ್ಲ ನಿರಂಜನ ನೆಲಸಲಂತವಳ (ವರ್ಧಚ. ೧೦–೭೯).
[ಅಂಜನ + ಬಣ್ಣ]

**ಅಂಜನಶಲಾಕೆ** (ನಾ). ಕಣ್ಣಿಗೆ ಕಾಡಿಗೆ, ಮುಲಾಮು ಮೊದಲಾದ ವನ್ನು ಹಚ್ಚಿಕೊಳ್ಳುವ ಕಡ್ಡಿ ; ಕಾಡಿಗೆಕಡ್ಡಿ.
[ಅಂಜನ + ಶಲಾಕೆ]

**ಅಂಜನಸಿದ್ಧ** (ನಾ). ಅಂಜನವನ್ನು ಉಪಯೋಗಿಸುವುದರಲ್ಲಿ ಸಿದ್ಧಿ ಹೊಂದಿದವನು ; ಅಂಜನವನ್ನು ಎಚ್ಚಿಕೊಳ್ಳುವುದರ ಮೂಲಕ ಅದ್ಭುತ ಶಕ್ತಿಗಳನ್ನು ಸಾಧಿಸಿ ಪಡೆದಿರುವವನು : ಕೊಂದಂ ಕೊಲ್ವಂತೆ ರಸಮುನಂಜನಸಿದ್ಧಂ (ಶಮುದ. ೨೩೭ ಪ್ರಯೋ) ; ರಾತ್ರಿಯೆಂಬ ಹುತ್ತಿನೊಳಗೆ ನಿದ್ರೆಯೆಂಬ ರಾಹು ಹೆಡೆಯನುತ್ತಿ ಕಚ್ಚಲೊಡನೆ ಅಂಜನಾ [ನ]ಸಿದ್ಧರ ಅಂಜನವು ಹಾಱಿತ್ತು (ಅವಚಂ. ೧೨೭೯).
[ಅಂಜನ + ಸಿದ್ಧ]

**ಅಂಜನಸಿದ್ಧಿ** (ನಾ). ಅಂಜನದ ಉಪಯೋಗದಿಂದ ಉಂಟಾಗುವ (ಹಲವು ಬಗೆಯ) ಸಿದ್ಧಿ. [ಅಂಜನ + ಸಿದ್ಧಿ]

**ಅಂಜನಾವತಿ** (ನಾ). ಈಶಾನ್ಯದಿಕ್ಕಿನ ಸುಪ್ರತೀಕವೆಂಬ ದಿಗ್ಗಜದ ಪತ್ನಿ. [ಸಂ. ಅಂಜನಾವತೀ]

**ಅಂಜನಿ** (ನಾ). ೧. "ಕಾಡಿಗೆಯ ಕೊಳವಿ" (ಮಂಗರಾ. ೩೩೭, ಕಿ). ೨. ಚಂದನ ಕುಂಕುಮಾದಿಗಳಿಂದ ಅಲಂಕರಿಸಿಕೊಂಡವಳು, —ಅಲಂಕರಿಸಿಕೊಳ್ಳಲು ಅರ್ಹಳಾದವಳು. ೩. ಕಟುಕರೋಹಿಣಿ ; ಕಾಲಾಂಜನ ಎಂಬ ಗಿಡ. [ಸಂ. ಅಂಜನೀ]

**ಅಂಜನಿಕೆ** (ನಾ). ೧. ಒಂದು ಜಾತಿಯ ಹಲ್ಲಿ. ೨. ಸಣ್ಣ ಇಲಿ ; ಸುಂಡಿಲಿ. ೩. = ಅಂಜನಾವತಿ. [ಸಂ. ಅಂಜನಿಕಾ]

**ಅಂಜನೆ** (ನಾ). ೧. ಉತ್ತರದಿಕ್ಕಿನ ಸಾರ್ವಭೌಮ ಎಂಬ ದಿಗ್ಗಜದ ಪತ್ನಿ. ೨. ಹನುಮಂತನ ತಾಯಿ ; ಅಂಜನಾದೇವಿ. ೩. [ಜೈನ] ಒಂದು ನರಕದ ಹೆಸರು : ಅಂಜನೆಯೆಂಬ ಪೆಸರ ಪಂಕಪ್ರಭೆಯೆಂಬ ನಾಲ್ಕನೆಯ ನರಕಮಿರ್ದುದು (ಆಜಿಪು. ೧೧–೬ ವ). [ಸಂ. ಅಂಜನಾ]

**ಅಂಜಮೆ₁** (ನಾ). ಹೆದರಿಕೆಯಿಲ್ಲದಿರುವುದು ; ನಿರ್ಭಯ. 'ಅಂಜಮೆ ಗುಡು' ಪರಾ. [ಅಂಜು₁ + –ಅಮೆ₁. ‖ ತಮಿ. ಅಞ್ಜಾಮೈ]

**ಅಂಜಮೆ₂** (ನಾ). ಅಂಜಿಕೆ ; ಹೆದರಿಕೆ ; ಭಯ : ಭರತಂಗೆಱಗುವೆಱಕ ಮಂಜಮೆಯಲ್ತೆ (ಆದಿಪು. ೧೪–೭೫) ; ಪೊಱಗಣ್ಗೆ ರಂಜಿಸುವ ಬಹಿರಾ ಳಾಪದ ಡೊಂಬನೊಲ್ಲದೆ ಮಾಸಿದ ಹೇಮಕುಂಭದಂತೆ, ಸಾಧಕನ ಮರು

ಳಾಟದಂತೆ, ವೀರನಂಜಮೆಯಂತೆ . . . ಒಳಗೆ ಕಡು ಲೇಸಪ್ಪ ಸನ್ಮಾರ್ಗಮಂ ಬಿಟ್ಟು (ಧರ್ಮಾಮೃ. ೮-೯೩ ವ); ಸತಿಗೆ ಪತಿಯೆ ಕರಂ ಕೂರ್ತಾಪೊಟ್ಟುಮಂಜುವಂಜಮೆ ಕೋಪಮನುಡುಗಿಸಲಿದೊಂದೆ ಸಾಲದೆ ಬನ್ನಿಂ (ಜೀವಸಂ. ೧೧೮-೬೧). [ಅಂಜು$_1$ + -ಅಮೆ$_2$]

**ಅಂಜನೆಗುಡು** (ಕ್ರಿ). ಹೆದರಿಕೆಯನ್ನು ಹೋಗಲಾಡಿಸಿ ಧೈರ್ಯ ಹೇಳು; ಅಭಯಕೊಡು: ಜನಮಂ ನೀಮಂಜಲಿಮೆಂದಡಜಿವಮರ್ವಿನ ಮಂಜಮೆಗೊಟ್ಟಜಿದು ನಿಜಿಸಿದಂ ಚಂದ್ರಾಭಂ (ಆದಿಪು. ೬-೬೧).
[ಅಂಜಮೆ$_1$ + ಕುಡು$_1$ (< ಕೊಡು$_1$)]

**ಅಂಜರ** 'ಅಂಜೂರ' ನೋ.

**ಅಂಜಲಿ,** ಅಂಜಳಿ (ನಾ). ೧. ಬೊಗಸೆ: ಮುಚ್ಚಿದಂಜಲಿವೆರಸಿ ಗುರುವಸಿಷ್ಠಂಗೆಜಗಿ (ಹಚಕಾ. ೧೩-೧೪); ಏಕೆ ಭೋಜನಪಾತ್ರವಂಜಲಿಯಿರಲು (ನಿಭಾಗ. ೨-೧-೩೩). ೨. ಒಂದು ಬೊಗಸೆ ತುಂಬುವಷ್ಟು ಧಾನ್ಯ. ೩. ಅಭಿನಯ ಮಾಡುವಾಗ ತೋರಿಸುವ ಒಂದು ಹಸ್ತವಿನ್ಯಾಸ; ಅಂಜಲಿಮುದ್ರೆ. **ಅಂಜಳಿ** (ನಾನಾರ. ೧೦೮). [ಸಂ.]

**ಅಂಜಲಿಕರಣ** (ನಾ). ಕೈಮುಗಿಯುವುದು. [ಅಂಜಲಿ + ಕರಣ]

**ಅಂಜಲಿಕಾರಿಕೆ** (ನಾ). ೧. ಕೈಮುಗಿದುಕೊಂಡಿರುವ ಮಣ್ಣು ಬೊಂಬೆ. ೨. ಮುಟ್ಟಿದರೆ ಮುನಿ ಎಂಬ ಹೆಸರಿನ ವನಸ್ಪತಿ; ಮುಟ್ಟಲುಮುರಿಕೆ. ೩. ಗೋಡೆಯ ಮೇಲೆ ಬರೆದ ಚಿತ್ರ: "ಈಕ್ಷಿಸುವ ಭಿತ್ತಿಯೊಳು ಬರೆದ ಚಿತ್ರಂಗಳಂಜಲಿಕಾರಿಕಾಖ್ಯಮಕ್ಕುಂ" (ಮಂಗರಾ. ೬೦-೧೪). [ಸಂ. ಅಂಜಲಿಕಾರಿಕಾ]

**ಅಂಜಲಿನೀಡು** (ಕ್ರಿ). ಬೊಗಸೆಯನ್ನು ಮುಂದಕ್ಕೆ ಚಾಚು: ಅಂಜಲಿ ನೀಡಿ ದಿವ್ಯಪಾಯಸಪೂರ್ಣ ಪಾತ್ರೆಯಂ ವಿನಯದಿಂ ಕೊಂಡು (ಶ್ರೀರಾಮಾ. ೧೪-೨೬೨). [ಅಂಜಲಿ + ನೀಡು$_1$]

**ಅಂಜಲಿಪುಟ** (ನಾ). ಬೊಗಸೆ. [ಅಂಜಲಿ + ಪುಟ$_2$]

**ಅಂಜಲಿಬಂಧ** (ನಾ). ಕೈಗಳನ್ನು ಬೊಗಸೆಯಾಗಿ ಜೋಡಿಸಿ ಹಣೆಯ ಬಳಿ ಇಟ್ಟುಕೊಂಡು ಮಾಡುವ ನಮಸ್ಕಾರ; ಕೈಮುಗಿಯುವುದು; ಕೈಜೋಡಿಸುವುದು. [ಅಂಜಲಿ + ಬಂಧ]

**ಅಂಜವಲೆ** (ನಾ). ಭೀತಿ; ತಲ್ಲಣ (?): ಈ ಯುವತಿಯ ಹಾವಭಾವಮನೆ ಭಾವಿಪಭಾವಭವಂ ಭವಂಗಮಂಜವಲೆಯನೋವದೀವನೆ (ವರ್ಧಪು. ೩-೬೮); ಎಂದು ಮತ್ತಂ ತನ್ನ ತಮ್ಮನ ಸ್ವೈರಣೆಯ ಸಲ್ಗೆಯಂಜವಲೆಯೊಲವಿನ ಗುಣಂಗಳಂ ನೆನೆನೆನೆದು (ವರ್ಧಪು. ೯-೬೬ ವ).
[ಅಂಜಮೆ$_2$ + ಅಲೆ$_2$? ಅಥವಾ ಅಂಜು$_1$ + *ಅವಲೆ? P ತಮಿ. ಅವಲೈ = ನೋವು]

**ಅಂಜಸಾ** (ಅ). ೧. ದಿಟವಾಗಿ; ನಿಜವಾಗಿ; ಸರಿಯಾಗಿ. ೨. ಥಟ್ಟನೆ; ಕೂಡಲೆ: "ತ್ವರಿತದಲಿ ದಿಟದಲ್ಲಿ ಅಂಜಸಾಖ್ಯಯಮೆನಿಕು" (ಮಂಗರಾ. ೧೫೬-೬೩). [ಸಂ.]

**ಅಂಜಸಾಸ್ಪರ್ಶ** (ನಾ). ಅಕ್ಷಣವೇ ಮಾಡುವ ಸ್ಪರ್ಶ: ಖಂಜತನವು ಬಂದು ಪ್ರಾಪ್ತನಾ[ವಾ]ದಡೆ ಅಂಜಸಾಸ್ಪರ್ಶ ಬಯಸುವೆ (ಮೋಕ್ಷದೀ. ೧೩೨). [ಅಂಜಸಾ + ಸ್ಪರ್ಶ]

**ಅಂಜಳಿ** 'ಅಂಜಲಿ' ನೋ.

**ಅಂಜಿಕೆ** (ನಾ). ಹೆದರಿಕೆ; ಭಯ; ದಿಗಿಲು: ಬಿಡು ನೀನಂಜಿಕೆಯಂ ಕಪಿಂಜಲಕ ದೋಷಂ ನಿನ್ನದಲ್ತು (ಕಾದಂಉ. ೭೨೪); ಅನುಗೆಟ್ಟು ನೀವಿಲ್ಲಿದ್ದಡಂಜಿಕೆ ಹುಟ್ಟದಿಹುದೇ (ಬಸವು. ೧೮-೧೫); ಸುರಪನಂಕುಶವಾಕಿದರೆ ಮೆಯ್ಯಜಿಯದೈರಾವತಕೆ ಕಬ್ಬಿನಲಿಜಿದರಂಜಿಕೆಯುಂಟೆ (ಕುವ್ಯಾದ್ರೋ. ೫-೫೫); ಅಂಜಿಕಿನ್ಯಾತಕಯ್ಯಾ ಸಜ್ಜನರಿಗೆ (ಪುರಂದ. ೧-೧೯೨-೧). [ಅಂಜು$_1$ + -ಇಕೆ]

**ಅಂಜಿಸು** (ಕ್ರಿ). ಹೆದರಿಸು; ಭಯಪಡಿಸು; ದಿಗಿಲುಗೊಳಿಸು: ಪೊಸಕಾರೊಳಿಂತು ಬೆಳ್ಪಗೆ ಪಥಿಕಾಂಗನಾಜನಮನಂಜಿಸುವಂತಿರೆ (ಕವಿರಾ. ೧-೧೨೪); ನಿಮಗಾನಂಜದೊಡಂಜಿಸಲ್ ನೆಜೆವೆನೇ ತ್ರೈಲೋಕ್ಯಮಂ ಯುದ್ಧದೊಳ್ (ಪಂಪಭಾ. ೧೧-೧೩೪); ಎಜಗದರಾತಿಭೂಭುಜರ ನಾಜಿಯೊಳಂಜಿಸಿ ತಂನಿಜಾಂಘ್ರಿಗಳ್ಗೆಜಗಿಸುತಿರ್ಪ (ಎಕ. VII, ಶಿವಮೊ. ೯೭-೨೧; 1113); ಸೌಭದ್ರೇಯ ಭೃಂಗನ ಬಿಲುದನಿಯ ಭರವಂಜಿಸಿತು ಜಯಯುವತಿ ವಿರಹಿಗಳ (ಕುವ್ಯಾದ್ರೋ. ೬-೩೧); ಶಾಬವ್ಯಗಮಂಜಿಪುದು ಗಡ ಪುಲಿಯಂ (ಜೈಮಿಭಾ. ೨೦-೨೫). **ಅಂಜಿಸಿಕೊ** = ತನ್ನ ವಿಷಯವಾಗಿ ಅಂಜುವಂತೆ ಮಾಡು: ಮೋಜನ ಹೊಯ್ದುಜಿ ಬೆಕ್ಕನಂಜಿಸಿಕೊಂಡನೆಂಬಜಿಕೆಯ ನುಡಿಯಂತೆ ಮದನ ಉಜುಬಿ ಹೇಳುವ ಮಂತ್ರಿಸಖರನಂಜಿಸಿಕೊಂಡ ಹೊಜವೆಣ್ಣುಗಳ ಮೇಲೆ ಮುನಿದು (ಭರಚ. ೪೮-೯೩). [ಅಂಜು$_1$ + -ಇಸು$_1$]

**ಅಂಜಿಹುಲ್ಲು** (ನಾ). ಒಂದು ಬಗೆಯ ಹುಲ್ಲು (ವೈಶಾಗಿ. ೨೭-೫೧೨). 'ಅಂಚಿಹುಲ್ಲು' ಪರಾ.
[ಅಂಜಿ$_0$ (< ಹಂಜಿ?) + ಹುಲ್ಲು (< ಪುಲ್)]

**ಅಂಜೀರ** 'ಅಂಜೂರ' ನೋ.

**ಅಂಜು$_1$** (ಕ್ರಿ). ಹೆದರು; ಭಯಪಡು; ದಿಗಿಲುಬೀಳು: "ಅಂಜು – ಭಯೇ" (ಶಮಧಾ); ಅಸ್ತಕನ್ನಜ್ದುಡೊನ್ (ಮೈಆರಿ. ೧೯೩೯, ೨೨-೧೮; 750); ಅಂಜದಂಜದೆ ತೊಲತೊಲಗು (ಕವಿರಾ. ೨-೨೬); ಕಾಗೆವೊಲಿಂತು ಬಿಲ್ಗೆ ಕರಮಂಜುವಿರಂಜಲಿಮಾ ತ್ರಿಣೇತ್ರನಂ ಪೋಗೆಡೆಗೊಂಡು ಕಾದುವೆನೆ (ಪಂಪಭಾ. ೧೧-೧೨೨); ನಡುಗುವ ವಲ್ಲಭೆಯರನಂಜಲಿಮಂಜಲಿಮೆಂದು ಸಂತೈಸಿ (ಶಾಂತಿಪು. ೮-೫೦ ವ) [ಅಂಜಲಿಂ = ಹೆದರಬೇಡಿ]; ಈ ನದೀನಂದನನ ಬಲದಲಿ ಸೇನೆ ಶಿವಗಂಜುವುದೆ (ಕುವ್ಯಾಭೀ. ೧-೩೩); ಅಂಜಿದು ಫಣಿರಾಯ ತಲೆದೊನೆಯಲು ರತ್ನ ಗುಂಜಿಯಂತೆಸೆದು ಚೆಲ್ಲಿದುವು (ಮೋಹತ. ೧೨-೫೩) [ಅಂಜಿದು = ಅಂಜಿ]; ತಮಕೆ ರವಿಯಂಜಿ ಬೆಳಗದಿರ್ಪನೆ ಲೋಕಮಂ (ಚಿಬಪು. ೧-೩೨); ಅಂಜಿದವನ ಮೇಲೆ ಕಪ್ಪೆ ಹಾಕಿದ ಹಾಗೆ (ಗಾದೆ). **ಅಂಜಿ ಅತ್ತೀಕಾಯಾಗು** = ಭಯದಿಂದ ಕುಗ್ಗು: ಅರಮನೆಗೆ ಅರಮನೆಯೇ ಅಂಜಿ ಅತ್ತೀಕಾಯಾಗಿತ್ತು (ಪುಟ್ಟರ. ೭).
[ದೇ. ‖ ತಮಿ. ಮಲ. ಅಞ್ಚು; ತುಳು. ತೆಲು. ಅಂಜು; ಕುಇ. ಅಜ; ಕುವಿ. ಅಜ್ಜಲಿ; ಬ್ರಾಹೂ. ಹೀಜಿಂಗ್]

**ಅಂಜು$_2$** (ನಾ). ಹೆದರಿಕೆ; ಭಯ: ಹಿಂಜರಿದನ್ನೈಸೆ ರಾಮುಂಗೆ ಮೊರೆಯಿಡಲ್ ಅಂಜರಿಯದಾಂಜನೇಯಂ (ಶ್ರೀರಾಮಾ. ೭೫೮-೨೫೭).
[< ಅಂಜು$_1$]

**ಅಂಜುಕುಳಿ,** ಅಂಜುಗುಳಿ (ನಾ). ಹೆದರುವುದೇ ಸ್ವಭಾವವಾಗಿರುವ ವ್ಯಕ್ತಿ; ಭೀರು; ಹೇಡಿ: ಅಂಜುಕುಳಿ (ಭಾಷಾಭೂ. ೧೮೪ ಉದಾ); ಎಡೆಬಿಡದೆ ದುಃಖಂಗಳೊತ್ತುತಿರೆ ಬಾಟ ನೀಳ್ಪನ್ ಬಯಸಿ ತಾಳ್ವನ್ ಅಂಜುಕುಳಿ (ಅಶ್ವತ್ಥಾ. ೨೦-೨೩); ವಿನೋದವಾಗಿ ಕೇಳಿದರೆ ಕೋಪಿಸಿಕೊಂಡು ಬಿಟ್ಟೆ; ನೀನು ಶುದ್ಧ ಅಂಜುಕುಳಿ (ಆರ್ಯಕ. ೪೭). **ಅಂಜುಗುಳಿ**: ಆತ ಮಹಾ ಅಂಜುಗುಳಿಯಾಗಿ ತೋರುತ್ತಾನೆ (ರತ್ನಗೋ. ೬೬); ಈಕೆ ಬಹಳ ಅಂಜುಗುಳಿ ಎಂದ (ನಡೆದಾ. II, ೧೧೨೫).
[ಅಂಜು$_1$ + -ಕುಳಿ$_2$]

**ಅಂಜುಗುಳಿ** 'ಅಂಜುಕುಳಿ' ನೋ.

**ಅಂಜುಪುರುಕ,** ಅಂಜುಬುರುಕ (ನಾ). = ಅಂಜುಕುಳಿ. **ಅಂಜುಬುರುಕ**: ಅಂಜುಬುರುಕರಿಗೆ ಇಲ್ಲಿ ಸ್ಥಾನವೇ ಇಲ್ಲ (ವಾತ್ಸಲ್ಯ. ೨೧).
[ಅಂಜು$_1$ + -ಪುರುಕ]

**ಅಂಜುಪುರುಕಿ,** ಅಂಜುಬುರುಕಿ (ನಾ). ಹೆದರುವುದೇ ಸ್ವಭಾವ

ವಾಗಿರುವ ಹೆಂಗಸು. **ಅಂಜುಬುರುಕಿ** : ಏನು ಅಂಜುಬುರುಕಿ ನೀನು ಯಶೋದಾ (ವಾತ್ಸಲ್ಯ. ೩೫). [ಅಂಜು$_2$ + –ಪುರುಕಿ]

**ಅಂಜುಬುರುಕ** 'ಅಂಜುಪುರುಕ' ನೋ.

**ಅಂಜುಬುರುಕಿ** 'ಅಂಜುಪುರುಕಿ' ನೋ.

**ಅಂಜುರ** 'ಅಂಜೂರ' ನೋ.

**ಅಂಜುಲಿ,** ಅಂಜುಳಿ (ನಾ). = ಅಂಜಲಿ : "ಬೊಗಸೆ" (ಗಂಗಾಮ). **ಅಂಜುಳಿ** : ಮುಖಪ್ರಕ್ಷಾಳನಾರ್ಥಂ ಪೇರಡವಿಯೊಳಂಜುಳಿಯಿಂ ಜಲಮಂ ತಂದು (ಕಾದಂಪೂ. ೭೦೧) ; ಲಲನೆಯಂಜುಳಿ[ಪಾಠಾಂ. ಲಿ] ಸಲಿಲದಿಂ ಚಪ್ಪಳಿಸುತಂ ಬೆನ್ನೊಳು ಶಿರಸಿನೊಳು ಜಲವನೊತ್ತುವಳ್ (ಬಸವು. ೧೫–೯) ; ಜಗವುಘೇ ಯೆಂದುದು ಜಯಧ್ವನಿ ಜಗವ ಝೊಂಪಿಸಿತೊಗ್ಗಿನಂಜುಳಿ ಗಗನದಗಲಕೆ ಕುಣಿವುತಿದ್ದುದು ಸುರರ ಭಾಳದಲಿ (ಕುವ್ಯಾಕ. ೬–೩೨) ; ಚೂಡಾಮಣಿಯನಂಜುಳಿಗೆ ತೆಗೆದು (ಶ್ರೀರಾಮಾ. ೫೩೪–೨೬೪). [ಸಂ. ಅಂಜಲಿ]

**ಅಂಜುಳಿ** 'ಅಂಜುಲಿ' ನೋ.

**ಅಂಜೂರ,** ಅಂಜರ, ಅಂಜೀರ, ಅಂಜುರ, ಅಂಜೂರಿ (ನಾ). ಅತ್ತಿಯ ಜಾತಿಗೆ ಸೇರಿದ ಒಂದು ಬಗೆಯ ಮರ, —ಹಣ್ಣು : ಚಂಪಕ ಪಾರಿಜಾತವು ಪನಸು ಅಂಜೂರ (ಜಿನಭಾ. ೧೭–೧೬). **ಅಂಜರ** : ಅಂಜರಮುಂ ಖರ್ಜೂರಮುಂ . . . ಮಂಜುಳದುದ್ಯಾನವನದೊಳಿರ್ಪವು ಪೆಂಪಿಂ (ಹಮ್ಮಿರ.೪–೧೫); ಅಂಜರದ್ರಾಕ್ಷಿ ಸಲವಿದನಲ ತಂಗಿ (ಮಲ್ಲಿಗೆ. ೪೮). **ಅಂಜೀರ** : ಕಾನಡಾ ತೋಟಗಳಲ್ಲಿ ಕಿತ್ತಳೆ, ಕಂಜಿ, ಅಂಜೀರ . . . ಫಲಗಳು ಬೆಳೆಯುತ್ತವೆ (ಕಭಾಗ. ೨೭೬) ; ಇವಲ್ಲದೆ ಮತ್ತೊಂದು ಕಡೆಗೆ ಅಂಜೀರವನ್ನು (ಕೃಷಿಪ್ರ. ೧೪೩). **ಅಂಜುರ** : ಉತ್ತುತ್ತೆ ಜೇನು ಅಂಜುರ ಶೇವು (ವಾದಿಕೀ. ೧–೧೪೯–೨). **ಅಂಜೂರಿ** : ಅಂಜೂರಿಯ ಗಿಡಗಳೂ ಅತ್ತೀ ಆಲದ ಮರಗಳೂ ಒಂದೇ ಜಾತಿಯೊಳಗಿನವು ಎಂದು ವಿದ್ವಾಂಸರು ಹೇಳುತ್ತಾರೆ (ಮುಂಬಯಿ. ೨–೨೯).

[← ಅರ. ಪಾರ. ಹಿಂ. ಮರಾ. ಅಂಜೀರ್]

**ಅಂಜೂರಿ** 'ಅಂಜೂರ' ನೋ.

**ಅಂಜೆ** (ನಾ). ಬಟ್ಟೆ; ವಸ್ತ್ರ; ಕಪ್ಪಡ (೬). [~ ಅಂಚಿ$_4$]

**ಅಂಝುಟಿ** 'ಅಜ್ಝುಟಿ' ನೋ.

**ಅಂಟಕಾಸು,** ಅಂಟಗಾಸು (ಕ್ರಿ). ಕಲಾಯಿಮಾಡು; ಬೆಸುಗೆಹಾಕು (ಸ್ಯಾಂಡರ್). **ಅಂಟಗಾಸು** (೬).

[< ಅಂಟು$_2$ + ಕಾಸು$_1$ (<.ಕಾಯಿಸು$_1$)]

**ಅಂಟಗಾಸು** 'ಅಂಟಕಾಸು' ನೋ.

**ಅಂಟರಳೆ** (ನಾ). ಒಂದು ಜಾತಿಯ ಗಿಡ; ಅಂಟವಾಳ.

[ಅಂಟು$_1$ + ಅರಳೆ ?]

**ಅಂಟರಿಕೆ** (ನಾ). ಸೋಕಿದರೆ ಅಂಟಿಕೊಳ್ಳುವ ಒಂದು ಬಗೆಯ ಹುಲ್ಲು. [ಅಂಟರು + –ಇಕೆ]

**ಅಂಟರಿಸು** (ಕ್ರಿ). (ಉಕ) ೧. (ದ್ರವಾಂಶ ಕಳೆದು ಹೋಗಿ) ಗಟ್ಟಿಯಾಗು. ೨. "ಹೊತ್ತು, ಹೆಚ್ಚು ಬೆಂದಿರು, ಹುರುಪಡಿಸು" (ಜಾನಕೋ. ೧೨). [~ ಅಡು ? ]

**ಅಂಟರು,** ಅಂಟಲು (ಕ್ರಿ). ಅಂಟಿಕೊಳ್ಳು, ಹತ್ತಿಕೊಳ್ಳು : "ಸ್ಪರ್ಶ" (ಗುವಿಮೋ. ೬). **ಅಂಟಲು** (೬). [< ಅಂಟು$_1$ ?]

**ಅಂಟಲು** 'ಅಂಟರು' ನೋ.

**ಅಂಟಸುಂಟ** (ನಾ). ನಿಂದಾವಾಚಕವಾದ ಒಂದು ಶಬ್ದ ; ಒಂದು ಬೈಗುಳ (?) : ದರವುರಮುಮುಂಟಸುಂಟಯುಮುರೆವೊರಕನುಮೆನಿಸಿ ತರತರಂ ನುಡಿದು ಸಭಾಂತರದೊಳ್ ರಂಜಿಪುದೆ ರಸಾಂತರಂಗಳಂ ಮುಟ್ಟಿ ನುಡಿದು ರಂಜಿಸವೇಡಾ (ಅಜಿಪು. ೧–೮೪) ; ಚೀ ಬಿಸುಡುಗೊಯ್ಕೆಯರುಟ್ಟುದಜಕೊದ್ದೆ ಬೀಟು ಬೆರಳ್ಗಡಿಕೆಯರಂಟಸುಂಟ ಸುಡು ಪಂಜೆಗಳೆಂಜಲ ಹಂಜೆಯೆಂದು ಬಯ್ದೊಡನೆತ್ತಿದರ್ ಮಸಗಿ ಬೇಂಟದ ಬನ್ನಮನಕ್ಕತಂಗಿಯರ್ (ಅನಂಪು. ೮–೩೧). [?]

**ಅಂಟಿಕ್ಕು** (ಕ್ರಿ). ೧. ಅಂಟಿಸು. ೨. ನಾಟಿಹಾಕು ; ಕಸಿಮಾಡು (೬). ೩. ಬೆಂಕಿ ಹಚ್ಚು (ಸ್ಯಾಂಡರ್). [ಅಂಟು$_2$ + ಇಕ್ಕು$_1$]

**ಅಂಟಿಗೆಪಂಟಿಗೆ** (ನಾ). ಕೃಷ್ಣಪಕ್ಷದ ರಾತ್ರಿಯಲ್ಲಿ ಹುಡುಗರು ದೀಪವನ್ನು ಹಿಡಿದುಕೊಂಡು ಮನೆಯಿಂದ ಮನೆಗೆ ಹೋಗಿ ಕಾಣಿಕೆಯನ್ನು ಬೇಡುವ ಒಂದು ಆಟ; 'ಅಂಟಿಗೆಪಂಟಿಗೆ' ಎಂದು ಕೂಗುವ ಒಂದು ಬಗೆಯ ಹುಡುಗರ ಆಟ (ಸ್ಯಾಂಡರ್). [?]

**ಅಂಟಿಡು** (ಕ್ರಿ). ಅಂಟಿಸು ; ಸೇರಿಸು ; ಕೂಡಿಸು (ಸ್ಯಾಂಡರ್). [ಅಂಟು$_2$ + ಇಡು$_1$]

**ಅಂಟಿಸು** (ಕ್ರಿ). ೧. ಅಂಟಿಕೊಳ್ಳುವಂತೆ ಮಾಡು ; ಸೇರಿಸು ; ಹತ್ತಿಸು ; ಸೋಕಿಸು; ಮುಟ್ಟಿಸು : ತೇಱಡಿ(ಱ)ದಲ್ಲಿ ಪೂಸೆ ನಿಲ್ಲದು ವಿಷಮುಂತದುಂ ಪೆಜರನಂಟಿಸೆ ಪತ್ತುಗುಮಾ ಮಹಾವಿಷಂ (ಲೋಕೋಪ. ೧೧–೨೭) ; ಕಂಪಿಪೊಡಲಂಟಿಪ ಧೂಳಿಯೊಜಲ್ವ ನಿಸ್ವನಂ ನಿಟ್ಟುಸುರಂದು ವಿಸ್ಮಯಮನಾಗಿಸೆ (ಉದ್ಭಟ. ೪–೫೯) ; ಸುತವೆರಸಾ ವಧೂಟಿ ಜಿನರಾಜ ಗೃಹಕ್ಕೆ ಪೊದಟ್ಟು ಪೋಗಿ ಸಂಗತಿವಡೆದಿರ್ದ ಬಾಗಿಲ ಕವಾಟಗಳಂ ಸಿಶುಪಾದಂ[ಶಿಶುಪಾದಮಂ] ಕಳಾವತಿ ಬಿಡದಂಟಿಸಲ್ ತೆಱದವಂದೆರೆದುಂ (ಪುಣ್ಯಾಸ್ರ.೭–೫೨) ; ಎಂಟುಮುಡಿ ನಯದಿಂದ ನೊಸಲಿನೊಳಂಟಿಸುವುದಾ ತಂಗೆ ಪಟ್ಟವನೆಂದಳಾ ಕಾಂತೆ (ತೊರರಾ. ೨–೧–೩೫) ; ಅದೊಂದು ದುಃಖ ಪರಂಪರೆ, ನಿಮಗೇಕೆ ಆ ದುಃಖ ಅಂಟಸಲಿ (ನವನೀ. ೬೯) ; ಮೊದಲ ಹಾಳೆಯಲ್ಲಿ ನನ್ನ ಕಾಗದವನ್ನು ಅಂಟಸಿದ್ದರು (ಶಾಲೆಮು.೪೯). ೨. ಬೆಂಕಿ, ದೀಪ ಮುಂತಾದವನ್ನು ಹೊತ್ತಿಸು ; ಹಚ್ಚು : ಅಂಟಿಸಿದ ದೀಪದಿಂ ಕಂಡರಣಿಯುಂ ಮಥಿಸಿ (ವೀಶೈಪು. ೫–೧೨–೨೬). ೩. ಉಂಟುಮಾಡು : ಪಂತಿಸಿ ರಿಪುಗಳ ಮುಱಿಯಲಿಱದು ಮನಕಂಟಿಸಿದರು ಭೀತಿಯನು (ಕಂನವಿ. ೧೪–೧೦೪). [ಅಂಟು$_1$ + –ಇಸು$_3$]

**ಅಂಟು$_1$** (ಕ್ರಿ). ೧. ಮುಟ್ಟು ; ತಾಕು ; ಸೋಕು : ವಿರಚಿಸಿ ಸುಕುಮಾರತೆಯಂ ಪಿರಿದುಂ ಬೆರಳಿಂದವಂಟನೋಡಿದನೋ ಪೇಟಿರವಿಂದೋದ್ಭವನೆನಲಾ ತರುಣಿಯ ಗಂಭೀರನಾಭಿಮಂಡಲಮೆಸೆಗುಂ (ಕಾದಂಉ. ೧೦) ; ನಿನ್ನಧರಾಮೃತಕ್ಕೆಳಸಿ ತನ್ನೃಪ ನನ್ನವನಂಟನೊರ್ಮೆಯುಂ ನಿನ್ನಯ ಸಂಗಮಕ್ಕೆಳಸಿ ಮಾಣ್ದನತೀವ ಸುಖಪ್ರಸಂಗಮಂ (ನಳಚಂ. ೧೬೪); ಕೋಮಳಕರದಿಂ ಭೂಮಿಶನ ಸಕಲಾವಯವಂಗಳನಂಟ ನೋಡಿ (ದಶಕು. ೨–೫೩ ವ) ; ಇಱದೆಡೆಯನಂಟಂಟ ತೋಱುತಿರಲು (ಅರಾಚ. ೧೩–೧೯). ೨. ಜತೆಗೂಡು ; ಸೇರು ; ಕೂಡು : ನಿಚಿತ ಮುದದಿಂದೆ ಮುಖಶಶಿರುಚಿಯಂ ಬಿಡದಂಟ ಸವಿವೆವೆಂದಗಲದೆ ಸಾರ್ದ ಚಕೋರಂಗಳವೊಲ್ ಘನಕುಚೆಯಲರ್ಗಣ್ಗಳ್ ವಿರಾಜಿಸಿದುವು (ಉದ್ಭಟ. ೬–೧೦೭); ಕಂಟಕಿಯೆಂದು ನುಡಿವರೆಮ್ಮನೆಮ್ಮೊಳಗುಂಟಾದ ಸವಿಯನಿಮಿಷರು ಈಂಟುವ ಸುಧೆಯೊಳಿಲ್ಲೆಂದು ತೋರ್ಪೊಲು ಫಲವಂಟಿದ ಪಲಸುಗಳಿಹವು (ಕಂನವಿ. ೨–೪೬) ; ಆ ಪುಸ್ತಕದಲ್ಲಿ ಹಾಳೆಗಳು ಒಂದಕ್ಕೊಂದು ಅಂಟಕೊಂಡಿವೆ (ರೂಢಿ). ೩. ಉಂಟಾಗು ; ಒದಗು : ಅಂಟದ ಜಗಳದೊಳಗೆ ಮಾರ್ಬಲವನು ಪಂಟಿಸಿ ಮುಱಿಯಿಱದಾಗ ಒಂಟಂಗದಲಿ ಮೆಱದರ ಕೇರಿಯೆಸೆದುವು (ಕಂನವಿ. ೬–೬೦); ಪಾಪ ಪುಣ್ಯಗಳೆರಡೂ ಅವನಿಗೆ ಅಂಟಲಾರವು (ಜಗದಾ. ೩೪). ೪. ಮೆತ್ತಿಕೊ ; ಹತ್ತಿಕೊ : ಜಾಜಲಂಟದ ಕಾಲ ರೊಂಡೆಯನೂಱ ಬಿದ್ದಂಗಯ್ಯ ಕೆಸಱಂ ತೋಱುತಂ ಭೂನಾಥ ನೀನಱಿಯಾ ಜಗತ್ರಯಕೆ (ಬಸವು. ೧೦–೮). ೫. ಸವರು ; ನೇವರಿಸು ;

ತಿದ್ದು : ಸಿಮಿರ್ದ ಸೆಳ್ಳುಗುರ್ಗಳಿನೊಯ್ಯನೊಯ್ಯನಳಕಾಳಿಯನಂಟುತ
ಮುನ್ನತಸ್ತನಂ ಪೊಗರೆಸೆಯಲ್ (ನಳಚಂ. ೩.೨೯). ೬. ನಿಲ್ಲು ; ತಡೆ :
ಧರೆಯನೆಲ್ಲ ಮುಸುಕುವ ಬಲುಗತ್ತಲೆ ತರಣಿಯ ಮುಂದೆ ನಿಲುವುದೆ
ದುರುಳಬಲದಿ ಜನಮುಂ ದಂಟದೇ ಪರಿದೋಡಿತು ದೆಸೆದೆಸೆಗಳಿಗೆ
(ಜೀವಂಸಾಂ. ೫-೬೫). ೭. ಕೋಪದಿಂದ ಮೇಲೆ ಬೀಳು (ಸ್ಯಾಂಡರ್).
೮. ಮೈಥುನ ಮಾಡು ; ಸಂಭೋಗಿಸು (ಸ್ಯಾಂಡರ್). ೯. ಹಿಂಬಾ
ಲಿಸು ; ಅಟ್ಟು (ಸ್ಯಾಂಡರ್).

[ದೇ. ‖ ತಮಿ. ಅಟ್ಟು ; ತುಳು. ತೆಲು. ಅಂಟು ; ಕೋಲಾ. ಅಟ್ ;
ನಾಯ್ಕಿ. ಅಟ್ಟ್]

**ಅಂಟು₂** (ನಾ). ೧. ಮುಟ್ಟಿದರೆ ತಗುಲಿಕೊಳ್ಳುವ ಸ್ವಭಾವ ;
ಜಿಗಟು : ಎಲ್ಲರಿಗೂ ಬಾಯಿ ಅಂಟುಅಂಟಾಗಿದೆ (ನಡೆದಾ. II, ೧೪೬೦).
೨. ಜಿಗಟಾದ ವಸ್ತು ; ಸೋಕಿದ ಸ್ಥಳಕ್ಕೆ ಹತ್ತಿಕೊಳ್ಳುವ
ಸ್ವಭಾವದ ಪದಾರ್ಥ ; ಗಿಡಮರಗಳ ಹಾಲಿನಿಂದ ಉತ್ಪನ್ನ
ವಾಗುವ ಗೋಂದು ; ಬಂಕೆ ; ಕೃತಕವಾಗಿ ತಯಾರಿಸುವ ಸರಿ :
"ಸರಿ ಪರಿಸನಂಗಳೊಳಗಂಟು" (ಶಬ್ದಮಂ. ೯೨) ; ಮಯಣದಂಟಿನ
ಮೇಲುಕೊಂಬಿನ ಬೇಟೆಗಾಜರು ಬಳಸಿದರು (ಕುವ್ಯಾಅ. ೫-೩೩) ; ಗಳೆ
ಗಳಂಟಿಗೆ ಸಿಲುಕಿದವು ಪಿಕ್ಕುಳಿಗ ಪಿಂಜರ ಮಂಜರಿಗ ಮಿಾಂಬುಲಿಗ
ಲಾವುಗೆ ಸರಲೆ ಬುರುಲೆಗಳ್ (ತೊರರಾ. ೩-೩-೧೮); ಅಂಟನಂದದ ಸ್ನೇಹ
ಬಿಜುಬಿನಂದದ ಕೋಪವುಂಟಾದವರನು ಪತ್ತುವುದು (ಭರಚ. ೬೮-೩೪) ;
ಅಂಟುಗಳಟಿದ ಪಕ್ಕಿಗಳಂತೆಯುಂ (ಚಿಕವಂ. ೫೯-೫). ೩. ಕೊಳೆ ;
ಕಶ್ಮಲ : "ಆಚಮನಂ ಉಪಸ್ಪರ್ಶನಂ ಈ ೨ ಅಂಗದಂಟುಬಾರಿಸುವುದು"
(ಹಲಾಯು. ೬೮-೨೫೪) ; ಒಲಿದುಂಬ ಬಟ್ಟಲು ಹರಿವಾಣದೊಳಗೆ
ಕೈಯಲುಬುವ.ಬಟ್ಟಲು ಹೊಜಗೆ ಕೆಲದಲ್ಲಿ ಕರತಳದಂಟ ಕೀಳುವ ದಾರೆ
ಸಲೆ ಸಂದ ಗಿಣ್ಣಿಲೊಪ್ಪಿದುದು (ಭರಚ. ೪-೬೪). ೪. ಸ್ತ್ರೀಯರ ರಜೋ
ದೋಷ ; ಮುಟ್ಟು : "ಅಂಟನಲಿ ಮುಟ್ಟಲಕ್ಕುಂ" (ಕಬ್ಬಕೈ. ೬೩).
೫. ಕಸಿಮಾಡುವುದಕ್ಕೂ ಚಿಗುರಿಸುವುದಕ್ಕೂ ಉಪಯೋಗಿಸುವ
ಕಡ್ಡಿ, —ಬಳ್ಳಿಯ ಹಂಬು : ಮಲ್ಲಿಗೆಯ ಅಂಟು ಇದ್ದಂತೆ ನೇಹದ
ನಂಟು (ಸೂರ್ಯಪಾ. ೨೬-೩) ; ಪುಷ್ಪದ ಜಾತಿಯ ಬೀಜಗಳನ್ನು ಅಥವಾ
ಅಗಿಗಳನ್ನು. . . ಅಥವಾ ಅಂಟುಗಳನ್ನು ತರಿಸಿ . . . ಹಾಕುತ್ತಾ (ಕೃಷಿಪ್ರ.
೧೪೩) ; ನಾಟುವ ಅಂಟುಗಳು ಸಾಲ್ಕೆಂಟು ದಿವಸದಲ್ಲಿ ನೆಲೆಗೊಳ್ಳುತ್ತವೆ
(ರೂಢಿ). ೬. ಸಂಪರ್ಕ ; ಸಂಬಂಧ : ಅಂಟು ತಪ್ಪಿದರೆ ನಂಟು
ತಪ್ಪೀತೆ ? (ಗಾದೆ). ೭. ಆಸರೆ ; ಅವಲಂಬನ ; ರಕ್ಷಣೆ (ಸ್ಯಾಂಡರ್).
**ಅಂಟಿನ ಉಂಡೆ** = ೧. ಗೋಂದನ್ನು ಹುರಿದು ಪಾಕದಲ್ಲಿ ಹಾಕಿ
ಕಟ್ಟುವ ಉಂಡೆ : ಅಂಟಿನ ಉಂಡಿ[ಡೆ]ಯಿಲ್ಲದೆ ಶೀನೂನ ಫಲಾಹಾರ
ವಾಗುತ್ತಿರಲಿಲ್ಲ (ಸಮಜೀ. ೫೩೫). ೨. ಪುರಿ ಕಡಲೆ ಅವಲಕ್ಕಿ ಮುಂ
ತಾದವನ್ನು ಬೆಲ್ಲದ ಪಾಕದಲ್ಲಿ ಹಾಕಿ ಕಟ್ಟುವ ಉಂಡೆ : "ಅಯ್ಯೋ
ಆಗಲೆ ಹೊರಟುಹೋಗಿಬಿಟ್ಟನೆ ? ಒಂದಷ್ಟು ಅಂಟಿನ ಉಂಡೆ, ಅವುಗು
ಕಟ್ಟಿ ಕೊಡುತ್ತಿದ್ದೆನಲ್ಲಾ ? (ಬೆಳುಮು. ೨೬೪). **ಅಂಟಿನ ಕೋಲು** = ಅಂಟು
ಕೋಲು : ಬೇಂಟೆಗೆ ಬಲೆಗಳಂಟಿನ ಕೋಲು ಕಣ್ಣಿಯ ಬಲುಭುಜರು
ಸಡಗರಿಸಿ ನೆರೆದರು ಪುರದ ಬಾಹೆಯಲಿ (ನಳಚ. ೨-೧೧). **ಅಂಟಿನ ಮರ** =
ಜಿಗಟಾದ ಹಾಲಿಂದ ಕೂಡಿದ ಒಂದು ಜಾತಿಯ ಮರ (ಕಿ).

[< ಅಂಟು₁. ‖ ತುಳು. ತೆಲು. ಅಂಟು]

**ಅಂಟುಕ** (ನಾ). ಬೆನ್ನು ಹತ್ತುವ ಸ್ವಭಾವವುಳ್ಳವನು ; ಸಿಕ್ಕಿದರೆ
ಬಿಡದವನು : ಉಕಪ್ರತ್ಯಯಕ್ಕೆ – ಅಂಟುಕಂ, ಕಾರುಕಂ (ಶಮದ. ೨೦೩
ಪ್ರಯೋ). [ಅಂಟು₁ + –ಉಕ]

**ಅಂಟುಕಣಿ** (ನಾ). ಅಂಟನ್ನು ಸವರಿದ ಬಲೆ (?) : ಕಣ್ಣಿವಲೆಗಳು
ರುಳ್ವಲೆ ಕಿಜುವಲೆ ಕಾಲ್ಕಣ್ಣಿವಲೆಗಳಂಟುಕಣಿಯಿಂ ಬಣ್ಣಗೆಡಿಸಿ ಖಗ
ಮೃಗಗಳ ಕೊಲುತಿರ್ಪಣ್ಣರಿಗುಂಟೇ ಸದ್ಗತಿಯು (ಅನಂಚ. ೧೨-೧೨೯).

[ಅಂಟು₂ + ಕಣಿ (< ಕಣ್ಣಿ ?)]

**ಅಂಟುಕಲಿಕೆ, ಅಂಟುಕಲಿಗೆ** (ನಾ). ಸೂತಕ ; ಮೈಲಿಗೆ (ಸ್ಯಾಂಡರ್).
**ಅಂಟುಕಲಿಗೆ** (ಸ್ಯಾಂಡರ್). [ಅಂಟು₂ + ಕಲ್₁ + –ಇಕೆ]

**ಅಂಟುಕಲಿಗೆ** 'ಅಂಟುಕಲಿಕೆ' ನೋ.

**ಅಂಟುಕೊಡು** (ಕ್ರಿ). ಆಸರೆಯನ್ನು ನೀಡು ; ಆಶ್ರಯ ಕೊಡು
(ಸ್ಯಾಂಡರ್). [ಅಂಟು₂ + ಕೊಡು]

**ಅಂಟುಕೋಲು** (ನಾ). ೧. ಅಂಟನ್ನು ಹತ್ತಿಸಿದ ಕೋಲು :
ದುರ್ಯೋಧನನು ಹನ್ನೊಂದಕ್ಷೋಹಿಣಿ ಸೈನ್ಯವನ್ನೂ ಮಂಡೆಕೂದಲು
ಗಳನ್ನು ಹಿಡಿದು ಸೆಳೆಯುವ ಅಂಟುಕೋಲುಗಳನ್ನೂ. . .ಇನ್ನೂ ಬೇಕಾದ
ಯುದ್ಧಸಾಮಗ್ರಿಗಳನ್ನೂ ಸಿದ್ಧಪಡಿಸಿ (ಕೃವಾಖ. ೨೪೪). ೨.=ಅಂಟುಗಳೆ.

[ಅಂಟು₂ + ಕೋಲು (< ಕೋಲ್)]

**ಅಂಟುಗಟ್ಟಿಗೆ** (ನಾ). = ಅಂಟುಗಳೆ : ಬಡಿಕೋಲು ಜಾಯಿಲಂ ಪಾಸು
ವಲೆ ಬೀಸುವಲೆ ತಡಿಕೆ ಕಾಲ್ಗಣ್ಣಂಟುಗಟ್ಟಿಗೆಯು ಬೆಂಗಲ್ಲಿ ತೊಡಕುವಲೆ
ಕೆಂಬಿ ತಿತ್ತಿಯು (ರಾಘಚಾ. ೧೭-೬೭). 'ಅಂಟುಕೋಲು' ಪರಾ.

[ಅಂಟು₂ + ಕಟ್ಟಿಗೆ]

**ಅಂಟುಗರಿಕೆಹುಲ್ಲು** (ನಾ). ಸೋಕಿದರೆ (ಬಟ್ಟೆಬರೆಗೆ, ಮೈಗೆ) ಅಂಟಿ
ಕೊಳ್ಳುವ ಸ್ವಭಾವದ ತೆನೆಗಳುಳ್ಳ ಒಂದು ಜಾತಿಯ ಹುಲ್ಲು :
ಅಂಟುಗರಿಕೆ ಹುಲ್ಲು (ಮೈಔಗಿ. ೧೪-೨೪೨). 'ಅಂಟುಪುರಲೆ' ಪರಾ.

[ಅಂಟು₂ + ಗರಿಕೆ (< ಕಱುಂಕೆ) + ಹುಲ್ಲು (< ಪುಲ್)]

**ಅಂಟುಗಳ** (ನಾ). ಸಸಿ ; ನಾಟಿಹಾಕಲಿರುವ ಸಣ್ಣ ಪೈರು
(ಸ್ಯಾಂಡರ್). [ಅಂಟು₂ + ?]

**ಅಂಟುಗಳೆ** (ನಾ). ಬೇಟೆಗಾರರು ಹಕ್ಕಿಗಳನ್ನು ಹಿಡಿಯಲು ಬಳಸುವ
ಅಂಟು ಹತ್ತಿಸಿದ ಕೋಲು, —ಗಳು : ದಡಿವಲೆಗಳಂ ಬಡಿಕೋಲ್ಗಳಂ
ಅಂಟುಗಳೆಗಳಂ ಕಾಲ್ಗಣ್ಣಿಗಳ ಗಿಡುಗ ಸಾಳುವ ಜಾಯಿಲಂಗಳಂ (ಚಿಕವಂ.
೫-೧೭). [ಅಂಟು₂ + ಗಳೆ (< ಗಱೆ)]

**ಅಂಟುಗೊಳ್** (ಕ್ರಿ). ೧. ಅಂಟಿಕೊ ; ಸಿಕ್ಕಿಕೊ ; ನಾಟು :
ಬಾಸೆಯೊಳಂಟುಗೊಂಡ ಕಣ್ ತಿವಳಿಯೊಳಂ ಸಿಲ್ಕಿ ಪೋಗಲಾರ್ತುದಿಲ್ಲ
(ಕಬ್ಬಿಕಾ. ೬೮). ೨. ಆಶ್ರಯಿಸು ; ಅವಲಂಬನ ಹೊಂದು : ನಯನ
ದೊಳ್ ತವಕಂ ತವೆ ಮಿಕ್ಕು ತಲ್ಲತಾಮುಂದಿರದಂಟುಗೊಂಡದೆನಸುಂ
ಕುಸುಮಾವಳಿದೇವಿ ನೋಡಿದಳ್ (ಕುಸುಮಾ. ೧೩-೯೬) ; ನೀದಾರ್ಣಮ
ನಂಟುಗೊಂಡಡಟರಾಗಳೆ ಬಾಯ್ವಿಡೆ (ಕಬ್ಬಿಕಾ. ೧೯೪).

[ಅಂಟು₂ + ಕೊಳ್₁]

**ಅಂಟುಗೊಳಿಸು** (ಕ್ರಿ). ನಡು ; ನಾಟು : ಅಗೆದು ನಟ್ಟಂತೆಯುಂ ಅಂಟು
ಗೊಳಿಸಿದಂತೆಯುಂ ಬಿತ್ತಿದಂತೆಯುಂ ಬೇರ್ವರಿದಂತೆಯುಂ ಮುಗ್ಧ
ಮಾಗಿರ್ಪಂತುಟಾ ಮೆಲ್ಲಡಿಯೊಳ್ಗಂಪಂ ಸವಿವಿನಂ (ಚಿಕವಂ. ೯೦-೨೦).

[ಅಂಟು₂ + ಕೊಳ್₁ + –ಇಸು₃]

**ಅಂಟುಗೋಡೆ** (ನಾ). ಅಕ್ಕ ಪಕ್ಕದ ಕಟ್ಟಡಗಳ ನಡುವೆ ಎರಡಕ್ಕೂ
ಸೇರಿ ಅವುಗಳನ್ನು ಕೂಡಿಸುವ ಗೋಡೆ. 'ಅಂಟುಮನೆ' ಪರಾ.

[ಅಂಟು₂ + ಗೋಡೆ]

**ಅಂಟುಜಲವೇಂಟೆ** (ನಾ). ಅಂಟುವ ದ್ರವವನ್ನು ಉಪಯೋಗಿಸಿ
ಹಕ್ಕಿಗಳನ್ನೂ ಸಣ್ಣ ಪ್ರಾಣಿಗಳನ್ನೂ ಹಿಡಿಯುವ ಒಂದು ಬಗೆಯ
ಬೇಟೆ : ಗೋರಿವೇಂಟೆ ಪಳಹರವೇಂಟೆ ಪಟವೇಂಟೆ ವಿದ್ಯಾಧರರ ಬೇಂಟೆ
ಚಿತ್ರವೇಂಟೆ ಅಂ[ಪಾಠಾಂ. ಉಂ]ಟು ಜಲವೇಂಟೆ ತೋಹಿನ ಬೇಂಟೆ ಘನ
ಸೋಹುವೇಂಟೆಗಳೆನಿಪ್ಪ ಹೆಸರಂ ಪೆತ್ತು ಮೆಱೆವುತಿಪ್ಪೆಂಟು ತೆಱದುಟಿತ

ವೇಂಟಿಯನಾಡಿದಂ (ಹಚಕಾ. ೫-೪೯): ಈ ಮೇಲಿನ ಪ್ರಯೋಗದಲ್ಲಿ ಅಂಟುಜಲವೇಂಟಿ ಎಂಬುದನ್ನು ಒಂದು ಪದವೆಂದು ಭಾವಿಸಿದರೆ ಮಾತ್ರ ಎಂಟು ಬೇಟೆಗಳ ಲೆಕ್ಕ ಸರಿ ಹೋಗುತ್ತದೆ. ಆದರೆ ಇದನ್ನು ಅಂಟುವೇಂಟಿ, ಜಲವೇಂಟಿ ಎಂದು ವಿಂಗಡಿಸಿ ಇವೆರಡೂ ಬೇರೆ ಬೇರೆ ಬೇಟೆಗಳೆಂದು ಭಾವಿಸುವುದೂ ಸಾಧ್ಯ.
[ಅಂಟು$_2$ + ಜಲ + ಬೇಂಟೆ]

**ಅಂಟುಜಾಡ್ಯ** (ನಾ). = ಅಂಟುರೋಗ: ಜ್ಞಾನಾಂಬೆಯ ಮೈಮೇಲೆ ಸಿಡುಬು ಕಾಣಿಸಿತು . . . ಅದು ಅಂಟುಜಾಡ್ಯವಾದುದರಿಂದ ನಾವು ಅಡಿಗಡಿಗೆ ಹೋಗಿ ಜ್ಞಾನಾಂಬೆಯನ್ನು ನೋಡಿಕೊಂಡು ಬರಲು ವೈದ್ಯರು ಅವಕಾಶ ಕೊಡಲಿಲ್ಲ (ಪ್ರತಾಪ. ೧೧೬). [ಅಂಟು$_2$ + ಜಾಡ್ಯ]

**ಅಂಟುಪುರುಲೆ** (ನಾ). ಸೋಕಿದರೆ ಅಂಟಿಕೊಳ್ಳುವ ಸ್ವಭಾವದ ತೆನೆಯುಳ್ಳ ಒಂದು ಬಗೆಯ ಹುಲ್ಲು. 'ಅಂಟುಗರಿಕೆ ಹುಲ್ಲು' ಪರಾ.
[ಅಂಟು$_2$ + ಪುರುಲೆ]

**ಅಂಟುಬಾರಿಸು** (ಕ್ರಿ). ಅಂಟನ್ನು ಕಳೆ; ಕೊಳೆಯನ್ನು ಹೋಗಲಾಡಿಸು: ಆಚಮನಂ ಉಪಸ್ಪರ್ಶನಂ ಈ ೨ ಅಂಗದಂಟುಬಾರಿಸುವುದು (ಹಲಾಯು. ೬೪-೨೫೪). [ಅಂಟು$_2$ + ಬಾರಿಸು]

**ಅಂಟುಮನೆ** (ನಾ). ಎರಡಕ್ಕೂ ನಡುವೆ ಒಂದೇ ಗೋಡೆಯಿರುವ ಅಕ್ಕಪಕ್ಕದ ಮನೆಗಳಲ್ಲಿ ಒಂದು: ಈ ಬೀದಿಯಲ್ಲಿ ಅಂಟುಮನೆಗಳೇ ಹೆಚ್ಚಾಗಿವೆ (ರೂಢಿ). 'ಅಂಟುಗೋಡೆ' ಪರಾ. [ಅಂಟು$_2$ + ಮನೆ]

**ಅಂಟುಮುಟ್ಟು** (ನಾ). ಆಶೌಚ; ಸೂತಕ; ಸಂಬಂಧದಿಂದಲೂ ಸ್ಪರ್ಶದಿಂದಲೂ ಉಂಟಾಗುವ ಮೈಲಿಗೆ (ಸ್ಯಾಂಡರ್).
[ಅಂಟು$_2$ + ಮುಟ್ಟು$_2$]

**ಅಂಟುಮುರುವು** (ನಾ). ಒಂದು ಬಗೆಯ ಕಿವಿಯ ಒಡವೆ; ಕಿವಿಯ ಮೇಲುಭಾಗದಲ್ಲಿ ಸಿಕ್ಕಿಸಿಕೊಳ್ಳುವ ಒಂದು ಸಣ್ಣ ಒಡವೆ (ಸ್ಯಾಂಡರ್). ಚಂದ್ರಮುರು ಹೋ. [ಅಂಟು$_1$ + ಮುರುವು]

**ಅಂಟುರೋಗ** (ನಾ). ಒಬ್ಬರಿಂದ ಮತ್ತೊಬ್ಬರಿಗೆ ಹರಡುವ ರೋಗ: ಸಿಡುಬು ಅಂಟುರೋಗ (ರೂಢಿ). [ಅಂಟು$_2$ + ರೋಗ]

**ಅಂಟುವಕ್ಕು** (ನಾ). ಅಂಟನ್ನು ಉಪಯೋಗಿಸಿ ಹಚ್ಚುವ ಕಪ್ಪು, —ಕಾಡಿಗೆ; ರಕ್ಷೆಗಾಗಿ ಇಡುವ ಬೊಟ್ಟು: ಮಡದಿಯರೆಲ್ಲಂ ಪೊತ್ತಿಸಿ ತಡೆಯದೆ ಕೈಮುಗಿದು ನೆನೆದು ಮನೆದೇವತೆಯಂ ಕುಡಿವೆರಳೊಳಂಟುವಕ್ಕೆಂದಿಡುವರ್ ಬಾಳರ್ಗೆಯಾ ಸೊಡರ್ಗುಡಿ ಕಪ್ಪಂ (ಸೂಕ್ತಿಸು. ೮-೧೪೪). 'ಸೊಡರ್ವಕ್ಕು' ಪರಾ. [ಅಂಟು$_2$ + ಮಕ್ಕು ?]

**ಅಂಟುವಲೆ** (ನಾ). ಅಂಟನ್ನು ಸವರಿ ಮೃಗಪಕ್ಷಿಗಳನ್ನು ಹಿಡಿಯಲು ಉಪಯೋಗಿಸುವ ಒಂದು ಬಗೆಯ ಬಲೆ: ಕವಣೆಯ ಮಿಂಟೆಯ ಪೆಂಟೆಯ ಅಂಟುವಲೆಯ ತಡಿಕೆವಲೆಯ ಬೀಸುಂಬಲೆಯ (ರಾಮಾಶ್ವ. ೮೩-೨೩). [ಅಂಟು$_2$ + ಬಲೆ]

**ಅಂಟುವಾಳ** (ನಾ). ನೀರಿನಲ್ಲಿ ನೆನೆಸಿ ಉಜ್ಜಿದಾಗ ನೊರೆ ಹೊರಡುವ ಒಂದು ಬಗೆಯ ಕಾಯಿ: ಅಂಟುವಾಳದ ಕಾಯಿಗೆ ಬಂಟವಾಳಕ್ಕೆ ಹೋಗಬೇಕೇ ? (ಗಾದೆ). ಅರುಟಾಳ ಹೋ. [ಅಂಟು$_2$ + ?]

**ಅಂಟುವೇಂಟೆ** (ನಾ). ಅಂಟನ್ನು ಉಪಯೋಗಿಸಿ ಮೃಗಪಕ್ಷಿಗಳನ್ನು ಹಿಡಿಯುವ ಬೇಟೆ. 'ಅಂಟುಜಲವೇಂಟೆ' ಪರಾ.
[ಅಂಟು$_2$ + ಬೇಂಟೆ]

**ಅಂಟೆಯ** (ನಾ). ಒಂದು ಆಭರಣ: ಹರಳೋಲೆಯಂಟೆಯ ಮೂಗುತಿಗಳ ಹೊನ್ನ ಹರಿವಾಣದೊಳು ತಂದಿದಳು (ಚಂಪ್ರಸಾಂ. ೧೨-೧೭೪). [?]

**ಅಂಟೆಳೆ** (ನಾ). ನೆಯ್ಗೆಯಲ್ಲಿ ಕೂಡಿಸುವ ನೂಲಿನ ಎಳೆ; ಕೆಚ್ಚು.
[ಅಂಟು$_1$ + ಎಳೆ$_2$ (< ಎೞ್ಕೆ)]

**ಅಂಟೊತ್ತು** (ಕ್ರಿ). ಅತಿ ಸಮೀಪದಲ್ಲಿರು; ತೀರ ಹತ್ತಿರದಲ್ಲಿರು: ದ್ವಾರಕಿ ಬಹಿರ್ಭಾಗದೊಳಿಳಿದಾಗ ಕೈವಾರಿಸಿದಳು ಪಟ್ಟಣವ ಅಂಟೊತ್ತಿಕೊಂಡಿದೆ ಸಿರಿವೆತ್ತು ಪೌರೋಪಕಂಠದೆ ಮೆಚ್ಚಿವ ಸಾಗರವ ದಾಂಟಲಾಶ್ಚರ್ಯ ಶ್ರೀಕೃಷ್ಣನ ದ್ವಿತೀಯ ವೈಕುಂಠವಿದೆಂದಾಡಿದಳು (ಮೋಹತ. ೩೧-೧೩, ೧೪). [ಅಂಟು$_1$ + ಒತ್ತು$_1$]

**ಅಂಡ$_1$** (ನಾ). ಬಿಲ್ಲುಗಾರ; ಸೈನಿಕ (?): ಮುಂಡಿಯೊಳೂಱಿ ಬಿಲ್ವಿಡಿದು ಬಾಣವ ಪೂಡಿ ಅಂಡರಾಕರ್ಣಾಯತದಿ ಮುಂಡನವಾಗಿ ಬಿಟ್ಟರು ಯಿದಿರಾಂತ[ರ ?] ಖಂಡಿಸೆ ಸ[ಶ]ಸ್ತ್ರಸಂದೋಹ (ಅನಂತ. ೨೪-೫೦). [?]

**ಅಂಡ$_2$** (ನಾ). ೧. ತತ್ತಿ; ಮೊಟ್ಟೆ. ೨. ಬೀಜ; ವೃಷಣ. ೩. ಬೀಜಕೋಶ; ವೃಷಣಕೋಶ. ೪. ಕಸ್ತೂರಿಮೃಗದ ಕಸ್ತೂರಿಯಿರುವ ಕೋಶ; ಮೃಗನಾಭಿ. ೫. ಪುರುಷನ ವೀರ್ಯ; ರೇತಸ್ಸು; ಶುಕ್ಲ. ೬. ಶಿವ: "ಮುಷ್ಕಂ, ಅಂಡಂ, ವೃಷಣಃ, ಕೋಶಃ, ಸಂಗ್ರಾಹಃ, ಮುಷ್ಟಿಃ – ಈ ಆಱು ಅಂಡಂ" (ಹಲಾಯು. ೮೬-೩೯). [ಸಂ.]

**ಅಂಡಕ$_1$** (ನಾ). (ಉಕ) "ಹುಂಬ, ವಿಚಾರವಿಲ್ಲದವ, ಕಾಡಾಡಿ" (ಜಾನಕೋ). [?]

**ಅಂಡಕ$_2$** (ಗು). (ಉಕ) ಗೊತ್ತಾದ ಒಂದು ಆಕಾರವನ್ನು ಕೊಡದ; ಸದ್ದಾಮುದ್ದ. 'ಅಂಡಕ ಕಲ್ಲು' ಪರಾ. [?]

**ಅಂಡಕ$_3$** (ನಾ). ೧. ಸಣ್ಣ ತತ್ತಿ; ಮೊಟ್ಟೆ. ೨. ಅಂಡ; ಬೀಜಕೋಶ. ೩. ಅರ್ಧಗೋಳಾಕಾರದ ಮೇಲ್ಛಾವಣಿ; ಗುಮ್ಮಟ. [ಸಂ.]

**ಅಂಡಕಕಲ್ಲು** (ನಾ). (ಉಕ) ಕೆತ್ತಿ ಆಕಾರ ಕೊಡದಿರುವ ಕಲ್ಲು: ಇಮಾರತಿನ ಶೇಷವೊಂದು ಊರಹೊರಗೆ ಇರುತ್ತದೆ. ಇಲ್ಲಿ ಅಂಡಕಕಲ್ಲುಗಳನ್ನು ಉದ್ದಕ್ಕೆ ನಿಲ್ಲಿಸಿ ಅವುಗಳ ಮೇಲೆ ದೊಡ್ಡ ದೊಡ್ಡ ಬಂಡೆಗಳನ್ನು ಅಡ್ಡ ಇಟ್ಟದ್ದಾರೆ (ಕಭಾಗ. ೪೭೯); ಯಮಾಯಿಯೆಂಧರೆ ಒಂದು ಅಂಡಕ ಕಲ್ಲು ಇರುತ್ತದೆ (ಕಭಾಗ. ೬೯೦). [ಅಂಡಕ$_2$ + ಕಲ್ಲು (< ಕಲ್)]

**ಅಂಡಕೋಶ** (ನಾ). ಬೀಜಕೋಶ; ವೃಷಣಕೋಶ.
[ಅಂಡ$_3$ + ಕೋಶ]

**ಅಂಡಗೆ, ಅಂಡಿಗೆ$_1$** (ನಾ). ೧. ದೊಡ್ಡಮೂಟೆ; ಪೆಂಟೆ; ಪೆಂಡೆ; ಒಂದು ಎತ್ತು ಹೊರಬಲ್ಲಷ್ಟರಲ್ಲಿ ಅರ್ಧ (?): ಈತಂಗೆ ಹನ್ನೆರಡು ಕಟ್ಟರಳೆಯಂ ಹಾಯ್ಕಿ ನೂತು ಕೊಡಲಿ ಎನಲಾಱು ಮಣವಿನಂಡ[ಪಾಠಾಂ. ಡಿ]ಗೆಯ ತಂದೆತ್ತಿಕೊಳ್ಳೆನೆ ನಗುತಲೀ ಸುಟ್ಟಬೂದಿಯಂ ಪೊಱುವರಾರೆನೆ (ಗುರುಚಾ. ೧೪-೫). **ಅಂಡಿಗೆ$_1$**: ೧. ಕೆಲವರು ಕಳ್ಳರು . . . ವರ್ತಕನ ಮನೆಯೊಳಗಿನ ಎಷ್ಟೋ ಅರಳೀ ಅಂಡಿಗೆಗಳನ್ನು ಕದ್ದೊಯ್ದರು (ಮುಂಬಯಿ. ೪-೨೦). ೨. ಸುರುಳಿ: ಎರಡೂ ಕಿವಿಯಲ್ಲಿ ಅತ್ತರಿನ ಅರಳೆ ಅಂಡಿಗೆಗಳನ್ನಿಟ್ಟುಕೊಂಡು (ಮುಂಗಾಪು. ೨೩).
[?. ‖ ತೆಲು. ಅಂಡೆಮು; ಅಂಡಿಯಮು]

**ಅಂಡಜ** (ನಾ). ೧. ಮೊಟ್ಟೆಯೊಡೆದು ಹುಟ್ಟುವಪ್ರಾಣಿ; ತತ್ತಿಯಿಂದ ಹುಟ್ಟಿಬರುವ ಪ್ರಾಣಿ. ೨. ಹಕ್ಕಿ. ೩. ಹಾವು. ೪. ಮೀನು. ೫. ಹಲ್ಲಿ. ೬. ಬ್ರಹ್ಮ; ಚತುರ್ಮುಖ. [ಸಂ.]

**ಅಂಡಜತುರಂಗ** (ನಾ). ಪಕ್ಷಿಯನ್ನು ವಾಹನವಾಗಿ ಹೊಂದಿರುವವನು; ಪಕ್ಷಿವಾಹನ; ವಿಷ್ಣು. [ಅಂಡಜ + ತುರಂಗ]

**ಅಂಡಜಧ್ವಜ** (ನಾ). ಪಕ್ಷಿಯನ್ನು, ಎಂದರೆ ಗರುಡನನ್ನು, ಧ್ವಜದಲ್ಲಿ ಹೊಂದಿರುವವನು; ವಿಷ್ಣು. [ಅಂಡಜ + ಧ್ವಜ]

**ಅಂಡಜಪ್ರಧಾನ** (ನಾ). ಪಕ್ಷಿಗಳ ಒಡೆಯ; ಗರುಡ.
[ಅಂಡಜ + ಪ್ರಧಾನ]

**ಅಂಡಜಾಧಿಪ** (ನಾ). ೧. ಸರ್ಪರಾಜ. ೨. ಗರುಡ.
[ಅಂಡಜ + ಅಧಿಪ]

**ಅಂಡಜಾಧಿಪಕುಂಡಲ** (ನಾ). ಹಾವನ್ನು ಕಿವಿಯ ಆಭರಣವಾಗಿ ಹೊಂದಿರುವವನು ; ಶಿವ : ಖಂಡೆಯವನುಱೆ ಝುಳಪಿಸುತ್ತಂ ಮಂಡೆಯಂ ಹೊಡೆದೆಡೆಯೊಳಾಕ್ಷಣವಂಡಜಾಧಿಪಕುಂಡಲಂ ಪ್ರತ್ಯಕ್ಷ ಮಾಗಿರ್ದು (ಬಸಪು. ೨೭–೫೫). [ಅಂಡಜಾಧಿಪ + ಕುಂಡಲ]

**ಅಂಡರಿಕೆ** (ನಾ). ಒಂದು ಆಟದ ಹೆಸರು (?) : ಸಂಜೆಯಲ್ಲಿ ಹುಡುಗಿಯರು ಬಣ್ಣದ ಉಡಿಗೆ ತೊಡಿಗೆಗಳಿಂದ ಅಲಂಕೃತರಾಗಿ ಎಂಟು ಕಾಲಿನ ದೀವಿಗೆಗಳನ್ನು ಹಿಡಿದುಕೊಂಡು ಗುಂಪು ಗುಂಪಾಗಿ ಮನೆಮನೆಗೆ ಹೋಗಿ "ಅಂಡರಿಕೇ ಪಂಡರಿಕೇ ಎಂಟು ಕಾಲ್ದೀವಿಗೇ ಎಣ್ಣೇ ಬಿಡೇ" ಎಂದು ಮುಂತಾಗಿ ಹಾಡುತ್ತ (ಸುವಸಂ. ೩೩). 'ಅಂಟಿಗೆ ಪಂಟಿಗೆ' ಪರಾ. [?]

**ಅಂಡಲಿ** 'ಅಂಡಲೆ$_1$' ನೋ.

**ಅಂಡಲಿಸು** (ಕ್ರಿ). ಹಿಂಸಿಸುವಂತೆ ಮಾಡು; ಕಾಟಕ್ಕೆ ಗುರಿಮಾಡು : ದಂಡಿಸದಿರು ಎನ್ನ ಅಂಡಲಿಸಲು ಬೇಡ ಗಂಡನೊಡನೆ ನುಡಿದು (ಪುರಂದ. ೩–೧೩೦–೧೪). [ಅಂಡಲೆ$_2$ + –ಇಸು$_3$]

**ಅಂಡಲೆ$_1$**, ಅಂಡಲಿ, ಅಂಡೊಲಿ (ಕ್ರಿ). ೧. ಹತ್ತಿರ ಬಂದು ಪೀಡಿಸು ; ಕಾಡು ; ಹಿಂಸೆಮಾಡು : "ಅಂಡಲೆ–ಆಸನ್ನಪೀಡನೇ" (ಶಮಧಾ) ; ನನೆಗಣೆಯಿಂ ಜಗತ್ತ್ರಯಮನಂಡಲೆದಂಗಭವಂಗೆ ಭಂಗಮಂ ಜನಿಯಿಸಿದ್ಯೆ (ಪಂರಾಮಾ. ೫–೫) ; ನಿಮ್ಮ ನೆನಹ ಮತಿ ಮಱೆದಿರ್ದೊಡೆ ಪಾಪ ತನುವ ನಂಡಲೆವುದ ಮಾಣ್ಬುದೆ (ಬಸವ. ೧೭೮) ; ಎಱಗದ ಗಂಡಮಂಡಳಿಯ ನಂಡಲೆದಾಳ್ದನ ಪಾದದಲ್ಲಿ ತಂದೆಜಗಿಪಂ (ಎಕ. V, ಅರಸೀ. ೧೩೮–೨೮ ; 1174) ; ದನುಜಂ ಹರೀಂದ್ರಾದಿಗಳನಂಡಲೆದೊಡಳ್ಕಿ ತದ್ದೇವನಿಕರಂ (ಪದ್ಮರಾ. ೧೧–೧೫೫) ; ಹಲವು ಪರಿಯಲಿ ಯಿವರವಳನಂಡಲೆದು ಭೀಮಗೆ ಹೇಳಿಸಿದಳಾ ಫಲುಗುಣನ ಕೈಯಿಂದ (ಕುವ್ಯಾಆ. ೧೦–೨೨) ; ಮಲೆವ ದೈತ್ಯರ ಗಂಡ ದಾಸೋತ್ತಮರನಂಡಲೆವ ದುಷ್ಕೃತಂಗಳ ಗಂಡ ಕೊಲಲೊಡರ್ಚುವ ಮಿತ್ತುವಿನ ಗಂಡನ ಪಾದಜಲರುಹಯುಗವ ನೋಡಿದರು (ಮೋಹತ. ೪೨–೩೯). ೨. ಜರೆ ; ತಿರಸ್ಕರಿಸು : ನೆಲದೊಳು ಪೊಂಗಳನೇಕೆ ಪೂಳ್ವರೆನುತುಂ ತಾಂ ಲುಬ್ಧರಂ ಮಾಣದಂಡಲೆಯುತ್ತಿರ್ಪ ವಿವೇಕಿ ನಾಕಿ . . . ಇಳಾವಿಖ್ಯಾತವಪ್ಪಂತಿರಲ್ (ಎಕ. V, ಹಾಸನ. ೭೬–೬೦ ; 1165) ; ಕರಂ ಲಾಳನನಾಳಿಮಾಡುವುದು ಪಾಂಡ್ಯನನಂಡಲೆಗುಂ ತೆಲುಂಗ ಭೂಪಾಲನನೇಳಿದಿಕ್ಕೆಯನೆ ಮಾಡುವುದೀ ಕುಱುಗೋಡ ಕೋಟೆ (ಸೌಇಇ. IX-i, ೨೯೬–೧೪ ; 1176) ; ಷಡ್ದರ್ಶನಾದಿಗಳನಂಡಲೆದು ವರ್ತಿಸುವಂಗಡಾ (ಪದ್ಮರಾ. ೯–೭). ೩. ಕಷ್ಟಕ್ಕೆ ಒಳಗಾಗು ; ಕ್ಲೇಶಪಡು : ಪುಂಡರೀಕೋದ್ಭವನ ಶಿರವನು ತುಂಡಿಸಿದ ಖಂಡಪರಶುವು ರುದ್ರಭೂಮಿಯೊಳಂಡಲೆದು ತಿರುಗುವನು (ಹಭಸಾ. ೭೨) ; ದಂಡಿಸಿಹಳುಪವಾಸದಲಿ ಮನಮಂಡಲೆದುದಾ ಸತಿಗಿನಿಯನನು ಕಂಡು ಹೇಳುವವರಾರೆನುತ ಮಱುಗುವಳು (ನಳಚ. ೭–೩೬) ; ಕಂಡಿರೇ ಹಸ್ತಿನಪುರವ ಮಾರ್ತಾಂಡನಿಲ್ಲದ ದಿನಪ[ದ] ತೆಱದೊಳಗಂಡಲೆಯುತಿದೆ (ತಿಮ್ಮಸ್ತ್ರೀ. ೨–೧೪). ೪. ಅಲೆದಾಡು : ದಿಕ್ಕುದೆಸೆಯಿಲ್ಲದೆ ಅಂಡಲೆಯುವ ಅನಾಥ ಜೀವದಂತೆ ರೈಲು ಧಾವಿಸುತ್ತಿತ್ತು (ರೂಪಸ. ೧) ; ಕೈಯಲ್ಲಿ ಅರ್ಜಿ ಹಿಡಿದುಕೊಂಡು ಇಡಿ ದಿನವನ್ನು ಬೇರೆ ಬೇರೆ ಕಚೇರಿ–ಕಟ್ಟೆಗಳಲ್ಲಿ ನೌಕರಿಗಾಗಿ ಅಂಡಲೆಯುವವರು! (ಮೋಜೀವ.೪). ೫. ವ್ಯಾಪಿಸು; ಕವಿ : ಕೆಂಧೂಳಿರದೆ ನಭಕುಪ್ಪರಿಸಿ ರವಿಮಂಡಲವನಂಡಲೆಯೆ (ಕುವ್ಯಾವಿ. ೬–೬೨) ; ತತ್ತ್ರಭೆ ಗಗನಮಂಡಲವನಂಡಲೆಯಲು (ನಂದಿಮಾ. ೧೦–೩೩). ೬. ಬಲಾತ್ಕಾರ ಮಾಡು ; ಒತ್ತಾಯ ಮಾಡು : ಭಂಡ ಬಂದಾಲಯದ ಕದಗಳನಂಡಲೆದು ನೂಕಲ್ಕದಂ ಗುರು ಕಂಡಪರ ಭೇದವ ಮನಃಪರಿಯಾಯಮುಂ ತಿಳಿದು (ಶಂಕದಾ. ೧೩–೬೬). ೭. ಹಿಂದೆಗೆ ; ಹಿಮ್ಮೆಟ್ಟು : ನಸು ನಸು ನಾಣ್ಚುತೊಂದಿನಿಸು ಬಾಗಿದ ನುಣ್ಮೊಗಮೊಂದು ಪಕ್ಕದೊಳ್ ಮಸಗಿ ಮಲರ್ದು ಮಾರ್ಪೊರ್ಳೆದು ಬೆಂಗಱೆ ನೂಂಕಿ ಕಡಂಗಿ ಕೊಂಕುವಾ ಪೊಸವಗೆ ನೋಟಮುಂಡಲೆವ ಮೆಯ್ ನೆಲನಂ ಬರೆವೋಜೆಯೊಪ್ಪದೊಳ್ ಪೊಸಸಿರಿಯೊಂದಿ ನಿಂದಳಿದಿರೊಳ್ ಚಿಕದೇವನೃಪಾಲಚಂದ್ರನಾ (ಅಪ್ರತಿ. ೧–೪೭) ; ಪಂದಿಯೊಂದು ಡುಱುಕೆಂದೊಡೆ ಸಿಂಗಮಂಡಲೆವುದೆ (ರಾಮಾಶ್ವ. ೨೫–೨೩). ೮. ಹೊಡೆ ; ಕೆಡಹು : "ಅಂಡಲೆದುದು . . . ಪ್ರತಿಹತಕ್ಕೆ ಪೆಸರ್" (ಕಶಸಾ. ೧೫–೨೯೬). **ಅಂಡಲಿ** : ೧. ಶ್ರೀಮನ್ಮಹಾಸಾಮನ್ತಾಧಿಪತಿ ಮಹಾಸಾಮನ್ತ ಗಸಣಿ ದೊಡ್ಡಂಕಬಡಿವ ಜಗವನಣ್ಡಲಿ[ಲೆ?]ವ ಸಿತಗರ ಗಂಡ ಸಾಮನ್ತ ಬಿಟ್ಟದೇವನು (ಎಕ. XVI, ಚಿಕ್ಕನಾ. ೯೮–೧೪ ; 1170). **ಅಂಡೊಲಿ** : ೧. ಮಂಡೆಬಾಗಿ ನಿತ್ಯ ನಡುವಲ್ಲಿ ಓಡುವಲ್ಲಿ ಅಂಡುಗೊಂಡಿದಲ್ಲಿ ಆಲಿಸಿ ಕೇಳುವಲ್ಲಿ ಅಂಡೊಲಿಯದೆ ಸುಮ್ಮನಿಹದಲ್ಲಿ (ವಿಸಾಸು. ೪೩–೧). [ಅಂಡು$_2$ + ಅಲೆ$_1$]

**ಅಂಡಲೆ$_2$** (ನಾ). ೧. ಕೋಟಲೆ ; ಹಿಂಸೆ ; ಕಾಟ : ಪರನೃಪರ ಭಯವಿಲ್ಲ ಸಾಲದಂಡಲೆಯಿಲ್ಲ (ಹಚಕಾ. ೩–೭೮) ; ನೃಪತಿ ಚಂಡಪರಾಕ್ರಮನಿವನ ಕೊಲಿಸಿ ಪಗೆಯಂಡಲೆಗೊಳಗಾಗದಿರನು (ಕುರಾಸಾಂ. ೩೬–೬೯) ; ಹೆಂಡಿರುಗಳ ಬಿಟ್ಟೋಡಿದವರ ಶಿಶುತಂಡವನೀಡಾಡಿದವರ ಗಂಡನ ಬಿಟ್ಟು ಬಾಯ್ಬಿಡುತ್ತೈದಿದ ಹೆಂಗಳಂಡಲೆಗಳನೇವೇಳ್ವೆ (ಕಂನವಿ. ೧೧–೫೨) ; ವರಂಗಲ್ಲಿನ ವಜೀರನ ಅಂಡಲೆ ಮಿತಿಮೀರಿ ಹೋಗಿರುವುದರಿಂದ (ವಿಜಸಾ. ೩–೧೩). ೨. ಚಿಂತೆ : ಎಲೆ ನೃಪತಿ ಭೂಮಂಡಲದ ಸಕಲ ಸಾಮ್ರಾಜ್ಯಮಂ ಪಾಲಿಸುವ ನಿನ್ನ ಸಂತಸದೇಳ್ಗೆಗೆ ಖಂಡನಂ ಮಾಳ್ಪುದಾನನದಿರವು ಸಾಕು ಮನದಂಡಲೆಯನೊರೆಯೆನಲು (ಜೈಮಿಭಾ. ೨–೧೫). [< ಅಂಡಲೆ$_1$]

**ಅಂಡಲೆತ** (ನಾ). ಅಲೆದಾಟ ; ಕ್ಲೇಶ ; ಕೋಟಲೆ : ತಂಡುಲದ ಹಿಡಿಯೊಂದು ತುಂಡುಬಟ್ಟೆಯದೊಂದು ಅಂಡಲೆತವಿದಕೇನೊ ಮಂಕುತಿಮ್ಮ (ಮಂಕುಕ. ೨೦). [ಅಂಡಲೆ$_1$ + –ತ$_2$]

**ಅಂಡಲೆವಡೆ** (ಕ್ರಿ). ತೊಂದರೆಗೆ ಗುರಿಯಾಗು ; ಹಿಂಸೆಪಡು ; ಕೋಟಲೆಗೊಳ್ಳು; ಅಲೆದಾಡು : ಪರದಾರಾಸಕ್ತನಿಂದಂಡಲೆವಡೆದುದು ತಾನೆಂದು ಕೈಲಾಸಧಾತ್ರೀಧರಮುಂ ನಿತ್ಯಂ ನಗುತ್ತಿರ್ದಪುದೆನೆ . . . ಉತ್ತುಂಗದೇವಾಯತನವಿತತಿ ರಾರಾಜಿಸುತ್ತಿರ್ಪುದೆತ್ತಂ (ಕುಸುಮಾ. ೨–೮೬) ; ಅಂಡಲೆವಡೆದು ಬಂದಬಲೆ ತಾ ಕಣ್ಣಾರೆ ಕಂಡಾಕ್ಷಣವೆ ತಕ್ಕೈಸಿ ಮುಂಡಾಡಲಿವರ್ಗ ರ ಪರಿತೋಷ ಪೂರ್ವದಿಙ್ಮಂಡಲವನು ರಾಗಿಸಿತು (ಮೋಹತ. ೨೯–೫೮). [ಅಂಡಲೆ$_2$ + ಪಡೆ$_1$]

**ಅಂಡವಾತ** (ನಾ). ವೃಷಣವು ಬಾತುಕೊಳ್ಳುವ ಒಂದು ರೋಗ : ಮುಟ್ಟಿದರೆ ಮುರುಟಯನ್ನೂ ಹಿಡಿಹಿಡಿಕೆಯನ್ನೂ ಅಂಬಿಲದಲ್ಲಿ ಅರೆದು ಪೂಸಲು ಅಂಡವಾತ ಮಾಣ್ಗುಂ (ವಿವೈವಿ. ೮೦). [ಅಂಡ$_1$ + ವಾತ]

**ಅಂಡವಾಯು** (ನಾ). = ಅಂಡವಾತ. [ಅಂಡ$_1$ + ವಾಯು]

**ಅಂಡವೃದ್ಧಿ** (ನಾ). = ಅಂಡವಾತ. [ಅಂಡ$_1$ + ವೃದ್ಧಿ]

**ಅಂಡಾಶಯ** (ನಾ). ವೃಷಣದ ಚೀಲ; ಅಂಡಕೋಶ; ಬೀಜಕೋಶ. [ಅಂಡ$_1$ + ಆಶಯ]

**ಅಂಡಿ$_1$** (ನಾ). ಹತ್ತಿರ ; ಸಮೀಪ (?) : ಕೆಂಡವನೆ ನೋಡಿ ಶಿಶು ಭಯಬೀಳದಲೆ ಅಂಡಿಯಲ್ಲಿ ಪೋಗಿ ತುಡುಕುವಂತೆ ಉದ್ದಂಡ ಭವದಲ್ಲಿ ಭವಣೆಗಳಟ್ಟಿದರು ಕೆಂಡಕ್ಕೆ ಸಣ್ಣವನು ಭಯಬೀಳದಂತಿರೊ ಹಿಂಡುದೈವದ ಗಂಡ (ವಿಸಾಸು. ೧೫–೨). [< ಅಂಡು$_1$]

**ಅಂಡಿ$_2$** (ನಾ). ಬೇರು ; ಮೂಲ : 'ಅಂಡಿಗಾಣಿಸು' ಪರಾ. ಅಂಡೀಕೀಳು = ೧. ಮೂಲೋತ್ಪಾಟನ ಮಾಡು ; ಧ್ವಂಸ ಮಾಡು (ಸ್ಯಾಂಡರ್). ೨. ಆಸರೆಗೆಡಿಸು (ಸ್ಯಾಂಡರ್). [?]

**ಅಂಡಿಗಾಣಿಸು** (ಕ್ರಿ). ಬೇರು ಗೋಚರವಾಗು ; ಬುಡ ಕಣ್ಣಿಗೆ ಕಾಣಿಸು : ಕಂಡು ಕಾಂತನ ಕಾಲಿಗೆಱಗಲಾತಂ ತನ್ನ ಮೊಂಡಗೈಯಿಂದೆತ್ತಿ ಮೊಗವ ನೋಡುತ ಮೂಗನಂಡಿಗಾಣಿ[ಪಾಠಾಂ. ನಿ]ಸಿ ಕೊಯ್ದುದೇಕೆನಲು (ಪ್ರೌಢರಾ. ೧೫–೧೧). [ಅಂಡಿ$_2$ + ಕಾಣಿಸು]

**ಅಂಡಿಗೆ$_1$** 'ಅಂಡಗೆ' ನೋ.

**ಅಂಡಿಗೆ$_2$** (ನಾ). ಒಂದು ಊರಿನ ಹೆಸರು : ಶಿವಾಚಾರ ಸಂಪನ್ನ ದ್ಯಾವಾಪೃಥ್ವೀ ಮಹಾಮಹತ್ತಿನೊಳಗಾದ ಅಣ್ಡಿಗೇಲೂ ನಮ್ಮ ಮಾವಾಜಿ ರೇವಣ್ಣ ವಡೇರು (ಎಕ. VIII, ತೀರ್ಥಹ. ೬೨–೧೦ ; 1635). [?]

**ಅಂಡಿಸು** (ಕ್ರಿ). ೧. ಹತ್ತಿರ ಹೋಗು ; ಸಮೀಪಿಸು ; ಸೇರು : ನೆರೆದೊಡಟ್ಟುವ ಹೊಕ್ಕೊಡಂಡಿಸುವ ಮುರಿದೊಡಂ ಮುರಿವ ಬೊಬ್ಬಿಟ್ಟೊಡುಬ್ಬೇಳ್ವ (ಸೋಮಚ. ೩–೧೧) ; ಶರವಿಬ್ಬಗಿಯ ಮಾಡಿತು ಮುಂದುವರಿದಂಡಿಸಿದ ಸೂಕರನ (ತೊರರಾ. ೩–೩–೨೧) ; ಗಂಡೆದ್ದು ಕಾದಿತಾದೊಡೆ ಮಸ್ತಕಕೆ ಪೊಯಿಚೆಂಡಿನಂದದಿ ಪುಟನೆಗೆದು ಅಂಡಿಸಿತಾದೊಡೆ ನಾನದ ನೆಳೆತಹೆ ಸೊಂಡಿಲ ಕೈಸುತ್ತಿಕೊಂಡು (ನಾಗಕು. ೭–೩೩) ; ಕೆಂಡುದ ಪೇಳಿರ್ಪೆಯೆಂದನವರು ಪೇಳಲಂಡಿಸುತಿದ್ದರಂತದನು (ಭರಚ. ೪೩–೯೭) ; ಕಂಡು ಶಾಕಿನಿನಿವಹವನಿತರೊಳಂಡಿಸದೆ ತಮತಮಗೆ ಕವಿದವು (ಅಂಬಿಕಾ. ೨೭–೫೩). ೨. ಕುಳಿತುಕೊ ; ಆಶ್ರಯ ಹೊಂದು : ಪೆಂಡಿರ ಪಿಡಿದನ ನಿದಿರ್ಗೊಂಡು ಕೊಲಲಣ್ಮದಂಡಿಸಿ ಮಱೆಯೊಳು ಕೊಲುವ ಭಂಡುಬೇಡೆನಗೆ (ಕುರಾಸಾಂ. ೩೫–೪೮) ; ತೊಲಗದಿಡುಕಿನೊಳಂಡಿಸಿದರಾಗಳೇ ಕೆಲರ್ ತಳಿಗಳೊಳ್ ಪೊಕ್ಕು ಮೈಗರೆದರಾಗಳೆ ಕೆಲರ್ (ಚಬಪು. ೪೨–೨೭); ಪಾಲ್ದೆನೆಯೊಳಂಡಿಸಿದ ಗಿಳಿವಿಂಡನಬಲೆಯರ್ ಕಾಲ್ದೆಗೆಯಲಾರ್ದು ಕೈಪಱಿಗುಟ್ಟುವಂಡಲೆಗೆ (ಜೈಮಿಭಾ. ೩–೭). ೩. ಒದಗು ; ಉಂಟಾಗು ; ಸಂಭವಿಸು : ಕಂಡು ಕೇಳಿದುದಿಲ್ಲವೀ ಭೂಮಂಡಲದೊಳಪಜಯವು ನಿಮಗಿಂದಂಡಿಸಿತು ಹರಿಯನ್ನು ಮರೆದುದರಿಂದ (ಅರ್ಜಾವಿ. ೭–೪೬). ೪. ಹಿಂದೆಗೆ ; ಹಿಮ್ಮೆಟ್ಟು : ನುಡಿದ ಮಾತಿಂಗೆ ಕೊಱತೆಯೆಂದು ಮನ ಮಾಡಿ ತನು ಅಂಡಿಸಲೇತಕ್ಕೆ ಹಾವಿನ ಹೇಳಿಗೆಯ ತೆಗೆದ ಕೋಡಗದಂತೆ ಮಾತಾಡಲೇಕೆ ಮತ್ತುಡುಗಲೇಕೆ (ನಗೆಮಾ. ೧೪). **ಅಂಡಂಡಿಸು** = ಮೇಲೆ ಬೀಳು ; ಮುತ್ತು : ದಂಡಿಸಿ ದಳ್ಳಿಸಿ ಹಿಂಡಿ ಹಿಪ್ಪೆಯ ಮಾಡಿ ಬಂಡುಗೆಡಿಸಿ ಬಾಯ ಬಿಡಿಸಿ ಅಂಡಂಡಿಸಿ ಯಿರ್ಪರವನೀ ಸಂಸೃತಿ ಕೊಂಡು ಕೊನೆವುದೆನ್ನ ರಂಗ (ಶತಸಾಂ. ೧೫–೮೭). [ಅಂಡು$_1$ + –ಇಸು$_3$]

**ಅಂಡು$_1$** (ಕ್ರಿ). ೧. ಹತ್ತಿರ ಹೋಗು ; ಸೇರು ; ಕೂಡು : ತೊಂಡಿನಟ್ಟಳಿ ಕುಚಿತ್ತದ ಕೊತ್ತಳಂ ಸಟಿಯೊಳಂಡಿದಾಳ್ವೇರಿ (ಸಿಂಗಿರಾ. ೪೫–೮) ; ಮಂಡಲೇಶ್ವರ ಕೇಳ್ ಜಯಂತಿಪುರಮುಂಟಲ್ಲಿ ಚಂಡತರ ಬ್ರಹ್ಮರಾಕ್ಷಸನೊಂದು ಬಂದು ಮೆಯ್ಯಂಡಿಹುದು ತತ್ಪುರದ ಸರ್ವಜ್ಞನೆಂಬ ವಿಪ್ರಾತ್ಮಜನನನುದಿನದೊಳು (ಚಬಪು. ೫೨–೫೨). ೨. ಅಡಗು (ಕರಾ). [ದೇ. ~ ಅಂಟು$_1$. ‖ ತಮಿ. ಅಣ್ಡು]

**ಅಂಡು$_2$** (ನಾ). ೧. ಹತ್ತಿರ; ಸಮೀಪ: ಹಳ್ಳದ ಅಂಡಿನಲ್ಲಿ (ಸ್ಯಾಂಡರ್). ೨. ಆಶ್ರಯ ; ಆಸರೆ : ಅಂಡು ತಪ್ಪಿದ ಮೇಲೆ ಅವನ ಸಂಗಡ ಯಾರು ಮಾತಾಡುತ್ತಾರೆ ?(ರೂಢಿ). **ಅಂಡುಮಾಡಿಕೊ** = ಆಶ್ರಯ ಪಡೆದುಕೊ ; ಬೆಂಬಲ ಹೊಂದು : ಅರಸಿನ ಅಂಡುಮಾಡಿಕೊಂಡು ಅತಿ ತಿಪ್ಪಲು ಪಡುತ್ತಾನೆ (ಸ್ಯಾಂಡರ್). 'ಅಂಡುಗೊಳ್' ಪರಾ. [< ಅಂಡು$_1$]

**ಅಂಡು$_3$** (ನಾ). ೧. ನಿತಂಬ ; ಕುಂಡಿ ; ಪಿರ್ರೆ : ಜಲವ ಕಾಣದ ಗೋದನಂತೆ ತೋಡುತ್ತ ಗಱಿಯ ಹಿಡಿದ ಅಂಡಿನಂತೆ ಹಿಡಿದೊಡವೆಯ ಬಿಡಲಾಱದೆ ಬೇವುತ್ತ ಆಡಿವಜ್ಜೆಯ ಮೆಟ್ಟ ಬಿಡಲಾಱದೆ (ದಾಸೋಸಂ. ೩೧); ಅರಮನೆಗೆದುರಾಗಿ ಅಂಡುತಿರುಗಿಸಿ ಬಗ್ಗಿ ಗೋಪುರದ ಕೊಟ್ಟಕೊನೆಯಲ್ಲಿ ಕುಳಿತುಕೊಂಡನು (ಕಥಾಮಂ. ೯೯). ೨. ಯೋನಿಪ್ರದೇಶ. ೩. (ಪಾತ್ರೆಯ) ತಳ ; ಅಡಿ ; ಕೆಳಭಾಗ. ℙ ಈ ಶಬ್ದಕ್ಕೆ ಸಾಮಾನ್ಯವಾಗಿ ಶಿಷ್ಟ ಪ್ರಯೋಗವಿಲ್ಲ. **ಅಂಡಿಗೆ ಆನಿಸಿಕೊಂಡು ಬಾ** = ೧. ಅತ್ಯಂತ ಅಗತ್ಯವಾಗಿರು ; ೨. ಕಾಲಾವಕಾಶ ಕೊಡದೆ ಇರು (ಉಕ). **ಅಂಡು ತಿರುಗಿಸಿಕೊಂಡು ಹೋಗು** = ಅಲಕ್ಷ್ಯಮಾಡು ; ಮಾತಿಗೆ ಬೆಲೆ ಕೊಡದಿರು. [ದೇ. ‖ ತಮಿ. ಅಣ್ಡು ; ತುಳು. ಅಂಡು]

**ಅಂಡು$_4$** (ನಾ). ವೃಷಣ (ಕಿ). [ಸಂ. ಅಂಡ]

**ಅಂಡುಕ** (ನಾ). ಒಂದು ಜಾತಿಯ ಹಕ್ಕಿ (ಸ್ಯಾಂಡರ್). [?]

**ಅಂಡುಗಚ್ಚೆ** (ನಾ). ಉಟ್ಟ ಧೋತರವನ್ನು ಮೇಲಕ್ಕೆ ಎತ್ತಿ ಕಟ್ಟಿದ ಕಚ್ಚೆ (ಕರಾ) : ಭಟ್ಟರು ಅಂಡುಗಚ್ಚೆ ಹಾಕಿ ಮುಂಡಾಸು ಸುತ್ತಿ ಹೊರಟರು (ರೂಢಿ). [ಅಂಡು$_3$ + ಕಚ್ಚೆ]

**ಅಂಡುಗಿ** (ನಾ). ಒಂದು ಊರಿನ ಹೆಸರು : ಮೊಳಿಊರಾ ಮಣಿಯಗಾಮುಣ್ದರುಂ ನಾವಳ್ಳಿಯರುಂ ಅಣ್ಡುಗಿಯಾ ಗಾಮಿಗರುಂ ನೀರಿಲ್ಲಿಯಾ ಸಿನ್ದೆಱಗಾಮಿಗರುಂ (ಎಕ. VII, ಶಿಕಾರಿ. ೧೫೪–೧೦ ; 685) [?]

**ಅಂಡುಗೊಳ್** (ಕ್ರಿ). ೧. ಸಮೀಪಿಸು ; ಹತ್ತಿರ ಹೋಗು ; ಹೋಗಿ ಸೇರು : ಮತ್ತೊರ್ವಳತಿಸಂಭ್ರಮತ್ವರಿತದಿಂ ಮೇಖಳಾಕಳಿತ ರುಚಿರ ಲುಳಿತಾಧರಪಲ್ಲವೆ ನೋೞ್ಪ ದಂಡುಗಳೊಳಂಡುಗೊಂಡು ಸೊರ್ಕಿದಾನೆ ಬರ್ಪಂತೆ ಬಂದು (ಪಂಪಭಾ. ೪–೩೬ ವ) ; ಗಿರಿಯ ಸರಿಯ ನಾಸಲ್ಕೆ ಸಾರ್ದಂಡುಗೊಂಡಿರ್ದಿಳೆ ಕಂಪಂಗೊಳ್ವಿನಂ ಗರ್ಜಿಸಿದುದು ಮುಳಿದಾಭೀಳ ದೇಹಂ ವರಾಹಂ (ಸೂಕ್ತಿಸು. ೩–೧೩೮) ; ಟೊಣೆದವರೆಚ್ಚ ಕೂರ್ಗಣೆಗಳಂ ಮಿಗೆ ಮುತ್ತಿದ ಜಾಯಿಲಂಗಳಂ ಕ್ಷಣದೊಳಿದಿರ್ಚಿ ತುಂಡಿಸಿ ಕಱುತ್ತಿಱಿವಿಟ್ಟಿಯನಂಡುಗೊಂಡು ಬಿನ್ನಣದೆ ಬಿದಿರ್ಚಿ . . . ಎಕ್ಕಲನುರ್ಬುತೆ ಸೀಳ್ದು ದಾರ್ಪಿನಿಂ (ಶಬಶಂ. ೪–೧೦). ೨. ಆಶ್ರಯಿಸು : ಕುಪ್ಪಳಿಸಿ ತುಱುಗಿ ಪರ್ವಿದ ಱೊಪ್ಪವನಿರದಂಡುಗೊಂಡು ಪಂದಿಯ ಬೞಿಯೊಳ್ (ಗಿರಿಕ. ೧–೧೦೩); ದಂತಿ ಕಾಡೊಳ್ ಪೊಕ್ಕಂತೆ ಹೆಜ್ಜೆಮೆಟ್ಟಿ ನಡೆನಡೆದು ಹೆಮ್ಮೆಳೆಯನಂಡುಗೊಂಡು ಗರ್ಜಿಸುತುಂ (ನಂಬಿರ. ೧೮–೧೫). ೩. ಕೈಸಾಗದೆ ಕುಳಿತುಬಿಡು : ಕಂಡುದಿವರನು ರಾಯಮೋಹರವಂಡುಗೊಂಡುದು [ಪಾಠಾಂ. ಡರೆ] ಬೊರೆಗಳಿದು ಕೋದಂಡರುದ್ರನ ರಣ ಕಣಾ ತಾವೇನ ನೊದಗುವರು (ಕುವ್ಯಾದ್ರೋ. ೧೮–೨೩) ; ಭೀಮನ ಗಂಡುಗೆಡಿಸುವರಿಲ್ಲ ಕೌರವದಳದ ಸುಭಟರಲಿ ಅಂಡುಗೊಂಡುದು[ಪಾಠಾಂ. ಡರು] ಬಿರುದುಗಿರುದಿನ ಗಂಡರಕಟ (ಕುವ್ಯಾಕ. ೧೦–೧೮). [ಅಂಡು$_2$ + ಕೊಳ್]

**ಅಂಡುಗೋಡೆ** (ನಾ). ಮುಖ್ಯವಾದ ಗೋಡೆಯನ್ನು ಭದ್ರಪಡಿಸುವುದಕ್ಕಾಗಿ ಅದಕ್ಕೆ ಆಸರೆಯಾಗಿ ಕಟ್ಟುವ ಗೋಡೆ; ಈಡುಗೋಡೆ; ಒತ್ತುಗೋಡೆ (ಸ್ಯಾಂಡರ್). [ಅಂಡು$_1$ + ಗೋಡೆ]

**ಅಂಡೆ$_1$** (ನಾ). ಸಾಮೀಪ್ಯ ; ಹತ್ತಿರ ; ನೆರೆ ; ಪಕ್ಕ : ಅವನು ಬೀಳುವಾಗ ಹೇಗೆ ಬಿದ್ದ ? ಮಗ್ಗುಲಿಗೆ ಬಿದ್ದನೋ ? ಹಗೆಯಂಡೆಗೆ ಬಿದ್ದನೊ ? (ಆರ್ಯಕ. ೬೯); ಮನೆಯ ಅಂಡೆಯಲ್ಲಿರುವುದು ಮಡದಿಯರಿಗೆ ಒಳ್ಳೇದು (ಸ್ಯಾಂಡರ್). [< ಅಂಡು$_1$. ‖ ತಮಿ. ಅಣ್ಡೈ ; ತೆಲು. ಅಂಡ]

**ಅಂಡೆ$_2$** (ನಾ). ೧. ಟೊಳ್ಳಾದ ಬೊಂಬಿನಿಂದ ಅಥವಾ ಲೋಹದಿಂದ ಮಾಡಿದ, ಸಾಧಾರಣವಾಗಿ ಹಿಡಿಯಿಂದ ಕೂಡಿದ, ಉದ್ದವಾದ ಪಾತ್ರೆ : ಬಿದಿರಿನ ಅಂಡೆಯಲ್ಲಿ ಮಜ್ಜಿಗೆ ಕಡೆಯುತ್ತಾರೆ ; ಉಪ್ಪಿನಕಾಯಿ ಹಾಕಿಡುತ್ತಾರೆ (ರೂಢಿ). ೨. ಬಿದಿರಿನಿಂದ ಮಾಡಿದ ಜೀರ್ಕೊಳವೆ(?): ನಳನಳಿಪ ವಿಟರ ಭಾವವನೆಸುವ ಕೇಣದಿಂ ಬಿದಿರಂಡೆ ಕೊಂಬು ಪೊಸಸಿಪ್ಪು ನಾಳಿಗಳೆಸೆಯೆ ಪದೆಗೊರಳ ಪದ್ಮವದನೆಯರ ಹರಿಬಂ ಮಸೆಯೆ (ಬಾಣರ. ೧೪೨–೩); ಕಡುಪಿಂ ಬಂದೊರ್ಬಳಾರ್ಪಿಂ ಕುಳಿರ್ವ ಜಲವನಾರ್ದಂಡೆಯಿಂ ಪೊಯ್ಯಲ್ (ದಶಕು. ೧೧–೮೪) ; ರತ್ನದಾ ಚೆಂಬೊನ್ನಿನಂಡೆಗಳ ತುಂಬಿ ಪರಿಮಳಮಿಶ್ರದಂಬುಗಳ . . . ಅಬಲೆಯರು ಮುಂಬರಿದು ಚೆಲ್ಲು

ವಲ್ಲಿ (ಭಾವಚಿಂ. ೪–೨೪). 'ಬಿದಿರಂಡೆ', 'ಹೊನ್ನಂಡೆ' ಪರಾ. **೩.** (ಮೂಗಿನ) ಹೊಳ್ಳೆ : ಪಸುರ್ವಾಯದ ತಣ್ಪಾಜದ ಮೆಲ್ಪುಗುಂದದ ಮರುಗದ ದವನದ ಪೊಸಗಂಪಂ ಪತ್ತಿಸಿ ಪೋಪ ಬರ್ಪ ಬಟ್ಟೆಗರ ಮೂಗಿನಂಡೆಯೊಳ್ ತುಱುಕುವ ಬನಗಾಳಿಯಂ ಬೞಿಗೊಂಡು (ರಾಮಾಶ್ವ. ೧೧೧–೮). **೪.** ಊದುಕೊಳವೆ (ಕರಾ).
[ದೇ. ‖ ತಮಿ. ಅಣ್ಡೈ; ತುಳು. ಅಂಡೆ]

**ಅಂಡ್ಯೆ** (ನಾ). ರಾಶಿ; ಸಮೂಹ; ಕಣಜ : ಬರಲು ದುರ್ಭಿಕ್ಷ ಭೂಸುರರೈದಿಯಾತನೊಪ್ಪಿರುವ ಮಂದಿರವ ಸಾರಿದರು ಕಂಡಾಗ ದ್ವಿಜರ ಮೇಲಣ ಕರುಣದೆ ಮುನಿ ಪುಂಡರೀಕಾಕ್ಷನ ಭಜಿಸಿ ಕೊಂಡಾ ಯವೆಯ ಬೀಜವ ಬಿತ್ತಿ ಧಾನ್ಯದಂಡೆಯೊಳವರ ರಕ್ಷಿಸಿದ (ಕಂನವಿ. ೫–೧೩). [?]

**ಅಂಡೆಬಿದಿರು** (ನಾ). ಒಂದು ಜಾತಿಯ ಬಿದಿರು; ಅಂಡೆಗಳನ್ನು ಮಾಡಲು ಅನುಕೂಲವಾಗುವಂತೆ ಟೊಳ್ಳಾಗಿ ದಪ್ಪನಾಗಿ ಬೆಳೆಯುವ ಬಿದಿರು : ಅಂಡೆಬಿದಿರು (ಮೈಔಗಿ. ೧೧–೧೯೨).
[ಅಂಡ್ಯೆ$_2$ + ಬಿದಿರು$_2$ (< ಬಿದಿರ್$_2$)]

**ಅಂಡೆಹರಳು** (ನಾ). ಅಣ್ಣೆಕಲ್ಲು (ಉಕ).
[ಅಂಡೆ$_1$ ? + ಹರಳು (< ಪರಲ್)]

**ಅಂಡೈಸು** (ಕ್ರಿ). ಸೇರು; ನಿಲ್ಲು; ನೆಲಸು : ಮೇಲಿಕ್ಕಿದ ನಾಯಂ ಕಂಡು ಬೆಂಬತ್ತುವ ಬಿರುದಿನ ಜಂಘಾಳರಂ ಮಿಕ್ಕು ಪೆರ್ವಳ್ಳದಿಱುಂಬಂ ಪೊಕ್ಕು ನಾನಲ್ಗೆಸಱ ಹೊನಲೊಳಂಡೈಸಿ ನಿಂದಿರ್ದುದು (ಕಾವ್ಯಸಾ. ೧೧೧೮). [ಅಂಡು$_1$ + –ಇಸು$_3$]

**ಅಂಡೊಲಿ** 'ಅಂಡಲೆ' ನೋ.

**ಅಂತ$_1$** 'ಅಂತಪ್ಪ' ನೋ.

**ಅಂತ$_2$** (ನಾ). **೧.** ಕೊನೆ; ತುದಿ; ಮೇರೆ; ಅವಧಿ. **೨.** ಅಂಚು; ಅರುಗು. **೩.** ಮುಗಿವು; ತೀರುಗಡೆ. **೪.** ಕೊನೆಗಾಲ; ಸಾವು; ನಾಶ. **೫.** ಕೀಳು; ಹೀನ. **೬.** ತುಂಬ ಕಿರಿಯ. **೭.** ನಿರ್ಣಯ; ನಿಶ್ಚಯ. **೮.** ಶೇಷ; ಉಳಿಕೆ. **೯.** ವಿಭಾಗ. **೧೦.** ಸಮೀಪ; ಹತ್ತಿರ. **೧೧.** [ವ್ಯಾಕ] ಶಬ್ದದ ಕಡೆಯ ಭಾಗ; ಸಮಾಸದಲ್ಲಿ ಕೊನೆಯ ಶಬ್ದ. **೧೨.** ಒಳಗು; ಒಳಭಾಗ. **೧೩.** ಶಬ್ದದ ಅರ್ಥ. **೧೪.** ಧರ್ಮ. **೧೫.** ಸತ್ತ್ವ. **೧೬.** ಇಂದ್ರ. **೧೭.** ಕರ್ಮ: "ಧರ್ಮ ಸಮೀಪ ಸತ್ವಮೊಳಗುಂ ಕಡೆ ಜೀರ್ಣ ಪದಾರ್ಥ ವಾಸವಂ ಕರ್ಮಮಿವಂತ ಮಕ್ಕುಂ" (ನಾನಾರ. ೪೯). [ಸಂ.]

**ಅಂತಃಕರಣ** (ನಾ). **೧.** (ಶರೀರದ) ಒಳಗಿನ ಇಂದ್ರಿಯ; ಮನಸ್ಸು. **೨.** ಚಿತ್ತವೃತ್ತಿ. **೩.** ದಯೆ; ಕನಿಕರ : ನಮ್ಮ ಯಜಮಾನರಿಗೆ ನನ್ನ ವಿಷಯದಲ್ಲಿ ಎಳ್ಳಷ್ಟೂ ಅಂತಃಕರಣವಿಲ್ಲ (ರೂಢಿ). **ಅಂತಃಕರಣಪಡು** = ಕನಿಕರಪಡು; ದಯೆ ತೋರಿಸು : ಈಗಿನ ಕಾಲದಲ್ಲಿ ಓದಿ ಪ್ಯಾಸು ಮಾಡಿದ ಹುಡುಗಿಯರು ಸಿಕ್ಕುತ್ತಾರೆ. ಹಾರ್ಮೋನಿಯಂ ಕಲಿತವರು ವೀಣೆ ಕಲಿತವರು ಸಿಕ್ಕುತ್ತಾರೆ. ಅಂತಃಕರಣಪಡುವ ಹುಡುಗಿಯರು ಸಿಕ್ಕುವುದು ಕಷ್ಟ (ಶ್ರೀಕಥೆ. ೭೩). [ಸಂ. (ಅಂತರ್ + ಕರಣ)]

**ಅಂತಃಕರಣಗೇಡಿ** (ನಾ). ಪ್ರೀತಿಯಿಲ್ಲದ, —ಕನಿಕರವಿಲ್ಲದ ವ್ಯಕ್ತಿ : ಇಂಥಾ ಅಂತಃಕರಣಗೇಡಿ ಹೆಂಗಸು ಹುಡುಗರನೇನು ನೋಡಿಕೊಂಡೀತು! (ಹೊಸಂಸಾ. ೧೭೦).
[ಅಂತಃಕರಣ + ಕೇಡು + –ಇ$_2$]

**ಅಂತಃಕರಣಜೀವಿ** (ನಾ). ಕರುಣಾಳು; ದಯಾಶೀಲವ್ಯಕ್ತಿ : ಅಂತಃಕರಣಜೀವಿಯೂ ಸಹೃದಯೆಯೂ ಆದ ಶಾಂತಲೆಗೆ, ಲಕ್ಷ್ಮಿ ಆಗ ಅಂದ ಮಾತು ಶಾಶ್ವತವಾಗಿ ಎದೆಯಲ್ಲಿ ನೆಟ್ಟುಹೋಯಿತು (ಶಾಂತಲಾ. ೧೨).
[ಅಂತಃಕರಣ + ಜೀವಿ]

**ಅಂತಃಕರಣಮಲಿನೆ** (ನಾ). ಚಿತ್ತಶುದ್ಧಿಯಿಲ್ಲದವಳು; ಮನಸ್ಸು ಅಶುದ್ಧವಾದವಳು : ಕಾಮಾತುರಿಯರತಿದವಡಿತಿಯರಂತಃಕರಣಮಲಿನೆಯರು (ಬಸಪು. ೪೦–೫೩).
[ಸಂ. ಅಂತಃಕರಣಮಲಿನಾ (ಅಂತಃಕರಣ + ಮಲಿನ + –)]

**ಅಂತಃಕರಣಶುದ್ಧ** (ಗು). ಪರಿಶುದ್ಧವಾದ ಮನಸ್ಸುಳ್ಳ; ನಿರ್ಮಲ ಚಿತ್ತವುಳ್ಳ : ವಿಶದಕೀರ್ತಿಸ್ಫುರಣನಂತಃಕರಣಶುದ್ಧನು ಸಚ್ಚಿದನುಬದ್ಧ (ಬಸಪು. ೩೮–೨). [ಅಂತಃಕರಣ + ಶುದ್ಧ]

**ಅಂತಃಕರಣಶುದ್ಧಿ** (ನಾ). ಮನಶ್ಶುದ್ಧಿ : ಚರಣವದನಕ್ಷಾಲನಾಂತಃಕರಣಶುದ್ಧಿಯಲಾಚಮನವಿಸ್ತರಣದಲಿ (ಕುವ್ಯಾಗ. ೩–೪೨).
[ಅಂತಃಕರಣ + ಶುದ್ಧಿ]

**ಅಂತಃಕರಣಿ** (ನಾ). ದಯೆಯುಳ್ಳವನು. [ಸಂ. ಅಂತಃಕರಣಿನ್]

**ಅಂತಃಕರಿಸು** (ಕ್ರಿ). ಒಳಕೊಳ್ಳು : ಸಿರಿಯಂ ಮಂದಾರಮಂ ಚಂದ್ರನನಮಲಮಣಿಶ್ರೇಣಿಯಂ ಮಾಣದಂತಃಕರಿಸಿರ್ದಾ ಪೂರ್ಣದುಗ್ಧಾರ್ಣವದೊರೆಗೆಣೆವಂದತ್ತು . . . ಆಸ್ಥಾನಗೇಹಂ (ಚಂದ್ರಪು. ೫–೩).
[ಅಂತಃಕರಣ + –ಇಸು$_3$]

**ಅಂತಃಕಲಹ** (ನಾ). ಒಳಜಗಳ : ಅಂತಃಕಲಹದಿಂದ ದೇಶವು ಶತ್ರುಗಳ ಪಾಲಾಯಿತು (ರೂಢಿ). [ಸಂ. (ಅಂತರ್ + ಕಲಹ)]

**ಅಂತಃಕಲುಷಚಿತ್ತ** (ನಾ). ಕೊಳೆ ತುಂಬಿದ ಮನಸ್ಸುಳ್ಳವನು : ಅಡಿಯಿಟ್ಟನಂತಃಕಲುಷಚಿತ್ತ ದುರಂತಚಿಂತೆಯಲಿ (ಕುವ್ಯಾಅ. ೨೨–೪೨).
[ಸಂ. (ಅಂತಃಕಲುಷ + ಚಿತ್ತ)]

**ಅಂತಃಕಲುಷಿತ** (ಗು). ಅಂತರಂಗದಲ್ಲಿ ಕಲ್ಮಷವುಳ್ಳ : ಅಂತಃಕಲುಷಿತನಂತಶ್ಯಾಂತಂ ಧಮಿತಾರಿಯೆಂಬುದಂ ದೂತಮುಖೋದಂತಂಗಳಿನಱಿವುದು (ಶಾಂತಿಪು. ೨–೫೭). [ಸಂ. (ಅಂತರ್ + ಕಲುಷಿತ)]

**ಅಂತಃಕಳಂಕ** (ಗು). ಒಳಗಿನ ಕೊಳೆಯುಳ್ಳ; ಒಳಗೆ ಕಳಂಕವುಳ್ಳ : ಕಿಡಿಸುಗುಮಂತಃಕಳಂಕನೃಪಮಂಡಲಮಂ ತಡೆಯದೆ ತಮಸ್ಸ್ವಭಾವಂ ಕಿಡಿಸುವವೋಲಱಿದು ರಾಹು ಶಶಿಮಂಡಲಮಂ (ಕವಿರಾ. ೩–೧೪೮).
[ಸಂ. (ಅಂತರ್ + ಕಲಂಕ)]

**ಅಂತಃಕೃತ** (ಗು). ಒಳಕೊಂಡ : ನಭೋಮಂಡಳದಂತಂತಃಕೃತಭುವನಂ ನಟನಂತೆ ದಿಟಂ ಪ್ರಬಳನಕ್ರಮುಕರಸಮೇತಂ (ಚಂದ್ರಪು. ೫–೪೦).
[ಸಂ. (ಅಂತರ್ + ಕೃತ)]

**ಅಂತಃಕ್ರಿಯೆ** (ನಾ). **೧.** ಒಳಗೆ ನಡೆಯುವ ಕೆಲಸ; ಒಳಗೆಲಸ. **೨.** ಒಳಕೊಳ್ಳುವುದು; ಸ್ವೀಕಾರ : "ಒಳಕೆಯ್ – ಅಂತಃಕ್ರಿಯಾಯಾಂ" (ಶಮುಧಾ). [ಸಂ. ಅಂತಃಕ್ರಿಯಾ (ಅಂತರ್ + ಕ್ರಿಯಾ)]

**ಅಂತಃಪಟ** (ನಾ). ಮದುವೆಯ ಮುಹೂರ್ತದಲ್ಲಿ ವಧೂವರರಿಗೆ ನಡುವೆ ಅಡ್ಡಲಾಗಿ ಹಿಡಿಯುವ ವಸ್ತ್ರ : ಅಂತಃಪಟ ತಾಗಿ ಬೆಲ್ಲ ಜೀರಿಗೆ ನೆಲಕ್ಕೆ ಬಿದ್ದಿತು (ಸುವಸಂ. ೫೪). 'ಅಂತರಪಟ' ಪರಾ.
[ಸಂ. (ಅಂತರ್ + ಪಟ)]

**ಅಂತಃಪಟಲ** (ನಾ). = ಅಂತಃಪಟ : ವಧೂವರರನ್ನು ಅಲ್ಲಿಗೆ ಕರೆತಂದು ಒಬ್ಬರ ಎದುರಿಗೊಬ್ಬರನ್ನು ನಿಲ್ಲಿಸಿ ನಡುವೆ ಕೇಸರಿಬಣ್ಣದ ಅಂತಃಪಟಲವನ್ನು ಹಿಡಿದರು (ಅಂಬಿಕೆ. ೧೮೬). [ಸಂ. (ಅಂತರ್ + ಪಟಲ)]

**ಅಂತಃಪಾತಿ** (ಗು). ಒಳಗೆ ಬೀಳುವ : ಉದಕಾಂತಃಪಾತಿವೊಲ್ ಸ್ನೇಹದ ಲವಮೆನಸುಂ ಪರ್ವಿ ಮದ್ಯಾವನೋದ್ಯನ್ಮದದೊಳ್ತೋಱುತ್ತುಮಿರ್ದಪ್ಪುದು (ಕಾದಂಉ. ೯೧); ಬಂಧನಪಂಚಕ ಸಂಘಾತಪಂಚಕಮೆಂಬಿವು ತಂತಮ್ಮ ಶರೀರದೊಳ್ ಅಂತಃಪಾತಿಗಳ್ (ತತ್ತ್ವಪ್ರ. ೩೦೦).
[ಸಂ. ಅಂತಃಪಾತಿನ್]

**ಅಂತಃಪಾತಿತ್ವ** (ನಾ). ಒಳಗೆ ಬೀಳುವುದು : ಪ್ರಮಾಣಪ್ರಯಾಂತಃ

ಪಾತಿತ್ವಂ ಉಕ್ತ ಪಂಚವಿಧಜ್ಞಾನಕ್ಕೆ ನಿರೂಪಿತಮಾದೊಡಂ ಪ್ರತ್ಯಕ್ಷಾನುಮಾನಾದಿಪ್ರಮಾಣಕಲ್ಪನಾನಿವೃತ್ತ್ಯರ್ಥಂ (ತತ್ತ್ವಪ್ರ. ೫೩). [ಸಂ.]

**ಅಂತಃಪುರ** (ನಾ). ೧. ಸ್ತ್ರೀಯರಿಗಾಗಿ ಪ್ರತ್ಯೇಕವಾಗಿ ಏರ್ಪಟ್ಟ ಮನೆಯ ಒಳಭಾಗ; ರಾಣಿವಾಸ; ಜನಾನಾ. ೨. ಅರಮನೆ. ೩. ರಾಣಿವಾಸದಲ್ಲಿ ವಾಸಮಾಡುವವರು. ೪. ರಾಣಿ. [ಸಂ.]

**ಅಂತಃಶಾಂತ** 'ಅಂತಶ್ಶಾಂತ' ನೋ.

**ಅಂತಃಶುದ್ಧಿ** 'ಅಂತಶ್ಶುದ್ಧಿ' ನೋ.

**ಅಂತಃಶೂನ್ಯ** 'ಅಂತಶ್ಶೂನ್ಯ' ನೋ.

**ಅಂತಃಸತ್ತ್ವ** 'ಅಂತಸ್ಸತ್ತ್ವ' ನೋ.

**ಅಂತಃಸತ್ತ್ವೆ** 'ಅಂತಸ್ಸತ್ತ್ವೆ' ನೋ.

**ಅಂತಃಸಾರ** 'ಅಂತಸ್ಸಾರ' ನೋ.

**ಅಂತಃಸ್ಥ**, ಅಂತಸ್ಥ (ಗು). ೧. ಒಳಗಿನ; ನಡುವಣ. (ನಾ). ೨. [ವ್ಯಾಕ] ಯ್, ರ್, ಲ್, ವ್ ಎಂಬ ವರ್ಣಗಳಲ್ಲಿ ಒಂದು. ೩. ಮನಸ್ಸಿನೊಳಗಿನ ಅಭಿಪ್ರಾಯ, —ರಹಸ್ಯ. **ಅಂತಸ್ಥ** : ೩. ಇನ್ನು ಹೇಳದೊಡೆ ಮಾಣಲಂತಸ್ಥಮದು ತಾನೆ ತುಬ್ಬುವುದು (ಜೈಮಿಭಾ. ೩೦-೩೧). [ಸಂ.]

**ಅಂತಃಸ್ಥಲಿ** (ನಾ). ಒಳಪ್ರದೇಶ : ಸರಿಯಲ್ಲಾ ಚಿತ್ಕ್ರಿಯೆಯಿಂ ತನ್ನ ಹೃದರವಿಂದಾಂತಃಸ್ಥಲಿಯೊಳ್ ಸರ್ವೇಶ್ವರನಂ ಚಿನ್ಮಯನಂ ಭರ್ಗನ ನುಜಿ ನಿಜಿಸಿದ ಮಹಿಮಂಗೆ (ಉದ್ಭವೇ. ೩-೬೯). [ಸಂ.]

**ಅಂತಃಸ್ಫಾರಿತ** (ಗು). ಒಳಗೊಳಗೇ ವಿಕಾಸಗೊಂಡ : ಮನೋಜ ಲೀಲೆಯನವಕರ್ಣಿಸಿ ಕರ್ಣಾಂತವಿಶ್ರಾಂತ ಲೋಚನಂಗಳಂತಸ್ಫಾರಿತಂಗಳಾಗೆ ದಿಗವಲೋಕನಂಗೆಯ್ದು (ಮಲ್ಲಿಪು. ೮-೧೨೮). [ಸಂ. (ಅಂತರ್ + ಸ್ಫಾರಿತ)]

**ಅಂತಃಸ್ಮೃತಿ** (ನಾ). ನೆನಪಿನ ಒಳಪದರ : ಕಣ್ ಪನಿಯುವಂತೆ ತಂತಿಯಿಂಪಿಗೆ ಕರಗಿತಂತಃಸ್ಮೃತಿಯಲಂಪು (ಶ್ರೀರಾಮಾ. ೪೩೦-೪೯೯). [ಸಂ. (ಅಂತರ್ + ಸ್ಮೃತಿ)]

**ಅಂತಃಸ್ವೇದ** (ನಾ). ಆನೆ. [ಸಂ. (ಅಂತರ್ + ಸ್ವೇದ)]

**ಅಂತಕ** (ನಾ). ೧. ಯಮ ; ಮೃತ್ಯುದೇವತೆ : ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ (ಪುರಂದ. ೨-೬೧-೧) ; ಅಂತಕನ ಶಿಕ್ಷೆಗೆ ಹೆದರೆ, ಸಂತೆ ಗೋವಿಂದನ ಸಾಲಕ್ಕೆ ಹೆದರುತ್ತೇನೆ (ಗಾದೆ). ೨. ಮೃತ್ಯುವಿನಂತೆ ವಿನಾಶಕ : ಇವದಿರಿಗಂತಕನು ತಾನಹೆನು (ಕುವ್ಯಾಅ. ೨೨-೪೩). ೩. ಸಾವು. ೪. ಕೊನೆ ; ಅಂಚು ; ಎಲ್ಲೆ. [ಸಂ.]

**ಅಂತಕದೂತ** (ನಾ). ಯಮದೂತ ; ಯಮಭಟ. [ಅಂತಕ + ದೂತ]

**ಅಂತಕನಗರ** (ನಾ). ಯಮನ ಪಟ್ಟಣ ; ಸಂಯಮಿನೀ ಪಟ್ಟಣ : ವೈರಿಬಲ ಬಿಡೆ ಜಡಿದುದಂತಕನಗರವದ್ಭುತವಾಯ್ತು ಸಂಗ್ರಾಮ (ಕುವ್ಯಾಭೀ. ೯-೧೧). [ಅಂತಕ + ನಗರ]

**ಅಂತಕವೈರಿ** (ನಾ). ೧. ಯಮನ ಶತ್ರು ; ಶಿವ. ೨. ಜಿನ ; ಅರ್ಹಂತ : ಅಂತಕನ ಸಾಮ್ಯಮನಂತಕವೈರಿಯಲ್ಲದುಂತಮರಮನುಷ್ಯರಾರ್ಪರೆ ನಿರಾಕರಿಸಲ್ (ಶಾಂತಿಪು. ೭-೭೮). [ಅಂತಕ + ವೈರಿ]

**ಅಂತಕಹರ** (ನಾ). ಯಮನನ್ನು ನಿಗ್ರಹಿಸಿದವನು; ಮೃತ್ಯುಂಜಯ; ಶಿವ. [ಅಂತಕ + ಹರ]

**ಅಂತಕಾನುಗ** (ನಾ). ಯಮನನ್ನು ಅನುಸರಿಸಿ ನಡೆಯುವವನು ; ಯಮಭಟ. [ಅಂತಕ + ಅನುಗ]

**ಅಂತಕಾಂತಕ** (ನಾ). ಯಮನಿಗೆ ಯಮನಂತಿರುವವನು ; ಯಮನನ್ನು ನಿಗ್ರಹಿಸಿದವನು ; ಶಿವ. [ಅಂತಕ + ಅಂತಕ]

**ಅಂತಗಮನ** (ನಾ). ೧. ಕೊನೆಮುಟ್ಟುವಿಕೆ ; ಮುಗಿಸುವಿಕೆ. ೨. ಕೊನೆಯ ಪ್ರಯಾಣ ; ಪ್ರಾಯೋಪವೇಶದಿಂದ ಶರೀರತ್ಯಾಗ ಮಾಡುವುದು. [ಅಂತ$_2$ + ಗಮನ]

**ಅಂತಗಾಣ್** (ಕ್ರಿ). ಕೊನೆಗಾಣು ; ಗುರಿಮುಟ್ಟು : ಅಂತರಾಯಗಳಿಲ್ಲದೇ ಕ್ರಿಯೆಯಂತಗಂಡರೆ ತತ್ಫಲವನತಿಸಂತಸದಲ್ಲೈದುವರ ಕಥನವ ನೊರೆವೆ (ನಿಭಾಗ. ೧೧-೧೭-೩೪). [ಅಂತ$_2$ + ಕಾಣ್]

**ಅಂತಗಾಣಿಸು** (ಕ್ರಿ). ಕೊನೆಮುಟ್ಟಿಸು ; ಪಾರುಮಾಡು : ಸಂಸಾರ ದೃಶ್ಯಗಳಂತಗಾಣಿಪ ಪರಮವೈರಾಗ್ಯವು ದೊರಕಿತೆಂದ (ನಿಭಾಗ. ೧೧-೧೫-೪). [ಅಂತಗಾಣ್ + -ಇಸು$_3$]

**ಅಂತಪ್ಪ**, ಅಂತ, ಅಂತಹ, ಅಂಥ, ಅಂಥಾ (ಗು). ಆ ಪ್ರಕಾರವಾದ; ಆ ರೀತಿಯ ; ಆ ಬಗೆಯ : ಅಂತಪ್ಪ ಒಸಗೆ ಉತ್ಸಾಹಂಗಳ್ಗೆ (ಎಇ. XIV, ೧೯೧-೧೭ ; 725) ; ಅಂಜನಪುಂಜದಂತಪ್ಪ ಮೆಯ್ಯುಂ ಸಿಡಿಲನಡಸಿದಂತಪ್ಪ ದಾಡೆಯುಮುರಿಯುರುಳಿಯಂತಪ್ಪ ಕಣ್ಣುಂ (ಪಂಪಭಾ. ೮-೪೨ವ) ; ಎಮ್ಮಂತಪ್ಪ ಪ್ರಾಣಿಮಾತ್ರಂಗಳಿಲ್ಲದೊಡೆ ಅಪ್ರತಿಮ ಪರಾಕ್ರಮನಪ್ಪ ನಿಮಗೆ ತೀರದ ಕಜ್ಜಮಾವುದಾನುಮಿಲ್ಲ (ಪಂಚತಂ. ೩೪-೧೮) ; ಅಂತಪ್ಪ ಪರಮ ಶಿವಭಕ್ತರುಗಳೊಳರೆ (ಬಸವಪು. ೨೫-೧೫). **ಅಂತ** : ಅಗಲವಾದಂತ ಬೇಕಾದಂತೆ ಅಗಳಾಡುವಂತ ಎರಡು ಕಿವಿಗಳು (ಮುಂಬಯಿ. ೫-೧೮). **ಅಂತಹ** : ಅಂತಪ್ಪಂ ಮೊದಲಾದುವಱ ಹಕಾರಕ್ಕೆ – ಅಂತಹಂ ಇಂತಹಂ ಉಂತಹಂ ಎಂತಹಂ (ಶಮದ. ೧೬೦ ಪ್ರಯೋ) ; ಹಿಂಸ್ತಾದಂತಹವರಂ ಲೇಸಾಗಿ ನಡಹುವರು (ಮೈಆರಿ. ೧೯೩೨, ೩೦-೪ ; 1125) ; ಮಾಡುವಂತಹ ಕೆಲಸವೇನು (ಬಸವಪು. ೩೬-೧೮). **ಅಂಥ** : ನಿನ್ನಂಥ ಬಗೆವ ತಾಯಿಗಳಿರುತಿರಲ್ ವ್ಯಾಧಿಗಳವೇಗೈದಪವು (ಬಸವಪು. ೧೫-೩೬) ; ಅಂಥ ಒಳ್ಳೆಯ ಹುಡುಗಿಗೆ ಇಂಥ ಗಂಡ ಸಿಕ್ಕಿದನೆ ! (ರೂಢಿ). **ಅಂಥಾ** : ಬೆಟ್ಟದಲ್ಲಿ ಹುಟ್ಟಿದಂಥಾ ಆ ಒಗನಿ (ನಾಚಿರಾ. ೩) ; ಇಕ್ಕಿದಂಥಾ ಭೋಜನವೆ ಹಿತವು (ಬಸವಪು. ೨೪-೭) ; ಪೂರ್ವದಲಿ ನಂಮ ಮಠ ಧರ್ಮಕೆ ನಡದು ಬಂದಂಥಾ ಹೊಂನೂರ ಸೀಮೆವಳಗಣ (ಎಕ. VII, ಶಿವಮೊ. ೮೨-೧೮ ; 1683). **ಅಂತಪ್ಪಂ** = ಅಂಥವನು : ಏಂ ದ್ರೋಣನೆಂಬನೇಂ ಪಾರ್ವನೆ ಪೇೞಿಂತೆನಗೆ ಕೆಳೆಯನೇ ನೂಂಕಂತಪ್ಪನನಱಿಯೆನೆಂದು ಸಭೆಯೊಳ್ ನುಡಿದಂ (ಪಂಪಭಾ. ೨-೪೭). **ಅಂತಪ್ಪಳ್** = ಅಂಥವಳು : ಗಂಡನು ಬಯಸುವಂತಪ್ಪಳು ಕಾಂತೆ (ನಾಚಿರಾ. ೩). **ಅಂತಪ್ಪುದು** = ಹಾಗಾಗುವುದು ; ಹಾಗಿರುವುದು : ಸರ್ವಾಭ್ಯಂತರಸಿದ್ಧಿ ಅಂತಪ್ಪುದಂ ಪದಿನೆಣ್ಬರುಂ ಪದಿನಱುವರುಂ ಕಾವರ್ (ಸೌಇಇ. XI-i, ೩೮-೧೫ ; 950). [ಅಂತು$_1$ + ಅಪ್ಪ$_4$ (< ಆಗು$_1$)]

**ಅಂತಪ್ರಾಸ** (ನಾ). [ಛಂದ] ಪದ್ಯದ ಪಾದಗಳ ಕೊನೆಯಲ್ಲಿ ಬರುವ ಪ್ರಾಸ : ಉದಾ— ಅತಿವಿಶದಯಶೋವೃತ್ತಂ । ನತಸಕಲಾರಾತಿಜನ ವಿತಾನಂ ಮತ್ತಂ ॥ ವಿತತಶ್ರೀ ಸಂಪತ್ತಂ । ಶತಮಖಸದೃಶಾನುಭಾವ ವಿಭವಂ ಬೆತ್ತಂ ॥ (ಛಂದೋಂಬು. ೩. ೧-೬೨). 'ಅಂತ್ಯಪ್ರಾಸ' ಪರಾ. [ಅಂತ$_2$ + ಪ್ರಾಸ]

**ಅಂತಯಮಕ** (ನಾ). [ಕಾವ್ಯಮೀ] ಪದ್ಯದ ಪಾದಗಳ ಕೊನೆಯಲ್ಲಿ ಬರುವ ಯಮಕಾಲಂಕಾರ : ಉದಾ— ನಾನಾ ಶಶಮೃಗಧರಮಂ । ಸಾನುಜ ತರುಶಿಖರಲಗ್ನ ಶಶಮೃಗಧರಮಂ॥ ಪೀನಸರೋಜಾಲಯಮಂ । ವಾನೇಚರ ಯುವತಿಜಿತ ಸರೋಜಾಲಯಮಂ ॥ (ಕಾವ್ಯಾವ. ೫೪೯). [ಅಂತ$_2$ + ಯಮಕ]

**ಅಂತರ** (ನಾ). ೧. ವ್ಯತ್ಯಾಸ ; ಭೇದ : ಕರಿಗಂ ಪರಮಾಣುಗಮಂತರ ಮಾವುದೊ ನಿಮಗಮಸುರವೈರಿಗಮೇನಂತರಮಂತೆ (ಪಂಪಭಾ. ೧೦-೭) ; ಹತ್ತಕ್ಕೂ ಆರಕ್ಕೂ ಅಂತರವೆಷ್ಟು ? (ರೂಢಿ) ; ಈ ಎರಡು ಭಿನ್ನರಾಶಿಗಳ

ಅಂತರವನ್ನು ಕಂಡುಹಿಡಿಯಿರಿ (ರೂಢಿ). ೨. ಹೋಲಿಕೆ; ಸಾದೃಶ್ಯ: ಮರವಣೆಗಂ ಬೀಣೆಗಮಂತರಮಾವುದೊ ಸುಕವಿ ರಚಿತ ಮೃದುಲಲಿತಪದ ಸ್ಫುರಿತಸರಸೋಕ್ತಿಗಂ ನಿಷ್ಠುರ ಕುಕವಿ ಕಟೂಕ್ತಿಗಳ್ಗಮೇನಂತರಮೋ (ಕಾವ್ಯಾವ. ೬೫). ೩. ನಡುವಣ ರಂಧ್ರ: ಗವಾಕ್ಷಜಾಳಾಂತರಂಗ ಳಿಂದಂ ದಿಶಾವಲೋಕನಂಗೆಯ್ಯುತ್ತಿರ್ಪನ್ನೆಗಂ (ವಡ್ಡಾ ರಾ. ೯೩-೯). ೪. ಸಮೀಪ. ೫. ದೂರ: ಬಟ್ಟೆಯಟ್ಟದಂದು ಬನ್ನಿಮೆಂದು ಪ್ರಿಯಂ ನುಡಿದಿರಿಸಿ ಕಿಱಿದಂತರಂ ಬಂದೊಂದು ತಾವರೆಗೆಱೆಯ ಮೊದಲೊಳ್ ನಿಂದು (ಪಂಪಭಾ. ೨-೯೫ ವ). ೬. ಮೇರೆ; ಎಲ್ಲೆ: ಧುರದೊಳ್ ಮೂಱುಂ ಲೋಕಂ ನೆರೆದಿರೆಯುಂ ಕುಡುವ ಪೊಟ್ಟುಱೊಳ್ ಮೇರುವೆ ಮುಂದಿರೆಯುಂ ಬೀರದ ಬಿಯದಂತರಕ್ಕೆ ಕಿಱಿದೆಂದು ಚಿಂತಿಪಂ ಪ್ರಿಯ ಗಳ್ಳಂ (ಪಂಪಭಾ. ೧-೪೮). ೭. ಕೆಚ್ಚು; ಸಾಮರ್ಥ್ಯ: ಮರುಳು ಸಾರಥಿ ನಮ್ಮ ನಾವ್ ಪತಿಕರಿಸಿಕೊಳಲಾಗದು ಕಣಾ ನೀನಱಿಯೆ ನಮ್ಮಂ ತರವ ನಾವಿನ್ನಾಡಿ ಫಲವೇನು (ಕುವ್ಯಾದ್ರೋ. ೪-೫೫). ೮. ಶಕ್ಯತೆ; ಸಾಧ್ಯತೆ: ನಳಿನನಾಳವು ಗಜದ ಕೈಯೊಡನಳವಿಗೊಡಲಂತರವೆ (ಕುವ್ಯಾದ್ರೋ. ೪-೪೮). ೯. ಬಿಡುವು; ವಿರಾಮ: ಚಿಂತಿಮಾಡುವರೇನ ಅಂತರಿಲ್ಲದ ಹಾಂಗ (ಗರತಿ. ೭೪). ೧೦. ನಡುವಣ ಸ್ಥಳ; ಮಧ್ಯ ಭಾಗ: ರಾಮಚಂದ್ರಂ ರಾಜ್ಯಮಂ ತ್ಯಜಿಸಿ ವಿಪಿನಾಂತರದ ವಾಸಮಂ ಕೈಕೊಳ್ಳುದೇಕೆ (ಶ್ರೀರಾಮಾ. ೮೦-೬೬). ೧೧. ಕಾಲಾವಕಾಶ, ಸ್ಥಳಾವಕಾಶ ಇತ್ಯಾದಿ: ಆರು ತಿಂಗಳ ಅಂತರದಲ್ಲಿ ಇಷ್ಟು ಕೆಲಸ ನಡೆದು ಹೋಯಿತು (ರೂಢಿ). ೧೨. ಗುರಿ; ಉದ್ದೇಶ. ೧೩. ಆತ್ಮೀಯ; ಪ್ರೀತಿ ಪಾತ್ರ. ೧೪. ಒಳಬಟ್ಟೆ; ಒಳಉಡಿಗೆ. 'ಅಂತರೀಯ' ಪರಾ. ೧೫. ಸಂದರ್ಭ; ಸಮಯ. ೧೬. ಅಗಲಿಕೆ; ಬೇರ್ಪಡುವಿಕೆ. ೧೭. ಮರೆ. 'ಅಂತರಿತ' ಪರಾ. ೧೮. ಔನ್ನತ್ಯ; ಹಿರಿಮೆ; ಗೌರವ; ಮನ್ನಣೆ. ೧೯. ದೌರ್ಬಲ್ಯ; ನ್ಯೂನತೆ. ೨೦. ಕಾಲು; ಪಾದ. ೨೧. ನಾದ; ಧ್ವನಿ. ೨೨. ಅತಿಕ್ರಮ. ೨೩. ಆತ್ಮ; ಪರಮಾತ್ಮ. ೨೪. ಮನಸ್ಸು; ಹೃದಯ. ೨೫. (ಸಮಾಸದ ಕೊನೆಯಲ್ಲಿ) ಬೇರೊಂದು: ಉದಾ — ದೇಶಾಂತರ; ದೇಹಾಂತರ; ಕಾಲಾಂತರ; ಸ್ಥಲಾಂತರ: ಅವನು ಆಸ್ತಿಯನ್ನೆಲ್ಲ ಕಳೆದುಕೊಂಡು ದೇಶಾಂತರಕ್ಕೆ ಹೋದನು (ರೂಢಿ). ೨೬. [ಜೈನ] ಮುಕ್ತಿಗೆ ಯಾರೂ ಸಲ್ಲದಿರುವ ಕಾಲ: "ಮುಕ್ತಿಗಾರುಂ ಸಲ್ಲದಿರ್ಪ ಕಾಲಂ ಅಂತರಂ" (ತತ್ತ್ವಪ್ರ. ೩೭೨); "ಮಜಹಿನಲಿ ಒಳಗುಡುವ ಸೀರೆಯಲಿ ಮಧ್ಯದಲಿ ತೆಜಹಿನಲಿ ಛಿದ್ರದಲಿ ಅಂತರಾತ್ಮಕನಲ್ಲಿ ಹೊಜಕೂಟದಲ್ಲಿ ಅವಸರದಲಿ ವಿಶೇಷದಲಿ ಅಂತರಾಹ್ವಯಮೆನಿಕ್ಕುಂ" (ಮಂಗರಾ. ೧೫೪-೬೭); "ಪಾದದೊಳಾತ್ಮನೊಳ್ ಮರಹಿನೊಳ್ ಮನದೊಳ್ ಪರಕೂಟದೊಳ್ ಮಹೋತ್ಸೇಧ ವಿಶೇಷಮಧ್ಯಗಳೊಳೊಂದೆಡೆಯೊಳ್ ಕ್ಷಣದೊಳ್ ವಿಯೋಗದೊಳ್ ನಾದವತಿಕ್ರಮಾಂಬರ ಬಿಲಂಗಳೊಳಂತರ ಶಬ್ದಮಕ್ಕುಂ" (ನಾನಾರ. ೭೭).

**ಅಂತರಂತರ**=೧. ಸಾಲಿನಲ್ಲಿ ನಡುನಡುವೆ ತಕ್ಕಷ್ಟು ಸ್ಥಳ ಬಿಟ್ಟಿರುವುದು. ೨. ಎತ್ತರದಲ್ಲಿ ಕ್ರಮಕ್ರಮವಾಗಿ ಏರುತ್ತ ಹೋಗುವ ಅಂತಸ್ತುಗಳುಳ್ಳ ರೀತಿ; ಮೆಟ್ಟಲು ಮೆಟ್ಟಲಾಗಿರುವ ಸ್ಥಿತಿ. ೩. ಅಂತಸ್ತು; ಮಹಡಿ: "ಪರಿವಿಡಿ ತಗಹು ಪಂಕ್ತಿ ಸಮವಂತರಂತರವಕ್ಕುಂ" (ಶಬ್ದಮಂ. ೧೧೬); "ಅಂತರಂತರದೊಳಂ . . . ನೆಲೆ" (ಶಬ್ದಮಂ. ೧೧೭). [ಸಂ.]

**ಅಂತರಂಗ** (ನಾ). ೧. ಒಳಭಾಗ; ಒಳಗು: ಚಕ್ಕಮಕ್ಕಿಯ ಕಲ್ಲಿನಂತರಂಗದೊಳಗ್ನಿ ಗುಪ್ತವಾಗಿರ್ಪಂತೆ (ಶ್ರೀರಾಮಾ. ೨೩-೬೧). ೨. ಮನಸ್ಸು; ಹೃದಯ: ನುಡಿಸಿದನೆನ್ನಂ ನಲ್ಲಂ ಬಿಡಿಸಿದನೆನ್ನಂತರಂಗದನುತಾಪಮನೊಲ್ದುಡಿಸಿದನೊಳ್ಳುಡೆಯಂ (ಕವಿರಾ. ೩-೨೩೪); ಪೇದನೆ ಪಿರಿದಾಯ್ತು ನಂದನ ಯಶೋದೆಯ ಗೋಪಿಯರಂತರಂಗದೊಳ್ (ಜಗನ್ನಿ. ೩-೯೧). ೩. ಒಳಗಿನ ಅಭಿಪ್ರಾಯ; ಉದ್ದೇಶ: ಅವನ ಅಂತರಂಗವನ್ನು ತಿಳಿಯುವುದು ಕಷ್ಟ (ರೂಢಿ). [ಸಂ. (ಅಂತರ್ + ಅಂಗ)]

**ಅಂತರಂಗವಿಡಿ** (ಕ್ರಿ). ಮನಸ್ಸನ್ನು ಅರಿ; ಅಭಿಪ್ರಾಯವನ್ನು ತಿಳಿ: ಸರಿಬಂದವನ ಕಂಡೊಡೆ ಕೌಮುದಿಗಾಗ ಕರಗುವ ಶಶಿಕಾಂತದಂತೆ ನೆರೆಯಂತರಂಗವಿಡಿದು ಕೂಡಿದಲ್ಲದೆ ಪಿರಿದು ಸ್ಫೈರಿಸರೇವೇಳ್ವೆ (ಕಂನವಿ. ೧೧-೨೮). [ಅಂತರಂಗ + ಪಿಡಿ$_1$]

**ಅಂತರಂಗುಡು** (ಕ್ರಿ). ೧. ಗುಟ್ಟನ್ನು ತಿಳಿಸು; ಅಂತರಂಗವನ್ನು ಹೊರಗೆಡಹು. ೨. ಅವಕಾಶ ಕೊಡು. ೧, ೨: ಏತಱಿಂದಱಿಯದಲ್ಲಿ ರದಿರ್ ಮಱಿದಾರ್ಗಮಂತರಂಗುಡದಿರನಾರತಂ ಮಱಿಯದಾಗಿಸು ನೀಂ ತನುಗಪ್ಪ ಯತ್ನಮಂ (ಕಾದಂಬ. ೪೦೭).
[ಅಂತರ + ಕುಡು$_1$ (< ಕೊಡು$_1$)]

**ಅಂತರಂಗೆ** (ನಾ). ಬೇಕಾದವಳು; ಅತ್ಯಂತ ಪ್ರಿಯಳು: ಇಂತು ನಡೆದು ಪತಿಗಂತರಂಗೆಯರಪ್ಪ ಕಾಂತೆಯರಿಗೆ ಕಯ್ಯೊಡನೆ ಸಂತಾನ ಸೌಭಾಗ್ಯ ಸಂಪತ್ತುಗಳನು ಶ್ರೀಕಾಂತನು ಕೈಸೇರಿಸುವನು (ಹದಿಬ. ೩-೫೦).
[ಸಂ. ಅಂತರಂಗಾ]

**ಅಂತರಕಾಲ** (ನಾ). [ಜೈನ] ಒಂದು ಗುಣಸ್ಥಾನವನ್ನು ಬಿಟ್ಟು ಬೇರೆಯ ಗುಣಸ್ಥಾನಕ್ಕೆ ಹೋದ ಜೀವವು ತಿರುಗಿ ತನ್ನ ಗುಣಸ್ಥಾನವನ್ನು ಸಂಪಾದಿಸುವವರೆಗಿನ ನಡುವಣ ಕಾಲ: "ಒಂದು ಗುಣಸ್ಥಾನದಲ್ಲಿ ಇರುವ ಜೀವವು, ಆ ಗುಣಸ್ಥಾನವನ್ನು ಬಿಟ್ಟು ಅನ್ಯಗುಣಸ್ಥಾನದಲ್ಲಿಯೂ ಹೋಗುವುದು. ಆ ಜೀವವು ತಿರುಗಿ ತನ್ನ ಗುಣಸ್ಥಾನವನ್ನು ಸಂಪಾದಿಸುವವರೆಗಿನ ನಡುವಿನ ಕಾಲಕ್ಕೆ ಅಂತರಕಾಲವೆನ್ನುವರು" (ಜೈನಪ. ೩೧೭). [ಅಂತರ + ಕಾಲ]

**ಅಂತರಗಂಗೆ** (ನಾ). ೧. ಕೊಳಗಳಲ್ಲಿಯೂ ಬೇರೆ ಬಗೆಯ ಜಲಾಶಯಗಳಲ್ಲಿಯೂ ಬೇರು ನೆಲವನ್ನು ಮುಟ್ಟದಂತೆಯೇ ನೀರಿನ ಮೇಲೆ ತೇಲಿ ಬೆಳೆಯುವ ಒಂದು ಬಗೆಯ ಗಿಡ: ಅಂತರಗಂಗೆಯಲ್ಲಿ ವಿಧ ವಿಧದ ಎಲೆಗಳ ಆಕಾರವು . . . ಕಾಣಿಸುತ್ತದೆ (ಮುಂಬಯಿ. ೬-೨೭೫); ಈ ವರ್ಗದವುಗಳನ್ನು ಅಂತರಗಂಗೆ (Hyacinth) ಎಂದು ಕರೆಯುತ್ತಾರೆ (ಬಾಲಪ್ರ. ೩೦೬). ೨. ಪ್ರವಾಹ; ಮೇಲೆ ಕಾಣಿಸಿಕೊಳ್ಳದೆ ಒಳಗೇ ಹರಿಯುವ ನೀರು; ಗುಪ್ತಗಾಮಿನಿ. [ಅಂತರ + ಗಂಗೆ]

**ಅಂತರಚಂಡು** (ನಾ). (ದಕ. ಕ) ಮೇಲಕ್ಕೆ ಎಸೆದಾಡುವ ಚಂಡು.
[ಅಂತರ + ಚಂಡು]

**ಅಂತರತಮ** (ನಾ). ಅತ್ಯಂತ ಆಂತರಿಕನಾದವನು, — ಆಪ್ತನಾದವನು: ಅಂತರತಮ ನೀ ಗುರು, ಹೇ ಆತ್ಮತಮೋಹಾರಿ! ಜಟಿಲ ಕುಟಿಲತಮ ಅಂತರಂಗ ಬಹುಭಾವ ವಿಪಿನ ಸಂಚಾರಿ (ಅಗ್ನಿಹಂ. ೮೮). [ಸಂ.]

**ಅಂತರತಾವರೆ** 'ಅಂತರದಾಮರೆ' ನೋ.

**ಅಂತರದಾಮರೆ**, ಅಂತರತಾವರೆ (ನಾ). ಅಂತರಗಂಗೆ ಎಂಬ ಗಿಡದ ಒಂದು ಬಗೆ. **ಅಂತರತಾವರೆ** (ವೃಶಿಗಿ. ೩೩-೬೨೯).
[ಅಂತರ + ತಾಮರೆ]

**ಅಂತರಪಿಶಾಚಿ** (ನಾ). ೧. ಎತ್ತಲೂ ಗತಿಯಿಲ್ಲದೆ ಗಾಳಿಯಲ್ಲಿ ಅಲೆದಾಡಿ ಸಂಕಟಪಡುವ ಗಂಡು ಅಥವಾ ಹೆಣ್ಣು ದೆವ್ವ; ಪ್ರೇತಕಾರ್ಯಗಳು ನಡೆಯದ ಕಾರಣ ಸದ್ಗತಿ ಕಾಣದೆ ಕಷ್ಟಪಡುವ ಜೀವ: ಸತ್ತವರೆಲ್ಲ, ಆದರಲ್ಲೂ 'ಖೂನಿ'ಯಾಗಿ ಸತ್ತವರೆಲ್ಲ ಅಂತರಪಿಶಾಚಿಗಳಾಗಿ ಸುತ್ತುತ್ತಾರೆಂದು ಹಿರಿಯರು ಕಿರಿಯರಿಗೆ ಕತೆಮಾಡಿ ಹೇಳುತ್ತ ಬಂದಿದ್ದಾರೆ (ಬನಸಿ. ೪೭). ೨. [ಆಲಂ] ನೆಲೆಯಿಲ್ಲದೆ ಹಿಂಸೆಪಡುತ್ತಿರುವ ಪ್ರಾಣಿ. [ಅಂತರ + ಪಿಶಾಚಿ]

**ಅಂತರಬೆಂತರ** (ನಾ). ಒಂದು ಬಗೆಯ ಪಿಶಾಚಿ: ಅಂತರಬೆಂತರ ಕಾಳಯ್ಯ ಮಾಳಯ್ಯ ದೂಳಯ್ಯ ಕೇತಯ್ಯಗಳೆಂಬ ನೂಱು ಮಡಕೆಗೆ ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದು ದಡಿ ಸಾಲದೆ! (ಬಸವ. ೫೫೭). [ಅಂತರ + ಬೆಂತರ]

**ಅಂತರಮಾಡು**₁ (ಕ್ರಿ). ತಡಮಾಡು; ಸಾವಕಾಶಮಾಡು: ಅಂತರ ಮಾಡದೆ ಪೇಳ್ವೆವು ಲಾಲಿಸು ಕಾಂತಾಜನದ ಕಪಟವ (ಪ್ರಭಂಜ. ೨–೧೪೯); ಅಂತದ ಕಂಡಾ ಜನರೆಲ್ಲ ರೂಪಜಯಂತನ ಭದ್ರಲಕ್ಷಣಕೆ ಅಂತರಮಾಡ ದಚ್ಚರಿವಡುತವೆ ಕಡುಸಂತಸದಿಂದೊಡವರಲು (ಪ್ರಭಂಜ. ೨–೮೫). 'ಅಂತರಿಸು' ಪರಾ. [ಅಂತರ + ಮಾಡು₁]

**ಅಂತರಮಾಡು**₂ (ನಾ). ಮೇಲಿನ ಚಾವಣಿ. [ಅಂತರ + ಮಾಡು₂]

**ಅಂತರಲಗಡ** (ನಾ). ಜಟ್ಟಿವರಸೆಗಳಲ್ಲಿ ಒಂದು: ಪೊಸಗೆ ಕಕ್ಕವಡುಮ್ಮೆ ಹುಗ್ಗಮಂತರಲಗಡಂ. . . ಪಟ್ಟಿ ಕತ್ತರೆಗಳೆನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಪುವಿ. ೨೬–೧೮). [ಅಂತರ + ಲಗಡ]

**ಅಂತರವಟ್ಟ** (ನಾ). ಒಂದು ಅಳತೆ (?): ಪೊಟ್ಟೆಯ ಸುಂಕವೊಳಗಾಗಿ ಅರ್ದ್ಧಾದಾನ ಅಲ್ಲಿ ಅಂತರವಟ್ಟದಿಂ ತೀವಿದ ಎತ್ತಿನ ಅಡಕೆಯ ಹೇಱಿಂಗೆ ಮೇಲಡಕೆ ನೂಱಯ್ಯತ್ತು (ಎಇ. XIX, ೩೯–೫೨; 1144). [< ಅಂತರ + ?]

**ಅಂತರವಲ್ಲಿ** (ನಾ). ನೆಲಕ್ಕೆ ಬೇರು ಬಿಡದೆ ಅಂತರಾಳದಲ್ಲಿ ಬೆಳೆಯುವ ಒಂದು ಬಳ್ಳಿ. [ಅಂತರ + ವಲ್ಲಿ₂]

**ಅಂತರಶೈವ** (ನಾ). ಶೈವರಲ್ಲಿ ಒಂದು ಭೇದ: ಆದಿಶೈವ ಮಹಾಶೈವ ಅನುಶೈವ ಅಂತರ (ಅವಾಂತರ) ಶೈವ ಪ್ರವರಶೈವ ಅಂತ್ಯಶೈವ ಎಂಬ ಈ ಆಱು ಶೈವದ ನೀತಿಯಲ್ಲ (ಸಿದ್ಧೇವ. ೯). [ಅಂತರ + ಶೈವ]

**ಅಂತರಶೌಚ** (ನಾ). ಒಳಗಿನ ಶುಚಿತ್ವ; ಅಂತರಂಗಶುದ್ಧಿ; ಮನೋನೈರ್ಮಲ್ಯ: ಅಸೂಯೆ ಮೊದಲಾದ ಮಲಗಳಿಲ್ಲದಂತೆ ಮಾಡಿಕೊಳ್ಳುವುದರ ಪೆಸರು ಅಂತರಶೌಚವೆನಿಸುವುದು (ಮುಮುಕ್ಷು. ೨). [ಅಂತರ + ಶೌಚ]

**ಅಂತರಸ್ಥ** (ಗು). ಒಳಗಿರುವ: ಜಿನಚಂದ್ರಕುಮಾರಂ ಕ್ಷೀರನೀರಪೂರ ಪ್ಲವಾಂತರಸ್ಥಂ ಪೋಲ್ತಂ ಕನಕರುಚಿಯಿಂದಮಾ ಪಳಿಕಿನ ಕೊಡನೊಳಗಿರ್ದ ನಂದದೀವಿಗೆಯಿರವಂ (ಶಾಂತಿಪು. ೧೦–೯೨). [ಸಂ.]

**ಅಂತರಾಂತರ** (ನಾ). ೧. ನಡುನಡುವೆ: ಆ ಜಂಬೂದ್ವೀಪದ ನಟ್ಟನಡುವೆ . . . ಅಂತರಾಂತರ ನಿರಂತರ ಕಾಂತ ಸೋಮ ಯಮ ವರುಣ ಕುಬೇರ ಪ್ರಮುಖ ಲೋಕಪಾಲಾಭಿಯೋಗ್ಯ ದಿಗ್ಗಜೇಂದ್ರದೇವ ವಿಹಾರ ಪ್ರಾಸಾದಾಭಿರಾಮಮುಮಂ (ಆದಿಪು. ೧–೪೯ ವ); ಏಂ ಸಲುಗೆಯೊ ಮುರಾರಿ ಯೆಡೆಯೊಳ್ ದ್ವಾರಪಾಲಕರ್ ತಡೆಯರೂರ್ವರುಮಂತರಾಂತರದೊಳು (ಜೈಮಿಭಾ. ೬–೪೨). ೨. ಅಂತರಿಕವಾದ ಸಾಮರ್ಥ್ಯ: ಆನೆಯ್ಯೆತಂದು ಅವಗಡಿಸಿ ಮಾಡುವ ಪರಿಯನೆಲ್ಲವನಱಿದು ಮುಳಿಸಿಂದುಪಾಯದ ತವಕದಿಂ ತನ್ನಂತರಾಂತರವಂ ವಿಚಾರಿಸದೆ (ಬಸವು. ೧೮–೪೩, ೪೪). [ಅಂತರ + ಅಂತರ]

**ಅಂತರಾಟ** (ನಾ). ೧. ಅಂತರಾಳ; ಗಗನ; ಎತ್ತರದ ಪ್ರದೇಶ: ಕೆಂಪನೆ ಹಣ್ಣಿಗು ಸಂಪಗೆ ಹೂವಿಗು ಅಂತರಾಟದ ದೋರಹುಣಿಸೆಯ ಹಣ್ಣಿಗು ಎಂಥೋರು ಬಾಯಿ ಬಿಡುವರು (ಹೆಮುಪ. ೨೨–೮). ೨. ಯಾವ ಆಸರೆಯೂ ಇಲ್ಲದೆ ನೇತಾಡುತ್ತಿರುವ ಸ್ಥಿತಿ: ಎಂಥೆಂಥವರಿಗೋ ಅಂತರಾಟ ಕಾಲು ಮುರಿದವರಿಗೆ ಕೈಲಾಸವಂತೆ (ಗಾದೆ). [ಸಂ. ಅಂತರಾಲ]

**ಅಂತರಾತ್ಮ** (ನಾ). ೧. ಜೀವಾತ್ಮ. ೨. ಹೃದಯ ಮಧ್ಯವರ್ತಿಯಾದ ಬ್ರಹ್ಮವಸ್ತು; ಪರಮಾತ್ಮ: ಜೀವಾತ್ಮ – ಅಂತರಾತ್ಮನ ಸುದ್ದಿಯ ಬೆಸಗೊಂಬರೆ ಹೇಳಿಹೆ, ಕೇಳಿ ಭೋ (ಬಸವು. ೯೨೬); ಯಾರೇ ಆಗಲಿ ಅಂತರಾತ್ಮ ಮೆಚ್ಚುವಂತೆ ಕೆಲಸ ಮಾಡಬೇಕು (ರೂಢಿ). [ಸಂ. ಅಂತರಾತ್ಮನ್ (ಅಂತರ್ + ಆತ್ಮನ್)]

**ಅಂತರಾಯ** (ನಾ). ೧. ಅಡ್ಡಿ; ವಿಘ್ನ: ಅಧ್ಯಯನಾಂತರಾಯಮಂ ಮಾಡಲೆಂದವರೋದುವಾವಾಸದೊಳ್ ಸಂಕ್ಲೇಶಮಾಗೆ ಸಾರಮೇಯಪೂತಿ ಕಳೇವರಮನಿಕ್ಕಿದೊಡೆ (ಆದಿಪು. ೩–೩೮ ವ). ೨. [ಜೈನ] ಮೋಕ್ಷವನ್ನು ಬಯಸಿ ಮುಂದುವರಿಯುವವರಿಗೆ ನಡುವೆ ಉಂಟಾಗುವ ತೊಡಕು: ಅಂತರಾಯಮುಂ ದಾನಲೋಭ ಭೋಗೋಪಭೋಗ ವೀರ್ಯಾಂತರಾಯ ಪ್ರಕಾರದಿಂ ಪಂಚವಿಧಮಕ್ಕುಂ (ಶಾಂತಿಪು. ೧೨–೧೧ ವ); ಕರುಣಂ ಕೈಮಿಗೆ ಕಂಡಾದರದಿಂ ಮನ್ಯುಮಿಕ್ಕು ನಯನ ಜಲಂಗಳಂ ಸುರಿದಿನ್ನೆಗಮಲ್ಲಿರ್ದಂತರಾಯದಿಂ ಬಂದಿರೀಗಳ್ (ಸುಕುಮಾ. ೫–೩). 'ಅಂತರಾಯ ಪಂಚಕ' ಪರಾ. **ಅಂತರಾಯಮಾಡು** = ಅಡ್ಡಿಪಡಿಸು: ನ್ಯಾಯಘೋರಣೆಗೆ ಅಂತರಾಯ ಮಾಡುವುದು ಯಾರಿಗೂ ಧರ್ಮವಲ್ಲ (ಕೆಲಶಿ. ೨೪೪). [ಸಂ.]

**ಅಂತರಾಯಪಂಚಕ** (ನಾ). [ಜೈನ] ದಾನಾಂತರಾಯ, ಲಾಭಾಂತರಾಯ, ಭೋಗಾಂತರಾಯ, ಉಪಭೋಗಾಂತರಾಯ ಮತ್ತು ವೀರ್ಯಾಂತರಾಯ ಎಂಬ ಐದು ಬಗೆಯ ವಿಘ್ನಗಳಲ್ಲಿ ಒಂದು: ದಾನ ಲಾಭ ಭೋಗೋಪಭೋಗ ವೀರ್ಯಾಂತರಾಯ ಪಂಚಕಮುಮಂ ನಿರ್ಮೂಳಮಪ್ಪಂತೊರ್ಮೊದಲೆ ಕಿಡಿಸಿ (ಆದಿಪು. ೧೦–೧೪ ವ). [ಅಂತರಾಯ + ಪಂಚಕ]

**ಅಂತರಾಲ**, ಅಂತರಾಳ (ನಾ). ೧. ನಡುವಣ ಪ್ರದೇಶ ಅಥವಾ ಕಾಲ. ೨. ನಡುವಣ ವಸ್ತು. ೩. ಒಳಭಾಗ; ಮಧ್ಯಭಾಗ. ೪. ಈಶಾನ್ಯ, ನೈಋತ್ಯ ಮುಂತಾದ ವಿದಿಕ್ಕುಗಳಲ್ಲಿ ಒಂದು. **ಅಂತರಾಳ**: ೧. ಹೃದಯಕಮಳಮಧ್ಯದ ಅಂತರಾಳದ ಏಕಪೀಠದ ಸಿಂಹಾಸನದ ತೆಱಹ ಕೊಡು ಕೂಡಲಸಂಗಮದೇವಾ (ಬಸವ. ೮೪೪); ಅಂತರಾಳದೊಳಿರ್ದ ವಿಭಕ್ತಿಯೆಲ್ಲಂ ಪೋಕುಂ (ಶಮದ. ೧೬೨ ವೃತ್ತಿ). ೩. ಅವನ ಈ ನುಡಿಗಳ ಪ್ರತಿಧ್ವನಿಯು ಅವಳ ಭಾವಾತುರವಾದ ಹೃದಯದ ಅಂತರಾಳದಲ್ಲಿ ಏಳುತ್ತಿತ್ತು (ಪರಿಣೀ. ೩೭). [ಸಂ.]

**ಅಂತರಾಳ** 'ಅಂತರಾಲ' ನೋ.

**ಅಂತರಾಳಿಕೆ** (ನಾ). ಒಳಆಡಳಿತದ ಪ್ರದೇಶ (?): ಹೆಗ್ಗಡೆ ಸಿರಿಯಣ್ಣಂ ತನ್ನಂತರಾಳಿಕೆಯ ಮೂಲೆವರ್ತ್ತ ಮುಖ್ಯವಾಗಿ ಹೆಜ್ಜುಂಕದಧಿಕಾರಿ ಚಾವುಂಡರಾಯನಂ (ಮೈಅರಿ. ೧೯೨೯, ೬೨–೧೦; 1319). [ಅಂತರ + ಆಳಿಕೆ]

**ಅಂತರಿಕ್ಷ** (ನಾ). ೧. ಆಕಾಶ: ಸಮಸ್ತ ಸುರಗಣಂ ನೆರೆದು ಬಂದಂತರ್ಹಿತ ರೂಪದಿಂದಂತರಿಕ್ಷದೊಳ್ (ಜಗವಿ. ೨–೯೫ ವ). ೨. ಭೂಮಿಗೂ ಆಕಾಶಕ್ಕೂ ನಡುವಣ ಪ್ರದೇಶ; ಅಂತರಾಳ. ೩. ನಿಲುಕದಷ್ಟು ಎತ್ತರ: ಅವನು ಅಧಿಕಾರಕ್ಕೆ ಬಂದ ಈಚೆಗೆ ಅಂತರಿಕ್ಷದಲ್ಲಿದ್ದಾನೆ (ರೂಢಿ). [ಸಂ.]

**ಅಂತರಿಕ್ಷನಿಮಿತ್ತ** (ನಾ). ಆಕಾಶದಲ್ಲಿ ಗ್ರಹ ನಕ್ಷತ್ರ ಮೊದಲಾದವುಗಳ ಸ್ಥಿತಿ ಚಲನಾದಿಗಳ ಆಧಾರದಿಂದ ತಿಳಿದುಕೊಳ್ಳುವ ಶಕುನ: ಚಂದ್ರಾದಿತ್ಯಗ್ರಹನಕ್ಷತ್ರಂಗಳಂ ನೋಡಿ . . . ಪೇಳ್ವುದಂತರಿಕ್ಷನಿಮಿತ್ತಮೆಂಬುದು (ಶ್ರಾವಕಾ. ೯೩–೨೦). [ಅಂತರಿಕ್ಷ + ನಿಮಿತ್ತ]

**ಅಂತರಿತ** (ಗು). ೧. ಬೇರ್ಪಡಿಸಲ್ಪಟ್ಟ; ಸ್ಥಳಾವಕಾಶ ಪಡೆದ: ಲಕ್ಷಯೋಜನಾಂತರದೊಳೊಂದೊಂದೋರೊಂದು ರಜ್ಜುಪ್ರಮಾಣಾಂತರಿತಂಗಳಕ್ಕುಂ (ಶಾಂತಿಪು. ೭–೮೪ ವ). ೨. ದೂರಗೊಳಿಸಲ್ಪಟ್ಟ. ೩. ಮರೆಯಾದ; ಒಳಗೆ ಹುದುಗಿದ. ೪. ತಡೆಹೊಂದಿದ. [ಸಂ.]

**ಅಂತರಿತೆ** (ನಾ). ದೂರಮಾಡಲ್ಪಟ್ಟವಳು; ಅಗಲಿಕೆ ಹೊಂದಿದವಳು: ಆತ್ಮವಲ್ಲಭಾಂತರಿತೆಯನೆನ್ನನಣ್ಣ ಬೆಸಗೊಳ್ವುದೆ ಪೇೞ್ವೆನೆ ತತ್ಪ್ರಪಂಚಮಂ (ಕಾದಂಪೂ. ೭೦೪). [ಸಂ. ಅಂತರಿತಾ]

**ಅಂತರಿಸು** (ಕ್ರಿ). ೧. ನಿಂತುಹೋಗು: ಅನ್ತಾ ಧರ್ಮಂ ಬಹುಕಾಲಾಂತದೊಳನ್ತರಿಸಲದನೆ ಬಲ್ಲಾಳಮಹೀಕಾಂತಾಮಾತ್ಯಂ ಸ್ಥಿರಮಪ್ಪಂತು ಪುನರ್ದ್ವರ್ತ್ತಮಾಗಿ ವಿನಯದಿನಿತ್ತಂ (ಮೈಆರಿ. ೧೯೩೫, ೪೯–೫೫ ; 950) ; ತನ್ನ ತಪ ಹರಿಪದ ಸಮಾರಾಧನೆಗಳೆಂತರಿಸಿದವು (ನಿಭಾಗ. ೫–೮–೩೧). ೨. ಮರೆಯಾಗು ; ಕಾಣಿಸದೆ ಹೋಗು: ಕಿಱಿದು ಪೊೞ್ತು ಶೋಕಾನುಬಂಧದೊಳ್ ಕೋಪಾನುಬಂಧಮುಂ ಸಮರಾನುಬಂಧಮುಮಂತರಿಸಿರ್ದು (ಗದಾಯು. ೪–೧೩ ವ) ; ಮಡಿದ ಕರಿಗಳ ಮಗ್ಗುಲೊಳ್ ಕೆಲರಡಗಿ ಹರಣವನುಳುಹಿಕೊಂಡರು . . . ಕಡಿದು ಬಿದ್ದಿಹ ಮುಂಡಗಳ ಯೆಡೆಯೆಡೆಯೊಳಂತರಿಸಿದುದು ಕೆಲಬರು (ಕೋಗಯ. ೨೫–೬೮). ೩. ಒಳಕ್ಕೆ ಬರು ; ಒಳಹೊಗು: ಎಲ್ಲರುಮುವಂ ಮೆಟ್ಟಬರೆ ಕೆಲರ್ ವಿವೇಕಿಗಳಪ್ರಾಸುಕಮೆಂದು ಮೆಟ್ಟ ಬರಲೊಲ್ಲದೆ ಪ್ರಾಸುಕವಪ್ಪ ಮಾರ್ಗದೊಳವರಂತರಿಸೆ ನೀಮಿವರಂತೇಕೆ ಬಂದುದಿಲ್ಲೆನೆ (ಚಾವುಂಪು. ೬೩). ೪. ಭೇದಿಸು; ಛಿದ್ರಿಸು: ತಡೆಯದೆ ಗಜಮಸ್ತಕವೆಚ್ಚು ಹಾವಿನ ಹೆಡೆಯನಂತರಿಸಿ ಸೀಳ್ದಿಕ್ಕಿ ಬಿಡಯವಿಲ್ಲದೆ ತಂದದ್ವಿತಯರತ್ನಂಗಳ ತಡೆಯದೆಲ್ಲವ ಕೊಟ್ಟರವಗೆ (ಮೋಹತ. ೧೯–೫೮). ೫. ಬಿಡು ; ತ್ಯಜಿಸು: ಆಯುಧವಿಕ್ಕಿದವಂಗೆ ವೀರದ ಮಾತೇಕೆ ? ಲಿಂಗವಂತರಿಸಿದವಂಗೆ ಒಳುನುಡಿಯೇಕೆ ? (ಬಸವ. ೬೩೨) ; ನಿಯತಂ ಬೇಸಗೆಯೊಳ್ ಬಯ್ಗೆಯುಮಾ ಪಗಲುಮೊಂದು ದೆವಸಮಂತರಿಸದೆ ಮಾಗಿಯೊಳಬ್ಬ ಕಾಲದೊಳ್ ಭೂಮಿಯೊಳಂ ಪದನಱಿತು ನೀರನೆತ್ತುಗೆ ಬಲ್ಲರ್ (ಲೋಕೋಪ. ೬–೮) ; ನಿರುತವಾದೆಮ್ಮ ವ್ರತವನಂತರಿಸದೊಬ್ಬಳ ಹಾಲನಗಜಾವರನಿವಾಸಕ್ಕೊಯ್ದು ಶಂಭುವಿಗುಣಬಡಿಸು ಕಂಡ (ಬಸಪು. ೧೪–೩) ; ಅಕಟಾ ಸತ್ತಡಿವನೆಂದುದಿಸುವನು ಬಳಿಕೆಮ್ಮ ರಘುಪತಿಯಾ ಒತ್ತಬರದಾಹವಕೆ ತನುವನು ತೆತ್ತು ನಿಲುವವರಾರು ನೆಱೆ ದುರ್ವ್ಯರ್ತ್ತತನವಿದು ನಮ್ಮದೆಂದಂತರಿಸಿದನು ಹನುಮ (ತೊರರಾ. ೫–೨–೪೯). ೬. ತಡಮಾಡು ; ವಿಳಂಬ ಮಾಡು ; ತಡೆದಿರು: ಇಂತೊರೆದು ಮೃದುಶಿರೀಷಸುಮಾಂತದವೋಲ್ ಸೂಕ್ಷ್ಮಮೆನಿಪ ತುಪ್ಪುೞ ತಿಯಿಂ ದಂತುರಮಾದೆನ್ನಂಗಮನಂತರಿಸದೆ ಕೆರದಿನೆೞವಿದಂ ಮನದಱಲಿಂ (ಕಾದಂಉ. ೭೩೦) ; ಕೆಲದ ನೆಲದರಸುಮಕ್ಕಳ ನಲಂಘ್ಯಬಲರಂ ತಗುಳ್ದು ಕಳೆದೊಂದೆಡೆಯೊಳ್ ನೆಲೆವೀಡು ಮಾಡಿ ನಿಮ್ಮಂ ಬಲಭದ್ರಂ ತರಿಸದಿನಿಸನಂತರಿಸುವನೇ (ಪಂರಾಮಾ. ೬–೧೬೩) ; ತೊರೆದ ಕುಚಂಗಳಿಂದೆ ಕೊಣಸಂ ನಸೆಯಿಂ ಮೃಗಮುಂ ಕುರಂಗಿ ಸಾರ್ತರಲೆಡೆಗೊಂಡು ಭಲ್ಲದಿನೆರೞ್ಕಡಿಯಾಗಿ ಕಿರಾತನೆಚ್ಚೊಡಂತರಿಸದೆ ಪುಲ್ಲೆ ಸಾರ್ಚೆ ಮಗನಂ ಮೊಲೆಯಂ ನೆರೆದೇಣನಂ ಬೞಿಕ್ಕೆರಡುಡಿಯಾಯ್ತು ಕೇವಲಮೆ ದೇಹಿಗೆ ಸಂಸೃತಿಮೋಹಬಂಧನಂ (ಜಗವಿ. ೧೬–೨೨) ; ಇಂದು ತನಕ ಶ್ರೀಕಾಂತೆಗೆ ತನುಜೋದಯವು ಅಂತರಿಸಿದುದಿನ್ನು ಜನಿಯಿಸುವನು ನೃಪಕಾಂತ ಕುಮಾರ ಚಂದ್ರಮನು (ಚಂಪ್ರಸಾಂ. ೪–೧೮). ‘ಅಂತರ ಮಾಡು’ ಪರಾ. ೭. ನಷ್ಟವಾಗು ; ಇಲ್ಲದಂತಾಗು ; ತೀರಿಹೋಗು: ಚಿತ್ತವಿಸು ಭೂಪಾಲ ಪಾಂಡವರತ್ತ ವನವಾಸಕ್ಕೆ ನಡೆಯಲ್ಕಿತ್ತ ಬಂದೆವು ಮುನ್ನಿನೋಲಗವಂತರಿಸಿತಾಗಿ (ಕುವ್ಯಾವಿ. ೧–೧೮) ; ದಾರಿಯುಲಿ ತಸ್ಕರರು ಸುಲಿದಾ ನಾರಿಯರನೆಳದೊಯ್ಯಲರ್ಜುನ ವೀರತನವಂತರಿಸಿ ಚಿಂತಿಸಿವ[ವೊ]ಬ್ಬನೇ ಬರುತ (ನಿಭಾಗ. ೧೧–೩೬–೮೮) ; ತೇಜನಿದೀಗರ್ಜುನನು ಪಾಯದಿ ಹರಣ ತನಗಂತರಿಸುವನ್ನೆಗಮುಱಿವಿನಿಂ ಸಲಹುವೆನು (ಕೋಗಯ. ೨೦–೩೨) ; ಧರೆಯೊಳೀ ಕೃತಿಯ ದೋರ್ಬಲಿಯೆಂಬ ಕವಿ ತಾನು ವಿರಚಿಸಿ ತುದಿಯೊಳಂತರಿಸೆ ತರಳನಹುದು ನಾನು ನಾಯಕಾತಿಶಯವೆತ್ತಿರೆ ಪೇಳ್ದನಿದ ಪೂರ್ತಿಯಾಗಿ (ನಾಗಕು. ೩೨–೧೯೮) ; ಇರುತಿರೆ ದಾಸಿ ಅಂತರಿಸಿ ಪೋದಳು ಬಾಲ ಪರಪುಟ್ಟನಾದುದ ಕಂಡು (ಚಂದ್ರಹಾ. ೧–೨೭). ೮. ನಡುವೆ ಜಾಗವನ್ನು ಬಿಡು ; ಅವಕಾಶ ಮಾಡಿಕೊಡು: ಆತಮಮುಮಂ ಕಿಡಿಸಲ್ ಸಂಜಾತನಯಂ ಬಗೆದು ತದ್ಗುಹಾಭಿತ್ತಿಗಳೊಳ್ ಎರಡಱೊಳಂ ಚಂದ್ರಾದಿತ್ಯರನಾಗಳ್ ಬರೆದು ಕಾಕಿಣೀರತ್ನದೊಳಂ ಸ್ಫುರಿತಮಣಿರತ್ನದೊಳಮಂತರಿಸುತ್ತುಂ ಯೋಜನಕ್ಕೆ ಬರೆದೊಂದೊಂದಂ ಬಿಸಿಲಂ ಬೆಳ್ದಿಂಗಳುಮಂ ಪಸರಿಸೆ ಕೞ್ತಲೆ ತೆರಳ್ದು ತೂಳ್ದೊಡೆ (ಆದಿಪು. ೧೩–೪೮, ೪೯, ೫೦) ; ನೆರೆದು ಬರುತಿಹವರ್ಗಳೆಲ್ಲಂತರಿಸಿ ದಾರಿಯನೀಯೆ ಧೀರರು ವುರವಣಿಸಿ ವೀರಾವತಾರರು ಮೂವರೈತರಲು (ಬಸಪು. ೬೧–೨೪). ೯. ಅವಕಾಶ ಮಾಡಿಕೊ: ಅನುನಯವನಂಗೀಕರಿಸಿ ನೃಪಜನ ಸರಾಗದಿನಂತರಿಸಿ ಕುಳ್ಳಿರ್ದುದಲ್ಲಲ್ಲಿ (ತೊರರಾ. ೧–೧೫–೩೧). ೧೦. ಮರೆಮಾಡು: ಇಂತಿರುತಿರಲ್ಕೆ ಕೌಂಡಿನ್ಯನೆಂಬೊರ್ವ ಮುನಿಪಂ ತನ್ನ ಮನೆಗೆ ಬರಲಾತನಂ ಸತ್ಕರಿಸಿ ಚಿಂತೆವೆತ್ತಿರಲವನಿದೇನೆಂದು ಬೆಸಗೊಂಡೊಡವಳ ಪ್ರತಿಕೂಲತೆಯನು ಅಂತರಿಸದೆಲ್ಲಮುಂ ಪೇಳ್ದೊಡೆ (ಜೈಮಿಭಾ. ೧೦–೨೫). ೧೧. ದೂರ ಸರಿ: ಬರಲು ಕಂಡಡೆ ವಂದಿಸುತಲಂತರಿಸಿ ಮಿಗೆ ಹತ್ತಿರವೆನಿಸದತಿತರದ ದೂರವ ಸಾರದೀ ಪರಿ . . . ಬೆಸಸಿದನರವರಿಸದಾ ಕ್ಷಣಕೆ ಮಾಡುವನವನೆ ಸೇವಕನು (ಕುವ್ಯಾಉ. ೩–೧೦೬). ೧೨. ಆಶ್ರಯಿಸು: ಸಂತವಿಸಿ ದೇವಿಯರ ಬಳಿಕಾಕಾಂತೆ ಕಾಪಿನ ನಾರಿಯರು ಸಹಿತಂತರಿಸಿದಳು ನಿದ್ರೆಯನು (ತೊರರಾ. ೫–೩–೬೩). [ಅಂತರ + –ಇಸು]

**ಅಂತರೀಕ್ಷಣೆ** (ನಾ). ಒಳಹೊಕ್ಕು ನೋಡುವುದು ; ಒಳನೋಟ: ವಸ್ತುಸಾಕ್ಷಾತ್ಕಾರವಂತರೀಕ್ಷಣೆಯಿಂದ ಶಾಸ್ತ್ರತನದಿಂದಲ್ಲ (ಮಂಕುಕ.೬೫). [ಸಂ. ಅಂತರೀಕ್ಷಣ (ಅಂತರ್ + ಈಕ್ಷಣ)]

**ಅಂತರೀಪ** (ನಾ). ದ್ವೀಪ; ನೀರು ಸುತ್ತುವರಿದ ನಡುಗಡ್ಡೆ: ಕರಟವ್ಯೂಹಾಂತರೀಪಂ ತುರಗಬಲತರಂಗಂ . . . ಸೈನ್ಯಾರ್ಣವಂ (ಜಗವಿ. ೧೬–೬೯). [ಸಂ.]

**ಅಂತರೀಯ** (ನಾ). ೧. ಉಡಿಗೆ. ೨. ಒಳ ಉಡಿಗೆ; ಉಳ್ಳುಡೆ. ೩. ನಡುವಿನ ಕೆಳಕ್ಕೆ ಉಡುವ ವಸ್ತ್ರ: ನಾಭಿವಿಲಂಬಮಾನಲಂಬಸ್ತನವಿಸ್ರಸ್ತಾಂತರೀಯೋತ್ತರೀಯ ವೃದ್ಧಧಾತ್ರೀ ನರ್ತನ ನಿರೀಕ್ಷಣ ಜನತಾಜನಿತ ಹಾಸನಿವಾಸಮುಂ (ಆದಿಪು. ೮–೩೫ ವ) ; ಗರಿಗಾತರಂಗತರಳದುಕೂಲ ವಸನಾಂತರೀಯೋತ್ತರೀಯಂ ಅಭಿನವ ಸುಜಾತ ಪಾರಿಜಾತ ಸುಮನಶ್ಶೇಖರಂ (ಶಾಂತಿಪು. ೭–೧೩ ವ). [ಸಂ.]

**ಅಂತರ್ಗಡು** (ಗು). ೧. ಒಳಗೆ ಹುಳುಗಳುಳ್ಳ ; ಹುಳು ತುಂಬಿದ. ೨. ಕೆಲಸಕ್ಕೆ ಬಾರದ ; ನಿರರ್ಥಕ: “ಅಂತರ್ಗಡುಯೆಂಬುದು ಅಪ್ರಯೋಜನಂ” (ಹಲಾಯು. ೧೨೭–೪೯).
[ಸಂ. (ಅಂತರ್ + ಗಡ್ಡು$_4$)]

**ಅಂತರ್ಗತ** (ಗು). ೧. ಒಳಕ್ಕೆ ಹೋದ ; ಒಳಹೊಕ್ಕ. ೨. ಒಳಗೆ ನೆಲಸಿದ ; ಒಳಗಿರುವ. ೩. ಬಚ್ಚಿಟ್ಟ; ಮುಚ್ಚಿಟ್ಟ; ಒಳಗೆ ಅಡಗಿದ. ೪. ಮರೆಯಲ್ಪಟ್ಟ ; ಜ್ಞಾಪಕ ತಪ್ಪಿದ. (ನಾ). ೫. ಮನಸ್ಸಿನ ಒಳಗಡೆ: ಇವಳ್ ಪರಪುರುಷಾಪೇಕ್ಷಣೆಯಕ್ಕುಮೆನುತುಮಂತರ್ಗತದೊಳ್ . . . ಎಯ್ದೆವಂದಾಗಳ್ (ಸುಕುಮಾ. ೭–೨೦, ೨೧) ; ಸಂಸ್ಕಾರಶತೇನಾಪಿ ನ ಗೂಧಃ ಕುಂಕುಮಾಯತೇ . . . ಎಂಬಿದಂ ತನ್ನಂತರ್ಗತದೊಳೆ ಬಗೆದು (ಸುಕುಮಾ. ೨–೭೧). [ಸಂ. (ಅಂತರ್ + ಗತ)]

**ಅಂತರ್ಗತಧ್ಯಾನಿ** (ನಾ). ಮನಸ್ಸಿನಲ್ಲಿಯೇ ಧ್ಯಾನಮಾಡುತ್ತಿರುವವನು: ವಿಗತೇಂದ್ರಿಯಾದಿ ಮನೋವಿಷಯನಭವನನವರತಾಂತರ್ಗತಧ್ಯಾನಿ ಉಗ್ರಲೋಚನನಚಳಭಕ್ತಗಣಾಗ್ರಗಣ್ಯನು (ಬಸಪು. ೫೩–೧, ೨).
[ಸಂ. ಅಂತರ್ಗತಧ್ಯಾನಿನ್ ( ಅಂತರ್ಗತ + ಧ್ಯಾನ + –)]

**ಅಂತರ್ಗತಭೇದ** (ನಾ). ೧. ಒಳಗಿನ ವ್ಯತ್ಯಾಸ; ಒಳಭೇದ. ೨. ಒಳಗೆ ಕಾಣಬರುವ ವಿಭಾಗ: ಮುಂತಣ ಲಕ್ಷಣಲಕ್ಷ್ಯಯುಗಾಂತರ್ಗತಭೇದಮುಕ್ಕುಮಾ ವ್ಯತಿರೇಕಂ (ಕವಿರಾ. ೩–೩೪). [ಅಂತರ್ಗತ + ಭೇದ]

**ಅಂತರ್ಗತಸ್ವನ** (ನಾ). ಒಳಗೇ ಹುದುಗಿದ ಧ್ವನಿ: "ಮಿನುಕು–ಅಂತರ್ಗತಸ್ವನೇ" (ಶಮುಧಾ.). [ಅಂತರ್ಗತ + ಸ್ವನ]

**ಅಂತರ್ಗೃಹ** (ನಾ). ಮನೆಯ ಒಳಭಾಗ; ಒಳಗಿನ ಕೋಣೆ: ದಂಡನಾಥನನ್ನು ಒಡನೆಯೇ ನನ್ನ ಅಂತರ್ಗೃಹಕ್ಕೆ ಬರಹೇಳಿ ಕಳುಹು (ಸುಗುಗಂ. ೪೫–೧೭). [ಸಂ. (ಅಂತರ್ + ಗೃಹ)]

**ಅಂತರ್ಜಠರ** (ನಾ). ಹೊಟ್ಟೆ. [ಸಂ. (ಅಂತರ್ + ಜಠರ)]

**ಅಂತರ್ಜಲೀಯ** (ಗು). ೧. ನೀರಿನ ಒಳಗಡೆಯ. ೨. ನೀರಿನ ಒಳಗಡೆ ಜರುಗುವ: ಅಂತರ್ಜಲೀಯ ಛಾಯಾಗ್ರಹಣವೂ ಮತ್ತೊಂದು ವಿಚಿತ್ರವೇ ಸರಿ (ವಿಜ್ಞಾನಿ. ೧೫). [ಸಂ. (ಅಂತರ್ + ಜಲ + –)]

**ಅಂತರ್ಜಾತೀಯ** (ಗು). ಬೇರೆ ಬೇರೆ ಜಾತಿಗಳ ನಡುವಣ: ನಮ್ಮ ದೇಶದಲ್ಲಿ ಇತ್ತೀಚೆಗೆ ಅಂತರ್ಜಾತೀಯ ವಿವಾಹಗಳು ಹೆಚ್ಚಾಗಿ ನಡೆಯುತ್ತಿವೆ (ರೂಢಿ). [ಸಂ. (ಅಂತರ್ + ಜಾತಿ + –)]

**ಅಂತರ್ಜ್ಯೋತಿ** (ನಾ). ಒಳಗಿರುವ ಬೆಳಕು; ಒಳದೀಪ: ಪಳುಕುಗೊಡದೊಳಗೆ ಪೊಜಗುಜ್ವಳಿಪಂತರ್ಜ್ಯೋತಿಯಂತಿರೊಳಗಂ ಪೊಜಗಂ ಬೆಳಪ ಮನೋಮಧ್ಯಸಮುಜ್ವಳಲಿಂಗಮನರಸನಳ್ಕಱಿಂ ಜಾನಿಸಿದಂ (ರಾಜಶೇ. ೧೩–೫೫).
[ಸಂ. ಅಂತರ್ಜ್ಯೋತಿಸ್ (ಅಂತರ್ + ಜ್ಯೋತಿಸ್)]

**ಅಂತರ್ದಾಹ** (ನಾ). ಒಳಗಿನ ಬೇಗೆ, —ಸಂತಾಪ.
[ಸಂ. (ಅಂತರ್ + ದಾಹ)]

**ಅಂತರ್ದಾಹಕ** (ನಾ). ಒಳಗೊಳಗೇ ಬೆಂಕಿ ಹಚ್ಚುವವನು; ಅಂತರಂಗಕ್ಕೆ ಸೇರಿದಂತೆ ಇದ್ದುಕೊಂಡು ದ್ರೋಹಮಾಡುವವನು: ಕೃತಕ ಮಾಯಾಜಾಲರನು ಕಾಹುರರನಂತರ್ದಾಹಕರ ಶಠರ . . . ನೀನಾಳಿಗೊಂಬೆಯೊ (ಕುವ್ಯಾಸ. ೧–೬೦). [ಸಂ. (ಅಂತರ್ + ದಾಹಕ)]

**ಅಂತರ್ದೃಷ್ಟಿ** (ನಾ). ತನ್ನ ಒಳಗನ್ನು ತಾನೇ ಪರಿಶೀಲಿಸಿಕೊಳ್ಳುವ ದೃಷ್ಟಿ: ಪರಮಬ್ರಹ್ಮಶರೀರಪುಷ್ಟಿ ಜನತಾಂತರ್ದೃಷ್ಟಿ ಕೈವಲ್ಯಬೋಧರಮಾವಹೌಕ್ತಿಕಹಾರಯಷ್ಟಿ (ಪಂರಾಮಾ. ೧–೬).
[ಸಂ. (ಅಂತರ್ + ದೃಷ್ಟಿ)]

**ಅಂತರ್ದೇಶೀಯ** (ಗು). ೧. ಬೇರೆ ಬೇರೆ ದೇಶಗಳಿಗೆ ಪರಸ್ಪರವಾಗಿ ಸಂಬಂಧಿಸಿದ. ೨. ಒಳ ಪ್ರದೇಶದ. 'ಅಂತರ್ದೇಶೀಯ ಪತ್ರ' ಪರಾ. [ಸಂ. (ಅಂತರ್ + ದೇಶ + –)]

**ಅಂತರ್ದೇಶೀಯಪತ್ರ** (ನಾ). ಒಂದು ದೇಶದ ಎಲ್ಲೆಯೊಳಗಿನ ಸ್ಥಳಗಳಿಗೆ ಮಾತ್ರ ಕಳಿಸಬಹುದಾದ ಪತ್ರ: ಅಂತರ್ದೇಶೀಯ ಪತ್ರದ ಒಳಗಡೆ ಏನನ್ನೂ ಇರಿಸಕೂಡದು (ರೂಢಿ).
[ಅಂತರ್ದೇಶೀಯ + ಪತ್ರ]

**ಅಂತರ್ದೇಹ** (ನಾ). ಕರುಳು. [ಸಂ. (ಅಂತರ್ + ದೇಹ)]

**ಅಂತರ್ದ್ವಾರ** (ನಾ). (ಮನೆಯ ಒಳಗಿನ) ರಹಸ್ಯವಾದ ಬಾಗಿಲು; ಗುಪ್ತದ್ವಾರ. [ಸಂ. (ಅಂತರ್ + ದ್ವಾರ)]

**ಅಂತರ್ದ್ವೀಪ** (ನಾ). ದ್ವೀಪದ ಒಳಭಾಗ: ಅಪಾತ್ರದಾನಂ . . . ಅಂತರ್ದ್ವೀಪಂಗಳೊಳ್ ಕುಮಾನುಷತ್ವಮುಮಂ ಮಾಡುಗುಂ (ಆದಿಪು. ೧೧–೧೧ ವ); ಪುರಮಂತರ್ದ್ವೀಪಮೆಂಬಂತಿರೆ . . . ಕಱಿದುದು ಬಹಳಾಸಾರಮಂ ನೀರದೌಘಂ (ಚಂದ್ರಪು. ೪–೪೧).
[ಸಂ. (ಅಂತರ್ + ದ್ವೀಪ)]

**ಅಂತರ್ಧನ** (ನಾ). ಸ್ವಂತದ ಆಸ್ತಿ; ಖಾಸಗಿ ಆಸ್ತಿ (?): ವನನಿಧಿಯೊಳಿನಗೆ ಕೆಯ್ಸಾರ್ದನಿತಂ ವಸ್ತುಗಳನುಱಿಪದೋಲಗಿಸಿದೆನಿನ್ನೆನಗದುವೆ ದಿವ್ಯಮಂತರ್ಧನಕ್ಕೆ ಭವದವಧಿಬೋಧಮತಿಶಯಬೋಧಾ (ಶಾಂತಿಪು. ೧೧–೧೭೭). 'ಬಾಹ್ಯಧನ' ಪರಾ. [ಸಂ. (ಅಂತರ್ + ಧನ)]

**ಅಂತರ್ಧಾನ** (ನಾ). ಕಣ್ಮರೆಯಾಗುವುದು; ಅದೃಶ್ಯವಾಗುವುದು; ಮಾಯವಾಗುವುದು: ತಲೆಯೊಳ್ ಕಯ್ಯನಿಟ್ಟು ಶಶಿಶೇಖರಂ ನೆಟ್ಟನಂತರ್ಧಾನದೊಳ್ ಸಂದನೀಶ್ವರಂ (ಸಂಜಿರ. ೭–೧೬೪); ಆ ದಿವ್ಯಪುರುಷಂ ಅಂತಕ್ಕೆ ಎಂದೊಂದು ಫಲಮನನುಗ್ರಹಿಸಿ ಅಂತರ್ಧಾನಮಾದಂ ತೆಯುಂ ಕನಸುಗಂಡೆಟ್ಚಿತ್ತಳ್ (ಅದ್ಭುತ. ೫–೪). **ಅಂತರ್ಧಾನವಾಗು** = ಕಣ್ಮರೆಯಾಗು; ಅದೃಶ್ಯವಾಗು: ಆ ರಾಜನು ನೋಡುತ್ತಿದ್ದ ಹಾಗೆಯೇ ನಾರದಮಹರ್ಷಿ ಅಂತರ್ಧಾನವಾದನು (ರೂಢಿ). [ಸಂ.]

**ಅಂತರ್ಧಿ** (ನಾ). ೧. = ಅಂತರ್ಧಾನ. ೨. ಅಡಗಿಕೊಂಡಿರುವುದು; ಬಚ್ಚಿಟ್ಟುಕೊಂಡಿರುವುದು. ೩. ಅಡಗಿಕೊಂಡಿರುವವನು; ಗುಟ್ಟಾಗಿ ನೆಲಸಿದವನು: ಪೃಥ್ವೀಪಾಲ ಭೂಪಾಲಂ ಭವದೀಯ ದೇಶಾಸನ್ನಸ್ಥಿತಂಗಳಪ್ಪ ಪನ್ನೆರಡುಂ ಮಂಡಲಂಗಳೊಳಂತರ್ಧಿಯುಂ ಮಿತ್ರದ್ವಿತಯದೊಳ್ ಕೃತ್ರಿಮಮಿತ್ರನುಂ . . . ಆಗಿರ್ಪಂ (ಚಂದ್ರಪು. ೯–೧೧೭ ವ). [ಸಂ.]

**ಅಂತರ್ಧೂಪ** (ನಾ). ಶಿವಲಿಂಗವಿರುವ ಪಾಣಿಬಟ್ಟಲಿನ ಒಳಗೆ ಹಾಕುವ ಧೂಪ (?): ಚೆನ್ನೆಸೆದು ಮಹಿಷಾಕ್ಷಿಗುಗ್ಗುಳವನ್ನೆ ಧೂಪಿಸಿ ಸೋಮಧಾರಿಗೆ ತನ್ನ ತೂಕವನಿಕ್ಕಿಯಂತರ್ಧೂಪಮಂ ಕೊಟ್ಟು (ಬಸಪು. ೪೩–೨೦). [ಸಂ. (ಅಂತರ್ + ಧೂಪ)]

**ಅಂತರ್ನಾಟಕ** (ನಾ). ಒಂದು ನಾಟಕದೊಳಗೆ ಅದರ ಅಂಗವಾಗಿ ಬರುವ ಉಪನಾಟಕ: ಭವಭೂತಿಯ ಉತ್ತರರಾಮಚರಿತದ ಏಳನೆಯ ಅಂಕದಲ್ಲಿ ಒಂದು ಅಂತರ್ನಾಟಕ ಬರುತ್ತದೆ (ರೂಢಿ). 'ಗರ್ಭಾಂಕ' ಪರಾ. [ಸಂ. (ಅಂತರ್ + ನಾಟಕ)]

**ಅಂತರ್ನಿಯುಕ್ತ** (ನಾ). ರಾಜನ ಅಂತಃಪುರದ ಮುಖ್ಯಾಧಿಕಾರಿ (?): ಜಗತೀಶಂ ನೋಟ್ಪ ಕಣ್ಗಂ ನುಡಿವ ದನಿಗಮಿಂಬಾಗಿ ಕುಳ್ಳಿರ್ದರಂದೋಳಿಗಳಿಂ ದಂಡಾಧಿಪರ್ . . . ಸಾಮಂತರಂತರ್ನಿಯುಕ್ತರ್ (ಅನಂಪು. ೨–೨೭). 'ಅಂತಸ್ಥಿತ' ಪರಾ.
[ಸಂ. (ಅಂತರ್ + ನಿಯುಕ್ತ)]

**ಅಂತರ್ನಿಷ್ಠ** (ನಾ). ಏಕಾಗ್ರವಾದ ಧ್ಯಾನದಲ್ಲಿ ತೊಡಗಿದ ವ್ಯಕ್ತಿ: ಸುಲಭವಂತರ್ನಿಷ್ಠರಿಗೆ ನಿಷ್ಕಳ ನಿರೂಪನನಂತ ನಿಜ ನಿರ್ಮಳವೆನಿಪ ಪರಮಾತ್ಮ ಚಿನುಮಯ ರೂಪ ತಾನೆಂದ (ಕುವ್ಯಾದ್ರೋ. ೩–೬೬).
[ಸಂ. (ಅಂತರ್ + ನಿಷ್ಠ)]

**ಅಂತರ್ಬದ್ಧ** (ನಾ). ಅನ್ಯೋನ್ಯಭಾವ (?): ದಾಯಿಗರೊಳಂತರ್ಬದ್ಧವುಂಟೇ ರಾಯ ನಿನಗೆಂದ [ಪಾಠಾಂ. ಅಂತರ್ಭೇದವೇ ಭೂಪಾಲ ಕೇಳೆಂದ] (ಕುವ್ಯಾಸ. ೧–೭೭). [ಸಂ. (ಅಂತರ್ + ಬದ್ಧ)]

**ಅಂತರ್ಬಹೀರೂಪ** (ನಾ). ಒಳಗಿನ ಮತ್ತು ಹೊರಗಿನ ಆಕಾರ: ಆವುದಂತರ್ಬಹೀರೂಪದಿಂ ವಿಶದದರ್ಶನಾವಗಮ್ಯಂ ಅದೆಲ್ಲಮನುಸತ್ಯಾವಭಾಸಿ (ಆದಿಪು. ೨–೯ ವ). [ಸಂ. (ಅಂತರ್ + ಬಹಿಸ್ + ರೂಪ)]

**ಅಂತರ್ಭಾವ** (ನಾ). ೧. ಒಳಗೆ ಸೇರಿರುವುದು. ೨. ಒಳಮನಸ್ಸಿನ ಭಾವ: ಸ್ಥಾವರಕೆ ಜಂಗಮಕೆ ನೀನೇ ಜೀವಚೇಷ್ಟಕನವದಿರಂತರ್ಭಾವವನು ನೆಱೆ ಬಲಿಯಲಾಗದು ಸಂಧಿಕಾರ್ಯದಲಿ (ಕುವ್ಯಾಉ. ೭–೧೦). ೩. ಅದೃಶ್ಯತೆ; ಮರೆಯಾಗುವಿಕೆ. [ಸಂ. (ಅಂತರ್ + ಭಾವ)]

**ಅಂತರ್ಭಾವವಹ್ನಿ** (ನಾ). ಅಂತರಂಗದ ಬೇಗೆ, —ಸಂತಾಪ: ನೀವಜಱಿಯಿರೇ ಹಿಂದೀಸು ಕಾಲದಲಿ ನೋವು ಬೇಱಿಲ್ಲೆನಗೆ ನಿಳಯಕೆ

ನೀವು ಬಿಜಯಂಗೈವುದಂತರ್ಭಾವವಹ್ನಿಯನೇಕೆ ಬೆದಕುವಿರೆಂದನಾ ಭೂಪ (ಕುವ್ಯಾಸ. ೧೨–೧೧). [ಅಂತರ್ಭಾವ + ವಹ್ನಿ]

**ಅಂತರ್ಭಾವಿ** (ಗು). ಒಳಪಟ್ಟಿರುವ; ಒಳಗೆ ಸೇರಿಕೊಂಡಿರುವ: ರೂಪರಸಗಂಧಸ್ಪರ್ಶವಂತಂಗಳಪ್ಪುದಜಿಂ ಪೃಥಿವ್ಯಪ್ತೇಜೋವಾಯುಗಳುಂ ಮನಮುಂ ಪುದ್ಗಲದ್ರವ್ಯದೊಳಂತರ್ಭಾವಿಗಳ್ (ತತ್ತ್ವಪ್ರ.೨೩೨). [ಸಂ. ಅಂತರ್ಭಾವಿನ್ (ಅಂತರ್ + ಭಾವ + –)]

**ಅಂತರ್ಭಾಸಿತ** (ಗು). ಅಂತರಂಗದಲ್ಲಿ ಪ್ರಕಾಶಗೊಂಡ: ಆ ಸಮರ್ಥ ಮುನೀಂದ್ರನಂತರ್ಭಾಸಿತಾತ್ಮಧ್ಯಾನಸುಖನಿಸ್ಯಾಸದಿರಲಂಕೆದಲಿ ಬಿದ್ದುದು ಮಧುರ ಚೂತಫಲ (ಕುವ್ಯಾಸ. ೨–೪೦). [ಸಂ. (ಅಂತರ್ + ಭಾಸಿತ)]

**ಅಂತರ್ಭೂತ** (ಗು). = ಅಂತರ್ಭಾವಿ. [ಸಂ. (ಅಂತರ್ + ಭೂತ)]

**ಅಂತರ್ಭೇದ** (ನಾ). ೧. ಒಳಗಿನ ಭೇದ; ಒಳವಿಭಾಗ: ಕ್ಷೀರಗುಡಾದ್ಯಂತರ ರಸಾಂತರ ಜಾತ್ಯಂತರಮಪ್ಪಂತನಂತಮಂತರ್ಭೇದಂ (ಕವಿರಾ. ೨–೯೫). ೨. ಒಳಗಿನ ಭಿನ್ನಾಭಿಪ್ರಾಯ; ಅಂತಃಕಲಹ: ಅಂತರ್ಭೇದದೊಳಂತು ಭಿದ್ರಿಸಿದರಾ ಗಾಂಗೇಯರಂ (ಪಂಪಭಾ. ೧೨–೯೬). ೩. ನಾಟುವುದು; ಒಳಕ್ಕೆ ಚುಚ್ಚುವುದು: "ನಾಂಟು–ಅಂತರ್ಭೇದೇ" (ಶಮಧಾ). [ಸಂ. (ಅಂತರ್ + ಭೇದ)]

**ಅಂತರ್ಮಣಿ** (ನಾ). [ಗಜ] ಆನೆಯ ಕೊರಳಿನಲ್ಲಿ ಇರುವ ಒಂದು ಬಗೆಯ ಸುಳಿ (?): ಮಂಗಳವಸದನಂಗೊಂಡು ಪರಿಪೂರ್ಣಾಬ್ಜಕುಬ್ಜಶಿರೋದ್ಧರಣನಂ ವ್ಯೂಢೋರಸ್ಕನಂ ಪ್ರಭೂತಾಂತರ್ಮಣಿಯಂ ವಿಪುಲೋಚಿತಾಂಸನಂ ... ತರಿಸಿ ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇವಂ ಪೊಜಮಟ್ಟ ನೇಜ಼ಿ ಜಯಮುಂ ಜಯಪರ್ವತಯಾನನಾಗಮಂ (ಶಾಂತಿಪು. ೧೦–೧೪೨ ವ, ೧೪೪). 'ದೇವಮಣಿ' ಪರಾ. [ಸಂ. (ಅಂತರ್ + ಮಣಿ)]

**ಅಂತರ್ಮಂಡಲ** (ನಾ). ರಾಜ್ಯದ ಒಳಗಡೆ; ಒಳದೇಶ. 'ಅಂತರ್ಮಂಡಲಸಾಧನ' ಪರಾ. [ಸಂ. (ಅಂತರ್ + ಮಂಡಲ)]

**ಅಂತರ್ಮಂಡಲಸಾಧನ** (ನಾ). ಒಳದೇಶವನ್ನು ಸ್ವಾಧೀನಪಡಿಸಿಕೊಳ್ಳುವ ಕಾರ್ಯ: ನಿನಗರಸ ಬಹಿರ್ಮಂಡಳಮನೆ ಸಮುಜಲ್ಕಿನಿತು ಬರಿಸಮುಂ ಪೋದುವು ಕೇಳಿನಿಸಂತರ್ಮಂಡಲಸಾಧನಮುಂಟೆಂದಜಿಪಿದುದುಮನಿನ್ನಜಿವುವೆವೇ (ಆದಿಪು. ೧೪–೧೫). [ಅಂತರ್ಮಂಡಲ + ಸಾಧನ]

**ಅಂತರ್ಮಥನ** (ನಾ). ಆಂತರಿಕವಾದ ವಿಮರ್ಶೆ: ನನ್ನ ಜೀವಿತದ ಗುರಿಯೇನೆಂಬುದನ್ನು ಇನ್ನಿಷ್ಟು ಸ್ಥಿರವಾಗಿಸುತ್ತೇನೆ. ಅಂತರ್ಮಥನವಿಲ್ಲದೆ ಗತಿಯಿಲ್ಲ (ಸಮಜೀ. ೧೪೫). [ಸಂ. (ಅಂತರ್ + ಮಥನ)]

**ಅಂತರ್ಮನ** (ನಾ). ೧. ದುಗುಡ; ದುಮ್ಮಾನ: ಸಂಜಯಸಹಿತ ಕೌರವಜನಪ ಬಂದನು ತತ್ಸರೋವರಕೆನಿಲಸಿದಿರಾದನು ಸುಗಂಧದ ಶೈತ್ಯಪೂರದಲಿ ತನುವಿಗಾಪ್ಯಾಯನದಿನಂತರ್ಮನಕೆ ಪಲ್ಲಟವಾಯ್ತು (ಕುವ್ಯಾಗ. ೩–೩೭). ೨. ಧ್ಯಾನಾಸಕ್ತ. [ಸಂ. ಅಂತರ್ಮನಸ್ (ಅಂತರ್ + ಮನಸ್)]

**ಅಂತರ್ಮನನ** (ನಾ). ಆಂತರಿಕವಾದ ಆಲೋಚನೆ: ಚಾರುದೃಶ್ಯಂಗಳಿಂ ಪ್ರೀತಿ ಹೃದಯವಿಕಾಸ ಕ್ರೂರದೌಷ್ಟ್ಯಂಗಳಿಂ ವೀರಾನುಕಂಪ ಭೈರವಾದ್ಭುತಗಳಿಂ ಮೌನದಂತರ್ಮನನ ದಾರಿಯುದ್ಧಾರಕಿವು (ಮಂಕುಕ. ೪೫೭). [ಸಂ. (ಅಂತರ್ + ಮನನ)]

**ಅಂತರ್ಮಂದಿರ** (ನಾ). ಮನೆಯ ಒಳಭಾಗ; ಒಳಮನೆ: ಚುನ್ನವಾಡುತ ಹೋಗಿ ನೃಪತನಯಂ ನಿಜಾಂತರ್ಮಂದಿರದೊಳಂ ತನ್ನ ಸತಿಯುಂ ತಾನುಂ ಸುರತ ಸುಖಾನುಭೋಗದಲಿ (ಬಸವು. ೪೭–೨೦). [ಸಂ. (ಅಂತರ್ + ಮಂದಿರ)]

**ಅಂತರ್ಮಲ** (ನಾ). ಅಂತರಂಗದ ಕಶ್ಮಲ: ವಿಲಸಿತ ಭವದಭ್ಯಾಗಮ ಜಲಧಾರೆಗಳೇನುಮುಜಿಯದಂತುಮದಂತರ್ಮಲಮಂ ಕರ್ಚಿದೊಡಾನೀ ನೆಲಕೆಲ್ಲಂ ಪಾವನೀಯಚರಿತನೆನಾದೆಂ (ಕವಿರಾ. ೨–೬೭). [ಸಂ. (ಅಂತರ್ + ಮಲ)]

**ಅಂತರ್ಮಲಿನ** (ಗು). ೧. ಒಳಗೆ ಕಳಂಕವುಳ್ಳ. ೨. ಮನಸ್ಸಿನಲ್ಲಿ ಕಶ್ಮಲವುಳ್ಳ; ಅಂತರಂಗ ಶುದ್ಧಿಯಿಲ್ಲದ: ೧, ೨: ಸರಿದಧಿಪತಿಯಂ ದೋಷಾಕರನಂತರ್ಮಲಿನನಾಗಿಯುಂ ಪೆರ್ಚಿಸುಗುಂ (ಕವಿರಾ. ೩–೩೫). [ಸಂ. (ಅಂತರ್ + ಮಲಿನ)]

**ಅಂತರ್ಮಿಥುನ** (ಗು). ಒಳಗೆ ದಂಪತಿಗಳು ಇರುವ: ಸುಳಿವ ಪರಿಮಳ ಪವನನಿಂ ಕಂಗೊಳಿಸಿತರ್ಜುನ ಕಾಮ್ಯಸಿದ್ಧಿಸ್ಥಳದೊಳಂತರ್ಮಿಥುನ ಕಾನನ ವರಸ ಕೇಳೆಂದ (ಕುವ್ಯಾಅ. ೪–೩೯). [ಸಂ. (ಅಂತರ್ + ಮಿಥುನ)]

**ಅಂತರ್ಮುಖ** (ಗು). ೧. ಮನಸ್ಸು ಒಳಮುಖವಾಗಿರುವ: ಬದ್ಧಪಲ್ಯಂಕಾಸನಂ ಪೂರ್ವಾಭಿಮುಖನುಮಂತರ್ಮುಖನುಮಾಗಿ ಜಯಶಾಳಿ ನಮಸ್ಸಿದ್ಧೇಭ್ಯಯೆನುತ್ತುಂ (ಮಲ್ಲಿಪು. ೧೩–೧೮೫, ೧೮೬). (ನಾ). ೨. ಒಳಮುಖವಾಗಿರುವ ಸ್ಥಿತಿ: ಶಿವನನಂತರ್ಮುಖದಿಂ ನೋಡಲೊಳಪೊಕ್ಕವೆಂಬಂತೆ ಕಣ್ ಮಾಯಮಾಗೆ (ಸಂಬಿರ. ೧೪–೯೭). [ಸಂ. (ಅಂತರ್ + ಮುಖ)]

**ಅಂತರ್ಮುಖತೆ** (ನಾ). (ಮನಸ್ಸು) ಒಳಮುಖವಾಗಿರುವುದು, —ಅಂತರಂಗದ ಕಡೆ ತಿರುಗಿರುವುದು: ಅಂತರ್ಮುಖತೆಗಭಿಮುಖಂ ಮಾಜ್ಕುಪಾಧ್ಯಾಯರೆಮ್ಮಂ (ಚಂದ್ರಪು. ೧–೪); ಸ್ವಾಮಿದಾಸರನ್ನು ಕಂಡಾಗಿನಿಂದ ಸಾನಿಯ ಜೀವನಕ್ಕೆ ಹೆಚ್ಚಿನ ಒಂದು ಅಂತರ್ಮುಖತೆ ಬಂದಿತ್ತು (ಸಮಜೀ. ೫೧೩). [ಸಂ. ಅಂತರ್ಮುಖತಾ (ಅಂತರ್ + ಮುಖ + –)]

**ಅಂತರ್ಮುಖಿ** (ನಾ). ಆತ್ಮಚಿಂತನೆಯಲ್ಲಿ ನಿರತನಾಗಿರುವ ವ್ಯಕ್ತಿ: ಪಡುವಣ ಹೊಂಗಡಲಿನಲ್ಲಿ ಮಿಾಯಲಿಳಿದಿರುವ ಮುಳುಗುನೇಸರು ಸಾಸಿರ ಕಾಂಚನ ಕಿರಣಗಳಿಂದ ಯೋಗಸಮಾಧಿಯಲ್ಲಿ ನಾನಿನ್ನು ಅಂತರ್ಮುಖಿಯಾಗುತ್ತೇನೆಂದು ಸಾರುವಂತಿತ್ತು (ಬದುಬ್ಬೆ. ೧೨೯). [ಸಂ. ಅಂತರ್ಮುಖಿನ್ (ಅಂತರ್ + ಮುಖ + –)]

**ಅಂತರ್ಮುಹೂರ್ತ** (ನಾ). [ಜೈನ] ೧. ಒಂದು ಮುಹೂರ್ತಕ್ಕಿಂತಲೂ ಕಡಮೆಯಾದ ಕಾಲ: "ಒಂದು ಮುಹೂರ್ತದೊಳಗಿಂದ ಒಂದು ಸಮಯವು ಕಡಿಮೆಯಾದರೆ, ಅದು ಭಿನ್ನಮುಹೂರ್ತವೆನಿಸುವುದು. ಅವಲಿಗಿಂತ ಕಡಿಮೆಯಾದ ಕಾಲವು ಅಂತರ್ಮುಹೂರ್ತವೆನಿಸುವುದು" (ಜೈನಪ. ೩೦೭); ಪೂರ್ವೋಕ್ತವಿಧಾನದಿನಂತರ್ಮುಹೂರ್ತದಿಂ . . . ಪದಿನಾಜು ಪ್ರಕೃತಿಗಳುಮಂ ನಿರವಶೇಷಂ ಕಿಡಿಸಿ (ಆದಿಪು. ೧೦–೧೪ ವ); ಸಮಯಂ ಕುಂದೆ ಮುಹೂರ್ತದೊಳಮೋಘಮಂತರ್ಮುಹೂರ್ತಮಕ್ಕುಂ (ಪಂರಾಪಾ. ೧–೫೧). ೨. ತುಂಬ ಕಡಮೆಯ ಪ್ರಮಾಣದ ಕಾಲ: ನಾನಾವಿಧವಿನೋದಂಗಳಿನಂತರ್ವರ್ತ್ತಿಗೆ ನವಮಾಸಂಗಳಂತರ್ಮುಹೂರ್ತಂಗಳಾಗಿ ಪೋಗೆ (ಸುಕುಮಾ. ೧೦–೨೫ ವ). [ಸಂ. (ಅಂತರ್ + ಮುಹೂರ್ತ)]

**ಅಂತರ್ಯ** (ನಾ). ೧. ಒಳಗು; ಒಳಗಡೆ: ವ್ಯಕ್ತ ನಾನಾವೇದ ವೇದಾಂತೋಕ್ತನಂತರ್ಯಾಗತ ನಿರಂತರ ಸುಯೋಗಪರ (ಬಸವು. ೮–೫). ೨. "ಒಳಮಾತು" (ಗಂಗಾಮ). ೩. ಗುಟ್ಟು; ರಹಸ್ಯವಾದ ಆಶಯ. [ಸಂ.]

**ಅಂತರ್ಯಾಮಿ** (ನಾ). ೧. ಅಂತರಂಗವನ್ನು ನಿಯಾಮಿಸತಕ್ಕವನು; ಪರಮಾತ್ಮ: ಈತನಂತರ್ಯಾಮಿ ಜೀವವ್ರಾತದಲಿ ಜನಜನಿತವಿದು (ಕುವ್ಯಾಉ. ೯–೬೯). ೨. ಆತ್ಮ. ೩. ಮೈಯೊಳಗೆ ನಡೆಯುವ ಕ್ರಿಯೆಗಳಿಗೆ ಸಾಧನವಾದ ವಾಯುಗಳಲ್ಲಿ ಒಂದು: "ಮೇಲುಕೆಳಗಂ

ನೋಡುವುಧು ದೇವದತ್ತವಕ್ಕಾಲಿಗಳ ಮುಚ್ಚಿ ತೆಗೆವುದು ಕೃಕರಮುಕ್ಕು ಕೈಕಾಲ ಗತಿಯಲ್ಲಿಹುದು ವಿಶ್ವವಕ್ಕು . . . ಆತ್ಮನೊಳು ಮುಖ್ಯವಹ ಗಾಳಿಯಂತರ್ಯಾಮಿಯಕ್ಕು" (ಮಂಗರಾ. ೧೬–೧೩).
[ಸಂ. ಅಂತರ್ಯಾಮಿನ್]

**ಅಂತರ್ಯಾಮಿಸು** (ಕ್ರಿ). ಅಂತರಂಗವನ್ನು ಹಿಡಿತದಲ್ಲಿಟ್ಟು ನಡೆಯಿಸು: ಯಿವನೆ ಕೂಟಸ್ಥ ದಿಟನಾದಕಾರಣಂ ತಾನೆ ಜಗತೆಲ್ಲವಂ ಸೃಜಿಸಿಯಂತರ್ಯಾಮಿಸಿ ಆ ಜಗದ ನಟಣೆಯನು ನಟಿಸಿ (ತುರಂಗ. ೮೯–೩೨, ೩೩). [ಅಂತರ್ಯಾಮಿ + –ಇಸು$_3$]

**ಅಂತರ್ರಾಷ್ಟ್ರೀಯ** (ಗು). ಬೇರೆ ಬೇರೆ ರಾಷ್ಟ್ರಗಳಿಗೆ ಪರಸ್ಪರವಾಗಿ ಸಂಬಂಧಿಸಿದ. [ಸಂ. ಅಂತಾರಾಷ್ಟ್ರೀಯ (ಅಂತರ್ + ರಾಷ್ಟ್ರ + –)]

**ಅಂತರ್ಲಾಗ** (ನಾ). ಒಳಮುಖವಾಗಿ ಹಾಕುವ ಲಾಗ; ಮುಂಗಣ್ಣು; ಒಂದು ಬಗೆಯ ದೊಂಬರ ವರಸೆ: ಇಲ್ಲಿಯ ಗಾಳಿ ಬಯಲಾಟದೊಳಗಿನ ಅಂತರ್ಲಾಗ ಜಂತರ್ಲಾಗಗಳಲ್ಲಿ ಕಲ್ಪನಾ ಚಮತ್ಕೃತಿಯಾಗಲಿ, ಆದರದೆ ವಿಕೃತಿಯಾಗಲಿ ಕಂಡರೂ ಅದೂ ನವೀನ ಬೋಧವೇ ಸರಿ (ಹೃದಸ. ಮು. ೩); ಸರಕಾರ ಹೊಡೆದ ಈ ಅಂತರ್ಲಾಗದ ನ್ಯಾಯಾನ್ಯಾಯಗಳನ್ನು ವಿಚಾರಿಸಲಿಕ್ಕೆ ನಾನು ಅರ್ಹನಲ್ಲ (ಹೂಬಾಣ. ೧೩೬).
[ಸಂ. ಅಂತರ್ + ಲಾಗ]

**ಅಂತರ್ಲಿಂಗಧಾರಣ** (ನಾ). [ವೀಶೈ] "ಮಹಾಲಿಂಗವನ್ನು ಚಿತ್ತದಲ್ಲಿ ಧ್ಯಾನರೂಪದಿಂದ ಧರಿಸುವುದೇ ಅಂತರ್ಲಿಂಗಧಾರಣವೆನಿಸುವುದು" (ಅಷ್ಟಾವಿ. ೨). [ಸಂ. (ಅಂತರ್ + ಲಿಂಗ + ಧಾರಣ)]

**ಅಂತರ್ಲೀನ** (ಗು). ಒಳಗೆ ಲೀನವಾಗಿರುವ, —ಸೇರಿಹೋಗಿರುವ: "ನೆಟ್ಟು—ಅಂತರ್ಲೀನೇ" (ಶಮುಧಾ). [ಸಂ. (ಅಂತರ್ + ಲೀನ)]

**ಅಂತರ್ಲೇಪ** (ನಾ). ಅಂತರಂಗಕ್ಕೆ ಅಂಟಿಕೊಂಡಿರುವುದು: ಅನುರಾಗಮುಂ ವಿರಾಗಮನುಳ್ಳ ವಿಷಯಗಳುಯೆನಿಪ ವಿಷಯಂಗಳಂ ಪಿಡಿವಲ್ಲಿ ಬಿಡುವಲ್ಲಿ ಮನದೊಳನಿಶಂ ಬಹಿರ್ಲೇಪವಂತರ್ಲೇಪವೆಂಬುಭಯ ಸಮಭಾವದಿಂದನವರತ ಪರಶಿವಾದ್ವೈತ ನಿಷ್ಠೆಯೊಳು (ಲಶಿಚಿಂ. ೫೪–೪೨).
[ಸಂ. (ಅಂತರ್ + ಲೇಪ)]

**ಅಂತರ್ವಂಶ** (ನಾ). ಅಂತಃಪುರ; ರಾಣಿವಾಸ.
[ಸಂ. (ಅಂತರ್ + ವಂಶ)]

**ಅಂತರ್ವಂಶಿಕ** (ನಾ). ರಾಣಿವಾಸದ ಮೇಲ್ವಿಚಾರಕ; ಅಂತಃಪುರದ ಅಧಿಕಾರಿ: "ಮನೆವೆಗ್ಗಡೆ ಅಂತರ್ವಂಶಿಕನೆಂಬುದು" (ಹಲಾಯು. ೭೧–೨೭೫); ಅಸ್ಥಾನಮುಂಡಪದೊಳತಿಪ್ರಚಂಡ ಮಂಡಲಿಕ ಮಹಾಸಾಮಂತ ಮಂತ್ರಿಪ್ರಧಾನ ಪುರೋಹಿತಾಂತರ್ವಂಶಿಕಾದಿ ಪರಿವಾರ ಪರಿವೃತಂ . . . ಒಡ್ಡೋಲಗಂಗೊಟ್ಟರೆ (ಆದಿಪು. ೨–೨ ವ).
[ಸಂ. (ಅಂತರ್ವಂಶ + –)]

**ಅಂತರ್ವಣ** (ಗು). ಅಡವಿಯ ನಡುವೆ ಇರುವ: ವಜ್ರವೇದಿಕೋತ್ತುಂಗತೋರಣದ್ವಾರದಂತರ್ವಣ ತುಂಗ ಕುಜಂಗಳ ನೆಬಲ್ಗಳೊಳ್ . . . ಬೀಡಂ ಬಿಡಿಸಿದಾಗಳ್ (ಆದಿಪು. ೧೨–೭೮ ವ); (ಶಾಂತಿಪು. ೨–೯೧ ವ).
[ಸಂ. (ಅಂತರ್ + ವನ)]

**ಅಂತರ್ವತ್ನಿ** (ನಾ). ಬಸುರಿಯಾದ ಹೆಂಗಸು; ಗರ್ಭಿಣಿ: ಬಣ್ಣಿಸಿದರಿಂದ್ರನ ಕಾಂತೆಯರಂತರ್ವತ್ನಿಯನಾ ನೃಪಪತ್ನಿಯಂ (ಆದಿಪು. ೭–೩೧); ತರುಣಿಯನಂತರ್ವತ್ನಿಯನರಣ್ಯದೊಳ್ ಬಿಸುಡವೇಚಿಕ್ಕೊಡೀ ಬೆಸನಂ ಕಾಪುರುಷನೆನೇಗೊಂಡೆಂ ಕಿಂಕರಭಾವದಿಂ (ಪಂರಾಮಾ. ೧೫–೭೬).
[ಸಂ. ಅಂತರ್ವತ್ನೀ]

**ಅಂತರ್ವರ್ತಿ** (ಗು). ೧. ಒಳಗೆ ಇರುವ; ಒಳಗಡೆ ನೆಲಸಿರುವ: ತನ್ನೊಡನೆಯ ಬಲಮೆಲ್ಲಮಂ ಪಡುವಣ ಸೋಪಾನಂಗಳಿಂದಂ ಬೆಂಕೆಭೋಂಕೆನಲುರದಂತು ಬೇಗಂ ಮ್ಲೇಚ್ಛ ಖಂಡಾಂತರ್ವರ್ತಿಯಾಗೆ ಮುನ್ನಂ ಕಳಿಪಿ (ಆದಿಪು. ೧೩–೩೫ ವ). (ನಾ). ೨. ಮನೆಯ ಒಳಗೆಲಸದ ಸೇವಕ: ಅಯ್ಯ ಕೇಳ್ ಬಳ್ಳೇಶ್ವರನ ಮಲ್ಲಯ್ಯ ಕೊಟ್ಟಗೆಯವನು ಚಂಡೇಶಯ್ಯ ಕೀಲಾರಕ್ಕೊಡೆಯ . . . ಅಂತರ್ವರ್ತಿ ಸಾವಂತಂ ಮಳಯರಾಜ (ಬಸಪು. ೯–೪೬). ೩. ಅಂತರ್ಮುಖಿ; ಧ್ಯಾನಾಸಕ್ತ: ಆತ್ಮಾರ್ಥಕ್ಕೆ ಮನೆಮನೆಗೆ ಹುಗುವವಂಗೇಕೀ ಸಘಾಟಿಕೆಯಗಲದಂತರ್ವರ್ತಿಯಹ ತಪಸಿಗಳಿಗರ್ಚಿಸಬೇಕು ಗುಡಿಯೊಳು ಪೊಕ್ಕು ಶಂಕರನ (ಬಸಪು. ೪೩–೪೪). [ಸಂ. ಅಂತರ್ವರ್ತಿನ್]

**ಅಂತರ್ವಾಣಿ** (ನಾ). ೧. ಶಾಸ್ತ್ರಗಳನ್ನು ಚೆನ್ನಾಗಿ ತಿಳಿದವನು; ಶಾಸ್ತ್ರಜ್ಞ: "ಶಾಸ್ತ್ರಮಂ ಬಲ್ಲವನಂ ಅಂತರ್ವಾಣಿಯೆಂಬುದು" (ಹಲಾಯು. ೬೬–೨೪೫). ೨. ಅಂತರಾತ್ಮನ ಧ್ವನಿ; ಮನಸ್ಸಾಕ್ಷಿ: ಗಾಂಧಿಯವರು ತಮ್ಮ ಅಂತರ್ವಾಣಿಗೆ ವಿರೋಧವಾಗಿ ಎಂದೂ ನಡೆಯುತ್ತಿರಲಿಲ್ಲ (ರೂಢಿ). [ಸಂ. ಅಂತರ್ವಾಣೀ (ಅಂತರ್ + ವಾಣೀ)]

**ಅಂತರ್ವಾಸ$_1$** (ನಾ). ಮನೆಯ ಒಳಭಾಗ; ಒಳಮನೆ: ಹೆದಜದತಿಸಭ್ಯನವೊಲನುನಯವೊದಗಿ ನಿಮ್ಮಂ ಸಾರ್ದಪಂ ಮಾಣದೆ ನಿಜಾಂತರ್ವಾಸಮಂ ಪುಗುವಂ ಬಳಿಕ ತಾನು (ಬಸಪು. ೫೫–೫).
[ಸಂ. (ಅಂತರ್ + ವಾಸ$_2$)]

**ಅಂತರ್ವಾಸ$_2$** (ನಾ). ಒಳಬಟ್ಟೆ; ಒಳಗಿನ ಉಡಿಗೆ. 'ಬಹಿರ್ವಾಸ' ಪರಾ. [ಸಂ. ಅಂತರ್ವಾಸಸ್ (ಅಂತರ್ + ವಾಸಸ್)]

**ಅಂತರ್ವೀಕ್ಷೆ** (ನಾ). ಒಳನೋಟ; ಅಂತರ್ಮುಖವಾದ ಚಿಂತನೆ.
[ಸಂ. ಅಂತರ್ವೀಕ್ಷಾ (ಅಂತರ್ + ವೀಕ್ಷಾ)]

**ಅಂತರ್ವೇದಿ** (ಗು). ೧. ಯಜ್ಞಶಾಲೆಯ ಒಳಭಾಗಕ್ಕೆ ಸೇರಿದ. (ನಾ). ೨. ಯಜ್ಞಶಾಲೆಯ ಒಳಜಗಲಿ. ೩. ಗಂಗಾ ಯಮುನಾ ನದಿಗಳ ನಡುವಣ ಪ್ರದೇಶದ ಹೆಸರು.
[ಸಂ. (ಅಂತರ್ + ವೇದಿ$_1$)]

**ಅಂತರ್ಹಾಸ** (ನಾ). ಒಳಗೊಳಗೇ ನಗುವುದು.
[ಸಂ. (ಅಂತರ್ + ಹಾಸ್ಯ$_2$)]

**ಅಂತರ್ಹಿತ** (ಗು). ಮರೆಯಾದ; ಅಂತರ್ಧಾನ ಹೊಂದಿದ: ವಿಪ್ರವೇಷದಿಂ ಬಂದು ನಿನ್ನಂ ವರಿಪೆನೆಂದೊರೆದಂತರ್ಹಿತನಾದಂ (ರಾಮಾಶ್ವ. ೧೨೫–೨೦). [ಸಂ.]

**ಅಂತರ್ಹಿತರೂಪ** (ನಾ). ಮರೆಯಾದ, ಕಣ್ಣಿಗೆ ಗೋಚರವಾಗದ, ಆಕಾರ: ಸಮಸ್ತ ಸುರಗಣಂ ನೆರೆದು ಬಂದಂತರ್ಹಿತರೂಪದಿಂದಂತರಿಕ್ಷದೊಳ್ (ಜಗವಿ. ೨–೯೫ ವ). [ಅಂತರ್ಹಿತ + ರೂಪ]

**ಅಂತರ್ಹಿತೆ** (ನಾ). ೧. ಮರೆಯಾದವಳು. ೨. ಲೀನವಾಗಿರುವವಳು: ಪುರುಷನೊಳಂತರ್ಹಿತೆಯೆನೆ ಪ್ರಕೃತಿ ಎನೆ ಈ ಯೋಗ ವಿಯೋಗವೆ ವಿಕೃತಿ (ಗಣೇಶ. ೧೬–೩೯೯). [ಸಂ. ಅಂತರ್ಹಿತಾ]

**ಅಂತವಂತ** (ಗು). ಕೊನೆಯುಳ್ಳ; ಅಶಾಶ್ವತ: ಅಂತವಂತ ವಸ್ತುವು ಒಂದು ದಿನ ಅನಂತವಾಗುವುದು (ಭಾಚಿತ್ರ. iii). [ಸಂ. ಅಂತವತ್]

**ಅಂತವಾಸ** (ನಾ). (ಊರಿನ) ಸಮೀಪದ ಶಿಬಿರ: ಆಮರ್ದಿನ ಕಡಲೊಳಗಿರ್ಪಂತಿರ್ದನಂತವಾಸದೊಳಾಗಳ್ (ಆದಿಪು. ೧೧–೨೮).
[ಅಂತ + ವಾಸ$_2$]

**ಅಂತವುರ** (ನಾ). ೧. ಅಂತಃಪುರ; ರಾಣಿವಾಸ: "ಅಂತಃಪುರ–ಅಂತವುರ" (ಶಮುದ. ೨೯೨ ಪ್ರಯೋ); "ಅಂತವುರಮೆಂದು ಅಂತಃಪುರಂ" (ಕಶಸಾ. ೩೨೨); ನಿನ್ನಂತವುರದ ಕಾಂತೆಯರಂ ನೋಡದೆ ಸುಡಿಯದಿಂ ಬುಕೆಯ್ಯದೆ (ಪಂರಾಮಾ. ೧೪–೧೯೩); ಅನಿರುದ್ಧನಂತವುರದಂಗನೆಯರ ರೋದನರವಂ ಸುಧಾಗೃಹತತಿಯೊಳ್ ಜನಿಯಿಸಿದುದು (ಜಗವಿ. ೧೭–೧೩೪).

೨. ರಾಣಿವಾಸದ ಸ್ತ್ರೀಯರು: ಅವಿರಳ ಗಳದಶ್ರುಜಲಪ್ಲವ ಧೌತ ಕಪೋಲತಳಮವಂತೀಶ್ವರನಂತವುರಂ ಪರಿಪಾಳಿಪುದೆಮ್ಮ ವತಂಸಮನೆಂದು ಬಂದು ಕಾಲ್ಗೆಱಗುವುದುಂ (ಪಂಪಭಾ. ೭-೭೪); ಅಂತವುರಂಬೆರಸರಸಂ ಸಂತಸಮಂ ತಾಳ್ದಿ (ಚಿಕವಿ. ೪-೮೨). [ಸಂ. ಅಂತಃಪುರ]

**ಅಂತವುರಂಬುಗು** (ಕ್ರಿ). ಅಂತಃಪುರವನ್ನು ಪ್ರವೇಶಿಸು: ಭೂರಮಣಂ . . . ಪುರವಿಹಾರಂಗೆಯ್ದೊಡವಂದರ ಬೀಳ್ಕೊಟ್ಟಂತವುರಂಬೊಕ್ಕಂ (ಉದ್ಭದೇ. ೪-ಸೂ). [ಅಂತವುರ + ಪುಗು$_1$ (< ಪೊಗು)]

**ಅಂತವೆಯ್ದು** (ಕ್ರಿ). ತುದಿಮುಟ್ಟು; ಪರಮಾವಧಿಯನ್ನು ಕಾಣು: ಜಗದಯ್ಯನನು ಪಡೆದಾಂ ಧನ್ಯಳಾದೆನು ಎನುತ ಮನದಲಿ ಕಾಂತೆ ಸಂತಸದಂತವೆಯ್ದಿದಳು (ಸಾಳ್ವಭಾ. ೨೧-೮೭). [ಅಂತ$_2$ + ಎಯ್ದು]

**ಅಂತಶ್ಚಕ್ಷು** (ನಾ). ಒಳಗಣ್ಣು: ಹೀಗೆ ಸ್ವಲ್ಪ ಕಾಲ ನಡೆಸಿಕೊಂಡರೆ ನಿಮ್ಮಲ್ಲೇ ಒಂದು ದಿವ್ಯ ಅಂತಶ್ಚಕ್ಷು ಉದಯವಾಗುವುದು (ಶಾಂತಲಾ. ೯೫). [ಸಂ. ಅಂತಶ್ಚಕ್ಷುಸ್ (ಅಂತರ್ + ಚಕ್ಷುಸ್)]

**ಅಂತಶ್ಚತುಷ್ಟಯ** (ನಾ). ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಎಂಬ ನಾಲ್ಕು ಸೂಕ್ಷ್ಮೇಂದ್ರಿಯಗಳು: ಬೆರಸಿ ಪನ್ನೊಂದಿಂದ್ರಿಯಂಗಳನರಿದೆನಿಸಿದಂತಶ್ಚತುಷ್ಟಯದಿರವಿನಲಿ ಮೂಜಂ ನಿಯೋಜಿಸಿ (ಬಸಪು. ೪೩-೨). [ಸಂ. (ಅಂತರ್ + ಚತುಷ್ಟಯ)]

**ಅಂತಶ್ಶಾಂತ** ≡ ಅಂತಃಶಾಂತ (ಗು). ಸಮಾಧಾನದಿಂದ ಕೂಡಿದ ಮನಸ್ಸುಳ್ಳ; ಮನಸ್ಸು ಕದಡದ. [ಸಂ. (ಅಂತರ್ + ಶಾಂತ)]

**ಅಂತಶ್ಶುದ್ಧಿ** ≡ ಅಂತಃಶುದ್ಧಿ (ನಾ). ಒಳಗಿನ ಶುದ್ಧತೆ; ಮನೋನೈರ್ಮಲ್ಯ. [ಸಂ. (ಅಂತರ್ + ಶುದ್ಧಿ)]

**ಅಂತಶ್ಶೂನ್ಯ** ≡ ಅಂತಃಶೂನ್ಯ (ಗು). ೧. ಒಳಗೆ ಟೊಳ್ಳಾಗಿರುವ. ೨. ಮನಸ್ಸು ಶೂನ್ಯವಾಗಿರುವ. ೧, ೨: ಎನಿತೆನಿತಂ ಕಲಿಸಿದೊಡಂ ತನಿತನಿತುಂ ನೈಜಭಾವಮಕ್ಕುಂ ನೃಪನಂದನನೆಂತುಮಂತು ಕರ್ಕಶತನು ವಂತಶ್ಶೂನ್ಯಮಕ್ಕುಮುನ್ನತವಂಶಂ (ಗದಾಯು. ೩-೫೮).
[ಸಂ. (ಅಂತರ್ + ಶೂನ್ಯ)]

**ಅಂತಸ್ತಮಃಪಟ** (ನಾ). ಒಳಗಿನ ಕತ್ತಲೆಯ (ಎಂದರೆ ಅಜ್ಞಾನದ) ತೆರೆ: ತನ್ಮುನಿ ಧರ್ಮವೃದ್ಧಿ ನಿಮಗೆಂದಾ ನಾಲ್ವರಂತಸ್ತಮಃಪಟಮಂ ಪಿಂಗಿಸಿ ಭೋಗ ಭೂಮಿಜರ ಕಣ್ಣಾಗಳ್ ನಭೋಮಾರ್ಗ ಪರ್ಯಟನಂ ಶಿಕ್ಷಿಸಿ ಪೋದರ್ (ಶಾಂತಿಪು. ೭-೯). [ಸಂ. (ಅಂತರ್ + ತಮಸ್ + ಪಟ)]

**ಅಂತಸ್ತಾಪ** (ನಾ). ಒಳಗಿನ ಬೇಗೆ; ಸಂಕಟ; ಉದ್ವೇಗ.
[ಸಂ. (ಅಂತರ್ + ತಾಪ)]

**ಅಂತಸ್ತಿಮಿರ** (ನಾ). ಒಳಗಿನ ಕತ್ತಲೆ; ಅಜ್ಞಾನ: ಜಾಗ್ರದವಸ್ಥೆಯಂತಸ್ತಿಮಿರಕರಣಭ್ರಮೆಯಲುದಿತ ಸ್ವಪ್ನವೀಥಿಯಲಿ . . . ಶಿವನನು ಪಾರ್ಥ ಚಿಂತಿಸಿದ (ಕುವ್ಯಾಅ. ೫-೬). [ಸಂ. (ಅಂತರ್ + ತಿಮಿರ$_2$)]

**ಅಂತಸ್ತು** (ನಾ). ೧. ಒಂದರ ಮೇಲೆ ಒಂದರಂತೆ ಅಳವಟ್ಟಿರುವ ಶ್ರೇಣಿಯಲ್ಲಿ ಒಂದು. ೨. ಮಹಡಿ; ಉಪ್ಪರಿಗೆ: ಮನೆಯ ಮೇಲಿನಂತಸ್ತು ಮುರಿದು ಬಿದ್ದಿತು (ಮುದ್ರಾಮಂ. ೧೨); ಆ ಮೇಲಿನ ಅಂತಸ್ತುಗಳಲ್ಲಿ ವಸತಿಯ ವ್ಯವಸ್ಥೆ ಮಾಡಿಕೊಡುತ್ತಿದ್ದರು (ರತ್ನಗೋ. ೧೪). ೩. ಮಟ್ಟ; ಅರ್ಹತೆಯ ತಾರತಮ್ಯ: ಶರೀರವು ಒಂದು ಅಂತಸ್ತಿನ ತನಕ ವಿಕಸಿಸಿ ಬೆಳೆದು ನಿಂತು ಬಿಟ್ಟರೂ ಜೀವನ ವಿಕಾಸ ನಿಲ್ಲದೆ ಮುಂದುವರಿಯುತ್ತಿರುತ್ತದೆ (ಜೀವಾತ್ಮ. ೧೭೪); ಅವರವರ ಅಂತಸ್ತು ಗೌರವಗಳಿಗೆ ತಕ್ಕಂತೆ ಸುಖಾಸನಗಳನ್ನು ಹಾಸಲಾಗಿತ್ತು (ಶಾಂತಲಾ. ೧೬).
[ಸಂ. ಅಂತಃಸ್ಥ ?. / ತಮಿ. ಅನ್ತಸ್ತು; ತುಳು. ತೆಲು. ಅಂತಸ್ತು]

**ಅಂತಸ್ಥ** 'ಅಂತಃಸ್ಥ' ನೋ.

**ಅಂತಸ್ಥಿತೆ** (ನಾ). ಗುಟ್ಟು; ರಹಸ್ಯ: ಬಲು ಪ್ರಧಾನನ ವೈರ ಹಿತವಹಲಲನೆಯರ ಮನದಳಲು ಹಗೆಯಲಿ ಬಳಸುವಂತಸ್ಥಿತೆಯನಾಮಿಕರೊಡನೆ ಕೆಳೆಗೋಷ್ಠಿ (ಕುವ್ಯಾಉ. ೩-೭೦). [ಸಂ. ಅಂತಃಸ್ಥಿತಾ]

**ಅಂತಸ್ಸತ್ತ್ವ$_1$** ≡ ಅಂತಃಸತ್ತ್ವ (ನಾ). ಒಳಗಿನ ಬಲ; ಮನಶ್ಶಕ್ತಿ; ಒಳಹುರುಳು. [ಸಂ. (ಅಂತರ್ + ಸತ್ತ್ವ)]

**ಅಂತಸ್ಸತ್ತ್ವೆ$_2$** ≡ ಅಂತಃಸತ್ತ್ವೆ (ನಾ). ೧. ಗರ್ಭಿಣಿ; ಬಸುರಿ. ೨. ಭಲ್ಲಾತಕ; ಗೇರುಮರ.
[ಸಂ. ಅಂತಸ್ಸತ್ತ್ವಾ (ಅಂತರ್ + ಸತ್ತ್ವ + -)]

**ಅಂತಸ್ಸಾರ** ≡ ಅಂತಃಸಾರ (ನಾ). ಒಳಗಿನ ತಿರುಳು, —ಸತ್ತ್ವ: ತನಯನಂತಸ್ಸಾರಮಂ ಬಲ್ಲರೇ (ಮಲ್ಲಿಪು. ೧೩-೮೦).
[ಸಂ. (ಅಂತರ್ + ಸಾರ)]

**ಅಂತಸ್ಥಿತ** (ನಾ). ರಾಜನ ಅಂತಃಪುರದ ಮುಖ್ಯಾಧಿಕಾರಿ (?): ಪೌರೋಹಿತಂ ದಂಡನಾಥನಧ್ಯಕ್ಷನಧಿಕಾರಿ . . . ಪ್ರತಿಹಾರಿಯಂತಸ್ಥಿತಂ [ಪಾಠಾಂ. ಸ್ಥಿಕಂ] . . . ತಳವಾಱನೆಂಬಿವರು ಭೂರಮಣರಲ್ಲಿ ವಿನಿಯೋಗಮಂ ತಾಳ್ದು ಪದಿನೆಣ್ಬರ್ ಪ್ರಧಾನರೆನಿಕುಂ (ಮಂಗರಾ. ೮೦-೧೧). 'ಅಂತರ್ನಿಯುಕ್ತ' ಪರಾ.
[ಸಂ. ಅಂತಃಸ್ಥಿತ (ಅಂತರ್ + ಸ್ಥಿತ)]

**ಅಂತಹ** 'ಅಂತಪ್ಪ' ನೋ.

**ಅಂತಱಿಂ**, ಅಂತಱಿಂದಂ, ಅಂತಱಿಂದೆ (ಅ). ೧. ಆದುದರಿಂದ; ಆ ಕಾರಣದಿಂದ: ಭೂತಮಯ್ದುಮಱಿಗುಂ ಕೊಟ್ಟರ್ದುದಾದಂತಱಿಂದೆನಗಿಂ ಮಾಣ್ಬುದು ಸೂಟಿ (ಪಂಪಭಾ. ೫-೭೪); ಕುಯೋನಿಯೊಳ್ ತಿರಿದು ಪೋದುವು ಕಾಲಮನಂತಮಂತಱಿಂ ಪುಟ್ಟಿದೆ ಪೊಂದದಿರ್ಪ ಬಗೆಯಂ ಬಗೆದಂದು ಕೃತಾರ್ಥನಾಗೆನೇ (ಸುಕುಮಾ. ೧೧-೮೨); ಕೃತಮುಱಿವೊಡೆ ಸದ್ಗುರುಶಿಕ್ಷಿತನಪ್ಪವನಱಿಗುಮಂತಱಿಂ ಸತತಂ ಸಂಗತಿಗುರುವಿನೊಳಾದೊಡೆ ನರಪತಿ ಸುರಪತಿಲೀಲೆಯಂ ಸಮಂತ್ರೈದಿದಪಂ (ಚಂದ್ರಪು. ೪-೨೪). ೨. ಅದಕ್ಕಿಂತಲೂ: ಕ್ರೂರ[ನಂ]ದನ ಮಗಗೆ ಕೊಡುವಂತಱಿಂ ನಿಮಗೀವುದೊಳ್ಳಿತಲೆ (ಸಾಳ್ವಭಾ. ೧೯-೧೬). **ಅಂತಱಿಂದಂ, ಅಂತಱಿಂದೆ**: ೧. ಅಂತಱಿಂದವರನಾ ಪೊಟಲೊಳ್ ಕಾಣಲ್ಬಂದತ್ತು (ಶಮುದ. ೯೦ ಪ್ರಯೋ). "ಪೊಚ್ಚಱಿಗುಂ ತೃತೀಯೆ ಬಂದಂತಱಿನೆಂಬ ಪದಕ್ಕಮಾ ಎಕಾರಕ್ಕಿತರಂ" (ಶಮುದ. ೩೧೭).
[* ಅಂತಱ್ -(= ಅಂತು$_1$ + -ಅಱ್-) + -ಇಂ$_0$. P -ಇಂ ಎಂಬುದು ಹಳಗನ್ನಡದ ತೃತೀಯಾವಿಭಕ್ತಿ ಪ್ರತ್ಯಯ]

**ಅಂತಱಿಂದಂ** 'ಅಂತಱಿಂ' ನೋ.

**ಅಂತಱಿಂದೆ** 'ಅಂತಱಿಂ' ನೋ.

**ಅಂತಱು[ಃಪು]ರವೆರ್ಗಡೆ** (ನಾ). ರಾಣಿವಾಸದ ಮೇಲ್ವಿಚಾರಕ: ಶ್ರೀಮನ್ಮಹಾಪ್ರಧಾನನನೇಕ ದೇಶಾಧಿಪತಿಯನ್ತಱು[ಃಪು]ರವೆರ್ಗಡೆ ಸೀತಾಳಚಂದ್ರಂ (ಸೌಇಇ. IX-i, ೨೯೫-೭; 1172).
[ಅಂತಃಪುರ + ಪೆರ್ಗಡೆ]

**ಅಂತಿ$_1$** (ನಾ). ಒಂದು ಹೆಸರು (?): ಎಱೆಯಮ್ಮನುಂ ಸಿರಿಯಮ್ಮನುಂ ಅನ್ತಿಯ ಸುಗ್ಗಯ್ಯನು ಬಿಡಿ ಪೊನ್ನಯ್ಯನುಂ ಅಲ್ಲಮ್ಮನುಂ (ಎಕ. XI, ಹೊಳಲ. ೩೦-೧೨; 964). [?]

**ಅಂತಿ$_2$** (ನಾ). ಅಕ್ಕ (?). [?]

**ಅಂತಿಕ** (ನಾ). ೧. ಹತ್ತಿರ; ಸಮೀಪ; ನೆರೆಹೊರೆ: ಕಂಸಂ ನಿಜಾಂತಿಕದೊಳಿರ್ದ ಮಂತ್ರಿಗಳ್ಗಾ ವೃತ್ತಾಂತಮಂ ಪೇಳ್ವುದುಂ (ಜಗವಿ. ೨-೪೪ ವ). ೨. ಕಡೆ; ಕೊನೆ; ಅವಧಿ. [ಸಂ.]

**ಅಂತಿಬಲೆಹುಲ್ಲು** (ನಾ). ಒಂದು ಬಗೆಯ ಹುಲ್ಲು (ಮೈಔಗಿ.೨೭-೫೧೫).
[ಅಂತಿಬಲೆ$_0$ + ಹುಲ್ಲು (< ಪುಲ್)]

**ಅಂತಿಮ** (ಗು). ಕೊನೆಯ ; ಕಟ್ಟಕಡೆಯ : ಇದೇ ನಮ್ಮ ಅಂತಿಮ ನಿರ್ಧಾರ (ರೂಢಿ). [ಸಂ.]

**ಅಂತಿಮದರ್ಶನ** (ನಾ). = ಅಂತ್ಯದರ್ಶನ. [ಅಂತಿಮ + ದರ್ಶನ]

**ಅಂತಿರೆ** (ಅ). ೧. ಆ ಪ್ರಕಾರವಾಗಿ; ಆ ರೀತಿಯಲ್ಲಿ : ಮೃಗಪಶು ಶಕುನಿಗಣಂಗಳೊಳಗಣಿತ ನಿಜಜಾತಿ ಜನಿತ ಭಾಷೆಗಳೆಂದುಂ ನೆಗಟ್ದಂತಿರೆ ನರರೊಳಮಪ್ರಗಲ್ಭವಚನಪ್ರವೃತ್ತಿ ನೆಗೞ್ಗುಂ ಸಹಜಂ (ಕವಿರಾ. ೧-೭). ೨. ಹೋಲಿಕೆಯನ್ನು ಸೂಚಿಸುವ ಮಾತು ; ಉಪಮಾವಾಚಕ : ಮುತ್ತುಗಳಂತಿರೆ ಸೂಸಿ ಪಾಯ್ವ ಶೀಕರದೊಳೆ ನಾಂದು (ಕಾವ್ಯಸಾ. ಶೂದ್ರಕ. ೭೮) ; ಉಪಮಾನಾರ್ಥದೊಳಿವು ವರ್ತಿಪುವಂತಿರೆಯಂತೆಯಂತೆ ವೋಲ್ವೋಲ್ಗಳ್ (ಶಮದ. ೩೧೬).

[ಅಂತು$_1$ + ಇರ್$_0$. ℙ ಇರೆ ಎಂಬುದು ಇರ್ ಧಾತುವಿಗೆ "ಸತ್ಯರ್ಥ"ದ –ಎ ಪ್ರತ್ಯಯ ಹತ್ತಿದ ರೂಪ]

**ಅಂತಿರೆವೊಲ್** 'ಅಂತಿರೆವೋಲ್' ನೋ.

**ಅಂತಿರೆವೋಲ್**, ಅಂತಿರೆವೊಲ್ (ಅ). = ಅಂತಿರೆ ೨ : ರವಿಯಂತಿರೆ ವೋಲಧಿಕ ಪ್ರತಾಪಿ (ಶಬ್ದಾನು. ೨೦ ಪ್ರಯೋ). **ಅಂತಿರೆವೊಲ್**: ಅಂತಕನಂತಿರೆವೊಲುಗ್ರಂ (ಶಬ್ದಾನು. ೨೦ ಪ್ರಯೋ). [ಅಂತಿರೆ + ವೋಲ್]

**ಅಂತು$_1$** (ಅ). ೧. ಹಾಗೆ ; ಆರೀತಿಯಲ್ಲಿ : ಫಣಿಮಣಿಯನ್ತು ಭೋಗಿ. . . ಅನಿನ್ದ್ಯಗುಣನ್ (ಎಕ. XI, ಚಿತ್ರದು. ೪೩-೧ ; 550) ; ಅಂತು ಕಂಡು ಮನಂಗೊಂಡೆತ್ತಿಕೊಂಡು ಮನೆಗೆ ತಂದು (ಪಂಪಭಾ. ೧-೯೬ ವ) ; ವಿಚಿತ್ರಮಿದನಂತಿಂತುಂತೆನಲ್ ಬರ್ಕುಮೆ (ಕಾದಂಉ. ೩೧೯); ಬ್ರಹ್ಮಾದಿನಿಚಯಮಂತೊಂದೆಸೆಯೊಳೊಪ್ಪಿರಲು (ಬಸರ. ೧-೧೭) ; ಭಟಾಂಗದ ಮಾತದಂತಿರಲಿ (ಕುವ್ಯಾದ್ಯೋ. ೫-೫೩) ; ಒಡೆಯನಿರಿಸಿದಂತಿರ್ಪುದಲ್ಲದೆ ಪೇಳೊಡವೆಗೆ ಬೇಱಿರವುಂಟೆ (ಹದಿಬ. ೧-೪೪). ೨. ಒಟ್ಟಿನಲ್ಲಿ ; ಮೊತ್ತದಲ್ಲಿ : ಅಂತು ಸಂಧಿ ೮ ಕ್ಕಂ ಸೂತ್ರ ೪೬ ಕ್ಕಂ ತ್ರಿಪದಿ ೫೩೫ ಕ್ಕಂ ಮಂಗಳ ಮಹಾ ಶ್ರೀ (ಅನುಸಾ). **ಅಂತಿಂತು** = ಹೇಗೆ ಹೇಗೋ ; ಕ್ರಮವಿಲ್ಲದೆ : ಪ್ರಾಸಚ್ಛಂದೋನ್ವಯ ವಿನ್ಯಾಸದಿನಂತಿಂತು ಶಬ್ದಮಿರ್ಕುಂ (ಶಮದ. ೬) ; **ಅಂತುಂ ಅಲ್ಲದೆ** = ಅಷ್ಟು ಮಾತ್ರವಲ್ಲದೆ ; ಅಷ್ಟೇ ಅಲ್ಲದೆ : ಅಂತುಮಲ್ಲದೆ ಬಲ್ಮೆಗಂ ಬಸನಕ್ಕಂ ಸವಿಯಪ್ಪ ಕಿಱುವೇಂಟೆಯುಮಲ್ಲದುೞಿದ ಬೇಂಟೆಯಂ ಬೇಂಟೆಯೆನ್ನೆಂ (ಪಂಪಭಾ. ೫-೪೬ ವ) ; ಅಂತುಮಲ್ಲದೆಯುಂ, ಸತತಂ ನಿಜದೇಹದಿನವ್ಯತಿರಿಕ್ತೆಯೆನಿಪ್ಪ ಹೃದಯವಲ್ಲಭೆಯೊಳ್ (ಚಂದ್ರಪು. ೩-೨೪ ವ, ೨೫). **ಅಂತುಂ ಇಂತುಂ** = ಹಾಗೂ ಹೀಗೂ ; ಹೇಗೋ ಒಂದು ಬಗೆಯಲ್ಲಿ : ಪರೋಕ್ತಯುಕ್ತಿಯಂ ವಿರಚಿಸುತಂತುಮಿಂತುಮುೞಿಗಬ್ಬಮನಾಗಿಸಿ ಕೇಳಿಸುತ್ತೆ ಕಾಲುರಿಚರ ತೋರ್ಪ ದುಷ್ಕವಿ ಮಹಾಕವಿಮಧ್ಯದೊಳೊಪ್ಪಲಾರ್ಪನೇ (ರಾಜಶೇ. ೧-೨೩). **ಅಂತೂ** = ೧. ಹಾಗೂ ; ಅಷ್ಟಾದರೂ ; ಏನೇ ಆದರೂ : ಕಾದು ಕಾದು ಸಾಕಾಯಿತು ; ಅಂತೂ ನೀನು ಬರಲಿಲ್ಲ (ರೂಢಿ). ೨. ಆದರೋ : ಅವನಂತೂ ಸಹಾಯ ಮಾಡಲಿಲ್ಲ ; ನೀನಾದರೂ ಮಾಡು (ರೂಢಿ). **ಅಂತೂ ಇಂತೂ** = ಹೇಗೆ ಆದರೂ ; ಯಾವ ರೀತಿಯಲ್ಲೂ : ಅಂತೂ ಇಂತೂ ಕುಂತಿಯ ಮಕ್ಕಳಿಗೆ ರಾಜ್ಯವಿಲ್ಲ (ಗಾದೆ). **ಅಂತೆಂಬರ ಗಂಡ, ಅಂತೆಂಬವರ ಗಂಡ** = ಹಾಗೆ ಹೇಳತಕ್ಕವರ ಪ್ರಭು ; ಒಂದು ಬಿರುದು : ತಾಂ ತಳೆದಿಳೆಯಂ ಧರ್ಮದೊಳಂತೆಂಬರ ಗಂಡ ಬಿರುದನಾಂತೆಸೆದಿರ್ಕುಂ (ಅಪ್ರತಿ. ೧-೬) ; ಅಂತೆಂಬರ ಗಂಡನೆಂದು ಕೊಂಡಾಡಿದ ಪಂತದ ದೊರೆಯಿವನಾರೊ (ಕಂನವಿ. ೧೩-೩೭) ; ಅನ್ತೆಮ್ಬವರಗಣ್ಡಸ್ಯ ಹರಿಭಕ್ತಿ ಸುಧಾನಿಧೀಃ (ಎಇ. XIV, ೨೨೨-೧೧೮ ; 1551). 'ಬಿರುದಂತೆಂಬರಗಂಡ' ಪರಾ.

[ದೇ. ‖ ತುಳು. ಅಂಚ ; ತೆಲು. ಅಟು]

**ಅಂತು$_2$** (ನಾ). ೧. ಕೊನೆ ; ತುದಿ ; ಪರಮಾವಧಿ : ಸಂತಸದಂತನೆಯ್ದಿ ಸುರತಾಮೃತದೊಳ್ ತಣಿದಟ್ಟಿಱಿಂ ಜಿಗಿಲ್ತಂತಿರೆ (ಆದಿಪು. ೩-೫) ; ಭುವನೇಶ್ವರ ನಿಜರೂಪಸ್ತವ ವಸ್ತುಸ್ತವ ಗುಣಸ್ತವಂಗಳನವಱಂತುವರಂ ಬಣ್ಣಿಸಲಮರೇಂದ್ರ ವಾಸುಕಿ ಪ್ರಭುಗಳಾರ್ತರಿಲ್ಲೆನ್ನಳವೇ (ಆದಿಪು. ೧೦-೫೨) ; ಪೆಸರಂ ದೆಸೆಯಂತುವರಂ ನಿಮಿರ್ಚಿದ × × (ಎಕ. VII, ಶಿವಮೊ. ೫೭-೫೦ ; 1115) [ಅಂತುವರಂ = ಕೊನೆಯ ವರೆಗೆ ; ಅವಧಿಯ ವರೆಗೆ] ; ಸಾಗರದಂತನಹಿತಮಹೀಶ್ವರರೊಡನೆಯ್ದಿತ್ತು ವಿಶದ ಕೀರ್ತಿಪ್ರಸರಂ (ಎಕ. V, ಬೇಲೂರು. ೧೨೪-೧೯ ; 1188) ; ಇಂತೆಸೆವ ಶರಧಿಗಳ ಭೇದದ ಅಂತುವನು ಪೇಳುವೆನು (ಶರಲೀ. ೧೦-೧೫). ೨. ನೆಲೆ ; ಒಳಗುಟ್ಟು ; ಮರ್ಮ (ಕರಾ) : ಅವನ ಅಂತು ತಿಳಿಯಲಿಕ್ಕೆ ಅವರಪ್ಪನಿಗೂ ಸಾಧ್ಯವಿಲ್ಲ (ರೂಢಿ); ಅಂತು ಕೊಟ್ಟು ಚಿಂತೆಮಾಡಿದರೆ ಏನು ಬಂತು? (ರೂಢಿ). **ಅಂತುಗೊಂತು** = ಮೇರೆ, ನೆಲೆ ಮೊದಲಾದದ್ದು : ಇಂದಿನ ತನಕ ಹೊರನಾಡನ್ನೇ ಕಂಡರಿಯದ ಕೊನಸ್ಟೆನ್ಸಾ ಅಂತುಗೊಂತಿಲ್ಲದ ದೂರದೇಶಕ್ಕೆ – ವಿಧರ್ಮೀಯರ ಅಪರಿಚಿತ ನಾಡಿಗೆ – ನಡೆಯಬೇಕು (ಭಾಸರ. ೬೮). **ಅಂತು ಪಾರು** = ಕೊನೆ ; ಮುಕ್ತಾಯ : ಅವನ ಹರಟೆಗೆ ಅಂತು ಪಾರು ಯಾವುದೂ ಇಲ್ಲ (ರೂಢಿ). [ಸಂ. ಅಂತ. / ತಮಿ. ಅನ್ತು]

**ಅಂತು$_3$** (ನಾ). ರುದ್ರಾಕ್ಷಿ ಸರ (?) : ತೆತ್ತಿಸಿದ ಶಂಖಸರ ತಲೆಯೊಳು ಸುತ್ತಿದಂತುಗಳೆಸೆವ ಸಿದ್ಧರ ಮೊತ್ತಮಿರ್ದುದು (ಶಂಕದಾ. ೧೫-೪). [?]

**ಅಂತುಕ** (ನಾ). ಕೊನೆ ; ಮುಕ್ತಾಯ : ಶ್ರೀಕಾಂತನನು ನಿಜಸಮಯ ಸೌಖ್ಯದ ಸಂತತಿಗಳಿಂದೋಲಗಿಸುತಿರಲಿರಲು ದಿನಗಳಿಗೆ ಅಂತುಕವನಿಕ್ಕಿದನು ವಿಧಿ (ನಿಭಾಗ. ೧೦-೧೯-೩೫). [< ಅಂತು$_2$ ?]

**ಅಂತುಟು$_1$** (ಗು). ಅಷ್ಟು : ಅವನೀವಂತುಟನೀಯದಂತುಟನದಂ ಬಲ್ಲಂತು ಕಾಲ್ಗುತ್ತಿ ನೋಡು (ಪಂಪಭಾ. ೯-೨೬) ; ನೀನೀ ಯೆಡೆಗಿದುಚಿತವೆಂಬಂತುಟಂ ನೀನೆ ಬಲ್ಲೆ (ಕಾದಂಪೂ. ೮೫೧) ; ಚಿಂತಿಸಲಾರ್ಗಂ ಬಾರದು ಎಂಬಂತುಟಣ ಕಳಸನಿರ್ಬ್ಬಾಣಮುಪ್ಪನ್ನೆಗಂ ಮಾಡಿಸಿದಂ (ಎಇ. XV, ೯೦-೫೩ ; 1160) [ಅಂತುಟಣ = ಆ ಪ್ರಕಾರದ ; ಅಂಥ]. **ಅಂತುಟೊಂದು** = ಅಷ್ಟೊಂದು : ಅಂತುಟೊಂದು ನೋಟದ ತೆಜನಂತುಟೊಂದು ತನಿಸೋಂಕಿನ ಸಮ್ಮದವಂತುಟೊಂದು ಮೇಳದ ಚದುರಂತುಟೊಂದು ಪರಿರಂಭದ ಸಂಭ್ರಮಮಂತುಟೊಂದು ಕೂಟದ ಪರಿ (ಜಗವಿ. ೧೧-೫೭).

[ಅಂತು$_1$ + –ಟು]

**ಅಂತುಟು$_2$** (ಅ). ಹಾಗೆ; ಆ ರೀತಿಯಲ್ಲಿ : ಆ ನಾಡೊಳ್ ಮಾನಸರ್ ಮಾನಸರಂ ತಿಂಬಂತುಟಪ್ಪ ಮಹಾ ಘೋರಂ ಪಸವಾದೊಡೆ (ವಡ್ಡಾರಾ. ೯೨-೧) ; ಮುತ್ತುಂ ಮೆಟಿಸುಂ ಕೋದಂತುಟೆ ನಿನ್ನ ತಪದ ಪಾಂಗೆಂತುಗಡಾ (ಪಂಪಭಾ. ೭-೯೨) ; ಭಟಸಂಘಕ್ಕದಟೆಂತುಟಂತುಟೆ ಮುಖಾಂಭೋಜಕ್ಕೆ ಮೂಗೆಂತುಟಂತುಟೆ (ಧರ್ಮಾಮೃ. ೧-೭೨) ; ಚಪ್ಪರಮನಾರಂತುಟೆಂತುಟೆಂದುಪಮಿಸಲ್ ನೆಱೆವರೆನಿಪಂದದಿಂ ರಚಿಸಿ (ಪದ್ಮರಾ. ೩-೪೦). [< ಅಂತುಟು$_1$]

**ಅಂತುಂಡಿಕಾಯಿ** (ನಾ). ಒಂದು ಬಗೆಯ ಕಾಯಿ (ವೈಔಗ. ೧೭-೩೧೦). [ಅಂತುಂಡಿ$_0$ + ಕಾಯಿ (< ಕಾಯ್$_3$)]

**ಅಂತೆ$_1$** (ಅ). ೧. ಹಾಗೆ ; ಆ ರೀತಿಯಲ್ಲಿ : ಅಗ್ನೇಯದಿನಂತೆ (ಎಕ. I, ೧-೨೩ ; 466 ?) ; ತಸ್ಯ ಸೀಮಾಂತರಂ ಪೂರ್ವಸ್ಯಾನ್ದಿಶಿ ತುಬ್ಬಿಲ್ಗಾಲೆ ಅನ್ತುಬನ್ದು ಕಳರಾ ಬಾಯ್ಕಾಲುಳ್ ಕೂಡಿ ಅನ್ತೆಬನ್ದು (ಮೈಆರಿ. ೧೯೩೬, ೫೩-೨೪ ; 550) ; ಗುರುವಿನಂತೆ ಶಿಷ್ಯ ತಂದೆಯಂತೆ ಮಗ (ಗಾದೆ). ೨. ಹಾಗೆಯೇ ; ಸುಮ್ಮನೆ : ಕುತ್ತಕ್ಕೆ ಮರ್ದನಿಕ್ಕದೆ ಕುತ್ತಂ ಪೋಗೆಂದೊಡಂತೆ ಪೋಕುಮೆ (ಸಮಪ. ೧೧-೯೪). ೩. ಹೋಲಿಕೆಯನ್ನು ಸೂಚಿಸುವ ಶಬ್ದ ; ಉಪಮಾವಾಚಕ : ವನರುಹದಂತೆ ಮುಖಂ (ಕವಿರಾ. ೩-೬೦) ; ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ

(ಆದಿಪು. ೨–೯) ; ಹಡಗು ಜಲಧಿಯೊಳೋಡಿ ಗಿರಿಗಳನೆಡಹಿ ಸುಗ್ಗಾದಂತೆ (ಕುವ್ಯಾದ್ರೋ. ೩–೨೪). [–ಅಂತು$_1$ + –ಎ$_4$]

**ಅಂತೈ** (ಅ). ಹಾಗೆಂದು ಹೇಳುತ್ತಾರೆ, ಹೀಗೆಂದು ಸುದ್ದಿಯಿದೆ ಎಂಬುದನ್ನು ಸೂಚಿಸುವ ಶಬ್ದ : ಶುದ್ಧ ಸೂರ್ಯವಂಶಜರಂತೆ ಅಯೋಧ್ಯವನಾಳುವ ಅರಸುಗಳಂತೆ ಬುದ್ಧ್ಯುಳ್ಳ ದಶರಥನಣುಗನಂತೆ ಪ್ರಸಿದ್ಧ ಪೆಸರು ರಾಮ ಲಕ್ಷುಮಣರಂತೆ (ಪುರಂದ.೩–೭೭–೧); ಸಾಲ್ಗುಮಾ ಅಂತೆ ಕಂತೆಯ ಚಿಂತೆ (ಶ್ರೀರಾಮಾ. ೪೫೨–೭) ; ಅವರ ಮನೆಯಲ್ಲಿ ಮುಂದಿನ ತಿಂಗಳು ಮದುವೆಯಂತೆ (ರೂಢಿ). [< ಅನ್ನು]

**ಅಂತೆಗೆಯ್** (ಕ್ರಿ). ಹಾಗೆ ಮಾಡು ; ಹಾಗೆಯೇ ಮಾಡು : ಅಂತೆ ಗೆಯ್ವಂ ನಿಮ್ಮಮ್ಮ ನಣ್ಪುಗಳೀಗಳಾದುವಲ್ಲ (ಪಂಪಭಾ. ೯–೭ ವ); ದವನಕ ನಂತೆಗೆಯ್ವೆನೆಂದು ಬರುತ್ತ (ಪಂಚತಂ. ೫೫–೩) ; ಎಂಬುದುಮಂತೆಗೆಯ್ವೆನೆಂದು ಪೋಗಿ (ಜಗವಿ. ೭–೪ ವ). [ಅಂತೆ$_1$ + ಗೆಯ್ (< ಕೆಯ್$_1$)]

**ಅಂತೆವೊಲ್** 'ಅಂತೆವೋಲ್' ನೋ.

**ಅಂತೆವೋಲ್,** ಅಂತೆವೊಲ್ (ಅ). ೧. ಹೋಲಿಕೆಯನ್ನು ಸೂಚಿಸುವ ಮಾತು; ಉಪಮಾವಾಚಕ : ಪಗಲುತ್ಪಲಲಕ್ಷ್ಮಿಯಂತೆವೋಲ್ ಕೊರಗುತುಂ (ಜಗವಿ. ೧೬–೧೨೯). ೨. ಉತ್ಪ್ರೇಕ್ಷೆಯನ್ನು ಸೂಚಿಸುವ ಮಾತು: ಕಣ್ಣನೀರಿಱಿದುವು ಬಾಳೆಮೀನ್ ಜಲಮನುಱ್ಕಿಸಲಾಜದೆ ಕಾಱುವಂತೆವೋಲ್ (ಕಾವ್ಯಸಾ. ಶೂದ್ರಕ. ೭೧೧) ; ಆ ಗೇಯಕ್ಕೆ ಸೋಲ್ತಂತೆವೋಲ್ ತಲೆಯಂ ತೂಗುವವಂ ಸುಯೋಧನ ನೃಪಂ (ಪಂಪಭಾ. ೩–೫೫).

**ಅಂತೆವೊಲ್ :** ೧. ಕೃಶಾನುವ ನೆಟಿಲಳುರದಂತೆವೊಲ್ ಕನ್ನಡಿಯಂ (ಆದಿಪು. ೭–೩೨). ೨. ನವನಳಿನೀವನಂಗಳ ಪರಾಗರಜಂಗಳನುಂಡು ಮುನ್ನಮಂತವನೆ ವಿಯತ್ತಳಭ್ರಮಣವಿಹ್ವಲನಾಗಿ ಬೞಲ್ದು ಕಾಱುವಂತೆವೊಲಿರೆ ಕೆಂಪು . . . ರವಿ ಪೊರ್ದಿದನಸ್ತಶೈಲಮಂ (ಪಂಪಭಾ. ೪–೪೭). [ಅಂತೆ + ವೋಲ್]

**ಅಂತೇವಾಸಿ** (ನಾ). ೧. ಗುರುವಿನ ಸಮೀಪದಲ್ಲಿ ವಾಸಮಾಡುವ ಶಿಷ್ಯ. ೨. ಚಂಡಾಲ. [ಸಂ. ಅಂತೇವಾಸಿನ್]

**ಅಂತ್ಯ** (ಗು). ೧. ಕಡೆಯ ; ಕೊನೆಯ ; ತುದಿಯ. ೨. ತುಂಬ ಕೆಳಗಿನ ; ಅತ್ಯಂತ ಹೀನ. (ನಾ). ೩. ಕೊನೆ ; ತುದಿ. ೪. ತುಂಬ ಕೆಳಗಿನ ಜಾತಿಯವನು. ೫. ಮ್ಲೇಚ್ಛ. ೬. ಹತ್ತುಲಕ್ಷ ಕೋಟಿ. ೭. ಪ್ರಳಯ. [ಸಂ.]

**ಅಂತ್ಯಜ** (ಗು). ೧. ಕಡೆಯಲ್ಲಿ ಹುಟ್ಟಿದ. (ನಾ). ೨. ಶೂದ್ರ. ೩. ಚಂಡಾಲ : ಅಂತ್ಯಜನಲ್ಲಿ ಹೋಗಿ ಮೆಂತ್ಯ ಕದ್ದಹಾಗೆ (ಗಾದೆ). [ಸಂ.]

**ಅಂತ್ಯಜನ್ಮ** (ನಾ). ೧. ಶೂದ್ರ. ೨. ಚಂಡಾಲ. [ಸಂ. ಅಂತ್ಯಜನ್ಮನ್ (ಅಂತ್ಯ + ಜನ್ಮನ್)]

**ಅಂತ್ಯಜಾತಿ** (ನಾ). ಕಡೆಯ ಜಾತಿ ; ತುಂಬ ಕೆಳಗಿನ ಜಾತಿ. [ಅಂತ್ಯ + ಜಾತಿ]

**ಅಂತ್ಯದರ್ಶನ** (ನಾ). ಕೊನೆಯ ಬಾರಿಗೆ ನೋಡುವುದು : ಗಾಂಧಿಯವರ ಶ್ಮಶಾನಯಾತ್ರೆಯ ಕಾಲದಲ್ಲಿ ಅವರ ಅಂತ್ಯದರ್ಶನಕ್ಕಾಗಿ ಲಕ್ಷಾಂತರ ಜನರು ಬೆಹಲಿಯ ಬೀದಿಗಳಲ್ಲಿ ನೆರೆದಿದ್ದರು (ರೂಢಿ). [ಅಂತ್ಯ + ದರ್ಶನ]

**ಅಂತ್ಯಪ್ರಾಸ** (ನಾ). [ಛಂದ] ಪದ್ಯದ ಎರಡು ಅಥವಾ ಹಲವು ಪಾದಗಳ ಕೊನೆಯಲ್ಲಿ ಬರುವ ಪ್ರಾಸ. ಉದಾ— ಪೊಟಿಲ ಬೆಡಂಗಂ ಮೆಚ್ಚಿ ಮೆಚ್ಚಿ ನೋಡಿ। ದಿವಿಜೇಂದ್ರನಿಳಾಸದೊಳಿಂತು ಕೂಡಿ (ಪಂಪಭಾ. ೪–೧೦) ; ಸರ್ವಜೀವಂಗಳುಂ ಮುಕ್ತಿಯಂ ಕಾಣ್ಗೆ ; ದೇವರೊಳ್ ಪಗೆವವರ ಕಾಳಗಂ ಮಾಣ್ಗೆ ; ಸಾವುದೆಲ್ಲಾ ಸತ್ತು, ಬಾನಾಳ್ಕೆ ಪೂಣ್ಗೆ (ಹೊಂಗಳು. ೩೪). [ಅಂತ್ಯ + ಪ್ರಾಸ]

**ಅಂತ್ಯಯಮಕ** (ನಾ). [ಕಾವ್ಯಮೀ] ಪದ್ಯದ ಪಾದಗಳ ಕೊನೆಯಲ್ಲಿ ಬರುವ ಯಮಕವೆಂಬ ಶಬ್ದಾಲಂಕಾರ. ಉದಾ— ಪ್ರಕಟ ಕಪಟ ನಾಟಕನಂ। ಶಕಲಿಸಿ ದಿಗ್ವಲಿಯನಿತ್ತನತಿಖೇಟಕನಂ ॥ ಚಕಿತ ಜನೋತ್ಪಾಟಕನಂ। ಚಿಕದೇವಂ ಜಡಿದು ಜೈಯ್ತುಜೀಕಾಟಕನಂ ॥ (ಅಪ್ರತಿ. ೨–೧೯). [ಅಂತ್ಯ + ಯಮಕ]

**ಅಂತ್ಯಲೋಪ** (ನಾ). [ವ್ಯಾಕ] (ಶಬ್ದದ) ಕೊನೆಯ ವರ್ಣ ಅಥವಾ ಅಕ್ಷರ ಲೋಪವಾಗುವುದು : ರಾಜನ್ ಮೂರ್ಧನ್ . . . ಯುವನ್ ಇವು ಮೊದಲಾದ ಶಬ್ದಂಗಳಂತ್ಯಲೋಪಮಾಗಿ ರಾಜ ಮೂರ್ಧ . . . ಯುವ ಎಂಬಂತಾದೊಡಂ ಲಿಂಗಮಪ್ಪುವು (ಶಮದ. ೮೯ ಪ್ರಯೋ) ; ಕೆಲವು ಪಲವು ಎಂಬ ಶಬ್ದಂಗಳ್ ವತ್ವಮಿದಿರೊಳಿರ್ದೊಡಮಂತ್ಯಲೋಪಮಂ ಪಡೆವುವು (ಶಮದ. ೧೦೦ ವೃತ್ತಿ). [ಅಂತ್ಯ + ಲೋಪ]

**ಅಂತ್ಯವರ್ಣ** (ನಾ). ೧. [ವ್ಯಾಕ] (ಶಬ್ದದ) ಕೊನೆಯ ವರ್ಣ. ೨. ಹಿಂದೂಧರ್ಮದ ನಾಲ್ಕು ವರ್ಣಗಳಲ್ಲಿ ಕಡೆಯದಾದ ಶೂದ್ರ ಜಾತಿ. [ಅಂತ್ಯ + ವರ್ಣ]

**ಅಂತ್ಯಶೈವ** (ನಾ). [ವೀಶೈ] ಆರು ಬಗೆಯ ಶೈವ ಪ್ರಭೇದಗಳಲ್ಲಿ ಒಂದು : ಆದಿಶೈವ ಮಹಾಶೈವ ಅನುಶೈವ ಅಂತರ (ಅವಾಂತರ) ಶೈವ ಪ್ರವರಶೈವ ಅಂತ್ಯಶೈವ ಎಂಬ ಈ ಆಱು ಶೈವದ ನೀತಿಯಲ್ಲ (ಸಿದ್ಧೇವ. ೯). [ಅಂತ್ಯ + ಶೈವ]

**ಅಂತ್ಯಾಕ್ಷರ** (ನಾ). (ಶಬ್ದದ) ಕೊನೆಯ ಅಕ್ಷರ. [ಅಂತ್ಯ + ಅಕ್ಷರ]

**ಅಂತ್ಯಾಕ್ಷರಿ** (ನಾ). ಒಬ್ಬರು ಹೇಳಿದ ಪದ್ಯದ ಕೊನೆಯ ಅಕ್ಷರದಿಂದ ಮತ್ತೊಬ್ಬರು ಮುಂದಿನ ಪದ್ಯವನ್ನು ಆರಂಭಿಸಿ ಹೇಳುವ ಸ್ಪರ್ಧೆ. [ಸಂ. *ಅಂತ್ಯಾಕ್ಷರೀ (ಅಂತ್ಯ + ಅಕ್ಷರ + –)]

**ಅಂತ್ಯಾದರ್ಶನ** (ನಾ). = ಅಂತ್ಯಲೋಪ : ಜನಮುಲಿವ ಸಂಸ್ಕೃತ ವ್ಯಂಜನಾಂತ ಲಿಂಗಂಗಳತ್ವಮುಂ ದ್ವಿತ್ವದಿನುತ್ವ ನಿಯೋಗಮುಮಂತ್ಯಾದರ್ಶನಮುಂ ಮೇಣ್ . . . ತಾಳ್ದು ಕನ್ನಡಕ್ಕಿವು ಲಿಂಗಂ (ಶಮದ. ೮೭). [ಅಂತ್ಯ + ಅದರ್ಶನ]

**ಅಂತ್ಯೇಷ್ಟಿ** (ನಾ). ಸತ್ತವರಿಗಾಗಿ ಮಾಡುವ ಉತ್ತರಕ್ರಿಯೆ. [ಸಂ.]

**ಅಂತ್ರ** (ನಾ). ಕರುಳು. [ಸಂ.]

**ಅಂತ್ರವೃದ್ಧಿ** (ನಾ). ಕರುಳು ಕೆಳಕ್ಕೆ ಇಳಿಯಬೀಳುವ ಒಂದು ರೋಗ; 'ಹರ್ನಿಯಾ'. [ಅಂತ್ರ + ವೃದ್ಧಿ]

**ಅಂದ** (ನಾ). ೧. ಚೆಲುವು ; ಸೊಬಗು : ಜವ್ವನದ ವಿಳಾಸದಂದದ ಬೆಡಂಗಿನ ಪೆಂಡಿರೆ ಪೆಂಡಿರ್ (ಪಂಪಭಾ. ೪–೮೫) ; ಆಕೆಯ ಮಾತಾಕೆಯ ಮುದ್ದಾಕೆಯಂದವಾಕೆಯ ತನುಸೋಂಕು (ಕಾದಂಉ. ೭೭೪) ; ಆ ತೋಟದ ಅಂದವನ್ನು ಎಲ್ಲರೂ ಮೆಚ್ಚಿದರು (ರೂಢಿ). ೨. ರೀತಿ ; ಬಗೆ : ಸೀಮರ್ಬುತ್ತಿನಂದಮಾದುವು ಪನಿಗಳ್ (ಕಾವ್ಯಸಾ. ಶೂದ್ರಕ. ೬೧೪) ; ಇದಱಂದಂ ಬಿಸವಂದಮಿಂತಿದಮರೇಂದ್ರಾವಾಸದೊಂದಂದಮಿಂತಿದು ದಲ್ ದೇವ ವಿಮಾನದಂದಮಿದು (ಆದಿಪು. ೪–೫) ; ಉಱಿದ ಗುಣಂಗಳುಮನೀಯಂದದೊಳ್ ಪ್ರತಿಲೋಮುಂಗೆಯ್ವುದುಂ (ಪಂಚತಂ. ೮೧–೭) ; ಆರರೆ ಸಿಂಹದ ತೋಳ ತೆಕ್ಕೆಯ ಕರಿಯ ಸೆಳೆವಂದದಲಿ (ಕುವ್ಯಾಕ. ೧೪–೨) ; ಅರಸಿಗೆ ಮೆಚ್ಚಾದುದನೆ ಲೇಸೆಂದೆಲ್ಲರೊರೆಯಬೇಕೆಂಬಂದವಲ್ಲ (ಭರಚ. ೨–೩೪). ೩. ಉದ್ದೇಶ : ನೀವಿರ್ವರುಂ ಬಂದಂದಮುಮಂ ಮನೆವಾೞ್ತೆಯಂ ಪೇೞಿಂ (ಪಂಪಭಾ. ೯–೧೧ ವ) ; ೪. ಸ್ಥಿತಿ ; ವಿಷಯ : ಕಣ್ಬನಿಯಂ ಸೂಸಿದಳೊಂದುಮಂ ನುಡಿದಳಿಲ್ಲಾ ಕನ್ನೆ ತನ್ನಂದಮಂ (ಆದಿಪು. ೩–೨೪) ; ಕೊಂದ ಹೆಣವಂ ಕಾಣೆವಾತಂ ತಿಂದನೋ ದಿವಿ ನುಂಗಿದುದೊ ಆದಱಂದವಱಿಯೆವು (ಬಸವು. ೨೧–೧೭). ೫. ಸ್ವಭಾವ ; ಸ್ವರೂಪ : ಏನೆಂದೊಡೆಷ್ಟಾದೊಡಂ ಬಿಡ ತನ್ನಂದವ ನೀಚ ತಾಂ (ಸೋಮೇಶ. ೪೭) ;

ಕಂಡಾ ನೀನಿತ್ತ ಬಾ ಎಂದು ನೀವು ನಿಮ್ಮಂದವ ತೋಱಯ್ಯ ಚೆನ್ನಮಲ್ಲಿಕಾರ್ಜುನಾ (ಮಹಾದೇ. ೧೯–೪). **ಅಂದಚಂದ** = ಸೌಂದರ್ಯ: ಮಂಜಕ್ಕ ನಗಗಳನ್ನು ತೆಗೆದುಕೊಂಡು ಅವುಗಳ ಅಂದಚಂದಗಳನ್ನು ನೋಡಿದಳು (ಹಾಹುತ್ತ. ೭೪); ಅಂದಚಂದಕ್ಕೆ ನಾನು, ರಾಗರಚನೆಗೆ ನಮ್ಮಕ್ಕ (ಗಾದೆ).

[**ದೇ.** ‖ **ತಮಿ. ಮಲ.** ಅನ್ದ; **ತುಳು.** ಅಂದ, ಅಂದಚಂದ; **ತೆಲು.** ಅಂದಮು]

**ಅಂದಂಗೊಳಿಸು,** ಅಂದಗೊಳಿಸು (ಕ್ರಿ). ಅಂದವಾಗಿ ಕಾಣುವಂತೆ ಮಾಡು, —ಇರಿಸು: ನೀಲರತ್ನದ ಕಡೆಯವಮಂ ಪದಾಗ್ರದೊಳಂದಂಗೊಳಿಸಿಯುಂ (ರಾಜಶೇ. ೧೩–೫೯ ವ). **ಅಂದಗೊಳಿಸು**: ಯಜಮಾನರು ಹಿಂದಿರುಗುವ ವೇಳೆಗೆ ಮನೆಯನ್ನೆಲ್ಲಾ ಅಂದಗೊಳಿಸಿರಬೇಕು (ರೂಢಿ). [ಅಂದ + ಕೊಳ್$_1$ + –ಇಸು$_3$]

**ಅಂದಂಬಡೆ,** ಅಂದವಡೆ (ಕ್ರಿ). ಚೆಲುವಾಗು; ಸುಂದರವಾಗು; ಸೊಗಸಾಗು: ಕಲ್ಪಾಮರೇಂದ್ರ ಪ್ರಬಳಬಳಸಮಿತಿ ಗಗನತಳದಿಂದ ಮಂದಂಬಡೆದು ವಿನೀತಾಪುರಕ್ಕವತರಿಸಿ (ಆದಿಪು. ೭–೧೦೭ ವ); ಅಂದಂಬಡೆದ ಮೊಗ ಸುಱಿಗುರುಳ್ ಸೋರ್ಮುಡಿ ನೋಡಲ್ ನಾಡೆ ಸೊಗಯಿಕುಂ ದ್ರೌಪದಿಯಾ (ಗದಾಯು. ೮–೫೧); ಗಿಳಿಯಂದಂಬಡೆದು ನಿನಗೆ ತನೂಭವದೋಹಳಮಂ ತಾನನುಗೊಳಿಸಿದುದು (ಜಯಕಾ. ೨–೨೫). **ಅಂದವಡೆ**: ಅಂದವಡೆದ ಮೆಯ್ಯನಿರ್ಗುಡಿತೋರಣ ಚೆಂದಳಿರ್ದುಱಿ ಕುಂಭಕಲಶ ಮಂದಸ್ಮಿತ ಮುಖ ಕನ್ನಡಿಯವರ್ರೈತಂದರು (ಮೋಹತ. ೪೨–೪೯). [ಅಂದ + ಪಡೆ$_1$]

**ಅಂದಂಬೆಱು** (ಕ್ರಿ). = ಅಂದಂಬಡೆ: ಗೀತಿಕೆ ಶಿವದಿಗಳಂದಂಬೆತ್ತೆಸೆಯೆ (ಕವಿರಾ. ೧–೩೫); ನಿನ್ನನಾ ಕೋಮಳೆಯಂದಂಬೆತ್ತ ಸುತ್ತುಂಗುರುಳಳವಡಿಸಲ್ (ಆದಿಪು. ೪–೨೧); ಅಂದಂಬೆತ್ತದಿರ್ಮುತ್ತೆ (ಜಗನಿ. ೬–೧೬ ವ). [ಅಂದ + ಪೆಱು$_1$]

**ಅಂದಕಾಱ,** ಅಂದಗಾಱ (ನಾ). ಅಂದವುಳ್ಳವನು; ಸೊಗಸುಗಾರ: ಇಂದೇನೊ ಲೆಕ್ಕವಿಲ್ಲದ ವಾಕ್ಯದೋಱುವರಂದಕಾಱರು ನಿಮ್ಮ ಸುತರು (ಭರತೇ. ೭೧–೫೧). **ಅಂದಗಾಱ**: ಈ ಅಂದಗಾಱ ಅಣ್ಣಗಳ ಕಂಡು ಬಂಡಾದಿರಣ್ಣಾ (ಮೋಳಿಮಾ. ೬೬). [ಅಂದ + –ಕಾಱ]

**ಅಂದಗಾಱ** 'ಅಂದಕಾಱ' ನೋ.

**ಅಂದಗಾಱಿಕೆ** (ನಾ). ಸೊಗಸುಗಾರಿಕೆ; ಠೀವಿ; ಒಯ್ಯಾರ: ಅಂದಗಾಱಿಕೆಯಲ್ಲಿ ನಡೆವನಲ್ಲ ಉಂಬಾಗ ಜಂಗಮವೆಂದು ಸಂಜೆಗೆ ಕಳ್ಳನೆಂದು ಹಿಂಗಿ ನುಡಿವನಲ್ಲ (ಮೋಳಿಮಾ. ೧೬೦); ಅಂದಗಾಱಿಕೆಯೊಳಗರಸಿ ನೋಲಗದೊಳು ನಿಂದು ನುಡಿದು ಸಮರದೊಳು (ತ್ರಿಪುಸಾಂ. ೧೩೬).

[ಅಂದಗಾಱ (< ಅಂದಕಾಱ) + –ಇಕೆ]

**ಅಂದಗಾರ್ತಿ** (ನಾ). ಚೆಲುವೆ; ಸೊಗಸುಗಾರ್ತಿ.

[ಅಂದಗಾಱ (< ಅಂದಕಾಱ) + –ತಿ]

**ಅಂದಗೆಡಿಸು** (ಕ್ರಿ). ನಾಶಮಾಡು: ಇಂದು ನೀನಾ ಪಾಂಡುಪುತ್ರರನಂದಗೆಡಿಸದೆ ಬಿಟ್ಟೆಯಾದೊಡೆ ಮುಂದೆ ಬೆಟ್ಟಿತು ರಾಜಕಾರಿಯ (ಕುವ್ಯಾಅ. ೮–೨೦); ದುರ್ಯೋಧನೆಗಳ ನಾನಾ ಚಂದದಲಿ ಬೋಧಿಸಿ ಸುನೀತಿಯನಂದಗೆಡಿಸಿ ತದೀಯ ವಂಶಚ್ಛೇದ ಮಾರ್ಗವನು (ಕುವ್ಯಾಅ. ೮–೫೪); ಮುಕ್ಕಿದರ್ ಕೊಱಿದರರೆದರ್ ಕೊಂದರರಂದಗೆಡಿಸಿದರ್ (ಚಿಬಪು. ೨೧–೨೦).

[ಅಂದ + ಕೆಡು + –ಇಸು$_3$]

**ಅಂದಗೆಡು** (ಕ್ರಿ). ಸೊಗಸುಗುಂದು; ಕೆಟ್ಟುಹೋಗು: ಸೊಂದನ್ನೈ ಸುಗ್ರೀವ ತಪ್ಪಾಯ್ತುಂದಗೆಟ್ಟುದು ಬಲ್ಲವಿಕೆಯೇನೆಂದು ಬಗೆವನೊ ಚಿತ್ತದಲಿ (ತೊರರಾ. ೪–೩–೧೪). [ಅಂದ + ಕೆಡು]

**ಅಂದಗೆಯ್** (ಕ್ರಿ). ಅಲಂಕರಿಸು; ಪರಿಷ್ಕರಿಸು: "ಸಂಸ್ಕೃತವೆನೆ ಪ್ರಶಸ್ತಮೆನಲಂದಗೆಯ್ವುದಕ್ಕುಂ" (ಶಬ್ದಮ. ೧೩೫–೩೬).

[ಅಂದ + ಗೆಯ್ (< ಕೆಯ್$_1$)]

**ಅಂದಗೇಡಿ** (ನಾ). ೧. ಅಂದವಿಲ್ಲದ ವ್ಯಕ್ತಿ ಅಥವಾ ಪ್ರಾಣಿ; ಕುರೂಪಿ: ಗೇಂಡಾಮೃಗಗಳು ಸ್ಥೂಲವಾಗಿಯೂ ಅಂದಗೇಡಿಗಳಾಗಿಯೂ ಇರುತ್ತವೆ (ಮುಂಬಯಿ. ೫–೨೪೪). ೨. ರೀತಿಗೆಟ್ಟ ವ್ಯಕ್ತಿ: ಆ ಅಂದಗೇಡಿಗಳು ಈ ಕೆಲಸಗಳಲ್ಲಿ ಮಾನ ಮರ್ಯಾದೆಗಳನ್ನು ಬದಿಗಿಡುವುದಕ್ಕಾಗಲಿ . . . ಹಿಂದೆ ಮುಂದೆ ನೋಡಲಿಕ್ಕಿಲ್ಲ (ಧಾರ್ಮಿತೀ. ೧).

[ಅಂದ + ಕೇಡು + –ಇ$_2$]

**ಅಂದಗೊಳಿಸು** 'ಅಂದಂಗೊಳಿಸು' ನೋ.

**ಅಂದಣ$_1$** 'ಅಂದಳ' ನೋ.

**ಅಂದಣ$_2$** (ನಾ). ಕಣ್ಣಿನ ಪೊರೆ: ಅರೆದಜಮೂತ್ರದೊಳೊಂದಿರೆ ಸುರದಾರುವನೆಚ್ಚಿದಂದು ಮೇಣೀಱುದಿನಂ ಸುರಭಿಯ ಜಳದೊಳ್ ಭಾವಿಸಿ ಹರೀತಕಿಯನೆಚ್ಚೊಡಂದಣಂಗಳ್ ಕಿಡುಗುಂ (ಲೋಕೋಪ. ೯–೭೫).

[< ಸಂ. ಅಂಧ + ?]

**ಅಂದಣಗಿತ್ತಿ** (ನಾ). ಅಡಿಗೆ ಮಾಡಿ ಮಾರುವವಳು; ಆಹಾರವನ್ನು ವಿಕ್ರಯಿಸುವವಳು: ಅನವರತ ಮಾಡಿಹೆನೆಂದು ಉಪ್ಪರಗುಡಿಯ ಕಟ್ಟಿ ಮಾಡುವ ಭಕ್ತನ ಮನೆಯದು ಅಂದಣಗಿತ್ತಿಯ ಮನೆ (ಬಸವ. ೨೨೬); ಇವರೆಲ್ಲರು ಆ[ಅ]ಡುವ ಅಂದಣಗಿತ್ತಿಯ ಮನೆಯ ಉಂಬಳಿಕಾಱರಾದರು (ಮೋಳಿಮಾ. ೫೯೬); ಅನುಶ್ರುತವ ಮಾಡಿಹೆನೆಂದು ಉಪ್ಪರಗುಡಿಯನೆತ್ತಿ ಮಾಡುವ ಭಕ್ತನ ಮನೆಯು ಅಟ್ಟುಕ್ಕುವ ಅಂದಣಗಿತ್ತಿಯ ಮನೆ (ಚೆನ್ನವ. ೫೩–೧). 'ಅಂದಣಿಗ' ಪರಾ. [< ಅಂದಣಿಗ + –ಇತ್ತಿ ?]

**ಅಂದಣಿಗ** (ನಾ). ಆಹಾರವನ್ನು ಮಾರುವವನು: ಉಂಡವರ ನೋಡಿ ತಮ್ಮ ಬಂಧುಗಳ ನೋಡಿ ಅವರು ಜಂಗಮವೆಂದು ತನ್ನ ಸಂದೇಹದ ಕಟ್ಟಳೆ ಅವರೆಂದು ಮಾಡುವ ಅಂದಣಿಗರ ಜಗಭಂಡರ ಒಡೆಯರ ಕಟ್ಟಳೆ ವ್ರತದಂಗದ ಸಂಗವಲ್ಲ ಏಲೇಶ್ವರಲಿಂಗಕ್ಕೆ ದೂರ (ಏಲೇಶ್ವ. ೯೪); ತತ್ಪುರದೊಳಿರ್ದ ವಿಶಾಖನಂದಿ ಪಸಿವಂ ನಂದಿಸಲೆಂದು ಅಂ[ಪಾಠಾಂ. ಲಂ]ದಣಿಗರ ಮಂದಿರಕ್ಕೆ ಪೋಪವಂ ಮುಂದೆ (ವರ್ಧಪು. ೩–೧೨ ವ).

[ಅಂದಣ$_0$ + –ಇಗ. P ~ ? ಸಂ. ರಂಧನ = ಅಡಿಗೆ]

**ಅಂದಣಿಗೆ** (ನಾ). ಒಂದು ಊರಿನ ಹೆಸರು: ಹರಿರಾಣಾದ ಚನ್ನಗೌಂಡನುಂ ಬಾಡದ ಯಕ್ಕಮುಗೌಂಡನುಂ ಅಂದಣಿಗೆಯ ಕಲ್ಲಗೌಂಡನುಂ ನಿಡುಗುಂದಿಯ ಸಮಸ್ತ ಪ್ರಜೆ (ಕಕುಲ. ೧೭–೧೫; ?). [?]

**ಅಂದಪಡಿಸು** (ಕ್ರಿ). = ಅಂದಂಗೊಳಿಸು: ಇದರಲ್ಲಿ ಮುದ್ರಣದ ತಪ್ಪುಗಳು ಹೇರಳವಾಗಿ ಬಿದ್ದಿದ್ದುದರಿಂದ ಅವೆಲ್ಲವನ್ನೂ ತಿದ್ದಿ ಪುಸ್ತಕದ ರೂಪವನ್ನೂ ಆಕಾರವನ್ನೂ ಅಂದಪಡಿಸಿ, ಈ ಎರಡನೆಯ ಮುದ್ರಣವನ್ನು ಮಾಡಿಸಲಾಗಿದೆ (ಚಾವುಂಪು. ಪೀ. ೬). [ಅಂದ + ಪಡು$_1$ + –ಇಸು$_3$]

**ಅಂದಮಾರಯ್ಯ** (ನಾ). ಒಬ್ಬನ ಹೆಸರು: ಶ್ರೀ ಸನ್ದ ಬೆಳ್ಗೊಳದಲೆ ನಿನ್ದು × ಡನೆವಿಟ್ಟು ಅನ್ದಮಾರಯ್ಯ ಮನದಲಗ್ಗಳದೇವರೆಂಬರಂ ಕಾಣ್ಬ ಬಗೆಯಿನ್ದಂ (ಎಕ. II, ೪೬೭; 1000). [ಅಂದ + ಮಾರ + ಅಯ್ಯ]

**ಅಂದಮಾಸಲ್** (ನಾ). ಒಂದು ಊರಿನ ಹೆಸರು: ರಣಪಾರಗಾಮುಣ್ಡರುಂ ಅನ್ದಮಾಸಲ ಉತ್ತಮ ಗಾಮುಣ್ಡರುಂ ನವಿಲೂರ ನಾಱ್ಗಾಮುಣ್ಡರುಂ (ಎಕ. II, ೩೫–೮; 800). [?]

**ಅಂದಲ** 'ಅಂದಳ' ನೋ.

**ಅಂದವಡೆ** 'ಅಂದಂಬಡೆ' ನೋ.

**ಅಂದವಳಿ** (ಕ್ರಿ). ರೂಪುಗೆಡು; ಸ್ಥಿತಿಗೆಡು: ನೀನೇಕಂದವಳಿದೆ ರಣದೊಳಗೆ ಕಂದ (ಜೈಮಿಭಾ. ೧೩–೫೫). [ಅಂದ + ಅಳಿ$_1$ (< ಅಱಿ$_1$)]

**ಅಂದವಿಗ** (ನಾ). ಅಂದವುಳ್ಳವನು; ಸ್ವರೂಪವುಳ್ಳವನು: ಅಲ್ಲಮಪ್ರಭು ಸಿದ್ಧರಾಮರನು ಅಂದು ಭಾವಿಸಿ ನೋಡಿ ಇವರೇನಿಂದುವಾಳಿಯ ಸಗುಣನಿರ್ಗುಣದಂದವಿಗರೋ ಶಿವಶಿವಾ ಎನುತಿರ್ದುದಖಿಳಜನ (ಪ್ರಭುಲೀ. ೧೪–೧೩). [ಅಂದ + –ಇಗ]

**ಅಂದವಿಡು** (ಕ್ರಿ). ೧. ಚೆನ್ನಾಗಿ ಇಡು; ಕ್ರಮವಾಗಿ ಇಡು: ಮಂದರಾಚಲವದನು ಮೇರುವಿಗಂದವಿಟ್ಟನು ಮರಳಿ ಮಾರುತ ಬಂದನೊಬ್ಬನು ಬಳಿಕ ಶ್ರೀಪತಿಯೆಡೆಗೆ (ಸಂಭಪ. ೬–೪೦); ಬಂದರಾ ಚಿತ್ರಿಕರು ಕರಿಯ ಪೊಲಂದವಿಟ್ಟರು ಬಣ್ಣಬರಹಗಳಿಂದ ರಚಿಸಿದರಾನೆಯನು ಚೌದಂತಿಗಳ ನಿಲಿಸಿ (ಸಂಭಪ. ೨೦–೧೦). ೨. ನೆಮ್ಮದಿಗೊಳಿಸು; ಸಮಾಧಾನ ಮಾಡು: ಕುಂದುನಿಂದೆಗಳೊಳಗೊಂದಿದ ಪುರುಷರು ಬಂದಡೆ ತಮ್ಮ ಪೊಲವರ ಅಂದವಿಡುವ ಸದುಹೃದಯರ ತೆಜಹಿನೊಳು ಚಂದನವೃಕ್ಷಗಳಿಹವು (ಅಂಜಚ. ೨–೪೫); ಮಾರ್ಕಂಡೇಯಮುನಿ ಯಮನಂದನನ ನಿತಿಹಾಸಕಥೆಗಳಲಂದವಿಟ್ಟನು ಚಿತ್ತವನು ಖಯಖೋಡಿಗಳ ಕಳಿದು (ಕುವ್ಯಾಅ. ೧೫–೨೦). [ಅಂದ + ಇಡು$_1$]

**ಅಂದವಿಸು,** ಅಂದೈಸು (ಕ್ರಿ). ೧. ಅಂದವಾಗಿ ಮಾಡು; ಅಲಂಕರಿಸು: ಇಪ್ಪತ್ತೈದು ಗತಿಯೆಂಬ ಹೊಂದಿಗೆಯ ಸೋಪಾನಗಳ ಬಲಿದಂದವಿಸಿ[ಸೆ]ಯಲ್ಲಮನ ಪರಮಾನಂದಲೀಲಾಮೃತ ಸರೋವರವಾಯ್ತು ಜಗದೊಳಗೆ (ಪ್ರಭುಲೀ. ೨೫–೨೫). **ಅಂದೈಸು**: ೨. ಉತ್ತಮಪಡಿಸು: ಹಿಂದಣಿವರ ಕಥೆಗಳ ಕೇಳಿ ಸ್ವಗುಣವನಂದೈಸ ಮನ ವಚನಗಳೊಳು ಕೇಸರಿಯ ಮುಂದಣ ಸೊಣಗನಂದದಿ ನಾಚಿಕೊಳದೆಲೆ ಮಂದಮತಿಯೆ ಗುರುಸಿದ್ಧನೊಲಿವನೇ (ಕೈಕವ. ೭೨–೫). ೩. ಹುಟ್ಟಿಬರು; ಕಾಣಿಸಿಕೊ; ಆವಿರ್ಭವಿಸು: ಆ ನಿಶ್ಶಬ್ದದಿರವದೆಂದು ಎಂದಿರದಜಿಳೊಳ್ ನಾದವಂದೈಸಿತಾವ ವಿಧದಿಂದೆ ಯದನೊರೆವುದೆನಲಿಂತೆಂದನು (ಮಸೋವಿ. ೨–೬); ಭೆಳ್ಳಾಲಿಯಿಂದೆ ಕರ್ಪಾಲಿಯದಜಿಳೊಳ್ ಬಿಂಬವು ಅಂದೈಸಿತು (ಮಸೋವಿ. ೫–೫). ೪. ನಿರ್ಧರಿಯಿಸು: ಮನದಿರವನು ಅಂದೈಸಲರಿದೆನಲ್ ತಂದೆ ನೀವಜಿಸದೊಡೆ ಸಂದೇಹ ಬಿಡದೆನಗೆ (ಮಸೋವಿ.೧–೪೭). [ಅಂದ + –ಇಸು$_3$]

**ಅಂದವೇಱು** (ಕ್ರಿ). ಸೊಗಸು ಹೆಚ್ಚು; ಕಳೆಗೊಳ್ಳು: ವಿಮಲಬ್ರಹ್ಮರಶ್ಮಿಯಲಿ ಅಂದವೇಱಿದ ಗಡ್ಡ ದರ್ಭೆಗಳಿಂದ ನಿಜಿಯುಡಿಗೆಗಳ ನಾಟಕದಿಂದ (ಕುವ್ಯಾಅ. ೧೦–೨); ಕಂದಿದುವು ಮೋಜಿಗಳು ಗಂಗಾನಂದನ ದ್ರೋಣಾದಿ ಸುಜನರಿಗಂದವೇಱಿತು ಮುಸುಡು ಶಕುನಿ ಸುಯೋಧನಾದಿಗಳ (ಕುವ್ಯಾಸ. ೧೩–೪೨). [ಅಂದ + ಏಱು$_1$]

**ಅಂದಳ,** ಅಂದಣ$_1$, ಅಂದಲ (ನಾ). ಶಿಬಿಕೆ; ಪಲ್ಲಕ್ಕಿ; ಮೇನೆ; ಡೋಲಿ: "ಶಿಬಿಕಾ ಯಾಪ್ಯಯಾನಂ ಈ ೨ ಅಂದಳ" (ನಾಚಿರಾ. ೧೩೪); ಅಂದಳದ ಮುಂಧೆ ವಂದಿಸಿಕೊಂಡಿಹೆನೆಂದು ತ್ರಿವಿಧದ ಹೆಜಿಹಿಂಗಿ ಮಾಡುವ ನಿರ್ಬಂಧಿಗನ ನೋಡಾ (ಮೋಳಿಮಾ. ೫೯); ರಾಣಿಯ ವಾಸದಂದಳಕೆ ದಡ್ಡಿ ಮುಸುಂಕುವುದುಂಟು (ಪಾರ್ಶ್ವಪು. ೮–೯೩); ಅರಮನೆಗೆ ಪೋಪ ನೃಪರಂದಳದ ಗೊಂದಳದ ತರುಣಿಯರ ಮಣಿಭೂಷಣಾವಳಿಯ ಗಾವಳಿಯ (ಚಿಬಪು. ೪೨–೧೫). **ಅಂದಣ$_1$**: ನಡೆಮಾಡಂ ನಡೆಗೊಪ್ಪುವಶ್ವತತಿ ಚೆಂಬೊನ್ನಂದಣಂ ವಾಜಿ ಪೆರ್ವಿಡಿ ಪೇರಾನೆ ಸುಖಾಸನಂ ತುಱುಗೆ ಬಂದರ್ ಗಾಯಕರ್ ವಾದಕರ್ (ಮಲ್ಲಿಪು. ೫–೭೭); ಪತ್ತುವಂದಣಮುಂ ಕೆಂಪಿನ ಪೂವಂ . . . ಕನಸೊಳ್ ಕಾಣಲು ಬಾರದೈ (ಸೋಮೇಶ. ೭೦); ನವರತ್ನದಂದಣದೊಳು ಲತಾಂಗಿ ವಿರಾಜಿಸಲು (ಜೀವಂಚ. ೮–೨೫). **ಅಂದಲ**: ಬ್ರಹ್ಮರ್ಷಿಗಳಿಂದ ಆಚರಿಸಲ್ಪಟ್ಟ ವೇದೋಕ್ತ ಮಂತ್ರಗಳನ್ನು ದೂಷಿಸಿ ಅವರನ್ನು ಅಂದಲವನ್ನು ಹೊತ್ತುಕೊಂಡು ಬರುವುದಕ್ಕೆ ಕಟ್ಟು ಮಾಡಿದ ಪಾಪಾತ್ಮನಾದ ನೀನು (ಕೃವಾಉ. ೨೧); ಕಾಲುನಡಗೇಲಿ ಬರಲಾರೆ ತಮ್ಮಯ್ಯ ಬ್ಯಾಗನೇ ತರಿಸೋ ಅಂದಲವಾ (ಹುಟ್ಟಹ. ೪೯).
[ಸಂ. ಆಂದೋಲ]

**ಅಂದಳಸತ್ತಿಗೆ** (ನಾ). ೧. ಪಲ್ಲಕ್ಕಿ ಮತ್ತು ಛತ್ರಿ. ೨. ಪಲ್ಲಕ್ಕಿಯ ಮೇಲಿನ ಛತ್ರಿ: ಎರಡು ಪದಂಗಳಪಭ್ರಂಶಕ್ಕೆ—ಆಂದೋಳಛತ್ರಿಕಾ—ಅಂದಳಸತ್ತಿಗೆ (ಶಮದ. ೨೪೯ ಪ್ರಯೋ). [ಅಂದಳ + ಸತ್ತಿಗೆ]

**ಅಂದಾಜಾ** 'ಅಂದಾಜು' ನೋ.

**ಅಂದಾಜು,** ಅಂದಾಜಾ (ನಾ). ೧. ಊಹೆ; ಊಹಿಸಿದ ಪರಿಮಾಣ: ಇಂಥಾ ಭಾರೀ ಸಭೆಯು ಈ ಭಾಗದಲ್ಲೇ ಎಂದೂ ಸೇರಿದ್ದಿಲ್ಲ. ನಿನ್ನ ಅಂದಾಜೇನು? ಹತ್ತು ಸಾವಿರ ತಲೆಯು ಇರಬಹುದು, ಅಲ್ಲವೆ? (ನಡೆದಾ. I, ೩೪೯). ೨. ಒಂದು ವಸ್ತುವಿಗಾಗುವ ಬೆಲೆ, ಕೆಲಸಕ್ಕಾಗಿ ತಗುಲುವ ವೆಚ್ಚ ಮುಂತಾದವುಗಳ ಬಗೆಗೆ ಊಹೆ: ಇಂಥ ಮನೆಯನ್ನು ಕಟ್ಟಸುವುದಕ್ಕೆ ಕನಿಷ್ಠಪಕ್ಷ ಐವತ್ತುಸಾವಿರ ರೂಪಾಯಿಗಳಾದರೂ ಬೇಕಾಗಬಹುದೆಂದು ನನ್ನ ಅಂದಾಜು (ರೂಢಿ). **ಅಂದಾಜಾ**: ೧. ಸ್ವತ್ತಿನ ಖರೀದಿಯನ್ನು ಒಂದು ರೂಪಾಯಿಗಿಂತಲೂ ಕಡಿಮೆಯಾಗಿ ಅಂದಾಜಾ ಮಾಡಕೂಡದು (ಗ್ರಾಮಾಕ. ೬೧). **ಅಂದಾಜುಕಟ್ಟು** = ಒಂದು ವಸ್ತುವಿಗಾಗುವ ಬೆಲೆ, ಕೆಲಸಕ್ಕಾಗಿ ತಗುಲುವ ವೆಚ್ಚ ಮುಂತಾದವುಗಳ ಬಗೆಗೆ ಊಹೆಮಾಡು. **ಅಂದಾಜು ಮಾಡು** = ಅಂದಾಜು ಕಟ್ಟು: ಈ ಪುಸ್ತಕವನ್ನು ಮುದ್ರಿಸುವುದಕ್ಕೆ ಎಷ್ಟಾಗಬಹುದೆಂಬುದನ್ನು ಅಂದಾಜು ಮಾಡಿ ಹೇಳಿ (ರೂಢಿ).
[← **ಪಾರ.** ಅಂದಾಜ್ = ಪ್ರಮಾಣ, ತರ್ಕ; **ಹಿಂ. ಮರಾ.** ಅಂದಾಜ್]

**ಅಂದಾಜುಪಟ್ಟಿ** (ನಾ). ಲೆಕ್ಕದ ಅಂದಾಜನ್ನು ತಿಳಿಸುವ ಪಟ್ಟಿ.
[ಅಂದಾಜು + ಪಟ್ಟಿ$_2$]

**ಅಂದಾಜುಪತ್ರ** (ನಾ). = ಅಂದಾಜುಪಟ್ಟಿ: ನಿಮ್ಮ ಗೃಹಕೃತ್ಯದ ಅಂದಾಜುಪತ್ರದಲ್ಲಿ ಪೌಷ್ಟಿಕ ಆಹಾರಗಳಿಗೆ ಮೊದಲನೆಯ ಸ್ಥಾನ ಸಿಗಬೇಕು. (ಆಡುಸೌ. ೧೨೩). [ಅಂದಾಜು + ಪತ್ರ]

**ಅಂದಾಜುಬೆಲೆ** (ನಾ). ಊಹಿಸಿ ತಿಳಿಯಬಹುದಾದ ಬೆಲೆ: ನಾವು ನೋಡಿದ್ದ ಬೈಸಿಕಲ್ಲಿನ ಅಂದಾಜುಬೆಲೆ ಎಷ್ಟಿರಬಹುದು? (ರೂಢಿ).
[ಅಂದಾಜು + ಬೆಲೆ]

**ಅಂದಾದರ್ಬಾರು** 'ಅಂಧಾದರ್ಬಾರು' ನೋ.

**ಅಂದಾದಿ** (ನಾ). ಒಂದು ವಂಶದ ಹೆಸರು (?): ಅಂದಾದಿಯರ ನೊಂಬಿಯಂಬ್ಬಸೆಟ್ಟಿಯ ಮ್ಮಗಂ ನಿರುಗುನ್ದಸೆಟ್ಟಿಯುಂ (ಎಕ. IX, ಹೊಸಕೋ. ೧೦–೧೬; 1023). [?]

**ಅಂದಾದುಂದಿ** 'ಅಂಧಾದುಂದಿ' ನೋ.

**ಅಂದಿ** (ನಾ). ನೆಲ್ಲುಚಿಟ್ಟೆ; ಹೂಜಿ (?). [← ? **ತಮಿ.** ಅನ್ದು]

**ಅಂದಿಕೆ** (ನಾ). ಒಲೆ (?). [**ಸಂ.** ಅಂತಿಕಾ]

**–ಅಂದಿಗ** (ನಾ). ಆ ರೀತಿಯಾದವನು; ಅಂಥವನು: ಒಂದೊಂದೆ ರಸದ ಸೋಲಮದೊಂದೊಂದನೆ ಕೊಲ್ಲುಮೋವೊ ಲಂಪಳರಪ್ಪೆಮ್ಮಂದಿಗರಂ ಬಗೆವಂದದೆ ಕೊಂದಿಕ್ಕವೆ ಸಕಲವಿಷಯವಿಷಮವಿಷಂಗಳ್ (ಆದಿಪು. ೪–೭೩). 'ಒಂದಿಗ' ಪಠಾ. [ಅಂದ? + –ಇಗ]

**ಅಂದಿಗರ್ಚು** (ನಾ). ಸಂಧ್ಯಾಕಾಲದಲ್ಲಿ (ಗುರುವಿನ) ಪಾದವನ್ನು ತೊಳೆದು ಮಾಡುವ ಪೂಜೆ (?): ಮಠದ ವಿದ್ಯಾದಾನಕ್ಕೆ ತವ(ಮ)ಗೆ ನಡೆವ ಅಂದಿಗರ್ಚ ಕಾಣಿಕೆಯವೆರಡು ಗದ್ಯಾಣದ ತೆಱಿಯಂ ತತ್ಕಾಲದೊಳ್ ಬಿಟ್ಟರು (ಎಇ. XVI, ೮೫–೩೬; 1067).
[ಅಂದಿ$_0$+ ಕರ್ಚು$_2$ (< ಕಟ್ಟು$_1$). P ತಮಿ. ಅನ್ದಿ < ಸಂ. ಸಂಧ್ಯಾ]

**ಅಂದಿಗೆ** 'ಅಂದುಗೆ' ನೋ.

**ಅಂದಿಸು** (ಕ್ರಿ). ಎಟುಕಿಸು ; ನಿಲುಕಿಸು. **ಅಂದಿಸಿಕೊ** = ಎಟುಕಿಸಿಕೊ; ನಿಲುಕಿಸಿಕೊ : ಅಂದಿಸಿಕೊ ಹೆರರೆನಿಪರನು ಹೃದಯವಿಸ್ತರದೆ ಹೊಂದು ವಿಶ್ವಾತ್ಮತೆಯ (ಮಂಕುಕ. ೬೩೭). [ಅಂದು$_1$ + –ಇಸು$_3$]

**ಅಂದಿಹುಳು** (ನಾ). ಅಂದಿ ಎಂಬ ಹುಳು; ನೆಲ್ಲು ಚಿಟ್ಟೆ; ನೆಲ್ಲು ಹೂಜಿ (ಕ). [ಅಂದಿ + ಹುಳು (< ಪುೞು)]

**ಅಂದು$_1$** (ಕ್ರಿ). ೧. ಎಟುಕಿಸು ; ನಿಲುಕಿಸಿಕೊಳ್ಳು : ತಾಂಬೂಲಮಡಪುಗಳ್ ಅಂದಿಕೊಟ್ಟಳು ಅಂಬುಜಾನನೆ (ಬಾಹಾಕ. ೧೩–೪). ೨. ಎಟುಕು ; ನಿಲುಕು : ಸೌಂದರ್ಯವೊಂದು ದೈವರಹಸ್ಯ ಸೃಷ್ಟಿವೊಲು ನಿಂದಿರ್ಪುದದರಾಶೆಯೆನೆ ಜೀವಿತಾಶೆ ಅಂದುವುದು ಕಣ್ಣಿಗದು (ಮಂಕುಕ. ೪೭೯). **ಅಂದಿಕೊ** = ಎಟುಕಿಸಿಕೊ ; ನಿಲುಕಿಸಿಕೊ.

[ ← ? **ತೆಲು.** ಅಂದು]

**ಅಂದು$_2$** (ನಾ). ಆ ದಿನ; ಆ ವೇಳೆ; ಆಗ; ಹಿಂದೆ: ಭದ್ರಮಾಗಿದ ಧರ್ಮವನ್ದುವಟುಕ್ಕೆವನ್ದಿನಿಸಳ್ಕಲೋ (ಎಕ. II, ೩೧–೨ ; 650) ; ಕಾರ್ತಿಗೆ ಪುಣ್ಣಮೆ ಅನ್ದು ತಟುಕ್ಕಾಡಾ ಇಪ್ಪರ್ತತ್ತ್ಯುರ್ಕಂ (ಎಕ. III, ತಿರುಮು. ೧–೪ ; 726) ; ಅಂದಿದು ಸೀತೆಯೊಳ್ ನೆರೆದು ನಿಂದೆಡೆ ತತ್ಪರದೂಷಣರ್ಕಳಂ ಕೊಂದೆಡೆ (ಪಂಪಭಾ. ೪–೧೯) ; ದಿವಾಕರನಂದಿಂ ದಕ್ಷಿಣೋತ್ತರಾಯಣನಾದಂ (ಗಿರಿಕ. ೧–೫೩) ; ಸುರರ ಕಾರ್ಯದಲಂದು ಸಾರಥಿ ಸರಸಿಜೋದ್ಭವನಾಗನೇ (ಕುವ್ಯಾಕ. ೫–೩೨) ; ಅಂದಿನಿಂ ಚಂದ್ರಹಾಸಂ ಪಾಲಿಸುವನಿಳೆಯನು (ಜೈಮಿಭಾ. ೨೯–೧೨). **ಅಂದಂದು** = ಆಗಾಗ ; ಆಯಾ ವೇಳೆ; ಆಯಾ ದಿವಸ : ಅಂದಂದಿನ ದಂದುಗಕ್ಕೆ ಏವೇನೆವೆ ನಯ್ಯ (ಮಹದೇ. ೨–೨) ; ಬೆಳಗುಗಂದಂದಿಂಗೆ ಮಚ್ಚಿತ್ತಮಂ (ಅರ್ಧನೇ. ೧–೫). **ಅಂದು ತೊಟ್ಟು** = ಆಗಿನಿಂದ ಹಿಡಿದು ; ಆ ಗಿ ನಿಂ ದ ಲೂ : ಅಂದೇಕಪತ್ನೀವ್ರತಂ ನಿಶ್ಚಳಿತಂ ನೋಡಂದುತೊಟ್ಟಂದುವರಮದನೆ ದಲ್ ಭಾವಿಸುತಿರ್ಪನವ್ಯಾಕುಳಚಿತ್ತಂ (ರಸರ. ೩–೧೩೩).

[**ದೇ.** ‖ **ತಮಿ.** ಅನ್ರು, ಅನ್ರೈ ; **ಮಲ.** ಅನ್ನು ; **ಕೊಡ.** ಅಂದಿ ; **ತುಳು.** ಆನಿ, ಆಪಗ ; **ತೆಲು.** ಅಂತ ; **ಗೊಂಡಿ.** ಅನೀ, ಅಂತೀ ; **ಕುರುಖ್.** ಅಂತಿ ; **ಮಲ್ತೊ.** ಅಂದೆ, ಅನಿ]

**ಅಂದು$_3$** (ಅ). ಆ ಸಂದರ್ಭದಲ್ಲಿ ; ಆ ಪಕ್ಷದಲ್ಲಿ : ಅಂತು ಮಾಡಲಾಜದಂದು ತಪಂಬಡುವೆನೆಂದು ವಸುಭಾಗಭಟ್ಟಂ ಪ್ರತಿಜ್ಞಾಪೂರ್ವಕಂ ನುಡಿವುದುಂ (ಪಂಚತಂ. ೧೮–೧೫). [< ಅಂದು$_2$]

**ಅಂದುಕೆ** (ನಾ). ೧. ಸರಪಳಿ; ಬೇಡಿ. ೨. ಆನೆಯ ಕಾಲಿನ ಸರಪಳಿ; ನಿಗಳ. ೩. ಕಾಲಂದುಗೆ; ನೂಪುರ; ರುಳಿ. [**ಸಂ.**]

**ಅಂದುಗೆ,** ಅಂದಿಗೆ (ನಾ). ನೂಪುರ; ರುಳಿ; ಕಾಲಿನ ಕಡಗ: "ಶಿಂಜಿನಿ ನೂಪುರಮಂದುಗೆ ಮಂಜೀರಂ ಹಂಸಕಂ" (ವಸ್ತುಕೋ. ೬೬–೬) ; "ಕಟಿಲೆಂದು ಮಜ್ಜಿಗೆಯುಂ ಅಂದುಗೆಯುಮುಕ್ಕುಂ" (ಶಮದ. ಕಿ. ೧–೨೩ ವೃತ್ತಿ); ಅಂದುಗೆಯಂತೆ ಮೇಗಾಲಂ ಪತ್ತಿ ಸೊಪ್ಪುಗುಟ್ಟುವರ್ (ಧರ್ಮಾಮೃ. ೩–೬೩ ವ) ; ಉಡೆವಣಿಯ ತೊಡವು ಘಳಘಳಿಸುವಂದುಗೆಯಾನೆ ಮೃಡನ ಸುತನುಂ ದ್ವಿಜತನೂಜನೆಂದುಂ ತಾನೆ (ಬಸರ. ೧–೧೫೫); ಅಂದುಗೆ ಪೊಂಗೆಜ್ಜೆ ಪಾಯ್ಪಟ ಘಲುಘಲು ಅಂದದಿ ಕುಣಿವ ಗೋವಿಂದನ ಚರಣವ (ಪುರಂದ. ೨–೬೮–೩). **ಅಂದಿಗೆ :** "ಪಾಡಗಮಪ್ಪುದಂದಿಗೆ" (ಕಶರ. ೯) ; ಕಾಲ್ಸರದ ಅಂದಿಗೆಗಳ. . . ವಂದೇ ಕಾಲದೊಳ್ ಘಲ್ಲೆಂದು ಧ್ವನಿಗೊಡುವಂತೆ (ಸೌಗಂಧಿ. ೨೨೭–೬). [**ಸಂ.** ಅಂದುಕ]

**ಅಂದೇಶ** (ನಾ). ಕೇಡಾಗುವುದೆಂಬ ಭಯ,—ಸಂದೇಹ,—ಶಂಕೆ: ನಮ್ಮ ಕಡೆಯಿಂದ ಯೇನು ಆಗಬೇಕು ? ಆ ವಿವರ ಹೇಳಿದರೆ ಮಾಡಿ ಕೊಟ್ಟೇವು. ಈ ಬಗ್ಗೆ ಅಂದೇಶವಿಲ್ಲದೆ ಹೇಳಬೇಕು (ರಾಜೇಂದ್ರ. ೧೦೦) ; ವಿಪರೀತ ಮತಿಯಿಂದ ಇಂಥ ಉಪಯೋಗವಿಲ್ಲದ ದೂರದ ಅಂದೇಶವನ್ನು ತೆಗೆದುಕೊಂಡು ಮನಸ್ಸಿಗೆ ಉತ್ಸಾಹವನ್ನು ಕಡಿಮೆ ಮಾಡಿಕೊಳ್ಳಬಾರದು (ಕೃಷಿಪ್ರ. ೬೧) ; ಯಾವ ಅಂದೇಶವನ್ನೂ ಪಡದೆ ನಿರ್ವಂಚನೆಯಿಂದ ಎಲ್ಲವನ್ನೂ ಹೇಳಿ (ಮುಸುಗ. ೧೨೫) ; ನಿಮ್ಮಂಥವರ ಕೂಡ ವ್ಯವಹಾರ ಮಾಡಿದರೆ ಉಳಿತಾಯವಾಗುವ ಬದಲು ನನ್ನ ಅಂಗಡಿಗೇ ಅಳಿಗಾಲವೊದಗುವುದರಲ್ಲಿ ಅಂದೇಶವಿಲ್ಲ (ಕಗದ್ಯ. ೨–೩೪).

[**ಪಾರ.** ಅನ್ದೇಷಾ ; **ಹಿಂ.** ಅಂದೇಶಾ ; **ಮರಾ.** ಅಂದೇಶ್, ಅಂದೇಶಾ. / **ಸಂ.** ಸಂದೇಹ ?]

**ಅಂದೈಸು** 'ಅಂದವಿಸು' ನೋ.

**ಅಂದೋಜಿ** (ನಾ). ನಿಷೇಕಪ್ರಸ್ತದ ಮನೆಯಲ್ಲಿ ವಧೂವರರ ಉಪಯೋಗಕ್ಕಾಗಿ ಜೋಡಿಸಿ ಇಟ್ಟಿರುವ ತಿಂಡಿಯ ಸಾಮಗ್ರಿ : ನಂಜಕ್ಕನಿಗೆ ಅಂಧೋಜಿ ಸಾಮಾನುಗಳನ್ನು ಸಿದ್ಧಪಡಿಸುವುದೇ ಒಂದು ಕೆಲಸವಾಯಿತು (ಕೀಲುಗೊಂ. ೪೧) ; ಅಂದೋಜಿ ಸಾಮಾನುಗಳನ್ನೂ ಬೆಳ್ಳಿಯ ತಾಂಬೂಲದ ತಟ್ಟೆ ಪರಿಕರಗಳನ್ನೂ ಕೊಂಡು ತಂದಿದ್ದಳು (ಕಾಮಿಕಾಂ. ೧೬೦). [< ಅಂದ + ಓಜೆ ?]

**ಅಂಧ** (ನಾ). ೧. ಕುರುಡ; ಕಣ್ಣು ಕಾಣದವನು. ೨. ಕತ್ತಲೆ; ಮಬ್ಬು. ೩. ಕದಡಿದ ನೀರು ; ನೀರು. ೪. = ಅಂಧಕಾಸುರ. [**ಸಂ.**]

**ಅಂಧಂತಮುಸ್ಸು** (ನಾ). = ಅಂಧತಮುಸ ೨ : ಒಳಗಿನ ಈ ಕತ್ತಲೆಯು ಈ ಅಂಧಂತಮುಸ್ಸು ಅವನನ್ನು ನಿರ್ವಿಣ್ಣನಾಗಿ ಮಾಡಿತು (ಸಮುಜೀ. ೯೨೩). [**ಸಂ.** ಅಂಧತಮುಸ]

**ಅಂಧಕ** (ನಾ). ೧. ಕುರುಡ : ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ (ಬಸವ. ೫೯) ; ತನುವಿಕಾರಿಯನಂಗಹೀನನ ಪಂಗುಳಾಂಧಕನ. . .ಕಾಣ್ಬುದು ಮಹೀಶರಿಗಂಗವಲ್ಲೆಂದ (ಕುವ್ಯಾಉ. ೩–೧೧೭). ೨. = ಅಂಧಕಾಸುರ. ೩. ಕತ್ತಲೆ. ೪. ನೀರು. ೫. ಯದುವಂಶದಲ್ಲಿ ಹುಟ್ಟಿದ ಒಬ್ಬ ಕ್ಷತ್ರಿಯ. ೬. ಒಂದು ದೇಶದ ಹೆಸರು. [**ಸಂ.**]

**ಅಂಧಕಮರ್ದಕ** (ನಾ). ಅಂಧಕಾಸುರನನ್ನು ಮರ್ದಿಸಿದವನು ; ಶಿವ. [ಅಂಧಕ + ಮರ್ದಕ]

**ಅಂಧಕವ್ಯಾಪಾರ** (ನಾ). ಕುರುಡು ಕೆಲಸ ; ಕುರುಡು ದರ್ಬಾರು : ಔರಂಗಜೇಬನು ನಮ್ಮ ದೇಶೀಯರ ಮೇಲೆಯೇ ಅಲ್ಲದೆ ಮುಸಲ್ಮಾನ ಗುಂಪಿಗೆ ಸೇರಿದ ಷಾಹಿ ಮೊದಲಾದ ದೊರೆಗಳ ಮೇಲೆಯೂ ತೋರಿಸಿದ ಅಂಧಕವ್ಯಾಪಾರದ ರಾಜತಂತ್ರವು ಮೊಗಲರ ಆಳಿಕೆಗೆ ಇದ್ದ ಅಲ್ಪಸ್ವಲ್ಪ ಪ್ರಜಾನುರಾಗವನ್ನೂ ಕೆಡಿಸಿ (ಪಾಳೆಗಾ. ೧೫). [ಅಂಧಕ + ವ್ಯಾಪಾರ]

**ಅಂಧಕಾರ** (ನಾ). ಕತ್ತಲೆ. [**ಸಂ.**]

**ಅಂಧಕಾರಾತಿ** (ನಾ). ಅಂಧಕಾಸುರನ ಶತ್ರು ; ಶಿವ.

[ಅಂಧಕ + ಅರಾತಿ]

**ಅಂಧಕಾಸುರ** (ನಾ). ಅಂಧಕನೆಂಬ ರಾಕ್ಷಸ. [ಅಂಧಕ + ಅಸುರ]

**ಅಂಧಕಿ** (ನಾ). ಕುರುಡಿ. [ಅಂಧಕ + –ಇ$_2$]

**ಅಂಧತಮುಸ** (ನಾ). ೧. ದಟ್ಟವಾದ ಕತ್ತಲೆ. ೨. ಅಜ್ಞಾನ : ನಿರಂತರಮಾ ಭೂಪನೊಳಿರ್ದುದಂಧತಮುಸಂ (ಶಾಂತಿಪು. ೧೦–೧೫೩). ೩. ಒಂದು ನರಕದ ಹೆಸರು. [**ಸಂ.**]

**ಅಂಧತಮಿಸ್ರ** (ನಾ). = ಅಂಧತಮುಸ ೩ : ಪರಮಪಾತಕರುರುಳ್ವರಂಧತಮಿಸ್ರ ನರಕದಲಿ (ಅಮೃತ. ೮–೧).

[ಅಂಧ + ತಮಿಸ್ರ. **P ಸಂ.** ಅಂಧತಾಮಿಸ್ರ]

**ಅಂಧತೆ** (ನಾ). ಕುರುಡು. [**ಸಂ.** ಅಂಧತಾ]

**ಅಂಧನೃಪಾಲ** (ನಾ). ಕುರುಡ ದೊರೆ ; ಧೃತರಾಷ್ಟ್ರ.

[ಅಂಧ + ನೃಪಾಲ]

**ಅಂಧಪಾಷಾಣ** (ನಾ). ಲೋಹಾಂಶವಿಲ್ಲದ ಕಲ್ಲು : ದುರಾತ್ಮ ಪರಿ

ಕಲ್ಪಿತಮತಾವಲಂಬಿಗಳ್ ಮುಕ್ತಿಯಂ ಬಯಸುವಂದಂ ನೀರೊಳ್ ಬೆಣ್ಣೆಯಜಸುವಂತಂಧಪಾಷಾಣದೊಳ್ ಪೊನ್ನನಜಸುವಂತಕ್ಕುಂ (ಚಾವುಂಉ. ೩೯೧); ಅವಜಸೊಳೆಂತಂಧಪಾಷಾಣಂಗಳೊಳ್ ಸುವರ್ಣಪಾಷಾಣಮಿರ್ಪುದಂತಭವ್ಯರಾಶಿಯೊಳಗೆ ಭವ್ಯಜೀವಂಗಳೆಂಬಿವಿರ್ಕುಂ (ಜೀವಸಂ.೨–೭ ವ).
[ಅಂಧ + ಪಾಷಾಣ]

**ಅಂಧಯಷ್ಟಿ** (ನಾ). ಕುರುಡನಿಗೆ ಸಹಾಯವಾದ ದೊಣ್ಣೆ; ಕುರುಡನ ಕೈಯ ಕೋಲು : ಎಮಗಂಧಯಷ್ಟಿಯಾಗಿರ್ದ ಮಗನೆ ನೀನುಳ್ಳೊಡೆಲ್ಲಮೊಳವು (ಗದಾಯು. ೩–೭೯). [ಅಂಧ + ಯಷ್ಟಿ]

**ಅಂಧರಾಣ್ಣಂದನ** (ನಾ). ಧೃತರಾಷ್ಟ್ರನ ಮಗ; ದುರ್ಯೋಧನ : ಅಂಧರಾಣ್ಣಂದನನಲ್ಲದುಂತು ತಲೆಯುರ್ಚುಗುಮೇ ರಣರಂಗಭೂಮಿಯೊಳ್ (ಪಂಪಭಾ. ೧೩–೭೫). [**ಸಂ.** (ಅಂಧರಾಜ್ + ನಂದನ)]

**ಅಂಧಲಾವುಕನ್ಯಾಯ** (ನಾ). ಕುರುಡನಿಗೆ ಲಾವುಗೆಹಕ್ಕಿ ಸಿಕ್ಕಿದಂತೆ ಒಂದು ಆಕಸ್ಮಿಕ ಘಟನೆ : ವಿಚಾರಿಸಿ ನೋಡೆ ಕಾಕತಾಳೀಯದೆ ವಾಚ್ಯಮೊಂದೆರಡು ಕೂಡೆ ನಿರ್ಘರ್ಷಿಪೊಡಂಧಲಾವುಕನ್ಯಾಯದೆ ಭಾವಮೊಂದೆರಡು ಲೇಸೆನೆ ಪೇೞ್ದುಜದಿರ್ಪುದೊಪ್ಪಮೇ (ಚಂದ್ರಪ್ರ. ೧–೪೮).
[ಅಂಧ + ಲಾವುಕ + ನ್ಯಾಯ]

**ಅಂಧಶ್ರದ್ಧೆ** (ನಾ). ಕುರುಡು ನಂಬಿಕೆ; ವಿಮರ್ಶೆಯಿಲ್ಲದ ವಿಶ್ವಾಸ.
[ಅಂಧ + ಶ್ರದ್ಧೆ]

**ಅಂಧಾದರ್ಬಾರು,** ಅಂದಾದರ್ಬಾರು (ನಾ). ಕುರುಡು ಆಡಳಿತ; ಅವ್ಯವಸ್ಥೆಯಾದ ಆಡಳಿತ : ನನ್ನ ಸ್ನೇಹಿತ ಅಂಧಾದರ್ಬಾರು ಮಾಡಿ ಇದ್ದದ್ದನ್ನೆಲ್ಲಾ ಕಳೆದುಕೊಂಡ (ರೂಢಿ). **ಅಂದಾದರ್ಬಾರು** : ಅಂದಾದರ್ಬಾರು! ಉಣ್ಣು ತಿನ್ನುವ ವಿಷಯದಲ್ಲಿ ಹಳೆಯ ಕ್ರಮಗಳಂತೆ ಡೌಲಾಗಿ ನಡೆಸಿದವರು (ಜಾರುಬಾ. ೧೪೧).
[ಅಂಧಾ$_0$ (< **ಸಂ.** ಅಂಧ) + ದರ್ಬಾರು]

**ಅಂಧಾದುಂದಿ,** ಅಂದಾದುಂದಿ (ನಾ). ಅವಶ್ಯವಾದದ್ದಕ್ಕಿಂತ ಮೀರಿದ ಖರ್ಚು; ದುಂದು ವೆಚ್ಚ. **ಅಂದಾದುಂದಿ** : ಪ್ರಾಂತದ ಮತ್ತು ಮಧ್ಯವರ್ತಿ ಸರಕಾರದ ಅಂದಾದುಂದಿ ಕಾರಭಾರ, ಮಿಲಿಟರಿ ಜನರ ದುಂದುಗಾರಿಕೆ, ಕಾಳಾಬಜಾರಿಗಳ ನಿರ್ಲಜ್ಜಲೋಭ ಮುಂತಾದ್ದರಿಂದ (ಅನ್ನ. ೩೭೭); ಗಂಡನ ಅಂದಾದುಂದಿಯ ಕಡೆಗೆ ಕುರುಡುಗಣ್ಣು ಮಾಡಿ ಕುಳಿತಿದ್ದಳು (ಗೀಚುಗೆ. ೬೧).
[← **ಹಿಂ.** ಅಂಧಾಧುಂಧ್; **ಮರಾ.** ಅಂಧಾಧುಂದ್, ಅಂದಾಧುಂದೀ]

**ಅಂಧಾವಸ್ಥೆ** (ನಾ). ಕುರುಡತನ; ಕುರುಡಾದ ಸ್ಥಿತಿ.
[ಅಂಧ + ಅವಸ್ಥೆ]

**ಅಂಧಾಸುರ** (ನಾ). = ಅಂಧಕಾಸುರ. [ಅಂಧ + ಅಸುರ]

**ಅಂಧಾಸುರಭೇದಿ** (ನಾ). = ಅಂಧಾಸುರಾಂತಕ.
[**ಸಂ.** ಅಂಧಾಸುರಭೇದಿನ್ (ಅಂಧಾಸುರ + ಭೇದಿನ್)]

**ಅಂಧಾಸುರಾಂತಕ** (ನಾ). ಅಂಧಕಾಸುರನನ್ನು ಕೊಂದವನು; ಶಿವ : ಕುಸುಮದಲಿ ರಿಪುಗಣಭಯಂಕರನರ್ಚಿಸಿದನಂಧಾಸುರಾಂತಕನ (ಕುವ್ಯಾಅ. ೬–೪೩). [ಅಂಧಾಸುರ + ಅಂತಕ]

**ಅಂಧು** (ನಾ). ಬಾವಿ : ಸಿಂಧುವನ್ನಂಧುವೆನೆ ತಿಳಿದು ಛಾಯಾಗ್ರಹವ ಕೊಂದು ಲಂಕಿಣಿಯ ಮರ್ದಿಸಿ ನಿಶೆಯೊಳಾ ಧರಾನಂದನೆಯ ನೋಡಿ . . . ಕಪಿವೃಂದಮಂ ಹರುಷಗೊಳಿಸಿದ (ವೆಂಕಾರಾ. ೫–೧–೨). [**ಸಂ.**]

**ಅಂಧುಕವರ್ಣ** (ನಾ). ಮಾಸಲುಬಣ್ಣ; ಕಂದುಬಣ್ಣ : ವಯಸ್ಸು ಒಂದೇ ಆಗಿದ್ದರೂ ಮೋರೆಯ ಕಣ್ಣು ಮೂಗುಗಳ ಸ್ಥಿತಿ ಹೆಚ್ಚುಕಡಿಮೆಯಾಗದಿದ್ದರೂ ಆಕಾರವು ಸಮವಾಗಿದ್ದರೂ ಬಣ್ಣವೊಂದು ಮಾತ್ರ ರಸಮಯವಾಗಿತ್ತು. ಕಮಲೆಯ ಅಂಧುಕವರ್ಣವು ಈ ತೆನೆತೆನೆಯಾಗಿ ಬಳುಕುತ್ತಿರುವ ಗೌರಕಾಯವನ್ನು ಹೇಗೆ ಸಲ್ಲಿಸಬೇಕು? (ರಕ್ತಧ್ವ. ೩೩೭).
[ಅಂಧುಕ್$_0$ + ವರ್ಣ. **P ಮರಾ.** ಅಂಧುಕ್ = ಕಂದುಬಣ್ಣ]

**ಅಂಪಕಪೋಷಣ** (ನಾ). ಬೀಳ್ಕೊಡುವ ಸಮಯದಲ್ಲಿ ಕೊಡುವ ಉಡುಗೊರೆ: ನವರಾತ್ರಿಯಲ್ಲಿ ಕಾಳೆಗವಂ ಮಾಡಿದ ಜಟ್ಟಿಗಳಿಗೆ ಪರಸ್ಪರ ವೈಷಮ್ಯವಿರಬಾರದೆಂದು ಒಟ್ಟುಗೂಡಿಸಿ ಊಟವಂ ಮಾಡಿಸಿ ಅಂಪಕಪೋಷಣವಂ ಕೊಟ್ಟು ಕಳುಹಿಸಿದರು (ಮಹಾವಂ. I, ४०).
[← **ತೆಲು.** ಅಂಪಕ (= ಬೀಳ್ಕೊಡುವುದು) + ಪೋಷಣ]

**ಅಂಪಯ್ಯು** (ಕ್ರಿ). ನಿರೂಪಿಸು (?) : ಅಂಪಯ್ಯಲ್ಬಾರದಂಚತ್ಪರಮಪದದ ಸೂತ್ರಂ ಶಿವಜ್ಞಾನನೇತ್ರಂ . . . ಪಂಪಾಕ್ಷೇತ್ರಂ ವಿರಾಜಚ್ಛ್ರುತಿತತಿ ಮಕುಟಸ್ತೋತ್ರಪಾತ್ರಂ ಪವಿತ್ರಂ (ಉದ್ಭಟ. ೩–೨೫). [?]

**ಅಂಪು** ‘ಅಣ್ಪು’ ನೋ.

**ಅಂಬಕ** (ನಾ). ೧. ಕಣ್ಣು. ೨. ಎರಡು ಎಂಬ ಸಂಖ್ಯೆಗೆ ಒಂದು ಸಂಕೇತ. [**ಸಂ.**]

**ಅಂಬಕದ್ಯುತಿ** (ನಾ). ಕಣ್ಣಿನ ಹೊಳಪು. [ಅಂಬಕ + ದ್ಯುತಿ]

**ಅಂಬಕವಾರಿ** (ನಾ). ಕಣ್ಣೀರು. [ಅಂಬಕ + ವಾರಿ]

**ಅಂಬಕಳ,** ಅಂಬಳಕ (ನಾ). ಅಂಬಲಿಗೆ ಮಜ್ಜಿಗೆಯನ್ನು ಸೇರಿಸಿ ಮಾಡಿದ ಒಂದು ಬಗೆಯ ಗಂಜಿ : ಮಾದರ ಚೆನ್ನನೊಡನುಂಡೆವೆಲೆ ಚೋಳ ಕೇಳಂಬಕಳದ ಸವಿಯನದನೇನನೆಂದಪೆಂ (ಚೆನ್ನರ. ೮೩–೩); ತಣಿದೆನಳಿಯಂಬಕಳಕೆ ಮನವೆಳಸಿತ್ತು (ಸಿದ್ಧರಾ. ೨–೩೧); ಶ್ರೀಕಂಠನಿತ್ತಂಬಕಳವುಂಟು (ರೇವಣ. ೫೮–೫೩). **ಅಂಬಳಕ** : ಜಂಗಮನಿವಹಂ ಮಿಸುಪಂಬಳಕಮನಾರೋಗಿಸಿ ತಣಿಗುಂ (ವೃಷವಿ. ೧೯–೬).
[< ಅಮ್ಲ + ಕಜ್ಜಿ ?. ‖ **ತೆಲು.** ಅಂಬಕಳಮು]

**ಅಂಬಟ** (ನಾ). ನಾಯಿಂದ; ಕ್ಷೌರಿಕ : “ನಾವಿದ” (ಚತುನಿ. ಕಿ. I, ೬೧).
[**ಸಂ.** ಅಮ್ಬಷ್ಠ. / **ತಮಿ. ಮಲ.** ಅಮ್ಬಟ್ಟ]

**ಅಂಬಟೆ,** ಅಂಬಾಡೆ, ಅಮಟೆ (ನಾ). ಉಪ್ಪಿನಕಾಯಿ ಮೊದಲಾದವುಗಳಿಗೆ ಉಪಯೋಗಿಸುವ ಒಂದು ಬಗೆಯ ಹುಳಿಯಾದ ಕಾಯಿ ಮತ್ತು ಅದರ ಮರ : ಕಮ್ಮಿಪ್ಪ ಸುಭದ್ರೆ ಮಾಮಿಡಿ ಕರಂಜಿಕೆಯಂಬಟೆ ನಿಂಬೆ ನೆಲ್ಲಿಗಾಯ್. . . ಅರೆಮಾದುಫಲಂಗಳಾದಿಯಾದುಪ್ಪಿನಕಾಯ್ಗಳಂ (ಲೀಲಾವ. ೫–೭೧); ಇದಜಂತೆ ನೆಲ್ಲಿ ಹಿಪ್ಪಲಿ ಕರಂಜಿಗೆ . . . ತದುಕಂಬಟೆಯ ಕಾಯ್ಗಳಿಂದ . . . ಉಪ್ಪಿನಕಾಯ್ಗಳಂ ಮಾಳ್ಪುದು (ಸೂಪಶಾ. ೩–೧೬); ನಿಂಬೆಯಂಬಟೆ ಮಾತುಳಂಗ ವಿಳಂಗ ನಾರಂಗ (ತೊರರಾ. ೫–೪–೬); ಬೊಬ್ಬುಲಿ ಮಾವಂಬಟೆ ಕಕ್ಕೆ ಬಿಕ್ಕೆ ಬಕುಳಂ (ರಾಜಶೇ.೫–೫೬); ದೂರದ ಮಾವಿಗಿಂತ ಹತ್ತಿರದ ಅಂಬಟೆ ಲೇಸು (ಗಾದೆ). **ಅಂಬಾಡೆ** (ಗಂಗಾವು). **ಅಮಟೆ** : ಹುಣಿಸೆ, ಅಮಟೆ, ಅರೆಮಾದಳ . . . ಘಮಘಮಿಸುತ್ತ (ಸೌಗಂಧಿ. ೩೭–೧೨); ನಿಂಬೆ ಮಾದಲ ಮಾವು ಹಿರಳೆಯಿಂಬಾದ ಅಮಟೆಗಳನ್ನು ಚಪ್ಪರಿಸಿದರು (ಸೌಗಂಪ. ೨–೯).
[< ಅಮ್ಲ + ?. / **ತುಳು.** ಅಂಬಡೆ]

**ಅಂಬಟ್ಟಕಮ್ಮ** (ನಾ). ಕ್ಷೌರಿಕ ವೃತ್ತಿ (?) : ರೇವನ ಕೆಜ಼ೆಯ ಕೆಬಿಗೊಮ್ಮತ್ತರ್ ಗುಣ್ಣುಮೊಗೆಯೊಮ್ಮತ್ತರ್ ಮಣಲಿಯೊಮ್ಮತ್ತರ್ ಕೇಸರಿಯೊಮ್ಮತ್ತರಮ್ಬಟ್ಟಕಮ್ಮ ಕುಜ಼ಿಯಪ × × ಮತ್ತರ್ (ಎಕ. VII, ಶಿವಮೊ. ೧೧೫–೧೩; ?).
[ಅಂಬಟ್ಟ$_0$ (< **ಸಂ.** ಅಂಬಷ್ಠ ?) + ಕಮ್ಮ. **P ತಮಿ.** ಅಮ್ಬಟ್ಟ = ಕ್ಷೌರಿಕ]

**ಅಂಬತ್ತಕ್ಕಿನಾಡು** (ನಾ). ಒಂದು ನಾಡಿನ ಹೆಸರು : ನಮಗೆ ಸಲುವ ಅಂಬತ್ತಕ್ಕಿನಾಡಿನೊಳಗಣ ಕತ್ತರಿಕುಪ್ಪೆಯ ಚತುಃಸೀಮೆಗೆ ಉಳ್ಳಂತಾ

ಗದ್ದೆ ಬೆದ್ದ(ಲ)ಲು ಆಣೆ ಅಚ್ಚುಕಟ್ಟು ನಿಧಿನಿಕ್ಷೇಪ ಜಲಪಾಷಾಣ (ಎಕ. X, ಚಿಂತಾಮ. ೮೧–೧೨ ; 1413). [ಅಂಬತ್ತಕ್ಕಿ₀ + ನಾಡು]

**ಅಂಬರ** (ನಾ). ೧. ಬಟ್ಟೆ ; ಅರಿವೆ. ೨. ಆಕಾಶ. ೩. ಸೊನ್ನೆಯನ್ನು ಸೂಚಿಸುವ ಸಂಕೇತಗಳಲ್ಲಿ ಒಂದು. ೪. ಹತ್ತಿರ ; ನೆರೆಹೊರೆ. ೫. ಕಾಗೆ ಬಂಗಾರ ; ಅಭ್ರಕ. ೬. ಒಂದು ಬಗೆಯ ಸುಗಂಧದ್ರವ್ಯ. ೭. ಅರಳೆ; ಹತ್ತಿ. ೮. ಹಾಸಿಗೆ (?). ೯. [ಛಂದ] ತಗಣ ; – – ᴗ ಎಂಬ ಲಕ್ಷಣದ ಅಕ್ಷರಗಣ. [ಸಂ.]

**ಅಂಬರಕುಸುಮ** (ನಾ). ಆಕಾಶದಲ್ಲಿಯ ಹೂವು ; ಗಗನಕುಸುಮ ; ಅತ್ಯಂತ ಅಸಂಭವವಾದ ವಸ್ತು. [ಅಂಬರ + ಕುಸುಮ]

**ಅಂಬರಗಮನ** (ನಾ). ೧. ಆಕಾಶದಲ್ಲಿ ಸಂಚರಿಸುವುದು ; ಗಗನ ಸಂಚಾರ. ೨. ಆಕಾಶದಲ್ಲಿ ಸಂಚರಿಸುವವನು ; ಗಗನಗಾಮಿ. [ಅಂಬರ + ಗಮನ]

**ಅಂಬರಚಕ್ರ** (ನಾ). ಗಗನಮಂಡಲ ; ಆಕಾಶ. [ಅಂಬರ + ಚಕ್ರ]

**ಅಂಬರಚರ** (ನಾ). ಅಂತರಿಕ್ಷದಲ್ಲಿ ಸಂಚರಿಸುವವನು ; ಖಚರ ; ವಿದ್ಯಾಧರ. [ಅಂಬರ + ಚರ]

**ಅಂಬರಚರವಿದ್ಯೆ** (ನಾ). ಆಕಾಶದಲ್ಲಿ ಸಂಚರಿಸುವ ಶಕ್ತಿಯನ್ನು ಕೊಡುವ ವಿದ್ಯೆ ; ಗಗನಗಾಮಿನೀವಿದ್ಯೆ. 'ಅಂಬರಚರವಿದ್ಯೆಂಬಡೆ' ಪರಾ. [ಸಂ. ಅಂಬರಚರವಿದ್ಯಾ (ಅಂಬರಚರ + ವಿದ್ಯಾ)]

**ಅಂಬರಚರವಿದ್ಯೆಂಬಡೆ** (ಕ್ರಿ). ಆಕಾಶದಲ್ಲಿ ಸಂಚರಿಸುವ ವಿದ್ಯೆಯನ್ನು ಹೊಂದು : ನೆಲದೊಳ್ ಮೃದುಪಾದವನಿಡೆ ನೋವುದೆನುತ ಕಡು ಚದುರಿಂದಂಬರಚರವಿದ್ಯೆಂಬಡೆದೆಯ್ದುವ ತೆಜನಾಗಿ (ಜಯಕಾ. ೨–೫೧). [ಅಂಬರಚರವಿದ್ಯೆ + ಪಡೆ₁]

**ಅಂಬರಚಿಕುರ** (ನಾ). ವ್ಯೋಮಕೇಶ ; ಶಿವ : ಅಂಬರಚಿಕುರ ದಿಗಂಬರ ಗಜಚರ್ಮಾಂಬರ ಲೀಲಾಡಂಬರ ಶರಣಹೃದಂಬರ (ಉದ್ಭಟದೇ. ೬–೩೬). [ಅಂಬರ + ಚಿಕುರ]

**ಅಂಬರಚುಂಬಿ** (ಗು). ಆಕಾಶವನ್ನು ಮುತ್ತಿಡುವಂಥ ; ತುಂಬ ಎತ್ತರವಾದ. [ಸಂ. ಅಂಬರಚುಂಬಿನ್ (ಅಂಬರ + ಚುಂಬಿನ್)]

**ಅಂಬರತಳ** (ನಾ). ಗಗನ ಪ್ರದೇಶ : ಅಂಬರತಳದೊಳ್ ವರತಾರಾ ಪರಿಗತ ಶಶಧರನಂತೊಪ್ಪಿರೆ (ಕವಿರಾ. ೨–೧೦). [ಅಂಬರ + ತಳ₂]

**ಅಂಬರಪಂಚಕ** (ನಾ). ಹೃದಯಾಕಾಶ, ಪರಾಕಾಶ, ಮಹಾಕಾಶ, ತತ್ತ್ವಾಕಾಶ, ಸೂರ್ಯಾಕಾಶ ಎಂಬ ಐದು ಆಕಾಶಗಳು : ಅಂಬರ ಪಂಚಕದಿರವ ಪೇಳುವೆನೆಲೆ ಕಂಬುಕಂಧರಿ ಬಿಡದಾಲಿಸು (ವೇದಾಂಪ. ೪–೬–೧). [ಅಂಬರ + ಪಂಚಕ]

**ಅಂಬರಮಣಿ** (ನಾ). ಸೂರ್ಯ. [ಅಂಬರ + ಮಣಿ]

**ಅಂಬರವೀಥಿ** (ನಾ). ಆಕಾಶಮಾರ್ಗ. [ಅಂಬರ + ವೀಥಿ]

**ಅಂಬರಶಿರೋರುಹ** (ನಾ). = ಅಂಬರಚಿಕುರ : ಅಂಬರಶಿರೋರುಹ ದಿಗಂಬರ ರಮಾವರ ಕಳಂಬ ರವಿಜಾತಹರ ತುಂಬುರ ಸುಗೀತಾಡಂಬರ ಗಣವ್ರಜ ಕುಟುಂಬ (ರಾಜಶೇ. ೧೩–೫೪). [ಅಂಬರ + ಶಿರೋರುಹ]

**ಅಂಬರಸ** (ನಾ). ಒಬ್ಬನ ಹೆಸರು : ಗಜಾಂಕುಶಕುಳತಿಳಕಂ ಪ್ರಭುಕೇಸರಿ ನಾಯಕರುಂ ಮಗನಂಬರಸನುಂ (ಎಇ. XXVII, ೧೫–೩೪ ; 1114). [ಅಂಬೆ ? + ಅರಸ]

**ಅಂಬರಾಂಬರ** (ನಾ). ಆಕಾಶವೇ ವಸ್ತ್ರವಾಗಿ ಉಳ್ಳವನು ; ದಿಗಂಬರ ; ಶಿವ. [ಅಂಬರ + ಅಂಬರ]

**ಅಂಬರಾಪಗೆ** (ನಾ). ೧. ಆಕಾಶದಲ್ಲಿ ಹರಿಯುವ ನದಿ ; ದೇವಲೋಕದ ಗಂಗಾನದಿ. ೨. ಗಂಗಾನದಿ. [ಅಂಬರ + ಆಪಗೆ]

**ಅಂಬರಿ** (ನಾ). ಬರೆಯುವುದಕ್ಕಾಗಿ ಸಿದ್ಧಪಡಿಸಿದ ಬಟ್ಟೆ ; ಕಡಿತ : "ಕಡಿತಮಂಬ [ಪಾಠಾಂ. ಖ]ರಿಯಕ್ಕು ಬಳಪಮುದು ಶುಭ್ರೋಪಲಂ" (ಮಂಗರಾ. ೧೦೬–೧೫). [ಸಂ. ಅಂಬರ ? ]

**ಅಂಬರಿಕೆ** (ನಾ). "ತರಗೆಲೆಯಂತಿರುವ ಮೀನು" (ಕರಾ). [?]

**ಅಂಬರೀಷ** (ನಾ). ೧. ಹುರಿಯುವ ಓಡು ; ಬಾಣಲೆ. ೨. ದಾನಶೂರನೂ ವಿಷ್ಣುಭಕ್ತನೂ ಆದ ಸೂರ್ಯವಂಶದ ಒಬ್ಬ ರಾಜ. ೩. ವಿಷ್ಣು. ೪. ಶಿವ. ೫. ಸೂರ್ಯ. ೬. ಪಶ್ಚಾತ್ತಾಪ. ೭. [ಜೈನ] ಒಂದು ನರಕದ ಹೆಸರು. ೮. ಯುದ್ಧ. ೯. ಎಳೆಯ ವಯಸ್ಸಿನ ಪ್ರಾಣಿ ; ಮರಿ. ೧೦. ಅಂಬಟೆಮರ. [ಸಂ.]

**ಅಂಬರು** (ನಾ). ಹಾಲುಮಡ್ಡಿಯಂತಹ ಒಂದು ಬಗೆಯ ಸುಗಂಧದ ಮೇಣ : ಲಕ್ಷಾಂತರ ವರುಷಗಳ ಹಿಂದೆ ಅಂಬರು ಆಗುವ ಮರಗಳು ಭೂಮಿಯ ಮೇಲೆ ಬೆಳೆಯುತ್ತಿದ್ದವು. ಕ್ರಮೇಣ ಆ ಜಾತಿಯ ಮರಗಳು ಪೂರಾ ನಾಶವಾಗಿಹೋದುವು. ಆದರೆ ಗೋಂದಿನಂತೆ ಆ ಮರಗಳಲ್ಲಿ ಹುಟ್ಟಿದ ಅಂಬರು ಮಾತ್ರ ನಾಶವಾಗದೆ ಕಲ್ಲಿನಂತಾಗಿ ಭೂಮಿಯಲ್ಲಿಯೇ ನಿಂತಿತು. (ವಿಜ್ಞಾನ. ೧–೧೧೬).
[← ಇಂ. Amber < ಅರ. ಅಂಬರ್. / ಹಿಂ. ಅಂಬರ್]

**ಅಂಬರೇಚರ** (ನಾ). = ಅಂಬರಚರ : ಪುಣ್ಯದ ಬೀಡೆನಿಪುದು ಪುರಮಿಂದಂಬರೇಚರಪತಿಯಾ (ಶಾಂತಿಪು. ೩–೯). [ಸಂ.]

**ಅಂಬಲ₁** (ನಾ). ೧. ಮಂಟಪ ; ಚಾವಡಿ ; ಸಭೆ ಸೇರುವ ಸ್ಥಳ : ಗೊಟ್ಟಿಜೆಯರಮ್ಬಲಕೆ ಕೊಟ್ಟುದು ಅಯ್ಯೂಂಬು ಕಟನಿ (ಮೈಆರಿ.೧೯೨೬, ೧೦೦–೮ ; ಸು. 900) ; ಬಟಕಳದ ಅಂಬಲದ ಅಂಗಡಿಯಲ್ಲಿ ಯೆಕಪನಾಯಕನ ಹೆಸರಲು ಯಿಕ್ಕಿದ ವೀರಗಲಿನಂಲ್ಲಿ ಕಾಲಂಪ್ರತಿಯಲು [ಯೆರೆವ] ಅರವಟ್ಟಿಗೆಯ ಧರ್ಮಕೆ (ಕಇ. III–i, ೧೪–೬೪ ; 1545). ನಮ್ಮೂರವರು ಅರವಟ್ಟಿಗೆಗಾಗಿ ಕಟ್ಟಿಸಿದ ಚಾವಡಿಯನ್ನು ಅಂಬಲವೆನ್ನುತ್ತಾರೆ. ಇದು ಒಂದು ರೀತಿಯಿಂದ ಛತ್ರವೆಂದರೂ ಸಲ್ಲುತ್ತದೆ (ಮೈಲಿವಾ. ೭೩). ೨. (ಮನೆಯ ಅಥವಾ ದೇವಸ್ಥಾನದ) ಅಂಗಳ ; ಹಜಾರ : ಆ ರಾತ್ರಿಯನ್ನು ಶಂಕರಯ್ಯ ದೇವಾಲಯದ ಅಂಬಲದಲ್ಲಿ ಹರಿಹರಿ ಎಂದು ಹೇಳುತ್ತ ಮಲಗಿಕೊಂಡು ಕಳೆದರು (ನಂಬಿನಾ. ೬೪) ; ಹೊಸ ಬಟ್ಟೆಗಳನ್ನು ಧರಿಸಿ ಅಂಬಲಕ್ಕೆ ಬಂದು ಆಯುಧಗಳ ಮುಂದೆ ನಿಂತರು (ಚಿಕರಾ. ೨೬೩) ; ಭಾರಿ ದೊಡ್ಡಮನೆ ; ದೊಡ್ಡಪಾಗಾರ ; ಹೆಬ್ಬಾಗಿಲು, ಅಂಬಲ, ಚಾವಡಿಗಳಿಂದ ಕೂಡಿದ ಮನೆ (ಗೊಂಡಾರ. ೧೮) ; ಮಂಜಯ್ಯನವರು ರಾಧಾಕೃಷ್ಣನನ್ನು ಕರೆದುಕೊಂಡು ಮನೆಯ ಅಂಬಲವನ್ನು ಸೇರಿದರು (ಔದಾಉ. ೩೨). 'ಅಂಬಲಗೊಟ್ಟಗೆ' ಪರಾ.
[ದೇ. ‖ ತಮಿ. ಮಲ. ಅಮ್ಬಲ ; ತುಳು. ಅಂಬಲ, ಅಂಬಿಲ, ಅಂಬೆಲ ; ಕೊಡ. ಅಂಬಿಲ]

**ಅಂಬಲ₂** 'ಅಂಬಲಿ₁' ನೋ.

**ಅಂಬಲ₃** (ನಾ). ಒಬ್ಬನ ಹೆಸರು : ಕಯ್ವಾರನಾಡಧಿಪತಿ ಅಂಬಲನ್ ತುಱುಗಳೊಳ್ ಬಿಳ್ದು ಸೇನೆಯನಿಕ್ಕಿ ಸುರಲೋಕಕೆ ಸನ್ದನ್ (ಮೈಆರಿ. ೧೯೨೪, ೪೯–೨ ; 900). [?]

**ಅಂಬಲಕೆ** (ನಾ). ಒಂದು ಹೆಸರು (?) : ಸ್ವಸ್ತಿ ಶ್ರೀಪುರ್ಷನ್ ಅಮ್ಬಲಕರಾಳ್ದತು ಅದುಮ್ಕುರಮಾಗಿ ಅಳೊನಜೊಪ್ಪೊಸ್ಸಯ್ಯಮಹಾಪಾತಕನಪ್ಪೊ (ಎಕ. X, ಚಿಂತಾಮ. ೧೧೫–೨ ; 750). [?]

**ಅಂಬಲಗೊಟ್ಟಗೆ** (ನಾ). (ಊರಿನವರು) ಸಭೆ ಸೇರುವ ಚಾವಡಿ : ಯಿಾ ಚತುಃಸೀಮೆಯೊಳಗೆ ೧೧೦ ಹಾನೆ ಗದ್ದೆ೦ ಯಿದಕೆ ಗೇಣಿ ಅಕ್ಕಿ ೮೨೪ . . . ಯಿದಱೊಳಗಣ ಆದಾಯವೂ ಮಠಕೆ ಅಂಬಲಗೊಟ್ಟಗೆಗೆ ೧ ಬಾವಿಗೆ (ಸೌಇಇ. IX–ii, ೪೪೬–೬೦ ; 1436). [ಅಂಬಲ₁ + ಕೊಟ್ಟಗೆ]

**ಅಂಬಲತಿಂಡೆ** (ನಾ). ಒಂದು ಪ್ರದೇಶದ ಹೆಸರು : ಸೀಯಮಂಗಲದ

ಪೊಲ ಮೇರೆ ಇಸಾನದ ದೆಸೆ ನಡುಗಲ್ಲೆ ಅಮ್ಬಲತಿಣ್ಣೆಯಿನ್ತೆಂಕಾಯ್ ಪೇರೊಟ್ಟಿಯೆ (ಎಕ. X(s), ಚಿಕ್ಕಬ. ೧೦೬–೬೬ ; 850). [?]

**ಅಂಬಲಪೊನ್ನಬ್ಬೆ** (ನಾ). ಒಬ್ಬಾಕೆಯ ಹೆಸರು: ಅಂಬಲಪೊನ್ನಬ್ಬೆ ಇಱಿವನೊಱಿಮ್ಬು . . . ಪೃಥುವೀರಾಜ್ಯಂಗೆಯ್ಯೆ (ಎಕ. XII, ಶಿರಾ. ೧೪–೪ ; 946). [ಅಂಬಲ$_1$ ? + ಪೊನ್ನಬ್ಬೆ]

**ಅಂಬಲಿ**$_1$, ಅಂಬಲ$_1$, ಅಂಬಿಲ, ಅಂಬಿಲೆ (ನಾ). ೧. ರಾಗಿಯ ಹಿಟ್ಟು, ಜೋಳದ ಹಿಟ್ಟು, ಗೋಧಿಯ ಹಿಟ್ಟು, ಅಕ್ಕಿ ಮುಂತಾದ ವುಗಳಿಂದ ಮಾಡಿದ ಗಂಜಿ; ಅನ್ನವನ್ನು ಬೇಯಿಸುವಾಗ ಬಸಿದ ಗಂಜಿ: ಎಂಟುದಮ್ಮದ ಪುಳ್ಳಿಯಂ ತಂದೊಡಮೊಂದು ಪಣಮನಪ್ಪೊಡಂ ಪೆಱದೆ ಬಸಿಕೊರ್ಟಿ್ಗಮಂಬಲಿಗಮೆಣ್ಣೆಗಂ ಕಟಿಗಂ ಕೊಟ್ಟು ಪೋಕುಂ (ವಡ್ಡಾರಾ. ೭೭–೨೦) ; ಜಂತಿಗರ್ ಸಂತತಿಗೆಟ್ಟರಂತಟಿಲೆ, ತಂಬುಲಿಗರ್ ನಂಬುಗೆಗೆಟ್ಟವರಂತೆ ಪೆಱಸಾಟೆ, ಚೊಲ್ಲೆಯರ್ ಗಲ್ಲೆಯುಂಬಲಿಯಂತೆ ನೆಲನಂ ಪತ್ತೆ (ಧರ್ಮಾಮೃ. ೨–೬೯) ; ಬೆಣ್ಣೆಯ ನೇಮ ಬೆಲ್ಲದ ನೇಮ ಅಂಬಲಿಯ ನೇಮದವರನಾರನೂ ಕಾಣೆ (ಬಸವ. ೨೩೨) ; ಅಂಬಲಿಯುಂ ಬವಗೆ ಅಮೃತಾನ್ನ ಕೊಡಲೇಕೆ (ಪುರಂದ. ೨–೬೪–೨) ; ಸಜ್ಜಿಗೆಯಿಂದ ಉಪ್ಪಿಟ್ಟು ಅಂಬಲಿ ತಯಾರಿಸಬಹುದು (ಅಡುಸೌ. ೬೩) ; ಅಂಬಲಿಗೆ ಗತಿಯಿಲ್ಲದವಗೆ ಹಂಬಲಿಸುವುದು ಯಾಕೆ? (ಗಾದೆ) ; ಅಂಬಲಿ ಕುಡಿಯು ವನಿಗೆ ಮೀಸೆ ತಿಕ್ಕುವನೊಬ್ಬ (ಗಾದೆ). **ಅಂಬಲ**$_2$: ೨. ಅಕ್ಕಿಯನ್ನು ತೊಳೆದ ನೀರು ; ಕಲಗಚ್ಚು: ಅವುಗೆ ಕಿಚ್ಚಿನೊಳು ತಂಪು ಮರುಧರಣ ಯಲಿ ಬೆಳೆಯಂಬಲದಿ ಬೆಣ್ಣೆ ಹೊಲಗೇರಿಯೊಳು ವೇದದುಲುಹುಂಟೆ (ಮೋಳಿಪು. ೫–೧೨೦). **ಅಂಬಿಲ**: ೧. "ಕಳಿಯೆಂದಂಬಿಲಮುಕ್ಕಂ" (ಕವಿಕಂ. ೨೪೩) ; ಬಯಸಿದಮೃತವಿದ್ದಂತೆ ಅಂಬಿಲವನೆಱೆದುಂಬ ಭ್ರಮಿತಮಾನವ ನೀನು ಕೇಳಾ (ಗಣಭಾ. ೭೪–೧) ; ಪಾಲೆರೆವನಂ ಬಿಸು ಟಂಬಿಲವನೆರೆವವನ ಬಯಸಿದಂತಾಯ್ತಲಾ (ರಾಘಚಾ. ೯–೪೪) ; ಕ್ಷೀರವಿರ ಲಂಬಿಲವ ಕುಡಿವಂತೆ (ಯಾದವ. ೯–೧೫) ; ಅಗದರ ಹರ್ಮ್ಯದೊಳ್ ಪಡೆ ದೋಗರಮಮೃತೋಪಮಾನಮಾದೊಡಮದು ನೋೞ್ಪಾಗಳ್ ಸನ್ಮಿತ್ರರ ಪರ್ಣಾಗಾರದೆ ಲವಣಮಿಲ್ಲದಂಬಿಲಕೆಣೆಯೇ (ನೀತಿಮಂ. I, ೨೬೦). ೨. "ಅಂಬಿಲಂ ತಂಡುಲದ ರಸಕೆ" (ಕಶರ. ೧೧೭) ; ಅಂಬಿಲಮಂ ಮಂತ್ರಿಸಿ ಮುಖದಲ್ಲಿ ತಳಿವ ಮಂತ್ರಮಂ (ಬಾಲಚಿ. ೧೨೪–೯) ; ಶಿಲೆಯೊ ಳುಂಟೇ ಮೃದುವಜಸಲಂಬಿಲದೊಳುಂಟೇ ಬೆಣ್ಣೆ ಕರುಣಾಸುಲಭ ಹೊಲ ಗೇರಿಯೊಳಗುಂಟೇ ವೇದಘೋಷಣವು (ಬಸವು. ೩೦–೨೮). **ಅಂಬಿಲೆ**: ೧. ಅಂಬಿಲೆ ಅಳತೆಯಲಿ ತುಂಬಿ ಮೇಲೋಗರವ ಉಂಬ ಸದ್ಭಕ್ತನ ಮನೆ ಯಾಗಲಿ (ದೇದಾಪ್ರ. ೧೨೪–೧೧೧).

[**ದೇ.** ?. ‖ **ತಮಿ.** ಅಮ್ಬಲಿ ; **ತುಳು.** ಅಂಬುಲಿ ; **ತೆಲು.** ಅಂಬಲಿ ; **ಕೋಲಾ.** ಅಂಬ = ಅನ್ನ, ಅಂಬಾಲ್ = ಆಹಾರ, ವಲ್ಲಂಬಾ = ಅಕ್ಕಿ ; **ನಾಯ್ಕಿ.** ಅಂಬಲ್ = ಕುದುಪಲಕ್ಕಿ]

**ಅಂಬಲಿ**$_2$ (ನಾ). ಒಂದು ಊರು (?): ಸಂತಂ ನಿತ್ಯಂ ಬಸಂತವಸದಳ ವೆಸೆಯಲ್ ಕಂತುನಿಭರೂಪನತಿಗುಣವಂತಂ ಧರೆ ಪೊಗಳೆ ನೆಗಳ್ದನಂಬಲಿ ಯ್ಯೆಚಂ (ಸೌಇಇ. IX–i, ೩೨೨–೨೩ ; 1195). [?]

**ಅಂಬಲಿಗಪ್ಪರೆ** (ನಾ). ಅಂಬಲಿ ತುಂಬಿದ ಕೊಪ್ಪರಿಗೆ: ಸುರಿದುರಿ ಮುಸಗುವ ಬಸೆಯಂ ಪುರಿಮುಱಿಲಂ ಪೊಯ್ದು ಕೌಚಿ ಕಾಯ್ದಂಬಲಿ ಗಪ್ಪರೆಗಳ ಕರಗಿದರಗು ಸಜ್ಜರಸಂಗಳನೆಱೆದು ಸೀದು ಸೀದುರುಳಿಸಿದರ್ (ಚಿಕವಿ. ೨–೧೧೧). [ಅಂಬಲಿ$_1$ + ಕಪ್ಪರೆ]

**ಅಂಬಲಿಮಣ್** (ನಾ). ಅಂಬಲಿಗಾಗಿ ಬಿಟ್ಟ ಭೂಮಿ ; ಜೀವನಕ್ಕಾಗಿ ಬಿಟ್ಟ ಕ್ಷೇತ್ರ: ಅಮ್ಬಲಿಮಣ್ಣುಂ ತಳವನಪುರದೊಳ್ ತಳವಿತ್ತಿಯಮನ್ (ಎಕ. I, ೧–೨೦ ; 466 ?). [ಅಂಬಲಿ$_1$ + ಮಣ್]

**ಅಂಬಲೆ** (ನಾ). ಒಂದು ಊರಿನ ಹೆಸರು: ಆ ಬೆಂಮತೂರನಾಡ ಅಂಬ ಲೆಯ ಹರಿಯದ ಹಾಲನಾಗಗಉಡ ಕುಂನೂರ ವಿಠಲಗಉಡ (ಎಕ. XI, ಚಿತ್ರದು. ೬–೧೯ ; 1388). [?]

**ಅಂಬಷ್ಟ** (ನಾ). ಮಾವಟಿಗ; ಮಾವುತ: ಆಹ್ನಿಕ ಮುಗಿಸಿ ನಡೆದರು ಶೀಘ್ರ ಭೋಜಪನ ಗೇಹರಂಗದ್ವಾರದೆಡೆಗೆ, ಮಹಾಶೈಲದಂತೆ ತಮ್ಮ ನಿವೇಶಕೆ ಅಡ್ಡ ನಿಂತಿಹುದು ಅಂಬಷ್ಟ ನಿಲಿಸೆ ಕಂಡು ಶ್ರೀಕೃಷ್ಣ ಪರಿಕರವ ಮಧ್ಯಕೆ ಸುತ್ತಿಕೊಂಡು ಆಳಕವ ಕಟ್ಟಿದ ಕುಂಡಾಲವಂ ತೆಗೆಯೆ (ಪ್ರಸಭಾ. ೬೩–೧, ೨). [ಸಂ. ಅಂಬಷ್ಠ]

**ಅಂಬಷ್ಠ**$_1$ (ನಾ). ೧. ಬ್ರಾಹ್ಮಣನಿಂದ ವೈಶ್ಯಸ್ತ್ರೀಯಲ್ಲಿ ಹುಟ್ಟಿದವನು. ℙ ಸಾಮಾನ್ಯವಾಗಿ ಹಿಂದೆ ಇವರದು ವೈದ್ಯವೃತ್ತಿ. ೨. ಮಾವಟಿಗ. ೩. ಒಂದು ದೇಶ. ೪. ಕ್ಷೌರಿಕ (ಕಿ). [**ಸಂ.**]

**ಅಂಬಷ್ಠೆ**$_1$ (ನಾ). ೧. ಇರುವಂತಿಗೆ. ೨. ಪುಲ್ಲಂಪುರಿಚೆ; ಹುಲ್ಲು ಹುಳಿಗನ ಸೊಪ್ಪು; ಕಾಸಿನ ಸೊಪ್ಪು. ೩. ಅಮಟೆಯ ಮರ,—ಕಾಯಿ; ಅಂಬಟೆ. ೪. ಅಗಳುಶುಂಠಿ. ℙ ಹಲವು ಗಿಡಗಳಿಗೆ ಈ ಹೆಸರಿದೆ. [ಸಂ. ಅಂಬಷ್ಠಾ]

**ಅಂಬಳಕ** 'ಅಂಬಕಳ' ನೋ.

**ಅಂಬಳಿಕು** 'ಅಂಬಳಿಕ್ಕು' ನೋ.

**ಅಂಬಳಿಕ್ಕು**, ಅಂಬಳಿಕು (ಕ್ರಿ). = ಅಂಬೆಗಾಲಿಕ್ಕು: ಮಳೆಯರಾಜ ದೇವಂ ಶಿಶುಲೀಲೆಯಿಂ ಮುಂದೆ ತನಗೆ ಪ್ರತ್ಯಕ್ಷನಪ್ಪ ಶಿವನೇೞ್ ಬಪ್ಪ ನಂದಿಯ ನಿಲವಂ ತೋಱುವಂತೆ ಅಂಬಳಿಕ್ಕಿ (ಮಳೆರ. ೧೨೧–೧೧) ; ಚತುರ್ವಿಧ ಪದವಿಗಳಡಿಯಾಗಿರ್ಪವೆಂದವಂ ಮುಟ್ಟಿ ಚರಿಸುವ ಚಂದದಂ ತಂಬಳಿಕ್ಕಿಯಾಡುವನಮುಮ ಜಗದನುಗ್ರಹವಿಗ್ರಹಂ (ಪದ್ಮರಾ. ೨–೭೧). **ಅಂಬಳಿಕು**: ತ್ರ್ಯಂಬಕನಂ ಬಲವರಲೆರಡೆಂಬೀ ಪದವೆಯ್ದುವೆಂದು ನಾಲ್ಕುಂ ಕಾಲಿಂದಂ ಬಲವಂದಪಳೆಂಬಂತಂಬಿಕೆಯುಂಬಳಿಕಿಯಾಡುವಳ್ ಶೈಶವದೊಳ್ (ಗಿರಿಕ. ೩–೭೨) ; ಕುಂಬಿಕ್ಕಿ ಕುಣಿಕುಣಿದು ನಡೆಗೆಟ್ಟು ಕುಳ್ಳಿರ್ದು ಅಂಬಳಿಕಿ ಮೈಯಿಕ್ಕಿ ಲಲ್ಲೆಗರೆವುತ್ತಿರ್ದು (ತಿರುನೀ. ೨೬–೨೦). [*ಅಂಬಳ್ + ಇಕ್ಕು$_1$]

**ಅಂಬಾ** 'ಅಂಬೇ' ನೋ.

**ಅಂಬಾಕಾಂತ** (ನಾ). = ಅಂಬಾಪತಿ. [ಸಂ. (ಅಂಬಾ + ಕಾಂತ)]

**ಅಂಬಾಚರಿ** (ನಾ). [ಜೈನ] ಹಿಂದಿನ ಜನ್ಮದಲ್ಲಿ ಒಬ್ಬ ವ್ಯಕ್ತಿಯ ತಾಯಾಗಿದ್ದು, ಈಗ ಬೇರೊಂದು ಪ್ರಾಣಿಯಾಗಿ ಹುಟ್ಟಿರುವ ಹೆಣ್ಣು ಜೀವಿ: ಅರಸನುಮಾಗಳೆ ಸೆತ್ತದ ಭರದಿಂ ಕೊಳ್ಳಿನುತುಮಿಕ್ಕೆ ನವಿಲಂ ಕೊಳ್ಳೆಂದರೆಗೆತ್ತು ಪಿಡಿದುದಂಬಾಚರಿ ಕುಕ್ಕುರಿ ನೊಂದು ಬೀೞ್ವ ನಂದನಚರನಂ (ಯಶೋಚ. ೩–೪೨). [ಸಂ. ಅಂಬಾಚರೀ]

**ಅಂಬಾಡಿಯೆಲೆ** (ನಾ). ಮದರಾಸಿನ ಕಡೆಯ ವೀಳೆಯದೆಲೆ. [ಅಂಬಾಡಿ$_0$ + ಎಲೆ$_1$]

**ಅಂಬಾಡೆ** 'ಅಂಬಟೆ' ನೋ.

**ಅಂಬಾಪತಿ** (ನಾ). ಪಾರ್ವತೀದೇವಿಯ ಪತಿ; ಶಿವ. [ಸಂ. (ಅಂಬಾ + ಪತಿ)]

**ಅಂಬಾಭವಾನಿ** (ನಾ). ಪಾರ್ವತೀದೇವಿ. [ಸಂ. ಅಂಬಾಭವಾನೀ (ಅಂಬಾ + ಭವಾನೀ)]

**ಅಂಬಾರ** (ನಾ). ೧. ಕಾಳು ತೆಗೆದ ಹುಲ್ಲಿನ ಬಣವೆ, —ಹುಲ್ಲು ಮೆದೆ (ದಕ. ಕಿ). ೨. ಧಾನ್ಯದ ರಾಶಿ (ಸ್ಯಾಂಡರ್). ೩. ಸರ್ಕಾರಕ್ಕೆ ಸಲ್ಲಬೇಕಾದ ಧಾನ್ಯದ ಭಾಗ (ಸ್ಯಾಂಡರ್). [← **ಅರ. ಪಾರ. ಹಿಂ.** ಅಂಬಾರ್; **ಮರಾ.** ಅಂಬರ್, ಅಂಬಾರ್= ಕಣಜ, ಸಮೂಹ, ರಾಶಿ. / **ತಮಿ.** ಅಮ್ಬಾರ ; **ತೆಲು.** ಅಂಬಾರು]

**ಅಂಬಾರಖಾನೆ** (ನಾ). ಸರಕಾರದ ಧಾನ್ಯದ ಕೋಠಿ, —ಕಣಜ (ಸ್ಯಾಂಡರ್). [← **ಮರಾ.** ಅಂಬಾರ್‌ಖಾನಾ]

**ಅಂಬಾರಮಣ** (ನಾ). = ಅಂಬಾಪತಿ. [**ಸಂ.** (ಅಂಬಾ + ರಮಣ)]

**ಅಂಬಾರಿ$_1$** (ನಾ). ಆನೆಯ ಮೇಲೆ ಕುಳಿತುಕೊಳ್ಳಲು ಹಾಕುವ ಮಂಟಪದಂತಹ ಭದ್ರಾಸನ: ಧಾರೆಗೆ ಗಂಡನು ಸಿಂಗರಗೈದು ಅಂಬಾರಿಯೊಳಗೆ ಕುಳ್ಳಿರಿಸಿ (ಸೌಗಂಪ. ೧೧–೪೨) ; ಟೀಪುಸುಲ್ತಾನರ ಸ್ವಾರಿ ಬಾಬತು ಕುದುರೆ ವಂದು ಅಂಬಾರಿ ವಂದು ಪಾಲ್ಕಿ ವಂದು ಸಹ . . . ಕಳುಹಿಸಿ ಇದೆ (ರಾಜೇಂದ್ರ. ೯೯) ; ಸಿಂಗರಿಸಿದ ಆನೆಯ ಮೇಲೆ ಅಂಬಾರಿ ಹಾಕಿ ಅರಸರು ಕೂತುಕೊಳ್ಳುತ್ತಾರೆ (ಮುಂಬಯಿ. ೪–೨೩).
[← **ಅರ. ಪಾರ. ಹಿಂ. ಮರಾ.** ಅಂಬಾರೀ. / **ಮಲ.** ಅಮ್ಬಾಡಿ ; **ತುಳು.** ಅಂಬರಿ, ಅಂಬಾರಿ ; **ತೆಲು.** ಅಂಬಾರಿ, ಅಂಬಾರೀ]

**ಅಂಬಾರಿ$_2$** (ನಾ). ೧. ಉಗ್ರಾಣ. ೨. ಧಾನ್ಯವನ್ನು ಕೂಡಿಡುವುದಕ್ಕಾಗಿ ಇರುವ ನೆಲಮನೆ (ಉಕ). [< ಅಂಬಾರ ?]

**ಅಂಬಾರುಣ್ಣೆ** (ನಾ). ದನಕರುಗಳ ಮೈಗೆ ಹತ್ತಿಕೊಂಡು ರಕ್ತಹೀರಿ ಜೀವಿಸುವ ಒಂದು ಬಗೆಯ ದೊಡ್ಡ ಉಣ್ಣೆ (ಕ).
[ಅಂಬಾರೆ + ಉಣ್ಣೆ (< ಉಣ್ಣೆ$_1$)]

**ಅಂಬಾರೆ** (ನಾ). ಒಣಗಿದ ಮರದ ತುಂಡುಗಳಲ್ಲಿ ಕಂಡುಬರುವ ಒಂದು ಬಗೆಯ ಕೀಟ; ಕುಟ್ಟೆ ಹುಳು (?) (ಕ). [?]

**ಅಂಬಾಲ್** (ಅ). ಮಕ್ಕಳ ಆಟದಲ್ಲಿ 'ಇನ್ನೂ ಸಿದ್ಧವಾಗಿಲ್ಲ' ಎಂದು ಸೂಚಿಸುವ ಒಂದು ಕೂಗು.
[?. / **ತಮಿ.** ಅಮ್ಬಾಲ್ ; **ತೆಲು.** ಅಂಬಾಲ್]

**ಅಂಬಿ** (ನಾ). ದೋಣಿ ; ನಾವೆ. 'ಅಂಬಿಗ' ಪರಾ.
[**ಸಂ.** ಅಂಬಿ = ನೀರು. / **ತಮಿ.** ಅಮ್ಬಿ]

**ಅಂಬಿಕಾರಮಣ** (ನಾ). = ಅಂಬಾಪತಿ.
[**ಸಂ.** (ಅಂಬಿಕಾ + ರಮಣ)]

**ಅಂಬಿಕೆ** (ನಾ). ೧. ತಾಯಿ. ೨. ಪಾರ್ವತಿ. ೩. ಧೃತರಾಷ್ಟ್ರನ ತಾಯಿಯ ಹೆಸರು. [**ಸಂ.** ಅಂಬಿಕಾ]

**ಅಂಬಿಕ್ಕು** (ಕ್ರಿ). ಬಾಣವನ್ನು ಪ್ರಯೋಗಮಾಡು: ಮದನನೈದಂಬಿನೊಳಂಬಿಕ್ಕುವ ಸೌಂದರ್ಯಂ ಕೈಮಿಕ್ಕಿರೆ ಕಾಂತೆಯ ಕೈಬೆರಲ್ ಬೆರಲ್ಮಿಡಿಯಿಸುಗುಂ (ಮಲ್ಲಿಪು. ೩–೭೧) ; ಅಂಬುಜನಾಭಂ ನರಂಗೆ ಪೇೞ್ವಂದೆನಸುಂ . . . ಕೌರವರಂಬಿಕ್ಕಲ್ ಮಱೆದರಕ್ಕುಮೋ ಪೇೞಿಮಿದಂ (ಸಮಪ. ೧೦–೧೫೯). [ಅಂಬು$_2$ + ಇಕ್ಕು$_1$]

**ಅಂಬಿಗ$_1$** (ನಾ). ೧. ದೋಣಿ, ಹರಿಗೋಲು ಮುಂತಾದ ನಾವೆಗಳನ್ನು ನಡಸುವವನು: ನಡುಗಡಲೊಳ್ ಪಱುಗೋಲಂ ನಡೆಯಿಸುವಂಬಿಗನಂತೆ (ಧರ್ಮಾಮೃ. ೬–೨೧೯) ; ಚಂಪಾಪುರೋದ್ಯಾನಾರಾಮಸಮೀಪದೊಳ್ ಪೊೞೆಯೊಳಿರ್ದಾಯಂಬಿಗರ್ ಕಂಡು (ನೇಮಿಪು. ೩–೪೧) ; ಪುರವಳಯಂ ಪಱುಗೋಲಂತಿರ್ದುದು . . . ದಾಟಸುವುದ್ಭಟನಂಬಿಗನಂತಿರೆ (ಉದ್ಭರ. ೧೫೭–೬) ; ಯಮುನಾನದಿಯೊಳ್ ಬಿಡೆ ಬರ್ಪಮಂದಸಂ ಚಂಪೆಯೆಂಬ ಪುರದಂಬಿಯ[ಗ]ರೆಲ್ಲಮದಂ ತೆಗೆದು ನದೀತೀರಮನೆಯ್ದಿ ಬೞಿಕ್ಕೆ ನಿಜನೃಪಾಲಂಗಾಗಳ್ (ಮಹಾಸೇ. ೩–೧೨೯) ; ಆ ಯಾತ್ರಿಕರಲ್ಲಿ ಒಬ್ಬನು ಅಂಬಿಗರ ಹುಡುಗಿಯನ್ನು ಕುರಿತು (ಶ್ರೀರಾಯ. ೨) ; ಹೊಳೆ ದಾಟದ ಮೇಲೆ ಅಂಬಿಗರ ಮಿಂಡ (ಗಾದೆ). ೨. ಬೆಸ್ತರವನು; ಮೀನುಗಾರ; ಸೂತಕುಲದವನು : "ಅಂಬಿಗಂ ತಾಂ ನೀರ್ಕುಟಿಗಂ" (ಕವಿಕಂ. ೧೫೫) ; ಪಿಂದೆ ಕಡಂಗಿ ತೇರನೆಸಗೆಂಬವನಂಬಿಗನಾಜಿರಂಗದೊಳ್ ಮುಂದೆ ಸಮಾನನಾಗಿ ಬೆಸದಿರ್ಪವನುಂ ತುಱುಕಾಱನಾಗೆ (ಪಂಪಭಾ. ೧೨–೯೪) ; ಪೊಸಬನಿವನಂಬಿಗನೆನಿಸನೀಕ್ಷಿಸಲು ರಾಜಕುಮಾರನಹುದೆಂದೊಸೆದು ಮನದಲಿ ನೆನೆದು ಮನ್ನಿಸಿ ವಿದ್ಯೆಗಲಿಸಿದನು (ಸಾಳ್ವಭಾ. ೨೦–೩).
[ಅಂಬಿ + -ಇಗ (?) / **ಮಲ.** ಅಮ್ಪಿ; **ಮರಾ.** ಅಂಬೀ. ℙ **ತಮಿ.** ಅಮ್ಬಾಪಾಟ್ಟು = ಅಂಬಿಗನ ಹಾಡು]

**ಅಂಬಿಗ$_2$** (ನಾ). ೧. ಅಂಬನ್ನು ಹಿಡಿದವನು ; ಬಿಲ್ಲುಗಾರ : ಅಂಬಿಗರ ಸಬಳಿಗರ. . .ಪಡೆವೆರಸು. . . ದಂಡೆತ್ತಿ ಪೋದರ್ (ರಾಮಾಶ್ವ. ೯೩–೨೮).
೨. ಬೇಡರವನು : "ಅಂಬಿಗನೆನಲ್ಕಿನ್ನು ವ್ಯಾಧಂಗೆ" (ಕಶರ. ೧೧೭).
[ಅಂಬು$_2$ + -ಇಗ]

**ಅಂಬಿಗಗೆಯಿ** (ನಾ). ಅಂಬಿಗನಿಗೆ ಮಾನ್ಯವಾಗಿ ಬಿಟ್ಟುಕೊಟ್ಟ ಹೊಲ, ಗದ್ದೆ ಮುಂತಾದ ಭೂಮಿ : ಪೆರ್ಗಡೆಗೆಯಿ ಮತ್ತ ೮ ಅಂಬಿಗಗೆಯಿ ಮತ್ತ ೮ ತಳಾಱಗೆಯಿ ಮತ್ತ ೧೨ (ಸೌಇಇ. IX-i, ೭೪–೮ ; 981).
[ಅಂಬಿಗ$_1$ + ಕೆಯ್$_3$]

**ಅಂಬಿಗಾರ** (ನಾ). ನಾವಿಕ ; ಅಂಬಿಗ : ಈ ದೇಶದಲ್ಲಿ ಕೆಲವು ಅಂಬಿಗಾರರು ಹೊಳೆಯ ಮಡಿಗಳಲ್ಲಿ (ಸಣಬನ್ನು) ಬಿತ್ತುತ್ತಾರೆ (ಕೃಷಿಪ್ರ. ೮೬); ದೋಣಿ ದಾಟದ ಮೇಲೆ ಅಂಬಿಗಾರನ ಮಿಂಡ (ಗಾದೆ).
[ಅಂಬಿ + -ಗಾರ (<-ಕಾಱ)]

**ಅಂಬಿಗಿತ್ತಿ** (ನಾ). ಅಂಬಿಗ ಜಾತಿಯ ಹೆಂಗಸು; ಬೆಸ್ತರವಳು : ಯೋಜನಗಂಧಿಯಂಬಿಗಿತ್ತಿಗೆ ಮನಸಂದಂ ನದಿಯ ಮಧ್ಯದೊಳ್ ಮುನಿನಾಥಂ (ಧರ್ಮಪ. ೨–೨೫) ; ಪರಮ ಋಷೀಶ್ವರ ಪಾರಾಶರವ್ರತಿ ಸ್ಮರನ ಬಾಣಕೆ ಗುಱಿಯಾಗಿ ಹಱುಗೋಲೊಳಗಂಬಿಗಿತ್ತಿಯ ನೆರೆದನೀ ನರ ಮನುಷ್ಯರ ಪಾಡೇನು (ಕಂನವಿ. ೯–೧೪೮). [ಅಂಬಿಗ$_1$ + -ಇತ್ತಿ]

**ಅಂಬಿರಿವಿಡು** (ಕ್ರಿ). ಧಾರಾಕಾರವಾಗಿ ಸುರಿ; ಸ್ರವಿಸು : ಸುರಿವ ಬಿಸುನೆತ್ತರ ಸರಿಯೊಳಮಂಬಿನ ಸರಿಯೊಳಮಂಬಿರಿವಿಟ್ಟು ಪಾಯ್ವ ಮದಗಜಂಗಳ ಮದಜಲದೊಳಂ (ಪಂಪಭಾ. ೧೦–೭೦ ವ) ; ಅಂಬಿರಿವಿಡೆ ಭೋಂಕನೆ ನಯನಾಂಬುಗಳ್ (ಪಂರಾಮಾ. ೬–೪೯) ; ಕೆಚ್ಚಲ್ ಕುಸಿವನ್ನಂ ಬೀಗಿ ಪಾಲಂಬಿರಿವಿಡೆ ಮೊಲೆಯಿಂ (ಮಲ್ಲಿಪು. ೮–೯೯) ; ತಲೆಯಿಂದಂಬಿರಿವಿಟ್ಟೊಗೆವ ರಕ್ತಧಾರೆಯೆ ಕಡಿಖಂಡಂಬೋಗಿ (ನೇಮಿಪು. ೧೨–೧೫೭) ; ಮೊಲೆಯಿಂದಂಬಿರಿವಿಟ್ಟು ಪಾಲುಗುತಮೋರಂತಿರ್ದೊಡಂ (ಶಾಂತೀಶ್ವ. ೧–೮೫).
[ಅಂಬು$_3$ + ಇರಿವಿಡು]

**ಅಂಬಿಲ** 'ಅಂಬಲಿ$_1$' ನೋ.

**ಅಂಬಿಲೆ** 'ಅಂಬಲಿ$_1$' ನೋ.

**ಅಂಬಿಸು** (ಕ್ರಿ). ಒಣಗಿಸು ; ಶೋಷಿಸು : ಎಱಗಿತ್ತೊತ್ತಿತ್ತು ಪೊಯ್ದತ್ತಡಸಿತುಱುಬಿತುರ್ಬಿತ್ತು . . . ಮುತ್ತಿತ್ತಱಸಿತೊಱಲಿಸಿತ್ತಾಲಿಸಿತ್ತಂಬಿಸಿತ್ತಾಮಱೆಹಂ ಸೂಸಿತ್ತು . . . ಕಾಲಕೂಟಂ (ಕವಿಚ. II, ೫೧೨ ; ದಶಾವ. 1680). [ಅಂಬು$_1$ + -ಇಸು$_3$]

**ಅಂಬು$_1$** (ಕ್ರಿ). ಒಣಗು; ಆರು ; ಬಾಡು : "ಅಂಬು – ಶೋಷಣೇ ಶರೇ ಚ" (ಶಮುಧಾ). [**ದೇ.**]

**ಅಂಬು$_2$** (ನಾ). ಬಾಣ; ಕಣೆ; ಸರಳು : "ಅಂಬು–ಶೋಷಣೇ ಶರೇ ಚ" (ಶಮುಧಾ) ; "ಅಂಬು ಮಾರ್ಗಣಂ" (ಕರ್ಣಾನಿ. ೨೯) ; "ಪುಣುಬು ಕಣೆಯಂಬುಸರಲ್ ತಾವಕ್ಕು ಶರಸಮಾಹ್ವಯಂ" (ಕವಿಕಂ. ೮೨) ; ಉಱಿಕೀಲಿಚ್ಚಿದವಂಬುವಾಳ್ಪಲಗೆಯುಳ್ಳಟ್ಟುಱ್ತುವಲ್ಪನ್ದಿಪಿನ್ (ಸೌಇಇ. IX-i, ೩೯೨–೩ ; ೮ ನೆಯ ಶತ.) ; ಕಿಟ್ಟಿ ಕಾದಿ ಮಱುವಕ್ಕದವರ ಮೆಯ್ಮೆಯ್ಯಮ್ಬಾಗೆ ಎಚ್ಚೋೞಿಡಿಸಿ . . . ಭೀಷ್ಮನ್ವಿೞ್ದನ್ತೆ ನೆಲಮುಟ್ಟದೆ ಬಿೞ್ದೊನಾನ್ (ಎಕ. VIII, ಸೊರಬ. ೧೦–೭ ; 800) ; ಬಿಲ್ಗಳನೇಱಿಸಿ ತಿರುವಾಯೊಳಂಬನಿಟ್ಟಿಸಲೆಂದು ತೆಗೆದಿಸುವನ್ನೆಗಂ (ವಡ್ಡಾರಾ. ೯೬–೬); ತಪಕೆ ಬಿಲ್ಲುಮಂಬುಂ ದೊರೆಯೇ (ಪಂಪಭಾ. ೮–೩) ; ಅಂಬಿನ ಮೊನೆಯಲುಣಲಿಕ್ಕುವೆನು

ರಣಭೂತಕ್ಕೆ ನಿನ್ನೊಡಲ (ಕುವ್ಯಾದ್ರೋ. ೧–೫೫) ; ಈ ನಾಲ್ಕು ಅಂಬುಗಳಂತೆ ಯುದ್ಧಭೂಮಿಯಲ್ಲೆಲ್ಲ ಹುಡುಕಿದರೂ ಇನ್ನೊಂದು ಅಂಬು ಸಿಕ್ಕಲಿಲ್ಲ (ಶಾಂತಲಾ. ೨೨೨) ; ಅಂಬು ಬಿಡಲಿಕ್ಕೆ ತಿಳಿಯದಿದ್ದರೆ ಚಂಬು ಮುಣುಗಿಸಲಿಕ್ಕೆ ತಿಳಿಯದೆ ? (ಗಾದೆ).

[ದೇ. ‖ ತಮಿ. ಮಲ. ಅಮ್ಪು ; ತುಳು. ಅಂಬು ; ಕೊಡ. ಅಂಬಿ ; ತೆಲು. ಅಂಬು, ಅಂಬಕಮು, ಅಮ್ಮು ; ಕೋಲಾ. ಅಂಬೆ, ಅವ್ರ್ ; ಕುಇ. ಅಂಬು ; ಕುವಿ. ಅಂಬೂ ; ಪರ್ಜಿ. ಗಡ. ಅಂಬ್]

**ಅಂಬು₃** (ನಾ). ೧. ನೀರು. ೨. ಮುಡಿವಾಳ; ಲಾಮಂಚ. [ಸಂ.]

**ಅಂಬುಕಂಟಕ** (ನಾ). ಮೊಂಡುಮೂತಿಯ ಮೊಸಳೆ.
[ಅಂಬು₃ + ಕಂಟಕ]

**ಅಂಬುಕಂಡಿ,** ಅಂಬುಗಂಡಿ (ನಾ). ಕೋಟೆಯ ಕೊತ್ತಳದಲ್ಲಿ ಮರೆಯಾಗಿ ನಿಂತು ಹೊರಗಿರುವ ಶತ್ರುಗಳ ಮೇಲೆ ಬಾಣವನ್ನು ಬಿಡುವುದಕ್ಕಾಗಿ ಮಾಡಿಕೊಂಡಿರುವ ಕಂಡಿ; ಬಂದೂಕವನ್ನು ಇಟ್ಟು ಹೊಡೆಯಬಹುದಾದ ರಂಧ್ರ : ಅಂಗ ಕೋಟಿ ಭುಜ ಆಳುವೇರಿ ತಲೆ ತೆನೆ ಕಣ್ಣು ಅಂಬುಕಂಡಿ[ಪಾಠಾಂ. ಗಂಡಿ] ಕಾದುವ ಅರಸು ಅಸುರಾಜ ಕೂಟದ ಮನ್ನೆಯರ್ರೈದುಮಂದಿ (ಕಲ್ಯಾಶಾಂ. ೪೦) ; ಚೋರಕಂಡಿಗಳಂಬು ಕಂಡಿಗಳೊಳು ಗುಜಿಯೇಜಿಸಿ ಮೆಜೆವ ಕೈಗೋವಿ . . . ತೋಜಿತು ಕಣ್ಗೆ ಕೌತುಕವ (ಕಂನವಿ. ೧೧–೧೩೭). **ಅಂಬುಗಂಡಿ** : ಮುಗಿಲಟ್ಟಳೆಗಳ ಕೆಲದಂಬುಗಂಡಿಯಿಂ ನುಸುಳ್ದು ನಡೆವ ದಿನಕರನ ಹಯಂ ಗಗನಾಧ್ವ ಖೇದಮಂ ಪಟಿಯಿಗೆಗಳ ತಣ್ಣೆಲರ ತೀಟದಿಂ ತೊಲಗಿಸುಗುಂ (ಪಂರಾಮಾ. ೧–೧೧೬) ; ಇಡಿಸುವ ಡೆಂಕಣಕ್ಕೆ ನೆಲವಾಳಿಗೆ ಕೊತ್ತಳದಂಬುಗಂಡಿಯಿಂ ದುಡುಗದೆ ಪಾಯ್ವ ಕೂರ್ಗಣೆಗೆ (ಚಂದ್ರಪು. ೫–೧೦೬) ; ಶಂಕೆಯನು ಕಂಡರ ಮನಕೆ ಪುಟ್ಟಿಸುತ ಸಾಲ್ವಿಡಿದಂಬುಗಂಡಿಗಳ್ ಬೆಳಗಿದವು ಪಜ್ಜಳಿಸಿ ವರಶತಘ್ನಿಸಮ್ಮಿಶ್ರದಿಂ ಶಿವನ ಶಿಖಿನಯನಮೆಂಬಂತೆ (ವೆಂಕಾರಾ.೧–೩–೬); ಎಲ್ಲ ದೆಸೆಯೊಳಂಬುಗಂಡಿ ಡೆಂಕಣೆಗಳುಂ ಚೆಲ್ಲುತಿಹ ಹುರಿಮಳಲು (ಮರುಚ. ೨–೨೭). [ಅಂಬು₂ + ಕಂಡಿ₁]

**ಅಂಬುಕಣ** (ನಾ). ೧. ನೀರಿನ ಹನಿ. ೨. ತುಂತುರು.
[ಅಂಬು₃ + ಕಣ₄]

**ಅಂಬುಕಿರಾತ** (ನಾ). = ಅಂಬುಕಂಟಕ. [ಅಂಬು₃ + ಕಿರಾತ]

**ಅಂಬುಕೀಶ** (ನಾ). ಕಡಲುಹಂದಿ ಎಂಬ ಒಂದು ಬಗೆಯ ಜಲಜಂತು; ಶಿಶುಮಾರ; ಹೇರಾಮೆ; ನೀರಾಮೆ. [ಅಂಬು₃ + ಕೀಶ]

**ಅಂಬುಕೂರ್ಮ** (ನಾ). = ಅಂಬುಕೀಶ. [ಅಂಬು₃ + ಕೂರ್ಮ]

**ಅಂಬುಗಂಡಿ** 'ಅಂಬುಕಂಡಿ' ನೋ.

**ಅಂಬುಗಡಿ** (ನಾ). ಬಾಣದ ಚೂರು (?) : ಅಂಗಜನಣುಗನ ಬಲಗೊಂಬ ವನಲಕ್ಷ್ಮಿ ರಂಗವಾಲಿಯನಿಕ್ಕಿದಂತೆ ತುಂಗವಿಕ್ರಮರಂಬುಗಡಿಯಿಂದೆ ಸುರಿದ ರತ್ನಂಗಳೊಪ್ಪಿರ್ದುವಾ ಬನದಿ (ಮೋಹತ. ೧೯–೨೪).
[ಅಂಬು₂ + ಕಡಿ₃]

**ಅಂಬುಗಱೆ** (ಕ್ರಿ). ಬಾಣಗಳನ್ನು ಸುರಿಸು. [ಅಂಬು₂ + ಕಱೆ₁]

**ಅಂಬುಗಾಣಿಸು** (ಕ್ರಿ). ಬಾಣಕ್ಕೆ ಗುರಿಮಾಡು ; ಬಾಣದಿಂದ ಹೊಡೆ: ಬಲದೇವನನುಮತದೊಳ್ ಪೆಱಗಂ ತಗುಳ್ದ ಯಾದವಬಲಮುಂಟಪ್ಪೊಡದನಂಬುಗಾಣಿಸಲ್ ನೀನೆ ಸಾಲ್ವಯ್ (ಪಂಪಭಾ. ೫–೨೦ ವ).
[ಅಂಬು₂ + ಕಾಣ್ + –ಇಸು₃]

**ಅಂಬುಗಾರ** (ನಾ). ಬಾಣಪ್ರಯೋಗ ಮಾಡುವವನು ; ಬಾಣಪ್ರಯೋಗದಲ್ಲಿ ಗಟ್ಟಿಗ. [ಅಂಬು₂ + –ಗಾಱ (< –ಕಾಱ)]

**ಅಂಬುಗುಳ್ಳೆ** (ನಾ). ನೀರುಗುಳ್ಳೆ : ನಂಬದಿರು ಈ ದೇಹ ಅಂಬುಗುಳ್ಳೆಯಂತೆ (ಪುರಂದ. ೨–೫–೩). [ಅಂಬು₃ + ಗುಳ್ಳೆ]

**ಅಂಬುಗೂಡು** (ನಾ). ಬಾಣಗಳನ್ನಿಡುವ ಗೂಡು ; ಬತ್ತಳಿಕೆ : ಹರಿಣಾಂಕನಂ ತಾರಾಕದಂಬಮಂ ಕಾಣುತ್ತ ಕೋಕಪದ್ಮಿನಿ ಕಾಮನಂಬುಗೂಡಾಗಿ ಮೊಗ ಕಂದಿತೆನೆ (ಸಿದ್ಧರಾ. ೮–೭೬) ; ಪಿರಿದು ಪತಿಗಾಣದಳಲಿಂ ಮರವಟ್ಟರೆ ಮುಗಿದ ಕಣ್ಣೆಳಲ್ವೆಱಕೆಗಳುಂ ಸ್ಮರನೆಸೆಯಲಂಬುಗೂಡಾಗಿರೆ ಬಿರ್ದಂತಿರ್ದುದದಱೊಳೊಂದು ರಥಾಂಗಂ (ತ್ರಿಪುವಿ. ೨೪–೧೧೭) ; ಆ ಚಿತ್ತಜಾತನಲರಂಬುಗಳನಿಟ್ಟು ಕರ್ವಿನ ಬಿಲ್ಗೆ ಭೂತಲದೊಳಂಬುಗೂಡಾಗಿ ಭೀಳ್ವಂತೆ ಕೆಡೆಕೆಡೆಯೆನುತ್ತೆಚ್ಚನಾಗ (ಸಮ್ಯಕೌ. ೯–೧೨).
[ಅಂಬು₂ + ಗೂಡು. ‖ ತಮಿ. ಅಮ್ಪುಕ್ಕೂಡು]

**ಅಂಬುಚರ** (ನಾ). ನೀರಿನಲ್ಲಿ ಸಂಚರಿಸುವ ಮೀನು ಮುಂತಾದ ಪ್ರಾಣಿ. [ಅಂಬು₃ + ಚರ]

**ಅಂಬುಜ** (ನಾ). ೧. ನೀರಿನಲ್ಲಿ ಹುಟ್ಟಿದ್ದು ; ಕಮಲ. ೨. ನಿಚುಲವೃಕ್ಷ. ೩. ಶಂಖ. ೪. [ಛಂದ] ಒಂದುವೃತ್ತದ ಹೆಸರು : ಅಂಬುಜಂ ಭಜಸಸಗಂ ಶರದಿಂದೆ ವಿರಾಮಂ (ಛಂದೋಂಬು. ೩. ೧೬೪). [ಸಂ.]

**ಅಂಬುಜಜ** (ನಾ). (ವಿಷ್ಣುವಿನ ನಾಭಿಯ) ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ. [ಸಂ.]

**ಅಂಬುಜನಾಭ** (ನಾ). ನಾಭಿಯಲ್ಲಿ ಕಮಲವುಳ್ಳವನು; ಪದ್ಮನಾಭ; ವಿಷ್ಣು. [ಸಂ. (ಅಂಬುಜ + ನಾಭಿ + –)]

**ಅಂಬುಜನೇತ್ರ** (ನಾ). ಕಮಲದಂತೆ ಕಣ್ಣುಳ್ಳವನು ; ವಿಷ್ಣು.
[ಅಂಬುಜ + ನೇತ್ರ]

**ಅಂಬುಜನೇತ್ರೆ** (ನಾ). ಕಮಲದಂತೆ ಕಣ್ಣುಳ್ಳವಳು.
[ಸಂ. ಅಂಬುಜನೇತ್ರಾ (ಅಂಬುಜ + ನೇತ್ರ + –)

**ಅಂಬುಜನ್ಮ** (ನಾ). = ಅಂಬುಜ ೧. [ಅಂಬು + ಜನ್ಮ]

**ಅಂಬುಜಪಾಣಿ** (ನಾ). ೧. ಕಮಲವನ್ನು ಕೈಯಲ್ಲಿ ಹಿಡಿದವನು ; ವಿಷ್ಣು : ದ್ರೋಣ ಮನಗೊಂಡೆಱೆವಡಂಬುಜಪಾಣಿಯಿದಿರೇ ನಮ್ಮ ಭಾಗ್ಯದ ಬಾಣಸಿಗ ವಿಧಿ ವಿಷವ ಬೆರಸಿದದಾರು ಕಾವವರು (ಕುವ್ಯಾದ್ರೋ. ೪–೬). ೨. ಸೂರ್ಯ. ೩. ಬೋಧಿಸತ್ತ್ವ ಅವಲೋಕಿತೇಶ್ವರ.
[ಅಂಬುಜ + ಪಾಣಿ]

**ಅಂಬುಜಬಂಧು** (ನಾ). ೧. ಕಮಲದ ಗೆಳೆಯ; ಸೂರ್ಯ. ೨. ಬ್ರಹ್ಮ : ಅಲಗು ಖಣಿಖಟಿಲೆಂಬುವ ದನಿ ಮಿಗೆ ತುಂಬಿತಂಬುಜಬಂಧು ವಾಲಯವ (ಕುವ್ಯಾಭೀ. ೪–೭ ಅಡಿಟ.). [ಅಂಬುಜ + ಬಂಧು]

**ಅಂಬುಜಭವ** (ನಾ). = ಅಂಬುಜಜ. [ಅಂಬುಜ + ಭವ]

**ಅಂಬುಜಮಿತ್ರ** (ನಾ). ೧. = ಅಂಬುಜಬಂಧು ೧. ೨. [ಛಂದ] ಜಗಣ; U–U ಎಂಬ ಲಕ್ಷಣದ ಅಕ್ಷರಗಣ. [ಅಂಬುಜ + ಮಿತ್ರ]

**ಅಂಬುಜಮುಖಿ** (ನಾ). ಕಮಲದಂತೆ ಮುಖವುಳ್ಳವಳು.
[ಸಂ. ಅಂಬುಜಮುಖೀ (ಅಂಬುಜ + ಮುಖ + –)]

**ಅಂಬುಜವದನೆ** (ನಾ). = ಅಂಬುಜಮುಖಿ.
[ಸಂ. ಅಂಬುಜವದನಾ (ಅಂಬುಜ + ವದನ + –)]

**ಅಂಬುಜಸಖ** (ನಾ). = ಅಂಬುಜಬಂಧು. [ಅಂಬುಜ + ಸಖ]

**ಅಂಬುಜಾಕರ** (ನಾ). ಕಮಲದ ಕೊಳ; ಸರೋವರ: ಅಂಬುಜಾಕರದ ತಣ್ಪುಱೆಲೊಳ್ ತನಗೇಜಲಿಕ್ಕೆ (ಶಾಂತಿಪು. ೮–೪).
[ಅಂಬುಜ + ಆಕರ]

**ಅಂಬುಜಾನನೆ** (ನಾ). = ಅಂಬುಜಮುಖಿ.
[ಸಂ. ಅಂಬುಜಾನನಾ (ಅಂಬುಜ + ಆನನ + –)]

**ಅಂಬುಜಾಂಬಕ** (ನಾ). = ಅಂಬುಜನೇತ್ರ. [ಅಂಬುಜ + ಅಂಬಕ]

**ಅಂಬುಜಾಸನ** (ನಾ). (ವಿಷ್ಣುವಿನ ನಾಭಿಯ) ಕಮಲವನ್ನು ಪೀಠವಾಗಿ ಹೊಂದಿರುವವನು ; ಬ್ರಹ್ಮ. [ಅಂಬುಜ + ಆಸನ]

**ಅಂಬುಜೋದರ** (ನಾ). ಉದರದಲ್ಲಿ, ಎಂದರೆ ಹೊಕ್ಕುಳಲ್ಲಿ, ಕಮಲವುಳ್ಳವನು ; ವಿಷ್ಣು. [ಅಂಬುಜ + ಉದರ]

**ಅಂಬುಜೋದ್ಭವ** (ನಾ). = ಅಂಬುಜಜ. [ಅಂಬುಜ + ಉದ್ಭವ]

**ಅಂಬುಣ್** (ನಾ). ಒಂದು ಬಗೆಯ ಹುಣ್ಣು ; ನೀರುಹುಣ್ಣು (?) : ಅಂಬುಣ್ಣಾ[ಪಾಠಾಂ. ಅಂಬುಳುವಾ]ದೊಡೆ ಷಣ್ಮುಖನೆಂಬರ್ ಸೇವಳಿಯಾಗೆ ಸಲೆ ಮಾರಿಯ ಹುಣ್ಣೆಂಬರ್ ತುಱಿಯಾದೊಡೆ ಫಣಿಯೆಂಬರ್ ಮತಿಹೀನ ಜನರ್ (ಸಮುಪ. ೯–೨೬). [< ಅಂಬು₃ + ಪುಣ್ ?]

**ಅಂಬುದ** (ನಾ). ೧. ನೀರನ್ನು ಕೊಡತಕ್ಕದ್ದು; ಮೋಡ. ೨. ಕೊನ್ನಾರಿಗೆಡ್ಡೆ ; ತುಂಗೆಗೆಡ್ಡೆ ; ಭದ್ರಮುಸ್ತೆ. [ಸಂ.]

**ಅಂಬುದಧ್ವನಿ** (ನಾ). ಮೋಡದ ಸದ್ದು; ಗುಡುಗು : ಅಂಬುದಧ್ವನಿಗೆ ಪೆರ್ಚಿದ ಮತ್ತಮಯೂರದಂತೆ (ಶಾಂತಿಪು. ೫–೩೬). [ಅಂಬುದ + ಧ್ವನಿ]

**ಅಂಬುದನಿನದ** (ನಾ). ೧. = ಅಂಬುದಧ್ವನಿ : ಅಂಬುದನಿನದಾಡಂಬರಮಂಬರದೊಳೊಳುಂಬಮಾಗಳೆಸೆದಪುದೆನೆ (ಸುಕುಮಾ. ೧೧–೩೯). ೨. ಗುಡುಗಿನಂತೆ ಗಂಭೀರವಾದ ಧ್ವನಿಯುಳ್ಳವನು : ಪದದಪ್ಪುದೆಯುಂ . . . ಅಂಬುದನಿನದನತಂದ್ರನಿಂದ್ರನಾ ಜಿನಚಂದ್ರಂ (ಶಾಂತಿಪು. ೫–೧೦). [ಅಂಬುದ + ನಿನದ]

**ಅಂಬುದನಿವಹ** (ನಾ). ಮೋಡಗಳ ಸಮೂಹ : ಮಱಸುವವೊಲ್ ದಿವಸಕರನನಂಬುದನಿವಹಂ (ಕವಿರಾ. ೩–೧೪೮). [ಅಂಬುದ + ನಿವಹ]

**ಅಂಬುದಫಲ** (ನಾ). ಆಲಿಕಲ್ಲು : "ಅಂಬುದಫಲಂ ಕರಕಮೆನಲಾಲಿಕಲ್ಲಕ್ಕು" (ಮಂಗರಾ. ೧೩–೫). [ಅಂಬುದ + ಫಲ]

**ಅಂಬುದಮಾರ್ಗ** (ನಾ). ಮೋಡಗಳು ಚಲಿಸುವ ದಾರಿ; ಅಂತರಿಕ್ಷ; ಆಕಾಶ : ದಿವಿಜಗಜಮುಂಬುದಮಾರ್ಗಕ್ಕೊಗೆದುದೊಗೆವ ರಜತಾದ್ರಿಯವೋಲ್ (ಶಾಂತಿಪು. ೧೦–೨೫). [ಅಂಬುದ + ಮಾರ್ಗ]

**ಅಂಬುದರಥ** (ನಾ). ಮೇಘವನ್ನೇ ರಥವಾಗಿ ಹೊಂದಿರುವವನು ; ಇಂದ್ರ. [ಅಂಬುದ + ರಥ]

**ಅಂಬುದರ್ತು** (ನಾ). ಮಳೆಗಾಲ ; ವರ್ಷಋತು : ಬರೆ ಕೊಳ್ಗೆ ವಸಂತಮನಂಬುದರ್ತುಗಾಗ್ರೀಷ್ಮಮನಂತೆ ವಿಲೋಮಕಥ್ಯಮಯನದ್ವಯದೊಳ್ (ಜಾತತಿ. ೨೪–೭). [ಅಂಬುದ + ಋತು]

**ಅಂಬುದಾಗಮ** (ನಾ). ಮೋಡಗಳು ಬರುವ ಕಾಲ ; ಮಳೆಗಾಲ : ಅಂಬುದಾಗಮದ ಕೋಗಿಲೆಯಂತಿರೆ ಮೂಗುವಟ್ಟು (ಆದಿಪು. ೩–೨೬). [ಅಂಬುದ + ಆಗಮ]

**ಅಂಬುದಾಭ** (ಗು). ಮೇಘಕ್ಕೆ ಸಮಾನವಾದ : ದಾರುದಾರುಣನಂದಾನವಾರಿವಾರಿತಲೋಕನಂ ಬಾರ ಬಾರಣಮಂ ನೋಡಾಸಾರಸಾರಾಂಬುದಾಭಮಂ (ಕವಿರಾ. ೨–೧೩೦) [ಸಂ.]

**ಅಂಬುದುಡು** (ಕ್ರಿ). ಬಿಲ್ಲಿಗೆ ಬಾಣವನ್ನು ಹೂಡು ; ಬಾಣವನ್ನು ಪ್ರಯೋಗಿಸು : ನದೀಪುತ್ರಂಗೆ ಪೇಱಾಲ್ ಚಲಂಬಟ್ಟುಂ ಮಾರ್ಮಲೆದಂಬುದೊಟ್ಟುಮುಱಿವರ್ ಸಂಗ್ರಾಮರಂಗಾಗ್ರದೊಳ್ (ಪಂಪಭಾ. ೧೦–೧೧೭); ಬಿಳೆದೊಟ್ಟೊಡೆ ಗೆಲ್ವಯಂಬುದೊಟ್ಟೊಡೆ ಗೆಲ್ಲಯ್(ಕಾವ್ಯಾವ. ೭೭೪). [ಅಂಬು₂ + ತುಡು₁ (< ತೊಡು)]

**ಅಂಬುಧರ** (ನಾ). ನೀರನ್ನು ಧರಿಸಿರುವುದು ; ಮೋಡ. [ಸಂ.]

**ಅಂಬುಧರಕಾಲ** (ನಾ). ಮಳೆಗಾಲ. [ಅಂಬುಧರ + ಕಾಲ]

**ಅಂಬುಧರಾಗಮ** (ನಾ). = ಅಂಬುದಾಗಮ. [ಅಂಬುಧರ + ಆಗಮ]

**ಅಂಬುಧಿ** (ನಾ). ೧. ನೀರು ನಿಲ್ಲುವ ಸ್ಥಳ ; ಸಮುದ್ರ; ಕಡಲು. ೨. ನಾಲ್ಕು ಎಂಬ ಸಂಖ್ಯೆಗೆ ಒಂದು ಸಂಕೇತ. ೩. ನೀರಿನ ಪಾತ್ರೆ. [ಸಂ.]

**ಅಂಬುಧಿವೇಷ್ಟಿತ** (ಗು). ಸಮುದ್ರವು ಸುತ್ತುವರಿದಿರುವ : ಪೊಗಬ್ಬುದಂಬುಧಿವೇಷ್ಟಿತ ಭೂರಿ ಭೂತಳಂ (ಎಕ. II, ೧೧೭–೧೧೦ ; 1123). [ಅಂಬುಧಿ + ವೇಷ್ಟಿತ]

**ಅಂಬುನಾಗ** (ನಾ). ೧. ನೀರಾನೆ. ೨. ನೀರು ಹಾವು. [ಅಂಬು₃ + ನಾಗ]

**ಅಂಬುನಿಧಾನ** (ನಾ). = ಅಂಬುಧಿ : ಭೀಕರನಂಬುನಿಧಾನದಾಳವನಱಿವುದೇ (ಬಸವು. ೬೦–೪೩). [ಅಂಬು₃ + ನಿಧಾನ]

**ಅಂಬುನಿಧಿ** (ನಾ). = ಅಂಬುಧಿ : ಗಂಭೀರತೆಯಿದಿರೊಳಂಬುನಿಧಿ ತೆಳ್ಳತೆಳ್ಳನೆ (ಹಚಕಾ. ೧–೪೧). [ಅಂಬು₃ + ನಿಧಿ]

**ಅಂಬುಪಾನ** (ನಾ). ನೀರನ್ನು ಕುಡಿಯುವುದು. [ಅಂಬು₃ + ಪಾನ]

**ಅಂಬುಪಾಯಿ** (ಗು). ನೀರನ್ನು ಕುಡಿಯುವ : ವಿವಿಧ ಮೂಲಫಲಾಶಿಗಳುಂ ಸರೋವರನದೀನಿರ್ಝರಾಂಬುಪಾಯಿಗಳುಮಾಗಿ (ಆದಿಪು. ೯–೯೩ ವ). [ಸಂ. ಅಂಬುಪಾಯಿನ್]

**ಅಂಬುಪ್ರಸಾದ** (ನಾ). ನೀರನ್ನು ತಿಳಿಮಾಡತಕ್ಕ ವಸ್ತು ; ಚಿಲ್ಲದ ಬೀಜ ; ಕತಕ ಬೀಜ. [ಅಂಬು₃ + ಪ್ರಸಾದ]

**ಅಂಬುಭೃತ್** (ನಾ). ೧. ನೀರನ್ನು ಹೊತ್ತಿರುವುದು ; ಮೋಡ. ೨. ಒಂದು ಜಾತಿಯ ಹುಲ್ಲು. [ಸಂ.]

**ಅಂಬುರಾಶಿ** (ನಾ). ೧. ನೀರಿನ ರಾಶಿ. ೨. ಸಮುದ್ರ ; ಕಡಲು. [ಅಂಬು₃ + ರಾಶಿ]

**ಅಂಬುರುಟ್ಪೀಠ** (ನಾ). ೧. ಕಮಲದ ಪೀಠ : ಅಮರ್ಚುತ್ತಂಬುರುಟ್ಪೀಠಮುಂ . . . ಶರದಂಭೋಜಿನಿ ಮಾಡಿದಳ್ ದ್ವಿಜವರಂಗಾತಿಥ್ಯ ಸತ್ಕಾರಮಂ (ರಾಜಶೇ. ೫–೧೦) ೨. ಕಮಲವನ್ನು ಪೀಠವಾಗಿ ಹೊಂದಿರುವವನು ; ಬ್ರಹ್ಮ. [ಸಂ. (ಅಂಬುರುಹ್ + ಪೀಠ)]

**ಅಂಬುರುಹ** (ನಾ). ನೀರಿನಲ್ಲಿ ಹುಟ್ಟಿದ್ದು ; ಕಮಲ : ವದನಮಿದಲ್ತಂಬುರುಹಂ (ಕವಿರಾ. ೩–೨೪). [ಸಂ.]

**ಅಂಬುರುಹಗರ್ಭ** (ನಾ). ಕಮಲದ ಗರ್ಭದಲ್ಲಿ ಹುಟ್ಟಿದವನು; ಬ್ರಹ್ಮ. [ಅಂಬುರುಹ + ಗರ್ಭ]

**ಅಂಬುರುಹನಯನ** (ನಾ). = ಅಂಬುಜನೇತ್ರ. [ಅಂಬುರುಹ + ನಯನ]

**ಅಂಬುರುಹನಯನೆ** (ನಾ). = ಅಂಬುಜನೇತ್ರೆ. [ಸಂ. ಅಂಬುರುಹನಯನಾ (ಅಂಬುರುಹ + ನಯನ + –)]

**ಅಂಬುರುಹಸಖ** (ನಾ). ಸೂರ್ಯ : ಪತ್ತಱೊಳಂಬುರುಹಸಖಂ ನಿಲೆ ಪುಟ್ಟಿದ ನರನತಿವಿತ್ತಾಢ್ಯನೆನಿಸುಗುಂ (ಜಾತತಿ. ೧೨–೩೧). [ಅಂಬುರುಹ + ಸಖ]

**ಅಂಬುರುಹಾನನೆ** (ನಾ). = ಅಂಬುಜಮುಖಿ. [ಸಂ. ಅಂಬುರುಹಾನನಾ (ಅಂಬುರುಹ + ಆನನ + –)]

**ಅಂಬುರುಹಾಸನ** (ನಾ). = ಅಂಬುಜಾಸನ. [ಅಂಬುರುಹ + ಆಸನ]

**ಅಂಬುರುಹೇಕ್ಷಣೆ** (ನಾ). = ಅಂಬುಜನೇತ್ರೆ : ಸ್ಮರಶರಸಂಧಾನಕ್ಕಂಬುರುಹೇಕ್ಷಣೆ ಲಕ್ಷ್ಯಮಾಗೆ (ಶಾಂತಿಪು. ೮–೮೨). [ಸಂ. ಅಂಬುರುಹೇಕ್ಷಣಾ (ಅಂಬುರುಹ + ಈಕ್ಷಣ + –)]

**ಅಂಬುಲಾಕುಳ** (ನಾ). ಒಂದು ಬಿರುದಿನ ವಸ್ತು : (ಸಾಧಾರಣ ಬಿರುದುಗಳು) ಪೆಂಡ್ಯ, ಪಾದುಕೆ, ಪುತ್ತಾರು, ಅಂಬುಲಾಕುಳ, ಹಡವೆ (ಗುರುದ. ೧೧). [ಅಂಬು₂ ? + ಲಾಕುಳ ?]

**ಅಂಬುವಾಹ** (ನಾ). = ಅಂಬುಧರ. [ಸಂ.]

**ಅಂಬುವಾಹಿನಿ** (ನಾ). ನೀರನ್ನು ಎತ್ತಿ ಹಾಕುವ ಪಾತ್ರೆ, —ಮರದ ಗೂಡೆ. [ಸಂ. ಅಂಬುವಾಹಿನೀ (ಅಂಬು₃ + ವಾಹಿನೀ)]

**ಅಂಬುವೀಡು** (ನಾ). ೧. ಬಾಣವನ್ನು ಬಿಡುವುದು ; ಬಾಣ

ಪ್ರಯೋಗ. ೨. ಬಾಣವನ್ನು ಪ್ರಯೋಗ ಮಾಡಿದರೆ ಎಷ್ಟು ದೂರ ಹೋಗುವುದೋ ಅಷ್ಟು ದೂರ: ಅಂತೊಂದಂಬುವೀಡಿನೆಡೆಯೊಳ್ ಕಾಮನಂಬುವೀಡಿಂಗೊಳಗಾಗಿ ತಾಂ ಕಾಮರೂಪೆಯಪ್ಪುದಱಿಂ ದಿವ್ಯ ಕನ್ಯಕಾಸ್ವರೂಪಮಂ ಕೆಯ್ಕೊಂಡು (ಪಂಪಭಾ. ೩–೧೩ ವ); ಒರ್ವನನೆ ಲಕ್ಷ್ಯಂಮಾಡಿ ಶರಾಸಾರದಿಂ ದೂರಪಾತಮಿಸುವುದುಮಂಬುವೀಡಿನಳವಿ ಗಗ್ಗಳಮಪ್ಪುದಱಿನೆಡೆಯೊಳ್ ಧನುರ್ಧರನ ಶರವರ್ಷಂ ನವಪಯೋದ ಪ್ರಮೋದ ಬಿಂದುವರ್ಷದಂತೆ ಕಳೆಯೆ (ಶಾಂತಿಪು. ೪–೮ ವ); ಶಶಿಪ್ರಭಾ ಪ್ರಿಯನ ರಥಕ್ಕಾಗಿ ಬೇಗನೆ ಬಂದಂಬುವೀಡಿನೊಳ್ ನಿಂದು ವಿದ್ಯಾಧರರ್ ಯುದ್ಧಸನ್ನದ್ಧರಾಗಿ (ಚಂದ್ರಪು. ೬–೩೮ ವ). [ಅಂಬು₂ + ಬೀಡು₁]

**ಅಂಬುವುಗು** (ಕ್ರಿ). ನೀರಿನೊಳಕ್ಕೆ ಪ್ರವೇಶಿಸು: ಅಂಬುವೊಕ್ಕರ ಪುಲ್ವಿಡಿದರಾ ಮುಣ್ಮುಳಿಯನು ಮಾಳ್ಪುದಱ ಬೀರತೆಯೇಂ (ಶ್ರೀಪಾಲ. ೮–೬೬). [ಅಂಬು₃ + ಪುಗು (< ಪೊಗು)]

**ಅಂಬುವೇತಸ** (ನಾ). ನೀರುಹಬ್ಬೆಯ ಗಿಡ. [ಅಂಬು₃ + ವೇತಸ]

**ಅಂಬುಸಂಭವ** (ನಾ). = ಅಂಬುಜ. [ಅಂಬು₃ + ಸಂಭವ]

**ಅಂಬುಸರಣ** (ನಾ). ನೀರಿನ ಓಟ, —ಪ್ರವಾಹ. [ಸಂ. (ಅಂಬು₃ + ಸರಣ)]

**ಅಂಬುಸರಣಿ** (ನಾ). ೧. ನೀರು ಹರಿಯುವ ದಾರಿ; ಜಲಮಾರ್ಗ; ನದಿಯ ಪಾತ್ರ. ೨. ದೋಣಿ; ನಾವೆ: ವಿಜ್ಞಾಪಿಸಿದರರಸ ಲಾಲಿಪು ದಂಬುಸರಣಿ ಬಂದಿರ್ಪುದೆನುತ (ವೆಂಕಾರಾ. ೨–೧೬–೩೫). [ಅಂಬು₃ + ಸರಣಿ]

**ಅಂಬೂಕೃತ** (ನಾ). ಬಾಯಿಂದ ಉಗುಳು ಸಿಡಿಯುವಂತೆ ಮಾತಾಡುವುದು: "ಉಗುೞ್ ಸಿಡಿವ ನುಡಿ ಅಂಬೂಕೃತಮೆಂಬುದು" (ಹಲಾಯು. ೨೩–೧೪೧). [ಸಂ. (ಅಂಬು₃ + ಕೃತ)]

**ಅಂಬೂದ್ಭೂತ** (ನಾ). = ಅಂಬುಜ: ಅಂಬೂದ್ಭೂತಾಸ್ಯಂ ಸನ್ಮಧ್ಯಂ ಕಂಬುಗ್ರೀವಂ . . . ಶ್ರೇಷ್ಠಸ್ತ್ರೀಗಕ್ಕುಂ (ಮದತಿ. ೬–೨). [ಅಂಬು₃ + ಉದ್ಭೂತ]

**ಅಂಬೆ₁** (ನಾ). ೧. ಕರು (ಕರಾ–ಪ್ರಾ): ನಮ್ಮ ಮನೆಯ ಅಂಬೆ ಅಂಗಳದಲ್ಲಿ ಕುಣಿದಾಡುತ್ತಿದೆ (ರೂಢಿ). ೨. ಹಸು (ಉಕ). [~ ಅಂಬೇ ?]

**ಅಂಬೆ₂** 'ಅಂಬೇ' ನೋ.

**ಅಂಬೆ₃** (ನಾ). ೧. ತಾಯಿ; ಅಮ್ಮ. ೨. ಹೆಂಗಸರ ಹೆಸರಿನ ಕೊನೆಯಲ್ಲಿ ಗೌರವ ಸೂಚಕವಾಗಿ ಸೇರುವ ಮಾತು. ಉದಾ— ಕಮಲಾಂಬೆ, ಗಿರಿಜಾಂಬೆ, ನೀಲಾಂಬೆ. ೩. ಪಾರ್ವತೀ ದೇವಿ. ೪. ಮಹಾಭಾರತದಲ್ಲಿ ಪ್ರಸಿದ್ಧಳಾದ ಒಬ್ಬ ಹೆಂಗಸು. [ಸಂ. ಅಂಬಾ]

**ಅಂಬೆಗರೆ** (ಕ್ರಿ). 'ಅಂಬೇ' ಎಂದು ಕೂಗು: ಹಸು ಕರುವಿನೆಡೆಗೆ ಕೆಚ್ಚಲು ದೊರೆದು ಬರುವಂತೆ ಅಂಬೆಗರೆಯಲು ಕರುಳು ಆನಂದ ತೊರೆಯುವುದು (ಉಯ್ಯಾಲೆ. ೨೩). [ಅಂಬೆ₂ (< ಅಂಬೇ) + ಕರೆ₁]

**ಅಂಬೆಗಲಿಸು** (ಕ್ರಿ). ಅಂಬೆಗಾಲಿಕ್ಕು; ಅಂಬೆಗಾಲಿಡು: ಆನೆಯ ಮಱಿಯಂತೆವೊಲಂಬೆಗಲಿಸಿ[ಪಾಠಾಂ. ಲಸಿ] ನಡೆದಂ ಕೃಷ್ಣಂ (ಅರ್ಧನೇ. ೬–೭೫); ಉರುಳಿಟ್ಟಂಬೆಗಲಿಸಿ ದಟ್ಟಡಿಯಿಟ್ಟು ಪರಿದಾಡುವ ಸಮಯದೊಳು (ನೇಮಿಸಂ. ೧೫–೭೮). [< ಅಂಬೆಗಾಲ್ ? + –ಇಸು₃]

**ಅಂಬೆಗಾಲ್**, ಅಂಬೆಗಾಲು, ಅಂಬೇಗಾಲು (ನಾ). ಮಂಡಿಗಳನ್ನೂ ಅಂಗೈಗಳನ್ನೂ ಊರಿಕೊಂಡು (ಮಕ್ಕಳು) ಚಲಿಸುವ ರೀತಿ: ಬಾಲಕೇಳೀವಿಳಾಸದೊಳ್ ತಮ್ಮೂರ ವನಮಧ್ಯದೊಳಿರ್ಪಕೃತ್ರಿಮ ಚೈತ್ಯಾಲಯಕ್ಕೆ ಅಂಬೆಗಾಲಿಂ ಬಂದು (ಜೀವಸಂ. ೧೨–೫೯ ವ); ಸಿಂಗದ ಚಂದದಿನೆಂದಂಬೆಗಾಲೊಳೆಸೆವನೊ ಕಂದಂ (ಪುಷ್ಪಪು. ೩–೯೫). **ಅಂಬೆಗಾಲು**: ಚೆಲ್ವ ಪಣೆ ಕುರುಳು ಜೋಲ್ವಂಬೆಗಾಲು (ಜೈಮಿಭಾ. ೨೮–೧೮); ತೊದಲು ನುಡಿಗಳಂಬೆಗಾಲು ದಟ್ಟಡಿ ಮುದಪೊದವಿದ ಧೂಳಾಟದಿಂದ (ಕಂಸವಿ. ೪–೮೧). **ಅಂಬೇಗಾಲು**: (ಉಕ) ನಾವೆಲ್ಲರು ಹುಡುಗರ ಹಾಗೆ ಅಂಬೇಗಾಲು ಹಚ್ಚಿ (ಮುಂಬಯಿ. ೪–೭೩). [ಅಂಬೆ₁ ? + ಕಾಲ್₁]

**ಅಂಬೆಗಾಲಿಕ್ಕು** (ಕ್ರಿ). ಅಂಬೆಗಾಲನ್ನು ಇಡು; ಮಂಡಿಗಳನ್ನೂ ಅಂಗೈಗಳನ್ನೂ ಊರಿಕೊಂಡು ಚಲಿಸು: ಅಂಬೆಗಾಲಿಕ್ಕುವ ಪದದೊಳ್ ಸಿಂಹಶಿಶುವೊಲೆಸೆದಂ ಕೃಷ್ಣಂ (ಜಗವಿ. ೩–೩೫); ಪುರಜನರ ಸಂಭ್ರಮದೊಳ್ ಬಾಳಕಂ ಪೋಗಿರ್ದಂಬೆಗಾಲಿಕ್ಕುತ್ತಂ ಪೋಗಿ ನಾಗರ ಬಾವಿಯೊಳ್ ಬೀಳೆ (ಪುಣ್ಯಾಸ್ರ. ೭–೫೨ ವ); ಅಂಬೆಗಾಲಿಕ್ಕುತ ಬಂದ ಗೋವಿಂದ (ಪುರಂದ. ೧–೮೫–೧); ಮಗು ಈಗೀಗ ಅಂಬೆಗಾಲಿಕ್ಕುತ್ತಿದೆ (ರೂಢಿ). [ಅಂಬೆಗಾಲ್ + ಇಕ್ಕು₁]

**ಅಂಬೆಗಾಲಿಡು** (ಕ್ರಿ). = ಅಂಬೆಗಾಲಿಕ್ಕು: ಭೂತಳದೊಳಗಂಬೆಗಾಲಿಟ್ಟು ನಡೆವಂತೆ ಚೇತನವಾದುದಂಗಜಗೆ (ಮೋಹತ. ೧೧–೫೯); ಖಳರೆದೆಗಳಿಂತು ಮೊಳಕಾಲೊಳೊದೆದಪನೆಂಬವೋಲಂಬೆಗಾಲಿಟ್ಟು (ಚಿಬಪು. ೫–೩೯). [ಅಂಬೆಗಾಲ್ + ಇಡು₁]

**ಅಂಬೆಗಾಲು** 'ಅಂಬೆಗಾಲ್' ನೋ.

**ಅಂಬೆಗಾಲುಹಚ್ಚು** (ಕ್ರಿ). = ಅಂಬೆಗಾಲಿಕ್ಕು: ಅಂಬೆಗಾಲು ಹಚ್ಚಿ ನಡೆ (ಕಿ). [ಅಂಬೆಗಾಲು + ಹಚ್ಚು₁ (< ಪತ್ತಿಸು)]

**ಅಂಬೆಗಾಲುಹಾಕು** (ಕ್ರಿ). = ಅಂಬೆಗಾಲಿಕ್ಕು: ಮಗು ಅಂಬೆಗಾಲು ಹಾಕುತ್ತಾ ಇದೆ (ರೂಢಿ). [ಅಂಬೆಗಾಲು + ಹಾಕು (< ಪಾಯ್ಯು₁)]

**ಅಂಬೆಹಳದಿ** (ನಾ). ಒಂದು ಬಗೆಯ ಅರಿಸಿನದ ಗಿಡ; ಕಚೋರ; ಕಸ್ತೂರರಿಸಿನ; ಗಂಟುಕಚೋರ: ಅಂಬೆಹಳದಿ ಕಾರ್ಗೆಣಸು ನೀರುಳ್ಳಿ ಕೊತ್ತುಂಬರಿ ಕರಿಬೇವು ಸಹಿತ ಸಿಂಬೆ ಕೂಗಲಿ ಪಿಪ್ಪಲಗಾಯ ಕೊಯ್ದರು ನಿಂಬೆಯ ಕಳಿವಣ್ಗಳೊಡನೆ (ಮೋಹತ. ೪–೬೦). ℙ ಇದನ್ನು ಉಪ್ಪಿನಕಾಯಿಯೊಡನೆ ಹಾಕುವುದುಂಟು. [ಸಂ. ಅಮ್ಲಹರಿದ್ರಾ (ಅಮ್ಲ + ಹರಿದ್ರಾ)]

**ಅಂಬೇ**, ಅಂಬಾ, ಅಂಬೆ₂ (ಅ). ಒಂದು ಅನುಕರಣ ಶಬ್ದ; ದನಕರುಗಳು ಕೂಗುವ ಧ್ವನಿಯ ಅನುಕರಣ: ಅಂಬೇಯೆನುತ್ತ ತಲೆಗಳನೆತ್ತಿ ನೋಡುವವು (ಬಸವು. ೬೦–೨೮); ಆಕಳುಗಳಂಬೇಯೆನುತ ಮುಂಕೊಂಡು (ಬಸವು. ೬೦–೩೩). **ಅಂಬಾ**: ದನಗಳ ಬಾಯಿಯ 'ಅಂಬಾ ಅಂಬಾ' ಎಂಬಾ ಗೀತೆಯೊಳಲೆಯುವುದು (ತಳಿರು. ೫೮); ಅಂಬಾ ಎಂಬ ಆರ್ತಧ್ವನಿಯೊಡನೆ ಆ ಗೂಳಿಯು ಹಾರಿ ಬಿದ್ದಿತು (ಬಂಗಾಹೆ. ೧೯). **ಅಂಬೆ₂**: 'ಅಂಬೆಗರೆ' ಪರಾ. [ದೇ. ‖ ತುಳು. ಅಂಬ, ಅಂಬಾ, ಅಂಬೇ, ಅಂಬೊ; ತೆಲು. ಅಂಭಾ]

**ಅಂಬೇಗಾಲು** 'ಅಂಬೆಗಾಲ್' ನೋ.

**ಅಂಬೇಱು** (ನಾ). ೧. ಬಾಣದ ಹೊಡೆತ; ಬಾಣದ ಪೆಟ್ಟು: ಒಡವಂದಂಕದ ಕೌರವರ್ ದ್ರುಪದನಂಬೇಱಂಗೆ ಮೆಯ್ಯೊಡ್ಡದೊಡ್ಡೊಡೆದೋಡುತ್ತಿರೆ (ಪಂಪಭಾ. ೨–೬೨). ೨. ಧನುರ್ಯುದ್ಧ: ಅಂಬೇಱಿಂಗಾಂತರಂ ತತ್ತಱದಱಿದು ಭುಜಾಗರ್ವಮಂ ಬಿಟ್ಟು ಬಾಯ್ವಿಟ್ಟು (ಪಂರಾಮಾ. ೪–೫೦). [ಅಂಬು₁ + ಏಱು₂]

**ಅಂಬೋಣ** (ನಾ). ಹೇಳಿಕೆ; ಉಕ್ತಿ: ಆ ಬಕುಲೆಯ ಬಗ್ಗೆ ನಿನ್ನ ಅಂಬೋಣವೇನದೆ? (ಮೋಹಿನಿ. ೨೭); ನನ್ನ ಅಂಬೋಣ ಮೊದಲು ಕೇಳಿಕೊಳ್ಳಿ ಆಮೇಲೆ ಬೇಕಾದ್ದನ್ನಿರಿ (ಗೌರಾಂಗ. ೩೨); ಇಂಥವರ ಅಂಬೋಣವೇನೆಂದರೆ ಸಮಾಜದಲ್ಲಿ ವರ್ಗಗಳೆಂಬುವೇ ಇಲ್ಲ (ಮಾವಾದ. ೮೮). [< ಅನ್ನು + –ಓಣ]

**ಅಂಭ** 'ಅಂಭಸ' ನೋ.

**ಅಂಭಃಕಣ** (ನಾ). ನೀರಿನ ಹನಿ. [ಸಂ. (ಅಂಭಸ್ + ಕಣ)]
**ಅಂಭಃಕರಿ** (ನಾ). ನೀರಾನೆ.
[ಸಂ. ಅಂಭಃಕರಿನ್ (ಅಂಭಸ್ + ಕರಿನ್)]
**ಅಂಭಃಕುಂಭೀನ** (ನಾ). = ಅಂಭಃಕರಿ : ಅಂಭಃಕುಂಭೀನ ಕುಂಭೀನಸ ಮಕರ . . . ಚಳನ್ಮೀನಫೇನಪ್ರತಾನಂ ಶುಂಭದ್ಗಂಭೀರಿಮಂ ರಂಜಿಸಿದು ದಮಮ ದತ್ತೇಂದ್ರಭದ್ರಂ ಸಮುದ್ರಂ (ರಾಜಶೇ. ೧-೯೦).
[ಸಂ. (ಅಂಭಸ್ + *ಕುಂಭೀನ)]
**ಅಂಭಃಪೂರ** (ನಾ). = ಅಂಭಃಪ್ಲವ ೧ : ಮುಂಗಯ್ಯಂ ಪಿಡಿದೊತ್ತಿ ಕೈಯ ಕರವಾಳ್ ಬೀೞ್ತರ್ಪಿನಂ ವಕ್ತ್ರರಂಧ್ರಂಗಳ್ ಕಾಜುವಿನಂ ಕೆದುಷ್ಣರುಧಿರಾಂಭಃಪೂರಮಂ ಪೊಯ್ದು (ಪಂರಾಮಾ. ೮-೫೪).
[ಸಂ. (ಅಂಭಸ್ + ಪೂರ$_1$)]
**ಅಂಭಃಪ್ಲವ** (ನಾ). ೧. ನೀರಿನ ಪ್ರವಾಹ. ೨. ನೀರಿನ ರಾಶಿ : ಮೊಳೆವುಲ್ಲಂ ಮೇದು ಮಧ್ಯಂದಿನದ ಬಿಜುವಿಸಿಲ್ ತಾಗೆ ಬೆನ್ನಂ ಭರಂಗೊಂಡೆಳಸುತ್ತಂ ಪಲ್ವಲಾಂಭಃಪ್ಲವದೆ ಮುಳುಗಿ ತತ್ಕರ್ದಮಂ ಪತ್ತೆ ನಿಂದು (ರಾಜಶೇ. ೫-೭೮). [ಸಂ. (ಅಂಭಸ್ + ಪ್ಲವ)]
**ಅಂಭಶ್ಚರ** (ನಾ). = ಅಂಬುಚರ. [ಸಂ. (ಅಂಭಸ್ + ಚರ)]
**ಅಂಭಸ, ಅಂಭ, ಅಂಭಸಿ** (ನಾ). ನೀರು : "ಜೀವನೀಯಮುಂಭಸಮಂಬು ತೋಯಂ ಜಲಂ" (ಮಂಗರಾ.೧೧೯-೧). **ಅಂಭ** (ಗಂಗಾಮ). **ಅಂಭಸಿ** : ಪಯವ ಕೂಡಿದ ನೀರಿನಂತೆ, ಮಧುರವ ಕೂಡಿದ ಅಂಭಸಿಯಂತೆ, ತೈಲವ ಕೂಡಿದ ಉದಕದಂತೆ (ಮೋಳಿಮಾ. ೫೩೫). [ಸಂ. ಅಂಭಸ್]
**ಅಂಭಸಿ** 'ಅಂಭಸ' ನೋ.
**ಅಂಭೋಜ** (ನಾ). ನೀರಿನಲ್ಲಿ ಹುಟ್ಟಿದ್ದು ; ತಾವರೆ ; ಕಮಲ. [ಸಂ.]
**ಅಂಭೋಜಜಾತ** (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ.
[ಅಂಭೋಜ + ಜಾತ]
**ಅಂಭೋಜನೇತ್ರೆ** (ನಾ). ಕಮಲವನ್ನು ಹೋಲುವ ಕಣ್ಣುಳ್ಳವಳು.
[ಸಂ. ಅಂಭೋಜನೇತ್ರಾ (ಅಂಭೋಜ + ನೇತ್ರ + -)]
**ಅಂಭೋಜಮಿತ್ರ** (ನಾ). ಕಮಲದ ಗೆಳೆಯ ; ಸೂರ್ಯ.
[ಅಂಭೋಜ + ಮಿತ್ರ]
**ಅಂಭೋಜಲೋಚನ** (ನಾ). ಕಮಲವನ್ನು ಹೋಲುವ ಕಣ್ಣುಳ್ಳವನು ; ವಿಷ್ಣು. [ಅಂಭೋಜ + ಲೋಚನ]
**ಅಂಭೋಜಷಂಡ** (ನಾ). ೧. ಕಮಲದ ಸಮೂಹ, —ವನ : ನಿಖಿಳ ವಿನೇಯಾಗ್ರಗಣ್ಯೈಕಚೂಡಾಮಣಿ ಧರ್ಮಾಂಭೋಜಷಂಡದ್ಯುಮಣಿ ಬುಧ ಜನಪ್ರೀಣನಾಗ್ರೇಸರಗ್ರಾಮಣಿಯಾದಂ (ಅಜಿಪು. ೧೨-೧೫). ೨. ಕಮಲದ ಸಮೂಹವುಳ್ಳದ್ದು ; ಕೊಳ. [ಅಂಭೋಜ + ಷಂಡ]
**ಅಂಭೋಜಸಂಭವ** (ನಾ). = ಅಂಭೋಜಜಾತ.
[ಅಂಭೋಜ + ಸಂಭವ]
**ಅಂಭೋಜಾತ** (ನಾ). = ಅಂಭೋಜ. [ಸಂ. (ಅಂಭಸ್ + ಜಾತ)]
**ಅಂಭೋಜಿನಿ** (ನಾ). ೧. ಕಮಲ. ೨. ಕಮಲದ ವನ, —ಗುಂಪು.
[ಸಂ. ಅಂಭೋಜಿನೀ]
**ಅಂಭೋದ** (ನಾ). ನೀರನ್ನು ಕೊಡುವಂಥದು ; ಮೋಡ. [ಸಂ.]
**ಅಂಭೋದಕಾಲ** (ನಾ). ಮೋಡಗಳು ಪ್ರಚುರವಾಗಿರುವ ಕಾಲ ; ಮಳೆಗಾಲ. [ಅಂಭೋದ + ಕಾಲ]
**ಅಂಭೋದಪಥ** (ನಾ). = ಅಂಭೋದಮಾರ್ಗ : ಸುರಾಸುರರಂಭೋದ ಪಥಕ್ಕೆಳಂಕರಣಮಾಗುಯ್ದರ್ (ಆದಿಪು. ೯-೭೩). [ಅಂಭೋದ + ಪಥ]
**ಅಂಭೋದಮಾರ್ಗ** (ನಾ). ಮೋಡಗಳು ಸಂಚರಿಸುವ ದಾರಿ ; ಆಕಾಶ. [ಅಂಭೋದ + ಮಾರ್ಗ]
**ಅಂಭೋದಸ್ವನ** (ನಾ). ೧. ಮೋಡದ ಧ್ವನಿ; ಗುಡುಗು. ೨. ಒಬ್ಬನ ಹೆಸರು : ಅಹಿಧರಂ ಶಂಕುಕರ್ಣಂ ಪ್ರಕುಂಡೋದರನಂಭೋದಸ್ವನಂ ಧೂರ್ಜಟಿ . . . ಎಸೆದರ್ ವಿಶ್ವೇಶ್ವರಾ ಸ್ಥಾನದೊಳ್ (ರಾಜಶೇ. ೧೪-೧೫೩, ೧೫೪). [ಅಂಭೋದ + ಸ್ವನ]
**ಅಂಭೋದಾಧ್ವ** (ನಾ). = ಅಂಭೋದಮಾರ್ಗ : ಬಲಿಭುಗ್ಬಲಂ ನಡೆದುದಂಭೋದಾಧ್ವದೊಳ್ ರಾಗದಿಂ (ಪಂಚತಂ. ೨೬೫-೨೦).
[ಅಂಭೋದ + ಅಧ್ವ]
**ಅಂಭೋಧಿ** (ನಾ). ಜಲಾಶಯ ; ಸಮುದ್ರ. [ಸಂ.]
**ಅಂಭೋಧಿಪಥ** (ನಾ). ಸಮುದ್ರಮಾರ್ಗ : ಕೇತನಚಂಚಲಾಂಚಳ ನಿಚಯದಿಂದಂ ಅಂಭೋಧಿಪಥಮುಮತಿಚಕಿತವಿದ್ವಿಷ್ಟದೃಷ್ಟಿಪಥಮುಂ ನಿರವಕಾಶಮಾಗೆಯುಂ (ಆದಿಪು. ೧೩-೭೭ ವ). [ಅಂಭೋಧಿ + ಪಥ]
**ಅಂಭೋನಿಧಿ** (ನಾ). = ಅಂಭೋಧಿ. [ಸಂ.]
**ಅಂಭೋರಾಶಿ** (ನಾ). ನೀರಿನ ಸಮೂಹ ; ಸಮುದ್ರ.
[ಸಂ. (ಅಂಭಸ್ + ರಾಶಿ)]
**ಅಂಭೋರಾಸಿ** (ನಾ). = ಅಂಭೋರಾಶಿ : ಗಭೀರತೆಯೊಳಂಭೋರಾಸಿಯಂ × × × ವಾರ್ಪ್ಪಿನೊಳ್ಕಲ್ಪವೃಕ್ಷಮನೀತಂ ನೆಱೆ ಪೋ[ಲ್ವ]ನೆಂದನುದಿನಂ ವ್ಯಾವರ್ಣ್ಣಿಕುಂ (ಸೌಇಇ. XI-ii, ೧೨೦-೪೧ ; 1044).
[ಸಂ. ಅಂಭೋರಾಶಿ (ಅಂಭಸ್ + ರಾಶಿ)]
**ಅಂಭೋರುಹ** (ನಾ). ನೀರಿನಲ್ಲಿ ಹುಟ್ಟಿದ್ದು ; ಕಮಲ : ಪೊಸತಲರ್ದಂಭೋರುಹದೊಳ್ ಮುಸುಂಬು ಮುಟುಗುವಿನಮೆಱಗಿ ಗಂಧಮನಾಘ್ರಾಣಿಸುತಂ (ಅಜಿಪು. ೬-೬೬). [ಸಂ.]
**ಅಂಭೋಲವ** (ನಾ). ನೀರಿನ ಹನಿ, —ಕಣ : ಕೊಳದಂಭೋಲವ ಮುಣ್ಮಿ ಪೊಣ್ಮೆ (ಶಾಂತಿಪು. ೭-೧೨೭). [ಸಂ. (ಅಂಭಸ್ + ಲವ)]
**ಅಂವರೆ** (ನಾ). ಹೆದರಿಕೆ ; ಭಯ (?) : ಶೆಳೆವ ಮೃತ್ಯು ನಿನ್ನ ತಡಹಲಿ ಎಂಬೆನೆ ಬಲುಮೃತ್ಯುಗಳ ನೀನೆ ತಲೆಮೆಟ್ಟಿ ಆಳುವೆ ಸುಲಭನೆ ನಿನಗೊಂದು ಅಂವರೆ ಕಾಣೆ ನೆಲೆ ಯಾವದು ನಿನ್ನ ಬಲವಂತತನಕ್ಕೆ (ಮೋಕ್ಷದೀ. ೯೬-೭). [?]
**ಅಂಶ** (ನಾ). ೧. ಭಾಗ. ೨. ಆಸ್ತಿಯಲ್ಲಿ ಪಾಲು. ೩. ಅಕ್ಷಾಂಶ ಅಥವಾ ರೇಖಾಂಶ. ೪. ಆದಿತ್ಯರಲ್ಲಿ ಒಬ್ಬನ ಹೆಸರು. ೫. [ಗಣಿತ] ಭಿನ್ನರಾಶಿಯಲ್ಲಿ ಗೆರೆಯ ಮೇಲಣ ಅಥವಾ ಪೂರ್ವದ ಸಂಖ್ಯೆ : ಉದಾ— $\frac{೩}{೪}$ ಅಥವಾ ೩/೪ ಎಂಬುದರಲ್ಲಿ ೩ ಎಂಬ ಸಂಖ್ಯೆ. ☞ ಭಿನ್ನರಾಶಿಯಲ್ಲಿ ಗೆರೆಯ ಕೆಳಗಿನ ಅಥವಾ ಆಮೇಲಿನ ಸಂಖ್ಯೆಗೆ 'ಛೇದ' ಎಂದು ಹೆಸರು. ೬. [ಜ್ಯೋತಿ] ಒಂದು ರಾಶಿಯ ಒಂಬತ್ತನೆಯ ಒಂದು ಭಾಗ ; ನವಾಂಶ : "ಅಂಶ-ಭಾಗ (ಸಾಮಾನ್ಯವಾಗಿ ನವಾಂಶ ಎನ್ನುವ ಅರ್ಥದಲ್ಲಿ ಬಳಕೆಯಲ್ಲಿದೆ)" (ಜಾತಕ. ಪರಿ. ೩. ಪು. ೩೫೯). ೭. ವಿವರ ; ಬಾಬು : ಈ ಸಂದರ್ಭದಲ್ಲಿ ಗಮನಕ್ಕೆ ತಂದುಕೊಳ್ಳಬೇಕಾದ ಅಂಶ ಇನ್ನೊಂದು ಉಂಟು (ರೂಢಿ). ೮. ಕೋನದ ಅಥವಾ ಶಾಖದ ಪರಿಮಾಣ ; ಡಿಗ್ರಿ. ೯. [ಛಂದ] ಕನ್ನಡ ಛಂದಸ್ಸಿನ 'ಅಂಶಗಣ'ದ ಮೂಲಘಟಕ : ಗಣದಲ್ಲಿ ಅಂಶಗಳುಂಟು. ಗಣಕ್ಕೆ ಮೂಲಾಂಶ ಒಂದು ಗುರು (ಲಘುವಲ್ಲ) . . . ಮೊದಲನೆಯ ಅಂಶಕ್ಕೆ ಮಾತ್ರ, ಎಂದರೆ ಗುರುವಿಗೆ ಬದಲಾಗಿ, ಎರಡು ಲಘುವನ್ನು ಹಾಕಬಹುದು. ಎರಡನೆಯ, ಮೂರನೆಯ, ನಾಲ್ಕನೆಯ ಅಂಶಗಳು ಲಘುವಾಗಿಯೂ ಇರಬಹುದು (ಕೈಪಿಡಿ. ೧೧೮, ೧೧೯) ; ಬ್ರಹ್ಮಗಣದಲ್ಲಿ ಎರಡು "ಅಂಶ"ಗಳೂ ವಿಷ್ಣುಗಣದಲ್ಲಿ ಮೂರೂ ರುದ್ರಗಣದಲ್ಲಿ ನಾಲ್ಕೂ ಇರುತ್ತವೆ . . . ಗಣದ ಮೊದಲನೆಯ ಅಂಶ ಮಾತ್ರ ಒಂದು ಗುರುವಿನಿಂದ ಅಥವಾ ಎರಡು ಲಘುಗಳಿಂದ ಕೂಡಿರಬಹುದು. . .

ಗಣದ ಮಿಕ್ಕ ಅಂಶಗಳೆಲ್ಲ ಒಂದೊಂದೇ ಅಕ್ಷರದಿಂದ (syllable) ಆಗಿರಬೇಕು (ಸಮಾಲೋ. ೨೨೪). [ಸಂ.]

**ಅಂಶಕ** (ನಾ). ೧. ಪಾಲು. ೨. ಪಾಲು ಉಳ್ಳವನು. ೩. [ಜ್ಯೋತಿ] ಒಂದು ರಾಶಿಯ ಒಂಬತ್ತನೆಯ ಒಂದು ಭಾಗ. [ಸಂ.]

**ಅಂಶಕಫಲ** (ನಾ). [ಜ್ಯೋತಿ] ನವಾಂಶದೃಷ್ಟಿಯ ಫಲ: ವಿಧುವಿರ್ದ ನವಾಂಶಕ[ಗೃಹ]ದಧಿಪತಿ ಬಲವಂತನಾದೊಡಂಶಕಫಲಮುಖ್ಯಧಿಕಂ (ಜಾತತಿ. ೨೦-೨೪). [ಅಂಶಕ + ಫಲ]

**ಅಂಶಕರ್ತ** (ನಾ). ಪಾಲಿನ ಒಡೆಯ; ಪಾಲುದಾರ (ಸ್ಯಾಂಡರ್). [ಅಂಶ + ಕರ್ತ]

**ಅಂಶಕುಂಡಲಿ** (ನಾ). ಜಾತಕದಲ್ಲಿ ಗ್ರಹಗಳು ಯಾವ ಯಾವ ಅಂಶದಲ್ಲಿ ಇರುತ್ತವೆ ಎಂಬುದನ್ನು ಗುರುತಿಸಿರುವ ಹನ್ನೆರಡು ಮನೆಗಳ ಆಕೃತಿ. [ಸಂ. ಅಂಶಕುಂಡಲೀ (ಅಂಶ + ಕುಂಡಲೀ)]

**ಅಂಶಗಣ** (ನಾ). ಕರ್ಣಾಟಕ ವಿಷಯಜಾತಿಯೆಂದು ನಾಗವರ್ಮನು ಕರೆದಿರುವ ದೇಶೀಯ ಛಂದಸ್ಸಿಗೆ ಆಧಾರವಾಗಿರತಕ್ಕ ಬ್ರಹ್ಮ ವಿಷ್ಣು ರುದ್ರ ಎಂಬ ಗಣಗಳಿಗೆ ಆಧುನಿಕ ವಿದ್ವಾಂಸರು ಕೊಟ್ಟಿರುವ ಹೆಸರು: ಇವನ್ನು [= ಬ್ರಹ್ಮ ವಿಷ್ಣು ರುದ್ರ ಗಣಗಳನ್ನು] ಅಕ್ಷರಗಣ ಎನ್ನುವುದಕ್ಕಿಂತಲೂ ಅಂಶಗಣ ಎಂದು ಹೇಳುವುದು ಉತ್ತಮ (ಕೈಪಿಡಿ. ೧೧೮. ಅಡಿಟಿ); ಬ್ರಹ್ಮ ವಿಷ್ಣು ರುದ್ರ ಗಣಗಳ ಮೂಲಮಾಪಕವನ್ನು (Unit of measurement) "ಅಂಶ"ವೆಂದು ಕರೆದು, ಈ ಗಣಗಳನ್ನು "ಅಂಶಗಣ"ಗಳೆಂದು ನಿರ್ದೇಶಿಸಿದವರು ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು (ಸಮಾಲೋ. ೨೨೩ ಅಡಿಟಿ). 'ದೇವಗಣ' ಪರಾ. [ಅಂಶ + ಗಣ]

**ಅಂಶಚಕ್ರ** (ನಾ). = ಅಂಶಕುಂಡಲಿ. [ಅಂಶ + ಚಕ್ರ]

**ಅಂಶಜ** (ನಾ). (ದೇವತೆಯ) ಅಂಶದಿಂದ ಹುಟ್ಟಿದವನು. [ಸಂ.]

**ಅಂಶತಃ** (ಅ). ಭಾಗಭಾಗವಾಗಿ; ಕೆಲಮಟ್ಟಿಗೆ. [ಸಂ.]

**ಅಂಶಪತಿ** (ನಾ). [ಜ್ಯೋತಿ] ಚಂದ್ರನು ಇರುವ ನವಾಂಶಕ್ಕೆ ಒಡೆಯನಾದ ಗ್ರಹ: ಉದಯಕೆ ನಿಂದ ರಾಶಿಯೊಳೆ ಸಂದ ನವಾಂಶಕದಿಂದೆ ಮುಂದೆ ಮತ್ತುದಯಿಸುವಂಶಕಂಗಳವು ಸಲ್ವಿನೆಗಂ ಮನುಜಂಗೆ ಮುಚ್ಚಿಪೋಪುದು ದೊರೆಕೊಳ್ಳುಮಂಶಪತಿ ನೋಡುವೊಡಿಮ್ಮಡಿ ಮುಚ್ಚಿಪೋಕುಂ (ಜಾತತಿ. ೨೩-೨೩). [ಅಂಶ + ಪತಿ]

**ಅಂಶಪುರುಷ** (ನಾ). ದೇವಾಂಶವುಳ್ಳವನು; ವಿಭೂತಿಪುರುಷ. [ಅಂಶ + ಪುರುಷ]

**ಅಂಶಾಂಶ** (ನಾ). ಅಂಶದ ಅಂಶ. [ಅಂಶ + ಅಂಶ]

**ಅಂಶಾಯು** (ನಾ). [ಜ್ಯೋತಿ] ಜನ್ಮಲಗ್ನವು ಬಲಿಷ್ಠವಾಗಿರುವಾಗ ಆಯುಷ್ಯದ ಪ್ರಮಾಣವನ್ನು ಲೆಕ್ಕಮಾಡುವ ಕ್ರಮ: ಪರಮಾಯುಷ್ಯಮನೆಯ್ದೆ [ಪೊರ್ದಿಯಧನಂ] ತಾನಪ್ಪುದಂ ಕಂಡು ಕಂಡಿರೆ ಪಿಂಡಾಯುವದೇವುದೆಂಬರರೆಬರ್ ಕೈಕೊಳ್ವರಂಶಾಯುಮಂ (ಜಾತತಿ. ೮-೧೩). [ಅಂಶ + ಆಯ್ಯು]

**ಅಂಶಾವತಾರ** (ನಾ). ದೇವತಾಶಕ್ತಿಯ ಒಂದು ಭಾಗ ಕಾರಣಾಂತರದಿಂದ ಭೂಲೋಕದಲ್ಲಿ ಹುಟ್ಟುವುದು. 'ಪೂರ್ಣಾವತಾರ' ಪರಾ. [ಅಂಶ + ಅವತಾರ]

**ಅಂಶಿ** (ಗು). ೧. ಅಂಶಗಳನ್ನು ಹೊಂದಿರುವ. ೨. ಪ್ರಧಾನವಾದ. (ನಾ). ೩. ಪಾಲುಗಾರ. ೪. [ದ್ವೈತ]: "ಅಂಶಿಗಳೆಂದರೆ ಸಾಂಶರೆಂದರ್ಥ. ಅಂದರೆ ಒಂದು ರೂಪದಿಂದ ಒಂದು ಕಡೆಯೂ, ರೂಪಾಂತರದಿಂದ ಮತ್ತೊಂದು ಕಡೆಯೂ ಇರುವ ಯೋಗ್ಯತೆಯುಳ್ಳ ತತ್ತ್ವಾಭಿಮಾನಿ ದೇವತೆಗಳು" (ಹಸಾರ. ೧೪-೬; ಪು, ೭೪೮). [ಸಂ. ಅಂಶಿನ್]

**ಅಂಶಿಕ** (ನಾ). ೧. ಅಂಶ: ಶಿವಪುತ್ರನಂಶಿಕದಾತನೀಗ ಧರಿತ್ರಿಯೊಳು ... ಜ್ಞಾನಸಂಬಂಧಿಯಾರೆನಿಪ್ಪಭಿಧಾನದಿಂದ (ಬಸವು. ೫೦-೪೪, ೪೫). ೨. ಅಂಶವುಳ್ಳವನು: ಶೂಲಿಯಂಶಿಕನಿರ್ಪ ತನ್ನ ವಿಶಾಲಗರ್ಭದ ಭಾರಮಂ ತಾಂ ತಾಳಲಾಜದೆ (ಬಸವು. ೩-೧೩); ಈ ಯೋಗದ ಅಂಶಿಕರೇ ಸಹೃದಯರು (ಸಾಹಿವಿ. ೧೫). [ಸಂ.]

**ಅಂಶಿಸಮಾಸ** (ನಾ). ಪೂರ್ವಪದವು ಒಂದು ವಸ್ತುವಿನ ಅಂಶವನ್ನು ತಿಳಿಸುವ ಶಬ್ದವಾಗಿಯೂ, ಉತ್ತರಪದವು ಅಂಶಿಯನ್ನು ತಿಳಿಸತಕ್ಕದ್ದಾಗಿಯೂ ಇರುವ ಸಮಾಸ: ಯತ್ರ ಅಂಶಾಂಶಿವಾಚಿನೋಃ ಪದಯೋಃ ... ಸಮಾಸಃ ಸೋಽಂಶಿಸಮಾಸ ಉಚ್ಯತೇ (ಶಬ್ದಾನು. ೩೦೯ ವ್ಯಾಖ್ಯಾ). ಉದಾ— ಅಂಗಾಲು, ಮುಂಗಯ್, ಹೆಡದಲೆ. ☞ ಈ ಸಮಾಸಕ್ಕೆ ಶಬ್ದಮಣಿದರ್ಪಣ ಮೊದಲಾದ ಗ್ರಂಥಗಳಲ್ಲಿ ಅವ್ಯಯೀಭಾವ ಎಂಬ ಹೆಸರಿದೆ. [ಅಂಶಿ + ಸಮಾಸ]

**ಅಂಶು** (ನಾ). ೧. ಕಿರಣ. ೨. ಮೊನೆ; ತುದಿ. ೩. ಉಡುಪು. ೪. ಅಲಂಕಾರ. ೫. ಒಬ್ಬ ಋಷಿಯ ಹೆಸರು. ೬. ಒಬ್ಬ ದೊರೆಯ ಹೆಸರು. ೭. ವೇಗ. [ಸಂ.]

**ಅಂಶುಕ** (ನಾ). ೧. (ಉಡುವ ಅಥವಾ ಹೊದೆಯುವ) ಬಟ್ಟೆ. ೨. ಬಿಳಿಯ ಬಟ್ಟೆ. ೩. ಎಲೆ. ೪. ಕಿರಣ. [ಸಂ.]

**ಅಂಶುಜಾಲ** (ನಾ). ಕಿರಣಗಳ ಸಮೂಹ. [ಅಂಶು + ಜಾಲ]

**ಅಂಶುಧರ** (ನಾ). ಕಿರಣಗಳನ್ನು ತಳೆದವನು; ಸೂರ್ಯ. [ಸಂ.]

**ಅಂಶುಪಟ್ಟೆ** (ನಾ). ಒಂದು ವಿಧವಾದ ರೇಷ್ಮೆಯ ಬಟ್ಟೆ. [ಅಂಶು + ಪಟ್ಟ]

**ಅಂಶುಪತಿ** (ನಾ). ಕಿರಣಗಳ ಒಡೆಯ; ಸೂರ್ಯ. [ಅಂಶು + ಪತಿ]

**ಅಂಶುಮಂತ** (ನಾ). ೧. ಸೂರ್ಯ. ೨. ಚಂದ್ರ. ೩. ಸಗರ ಚಕ್ರವರ್ತಿಯ ಮೊಮ್ಮಗ. ೪. ಒಂದು ಪರ್ವತ. [ಸಂ. ಅಂಶುಮತ್]

**ಅಂಶುಮತಿ** (ನಾ). ೧. ಯಮುನಾ ನದಿ. ೨. ಮೂರೆಲೆ ಹೊನ್ನೆಯ ಗಿಡ. ೩. ಒಂದೆಲಗ (ಓಷಧಿ. ೫). ೪. ಇಂಗು (ಓಷಧಿ. ೫). [ಸಂ. ಅಂಶುಮತೀ]

**ಅಂಶುಮತ್ತನೆಯ** (ನಾ). ಸೂರ್ಯನ ಮಗ; ಕರ್ಣ: ತತ್ತನೆಯಂ ಘನಶೌರ್ಯಮರುತ್ತನೆಯಂ ವಿತರಣಾಂಶುಮತ್ತನೆಯಂ ಲೋಕೋತ್ತರ ಶೌಚಗುಣೇಂದ್ರಸರಿತ್ತನೆಯಂ ಬೊಪ್ಪದೇವಭೂಪಂ ನೆಗಳ್ದಂ (ಎಕ. XI, ದಾವಣ. ೩೫-೫೭; 1160). [ಸಂ. ಅಂಶುಮತ್ತನಯ (ಅಂಶುಮತ್ + ತನಯ)]

**ಅಂಶುಮತ್ಫಲೆ** (ನಾ). ಬಾಳೆಯ ಗಿಡ. [ಸಂ. ಅಂಶುಮತ್ಫಲಾ (ಅಂಶುಮತ್ + ಫಲ + –)]

**ಅಂಶುಮಾಲಿ** (ನಾ). ಕಿರಣಗಳ ಮಾಲೆಯುಳ್ಳವನು; ಸೂರ್ಯ. [ಸಂ. ಅಂಶುಮಾಲಿನ್ (ಅಂಶು + ಮಾಲಾ + –)]

**ಅಂಶುಮಾಲೆ** (ನಾ). ಕಿರಣಗಳ ಮಾಲೆ; ಪ್ರಭಾವಲಯ. [ಅಂಶು + ಮಾಲೆ]

**ಅಂಶುಹಸ್ತ** (ನಾ). ಕಿರಣಗಳೇ ಕೈಯಾಗಿ ಉಳ್ಳವನು; ಸೂರ್ಯ. [ಅಂಶು + ಹಸ್ತ]

**ಅಂಶೆ** (ನಾ). ೧. ಅಂಶ. ೨. ಪಾಡು; ಸ್ಥಿತಿ. (ಕ). [ಸಂ. ಅಂಶ]

**ಅಂಶೋದ್ಭವ** (ನಾ). = ಅಂಶಜ. [ಅಂಶ + ಉದ್ಭವ]

**ಅಂಸ** (ನಾ). ೧. ಭುಜ. ೨. (ತೋಳನ್ನೂ ಹೆಗಲನ್ನೂ ಸೇರಿಸುವ) ಹೆಗಲೆಲುಬು. ೩. ಒಬ್ಬ ರಾಜನ ಹೆಸರು. [ಸಂ.]

**ಅಂಸಕೂಟ** (ನಾ). ೧. ಗೂಳಿಯ ಹೆಗಲ ಮೇಲಿನ ಡುಬ್ಬ; ಹಿಣಿಲು; ಇಣಿ. ೨. ಹೆಗಲು; ಭುಜಶಿಖರ. [ಅಂಸ + ಕೂಟ]

**ಅಂಸತ್ರ** (ನಾ). ಭುಜವನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಯೋಧರು ಉಪಯೋಗಿಸುವ ಒಂದು ಸಲಕರಣೆ. [ಸಂ.]

**ಅಂಸರೋಳಿ** (ನಾ). ಒಂದು ಮರ; ಅಂಕೋಲದ ಮರ : ಅಂಸರೋಳಿ(ಮರ) ಬಹಳ ಎತ್ತರವಾಗಿ ಬೆಳೆಯುವುದಿಲ್ಲ . . . ಕಾಯಿ ಒಗರು, ಹುಳಿ (ಕಭಾಗೆ. ೩೪). [?]

**ಅಂಸಲ,** ಅಂಸಳ (ಗು). ತುಂಬಿದ ಭುಜವುಳ್ಳ; ಬಲಿಷ್ಠನಾದ. **ಅಂಸಳ** : "ಬಲವಾನ್ ಅಂಸಳಃ ಈ ೨ ಬಲ್ಲಿದಂ" (ಹಲಾಯು. ೬೩-೨೨೬). [ಸಂ.]

**ಅಂಸಳ** 'ಅಂಸಲ' ನೋ.

**ಅಂಸು** (ನಾ). ಅಂಚು ; ದಡ (?) : ಹಂಸಮಿಥುನಗೂಡಿ ಬಳಗ ಸಮನ್ವಿತ ಸಂಶಯವಿಲ್ಲದೆ ಕೊಳನ ಅಂಸುವ ದಾಂಟಿ ಪೋಗುವ ವೋಲು ಜಿನರಾಜಹಂಸ ನಡೆದನೇನೆಂಬೆ (ಅನಂತ. ೯-೧೩೨). [< ಅಂಚು$_2$ ?]

**ಅಂಹ** (ನಾ). ೧. ಪಾಪ. ೨. ಕಷ್ಟ. ೩. ಕೊರತೆ. [ಸಂ. ಅಂಹಸ್]

**ಅಂಹತಿ** (ನಾ). ದಾನ. [ಸಂ.]

**ಅಂಹ್ರಿ** (ನಾ). = ಅಂಘ್ರಿ. [ಸಂ.]

**ಅಃ,** ಆಃ (ಅ). ಸಂತೋಷ, ಅಶುಭ, ವ್ಯಥೆ, ಆಶ್ಚರ್ಯ, ವಿಡಂಬನ ಸ್ಮರಣೆ ಮುಂತಾದವುಗಳನ್ನು ಸೂಚಿಸುವ ಅವ್ಯಯ : "ಅಃ ಸಂಪ್ರಹರ್ಷಾಶೋಭನ ಖೇದ ವಿಸ್ಮಯೇಷು" (ಭಾಷಾಭೂ. ೨೬೩ ಉದಾ); ಪರಿವಿಡಿಯಿಂದಾಃ ಅಃ ಎಂಬೆರಡುಂ ವಿಸ್ಮಯ ವಿಡಂಬನ ವ್ಯಥನ ಸಂಸ್ಫುರಿತಾರ್ಥದೊಳ್ (ಶಮದ. ೩೧೦). (i) ಸಂತೋಷಕ್ಕೆ : ಅಃ ಒಳ್ಳಿತಾಯ್ತು (ಭಾಷಾಭೂ. ೨೬೩ ಉದಾ). (ii) ಅಶುಭಕ್ಕೆ : ಅಃ ಪೊಲ್ಲದಾಯ್ತು (ಭಾಷಾಭೂ. ೨೬೩ ಉದಾ). (iii) ವ್ಯಥೆಗೆ : ಪೆಱತೊಂದನೀವೆನೆಂದನೆ ನೊಂದಃ ಎಂದನೆ (ಪಂಪಭಾ. ೧-೧೦೨) ; ಅಃ ಪಾತಕ ವಿಧಿಯೇ (ಭಾಷಾಭೂ. ೨೬೩ ಉದಾ). (iv) ಆಶ್ಚರ್ಯಕ್ಕೆ : ಅಃ ಚೋದ್ಯಂ (ಭಾಷಾಭೂ. ೨೬೩ ಉದಾ) ; ಇನಿಯನೆ ಬೆಲ್ಲದಿಂದಿನಿಯನೀವನೆ ಅಃ ಪಿರಿದೀವಂ (ಕಾವ್ಯಾವ. ೫೨). **ಆಃ** : (i) ಆಃ ಆಃ ಇಂದ್ರಚಾಪದ ಪಾಂಗಿನಿಂ ಪಲವಗೆವಣ್ಣದಿಂ ರಂಜಿಪ ಆ ಎನ್ನ ಪೂದೋಂಟದ ಸೊಬಗೇ (ರಾಮಾಶ್ವ. ೩೯-೨೯). (iv) ಆಃ ಏತಱೊಂದು ಬಿದಿಯ ಬದಗಾಟಮೊ (ರಾಮಾಶ್ವ. ೧೬೦-೧೬). (v) ವಿಡಂಬನಕ್ಕೆ : ಆಃ ರತಿಯಂ ಬಣ್ಣಿಸಲ್ಕೆ ಸಲ್ಲದ ನೀನೇ ತಱ ಕಾಮದೇವಂ (ರಾಮಾಶ್ವ. ೮೭-೩೦). (vi) ಸ್ಮರಣೆಗೆ : ಆಃ ಎಡರ್ಗೇಡಿಯನೆ ಮಱೆತೆಂ (ರಾಮಾಶ್ವ. ೮೮-೧೯).

**ಅಕ$_1$** 'ಅಕ್ಕ$_1$' ನೋ.

**ಅಕ$_2$** (ನಾ). ಸುಖವಲ್ಲದ್ದು ; ದುಃಖ. [ಸಂ.]

**ಅಕಂಟಕ** (ಗು). ೧. ಮುಳ್ಳಿಲ್ಲದ. ೨. ವಿಘ್ನವಿಲ್ಲದ ; ಶತ್ರುಗಳಿಲ್ಲದ ; ನಿಷ್ಕಂಟಕ. [ಸಂ.]

**ಅಕಂಪಿತ** (ಗು). ನಡುಗದ ; ಅಲುಗದ ; ಅಳ್ಳಾಡದ. [ಸಂ.]

**ಅಕಂಪಿತಶರೀರ** (ಗು). ನಡುಗದ ಮೈಯುಳ್ಳ ; ಸ್ಥೈರ್ಯವುಳ್ಳ : ಪರಮಯೋಗಿಯಿರ್ಪಂದದಿಂದಕಂಪಿತಶರೀರನಿರ್ದುದು ಜಲಾಶಯೋಪಾಂತದೊಳ್ ಬಕಂ (ಪಂರಾಮಾ. ೭-೯೧). [ಅಕಂಪಿತ + ಶರೀರ]

**ಅಕಚ** (ನಾ). ೧. ಜುಟ್ಟು ಇಲ್ಲದವನು ; ಪಟ್ಟೆದಲೆಯವನು ; ಬಕ್ಕದಲೆಯವನು. ೨. ಕೇತುಗ್ರಹ. [ಸಂ.]

**ಅಕಚೆಯ** (ನಾ). ಒಬ್ಬನ ಹೆಸರು : ಶ್ರೀಮದಕಚೆಯಂ (ಎಕ. II, ೪೪೭ ; 1000). [< ಅಕಚ ? + ಅಯ್ಯ$_1$]

**ಅಕಟ** 'ಅಕ್ಕಟ' ನೋ.

**ಅಕಟವಿಕಟ,** ಅಗಟವಿಗಟ, ಅಗಡವಿಗಡ (ಗು). ೧. ಬಲು ದೊಡ್ಡ. ೨. ಘೋರ. (ನಾ). ೩. ವಿರೋಧ ; ಅಸಂಬದ್ಧತೆ : ರಾಜಕೀಯದಲ್ಲಿ ಒಂದು ಅಕಟವಿಕಟ ನಿರಂತರವಾಗಿರುತ್ತದೆ. ಅಧಿಕಾರಪಟ್ಟಕ್ಕೆ ಪ್ರತಿಭಾವಂತ ಪ್ರಾಮಾಣಿಕರು ಬರುವುದು ಅಪರೂಪ (ರಾಜ್ಯಶಾ. ೨೫೭). **ಅಗಟವಿಗಟ** : ೩. "... ಅವಳ ಗಂಡ ಮೂರು ಹೊತ್ತೂ ಸೊಸೈಟಿಯ ಲೆಕ್ಕ ಮುಂದಿಡ್ತಾನೇನು ? ನಿನ್ನದೆಲ್ಲ ಅಗಟವಿಗಟ ". ಅನಸೂಯಮ್ಮನವರೂ ರಾಜಣ್ಣನೊಡನೆ ದನಿಗೂಡಿಸಿದರು (ಮರಳಿ. ೫೭). **ಅಗಡವಿಗಡ** (೩).

[ಅಕಟ$_0$ (< ಸಂ. ಅಕೃತ ?) + ವಿಕಟ. / ತಮಿ. ಅಕಟವಿಕಟ ; ತೆಲು. ಅಕಟವಿಕಟಮು, ಅಕಟಾವಿಕಟಮು ; ಮರಾ. ಅಕಟ್‌ವಿಕಟ್, ಅಕಟೋವಿಕಟ್]

**ಅಕಟಾ** 'ಅಕ್ಕಟ' ನೋ.

**ಅಕಟಾಯಿಸು** (ಕ್ರಿ). ಸಂಕೋಚವಾಗು ; ಸುಕ್ಕು ; ಸುರುಟಿಕೊ : ಚರ್ಮ ಬಿಸಲಲ್ಲಿ ಒಣಗಿ ಅಕಟಾಯಿಸಿಹೋಯಿತು (ಸ್ಯಾಂಡರ್).

[ಅಕಟಾ$_0$ + –ಇಸು$_3$. ← ಮರಾ. ಅಖಡಣೇಂ ; ಹಿಂ. ಅಕಡ್‌ನಾ]

**ಅಕಡಾ** (ನಾ). ತಲೆಯ ಕೂದಲನ್ನು ಬಿಗಿಹಿಡಿಯುವಂತೆ ಸಿಕ್ಕಿಸಿಕೊಳ್ಳುವ ಒಂದು ಬಗೆಯ ಸೂಜಿ ; ಕೂದಲ ಸೂಜಿ : ಅಲ್ಲಿ . . . ಹೆಂಗಸರ ತುರುಬಿನಲ್ಲಿ ಚುಚ್ಚುವ ಎರಡು ಮೂರು ಬೆಳ್ಳಿಯ ಅಕಡಾಗಳೂ ಬಿದ್ದಿದ್ದವು (ಅಂಬಿಕೆ. ೧೨).

[← ಹಿಂ. ಮರಾ. ಆಂಕಡಾ, ಆಕಡಾ]

**ಅಕಡಿ** 'ಅಕ್ಕಡಿ' ನೋ.

**ಅಕಡಿತಕಡಿ** 'ಅಕ್ಕಡಿತಕ್ಕಡಿ' ನೋ.

**ಅಕಯ್ಯ** (ನಾ). ಒಬ್ಬನ ಹೆಸರು (?) : ಇಡುಗುರ ಗವುಣ್ಡತನದಕಯ್ಯ ಅದ್ದಿಯಾಪಳ್ಳಿಯೊಳ್ ತುಱುಗೊಳೊಳ್ಸತ್ತ (ಎಕ. XIV, ನಾಗಮಂ. ೧೧೧-೩ ; 961). [ಅಕ$_0$ + ಅಯ್ಯ$_1$]

**ಅಕರ$_1$** (ಗು). ೧. ಕೈಯಿಲ್ಲದ. ೨. ತೆರಿಗೆಯಿಲ್ಲದ. [ಸಂ.]

**ಅಕರ$_2$** (ಅ). ತೆರಿಗೆಯಿಲ್ಲದೆ : ಭಟ್ಟಗ್ಗಿರ್ಗೇ ಗಟ್ಟಿದ ಒಡ್ಡಲಿ ಆ ಪತ್ತೊನ್ದಿ ವಿಟ್ಟಾರಕರ (ಮೈಆರಿ. ೧೯೩೬, ೧೬-೧೬ ; ಸು. 450) ; ವ್ರಿತ್ತಿ(ವೃತ್ತಿ)ಗಳನು ನಿಧಿನಿಕ್ಷೇಪಸಹಿತವಾಗಿ ಸಿದ್ಧಾಯ ಯೆ(ಯೊ)ಸಗೆ ಕಾಣಿಕೆಬೇಡುಂಗೊಳು ಅಕರ ಸರ್ವ್ವಬಾಧಾಪರಿಹಿ(ಹೃ)ತವಾಗಿ . . . ಕೊಟ್ಟರು (ಎಇ. XXVII, ೧೬೨-೬೫ ; 1256) ; ಆ ಬಾಳುಗಳ ಮೇಲೆ ಉಳ ಪೂರ್ವ್ವಾಯ ಅಕರ ಅ(೦)ನ್ಯಾಯವನೂ ಕಾ[ದು ಸರ್ವ್ವ]ಬಾಧೆ ಪರಿಹಾರವಾಗಿ (ಸೌಇಇ. IX–ii, ೪೦೯-೨೭ ; 1365). [ಸಂ. ಅಕರಂ]

**ಅಕರಖಂಡಿಕೆ** (ನಾ). ಅಕ್ಷರಾಭ್ಯಾಸದ ಪಾಠಶಾಲೆ : ಅಕರಖಂಡಿಕೆಗೆ ಮತ್ತರು ಇಪ್ಪತ್ತು ಧರ್ಮೇತಕ್ಕೆ ಹತ್ತು (ಕಇ. II, ೧೬-೪೪ ; 1122). 'ಅಕ್ಷರಖಂಡಿಕ' ಪರಾ.

[ಸಂ. ಅಕ್ಷರಖಂಡಿಕ (ಅಕ್ಷರ + ಖಂಡಿಕ)]

**ಅಕರಣ** (ನಾ). ೧. ಮಾಡದಿರುವಿಕೆ. ೨. ಕರಣವಿಲ್ಲದವನು. [ಸಂ.]

**ಅಕರಣಿ** (ನಾ). ಸೋಲು ; ಉದ್ದೇಶ ಭಂಗ. [ಸಂ.]

**ಅಕರಣೀಯ** (ಗು). ಮಾಡಬಾರದ. [ಸಂ.]

**ಅಕರಾಸ್ತೆ** (ನಾ). ಅಕ್ಕರೆ ; ಪ್ರೀತಿ (ದಕ) : ಅಕ್ಕ ಬದುಕಿದ್ದರೆ ಎಷ್ಟು ಅಕರಾಸ್ತೆ ಪಡುತ್ತಿದ್ದರೋ (ಸಂಧ್ಯಾರಾ. ೧೧೦) ; ಈಗ ಏನು ಬುದ್ಧಿ ಹುಟ್ಟಿತೋ ಇಷ್ಟು ಅಕರಾಸ್ತೆ ತೋರಿದರು (ತಾಯಿಕ. ೮೫).

[< ಅಕ್ಕರೆ (< ಅಱ್ಕೆಱ್$_2$) + ಆಸ್ಥೆ]

**ಅಕರಾಳವಿಕರಾಳ** (ಗು). (ಉಕ) ಘೋರ : " ಲೇ ನೀಲಿs . . . " ಎಂದು ಆಕೆ ಗುಡುಗಿದಾಗ ಆಕೆಯ ಅಕರಾಳ–ವಿಕರಾಳ ಆಕೃತಿಗೆ ಹೆದರಿ ನೀಲವ್ವನ ಆ ಮಕ್ಕಳು ಚೀರಿಟ್ಟವು ; ಅಳಲಾರಂಭಿಸಿದುವು (ಬರಹಾ. ೯); ಅಕರಾಳವಿಕರಾಳ ಪ್ರಾಣಿಯು ಅಲ್ಲಿಗೆ ಬಂತು (ಕಸಾಪ. ೧-೧೩೮).

[← ಮರಾ. ಅಕರಾಳ್‌ವಿಕರಾಳ್]

**ಅಕರುಣ** (ಗು). ೧. ಕರುಣೆಯಿಲ್ಲದ. (ನಾ). ೨. ಕರುಣೆಯಿಲ್ಲದಿರುವಿಕೆ: ಈ ಶಭಕ್ತರ ವಿದಿತಕರುಣಾಕರುಣದಿಂದಜಹರಿಮುಖಾಮರರು ಮುದದೊಳಮುದದೊಳಿರ್ಪರೆಂದೊಡೆ (ಬಸವು. ೪-೪೫). [ಸಂ.]

**ಅಕರ್ಣ** (ಗು). ೧. ಕಿವಿಯಿಲ್ಲದ. ೨. ಕರ್ಣನೆಂಬ ವೀರನಿಲ್ಲದ (ಸೈನ್ಯ ಇತ್ಯಾದಿ). (ನಾ). ೩. ಹಾವು. [ಸಂ.]

**ಅಕರ್ಣಹೃದಯ** (ಗು). ೧. ಕಿವಿ ಹೃದಯಗಳಿಲ್ಲದ; ಕಿವಿಯಿಂದ ಕೇಳಿ ಹೃದಯದಲ್ಲಿ ಆನಂದಿಸಿ ಅನುಭವಿಸಲಾರದ. ೨. ಹಾವಿನ ಹೃದಯವುಳ್ಳ. ೧, ೨: ಕವಿತಾವಿಷಯಮಕರ್ಣಹೃದಯನಪ್ಪ ಜಡಾತ್ಮಂಗೇವುದೊ (ಮಲ್ಲಿಪು. ೧-೩೬). [ಸಂ. (ಅ- + ಕರ್ಣ + ಹೃದಯ)]

**ಅಕರ್ತ,** ಅಕರ್ತಾರ (ನಾ). ಕರ್ತೃತ್ವವಿಲ್ಲದವನು; ಕರ್ತನಲ್ಲದವನು: ಇಷ್ಟುಮಾಡಿದರೂ ಅಕರ್ತ ಎಂದು ಪರಮಾತ್ಮನಿಗೆ ಹೆಸರು (ಹಸಾರ. ೬-೩೧, ಟೀಕೆ). **ಅಕರ್ತಾರ**: ಒಟ್ಟಿನಲ್ಲಿ ಈಶ್ವರನು ಅಕರ್ತಾರ (ಜೀವಾತ್ಮ. ೫೯೬). [ಸಂ. ಅಕರ್ತೃ]

**ಅಕರ್ತವ್ಯ** (ಗು). ಕರ್ತವ್ಯವಲ್ಲದ; ಮಾಡಬಾರದ. [ಸಂ.]

**ಅಕರ್ತಾರ** 'ಅಕರ್ತ' ನೋ.

**ಅಕರ್ತೃಕ** (ಗು). ಕರ್ತೃವಿಲ್ಲದ; ಸೃಷ್ಟಿಸಿದವನಿಲ್ಲದ: ಲೋಕಪ್ರಕಾರಮೆಂತೆಂದೊಡೆ-ಅದಕರ್ತೃಕಮುದಭರ್ತೃಕಮುದಹಂಕೃತಮುಂತದೂರ್ಧ್ವಮಧ್ಯಾಧೋಭೇದದಿನಿರ್ಪುದು (ಅನಂಪು. ೧-೬೬ ವ, ೬೭). [ಸಂ.]

**ಅಕರ್ಮ** (ನಾ). ೧. ಕರ್ಮವಲ್ಲದ್ದು. ೨. ಕೆಲಸವಿಲ್ಲದವನು. ೩. ಯೋಗ್ಯವಲ್ಲದ ಕೆಲಸ. [ಸಂ. ಅಕರ್ಮನ್]

**ಅಕರ್ಮಕ** (ಗು). [ವ್ಯಾಕ] ಕರ್ಮಪದವನ್ನು ಅಪೇಕ್ಷಿಸದ (ಕ್ರಿಯಾವಾಚಕ): ಉದಾ— ಇರು, ಹೋಗು ಇತ್ಯಾದಿ. 'ಸಕರ್ಮಕ' ಪರಾ. [ಸಂ.]

**ಅಕರ್ಮಿ** (ನಾ). ಮಾಡಬಾರದ್ದನ್ನು ಮಾಡುವವನು. [ಸಂ. ಅಕರ್ಮಿನ್]

**ಅಕಲ** (ಗು). ಭಾಗವಿಲ್ಲದ; ಅಖಂಡ. [ಸಂ.]

**ಅಕಲಂಕ,** ಅಕಳಂಕ (ಗು). ಕಳಂಕವಿಲ್ಲದ; ನಿರ್ಮಲವಾದ; ಪಾಪರಹಿತ. **ಅಕಳಂಕ**: 'ಅಕಳಂಕನೀಱು' ಪರಾ. [ಸಂ.]

**ಅಕಲವಿಕಲ** (ನಾ). ತಬ್ಬಿಬ್ಬು; ಗೊಂದಲ; ಕಸಿವಿಸಿ: 'ಕೊನೆಗೆ ಆ ಮದುವೆಯಾಯಿತೆ?' ಈ ಪ್ರಶ್ನೆಯಿಂದ ಗೋಪಾಲನಲ್ಲಿ ಒಂದು ಬಗೆಯ ಅಕಲವಿಕಲವುಂಟಾಯಿತು (ನಿಷ್ಕಾಮ. ೧೧೮). [ಅಕಲ? + ವಿಕಲ]

**ಅಕಲಾಯ** (ಗು). ಶ್ರಮವಿಲ್ಲದ; ಕಷ್ಟವಿಲ್ಲದ (?).

**ಅಕಲಾಯವಾಗಿ** = ಅನಾಯಾಸವಾಗಿ: ಇದ್ದುದು ಇದ್ದಹಾಗೆ ಹೇಳುವುದಕ್ಕೆ ತಾವು ಸಿದ್ಧರಾಗಿರುವಾಗ ಅಕಲಾಯವಾಗಿ ಬಂದರೆ ಏಕೆ ಬಿಡಬೇಕು (ಘಾಟೀಮು. ೨೬); ಅಕಲಾಯವಾಗಿ ಅವನಿಗೆ ಒಂದು ಲಕ್ಷ ರೂಪಾಯಿ ಬಂತು (ರೂಢಿ). [ಅನ್ಯ.?]

**ಅಕಲಿಮಯ್ಯ** (ನಾ). ಒಬ್ಬನ ಹೆಸರು: ಶ್ರೀಮತು ಪೆರ್ಗ್ಗಡೆ ಅಕಲಿಮಯ್ಯಂಗಳ್ (ಎಇ. XVI, ೭೮-೩೧; 1037). [ಅಕಲಿಮ್ಯ + ಅಯ್ಯ$_1$]

**ಅಕಲು** 'ಅಕ್ಕಲ್ಕು$_2$' ನೋ.

**ಅಕಲುಗೇಡಿ** (ನಾ). (ಉಕ) ಬುದ್ಧಿಯಿಲ್ಲದವನು; ಅವಿವೇಕಿ. [ಅಕಲು (< ಅಕ್ಕಲ್ಕು$_2$) + ಕೇಡು + -ಇ$_2$]

**ಅಕಲುಷ** (ಗು). ದೋಷವಿಲ್ಲದ; ನಿರ್ಮಲ. [ಸಂ.]

**ಅಕಲುಷೆ** (ನಾ). ಪರಿಶುದ್ಧಳು; ನಿರ್ಮಲೆ: ಸಕಲ ಸದ್ಗುಣಸಂಪನ್ನೆ ಅಕಲುಷೆ ಯೆಳವಂದೂರ ದೇವಮ್ಮನು ಸಕಲ ಸಂಪದದೊಡನಿಹಳು (ಹದಿಬ. ೧-೧೪). [ಸಂ. ಅಕಲುಷಾ]

**ಅಕಲುಹಾಕು** (ಕ್ರಿ). ಬುದ್ಧಿಯನ್ನು ಉಪಯೋಗಿಸು; ಉಪಾಯಮಾಡು: ಅಕಲುಹಾಕಿ ತನ್ನ ಅಕ್ಕನ ಬಿಳಿಸೀರೆಗೆ ಸಾಬೂನು ಹಚ್ಚಿ ಬೆಳ್ಳಗೆ ಮಾಡಿಕೊಂಡು ಅದನ್ನೇ ರುಮಾಲಿನಂತೆ ಶಿಸ್ತಾಗಿ ಕಟ್ಟಿಕೊಂಡು ಬಂದಿದ್ದ (ಎಳೆಕ. ೧೫).
[ಅಕಲು (< ಅಕ್ಕಲ್ಕು$_2$) + ಹಾಕು (< ಪಾಯ್ಕು$_1$)]

**ಅಕಲಿಕೆ** (ಗು). ಒಬ್ಬೊಬ್ಬರಿಗೂ ಪ್ರತ್ಯೇಕವಾಗಿ ಸಲ್ಲತಕ್ಕ (?): ತಾಯ ಮಕಳೊಳಗೆ ಆರೊಬರು ತಮುಗೆ ಅಕಲಿಕ ಪಾಲು ಉಂಟೆಂದು (ಸೌಇಇ. ೧೯೩೦, ಉಡುಪಿ. ೫೯-೫೩; 1465). [?. / ಹಿಂ. ಅಕೇಲಾ]

**ಅಕಲ್ಕರೆ** 'ಅಕ್ಕಲಕರೆ' ನೋ.

**ಅಕಲ್ಪ** (ಗು). ೧. ಶಾಸ್ತ್ರೋಕ್ತವಲ್ಲದ. 'ಅಕಲ್ಪಭಸ್ಮ' ಪರಾ. (ನಾ). ೨. ಯಾವ ಕಟ್ಟಳೆಗೂ ಒಳಪಡದವನು: ಪಾರ್ವತೀಪತಿ ಕಣ್ಣಪನ ನೊಡನೊಡನೆ ಬಿಗಿದಪ್ಪಿ ನಿರ್ವಿಕಲ್ಪಾಕಲ್ಪ ಕೇಳು ಚತುರ್ವಿಧದ ಪದವಿಗಳು ಮೊದಲಹ ಸರ್ವಭೋಗ ಸುಖಂಗಳಂ ಕೊಡುವೆನು (ಬಸವು. ೧೮-೧೦೦). [ಸಂ.]

**ಅಕಲ್ಪಭಸ್ಮ** (ನಾ). [ವೀಶೈ] "ಮಂತ್ರಹೀನರಿಂದ ಸಂಪಾದಿಸಲ್ಪಟ್ಟ ಭಸ್ಮವೇ ಅಕಲ್ಪಭಸ್ಮವು" (ಅಷ್ಟಾವಿ. ೪). [ಅಕಲ್ಪ + ಭಸ್ಮ]

**ಅಕಲ್ಪಿತ** (ಗು). ೧. ಕಲ್ಪಿತವಲ್ಲದ. ೨. ನಿರೀಕ್ಷಿಸದೆ ಇದ್ದ; ಅನಿರೀಕ್ಷಿತ: ಆದರೆ ಅಕಲ್ಪಿತವಾಗಿ ಈ ವಿಚಾರವೇ ಈಗ ಮತ್ತೆ ಅವರೆದುರಿಗೆ ಬಂದು ನಿಂತಿತ್ತು (ಸಮುಜೀ. ೩೭). [ಸಂ.]

**ಅಕಲ್ಮಷ** (ಗು). ಕಲ್ಮಷವಿಲ್ಲದ; ಶುದ್ಧ. [ಸಂ.]

**ಅಕಲ್ಯಾಣ** (ನಾ). ೧. ಅಶುಭ. ೨. ಕೇಡು. [ಸಂ.]

**ಅಕಶೇರು** (ಗು). ಕಶೇರು ಇಲ್ಲದ; ಬೆನ್ನುಮೂಳೆಯಿಲ್ಲದ (ಪ್ರಾಣಿ): ಮೂಡಿತೊಂದಕಶೇರು ಕಶ್ಮಲ ಸರೀಸೃಪಂ ಮಂಜಿ ಮೈಗೊಂಡಂತೆ ವೋಲ್ (ಶ್ರೀರಾಮಾ. ೨೬೪-೩೮). [ಸಂ.]

**ಅಕಸಾಲ** 'ಅಕ್ಕಸಾಲೆ' ನೋ.

**ಅಕಸಾಲಿಕೆ** 'ಅಕ್ಕಸಾಲಿಕೆ' ನೋ.

**ಅಕಸಾಲಿಗ** 'ಅಕ್ಕಸಾಲಿಗ' ನೋ.

**ಅಕಸಾಲೆ** 'ಅಕ್ಕಸಾಲೆ' ನೋ.

**ಅಕಸಾಲೆವಾಳು** (ನಾ). ಅಕ್ಕಸಾಲೆಗೆ ವೃತ್ತಿಯಾಗಿ ಬಿಟ್ಟ ಭೂಮಿ (?): ಬಡ್ಡಗಿವಾಳ ಬಿಣ್ಣೋಜಗೆ ಕೊಟ್ಟ ಮತ್ತ ೫ ಅಕಸಾಲೆವಾಳು ಬಾಳಿಗೆ ಮತ್ತ ೫ (ಸೌಇಇ. IX-i, ೧೨೩-೨೬; 1059).
[ಅಕಸಾಲೆ (< ಅಕ್ಕಸಾಲೆ) + ಬಾಳ್ಕು$_2$ (< ಬಾೞ್$_2$?)]

**ಅಕಸ್ಮಾತ್** (ಅ). ಇದ್ದಕ್ಕಿದ್ದಹಾಗೆ; ಅನಿರೀಕ್ಷಿತವಾಗಿ; ಹಠಾತ್ತಾಗಿ: ಅಕಸ್ಮಾತ್ ಅವರು ಅಲ್ಲಿಗೇ ಬಂದರು (ರೂಢಿ).

**ಅಕಸ್ಮಾತ್ತಾಗಿ** = ಇದ್ದಕಿದ್ದಂತೆಯೇ: ಅಕಸ್ಮಾತ್ತಾಗಿ ಸನ್ನಿಪಾತಜ್ವರ ಬಂದು ನಮ್ಮ ಜೀವನದ ಆಧಾರಸ್ತಂಭವಾಗಿದ್ದ ನನ್ನ ತಂದೆಯವರು ತೀರಿಕೊಂಡರು (ಮುಂಗಾಮು. ೧೭); ಅಕಸ್ಮಾತ್ತಾಗಿ ಅವನೂ ಅವಳ ಕಡೆಗೆ ಕಣ್ಣು ಹಾಯಿಸಿದನು (ರಂಗರೋ. ೨೬). [ಸಂ.]

**ಅಕಸ್ಮಾತ್ತು** (ಅ). = ಅಕಸ್ಮಾತ್. [ಸಂ. ಅಕಸ್ಮಾತ್]

**ಅಕಳಂಕ** 'ಅಕಲಂಕ' ನೋ.

**ಅಕಳಂಕತನ** (ನಾ). ಕಳಂಕವಿಲ್ಲದಿರುವಿಕೆ: ರಾಜರಲ್ಲಿ ಹೊಕ್ಕು ಮತ್ತೆ ಅವರಾಗುಚೀಗೆಯ ಹೇಳಬೇಕು. ಬೇಗೆಯ ಅಳವಿನಲಿ ಹೊಕ್ಕು ಮತ್ತೆ ಸೊಡೆಗಂಜಲೇಕೆ? ಸುಖವ ಮಚ್ಚಿ ಅಖಿಳರೊಳಗೆ ಬೆರಸಿದ ಮತ್ತೆ ಅಕಳಂಕತನ ಉಂಟೇ? ಇಂತೀ ಬಕಧ್ಯಾನಿಗಳ ಧ್ಯಾನ ಮಕರನ ಒಲುಮೆಯಂತೆ (ಮೋಳಿಮಾ. ೫೦-೨೦೭).
[ಅಕಳಂಕ (= ಅಕಲಂಕ) + -ತನ]

**ಅಕಳಂಕನೀಱು** (ನಾ). ೧. ಯಾವ ದೋಷವೂ ಇಲ್ಲದ ಸೌಂದರ್ಯ

ಉಳ್ಳವನು. ೨. ಒಂದು ಬಿರುದು: ಮಾಟೂರ ವಂಶೋದ್ಭವನಕಳಂಕ ನೀಜಂ . . . ಶ್ರೀಮದ್ಮಾಚಿಯರಸಂ (ಎಕ. VIII, ಸೊರಬ. ೭೦-೫ ; 938). [ಅಕಳಂಕ (= ಅಕಲಂಕ) + ನೀಜ]

**ಅಕಳಚಕಳ**, ಅಕಳಸಕಳ$_1$ (ನಾ). ಚಕ್ಕಲಗುಳಿ (?). **ಅಕಳಸಕಳ$_1$** (?). [**ಅನ್ಯ.** ?]

**ಅಕಳಸಕಳ$_1$** 'ಅಕಳಚಕಳ' ನೋ.

**ಅಕಳಸಕಳ$_2$**, ಅಕಳಾಸಕಳಾ (ಅ). (ಉಕ) ಅವ್ಯವಸ್ಥಿತವಾಗಿ ; ಯದ್ವಾತದ್ವಾ (?): ಕಕ್ಕಾ ಕ್ಷಮಿಸಿರಿ, ಅಪ್ಪ ಸಿಟ್ಟಿನ ಭರದಲ್ಲಿ ಏನಃ ಅಕಳಸಕಳ ಅಂದರೂ (ಬಾಂಡಾಯ. ೮). **ಅಕಳಾಸಕಳಾ** : ಅವ ನಾರೋ ಕನ್ನಡ ಶಾಲಾಮಾಸ್ತರನಂತೆ– ನನ್ನನ್ನು ಅಕಳಾಸಕಳಾ ಬೈದು ಬಿಟ್ಟ (ಹಸ್ನೊಂದ. ೧೩೫). [**ಅನ್ಯ.**?]

**ಅಕಳಾಸಕಳಾ** 'ಅಕಳಸಕಳ$_2$' ನೋ.

**ಅಕಳಿತಿ** (ನಾ). ಒಬ್ಬ ವ್ಯಕ್ತಿಯ ಹೆಸರು : ಕೆಱೆ ಕಟ್ಟಿಸಿದೋರ್ ಅಕಳಿತಿಗಳ್ ಅವರ ಮಕ್ಕಳ್ ಅಲ್ಲಗನು ದಾಟಿಗನು ಸಪುತ್ರರ್ಕಳ್ (ಎಕ. XVI, ಪಾವುಗ. ೧೨-೬ ; 754). [?]

**ಅಕಾಂಡ** (ಗು). ೧. ತಾಳು ಇಲ್ಲದ (ಮರ ಇತ್ಯಾದಿ). ೨. ಅನಿರೀಕ್ಷಿತ ; ಆಕಸ್ಮಿಕ. [**ಸಂ.**]

**ಅಕಾಂಡಜಳದ** (ನಾ). ಅನಿರೀಕ್ಷಿತವಾದ ಮೋಡ : ಕೆಲದ ಪುಂಡರೀಕದೊಳ್ ಮಂಡಳಿಸಿದ ಮರಾಳಮಂಡಳಿಗಕಾಂಡಜಳದ ಮಂಡಳಶಂಕೆಯಂ ಭೋಂಕನಾಗಿಸಿ ಮೇಗಣ್ಣೆ ಪಾಱಿಸಿ ಪರಕಲಿಸಿ ಪಾಡುವ ಪಱಮೆವಱಿಗಳಿಂ (ರಾಜಶೇ. ೨-೭೬ ವ). [ಅಕಾಂಡ + ಜಳದ ( = ಜಲದ)]

**ಅಕಾಂಡತಾಂಡವ** (ನಾ). ೧. (ಪಾಂಡಿತ್ಯ, ಆಗ್ರಹ ಮೊದಲಾದವುಗಳ) ಅಪ್ರಕೃತವೂ ಅಸಂಬದ್ಧವೂ ಆದ ಪ್ರದರ್ಶನ: ಅಕಾಂಡ ತಾಂಡವಾರಂಭ ಶೌಂಡ ಶಿಖಂಡಿ ಮಂಡಳಮುಮಂ (ಆದಿಪು. ೪-೫೪ ವ). ೨. ಹುಚ್ಚು ಕುಣಿತ. ೩. ರೇಗಾಟ (ಉಕ) : ಮೊದಲೇ ಸತ್ಯಸಂಗತಿಯನ್ನು ಹೇಳಿದ್ದರೆ ಅಕಾಂಡತಾಂಡವವಿರಲಿಲ್ಲ (ಜಯಂತ. ೪೩).
[ಅಕಾಂಡ + ತಾಂಡವ]

**ಅಕಾಮನಿರ್ಜರೆ** (ನಾ). [ಜೈನ] ವ್ಯಕ್ತಿಯ ಉದ್ದೇಶವಿಲ್ಲದೆ ತನ್ನಷ್ಟಕ್ಕೆ ತಾನೇ ಆಗುವ ನಿರ್ಜರೆ : ಚಾರನಿರೋಧ . . . ಮಲಧಾರಣ ಪರಿತಾಪಾದಿ ಪರೀಷಹಂಗಳ್ ಸ್ವೇಚ್ಛಾರಹಿತ ನಿರ್ಜರಣಕಾರಣ ಮಪ್ಪುದಱಿಂ ಅಕಾಮನಿರ್ಜರೆ (ತತ್ತ್ವಪ್ರ. ೨೬೩).
[**ಸಂ.** ಅಕಾಮನಿರ್ಜರಾ (ಅಕಾಮ + ನಿರ್ಜರಾ)]

**ಅಕಾಮಿಕೆ** (ನಾ). ಇಚ್ಛೆಯಿಲ್ಲದ ವ್ಯಕ್ತಿ : ಸಕಳಪರಿಗ್ರಹಮಂ ಬಿಟ್ಟಕಾಮಿಕಂ ಯೋಗಯುಕ್ತನೆನಿಪಂ (ಸಮಪ. ೮-೧೭೬). [**ಸಂ.**]

**ಅಕಾಯ** (ಗು). ೧. ಶರೀರವಿಲ್ಲದ. ೨. ಶರೀರಾಭಿಮಾನವಿಲ್ಲದ : ಶಿವತತ್ತ್ವವೊಂದರಲ್ಲಿ ಚಿತ್ತವುಳ್ಳದಾಗಿ ಮಿಗೆ ದೃಢವಾದ ಭಕ್ತಿಯಿಂದ ಹೋದಂಥಾ ದೇಹೇಂದ್ರಿಯ ಮೊದಲಾದವಱೊಡತಣ ಸಂಗವುಳ್ಳಾತನು ಅಕಾಯನೆಂದು ಹೇಳಲ್ಪಡುತ್ತಿಹನು (ಕೈವಟೀ. ೪೧). 'ಅಕಾಯಚರಿತ' ಪರಾ. (ನಾ). ೩. ಶರೀರಾಭಿಮಾನವಿಲ್ಲದಿರುವಿಕೆ : ಕಾಯದೊಳಗೆ ಅಕಾಯವಾಯಿತ್ತು (ಮಹಾಸಾ. ೨೨೬). [**ಸಂ.**]

**ಅಕಾಯಚರಿತ** (ಗು). ಶರೀರದ ಮೇಲೆ ಅಭಿಮಾನವಿಲ್ಲದೆ ವರ್ತಿಸುವ : ಅವ ಮದವೆಂಬುದಿಲ್ಲ ನೀನವಗ್ರಹಿಸಿದ ಕಾರಣ ಚೆನ್ನಮಲ್ಲಿಕಾರ್ಜುನಯ್ಯಾ, ನಿಮ್ಮ ಶರಣನು ಅಕಾಯಚರಿತನಾಗಿ (ಮಹಾಸಾ. ೧೧೯).
[ಅಕಾಯ + ಚರಿತ]

**ಅಕಾಯಸ್ಥಲ** (ನಾ). [ವೀಶೈ] ಶರೀರದ ಸಂಬಂಧವಿಲ್ಲದಿರುವಿಕೆಯನ್ನು ಪಡೆಯುವ ಕ್ರಮವನ್ನು ವಿವರಿಸುವ ಸ್ಥಲ: ಮಾಹೇಶ್ವರಂಗೆ ಲಿಂಗಕಾಯಮಥನದಿಂದ ದೇಹಕ್ಕೆ ನಿರ್ದೇಹಭಾವವು ಹೇಗೆ ಹಿಂಗೆಂಬ ಆಕಾಂಕ್ಷಾವುಂಟಾಗುತ್ತಿರಲಾಗಿ ಮುಂದೆ ಅಕಾಯಸ್ಥಲವೆಂದು ಹೇಳಲ್ಪಡುತ್ತಿದ್ದಿತ್ತು (ಕೈವಟೀ. ೪೦). [ಅಕಾಯ + ಸ್ಥಲ]

**ಅಕಾರ** (ನಾ). [ವ್ಯಾಕ] = ಅ$_1$. [**ಸಂ.**]

**ಅಕಾರಣ** (ಗು). ಕಾರಣವಿಲ್ಲದ ; ಉದ್ದೇಶವಿಲ್ಲದ. [**ಸಂ.**]

**ಅಕಾರಣಂ** (ಅ). ಕಾರಣವಿಲ್ಲದೆ; ನಿಷ್ಕಾರಣವಾಗಿ : ನಿಮಗಿಂತು ಸಾವುಮೇತಜದಿನಕಾರಣಂ ನೆಱೆಯೆ ಸಂಭವಿಸಿರ್ದುದೊ ಕುಂಭಸಂಭವಾ (ಗದಾಯು. ೪-೪೯). [**ಸಂ.**]

**ಅಕಾರಪ್ರಣಮ** (ನಾ). [ವೀಶೈ] ಪ್ರಣವದಲ್ಲಿಯ ಅಕಾರ; ಓಂಕಾರದ ಮೊದಲ ಅಂಶವಾದ ಅಕಾರ : ಓಂಕಾರ ಪ್ರಣಮದ ತಾರಕಾಕೃತಿ ಮತ್ತು ದಂಡಕಾಕೃತಿಗಳು ಅಕಾರಪ್ರಣಮದಲ್ಲಿ ಸಂಬಂಧಪಡುತ್ತವೆ (ಶಿವಾಕೋ. ೧೯೧).
[**ಸಂ.** ಅಕಾರಪ್ರಣವ (ಅಕಾರ + ಪ್ರಣವ)]

**ಅಕಾರಾಂತ** (ಗು). [ವ್ಯಾಕ] 'ಅ' ಎಂಬ ವರ್ಣದಿಂದ ಕೊನೆಗೊಳ್ಳುವ (ಶಬ್ದ) : ಉದಾ— ಮನುಷ್ಯ, ನೆಲ ಇತ್ಯಾದಿ.
[ಅಕಾರ + ಅಂತ$_2$]

**ಅಕಾರಾಂತತೆ** (ನಾ). [ವ್ಯಾಕ] 'ಅ' ಎಂಬ ವರ್ಣದಿಂದ ಕೊನೆಗೊಳ್ಳುವಿಕೆ. [**ಸಂ.** ಅಕಾರಾಂತತಾ]

**ಅಕಾರಾಂತತ್ವ** (ನಾ). [ವ್ಯಾಕ] = ಅಕಾರಾಂತತೆ. [**ಸಂ.**]

**ಅಕಾರ್ಯ$_1$** (ನಾ). ಮಾಡಬಾರದ ಕೆಲಸ; ಕೆಟ್ಟ ಕೆಲಸ. [**ಸಂ.**]

**ಅಕಾರ್ಯ$_2$** (ನಾ). ವಿಷ್ಣುವಿನ ಕೆಲಸ. 'ಅಕಾರ್ಯಪ್ರಯುಕ್ತ' ಪರಾ. [ಅ$_8$ + ಕಾರ್ಯ]

**ಅಕಾರ್ಯಪ್ರಯುಕ್ತ** (ನಾ). ೧. ಕೆಟ್ಟಕೆಲಸದಲ್ಲಿ ತೊಡಗಿದವನು. ೨. ವಿಷ್ಣುವಿನ ಕೆಲಸದಲ್ಲಿ ತೊಡಗಿದವನು. ೧,೨ : ಬಹುವಕ್ತ್ರಂ ಪದ್ಮಗರ್ಭಂ ದನುಜಗುರು ಗುರುದ್ವೇಷಿ ಜೀವಂ ಸುರಾಧೀಶಹಿತಾತ್ಮಂ ಸುಪ್ರವೃದ್ಧೋದ್ಧವನೆನಿಪವನುಂ ತಾನಕಾರ್ಯಪ್ರಯುಕ್ತಂ ಮಹಿಯೊಳು ಪೋಲ್ವನ್ನನಾವಂ ತನಗೆನೆ ನೆಗಳ್ದಂ (ಎಕ. VIII, ಸೊರಬ. ೧೪೦-೫೬ ; 1198). [ಅಕಾರ್ಯ$_{1,2}$ + ಪ್ರಯುಕ್ತ]

**ಅಕಾಲ** (ನಾ). ಕಾಲವಲ್ಲದ ಕಾಲ ; ಸರಿಯಲ್ಲದ ಕಾಲ. [**ಸಂ.**]

**ಅಕಾಲಫಲ** (ನಾ). ಕಾಲವಲ್ಲದ ಕಾಲದಲ್ಲಿ ಬಿಟ್ಟ ಹಣ್ಣು.
[ಅಕಾಲ + ಫಲ]

**ಅಕಾಲಮರಣ** (ನಾ). ಸರಿಯಾದ ಕಾಲಕ್ಕಿಂತ ಮುಂಚೆ, ಅಲ್ಪಾಯುಸ್ಸಿನಲ್ಲಿ, ಉಂಟಾಗುವ ಸಾವು. [ಅಕಾಲ + ಮರಣ]

**ಅಕಾಲವರಿಷ** (ನಾ). = ಅಕಾಲವರ್ಷ ೨ : ಸ್ವಸ್ತಿಶ್ರೀ ಅಕಾಲವರಿಷ ಭಟಾರರಾ ಪ್ರಿಥುವಿ ರಾಜ್ಯಂಗೆಯೆ (ಎಇ. VI, ೧೯೦-೧ ; 765).
[**ಸಂ.** ಅಕಾಲವರ್ಷ (ಅಕಾಲ + ವರ್ಷ)]

**ಅಕಾಲವರ್ಷ** (ನಾ). ೧. ಕಾಲವಲ್ಲದ ಕಾಲದಲ್ಲಿ ಬರುವ ಮಳೆ. ೨. ರಾಷ್ಟ್ರಕೂಟ ರಾಜರ ಹೆಸರುಗಳಲ್ಲಿ ಅಥವಾ ಬಿರುದುಗಳಲ್ಲಿ ಒಂದು. [ಅಕಾಲ + ವರ್ಷ]

**ಅಕಾಲವೃಷ್ಟಿ** (ನಾ). = ಅಕಾಲವರ್ಷ ೧. [ಅಕಾಲ + ವೃಷ್ಟಿ]

**ಅಕಾಲಿಕ** (ಗು). ಯುಕ್ತವಲ್ಲದ ಕಾಲದ : ನೀವು ಈಗ ಅಧಿಕಾರವನ್ನು ಬಿಡುವುದು ಅಕಾಲಿಕವಾಗುತ್ತದೆ (ರೂಢಿ). [**ಸಂ.**]

**ಅಕಾಲೀನ** (ಗು). ಯುಕ್ತವಲ್ಲದ ಕಾಲದ ; ಕಾಲಕ್ಕೆ ಸಂಬಂಧಪಡದ: ಆ ಕಾಲಕ್ಕುಕ್ತವಾದ ವೃತ್ತಿಗಳೇ ಈ ಕಾಲಕ್ಕೂ ಸಾಧ್ಯವಲ್ಲದಿದ್ದರೂ ವೃತ್ತಿತತ್ತ್ವವೇನೂ ಅಕಾಲೀನವಲ್ಲ (ಆರ್ಯಧ. ೮೪). [**ಸಂ.**]

**ಅಕಾಳಿ** 'ಅಕ್ಕಾಳಿ' ನೋ.

**ಅಕಿಂಚನ** (ಗು). ೧. ಏನೊಂದೂ ತನ್ನ ಬಳಿ ಇಲ್ಲದ. (ನಾ). ೨. ತೀರ ಬಡವ. [ಸಂ.]

**ಅಕಿಂಚನಜೀವನ** (ನಾ). ತೀರ ಬಡತನದ ಜೀವನ; ದರಿದ್ರ ಜೀವನ: ರಾಜ್ಯವನಾಳಬಲ್ಲವನು ಈ ಅಕಿಂಚನಜೀವನವನು ಬಯಸುವನಲ್ಲ (ನವರಾ. V, ೧೯). [ಅಕಿಂಚನ + ಜೀವನ]

**ಅಕಿಂಚನತೆ** (ನಾ). = ಅಕಿಂಚನತ್ವ. [ಸಂ. ಅಕಿಂಚನತಾ]

**ಅಕಿಂಚನತ್ವ** (ನಾ). ೧. ಅಧಿಕವಾದ ಬಡತನ. ೨. [ಜೈನ] ಜೈನ ಯತಿಗಳ ಒಂದು ವ್ರತ. [ಸಂ.]

**ಅಕಿಂಚಿತ್ಕರ** (ಗು). ೧. ಏನನ್ನೂ ಮಾಡದ: ಅಲ್ಲಿರ್ಪ ಮಹಾನಾಗಂ ಅತನ ಪುಣ್ಯಪ್ರಭಾವದಿಂ ಅಕಿಂಚಿತ್ಕರನಾಗೆ ನಾಗಶಯನದೊಳ್ ಪಟ್ಟಿರ್ದು (ಚಾವುಂಪು. ೬೮–೨೦). ೨. ಯಾವುದಕ್ಕೂ ಒದಗದ; ಕೆಲಸಕ್ಕೆ ಬಾರದ. [ಸಂ.]

**ಅಕೀಕ** (ನಾ). ಗೋಮೇಧಿಕ ಜಾತಿಯ ಒಂದು ರತ್ನಶಿಲೆ: ಅಕೀಕವು ಗೋಮೇದದ ಅವಾಂತರ ಜಾತಿಯುಂಟು (ಮುಂಬಯಿ. ೭–೪೬).
[← **ಅರ. ಪಾರ. ಹಿಂ. ಮರಾ.** ಅಕೀಕ್. / **ತಮಿ.** ಅಕ್ಕಿಕ್ಕಲ್ ; **ತುಳು.** ಅಕ್ಕೀಕ]

**ಅಕುಟಿಲ** (ಗು). ೧. ಡೊಂಕಲ್ಲದ; ವಕ್ರವಲ್ಲದ. ೨. ನೇರವಾದ; ಮೋಸವಿಲ್ಲದ. [ಸಂ.]

**ಅಕುಟಿಲಾಂತಃಕರಣ** (ನಾ). ೧. ನಿಷ್ಕಪಟವಾದ ಮನಸ್ಸು. ೨. ನಿಷ್ಕಪಟವಾದ ಮನಸ್ಸು ಉಳ್ಳವನು. 'ಅಕುಟಿಲಾಂತಃಕರಣತನ' ಪರಾ. [ಅಕುಟಿಲ + ಅಂತಃಕರಣ]

**ಅಕುಟಿಲಾಂತಃಕರಣತನ** (ನಾ). ನಿಷ್ಕಪಟವಾದ ಮನಸ್ಸುಳ್ಳ ಸ್ಥಿತಿ: ಅಕುಟಿಲಾಂತಃಕರಣತನ ಬಾಧಕವಲೇ ಗರುವರಿಗೆ (ಕುವ್ಯಾಅ. ೧೯–೪೪).
[ಅಕುಟಿಲಾಂತಃಕರಣ + –ತನ]

**ಅಕುತೋಭಯ** (ಗು). ೧. ಎತ್ತಣ ಭಯವೂ ಇಲ್ಲದ (ಸ್ಥಿತಿ, ವ್ಯಕ್ತಿ ಇತ್ಯಾದಿ). (ನಾ). ೨. ಮೋಕ್ಷ: ನಿಜದಕುತೋಭಯದ ಗತಿಯ ಒಲುವ ಯೋಗಿಗಳಿಂಗೆ ನೃಪ ನಿರ್ಮಲ ಸುನಿಶ್ಚಿತಯೋಗವಿದೆಲಾ ಜಲಜನಾಭನ ನಾಮಕೀರ್ತನವೆಂದನಾ ಮುನಿಪ (ನಿಭಾಗ. ೨–೧–೧೬).
[ಸಂ. (ಅ– + ಕುತಃ + ಭಯ)]

**ಅಕುತೋಭಯನಿವಾಸ** (ನಾ). ಮೋಕ್ಷಸ್ಥಾನ: ಖಟ್ವಾಂಗಾಖ್ಯವರ ರಾಜರುಷಿ . . . ಅಕುತೋಭಯನಿವಾಸವ ಬೆರಸಿ ನಿಜಸುಖಪೂರ್ಣನಾದನು (ನಿಭಾಗ. ೨–೧–೧೯). [ಅಕುತೋಭಯ + ನಿವಾಸ]

**ಅಕುಪಿತ** (ಗು). ಕೋಪಿಸಿಕೊಂಡಿಲ್ಲದ. [ಸಂ.]

**ಅಕುಪ್ಯ** (ನಾ). ಹೀನವಲ್ಲದ ಲೋಹ; ಚಿನ್ನ ಅಥವಾ ಬೆಳ್ಳಿ. [ಸಂ.]

**ಅಕುಲ** (ಗು). ಕುಲವಿಲ್ಲದ ; ಹೀನಕುಲದ. [ಸಂ.]

**ಅಕುಲಜ** (ನಾ). ಸತ್ಕುಲದಲ್ಲಿ ಹುಟ್ಟಿಲ್ಲದವನು; ಹೀನಕುಲದವನು: ಕುಲಜನಾಗಲಕುಲಜನಾಗಲಿ ಜಲರುಹಾಕ್ಷನ ನಾಮಕೀರ್ತನದೊಳಗೆ ಬದುಕುವನಾವನಾತನೆ ಸುಕೃತಿಯೆಂಬವನು (ಕುವ್ಯಾ ಉ. ೩–೧೨೩). [ಸಂ.]

**ಅಕುಲೀನೆ** (ನಾ). ೧. ಸತ್ಕುಲದಲ್ಲಿ ಹುಟ್ಟಿಲ್ಲದವಳು; ಹೀನಕುಲದವಳು. ೨. ಭೂಮಿಯ ಸ್ಪರ್ಶವಿಲ್ಲದವಳು. ೧,೨: ಮಲಯಮೇಖಲೆಯಂತೆ ಚಂದನಪಲ್ಲವಾವತಂಸೆಯುಂ . . . ದಿವ್ಯಕಾಂತೆಯಂತಕುಲೀನೆಯುಂ . . . ಯಕ್ಷಾಧಿಪಲಕ್ಷ್ಮಿಯಂತಳಕೋದ್ಭಾಸಿಯೆನಿಸಿದೇಜುಂಜವ್ವನೆಯ ರೂಪಾತಿಶಯಮನೆಮೆಯಿಕ್ಕದೆ ಶೂದ್ರಕಂ ನೋಡುತ್ತ ಮತಿವಿಸ್ಮಿತಚಿತ್ತನಾಗಿ (ಕಾದಂಪೂ. ೪೯).
[ಸಂ. ಅಕುಲೀನಾ (ಅ– + ಕುಲೀನಾ ; ಅ– + ಕು + ಲೀನಾ)]

**ಅಕುಶಲ** (ಗು). ೧. ಕೌಶಲವಿಲ್ಲದ. ೨. ಅಮಂಗಳವಾದ [ಸಂ.]

**ಅಕೂಪಾರ** (ನಾ). ೧. ಸಮುದ್ರ. ೨. ದೊಡ್ಡ ಆಮೆ. ೩. ಆದಿಕೂರ್ಮ. ೪. ಸೂರ್ಯ. ೫. ಕಲ್ಲಿನ ಮೊರಡಿ ; ಬಂಡೆ. [ಸಂ.]

**ಅಕೂಬಾರ** (ನಾ). = ಅಕೂಪಾರ ೧: ಈ ಬಹಳ ರತ್ನರಾಜದಕೂಬಾರಾವೃತಧರಿತ್ರಿಯೊ ಕೃತಿರತ್ನಕ್ಕೇಬೆಲೆಯೆನಿಸಿದುದೆನೆ (ಲೀಲಾವ. ೧೪–೧೪೫).
[ಸಂ. ಅಕೂವಾರ]

**ಅಕೃತ** (ಗು). ೧. ಮಾಡಲ್ಪಡದ; ಮಾಡಿಲ್ಲದ. ೨. ಕೃತಕವಲ್ಲದ. (ನಾ). ೩. ಸಿದ್ಧವಾಗಿಲ್ಲದ ಅಡಿಗೆ. ೪. ಲೋಹದ ಅದಿರು ಮುಂತಾದವು. [ಸಂ.]

**ಅಕೃತಕ** (ಗು). ಕೃತಕವಲ್ಲದ; ಸ್ವಾಭಾವಿಕವಾದ. [ಸಂ.]

**ಅಕೃತ್ಯ** (ಗು). ೧. ಮಾಡಲು ಯೋಗ್ಯವಲ್ಲದ. (ನಾ). ೨. ಕೆಟ್ಟ ಕೆಲಸ. [ಸಂ.]

**ಅಕೃತ್ರಿಮ** (ಗು). ೧. ಮಾಡಿದ್ದಲ್ಲದ; ಕೃತಕವಲ್ಲದ; ಸಹಜ. ೨. ಮೋಸವಿಲ್ಲದ; ನಿಷ್ಕಪಟವಾದ; ನಿರ್ವಂಚನೆಯಾದ. [ಸಂ.]

**ಅಕೃಷ್ಟ** (ಗು). ಉಳದ; ಬೇಸಾಯ ಮಾಡದ. 'ಅಕೃಷ್ಟಪಚ್ಯ' ಪರಾ. [ಸಂ.]

**ಅಕೃಷ್ಟಪಚ್ಯ** (ಗು). ಉತ್ತು ಬೇಸಾಯ ಮಾಡದೆ ಬೆಳೆಯನ್ನು ಕೊಡುವ (ಭೂಮಿ): ಕಲ್ಪವೃಕ್ಷಪರಿಕ್ಷಯದೊಳ್ ಪ್ರಜಾಜೀವನೋಪಾಯಹೇತುಗಳಕೃಷ್ಟಪಚ್ಯಂಗಳಾಗಿ (ಆದಿಪು. ೯–೬೨ ವ); ಮದನಕ್ಷೇತ್ರಮಕೃಷ್ಟಪಚ್ಯಮಿದು ಕಣ್ಬೇಟಕ್ಕನಾಯಾಸಲಬ್ಧ . . . ಎನೆ ಚೆಲ್ವಾದತ್ತು ಚಂದ್ರಾತಪಂ (ಮಲ್ಲಿಪು. ೬–೮೫).
[ಸಂ. ಅಕೃಷ್ಟಪಚ್ಯಾ (ಅಕೃಷ್ಟ + ಪಚ್ಯಾ)]

**ಅಕೃಷ್ಣಕರ್ಮ** (ನಾ). ೧. ಕಳಂಕವಿಲ್ಲದ ಕೆಲಸ; ಒಳ್ಳೆಯ ಕೆಲಸ. ೨. ಕೆಟ್ಟ ಕೆಲಸವನ್ನು ಮಾಡದವನು; ಪಾಪ ಮಾಡದವನು:
[ಸಂ. ಅಕೃಷ್ಣಕರ್ಮನ್ (ಅಕೃಷ್ಣ + ಕರ್ಮನ್)]

**ಅಕೊ** 'ಅದೆಕೊಳ್' ನೋ.

**ಅಕ್ಕ$_{1}$**, ಅಕ$_{1}$, ಅಕ್ಕಳ್ (ನಾ). ೧. ಹಿರಿಯ ಸಹೋದರಿ: ತಮ್ಮಕ್ಕನಂ ಕಾಣಲ್ ಪೋದಾತಂ (ಪಂಪಭಾ. ೮–೫೮ ವ); ತಮ್ಮಕ್ಕನತ್ತಿಮಬ್ಬೆಯಲ್ಲಿಗೆ ಗುಂಡಮಬ್ಬೆ ಬಂದು (ಅಜಿಪು. ೧–೪೬ ವ); ಆತನ ಅಕ್ಕ ಸಿರಿಯಬ್ಬೆ ಪರಲೋಕವಿನೆಯಂ ಮಾಡಿ (ಎಕ. VIII, ಸೊರಬ. ೪೬–೬ ; 1008); ಹಿಂಗದೆಯಕ್ಕತಂಗಿಯರ ಮೇಳದಲಿ ಪುರಾಂಗನಾಜನವೈದಿದುದು (ಕಂನವಿ. ೨೧–೨೨); ಅಕ್ಕನ ಹಗೆ ಭಾವನ ನಂಟು (ಗಾದೆ); ಅಕ್ಕನ ಬಂಗಾರವಾದರೂ ಅಕ್ಕಸಾಲೆ ಬಿಡ (ಗಾದೆ). ೨. (ಗೌರವಾರ್ಥದಲ್ಲಿ) ಹೆಂಗಸು: ಗಾಂಧಾರಿವೆಸರಿನಕ್ಕಂಗಳು ತಾಂ (ಪುಣ್ಯಾಸ್ರ. ೨–೪೬); ಮನೆಯೊಳಗಕ್ಕಂದಿರನುವೆ (ಜಯಕಾ. ೧–೨೦). ೩. ಹೆಂಗಸರನ್ನು ಸಂಬೋಧಿಸುವಾಗ ಸರ್ವಸಾಧಾರಣವಾಗಿ ಉಪಯೋಗಿಸುವ ಮಾತು (ಅವ್ವ, ಅಮ್ಮ ಎಂಬಂತೆ): ಅಕ್ಕ ಪೇಱೂರೊಳಿಂ ನುಡಿವೋಬೇಸಱಂ (ಆದಿಪು. ೩–೩೧); ಲತಾಂಗಿ ನೊಂದಿನಿಸುಮಲ್ಲಿರದಕ್ಕನ ಬರ್ಪಬಟ್ಟೆಯಂ ನೋಡುವಮೇೞಿಮೆಂದು (ಕಾದಂಉ. ೯೫); ಅಕ್ಕ ನಿನ್ನಂತಾರೀ ಜಗದೊಳಡಬಲ್ಲರ್ (ಧರ್ಮಾಮೃ. ೫–೯೮); ಬನ್ನಿರೆ ಅಕ್ಕಗಳು, ಹೋಗಿರೆ ಆಲದ ಮರಕ್ಕೆ ! (ಬಸವ. ೫೬೨); ಅಕ್ಕ ಕೇಳವ್ವ ಅಕ್ಕಯ್ಯ ನಾನೊಂದ ಕನಸ ಕಂಡೆ (ಮಹದೇ. ೧೫–೨); ತರಳೆ ನಿನ್ನಂ ನಂಬಿ ಹೋದಪೆವಕ್ಕ ಚೆನ್ನಕ್ಕ (ಬಸಪು. ೧೪–೩); ಅಕ್ಕ ಬಪ್ಪೆನು ಬಿಡು ಸೆಱಗ (ಭರಚ. ೩೬–೩೫). ೪. ಹೆಂಗಸಿನ ಹೆಸರಿನ ಕೊನೆಯಲ್ಲಿ (ಅವ್ವ, ಅಮ್ಮ ಎಂಬಂತೆ) ಸೇರುವ ಮಾತು: ಉದಾ—ನಂಬಿಯಕ್ಕ, ಮಹದೇವಿಯಕ್ಕ, ರಾಮಕ್ಕ. ೫. ಅಪೂರ್ವವಾಗಿ ಗಂಡಸರ

ಹೆಸರಿನ ಕೊನೆಯಲ್ಲಿ ಸೇರುವ ಮಾತು : ಮಾರಕ್ಕ ಅರಸರ್ ಬನವಾ(ವಾ)ಸಿ ಪನ್ನಿಚ್ಛಾಸಿರಮನಾಳೆ (ಎಇ. VI, ೧೬೩-೧ ; 780). **ಅಕ್ಕೆ₁** : ೧. ಬೆರಲ್ಗಳೊಪ್ಪಿರ್ದುವಾಯಕನಂಘ್ರಿಯುಗಳ ಪಲ್ಲವದಿ (ಮೋಹತ. ೨೩-೧೪). (ಮೋಹತ. ೧೩-೩೬, ೨೪-೧೯, ೨೫-೫, ೩೧-೨೧, ೩೩-೫೨, ೩೩-೬೩, ೪೦-೨೬ ನೋ) [ಆ + ಅಕ = ಆಯಕ] ; ನಿರುತದಿಂದ ವರು ಶುಚಿಯಾಗಿ ಹಾಸುತಲಾಯಕನ ಕುಳ್ಳಿರಿಸಿ ಬಳಿಕ್ಕಂ (ಪ್ರಭುಪು. ೮-೬೬) ; ಮುಪ್ಪೊಳಲ ಜೈಸಿದೆ ಸದಾಶಿವನ ಪತ್ನಿಗಂತಃಕರಣದನ್ನೆಯಾಯಕನೆನಿಪ್ಪುದನುದಾಹರಿಸುವಂತೆ (ಸೌಂದಪು. ೧೩-೪೦) [ಈ + ಅಕ = ಈಯಕ]. **ಅಕ್ಕಳ್** : ೧. 'ಅಕ್ಕಳ್ಳಗ' ಪರಾ. ೨. : ಸೂಳೆಯರ ನೆಗಟ್ಟಿ ನಾಡೆ ತನಗಟ್ಟಿ ದಲಕ್ಕಳೆ ಸೂಳೆಯಾಗಳೇ (ಪಂಪಭಾ. ೪-೯೪) ; ಕೊಂತಿಮಾದೇವಿಗಮೊಂದುತ್ತರಮಾದಳ್ ಕರ್ಣಂಬೆತ್ತಕ್ಕಳೆ [ಪಾಠಾಂ. ಕ್ಕನೆ, ಕರ್ಳೆ] (ಪಂಪಭಾ. ೧೨-೧೨೫). ⊪ ಬಹುವ. ಅಕ್ಕಂಗಳ್, ಅಕ್ಕಗಳು, ಅಕ್ಕಂದಿರ್, ಅಕ್ಕದಿರು, ಅಕ್ಕನವರು ಇತ್ಯಾದಿ. ⊪ ಗೌರವವನ್ನು ಅಥವಾ ಪ್ರೀತಿಯನ್ನು ತೋರಿಸುವಾಗ ಅಕ್ಕಚ್ಚಿ, ಅಕ್ಕಣ್ಣಿ, ಅಕ್ಕಮ್ಮ, ಅಕ್ಕಯ್ಯ, ಅಕ್ಕವ್ವ ಮುಂತಾದ ಸಮಾಸ ರೂಪಗಳೂ ಉಂಟು.

**ಅಕ್ಕ ತಂಗಿಯ ಕಲ್ಲು** = ಜೊತೆಜೊತೆಯಾಗಿರುವ ಎರಡು ಕಲ್ಲುಗಳು. ಇವುಗಳಲ್ಲಿ ಒಂದು ದೊಡ್ಡದು, ಒಂದು ಚಿಕ್ಕದು. **ಅಕ್ಕ ತಂಗೆಯ ಕಟ್ಟೆ** = ಜೋಡಿಜೋಡಿಯಾಗಿರುವ ಕಟ್ಟೆಗಳು. ಇವುಗಳಲ್ಲಿ ಒಂದು ದೊಡ್ಡದು, ಒಂದು ಚಿಕ್ಕದು : ಈಶಾನ್ಯದಲು ಅಕ್ಕ ತಂಗೆಯ ಕಟ್ಟೆಯ ಒಳಗೆರೆಯೊಳಗಣ ಗುಡ್ಡದ ಪಡುವಣ ಕೋಡುಗಲ್ಲೇ ಗಡಿ (ಎಕ. VII, ಶಿವಮೊ. ೭೧-೩೭ ; 1431).

[**ದೇ.** ‖ **ತಮಿ.** ಅಕ್ಕಾ, ಅಕ್ಕೈ, ಅಕ್ಕನ್, ಅಕ್ಕಾಳ್ ; **ಮಲ.** ಅಕ್ಕ ; **ತುಳು.** ಅಕ್ಕ, ಅಕ್ಕೆ ; **ಕೊಡ.** ಅಕ್ಕೆ ; **ತೆಲು.** ಅಕ್ಕ ; **ಕೋಲಾ.** ಅಕ್ಕಾ ಬಾಯೀ ; **ಗೊಂಡಿ.** ಅಕ್ಕಾ, ತಕ್ಕಾ. / **ಸಂ.** ಅಕ್ಕಾ = ತಾಯಿ, ಅರ್ಕಾ= ಜ್ಯೇಷ್ಠಭಗಿನಿ ; **ಪ್ರಾ.** ಅಕ್ಕಾ = ಸಹೋದರಿ]

**ಅಕ್ಕ₂** (ನಾ). ಐನಶಿ ಎಂಬ ಮರ : ಅಕ್ಕ (ಐನಶಿ) – ಮಧ್ಯಮ ಆಕಾರದ್ದು ; ಕಟ್ಟಿಗೆ ಮಿಂಚುಳ್ಳ ಹಳದಿ ; ಅದರಿಂದ ಹರಿವಾಣಗಳನ್ನು ಮಾಡುವರು (ಕಭಾಗೆ. ೩೫). [?]

**ಅಕ್ಕಕ್ಕ** (ಅ). ದುಃಖವನ್ನು ಸೂಚಿಸುವ 'ಅಯ್ಯಯ್ಯೋ' ಎಂಬ ಅರ್ಥವುಳ್ಳ ಶಬ್ದ : ಚಿಕ್ಕವಂ ಕಂಬನಿಗಳುಗುತಿರೆ ಬಿಕ್ಕಿಬಿಕ್ಕಿಯಳುತ್ತ ಹೋ ಅಕ್ಕಕ್ಕಯೆನುತಂ ಬಟ್ಟಲಂ ಕೈಯಿಂದೆ ಮುಚ್ಚುತ (ಬಸವು. ೫೦-೭). [ಅಕ್ಕ₁ + ಅಕ್ಕ₁]

**ಅಕ್ಕಕ್ಕನೆ** (ಅ). ನೆಟ್ಟನೆ ; ಹಿಂದು ಮುಂದೆ ನೋಡದೆ (ಉಕ): ಸುಖ ದುಃಖಮಿಶ್ರಿತ ಭಾವನೆಯಿಂದ ಮನೆಯೊಳಗೆ ಅಕ್ಕಕ್ಕನೆ ಹೋಗಲಾರದೆ ಅವಳು ನಿಂತಿದ್ದಳು (ಮುಳ್ಳುಬೇ. ೪). [?]

**ಅಕ್ಕಚ್ಚಲು** (ನಾ). = ಅಕ್ಕಿಗಂಜಿ ೧. 'ಅಕ್ಕಿಗರ್ಚು₂' ಪರಾ. [< ಅಕ್ಕಿಗರ್ಚು₁ + -ಅಲು (< -ಅಲ್)]

**ಅಕ್ಕಚ್ಚಿ** (ನಾ). ಅಕ್ಕನನ್ನು ಪ್ರೀತಿಯಿಂದ ಅಥವಾ ಗೌರವದಿಂದ ನಿರ್ದೇಶಿಸುವ ಮಾತು. [ಅಕ್ಕ₁ + ಅಚ್ಚಿ₄. ‖ **ತಮಿ.** ಅಕ್ಕೈಚ್ಚಿ]

**ಅಕ್ಕಚ್ಚು** 'ಅಕ್ಕಿಗರ್ಚು₂' ನೋ.

**ಅಕ್ಕಚ್ಚುನೀರು** (ನಾ). ಅಕ್ಕಿಯನ್ನು ತೊಳೆದ ನೀರು : ಅವಳಿದ್ದರೆ ಅಕ್ಕಚ್ಚು ನೀರನ್ನಾದರೂ ಅಮೃತವೆಂದೆಣಿಸಿ ಕುಡಿಯಬಲ್ಲೆನೆಂದೆ (ಸೀತಾರ. ೯). [ಅಕ್ಕಚ್ಚು (< ಅಕ್ಕಿಗರ್ಚು₂) + ನೀರು (< ನೀರ್)]

**ಅಕ್ಕಜ₁** 'ಅಚ್ಚಿಜ₁' ನೋ.

**ಅಕ್ಕಜ₂** (ನಾ). ೧. ಭಯಮಿಶ್ರಿತವಾದ ಆಶ್ಚರ್ಯ ; ಬೆರಗು ; ಆಶ್ಚರ್ಯ ; ಸೋಜಿಗ : "ಅಕ್ಕಜಮೆಂದು ಸೋಜಿಗದೊಳ್" (ಕರ್ಣಾನಿ. ೯೦) ; ಮಕ್ಕಳು ಪುಟ್ಟಿದ ಪದದೊಳು ಬೆಕ್ಕಸವಟ್ಟಿರ್ದ ಮರ್ತ್ಯರಂ ಕಂಡಾಗಳ್ ಚಿಕ್ಕನೆಯುವರ ಹೃದಯದೊಳಿರ್ದಕ್ಕಜಮಂ ಕಳೆದು ಕೀರ್ತಿಯಂ ಪ್ರಕಟಿಸಿದಂ (ಪುಣ್ಯಾಸ್ರ. ೧೧-೧೧) ; ಬಿಲುಜೀವೊಡೆಯ ರವದಕ್ಕಜದ ಕಾಲಾಳೊದಗಿತು (ಕುವ್ಯಾಶ. ೨-೪) ; ತನು ರೋಮದಿಕ್ಕೆಯೊಳನಂತಶತ ಕೋಟಿಬ್ರಹ್ಮಾಂಡಂಗಳಕ್ಕಜಮೆನಲ್ ತಾಳ್ದರುಂಟೆ (ನಂದೀಮಾ.೧೦-೫೦). ೨. ಆಧಿಕ್ಯ ; ಅತಿಶಯ : ಅಕ್ಕಜದ ಶೋಕಾಗ್ನಿಯಿಂ ಮೊಗಂ ಬಾಡುತಿರೆ (ಮನುಚೋ. ೨೧೯-೨೧) ; ಶಕ್ರ ಮಾಡಿದ ಕೃತ್ಯವನು ಮುನಿಶಕ್ರ ವಂದಿತನಜಿದು ವಿಸ್ಮಯದಕ್ಕಜವು ತಾನಿಲ್ಲದೇ ತನ್ನೊಳಗೆ ನಸುನಗುತ (ನಿಭಾಗ. ೧೧-೮-೧೫). ೩. ಪ್ರೀತಿ : ದ್ವಿಜನಿಕರಂ ಧೌತವನಕ್ಕಜದಿಂ ಮೇಲ್ವಿಡಿದು ಪೋಪ ತೆಜದಿಂದಾಗಳ್ ದ್ವಿಜನಿಕರಂ ಧೌತವನಕ್ಕಜದಿಂ ಮೇಲ್ವಿಡಿದು ಪೋದುದೀಕ್ಷಿಸೆ ಭೂಪಂ (ನಳಚಂ. ೫೨೯) ; ಮಕ್ಕಳಿಲ್ಲ ತ್ರಿವರ್ಗಸಾಧನದಕ್ಕಜದ ಭಾಮಿನಿಯುಮಿಲ್ಲ (ನಿಭಾಗ. ೧೧-೧೩-೬೪) ; ಅಕ್ಕಜವ ಮಾಡದಿರಿವಂ ನಿನ್ನ ಮೈವಳಿಗೆ ತಕ್ಕನಲ್ಲಂ . . . ಎಂದು . . . ಅವಳ ದೂತಿಕೆ ನುಡಿದಳವನಂ ಜಜಿದು ಪೊಗಳ್ವೊಲು (ಜೈಮಿಭಾ.೬-೩೫).

[?. / **ತೆಲು.** ಅಕ್ಕಜಮು = ಆಶ್ಚರ್ಯ ; **ಕುಇ.** ಅಕಜಕ ಆವ = ಭಯಾಶ್ಚರ್ಯಗಳಿಂದ ಮೂಕನಾಗು]

**ಅಕ್ಕಜಂಗೊಳ್**, ಅಕ್ಕಜಗೊಳ್ (ಕ್ರಿ). ಆಶ್ಚರ್ಯಹೊಂದು ; ವಿಸ್ಮಯಪಡು : ಎಕ್ಕಟಗನಿರವಿಂಗೆ ಮೂಜಗವಕ್ಕಜಂಗೊಳಲೆಸೆದನನು ಪಮಯೋಗನಿಷ್ಠೆಯಲಿ (ನಿಭಾಗ. ೫-೬-೧೪) ; ಅಕೂಪಾರದ ಬೆಡಗ ನೀಕ್ಷಿಸಿ . . . ಸೀತಾರಾಮನಕ್ಕಜಂಗೊಂಡೊರೆದನ್ (ಶ್ರೀರಾಮು. ೩-೩೧).

**ಅಕ್ಕಜಗೊಳ್** : ರೂಢಿಗಚ್ಚರಿಯಾದ ಬಾಲಕ್ರೀಡೆಗಕ್ಕಜಗೊಂಡು (ಪ್ರಭುಲೀ. ೬-೩೪) ; ಠಕ್ಕು ಮಾಯಾತನಕಕ್ಕಜಗೊಂಬೆನೊ . . . ಸಿರಿ ವಿಜಯವಿಠಲ (ವಿದಾಕೃ. ೧೫೫-೩). [ಅಕ್ಕಜ₂ + ಕೊಳ್₁]

**ಅಕ್ಕಜಂಬಡು** (ಕ್ರಿ). = ಅಕ್ಕಜಂಗೊಳ್ : ವರಮುನಿಪ ನೋಡಿದಾ ಸ್ಫಟಿಕಮಯಭಿತ್ತಿಯೊಳು ಸ್ಫುರಿಸುತೊಪ್ಪಿರ್ಪ ಬೆಳ್ಳುಪ್ಪರಿಗೆಗಳನೆಂದು ಕರಮಕ್ಕಜಂಬಟ್ಟದಾವ ವಾರಾಂಗನೆಯ ಮನೆಯೋಯೆನುತ್ತುಸುರ್ದನು (ರಾಘಜ. ೭-೭೯). [ಅಕ್ಕಜ₂ + ಪಡು₁]

**ಅಕ್ಕಜಂಬೊರೆ** (ಕ್ರಿ). ಆಶ್ಚರ್ಯದಿಂದ ಕೂಡಿರು (?) : ಮುಂಬರಿದು ಮೊಟ್ಟಿ ತದಂಘ್ರಿಯ ರೇಣುವಕ್ಕಜಂಬೊರೆಯದ ರಕ್ಕೆಪೊಟ್ಟನಿಸಿರಲ್ಕೆ (ಪುಷ್ಪಪು. ೩-೯೮). [ಅಕ್ಕಜ₂ + ಪೊರೆ₂]

**ಅಕ್ಕಜಂಮಿಗು** (ಕ್ರಿ). ಆಶ್ಚರ್ಯ ಹೆಚ್ಚಾಗು : ಲಕ್ಕ ಸಂಖ್ಯೆಯ ಪೊನ್ನ ರಾಸಿಗಳುಕ್ಕುತಿರೆ ಬಿಜ್ಜಳನು ನೋಡುತ ಬೆಕ್ಕಸಂಬಟ್ಟಕ್ಕಜಂಮಿಕ್ಕಲುಗಿಸುತ ಶಿರವ (ಬಸವು. ೫-೬೧). [ಅಕ್ಕಜ₂ + ಮಿಗು]

**ಅಕ್ಕಜಗೊಳ್** 'ಅಕ್ಕಜಂಗೊಳ್' ನೋ.

**ಅಕ್ಕಜಮೆಯ್ದು** (ಕ್ರಿ). = ಅಕ್ಕಜಂಗೊಳ್ : ಭೂಪಾಲ ಜಗತ್ಪಾಲಂ ಕೇಳ್ದವನಾ ಪೊಗಸಿನೊಳೆ ಕರಸಿ ಮುನ್ನನೆ ಬರೆದಾ ಪರಿಯಂ ತಾನಾಗಳೆ ಬರೆಯಿಸಿಯಕ್ಕಜಮೆಯ್ದಿದನು (ಜಯಕಾ. ೧೨-೭೧). [ಅಕ್ಕಜ₂ + ಎಯ್ದು₁]

**ಅಕ್ಕಜವಗೆ** (ನಾ). ಆಶ್ಚರ್ಯಕರವಾದ ರೀತಿ : ಬೆಕ್ಕಸದೊಳಾಲಿಸಿತೊ ಆಕ್ಕಜವಗೆಗೆ ತೆಕ್ಕನುಕ್ಕಿದಾನಂದದೊಳ್ ತೇಲಿ ಸುಗ್ರೀವಭಟಸಮಿತಿ (ಶ್ರೀರಾಮಾ. ೫೩೨-೧೨೦). [ಅಕ್ಕಜ₂ + ಬಗೆ₂]

**ಅಕ್ಕಜೋಗಿಗಿಡ** (ನಾ). ಒಂದು ಗಿಡ (ಮೈಔಗಿ. ೫೮-೧೧೭೨). [ಅಕ್ಕಜೋಗಿ₀ + ಗಿಡ (< ಗಿಡು)]

**ಅಕ್ಕಟ**, ಅಕಟ, ಅಕಟಾ, ಅಕ್ಕಟಾ (ಅ). ೧. ವಿಷಾದವನ್ನು ಸೂಚಿಸುವ, 'ಅಯ್ಯೋ' ಎಂಬ ಅರ್ಥವುಳ್ಳ, ಶಬ್ದ: "ಅಕ್ಕಟ ವಿಷಾದೇ"

(ಭಾಷಾಭೂ. ೨೫೪) ; ದಯೆಯಿಂದಕ್ಕಟ ಅಯ್ಯೋ ಎಂದು (ವಡ್ಡಾರಾ. ೧೫೭-೪) ; ಅರಗಿನ ಮನೆಯೊಳ್ ಪಾಂಡವರುರಿದಱ್ಗಿದರಕ್ಕಟಯ್ಯೊ (ಪಂಪಭಾ. ೩-೭) ; ಪಂಚಪಾಂಡವರ ಶಿರಂಗಳಂ ನೆಱೆ ವಿಚಾರಿಸದಕ್ಕಟ ಕೊಂಡುಬರ್ಪುದೇ (ಗದಾಯು. ೯-೩೩). ೨. ಆಶ್ಚರ್ಯವನ್ನು ಸೂಚಿಸುವ ಶಬ್ದ : "ಅಕ್ಕಟಮೆಂದೆನಲ್ಕೆ ಬಿಸವಂದದೊಳ್" (ಕರ್ಣಾನಿ. ೫೦); "ಅಕ್ಕಟಯೆನಿಪ್ಪುದಾಶ್ಚರ್ಯಪದಂ" (ಚತುನಿ. ೧೦೨) ; ಅಕ್ಕಟ ಸಗ್ಗಮಿದಿರಂ ಬಂದುದು (ಪಂಚತಂ. ೧೫೭-೭). ೩. ಅಸೂಯೆಯನ್ನು ಸೂಚಿಸುವ ಶಬ್ದ (ಚತುನಿ. ಕ. I, ೮೬). **ಅಕಟ** : ೧. ಆಯೆಡೆಗೆ ಬಂದನಕಟೆಂದು ತಡವರಿಸಿ (ಧರ್ಮಾಮೃ. ೨-೫೫); ತೀರಿತಿನ್ನೇನಕಟ ಪಾಂಡವವೀರರುಬ್ಬಟೆ . . . ಅಕಟೆನ್ನಾರು ಕಾವವರು (ಕುವ್ಯಾದ್ರೋ. ೩-೫೮). ೨. ನುಸಿಗಳೌಕಿದರಕಟ ದಿಗ್ಗಜ ಘುಸಣಿಗೊಂಬುದೆ(ಕುವ್ಯಾದ್ರೋ. ೧೦-೫೦). **ಅಕಟಾ** : ೧. ಸೂಜಿ ಹೋದುದು ನಗರಿ ಖಳರಿಗೆ ಮಾಜಿದರು ಪಟ್ಟಣವನಕಟಾ ಕಾಜುಮುದ್ದಿಗೆ ಹೋಹುದೇ ಕೈಮುಸಕ (ಕುವ್ಯಾಕ. ೧-೮). **ಅಕ್ಕಟಾ** : ೧. "ಅಕ್ಕಟಾ ಎನೆ ಖೇದಂ" (ಕವಿಕಂ. ೧೯೧) ; ಬೆಳ್ಳಾದಪನಕ್ಕಟಾ ಖಚರಂ (ಆದಿಪು. ೨-೩೫) ; ನಲಿದು ಪೂಜಿಸಲೀಯನಕ್ಕಟಾ ಸಂಗಮುಂ (ಬಸರ. ೫-೪). ℙ ಈ ಶಬ್ದಗಳನ್ನು ದ್ವಿರುಕ್ತಿಯಾಗಿ ಬಳಸುವುದೂ ಉಂಟು : ಅಕಟಕಟಾ ಶಿವ ನಿನಗಿನಿತು ಕರುಣವಿಲ್ಲ (ಬಸವ. ೬೪) ; ಇಕ್ಕಿದಿರಲಾ ರಾಜಪುತ್ರರನಕ್ಕಟಕಟಾ ಸ್ವಾಮಿದ್ರೋಹರು ಹೊಕ್ಕ ಮನೆ ಹಾಳಹುದಲಾ (ಕುವ್ಯಾದ್ರೋ. ೫-೮೦) ; ವ್ಯರ್ಥವಾಯ್ತಕಟಕಟ ಜನ್ಮ (ತೊರರಾ. ೧-೪-೨) ; ಅಕಟಕಟಾ ! ಕಣ್ಣಿಲ್ಲದೆ ಇರುವುದು ಬಹು ಕಷ್ಟ (ಮುಂಬಯಿ. ೩-೯೦).

[ದೇ. ‖ **ತಮಿ.** ಅಕ್ಕಟ ; **ತೆಲು.** ಅಕಟ, ಅಕಟಾ, ಅಕ್ಕಟ, ಅಕ್ಕಟಾ ; **ತುಳು.** ಅಕಟಕಟ]

**ಅಕ್ಕಟಾ** 'ಅಕ್ಕಟ' ನೋ.

**ಅಕ್ಕಟಿಕೆ** (ನಾ). ಉತ್ಕಟವಾದ ಆಸೆ (?) : ಒಕ್ಕಲನೆಂತುಂ ರಕ್ಷಿಸುವಕ್ಕಟಿಕೆ[ಪಾಠಾಂ. ಟ]ಯನುಳ್ಳ ಭೂಮಿಪಾಳಕನೆಂತುಂ ಒಕ್ಕಲ ಕೆಯ್ಗಳಿಗೆಱಗುವ ಪಕ್ಕಿಗಳಂ ಕವಣೆಗೊಂಡು ಕಾಯಲವೇಡಾ (ಸಮಪ. ೧೪-೮೨).

[~ ಅಱ್ಕಱು ?. ‖ **ತೆಲು.** ಅಕ್ಕಟಿಕ = ಕನಿಕರ, ದಯೆ]

**ಅಕ್ಕಟಿ** (ಅ). ಶ್ರಮವಿಲ್ಲದೆ ; ಬಿಟ್ಟಿಯಾಗಿ : ಅಕ್ಕಟಿ ಬಂದ ದುಡ್ಡು ಪುಕ್ಕಟಿ ಹೋಯಿತು (ಮರಮ. ೪೪); ಅವರ ತೋಟ ಹೋದರೆ 'ಅಕ್ಕಟಿ' ಬಂದದ್ದು ಎನ್ನುತ್ತೀ (ಮರಮ. ೪೪). [**ಸಂ.** ಅಕಷ್ಟ ?]

**ಅಕ್ಕಡ**$_1$ 'ಅಕ್ಷಡ' ನೋ.

**ಅಕ್ಕಡ**$_2$ (ನಾ). ಹರಿಗೋಲು : "ಅಕ್ಕಡ – ಹರಿಗೋಲು" (ಶರಸಾ. ೨೪-೮-೨೯೯). [?]

**ಅಕ್ಕಡ**$_3$ (ನಾ). ಕಿರುನೆಲ್ಲಿ (ಒಷಧಿ. ೨). [?]

**ಅಕ್ಕಡಿ,** ಅಕಡಿ (ನಾ). ೧. ಹೊಲದಲ್ಲಿ ಮುಖ್ಯವಾದ ಬೆಳೆಯ ಎರಡು ಸಾಲುಗಳ ನಡುವೆ ಇತರ ಧಾನ್ಯಗಳನ್ನು ಬೆಳೆಯುವುದಕ್ಕಾಗಿ ಮಾಡಿರುವ ಉಕ್ಕೆಯ ಸಾಲು. ೨. (ಅಕ್ಕಡಿ ಸಾಲಿನಲ್ಲಿ ಬಿತ್ತುವ) ತೊಗರಿ, ಅಲಸಂದೆ, ಹೆಸರು, ಹುರುಳಿ ಮುಂತಾದ ಚಿಲ್ಲರೆ ಧಾನ್ಯಗಳು ; ಚಿಲುವಾನ ಧಾನ್ಯಗಳು : ಬಿಳಿ ಜೋಳದಲ್ಲಿಯಾದರೂ ಕುಸುಬಿಯ ಅಕ್ಕಡಿಯನ್ನು ಹಾಕಬೇಕು (ಕೃಷಿಪ್ರ. ೮೧) ; ಜೋಳದೊಳಗೆ ತೊಗರಿ ಹೆಸರು ಅಲಸಂದಿ ಹುರುಳಿ ಪುಂಡಿ ಇವುಗಳ ಅಕ್ಕಡಿಗಳನ್ನು ಹಾಕುವರು (ಮುಂಬಯಿ. ೫-೧೯೬). ೩. ನಾಲ್ಕು ಸಾಲು ಬೆಳೆಯನ್ನುಳ್ಳ ಭೂಮಿಯ ಅಗಲ. ಇದರಲ್ಲಿ ಎರಡು ಮುಖ್ಯ ಧಾನ್ಯದ ಸಾಲುಗಳ ನಡುವೆ ಎರಡು ಅಕ್ಕಡಿ ಸಾಲುಗಳಿರುತ್ತವೆ (ಉಕ) : ಧೀರ ಹೌದೋ ರಾಯಿನಾಯಿಕಾ ಹಾರಿ ಹನ್ನೆರಡಕ್ಕಡಿ ಜಿಗದಾ (ಇಆ. XIV, ೩೦೧-೯; ?). ೪. "ಇಕ್ಕಟ್ಟು" (ಸಿರಿಕೋ). **ಅಕಡಿ** : ೩. ಹೆಂಡೆಹೊಲಾದಭಿವರೆಲಾ ೨ ಅಕಡಿ ।।। ೬೦ ಮರು ।೫।। ಮಯಗೊಂಡ ಗೌಉಡಗೆ। ಪಲಿಸಿಕೊಟವುಡುಗೊರೆ (ಎಕ. VII, ಶಿವಮೊ. ೧೦೭-೩೨ ; 1570).

**ಅಕ್ಕಡಿಯ ಕೋಲು** = ಅಕ್ಕಡಿಸಡ್ಡೆ : ಮುಂಗಾರಿಯ ಜೋಳದಲ್ಲಿ ತೊಗರಿ, ಹೆಸರು, ಅಲಸಂದಿ ಮುಂತಾದ ಕಾಳುಗಳನ್ನು ಅಕ್ಕಡಿಯ ಕೋಲಿನಿಂದ ಬಿತ್ತುವರು (ಕಭಾಗ. ೨೭೮). [?]

**ಅಕ್ಕಡಿಕಾಳು** (ನಾ). = ಅಕ್ಕಡಿ ೨ : ಪಾಪವ್ವ ಅಕ್ಕಡಿಸಡ್ಡೆಯಲ್ಲಿ ಅಕ್ಕಡಿ ಕಾಳು ಬಿತ್ತಿದಳು (ನದೀಪ. ೬೭). [ಅಕ್ಕಡಿ + ಕಾಳು]

**ಅಕ್ಕಡಿಕೋಲು** (ನಾ). = ಅಕ್ಕಡಿಸಡ್ಡೆ.

[ಅಕ್ಕಡಿ + ಕೋಲು (< ಕೋಲ್$_1$)]

**ಅಕ್ಕಡಿತಕ್ಕಡಿ,** ಅಕಡಿತಕಡಿ (ನಾ). ೧. ತೂಕದಲ್ಲಾಗಲಿ ಮಾತಿನಲ್ಲಾಗಲಿ ಮೋಸ (ಕ). ೨. "ಮಾತಿನ ಮಲ್ಲ ; ಮಾತ[ತುಗು]ಗೂಳಿ ; ಮಾತಿನಲ್ಲಿ ವಂಚಕ" (ಜಾನಕೋ). **ಅಕಡಿತಕಡಿ** (ಕ). [ಅಕ್ಕಡಿ$_0$ + ತಕ್ಕಡಿ]

**ಅಕ್ಕಡಿಪೈರು** (ನಾ). ಅಕ್ಕಡಿಯ ಧಾನ್ಯಗಳನ್ನು ಬಿತ್ತಿ ತೆಗೆಯುವ ಬೆಳೆ (ಕಿಸಂಗ್ಲಾ). [ಅಕ್ಕಡಿ + ಪೈರು (< ಪಯಿರು)]

**ಅಕ್ಕಡಿಬಳ್ಳಿ** (ನಾ). ಅಕ್ಕಡಿಯಾಗಿ ಬೆಳೆಯುವ ಅವರೆ, ಅಲಸಂದೆ, ಮೊದಲಾದ ಬಳ್ಳಿ : ಜೋಳದ ಬೆಳೆಯನ್ನೂ ಅದರ ಕಾಲಿಗೆರಗಿದ ಅಕ್ಕಡಿಬಳ್ಳಿಗಳನ್ನೂ ನೋಡಿದರೆ (ಬೆಳಭಾ. ೧). [ಅಕ್ಕಡಿ + ಬಳ್ಳಿ]

**ಅಕ್ಕಡಿಸಡ್ಡೆ** (ನಾ). ಅಕ್ಕಡಿಕಾಳನ್ನು ಬಿತ್ತುವ ಸಲಕರಣೆ (ಇದನ್ನು ಸಾಮಾನ್ಯವಾಗಿ ಕೂರಿಗೆಯ ಹಿಂದೆ ಜೋಡಿಸಿರುತ್ತದೆ) : ದಾಸಯ್ಯ ಬೀಜ ತಾನೇ ಬಿತ್ತಿದ. ಹಿಂದೆ ಪಾಪವ್ವ ಅಕ್ಕಡಿಸಡ್ಡೆಯಲ್ಲಿ ಅಕ್ಕಡಿಕಾಳು ಬಿತ್ತಿದಳು (ನದೀಪ. ೬೭). 'ಅಕ್ಕಡಿಕೋಲು' ಪರಾ.

[ಅಕ್ಕಡಿ + ಸಡ್ಡೆ$_1$]

**ಅಕ್ಕಣಬ್ಬೆ** (ನಾ). ಒಬ್ಬ ಹೆಂಗಸಿನ ಹೆಸರು : ಅಕ್ಕಣಬ್ಬೆ ಗೋಯಿತಿ ಕೋಟಿಯಮ್ಮನಕ್ಕಂ (ಮೈಆರಿ. ೧೯೨೯, ೬೯-೩ ; 964).

[ಅಕ್ಕಣಿ$_1$ + ಅಬ್ಬೆ$_1$]

**ಅಕ್ಕಣಿ**$_1$ 'ಅಕ್ಕಣ್ಣಿ' ನೋ.

**ಅಕ್ಕಣಿ**$_2$ (ನಾ). ಮಗ್ಗದಲ್ಲಿ ಹಾಸುಹೊಕ್ಕುಗಳು ಎಡೆಬಿಡದೆ ಹೊಂದಿಕೊಂಡಿರುವಿಕೆ (ಕ). [?]

**ಅಕ್ಕಣಿ**$_3$ (ನಾ). ಕಾಳು ತೆಗೆದ ಜೋಳದ ತೆನೆ; ಸಂಡು (ಉಕ) : ಕಣದೊಳಗಿನ ಅಕ್ಕಣಿ ತೆಗೆದೆಯಾ ? (ರೂಢಿ). [?]

**ಅಕ್ಕಣ್ಣಿ,** ಅಕ್ಕಣಿ$_1$ (ನಾ). ೧. ಅಕ್ಕನನ್ನು ಅಥವಾ ಗೌರವಾರ್ಹಳಾದ ಹೆಂಗಸನ್ನು ಪ್ರೀತಿಯಿಂದ ನಿರ್ದೇಶಿಸುವ ಮಾತು : ನಮ್ಮ ಅಕ್ಕಣ್ಣಿಗೆ ಎಂದೂ ಪೊರಕೆ ಹಿಡಿದು ಗೊತ್ತಿಲ್ಲ (ಅರಗಿ. ೮೮). ೨. ಒಬ್ಬಾಕೆಯ ಹೆಸರು. **ಅಕ್ಕಣಿ**$_1$ : ೨. 'ಅಕ್ಕಣಿ' ಎಂಬುದು ಅವಳ ನಾಮಧೇಯ (ಹಹಸ. ೫೦). [ಅಕ್ಕ$_1$ + –ಅಣ್ಣಿ]

**ಅಕ್ಕತಂಗಿಯರ ಹಣ್ಣು** (ನಾ). ಪಪ್ಪಾಯಿ ; ಪರಂಗಿ ಹಣ್ಣು (ಕ).

[ಅಕ್ಕ$_1$ + ತಂಗಿ (< ತಂಗೆ) + ಹಣ್ಣು$_2$ (< ಪಣ್$_3$). ‖ **ಕೊಡ.** ಅಕ್ಕತಂಗೆ ಕಾಯಿ]

**ಅಕ್ಕದ** 'ಅಱ್ಕಱ$_1$' ನೋ.

**ಅಕ್ಕದಾಣಿ** (ನಾ). ಯೋಗದಂಡ (ಸ್ಯಾಂಡರ್).

[ಅಕ್ಕ$_0$ (< ಸಂ. ಅಕ್ಷ) + ದಾಣಿ$_2$ (< ಡಾಣೆ)]

**ಅಕ್ಕದಾಮ** (ನಾ). ರುದ್ರಾಕ್ಷಿಯ ಸರ ; ಜಪಸರ.

[**ಸಂ.** ಅಕ್ಷದಾಮನ್ (ಅಕ್ಷ + ದಾಮನ್)]

**ಅಕ್ಕದಾಳ** (ನಾ). ಪಗಡೆಯ ಆಟದಲ್ಲಿ ಉಪಯೋಗಿಸುವ ದಾಳ.
[ಅಕ್ಕ$_{0}$ (< ಸಂ. ಅಕ್ಷ) + ದಾಳ]

**ಅಕ್ಕನ ಚೌರಿ** (ನಾ). ಒಂದು ಬಗೆಯ ಕಾಯಿಪಲ್ಯ (ಸ್ಯಾಂಡರ್).
[ಅಕ್ಕ$_{1}$ ? + ಚೌರಿ]

**ಅಕ್ಕಪಕ್ಕ** (ನಾ). ಆ ಕಡೆ ಈ ಕಡೆ; ನೆರೆಹೊರೆ : ಅಕ್ಕಪಕ್ಕದ ಕೋಣೆಗಳಲ್ಲಿ ಅಪರಿಚಿತರು ಮಲಗಿರುವಲ್ಲಿ (ವಾತ್ಸಲ್ಯ. ೯) ; ಅಕ್ಕಪಕ್ಕದವರು ಎಚ್ಚರಿರುವರೊ ಹೇಗೊ ಎಂದು ಕಿವಿಗೊಟ್ಟು ಕೇಳಿದ (ಕೊತಕಾ. ೨೦).
[ಅಕ್ಕ$_{0}$ + ಪಕ್ಕ]

**ಅಕ್ಕಬ** (ನಾ). ಆಶ್ಚರ್ಯ (ಸ್ಯಾಂಡರ್). ℙ ಇದು 'ಅಕ್ಕಜ' ಎಂಬುದಕ್ಕೆ ಪ್ರತಿಯಾಗಿ ಬಂದಿರುವ ಮಿಥ್ಯಾಶಬ್ದವಾಗಿರಬಹುದೆ ?
[ ? < ಅಕ್ಕ$_{1}$ + ಅಬ್ಬ$_{3}$]

**ಅಕ್ಕಬ್ಬೆ** (ನಾ). ಒಬ್ಬಾಕೆಯ ಹೆಸರು : ಸೀಯವೂರ ಅಕ್ಕಬ್ಬೆ ಆಳುತ್ತಿರೆ (ಎಕ. XII, ಶಿರಾ. ೨೪–೪೧ ; 900). [ಅಕ್ಕ$_{1}$ + ಅಬ್ಬೆ$_{1}$]

**ಅಕ್ಕಮಾಲೆ** (ನಾ). ರುದ್ರಾಕ್ಷಿಯ ಸರ ; ಜಪಸರ.
[ಸಂ. ಅಕ್ಷಮಾಲಾ (ಅಕ್ಷ + ಮಾಲಾ)]

**ಅಕ್ಕಮಿಕ** (ನಾ). ಆಕ್ರಮಿಸುವವನು ; ಆಕ್ರಮಣಕಾರ (?) : ಆದಿರದ ಬೀಕರಕ್ಕಮಿಕಪೂಣಿಗರಂಜೆ(ಲೆ)ಗಣ್ಣನಿತ್ತು ಬಾಳದ ಪರಮಂಡಳಂ (ಕಇಅ. ೪, ೨–೧೨೩ ; 1058). [ಸಂ. ಆಕ್ರಾಮಕ ?]

**ಅಕ್ಕಮೆ** 'ಅಟ್ಕಮೆ' ನೋ.

**ಅಕ್ಕಯ್ಯ** (ನಾ). ಅಕ್ಕನನ್ನು ಪ್ರೀತಿಯಿಂದ ಕರೆಯುವ ಮಾತು : ಅಕ್ಕ ಕೇಳವ್ವ, ಅಕ್ಕಯ್ಯ ನಾನೊಂದ ಕನಸ ಕಂಡೆ (ಮಹದೇ. ೧೫–೨).
[ಅಕ್ಕ$_{1}$ + ಅಯ್ಯ$_{1}$. ‖ **ತುಳು.** ಅಕ್ಕಯ್ಯ]

**ಅಕ್ಕರ್** 'ಅಟ್ಕಱ್$_{2}$' ನೋ.

**ಅಕ್ಕರ$_{1}$** 'ಅಟ್ಕಱ್$_{2}$' ನೋ.

**ಅಕ್ಕರ$_{2}$** (ನಾ). ೧. [ವ್ಯಾಕ] ಅ, ಆ ಮುಂತಾದ ವರ್ಣ : ಅಕ್ಕರಮುಂ ವರ್ಣಮುಮೆಂದಕ್ಕುಂ ಶುದ್ಧಾಕ್ಷರಕ್ಕೆ ನಾಮಂ (ಶಮದ. ೨) ; ನೋಡುವೊಡೊಂದಕ್ಕರಮುದು ಮಾಡುವೊಡುಚ್ಚರಣೆಗರಿದು (ಗಿರಿಕ. ೧–೩೨) ; ಅಕ್ಕರವು ಲೇಖಕ್ಕೆ ತರ್ಕ ತಾ ವಾದಕ್ಕೆ ಮಿಕ್ಕ ಓದುಗಳು ತಿರುಪೆಗೆ ಮೋಕ್ಷಕೆರಡಕ್ಕರವೆ ಸಾಕು (ಸರ್ವಜ್ಞ. ೪೬೧). ೨. ಬರವಣಿಗೆ ; ಬರಹ : ಬುಮ್ಮಯ್ಯನಕ್ಕರಂ (ಎಕ. I, ೩–೧೧ ; 890) ; ನೊಸಲೊಳ್ ಬರೆದಕ್ಕರಮಾ ವಿಧಾತ್ರನಾ (ಪಂಪಭಾ. ೧೩–೧೯) ; ಕಂಡರಿಸಿ ಕಲ್ಲೊಳಿಟ್ಟಕ್ಕರಮುಮೆಂಬಿನೆಗಮೆಸೆದಪುದು (ಅಜಿಪು. ೧೨–೨೫). ೩. ಹಸ್ತಾಕ್ಷರ ; ರುಜು (?) : ಅಯ್ಯಪ್ಪ ದೇವನಕ್ಕರ ವಿಕ್ರಮಾದಿತ್ಯನಕ್ಕರ ಇಯುರ ಪ × × ರ ಅಯ್ಯಪ್ಪ ಚೋಳ [ಕೊ] ಟ್ಟುದು (ಸೌಇಇ. IX–i, ೪೦–೧೬ ; 977). ೪. ವಿದ್ಯೆ : ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರ್ (ಪಂಪಭಾ. ೪–೨೯) ; ಕಬ್ಬಿಗಗಳ್ಳರೆಂದು ಕೂಸಾಡಿಸಬಾರದಕ್ಕರದ ರಾಜ್ಯದೊಳೀ ಕವಿಚಕ್ರವರ್ತಿಯಾ (ಶಾಂತಿಪು.೧೨–೭೭) ; ದೇಶಮೆಲ್ಲಮಕ್ಕರಮನಱಿಯದನಿತಱಿಂದಕ್ಕರಮಿಲ್ಲೆನಲ್ಬಾರದು (ಧರ್ಮಾಮೃ. ೯–೧೦೦ ವ) ; ೫. [ಛಂದ] ಪದ್ಯಜಾತಿಯಲ್ಲಿ ಒಂದು ಬಗೆ : ಸುಂದರವೃತ್ತಂಗಳಕ್ಕರಂ ಚೌಪದಿ (ಕವಿರಾ. ೧–೩೫) ; ಮದನವತಿಯಕ್ಕರಂ ಚೌಪದಿ ಗೀತಿಕೆ (ಛಂದೋಂಬು. ೧–೫೬) ; ಈ ಗಣಂಗಳಿಂದಾದ ಅಯ್ದು ಅಕ್ಕರಂಗಳ ಲಕ್ಷಣಮಂ ಪೇೞ್ವೆಂ (ಛಂದೋಂಬು. ೫–೨೩ ವ). ℙ ಇದರಲ್ಲಿ ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿಱಿಯಕ್ಕರ ಎಂದು ಐದು ಪ್ರಭೇದಗಳುಂಟು. ೬. ಅಕ್ಷರ ತಿಳಿದವನು ; ವಿದ್ಯಾವಂತ (ಈ ಅರ್ಥದಲ್ಲಿ ಬಹುವ. ರೂಪ ಮಾತ್ರ ಸಿಕ್ಕಿದೆ) : ಸೋಮುಗ್ರಹಣ ಅಲ್ಲಿಯ ಅಕ್ಕರರಿಗು ವೇದವಿಶಾಲ × × × ಸೋಮ ಸಿವನಾಸ್ಥಾನಂ (ಎಕ. IV, ಗುಂಡ್ಲುಪೇ. ೯೩–೧೦ ; 1049). ೭. ಹಣೆ ಬರಹ : ಅಕ್ಕರವು ಬರೆದಿರಲು ಬೆಕ್ಕಿದ್ದು ಹಿಡಿಯುವುದು ರಕ್ಕಸನು ಸೀತೆ ಸೆಳೆವಾಗ ರಾಮ ತಱಿದಿಕ್ಕದೇಕಿರ್ದ (ಸರ್ವಜ್ಞ. ೮೪೭).

**ಅಕ್ಕರದ ಹೊಲಿಗೆ** = ಅಕ್ಕರವೊಲಿಗೆ : ಹಱಿಗವಿಗಳ ಕಬ್ಬಂಗಳ ಹೊಱಗಳಿಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ಬಱಿತಾಱಿಗಬೀಱಿಗ ವೆತ್ತಱತತ್ತಱವೆಕ್ಕಸಕ್ಕಮಸ್ತವ್ಯಸ್ತಂ (ಗಿರಿಕ. ೧–೨೩). [ಸಂ. ಅಕ್ಷರ]

**ಅಕ್ಕರಂಬರೆ** (ಕ್ರಿ). ಅಕ್ಷರಗಳನ್ನು ಬರೆ : ಅವಯವದಿಂದೆ ಸಾಧಿಸಿದ ಮಾಳವವೇಳುವನೆಯ್ದೆ ಗಂಗಮಾಳವವೆನಲಕ್ಕರಂ ಬರೆದು ಕಲು ನಿಱಿಸುತ್ತೆ (ಎಕ. VII, ಶಿವಮೊ. ೪–೪೫ ; 1122). [ಅಕ್ಕರ$_{2}$ + ಬರೆ$_{1}$]

**ಅಕ್ಕರಂಬೊಯ್** (ಕ್ರಿ). (ಶಾಸನದ ಶಿಲೆಯ ಮೇಲೆ) ಅಕ್ಷರಗಳನ್ನು ಕೊರೆ ; ಕೆತ್ತು : ಅಕ್ಕರಂಬೊಯ್ದ ಕೊವರಾಚಾರಿಯ ಮಗಂ ಮಾಣಿಕಾಚಾರಿಗೆ ಕಣ್ಣುಗ ಗೞ್ದೆ ಕೊಡಂಗೆಗೊಟ್ಟರ್ (ಎಕ. IX, ಹೊಸಕೋ. ೧೧೧–೯ ; 997) ; ಮುಡಿಗನಕ್ಕರಂಬೊಯ್ದ (ಮೈಆರಿ. ೧೯೪೨, ೬೧–೧೩; 1002). [ಅಕ್ಕರ$_{2}$ + ಪೊಯ್$_{1}$]

**ಅಕ್ಕರಗಿವುಡ** (ನಾ). ಅಕ್ಷರವನ್ನು ಕೇಳದವನು; ವಿದ್ಯೆಯಿಲ್ಲದವನು; ವಿದ್ಯಾವಿಮುಖ : ಬಗೆವೊಡೆ ಕಬ್ಬಿಗರಕ್ಕುಮೆ ಓದುಗೇಳದಕ್ಕರಗಿವುಡರ್ (ಲೀಲಾವ. ೧–೨೩) ; ಬಹುಶ್ರುತರಿದ್ದಾರೆ, ಅಕ್ಕರಗಿವುಡರಿದ್ದಾರೆ (ಸಾಹಿಸಂ. ೧೯೭). [ಅಕ್ಕರ$_{2}$ + ಕಿವುಡ]

**ಅಕ್ಕರಗೊಟ್ಟಿ** (ನಾ). ವಿದ್ವಾಂಸರ ಸಭೆ ; ವಿದ್ವಾಂಸರೊಡನೆ ಮಾಡುವ ಚರ್ಚೆ ಸಲ್ಲಾಪ ಮುಂತಾದವು : ಅಕ್ಕರಗೊಟ್ಟಿಯುಂ ಚದುರರೊಳ್ಪಾತುಂ (ಪಂಪಭಾ. ೪–೩೧) ; ತಂತ್ರನಿಯಂತ್ರಣಂ ಬಿನದ ಮೋಲಗಮಕ್ಕರಗೊಟ್ಟಿ ಕಾರ್ಯಸನ್ಮಂತ್ರಮುದಾತ್ತವೃತ್ತಿ (ಶಾಂತಿಪು. ೭–೧೧೦). [ಅಕ್ಕರ$_{2}$ + ಗೊಟ್ಟಿ]

**ಅಕ್ಕರಜಾಣ** (ನಾ). ವಿದ್ವಾಂಸ : ಲೋಕಕ್ಕನುರಾಗಮಂ ಜನಿಯಿಸಣ್ಣ ಮನೋಮುದದಿಂದಮೆಂದು ಸಂದಕ್ಕರ ಜಾಣರಾಗ್ರಹಿಸೆ (ವರ್ಧಪು. ೧–೨೩). [ಅಕ್ಕರ$_{2}$ + ಜಾಣ]

**ಅಕ್ಕರತೆ** (ನಾ). ಅಕ್ಕರೆ; ಪ್ರೀತಿ : ಅವರು ನಿನ್ನನ್ನು ಹ್ಯಾಗೆ ಅಕ್ಕರತೆಯಿಂದ ಜೋಕೆಮಾಡುತ್ತಾರೆ (ಮುಂಬಯಿ. ೧–೩೬) ; ಅಕ್ಕ ತಂಗಿ ತಾಯಿ ತರಳೆ ಇವರ ಪ್ರೀತಿ ಕರೆಯಿತು ಅಕ್ಕರತೆಯ ಸುರಿಯಿತು (ಪಯಣ. ೫–೧೬).
[ಅಕ್ಕರ$_{1}$ (< ಅಟ್ಕಱ್$_{2}$) + –ತೆ]

**ಅಕ್ಕರಮಾಲೆ** (ನಾ). ವರ್ಣಮಾಲೆ : ಟಾಂತಂಬರಂ ಬುಧರ್ ಪೊಗೞ್ವಂತಕ್ಕರಮಾಲೆಯಂ ಜಿನಸ್ತವನದೊಳೋರಂತಿರೆ ಪೇೞ್ದಂ (ಜಿನಾಲೆ. ೩೮). [ಅಕ್ಕರ$_{2}$ + ಮಾಲೆ]

**ಅಕ್ಕರವಿದ್ಯೆ** (ನಾ). = ಅಕ್ಷರವಿದ್ಯೆ : ಮಕ್ಕಳಿಗೆ ತಂದೆ ಬಾಲ್ಯದೊಳಕ್ಕರ ವಿದ್ಯೆಗಳನಱಿಪದಿರ್ದೊಡೆ ಕೊಂದಂ (ನೀತಿಸಾ. ೩–೧೬).
[ಅಕ್ಕರ$_{2}$ + ವಿದ್ಯೆ]

**ಅಕ್ಕರವೊಲಿಗೆ** (ನಾ). ಅಕ್ಷರಗಳ ಸೇರಿಕೆ, —ಜೋಡಣೆ : ಸರಿಯಲ್ತು ವಲ್ತು ಕೇಳ್ ತರದೇಳುಕೋಟಿಯಕ್ಕರವೊಲಿಗೆ ಕಂಥೆ ಮಂತ್ರಂಗಳಿಂದುಂ ಗಿರಿರಾಜಕನ್ಯಕಾವರನಾಣೆಯೆಮ್ಮ ಶಂಕರಶರಣರಾಣೆ ಪುಸಿಯಲ್ಲ (ಸಾನಂಚ. ೧–೩೪). [ಅಕ್ಕರ$_{2}$ + ಪೊಲಿಗೆ (< ಪೊಲ್ಗೆ)]

**ಅಕ್ಕರಾಂಕಮಾಲೆ** (ನಾ). ಪದ್ಯದ ಪ್ರತಿಯೊಂದು ಶಬ್ದವೂ ಒಂದೇ ಅಕ್ಷರದಿಂದ ಮೊದಲಾಗುವ ಕವಿತೆ (ಸ್ಯಾಂಡರ್).
[ಸಂ. ಅಕ್ಷರಾಂಕಮಾಲಾ (ಅಕ್ಷರ + ಅಂಕಮಾಲಾ)]

**ಅಕ್ಕರಿಕೆ** (ನಾ). ಒಂದು ಬಗೆಯ ಕನ್ನಡ ಪದ್ಯಜಾತಿಯ ಹೆಸರು : ಮುರರಿಪು ಬೊಮ್ಮಂ ಮುರರಿಪು ಬೊಮ್ಮಂ ಮುರರಿಪು ಶೂಲಧರಂ

ಸರಸದೆ ನಿಲ್ಕುಂ ಖರಗಣಮುಕ್ಕುಂ ಸುರುಚಿರಮಾತ್ರೆಗಳಿಂ । ನಿರುಪಮು ದಿಂದಂ ಪರಿಮಿತಮಪ್ಪಂತಿರೆ ಯತಿಯಾಜಿಜಿಳೊಳಂ । ಬರೆ ತರಳಾಕ್ಷೀ ಧರೆಯೊಳಿದೆತ್ತಂ ಕರಮೆಸೆವಕ್ಕರಿಕೆ ॥ (ಛಂದೋಂಬು. ೬. ೫–೩೦೮).
[ಸಂ. ಅಕ್ಷರಿಕಾ]

**ಅಕ್ಕರಿಗ** (ನಾ). ೧. ಅಕ್ಷರವನ್ನು ಕಲಿತವನು; ಓದುಬರಹ ಬಲ್ಲವನು; ವಿದ್ವಾಂಸ: ಕಂಡೊಡನಾಡಿದಕ್ಕರಿಗನಕ್ಕರಿಗಂ ಗೆಡೆಗೊಂಡ ಪಂಡಿತಂ ಪಂಡಿತನೆಯ್ದೆ ಕಲ್ತ ಚದುರಂ ಚದುರಂ (ಶಾಂತಿಪು. ೧೨–೭೮); ಸರಸತಿಯನಬಲೆಯಂ ಗೋಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನಕ್ಕರಿಗನೆ (ಅಜಿಪು. ೧–೯೦); ಅಕ್ಕರಿಗರಿದನೋದಿ ಪೊಸತಾಗಿರೆ ಸೊಬಗಿನ ಸುಗ್ಗಿಯೆಂಬ ಪೆಸರಂ ಕೊಟ್ಟರ್ (ಕಬ್ಬಿಗಕಾ. ೩೪೬); ಆಚರಣಕ್ಕೆ–ದೇಗುಲಿಗಂ ಅಕ್ಕರಿಗಂ ಚಂದಸಿಗಂ (ಶಮದ. ೧೯೭ ಪ್ರಯೋ); ಎಗ್ಗರಕ್ಕರಿಗರಂ ಪಗೆಸಾರಿ[ಚಿ] ಪಂಬಲಿಸಿ ಬಸವಟಿವಂತೆ (ಚಿಕವಂ. ೨೫–೧೮); ಅಕ್ಕರಕ್ಕರದ ನೆಲೆಬೆಲೆಯರಿಯದವರು ಅಕ್ಕರಿಗರು (Men of Letters) ಹೇಗಾದಾರು? (ಸಾಹಿಸಂ. ೬೯). ೨. ಗಿಳಿ; 'ಪಂಡಿತವಕ್ಕಿ': ರತಿದೇವಿ ದುಕ್ಕದಿಂದಾಯಾಸಗೊಳುತೆ ಅಕ್ಕರಿಗನನೇಱಿಕೊಂಡು ಶೀಘ್ರದಿ ಬಂದು ಹೊಕ್ಕಳು ಕುಸುಮಾವತಿಯ (ಮೋಹತ. ೮–೪೯). ೩. ಅಕ್ಕರ ವೃತ್ತವನ್ನು ರಚಿಸುವವನು: ಅಕ್ಕರಿಗಂ, ಮದನವತಿಗಂ (ಶಬ್ದಾನು. ೪೧೨). [ಅಕ್ಕರ$_2$ + –ಇಗ]

**ಅಕ್ಕರಿಗವೃತ್ತಿ** (ನಾ). ವಿದ್ವಾಂಸ, ಉಪಾಧ್ಯಾಯ ಇವರಿಗೆ ದಾನವಾಗಿ ಕೊಟ್ಟ ಭೂಮಿ, ಗದ್ದೆ ಇತ್ಯಾದಿ: ಓದಿಸಿ ಗುಣಶಾಸನದಿ ನಾಳ್ವಕ್ಕರಿಗವೃತ್ತಿ ಮತ್ತರಿರ್ಪ್ಪತ್ತೈದು ಮನೆಯೊಂದು (ಎಇ. XX, ೬–೨೮; 1012). [ಅಕ್ಕರಿಗ + ವೃತ್ತಿ]

**ಅಕ್ಕರು** 'ಅಟ್ಕುಱ್$_2$' ನೋ.

**ಅಕ್ಕರುಗಾರ್ತಿ** (ನಾ). ಪ್ರೀತಿಯುಳ್ಳವಳು: ದಕ್ಕಿದೆ ರಂಗಯೆಂಬಕ್ಕರುಗಾರ್ತಿಯ ಪಕ್ಕೆಯ ಪರಿಯೆಂದಿಗಪ್ಪುದೊ (ಶತಸಾಂ. ೨೪–೧೯).
[*ಅಕ್ಕರುಗಾಱ + –ಇತಿ$_1$]

**ಅಕ್ಕರೆ$_1$** 'ಅಟ್ಕುಱ್$_2$' ನೋ.

**ಅಕ್ಕರೆ$_2$** (ನಾ). ಆಚೆಯ ದಡ: ನಾನು ನಿನ್ನನ್ನು ಈ ನದಿಯಿಂದ ದಾಟಿಸುವೆನು. ಅಕ್ಕರೆಯಲ್ಲಿ (ಅತ್ತ [ತಥಾ] + ಕರೆ = ಅಕ್ಕರೆ) ಸೂರ್ಯದೇವನ ಅರಮನೆಗೆ ಹೋಗುವ ದಾರಿಯಿದೆ (ಪಂಚಾವ್ಯ. ೪೯).
[ಅ + ಕರೆ. ‖ ತಮಿ. ಅಕ್ಕರೈ; ಮಲ. ಅಕ್ಕರ; ತುಳು. ಅಕರ, ಅಕಾರ, ಅಕರ = ಅಲ್ಲಿ, ದೂರದಲ್ಲಿ]

**ಅಕ್ಕರೆಮಗ** (ನಾ). ಪ್ರೀತಿಪಾತ್ರನಾದ ಮಗ: ಅಜಾಮಿಳ ನಿನ್ನಕ್ಕರೆ ಮಗನೆ ಪೇಳೊ ಹೇ ಸ್ವಾಮಿ (ಪುರಂದ. ೧–೨–೨).
[ಅಕ್ಕರೆ (< ಅಟ್ಕುಱ್$_2$) + ಮಗ]

**ಅಕ್ಕಲಕರೆ**, ಅಕಲ್ಕಾರೆ, ಅಕ್ಕಳಕರೆ, ಆಕಲಕರೆ (ನಾ). ಒಂದು ಮೂಲಿಕೆ. **ಅಕಲ್ಕಾರೆ** (ವೈಔಗಿ. ೨೫–೪೬೩). **ಅಕ್ಕಳಕರೆ**: ಅಕ್ಕಳಕರೆ ಚೂರ್ಣ ಎರಡು ಚಿಟಿಕೆಯನ್ನು ಜೇನಿನಲ್ಲಿ ಕಲಸಿ ಬೆಳಿಗ್ಗೆ ನೆಕ್ಕಿಸುವುದು (ಮನೆಮ. ೯). **ಆಕಲಕರೆ** (ದಕ).
[? ← ಹಿಂ. ಅಕರಕರಾ; ಮರಾ. ಅಕಲ್‌ಕರಾ, ಅಕಲಾಕಾರಾ, ಅಕ್ಕಲ್‌ಕರಾ, ಅಕ್ಕಲ್‌ಕಾಢಾ, ಅಕ್ಕಲ್‌ಕಾರಾ. / ತಮಿ. ಅಕ್ಕರಕಾರಂ; ಮಲ. ಅಕ್ಕಲ್‌ಕರುವ, ಅಕ್ಕಿಲ್‌ಕಾರ; ತೆಲು. ಅಕ್ಕಲಕರ, ಅಕ್ಕಲಕಱ್ಱ ಇತ್ಯಾದಿ]

**ಅಕ್ಕಲಹುಷಾರಿ** (ನಾ). ಬುದ್ಧಿಯ ಪೂರ್ಣಸ್ವಸ್ಥತೆ: "ನನ್ನದು ನನ್ನ ವಾರಸದಾರದೂ ಇಲ್ಲವೆ ಮೃತ್ಯುಪತ್ರ ನಡೆಸುವವರದು ಹಕ್ಕು ಇಲ್ಲ" "ಅಕ್ಕಲಹುಷಾರಿಯಿಂದ ಆತ್ಮಸಂತೋಷದಿಂದ ಬರಕೊಟ್ಟದ್ದು" ಹೀಂಗೆಲ್ಲ ಶಬ್ದ ಇರಬೇಕು ಎಂದು ಹೇಳಿ ಆ ಪ್ರಕಾರ ಬರೆಸಿ ರಜಿಸ್ಟರ ಮಾಡಿಸಿದರು (ದಾಸಹು. ೬೩). [← ಮರಾ. ಅಕ್ಕಲ್‌ಹುಷಾರೀ]

**ಅಕ್ಕಲು$_1$** (ನಾ). ನಾಶ: ಇ ದರ್ಮ್ಮಕೆ ಅಕ್ಕಲ ಮಾಡಿದವರು ××× ಗಂಗೆಯ ತಡಿಯಲು ××× ಕೊಂದ ಪಾಪದಲ್ಲಿ ಹೋಹರು (ಎಕ. IX, ಚನ್ನಪ. ೭೬–೨೯; 1307).
[< ಅಟ್ಕು$_1$ + –ಅಲು (< –ಅಲ್)]

**ಅಕ್ಕಲು$_2$**, ಅಕಲು, ಅಖಲು (ನಾ). ಬುದ್ಧಿ; ವಿವೇಕ: ನೋಡಿದ್ಯಾ ಸರಳಾ, ಈ ಕಾಲೇಜ್ ಕಲ್ತ ಕುಮಾರಿಯ ಅಕ್ಕಲು (ಧನಂಜ. ೨೦). **ಅಕಲು**: ಕಟುಕಬುದ್ಧಿಗೆ ಶರಣುಮಾಡಿ ಕುಳಿತಿದೆ ಸದ್ಯ. ವಿಜ್ಞಾನಿಗಳ ಅಕಲು ಹೃದ್ಯ ವಿದ್ವರು ವಧ್ಯ (ಸೂರ್ಯಪಾ. ೪೪–೭). **ಅಖಲು**: ಹಾಗೆ ನಿಂತ ಮೆಟ್ಟಿಗೆ ಕೊಡಿ ಅನ್ನಲಿಕ್ಕೆ ನಮಗೇನು ಅಖಲಿಲ್ಲವೆ? (ಜಾರುದಾ. ೧೫೬).
[← ಅರ. ಪಾರ. ಹಿಂ. ಅಕ್ಲ್; ಮರಾ. ಅಕ್ಕಲ್. / ತುಳು. ಅಕಲು, ಅಕ್ಕಲು]

**ಅಕ್ಕವೆ$_1$** 'ಅಟ್ಕುವೆ' ನೋ.

**ಅಕ್ಕವೆ$_2$** (ನಾ). ಒಂದು ಊರಿನ ಹೆಸರು: ಬೂವಿಸೆಟ್ಟಿ ಪ ೧ ಏಚಿಸೆಟ್ಟಿ ಪ ೧ ಅಕ್ಕವೆಯ ಮಹದೇವಸೆಟ್ಟಿ ಪಾರಿಸ್ಸಸೆಟ್ಟಿ ಪ ೧ ನಿಡಿಯ ಮಲ್ಲಿಸೆಟ್ಟಿ ಪ ೧ (ಎಕ. II, ೨೩೫–೪೧; 1185). [?]

**ಅಕ್ಕವ್ವೆ** (ನಾ). ಒಬ್ಬ ಹೆಂಗಸಿನ ಹೆಸರು: ಜನನಿ ಜಗತ್ಖ್ಯಾತೆಯಕ್ಕವ್ವೆಯೆಂದೆಂದು (ಎಕ. II, ೩೨೭–೩೯; 1181). [ಅಕ್ಕ$_1$ + ಅವ್ವೆ]

**ಅಕ್ಕಸ$_1$** (ನಾ). (ಉಕ) ಕನಿಕರದಿಂದ ಕೂಡಿದ ಕಳವಳ: "ಹೂಂ, ನೀ ಹೇಳಿದಂಗ ಕೇಳಬೇಕು. ಹಾಳಾಗಿ ಹೋಗಬೇಕು." ತಾಯವ್ವ ಅಕ್ಕಸದ ದನಿಯಲ್ಲಿ ನುಡಿದಳು (ಖಾನಾನೀ. ೫೨); 'ನೀವು ಬಹಳೇ ಒಯ್ಯಾರದವರು ಸಾಹೇಬರು ದಾರೀ ಕಾಯುತ್ತಿರುವರು... ಹೀಗೆ ಮಾಡಿದರೆ ಸಾಹೇಬರು ಏನು ತಿಳಕೊಂಡಾರು?' ವನಿತೆಯು ಮೆಲ್ಲನೆ, ಆದರೂ ಅಕ್ಕಸದಿಂದ ನುಡಿದಳು (ಸ್ಕೂಲಮಿ. ೧೨೯).
[?. / ತೆಲು. ಅಕ್ಕಸಮು = ದಯೆ, ಕನಿಕರ]

**ಅಕ್ಕಸ$_2$** (ನಾ). (ಉಕ) ರೋಷ; ಆಕ್ರೋಶ: ನಕ್ಕು ನುಡಿವರ ಮುಂದೆ ಮುಕ್ಕರಿಸಿದರು ತಾಳು, ಅಕ್ಕಸವ ಮಾಡುವರ ಅಕ್ಕರದಿ ತಾಳು (ಜಗದಾ. ೧೦೨). ಮೊಗ್ಗಾವಿಯು ಇಂಥ ಮಳೆಯನ್ನು ಕಂಡಿದ್ದಿಲ್ಲ. ಅಬ್ಬಾ! ಅದರ ಅಕ್ಕಸವೆಷ್ಟು, ಒಗರೆಷ್ಟು ಹಟವೆಷ್ಟು! (ಸಮಜೀ. ೧೭೦). ನಾನೇ ಈ ಸ್ಥಳ ಬಿಟ್ಟು ಹೊರಟುಹೋಗುವೆನು, ಎಂದು ಅಕ್ಕಸದಿಂದ ನುಡಿಯುತ್ತ ತಾನು ಕುಳಿತ ಸ್ಥಳದಿಂದ ಚಟ್ಟನೆ ಎದ್ದು ಹೊರಟವನು (ಶೈವಸು. ೩೧೫).
[ಪ್ರಾ. ಅಕ್ಕೋಸ, ಅಕೋಸ. (< ಸಂ. ಆಕ್ರೋಶ); ಪಾಲಿ. ಅಕ್ಕೋಸ. / ಹಿಂ. ಮರಾ. ಅಕಸ್; ತೆಲು. ಅಕ್ಕಸಮು, ಅಕ್ಕಸು, ಅಕ್ಕಸ್ಸು]

**ಅಕ್ಕಸಗಾಱ** (ನಾ). ಪ್ರೀತಿಸುವವನು (ಉಕ. ೬).
[ಅಕ್ಕಸ$_1$ + –ಗಾಱ (< –ಕಾಱ)]

**ಅಕ್ಕಸತನ** (ನಾ). ಆಕ್ರೋಶದ ಸ್ವಭಾವ: ನೋಡಿದಿರ್ಯಾ, ಜೀವವ್ವಾ! ಹೆಂಗಸಿನ ಅಕ್ಕಸತನಾ! ಹೆಣ್ಣು ಅನಬೇಕೋ ಹುಲಿ ಅನಬೇಕೋ ಇವಕ್ಕ (ನಡುಮು. ೭೮); ಇಂಥಾವೆಲ್ಲಾ ಅಕ್ಕಸತನಾ ಬಿಟ್ಟುಬಿಡೋ ಮಾರಾಯ (ವೈನಿ. ೩೧೯). [ಅಕ್ಕಸ$_2$ + –ತನ]

**ಅಕ್ಕಸಬಡು** (ಕ್ರಿ). (ಉಕ) ಕಳಕಳಿ ಮಾಡು: ಸದಾನಂದ ಹೆಂಡತಿ ಉಡಲಿ ತೊಡಲಿ ಎಂದು ಎಷ್ಟು ಅಕ್ಕಸಬಡುವನು (ಪ್ರತಿಸ. ೧೬).
[ಅಕ್ಕಸ$_1$ + ಪಡು$_1$]

**ಅಕ್ಕಸಮಾಡು** (ಕ್ರಿ). ಆಕ್ರೋಶ ಮಾಡು: ಆಕೆ ಅತ್ತು ಕರೆದು ಅಕ್ಕಸ

ಮಾಡಿ 'ಹೊಲ್ಯಾರಮನಿಗೆ ಹೆಣ್ಣು ಕೊಡ್ಲಾಕ ನಾ ಎಂದಾದರೂ ಒಪಿಗೊಂಡೀನೇನ್ರೀ' ಎಂದು ಕೇಳಿದಳು (ಮಾತನಾ. ೧೨).
[ಅಕ್ಕಸ$_2$ + ಮಾಡು$_1$]

**ಅಕ್ಕಸಾಲ** 'ಅಕ್ಕಸಾಲೆ' ನೋ.

**ಅಕ್ಕಸಾಲಗಿತ್ತಿ** (ನಾ). = ಅಕ್ಕಸಾಲಿತಿ.
[ಅಕ್ಕಸಾಲ (< ಅಕ್ಕಸಾಲೆ) + -ಗಿತ್ತಿ]

**ಅಕ್ಕಸಾಲಿ** 'ಅಕ್ಕಸಾಲೆ' ನೋ.

**ಅಕ್ಕಸಾಲಿಕೆ,** ಅಕಸಾಲಿಕೆ (ನಾ). ಅಕ್ಕಸಾಲೆಯ ಕೆಲಸ, —ವೃತ್ತಿ. **ಅಕಸಾಲಿಕೆ :** ಹಿರಿಯೂರ ಬಡಿಗೆ ಕಂಮಟಿಕೆ ಅಕಸಾಲಿಕೆ . . . ಯೇನು ಳುದನು ಸರ್ವಮಾನ್ಯವಾಗಿ ಕೊಟೆಲು (ಎಕ. IX (S), ಕಾನಕಾ. ೬೫–೧೬ ; 1381). [ಅಕ್ಕಸಾಲೆ + -ಇಕೆ]

**ಅಕ್ಕಸಾಲಿಗ,** ಅಕಸಾಲಿಗ (ನಾ). = ಅಕ್ಕಸಾಲೆ ೧. **ಅಕಸಾಲಿಗ :** ಒಂದು ದಿನ ನಮ್ಮೂರ ಅಕಸಾಲಿಗನ ಮನೆಯಲ್ಲಿ ಜಗಳವಾಗುತ್ತಿತ್ತು (ಹುಟ್ಟಹ. ೬೪). [ಅಕ್ಕಸಾಲೆ + -ಇಗ]

**ಅಕ್ಕಸಾಲಿಗಿತ್ತಿ** (ನಾ). = ಅಕ್ಕಸಾಲಿತಿ. [ಅಕ್ಕಸಾಲಿಗ + -ಇತ್ತಿ]

**ಅಕ್ಕಸಾಲಿಗೆಯ[ಯಿ]** (ನಾ). ಅಕ್ಕಸಾಲೆಗೆ ಸೇರಿದ ಹೊಲ, -ಗದ್ದೆ: ಮೂಡಲು ತಗ್ಗಿಗೆ ಹೋದ ಹೆಬ್ಬಟ್ಟೆ ತೆಂಕಲು ಹಳ್ಳ ಪಡುವಲಕ್ಕಸಾಲಿಗೆಯ[ಯಿ] ಬಡಗಲು ಹೆಬ್ಬಳ್ಳ (ಕಇ. I, ೩೦–೪೩ ; 1222).
[ಅಕ್ಕಸಾಲಿ (< ಅಕ್ಕಸಾಲೆ) + ಕೆಯ್$_2$ (< ಕೆಯ್ಯ್$_3$)]

**ಅಕ್ಕಸಾಲಿತಿ,** ಅಕ್ಕಸಾಲ್ತಿ (ನಾ). ಅಕ್ಕಸಾಲೆ ಹೆಂಗಸು : "ಇತಿಗೆ . . . ಅದಂತಮಲ್ಲದಲ್ಲಿಯುಂ – ಅಕ್ಕಸಾಲಿತಿ, ಒಕ್ಕಲಿತಿ" (ಶಮದ. ೨೦೮ ಪ್ರಯೋ). **ಅಕ್ಕಸಾಲ್ತಿ :** ಅಕ್ಕಸಾಲ್ತಿ ಬಂಗಾರಿಯ ಮನೆಗೆ ಬಂದು ಕಾಡುತ್ತಿದ್ದರಂತೆ (ಸರಸ. ೧೦). [ಅಕ್ಕಸಾಲೆ + -ಇತಿ$_1$ (< -ಇತ್ತಿ)]

**ಅಕ್ಕಸಾಲೆ,** ಅಕಸಾಲ, ಅಕಸಾಲೆ, ಅಕ್ಕಸಾಲ, ಅಕ್ಕಸಾಲಿ, ಅಗಸಾಲ, ಅಗಸಾಲೆ, ಅರ್ಕಸಾಲೆ (ನಾ). ೧. ಚಿನ್ನ ಬೆಳ್ಳಿ ಮುಂತಾದವುಗಳ ಕೆಲಸ ಮಾಡುವವನು: ಎಗವುಣ್ಣನ ಅಕ್ಕಸಾಲೆ ಕೇತಂ (ಮೈಆರಿ. ೧೯೪೩, ೧೧–೧೦ ; 1050) ; ಮೂಡಲಕ್ಕಸಾಲೆ ನೇಮೋಜನ ಮನೆಯ ಹತ್ತಿ ಬಂದ ಬೀದಿಯೇ ಮೇರೆ (ಸೌಇಇ. XI–ii, ೧೪೦–೩೬ ; 1097) ; ಅಕ್ಕಸಾಲೆಯವಗೆ ಬಂಗಾರವಂ . . . ಕೊಟ್ಟೊಡವಂ ಬಂಗಾರಮಂ ಕುಡದೆಡೆಯಾಡಿಸಿದನೆನೆ (ಧರ್ಮಪ. ೬–೧೫ ವ) ; ಪದಕಮಕ್ಕಸಾಲೆಯಿಂ ಮಾಡಲ್ಪಟ್ಟುದು (ಶಮದ. ೧೨೮ ಪ್ರಯೋ) ; ಕೊಳುವ ಕೊಡುವೆಡೆಯಲ್ಲಿಯಱಿಯದೆ ಮೊಳಿಗಳಂ ಹೊಱನೂಂಕಿವೊಳ್ಳಿಹ ಮೊಳೆಯ ನೊರೆಗೊಂಬಕ್ಕಸಾಲೆಯು ತಾನೆ ಕೇಳರಸ (ಬಸವು. ೨೧–೩೦) ; ವರಕರಸ್ಥಲದ ವೀರಣ್ಣೊಡೆಯರೆಂಬುವರ ಕರಕಮಲಸಂಜಾತನಕ್ಕಸಾಲೆಯ ನಾಗನಿರುತಲೊಂದಿನದಲ್ಲಿ (ಚಿಬಪು. ೬೩–೭); ಅಕ್ಕಸಾಲೆ ಕಿವಿ ಚುಚ್ಚಿದರೆ ನೊಚ್ಚಗೆ (ಗಾದೆ). ೨. ಅಕ್ಕಸಾಲೆ ಕೆಲಸಮಾಡುವ ಸ್ಥಳ (ಶಿ). **ಅಕಸಾಲ** (ಶಿ). **ಅಕಸಾಲೆ :** ೧. ಶ್ರೀ ನಾರಸಿಂಹ ದೇವರು ಅಕಸಾಲೆ ಕಾಳಜೀಗೆ ಕೊಟ್ಟ ಕೊಡಗೆ (ಎಕ. XIV, ಮಳವ. ೧೨೮–೧ ; 1259) ; ನಾಲ್ಕು ನಾಡ ಬಡಗಿ ಕಂಮಾರ ಅಕಸಾಲೆ (ಎಕ. IX, ಮಾಗಡಿ. ೧೫–೨೭ ; 1315). **ಅಕ್ಕಸಾಲ** (ಶಿ). **ಅಕ್ಕಸಾಲಿ :** ೧. ಬಡಗಲು ಅಕ್ಕಸಾಲಿ ಕೇತನ ಭೂಮಿ (ಬೊಂಕಶಾ. ೧೯೩೬, ಲಕ್ಷ್ಮೇಶ್ವ. ೩೪–೨೫ ; ?). **ಅಗಸಾಲ** (ಶಿ). **ಅಗಸಾಲೆ :** ೧. "ರುಕ್ಮಕಾರಕ = ಅಗಸಾಲೆಯರವ" (ಗಂಗಾಮು). **ಅರ್ಕಸಾಲೆ:** ೧. ಅಲುಗೋಡ ಅರ್ಕಸಾಲೆ ಬಳಚಾರಿ ದೊಡಯಚರಿಯ ಮಗ ಕೆತಚಾರಿ ಬೊಗಾಚಾರಿ ಮಾಡಿಸಿಕೊಟ್ಟ ದೇವಾಲಯ (ಮೈಆರಿ. ೧೯೩೯, ೫೨–೫ ; 1278). ℙ ಕೆಲವು ಸಂಸ್ಕೃತ ಶಾಸನಗಳಲ್ಲಿ 'ಅಕ್ಷಶಾಲಿನ್', 'ಅಕ್ಷಸಾಲಿನ್', 'ಅಖಸಾಲಿನ್' ಎಂಬ ಶಬ್ದರೂಪಗಳು ದೊರೆಯುತ್ತವೆ. **ಅಕ್ಷಶಾಲಿನ್ :** ಉತ್ಕೀರ್ಣಂ ಚಾಕ್ಷಶಾಲಿನಾ ಶ್ರೀ ಸಾಮನ್ತ ಋಣ್ಡಿಮಲೇಪಾ (ಎಇ. XVIII, ೩೧೩–೩೧; 808). **ಅಕ್ಷಸಾಲಿನ್ :** ಉತ್ಕೀರ್ಣಂ ಚಾಕ್ಷಸಾ(ಶಾ)ಲಿ ಕುಮಾರಚನ್ದ್ರೇಣ ತಾಮ್ರಶಾಸನಮಿತಿ (ಎಇ. XVIII, ೨೯೮–೨೯ ; ಸು. 1100) ; ಉತ್ಕೀರ್ಣಂ ಅಕ್ಷಸಾಲಿನಾ ನಪೇನ (ಎಇ. XXIX, ೧೯೪ ; ಸು. 1100). **ಅಖಸಾಲಿನ್ :** ಉತ್ಕೀರ್ಣಂ ಚಾಖ(ಕ್ಷ)ಶಾಲಿಖಣ್ಡಿಮಲ್ಲೇನೇತಿ (ಎಇ. XXX, ೨೮–೩೦ ; 803).

[ಸಂ. ಅಕ್ಷಶಾಲಿನ್ ?. / ತಮಿ. ಅಕ್ಕಚಾಲೈ = ಹೊನ್ನು ಮೊದಲಾದ ಲೋಹದ ಕೆಲಸವನ್ನು ಮಾಡುವ ಎಡೆ; ಟಂಕಸಾಲೆ; ಅಕ್ಕಚಾಲೈಯರ್ = ಅಕ್ಕಸಾಲೆಯವರು ; ತೆಲು. ಅಗಸಾಲಿ, ಅಗಸಾಲೆ ; ಮರಾ. ಅಕಸಾಳೀ. ℙ ಸಂ. ಅರ್ಕ = ತಾಮ್ರ ; ಪ್ರಾ. ಅಕ್ಕ = ಚಿನ್ನ]

**ಅಕ್ಕಸಾಲ್ತಿ** 'ಅಕ್ಕಸಾಲಿತಿ' ನೋ.

**ಅಕ್ಕಳ್** 'ಅಕ್ಕ$_1$' ನೋ.

**ಅಕ್ಕಳಕರೆ** 'ಅಕ್ಕಲಕರೆ' ನೋ.

**ಅಕ್ಕಳಿಕೆ$_1$** (ನಾ). ಅಗ್ಗಳಿಕೆ; ಹೆಚ್ಚಿಗೆ : ಅರ್ಕನುದಗ್ರತೇಜದಕ್ಕಳಿಕೆಯ ಪೆಂಪುಮಂ ತಳೆದು (ಸೌಇಇ. IX–i, ೨೦೫–೯ ; 1122). [? + -ಇಕೆ]

**ಅಕ್ಕಳಿಕೆ$_2$** 'ಅಕ್ಕುಳಿಕೆ' ನೋ.

**ಅಕ್ಕಳಿಸು** 'ಅಕ್ಕುಳಿಸು' ನೋ.

**ಅಕ್ಕಳೆ$_1$** (ನಾ). ಜಿರಳೆ (ಕರಾ). [ದೇ. ?. ‖ ತುಳು. ಎಕ್ಕಲೆ, ಎಕ್ಕಲು]

**ಅಕ್ಕಳೆ$_2$** (ನಾ). ಹೊಲಗದ್ದೆಗಳ ಬೇಲಿಯಲ್ಲಿ ಮನುಷ್ಯರು ಮಾತ್ರ ಒಬ್ಬೊಬ್ಬರಾಗಿ ದಾಟಿ ಹೋಗಲಾಗುವಂತೆಯೂ, ದನಕರುಗಳು ನುಸಿಯಲಾಗದಂತೆಯೂ Y ಆಕಾರದಲ್ಲಿ ಕವೆಗೋಲು ನೆಟ್ಟು ಮಾಡಿರುವ ಬಾಗಿಲು ; ಕಡಕಲು. [?]

**ಅಕ್ಕಳ್ಮಗ** (ನಾ). ಅಕ್ಕನ ಮಗ : ೧. ತ್ರಿಬುವನ ಬುಜಗಂನಕ್ಕಳ್ಮಗಜ್ಗಿ [= ತ್ರಿಭುವನ ಭುಜಂಗನ (?) ಅಕ್ಕನ ಮಗನಿಗೆ] (ಎಕ. X, ಕೋಲಾರ. ೨೩–೫ ; 900). [ಅಕ್ಕಳ್ (< ಅಕ್ಕ$_1$) + ಮಗ]

**ಅಕ್ಕಳ್ಳು** (ನಾ). ಒಂದು ಜಾತಿಯ ಅಕ್ಕಿ. [← ತೆಲು. ಅಕ್ಕುಳ್ಲು]

**ಅಕ್ಕಱ್** 'ಅಟ್ಕಱ್$_2$' ನೋ.

**ಅಕ್ಕಱ** 'ಅಟ್ಕಱ್$_2$' ನೋ.

**ಅಕ್ಕಱು** 'ಅಟ್ಕಱ್$_2$' ನೋ.

**ಅಕ್ಕಱುಗುಟುಕು** (ನಾ). ಪ್ರೀತಿಯಿಂದ ಊಡಿಸುವ ಗುಟುಕು : ವಿಹಂಗಮುಂಗಳಕ್ಕಱುಗುಟುಕಂ ಕೊಳಲ್ಕಿರದೆ ಪಾಱಿದುವೆಣ್ದೆಸೆಗಂ ಪ್ರಭಾತಕಾಲದೊಳ್ (ಶಾಂತೀಶ್ವ. ೧೧–೯೬).
[ಅಕ್ಕಱು (< ಅಟ್ಕಱ್$_2$) + ಗುಟುಕು]

**ಅಕ್ಕಱುಗೊಳ್** (ಕ್ರಿ). ಪ್ರೀತಿಹೊಂದು : ಚೊಕ್ಕಳವೆಳಗಾವರಿಸುವವನಿ ತಳವಕ್ಕಱುಗೊಂಬ ವಿರಹಿಗಳ್ ನೆಯ್ದಿಲ ತಕ್ಕನುದಯಗಿರಿಶಿಖರಮ ನೇಱಲ್ ಪಿರಿದುಂ ಸೊಗಸಿದುದು (ಜಯಕಾ. ೧೧–೫೯).
[ಅಕ್ಕಱು (< ಅಟ್ಕಱ್$_2$) + ಕೊಳ್$_1$]

**ಅಕ್ಕಱುಪಲ್ಲಿ** (ನಾ). ಒಂದು ಊರಿನ ಹೆಸರು : ಸ್ವಸ್ತಿ ಶ್ರೀ ಅಜ್ಜಗಗವುಣ್ಣ × × × ಅಕ್ಕಱುಪಲ್ಲಿಯ ರಾಜ್ಜಯ ನೂರೆಂ[ಱಿಂ]ಟ್ಟೆದುಮ (ಎಕ. XII, ತುಮಕೂ. ೧೫ ; ?). [ಅಕ್ಕಱು (< ಅಟ್ಕಱ್$_2$ ?) + ಪಲ್ಲಿ$_2$]

**ಅಕ್ಕಱೆ** 'ಅಟ್ಕಱ್$_2$' ನೋ.

**ಅಕ್ಕಾಂತಗೈ** (ಕ್ರಿ). ಆಕ್ರಾಂತನಾಗುವಂತೆ ಮಾಡು; ಮೇಲೆ ಬಿದ್ದು ವಶಪಡಿಸಿಕೊ : ಉಷ್ಣಾನಲದ ಚಂಡಭಾಸ್ಕರ ಸದೃಶಮೆನಿಸೆ ಅಕ್ಕಾಂತಗೈದಮುರವೈರಿಗಳನುದ್ಧತಪರಾಕ್ರಮಿಗಳ (ವೆಂಕಾರಾ. ೬–೫೭–೩೨).
[ಅಕ್ಕಾಂತ$_0$ (< ಸಂ. ಆಕ್ರಾಂತ) + ಗೈ (< ಗೆಯ್$_1$)]

**ಅಕ್ಕಾಜಿ** (ನಾ). ಅಕ್ಕನನ್ನು ಗೌರವದಿಂದ ಅಥವಾ ಪ್ರೀತಿಯಿಂದ ಕರೆಯುವಾಗ ಉಪಯೋಗಿಸುವ ಮಾತು: ಎನ್ನೆರ್ದೆಗೋಟೆಯ ಕೋಳುಗೊಂಡುದಕ್ಕಾಜಿ ನಿನ್ನಾಣೆ (ಕುರಾಸಾಂ. ೨೩–೨೨) ; ಅಕ್ಕಾಜಿ ನೀ ನೋಡು ತಾ ನೋಡು ತಂಗಿ ನೋಡಕ್ಕಜಿಂದರಸನ ಮೊಗವಾ (ಭರಚ. ೪–೧೦) ; ತಾಯೆ ಅಕ್ಕಾಜಿಗಳಿರಾ (ಮುದ್ರಾಮಂ. ೧೫೬). ℙ ಅಣ್ಣಾಜಿ, ಭಾವಾಜಿ, ಮಾವಾಜಿ ಇತ್ಯಾದಿ ಹೋ.

[< ಅಕ್ಕ$_1$ + –ಜಿ (< ಜೀಯ)]

**ಅಕ್ಕಾಡಿಸು** 'ಅಟ್ಟಾಡಿಸು' ನೋ.

**ಅಕ್ಕಾಡು$_1$** 'ಅಟ್ಟಾಡು$_1$' ನೋ.

**ಅಕ್ಕಾಡು$_2$** 'ಅಟ್ಟಾಡು$_2$' ನೋ.

**ಅಕ್ಕಾದೇವಿ** (ನಾ). ಒಬ್ಬಾಕೆಯ ಹೆಸರು: ರಾ ರಾ ಜಿ ಸಿ ದ ಳ ಖಿ ಳ ವಿ ದ್ಯಾ ರ್ತ್ಥಿ ರ್ ದೀನಾವಳೀನಂದಿನಿಯಕ್ಕಾದೇವಿ ಧರ್ಮಾಗ್ರಣಿ (ಇಅ. XVIII, ೨೬೩–೨೧ ; 994). [< ಅಕ್ಕ$_1$ + ದೇವಿ]

**ಅಕ್ಕಾರು** (ಕ್ರಿ). (ದಕ) ಅಳುವಿನಿಂದ ಗಂಟಲು ಒಣಗು.

[ಅಕ್ಕೆ$_1$ (< ಅಟ್ಟೆ$_1$) + ಆರು$_1$ (< ಆಱು$_1$)]

**ಅಕ್ಕಾಳೆ, ಅಂಕಾಳೆ, ಅಕಾಳಿ** (ನಾ). ತುಪ್ಪದಲ್ಲಿ ಹುರಿದ ಅಕ್ಕಿ, ಹಾಲು, ಸಕ್ಕರೆ ಮೊದಲಾದವನ್ನೆಲ್ಲ ಹಾಕಿ ಮಾಡಿದ ಗಟ್ಟಿ ಪಾಯಸ; ಕ್ಷೀರಾನ್ನ: ಪಿಟ್ಟು ೫೧ ಅಕ್ಕಾಳೆ ಮಡೆ ಹರಿವಾಣ ೪ ಅಡಕೆ ೫೦ ಎಲೆ ೧೦೦(ಸೌಇಇ. IX–ii, ೪೮೯–೪೧; 1513); ಲಕ್ಷುಮಿದೇವಿಯರಿಗೆ ಆರೋಗಣೆಗೆ ಅಕ್ಕಾಳೆಯ ಪಾಯಸದ ಹರಿವಾಣ ೧ ಕೆ (ಎಕ. XIV, ಶ್ರೀರಂಗ. ೨೬೩–೭ ; 1527). **ಅಂಕಾಳೆ**: ನಯಿವೇದ್ಯಕೆ ದಿ ೧ ಕಂ ಹರಿವಾಣ ೫ ಅ(ಂ)ಕ್ಕಾಳೆ ಮಂಡೆ ೧ ಅಪ್ಪ ಪಡಿ ೧ (ಸೌಇಇ. IV, ೨೮೩–೫ ; 1514). **ಅಕಾಳಿ**: ಅಪ್ಪ ಪ್ರಸಾದ ಹದಿಮೂರೂ ಅಕಾಳಿಯ ಪ್ರಸಾದ ××× ಧಿವನೂ ನಮಗೆ . . . ಯಿಕ್ಕುವ ಹಾಗೆ ಕಟ್ಟಳೆಯ ಮಾಡಿದೆವಾಗಿ (ಸೌಇಇ. IX–i, ೪೬೨–೩ ; 1467).

[ ?. / **ತಮಿ.** ಅಕ್ಕಾರಡಲೈ, ಅಕ್ಕಾರವಡಿಚಿಲ್ = ಹಾಲು ಸಕ್ಕರೆ ಸೇರಿಸಿ ಮಾಡಿದ ಪರಮಾನ್ನ]

**ಅಕ್ಕಿ$_1$** (ನಾ). ೧. ಬತ್ತದ ಹೊಟ್ಟು ತೆಗೆದ ಮೇಲೆ ಉಳಿಯುವ ಕಾಳು: ಕಳಶಮುಂ ಕನ್ನಡಿಯುಂ ಪೂವುಮಕ್ಕಿಯುಂ ಮಾದುಫಲಮುಂ (ಪಡ್ಡಾರಾ. ೭೮–೭) ; ಪನ್ನಿರ್ಕಂಡುಗದಕ್ಕಿಯ ಕೂಟುಮ[ಂ] (ಪಂಪಭಾ. ೩–೨೫ ವ) ; ಜಲವುಕ್ಕುವುದಕ್ಕೆ ಮುನ್ನವೆ ಅಕ್ಕಿ ಬೆಂದಿತ್ತು (ಮೋಳಿಮಾ. ೮೦೧) ; ಅಕ್ಕಿಯ ಮೇಲೆ ಆಸೆ ನಂಟರ ಮೇಲೆ ಪ್ರೀತಿ (ಗಾದೆ). ℙ ಸಣ್ಣಕ್ಕಿ, ದಪ್ಪಕ್ಕಿ, ಕೇಸಕ್ಕಿ, ಬೆಣತಕ್ಕಿ, ನೆಲ್ಲಕ್ಕಿ, ಗಂಧಸಾಲೆಯಕ್ಕಿ, ಜೀರಾಸಣ್ಣಕ್ಕಿ, ದೇವಮಲ್ಲಿಗೆಯಕ್ಕಿ, ಮರಳಕಾಂತಿಯಕ್ಕಿ ಇತ್ಯಾದಿ ಹೋ. ೨. ಅಕ್ಕಿಯಂತಿರುವ ಕಾಳು: ವೇಣುವಿಗೆ ಅಕ್ಕಿ ಹುಟ್ಟಿದ[ರೆ] ಮತ್ತೆ ಬಾಳುವೆಯುಂಟೆ? (ಮಾದೂಳ. ೨೧) ; ℙ ಬಿದಿರಕ್ಕಿ, ನವಣೆಯಕ್ಕಿ, ಸಾವೆಯಕ್ಕಿ, ರಾಜಾನ್ನದಕ್ಕಿ, ಹಾರಕದಕ್ಕಿ, ಏಲಕ್ಕಿ ಇತ್ಯಾದಿ ಹೋ. ೩. ರಂಗೋಲಿಯ ಹಸೆ ಬರೆಯುವಾಗ ಇಡುವ ಅಕ್ಕಿಯ ಆಕಾರದ ಚುಕ್ಕಿ: ಪಸುರ್ಪೊನ್ನ ಜಗಲಿ ಪಚ್ಚೆಯ ಪಸುರ್ವಂದರ್ ಮುತ್ತಿನಕ್ಕಿ ನೀಲದ ಜಾಗಂ (ಕಾವ್ಯಾವ. ೨೩೬). ೪. ಮಂತ್ರಾಕ್ಷತೆ: ಜಿನನಂ ಪೂಜಿಸಿದಕ್ಕಿ ಮಾಲೆ ಸೊಡರ್ಗಳ್ (ಲೀಲಾವ. ೩–೭೭).

ಅಕ್ಕಿಯ ಭೋಜ = ಅಕ್ಕಿಬೋಜ : ಗೌಡರ ಮನೆಯಲ್ಲಿ ಜವಾನನಿಗೆ ಔತಣದ ಊಟವಾಗುತ್ತಿತ್ತು. ಅವನಿಗೆ ಕುಡಿಯುವ ಚಟವಿದ್ದರೆ ಬಗನೆ ಕಳ್ಳನ್ನು ಅಥವಾ ಅಕ್ಕಿಯ ಭೋಜವನ್ನು ಕುಡಿಸುತ್ತಿದ್ದರು (ಪಂಜಪಂ. ೪೭). **ತಲೆಗೆ ಅಕ್ಕಿಕಾಣಿಸು** = ಮದುವೆ ಮಾಡು; ಅಕ್ಷತಾರೋಪಣ ಮಾಡಿಸು: "ಮಗು, ತಂಗಿಗೆ ಹದಿನೇಳು ವರ್ಷ ತುಂಬಿತು. ಬಸಪ್ಪಯ್ಯನ ಮನೆ ಒಳ್ಳೆಯದಲ್ಲ. ಆದಷ್ಟು ಬೇಗನೆ ಅವಳ ತಲೆಗೆ ಅಕ್ಕಿಕಾಣಿಸುವ ಯೋಜನೆ ನನಗೆ" (ಮುಸಕೂ. ೯). **ಬಾಯಿಗೆ ಅಕ್ಕಿಕಾಳು ಹಾಕಿಕೊಂಡಿರು** = ಏನು ಕೇಡಾಗುವುದೋ ಎಂದು ಹೆದರಿ ನಡುಗುತ್ತಿರು, —ಆತಂಕಪಟ್ಟುಕೊಳ್ಳುತ್ತಿರು (ಹೆಣದ ಬಾಯಿಗೆ ಅಕ್ಕಿಯನ್ನು ಹಾಕುವ ಸಂಪ್ರದಾಯದಿಂದ ಈ ಅರ್ಥ ಬಂದಿರಬಹುದು).

[**ದೇ.** < *ಅರ್ಕ್. ‖ **ತಮಿ.** ಅರಿ, ಅರಿಚಿ ; **ಮಲ. ತುಳು.** ಅರಿ ; **ಕೊಡ.** ಅರಿ, ಅಕ್ಕಿ ; **ತೆಲು.** ಅಕ್ಕುಳ್ಲು]

**ಅಕ್ಕಿ$_2$** (ನಾ). ಕಣ್ಣು (ಕಿ). [**ಸಂ.** ಅಕ್ಷಿ]

**ಅಕ್ಕಿಗಂಜಿ** (ನಾ). ೧. ಅಕ್ಕಿಯನ್ನು ನೀರಿನಲ್ಲಿ ಕುದಿಸಿದಾಗ ಮೇಲೆ ನಿಲ್ಲುವ ಮಂದವಾದ ದ್ರವ. ೨. ಅಕ್ಕಿಯನ್ನಾಗಲಿ ಅಕ್ಕಿಯ ತರಿಯನ್ನಾಗಲಿ ಬೇಯಿಸಿ ಮಾಡಿದ ಅಂಬಲಿ ಅಥವಾ ಪಾಯಸ.

[ಅಕ್ಕಿ$_1$ + ಗಂಜಿ$_1$. ‖ **ತುಳು.** ಅರ್ಗಂಜಿ]

**ಅಕ್ಕಿಗಚ್ಚು** 'ಅಕ್ಕಿಗರ್ಚು$_2$' ನೋ.

**ಅಕ್ಕಿಗರ್ಚು$_1$** (ಕ್ರಿ). ಅಕ್ಕಿಯನ್ನು ತೊಳೆ: ಎಸರನಿಡುವಕ್ಕಿಗರ್ಚುವ ಬೆಸನಂ (ಗದಾಯು. ೭–೩೭). [ಅಕ್ಕಿ$_1$ + ಕರ್ಚು$_2$]

**ಅಕ್ಕಿಗರ್ಚು$_2$, ಅಕ್ಕಚ್ಚು, ಅಕ್ಕಿಗಚ್ಚು** (ನಾ). ೧. ಅಕ್ಕಿಯನ್ನು ತೊಳೆದ ನೀರು. ೨. ಕಲಗಚ್ಚು. ೩. ಹುಳಿಗಂಜಿ. ೪. = ಅಕ್ಕಿಗಂಜಿ ೧. "ಅಭಿಷವಂ ಅವಂತಿಸೋಮಂ ಶುಷೋದಕಂ ಶುಕ್ಲಂ ಈ ೪ ಅಕ್ಕಿಗರ್ಚು" (ಹಲಾಯು. ೫೩–೧೬೩) ; "ಅಭಿಷವಮವಂತಿ ಶುಕ್ಲಂ ಸೋಮಮೆನಲಕ್ಕಿಗರ್ಚೆನಿಕ್ಕುಂ" (ಮಂಗರಾ. ೬೪–೧). **ಅಕ್ಕಚ್ಚು**: ೨. ಎತ್ತುಗಳಿಗೆ ಮುಂಜಾನೆ ನೀರನ್ನೂ ಅಕ್ಕಚ್ಚನ್ನೂ ಕುಡಿಯಲು ಇತ್ತೆನು (ಈಕಥೆ. ೨೩) ; ದನಗಳು ತಮಗೆ 'ಅಕ್ಕಚ್ಚು' ಬರಲಿ ಎಂದು ರಾಗಮಾಡುತ್ತವೆ (ಮರಮ. ೭). **ಅಕ್ಕಿಗಚ್ಚು**: ೧. ಮಾವಿನ ಬಿತ್ತೆಳೆಯ ಕಱಿಕೆ ಶರ್ಕರೆಯಿನಿತಂ ಭಾವಿಸುವುದಕ್ಕಿಗಚ್ಚಂ (ಕಲ್ಯಾಕಾ. ೫–೧೩) ; ಅಕ್ಕಿಗಚ್ಚಂ ಬಸಿದು ತಿಳಿನೀರನೊಲೆಗೆತ್ತಿ ಕಾಸಿ (ಸೂಪಶಾ. ೩–೨). [< ಅಕ್ಕಿಗರ್ಚು$_1$]

**ಅಕ್ಕಿಗುಟ್ಟು** (ಕ್ರಿ). ಅಕ್ಕಿಯನ್ನು ಸಿದ್ಧಪಡಿಸುವುದಕ್ಕಾಗಿ ಬತ್ತವನ್ನು ಕುಟ್ಟು: ಸಾರಿಸುವೆಡೆಯೊಳಮಕ್ಕಿಗುಟ್ಟುವೆಡೆಯೊಳ್ (ಸಮುಪ. ೫–೮).

[ಅಕ್ಕಿ$_1$ + ಕುಟ್ಟು$_1$]

**ಅಕ್ಕಿಗುಡು** (ಕ್ರಿ). ಅಕ್ಕಿಯನ್ನು ಕೊಡು: ಅಕ್ಕಿಗೊಟ್ಟು ಮಡಗೂಟುಣ್ಬಂದಮುಂ ಪೋಲದೇ (ಆದಿಪು. ೧೪–೩೨).

[ಅಕ್ಕಿ$_1$ + ಕುಡು$_1$ (< ಕೊಡು$_1$)]

**ಅಕ್ಕಿಗೆಡ್ಡೆ** (ನಾ). ಒಂದು ಮೂಲಿಕೆ; ಭದ್ರಾಕಂದ (ಒಷಧಿ. ೧೧೦).

[ಅಕ್ಕಿ$_1$ + ಗೆಡ್ಡೆ]

**ಅಕ್ಕಿತರಿ** (ನಾ). ಅಕ್ಕಿಯನ್ನು ಒಡೆದು ಮಾಡಿದ ತರಿ, —ನುಚ್ಚು: ದಿನವೂ ರಾತ್ರಿ ಸಾವಿತ್ರಿ ಉಪವಾಸ ಮಾಡಿದರೆ ಮೈಗಾಗುವುದಿಲ್ಲವೆಂದು ಸರೋಜ ಅಕ್ಕಿತರಿ ಹಾಕಿ ಉಪ್ಪಿಟ್ಟು ಮಾಡಿಟ್ಟಳು (ತಾಯಿಕ. ೨೩೦).

[ಅಕ್ಕಿ$_1$ + ತರಿ$_2$ (< ತಱಿ$_3$)]

**ಅಕ್ಕಿದಳಿ** (ಕ್ರಿ). = ಅಕ್ಕಿಗುಟ್ಟು: ಅಂಗವಿಪಿನದಿ . . . ಮನ್ಮಥ ಮೃಗವಾಸ್ಮರನಲೆಯಿಂ ಸೆಱೆವಿಡಿದನೆ ಸುಪ್ಪಿಯೆಂದುರೆ ಪಾಡುತಕ್ಕಿದಳಿವರು (ಜೀವಂಸಾಂ. ೨೦–೧೬). [ಅಕ್ಕಿ$_1$ + ತಳಿ$_1$]

**ಅಕ್ಕಿನುಚ್ಚು** (ನಾ). ಅಕ್ಕಿಯ ನುಚ್ಚು ; ತುಂಡುತುಂಡಾದ ಅಕ್ಕಿ.

[ಅಕ್ಕಿ$_1$ + ನುಚ್ಚು (< ನುರ್ಚು$_2$)]

**ಅಕ್ಕಿಪಡಿ** (ನಾ). ಅತಿಥಿ ಮುಂತಾದವರಿಗೆ ಅಡಿಗೆ ಮಾಡಿಕೊಂಡು ಊಟಮಾಡುವುದಕ್ಕಾಗಿ ಕೊಡುವ ಅಕ್ಕಿ ಬೇಳೆ ಮುಂತಾದ ಪದಾರ್ಥಗಳು; ಸ್ವಯಂಪಾಕದ ಸಾಮಗ್ರಿ; ಸೀದಾ: ಶಿಷ್ಯನ

ಮನೆಯ ಹೊಗಲೊಲ್ಲದೆ ಅಕ್ಕಿಪಡಿಯ ತರಿಸಿಕೊಂಡು ಹೊಸಬಳಿಕೆ ಎಂದು ಮಾಡಿಸಿಕೊಂಡುಂಬವಂಗೇನೆಂಬೆನಯ್ಯಾ (ಚೆನ್ನವ. ೪೫-೨).
[ಅಕ್ಕಿ$_1$ + ಪಡಿ$_3$]

**ಅಕ್ಕಿಪಿಲ್ಲಿ** (ನಾ). ಒಂದು ಬಗೆಯ ಕಾಲುಂಗುರ. [ಅಕ್ಕಿ$_1$ ? + ಪಿಲ್ಲಿ$_1$]

**ಅಕ್ಕಿಬೋಜ** (ನಾ). ಅಕ್ಕಿಯಿಂದ ಮಾಡಿದ ಒಂದು ಬಗೆಯ ಮದ್ಯ: ಅವನು ಒಂದು ಹಳ್ಳಿಗೆ ಹೋಗಿ ಚೆನ್ನಾಗಿ ಅಕ್ಕಿಬೋಜ ಕುಡಿದು, ಮತ್ತೇರಿ ಕೆಸರುಗದ್ದೆಯ ಅಂಚಿನಲ್ಲಿ ತೂರಾಡುತ್ತ ಬರುತ್ತಿದ್ದನು (ಕಾನೂರು. ೨೦).
[ಅಕ್ಕಿ$_1$ + ಬೋಜ]

**ಅಕ್ಕಿಯಿಡು** (ಕ್ರಿ). ಚುಕ್ಕಿಯನ್ನು ಗುರುತು ಮಾಡು: ತಗಡಿನ ಮೇಲೆ ಕೆಳಗಿನ ಅಂಚಿನವರೆಗೆ ಬಳಪದಿಂದ ಅಕ್ಕಿಯಿಡುತ್ತಾ ಹೋಗರಿ (ಮುಂಬಯಿ. ೫-೫೩). [ಅಕ್ಕಿ$_1$ + ಇಡು$_1$]

**ಅಕ್ಕಿರಡ್ಡಿಗಿಡ** (ನಾ). ಒಂದು ಮೂಲಿಕೆ; ಅಕ್ಕಿಹೆಡೆ (೬).
[ಅಕ್ಕಿರಡ್ಡಿ$_0$ + ಗಿಡ (< ಗಿಡು)]

**ಅಕ್ಕಿವುಲ್ಲು** (ನಾ). ಹೊಲದಲ್ಲಿ ತಾನಾಗಿ ಬೆಳೆಯುವ ಒಂದು ಬಗೆಯ ಹುಲ್ಲು: ಮರದಾರಕ್ಕಿವುಲ್ಲೆಸೆದಿಹುವಾ ವಿಪಿನದೊಳು (ಶ್ರೀಪಾಲ. ೬-೧೩). [ಅಕ್ಕಿ$_1$ + ಪುಲ್ಲು (< ಪುಲ್)]

**ಅಕ್ಕಿವೋಲೆ** (ನಾ). (ದಕ-ಪ್ರಾ) ಒಂದು ಬಗೆಯ ಕಿವಿಯ ಓಲೆ.
[ಅಕ್ಕಿ$_1$ + ಓಲೆ]

**ಅಕ್ಕಿಸಜ್ಜಕ** (ನಾ). (ಉಕ) = ಅಕ್ಕಿಸಜ್ಜಿಗೆ. [ಅಕ್ಕಿ$_1$ + ಸಜ್ಜಕ]

**ಅಕ್ಕಿಸಜ್ಜಿಗೆ** (ನಾ). ಅಕ್ಕಿಯ ತರಿ, ತುಪ್ಪ, ಬೆಲ್ಲ ಮೊದಲಾದವುಗಳನ್ನು ಉಪಯೋಗಿಸಿ ಮಾಡಿದ ಒಂದು ತಿಂಡಿಯ ಪದಾರ್ಥ.
[ಅಕ್ಕಿ$_1$ + ಸಜ್ಜಿಗೆ (< ಸೊಜ್ಜಿಗೆ)]

**ಅಕ್ಕಿಸರಿ** (ನಾ). ಅಕ್ಕಿಯ ಹಿಟ್ಟಿನಿಂದ ಮಾಡಿದ ಅಂಟು.
[ಅಕ್ಕಿ$_1$ + ಸರಿ (< ಸಜ್ಜಿ$_1$)]

**ಅಕ್ಕಿಸು$_1$** 'ಅಟ್ಟಿಸು' ನೋ.

**ಅಕ್ಕಿಸು$_2$** (ಕ್ರಿ). ಹಿಡಿ; ಅಪ್ಪಿಕೊ: ಅಕ್ಕನಿಗೆ ಬಾಚಿ ಹಿಕ್ಕುವ ಸೇವೆಗೆ ಪುಕ್ಕಟ್ಟೆ ಅನ್ನಕ್ಕೆ ಸಿಕ್ಕುವಳೆ ನೀನು ಚಿಕ್ಕ ಪ್ರಾಯಕೆನ್ನ ಪಕ್ಕಗೆ ಬಂದರೆ ಸಕ್ಕರೆದುಟಿ ಸವಿದಕ್ಕಿಸುವೆ (ವಾದಿಕೀ.೧-೬೫-೫). [ಅಕ್ಕು$_1$ + -ಇಸು$_3$]

**ಅಕ್ಕಿಹಿಟ್ಟು** (ನಾ). ಅಕ್ಕಿಯನ್ನು ಬೀಸಿ ಮಾಡಿದ ಹಿಟ್ಟು: ಅಕ್ಕಿ ಹಿಟ್ಟಿನ ಲಿಂಗವು ವಿದ್ಯಾಪ್ರದವು (ಸೌಗಂಧಿ. ೩೯೨-೩೩).
[ಅಕ್ಕಿ$_1$ + ಹಿಟ್ಟು (< ಪಿಟ್ಟು)]

**ಅಕ್ಕಿಹುಲ್ಲು** (ನಾ). = ಅಕ್ಕಿವುಲ್ಲು (ಮೈಔಗಿ. ೨೮-೫೪೦).
[ಅಕ್ಕಿ$_1$ + ಹುಲ್ಲು (< ಪುಲ್)]

**ಅಕ್ಕಿಹೆಡೆ, ಅಕ್ಕಿಹೆಡೆಯ** (ನಾ). ಕಿರಿಹಾಲೆಸೊಪ್ಪು; ಹಾಲು ತೊಟ್ಟಿನ ಗಿಡ: "ಅಕ್ಕಿಹೆಡೆ ಹೇಮದುಗ್ಧಂ ಚುಕುಳಮೆಂದೆನಿಕ್ಕುಂ" (ಮಂಗರಾ. ೩೯-೨೭). **ಅಕ್ಕಿಹೆಡೆಯ**: "ಭದ್ರಾನನೀ = ಅಕ್ಕಿಹೆಡೆಯ, ಕಳ್ಳಂಗಡಲೆ; ಭದ್ರೋದನೀ, ಭರದ್ವಾಜೀ = ಅಕ್ಕಿಹೆಡೆಯ" (ಓಷಧಿ. ೧೧೦); "ಕ್ಷೀರಾವೀ ದುಗ್ಧಿಕಾ ಶಬ್ದಗಳು, ಅಕ್ಕೀ[ಕ್ಕಿ]ಹೆಡೆಯ ಗಿಡದ ಹೆಸರುಗಳು, ಹಾಲುತೊಟ್ಟಿನ ಗಿಡವೆಂಬರು" (ಗುರುಬಾ. ೧೬೨-೧೪೬). ಪೆಡೆಯಕ್ಕಿ ಹೋ. [ಅಕ್ಕಿ$_1$ + ಹೆಡೆ (< ಪೆಡೆ)]

**ಅಕ್ಕಿಹೆಡೆಯ** 'ಅಕ್ಕಿಹೆಡೆ' ನೋ.

**ಅಕ್ಕಿಹೊಡೆ** (ನಾ). = ಅಕ್ಕಿಹೆಡೆ: "ಕ್ಷೀರಿಕಾ ದುಗ್ಧಿಕಾ ಈ ೨ ಅಕ್ಕಿ ಹೊಡೆ" (ನಾಚಿರಾ.೧೮೯-೭); ಅಕ್ಕಿಹೊಡೆ ಸಮೂಲವ ತಂದು ಮೆಣಸು ಸೈಂಧವಲವಣ . . . ಶೋಧಿಸಿ ಸಣ್ಣ ಅರಳೆಬತ್ತಿ ಅದ್ದಿ ಆ ಹುಣ್ಣಿನ ಮೇಲೆ ಹಾಕಲು ಎಂಥಾ ಹುಣ್ಣಾದರೂ ಮಾಣ್ಗುಂ (ವಿವೈವಿ. ೭೭).
[ಅಕ್ಕಿ$_1$ + ಹೊಡೆ$_2$ (< ಪೊಡೆ)]

**ಅಕ್ಕು$_1$** (ಕ್ರಿ). ೧. ಹಿಡಿ; ಅಪ್ಪಿಕೊ: ಮೇಲ[ಪಾಠಾಂ. ಲಿ]ಕ್ಕಿದಪೆನಿಂತು ಮುದ್ದಿಸುವೆನಿಂತು (ಚಬಪು. ೧೯-೪೧); ಅಕ್ಕಿತೇ ದುಷ್ಕೀರ್ತಿ ತಮ್ಮನ ನಿಕ್ಕಿದೆನಲಾ ರಣಕೆ (ತೊರರಾ. ೬-೪೭-೩೮). ೨. ಯೋಗ್ಯವಾಗು; ಉಚಿತವಾಗು; ಸರಿಹೋಗು: ಎಕ್ಕಸಕ್ಕದ ಮಾತುಗಳು ನಿಮಗಕ್ಕುವವೆ (ಬಸಪು. ೫೬-೨೧). [ದೇ. ‖ ತುಳು. ಅರ್ಕು = ತಬ್ಬು]

**ಅಕ್ಕು$_2$** 'ಅಟ್ಟು$_1$' ನೋ.

**ಅಕ್ಕು$_3$** (ನಾ). ಏಳಿಗೆ; ಲಾಭ; ಸಂಪತ್ತು: ಸಿರಿಗೀ ಬಾರಗೆ ಬಾಗಿಲೊಳ್ ಬೊಜಗರೀಗಳ್ ಬಂದು ನಿಂದಿರ್ದಪರ್ ಕರೆ ನಿಮ್ಮಕ್ಕನನಕ್ಕುವ[ಪಾಠಾಂ. ಮ]ಕ್ಕು ಪೊಸತು (ಶಾಂತೀಶ್ವ. ೧೧-೭೯; ಕುಸುಮಾ. ೧೧-೧೫೪).
[< ಆಗು$_1$?. ‖ ತಮಿ. ಅಕ್ಕಮ್ = ಅಭಿವೃದ್ಧಿ, ಸಂಪತ್ತು]

**ಅಕ್ಕು$_4$** 'ಅಟ್ಟು$_2$' ನೋ.

**ಅಕ್ಕು$_5$** (ನಾ). ಇಲಿ: ಬಯಲ್ಗೆ ಬಂದ ಕಿತ್ತಿಲಿಯನಜಿಯಟ್ಟುವ ದಿಟ್ಟದ ಗೊತ್ತಿನ ಕೊತ್ತಿಗೆ ತಡೆಯ ಹಡಲಿಗೆಯೇಂ ಬಲ್ಲೆಟ್ಟೆ? ಮೇಣುಂ ಮೈಗರೆ ವಕ್ಕಿನ ತಲೆ ದಕ್ಕುಂತ[ದ]ಲೆಯೇ (ರಾಮಾಶ್ವ. ೯೭-೨೯); ಅಕ್ಕುಬೆಕ್ಕುಗಳೊಂದು ಗೂಡವೆಯೆಮಗೇಕೆ? (ರಾಮಾಶ್ವ. ೯೮-೫). [ಸಂ. ಆಖು]

**ಅಕ್ಕು$_6$** 'ಆಗು$_1$' ನೋ.

**ಅಕ್ಕುಂ** 'ಆಗು$_1$' ನೋ.

**ಅಕ್ಕುಡ$_1$** (ನಾ). ಶೂರ; ಸತ್ತ್ವಶಾಲಿ; ಎದೆಗಾರ: "ಅಕ್ಕುಡರೆನೆ ಸತ್ವಗರು" (ಭಾರನಿ. ೫೨-೬೦). [?]

**ಅಕ್ಕುಡ$_2$** (ಗು). ಸತ್ತ್ವಹೀನ; ನಿಸ್ಸಾರ (?): ದುಗುಡವೇಕೈ ನಿಮಗೆ ಕರ್ಣಾದಿಗಳು ನೀವಕ್ಕುಡರೆ ಬಲುಗಾಳೆಗದೊಳಗೆ ಕೈಮಾಡಿ ನೊಂದಿರಿ ಕೊಂದಿರರಿಭಟರ (ಕುವ್ಯಾದ್ರೋ. ೪-೫); ವೀರ ರಾಮನ ಬಾಣವರುಷಾಸಾರದಲಿ ನೆನೆದಸುರಪತಿ ಕೈಹಾರವಕ್ಕು[ಪಾಠಾಂ. ಕ್ಕು]ಡವಾಗೆ . . . ನೆಗಹಿದನಾರುಭಟೆಯಲಿ . . . ಮಹೋಗ್ರಶಕ್ತಿಯನು (ತೊರರಾ. ೬-೪೯-೩೩). [?]

**ಅಕ್ಕುಡಿಸು** (ಕ್ರಿ). ಕುಗ್ಗು; ತಗ್ಗು; ಕುಸಿ: ಕಾಳೆಗದ ಕೈಚಳಕದವನು ಬ್ಬಾಳುತನವಕ್ಕುಡಿಸೆ ಯಿಕ್ಕೆಲದಾಳು ತೆಗೆದುದು (ಕುವ್ಯಾದ್ರೋ. ೧೭-೧); ಬಾಣಹತಿಗಕ್ಕುಡಿಸಿ ರಾಜ್ಯಶ್ರೇಣಿ ಜರುಗಿತು (ಕುವ್ಯಾಕ. ೨೮-೪೨); ನಸಿದಿರಕ್ಕುಡಿಸಿದಿರಿ ನೊಂದಿರಿ ಬಸವಳಿದಿರನುಗೆಟ್ಟಿರಖಿಳಾಯಸಕೆ ಸಂದಿರಿ (ತೊರರಾ. ೧-೮-೬೪); ಬಲಿಮುಖ ಪಡೆಯ ಪದಹತಿಗಹಿಪನಸುವಕ್ಕುಡಿಸೆ (ತೊರರಾ. ೬-೧-೧೨). 'ಅಕ್ಕುಳಿಸು' ಪಠಾ. [ಅಕ್ಕುಡ$_2$ + -ಇಸು$_3$]

**ಅಕ್ಕುಮಿಕ್ಕು** (ನಾ). ಅತಿಶಯ: ಅಕ್ಕರೆಯದಾಯಿತು ಅಕ್ಕರಿಗರಿಗೆಲ್ಲ ಅಕ್ಕುಮಿಕ್ಕೆನುವಂತೆ ಕೊನೆವರೆಗು (ಸಚೀಗೀ. ೪೦-೯೪೦).
[< ಆಗು$_1$ + ಮಿಗು ?]

**ಅಕ್ಕುರಳಿ** (ನಾ). "ಭಯ, ಅಂಜಿಕೆ" (ಸಿರಿಕೋ). [?]

**ಅಕ್ಕುಲ** (ನಾ). ಕುಲಹಾನಿ: ಪರಸ್ತ್ರೀಯರಂ ನೆರೆದೆಡಕ್ಕುಲಮುಪ್ಪುದು (ಜೈಮಿಭಾ. ೫-೫೭). [ಸಂ. ಅಕುಲ]

**ಅಕ್ಕುಲಜ** (ನಾ). ಹೀನಕುಲದಲ್ಲಿ ಹುಟ್ಟಿದವನು: ಗಂಗಾಂಬುವಿಗೆ ಕಿಲ್ಬಿಷವೆ ಬೃಹದ್ಭಾನುವಂತ್ಯಜರ ಮನೆಯಲಿರ್ದಡಕ್ಕುಲಜನೆ (ಸಿಂಗಿರಾ. ೪-೪೧); ಅಕ್ಕುಲಜಂಗಾಚಾರಂ ಮರ್ಕಟರೂಪಂಗೆ ಚೇಷ್ಟೆ ಮುದುಕೆಗೆ ಬೇಟಂ ಠಕ್ಕರಿಗಾರಾಧ್ಯತನಂ ಮಿಕ್ಕುದು ಕಲಿಕಾಲಗುಣ ಮಹತ್ಫಲದಿಂದಂ (ನೀತಿಸಾ. ೧೬-೧೫೧). [ಸಂ. ಅಕುಲಜ]

**ಅಕ್ಕುಲಿಗ** (ನಾ). ಕುಲಗೇಡಿ; ನೀಚ: ಅದನು ಕುಹಕದಿ ಗೆಲ್ಲಲಾ ಶಕುನಿ ಅಕ್ಕುಲಿಗನಿಹನು (ಜಿನಭಾ. ೩೭-೩೨). [ಅಕ್ಕುಲ + -ಇಗ]

**ಅಕ್ಕುಲಿಸು** 'ಅಕ್ಕುಳಿಸು' ನೋ.

**ಅಕ್ಕುವಣಿಗ** (ನಾ). ಹಕ್ಕುದಾರರಿಲ್ಲದ ಆಸ್ತಿಯನ್ನು ನುಂಗುವವನು:

ಇವನು ಅಕ್ಕುವಣಿಗ ; ಯಾರ ದ್ರವ್ಯವಾದರೂ ಅಕ್ಕಿಸಿಕೊಳ್ಳುತ್ತಾನೆ (ಸ್ಯಾಂಡರ್). [ಅಕ್ಕು$_2$ (< ಅಟ್ಟು$_1$) + –ವಣಿಗ]

**ಅಕ್ಕುಳಿ** (ನಾ). ಕುಗ್ಗಿದವನು (?) : ಅಕ್ಕುಳಿಸಿದ ಹೊಟ್ಟೆ ಬೆಕ್ಕುಗಣ್ಣಿನ ಮೋರೆ ಅಕ್ಕುಳಿಯು ತುಂಬ ಕಡುಗೋಪಿ ಪುರುಷನು ಚಿತ್ತಿನಿಗೆ ಮೇಳ (ಸರ್ವಜ್ಞ. ೧೬೩೮). [< ಅಟ್ಟು$_1$ + –ಕುಳಿ ?]

**ಅಕ್ಕುಳಿಕೆ, ಅಕ್ಕಳಿಕೆ$_2$** (ನಾ). ೧. ಕುಗ್ಗುವುದು ; (ಹೊಟ್ಟೆ) ಒಳಕ್ಕೆ ಇಳಿಯುವುದು ; ಹೊಟ್ಟೆಯನ್ನು ಒಳಕ್ಕೆ ಎಳೆದುಕೊಳ್ಳುವುದು. ೨. ಚಕ್ಕಳಗುಳಿ ; ಕಚಗುಳಿ; ಗುಳುಗುಳು; ಕಟ್ಬಾಡಿಸುವುದು (ಕಿ). **ಅಕ್ಕಳಿಕೆ$_2$** (ಕಿ). [ಅಕ್ಕುಳಿಸು + –ಇಕೆ]

**ಅಕ್ಕುಳಿಸು**, ಅಕ್ಕಳಿಸು, ಅಕ್ಕುಲಿಸು (ಕ್ರಿ). ೧. (ಹೊಟ್ಟೆ) ಒಳಕ್ಕೆ ಇಳಿ; ಕುಗ್ಗು ; (ಹೊಟ್ಟೆಯನ್ನು) ಒಳಕ್ಕೆ ಎಳೆದುಕೊ; ಕುಗ್ಗಿಸು: "ಅಕ್ಕು [ಪಾಠಾಂ. ಕ್ಕ]ಳಿಸು ನಿಮ್ನಕುಕ್ಷಿ ಭಯೇ ಚ" (ಶಮುಧಾ); ಬಟಿಲ್ದ ಮೆಯ್ಯಕ್ಕುಳಿಸಿರ್ದ ಪೆರ್ಬಸಿಱಗುರ್ವಿಸೆ ಬಂದನದೊರ್ವ ಪಾರ್ವಂ (ಲೀಲಾವ. ೬–೬೮); ಬಿಟ್ಟ ಬಾಯಕ್ಕುಳಿಸಿರ್ದ ಪೊಟ್ಟೆ (ವರ್ಧಪು. ೧೫–೩೮); ಕುಕ್ಷಿಯಕ್ಕುಳಿಸೆ ಬೆಂಗಡರ್ವುದು ಸಹಜದೊಳೀಕ್ಷಿಸೆ ಪುಟ್ಟ ಡೊಳ್ಳಿಹುದು (ಭರಚ. ೬–೬೧). ೨. ತಗ್ಗು ; ಕುಗ್ಗು : ಸುರರಳ್ಳಾಡುವ ಮೇರುವಕ್ಕುಳಿಸುವೆನ್ನೀ ಶೌರ್ಯಮುಂ (ಕಾವ್ಯಸಾ. ೪೨೦); ಉಗ್ರಾಟೋಪವಕ್ಕುಳಿಸುತೆ (ರುಕ್ಮಾಂಗ. ೧೩–೭೫) ೩. ಹೆದರು : "ಅಕ್ಕು[ಪಾಠಾಂ. ಕ್ಕ]ಳಿಸು ನಿಮ್ನಕುಕ್ಷಿ ಭಯೇ ಚ" (ಶಮುಧಾ) ; ಈ ಭುವನೈಕಮಲ್ಲಂ ಮೋಹಮಲ್ಲನ ನೆಕ್ಕತುಳದಿಂದಕ್ಕುಳಿಸದೆ ಡೊಕ್ಕರಿಗೊಂಡು (ಪಾರ್ಶ್ವಪು. ೧೬–೧೦ ವ) ; ಮುಕ್ಕಣ್ಣನಾತ್ಮಜಂ ಹರಿಯಕ್ಕುಳಿಪಂತೊಂದು ಬಾಣಮಂ ತೊಟ್ಟೆಚ್ಚಂ (ವೀರವಿ. ೧೨–೩೬). ೪. ಹಿಂದೆಗೆ; ಹಿಮ್ಮೆಟ್ಟು : "ಒಳಸೋರ್ದುದು ಪಾರಿತು ಮಲ್ಲಳಿಗೊಂಡುದು ಸರಿದುದೋಸರಿಸಿದುದು ತಾನಕ್ಕುಳಿಸಿದುದು ಮೆಯ್ದೆಗೆದುದುಂ . . . ಪಿಂಗಿತು ಪೆಡಮೆಟ್ಟಿತೆನ್ನಲಪಸರಣಂ" (ಕವಿಕಂ. ೨೫೨, ೨೫೩); "ಅಕ್ಕುಳಿಸಿತೆಂದುಂ . . . ಅಪಸರಣಕ್ಕೆ ಪೆಸರ್" (ಕಶಸಾ. ೩೧–೬೫). ಸರ್ವವನಕ್ಕುಳಿಸದೆನ್ನಲಿ ಸಮರ್ಪಿಸಿ ಭಾವಶುದ್ಧಿಯಲಿ (ನಿಭಾಗ. ೩–೧೫–೧೬); ಕಳವಿನಲಿ ಬಲುಹಿನಲಿ ಮೇಣಕ್ಕುಳಿಸದೀ ಬ್ರಹ್ಮಸ್ವವನು . . . ಅವನು ಕೊಂಬನಾತನನು (ನಿಭಾಗ. ೫–೧೧–೨೭). ೫. ಹಿಂದಕ್ಕೆ ತೆಗೆದುಕೊ; ಉಪಸಂಹಾರಮಾಡು : ಬೆಳಸಿ ರಜದಲಿ ಸತ್ವಗುಣದಲಿ ನಿಲಿಸಿ ತಾಮಸಗುಣದಿನಿದನಕ್ಕುಳಿಸಿ ಜಗವನು ನಿನ್ನ ಮಾಯಾಶಕ್ತಿಯಲಿ ನೀನೆ (ನಿಭಾಗ. ೧೦–೩–೪೫). ೬. ದುಃಖಿಸು ; ಕೊರಗು : ಕರುಣದಿಂ ಮುನಿಪ ಸತಿಯಕ್ಕುಳಿಸದಿರು ಬೆದರಲೇಕೇಳು ನಿನಗೆ ಮಗನಹನಂಜ ಬೇಡೆಂದನು (ತುರಂಗ. ೫–೩೯). **ಅಕ್ಕಳಿಸು** : ೧. ಅಕ್ಕಳ[ಳಿ]ಸಿದ ಹೊಟ್ಟೆ ಸೊಕ್ಕಿದ ಗಲ್ಲ (ಶರಲೀ. ೩೪೩–೪). ೩. ಅಕ್ಕಳಿಸಬೇಡ ನಿನಗಾ ಮುನಿಯೆರಿಪುವ ತರಿದಿಕ್ಕು ನಡೆ (ತುರಂಗ. ೫೪–೩೮) ; ಪಾರ್ವನೆಂದಕ್ಕಳಿಸಿ ಹೆರೆದೆಗೆದು ಪಂಟಿಸದೆ ಸೇರ್ವೆಯಿಂದಾ ಪಶುವನಾಕ್ರಮಿಸಿ ಬಂದು (ಪರಶು. ೨೩–೧೭). ೬. ನೋವಿನೊಳ್ ಪವಡಿಸಿದ ಭೂರಮಣನಂ ಕಂಡರು ಅಕ್ಕಳಿಸುತಿರೆ ಫಲುಗುಣಂ (ತುರಂಗ. ೬೪–೩೭). **ಅಕ್ಕುಲಿಸು** : ೨. ಗೋಪರಮಕ್ಕಳೀ ಕೊಂದವರು ಕಾಲಂಗಕ್ಕುಲಿಸದರಿಬಲಪರಾಕ್ರಮನನು (ನಿಭಾಗ. ೧೦–೪೭–೩).

**ಅಕ್ಕುಳಿಸಿಕೊ** = ತಗ್ಗಿಸಿಕೊ ; ಉಪಸಂಹರಿಸು : ಪಾಪಿ ಕೊಲ್ಲದಿರಕ್ಕುಳಿಸಿಕೋ ಕೋಪವನು (ನಿಭಾಗ. ೧೦–೩೧–೧೫). 'ಅಕ್ಕುಡಿಸು' ಪರಾ.

[ಅಕ್ಕುಳಿ$_0$ ? + –ಇಸು$_3$. ‖ **ತಮಿ. ಮಲ.** ಎಕ್ಕು = ಹೊಟ್ಟೆಯ ಸ್ನಾಯುಗಳನ್ನು ಸಂಕೋಚಿಸು ; **ತೆಲು.** ಅಕ್ಕಳಿಂಚು = ತಗ್ಗಿಸು]

**ಅಕ್ಕೆ$_1$** 'ಅಟಕ್ಕೆ$_1$' ನೋ.

**ಅಕ್ಕೆ$_2$** 'ಅಣ್ಕೆ' ನೋ.

**ಅಕ್ಕೆ$_3$** 'ಅಗು$_1$' ನೋ.

**ಅಕ್ಕೆಬೊಟ್ಟು** (ನಾ). ಹಣೆಗೆ ಇಡುವ ಅಕ್ಷತೆಯ ಬಟ್ಟು : ಸೋಮುರ್ಡಿಯ ಮಲ್ಲಿಗೆಯೆ ನೊಸಲಕ್ಕೆ[ಪಾಠಾಂ. ಲಣ್ಕೆ]ಬೊಟ್ಟೆ ಬೈತಲೆಯೆಳೆ ಮುತ್ತೆ ಬಾ (ಧರ್ಮನಾ. ೧–೭೫). [ಅಕ್ಕೆ$_2$ (< ಅಣ್ಕೆ) + ಬೊಟ್ಟು$_2$]

**ಅಕ್ಕೊ** 'ಅದೆಕೊಳ್' ನೋ.

**ಅಕ್ಕೊತ್ತು** (ಕ್ರಿ). ಹಟಮಾಡು ; ಪಟ್ಟುಹಿಡಿ (?) : ಸಾಕಲಾಗದೆಂದು ಅಕ್ಕೊತ್ತಿ ನುಡಿದರೆ ಏಕೆ ನಾ ನಿಮ್ಮ ಬಿಡುವೆ ಶಂಭು ಜಕ್ಕೇಶ್ವರಾ (ಗಣಭಾ. ೫೫–೫). [ಅಕ್ಕು$_1$ ? + ಒತ್ತು$_1$]

**ಅಕ್ಕೊತ್ತೆ** (ನಾ). ಒತ್ತಿ ಹಿಡಿದು ತೆಗೆದುಕೊಂಡ ಪಣ. 'ಅಕ್ಕೊತ್ತೆಗೊಳ್' ಪರಾ. [ಅಕ್ಕು$_1$ ? + ಒತ್ತೆ]

**ಅಕ್ಕೊತ್ತೆಗೊಳ್** (ಕ್ರಿ). ಒತ್ತಿ ಹಿಡಿದು ಪಣವಾಗಿ ತೆಗೆದುಕೊ ; ವಶಪಡಿಸಿಕೊ ; ಅಧೀನಮಾಡಿಕೊ : ಕಕ್ಕಸವೆತ್ತ ಕಾಮಿನಿಯರ ಕಂಡು ಕಣ್ಣಕ್ಕದಂತೆನ್ನ ಚಿತ್ತವನು ಅಕ್ಕೊತ್ತೆಗೊಂಡ ಭಾಮಿನಿ ರನ್ನೆ ಲಾಲಿಸು (ಮೋಹತ. ೩೮–೨). [ಅಕ್ಕೊತ್ತೆ + ಕೊಳ್$_1$]

**ಅಕ್ಖಡ**, ಅಕ್ಕಡ, ಅಖಾಡ (ನಾ). ಕುಸ್ತಿ ಮಾಡುವ ಪ್ರದೇಶ ; ಮಲ್ಲಯುದ್ಧದ ಧಂಗ : ಸುಮಿತ್ರನೆಂಬರಸಂ ಮಾನಕಷಾಯ ಮಹಾಗರ್ವಿತಂ ಮಲ್ಲಯುದ್ಧದೊಳ್ ಕುಶಲನಕ್ಖ[ಡ]ದೊಳ್ ಪಲರುಮನಿಕ್ಕಿ ಗೆಲ್ದು (ಚಾವುಂಉ. ೪೬–೨) ; ಮತ್ತಂ ಮಲೆತು ನಿಂದು ಅಕ್ಖಡದೊಳ್ ಪೊಕ್ಕು ಬಾಹಪ್ಪಳಿಸಿ (ಗಿರಿಕ. ೨–೧೦೫ ವ) ; ಇಕ್ಕುಬಿದಂತಖ್ಖ[ಕ್ಖ]ಡದೊಳ್ ಕಡಂಗಿ ಪಿಡಿದೌಂಕಲ್ ಬಲ್ಲ ಮಲ್ಲರ್ (ಧರ್ಮನಾ. ೨–೪೮) ; ಕೆಂಬಟ್ಟೆಯ ಮಿಸುಗುವ ಪಾಸೆಂಬಕ್ಖಡದೊಳು ನವ ಘುಸೃಣವಿಮಿಶ್ರಿತ ಗಂಧರಜಮನಂಗದೊಳಿಟ್ಟು (ಜಯಕಾ. ೮–೫೦). **ಅಕ್ಕಡ** : ಜಗಜಟ್ಟಿಗಳಕ್ಕಡಂಗಳೊಳ್ ಮರಳದೆ ಪೋರ್ವ (ಸೂಕ್ತಿಸು. ೪–೮೫); ಕರತಳವ ಮಾಱುದ್ದಿ ಭುಜದಲಿ ಶಿರದಲಂದಕ್ಕಡದ ಮಣ್ಣನು ಬೆರಳಲುದುರಿಚಿ (ಕುವ್ಯಾಕ. ೧೯–೪೧); ಜಟ್ಟಿಗಳಾ ಪಿರಿಯಕ್ಕಡಮಾ ಪೊಳಲ ಬಾಹೆಯೊಳು ಬಂಧುರಮಾಗಿಯೆ ತೀವಿಹುದು (ಶ್ರೀಪಾಲ. ೧–೬೮). **ಅಖಾಡ** : ಮೂರನೆಯ ಜಾವದಹೊತ್ತಿಗೆ ಎಲ್ಲರೂ ಅಖಾಡದಲ್ಲಿ ಸೇರಿದರು (ಝಾರಾಣಿ. ೨೮).

[**ಪ್ರಾ.** ಅಕ್ಖಾಡಗ, ಅಕ್ಖಾಡಯ (< **ಸಂ.** ಅಕ್ಷವಾಟಕ, ಅಕ್ಷವಾಟ) ; **ಪಾಲಿ.** ಅಕ್ಖವಾಟ. / **ಮರಾ.** ಅಖಾಡಾ, ಅಕ್ಖಾಡ ; **ಹಿಂ.** ಅಖಾಡಾ]

**ಅಕ್ಖೋಳ** 'ಅಕ್ಷೋಟ' ನೋ.

**ಅಕ್ತ** (ಗು). ಬಳಿದ; ಲೇಪಿಸಿದ : ಉದಾ— ವಿಷಾಕ್ತ [= ವಿಷ + ಅಕ್ತ] ; ರಕ್ತಾಕ್ತ [= ರಕ್ತ + ಅಕ್ತ]. [**ಸಂ.**]

**ಅಕ್ರಮ** (ಗು). ೧. ಕ್ರಮವಿಲ್ಲದ. ೨. ಕ್ರಮವಲ್ಲದ; ನಿಯಮಕ್ಕೆ ವಿರೋಧವಾದ. (ನಾ). ೩. ಒಂದು ಕಾವ್ಯದೋಷ : ಮೊದಲೊಳ್ ಮುಂ ಪೇೞ್ದುದ್ದೇಶದಂದಮನುದೇಶಮಾಗದಂದಕ್ರಮಂ (ಕಾವ್ಯಾವ. ೪೬೮). ೪. ಗಂಗಡಿಕಾರ : "ಅಜಿಯೆ ಗಂಗಡಿಕಾರನಕ್ರಮಂ" (ಮಂಗರಾ. ೧೧೦–೬). [**ಸಂ.**]

**ಅಕ್ರಮನಿರೋಧ** (ನಾ). ಅಕ್ರಮವನ್ನು ತಪ್ಪಿಸುವುದು ; ಅನ್ಯಾಯವನ್ನು ತಡೆಯುವುದು. [ಅಕ್ರಮ + ನಿರೋಧ]

**ಅಕ್ರಮಪ್ರವೇಶ** (ನಾ). ಎಲ್ಲೆಮೀರಿ ಪ್ರವೇಶಿಸುವುದು ; ನ್ಯಾಯವಿರುದ್ಧವಾಗಿ ಪ್ರವೇಶಿಸುವುದು. [ಅಕ್ರಮ + ಪ್ರವೇಶ]

**ಅಕ್ರವ್ಯಾದ** (ನಾ). ಮಾಂಸಾಹಾರಿಯಲ್ಲದ ಪ್ರಾಣಿ ; ಸಸ್ಯಾಹಾರಿ : ಹಕ್ಕಿಗಳು ಕ್ರವ್ಯಾದಗಳು, ಅಕ್ರವ್ಯಾದಗಳು ಎಂದೆರಡು ಪ್ರಕಾರದವು. ಕಾಗೆ, ಹದ್ದು, ರಣಹದ್ದು ಮುಂತಾದವು ಕ್ರವ್ಯಾದಗಳು. ಗಿಣಿ, ಹಂಸ ಮುಂತಾದವು ಅಕ್ರವ್ಯಾದಗಳು (ಆರ್ಯಧ. ೧೦೫). [**ಸಂ.**]

**ಅಕ್ರಿಯ**$_1$ (ಗು). ೧. ಕೆಲಸವಿಲ್ಲದ; ನಿಷ್ಕ್ರಿಯ: ಏಕನಾತ್ಮನನಂತನಚಲನಶೋಕನದ್ವಯನಮಲನಭವನಲೋಕ ನಿಸ್ಪೃಹನಮಿತನಕ್ರಿಯನ ಹತನಭ್ರಮನು (ಕುವ್ಯಾಭೀ. ೩–೫೯). [ಸಂ.]

**ಅಕ್ರಿಯ**$_2$ (ನಾ). ಸಲ್ಲದ ನಡೆವಳಿಕೆ; ಕೆಟ್ಟ ಕೆಲಸ: ಅಕ್ರಿಯದಿ ನಡೆದು ಕೆಟ್ಟರು (ತುರಂಗ. ೮೫–೭). [ಸಂ. ಅಕ್ರಿಯಾ]

**ಅಕ್ರೂರ** (ಗು). ೧. ಕ್ರೂರವಲ್ಲದ; ಮೃದು. (ನಾ). ೨. ಶ್ರೀಕೃಷ್ಣನ ಚಿಕ್ಕಪ್ಪ. [ಸಂ.]

**ಅಕ್ರೋಟ** 'ಅಕ್ರೋಡ' ನೋ.

**ಅಕ್ರೋಟು** 'ಅಕ್ರೋಡ' ನೋ.

**ಅಕ್ರೋಡ,** ಅಕ್ರೋಟ, ಅಕ್ರೋಟು, ಅಖೋಟ (ನಾ). ಒಂದು ಜಾತಿಯ ಮರ: ಜಯಂತಿಯ ತೀರದಲ್ಲಿ ವಿಸ್ತಾರವಾದ ಆಲದ ಮರಗಳಂತೆ ಭವ್ಯವಾಗಿ ಬೆಳೆದಿರುವ 'ಅಕ್ರೋಡ'ದ ಮರಗಳ ಸಾಲುಗಳ ನಡುವೆ ಒಂದು ರಾತ್ರಿಯನ್ನು ಕಳೆಯಬೇಕಾಯಿತು (ಅಹಲ್ಯೋ. ೫೩). **ಅಕ್ರೋಟ** (೩). **ಅಕ್ರೋಟು**: ಮನೆಗೆ ಹಿಂತಿರುಗುವಾಗ ನನ್ನ ಜೇಬಿನಲ್ಲಿ ಅಕ್ರೋಟು, ಆಪಿಲ್ ಹಣ್ಣುಗಳನ್ನೂ . . . ಕೊಟ್ಟು ಕಳಿಸಿದರು (ವಿವಧು. ೬). **ಅಖೋಟ** (ಪಂಡಿತ. ೬).

[ಪ್ರಾ. ಅಕ್ಖೋಡ (< ಸಂ. ಅಕ್ಷೋಟ). / ಪಾರ. ಅಖರೂತ್; ಹಿಂ. ಅಖ್‌ರೋಟ್]

**ಅಕ್ರೋಧ** (ನಾ). ಕ್ರೋಧವಿಲ್ಲದಿರುವುದು. [ಸಂ.]

**ಅಕ್ಲಿಷ್ಟ** (ಗು). ಕ್ಲಿಷ್ಟವಲ್ಲದ; ನಿರಾಯಾಸವಾದ. [ಸಂ.]

**ಅಕ್ಲೀಬ** (ನಾ). ೧. ಕ್ಲೀಬನಲ್ಲದವನು; ಷಂಡನಲ್ಲದವನು. ೨. ಸಮರ್ಥ. [ಸಂ.]

**ಅಕ್ಲೇಶ** (ನಾ). ಕ್ಲೇಶವಿಲ್ಲದ ಸ್ಥಿತಿ: ಮತ್ತನಯರ್ಕಳನೋದಿಸೆ ಮತ್ತವನಕ್ಲೇಶದಿಂ ಶ್ರುತಿಸ್ಮೃತಿಶಾಸ್ತ್ರೋಪಾತ್ತಮುಖನಾಗೆ (ಶಾಂತಿಪು. ೬–೬೩). [ಸಂ.]

**ಅಕ್ಷ** (ನಾ). ೧. ಪಗಡೆಯ ಆಟದ ದಾಳ. ೨. ಪಗಡೆಯ ಕಾಯಿ: "ದ್ಯೂತದಚ್ಚುಗಳಕ್ಷಮೆನಿಸಿಕ್ಕು" (ಮಂಗರಾ. ೭೨–೨೪). ೩. ಪಗಡೆಯ ಆಟ, —ಜೂಜು: "ತಾಜಿಕಿಯಲಿ ಭಂಡಿಯಲಿ ಜೂಜಿನಲಿ ಬಲ್ಪಿನಾಧಾರದಲಿ ಅಕ್ಷಮೆನಿಸಿಕ್ಕು" (ಮಂಗರಾ. ೧೪೫–೩೦). ೪. ರಥದ ಅಚ್ಚು; ಅಚ್ಚುಮರ; ಅಚ್ಚಿಗೆ ಹಾಕುವ ಬಳೆ; ಕಡೆಗೀಲು: "ಅಕ್ಷಮೆನಲಚ್ಚು" (ಮಂಗರಾ. ೮೪–೨೫). ೫. ರಥ; ಬಂಡಿ. ೬. (ಬಂಡಿಯ) ಚಕ್ರ. ೭. ತಾರೆಯ ಕಾಯಿ, —ಮರ: "ವಿಭೀತಕಮಕ್ಷಮೆನೆ ತಾಜಿಯಕ್ಕು" (ಮಂಗರಾ. ೩೭–೨೦). ೮. ನೆಲ್ಲಿಯ ಮರ. ೯. ರುದ್ರಾಕ್ಷಿಯ ಮರ. ೧೦. ಗೇರುಮರ. ೧೧. ಕಣ್ಣು. ೧೨. ಇಂದ್ರಿಯ. ೧೩. ಕವಡೆ; ತಾಡಿಕವಡೆ. ೧೪. ಎಂಬತ್ತು ಗುಂಜಿಯ ತೂಕ; 'ಕರ್ಷ'. ೧೫. [ಭೂಗೋಳ] ಉತ್ತರ ದಕ್ಷಿಣ ಧ್ರುವಗಳನ್ನು ಸೇರಿಸುವ ಕಲ್ಪಿತ ರೇಖೆ; ಅಕ್ಷರೇಖೆ; ಭೂಮಿಯ ಅಚ್ಚು. ೧೬. "ತ್ರಾಸಿನ ಅಡ್ಡ" (ನಾನಾಶ); ತಕ್ಕಡಿಯ ದಂಡಿಗೆ; ದಂಡಿಗೆಯನ್ನು ತೂಗು ಹಿಡಿಯುವ ದಾರ; "ದಂಡಿಗೆಯ ಮುಳ್ಳು" (ಕಸ್ತೂರಿ). ೧೭. ಮೈಲುತುತ್ತ; ತುತ್ತೆ. ೧೮. ಸಂಚರ್ಚಲವಣ. ೧೯. ಆತ್ಮ. ೨೦. ಪೋಷಕ. ೨೧. ಜ್ಞಾನ. ೨೨. ನ್ಯಾಯ. ೨೩. (ನ್ಯಾಯಸ್ಥಾನದಲ್ಲಿ ಹೂಡುವ) ವ್ಯವಹಾರ; ಮೊಕದ್ದಮೆ. ೨೪. ಆಚಾರ. ೨೫. ತ್ಯಾಗ. ೨೬. ವೈರಾಗ್ಯ. ೨೭. ಶಕ್ತಿ. ೨೮. ಶಕ್ತಿಯ ಆಧಾರ. ೨೯. ನೀಲಿ. ೩೦. ಹಾವು. ೩೧. ಗರುಡ. ೩೨. ಹುಟ್ಟುಕುರುಡ. ೩೩. ಅವಲೋಹ. ೩೪. ಗಣಿ. ೩೫. ರಾವಣನ ಒಬ್ಬ ಮಗನಾದ ಅಕ್ಷಕುಮಾರ. ೩೬. ಚೆಂಡುಗ (ಒಷಧಿ. ೧). ೩೭. ದೇವಸಾಸಿವೆ. (ಒಷಧಿ. ೧). ೩೮. ದವಡೆಯ ಕೆಳಭಾಗ. ೩೯. ಔದಾರ್ಯ. ೪೦. ತೊಟ್ಟಿನ ತುದಿಯಲ್ಲಿಯ ಹೂವಿನ ಎಸಳುಗಳು ಜೋಡಿಸಿದಂತಿರುವ ಆಕಾರ; ಪುಷ್ಪಪಾತ್ರ: "ಅಖಿಲೇಂದ್ರಿಯಾಂಬಕಂ ತ್ಯಾಗವಿರಾಗ ತಾರೆ ಶಕಟಂ ರಥದಚ್ಚಿನ ಲೋಹ ಬಲ್ಪು ಜೂಜಾಗರನೆಲ್ಲಿ ಪೋಷಕಕಮಿವಿಂತು ಧರಿತ್ರಿಯೊಳಕ್ಷವಾಚಕಂ" (ನಾನಾರ. ೩೪). [ಸಂ.]

**ಅಕ್ಷಂತಿ** 'ಅಕ್ಷತೆ' ನೋ.

**ಅಕ್ಷಕ** (ನಾ). ಬೆಂಡುಗದ ಮುಳ್ಳು (ಒಷಧಿ. ೪). [ಸಂ.]

**ಅಕ್ಷಕ್ರೀಡೆ** (ನಾ). ಪಗಡೆಯ ಆಟ. [ಅಕ್ಷ + ಕ್ರೀಡೆ]

**ಅಕ್ಷಜ** (ನಾ). ೧. ವಜ್ರ. ೨. ಸಿಡಿಲು. ೩. ವಿಷ್ಣು. [ಸಂ.]

**ಅಕ್ಷತ** (ಗು). ೧. ಮುರಿಯದ; ಮುಕ್ಕಾಗದ; ಗಾಯಗೊಳ್ಳದ. (ನಾ). ೨. (ಮೊನೆ ಮುರಿಯದ) ಅಕ್ಕಿ: "ಸದಕಂ ತಂಡುಲಮಕ್ಷತಂ" (ವಸ್ತುಕೋ. ೯೫–೨೧). ೨. (ಪೂಜೆ, ಶುಭಕಾರ್ಯ ಮುಂತಾದವುಗಳಲ್ಲಿ ಬಳಸುವ) ಅರಿಸಿನವನ್ನಾಗಲಿ ಕುಂಕುಮವನ್ನಾಗಲಿ ಹಚ್ಚಿದ ಅಕ್ಕಿ. ೪. ಹಣೆಯಲ್ಲಿ ಇಟ್ಟುಕೊಳ್ಳುವ ಬಟ್ಟು. ☞ ಅರಿಸಿನವನ್ನು ತೇದು ಅದರೊಡನೆ ಬಾಳೆಯ ಸಿಪ್ಪೆಯ ಕರಿಕನ್ನು ಕಲಸಿ ಇದನ್ನು ಸಿದ್ಧಪಡಿಸುತ್ತಾರೆ. ೫. (ಹಣೆಯ ಬಟ್ಟಿಗಾಗಿ) ಉಪಯೋಗಿಸುವ ಗಂಧ. [ಸಂ.]

**ಅಕ್ಷತದಿಗೆ** (ನಾ). ವೈಶಾಖಮಾಸದ ಶುಕ್ಲಪಕ್ಷದ ತದಿಗೆ; ಆ ದಿನ ಮಾಡುವ ಹಬ್ಬ.

[ಸಂ. ಅಕ್ಷಯ ತೃತೀಯಾ (ಅಕ್ಷಯ + ತೃತೀಯಾ)]

**ಅಕ್ಷತಧೈರ್ಯ** (ನಾ). ೧. ಕುಂದದಿರುವ ಧೈರ್ಯ. ೨. ಧೈರ್ಯಗುಂದದ ವ್ಯಕ್ತಿ. [ಅಕ್ಷತ + ಧೈರ್ಯ]

**ಅಕ್ಷತಯೋನಿ** (ನಾ). ಪುರುಷಸಂಪರ್ಕ ಹೊಂದಿಲ್ಲದ ಹೆಂಗಸು.

[ಅಕ್ಷತ + ಯೋನಿ]

**ಅಕ್ಷತರು** (ನಾ). ತಾರೆಯ ಮರ. 'ಅಕ್ಷತರೂಪಸಂಪನ್ನೆ' ಪರಾ.

[ಅಕ್ಷ + ತರು]

**ಅಕ್ಷತರೂಪಸಂಪನ್ನೆ** (ನಾ). ೧. ಕುಂದಿಲ್ಲದ ರೂಪವುಳ್ಳವಳು. ೨. ತಾರೆಯಮರದಿಂದ ಕೂಡಿದ್ದು. ೧,೨: ನಿದ್ರೆಯಂತೆ ಲೋಚನಗ್ರಾಹಿಣಿಯುಂ ಮೂರ್ಛೆಯಂತೆ ಮನೋಹರೆಯುಂ ಅರಣ್ಯಭೂಮಿಯಂತೆ ಅಕ್ಷತರೂಪಸಂಪನ್ನೆಯುಂ (ಕಾದಂಪೂ. ೪೯).

[ಸಂ. ಅಕ್ಷತರೂಪಸಂಪನ್ನಾ (ಅಕ್ಷತ + ರೂಪ + ಸಂಪನ್ನಾ; ಅಕ್ಷ + ತರು + ಉಪಸಂಪನ್ನಾ)]

**ಅಕ್ಷತಶರೀರ** (ನಾ). ಗಾಯಗೊಳ್ಳದ ಮೈ; ಪೆಟ್ಟುಬೀಳದ ಮೈ.

[ಅಕ್ಷತ + ಶರೀರ]

**ಅಕ್ಷತಾರೋಪಣೆ** (ನಾ). ೧. ಮದುವೆಯ ಸಮಯದಲ್ಲಿ ವಧೂವರರು ಒಬ್ಬರಮೇಲೊಬ್ಬರು ಅಕ್ಷತೆಯನ್ನು ಹಾಕುವುದು (ದಕ). ೨. ಹಿರಿಯರು ವಧೂವರರ ಮೇಲೆ ಶುಭವನ್ನು ಕೋರಿ ಅಕ್ಷತೆ ಹಾಕುವುದು. (ಉಕ). [ಸಂ. ಅಕ್ಷತಾರೋಪಣ (ಅಕ್ಷತ + ಆರೋಪಣ)]

**ಅಕ್ಷತೆ,** ಅಕ್ಷಂತಿ (ನಾ). ೧. = ಅಕ್ಷತ ೨: [ಭ]ತಾಯಮಣೀಯ ವೇಟ್ಟುಮೆನ್ನು ಕಿಡಿಸಿದಾಗಳ[ಳ್] ಪಂಪಯ್ಯಂ ನಾನೊಂದಕ್ಷತೆಯ ನಪ್ಪಂದ[ಪ್ಪೊಡ ?]ಮಿಾಯೆನೆನ್ನು (ಸೌಇಇ. XI–i, ೩೭–೮; 942). ೨. = ಅಕ್ಷತ ೩: ಚಂದನದ ಮುತ್ತಿನಕ್ಷತೆಯ ಕುಂಕುಮಮಿಶ್ರದಿಂದೆ ನವ ದಧಿ ಲಾಜ ದೂರ್ವಾಕ್ಷತೆಯೊಳೆಸೆವ ಪೊಂದಳಿಗೆವಿಡಿದಾರತಿಯನೆತ್ತಿ (ಜೈಮಿಭಾ. ೩೩–೨೩); ಅಕ್ಷತೆಗೆ ಬೇಕು ಎಂದರೆ ಮನೆಯಲ್ಲಿ ಎರಡು ಅಕ್ಕಿಯ ಕಾಳಿಲ್ಲ (ರೂಢಿ). ೩. = ಅಕ್ಷತ ೪: ಅವನು ಊಟಮಾಡಿದ್ದರೂ ಹಣೆಯಲ್ಲಿ ಅಕ್ಷತೆ ಇರಲಿಲ್ಲ (ರೂಢಿ). ಅರತಕ್ಷತೆ, ಕೆಂಪಕ್ಷತೆ,

ಗಂಧಾಕ್ಷತೆ, ಬಿಳಿಯಕ್ಷತೆ, ಮಂತ್ರಾಕ್ಷತೆ, ಹಳದಿಯಕ್ಷತೆ ಹೋ.

**ಅಕ್ಷಂತಿ** : (ಉಕ) = ಅಕ್ಷತ ಳ : ಏನು ಅಂಗಾರಾ ! ಏನು ಅಕ್ಷಂತೀ ! (ಹುಚ್ಚಾ ಟ. ೮೯–೨೬). [ಸಂ. ಅಕ್ಷತ]

**ಅಕ್ಷತೈ₁** (ನಾ). = ಅಕ್ಷತಯೋನಿ. [ಸಂ. ಅಕ್ಷತಾ]

**ಅಕ್ಷತೈ₂** (ನಾ). ೧. 'ಕರ್ಕಾಟಕ ಶೃಂಗಿ' ಎಂಬ ಮೂಲಿಕೆ. ೨. ಗೋಣಿ (ಒಷಧಿ. ೪). [ಸಂ. ಅಕ್ಷತಾ]

**ಅಕ್ಷದರ್ಶಕ** (ನಾ). ೧. ನ್ಯಾಯಾಧಿಪತಿ. ೨. ಜೂಜಾಟಗಳ ಮೇಲ್ವಿಚಾರಕ. [ಅಕ್ಷ + ದರ್ಶಕ]

**ಅಕ್ಷದಾಮ** (ನಾ). ಜಪಸರ; ರುದ್ರಾಕ್ಷಿಯ ಸರ. [ಸಂ. ಅಕ್ಷದಾಮನ್ (ಅಕ್ಷ + ದಾಮನ್)]

**ಅಕ್ಷದೀಕ್ಷಿತ** (ನಾ). ದ್ಯೂತದ ದೀಕ್ಷೆಯನ್ನು ತೊಟ್ಟವನು; ಜೂಜಾಟದಲ್ಲಿ ನಿರತನಾದವನು : ಕೃತಕಮಾರ್ಗದ ಮೋಡಿಯಲಿ ಪರಿಚಿತನು ನೀನಲ್ಲಕ್ಷವಿಮಲಕ್ರತುವಿಧಾನವನಕ್ಷದೀಕ್ಷಿತರಜಿವರಿದನೆಂದ (ಕು ವ್ಯಾ ಸ. ೧೩–೪೪). [ಅಕ್ಷ + ದೀಕ್ಷಿತ]

**ಅಕ್ಷದೇವಿ** (ನಾ). ಜೂಜುಗಾರ. [ಸಂ. ಅಕ್ಷದೇವಿನ್ (ಅಕ್ಷ + ದೇವಿನ್)]

**ಅಕ್ಷಧೂರ್ತ** (ನಾ). ೧. ದ್ಯೂತದಲ್ಲಿ ಮೋಸ ಮಾಡುವವನು. ೨. ದ್ಯೂತದಲ್ಲಿ ಮೋಸಗಾರನಾದ ಒಬ್ಬನ ಹೆಸರು : ವರಸೇನನೆಂಬೊಂ ಜೂದಾಡಿಯಕ್ಷಧೂರ್ತನೆಂಬೊಂಗೆ ಸಾಸಿರ ದೀನಾರಮಂ ಸೋಲ್ತು (ವಡ್ಡಾರಾ. ೧೪–೩). [ಅಕ್ಷ + ಧೂರ್ತ]

**ಅಕ್ಷಪಟಲ** (ನಾ). ೧. ನ್ಯಾಯಸ್ಥಾನ. ೨. ನ್ಯಾಯಸಂಬಂಧದ ಕಾಗದಪತ್ರಗಳ ಭಂಡಾರ. [ಅಕ್ಷ + ಪಟಲ]

**ಅಕ್ಷಪಾದ** (ನಾ). ೧. (ನ್ಯಾಯದರ್ಶನದ ಪ್ರವರ್ತಕನಾದ) ಗೌತಮ ಋಷಿ. ೨. ನ್ಯಾಯದರ್ಶನವನ್ನು ಅನುಸರಿಸುವವನು. [ಅಕ್ಷ + ಪಾದ]

**ಅಕ್ಷಫಲ** (ನಾ). ತಾರೆಯ ಕಾಯಿ : ಅಂದಿನ ಮನುಜರಕ್ಷಫಲದನಿತೆನಿಪ ರಸಾಯನಮನೆರಡು ದಿವಸಕ್ಕುಣ್ಬರ್ (ಪಂರಾಮಾ. ೧–೬೨). [ಅಕ್ಷ + ಫಲ]

**ಅಕ್ಷಮ** (ಗು). ೧. ಕ್ಷಮೆಯಿಲ್ಲದ; ತಾಳ್ಮೆಯಿಲ್ಲದ; ಸಹಿಸಿಕೊಳ್ಳಲಾರದ. ೨. ಅಸಮರ್ಥ : ಸಕಲಕಾರ್ಯಾಕ್ಷಮಮಪ್ಪ ತಿರ್ಯಗ್ಜಾತಿಯೊಳ್ ಬಿಟ್ಟು ಚಿಂತಾ ಪೀಡಿತ ನಾಗಿ (ಕಾದಂಉ. ೭೧೯); ಚರಣ ವದನವ ತೊಳೆದು ಥಗೆ ಡಾವರಿಸಲಕ್ಷಮನಾಗಿ . . . ಮೊಗೆದನು ಗರಳಮಯ ಜಲವ (ಕುವ್ಯಾಅ. ೨೩–೨೪). [ಸಂ.]

**ಅಕ್ಷಮಣಿ** (ನಾ). ಜಪಸರದ ಮಣಿ. [ಅಕ್ಷ + ಮಣ್ಯಿ]

**ಅಕ್ಷಮಾಲೆ** (ನಾ). ಜಪಸರ; ರುದ್ರಾಕ್ಷಿಸರ. [ಅಕ್ಷ + ಮಾಲೆ]

**ಅಕ್ಷಮೆ** (ನಾ). ಕ್ಷಮಿಸದಿರುವಿಕೆ; ಸೈರಣೆಯಿಲ್ಲದಿರುವಿಕೆ. [ಸಂ. ಅಕ್ಷಮಾ]

**ಅಕ್ಷಮ್ಯ** (ಗು). ಕ್ಷಮಿಸಲಾಗದ : ಅವನು ಮಾಡಿದ್ದು ಅಕ್ಷಮ್ಯವಾದ ಅಪರಾಧ (ರೂಢಿ). [ಸಂ.]

**ಅಕ್ಷಯ** (ಗು). ೧. ಕ್ಷಯವಿಲ್ಲದ; ನಾಶವಿಲ್ಲದ. (ನಾ). ೨. ಪ್ರಭವ ಮೊದಲಾದ ೬೦ ಸಂವತ್ಸರಗಳಲ್ಲಿ ಕೊನೆಯದು. ℙ ಇದಕ್ಕೆ 'ಕ್ಷಯ'ವೆಂದೂ ಹೆಸರುಂಟು. ೩. ಯವೆ (ಒಷಧಿ. ೪). ೪. ಕಣ್ಣು. ೫. ಕಾರ್ಯ. ೬. ಕತ್ತಲೆ. ೭. ವನ. ೮. ತೆಂಗು. ೯. ಹಲಸು. ೧೦. ಮಾವು. ೧೧. ಬಾಳೆ. ೧೨. ಗುಣ. ೧೩. ಗುಹೆ. ೧೪. ನಾರಿ ಇತ್ಯಾದಿ. "ಅಕ್ಷಯಮೆನೆ ಕಣ್ಣಕ್ಕುಂ ಅಕ್ಷಯಮೆನೆ ಕಾರ್ಯಮಕ್ಕು ಕತ್ತಲೆಯಕ್ಕುಂ ಅಕ್ಷಯಮೆನೆ ಮಾವಕ್ಕುಂ ಅಕ್ಷಯಮೆನೆ ನಾರಿಯಕ್ಕು . . . ಅಕ್ಷಯಮೆನೆ ವನವಕ್ಕುಂ ಅಕ್ಷಯಮೆನೆ ತೆಂಗು ಹಲಸು ಬಾಳೆಗಳಕ್ಕುಂ ಅಕ್ಷಯಮೆನೆ ಗುಣಮಕ್ಕುಂ ಅಕ್ಷಯಮೆನೆ ಗುಹೆಗಳಕ್ಕು" (ಶಬ್ದರ. ೨೫, ೨೬); "ಮಧು ಪ್ರಸಿದ್ಧ ಶಂಬರಮುಮ್ಮಕ್ಷರಂ ವಿಷಯ ಮುಕ್ತಿ ಗಳೆಂಬಿವಕಕ್ಷಯಾಂಕಿತಂ" (ನಾನಾರ. ೧೦). [ಸಂ.]

**ಅಕ್ಷಯತೂಣೀರ** (ನಾ). ಎಷ್ಟು ಬಾಣಗಳನ್ನು ಹೊರಕ್ಕೆ ತೆಗೆದರೂ ಬರಿದಾಗದ ಬತ್ತಳಿಕೆ; ತವದೊಣೆ. [ಅಕ್ಷಯ + ತೂಣೀರ]

**ಅಕ್ಷಯತೃತೀಯೆ** (ನಾ). ೧. = ಅಕ್ಷತದಿಗೆ. ೨. [ಜೈನ] ಶ್ರೇಯಾಂಸನು ಆದಿತೀರ್ಥಂಕರನಿಗೆ ಆಹಾರದಾನಮಾಡಿದ ಪುಣ್ಯದಿನ : ಅಕ್ಷಯದಾನಂ ನಿಮಗಕ್ಕೆಕ್ಷುಣ್ಣಮಿದೆಂದು ಪರಮ ಮುನಿ ಪರಸೆ ಬಳಿಕ್ಕಕ್ಷಯತೃತೀಯೆಯೆಂದಖಿಲಕ್ಷಿತಿಗಂ ನೆಗಟ್ಟುದಲ್ತೆ ತತ್ಪುಣ್ಯದಿನಂ (ಆದಿಪು. ೧೦–೬). [ಅಕ್ಷಯ + ತೃತೀಯೆ]

**ಅಕ್ಷಯದಾನ** (ನಾ). ಶಾಶ್ವತವಾದ ಫಲವನ್ನು ಕೊಡುವ ದಾನ. ℙ 'ಅಕ್ಷಯತೃತೀಯೆ' ಪ್ರಯೋಗ ಪರಾ. [ಅಕ್ಷಯ + ದಾನ]

**ಅಕ್ಷಯಪದ** (ನಾ). ನಾಶವಿಲ್ಲದ ಸ್ಥಾನ; ಮೋಕ್ಷ. [ಅಕ್ಷಯ + ಪದ₁]

**ಅಕ್ಷಯಪಾತ್ರೆ** (ನಾ). ೧. ಬರಿದಾಗದ ಪಾತ್ರೆ : ಯಾರಿಗೆ ಯಾವ ರುಚಿ ಬೇಕೋ ಅದನ್ನು ಒದಗಿಸುತ್ತಿತ್ತು ಆಕೆಯ ಅಂಗೈಯ ಅಕ್ಷಯಪಾತ್ರೆ (ವೈನಿ. ೧೬೬). ೨. (ವ್ಯಂಗ್ಯವಾಗಿ) ಭಿಕ್ಷಾಪಾತ್ರೆ. [ಅಕ್ಷಯ + ಪಾತ್ರೆ]

**ಅಕ್ಷಯಬೋಧ** (ನಾ). ೧. ನಾಶವಿಲ್ಲದ ಜ್ಞಾನ; ಅನಂತಜ್ಞಾನ. ೨. ಅನಂತಜ್ಞಾನವುಳ್ಳವನು; ತೀರ್ಥಂಕರ : ತಜ್ಜನಕೆ ನಿನ್ನ ನುಡಿ ಸೋಪಾನಂ ತಾನಾದುದು ಕೈವಲ್ಯಸುಧಾನಿಳಯಾಗ್ರಾರುರುಕ್ಷುಗಕ್ಷಯಬೋಧಾ (ಚಂದ್ರಪು. ೯–೩೧). [ಅಕ್ಷಯ + ಬೋಧ]

**ಅಕ್ಷಯವಟ** (ನಾ). ಗಯಾಕ್ಷೇತ್ರದ ಒಂದು ಪುರಾತನವಾದ ಆಲದ ಮರ. [ಅಕ್ಷಯ + ವಟ]

**ಅಕ್ಷಯಸಮಯ** (ನಾ). ಕ್ಷಯವಿಲ್ಲದ ಕಾಲ; ನಿರಂತರವಾದ ಕಾಲ (?) : ನಯವಿನಿಮಯ ನಾನಾಮಂತ್ರದೂತಪ್ರಯಾಣಾಕ್ಷಯಸಮಯವಿಳಾಸೋಲ್ಲಾಸಿ ಸಂಗ್ರಾಮಿತಾಂಗಂ (ಕವಿರಾ. ೩–೨೧೩). [ಅಕ್ಷಯ + ಸಮಯ]

**ಅಕ್ಷಯಸೌಖ್ಯ** (ನಾ). ನಾಶವಿಲ್ಲದ ಸೌಖ್ಯ; ಅನಂತಸುಖ : ಮಾಡುವುದೆಮಗಕ್ಷಯಸೌಖ್ಯಾನಂತಮೋಕ್ಷ ಲಕ್ಷ್ಮೀಕಾಂತಾ (ಸುಕುಮಾ. ೪–೫೩). [ಅಕ್ಷಯ + ಸೌಖ್ಯ]

**ಅಕ್ಷಯಾಧಾನ** (ನಾ). = ಅಕ್ಷಯಪಾತ್ರೆ : ಚಿರಚೈತ್ರಮಿಂದೆಲ್ಲಿ ಅಸುಗೆಯಾ ಕಾನಂ? ಎಲ್ಲಿ ಬಲ್ಲರೆ ಕೃಷ್ಣೆಯಕ್ಷಯಾಧಾನಂ? (ಗೀಳಿಎಂ. ೧೧೭–೪). [ಅಕ್ಷಯ + ಆಧಾನ]

**ಅಕ್ಷರ** (ಗು). ೧. ನಾಶವಿಲ್ಲದ; ಮರಣವಿಲ್ಲದ; ವಿಕಾರವಿಲ್ಲದ; ಸ್ಥಿರವಾದ. (ನಾ). ೨. ಅಕಾರ ಮೊದಲಾದ ವರ್ಣ. ೩. "ಒಂದು ಸಲದ ಉಚ್ಚಾರಣೆಗೆ ಶಕ್ಯವಾಗುವಷ್ಟರ ಪದಭಾಗ" (= syllable. ಇಂಕನಿ). ℙ ಸಾಮಾನ್ಯವಾಗಿ ಇದು ಒಂದು ಅಥವಾ ಹಲವು ವ್ಯಂಜನಗಳಿಂದ ಕೂಡಿರುವ ಅಥವಾ ತನಿಯಾಗಿರುವ ಒಂದು ಸ್ವರವಾಗಿರುತ್ತದೆ. ಉದಾ— "ಅಕ್ಷರ" ಎಂಬ ಶಬ್ದದಲ್ಲಿ ಅ, ಕ್ಷ, ರ ಎಂಬ ಮೂರು ಅಕ್ಷರಗಳಿವೆ. ೪. ಉಚ್ಚಾರಣೆಯನ್ನು ಬರಹದಲ್ಲಿ ತೋರಿಸುವ ಚಿಹ್ನೆ; ಲಿಪಿ : ಇಲ್ಲಿರುವ ಅ ಎಂಬ ಅಕ್ಷರವನ್ನು ಹೊಡೆದು ಹ ಎಂಬ ಅಕ್ಷರವನ್ನು ಬರೆ (ರೂಢಿ). ೫. ಬರವಣಿಗೆ; ಬರಹ : ಅವನ ಅಕ್ಷರವನ್ನು ಓದುವುದಕ್ಕೇ ಆಗುವುದಿಲ್ಲ (ರೂಢಿ). ೬. ಪತ್ರ. ೭. ಮಾತು. ೮. ಬ್ರಹ್ಮ. ೯. ವಿಷ್ಣು. ೧೦. ಶಿವ. ೧೧. ಪರಬ್ರಹ್ಮ. ೧೨. ಕೀರ್ತಿ.

೧೩. ಮೋಕ್ಷ. ೧೪. ನೀರು. ೧೫. ಆಕಾಶ. ೧೬. ತಪಸ್ಸು. ೧೭. ಧರ್ಮ. ೧೮. "ಮೂಲಕಾರಣ" (ಗಂಗಾಮ). ೧೯. ಪ್ರಣವ. ೨೦. ಕತ್ತಿ. ೨೧. ಅಪಾಮಾರ್ಗ (= ಉತ್ತರಣೆ). ೨೨. ಹೆಗ್ಗುಳ್ಳ (ಓಷಧಿ. ೪). "ಅಂಬರಮಪುನರ್ಭವಂ ವಿವಿಧವರ್ಣಮಸಂಗತಕೀರ್ತಿ ಶುಭ್ರಮಕ್ಷರಮೆನಿಸಿರ್ಕು" (ನಾನಾರ. ೭೬). [ಸಂ.]

**ಅಕ್ಷರಕಲ್** (ನಾ). ಅಕ್ಷರವನ್ನು ಬರೆದ ಕಲ್ಲು; ಶಿಲಾಶಾಸನ: ತಟ್ಟಗ್ಗೆಱೆಯ ಕಿಱಿಕ್ಕೆಱೆ ಪೋಗಿ ಅಕ್ಷರಕಲ್ಲ ಮೇಗೆ ಅಲ್ಲಿನ್ದಾ ವಸೆಲ್ (ಎಕ. II, ೩೫–೫; 800). [ಅಕ್ಷರ + ಕಲ್$_3$]

**ಅಕ್ಷರಕಾರ್ಖಾನೆ** (ನಾ). ಅಚ್ಚಿನ ಮೊಳೆಗಳನ್ನು ತಯಾರಿಸುವ ಕಾರ್ಖಾನೆ: ಅಮೆರಿಕಾದಲ್ಲಿ ಅಕ್ಷರ–ಕಾರ್ಖಾನೆ ಇರಲಿಲ್ಲ(ಬೆಂಜಮ್.೮೯). [ಅಕ್ಷರ + ಕಾರ್ಖಾನೆ]

**ಅಕ್ಷರಕೇವಳಿ** (ನಾ). ಒಂದು ವಿದ್ಯೆ: ವಿಹಗದಂತೆ ಖೇಚಕ್ರಮಂ ವರ್ತಿಸಿ ಮತ್ತಮಕ್ಷರಕೇವಳಿ ದೂತಚೇಷ್ಟೆ ಮೊದಲಾಗಿರಲಾ ಬಿಚ್ಚುವಂ ವಿದ್ಯೆಗಳೊಳೆಲ್ಲಮೊಚ್ಚತಂ ನೋಡಿದೊಡೆ (ಸುಕುಮಾ. ೩–೬ ವ).
[ಅಕ್ಷರ + ಕೇವಳಿ (= ಕೇವಲಿ)]

**ಅಕ್ಷರಖಂಡಿಕೆ** (ನಾ). ಅಕ್ಷರಾಭ್ಯಾಸದ ಪಾಠಶಾಲೆ: ವೇದಖಂಡಿಕ ಶಾಸ್ತ್ರಖಂಡಿಕ ತರ್ಕ್ಕವಕ್ಷರಖಂಡಿಕೆ × × × ಗಳುಗಗ್ರಾಸನವಿನಿತುವಂ ನಡಸುವಂತಾಗಿ (ಎಕ. VI, ಕಡೂರು. ೫೧–೬೪; 1169).
[ಅಕ್ಷರ + ಖಂಡಿಕೆ]

**ಅಕ್ಷರಗಣ** (ನಾ). ಸಂಸ್ಕೃತ ಛಂದಸ್ಸಿನಲ್ಲಿ ಹೇಳಿರುವ ಯಗಣ (ᴗ – –), ಮಗಣ (– – –), ತಗಣ (– – ᴗ), ರಗಣ (– ᴗ –), ಜಗಣ (ᴗ – ᴗ), ಭಗಣ (– ᴗ ᴗ), ನಗಣ (ᴗ ᴗ ᴗ), ಸಗಣ (ᴗ ᴗ –) ಎಂಬ ಎಂಟು ಗಣಗಳಲ್ಲಿ ಒಂದು. [ಅಕ್ಷರ + ಗಣ]

**ಅಕ್ಷರಚಣ** (ನಾ). ಓದುಬರಹದಲ್ಲಿ ಸಮರ್ಥ. [ಅಕ್ಷರ + ಚಣ$_1$]

**ಅಕ್ಷರಚುಂಚು** (ನಾ). = ಅಕ್ಷರಚಣ. [ಅಕ್ಷರ + ಚುಂಚು$_4$]

**ಅಕ್ಷರಚ್ಯುತ** (ನಾ). = ಅಕ್ಷರಚ್ಯುತಕ. [ಅಕ್ಷರ + ಚ್ಯುತ]

**ಅಕ್ಷರಚ್ಯುತಕ** (ನಾ). ಒಂದು ಶಬ್ದಾಲಂಕಾರ; ಒಂದು ವಾಕ್ಯದ ಶಬ್ದದಲ್ಲಿ ಅಥವಾ ಶಬ್ದಗಳಲ್ಲಿ ಒಂದು ಅಕ್ಷರವನ್ನು ಬಿಟ್ಟರೆ ಅರ್ಥವತ್ತಾದ ಮತ್ತೊಂದು ವಾಕ್ಯವುಂಟಾಗುವುದು: ಉದಾ— "ಉಮಾಧವಂಗೆ ವಂದನಂ": ಶಿವನಿಗೆ ವಂದನೆಯೆಂದು ಅರ್ಥ ಕೊಡುವ ಈ ವಾಕ್ಯದ ಮೊದಲನೆಯ ಶಬ್ದದಲ್ಲಿ ಮೊದಲನೆಯ ಅಕ್ಷರವಾದ ಉಕಾರವನ್ನು ಬಿಟ್ಟರೆ ಮಾಧವಂಗೆ [= ವಿಷ್ಣುವಿಗೆ] ವಂದನೆಯೆಂಬ ಅರ್ಥವತ್ತಾದ ವಾಕ್ಯವಾಗುತ್ತದೆ.
[ಸಂ. (ಅಕ್ಷರ + ಚ್ಯುತಕ)]

**ಅಕ್ಷರಛಂದಸ್ಸು** (ನಾ). ಯಗಣ, ಮಗಣ ಮುಂತಾದ ಅಕ್ಷರಗಣಗಳನ್ನು ಆಧಾರವಾಗಿ ಉಳ್ಳ ಛಂದಸ್ಸು. [ಅಕ್ಷರ + ಛಂದಸ್ಸು]

**ಅಕ್ಷರಜೀವಕ** (ನಾ). ಬರವಣಿಗೆಯಿಂದ ಜೀವಿಸುವವನು; ಶಾನುಭೋಗ; ಕುಲಕರಣಿ: "ಕಾಯಸ್ಥಃ, ಅಕ್ಷರಜೀವಕಃ – ಈ ೨ ಸೇನಬೋವಂ" (ಹಲಾಯು. ೯೬–೪೩೨). [ಅಕ್ಷರ + ಜೀವಕ]

**ಅಕ್ಷರಜೀವಿ** (ನಾ). = ಅಕ್ಷರಜೀವಕ: "ಅಕ್ಷರಜೀವಿ ಚಿತ್ರಕಾಯಸ್ಥನೆನೆ ಸೇನಭಾಗಂ" (ಮಂಗರಾ. ೧೧೫–೧೪). [ಅಕ್ಷರ + ಜೀವಿ]

**ಅಕ್ಷರಜ್ಞ** (ನಾ). ಅಕ್ಷರವನ್ನು ಬಲ್ಲವನು; ವಿದ್ಯಾವಂತ: ಓದಿನಲ್ಲಿ ಕಾಬರೆ ಅಕ್ಷರಜ್ಞನಲ್ಲ ವಾದಿನಲ್ಲಿ ಕಾಬರೆ ಗಂಧರ್ವನಲ್ಲ (ಮೋಳಿಮಾ. ೨–೨). [ಸಂ.]

**ಅಕ್ಷರದಾರಿದ್ರ್ಯ** (ನಾ). ಅಕ್ಷರಜ್ಞಾನವಿಲ್ಲದಿರುವುದು; ವಿದ್ಯೆಯಿಲ್ಲದಿರುವುದು: ಇಂದಿನ ಸಾಮಾಜಿಕರ ಅಕ್ಷರದಾರಿದ್ರ್ಯವು ಬಲುದೊಡ್ಡದು (ಸಾಹಿವಿ. ೭೦). [ಅಕ್ಷರ + ದಾರಿದ್ರ್ಯ]

**ಅಕ್ಷರಪುರುಷ** (ನಾ). ನಾಶವಿಲ್ಲದ ಪುರುಷ; ಪರಮಾತ್ಮ
[ಅಕ್ಷರ + ಪುರುಷ]

**ಅಕ್ಷರಮಾಲೆ** (ನಾ). ಒಂದು ಭಾಷೆಯಲ್ಲಿಯ ಎಲ್ಲಾ ವರ್ಣಗಳ ಅನುಕ್ರಮದ ಪಾಠ; ವರ್ಣಮಾಲೆ. 'ಜಿನಾಕ್ಷರಮಾಲೆ' ಪರಾ.
[ಅಕ್ಷರ + ಮಾಲೆ]

**ಅಕ್ಷರರೇಖೆ** (ನಾ). ಬರಹ: ಅವಳೊಳ್ಪಸಿಜ ವಳಿ ರೇಖೆಗೆಟ್ಟುವು ನೊಸಲಕ್ಷ[ಪಾಠಾಂ. ಕ್ಕ]ರರೇಖೆಯೊಡನೆ ಮಧುರಾಧಿಪನಾ (ಅರ್ಧನೇ. ೭–೩೪).
[ಅಕ್ಷರ + ರೇಖೆ]

**ಅಕ್ಷರವಿದ್ಯೆ** (ನಾ). ೧. ಅಕ್ಷರಗಳ ತಿಳಿವಳಿಕೆ; ಓದುಬರಹ: ಅಕ್ಷರವಿದ್ಯೆಯನ್ನು ಮಾರಿ ಮೂರುದಿನದ ಈ ಮಣ್ಣಿನ ಗಡಿಗೆಯನ್ನು ಉಳಿಸಿಕೊಳ್ಳಬೇಕೆ? (ತುಂಗಭ. ೮). 'ಅಕ್ಕರವಿದ್ಯೆ' ಪರಾ. ೨. ಶಾಶ್ವತವಾದ ವಿದ್ಯೆ; ಬ್ರಹ್ಮವಿದ್ಯೆ. [ಅಕ್ಷರ + ವಿದ್ಯೆ]

**ಅಕ್ಷರವಿನ್ಯಾಸ** (ನಾ). ಅಕ್ಷರಗಳ ಜೋಡಣೆ. [ಅಕ್ಷರ + ವಿನ್ಯಾಸ]

**ಅಕ್ಷರವೃತ್ತ** (ನಾ). [ಛಂದ] ಅಕ್ಷರ ಗಣಗಳಿಂದ ರಚಿಸಿದ ವೃತ್ತ; ವಸಂತತಿಲಕ, ಶಾರ್ದೂಲವಿಕ್ರೀಡಿತ ಮೊದಲಾದ ವೃತ್ತಗಳಲ್ಲಿ ಒಂದು. [ಅಕ್ಷರ + ವೃತ್ತ]

**ಅಕ್ಷರವೃತ್ತಿ** (ನಾ). ಪದದಲ್ಲಿರುವ ಅಕ್ಷರಗಳ ಸಂಖ್ಯೆ: ದಿಟದ ನಾಮಂಗಳ ಅಕ್ಷರವೃತ್ತಿಗೆ–ಪೂ, ಮರಂ, ಹೊತ್ತಗೆ, ಕವಳಿಗೆ, ಕಟ್ಟವತ್ತಿಗೆ (ಶಮುದ. ೭೬ ಪ್ರಯೋ). [ಅಕ್ಷರ + ವೃತ್ತಿ]

**ಅಕ್ಷರಶಃ** (ಅ). ೧. ಒಂದೊಂದು ಅಕ್ಷರವನ್ನೂ ಹಿಡಿದು; ಅಕ್ಷರ ಅಕ್ಷರವಾಗಿ. ೨. ಅಕ್ಷರಾರ್ಥದಲ್ಲಿ; ಪ್ರತಿಯೊಂದು ವಿವರದಲ್ಲೂ: ಅವನ ವಿಷಯದಲ್ಲಿ ನೀನು ಹೇಳಿದ್ದು ಅಕ್ಷರಶಃ ನಿಜವಾಯಿತು (ರೂಢಿ). [ಸಂ.]

**ಅಕ್ಷರಶತ್ರು** (ನಾ). ೧. ಓದುಬರಹವನ್ನು ದ್ವೇಷಿಸುವವನು. ೨. ಓದುಬರಹ ಬಾರದವನು: ಆ ಅಡಿಗೆಯ ಮಾಣಿಯು ಅಷ್ಟೊಂದು ಅಕ್ಷರಶತ್ರುವಿರಲಿಲ್ಲ (ಅಂಬಿಕೆ. ೮೨). [ಅಕ್ಷರ + ಶತ್ರು]

**ಅಕ್ಷರಸಂಕೇತ** (ನಾ). ಒಂದು ಬಗೆಯ ಗೂಢಲಿಪಿ (೬).
[ಅಕ್ಷರ + ಸಂಕೇತ]

**ಅಕ್ಷರಸಂಜ್ಞೆ** (ನಾ). ೧. ಅಕ್ಷರಗಳನ್ನು ಗುರುತಿಸುವುದಕ್ಕೂ ವಿಂಗಡಿಸುವುದಕ್ಕೂ ಉಪಯೋಗಿಸುವ ಸಂಕೇತ(ಗಳು). ಉದಾ—ಸ್ವರ, ವ್ಯಂಜನ ಇತ್ಯಾದಿ. ☞ ಶಬ್ದಮಣಿದರ್ಪಣದ ಮೊದಲನೆಯ ಸಂಧಿಯಲ್ಲಿ ಬರುವ "ಅಕ್ಷರಸಂಜ್ಞಾ ಪ್ರಕರಣಂ" ಎಂಬುದನ್ನು ನೋಡಿ. ೨. ವ್ಯಂಜನಾಕ್ಷರಗಳಿಂದ ಸಂಖ್ಯೆಯನ್ನು ಸೂಚಿಸುವ ಪದ್ಧತಿ: "ನಿರುತದಿಂ ಕಟಪ[ಯ]ಮೆನಲ್ಕೊಂದು ಖಠಫರಮದೆರಡಕ್ಕು ಗಡಬಲಂ ಮೂಱಕ್ಕು ಘಢಭವಂ ನೆರೆ ನಾಲ್ಕು ಙಣಮುಶಮದೈದು ಚತಷವಾಱು ಛಥಸಮುದೇಳು ಜದಹಮೆಂಟು ಅಱ ಝಧಳಮೊಂಬತ್ತು ನಂ ಸೊನ್ನೆಯಿಂತಿವಕ್ಷರಸಂಜ್ಞೆಯಕ್ಕು" (ಮಂಗರಾ. ೧೧೪–೧೧).
[ಅಕ್ಷರ + ಸಂಜ್ಞೆ]

**ಅಕ್ಷರಸಂಸ್ಥಾನ** (ನಾ). = ಅಕ್ಷರವಿನ್ಯಾಸ. [ಅಕ್ಷರ + ಸಂಸ್ಥಾನ]

**ಅಕ್ಷರಸ್ಥ** (ನಾ) ಅಕ್ಷರ ತಿಳಿದವನು; ಓದು ಬರಹ ಬಲ್ಲವನು: ನಾವು ಮಾತಾಡಿಸಿದ ಮನುಷ್ಯ ಅಕ್ಷರಸ್ಥನಂತೆ ತೋರಲಿಲ್ಲ (ರೂಢಿ).
[ಅಕ್ಷರ + –ಸ್ಥ]

**ಅಕ್ಷರಾಂಕಗಣಿತ** (ನಾ). ಅಕ್ಷರಗಳ ಮೂಲಕ ಅಂಕಿಗಳನ್ನು ಸೂಚಿಸುವ ಗಣಿತ: ಅದು ಅಕ್ಷರಾಂಕ ಗಣಿತ, ಅಕ್ಷರಗಳೇ ಅಂಕಿಗಳನ್ನು ಹೇಳಬಲ್ಲುವು (ತುಂಗಭ. ೨೦). [ಅಕ್ಷರ + ಅಂಕ್ಕ + ಗಣಿತ]

**ಅಕ್ಷರಾತ್ಮಕ** (ಗು). ಅಕ್ಷರಗಳಿಂದ ಕೂಡಿದ : ಅಕ್ಷರರೂಪಂ = ಅಕ್ಷರಾತ್ಮಕವಮಾದ (ಶಮುದ. ೩೫ ಟೀಕೆ). [ಸಂ. (ಅಕ್ಷರ + ಆತ್ಮನ್ + –)]

**ಅಕ್ಷರಾಭ್ಯಾಸ** (ನಾ). ೧. ಅಕ್ಷರಗಳನ್ನು ಕಲಿಯುವುದು. ೨. ಮಗುವಿಗೆ ಅಕ್ಷರ ಕಲಿಸಲು ಪ್ರಾರಂಭಮಾಡುವ ಶುಭಕಾರ್ಯ; ಓನಾಮ ಪೂಜೆ. [ಅಕ್ಷರ + ಅಭ್ಯಾಸ]

**ಅಕ್ಷರಾರ್ಥ** (ನಾ). ಶಬ್ದದ ಅಕ್ಷರಗಳಿಂದ ನೇರವಾಗಿ ಹೊರಡುವ ಅರ್ಥ : "ಪ್ರತಿಭೆ" ಎಂಬ ಶಬ್ದದ ಅಕ್ಷರಾರ್ಥ "ಹೊಳಹು" (ಭಾರಮಿಾ. ೧೬೨). [ಅಕ್ಷರ + ಅರ್ಥ]

**ಅಕ್ಷರುಚಕ** (ನಾ). "ಸೋರುಪ್ಪು" (ಗಂಗಾಮ). [ಸಂ.]

**ಅಕ್ಷರೇಖೆ** (ನಾ). ಭೂಮಿಯ ಅಚ್ಚು ಎಂದು ಭಾವಿಸಿರುವ, ಉತ್ತರ ದಕ್ಷಿಣ ಧ್ರುವಗಳನ್ನು ಕೂಡಿಸುವ, ನೇರಗೆರೆ. [ಅಕ್ಷ + ರೇಖೆ]

**ಅಕ್ಷವತಿ** (ನಾ). ಪಗಡೆಯ ಆಟ ; ಜೂಜು. [ಸಂ. ಅಕ್ಷವತೀ]

**ಅಕ್ಷವಲಯ**, ಅಕ್ಷವಳಯ (ನಾ). ಜಪಸರ : ವನಿತೆಯ ಮೌಕ್ತಿಕಾಕ್ಷವಲಯಂ ಕೊರಲೊಳ್ ಕರಮೊಪ್ಪಿ ತೋಱುಗುಂ (ಕಾದಂಪೂ. ೬೭೪). **ಅಕ್ಷವಳಯ** : ಬಕುಳದ ಪೂವಿನಕ್ಷವಳಯಕ್ಕೆ ದುಕೂಲದ ಚೆಲ್ವನಪ್ಪ ಸಾಳಿಗೆಗೆ (ಶಾಂತಿಪು. ೮–೯೦). [ಅಕ್ಷ + ವಲಯ]

**ಅಕ್ಷವಳಯ** 'ಅಕ್ಷವಲಯ' ನೋ.

**ಅಕ್ಷವಿದ್ಯೆ** (ನಾ). ಪಗಡೆಯ ಆಟದ ವಿದ್ಯೆ. [ಅಕ್ಷ + ವಿದ್ಯೆ]

**ಅಕ್ಷಸೂತ್ರ** (ನಾ). ಜಪಸರ : ಪರಶುಫಳಾಕ್ಷಸೂತ್ರ ವರದೋಚಿತ ಚಿಹ್ನ ಚತುರ್ಭುಜಂ (ಆದಿಪು. ೧–೮). [ಅಕ್ಷ + ಸೂತ್ರ]

**ಅಕ್ಷಹೃದಯ** (ನಾ). ಪಗಡೆಯಾಟದ ಮರ್ಮ, —ಒಳಗುಟ್ಟು. [ಅಕ್ಷ + ಹೃದಯ]

**ಅಕ್ಷಾಂತಕ** (ನಾ). ಅಕ್ಷನೆಂಬ ರಾಕ್ಷಸನನ್ನು ಕೊಂದವನು ; ಹನುಮಂತ. [ಅಕ್ಷ + ಅಂತಕ]

**ಅಕ್ಷಾಂತಿ** (ನಾ). ಸೈರಣೆಯಿಲ್ಲದಿರುವಿಕೆ ; ಅಸೂಯೆ. [ಸಂ.]

**ಅಕ್ಷಾಂಶ** (ನಾ). ಅಕ್ಷರೇಖೆಯ ಒಂದು ಭಾಗ ; ಭೂಗೋಳದ ಅಕ್ಷರೇಖೆಯನ್ನು ೧೮೦ ಅಂಶಗಳಾಗಿ ಭಾಗಿಸಿ ಈ ಭಾಗಬಿಂದುಗಳನ್ನು ಕೇಂದ್ರವಾಗಿಟ್ಟುಕೊಂಡು ಗೋಳದ ಮೇಲ್ಮೈಯ ಮೇಲೆ ಅಡ್ಡಡ್ಡಲಾಗಿ ಎಳೆದಂತೆ ಭಾವಿಸಿರುವ ವೃತ್ತಾಕಾರದ ರೇಖೆ. [ಅಕ್ಷ + ಅಂಶ]

**ಅಕ್ಷಾಂಶರೇಖೆ** (ನಾ). ಕೃತಕ ಭೂಗೋಳದ ಅಥವಾ ಭೂಪಟದ ಮೇಲೆ ಸಮಭಾಜಕ ವೃತ್ತಕ್ಕೆ ಸಮಾನಾಂತರವಾಗಿ ಎಳೆದಿರುವ ರೇಖೆ : ಹೀಗೆ ಸಮಭಾಜಕವೃತ್ತಕ್ಕೆ ಸಮಾನಾಂತರವುಳ್ಳ ರೇಖೆಗಳನ್ನು ಪ್ರತಿಯೊಂದು ಭಾಗದಿಂದಲೂ ಎಳೆಯಬಹುದು. ಈ ರೇಖೆಗಳನ್ನು ಅಕ್ಷಾಂಶರೇಖೆಗಳೆಂದು ಹೇಳುತ್ತೇವೆ (ಭೂವಿವ. ೧೬). [ಅಕ್ಷಾಂಶ + ರೇಖೆ]

**ಅಕ್ಷಾಂಶವೃತ್ತ** (ನಾ). ಅಕ್ಷಾಂಶರೇಖೆಯಿಂದ ಆಗಿರುವ ವೃತ್ತ : ಈ ಅಕ್ಷಾಂಶ ವೃತ್ತಗಳನ್ನು ಸಮಭಾಜಕವೃತ್ತದಿಂದ ಎಣಿಸಲು ಪ್ರಾರಂಭಿಸುತ್ತೇವೆ (ಭೂವಿವ. ೧೬). [ಅಕ್ಷಾಂಶ + ವೃತ್ತ]

**ಅಕ್ಷಾಗ್ರ** (ನಾ). (ಬಂಡಿಯ) ಅಚ್ಚಿನ ಮರದ ತುದಿ. [ಅಕ್ಷ + ಅಗ್ರ]

**ಅಕ್ಷಾರ₁** (ಗು). ಉಪ್ಪಿಲ್ಲದ. [ಸಂ.]

**ಅಕ್ಷಾರ₂** (ನಾ). ಅಕ್ಷರ ; ಲಿಪಿ : ಅಕ್ಷಾರದಲ್ಲೂ ಮೂವತ್ತಐದು ವರಹನ ಗ್ರಾಮ[ವ]ನೂ (ಎಕ. XIV, ಗುಂಡ್ಲುಪೇ. ೧೩೨–೧೨ ; 1540) ; "ಅಕ್ಷಾರವಿಶೇಷರೇಖೆ ಗೃಹಮುಟ್ಟುಗಳುಂ ಪೊರೆ ಮಾತ್ರೆಯುಕ್ಕುಂ" (ನಾನಾರ. ೧೫೮). [ಸಂ. ಅಕ್ಷರ]

**ಅಕ್ಷಾವಳಿ** (ನಾ). ಜಪಸರ : ತೊಳಗುವ ಹಾರಮನಾಗಳ್ ತಳೆವಂತಿರೆ ನೆಲಕೆ ಬೀಳ್ವಿನಂ ಪಿಡಿದಕ್ಷಾವಳಿಯುಂ ಕೊರಲೊಳ್ ತಳೆದು (ಕಾದಂಪೂ. ೭೭೧). [ಅಕ್ಷ + ಆವಳಿ (= ಆವಲಿ)]

**ಅಕ್ಷಿ** (ನಾ). ೧. ಕಣ್ಣು. ೨. ರಂಧ್ರ : ದೂರದರ್ಶಕ ಯಂತ್ರದಕ್ಷಿಯೊಳ್ ಕಣ್ಣಿಟ್ಟು (ಶ್ರೀರಾಮಾ. ೧೧–೨೬೩). [ಸಂ.]

**ಅಕ್ಷಿಕರ್ಣ** (ನಾ). ಕಣ್ಣೇ ಕಿವಿಯಾಗಿರುವ ಪ್ರಾಣಿ ; ಹಾವು : "ಅಕ್ಷಿಕರ್ಣಂ . . . ಎನಲು ಸರ್ಪಂಗೆ ನಾಮಂ" (ಮಂಗರಾ. ೧೧೮–೧). [ಅಕ್ಷಿ + ಕರ್ಣ]

**ಅಕ್ಷಿಕೂಟಕ** (ನಾ). ಕಣ್ಣಿನ ಗುಡ್ಡೆ. [ಅಕ್ಷಿ + ಕೂಟಕ]

**ಅಕ್ಷಿಗತ** (ಗು). ೧. ಕಣ್ಣಿಗೆ ಬಿದ್ದಿರುವ ; ದೃಷ್ಟಿಯಲ್ಲಿರುವ ; ಕಣ್ಣೆದುರಿಗೆ ಇರುವ. ೨. ಕಣ್ಣು ಕುಕ್ಕುವ ; ಕಣ್ಣುಬೇನೆಯಂತಿರುವ ; ಅನಿಷ್ಟ : "ಅಕ್ಷಿಗತಃ ದ್ವೇಷ್ಯಃ, ಪ್ರಣಾಯ್ಯಃ, ಅಸಮ್ಮತಃ – ಈ ೪ ಅನಿಷ್ಟಂ" (ಹಲಾಯು. ೬೦–೨೧೧). "ಅಕ್ಷಿಗತನಸಮ್ಮತನೆನಲನಿಷ್ಟನಕ್ಕು" (ಮಂಗರಾ. ೭೧–೧೬). [ಅಕ್ಷಿ + ಗತ]

**ಅಕ್ಷಿಗಾವುದ** (ನಾ). ಕಣ್ಣು ಹಾಯುವಷ್ಟು ದೂರ (?) : ಪಕ್ಷಿಗಾವುದಕೊಂದು ಪಟ್ಟಣ ನಿಂತೀತು ಕೇಳಿರಣ್ಣಾ ಅಕ್ಷಿಗಾವುದಕೊಂದು ಜ್ಯೋತಿಗಳಾದ[ದಾ]ವು ಕೇಳಿರಣ್ಣಾ (ಕಾಲಸಂ. ೧೦೧–೨). [ಅಕ್ಷಿ + ಗಾವುದ]

**ಅಕ್ಷಿತಾರಕ** (ನಾ). ಕಣ್ಣಿನ ಪಾಪೆ, —ಗೊಂಬೆ : "ಕನೀನಿಕಾನಾಮಮಕ್ಷಿತಾರಕಮಕ್ಕುಂ" (ವಸ್ತುಕೋ. ೭೦–೧೭). [ಸಂ. ಅಕ್ಷಿತಾರಕಾ (ಅಕ್ಷಿ + ತಾರಕಾ)]

**ಅಕ್ಷಿಪಕ್ಷ** (ನಾ). ಕಣ್ಣುರೆಪ್ಪೆ. [ಅಕ್ಷಿ + ಪಕ್ಷ]

**ಅಕ್ಷಿಪಕ್ಷ್ಮ** (ನಾ). = ಅಕ್ಷಿಪಕ್ಷ. [ಅಕ್ಷಿ + ಪಕ್ಷ್ಮ]

**ಅಕ್ಷಿಭ್ರಮ** (ನಾ). ೧. ಕಣ್ಣಿನ ಚಲನೆ. ೨. ಕಣ್ಣಿನ ಭ್ರಾಂತಿ. [ಅಕ್ಷಿ + ಭ್ರಮ]

**ಅಕ್ಷಿಮಣ** (ನಾ). ಕಣ್ಣು ಮತ್ತು ಮನಸ್ಸು (?) : ಈ ಮಹಾಪರೂತದುಳ್ ಅಕ್ಷಯಕೀರ್ತಿ ತುನ್ತಕದ ವಾರ್ಧಿಯ ಮೇಲದು ನೋನ್ತು ಭಕ್ತಿಯಿವರ್ ಅಕ್ಷಿಮಣಕ್ಕೆ ರಮ್ಯ ಸುರಲೋಕಸುಕಕ್ಕೆ ಭಾಗಿ (ಎಕ. II, ೨೧–೪; 700). [ಅಕ್ಷಿ + ಮನ ?]

**ಅಕ್ಷಿಮಧ್ಯ** (ನಾ). = ಅಕ್ಷಿತಾರಕ : "ಕನೀನಿಕೆಯದಕ್ಷಿಮಧ್ಯಂ" (ಮಂಗರಾ. ೯೩–೨). [ಅಕ್ಷಿ + ಮಧ್ಯ]

**ಅಕ್ಷಿಮೂಲ** (ನಾ). ಕಣ್ಣಿನ ಮೊದಲು ; ಕಣ್ಣಿನ ಕುಣಿಕೆ ; ಮೊದಲುಗಣ್ಣು : "ಅಕ್ಷಿಮೂಲಂ ಪೂರ್ವನೇತ್ರಮೆನೆ ಮೊದಲಗಣ್" (ಮಂಗರಾ. ೯೪–೩). [ಅಕ್ಷಿ + ಮೂಲ]

**ಅಕ್ಷಿರೋಗ** (ನಾ). ಕಣ್ಣಿನ ರೋಗ ; ಕಣ್ಣುಬೇನೆ. [ಅಕ್ಷಿ + ರೋಗ]

**ಅಕ್ಷಿರೋಮ** (ನಾ). ಕಣ್ಣಿನ ರೆಪ್ಪೆಯ ಕೂದಲು ; ಎವೆ : "ಅಕ್ಷಿರೋಮಂ ಪಕ್ಷ್ಮಮೆಂದೊಡೆವೆಗಳ್" (ಮಂಗರಾ. ೯೪–೩). [ಅಕ್ಷಿ + ರೋಮ]

**ಅಕ್ಷಿವಿಕ್ಷೇಪ** (ನಾ). ನೋಟವನ್ನು ಬೀರುವುದು. [ಅಕ್ಷಿ + ವಿಕ್ಷೇಪ]

**ಅಕ್ಷಿಶೂಲೆ** (ನಾ). = ಅಕ್ಷಿರೋಗ. [ಅಕ್ಷಿ + ಶೂಲೆ]

**ಅಕ್ಷಿಶ್ರವಣ** (ನಾ). = ಅಕ್ಷಿಕರ್ಣ. [ಅಕ್ಷಿ + ಶ್ರವಣ₂]

**ಅಕ್ಷಿಶ್ರುತಿ** (ನಾ). = ಅಕ್ಷಿಕರ್ಣ. [ಅಕ್ಷಿ + ಶ್ರುತಿ]

**ಅಕ್ಷಿಸು** (ಕ್ರಿ). ನೋಡು ; ವಿಚಾರಿಸು : ಈ ತೆಱದಿಂ ಅಕ್ಷಿಸಿ ಸುಖಿಸುತ್ತಿಹುದೆಂದನು ದೇಶಿಕನು (ಕಲ್ಯಾಣೇ. ೨೨). ☞ ಈ ಶಬ್ದವು "ಲಕ್ಷಿಸು" ಎಂಬುದಕ್ಕೆ ಅಪಲಿಖಿತವಾಗಿರಬಹುದು. [ಅಕ್ಷಿ + –ಇಸು₃]

**ಅಕ್ಷಿಸ್ಪಂದ** (ನಾ). ಕಣ್ಣು ಅದುರುವುದು ; ಕಣ್ಣಿನ ಮಿಟುಕು. [ಅಕ್ಷಿ + ಸ್ಪಂದ]

**ಅಕ್ಷಿಸ್ಪಂದನ** (ನಾ). = ಅಕ್ಷಿಸ್ಪಂದ. [ಅಕ್ಷಿ + ಸ್ಪಂದನ]

**ಅಕ್ಷಿಹೀನ** (ನಾ). ಕಣ್ಣಿಲ್ಲದವನು; ಕುರುಡ: "ಅಂಧಂ ಸಮಂತಕ್ಷಿ ಹೀನಂ" (ವಸ್ತುಕೋ. ೭೪–೪೦). [ಅಕ್ಷಿ + ಹೀನ]

**ಅಕ್ಷೀಣ** (ಗು). ೧. ಕ್ಷೀಣವಾಗದ; ಬಡವಾಗದ. ೨. ನಾಶವಿಲ್ಲದ; ಶಾಶ್ವತವಾದ: ಮುನಿಪಶ್ರೇಣಿಗಳವಾಙ್ಮನಸುಗಳಿಗಕ್ಷೀಣಪದದಲಿ ಮೀಱಿ ತೋಱುವ ನಿರುಪಮಿತಮೂರ್ತಿ (ಬಸವು. ೫೦–೭೦). [ಸಂ.]

**ಅಕ್ಷೀಣಮಹಾಲಯ** (ನಾ). [ಜೈನ] ಎಷ್ಟು ಜನ ಬಂದರೂ ಮನೆಯಲ್ಲಿ ಸ್ಥಳವಿರಬಹುದಾದ ಮಹಿಮೆಯುಳ್ಳವನು: ಕ್ಷೇತ್ರರ್ದ್ಧಿ ಪ್ರಾಪ್ತಾರ್ಯರ್ ಅಕ್ಷೀಣಮಹಾಶನರುಂ ಅಕ್ಷೀಣಮಹಾಲಯರುಂ ಎಂದಿತ್ತೆಱಂ (ತತ್ತ್ವಪ್ರ. ೧೭೪). [ಸಂ. (ಅಕ್ಷೀಣ + ಮಹತ್ + ಆಲಯ)]

**ಅಕ್ಷೀಣಮಹಾಶನ** (ನಾ). [ಜೈನ] ಎಷ್ಟು ಜನ ಊಟಮಾಡಿದರೂ (ಮನೆಯಲ್ಲಿ) ಆಹಾರ ಮುಗಿಯದಂತಿರುವ ಮಹಿಮೆಯುಳ್ಳವನು: ಕ್ಷೇತ್ರರ್ದ್ಧಿ ಪ್ರಾಪ್ತಾರ್ಯರ್ ಅಕ್ಷೀಣಮಹಾಶನರುಂ ಅಕ್ಷೀಣಮಹಾಲಯರುಂ ಎಂದಿತ್ತೆಱಂ (ತತ್ತ್ವಪ್ರ. ೧೭೪). [ಸಂ. (ಅಕ್ಷೀಣ + ಮಹತ್ + ಅಶನ)]

**ಅಕ್ಷೀಬ** (ಗು). = ಅಕ್ಷೀವ. [ಸಂ.]

**ಅಕ್ಷೀವ** (ಗು). ೧. ಕುಡಿದು ಮತ್ತೇರದ. (ನಾ). ೨. ನುಗ್ಗೆಯ ಗಿಡ. ೩. ಸಮುದ್ರದ ಉಪ್ಪು. [ಸಂ.]

**ಅಕ್ಷುಣ್ಣ** (ಗು). ೧. ತುಳಿಯದ. ೨. ಮುರಿಯದ. ೩. ಕೊರತೆಯಿಲ್ಲದ: ಅಕ್ಷಯದಾನಂ ನಿಮಗಕ್ಕಕ್ಷುಣ್ಣಮಿದೆಂದು ಪರಮಮುನಿ ಪರಸೆ (ಆದಿಪು. ೧೦–೬). [ಸಂ.]

**ಅಕ್ಷುಭಿತ** (ಗು). ಕ್ಷೋಭೆಯಿಲ್ಲದ; ಪ್ರಶಾಂತವಾದ. [ಸಂ.]

**ಅಕ್ಷುಬ್ಧ** (ಗು). = ಅಕ್ಷುಭಿತ. ?[ಸಂ.]

**ಅಕ್ಷೂಣ** (ಗು). ಕಡಮೆಯಾಗದ; ಕೊರತೆಯಿಲ್ಲದ: ಇಳಾಭಾರಕ್ಷಮಾಕ್ಷೂಣನಂ ಅಂತು ಸರ್ವಲಕ್ಷಣಸಂಪೂರ್ಣನಪ್ಪ ಮಗನನಮೋಘಂ ಪಡೆವೆನೆಂಬುದ್ಯೋಗಮನೆತ್ತಿಕೊಂಡು (ಪಂಪಭಾ. ೧–೧೩೪, ವ). [ಸಂ. ಅಕ್ಷುಣ್ಣ]

**ಅಕ್ಷೇತ್ರ** (ನಾ). ೧. ಕೃಷಿಮಾಡದ ಭೂಮಿ. ೨. ತಕ್ಕದ್ದಲ್ಲದ, ಯೋಗ್ಯವಲ್ಲದ ಕ್ಷೇತ್ರ. [ಸಂ.]

**ಅಕ್ಷೋಟ** (ನಾ). ಬೆಟ್ಟದ ಗೋಣಿಮರ. [ಸಂ.]

**ಅಕ್ಷೋಡ** (ನಾ). = ಅಕ್ಷೋಟ. [ಸಂ.]

**ಅಕ್ಷೋಣಿ** (ನಾ). = ಅಕ್ಷೌಹಿಣಿ ೧: ಇವರ ಬಳಿಯಲಿ ಬಿಂಕದೆರಡಕ್ಷೋಣಿ ಬಲವದೆ (ಕುವ್ಯಾಭೀ. ೨–೧೦). [ಸಂ. ಅಕ್ಷೌಹಿಣೀ]

**ಅಕ್ಷೋದ** (ಗು). = ಅಕ್ಷೋಭ ೧. [ಸಂ.]

**ಅಕ್ಷೋಭ** (ಗು). ೧. ಕ್ಷೋಭೆಯಿಲ್ಲದ; ತಳಮಳವಿಲ್ಲದ. (ನಾ). ೨. ಸ್ಥೈರ್ಯ. ೩. ಆನೆಯನ್ನು ಕಟ್ಟುವ ಕಂಬ. [ಸಂ.]

**ಅಕ್ಷೋಭ್ಯ** (ಗು). ಕ್ಷೋಭೆಗೊಳ್ಳದ; ತಳಮಳಿಸದ; ಕದಡದ; ಸ್ಥಿರವಾದ. [ಸಂ.]

**ಅಕ್ಷೋಹಿಣಿ** (ನಾ). = ಅಕ್ಷೌಹಿಣಿ ೨: ಕರಿಗಳ್ ಭೃಂಗಕುಳಾಕುಳೀಕೃತಕಟೋಪೇತಂಗಳೊಂಬತ್ತುಸಾಸಿರಮಂತೊಂದು ಗಜಕ್ಕೆ ನೂಱು ರಥಮಂತಾ ಸ್ಯಂದನಕ್ಕೊಂದಱೊಳ್ ತುರಗಂ ನೂಱನಿತುಂ ತುರಂಗದಳಮೊಂದೊಂದರ್ಕೆ ನೂಱಾಳ್ ತಗುಳ್ವಿರೆ ಬಲ್ಲರ್ ನಡೆ ನೋಡಿ ಕೂಡೆ ಪಡೆದತ್ತಕ್ಷೋಹಿಣೀ ಸಂಖ್ಯೆಯಂ (ಪಂಪಭಾ. ೯–೯೫). [ಸಂ. ಅಕ್ಷೌಹಿಣೀ]

**ಅಕ್ಷೋಳ** (ನಾ). = ಅಕ್ಷೋಟ: ಗಿರಿಪ್ರಭವಮುದಕ್ಷೋಳಂ (ವಸ್ತುಕೋ. ೩೪–೮). [ಸಂ.]

**ಅಕ್ಷೌಹಿಣಿ** (ನಾ). ೧. ೨೧,೮೭೦ ಆನೆ, ೨೧,೮೭೦ ರಥ, ೬೫,೬೧೦ ಕುದುರೆ, ೧,೦೯,೩೫೦ ಕಾಲಾಳು–ಇಷ್ಟನ್ನೂ ಒಳಕೊಂಡ ಸೈನ್ಯ: ಒಂದು ಸಾಮಜಮೊಂದು ತೇರ್ ಮೂಱಶ್ವಮೆಯ್ದು ಕಾಲಾಳ್ಗಳ್ ಪತ್ತಿಯಕ್ಕುಂ ಸಂದ ಪತ್ತಿ ಮೂಱಾಗೆ ಸೇನಾಮುಖಮಾಮೂಱು ಗುಲ್ಮಂ ಮೂಱುಗುಲ್ಮಕ್ಕೊಂದು ಗಣಮವು ಮೂಱುವಾಹಿನಿ ತತ್ತ್ರಯಂ ಪೃತನಾಖ್ಯೆ ಪೃತನೆಗಳ್ ಮೂಱೊಂದಿ ತೋಱೆ ಚಮೂ(ವದು) ಮೂಱನೀಕಿನಿ ಪತ್ತನೀಕಿನಿಯಕ್ಷೌಹಿಣಿಯೆನಿಕ್ಕುಂ (ವಸ್ತುಕೋ. ೮೩–೮). ೨. ಪಂಪಭಾರತದಲ್ಲಿ ಹೇಳಿರುವ ಮೇರೆಗೆ ಇನ್ನೊಂದು ವಿವರಣೆ: ೯,೦೦೦ ಆನೆ; ೯,೦೦೦ × ೧೦೦ ರಥ; ೯,೦೦೦ × ೧೦೦ × ೧೦೦ ಕುದುರೆ; ೯,೦೦೦ × ೧೦೦ × ೧೦೦ × ೧೦೦ ಕಾಲಾಳು – ಇಷ್ಟನ್ನೂ ಒಳಕೊಂಡ ಸೈನ್ಯ. 'ಅಕ್ಷೋಹಿಣಿ' ಪರಾ. [ಸಂ. ಅಕ್ಷೌಹಿಣೀ]

**ಅಖಂಡ** (ಗು). ನಡುವೆ ಕತ್ತರಿಸಿ ಹೋಗದ; ಅವಿಚ್ಛಿನ್ನವಾದ; ಪೂರ್ಣವಾದ. [ಸಂ.]

**ಅಖಂಡಣ** (ಗು). = ಅಖಂಡನ. [ಸಂ. ಅಖಂಡನ]

**ಅಖಂಡದೀಪ** (ನಾ). ಸದಾ ಉರಿಯುತ್ತಿರುವ ದೀಪ; ನಂದಾದೀಪ: ಆ ಊರಿನ ಈಶ್ವರಾಲಯಕ್ಕೂ ದತ್ತಿಗಳನ್ನು ಬಿಟ್ಟುಕೊಟ್ಟು ಅಖಂಡದೀಪಕ್ಕೆ ವ್ಯವಸ್ಥೆಮಾಡಿ ಬಂದರು (ಶಾಂತಲಾ. ೨೧೪). [ಅಖಂಡ + ದೀಪ$_1$]

**ಅಖಂಡನ** (ಗು). ೧. ಖಂಡಿಸದ; ಭಂಗವಾಗದ; ಮುರಿಯದ. ೨. ಪೂರ್ಣವಾದ; ಸಮಗ್ರ. (ನಾ). ೩. ಖಂಡಿಸದಿರುವಿಕೆ. ೪. ಕಾಲ. [ಸಂ.]

**ಅಖಂಡಪತ್ರ** (ನಾ). (ಪರಂಗಿ, ಮರಗೆಣಸು ಮುಂತಾದ ಎಲೆಗಳಂತೆ) ವಿಭಾಗ ಹೊಂದದ ಎಲೆ (ಕಿಸಂಗ್ಲಾ. ೪೪). [ಅಖಂಡ + ಪತ್ರ]

**ಅಖಂಡಸುಖ** (ನಾ). ವಿಚ್ಛೇದವಿಲ್ಲದ ಸುಖ; ಪೂರ್ಣಸುಖ: ನೃಪತಿ ಕಂಡನಖಂಡಸುಖೈಕಭಾಗಿಯಂ (ಚಂದ್ರಪು. ೩–೬೯). [ಅಖಂಡ + ಸುಖ]

**ಅಖಂಡಸೌಭಾಗ್ಯ** (ನಾ). ೧. ಸ್ಥಿರವಾದ ಮುತ್ತೈದೆತನ. ೨. (ವ್ಯಂಗ್ಯವಾಗಿ) ಸೂಳೆತನ; ನಿತ್ಯಸುಮಂಗಲಿತನ (ಉಕ). [ಅಖಂಡ + ಸೌಭಾಗ್ಯ]

**ಅಖಂಡಿತ** (ಗು). ೧. ಖಂಡಿಸಿಲ್ಲದ; ಕತ್ತರಿಸದ; ಭಂಗವಾಗದ: ಏನಖಂಡಿತಮೊ ಶೌರ್ಯಗುಣೋನ್ನತಿ ರಾಜರಾಜನಾ (ಪಂಪಭಾ. ೧೩–೬೫); ಅಖಂಡಿತಮಭಿಮಾನಮದನೆ ಬಲ್ವಿಡಿವಿಡಿವೆಂ (ಗದಾಯು. ೫–೫೩). ೨. ಎಡೆಬಿಡದ; ನಿರಂತರ. ೩. ವಾದದಲ್ಲಿ ಸೋಲದ; ಖಂಡನೆ ಹೊಂದದ. [ಸಂ.]

**ಅಖಂಡಿತಕಾಯಕ** (ನಾ). ಮಧ್ಯದಲ್ಲಿ ಬಿಟ್ಟುಹೋಗದ ಕಾಯಕ; ಸಂತತವಾದ ಕಾಯಕ: ಅಖಂಡಿತಕಾಯಕದ ಅಖಂಡಿತರ ಕಂಡೇವು (ಕಾಲಸಂ. ೧೨–೭). [ಅಖಂಡಿತ + ಕಾಯಕ]

**ಅಖಂಡಿತಪ್ರಸಾದಿ** (ನಾ). [ವೀಶೈ] ಪ್ರಸಾದಸ್ಥಲದಲ್ಲಿ ಚ್ಯುತಿಯಾಗದಂತೆ ನಡೆಯುವವನು: ಖಂಡಿತವಿಲ್ಲದ ಅಖಂಡಿತಪ್ರಸಾದಿ ಕೂಡಲಸಂಗಮದೇವರಲ್ಲಿ ತಾನೇ ಪ್ರಸಾದಿ (ಬಸವ. ೯೪೨). [ಅಖಂಡಿತ + ಪ್ರಸಾದಿ]

**ಅಖರ್ವ** (ಗು). ೧. ಕುಳ್ಳಲ್ಲದ. ೨. ಅಲ್ಪವಲ್ಲದ; ಮಹತ್ತಾದ: ಪಗಲ್ ಕಡುಕೊರ್ವಂ ಪಡೆದಿರ್ಪನಂ ರಘುತನೂಜಾಖರ್ವ ಚಾತುರ್ಬಲಂ (ಪಂರಾಮಾ. ೧೨–೩೨); ಅತಿಬಳ ಮೂಕದಾನವನೆನಿಪ್ಪವನೊರ್ವನಖರ್ವಗರ್ವಸಂಯುತಂ (ಶಬಶಂ. ೪–೨). [ಸಂ.]

**ಅಖರ್ವಭಕ್ತಿ** (ನಾ). ಅಲ್ಪವಲ್ಲದ ಭಕ್ತಿ; ಮಹತ್ತಾದ ಭಕ್ತಿ: ನೋಡ ಲೇಕೋರಾಮಿತಂದೆಗಳಖರ್ವಭಕ್ತಿಯೊಳು ಶಿವ ಶಿವ ಎಂದು (ಗುರುಚಾ. ೨-೬೮). [ಅಖರ್ವ + ಭಕ್ತಿ]

**ಅಖಲು** 'ಅಕ್ಕಲ್ಲು₂' ನೋ.

**ಅಖಲ್ಯ** (ಗು). ೧. ಹೇಡಿ: "ಅಖಲ್ಯ-ಹೇಡಿ" (ಜಾತತಿ. ಪರಿ. ೩೯೫); ಶಲ್ಯಂ ಸತ್ತಿಂಬಟಿಯಮಖಲ್ಯಂ ಕೊಳದೊಳಗೆ ಪೊಕ್ಕು ಮೆಯ್ಗರೆದೈ ಚಿಃ ಖಲ್ಯನೆನೆ ಬಾರ್ತೆಗೆಟ್ಟುದಮೂಲ್ಯಯಶೋರತ್ನಮೆಂಬುದಂ ಮಾಸುವೆನೇ (ಗದಾಯು. ೬-೨೪); ರವಿ ಲಗ್ನಾವಸಥಕ್ಕೆ ಷಷ್ಠಗೃಹದೊಳ್ ನಿಂದಂ ದಖಲ್ಯಂ ಪರಾಭವಭಾಜಂ (ಜಾತತಿ. ೧೪-೩). ೨. ಅಪ್ರಯೋಜಕ; ನಿಸ್ಸಾರ: ನಿರೀಕ್ಷಿಸಿ ನಿಕೃಷ್ಟ ದುಷ್ಟಗಣರಂ ಗತಪ್ರಜ್ಞ[ರಂ] ನಿರಂತರ ದಿಗಂತರೋಪಗತ ದುರ್ಯಶಃಪ್ರಾಪ್ತರಂ ದುರಾತ್ಮರನಖಲ್ಯರಂ ಬಟುಕ ಸೋಮಶರ್ಮಾತ್ಮಜಾತರಂ ಖಳವಿನೀತರಂ ವಿಕೃತ ಮಾರ್ಗವಿಖ್ಯಾತರಂ (ಸುಕುಮಾ. ೨-೧೮); ನೆರೆದೀ ಸಭೆಯೊಳ್ ಲಜ್ಜಾಭರದಿಂ ತಲೆಯೆಱಕ ಮಾಡುದಿಂದೆನಗೀ ದುಶ್ಚರಿತರನಿವಂದಿರಂ ಪರಿಹರಿಸಿಮಯೋಗ್ಯರನಖಲ್ಯರಂ ನಿರ್ಗುಣರಂ (ಸುಕುಮಾ. ೨-೨೪). 'ಅಶಲ್ಯ' ಪರಾ. [ಸಂ. ?]

**ಅಖಾಡ** 'ಅಕ್ಸಡ' ನೋ.

**ಅಖಾತ** (ಗು). ೧. ಅಗೆಯಲ್ಪಡದ; ಅಗೆದು ಮಾಡಿಲ್ಲದ. (ನಾ). ೨. ನೈಸರ್ಗಿಕವಾದ ಕೊಳ ಅಥವಾ ಸರೋವರ. ೩. ಕೊಲ್ಲಿ. ಉದಾ— ಬಂಗಾಳ ಅಖಾತ. [ಸಂ.]

**ಅಖಾದ್ಯ** (ಗು). ೧. ತಿನ್ನಲಾಗದ. ೨. ತಿನ್ನಬಾರದ. [ಸಂ.]

**ಅಖಾರಿ** (ಗು). ದೋಷವಿಲ್ಲದ; ಕಳಂಕವಿಲ್ಲದ (ಸ್ಯಾಂಡರ್). [?]

**ಅಖಿನ್ನ** (ಗು). ಖಿನ್ನನಾಗದ; ವಿಷಾದವಿಲ್ಲದ. [ಸಂ.]

**ಅಖಿಲ**, ಅಖಿಳ (ಗು). ಕೊರೆಯಿಲ್ಲದ; ಇಡಿಯಾದ; ಸಮಗ್ರ; ಪೂರ್ಣ. **ಅಖಿಳ**: 'ಅಖಿಳವೇದಿ' ಪರಾ. [ಸಂ.]

**ಅಖಿಲಾಂಡ** (ನಾ). ಸಮಸ್ತ ಪ್ರಪಂಚ. [ಅಖಿಲ + ಅಂಡ₂]

**ಅಖಿಳ** 'ಅಖಿಲ' ನೋ.

**ಅಖಿಳವೇದಿ** (ನಾ). ಎಲ್ಲವನ್ನೂ ತಿಳಿದವನು; ಸರ್ವಜ್ಞ: ರಸಭಾವ ಸಮನ್ವಿತನೆಂದು ಸುಭಗನೆಂದಖಿಳವೇದಿಯೆಂದನ್ವಿತನೆಂದು ಸಮಗ್ರನೆಂದು ಸಲೆ ಬಣ್ಣಿಸುವುದು ಧರೆ (ಜಾತತಿ. ೨೪-೪೩).
[ಅಖಿಳ (= ಅಖಿಲ) + ವೇದಿ]

**ಅಖಿಳಾದ್ವೈತ** (ನಾ). ಪೂರ್ಣವಾದ ಅದ್ವೈತ: ನಿರ್ವಿಭವವಂತಲ್ಲ ಕೇಳಿರೆ ಪಾರ್ವತೀಶದ್ವೈತವೆಂಬುದದೊರ್ವನಖಿಳಾದ್ವೈತವದು ತಾನಂತುಮಲ್ಲದೆಯು (ಬಸವು. ೫೧-೧೮). [ಅಖಿಳ (= ಅಖಿಲ) + ಅದ್ವೈತ]

**ಅಖಿಳಾಹುತಿ** (ನಾ). ಎಲ್ಲಾ ಬಗೆಯ ಆಹುತಿ: ಬೆರಳ ಸಮಿಧೆಯ ಲಡಗಿನಖಿಳಾಹುತಿಯ ರಚನೆಯಲಿ (ಕುವ್ಯಾಉ. ೧೦-೧೯).
[ಅಖಿಳ (= ಅಖಿಲ) + ಆಹುತಿ]

**ಅಖೇರ** 'ಆಖೈರು' ನೋ.

**ಅಖೋಟ** 'ಅಕ್ರೋಡ' ನೋ.

**ಅಖ್ಖ[ಕ್ಖ]ಂಡ** (ಗು). ಮುಕ್ಕಾಗದ; ಇಡಿಯಾದ; ಪೂರ್ಣ: ಒಪ್ಪುವ ಕನ್ನಡದೊಳ್ ಸ್ವಭಾವದಿಂ ಕೆಲವು ಮಹಾಪ್ರಾಣಂಗಳೊಳವು; ಅವಾವುವೆಂದೊಡೆ – ವರ್ಗದ್ವಿತೀಯಾಕ್ಷರಂಗಳ್ಗೆ ವಖ್ಖಾಣಂ . . . ಅಖ್ಖ[ಕ್ಖ]ಂಡಂ . . . ಖೊಪ್ಪರಂ (ಶಮದ. ೧೫ ವೃತ್ತಿ).
[ಪ್ರಾ. ಅಕ್ಖಂಡ (< ಸಂ. ಅಖಂಡ); ಪಾಲಿ. ಅಕ್ಖಂಡ]

**ಅಖ್ಯಾತಿ** (ನಾ). ೧. ಕೆಟ್ಟ ಹೆಸರು; ಅಪಖ್ಯಾತಿ; ಅಪಕೀರ್ತಿ. ೨. [ತತ್ತ್ವಶಾ] ವಸ್ತುವನ್ನು ಸರಿಯಾಗಿ ತಿಳಿದುಕೊಳ್ಳದೆ ಇರುವ ಭ್ರಾಂತಿ. 'ಅಖ್ಯಾತಿವಾದ' ಪರಾ. [ಸಂ.]

**ಅಖ್ಯಾತಿವಾದ** (ನಾ). [ತತ್ತ್ವಶಾ]: "ಅಖ್ಯಾತಿ ಎಂದರೆ ವಸ್ತುವನ್ನು ಸರಿಯಾಗಿ ತಿಳಿದುಕೊಳ್ಳದೆ ಇರುವ ಭ್ರಾಂತಿ ಎಂದರ್ಥ . . . ಇತರರು ಒಂದು ವಸ್ತುವನ್ನು ಮತ್ತೊಂದು ವಸ್ತುವಾಗಿ ತಿಳಿಯುವುದು ಎಂಬ ಭ್ರಾಂತಿಯನ್ನು ಎಲ್ಲಿ ಹೇಳುತ್ತಾರೋ ಅಲ್ಲಿ ಇವರು [= ಸಾಂಖ್ಯರು] ಆ ಎರಡು ವಸ್ತುಗಳಿಗೂ ಇರುವ ವ್ಯತ್ಯಾಸವನ್ನು ತಿಳಿಯದೆ ಇರುವುದೇ ಭ್ರಮೆ ಎಂದು ಹೇಳುತ್ತಾರೆ. ಇದೇ ಅಖ್ಯಾತಿವಾದ" (ಹಿಂದಸಾ. ೫೧).
[ಅಖ್ಯಾತಿ + ವಾದ]

**ಅಗ-₁** (ನಾ). ಒಳಗು, ಒಳಗಡೆ ಎಂಬ ಅರ್ಥವುಳ್ಳ ಶಬ್ದ. ℙ ಈ ಶಬ್ದಕ್ಕೆ ಕನ್ನಡದಲ್ಲಿ ಸ್ವತಂತ್ರಪ್ರಯೋಗವಿಲ್ಲ. ಇದು 'ಅಗಂಗೊಳ್' 'ಅಗಪಡು' ಮೊದಲಾದ ಸಮಾಸಗಳಲ್ಲಿ "ಅಗ-", "ಅಗಂ-" ಈ ರೂಪಗಳಲ್ಲಿ ದೊರೆಯುತ್ತದೆ. [ದೇ. ‖ ತಮಿ. ಮಲ. ಅಗ]

**ಅಗ₂** (ಗು). ೧. ನಡೆಯಲಾರದ. (ನಾ). ೨. ಮರ. ೩. ಬೆಟ್ಟ. ೪. ಹಾವು. ೫. ಸೂರ್ಯ. [ಸಂ.]

**ಅಗಂಗೊಳ್** (ಕ್ರಿ). ಒಳಕೊಳ್ಳು; ಸ್ವಾಧೀನಪಡಿಸಿಕೊ: ಬೆದರು ಗಣ್ಣಾಗುತ್ತೆ ನಿಟ್ಟಿಸಿದಳೀನಸೊ ಸುದೂರವನಗಂಗೊಳ್ವವೋಲ್ (ಶ್ರೀರಾಮಾ. ೬೫೭-೨೨೨). [ಅಗ-₁ + ಕೊಳ್₁]

**ಅಗಚಾಟಲು**, ಅಗಚಾಟಲೆ, ಅಗಚಾಟು, ಅಗಚಾಟ್ಲು (ನಾ). ಆಯಾಸ; ಶ್ರಮ. **ಅಗಚಾಟಲೆ** (೬). **ಅಗಚಾಟು**: "ಈ ಸೌಂದರ್ಯ ನಾಟಕದ ಕಂಪನಿ ಅಗಚಾಟನಲ್ಲಿ ಹಾಳುಮಾಡಿಕೊಳ್ಳಬೇಕೆಂದಿದ್ದೆಯಲ್ಲಾ" (ನಟಸಾ. ೬೨೮). **ಅಗಚಾಟ್ಲು**: ಅಡವಿಯೊಳಗೆ ಶೇರಿ ಅಗಚಾಟ್ಲು ಬೀಳುವಂತಾ ಕನಸು ಕಂಡೆ ನಾನು (ಯನಳ. ೬೫).

**ಅಗಚಾಟಲು ಪಡು, ಅಗಚಾಟಲು ಬೀಳು** = ತೊಂದರೆ ಪಟ್ಟುಕೊ; ಕಷ್ಟಕ್ಕೆ ಸಿಕ್ಕಿಕೊ.

[ದೇ. ?. ‖ ತೆಲು. ಅಗಚಾಟುಲು, ಅಗಚಾಟ್ಲು = ಕಷ್ಟ, ಆಪತ್ತು]

**ಅಗಚಾಟಲೆ** 'ಅಗಚಾಟಲು' ನೋ.

**ಅಗಚಾಟು** 'ಅಗಚಾಟಲು' ನೋ.

**ಅಗಚಾಟ್ಲು** 'ಅಗಚಾಟಲು' ನೋ.

**ಅಗಚಾಟ್ಲುಮಾರಿ** (ನಾ). ಕಷ್ಟದಲ್ಲಿ ಸಿಕ್ಕಿಕೊಂಡವನು; ತೊಂದರೆಗೆ ಒಳಗಾದವನು (ಸ್ಯಾಂಡರ್).

[ಅಗಚಾಟ್ಲು (< ಅಗಚಾಟಲು) + ?. ‖ ತೆಲು. ಅಗಚಾಟ್ಲಮಾರಿ = ಕಷ್ಟಗಳನ್ನು ಉಂಟುಮಾಡುವ ಸ್ವಭಾವದವನು, ದುಷ್ಟ]

**ಅಗಚಿಗದ್ದೆ** (ನಾ). ಒಂದು ಬಗೆಯ ಗದ್ದೆ: ಯೀ ಉಭಯ ಗ್ರಾಮುಗಳ ಮಧ್ಯದಲ್ಲಿ ಯಿರುವ ಅಗಚಿಗದ್ದೆ ಮಾನಿಯಲ್ಲಿ ಮಠಾ ಕಟ್ಟಿಶಿ (ಎಕ. V, ಹಾಸನ. ೧೭-೧೩; 1774). [ಅಗಚ್ಚಿ + ಗದ್ದೆ (< ಗಟ್ಟೆ)]

**ಅಗಚಿತಡ** (ನಾ). ಒಂದು ಊರಿನ ಹೆಸರು (?): ತಂನ ನಡಪಿದ ಎಳೆಯರು ಅಗಚಿತಡ ಕೆ[ೞ]ತನು ಪಟ್ಟವಳಿಯೆ ಮಸಣನ ಕೂಡೆ ಕಾದು (ಎಕ. VII, ಶಿವಮೊ. ೨೩-೯; 1115). [?]

**ಅಗಚು** 'ಅಗಲ್ಚು' ನೋ.

**ಅಗಜಾತೆ** (ನಾ). ಹಿಮವಂತನ ಮಗಳು; ಪಾರ್ವತಿ.
[ಸಂ. ಅಗಜಾತಾ (ಅಗ + ಜಾತಾ)]

**ಅಗಜಾರಮಣ** (ನಾ). ಪಾರ್ವತಿಯ ಪತಿ; ಶಿವ.
[ಸಂ. (ಅಗಜಾ + ರಮಣ)]

**ಅಗಜೆ** (ನಾ). = ಅಗಜಾತೆ. [ಸಂ. ಅಗಜಾ]

**ಅಗಜೇಂದ್ರ** (ನಾ). = ಅಗಜಾರಮಣ. [ಸಂ. (ಅಗಜಾ + ಇಂದ್ರ)]

**ಅಗಜೇಶ** (ನಾ). = ಅಗಜಾರಮಣ. [ಸಂ. (ಅಗಜಾ + ಈಶ)]

**ಅಗಟವಿಗಟ** 'ಅಕಟವಿಕಟ' ನೋ.

**ಅಗಟು** (ನಾ). ಕಮಟು ವಾಸನೆ; ಮಣಕು ವಾಸನೆ: ಮೃದುವಾದ ಉರಗತಲ್ಪನು ತಾನು ಹಸಿಬಾಣತಿಯ ಅಗಟ[= ಅಗಟಿನ] ಮಂಚದೊಳಿಪ್ಪನೇ (ವಾದಿಕೀ. ೧-೧೩೦-೫). [?]

**ಅಗಡ** (ನಾ). ೧. ತುಂಟ; ದುಷ್ಟ. ೨. ತುಂಟತನ; ದುಷ್ಟತನ: ಏಳುನೂಜಿಪ್ಪತ್ತು ಅಮರಗಣಂಗಳ ಭಾವವಿಡ್ದಂತೆ ನಿಮ್ಮ ಅಗಡವೇ ಕಯ್ಯಾ? (ಮದೇಮ್ಮ. ೨೩). [**ಸಂ.** *ಅಘಟ?]

**ಅಗಡತನ** (ನಾ). ತುಂಟತನ: ಅವನು ಅಗಡತನದಿಂದ ಬಿಲ್ಲಿಗೆ ಹೆದೆಯೇರಿಸಿ ತೀಡಿ ಜೇಗೈದು ನಿಂತುಕೊಂಡ (ಬಿದುರಿ. ೨೦೯).
[ಅಗಡ + -ತನ]

**ಅಗಡದತ್ತ** (ಗು). ಧಾಂಡಿಗ: ಅಗಡದತ್ತ ಕುದುರೆ (ಉಕ. ೬).
[ಅಗಡ + ?]

**ಅಗಡದಿಗಡ** (ನಾ). ಒರಟ; ತುಂಟ: "ಅಗಡದಿಗಡ-ಎಟ್ಟತನ" (ಜಾನಕೋ). [ಅಗಡ + ದಿಗಡ]

**ಅಗಡವಿಗಡ** 'ಅಕಟವಿಕಟ' ನೋ.

**ಅಗಡಾನೆ** (ನಾ). ತುಂಟ ಆನೆ: ಅಗಡಾನೆ ಬಿಗಿದು ಬಲ್ಪಿಡಿಯಿತ್ತಲ್ಲಾ ಜಗವೆಲ್ಲವ (ಆದವ. ೩೧). [ಅಗಡ + ಆನೆ]

**ಅಗಡಿಸು** (ಕ್ರಿ). ಕೆಡಿಸು; ಹಾಳುಮಾಡು: ಅಗಡಿಸಿದರಡವಿಯನು ಬಱಿಕೈದರು ಮಹಾವನವ (ನಿಭಾಗ. ೧೦-೬೧-೧೭); ನಿಗಮಮಾರ್ಗಂಗಳನು... ಅಗಡಿಸುವ ಪಾಷಂಡಪಥದೊಳಿಗವ ಮಾಣಿಸಲೆಂದು (ನಿಭಾಗ. ೧೦-೪೫-೨೭). [ಅಗಡು + -ಇಸು₃]

**ಅಗಡೀದಿಗಡೀ** (ಗು). (ಉಕ) ಅಡ್ಡಾದಿಡ್ಡಿ: ಒಬ್ಬಿಬ್ಬರು ಅಗಡೀದಿಗಡೀ ಬೆಲೆಗೆ ಸಾಮಾನು ಕೇಳಿ ವ್ಯಾಪಾರಿಗಳ ಕೈಯಿಂದ ಹುಚ್ಚಾಪಟ್ಟೆ ಬೈಸಿಕೊಂಡು ಜಗಳಕ್ಕೆ ಸಿದ್ಧರಾಗುತ್ತಿದ್ದರು (ರಕ್ತಧ್ವ. ೧೦೭).
[← **ಮರಾ.** ಅಗಡೀದಗಡೀ = ಅಸ್ತವ್ಯಸ್ತ ಸ್ಥಿತಿ]

**ಅಗಡು** (ನಾ). ೧. ಅವಿಧೇಯತೆ; ತುಂಟತನ; ದುಷ್ಟತನ: ಅಗಡಿನ ಪೆಂಡಿರೊಳ್ ವ್ಯವಹಾರಮಲ್ಲದೆ ಬೇಟಮಿಲ್ಲ (ಲೀಲಾವ. ೨-೯೩ ವ). (ಗು). ೨. ಹಿಡಿತಕ್ಕೆ ಸಿಕ್ಕದ; ತುಂಟ; ದುಷ್ಟ; ಒರಟ: ನೆರೆಮನೆಯವರು ಮಿಥ್ಯವಾದಿಗಳು ಪಶುಗಳಗಡು (ಹಚಶಾ. ೧೨-೩); ಅಗಡು ಪುಷ್ಕರನಿತ್ತ ಕೋಪಾಗ್ನಿಯಲಿ ಖತಿ ಮಸಗೆ (ನಳಚ. ೯-೩೭); ಮಹಿಷಖಳನೆಂಬಗಡು ರಕ್ಕಸನಹಿಮಿಷಾರಣ್ಯದಲಿ ತಪದೊಳು (ಅಂಬಿಕಾ. ೮-೧೯).
**ಅಗಡಾಗು** = ಕೆಟ್ಟುಹೋಗು; ಹಾಳಾಗು: ಮಗನನೀವೆನೆ ಪಾರಲೌಕಿಕವಗಡಹುದು (ಕುವ್ಯಾಆ. ೧೦-೧೩).
[< ಅಗಡ. ‖ **ತಮಿ. ತೆಲು.** ಅಗಡು]

**ಅಗಡುಕುದುರೆ** (ನಾ). ೧. ತುಂಟ ಕುದುರೆ; ಪಳಗಿಸದಿರುವ ಕುದುರೆ: ಆಸಗೊಳ್ಳದ ಅಗಡು ಕುದುರೆಗಳನ್ನು ಸಾಗುಮಾಡುವುದರಲ್ಲಿ ಇವನು ಜಾಣನಿದ್ದನು (ಪ್ರಾಚೀಹಿಂ. ೫೨). ೨. ಬಿಳಿಯ ಕುದುರೆ (?): "ಬಿಳಿಯ ಕುದುರೆ ಸಿತ ಕರ್ಕ ಎನಿಸುಗು; ಅಗಡುಕುದುರೆಯೆಂದೂ ಎಂಬರು" (ನಾಚಿರಾ. ೬). [ಅಗಡು + ಕುದುರೆ]

**ಅಗಡುಗೊಳ್** (ಕ್ರಿ). ಕೆಟ್ಟುಹೋಗು (?): ವಿಗಡಿಸಿದರೊಳಪೊಕ್ಕು ಸದ್ಯಃಸ್ಥಗಿತದುಃಖಸುಖಮಿತ್ತೊಡಮಗಡುಗೊಂಡಾಯಾ ಪದಾರ್ಥವನಾಳ್ದರಿಂದಹುದು (ವಿವೇಭ. ೪-೪೭). [ಅಗಡು + ಕೊಳ್₁]

**ಅಗಡುಗೊಳಿಸು** (ಕ್ರಿ). ಕೆಡಿಸು; ಹಾಳುಮಾಡು: ಸುರಪನೆಯ್ದುವನಗಡುಗೊಳಿಸಲು ಕವಚವನು ನೀ ತೆಗೆದು ಕೊಡದಿರು (ಕುವ್ಯಾಆ. ಒರಿಇ. ೨೩-೭); ದೇವ ಎನ್ನನು ಅಗಡುಗೊಳಿಸದಿರು ಅನಿಮಿತ್ತ ಬಾಂಧವ (ವಿಪ್ರಸು. ೧೮-೪). [ಅಗಡುಗೊಳ್ + -ಇಸು₃]

**ಅಗಡುತನ** (ನಾ). ತುಂಟತನ; ದುಷ್ಟತನ: ಬೆಣ್ಣೆಯ ಮಡಕೆಯ ನೊಣ ನುಂಗಿತ್ತು ನುಂಗಿದ ನೊಣವ ಹಿಂದೆ ಹಿಡಿಯಲಾಗಿ ಉಗ[ಗು]ಳದು ಬೆಣ್ಣೆಯ ಕೊಡದು ಮಡಕೆಯ ಇದಱಗಡುತನವ ನೋಡಾ (ಮೋಳಿಮಾ. ೨೧೬-೭೮೦); ಯಾದವನಗಡುತನಕೌಷಧಿಯ ಬಲ್ಲೆನು ಬಿಗಿದು ಕೆಡಹುವೆ (ಕುವ್ಯಾಉ. ೭-೧೮); ಅಗಡುತನದಲಿ ಕೆಟ್ಟೆ ನಿನಗಿನ್ನಾರು ಗತಿಯೆಂದ (ಕೋಗಯು. ೨೫-೩೭); ಅಗಡುತನ ಮಾಡಬೇಡ (ಅಗ್ರಹ. ೩೫-೯).
[ಅಗಡು + -ತನ]

**ಅಗಡುದನ** (ನಾ). ತುಂಟ ದನ: ಹಳ್ಳಿ ತೋಟಗಳ ಸುತ್ತಲೂ ಬೇಲಿ ಆಗತ್ಯ; ಅಗಡು ದನಗಳ ಕಾಟದಿಂದ ಬೆಳೆಯನ್ನು ಉಳಿಸಲು (ತರಬೆ. ೬೭).
[ಅಗಡು + ದನ]

**ಅಗಡುದಾನವ** (ನಾ). ದುಷ್ಟರಾಕ್ಷಸ: ಅಗಡುದಾನವನಿವನು ಕಡ್ಡಿಗೆ ಬಗೆವನೇ (ಕುವ್ಯಾದ್ರೋ. ೧೬-೫). [ಅಗಡು + ದಾನವ]

**ಅಗಡುಬೊಮ್ಮ** (ನಾ). ಗಟ್ಟಿಮುಟ್ಟಾದವನು; ಧಾಂಡಿಗ: ಆ ಹೆಂಣಿಗೂ ಆ ಗಂಡಿಗೂ ಈಡೇ ಇಲ್ಲ... ಆ ಹೆಂಣಿಗೆ ಎಲ್ಲಿಯಾದರೂ ಅವರಂಥ ಇವರಂಥ ನಿನ್ನಂಥ ಅಗಡುಬೊಮ್ಮನ ಹಾಗೆ ಇರತಕ್ಕವರು ಇದ್ದರೆ ಸಗ್ಗಿಯಾಳು (ಮಾಮರಾ. ೧೩೬). [← **ಮರಾ.** ಅಗಡಬಂಬ]

**ಅಗಡುಮಗ** (ನಾ). ದುಷ್ಟನಾದ ಮಗ: ನಿನ್ನಗಡುಮಗನುತ್ಸಾಹವದ್ದುದು ಖೇದಪಂಕದಲಿ (ಕುವ್ಯಾದ್ರೋ. ೧೯-೫೧); ನಿನ್ನಗಡುಮಗನಾವೇಳೆಯಲ್ಲಿ ಕರ್ಣಂಗೆ ಸೇನಾಪಟ್ಟಗಟ್ಟಲೆಂದು ಚಿಂತಿಸುತ್ತಿರ್ದನು (ತುರಂಗ. ೫೮-೭೧, ೭೨). [ಅಗಡು + ಮಗ]

**ಅಗಡುಮಾಡು** (ಕ್ರಿ). ೧. ಕಾಡು; ಹಿಂಸೆಪಡಿಸು: ಅಗಡು ಮಾಡಿದ ನಿಮ್ಮ ಮಕ್ಕಳ ವಿಗಡತನಕಂಜಿದರೊ ದುರಿತದ ಸೊಗಡಿಗಂಜಿದರೋ (ಕುವ್ಯಾಸ. ೧೬-೫೬); ಆ ಬಡಜನರನ್ನು ಹೀಗೆ ಅಗಡುಮಾಡುವುದು ಯುಕ್ತವಲ್ಲ (ಸುಮಚ. ೨೧೪). ೨. ಕೀಳುಮಾಡು; ತೆಗಳು: ಹಗೆಯನೇ ಕೊಂಡಾಡಿ ಸ್ವಾಮಿಗೆ ಬೆಗಡ ಬೆಳಸಿ ರಣಾಗ್ರಸುಭಟರನಗಡುಮಾಡಿ ವೃಥಾತ್ಮಕುಕ್ಷಿಂಭರಿಕರೆಂದೆನಿಸಿ (ಕುವ್ಯಾಕ. ೯-೧೬). [ಅಗಡು + ಮಾಡು₁]

**ಅಗಡುಮೋಱೆ** (ನಾ). ವಿಕಾರವಾದ, ಘೋರವಾದ ಮುಖ: ಹೊಗರೊಗುವ ದಾಡೆಗಳ ದಳ್ಳಿಸುವಗಡುಮೋಱೆಯ... ರಕ್ಕಸರನೀಕ್ಷಿಸಿ (ತೊರರಾ. ೬-೧೩-೬). [ಅಗಡು + ಮೋಱೆ]

**ಅಗಡುವಾಕ್ಯ** (ನಾ). = ಅಗಡುಮಾತು: ಪಗೆಯ ಕೈವಿಡಿದೆಮ್ಮ ಶಿಷ್ಟರನಗಡುವಾಕ್ಯದಿ ಪರಿಹರಿಸಿ ಸರಿಮಿಗಿಲ ಮಾನಸನೆಂದಹಂಕಾರದಲಿ (ಕೋಗಯು. ೧೭-೭೧). [ಅಗಡು + ವಾಕ್ಯ]

**ಅಗಡುಮಾತು** (ನಾ). ಅಪವಾದ; ನಿಂದೆ: ಮಗಗಾದ ಲೀಲೆ ತಂದೆಗೆ ಬಂದ ಶೂಲೆಯೆಂಬಗಡುಮಾತಿಗೆ ಬಂಚೆನಲ್ತೆ (ಭರಚ. ೫೮-೮೪).
[ಅಗಡು + ಮಾತು₁]

**ಅಗಡುಹೇಳು** (ಕ್ರಿ). ನಿಂದೆ ಮಾಡು: ಅಗಡುಹೇಳುವ ಅಣ್ಣಗಳೆಲ್ಲರೂ ಕೊಡುವರಿಲ್ಲದಿರೆ ಹಾವ ಹಿಡಿದ ಕೋಡಗದಂತಾದರು (ಕವಿಚ. I, ೨೦೮, ಸಗಬೊ). [ಅಗಡು + ಹೇಳು (< ಪೇೞ್)]

**ಅಗಣಿ₁** 'ಅಗ್ಗಱಿ₁' ನೋ.

**ಅಗಣಿ₂** 'ಅರ್ಘವಾಣಿ' ನೋ.

**ಅಗಣಿತ** (ಗು). ೧. ಎಣಿಸಿಲ್ಲದ; ಲೆಕ್ಕವಿಲ್ಲದ; ಲೆಕ್ಕಕ್ಕೆ ಮೀರಿದ. (ನಾ). ೨. (ಸಾಮರ್ಥ್ಯದಲ್ಲಿ) ಅಳತೆಗೆ ಮೀರಿದವನು: ಭೀಷ್ಮನ ಬೆಗಡುಗೊಳಿಸಲು ಹರನ ಹವಣಲ್ಲಗಣಿತನ ಸಾಮದಲಿ ಮುಱಿಯಲು ಬೇಕು (ಕುವ್ಯಾಭೀ. ೭-೧೨). ೩. ಗಣನೆಗೆ ಅರ್ಹತೆಯಿಲ್ಲದಿರುವಿಕೆ: ಅಗಣಿತದ ಶಿಶುವಿವನು ಕೋಟಿಯ ವಿಗಡರಿದಿರಿಗೆ ನೂಕಲಾಱನು (ಕುವ್ಯಾದ್ರೋ. ಪರಿ. ಪು. ೨೭೭). ೪. ಸಮೂಹ: "ಸಂದೋಹವಗಣಿತಂ ಸಕಲಂ ತತಿ" (ಮಂಗರಾ. ೧೨೬-೧). [**ಸಂ.**]

**ಅಗಣ್ಯ** (ಗು). ೧. ಎಣಿಸಲಾಗದ; ಲೆಕ್ಕ ಮಾಡಲಾಗದ; ಅಸಂಖ್ಯ. ೨. ಲೆಕ್ಕಕ್ಕಿಲ್ಲದ; ಗಣನೆಗೆ ಬಾರದ. [ಸಂ.]

**ಅಗತಿ$_1$** (ನಾ). ೧. ಗತಿಯಿಲ್ಲದಿರುವುದು; ದಿಕ್ಕಿಲ್ಲದಿರುವುದು; ದುರ್ಗತಿ. ೨. ಚಲನೆಯಿಲ್ಲದಿರುವುದು; ನಿಲುಗಡೆ: ಹುಟ್ಟೆಂದರೆ ಗತಿ, ಸಾವೆಂದರೆ ಅಗತಿ (ವಿಚಾಮಂ. ೩೧). [ಸಂ.]

**ಅಗತಿ$_2$** (ನಾ). ಒಂದು ಮನೆತನದ ಹೆಸರು (?): ಕಾಕತ್ತಿಯ ಅಗತಿ ಭೈರೋಜನ ಮಗ ನಾಡೋಜನು ಮರ ಕಬುನ ಕೆಲಸಕೆ ವಿತ್ತಿಕಾಜರು ಯಿವರು ತುಬ ಮಾಡಿದರು (ಎಕ. X, ಚಿಂತಾಮ. ೬೮–೧೪; 1378). [?]

**ಅಗತಿಕ** (ನಾ). ಗತಿಯಿಲ್ಲದವನು; ನಿರ್ಗತಿಕ; ದರಿದ್ರ: ಹಿರಿಯರ ಸೊತ್ತಿಲ್ಲದ ಅಗತಿಕರಂತೆ ಕನ್ನಡಿಗರಲೆದಾಡುವುದು ಕನ್ನಡದ ನೆಲೆಯನ್ನು ಬಿಡುವುದರಿಂದಲ್ಲದೆ ಬೇರೆ ಯಾತರಿಂದಲೂ ಅಲ್ಲ (ವಿಚಾಮಂ. ೩). [ಸಂ.]

**ಅಗತುಕೊ** 'ಅಗುರ್' ನೋ.

**ಅಗತೆ** 'ಅಗಟ್ಟಿ' ನೋ.

**ಅಗತೆಹೊಲ** (ನಾ). ಅಗೆದು ಹಸನುಮಾಡಿದ ಹೊಲ (?): ಕೋಳಿ ಕೆರೆ ಹೊಲಕ್ಕೆ ತೆಂ ಅಗತೆಹೊಲದ ಬ ಬೇಲಿ ಹೊರಗೆ (ಎಕ. III, ತಿರುಮ. ೬೩–೪೨೭; 1748). [ಅಗತೆ (< ಅಗಟ್ಟಿ) + ಹೊಲ (< ಪೊಲ)]

**ಅಗತ್ಯ** (ನಾ). ೧. ಬೇರೆ ಗತಿಯಿಲ್ಲದ ಸ್ಥಿತಿ; ಬೇರೆ ಮಾರ್ಗವಿಲ್ಲದಿರುವಿಕೆ. ೨. ತುಂಬಾ ಬೇಕಾಗಿರುವುದು; ಆವಶ್ಯಕತೆ: ಆತನ ದಿನಚರಿಯ ವಿವರಗಳನ್ನು ಸ್ವಲ್ಪಮಟ್ಟಿಗೆ ತಿಳಿದುಕೊಳ್ಳಬೇಕಾದುದು ಅಗತ್ಯ (ಕೃದೇವ. ೧೦); ಈಗ ನನಗೆ ಹತ್ತು ರೂಪಾಯಿ ಅಗತ್ಯವಾಗಿದೆ (ರೂಢಿ); ಈ ಕೆಲಸಕ್ಕೆ ನಿನ್ನ ಸಹಾಯದ ಅಗತ್ಯವಿಲ್ಲ (ರೂಢಿ). ೩. ಉತ್ಕಟವಾದ ಇಚ್ಛೆ: ಒತ್ತಿ ಮುಂದಕೆ ತೂಳಿ ದೇವಿಗಗತ್ಯದಿಂದಂಘವಿಸಿ ಹೂಂಕೃತಿವೆತ್ತು ಘರ್ಜಿಸಲುದಿಸಿತುರು ಚಾಮುಂಡತರಶಕ್ತಿ (ಅಂಬಿಕಾ. ೧೮–೫೫).

ಅಗತ್ಯಬೀಳು = ಆವಶ್ಯಕತೆಯುಂಟಾಗು: ಅವರಿಗಾದರೂ ಬಡಿಗ ಸಿಂಪಿಗ, ಕಮ್ಮಾರ ಮುಂತಾದವರ ಅಗತ್ಯ ಬೀಳುತ್ತದೆ (ಮುಂಬಯಿ. ೫–೮೪. ೬).

[ಸಂ. ಅಗತಿಕ?. / ತಮಿ. ಅಗತ್ತಿಯವ್; ತುಳು. ಅಗತ್ಯ; ತೆಲು. ಅಗತ್ಯಮು; ಮರಾ. ಅಗತ್ಯ]

**ಅಗದ** (ಗು). ೧. ರೋಗವಿಲ್ಲದ; ಆರೋಗ್ಯವುಳ್ಳ. (ನಾ). ೨. ರೋಗವಿಲ್ಲದಿರುವುದು; ಆರೋಗ್ಯ. ೩. ಔಷಧ; ಮದ್ದು. ೪. ವಿಷಕ್ಕೆ ಚಿಕಿತ್ಸೆಯನ್ನು ಹೇಳುವ ಶಾಸ್ತ್ರಭಾಗ. [ಸಂ.]

**ಅಗದಂಕಾರ** (ನಾ). ರೋಗವನ್ನು ಪರಿಹಾರ ಮಾಡುವವನು; ವೈದ್ಯ. [ಸಂ.]

**ಅಗದತಂತ್ರ** (ನಾ). "ವಿಷಪದಾರ್ಥಗಳಿಂದ ಉಂಟಾಗತಕ್ಕ ಪ್ರಾಣೋಪದ್ರವಗಳನ್ನು ಪರಿಹಾರಮಾಡತಕ್ಕ ವಿಧಾನಗಳನ್ನು ಬೋಧಿಸತಕ್ಕ ಭಾಗ ಅಗದತಂತ್ರ" (ಸುಜ್ಞಾಚಂ. ೬೭). [ಅಗದ + ತಂತ್ರ]

**ಅಗದೀ** (ಅ). (ಉಕ) ಸಂಪೂರ್ಣವಾಗಿ; ಪೂರ; ಪೂರ್ತಿ: ಆಕೆಯ ನಡತೆಯು ಅಗದೀ ಸರಿಬರದ್ದರಿಂದ (ಉತ್ತಗೃ. ೭೯); ನೀನಾಡುವ ಮಾತು ಅಗದೀ ಸತ್ಯ (ಮೋಹನೀ. ೭೯); ಅವನು ಅಗದೀ ಕೆಟ್ಟ ಹುಡುಗ (ಜಾನಕೋ). [← ಮರಾ. ಅಗದೀ]

**ಅಗಧರ** (ನಾ). ಬೆಟ್ಟವನ್ನು ಎತ್ತಿಹಿಡಿದವನು; ಕೃಷ್ಣ; ವಿಷ್ಣು: ಜಗದಾಧಾರಕನೈ ನೀನಗಧರ ನಿನ್ನಂಘ್ರಿಭಾರಮಂ ಕ್ಷೀಣಬಲೋರಗನೆಂತು ಸೈರಿಪಂ (ಜಗವಿ. ೩–೧೧೦). [ಸಂ.]

**ಅಗನಿವಾಸಿ** (ನಾ). ಬೆಟ್ಟದಲ್ಲಿ ವಾಸಿಸುವವನು; ಶಿವ: ಅಗನಿವಾಸಿಯ ನೀಕ್ಷಿಸುತ್ತಿಂತೆಂದನಾ ದಕ್ಷ (ನಿಭಾಗ. ೪–೪–೪). [ಅಗ$_2$ + ನಿವಾಸಿ]

**ಅಗಪಡು**, ಅಗವಡು (ಕ್ರಿ). ೧. ಒಳಪಡು; ಸೆರೆಯಾಗು; ಸಿಕ್ಕಿಕೊ; ವಶವಾಗು: ನರನೊಳ್ ಮುನ್ನಗಪಟ್ಟುದೊಂದಬಲೊಳಾಂ ಕೈಲಾಸ ಶೈಲೇಶನಂ ಪಿರಿದುಂ ಭಕ್ತಿಯೊಳರ್ಚಿಸುತ್ತುಮಿರೆ (ಪಂಪಭಾ. ೧೧–೬೮); ಜಗದೊಳಗೆ ನೆಗಟ್ದ ಪೂಲಿಯೊಳಗ(ಘ)ಪಟ್ಟರ್ ದೇವನಿವಹವೆಲ್ಲಂ (ಎಇ. XVIII, ೧೯೨–೩೯; 1184). **ಅಗವಡು**: ಮೆಟ್ಟಿಪ್ಪಟ್ಟಗ[ಪಾಠಾಂ. ಘ] ಪಟ್ಟು ಕೂಡೆ ಮತಿಗೆಟ್ಟೆರ್ದೆಗೆಟ್ಟು ಬಟಲ್ದಟಲ್ದು ಬಾಯ್ವಿಟ್ಟು ಕುಯೋನಿಯೊಳ್ತಿರಿದು ಪೋದುವು ಪಲವುಕಾಲಮನಂತಂ (ಸುಕುಮಾ. ೧೧–೮೨); ಪುಣ್ಯಪಾಪ ಖಳರಿರ್ದಪರಂತವರ್ಗೀಕೆ ಪಕ್ಕುಗೊಟ್ಟಗವ[ಪಾಠಾಂ. ಘಪ]ಡುತಿರ್ಪ (ಸಮಪ. ೧೫–೧೦೩). ೨. ನೋವು ಹೊಂದು; ಕ್ಲೇಶಪಡು; ದುಃಖಕ್ಕೆ ಒಳಗಾಗು: "ಅಗವಟ್ಟಂ ಮಿಗೆ ನೋವುವಟ್ಟನೊಳೆ" (ಕರ್ಣಾನಿ. ೯೮); ಬಾಗುಳ ಪೆಚಿಸಿನಗವಟ್ಟಾಗಳುಮಾ ಕತದೊಳೆ ಬಗೆಗೆಟ್ಟಿರ್ಪ ರಾಯನೋಲಗಕೊರ್ಮೆ ಜಾಬಾಲಿ ಮುನಿಪಂ ಬಿಜಯಂಗೈದಂ (ರಾಮಾಶ್ವ. ೧೦೧–೨೦). 'ಅಘಪಡು' ಪರಾ.

[ಅಗ–$_1$ + ಪಡು$_1$. ‖ ತಮಿ. ಅಗಪ್ಪಡು = ಒಳಪಡು, ವಶವಾಗು, ಸಿಕ್ಕಿಕೊ; ಮಲ. ಅಗಪ್ಪೆಡುಕ; ತೆಲು. ಅಗಪಡು, ಅಗ್ಗಪಡು = ವಶವಾಗು, ಸಿಕ್ಕಿಕೊ]

**ಅಗಪೆ** (ನಾ). ಚಿಪ್ಪಿನ ಸೌಟು; ಸಟ್ಟುಗ: "ತರ್ದು ದಾರುಹಸ್ತಕ = ಅಗಪೆ" (ನಾಚಿರಾ. ೬).

[ದೇ. ‖ ತಮಿ. ಅಗಪ್ಪೈ, ಅಪ್ಪೈ; ಮಲ. ಅಗಪ್ಪಾನ್, ಅಪ್ಪ; ತೆಲು. ಅಗಪ, ಅಬಕ]

**ಅಗಭೇದಿ** (ನಾ). ೧. ಬೆಟ್ಟಗಳನ್ನು ಸೀಳುವವನು; ಇಂದ್ರ. ೨. ಮರವನ್ನು ಕತ್ತರಿಸುವ ಸಾಧನ; ಕೊಡಲಿ. ೩. ಸಿಡಿಲು.

[ಸಂ. ಅಗಭೇದಿನ್ (ಅಗ$_2$ + ಭೇದಿನ್)]

**ಅಗಮ** (ಗು). ೧. ಚಲಿಸದ; ತಿರುಗಾಡದ. (ನಾ). ೨. ಮರ. ೩. ಬೆಟ್ಟ. [ಸಂ.]

**ಅಗಮುಂಡಿ** (ನಾ). ತಿಗುಳ ಜಾತಿಯ ಗಂಡಸು, ಬೇರೆ ಜಾತಿಯ ಹೆಂಗಸು ಇವರಿಗೆ ಜನಿಸಿದವನು (ಎಸಮ್ಮೈ. IX, ೧). [?]

**ಅಗಮ್ಯ** (ಗು). ೧. ಹೋಗಿ ಸೇರಲಾಗದ. ೨. ಮುಟ್ಟಲಸಾಧ್ಯವಾದ; ಬುದ್ಧಿಗೆ ಎಟುಕದ. ೩. ಕೂಡಬಾರದ. [ಸಂ.]

**ಅಗಮ್ಯಗಮನ** (ನಾ). ೧. ಹೋಗಬಾರದ ಕಡೆ ಹೋಗುವುದು. ೨. ಕೂಡಬಾರದವರನ್ನು ಕೂಡುವುದು. [ಅಗಮ್ಯ + ಗಮನ]

**ಅಗಮ್ಯಾಗಮನ** (ನಾ). ಕೂಡಬಾರದ ಹೆಣ್ಣನ್ನು ಕೂಡುವುದು.

[ಸಂ. (ಅಗಮ್ಯಾ + ಗಮನ)]

**ಅಗರ$_1$** 'ಅಗ್ರಹಾರ' ನೋ.

**ಅಗರ$_2$** (ನಾ). "ಹಡಗದ ಹಿಂಭಾಗ, ಹಿಂಗೋಟು" (ರಮಾಕಾಂ). [?]

**ಅಗರಂಗೆಯ್** (ಕ್ರಿ). ಅಗ್ರಹಾರವಾಗಿ ಪರಿವರ್ತಿಸು: ಆ ವಸ್ತುವಾಹನಂಗಳಂ ದೇಗುಲಂಗಳಂ ಪಾರ್ವರ್ಗರ್ಮಿತ್ತುಮನ್ನ ನಾಡೊಳ್ ತಲೆವಳ್ಳಿಗಳ ನಗರಂಗೆಯ್ದಂ (ಚಿಕವಂ. ೧೨–೧೩). [ಅಗರ$_1$ + ಗೆಯ್]

**ಅಗರಯ್ಯ** (ನಾ). ಒಬ್ಬನ ಹೆಸರು: ಅಗರಯ್ಯಂ ನೀತಿಮಾರ್ಗ್ಗ ಪೆಮ್ಮನಡಿಗೆ ಕಿಬ್ಬುಗ್ಗೆಯಾದಂ (ಎಕ. III, ತಿರುನ. ೯೧–೫; 921).

[ಅಗರ$_1$ ? + ಅಯ್ಯ$_1$]

**ಅಗರಿ$_1$** 'ಅಗ್ಗಟಿ$_1$' ನೋ.

**ಅಗರಿ$_2$** (ನಾ). ಬಿಳಿಯ ಮಗ್ಗದವರಲ್ಲಿ ಒಂದು ಪಂಗಡ (ಎಸಮ್ಮೈ. VIII, ೮). [?]

**ಅಗರಿ$_3$** (ನಾ). ೧. ಒಂದು ಬಗೆಯ ಹುಲ್ಲು ಅಥವಾ ಗಿಡ. ℙ ಇದು ಇಲಿಗಳ ವಿಷಕ್ಕೆ ಔಷಧವೆಂದು ಹೇಳುತ್ತಾರೆ. ೨. ವಿಷಾಪಹಾರಿ ವಸ್ತು. [ಸಂ. ಅಗರೀ]

**ಅಗರು** (ನಾ). ೧. = ಅಗಿಲ್ ೧: ಅಗರುವ ಮೆಚ್ಚು ಪಚ್ಚ ಸಿರಿಕಂಡ ದೊಳಗ್ಗಲಿಸಿತ್ತು . . . ಬಸಂತಮಾಸದೊಳ್ (ಪಂಪಭಾ. ೫–೩೦); ಗೋಣಿ ಬಿಲ್ವ ಬೇವು ಆಗರು ಮೊದಲಾದ ಮರಗಳು (ಸೌಗಂಧಿ. ೪೩೩–೮). 'ಕಿರಿಯಗರು', 'ಕೃಷ್ಣಾಗರು', 'ಶ್ವೇತಾಗರು' ಪರಾ. ೨. = ಅಗಿಲ್ ೨: ಮೃಗನಾಭಿಯಂ ಕುಂಕಮುವನಿಂಪುಗರ್ಪುರವನಗರುಮಂ ಸಾದಂ (ಪದ್ಮರಾ. ೮–೭೯); ನಿರ್ಜರರ ನಾಕಲೋಕಕೆ ದಾಳಿಯ ಇಟ್ಟುದಿರದಗರು ಧೂಪದ ಧೂಮಮೆಣ್ದಿಸೆಯ ಮೆಟ್ಟಿದುದು ಸಕಲ ವಾದ್ಯಂಗಳ ನಿನದಂ (ಚಿಬಪು. ೬–೫೨).

[**ಸಂ.** ℙ 'ಅಗುರು$_2$' ಶಬ್ದದ ನಿಷ್ಪತ್ತಿಭಾಗವನ್ನು ನೋಡಿ]

**ಅಗರುಗಂಧ** (ನಾ). = ಅಗಿಲುಗಂಧ. [ಅಗರು + ಗಂಧ]

**ಅಗರುಧೂಪ** (ನಾ). = ಅಗುರುಧೂಪ. [ಅಗರು + ಧೂಪ]

**ಅಗರುಬತ್ತಿ** (ನಾ). ಒಂದು ಬಗೆಯ ಊದುಬತ್ತಿ. [ಅಗರು + ಬತ್ತಿ]

**ಅಗರ್ತೆ** 'ಅಗಟ್ತಿ' ನೋ.

**ಅಗರ್ಹಿತ** (ಗು). ನಿಂದ್ಯವಲ್ಲದ: ಮಿಗೆ ದುಷ್ಕರಕಾವ್ಯಂಗಳೊಳಗರ್ಹಿತ ಪ್ರಾಯಮಕ್ಕುಮಾ ಶ್ರುತಿಕಷ್ಟಂ (ಕವಿರಾ. ೧–೬೭). [**ಸಂ.**]

**ಅಗಲ್$_1$**, ಅಗಲು$_1$ (ಕ್ರಿ). ೧. ಬಿಟ್ಟುಹೋಗು; ತೊರೆ: ಮೋಹಮುಗಲ್ದಿ ವಲ್ವಿಷಯಂಗಳನಾತ್ಮವಶಕ್ರಮುವಿದು (ಎಕ. II, ೯೫–೩; 700); ಸಂಪ್ರೀತಿ ಯಿನಾವನನಗಲಳ್ ನೀತಿನಿರಂತರನುದಾರನಾ ನೃಪತುಂಗಂ (ಕವಿರಾ. ೧–೧); ತಪಂಬಟ್ಟು ಪನ್ನೆರಡು ವರುಷಂಬರೆಗಂ ಗುರುಗಳನಗಲದಿರ್ದು (ವಡ್ಡಾರಾ. ೧೦೯–೧೦); ನೀನುಮಗಲ್ದೆಯಿನ್ನೆನಗೆ ಪೇೞ್ ಪೆಱರಾರೆನಗಾಸೆ (ಪಂಪಭಾ. ೧೩–೩); ಅಗಲರ್ ಸೂಳೆಯನಾಳರಾ ಕುಲಜೆಯಂ (ಸೋಮೇಶ. ೪೬); ಅಗಲ್ದಿನಿಯನ ತೋಱಿಸು ಬಾ ಬಾ ಯೆಂದು ಮುಗುದೆ ಬಿದ್ದಳು ಚರಣದಲಿ (ಮೋಹತ. ೧೮–೫೫). ೨. ವಿಶಾಲವಾಗು. 'ಅಗಲುರ' ಪರಾ. **ಅಗಲು$_1$**: ೧. ತೋಱಿ ಮಱುದಿನವಗಲಿಹೋದನು (ಕುವ್ಯಾಆ. ಪರಿ. ೧–೧೮); ಹಿಂಡನಗಲಿದ ಹುಲ್ಲೆಯ ನಸೆಯೊಳಗಿಪ್ಪ ಗಂಡೇಣ ತನ್ನ ವಲ್ಲಭನ (ಮೋಹತ. ೯–೩೪).

**ಅಗಲ್ದುರದ** = ಅಗಲವಾದ ಎದೆಯುಳ್ಳವನು: ಬಲ್ದಲೆಯಂ ತೋಳ್ನೀಳ್ದನಗಲ್ದುರದಂ ಬಟ್ಟದೊಡೆಯವಂ ಕೆಂಗಣ್ಣಂ (ಕಾವ್ಯಾವ. ೨೫೬).

[**ದೇ.** ‖ **ತಮಿ.** ಅಗಲ್ = ಬೇರೆಯಾಗಿಸು; **ಮಲ.** ಅಗಲ್; **ತುಳು.** ಅಗಪುನಿ, ಅಗಪಾವುನಿ; **ತೆಲು.** ಅಗಲು = ಒಡೆದುಹೋಗು, ಸೀಳಿಹೋಗು]

**ಅಗಲ್$_2$**, ಅಂಗಲ, ಅಗಲ$_2$, ಅಗಲು$_2$ (ನಾ). ಊಟದ ತಟ್ಟೆ; ಕಂಚು; ತಳಿಗೆ: ಅಗಲಂ ತಂದು ಮುಂದಿರಿಸಲುಂ (ಆದಿಪು. ೭–೭೧ ವ); ಆಗಲೊಳಗಿಕ್ಕಿದೊಳ್ಪುಣಿಸಮೇಧ್ಯಮುಮೆಂಜಲುಮಪ್ಪುದು (ಅಜಿಪು. ೨–೫೧); ಸಾರವಸ್ತುಗಳ ತಂದಗಲೆಲ್ಲ ತುಂಬುವಂತಾರಯ್ದು ಬಡಿಸಿದ ಮೇಲೆ (ಭರಚ. ೪–೮೧); **ಅಂಗಲ**: ಅಸವನೆಗಂಗಲಕ್ಕೆ ತಲೆವಾಗಿಲಿ ಗಚ್ಚನೆ ನೋಡಲೀಱಲಿಂಗೊಸಗೆಗೆ ನೋಂಪಿಗಂಗಡಿಗೆ ಬಾಡಿನ ಸನ್ತೆಗೆ ಬಾಯಿನಕ್ಕೆ ಪೋಪೆಸಕದೆ ಪಾಂಬರೊಳ್ ನೆರೆವರಂ ಕುಲನಾರಿಯರೆಂಬುದೇ (ಮುಂಬರಾ. X, ೨೬೫–೪೩; 1229) [ಅಂಗಲಕ್ಕೆ = (ಇನ್ನೊಬ್ಬರಿಗೆ ಎರವಲಾಗಿ ಕೊಟ್ಟಿದ್ದ) ಊಟದ ತಳಿಗೆಯನ್ನು ತರುವುದಕ್ಕೆ]. **ಅಗಲ$_2$**: "ಅಗಲ – ಗಂಗಾಳ ಪತ್ರಾವಳಿ" (ಗಂಗಾಮ. ೪). **ಅಗಲು$_2$**: ಕುಡುಕೆಯ ಘೃತ ಅಗಲಿಗೆ ಬಂದಂತೆ (ಶಿವಮಂ. ೪೭).

[**ದೇ.** ‖ **ತಮಿ.** ಅಗಲ್ = ಮಣ್ಣಿನ ದೊಡ್ಡ ಮಡಕೆ; **ಮಲ.** ಅಗಲ್; **ತುಳು.** ಅಗಳಿ, ಅಗೊಳಿ]

**ಅಗಲ$_1$** (ನಾ). ೧. ಒಂದು ವಸ್ತುವಿನ ಅಡ್ಡಳತೆ: ಅದರಗಲಮೊಂದು ಯೋಜನಂ (ಆದಿಪು. ೧೦–೨೭); ನಿವೇಶನದ ಅಗಲಂ ಆಗಳೆಯೊಳ್ಗಳೆಳ ಗೇಣು ೧೭ (ಇಆ. XXX, ೨೭೩–೩೮; 1054); ಮೇದಿನಿಯಳತೆಗೆ ಕಿ[ಱಿ]ದೆಂಬಾ ದೆಸೆಯಗಲಂ (ವ್ಯವಹಾ. ೩). ೨. ವಿಸ್ತಾರ; ಹರವು: ಧರೆಗೆ ಬಸವನ ಭಕ್ತಿರಸಘನಶರಧಿಯಡುವಗಲಕ್ಕೆ ನೆಱೆದುಪ್ಪರಿಸೆ (ಬಸಪು. ೮–೮); ನೆರೆದ ಸೇನೆಗೆ ನೆಲನಗಲ ನೆಱೆಯದು (ಕುವ್ಯಾದ್ರೋ. ೧–೪೫). ಅವರೊಳಗಲಕೆ ನಿಂದ ರಿಪುಗಳ ಜವನ ಬೋನವ ಮಾಡದಿದ್ದರೆ (ಕುವ್ಯಾದ್ರೋ. ೪–೩೯). ೩. ನಡುವೆ ಅಂತರವಿರುವಿಕೆ: "ಅಗಲದ ಮೊಳಕಾಲುಳ್ಳವನು: ಪ್ರಜ್ಞು, ಪ್ರಗತಜಾನುಕ" (ನಾಚಿರಾ).

[**ದೇ.** ‖ **ತಮಿ.** ಅಗಲಮ್; **ಮಲ.** ಅಗಲಮ್, ಆಗಲ, ಅಗಲೇ; **ತುಳು.** ಅಗೆಲೊ; **ತೆಲು.** ಅಗಲಮು]

**ಅಗಲ$_2$** 'ಅಗಲ್$_2$' ನೋ.

**ಅಗಲಂ** (ಅ). ಅಗಲವಾಗಿ; ಹರವಿನಲ್ಲೆಲ್ಲ: ಕೂೞಂ ಕೊಂಡು ಬಂದು ಕೆಯ್ಯೊಳಗಲಮ[ಪಾಠಾಂ. ಗಳಲ್ಲಿಲ್ಲ]ಱಿಸಿ ಕಾಣದೆ (ವಡ್ಡಾರಾ. ೧೫೨–೨೧).

[< ಅಗಲ$_1$]

**ಅಗಲಂಬೆಱು** (ಕ್ರಿ). ಅಗಲವಾಗಿರು; ವಿಶಾಲತೆಯನ್ನು ಪಡೆ: ಇಂತಗಲಂಬೆತ್ತು ಮಹತ್ವಮಂ ತಳೆದು ಬಂದೆಟ್ಟಂದನಬ್ಜೇಕ್ಷಣಂ (ಜಗವಿ. ೧೫–೮೦); ಅಗಲಂಬೆತ್ತುರುವಕ್ಷದಿಂದುರುಲಸದ್ರಕ್ತಾಂಬುಜಾತಾಕ್ಷಿಯಿಂ (ದಶಕು. ೬–೧೪೭). [ಆಗಲ$_1$ + ಪೆಱು]

**ಅಗಲಾಡು** 'ಅಲುಗಾಡು' ನೋ.

**ಅಗಲಿಕೆ** 'ಅಗಲ್ಕೆ' ನೋ.

**ಅಗಲಿಕ್ಕಿಸು** (ಕ್ರಿ). ಊಟಕ್ಕೆ ತಟ್ಟೆ ಹಾಕಿಸು; ಊಟಕ್ಕೆ ಬಡಿಸು: ಭೂತಗಣಕಗಲದಗಲಿಕ್ಕಿಸುವೆನೆಂದಸುರಸೇನೆ ಸುಗಿಸುಗಿದೋಡುವ್ವೋಲ್ ಕಡಿದನು (ಚಿಬಪು. ೪೩–೪೦). [ಅಗಲ್$_2$ + ಇಕ್ಕು$_1$ + –ಇಸು$_3$]

**ಅಗಲಿಚು** 'ಅಗಲ್ಚು$_1$' ನೋ.

**ಅಗಲಿಡು** (ಕ್ರಿ). ಊಟಕ್ಕೆ ತಟ್ಟೆ ಹಾಕು: ಮಿಗೆ ತಿಳಿದುಪ್ಪವಂ ಪನಿಯ ಪಾನವನಿರ್ಕೆಲವಟ್ಟಲಲ್ಲಿ ತಂದಗಲಿಡಲಲ್ಲಿ (ನಳಚಂ. ೪೫೦).

[ಅಗಲ್$_2$ + ಇಡು$_1$]

**ಅಗಲಿತು**, ಅಗಲಿತ್ತು (ಗು). ಅಗಲವಾದ; ವಿಸ್ತಾರವಾದ: ಪೆಱಗಸಿದಾಗಿ ಮುಂತಗಲಿತಪ್ಪುದಱಿಂದೆ (ಕಾವ್ಯಸಾ. ಶೂದ್ರಕ. ೭೪೭); ಆಲದ ಮರದಂತೆ ಕೆಳಗಸಿದಾಗಿ ಮೇಲಗಲಿತಪ್ಪ ವೃತ್ತನ್ಯಗ್ರೋಧ ಪರಿಮಂಡಲ ಸಂಸ್ಥಾನಮುಮಂ (ತತ್ತ್ವಪ್ರ. ೭೯೬). **ಅಗಲಿತ್ತು**: ಹುತ್ತಿನಂತೆ ಕೆಳಗಗಲಿತ್ತಾಗಿ ಮೇಗಸಿದಪ್ಪುದು ಸ್ವಾತಿ (ತಸೂವೃ. ೨೫೬); ಬಿಣ್ಣಿತ್ತು, ಗುಂಡಿತ್ತು, ಅಗಲಿತ್ತು (ಶಮದ. ೭೭ ಪ್ರಯೋ.); "ವಿಶಂಕಟಂ ವಿಶಾಳಂ– ಈ ೨ ಅಗಲಿತ್ತು" (ಹಲಾಯು. ೧೨೪–೭೮). [~ ಅಗಲ್$_1$]

**ಅಗಲಿತ್ತು** 'ಅಗಲಿತು' ನೋ.

**ಅಗಲಿಸು** (ಕ್ರಿ). ೧. = ಅಗಲ್ಚು$_1$ ೧: ಪ್ರಪ್ರದೇಶಾನುಭಾಗಬಂಧಸ್ಥಾನಂಗಳೊಳಗಲಿಸಿ . . . ಸಮಯೋತ್ತರಾನುಕ್ರಮದಿನುತ್ಕೃಷ್ಟ ಸ್ಥಿತಿವರಂ ಪರಿವಡಿದಪ್ಪದೆ ಕಿಟ್ಟುವುದಂ ಭಾವಪರಿವರ್ತನಮೆಂಬುದು (ಸುಕುಮಾ. ೬–೬ ವ); ಉಗಿದು ಕಿವಿವರೆಗಾಗಿ ಬಾಣವನಗಲಿಸುತ ಬೊಬ್ಬಿಱಿಯೆ (ತೊರರಾ. ೩–೩–೨೧). ೨. = ಅಗಲ್ಚು$_1$ ೨: ಚೀಲದ ಬಾಯನ್ನು ಆಗಲಿಸಿ ಹಿಡಿದುಕೊ, ಅಕ್ಕಿ ಸುರಿಯುತ್ತೇನೆ (ರೂಢಿ). [ಅಗಲ್$_1$ + –ಇಸು$_3$]

**ಅಗಲು$_1$** 'ಅಗಲ್$_1$' ನೋ.

**ಅಗಲು$_2$** 'ಅಗಲ್$_2$' ನೋ.

**ಅಗಲುಗಾಣಿಸು** (ಕ್ರಿ). ಎಡೆಮಾಡಿಸು; ಊಟಕ್ಕೆ ಬಡಿಸು: ಅಮೃತಾನ್ನವ ಮುದದಿಂದಗಲುಗಾಣಿಸಲಾ ಶಿವಪ್ರಸಾದದಲಿ ತೃಪ್ತಿಯನೆಯ್ದಿ (ಸೌಂದಪು. ೮–೮೯). [ಅಗಲು$_2$ (< ಅಗಲ್$_2$) + ಕಾಣ್ + –ಇಸು$_3$]

**ಅಗಲುರ** (ನಾ). ಅಗಲವಾದ ಎದೆ; ವಿಶಾಲವಾದ ಎದೆ: ಶ್ರೀಗಗಲು[ಪಾಠಾಂ. ಲ್ದು]ರಮುಂ ಕೀರ್ತಿಶ್ರೀಗೆ ದಿಗಂತಮುಮಂ (ಪಂಪಭಾ. ೨–೧);

ಮೃಗಮದದ ಪುಳಿಂಚುಗಳ್ ಪನಿತ್ತಿರಲೆಡೆಯಾದಗಲುರಮನೆನಗೆ ಪಡೆದಜ ನೊಗಸುಗಮಲ್ತೆಲಗೆ ನಿನ್ನನೆನಗೆಯೆ ಪಡೆದಂ (ಪಂಪಭಾ. ೮–೬೭).
[ಅಗಲ್$_1$ + ಉರ]

**ಅಗಲುಹ$_1$** (ನಾ). ಅಗಲುವುದು ; ವಿಯೋಗ.
[ಅಗಲು$_1$ + –ಹ (< –ಪ)]

**ಅಗಲುಹ$_2$** (ಅ) ಬಿಟ್ಟು ; ಹೊರತು : ಪುಂದನಾಡ ಬಂಗೆಡಗ್ರಾಮ ವೊಂದಕೆ ಪಾಳೆಯಗಲುಹ ಐನೂಱು ವರಹ (ಎಕ. XIV, ಗುಂಡ್ಲುಪೇ. ೧೨೮–೬೫ ; 1510). [< ಅಗಲುಹ$_1$]

**ಅಗಲೆ** (ಅ). ಅಗಲವಾಗುವಂತೆ; ಬಿರಿಯುವಂತೆ; ದೂರವಾಗುವಂತೆ. **ಅಗಲೆ ಕುಳ್ಳಿರ್** = ದೂರದಲ್ಲಿ ಕುಳಿತಿರು : ತಲೆಯಂ ಬಾಗಿ ದೂರ ದೊಳ್ ಪೊಡವಟ್ಟು ಕೆಲಕ್ಕೆ ಪೋಗಲಮ್ಮದಗಲೆ ಕುಳ್ಳಿರ್ದ ಚಂದ್ರಾ ಪೀಡನಂ ನೋಡಿ (ಕಾದಂಬ. ೪೭೪). **ಅಗಲೆ ನೂಂಕು** = ದೂರಕ್ಕೆ ತಳ್ಳು (ಪ್ರಭಣ್ಣ). **ಅಗಲೆ ಪೋೞ್** = ಅಗಲವಾಗಿ ಬಗಿ ; ಸೀಳು : ಕುಡಿವೆಂ ದುಶ್ಶಾಸನೋರಃಸ್ಥಳಮನಗಲೆ ಪೋೞ್ದಾರ್ದು ಕೆನ್ನೆತ್ತರಂ (ಪಂಪಭಾ. ೭–೧೩). **ಅಗಲೆವೋಗು** = ದೂರಹೋಗು : ಅಗಲೆವೋದ ಹಂಸನನಱ ಸಲ್ ಪದೆದೆಳಸುವ ಪೆಣ್ಣಂಚೆ (ಪಂಪಭಾ. ೫–೫೬). [< ಅಗಲ್$_1$]

**ಅಗಲೆತ್ತು** (ಕ್ರಿ). ಊಟದ ತಟ್ಟೆಯನ್ನು ಎತ್ತು : ನೆರೆದತ್ತು ಮಜ್ಜನಂ ಬುಗಿಸುವ. . .ಬೋನಮೆತ್ತುವಗಲೆತ್ತುವ ದೇವವಿಳಾಸಿನೀಜನಂ (ಮಲ್ಲಿಪು. ೧೧–೮೪). [ಅಗಲ್$_2$ + ಎತ್ತು$_1$]

**ಅಗಲೊಗೆ** (ಕ್ರಿ). ಬಿಚ್ಚಿ ಹರಡಿಕೊಳ್ಳುವಂತೆ ಎಸೆ : ಒಗೆದೊಗೆದು ಮುರಿದು ಜಗುನೆಯೊಳಗಲೊಗೆ[ಪಾಠಾಂ. ಕೊಲೆದೊಲೆ]ದುಂ ಪಿಂಡುಕಿರ್ಪ ರಜಕನಂ (ಅರ್ಧನೇ. ೮–೭೫). [ಅಗಲ್$_1$ + ಒಗೆ$_1$]

**ಅಗಲೊತ್ತು** (ಕ್ರಿ). ಅಗಲವಾಗುವಂತೆ ಒತ್ತು : ಸುರಿಗೆಯೊಳುರಮಂ ಬಿಕ್ಕನೆ ಬಿರಿಯಿಱಿದು ಬರಿಯನಗಲೊತ್ತಿ ಮನಂ ಕೊಕ್ಕರಿಸದೆ (ಪಂಪಭಾ. ೧೨–೧೫೩). [ಅಗಲ್$_1$ + ಒತ್ತು$_1$]

**ಅಗಲೌತಣ** (ನಾ). ದೊಡ್ಡ ಔತಣ ; ಭೂರಿಭೋಜನ : ರಣಪಿಶಾ ಚದ ಬಡಿಸಿದಗಲೌತಣದ ಮನೆಯಿದು (ಉತ್ತರಾ. ೨೨–೧೮).
[ಅಗಲ$_1$ ? + ಔತಣ. ℙ ತುಳು. ಅಗೆಲ್‌ಪಾಡು = ಭೂತಗಳಿಗೆ ಬಡಿಸುವುದು]

**ಅಗಲ್ಕೆ,** ಅಗಲಿಕೆ (ನಾ). ಅಗಲುವಿಕೆ; ಬಿಟ್ಟುಹೋಗುವಿಕೆ; ವಿಯೋಗ : ಉಮ್ಮಳಿಸುವಳಟ್ಟೆ ಪತ್ತುವಳಗಲ್ಕೆಗೆ ಕಾಯ್ವಳ್ (ಕಾವ್ಯಸಾ. ಶೂದ್ರಕ. ೯೯೩) ; ನಿನ್ನನಗಲ್ವಗಲ್ಕೆಯುಂ ಪ್ರಾಣದಗಲ್ಕೆಯುಂ ಸಮಂ (ಆದಿಪು. ೧೨–೩೬). **ಅಗಲಿಕೆ** : "ವಿಪ್ರಲಂಭ, ವಿಪ್ರಯೋಗ = ಅಗಲಿಕೆ" (ನಾಚಿರಾ) ; "ಅಪಜಯದೊಳತ್ಯಗಲಿಕೆಯೊಳಂ ಪ್ರತ್ಯವಾಯಮೆಂಬುದು" (ಮಂಗರಾ. ೧೪೨–೧೯) ; ಇಂತೆಮಗೆ ಭಕ್ತರಿಗೆ ಹೃದಯದೊಳಗಗಲಿಕೆಯ ದುಂಟೇ (ಬಸವು. ೨೬–೬೩). [ಅಗಲ್$_1$ + –ಕೆ]

**ಅಗಲ್ಕೆಗಿಚ್ಚು** (ನಾ). ಅಗಲಿಕೆಯಿಂದ ಆಗುವ ತಾಪ; ವಿರಹಜ್ವಾಲೆ : ಬಳಸಿದುದು . . . ಚಕ್ರಯುಗಂಗಳಗಲ್ಕೆಗಿಚ್ಚು . . . ಸಂಜೆಯ ಕೆಂಪು ಲೋಕಮಂ (ಚಂದ್ರಪು. ೮–೪). [ಅಗಲ್ಕೆ + ಕಿಚ್ಚು (< ಕಿರ್ಚು)]

**ಅಗಲ್ಕೆವೆಱು** (ಕ್ರಿ). ಅಗಲಿಕೆಯನ್ನು ಪಡೆ; ವಿಯೋಗವನ್ನು ಹೊಂದು: ಬಲ್ಮೊಳಿಸಿಂದಮಗಲ್ಕೆವೆತ್ತ ನಲ್ಲರ ಬಗೆ ಬಳ್ಕೆ (ಕಬ್ಬಿಗಕಾ. ೩೦೦).
[ಅಗಲ್ಕೆ + ಪೆಱು]

**ಅಗಲ್ಚು$_1$**, ಅಗಚು, ಅಗಲಿಚು (ಕ್ರಿ). ೧. ಬೇರ್ಪಡಿಸು ; ದೂರ ಮಾಡು ; ನಿವಾರಿಸು : ಕುರುಪತಿಯಿಂದಂ ಮುನ್ನಂ ತ್ವತ್ಪತಿಯಿಂದಂ ನಿನ್ನನಗಲ್ಚಲ್ಕೆ ಕಪಟಗೋಪಂ ಪ್ರಭುವೇ (ಗದಾಯು. ೯–೧೪) ; ಮನಃ ಕ್ಷತಮಂ ಮನದಿಂದಗಲ್ಚಿದಳ್ (ಸುಕುಮಾ. ೭–೯) ; ವಳಿತ್ರಯ ಮಧ್ಯ ದೊಳ್ ನಡುವ ದಿಟ್ಟಿಯನಾಗದಾರ್ಗಮಗಲ್ಚಲ್ (ಕಾವ್ಯಾವ. ೬೦) ; ಆಗ ಳೀಗಳೆಂಬೆಡೆಗಗಲ್ಚರುಚಿದೆಡೆಗಿನಾಗಮಂ ದೋಷಕರಂ (ಶಮದ. ೧೧೯) ; ತನ್ನ ಮುನ್ನಿನ ಕರ್ಮವನಗಲ್ಚಿ ಮರಳಿ ತೊಡೆಯಲುಂ ಕಾಯಲುಂ ಪಂಕ ರುಹಗರ್ಭಂಗಾಗದು (ಬಸವು. ೪೬–೧೩). ೨. ಅಗಲವಾಗಿ ಮಾಡು ; ಹಿಗ್ಗಲಿಸು ; ಹರಡು : ಕರಗಸಂಗಳಿಂದಂ ಮರನಂ ಪೋೞ್ವಂತೆ ಕೆಯ್ಯಂ ಕಾಲನಗಲ್ಚಿ ಪಿಡಿದಡಸಿ ಕಟ್ಟಿ (ವಡ್ಡಾರಾ. ೧೨೭–೧೫) ; ಸಿರಿಮೊಗಕ್ಕೆ ಬಿಸಿಲಾಗದಂತಾಗಸದೊಳೋಸರಿಸದಂಚೆಗಳೆಱಂಕೆಯನಗಲ್ಚಿ ನೆಳಲಾಸೆ ಗೆಯ್ದವು (ಜೈನಿಭಾ. ೧೯–೩೪). **ಅಗಚು** : ೨. ಶರಣರ್ಗರ್ಥವನ್ನ ವೀಯದವರ ಕಾಲುಕಯ್ಯನಗಚಿ ತೋರಣದೊಳು ಕಟ್ಟಿ (ಸಾನಂಚ. ೬–೧೪೮ ರ). **ಅಗಲಿಚು** ೧. (ಅನಂನಾ).
[ಅಗಲ್$_1$ + –ಚು. ‖ ತೆಲು. ಅಗಲ್ಚು, ಅಗಲುಚು, ಅಗಲಿಂಚು = ಭೇದಿಸು]

**ಅಗಲ್ಚು$_2$** (ನಾ). ಅಗಲಿಕೆ ; ವಿಯೋಗ : ನೀರಜದ ಮುಚ್ಚು ರಥಾಂಗ ದಗಲ್ಚು ಜಾರೆಯರ್ಗೊದವಿದ ಬೆಚ್ಚು . . . ಬಂದುದುದಯಗಿರೀಂದ್ರ ಮಸ್ತಕದೊಳಿರ್ದುದು ಪೂರ್ಣಶಶಾಂಕಮಂಡಲಂ (ಸೂಕ್ತಿಸು. ೮–೨೨೪).
[< ಅಗಲ್ಚು$_1$]

**ಅಗಲ್ತರ್** (ಕ್ರಿ). ಒಂದರಿಂದ ಮತ್ತೊಂದು ದೂರ ಹೋಗು ; ಅಂತರ ವುಳ್ಳದ್ದಾಗು ; ಅಗಲು : ಬರಿಗಂಡಂ ಪಿಣಿಲೇೞಿ ರೋಮಮುಡಿದಿರ್ಬೆ ನ್ನಾಗೆ ಮುಂಗಾಲಗಲ್ತರೆ. . . ಭೀಕರಂ ಸೊಗಯಿಸಿತ್ತುತ್ಕ್ರೀಕರಂ ಸೂಕರಂ (ಚಂದ್ರಪು. ೫–೬೦). [ಅಗಲ್$_1$ + ತರ್$_1$]

**ಅಗಲ್ತೆ** (ನಾ). ಅಗಲಿಕೆ : ಅಂಶಗಲನಾತ್ – ಕೆಲಕೆಲವು ಭಾಗಂಗಳ್ ಪೋಪುದಱತ್ತಣಿಂದಮುಂ, ನಿಶ್ಶೇಷ ವಿಶ್ಲೇಷತಶ್ಚ–ನೆಱೆಯಗಲ್ತೆಯತ್ತಣಿಂ ದಮುಂ (ಜೀವಸಂ. ೧೦–೨ ಟೀಕೆ). ℙ ಈ ಶಬ್ದವು 'ಅಗಲ್ಕೆ' ಎಂಬು ದರ ಅಪಲಿಖಿತವಿರಬಹುದು. [ಅಗಲ್$_1$ + –ತೆ]

**ಅಗಲ್ದುರದ** 'ಅಗಲ್$_1$' ನೋ.

**ಅಗವಡು** 'ಅಗಪಡು' ನೋ.

**ಅಗವೆ** (ನಾ). ಬಿದಿರು (?) : "ಕರೀರ ಗ್ರಂಥಿಲಂ = ಅಗವೆ" (ಔಷಧಿ. ೨೭). [?]

**ಅಗವೈರಿ** (ನಾ). ಬೆಟ್ಟಗಳ ಶತ್ರು ; ಇಂದ್ರ. [ಅಗ$_2$ + ವೈರಿ]

**ಅಗಸ$_1$** 'ಅಸಗ' ನೋ.

**ಅಗಸ$_2$** (ನಾ). ಒಂದು ಗಿಡಮೂಲಿಕೆ : ಅಗಸದ ಬೇರಂ ಮೊಸರೊಳು ತಿನ್ದೆ ಕಾಮಾಲೆ ತೀರ್ಗುಂ (ವಿದ್ಯೈವಿ. ೯೨). [?]

**ಅಗಸಗಿತ್ತಿ** (ನಾ). = ಅಸಗಿತಿ : "ರಜಕಿ, ಅಗಸಗಿತ್ತಿ" (ಗಂಗಾಮ).
[ಅಗಸ$_1$ (< ಅಸಗ) + –ಗಿತ್ತಿ]

**ಅಗಸತಿ** 'ಅಸಗಿತಿ' ನೋ.

**ಅಗಸವೆಟು[ಟ್ಟು]** (ನಾ). (ಅಗಸನ ಬಡಿತದಂತೆ ಬೀಳುವ) ಒಂದು ಬಗೆಯ ಕತ್ತಿಯ ಪೆಟ್ಟು : ತನ್ನ ಬಂಡಿಕೋಲಿನ ತುದಿಯನ್ನು ಇದಿರಾಗಿ ಇದ್ದವನ ಎದೆಯಲ್ಲಿ ತೋರಿಸಿ ಹೊರಗೆ ತಿರುಹುತ ಭುಜದಲ್ಲಿ ಪೆಟ್ಟು ಅವದು ಅದು ಅಗಸವೆಟು[ಟ್ಟು] ಎಂದು ಸಮ್ಮತವು (ಖಡ್ಗಟೀ. ೫–೬೭).
[ಅಗಸ$_1$ (< ಅಸಗ) + ಪೆಟ್ಟು]

**ಅಗಸವ್ವೆ** (ನಾ). ಒಬ್ಬಾಕೆಯ ಹೆಸರು : ಕೇಸವರಾಜ ಅಗಸವ್ವೆ ದಾಸರ ಗಂಗಮಳಿದ ಕೆಲಸದ ಶಸ್ತ್ರವನೊತ್ತೆಯಿಟ್ಟು (ಎಕ. VIII, ಚೆನ್ನಗಿ. ೩೨–೨೩೯ ; ಸು. 1050). [ಅಗಸ$_0$ + ಅವ್ವೆ]

**ಅಗಸಾಲ** 'ಅಕ್ಕಸಾಲೆ' ನೋ.

**ಅಗಸಾಲೆ** 'ಅಕ್ಕಸಾಲೆ' ನೋ.

**ಅಗಸಿಗ** (ನಾ). ಅಗಸ (೬). [ಅಗಸ$_1$ (< ಅಸಗ) + –ಇಗ]

**ಅಗಸುತೆ** (ನಾ). ಪರ್ವತರಾಜನ ಮಗಳು ; ಪಾರ್ವತಿ.
[ಅಗ$_2$ + ಸುತೆ]

**ಅಗಸುದ್ದಿ**, ಅಗಸುದ್ದೆ (ನಾ). (ಉಕ) ಔಷಧಿ ; ಮದ್ದು : ಅಗಸುದ್ದಿ ಇಲ್ಲದ ಖಿಮ್ಮು ಹೋಗತಿದ್ದರ ಯಾಕ ಹೇಳಬಾರದು (ನಡೆದಾ. I, ೨೭೦). **ಅಗಸುದ್ದೆ**: ಗೌಡರಿಗೆ ಅಗಸುದ್ದೆ ತರಸೂ ಹಾದೀ ಹೇಳಬಾರದ (ಗ್ರಾಮಾಯ. ೧೯೭). [ಸಂ. ಔಷಧಿ ?]

**ಅಗಸುದ್ದೆ** 'ಅಗಸುದ್ದಿ' ನೋ.

**ಅಗಸೆ$_1$** 'ಅಗುಸೆ' ನೋ.

**ಅಗಸೆ$_2$** (ನಾ). ಅಗಲವಾದ, ಕೆಂಪು ಅಥವಾ ಬಿಳಿಯ ಹೂವು ಬಿಡುವ, ಎತ್ತರವಾಗಿ ಬೆಳೆಯುವ ಒಂದು ಮರ: "ಅಗಸೆ ಮತ್ತಗಸ್ತ್ಯ ಮೆನಿಕ್ಕು" (ಮಂಗರಾ. ೪೨-೩೮) ; "ಅಗಸ್ತ್ಯ, ಅಗಸೆ" (ಶಬ್ದಾನು. ೧೬೦ ಪ್ರಯೋ) ; ಅಗಸೆಯ ಮರಕ್ಕೆ ತೊನಸೆ ಮಱುದುಂಬಿಯೆಂಬಂತೆ (ಧರ್ಮಾಮೃ.೭-೨೨೯ ವ); ದಿಟ್ಟಪರಿಗರ್ಧಚಂದ್ರಾಕೃತಿಯೊಳ್ಪರ್ಣಿನ್ನ ದಿಟ್ಟ ಕುಸುಮಾಸ್ತ್ರಮಂ ಮದನ ಶಿವನೆದೆಗೆಸೆಯೆ . . . ಶಿವ ಸಾಂಬನಾದ ಗಡ ದಿಟ್ಟಯಿಂ ನೋಳ್ಪೆವೆಂದಗಸೆಗಳ್ ಗಗನಕಡಹಾಯ್ವಂತೆ ನಲಿವುದಿಲ್ಲಿ (ಅರ್ಜಾವಿ. ೨೩-೩).
[ಸಂ. ಅಗಸ್ತಿ, ಅಗಸ್ತ್ಯ. / ತಮಿ. ಅತ್ತಿ ; ತುಳು. ಅಗಸೆ]

**ಅಗಸೆ$_3$** (ನಾ). ನೀಲಿ ಹೂವು ಬಿಡುವ ಒಂದು ಬಗೆಯ ಚಿಕ್ಕ ಗಿಡ ; ಇದರ ಬೀಜ : ಅತಸೀ-ಅಗಸೆ (ಶಮದ. ೨೭೭ ಪ್ರಯೋ) ; ಅಗಸೆಯ ಪೂವಂ ದೊರೆಗಿಡಿಪ ಬಣ್ಣದಿಂ ಭಾಸ್ಕರತನಯಂ ಭುವನಕೆಲ್ಲಮೊಳ್ಪಂ ಮಾಳ್ಪಂ (ಜಟ್ಟಮ. ೭-೮೭) ; ಎಳ್ಳು ಅಗಸೆ ಕುಸುಬೆ ಹೆಸಱು ಉದ್ದು ತೊಗರಿ ಹುರುವಲ್ಲಿ ಮುಂತಾದ ಧಾನ್ಯಕ್ಕೆ (ಎಕ. V, ಬೇಲೂರು. ೭೫-೯೪ ; 1387). [ಸಂ. ಅತಸೀ. / ತೆಲು. ಅಗಿಸಿಯ, ಅವಿಸಿಯ, ಅವಿಸೆ, ಅಗಿಸೆ]

**ಅಗಸೆಗಿವಿ** (ನಾ). ಅಗಸೆಯ ಹೂವಿನಂತೆ ಅಗಲವಾಗಿರುವ ಕಿವಿ : ಬಟ್ಟಮೊಗದ ಅಗಸೆಗಿವಿಯ ಸೊಗಸುನುಡಿಯಂಗನೆಯರ್ (ರಾಮಾಶ್ವ. ೧೨೨-೨೫). [ಅಗಸೆ$_2$ + ಕಿವಿ]

**ಅಗಸೆಗೆಯ್** (ನಾ). ಅಗಸೆ ಬೆಳೆಯುವ ತೋಟ, —ಹೊಲ : "ಅಗಸೆಗೆಯ್ ಔಮಿನಾನವಕ್ಕು" (ಮಂಗರಾ. ೨೮-೩).
[ಅಗಸೆ$_2$ + ಕೆಯ್$_3$]

**ಅಗಸೆಬಾಗಿಲ್**, ಅಗಸೆಬಾಗಿಲು (ನಾ). ಹೆಬ್ಬಾಗಿಲು : "ಗೋಪುರ, ಹೆಬ್ಬಾಗಿಲ್" (ಗಂಗಾಮು). **ಅಗಸೆಬಾಗಿಲು** (೩).
[ಅಗಸೆ$_1$ (< ಅಗುಸೆ) + ಬಾಗಿಲ್]

**ಅಗಸೆಬಾಗಿಲು** 'ಅಗಸೆಬಾಗಿಲ್' ನೋ.

**ಅಗಸೆಯೆಣ್ಣೆ** (ನಾ). ಅಗಸೆ ಬೀಜದಿಂದ ತೆಗೆದ ಎಣ್ಣೆ : ಆ ಎರಕಗಳು ಮಣ್ಣು ಮತ್ತು ಅಗಸೆಎ[ಯೆ]ಣ್ಣೆ ಕೂಡಿಸಿ ಇಲ್ಲಿಯೇ ತಯಾರಾಗುವುದನ್ನು ಕಾಣಬಹುದು (ಪ್ರವಾಸಿ. ೮೮). [ಅಗಸೆ$_3$ + ಎಣ್ಣೆ]

**ಅಗಸೆವಟ್ಟೆ** (ನಾ). ಹೆಬ್ಬಾಗಿಲಿನ ದಾರಿ : ನಡೆವವರಿಗೆ ಕಾಲೇಳವಗಸೆವಟ್ಟೆಗಡರ್ವವರಿಗೆ ತಮ್ಮ ಚಿತ್ತ ಒಡಬಡದಾ ತಾಣವ ಬಿಟ್ಟು ಪೋಪರು ಸಿಡಿಮಿಡಿಗೊಳುತ್ತೈದುವರು (ರಾಮವಿ. ೨೦-೧೮೬).
[ಅಗಸೆ$_1$ (< ಅಗುಸೆ) + ಬಟ್ಟೆ$_I$]

**ಅಗಸೆವೂ** (ನಾ). ಅಗಸೆಮರದ ಹೂವು. 'ಅಗಸೆವೂಗೊಂಬು' ಪರಾ.
[ಅಗಸೆ$_2$ + ಪೂ]

**ಅಗಸೆವೂಗೊಂಬು** (ನಾ). ಅಗಸೆಯ ಹೂವಿನಂತಿರುವ ಕೋರೆದಾಡೆ : ಪೊದಟ್ದಗಸೆವೂಗೊಂಬೊಪ್ಪೆ ಕೋಟ್ಟುಟ್ಟೆ ಪೆರ್ಮೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ಕೇಕರಂ ಸೂಕರಂ (ಚಂದ್ರಪ್ರ. ೫-೬೦).
[ಅಗಸೆ$_2$ + ಪೂ + ಕೊಂಬು$_2$]

**ಅಗಸೆಳ್ಳು** (ನಾ). ಅಗಸೆಯ ಬೀಜ (ಸ್ಯಾಂಡರ್). [ಅಗಸೆ$_3$ + ಎಳ್ಳು]

**ಅಗಸ್ತ್ಯ** (ನಾ). ೧. ಒಬ್ಬ ಪ್ರಸಿದ್ಧ ಋಷಿ. ೨. ದಕ್ಷಿಣ ದಿಕ್ಕಿನ ಆಕಾಶದಲ್ಲಿಯ ಒಂದು ನಕ್ಷತ್ರ. ೩. ಅಗಸೆ ಮರ : "ಅಗಸೆ ಮತ್ತಗಸ್ತ್ಯ ಮೆನಿಕ್ಕು" (ಮಂಗರಾ. ೪೨-೩೮). ೪. ಸಾಲೆ ಜನಾಂಗದ ಒಂದು ಪಂಗಡ (ಎಸಮೈ. IX, ೯). [ಸಂ.]

**ಅಗಹರ** (ನಾ). ಪಾಪನಿವಾರಕ ; ಶಿವ : ಚಿತ್ತಭವಹರನಹಿತಹರನುನ್ಮತ್ತಗಜಹರನಗಹರಂ ಪುರಹರನು ಭವಹರನು (ಬಸವು. ೫೪-೪೫).
[ಸಂ. ಅಘಹರ]

**ಅಗಹರಣ**, ಅಗಹಾರಣ (ನಾ). ರಂಪ ; ರಗಳೆ : ಮಗುವಿನ ಕೈಯೊಳಗಿರುತಿಹ ಬಗೆಬಗೆ ಫಲಕಂದಗಳನು ಕಿತ್ತುಕೊಳುತ್ತಂ ಅಗಹರಣ ಮಾಡಿ ಕಾಡೊಳು ನೆಗೆದೊದೆಯುತೆ ಬೇಗ ನಡಿಯೊ ಯೆನ್ನುತೆ ತಗುಳಲ್(ಹನುಚ. ೫೪). **ಅಗಹಾರಣ** : ಮೃಗದ ಸಂಕುಲ ಪೆಚ್ಚಿ ಅಗಹಾರಣವ ಮಾಡಿ ಬಗೆವವು ಜನಗಳ ನೆಗರದೊಳೀಗ (ಹನುಚ. ೧೪).
[< ? ಹಗರಣ (< ಪಗರಣ)]

**ಅಗಹಾರಣ** 'ಅಗಹರಣ' ನೋ.

**ಅಗಹು** (ನಾ). ಅಗೆಯುವಿಕೆ ; ತೋಡುವಿಕೆ : ಲೋಹವನು ಬಳಿಕ ಕೆಂಗಱಿಯ ಕೋಲಿಂಗೆ ಬೇಗದಿ ಸಂಗಿಸಿದ ಮೊನೆಯಾಗಿ ಮುರಹರನಂಗದಗಹಿಗೆ ನೇಮನ[ವ]ಲೆ (ನಭಾಗ. ೧೧-೧-೪೫).
[ಅಗೆ$_1$ + -ಹು (< -ಪು)]

**ಅಗಳ್$_1$** 'ಅಗುೞ್$_1$' ನೋ.

**ಅಗಳ್$_2$** 'ಅಗುೞ್$_2$' ನೋ.

**ಅಗಳಂತಿ** 'ಅಗಱ್ತಿ' ನೋ.

**ಅಗಳತೆ** 'ಅಗಱ್ತೆ' ನೋ.

**ಅಗಳತೆಗಡ್ಡೆ** (ನಾ). ಕಂದಕವನ್ನು ತೋಡಿ ಎತ್ತಿಹಾಕಿದ ಮಣ್ಣಿನ ದಿಬ್ಬ (ಸ್ಯಾಂಡರ್). [ಅಗಳತೆ (< ಅಗಱ್ತೆ) + ಗಡ್ಡೆ]

**ಅಗಳಸುಂಟಿ** 'ಅಗಳುಶುಂಠಿ' ನೋ.

**ಅಗಳಾಡಿಸು** (ಕ್ರಿ). (ಉಕ) ಅಲುಗಾಡಿಸು ; ಅಲ್ಲಾಡಿಸು : ಪಕ್ಷಿಗಳಿಗೆ ಬೇಕಾದಷ್ಟು ಕಸುವಿನಿಂದ ರೆಕ್ಕೆಗಳನ್ನು ಅಗಳಾಡಿಸಲಿಕ್ಕೆ ಅನುಕೂಲಿಸುವದು (ಮುಂಬಯಿ. ೪-೫೭) ; ಅವರನ್ನಿಷ್ಟು ಅಗಳಾಡಿಸಿ ನೋಡ್ರಿ (ಹೊಸಂಸಾ. ೩೪). [ಅಗಳಾಡು (< ಅಲುಗಾಡು) + -ಇಸು$_3$]

**ಅಗಳಾಡು** 'ಅಲುಗಾಡು' ನೋ.

**ಅಗಳಿ** 'ಅಗ್ಗಱಿ$_1$' ನೋ.

**ಅಗಳಿಚಣ್ಣ** (ನಾ). ಮೊಳಕಾಲ ವರೆಗೆ ಬರುವ, ಒಂದು ಬಗೆಯ ಅಗಲವಾದ ಚಲ್ಲಣ (೩). [ಅಗಳ್$_0$ + ಚಣ್ಣ (< ಚಲ್ಲಣ)]

**ಅಗಳಿತ$_1$** (ಗು). ಗಳಿತವಲ್ಲದ ; ಬಿದ್ದುಹೋಗದ ; ಶಿಥಿಲವಾಗದ.
[ಸಂ. ಅಗಲಿತ]

**ಅಗಳಿತ$_2$** (ಗು). ಲೆಕ್ಕವಿಲ್ಲದ ; ಅತಿಶಯವಾದ : ಆಚಾರ್ಯರಾಯನಗಳಿತಮಹಿಮಂ (ಮುಂಬರಾ. ೩೩೮-೩; 12 ಶತ). [ಸಂ. ಅಗಣಿತ]

**ಅಗಳಿಸು** 'ಅಗುೞಿಸು' ನೋ.

**ಅಗಳು$_1$** 'ಅಗುೞ್$_1$' ನೋ.

**ಅಗಳು$_2$** 'ಅಗುೞ್$_2$' ನೋ.

**ಅಗಳು$_3$** 'ಅಗುೞ್$_3$' ನೋ.

**ಅಗಳು$_4$** (ನಾ). ದಂಡೆ; ದರೆ (ಕರಾ): ನೋಡಿ, ನಮ್ಮ ಈ ಆಸ್ತಿ ತೆಂಕು ಬಡಗಾಗಿದೆ. ಅಗಲ ಅರ್ಧ ಫರ್ಲಾಂಗು. ತೆಂಕು ಬಡಗು ಪೂರ್ವ ಬದಿಗಳಲ್ಲಿ ಅಗಳು ಹಾಕಿಸಿದ್ದೇನೆ (ಬಾಳಿಗಿ. ೪೫). [ ~ ಅಗುೞ್$_3$ ?]

**ಅಗಳು$_5$** (ಕ್ರಿ). ೧. ಕೈಯಲ್ಲಿ ಗಟ್ಟಿಯಾಗಿ ಹಿಡಿದುಕೊಂಡಿರುವ

ಪದಾರ್ಥದಲ್ಲಿ ಒಂದು ಚೂರನ್ನು ಹಲ್ಲಿನಿಂದ ಕಚ್ಚಿ ಕೀಳು (ಉಕ). ೨. ನುಂಗು (ಸ್ಯಾಂಡರ್). [~ ಅಗಿ₁]
**ಅಗಲುಗಡ್ಡೆ** (ನಾ). = ಅಗಳತೆಗಡ್ಡೆ (ಕಿಸಂಗ್ಲಾ).
[ಅಗಲ್ಳು₃ (< ಅಗುಟ್ಟು₃) + ಗಡ್ಡೆ]
**ಅಗಲುಬಾಗಿಲು** (ನಾ). ಕಂದಕದ ಸೆಳೆಸೇತುವೆ; ಎತ್ತುಸೇತುವೆ: (ಕಿಸಂಗ್ಲಾ). [ಅಗಳ್ಳು₃ (< ಅಗುಟ್ಟು₃) + ಬಾಗಿಲು (< ಬಾಗಿಲ್)]
**ಅಗಲುಶುಂಠಿ**, ಅಗಳಸುಂಟಿ, ಅಗುರುಶುಂಠಿ, ಅಗುಳುಶುಂಠಿ (ನಾ). ಒಂದು ಬಗೆಯ ಮೂಲಿಕೆ. **ಅಗಳಸುಂಟಿ** (ಕಿ). **ಅಗುರುಶುಂಠಿ** (ಪಂಡಿತ). **ಅಗುಳುಶುಂಠಿ** : "ಪಾಠೆಯೆಂದೆನಲಗುಳುಶುಂಠಿಯಕ್ಕುಂ" (ಮಂಗರಾ. ೪೩–೪೦); ಅಮರದವಳ್ಳಿ ಅಗುಳುಶುಂಠಿ ಇವಿಷ್ಟನು ಕಷಾಯವ ಹಾಕಿ ಅಷ್ಟಾವಶೇಷವಾಗಿ ಕಾಸಿ ಕೊಡಿಸಲು ಶ್ಲೇಷ್ಮ ಪಿತ್ತಜ್ವರ . . . ಪರಿಹರವಹವು (ವೈದ್ಯಸಾ. ೬೨–೧೧೭ ಟೀಕು). [< ಅಗಿಲು ? + ಶುಂಠಿ]
**ಅಗಳ್ತೆ** 'ಅಗಟ್ತೆ' ನೋ.
**ಅಗಳ್ತೆಬಾಗಿಲು** (ನಾ). = ಅಗಳುಬಾಗಿಲು.
[ಅಗಳ್ತೆ (< ಅಗಟ್ತೆ) + ಬಾಗಿಲು (< ಬಾಗಿಲ್)]
**ಅಗಟ್₁** 'ಅಗುಟ್ಟು₁' ನೋ.
**ಅಗಟ್₂** 'ಅಗುಟ್ಟು₃' ನೋ.
**ಅಗಟಿ₁** (ನಾ). ಒಂದು ಊರಿನ ಹೆಸರು: ಅಗಟಿಯ ಮೋಣಿಗುರವರ ಶಿಷ್ಯ ಕೊಟ್ಟರದ ಗುಣಸೇನ ಗುರವನ್ನೋರ್ನ್ನು ಮುಡಿಪ್ಪಿದಾರ್ (ಎಕ. II, ೮–೧; 700). ℙ 'ಅಗಟಿ', 'ಅಗಿಟಿ', 'ಅಗುಲಿ' ಈ ಮೂರೂ ಒಂದೇ ಶಬ್ದದ ಬೇರೆ ಬೇರೆ ರೂಪಗಳಾಗಿರಬಹುದೆ? [?]
**ಅಗಟಿ₂** 'ಅಗ್ಗಟಿ₁' ನೋ.
**ಅಗಟಿಸು** 'ಅಗುಟಿಸು' ನೋ.
**ಅಗಟ್ತೆ**, ಅಗತೆ, ಅಗರ್ತೆ, ಅಗಳಂತಿ, ಅಗಳತೆ, ಅಗಳ್ತೆ, ಅಗುಳಂತಿ (ನಾ). ೧. ತೋಡುವುದು; ಅಗೆಯುವುದು; ಮಣ್ಣನ್ನು ಮಗುಚಿ ಹಾಕುವುದು; ಅಗೆತ: "ಅಗಟ್ತೆ = ಖನನಂ" (ಶಮದ. ಪರಿ. ೧–೧). ೨. ಕಂದಕ; ಅಗಳು: ಪವಳದ ಬೀಡು ಕಂಬುಗಳ ನಾಡು . . . ಪದ್ಮಸಂಭವನ ನೆಗಟ್ತೆ ಪೂರ್ವದ ಪೊಗಟ್ತೆ ಕುದುರ್ಗದಗಟ್ತೆ ಮಿಕ್ಕ ಬಾಡವಶಿಖಿಗೋಗರಂ ಮಣಿಗಳಾಗರಮಂದೆಸೆದತ್ತು ಸಾಗರಂ (ಸೂಕ್ತಿಸು. ೨–೩೭). ೩. (ನೀರು ಮೊದಲಾದವನ್ನು) ಮೊಗೆಯುವುದು (?): "ದ್ರಾಗ್ಭುತಕಮೆಂಬುದು ಅಗಟ್ತೆಯ [ಪಾಠಾಂ. ಅಗರ್ತೆಯ] ನೀರ್" (ಹಲಾಯು. ೧೦೭–೨೭). **ಅಗತೆ**: ೧. ನೆತ್ತಿಯಗತೆಗಳಂಕುಶದ ಬೆರಳೊತ್ತುಗಿವಿಗಳ ಕರದ ಪರಿಘುದ ಮತ್ತಗಜಘಟೆಗಳನು (ಕುವ್ಯಾಶ. ೨–೨೬); ಅವರು ಉದ್ದಕ್ಕೆಮಣ್ಣನ್ನಗೆದು ಕೊಚ್ಚಿ ಅಗತೆಮಾಡಿದರೆ ಕೊಡಿಸಿಟ್ಟ ಬೂದಿಯನ್ನು ಸೀತಮ್ಮ ತಂದು ಸುರಿಯುವರು (ಬಾಳಿಗಿ. ೭೯). ೩. "ಅವೃತ್ತಮೆನಲಗತೆಯಿಂದಾದ ನೀರ್ಗಕ್ಕು ನಾಮಂ" (ಮಂಗರಾ. ೧೨೦–೨). **ಅಗರ್ತೆ**: ೩. "ಅಗರ್ತೆಯ ನೀರ್" (ಹಲಾಯು. ೧೦೭–೨೭). **ಅಗಳಂತಿ** ೨. (ಸ್ಯಾಂಡರ್). **ಅಗಳತೆ**: ೨. ಉತ್ತರದ ಮೇರೆಯಲ್ಲಿ ನರ್ಮದೆಯೂ ದಕ್ಷಿಣದ ಮೇರೆಯಲ್ಲಿ ತುಂಗಭದ್ರೆಯೂ ಚಾಳುಕ್ಯ ರಾಜ್ಯಕ್ಕೆ ಅಗಳತೆಯಾಗಿದ್ದವು (ಕವೀರ. ೬೧). **ಅಗಳ್ತೆ** : ೩. ಅಗಳ್ತೆಗಳನೆಲ್ಲಮಂ ಕ್ರೂರಮಾದ ದನಿಗಳಿಂದೆಯುಂ ಮಿಾನ್ಮೊಸಳೆಗಳಿಂದೆಯುಂ ಪರಿಪೂ[ರಿ]ತಂಗಳಾಗಿ ಮಾಡಬೇಕು (ಭಾರಶಾಂ. ೭೦–೪೮೨). **ಅಗುಳಂತಿ** : ೨. (ಗ್ಯಾರೆಟ್).
[ಅಗಟ್ + -ತೆ. ‖ **ತೆಲು.** ಅಗಡತ, ಅಗಡಿತ, ಅಗಡ್ತ; **ತುಳು.** ಅಗತ್ತೆ]
**ಅಗಾಗ್ರ** (ನಾ). ಬೆಟ್ಟದ ತುದಿ; ಶಿಖರ. [ಅಗ₂ + ಅಗ್ರ₁]
**ಅಗಾಡಿ** (ನಾ). ೧. ಮುಂಭಾಗ; ಮುಂದುಗಡೆ: ಪಾಜಲಖಾನನು ತಂನ ದಂಡು ತೆಗೆದುಕೊಂಡು ಅಗಾಡಿಗೆ ಆಗಿಕೊಂಡು. ಪಿಚಾಡಿಗೆ ಜಾನ್ ಕಸ್ತೂರಿ ಆಗಿಕೊಂಡು (ರಾಜೇಂದ್ರ. ೨೨). ೨. ಕುದುರೆಯ ಮುಂಗಾಲುಗಳನ್ನು ಕಟ್ಟುವ ಹಗ್ಗ: ಸಾಲೋ ನರಸಿಂಗರಾಯನ ಖಾಸಾ ಕುದುರೆಯ ಅಗಾಡಿಯನ್ನೂ ಪಿಚಾಡಿಯನ್ನೂ ಬಿಚ್ಚುತ್ತಾ ಇದ್ದನು (ಚಿತ್ರಪಾ. ೧೧). ೩. ಕುದುರೆಯ ಲಗಾಮಿನ ಹಗ್ಗ (?).
[← **ಹಿಂದಿ.** ಅಗಾಡೀ; **ಮರಾ.** ಅಘಾಡೀ. / **ತೆಲು.** ಅಗ್ಗಡಿ]
**ಅಗಾಧ** (ಗು). ೧. ಆಳವಾದ; ಆಳವನ್ನು ಅಳೆಯಲಾಗದ. ೨. ಅಶಕ್ಯ; ಅಸಾಧ್ಯ. ೩. ಗುಳಿ; ಗುಂಡಿ: "ನಿಮ್ನಂ, ಅಗಾಧಂ, ಗರ್ತಃ . . . ಈ ೧೫ ಕುಟಿ" (ಹಲಾಯು. ೧೦೩–೨). [ಸಂ.]
**ಅಗಾರ** (ನಾ). ಮನೆ; ಬೀಡು; ವಸತಿ. [ಸಂ.]
**ಅಗಾರಿ₁** (ನಾ). ಮನೆಯುಳ್ಳವನು; ಗೃಹಸ್ಥ. [ಸಂ. ಅಗಾರಿನ್]
**ಅಗಾರಿ₂** (ನಾ). ಬೆಟ್ಟಗಳ ಶತ್ರು; ಇಂದ್ರ. [ಅಗ₂ + ಅರಿ₆]
**ಅಗಾವು₁** (ಗು). (ಉಕ) ಮುಂಗಡವಾಗಿ ಕೊಡುವ: ರೈತರಿಂದ ಅಗಾವು ಲಾವಣಿ ವಸೂಲ ಮಾಡಿಕೊಂಡು ನಿನ್ನ ತಾಯ ಕಣ್ಣಲ್ಲಿ ಮಣ್ಣನ್ನೇ ಎರಚಿದ್ದಾನೆ (ಬೆವರ. ೧೪೭); ವಿಶ್ವಾಸನಿಗೆ ಪುಣೆಯ ತ್ಯಾಗದ ಅಗಾವು ನೋಟೀಸು ಬಜಾಯಿಸಿದ (ದೀಪಹ. ೩೩).
[← **ಹಿಂ. ಮರಾ.** ಅಗಾಊ = ಮೊದಲೇ, ಮುಂಚಿತವಾಗಿ]
**ಅಗಾಹಿತರತ್ನ** (ನಾ). ಇಂದ್ರನೀಲಮಣಿ: ಮೃಗಮದದಂಗರಾಗ ಮಸಿತೋತ್ಪಲಮಾಲೆಯ ಚೊಲ್ಲೆಯಂ ಮನಂಬುಗುವ ತಮಾಲಪಲ್ಲವದ ಮೆಲ್ಲುಡೆ ಕಟ್ಟಿದ ಪೀಲಿದಂಡೆ ಚೆಲ್ವಗಲದ ಸಾಂದ್ರಕಜ್ಜಲಲಲಾಮಮಗಾಹಿತರತ್ನಭೂಷಣಂ ಸೊಗಯಿಸೆ ದೇವಿಯರ್ ಬಳಸಿನಿಂದೆಸೆದಿರ್ದರಗೇಂದ್ರಪುತ್ರಿಯ (ಶಬಶಂ. ೩–೧೧).
[ಸಂ. (ಅಗಾಹಿತ + ರತ್ನ). ℙ ಅಗಾಹಿತ=ಪರ್ವತಗಳ ಶತ್ರು; ಇಂದ್ರ]
**ಅಗಿ₁** (ಕ್ರಿ). ೧. ಹೆದರು; ಅಂಜು; ಕುಗ್ಗು; ಹಿಂದೆಗೆ: "ಅಗಿ – ಸಂತ್ರಾಸ ಹರ್ಷ ಚರ್ವಣೇಷು" (ಶಮಧಾ); "ಅಗಿದನಳ್ಕಿದಂ . . . ಎನಲ್ಕೆ ಭಯಭರಿತನಕ್ಕು" (ಕವಿಕಂ. ೧೯೯); ಕಿಡುವೊಡಲ ಕಿಡುವ ರಾಜ್ಯದ ಪಡೆಮಾತುಗೊಳಲ್ಕಮೆನ್ನ ಮೆಯ್ಯಗಿದಪುದು (ಆದಿಪು. ೧೪–೧೨೭); ಉರಗರಗಿದರ್ ದೈತ್ಯರ್ ಬೆಳ್ಕುತ್ತರಳ್ಕಿದನಿಂದ್ರನೀಶ್ವರನ ಮನಮುಮ್ಮಾಡಿತ್ತೋಡಿತ್ತು (ಕಾವ್ಯಾವ. ೩೯೭); ವೈರಿಗಳೆಲ್ಲರುಂ ದಶರಥಕ್ಷಿತಿಪಂಗಗಿದೋಡಿ ಪೋಗುತಂ (ಬಾಧಪು. ೮–೪೨); ಬಿಸಿಲ ತಾಪಕ್ಕಗಿದು ಶಿಖಿಯಲಿ ನುಸುಳುವಪೊಲಾಪತ್ತಿಗುಜಿತ ಚಿಂತಿಸಲು ಘನವಹುದು (ಜೀವಂಚ. ೪–೩೩). ೨. ಸಂತೋಷಪಡು; ಹಿಗ್ಗು; ಉತ್ಸಾಹಗೊಳ್ಳು: ಮೆಲ್ಲನೆ ಮಲಗಿರೆ ಕದಪಂ ಮೆಲ್ಲನೆ ಜಕ್ಕುಲಿಸೆ ನಕ್ಕು ಮಗನಗಿದೊದೆಯಲ್ ಮೆಲ್ಲಡಿಗೆ ಸಿಲ್ಕಿ ಹಾರಂ ಝಲ್ಲನೆ ಪಜಿದೊಕ್ಕ ಮುತ್ತನೆಂದಾಯ್ದಪನೋ (ಧರ್ಮನಾ. ೩–೧೨೩); ಮುಂಗಾಣಿಕೆಯ ಹರುಷದೊಳಗಿದು ವಿರಹವ ಬೀಳುಕೊಟ್ಟುವು ಜಕ್ಕವಕ್ಕಿಗಳು (ಕುವ್ಯಾಭೀ. ೧–೨೮). ೩. ಹಲ್ಲಿನಿಂದ ಅರೆದು ಸಣ್ಣಿಸು; ಜಗಿ: ಕೆಲಕೆಲವು ನಾಯ್ಗಳುರ್ಕಿಂ ತೊಲಗದೆ ಪಾಯ್ದಗಿದು ತೆಗೆದು ತಿನೆಯುಂ (ಧರ್ಮಾಮೃ. ೩–೭೮); ದೇವದಾನವರ ಮಾಯೆ ಅಗಿದಗಿದು ತಿಂಬಂದು (ಶೂನ್ಯಸಂ. ೫–೧೫); ಊಟಮಾಡುವಾಗ ಆಹಾರವನ್ನು ಚೆನ್ನಾಗಿ ಅಗಿದು ತಿನ್ನಬೇಕು (ರೂಢಿ). ೪. ಕಚ್ಚು: ಫಣಿಯಗಿಯೆ ಮಡಿದಂ (ಹಚಕಾ. ೧೨–೧೮); ಅಗಿವ ಹಲ್ಲಾಡಿನಲಿ ಹೊಜವಂಟನು ನಿಜಾಲಯವ (ತೊರರಾ. ೨–೩–೯). ೫. ಅಲುಗಾಡು; ತೊನೆದಾಡು; ಸ್ಪಂದಿಸು: ಇವನನಾನಿಸುವೆಂ ಮೆಯ್ಯಗಿವಂತೆನುತುಂ ನನೆಯಂಬುಗಳಿಂ ಮದನಂ ಮಹೀಶಮದನನನೆಚ್ಚಂ (ಕುಸುಮಾ. ೧೧–೧೧೧); ಅಗಿದು ಮೆಟ್ಟಿದಡವನಿ ಪಡುವಲು ನೆಗೆದುದಡರಿದು ಮುಂದೆ ಮೆಟ್ಟಲು ಚಿಗಿದುದಿಳೆ ಮೂಡಲು ಮಹಾಗಜವೈದಿತಾಹವನ (ಕುವ್ಯಾದ್ರೋ. ೩–೯); ಅಬಲಾ

ಜನದ ಕೈಗಳಲಗಿವ ಚಾಮರವೆಸೆದವಿದ್ದೆಸೆಯಲಿ ದಶಾನನನ (ತೊ ರ ರಾ. ೬–೧೦–೧೨); ನಿಗನಿಗನೆ ಹೊಳೆಹೊಳೆವ ಕಲಶದೊಳಗಿವ ಪಳಹದ ಘಂಟೆ ಮೊಳಗಲು (ಕೋಗಯ. ೧೮–೭೪). ೬. ವ್ಯಾ ಪಿ ಸು; ಆ ವ ರಿ ಸು: ಹೊಗೆಯ ಹೊದಱಿನ ನಿಱಿಗೆಯಿದು ವಹ್ನಿಗೆ ಸುನಿಶ್ಚಯವೆಂಬವೊಲು ಮೇಲಗಿವ ಶೋಕಕೃಶಾನುವಿನ್ನೀ ಮನದ ಹೊಗೆಯೆಂದ (ಕುವ್ಯಾದ್ರೋ. ೮–೧೦, ಅಡಿಟ); ದಂದಶೂಕಮಹೋಗ್ರ ಖಗಮೃಗದಿಂದ ಮಿಗೆ ಕಪ್ಪಗಿವ ಕತ್ತಲೆಯಿಂದ ಬೀಱಿತು ಭಯವನಾ ರಘುರಾಜಪುತ್ರರಿಗೆ (ತೊರರಾ. ೧–೧೦–೧). ೭. ಗರ್ಜಿಸು; ಧ್ವನಿಮಾಡು; ಕೂಗು: ಘುರ್ಘ್ವಿನೀತೆಱೆ ಅಪ್ಪೊರ್ ಕೊಸರು ಪುಟ್ಟುಱಿದಿದಿರುಪ[ಪಾ]ಯ್ದಾಗಿದಿಡಿದಿರುದೞಿ ನಾಮ ನ್ನಾದಿಗಳು ಪಗೊಳತ್ತೆಪ್ಪದಿನ್ನವ್ರು (ಮೈಆರಿ. ೯೪೩೦, ೩೬–೫; 800); ಅಗಿವ ಪಟಹ ಮೃದಂಗ ಕಹಳಾದಿಗಳ ಕಳಕಳರಭಸ ದಶದಿಕ್ಕುಗಳ ಮಾತಾಡಿಸೆ (ಕು ವ್ಯಾ ಭೀ. ೧–೯೬); ಅಗಿವ ಕಂಕ ಲವಾಕ ಗೃಧ್ರಾದಿಗಳ ಬಹಳಸ್ಫೀತಗೋಮಾಯುಗಳ ರಣವೇತಾಳಭೂತಪ್ರಕರ ಸಂಕುಲದ . . . ಕಾಳಗದ ಕಳನತಿರೌದ್ರರಸವನು ಮೊಗೆದುದು (ನಿಭಾಗ. ೧೦–೫೬–೫೭).

**ಅಗಿದು ಮಾಡು** = ಭಯಪಡುವಂತೆ ಮಾಡು (?): ಲೋ ಕ ವ ತನಗೆ ನಿತ್ಯವನಗಿದು ಮಾಡುವೆನೆನುತ (ಸಂಭಪ. ೮–೩).

[**ದೇ.** ‖ **ತುಳು.** ಅಗಿಪುನಿ]

**ಅಗಿ$_2$** (ನಾ). ನಡುಕ (?): ಗಟಗಟ ಸುರಿವಶ್ರುವ ಕೊರಲಿಱಿವಗಮುಗಿ ಮಟ್ಟಿಗದಟ್ವಿ ಮೊಟಗಿಂಗಂ ಪೊಂಪುಱಿಯೆನಿಸಿದಾತ್ಮನಿಂದೆಗಮಟಿಲ್ಲ ಮಿಂದ್ರನುಮುಪೇಂದ್ರನುಂ ಪದನಾದರ್ (ಶಾಂತಿಪು. ೬–೮೯). [< ಅಗಿ$_1$]

**ಅಗಿಣಿ$_1$** 'ಅರ್ಘವಾಣಿ' ನೋ.

**ಅಗಿಣಿ$_2$** 'ಅಗ್ಗಲಿ$_1$' ನೋ.

**ಅಗಿತಿನ್ನು** (ಕ್ರಿ). ಅಗಿದು ತಿನ್ನು: ಬಲುಶುಂಡಾಲಗಳನಗಿತಿಂಬ ಮೃಗಪತಿ ಗಿದಿರೆ ನರಿ (ಪ್ರಹ್ಲಾಚ. ೭–೪೯). [ಅಗಿ$_1$ + ತಿನ್ನು (< ತಿನ್)]

**ಅಗಿದು** (ಗು). ಆಳವಾದ: ಉದಕದಾನ ನಿಮಿತ್ತವಾಗಿ ಅಗಿದಪ್ಪ ಬಾವಿ ಯನಗಳಿಸಿ (ಸೌಇಇ. IX–i, ೨೬೮–೪೩; 1112). [?]

**ಅಗಿನಿ** (ನಾ). ೧. ಬೆಂಕಿ; ಕಿಚ್ಚು: "ಅಗಿನಿಯೆನೆ ಕಿಚ್ಚು" (ಕಬ್ಬಕೈ. ೨೦); ಗಗನಮೆನಿಪ್ಪ ಪಾಳ್ವೊಲದೊಳರ್ಕಸಮುದ್ಧೃತಿಗೆಯ್ದು ಸಂಜೆಯೆಂಬಗಿ ನಿಯನಿಟ್ಟು ಮರ್ಬನಿಪ ಗೊಬ್ಬರವಂ ತಳಿದು (ರಾಜಶೇ.೧೧–೬೮). ೨. ಅಗ್ನಿ ದೇವತೆ: "ಅಗಿನಿಯಮಳ್ದಲೆಯನಗ್ಗಿಯು" (ಕವಿಕಂ. ೩೪); ಅಭಿನವದ ಸದ್ವರವನಗಿನಿಗೆ ವಿಭವದಿಂದಲೆ ಕೊಟ್ಟು (ಕೋಗಯ. ೧೧–೩೧).

[**ಸಂ.** ಅಗ್ನಿ. / **ತುಳು.** ಅಗಿನಿ; **ತೆಲು.** ಅಗಿನಿ, ಅಗ್ಗಿ; **ಮರಾ.** ಅಗಿನ್, ಅಗೀನ್; **ಹಿಂ.** ಆಗಿನ್]

**ಅಗಿಬಿಗಿ** (ನಾ). ಸಡಗರ; ಸಂತೋಷದ ಸಂಭ್ರಮ: ಆ ಗಂಧೋದಕ ಕತಿಪಯ ಭಾಗಮನೆಲೆಮುಟ್ಟೆ ಮೇಗಣಿಂ ಮೇಗೆಯೆ ಕೊಳ್ವಾಗಡಿನ ಮುಕುಟದೊಳ್ ತ ಳಿ ವಾ ಗ ಡಿ ನ ಗಿ ಬಿ ಗಿ ತಗುಳ್ದುದಮರೇಶ್ವರರೊಳ್ (ಶಾಂತಿಪು. ೧೦–೫೪). [< ಅಗಿ$_1$ + ಬಿಗಿ$_2$]

**ಅಗಿಯಹುಣ್ಣಿಮೆ** (ನಾ). = ಅಗಿಹುಣ್ಣಿಮೆ: ಅ ಗಿ ಯ ಹು ಣ್ಣಿ ಮೆ ಹೋದ ಮಿಗೆ ಮೂಱು ದಿವಸಕ್ಕೆ ಮೃಗಧರನ ಕೂಡೆ ಮೃಗವಿರಲು ಮಳೆ ಗಾಲ ಜಗ ದಣಿಯಲಕ್ಕು (ಸರ್ವಜ್ಞ. ೧೫೭೩).

[ಅಗ್ಗಿ$_0$ (< ಅಗ್ಗೆ$_2$) + ಹುಣ್ಣಿಮೆ]

**ಅಗಿಲ್, ಅಗಿಲು** (ನಾ). ೧. ಒಂದು ಜಾತಿಯ ಸುಗಂಧದ ಮರ: ಚಿಲ್ಲವಗಿಲಂಬಟೆ ಕರಂಜ ಪಿಚುಮಂದ (ಉ ದ್ಭ ಟ. ೨–೪೨); ಮಾದಲ ಕಿತ್ತೀಳೆಯಗಿಲ್ ನಾರಗ . . . ದಾಳಿಂಬದ ಸಾಲ್ಗಳ್ ಸಲೆ ಸೊಗಸಿದುವಲ್ಲಿ (ಜ ಯ ಕಾ. ೧೫–೪೩). ೨. ಈ ಮರದಿಂದ ಸಿದ್ಧಪಡಿಸಿದ ಪರಿಮಳ ವಸ್ತು; ಸುಗಂಧ ದ್ರವ್ಯ: 'ಕಾರಗಿಲ್' ಪರಾ. ೩. ಪರಿಮಳ; ಸುಗಂಧ. 'ಅಗಿಲಿಲಿ' ಪರಾ. **ಅಗಿಲು**: ೨. ಅಗಿಲು ಸಾದು ಜವಾದಿ ಚಂದನ ಮೃಗಮದಂ (ಬಸವು. ೪–೩೫); ಕುಂಕುಮ ನನ್ನು ಒಂದಕ್ಕೆ ಹಾಗ, ಅಗಿಲು ತೊಲೆ ಒಂದಕ್ಕೆ ಅಡ್ಡ (ಎಕ. V. ಬೇ ಲೂ ರು. ೭೫–೮೨; 1387); ಅಗಿಲು ಸಾಂಬ್ರಾಣಿಯ ಧೂಪವಾಸನೆ ನೆಱೆ ನಿಗುರಿತು ಗಗನ ಮಂಡಲಕೆ (ಕಂನವಿ. ೨೦–೧೮).

[**ದೇ.** ‖ **ತಮಿ. ಮಲ.** ಅಗರು, ಅಗಿಲ್; **ತುಳು.** ಅಗಿಲ್; **ತೆಲು.** ಅಗರು, ಅಗುರು, ಅಗಲು, ಅಗುಲು. / **ಸಂ.** ಅಗರು, ಅಗುರು; **ಪ್ರಾ.** ಅಗರು, ಅಗಲಯ]

**ಅಗಿಲ** (ನಾ). ಉಪ್ಪಾರರಲ್ಲಿ ಒಂದು ಬಗೆ (ಎಸಮೈ. XXI, ೧೪). [?]

**ಅಗಿಲಿಲಿ** (ಗು). ಅಗಿಲು ಇಲ್ಲದ; ಪರಿಮಳವಿಲ್ಲದ: ಸೊಗಯಿಸುಗುಮೆ ಪಲ್ಲಿಲಿವಾಯಗಿಲಿಲಿ ಗಂಧಂ [ಪಾಠಾಂ. ಪಗಿಲಿಲಿವಣ್ಣಂ] ಸಮಂತು ಕೂರಿಲಿ ಕುಡುಗೋಲ್ ಮಿಗೆ ನಾಣಿಲಿಯೆನಿಸುವ ವಧು ನಗೆಗೆಡೆಯಕ್ಕುಂ ಸಮಸ್ತ ಜಗತೀತಳದೊಳ್ (ಕಾವ್ಯಾವ. ೨೫೭). [ಅಗಿಲ್ + –ಇಲ್ಲಿ$_2$]

**ಅಗಿಲು** 'ಅಗಿಲ್' ನೋ.

**ಅಗಿಲುಕುಂಕುಮ** (ನಾ). ಒಂದು ಬಗೆಯ ಗಿಡ: "ಪೀತಕಂ – ಮರ ದರಿಸಿನ, ಅಗಿಲುಕುಂಕುಮ" (ಓಷಧಿ. ೯೯).

[ಅಗಿಲು (< ಅಗಿಲ್) + ಕುಂಕುಮ]

**ಅಗಿಲುಗಂಧ** (ನಾ). ಹಳದಿಯ ಬಣ್ಣದ ಪರಿಮಳವನ್ನು ಕೊಡುವ ಒಂದು ವೃಕ್ಷ: ಅಗಿಲುಗಂಧ (ಮೈಔಗಿ. ೮–೧೩೭).

[ಅಗಿಲು (< ಅಗಿಲ್) + ಗಂಧ]

**ಅಗಿಲುಚಕ್ಕೆ** (ನಾ). ಅಗಿಲು ಮರದ ಚಕ್ಕೆ (ಕ).

[ಅಗಿಲು (< ಅಗಿಲ್) + ಚಕ್ಕೆ]

**ಅಗಿಸು** 'ಅಗೆಯಿಸು' ನೋ.

**ಅಗಿಟಿ** (ನಾ). ಒಂದು ಊರಿನ ಹೆಸರು (?): ಅದಱ ತದನಾನ್ತರ ಅಗಿಟಿಯ ಪಾಟಿಗೊಳಗೋ × ಅದಱ ತದನಾನ್ತರ ಅಗುಲಿಯ ಕಣುವೆ (ಸೌಇಇ. IX-i, ೪೧–೨೮; 1100). 'ಅಗಟಿ' ಪರಾ. [?]

**ಅಗಿಹುಣ್ಣಿಮೆ** (ನಾ). ವೈ ಶಾ ಖ ಮಾ ಸ ದ ಹುಣ್ಣಿಮೆ. ℙ ಬತ್ತ, ತಂಬಾಕು, ಮೆಣಸು ಮುಂತಾದವುಗಳ ಅಗೆಗಳನ್ನು (= ಸಸಿಗ ಳನ್ನು) ನಾಟಿ ಹಾಕುವ ಕಾಲ: ಅಗಿಹುಣ್ಣಿಮೆಯ ಹಗಲು, ಗೌರಿ ಹುಣ್ಣಿ ಮೆ ಇರುಳು (ಉಯ್ಯಾಲೆ. ೭೦–೯). [ಅಗ್ಗಿ$_0$ (< ಅಗ್ಗೆ$_2$) + ಹುಣ್ಣಿಮೆ]

**ಅಗು** 'ಅಗ್ಗು$_1$' ನೋ.

**ಅಗುಂತಿ** (ನಾ). ೧. ಹೆಚ್ಚಳ; ಅತಿಶಯ: ಆದಿತ್ಯನ ತೇಜದಗುಂತಿ ಯುಮಂ (ಪಂಪಭಾ. ೧–೧೩೯ ವ); ಕಾಂತಿಯಗುಂತಿ ಶಾಂತಿ ವಿಭವಂ ಭದ್ರಂ ಶುಭಂ ಮಂಗಳಂ (ಪಂಪಭಾ. ೧೪–೬೫). ೨. ರಾಶಿ; ಒಟ್ಟಿಲು: ನೆಣದ ಬಳಂಬೆ ಕೋಳ್ಮಿದುಳ ತಿನ್ತಿಣಿ ಮೂಳೆಯ ತೋರವಟ್ಟು ಬಲ್ವೆಣ ಗಳಗುನ್ತಿ ನೆತ್ತರ ಕಡಲ್ (ಎಕ. V, ಅರಸೀ. ೧೦೨–೪೬; 1100). 'ಅದಗುಂತಿ' ಪರಾ. [?]

**ಅಗುಂತಿವಡೆ** (ಕ್ರಿ). ಹೆಚ್ಚು; ಸಮೃದ್ಧಿಯಾಗು: ಕಳ್ದಪಹರಿಸಿದ ಕಸವರಮಗುಂತಿವಡೆದಗ್ಗಲಿಪಂತಿರೆ ತೋಱಿ ಬೇಗದಿಂ ಮೆಯ್ಗರೆಗುಂ (ನೀತಿಮಂ. II. ೨೩೩). [ಅಗುಂತಿ + ಪಡೆ$_1$]

**ಅಗುಂದಲೆ** (ನಾ). ಅ ತಿ ಶ ಯ; ಹೆಚ್ಚಳ: "ಅಗುಂದಲೆ = ಪಿರಿದು" (ಶಮುದ. ಪರಿ. ೨–೧); "ಅಗುಂದಲೆಂದು ಬಹುಳಂ" (ಕರ್ಣಾನಿ. ೨೧), "ಮೊಕ್ಕಳಮಗುಂದಲೆ ಕರಂ ನೆಱೆ" (ಕಬ್ಬಕೈ. ೪೮); ಅಗುಂದಲೆ ಪೊಗ ಟಿಲ್ಕೆ ಚಕ್ರಿನಂದನರಳವಂ (ಆ ದಿ ಪು. ೪–೮೮); ಲೋಕಕ್ಕೆಲ್ಲಮಗುಂದಲೆ ಯಾದ ಬೀರಮೆಸೆಯೆ (ಪಂಪಭಾ. ೧೨–೨೧೩ ವ); ಅಖಿಳೇಂದ್ರಿಯದೊಳ್ ಸಂದಿರ್ದ ನರರ ದುಃಖದಗುಂದಲೆಯಂ ಪವಣಿಸಲ್ಕೆ ಬ ಲ್ಲ ವ ನಾ ವಂ

(ಪುಣ್ಯಾಸ್ರ. ೧–೧೧೩); ಸಂತಸಮಗುಂದಲೆಯಾಗೆ ಪಡೆವೆರಸು ನಡೆತರ್ಪ (ರಾಮಾಶ್ವ. ೫೬–೨೩). [ಅಗು (< ಅಗು$_1$) + –ತಲೆ$_2$]

**ಅಗುಂದಲೆಮಾಡು** (ಕ್ರಿ). ಹೆಚ್ಚಿಸು; ಅತಿಶಯಗೊಳಿಸು: ಲಾವಣ್ಯರಸದ ತಂದಲನಗುಂದಲೆಮಾಡೆಯುಂ (ಪಂರಾಮಾ. ೩–೭೭ ವ). [ಅಗುಂದಲೆ + ಮಾಡು$_1$]

**ಅಗುಂದಲೆವಡೆ** (ಕ್ರಿ). ಆಧಿಕ್ಯವನ್ನು ಹೊಂದು; ಹೆಚ್ಚುಗಾರಿಕೆಯನ್ನು ಪಡೆ: ಪಾಕಂ ಲೋಕೋತ್ತರಮೆನಿಸೆ ಶಯ್ಯೆ ರಯ್ಯಮಾಗೆ ಬಂಧಮಗುಂದಲೆವಡೆಯೆ (ರಾಜಶೇ. ೫–೧೯ ವ). [ಅಗುಂದಲೆ + ಪಡೆ$_1$]

**ಅಗುಂದಲೆವೋಗು** (ಕ್ರಿ). ಹೆಚ್ಚಾಗಿ ಹೋಗು: ಕೊಳದೊಂದು ಭಾಗಕ್ಕೆ ನೀರೆಲ್ಲಮಗುಂದಲೆವೋಗೆ (ಶಾಂತಿಪು. ೮–೩೮ ವ). [ಅಗುಂದಲೆ + ಪೋಗು]

**ಅಗುಂಬಿಸು** (ಕ್ರಿ). ರಾಶಿಮಾಡು; ಒಟ್ಟು: "ಅಗುಂಬಿಸಿದನೆನಲ್ಕೆ ರಾಶಿಮಾಡಿದನಕ್ಕುಂ" (ಕರ್ಣಾನಿ. ೩೦). [ಅಗುಂಬು$_0$ + –ಇಸು$_3$]

**ಅಗುಚು** 'ಅಗುರ್ಚು' ನೋ.

**ಅಗುಣ** (ಗು). ಗುಣವಿಲ್ಲದ; ನಿರ್ಗುಣ. [ಸಂ.]

**ಅಗುಣಿ** 'ಅಗ್ಗಟ್ಟಿ$_1$' ನೋ.

**ಅಗುಪ್ತ** (ಗು). ೧. ಗುಪ್ತವಲ್ಲದ; ರಹಸ್ಯವಲ್ಲದ. ೨. ರಕ್ಷಣೆಯನ್ನು ಕೋರದ: ಸರ್ವ್ವಮಹೀಗುಪ್ತಮಗುಪ್ತಂ ಸಮಸ್ತ ವಂಶಾವತಂಸಮಂತಾವಂಶಂ (ಕಇಅ. ೨, ೨–೧೫; 1058). [ಸಂ.]

**ಅಗುರ್** (ಕ್ರಿ). ೧. ಸಾಹಸವನ್ನು ತೋರು; ಆಕ್ರಮಣ ಮಾಡು: ಧರೆಯೆಲ್ಲಂ ಪೊಗೞ್ವನ್ನಿರೆ [ಪುರಿ]ಗೆಱೆಯೊಳಗುರ್ತು ರೋಣಮಂ ಕಾದ ಮುರೇಶ್ವರಪುರಮನೆಯ್ದಿದೋಂ . . . ಪಂಪಯ್ಯಂ (ಸೌಇಇ. XI–i, ೩೬–೨೩; 942). ೨. ಹೆಚ್ಚಾಗು; ಅತಿಶಯವಾಗು: ಒಡ್ಡಿದ ಮೇಘಸಮೂಹದಂತೆ ನಂಟರ ಕಡುಗೂರ್ಮೆ ಪಣ್ತ ಮರನಂತೆ ವಿಳಾಸದಗುರ್ತ ಮೈಮೆಯುಬ್ಬರಮದು ನೀರಬೊಬ್ಬುಳಿಕೆಯಂತೆ ನಿರಂತರಮಲ್ಲದೆಲ್ಲಿಯುಂ (ಧರ್ಮಾಮೃ. ೫–೧೯).

ಅಗತುಕೊ = ಮೇಲೆ ಬಿದ್ದು ಬಿಗಿಯಾಗಿ ಹಿಡಿದುಕೊ; ಅಮುಕಿಕೊ: ನಾನು ಅವನ ಸೊಂಟಕ್ಕೆ ನುಗ್ಗಿ ಅವನನ್ನು ಕೆಳಕ್ಕೆ ಎತ್ತಿಹಾಕಿ ಮೇಲೆ ಅಗತುಕೊಂಡೆ (ಸುಮಚ. ೬೦); ತನ್ನ ಮೇಲೆಯೇ ಎಲ್ಲಿ ಈ ಸಂಸಾರವೂ ಅಗತುಕೊಳ್ಳುವುದೋ ಎಂದು ಹೆದರಿ ಅವನು ಮೌನವ್ರತವನ್ನಾಚರಿಸಿದ (ಶನಿಸಂ. ೨೨). P ಅಗತುಕೊ < ಅಗರ್ತುಕೊಳ್ [ದೇ.]

**ಅಗುರಿಸು** (ಕ್ರಿ). = ಅಗುರ್ಚು ೧: ಕಾರ್ಮುಗಿಲೊಳಗೆ ತೊಳಗುವೆಳಮಿಂಚಿನಂತೆ ಕುಂದದಗುರಿಸೆಯುಗುರ್ವೆಳಗು ಸೊಗಸಿಂದೆಣ್ಣಿಯಂ ದೇವಿಗೊತ್ತಿ (ಪದ್ಮರಾ. ೩–೪೩). [ಅಗುರ್ + –ಇಸು$_3$]

**ಅಗುರು$_1$** (ನಾ). "ದೋಣಿ" (ನಾನಾಶ. ೫). [?]

**ಅಗುರು$_2$** (ನಾ). ೧. = ಅಗಿಲ್ ೧: ತೆಗಪಿ ಮೊದಲಲ್ಲಿ ಮತ್ಸ್ಯಾಂಬುಗವಾಮಿಷಮಗುರುಪಿಂಡಿಯೆಂಬಿನಿತುವನಿಕ್ಕುಗೆ (ಲೋಕೋಪ. ೬–೩೪). ೨.= ಅಗಿಲ್ ೨: ಅಗುರು ಧೂಪದ ಹೊಗೆಗೆ ಮಾಸಿದೆ ಅಚ್ಚ ಬಿಳಿ ಮುತ್ತಿನ ಸರ (ಮುಕ್ತಕಂ. ೧೮–೭). [ಸಂ. P ← ಮೂಲದ್ರಾ. ಅಗಿಲ್]

**ಅಗುರು$_3$** (ಗು). ೧. ಭಾರವಲ್ಲದ; ಹಗುರವಾದ. ೨. [ಛಂದ] ಗುರುವಲ್ಲದ; ಲಘು (ಅಕ್ಷರ): ಒಗೆಗುಂ ಶಿಥಿಲದ್ವಿತ್ವಮಗುರುಪೂರ್ವಸ್ಥಿತಿಯಿಂ (ಶಮದ. ೪೪); ಅಗುರುಪದಾದಿಗೆ ದೀರ್ಘಂ ನೆಗಟ್ಟುಂ (ಶಮದ. ೧೪೦). [ಸಂ.]

**ಅಗುರುಚಕ್ಕೆ** 'ಅಗಿಲುಚಕ್ಕೆ' ನೋ.

**ಅಗುರುಧೂಪ** (ನಾ). ಅಗುರುಚಕ್ಕೆಯ ಧೂಪ; ಅಗುರಿನಿಂದ ಮಾಡಿದ ಧೂಪ. [ಅಗುರು$_2$ + ಧೂಪ]

**ಅಗುರುಲಘುತ್ವ** (ನಾ). [ಜೈನ] ಸಿದ್ಧರ ಎಂಟು ಗುಣಗಳಲ್ಲಿ ಒಂದು: "ಆ ಎಂಟು ಗುಣಗಳು—೧. ಸಮ್ಯಕ್ತ್ವ. ೨. ದರ್ಶನ. ೩. ಜ್ಞಾನ. ೪. ಅಗುರುಲಘುತ್ವ. ೫. ಅವಗಾಹನತ್ವ. ೬. ಸೂಕ್ಷ್ಮತ್ವ. ೭. ಅನಂತವೀರ್ಯತ್ವ. ೮. ಅವ್ಯಾಬಾಧತ್ವ" (ಜೈನಪ. ೫೦೬). [ಸಂ. (ಅ– + ಗುರು + ಲಘು + –)]

**ಅಗುರುಶುಂಠಿ** 'ಅಗಳುಶುಂಠಿ' ನೋ.

**ಅಗುರ್ಚು**, ಅಗುಚು (ಕ್ರಿ). ೧. ಸೇರಿಸು; ಕೀಲಿಸು; ಒತ್ತು; ಅಮುಕು: ಆಭರಣದೊಳಗುರ್ಚಿದ ಪಚ್ಚೆಯ ಪಸರಿಸಿದ ಪಸುರಂ ಪಸುರೆಲೆಗೆತ್ತು (ಕಾದಂಉ. ೨೫). **ಅಗುಚು**: ೧. ನೆಲಕ್ಕೆ ಅಗುಚಿಬಿಡು (ಸ್ಯಾಂಡರ್). ೨. (ಕಂಕುಳಲ್ಲಿ) ಇರುಕು (ಕಿ). [ಅಗುರ್ + –ಚು]

**ಅಗುರ್ಬಿಸು** 'ಅಗುರ್ವಿಸು' ನೋ.

**ಅಗುರ್ಬು** 'ಅಗುರ್ವು' ನೋ.

**ಅಗುರ್ಬುವಡೆ** 'ಅಗುರ್ವುವಡೆ' ನೋ.

**ಅಗುರ್ವಿಸು**, ಅಗುರ್ಬಿಸು (ಕ್ರಿ). ೧. ಭಯಪಡಿಸು; ದಿಗಿಲುಗೊಳಿಸು: ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗಳ್ವಿಡಿದು ವಿಷೋರಗಪ್ರತತಿ ನೋಟಿಪ್ಪೊಡಗುರ್ವಿಸೆ ಸುಯ್ಯು ಸುಯ್ಯಳಿಂ (ಆದಿಪು. ೧೪–೧೪೦); ಪುಲಿ ಕರಡಿವಿಂಡೋಳಿಯಿಂ ಪಾಳಿಯಿಂ . . . ಪೊಡೆವ ಸಿಡಿಲ್ಮಿಂಚುಗಳ ಹೊಯ್ಗಳಿಂ ಬಯ್ಗಳಿಂ ತತ್ಪಥಮಗುರ್ವಿಸಿದುದು (ಚಿಬಪು. ೫೬–೨೨). ೨. ಭಯಪಡು; ಹೆದರು; ನಡುಗು: ನೆಱೆದೆಚ್ಚೆಚ್ಚೋರಣದೊಳ್ ಚೇಕಿತ್ಸನನಾರುಮಗುರ್ವಿಸೆ ಘಟೋದ್ಭವಂ ತಱಿದಾರ್ದಂ (ಪಂಪಭಾ. ೧೧–೬೦). ೩. ಹೆಚ್ಚಿಸು; ಅತಿಶಯಗೊಳಿಸು: ಜಲನಿಧಿಯಂ ಮುಗಿಲ್ವನಿಗಳಿಂದಮಗುರ್ವಿಸುವಂತೆ ನಿಮ್ಮನಾಂ ತಿಳಿಪಿದಪೆಂ ಗಡ (ಕಾದಂಉ. ೪೮೬). ೪. ಅತಿಶಯವಾಗು; ವಿಜೃಂಭಿಸು: ಶಕ್ತಿಯಂ ಕೊಂಡಗುರ್ವಿಸಿ ಗಾಂಗೇಯನನಿಟ್ಟಂ (ಪಂಪಭಾ. ೧೦–೧೨೩); ದೆಸೆಯಂ ತೆಕ್ಕನೆ ತೀವಿ ಪರ್ಬಿ ಗಗನಂ ಕೂಡಿಟ್ಟವೋಲ್ ನೀಳ್ದಗುರ್ವಿಸೆ ಬಾಹುಭ್ರಮಿತಾಭ್ರವಿಭ್ರಮುಗದಂ (ಗದಾಯು. ೬–೩೩); ಮೆಱೆಯಿತುತ್ರಿಣಯನಾವಾಸಪರ್ವತವಗುರ್ವಿಸುತಲಿ (ಸಿದ್ಧರಾ. ೧–೧೫); ಆ ರಸೆಯಾಣ್ಮನೋಲಗಕೆ ಬಂದನಗುರ್ವಿಸುತಾಂಧ್ರದೇಶದಿಂ ಶೌರಿಯ ಭೃತ್ಯನೋರ್ವೊ ಭುವನತ್ರಯತಾತನೆನಿಪ್ಪಸೊರ್ವವಂ (ಸಾನಂಚ. ೧–೧). **ಅಗುರ್ಬಿಸು**: ೧. ನಿಸಾಂತಹೇತುಗಳಿನಾದಮಗುರ್ಬ್ಬಿಸಿ[ಬ]ಟ್ಟುಬೀಟುವೊಲ್ತೊಟ್ಟನೆ ಸೊಸ್ದು ಬೀೞ್ವೆಡೆ (ಎಕ. II, ೧೩೮–೧೬; 940). ೨. ಎನ್ನ ಮೆಯ್ಯ್ ಮತ್ತಹಸ್ತಿಗೆ ಪಕ್ಕಾದ ಗುಬ್ಬಿಯ ಮೆಯ್ಯಂತೆಗುರ್ಬಿಸಿದಪ್ಪುದು (ಶಾಂತಿಪು. ೩–೬೦ ವ). ೫. ಸ್ಪಂದಿಸು; ಹಾರು: ಕಣ್ಣೆಲ್ಲಮುಚ್ಚರಿಯೆಂಬಂತಿರೆ ಪುರ್ಬುಗುರ್ಬಿಸೆ. . . ನೃತ್ಯಾಭಿನಯಕ್ಕದೇಂ ಮೆಱೆದಳೋ (ದಶಕು. ೮–೧೬೨). [ಅಗುರ್ವು + –ಇಸು$_3$]

**ಅಗುರ್ವು**, ಅಗುರ್ಬು, ಗುರ್ವು, ಗುರ್ಬು (ನಾ). ೧. ಭಯಂಕರತೆ; ಉಗ್ರತೆ; ಭಯ: "ಅಗುರ್ವು, ಬಿಗುರ್ . . . ಈ ೧೦ ಭಯಂ" (ಶಬ್ದಸಾ. ೨೨೩); "ಗುರ್ವುಮಗುರ್ವೆನೆ ಭಯಾನಕಂ ತಾನಕ್ಕುಂ" (ಚತುನಿ. ೪೯); ಮುಗಿಲಂ ಮುಟ್ಟಿದ ಪೆಂಪು ಪೆಂಪನೊಳಕೊಂಡುದ್ಯೋಗಮುದ್ಯೋಗದೊಳ್ ನೆಗೞ್ದಾಜ್ಞಾಫಲಮಾಜ್ಞೆಯೊಳ್ ತೊಡರ್ದಗುರ್ವೊಂದೊಂದಗುರ್ವಿಂದಗುರ್ವು[ಪಾಠಾಂ. ತೊಡರ್ದ ದೋರ್ಗರ್ವ ಕ್ಕಗುರ್ವಾಗೆ ಮುರ್ವು]ಗೊಳುತ್ತಿರ್ಪರಿಮಂಡಳಂ ಜಸಕಡರ್ಪಪ್ಪನ್ನೆಗಂ ಸಂದಂ (ಪಂಪಭಾ. ೧–೨೭); ಕಟ್ಟಲಿಸಿ ಕರಂಗಿದ ಬಲ್ಲಡವಿ ಕಣ್ಗೆ ಪಡೆದುದ ಗುರ್ವಂ (ಪಂರಾಮಾ. ೭–೧೧೪); ಆಗುರ್ವಿನ ದಂತಿ ದಳವುಳಿಸಿದವು ರಣದೊಳಗೆ (ತೊರರಾ. ೬–೨೯–೨೬). ೨. ಸಾಹಸ; ಪರಾಕ್ರಮ: ನಡುವ ಸರಲ್ ಸರಲ್ಕೊಳೆ ಸುರುಳ್ವ ಹಯಂ . . . ಅಂತಗುರ್ವಿ[ಪಾಠಾಂ. ಅಂತಗುರ್ಬಿ]ನಚ್ಚುಡಿದಿರೆ ಕಾದಿ ಬಿಚ್ಚಳಿಸಿದರ್ ಬಿಸುನೆತ್ತರ ಸುಟ್ಟುರೆ ಸೂಸು

ವನ್ನೆಗಂ (ಪಂಪಭಾ. ೧೦–೧೧೪) ; ಈಶಂಗೆ ಬೂತಟ್ಟುವಗುರ್ವಂ ತೋಱಿದಪ್ಪೆಂ (ಜಗವಿ. ೧೩–೩೮) ; ಕದನಕ್ರೀಡೆಯೊಳಾತ್ಮಕಾಂತೆಯನಗುರ್ವಿಂ ತಂದ ವೃತ್ತಾಂತಮಂ. . . ಸೂಚಿಸಿ (ಪುಷ್ಪಪು. ೬–೩೧). ೩. ಅತಿಶಯ ; ಮಹಿಮೆ ; ಹೆಚ್ಚಳ : ಪಡೆ ಪಡೆಮೆಚ್ಚೆಗಂಡನೆನೆ ಸಂದರಿಕೇಸರಿಯೆಂಬ ಗುರ್ವು ನೇರ್ಪಡೆ ನೆಗೞ್ದಾನಣಂ ಸೆಡೆದು ಮಾಣ್ಬನೆ (ಪಂಪಭಾ. ೧೧–೧೨೨) ; ಕಣ್ಣೀರಪೂರದಗುರ್ವಿಂ ದೆಸೆಗಾಣದಂದೆಡಪುತಂ (ಕಾದಂಪೂ. ೯೦೪) ; ತದುರ್ವೀತಳಮನಗುರ್ವಿನರ್ಚನೆಗಳಿನರ್ಚಿಸಿ (ವರ್ಧಪು. ೧೬–೮೨ ವ). ೪. ವಿಸ್ಮಯ ; ಅದ್ಭುತ ; ಬೆರಗು : "ಬಿಗುರ್ವಗುರ್ವು . . . ಎನಲ್ಕೆ ಬೆರಗಪ್ಪ ಭಾವಂ" (ಕಬ್ಬಿಕೈ. ೪೧) ; ದಹನನಂ [ವ]ಲಗೊಣ್ಡೋಡಿಸದೆ ಚಿನ್ತಿಸಿ ಮನದೊಳ್ ಮೃಡನನಗುವಾ[ರ್]ಗೆ ಪಾಯ್ದು ಸಂಬುವೆ ಬೀರಂ (ಇಆ. XX, ೬೯–೪; 880) ; ವಾರಿಧಿಯೆ ಗಗನಮಂ ಮುಟ್ಟೆ ನಿಂದಂತಗುರ್ವಿಂದಾದಂ ಚೆಲ್ವಾಯ್ತು ಚಕ್ರಿದ್ವಿಪಘಟೆ (ಆದಿಪು. ೧೪–೯೨). **ಅಗುರ್ಬು**: ೧. ಧುರದೊಳು ಬಂದೊಡ್ಡಿವೈರಿಪ್ರಕರವಿರಲವಷ್ಟಮ್ಭದಿಂ ಬಿಟ್ಟದೇವಂ ಕರವಾಳಂ ತೋಡಿಕೊಂಡಿಂಬಳಿಕವೆಲೆ ಮಹಾದೇವ ಕಾಲಾಗ್ನಿ ರುದ್ರಂಗುರಿಗಣ್ಣಾದಂತೆ . . . ಅಗುರ್ಬುರ್ಬ್ಬಿದುದೆನೆ ಭರದಿಂ ಮಿೞಿ ಮಾಱಾಂಪನಾವಂ (ಎಕ. V. ಬೇಲೂರು. ೧೭೧–೨೭ ; 1160). ೨. ಮದಧಾರಾಜಳಾಸಾರದಿಂದುರ್ಬಿದಗುರ್ಬಂ ತಾಳ್ದಿನಿಂದೂರ್ಜಿತ ಜಯಗಜಮಂ ರಾಗದಿಂದೇಱಿದಂ (ಆದಿಪು. ೧೨–೬೧) ; ನಡೆವೆಡೆಯೊಳಗುರ್ಬಿಂ ಬೊಬ್ಬಿಡುವಂದುಗೆಗೆಜ್ಜೆ (ಗಿರಿಕ. ೩–೮೯). ೩. ಅಂತು ನೂರ್ವರೊಳೊರ್ವನ ಗುರ್ಬು ಪರ್ಬಿ ಪರಕಲಿಸೆ ಸಂಪೂರ್ಣವಯಸ್ಕನಾಗಿ ಘೃತಘಟವಿಘಟನು ಮಾಗಿ ಪುಟ್ಟುವುದುಂ (ಪಂಪಭಾ. ೧–೧೩೧ ವ) ; ಚಿತ್ರಾನೀಕನೆಂಬಗುರ್ಬಿನ ಸೇನಾಪತಿಯೊಸೆದು ತಾಗೆ (ಶಾಂತಿಪು. ೪–೨೨). **ಗುರ್ವು**: ೧. ಬೋೞಿಯರ್ಗೆ ಗುರ್ವನಗುರ್ವಿಸುವ ಸೆರಗಂಬೆರಗಂ ಪಾರದ (ರಾಮಾಶ್ವ. ೯೦–೨೬). ೨. "ಗುರ್ವೆನೆ ಗೌರವಂ" (ಕರ್ಣಾನಿ. ೫೭). **ಗುರ್ಬು**: ೪. ಒಡಗೊಂಡು ಬಸವರಾಜನ ಮಹಮನೆಗೆ ಬರುತೆ . . . ಆಡುವ ಗಣಂಗಳಂ ಗುರ್ಬಿನಿಂ ನೋಡುತಂ (ಬಸರ. ೧೧–೧೭೮) ; ಹಾಸ್ಯದೊಳು ಶಿರದೂಗು ತೊಡನಾಡಿಗಳು ಕೈಹೊಯ್ದು ಗುರ್ಬಿನಿಂ ನಗುತ ಮಗುಳ್ದಿರಂತೆಂದರು (ಸಿಂಗಿರಾ. ೭–೧೪). [ಅಗುರ್ + –ವು]

**ಅಗುರ್ವುಗಿಡು** (ಕ್ರಿ). ಶಕ್ತಿಹೀನವಾಗು ; ಸತ್ತ್ವಗುಂದು : ಆನೆಯುಮಗುರ್ವುಗಿಡುಗುಮದಾನಂ (ಶಾಂತಿಪು. ೨–೩೩).
[ಅಗುರ್ವು + ಕಿಡು (< ಕೆಡು)]

**ಅಗುರ್ವುಗೊಳ್** (ಕ್ರಿ). ಹೆದರು ; ಭಯಪಡು : ಷಟ್ಖಂಡಭೂಮಂಡಳಂ ನಿಮಿರ್ದಾಜ್ಞಾಪ್ರಸರಕ್ಕಗುರ್ವುಗೊಳೆಯುಂ (ಆದಿಪು. ೧೫–೪).
[ಅಗುರ್ವು + ಕೊಳ್$_1$]

**ಅಗುರ್ವುವಡೆ**, ಅಗುರ್ಬುವಡೆ (ಕ್ರಿ). ೧. ಅತಿಶಯವಾಗು: ಅತಿಪ್ರಬಳ ಬಲಮನಾತನ ಮೇಲಟ್ಟಲದನೆಬ್ಬಟ್ಟಿ ಕಳೆದಗುರ್ವುವಡೆದ ಮಹಾಬಳದಿನುರ್ವಿ (ನೇಮಿಪು. ೫–೭೮ ವ) ; ಇಂತಗುರ್ವುವಡೆದ ಚಿತ್ರಕ್ರಿಯಾ [ಪಾಠಾಂ. ವಿಕ್ರಿಯಾ]ವಿಡಂಬನದಿಂ ವಿಚಿತ್ರಗಾತ್ರಮನಪ್ಪುಕೆಯ್ದೊಪ್ಪಂಬೆತ್ತ ನಿಜಗಜೇಂದ್ರಬಂಧುರಸ್ಕಂಧಪ್ರದೇಶಮಂ (ವರ್ಧಪು. ೧೩–೮೮ ವ). **ಅಗುರ್ಬುವಡೆ**: ೨. ಭಯಂಕರವಾಗು : ಕಡುಮುಳಿಸೆಂಬ ಕಿಚ್ಚಿನ ಕರ್ಬೊಗೆಯಂತಗುರ್ಬುವಡೆದು ನೊಸಲೊಳ್ ಗಂಟಿಕ್ಕಿದ ಪುರ್ಬುಗಳುಂ (ಕಬ್ಬಿಕಾ. ೩೧೦). [ಅಗುರ್ವು + ಪಡೆ$_1$]

**ಅಗುರ್ವುವೆಱು** (ಕ್ರಿ). = ಅಗುರ್ವುವಡೆ೧. : ಅಗುರ್ವುವೆತ್ತ ಮುಳಿಸಿಂ ಕೊಲೆಯಿಂದಘಮೋಹಬಂಧಮಾದುದು (ಸಮಪ. ೧೫–೧೦೨) ; ನೇತ್ರದ ಮಧುತ್ಸವಿಯಿಂದಮುಗುರ್ವ್ವುವೆತ್ತು ಪೋಲ್ತುದು ದಿಗುದಂತಿಯಂ (ಎಕ. VII, ಚನ್ನಗಿ. ೩೯–೩೨ ; 1149). [ಅಗುರ್ವು + ಪೆಱು]

**ಅಗುರ್ವೆಱು** (ಕ್ರಿ). ಬೆರಗಾಗು ; ವಿಸ್ಮಯಹೊಂದು : ಮಹಾದರ್ಶನಾರ್ಥಂಗಳಂ ಕೇಳ್ದಗುರ್ವೆತ್ತಂತಿರ್ದರಾ ಸದ್ಗುರು ಪದಯುಗದೊಳ್ ಪೊಣ್ಮೆ ಸದ್ಭಕ್ತಿಯಾಗಳ್ (ದಿವ್ಯಚ. ೧೩–೨೮). [< ಅಗುರ್ವು + ಪೆಱು]

**ಅಗುಲಿ** (ನಾ). ಒಂದು ಊರಿನ ಹೆಸರು (?) : ಅದಱ ತದನಾನ್ತರ ಅಗಿಱಿಯ ಪಾೞಿಕೊಳಗೋ × ಆದಱ ತದನಾನ್ತರ ಅ ಗು ಲಿ ಯ ಕಣು ವೆ (ಸೌಇಇ. IX–i, ೪೧–೨೯ ; 1100). 'ಅಗೞಿ' ಪರಾ. [?]

**ಅಗುಸೆ**, ಅಗಸೆ$_1$ (ನಾ). ಹೆಬ್ಬಾಗಿಲು ; ಮಹಾದ್ವಾರ : ಸ್ವರ್ಗದಗುಸೆಯಂ ರುದ್ರಲೋಕದ ಕೇರಿಗಳನು . . . ಕಾಣುತ್ತೆ ನಡೆತಂದನು (ಸಿದ್ಧರಾ. ೩–೫) ; ಕಡುಮುಳಿಸಿಂದ ಹಟ್ಟಯೊಳಗುಸೆಯುಂ ಹುಗಲೀಯದಿಕ್ಕಿದನು (ಬಸಪು. ೬೦–೨೬) ; ಕಂಡೆ ಮಾತುಳಬಲ್ಲಹನರಮನೆಯಗುಸೆಯಾ (ಸೊಬಸೋ. ೧೮–೨೨). **ಅಗಸೆ$_1$**: ಹೊತ್ತಾಱೆ ಎದ್ದ ಕುರುಡಂಗೆ ಅಗಸೆಯಲ್ಲಿ ಅಸ್ತಮಾನವಾದಂತೆ (ಬಸವ. ೨೯೨) ; ಅಗಸೆ ಊರಿಗೆ ಲೇಸು ಸೊಗಸು ಬಾಳುವೆ ಲೇಸು ಬೊಗಸೆಯುಳ್ಳವರ ಕೆಳೆ ಲೇಸು ಊರಿಂಗೆ ಅಗಸ ಲೇಸೆಂದ (ಸರ್ವಜ್ಞ. ೧೧೪೨) ; ಈ ಕೋಟೆಗೆ ಮೂರು ಅಗಸೆಗಳಿವೆ (ಮುಂಬಯಿ. ೬–೨೫). [?]

**ಅಗುೞ್$_1$** 'ಅಗುೞ್$_1$' ನೋ.

**ಅಗುೞ್$_2$** 'ಅಗುೞ್$_2$' ನೋ.

**ಅಗುೞ್$_3$** 'ಅಗುೞ್$_4$' ನೋ.

**ಅಗುೞಂತಿ** 'ಅಗೞ್ತಿ' ನೋ.

**ಅಗುೞಿ** 'ಅಗ್ಗೞಿ$_1$' ನೋ.

**ಅಗುೞಿಗನ್ನ** (ನಾ). (ಮನೆಯ ಒಳಗಿನ) ಅಗುೞಿಯನ್ನು ತೆಗೆಯುವುದಕ್ಕಾಗಿ ಕೊರೆದ ಕಂಡಿ : ಅಗುೞಿಗನ್ನವನಿಕ್ಕಲೊಡನಾ ಬಗಿದ ಮಣ್ಣೆಲ್ಲಂ ಮಿಸುಪ ಹೊನ್ನಗುತಿರಲು (ಬಸಪು. ೩೧–೧೨).
[ಅಗುೞಿ (< ಅಗ್ಗೞಿ$_1$) + ಕನ್ನ]

**ಅಗುೞಿಸು$_1$** 'ಅಗುೞಿಸು' ನೋ.

**ಅಗುೞಿಸು$_2$** (ಕ್ರಿ). = ಅಗುೞ್ಚು : ಮರಾಳಗಮನೆಯರ್ ಮೊಗೆಯಲೆನುತ್ತೆ ಕೊಡನನುದಕದೊಳಗುೞಿಸೆ (ಜಯಕಾ. ೯–೧೪) ; ರೂಪುಗಳ ಹಲವು ತಾಳ್ದ ಸ್ಮರನ ಅಗುೞಿಪ ಶಕ್ತಿಯುಂಟು (ಭರಚ. ೫೧–೯೧) ; ಕೊತ್ತುಂಬಲಿಯನರೆದು ಕಲುಕದೊಳಗಾ ಕಾಯನು ಅಗುೞಿಸಿದ ಬಳಿಕ (ಸೂಪಶಾ. ೪–೮೪). [ಅಗುೞು$_2$ (< ಅಗುೞ್$_2$) + –ಇಸು$_3$]

**ಅಗುೞು$_1$** 'ಅಗುೞ್$_1$' ನೋ.

**ಅಗುೞು$_2$** 'ಅಗುೞ್$_3$' ನೋ.

**ಅಗುೞು$_3$** 'ಅಗುೞ್$_4$' ನೋ.

**ಅಗುೞುಶುಂಠಿ** 'ಅಗಳುಶುಂಠಿ' ನೋ.

**ಅಗುೞ್$_1$**, ಅಗೞ್$_1$, ಅಗೞು$_1$, ಅಗೞ್$_1$, ಅಗುೞ್$_1$, ಅಗುೞು$_1$ (ಕ್ರಿ). ೧. ಅಗೆ ; ತೋಡು ; ಬಗಿ : "ಅಗುೞ್ (ಅಗೞ್) – ಖನನೇ, ಜಲನಿಮಜ್ಜನೇ" (ಶಮಧಾ) ; ತನ್ನ ಕಾಲಂ ದರ್ಭಾಂಕುರಂ ನೆತ್ತವರೆ ಕೊಂಡೊಡೆ ಮುಳಿದದನಗುೞ್ದು ಸುಡುವೊನಂ (ವಡ್ಡಾರಾ. ೧೮೪–೧) ; ಪುತ್ತನಗುೞ್ದು ಪಾವಂ ಕೊಲ್ವರೆನೆ (ಪಂಚತಂ. ೮೬–೮) ; ಶೈಲಮಂ ಗುದ್ದಲಿಯಿಂದಗುೞ್ದು [ಕೆಡೆಯ]ನೂಂಕುವೆನೆಂಬೆಗ್ಗನಂ ಪೋಲ್ಕುಂ (ಧರ್ಮಾಮೃ. ೪–೧೮೫) ; ಮಹೀವಳಯದ ಸೆರೆಯುಱಿದಗುೞ್ದಂತೆ ನೀರಧಾರೆಗಳಕ್ಕುಂ (ಜಟ್ಟಮ. ೧೧–೨). **ಅಗೞ್$_1$**: ೧. ಇಟ್ಟಿಗೆಗೆಂದಗೞ್ದ ಕುೞಿಗಳ್ ಕೆಱೆಯಾದವು (ಎಕ. II, ೧೪೩–೧೦ ; 1131) ; ಕಂದಮೂಲಫಲಂಗಳನಗೞುತ್ತಂ ಬಂದು (ಮಹಾನೇ. ೩–೧೪೫ ವ). **ಅಗೞು$_1$**: ೧. ಅಗೞಿದನು ಬಿಲಮಾಡಿ ಫಣಿಪನ ಬೆಗಡುಗೊಳಿಸಿ (ದೇವೀಮ. ೪–೫) ; ಉಸುಕು ಅಥವಾ ಭೂಮಿಯನ್ನು ಅಗೞಿದರೆ ಈ ಪಟ್ಟಣಗಳ ಹಳೆಯ ಗುರುತುಗಳು ಈಗಲೂ

ದೊರೆಯುತ್ತವೆ (ಮತಂಪ.೬೧). **ಅಗೞ್$_1$**: ೧. ಬಾವಿಯಂ ತೂಱ್ಚಿಬೆಟ್ಟ ಮನಗೞ್ವಂತೆ (ಧರ್ಮಾಮೃ.೧೩-೧೪೦). ೨. (ಶಾಸನವನ್ನು ಕಲ್ಲಿನಮೇಲಾಗಲಿ ತಾಮ್ರಪಟದ ಮೇಲಾಗಲಿ) ಕೊರೆ, —ಕೆತ್ತು : ಮಧುರೊವರ್ಮನಗೞ್ದ ಶಾಸನಂ, ಅಗೞ್ದುದು ನಿಮಿತ್ತಮಾಗೆ ಕೊಟ್ಟ ಮಣ್ (ಎಕ. IX, (S), ಬೆಂಗಳೂ. ೧೫೧-೬೧ ; 828). **ಅಗುಳ್$_1$** : ೧. ಮೃಡಪೂಜೆಯ ವೇದಿಕೆಯಂ ಬಿಡದಗುಳ್ದಪಳ್ (ವೃಷವಿ.೩೨-೨೪). **ಅಗುೞು$_1$**: ೧. ಎರಡುಶರದಲಿ ಮತ್ತೆ ಭೂಪತಿಯುರವನಗುೞಿದನು (ಕುವ್ಯಾಶ.೩-೪೪); ಅ ಗು ೞು ತಿ ರೆ ಕಾಮಾಟದವರುಮುವರೊತ್ತಿನೊಳು ಪುಗಿಲುವೆತ್ತತಿಮಂತ್ರವಾದಿಗಳು (ಪ್ರಭುಪು. ೭-೨೫). [ದೇ. ‖ ತಮಿ. ಅಗೞ್]

**ಅಗುೞ್$_2$**, ಅಗುಳ್$_2$, ಅಗುೞು$_2$ (ಕ್ರಿ). ಮುಳುಗು : "ಅ ಗು ೞ್ (ಅಗೞ್) – ಖನನೇ, ಜಲನಿಮಜ್ಜನೇ" (ಶ ಮ ಧಾ). **ಅ ಗು ಳ್$_2$** : ಪದ್ಮಿನಿಯನು ಅ ಗ ಲ್ದೆ ನು ಪದಹೀನನಾದೆನೆಂದಿನನೊಂದಗುಳ್ದನಾ ಪಡುಗಡಲೆಡೆಯೊಳು (ಸೊಬಸೋ. ೨೩-೪) ; ಕರಗುವ ಕರಿಯ ಮುಗಿಲಕೊನೆಯೆ ೞಿ ದ ತ ರ ಣಿ ಸಮುದ್ರದೊಳಗುಳ್ವಂಥದಿ (ಜಯಕಾ. ೯-೨೩). **ಅಗುೞು$_2$** : ನೀರಿನಲ್ಲಿಯದನು ಅಗುೞುವಂದದೊಳು ಒಂದೆರಡು ಗಳಿಗೆಯಿರಿಸಿ (ಸೂಪಶಾ. ೨-೪೩); ಪಿನ್ನೇಸಱು ಪಿಂಗಡಲೊಳಗಗುೞದ ಮುನ್ನಂ (ನೇಮಿಸಂ. ೨೮-೧೮೮). [ದೇ.]

**ಅಗುೞ್$_3$**, ಅಗಳ್$_2$, ಅಗೞು$_2$, ಅಗೞ್$_2$ (ನಾ). ತೋಡಿದ್ದು ; ಅ ಗೆ ದ ದ್ದು ; ಕಂದಕ : ಕೈಲಾಸಮಂ ಬಳಸೆಯುಮಗುೞ್ಗಳುಮಂ ಮಾಡುತ್ತಿರ್ಪನ್ನೆಗಂ (ಅಜಿಪು. ೧೦-೧೦ ವ) ; ಆಳ್ವೇರಿ ನೆಲಗಟ್ಟಗುೞ್ಗಳ್ . . . ಸ್ವರ್ಗಮರ್ತ್ಯಪಾತಾಳಂಗಳಳತೆಗೆಱೆಗಳಂತಿರ್ಪುವು (ಚಿ ಕ ವ ಂ. ೪-೧೫). **ಅಗಳ್$_2$** : ಪೊಂಗೋಂಟೆಯಂ ತೋರಿತ್ತಾದಗಳೆಯ್ದೆ ಸುತ್ತಿಮೆಱೆಗುಂ (ಬಾಧಪು. ೪-೨೭) ; ಜಲಪಕ್ಷಿಗಳ ಕಳಧ್ವಾನದಿಂದಾ ಪುರದಗಳ್ ಮೆ[ಱೆ]ದುದು (ಚೆಬಪು. ೧೧-೩೧). **ಅಗೞು$_2$** : ಹಳ್ಳವಂ ಮುಟ್ಟದಗಳು ಮೇರೆಯಾಗಿ (ಕಇ. II, ೧೪-೬೨ ; 1123) ; ಅಗಳು ತಾನೈವತ್ತು ಯೋಜನದಗಲ (ತೊರರಾ. ೫-೯-೩೪) ; ಒಂದು ಕರಿಯೆಲೆಯ ಪ್ರಪಂಚಗಾಗಿ ಎನ್ನ ಭಕ್ತಿ ಬೆರಳು ಕಡಿಮೆ ಅಗಳ ದಾಂಟಿದಂತಾಯಿತು (ಶರಲೀ. ೫೯೧-೨ ವ) ; ಅಗಳಿನಲಿ ನೀರಿಲ್ಲ ಅದರ ತಳದಲ್ಲಿ ಮಿಗೆ ಬಳೆದ ಮುಳ್ಳುಗಿಡ ಪೊದೆಯಾಗಿದೆ (ಅರುಣ. ೧೫) ; ಗೇಣು ಬಿಟ್ಟು ಅಗಳು ದಾಟಿದ ಹಾಗೆ (ಗಾದೆ). **ಅಗೞ್$_2$** : ಲವಣಜಳಧಿ ಬಳಸಿದಂತೆ ಬಳಸಿದಗೞ ನೀಳದಿಂ (ಪಂಪಭಾ. ೧-೫೮); ಬೆಗೞ್ವನೀಯುತಗೞಿಸೆದಿರ್ಕುಂ (ಉದ್ಭಟ. ೧-೪೩); ಧೂಳಿೊಳಗೞಿಂ ಪೊೞ್ವಿಂ (ಚಿಕವಿ. ೨-೧೦೨).

[< ಅಗುೞ್$_1$. ‖ ತಮಿ. ಅಗೞ್ ; ಅಗೞಿ ; **ಮಲ.** ಅಕಿೞ್ ; **ತುಳು.** ಅಗರ್, ಅಗಳ್ ; **ತೆಲು.** ಅಗಡತ, ಅಗಡಿತ, ಅಗಡ್ತ]

**ಅಗುೞ್$_4$**, ಅಗುೞು$_3$ (ನಾ). ೧. ಬೆಂದ ಅಕ್ಕಿಯ ಕಾಳು: ಲವಣಾಂಬುರಾಶಿ ಕುಕ್ಕುೞಿಗುದಿವಲ್ಲಿ ಕೂೞ್ಗುದಿಯೆ ಮೇಗೆ ಸಿಡಿಲ್ದಗುೞಂತೆ (ಪಂಪಭಾ. ೧೧-೧೫೩) ; ಒಂದು ವರ್ಷದಾರಂಬಕ್ಕಾಱದೆ ಸಾವನ್ನೆವರಮೆಂ ಜಲಗುೞನಾಯ್ದುಂಬೊಕ್ಕಲ ಮ ಗ ನು ಂ (ಧ ರ್ಮಾ ಮೃ . ೭-೧೫೩ ವ); ಮಗುೞ್ದಗುೞ್ಗಳ ಹದನಂ ತೆಗೆದೊತ್ತಿ ನೋಡಿ ಬಾಗಿದಳ್ (ದಶಕು. ೧೨-೧೨೨). ೨. ಅನ್ನ : ಉಣ್ಬಗುೞಂ ಬೆಸಕೈವ ತಮ್ಮ ಮುಟ್ಟುಗಳನೆ ದೈವಮೆಂದೆಱಗುವಾತನೆ ದೈವದ ಮೂಢನಲ್ಲವೆ (ಪದ್ಯಸಾ. II, 820. ಶಾಸ್ತ್ರಸಾ). **ಅಗುೞು$_3$**: ೧. ಕಾಗೆಯೊಂದಗುೞ ಕಂಡರೆ ಕರೆಯದೇ ತನ್ನ ಬಳಗವನು (ಬ ಸ ವ. ೪೩೭) ; ಸ ತ್ಯ ಶ ರ ಣ ರ ಅಂಗಳದೊಳಗೆ ಬಿದ್ದ ಅಗುೞನೆತ್ತಿಕೊಂಡಿಪ್ಪೆ (ಶೂನ್ಯಸಂ. ೧೨೩-೫) ; ನೀರುಳ್ಳಿ ಹಸಿಯಲ್ಲಮಂ ತೊಕ್ಕ ತೆಗೆದಗುೞ ತೆಱದೊಳು ಕತ್ತರಿಸಿಹಾಕೆಯಾ ಕೂಳು ಕಲಸೋಗರಂ ತಾನಾಯಿತು (ಸೂಪಶಾ. ೩-೨೫); ಹರವಿಯನ್ನದಲ್ಲಿ ಒಂದಗುಳು ನೋಡಿದರೆ ಸರಿ (ಗಾದೆ); ಅಗುಳು ಹಿಸುಕಿ ಅನ್ನ ನೋಡು (ಗಾದೆ). ೨. ಉಂಡಗುೞು ನೀರ್ ಸುರಿಯೆ ನಡನಡುಗಿ ಕೋಡುತಂ (ಪಂಡೋರ. ೧-೭). 'ಅವುೞ್' ಪರಾ.

**ಅಗುಳು ಗಂಜಿ ಬೇರೆಯಾಗು** = ಗರ್ಭಿಣಿಯ ದೇಹದಿಂದ ಮಗು ಹೊರಬರು. [ದೇ. ‖ ತಮಿ. ಅವಿೞ್ = ಅಗುಳು, ಅನ್ನ]

**ಅಗುೞಿ** 'ಅಗ್ಗೞಿ$_1$' ನೋ.

**ಅಗುೞಿಸು**, ಅಗಳಿಸು, ಅಗೞಿಸು, ಅಗುಳಿಸು$_1$ (ಕ್ರಿ). ೧. ಅಗೆಯಿಸು; ತೋಡಿಸು : "ಅಗುೞಿಸು – ಖನನೇ" (ಶಮಧಾ) ; ಪಿರಿದಪ್ಪದೊಂದು ಕೊಂಡಮನಗುೞಿಸಿ (ಪಂರಾಮಾ.೧೬-೨೫ ವ); ನೀರೆಸೆವಂತಗುೞಿಸುವುದು ಕೂಪ ಸರೋವರ ದೀರ್ಘಿಕಾ ತಟಾಕಂಗಳುಮಂ (ಲೋಕೋಪ. ೫-೩) ; ಕೊಳಂಗಳನಗುೞಿಸಿ (ಚಿಕವಿ.೨-೮೩). **ಅಗಳಿಸು** : ೧. ಮಹಾಜನಂ ರಟ್ಟಸಮುದ್ರವನಗಳಿಸಲೆಂದು ಪ ಡೆ ದ ದಾನಾರ್ತ[ರ್ಥ]ಮಾವುದೆಂದೊಡೆ (ಇಆ. XIX, ೧೬೪-೧೭ ; 1040) ; ಬೃಹಸ್ಪತಿವಾರದಲು ಕೆಱೆಯನಗಳಿಸಿ ನೀರಂ ಪಡೆದು (ಎಕ. VII, ಶಿಕಾರಿ. ೧೯೨-೨೨ ; 1107). **ಅಗೞಿಸು** : ೧. ಬಾವಿಯುಮನಗೞಿಸಿದಂ (ಮೈಆರಿ. ೧೯೦೯, ೭೮-೧೪ ; 964). ೨. (ಶಾಸನವನ್ನು) ಕೆತ್ತಿಸು : ಮೂನೂರ್ವರುಂ ವಹುದಿದಕ್ಕೆ ಸಾಕ್ಷಿ ಅಗವೆ[ೞಿ]ಸಲ್ಪಟ್ಟದು ನೆತ್ತಪ್ಪರ್ಡಿ (ಎಕ. X, ಶ್ರೀನಿವಾ. ೧೬-೭ ; 700). 'ಅಗುೞ್$_2$' ಪರಾ. **ಅಗುಳಿಸು** : ೧. ಕೆಱೆಯನಗುಳಿಸುತ ಶಿವನಿಳಯಮಂ ಮಾಡಿಸುತ (ಸಿದ್ಧರಾ. ೪-೪೧) ; ಧರೆಯನಗುಳಿಸಿ ಮಹೋನ್ನತ ಹೇಮರಾಸಿಗಳ ಸಲೆ ಹೊರಿಸಿಕೊಂಡು (ತಿಮ್ಮಅ. ೧-೮೦).

[ಅಗುೞ್$_1$ + -ಇಸು$_3$]

**ಅಗುೞೂಟ** (ನಾ). (ಮಗುವಿಗೆ ಮೊದಲ ಸಲ) ಅನ್ನ ತಿನ್ನಿಸುವುದು; ಅನ್ನಪ್ರಾಶನ : ಅವಯೋಗಮಾಗದಿರೆ ಮಾೞ್ಕಗುೞೂಟಮನಂತದುತ್ತಮಂ (ಲೋಕೋಪ.೨-೨೯). P ಚೌತಿ ನವಮಿ ಚತುರ್ದಶಿ – ಈ ಮೂಱು ತಿಥಿಗಳಂ ಬಿಟ್ಟು ಅವಯೋಗಮಿಲ್ಲದಿರ್ದೊಡೆ ಅನ್ನಪ್ರಾಶನಮಂ ಮಾೞ್ಪುದು (ಲೋಕೋಪ. ೨-೨೯ ಟೀಕು). [< ಅಗುೞೂಡು]

**ಅಗುೞೂಡು** (ಕ್ರಿ). (ಮಗುವಿಗೆ ಮೊದಲ ಸಲ) ಅನ್ನವನ್ನು ತಿನ್ನಿಸು: ಮಾಸಷಟ್ಕಂ ಪೋಗೆ ಪೂಜಾವಿಧಿಪೂರ್ವಕಂ ಯಥಾಕ್ರಮದಿನಗುೞೂಡುವುದು ಅನ್ನಪ್ರಾಶನಕ್ರಿಯೆ (ಚಾವುಂಲು. ೩೧). [ಅಗುೞ್$_4$ + ಊಡು$_1$]

**ಅಗುೞ್ಚು** (ಕ್ರಿ). ಮುಳುಗಿಸು ; ಅದ್ದು : "ಅಗುೞ್ಚು ಜಲಾಶಯಮಗ್ನೇ" (ಶಮಧಾ). [< ಅಗುೞ್$_2$ + -ಚು]

**ಅಗೂಢ** (ಗು). ಗೂಢವಲ್ಲದ ; ವ್ಯಕ್ತವಾದ. [ಸಂ.]

**ಅಗೆ$_1$** (ಕ್ರಿ). ತೋಡು ; ಬಗಿ : ಗುದ್ದಲಿಯನೆತ್ತಿಯಗೆಯತೊಡಗಿದರು (ಸಿದ್ಧರಾ. ೪-೧೯) ; ಅಂಕುಶವಾಳೆ ನೆತ್ತಿಯನಗೆದು (ಕುವ್ಯಾಕ. ೨-೧೭); ಬೆಟ್ಟ ಅಗೆದು ಇಲಿ ಹಿಡಿದ ಹಾಗೆ (ಗಾದೆ). [ದೇ.]

**ಅಗೆ$_2$** (ನಾ). ೧. ಮೊಳಕೆ; ಅಂಕುರ : "ಅಗೆ ಮೊಳೆಯುಂಕುರಮಕ್ಕುಂ" (ಕವಿಕಂ. ೭೮) ; "ಖನನಾಂಕುರಂಗಳೊಳಗೆಯು" (ಶ ಬ್ದ ಮ ಂ. ೮೧); ತಾರಗೆಗಳಗೆಗಳಂತಿರೆ ತಾರಾಪಥದೊಳ್ ನಿರಂತರಂ ತುಱುಗಿರೆ (ಆ ದಿ ಪು. ೬-೫೪). ೨. (ಕಿತ್ತು ಬೇರೆ ಕಡೆ ನೆಡುವುದಕ್ಕಾಗಿ ಬೆಳಸಿದ) ಸಸಿ : ನಾಂಟಿದ ಬೇಂಟಮೆಂಬಗೆಗೆ ನೀರ್ವೊಯ್ವಂತೆ (ಲೀ ಲಾ ವ. ೬-೧೫೪) ; ಬಿತ್ತಿದ ಗದ್ದೆಯಲ್ಲಿ ಆಗೆಯು ಅಂದವಾಗಬೇಕಾದರೆ (ಕೋಟಚೆ. ೨). ೩. ರೆಂಬೆ ; ಕೊಂಬೆ (ಕರಾ).

**ಅಗೆ ನೆಗೆ** = ಮೊಳಕೆಯೇಳು : ಆ ಭರತಕ್ಷೇತ್ರದೊಳು ಚಾಳುಕ್ಯ ಚಕ್ರೇಶ್ವರರ ವಂಶಾವತಾರದೊಳ್ ಅಗೆ ನೆಗೆವಂದದಿಂದೊಗೆದ ರಾಷ್ಟ್ರಕುಮಾರಕರಂ ಪೊರಳ್ಚಿ (ಕಇಆ. ೯೫, ೪-೭ ; ೧೨ನೆಯ ಶತ).

[ದೇ. ‖ ತಮಿ. ಅಗೈ ; ಮಲ. ಅಗ ; ತುಳು. ಅಗ್ಗೆ]

**-ಅಗೆ$_3$** (ಪ್ರ). ಕ್ರಿಯಾವಿಶೇಷಣಗಳನ್ನು ಸಾಧಿಸುವಾಗ ಗುಣವಾಚಕ

ಮುಂತಾದವುಗಳಿಗೆ ಹತ್ತುವ ಪ್ರತ್ಯಯ: ಉದಾ— ಕಮ್ಮಗೆ, ನೆಟ್ಟಗೆ, ಸುಮ್ಮಗೆ ಇತ್ಯಾದಿ. '-ಅನೆ' ಪರಾ.

**ಅಗೆಕಟ್ಟು** (ಕ್ರಿ). ಮಡಕೆ ಮುಂತಾದವುಗಳಲ್ಲಿ ಬೀಜಹಾಕಿ ಮೊಳಕೆ ಬರಿಸು, —ಸಸಿ ಬೆಳೆಯಿಸು. [ಅಗ್ಗೆ$_2$ + ಕಟ್ಟು$_1$]

**ಅಗೆತ** (ನಾ). ೧. (ಗುದ್ದಲಿ ಮುಂತಾದವುಗಳಿಂದ ಮಣ್ಣನ್ನು) ಅಗೆಯುವುದು, —ತೋಡುವುದು. ೨. ಭೂಶೋಧನೆ; ಉತ್ಖನನ. [ಅಗೆ$_1$ + -ತ]

**ಅಗೆದೋಱು** (ಕ್ರಿ). ಮೊಳಕೆಯನ್ನು ಕಾಣಿಸು; ಮೊಳೆ; ಅಂಕುರಿಸು: ನೃಪನ ಹೃದಯದೊಳುಗ್ರದ ಬೀಜವಗೆದೋಱುತಿರಲ್ . . . ಘುಡಿಘುಡಿಸಿ ಬಳಿಕಿಂತೆಂದನು (ಭಾವಜಂ. ೯-೨). [ಅಗ್ಗೆ$_2$ + ತೋಱು]

**ಅಗೆಬಿಡು** (ಕ್ರಿ). (ದಕ. ಕ). ಸಸಿಯೆಬ್ಬಿಸಲು ಬೀಜ ಹಾಕು; ಬಿತ್ತು. [ಅಗ್ಗೆ$_2$ + ಬಿಡು]

**ಅಗೆಮಾಡು** (ಕ್ರಿ). (ದಕ. ಕ). ಸಸಿಯೆಬ್ಬಿಸು, —ಬೆಳಸು. [ಅಗ್ಗೆ$_2$ + ಮಾಡು$_1$]

**ಅಗೆಯಿಕ್ಕು** (ಕ್ರಿ). ಸಸಿಯನ್ನು ಬೆಳಸಲು ಬೀಜ ನೆಡು; ಒಟ್ಟಿಲು ಹಾಕು: ಅಗೆಯಿಕ್ಕುಗೆ ಪುಣಸೆಯ ಬೀಜಗಳನವಂ ಕಿಟ್ಟು ನಾಂಟ (ಲೋಕೋಪ. ೬-೩೬). [ಅಗ್ಗೆ$_2$ + ಇಕ್ಕು$_1$]

**ಅಗೆಯಿಸು,** ಅಗಿಸು (ಕ್ರಿ). ಅಗೆಯುವಂತೆ ಮಾಡು; ತೋಡಿಸು: ಅಗೆಯಗೆಯೆನುತ್ತವುದಾರಿಶಂಕರದಾಸಿ ದಾಸಿಯ ಕೈಯಲಗ[ಗೆ]ಯಿಸಲು (ಬಸವು. ೨೩-೩೪); ನನ್ನ ಸ್ನೇಹಿತ ಹಳ್ಳಿಯಲ್ಲಿ ಒಂದು ಬಾವಿಯನ್ನು ಅಗೆಯಿಸುವ ಕೆಲಸದಲ್ಲಿ ತೊಡಗಿದ್ದ (ರೂಢಿ). **ಅಗಿಸು:** ಧನ ನಿನ್ನ ಸಿಂಹಾಸನದ ಕೆಳಗಿದೆ ಯಿನ್ನು ಸಂಶಯವೇಕಗಿಸು . . . ಕೋಱಿದಪೆ ನೆನಲು . . . ಜನಪಕ್ಷನಾಣವಗಿಸೆ ಮುಚ್ಚುಳವನಿತಱೊಳು ತೆಗೆಯಿಸಲ್ (ಬಸವು. ೫-೫೭, ೫೮). [ಅಗೆ$_1$ + -ಇಸು$_3$]

**ಅಗೆಯೆತ್ತು** (ಕ್ರಿ). ೧. ಮೊಳಕೆಯನ್ನು ಕೀಳು; ನಿರ್ಮೂಲಮಾಡು; ಮೂಲೋತ್ಪಾಟನ ಮಾಡು: ಅಂತು ಪಗೆಯನಗೆಯೆತ್ತಿ ಕಳಿಪು (ಪಂರಾಮಾ. ೧೧೦-೧೩೨ ವ); ಮುರಹರನಂದು ಕಿತ್ತನಗೆಯೆತ್ತಿದ[ನಾ] ಕನಕಾದ್ರಿಯಂ (ಕಇ. IV, ೧೧೦-೨೬; 1121); ಅಗಣಿತ ಮೃಗಗಣಮನಗೆಯೆತ್ತಿ ತಗುಳೆ ಬೆರ್ಚುವಿಟ್ಟಂ (ನೇಮಿಪು. ೧-೭೪ ವ). ೨. (?): ಅಗೆಯೆತ್ತುತ್ತಬ್ಬಿನೀನಾರಿಗೆ ಮಣಿಗಣಮಂ ಸೂಸುತಂ . . . ಸುೞಿವುದು ವನಸಂಚಾರಸಾರಂ ಸಮೀರಂ (ಕುಸುಮಾ. ೧-೧೧೪). [ಅಗ್ಗೆ$_2$ + ಎತ್ತು$_1$]

**ಅಗೆಯೇೞ್** (ಕ್ರಿ). ಮೊಳಕೆಯಾಗು; ಅಂಕುರಿಸು.

ಅಗೆಯೆೞ್ದುಪೋಗು=ನಿರ್ಮೂಲವಾಗು; ಪೂರ್ತಿ ನಾಶವಾಗು: ಚಕೋರಕೋಟಿಗಳ ಮನೋಮುದಂ ಕರಗುವಂದಮನೊಂದಿದುತ್ಪಲಂಗಳಾನಗೆಯಗೆಯೆೞ್ದುಪೋಗಲನುಗೆಯ್ದುದು . . . ಗತಪ್ರಭನಾಗುತಿರಲ್ ಸಿತಪ್ರಭಂ (ಕುಸುಮಾ. ೪-೩೬). [ಅಗ್ಗೆ$_2$ + ಏೞ್$_1$]

**ಅಗೆಯೊಡೆ** (ಕ್ರಿ). = ಅಗೆವಡೆ ೨: ಸ್ಥಾಪಿತವಾಗಿ ಅಗೆಯೊಡೆದು ಹಬ್ಬಿದು ದಿನ್ನೊಂದು (ನಾಡೋಜ. ೫೭). [ಅಗ್ಗೆ$_2$ + ಒಡೆ$_1$]

**ಅಗೆವಗೆ** (ನಾ). ಮೊಳಕೆಯ ರೀತಿ; ಮೊಳಕೆಗಳು; ಅಂಕುರಗಳು: ಸರ್ವಾಂಗದೊಳ್ ಪುಳಕದಗೆವಗೆಯೊಗೆಯೆ (ಮದೇಪು. ೧-೬). [ಅಗ್ಗೆ$_2$ + ಬಗ್ಗೆ]

**ಅಗೆವಡೆ** (ಕ್ರಿ). ೧. ಮೊಳಕೆಯನ್ನು ಪಡೆ. ೨. ರೆಂಬೆ ಬಿಡು: ಮಂಗಳೂರು ಪ್ರಾಂತದಲ್ಲಿ ಅಗೆವಡೆದು ಪಸರಿಸಲಾರಂಭಿಸಿದೆ (ನಾಡೋಜ. ೨೫೨). [ಅಗ್ಗೆ$_2$ + ಪಡೆ$_1$]

**ಅಗೆವೊಯ್** (ಕ್ರಿ).(ನಾಟಿಗಾಗಿ ಸಸಿ ಬೆಳಸಲು) ಬೀಜವನ್ನು ಬಿತ್ತು; ಒಟ್ಟಿಲುಹಾಕು: ಆ ನೃಪಂ ನೋಡಿ ವಸುದೇವನ ದೇಹಮನಗೆವೊಯ್ದಂತೆಯುಂ ಪಱಿದು ಪತ್ತಿಸಿದಂತೆಯುಂ ನೊಕ್ಕಳಮಿಾ ಮಕ್ಕಳೇಕಾದುವೆಂದು ಬೆಕ್ಕಸಂಬಟ್ಟು (ಅರ್ಧನೇ. ೫-೨ ವ); ಅತಿಸೇವ್ಯದಿವ್ಯ ಭಾಷಾಲತೆಗಗೆವೊಯ್ದರ್ಥಬೀಜದೆಳಮೊಳೆಯಂತೇಂ (ಪುಷ್ಪಪು. ೧೨-೬೩); ಅಗೆವೊಯ್ವ ಕಳಿಗೀಳ್ವ ಬೆದೆಯ ಬಿಚ್ಚುವ ನೀರ ಬಗೆಯಱಿದೂಡುವ (ಕುರಾಸಾಂ. ೨-೩೫). [ಅಗ್ಗೆ$_2$ + ಪೊಯ್$_1$]

**ಅಗೇಂದ್ರ** (ನಾ). ೧. ಬೆಟ್ಟಗಳ ರಾಜ; ಹಿಮವತ್ಪರ್ವತ. ೨. ಏಳು ಎಂಬ ಸಂಖ್ಯೆಗೆ ಒಂದು ಸಂಕೇತ: ಶೀತಕರದ್ವಿತಯಂ ಕೃಶಾನುಮುರುಲ್ಲಗೋಪೇತಮಗೇಂದ್ರದೊಳಾಗೆ ವಿಶ್ರಮಣಂ (ಛಂದೋಂಬು. ೨-೧೦೦). [ಸಂ.]

**ಅಗೇಂದ್ರಜೆ** (ನಾ). ಪರ್ವತರಾಜನ ಮಗಳು; ಪಾರ್ವತಿ. [ಸಂ. ಅಗೇಂದ್ರಜಾ]

**ಅಗೇಡಿ,** ಅಗೋಡಿ (ನಾ). ಕಿತ್ತು ಬೇರೆ ಕಡೆ ನೆಡುವುದಕ್ಕಾಗಿ ಬೀಜ ಬಿತ್ತಿ ಸಸಿಯನ್ನು ಬೆಳಸುವ ಮಡಿ; ಒಟ್ಟಿಲು; ಪಾತಿ: ಕೋಳಿಗಳು ಬಂದು ಅಗೇಡಿ (ಬತ್ತದ ಸಸಿ ನೆಟ್ಟ ಹೊಲ) ಬತ್ತ ಕದಿಯದಂತೆ ನೋಡಿಕೊಳ್ಳುತ್ತಿದ್ದೆವು (ಹುಮು.ಖ. ೨೪); ಸುಬ್ಬನ ಮಾಸೆ ನೀರಿಲ್ಲದ ಅಗೇಡಿ ಹಾಗಾಗುತ್ತದೆ (ಹಹಸ. ೨೮). **ಅಗೋಡಿ:** "ನೋಡು, ಮಧ್ಯಾಹ್ನದ ಹೊತ್ತು, ಒಂದೆಮ್ಮೆ ನಮ್ಮ ಅಗೋಡಿಗೆ ಬಂದಿತ್ತಂತೆ. ನಮ್ಮ ರಾಮು ಅಟ್ಟದ ಅಂತಾ ಕಾಣ್ತದೆ" (ಸನ್ಯಾಕ. ೧೦೪). [ಅಗ್ಗೆ$_2$ + ಅಡ್ಡಿ]

**ಅಗೇಲು** (ನಾ). ಭೂತಬಲಿ. 'ಅಗೇಲುಹಾಕು' ಪರಾ. [← ತುಳು. ಅಗೆಲ್]

**ಅಗೇಲುಹಾಕು** (ಕ್ರಿ). ಭೂತಕ್ಕೆ ಬಲಿಯನ್ನು ಹಾಕು: 'ದೆಯ್ಯೊಂದಿ' ಭೂತಕ್ಕೆ ಅಗೇಲು ಹಾಕುವುದನ್ನು ದಂಬನ ಹೊರತು ಬೇರೆಯವರು ಮಾಡುವಂತಿರಲಿಲ್ಲ (ದಂಬನಾ. ೧೧). [ಅಗೇಲು + ಹಾಕು (< ಪಾಯ್ಕು$_1$). / ತುಳು. ಅಗೆಲ್‌ಪಾಡು]

**ಅಗೇವು** (ನಾ). ಸಸಿ; ಪೈರು: ತೊಪ್ಪಲಗೇವು, ಹೊಗೆಸೊಪ್ಪಿನಗೇವು, ಬದನೇ ಆಗೇವು, ಮೆಣಸಿನಗೇವು, ನೀರುಳ್ಳಿ ಅಗೇವು (ಸ್ಯಾಂಡರ್). [< ಅಗ್ಗೆ$_2$]

**ಅಗೊ** 'ಅದೆಕೊಳ್' ನೋ.

**ಅಗೋ** 'ಅದೆಕೊಳ್' ನೋ.

**ಅಗೋಚರ** (ಗು). ಕಣ್ಣಿಗೆ ಕಾಣದ; ಇಂದ್ರಿಯಗಳಿಗೆ ನಿಲುಕದ; ಗೋಚರಿಸದ. [ಸಂ.]

**ಅಗೋಡಿ** 'ಅಗೇಡಿ' ನೋ.

**ಅಗೌಕಸ** (ನಾ). ಮರವೇ ಮನೆಯಾಗಿ ಉಳ್ಳದ್ದು; ಮರಗಳಲ್ಲಿ ವಾಸಿಸುವ ಪ್ರಾಣಿ; ಕಪಿ: ಶರಭಸಿಭಾರಿ ಸೈರಿಭಮಿಭಂ ಬನವಂದಿ ತರಕ್ಷು ಖಡ್ಗಿ ಶಂಬರ ಮೃಗ ಮೇಷಮೇಣಮಜಭೇದನಮೃಕ್ಷಮಗೌಕಸಂ ಮೊಲಂ (ಶಬಶಂ. ೩-೩೪). [ಸಂ.]

**ಅಗೌರವ** (ನಾ). ಗೌರವವಿಲ್ಲದಿರುವುದು; ಅವಮಾನ: ಅಂದಿನ ಸಭೆಯಲ್ಲಿ ಗೌರವಕ್ಕೆ ಬದಲಾಗಿ ಅವನಿಗೆ ಅಗೌರವ ಒದಗಿತು (ರೂಢಿ). [ಸಂ.]

**ಅಗ್ಗ**$_1$ (ನಾ). ೧. ಕಡಮೆ ಬೆಲೆ; ಇಳಿತಾಯದ ಬೆಲೆ: ಯೇಳು ಸಾವಿರ ಭಟ್ಟಿ ಅಕ್ಕಿಯಂನು ಜಮಾ ಮಾಡಿ ಅಗ್ಗದಿಂದ ಸರಕಾರಕ್ಕೆ ಕೊಟ್ಟೇವು (ರಾಜೇಂದ್ರ. ೬೮); ಸಕಲವಾದ ಪೈರುಗಳು ಬೆಳೆದು ಅಗ್ಗವಾಗಲು (ಕೃವಾಆ. ೧೫೦); ಅಗ್ಗದ ಆಸೆಗೆ ಗೊಬ್ಬರ ಕೊಂಡರು (ಗಾದೆ); ಅಗ್ಗದ ಸೆಟ್ಟಿ ಮುಗ್ಗಿದ ಜೋಳ (ಗಾದೆ); ಸಂತೆಗೆ ಸಾಮಾನು ಹೆಚ್ಚಾಗಿ ಬಂದು ಅಗ್ಗವಾಯಿತು (ರೂಢಿ); ಆ ಅಂಗಡಿಯಲ್ಲಿ ಅಗ್ಗದ ಬೆಲೆಗೆ ಮಾರುತ್ತಾರೆ. (ರೂಢಿ). ೨. ಅಲ್ಪ; ಹಗುರ: ನನ್ನ ಮಾತು ಅಷ್ಟು ಅಗ್ಗವಾಗಿ ಹೋಯಿತೆ? (ರೂಢಿ). [~ ಅಗ್ಗ$_2$?. / ತುಳು. ಅಗ್ಗ; ತೆಲು. ಅಗ್ಗುವ]

**ಅಗ್ಗ**$_2$ (ನಾ). ೧. ಬೆಲೆ: ಹರದರ್ ಗಳಿಸಿರ್ಪ ಮುತ್ತುಗಳ್ಗೆ ಗಜ್ಜುಗದತ್ತಣಿಂ ಕಡೆಯೆಂದು ಅಸಂಭಾವಿತಮಾದ ಅಗ್ಗಮಂ ಪೇಳಿರ್ಪುದರಿಂ (ನರಚ. ೬೩–೧೫೫ ವ). ೨. ಶ್ರೇಷ್ಠತೆ; ಅತಿಶಯ; ಆಧಿಕ್ಯ: ನಿಮ್ಮೊಳಗ್ಗದ ಪರಶುಧರಂ ಪೊಣರ್ದು ತಾನದಂದೇನಾದಂ (ಪಂಪಭಾ. ೧೦–೭); ಅಗ್ಗದ ಕೀರ್ತಿ ಮಾಸುಗುಂ (ಪಂಚತಂ. ೧೬೫–೬); ಪುದಿದೈಶ್ವರ್ಯದಿನಗ್ಗದಗ್ಗಳಿಕೆಯಿಂ ಚಾತುರ್ಯದಿಂ ಶೌರ್ಯದಿಂ (ಸುಕುಮಾ. ೫–೧೦); ನೃಪರೊಳೆಂ ತಾನಗ್ಗದಿಂ ಕಾದೊಡಂ . . . ಪಡೆದಪ್ಪಲ್ಲದೆ ಬರ್ಪುದೇ (ಸೋಮೇಶ. ೨೮); ಕುಮಾರಿಕೆಯನಪ್ಪಿದ ದರ್ಪಕನಹ್ನಿಯಗ್ಗದೀ ಬೇಗೆ (ಉದ್ಭಟ. ೭–೬೪); ಅಗ್ಗದ ಬಸವರಾಜಂಗೆ ತಿಳುಹುವೆನು ಶಿವತತ್ವಭಕ್ತಿಯ (ಪ್ರಭುಲೀ. ೧೮–೨). ೩. ಅಧಿಕವಾದ ಸಾಮರ್ಥ್ಯ; ಕಸುವು: ಮದನಂಗೆ ಚೈತ್ರ ನಲರಗ್ಗದ ಕೂರಲಗಾಗೆ (ಕುಸುಮಾ. ೯–೫೮); ಆದಟನೈತರೆ ಹೋಗಲೀಯದೆ ಮೊದಲ ಬಾಗಿಲ ಕಟ್ಟಿಕೊಂಡಗ್ಗದ ಜಯದ್ರಥ ಭೀಮನೊಳು ಬಲುಗಾಳಿಗವ ಹಿಡಿದ (ಕುವ್ಯಾದ್ರೋ. ೫–೬೩); ಪಿಂಗಾಲ್ಗೆ ತೊಡರ್ಚಿದಗ್ಗದಗ್ಗರಣೆಯಂ ಛಟಛಟನೆ ಕಿಳ್ತು ಕಿಳಿದುರ್ (ರಾಜಶೇ. ೬–೧೧ ವ); ಕೆಂಡನಗ್ಗದ ಯಕ್ಷ ರಾಕ್ಷಸ ಗಂಡುಗಲಿಗಳನತುಳಬಲ ಕೋದಂಡಖಡ್ಗಕರಾಳ ರುದ್ರ ಸುವೀರಭದ್ರರನು (ಅಂಬಿಕಾ. ೨–೧೨). [ಸಂ. ಅರ್ಘ]

**ಅಗ್ಗ**$_3$ (ನಾ). ೧. ತುದಿ: ದೇವಕುಲೇಂದ್ರನುಪ್ಪರಿಗೆಯಗ್ಗದ ಕಾಂಚನ ಕುಂಭದಂತೆ ಚೆಲ್ವಾವರಿಸಿರ್ಪಿನಂ (ಉದ್ಭಟ. ೧೧–೮). ೨. ಮುಂದು; ಮೊದಲು: ನಸಿಗನೊಳಗ್ಗದ ನಸಿಗಂ (ಸಮಪ. ೭–೩೦); ಸುದ್ದಗೆಯೊಳಗ್ಗದ ಬಿಣ್ಪೆನೋಂಕಾರಮಂ ಬರೆಯಲ್ (ಭಾವಚಿಂ.೧–೩೪). [ಸಂ. ಅಗ್ರ]

**ಅಗ್ಗಂಟು** (ನಾ). ಸುಲಭವಾಗಿ ಬಿಡಿಸಲಾಗದ ಗಂಟು; ಬಲವಾದ ಗಂಟು: ಮದುವೆಯೆಂದರೆ ಏನೆಂದು ತಿಳಿದಿರುವಿ? ಧರ್ಮದ ಗಂಟು, ಆಯುಷ್ಯದ ಅಗ್ಗಂಟು, ಅದದ್ದನ್ನು ಸಹನಮಾಡಿಕೊಳ್ಳಲೇಬೇಕು (ಕಾದನ. ೫೮); ಹುಡುಗ–ಹುಡುಗರು ಅಗ್ಗಂಟಾಗಿ ತೊಡಕುಬಿದ್ದಂತಿದ್ದುದು ಈಗ ತಟ್ಟನೆ ಸಡಿಲಾಗಿ ಬಿಟ್ಟಿತು (ಕುಮಾರಾ. ೨೦೬). 'ಕಗ್ಗಂಟು' ಪರಾ.
[ಅಟ್$_0$ (< ಅಟ್ ?) + ಗಂಟು. ‖ **ತುಳು.** ಅಗ್ಗೆಂಟು = ನಿರ್ಧಾರ, ಹಟ]

**ಅಗ್ಗಂಬೆಱು** (ಕ್ರಿ). ಶ್ರೇಷ್ಠವಾಗು; ಅತಿಶಯವಾಗು: ಇವಳ ಮುಖಮೆಂಬಗ್ಗಂಬೆತ್ತಿರ್ದ ಪೆಂಪಿನ ಚಕ್ರದಿಂದಿವಳ ನಳಿತೋಳೆಂಬೀ ತೀವ್ರಾಸಿಯಿಂ ಸ್ಮರನಂಜಿಪಂ (ಧರ್ಮಾಮೃ. ೩–೩೪). [ಅಗ್ಗ$_2$ + ಪೆಱು]

**ಅಗ್ಗಂಮಾಡು** (ಕ್ರಿ). ಹೆಚ್ಚು ಮಾಡು; ದೊಡ್ಡದು ಮಾಡು: ಎಲ್ಲ ತೇಜದಿಂ ತಮ್ಮಗ್ಗನಗ್ಗಂ ಮಾಡಿ ಬಂದ ಬರವುಮಂ ನೋಡಿ (ವರ್ಧಮಾ. ೯–೪೩ ವ). [ಅಗ್ಗ$_2$ + ಮಾಡು$_1$]

**ಅಗ್ಗಡ**$_1$ (ನಾ). ಭೆಂಗಾಡು (?): ಕೆಱೆಬಾವಿಗಳೆಲ್ಲದಗ್ಗಡದೆಡೆಯಲ್ಲಿ ತೊಱೆನೀರ ಕಂಬಿಯೊಳ್ ತರಿಸಿ ನೆಱೆ ಧರ್ಮಿಷ್ಠರು ನಿರ್ಮಿತವನು ಮಾಡಿದಜವಟ್ಟಿಗೆಗಳೊಪ್ಪಿದುವು (ಮೋಹತ. ೨–೨೬). [?]

**ಅಗ್ಗಡ**$_2$ 'ಅಗ್ಗಲ' ನೋ.

**ಅಗ್ಗಡಲ್**$_1$ (ನಾ). ೧. ಆಳವಾದ ಸಮುದ್ರ. ೨. ರಕ್ತದ ಕಡಲು (?): "ಅಗ್ಗಡಲೆನೆ ರಕ್ತಜಲಧಿ" (ಭಾರನಿ. ೧೭); ಸೇನೆಯನಗ್ಗಡಲೊಳಿಕ್ಕಿದನು ಫಲುಗುಣನಗಣಿತಾಸ್ತ್ರದಲಿ (ಕುವ್ಯಾವಿ. ೮–೬೯); ಒಗ್ಗಿ ಕವಿತಹ ತುರಗ ಸೇನೆಯನಗ್ಗಡಲೊಳಿಕ್ಕಿದನು (ಕುವ್ಯಾಭೀ. ೮–೪೬).
[< ಅಟ್$_0$ (< ಅಟ್ ?) + ಕಡಲ್]

**ಅಗ್ಗಡಲ್**$_2$ (ನಾ). ಒಂದು ಊರಿನ ಹೆಸರು: ಅಗ್ಗಡಲ ಬಾಸಗವುಂಡನ ಮಗ (ಎಕ. V. ಬೇಲೂರು. ೨೦೪–೭; 1135). ℙ ಇದು ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನಲ್ಲಿರುವ, ಈಗಿನ "ಅಗ್ಗಡಲು" ಎಂಬ ಊರು. [?]

**ಅಗ್ಗಡೆ** (ನಾ). ಗಟ್ಟಿಗಿತ್ತಿ; ಗಂಡುಬೀರಿ (?): ಬೆಂಡಕ್ಕುಂ ಬೀಳಕ್ಕುಂ ಭಂಡಕ್ಕುಂ ಬಲುಮೆ ಕೆಡುಗುಮಾಯುತಿಯಳಿಗುಂ ಹೆಂಡತಿಯಗ್ಗಡೆಯಾದೊಡೆ ಗಂಡಂ ನಾಯಿಂದ ಕಷ್ಟ ಸುಗುಣಕರಂಡಾ (ನೀತಿಸಾ. ೭೩೬). 'ಅಗ್ಗಳ್ತಿ$_2$' ಪರಾ. [< ಅಗ್ಗಳ್ತಿ$_2$ ?]

**ಅಗ್ಗಡೆಯು** 'ಅಗ್ಗಳೆಯ' ನೋ.

**ಅಗ್ಗಣಿಗಿ** (ನಾ). = ಅರ್ಘವಾಣಿ: ರಂಜಣಗಿ ಅಗ್ಗಣಗಿ ಮಂಜು ಹರಿಯಲು ಕಾಸಿ ನಂಜುಂಡ ನಿನ್ನ ಎರೆಯುವೆನು (ನಾಡಪ. ೫).
[ಅಗ್ಗಣಿ (< ಅರ್ಘವಾಣಿ) + ?]

**ಅಗ್ಗಣಿ** 'ಅರ್ಘವಾಣಿ' ನೋ.

**ಅಗ್ಗಪವೆಗ್ಗಡೆ** (ನಾ). ಒಬ್ಬಾತನ ಹೆಸರು: ಶ್ರೀಮುದಗ್ಗಪವೆಗ್ಗಡೆಯರುಂ . . . ಅಳುತ್ತಮಿದ್ದರ್ (ಎಕ. XI, ಚಿತ್ರದು. ೨೩–೨೦; 1205). 'ಅಗ್ಗಪ್ಪ' ಪರಾ. [< ಅಗ್ಗಪ್ಪ + ಪೆರ್ಗಡೆ]

**ಅಗ್ಗಪಾಡು** (ನಾ). ಗೌರವಹೀನವಾಗಿರುವಿಕೆ; ಮಾನಹೀನತೆ; ಹಗುರವಾಗಿರುವ ಸ್ಥಿತಿ (ಕ). [ಅಗ್ಗ$_1$ + ಪಾಡು$_3$]

**ಅಗ್ಗಪ್ಪ** (ನಾ). ಒಬ್ಬಾತನ ಹೆಸರು: ಭಾರತಿಯಕ್ಕನನೆಮ್ಮವೆಯಕ್ಕಪ ಅಗ್ಗಪ್ಪಗೆ (ಎಕ. II, ೩೪೭–೨೪; 1296). [ಅಗ್ಗ$_3$ ? + ಅಪ್ಪ$_1$]

**ಅಗ್ಗಪ್ಪಸೆಟ್ಟಿ** (ನಾ). ಒಬ್ಬಾತನ ಹೆಸರು: ಅಗ್ಗಪ್ಪಸೆಟ್ಟಿಯರ ಮಕ್ಕಳು ದೋರೆಯ ಚವುಡಯ್ಯನವರು (ಎಕ. II, ೨೪೭–೨೭; 1273). 'ಅಗ್ಗಪವೆಗ್ಗಡೆ' ಪರಾ. [ಅಗ್ಗಪ್ಪ + ಸೆಟ್ಟಿ]

**ಅಗ್ಗಯಿಲೆ** 'ಅಗ್ಗಾಯಿಲೆ' ನೋ.

**ಅಗ್ಗರ** (ನಾ). (ಉಕ) ಬಲು ತಣ್ಣಗಾದ ವಸ್ತು: "ಅವ್ವಾ, ಅನ್ನ ಅರಿ ಅಗ್ಗರವಾಯಿತು. ಲಗೂನೆ ಊಟಕ್ಕೆ ಬಾ" (ಎರಸ.೨೧). [ಸಂ. ಅಂಗಾರ?]

**ಅಗ್ಗರಜ** (ನಾ). ಅಣ್ಣ: ನೊರೆಹಾಲ್ಗಡಿಗೆಯ ತ್ವರಿತದಿ ಒಯ್ದಗ್ಗರಜಗೆ ಕೊಡುವ (ಪ್ರಸಭಾ. ೧೭–೧೩). [ಸಂ. ಅಗ್ರಜ]

**ಅಗ್ಗರಣೆ**$_1$ (ನಾ). = ಒಗ್ಗರಣೆ: ಪದನಾದ ಬದನೆಯ ಹೊದಟೆಯಗ್ಗರಣೆಯಂ ಮಾಡಿ ಪರಿಮಳವಿಕ್ಕಲದು ತುಳುವಬದನೆಯಕಾಯವೆಸರಾದುದು (ಸೂಪಶಾ. ४–೭); ಹಸಿಯ ಕೊಣಬಿಯೊಳು ಹಾಕಿಸಿಯಗ್ಗರಣೆಯಂ ಮಾಳ್ಪುದು (ಸೂಪಶಾ. ४–೨೯).
[ಅಗ್ಗರಿಸು + -ಅಣೆ. / **ಮರಾ.** ಅಗಾರಣೇಂ, ಓಗ(ಘ)ರಣೇಂ]

**ಅಗ್ಗರಣೆ**$_2$ (ನಾ). ಹಗ್ಗ: "ಅಗ್ಗರಣೆ ದಾವೆಂದು ದಾಮಂ" (ಕವಿಕಂ. ೨೫೧); ಆ ಮಹಾಮದೇಭಂ. . . ನೆಲದ ನಾಲಗೆಯಂ ಕೀಳ್ವಂತೆ ಬಾಳ್ಗಂಬಮಂ ಕಿೞ್ತು ಅಗ್ಗರಣೆಯಂ ನುರ್ಗುಮಾಡಿ (ಚಂದ್ರಪ್ರ. ೯–೧೦೧ ವ); ಪಿಂಗಾಲ್ಗೆ ತೊಡರ್ಚಿದಗ್ಗದಗ್ಗರಣೆಯಂ ಛಟಛಟನೆ ಕಿಳ್ತು ಕಿಳಿದುರ್ (ರಾಜಶೇ. ೬–೧೧ ವ); ಶ್ರೀರಂಗರಾಯನ ಕಯ್ಯಗ್ಗಟನಗ್ಗರಣೆಯ ಎಳಲುಂಗೊನೆಯನ್ನು ತುಡುಂಕಿಕೊಂಡು ಆತನನ್ನು ದರದರನೆ ಈಳ್ದುಯ್ದು (ಮಂತ್ರಶ. ೧೧೨–೨೧). [ಸಂ. *ಅಗ್ರಹಣ ?]

**ಅಗ್ಗರಿಸು** (ಕ್ರಿ). ಒಗ್ಗರಣೆ ಹಾಕು; ಒಗ್ಗರಿಸು: ಜೀರಿಗೆ ಮೆಂತೆಯಂ ಕುಂತಿ ನೀರುಳ್ಳಿಯಿಕ್ಕಿಯಿನಿಸು ಎಣ್ಣೆಯಿಂಗಿಕ್ಕಿಯಗ್ಗರಿಸಿಯಾಱಿಸಿಕೊಂಡ ಎಣ್ಣೆಯೊಳು (ಸೂಪಶಾ. ೩–೨೦). [~ ಒಗ್ಗರಿಸು]

**ಅಗ್ಗಲ**, ಅಗ್ಗಡ$_2$, ಅಗ್ಗಳ$_1$ (ಗು). ೧. ಅಧಿಕ; ಶ್ರೇಷ್ಠ; ಅತಿಶಯವಾದ: ಅಲರುವಿಲ್ಲನ ಬಿಜ್ಜೆಯೆಂಬಗ್ಗಲದ ಬಿನ್ನಣಿ ಸವೆದ ನರಪುತ್ಥಳಿಗಳ್ (ಸಾಳ್ವಭಾ. ೧೮–೬೩). **ಅಗ್ಗಡ**$_2$: ೧. (ಅನಂನಾ. ೧೨). **ಅಗ್ಗಳ**$_1$: ೧. "ಅಧಿಕಂ ತಾನಗ್ಗಳಕ್ಕೆ ನಾಮಂ" (ಕವಿಕಂ. ೨೩೨); "ಅಗ್ಗಳಂ ಎಂಬುದೆ ಅಧಿಕಂ" (ಚತುನಿ. ೧೯); ಏನುಮಂ ಬಗೆಯದಂತಿರೆ ಪೇೞ್ದ ಸಮುಚ್ಚಯೋದ್ಭಾವಕ ಕ್ರಮವಿಚಾರದೆ ದೋಷಮಿದಗ್ಗಳಂ (ಕವಿರಾ. ೧–೧೩೧); ಆದಿತ್ಯನ ತೇಜದಿಂದಗ್ಗಳಮಪ್ಪ ತೇಜದೊರಾಗಿ (ವಡ್ಡಾರಾ. ೯೮–೧೩);

ಕವಿತಾಗುಣಾರ್ಣವಂ ಕವಿತೆಯೊಳಗ್ಗಳಂ ಗುಣದೊಳಗ್ಗಳಮೆಲ್ಲಿಯುಮಿಾ ಗುಣಾರ್ಣವಂ (ಪಂಪಭಾ. ೧–೧೦) ; ಏನಳವಗ್ಗಳಮೋ ಕವೀಂದ್ರರಾ (ಲೀಲಾವ. ೧–೧೧) ; ಇಂದು ಗೆಲಿದರೆ ಧರ್ಮಸುತನವರಿಂದುಕುಲದಗ್ಗಳರು (ಕುವ್ಯಾದ್ರೋ. ೯–೨೮) ; ನಳಿನನಾಭನ ಭಜಕರೇನಗ್ಗಳರೊ ಜಗದೊಳು (ತೊರರಾ. ೬–೩೬–೭೩). (ನಾ). ೨. ಅಗ್ಗಳಿಕೆ ; ಶ್ರೇಷ್ಠತೆ ; ಹಿರಿಮೆ : ರತ್ನಗಳ ಬೆಳೆವೊಲದಂತೆ ಸಿಂಗರಿಸಿರ್ದ ಕಟಕದಗ್ಗಳವ ಕಂಡತ್ತ ಬೀಗಿದಳು (ಭರಚ. ೩೯–೮೫). ೩. ಕನ್ನಡ 'ಚಂದ್ರಪ್ರಭಪುರಾಣ' ವನ್ನು ಬರೆದ ಕವಿಯ ಹೆಸರು.

[?. / **ತೆಲು.** ಅಗ್ಗಲಮು ; **ಪ್ರಾ.** ಅಗ್ಗಲ = ಅಧಿಕ]

**ಅಗ್ಗಲಂ,** ಅಗ್ಗಳಂ (ಅ). ಹೆಚ್ಚಾಗಿ ; ಅಧಿಕವಾಗಿ : ಅಗ್ಗಲಮೆಸೆದತ್ತು ದಿಗ್ವಲಯದಂತೆ ನಿಶಾಂತದೊಳಂಗನಾಜನಂ (ಅಜಿಪು. ೬–೬೪). **ಅಗ್ಗಳಂ:** ಅಗ್ಗಳಂ ಪ್ರತಿಪತ್ತಿಯುಂ ಗೌರವಮುಮಂ ಮಾಡಿದೊಡರಸಂ (ವಡ್ಡಾರಾ. ೧೧೧–೧೩) ; ಹನ್ನೊಂದಬ್ದದಿನತ್ತಲಗ್ಗಳಂ ಬಾಟನವಂ (ಜಾತತಿ. ೬–೩೩) ; ಜಿನಮಾರ್ಗಂ . . . ಪರಮಾಪವರ್ಗಸುಖಮಂ ಭವ್ಯರ್ಗೆ ಮಾಳ್ಕಗ್ಗಳಂ (ಬಾಧಪು. ೧–೭). [< ಅಗ್ಗಲ]

**ಅಗ್ಗಲಿಸು,** ಅಗ್ಗಳಿಸು (ಕ್ರಿ). ೧. ಹೆಚ್ಚಿಸು ; ದೊಡ್ಡದು ಮಾಡು ; ಅತಿಶಯಪಡಿಸು : ನಿಲಿಸಿ ಲಘುಪದಮನದನಗ್ಗಲಿಸಿರೆ ಮತ್ತೊತ್ತಿ ಬರ್ಪ ಪದಮಂ ತುದಿಯೊಳ್ ನಿಲೆ ಪೇಳ್ದಾಗಳ್ ಕೂಸಿನ ತಲೆಯೊಳ್ ಬಿಣ್ಪೊಜೆಯನಿಟ್ಟವೋಲಸುಖಕರಂ (ಕವಿರಾ. ೨–೬) [ಅಗ್ಗಲಿಸಿರೆ = (ಹ್ರಸ್ವ ಸ್ವರಕ್ಕೆ) ಗುರುತ್ವವನ್ನು ಉಂಟುಮಾಡಿ] ; ಕಳರ್ದಂ ಪುರಾಂಗನಾನೇತ್ರ ಚಕೋರಮಗ್ಗಲಿಸೆ ಸಂಮುದಮಂ ಮನುಜೇಂದ್ರಚಂದ್ರಮಂ (ಮಲ್ಲಿಪು. ೯–೮) ; ಅಲರ ಪೊಸಗಂಪಿನಿಂದೆಮಗಲಂಪನಗ್ಗಲಿಸಿ ನೀನೆ ರಕ್ಷಿಪುದು (ಚಂದ್ರಪು. ೭–೫೫). ೨. ಹೆಚ್ಚಾಗು ; ದೊಡ್ಡದಾಗು ; ಅತಿಶಯವಾಗು : ಅಗ್ಗಲಿಸಿದ ಮದದಿಂ ನಾಲಗೆ ಕುಲಮಂ ತುಬ್ಬುವವೊಲುಜದೆ ನೀಂ ಕೆಡೆನುಡಿವೈ (ಪಂಪಭಾ. ೧೦–೨೦) ; ವಿಯೋಗದೊಳಾದ ಖೇದಮಗ್ಗಲಿಸಿರುತಿರ್ದಳಲ್ತೆ (ಕುಸುಮಾ. ೧೫–೮) ; ಮೇರುವ ತೆಂಕದೆಸೆಯಗ್ಗಲಿಪ ಭರತಕ್ಷೇತ್ರದಾರ್ಯಾಖಂಡದೊಳಗೆ (ಸಾಳ್ವಭಾ. ೫–೧). ೩. ದೃಢವಾಗು ; ಪ್ರಬಲವಾಗು ; ಜೋರಾಗು : ಅಗ್ಗಲಿಸಿಯೆ ನಿಂದುದೆಂತುಮಸು ಪೋಗದೆ (ಕಾದಂಪೂ. ೯೨೧) ; ಕುಲಟೆಯರೊಳ್ ನೆರೆದು ಪಟಿಗೆ ನಾಣ್ಚದೆ ಕರಮಗ್ಗಲಿಪವರ್ಗದೆಂದುವೆಂದುಂ ನಿಲಲಜಿಯವು ಮೋಕ್ಷದಾಯಕಂ ಸಚ್ಚರಿತಂ (ಸಮಪ. ೫–೭೪). ೪. ಹಿಗ್ಗಿಸು ; ನಲಿಸು : ನೋಯಿಕ್ಕು ಮಾಜಿಕ್ಕುಮಗ್ಗಲಿಕುಂ ಕಬ್ಬದ ಗೇಯದೊಂದು ಸುಸಿಲೊಂದಿಂಪೆಂಬುದೇಗೆಯ್ಯದೊ (ಆದಿಪು. ೧೨–೨೪). ೫. ಹಿಗ್ಗು ; ನಲಿ ; ಆನಂದಪಡು : ಕಾಂತೆಯರೊಳ್ ರಾಜ್ಯಶ್ರೀಕಾಂತೆಯೊಳಾದಮೆ ಜಿತಾತ್ಮನಗ್ಗಲಿಸುವನಲ್ತೆಂದೊಡೆ ಮುಕ್ತಿಶ್ರೀಕಾಂತೆಯೊಳಗ್ಗಲಿಪನೆಡೆಯೊಳಗ್ಗಲಿಸುಗುಮೇ (ಅಜಿಪು. ೬–೩೬) ; ದಾಳಿಕ್ಕುವ ಬಲವಂತರ ಸೇನಾಸಂಭ್ರಮುಮಂ ಕಂಡಗ್ಗಲಿಸುತ್ತಾರುತ್ತನುಮಾನಿಸಿದನು (ವೀರೇಚ. ೨–೨೩) ; ತಾಂ ತಾಂ ಬೇಜನುಭವಿಸಿದ ಸಂತಸಮಂ ಸಮರಸಂಗೊಳಲ್ಕಿರ್ವರುಮೇಕಾಂತದೊಳಿನಿವಾತುಗಳಿಂದಾಂತಾನೆಂದೊರೆವರಾಲಿಸುವರಗ್ಗಲಿಪರ್ (ಚಿಕವಿ. ೬–೨೭೫). ೬. ಹರಡು ; ವ್ಯಾಪಿಸು : ಅಗ್ಗಳದ ವೈಷ್ಣವಮೋಹಮೆ ನಿನ್ನ ಮೆಯ್ಯೊಳಗ್ಗಲಿಸಿದುದಕ್ಕುಂ (ಪಂಪಭಾ. ೯–೪೪) ; ಅಭಿಮನ್ಯುವಿನ ಸಾಹಸಂ ತಂತಮ್ಮ ಮನಂಗಳೊಳಗ್ಗಲಿಸೆ ವಿಗತನಿದ್ರೆಯಿನಿರೆ (ನೇಮಿಪು. ೧೨–೬೩ ವ) ; ಕಡಸಿಗೆಯ ಬೇರ್ ಮರಂಗುಳಿಯೊಳಗಗ್ಗಲಿಸಿರೆ (ಕಲ್ಯಾಕಾ. ೪–೨೨). ೭. ಒದಗು ; ಉಂಟಾಗು : ತತ್ಪುರುಷಕ್ಕಗ್ಗಲಿಪುದುಚಿತಾಕ್ಷರಾಗಮಂ (ಶಮುದ. ೧೭೬). **ಅಗ್ಗಳಿಸು :** ೧. ಮಗನನೆತ್ತಿ ಪುಳಕಾಂಕುರಮಂ ಮೈಗಗ್ಗಳಿಸದ ಕಾಂತೆಯ ಕೈಗಮದೇಂ ಭೇದಮುಂಟೆ ಸೀರೆಯ ಕೈಗಂ (ಮಲ್ಲಿಪು. ೩–೧೧೫) ; ಪೂಗಂಪು ರಾಗಧಲಂಪನಗ್ಗಳಿಸೆ (ಪುಷ್ಪಪು. ೨–೪೩). ೨. ಆ ಮಾತಿನೊಳ್ ಬೇಟಮಗ್ಗಳಿಸೆ ನಿಜನಿವಾಸಕ್ಕೆ ಬಂದು (ಪಂಪಭಾ. ೮–೬೩ ವ) ; ತಂಬೆಲರ ಕಾಲಾಟವಗ್ಗಳಿಸೆ ನಸುಮೊರೆಯುತುಂ ತುಂಬಿ ಸುಳಿದಾಡೆ (ಪದ್ಮರಾ. ೮–೨) ; ಇಳೆಯೊಳೀ ಸುತನಿಂದೆ ಬಡತನ ತೊಲಗಿದಪುದೆಂದಜುಹುವಂತಗ್ಗಳಿಸಿದುನು ನಡುವು (ಜೀವಂಚ. ೪–೩೬). ೮. ಮಿಾರು ; ಅತಿಕ್ರಮಿಸು : ಕಳವೀಣಾಕ್ವಣಿತಮನಗ್ಗಳಿಸುವ ಕಳ ಕಂಠರವಮನೇಳಿಪ ನಿನ್ನೀಕಳಭಾಷಿತಂ (ಮಲ್ಲಿಪು. ೪–೧೮) ; ಉಲುಕಿದರೆ ನಿನ್ನಾಣೆಯೆನುತಗ್ಗಳಿಸಿ ನೃಪತಿಯ ಕೆಡೆನುಡಿದು (ಕುವ್ಯಾಕ. ೧೧–೬೧).

[ಅಗ್ಗಲ + –ಇಸು$_3$. ‖ **ತೆಲು.** ಅಗ್ಗಲಿಂಚು]

**ಅಗ್ಗವಣಿ** 'ಅರ್ಘವಾಣಿ' ನೋ.

**ಅಗ್ಗವಳ** (ನಾ). ರಾಜಪರಿವಾರದ ಒಬ್ಬ ಅಧಿಕಾರಿ : ರಾಜಾಂಗಣದೊಳ್ ಸಂದಿಸಿ ನಡೆವ ಪಡಿಯಜರ ಪಡೆವಳರಡಪವಳರಗ್ಗವಳರ ಕಬ್ಬಿಗರ . . . ಅಂದಣದ ಗೊಂದಣಂ ರಣಮಂಡಲದ ಬಾಗಿಲ್ವಾಡದೊಳ್ ತಿಂತಿಣಿಗೊಂಡು (ಅನಂಪು. ೬–೯೪ ವ). [ಸಂ. *ಅರ್ಘಪಾಲ ?]

**ಅಗ್ಗವಳಿ** (ನಾ). ಬೆಲೆ ಕಡಮೆಯಾಗಿರುವುದು ; ಅಗ್ಗ : ನೀ ಕೊಂಡ ಬಟ್ಟೆ ಬಹು ಅಗ್ಗವಳಿಯಾಗಿದೆ (ಸ್ಯಾಂಡರ್). [ಅಗ್ಗ$_1$ + –ವಳಿ]

**ಅಗ್ಗಸುಗ್ಗಿ** (ನಾ). ಪದಾರ್ಥಗಳು ಸುಲಭವಾಗಿ, ಸಮೃದ್ಧಿಯಾಗಿ ಸಿಕ್ಕತಕ್ಕ ಸ್ಥಿತಿ : ದಾಯಿಗನಾದನಗ್ಗಳದ ಸಗ್ಗಿಗರೊಳ್ ಸೊದೆಯಗ್ಗಸುಗ್ಗಿಯೊಳ್ (ಚಿಕವಿ. ೨–೨೧). [ಅಗ್ಗ$_1$ + ಸುಗ್ಗಿ]

**ಅಗ್ಗಸೆರ್** (ನಾ). ಒಂದು ವಂಶದ ಹೆಸರು ಅಥವಾ ಬಿರುದು (?) : ಪುನುವೆಲವಳ್ಳಿಯ ಗಾವುಣ್ಡನಗ್ಗಸೆ(ಸ)ರೆಳವರಿ ತಮ್ಮ ಬಾವಂಗೆ ಪರೋಕ್ಷವಿನಯಂಗೆಯ್ದುಕಲ್ಲಂನಿಜಿಸಿದಂ (ಎಕ. VIII, ಸೊರಬ. ೫೩೦–೯; 979). [?]

**ಅಗ್ಗಳ$_1$** 'ಅಗ್ಗಲ' ನೋ.

**ಅಗ್ಗಳ$_2$** (ನಾ). ಅಗಳು ; ಕಂದಕ (ಕಿಸಂಗ್ಲಾ. ೧೨೮).

**ಅಗ್ಗಳ ಕಟ್ಟು** = ಕಂದಕದ ಗೋಡೆಯನ್ನು ಕಟ್ಟು (ಕಿಸಂಗ್ಲಾ. ೧೨೮). **ಅಗ್ಗಳ ಹಾಕು** = ಕಂದಕವನ್ನು ತೆಗೆ (ಕಿಸಂಗ್ಲಾ. ೧೨೮).

[< ಅಗುಟು$_3$]

**ಅಗ್ಗಳ$_3$** (ನಾ). (?) : ಪೆರ್ಬಟ್ಟಕ್ಕಂ ಬಿದಿರೂರ ಅಗ್ಗಳಮಿಳಿವಲ್ಲಿ ಅಜ್ಜಿಕೆ ಕಾದಿದ ಬಿದೆಯಿತ್ತ ಸತ್ತನಾತಜಿಗೆ ಬಟಾರರು ಕೊಟ್ಟುದು (ಎಕ. X, ಶ್ರೀನಿವಾ. ೨೭–೨೩ ; 870). [?]

**ಅಗ್ಗಳಂ** 'ಅಗ್ಗಲಂ' ನೋ.

**ಅಗ್ಗಳಗಣ್** (ನಾ). ೧. ಹೆಚ್ಚಾದ (ಎಂದರೆ, ಮೂರನೆಯ) ಕಣ್ಣು : ತೋಜಿದನೆಜಕದೆ ಹರಿಗಂಗೆ ರುದ್ರನಗ್ಗಳಗಣ್ಣಂ (ಪಂಪಭಾ. ೮–೨೩). ೨. ವಿಶೇಷ ದೃಷ್ಟಿ : ಕಳೆಗಳೆನಿತನಿತಜಸೊಳಮಗ್ಗಳಗಣ್ಣಂ ತೋರ್ಪನಗ್ಗಳಂ ನೃಪಸಭೆಯೊಳ್ (ಚಂದ್ರಪು. ೧–೫೭).

[ಅಗ್ಗಳ$_1$ (< ಅಗ್ಗಲ) + ಕಣ್]

**ಅಗ್ಗಳಗಣ್ಣ** (ನಾ). ಹೆಚ್ಚಾದ (ಎಂದರೆ, ಮೂರನೆಯ) ಕಣ್ಣುಳ್ಳವನು ; ಶಿವ : ಅರ್ಧನಾರೀತ್ವಮಂ ಪಡೆದಿಪ್ಪಗ್ಗಳಗಣ್ಣ ರಕ್ಷಿಸೊಲವಿಂ (ಪಾವಶ. ೪). [ಅಗ್ಗಳಗಣ್ + –ಅ$_7$]

**ಅಗ್ಗಳಜೂರ್** (ನಾ). ಒಂದು ಊರಿನ ಹೆಸರು : ಕೋಳೂರಗ್ಗಳಜೂರ ಕರಗೆಯ ತಳಭಂಡಮುಂ (ಎಇ. XIX, ೧೮೯–೨೨ ; 1079). [?]

**ಅಗ್ಗಳಪದಾತಿ** (ನಾ). ದೊಡ್ಡ ಕಾಲಾಳು ಪಡೆ : ಅಳಿದುದಕೆ ಕೊಲೆಕೊತ್ತು ವಡೆದಗ್ಗಳಪದಾತಿಗೆ ಗಣನೆಯಿಲ್ಲ (ಕುವ್ಯಾದ್ರೋ. ೧೦–೨೧).

[ಅಗ್ಗಳ$_1$ (< ಅಗ್ಗಲ) + ಪದಾತಿ]

**ಅಗ್ಗಳಬಲಾಢ್ಯ** (ನಾ). ಹೆಚ್ಚು ಬಲವುಳ್ಳವನು ; ಮಹಾಪರಾಕ್ರಮಿ : ಭರದಿಂದ ಯೋಚಿಸಿಯೆ ಸೂರ್ಯಮಂಡಲದೆಡೆಗೆ ಪರಿಯೆ ನೀನಗ್ಗಳ

ಬಲಾಢ್ಯ ನಿನ್ನಯ ನೇಹವೆರದಿರ್ದು ಮನ್ಮನೋರಥ ಬೆಳೆವುದತಿಶಯಮೆ (ವೆಂಕಾರಾ. ೫-೧-೩೧). [ಅಗ್ಗಳ$_1$ (< ಅಗ್ಗಲ) + ಬಲಾಢ್ಯ]

**ಅಗ್ಗಳವಸ್ತು** (ನಾ). ಶ್ರೇಷ್ಠವಸ್ತು; ಬಹು ಬೆಲೆಯುಳ್ಳ ಪದಾರ್ಥ: ಒಳ್ಳಿತಪ್ಪಗ್ಗಳವಸ್ತುವೆಲ್ಲಂ ಪೃಥ್ವಿಯನಾಳ್ವಂಗಕ್ಕುಂ (ವಡ್ಡಾರಾ. ೧೧೫-೨೬). [ಅಗ್ಗಳ$_1$ (< ಅಗ್ಗಲ) + ವಸ್ತು]

**ಅಗ್ಗಳಾ** (ನಾ). ಒಬ್ಬಾತನ ಹೆಸರು (?) : ಅಗ್ಗಳಾ ಅರಸರಾ ಬೆಸಸಿದೊಡೆ ಬೆಸನ ಪೆತ್ತು ಬರ್ಬ ಬಲಮಾನ್ತಾಳ್ದಿ ಎಱಿದು ಬಿಟ್ಟರ್ (ಎಕ. X (S), ಬಾಗೇಪ. ೮೬-೬; 820). [~ ಅಗ್ಗಳ$_1$ (< ಅಗ್ಗಲ)]

**ಅಗ್ಗಳಿಕೆ, ಅಗ್ಗಳಿಕ್ಕೆ** (ನಾ). ೧. ಹೆಚ್ಚುಗಾರಿಕೆ; ಅತಿಶಯ; ಶ್ರೇಷ್ಠತೆ: ಪಚ್ಚಪಸಿಯ ತುಱುಕಾಱಂಗಗ್ಗಳಿಕೆಯನೆ ಮಾಡಿ (ಪಂಪಭಾ. ೬-೪೬); ಅಣುವಂ ಪಾಂಡವಕೇತುದಂಡದೊಳ್ ನೆಲಸುವುದಾವಗ್ಗಳಿಕೆ (ಗದಾಯು. ೩-೪೧); ನೆಗಟ್ದ ಧರ್ಮಮುಂ ಪಾಪಮುಂ ಸಮನಪ್ಪುದಱಿನಾವುದಗ್ಗಳಿಕೆ (ಜೀವಸಂ. ೨೨೪-೨೮ ವ); ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ (ಕುವ್ಯಾಅ. ೧-೧೫). ೨. ಸಾಮರ್ಥ್ಯ; ಕಸುವು: ವಿರಾಟನು . . . ವೃದ್ಧನಾದರೂ ಪ್ರಾಯದವನ ಹಾಗೆ ಅಗ್ಗಳಿಕೆಯಿಂದ ಯುದ್ಧಕ್ಕೆ ನಿಂತನು (ಕೃವಾವಿ. ೬೦). **ಅಗ್ಗಳಿಕ್ಕೆ**: ೧. ರಾಜಸೂಯಮನಿಂದಗ್ಗಳದಗ್ಗಳಿಕ್ಕೆಯ ಮುಖಂ ತಾನೆಂಬಿನಂ (ಪಂಪಭಾ. ೬-೬೬); ಬೆಲೆಯಿಲ್ಲೆಂಬಿನಿತಗ್ಗಳಿಕ್ಕೆಯ ಮಹಾರತ್ನಂಗಳ್ (ಜೀವಸಂ. ೧೯೭-೩೦).
[ಅಗ್ಗಳ$_1$ (< ಅಗ್ಗಲ) + -ಇಕೆ. ‖ ತೆಲು. ಅಗ್ಗಲಿಕ]

**ಅಗ್ಗಳಿಕೆವಡೆ** (ಕ್ರಿ). ಅತಿಶಯವಾಗು; ಶ್ರೇಷ್ಠತೆಯನ್ನು ಹೊಂದು: ಆರ್ ಪಡೆವನ್ನರ್ ತನ್ನನೆಂಬಗ್ಗಳಿಕೆವಡೆದು (ಪಂರಾಮಾ. ೧-೪೨); ಉಳುಹಿ ಬಿಡುವನೆ ಸಮರಮುಖದಲಿ ಮಲೆತನಾದರೆ ಕರ್ಣನೇನಗ್ಗಳಿಕೆವಡೆದನೊ ಶಿವಶಿವಾ (ಕುವ್ಯಾಕ. ೧೬-೧೪); ಇಳೆಗಗ್ಗಳಿಕೆವಡೆದ ಪಟ್ಟಣದ ಲಗ್ಗೆಯೊಳಗೇಱಿದರು ತುರುಕರು (ಕಂನವಿ. ೧೪-೨೪). [ಅಗ್ಗಳಿಕೆ + ಪಡೆ$_1$]

**ಅಗ್ಗಳಿಕ್ಕೆ** 'ಅಗ್ಗಳಿಕೆ' ನೋ.

**ಅಗ್ಗಳಿಸು** 'ಅಗ್ಗಲಿಸು' ನೋ.

**ಅಗ್ಗಳೆ$_1$** (ನಾ). ೧. ಆಧಿಕ್ಯ; ಶ್ರೇಷ್ಠತೆ: "ಉಬ್ಬರಂ ಅಗ್ಗಳಂ ಅಗ್ಗಳೆ ನೆಱೆ . . . ಪೆರ್ಚುಗೆ ಈ ೧೯ ಅತಿಶಯಂ" (ಕಶಸಾ. ೧೨-೨೩೪); ಪೊಡವಿಯೊಳೆನ್ನನಗ್ಗಳೆಯ ಕವಿಮಂಗನೆನಿಸುವುದು (ಮಂಗರಾ. ೧೫೮-೭೫). (ಗು). ೨. ಆಧಿಕ್ಯವುಳ್ಳ; ಅಧಿಕ; ಶ್ರೇಷ್ಠ: ವಿಜಯ ವಿಠಲರೇಯನ ಶರಣರೊಳಗಗ್ಗಳೆಯಾದ ಭೀಮಸೇನನ ಚರಣ (ವಿದಾಕೃ. ೨೭-೩). 'ಅಗ್ಗಳೆಯ' ಪರಾ. [ಅಗ್ಗಳ$_1$ (< ಅಗ್ಗಲ) + -ಎ$_4$ ?]

**ಅಗ್ಗಳೆ$_2$** (ನಾ). ಅಧಿಕಳು; ಶ್ರೇಷ್ಠಳು: ಪರಮಪಾವನಚರಿತೆ ಪಾರ್ವತಿ . . . ಸುರರೊಳಗಗ್ಗಳೆ ನೀನೆಯಾದರಾಲಿಪುದು ಶ್ರೀಕರಶುಭೋದಯಂಗಳಂ (ವೆಂಕಾರಾ. ೫-೧-೪). 'ಅಗ್ಗಡೆ' ಪರಾ.
[ಅಗ್ಗಳ$_1$ (< ಅಗ್ಗಲ) + -ಎ$_4$]

**ಅಗ್ಗಳೆ$_3$** 'ಅಗ್ಗಾಯಿಲೆ' ನೋ.

**ಅಗ್ಗಳೆಯ, ಅಗ್ಗಡೆಯ** (ನಾ). ೧. ಶ್ರೇಷ್ಠ: ಲಿಂಗವನಱಿದನಾಗಿ ಗುರುವೆಂಬುದ ಬಲ್ಲ ಪ್ರಸಾದವನಱಿದನಾಗಿ ಜಂಗಮವೆಂಬುದ ಬಲ್ಲ . . . ಇಂತೀ ಅಗ್ಗಳೆಯಂಗೆ ಜಗದ ನುಗ್ಗುಗಳು ಸರಿಯೆಂದರೆ ಸಿಗ್ಗಾಗದಿಪ್ಪರೆ (ಮೋಳಿಮಾ. ೧೬೫-೬೧೭); ಅಲಘುಮುನಿ ಮಾತಂಗನೆಂಬಗ್ಗಳೆಯನುದ್ಭವಿಸಿದನು (ಬಸಪು. ೫೭-೭೨); ರಾಯರೊಳಗಗ್ಗಳೆಯನಹ ಕೌಂತೇಯನಿಗೆ (ನಳಚ. ೧-೬). ೨. ಶೂರ: "ಅಗ್ಗಳೆಯನೆನಲ್ ಬಲ್ಲಿದಂ" (ಭಾರನಿ. ೧೭); ನಿಲಿಸಿದಂ ನಾಡೆ ಪದ್ಮಾಯತವ್ಯೂಹಮಂ ದಳದೊಳಗ್ಗಳೆಯರೆಸಳೆಸಳಾಗೆ ದನುಜಕುಲತಿಲಕನನುಜರ್ ಕೇಸರಂಗಳಾಗಲ್ (ಚೆಬಪು. ೩೮-೩೨). **ಅಗ್ಗಡೆಯ**: ೨. ಕ್ರೋಧದಲಿ ಪೊಡೆದರಾ ರಾಮಾಚ್ಯುತರನಗ್ಗಡೆಯ ಸಾತ್ಯಕಿ ಗಾಂಧಿನೀಸುತ ಕಡು ದುರುಳನನಿರುದ್ಧ ಮೊದಲಾದವರು ಬೊಬ್ಬಿಡುತೆ (ನಿಭಾಗ, ೧೧-೩೬-೨೫). [ಅಗ್ಗಳೆ$_1$ + -ಅ$_7$]

**ಅಗ್ಗಳೆಯತನ** (ನಾ). ಅಗ್ಗಳಿಕೆ; ಹೆಚ್ಚುಗಾರಿಕೆ; ಮಹಿಮೆ: ಭಕ್ತರ ಪಾವನವ ಮಾಡಲಿಕೆ ತಾನೇ ಕುಱುಹುವಿಡಿದಗ್ಗಳೆಯತನದಲಿ ನಡೆದಂ (ಪ್ರಭುಲೀ. ೧೧-೩೭); ಇದಱಗ್ಗಳೆಯತನವನಾರ್ ಪೇಳ್ದಪರ್ (ಚೆಬಪು. ೨೮-೧೦). [ಅಗ್ಗಳೆಯ + -ತನ]

**ಅಗ್ಗಱಿ$_1$**, ಅಗಣಿ$_1$, ಅಗರಿ$_1$, ಅಗಳಿ, ಅಗಱಿ$_2$, ಅಗಿಣಿ$_2$, ಅಗುಣಿ, ಅಗುಳಿ, ಅಗುಱಿ (ನಾ). ೧. ಮುಚ್ಚಿದ ಕದವನ್ನು ತೆರೆಯಲಾಗದಂತೆ ತಡೆಯುವ ಅಡ್ಡಮರ; ತಾಳು; ತಡೆಗೂಟ; ಲಾಳವಿಂಡಿಗೆ: ಕಾಯ್ವರ ಜವಂ ಪ್ರತಿಬಲದಗ್ಗಱಿ (ಎಕ. XI, ಚಿತ್ರದು. ೨೬-೨; 946) [ಪ್ರತಿಬಲದ ಅಗ್ಗಱಿ = ಶತ್ರುಸೈನ್ಯವನ್ನು ತಡೆಯುವವನು]. **ಅಗಣಿ$_1$**: ೧. (ಕಿ). **ಅಗರಿ$_1$**: ೧. ಅಗರೀಗೂಟ ಹಾಕು (ಕಲ್ಪದ್ರು. ೪). **ಅಗಳಿ**: ೧. ಅಟ್ಟವೆಂದ್ದುತ್ತಿ ಅಗಳಿಯ ಮೇಲೆ ಇಟ್ಟಳು ಸಾದೆಂದು ಸಗಣೆಯನು (ಪುರಂದ. ೧-೧೧೧-೮). **ಅಗಱಿ$_2$**: ೨. ತಮಟೆಯನ್ನು ಬಡಿಯುವ ಕೋಲು: ೧, ೨. "ಆವುಜದ ಮುಟ್ಟನೊಳ್ ಲಾಳವಿಂಡಿಗೆಯೊಳಂ ಬಲ್ಲರಿಂದಗಱಿಯಕ್ಕುಂ" (ಸಂಜೀವ. ೧೩). **ಅಗಿಣಿ$_2$**: ೧. ಅರ್ಗಲೇವ-ಅಗಿ[ಗು?]ಣಿಯೋಪಾದಿಯಲ್ಲಿ (ಬಾಹಟೀ. ೨-೩). **ಅಗುಣಿ**: ೧. ನಿತ್ಯ ನಡುಮನೆಯ ಒಳಅಗುಣಿಯನ್ನು ಹಾಕುತ್ತಿರಲಿಲ್ಲ (ಕಾವೇರಿ. ೧೬೦). **ಅಗುಳಿ**: ೧. ಅವರು ತಿಮಿರಾಸ್ತ್ರದಲಿ ಕೆತ್ತರು ಭುವನನಯನದ ಕದವನಾಗಳೆ ರವಿಯ ಶರದಲಿ ಮುಱಿದನಗುಳಿಯನು (ಕುವ್ಯಾಅ. ೧೨-೪೩); ಅಬ್ಬರವೇನೆನುತ ನಭದಗುಳೆ[ಳಿ]ಯ ತೆಗೆಯೆ (ವಿದಾಕೃ. ೭೫-೫); ಬಾಗಿಲನ್ನು ಬಂಧಿಸಿ ಅಗುಳಿಯನ್ನು ಭದ್ರಪಡಿಸಿದನು (ಝಾರಾಣಿ. ೪೭). **ಅಗುಱಿ**: ೧. "ಅರ್ಗಳಃ, ಪರಿಘಃ- ಈ ೨ ಅಗುಱಿ" (ಹಲಾಯು. ೫೦-೧೪೫); "ಕ್ಷಳಂಗಳ್ಗೆ ಱಱಾದೇಶಂ-ಅರ್ಗಳಂ = ಅಗುಱಿ" (ಶಮುದ. ೨೧ ವೃತ್ತಿ, ಪ್ರಯೋ); "ತಾಳಗುಱಿಯೆನ್ನಲರ್ಗಳಮಕ್ಕುಂ" (ಕವಿಕಂ. ೧೪೮). ೩. (ಬಾಗಿಲನ್ನು ಮುಚ್ಚುವ) ಕದ; ಕವಾಟ: "ದ್ವಾರಾರ್ಗಳಮದು ಪರಿಘಂ ದ್ವಾರಪಿಧಾನಂ ಕವಾಟಮಗುಱಿಯೆನಿಕ್ಕುಂ" (ವಸ್ತುಕೋ. ೪೭-೧೨). [ಸಂ. ಅರ್ಗಲ]

**ಅಗ್ಗಱಿ$_2$** (ನಾ). ಆಧಿಕ್ಯ; ಅತಿಶಯ: ಸುಱಿವ ತುರಂಗವಾಹಳಿಯ ಪೂವಲಿಯೊಳ್ ಪೊರೆದಂಕದಾನೆಯಗ್ಗಱಿಯ ಮದಾಂಬುಕರ್ದಮದೊಳರ್ದು (ಅನಂಪು. ೩-೧೬). ☞ ಇದು 'ಅಗ್ಗಳೆ$_1$' ಎಂಬ ಶಬ್ದದ ಅಪಲಿಖಿತವಾಗಿರಬಹುದು. [~ ಅಗ್ಗಳೆ$_1$]

**ಅಗ್ಗಱಿಕೆ** (ನಾ). = ಅಗ್ಗಱಿ$_1$: ೧. "ಅಗ್ಗಱಿಕೆಯೆಂದು ಲಾಳವಿಂಡಿಗೆಯುಂ ಆವುಜದ ಮುಟ್ಟುಮಕ್ಕುಂ" (ಶಮುದ. ಪರಿ. ೧). [ಸಂ. ಅರ್ಗಲಿಕಾ]

**ಅಗ್ಗಾಡಿ$_1$**, ಅಗ್ಗಾಳಿ (ನಾ). ಲಜ್ಜೆಗೆಟ್ಟ ಕೀಳು ಹೆಂಗಸು (ಸ್ಯಾಂಡರ್). **ಅಗ್ಗಾಳಿ** (ಸ್ಯಾಂಡರ್). [< ಅಗ್ಗಾಯಿಲೆ]

**ಅಗ್ಗಾಡಿ$_2$** (ನಾ). (ಉಕ) ಹೊಗೆಬಂಡಿ: ಸ್ಟೇಷನ್ನಿನಲ್ಲಿ ನಾವು ಅತ್ತಿತ್ತ ಅಲೆಯುತ್ತಿರುವಾಗಲೇ ಅಗ್ಗಾಡಿ ಬಂತು (ರೂಢಿ).
[← ಮರಾ. ಅಗ್ಗಾಡೀ]

**ಅಗ್ಗಾಡಿಕಾರ** (ನಾ). ೧. ಗಾರುಡಿಗ; ಯಕ್ಷಿಣಿ ಮಾಡುವವನು. (ಸ್ಯಾಂಡರ್). ೨. ವಂಚಕ; ಮೋಸಗಾರ (ಸ್ಯಾಂಡರ್).
[? + -ಕಾರ (< -ಕಾಱ)]

**ಅಗ್ಗಾಯಿತಿ** (ನಾ). =ಅಗ್ಗಾಯಿಲೆ ೧. ಅಗ್ಗಾಯಿ[ಪಾಠಾಂ. ಯ]ತಿಯಪ್ಪ ಸೂಳೆಗಂ ಕುಡಲಿಲ್ಲದೆ ಬಡಬೊಜಂಗಂ ಪಱಿದು ಸಾಮಾನ್ಯದ ಭೇದವಾರಿಗಳಂ ಪೊಗಟ್ವಂತೆ (ಧರ್ಮಾಮೃ. ೮-೭೭). ☞ ಇದು 'ಅಗ್ಗಾಯಿಲೆ' ಎಂಬ ಶಬ್ದದ ಅಪಲಿಖಿತವಾಗಿರಬಹುದು. [< ಅಗ್ಗಾಯಿಲೆ ?]

**ಅಗ್ಗಾಯಿಲೆ,** ಅಗ್ಗಯಿಲೆ, ಅಗ್ಗಳೆ$_3$ (ನಾ). ೧. ಹೆಚ್ಚು ಹಣವನ್ನು ತೆಗೆದುಕೊಳ್ಳುವ ವೇಶ್ಯೆ. ೨. ಬೆಲೆವೆಣ್ಣು; ಸೂಳೆ: ತನ್ನಾಣ್ಮಂ ಕರಮರಿಯಳಪ್ಪಗ್ಗಾಯಿಲೆಯಂ ನೋಡುತ್ತಮಿರ್ದನೆಂಬನಿತರ್ಕೆ ಮುನಿದಾಕೆಯ ಮನೆಗೆ ಕಾದಲ್ ಬಂದಾಗಳ್ (ಬಂಹರಿ. ೩-೫೦ ವ); ಸಗ್ಗದಗ್ಗಾಯಿಲೆಯರರಸನಂ ಮೆಚ್ಚಿಸಲ್ಕಾರ್ತುರ್ ಕೊಂಡೊಯ್ದರ್ (ಪುಷ್ಪಪು.೧೩-೯೨); ಅರ್ಘವತೀಂ = ಅಗ್ಗಾಯಿಲೆಯಂ; ಅರ್ಘವತೀಷು = ಅಗ್ಗಾಯಿಲೆಯರೊಳ್ (ನೀತಿವಾ. ೨೩-೪೯). **ಅಗ್ಗಯಿಲೆ:** ೧. ಬಚ್ಚರ ದೂಸಿಗರ ನಿಯೋಗಿಗಳ ಅಗ್ಗಯಿಲೆಯರಪ್ಪ [ಪಾಠಾಂ. ಅಗ್ಗಳಮಪ್ಪ, ಅಗ್ಗಯಿಮಯರಪ್ಪ] ಸೂಳೆಯರ ಸಾಮಂತರ ಕಸವರಂಗಳೆಲ್ಲಮಂ ಕಳ್ದು (ವಡ್ಡಾರಾ. ೧೨೩-೫). **ಅಗ್ಗಳೆ$_3$:** ೧. ಒಂದು ದಿನಂ ನೀಂ ತಳ್ವಿದೊಡಂದಸುವಿಂಗುಪಟಳಂ ಮನಃಪ್ರಿಯ ಕೇಳೇನೆಂದಱಿಯೆನೆನಗೆ ನಿಕ್ಕುವಮೆಂದಣಕಿಸಿ ಧನಮನುಗಿವಳಗ್ಗಳೆ ಧರೆಯೊಳ್ (ಉದ್ಭಟ. ೧೦-೬೫).

[ಅಗ್ಗ$_2$ + -ಆಯಿಲ + -ಎ$_4$]

**ಅಗ್ಗಾರ** (ನಾ). ದುರ್ಗಮವಾದ ಪ್ರದೇಶ (?): "ಈ ಅಗ್ಗಾರದ ದಾರಿಯಲ್ಲಿ ದೊಡ್ಡವರೂ ಕೂಡ ಒಬ್ಬರೇ ಹೋಗಲಾರರು, ನೀನು ಸಣ್ಣವನು. ಇಂಥಾ ಸಾಹಸವನ್ನು ಏಕೆ ಮಾಡುವೆ?" ಎಂದು ಕೇಳಿದನು (ಶೀರಶ. ೮). 'ಅಗ್ಗಡ' ಹರಾ. [?]

**ಅಗ್ಗಾಳಿ** 'ಅಗ್ಗಾಡಿ$_1$' ನೋ.

**ಅಗ್ಗಾಳು** (ನಾ). ಕೀಳು ಮನುಷ್ಯ; ತುಚ್ಛನಾದವನು (ಶಿ).

[ಅಗ್ಗ$_1$ + ಆಳು$_2$ (< ಆಳ್$_2$)]

**ಅಗ್ಗಿ$_1$,** ಹಗ್ಗಿ (ನಾ). ಅಗ್ನಿ; ಬೆಂಕಿ; ಉರಿ; ಕಿಚ್ಚು: "ನತ್ವಕ್ಕೆ ಗತ್ವಂ- ಅಗ್ನಿ - ಅಗ್ಗಿ" (ಶಮದ. ೨೬೬ ಪ್ರಯೋ); "ಅಗ್ಗಿಯುಗ್ನಿಯೊಳ್ ತಳೆದಿರ್ಕುಂ" (ಕರ್ಣಾನಿ. ೪೬); "ಅಗ್ಗಿಯು ಪೊಗೆವಟಿಯಿಗೆಯುವನು ಹಗ್ಗಿಕೆರ್ಚು" (ಕವಿಕಂ. ೩೪); ನಿರ್ಮಿಸಿದಳದ್ಭುತಮಾಗಿರಲಗ್ಗಿಕೊಂಡಮಂ (ನೇಮಿಪು. ೭-೧೯); ವಿರಹವೇದನೆಯಾಜ್ಯಂಬೊಯ್ದಗ್ಗಿಯ ತೆಜನಾಯ್ತು (ಜಯಕಾ. ೪-೪೦). **ಹಗ್ಗಿ:** "ಅತ್ವಕ್ಕೆ ಹತ್ವಂ: ಅಗ್ನಿ-ಹಗ್ಗಿ" (ಶಮದ. ೨೬೯ ಪ್ರಯೋ); "ಹಗ್ಗಿಯೆಂದಗ್ನಿನಾಮಂ" (ಕರ್ಣಾನಿ. ೪೭); ಇರುಳಾಗೆ ಹುಳ್ಳಿಹೊಱೆಯಂ ತಂದು ಮುಂದೆ ಹಗ್ಗಿಯನೊಟ್ಟಿ ಬೆಳಗನೆತ್ತುತ್ತಂದು (ಕಣ್ಣರ. ೪೬-೬); ಹರನ ಹಣೆಗಣ್ಣ ಹಗ್ಗಿಯನು ಹಗೆಗೊಂಬಂದದಿಂ ಇಂದೆನ್ನ ಹಗೆಗೊಂಡೆ (ಹಚಕಾ. ೮-೯); ನಾಲ್ಕು ದಿಕ್ಕಿನಲಿಕ್ಕಿದ ಕಿಚ್ಚುವೆಗ್ಗಳಗಣ್ಣನ ಹಗ್ಗಿಯೊಲು ಬಗೆಯಂ ಮಾಡೆ (ಪುಣ್ಯಾಸ್ರ. ೪-೩೫ ವ); ಕದಿರೇಱಿದ ಕಂಜಾತಪ್ರಿಯನಂ ಪದೆದೀಕ್ಷಿಸುವಿನಕಾಂತದ ಕಲ್ಲೊಳಗುದಯಿಪ ಹಗ್ಗಿಯವೊಲ್ (ಜಯಕಾ. ೨-೬೭). [ಸಂ. ಅಗ್ನಿ]

**ಅಗ್ಗಿ$_2$** (ನಾ). ಒಂದು ಅಡ್ಡಹೆಸರು; ಉಪನಾಮ; 'ಅಗ್ನಿಹೋತ್ರಿ' ಶಬ್ದದ ಸಂಕ್ಷಿಪ್ತ ರೂಪ(?): ತೆಂಕಲು ವಿಷ್ಣುಅಗ್ಗಿ ಹರಿಹರ ಪಂಡೆಯ ಬಾಳಿಂದ ಬಡಗಲು ಪಡುವಲು ಗಂಗಾಧರಅಗ್ಗಿಯ ಬೆಟ್ಟಿನ ಪಡುವಣ ಬಾಗಿಲ ಗದ್ದೆಯಿಂದ (ಸೌಇಇ. IX-ii, ೪೨೬-೧೬; 1402).

[ಸಂ. ಅಗ್ನಿ - ?]

**ಅಗ್ಗಿಕೊಂಡ,** ಅಗ್ಗಿಗೊಂಡ (ನಾ). ಕೆಂಡದಿಂದ ಕೂಡಿದ ಗುಂಡಿ; ಅಗ್ನಿಕುಂಡ: ವಿರೋಧಿಯ ಬರ್ಪ ಬಟ್ಟೆಯೊಳ್ ಮೋಹದಿನೆಯ್ದೆ ನಿರ್ಮಿಸಿದಳದ್ಭುತಮಾಗಿರಲಗ್ಗಿಕೊಂಡಮಂ (ನೇಮಿಪು. ೭-೧೯). **ಅಗ್ಗಿಗೊಂಡ:** ಅಗ್ಗಿಗೊಂಡದೊಳ್ ಪೊತ್ತುವ ನಱುನೆಯ್ಯ ನೆಲ್ಲರಳ ಬಲಿಗೂಟ, ಸಿರಿಕಂಡ ಸೆಕ್ಕೆಯ ಸವುದೆಯ ಕಮುರಿಂ ಪೊರೆದೆಲ್ಲೆಡೆಯೊಳೆತ್ತಂ ಪಳಂಚಲೆವೆಲರಿಂ (ರಾಮಾಶ್ವ. ೬೪-೩). [ಸಂ. ಅಗ್ನಿಕುಂಡ]

**ಅಗ್ಗಿಗ** (ನಾ). ೧. ಮುಂದಾಳು; ಅಗ್ರಗಣ್ಯ: ಅಗ್ಗಳೆಯನಾ ಮಗಧಮಾತಿನಲಗ್ಗಿಗನು ಶಿಶುಪಾಲ (ಸಂಭಪ. ೩೦-೨೧). ☞ ಈ ಪ್ರಯೋಗದಲ್ಲಿ "ಮಾತಿನ ಲಗ್ಗಿಗನು ..." ಎಂದು ಬಿಡಿಸುವುದೂ ಸಾಧ್ಯ. ೨. ದೊರೆ: "ಅರಸು" (ಚತುನಿ. ೬. ೧-೫). [ಸಂ. ಅಗ್ರಗ]

**ಅಗ್ಗಿಗಣ್ಣು** (ನಾ). ಉರಿಗಣ್ಣು; ಕೆಂಡಗಣ್ಣು: ಹರನ ಹಣೆಯ ಅಗ್ಗಿಗಣ್ಣು ಭೇದಿಸಬಾರದಿರವಿನಂತೆಸೆವ ವಾಹಿನಿಯ (ನೇಮಿಸಂ. ೨೮-೧೨೪).

[ಅಗ್ಗಿ$_1$ + ಕಣ್ಣು (< ಕಣ್)]

**ಅಗ್ಗಿಗೊಂಡ** 'ಅಗ್ಗಿಕೊಂಡ' ನೋ.

**ಅಗ್ಗಿಟ** 'ಅಗ್ಗಿಷ್ಟಗೆ' ನೋ.

**ಅಗ್ಗಿಟಿಕೆ** 'ಅಗ್ಗಿಷ್ಟಗೆ' ನೋ.

**ಅಗ್ಗಿಟಿಗೆ** 'ಅಗ್ಗಿಷ್ಟಗೆ' ನೋ.

**ಅಗ್ಗಿಟ್ಟಿಕೆ** 'ಅಗ್ಗಿಷ್ಟಗೆ' ನೋ.

**ಅಗ್ಗಿಣಿ** 'ಅರ್ಘವಾಣಿ' ನೋ.

**ಅಗ್ಗಿಣಿಮಂಕಿ[ಕೆ]ಣಿ** (ನಾ). "ನೀರನ್ನು ತರಲು ಎತ್ತಿನ ಮೇಲೆ ಇಡುವ ನಾಲ್ಕು ಪಾತ್ರೆಗಳು" (ಅನಂನಾ. ೧೨).

[ಅಗ್ಗಿಣಿ (< ಅರ್ಘವಾಣಿ) + ಮಂಕಣಿ]

**ಅಗ್ಗಿಮುಸುಡ** (ನಾ). = ಅಗ್ಗಿಮೊಗ: ಸುಮನಂಗಳತಿವೃಷ್ಟಿಯ ಅಗ್ಗಿಮುಸುಡರ್ ಮೇಲೆ ಸಿಂಪಿಸಲ್ (ಪರಶು. ೧೯-೬).

[ಅಗ್ಗಿ$_1$ + ಮುಸುಡು + -ಅ$_7$]

**ಅಗ್ಗಿಮೊಗ** (ನಾ). ಅಗ್ನಿಯೇ ಮುಖವಾಗಿ ಉಳ್ಳವನು; ಅಗ್ನಿಯ ಮೂಲಕ ಹವಿಸ್ಸನ್ನು ಸ್ವೀಕರಿಸುವವನು; ದೇವತೆ: "ಅಗ್ಗಿಮೊಗದವರಮದ್ರ್ಮಣಿಗಳ್" (ಶಬ್ದಮಂ.೯); ಪಯೋಷ್ಣೀನದಿಯ ಕೂಲದೊಳಗ್ಗಿಮೊಗರ್ಗೆ ಬಾಣಸುಗೈದು (ರಾಮಾಶ್ವ. ೬೪-೨). [ಸಂ. ಅಗ್ನಿಮುಖ]

**ಅಗ್ಗಿಲ್** (ನಾ). ಒಂದು ಜಾತಿಯ ಗಿಡ: ಪಡುವಲ್ಲಗ್ಗಿಲ ಮೆಳೆ ಅಲ್ಲಿ ತ್ರಿಕೂಟದ ಮೂಱುಕಲ್ಲು ಅಲ್ಲಿಂ ಬಡಗ ಬೆಲಪುತ್ತಿನ ಸುಣ್ಣದ ಕಲ್ಲಕುಪ್ಪೆ (ಸೌಇಇ. XI-i, ೧೧೬-೨೭; 1075). [?]

**ಅಗ್ಗಿವಳೆದೆಣ್ಣೆ** (ನಾ). (= ಅಗ್ಗಿ ಬಳೆದ ಎಣ್ಣೆ). ಉರಿ ಸುತ್ತಿಕೊಂಡಿರುವ ಎಣ್ಣೆ; ಉರಿಯುತ್ತಿರುವ ಎಣ್ಣೆ: "ಉರಿಯೆಣ್ಣೆಯಗ್ಗಿವಳೆದೆಣ್ಣೆಯೆಂದಕ್ಕು" (ಕಬ್ಬಿಕೈ. ೭೬); ಬಳೆದು ವಿಷಾಗ್ನಿಯಗ್ಗಿವಳೆದೆಣ್ಣೆಯೊಳೆಬ್ಬುರಿವಗ್ನಿಯಂತೆ ನೀರೊಳಗುರಿದೇಱೆ ... ಕೆಳದಾರ್ಸುರಕ್ಕಗುಬ್ಬಿ ವಾರ್ಧಿವೊಲಿರ್ದುದು ಕಾಳಿಯ ಹ್ರದಂ (ಅರ್ಧನೇ. ೮-೪೦). ☞ ಇದು 'ಶಬ್ದಮಣಿದರ್ಪಣ'ದ ಪ್ರಯೋಗಸಾರದಲ್ಲಿ ಉಗ್ಗಿವಳದೆಣ್ಣೆ, ಉರ್ಗಿವಳದೆಣ್ಣೆ, ಉರ್ಗಿವಳಿದೆಣ್ಣೆ ಎಂಬ ರೂಪಗಳಲ್ಲಿ ದೊರೆಯುತ್ತದೆ.

[ಅಗ್ಗಿ$_1$ + ಬಳೆ$_2$ + ಎಣ್ಣೆ. ☞ ಬಳೆ$_2$ = ಸುತ್ತು. 'ಬಳಸು' ಹರಾ. ತಮಿ. ವಳೈ = ಸುತ್ತುಗಟ್ಟು]

**ಅಗ್ಗಿವೆಗಡು** (ನಾ). ಬೆಂಕಿಯ ಭಯ: ತದುಕಿನ ಮರದ ಮುಱಿಗಣ್ಣೊಳೊಗೆದ ಪಗಿನೊಳಗ್ಗಿವೆಗಡಿಂ ಕಾಲ್ದೊಡದರ್ ಮಿಡುಕಿ ಕಳಮಳಿಪ ಕಳವಿಂಕ ಸಂಕುಳಂಗಳುಂ (ಚಂದ್ರಪು. ೫-೬೫ ವ). [ಅಗ್ಗಿ$_1$ + ಬೆಗಡು$_2$]

**ಅಗ್ಗಿಷ್ಟಕೆ** 'ಅಗ್ಗಿಷ್ಟಗೆ' ನೋ.

**ಅಗ್ಗಿಷ್ಟಗೆ,** ಅಗ್ಗಿಟ, ಅಗ್ಗಿಟಿಕೆ, ಅಗ್ಗಿಟಿಗೆ, ಅಗ್ಗಿಟ್ಟಿಕೆ, ಅಗ್ಗಿಷ್ಟಕೆ, ಅಗ್ಗಿಷ್ಟಿ, ಅಗ್ಗಿಷ್ಟಿಕೆ, ಅಗ್ಗಿಷ್ಟಿಗೆ, ಅಗ್ನಿಷ್ಟಗೆ, ಅಗ್ನಿಷ್ಠಗೆ (ನಾ). ೧. ಕೆಂಡವನ್ನು ಇಟ್ಟು ಕಾಯಿಸುವ, ಮುಖ್ಯವಾಗಿ ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ಒಲೆ; ಕುಂಪಟಿ; ಕುಮಟಿ: ಇದಕೆ ಪಡೆಯಂ ಅಗ್ಗಿಷ್ಟಗೆಯುಂ ಆಜವ××× ಯುಂ (ಎಕ. X, ಮುಳಬಾ. ೮೦-೮; 767). **ಅಗ್ಗಿಟ:** ಅರಲಸರಲ ಸೊನ್ನಾರಂ ಪಲಪೂ ಪರಕಲಿಸಿದ ಪಾಸೆಂಬಗ್ಗಿಟದೊಳಗಿರಿಸಿ (ಜಯಕಾ. ೮-೪೭). **ಅಗ್ಗಿಟಿಕೆ:** ಮಿಸುಗುವೀಯಗ್ಗಿಟಿಕೆಯೊಳು ಎನ್ನ ನಿನ್ನ ಓಲೆಯ ಬರೆದು ಹಾಕಲಾಗಿ (ಪ್ರಭುಪು. ೭-೬೦); ಅಗುರು ದಶಾಂಗ ಗುಗ್ಗುಳಾದಿಗಳ ಬೆಳ್ಳಿಯಗ್ಗಿಟಿಕೆಗಳನ್ನು

ಪೋಷಿಸುವ ಊದುವ (ಚಿಟ್ಟಅ. ೬೨-೧೯). **ಅಗ್ಗಿಟಿಗೆ** (ನಾಚಿರಾ. ೬).
**ಅಗ್ಗಿಟ್ಟಿಕೆ** : ೨. ಹೋಮಕುಂಡ : ನಾಲ್ಮೊಗನಗ್ಗಿಟ್ಟಿಕೆಯೊಳೊಗೆದ ಒಳ್ಳಗೆಯ ಮುದ್ದುಗುವರಿ (ರಾಮಾಶ್ವ. ೮೮-೫). **ಅಗ್ಗಿಷ್ಟಕೆ** : ೧. (೬).
**ಅಗ್ಗಿಷ್ಟಿ** : ೧. (೬). **ಅಗ್ಗಿಷ್ಟಿಕೆ** : ೧. (ಗುವಿಮೋ). **ಅಗ್ಗಿಷ್ಟಿಗೆ** : ೧. ಅಕ್ಕ ಅಗ್ಗಿಷ್ಟಿಗೆ ಕಾಸಿಕೊಳ್ಳುತ್ತ ಮಲಗಿದ್ದಳು (ವೈನಿ.೨೨೩). **ಅಗ್ನಿಷ್ಟಗೆ**: ೧. ಅಗ್ನಿಷ್ಟಗೆಯ ಬ್ರಾಹ್ಮಣಂಗೆ ಗದ್ಯಾಣವೆರಡು ಅನ್ತು ಗದ್ಯಾಣಂ ಮೂವತ್ತು (ಸೌಇಇ. IX-i, ೧೭೫-೨೪; 1107). **ಅಗ್ನಿಷ್ಠಗೆ**: ಅಗ್ನಿಷ್ಠಗೆಯುಂ ಮಠಮುಮಂ ರಕ್ಷಿ[ಸಿ]ದರ್ಗ್ಗೆ ಅನ್ತಪುಣ್ಯ (ಎಕ. VII, ಶಿಕಾರಿ. ೭೪-೨೬; 1010); ಹೊಢ್ಢರೆ ಅಗ್ನಿಷ್ಠಗೆಯ ಮಠದಲ್ಲಿ ನಾಲ್ಕು ಘಳಿಗೆ ಸ್ಮೃತಿಯ ಹೇಳುವರು (ಎಕ. XII, ಚಿಕ್ಕನಾ. ೨-೭೨; 1261). [ಸಂ. ಅಗ್ನಿಷ್ಠಕ]
**ಅಗ್ಗಿಷ್ಟಿ** 'ಅಗ್ಗಿಷ್ಟಗೆ' ನೋ.
**ಅಗ್ಗಿಷ್ಟಿಕೆ** 'ಅಗ್ಗಿಷ್ಟಗೆ' ನೋ.
**ಅಗ್ಗಿಷ್ಟಿಗೆ** 'ಅಗ್ಗಿಷ್ಟಗೆ' ನೋ.
**ಅಗ್ಗಿಸು**₁ 'ಅಬ್ಬಿಸು' ನೋ.
**ಅಗ್ಗಿಸು**₂ (ಕ್ರಿ). ೧. ಶ್ರೇಷ್ಠಸನ್ನಾಗಿ ಮಾಡು; ದೊಡ್ಡಸ್ತಿಕೆ ಕೊಡು; ಗೌರವಿಸು; ಹೆಚ್ಚುಮಾಡು; ಹೊಗಳು: ಮನುಚರಿತಕ್ಕಳಂಕರಣ ವಾಯ್ತು ಚರಿತ್ರದ ಪೆಂಪು... ಅಂಬರೇಚರೇಶನ ವಿಳಸತ್ಪರಾರ್ಥ ಗುಣಕಂ ಮಿಗಿಲಾಯ್ತು ಪರಾರ್ಥವೃತ್ತಿಯೆಂದನುಪಮರಗ್ಗಿಪರ್ ನೆಗಳ್ದ ಸಾಯಣನಾಯಕನಂ ಗುಣಾತ್ಮನಂ (ಶಾಸಪ. ೯೯-೨೦; 1164); ಶಿಶುವ ನಿಂತಗ್ಗಿಸುವೆರೇ ಎಂದು ಕರಗುತಂ ಇರ್ಪಾಗಳಲ್ಲಿ (ಬಸರ. ೯-೪); ಜಾತಿ ನಾನೆಂದೆನ್ನನಗ್ಗಿಸಿ ಭೂತಳಾಧಿಪ ಸಾಕಿದನು (ಕುವ್ಯಾಕ. ೧೩-೨೦). ೨. ಹೆಚ್ಚಾಗು; ಹಿಗ್ಗು: ವಿದ್ಯಾಗಣಯೂಥನಂ ನೋಡಿ ಪುಳಕಿಸಿ ಮಜ್ಜ ನಕ್ಕೆಱಿದು ಮನಂಗೊಂಡು ನಾಡೆ ಅಗ್ಗಿಸುತ ವೀರಾಳಾಪಮಂ ಕೈಕೊಂಡು (ನಾಚಿರ. ೧೭೭-೧೩). ೩. ಮೀರು; ಅತಿಶಯವಾಗು: ಭೇರುಂಡನ ನಗ್ಗಿಕುಂ ಬಲದಿನಾ ಭೇರುಂಡನೆಂಬರ್ (ಕೊಲ್ಲಾಶಾ. ೧೫-೪೩; 1186).
**ಅಗ್ಗಿಸಿಕೊ** = ದೊಡ್ಡವನೆಂದು ಭಾವಿಸಿಕೊ; ಹೊಗಳಿಕೊ: ಏಸನಗ್ಗಿಸಿಕೊಂಬೆ ನಿನಗಿನ್ನೈಸು ಕೈದುಗಳಲ್ಲಿ ಕೃತವಭ್ಯಾಸವಾ ಕೈದುಗಳ ಬಾಯಿಗೆ ನಿನ್ನ ಬೀಱುವೆನು (ಕುವ್ಯಾಕ. ೧೯-೪೦); ತನ್ನನಗ್ಗಿಸಿಕೊಳುತ ಮಾಡನು ವರ್ಣಗಳಿಗಾಶ್ರಮಿಗಳಿಗೆ ಬಹುಮಾನ್ಯರಿಗೆ ಮನ್ನಣೆಯನು (ನಿಭಾಗ. ೫-೧೧-೩೬). [ಅಗ್ಗ₂ + -ಇಸು₃]
**ಅಗ್ಗು** 'ಅಬ್ಬು' ನೋ.
**ಅಘಟಿತ** (ಗು). ಜಯಿಸಲು ಅಸಾಧ್ಯನಾದ: 'ಅಗ್ಘಟಿತವೀರ' ಪರಾ. [ಸಂ. ಅಘಟಿತ]
**ಅಗ್ಘಟಿತವೀರ** (ನಾ). ಜಯಿಸಲು ಅಸಾಧ್ಯನಾದ ವೀರ: ಅಚ್ಯುತನು ತಾ ನಿಮಿಷದಲಿ ಖಗರಾಜವಾಹನನಾಗಿ ನಡೆತಂದು ಅಮರಪತಿಗಗ್ಘಟಿತ ವೀರರ ಯಮನ ವಶವನು ಮಾಡಿ ತ್ರೈಜಗಕಮಿತನಾದನು ವಿಷ್ಣು ಪೊರೆದನು ದಿವಿಜಸಂತತಿಯ (ನಿಭಾಗ. ೧೧-೮-೪೦). [ಅಘಟಿತ + ವೀರ]
**ಅಗ್ಘಣಿ** 'ಅರ್ಘವಾಣಿ' ನೋ.
**ಅಗ್ಘವಣಿ** 'ಅರ್ಘವಾಣಿ' ನೋ.
**ಅಗ್ನಾಯಿ** (ನಾ). ೧. ಅಗ್ನಿಯ ಹೆಂಡತಿ. ೨. ತ್ರೇತಾಯುಗ. [ಸಂ.]
**ಅಗ್ನಿ** (ನಾ). ೧. ಬೆಂಕಿ; ಕಿಚ್ಚು. ೨. ಬೆಂಕಿಯ ಅಧಿದೇವತೆ; ಅಷ್ಟ ದಿಕ್ಪಾಲಕರಲ್ಲಿ ಒಬ್ಬ; ಆಗ್ನೇಯ ದಿಕ್ಕಿನ ಅಧಿಪತಿ. ೩. ಆಹಾರ ವನ್ನು ಜೀರ್ಣಿಸುವ ಅಂತಶ್ಶಕ್ತಿ; ಜಠರಾಗ್ನಿ. ೪. ಪಿತ್ತರಸ. ೫. ಮೂರು ಎಂಬ ಸಂಖ್ಯೆಗೆ ಒಂದು ಸಂಕೇತ. ೬. ಚಿನ್ನ. ೭. ಚಿತ್ರ ಮೂಲ ಎಂಬ ಗಿಡ: "ಚಿತ್ರಮೂಲಂ ವ್ಯಾಳವಗ್ನಿ ಚಿತ್ರಕವಕ್ಕು" (ಮಂಗರಾ. ೩೯-೨೬). ೮. ತುಗ್ಗಿಲು ಎಂಬ ಮರ: "ಅಗ್ನಿಯೆನೆ ತುಗ್ಗಿಲಕ್ಕುಂ" (ಮಂಗರಾ. ೩೬-೧೮). ೯. ನಿಂಬೆ. ೧೦. [ಛಂದ] ಅಕ್ಷರ ಗಣಗಳಲ್ಲಿ ಒಂದು; ರಗಣ (– ∪ –): "ಆದ್ಯಂತ ಗುರುವಿರಲಗ್ನಿ ಯಕ್ಕು" (ಮಂಗರಾ. ೧೦೭-೨೦). ೧೧. "ಕೇಸರ" (ಗುವಿಮೋ). [ಸಂ.]
**ಅಗ್ನಿಕಂಟಕ** (ನಾ). ಅಗ್ನಿಯ ಮೂಲಕ ಉಂಟಾಗುವ ಅಪಾಯ, —ಸಾವು. [ಅಗ್ನಿ + ಕಂಟಕ]
**ಅಗ್ನಿಕಣ** (ನಾ). ಬೆಂಕಿಯ ಕಿಡಿ. [ಅಗ್ನಿ + ಕಣ₄]
**ಅಗ್ನಿಕಾರ್ಯ** (ನಾ). ಅಗ್ನಿಯಲ್ಲಿ ಹವಿಸ್ಸು ಮುಂತಾದವನ್ನು ಅರ್ಪಿಸುವುದು; ಅಗ್ನಿಯ ಪೂಜೆ. [ಅಗ್ನಿ + ಕಾರ್ಯ]
**ಅಗ್ನಿಕಾಷ್ಠ** (ನಾ). ಸೌದೆ; ಕಟ್ಟಿಗೆ; ಉರುವಲು. [ಅಗ್ನಿ + ಕಾಷ್ಠ]
**ಅಗ್ನಿಕುಂಡ** (ನಾ). ೧. ಹೋಮ ಮಾಡುವುದಕ್ಕಾಗಿ ಅಗ್ನಿಯನ್ನು ಇಡುವ ಮಡಕೆ ಅಥವಾ ಗುಂಡಿ. ೨. ಬೆಂಕಿಯನ್ನು ಉರಿಸುವ ಗುಂಡಿ, —ಕೊಂಡ. [ಅಗ್ನಿ + ಕುಂಡ]
**ಅಗ್ನಿಕುಕ್ಕುಟ** (ನಾ). ೧. ಬೆಂಕಿಯ ಕಿಡಿ. ೨. ಬೆಂಕಿಯನ್ನು ನುಂಗುವ ಕೋಳಿ. [ಅಗ್ನಿ + ಕುಕ್ಕುಟ]
**ಅಗ್ನಿಕೋಣ** (ನಾ). ಪೂರ್ವಕ್ಕೂ ದಕ್ಷಿಣಕ್ಕೂ ನಡುವಣ ಮೂಲೆ; ಆಗ್ನೇಯ ದಿಕ್ಕು. [ಅಗ್ನಿ + ಕೋಣ₂]
**ಅಗ್ನಿಗಣ್ಣ** (ನಾ). ಉರಿಗಣ್ಣುಳ್ಳವನು; ಶಿವ (ಸ್ಯಾಂಡರ್). [ಅಗ್ನಿ + ಕಣ್ + -ಅ₇]
**ಅಗ್ನಿಗಣ್ಣು** (ನಾ). ಉರಿಗಣ್ಣು: ಅಗ್ನಿಗಣ್ಣಿನ ಹರನೊಡನೆ ಬಲು ವಿಗ್ರಹವನಾಚರಿಸಿ (ನಿಭಾಗ. ೪-೨-೧೪). [ಅಗ್ನಿ + ಕಣ್ಣು(< ಕಣ್)]
**ಅಗ್ನಿಗರ್ಭ** (ಗು). ೧. ಬೆಂಕಿಯನ್ನು ಒಳಕೊಂಡಿರುವ. (ನಾ). ೨. ಸೂರ್ಯಕಾಂತಮಣಿ. ೩. ಯಜ್ಞದ ಅರಣಿ. ೪. ಶಮಿ. ೫. ಮಹಾಜ್ಯೋತಿಷ್ಮತೀ ಲತೆ. ೬. ಭೂಮಿ. [ಅಗ್ನಿ + ಗರ್ಭ]
**ಅಗ್ನಿಗೆಯ್ಯ** (ನಾ). ಕೈಯಲ್ಲಿ ಬೆಂಕಿಯುಳ್ಳವನು; ಭಸ್ಮಾಸುರ. [ಅಗ್ನಿ + ಕೆಯ್₂ + -ಅ₇]
**ಅಗ್ನಿಚಿತ್ತು** (ನಾ). ನಿತ್ಯವೂ ತಪ್ಪದೆ ಅಗ್ನಿಹೋತ್ರ ನಡೆಸುತ್ತಿರುವವನು; ಅಗ್ನಿಹೋತ್ರಿ; ಆಹಿತಾಗ್ನಿ. [ಸಂ. ಅಗ್ನಿಚಿತ್]
**ಅಗ್ನಿಜ** (ನಾ). ೧. ಕುಮಾರಸ್ವಾಮಿ. ೨. ಚಿನ್ನ. [ಸಂ.]
**ಅಗ್ನಿಜ್ವಾಲೆ** (ನಾ). ೧. ಬೆಂಕಿಯ ಉರಿ ಅಥವಾ ನಾಲಗೆ. ೨. ಬಣ್ಣಗಾರರು ಉಪಯೋಗಿಸುವ, ಕೆಂಪು ಹೂವು ಬಿಡುವ ಒಂದು ಗಿಡ: ೩. ಕೆಂಪು ಹೂವು ಬಿಡುವ ಮತ್ತೊಂದು ಗಿಡ; ಜಲಪಿಪ್ಪಲಿ. [ಅಗ್ನಿ + ಜ್ವಾಲೆ]
**ಅಗ್ನಿತಾರೆ** (ನಾ). ಕೃತ್ತಿಕಾ ನಕ್ಷತ್ರ. [ಅಗ್ನಿ + ತಾರೆ₂]
**ಅಗ್ನಿತುಂಡಿ** (ನಾ). ಒಂದು ಬಗೆಯ ಔಷಧಿ: ಆಯುರ್ವೇದದ ಅಗ್ನಿರಸ-ಅಗ್ನಿತುಂಡಿಗಳನ್ನೂ ಮುಕ್ಕಿದನು (ತುಂಬಿಕೊ. ೬೬). [ಸಂ. *ಅಗ್ನಿತುಂಡಿನ್ (ಅಗ್ನಿ + ತುಂಡ + -)]
**ಅಗ್ನಿತ್ರಯ** (ನಾ). ಆಹವನೀಯ, ಗಾರ್ಹಪತ್ಯ, ದಕ್ಷಿಣ ಎಂಬ ಮೂರು ಅಗ್ನಿಗಳು. [ಅಗ್ನಿ + ತ್ರಯ]
**ಅಗ್ನಿದಳ** (ನಾ). ಅಗ್ನಿಯ ಸೈನ್ಯ: ಇಂದ್ರದಳ, ಅಗ್ನಿದಳ, ಯಮದಳ, ನೈಋತ್ಯದಳ... ಅಗ್ನಿದಳವೇಱಲು ಹಸಿವ (ಪದಗೋ. ೨-೨೮೭). [ಅಗ್ನಿ + ದಳ₂]
**ಅಗ್ನಿದಿಕ್ಕು** (ನಾ). = ಅಗ್ನಿಕೋಣ. [ಅಗ್ನಿ + ದಿಕ್ಕು]
**ಅಗ್ನಿದಿವ್ಯ** (ನಾ). = ಅಗ್ನಿಪರೀಕ್ಷೆ ೨: ಎರಡನೆಯ ಮಹಾಯುದ್ಧದ ಬರಗಾಲ... ಪ್ರವಾಸದ ಅಗ್ನಿದಿವ್ಯ-ಇವನ್ನೆಲ್ಲ ಆಗ ಅನುಭವಿಸಬೇಕಾಗಿರಲಿಲ್ಲ (ಸಮಜೀ.೪೪೫); ಚಿಮಣಾಳ ಅಗ್ನಿದಿವ್ಯದ ಮರಣದ ಸುದ್ದಿ ಮನೆ ಮನೆಗೂ ಮುಟ್ಟಿ ಭೀತಿಯನ್ನು ಹರಡಿತ್ತು (ಗ್ರಾಮಾಯ. ೫೮೮). [ಅಗ್ನಿ + ದಿವ್ಯ]

**ಅಗ್ನಿದೀಪನ** (ನಾ). ೧. ಬೆಂಕಿಯನ್ನು ಉಜ್ಜ್ವಲಗೊಳಿಸುವುದು. ೨. ಜಠರಾಗ್ನಿಯನ್ನು, ಜೀರ್ಣಶಕ್ತಿಯನ್ನು ಪುಟಗೊಳಿಸುವುದು. ೩. "ಕಡವ" ಎಂಬ ಗಿಡ (ಓಷಧಿ. ೬). [ಅಗ್ನಿ + ದೀಪನ]

**ಅಗ್ನಿದೇವೆ** (ನಾ). = ಅಗ್ನಿತಾರೆ. [ಸಂ. ಅಗ್ನಿದೇವಾ (ಅಗ್ನಿ + ದೇವ + –)]

**ಅಗ್ನಿಧಾರಣೆ** (ನಾ). [ವೀಶೈ] ಪಂಚಧಾರಣೆಗಳಲ್ಲಿ ಒಂದು : ಪಂಚ ಧಾರಣೆಗಳು – ಇವು ಅಗ್ನಿಧಾರಣೆ, ನಾಡಿಧಾರಣೆ, ವಾಯುಧಾರಣೆ, ಅಮೃತ ಧಾರಣೆ, ಆಧಾರಧಾರಣೆ – ಎಂದು ಐದು ಇವೆ (ಶಿವಾಕೋ. ೩೭೯). [ಅಗ್ನಿ + ಧಾರಣೆ]

**ಅಗ್ನಿನಯನ** (ನಾ). ಅಗ್ನಿಯನ್ನು (ಮೂರನೆಯ) ಕಣ್ಣಾಗಿ ಹೊಂದಿರುವವನು; ಶಿವ. [ಅಗ್ನಿ + ನಯನ]

**ಅಗ್ನಿನೃತ್ಯ** (ನಾ). ಬೆಂಕಿಯ ಸುತ್ತಲೂ ಕುಣಿಯುವ ಒಂದು ಕುಣಿತ: ಮಾರ್ಚ್–ಏಪ್ರಿಲ್ ತಿಂಗಳಲ್ಲಿ ನಡೆಯುವ ಮೇಳ ಅಥವಾ ಉತ್ಸವದ ಸಂದರ್ಭದಲ್ಲಿ ಈ ಅಗ್ನಿನೃತ್ಯ ನಡೆಯುತ್ತದೆ (ಭಾರಜಾ. ೯೬). [ಅಗ್ನಿ + ನೃತ್ಯ]

**ಅಗ್ನಿಪರೀಕ್ಷೆ** (ನಾ). ೧. ಬೆಂಕಿಯನ್ನು ಮುಟ್ಟಿ, ಕೆಂಡದ ಮೇಲೆ ನಡೆದು ಅಥವಾ ಉರಿಯುವ ಅಗ್ನಿಯನ್ನು ಪ್ರವೇಶಿಸಿ ತನ್ನ ನಿರ್ದೋಷಿತ್ವವನ್ನು ಸ್ಥಾಪಿಸುವ ಪರೀಕ್ಷೆ. ೨. ಕಠಿನ ಪರೀಕ್ಷೆ. 'ಅಗ್ನಿದಿವ್ಯ' ಪರಾ. [ಅಗ್ನಿ + ಪರೀಕ್ಷೆ]

**ಅಗ್ನಿಪರ್ಣಿ** (ನಾ). ಗೇರುಬೀಜ (ಸ್ಯಾಂಡರ್). [ಸಂ. ಅಗ್ನಿಪರ್ಣಿನ್ (ಅಗ್ನಿ + ಪರ್ಣ + –)]

**ಅಗ್ನಿಪರ್ವತ** (ನಾ). ಉರಿ, ಕೆಂಡ, ಕರಗಿದ ಲೋಹ ಮುಂತಾದವನ್ನು ಉಗುಳುವ ಬೆಟ್ಟ; ಜ್ವಾಲಾಮುಖಿ. [ಅಗ್ನಿ + ಪರ್ವತ]

**ಅಗ್ನಿಪಳ** (ನಾ). = ಅಗ್ನಿಫಲ : "ಅಗ್ನಿಪಳಮೆನಲು ವಜ್ರಂ" (ಮಂಗರಾ. ೩೧–೬). [ಅಗ್ನಿ + ಪಳ]

**ಅಗ್ನಿಪುಟ** (ನಾ). ಬೆಂಕಿಯಲ್ಲಿ ಪಕ್ವಮಾಡುವುದು; ಪುಟ ಹಾಕುವುದು. [ಅಗ್ನಿ + ಪುಟ]

**ಅಗ್ನಿಪುತ್ರಿ** (ನಾ). ಬೆಂಕಿಯ ಮಗಳು; ದ್ರೌಪದಿ : ನೀನಗ್ನಿಪುತ್ರಿಯ್ಯೆ ಪವಮಾನತನೂಭವನೆನ್ನಾನಣಂ ಕೂಡೆ ಸುಸಂಧಾನಮುರಿನ್ನಪರೊಳೆಂತು (ಗದಾಯು. ೧–೬೬). [ಅಗ್ನಿ + ಪುತ್ರಿ]

**ಅಗ್ನಿಪುರುಷ** (ನಾ). ಅಗ್ನಿದೇವತೆ. [ಅಗ್ನಿ + ಪುರುಷ]

**ಅಗ್ನಿಪೂಜೆ** (ನಾ). ಅಗ್ನಿಯನ್ನು ಪೂಜಿಸುವುದು. [ಅಗ್ನಿ + ಪೂಜೆ]

**ಅಗ್ನಿಪ್ರತಿಷ್ಠೆ** (ನಾ). ಹೋಮಕ್ಕೆ ಮೊದಲು ಅಗ್ನಿಯನ್ನು ಕುಂಡದಲ್ಲಿ ಸ್ಥಾಪಿಸುವುದು. [ಅಗ್ನಿ + ಪ್ರತಿಷ್ಠೆ]

**ಅಗ್ನಿಪ್ರವೇಶ** (ನಾ). ೧. ಬೆಂಕಿಯಲ್ಲಿ ಬೀಳುವುದು. ೨. ವಿಧವೆ ಗಂಡನ ಚಿತೆಯಲ್ಲಿ ಸಹಗಮನ ಮಾಡುವುದು. [ಅಗ್ನಿ + ಪ್ರವೇಶ]

**ಅಗ್ನಿಪ್ರಳಯ** (ನಾ). ಬೆಂಕಿಯಿಂದ ಉಂಟಾಗುವ ವಿನಾಶ. [ಅಗ್ನಿ + ಪ್ರಳಯ]

**ಅಗ್ನಿಫಲ** (ನಾ). ವಜ್ರ. [ಅಗ್ನಿ + ಫಲ]

**ಅಗ್ನಿಬಲ** (ನಾ). ಜೀರ್ಣಶಕ್ತಿ (ಕಿಸಂಗ್ಲಾ. ೧೧೧). [ಅಗ್ನಿ + ಬಲ]

**ಅಗ್ನಿಬಳ್ಳಿ** (ನಾ). ಜ್ಯೋತಿಷ್ಮತಿ ಎಂಬ ಬಳ್ಳಿ; ಕಂಗುಂಗೆ ಗಿಡ. [ಅಗ್ನಿ + ಬಳ್ಳಿ]

**ಅಗ್ನಿಬಾಣ** (ನಾ). ೧. ಆಗ್ನೇಯಾಸ್ತ್ರ. ೨. ಒಂದು ಬಗೆಯ ಬಾಣ ಬಿರುಸು. [ಅಗ್ನಿ + ಬಾಣ]

**ಅಗ್ನಿಭಕ್ಷಕ** (ನಾ). ೧. ಬೆಂಕಿಯನ್ನು ನುಂಗುವ ಯಕ್ಷಿಣಿಗಾರ. ೨. ಅತ್ಯುಗ್ರವಾದಿ; ತೀವ್ರಗಾಮಿ. [ಅಗ್ನಿ + ಭಕ್ಷಕ]

**ಅಗ್ನಿಭವ** (ಗು). ೧. ಅಗ್ನಿಯಿಂದ ಹುಟ್ಟಿದ. (ನಾ). ೨. ಕುಮಾರಸ್ವಾಮಿ; ಷಣ್ಮುಖ. [ಅಗ್ನಿ + ಭವ]

**ಅಗ್ನಿಭೂ** (ಗು). = ಅಗ್ನಿಭವ. [ಸಂ.]

**ಅಗ್ನಿಮಂಡಲ** (ನಾ). ಬೆಂಕಿಯ ಆವರಣ. [ಅಗ್ನಿ + ಮಂಡಲ]

**ಅಗ್ನಿಮಂಥ** (ನಾ). ೧. ಅರಣಿಯನ್ನು ಉಜ್ಜುವುದರಿಂದ ಬೆಂಕಿಯನ್ನು ಉತ್ಪತ್ತಿ ಮಾಡುವುದು. ೨. ಒಂದು ಬಗೆಯ ನೆಲ್ಲಿ; ನರುವಲ್ ಎಂಬ ಗಿಡ : "ಅಗ್ನಿಮಂಥಮೆನೆ ನರುವಲೆನಿಸಿಕ್ಕು" (ಮಂಗರಾ. ೩೬–೧೬). [ಸಂ.]

**ಅಗ್ನಿಮಂಥನ** (ನಾ). = ಅಗ್ನಿಮಂಥ ೨ : "ಅಗ್ನಿಮಂಥನ ನರುವಲ್" (ವಸ್ತುಕೋ. ೩೭–೨೭). [ಅಗ್ನಿ + ಮಂಥನ]

**ಅಗ್ನಿಮಥನ** (ನಾ). = ಅಗ್ನಿಮಂಥ ೧. [ಅಗ್ನಿ + ಮಥನ]

**ಅಗ್ನಿಮಾಂದ್ಯ** (ನಾ). ಜೀರ್ಣಶಕ್ತಿ ಕುಗ್ಗಿರುವುದು; ಆಹಾರ ಸರಿಯಾಗಿ ಅರಗದಿರುವುದು. [ಅಗ್ನಿ + ಮಾಂದ್ಯ]

**ಅಗ್ನಿಮಾಪಕ** (ನಾ). ಬೆಂಕಿಯ ಅಧಿಕ ಪ್ರಮಾಣದ ತಾಪವನ್ನು ಅಳೆಯುವ ಉಪಕರಣ (= Pyrometer) : ಕನ್ನಡ ಭೌತವಿಜ್ಞಾನ ಗ್ರಂಥವೊಂದರ . . . ಪುಟದಲ್ಲಿ – ಅಕ್ಷ, ಅಗ್ನಿಮಾಪಕ . . . ಅನುಪಾತ ಸೂಚಕಸಂಖ್ಯೆ – ಇಷ್ಟು ಶಬ್ದಗಳಿವೆ (ಸಮಾಲೋ. ೧೩೦). [ಅಗ್ನಿ + ಮಾಪಕ]

**ಅಗ್ನಿಮಿತ್ರ** (ನಾ). ಅಗ್ನಿಯ ಸ್ನೇಹಿತ; ವಾಯು : ಕಲಿ ಮೂಕವರಾಹನಗ್ನಿಮಿತ್ರನ ಹರಿಣಂ ವಿನಾಯಕನ ಮೂಷಕ ಕಾಲನ ಕೋಣ ವಿಂಧ್ಯವಾಸಿನಿಯ ಮೃಗಾರಿ ನಾಯಿಗರಿದಲ್ಲವು ಸಾಹಸಮಲ್ಲದೇವನ (ಸೂಕ್ತಿಸು. ೩–೧೨೩). [ಅಗ್ನಿ + ಮಿತ್ರ]

**ಅಗ್ನಿಮುಖ** (ನಾ). ೧. ದೇವತೆ. ೨. ಬ್ರಾಹ್ಮಣ. [ಅಗ್ನಿ + ಮುಖ]

**ಅಗ್ನಿಮುಖಾಸ್ತ್ರ** (ನಾ). ಬೆಂಕಿಯನ್ನು ಕಾರುವ ಬಾಣ; ಆಗ್ನೇಯಾಸ್ತ್ರ. [ಅಗ್ನಿಮುಖ + ಅಸ್ತ್ರ]

**ಅಗ್ನಿಮುಖಿ** (ಗು). ೧. ಮುಖದಲ್ಲಿ ಅಗ್ನಿಯನ್ನು ಹೊಂದಿರುವ (ನಾ). ೨. ಗೇರುಮರ. [ಸಂ. ಅಗ್ನಿಮುಖೀ (ಅಗ್ನಿ + ಮುಖ + –)]

**ಅಗ್ನಿಮೂಲೆ** (ನಾ). = ಅಗ್ನಿಕೋಣ. [ಅಗ್ನಿ + ಮೂಲೆ]

**ಅಗ್ನಿಯಂತ್ರ** (ನಾ). ಬೆಂಕಿಯನ್ನು ಉಗುಳುವ ಯಂತ್ರ. [ಅಗ್ನಿ + ಯಂತ್ರ]

**ಅಗ್ನಿರಕ್ಷೆ** (ನಾ). "ಬರೆ, ಚಿಟಿಕೆ" (ಅನಂನಾ. ೧೪). 'ಅಗ್ನಿವೈದ್ಯ' ಪರಾ. [ಅಗ್ನಿ + ರಕ್ಷೆ]

**ಅಗ್ನಿರಸ** (ನಾ). ಒಂದು ಔಷಧಿ : ಆಯುರ್ವೇದದ ಅಗ್ನಿರಸ–ಅಗ್ನಿತುಂಡಿಗಳನ್ನೂ ಮುಕ್ಕಿದನು (ತುಂಬಿಕೊ. ೬೬). [ಅಗ್ನಿ + ರಸ]

**ಅಗ್ನಿಲಿಪಿ** (ನಾ). "ಬೆಂಕಿಯ ಶಾಖಕ್ಕೆ ಕಾಣುವ ಬರವಣಿಗೆ" (ಅನಂನಾ. ೧೪). [ಅಗ್ನಿ + ಲಿಪಿ]

**ಅಗ್ನಿವರ್ಧಕ** (ಗು). ಜೀರ್ಣಶಕ್ತಿಯನ್ನು ಹೆಚ್ಚಿಸುವ. [ಅಗ್ನಿ + ವರ್ಧಕ]

**ಅಗ್ನಿವೀರ್ಯ** (ನಾ). ಶಿವ; ಈಶ್ವರ : "ಅಗ್ನಿವೀರ್ಯನಭವಂ . . . ಎನಲು ರುದ್ರಂ" (ಮಂಗರಾ. ೪–೧೧). [ಅಗ್ನಿ + ವೀರ್ಯ]

**ಅಗ್ನಿವೈದ್ಯ** (ನಾ). (ಕೆಲವು ರೋಗಗಳ ಚಿಕಿತ್ಸೆಯಲ್ಲಿ) ಬರೆಹಾಕುವುದು; ಚಿಟಿಕೆ ಹಾಕುವುದು. [ಅಗ್ನಿ + ವೈದ್ಯ]

**ಅಗ್ನಿಶಾಮಕ** (ಗು). ಬೆಂಕಿಯನ್ನು ಆರಿಸುವ: 'ಅಗ್ನಿಶಾಮಕ ದಳ', 'ಅಗ್ನಿಶಾಮಕ ಯಂತ್ರ' ಪರಾ. [ಅಗ್ನಿ + ಶಾಮಕ]

**ಅಗ್ನಿಶಾಮಕದಳ** (ನಾ). ಬೆಂಕಿಯನ್ನು ಆರಿಸುವ ಸಿಬ್ಬಂದಿ. [ಅಗ್ನಿಶಾಮಕ + ದಳ]

**ಅಗ್ನಿಶಾಮಕಯಂತ್ರ** (ನಾ). ಬೆಂಕಿಯನ್ನು ಆರಿಸುವ ಯಂತ್ರ. [ಅಗ್ನಿಶಾಮಕ + ಯಂತ್ರ]

**ಅಗ್ನಿಶಾಲೆ** (ನಾ). ಪವಿತ್ರವಾದ ಅಗ್ನಿಯನ್ನು ಇಡುವ ಸ್ಥಳ; ಯಜ್ಞಶಾಲೆ. [ಅಗ್ನಿ + ಶಾಲೆ₂]

**ಅಗ್ನಿಶಿಖ** (ಗು). ೧. ಉರಿಯ ಶಿಖರವುಳ್ಳ; ಬೆಂಕಿಯಂತೆ ತುದಿಯುಳ್ಳ. (ನಾ). ೨. ಕುಂಕುಮಕೇಸರಿ. ೩. ಕುಸುಬೆ ಗಿಡ. ೪. ದೀಪ. ೫. ಒಂದು ಬಗೆಯ ಆಕಾಶಬಾಣ. ೬. ಬಾಣ. ೭. ಚಿನ್ನ. [ಸಂ. ಅಗ್ನಿಶಿಖ (ಅಗ್ನಿ + ಶಿಖಾ + –)]

**ಅಗ್ನಿಶಿಖೆ** (ನಾ). ೧. ಬೆಂಕಿಯ ಉರಿ, —ಜ್ವಾಲೆ. ೨. ಕೋಲುಕುಟುಕನ ಗಿಡ; "ವತ್ಸನಾಭಿ" (ನಾನಾಶ). ೩. "ಬೆಣ್ಣೆಬಿದಿರು ಸೊಪ್ಪು" (ಪಂಡಿತ. ೧೮೩). [ಅಗ್ನಿ + ಶಿಖೆ]

**ಅಗ್ನಿಶಿಲೆ** (ನಾ). ೧. "ಅಗ್ನಿಯ ವ್ಯಾಪಾರದಿಂದ ಹುಟ್ಟಿದ ಶಿಲೆಗಳು ಅಗ್ನಿಶಿಲೆಗಳು. ಇವು ಮುದ್ದೆಗಲ್ಲುಗಳು ಪದರಗಳಿಲ್ಲ. . ." (ಕಭಾಗೆ. ೨ ಅಡಿಟ); ಮುಂಬಯಿ ಕರ್ಣಾಟಕ ಭಾಗದೊಳಗಿನ ಭೂಮಿಯ ರಚನೆಯು ಮುಖ್ಯವಾಗಿ ಅಗ್ನಿಶಿಲೆಗಳಿಂದಲೂ ವಿಕೃತಶಿಲೆಗಳಿಂದಲೂ ಆಗಿರುತ್ತದೆ(ಕಭಾಗೆ.೨). ೨. ಚಕಮಕಿಕಲ್ಲು (ಸ್ಯಾಂಡರ್). [ಅಗ್ನಿ + ಶಿಲೆ]

**ಅಗ್ನಿಶೌಚ** (ನಾ). ೧. ಬೆಂಕಿಯಿಂದ ಶುದ್ಧಿಗೊಳಿಸುವುದು. ೨. ಉಬ್ಬೆಗೆ ಹಾಕಿ ಶುಚಿ ಮಾಡುವುದು. 'ಅಗ್ನಿಶೌಚವಸ್ತ್ರ' ಪರಾ. [ಅಗ್ನಿ + ಶೌಚ]

**ಅಗ್ನಿಶೌಚವಸ್ತ್ರ** (ನಾ). ಉಬ್ಬೆಗೆ ಹಾಕಿ ಶುಚಿಮಾಡಿದ ಬಟ್ಟೆ: ಅಳುರುತ್ತಮಿರ್ಪ ಮದನಾನಳನಿಂದೆಂತೆಂತು ಬೇವುದನಿತಂತತಿನಿರ್ಮಳಮಪ್ಪುದು ಲಾವಣ್ಯಂ ನಳಿನಾನನೆಗಗ್ನಿಶೌಚವಸ್ತ್ರದ ತೆಱದಿಂ (ಕಾದಂಉ. ೩೨೭). [ಅಗ್ನಿಶೌಚ + ವಸ್ತ್ರ]

**ಅಗ್ನಿಷ್ಟಗೆ** 'ಅಗ್ಗಿಷ್ಟಗೆ' ನೋ.

**ಅಗ್ನಿಷ್ಟೋಮ** (ನಾ). ೧. ಅಗ್ನಿಸ್ತುತಿ. ೨. ಒಂದು ಯಾಗ. ೩. ಅಗ್ನಿಷ್ಟೋಮ ಯಾಗದಲ್ಲಿ ಉಪಯೋಗಿಸುವ ಮಂತ್ರ ಅಥವಾ ಅದನ್ನು ವಿವರಿಸುವ ಕಲ್ಪ. [ಸಂ. (ಅಗ್ನಿ + ಸ್ತೋಮ)]

**ಅಗ್ನಿಷ್ಠಗೆ** 'ಅಗ್ಗಿಷ್ಟಗೆ' ನೋ.

**ಅಗ್ನಿಸಂಸ್ಕಾರ** (ನಾ). ೧. ಅಗ್ನಿಗೆ ಸಂಸ್ಕಾರ ಮಾಡುವುದು; ಕರ್ಮಕ್ಕೆ ಅರ್ಹವಾಗುವಂತೆ ವಿಧಿವತ್ತಾಗಿ ಅಗ್ನಿಯನ್ನು ಸಿದ್ಧಗೊಳಿಸುವುದು. ೨. ಅಗ್ನಿಯಿಂದ ಸಂಸ್ಕಾರ ಮಾಡುವುದು (ಮುಖ್ಯವಾಗಿ—ಪಾತ್ರೆಯನ್ನು ಸುಟ್ಟು ಶುದ್ಧಿಗೊಳಿಸುವುದು; ಶವದಹನ ಮಾಡುವುದು). [ಅಗ್ನಿ + ಸಂಸ್ಕಾರ]

**ಅಗ್ನಿಸಖ** (ನಾ). = ಅಗ್ನಿಮಿತ್ರ. [ಅಗ್ನಿ + ಸಖ]

**ಅಗ್ನಿಸರ್ಪ** (ನಾ). ಚರ್ಮದ ಮೇಲೆ ಕಡುಗೆಂಪು ಬಣ್ಣವನ್ನು ಉಂಟುಮಾಡುವ ಒಂದು ಉಷ್ಣವ್ಯಾಧಿ (= erysipelas. ಕಿಸಂಗ್ಲಾ. ೧೦೧). [ಅಗ್ನಿ + ಸರ್ಪ]

**ಅಗ್ನಿಸಾಕ್ಷಿ** (ನಾ). ಅಗ್ನಿಯನ್ನು ಸಾಕ್ಷಿಯಾಗಿ ಇಟ್ಟುಕೊಳ್ಳುವುದು: ಕುಮಾರನಂ ಮುನ್ನಂ ಹುತಾಗ್ನಿಯಾಗಿರ್ದ ಪುರೋಹಿತನನಿದಿರ್ಗೊಂಡಗ್ನಿಸಾಕ್ಷಿಯೊಳ್ ಜ್ಯೋತಿಃಪ್ರಭೆಯುಂ ಯಥೋಕ್ತವಿಧಿಪೂರ್ವಕಂ ಕುಡುವುದುಂ (ಶಾಂತಿಪು. ೬–೧೨ ವ). 'ಅಗ್ನಿಸಾಕ್ಷಿಕ' ಪರಾ. [ಅಗ್ನಿ+ ಸಾಕ್ಷಿ]

**ಅಗ್ನಿಸಾಕ್ಷಿಕ** (ಗು). (ಮದುವೆ ಮೊದಲಾದ ಕರ್ಮಗಳಲ್ಲಿ) ಅಗ್ನಿಯನ್ನು ಸಾಕ್ಷಿಯಾಗಿ ಇಟ್ಟುಕೊಂಡಿರುವ; ಅಗ್ನಿಸಾಕ್ಷಿಯಾಗಿರುವ.
**ಅಗ್ನಿಸಾಕ್ಷಿಕವಾಗಿ**=ಅಗ್ನಿಯ ಸಮ್ಮುಖದಲ್ಲಿ; ಶಾಸ್ತ್ರೋಕ್ತವಾಗಿ: ಕೃಷ್ಣೆಯು ಅಗ್ನಿಸಾಕ್ಷಿಕವಾಗಿ ಮದುವೆಮಾಡಿಕೊಂಡು ಎಲ್ಲರಿಗೂ ಧರ್ಮಪತ್ನಿಯಾಗಿರಲಿ (ವಚಭಾ. ೫೯). [ಸಂ. (ಅಗ್ನಿ + ಸಾಕ್ಷಿನ್ + –)]

**ಅಗ್ನಿಸೂತ್ರ** (ನಾ). ಉಪನಯನ ಕಾಲದಲ್ಲಿ ವಟುವಿನ ಸೊಂಟಕ್ಕೆ ಸುತ್ತುವ ನೊದೆಹುಲ್ಲಿನ ಹುರಿ; ಮೌಂಜಿ. [ಅಗ್ನಿ + ಸೂತ್ರ]

**ಅಗ್ನಿಸ್ತಂಭ** (ನಾ). (ಮಂತ್ರವಿದ್ಯಾಬಲದಿಂದ) ಬೆಂಕಿಯ ಕಾವು ತಟ್ಟದಂತೆ ತಡೆಯುವುದು, —ಉರಿಯನ್ನು ನಿಲ್ಲಿಸುವುದು: ಅದೆಂತು ಹರಿಯಿರ್ದಪನೀ ಹೃದಯಾಗ್ನಿಯೊಳಗ್ನಿಸ್ತಂಭದ ವಿದ್ಯೆಯನೀಗಳೆಂತು ಕಲ್ತನೊ ಸಖಿಯೇ (ಜಗವಿ. ೧೧–೪೮). [ಅಗ್ನಿ + ಸ್ತಂಭ]

**ಅಗ್ನಿಸ್ತಂಭನ** (ನಾ). = ಅಗ್ನಿಸ್ತಂಭ. [ಅಗ್ನಿ + ಸ್ತಂಭನ]

**ಅಗ್ನಿಸ್ತಂಭಿನಿ** (ನಾ). ಬೆಂಕಿಯನ್ನಾಗಲಿ, ಚೆನ್ನಾಗಿ ಕಾದ ವಸ್ತುಗಳನ್ನಾಗಲಿ ಮುಟ್ಟಿದರೆ ಸುಡದಂತೆ ಮಾಡಿಕೊಳ್ಳುವ ವಿದ್ಯೆ: ಮತ್ತೊಂದು ದಿವಸಂ ಪ್ರಜ್ಞಪ್ತಿ ಕಾಮರೂಪಿಣಿ ಅಗ್ನಿಸ್ತಂಭಿನಿ ಉದಕಸ್ತಂಭಿನಿ ವಿಶ್ವಪ್ರವೇಶಿನಿ . . . ಯೆಂಬಿವು ಮೊದಲಾಗಿ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ (ಚಾವುಂಉ. ೨೧೦). [ಸಂ. ಅಗ್ನಿಸ್ತಂಭಿನೀ (ಅಗ್ನಿ + ಸ್ತಂಭಿನೀ)]

**ಅಗ್ನಿಸ್ಫೋಟ** (ನಾ). ಬೆಂಕಿಯನ್ನು ಕಾರಿ ಶತ್ರುವನ್ನು ಸುಡುವ ಒಂದು ಸಾಮಗ್ರಿ; ಸಿಡಿಮದ್ದು: ಅಗ್ನಿಸ್ಫೋಟ ಮಹೋಲ್ಕ ಅಂಗಾರಸ್ಫೋಟ . . . ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾಧಿಸಾಧನವಿಶೇಷಂಗಳಿಂದಲುಂ (ವಿವೇಕ. ೨೬೩). [ಅಗ್ನಿ + ಸ್ಫೋಟ]

**ಅಗ್ನಿಹೋತ್ರ** (ನಾ). ೧. ಅಗ್ನಿಯನ್ನು ಉದ್ದೇಶಿಸಿ ಮಾಡುವ ಹೋಮ. ೨. ಅಗ್ನಿಯನ್ನು ಅನುದಿನವೂ ಕಾಪಾಡಿಕೊಂಡು ಹೋಮ ಮಾಡುತ್ತಿರುವ ಕರ್ಮ. ೩. ಹೋಮಾಗ್ನಿ. [ಸಂ. (ಅಗ್ನಿ + ಹೋತ್ರ)]

**ಅಗ್ನಿಹೋತ್ರಿ** (ನಾ). ೧. ಅನುದಿನವೂ ಅಗ್ನಿಹೋತ್ರ ನಡಸುತ್ತಿರುವವನು. ೨. ಅಗ್ನಿಹೋತ್ರಕ್ಕಾಗಿ ಗೃಹವನ್ನು ಸಜ್ಜುಗೊಳಿಸಿರುವವನು; ಅಲ್ಲಿ ಅಗ್ನಿಯನ್ನು ಸ್ಥಾಪಿಸುವವನು. [ಸಂ. ಅಗ್ನಿಹೋತ್ರಿನ್ (ಅಗ್ನಿಹೋತ್ರ + –)]

**ಅಗ್ನೀಧ್ರ** (ನಾ). ೧. ಅಗ್ನಿಯನ್ನು ಪಟುಮಾಡುವವನು; ಬ್ರಹ್ಮ ಎಂಬ ಹೆಸರಿನ ಋತ್ವಿಕ್ಕು. ೨. ಯಜ್ಞಕರ್ಮ. [ಸಂ.]

**ಅಗ್ನ್ಯಾಧಾನ** (ನಾ). ಹೋಮಕ್ಕಾಗಿ ಅಗ್ನಿಯನ್ನು ಸ್ಥಾಪಿಸುವುದು. [ಅಗ್ನಿ + ಆಧಾನ]

**ಅಗ್ರ₁** (ಗು). ೧. ಪ್ರಧಾನವಾದ; ಮುಖ್ಯವಾದ; ಅತ್ಯುತ್ತಮವಾದ. ೨. ಮೊಟ್ಟಮೊದಲಿನ; ಪ್ರಥಮ. ೩. ಅತಿಶಯವಾದ; ಅಧಿಕವಾದ; ಹೆಚ್ಚಾದ. (ನಾ). ೪. ತುದಿ; ಮೇಲ್ಭಾಗ; ಶಿಖರ. ೫. ಮುಂದುಗಡೆ; ಮುಂಭಾಗ. ೬. ಮೊದಲು; ಆದಿ; ಆರಂಭ. ೭. ನಗರದ ಸಮೀಪ ಪ್ರದೇಶ. ೮. ಸ್ತುತಿ; ಸ್ತೋತ್ರ. ೯. ದಾನಕೊಡುವ ಆಹಾರದ ಒಂದು ಅಳತೆ. ೧೦. ಸಮೂಹ. ೧೧. ಒಂದು ಪಲದ ತೂಕ. ೧೨. ಗುರಿ; ಕೊನೆ. ೧೩. ಬ್ರಾಹ್ಮಣ: ಅಗ್ರಖೇಟ ಎಂಬಲ್ಲಿಯ 'ಅಗ್ರ'ಕ್ಕೆ ಶ್ರೇಷ್ಠ (= ಬ್ರಾಹ್ಮಣ) ಎಂಬರ್ಥವೆಂದು ಅವರು ಊಹಿಸಿರುವುದು ಸರಿಯಾಗಿದೆ (ಶಬ್ದವಿ. ೬೧). 'ಅಗ್ರಹಾರ', 'ಅಗ್ರೇಶ್ವರ' ಪರಾ. ೧೪. ದೇವರಿಗೆ ಅರ್ಪಣೆಯಾಗುವ ಪ್ರಥಮ ನೈವೇದ್ಯ: ಸಿಂಗಬೋಯಂ ಮಾಡಿದ ಅಗ್ರಂ ಒನ್ದು ಈ ಅಗ್ರಕ್ಕೆ ಕೊಟ್ಟ ಗದ್ಯಾನಂ ಇಪ್ಪತ್ತು (ಕಇ. III–i, ೧–೭ ; 1200). ೧೫. ತುದಿಯ ಭಾಗವನ್ನುಳ್ಳ ಬಾಳೆಯೆಲೆ: ಶುಭಕಾರ್ಯಗಳಲ್ಲಿ ಊಟಕ್ಕೆ ಅಗ್ರಗಳನ್ನು ಹಾಕುವುದು ಪದ್ಧತಿ (ರೂಢಿ). "ಇದಿರೊಳತಿ ಮುಖ್ಯದೊಳು ತುದಿಮೊದಲೊಳಗ್ರಮಕ್ಕುಂ" (ಮಂಗರಾ. ೧೫೦–೫೨); "ಇದಿರೊಳ್ ಪ್ರಧಾನದೊಳ್ ಸ್ತುತಿನಗರೋಪಭೇದ ಮೊದಲಗ್ರವಿಧಾನದೊಳಗ್ರವಾಚಕಂ" (ನಾನಾರ. ೮೩).
**ಅಗ್ರದೆಲೆ** (= ಅಗ್ರದ ಎಲೆ) = ಅಗ್ರ ೧೫. [ಸಂ.]

**ಅಗ್ರ₂** (ನಾ). ನಾಲಗೆ, ತುಟಿ, ಗಂಟಲು ಇವುಗಳ ಒಂದು ರೋಗ ; ಬಾಯಿಹುಣ್ಣು.
[**ಸಂ.** ಅಗ್ರ ? . / **ತಮಿ.** ಅಕ್ಕರವಮ್ = ಬಾಯಿರೋಗ; **ಮಲ.** ಅಕ್ಕಾರವಮ್ = ರೋಗ ; **ತುಳು.** ಅಗ್ರ = ಬಾಯಿಹುಣ್ಣು]

**ಅಗ್ರಕ** (ನಾ). (ಸೈನ್ಯದ) ಮುಂಚೂಣಿ : ಎಳೆದು ಕುಂಡಿಲದಿಂದ ಹಯಗಳ ತುಳಿವ ಆನೆಗಳಗ್ರಕವು (ಪಶುಭಾ. ೨೨–೫೯). [**ಸಂ.**]

**ಅಗ್ರಕಾರ್ಯ** (ನಾ). ೧. ಮೊದಲು ಮಾಡಬೇಕಾದ ಕೆಲಸ; ಮುಖ್ಯ ಕಾರ್ಯ. ೨. ಮುಂದೆ ಮಾಡಬೇಕಾದ ಕೆಲಸ : ೧, ೨. ಕೇಳದತಿಹಿತರ ವಚನಮನಾಳೋಚಿಸದಗ್ರಕಾರ್ಯಮಂ ವ್ಯಗ್ರತೆಯಂ ತಾಳಿ ಕಡುಗಜ್ಜಮೆಸಪುದನೇಳಿಪುದುರ್ವೀಜನಂ ಜಗನ್ನುತಚರಿತ (ರಾಜಶೇ. ೧೩–೯). [ಅಗ್ರ₁ + ಕಾರ್ಯ]

**ಅಗ್ರಗ** (ನಾ). ಮುಂದಾಳು ; ನಾಯಕ. [**ಸಂ.**]

**ಅಗ್ರಗಣ್ಯ** (ನಾ). ಪ್ರಮುಖ ; ಸರ್ವಶ್ರೇಷ್ಠ. [ಅಗ್ರ₁ + ಗಣ್ಯ]

**ಅಗ್ರಗಮನ** (ನಾ). ಮುಂದೆ ಹೋಗುವುದು ; ಮುಂಚುವುದು. [ಅಗ್ರ₁ + ಗಮನ]

**ಅಗ್ರಗಾಮಿ** (ನಾ). ಮುಂದುಗಡೆ ಹೋಗುವವನು ; ಮುಂದಾಳು ; ನಾಯಕ. [**ಸಂ.** ಅಗ್ರಗಾಮಿನ್]

**ಅಗ್ರಗೃಹ** (ನಾ). ಹಿರಿಯ ಮನೆತನ : ಕರಿಯ ಕುಲ ಅಗ್ರಗೃಹವೆಂದೆನಿಪ ಹರಭಕ್ತ ಶಂಕರನ ಸದ್ವರಪುತ್ರಂ (ಪ್ರೌಢರಾ. ೧–೨೫). [ಅಗ್ರ₁ + ಗೃಹ]

**ಅಗ್ರಘುರಟ್ಟ** (ನಾ). ೧. ಬೀಸುವ ಕಲ್ಲಿನಲ್ಲಿ ಮೇಲಿನ ಹೋಳು. ೨. (ವಿರೋಧಿಗಳನ್ನು) ಅರೆದು ಹುಡಿಮಾಡುವವನು : ಕಲ್ಲಿನಾಥನ ಭೃತ್ಯ ರಿಪುಕವಿದಲ್ಲಣಾಗ್ರಘುರಟ್ಟ ಪಂಡಿತ ಮಲ್ಲಿಕಾರ್ಜುನ ಕವಿಕಮಲರವಿ ಪೇಳ್ದಂ (ಶಂಕದಾ. ೧–೧೪). [ಅಗ್ರ₁ + ಘುರಟ್ಟ]

**ಅಗ್ರಜ** (ನಾ). ೧. ಮೊದಲು ಹುಟ್ಟಿದವನು ; ಹಿರಿಯ ಸೋದರ ; ಅಣ್ಣ. ೨. ಬ್ರಾಹ್ಮಣ. [**ಸಂ.**]

**ಅಗ್ರಜನ್ಮ** (ನಾ). = ಅಗ್ರಜ. [ಅಗ್ರ₁ + ಜನ್ಮ]

**ಅಗ್ರಜಾತೆ** (ನಾ). ಮೊದಲು ಹುಟ್ಟಿದವಳು ; ಹಿರಿಯ ಸೋದರಿ ; ಅಕ್ಕ. [ಅಗ್ರ₁ + ಜಾತೆ]

**ಅಗ್ರಜೆ** (ನಾ). = ಅಗ್ರಜಾತೆ. [**ಸಂ.** ಅಗ್ರಜಾ]

**ಅಗ್ರಜೇಶ** (ನಾ). ವಿಷ್ಣು : ಧರಿಸಿದನು ಖಟ್ವಾಂಗಮನಲೀಶ್ವರನ ಹೆಗಲಲಿ ಅಗ್ರಜೇಶನ ಹರಿಯೆನಿಸಿದನ ಘನಕಳೇವರವೊಪ್ಪುತಿರ್ದುದಲ (ಬಸವು. ೫೪–೪೩). [ಅಗ್ರಜ + ಈಶ]

**ಅಗ್ರಣಿ** (ನಾ). ಮುಂದಾಳು ; ಪ್ರಮುಖ ; ಶ್ರೇಷ್ಠ : ಅಧಿಕ ಸತ್ವಗುಣೈಕಾಗ್ರಣಿಗಾ ನೃಪಂಗೆ (ಕಾದಂಪೂ. ೧೯). [**ಸಂ.** ಅಗ್ರಣೀ]

**ಅಗ್ರತನೂಜ** (ನಾ). ಹಿರಿಯ ಮಗ; ಜ್ಯೇಷ್ಠ ಪುತ್ರ. [ಅಗ್ರ₁ + ತನೂಜ]

**ಅಗ್ರತಾಂಬೂಲ** (ನಾ). ಸಭೆಯಲ್ಲಿ (ಗೌರವ ಸೂಚಕವಾಗಿ) ಕೊಡುವ ಮೊದಲ ವೀಳೆಯ ; ಪ್ರಥಮ ತಾಂಬೂಲ : ಮದುವೆ ಮುಂಜಿಗಳಲ್ಲಿ ಅಗ್ರತಾಂಬೂಲ ಯಾರಿಗೆ ಸಲ್ಲಬೇಕು ಎಂಬುದನ್ನು ಸರಿಯಾಗಿ ತಿಳಿದುಕೊಂಡಿರಬೇಕು (ರೂಢಿ). [ಅಗ್ರ₁ + ತಾಂಬೂಲ]

**ಅಗ್ರದೆಲೆ** 'ಅಗ್ರ₁' ನೋ.

**ಅಗ್ರದೇಶ** (ನಾ). ದಡ; ಅಂಚು; ತುದಿ : ಕೋಪಮನಾಱಿಪ್ಪುದೆ ಪಂಥಮೆಂದು ಬಂದಂ ತದಗ್ರದೇಶಕ್ಕೆ ಕೋಣಪಂ ವಿಗತಕೃಪಂ (ಚಂದ್ರಪು. ೫–೪೨). [ಅಗ್ರ₁ + ದೇಶ]

**ಅಗ್ರಪಂಕ್ತಿ** (ನಾ). ೧. ಮೊದಲನೆಯ ಪಂಕ್ತಿ ; ಊಟಕ್ಕೆ ಮೊದಲು ಕುಳಿತುಕೊಳ್ಳುವ ಆಮಂತ್ರಿತರ ಪಂಕ್ತಿ. ೨. ನಿಮಂತ್ರಣ ; ಬ್ರಾಹ್ಮಣಾರ್ಥ : ನಾಳೆ ನಮ್ಮ ತಂದೆಯವರ ಶ್ರಾದ್ಧ ; ತಾವು ಅಗ್ರಪಂಕ್ತಿಗೆ ಬರಲು ಒಪ್ಪಬೇಕಾಗಿ ಕೋರುತ್ತೇನೆ (ರೂಢಿ). [ಅಗ್ರ₁ + ಪಂಕ್ತಿ]

**ಅಗ್ರಪಟಲ** (ನಾ). ತುದಿಯ ಪದರ : ಸೂರ್ಯಕೋಟಿ ಪ್ರಭೆಯ ಬೆಳಗಿನ ಸಹಸ್ರಕಿರಣದ ಅಗ್ರಪಟಲದ ಬೆಳಗು ಕೂಡಲ ಸಂಗಯ್ಯನು (ಬಸವ. ೯೫೪). [ಅಗ್ರ₁ + ಪಟಲ]

**ಅಗ್ರಪಟ್ಟ** (ನಾ). ಶ್ರೇಷ್ಠವಾದ ಸ್ಥಾನ ; ಮೊದಲನೆಯ ಸ್ಥಾನ : ವಿದ್ಯಾಗುರುಗಳಿಗೆ ಸಮಾಜದ ಪೀಠದಲ್ಲಿ ಅಗ್ರಪಟ್ಟ ಸಿಗುವವರೆಗೆ ಯಾವ ನಾಡಿಗೂ ಉದ್ಧಾರವಿಲ್ಲ (ರಂಗರೋ. ೮೨). [ಅಗ್ರ₁ + ಪಟ್ಟ]

**ಅಗ್ರಪದವಿ** (ನಾ). = ಅಗ್ರಪಟ್ಟ : ರಾಜನ ಸಭಾಮಂಡಲದಲ್ಲಿ ಅಗ್ರಪದವಿಯನ್ನು ಪಡೆದನು (ಮಣಿಸ. ೪೯). [ಅಗ್ರ₁ + ಪದವಿ]

**ಅಗ್ರಪದಾತಿ** (ನಾ). ಮುಂದುಗಡೆಯ ಕಾಲಾಳು ಪಡೆ: ಈತನ ಯಾನದೊಳಗ್ರಪದಾತಿಪದೋದ್ಧೂತಧೂಳಿ ಸಾಮಂತಶಿಖಾನೂತಮಣಿ ತರಣಿಕಿರಣವ್ರಾತಕ್ಕಸ್ತಮಯಸಮಯಮಂ ಪುಟ್ಟಿಸುಗುಂ (ಶಾಂತಿಪು. ೫–೧೧೮). [ಅಗ್ರ₁ + ಪದಾತಿ]

**ಅಗ್ರಪುತ್ರ** (ನಾ). ಹಿರಿಯ ಮಗ : ತಪಕ್ಕೆ ಪೋಪ ಪದದೊಳ್ ತನ್ನಗ್ರಪುತ್ರಂ ಕ್ರಮುಂಬಿಡಿದಿರ್ದಂ (ಆದಿಪು. ೨–೩೭ ವ). [ಅಗ್ರ₁ + ಪುತ್ರ]

**ಅಗ್ರಪೂಜೆ** (ನಾ). ಸಭೆಯಲ್ಲಿ ಶ್ರೇಷ್ಠನಾದವನಿಗೆ ಎಲ್ಲರಿಗಿಂತ ಮೊದಲು ಮಾಡುವ ಸತ್ಕಾರ ; ಪ್ರಥಮ ಸನ್ಮಾನ : ಧರ್ಮಪುತ್ರಂ ಪೇೞಿಮಾ ಸಭೆಯೊಳಗ್ರಪೂಜೆಗಾರ್ ತಕ್ಕರೆನೆ ಗಾಂಗೇಯನಿಂತೆಂದಂ (ಪಂಪಭಾ. ೬–೪೦ ವ). [ಅಗ್ರ₁ + ಪೂಜೆ]

**ಅಗ್ರಫಲ** (ನಾ). ಮೊದಲನೆಯ ಸಲ ಬಿಟ್ಟ ಫಲ ; ಚೊಚ್ಚಲ ಫಲ. [ಅಗ್ರ₁ + ಫಲ]

**ಅಗ್ರಬಲ** (ನಾ). ಸೇನೆಯ ಮುಂಭಾಗ ; ಮುಂಚೂಣಿ : "ಮುಂಗುಡಿಯೆನೆ ಮುಂದುಚೂಣಿಯೆನಲಗ್ರಬಲಂ" (ಭಾರನಿ. ೪೭). [ಅಗ್ರ₁ + ಬಲ₂]

**ಅಗ್ರಭವ** (ನಾ). ಮೊದಲು ಹುಟ್ಟಿದವನು ; ಅಣ್ಣ : ಒಲ್ದೀಕ್ಷಿಸಿದಂ ನಿಜಾಗ್ರಭವನಂ ದೈತ್ಯಾರಿ (ಜಗವಿ. ೪–೫೮). [ಅಗ್ರ₁ + ಭವ]

**ಅಗ್ರಮಹಿಷಿ** (ನಾ). ಪಟ್ಟದ ರಾಣಿ ; ಹಿರಿಯ ಹೆಂಡತಿ : ತನ್ನಗ್ರಮಹಿಷಿಯ ಮನಮನಾಱಿ ನುಡಿದು ಪಂಡಿತೆಯಂ ನೀನೀಕೆಯುಮಂ ನಿನ್ನ ಬಲ್ಲ ಮಾಟ್ಕಿಯೊಳೆಲ್ಲಮೆಲ್ಲಂದದೊಳಮೊಡಂಬಡಿಸಿ ಮನಂಗೆಲ್ವುದೆಂದು ನಿಯೋಜಿಸಿ ಪೋದಂ (ಆದಿಪು. ೩–೨೭ ವ). [ಅಗ್ರ₁ + ಮಹಿಷಿ]

**ಅಗ್ರಮಾಂಸ** (ನಾ). ೧. ಹೃದಯದ ಮಾಂಸ ; ಹೃದಯ : "ಅಗ್ರಮಾಂಸಮೆಂದೆನಲು ಬಹ[ಪಾಠಾಂ. ಬಹು]ಬಿಕ್ಕಕ್ಕು" (ಮಂಗರಾ. ೧೧೭–೭). ೨. ಯಕೃತ್ತಿನ ಮೇಲೆ ಬೆಳೆದ ದುರ್ಮಾಂಸ. [ಅಗ್ರ₁ + ಮಾಂಸ]

**ಅಗ್ರರ** 'ಅಗ್ರಾರ' ನೋ.

**ಅಗ್ರವರ್ತಿ** (ಗು). ೧. ಮುಂದಿರುವ. (ನಾ). ೨. ಮುಂದಾಳು. [**ಸಂ.** ಅಗ್ರವರ್ತಿನ್]

**ಅಗ್ರಶಾಖೆ** (ನಾ). ತುದಿಗೊಂಬೆ : ಭೂರುಹದಗ್ರಶಾಖೆಯೊಳು ಸೇರಿದ ಬಿಳುವಕ್ಕಿ ಚೀರುವ ದನಿ (ಹರಿಬ. ೨–೩೩). [ಅಗ್ರ₁ + ಶಾಖೆ]

**ಅಗ್ರಶಿಷ್ಯ** (ನಾ). ಶಿಷ್ಯರಲ್ಲಿ ಮೊದಲನೆಯವನು : ಶ್ರೀವರ್ಧಮಾನಸ್ವಾಮಿಯ ಮುಖೋದ್ಗತಾರ್ಥಮುಂ ಸಾಕ್ಷಾತ್ತದಗ್ರಶಿಷ್ಯ ಚತುರ್ಜ್ಞಾನಸಪ್ತರ್ಧಿಸಂಪನ್ನ ಗೌತಮಗಣಧರದೇವ ರಚಿತಾಂಗಾಂಗ ಬಾಹ್ಯಲಕ್ಷಣಗ್ರಂಥಮುಂ ಅಪ್ಪುದಱಿಂ ಪ್ರಮಾಣಂ (ತತ್ತ್ವಪ್ರ. ೬೩). [ಅಗ್ರ₁ + ಶಿಷ್ಯ]

**ಅಗ್ರಸಣಿ** (ನಾ). ಒಂದು ಹಡಗಿನಿಂದ ಇನ್ನೊಂದು ಹಡಗಿಗೆ ಸಾಮಾನು ಸಾಗಿಸುವುದು (ಕಿಸಂಗ್ಲಾ. ೧೩೩). [?]

**ಅಗ್ರಸರ** (ನಾ). = ಅಗ್ರೇಸರ. [ಸಂ.]

**ಅಗ್ರಸಾಲೆ** (ನಾ). ದೇವಸ್ಥಾನದ ಪಾಕಶಾಲೆ; ಭೋಜನ ಶಾಲೆ : ಅಗ್ರಸಾಲೇ ಊಟ, ಚಂದ್ರಶಾಲೇ ನಿದ್ದೆ (ಗಾದೆ. ೩). [ಸಂ. ಅಗ್ರಶಾಲಾ. / ತುಳು. ಅಗ್ರಸಾಲೆ = ಊಟದ ಮನೆ, ದೇವಾಲಯದ ಪಾಕಶಾಲೆ]

**ಅಗ್ರಸುತ** (ನಾ). ಹಿರಿಯ ಮಗ : ಅವರೊಳಗ್ರಸುತಂ ವಿದ್ಯಾನಿಧಿ ಮಲ್ಲಪಂ (ಅಜಿಪು. ೧–೨೬). [ಅಗ್ರ$_1$ + ಸುತ]

**ಅಗ್ರಸ್ಥಾನ** (ನಾ). ಮೊದಲ ಸ್ಥಾನ; ಗೌರವದ ಸ್ಥಾನ. [ಅಗ್ರ$_1$ + ಸ್ಥಾನ]

**ಅಗ್ರಹಸ್ತ** (ನಾ). ಕೈಯ ತುದಿ ; ತುದಿಗೈ : ಘನಸಾರ ಸರಳಚಂದನ ವನಮೃದುಪಲ್ಲವಮನಗ್ರಹಸ್ತದೆ ಕೊಂಡು (ಆದಿಪು. ೭–೭೧). [ಅಗ್ರ$_1$ + ಹಸ್ತ]

**ಅಗ್ರಹಾರ** (ನಾ). ೧. (ರಾಜರೇ ಮೊದಲಾದವರು) ಬ್ರಾಹ್ಮಣರ ಪೋಷಣೆಗಾಗಿ ದಾನಕೊಟ್ಟ ಭೂಮಿ, —ಗ್ರಾಮ: ಶ್ರೀ ಅನಾದಿತೋ ××× ಅಗ್ರಹಾರ (ಎಕ. VII, ಶಿಕಾರಿ. ೧೧೧–೧ ; 640) ; ಅಗ್ರಹಾರ ಮೆಳಮ್ಬುಣುಸೆ ಬ್ರಹ್ಮಾದೇಯ ಮಾಸಾಮಿಗ ಪ್ರೀ(ವ್ರಿ?)ತಿ ಅಱಿದುಕೊಳೆ ಕೊಡಲಾರದೆ (ಮೈಆರಿ. ೧೯೪೪, ೬–೧ ; 808) ; ಆದನೂರು ಅವರಿಗೆ ದತ್ತಿಯಾಗಿದ್ದ ಅಗ್ರಹಾರ (ಬೆಂದಯ. ೬೫) ; ಅಗ್ರಹಾರಕ್ಕೆ ಹೋದರೂ ದುರಾಗ್ರಹ ಬಿಡಲಿಲ್ಲ (ಗಾದೆ). ೨. ಬ್ರಾಹ್ಮಣರು ವಾಸಮಾಡುವ ಕೇರಿ, —ಬೀದಿ. ೩. ಕೆಲವು ಊರುಗಳ ಹೆಸರು : 'ಅಗ್ರಾಹಾರ' ಪರಾ. [ಸಂ.]

**ಅಗ್ರಹಾರಿಕ** (ನಾ). ಅಗ್ರಹಾರಕ್ಕೆ ಸೇರಿದವನು ; ಅಗ್ರಹಾರದಲ್ಲಿ ವಾಸಮಾಡುವವನು ; ಅಗ್ರಹಾರ ನಿವಾಸಿ. (ದಕ. ೩). [ಸಂ. *ಅಗ್ರಹಾರಿಕ ?]

**ಅಗ್ರಾಮ್ಯ** (ಗು). ಗ್ರಾಮ್ಯವಲ್ಲದ ; ಸುಸಂಸ್ಕೃತ ; ಶಿಷ್ಟ. [ಸಂ.]

**ಅಗ್ರಾಮ್ಯತೆ** (ನಾ). ೧. ಅಸಭ್ಯತೆಯಿಲ್ಲದಿರುವಿಕೆ. ೨. ಕಾವ್ಯಗುಣಗಳಲ್ಲಿ ಒಂದು : ಇದು ಸೌಂದರ್ಯಗುಣಪ್ರಕಾಶಮಿದು ತಾನಗ್ರಾಮ್ಯತಾಧಾನಮಿಂತಿದು . . . ಸಯ್ತಪ್ಪಿನಂ ತಿರ್ದಿ ಪೇೞ್ವುದು ಪೂಮಾಲೆಯ ನಿಂಬಿನಿಂ ಸಮೆವವೋಲ್ ಸತ್ಕಾವ್ಯಮಂ ಕಬ್ಬಿಗಂ (ಕಾವ್ಯಾವ. ೪೯೮). [ಸಂ. ಅಗ್ರಾಮ್ಯತಾ]

**ಅಗ್ರಾಮ್ಯತ್ವ** (ನಾ). = ಅಗ್ರಾಮ್ಯತೆ. [ಸಂ.]

**ಅಗ್ರಾಮ್ಯವಚನವೃತ್ತಿ** (ನಾ). ಕಾವ್ಯಗುಣಗಳಲ್ಲಿ ಒಂದು: ಅಗ್ರಾಮ್ಯವಚನವೃತ್ತಿ ಸಮುಗ್ರರಸಾಪೂರ್ಣಮಪ್ಪುದದು ಮಧುರಂ (ಕಾವ್ಯಾವ. ೫೧೯). [ಅಗ್ರಾಮ್ಯ + ವಚನ + ವೃತ್ತಿ]

**ಅಗ್ರಾರ**, ಅಗರ, ಅಗ್ರರ, ಅಘ್ರಾರ (ನಾ). = ಅಗ್ರಹಾರ ೧: ಅಗ್ರಾರಕ್ಕೆ ಬಿಸ್ಸಿದ ಬ್ರಾಂಹ್ಮರು (ಸೌಇಇ. IX–ii, ೪೦೮–೧೯ ; 1364) ; ಆರಾಮವಗ್ರಾರ ಧರ್ಮತಟಾಕಗಳ್ ಚಾರುತರದ ದೇವಾಲ್ಯ (ಕಂನವಿ. ೨೬–೩೭). **ಅಗರ** : ೧. ಅಗರದ ಪಾರ್ವರೊಟ್ಟಿಗೆನಂತೆಯುಂ ಪರ್ಬರ ಪಾಳೆಯದಂತೆಯುಂ (ಚಿಕವಂ. ೨೩–೧೦) ; ಚಿಗುರಿಡೆ ದೇಗುಲಂಗಳಗರಂ ಪೊಗರೇಱಿ ಪೊಲಿಲ್ಗಳೆಲ್ಗೆಯಿಂ ಸೊಗಯಿಸೆ (ಚಿಕವಿ. ೨–೬೦). ೩. ಅಗರ ಎಂಬ ಹೆಸರಿನ ಊರುಗಳು ಹಲವು ಇವೆ (ರೂಢಿ). **ಅಗ್ರರ** : ೧. ಅಗ್ರರ ಬಚಳಿ ವೀರಪನ ಮಗ ಹೊಂನಂಗಲ (ಮೈಆರಿ. ೧೯೪೦. ೧೧–೧ ; 1700). **ಅಘ್ರಾರ** : ೧. ಸಾತಳಿಗೆಯ ಸಾವಿರ ಐದು ಭೂಮಿ ಒಂಭತ್ತು ಅಘ್ರಾರದವರ ಮುಂದಿಟ್ಟು (ಮೈಆರಿ. ೧೯೩೨, ೪೨–೨೬ ; 1418) ; ಈ ಗ್ರಾಮು ಶೂದ್ರಪಾಡವಾಗಿದ್ದುದನೂ ಅಘ್ರಾರವ ಮಾಡಿ (ಮೈಆರಿ. ೧೯೪೦, ೩೫–೭ ; ಸು. 1500). [ಸಂ. ಅಗ್ರಹಾರ]

**ಅಗ್ರಾರವಾಸಿ** (ನಾ). = ಅಗ್ರಹಾರಿಕ : ಕುಂತಿಯ ಚರಣಸರಸಿಜಕಳಿಯ ನೇತ್ರಗಳೆರಗಿಸಿದರಗ್ರಾರವಾಸಿಗಳರಸ ಕೇಳೆಂದ (ಜಿನಭಾ. ೧೬–೨). [ಅಗ್ರಾರ + ವಾಸಿ$_2$]

**ಅಗ್ರಾಸನ$_1$** (ನಾ). ಬ್ರಾಹ್ಮಣರ ಜೀವನ ನಿರ್ವಾಹಕ್ಕಾಗಿ ದಾನವಾಗಿ ಕೊಟ್ಟ ಭೂಮಿ, —ಗ್ರಾಮ; ಅಗ್ರಹಾರ : ನಿಮಗೆ ದಾರಿದ್ರ್ಯಮೋಕ್ಷಮಕ್ಕುಂ ಷಷ್ಟಿಗ್ರಾಮಸಮನ್ವಿತಮಪ್ಪ ಅಗ್ರಾಸನ [ಪಾಠಾಂ. ಗ್ರಾಮ] ಮನರಸನಂ ಬೇಡಿಕೊಂಡೊಡೆ ಸುಖದಿಂ ಬಾೞ್ವಿರೆನೆ . . . ಇಂತು ಅಗ್ರಾಸನಮನುಣುತ್ತ ಮಜುವತ್ತು ಬಾಡಮನಾಳುತ್ತಂ (ವಡ್ಡಾರಾ. ೧೮೫–೭). ೨. ಬ್ರಾಹ್ಮಣರಿಗಾಗಿ ಏರ್ಪಡಿಸಿದ ಭೋಜನ ಶಾಲೆ,—ಭೋಜನ: ಅಗ್ರಾಸನದೊಳುಣಲೆಂದು ಬಂದು ಮಱೆಯನೇಱಿರ್ದೋನನಿಂತೆಂದಂ . . . ಎನ್ನಗ್ರಾಸನಮನುಣಲ್ಕೆ ಯೋಗ್ಯನಲ್ಲನದಱಿಂದಾತನನಟ್ಟಿ ಕಳೆಯಿಮೆಂದಟ್ಟಿದನೆಂದು ಪೇೞ್ದು ಪಡಿಯಱನಿಂದಮೆೞಿಯಿಸಿ (ವಡ್ಡಾರಾ. ೧೮೫–೨೪); ತದನನ್ತರಂ ದೇವರಗ್ರಾಸನದಲು ಅಪೂರ್ವಿಗ ಬ್ರಾಹ್ಮಣರು ಪನ್ನಿರ್ವ್ವರ್ಗ್ಗೆ ಸತ್ತ್ರಂ ನಡೆವುದು (ಹೈಆಸೀ. ೫–೮–೪೨ ; 1088) ; ಶ್ರೀ ಮಹಾದೇವೇಶ್ವರ ದೇವರ ಅಗ್ರಾಸನಕ್ಕೆ ಬಿಟ್ಟ ಕೆಯಿಾ (ಎಇ. XIII, ೭೦–೯೩ ; 1178) ; ತಾಂ ಪ್ರತಿಷ್ಟೆ ಮಾಡಿದ ಶ್ರೀಮಲ್ಲಿಕಾರ್ಜುನದೇವರಂಗಭೋಗ ರಂಗಭೋಗಕ್ಕೆಂದಯ್ವದಿಂಬರಿಗೆ . . . ಕಮ್ಮ ೬೦ ಮನಲ್ಲಿಯ ಗ್ರಾಸನಕ್ಕೆ ಬಿಟ್ಟರು (ಸೌಇಇ. IX–ii, ೭೧೨–೯ ; 1209). 'ಅಗ್ರಸಾಲೆ' ಪರಾ. [< ಅಗ್ರ$_1$ + ಅಶನ]

**ಅಗ್ರಾಸನ$_2$** (ನಾ). ೧. ಮೊದಲನೆಯ ಪೀಠ; ಪ್ರಥಮ ಪೀಠ. ೨. ಅಧ್ಯಕ್ಷ ಪೀಠ : ಗಂಗಾಧರರಾಯನು ಅಗ್ರಾಸನವನ್ನು ಅಲಂಕರಿಸಿದ್ದನು (ಝಾರಾಣಿ. ೮). [ಅಗ್ರ$_1$ + ಆಸನ]

**ಅಗ್ರಾಸೀನ** (ನಾ). ಮುಂದೆ ಕುಳಿತವನು. [ಅಗ್ರ$_1$ + ಆಸೀನ]

**ಅಗ್ರಾಹವ** (ನಾ). ಮುಖ್ಯವಾದ ಕಾಳಗ. [ಅಗ್ರ$_1$ + ಆಹವ]

**ಅಗ್ರಾಹಾರ** (ನಾ). = ಅಗ್ರಹಾರ ೧. ಅಗ್ರಾಹಾರಂ ಸೊಱಡಿಯ ಹೊನ್ನಯ ಮಗ ಬೀರಯ್ಯ (ಮೈಆರಿ. ೧೯೪೨, ೬೭–೪ ; 1133) ; ಅಗ್ರಾಹಾರದ ಮಹಾಜನಂಗಳೂ ವಿಶೇಷ ಪೂಜೆಗಾಗಿ ಧಾರಾಪೂರ್ವಕವಾಗಿ ಸಮರ್ಪಿಸಿದ ಉಭ್ರತ್ತಿ ೧ (ಸೌಇಇ. IX–ii, ೫೧೪–೧೭ ; 1521). [ಅಗ್ರ$_1$ + ಆಹಾರ]

**ಅಗ್ರಾಹ್ಯ** (ಗು). ೧. ಗ್ರಾಹ್ಯವಲ್ಲದ; ಅಂಗೀಕಾರಕ್ಕೆ ಅರ್ಹವಲ್ಲದ; ಒಪ್ಪಬಾರದ. ೨. ಇಂದ್ರಿಯಗಳಿಗೆ ಗೋಚರವಾಗದ; ಗ್ರಹಿಸಲಾಗದ. [ಸಂ.]

**ಅಗ್ರಿಮ** (ಗು). ೧. ಮೊಟ್ಟಮೊದಲಿನ; ಪ್ರಥಮ. ೨. ಪ್ರಧಾನ; ಶ್ರೇಷ್ಠ ; ಉತ್ತಮ. ೩. ಹಿರಿಯ ; ಜ್ಯೇಷ್ಠ. [ಸಂ.]

**ಅಗ್ರಿಯ** (ಗು). ೧. ಪ್ರಥಮ ; ಪ್ರಮುಖ ; ಶ್ರೇಷ್ಠ : ಸಂಗರದಗ್ರಿಯರು ಕೈವೀಸಿದರು ತೇರುಗಳ ತಿಂತಿಣಿಯ (ಕುವ್ಯಾಭೀ. ೪–೯೦). ೨. ಅಗ್ರಕ್ಕೆ ಸಂಬಂಧಿಸಿದ ; ತುದಿಯ. (ನಾ). ೩. ಅಣ್ಣ. [ಸಂ.]

**ಅಗ್ರೇದಿಧಿಷು** (ನಾ). ೧. ಒಂದು ಸಾರಿ ಯಾರಿಗೋ ಮದುವೆಯಾಗಿದ್ದವಳನ್ನು ಪುನಃ ಮದುವೆಮಾಡಿಕೊಂಡವನು. ೨. ಅಕ್ಕನು ಅವಿವಾಹಿತಳಾಗಿರುವಾಗಲೇ ಮದುವೆ ಮಾಡಿಕೊಂಡ ತಂಗಿ. ೩. ತಂಗಿಯ ಮದುವೆಯಾದಾಗ ಇನ್ನೂ ಅವಿವಾಹಿತಳಾಗಿದ್ದ ಅಕ್ಕನನ್ನು ಮದುವೆಮಾಡಿಕೊಂಡವನು : ಕಿರಿಯಳ್ಗೆ ಮುನ್ನಮೇ ಮದುವೆಯಾದ ಬಳಿಕಂ ಪಿರಿಯಳಂ ಮದುವೆಯಾದ ಅಗ್ರೇದಿಧಿಷುಗಳುಂ (ಭಾರಶಾಂ. ೩೪–೨೪೫). [ಸಂ. ಅಗ್ರೇದಿಧಿಷೂ (ಅಗ್ರೇ + ದಿಧಿಷೂ)]

**ಅಗ್ರೇಶ್ವರ** (ನಾ). ೧. ಅತ್ಯಂತ ಶ್ರೇಷ್ಠನಾದವನು: ನಂದಿನಾಥಾಗ್ರೇಶ್ವರಂಗೆಮುಗೊಂದಿನಿತು ಸಂದಿಲ್ಲ (ಬಸವು. ೧–೬೧). ೨. ಬ್ರಾಹ್ಮಣಶ್ರೇಷ್ಠ: ಅಗ್ರೇಶ್ವರಂ ಕಮ್ಮೆಕುಲದಿಂದೆ ಮೆಱೆದಿರ್ಪ ವಿಪ್ರನಿರ್ಪರ್ಂ ಮಾದಿರಾಜಂ (ಬಸರ. ೧–೯೮). [ಅಗ್ರ$_1$ + ಈಶ್ವರ]

**ಅಗ್ರೇಸರ** (ಗು). ೧. ಮುಂದೆ ಹೋಗುವ. ೨. ಶ್ರೇಷ್ಠ; ಅತ್ಯುತ್ತಮ. (ನಾ). ೩. ಮುಂದಾಳು; ನಾಯಕ. [ಸಂ.]

**ಅಗ್ರೋದಕ** (ನಾ). ದೇವರ ಪೂಜೆಗಾಗಿ ಉಪಯೋಗಿಸುವ ಮಿಾಸಲು ನೀರು: ನೈಜದಿಂದಜನ ಕರಪಾತ್ರದಗ್ರೋದಕಂ ವೈಜಯಂತೀಧರನ ಪಾದಾಂಬು (ಜೈಮಿಭಾ. ೯–೨೭). [ಅಗ್ರ$_1$ + ಉದಕ]

**ಅಗ್ರ್ಯ** (ನಾ). = ಅಗ್ರಿಯ. [ಸಂ.]

**ಅಗ್ಲಪಿತ** (ಗು). ಕುಂದಿಹೋಗದ. [ಸಂ.]

**ಅಘ** (ನಾ). ೧. ಪಾಪ. ೨. ದುಃಖ; ನೋವು; ಸಂಕಟ; ವ್ಯಸನ. ೩. ಕಷ್ಟ; ತೊಂದರೆ; ಅಪಾಯ. ೪. ಆಶೌಚ; ಸೂತಕ; ಮುಟ್ಟು. ೫. ಜನ್ಮಾವಳಿ; ಭವಾವಳಿ. ೬. ಅಘಾಸುರನೆಂಬ ರಾಕ್ಷಸ: "ಅಘಮೆನಲ್ . . . ಪಾಪಮಕ್ಕುಂ" (ಮಂಗರಾ. ೧೧೬–೨); "ವ್ಯಸನಕಾರ್ಯದೊಳು ದುರಿತದೊಳು ದುಃಖದೊಳು ಮತ್ತೆ ಭವಮಾಲೆಯೊಳಘಾಖ್ಯಮಕ್ಕುಂ" (ಮಂಗರಾ. ೧೫೦–೫೧). [ಸಂ.]

**ಅಘಚ್ಛಿದ** (ಗು). ಪಾಪವನ್ನು ನಾಶಮಾಡುವ: ತ್ರಿಜಗದಘಚ್ಛಿದಂ ತ್ರಿಜಗದೀಶನುತಂ ಕಥೆ ಶಾಂತಿನಾಥನಾ (ಶಾಂತಿಪು. ೧೨–೫೫). [ಸಂ.]

**ಅಘಟನ** (ನಾ). ೧. ಘಟಿಸದಿರುವುದು; ನಡೆಯದಿರುವುದು; ಅಸಂಭವತೆ. ೨. ಮಾಡಲು ಕಷ್ಟವಾಗಿರುವುದು, —ಅಸಾಧ್ಯವಾಗಿರುವುದು. [ಸಂ.]

**ಅಘಟಮಾನ** (ಗು). ನಡೆಯದ; ಸಂಭವಿಸದ: ನಿನ್ನೆಂದಂತುಟಿ ಮೋಕ್ಷಕ್ಕೆನ್ನಿರ್ಪಿರವಘಟಮಾನವೈಹಿಕದ ತೊಡರ್ಪಿನ್ನಿರವಿನೊಳುಂಟಱಿಪದೆ ನಿನ್ನಂ ಪುಸಿಯಾಡಿ (ಪಂಪಭಾ. ೮–೪). [ಸಂ.]

**ಅಘಟವ್ಯಾಪಾರ** (ನಾ). ಸಾಧಾರಣವಾಗಿ ಸಂಭವಿಸದ ಸಂಗತಿ. [ಅಘಟ$_0$ (< ಸಂ. ಅಘಟನ) + ವ್ಯಾಪಾರ]

**ಅಘಟಿತ** (ಗು). ೧. ಘಟಿಸದ; ನಡೆಯದ. ೨. ಸಾಧ್ಯವಲ್ಲದ; ಅಸಾಧ್ಯ. ೩. ಸಂಭವಿಸಲಾರದ. [ಸಂ.]

**ಅಘಟಿತಘಟನೆ** (ನಾ). ೧. ಸಾಮಾನ್ಯವಾಗಿ ಸಂಭವಿಸಲಾರದ ಕಾರ್ಯವು ಸಂಭವಿಸುವುದು. ೨. ಅಸಾಧಾರಣ ಸಂಗತಿ; ಅದ್ಭುತ. [ಅಘಟಿತ + ಘಟನೆ]

**ಅಘಟಿತಘಟಿತ** (ನಾ). ನಡೆಯಲಾಗದ್ದನ್ನು ನಡಸುವವನು: ಅಘಟಿತಘಟಿತರು ವಿಪರೀತಚರಿತರು ಕೂಡಲಸಂಗನ ಶರಣರು ನಡೆದ ದಾರಿ ಭಯ ಕಾಣಿರಣ್ಣಾ (ಬಸವ. ೧೪೬). [ಅಘಟಿತ + ಘಟಿತ]

**ಅಘಣಿ** 'ಅರ್ಘವಾಣಿ' ನೋ.

**ಅಘನ** (ಗು). ೧. ಭಾರವಿಲ್ಲದ. ೨. ಘನರೂಪವಲ್ಲದ; ದ್ರವ ಅಥವಾ ಅನಿಲ ರೂಪದ. ೩. ಟೊಳ್ಳಾಗಿರುವ. [ಸಂ.]

**ಅಘಪಡು**, ಅಘವಡು (ಕ್ರಿ). = ಅಗಪಡು ೨: ರಟ್ಟನೃಪದಿತಿಜಕುಲಸಂಘಟ್ಟದಿನಘಪಟ್ಟ ಚಳ್ಕಿಕುಲಕಭ್ಯುದಯಂ ಪುಟ್ಟೆ (ಎಇ. V, ೧೬–೮; 1142). **ಅಘವಡು** ೧. = ಅಗಪಡು ೧: ಮುನಿ ನೇತ್ರೇಂದ್ರಿಯಲೋಭದಿಂದಮುಂದಘವಟ್ಟಂ (ಪಂರಾಮಾ. ೪–೮೫). ೨. = ಅಗಪಡು ೨: ಅವರಘವಟ್ಟಿರವಂ ತಿಳಿದು ವಿಭೀಷಣನಱಿಪಿ ರಾಮ ಲಕ್ಷ್ಮೀಧರರ್ಗೆ (ಪಂರಾಮಾ. ೧೩–೧೪೪). ℙ 'ಅಘಪಡು', 'ಅಘವಡು' ಎಂಬವು 'ಅಗಪಡು,' 'ಅಗವಡು' ಎಂಬವುಗಳ ಈಚಿನ ರೂಪಾಂತರಗಳೆಂದು ತೋರುತ್ತದೆ. [ಅಘ$_0$ (< ಅಗ$_{-1}$ ?) + ಪಡು$_1$]

**ಅಘಮರುಷಣ** (ನಾ). = ಅಘಮರ್ಷಣ. 'ಅಘಮರುಷಣಂಗೆಯ್' ಪರಾ. [ಸಂ. ಅಘಮರ್ಷಣ]

**ಅಘಮರುಷಣಂಗೆಯ್** (ಕ್ರಿ). ಪಾಪನಿವಾರಕವಾದ ಮಂತ್ರೋಚ್ಚಾರಣೆಯೊಡನೆ ಸ್ನಾನಮಾಡು: ಸರಸಿಗಳ ಪುಣ್ಯೋದಕದಲಘಮರುಷಣಂಗೆಯ್ದು (ತೊರರಾ. ೧–೯–೧೫). [ಅಘಮರುಷಣ + ಗೆಯ್]

**ಅಘಮರ್ಷ** (ನಾ). ಜಪ: "ಜಪಮಘಮರ್ಷಂ" (ವಸ್ತುಕೋ. ೫೭–೩೫). [ಸಂ.]

**ಅಘಮರ್ಷಣ** (ನಾ). ೧. ಪಾಪವನ್ನು ಕಳೆಯುವುದು; ಪಾಪನಿವಾರಣೆ. ೨. ಅಘಮರ್ಷಣ ಮಂತ್ರ. ೩. ಆ ಮಂತ್ರದ ದ್ರಷ್ಟಾರನಾದ ಋಷಿ. [ಸಂ. (ಅಘ + ಮರ್ಷಣ)]

**ಅಘರಿಪು** (ನಾ). ೧. ಪಾಪಕ್ಕೆ ಶತ್ರು. ೨. ಅಘಾಸುರನ ಶತ್ರು; ಶ್ರೀಕೃಷ್ಣ. [ಅಘ + ರಿಪು]

**ಅಘವಡು** 'ಅಘಪಡು' ನೋ.

**ಅಘವಿಘಟನ** (ನಾ). ಪಾಪವು ನಾಶವಾಗುವುದು; ಪಾಪಕ್ಷಯ: ಅಮರಪಟಹಧ್ವನಿಗಳ್ ಮೊಱಗಿದುವಾಶಾರಿಕತನು ನೆಱಲಂತಿರೆ ನೆಲಕೆ ವಂದುದಘವಿಘಟನದಿಂ (ಶಾಂತಿಪು. ೧೨–೩೩). [ಅಘ + ವಿಘಟನ]

**ಅಘಹರ** (ಗು). ೧. ಪಾಪವನ್ನು ನಾಶಮಾಡುವ. (ನಾ). ೨. ಪಾಪವು ನಾಶವಾಗುವುದು: ಬಿಡೆ ಕೇಳ್ದಡಘಹರಂ ನೆನೆಯೆ ಪುಣ್ಯಾಘ ನುಡಿದಡೆ ಸರ್ವಸಿದ್ಧಿ (ಹಚಕಾ. ೧೦–೩೦). [ಅಘ + ಹರ$_2$]

**ಅಘಹಾರಿ** (ನಾ). = ಪಾಪವನ್ನು ನಾಶಮಾಡುವವನು: ಭಾಗವತಜನಲೋಲುಪನು ಬಂದ ಭಾವಿಸುವಡಘಹಾರಿ ಬಂದನು (ಕುವ್ಯಾಉ. ೮–೫೨). [ಸಂ. ಅಘಹಾರಿನ್]

**ಅಘಾಟ** (ನಾ). ಅದ್ಭುತ; ಅತಿಶಯ; ಲೋಕೋತ್ತರತೆ: ಉಳಿದರಿಬ್ಬರು ನಿಲುವರೇ ಕುರುಪತಿಯಘಾಟದ ಗದೆಯ ಗಾಯದಲಿ (ಕುವ್ಯಾಗ. ೫–೫೦); ಅತಿಬಲರನನುಪಮ ರಣದಘಾಟಕಿರೀಟವರ್ಧನರ (ತೊರರಾ. ೬–೨೦–೩). [← ?. ಮರಾ. ಅಘಾಡ್]

**ಅಘಾತಿ** (ಗು). ೧. ಕೊಲ್ಲದ; ತೊಂದರೆ ಮಾಡದ; ಅಪಾಯಕರವಲ್ಲದ. ೨. [ಜೈನ] ಜೀವದ ಅನಂತಜ್ಞಾನಾದಿ ಗುಣಗಳನ್ನು ನಾಶಮಾಡದ (ಕರ್ಮಗಳು): 'ಅಘಾತಿ ಕರ್ಮ' ಪರಾ. [ಸಂ. ಅಘಾತಿನ್]

**ಅಘಾತಿಕರ್ಮ** (ನಾ). [ಜೈನ] "ಅಘಾತಿಕರ್ಮಗಳಲ್ಲಿ ವೇದನೀಯ, ಆಯು, ನಾಮುಗೋತ್ರ—ಎಂದು ನಾಲ್ಕುಬಗೆಯಾಗಿವೆ" (ಜೈನಪ. ೩೬೬). 'ಅಘಾತಿ' ಪರಾ. [ಅಘಾತಿ + ಕರ್ಮ]

**ಅಘಾರಿ** (ನಾ). ಪಾಪಕ್ಕೆ ಶತ್ರು: ಅಮಿತಕೀರ್ತಿ ಕೇವಳಿಯಂ ಬಂಧಿಸಿ ಮಧ್ವಪಪದ್ಧತಿಯಂ ಬೆಸಗೊಳೆ ಬೆಸಸಿದನಘಾರಿ ದಿವ್ಯಧ್ವನಿಯಿಂ (ಶಾಂತಿಪು. ೬–೮೫). [ಅಘ + ಅರಿ$_6$]

**ಅಘೋರ** (ಗು). ೧. ಘೋರವಲ್ಲದ; ಭಯಂಕರವಲ್ಲದ. ೨. ಅತಿಭಯಂಕರ; ಘೋರ: ಮಱೆಯದಘೋರ ದುಶ್ಚರ ತಪಶ್ಚರಿತಂ ಮಳಧಾರಿದೇವರ (ಎಕ. II, ೧೧೬–೯೨; 1123). 'ಅಘೋರತಪ' ಪರಾ. ೩. ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ, ಈಶಾನ ಎಂಬ ಶಿವನ ಪಂಚಮುಖಗಳಲ್ಲಿ ಒಂದು. [ಸಂ.]

**ಅಘೋರತಪ** (ನಾ). ಘೋರವಾದ ತಪಸ್ಸು: ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ ಅಯ್ಯಾ? ಅಘೋರತಪವ ಮಾಡಿದೊಡೇನು? ಅಂತರಂಗ–ಆತ್ಮಶುದ್ಧಿಯಿಲ್ಲದವರನೆಂತು ನಂಬುವನಯ್ಯಾ (ಬಸವ. ೧೧೬). [ಸಂ. ಅಘೋರತಪಸ್ (ಅಘೋರ + ತಪಸ್)]

**ಅಘೋರನರಕ** (ನಾ). ಅಘೋರವೆಂಬ ನರಕ: ಭೋಗಾದಿ ಭೋಗವ

ಸಮವಾಗಿ ಭೋಗಿಸಲು ಅಘೋರನರಕದಲ್ಲಿಕ್ಕುವ ಕೂಡಲಸಂಗಮದೇವ (ಬಸವ. ೭೮೨). [ಅಘೋರ + ನರಕ]

**ಅಘೋರಾಸ್ತ್ರ** (ನಾ). ಶಿವಮಂತ್ರೋಚ್ಚಾರಣೆ ಮಾಡಿ ಪ್ರಯೋಗಿಸುವ ಅಸ್ತ್ರಗಳಲ್ಲಿ ಒಂದು: ಶಿವಾಸ್ತ್ರ ಕ್ಷುರಿಕಾಸ್ತ್ರ ಪಾಶುಪತಾಸ್ತ್ರ ವ್ಯೋಮಾಸ್ತ್ರ ಅಘೋರಾಸ್ತ್ರಮೆಂಬ ಪಂಚಾಸ್ತ್ರ ಮಹಾಮಂತ್ರಗಳಂ (ವಿವೇಕ. ೮೧). [ಅಘೋರ + ಅಸ್ತ್ರ]

**ಅಘೋಷ** (ಗು). ೧. ಧ್ವನಿಯಿಲ್ಲದ; ಸದ್ದಿಲ್ಲದ. ೨. [ವ್ಯಾಕ] ಘೋಷ ತಂತುಗಳ ಸ್ಪಂದನವಿಲ್ಲದೆ ಉಚ್ಚರಿಸುವ (ವರ್ಣ). ಉದಾ— ವರ್ಗೀಯ ವ್ಯಂಜನಗಳಲ್ಲಿ ವರ್ಗದ ಪ್ರಥಮ ದ್ವಿತೀಯ ವರ್ಣಗಳು, ಅವರ್ಗೀಯಗಳಲ್ಲಿ ಶ್, ಷ್, ಸ್ ಎಂಬವು. [ಸಂ.]

**ಅಘ್ರಾರ** 'ಅಗ್ರಾರ' ನೋ.

**ಅಚಂಗೆ** (ನಾ). ಒಂದು ಗಿಡ (ಮೈಔಗಿ. ೬೮–೧೩೮೭). [?]

**ಅಚಂಡ** (ಗು). ಚಂಡವಲ್ಲದ; ಬಿರುಸಲ್ಲದ; ಕೋಪವಿಲ್ಲದ; ಸಾಧುವಾದ. [ಸಂ.]

**ಅಚಂಡಿ** (ನಾ). ಸಾಧುವಾದ ಹಸು. [ಸಂ. ಅಚಂಡೀ]

**ಅಚಕ್ಷು** (ನಾ). ೧. ಕಣ್ಣಿಲ್ಲದವನು; ಕುರುಡ. ೨. ಕೆಟ್ಟುಹೋದ ಕಣ್ಣು; ಅಳಿಗಣ್ಣು: "ಅಚಕ್ಷುವೆಂಬುದು ಅಱಿಗಣ್ಣು" (ಹಲಾಯು. ೧೨೭–೮೭); "ಅಚಕ್ಷುವೆನಲಳಿಗಣ್ಣೆನಿಕ್ಕು" (ಮಂಗರಾ. ೧೩೫–೬೭). [ಸಂ. ಅಚಕ್ಷುಸ್]

**ಅಚಕ್ಷುರ್ದರ್ಶನ** (ನಾ). [ಜೈನ] ಕಣ್ಣನ್ನು ಉಳಿದ ಇಂದ್ರಿಯಗಳು ಮತ್ತು ಮನಸ್ಸು ಇವುಗಳಿಂದ ಒದಗುವ ದೃಷ್ಟಿ: ಚಕ್ಷುರ್ದರ್ಶನಾವರಣೀಯಮಚಕ್ಷುರ್ದರ್ಶನಾವರಣೀಯಂ... ಭೇದದಿಂ ನವವಿಧಭೇದಮಪ್ಪ ದರ್ಶನಾವರಣೀಯಮುಮಂ (ಸುಕುಮಾ. ೩–೩೯ ವ); ಚಕ್ಷುಃ–ಚಕ್ಷುರಿಂದ್ರಿಯದ ಕಾಣ್ಕೆ ಚಕ್ಷುರ್ದರ್ಶನಂ ಅದಂ ಮಱೆಯಿಸುವುದು ಚಕ್ಷುರ್ದರ್ಶನಾವರಣೀಯಂ, ಅಚಕ್ಷುಃ– ಉಳಿದಿಂದ್ರಿಯಂಗಳ ಮನದ ಕಾಣ್ಕೆ ಅಚಕ್ಷುರ್ದರ್ಶನಂ ಅದಂ ಮಱೆಯಿಸುವುದು ಅಚಕ್ಷುರ್ದರ್ಶನಾವರಣೀಯಂ (ತತ್ತ್ವಪ್ರ. ೨೯೨). [ಸಂ. (ಅಚಕ್ಷುಸ್ + ದರ್ಶನ)]

**ಅಚತುರ** (ಗು). ಚತುರನಲ್ಲದ. [ಸಂ.]

**ಅಚತುರೆ** (ನಾ). ಚತುರೆಯಲ್ಲದವಳು. [ಸಂ. ಅಚತುರಾ]

**ಅಚಪಲ** (ಗು). ೧. ಚಪಲವಿಲ್ಲದ. ೨. ಸ್ಥಿರವಾದ. [ಸಂ.]

**ಅಚಬಾಬು, ಅಚ್ಚವಾವು** (ನಾ). ಅವಶ್ಯವಾದ ಸಾಮುಗ್ರಿ, —ಉಪಕರಣ (ಸ್ಯಾಂಡರ್). **ಅಚ್ಚವಾವು** (ಸ್ಯಾಂಡರ್). [← ಪಾರ. ಹಿಂ. ಅಸ್‌ಬಾಬ್]

**ಅಚಮತ್ಕಾರ** (ನಾ). ಚಮತ್ಕಾರವಿಲ್ಲದಿರುವಿಕೆ: ವೈರಿಪದವಪಶಬ್ದವಚಮತ್ಕಾರವಥಮೋಪಮೆ... ಎನಿಪ್ಪ ಪೊಳ್ಳಂ ತೂಱಿ ಕಳೆದು (ಬಸವು. ೧–೧೮). [ಸಂ.]

**ಅಚರ** (ಗು). ೧. ಚಲನವಿಲ್ಲದ; ಇದ್ದಲ್ಲಿಯೇ ಇರುವ. (ನಾ). ೨. ಸ್ಥಾವರ; ಜಡ: ಚರಮಚರಮೆಂಬ ಜಗದಂತರದೊಳ್ ಖಳನೆಲ್ಲಿ ಪೊಕ್ಕೊಡಂ... ಕೊಲ್ಲದಿರೆಂ (ಗದಾಯ. ೬–೨೨). [ಸಂ.]

**ಅಚರಸ** (ನಾ). ಒಬ್ಬನ ಹೆಸರು: ಮಹಾಪ್ರದಾನ ಅಚರಸವೊಡೆಯರೂ ಬಾರಕೂರ ರಾಜದಾನಿಯಲ್ಲಿದ್ದು (ಕಇ. I, ೫೮–೪; 1446). [ಅಚ್ಚ$_0$ (< ಅಚ < ಅಯ್ಯ)+ ಅರಸ. P 'ಅಚೆಯನಾಯಕ' ಪರಾ.]

**ಅಚಲ, ಅಚಳ** (ಗು). ೧. ಚಲಿಸದ; ಅಲ್ಲಾಡದ; ಸ್ಥಿರ. ೨. ಶಾಶ್ವತ; ನಿತ್ಯ. (ನಾ). ೩. ಬೆಟ್ಟ. ೪. ಮೋಕ್ಷ. ೫. ಯೋಗಿ. ೬. ಕಿರಣ. ೭. ಪಾಮರ. ೮. ಅಗಣಿ. ೯. ಏಳು ಎಂಬ ಸಂಖ್ಯೆಗೆ ಒಂದು ಸಂಕೇತ: "ಅದ್ರಿ ಮರೀಚಿ ನಿತ್ಯ ಪಾಮರಮಪವರ್ಗಮುಂ ಪರಮಯೋಗಿಗಳಿಂತಚಲಾಖ್ಯ ಸಂತತಂ" (ನಾನಾರ. ೪೨). **ಅಚಳೆ**: ೧೦. ಪರಮಾತ್ಮ: ೫,೧೦. ಅಚಳನ ದೆಸೆಯಿಂದುದಯಿಸುವ ಚರಾಚರಮಚಳ[ಳ]ನಿಂದೆ ಪೊಜಗಣವಲ್ತೆಂದಚಳಿತಚಿತ್ತದಿನಿರ್ಪ್ಪಂ ಪ್ರಚಣ್ಡನದ್ವೈತಿ ನಿರುಪಮಂ ಗುಣಗಳ್ಳ (ಎಕ. VII, ಶಿಕಾರಿ. ೧೨೫–೨೧; 1071). [ಸಂ.]

**ಅಚಲತಾರೆ** (ನಾ). ಸ್ಥಿರವಾದ ನಕ್ಷತ್ರ. [ಅಚಲ + ತಾರ್ಕ್ಷ]

**ಅಚಲಪದ** (ನಾ). ಶಾಶ್ವತ ಪದವಿ; ಮೋಕ್ಷ: ಹುಟ್ಟ ಸಾವ ಭವಾಟವಿಯ ಕೆಡುವಟ್ಟೆಯನು ಕಳೆದಚಲಪದದಲಿ ನೆಟ್ಟನಚಲಿತನಾಗಿ ನೆಱೆ ಸುಖಿಯಾಗು (ನಿಭಾಗ. ೫–೮–೩೮). [ಅಚಲ + ಪದ]

**ಅಚಲರಿಪು** (ನಾ). ಪರ್ವತಗಳ ಶತ್ರು; ಇಂದ್ರ. [ಅಚಲ + ರಿಪು]

**ಅಚಲಸುತೆ** (ನಾ). ಪರ್ವತಪುತ್ರಿ; ಪಾರ್ವತಿ: ಮುಡಿಯೊಳಗಮರಾಪಗೆಯ ತಳೆದು ತೊಡೆಯೆಡೆಯೊಳಗಚಲಸುತೆಯನಾಂತು ಪೊಡೆಯೊಳಗಖಿಲ ಜಗಂಗಳ ನಿಲಿಸಿದ ಮೃಡ (ತ್ರಿಭುತಿ. ೧–೩). [ಅಚಲ + ಸುತೆ]

**ಅಚಲಿತ, ಅಚಳಿತ** (ಗು). ಅಲುಗಾಡದ; ಸ್ಥಿರ: ಘೋರತಪದಚಲಿತರನೀಕ್ಷಿಸಿದನವನೀಶನು (ಹಚಕಾ. ೬–೩೫). **ಅಚಳಿತ**: 'ಅಚಳಿತಚಿತ್ತ' ಪರಾ. [ಸಂ.]

**ಅಚಲೆ** (ನಾ). ಭೂಮಿ. [ಸಂ.]

**ಅಚಲೇಂದ್ರ** (ನಾ). ಪರ್ವತರಾಜ: 'ಅಚಲೇಂದ್ರತನುಜೆ' ಪರಾ. [ಅಚಲ + ಇಂದ್ರ]

**ಅಚಲೇಂದ್ರತನುಜೆ** (ನಾ). ಪರ್ವತರಾಜನ ಪುತ್ರಿ; ಪಾರ್ವತಿ: ಬೀಸದು ಬಿಜುಸುಗಾಳಿ... ತರುಗಳಲ್ಲಿ ಪರ್ಣ್ಕಾಯ್ಗಳಂ ಬೀಯಲೀಸದು ಸಮಸ್ತ ಋತುಸಮಯಂಗಳಚಲೇಂದ್ರತನುಜೆ ತಪಮಿರೆ ಬನದೊಳು (ಜೈಮಿಭಾ. ೧೫–೧೭). [ಅಚಲೇಂದ್ರ + ತನುಜೆ]

**ಅಚಳ** 'ಅಚಲ' ನೋ.

**ಅಚಳಿತ** 'ಅಚಲಿತ' ನೋ.

**ಅಚಳಿತಚಿತ್ತ** (ನಾ). ಸ್ಥಿರವಾದ ಮನಸ್ಸು: ಅಚಳಿತಚಿತ್ತದಿನಿರ್ಪ್ಪಂ ಪ್ರಚಣ್ಡನದ್ವೈತಿ ನಿರುಪಮಂ ಗುಣಗಳ್ಳ (ಎಕ. VII, ಶಿಕಾರಿ. ೧೨೫–೨೧; 1071). [ಅಚಳಿತ + ಚಿತ್ತ]

**ಅಚಳಿಯಂ** (ಅ). (ಬ್ರಹ್ಮಚರ್ಯ ಮುಂತಾದ ನಿಷ್ಠೆಗಳಲ್ಲಿ) ಅಚಲಿತವಾಗಿ; ಸ್ಥಿರವಾಗಿ: ಅಯ್ದು ಗದ್ಯಾಣಂ ಅಚಳಿಯಮಿಪ್ಪವಗ್ಗೆ ಕೊಟ್ಟುದು (ಇಆ. VIII, ೨೮೭–೨; 900). [ಪ್ರಾ. ಅಚಲಿಅಂ (< ಸಂ. ಅಚಲಿತಂ)]

**ಅಚಾತುರ್ಯ** (ನಾ). ೧. ಚಾತುರ್ಯವಿಲ್ಲದಿರುವಿಕೆ; ಜಾಣತನವಿಲ್ಲದಿರುವಿಕೆ. ೨. ಪ್ರಮಾದ: ಅವನು ಮನೆಗೆ ಹಿಂದಿರುಗುವಷ್ಟರಲ್ಲಿ ಒಂದು ಅನಿರೀಕ್ಷಿತವಾದ ಅಚಾತುರ್ಯ ನಡೆದುಹೋಗಿತ್ತು (ರೂಢಿ). [ಸಂ.]

**ಅಚಾನಕ** (ಗು). ಅನಿರೀಕ್ಷಿತ: ಮಾವನಿಗೆ ನನ್ನ ಆಗಮನ ಅಚಾನಕವೆನಿಸಿದ್ದರೆ ಹೆಚ್ಚು ಪರಿಣಾಮಕಾರಿಯಾಗಬಹುದಿತ್ತು (ದೀಪನಿ. ೧೫೭); ತುಳಸಿಯ ಹರಿಣಾಕ್ಷಿಯಲ್ಲಿಯ ಚಂಚಲತೆ ದೀಪ್ತಿ ಅಚಾನಕ ಮುಗುಳುನಗೆಯ ಮಿಸುನಿ 'ನಮಸ್ತೆ' ಹೇಳಿದ ಶೀವಿ ಅವನಿಗೆ ತೀರ ಅಪರಿಚಿತ (ದೀಪಹ. ೧೦೭). [← ಮರಾ. ಹಿಂ. ಅಚಾನಕ್]

**ಅಚಾಲ್ಯ** (ಗು). ಅಲ್ಲಾಡಿಸಲಾಗದ; ದೃಢ; ಶಾಶ್ವತ. [ಸಂ.]

**ಅಚಿಂತ** (ನಾ). ಚಿಂತೆಯಿಲ್ಲದವನು: ಅಭವರವ್ಯಯರಮಿತಮಹಿಮರಚಿಂತರಕ್ಷಯರಾದ್ಯರನುಪಮರು (ಬಸವು. ೮–೪೭). [ಸಂ.]

**ಅಚಿಂತ್ಯ** (ಗು). ೧. ಚಿಂತಿಸಲಾಗದ; ಕಲ್ಪನೆಗೆ ಮೀರಿದ. (ನಾ). ೨. ಪಾದರಸ. ೩. ಒಂದು ಅಂಕಿಯ ಮುಂದೆ ಮೂವತ್ತೊಂದು ಸೊನ್ನೆಗಳನ್ನು ಅಥವಾ ಅಂಕಿಗಳನ್ನು ಇಟ್ಟರೆ ಆಗುವ ಸಂಖ್ಯೆ (ಸ್ಯಾಂಡರ್). [ಸಂ.]

**ಅಚಿಕ್ಕಣ** (ಗು). ಮೃದುವಲ್ಲದ ; ಒರಟಾದ. [ಸಂ.]

**ಅಚಿತ** (ಗು). ೧. ರಾಶಿಮಾಡದ. (ನಾ). ೨. ಹತ್ತು ಖಂಡುಗದ ತೂಕ ; ಒಂದು ಗಾಡಿಗೆ ತುಂಬುವಷ್ಟು (ಕಿಸಂಗ್ಲಾ. ೧೬೧) : ಹತ್ತ[ತ್ತುಹ]ಣ ತೂಕಮೊಂದು ಗದ್ಯಾಣ ಅದು ನಾಲ್ಕಾಗಲೊಂದು ಕರ್ಷ ಅದು ನಾಲ್ಕಾಗಲೊಂದು ಹಲ ಅದು ಇಪ್ಪತ್ತಾಗಲು ವಂದು ಬಿಸಿಗೆ ಇದು ಅಯಿದಾಗಲು ಒಂದು ತೊಲೆ ಆ ತೊಲೆ ಇಪ್ಪತ್ತಾಗಲು ವಂದು ಭಾರ ಆ ಭಾರ ಹತ್ತಾಗಲೊಂದು ಅಚಿತವಹುದು (ವಿವೇಕ. ೬). [ಸಂ.]

**ಅಚಿತ್ತು** (ನಾ). "ಚಿತ್" ಅಲ್ಲದ್ದು ; ಅಚೇತನ ; ಜಡ. [ಸಂ. ಅಚಿತ್]

**ಅಚಿನ್ನಿದ್ರೆ** (ನಾ). ಜಡತೆ ತುಂಬಿದ ನಿದ್ದೆ ; ಎಚ್ಚರಗೊಳಿಸಲಾಗದ ನಿದ್ದೆ : ಜ್ಯೋತಿಯಾದರೂ ತಮೋಲೀಲೆಯಲಿ ಜಡದ ಮುದ್ರೆಯಾದೆ. ಎನಿತು ಕರೆದರೂ ಓಕೊಳ್ಳದಿರುವ ಅಚಿನ್ನಿದ್ರೆಯಾದೆ (ಅಗ್ನಿಹಂ. ೯೪). [ಸಂ. ಅಚಿನ್ನಿದ್ರಾ (ಅಚಿತ್ + ನಿದ್ರಾ)]

**ಅಚಿರ** (ಗು). ೧. ಬಹುಕಾಲ ನಿಲ್ಲದ ; ಕ್ಷಣಿಕ ; ಶಾಶ್ವತವಲ್ಲದ. ೨. ಇತ್ತೀಚಿನ ; ಹೊಸದಾದ. ೩. ಶೀಘ್ರ. [ಸಂ.]

**ಅಚಿರದ್ಯುತಿ** (ನಾ). ಕ್ಷಣಿಕವಾದ ಬೆಳಕು ; ಮಿಂಚು. [ಅಚಿರ + ದ್ಯುತಿ]

**ಅಚಿರಪ್ರಭೆ** (ನಾ). = ಅಚಿರದ್ಯುತಿ : ಅಚಿರಪ್ರಭೆಯುಂ ಪೆಂಡಿರ ಶುಚಿತ್ವಮುಂ ಕ್ಷಣದಿನಗ್ಗಳಂ ನಿಲ್ಕುಮೆ ಪೇಳ್ (ಪಂರಾಮಾ. ೯-೧೬೧). [ಅಚಿರ + ಪ್ರಭೆ]

**ಅಚಿರಾಂಶು** (ನಾ). = ಅಚಿರದ್ಯುತಿ : "ಅಚಿರಾಂಶುವೆನಲು . . . ಮಿಂಚಿ ನಿಕ್ಕುಂ" (ಮಂಗರಾ. ೧೩-೪) ; ಪೆರೆಯಿಕ್ಕಿ ಪೋದುವಚಿರಾಂಶುರಸನ ಘನಕಾಲವಿಷಧರಂಗಳ್ ಗಗನೋದರಗಹ್ವರದೊಳೆನಲ್ ತರತರದಿಂ ಪಸರಿಸಿದುವಂದು ಬಿಳಿಯ ಮುಗಿಲ್ಗಳ್ (ಪಂರಾಮಾ. ೬-೧೩೪). [ಅಚಿರ + ಅಂಶು]

**ಅಚುಂಬಿತ** (ಗು). ೧. ಚುಂಬಿಸಿಲ್ಲದ. ೨. ಯಾರೂ ಮುಟ್ಟದಿರುವ. ೩. ಹೊಂದಿಕೆಯಿಲ್ಲದ ; ಅಸಂಬದ್ಧ (ದಕ. ೩). ೪. ಅಸಾಧಾರಣ ; ಆಶ್ಚರ್ಯಕರ (ಗ್ಯಾರೆಟ್). [ಸಂ.]

**ಅಚುನೋದ** (ನಾ). ಒಂದು ಮೂಲಿಕೆ (ವೈಸಿಗಿ. ೩೧-೧೨೨೦). [?]

**ಅಚೆಯನಾಯಕ** (ನಾ). ಒಬ್ಬನ ಹೆಸರು : ಅಚೆಯನಾಯಕ ಮಾಡಿಸಿದ ದೀಪಮಾಲೆಯ ಕಂಬ (ಎಕ. X, ಚಿಂತಾಮ. ೭೧-೪ ; ?). [< ಅಚ್ಯ (< ಅಚ < ಅಯ್ಯ) + ಅಯ್ಯ$_1$ + ನಾಯಕ. ಪ 'ಅಚರಸ' ಪರಾ.]

**ಅಚೇತ** (ಗು). = ಅಚೇತನ ೨. [ಸಂ. ಅಚೇತಸ್]

**ಅಚೇತನ** (ಗು). ೧. ಚೇತನವಿಲ್ಲದ ; ಜಡ. ೨. ಅರಿವಿಲ್ಲದ ; ಎಚ್ಚರವಿಲ್ಲದ. [ಸಂ.]

**ಅಚೇತನವಸ್ತು** (ನಾ). ಚೈತನ್ಯವಿಲ್ಲದಿರುವ ವಸ್ತು : ದ್ರವ್ಯಗಳು ಅಚೇತನವಸ್ತುಗಳು, ಅನಾತ್ಮವಸ್ತುಗಳು, ಜೀವೇಶ್ವರವಸ್ತುಗಳು, ಚೇತನವಸ್ತುಗಳೆಂದು ವಿಭಾಗ (ಹಿಂದಸಾ. ೨೪೯). [ಅಚೇತನ + ವಸ್ತು]

**ಅಚೇತನವಾಚಕ** (ನಾ). ಅಚೇತನವಾದ ವಸ್ತುಗಳನ್ನು ತಿಳಿಸುವ ಶಬ್ದ : [ಸಂಬೋಧನೆಯಲ್ಲಿ] ಸ್ವರಾಂತವಾದ ಶಬ್ದಗಳಿಗೆ ಏಕವಚನದಲ್ಲಿ ಯಾವ ಪ್ರತ್ಯಯವೂ ಸೇರದೆ ಪ್ರಕೃತಿಯೇ ಪ್ರಯೋಗವಾಗುವುದುಂಟು. ಆಗ ಅಂತ್ಯಸ್ವರವು ದೀರ್ಘವಾಗುವುದೂ ಉಂಟು. ಆದರೆ ಅಕಾರಾಂತವಾದ ಅಚೇತನವಾಚಕಗಳಿಗೆ ಈ ರೀತಿಯ ಪ್ರಯೋಗವಿಲ್ಲ (ಕೈಪಿಡಿ. ೪೧). [ಅಚೇತನ + ವಾಚಕ]

**ಅಚೇಲಕ** (ಗು). ವಸ್ತ್ರವಿಲ್ಲದ ; ದಿಗಂಬರ. [ಸಂ.]

**ಅಚೈತನ್ಯ** (ನಾ). ೧. ಚೈತನ್ಯವಲ್ಲದ್ದು. ೨. ಅರಿವಿಲ್ಲದಿರುವಿಕೆ ; ಅಜ್ಞಾನ. ೩. ಜಡವಸ್ತು ; ಪ್ರಪಂಚ. ೪. ಶಕ್ತಿಯಿಲ್ಲದಿರುವಿಕೆ ; ೫. ಅತಿಯಾದ ಬಡತನ (ದಕ. ೩). [ಸಂ.]

**ಅಚೋದ್ಯ** (ಗು). ಚೋದ್ಯವಲ್ಲದ ; ಆಶ್ಚರ್ಯಕರವಲ್ಲದ. [ಸಂ.]

**ಅಚೌರ್ಯ** (ನಾ). ಕದಿಯದಿರುವಿಕೆ. [ಸಂ.]

**ಅಚ್ಚ$_1$** (ಗು). ನಿರ್ಮಲ ; ಶುದ್ಧ ; ಬೆರಕೆಯಿಲ್ಲದ ; ಅಪ್ಪಟ ; ಒಳ್ಳೆಯ : "ನಿರ್ಮಲದೊಳಗಚ್ಚಮೆನಲ್" (ಕರ್ಣಾನಿ ೫೭) ; ಮಹೀಶಂ ತೆಗೆದೆಚ್ಚ ನಚ್ಚ ಬಿಸುನೆತ್ತರ ಸುಟ್ಟುರೆ ಸೂಸುವನ್ನೆಗಂ (ಪಂಪಭಾ. ೧೧-೯೮) ; ಅಚ್ಚ ಹೆಣ್ಣಿನ ಸಂಗ ಷಂಡೇನು ಬಲ್ಲ (ಪುರಂದ. ೨-೫೮-೮). 'ಅಚ್ಚಕೆಂಪು', 'ಅಚ್ಚಗನ್ನಡ', 'ಅಚ್ಚಬಂಗಾರ' ಇತ್ಯಾದಿ ಪರಾ. [ಸಂ. ಅಚ್ಛ]

**ಅಚ್ಚ$_2$** (ನಾ). ೧. ಇಂದ್ರಿಯ : ಅಂಡಲೆಗೆಯ್ಯೆಂಬುದು ಜೋಗಿಗಳಚ್ಚಂಗಳ ಮುಗ್ಗಿಸುವೆಡೆಯೊಳ್ (ಉದ್ಭದೇ. ೨-೧೩). ೨. ಜಪಮಣಿ : 'ಅಚ್ಚಸರ' ಪರಾ. [ಸಂ. ಅಕ್ಷ]

**ಅಚ್ಚಂಗಜುಂಕೆ** 'ಅಚ್ಚಗಜುಂಕೆ' ನೋ.

**ಅಚ್ಚಂಬಲಿ** (ನಾ). ಒಳ್ಳೆಯ ಅಂಬಲಿ ; ಗಂಜಿ : ಓಗರ, ತುಯ್ಯಲು, ಅಚ್ಚಂಬಲಿ, ಹುಗ್ಗಿ, ತುಪ್ಪ, ಕಬ್ಬಿನ ರಸ . . . ಬಲಿಯಂ ಕೊಡುವುದು (ಬಾಲಚಿ. ೧೨೬-೧೫). [ಅಚ್ಚ$_1$ + ಅಂಬಲಿ]

**ಅಚ್ಚಂಬೊಯ್** (ಕ್ರಿ). ಪುಟವಿಡು : ತಚ್ಚೋಣಾವನಿಪಪ್ರಭೂತದೆಸಕಂ ತನ್ನುರ್ವರಾಮಂಡಲಕ್ಕಚ್ಚಂಬೊಯ್ದು ಪರಂಜಿಯಾದುದಹಿತವ್ರಾತಕ್ಕೆ ಕಿರ್ಚಾದುದು (ಉದ್ಭಟ. ೧೨-೬೩). [ಅಚ್ಚ$_1$ + ಪೊಯ್$_1$]

**ಅಚ್ಚಕ** (ನಾ). ಕಂದಾಯ ; ತೆರಿಗೆ ; ಸುಂಕ : ಅವನಚ್ಚಕವೈಘೊಂನು (ಸ್ಯಾಂಡರ್). [?]

**ಅಚ್ಚಕನ್ನಡ** 'ಅಚ್ಚಗನ್ನಡ' ನೋ.

**ಅಚ್ಚಕಪ್ಪು** (ನಾ). ಯಾವ ಬೆರಕೆಯೂ ಇಲ್ಲದ ಕಪ್ಪುಬಣ್ಣ : ಅಚ್ಚಕಪ್ಪು ಕುದುರೆಯು ದುಷ್ಟಾಶ್ವವೆನಿಸುವುದು (ಸೌಗಂಧಿ. ೩೧೨-೧೭). [ಅಚ್ಚ$_1$ + ಕಪ್ಪು$_3$ (< ಕರ್ಪು)]

**ಅಚ್ಚಕಮ್ಮೆತ್ತಿಯಕಿ** (ನಾ). ಒಂದು ಹೆಸರು (?) : ಪೊಲಿಪುಕೊಳ್ಳಿಯುಂ ಅರಮನೆತಾಣದ ಭಾಗಮುಮನ್ ಅಚ್ಚಕಮ್ಮೆತ್ತಿ [ಪಾಠಾಂ. ಅರ್ಚಕೆಂಮೆಂತಿ] ಯಕಿ ಕೊಟ್ಟಾರ್ಸೇನನರಸರುಂ (ಎಕ. VI, ಕೊಪ್ಪ. ೩೬-೧೦ ; 675). [?]

**ಅಚ್ಚಕಾಡಿಗೆಗಣ್** (ನಾ). ಶುದ್ಧವಾದ ಕಾಡಿಗೆಯನ್ನು ಹಚ್ಚಿದ ಕಣ್ಣು : ಅಚ್ಚಕಾಡಿಗೆಗಣ್ಣ ಮಿಗೆ ಮಿಂಚುಗಣ್ಣ ಕಡುಪೊಚ್ಚಲರ್ಗಣ್ಣ ಬಲ್ಪೊಗಸೆಗಣ್ಣಬಲೆಯರ್ . . . ಬರುತಿರ್ದರುತ್ಸವದೊಳು (ಚಿ ಬ ಪು. ೩೬-೪೪). [ಅಚ್ಚ$_1$ + ಕಾಡಿಗೆ + ಕಣ್]

**ಅಚ್ಚಕೆಂಪು**, ಅಚ್ಚಗೆಂಪು (ನಾ). ಶುದ್ಧವಾದ ಕೆಂಪು ಬಣ್ಣ ; ಒಳ್ಳೆಯ ಕೆಂಪು : ಅತ್ತಿಯ ಹಣ್ಣು ಅಚ್ಚಕೆಂಪಾದರೂ ಒಳಗೆ ನೋಡಿದರೆ ಹುರುಳಿಲ್ಲ (ರೂಢಿ). **ಅಚ್ಚಗೆಂಪು** : (ಮಲಿನರಕ್ತವು) ಆಮ್ಲಜನಕದ ಸಂಯೋಗದಿಂದ ಮತ್ತೆ ಅಚ[ಚ್ಚ]ಗೆಂಪಾಗುತ್ತದೆ (ಮುಂಬಯಿ. ೬-೩೨೬). [ಅಚ್ಚ$_1$ + ಕೆಂಪು]

**ಅಚ್ಚಕೆಚ್ಚು** (ನಾ). ಸ್ವಚ್ಛವಾದ ತಿರುಳು ; ಶುದ್ಧಸತ್ತ್ವ : ಒಸಗೆ ಬೀರಲಿ ಅಚ್ಚಕೆಚ್ಚು ಕನ್ನಡ ಹುರುಳು (ಗಂಗಾವ. ೩೯-೧೨). [ಅಚ್ಚ$_1$ + ಕೆಚ್ಚು$_2$]

**ಅಚ್ಚಕ್ಕಿ** (ನಾ). (ಉಕ) ಹೊಟ್ಟು, ಕಲ್ಲು, ಧೂಳು ಇಲ್ಲದ ಹಸನಾದ ಅಕ್ಕಿ. [ಅಚ್ಚ$_1$ + ಅಕ್ಕಿ$_1$]

**ಅಚ್ಚಕ್ಷರ** (ನಾ). ಅಚ್ಚಿನ ಅಕ್ಷರ ; ಮುದ್ರಣದ ಅಕ್ಷರ. [ಅಚ್ಚು$_2$ + ಅಕ್ಷರ]

**ಅಚ್ಚಗಂಪು** (ನಾ). ಹೊಸ ಕಂಪು ; ಬೆರಕೆಯಿಲ್ಲದ ವಾಸನೆ ; ಪರಿಮಳ : ಗೊಂಚಲೊಳೋಳಿಯೆ ಪಾಯ್ದುದಚ್ಚಗಂಪಿನೊಳವಿನಾಣಮಾಗೆ . . . ಮತ್ತ

ಮಧುವ್ರತಾಳಿಗಳ್ (ಶಾಂತಿಪು. ೬–೧೨೫); ಅಚ್ಚಗಂಪಿನ ಸಿರಿಕೆಂಡದಬ್ಬು (ಅರ್ಧನೇ. ೨–೧೪); ಬಿಡದೆಸಪೆಲರಿಂದಂ ಪೊಣ್ಮುತಿರ್ಪಚ್ಚಗಂಪಂ (ಕಬ್ಬಿಕಾ. ೨೩೫); ಚೂತವಲ್ಲರಿಯಲರಚ್ಚಗಂಪು ಬಗೆಗೊಂಡುದು(ರಾಜಶೇ. ೧೧–೧೯). [ಅಚ್ಚ₁ + ಕಂಪು]

**ಅಚ್ಚಗಂಬಿ** (ನಾ). ಬಿಳಿಯ ಗೀರಿನ ಅಂಚು : ಅಚ್ಚಗಂಬಿಯುಳ್ಳ ಹಚ್ಚಡವ ಹೊದ್ದವ್ನೆ (ಹುಟ್ಟಹ. ೩೦). [ಅಚ್ಚ₁ + ಕಂಬಿ₂]

**ಅಚ್ಚಗಗೊಳ್** 'ಅಚ್ಚಿಗಂಗೊಳ್' ನೋ.

**ಅಚ್ಚಗಡೆ** (ನಾ). ನಿರ್ಮಲವಾದ ಅಥವಾ ಸೊಗಸಾದ ರಂಗೋಲಿ : ಕರ್ಪೂರಪಾಳಿಪ್ರದೀಪದಿನೆತ್ತಂ ಬಿಡುಮುತ್ತಿನಚ್ಚಗಡೆಯಿಂ ಮಂದಾರ ಪುಷ್ಪೋಪಹಾರದಿಂ (ಶಾಂತಿಪು. ೬–೩೬). [ಅಚ್ಚ₁ + ಕಡೆ₂]

**ಅಚ್ಚಗದಿರು** (ನಾ). ಶುಭ್ರವಾದ ಕಿರಣ; ಹೊಳೆಯುವ ಕಾಂತಿ : ಮೃಗಶಾಬಾಂಕಮುಖದ ಮುಗ್ಧೆಯೊರ್ವಳ ನಗೆಗಣ್ಣೊನೆಯಚ್ಚಗದಿರಾ ಸೊಗಸುಗೊನರ (ಶ್ರೀಪಾಲ. ೯–೨೫). [ಅಚ್ಚ₁ + ಕದಿರು₁ (< ಕದಿರ್)]

**ಅಚ್ಚಗನ್ನಡ**, ಅಚ್ಚಕನ್ನಡ (ನಾ). ೧. ಶುದ್ಧವಾದ ಕನ್ನಡ : ಇಂಬು ವಡೆದಿರಲಚ್ಚಗನ್ನಡದ ನುಡಿ (ಸೌಂದಪು. ೧–೧೯). ೨. ದೇಶ್ಯ ಮತ್ತು ತದ್ಭವ ಶಬ್ದಗಳಿಂದ ಮಾತ್ರ ಕೂಡಿದ ಕನ್ನಡ: ಅಚ್ಚಗನ್ನಡಂ ಬಿಗಿವೊಂದಿರೆ ಕಬ್ಬಿಗರಕಾವನೊಲವಿಂದೊರೆದೆಂ (ಕಬ್ಬಿಕಾ. ೧೬); ನಾಲ್ವತ್ತೇಳುಮಾಯ್ತಳೆ ಶುದ್ಧಗೆಯಚ್ಚಗನ್ನಡಕ್ಕೀ ಕ್ರಮದಿಂ (ಶಮದ. ೩೩).

**ಅಚ್ಚಕನ್ನಡ** (೩). [ಅಚ್ಚ₁ + ಕನ್ನಡ]

**ಅಚ್ಚಗನ್ನಡಿಗ** (ನಾ). ೧. ಕನ್ನಡವೇ ತಾಯ್ನುಡಿಯಾಗಿರುವ ಕನ್ನಡಿಗ. ೨. ಕನ್ನಡದಲ್ಲಿ ಅತಿಶಯವಾದ ಅಭಿಮಾನವಿರುವ ಕನ್ನಡಿಗ : ಅಚ್ಚಗನ್ನಡಿಗರು ಈ ಭಾಗದಲ್ಲಿ ಅಸಮಾಧಾನಪಡಬಾರದೆಂದು ನನ್ನ ಪ್ರಾರ್ಥನೆ (ಇಂಗೀತಿ. ಅರಿಕೆ. ೪). [ಅಚ್ಚಗನ್ನಡ + –ಇಗ]

**ಅಚ್ಚಗಜುಂಕೆ**, ಅಚ್ಚಂಗಜುಕೆ (ನಾ). ಸೊಗಸಾದ, ಕೋಮಲವಾದ ಗರಿಕೆ; ದೂರ್ವೆ : ನಸುಮೆಲ್ಲದಚ್ಚಗಜುಂಕೆ ಸೂಸುತಿದೆ ಪೋದತ್ತಲ್ಲಿ ನಾನಾಮೃಗಂ (ಕಾದಂಪೂ. ೧೫೭); ಕೊಡೆ ಗುಡಿ ತೋರಣಂ ದಧಿ ಮಧುದ್ರವಮಚ್ಚಗಜುಂಕೆ ಲಾಜೆ (ಕಾವ್ಯಾವ. ೬೩೨); ಅಚ್ಚಗಜುಂಕೆಯನಾಯ್ದು ಮೆಯ್ದು ತಳ್ತೊಲವಿನೊಳಿರ್ಪ (ಶಾಂತೀಶ್ವ. ೧೩–೧೪೯). **ಅಚ್ಚಂಗಜುಕೆ**: ಫಲಮಕ್ಷತ ಕಮಲಾಕ್ಷತಮಲರಚ್ಚಂಗಜುಕೆ ಮಂಗಳದ್ರವ್ಯಂಗಳ್ (ಅಜಿಪು. ೪–೪೦). ☞ 'ಅಚ್ಚಂಗಜುಕೆ' ಎಂಬುದು 'ಅಚ್ಚಗಜುಂಕೆ' ಎಂಬುದರ ಅಪಲಿಖಿತವಾಗಿರಬಹುದು. [ಅಚ್ಚ₁ + ಗಜುಂಕೆ]

**ಅಚ್ಚಗೆಂಡ** (ನಾ). ನಿಗಿನಿಗಿ ಕೆಂಡ; ತನಿಗೆಂಡ; ಥಳಥಳಿಸುವ ಕೆಂಡ : ಮೇಳಿಸಿ ಜೀವಾವಳಿಗಳ ತಾಳಿಸುವರನಚ್ಚಗೆಂಡದೊಳ್ ಕಾವಲಿಯೊಳ್ ತಾಳಿಸುವರ್ (ಸುಕುಮಾ. ೧೧–೪೬). [ಅಚ್ಚ₁ + ಕೆಂಡ]

**ಅಚ್ಚಗೆಂಪು** 'ಅಚ್ಚಕೆಂಪು' ನೋ.

**ಅಚ್ಚಗೊಂಡ** (ನಾ). ತನಿಗೆಂಡವುಳ್ಳ ಕೊಂಡ: ಕರ್ವಿನ ಗಾಣದೊಳ್ ಮಜುಗುವಾಣದೊಳೆಣ್ಣೆಯ ಕುಂಡದೊಳ್ ಕನಲ್ದುರ್ವಿಸುವಚ್ಚಗೊಂಡದೊಳಗುರ್ವಿಸೆ ಸೀಳಿಸಿ ಮಾಣದಿಕ್ಕೆ ಪೋಟ್ಟುರ್ವಗಿಮಾಡಿ ತಾಳಿಸೆ(ಶಾಂತಿಪು. ೬–೯೫). [ಅಚ್ಚ₁ + ಕೊಂಡ₂]

**ಅಚ್ಚಚರ್ಮ** (ನಾ). "ಮೇಲ್ಚರ್ಮದ ಅಡಿಯಲ್ಲಿಯ ಅಚ್ಚಚರ್ಮ" (= Corium. ಇಂಕಠ). [ಅಚ್ಚ₁ + ಚರ್ಮ]

**ಅಚ್ಚಜೌವನೆ** (ನಾ). ಹೊಸ ಪ್ರಾಯದವಳು; ನವಯುವತಿ: ನೀರೆಜಾಣೆ ವಚ್ಚಜೌವನೆಯ ಮೇಲುದು ಮೆಲ್ಲನೆ ಜಾಱೆ (ರಾಜಶೇ. ೨–೨೬). [ಅಚ್ಚ₁ + ಜೌವನೆ]

**ಅಚ್ಚಟ** (ಅ). ಸ್ಥಿರವಾಗಿ; ಶಾಶ್ವತವಾಗಿ: ನೆಚ್ಚದಿರು ಈ ಕಾಯ ನಿಚ್ಚಳ ನಿನ್ನಾಧೀನ ಅಚ್ಚಟ ಇಪ್ಪನೆಂದು (ವಿಸಾಸು. ೧–೨೧–೧). [ಅಚ್ಚ₁ + ?]

**ಅಚ್ಚಣಿಸು** (ಕ್ರಿ). "ಮನಸ್ಸಿನ ಸಂಕಟವನ್ನು ಚೆನ್ನಾಗಿ ತೋರಿಸು" (ಶಾಮಣ್ಣ). [? + –ಇಸು₃]

**ಅಚ್ಚತಾಮ್ರ** (ನಾ). ಶುದ್ಧವಾದ ತಾಮ್ರ. [ಅಚ್ಚ₁ + ತಾಮ್ರ]

**ಅಚ್ಚತೆ** (ನಾ). ಪರಿಶುದ್ಧತೆ; ಸ್ವಚ್ಛತೆ. [ಸಂ. ಅಚ್ಛತಾ]

**ಅಚ್ಚದಾವರೆ** (ನಾ). ನಿರ್ಮಲವಾದ ತಾವರೆ; ಸೊಗಸಾದ ತಾವರೆ : ನುಣ್ಮೊಗಮಿರದಚ್ಚದಾವರೆಯ ಮೆಯ್ಸಿರಿಯಂ ಪಿಡಿದೆತ್ತೆ (ಕಬ್ಬಿಕಾ. ೪೦). [ಅಚ್ಚ₁ + ತಾವರೆ (< ತಾಮರೆ)]

**ಅಚ್ಚದಿಂಗಳ್** (ನಾ). ನಿರ್ಮಲನಾದ ಚಂದ್ರ: ನುಣ್ಮೊಗವಚ್ಚದಿಂಗಳಂ ಸಂದಿಸೆ (ಕಬ್ಬಿಕಾ. ೧೩೦). [ಅಚ್ಚ₁ + ತಿಂಗಳ್]

**ಅಚ್ಚದುಗುಲ** (ನಾ). ಶುಭ್ರವಾದ ರೇಷ್ಮೆಯ ಬಟ್ಟೆ : ಕಂಗೊಳಿಪಚ್ಚದುಗುಲದಿಂದೆರೆ[ತೆಱೆ] ವಿಡಿದರ್ (ಉದ್ಭಟ. ೮–೫೬). [ಅಚ್ಚ₁ + ದುಗುಲ]

**ಅಚ್ಚದೊಗರಿ** 'ಅಚ್ಚದೊವರಿ' ನೋ.

**ಅಚ್ಚದೊವರಿ**, ಅಚ್ಚದೊಗರಿ (ನಾ). ಶುದ್ಧವಾದ, ಅಪ್ಪಟ ತೊಗರಿ : **ಅಚ್ಚದೊಗರಿ** : "ತಕಾರ ತೃತೀಯತೆಗೆ – ಅಚ್ಚತುವರಿ – ಅಚ್ಚದೊವರಿ, ಅಚ್ಚದೊಗರಿ" (ಶಮದ. ೨೯೩ ಪ್ರಯೋ). [ಅಚ್ಚ₁ + ತೊವರಿ]

**ಅಚ್ಚನ** 'ಅರ್ಚನ' ನೋ.

**ಅಚ್ಚನಂಗೈ** (ಕ್ರಿ). ಅರ್ಚನೆಮಾಡು ; ಪೂಜಿಸು : ರಘುನಂದನಂ ತತ್ತಟದೊಳಿಂದುಮೌಳಿಯನಚ್ಚನಂಗೈದು (ವೆಂಕಾರಾ. ೬–೬೫–೯). [ಅಚ್ಚನ + ಗೆಯ್]

**ಅಚ್ಚನನೆ** (ನಾ). ಶುದ್ಧವಾದ ಹೂವು : ಕೊಳದಿಂ ಮಜ್ಜನಕಾರ್ಯಮಚ್ಚನನೆಯಿಂ ಭೂಷಾವಿರೋಹಂ ಫಲಾವಳಿಯಿಂ ಭೋಜನಕೃತ್ಯಂ (ಅಜಿಪು. ೨–೧೫). [ಅಚ್ಚ₁ + ನನೆ₂]

**ಅಚ್ಚನಿಂಬೆ** (ನಾ). ಹೊಸ ನಿಂಬೆಯ ಹಣ್ಣು : ಅಚ್ಚನಿಂಬೆಯ ಹುಳಿಯ ನಿಕ್ಕಿ (ಸೂಪಶಾ. ೨–೨೯). [ಅಚ್ಚ₁ + ನಿಂಬೆ]

**ಅಚ್ಚನೆ₁** 'ಅರ್ಚನ' ನೋ.

**ಅಚ್ಚನೆ₂** (ಅ). ಸ್ವಚ್ಛವಾಗಿ; ಸೊಗಸಾಗಿ; ಚೆನ್ನಾಗಿ: ಅಚ್ಚನೆ ಬರ್ಚಲರ್ ಕುರುಳ ಕುಂಕುಮ ಧೂಳಿಯನೆತ್ತಿ ಸುತ್ತಲುಂ ಕೆಚ್ಚನೆಯಾದ ಕೌಮುದಿಯದೇನೆಸೆದಿರ್ದುದೊ (ಲೀಲಾವ. ೧೦–೬೬). [ಅಚ್ಚ₁ + –ಅನೆ]

**ಅಚ್ಚಪಳುಕು** (ನಾ). ನಿರ್ಮಲವಾದ ಸ್ಫಟಿಕ ; ಶುಭ್ರವಾದ ಸ್ಫಟಿಕ : ಬೆಳುದಿಂಗಳೊಳಗಣ ಅಚ್ಚಪಳುಕಿನ ಪರ್ವತವ ಬೆಳುದಿಂಗಳೆಂದಿಪ್ಪಂತೆ (ಅದವ. ೧೧೬). [ಅಚ್ಚ₁ + ಪಳುಕು]

**ಅಚ್ಚಪುಳು** (ನಾ). ಕ್ರಿಮಿ; ಕೀಟ : "ಕ್ರಿಮಿಕೀಟವಚ್ಚಪುಳುವಕ್ಕುಂ" (ಮಂಗರಾ. ೧೧೬–೫). [ಅಚ್ಚ₁ + ಪುಳು (< ಪುೞು)]

**ಅಚ್ಚಪೂ** (ನಾ). ಹೊಸದಾಗಿ ಅರಳಿರುವ ಹೂವು : ಅಚ್ಚಪೂಗಳನಜಿಸಿ ಕೊಯ್ದು ತಂದವಜಿಂದೆ ಪಚ್ಚವಂ ಮಾಡಿ (ಚಿಬಪು. ೩೪–೩೧). [ಅಚ್ಚ₁ + ಪೂ₂]

**ಅಚ್ಚಪ್ರಸಾದಿ** (ನಾ). [ವೀಶೈ] ಪರಿಶುದ್ಧನಾದ ಪ್ರಸಾದಿ : ವಾಯು ಪ್ರಾಣವ ಚರಿಸದೆ ಆಕಾಶಭ್ರಮೆ ಬಲಿಯದೆ ಸರ್ವಾಂಗವನರ್ಪಿಸಿ ಪ್ರಸಾದಕಾಯವಳವಟ್ಟಡೆ ಅತ ಅಚ್ಚಪ್ರಸಾದಿ (ಪ್ರಭುವ. ೮೮–೧೩ ಟೀಕೆ); ಸಕಲ ಭ್ರಮೆಯನೆ ಜಜಿದು ಗುಹೇಶ್ವರಲಿಂಗದಲ್ಲಿ ಬಸವಣ್ಣನೊಬ್ಬನೆ ಅಚ್ಚಪ್ರಸಾದಿ (ಪ್ರಭುವ. ೮೭–೮); ಬಂದ ಬಂದ ಪದಾರ್ಥವ ಆಯಾಯ ಮುಖವನಱಿದು ನಮ್ಮ ಕೂಡಲ ಚನ್ನಸಂಗಯ್ಯನೆಂಬ ಮಹಾಲಿಂಗಕ್ಕೆ ಅರ್ಪಿಸಬಲ್ಲಡೆ ಆತನೆ ಅಱಿವುಆಚಾರಸಂಪನ್ನನಾದ ಅಚ್ಚಪ್ರಸಾದಿ ಎಂಬೆನಯ್ಯ (ಚನ್ನವ. ೫೮–೫). [ಅಚ್ಚ₁ + ಪ್ರಸಾದಿ]

**ಅಚ್ಚಬಂಗಾರ** (ನಾ). ಶುದ್ಧವಾದ ಬಂಗಾರ; ಅಪ್ಪಟ ಚಿನ್ನ. (ದಕ. ೩). [ಅಚ್ಚ₁ + ಬಂಗಾರ]

**ಅಚ್ಚಬಣ್ಣ** (ನಾ). ೧. ಒಳ್ಳೆಯ ಬಣ್ಣ; ಬೆರಕೆಯಿಲ್ಲದ ಬಣ್ಣ. ೨. ಒಳ್ಳೆಯ ಬಣ್ಣದ ಸೀರೆ: ಅಚ್ಚಬಣ್ಣವನುಟ್ಟು ಉಚ್ಚೃತೈತಲೆ ಬಿಟ್ಟು ನಿಚ್ಚಲು ಸೆಜಗ ಹಾರುವಳು (ಸರ್ವಜ್ಞ. ೧೮೨೯). [ಅಚ್ಚ$_1$ + ಬಣ್ಣ]

**ಅಚ್ಚಬಲ** (ನಾ). ಶೂರಸೈನ್ಯ; ದಿಟ್ಟಸೇನೆ; ಮೂಲ ಸೈನ್ಯ (?): ಅಚ್ಚಬಲ ಬಳಿಕೊದಗಿ ಭೂತಳ ಬಿಚ್ಚೆ ಬಿಲುಜೇವಡೆಗಳಲಿ ಕವಿದೆಚ್ಚರೈ (ತೊರವೆರಾ. ೬–೧೯–೩೫). 'ಅಚ್ಚಾಳು' ಪರಾ. [ಅಚ್ಚ$_1$ + ಬಲ$_2$]

**ಅಚ್ಚಬಾಸಿಗ** (ನಾ). ಶುದ್ಧವಾದ ಹೂವಿನ ಮಾಲೆ; ಒಳ್ಳೆಯ ಹೂವುಗಳಿಂದ ಕಟ್ಟಿದ ಹಾರ: ಕಡೆಗಣ್ಣಳುಗುಟ್ಟು ಕುಡಿವೆಳಗಿಂ ಮುಡಿದ ಮಲ್ಲಿಗೆಯಚ್ಚಬಾಸಿಗಂ ದ್ವಿಗುಣಿಸೆಯುಂ (ಬಾಧವು. ೬–೧೯ ವ). [ಅಚ್ಚ$_1$ + ಬಾಸಿಗ]

**ಅಚ್ಚಬಿಳಿದು** (ಗು). ಅಪ್ಪಟ ಬಿಳಿಯ ಬಣ್ಣವುಳ್ಳ; ಪೂರ್ತಿ ಬೆಳ್ಳಗಿರುವ: ಅಚ್ಚಬಿಳಿದೆಂಬಿನಮುಟ್ಟ ದುಕೂಲಮಚ್ಚಗಂಪಿನ ಸಿರಿಕಂಡದಣ್ಪು (ಅರ್ಧನೇ. ೨–೧೪). [ಅಚ್ಚ$_1$ + ಬಿಳಿದು]

**ಅಚ್ಚಬುದ್ಧಿ** (ನಾ). ಸಹಜವಾದ, ನಿಷ್ಕಲ್ಮಷವಾದ ಬುದ್ಧಿ: ರಾಮಪ್ಪ ಬೆಂಗಳೂರಿನ ಹುಚ್ಚಿಗೆ ಸಿಕ್ಕಿ ಹಳ್ಳಿಗನ ಅಚ್ಚಬುದ್ಧಿಯನ್ನು ಕಳಕೊಂಡಿದ್ದನು (ಸಣ್ಣಕ. ೧೦–೪೪). [ಅಚ್ಚ$_1$ + ಬುದ್ಧಿ]

**ಅಚ್ಚಬೆಳಂತಿಗೆ** (ನಾ). ಪೂರ್ತಿ ಬಿಳುಪು; ಅಚ್ಚಬಿಳುಪು: ತೊಳಪಚ್ಚಬೆಳಂತಿಗೆಯೋಲೆಯಚ್ಚಮುತ್ತಿನ ತೊಡವಚ್ಚಮಲ್ಲಿಗೆಯ ಸೋರ್ಮುಡಿ (ಅರ್ಧನೇ. ೨–೧೪). [ಅಚ್ಚ$_1$ + ಬೆಳಂತಿಗೆ]

**ಅಚ್ಚಬೆಳ್ದಿಂಗಳ್** (ನಾ). ನಿರ್ಮಲವಾದ ಬೆಳುದಿಂಗಳು: ಅಂತು ಸೊಗಯಿಸುವಚ್ಚಬೆಳ್ದಿಂಗಳೊಳ್ (ಪಂಪಭಾ. ೪–೫೨ ವ); ಜಲಕ್ಕನಾದಚ್ಚಬೆಳ್ದಿಂಗಳೊಳ್ (ಶಾಂತಿಪು. ೮–೬೨ ವ); ಉನ್ಮತ್ತನಂತಚ್ಚಬೆಳ್ದಿಂಗಳೊಳೊಯ್ಯನೊಯ್ಯನೆ ಬರುತ್ತಿರ್ದನನಾಂ ದೂರದೊಳ್ ಕಂಡು ಭಯಂಗೊಂಡು (ಕಾದಂಬ. ೫೬೭). [ಅಚ್ಚ$_1$ + ಬೆಳ್ದಿಂಗಳ್]

**ಅಚ್ಚಮಣೆ** (ನಾ). (ದಕ–ಪ್ರಾದೇ) ಮದುವೆಯಲ್ಲಿ ವಧೂವರರು ಮೆಟ್ಟಕ್ಕಿಯ ಸಂದರ್ಭದಲ್ಲಿ ಮೆಟ್ಟುವುದಕ್ಕೋಸ್ಕರ ಹೊಸದಾಗಿ ಮಾಡಿಸಿದ ಮಣೆ: ಮದುವೆಗಾಗಿ ಅಚ್ಚಮಣೆ ಬಾಸಿಂಗ ತರಿಸಬೇಕು (ರೂಢಿ). [ಅಚ್ಚ$_1$ + ಮಣೆ]

**ಅಚ್ಚಮಲ್ಲಿಗೆ** (ನಾ). ಬಿಳಿಯ ಮಲ್ಲಿಗೆ ಹೂವು; ಬೇರೆ ಹೂವಿನ ಬೆರಕೆಯಿಲ್ಲದ ಮಲ್ಲಿಗೆ ಹೂವು: ಅಚ್ಚಮಲ್ಲಿಗೆಯ ಸೋರ್ಮುಡಿ (ಅರ್ಧನೇ. ೨–೧೪). [ಅಚ್ಚ$_1$ + ಮಲ್ಲಿಗೆ]

**ಅಚ್ಚಮಿಂಚು** (ನಾ). ಶುಭ್ರವಾದ ಹೊಳಪು; ಬೆಳ್ಳನೆ ಬೆಳಗುವ ಕಾಂತಿ: ಅಚ್ಚಮಿಂಚಿನ ಸುಲಿಪಲ್ಗಳಚ್ಚಬಿಳಿದೆಂಬಿನಮುಟ್ಟ ದುಕೂಲಂ (ಅರ್ಧನೇ. ೨–೧೪). [ಅಚ್ಚ$_1$ + ಮಿಂಚು$_2$]

**ಅಚ್ಚಮುತ್ತು** (ನಾ). ಶುಭ್ರಕಾಂತಿಯಿಂದ ಹೊಳೆಯುವ ಮುತ್ತು; ಶುದ್ಧವಾದ (ಕೃತಕವಲ್ಲದ) ಮುತ್ತು: ಅಚ್ಚಮುತ್ತಿನ ತೊಡವು (ಅರ್ಧನೇ. ೨–೧೪); ಅಚ್ಚಮುತ್ತಿನ ಗುದಿಗಳಿಂ ಝಲ್ಲಿ ಪಟ್ಟಗಳ ಸಂದಣಿಗಳಿಂ (ಚಿಬಪು. ೫–೩). [ಅಚ್ಚ$_1$ + ಮುತ್ತು$_3$]

**ಅಚ್ಚಯ** (ನಾ). = ಅಕ್ಷಯ: 'ಅಚ್ಚಯಗೋಲ್' ಪರಾ. [ಸಂ. ಅಕ್ಷಯ]

**ಅಚ್ಚಯಗೋಲ್** (ನಾ). ಪ್ರಯೋಗಿಸುವಾಗ ಒಂದೇ ಆಗಿದ್ದರೂ ತಾಗುವ ವೇಳೆಗೆ ಅನೇಕವಾಗುವ ಬಾಣ; ಅಕ್ಷಯ ಬಾಣ: ಮಂತ್ರಿಸಿದ ಕೋಲ್ಗಳುಂ ಅಚ್ಚಯಗೋಲ್ಗಳುಂ ಲೆಕ್ಕಕೆ ಬಾರದಾದುವು (ಅದ್ಭುತ. ೪೯–೨೧). [ಅಚ್ಚಯ + ಕೋಲ್$_1$]

**ಅಚ್ಚರ$_1$** (ನಾ). ದೇವತೆ; ಸುರ: "ಗಾಳಿವಟ್ಟೆಗರುಮಚ್ಚರರೆಂದೆನುತುಂ ... ಎನೆ ದೇವವ್ರಾತಕಮರ್ದ ನಾಮಮಿವಕ್ಕುಂ" (ಕವಿಕಂ. ೩೨); "ದೇವಕುಲಕೆ ಬಿಜ್ಜೋದರರುಮಚ್ಚರರುಮಕ್ಕುಂ" (ಕಬ್ಬಿಕೈ. ೧೦); ಅಚ್ಚರರ ಗೊಂದಣಂ ನೆರೆದುದಂಬರತಳದೊಳು (ಸಮ್ಯಕ್ತ್ವಾ. ೫–೫೬); ಅಲರಿಚನಾರಿಂದ ಪೆಜೆಡಲೆಯನಾವನಿಂ ಮರಗೂಳಮೆಯ್ಯಣ್ಣಚ್ಚರರು ಮಜುಮಜು ಪುಟ್ಟಾಂತು ಮೆಯ್ವೆತ್ತರು (ಶತಸಾಂ. ೧೩–೭೪); ಬಿಜ್ಜೋದರರ ಗಂಡರ ರಚ್ಚರರ ಗಜಬಜಿಂ (ರಾಮಾಶ್ವ. ೭೬–೨೯). [ಸಂ. ಅಪ್ಸರಸ್ ?]

**ಅಚ್ಚರ$_2$** (ಗು). ನಾಶವಿಲ್ಲದ; ಶಾಶ್ವತ: ಅಚ್ಚರದ ಶಿವನ ಸಾರೂಪ್ಯದಿಂ ಥಳಥಳಿಸುವಚ್ಚಮುತ್ತಿನ ಬೊಂಬೆಯಂತಿರ್ಪ ಶಿಶುಗಳ್ (ಚಿಬಪು.೨೦–೨೨). [ಸಂ. ಅಕ್ಷರ]

**ಅಚ್ಚರಗಣಿಕೆ** (ನಾ). = ಅಚ್ಚರಸಿ: ಕೇತ ಪೆಣೆದಿಜಿದು ಸತ್ತೊಡಚ್ಚರಗಣಿಕೆಯರೊಡಗೊಣ್ಣು ದೇವಲೋಕಕುಯ್ದರ್ (ಸೌಇಇ. XI–i, ೫೧–೬; 1006). [ಅಚ್ಚರ$_1$ + ಗಣಿಕೆ$_3$]

**ಅಚ್ಚರವೆಣ್**, ಅಚ್ಚರವೆಣ್ಣು (ನಾ). = ಅಚ್ಚರಸಿ: ನೇಹದಿಂ ನೆರೆವ ಅಚ್ಚರವೆಣ್ಣಳಿಂದಾ ಗಿರಿ ಸೋಲ್ವರಿಗಚ್ಚರಿಯನು ಮಾಡುತಿಹುದು (ಕುರಾಸಾಂ. ೨–೧೧). **ಅಚ್ಚರವೆಣ್ಣು**: ಗಗನಮಾರ್ಗದೆ ನೆಜೆ ಚರಿಸುವಚ್ಚರವೆಣ್ಣುಗಳಿಗೆ (ಕಂನವಿ. ೫–೭೭). [ಅಚ್ಚರ$_1$ + ಪೆಣ್]

**ಅಚ್ಚರವೆಣ್ಣು** 'ಅಚ್ಚರವೆಣ್' ನೋ.

**ಅಚ್ಚರಸಿ**, ಅಚ್ಚರಸೆ, ಅಚ್ಚರಿ$_2$, ಅಚ್ಚರಿಸಿ, ಅಚ್ಚರೆ (ನಾ). ಅಪ್ಸರೆ; ದೇವಲೋಕದ ಗಣಿಕೆ: "ಅಪ್ಸರಸಿ – ಅಚ್ಚರಸಿ" (ಶಮದ. ೨೬೩ ಪ್ರಯೋ); ಪೂತ ಜಂಗಮಲತೆಗಳಂತೆಜಿಗಿ ತನ್ನ ಮುಂದೆ ಬಂದಾಡುವಚ್ಚರಸಿಯರುಮಂ (ಆದಿಪು. ೨–೬೫ ವ); ತ್ರಿದಿವದೊಳಚ್ಚರಸಿಯರಿರ್ಪುದು ವಿದಿತಂ ನಿಮಗೆ (ಕಾದಂಪೂ. ೭೦೬); ಕೊಂದು ಪೋದರಚ್ಚರಸಿಯರಣ್ಮೆ ಸತ್ತ ಭಟರಂ (ಗದಾಯು. ೪–೨೨); ಅಚ್ಚರಸಿಯರೇಜಿ ಬಂದ ಪ್ರಾಜಿನ ತೆಜದಿಂ (ಕಬ್ಬಿಕಾ. ೨೬೨); ಅರಗೆಜೆಯೊಳೀಸಾಡುತಿರ್ದಚ್ಚರಸಿಯರೋಯೆನೆ (ಸಾಳ್ವಭಾ. ೪–೩೮). **ಅಚ್ಚರಸೆ**: "ಅಪ್ಸರಸ್–ಅಚ್ಚರಸೆ" (ಶಬ್ದಾನು. ೧೬೦); ಉಗ್ರಗ್ರಾಹಸ್ವರೂಪದೊಳಿರ್ದಚ್ಚರಸೆಯರಂ ವಿಶಾಪೆಯರ್ಮಾಡಿ (ಪಂಪಭಾ. ೪–೨೦ ವ); ನೀಳಾಂಜನೆಯೆಂಬೊಳಚ್ಚರಸೆ ನರ್ತಿಸುತ್ತಿರ್ದು (ಚಾವುಂಪು. ೫೩); ಸುರಧನುವೆನೆ ನಭದೊಳು ನೆರೆದುವಚ್ಚರಸೆಯರಾಗ (ಶ್ರೀಪಾಲ. ೬–೮೬); ಅಚ್ಚರಿಯ ಸೊಬಗಿನಚ್ಚರಸೆಯಿವಳ್ (ಚಿಕವಿ. ೬–೧೮೨). **ಅಚ್ಚರಿ**: ಅಚ್ಚರಿಯರ್ ಮೆಲ್ಲನಮೃತರಸಮಂ ಪೊಯ್ವಂತೆ (ಉದ್ಭಟ. ೮–೨೨); ಅಚ್ಚರಿಯರೊಡನಾಡಿಸಿದನುರವಣೆಪ ಕಾಲಾಳ (ಕುಮ್ಮಾದ್ರೋ. ೧೨–೨೧); ಅಂಬುದಕ್ಕೆ ನೆಗೆವಚ್ಚರಿ ಅಚ್ಚರಿಯಂ ನಿಮಿರ್ಚಿದಳ್ (ಶಬಶಂ. ೧–೪೫); ನರ್ತಕಿ ... ಸುನೃತ್ತದಿಂ ಮೆಚ್ಚಿಸಿದಳಚ್ಯುತನ ನಚ್ಚರಿಯರಚ್ಚರಿಯೆನೆ (ಜೈಮಿಭಾ. ೭–೧೫). **ಅಚ್ಚರಿಸಿ**: ಪದ್ಮಾವತಿ ಮೊದಲ ನಾಕದೊಳಚ್ಚರಿ ಸಿಯಾದಳ್ (ಶಾಂತಿಪು. ೬–೮೬ ವ). ℙ 'ಅಚ್ಚರಿಸಿ' ಎಂಬುದು 'ಅಚ್ಚರಸಿ' ಎಂಬುದರ ಅಪಲಿಖಿತವಾಗಿರಬಹುದು. **ಅಚ್ಚರೆ**: ನಚ್ಚಣಿ ನರ್ತಿಸಿದಳಿಚ್ಚೆಯಜಿದಚ್ಚರೆ[ಪಾಠಾಂ. ಯಜಿಯದಚ್ಚರಿ]ವೊಲ್ (ಸುಕುಮಾ. ೧೦–೨೨). [ಸಂ. ಅಪ್ಸರಸ್]

**ಅಚ್ಚರಸೆ**: 'ಅಚ್ಚರಸಿ' ನೋ.

**ಅಚ್ಚರಳ್** (ನಾ). ಹೊಸ ಹೂವು: ಎಳಸುವಚ್ಚರಳ್ಗಳಂ ಸಿರಿಮುಡಿಗೆ ಕೈಕೊಳಿಸಿ (ಬೊಮ್ಮರ. ೧೧೧–೨೩). [ಅಚ್ಚ$_1$ + ಅರಲ್$_2$ (< ಅರಲ್$_2$)]

**ಅಚ್ಚರಿ$_1$** (ಕ್ರಿ). ಆಶ್ಚರ್ಯವುಂಟುಮಾಡು; ವಿಸ್ಮಯಗೊಳಿಸು: ಅಚ್ಚಬೆಳ್ದಿಂಗಳ ಬೊಂಬೆಯೊ ಎನೆ ಮನಕಚ್ಚರಿದಾವಾಗ ತೋರ್ಪ ಸಚ್ಚಿದಾನಂದ ಸನ್ಮತಿದೋಜು (ಭರಚ. ೬೧–೧). [< ಅಚ್ಚರಿ$_3$]

**ಅಚ್ಚರಿ$_2$** 'ಅಚ್ಚರಸಿ' ನೋ.

**ಅಚ್ಚರಿ$_3$**, ಅಚ್ಚರಿಯ$_1$ (ನಾ). ಆಶ್ಚರ್ಯ; ಸೋಜಿಗ; ಚೋದ್ಯ: "ಅಚ್ಚರಿ ಚೋದ್ಯಮೆಂದು" (ಕರ್ಣಾನಿ. ೪೫); "ಅಚ್ಚರಿಯೆನಲಕ್ಕು

ಬುಧರಿನಾಶ್ಚರ್ಯಾರ್ಥಂ" (ಕವಿಕಂ. ೩೭); ಅಸುರನದಟದೇನಚ್ಚರಿಯೋ (ಪಂಪಭಾ. ೬–೬೪); ಸಚ್ಚರಿತ್ರದೆ ನಡೆದಂದುರಿಗೊಡ್ಡಿದರಗಿನಂತಿರೆ ಕರಗುವುದಚ್ಚರಿಯೆ ನರರ ನೆರಪಿದ ದುರಿತಂ (ಸಮಪ. ೬–೨೫); ನಿಚ್ಚ ಶಿವರಾತ್ರಿಯನಚ್ಚರಿಯಿಂ ಮಾಳ್ಪ (ಬಸರ.೮–೪೩) [ಅಚ್ಚರಿಯಿಂ = ಆಶ್ಚರ್ಯಕರವಾದ ರೀತಿಯಲ್ಲಿ]; ಏನಿದಚ್ಚರಿ ಕೌರವೇಂದ್ರನ ಸೇನೆ ತಲೆಕೆಳಗಾಗುತಿದೆ (ಕುವ್ಯಾದ್ರೋ. ೧೯–೬); ಅಚ್ಚರಿಯ ತಂತ್ರವಿದು ಬ್ರಹ್ಮಸೃಷ್ಟಿಗಳೀಕೊ ಮುಚ್ಚಿಹವು ಸಾಜತೆಯ (ಮಂಕುಕ. ೩೧). **ಅಚ್ಚರಿಯ$_1$**: ಪಚ್ಚೆಯಲೋವೆ ಪಲವು ರತ್ನಖಚಿತದಿಂದಚ್ಚರಿಯವನಖಿಲರಿಗೆ ಚೆಚ್ಚರದಿಂದೀವ ಮದನಕೈಯಿಾಕ್ಷಿಪರಕ್ಷಿಯ ಸೆಜ಼ೆಗೆಯ್ಯುತಿಹವು (ಅಂಜಚ. ೫–೫೯); ಕಂಡುದೊಂದಚ್ಚರಿಯಮುಳ್ಳಡೆ ಪೇಳ್ವುದು (ತಿಮ್ಮಶಾಂ. ೧೧–೩೦).
[ಸಂ. ಆಶ್ಚರ್ಯ]

**ಅಚ್ಚರಿಗವಿ** (ಕ್ರಿ). ಆಶ್ಚರ್ಯ ಕವಿದುಕೊ: ಕಣ್ಣಪ್ಪನಚ್ಚರಿಗವಿದಪಾಂಗಾಶ್ರುಗಳಧಿಕವಾಯ್ತು (ಬಸಪು. ೧೮–೫೦). [ಅಚ್ಚರಿ$_3$ + ಕವಿ$_1$]

**ಅಚ್ಚರಿಗಾಣ್** (ಕ್ರಿ). ಆಶ್ಚರ್ಯವನ್ನು ಕಾಣು: ನಾಲ್ದೆಸೆಯ ನೋಡುವನಿತಳಜ಼ೊಳಚ್ಚರಿಗಂಡ (ಶ್ರೀಪಾಲ. ೪–೬೭). [ಅಚ್ಚರಿ$_3$ + ಕಾಣ್]

**ಅಚ್ಚರಿಗೊಳ್ಳು** (ಕ್ರಿ). ಆಶ್ಚರ್ಯ ಹೊಂದು: ನಾವು ನೋಡಿ ಅಚ್ಚರಿಗೊಂಡು ತಲೆದೂಗಬೇಕು (ಜ್ಯೋತಿರ್ವಿ. ೬೧).
[ಅಚ್ಚರಿ$_3$ + ಕೊಳ್ಳು$_1$ (< ಕೊಳ್$_1$)]

**ಅಚ್ಚರಿಮೂಡು** (ಕ್ರಿ). ಆಶ್ಚರ್ಯ ಹುಟ್ಟು: ಸಕಲ ನಿಯೋಗ ಸಹಿತಂ ನಾಡೊಡೆಯನುಂ ಮನದೊಳಚ್ಚರಿಮೂಡಿ ಬಸವನ ಭಕ್ತಿವಿಶ್ವಾಸಕ್ಕೆ ತಲೆದೂಗಿ (ಬಸಪು. ೫೬–೫೩). [ಅಚ್ಚರಿ$_3$ + ಮೂಡು$_1$]

**ಅಚ್ಚರಿಮೊಳೆ** (ಕ್ರಿ). = ಅಚ್ಚರಿಮೂಡು: ವಿಪ್ರನಚ್ಚರಿಮೊಳೆಯೆ ಮನದೊಳು ಹರುಷನಾಗುತ್ತಾಗ ಪರಿತಂದು (ಬಸಪು. ೫೬–೫೩).
[ಅಚ್ಚರಿ$_3$ + ಮೊಳೆ$_1$]

**ಅಚ್ಚರಿಯ$_1$** 'ಅಚ್ಚರಿ$_3$' ನೋ.

**ಅಚ್ಚರಿಯ$_2$** (ನಾ). ಆಶ್ಚರ್ಯ ಹೊಂದಿದವನು: ಭೂಜನರೆಲ್ಲರುಗಳಚ್ಚರಿಯರಾಗಿರಲು ಸತ್ತ ಮದವಾರಣದ ಹರಣವನಿತ್ತು ಬೊಮ್ಮಯ್ಯಂ ಮೆಜ಼ೆದಂ (ಬಸಪು. ೨೨–೩೫); ನೋಡಲಿಕಾಗದವನನೆನುತ್ತಿರಲು ಜನರಚ್ಚರಿಯರಾಗೆ (ಬಸಪು. ೨೬–೧೭). [ಅಚ್ಚರಿ$_3$ + –ಅ$_7$]

**ಅಚ್ಚರಿಯೊಂದು** (ಕ್ರಿ). = ಅಚ್ಚರಿವಡು: ಭಕ್ತಾನೀಕವಚ್ಚರಿಯೊಂದಿಯಾನಂದಿಸುತ (ಬಸಪು. ೩೯–೭೦). [ಅಚ್ಚರಿ$_3$ + ಒಂದು$_1$]

**ಅಚ್ಚರಿವಡಿಸು** (ಕ್ರಿ). ಬೆರಗಾಗಿಸು; ಆಶ್ಚರ್ಯಪಡುವಂತೆ ಮಾಡು: ಹೆಜ್ಜೆಹೆಜ್ಜೆಯಲಿ ಸಾಸಿರ ಪೊನ್ನ ಚಾಗವಿತ್ತು ಪರುಸೆಯನಿತಂ ತೃಪ್ತಿವಡಿಸಿ ಧಾರುಣಿಯೊಳಚ್ಚರಿವಡಿಸಿದಂ (ಸೌಂದಪು. ೧೧–೩೮).
[ಅಚ್ಚರಿ$_3$ + ಪಡು$_1$ + –ಇಸು$_3$]

**ಅಚ್ಚರಿವಡು** (ಕ್ರಿ). ಆಶ್ಚರ್ಯಪಡು; ವಿಸ್ಮಯ ಹೊಂದು; ಬೆರಗಾಗು: ಕಿಚ್ಚಂ ಪೊಕ್ಕುದನೀ ಜಗಮಚ್ಚರಿವಟ್ಟದನೆ ನುಡಿಯುತಿರ್ಪ್ಪುದು ನಿಚ್ಚ[ಂ] (ಇಆ. XX, ೧೯೪–೧೪; 900); ಆ ರೂಪಿಂಗಚ್ಚರಿವಡುತಿರ್ದ ನೃಪರೂಪಚಂದ್ರನಂ [ನೋಡಿ] (ಕಾದಂಪೂ. ೫೧); ನೋಡನೋಡಲ ದೃಶ್ಯನಾಗಲಚ್ಚರಿವಡುತ (ಪದ್ಮರಾ. ೧೧–೧೮೨); ಬಂಧುವಿತಾನವಚ್ಚರಿವಟ್ಟು ಕೇಳಲ್ (ಬಸಪು. ೩–೨೨). ಅಚ್ಚರಿವಟ್ಟು ಮೈಸೂರ ಭೂಗಧಿಪತಿಯ ಪೊಗಳಿದ (ಕಂನವಿ. ೧೩–೭೧). [ಅಚ್ಚರಿ$_3$ + ಪಡು$_1$]

**ಅಚ್ಚರಿವಡೆ** (ಕ್ರಿ). ೧. ಆಶ್ಚರ್ಯಪಡು. ೨. ಆಶ್ಚರ್ಯಪಡಿಸು: ಪಾವಿನ ಪಚ್ಚದಿನಚ್ಚರಿವಡೆದ ಜೋಗಿಣಿಯಂತಿರ್ಪಳ್ (ಕಬ್ಬಿಕಾ. ೩೧೫); ಅಚ್ಚರಿವಡೆದ ಭ್ರೂಲತೆ ಸಿಂಗಾಡಿಗಳೊಚ್ಚೇರಗಣ್ಣ ಪೂಸರದಿ (ಮೋಹತ. ೯–೮೨). [ಅಚ್ಚರಿ$_3$ + ಪಡೆ$_1$]

**ಅಚ್ಚರಿವೀಱು** (ಕ್ರಿ). ಆಶ್ಚರ್ಯವುಂಟುಮಾಡು: ಗೌರೀಶನೊಪ್ಪಿರ್ದನಚ್ಚರಿವೀಱುತ್ತಖಿಳರ್ಗೆ ಸಂತತ ಕೃಪಾರತ್ನಾಕರಂ ಶಂಕರಂ (ಶಬಶಂ. ೫–೫೮). [ಅಚ್ಚರಿ$_3$ + ಬೀಱು]

**ಅಚ್ಚರಿವೆಣ್** (ನಾ). = ಅಚ್ಚರಸಿ: ಕನಕಪರ್ವತದ ಮೇಲೆ ಕಣ್ಗೊಳಿಸುವಚ್ಚರಿವೆಣ್ಗಳಂತಚ್ಚರಿಯ ಬೀಜ಼ೆ (ಸೌಂದಪು. ೫–೯೬). [ಅಚ್ಚರಿ$_2$ + ಪೆಣ್]

**ಅಚ್ಚರಿವೆರಸು** (ಕ್ರಿ). ಆಶ್ಚರ್ಯಹೊಂದು: ಆಗಳಚ್ಚರಿವೆರಸುತಂ ಸಾಷ್ಟಾಂಗವೆಱಗಿ ನಮಿಸಿ (ಬಸಪು. ೫೨–೩). [ಅಚ್ಚರಿ$_3$ + ಬೆರಸು$_1$]

**ಅಚ್ಚರಿವೆಱು** (ಕ್ರಿ). ಆಶ್ಚರ್ಯವುಂಟುಮಾಡು; ಬೆರಗುಗೊಳಿಸು: ಆ ಲಲಿತಾಂಗಿ ಬೆಚ್ಚನುಸಿರ್ದಚ್ಚರಿವೆತ್ತಿರೆ[ಪಾಠಾಂ. ಬೆಚ್ಚರೆ] ಮೂರ್ಛೆವೋಪುದುಂ (ಆದಿಪು. ೩–೨೩); ನೋಟಕಚ್ಚರಿವೆತ್ತ ಸೊಡರ್ಗಂಬದಲ್ಲಿ ವಿರಾಟದೀಪ್ತಿಗಳೊಪ್ಪಿದುವು (ಮೋಹತ. ೨೧–೪). [ಅಚ್ಚರಿ$_3$ + ಪೆಱು]

**ಅಚ್ಚರಿಸಿ** 'ಅಚ್ಚರಸಿ' ನೋ.

**ಅಚ್ಚರಿಸು** (ಕ್ರಿ). ಆಶ್ಚರ್ಯಪಡು: ಸೋದರರು ವೊಂದೇ ಬಾರುನ್ನತಿವೆತ್ತುದಕೆದೆಯೊಳಾನಂದಿಸುತಿರ್ದರಚ್ಚರಿಸಿ (ಭರಚ. ೭೮–೪೬); ಅಚ್ಚರಿಸಿ ಚಿತ್ತೈಸೆನುತಲಾ ಅಚ್ಚರಸಿಯರ ಮೇಳದಲಿ ಸುರನಚ್ಚಣಿಯು ಭೂಮಿಯನು ಮುಟ್ಟದೆ ಮೆಟ್ಟುತಿರೆ (ಸಾಳ್ವಭಾ. ೨೦–೩೦). [ಅಚ್ಚರಿ$_3$ + –ಇಸು$_3$]

**ಅಚ್ಚರಿಹದ** (ನಾ). ಆಶ್ಚರ್ಯಕರವಾದ ಸ್ಥಿತಿ: ಮೂಡುವಚ್ಚರಿಹದವ ಹಾರುತ್ತ ಸಭೆಯೆಲ್ಲ ಎವೆಹೊಯ್ಯದಲ್ಲಿ ನಿಂದಿಹುದು (ಹೊಂಗಳು. ೧೨–೧೭). [ಅಚ್ಚರಿ$_3$ + ಹದ (< ಪದ$_1$)]

**ಅಚ್ಚರೆ** 'ಅಚ್ಚರಸಿ' ನೋ.

**ಅಚ್ಚಲರ್** (ನಾ). ಹೊಸ ಹೂವು: ಅಚ್ಚಲರ ತುಱುಗಲಂ ಪೇಱೆಕೊಂಡಿರ್ದುದೆತ್ತಂ ತಿಳಕಂ (ಕಾದಂಉ. ೭೮೦). [ಅಚ್ಚ$_1$ + ಅಲರ್$_2$]

**ಅಚ್ಚಲಿಂಗ** (ನಾ). ನಿರ್ಮಲವಾದ ಲಿಂಗ: ಪೂಗಲ್ಲನುಱೆ ಕಡೆನೂಂಕಿ ಪೂಜಿಸುಡುವ ಅಚ್ಚಲಿಂಗವು ಜಲಹರಿಯ ಕಡೆಗುಚ್ಚಿ ಹೆಚ್ಚುತ ಪೋಪ ಲಿಂಗವು (ಬಸಪು. ೫೭–೪೩). [ಅಚ್ಚ$_1$ + ಲಿಂಗ]

**ಅಚ್ಚಲಿಕೆ** (ನಾ). ಏಕಾಂತ; ಶಾಂತಪರಿಸ್ಥಿತಿ (ಸ್ಯಾಂಡರ್): ಅಚ್ಚಲಿಕೆಯಾಗಿ (ಗ್ಯಾರೆಟ್). [ಅಚ್ಚ$_1$ + ?]

**ಅಚ್ಚಲಿಚ್ಚೆ** (ನಾ). ಮತ್ತೆ ಮತ್ತೆ, ಮೇಲಿಂದ ಮೇಲೆ ಒದಗುವ ರೀತಿ (?): ಹೆಚ್ಚಿದ ಸ್ತ್ರೀಯರ ಮೆಚ್ಚುಗಳ ಮಾಡ್ಯಾರು ಕೇಳಿರಣ್ಣಾ ಅಚ್ಚಲಿಚ್ಚೆಗಳಲ್ಲಿ ಬೈಗಳ ಬೈವರು ಕೇಳಿರಣ್ಣಾ (ಕಾಲಸಂ. ೮೮–೨).
[?. / **ತಮಿ.** ಅಚ್ಚಲಚ್ಚಲಾಯ್ = ಮೇಲಿಂದ ಮೇಲೆ]

**ಅಚ್ಚಲಿಪಿ** (ನಾ). ಸೊಗಸಾದ ಬರಹ; ಉತ್ತಮವಾದ ಬರವಣಿಗೆ (ಸ್ಯಾಂಡರ್). [ಅಚ್ಚ$_1$ + ಲಿಪಿ]

**ಅಚ್ಚವಡಿ, ಅಚ್ಚವಳ್ಳಿ$_2$** (ನಾ). ತೆರಿಗೆ; ಕಂದಾಯ (ಕಿಸಂಗ್ಲಾ. ೧೩೯). **ಅಚ್ಚವಳ್ಳಿ$_2$** (ಸ್ಯಾಂಡರ್). [?]

**ಅಚ್ಚವಣ್** (ನಾ). ಹದವಾದ ಹಣ್ಣು; ತನಿವಣ್ಣು: ಪೆಣ್ಗಂಡುಗಳು ಮನಕರಗಿ ಕೂಡಿದೊಡಚ್ಚವಣ್ಗಳ ಸವಿದಂದವಲ್ತೆ (ಭರಚ. ೭–೩೪); ದೋರೆವಣ್ ಕಳಿತೆಸೆವಚ್ಚವಣ್ [ಪಾಠಾಂ. ಕಿ. ಪಣ್] (ಶಬಶಂ. ೧–೫೧).
[ಅಚ್ಚ$_1$ + ಪಣ್$_2$]

**ಅಚ್ಚವಣ್ಣ** (ನಾ). ಶುದ್ಧವಾದ ಬಣ್ಣ; ಬೆರಕೆಯಿಲ್ಲದ ಬಣ್ಣ (ಸ್ಯಾಂಡರ್). [ಅಚ್ಚ$_1$ + ಬಣ್ಣ]

**ಅಚ್ಚವಳ್ಳಿ$_1$** (ನಾ). ಒಳ್ಳೆಯ ಮನೆತನ; ಸತ್ಕುಲ: ಅವರ ಅವಳಿ ಅಚ್ಚವಳಿಯಾದುದರಿಂದ ಅವರಿಗೆ ಹೆಣ್ಣು ಯಾರಾದರೂ ಕೊಡುವರು (ಸ್ಯಾಂಡರ್); ಅಚ್ಚವಳಿಯವರು ತವರವರು (ಜಾನಕೋ. ೮).
[ಅಚ್ಚ$_1$ + ಬಳ್ಳಿ$_2$ (< ಬಱಿ$_3$)]

**ಅಚ್ಚವಳ್ಳಿ$_2$** 'ಅಚ್ಚವಡಿ' ನೋ.

**ಅಚ್ಚವಳಿಕು** (ನಾ). ಶುಭ್ರವಾದ ಸ್ಫಟಿಕ: "ಎರಡು ಪದಗಳಪಭ್ರಂಶಕ್ಕೆ– ಅಚ್ಛಸ್ಫಟಿಕ–ಅಚ್ಚವಳಿಕು" (ಶಮುದ. ೨೪೯); ಬೆಟ್ಟುವಗೆಯಂ ಪಗೆಯಿನಿಟ್ಟ ಕುಳಿಸದ ಕಡಿಕಂಡದಂತೊಪ್ಪುವಚ್ಚವಳಿಕಿನ ಗಂಡಶೈಲದಿಂ (ರಾಮಾಶ್ವ. ೬೨–೨೪). [ಅಚ್ಚ$_1$ + ಪಳಿಕು]

**ಅಚ್ಚವಾವು** 'ಅಚಬಾಬು' ನೋ.

**ಅಚ್ಚವಿಷ** (ನಾ). ಅಪ್ಪಟ ವಿಷ: "ಸಿಂಹನಾದಂ ಕ್ಷ್ವೇಡೆಯುಂ ಅಚ್ಚವಿಷಮಕ್ಕು" (ಮಂಗರಾ. ೧೩೬–೯೧). [ಅಚ್ಚ$_1$ + ವಿಷ]

**ಅಚ್ಚವೂ** (ನಾ). ಹೊಸ ಹೂವು: ತುಂಬಿಗಳಚ್ಚವೂಗಳಿಂ ದೂಸರಮಾದ ಚೊಲ್ಲೆಯದ ಕಂಪಿನೊಳೋಕುಳಿಯಾಡೆ (ಕಬ್ಬಿಗಾ. ೯೧).
[ಅಚ್ಚ$_1$ + ಪೂ$_2$]

**ಅಚ್ಚವೆಳ್ದಿಂಗಳ್** (ನಾ). ಶುಭ್ರವಾದ, ಹೊಳೆ ಹೊಳೆಯುತ್ತಿರುವ ಬೆಳುದಿಂಗಳು: ತನ್ನ ಜಸದಂತೆ ಪಸರಿಸಿದಚ್ಚವೆಳ್ದಿಂಗಳಂ (ಪಂಪಭಾ. ೪–೬೯ ವ); ತೃಷ್ಣೆಗೊರ್ಕುಡಿತೆಯಿಂ ಕೊಂಡಚ್ಚವೆಳ್ದಿಂಗಳಂ ಕುಡಿಯಲ್ಬರ್ಕುಮೆ (ಅರ್ಧನೇ. ೧–೩೧); ಅಚ್ಚವೆಳ್ದಿಂಗಳ ಸಿರಿಯಂತೆ (ಮೋಹತ. ೧೬–೫೮). [ಅಚ್ಚ$_1$ + ಬೆಳ್ದಿಂಗಳ್]

**ಅಚ್ಚಶಿವ** (ನಾ). ಸಾಕ್ಷಾತ್ ಶಿವ: ಭಕ್ತರನಚ್ಚಶಿವನೆಂದಿಪ್ಪ ಭಾಷೆ (ಬಸವು. ೬–೧); ಅಚ್ಚಶಿವನೊಂದಚ್ಚು ಭಕ್ತಿಯ ನಚ್ಚು (ಬಸವು. ೨೮–೪೭).
[ಅಚ್ಚ$_1$ + ಶಿವ]

**ಅಚ್ಚಸರ** (ನಾ). ಅಕ್ಷಮಾಲೆ; ಜಪಸರ: ಕೊರಲೊಳೊಪ್ಪುವಚ್ಚ ಪೊಚ್ಚಚ್ಚಸರಂ ಮುಕುತಿವೆಣ್ಣ ಸಿರಿಗೊರಲ ಕರ್ಮಣಿಸರಮುನಡಿಗೊತ್ತೆ (ರಾಮಾಶ್ವ. ೧೩೯–೧೪). [ಅಚ್ಚ$_2$ + ಸರ$_2$]

**ಅಚ್ಚಸವಿ** (ನಾ). ಬೆರಕೆಯಿಲ್ಲದ ಮಧುರ ರುಚಿ; ಕೇವಲ ಸವಿ: ಪರಮ ಪಶುಪತಿಯೆ ಅಚ್ಚಸವಿಯೇ ಸುಖವೆ ಸಖನೆ ನಂಬಿಯ ಪತಿಯೆ (ನಂಬಿರ. ೬–೧೪೮). [ಅಚ್ಚ$_1$ + ಸವಿ$_2$]

**ಅಚ್ಚಸೊಗ** (ನಾ). ಶುದ್ಧವಾದ ಸುಖ: ಹೆಜ್ಜೆಸೂಡಿದನಚ್ಚಸೊಗದ ಮೊಳೆ ಬೆಳೆಯುತ್ತುಂ (ಗಿರಿಕ. ೩–೩೬). [ಅಚ್ಚ$_1$ + ಸೊಗ]

**ಅಚ್ಚಹಾದಿ** (ನಾ). ಒಳ್ಳೆಯ ದಾರಿ; ಸರಿಯಾದ ಮಾರ್ಗ: ನೆಚ್ಚಿದವನು ಅಚ್ಚಹಾದಿ ಹಿಡಿಯುವನು (ವಿಜಾಮಂ. ೬೪).
[ಅಚ್ಚ$_1$ + ಹಾದಿ (< ಪಾದಿ)]

**ಅಚ್ಚಹಾಲು** (ನಾ). ಅಪ್ಪಟವಾದ ಹಾಲು (ಸ್ಯಾಂಡರ್).
[ಅಚ್ಚ$_1$ + ಹಾಲು (< ಪಾಲ್$_1$)]

**ಅಚ್ಚಳ** (ಗು). ಸ್ವಚ್ಛ; ಶುದ್ಧ; ಉತ್ಕೃಷ್ಟ (ಸ್ಯಾಂಡರ್). 'ಅಚ್ಚಳ ಮಾತು' ಪರಾ. ೨. ಪ್ರಶಾಂತ: ತೋಟವೂ ಮನೆಯೂ ಏನಚ್ಚಳವಾಗಿದೆ (ಸ್ಯಾಂಡರ್). [ಅಚ್ಚ$_1$ + ?]

**ಅಚ್ಚಳಮಾತು** (ನಾ). ಉತ್ಕೃಷ್ಟವಾದ ಮಾತು. [ಅಚ್ಚಳ + ಮಾತು]

**ಅಚ್ಚಳಿ** 'ಅಚ್ಚಟಿ' ನೋ.

**ಅಚ್ಚಳಿಕೆ** (ನಾ). ೧. ಸೊಗಸು; ಅಂದ: ನೋಡಲು ಹಸ್ತವಿಲ್ಲದೆ ಸೊಲ್ಪ ಗೀಜಗ ಗೂಡ ಕಟ್ಟಿದೊಡಚ್ಚಳಿಕೆಯ ಕೋಡಗ ಕಂಡು ಸೈರಿಸದೆ ವಿನಾಶವ ಮಾಡಲದೇನು ಕೇಡಹುದು (ಮೋಹತ. ೧–೨೩). ೨. ಪ್ರಶಾಂತತೆ (ಸ್ಯಾಂಡರ್). 'ಅಚ್ಚಳ' ಪರಾ. [ಅಚ್ಚಳ + -ಇಕೆ]

**ಅಚ್ಚಟಿ, ಅಚ್ಚಳಿ** (ಕ್ರಿ). ಅಂದಗೆಡು; ಸೊಗಸುಗುಂದು; ರೂಪುಗೆಡು: ಬೀರಮುಚ್ಚಟಿವಿನಮಾಮೆ ತಳ್ತಿಱಿದು ಗೆಲ್ದವರಾತಿಯನೆನ್ನು ಪೊಚ್ಚಱಿ ನುಡಿವಟಿಗಣ್ಣರಂ (ಎಕ. II, ೧೩೪–೫೧; 987); ಭರದಿಂ ಬಂದಚ್ಚಟಿಯದೆ ಪಿರಿಮಂಚದ ಮೇಲೆ ಲೀಲೆ ಮಿಕ್ಕಾದರದಿಂ ... ಇರ್ದರ್ (ಗಿರಿಕ. ೪–೧೩೪); ನಿಟ್ಟಾಲಿಗಳಾಟವಚ್ಚಟಿದು ... ಇರ್ದಳ್ (ಕುಸುಮಾ. ೧೨–೧೩೧). **ಅಚ್ಚಳಿ**: ಪುಳಕದ ಹಾದಿಗೆಂದು ಪಥಮುಪ್ಪುದು ... ಎನ್ನ ಚರಣಂಗಳ ಲೀಲೆಗದೆಂದು ಕೀಲ್ಗಳಚ್ಚಳಿವುದು (ಪಂಪಾಶ. ೨); ಬೆಚ್ಚಂತೆ ಬೆರಸಿ ಬಿರ್ಚದಚ್ಚಳಿಯದ ಪರಮಾನಂದಮಯ ಶಿವಯೋಗ ನಿದ್ರಾಮುದ್ರಿತನಾಗಿ (ವೃಷವಿ. ೨೩–೧೧ ವ); ಮಹಾವ್ಯಕ್ತಿಗಳ ನೆನಪು ಮಾತ್ರ ಮಾನವಕೋಟಿಯ ಹೃದಯಾಂತರಾಳದಲ್ಲಿ ಅಚ್ಚಳಿಯದೆ ಉಳಿದಿದೆ (ರಾಜಪ. ೫) [ಅಚ್ಚಳಿಯದೆ = ಸ್ವಲ್ಪವೂ ಕುಂದದೆ, ಸ್ಥಿರವಾಗಿ].
[ಅಚ್ಚು$_3$ + ಅಟಿ$_1$]

**ಅಚ್ಚಾ** (ನಾ). (ಉಕ) ಅಯೋಗ್ಯ: ಶಿವಪ್ಪನಾಯಕನು ತನ್ನ ಮನೆ ಹಾಳು ಮಾಡಿಕೊಂಡಿದ್ದರೂ ಈವರೆಗೆ ಮುಂದಿಯ ಕಡೆಯಿಂದ ಅಚ್ಚಾ ಅನ್ನಿಸಿಕೊಂಡವನಲ್ಲ (ಗುರುಪ್ರ. ೪೯). [ಅನ್ಯ. ?]

**ಅಚ್ಚಾಗು** (ಕ್ರಿ). ೧. ಸ್ಥಿರವಾಗು; ಶಾಶ್ವತವಾಗು: ಬೆಚ್ಚುಬೇರಿಲ್ಲದ ಸುಖವೆನಗಚ್ಚಾದ ಪರಿಯ ನೋಡಯ್ಯಾ (ಆದವ. ೮೮). ೨. ಮುದ್ರಣ ಹೊಂದು: ಈ ಪುಸ್ತಕ ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದಲ್ಲಿ ಅಚ್ಚಾಯಿತು (ರೂಢಿ). [ಅಚ್ಚು$_3$ + ಆಗು$_1$]

**ಅಚ್ಚಾಟ** (ನಾ). ಸೊಗಸಾದ ಆಟ; ಶುದ್ಧಲೀಲೆ: ಅಚ್ಚಾಟವಾಡುವ ದೈವ ಶ್ರೀವಾಸುದೇವಾ (ವಿಸ್ತೋ.ಸು. ೪೨–೧). [ಅಚ್ಚ$_1$ + ಆಟ]

**ಅಚ್ಚಾಡಿಸು** (ಕ್ರಿ). ಅಚ್ಚಿನಂತೆ ತಿರುಗಿಸು, —ಸುತ್ತಾಡಿಸು: ತನಿವಣ್ಗಳನಾಂತೆಸೆವೀಳೆಯೋಳಿಯಚ್ಚಾಡಿಪುದಾ ಪುರೋಪವನದೊಳ್ ನಡೆನೋಟ್ಪರ ಕಣ್ಗಳಂ (ಕುಸುಮಾ. ೨–೬೫). [ಅಚ್ಚು$_8$ + ಅಡು$_1$ + -ಇಸು$_3$]

**ಅಚ್ಚಾನೆ** (ನಾ). ಸೊಗಸಾದ ಆನೆ; ಶ್ರೇಷ್ಠವಾದ ಆನೆ: "ಕರ್ಣಾಟಕ ಪ್ರಕೃತಿಸ್ವರಲೋಪಕ್ಕೆ – ಅಕಾರಕ್ಕೆ– ಅರಸ + ಆನೆ = ಅರಸಾನೆ; ಅಚ್ಚ + ಆನೆ = ಅಚ್ಚಾನೆ" (ಶಮುದ. ೫೨ ಪ್ರಯೋ). [ಅಚ್ಚ$_1$ + ಆನೆ]

**ಅಚ್ಚಾಯಿಗ** (ನಾ). = ಅಚ್ಚುಗಾಱ (ಸ್ಯಾಂಡರ್). [ಅಚ್ಚು$_3$ + ?]

**ಅಚ್ಚಾರಿಗಿಡ** (ನಾ). ಒಂದು ಬಗೆಯ ಗಿಡ (ಮೈಔಗಿ. ೮–೧೪೨).
[ಅಚ್ಚಾರಿ$_0$ + ಗಿಡ (< ಗಿಡು)]

**ಅಚ್ಚಾವಿಚ್ಚಿ, ಅಚ್ಚಾವುಚ್ಚಿ** (ಅ). (ಉಕ) ೧. (ಮಾತಿನಲ್ಲಿ) ಅಸಂಬದ್ಧವಾಗಿ; ಯದ್ವಾತದ್ವಾ. ೨. (ಊಟ ತಿಂಡಿಯಲ್ಲಿ) ಕೊಳಕಾಗಿ; ಅನಾಗರಿಕವಾಗಿ; ಅಯೋಗ್ಯವಾಗಿ.
[← ಮರಾ. ಅಚ್ಚಾವಚ್ಚಾ; ಅಚ್ಯಾವಚ್ಯಾ]

**ಅಚ್ಚಾವುಚ್ಚಿ** 'ಅಚ್ಚಾವಿಚ್ಚಿ' ನೋ.

**ಅಚ್ಚಾಳ್, ಅಚ್ಚಾಳು$_1$** (ನಾ). ೧. ಶ್ರೇಷ್ಠನಾದ ಆಳು; ದಿಟ್ಟನಾದ ಸೈನಿಕ; ಮೂಲಬಲದ ಸೈನಿಕ (?): ಓಡಿದವರಲ್ಲಲ್ಲಿ ಧೈರ್ಯವ ಮಾಡಿತಚ್ಚಾಳೊಗ್ಗಿನಲಿ ಹುರಿಗೂಡಿತು (ಕುವ್ಯಾವಿ. ೮–೫೦); ವೀಳೆಯವನೊಲಿದಿತ್ತು ಸುರನಚ್ಚಾಳನಟ್ಟಿದನು (ಪ್ರಹ್ಲಾಚ. ೧೫–೩೨). **ಅಚ್ಚಾಳು$_1$**: ೧. ಓಳಿಯಿಂದವೆ ಹಳಚುವಚ್ಚಾಳುಗಳುಮಂ ಕೆಳೆದು (ಬಸವು. ೬೧–೨೭); ಅಚ್ಚಾಳು ಪವನಜನಾ ಗದೆಯಿಂ ಪೊಯ್ದು ನುಚ್ಚುನುಱಿಯ ಮಾಡಿದನು (ನೇಮಿಸಂ. ೨೯–೪೦); ಅಚ್ಚಾಳುಗಳು ಗೊತ್ತು ನಾಮಂಗಳಂ ಕೇಳಿ ಯಿರಿದಾಡಿದುದು (ತುರಂಗ. ೫೭–೧). ೨. ಒಂಟಿಯಾಗಿರುವವನು; ಒಂಟಿಯಾಗಿ ನಿಶ್ಚಿಂತೆಯಿಂದಿರುವವನು (ಸ್ಯಾಂಡರ್).
[ಅಚ್ಚ$_1$ + ಆಳ್$_2$. ‖ ತೆಲು. ಅಚ್ಚಾಳಿ, ಅಚ್ಚಾಲು = ಒಂಟಿ ಮನುಷ್ಯ, ತೊಂದರೆಯಿಲ್ಲದವನು]

**ಅಚ್ಚಾಳಿಕೆ, ಅಚ್ಚಾಳಿಗೆ** (ನಾ). ೧. ಆಳ್ತನ; ಮೈಕಟ್ಟು; ದಿಟ್ಟತನ. ೨. ಸ್ಥಿರತೆ; ನಿಶ್ಚಿಂತೆ. **ಅಚ್ಚಾಳಿಗೆ** (ಸ್ಯಾಂಡರ್).
[ಅಚ್ಚಾಳ್ + -ಇಕೆ$_2$]

**ಅಚ್ಚಾಳಿಗೆ** 'ಅಚ್ಚಾಳಿಕೆ' ನೋ.

**ಅಚ್ಚಾಳು$_1$** 'ಅಚ್ಚಾಳ್' ನೋ.

**ಅಚ್ಚಾಳು$_2$** (ನಾ). ಅಚ್ಚೊತ್ತುವವನು; ಎರಕ ಹೊಯ್ಯುವವನು:

ಕಲುಕುಟಿಗರಂ ಬಡಗಿಯರನಾ ಬಳಿಗೆಲಸಮಂ ಮಾಳ್ಪರಂ ತರವಳರ ನಚ್ಚಾಳುಗಳನಿಕ್ಕಟಿಗರನು (ಬಸಪು. ೧೬–೧೩).
[ಅಚ್ಚು$_3$ + ಆಳು$_2$ (< ಆಳ್$_2$)]

**ಅಚ್ಚಿ$_1$** (ನಾ). (ಮಕ್ಕಳ ಮಾತಿನಲ್ಲಿ) ರೊಟ್ಟಿ; ಬಕ್ಕರಿ (ಉಕ). 'ಅಪ್ಪಚ್ಚಿ' ಪರಾ. [ದೇ. ?]

**ಅಚ್ಚಿ$_2$** (ನಾ). ೧. ತಾಯಿ (ಕ). ೨. ಮಲಯಾಳಿ ಹೆಂಗಸು (ಕ).
[← ಮಲ. / ತಮಿ.]

**ಅಚ್ಚಿ$_3$** (ನಾ). ಮೊಲೆ; ಮೊಲೆಯ ತೊಟ್ಟು: ಅಚ್ಚಿಯೂ ಬೇಕು, ಅಪ್ಪಚ್ಚಿಯೂ ಬೇಕು (ಗಾದೆ. ಕ). 'ಅಚ್ಚಿಕೊಡು' ಪರಾ.
[ದೇ. ?. / ತಮಿ. ಒಚ್ಚಿ, ಒಞ್ಚಿ]

**ಅಚ್ಚಿ$_4$** (ನಾ). (ಅಂಕಿತ ನಾಮಗಳಲ್ಲಿ) ಲಕ್ಷ್ಮಿ: ಉದಾ— ಅಚ್ಚಕ್ಕ (= ಅಚ್ಚಿ + ಅಕ್ಕ); ಅಚ್ಚಪ್ಪ (= ಅಚ್ಚಿ + ಅಪ್ಪ); ಅಚ್ಚಮ್ಮ (= ಅಚ್ಚಿ + ಅಮ್ಮ). [ಸಂ. ಲಕ್ಷ್ಮೀ]

**ಅಚ್ಚಿ$_5$** (ನಾ). ಕಣ್ಣು: "ಕಣ್ಗಳೆನಲ್ ದಿಟ್ಟಿಯಚ್ಚಿಗಳ್ ನೇತ್ರಂಗಳ್" (ಕರ್ಣಾನಿ. ೯); ಅಚ್ಚಿನ[ಯ]ಲ್ಲಿ ಬೇಟದ ಜೀವು ದೃಷ್ಟವಾಯಿತ್ತು (ಮೋಳಿಮಾ. ೧೫೩–೫೭೪); ಉಚ್ಚವದಿಂ ದಸಿಯಂ ತೆಗೆದಚ್ಚಿಗೆ ಗೋಚರಿಸದೈದಲಾ ಲುಬ್ಧಕನಂದುಚ್ಚಮಹಿಮೆಯನೆ ಕಂಡು (ಉದ್ಭಟ. ೧೧–೧೧೧); ಮದನಕೈಯಾಕ್ಷಿಪರಚ್ಚಿಯ ಸೆಜಿಗೆಯ್ಯುತಿಹವು (ಅಂಜಚ. ೫–೫೯); ಅಚ್ಚಿ ಮೂಱುಳ್ಳ ಶಿವನಂ ಭಜಿಸುತಗಜಾತೆ ಸುಖಮಿರಲ್ (ಚಬಪು. ೩೪–೩೧).
[ಸಂ. ಅಕ್ಷಿ]

**ಅಚ್ಚಿಕೆ** (ನಾ). ಅನ್ಯಾಯವಾಗಿ ತೆರುವುದು (ದಕ. ಕ).
[ಅಚ್ಚು$_3$ + –ಇಕೆ]

**ಅಚ್ಚಿಕೆಮುಚ್ಚಿಕೆ** (ನಾ). = ಅಚ್ಚುಮೆಚ್ಚು ೧. (ಕ).
[← ತೆಲು. ಅಚ್ಚಿಕಬುಚ್ಚಿಕ = ಜೊತೆಗೂಡುವುದು, ಮೈತ್ರಿ]

**ಅಚ್ಚಿಕೊಡು** (ಕ್ರಿ). ಮಗುವಿಗೆ ಮೊಲೆಯುಣ್ಣಿಸು; "ಅಮ್ಮಿ"ಕೊಡು (ಸ್ಯಾಂಡರ್). [ಅಚ್ಚಿ$_3$ + ಕೊಡು]

**ಅಚ್ಚಿಕ್ಕು** (ಕ್ರಿ). (ಹಕ್ಕಿಯ ವಿಷಯದಲ್ಲಿ) ಮಲವಿಸರ್ಜನೆ ಮಾಡು: ಅಲ್ಲಿದ್ದ ಒಂದೆರಡು ಕಾಗೆಗಳು ಮೇಲಿನಿಂದ ಬೇಡನ ಮುಖದ ಮೇಲೆ ಅಚ್ಚಿಕ್ಕಿ ಹಾರಿಹೋದವು (ನೀತಿಚಿಂ. ೧೧೫). [ಅಚ್ಚು$_6$ + ಇಕ್ಕು$_1$]

**ಅಚ್ಚಿಗ$_1$**, ಅಚ್ಚುಕ, ಅಚ್ಚುಗ (ನಾ). ೧. ತೀವ್ರವಾದ ವ್ಯಥೆ; ಕಳವಳ: ನಲ್ಲಳಗಲ್ಕೆಯಿಂದಮಾದದವಟಿಲಚ್ಚಿಗಂ ಮಱುಕಮೆಂಬಿವಱಿಂದೆ ಕನಲ್ದು (ಆದಿಪು. ೧೨–೨೩); ಅಚ್ಚಿ[ಪಾಠಾಂ. ಚ್ಚು]ಗವೇಕಯ್ಯ ಸಂಸಾರದೊಳಗೆ? ನಿಚ್ಚ ನಿಚ್ಚ ಶಿವರಾತ್ರಿಯ ಮಾಡುವುದು; ಬೇಗ ಬೇಗ ಅರ್ಚನೆ–ಪೂಜನೆಯ ಮಾಡುವುದು, ಕೂಡಲಸಂಗನ ಕೂಡುವುದು (ಬಸವ. ೧೭೩); ನಂದಸುತನ ಮೂಗಿಂ ಬಾಯಿಂದುಚ್ಚಳಿಸೆ ರುಧಿರಮೆನಗಾದಚ್ಚಿಗಮುಂ ಮುಱಿವೊಡೊತ್ತಿ ಮುಱಿ ಚಾಣೂರಾ (ಅರ್ಧನೇ. ೮–೫೮); ಹೆಚ್ಚಿದಡವಿಯೊಳೊಬ್ಬನೇ ಶಿವನಚ್ಚಿಗದೊಳಿರ್ದಹನಕಟಕಟ (ಬಸಪು. ೧೬–೨); (ಪಂಪಭಾ. ೪–೯೯, ಚಿಕವಿ. ೬–೧೮೨ ನೋ). ೨. ಕ್ಲೇಶ; ಶ್ರಮ: ನೆಗಟ್ದೀಷಟ್ಖಂಡಮಂ ಸಾಧಿಸಿದೊಡೆ ಫಲಮೇಂ ಭೋಗದಿಂ ಸಾಧ್ಯಮೇಂ ಬಂಧುಗಳಿಂದಂ ಬರ್ಪುದೇಂಸುತ್ತಿದ ಪರಿಜನದಿಂದಪ್ಪುದೇನೊಂದುಮಿಲ್ಲಚ್ಚಿಗಮೊಂದುಂಟು (ಆದಿಪು. ೬–೨೬); ಕಿಚ್ಚಿಟ್ಟ ಬಟಿಕೆ ನಂದಿಸಲಚ್ಚಿಗದಿಂ ಬಾವಿದೋಡುವಂತಿರೆ ಕಣ್ಣಂ ಮುಚ್ಚಿ ಜಪಿಯಿಸುವೆ (ಪಂರಾಮಾ. ೧೪–೧೦೦); ಎಲ್ಲ ಕಳಿಯಂ ಕಾವ್ಯಜ್ಞರಿಂ ಕಲ್ಲದಚ್ಚಿಗದಿಂ ಕಟ್ಟಿದ ಕೆಟ್ಟ ಕನ್ನಡದ ಕಾಬ್ಬಂಗಳಂ ಬಟ್ಟಸಾಮಿಗಳಂ ಕೇಳಿಸಿ (ಅರ್ಧನೇ. ೧–೩೫); ನಿಚ್ಚವಯಣದಿಂದಚ್ಚಿಗಂ ಸಮನಿಸಿ[ಸ]ದಂತೆ ಸಕಳಸೇನೆಯಂ ಸೇನಾನಾಯಕಂ ತಡೆಯದೆ ನಡೆಯಿಸಿಕೊಂಡು (ಶಾಂತೀಶ್ವ. ೧೨–೧೨ ವ); ಒಚ್ಚೀರೆಗಣ್ಣ ಕೋಮಲೆಯರೊಪ್ಪಿಡಿನಡುವಿನಚ್ಚಿಗದ ಬಾಲಕಿಯರೋರಣದ ಪೊಳೆವಲ್ಲ ನಿಚ್ಚಳದ ಕದಪಿನ ನಿತಂಬಿನಿಯರ್ (ಜೈಮಿಭಾ. ೩೦–೨); (ಅರ್ಧನೇ. ೮–೮೪ ವ, ಅನಂಪು. ೪–೪ ನೋ). ೩. ಕೇಡು; ಅಪಾಯ: ಕೆತ್ತಿದಪುದೆನ್ನೆಡಗಣ್ ತಡವಿಲ್ಲದಚ್ಚಿಗಂ ತೋಱದೆ ಮಾಣದು (ಪಂರಾಮಾ. ೯–೧೧೫); ಬಂದುದೆತ್ತಣಚ್ಚಿಗಮೆಮಗೆಂದು ಬಾಯಬಿಟ್ಟ ಭೀರುಗಳಬ್ಬರ ಮಾದುದುಬ್ಬರಂ (ಚಂದ್ರಪು. ೯–೮೫); ಅಚ್ಚರಿಯ ಮುಳ್ಳಪಂದಿವೊಲಚ್ಚಿಗಮಂ ಮಾಡಿ ಮಡಿಪಿದತ್ತದು ಸುರರಂ (ಶಬಶಂ. ೪–೧೭); (ವರ್ಧಪು. ೧೧–೧೫ ನೋ). ೪. ಉತ್ಸಾಹ; ಸಂಭ್ರಮ: ಬಲವರಲಾಟಿಸುತ್ತಿರೆ ಪದಂ ಪದಪಿಂ ನಡೆ ನೋಡಲೆಂದು ಕಣ್ಮಲರೆಳಸುತ್ತಿರೆ . . . ರಸಜ್ಞ ಕೀರ್ತಿಸಲೊಡರ್ಚಿರೆ ಚಚ್ಚರಮಚ್ಚಿಗಂ ಪೊದಳ್ದಲರೆ (ರಾಜಶೇ. ೧೪–೯೪). ೫. ರೀತಿ; ಪ್ರಕಾರ: ಎನ್ನಂದ ಮಾತನಂತಿಂತೆನ್ನದೆ ತಡೆದಿರದೆ ಕೊಡುವಚ್ಚಿಗಮಂ ಕೇಳ್ (ಧರ್ಮಾಮೃ. ೨–೧೨೩). ೬. ನೆವ: ಮೊಗಮಿಸೆ ಬಾರದೋಪರ್ ಸೊಗಯಿಸಿ ಪೆಣ್ಬರಿಜನಿಟ್ಟು ಬರೆ ಪೂದಿಱಿವಚ್ಚಿಗದಿಂದಮೆಯ್ದೆ ಮೆಚ್ಚಿದ ಬಗೆಯಿಂ ಸ್ಮರಕೇಳಿಗೆಳಸಿದರ್ ಪುಂಶ್ಚಲಿಯರ್ (ಲೀಲಾವ. ೧೩–೧೦೭). **ಅಚ್ಚುಕ**: ೧. ನೀನಿಚ್ಚೈಸಿದವ ನಿನ್ನೆಡೆಗೆ ಮೆಚ್ಚಿ ಬಂದಪನೆನ್ನ ಮಾಕಾಳಿಯಾಣೆ ನೀನಚ್ಚುಕವನು ಮಾಡಬೇಡ (ನೇಮಿಸಂ. ೨೧–೬೩). ೪. ಮೆಚ್ಚಿದೆಂ ಕೊಡುವೆಂ ವರಂಗಳನಿಚ್ಚೆಯಾವುದು ಬೇಡು ನೀನೆನಲಚ್ಚುಕದ ದರಹಾಸಲಕ್ಷ್ಮಿ ಮುಖಾಬ್ಜದೊಳ್ ಮೊಳೆಯೆ (ಬಸಪು. ೨–೨೩); ನಿಶ್ಚಯಕೆ ನಿಶ್ಚಯಂ ಬೇಱೊಂದದೇಕೆ ನಿಜದಚ್ಚುಕಕೆ ಮಚ್ಚರವೆ (ಸಿಂಗಿರಾ. ೧೨–೨೪). **ಅಚ್ಚುಗ**: ೧. ಬಚ್ಚಬಱಿಯ ಜ್ಞಾನದರ್ಶನಮೈಯಾಗಿ ಅಚ್ಚುಗವೆಂಬುದ ನೀಗಿ ನಿಚ್ಚಲು ಸುಖದೊಳೋಲಾಡುವ ಸಿದ್ಧರ ಮೆಚ್ಚಿ (ಭರಚ. ೧೮–೨೩). ೧,೨. ನಿಚ್ಚಕ್ಕೆ ನಿಚ್ಚ ಒತ್ತೆಯ ಬೇಡಿದಡೆ ಅಚ್ಚು[ಪಾಠಾಂ. ಚ್ಚಿ]ಗವಾಯಿತ್ತವ್ವಾ ನಮ್ಮ ನಲ್ಲಂಗೆ ಕಿಚ್ಚನೆ ಹೊತ್ತುಕೊಂಡು ಅಚ್ಚನೆಯನಾಡಲು ಅಚ್ಚುಗವಾಯಿತ್ತವ್ವಾ ನಮ್ಮ ನಲ್ಲಂಗೆ (ಅವಚಂ.೨೫–೧೦೬); ಮಚ್ಚು ಅಚ್ಚುಗವಾಗಿಪ್ಪ ಪರಿಯ ನೋಡಾ (ಮಹದೇ. ೩೩–೨); (ಮೋಳಿಮಾ. ೨೮–೧೧೫, ನಿಭಾಗ. ೬–೧೬–೭ ನೋ). ೩. ಕಿಚ್ಚು ನೀರಲಗಿನ ಬಾಧೆ ತನುವಿಗಾತ್ಮನಚ್ಚುಗವಳಿದ ಸುವಸ್ತು (ಭರಚ. ೬೭–೧೩೨). ೪. ಮೆಚ್ಚಿದೆಸು ಬೇಡೀಗ ನಿನ್ನಯ ಅಚ್ಚುಗದ ಮಾತಿಂಗೆ ನೀಂ ಮನ ಮೆಚ್ಚುವಂದದಿ ಕೊಡುವೆ (ಶರಲೀ. ೭೫–೭). ೫. ಕತ್ತಲೆಗವಿಯಿತ್ತು ಮೂಱುಲೋಕದೊಳಗೆ ಇದಱಚ್ಚುಗವೇನು ಹೇಳಾ ಗುಹೇಶ್ವರಾ (ಅವಚಂ. ೧೦–೪೧); ಮಣ್ಣ ಪುತ್ತಳಿಯ ಮಾಣದೆ ಜಲದಲ್ಲಿ ತೊಳೆದರೆ ನಿಚ್ಚನಿಚ್ಚಕ್ಕೆ ಕೆಸಱಹುದಲ್ಲದೆ ಅದಱಚ್ಚುಗ ಬಿಡದಣ್ಣ (ಬಸವ. ೯೩). ೭. ಆಶ್ಚರ್ಯ; ಸೋಜಿಗ: ಮೆತ್ತಾನ ಅಶನವನುಂಡು ಕೆಚ್ಚಾನ ಚರ್ಮವ ಕಚ್ಚಿಕೊಂಡು ಬೆಚ್ಚಾನ ಮನೆಯಲ್ಲಿ ಬಿದ್ದಿಪ್ಪವರಿಗೆ ಅಚ್ಚುಗವೇ ಅನಂತಭವದುಃಖ (ಸಿದ್ಧೇವ. ೧೪೧); ಪಚ್ಚೆಗಿರಿಯು ತಾನೆ ಜಿನರೂಪವಾಂತು ಪಳಚ್ಚನೆ ನಿಂದುದೆಂದೆನಿಸಿ ಅಚ್ಚುಗ ನೋಡುವರಿಗೆ ಭುಜಬಲಿ ಜಿನಗಚ್ಚರಿವಟ್ಟೆಱಗಿದರು (ಭರಚ. ೭೦–೪೫).
[ದೇ. ?. / ತಮಿ. ಅಚ್ಚಮ್ = ಭಯ; **ಮಲ.** ಅಚ್ಚಮ್, ಅಞ್ಚಲ್ = ಭಯ; **ತೆಲು.** ಅಚ್ಚಿಕ = ಕ್ಷೋಭೆ; **ಕೋಲಾ.** ಅಂಜಲ್ಕ್ = ಭಯ]

**ಅಚ್ಚಿಗ$_2$** (ನಾ). ಅರ್ಚಕ; ಪೂಜಾರಿ (ಕ). [ಸಂ. ಅರ್ಚಕ]

**ಅಚ್ಚಿಗಂಗೊಳ್**, ಅಚ್ಚುಗಗೊಳ್ (ಕ್ರಿ). ೧. ತೀವ್ರವಾಗಿ ವ್ಯಥೆಪಡು: ಅಚಳಿತಧೈರ್ಯನ ಮನಮುಂ ಚಳಿಯಿಸಲಾಱದಚ್ಚರಸೆಯರಚ್ಚಿಗಂಗೊಂಡಂತಾಗೆಯುಂ (ಪಂಪಭಾ. ೭–೯೪ ವ); ಏನುಮಿಲ್ಲದಿರೆ ಬೆಱಗಾಗಿ ಅಚ್ಚಿಗಂಗೊಳುತೆ [ಪಾಠಾಂ. ಅಚ್ಚುಗಂಬಡುತೆ] ಹಮ್ಮದಂಬೋಗಿ (ತಿರುರ. ೨೭–೨೧). **ಅಚ್ಚುಗಗೊಳ್**: ೧. ಅಲ್ಲಿರ್ದ ಪಾತ್ರೆಯಿಲ್ಲದಿರೆ ಅಚ್ಚ

[ಚ್ಚು]ಗಗೊಂಡು ತಲ್ಲಣಿಸಿ ಜೋಲ್ದು ನಡುಗುತೆ (ಸಿದ್ಧೇಪು. ೧೪–೩೪). ೨. ಅಪಾಯಕ್ಕೆ ಒಳಗಾಗು : ಅಚ್ಚನಾಭಿಯ ಮೆದ್ದು ನಿರ್ವಿಷಸಿದ್ಧ ತಾನಚ್ಚುಗಗೊಳ್ಳದಿರ್ಪಂತೆ (ಭರಚ. ೨–೩೬). [ಅಚ್ಚಿಗ$_1$ + ಕೊಳ್$_1$]

**ಅಚ್ಚಿಗಂಗೊಳಿಸು** (ಕ್ರಿ). ಕಷ್ಟಪಡಿಸು ; ಕ್ಲೇಶಪಡಿಸು: ತುಚ್ಛಪರಿಚ್ಛದ ರುಚ್ಛವಿಗ್ರಹಮನೆತ್ತಿಕೊಂಡು ನಿಚ್ಚಗಾಳಗದೊಳಚ್ಚಿಗಂಗೊಳಿಸಿ (ಅಜಿಪು. ೯–೩೪ ವ). [ಅಚ್ಚಿಗ$_1$ + ಕೊಳ್$_1$ + –ಇಸು$_3$]

**ಅಚ್ಚಿಗಂಬಡಿಸು** (ಕ್ರಿ). = ಅಚ್ಚಿಗಂಗೊಳಿಸು : ಎನ್ನ ಪಗೆಯೆನಿಸಿರ್ದ ನನಜನಾಭಂ ಮತ್ತೊಂದು ತಾಣದೊಳ್ ಪುಟ್ಟಿದಂ ಕೆಮ್ಮನೆ ನಿಮ್ಮನಚ್ಚಿಗಂಬಡಿಸಿದೆನೆಂದು ಚಾಟುವಚನಂಗಳಂ ಮೆಱೆದು (ಜಗನ್ನಿ. ೩–೨೨ ವ). [ಅಚ್ಚಿಗ$_1$ + ಪಡು$_1$ + –ಇಸು$_3$]

**ಅಚ್ಚಿಗಂಬಡು**, ಅಚ್ಚುಗಬಡು, ಅಚ್ಚುಗವಡು (ಕ್ರಿ). ೧. ತೀವ್ರವಾಗಿ ವ್ಯಥೆಪಡು : ಅಚ್ಚರಿವಡುತೆ ಪಗಲೊಳೀ ಶಿವಾಲಯದ ಪಡಿ ಮುಚ್ಚಿರ್ಪ ಕತನಮೇನೆಂದೊಡಾಸ್ಥಾನದವರಚ್ಚಿಗಂಬಡುತೆಂದರ್ (ಪದ್ಮರಾ. ೫–೨೨). **ಅಚ್ಚುಗಬಡು** : ೧. ಸರ್ವಜ್ಞಾನಿಯಾಗಿ ಅಚ್ಚುಗಬಡುವಡೆ ಹಬ್ಬಿದ ಪಾಪದ ಫಲವನುಂಬಡೆ ಒಬ್ಬಳವನೆ ಬಿತ್ತಿ ಒಬ್ಬಳವನೆ ಬೆಳೆವಡೆ ಕಬ್ಬುನ ಹುಳಿವಡೆ ಇನ್ನೇವೆ ರಾಮನಾಥ (ದೇದಾಪ್ರ. ೧೧೪–೬೬). ೨. ಆಶ್ಚರ್ಯಪಡು : ಕೊಟ್ಟನೊರವನೆಂದು ನಿಶ್ಚಯವ ಮಾಡಿದ ಮತ್ತೆ ಸಾವರ ಕಂಡು ಅಚ್ಚುಗಬಡುತ್ತಿದ್ದೇನೆ (ಮೋಳಿಮಾ. ೨೧–೮೩). **ಅಚ್ಚುಗವಡು** : ೨. ನಿಶ್ಚಯವೆಂದು ವಿಯಚ್ಚರಗೆನಲಾಗಚ್ಚುಗವಡುತಾ ಖಳನು ಬೆಚ್ಚಿ ಪಿಂದಣಿಗೋಸರಿಸಿಯಾ ವನಿತೆಯ ಸಚ್ಚರಿತವ ನೋಡಿ ನುಡಿದು (ಅಂಜಚ. ೧೩–೨೨೨). [ಅಚ್ಚಿಗ$_1$ + ಪಡು$_1$]

**ಅಚ್ಚಿಗೊಳಿಸು** (ಕ್ರಿ). ದೃಷ್ಟಿಯನ್ನು ಸೆಳೆ; ಕಂಗೊಳಿಸು: ಪೊಚ್ಚಪೊಸಗಂಪಮರ್ದ ಚಂದನಕುಜಂಗಳಿಂ ಅಚ್ಚಿಗೊಳಿಸುವನಂತತಿಲಕದ ಕುಜಂಗಳಿಂ (ಉದ್ಭಟ. ೩–೯೩); ಪೊಚ್ಚಪೊಸಗಂಪನೀಯುತುಮಚ್ಚಿಗೊಳಿಪ್ಪಮಲ ಧೂಪಮಂ ಶಾಂತಂಗಂ ಚೆಚ್ಚರಿತನರ್ಪಿಸುತ್ತುಂ (ಉದ್ಭಟ. ೧೧–೬೮); ಪೊಚ್ಚಪೊಸ ಪೊನ್ನ ಕುಂಭದೊಳಚ್ಚಿಗೊಳಿಪ್ಪುದುಮನಳವಡಿಸಿಕೊಂಡು (ಉದ್ಭಟ. ೧೧–೬೬). [ಅಚ್ಚಿ$_5$ + ಕೊಳ್$_1$ + –ಇಸು$_3$]

**ಅಚ್ಚಿಡು** (ಕ್ರಿ). ಮುದ್ರಿಸು ; ಅಚ್ಚುಮಾಡು : ಈ ಪುಸ್ತಕವನ್ನು ಇಷ್ಟು ಸುಂದರವಾಗಿ ಅಚ್ಚಿಟ್ಟಿರುವ ಮುದ್ರಣಾಲಯದವರಿಗೆ ನನ್ನ ವಂದನೆಗಳು (ರೂಢಿ). [ಅಚ್ಚು$_3$ + ಇಡು]

**ಅಚ್ಚಿಮುಗುಳ್ಚು** (ಕ್ರಿ). ಕಣ್ಣುಮುಚ್ಚು : ಅಚ್ಚರಿಯರೊಳರಗಿಣಿಯರೊಳಚ್ಚಿಮುಗುಳ್ಚುವ ವಿಳಾಸಮುಂ ವಿಭ್ರಮುಮುಂ ನಚ್ಚಿರದು (ರಾಜಶೇ. ೧೨–೯೭). [ಅಚ್ಚಿ$_5$ + ಮುಗುಳ್ಚು]

**ಅಚ್ಚಿರಿ** 'ಅಚ್ಚಿಱಿ' ನೋ.

**ಅಚ್ಚಿವಳ್ಳಿ** (ನಾ). ಒಂದು ಹಳ್ಳಿಯ ಹೆಸರು : ಉತ್ತರಾಯಣ ಸಂಕ್ರಾನ್ತಿಯಂದು ಅಚ್ಚಿವಳ್ಳಿಯರ ಗಣಮಯ್ಯನ ತಮ್ಮ ನಾಯ್ಕಯ್ಯನ ಕಯ್ಯಲು (ಸೌಇಇ. IX–i, ೮೯–೧೬ ; 1035). [ಅಚ್ಚಿ$_4$ ? + ಪಳ್ಳಿ$_1$]

**ಅಚ್ಚಿಸು$_1$** 'ಅರ್ಚಿಸು' ನೋ.

**ಅಚ್ಚಿಸು$_2$** (ಕ್ರಿ). ಅಚ್ಚುಮಾಡಿಸು ; ಮುದ್ರಣಮಾಡಿಸು. [ಅಚ್ಚು$_3$ + –ಇಸು$_3$]

**ಅಚ್ಚಿಱಿ**, ಅಚ್ಚಿರಿ (ಕ್ರಿ). ೧. ಎರಕಹೊಯ್ಯಿ : ಉಲಿವ ವಿಮಾನ ಕಿಂಕಿಣಿಯ ಮೆಲ್ಲುಲಿಗಳ್ ಕಿವಿಗೆಯ್ದಿ ಮಟ್ಟಿದಗ್ಗಲಿಸೆ ತಗುಳ್ವ ಗೇಯರಸ ವಚ್ಚಿಱಿದಂತಿರೆ ಬೆಚ್ಚು ಚಿತ್ರದೊಳ್ ನಿಲೆ (ಶಾಂತಿಪು. ೪–೬೮). ೨. ಮುದ್ರೆಯೊತ್ತು ; ಮುದ್ರಿಸು : ಮಾಣದೆ ಮೋದೆ ಶೋಕದಚ್ಚಿಱಿದವೊಲಿರ್ದ ಬಾಸುಟಿನೊಳಚ್ಚು ಕನಲ್ದು ಬಟಲ್ದು ಜೋಲ್ದ ಮೆಯ್ (ಪಂಪಭಾ. ೧೪–೫); ಎಳನೆಂಡಿರ ತಂಡದಲತಗೆಯೂಡಿದಡಿವಜ್ಜೆಗಳಿಂದಚ್ಚಿಱಿದ ಪಚ್ಚೆಯ ಪಾಸಱೆಗಳುಮಂ (ಕಾದಂಬ. ೫೨೬). ೩. ನೆಲೆಗೊಳ್ಳು : ಅಗುಂದಲೆಯಾಯ್ತು ತೇಜಮುಚ್ಚಿಱಿದುದು ಮಿಕ್ಕ ಬಿಚ್ಚತಿಕೆ (ಸೌಇಇ. XI–ii, ೧೪೭–೩೬ ; 1099). ೪. ಒಂದುಗೂಡು ; ಬಿಗಿಯಾಗಿ ಹೊಂದಿಕೊ : ಪೊದಳ್ದು ನೀಳ್ದುದಿರ್ದವರ ಸಮುಶೀಲಮಚ್ಚಿಱಿದುದಿರ್ದವರ ನಚ್ಚಿನೊಡಂಬಡೀಂ ಭವಾಂತರಗತಮೋಹಬಂಧಬಲಮೋ ಬಲದೇವನ ವಾಸುದೇವನಾ (ಶಾಂತಿಪು. ೧–೭೯). **ಅಚ್ಚಿರಿ** : ೪. ವಾಣಿಗೆ ವೀಣೆಯು ಅಚ್ಚಿರಿದಂತೆ ಇರದಿರೆ ಏನದು ಆ ಹಾಡು (ಗಂಗಾತ. ೬೫–೭). [ಅಚ್ಚು$_3$ + –ಇಱು$_3$]

**ಅಚ್ಚು$_1$** (ಕ್ರಿ). ೧. ಹಿಡಿ ; ಹಿಡಿದುಕೊ (?) : ಒಚ್ಚತಯಿಲ್ಲೆನಲಾಗದು ಕಾಲವೊಂದಚ್ಚಿ ಕರ್ಮಗಳತ್ತ ತಹುದು ಚುಚ್ಚಿಕೊಡುವರಂತೆ ಪುದ್ಗಲ ಪರಿಣತಿಗಚ್ಚಾದ ಕಾರಣದಿಂದ (ಭರಚ. ೬೮–೪೨). ೨. ಅಚ್ಚೊತ್ತಿದಂತೆ ಇರು : ತರಿಸಂದು ನಿಂದಿರಲ್, ಬೆಳ್ದಿಂಗಳೊಳ್ ನೆಲದೊಳಚ್ಚಿರ್ದ ಕಪಿಕುಲೇಂದ್ರನ ಮಹಾವಾನರನ ಮೆಯ್ನೆಳಲ್ ಕೇಳ್ ಸ್ವಲ್ಪಮಾತ್ರಂ ಕರ್ಪುಗೆಟ್ಟು ನಸು ಬಿಳ್ಪಿದುದು (ಶ್ರೀರಾಮಾ. ೪೩೨–೩೨೫).

**ಅಚ್ಚಿಬರು**=೧. ಒಗ್ಗು : ಆ ಸ್ಥಳ ನನಗೆ ಅಚ್ಚಿಬರುವದಿಲ್ಲ (ಸ್ಯಾಂಡರ್); ಆ ಊರು ನನಗೆ ಅಚ್ಚಿಬಂತು (ಸ್ಯಾಂಡರ್) ; ಯಾರಿಗೂ ಅಚ್ಚಿಬಾರದ ಸ್ಥಳ ಅವನಿಗೆ ಅಚ್ಚಿಬಂತು (ಸ್ಯಾಂಡರ್). ೨. ಕೂಡಿಬರು ; ದಕ್ಕು : ಆ ದ್ರವ್ಯ ಅವನಿಗೆ ಅಚ್ಚಿಬರಲಿಲ್ಲ (ಸ್ಯಾಂಡರ್). [ದೇ. ?]

**ಅಚ್ಚು$_2$** (ಕ್ರಿ). ಅನ್ಯಾಯವಾಗಿ (ಹಣವನ್ನು) ತೆರು : ಅವನು ಸರಕಾರಕ್ಕೆ ಇಪ್ಪತ್ತು ವರಹಾಗಳು ಅಚ್ಚುತ್ತಾನೆ (ಸ್ಯಾಂಡರ್) ; ನಿನಗೆ ನಾನು ಅಚ್ಚಬೇಕೆ ? (ಸ್ಯಾಂಡರ್) ; ಆ ತೋಟಕ್ಕಾಗಿ ಇಪ್ಪತ್ತು ರೂಪಾಯಿ ಅಚ್ಚಿದ್ದೇನೆ (ಸ್ಯಾಂಡರ್). [← ತೆಲು. ಅಚ್ಚು = ದಂಡವನ್ನು ತೆರು]

**ಅಚ್ಚು$_3$** (ನಾ). ೧. ಮರದಲ್ಲಿಯೋ ಲೋಹದಲ್ಲಿಯೋ ಬೇಕಾದ ಆಕಾರವನ್ನು ಕೊರೆದು, ಅದರಲ್ಲಿ ಎರಕದ ಅಥವಾ ಕರಗಿಸಿದ ದ್ರವವನ್ನು ಹೊಯ್ದು, ಆ ಆಕಾರದ ಬಿಂಬವನ್ನು ಮಾಡಿಕೊಳ್ಳುವ ಸಾಧನ ; ಪಡಿಯಚ್ಚು : ಶೋಭಿಸಿದಂ ಕುಮಾರನಾನಂದಿತರೂಪನಂ ದೆಸೆಯೆ ತಂದೆಯೊಳಚ್ಚಿನೊಳೊತ್ತಿದಂತೆವೋಲ್ (ಆದಿಪು. ೮–೪೩) ; ಸಿರಿ ಗಿರಿಜಾತೆ ಶಾರದೆ ಶಚಿ ಮುಖ್ಯರು ಸರಿಯಲ್ಲವಿವಳಚ್ಚು ಬೇಱೆ (ಮೋಹತ. ೧೦–೫) ; ತಂದೆಯಚ್ಚಿನೊಳೊತ್ತಿದಂತಿರ್ದನಾ ರಾಜನಂದನ ತಂದೆಯಂಕದೊಳು (ಭರಚ. ೨೫–೨೪). ೨. 'ಅಚ್ಚು ೧'ರ ಮೂಲಕ ಸಿದ್ಧಪಡಿಸಿದ ಪದಾರ್ಥ. ಉದಾ— ಬೆಲ್ಲದ ಅಚ್ಚು, ಸಕ್ಕರೆಯ ಅಚ್ಚು ಇತ್ಯಾದಿ : ಹೊಱಗಣಿಂ ಬಂದ ಬೆಲ್ಲದ ಭಂಡಿಗೆ ಬೆಲ್ಲದಚ್ಚು ಹದಿನಯ್ದು (ಎಇ. XIII, ೨೨–೫೭ ; 1204) ; ಸಂಕ್ರಾಂತಿಯ ಹಬ್ಬದ ದಿನ ಎಳ್ಳಿನ ಜೊತೆಗೆ ಸಕ್ಕರೆಯ ಅಚ್ಚುಗಳನ್ನೂ ಬೀರುತ್ತಾರೆ (ರೂಢಿ). ೩. 'ಅಚ್ಚು ೧' ರಲ್ಲಿ ಎರಕಹೊಯ್ದ ರೂಪ ; ಪ್ರತಿರೂಪ ; ವಿಗ್ರಹ : ಕಾಮನಚ್ಚೊತ್ತಿದ ಬೇಟದಚ್ಚುಗಳ ಮಾೞ್ಕೆಯೊಳಿರ್ದುದು ಮೆಯ್ ಸುಭದ್ರೆಯಾ (ಪಂಪಭಾ. ೫–೧೭) ; ದೈವದ ಬಣ್ಣಮುಮನಚ್ಚುಮಂ ಕಳ್ಳರ್ ಕೊಂಡೊಯ್ವಲ್ಲಿ ಕಾಯಲಾಱದ ದೈವಂಗಳ್ (ಸಮುಪ. ೯–೧೦೪) ; ರಾಯ ನೃಸಿಂಹನ ನಚ್ಚಿನಚ್ಚು ಪೇಸಣಹನುಮಂ (ಸೌಇಇ. IX–i, ೩೪೩–೧೧ ; 1226) ; ಅಕ್ಕರಿಗರಾಭರಣಂ ಬುಧರಿಚ್ಚೆಯಚ್ಚು ವೀರರ ಕಣಿ (ಸೂಕ್ತಿಸು. ೧–೨೫). ೪. ಒತ್ತಿದ ಮುದ್ರೆ : ನಾನಾವಿಷಯತತಿಗೆ ತನ್ನಾಣೆ ತನ್ನಚ್ಚು ತನ್ನಿಟ್ಟರಸರ್ ತನ್ನೋಲೆ ತನ್ನುಂಡಿಗೆಯೆನೆ ವಿದಿತಾಜ್ಞಾನ್ವಿತಂ ಮಾಡಿದಂ (ಸೌಇಇ. XI–i, ೧೧೬–೭ ; 1075). ೫. ನೇಯುವಾಗ ಉದ್ದೆಳೆಗಳು ಒಂದರೊಡನೆ ಮತ್ತೊಂದು ಸೇರಿಕೊಳ್ಳದಂತೆಯೂ, ಅಡ್ಡೆಳೆಗಳಿಗೆ ಅಣಿ ಬರುವಂತೆಯೂ ಮೇಲೊಂದು ಕೆಳಗೊಂದು ಕೋಲಿನ ಮೇಲೆ ಹುರಿದಾರದಲ್ಲಿ ಮಾಡಿದ ಒಂದು ಉಪಕರಣ ; ಬೆದ ;

ಸಾವಿರದಲ್ಲಿ ಒಂದು ರಜ್ಜು ಹಱಿದಡೆ ಅದ ಸಾಗಿಸಿ ಕಡೆಹಾಸಬೇಕಲ್ಲದೆ ಗೈದುಬಿಟ್ಟಡೆ ಒಂದಱ ಹಿಂದೊಂದಳಿಯಿತ್ತು ಆ ಅಚ್ಚು (ಮೋಳಿಮಾ. ೫೫–೨೨೮). ೬. ಅಕ್ಷರದ ಮೊಳೆಗಳನ್ನು ಜೋಡಿಸಿ ಮುದ್ರಣ ಮಾಡುವುದು; ಮುದ್ರಣ. 'ಅಚ್ಚುಮಾಡು' ಪರಾ.

**ಅಚ್ಚಿನ ಮನೆ** = ಅಚ್ಚುಕೂಟ: ೧೮೦೦ ರ ಸುಮಾರಿನಲ್ಲಿ ಕೇರಿ ಫಾರ್ಸ್ಟ ಮುಂತಾದ ಪಾದ್ರಿಗಳ ಪ್ರಯತ್ನದಿಂದ ಬಂಗಾಳಿಯಲ್ಲಿ ಒಂದು ವ್ಯಾಕರಣವೂ ನಿಘಂಟೂ ಹುಟ್ಟಿದುವು. ಅಚ್ಚಿನ ಮನೆಯಾಯಿತು. ಬೈಬಲ್ ಭಾಷಾಂತರವಾಯಿತು (ಬಂಕಿಮ. ೮). 'ಅಚ್ಚುಮನೆ' ಪರಾ.

[ದೇ. ? ಅಥವಾ ~ ಸಂ. ಅಕ್ಷ ?. / **ತಮಿ. ಮಲ. ತುಳು. ಕೊಡ.** ಅಚ್ಚಿ; **ತೆಲು.** ಅಚ್ಚು]

**ಅಚ್ಚು$_{4}$** (ನಾ). ಪ್ರೀತಿ; ಪ್ರೀತಿಯ ವಸ್ತು: ಅಕುಟಿಲರ ಮನಮಚ್ಚು ಸಿರಿಹರಿಭಕುತರುಮ್ಮಹದಚ್ಚು ಶಿವಸೇವಕರ ಮೆಚ್ಚು ಕುಮಾರ ವಾಲ್ಮೀಕಿ ಪ್ರಬಂಧಕೃತಿ (ತೊರರಾ. ೧–೧–೧೧); ಅಚ್ಚಿನೊಳಗೆ ಮೆಚ್ಚು ಮೆಚ್ಚಿನೊಳಗೆ ಅಚ್ಚು ಕಿಚ್ಚಿದ್ದು ಹೋಯಿತಲ್ಲಾ (ಪುರಂದ. ೧–೫೪–೧); ಹರಿಶರಣರಚ್ಚು ಬುಧಜನರಿಗೆ ಪೆಚ್ಚು (ಮೋಹತ. ೧–೩೮); ಅಚ್ಚಿನ ಮನುಷ್ಯಗೆ ನುಚ್ಚಿನ ಅನ್ನ (ಗಾದೆ. ೬೫) [?]

**ಅಚ್ಚು$_{5}$** (ನಾ). ಅಂಚು: ಸೆಱಗುಸೇರುವೆಗಿಳಿದೆಡದ ಕಂಕುಳೊಳೊಲಿದಿಱು ಕಿದ ಪಚ್ಚಡದಚ್ಚು ನಿಱಿಸಿ ಬೀಸುವ ಬಲದೋಳಿಂದ ಗಮಕದಿ ಮಱಿ ಯಾನೆ ನಡೆವಂತೆ ನಡೆದ (ಭರಚ. ೪–೩). [~ ಅಂಚು$_{2}$ ?]

**ಅಚ್ಚು$_{6}$** (ನಾ). ಪಕ್ಷಿಯ ಮಲ; ಹಕ್ಕಿಯ ಹಿಚಿಕೆ: ಅದು ಕಾಗೆಯ ಅಚ್ಚು; ತುಳಿಯಬೇಡ (ರೂಢಿ). 'ಅಚ್ಚಿಕ್ಕು' ಪರಾ. [?]

**ಅಚ್ಚು$_{7}$** (ನಾ). ೧. ಬಂಡಿಯ ಅಥವಾ ರಥದ ಇರಚಿ: ಉಡಿದಿರ್ದಚ್ಚು ಱಿದೀಸು ತಱ್ಗಿದ ನೊಗಂ ಜೀಱಿಟ್ಟ ಚಕ್ರಂ (ಪಂಪಭಾ. ೧೦–೯೧); ಅಚ್ಚು ಮುಱಿದ ಭಂಡಿಯಂತೆ ನುಚ್ಚುನುಱಿಯಾಗೆ (ಪಂಚತಂ. ೧೫೮–೩); ತೊಲಗದ ಪದ್ಮಾಸನವೆನಿಪಚ್ಚಿನೊಳೊಲಿದಾರಾಧನೆಯೆಂಬ ಬಲುಗಾಲಿಯು ನಳವಡಿಸಿ (ತ್ರಿಪುಸಾಂ. ೧೦೬); ಕೀಲ ತೆಗೆಯಚ್ಚುಗಳ ಹೆರೆ ಬಲು ಗಾಲಿಗಳ ಜೋಡಿಸು (ಕುವ್ಯಾಕ. ೮–೧೨); ಭಗ್ನವಾದ ಚಕ್ರಗಳೂ ಅಚ್ಚುಗಳೂ ಧ್ವಜಗಳೂ ಉಂಟಾಗಿ ರಥಗಳು . . . ಬಿದ್ದವು (ಕೃವಾಭೀ. ೧೧೨). 'ಮೇಲಚ್ಚು' ಪರಾ. ೨. ನಡುಗೂಟ; ಕೀಲು: ಆಡಿದುವಿಂದ ರಾತಿಭಟರಟ್ಟಿಗಳಾಜಿಯೊಳೆನ್ನ ಕಾರ್ಯದಚ್ಚಾಡಿದುದಿಂದು ಕೂಡಿದುದು ವೈರಿಬಲಾರುಣಸಿಂಧುವಾರ್ಧಿಯಂ (ಜಗವಿ. ೮–೬೫). ೩. ಪಗಡೆಯ ದಾಳ. ೪. ಜೂಜಾಟ: "ಅಕ್ಷಃ ದುರೋದರಃ–ಈ ೨ ಅಚ್ಚು" (ಹಲಾಯು. ೬೪–೨೩೩). ೫. ಎಂಬತ್ತು ಗುಂಜಿಯ ತೂಕ; 'ಕರ್ಷ'. ೬. ಒಂದು ನಾಣ್ಯ: ತುಂಬಳಬೀಡಿನ ಶ್ರೀ ಪಂಚಲಿಂಗ ದೇವರಂಗಭೋಗಕ್ಕಂ . . . ಗಾಣ ೨ ಅಚ್ಚಿನ ಟಂಕಸಾಲೆಯಲು ದಳಕ್ಕೆ ವೀಸ ೨ (ಸೌಇಇ. IX–i, ೨೨೮–೧೧; 1133); ಎನುತಲ್ಲಿ ಹನ್ನೆರಡು ಸಾವಿರಚ್ಚಂ ಕೊಟ್ಟು ಮನವಾರೆ ಪಡಿಯ ಸಾವಿರ ಪೊನ್ಗಳಂ ಕೊಟ್ಟು (ನಂಬಿರ. ೧೧–೮೩).

**ಅಚ್ಚುಬರು** = ಸರಿಯಾದ ಗರ ಬೀಳು: ಒಳಪೊಕ್ಕು ಕಟ್ಟುವರಚ್ಚು ಬಂದರೆ ಜೂಜುಗಾಱರ ಪರಿಯೊಳಬಳೆಯುರು (ಬಸವು. ೪೦–೬೬). ☞ ಇಲ್ಲಿ ಶ್ಲೇಷೆಯಿಂದ 'ಹಣ ಲಭಿಸು' ಎಂದೂ ಅರ್ಥವಾಗುತ್ತದೆ.

[ಸಂ. ಅಕ್ಷ]

**ಅಚ್ಚು$_{8}$** (ನಾ). [ವ್ಯಾಕ] ಸ್ವರ: ವಾರಿರುಹಸಂಭವನೆ ಕೇಳಕಾರದಲಿ ಹದಿನಾರು ಅಚ್ಚುಗಳು ಜನಿಸಿದವು ಕ್ರಮದಿ (ಕಭವಿ. ೨೨೯); ಸ್ವರಕ್ಕೆ ಅಚ್ಚೆಂತಲೂ, ವ್ಯಂಜನಕ್ಕೆ ಹಲ್ಲೆಂತಲೂ, ಕಡಮೆ ನಾಲ್ಕಕ್ಕೂ ಅಯೋಗ ವಾಹವೆಂತಲೂ ಹೆಸರುಂಟು (ಹೊಸುಗ. ೨).

[ಸಂ. ಅಚ್. / **ತೆಲು.** ಅಚ್ಚು]

**ಅಚ್ಚು$_{9}$** (ನಾ). ಪೆಗುದೇಶದ ಕುದುರೆ (ಕಿ).

[ಅನ್ಯ. / **ತಮಿ. ಮಲ. ತೆಲು.** ಅಚ್ಚಿ]

**ಅಚ್ಚುಕ** 'ಅಚ್ಚಿಗ$_{1}$' ನೋ.

**ಅಚ್ಚುಕಟ್ಟು$_{1}$** (ಕ್ರಿ). ಬಟ್ಟೆ ನೇಯುವಲ್ಲಿ ಅಣಿಬರುವಂತೆ ಕೋಲುಗಳ ಮೇಲೆ ಹುರಿದಾರದಲ್ಲಿ ಅಚ್ಚನ್ನು ತಯಾರುಮಾಡು (ಕಿ).

[ಅಚ್ಚು$_{3}$ + ಕಟ್ಟು$_{1}$]

**ಅಚ್ಚುಕಟ್ಟು$_{2}$** 'ಅಚ್ಚುಗಟ್ಟು' ನೋ.

**ಅಚ್ಚುಕಟ್ಟುತನ** (ನಾ). ಅಣಿಯಾಗಿರುವುದು; ಒಪ್ಪ; ಓರಣ: ಎಷ್ಟೇ ಬಡವರ ಮನೆಯಾಗಿರಲಿ ಮನೆಯಲ್ಲಿ ಶುಚಿತ್ವ ಮತ್ತು ಅಚ್ಚುಕಟ್ಟು ತನ ಬೇಕು (ಅಡುಸಾ. ೩೭); ಸ್ವಲ್ಪೇ ಸಂಬಳದಲ್ಲಿ ತಾನು ಅದೆಷ್ಟು ಅಚ್ಚು ಕಟ್ಟುತನದಿಂದ ಸಂಸಾರ ಸಾಗಿಸಿದರೂ ಮನೆಯ ಖರ್ಚಿಗೆ ಹಣ ಕೊಡು ವಾಗ ಜಗಳ ತೆಗೆಯುವರು (ಕುಂಕುಮ. ೯೩). [ಅಚ್ಚುಕಟ್ಟು$_{2}$ + –ತನ]

**ಅಚ್ಚುಕತನ** (ನಾ). ಉತ್ಸಾಹ; ಸಂಭ್ರಮ: ನಿಜಸ್ವಾಮಿಯಂ ಮೆಚ್ಚಿಪಚ್ಚುಕತನದಿನಳವಿಯಲ್ಲದ ದುಸ್ಸಹ ಮಹಾಬ್ರತಾಯುಧಮಂ ತಳೆದು ನಿಲ್ವುದುಂ (ವರ್ಧಪು. ೧೦–೪೦ ವ). [ಅಚ್ಚುಕ + –ತನ]

**ಅಚ್ಚುಕಾಱ** (ನಾ). ಪ್ರೀತಿಪಾತ್ರನಾದವನು: ನಿಕುಂಭನಿನಕುಲನ ಮನ್ನಣೆಯ ಮನದಚ್ಚುಕಾಱನ [ಪಾಠಾಂ. ಮನಮಚ್ಚುಗಾಱನ] ಬೆನ್ನಲಪ್ಪ ಳಿಸಿದನು (ತೊರರಾ. ೬–೩೯–೮). [ಅಚ್ಚು$_{4}$ + –ಕಾಱ]

**ಅಚ್ಚುಕೂಟ** (ನಾ). ಮುದ್ರಣಶಾಲೆ; ಛಾಪಖಾನೆ: ಅಚ್ಚುಕೂಟ ಗಳನ್ನು ಇಡಿಸಿದನು (ಮುಂಬಯಿ. ೫–೧೯೬ ಕಿ.); ಆ ಅಚ್ಚುಕೂಟದಲ್ಲಿ ಐದಾರು ಭಾಷೆಗಳನ್ನು ಅಚ್ಚುಮಾಡುವ ಸೌಕರ್ಯವಿದೆ (ರೂಢಿ).

[ಅಚ್ಚು$_{3}$ + ಕೂಟ$_{1}$. / **ತಮಿ. ಮಲ.** ಅಚ್ಚುಕ್ಕೂಟಮ್; **ತೆಲು.** ಅಚ್ಚುಕೂಟಮು]

**ಅಚ್ಚುಗ** 'ಅಚ್ಚಿಗ$_{1}$' ನೋ.

**ಅಚ್ಚುಗಂಬ** (ನಾ). ಇರಚಿ (ಸ್ಯಾಂಡರ್). [ಅಚ್ಚು$_{7}$ + ಕಂಬ]

**ಅಚ್ಚುಗಂಬಡೆ** (ಕ್ರಿ). = ಅಚ್ಚಿಗಂಬಡು ೧: ಒಚ್ಚತಂ ತನಗುಳ್ಳ ರಾಜ್ಯ ದೊಳಗರ್ಧವಂ ಪಚ್ಚುಗೊಡುವೆಂ ತತ್ತುರಂಗಮುಂ ತಂದರ್ಗೆ ಮುಚ್ಚು ಮಱೆಯೇಕೆಂಬ ನುಡಿಗೆ ಕುಂಡಲನೆಂಬ ಭಟನೆಳ್ದು ಕಯ್ಯ ಮುಗಿದು ಅಚ್ಚುಗಂ [ಪಾಠಾಂ. ತಂ] ಬಡೆವುದಕ್ಕೇನು ಕಾರಣಮಿದೇನಚ್ಚರಿಯೆ (ಸಮ್ಯಕೌ. ೧೧–೪೪). [ಅಚ್ಚುಗ + ಪಡೆ$_{1}$]

**ಅಚ್ಚುಗಗೊಳ್** 'ಅಚ್ಚಿಗಂಗೊಳ್' ನೋ.

**ಅಚ್ಚುಗಟ್ಟು**, ಅಚ್ಚುಕಟ್ಟು$_{2}$ (ನಾ). ೧. ಕೆರೆ, ಕಾಲುವೆ ಮುಂತಾ ದವುಗಳ ಆಸರೆಯಲ್ಲಿರುವ ಭೂಮಿಯ ಪರಿಮಿತಿ: ನೇಱಿಲಕೆಱೆಯ ಮೂಡಣ ಕೋಡಿಯಿಂ ತೆಂಕಣ ಹೊಸಗೆಱೆಯಚ್ಚುಗಟ್ಟಾದುದೆಲ್ಲಂ (ಎಕ. II, ೭೩–೪೫; 1118); ಬಱಹಾಳ ಕೆಱೆಯಚ್ಚುಗಟ್ಟು ಮೇರೆಯಾಗಿ (ಎಕ. II, ೩೪೫–೬೧; 1159); ಈ ಗ್ರಾಮಗಳ ಚತುಃಸೀಮೆ ಒಳಗುಳ್ಳ ಗದ್ದೆ ಬೆದ್ದಲು ತೋಟ ತುಡಿಕೆ ಅಡು ಮನೆ ಅಣೆ ಅಚ್ಚುಗಟ್ಟು ಕಾಡಾರಂಭ . . . ಸುಂಕ ಸುವರ್ಣಾದಾಯ ಇವು ಮೊದಲಾದ ಸಕಲಸ್ವಾಮ್ಯವು (ಎಕ. XIV, ಮಂಡ್ಯ. ೧೫೫–೪೫; 1622). ೨. ಒಪ್ಪ; ಓರಣ; ಅಣಿ: ನಡೀರಿ ನಾನೂ ಸ್ವಲ್ಪ ಸಿದ್ಧವಾಗಬೇಕಾಗಿದೆ ಇಂದಿನ ಕೆಲಸ ಅಚ್ಚುಗಟ್ಟುಮಾಡೋ ದಕ್ಕೆ (ಬದುಬ್ರೈ. ೧೨). **ಅಚ್ಚುಕಟ್ಟು$_{2}$**: ೧. ತೋಟ ತುಡಿಕೆ ಅಣೆ ಅಚ್ಚು ಕಟ್ಟು ನಿದಿ ನಿಕ್ಷೇಪ (ಎಕ. XV, ಹೊಳೆನ. ೧೨೨–೨೬; 1473); ಆ ಹರಿಯ ಸಮುದ್ರದ ಹೊಲದಲಿ ಹುಟ್ಟಿದ ಅಚ್ಚುಕಟ್ಟು ನಿಂಮ ನಾಘುಂಡುಗ ಗದ್ದೆಯ ಕೆಳಗೆ ಮುಂದೆ ಹುಟ್ಟಿದಂಥ ಅಚ್ಚುಕಟ್ಟು . . . ಅನುಭವಿಸ ಲುಳವರು (ಸೌಇಇ. IX–ii, ೪೭೨–೪; 1485); ಚತುಃಸ್ಸೀಮೆಯೊಳಗಾದ ಗದ್ದೆ ಬೆದ್ದಲು ಕಟ್ಟೆ ಕಾಲುವೆ ಅಣೆ ಅಚ್ಚುಕಟ್ಟು ಹೊಲ ಮೇರೆ ನೀರುವಳಿ

ಇವೆಲ್ಲಂ (ಎಕ. V, ಹಾಸನ. ೨–೧೬ ; 1563). ೨. ಮಳೆ ಗಾಳಿ ಬಿಸಿಲು ಗಳಿಂದ ಸುರಕ್ಷಿತವಾಗಿರಲು ಅಚ್ಚುಕಟ್ಟಾದ ಮನೆಗಳು ಬೇಕು (ಜೀವಾತ್ಮ. ೨೭೦) ; ಆತನ ಸಂಸಾರ ಬಹು ಅಚ್ಚುಕಟ್ಟಾಗಿದೆ (ರೂಢಿ) ; ಅಚ್ಚು ಕಟ್ಟಾದ ಕೆಲಸ ಚಂದ ಬಂದುಕಟ್ಟಾದ ಊಟ ಚಂದ (ಗಾದೆ. ೬).

[ಅಚ್ಚು₃ ? + ಕಟ್ಟು₂. / **ತಮಿ.** ಅಚ್ಚುಕ್ಕಟ್ಟು; **ತುಳು.** ಅಚ್ಚಿಕಟ್ಟು ; **ತೆಲು.** ಅಚ್ಚುಕಟ್ಟು]

**ಅಚ್ಚುಗಬಡು** 'ಅಚ್ಚಿಗಂಬಡು' ನೋ.

**ಅಚ್ಚುಗಲ್ಲು** (ನಾ). ಬಟ್ಟೆಗಳ ಮೇಲೆ ಚಿತ್ರ ಮುಂತಾದವನ್ನು ಮುದ್ರಿಸುವಾಗ ಉಪಯೋಗಿಸುವ ಕಲ್ಲು (ಸ್ಯಾಂಡರ್).

[ಅಚ್ಚು₃ + ಕಲ್ಲು₂]

**ಅಚ್ಚುಗವಡು** 'ಅಚ್ಚಿಗಂಬಡು' ನೋ.

**ಅಚ್ಚುಗಾರ** 'ಅಚ್ಚುಗಾಱ' ನೋ.

**ಅಚ್ಚುಗಾಱ,** ಅಚ್ಚುಗಾರ (ನಾ). ೧. ಅಚ್ಚಿನ ಕೆಲಸ ಮಾಡುವವನು; ಬಟ್ಟೆ ಮೊದಲಾದವುಗಳ ಮೇಲೆ ಆಕೃತಿಗಳನ್ನು ಅಚ್ಚೊತ್ತುವವನು. ೨. ಪಾಕ, ಲೋಹರಸ ಮೊದಲಾದವನ್ನು ಎರಕ ಹೊಯ್ಯುವವನು. ೧,೨ : ಅಚ್ಚುಗಾಱರ ಬಣ್ಣಗಾಱರ ಕೇರಿಗಳಚ್ಚರಿ ಮಿಗೆ ಕಣ್ಗೆಸೆದವು (ಕುರಾಸಾಂ. ೪–೧೧೩). **ಅಚ್ಚುಗಾರ :** ೩. ಮುದ್ರಣ ಕಾರ (ಸ್ಯಾಂಡರ್). [ಅಚ್ಚು₃ + –ಕಾಱ]

**ಅಚ್ಚುಗೂಟ** (ನಾ). ಬೀಸುವ ಕಲ್ಲಿನ ಕೆಳಭಾಗದ ಹೋಳಿನ ಮಧ್ಯ ದಲ್ಲಿ ರಂಧ್ರಮಾಡಿ ಅದರಲ್ಲಿ ಜೋಡಿಸಿರುವ ಗೂಟ (೬).

[ಅಚ್ಚು₇ + ಗೂಟ]

**ಅಚ್ಚುಗೊಳ್** (ಕ್ರಿ). = ಅಚ್ಚುಡಿ₁ : ತನು ಮಾಸಲಾಗೆ ಮನ ಮಾಸಲಾಗೆ ಭಾವವಚ್ಚುಗೊಂಡಿಪ್ಪುದವ್ವಾ (ಮಹಾಸಾ. ೩–೭). [ಅಚ್ಚು₃+ ಕೊಳ್₁]

**ಅಚ್ಚುಗೋಲು** (ನಾ). ೧. = ಅಚ್ಚುಗೂಟ (೬). ೨. (ಧಾನ್ಯದ) ರಾಶಿ ಯನ್ನು ಯಾರೂ ಕದಲಿಸದಂತೆ ಅದಕ್ಕೆ ಮುದ್ರೆಹಾಕಲು ಉಪ ಯೋಗಿಸುವ ಕೋಲು ; ಮುದ್ರೆಕೋಲು (ಸ್ಯಾಂಡರ್).

[ಅಚ್ಚು₃ + ಕೋಲು₁ (< ಕೋಲ್₁)]

**ಅಚ್ಚುಡಿ₁** (ಕ್ರಿ). ಎರಕಹೊಯ್ದಂತೆ ಒಂದಾಗು ; ಬಿಡಿಸಲಾಗದಂತೆ ಸೇರು : ದೊರೆವಡೆದಿರ್ದುದಿರ್ದರ ಮನೋರಥಂ . . . ಅಚ್ಚುಡಿದಿರ್ದು ದಿರ್ದರ ಮುಚ್ಚು (ಶಾಂತಿಪು. ೧–೭೯) ; ಪಡೆವರಲಾವುದೊ ರನ್ನದ ಸೊಡ ರಾವುದೊ ಪೇೞಿಮೆಂಬಿನಂ ಸಂದೆಗದಚ್ಚುಡಿದಿರೆ ನಾಗಾಂಗನೆಯರ್ ಗಡಣದೆ ಸಮ್ಮೋದಸಾನುವಂ ಸಾರ್ತಂದರ್ (ಮಲ್ಲಿಪು. ೧೪–೨೭೬) ; (ಶಾಂತಿಪು. ೫–೧೧೩, ೬–೧೦೭, ಮಲ್ಲಿಪು. ೧೦–೭೯ ನೋ).

[ಅಚ್ಚು₃ + ಉಡಿ₁ ?]

**ಅಚ್ಚುಡಿ₂** (ಕ್ರಿ). (ರಥ ಮೊದಲಾದವುಗಳ) ಅಚ್ಚು ಮುರಿದು ಹೋಗು. [ಅಚ್ಚು₇ + ಉಡಿ₁ ?]

**ಅಚ್ಚುತ** (ನಾ). ಚ್ಯುತಿಯಿಲ್ಲದವನು ; ವಿಷ್ಣು : ನಿಚ್ಚ ಕೈಯೆತ್ತಿ ಕೊಡುವ ದಾನಧರ್ಮಕ್ಕೆ ಸಚ್ಚರಿತಾನುರಂಜನೆಗೆ ಅಚ್ಚುತನೊಲಿದಿತ್ತ ಬಿರುದ ಕೊಳ್ಳೆಂದೊರ್ವೆ ಪಚ್ಚೆಯ ಕಡಗವಿಕ್ಕಿದಳು (ಕಂಸವಿ. ೨೪–೬೫).

[**ಸಂ.** ಅಚ್ಯುತ]

**ಅಚ್ಚುತೇರು** (ನಾ). (ಮರ ಮುಂತಾದವುಗಳಿಂದ ಮಾಡಿರುವ) ತೇರಿನ ಸ್ಥಿರವಾದ ತಳಕಟ್ಟು, —ತೇರಿನ ವೇದಿಕೆ (ಸ್ಯಾಂಡರ್).

[ಅಚ್ಚು₇ + ತೇರು₂ (< ತೇರ್₂)]

**ಅಚ್ಚುತೊಲೆ** (ನಾ). ಇರಚಿ (ಸ್ಯಾಂಡರ್). [ಅಚ್ಚು₇ + ತೊಲೆ]

**ಅಚ್ಚುಪಡಿ,** ಅಚ್ಚುವಡಿ₁ (ನಾ). ೧. ಪಡಿಯಚ್ಚು ; ಪ್ರತಿರೂಪ ; ಪ್ರತಿಬಿಂಬ : ಈ ವಕೀಲ್ರಿಗೆ ಕಮಲನೂ ಸೇರಿ ಆರುಜನ ಹೆಣ್ಣುಮಕ್ಕಳು, ಇಬ್ಬರು ಗಂಡುಮಕ್ಕಳು ಇದ್ದರು. ಎಲ್ಲಾ ಒಂದೇ ಅಚ್ಚುಪಡಿ. ಕೋಪದ ಮುದ್ದೆಗಳು (ಬಾಗಿನ. ೪೦). **ಅಚ್ಚುವಡಿ₁ :** ೨. ಅಚ್ಚುಕಟ್ಟು ; ಓರಣ (ದಕ. ೬). [ಅಚ್ಚು₃ + ಪಡಿ₅]

**ಅಚ್ಚುಪನ್ನಾಯ** (ನಾ). ವೀಳೆಯದೆಲೆಯ ಮೇಲೆ ಹಣದ ರೂಪದಲ್ಲಿ ವಸೂಲು ಮಾಡುತ್ತಿದ್ದ ಸುಂಕ (?) : ಶ್ರೀಮದಚ್ಚುಪನ್ನಾಯದಧಿ ಷ್ಠಾಯಕಂ ಶ್ರೀಮದ್ದಣ್ಣನಾಯಕಂ ಮಹಾವಿಷ್ಣುವರಸರು (ಸೌಇಇ. IX–i, ೧೬೪–೪೦ ; 1098) ; ಅಚ್ಚುಪನ್ನಾಯದಧಿಷ್ಠಾಯಕಂ ದಣ್ಣನಾ ಯಕ ಮಾಧವಭಟ್ಟರ್ (ಸೌಇಇ. XI–ii, ೧೫೦–೨೯ ; 1102) ; ಮಾಧವ ಭಟ್ಟರಚ್ಚುಪನ್ನಾಯಮು[ಂ] ಸುಖಸಂಕಥಾವಿನೋದದಿನಾಳುತ್ತಮಿಱ್ದು (ಸೌಇಇ. XI–ii, ೧೯೦–೫ ; 1106).

[ಅಚ್ಚು₇ ? + ಪನ್ನಾಯ. ℙ ಪನ್ನಾಯ < ಪರ್ಣಾಯ (ಪರ್ಣ + ಆಯ)]

**ಅಚ್ಚುಬೀಗ** (ನಾ). ಎರಡು ಕೀಲಿನ ಬೀಗ; ಜೋಡುಕೀಲಿನ ಬೀಗ (ಸ್ಯಾಂಡರ್). [ಅಚ್ಚು₃ ? + ಬೀಗ₁ (< ಬಿಯ್ಯಗ₁)]

**ಅಚ್ಚುಬೆಲ್ಲ** (ನಾ). ಅಚ್ಚಿನಲ್ಲಿ ಹೊಯ್ದು ಬೆಲ್ಲ : ಅಚ್ಚುಬೆಲ್ಲ ಅಚ್ಚಪ್ಪಗೆ, ನುಚ್ಚುಗಂಜಿ ವೆಂಕಪ್ಪಗೆ (ಗಾದೆ). ಉಂಡೆಬೆಲ್ಲ ನೋ.

[ಅಚ್ಚು₃ + ಬೆಲ್ಲ. / **ತೆಲು.** ಅಚ್ಚುಬೆಲ್ಲಮು]

**ಅಚ್ಚುಮಟ್ಟ** (ನಾ). ಪೆಗುದೇಶದ ಕುದುರೆ. (೬).

[ಅಚ್ಚು₉ + ಮಟ್ಟ₃. / **ತಮಿ.** ಅಚ್ಚಮಟ್ಟಮ್ ; **ತೆಲು.** ಅಚ್ಚ ಮಟ್ಟಮು]

**ಅಚ್ಚುಮನೆ** (ನಾ). = ಅಚ್ಚುಕೂಟ. (ಸ್ಯಾಂಡರ್). [ಅಚ್ಚು₃ + ಮನೆ]

**ಅಚ್ಚುಮರ** (ನಾ). ಎರಕ ಹೊಯ್ಯಲು ಉಪಯೋಗಿಸುವುದಕ್ಕಾಗಿ ಮರದಿಂದ ಮಾಡಿದ ಅಚ್ಚು (ದಕ. ೬). [ಅಚ್ಚು₃ + ಮರ]

**ಅಚ್ಚುಮಾಡಿಸು** (ಕ್ರಿ). ಮುದ್ರಣ ಮಾಡಿಸು : ಈ ಪ್ರಕಟಣೆಯನ್ನು ಇಂದಿನ ಸಂಜೆಯೊಳಗಾಗಿ ಅಚ್ಚುಮಾಡಿಸಿ ಹಂಚಲೇಬೇಕು (ರೂಢಿ).

[ಅಚ್ಚುಮಾಡು + –ಇಸು₃]

**ಅಚ್ಚುಮಾಡು** (ಕ್ರಿ). ಮುದ್ರಿಸು : ನಮ್ಮ ಪುಸ್ತಕವನ್ನು ಬೇಗ ಅಚ್ಚು ಮಾಡಿಕೊಡಿ ಎಂದು ಮುದ್ರಣಾಲಯದವರನ್ನು ಮತ್ತೆ ಮತ್ತೆ ಪ್ರಾರ್ಥಿ ಸಿದೆವು (ರೂಢಿ). [ಅಚ್ಚು₃ + ಮಾಡು₁]

**ಅಚ್ಚುಮೆಚ್ಚು** (ನಾ). ೧. ಅತಿಶಯವಾದ ಪ್ರೀತಿ ಮತ್ತು ಮೆಚ್ಚಿಕೆ : ಕೇಳಿದೈ ಕುಶ ನಿಮ್ಮ ರಘುಭೂಪಾಲಕನ ಮನದಚ್ಚುಮೆಚ್ಚಿನ ಪಾಲನೆಯ ನಿಜಭೃತ್ಯನನು ವಂಚಿಸಿ (ತೊರರಾ. ೬–೨೪–೧) ; ಕೋಮಲೆಯರಚ್ಯುತ ನಚ್ಚುಮೆಚ್ಚಿನ ರಾಜವನಿತೆಯರು (ನಳಚ. ೯–೬೭) ; ಅಚ್ಚುಮೆಚ್ಚಿನೊಳು ಕೂಡಿದರೆನೆ ಸಾಕು (ಭರಚ. ೧೦–೧೯೯) ; ರಘುನಾಥ ಮಾಸ್ತರರು ಬಂದ ಕೆಲವು ದಿನಗಳಲ್ಲಿಯೇ ರಂಗಣ್ಣನು ಅವರ ಅಚ್ಚುಮೆಚ್ಚಿನ ವಿದ್ಯಾರ್ಥಿ ಯಾಗಿಬಿಟ್ಟನು (ರಂಗರೋ. ೮೪). ೨. ಅತಿಶಯವಾದ ಪ್ರೀತಿ ಮೆಚ್ಚಿಕೆ ಗಳಿಗೆ ಪಾತ್ರನಾದ ವ್ಯಕ್ತಿ ಅಥವಾ ವಸ್ತು : ತನ್ನ ನಿಯತ್ತಿನಿಂದ ಧಣಿಯ ಮನಸ್ಸನ್ನು ಒಲಿಸಿಕೊಂಡಿದ್ದನಲ್ಲದೆ ಮನೆಯವರೆಲ್ಲರಿಗೂ ಅಚ್ಚು ಮೆಚ್ಚಾಗಿದ್ದ (ಅನಾಮಿ. ೪೪). [ಅಚ್ಚು₄ + ಮೆಚ್ಚು₂]

**ಅಚ್ಚುಮೊಳೆ** (ನಾ). ಮುದ್ರಣದ ಅಕ್ಷರವನ್ನು ಕೆತ್ತಿರುವ ಮೊಳೆ.

[ಅಚ್ಚು₃ + ಮೊಳೆ₂]

**ಅಚ್ಚುವಡಿ₁** 'ಅಚ್ಚುಪಡಿ' ನೋ.

**ಅಚ್ಚುವಡಿ₂** (ನಾ). ಗೊತ್ತುಪಡಿಸಿರುವ ಕಂದಾಯ : ಈ ಭೂಮಿಯ ಅಚ್ಚುವಡಿ ವರುಷಕ್ಕೆ ನಾಲ್ಕು ವರಹ (ಸ್ಯಾಂಡರ್). 'ಅಚ್ಚವಡಿ' ಪರಾ.

[~ ಅಚ್ಚು₂]

**ಅಚ್ಚುವಣಿಗ** 'ಅಚ್ಚುವಳಿಗ' ನೋ.

**ಅಚ್ಚುವಳಿಗ**, ಅಚ್ಚುವಣಿಗ (ನಾ). ಸರ್ಕಾರಕ್ಕೆ ಕಂದಾಯವನ್ನು ಕೊಡುವವನು (ಸ್ಯಾಂಡರ್). **ಅಚ್ಚುವಣಿಗ** (ಸ್ಯಾಂಡರ್).
[< ಅಚ್ಚುವಡ್ಡಿ$_2$ + –ಇಗ]

**ಅಚ್ಚುವಿಡಿ** (ಕ್ರಿ). ಎರಕಹೊಯ್ದು ರೂಪವನ್ನು ತಾಳು: ತೊಡುವಲ್ಲಿ ಪೊದೆವಲ್ಲಿ ಸಂಗ ಶರಣೆಂದೆನುತೆ ಸಂಗನಾಮದೊಳಚ್ಚುವಿಡಿದು ಬೆಳೆವಂತಿರ್ದರ್ (ಬಸರ. ೩–೧೩೭). [ಅಚ್ಚು$_3$ + ಪಿಡಿ$_1$]

**ಅಚ್ಚುಹಲಗೆ** (ನಾ). ತೇರಿನ ವೇದಿಕೆಯ ಮೇಲೆ ಹಾಸುವ ಹಲಗೆ (ಸ್ಯಾಂಡರ್). [ಅಚ್ಚು$_7$ + ಹಲಗೆ (< ಪಲಗೆ)]

**ಅಚ್ಚುಹಾಕಿಸು** (ಕ್ರಿ). = ಅಚ್ಚುಮಾಡಿಸು. [ಅಚ್ಚುಹಾಕು + –ಇಸು$_3$]

**ಅಚ್ಚುಹಾಕು** (ಕ್ರಿ). ೧. ಅಚ್ಚೊತ್ತು; ಮುದ್ರೆಯೊತ್ತು (ದಕ. ೬). ೨. ಅಚ್ಚುಮಾಡು; ಮುದ್ರಣ ಮಾಡು.
[ಅಚ್ಚು$_3$ + ಹಾಕು (< ಪಾಯ್ಕು$_1$)]

**ಅಚ್ಚುಹೊಡೆ** (ಕ್ರಿ). = ಅಚ್ಚುಹಾಕು (ಸ್ಯಾಂಡರ್).
[ಅಚ್ಚು$_3$ + ಹೊಡೆ$_1$ (< ಪೊಡೆ$_1$)]

**ಅಚ್ಚುಳ** (ನಾ). ೧. ಚರ್ಮದ ಕೆಲಸ. ೨. ಕುದುರೆಗೆ ಜೀನುಹಾಕುವುದು ಮುಂತಾದ ಕೆಲಸ: "ಅಚ್ಚುಳಂ ಚರ್ಮಕ್ರಿಯಾ ತುರಂಗಾದಿ ಸಜ್ಜೀಕರಣಂ ವಾ" (ಶಬ್ದಾನು. ೪೨೫ ವ್ಯಾಖ್ಯಾ). [?]

**ಅಚ್ಚುಳಕೋಲ್** (ನಾ). ಚರ್ಮದ ಪಟ್ಟಿಯನ್ನುಳ್ಳ ಕೋಲು; ಬಾರುಕೋಲು; ಚಾವಟಿ: ಸಿಂಹರಥಮಹಾರಾಜಂ ಮುನಿದು ಅಚ್ಚುಳಾಯಿಲರಂ ಬರವೇಳ್ದೀ ಚಪಳೆಯಂ ಸಾಯೆ ಮೋದಿಯೆಂಬುದುಂ, ಕಜ್ಜನೆ ಕರಿಯವರಾಗಳೆ ಗಜ್ಜನೆ ಪರಿತಂದು ಮಾಣದಚ್ಚುಳಕೋಲಿಂ ತಿಜ್ಜನೆ ತಿರಿಪಿ ದುರಾತ್ಮರ್ ಚುಜ್ಜನೆ ಕೆನ್ನೆತ್ತರೊಗೆಯೆ ತೊಲಗದೆ ಬಡಿದರ್ (ಧರ್ಮಾಮೃ. ೩–೧೯೦, ೧೯೧). [ಅಚ್ಚುಳ + ಕೋಲ್$_1$]

**ಅಚ್ಚುಳಾಯ[ಯಿ]ತ** 'ಅಚ್ಚುಳಾಯ್ತು' ನೋ.

**ಅಚ್ಚುಳಾಯಿಲ** 'ಅಚ್ಚುಳಾಯ್ಲ' ನೋ.

**ಅಚ್ಚುಳಾಯ್ತು**, ಅಚ್ಚುಳಾಯ[ಯಿ]ತ (ನಾ). ೧. ಪರಿಚಾರಕ; ಸೇವಕ; ಊಳಿಗದವನು: "ಅಚ್ಚುಳಾಯ್ತನುಮೆನುತ್ತಂದುಚ್ಚರಿಸಲ್ ಬುಧರಿನಿರದೆ ಪರಿಚಾರಕ ತಾಂ" (ಕವಿಕಂ. ೧೫೮); "ಪರಿಚಾರಕರ್ಗಚ್ಚುಳಾಯ್ತರೆಂದೆಂಬ ಪೆಸರೊಪ್ಪಿ ತೋರ್ಕುಂ" (ಕಬ್ಬಿಕೈ. ೩೫); ಪರಿವ ಕರೆವೆಜೆವ ಸೂಜಾಯ್ತರ ಸೂಳುಗಳ್ ತುಜುಂಗಿದಚ್ಚುಳಾಯ್ತರ ಕಳಕಳರವದಿಂ (ಸುಕುಮಾ. ೧೧–೨೫); ಇರದೊಗೆದುದಲ್ಲಿ ಸೂಜಾಯ್ತರ ಕಳಕಳವಚ್ಚುಳಾಯ್ತರುಲಿಪುಂ (ಜಗವಿ. ೧೧–೬೩); ಬಿಜ್ಜಲಂಗೇನದಟಿಸೆದುದೊ ಪೇಳ್ ಸಿಂಹಳಾಧೀಶ್ವರಂ ಬೆತ್ತಳಿಗಂ... ತುರುಷ್ಕಂ ಕುದುರೆವೆಸದವಂ ಲಾಳನಾದಚ್ಚುಳಾಯ್ತಂ (ಎಕ. VII, ಶಿಕಾರಿ. ೧೯೭–೨೦; 1181); ಅರಮನೆಯೊಳಗೆ ಪುಗುವ ಪೊಜಮಡುವ ಝುಳಂಬಾಯ್ತರ ಸೂಜಾಯ್ತರ ಕಲ್ಲಾಯ್ತರ ಡಂಗಾಯ್ತರಚ್ಚುಳಾಯ್ತರ ರಭಸಂ (ಶಮುದ. ೧೯೮ ಪ್ರಯೋ); ಅತನಡಿಯಚ್ಚುಳಾಯ್ತನಂಗದನೆಂ (ರಾಮಾಶ್ವ. ೧೪೨–೧೨). ೨. ಕುದುರೆಯ ಜೀನು ಮುಂತಾದವನ್ನು ಸಜ್ಜುಮಾಡುವವನು: ಸೂಜೊಳಧಿಕೃತಂ ಸೂಜಾಯ್ತಂ, ಏವಂ ಬಾಗಿಲಾಯ್ತಂ, ಅಚ್ಚುಳಾಯ್ತಂ, ಕಲ್ಲಾಯ್ತಂ (ಶಬ್ದಾನು. ೪೨೫ ಪ್ರಯೋ). **ಅಚ್ಚುಳಾಯ[ಯಿ]ತ**: ೧. ಅಡಪವಳಚ್ಚುಳಾಯ[ಯಿ]ತರಕೇರಿಗಳೆಡೆವಿಡದೊಪ್ಪಿದುವಲ್ಲಿ (ಶ್ರೀಪಾಲ. ೧–೭೫). [ಅಚ್ಚುಳ + –ಆಯ್ತ]

**ಅಚ್ಚುಳಾಯ್ಲ**, ಅಚ್ಚುಳಾಯಿಲ (ನಾ). ಪರಿಚಾರಕ (೬). 'ಅಚ್ಚುಳಾಯ್ತು' ಪರಾ. **ಅಚ್ಚುಳಾಯಿಲ**: ಸಿಂಹರಥಮಹಾರಾಜಂ ಮುನಿದು ಅಚ್ಚುಳಾಯಿಲರಂ ಬರವೇಳ್ದೀ ಚಪಳೆಯಂ ಸಾಯೆ ಮೋದಿಯೆಂಬುದುಂ (ಧರ್ಮಾಮೃ. ೩–೧೯೦); ಮೈಲಾರದ ಗೊರವನಂತೆ ತಂತಮ್ಮನೆ ಬಡಿದುಕೊಳ್ವಚ್ಚುಳಾಯಿಲರುಮಂ ಕೊರಲ್ಬಿಗಿದ ಕಜುವಿನಂತೆ ಗೋಳಿಡುವ ವಿಳಾಸಿನಿಯರುಮಂ (ಧರ್ಮಾಮೃ. ೩–೨೦೬).
[ಅಚ್ಚುಳ + –ಆಯ್ಲ]

**ಅಚ್ಚುಳಿ** (ನಾ). ಅಚ್ಚಿನ ಕೆಲಸ ಮಾಡುವವನು; ಹತ್ತಿಯ ಬಟ್ಟೆಯ ಮೇಲೆ ಅಚ್ಚುಮಾಡುವವನು (ಸ್ಯಾಂಡರ್). [ಅಚ್ಚು$_3$ + –ಉಳಿ$_6$]

**ಅಚ್ಚುಳಿಗ** (ನಾ). = ಅಚ್ಚುಳಿ (ಸ್ಯಾಂಡರ್). [ಅಚ್ಚು$_3$ + –ಉಳಿಗ$_3$]

**ಅಚ್ಚುಳುಗ** (ನಾ). = ಅಚ್ಚುಳಾಯ್ತು ೧: "ಬಹುಲ ಗ್ರಹಣಾತ್ ಉಗ ಪ್ರತ್ಯಯೋಪಿ: ಸೂಳುಗಂ, ಅಚ್ಚುಳುಗಂ, ಕಲ್ಲುಗಂ" (ಶಬ್ದಾನು. ೪೨೫, ವ್ಯಾಖ್ಯಾ). [ಅಚ್ಚುಳ + –ಉಗ]

**ಅಚ್ಚೊರಮುಳ್ಳು** (ನಾ). ಒಂದು ಗಿಡಮೂಲಿಕೆ (ವೈಔಗ. ೭೭–೧೫೭೪). [ಅಚ್ಚೂರ್$_0$ + ಮುಳ್ಳು (< ಮುಳ್)]

**ಅಚ್ಚೆ**$_1$ (ನಾ). ಒಂದು ಬಗೆಯ ಮೀನು: ಕಿಜುಮೀನ್ ಕೆಂಗಜಿಯಚ್ಚೆ [ಪಾಠಾಂ. ಮಚ್ಚೆ, ಯಚ್ಚೆ] ಕುಚ್ಚಲತಿಗಂ . . . ಬಣ್ಣಮೀನೆನಿಪಿವೆಲ್ಲಂ ಬಿಳ್ದುವಾ ತಾಣದೊಳ್ (ರಾಜಶೇ. ೫–೧೧೫). [?]

**ಅಚ್ಚೆ**$_2$ (ನಾ). ೧. ಪೂಜೆ. ೨. ಪೂಜಾವಿಗ್ರಹ: ಅಚ್ಚೆಯ ಪೂಜೆ ಕರ್ಕಶದನುಭಾವ ಡೊಂಬರ ದೋಳ ಕೇಳಿ ಬಂದವರೆಲ್ಲರು ತಮ್ಮ ತಮ್ಮ ಮಂದಿರಕ್ಕೆ ಹೋಹಂತಾಯಿತ್ತು (ಗುಪ್ತಮಂ. ೩೫).
[ಸಂ. ಅರ್ಚಾ ( = ಪೂಜಾರ್ಹವಾದ ವಿಗ್ರಹ)]

**ಅಚ್ಚೆ**$_3$ 'ಅಚ್ಛಾ' ನೋ.

**ಅಚ್ಚೆಪಂಗ** (ನಾ). ಹೆಣ್ಣುಮಕ್ಕಳು ದೀಪದ ಸುತ್ತ ಕೈಚಪ್ಪಾಳೆ ತಟ್ಟಿಕೊಂಡು ಮಾಡುವ ಒಂದು ಬಗೆಯ ಕುಣಿತ (ದಕ).
[← ತಮಿ. ಅಚ್ಚಾಪ್ಪೊಜ್ಜ]

**ಅಚ್ಚೆರೆ** (ಕ್ರಿ). ೧. ಅಕ್ಷರದ ಮೊಳೆಗಳನ್ನು ಎರಕಹೊಯ್ಯಿ (ಸ್ಯಾಂಡರ್). ೨. = ಅಚ್ಚೊತ್ತು$_1$ ೧: ಅವುಗಳನ್ನೆಲ್ಲಾ ಅಚ್ಚೆರೆದು ರಾಜಧರ್ಮದ ಸಂಪೂರ್ಣ ಮೂರ್ತಿಯೊಂದನ್ನು ನನ್ನ ಕಣ್ಣೆದಿರಲ್ಲಿ ತೋರಿಸಿರಿ (ಗುರುಣಿ. ೨೧). [ಅಚ್ಚು$_3$ + ಎರೆ$_1$ (< ಎಜೆ$_1$)]

**ಅಚ್ಚೇರು** (ನಾ). ಅರ್ಧಸೇರು: ನನ್ನ ಸ್ನೇಹಿತ ಪ್ರತಿದಿನ ಅಚ್ಚೇರು ಹಾಲನ್ನು ಕುಡಿಯುತ್ತಾನೆ (ರೂಢಿ). [ಅರೆ$_3$ + ಸೇರು$_2$]

**ಅಚ್ಚೊತ್ತು**$_1$ (ಕ್ರಿ). ೧. ಅಚ್ಚಿನಲ್ಲಿ ಒತ್ತು; ಪ್ರತಿಕೃತಿಮಾಡು; ಎರಕಹೊಯ್ಯಿ: ನಿನ್ನಚ್ಚೊತ್ತಿದನ್ನರುಂ ಪಜಿದು ಪತ್ತಿಸಿದನ್ನರುಮಪ್ಪೊರಯ್ಯೂರ್ವರ್ ಮಕ್ಕಳ್ವೆರಸು (ಶಾಂತಿಪು. ೭–೧೦೩ ವ); ತಂದೆಯೊಳಚ್ಚೊತ್ತಿದವೊಲ್ ಸೌಂದರತೆಯನಾಂತ ರೂಪು (ಪುಣ್ಯಾಸ್ರ. ೭–೮೩); ಪೊಂಗಿ ಪೊರೆಯೇಜಿ ಮಾನಸಸಮರ್ಚನೆಯೊಳಚ್ಚೊತ್ತಿರ್ದನು (ಕೊಟ್ಟೂ ಬ. ೮–೧೧). ೨. ಮುದ್ರೆಯೊತ್ತು; ಅಂಕಿಸು: ಬಂದು ತನ್ನ ಮುಜಿಪೊಕ್ಕೊಡೆ ಕಾಯದೆ ಚಾಗದೊಳ್ಪಿನಚ್ಚೊತ್ತದೆ ಮಾಣ್ದು ಬಾಳ್ವ ಪುಟುವಾನಸನೆಂಬನಜಾಂಡಮೆಂಬುದೊಂದತ್ತಿಯ ಪಣ್ಣೊಳಿರ್ಪ ಪುಟುವಲ್ಲದೆ ಮಾನಸನೇ (ಪಂಪಭಾ. ೫–೭೫); ಪತ್ತುವಿಡೆ ಮೂರ್ಛೆ ಮುನಿಸಚ್ಚೊತ್ತಿದವೋಲ್ ನುಸದಿನಗಲದಿರೆ . . . ಜನಾರ್ದನಂ ಕುಳ್ಳಿರ್ದಂ (ಪಂರಾಮಾ. ೧೪–೭೦); ಮುಂಡಾಡಿ ಮುಂಡಾಡಿ ನೊಸಲೊಳಚ್ಚೊತ್ತುತಂ ಚಂದ್ರಚೂಡಂಗೆ ಸಿರಿಗಂಧಮನಲಂಕರಿಸಿ (ಬಸರ. ೩–೫೨); (ಪಂಪಭಾ. ೫–೧೭, ೬–೪೧ ವ, ಭಾವಚಿಂ. ೨–೩, ಚೆಬಪು. ೩೨–೪೪ ನೋ). 'ಅಚ್ಚೆಱಿ' ಪರಾ. [ಅಚ್ಚು$_3$ + ಒತ್ತು$_1$. / **ತೆಲು.** ಅಚ್ಚೊತ್ತು]

**ಅಚ್ಚೊತ್ತು**$_2$ (ನಾ). ಕಣ್ಣುರೆಪ್ಪೆ ಬಡಿಯುವಷ್ಟು ಹೊತ್ತು; ಕ್ಷಣಮಾತ್ರ: ಸಖಿ ನಿನ್ನ ನೆರೆದು ಮಚ್ಚಿಸಿ ಪೋದಾತನಾರೆಂದು ಪೇಳ್ದೊಡಚ್ಚೊತ್ತಿಲಿ ನಾ ತಂದು ಕೊಡುವೆ (ಮೋಹತ. ೨೮–೨೪).
[ಅಚ್ಚೆ$_5$ + ಒತ್ತು$_6$]

**ಅಚ್ಛ1** (ಗು). ೧. ನಿರ್ಮಲವಾದ; ಶುಭ್ರವಾದ; ಸ್ವಚ್ಛವಾದ. (ನಾ). ೨. ಸ್ಫಟಿಕ. [ಸಂ.]

**ಅಚ್ಛ2** (ನಾ). ಕರಡಿ. [ಪ್ರಾ. ಸಂ. ᑭ ಅಚ್ಛ (< ಸಂ. ಋಕ್ಷ)]

**ಅಚ್ಛಂದ** (ಗು). ಛಂದಸ್ಸಿಲ್ಲದ; ಛಂದಸ್ಸು ಕೆಟ್ಟಿರುವ : ಚ್ಯುತಯಾಥಾಸಂಖ್ಯಂ ವ್ಯವಹಿತಮಚ್ಛಂದಂ ವಿಸಂಧಿಕಂ ನೇಯಾರ್ಥಂ (ಕವಿರಾ. ೧–೬೮). [ಸಂ.]

**ಅಚ್ಛತ್ರಿ** (ನಾ). ಛತ್ರಿಯಿಲ್ಲದವನು : ಛತ್ರಿಗಳ್ ನಡೆದಪರೆಂದಿಂತು ಅಚ್ಛತ್ರಿಗಳೊಳ್ ಛತ್ರಿವ್ಯವಹಾರಂ ವರ್ತಿಸುವಂತೆ (ತತ್ವಪ್ರ. ೨೨೧). [ಸಂ.]

**ಅಚ್ಛಭಲ್ಲ** (ನಾ). ಕರಡಿ. [ಅಚ್ಛ2 + ಭಲ್ಲ]

**ಅಚ್ಛಮಲ್ಲಿಕೆ** (ನಾ). = ಅಚ್ಚಮಲ್ಲಿಗೆ.
[ಸಂ. ಅಚ್ಛಮಲ್ಲಿಕಾ (ಅಚ್ಛ + ಮಲ್ಲಿಕಾ)]

**ಅಚ್ಛವೊ[ವ?]ತ್ತಳಿಕೆ** (ನಾ). ಶುಭ್ರವಾದ ವಸ್ತ್ರ (?) : ಪರಮಪ್ರೀತಿಯನಪ್ಪುಕೆಯ್ದು ನಳಧಾತ್ರೀವಲ್ಲಭಂ ಸಿಂಹವಿಷ್ಟರದೊಳ್ ಕುಳ್ಳಿರಲಚ್ಛವೊ[ವ?]ತ್ತಳಿಕೆಯಿಂ ಮಂತ್ರಿಪ್ರಜಂ ರಾಜಪುತ್ರರನೇಕರ್ ನಿಜಪೌರರಾಪ್ತರೊಸೆದೆಟ್ಟಂದೆಲ್ಲರುಂ ಕಾಣ್ಕೆಯಂ ಚರಣಕ್ಕಿತ್ತು ನಿರೀಕ್ಷಿಸುತ್ತೆ ಮುಖವಂ ಕೈಯೆತ್ತಿ ಮೆಯ್ಯಿಕ್ಕಿದರ್ (ನಳಚಂ. ೭೬೯).
[ಅಚ್ಛ1 + ಪತ್ತಳಿಕೆ ?]

**ಅಚ್ಛಳಿಸು** (ಕ್ರಿ). ಬೆದರು (?) : ತೊರೆದೊಗುವ ಪಾಲಿಂದ ಬಾಲಂಗಳನ್ನೆತ್ತಿ ಹೊಸಬರ ಸೊಗಡಿನಿಂದಲಛ್ಛ[ಚ್ಛ]ಳಿಸುತ್ತ ಪಥದೊಳಗೆ ಗೋಕುಲದ ಹಿಂಡುಗಳ್ ಬರುತಿರ್ದವು (ತುರಂಗ. ೩೭–೨೨). [?]

**ಅಚ್ಛಾ, ಅಚ್ಚೆ3, ಅಚ್ಛೆ** (ನಾ). (ಉಕ) ಸಾಮಾನ್ಯವಾಗಿ, ಮಕ್ಕಳನ್ನು ಅತಿಯಾಗಿ ಮುದ್ದುಮಾಡುವುದು; ಅತಿಯಾದ ಪ್ರೀತಿ, —ಉಪಚಾರ : ಈ ಮನೆಯೊಳಗ ಹುಡುಗಿ ಅಚ್ಛಾದಲೇನೂ ಬೆಳೆದಳು (ಹೊಸಂಸಾ. ೧೨೯). **ಅಚ್ಚೆ3** : ಅಜ್ಜಿ ಅಜ್ಜಂದಿರ ಅಚ್ಚೆಯ ಮೊಮ್ಮಗನಾಗಿದ್ದ ಗೋಪಾಲ ಮಾವನ ಬುದ್ಧಿಯ ಮಾತುಗಳಿಗೆ ಕಿವಿಕೊಡಲೇ ಇಲ್ಲ (ಒಡ್ಡಿಉ. ೧೧೧); ವಿಮಲೆಯು ಒಂದು ಅಚ್ಚೆಯ ಪೆಟ್ಟು ಕೊಟ್ಟಳು (ದಾಸಹು. ೪೦). **ಅಚ್ಛೆ** : ಮನೆಯಲ್ಲಿ ಸೋದರತ್ತೆ ಮಾವಂದಿರ ಅಚ್ಛೆಯಿಂದ ಯಾವುದಕ್ಕೂ ಕೊರತೆಯಾಗದೆ ಸುಖವಾಗಿ ಬೆಳೆದಿದ್ದಳು (ಹೂಬಿಸಿ. ೯); ಹೀಗೆ ಲೀಲಾ ಅಚ್ಛೆಯ ಮಗಳಾಗಿ, ಮುದ್ದಿನ ಕಣಿಯಾಗಿ ಬೆಳೆದದ್ದರಿಂದ ಅವಳಲ್ಲಿ ಸ್ವಾಭಾವಿಕವಾಗಿ 'ತನ್ನತನ' ಬೆಳೆಯತೊಡಗಿತು (ರಂಗರೋ. ೧೮೬).

**ಅಚ್ಚ ಚ್ಚೆ** (ದ್ವಿರುಕ್ತಿ) : ಅವರು ಶ್ರೀಕಂಠಶಾಸ್ತ್ರಿಗಳ ವಿರುದ್ಧ ನುಡಿದಾಗ ಹೊಡೆತ ತಪ್ಪಿದ್ದಲ್ಲ. ಅದನ್ನೆಲ್ಲ ಸಹಿಸಿಕೊಂಡು ಮತ್ತೆ ಮರುಕ್ಷಣ ಶ್ರೀಕಂಠಶಾಸ್ತ್ರಿಗಳೊಡನೆ ಅಚ್ಚಚ್ಚೆಯೂ ನಡೆದುದೇ (ಗಂಗಾಸಾ. ೪೪). **ಅಚ್ಛಾಮಾಡು** = ಅತಿಯಾಗಿ ಮುದ್ದುಮಾಡು : ನಮ್ಮ ಕಾಕಾ ಏನು ಹೀಂಗ ಬೈತಾನ ಹೀಂಗ ಅಚ್ಛಾಮಾಡತಾನ! (ವೈನಿ. ೩೫). [?]

**ಅಚ್ಛಾಂಬು** (ನಾ). ನಿರ್ಮಲವಾದ ನೀರು : ವನಕುಸುಮಸ್ತಬಕದ ನೆಬಲಿನಿಸಚ್ಛಾಂಬುವಿನೊಳೆಸೆಯೆ (ಆದಿಪು. ೧೧–೬೨). [ಅಚ್ಛ1 + ಅಂಬು3]

**ಅಚ್ಛಾಯ** (ಗು). ನೆರಳಿಲ್ಲದ : ಆ ಜಿನೇಶ್ವರನನಂತಚತುಷ್ಟಯೈಶ್ವರ್ಯಸಮೇತನುಂ ಸಮುಪ್ರಸಿದ್ಧನಖಕೇಶತ್ವವಿರಾಜಮಾನನುಂ ಚತುರಾಸ್ಯನುಮಚ್ಛಾಯನುಮಕ್ಷಿಸ್ಪಂದವ್ಯಪೇತನುಂ (ಸುಕುಮಾ. ೮–೬೯ ವ). [ಸಂ.]

**ಅಚ್ಛಾಯತ್ವ** (ನಾ). ಛಾಯೆಯಿಲ್ಲದಿರುವುದು; ನೆರಳಿಲ್ಲದಿರುವುದು: ಅಚ್ಛಾಯತ್ವಮುಂ ಅಪಕ್ಷ್ಮಸ್ಪಂದತ್ವಮುಂ.... ಎಂಬ ಘಾತಿಕ್ಷಯಜಮುಮಪ್ಪ ದಶಗುಣಂಗಳುಂ (ಚಾವುಂಪು. ೧೧೫). [ಸಂ.]

**ಅಚ್ಛಿದ್ರ** (ಗು). ೧. ರಂಧ್ರವಿಲ್ಲದ; ಬಿರುಕಿಲ್ಲದ. ೨. ಅವಿಚ್ಛಿನ್ನವಾದ. [ಸಂ.]

**ಅಚ್ಛಿನ್ನ** (ಗು). ೧. ಕತ್ತರಿಸದ; ಮೊಟಕುಮಾಡದ. ೨. ಬೇರ್ಪಡದ; ಅಗಲದ. 'ಅಚ್ಛಿನ್ನಭಕ್ತ' ಪರಾ. [ಸಂ.]

**ಅಚ್ಛಿನ್ನಭಕ್ತ** (ನಾ). ೧. ದೃಢಭಕ್ತಿಯುಳ್ಳವನು : ಅಚ್ಛಿನ್ನಭಕ್ತರು ನಾಲ್ವರೆನಿಪರು ಭಾರತೀಪ್ರಾಣ ಪೊನ್ನೊಡಲ ವಾಗ್ದೇವಿಯರು (ಹಸಾರ. ೨೩–೧೪). ೨. ಒಡೆಯನ ಅಥವಾ ಮುಖಂಡನ ಮಾತನ್ನು ವಿವೇಚನೆ ಮಾಡದೆಯೇ ಒಪ್ಪಿಕೊಳ್ಳುವ ಅನುಯಾಯಿ.
[ಅಚ್ಛಿನ್ನ + ಭಕ್ತ]

**ಅಚ್ಛಿನ್ನಭಕ್ತಿ** (ನಾ). ಸ್ಥಿರವಾದ, ಶಾಶ್ವತವಾದ ಭಕ್ತಿ; ದೃಢಭಕ್ತಿ.
[ಅಚ್ಛಿನ್ನ + ಭಕ್ತಿ]

**ಅಚ್ಛಿನ್ನವಾಹಿನಿ** (ನಾ). ನಿರಂತರವಾದ ಪ್ರವಾಹ : ಮಾನುಷ್ಯ ಚರಿತೆಯಚ್ಛಿನ್ನವಾಹಿನಿ ಸಾಗಲಾನುಪೂರ್ವ್ಯದ ಕರ್ಮಋಣಶೇಷವಿನಿತು ತಾನಿರಲೆಬೇಕಲ್ತೆ (ಮಂಕುಕ. ೧೬೩). [ಅಚ್ಛಿನ್ನ + ವಾಹಿನಿ]

**ಅಚ್ಛೆ** 'ಅಚ್ಛಾ' ನೋ.

**ಅಚ್ಛೋಟನ** (ನಾ). ಬೇಟೆ. [ಸಂ.]

**ಅಚ್ಛೋದ** (ನಾ). ೧. ನಿರ್ಮಲವಾದ ನೀರು. ೨. (ಬಾಣಕವಿಯ 'ಕಾದಂಬರಿ'ಯಲ್ಲಿ ವರ್ಣಿತವಾಗಿರುವ) ಒಂದು ಸರೋವರದ ಹೆಸರು : ಕಂಗೊಳಿಪಚ್ಛೋದಸರಸಿಗೆ ಜನನಿವೆರಸು ಮಜ್ಜನಕ್ಕೆಂದು ನಡೆತಂದು ನೋೞ್ಪಲ್ಲಿ (ಕಾದಂಪೂ. ೭೨೧). [ಅಚ್ಛ1 + ಉದ]

**ಅಚ್ಛೋದಕ** (ನಾ). = ಅಚ್ಛೋದ ೧ : ಕರಿಯೂಥಪತಿಗಳೆರಡುಂ ಸರಸೀಜಳಮಂ ವಿಳಾಸದಿಂ ಪುಗುವವೊಲಾದರದಿಂದೆ ಪೊಕ್ಕು ತುಳುಕಿದರರವಿಂದರಜಃಪಿಶಂಗಿತಾಚ್ಛೋದಕಮಂ (ಆದಿಪು. ೧೪–೧೦೬).
[ಅಚ್ಛ1 + ಉದಕ]

**ಅಚ್ಯುತ** (ಗು). ೧. ಬಿದ್ದುಹೋಗದ. ೨. ನಾಶವಿಲ್ಲದ; ಸ್ಥಿರವಾದ; ಶಾಶ್ವತವಾದ. (ನಾ). ೩. ವಿಷ್ಣು; ಕೃಷ್ಣ. ೪. ಒಂದು ಬಗೆಯ ಅರಿಸಿನದ ಗಿಡ. ೫. ಒಂದು ಪಾದದಲ್ಲಿ ೧೫ ಅಕ್ಷರವುಳ್ಳ ಸಮಪಾದ ಅಕ್ಷರವೃತ್ತದ ಹೆಸರು : ನಗಹರೇಂದುಗಣತ್ರಿತಯಾಗ್ರಹರಂ ಸೊಗಸಿ ಕೂಡಿರೆ ನಿಂದೊಡೆ ವಿಶ್ರಮಣಂ ನೆಗಟೆದಂಬುಧಿಯಲ್ಲಿದು ಪಿಂಗಳನಿಂ ಮೃಗನಿಭೇಕ್ಷಣೆ ನಾಮದೊಳಚ್ಯುತಮುಂ [ಪಾಠಾಂ. ಳಭ್ಯುದಯಂ, ಳಭ್ಯುದಿತಂ] (ಛಂದೋಂಬು. ೩. ೧೬೪). ᑭ ಇದಕ್ಕೆ 'ಅಭ್ಯುದಯ' ಅಥವಾ 'ಅಭ್ಯುದಿತ' ಎಂಬ ಹೆಸರು ಹೆಚ್ಚು ಪ್ರಚುರವಾಗಿದ್ದಂತೆ ತೋರುತ್ತದೆ. 'ಅಭ್ಯುದಯ' ಪರಾ. ೬. [ಜೈನ] = ಅಚ್ಯುತಕಲ್ಪ. ೭. ಮೊರಸು ಒಕ್ಕಲಿಗರಲ್ಲಿ ಒಂದು ಪಂಗಡ (ಎಸಪ್ಮೈ. XV, ೪೩). [ಸಂ.]

**ಅಚ್ಯುತಕ** (ನಾ). ಒಂದು ಅರ್ಧಸಮವೃತ್ತದ ಹೆಸರು : ಶತಮುಖಭಾನುಯುಗಾಗ್ರಲಗಂ ಶೀತಕರತ್ರಿತಯಾಗ್ರಹರಂ ಮತಿಯುತೆ ಬಂದೊಡಿದಚ್ಯುತಕಂ [ಪಾಠಾಂ. ದಭ್ಯುದಕಂ] (ಛಂದೋಂಬು. ೩. ೨೩೬). [ಸಂ.]

**ಅಚ್ಯುತಕಲ್ಪ** (ನಾ). [ಜೈನ] 'ಅಚ್ಯುತ' ಎಂಬ ಹೆಸರಿನ ಹದಿನಾರನೆಯ ಸ್ವರ್ಗ : ಸಂನ್ಯಸನವಿಧಿಯಿಂದಂ ಮುಡಿಪಿ ಅಚ್ಯುತಕಲ್ಪದೊಳಿರ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊಂ (ವಡ್ಡಾರಾ. ೨೪–೧೮). [ಅಚ್ಯುತ + ಕಲ್ಪ]

**ಅಚ್ಯುತಪದವಿ** (ನಾ). ಶಾಶ್ವತವಾದ ಸ್ಥಾನ; ಮೋಕ್ಷ : ದಾನವೇಸಂಸಾರಸಾಧನ ದಾನದಿಂ ಪಾಲನೆಯ ಫಲಕಿನ್ನೇನನೆಂಬೆನು ಕಡೆಯೊಳಚ್ಯುತಪದವಿ ಫಲವೆಂದ (ಕುವ್ಯಾಉ. ೪–೨೫). [ಅಚ್ಯುತ + ಪದವಿ]

**ಅಚ್ಯುತರಾಯಿ** (ನಾ). (ವಿಜಯನಗರದ ಅಚ್ಯುತರಾಯನು ಚಲಾವಣೆಗೆ ತಂದ) ಒಂದು ಚಿನ್ನದ ನಾಣ್ಯ : ಇನ್ನೂ ಇತರ ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು, ಯಾವವೆಂದರೆ :– ೧ ಗಬರು

೧ ಮೊಹರು . . . ೧ ಅಚ್ಯುತರಾಯಿ ೧ ದೇವರಾಯಿ (ಚಿತ್ರಪಾ. ೧೦೪). [ಅಚ್ಯುತರಾಯ₀ + -ಇ₃]

**ಅಚ್ಯುತಸೌಖ್ಯ** (ನಾ). ಶಾಶ್ವತವಾದ ಸುಖ: ಅಶೇಷದೈತ್ಯವಿದ್ರಾವಣನೀಗೆ ದುರ್ಗವಿಭುಗಚ್ಯುತನಚ್ಯುತಸೌಖ್ಯಕೋಟಿಯಂ (ಪಂಚತಂ. ೧–೪). [ಅಚ್ಯುತ + ಸೌಖ್ಯ]

**ಅಚ್ಯುತೇಂದ್ರ** (ನಾ). [ಜೈನ] ಅಚ್ಯುತಕಲ್ಪದ ಇಂದ್ರ: ಅಚ್ಯುತೇಂದ್ರನೊಡನೆ ನಿಜಪೂಜಾವಿಳಾಸಮಂ ಮೆಱೆಯಲೆಂದು ಪೋಗಿ (ಆದಿಪು. ೨–೭೭ ವ). [ಅಚ್ಯುತ + ಇಂದ್ರ]

**ಅಛ್ಯ** (ಗು). = ಅಚ್ಚ₁: "ಯತ್ವಂ ಬೆರಸಿದ ಛತ್ವಕ್ಕೆ ದ್ವಿತ್ವದ ಚಕಾರಂ – ಅಛ್ಯ – ಅಚ್ಛ" (ಶಮದ. ೨೫೬ ಪ್ರಯೋ). [ಸಂ. ಅಚ್ಛ. P 'ಅಛ್ಯ' ಎಂಬ ರೂಪ ಸಂಸ್ಕೃತದಲ್ಲಿ ಕಾಣಬರುವುದಿಲ್ಲ.]

**ಅಜ** (ಗು). ೧. ಹುಟ್ಟು ಇಲ್ಲದ; ಜನ್ಮರಹಿತ. ೨. ಹುಟ್ಟದಿರುವ. (ನಾ). ೩. ಪರಮಾತ್ಮ. ೪. ಜೀವ. ೫. ಬ್ರಹ್ಮ. ೬. ವಿಷ್ಣು. ೭. ಶಿವ. ೮. ಸೂರ್ಯ. ೯. ಚಂದ್ರ. ೧೦. ಮನ್ಮಥ. ೧೧. ಜಿನ. ೧೨. ಹಿಂಡಿನ ಮುಂದಾಳು. ೧೩. ಹೋತ; ಮೇಕೆ. ೧೪. ಟಗರು; ಕುರಿ. ೧೫. ಮೇಷರಾಶಿ. ೧೬. (ದಶರಥನ ತಂದೆಯಾದ) ಅಜಮಹಾರಾಜ. ೧೭. ಒಬ್ಬ ಋಷಿ. ೧೮. ಹಳೆಯ ಬತ್ತ. ೧೯. ಮಳೆ. ೨೦. ಸಮುದ್ರ. ೨೧. ಆನೆ. ೨೨. ಹೆಂಗಸು. ೨೩. ಭೂಮಿ. ೨೪. ಮುಕ್ತಿ: "ಹರಿಯೊಳು ಮನೋಜನೊಳು ಜಿನಪನೊಳು ಶಾಲಿಯೊಳು ಧರಣಿ[ಪಾಠಾಂ. ವರುಣಿ]ಯೊಳು ಬೊಮ್ಮನೊಳು ವೃಷ್ಟಿಯೊಳು ಭರ್ಗನೊಳು ತರುಣಿಯೊಳು ಸತ್ಯಮುನಿಯೊಳು ಹೋತಿನೊಳು ನಿಯತದಿಂದಲಜನಾಮಮಕ್ಕುಂ" (ಮಂಗರಾ. ೧೫೨–೬೦); "ಜಿನ ವನಜಾಕ್ಷ ಮನ್ಮಥ ಶಿವಂ ಪಳನೆಲ್ಲು ಪತಂಗ ಪಂಕಜಾಸನ ಮುನಿ ವೃಷ್ಣಿ ಕಾಮಿನಿಯಜಾದಿಗಳಿಂತಜಶಬ್ದಮಕ್ಕು" (ನಾನಾರ. ೪೮); "ಮದನಂ ಜಿನ ವನಜಾಕ್ಷಂ ಪದುಮೋದ್ಭವ ಪಳೆಯಭತ್ತ ಮುನಿ ಕಾಮಿನಿಯರ್ ನದಿಶೇಖರನಿನನಾಡಿಂಗಿದು ಪತ್ತುಂ ಭಾವಿಸಲ್ಕೆಯಿದೆ ಯಜ ಶಬ್ದಂ" (ನಾನಾಕಂ. ೩೦); "ಅಜನೆನೆ ವಾರುಧಿಯಕ್ಕುಂ ಅಜನೆಂದೆನಲಾನೆಯಕ್ಕುಮಂಬರಮಕ್ಕುಂ ಅಜನೆನೆ ಶಶಿರವಿಯಕ್ಕು[ಂ] ಅಜನೆಂದೆನೆ ಮುಕ್ತಿಯಕ್ಕು ಶಬ್ದಾಗಮದೊಳ್ (ಶಬ್ದರ. ೩೦). [ಸಂ.]

**ಅಜಂಡ** (ಗು). ೧. ಹೊಲಿದು ಸೇರಿಸಿಲ್ಲದ; ಅಖಂಡವಾದ; ಇಡಿಯಾಗಿರುವ (ದಕ. ೩). ೨. ಉದ್ದವೂ ಅಗಲವೂ ಬೇಕಾದಷ್ಟಿರುವ; ಹರವಾದ. [ಸಂ. ಅಜಾಂಡ = ಬ್ರಹ್ಮಾಂಡ]

**ಅಜಕವ** (ನಾ). ಶಿವನ ಧನುಸ್ಸು; ಪಿನಾಕ. [ಸಂ.]

**ಅಜಕಾವ** (ನಾ). = ಅಜಕವ. [ಸಂ.]

**ಅಜಕು** (ಕ್ರಿ). "ಹೆದರು, ಭಯಪಡು" (ಸಿರಿಕೋ). [?. / ತಮಿ. ಅಶಂಗು = ಚಲಿಸು; ನಡುಗು]

**ಅಜಕುಕ್ಷಿ** (ಗು). ಆಡಿನ ಹೊಟ್ಟೆಯಂತೆ ತೆಳ್ಳಗಿರುವ ಹೊಟ್ಟೆಯುಳ್ಳ: ಮಹಾವ್ಯೂಢೋರಸ್ಕನುಂ ವಿಪುಳೋಪಚಿತಾಂಸನುಂ ಸಮಪಾರ್ಶ್ವನುಂ ಅಜಕುಕ್ಷಿಯುಂ ಗೋಧೋತ್ರಿಷ್ಟನುಂ . . . ಅಪ್ಪ ವಿಜಯಪರ್ವತ ಗಜೇಂದ್ರಂ (ಆದಿಪು. ೧೨–೫೬ ವ). [ಅಜ + ಕುಕ್ಷಿ]

**ಅಜಕೆ** (ನಾ). ಒಂದು ಬಗೆಯ ಚರ್ಮ ರೋಗ: ಶ್ಲೇಷ್ಮದಿಂದುಂಟಾದ ಮಸೂರಿಕೆಯಲ್ಲಿ ಮೈಮೇಲೆ ಅಕ್ಕಿಯ ಹಾಗೇ ಸ್ಫೋಟಕಂಗಳು ಏಳುವವು. (ಇವನು ಅಜಕೆ ಎಂಬರು) (ವೈದ್ಯಸಾ. ೩೭೨). [?]

**ಅಜಗ** (ನಾ). ೧. = ಅಜಕವ. ೨. ವಿಷ್ಣು. ೩. ಅಗ್ನಿ. ೪. ಒಂದು ಹಾವಿನ ಹೆಸರು: ಅಜಗನುಂ ದುರ್ಮುಖಂ . . . ಆದ್ಯುರುತರದ ಕಿಲ್ಬಿಷದ ಫಣಿಗಳು (ಬಸವು. ೪೬–೨೮). [ಸಂ.]

**ಅಜಗಂಧಿ** (ನಾ). ೧. ಆಡಿನ ವಾಸನೆಯುಳ್ಳದ್ದು. ೨. ತೌಡಂಗಿ ಗಿಡ: "ತೌಡಂಗಿಯಜಗಂಧಿಯಕ್ಕು" (ಮಂಗರಾ. ೪೦–೩೨). ೩. "ನಾರುಬೇಳೆ" (ಒಷಧಿ. ೬). 'ಅಜಗಂಧಿಕೆ' ಪರ್ಯಾ. [ಸಂ. ಅಜಗಂಧಿನ್ (ಅಜ + ಗಂಧ + –)]

**ಅಜಗಂಧಿಕೆ** (ನಾ). ನಾರುಂಬೇಳೆ; ನಾರುಬೇಳೆ; "ನ್ಯಾಬಳ್ಳಿ" (ಗಂಗಾಮು. ೫). [ಸಂ. ಅಜಗಂಧಿಕಾ]

**ಅಜಗಜನ್ಯಾಯ** (ನಾ). ಆಡಿಗೂ ಆನೆಗೂ ಇರುವ ಅಧಿಕವಾದ ವ್ಯತ್ಯಾಸವನ್ನು ನಿರ್ದೇಶಿಸುವ ನ್ಯಾಯ. 'ಅಜಗಜಾಂತರ' ಪರ್ಯಾ. [ಅಜ + ಗಜ + ನ್ಯಾಯ]

**ಅಜಗಜಾಂತರ** (ನಾ). ಆಡಿಗೂ ಆನೆಗೂ ಇರುವಂಥ ವ್ಯತ್ಯಾಸ; ವ್ಯತ್ಯಾಸ ಬಹಳವಾಗಿರುವುದು; ಒಂದಕ್ಕೊಂದಕ್ಕೆ ಸಾಮಂಜಸ್ಯವೇ ಇಲ್ಲದಿರುವುದು: ನಂಮ ಸಂಕಟಗಳ ತಮಗೆ ಬರಸಿ ಕಳುಹಿದ್ದು ತಾವು ನಮಗೆ ಬರಸಿ ಕಳುಹಿದ್ದು ವಂದಕ್ಕೆ ವಂದು ಶೇರದೆ ಅಜಗಜಾಂತರವಾಗಿ ಇದೆ (ರಾಜೇಂದ್ರ. ೮೬); ಇಂದಿನ ಶಾಲೆಗಳ ಶಿಕ್ಷಣಕ್ಕೂ, ಅನಾದಿಕಾಲದಲ್ಲಿ ಮಾನವನಿಗೆ ದೊರಕುತ್ತಿದ್ದ ಶಿಕ್ಷಣಕ್ಕೂ ಅಜಗಜಾಂತರ ವ್ಯತ್ಯಾಸ ಕಂಡುಬರುತ್ತದೆ (ಶಿಕ್ಷದ. ೪). [ಅಜ + ಗಜ + ಅಂತರ]

**ಅಜಗರ** (ನಾ). ೧. ಹೋತವನ್ನು ನುಂಗುವಂಥದು; ಹೆಬ್ಬಾವು: ಪೊಲ್ಲದುಗೆಯ್ದನೆಂದು ನಹುಷಾಜಗರಂ ಪಿರಿದಪ್ಪ ದೈನ್ಯದಿಂ (ಕಾದಂಪೂ. ೧೧೩); ನುಂಗೆ ಜರದಜಗರಂ ತನ್ನಂಗಿ ತಪಸ್ವಿನಿ ಸಮಾಧಿ ಸಮನಿಸೆ (ಪಂರಾಮಾ. ೧೪–೫೭). ೨. (ಹೆಬ್ಬಾವಿನಂತೆ) ಜಡವಾದವನು. ೩. ಒಂದು ಬಗೆಯ ಗಿಡ (ವೈಔಗಿ. ೩೨–೬೨೫). [ಸಂ.]

**ಅಜಗರವೃತ್ತಿ** (ನಾ). ಹೆಬ್ಬಾವಿನಂತೆ ತಾನಾಗಿ ಬಂದದ್ದರಲ್ಲಿ ತೃಪ್ತಿಪಟ್ಟುಕೊಂಡು ಬಾಳುವುದು. 'ಅಜಗರವ್ರತ' ಪರ್ಯಾ. [ಅಜಗರ + ವೃತ್ತಿ]

**ಅಜಗರವ್ರತ** (ನಾ). ಅಜಗರ ವೃತ್ತಿಯನ್ನು ಅನುಸರಿಸುವ ವ್ರತ: ಧರ್ಮವಾಗಿ, ತಾನಾಗಿ ದೊರೆತ ಭೋಗ್ಯವಸ್ತುವನ್ನು ಬೇಡವೆನ್ನುವುದಿಲ್ಲ. ದೊರೆಯದಿರುವುದನ್ನು ಹುಡುಕಿಕೊಂಡು ಹೋಗುವುದಿಲ್ಲ. ಹೀಗೆ ನಾನು 'ಆಜಗರ'ವ್ರತವನ್ನು ನಡೆಸಿಕೊಂಡು ಹೋಗುತ್ತಿದ್ದೇನೆ (ವಚಭಾ. ೩೪೮). 'ಅಜಗರವೃತ್ತಿ' ಪರ್ಯಾ. [ಅಜಗರ + ವ್ರತ]

**ಅಜಗವ** (ನಾ). = ಅಜಕವ. [ಸಂ.]

**ಅಜಗವಪಾಣಿ** (ನಾ). ಶಿವ: ಕಾಣಿಕೆಯ ಬಳಿಕಿತ್ತರಜಗವಪಾಣಿ ವಾಣೀನಾಥರಾ ಗೀರ್ವಾಣಪತಿ ಧನಪತಿ ಹುತಾಶನ ಮುಖ್ಯ ದಿಗಧಿಪರು (ತೊರರಾ. ೬–೫೫–೧೯). [ಅಜಗವ + ಪಾಣಿ]

**ಅಜಗಳಸ್ತನ** (ನಾ). = ಅಜಾಗಲಸ್ತನ: ಅಜಗಳಸ್ತನದಂತೆಸೆವ ನಿನ್ನ ಪೌರುಷಂ ನಿಜವಾದೊಡೆ (ಜೈಮಿಭಾ. ೨೦–೫೭). [ಅಜ + ಗಳ₃ + ಸ್ತನ]

**ಅಜಗಾವ** (ನಾ). = ಅಜಕವ. [ಸಂ.]

**ಅಜಗುಜಿ** 'ಅಜಿಗುಜಿ' ನೋ.

**ಅಜಜಟೆ** (ನಾ). ೧. ಬ್ರಹ್ಮನ ಜಡೆ. ೨. ದವನ: "ಅಜಜಟಾ ತಪಸಿ ಋಷಿಪುಷ್ಪಮೆನೆ ದವನ ನಾಮಂ" (ಮಂಗರಾ. ೪೧–೩೪). [ಅಜ + ಜಟೆ]

**ಅಜಡ** (ಗು). ಜಡವಲ್ಲದ; ಚೈತನ್ಯವನ್ನು ಹೊಂದಿರುವ. 'ಅಜಡದ್ರವ್ಯ' ಪರ್ಯಾ. [ಸಂ.]

**ಅಜಡದ್ರವ್ಯ** (ನಾ). ಚೈತನ್ಯವುಳ್ಳ ವಸ್ತು: ಯಾವ ದ್ರವ್ಯವು ತಾನಾಗಿಯೇ ಸ್ಫುರಿಸುವುದೋ ಯಾವುದರ ಪ್ರಕಾಶವು ಅನ್ಯಾಧೀನವಾಗಿಲ್ಲವೋ ಅಂಥ ದ್ರವ್ಯವು ಅಜಡದ್ರವ್ಯವೆನಿಸಿಕೊಳ್ಳುವುದು. ಉದಾ— ಜೀವ; ಈಶ್ವರ; ನಿತ್ಯವಿಭೂತಿ (ತತ್ವಶು. ೪). [ಅಜಡ + ದ್ರವ್ಯ]

**ಅಜದಂಡೆ** (ನಾ). ಬ್ರಹ್ಮದಂಡಿ ಎಂಬ ಗಿಡ: ಅನುದಿನಮುಜದಂಡೆಯ

ಬೇರನಕ್ಕಿಗರ್ಚಿಂದೆ ಪೂಸೆ ಮೇಣ್ ಗರ್ದುಗಿನ ಬೇರನೆ ಪೂಸೆ ಕಿಡಿಸುಗುಂ ತೊಟ್ಟನೆ ಪುಟ್ಟಿದ ಪೊಲ್ಲಬಾಹುಮಂ ಗ್ರಂಥಿಯುಮಂ (ಲೋಕೋಪ. ೯–೧೨೮). [ಅಜ + ದಂಡ್ಗೆ]

**ಅಜದೊಂಡೆ** (ನಾ). ಒಂದು ಬಗೆಯ ಔಷಧಿಯ ಗಿಡ: ಕಿ(ತಿ)ರುಳಿಗೆ ಕಾಗೆದೊಂಡೆಯಜದೊಂಡೆ ಪುನರ್ನವಿ ಪತ್ತವಂದವೀಶ್ವರಿ ಮುಜುಂದೊಂಡೆ ನುಗ್ಗಿ ಸುರುವಾರುಣಿ ಚಿತ್ರಕಮೆಕ್ಕೆ ಗೋನು ಕಾತರಿಕೆಯೆನಿಪ್ಪಿವಂ ಮಧು ಯುತಂ ಘೃತಕರ್ಪಟ ಶುಲ್ಬ ನಾಗಲೋಹರಜಮುನಟ್ಟು ಕಟ್ಟೆ ಕಳೆದಿಕ್ಕುಗು ಮಾವಗಮುಷ್ಕಿ ವೃದ್ಧಿಯಂ (ಲೋಕೋಪ. ೯–೧೨೯). [ಅಜ + ತೊಂಡ್ಗೆ]

**ಅಜನ**$_1$ (ಗು). ೧. ಜನರಿಲ್ಲದ; ನಿರ್ಜನವಾದ. (ನಾ). ೨. ಮರುಭೂಮಿ. ೩. ಗಣನೆಗೆ ಬಾರದ ವ್ಯಕ್ತಿ; ಅಲ್ಪಮನುಷ್ಯ.
[ಸಂ. (ಅ– + ಜನ)]

**ಅಜನ**$_2$ (ನಾ). ಬ್ರಹ್ಮ. [ಸಂ.]

**ಅಜನಿ**$_1$ (ನಾ). "ಕಟುಕರೋಹಿಣಿ" (ಒಷಧಿ. ೨); ಬೇವಿನಂತಿರುವ ಒಂದು ಗಿಡ (ಉಕ). [?]

**ಅಜನಿ**$_2$ (ನಾ). ದಾರಿ. [ಸಂ.]

**ಅಜನಿಸು** (ಕ್ರಿ). ೧. ಉಂಟುಮಾಡು; ಹುಟ್ಟಿಸು (?): ಎನ್ನಿಂ[ದ] [ಪಾಠಾಂ. ದೆ]ಜನಿಸಿ ನುಡಿಯಿಸಿದುವಹಿಧ್ವಜನೋವದೆ ಮುನ್ನೆ ನೆಗಟ್ದು ದುಶ್ಚರಿತಂಗಳ್ (ಪಂಪಭಾ. ೯–೨೧); ಪಿಂಗಲವರ್ಣದಿಂ ಸೌಂದರಮಾಗಿ ಭಂಗಾರದ ಘಟ್ಟ ಕರಗಿ ಪರಿವ ಹೇಮರಸಪ್ರವಾಹರೂಪಮೆಂಬಂತೆ ಸೊಗಸನಜನಿಸುತ್ತುಮಿರೆ (ಬಾಧಪು. ಪು. ೩೧೪); ಸಮಸ್ತವಸ್ತುಗಳುಂ ನಿರಂತರಂ ನೆಲೆಗೊಂಡು ನಯನಾನಂದಮನಜನಿಸುತ್ತಿರೆ (ಬಾಧಪು. ಪು. ೬೩೮). ೨. ನೆನಪಿಗೆ ತರು (?); "ತಿರಸ್ಕರಿಸು" (ಪಂರಾಮಾ. ಕೋಶ): ತರಳ ಮುಕ್ತಾವತಂಸಪ್ರಭಾಪಲ್ಲವಮಾಕಾರಂ ಸ್ಮರಾಕಾರಮನಜನಿಸಿ ಪೊಕ್ಕಂ ನೃಪಾವಾಸಮಂ . . . ಕುಮಾರಂ (ಪಂರಾಮಾ. ೨–೩); ಅಂಬುಜದ ಬಂಡನುಣ್ಬೆಳದುಂಬಿಯನಜನಿಸೆ ಮನೋಜಗಜಗಮನೆಯ ವಕ್ತ್ರಾಂಬುಜದೊಳ್ ಮತ್ತೊರ್ವಳ್ ಬಿಂಬಾಧರೆ ಮೃಗಮದಾಂಬು ತಿಲಕಮನಿಟ್ಟಳ್ (ಪಂರಾಮಾ. ೩–೮೭); ಸಮುದ್ರಘೋಷಮನಜನಿಸುವ ಪಟು ಪಟಹ ಶಂಖ ಕಹಳಾರವಂ ಭೋರನೆ ಕೇಳ್ದು (ಪಂರಾಮಾ. ೯–೫೩ ವ). ೩. "ಅಡಗು, ಹೆದರು, ಭಯಪಡು" (ಅಯ್ಯಾಶಾ); ನಿಜಮುಖವಿಷಾಗ್ನಿದಗ್ಧತ್ರಿಜಗಂ ಶರಮಿಂತಿದೆಂದು ಸಕಲಗ್ರಹಮಂದ[ಪಾಠಾಂ. ದು]ಜನಿಸೆ ಶಚೀಭುಜಂಗಂ ಭುಜಂಗಬಾಣದೆ ಭುಜಂಗತಲ್ಪನನೆಚ್ಚಂ (ಜಗವಿ. ೧೩–೧೦೨); ಅರಲಂಬಿಂಗಾ ಮಹಾದೇವನುಮುಜನಿಸಿ [ಪಾಠಾಂ. ಮಹೇಶಂ ಮನದೊಳಳುಕಿ] ಸಮ್ಯಕ್ತಪೋನಿಷ್ಠೆಯಂ ಬಿಟ್ಟರೆವೆಣ್ಣಾಗಿರ್ದುದಂ ನೀಂ ನೆನೆ (ಜಗವಿ. ೧೮–೩೭). [ಅಜನೆ ? + –ಇಸು$_1$]

**ಅಜನೆ** (ನಾ). (ಕರಾ) ಭಯವನ್ನು ಹುಟ್ಟಿಸುವ ಸದ್ದು, —ಧ್ವನಿ: ಏನೋ ಒಂದು ಅಜನೆ ಆಯಿತು (ರೂಢಿ).
[← ? ತುಳು. ಅಜನೆ = ಭಯಹುಟ್ಟಿಸುವ ಅವ್ಯಕ್ತ ಶಬ್ದ]

**ಅಜನ್ಮೆ** (ನಾ). ೧. ಜನ್ಮವಿಲ್ಲದವಳು. ೨. ಹೀನಕುಲದವಳು; ಕುಲಗೊತ್ತಿಲ್ಲದವಳು: ಭಾವೆ . . . ಕುಮುದದಳದೀರ್ಘಲೋಚನೆಯಾಗಿಯುಂ ಅಂಧೆಯಂತೆಯುಂ ಪವಿತ್ರ ಪಾರ್ಥಿವಕುಲಪ್ರಸೂತೆಯಾಗಿಯುಂ ಅಜನ್ಮೆಯಂತೆಯುಂ ತನ್ನಂ ಬಗೆದು (ಚಂದ್ರಪು. ೩–೫೦ ವ).
[ಸಂ. *ಅಜನ್ಮಾ]

**ಅಜನ್ಯ**$_1$ (ಗು). ಜನ್ಯವಲ್ಲದ; ಹುಟ್ಟುವುದಕ್ಕೆ ಅರ್ಹವಲ್ಲದ. [ಸಂ.]

**ಅಜನ್ಯ**$_2$ (ಗು). ೧. ಜನಕ್ಕೆ ಹಿತಕರವಲ್ಲದ; ಲೋಕಕಂಟಕವಾದ. (ನಾ). ೨. ವಿಪತ್ತನ್ನು ಸೂಚಿಸುವ ಪ್ರಕೃತಿವ್ಯಾಪಾರ; ಉತ್ಪಾತ: "ಉಪಶಮಿಸುಗೆ ಸಕಲೋರ್ವಿಯೊಳುಪದ್ರವಂ ಡಿಂಬಮುನಯಮುಪಲಿಂಗಂ ಮಿಕ್ಕುಪಸರ್ಗಮರಿಷ್ಟಂ ದುಷ್ಟಪೀಡೆ ಡಾವರಮಜನ್ಯಮಿತಿ ಪ್ರಕರಂ" (ವಸ್ತುಕೋ. ೯೬–೧). [ಸಂ.]

**ಅಜಪ್‌ಆಗು** (ಕ್ರಿ). ಬೆರಗಾಗು; ಸ್ತಬ್ಧವಾಗು: ಚಹ ಕುಡಿಯುತ್ತಿರುವ ನಾರಾಯಣನನ್ನು ನೋಡಿದಾಗ ಅವನ ಎದೆ 'ಅಜಪ್'ಆಯಿತು (ರಾಚಂದ್ರ. ೮); ಮುಡೂರನ ಸವಾರಿ ಅದೇ ದಾರಿಯಾಗಿ ಹಾದುದು ಕಂಡಿತು. ಮಯ್ಯರ ಎದೆ 'ಅಜಪ್'ಆಯಿತು (ಹಹಸ. ೯೭).
[ಅಜಪ್$_0$ + ಆಗು$_1$. ℙ ಅಜಪ್ ← ಅರ. ಪಾರ. ಹಿಂ. ಮರಾ. ಅಜಬ್ = ಆಶ್ಚರ್ಯಕರ, ವಿಚಿತ್ರ]

**ಅಜಪಾಗಾಯತ್ರಿ** (ನಾ). = ಅಜಪಾಮಂತ್ರ: 'ಸೋಹಂ' – ಈ ಮಂತ್ರವನ್ನು ಅಜಪಾಮಂತ್ರವೆಂತಲೂ, ಅಜಪಾಗಾಯತ್ರಿಯೆಂತಲೂ ಪೇಳುವರು (ಮುಮುಕ್ಷು. ೨).
[ಸಂ. ಅಜಪಾಗಾಯತ್ರೀ (ಅಜಪಾ + ಗಾಯತ್ರೀ)]

**ಅಜಪಾಮಂತ್ರ** (ನಾ). ಸ್ಪಷ್ಟವಾಗಿ ವರ್ಣೋಚ್ಚಾರಣೆ ಮಾಡದಿದ್ದರೂ ಉಚ್ಛ್ವಾಸ ನಿಃಶ್ವಾಸಗಳಿಂದಲೇ ಅಕ್ಷರರೂಪವಾಗಿ ಪರಿಣಮಿಸುವ "ಹಂಸ"ಮಂತ್ರ. 'ಅಜಪಾಯೋಗ' ಪರಾ.
[ಸಂ. (ಅಜಪಾ + ಮಂತ್ರ)]

**ಅಜಪಾಯೋಗ** (ನಾ). ಅಜಪಾಮಂತ್ರವನ್ನು ಅನುಸಂಧಾನ ಮಾಡುವ ಯೋಗ: ಹರಿಹರ ಬ್ರಹ್ಮರುಗಳಿಂತೀ ಪರಿಯೊಳಿಹ ಮಾಯೆಯನು ಗೆಲುವಡೆ ಹಿರಿದು ಯತ್ನವ ಮಾಡುತಜಪಾಯೋಗ ಮೊದಲಾದ ಪರಿಪರಿಯ ಸಾಧನಗಳಿಂದದ ಪರಿಹರಿಸಲಚಾಯದೆ (ಅಮೃತ. ೪–೩೮); "೨೧,೬೦೦ ಸಂಖ್ಯೆಯ ಶ್ವಾಸೋಚ್ಛ್ವಾಸಗಳು ಯಾವಾಗಲೂ ಹಂಸಮಂತ್ರವನ್ನುಚ್ಚರಿಸುತ್ತಿರುವವೆಂದು ಅನುಸಂಧಾನ ಮಾಡುತ್ತಿರುವುದು" (ಅಮೃತ. ಅಡಿಟ). [ಸಂ. (ಅಜಪಾ + ಯೋಗ)]

**ಅಜಪಾಳಿ** (ನಾ). ಆಡುಗಳನ್ನು ಸಾಕಿ ಜೀವಿಸುವವನು: "ಅಜಾಜೀವ[ನ]ನಜಪಾಳಿ" (ವಸ್ತುಕೋ. ೬೫–೮೩). [ಸಂ. *ಅಜಪಾಲಿನ್]

**ಅಜಪೆ** (ನಾ). = ಅಜಪಾಮಂತ್ರ: ಆ ಪ್ರಣವದ ಜ್ಯೋತಿಸ್ವರೂಪದಲ್ಲಿ ಅಜಪೆಯಡಗಿತ್ತು ನೋಡಾ (ವಚಶಾ. II, ೩೩೨). [ಸಂ. ಅಜಪಾ]

**ಅಜಪೋತ** (ನಾ). ಆಡಿನ ಮರಿ: ಆ ವಿಪ್ರಘೋಷಣಂ ಸ್ಮೃತಿಗಾವಹಸ ವಿಧಾನಮಾದಪೋಲಜಪೋತಂ ಭಾವಿಸಿದುದು (ಯಶೋಚ. ೩–೬೧).
[ಅಜ + ಪೋತ]

**ಅಜಪ್ರಾಸ** (ನಾ). [ಛಂದ] ಆರು ಬಗೆಯ ಪ್ರಾಸಗಳಲ್ಲಿ ಒಂದು. ಇದರಲ್ಲಿ ವಿಸರ್ಗವು ಪ್ರಾಸಸ್ಥಾನದಲ್ಲಿ ಬರುತ್ತದೆ. ಉದಾ— ಅಃ ಪೊರೆವನಿವನೆ ಪರಮಯ । ಶಃ ಪಾತ್ರನೆನಲ್ಕೆ ಜನಮನಿನಿಸಲಸದೆಯುಂ । ಅಃ ಪೇಟಲದೇನಿವನಿಂ । ಸ್ವಃಪದವಾಙ್ಕ್ಯಂ ಸಮಂತು ಮೆಚಿವೀ ದೇಶಂ (ಕೈಪಿಡಿ. ೬೨). ℙ ಪ್ರಾಸಸ್ಥಾನದ ವ್ಯಂಜನವಾದ ಬಳಿಕ ವಿಸರ್ಗ ಬಂದರೆ ಅಜಪ್ರಾಸವೆಂದು ಕೆಲವರು ಹೇಳುತ್ತಾರೆ. ಉದಾ— ಪಾಶಃಕ್ಷಿದುರಂ ತತ್ತ್ವಾ।ವಾಸಃ ಪರಿಪೂರ್ಣತೇಜ ಮದಮತ್ಸರ ನಿ।ರ್ನಾಶಃ ಪಂಚಾನನ ಸುವಿ।ಲಾಸಃ ಶಿವನೆಂದೊಡಂದಜಪ್ರಾಸಕ್ಕಂ (ಕವಿಜ. ೨–೯); (ಛಂದೋಂಬು. ೩. ೧–೪೮ ನೋ). [ಅಜ + ಪ್ರಾಸ]

**ಅಜಬೀಜ** (ನಾ). ಹೋತದ ವೃಷಣ: ಹುತ್ತಕ್ಕೆ ಸರ್ಪನಾಗಿ ಉದಕಕ್ಕೆ ಒಳ್ಳೆಯಾಗಿ ಕೊಂಬಿಂಗೆ ಕೋಡಗವಾಗಿ ಆವರವರ ಬೆಂಬಳಿಯಲ್ಲಿ ಅಜಬೀಜವ ಕಾವ ಜಂಬುಕನಂತೆ ತಿರುಗಲೇತಕ್ಕೆ (ದಾಸೋಸಂ. ೩೩).
[ಅಜ + ಬೀಜ]

**ಅಜಮಾಯಿಶಿ** 'ಅಜಮಾಯಿಷಿ' ನೋ.

**ಅಜಮಾಯಿಷಿ, ಅಜಮಾಯಿಶಿ, ಅಜಮಾಷಿ, ಅಜಮಾಸು** (ನಾ). ೧. ಪರೀಕ್ಷೆ; ತನಿಖೆ: ಆಸ್ಪತ್ರೆಗೆ ಹೆಣವನ್ನು ಅಜಮಾಯಿಷಿ

ಮಾಡುವುದಕ್ಕಾಗಿ ರವಾನಿಸಬೇಕು (ಗ್ರಾಮಾಕ. ೫೯). **ಅಜಮಾಯಿಶಿ** : ೧. ರಾಜಮದದಿಂದ ನಾನೂ ಅಜಮಾಯಿಶಿಯನ್ನು ಮಾಡದೆ ತಪ್ಪು ಮಾಡಿದ್ದು (ಶನಿಮಾ. ೨೭). **ಅಜಮಾಷಿ** : ೨. ಅಂದಾಜು ; ಸರಿಸುಮಾರು (ಕಿಸಂಗ್ಲಾ. ೧೩೯). **ಅಜಮಾಸು** : ೨. ಒಂದು ಎಕರೆ ಭೂಮಿಯ ಗದ್ದೆಗೆ ಅಜಮಾಸು ಮೂವತ್ತೆರಡು ಸೇರು ಬೀಜದ ನೆಲ್ಲು ಬೇಕು (ಕೃಷಿಪ್ರ. ೫೫) ; ಉಪಸಂಪಾದಕರ ಕಿಸೆಗೆ ಪ್ರತಿ ತಿಂಗಳಲ್ಲಿ ಎಷ್ಟು ಹಣ ಸೇರುತ್ತದೆ ? ಅಜಮಾಸು ತಿಳಿಸಿದರೆ ಸಾಕು (ಕಿರಿಸಾ. ೨). ೩. ಊಹೆ; ಸಾಮಾನ್ಯ ಕಲ್ಪನೆ : ಈಯಜ್ಞಾನದ ಮೂಲಕವಾಗಿ ಫ್ರೆಂಚರು ತನಗೆ ಎಷ್ಟುಮಟ್ಟಿಗೆ ಸಹಾಯ ಮಾಡಬಹುದೆಂಬ ಅಜಮಾಸು ಸುಲ್ತಾನನಿಗೆ ಆಗಲಿಲ್ಲ (ಚರಿಸಂ. ೧೭೮).

[← **ಪಾರ.** ಅಜ್‌ಮಾಯಿಷ್ ; **ಹಿಂ.** ಅಜ್‌ಮಾಈಸ್ ; **ಮರಾ.** ಅಜಮಾಸ್. / **ತುಳು.** ಅಜಮಾಸ್]

**ಅಜಮಾಷಿ** 'ಅಜಮಾಯಿಷಿ' ನೋ.

**ಅಜಮಾಸು** 'ಅಜಮಾಯಿಷಿ' ನೋ.

**ಅಜಮೋದ** (ನಾ). ಜೀರಿಗೆಯ ಜಾತಿಯ ಒಂದು ಗಿಡ ಮತ್ತು ಅದರ ಬೀಜ; ಓಮು ; ವಾದಕ್ಕಿ; ಅಜವಾನ : "ಅಜಮೋದಮ ದೋವಂ" (ವಸ್ತುಕೋ. ೩೮-೩೩) ; "ಅ ಜ ಮೋ ದ ಮೆ ನ ಲೋ ವು" (ಮಂಗರಾ. ೪೧-೩೪). [**ಸಂ.**]

**ಅಜಯ** (ಗು). ೧. ಜಯವಿಲ್ಲದ; ಸೋತುಹೋದ. (ನಾ). ೨. ಸೋಲು. ೩. ಸೋಲಿಸಲಾಗದವನು. ೪. ವಿಷ್ಣು. [**ಸಂ.**]

**ಅಜರ**$_1$ 'ಅಜುರ' ನೋ.

**ಅಜರ**$_2$ (ಗು). ೧. ಮುಪ್ಪಿಲ್ಲದ. ೨. ಕೆಟ್ಟುಹೋಗದ. (ನಾ). ೩. ಮುಪ್ಪಿಲ್ಲದವನು; ದೇವತೆ. ೪. ಕೃಷ್ಣ : ಅದು ವಿಲಯಾಗ್ನಿಯ ಕಿಡಿಗಳನುಗುಱುತ್ತುಮೆಯ್ದೆವರ್ಪುದುಮಿದಿರಂ ನಡೆದಜರನುರ[ದಿ]ನಾಂತೊಡೆ (ಪಂಪಭಾ. ೧೧-೭೭). ೫. ಜಿನ : ಶಾಂತಿನಾಥಂ ಮಿಥ್ಯಾಡಂಬರ ವಿಘಾತಿ ಘಾತಿಕದಂಬಕ ತರುಗಹನದಹನನೆನೆ ನೆಗೞ್ದಜರಂ (ಶಾಂತಿಪು. ೧೨-೨೬). [**ಸಂ.**]

**ಅಜರಂಧ್ರ** (ನಾ). ಬ್ರಹ್ಮರಂಧ್ರ : ದ್ವಿಸಹಸ್ರ ವರುಷ ತಪವನು ಮಾಡೆ ಹರನೊಲಿಯದಿರಲು ಆದುವಂ ಬಿಟ್ಟು ಘನಕಷ್ಟದಿಂದವಂ ನಾಲಗೆಯನಜರಂಧ್ರಕಿಟ್ಟು ಶ್ಲೇಷ್ಮವನೆ ಸವಿದು (ಪ್ರೌಢರಾ. ೧-೮). [ಅಜ + ರಂಧ್ರ]

**ಅಜರನುಲಿ** 'ಅಜುರನೀಲಿ' ನೋ.

**ಅಜರಾಮರ** (ಗು). ೧. ಮುಪ್ಪೂ ಸಾವೂ ಇಲ್ಲದ ; ಶಾಶ್ವತವಾದ. (ನಾ). ೨. ಮುಪ್ಪೂ ಸಾವೂ ಇಲ್ಲದಿರುವಿಕೆ : ನಿನಗಭಿವೃದ್ಧಿಯಕ್ಕೆ ಶುಭಮಕ್ಕೆ . . . ಶುಭೋದಯಮಕ್ಕೆ ಪುಣ್ಯಮಕ್ಕನುಪಮಲಕ್ಷ್ಮಿಯಕ್ಕೆ ಜಯಮಕ್ಕಜರಾಮರಮಕ್ಕೆ (ಕಇಅ. ೯೬, ೪-೪೨ ; 12ನೆಯ ಶತ).

[ಅಜರ$_2$ + ಅಮರ]

**ಅಜರಾಮರತ್ವ** (ನಾ). = ಅಜರಾಮರ ೨ : ನುಡಿದನೆ ಮೇರುಮಂದರ ಶಿಳಾಕ್ಷರಮಿತ್ತನೆ. ಬೇಡಿ ಬಂದವಂಗೆಡಱಿನ ಕೇಡು ಕಾದನೆ ಶರಂಬುಗು ತಂದ ನೃಪಾನ್ವಯಕ್ಕೆ ಬೆಂಬಿಡಿದಜರಾಮರತ್ವವೆನಲಿಂನನಂನ್ಯನರೇಂದ್ರರೊಳು ಸಮಂ ನುಡಿಯದಿರಂಣ್ಣ ಬಿಜ್ಜಲಮಹೀಪನನಾಹವರೌದ್ರರೂಪನ (ಎಕ. VII, ಶಿಕಾರಿ. ೧೦೨-೧೩ ; 1162). [**ಸಂ.**]

**ಅಜರ್ಯ** (ಗು). ೧. ಜೀರ್ಣವಾಗದ; ಅರಗದ. ೨. ಕೆಟ್ಟುಹೋಗದ. (ನಾ). ೩. ಸ್ನೇಹ : "ಸ್ನೇಹಮಜರ್ಯಂ ಸಖ್ಯಂ ಸೌಹಾರ್ದಂ ಪ್ರೀತಿ" (ವಸ್ತುಕೋ. ೧೧೧-೪). [**ಸಂ.**]

**ಅಜಲ್‌ಮುಡಿ** (ನಾ). (ಕರಾ) ೫೬ ಸೇರಿನ ಪ್ರಮಾಣದ ಒಂದು ಅಳತೆ (ಕಿಸಂಗ್ಲಾ. ೧೭೦). [< ಅಜಿಲ ? + ಮುಡಿ]

**ಅಜವಾನ**, ಅಜಿವಾನ, ಅಜ್ಜವಾನ, ಆಜವಾನ (ನಾ). (ಉಕ). ಓಮು ; ವಾದಕ್ಕಿ : ಮೊರಡಿ ಮಸಾರಿಗಳಲ್ಲಿ ಹವೀಜ ಅಜವಾನ ಕಾರೆಳ್ಳು ಆಂದರೆ ಗೂರೆಳ್ಳು ಬಿತ್ತಬೇಕು (ಕೃಷಿಪ್ರ. ೬೬). **ಅಜಿವಾನ** (ಕಿ). **ಅಜ್ಜವಾನ** : ಯಾರ ಹೊಟ್ಟೆ ನೊಂದರೆ ಯಾರು ಅಜ್ಜವಾನ ತಿನ್ನುವರು ? ನಮಗಾದ ದುಃಖವನ್ನು ನಾವೇ ನೋಡಿಕೊಳ್ಳಬೇಕು (ಛತ್ರಪ. ೯೧). **ಆಜವಾನ** : ಜೀರಗೆ ಆಜವಾನ ತೂಕದ ಚಣ್ಣಕೆ (ಬೊಂಕಶಾ. ೧೯೩೮, ಇಂಡಿ. ೧೪-೨೧ ; ?). [← **ಹಿಂ.** ಅಜ್‌ವಾನ್]

**ಅಜವಿಂಡು** (ನಾ). ಆಡಿನ ಹಿಂಡು : ಅಜವಿಂಡ ಹೊಕ್ಕ ಹೆಬ್ಬುಲಿಯಂತೆ (ಮೋಹತ. ೩೫-೨೧). [ಅಜ + ಪಿಂಡು$_2$]

**ಅಜಶೃಂಗಿ** (ನಾ). ಹೋತನ ಕೊಂಬಿನಂತೆ ಕಾಣುವ ಕಾಯಿಗಳುಳ್ಳ ಒಂದು ಗಿಡ; ಕೊರಟಿಗೆ ಗಿಡ; "ಕುರುಟಿಗೆ" (ಓಷಧಿ. ೬).

[**ಸಂ.** ಅಜಶೃಂಗೀ (ಅಜ + ಶೃಂಗೀ)]

**ಅಜಸ್ರ** (ಅ). = ಅಜಸ್ರಂ : ಅವರ ಚಾಕರಿಗೇ ಒಬ್ಬನು ಅಜಸ್ರ ಬೇಕು (ವಿನೋದ. ೪೮). [**ಸಂ.** ಅಜಸ್ರಂ]

**ಅಜಸ್ರಂ** (ಅ). ಯಾವಾಗಲೂ; ಎಡೆಬಿಡದೆ; ಸಂತತವಾಗಿ : "ಅಜಸ್ರಂ ಶಾಶ್ವತಮೆನೆ ಸದಾನಾಮುಮಕ್ಕುಂ" (ಮಂಗರಾ. ೧೨೭-೭) ; ಭೂಮಿಜದಿಂ ತಣ್ಣೆರಲಿಂ ಮಾರ್ಗಂ ಮರಾಳೋತ್ಕರದೆ ನೆರೆದಚಕ್ರೌಘದಿಂ ಸಿಂಧು ಸಿಂಹೋತ್ಕರದಿಂ ಪೇರಾನೆಯಿಂ ಕಾನನಮಿಡಿದೆಸೆಗುಂ ದೇಶದೊಳ್ ನಿಂದಜಸ್ರಂ (ರಾಜಶೇ. ೨-೨೭). [**ಸಂ.**]

**ಅಜಹಲ್ಲಕ್ಷಣೆ** (ನಾ). [ತತ್ತ್ವಶಾ] ಲಕ್ಷಣಾವೃತ್ತಿಯ ಒಂದು ಪ್ರಕಾರ; "ಅಜಹಲ್ಲಕ್ಷಣೆಯೆಂದರೆ ಸಹಜವಾದ ಅರ್ಥವನ್ನು ಬಿಡದೆ ಹೆಚ್ಚು ಅರ್ಥವನ್ನು ತಿಳಿಯುವುದು" (ಹಿಂದಸಾ. ೨೦೬) ; "ಛರ್ಜಿಗಳು ನುಗ್ಗಿದುವು" ಎಂಬಲ್ಲಿ ವಾಚ್ಯಾರ್ಥವು ಹೀಗೆ ತಿರಸ್ಕೃತವಾಗುವುದಿಲ್ಲ. (ಜನರು ನುಗ್ಗಿದಾಗ ಅವರ ಕೈಯಲ್ಲಿದ್ದ ಛರ್ಜಿಗಳೂ ನುಗ್ಗಿಯೇ ನುಗ್ಗಿದುವು.) ಇಲ್ಲಿ ವಾಚ್ಯಾರ್ಥದ ಸಿದ್ಧಿಗಾಗಿ, ಎಂದರೆ ಅದು ಪೂರ್ಣವಾಗುವುದಕ್ಕಾಗಿ, ಛರ್ಜಿಯನ್ನು ಹಿಡಿದವರು ಲಕ್ಷಿತರಾಗುತ್ತಾರೆ. ಈ ಬಗೆಗೆ "ಅಜಹಲ್ಲಕ್ಷಣಾ" ಎಂಬು ಹೆಸರು (ಭಾರಮಿ. ೨೫೨). 'ಜಹಲ್ಲಕ್ಷಣೆ' ಪರಾ.

[**ಸಂ.** ಅಜಹಲ್ಲಕ್ಷಣಾ (ಅ- + ಜಹತ್ + ಲಕ್ಷಣಾ)]

**ಅಜಹೆ** (ನಾ). ನಸುಗುನ್ನಿಯ ಗಿಡ; ಕಪಿತುರಚಿಯ ಗಿಡ.

[**ಸಂ.** ಅಜಹಾ]

**ಅಜಾಂಡ** (ನಾ). ಬ್ರಹ್ಮಾಂಡ ; ವಿಶ್ವ : ತನ್ನ ಮಱಿವೊಕ್ಕೊಡೆ ಕಾಯದೆ ಚಾಗದೊಳ್ಪಿನಚ್ಚೊತ್ತದೆ ಮಾಣ್ದು ಬಾೞ್ವ ಪುಱುವಾನಸನೆಂಬನಜಾಂಡಮೆಂಬುದೊಂದತ್ತಿಯ ಪಣ್ಣೊಳಿರ್ಪ ಪುಱುವಲ್ಲದೆ ಮಾನಸನೇ (ಪಂಪಭಾ. ೫-೭೫). [ಅಜ + ಅಂಡ$_2$]

**ಅಜಾಕೃಪಾಣೀಯ** (ನಾ). ಮೇಕೆ ಬರುವುದೂ ಕತ್ತಿ ಬೀಳುವುದೂ ಏಕಕಾಲದಲ್ಲಿ ಸಂಭವಿಸಿ ಮೇಕೆಗೆ ಸಾವುಂಟಾಗುವುದು : ವೇಧಸ್ಸಂಕಲ್ಪಂ ದುರ್ಬೋಧಮಿವಂ ನಿಟ್ಟೆಯಿಂ ನಿರೋಧಿಸಿ ತನುವಂ ಸಾಧಿಸಿದೊಡೀ ಕೃಪಾಣಮೆ ಬಾಧಾಕರಮಾಯ್ತಜಾಕೃಪಾಣೀಯದವೋಲ್ (ಪಂರಾಮಾ. ೯-೨೫). [**ಸಂ.** (ಅಜಾ + ಕೃಪಾಣ + -)]

**ಅಜಾಗರ** (ಗು). ೧. ಎಚ್ಚರವಿಲ್ಲದ; ಎಚ್ಚರಿಕೆಯಿಲ್ಲದ. (ನಾ). ೨. ಗರುಗದ ಗಿಡ ; ಭೃಂಗರಾಜ. [**ಸಂ.**]

**ಅಜಾಗರೂಕ** (ಗು). (ಯಾವುದಾದರೊಂದು ವಿಷಯದಲ್ಲಿ) ಲಕ್ಷ್ಯ ಕಡಮೆಯಾದ; ಎಚ್ಚರ ವಹಿಸಿಲ್ಲದ; ಮೈಮರೆತ : ಆ ಒಂದು ಗಳಿಗೆಯಲ್ಲಿ ನಾನು ಅಜಾಗರೂಕನಾಗಿದ್ದ ಕಾರಣ ಇಷ್ಟೆಲ್ಲ ಅನರ್ಥ ಸಂಭವಿಸಿತು (ರೂಢಿ). [**ಸಂ.** (ಅ- + ಜಾಗರೂಕ)]

**ಅಜಾಗರೂಕತೆ** (ನಾ). ಮೈಮರೆತಿರುವಿಕೆ; ಎಚ್ಚರಗೇಡಿತನ. [ಸಂ. ಅಜಾಗರೂಕತಾ]

**ಅಜಾಗಲಸ್ತನ** (ನಾ). ೧. ಆಡಿನ ಕೊರಳಿನಲ್ಲಿರುವ ಮೊಲೆ. ೨. [ಆಲಂ] ಪ್ರಯೋಜನವಿಲ್ಲದ, ನಿರರ್ಥಕವಾದ ವಸ್ತು. [ಸಂ. (ಅಜಾ + ಗಲ + ಸ್ತನ)]

**ಅಜಾಗ್ರತೆ** (ನಾ). = ಅಜಾಗರೂಕತೆ: ನೀನು ಮಾಡಿಕೊಂಡ ಅಜಾಗ್ರತೆಗೆ ನಾನು ಹೊಣೆಯಲ್ಲ (ಕಾವೇರಿ. ೧೭೮); ಇಲಿಗಳಿಗಿಟ್ಟ ವಿಷ ಬೆರಸಿದ ಆಹಾರವಸ್ತುಗಳನ್ನು ಮನೆಯಲ್ಲಿ ಸಾಕಿದ ಇತರ ಪ್ರಾಣಿಗಳು ಅಜಾಗ್ರತೆಯಿಂದ ತಿಂದುಬಿಡಬಹುದು (ಆಡುಸಾ. ೪೯). [ಸಂ. ಅಜಾಗೃತತಾ]

**ಅಜಾಜಿ** (ನಾ). ಜೀರಿಗೆ: "ಜೀರಿಗೆಯಜಾಜಿ ಪೃಥ್ವಿಕೆಯಕ್ಕು" (ಮಂಗರಾ. ೪೧-೩೫). [ಸಂ. ಅಜಾಜೀ]

**ಅಜಾಜೀವ** (ನಾ). ಆಡುಗಳನ್ನು ಸಾಕಿಕೊಂಡು ಜೀವಿಸುವವನು: "ಜಾಬಾಲಃ ಅಜಾಜೀವಃ — ಈ ೨ ಆಡಿನಿಂ ಬರ್ದುಗಂಕುವವಂ" (ಹಲಾಯು. ೬೩-೨೨೬). [ಸಂ.]

**ಅಜಾಜೀವನ** (ನಾ). = ಅಜಾಜೀವ: "ಅಜಾಜೀವ[ನ]ನಜಪಾಳಿ" (ವಸ್ತುಕೋ. ೬೫-೮೩). [ಸಂ. (ಅಜಾ + ಜೀವನ)]

**ಅಜಾಜೀವಿ** (ನಾ). ೧.= ಅಜಾಜೀವ. ೨. ಸುಖಿ: "ಅಜಾಜೀವಿ ಜಾಬಾಳನೆನೆ ಸುಖಿಯಕ್ಕು" (ಮಂಗರಾ. ೭೧-೧೮). [ಸಂ. ಅಜಾಜೀವಿನ್]

**ಅಜಾತ** (ಗು). ೧. ಇನ್ನೂ ಹುಟ್ಟದಿರುವ. ೨. ಹುಟ್ಟು ಇಲ್ಲದ. (ನಾ). ೩. ವಿಷ್ಣು; ಕೃಷ್ಣ: ನಿಜಮತಮನೆನಗೆ ಮಾಜಲ್ಕಜಾತ ದೊರೆಯಲ್ಲಂ (ಪಂಪಭಾ. ೯-೨೧). ೪. ಶಿವ: ಈ ಲೋಕದ ಭೀತರು ಆ ಲೋಕದ ಕಲಿಗಳು ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯರೆಲ್ಲರೂ ಅಜಾತಂಗೆ ಸರಿಯೆ (ಬಸವ. ೯೦೧); ಕೂಟಗೆಯ ಕೂಳನುಣಬಂದವರೆಲ್ಲರು ಅಜಾತನ ನಿಲವ ಬಲ್ಲರೇ? ಬೇಟದ ಕಣ್ಣಿನವರೆಲ್ಲರು ಸತ್ಸಂಗವ ಬಲ್ಲರೇ? ಈಷಣತ್ರಯವ ಕೊಡುವರೆಲ್ಲರು ಪರದೇಶಿಕನ ಕೂಡಬಲ್ಲರೇ? (ಮೋಳಿಮಾ. ೨೬-೧೦೫). ೫. ಜಿನ: ಪಾಪೇಭಕಂಠೀರವನುಂ ಶ್ರೀವಿಜಯನುಮಜಾತನ ಪಾದಪಯೋಜಯುಗಳಕ್ಕೆಜಗಿ (ಶಾಂತಿಪು. ೬-೪೧ ವ). [ಸಂ.]

**ಅಜಾತಪೂರ್ವ** (ಗು). ಹಿಂದೆಂದೂ ಹುಟ್ಟದ; ಅಪೂರ್ವವಾದ: ಒರ್ಮೊದಲೊಳೆ ಬಿಲ್ಲುಂಬೆಜಗುಮಾಗಿ ಸತಿ ಚೋದ್ಯಂಬಟ್ಟಳಜಾತಪೂರ್ವವಿಸ್ಮಯದಿಂದಂ (ಶಾಂತಿಪು. ೧೦-೭). [ಅಜಾತ + ಪೂರ್ವ]

**ಅಜಾತಶತ್ರು** (ನಾ). ೧. ಶತ್ರುವೇ ಹುಟ್ಟಿಲ್ಲದವನು; ಹಗೆಯಿಲ್ಲದವನು. ೨. ಶಿವ. ೩. ಧರ್ಮರಾಯ ೧, ೩: ದಮಘೋಷಪುತ್ರಂ ವಸುದೇವಪುತ್ರನಂ ನಿರಾಕರಿಸಿ ನುಡಿಯಲಾ ಮಾತಿಂಗಜಾತಶತ್ರುವೆನಿಸಿದ ಧರ್ಮಪುತ್ರಂ ಕನಲ್ದು (ಜಗವಿ. ೧೭-೨೪ ವ); ವೀತರಾಗದ್ವೇಷಭಯನನಜಾತಶತ್ರುವನಕಟ ಕಪಟದ್ಯೂತದಲಿ ಕುರುರಾಯ ಗೆಲಿದನು (ಕುವ್ಯಾಸ. ೧೨ ಸೂ). [ಅಜಾತ + ಶತ್ರು]

**ಅಜಾನೇಯ** (ನಾ). ಉತ್ತಮ ಜಾತಿಯ ಕುದುರೆ: ಶುಭಲಕ್ಷಣಲಕ್ಷಿತಂಗಳಪ್ಪಜಾನೇಯ ಕಾಂಭೋಜ ವಾಜಿರಾಜಿಗಳೊಳ್ (ಪಂಪಭಾ. ೨-೯೩ ವ). 'ಆಜಾನೇಯ' ಪರಾ. [ಸಂ.]

**ಅಜಾಮಲ** (ನಾ). ಆಡಿನ ಹಿಕ್ಕೆ: ಅಜಾಮಲ ಲಿಂಗವಾದಲ್ಲಿ ಲೆಕ್ಕದ ಬುಡ ನಿಶ್ಚಯವಾದಲ್ಲಿ ಮತ್ತೆ ಕಾಷ್ಠದ ವೇಷ ಗುರುಚರಲಿಂಗವಾದಲ್ಲಿ (ಮೋಳಿಮಾ. ೧೫೩-೫೭೫). [ಸಂ. (ಅಜಾ + ಮಲ)]

**ಅಜಾಮುಲ** (ನಾ). = ಅಜಮೋದ (ಕ). [?]

**ಅಜಾರಿ** (ನಾ). (ಉಕ) ರೋಗ; ಕಾಯಿಲೆ; ಜಡ್ಡು; ಅಸ್ವಸ್ಥತೆ: ಇಂಥ ಸೂಚನೆಯನ್ನು ವಿರೋಧಿಸುವುದಕ್ಕಾಗಿ ಜ್ಯಾಥ್ಯಾಮನು ಕಾಯಿಲೆ (ಅಜಾರಿ) ಇದ್ದರೂ ಸ್ವತಃ ಪಾರ್ಲಮೆಂಟಕ್ಕೆ ಬಂದು ಭಾಷಣ ಮಾಡಿದನು (ಇಂಗ್ಲ ಇ. ೨-೩೮); ಹಾಗಾದರೆ ಅವ್ವನಿಗೆ ಅಜಾರಿ ಆಗಿದೆಯೇನು? (ಭಾಮಿನಿ. ೬೪).

**ಅಜಾರಿಬೀಳು** = ಕಾಯಿಲೆ ಬೀಳು: ಈ ಮಾರಾಯ ಅಬಾ ಅಜಾರಿ ಬಿದ್ದು ನಮ್ಮ ಕಳ್ಳತನ ಮತ್ತಷ್ಟು ಹೊರಬಿದ್ದಂತಾಯಿತು (ವೈನಿ. ೧೨೪). [← ಅರ. ಪಾರ. ಹಿಂ. ಮರಾ. ಅಜಾರ್, ಆಜಾರ್]

**ಅಜಿಂಕ್ಯ** (ಗು). ಗೆಲ್ಲಲಾಗದ; ಸೋಲಿಸಲಸಾಧ್ಯವಾದ: ತಾಮಜಿಂಕ್ಯರೆ ದಿಟಂ! ಪೆಣ್ ಪೆಳರೆ ಗಂಡು ನಗುವುದೆ ಸಾಜಮಾದೊಡಂ (ಶ್ರೀರಾಮಾ. ೨೧೫-೧೨೩); ಯಾವ ಭಗವಂತನ ಅಜಿಂಕ್ಯವಾದ ಮಾಯೆಯಿಂದ ಮೋಹಿತರಾಗಿ ನಿನ್ನಂಥವರು ನನ್ನನ್ನೇ ಸೃಷ್ಟಿಕರ್ತನೆಂದು ತಿಳಿಯುವರೋ ಆ ಭಗವಾನ್ ವಾಸುದೇವನಿಗೆ ನನ್ನ ನಮಸ್ಕಾರವು (ಭಾಮೃತ. ೫೬); ಕೊನೆಯವರೆಗೆ ಅಜಿಂಕ್ಯನೆನಿಸಿಕೊಳ್ಳುವುದು ಕಷ್ಟಸಾಧ್ಯವಾದ ಮಾತೇ ಸರಿ (ಹೊಸಬಿ. ೬೪). [← ಮರಾ.]

**ಅಜಿಗಿಜಿ**, ಅಜುಗಿಜಿ (ನಾ). ಅರೆದು ಪುಡಿಪುಡಿಮಾಡಿದ್ದು; ಜಜ್ಜಿಹೋದದ್ದು; ಚೂರ್ಣ: "ಅಜಿಗಿಜಿಯೆನಲರೆದು ಚೂರ್ಣಮೆನಿಸಿದುದಕ್ಕುಂ" (ಭಾರನಿ. ೫೦); ಅದ್ರಿಗಳಜಿಗಿಜಿಗಳಾದವು ನಿತಾಂತಪದಪ್ರಹಾರದಲಿ (ತೊರರಾ. ೩-೮-೪೯); ಕರಿ ರಥ ತುರಗ ಪತ್ತಿಗಳು ಥಟ್ಟುಗೆಡೆದಜಿಗಿಜಿಯೆನಿಸಿ ಕೆಡಲಿಟ್ಟು ಹರಿವರುಣಾಂಬುಗಳ (ನಿಭಾಗ. ೧೦-೫೩-೬); ರಕ್ತಂ ಪೊನಲ್ವರಿಯಲಜಿಗಿಜಿಯಿಂ ರಣಾಂಕಣಂ ಕೆಸಜಾಗಿ (ಚಿಬಪು. ೩೧-೩೨). **ಅಜುಗಿಜಿ**: ಗಜ ತುರಂಗ ಪದಾತಿಗಳನಜುಗಿಜಿಯ ಗೈದಾ ಪೌರುಷಾದ್ರಿಪ್ರಜವ ಭೇದಿಪ ವಜ್ರವಿದೆಕೊಳ್ಳೆನ್ನು ತಾರ್ಭಟಿಸಿ (ರಾಮಾಸಂ. ೬-೪-೬). 'ಅಜ್ಜಿಬಜ್ಜಿ' ಪರಾ.

**ಅಜಿಗಿಜಿಮಾಡು** = ಜಜ್ಜಿಹಾಕು; ಧ್ವಂಸಮಾಡು: ಅದೇನು? ಬೇಗನೆ ಹೇಳು. ಅವನ ಕುಹಕವನ್ನು ಹಾದಿಗೆಳೆದು ಅಜಿಗಿಜಿಮಾಡಿಬಿಡುತ್ತೇನೆ (ಹಗಲಿ. ೬೦). **ಅಜಿಗಿಜಿಯಾಗು** = ಪುಡಿಪುಡಿಯಾಗು; ಜಜ್ಜಿಹೋಗು: ಚರಣಾಂಗುಷ್ಠದಿಂ ನಿಷ್ಠುರದಿನೂಜಿ ನಟಿಸಿದಡಜಿಗಿಜಿಯಾಯ್ತು ತತ್ಕಮಠ (ಬಸಪು. ೧೭-೧೭); ಪಿರಿದು ಮೊನೆಗುತ್ತಿನಲಿ ನೆತ್ತರು ಸುರಿದುದಡಹೊಯ್ಲಿನಲಿ ಖಂಡದ ಹೊರಳಿ ತಳಿತುದು ಕಾಯವಜಿಗಿಜಿಯಾಯ್ತು ಲೌಡಿಯಲಿ (ಕುವ್ಯಾಭೀ. ೮-೧೭); ಅಡಿಯಿಡಲು ಮದವಾರಣದ ಕಾಲಡಿಯ ಕುಂಬಳದಂತೆ ರಕ್ಕಸಗಡಣವಜಿಗಿಜಿಯಾಗದಿರದು (ತೊರರಾ. ೪-೧೨-೩೧). [~ ಅಜಿಗುಜಿ?]

**ಅಜಿಗುಜಿ**, ಅಜಗುಜಿ (ನಾ). ನರಕ (?): ಬ್ರಾಹ್ಮಣರನಳಿದನಜಿಗುಜಿಗಿಳಿದ (ಬೊಂಕಶಾ. ೧೯೩೮, ಇಂಡಿ. ೫೯-೫೭; 936). **ಅಜಗುಜಿ**: ವಾರಣಾಸಿಯಲ್ ಬ್ರಾಹ್ಮಣರುಂ ಪಸುಗಳ್ಮನಳಿದನಜಗುಜಿಗಿಳಿದಂ (ಎಕ. VII, ಶಿಕಾರಿ. ೧೫೩-೩೬; 1039); ಅಳಿದವನಿದನೆಕ್ಕೋಟಿಯಮನಳಿದಂ ತೀರ್ಥಂಗಳನಿತುವನೋರಂತಳಿದಂ ಪಸುವಂ ಪಾರ್ವರನಳಿದಂ ಮೆಯ್ಯಳಿದನಾತನಜಗುಜಿಗಿಳಿದ[ಂ] (ಎಕ. XI, ದಾವಣ. ೧೩೪-೬೦; 1108 ?). [?]

**ಅಜಿತ** (ಗು). ೧. ಸೋತುಹೋಗದ. ೨. ಗೆಲ್ಲಲಾಗದ. (ನಾ). ೩. ವಿಷ್ಣು; ಕೃಷ್ಣ: ಧರ್ಮರಾಜಂ ರಾಜರಾಜನಲ್ಲಿಗೆ ನಿರ್ವ್ಯಾಜದಿಂ ದಿತಿಜಕುಳ ವಿಜಯಿಯಪ್ಪಜಿತನನೆ ದೂತಕಾರ್ಯಕ್ಕಟ್ಟಿದೊಡೆ (ಪಂಪಭಾ. ೯-೨೬ ವ). ೪. ಶಿವ. ೫. [ಜೈನ] ಎರಡನೆಯ ತೀರ್ಥಂಕರ; ಅಜಿತನಾಥ: ಆ ದಿವಿಜೇಂದ್ರಂಗಾದುದು ಗೀತವಾದ್ಯ ನೃತ್ಯಪ್ರಸಂಗಮಜಿತನ ಕೆಲದೊಳ್ (ಅಜಿಪು. ೫-೮೩). [ಸಂ.]

**ಅಜಿನ** (ನಾ). ೧. ಚರ್ಮ. ೨. ಜಿಂಕೆಯ (ಚಿಗರೆಯ) ಚರ್ಮ. ೩. "ಮತ್ತಿಯ ಮರ" (ಓಷಧಿ. ೨). 'ಕೃಷ್ಣಾಜಿನ' ಪರಾ. [ಸಂ.]

**ಅಜಿನಧಾರಿ** (ನಾ). (ಜಿಂಕೆಯ) ಚರ್ಮವನ್ನು ಧರಿಸಿದವನು: ಶಕುನಿಯು "ಯುಧಿಷ್ಠಿರ ಮಹಾರಾಜ! . . . ನಾವು ನಿಮ್ಮನ್ನು

ಸೋಲಿಸಿದರೆ ನೀವೂ ಹೀಗೆ ದ್ರೌಪದಿಯೊಡನೆ ಹನ್ನೆರಡು ವರ್ಷ ಕಾಡಿನಲ್ಲಿ ಅಜಿನಧಾರಿಗಳಾಗಿದ್ದು ಹದಿಮೂರನೆಯ ವರ್ಷ ಅಜ್ಞಾತವಾಸ ಮಾಡಬೇಕು . . . " ಎಂದನು (ವಚಭಾ. ೧೦೭). [ಸಂ. ಅಜಿನಧಾರಿನ್]

**ಅಜಿನಪತ್ರೆ** (ನಾ). ಚರ್ಮದ ರೆಕ್ಕೆಯುಳ್ಳದ್ದು; ಬಾವಲಿ. [ಸಂ. ಅಜಿನಪತ್ರಾ (ಅಜಿನ + ಪತ್ರ+ –)]

**ಅಜಿನಯೋನಿ** (ನಾ). ಜಿಂಕೆ; ಚಿಗರೆ. [ಅಜಿನ + ಯೋನಿ]

**ಅಜಿನಾಂಬರ** (ನಾ). ಚರ್ಮವೇ ಬಟ್ಟೆಯಾಗಿ ಉಳ್ಳವನು; ಶಿವ: ಪಿಂಗಳಜಟಾಭಾರನಹಿರಾಜನಘದೂರ ಸಮುದೇಭಾಸುರಾಜಿನಾಂಬರ ದಿಗಂಬರ ಶಂಬರಾರಿ ಮದವೈರಿ ಶೂರಿ (ಉದ್ಭದೇ. ೭–೧೩). [ಅಜಿನ + ಅಂಬರ]

**ಅಜಿರ** (ಗು). ೧. ಚಟುವಟಿಕೆಯುಳ್ಳ; ಚುರುಕಾದ. (ನಾ). ೨. ಅಂಗಳ; ಕಳ: ಸಂಗರಾಜಿರದೊಳ್ ಕೌರವರೆಂಬ ಕಾಕಕುಳಕೆನ್ನೀಯೊಂದೆ ಬಿಲ್ ಸಾಲದೇ (ಪಂಪಭಾ. ೧೨–೧೩೫). ೩. ಇಂದ್ರಿಯ ಗೋಚರವಾದ ವಿಷಯ. ೪. ಗಾಳಿ. ೫. ಶರೀರ. ೬. ಕಪ್ಪೆ. ೭. ಒಂದು ಬಗೆಯ ಇಲಿ. [ಸಂ.]

**ಅಜಿಲ** (ನಾ). ೧. ತುಳುನಾಡಿನ ಒಂದು ಅರಸು ಮನೆತನದ ಹೆಸರು: ಶ್ರೀ ವೀರತಿಂಮರಾಜವೊಡೆಯರಾದ ಅಜಿಲರು ಯೇನೂರ [ಬೆ]ಟ್ಟದಲ್ಲಿ ಗುಂಮಟಸ್ವಾಮಿಯ ನೆಲೆಗೊಳಿಸಿ (ಸೌಇಇ. VII, ೨೫೨–೬; 1604); ಭೈರವ ಬಂಗರ ಚೌಟರಜಿಲ ಸಾವಂತರ ಮನೆಮನೆಯಿಂಬೇ, ತುಳುವರ ತಾಯ್ಮನೆಯುಳಿದರ ಕಾಯ್ಮನೆ — ನೀನೆಮ್ಮಯ ಮನೆಯಂಬೇ (ಗಿಳಿವಿಂ. ೩೯). ೨. ಹೊಲೆಯರ ಜಾತಿಯಲ್ಲಿ ಒಂದು ಒಳಪಂಗಡ: ಎಲ್ಲ ಹೊಲೆಯರೂ ದಂಬನಜಾತಿಯವರಲ್ಲ. ಅವರಲ್ಲೂ ಸಾಕಷ್ಟು ಒಳಭೇದಗಳುಂಟು. ಮಾರಿ, ಮುಂಡಾಲ, ಅಜಿಲ, ಕೊರಗ . . . ಎಂದು ಹಲವಾರು ಒಳಪಂಗಡಗಳ ಹೊಲೆಯರು ಬೆಂಗೂರಲ್ಲಿ ಇದ್ದಾರೆ (ದಂಬನಾ. ೧೯). [?]

**ಅಜಿವಾನ** 'ಅಜವಾನ' ನೋ.

**ಅಜಿಹ್ಮ** (ಗು). ೧. ವಕ್ರವಲ್ಲದ; ನೇರವಾದ. ೨. ಋಜುಸ್ವಭಾವವುಳ್ಳ; ಪ್ರಾಮಾಣಿಕ: ಭೂಜಾಂಗವೃತ್ತಿಯಂ ಬಿಸುಟಾ ಜಗದಧಿಪಂಗೆ ವೈತಸಾವಳಿ ಪರಿವಂದಾ ಜಳಕೆಱಗುವವೋಲ್ ನಯಭಾಜನರೆಱಗಿದರ ಜಿಂಹ[ಹ್ಮ]ರೆನಿಸಿದ ಸುಹ್ಮರ್ (ಶಾಂತಿಪು. ೧೦–೧೫೫). (ನಾ). ೩. ಮೀನು. ೪. ಕಪ್ಪೆ. [ಸಂ.]

**ಅಜಿಹ್ಮಗ** (ಗು). ೧. ವಕ್ರವಾಗಿ ಹೋಗದ; ನೇರವಾಗಿ ಹೋಗುವ. (ನಾ). ೨. ಬಾಣ. [ಸಂ.]

**ಅಜೀಗರ್ತ** (ನಾ). ೧. ಹಾವು. ೨. ಒಬ್ಬ ಋಷಿ; ಶುನಶ್ಶೇಪನ ತಂದೆ. [ಸಂ.]

**ಅಜೀಬಾತು** (ಅ). (ಉಕ) ಪೂರ್ಣವಾಗಿ; ಅನಾಮತ್ತಾಗಿ: ಅರ್ಜಿಯೊಳಗಿನ ಸಂಗತಿ ಮಾತ್ರ ಅಜೀಬಾತು ಸುಳ್ಳು ಆದ (ಗಂಗಾಸಾ. ೧೩೨). [← ಮರಾ. ಅಜೀಬಾತ್, ಅಜೀಬಾದ್]

**ಅಜೀರ್ಣ** (ಗು). ೧. ಜೀರ್ಣವಾಗದ; ಅರಗದ. (ನಾ). ೨. ತಿಂದ ಆಹಾರ ಅರಗದಿರುವುದು; ಅಗ್ನಿಮಾಂದ್ಯ; ಮಂದ: ಮಕ್ಕಳು ಇತಿಮಿತಿಯಿಲ್ಲದೆ ತಿಂದು ಅಜೀರ್ಣಮಾಡಿಕೊಳ್ಳುತ್ತವೆ (ರೂಢಿ). [ಸಂ.]

**ಅಜೀರ್ಣಾಂಶ** (ನಾ). ಜೀರ್ಣವಾಗದ ಭಾಗ. [ಅಜೀರ್ಣ + ಅಂಶ]

**ಅಜೀರ್ತಿ** (ನಾ). = ಅಜೀರ್ಣ ೨: ಲೋಕದಖಿಳಪ್ರಾಣಿಗಳನುಂಡ ಜೀರ್ತಿಯಿಂದೋಕರಿಸಿದನೊ ಕಾಲನೆಂಬಿನಂ ಕಣ್ಗೆಸೆದುದಾ ಕಳಂ (ಜೈಮಿಭಾ. ೧೨–೪೫). [ಸಂ.]

**ಅಜೀವ** (ನಾ). ೧. ಜೀವವಿಲ್ಲದ್ದು; ನಿರ್ಜೀವ ವಸ್ತು. ೨. ಜೀವವಲ್ಲದ್ದು; ಜಡ. ೩. [ಜೈನ] ಏಳು ತತ್ತ್ವಗಳಲ್ಲಿ ಎರಡನೆಯದು: ಆ ತತ್ತ್ವಮುಂ ಜೀವಾಜೀವಾಸ್ರವಬಂಧಸಂವರ ನಿರ್ಜರಾ ಮೋಕ್ಷ ಭೇದದಿಂ ಸಪ್ತವಿಧಂ (ಆದಿಪು. ೧೦–೬೧ ವ); ತೋರ್ಪಿನಂ ಜೀವಮಜೀವಮೆಂಬಖಿಲವಸ್ತುಗಳುಂ (ಪಂರಾಮಾ. ೧೬–೬೪). [ಸಂ.]

**ಅಜೀವತತ್ತ್ವ** (ನಾ). [ಜೈನ] = ಅಜೀವ ೩: ಚೇತನಾರಹಿತಮಜೀವತತ್ತ್ವಂ ಅದು ಗತಿಸ್ಥಿತ್ಯವಗಾಹ ಶರೀರಾದಿ ವರ್ತನಾಹೇತು ಧರ್ಮಾಧರ್ಮಾಕಾಶ ಪುದ್ಗಲಕಾಲಭೇದದಿಂ ಪಂಚವಿಧಂ (ಆದಿಪು. ೧೦–೬೧ ವ). [ಅಜೀವ + ತತ್ತ್ವ]

**ಅಜೀವರತ್ನ** (ನಾ). ೧. ನಿರ್ಜೀವ ವಸ್ತುಗಳಲ್ಲಿ ಶ್ರೇಷ್ಠವಾದದ್ದು. ೨. [ಜೈನ] ಚಕ್ರವರ್ತಿಗಳಿಗೆ ಸಹಜವಾಗಿ ಒದಗುವ ೧೪ ಶ್ರೇಷ್ಠ ವಸ್ತುಗಳೊಳಗೆ ಚಕ್ರರತ್ನ, ದಂಡರತ್ನ ಮೊದಲಾದ ನಿರ್ಜೀವ ವಸ್ತುಗಳಲ್ಲಿ ಒಂದು: ಇಂತು ಜೀವಾಜೀವರತ್ನಂ ಬೇಱೆವೇಱೆ ಸಹಸ್ರಯಕ್ಷರಕ್ಷಿತಂಗಳಪ್ಪುವು (ಆದಿಪು. ೧೧–೩ ವ). 'ಜೀವರತ್ನ' ಪರಾ. [ಅಜೀವ + ರತ್ನ]

**ಅಜುಗಿಜಿ** 'ಅಜಿಗಿಜಿ' ನೋ.

**ಅಜುರ,** ಅಜರ$_1$ (ನಾ). ನೀಲಿಗಿಡ. **ಅಜರ$_1$** (೬). [?. / ತಮಿ. ಅವಿರಿ, ಅವುರಿ; ಮಲ. ಅಮರಿ, ಅವರಿ; ತೆಲು. ಅವಿರಿ]

**ಅಜುರನೀಲಿ,** ಅಜರನುಲಿ (ನಾ). ಕುರುಚಲು ಪೊದೆಯಾಗಿ ಬೆಳೆಯುವ ಒಂದು ಬಗೆಯ ನೀಲಿಗಿಡ. **ಅಜರನುಲಿ** (೬). [ಅಜುರ + ನೀಲಿ]

**ಅಜೆ** (ನಾ). ೧. ಆಡು; ಹೆಣ್ಣುಮೇಕೆ: ಸತ್ತು ಪೊಕ್ಕುದಜೆಯೊಳ್ ಜೀವಂ (ಯಶೋಚ. ೩–೫೪). ೨. ಮಾಯೆ: ಮಾನವನಜೆಯ ವಶನಹ ಯುವತಿಯರ ಮುಱಿದಱಿದು ಮುಟ್ಟದರೆ (ನಿಭಾಗ. ೧೧–೧೪–೧೯); ನಿಜದೊಳು ಸದಸತ್ತಾಗಿಹ ಶಕ್ತಿ ಅಜೆಯೆನಿಸುವುದದು ಮಾಯಾಶಕ್ತಿ (ಪರಗೀ. ೧–೩). ೩. ಭೂಮಿ (?): ಧೂಮಕೇತುವುದಯಿಸೆ ಬೆಳಸಿಲ್ಲಜೆಯುಂ ರುಜೆಯಿಂ ನವೆಗುಂ ಪ್ರಜೆಯೆಂದಱಿ (ಜಟ್ಟನು. ಪರಿ. ೩–೯). [ಸಂ. ಅಜಾ]

**ಅಜೇಯ** (ಗು). ಗೆಲ್ಲಲಾಗದ; ಸೋಲಿಸಲಾಗದ: ಅಜೇಯಂ ಪೋಲ್ಕುಮಾ ಮತ್ತಗಜಂ ವಾರಿಜನಾಭನಂ (ಕವಿರಾ. ೨–೧೩೨). [ಸಂ.]

**ಅಜ್ಜ$_1$** (ನಾ). ೧. ಎಕ್ಕದ ಅಥವಾ ಹಾಲೆಯ ಕಾಯಿಯ ಒಳಗಣ ಹಗುರವಾದ ಎಳೆ (೬). ೨. ಜೇಡರ ಹುಳುವಿನ ಬಲೆಯ ನಡುವಣ ಭಾಗ (ಉಕ). [?. / ತಮಿ. ಅಜ್ಜನ್ = ತೆಳುವು, ಅಜ್ಜೈ = ಅಲ್ಪ]

**ಅಜ್ಜ$_2$,** ಅಜ್ಜು$_2$ (ನಾ). ೧. ತಂದೆಯ ಅಥವಾ ತಾಯಿಯ ತಂದೆ; ತಾತ: ತಾಯ್ ತಂದೆಯಜ್ಜರ್ಕಳ ಮನೆಯಿಂದಂ ಪೂಸಲುಮುಡಲುಂ ತುಡಲುಂ ಪೂವುಂ ತಂಬುಲಮುಂ ತಿಂಬಡಂಗಳುಂ ಬಂದುವು (ವಡ್ಡಾರಾ. ೧೧೬–೧೯); ತನಯಂ ತಾಯ್ ತಂದೆ ತಮ್ಮಂ ಕೆಳೆಯನಳಿಯನಾಳ್ವಜ್ಜನೆಮ್ಮಜ್ಜನಿಷ್ಟಾಂಗನೆಯೆಂದು (ಆದಿಪು. ೩–೫೫); ಪಡುವಂ ಶಕ್ತಿವಿಹೀನನಂಧ ಬಧಿರಂ ಕೇಳಜ್ಜನೀ ಬಾಗಿಲೊಳ್ (ಕಾವ್ಯಾವ. ೬೧೬); ಪಜ್ಜಳಿಸಿತು ಪಾತಾಳಲೋಕದೆ ನಿಮ್ಮಜ್ಜನೈಸಿರಿಯು ಕೇವಲವೆ (ಮೋಹತ. ೩೦–೧೫); ಅಜ್ಜಗೆ ಮೊಮ್ಮಗ ಅಕಳಿಕೆ ಕಲಿಸಿದನಂತೆ (ಗಾದೆ); ಅಜ್ಜಾ ಮದುವೆ ಎಂದರೆ, ಎನಗೋ ಎಂದ (ಗಾದೆ). ೨. ಹಿರಿಯವನು; ವೃದ್ಧ: "ಅಜ್ಜಂ ಪಿರಿಯನೊಳೆಸೆಗುಂ" (ಕರ್ಣಾನಿ. ೪೪); ತನಗೆ ಸವನಪ್ಪವಂ ಪೊಣರ್ದನೆ ಕಾದುವುದಜ್ಜನಪ್ಪವಂಗೆಱಗುವುದು (ಕಬ್ಬಿಕಾ. ೨೨೯). ೩. ಅಂತಃಪುರದವರ ರಕ್ಷಣೆಗಾಗಿ ನಿಯುಕ್ತನಾಗಿರುವ ವೃದ್ಧ; "ಸಾವಾಸಿ": "ಅಜ್ಜಂ = ಸಾವಾಸಿ (ಪೊಸವಾಸಿ)" (ಶಮದ. ಪರಿ. ೨); ಕ್ಷಮಿಯಿಪುದೆಂದೆರೆದರಜ್ಜರಂ ಗುಜ್ಜರುಮಂ (ಅಜಿಪು. ೬–೧೯); ಸೆಜ್ಜೆವಳ್ಳನಜ್ಜಂ ಬೆಜ್ಜಂ ಆಡವಳನೆಂದಿಂತಿವರಂ ಕಡಂಗಿ ಬಿಡೆ ಜಡಿಯದಿರ್ಕೆ

ನಯಮಜ಼ಿವರಸಂ (ಕಾವ್ಯಾವ. ೩೨೬); ಮಜ್ಜನವಾಳರ ಮಣಿಹಗಾಜರ ಚಿಲುಬೆಜ್ಜರ ಬೆಸದಾಳುಗಳ ಅಜ್ಜರ ಕೇರಿಕೇರಿಗಳಿಂದಾ ಪುರಿ ಪಜ್ಜಳಿಸುತ ಮೆಜ಼ಿದಿಹುದು (ಕುರಾಸಾಂ. ೪–೧೧೫). ೪. ಬ್ರಹ್ಮ: ಏನ ಹೇಳಲಿ, ಮದನ, ಅಜ್ಜನ ಮಾಟಗಾರಿಕೆ ಎಂಥದೊ! ಚೆಲುವರೂಪಿನ ತಿರುಳಬಲ್ಲೀ ಕಣ್ಣಿಗೂ ಬೆರಗಾದುದೊ! (ಅಹಲ್ಯೆ. ೨೨). ℙ ಪಿತಾಮಹ ಹೋ. ೫. ಹಿರಿಯರ ಹೆಸರಿನ ಕೊನೆಗೆ ಗೌರವಾರ್ಥವಾಗಿ ಸೇರುವ ಮಾತು. ಉದಾ— ಚೆನ್ನಜ್ಜ, ರಾಮಜ್ಜ ಇತ್ಯಾದಿ. **ಅಜ್ಜು₂ ೩:** "ಅಜ್ಜೆಂದು ಸಾವಾಸಿ (ಸವಾಸಿ)" (ಶಮುದ. ೬. ೩೨೩–೮೦); "ಅಜ್ಜೆಂದು ಪೊಸವಾಸಿ (ಸಾವಾಸಿ)" (ಶಮುದ. ನ. ೨೪೩–೨). 'ಪಜ್ಜ', 'ಮುತ್ತಜ್ಜ' ಪರಾ. ೪. ಒಬ್ಬಾತನ ಹೆಸರು: ಅವಂಗೆ ಮಗನಜ್ಜನಜ್ಜಿಗನೃಪಂಗೆ ನಾಗಾರ್ಜುನಂ (ಎಇ. XXVII, ೭೧–೧೨; 1114).

[**ಪ್ರಾ.** ಅಜ್ಜ (< ಸಂ. ಆರ್ಯ). / **ತಮಿ. ಮಲ.** ಅಚ್ಚನ್ = ತಂದೆ; **ತುಳು. ಕೊಡ.** ಅಜ್ಜೆ = ತಾತ; **ಕೋಲಾ.** ಅಜಯನ್ = ವೃದ್ಧ; **ಕುರುಖ್.** ಅಜ್ಜೊ, ಅಜ್ಜೊಸ್ = ಮುತ್ತಜ್ಜ]

**ಅಜ್ಜಗ** (ನಾ). ಒಬ್ಬಾತನ ಹೆಸರು. 'ಅಜ್ಜಗಗವುಂಡ' ಪರಾ.
[~ ಅಜ್ಜ₂]

**ಅಜ್ಜಗಗವುಂಡ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಅಜ್ಜಗಗವುಣ್ಡ ××× ಅಕ್ಕೆಜುಪಲ್ಲಿಯ ರಾಜ್ಜಯ[ಜ್ಯವ]ನೂರೆಂಟೈದುಮ (ಎಕ. XII, ತುಮಕೂ. ೧೫–೧; ?). [ಅಜ್ಜಗ + ಗವುಂಡ (< ಗಾಮುಂಡ)]

**ಅಜ್ಜಗಳ್ಳ** (ನಾ). ತಂತ್ರಗಾರನಾದ ಕಳ್ಳ (ಉಕ. ೬).
[ಅಜ್ಜ₀ (< ಸಂ. ಆದ್ಯ ?) + ಕಳ್ಳ]

**ಅಜ್ಜಗಾಪು** (ನಾ). ನಂಬಿಕೆಗೆ ಪಾತ್ರರಾದ ವೃದ್ಧರ ಕಾವಲು: ಚತುರುದಧಿಮೇಖಲಾಲಂಕೃತ ವಸುಧಾದೇವಿಗಜ್ಜಗಾಪಿನವರ್ ದಿಕ್ಪತಿಗಳೆನೆ (ಪಂರಾಮಾ. ೨–೩೯); ಮುನಿವನಿತೆಯರ್ಗಜ್ಜಗಾಪೆನಿಪ್ಪುವು . . . ಜಂಬುಕಂಗಳ್ (ಜಗವಿ. ೧೬–೫೭). 'ಅಜ್ಜ₂ ೩.' ಪರಾ.
[ಅಜ್ಜ₂ + ಕಾಪು]

**ಅಜ್ಜಗಾವಲು** (ನಾ). ವಿಶೇಷವಾದ ಕಾವಲು: ಶಿವಾಜಿಯು ಎಲ್ಲಿಗಾದರೂ ಹೋಗುವದಾದರೆ ಆತನ ಬೆನ್ನಮೇಲೆ ಅಜ್ಜಗಾವಲಿಡಬೇಕು ಎಂದು ಅಪ್ಪಣೆ ಮಾಡಿದನು (ಛತ್ರಪ. ೧೪೪); ಮೆರವಣಿಗೆಯ ಸಮಯದಲ್ಲಿ ಕಂಡ ಗಂಡನ ಆಚರಣೆಯನ್ನು ವಸುಮತಿ ಲಘುವಾಗಿ ಕಾಣಲಿಲ್ಲ. ಅವನನ್ನು ಅಜ್ಜಗಾವಲು ಕಾಯುವ ನಿರ್ಧಾರ ಅಂದೇ ಅವಳಿಗೆ ಮೂಡಿ ಬಿಟ್ಟಿತ್ತು (ಮಣ್ಣಿಮ. ೧೫). 'ಅಜ್ಜಗಾಪು' ಪರಾ. [ಅಜ್ಜ₂ + ಕಾವಲು]

**ಅಜ್ಜಗಿತ್ತಿ** (ನಾ). ಹಿರಿಯ ಹೆಂಗಸು; ವಯಸ್ಸಾದವಳು: ಸಜ್ಜೆವನೆಯೊಳಗೆ ಮಣಿಮಯಮಾದ ಪರಿಯಂಕಕಜ್ಜಗಿತ್ತಿಯರು ಪಾಳಿಕೆಗೈದು ಮಾಣ್ಕಂಗಳ ಜ್ಯೋತಿಗಳನಿಟ್ಟು (ಚೋರಬ. ೨–೧೮). [ಅಜ್ಜ₂ + -ಗಿತ್ತಿ]

**ಅಜ್ಜಗೆ** 'ಅಜ್ಜುಗೆ' ನೋ.

**ಅಜ್ಜಡಿ** (ನಾ). ಒಂದು ಊರಿನ ಹೆಸರು: ಆ ಪರಮೇಶ್ವರಿಯಜ್ಜಡಿಯ ನಾಳುತ್ತಮಿರೆ . . . ಸಹದೇವನಜ್ಜಡಿಯ ಗಾಮುಂಡಿಂಗೆ ತಾನೇಕಮುಖ್ಯಕನಾದಂದು (ಸೌಇಇ. XVIII, ೧೨೪–೯; 1019). [?]

**ಅಜ್ಜನ ಪಟ್ಟೆ** (ನಾ). ಒಂದು ಬಗೆಯ ಮರ: ಅಜ್ಜನ ಪಟ್ಟೆ (ಖರ್ವತ) ಗಡುತರವಾಗಿ ಬೆಳೆಯುವುದು. ಕಟ್ಟಿಗೆ ಮಿದು. ಕೆಲಸಕ್ಕೆ ಬಾರದು (ಕಭಾಗೆ. ೩೫). [ಅಜ್ಜ₁ ? + ಪಟ್ಟೆ₁]

**ಅಜ್ಜಪಜ್ಜ, ಅಜ್ಜಪಿಜ್ಜ, ಅಜ್ಜಹಜ್ಜ** (ನಾ). ಅಜ್ಜ ಮತ್ತು ಮುತ್ತಜ್ಜ; ತಾತ ಮತ್ತು ಮುತ್ತಾತ; ಪೂರ್ವಿಕ(ರು): ಜಿತಾತ್ಮರ್ ಪ್ರಭುಗಳಧಿಕಪುಣ್ಯರ್ ಮುನ್ನೆ ನಿಮ್ಮಜ್ಜಪಜ್ಜರ್ (ಶಾಂತಿಪು. ೩–೬೬); ಕಾಳಾಭೀಳವಕ್ರಾಂತಮಮಂ ದಲ್ ಪುಗದರೊಳರೆ ಪೇಜ಼್ ನಿಮ್ಮಜ್ಜಪಜ್ಜರ್ಕಳಾರುಂ (ಅಜಿಪು. ೧೦–೨೦); ತನಗಜ್ಜಪಜ್ಜರಿಂ ಪಡೆದ ನೆಲಂ ದಲ್ (ಎಕ. VII, ಶಿಕಾರಿ. ೧೯೭–೩೩; 1192). **ಅಜ್ಜಪಿಜ್ಜ:** (ಕರಾ). ಅರಸನ ಅಜ್ಜಪಿಜ್ಜಂದಿರ ಕಾಲದಿಂದಲೂ ಬಂದ ಕತ್ತಿ (ಈಕಥೆ.೫–೪). **ಅಜ್ಜಹಜ್ಜ:** ಎಮ್ಮಜ್ಜಹಜ್ಜರು ಮಾಡಿಸಿದ ಧರ್ಮಂಗಳಿವಂ ಸಮುದ್ಧರಿಸಿದೊಡೆ ಯಾವುದು ದೋಷಂ (ಪಸಾರ. ೯೫೫–೧೫). 'ಪಜ್ಜ' ಪರಾ.
[ಅಜ್ಜ₂ + ಪಜ್ಜ₁]

**ಅಜ್ಜಪಾಲು** (ನಾ). (ದಕ) ಆಸ್ತಿಯನ್ನು ಮಕ್ಕಳು ವಿಭಾಗ ಮಾಡಿಕೊಳ್ಳುವಾಗ ತಂದೆತಾಯಿಗಳಿಗೆ ಬಿಡುವ ಪಾಲು.
[ಅಜ್ಜ₂ + ಪಾಲು₂]

**ಅಜ್ಜಪಿಜ್ಜ** 'ಅಜ್ಜಪಜ್ಜ' ನೋ.

**ಅಜ್ಜಮಂತು** (ನಾ). ವೃದ್ಧಮಂತ್ರಿ: ಸುಮಿತ್ರಾತ್ಮಜಂ ಸುಮತಿಯಂ – "ಎಲೆ ಅಜ್ಜಮಂತು ಮುಂತಿದೆ . . . ತೋರ್ಪ ಕಾರೊಡಲ ಬಲ್ವೆಟ್ಟಂ ಏನೆಂದು ಪೇಟಿಯಮ್" ಎಂಬುದುಂ (ರಾಮಾಶ್ವ. ೭೩–೨೪).
[ಅಜ್ಜ₂ + ಮಂತು₂]

**ಅಜ್ಜವ[ವೊ]ಡೆಯ** (ನಾ). ಹಿರಿಯ ಒಡೆಯ,— ಮುಖಂಡ (?): ಲಜ್ಜೆಹೋಯಿತು ನಿನ್ನ ದೇಶಾಂತರ ನಮಗಾಯ್ತೆಂದು ಅಜ್ಜವ[ವೊ]ಡೆಯರು ನೊಂದು ನುಡಿದು (ಬಿಜ್ಜರಾ. ೧೧–೩೨). [ಅಜ್ಜ₂ + ಒಡೆಯ]

**ಅಜ್ಜವಾನ** 'ಅಜವಾನ' ನೋ.

**ಅಜ್ಜಹಜ್ಜ** 'ಅಜ್ಜಪಜ್ಜ' ನೋ.

**ಅಜ್ಜಿ** (ನಾ). ೧. ತಂದೆಯ ಅಥವಾ ತಾಯಿಯ ತಾಯಿ: ತಮ್ಮಜ್ಜಿಯಪ್ಪ ವೀರಮತಿ ಮಹಾದೇವಿ (ವಡ್ಡಾರಾ. ೧೧೭–೩೦); ಮಗಳಕ್ಕಂ ತಂಗೆ ತಾಯ್ ನಾದಿನಿ ಸೊಸೆ ಮದವಳ್ಳಜ್ಜಿ ಮುತ್ತಬ್ಬೆ ಮತ್ತತ್ತಿಗೆ ಕೊಸಿತ್ತತ್ತೆಯೆಂಬೀ ಮೊಜ಼ಿಯ ವನಿತೆಯರ್ (ಶಾಂತಿಪು. ೬–೮೭); ಬೂತಯ್ಯಂಗಳಬ್ಬೆ ಮಾರಸಿಂಘದೇವಂಗಳಜ್ಜಿ (ಎಇ. IV, ೩೫೩–೧೮; 975); ಅಜ್ಜಿ ನೂತದ್ದೆಲ್ಲಾ ಅಜ್ಜನ ಉಡಿದಾರಕ್ಕೆ ಸರಿ (ಗಾದೆ). ೨. ಹಿರಿಯ ಹೆಂಗಸು; ಮುದುಕಿ: ಅಜ್ಜಿ ನಿಮ್ಮ ಊರು ಯಾವುದು? ನಿಮ್ಮ ಜೊತೆಗೆ ಯಾರೂ ಬಂದಿಲ್ಲವೆ? (ರೂಢಿ). ೩. (ಕಾವಲಿನ) ಮುದುಕಿ: ನಿರ್ಜರರಹಿತ ಕಂತು ಸುತ ಕೊಂಡು ಬಂದನು ಕಜ್ಜಾಯ ತುಪ್ಪ ಸಕ್ಕರೆಯ ಕೊಜ್ಜೆಯರಿಗೆ ಮೆಲ್ಲಿಸುತೆ ಮಿಕ್ಕುದ ಬಾಗಿಲಜ್ಜಿಯರಿಗೆ ತುತ್ತಿಸಿದ (ಮೋಹತ. ೧೮–೧೯). ೪. ಜೈನ ಸಂನ್ಯಾಸಿನಿ; ಕಂತಿ: ಚೈತ್ಯಾಲಯದಲಿರ್ಪ ರಿಶಿಯರಜ್ಜಿಯ ರಾಹಾರದಾನಕ್ಕೆ (ಇಆ. XIX, ೨೭೩–೩೭; 1054); ವಿಕ್ರಮಪುರದ ಶ್ರೀಗೊಣದಬೆಡಂಗಿ ಜಿನಾಲಯದ ರಿಷಿಯರಜ್ಜಿಯರಾಹಾರದಾನಕ್ಕೆ (ಸೌಇಇ. XI–ii, ೧೭೯–೬: 1085); ಯೋಗಿಗಳಜ್ಜಿಗಳರಸಿಯರಾ ನಾಲ್ಕು ಬಾಗಿಲೊಳ್ ನಿಂದು ಕೈಮುಗಿದು (ಭರಚ. ೧೬–೬೭). 'ಅಜ್ಜಿಕೆ' ಪರಾ. ೫. ಹಿರಿಯ ಹೆಂಗಸಿನ ಹೆಸರಿನ ಮುಂದೆ ಗೌರವಕ್ಕಾಗಿ ಸೇರಿಸುವ ಮಾತು: ಉದಾ— ಗೌರಜ್ಜಿ, ರಂಗಜ್ಜಿ ಇತ್ಯಾದಿ.
[ಅಜ್ಜ₂ + -ಇ₂]

**ಅಜ್ಜಿಕಥೆ** (ನಾ). ೧. ಅಜ್ಜಿ ಹೇಳುವ ಕಥೆ. ೨. ಈಗಿನ ಕಾಲದವರಿಗೆ ಒಪ್ಪಿಗೆಯಾಗದ, ಉಪಯೋಗವಿಲ್ಲದ ಕಥೆ. [ಅಜ್ಜಿ + ಕಥೆ]

**ಅಜ್ಜಿಕೆ** (ನಾ). ೧. ಜೈನ ಸಂನ್ಯಾಸಿನಿ: ಮೂಜುಲಕ್ಕೆಯುಮಿರ್ಪತ್ತು ಸಾಸಿರ್ವರಜ್ಜಿಕೆಯರುಂ (ಅಜಿಪು. ೮–೨೫ ವ); ಆ ಮಹಿಪನರಸಿ ಸುಪ್ರಭೆ . . . ಅಭಯಮತಿಗಳೆಂಬಜ್ಜಿಕೆಯರಿಂದ ದೀಕ್ಷೆಗೊಳಲು (ಸಮ್ಯಕ್ತಾ. ೭–೬೪). ೨. ಪೂಜ್ಯೆ; ಗೌರವಾರ್ಹಳು: ಅಜ್ಜಿಕೆಗಳಿಗಾಕೆ ನಮಿಸಿದಳವರು ನೀನಜ್ಜಿಕೆಯಲ್ತೆ ಬಾರೆನುತ . . . ಮೈದಡವಿ ಮನ್ನಿಸಲು (ಭರಚ. ೫೯–೨೭). [ಸಂ. ಆರ್ಯಿಕಾ]

**ಅಜ್ಜಿಗ** (ನಾ). ಒಬ್ಬಾತನ ಹೆಸರು: ಅವಂಗೆ ಮಗನಜ್ಜನಜ್ಜಿಗನೃಪಂಗೆ

ನಾಗಾರ್ಜುನಂ ರವಿಪ್ರತಿಮನಾತಂಗೆ ನೆಗಳ್ದಿನ್ದನಿನ್ದಂಗೆ (ಎಇ. XXVII, ೭೧–೧೨ ; 1114). [ಅಜ್ಜ₃ + -ಇಗ]

**ಅಜ್ಜಿಗಟ್ಟು** (ಕ್ರಿ). (ಕರಾ) (ಮೈಯ ಚರ್ಮ) ಸುಕ್ಕುಗಟ್ಟು. [ಅಜ್ಜಿ₀ + ಕಟ್ಟು₁]

**ಅಜ್ಜಿಗಡ್ಡೆ** (ನಾ). ಮಜ್ಜಿಗೆ ಗೆಡ್ಡೆ (೬). [ಅಜ್ಜಿ₀ + ಗಡ್ಡೆ₁]

**ಅಜ್ಜಿಗಿಜ್ಜಿ** (ನಾ). = ಅಜ್ಜಿಬಜ್ಜಿ. [~ ಅಜಿಗಿಜಿ ?]

**ಅಜ್ಜಿಗೆ** 'ಅಜ್ಜುಗೆ' ನೋ.

**ಅಜ್ಜಿಪುರಾಣ** (ನಾ). = ಅಜ್ಜಿಕಥೆ: "ನಿನ್ನ ಕಂತೆ ಅಜ್ಜಿಪುರಾಣ ನನಗೆ ಬೇಕಿಲ್ಲ. ಅದೆಲ್ಲಾ ಕನಸು" (ಸಾವಿಸ. ೭೬). [ಅಜ್ಜಿ + ಪುರಾಣ]

**ಅಜ್ಜಿಬಜ್ಜಿ** (ನಾ). ಮೆತ್ತಗಾಗಿರುವುದು ; ಜಜ್ಜಿ ಹೋಗಿರುವುದು : ಮಣಿಗೆ ರೇಗಿ ಹೋಗಿ, 'ಈವತ್ತು ಶನಿವಾರ ಅಂತ ತಿರುಗಿ ಹೇಳಿದ್ರೆ, ನಿನ್ನನ್ನ ತುಳಿದು ಅಜ್ಜಿಬಜ್ಜಿ ಮಾಡಿ ಕರುಳು ಕಿತ್ತುಹಾಕಿಬಿಡ್ತೀನಿ ನೋಡು' ಎಂದು ಬೆದರಿಸಿದ (ಸ್ವಾಮಿಸ್ನೇ. ೨೦೯). [~ ಅಜಿಗಿಜಿ ?]

**ಅಜ್ಜು₁** 'ಅಬ್ದು' ನೋ.

**ಅಜ್ಜು₂** 'ಅಜ್ಜ₂' ನೋ.

**ಅಜ್ಜು₃** (ನಾ). ರಹಸ್ಯ; ಗುಟ್ಟು (?) : ಕಜ್ಜಳಕಂಗಳ ಕಾಮಿನಿಗೆ ವಂದಜ್ಜು ತಿಳಿಸಿಕೊಡುವೆ ನೀ ಮುಖಅಬ್ಜಕೆ ಬಂದೊದಗು ಉಜ್ಜನೀ ಮಹಕಾಳೀ (ಶ್ರೀಕೃಪಾ. ೭೦೫). [?]

**ಅಜ್ಜುಕೆ** (ನಾ). ಗಣಿಕೆ. ℙ ಈ ಶಬ್ದ ಸಂಸ್ಕೃತ ನಾಟಕಗಳಲ್ಲಿ ಪ್ರಯೋಗವಾಗುತ್ತದೆ. [ಸಂ. ಅಜ್ಜುಕಾ]

**ಅಜ್ಜುಗ** 'ಅಜ್ಜುಗೆ' ನೋ.

**ಅಜ್ಜುಗುಜ್ಜು** (ನಾ). ಬಹಳ ಮೆತ್ತಗಿರುವುದು ; ಶಿಥಿಲವಾಗಿರುವಿಕೆ. **ಅಜ್ಜುಗುಜ್ಜು ಮುದುಕ** = ತುಂಬ ಶಿಥಿಲವಾಗಿರುವ ಮುದುಕ ; ಹಣ್ಣು ಹಣ್ಣು ಮುದುಕ (೬). **ಅಜ್ಜುಗುಜ್ಜು ಪ್ರಾಯ** = ಶರೀರವು ಗಳಿತವಾಗಿರುವ ವಯಸ್ಸು ; ಮೈ ಬಿಗಿತಪ್ಪಿ ಶಕ್ತಿ ಕುಗ್ಗುವ ವಯಸ್ಸು (೬). [~ ಅಜಿಗಿಜಿ ?]

**ಅಜ್ಜುಗೆ,** ಅಜ್ಜಗೆ, ಅಜ್ಜಿಗೆ, ಅಜ್ಜುಗ (ನಾ). ೧. ಇರವಂತಿ : ಗುಂಜೆ ನುಗ್ಗೆಯಜ್ಜುಗೆಯೆಂಬಿಂತಿವಱಿಂದವರ್ಕೆ ಬೇವಿನ ತೊವರಂ ತೆಗಪಿದೊಡೆ ಕೈಪೆಗೆಟ್ಟನಿದಕ್ಕುಂ (ಲೋಕೋಪ. ೮–೨೫). **ಅಜ್ಜಗೆ:** ೧. "ಅಜ್ಜಗೆಯೆಂದಿರವಂತಿಗೆ" (ಕಶಸಾ. ೯–೧೮೩) ; ಸೂರಣಂ ಶುಂಠಿ ಯಜ್ಜಗೆ . . . ಈ ಪೇೞ್ದ ಮರ್ದುಗಳಂ (ಲೋಕೋಪ. ೯–೨೪೦) ; ಸಜ್ಜು ಕದ ಚಳಿಕಿಗೆಯನಜ್ಜಗೆಯ ಪಜ್ಜಳಿಪ ಬಜ್ಜರದ ಬಾಪುರಿಯ (ರಾಜಶೇ. ೧೦–೫೭ ರ). ೨. ಮರುಗ : "ಸಮೀರಣಃ ಮರುವಕಃ . . . ಜಂಬೀರಃ ಈ ೫ ಅಜ್ಜಗೆ [ಪಾಠಾಂ. ೬. ಅಜ್ಜಿಗೆ] ಕೆಲಂಬರು ಮರುಗವೆಂಬರು" (ನಾಚಿರಾ. ೧೮೯); ಪಾತ್ರದಜ್ಜಗೆ ಗಜುಕೆ ತೊಳಸಿಯಂಕೋಲೆ (ವೀಶೈಪು. ೭–೧೦–೩೫). **ಅಜ್ಜಿಗೆ:** ೧. "ಅಜ್ಜಿಗೆಯುನಿ[ಮಿ]ರವಂತಿಯೊಳು" (ಶಬ್ದಮಂ. ೨೪). **ಅಜ್ಜುಗ:** ೧. "ಅಜ್ಜುಗವೆಂದಿರವಂತಿಗೆ" (ಕವಿಕಂ. ೭೪) [?]

**ಅಜ್ಜುನರಾಹ** (ನಾ). ಒಬ್ಬನ ಹೆಸರು : ಅಜ್ಜುನರಾಹನಾಳಕೆಯೊಳಿ ವೆಳಂಗಕೊವರ ಚಬ್ಬಿಸೆಟ್ಟಿಯ ತಮ್ಮ ಮಣಿಯಮಸೆಟ್ಟಿ ತುಱುಗೊಳಿ ತುಱುವನಿಕ್ಕಿಸಿ ಸತ್ತು ಸಗ್ಗಕ್ಕೆ ಸನ್ದಂ (ಎಕ. IX, ದೊಡ್ಡಬ. ೧೦–೧ ; 920). [ಅಜ್ಜುನ₀ (< ಅರ್ಜುನ) + ರಾಹ ?]

**ಅಜ್ಜೆಱೆ** (ನಾ). ಬಂಧನ (?) : ಕೆಱೆಯಂ ಕಟ್ಟಿಸು ಬಾವಿಯಂ ಸವಸು ದೇವಾಗಾರಮಂ ಮಾಡಿಸಜ್ಜೆಱೆಯೊಳ್ ಸಿಲ್ಕಿದನಾಥರಂ ಬಿಡಿಸು (ಸೌಇಇ. IV, ೨೭೭–೪೪ ; 1380). [< ಅಱ್ ? + ಸೆಱೆ₂]

**ಅಜ್ಝುಟೆ,** ಅಂಝುಟಿ (ನಾ). ಕಿರುನೆಲ್ಲಿ ; "ನೆಲನೆಲ್ಲಿಯ ಗಿಡ" (ಗಂಗಾಮು. ೫). **ಅಂಝುಟೆ** (೬). [ಸಂ. ಅಜ್ಝಟಾ]

**ಅಜ್ಞಾಣಗವುಂಡ** (ನಾ). ಒಬ್ಬಾತನ ಹೆಸರು : ತೊಲಗದ ಗಣ್ಣರ ಅಜ್ಞಾಣಗವುಣ್ಡನ ಮಕ್ಕಳ್ತಮ್ಮುತ್ತ ಐಯ್ವರು (ಎಕ. IV, ಹೆಗ್ಗಡ. ೧೦೪–೭ ; 1037). [ಅಜ್ಞಾಣ₀ + ಗವುಂಡ (< ಗಾಮುಂಡ)]

**ಅಜ್ಞ** (ಗು). ೧. ಏನೂ ತಿಳಿಯದ ; ಅರಿಯದ ; ಅರಿವಿಲ್ಲದ. (ನಾ). ೨. ತಿಳಿವಳಿಕೆ ಇಲ್ಲದವನು ; ದಡ್ಡ : ಕವಿತಾಪ್ರಾರ್ಥನೆ ಸೋಲ್ವವೋಲ್ ಕೃತಿಯೊಳಜ್ಞಂ ಸೋಲ್ವನೇ (ಜಗವಿ. ೧–೧೩) ; ಹುಲುಸರವಿ ಹಾವಹುದು ಹುತ್ತಿನ ತಲೆಯಲಿರಲಜ್ಞರಿಗೆ (ಕುವ್ಯಾಉ. ೧೦–೨೪) ; ಅಜ್ಞನ ಬುದ್ಧಿ ಮೊಗ್ಗಿನ ಹಾಗೆ, ಪ್ರಾಜ್ಞನ ಬುದ್ಧಿ ಫಲದ ಹಾಗೆ (ಗಾದೆ. ೬). [ಸಂ.]

**ಅಜ್ಞತನ** (ನಾ). = ಅಜ್ಞತ್ವ : ನಮ್ಮ ಕಟಕದಲಾಕೆವಾಳನು ನೀನು ನಮಗಿಂದಜ್ಞತನ ನಿನಗೆ ಸೋಕಿತೇ ಸುಪ್ರಾರ್ಥ (ತೊರರಾ. ೪–೧೧–೧೨). [ಅಜ್ಞ + -ತನ]

**ಅಜ್ಞತ್ವ** (ನಾ). ಏನನ್ನೂ ಅರಿಯದಿರುವಿಕೆ ; ದಡ್ಡತನ : ಅನಂತ ನಿನಗಿಂತಜ್ಞತ್ವಮೇನಕ್ಕುಮೇ (ಜಗವಿ. ೪–೫೬). [ಸಂ.]

**ಅಜ್ಞಾತ** (ಗು). ತಿಳಿದಿಲ್ಲದ ; ತಿಳಿಯದ : ಭುವನಖ್ಯಾತಮೆನಿಪ್ಪ ನಿನ್ನ ಚರಿತಂ ಪೇೞಿಾರ್ಗಮಜ್ಞಾತಮೇ (ಪಂರಾಮಾ. ೧೬–೨೫). [ಸಂ.]

**ಅಜ್ಞಾತವಾಸ** (ನಾ). ೧. ಯಾರಿಗೂ ತಿಳಿಯದಂತೆ ವಾಸಮಾಡುವ ಸ್ಥಿತಿ : ಸಪ್ತಶರಧಿ ಪರಿವೃತಧರೆಯ ಸಿರಿಯ ಸೊಬಗಜ್ಞಾತವಾಸಕ್ಕೆ ಪೋಗುತಿದೆ (ಹಚಕಾ. ೯–೧೦) ; ಅಜ್ಞಾತವಾಸದಲ್ಲಿಯೂ ಅಜ್ಞಾನಿಗಳ ಕಾಟ ತಪ್ಪಲಿಲ್ಲ (ಗಾದೆ. ೬). ೨. ಯಾರಿಗೂ ತಿಳಿಯದ ವಾಸಸ್ಥಾನ. [ಅಜ್ಞಾತ + ವಾಸ]

**ಅಜ್ಞಾನ** (ನಾ). ೧. ಅರಿವಿಲ್ಲದಿರುವಿಕೆ; ಜ್ಞಾನದ ಅಭಾವ : ಅಜ್ಞಾನೋತ್ಕಟಮದನರಮನೆಯ ಬಾಗಿಲೊಳ್ ಬಂದಿರ್ದಂ (ಶಾಂತಿಪು. ೮–೧೨೬). ೨. ಅಜಾಗರೂಕತೆ. ೩. ಅವಿದ್ಯೆ. [ಸಂ.]

**ಅಜ್ಞಾನತನ** (ನಾ). ತಿಳಿವಳಿಕೆಯಿಲ್ಲದಿರುವಿಕೆ (೬). [ಅಜ್ಞಾನ + -ತನ]

**ಅಜ್ಞಾನತ್ರಯ** (ನಾ). [ಜೈನ] ಕುಮತಿ, ಕುಶ್ರುತ, ವಿಭಂಗ ಎಂಬ ಮೂರು ಬಗೆಯ ಅಜ್ಞಾನಗಳು : ಅಜ್ಞಾನತ್ರಯರಹಿತರ್ ತ್ರಿಜ್ಞಾನ ಧರರ್ ವಿದೇಹದಿಂ ಬಂದಧಿಕಪ್ರಜ್ಞರ್ ಪುಟ್ಟುವರ್ (ಪಂರಾಮಾ. ೧–೬೯). [ಅಜ್ಞಾನ + ತ್ರಯ]

**ಅಜ್ಞಾನಾಂಧ** (ನಾ). ಅಜ್ಞಾನದಿಂದ ಕುರುಡಾದವನು : ಮಂತ್ರ ವಿಳೆಯೊಳಜ್ಞಾನಾಂಧರಿಗೆ ನಯನದಿವ್ಯೌಷಧಂ (ವೀಶೈಪು. ೨–೬–೩೩). [ಅಜ್ಞಾನ + ಅಂಧ]

**ಅಜ್ಞಾನಿ** (ನಾ). ತಿಳಿವಳಿಕೆಯಿಲ್ಲದವನು ; ದಡ್ಡ : ಶ್ವಾನನ ನಿದ್ರೆ ಅಜ್ಞಾನಿಯ ತಪದಂತೆ (ಬಸವ. ೨೪೦). [ಸಂ. ಅಜ್ಞಾನಿನ್]

**ಅಜ್ಞೇಯ** (ಗು). ೧. ತಿಳಿಯಲಾಗದ ; ಅರಿಯಲಸಾಧ್ಯವಾದ. (ನಾ). ೨. ತಿಳಿವಳಿಕೆಗೆ ಮೀರಿದ್ದು. [ಸಂ.]

**ಅಜ್ಞೇಯತಾವಾದ** (ನಾ). "ಜಡಪ್ರಪಂಚವನ್ನುಳಿದು ಮತ್ತೆ ಯಾವುದಾಗಲಿ ಸೃಷ್ಟಿಕರ್ತನಾಗಲಿ ಉಂಟೆಂಬುದೂ, ಇಂದ್ರಿಯ ಗೋಚರವಾದದ್ದರ ಹೊರತು ಬೇರೆ ಯಾವ ತತ್ತ್ವವಾದರೂ ಇರುವುದೆಂಬುದೂ, ತಿಳಿಯಲು ಸಾಧ್ಯವಲ್ಲವೆಂಬ ವಾದ" (Agnosticism. ಇಂಕನಿ). [ಸಂ. (ಅಜ್ಞೇಯತಾ + ವಾದ)]

**ಅಜ್ಞೇಯವಾದ** (ನಾ). = ಅಜ್ಞೇಯತಾವಾದ. [ಅಜ್ಞೇಯ+ವಾದ]

**ಅಜ್ಞೇಯವಾದಿ** (ನಾ). ಅಜ್ಞೇಯವಾದವನ್ನು ಎತ್ತಿಹಿಡಿಯುವವನು : ಅಜ್ಞೆಯರ ಕನಸಿನ ಶಾಸ್ತ್ರದಿಂದ ಅಜ್ಞೇಯವಾದಿಗಳ ಕನಸಿನ ನಿರಸನಕ್ಕೇ ಹಾರುವ ಅಗತ್ಯವಿಲ್ಲ (ವಿಚಾಮಂ. ೭೯). [ಸಂ. ಅಜ್ಞೇಯವಾದಿನ್ (ಅಜ್ಞೇಯ + ವಾದ + -)]

**ಅಟಕಟ** (ನಾ). ಬಳಲಿಕೆ; ಆಯಾಸ: "ಅಟಕಟವೆಂದೊಡೆ ಬಳಲಿಕೆ" (ಭಾರನಿ. ೩೦). [?. / **ಮರಾ.** ಅಟ್‌ಆಟ್, ಅಟಾಆಟ್=ಶ್ರಮ; ತ್ರಾಸ]

**ಅಟಕಟಿಸು** (ಕ್ರಿ). ೧. ಆಯಾಸಪಡು; ಬಳಲು: ಭಟರು ಬಳಲಿದ ರಿಂದು ರಣವೃತ್ಕಟವು ಧೀವಶಿಗಳು ಮಹಾರಥರಟಕಟಿಸುತಿದೆ... ನಿಶಾ ಪರಿಯಟನಪಟುಗಳು ಬರಲಿ ಕಾಳಿಗಕೆ (ಕುವ್ಯಾದ್ರೋ. ೧೫-೪೨); ಕೆಂಡದೆಡೆ ಮಿಡಿತೆಯಂತಟಕಟಿಸುತಾ ಶ್ರೀಧರ (ಜಿನಮು. ೧೧-೧೭). ೨. ರೌದ್ರಾವೇಶವನ್ನು ತೋರು: ಧರಣಿ ಕಂಪಿಸಲಟಕಟಿಸಿ ಕಲ್ಪಾಂತ ಪಾವಕ ಮೂರ್ತಿಯಂದದಲಿ (ಅನಂರಾ. ೧-೫-೬೪); ಮೃತ್ಯುದೇವತೆಯ ಭಗಿನಿಯೊ ತಾನೆನೆ ಅಟಕಟಿಸಿ ಕಲ್ಮುಳ್ಗಳಂ ಕೆಡಪಿ (ಪುಕಾಪ್ರ. ೨೧-೧).
[ಅಟಕಟ + -ಇಸು₃]

**ಅಟಕಾಯಿಸು** (ಕ್ರಿ). ತಡೆ; ಅಡ್ಡಿಮಾಡು; ಪ್ರತಿಬಂಧಿಸು: ಯರಡು ಜನ ದುಷ್ಕಾನರು ಬಂದಲ್ಲಿ ಪಹರೆದವರು ಅಟಕಾಯಿಸುವಾಗ್ಯೆ, ದುಷ್ಕಾನರು ಪಹರೆದವರ ಮೇಲೆ ಗುಂಡು ಹಾರಿಸಿದಲ್ಲಿ (ರಾಜೇಂದ್ರ. ೧೪೧); ಸದರಿ ಸ್ವಾಮಿಗಳವರು ನಿಮ್ಮ ನಿಮ್ಮ ಗಡಿಗಳ ಮಾರ್ಗವಾಗಿ ಬಂದಲ್ಲಿ ಉಕ್ಕಡ ಕಣಿವೆಗಳಲ್ಲಿ ಅಟಕಾಯಿಸದೆ ಬಿಟ್ಟುಬಿಡುವುದು (ಗುರುದ. ೧೦).
[ಅಟಕ್ಕಾ₀ + -ಇಸು₃. ℙ ಅಟಕಾ ← **ಹಿಂ.** ಅಟಕಾನಾ]

**ಅಟಕಾವು** (ನಾ). ಅಡ್ಡಿ; ಅಡಚಣೆ: ಯಿಾ ಧರ್ಮಕ್ಕೆ ಯಾರು ಅಡಿ ಅಟಕಾವು ಮಾಡಿ ನಡಸದೆ... ಮಠಕ್ಕೆ ಶಾಸನವನ್ನು ಕೊಡದೆ ಯಿರುತ್ತಾರೊ (ಎಕ. XVI, ಚಿಕ್ಕನಾ. ೯೦-೨೬; 1802); ಅವರ ಫೌಜು ಸಮುದ್ರದ ದಾರಿಗಾಗಿಯೂ ಘಾಟದಾರಿಗಾಗಿಯೂ ನಡೆಯುವಂಥಾದ್ದಕ್ಕೆ ಅಟಕಾವು ಮಾಡುವುದಕ್ಕಾದರೂ ಸನ್ಮತಿಸುವುದು ಇಲ್ಲವಷ್ಟೆ (ರಾಜೇಂದ್ರ. ೮೩).
[← **ಹಿಂ. ಮರಾ.** ಅಟಕಾವ್]

**ಅಟಕಾಳಿ** 'ಅಟ್ಟಕಟು' ನೋ.

**ಅಟಕಿಸು** (ಕ್ರಿ). = ಅಟಕಾಯಿಸು (ಕಿ). [ಅಟಕು + -ಇಸು₃]

**ಅಟಕು** (ನಾ). = ಅಟಕಾವು (ಸ್ಯಾಂಡರ್).
[← **ಹಿಂ. ಮರಾ.** ಅಟಕ್]

**ಅಟಕೊಬ್ಬರಿ,** ಅಟಖೊಬ್ಬರಿ (ನಾ). ಹೆಣ್ಣುಮಕ್ಕಳ ಒಂದು ಆಟ (ಸ್ಯಾಂಡರ್). **ಅಟಖೊಬ್ಬರಿ** (ಸ್ಯಾಂಡರ್).
[< ಅಟ್ಟ₃ + ಕೊಬ್ಬರಿ. ℙ 'ಅಟ್ಟಕೊಬ್ಬರಿ' ಎಂಬುದಕ್ಕೆ ಒಣಗಿದ ಕೊಬ್ಬರಿ ಎಂದು ಮೂಲಾರ್ಥವಿರಬಹುದು]

**ಅಟಖೊಬ್ಬರಿ** 'ಅಟಕೊಬ್ಬರಿ' ನೋ.

**ಅಟಗೋಲು** 'ಅಟ್ಟಗೋಲು' ನೋ.

**ಅಟಣಿಸು** (ಕ್ರಿ). ಚಲಿಸು: ವಟದ ಬೀಜಂದದಲಿ ಸುಪ್ತಿಲಿ ಅಟಣಿಸದಲಿದ್ದವನು ವ್ಯಾನವು ಪಟುತರವಾಗಲು ನಿದ್ರೆ ತಿಳಿವುದು ಜಾಗ್ರಸ್ವಪ್ನಹವು (ಜ್ಞಾನಸಿಂ. ೩೨-೪೨). [ಅಟಣಿ (< ಅಟನೆ) + -ಇಸು₃]

**ಅಟಣೆ** 'ಅಟನೆ' ನೋ.

**ಅಟತಾಳ** 'ಅಟ್ಟತಾಳ' ನೋ.

**ಅಟನ** (ನಾ). ತಿರುಗಾಟ; ಸಂಚಾರ; ಪ್ರಯಾಣ: ಅಟನಕ್ರಮದಿಂದೆ ಕಾಂಚಿಗೆಯ್ತಪ್ಪರ್ಗಳ್ (ದಿವ್ಯಚ. ೧೦-೫೪); ಎಲೆ ಸೌಮಿತ್ರಿ ಕಾನನ ನಿಡು ಅಟನಕಸದಳಮಪ್ಪುದು (ಜೈಮಿಭಾ. ೧೯-೧೧). 'ದೇಶಾಟನ', 'ಪರ್ಯಟನ' ಪರಾ. [**ಸಂ.**]

**ಅಟನಿ** (ನಾ). ಬಿಲ್ಲಿನ ತುದಿ; ಕೊಪ್ಪು: "ಬಿಲ್ಲಕೊಪ್ಪಟನಿ ಧನುಕೋಟಿಯೆಂದೆನಿಸಿಕ್ಕು" (ಮಂಗರಾ. ೭೭-೩೩). [**ಸಂ.**]

**ಅಟನೆ,** ಅಟಣೆ (ನಾ). ಚಲನೆ; ಸಂಚಾರ. 'ಅಟನೆಗೈ' ಪರಾ. **ಅಟಣೆ**: ಕರಣಂಗಳಟಣೆಯಿಲ್ಲದೆ ಬೆಳಗಖಂಡದಿಂದಿರೆ ತೋರ್ದುದಾ ಮಹಾಮುನಿಗಳಿಂಗೆ (ವೆಂಕಾರಾ. ೨-೨೧-೨೩). [**ಸಂ.** ಅಟನ]

**ಅಟನೆಗೈ** (ಕ್ರಿ). ಸಂಚಾರಮಾಡು: ಭಟರಾರ್ಭಟಿಸುತಲ್ಲಿ ತೃಣಚಲನೆಯಾಗದಂತಟನೆಗೈವುತ ಸರ್ವಜೀವರಿಗಗಮ್ಯಮೆನೆ ತೋರುವತಿಘೋರ ನಗರದಟವಿಗೈತರೆ (ವೆಂಕಾರಾ. ೨-೧೯-೨೨).
[ಅಟನೆ + ಗೈ (< ಗೆಯ್₁)]

**ಅಟಪಟ** (ನಾ). ತಲೆಕೆಳಗು; ತಿರುಗುಮುರುಗು (?): ಅಟಪಟದಿಂದವಧೂತನೆ ಮುಖ್ಯ ಅಟಪಟವೆನೆ ಸಾಕ್ಷಾಗ್ನಿ[ಶ್ನಿ]ಜದಾಖ್ಯ (ಅವಧೂ. ೭೧). [?]

**ಅಟಮುಟ,** ಅಟವಟ (ನಾ). ೧. ಸುಳ್ಳು; ಅಸತ್ಯ: ದಿಟಭಕ್ತರಂತೆ ಸುಮ್ಮನೆ ಕುಳ್ಳಿರ್ದಪರು ಅಟಮುಟವನೆನ್ನಮೇಲಿಟ್ಟುಸುರದಿರ್ದಪರು (ತಿರುರ. ೧೮); ಹುಸಿಯಟಮುಟಂಗಳಂ ಗುರುವಿನೊಳುಸುರ್ದವಂ (ದೀಕ್ಷಾಬೋ. ೯೫-೩). ೨. ಮಿಥ್ಯೆ; ಮಾಯೆ: ಈ ಯಟಮುಟದ ಜಗಕೊಡಲು ತಾನೆಲೆ ಮಗನೆ (ನಿಭಾಗ. ೧೧-೩೦-೧೩); ಅಟಮುಟದ ಬ್ರಹ್ಮಾಂಡತತಿಗಳು ಸಟೆಯ ಪಿಂಡಾಂಡಗಳದಗಲಾ ದಿಟವನಂತಿಂತೆನಲಶಕ್ಯವದೇ ಪರಬ್ರಹ್ಮ (ಅಮೃತ. ೪-೪೮). ೩. ಕಪಟ; ವಂಚನೆ; ಮೋಸ: "ಅಟಮುಟಮೆನೆ ಕಪಟಂ" (ಭಾರನಿ. ೪೪); ಅಟಮುಟವೇ ಆಧಾರ, ಕಪಟವೇ ಸದಾಚಾರ, ಕುಟಿಲವೇ ಘನವಾಯಿತ್ತು ಕೆಲಬರಿಗೆ (ಸಮಾವ. ೧); ಮಾಡುವಟಮುಟದರ್ಚನೆಗಳಂ ಮಾಡಿ ಹೋದನು (ಬಸಪು. ೪೩-೫೨); ಅಟಮುಟವು ಫಲಿಸುವುದೆ ದೈವದಲಿ (ತೊರರಾ. ೩-೬-೪೫). ೪. ವಂಚಕ; ಮೋಸಗಾರ; ಕಪಟಿ: ಅಟಮುಟರಿಗೆಯು ಅನಂದಮಾರ್ಗವ ಸಟೆಯೆನಿಪರವರಿಂಗೆ... ಇದು ಯೋಗ್ಯವಲ್ಲೆಂದ (ಜ್ಞಾನಸಿಂ. ೧೪-೧೪೭). **ಅಟವಟ**: ೩. ನುಡಿಗೆ ಪುಸಿದಟವಟದಿಂದನ್ಯರ್ಗೆ ಕನ್ಯೆಯನಿತ್ತು (ಅದ್ಭುತ. ೧೪-೧೪). ೪. ಅಟಸೆಲ್ಲ ದೇಶದೊಳಗಾರು ನೆಲೆಯಿಾಯದೆಲೆ ಚಟಕಟಿಸುವವರ ಗುಣವೀಕ್ಷಿಸದವನಿಯಿತ್ತಟವಟರು (ಜಿನಮು. ೨೩-೨೫).
[?. / **ತುಳು.** ಅಟಮುಟ; **ತೆಲು.** ಅಟಮುಟ, ಅಟಮುಟಮು. ℙ **ಪ್ರಾ.** ("ದೇಶೀ") ಮುಂಠ= ಮೋಸಗಾರ, ನೀಚ]

**ಅಟಮುಟಂಗೈ** (ಕ್ರಿ). ವಂಚಿಸು: ಇಲ್ಲಿಯ ತಾಯ್ಮಕ್ಕಳ್ ತಮ್ಮೊಳ್ ತಾಮೊರ್ವರನಾಳಿಗೊಂಬುದರ್ಕೆನಿತಾನುಮುಟಮುಟಂಗೆಯ್ದಪರ್ (ಚಿಕವಿ. ೬-೯೫ ವ). [ಅಟಮುಟ + ಗೈ (< ಗೆಯ್₁)]

**ಅಟಮುಟಕಾರ್ತಿ** (ನಾ). ೧. ಸುಳ್ಳು ಹೇಳುವವಳು. ೨. ಮೋಸಗಾತಿ; ವಂಚಕಿ: ದುಷ್ಟೆ ಕಷ್ಟೆಯೆಂಬಟಮುಟಕಾರ್ತಿಯರ್ ಸತಿಯರೇ (ಮುಂಬರಾ. X, ೨೬೫-೪೨; 1229).
[ಅಟಮುಟಕಾಱ + -ತಿ. / **ತೆಲು.** ಅಟಮುಟಕತ್ತೆ]

**ಅಟಮುಟಕಾಱ,** ಅಟಮುಟಗಾಱ (ನಾ). ೧. = ಅಟಮುಟಿಗ ೧. ೨. = ಅಟಮುಟಿಗ ೨: ಲಂಬಿಕಾಯೋಗಿಗಳ ಡೊಂಬರಿಗೆ ಸರಿ ಎಂಬೆ ಹಟಯೋಗಿಗಳ ಅಟಮುಟಕಾಱರೆಂಬೆ ಅಷ್ಟಾಂಗಯೋಗಿಗಳ ಕಷ್ಟಕರ್ಮಿಗಳೆಂದೆಂಬೆ (ಸಿದ್ಧೇವ. ೩೫೮). **ಅಟಮುಟಗಾಱ** (ಕಿ).
[ಅಟಮುಟ + -ಕಾಱ]

**ಅಟಮುಟಗಾಱ** 'ಅಟಮುಟಕಾಱ' ನೋ.

**ಅಟಮುಟಲಿಪಿ** (ನಾ). ಸುಳ್ಳುಬರಹ; ಮೋಸದ ಬರಹ: ಅಟಮುಟಲಿಪಿಗಾಗಿ ಕಟಕವಜಿಯೆ ಬಾಯ ತಟಪೊಟನುಜಿ ಹೊಯ್ಸಿಕೊಂಡು ತುಟಿಯ ಚುಂಬಿಸುವ ಹಲ್ಲುಗಳ ನೀಗಿದರೆಂದು ವಿಟ ನಕ್ಕು ನುಡಿದನೆಲ್ಲರೊಳು (ಭರಚ. ೩೬-೯೨). [ಅಟಮುಟ + ಲಿಪಿ]

**ಅಟಮುಟಿಗ** (ನಾ). ೧. ಸುಳ್ಳು ಹೇಳುವವನು: "ಮಾಡುವನೊಳಂ... ಅನೃತದಲ್ಲಿಯುಂ... ಇಗಪ್ರತ್ಯಯಮಕ್ಕುಂ... ಅನೃತಕ್ಕೆ – ಅಟಮುಟಿಗಂ, ಮಾಳಿಗಂ, ಪುಸಿಗಂ (ಶಮದ. ೧೯೭, ವೃತ್ತಿ, ಪ್ರಯೋ).

೨. ಮೋಸಗಾರ; ಮಾಯಾವಿ : ಆಟಮುಟಿಗಂ ಗಾಳುವಿವಂ ಕುಟಿಲಂ ಲಂಪಟನೆನಿಪ್ಪವಂ ಮಾನಸನೇ (ಕಾವ್ಯಾವ. ೩೬) ; ಅಟಮುಟಿಗಂ ದಿಟಕ್ಕೆನೆ ಕರಂ ಬಳೆದಂ ಮನದಂತೆ ವಾಮನಂ (ಅರ್ಥನೇ. ೬–೨೪) ; ಬಂದೀ ವಟು ಸಲೆಯಟಮುಟಿಗಂ (ನೇಮಿಸಂ. ೧೧–೬೭). [ಅಟಮುಟ + –ಇಗ]

**ಅಟಮುಟಿಗತನ** (ನಾ). ೧. ಸುಳ್ಳು ಹೇಳುವುದು. ೨. ಮೋಸಗಾರಿಕೆ; ವಂಚಕತನ : ಕುಟಿಲ ಕುಚ್ಛಿತ ಧೂರ್ತ ದುರ್ಜನವಟಮುಟಿಗತನ ಕಪಟ ಕಳವಳ (ಪ್ರಭುಲೀ. ೬–೫೪). [ಅಟಮುಟಿಗ + –ತನ]

**ಅಟಮುಟಿಸು, ಅಟವಟಿಸು** (ಕ್ರಿ). ೧. ಇದ್ದುದನ್ನು ಇಲ್ಲವೆನ್ನು ; ಸುಳ್ಳುಮಾಡು ; ಅಪಲಾಪಿಸು : ಆಕಾಶಗಂಗೆ ಮುನ್ನುಳ್ಳುದುಮನಟಮುಟಿಸಿ ಲೋಕಾಯತಂ ಪುಸಿಯನುಚ್ಚರಿಸಲಳವಡಿಸಿ ವಿಷ್ಣುಪದವೆಂದು ಗಗನದ ನಾಮುವಲ್ಲಿರ್ದು (ಜೊಮ್ಮರ. ೧೧೧–೩). ೨. ಮೋಸಮಾಡು ; ವಂಚಿಸು ; ಮರುಳುಮಾಡು : ಪಣಮಿಲ್ಲದೆಯಟಮುಟಿಸುವ ಬಣಗುಗಳಂ ನೆವವನಿಟ್ಟು ಬಿಟ್ಟು (ಉದ್ಭಟ. ೧೦–೬೬) ; ಆಟಮುಟಿಸಿ ಪರವಧುವ ತಂದುತ್ಕಟದ ಪಾಪಿಗೆ ಹೇಸಿ ವನವಧು ಚಿಟುಕ ಮುಚಿದಪಳೆನಲು (ತೊರರಾ. ೫–೪–೧೧). ೩. ತಪ್ಪಿಸು ; ಹೋಗಲಾಡಿಸು : ಇಷ್ಟಲಿಂಗದ ಘಟಣೆಯೆಂಬುದು ಸರ್ವಸಂಗವನಟಮುಟಿಸಬೇಕಾಗಿಯಂತರ್ಮಾರ್ಗದೋವರಿಗೆ (ಪ್ರಭುಲೀ. ೧೬–೩೨) ; ನಿಟಿಲದಲಿ ವಿಧಿ ಬರೆದ ಬರಹವನಟಮುಟಿಸಲಿದಜಳವೆ (ತೊರರಾ. ೩–೮–೪೨). ೪. ಆತುರಪಡು ; ತವಕಿಸು: ಸುಧೆಯನಿಂತೀಗಳೆನಗೆ ಕರುಣಿಸೆಂದಾಡಲಟಮುಟಿಪ ನಾ ಲ ಗೆ ವೆ ರ ಸು ಹರಿತಂದು (ಸಿದ್ಧರಾ. ೬–೩೯). **ಅಟವಟಿಸು** : ೨. ಚತುರೋಕ್ತಿಗಳಲಟವಟಿಸಿದರೆ ನಾ ಮರಳುವೆನೆ (ಕುವ್ಯಾಅ. ೨೦–೩೪) ; ಕುಟಿಲದೊಳು ನೆಲದೊಳುಂ ಬೀಳುತಂ ಏಳುತಂ ಆಟವಟಿಸಿ ನೋಡುವರ ಪಿಂದಟ್ಟಿ ಸೀಯ್ಯಲವರುಂ ನಗಲು ಎಡಿಸುತ್ತಂ (ಪ್ರಭುಪು. ೯–೩೩). ೪. ಎಂದಿನಂದದಿ ನಿದ್ರೆಗಟವಟಿಸುತಿರ್ಪಾಗಳು (ಸಿದ್ಧರಾ. ೧–೫೫) ; ಸುಟ್ಟುರುಹುವೆಣೀಯಾಗವನೆಂದುಜಡಟವಟಿಸಿದನು (ವೀರೇಚ. ೧–೪೫).
[ಅಟಮುಟ + –ಇಸು₂. / **ತೆಲು.** ಅಟಮುಟಿಂಚು]

**ಅಟಮಾರಿಸು** (ಕ್ರಿ). "ವಂಚಿಸು" (ಕಲ್ಪದ್ರು. ೫).
[ಅಟಮಾರು₀ + –ಇಸು₃]

**ಅಟರುಷ** (ನಾ). = ಅಟರೂಷ. [**ಸಂ.**]

**ಅಟರೂಷ** (ನಾ). ಆಡುಸೋಗೆ ಗಿಡ. 'ಆಟರೂಷ' ಪರಾ. [**ಸಂ.**]

**ಅಟರೂಷಕ** (ನಾ). = ಅಟರೂಷ. [**ಸಂ.**]

**ಅಟವಟ** 'ಅಟಮುಟ' ನೋ.

**ಅಟವಟಿಸು** 'ಅಟಮುಟಿಸು' ನೋ.

**ಅಟವಣೆ₁** 'ಅಟ್ಟವಣೆ' ನೋ.

**ಅಟವಣೆ₂** 'ಅಠವಣೆ' ನೋ.

**ಅಟವಾಳಿಗೆ** (ನಾ). ಮೇಲುಮಹಡಿ ; ಅಟ್ಟ (?) : ಶ್ರೀಮಂತರಾದ ವ್ಯಾಪಾರಸ್ಥರು ತಮ್ಮ ತಮ್ಮ ಮನೆ[ಳ]ಗೆ ಆಟವಾಳಿಗೆಗಳಲ್ಲಿ ಕುಳಿತು ಬೆಲೆಯುಳ್ಳ ರೇಶಿಮೆಯ ವಸ್ತ್ರ, ಶಾಲು, ಜಮುಖಾನಿ ಮೊದಲಾದುವನ್ನು ಮಾರುತ್ತಲಿದ್ದರು (ಸತ್ಯಸಾ. ೪೧). [< ಅಟ್ಟ₁ + ಮಾಳಿಗೆ]

**ಅಟವಿ₁** (ನಾ). ಒಂದು ಅಳತೆ : ವಿಜಾಪುರ ಜಿಲ್ಲೆಯಲ್ಲಿ ನಾಲ್ಕು ರೂಪಾಯಿಗೆ ಎರಡು ಅಟವಿ ಜೋಳ (ರಾಜಾದೇ. ೬೬). [?]

**ಅಟವಿ₂** (ನಾ). ಕಾಡು ; ಅಡವಿ ; ಅರಣ್ಯ : ಆ ವಧುವಂ ಮೆಲ್ಲನಿಚಿಪಿ ರೌದ್ರಮೃಗಂಗಳ್ಗಾವಾಸಮೆನಿಪದೊಂದು ಮಹಾವಿಷಮಾಟವಿಯೊಳಿರಿಸಿ ಪೋದತ್ತಾಗಳ್ (ಪಂಚಾಮಾ. ೧೪–೫೪). [**ಸಂ.**]

**ಅಟವಿಚರ** (ನಾ). ಕಾಡಿನಲ್ಲಿ ಸಂಚರಿಸುವವನು ; ಬೇಡ.
[ಅಟವಿ₂ + ಚರ]

**ಅಟವೀಚರ** (ನಾ). = ಅಟವಿಚರ : ಇರುಳುಬೇಗೆಯ ಚಕ್ರವಾಕಕೆ ತರಣಿ ತಲೆದೋಚಿದವೊಲಟ[ಪಾಠಾಂ. ಡ]ವೀಚರರಿಗರಸಗೆ ಭಾವಭಾವ ವ್ಯಕ್ತವಾಯ್ತೆಂದ (ಕುವ್ಯಾಗ. ೪–೪೮). [**ಸಂ.** (ಅಟವೀ + ಚರ)]

**ಅಟವೀತಟ** (ನಾ). ಅರಣ್ಯಪ್ರದೇಶ ; ಕಾಡು : ಹಿಂಗಿದವು ಹನ್ನೊಂದು ವರೆ ವರುಷಂಗಳಟವೀತಟದೊಳಿರಲಜುದಿಂಗಳೊಳಗೊಂದಾದುದಾಪತ್ತಾಮಹೀಶರಿಗೆ (ಕುವ್ಯಾಅ. ೨೩–೪). [**ಸಂ.** (ಅಟವೀ + ತಟ)]

**ಅಟವೀಪಾಳಿ** (ನಾ). ಅರಣ್ಯಗಳ ಪಂಕ್ತಿ ; ಕಾಡುಗಳ ಸಾಲು : ಲೆಕ್ಕಕೆ ಸಂದುದಟವೀಪಾಳಿಪರಿಯಟಣ ಪ್ರಬಂಧಕೆ ವರುಷ ಹನ್ನೊಂದು (ಕುವ್ಯಾವಿ. ೨೨–೧). [**ಸಂ.** ಅಟವೀಪಾಲಿ (ಅಟವೀ + ಪಾಲಿ)]

**ಅಟವೀಸಂಭವ** (ನಾ). ೧. ಕಾಡಿನಲ್ಲಿ ಹುಟ್ಟಿದ್ದು. ೨. ಕಾಡುಬತ್ತ ; ನೀವಾರ: "ದೂಸಂ ತೃಣಧಾನ್ಯ(ಮು)ಮಟವೀಸಂಭವಮುದೆ ಗವೇಧುಕಂ ನೀವಾರಂ" (ವಸ್ತುಕೋ. ೯೫–೧೯). [**ಸಂ.** (ಅಟವೀ + ಸಂಭವ)]

**ಅಟವ್ಯ** (ನಾ). ಅರಣ್ಯಪ್ರದೇಶ: ವಿಕಸಿತಪುಷ್ಪದಂತರಳಿ ಕನ್ನಡಿಗರ್ ಕರೆವಂತೆ ಬನ್ನಿ ಬಂಧಕಿಯರ ನಾಮುದಂತೊಗೆದ ಪಾದರಿ ರೋಗಿಗಳಂತೆ ತಾಱಿ ಪಾವಕನ ಶರೀರದಂತಿರುಡಿ ಸುಂಕಿಗಳಂತಿರೆ ಚೆಲ್ವು ಸಂದ ಲಾವಕನ ನಿಯೋಗದಂತೊಗೆದ ಬೊಬ್ಬುಲಿ ಪರ್ವಿದಟವ್ಯಮದ್ಭುತಂ (ಪುಣ್ಯಾಸ್ರ. ೧–೯೪). [**ಸಂ.**]

**ಅಟವ್ಯವಿ** (ನಾ). ಕಾಡುಕುರಿ : "ಕೊಂಡಗುಜ಼ಿ ವನೋರಣಮಟವ್ಯವಿಯೆನಿಕ್ಕು" (ಮಂಗರಾ. ೪೮–೮). [**ಸಂ.** (ಅಟವೀ + ಅವಿ)]

**ಅಟಳಪಟಳ** (ನಾ). ಅತಳವೆಂಬ ಅಧೋಲೋಕದ ಛಾವಣಿ (?) : ಪೊಟ್ಟಿಗೊಡೆದತ್ತು ರಟತ್ಪಟುಪಟಹ ಶಂಖಭೇರಿಯ ಚಟುಳಿತದಿಂದಟಳಪಟಳಮುಂಬರಪಟಳಂ (ಪಂಪಭಾ. ೧೦–೬೭).
[ಅಟಳ₀ (< **ಸಂ.** ಅತಲ ?) + ಪಟಳ (= ಪಟಲ)]

**ಅಟಾಟೋಪ** (ನಾ). (ಉಕ) ಆಡಂಬರ ; ಕೋಲಾಹಲ : ಇವರು ಬಂದು ನಾಚಿಕೆಯಿಲ್ಲದೆ ಆಟಾಟೋಪ ಮಾಡುತ್ತಿರುವುದನ್ನು ನೋಡಿ ಅವನು ಬೇಸತ್ತ (ಮುಳ್ಳಿಹಾ. ೩೪) ; "ಏನೂ ನನಗೆ ಸುಖವಿಲ್ಲ ಅಣ್ಣಾ ಎಷ್ಟು ಸಂಪಾದಿಸಿದರೇನು ? ಇವಳ ಆ ಟಾ ಟೋ ಪ ಮಿತಿಮೀರಿದೆ (ಕೊನೆಭೇ. ೧೩೨). ಅತ್ಯಾಟೋಪ ಹೋ. [< ಅಟ್ಟ₂ + ಆಟೋಪ₁]

**ಅಟಾಪ** 'ಅಟೋಪ' ನೋ.

**ಅಟಾಪಿಸು** (ಕ್ರಿ). ಹಿಡಿತಕ್ಕೆ ಸಿಕ್ಕು ; ಹತೋಟಿಗೆ ಬರು (?) : ಒದು ಬರಹದಲ್ಲಿ ಕಂಯಿಕುಂಯಿಯಾದರೆ, ಹೈಗ್ಯೆಯಾದರೆ, ಯಾರಿಗೂ ಅಟಾಪಿಸುತ್ತಿರಲಿಲ್ಲ (ದೀಪಹ. ೫೦). [ಅಟಾಪ (< ಆಟೋಪ) + –ಇಸು₃]

**ಅಟಿ** (ಕ್ರಿ). ಬಡಿ ; ಅಪ್ಪಳಿಸು : ಗೋದಾಪ್ರವಾಹಂಗಳು ಮಿಗಿಲಾವೇಗದಿ ನೊಂದನೊಂದಟಿಯೆ ನೀರ್ ಕಲ್ಲೋಲ ಕೋಲಾಹಲಂ ನೆಗಳಲ್ (ಉರಾಚ. ೪೦–೩೧). [?. / **ತಮಿ.** ಅಡಿ = ಹೊಡೆ]

**–ಅಟಿಗ** (ಪ್ರ). ಆಡುವವನು, ವ್ಯವಹರಿಸುವವನು, ಉದ್ಯುಕ್ತನಾದವನು ಎಂಬ ಅರ್ಥಗಳನ್ನು ಕೊಡುವ ಒಂದು ತದ್ಧಿತ ಪ್ರತ್ಯಯ: ಒಂದುವುದಟಿಗ ಪ್ರತ್ಯಯ ಮಾಡುವ ದೀವಿಗೆವಿಡಿವ ಹರದುಗೆಯ್ವನಿಬರೊಳಂ. ಅಟಿಗ ಪ್ರತ್ಯಯಕ್ಕೆ – ಕೊಲ್ಲಟಿಗಂ, ದೀವಟಿಗಂ, ಪೂವಟಿಗಂ (ಶಮದ. ೨೦೪, ಪ್ರಯೋ). –ಅಡಿಗ ಹೋ. [~ ಆಡು₁]

**ಅಟಿಸು** (ಕ್ರಿ). ಸಂಚಾರಮಾಡು ; ತಿರುಗಾಡು : ಆಟಿಸಲ್ಲ ದೇಶದೊಳಗಾರು ನೆಲೆಯಿಾಯದಲೆ ಚಟಕಟಿಸುವವರ ಗುಣವೀಕ್ಷಿಸದಲವನಿಯಿತ್ತಟವಟೆರು (ಜಿನಮು. ೨೩–೨೫). [ಅಟನ + –ಇಸು₃]

**ಅಟುಕು** (ಗು). (ಉಕ) ಚಿಕ್ಕ ; ಸಣ್ಣ : ಕೋಣೆಯು ತೀರ ಚಿಕ್ಕದಿತ್ತು. ಅದನ್ನು 'ಬರೀ ರಾತ್ರಿವಾಸಕ್ಕಾಗಿ ಕಟ್ಟಿಸಿದಂತೆ ಆಟುಕಾಗಿತ್ತು (ರಕ್ತಧ್ವ. ೩೧೧). [~ ಅಡಕ₁ ?]

**-ಅಟೆ** (ಪ್ರ). ಒಂದು ಭಾವನಾಮ ಪ್ರತ್ಯಯ: ಉದಾ— ಉಬ್ಬಟೆ, ಹೋರಟೆ.

**ಅಟೋಕಾಟ** (ಗು). (ಉಕ) ಬಹಳ ಹೆಚ್ಚಾದ ; ಅತ್ಯಧಿಕವಾದ : ಈ ಯಟೋಕಾಟ ಸಿದ್ಧತೆಯನ್ನು ನೋಡಿ ನಾನಾಫಡನವೀಸನ ಮನಸ್ಸಿನಲ್ಲಿ ತಾನೂ ಆ ದಂಡಿನೊಡನೆ ಹೋಗಬೇಕೆಂಬ ಬುದ್ಧಿಯು ಹುಟ್ಟಿತು (ಚರಿಸಂ. ೮೧). [← **ಮರಾ.** ಅಟೋಕಾಟ್]

**ಅಟೋಪ**, ಅಟಾಪ, ಅಟೋವು, ಅಟೋಪ್ಪು, ಆಟೋಪು (ನಾ). ೧. ಸಾಮರ್ಥ್ಯ ; ಶಕ್ತಿ : ದೈತ್ಯನಟೋಪವನು ಕಡಿಖಂಡಮಾಡಿಯೆ ತಹೆನು ಮೇದಿನಿಯ (ಸಂಭಪ. ೭–೩೫). **ಅಟಾಪ** : "... ನಿಮಗ ಈ ನೌಕರಿಮಾಡುವ ಅಟಾಪ ಸಿಕ್ಕಿಲ್ಲ" (ನಡೆದಾ. II, ೧೧೫೮). **ಅಟೋಪು**: ೨. ಅಂಕೆ ; ಅಧೀನ : ಇವನು ನನ್ನ ಆಟೋಪಿನಲ್ಲಿ ಇಲ್ಲ (ಸ್ಯಾಂಡರ್) ; ಆ ಕುದುರೆ ನನ್ನ ಅಟೋಪಿಗೆ ಬರುವುದಿಲ್ಲ (ಸ್ಯಾಂಡರ್). **ಅಟೋಪ್ಪು**: ೨. ಸೆಳವಿಗೆ ಸಿಕ್ಕ ನಾವೆ ಅಂಬಿಗರ ಅಟೋಪ ತಪ್ಪಿ ಸಾಗುತ್ತದೋ ಎಂದು ವಿವಂಚನೆಗೆ ಒಳಗಾಗಿದ್ದರು (ಗ್ರಾಮಾಯ. ೪೯೯). **ಆಟೋಪು** : ೨. ಇತ್ತ ರೇಗಿ ನಿಂತಿದ್ದ ಮೊಗಲರು ಪ್ರತಾಪನು ಆಟೋಪಿನಲ್ಲಿ ಬಂದನೆಂದು ಮನ್ಸಾಜಿಯನ್ನೇ ಪ್ರತಾಪನೆಂದು ಭಾವಿಸಿ ನಾಲ್ಕುದಿಕ್ಕಿನಿಂದ ಬಾಣಗಳ ಮಳೆ ಸುರಿಸತೊಡಗಿದರು (ಮಾತೃಭೂ. ೧೬). [?]

[← **ಮರಾ.** ಅಟಪ್, ಅಟೋಪ್ (< **ಸಂ.** ಆಟೋಪ ?)]

**ಅಟೋಪು** 'ಅಟೋಪ' ನೋ.

**ಅಟ್ಟ$_1$** (ನಾ). ೧. ಮನೆಯ ಒಳಗಡೆ, ಮುಖ್ಯವಾಗಿ ಸಾಮಾನುಗಳನ್ನು ಇಡುವುದಕ್ಕೋಸ್ಕರ, ಛಾವಣಿಗೆ ಹೊಂದಿಕೊಂಡಂತೆ ಸಾಮಾನ್ಯವಾಗಿ ಹಲಗೆ, ಗಳು ಮೊದಲಾದವನ್ನು ಹರಡಿ ಮಾಡಿರುವ ಅಂತಸ್ತು : "ಅಟ್ಟಃ ಅಟ್ಟಾಳಕಃ — ಈ ೨ ಅಟ್ಟಳೆ" (ಹಲಾಯು. ೪೫–೧೪೯) ; ಅಟ್ಟಕ್ಕೆ ನಿಚ್ಚಣಿಗೆಯನಿಕ್ಕಲಾಗಿ ನುಂಗಿತ್ತು ಅಟ್ಟವ ನಿಚ್ಚಣಿಗೆ (ಗುಪ್ತಮಂ. ೨) ; ಕೋಡಗವೇಜದೇ ಮರನನಟ್ಟವನೇಜದೆ ಬೆಕ್ಕು (ಸೂಕ್ತಿಸು. ೧೭–೨೩) ; ಅಟ್ಟಕ್ಕೆ ಏಣ್ಯಾಸೆ ಬೆಟ್ಟಕ್ಕೆ ಬಿದಿರಾಸೆ ಹೆಣ್ಣುಮಕ್ಕಳಿಗೆ ತವುರಾಸೆ (ನಾಪದ. ೬೮–೪) ; ಅಟ್ಟ ಸ್ವರ್ಗವಲ್ಲ, ಗಟ್ಟ ಮೇರುವಲ್ಲ (ಗಾದೆ) ; ಅಟ್ಟದಿಂದ ಬಿದ್ದವನನ್ನು ದಡಿಯಿಂದ ಚಚ್ಚಿದರು (ಗಾದೆ). ೨. ಮಹಡಿ : ಮಹಾರಾಜರು ಅಟ್ಟದ ಮೇಲಿರುವ ಸಾಧನಕಕ್ಷ ದಿಂದ ಇನ್ನೂ ಇಳಿದು ಬಂದಿಲ್ಲ (ಕುರಿಹಿಂ. ೧೭) ; ಹಿತ್ತಲಿನಿಂದ ಅಂಗಳವನ್ನು ಪ್ರವೇಶಿಸಿ ಹೇಗಾದರೂ ಮಾಡಿ ಸದ್ದಿಲ್ಲದೆ ಅಟ್ಟದ ಮೇಲಿನ ತನ್ನ ಕೋಣೆಯನ್ನು ಸೇರುವದು (ಗಂಪಮಾಯಿ. ೬೯). ೩. ಕಂಬ ನಟ್ಟು ಅದರ ಮೇಲೆ ಗಳು, ಹಲಗೆ ಮೊದಲಾದವನ್ನು ಹರಡಿ ಕಟ್ಟಿರುವ ವೇದಿಕೆ; ಅಟ್ಟಳೆ; ಅಟ್ಟು : ಸುಖಸಾಮ್ರಾಜ್ಯದ ಕನಸಿಗ ನೀನು ಅಟ್ಟ ಮುರಿಯುವೀ ಕುಣಿತವಿದೇನು ? (ಗರಿ. ೧೧೦–೧೭). ೪. ಅಂಗುಳು : ಮೂರ್ಧವೆಂದರೆ ಬಾಯೊಳಗಣಟ್ಟವು (ಹೊನುಗ. ೭) ; ಹಪ್ಪಳದ ಹಿಟ್ಟು ಅಟ್ಟಕ್ಕೆ ಅಂಟಿಕೊಂಡು ಕಿತ್ತರೂ ಬರದು (ರೂಢಿ). (ಗು). ೫. ಎತ್ತರವಾದ; ಉನ್ನತವಾದ : "ಅಟ್ಟಕ್ಕೆ –ಅಟ್ಟಗವಲ್, ಅಟ್ಟವಡಿ, ಅಟ್ಟಹಾಸ" (ಶಮದ. ೨೯೭, ೨೯೮, ಪ್ರಯೋ). 'ಅಟ್ಟಾಸುರ' ಪರಾ.

ಅಟ್ಟಕ್ಕೇರು = ಮೇಲೇರು ; ಹೆಚ್ಚಿಕೊ : ಅವನು ತನ್ನ ಯೋಗ್ಯತೆಯಾಗಲೇ ಅಟ್ಟಕ್ಕೇರಿರುವುದೆಂದು ಉಬ್ಬಿದನು (ನೀಗಟ್ಟು. ೩೦).

[**ದೇ.** ?. / **ತುಳು.** ಅಟ್ಟ ; **ತೆಲು.** ಅಟ್ಟಮು ; **ಸಂ.** ಅಟ್ಟ. ☞ ಇದು ಕೇಶಿರಾಜನು ಹೇಳುವ "ತತ್ಸಮ" ಶಬ್ದಗಳಲ್ಲಿ ಒಂದು (ಶಮದ. ೨೯೭ **ನೋ**)]

**ಅಟ್ಟ$_2$** (ಗು). ದಟ್ಟವಾದ ; ಒತ್ತಾದ (?). 'ಅಟ್ಟಡವಿ', 'ಅಟ್ಟಾಗು' ಪರಾ. [?]

**ಅಟ್ಟ$_3$** 'ಅಡು$_1$' ನೋ.

**ಅಟ್ಟ$_4$** (ನಾ). ಅನ್ನ ; ಆಹಾರ. [**ಸಂ.**]

**ಅಟ್ಟಂಬಟ್ಟಂ** (ಗು). ಒತ್ತಾಗಿ ಹರಡಿರುವ (?).

ಅಟ್ಟಂಬಟ್ಟಂ ಅರಣ್ಯ, ಅಟ್ಟಂಬಟ್ಟಾರಣ್ಯ=ಒತ್ತಾಗಿಯೂ ವಿಸ್ತಾರವಾಗಿಯೂ ಇರುವ ಕಾಡು : ಅಗೋ ಆ ಅಟ್ಟಂಬಟ್ಟಂ ಅರಣ್ಯದ ನಟ್ಟನಡುವೆ ಬೆಟ್ಟಗೋಟೆಯೊಂದನ್ನು ಕಟ್ಟಿದ್ದು, ನಿಟ್ಟಿರುಳಿನಲ್ಲಿ ಕೂಡ ಕಟ್ಟಾಯದ ಕಾವಲುಗಾರರು ಅದನ್ನು ಕಾಯುತ್ತಿರುವರು (ವಿಚಾಮಂ. ೬೮); ಅಟ್ಟಂಬಟ್ಟಾರಣ್ಯದೊಳು ರಾಕ್ಷಸನು ಬಂದು (ಸಬೀಗೀ. ೭–೧೬೧) ; ತಾನು ಹಿಂದೆ ಉಡುಪಿಯ ಯಾತ್ರೆಗೆಂದು ಹೊರಟಾಗ ರಾತ್ರಿ ಹೊತ್ತಿನಲ್ಲಿ ಭಯಾನಕ ಅಟ್ಟಂಬಟ್ಟಾರಣ್ಯದಲ್ಲಿ ನಡೆಯುತ್ತ ಘಟ್ಟ ಇಳಿದ ಸಂಗತಿಯನ್ನು ಹೇಳುವಾಗ ಕೇಳುತ್ತಿದ್ದ ನನ್ನ ಮೈಮೇಲೆ ಮುಳ್ಳುಬಂದುವು (ವೈನಿ. ೨೪೯). ಅಟ್ಟಬೆಟ್ಟ ಹೋ. [ಅಟ್ಟ$_2$ + ಬಟ್ಟ$_0$]

**ಅಟ್ಟಕಳಿ** 'ಅಟ್ಟಕಟಿ' ನೋ.

**ಅಟ್ಟಕಟಿ**, ಅಟಕಾಳಿ, ಅಟ್ಟಕಳಿ (ನಾ). ಸ್ನಾನ ಮಾಡುವಾಗ ಜಿಡ್ಡನ್ನು ಹೋಗಲಾಡಿಸಲು ಮುಖ್ಯವಾಗಿ ತಲೆಗೆ ಉಜ್ಜಿಕೊಳ್ಳುವ ಗಂಜಿ ಅಥವಾ ಸರಿ. ☞ ಇದಕ್ಕೆ 'ತೈಲನಾಶಿನಿ' ಎಂಬ ಹೆಸರಿದೆ: ಅವರ್ಗೆಲ್ಲಂ ನೀರನಿಡಿಸಿ ತಲೆಯಂ ಪೂಸಿಸಿಯೊಲ್ಲಣಿಗೆಯನುಡಿಸಿ ತಲೆಯೊಳಟ್ಟ[ಪಾಠಾಂ. ತಲೆಯೊಳ್]ಕಟಿಯಂ ಪೊಯ್ದಾಗಳ್ (ವಡ್ಡಾರಾ. ೧೮–೨೪). **ಅಟಕಾಳಿ** (ಉಕ). **ಅಟ್ಟಕಳಿ** : ಕಾದಗ್ಘವಣಿಯಟ್ಟಕಳಿ ಕರುಟು ಚಂದನಂಗಳನೊರಸಿ ಮಜ್ಜನವನು (ಸಿದ್ಧರಾ. ೮–೭೩) ; ಬಳಿಕ ಕುಂಕುಮವೆರಸಿದ ಮೃಗಮದದಟ್ಟಕಳಿಯ ನಾರಿಯರಳಕಕ್ಕೆ ತಳಿದು ಮಜ್ಜನವ ಮಾಡಿಸಿದರು (ಕುರಾಸಾಂ. ೨೯–೮೪) ; ಎಣ್ಣೆ ಬೆನ್ನೀರಟ್ಟಕಳಿಯಿಂದವಳ ಮೆಯ್ಯ ಬಣ್ಣವೇಳಿಸಿದರು (ರಾಮುವಿ. ೭–೬೪).

[ಅಟ್ಟ$_3$ + ಕಟಿ$_3$]

**ಅಟ್ಟಕುಂಬಳ** (ನಾ). ಬೀಜಕ್ಕಾಗಿ ಒಣಗಿಸಿ ಇಟ್ಟ ಕುಂಬಳಕಾಯಿ (ಸ್ಯಾಂಡರ್). [ಅಟ್ಟ$_3$ + ಕುಂಬಳ]

**ಅಟ್ಟಗವಲ್** (ನಾ). ಮರದ ಎತ್ತರವಾದ ಕವಲುಕೊಂಬೆ: "ಅಟ್ಟಕ್ಕೆ –ಅಟ್ಟಗವಲ್, ಅಟ್ಟವಡಿ, ಅಟ್ಟಹಾಸ" (ಶಮದ. ೨೯೮, ಪ್ರಯೋ).

[ಅಟ್ಟ$_1$ + ಕವಲ್$_2$]

**ಅಟ್ಟಗುಣ** (ನಾ). ಎಂಟರಷ್ಟು; ಎಂಟುಮಡಿ: ಇದ ಕಾದೊ ಅಟ್ಟಗುಣ ಅಸ್ವಮೇದದ ಪಲಮುಕ್ಕೆ (ಎಇ. IX, ೨೨–೧೫ ; 800).

[**ಸಂ.** ಅಷ್ಟಗುಣ (ಅಷ್ಟ + ಗುಣ)]

**ಅಟ್ಟಗೆ** (ನಾ). ಒಣಗಿದ ಕಟ್ಟಿಗೆ (?) : ನಿಘಾತದಂತದಂಡಂಗಳ ಕಿಡಿಯ ಕೆಂಡಂಗಳೊಳ್ ಪಕ್ಷಕಕ್ಷಂಗಳನುಚ್ಚಳಿಸಿ ನೆಗೆವ ನೆತ್ತರ ಸುಟ್ಟುರೆಗಳೊಳಂ ಕೋಡನೂಱಿ ಕೆಡೆವ ಮದಗಜಂಗಳುರಿಪತ್ತಿದಟ್ಟಗೆಯೊಟ್ಟಲಂತಿರ್ದುವು (ಅನಂಪು. ೧೪–೭ ವ). [~ ಅಡು ?]

**ಅಟ್ಟಗೊಂಬು** (ನಾ). ಮರದಲ್ಲಿಯ ಮುಖ್ಯವಾದ ಕೊಂಬೆ (ಸ್ಯಾಂಡರ್). 'ಅಟ್ಟಗವಲ್' ಪರಾ. [ಅಟ್ಟ$_1$ + ಕೊಂಬು$_1$]

**ಅಟ್ಟಗೋಲು**, ಅಟಗೋಲು (ನಾ). ೧. ಎತ್ತರವಾದ ಗಳೆ : ಆಕಾಶವನಡರುವಂಗೆ ಅಟ್ಟಗೋಲ [ಪಾಠಾಂ. ಅಟ್ಟುಗೋಲ, ಅಟ್ಟಕೋಲ] ಹಂಗೇಕೋ (ಅವಚಂ. ೮೩೯) ; ಅಂಬರವನಡರ್ವಂಗಟ್ಟಗೋಲೇಕೆ ಬಿಡದಂಬುಧಿಯ ದಾಂಟುವಂಗೇಕೆ ಹಱುಗೋಲ್ (ಚೆಬಪು. ೫೭–೯೧). **ಅಟಗೋಲು** : ೨. ಎತ್ತಿನ ಮೇಲೆ ಹೊರೆಯನ್ನು ಹೇರಲು ಉಪಯೋಗಿಸುವ ಗಳೆ (ಉಕ. ?).

[ಅಟ್ಟ$_1$ + ಕೋಲು$_1$ (< ಕೋಲ್$_1$)]

**ಅಟ್ಟಿಟ್ಟಿ** (ನಾ). ದೂತನನ್ನು ಕಳಿಸುವುದು ; ದೌತ್ಯ ; ನಿಯೋಗ ;

ಇನ್ನಳಿಪಿಂದವಟ್ಟುವಟ್ಟಿಟ್ಟಿಗಳಂ ಬಿಸುಟ್ಟುದೆಮಗಂ ತಮಗಂ ಮುಳಿಸಿಂದ ಮಾಗಳಟ್ಟಿಟ್ಟಿಗಳಪ್ಪುವು (ಪಂಪಭಾ. ೯–೮೯); ಮೈತ್ರಿಕ್ಕಂ ಮೇರೆಗಂ ಅಟ್ಟಿಟ್ಟಿಗಂ ಸ್ವಾಮಿಭೃತ್ಯಸಂಬಂಧಕ್ಕಂ . . . ಬಲಂ ಕೂಡಿ ನಡೆಯೆ (ಪಂಪಭಾ. ೯–೯೫ ವ); ಅಟ್ಟಿಲೆವೇಟ್ಟುದೊರ್ಮೆಗೆ ವಿಭೀಷಣನಲ್ಲಿಗೆ ನಮ್ಮ ನಣ್ಪನಟ್ಟಿಟ್ಟಿಯ ಮಾತನಟ್ಟಿದೊಡೆ ದೇವಿಯನಾತನ ಮಾತುಗೇಳ್ದು ಬಿಟ್ಟಿಟ್ಟುಗುಂ (ಪಂರಾಮಾ. ೧೧–೨೩); (ಪಂಪಭಾ. ೭–೨೭ ವ. ನೋ).

**ಅಟ್ಟಿಟ್ಟಿಯಟ್ಟು**=ದೂತರನ್ನು ಕಳಿಸು; ಸಂದೇಶವನ್ನು ಕಳಿಸು: ಪ್ರಮದವನದೊಳಗೆ ಸೆಜೆಯಿಟ್ಟು ಮತ್ತಮಟ್ಟಿಟ್ಟಿಯಟ್ಟುತಿರ್ದಪನುಚಿತ ಕ್ರಮಮಂ ಕಾಮುಕರಜೆವರೆ (ಪಂರಾಮಾ. ೧೧–೮೨).

[ಅಟ್ಟು$_4$ + ಅಟ್ಟು$_2$ + –ಇ$_3$. / ಪ್ರಾ. ("ದೇಶೀ") ಅಟ್ಟಟ್ಟ=ಹೊರಟು ಹೋದ]

**ಅಟ್ಟಿಟ್ಟಿಕೆ**, ಅಟ್ಟಾಟಿಕೆ$_1$ (ನಾ). ಬೇರೆಯವರ ಮೂಲಕ ಸಂದೇಶ ಮೊದಲಾದವನ್ನು ಹೇಳಿಕಳಿಸುವುದು; ದೂತರನ್ನು ಅಟ್ಟುವುದು; ದೌತ್ಯ: ಆ ಪ್ರಭುದೇವರು ಅಟ್ಟಿಟ್ಟಿಕೆ[ಪಾಠಾಂ. ಅಟ್ಟಾಟಿಕೆ]ಯಲ್ಲಿ ಕರೆಯಲಟ್ಟಿದರೆಂದು ಮುನಿಸನೊಳಗಿಟ್ಟುಕೊಂಡು ನುಡಿವ ಪ್ರಸ್ತಾವದ ವಚನ (ಶೂನ್ಯಸಂ. ೯೨–೧೨). **ಅಟ್ಟಾಟಿಕೆ$_1$**: ಅಟ್ಟಾಟಿಕೆಯ [ಪಾಠಾಂ. ಅಟ್ಟಿಟ್ಟಿಕೆಯ]ಮಾತನಾಡಲದೇಕೋ? ಮುಟ್ಟಿಬಂದುದಕ್ಕಂಜಲದೇಕೊ? (ಬಸವ. ೭೨೬); ಅಲ್ಲಮಪ್ರಭುದೇವರು ಸಿದ್ಧರಾಮಯ್ಯ ದೇವರು ಬಂದು ಬಾಗಿಲಲ್ಲಿರಲು ಅಟ್ಟಾಟಿಕೆಯಲಿಂತು ತೆಜಹು ಮಜಹಾಗಿಪ್ಪುದು ನಿಮಗುಚಿತವಲ್ಲೆಂದು ಚಿಕ್ಕದಣ್ಣಾಯಕರು ಬಿನ್ನೈಸಲು (ಶೂನ್ಯಸಂ. ೯೬–೨೨); ಭೃತ್ಯನಿದ್ದೆಡೆಗೆ ಕರ್ತನೆಯಿತಂದರೆ ಅಟ್ಟಾಟಿಕೆಯಲ್ಲಿ ಇಂತು ಕರೆವರುಂಟೆ? (ಶೂನ್ಯಸಂ. ೯೯–೨೨). [ಅಟ್ಟು$_4$ + ಅಟ್ಟು$_2$ + –ಇಕೆ$_2$]

**ಅಟ್ಟಡವಿ** (ನಾ). ದಟ್ಟವಾದ ಕಾಡು; ಕಗ್ಗಾಡು: ನಡೆದುದು ಬೇಡವಡೆಗಳಟ್ಟಡವಿಯೊಳಗೆ (ಹ ಚ ಕಾ. ಪರಿ. ೨೧೩–೫೪); ಅಟ್ಟಡವಿಯೆನ್ನ ದೂರೆನ್ನದೆಡೆಯೊಳು (ಸಿದ್ಧರಾ. ೨–೫೪); ಎತ್ತಿ ಚೆಲ್ಲಿದ ಮುಳಲು ಬೀಳದ ಮೊತ್ತವೆತ್ತಟ್ಟಡವಿಯಲಿ ನಲವೆತ್ತು ಬೆಳೆದಿಟ್ಟಿಯ ಮರಂಗಳು (ಬಸಪು. ೩೨–೬); ಪುಟ್ಟಬಾಲಕ ನಾರಾಯಣ ಹರಿಯೆನುತ ಅಟ್ಟಡವಿಯೊಳಗಿರಲು (ಚಂದ್ರಹಾ. ೨–೩೫). 'ಅಟ್ಟಾಗು' ಪರಾ. [ಅಟ್ಟ$_2$ + ಅಡವಿ]

**ಅಟ್ಟಡಿ$_1$** (ನಾ). ಅತ್ಯಂತ ಕೆಳಭಾಗ; ತಟ್ಟತಳ: ಅಟ್ಟಡಿಯಲೆಲ್ಲಾ ನಿರಯದಿಂ ತಟ್ಟತಳದೊಳು ಕಟ್ಟಕಡೆಯಲ್ಲಿ ದುಟ್ಟನೀ ತೆಜದಿಂದೆ ಎಕ್ಕಲನಾಗಿರಲು ಕಂಡು (ಸಾನಂಚ. ೮–೨೧); ಅವಳ ನಿನ್ನ ಕಾಲ ಅಟ್ಟಡಿಗೆ ಸಾರ್ಚದೊಡೆ ಲೋಕಕ್ಕೆ ಹೊಜಗಾನು (ವೀಶೈಪು. ೫–೨೦–೧).

[ಅಡಿ$_1$ + ಅಡಿ$_1$]

**ಅಟ್ಟಡಿ$_2$** (ನಾ). ಜನ ಹೆಚ್ಚಾಗಿ ಸೇರುವ ಸ್ಥಳ; ಜನಸಂದಣಿಯ ದಾರಿ ಅಥವಾ ಮನೆ (ಸ್ಯಾಂಡರ್). [?]

**ಅಟ್ಟಣ** 'ಅಟ್ಟಳೆ' ನೋ.

**ಅಟ್ಟಣಿಕೆ** 'ಅಡ್ಡಣಿಗೆ' ನೋ.

**ಅಟ್ಟಣಿಗೆ** 'ಅಟ್ಟಳಿಗೆ' ನೋ.

**ಅಟ್ಟಣೆ$_1$** 'ಅಟ್ಟಳೆ' ನೋ.

**ಅಟ್ಟಣೆ$_2$** (ನಾ). ಒಂದು ಬಗೆಯ ಕಾಲುಕೋಳ (?): ಧನವೆಲ್ಲ ಸವೆಯೆ ವೇಶ್ಯಾಮಾತೆ ಬಿಡದೆಯಾತನ ಕಾಲಿಗಟ್ಟಣೆಯ ಹೊಲಿದು ಬಾಗಿಲ ಕಾಯ್ದುನತನುವಿನಿಂದಿರೆ (ಪಾಸೋಪು. ೪–೬೧). [?]

**ಅಟ್ಟಣೆ$_3$** (ನಾ). (ಕರಾ) ಸಿದ್ಧತೆ; ಏರ್ಪಾಡು: ನಿನ್ನ ತಂದೆ ಹೇಳಿದ್ದು ಕೇಳಿತೋ ನಿನಗೆ? ಹೇಳು, ಹಾಗಾದರೆ ನಾವು ಮದುವೆಯ ಅಟ್ಟಣೆ ಮಾಡಬಹುದೋ (ಸೋಲು. ೩೫). [?]

**ಅಟ್ಟತಾಳ**, ಅಟತಾಳ, ಅಡತಾಳ (ನಾ). [ಸಂಗೀತ] ಒಂದು ಬಗೆಯ ತಾಳ: ಧ್ರುವತಾಳಮಟ್ಟತಾಳಂ ತ್ರಿಪುಡಂ ರೂಪಕ (ಛಂದಸ್ಸಾ. ೫–೧). **ಅಟತಾಳ**: ವಿದೂಷಕನು . . . ಅಟತಾಳಗತಿಯಿಂದ ಅಂಡುಗಳ ಮೇಲೆ ಯೇಟುಗಳಂ ಬಡಿಯುತ್ತ (ಸೌಗಂಧಿ. ೫೦೩–೧೬). **ಅಡತಾಳ**: ಬೇಗದಿ ಧೃವಮಠೆಯವು ಪಡಿಮಠೆಯವು ಯೇಗೈಯ್ಯಲಡತಾಳಗಳು (ತರ್ಕಕಾ. ೭–೫೬). [ಸಂ. ಅಷ್ಟತಾಲ (ಅಷ್ಟ + ತಾಲ)]

**ಅಟ್ಟತೆಂಗು** (ನಾ). ಬೀಜಕ್ಕಾಗಿ ಒಣಗಿಸಿ ಇಟ್ಟ ತೆಂಗಿನಕಾಯಿ (ಸ್ಯಾಂಡರ್). [ಅಟ್ಟ$_3$ + ತೆಂಗು$_2$]

**ಅಟ್ಟದೆಜೆ** (ನಾ). ದೊಡ್ಡ ತೆರಿಗೆ; ಹಿರಿಯ ಸುಂಕ (?): ಕನಕಸೇನ ಭಟ್ಟಾರಗ್ಗೆ ತಿಪ್ಪೆಯೂರೊಳಾದ ಅಟ್ಟದೆಜೆಯುಂ ಕುಱುದೆಜೆಯು ಮುಟ್ಟ ಸಾಮನ್ತದೆಜೆಯೆಲ್ಲವಮ್ಬಿಟ್ಟಂ (ಎಕ. III, ಮಳವ. ೩೦–೧೦; 909). ಪೆರ್ಜುಂಕ ಹೋ. ⓟ "Tax on upper rooms" [= ಅಟ್ಟಗಳ ಮೇಲಿನ ತೆರಿಗೆ] ಎಂದು ಶಾಸನದ ಸಂಪಾದಕರು ಭಾಷಾಂತರ ಮಾಡಿದ್ದಾರೆ. [ಅಟ್ಟ$_1$ + ತೆಜೆ$_3$]

**ಅಟ್ಟಬೆಟ್ಟ** (ನಾ). ದಟ್ಟವಾಗಿ ಹಬ್ಬಿರುವ ಬೆಟ್ಟ (?): ಅಟ್ಟಬೆಟ್ಟದ ಕಿಬ್ಬಿಯೊಳಗೆ . . . ಮುಟ್ಟ ಮೇದವು ಹುಲ್ಲನು (ಗೋಹಾಡು. ೪೪–೯); ಅಟ್ಟಬೆಟ್ಟದಲ್ಲಿ ಪುಟ್ಟ ಜೀವನದಲ್ಲಿ ಸೆಟ್ಟ್ಯೋಳೆ ನಿನ್ನ ಹರಸಿದೆ (ಹುಟ್ಟಿಹ. ೧೪೬). ಅಟ್ಟಡವಿ ಹೋ. [ಅಟ್ಟ$_2$ + ಬೆಟ್ಟ (< ವೆಟ್ಟ)]

**ಅಟ್ಟಮಡಿಸು** (ಕ್ರಿ). ಎಂಟುಮಡಿ ಮಾಡು; ಎಂಟರಷ್ಟು ಮಾಡು: ಡಂಬಕಭಕ್ತಿಗೆ ಮೆಚ್ಚಿ ಕೊಡನು ಕೃಷ್ಣ . . . ಕೆಟ್ಟೆನೆಂದರು ಇಲ್ಲ, ಕ್ಲೇಶಬಟ್ಟರು ಇಲ್ಲ, ಅಟ್ಟಮಡಿಸಿ [ಪಾಠಾಂ. ಅಟ್ಟಡಸಿ] ನಿಷ್ಠೂರ ಆಡಿದಡಿಲ್ಲ (ಪುರಂದ. ೫–೧೩೮–೨).

[ಅಟ್ಟ$_0$ (< ಸಂ. ಅಷ್ಟ) + –ಮಡಿ$_3$ + –ಇಸು$_3$]

**ಅಟ್ಟಲಾಟ** (ನಾ). ಬಯಲಾಟ: ರಾಮಾಯಣ ಭಾರತ ಕಥೆಗಳು ಜನತೆಗೆ ಕಥಕರು ಭಟ್ಟರು ಅಟ್ಟಲಾಟದವರು ಇವರಿಂದ ಕೇಳಿ ಹಿಂದಿನಿಂದಲೂ ಪರಿಚಿತವಾಗಿದ್ದುವು (ಬಂಕಿಮ. ೭). [ಅಟ್ಟಲು + ಆಟ]

**ಅಟ್ಟಲು** (ನಾ). ಬಯಲಾಟವನ್ನು ಆಡುವುದಕ್ಕಾಗಿ ಹಲಗೆ ಮೊದಲಾದವುಗಳಿಂದ ಸಿದ್ಧಪಡಿಸಿದ ವೇದಿಕೆ: ಮನೆಗಳಲ್ಲಿದ್ದ ಚಾಪೆ, ತಟ್ಟು . . . ಗೋಣಿಯ ಚೀಲಗಳು ಆಟದ ಅಟ್ಟಲಿನ ಮುಂದುಗಡೆ ಹರಡಿಕೊಂಡವು (ಬೆಳುಮ. ೨೧೯). [~ ಅಟ್ಟ$_1$]

**ಅಟ್ಟಲೆ** 'ಅಟ್ಟಳೆ' ನೋ.

**ಅಟ್ಟವಡಿ** (ನಾ). ಉದ್ದವಾದ ದೊಣ್ಣೆ (?): "ಅಟ್ಟಕ್ಕೆ– ಅಟ್ಟಗವಲ್, ಅಟ್ಟವಡಿ, ಅಟ್ಟಹಾಸ" (ಶಮದ. ೨೯೮ ಪ್ರಯೋ). [ಅಟ್ಟ$_1$ + ಬಡಿ$_2$]

**ಅಟ್ಟವಣೆ**, ಅಟವಣೆ$_1$, ಅಟ್ಟಾವಣೆ, ಅಟ್ಠವಣೆ, ಅಠವಣೆ$_1$, ಅಠಾವಣೆ, ಆಠವಣೆ, ಟವಣೆ, ಠವಣೆ (ನಾ). ೧. ಕೂಡುವ (ಮತ್ತು ಕಳೆಯುವ) ಲೆಕ್ಕ (ದಕ. ೬). ೨. ಭೂಕಂದಾಯ. ೩. ಭೂಕಂದಾಯದ ಲೆಕ್ಕಪತ್ರಗಳನ್ನಿಟ್ಟು ಆ ಕಾರ್ಯಭಾರವನ್ನು ನಿರ್ವಹಿಸುವ ಸರಕಾರದ ಶಾಖೆ ಮತ್ತು ಅಧಿಕಾರವರ್ಗ; "ರೆವೆನ್ಯೂ" ಇಲಾಖೆ: ಶತ್ರುಗಳ ಸೈನ್ಯದ ಜನಕ್ಕೆ ಬಂಧುಮಿತ್ರರಾಗಿ ನಮ್ಮ ಸೇನೆಯಲ್ಲಿ ಸಂಬಳಕ್ಕಿರುವ ಜನಗಳಂ ವಿಚಾರಿಸಿ, ನಮ್ಮ ದಂಡಿನಲ್ಲಿ ಅಧಿಕಾರವಿದ್ದರೆ . . . ಅದನ್ನು ತೆಗೆದು ಅಟ್ಟವಣೆಯಲ್ಲಿ ಅಧಿಕಾರಮಂ ನೇಮಿಸಬೇಕೇ ಹೊರತು ಸೇನೆಯಲ್ಲಿ ನೇಮಿಸಕೂಡದು (ಮುದ್ರಾಮಂ. ೮೮). **ಅಟವಣೆ$_1$**: ೧,೨ (೬). **ಅಟ್ಟಾವಣೆ**: ೩. ಸಾಮಾನ್ಯವಾಗಿ ಪೋಲೀಸು, ಅಟ್ಟಾವಣೆ, ಕಂದಾಚಾರಗಳಲ್ಲಿ ಈ ಪಂಗಡದವರು ಅನೇಕರು ಚಾಕರಿಗೆ ಸೇರುತ್ತಿದ್ದರು (ಕೆಲಸೆ. ೨೦೩). **ಅಟ್ಠವಣೆ**: ೧. ಕಟ್ಟಳೆ, ಅಟ್ಠವಣೆ, ಅಡ್ಡಿಕೆ . . . ಇತ್ಯಾದೌ ಸ್ವತೋ ದ್ವಿತ್ವಮಾಪನ್ನಾನಾಂ ಕಕಾರಾದೀನಾಂ ಪುನಶ್ಚ ದ್ವಿತ್ವಂ ಪ್ರಸಜ್ಯತೇ (ಶಬ್ದಾನು. ೬೭ ವ್ಯಾಖ್ಯಾ). ೨. ವೀರಭದ್ರ

ದುರ್ಗದ ಅಠ್ಠ[ಟ್ಟ]ವಣೆಗೆ ತೆಱುವ ಬೀಡು ದೇವಸ್ಥಾನದ ಅರೆವಾಸಿ ಊಳಿಗ ಮಾನ್ಯ . . . ಇದಱಲ್ಲಿಯುಂ ಅಠ್ಠ[ಟ್ಟ]ವಣೆಗೆ ಸಲುವ ವೈರು ಸುಂಕ ಪೊಂಮು (ಎಕ. III, ಶ್ರೀರಂಗ. ೧೦೦–೧೬೩, ೧೭೨ ; 1724) ; ಅಠ್ಠ[ಟ್ಟ]ವಣೆ ವಗ್ಯೆರೆ ಸ್ಥಳ ಖರ್ಚು ಹೋಗಲಾಗಿ (ಮುಹಾವಂ. II. ೬೭). **ಅಠವಣೆ$_1$**: ೨. ಕರಣೀಕರ ಅಠವಣೆಯ ಮಾಗಣೆ ಶಾನುಭೋಗರ ವರ್ತನೆಯಿಂದ ಗ ೨ (ಮೈಆರಿ. ೧೯೩೪, ೨೭–೨೦ ; 1430). ೩. ಚಿಕಅಠವಣೆಯಾ ಮಾದರರ್ಸನ ಬರಹ (ಎಕ. XIV, ಶ್ರೀರಂಗ. ೨೮೦–೭೮ ; 1460) ; ಅಠವಣೆ ವೆಂಕಟರಮಣಪ ಕಂದಾಚಾರದ ನಾರಾಸಿ (ಎಕ. XII. ಪಾವುಗ. ೬೦–೨೭ ; 1705) ; ನೀನು ಮಾಡಿಯಿರುವ ಮಸೀದಿ ಧರ್ಮಕ್ಕೆ ಅಠವಣೆಯಿಂದ ವರುಷ ೧ಕ್ಕೆ . . . ವರಹದ ಮೇರಿಗೆ ಕೊಟ್ಟು ಬರುವದು ಸರಿಯಷ್ಟೆ (ಎಕ. IX, ನೆಲಮಂ. ೮–೭ ; 1763). **ಅಠಾವಣೆ** : ೩. ಆಗಿನ ಕಾಲದ ಸುಬೇದಾರ್ರ ಮನೆಯಲ್ಲಿ ಇಪ್ಪತ್ತು ಇಪ್ಪತ್ತೈದು ಜನ ಊಳಿಗದವರು ಅಠಾವಣೆ ಕಂದಾಚಾರ ಎಂಬ ವರ್ಗದವರೂ ಇರುತ್ತಿದ್ದರಂತೆ (ಸಕತೆ. ೭೯). **ಆಠವಣೆ**: ೨. (ಕಿಸಂಗ್ಲಾ. ೧೩೯). **ಟವಣೆ** : ೧. ಸಿಕ್ಕಿದ ನಲ್ಲಳು ಮುನಿದ ನಲ್ಲನ ಮುಂಧೆ ಬಿಕ್ಕಳಿಸುತ ನುಡಿವಂತೆ ಲೆಕ್ಕ ಟವಣೆಯಾಗಿ ಕೊರಳು ಕುಣಿದು ದನಿಯಿಕ್ಕುವ ರಾಗ ರಂಜಿಸಿತು (ಭರಚ. ೫–೬೩) [ಲೆಕ್ಕ ಟವಣೆಯಾಗಿ = ಲೆಕ್ಕಕ್ಕೆ ಅನುಗುಣವಾಗಿ, ತಾಳಬದ್ಧವಾಗಿ] ; ಗ್ರಾಮಗಳಲ್ಲಿಯೂ ಪಟ್ಟಣಗಳಲ್ಲಿಯೂ ಧನಿಕರಾದವರ ಮನೆಗಳಲ್ಲಿಯೂ ಬಾಲಕರಿಗೆ ಓನಾಮದಿಂದ ಮೊದಲುಮಾಡಿ ಕೊಟ್ಟಕಾಗದ ಓದುವುದು, ಹೇಳಿದ್ದನ್ನು ಬರೆಯುವುದು, ಟವಣೆ ಹಾಕುವುದು, ಕಳೆಯುವುದು, ಇಷ್ಟರಮಟ್ಟಿಗೆ ಕನ್ನಡದಲ್ಲಿ ಹೇಳಿಕೊಡುವ ಮಠಗಳನ್ನು ಇರಿಸಿದ್ದರು (ಕುರಾಚ. ೨೭) ; ಕತ್ತೆ ಚಿತ್ರಗಾರನ ಮಿಂಡ, ಹಣ ನೋಟಗಾರನ ಮಿಂಡ, ಟವಣೆ ಶಾನಭೋಗನ ಮಿಂಡ (ಗಾದೆ. ೩). ೪. “ಸುಳ್ಳು, ಮೋಸ, ಕಪಟ” (ಸರ್ವಜ್ಞ. ಕೋಶ) ; ನವಣೆಯನು ಉಂಬುವನು ಹವಣಾಗಿ ಇರುತಿಹನು ಭವಣೆಗಳಿಗವನು ಒಳಬೀಳನೀ ಮಾತು ಟವಣೆಯಲ್ಲೆಂದ (ಸರ್ವಜ್ಞ. ೨೦೨೧). **ಠವಣೆ** : ೧. ಅಂತು ಸುಘೋಷೆಯೆಂಬ ವೀಣೆಯಂ ಕೊಂಡು ಕಳೆಯನಳವಡಿಸಿ ತಂತ್ರಿಯಂ ಸುತಂತ್ರಂಮಾಡಿ ಠವಣೆಯೆಂಬ ಪವಣಱಿದು ಪೊಯ್ದು (ಮಹಾನೇ. ೫–೧೪೮) ; ಇಮ್ಮಡಿಸಿ ಠವಣೆಯಿಕ್ಕಲು ಘಂಮನೆ ತಾಂ . . . ಇಮ್ಮಡಿಸಿ ಠವಣೆಯಿಕ್ಕಿದ ವಿವರ (ವ್ಯವಹಾ. ಹೇಱಿನ ಲೆಕ್ಕ) ; ಹೊನ್ನ ಠವಣೆಯ ಕೂಡಲಘವದು ಬೆನ್ನ ಬಿಡುವುದೆ (ಪ್ರಹ್ಲಾಚ. ೭–೧೦) ; ಉಭಯರುನ್ನತ ಗೆಲುವಿನಲಿ ಧೂಳಕ್ಕರಿಚ್ಚೆಯ ಠವಣೆ ಮುಗ್ಗಿಗಳ (ಜಿನಭಾ. ೭–೩೨). ೫. ಮೊತ್ತ ; ರಾಶಿ : ತವಕವೆಂದೇ ಕಾಗೆ ಬಳಗದ ಠವಣೆಯೆನಿಸುವ ಕಂಡ ನರರಿಗೆ ಕವರಿಕೊಡುವಾ ದಾನವದು ತಾಮಸದಾನವದುಯೆಂದ (ಜ್ಞಾನಸಿಂ. ೩೦–೨೪).

[ಸಂ. ಆಸ್ಥಾಪನ. / **ಮರಾ.** ಅಠವಣ್ = ಲೆಕ್ಕದ ಪುಸ್ತಕ. P ಅಟ್ಟವಣೆ, ಅಟ್ಠವಣೆ – ಇವುಗಳ ಆದಿಸ್ವರ ಲೋಪದಿಂದ ಟವಣೆ, ಠವಣೆ ಎಂಬ ರೂಪಗಳು ಉಂಟಾಗಿವೆಯೆಂದು ಇಲ್ಲಿ ಭಾವಿಸಲಾಗಿದೆ. ಆದರೆ, **ಸಂ.** ಸ್ಥಾಪನ ಎಂಬುದರಿಂದ ಪ್ರಾಕೃತದ ಮೂಲಕ ಠವಣೆ ಮತ್ತು ಟವಣೆ ಬಂದಿವೆಯೆಂದು ಭಾವಿಸುವುದೂ ಸಾಧ್ಯ]

**ಅಟ್ಟವಣೆ ಇಲಾಖೆ,** ಅಠವಣೆ ಇಲಾಖೆ, ಆಠವಣೆ ಇಲಾಖೆ (ನಾ). ಭೂಕಂದಾಯದ ಇಲಾಖೆ (ಗ್ಯಾರೆಟ್). **ಅಠವಣೆ ಇಲಾಖೆ** (ಸ್ಯಾಂಡರ್). **ಆಠವಣೆ ಇಲಾಖೆ** (ಕಿಸಂಗ್ಲಾ. ೧೩೯).

[ಅಟ್ಟವಣೆ + ಇಲಾಖೆ]

**ಅಟ್ಟವಣೆ ಕಚೇರಿ,** ಅಠವಣೆ ಕಚೇರಿ (ನಾ). ಭೂಕಂದಾಯದ ಕಚೇರಿ (ಗ್ಯಾರೆಟ್). **ಅಠವಣೆ ಕಚೇರಿ** (ಸ್ಯಾಂಡರ್).

[ಅಟ್ಟವಣೆ + ಕಚೇರಿ]

**ಅಟ್ಟವಣೆಕೋಲ್,** ಟವಣೆಕೋಲ್, ಠವಣೆಕೋಲ್ (ನಾ). (ಹಿಂದಿನ ಕಾಲದಲ್ಲಿ) ಓದುವಾಗ ಪುಸ್ತಕವನ್ನು ಇಟ್ಟುಕೊಳ್ಳುವುದಕ್ಕೆ ಉಪಯೋಗಿಸುತ್ತಿದ್ದ, ಸಾಮಾನ್ಯವಾಗಿ ನಾಲ್ಕು ಕಾಲುಗಳನ್ನು ಜೋಡಿಸಿ ಮಾಡಿದ ಪೀಠ; ಅಂಥ ಪೀಠದ ಪಾದ. P (ಶಬ್ದವಿ. ೪೫, ೪೬ ನೋ) : ಇರ್ದನಟ್ಟವಣೆಕೋಲ್ಗಳ ಮೇಲೆಸೆದಿರ್ದ ವೀರ ಸಿದ್ಧಾಂತದ ಶಾಸನಂಬರೆದ ಪೊತ್ತಗೆಯಂತಮರಾಪಗಾತ್ಮಜಂ (ಪಂಪಭಾ. ೧೧–೪೬). **ಟವಣೆಕೋಲ್** : ಹೊತ್ತಗೆಯ ಟವಣೆಕೋಲ್ಗಳೆತ್ತಿದ ತೆಱದನ್ತೆ ಸರದ ತನ್ದಲು ತನುವಂ ತೆತ್ತಿಸಲ್ಕಮರಕಾಂತಾ ಜತ್ತಕಿಯರುಯ್ಯೆ ದೇಕಂ ನಾಕಕ್ಕೋದ (ಎಕ. XII, ಚಿಕ್ಕನಾ. ೧೮–೩೦ ; 1149). **ಠವಣೆಕೋಲ್** : ಶ್ರಿತರತ್ನಪೀಠವಾಲಂಬಿತ ಲಂಬನ ಸಮಿತಿ ನಾಲ್ಕುಮನುಯೋಗದ ಸಂಗತಿಯೆನೆ ಮಣಿಖಚಿತಮದೇನತಿಶಯಮಾದತ್ತೊ ಠವಣೆಕೋಲ್ ಯತಿಪತಿಯಾ (ಮಲ್ಲಿಪು. ೧೦–೧೩೪) ; ಸೆಳೆಮಂಚದ ಕಾಲೆಂಬ ಠವಣೆಕೋಲೊಳಗೊಪ್ಪುವ ಪಾಸೆಂಬ ಕವಳಿಗೆಯೊಳೆಳಜೌವನೆಯವಯವಮೆಂದೆಂಬ ಲಸತ್ಪುಸ್ತಕದೊಳಗೆ (ಜಯಕಾ. ೮–೫೮).

[ಅಟ್ಟವಣೆ + ಕೋಲ್]

**ಅಟ್ಟವಿಧ** (ನಾ). ಎಂಟು ಬಗೆ : ಅಟ್ಟವಿಧಕರ್ಮ್ಮಮೆಲ್ಲಮನಟ್ಟು[ಂ]ಬರಿಗೊಂಡು (ಎಇ. X, ೧೫೨–೪೫ ; 915). [**ಸಂ.** ಅಷ್ಟವಿಧ (ಅಷ್ಟ + ವಿಧ)]

**ಅಟ್ಟವೆ$_1$** (ನಾ). ಹುಲ್ಲು ಮುಂತಾದವನ್ನು ಮೆದೆಹಾಕುವುದಕ್ಕಾಗಿ ಕಲ್ಲುಗಳ ಮೇಲೆ ಗಳುಗಳನ್ನು ಜೋಡಿಸಿ ಸಿದ್ಧಪಡಿಸುವ ವೇದಿಕೆ, —ಅಟ್ಟ (ದಕ. ೩).

[~ ಅಟ್ಟ$_1$. / **ತಮಿ.** ಅಟ್ಟವಿ ; **ತುಳು.** ಅಟ್ಟೆಮಿ]

**ಆಟ್ಟವೆ$_2$** (ನಾ). ಅಷ್ಟಮಿ : “ಇತ್ವಕ್ಕೆತ್ವಂ : ಅಷ್ಟಮಿ–ಆಟ್ಟವೆ” (ಶಮುದ. ೨೭೯ ಪ್ರಯೋ). [**ಸಂ.** ಅಷ್ಟಮಿ]

**ಅಟ್ಟಸ,** ಅಟ್ಟಾಸ (ನಾ). ಆಡಂಬರ; ಠೀವಿ : ಮತ್ತಮೊರ್ವಳ್ ಆಟ್ಟಸದ ಜಗದಿಟ್ಟಿ ಸೋಮರ್ಡಿಯಂ ತುಱುಬಿ (ರಾಮಾಶ್ವ. ೧೨೩–೧೫) ; ಒರ್ವಳಟ್ಟಸದಿ ಕೊಟ್ಟ ಪೊಱಮಟ್ಟಳಾಗ (ಶ್ರೀರಾಮ. ೪–೯) ; ಅಂದಿನ ನನ್ನಟ್ಟಸವನ್ನು ಬಗೆಯಲಳವೆ ಅವ್ವಾ (ಗಿಳಿವಿಂ. ೧೩–೨೧). **ಅಟ್ಟಾಸ** : ಅನುಸರಿಸಿಕೊಂಡಿಹರೊಳಾಗದಟ್ಟಾಸವಾವೋದ ಸತ್ಪಾಲನೆಲೆ ಸಾರ್ವಹಿತವ (ಜಿನಮು. ೨೩–೧೭). [**ಸಂ.** ಅಟ್ಟಹಾಸ. / **ಮರಾ.** ಅಟಾಸ್]

**ಅಟ್ಟಹನಸು** (ನಾ). (ವೇದದಲ್ಲಿ) ಗೊತ್ತಾದ ಸಂಖ್ಯೆಗಿಂತ ಹೆಚ್ಚು ಶಬ್ದಗಳು ಅಥವಾ ಮಂತ್ರಗಳಿರುವ ಹನಸು ; ಅನುವಾಕದ ಕಡೆಯಲ್ಲಿ ಅನಿಯತ ಸಂಖ್ಯೆಯ ಪದವಾಕ್ಯಗಳಿಂದ ಕೂಡಿದ ಹನಸು : ವೇದಮುಮನುದಾತ್ತಾನುದಾತ್ತ ರಸಮಯ ಸ್ವರಿತ ಪ್ರಚಯ ಸುಸ್ವರಂಗಳಿಂ . . . ಪದಪಾಳಿ ಸುಜಟಾಕ್ರಮಂ ಬಳಿಕಟ್ಟಹನಸೆಂಬಿನಂ ಲೋಕದಾ ಜನಂಗಳು ನೋಡೆ (ವೀಶೈಪು. ೪–೭–೨೧, ೨೨). ‘ಹನಸು’ ಪರಾ. [ಅಟ್ಟ$_1$ + ಹನಸು]

**ಅಟ್ಟಹಾಸ** (ನಾ). ೧. ತುಂಬ ಗಟ್ಟಿಯಾದ ನಗು : ಭುಜಂಗೇಂದ್ರನಂಕುರಮುನ್ಮೀಲಿತಮಟ್ಟಹಾಸಮೆ ದಳಾನೀಕಂ ವೃಷಂ ಪುಷ್ಪಂ (ಗದಾಯು. ೧–೨) ; ಆಡತೊಡಗಿದನಟ್ಟಹಾಸದಿಂದಂ ಮಸಗಿ (ತಿರುರ. ೨೮–೬) ; ಆ ಸಿಂಗಂ . . . ಗಾಸಿಮಾಡದೆ ಪುತ್ರನಂ ಪಿಡಿದುಕೊಂಡಟ್ಟಹಾಸದಿಂ ಮಾನವರ ತೆಱದಿಂಧೆ ನುಡಿದುದು (ಜೈಮಿಭಾ. ೨೬–೩೪). ೨. ಆಡಂಬರ ; ಠೀವಿ : ಈತನು ನ್ಯಾಯಾಧೀಶನ ಗೌರವದ ಉಡುಪುಗಳನ್ನು ಧರಿಸಿ ಅಟ್ಟಹಾಸದಿಂದ ತನ್ನ ಉನ್ನತಾಸನದ ಮೇಲೆ ಕುಳಿತು ಅಪರಾಧಿಗಳನ್ನು ವಿಚಾರಣೆಗಾಗಿ ಬರಮಾಡಿದನು (ಕಲಾಧ. ೯೨) ; ಅವನು ತುಂಬ ಅಟ್ಟಹಾಸದಿಂದ ಮೆರೆಯುತ್ತಾ ಇದ್ದಾನೆ (ರೂಢಿ). ‘ಅಟ್ಟಸ’ ಪರಾ.

[**ಸಂ.** (ಅಟ್ಟ$_1$ + ಹಾಸ)]

**ಅಟ್ಟಹಾಸಂಗೆಯ್** (ಕ್ರಿ). ಹಾಸ್ಯಮಾಡಿ ನಗು; ತಿರಸ್ಕರಿಸು: ತೊಟ್ಟನೆ ತೊಳಲ್ವಂತೆ ಮಾಡೆ ಪೊರ್ಕುಳ್ ಸುಳಿಯನಟ್ಟಹಾಸಂಗೆಯ್ಯೆ ಕಿಱುದೆರೆಯ ಮುಱುಕಮಂ ತ್ರಿವಳಿ (ಪದ್ಮರಾ. ೩-೨೮).
[ಅಟ್ಟಹಾಸ + ಗೆಯ್]

**ಅಟ್ಟಹಾಸಂಮಾಡು** (ಕ್ರಿ). = ಅಟ್ಟಹಾಸಂಗೆಯ್: ಅತುಳಲಕ್ಷ್ಮೀನಿಲಯಮಾದೊಡಂ ಭಂಗಸಹಿತಮಾಗಿರ್ಪುದೆಂದು ಅವಿರಳ ಪಯೋನಿಧಿಯನಟ್ಟಹಾಸಂಮಾಡುವವೊಲಿರ್ದುದಾ ಪುರಂ (ಜೈಮಿಭಾ. ೧೦-೩೫).
[ಅಟ್ಟಹಾಸ + ಮಾಡು$_1$]

**ಅಟ್ಟಹಾಸಕ** (ನಾ). ಮೊಲ್ಲೆ; ಕುಂದಪುಷ್ಪ. [ಸಂ.]

**ಅಟ್ಟಹಾಸಗಾಱ** (ನಾ). ಆಡಂಬರದ ಮನುಷ್ಯ; ಠೀವಿಯಿಂದ ಮೆರೆಯುವವನು (ಕಿ). [ಅಟ್ಟಹಾಸ + -ಗಾಱ (< -ಕಾಱ)]

**ಅಟ್ಟಹೆರಳೆ** (ನಾ). ಹೆರಳೆಹಣ್ಣಿನಿಂದ ಮಾಡಿದ ಒಂದು ಬಗೆಯ ಅಡಿಗೆ. [ಅಟ್ಟ$_3$ + ಹೆರಳೆ (< ಪೇರೀಳೆ)]

**ಅಟ್ಟಳ$_1$** 'ಅಟ್ಟಳೆ' ನೋ.

**ಅಟ್ಟಳ$_2$** (ನಾ). ಮೆರೆತ; ಔದ್ಧತ್ಯ: ಅವನ ಅಟ್ಟಳವೆಲ್ಲವೂ ಹತ್ತೆಂಟು ವರ್ಷಗಳೇವೆ (ಸ್ಯಾಂಡರ್). [~ ಅಟ್ಟ$_1$]

**ಅಟ್ಟಳಪಾಱು** (ಕ್ರಿ). ಮೇಲಕ್ಕೆ ಹಾರು: ಇಱಿದ ಘಾಯದಲುಗಿದ ಕರುಳಿನಲಱುಚುತಿರ್ದವು ಕರಡಿಗಳು ಹೊಂಗಱಿಯ ಕಟ್ಟದ ಕೋಲಿಗಟ್ಟಳಪಾಱಿ ಹಲುಗಿರಿದು ಒಱಲುತಿರ್ದವು ಕೋಡಗಗಳು (ತೊರರಾ. ೬-೧೯-೩೦). [ಅಟ್ಟಳ$_2$ + ಪಾಱು$_1$]

**ಅಟ್ಟಳಿಗೆ**, ಅಟ್ಟಣಿಗೆ (ನಾ). ೧. ಹೊಲ, ಗದ್ದೆ ಮುಂತಾದ ಕಡೆ ಕಂಬಗಳನ್ನು ನಟ್ಟು ಮೇಲೆ ಕಟ್ಟಿದ ಕಾವಲಿನ ಗುಡಿಸಲು; ಮಂಚಿಕೆ: ನವಗಂಧಶಾಲಿವನಕ್ಕೆ ತಳಿಗಳಂ ಹೆಣೆವ ಕಪ್ಪಂ ತೋಡುವ ಸಳಿಕದಟ್ಟಳಿಗೆಯಿಕ್ಕುವ ಬೆಚ್ಚುಗಳನಿರದೆ ನೆಡುವ (ಸಮ್ಯಕೌ. ೧-೨೪). ೨. ಸೋಪಾನಪಂಕ್ತಿ; "ಗ್ಯಾಲರಿ": ಅಟ್ಟಳಿಗೆಯನು ಮಾಡಿಸಿದನು ಮುಗಿಲನು ಮುಟ್ಟುವಂದದೊಳಾ ಜಿನಗೆ (ಗೋಮಟೇ. ೧೬-೮೩); ಗಟ್ಟಗಳ ಮೆಟ್ಟಲಿನ ಅಟ್ಟಳಿಗೆ ಏರಿ, ಸಾಟಿ ಇರದೊಡ್ಡೋಲಗದ ಸೊಬಗು ಮೀರಿ (ಕಏಪು. ೨೧). **ಅಟ್ಟಣಿಗೆ**: ೩. (ಹಲಗೆ ಮೊದಲಾದವುಗಳಿಂದ ಮಾಡಿದ) ಎತ್ತರವಾದ ವೇದಿಕೆ: ಚಿತ್ರ ಬಿಡಿಸುವ ಸಲುವಾಗಿ ಇವನಿಗೆ ಅಟ್ಟಣಿಗೆಯನ್ನು ಕಟ್ಟಿಕೊಟ್ಟರು (ಬಾಲಪ್ರ. I, ೩೯೭).
[ಸಂ. ಅಟ್ಟಾಲಿಕಾ. / ತುಳು. ಅಟ್ಟೊಳಿಗೆ]

**ಅಟ್ಟಳಿಸು** (ಕ್ರಿ). ಮೇಲಕ್ಕೆ ಹಬ್ಬು; ವ್ಯಾಪಿಸು: ಭೂರ್ಭುರ್ಭುಗಿಲೆಂಬಬ್ಬರವಿರದ[ದಿ ?]ಟ್ಟಳಿಸಲ್ಕಂಡೆಲೆಲೆಲೆ ಜಯಜಯತುಬುಬುಬೆಂದು ಗಣೇಶ್ವರರುಲಿಯೆ (ವೀರೇಚ. ೨-೩). [ಅಟ್ಟಳ$_1$ ? + -ಇಸು$_3$]

**ಅಟ್ಟಳೆ**, ಅಟ್ಟಣ, ಅಟ್ಟಣೆ$_1$, ಅಟ್ಟಲೆ, ಅಟ್ಟಳ$_1$ (ನಾ). ೧. ಕೋಟೆಯ ಮೇಲೆ ಯುದ್ಧಸಾಮಗ್ರಿಯನ್ನಿಟ್ಟುಕೊಳ್ಳುವುದಕ್ಕಾಗಿಯೂ ಕಾವಲುಗಾರರು ಇರುವುದಕ್ಕಾಗಿಯೂ ಕಟ್ಟಿರುವ ಕೊಠಡಿ; ಕೊತ್ತಳ; ಬುರುಜು: "ಅಟ್ಟಃ ಅಟ್ಟಾಲಕಃ -ಈ ೨ ಅಟ್ಟಳೆ" (ಹಲಾಯು. ೪೯-೧೩೯); "ಅಟ್ಟಾಳಮಟ್ಟಳೆಯೆನಿಕ್ಕು" (ಮಂಗರಾ. ೫೭-೫); ಪಾತಾಳತಳಮನೆಯ್ದಿದ ಖಾತಂ ಸುರಪುರಮನೆಯ್ದಿದಟ್ಟಳೆ ಪೆಂಪುದ್ಯೋತಿಸೆ ಪುರವಿಳಿಪುದು ಭೋಗಾತಿಶಯದ ಭೋಗವತಿಯನಮರಾವತಿಯಂ (ಅಜಿಪು. ೨-೧೬); ಅಟ್ಟಳೆಯೊ[ಪಾಠಾಂ. ಅಟ್ಟಣೆಯೊ]ಸುರರ ನಗರಕ್ಕೆ ದಾಳಿಡಲು ತಂದಿಟ್ಟ ನಿಚ್ಚಣಿಗೆಯೋ (ಹಚಕಾ. ೧-೩೭); ಅಗಳುಗಳಾಳುವೇರಿಗಳು ಡೆಂಕಣಿ ಅಟ್ಟಳೆ ಕೊತ್ತಳಂಗಳೊಡ್ಡುಗಳೊಳು ಕೋಂಟೆಯೆಂದೆನಿಸಿ (ಎಕ. XI, ಚಿತ್ರದು. ೨-೧೫; 1355); ಅಟ್ಟಳೆಯಲಿಟ್ಟಳಿಸಿದರು ಘನಶಾಲಾಸುವೀಥಿಯಲಿ (ತೊರರಾ, ೬-೧೧-೨); ಕೋಟೆಯ ನಾಲ್ಕೂ ಅಟ್ಟಳೆಗಳ ಮೇಲೆ (ಬೆಟ್ಟಅ. ೬೪-೮). **ಅಟ್ಟಣ**: ೧. ನಿಜಿ ಯುಡಿಗೆ ಸುತ್ತುಸುತ್ತಿನ ಕೋಟೆಗಳು ತೋರ ಪೊಱವಾಱಿ ಕೊತ್ತಳಂ ಪಱುಮೆಗಳೆಱಪ ಸೋಗೆದುಱುಬು ಮುಗಿಲಟ್ಟಣಂ ಮುಡಿದ ಹೊಂಗೇದಗೆಯ ಗಱಿಯೆಸಳೆ ಕೂರ್ದಸಿಗಳು (ಭಕ್ತಾಚ. ೨-೮); ಅಡಿಗಟ್ಟಣವೇಕೆ ಬೋಡಂಗೆ ಕಟ್ಟೇಕೆ ಕೋಡಗನ ಕೈಗೆ ಬಳೆಯೇಕೆ (ಸರ್ವಜ್ಞ. ೧೩೭೪). **ಅಟ್ಟಣೆ$_1$**: ೧. ಶಿವನಾಗಮುವೆ ನೆಗೆದ ಬಿರುದಿನಟ್ಟಣೆಯದಕೆ ಶಿವಪುರಾಣಂ ಸವೆದ ಬಾಗಿಲುಗಳಾ ಪುರಕೆ (ತಿರುರ. ೨); ಎಣಿಸಬಾರದ ವೃಷಭಕೇತನಂಗಳ ಅಟ್ಟಣೆ[ಪಾಠಾಂ. ವಟ್ಟಳೆ, ನಟ್ಟಲಿ]ಗಳ ಕೊತ್ತಳದೊತ್ತಿನ ಮಣಿಗಳಸ ಕೋಂಟೆಗಳ (ಸಿದ್ಧರಾ. ೧-೧೫); ಮುಗಿಲೆನಿಪಟ್ಟಣೆಯಿಂದಂ ಮುಗಿಲಂ ಮುಟ್ಟುವ ಪತಾಕೆಯಿಂ (ಜಗವಿ. ೨-೨೦); ಗೋಮೇಧಿಕದ ಮುಗಿಲಟ್ಟಣೆಯ ಸಾಲುಗಳ (ಕೋಗಯ. ೩-೬). ೨. (ಹಲಗೆ ಮೊದಲಾದವುಗಳಿಂದ ಮಾಡಿದ) ಎತ್ತರವಾದ ವೇದಿಕೆ: ಆನೆಗಳ ಮೇಲೆ ಕಟ್ಟಿದ ಅಟ್ಟಣೆಗಳ ಮೇಲೆ ಅಪ್ಸರೆಯರು ನರ್ತನ ಮಾಡಿದರು (ನಡೆದಾ. II, ೧೫೩೯). **ಅಟ್ಟಲೆ**: ೧. ಬಲವದ್ವಜ್ರಕವಾಟಮೆರ್ದೆಗಳ್ಕಾಟಂ ರಿಪುಶ್ರೇಣಿಗಟ್ಟಲೆ[ಗಳ್ ಸಾಲ್ವುದು] ವೈರಿವೀರರಸಮಂ ತೂಗಲ್ (ಪುಷ್ಪಪು. ೯-೨೬); ಅಟ್ಟಲೆಯೇಱಿ ಕಣ್ಮುಚ್ಚಲೆಯೊಳು ತಮ್ಮ ಮುಟ್ಟುವರೆಂದು ಮುಮ್ಮುಗಿಲ ನಟ್ಟನಡುವೆಯೊಲೆದಾಡುತಿಪ್ಪಾಗಸವಟ್ಟೆವೆಂಗಳ ತಂಡಮಿಹುದು (ಶ್ರೀಪಾಲ. ೧-೭೧). **ಅಟ್ಟಳ$_1$**: ೧. ದುರ್ಗದ ಅಟ್ಟಳಕೊತ್ತಲುಗಳಿಂದಲೂ (ಸುಗುಗಂ. ೧೧೬-೨೦).
[~ ಅಟ್ಟ$_1$. / ಸಂ. ಅಟ್ಟಾಲ]

**ಅಟ್ಟಾಗು** (ಕ್ರಿ). ಒತ್ತಾಗಿರು; ದಟ್ಟವಾಗಿರು: ಬಟ್ಟಲು ಪಿಡಿದು ಬಾಯಿ ಬಿಟ್ಟು ಕೇಳಿದರಿಲ್ಲ ಅಟ್ಟಾ[ಪಾಠಾಂ. ಕಟ್ಟಾ]ದಡವಿಯೊಳು ಕುಳಿತರು ಇಲ್ಲ, ಸೃಷ್ಟಿಯೊಳಗೆ ನಮ್ಮ ಪುರಂದರ ವಿಟ್ಠಲ ಕೊಟ್ಟವರಿಗುಂಟು ಕೊಡದವರಿಗಿಲ್ಲ (ಪುರಂದ. ೩-೧೬-೩). 'ಅಟ್ಟಡವಿ' ಪರಾ. [ಅಟ್ಟ$_2$ + ಆಗು$_1$]

**ಅಟ್ಟಾಟಿಕೆ$_1$** 'ಅಟ್ಟಟ್ಟಿಕೆ' ನೋ.

**ಅಟ್ಟಾಟಿಕೆ$_2$** (ನಾ). ಅಟ್ಟಿಕೊಂಡು ಹೋಗುವುದು; ಬೆನ್ನಟ್ಟುವುದು: ಅಟ್ಟಿತ್ತೊಂದು, ಓಡಿತ್ತೊಂದು, ಮುಟ್ಟಿ ಹಿಡಿಯಿತ್ತೊಂದು. ಅಟ್ಟಾಟಿಕೆಯಲ್ಲಿ ಅರಿದಾವುದು? (ಅವಚಂ. ೧೩-೫೪). [ಅಟ್ಟು$_2$+ ಆಟ + -ಇಕೆ$_2$]

**ಅಟ್ಟಾಡಿ** (ನಾ). ಅಡಿಗೆ ಮಾಡುವವಳು (?): ಅಟ್ಟಾಡಿ ಮುಂಡೆಯರ ಇಟ್ಟುಕೊಂಡಾಳುವರು ಕೇಡ ನೋಡಿ (ಕಾಲಸಂ. ೮೫-೪).
[ಅಟ್ಟು ('ಅಡು$_1$' ಇದರ ಭೂತನ್ಯೂನ ರೂಪ) + ಅಡು$_1$ + -ಇ$_2$]

**ಅಟ್ಟಾಯ** (ನಾ). ದುಡಿತದಿಂದ ಬಂದ ಆದಾಯ; ದುಡಿಮೆಯ ಪ್ರತಿಫಲ (ಸ್ಯಾಂಡರ್). [ಅಟ್ಟ$_3$ ? + ಆಯ$_4$]

**ಅಟ್ಟಾಲ**, ಅಟ್ಟಾಳ (ನಾ). ೧. ಕೊತ್ತಳ; ಬುರುಜು: ಆಕಾಶಾಂತಮನೆಯ್ದೆ ನೀಳ್ದ ವಿಕಟಾಟ್ಟಾಲಂಗಳೊಳ್ ಕೇತನಾನೀಕಂಗಳ್ (ಆದಿಪು. ೬-೧೦೪); ಎತ್ತುಗಲ್ ಪಿರಿಯ ಡೆಂಕಣಿ ಸೂಸುಡೆಂಕಣಿ ಸಮುತ್ತುಂಗಲಸಿತ ವಿಕಟಾಟ್ಟಾಲವಮರ್ದ ಕೈಗತ್ತರಿ (ಪದ್ಮರಾ. ೩-೨೧). **ಅಟ್ಟಾಳ**: ೧. "ಪುರಗೋಪುರಮುಕ್ಕು[ಮುಟ್ಟ]ಮಟ್ಟಾಳಾಖ್ಯಂ" (ವಸ್ತುಕೋ. ೪೭-೬); "ಅಟ್ಟಾಳಮಟ್ಟಳೆಯೆನಿಕ್ಕು" (ಮಂಗರಾ. ೫೭-೫); ಕಡೆಯಲೆಂದು ಪಾಲ್ಗಡಲೊಳ್ ತಂದಿರಿಸಿದ ಮಂದರಗಿರಿಗೇಂ ದೊರೆಯಾದುದೊ ಪೊನ್ನಕೋಂಟೆ ವಿಕಟಾಟ್ಟಾಳಂ (ಮಲ್ಲಿಪು. ೨-೫೧); ಅಟ್ಟಾಳಮಂ ಮೆಟ್ಟಿನೋೞ್ಪ ಲತಾತನ್ವಿಯರಂಬರೇಚರಿಯರೆಂಬಾಶಂಕೆಯಂ ಮಾಡಿದರ್ (ಪುಷ್ಪಪು. ೮-೪೭). ೨. ಮಾಳಿಗೆಯ ಮೇಲಿನ ಮನೆ; ಮಹಡಿ; ಉಪ್ಪರಿಗೆ: ನೆರೆದಟ್ಟಾಳಂಗಳೊಳ್ ನೋಡುವ ನಗರಜನಕ್ಕಾವಗಂ ಕೋಲನಾಂತಂ (ಚಂದ್ರಪು. ೫-೧೯). 'ಅಟ್ಟಳೆ' ಪರಾ.
[ಸಂ. / ತಮಿ. ಅಟ್ಟಾಣಿ, ಅಟ್ಟಾಲಂ, ಅಟ್ಟಾಲೈ; ತೆಲು.

ಆಟ್ಟಾಳಮು, ಅಟ್ಟಾಲಕಮು. ℙ ಇದು ಮೂಲತಃ ದ್ರಾವಿಡ ಶಬ್ದವಾಗಿರ ಬಹುದು. ~ 'ಅಟ್ಟ$_1$']

**ಅಟ್ಟಾಲಕ, ಅಟ್ಟಾಳಕ** (ನಾ). = ಅಟ್ಟಾಲ ೧ : ಅಲಂಘ್ಯಮುಮಭ್ರಂಕಷ ವಿವಿಧಾಟ್ಟಾಲಕಮುಮೆನಿಪ ಕನಕಪ್ರಾಕಾರದಿಂದೊಳಗೆ (ಪಂರಾಮಾ. ೧-೧೧೬ ವ). **ಅಟ್ಟಾಳಕ** : ತಜ್ಜನಪದಮಧ್ಯಂಗಳೊಳ್ ಪರಿಖಾವಪ್ರ ಪ್ರಾಕಾರಗೋಪುರಾಟ್ಟಾಳಕಾಳಂಕೃತಂಗಳಪ್ಪ ರಾಜಧಾನಿಗಳುಮಂ (ಆದಿಪು. ೮-೬೩ ವ) ; ಸುಕುಮಾರ ಗೃಹದ್ವಾರ ಗೋಪುರಾಟ್ಟಾಳಕ ಪ್ರಾಸಾದ ಕೂಟ ಕೋಟಿಗಳನೇಱಿ (ಸುಕುಮಾ. ೧೧-೭ ವ). [ಸಂ.]

**ಅಟ್ಟಾಲಿಕೆ** (ನಾ). ೧. = ಅಟ್ಟಾಲ ೧ : ನಾಲ್ಕು ದಿಕ್ಕುಗಳಲ್ಲಿಯೂ . . . ನಾಲ್ಕು ಅಟ್ಟಾಲಿಕೆಗಳಿಂದ ಆ ಮಂಟಪವು ಬಹು ರಮ್ಯವಾಗಿ ತೋರುತ್ತಿದ್ದಿತು (ಅಹಲ್ಯೋ. ೮೨). ೨. = ಅಟ್ಟಾಲ ೨ : ನಗರದ ಶ್ರೀಮಂತರು, ವಣಿಕ್‌ಶ್ರೇಷ್ಠರು, ಸರದಾರರು ಬಲಬೀದಿಯ ಆಟ್ಟಾಲಿಕೆಗಳಲ್ಲಿ ವಾಸ ಮಾಡುವರು (ರೂಲೇಖಾ. ೩೧). [ಸಂ. ಅಟ್ಟಾಲಿಕಾ]

**ಅಟ್ಟಾವಣೆ** 'ಅಟ್ಟವಣೆ' ನೋ.

**ಅಟ್ಟಾಸ** 'ಅಟ್ಟಸ' ನೋ.

**ಆಟ್ಟಾಸುರ** (ನಾ). ೧. ಅತಿಭಯಂಕರ ಸ್ಥಿತಿ : ಕಂದರ್ಪನೆಚ್ಚೆಚ್ಚೆಂತುಂ ಕೈವಾರದಟ್ಟಾಸುರವೆನೆ ಮುನಿದೆಚ್ಚಟ್ಟ (ಪಂರಾಮಾ. ೯-೮೪) ; ಈ ಸಮರ ಸನ್ನದ್ಧತೆಯ ಆಟ್ಟಾಸುರದ ಗಡಾವಣೆಗೆ (ಮಂತ್ರಶ. ೬೯-೮). ೨. ಅತಿಭಯಂಕರ ವ್ಯಕ್ತಿ : ಸ್ಥಿರಬದ್ಧಮತ್ಸರರ್ ಭೀಕರ ಬದ್ಧಭ್ರುಕುಟಿಘಟಿತ ರದ್ಭುತರಟ್ಟಾಸುರರ್ . . . ದೃಷ್ಟಿಯುದ್ಧಂಗೆಯ್ದರ್ (ಗದಾಯು. ೮-೨).

**ಆಟ್ಟಾಸುರಂ ಮಸಗು, ಆಟ್ಟಾಸುರಂ ಮಾಡು** = ಅತಿ ಭಯಂಕರವಾಗಿ ವಿಜೃಂಭಿಸು; ರೌದ್ರಾವೇಶವನ್ನು ತೋರು : ದೋಷಿಗಳ ಕಣ್ಗೆಯಟ್ಟಾಸುರಂ ಮಸಗಿದಂತಾಶಾಸಮೂಹವಂ ನುಂಗುವಂತೆ . . . ಮಿಾಸೆ ತಲೆನವಿರ್ಗಳತಿಭಯಮನುಗುಳೆ (ಸಾನಂಚ. ೫-೬) ; ಜೀವಿಸೆನಾನೆಂದು ನುಡಿಯಲಟ್ಟಾಸುರಂ ಮಾಡಿ ನಗುತಂ ಭಕ್ತನೊಡನೊಡನೆ ಕಟಕಿಗಳ ನಾಡುತಿರ್ದಂ (ರುದ್ರರ. ೫೮-೧೮). [ಅಟ್ಟ$_1$ + ಅಸುರ$_1$]

**ಅಟ್ಟಾಳ** 'ಅಟ್ಟಾಲ' ನೋ.

**ಅಟ್ಟಾಳಕ** 'ಅಟ್ಟಾಲಕ' ನೋ.

**ಅಟ್ಟಾಳು** (ನಾ). ೧. ಆಟ್ಟಿಸಿಕೊಂಡು ಬರುವ ಆಳು: ಐವರಟ್ಟಾಳುಗಳ ಯೌವನದ ಹಿಂಡುಗಳ ತವಕದಿ ಹೊಯ್ದು ನಿಂದಾತ ಜಗದೊಳಗೆ ದೈವ ತಾನಕ್ಕು (ಸರ್ವಜ್ಞ. ೩೦೬). ೨. ಆಳಿನ ಹಿಂದೆ ಕಳಿಸಿದ ಮತ್ತೊಬ್ಬ ಆಳು (ಸ್ಯಾಂಡರ್). [ಅಟ್ಟು$_2$ + ಆಳು$_2$ (< ಆಳ್$_2$)]

**ಅಟ್ಟಿಗ** (ನಾ). ೧. ಬೆಂಬತ್ತುವವನು; ಹಿಂಬಾಲಿಸುವವನು (ಸ್ಯಾಂಡರ್). ೨. ದನಗಳನ್ನು ಅಟ್ಟಿಕೊಂಡು ಹೋಗುವವನು (ಸ್ಯಾಂಡರ್). ೩. ಕಳಿಸಿಕೊಡುವವನು. (ಸ್ಯಾಂಡರ್). [ಅಟ್ಟು$_1$ + -ಇಗ]

**ಅಟ್ಟಿಗಾಲಿಗ** (ನಾ). ಅಗಸರವನು (ಕ). 'ಅಲ್ಲಿಗಾರಿಗ' ಪರಾ. [?]

**ಅಟ್ಟಿಗೆಮುಟ್ಟಿಗೆ** (ನಾ). ಒಂದು ಬಗೆಯ ಆಟ : ಮಳಲುಕುಪ್ಪೆ ಗುಬ್ಬಿ ಮನೆ ಕಣ್ಣುಮುಚ್ಚಣಿಕೆ ಬೆಳದಿಂಗಳ ಕುಪ್ಪೆ ಉಯ್ಯಾಲೆ ಜೋ ಜೋ ಆಳ ವಾಳಗೊಟ್ಟಿಗೆ ಅಟ್ಟಿಗೆಮುಟ್ಟಿಗೆ ಚಕ್ಕಳಗುಕ್ಕಳು ಗೋಲಿತೇವು(ವಿಸ್ತೋಸು. ೧೯-೩). 'ಅಂಟಿಗೆಪಂಟಿಗೆ', 'ತಟ್ಟಿಗೆಮುಟ್ಟಿಗೆ' ಪರಾ. [?]

**ಅಟ್ಟಿದಿರು** (ನಾ). ನೇರ ಎದುರು : ಬಂದು ಬಲಾಢ್ಯಕುಮಾರನಟ್ಟಿದಿರೊಳು ನಿಂದ ನಿಶಾಚರ ನಗುತೆ (ಮೋಹತ. ೩೪-೩೦). [ಅಟ್ಟ$_2$ ? + ಇದಿರು (< ಇದಿರ್)]

**ಅಟ್ಟಿಮಿಟ್ಟಿ** (ನಾ). (ಉಕ) ತಬ್ಬುವುದು; ಬಿಗಿಯಪ್ಪುವುದು ; ತೆಕ್ಕೆ.

**ಅಟ್ಟಿಮಿಟ್ಟಿಹಾಕು** = ತೆಕ್ಕೆ ಬೀಳು ; ಕೊರಳಿಗೆ ಅಟ್ಟಿಮಿಟ್ಟಿಹಾಕಿ ಪಾದಗಳ ಮೇಲೆ ಬೀಳುತ್ತಾನೆ (ಮುಂಬಯಿ. ೬-೨೧೮) ; ಮೋನಳು ತನ್ನ ಎರಡೂ ಕೈಗಳಿಂದ ಆವನ ಕೊರಳಿಗೆ ಆಟ್ಟಿಮಿಟ್ಟಿ ಹಾಕಿದವಳೆ, ಅವನಿಗೊಂದು ಮುದ್ದುಕೊಟ್ಟಳು (ಮುಳ್ಳುಬೇ. ೭). [?]

**ಅಟ್ಟಿಯ** (ನಾ). (?) : ಲೋಕಾದಿತ್ಯ ಅರಸರ್ಕ್ಕದಮ್ಬು × × ಎತ್ತಿಸಿದಟ್ಟಿಯಮಿದರ್ಕ್ಕೆ ಕೊಟ್ಟವಿರ್ಕ್ಕಟಿನಿ ಕಣ್ಡುಗಂ (ಎಕ. X, ಕೋಲಾರ. ೮-೬ ; ಸು. 753). [?]

**ಅಟ್ಟಿಲು** (ನಾ). (ಕರಾ) ಅಡಿಗೆ ; ಪಾಕ. [← ತುಳು. / ತಮಿ. ಅಟ್ಟಿಲ್ = ಆಡಿಗೆ ಮನೆ]

**ಅಟ್ಟಿಸು$_1$** (ಕ್ರಿ). ಹಿಡಿ (?) : ಪಂದಿವೇಂಟೆಯ ನಾಯೆಂತಪ್ಪುವೆಂದೊಡೆ . . . ಮನ್ನೆಯರಾಳಂತೆ ಕಾದಿಯಲಸದೆ ಸೂಳೆಯಂತೆ ಕೋಳಂ ಪಟ್ಟಟ್ಟಿ[ಪಾಠಾಂ. ಕೋಳಂಪತ್ತಿ, ಕೋಡಂಪಟ್ಟಿ, ಕೋಳಂಪಟ್ಟಲೀ]ಸದೆ ತಕ್ಕನಂತೆ ನಂಬಿಸಿಯುಂ (ಪಂಪಭಾ. ೫-೪೬ ವ).

**ಅಟ್ಟಿಸಿಕೊ** = ೧. ಸ್ವಾಧೀನಪಡಿಸಿಕೊ ; ವಶಪಡಿಸಿಕೊ : ಪುಂಡು ಸಾವಂತನನ್ನು ಗೋವೆ ಸರಕಾರದವರು ಅಟ್ಟಿಸಿಕೊಂಡರು (ಕ). ೨. ಪಡೆ ; ಸಂಪಾದಿಸು : ದೊಡ್ಡ ವ್ಯವಹಾರ ದೊಡ್ಡ ಮೊಬಲಗನ್ನು ಅಟ್ಟಿಸಿಕೊಳ್ಳುವುದು (ಜಯಂತ. ೩೯). **ಅಟ್ಟಿಸಿಕೊಂಡು ಹೋಗು** = ಬೆನ್ನಟ್ಟಿ ಹೋಗು : ಕಾವಲುಗಾರನು ಕಳ್ಳನನ್ನು ಬಹುದೂರದ ವರೆಗೂ ಅಟ್ಟಿಸಿಕೊಂಡು ಹೋದನು (ರೂಢಿ). [ಅಟ್ಟು$_1$ + -ಇಸು$_3$]

**ಅಟ್ಟಿಸು$_2$** (ಕ್ರಿ). ಕಳಿಸಿಕೊಡು : ಲೇಸಾಗಿ ಬೆಂದ ಬಾಡಂ ಬಾಸಣಿಸಿಟ್ಟು ದನೆಯಮೃತಮತಿಗಟ್ಟಿಸಿದಂ (ಯಶೋಚ. ೩-೭೦). [ಅಟ್ಟು$_2$ + -ಇಸು$_3$]

**ಅಟ್ಟಿಸು$_3$** (ಕ್ರಿ). ೧. ಬತ್ತು ; ಒಣಗು ; (ನೀರು) ಇಂಗು : ಹಾಲಗೆರೆ ಅಟ್ಟಿಸಿತೆಂದರೆ ಊರೊಳಗಿನ ಬಾವಿಗಳೆಲ್ಲ ಬಹುತರವೊಣಗುತ್ತವೆ (ಕಭಾಗೆ. ೪೫೫) ; ಭೂಮಿಯ ಮೇಲಿನ ನೀರು ದಿನದಿನಕ್ಕೆ ಕಡಿಮೆಯಾಗುತ್ತ ಹೋಗುವದು ; ಸಮುದ್ರಗಳು ಅಟ್ಟಿಸುತ್ತ ಹೋಗುವವು ; ಸರೋವರಗಳೂ ಹೊಳೆಗಳೂ ಒಣಗಿಹೋಗುವವು (ಮುಂಬಯಿ. ೬-೧೬೬). ೨. ಕಾಯಿಸು ; ಕುದಿಸು ; ಕುದಿಸಿ ಇಂಗಿಸು : ವಿಕ್ರಮಾರ್ಕನು ಹಸಿದಿದ್ದಾನೆ, ಆತನಿಗೆ ಆಟ್ಟಿಸಿದ ಹಾಲುಕೊಡು (ಪದ್ಮನ. ೧೦೯) ; ಹೃದಯದಲ್ಲಿ ಒಂದು ಬಗೆಯ ಉತ್ತಪ್ತಜ್ವಾಲೆಯು ಎದ್ದು ನಾಲ್ಕೂ ಮೂಲೆಗಳನ್ನು ಸುತ್ತಿ ಸೀಕರಿಯುವಂತೆ ವ್ಯಥೆಯಾಯಿತು. ಶರೀರದ ಮಾಂಸವೆಲ್ಲ ಅಟ್ಟಿಸಿದಂತೆ ಭಾಸವಾಯಿತು (ಜಯಂತ. ೩೨೨).

**ಅಟ್ಟಿಸಿಕೊ** = ಒಣಗಿಸಿಕೊ ; ಸೊರಗಿಸಿಕೊ : ಅರಬನು ಕುದುರೆಯ ಕಡೆಗೆ ನೋಡಿ –ನಿನ್ನನ್ನು ನಾನು ಇಂದಿನ ತನಕ ಜೀವಾ ಅಟ್ಟಿಸಿಕೊಂಡು ಜೋಪಾನ ಮಾಡಿ, ಈಗ ಎರಡನೆಯವರ ಕೈಯೊಳಗೆ ಹ್ಯಾಗೆ ಕೊಡಲಿ ! (ಮುಂಬಯಿ. ೨-೪೨). [ಅಟ್ಟು$_3$ + -ಇಸು$_3$]

**ಅಟ್ಟು$_1$** (ಕ್ರಿ). ಅಂಟು ; ಅಂಟಿಕೊ : ನೂಂಕೆ ಬೇಟಕಾಜನ ಮನವಟ್ಟಿ ಪತ್ತುವುದು ಬೇಟವಿದೇಂ ವಿಪರೀತವೃತ್ತಿಯೋ (ಪಂಪಭಾ. ೪-೧೦೩) ; ಕಾಡ ಪಂದಿಗಳ ಬಲ್ಕಣದಿಂ ಪೊಲಸಟ್ಟಿನಾರ್ವ ಜೀವಡೆಗಳ ಪುಣ್ಗಳಿಂ ತೊರೆವ ನೆತ್ತರ ಕಯ್ ನಡುಗಲ್ಕೆ (ಕಾದಂಪೂ. ೧೮೪) ; ಲಲನೆಯರೊಲ್ಲದೊಡಂ ಸಿರಿ ತೊಲಗಿದೊಡಂ ಪೋಗದಟ್ಟಿ ಕುತ್ತಂ ತನ್ನೊಳ್ ನೆಲಸಿದೊಡ ಮಂತು ಮುನ್ನಿನ ಕೊಲೆಯಲೆದಪುದು (ಧರ್ಮಾಮೃ. ೬-೧೩೭) ; ನರಗೆ ಬಂದಟ್ಟಿದ ವ್ಯಾಧಿಯು ನಿಲಲುಂಟೆ (ಮೋಕ್ಷದೀ. ೨).

**ಅಟ್ಟಿ ಕೊಟಿ ನಾಱು** = (ಎಲ್ಲ ಕಡೆಯೂ ವ್ಯಾಪಿಸಿ) ಸಹಿಸದಷ್ಟು ದುರ್ವಾಸನೆ ಬೀರು : ಜಲಧಿಯೊಳು ಕಪ್ಪೆ ಸತ್ತೊಡೆ ಜಲಧಿಯ ನೀರೆಲ್ಲ ಮುಟ್ಟಿ ಕೊಟಿ ನಾರ್ಪುದೆ (ಧರ್ಮಾಮೃ. ೬-೨೪೦).

[ದೇ. ‖ ತಮಿ. ಅಟ್ಟು ; ಕೋಲಾ. ಅಟ್ ; ನಾಯ್ಕಿ. ಅಟ್. ℙ ಅಟ್ಟು$_1$ > ಅಂಟು$_1$ ?]

**ಅಟ್ಟು$_{2}$** (ಕ್ರಿ). ೧. ಬೆನ್ನುಹತ್ತಿ ಹೋಗು ; ಬೆಂಬತ್ತು : "ಅಟ್ಟು –ಅನುಧಾವನೇ" (ಶಮಧಾ) ; ದೊನ್ನಮಾರನ್ ಚೋೞದ ನಚ್ಚಿಯ ನ್ನೊಳ್ಗೊಟ್ಟು ಪನ್ನಿರ್ವ್ವರ ದಣ್ಡು × × × × ವೋದಟ್ಟಿ ರಟ್ಟವಾಡಿಯ ಬೆಸವೆತ್ತು (ಎಕ. X, ಗೋರಿಬಿ. ೭೬–೩ ; ಸು. 750) ; ಕದಿ[ ಡಿ ]ತಲೆಯಿಂ ದಟ್ಟಿ ನಾಲ್ವರಾನಿಱಿದೊನ್ (ಸೌಇಇ. IX–i ; ೫–೧೨ ; 900) ; ಎಚ್ಚ ರಂಬನಂಬಟ್ಟುವಿನಂ (ಪಂಪಭಾ. ೧೦–೭೪) ; ಬೇಡನೊಂದು ಪುಲಿ ತನ್ನ ನಟ್ಟಿ ವರೆ ಪ್ರಾಣಭಯದಿಂ ದೆಸೆಗಾಣದೆ ಪುರಾಣಕೂಪದೊಳ್ ಬಿರ್ದ್ದಂ (ಪಂಚತಂ. ೧೦೮–೧೫) ; ಎಡಱಿದರನಟ್ಟಿ ಮೋದುವ ಪಡಿಯಱಗಟ್ಟಿಗೆ ಗಳ್ (ಶಮದ. ೮ ಪ್ರಯೋ). ೨. ಓಡಿಸು ; ಹೊರಕ್ಕೆ ನೂಕು ; ಬಲಾ ತ್ಕಾರದಿಂದ ಕಳಿಸು : ಮನೆಯಿಂ ಪೆಂಡಿತಿಯನಟ್ಟಿ ಕಳೆದೊಡೆ (ವಡ್ಡಾರಾ. ೭೭–೧೬); ಕೂಗಿಡುವ ಮರುಳ್ ಮರುಳ್ಪಡೆಯನಟ್ಟುವ ಸಿದ್ಧಗಣಂ (ಎಕ. VIII, ಸೊರಬ. ೧೮೪–೧೦ ; 1033 ?) ; ಕೞ್ತಲೆಯನಟ್ಟುವುದಯಾದಿತ್ಯ ಪ್ರಕಾಶದಂದದಿನಟ್ಟಿ ಮುಟ್ಟಿ (ವರ್ಧಪು. ೨–೪೮ ವ) ; ಮುಂದೆ ಕಟ್ಟುವ ರಟ್ಟಿದರೆ ಮುರಿವಿಂದ ಜಾಱುವರು (ಕುವ್ಯಾದ್ರೋ. ೩–೩೦) ; ಸಂದೇಹವ ನಟ್ಟಿದಳಿನಿತಿಲ್ಲದಂತೆ (ಮೋಹತ. ೨೯–೬) ; ವೇಣಕ್ಕನ ಬಿನ್ನಹವನ್ನು ಲೆಕ್ಕಿ ಸದೆ ಅವನನ್ನು ದೇಸಗತಿಯ ಹಳ್ಳಿಗೆ ಅಟ್ಟಿದರು (ಗಂಮಾಯಿ. ೭೩). ೩. ಕಳಿಸು ; (ದೂತನನ್ನು) ಕಳಿಸಿಕೊಡು : ನೆಕ್ಕುನ್ದಿನಾಡನಿಱಿಯಿ ಮೆನ್ದು ಆಟ್ಟಿ ಬಾಣರಸರಾ ದಣ್ಡು (ಎಕ. X, ಕೋಲಾರ. ೨೦೦–೭; 890) ; ಪರಚಕ್ರಭೂಪರಟ್ಟಿದ ಕರಿಗಳ್ ಬಿಡುತರ್ಪ ಮದದ ಪೊನಲಿಂದೆತ್ತಂ (ಕವಿರಾ. ೩–೧೮೧) ; ಆಟ್ಟಲೆವೇೞ್ದನವರ್ಗೆ ಶಾಸನಹರರಂ (ಆದಿಪು. ೧೪–೩೦) ; ಅನ್ಯನಾರಿಗೆರೆದಟ್ಟಿದಡಂ . . . ಕಿಡುಗುಂ ಕುಲಕ್ರಮಂ (ಎಕ. VII, ಶಿವಮೊ. ೪–೩೨ ; 1122) ; ಸಸಿಯಟ್ಟಿದ ಪೂವಂ ಮುಡಿ (ಕಬ್ಬಿಕಾ. ೪೩) ; ಬೊಪ್ಪನವರಟ್ಟಿದರೆ ಶಿವ ಶಿವ ತಪ್ಪ ನೆನೆವರೆ ಭೀಮ ಸೈರಿಸು (ಕುವ್ಯಾಸ. ೧೬–೩೨); ದೂತನನಟ್ಟಿದ ವಿಜಯಾಪುರವರ ಭೂತಳೇಶನ ಬಳಿ ಗಾಗ (ಕಂನವಿ. ೧೧–೨); ರಾಜಕುಮಾರನನ್ನು ಹಿಡಿದು ತರಲು ಸೈನಿಕರನ್ನು ಗೋಪುರಕ್ಕೆ ಅಟ್ಟಿದನು (ಮಣಿಸ. ೪೬). ೪. ಮುಂದಕ್ಕೆ ಚಾಚು, — ನೀಡು : ಕಿವಿಗಳನೊತ್ತಲ್ ರಕ್ತಂ ಬರುಹ, ಕಣ್ಗಳ್ ಚೆನ್ನಾಗಿ ತೋಱುಹ, ನೀರಂ ಕುಡಿವಾಗಳ್ ಮುಸುಡ ಅಟ್ಟಿ ನೀರ್ಕುಡಿಹ (ಲೋಕೋಪ. ೧೧–೭೫ ಟೀಕು). ೫. ಎರೆ ; ಹೊಯ್ಯಿ ; ಬಡಿಸು : ಹಾಲನಟ್ಟಿ ಹಾವ ಸಲಹಿ ದಲ್ಲಿ ಅದು ತನ್ನಯ ಉಚಿತಕೆ ಹಾಳಾಹಳವ ಬಿಟ್ಟಿತ್ತೆ (ಬಾಬೊಮ್ಮ. ೨೭) ; ಆರೋಗಿಸುವ ಬುದ್ಧಿ ಹುಟ್ಟದೋ ಸೀಯಿತ್ತೊ ತುಪ್ಪವನಟ್ಟಿ ನೆಂದೋ ಕುಡಿಯಲಱಿಯೋ (ಬಸಪು. ೧೪–೯). 'ಅಟ್ಟುಂಬರಿ$_{1}$', 'ಅಱಿಯಟ್ಟು', 'ಎೞ್ಬಟ್ಟು', 'ಬೆನ್ನಟ್ಟು' ಪರಾ.

**ಅಟ್ಟಿಡರ್** = "ಸಾಹಸದಿಂದ ಮೇಲಕ್ಕೆ ಹತ್ತು" (ಪ್ರಭಣ್ಣ) : ನೆಟ್ಟ ನಿನಿಸಂ ಪಿಂಮೆಟ್ಟಿ ದೞವಟ್ಟಿಡರೆಯಟ್ಟಳಿವರಂ ಕೈಗೊಟ್ಟು ಪುಯಿಲಿಟ್ಟರೆನೆ (ಚಿಕವಿ. ೨–೪೩). **ಅಟ್ಟಾಡು** = ಗದರಿಸಿ ಮಾತಾಡು : ಸಿಟ್ಟನಿಂ ತನ್ನ ಮೊಲೆಪಾಲ ತಾಂ ಪೀರ್ದಪುದು ಕೆಟ್ಟಗುಣಮಿದರಲ್ಲಿ ಜನಿಸಿತೆಂದಟ್ಟಾ ಡುತಂ (ಸಿದ್ಧಕಾ. ೬–೧೧). **ಅಟ್ಟಿಕೊ, ಅಟ್ಟಿಕೊಳ್** = ೧. ನಡಸು ; ಹೊಡೆದುಕೊಂಡು ಹೋಗು : ಪೊೞಲಿಂ ಬಂಡಿಯನಟ್ಟಿಕೊಂಡು ರಕ್ಕಸನಿರ್ದೆಡೆಗೆಯ್ತಂದು (ಪಂಪಭಾ. ೩–೨೭ ವ) ; ಆಳು ದನಗಳನ್ನು ಮೇಯಿಸಲು ಬೆಳಗ್ಗೆ ಕಾಡಿಗೆ ಅಟ್ಟಿಕೊಂಡು ಹೋಗಿ ಸಂಜೆ ಮನೆಗೆ ಅಟ್ಟಿ ಕೊಂಡು ಬರುತ್ತಾನೆ (ರೂಢಿ). ೨. ಗದರಿಸಿ ಗಟ್ಟಿಯಾಗಿ ಮಾತಾಡು : ಧೃತರಾಷ್ಟ್ರನು ಕರ್ಣನನ್ನು ಅಟ್ಟಿಕೊಂಡು ಭೀಷ್ಮನನ್ನು . . . ಸಂತವಿಟ್ಟು (ಕೃವಾಲು. ೨೬) ; ಮಗುವನ್ನು ಹಾಗೆ ಅಟ್ಟಿಕೊಳ್ಳಬೇಡ, ನಿದ್ದೆ ಮಾಡು ವಾಗ ಬೆಚ್ಚುತ್ತದೆ (ರೂಢಿ). **ಅಟ್ಟಿ ತಿನ್** = ಬೆನ್ನಟ್ಟಿ ಹಿಂಸಿಸು, — ಪೀಡಿಸು : ಮಗಳೇ ನೀನಿಲ್ಲದೆ ಮನೆ ಬಗೆವಂದೆನಗಟ್ಟಿ ತಿಂಬ ಪೞುವಾ ದುದು (ಧರ್ಮಾಮೃ. ೩–೨೪೩) ; ಚೇರರನಟ್ಟಿ ತಿಂಬ ಮಾಕಾಳಿ . . . ವೀರ ವಿಷ್ಣುಭೂಪಾಳಕಂ (ಎಕ. VII, ಶಿವಮೊ. ೫–೭ ; 1218). **ಅಟ್ಟಿದ ಕಾರ್ಯ** = ಹೇಳಿಕಳಿಸಿದ ಕೆಲಸ : ಸಾಳುವನರಸಿಂಗಯ್ಯದೇವ ಮಹಾ ಅರಸುಗಳು ತಿರುಪತಿಯ ಸ್ತಾನಿಕರಿಗೆ ಅಟ್ಟಿದ ಕಾರ್ಯ (ಸೌಇಇ. IX–ii, ೪೬೨–೧ ; 1467). **ಅಟ್ಟಿಯಾಡು** = ವಿಶ್ರಾಂತಿಗೆ ಅವಕಾಶವಿಲ್ಲದಂತೆ ಬೆನ್ನುಹತ್ತು : ಚಲದಂಕಮಲ್ಲನ ರಣರಂಗದೆಡೆಯಲ್ಲಿ ನಿಲಲೀಯದಟ್ಟಿ ಯಾಡಿದನು (ಮೋಹತ. ೧೨–೬೫). **ಅಟ್ಟಿಹರಿ** = ಮೇಲೆಬಿದ್ದು ಗದ ರಿಸು : ಮಾತು ಮನೆ ಕೆಡಿಸಿತು ತೂತು ಒಲೆ ಕೆಡಿಸಿತು ಎಂತ ಗಾದೆ ಹೇಳುತಾರೆ, ಹೀಗೆಲ್ಲಾ ಎನ್ನುತಾ ಬಂದ ಹೆಂಗಸರನ್ನು ಅಟ್ಟಿಹರಿಯುತಾ ಇದ್ದಳು (ಅದೂಟ. ೯೬). **ಅಟ್ಟಿಹಾಕು** = ಕಳಿಸಿಕೊಡು : ಮೇಲಧಿಕಾರಿ ಗಳು ಸ್ಥಳನಿವಾಸಿಗಳ ಮನೆಗಳಿಗೆ ತಮ್ಮ ಜನಗಳನ್ನು ಊಟಕ್ಕಾಗಿ ಹಂಚಿ ಹಂಚಿ ಅಟ್ಟಿಹಾಕಿದರು (ಮೊಪಾಸಾ. ೧೬). **ಅಟ್ಟಿಱು** = ಬೆನ್ನಟ್ಟಿ ಬಂದು ಇರಿ, —ಹೊಡೆ : ನೀನಿರಾನೆ ರಿಪುಸೇನೆಗೆ ಸಾಲ್ವೆನವುಂಕಿ ಪೇಡಿ ಪಾಡಿ ಗಟ್ಟಿಱೆ[ಪಾಠಾಂ. ಪೇಡೆನನಿಟ್ಟೊಱೆ]ವೆಡೆಗೈಯ ಕೈಯುಗುರೆ ಸಾಲದೆ (ಕಾವ್ಯಸಾ. ೪೧೧; ಶೂದ್ರಕ) ; ಮೆಟ್ಟಿದ ಕಾಲ್ದೊಡಕಿನ ಕರುಳ್ಗಳ ಕಿಗ್ಗಟ್ಟಿನ ಸುರಗಿಯೊಳ್ ಕೊಱೆದು ಅಟ್ಟಿಱಿಯಲ್ಕೆ ಬಪ್ಪುದ ಕಂಡು ತಲೆಗಳ ಕುಟ್ಟಿ ಕಳುಹಿದನು ಕುಮರ (ಮೋಹತ. ೩೫–೧೫). [ದೇ. ~ ? ಅಟ್ಟು$_{1}$]

**ಅಟ್ಟು$_{3}$** (ಕ್ರಿ). ೧. ಅಡಿಗೆ ಮಾಡು : ಅಟ್ಟುವ ಬ್ರಾಹ್ಮಣ ೧ ಉಂಬ ಬ್ರಾಹ್ಮರ ಜನ ೧೦ (ಸೌಇಇ. IX–ii, ೪೫೧–೯ ; 1447). ೨. (ಉಕ) ಇಂಗು ; ಕುದಿದು ಗಟ್ಟಿಯಾಗು. ೩. ಕೃಶವಾಗು ; ನವೆದು ಹೋಗು (ಕಿ). [< ಆಡು$_{1}$]

**ಅಟ್ಟು$_{4}$** (ನಾ). ೧. ಅಟ್ಟುವಿಕೆ ; ಕಳಿಸುವಿಕೆ ; ದೌತ್ಯ : ದೊಡ್ಡೊ ಡೆಯ ತನ್ನಯ ಮಂತ್ರಿ ಸಖರ ಬಡತಾವಿಗಟ್ಟನಟ್ಟಿದರೇನು ನಮ್ಮ ಚಿಕ್ಕೊಡೆಯನಲ್ಲಿಗೆ ಬಂದೆವೆಂದ (ಭರಚ. ೪೮–೪೭). 'ಅಟ್ಟಟ್ಟಿ' ಪರಾ. ೨. ಬೆನ್ನಟ್ಟುವಿಕೆ ; ಬಾಧೆ ; ಕೋಟಲೆ : 'ಅಟ್ಟುಗೊಳ್ಳು', 'ಅಟ್ಟುಪಡು', 'ಅಟ್ಟುಪೆಱು' ಪರಾ. [< ಅಟ್ಟು$_{2}$]

**ಅಟ್ಟು$_{5}$** (ನಾ). ೧. ಮೇಲುಭಾಗದ ಬಡು, —ನೆಲೆ : ಅವಱ ಮೇಗಣಟ್ಟುಗಳೊಳಿಟ್ಟ ಜೇನಪುಟ್ಟಿಗಳನನುಕರಿಸುವತಿರೌದ್ರಬೀಭತ್ಸಕುತ್ಸಿ ತೋತ್ಪತ್ತಿಸ್ಥಾನಂಗಳೊಳ್ (ಆದಿಪು. ೫–೮೩ ವ) ; ನರಕಬಿಲಂಗಳಂ ಮೇಗಳಟ್ಟು[ಪಾಠಾಂ. ಳೊಟ್ಟು]ಗಳೊಳಿಟ್ಟ ಜೇನ ಪುಟ್ಟಿಗಳುಮಂ (ಅಜಿಪು. ೧೧–೭ ವ) ; ಅಟ್ಟಿ ನಾಱುತಿರ್ಪಟ್ಟುಗಳಲ್ಲಿ ಪುಟ್ಟಿ (ಪಾರ್ಶ್ವಪು. ೬–೮೨). ೨. ಅಟ್ಟಣೆ ; ಅಟ್ಟಲು : ಬಯಲಾಟಕ್ಕೆ ಆಟ್ಟು ಕಟ್ಟಿದ್ದಾರೆ (ರೂಢಿ). [< ಅಟ್ಟ$_{1}$]

**ಅಟ್ಟು$_{6}$** (ನಾ). ಧಾನ್ಯದ ಹೊಟ್ಟನ್ನು ಬಿಡಿಸುವ, ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸಬಹುದಾದ, ಸಲಕರಣೆ (ಗ್ಯಾರೆಟ್). [?]

**ಅಟ್ಟುಂಗರೆ** (ನಾ). ಅಡಗಿಕೊಂಡು ಕೂಗುವವರನ್ನು ಅಟ್ಟಿ ಹಿಡಿ ಯುವ ಒಂದು ಆಟ (?) : ಪರಿವರಿ ಪಾಱುಂಬಳೆ ಮರಗೆರಸಿ ಕುಳಿ ಲ್ಸೆಂಡು ಬಟ್ಟು ತಿಱಿಕಲ್ಲಟ್ಟುಂಗರೆ ಹೊಣೆಗುಂಡೆಂಬಿವನಾ ಮುರಹರ ನಲ್ಲಲ್ಲಿ ಗಾಡುತುಂ ಬರಲಿದಿರೊಳ್ (ಜಗವಿ. ೪–೪೪). [ಅಟ್ಟು$_{2}$ + ಕರೆ$_{1}$]

**ಅಟ್ಟುಂಗಾಳೆ** (ನಾ). ಮುನ್ನುಗ್ಗುವ ಸೂಚನೆಯನ್ನು ಕೊಡುವ ಕಹಳೆ: ಬೊಂಬುಳಿಯಟ್ಟುಂಗಾಳೆಯ ತಿತ್ತಿರಿಗಾಳೆಗಳ ಕೋಳಾಹಳಮೆತ್ತಂ ತೀವುತ್ತಿರೆ (ಕುಮುರಾ. ೮–೩೭). [ಅಟ್ಟು$_{2}$ + ಕಾಳೆ (< ಕಹಳೆ)]

**ಅಟ್ಟುಂಜಗಳ** (ನಾ). ಬೆನ್ನಟ್ಟಿಹೋಗಿ ಮಾಡುವ ಜಗಳ (?) : ಜಕಾರಕ್ಕೆ– ತೂಗುಂಜೊಡರ್, ಅಟ್ಟುಂಜಗಳಂ (ಶಮದ. ೧೭೦ ಪ್ರಯೋ). [ಅಟ್ಟು$_{2}$ + ಜಗಳ]

**ಅಟ್ಟುಂಬರಿ$_{1}$** (ಕ್ರಿ). ಅಟ್ಟಿಸಿಕೊಂಡು ಹೋಗು ; ಬೆನ್ನಟ್ಟಿ ಹೋಗು :

ಹಂಸೆ ಹಂಸೆಗಟ್ಟುಂಬರಿವವೊಲು ಪದಪದಂ ಮೆಱೆಯೆ ಚಿಟ್ಟುಮುರಿಯಾಡುತಿರ್ದರು ಸತಿಯರು (ಹಚಕಾ. ೪–೧೦); ಅವಿಶ್ರಾಂತವಾಗಿ ನಡೆದು – ಪ್ಲುತಗತಿಯಿಂದಲೇ ಅಟ್ಟುಂಬರಿದು ಅತನನ್ನು ಸಾಧ್ಯವಾದರೆ ಸಜೀವವಾಗಿಯೇ ಕೈಸೆರೆಗೊಂಡು ತಂದು (ಚಿಟ್ಟಆ. ೨೧೯–೧೬).

[ಅಟ್ಟು$_2$ + ಪರಿ$_1$]

**ಅಟ್ಟುಂಬರಿ$_2$** (ನಾ). ಬೆನ್ನಟ್ಟಿಹೋಗುವುದು: "ಅಟ್ಟುಂಬಱಿ[ರಿ]ಯೆನೆ ಬಱಿವಱಿವೋಪುದು" (ಕವಿಕಂ. ೨೨೬); ಚುಂಬನಮುಪ್ಪು ಚಪ್ಪರಣೆ ಬೇಡುವ ಬಕ್ಕುಡಿ ಕಾಯ್ದು ಕೂಡುವಟ್ಟುಂಬರಿಯೆಂಬಿವಾಗೆ . . . ಕೊಂಡಳನಂಗಸೌಖ್ಯಮಂ (ಅರ್ಧನೇ. ೫–೭೧); ತಡೆಯದಿದಿರಿದಿರೊಡ್ಡೆ ಬಲವೆರಸೊಡನೆ ಕಾದಿದುದು ಮಿಗೆ ಸಿಡಿಸಿಡಿದು ತಲೆಗಳು ನಭದೊಳಟ್ಟುಂಬರಿಯನಾಡುತಿರೆ (ಸಾಳ್ವಭಾ. ೧೩–೨). [< ಅಟ್ಟುಂಬರಿ$_1$]

**ಅಟ್ಟುಂಬರಿಗೊಳ್** (ಕ್ರಿ). ೧. ಬೆನ್ನಟ್ಟಿ ಓಡಿಸಿಕೊಂಡು ಹೋಗು; ತೊಲಗಿಸು: ಅಟ್ಟವಿಧ ಕರ್ಮಮೆಲ್ಲಮನಟ್ಟು[ಂ]ಬರಿಗೊಂಡು ಕೊಡಿಪೆ [ನೆಂ]ಬುದೆ ಬಗೆಯಿಂ (ಎಇ. X, ೧೫೨–೪೫; 915); ಕಾಮುನಂಬಂಬನಟ್ಟುಂಬರಿಗೊಂಡೆಟ್ಟಿಟ್ಟತೋ (ಜಗವಿ. ೧೦–೭೮). ೨. ಮೀರಿಸು: ಬಟ್ಟಗೊಡೆ ಚಂದ್ರಕಾಂತಿಯನಟ್ಟುಂಬರಿಗೊಳೆ (ಪಂಪಭಾ. ೬–೯).

[ಅಟ್ಟುಂಬರಿ$_2$ + ಕೊಳ್]

**ಅಟ್ಟುಂಬರಿವರಿ** (ಕ್ರಿ). ರಭಸದಿಂದ ಮುಂದೆ ನುಗ್ಗು; ನಿಲ್ಲದಂತೆ ಓಡು: ಸದ್ಧರ್ಮಪೀಯೂಷ ಮಹಾಪ್ರವಾಹಂ . . . ಕಳಿಂಗಮಂಡಲದೊಳ್ ಮಡುಗಟ್ಟಿ ನಿಂದು ಮಹಾರಾಷ್ಟ್ರಮಂಡಳದೊಳಟ್ಟುಂಬರಿವರಿದು ಮಳಯಮಂಡಲದೊಳ್ ವೇಳೆಗೊಂಡು ನೆಲಸಿ (ಅನಂಪು. ೧೪–೪೭ ವ).

[ಅಟ್ಟುಂಬರಿ$_2$ + ಪರಿ$_1$]

**ಅಟ್ಟುಂಬಱಿ** (ನಾ). ಹಿಂಬಾಲಿಸಿ ಹೋಗುವುದು: "ಅಟ್ಟುಂಬಱಿಯೆಂದು ಬಱಿವಱಿ[ಯೊಳ್ ಪೋಪುದು]" (ಕಶಸಾ. ೨೭–೫೬೩). P "ಅಟ್ಟುಂಬಲಿಯೆನಲ್ಕೆ ಬಳಿವಲಿಯ ಪೆಸರು" (ಶಬ್ದಮಂ. ೬೨); "ಅಟ್ಟುಂಬಲಿಯೆನಲ್ಕೆ ಬಳಿವಳಿಯೊಳೆಯ್ದಿ ಪೋಪುದು" (ಕಬ್ಬಿಕೈ. ೫೭) – ಈ ಕಡೆಗಳಲ್ಲಿ ಈ ಶಬ್ದದ ಅಪಲಿಖಿತ ರೂಪಗಳು ಬಂದಿವೆ. ಅಟ್ಟುಂಬಱಿ ಎಂಬುದೂ ಅಟ್ಟುಂಬರಿ ಎಂಬುದರ ತಪ್ಪುರೂಪವಾಗಿರಬಹುದು. 'ಅಟ್ಟುಂಬರಿ$_2$' ಪರಾ. [ಅಟ್ಟು$_2$ + ಬಱಿ$_2$ ?]

**ಅಟ್ಟುಂಬೆಸ** (ನಾ). ಹೇಳಿಕಳಿಸಿ ಮಾಡಿಸುವ ಕೆಲಸ, —ಸೇವೆ: ದೇವವಾರವಧೂವರ್ಗದ ಮೆಚ್ಚಿ ಮೆಚ್ಚಿ ಬೆಸಕೆಯ್ವಟ್ಟುಂಬೆಸಂ . . . ಮುದಮಂ ತಂದೀಯೆ (ಅನಂಪು. ೮–೧೩೪). [ಅಟ್ಟು$_2$ + ಬೆಸ$_1$]

**ಅಟ್ಟುಕಲ್ಲು** (ನಾ). ಅರೆಯಲು ಉಪಯೋಗಿಸುವ ಕಲ್ಲು: ಅರೆಯುವ ಕಲ್ಲು: ಮಸಾಲೆ ಅರೆಯಲು. ಅಟ್ಟುಕಲ್ಲು: ಅಕ್ಕಿ, ಬೇಳೆ ಇತ್ಯಾದಿಗಳನ್ನು ಅರೆಯಲು. ಬೀಸುವ ಕಲ್ಲು: ಧಾನ್ಯ ಇತ್ಯಾದಿಗಳನ್ನು ಬೀಸಲು (ಅಡುಸೌ. ೩೫). [← ? ತಮಿ. ಅಟ್ಟುಕ್ಕಲ್]

**ಅಟ್ಟುಕಾಱಿ** 'ಅಟ್ಟುಗಾಱಿ' ನೋ.

**ಅಟ್ಟುಕುಳಿ** 'ಅಟ್ಟುಗುಳಿ' ನೋ.

**ಅಟ್ಟುಗ** (ನಾ). ಚೀನ ಮೊದಲಾದ ದೇಶದವರು ಊಟದ ಪಾತ್ರೆಯಿಂದ ಆಹಾರವನ್ನು ಎತ್ತಿಕೊಳ್ಳಲು ಉಪಯೋಗಿಸುವ ಕಡ್ಡಿ; ಊಟದ ಕಡ್ಡಿ: ಬೇಯಿಸಿದ ಮಾಂಸವನ್ನು ತಾಟನಲ್ಲಿ ಹಾಕಿ ಜಗುಲಿಯ ಮೇಲಿಟ್ಟು ಅವುಗಳಲ್ಲಿ ಅಟ್ಟುಗಗಳನ್ನು (= Chopstick) ಚುಚ್ಚುವರು (ಚೀನಬಾ. ೩೫). [?]

**ಅಟ್ಟುಗಲ** (ನಾ). ಅಡಿಗೆ ಮಾಡುವ ಪಾತ್ರೆ (ಸ್ಯಾಂಡರ್).

[ಅಟ್ಟು$_3$ + ಕಲ$_1$]

**ಅಟ್ಟುಗಾಱಿ, ಅಟ್ಟುಕಾಱಿ** (ನಾ). ಅಟ್ಟುವವನು; ಹೊಡೆದೋಡಿಸುವವನು (?). **ಅಟ್ಟುಕಾಱಿ**: ಅಟ್ಟುಗಾಱ[ಪಾಠಾಂ. ಕಾಱ]ನಲಾಜಗಂಗಳ ಪಟ್ಟಣದಲಂಜನೆಯ ಸುತನು (ತೊರರಾ. ೬–೪೮–೨೨).

[ಅಟ್ಟು$_2$ + –ಗಾಱ (< –ಕಾಱ)]

**ಅಟ್ಟುಗುಣಿ** 'ಅಟ್ಟುಗುಳಿ' ನೋ.

**ಅಟ್ಟುಗುಬ್ಬಚ್ಚಿಯಾಟ** (ನಾ). = ಅಟ್ಟುಗೂಳಾಟ: ಮಕ್ಕಳು ಅಟ್ಟುಗುಬ್ಬಚ್ಚಿಯಾಟ ಆಡುತ್ತಾರೆ (ರೂಢಿ). [ಅಟ್ಟು$_3$ + ಗುಬ್ಬಚ್ಚಿ + ಆಟ]

**ಅಟ್ಟುಗುಳಿ, ಅಟ್ಟುಕುಳಿ, ಅಟ್ಟುಗುಣಿ** (ನಾ). ಹದಿನಾಲ್ಕು ಗುಳಿಗಳುಳ್ಳ ಮಣೆಯನ್ನಿಟ್ಟುಕೊಂಡು ಆ ಗುಳಿಗಳಲ್ಲಿ ಹುಣಿಸೆ ಬೀಜ, ಕವಡೆ ಮೊದಲಾದವನ್ನು ತುಂಬಿ ಆ ಕಾಳುಗಳನ್ನು ಎತ್ತಿ ಒಂದೊಂದಾಗಿ ಮುಂದಿನ ಗುಳಿಗಳಲ್ಲಿ ಹಾಕುತ್ತ ಆಡುವ ಒಂದು ಆಟ: ಕೈನೇಣ ಕಿಱುದೊಟ್ಟಿಲಿನ ಬೊಂಬೆಗಳ ಎಳಮಿದುಳ ಕಜ್ಜಾಯ ಮೂಳೆಯ ಹಳಕು ಕಾಳಿಜದಟ್ಟುಗುಳಿಗಳ ಕೆಳೆಗಳೊಳು ಕೊಡಗೂಸು ಪೂತನಿನಿಕರವೊಪ್ಪಿದವು (ಕುವ್ಯಾಭೀ. ೫–೩೪). P ಈ ಆಟವನ್ನು "ಹರಳುಗುಣಿಮಣೆ ಆಟ", "ಅಟ್ಟುಗುಣಿಮಣೆ ಆಟ" ಎಂದು (ದಕ) ದಲ್ಲೂ, "ಚೆನ್ನಾಮಣಿ ಆಟ", "ಚೆನ್ನೆಮಣೆ" ಎಂದು (ಕರಾ) ದಲ್ಲೂ ಕರೆಯುತ್ತಾರೆ. **ಅಟ್ಟುಕುಳಿ** (ಕಿ). **ಅಟ್ಟುಗುಣಿ** (ಕಿ). [ಅಟ್ಟು$_2$ ? + ಕುಳಿ$_2$ (< ಕುೞಿ$_2$)]

**ಅಟ್ಟುಗುಳಿಮಣೆ** (ನಾ). ಅಟ್ಟುಗುಳಿಯಾಟಕ್ಕೆ ಉಪಯೋಗಿಸುವ ಹದಿನಾಲ್ಕು ಗುಳಿಗಳುಳ್ಳ ಮಣೆ. [ಅಟ್ಟುಗುಳಿ + ಮಣೆ]

**ಅಟ್ಟುಗೂಳಾಟ** (ನಾ). ಹೆಣ್ಣುಮಕ್ಕಳು ಅಕ್ಕಿ, ಬೇಳೆ ಮೊದಲಾದ ಪದಾರ್ಥಗಳನ್ನು ಸಂಗ್ರಹಿಸಿ ಅಡಿಗೆ ಮಾಡಿಕೊಂಡು ಊಟ ಮಾಡುವ ಒಂದು ಆಟ: ಕಾಲಭೈರವನ ಮಡದಿಯರಟ್ಟುಗೂಳಾಟದ [ಪಾಠಾಂ. ಆಡಿದ] ತಾಣವೊ ಆಡವಿಯೊ (ಕುರಾಸಾಂ. ೨೭–೯೩).

[ಅಟ್ಟುಗೂಳು + ಆಟ]

**ಅಟ್ಟುಗೂಳಾಡು** (ಕ್ರಿ). ಅಟ್ಟುಗೂಳಾಟವನ್ನು ಆಡು. 'ಅಟ್ಟುಗೂಳಾಟ'ದ ಪ್ರಯೋಗದ ಪಾಠಾಂತರವನ್ನು ನೋಡಿ.

[ಅಟ್ಟುಗೂಳು + ಆಡು$_1$]

**ಅಟ್ಟುಗೂಳು** (ನಾ). ೧. ಬೇಯಿಸಿ ಊಟಕ್ಕೆ ಸಿದ್ಧಪಡಿಸಿದ ಅನ್ನ; ಪಕ್ವಾನ್ನ (ಸ್ಯಾಂಡರ್). ೨. = ಅಟ್ಟುಗೂಳಾಟ: ಅಟ್ಟುಗೂಳು ಗೊಟ್ಟುಗುಳಿ ಮೊದಲಾಗೆಸೆವೊಟ್ಟುಗುಳಿಯನೊಡಗೂಡಿ ಪುಟ್ಟಿದಂದು ಮೊದಲಾಗಿ ಮಾಡುವ ಸಖಿ ನಿಟ್ಟಿಸಿ ನುಡಿದಳಿಂತೆಂದು (ಅಂಜಚ. ೫–೧೪೬).

[ಅಟ್ಟು$_3$ + ಕೂಳು (< ಕೂೞ್)]

**ಅಟ್ಟುಗೆ$_1$** (ನಾ). ೧. ಅಟ್ಟಿಸಿಕೊಂಡು ಹೋಗುವುದು (ಸ್ಯಾಂಡರ್). ೨. ಹಿಂಬಾಲಿಸುವುದು (ಸ್ಯಾಂಡರ್). [ಅಟ್ಟು$_2$ + –ಗೆ]

**ಅಟ್ಟುಗೆ$_2$** (ನಾ). ಸಂಸ್ಕರಿಸಿ ಸಿದ್ಧಪಡಿಸಿದ ಆಹಾರ (ಸ್ಯಾಂಡರ್).

[ಅಟ್ಟು$_3$ + –ಗೆ]

**ಅಟ್ಟುಗೊಳ್ಳು** (ಕ್ರಿ). ಚಿಂತಿಸು; ವ್ಯಥೆಪಡು: ಬಲದೇವ ಮಂತ್ರೀಶ ಚಿಂತೆಯೊಳ್ ಕಟ್ಟುವಡೆವುತೆ ಬಸವರಾಜಂಗೆ ಯೀ ವಾರ್ತೆಯಂ ಪೇಳೆ ನಗುತೆಂದನು ಅಟ್ಟುಗೊಳ್ಳದಿರು ಆ ಲಿಪಿಯ ನಾನೋದುವೆಂ (ಪ್ರಭುಪು. ೬–೧೯). [ಅಟ್ಟು$_4$ + ಕೊಳ್ಳು$_1$ (< ಕೊಳ್)]

**ಅಟ್ಟುಗೋಲು** (ನಾ). (ಅಡಿಗೆಯಲ್ಲಿ) ತೊಳಸಲು ಉಪಯೋಗಿಸುವ ಮರದ ಕೋಲು; ಹಿಟ್ಟು ತೊಳಸುವ ದೊಣ್ಣೆ (ಸ್ಯಾಂಡರ್).

[ಅಟ್ಟು$_3$ + ಕೋಲು (< ಕೋಲ್)]

**ಅಟ್ಟುದೆರೆ** (ನಾ). ಒಂದನ್ನೊಂದು ನೂಕಿಕೊಂಡು ಮುನ್ನುಗ್ಗುವ ಅಲೆ: ಇಡುಕುದೆರೆಯಟ್ಟುದೆರೆಯಟ್ಟುದೆರೆ ಕಟ್ಟುದೆರೆಯಡಕಿಲ್ದೆರೆಗಳು ಲಿದು ಹಳಚಲು (ಸೋಮುಚ. ೧–೬೫). [ಅಟ್ಟು$_2$ + ತೆರೆ$_3$]

**ಅಟ್ಟುಪಡು** (ಕ್ರಿ). ಅಟ್ಟಲ್ಪಡು; ಬೆನ್ನಟ್ಟುವಿಕೆಗೆ ಒಳಗಾಗು: ನಾಯ್ಗಳಿಂದಂ ಅಟ್ಟುಪಟ್ಟ ಪೆಣ್ಮೊಲನಂತೆ ಭಯಮನೆಡಗಲಸಿ (ಶಾಂತಿಪು. ೭–೯೧ ವ); ದೂವೆಯೊಳ್ ಪೊಕ್ಕ ಪಾವಿನಂತೆ ಬೆದಬೆದ ಬೆಂದಟ್ಟುಪಟ್ಟ ಪುಲ್ಲೆಯಂತಿರೆರ್ದೆ ಪಡಪಡ ಪಾಯೆ (ಲೀಲಾವ. ೧೦–೭೦ ವ).
[ಅಟ್ಟು$_4$ + ಪಡು$_1$]

**ಅಟ್ಟುಪೆಱು**, ಅಟ್ಟುವೆಱು (ಕ್ರಿ). = ಅಟ್ಟುಪಡು: ಅಟ್ಟುಪೆತ್ತ[ಪಾಠಾಂ. ವೆತ್ತ]ಪೊಲೆವುಲ್ಲೆಯಳ್ಳೆವಿಳ್ಳೆಯಾದ ಮಾತಂ (ಆದಿಪು. ೧೨–೨೯ ವ); ದಾನದುರ್ದ್ದಿನಮತ್ತೇಭದಿನಟ್ಟುಪೆತ್ತು ರಣದೊಳ್ ಬೆನ್ನಿತ್ತು (ಎಇ. XV, ೩೩೧–೮; 1028). **ಅಟ್ಟುವೆಱು**: ಮೇಲೆ ಕೊಟ್ಟಿರುವ (ಆದಿಪು. ೧೨–೨೯ ವ) ಪ್ರಯೋಗದ ಪಾಠಾಂತರವನ್ನು ನೋಡಿ.
[ಅಟ್ಟು$_4$ + ಪೆಱು]

**ಅಟ್ಟುಪ್ಪು** (ನಾ). ಉಪ್ಪುನೀರನ್ನು ಕಾಯಿಸಿ ಇಂಗಿಸಿ ತಯಾರಿಸಿದ ಉಪ್ಪು: "ವಸುಕಮಟ್ಟುಪ್ಪು" (ಮಂಗರಾ. ೪೩–೪೧); ಸಮುದ್ರದ ನೀರು ಕೊಪ್ಪರಿಗೆಗಳೊಳಗೆ ಹಾಕಿ, ಒಲೆಯ ಮೇಲೆ ಏರಿಸಿ, ಬುಡಕ್ಕೆ ಉರೀಹಚ್ಚಿ, ಅಟ್ಟಿಸಿ ಉಪ್ಪು ಮಾಡುತ್ತಾರೆ. ಈ ಉಪ್ಪಿಗೆ ಅಟ್ಟುಪ್ಪು ಅನ್ನುತ್ತಾರೆ (ಮುಂಬಯಿ. ೪–೨೦೦). ಕಲ್ಲುಪ್ಪು ಹೋ.
[ಅಟ್ಟು$_3$ + ಉಪ್ಪು. / **ತಮಿ. ತೆಲು.** ಅಟ್ಟುಪ್ಪು]

**ಅಟ್ಟುಮಣಿಹ** (ನಾ). ಸಂದೇಶ ಮೊದಲಾದವನ್ನು ಒಯ್ಯುವ ಕೆಲಸ; ದೂತನ ಕೆಲಸ: ತನುವೆಂಬ ರಾಜ್ಯಕ್ಕೆ ಮನವೆಂಬ ಅರಸು. ಅರಸಿಂಗೆ ನೋಟಬೇಟದವರಿಬ್ಬರು ಅಟ್ಟುಮಣಿಹ ಹರಿಮಣಿಹದವರು (ಲಿಂಗವ. ೧೨–೪೪). 'ಹರಿಮಣಿಹ' ಪರಾ. [ಅಟ್ಟು$_2$ + ಮಣಿಹ]

**ಅಟ್ಟುಮಾಣಿ** (ನಾ). ದೌತ್ಯಕ್ಕಾಗಿ ಕಳಿಸುವ ಹುಡುಗ; ದೂತ: ಪಾಂಡುತನಯನಂತೆ ನಿನ್ನ ಅಟ್ಟುಮಾಣಿಗೆ ಮಣೆಯ ಹಾಕಿಕ್ಕಬೇಕು ಅರ್ಜುನನಂತೆ ನಿನ್ನ ಬಂಡಿಯ ಬೋವನ ಮಾಡಿ ಲಗಾಮ ಹಿಡಿಸಲಿಬೇಕು (ಶ್ರೀಪುದಾ. ೫–೫೭). [ಅಟ್ಟು$_2$ + ಮಾಣಿ]

**ಅಟ್ಟುರಿ** (ನಾ). ಪಾತ್ರೆಯ ತಳದ ಸೀಕಲು ಅನ್ನ; ತಳಹತ್ತಿದ ಅನ್ನ (ಸ್ಯಾಂಡರ್). 'ಅಟ್ಟೊತ್ತು' ಪರಾ. [ಅಟ್ಟ$_3$ + ಉರಿ$_2$ ?]

**ಅಟ್ಟುವಳಿ** (ನಾ). = ಅಟ್ಟುಳಿ$_1$. 'ಅಟ್ಟುವಳಿಗೊಳ್' ಪರಾ.
[ಅಟ್ಟು$_2$ + –ವಳಿ$_2$]

**ಅಟ್ಟುವಳಿಗೊಳ್** (ಕ್ರಿ). ಅಟ್ಟುವಿಕೆಗೆ ಒಳಗಾಗು: ಇಟ್ಟಳಿಸಿರೆ ಕೋಟಿಯ ಮುಗಿಲಟ್ಟಳೆಗಳ್ ತೆನೆಯ ಸಂದಿಸಂದಿಯೊಳೊಂದೊಂದಟ್ಟುವಳಿಗೊಂಡು ಪಾಯ್ದುವು ಕಟ್ಟದೆ ಮುಟ್ಟದೆ ವಿಮಾನಮಂಬರಚರರಾ (ಧರ್ಮನಾ. ೨–೬೭). [ಅಟ್ಟುವಳಿ + ಕೊಳ್]

**ಅಟ್ಟುವೆಱು** 'ಅಟ್ಟುಪೆಱು' ನೋ.

**ಅಟ್ಟುಳಿ** (ನಾ). ೧. ಅಟ್ಟಿಸಿಕೊಂಡು ಹೋಗುವಿಕೆ; ಒತ್ತಡ: ಬೇಡರಟ್ಟುಳಿಗಳೊಳು ಕುತ್ತುಱಿೊಳಗಡಗಿರ್ದು ಬಳಿಕೆದ್ದು ತಮತಮ್ಮ ಹೆತ್ತ ತಾಯ್ಗಳನಱಸುತತ್ತಲಿತ್ತಲು ಪರಿದು (ಹಚಕಾ. ೫–೪೮); ಸುಳಿ ತೆರೆ ನೊರೆ ಬುದ್ಬುದ ಜಲಚರಗಳಟ್ಟುಳಿಗೆ ತುಳುಕಿ ಮೇಲಕೇಳ್ವ ಬಲುಸೀರ್ಪನಿಗಳ ಮೊತ್ತದಿಂದಂಬುಧಿಯುಳವಟ್ಟು ಮೆಱೆದುದು (ಕಂನವಿ. ೪–೨೩). ೨. ಹಿಂಸೆ; ಬಾಧೆ: ಇಕ್ಕಿಕ್ಕುವ ಶಾವಿನಲ್ಲಿ ಮಕ್ಕಳಂತೆ ತಳಿಗೆಯ ತೆಗೆಯದೆ ಕೊಟ್ಟಹ ಕೊಟ್ಟಹರೆಂದು ಭಟ್ಟರಂತೆ ಅಟ್ಟುಳಿಗೊಳಗಾಗದೆ ಕೊಂಬ ತೆಱದಲ್ಲಿ (ಡಬೊಮ್ಮ. ೮೬); ಕೊಲುವ ರಕ್ಕಸನಟ್ಟುಳಿಗೆ ಪುರಜನ ಮೆಲ್ಲ ನೆರೆದೈತಂದು (ನೇಮಿಸಂ. ೨೩–೧೨೫); ಸುರನದಿಯಲಿ ಮಿಂದು ಶುಚಿಯಾದ ಮೇಲಿನ್ನು ದುರಿತಗಳಟ್ಟುಳಿಯೆ (ಪುರಂದ. ೧–೫೫–೩); ಮನುಜಂಗಟ್ಟುಳಿಯಂ ಪಡೆದು ಕೊಲ್ವ ಪಸಿವೆಂಬ ಗದಂ (ನೀತಿಮಂ. II, ೧೮೭). ೩. ತನ್ನ ಜಾತಿಯ ಮೃಗಗಳನ್ನು ವಂಚಿಸಿ ಬೇಟೆಗಾರರ ವಶಪಡಿಸುವ ಮೃಗ; ದೀಹದ ಮೃಗ: "ಅಟ್ಟುಳಿಯೆನಲು ಸೋಹುಮೃಗ" (ಮಂಗರಾ. ೧೧೨–೫). [ಅಟ್ಟು$_2$ + –ಉಳಿ$_3$ ?]

**ಅಟ್ಟುಳಿಗ$_1$** (ನಾ). "ಅಡಿಗೆ ಮಾಡುವವನು" (ಪ್ರಭಣ್ಣ).
[ಅಟ್ಟು$_3$ + –ಉಳಿಗ]

**ಅಟ್ಟುಳಿಗ$_2$** (ನಾ). ಕೋಟಲೆ ಕೊಡುವವನು; ಹಿಂಸೆಮಾಡುವವನು (ಸ್ಯಾಂಡರ್). [ಅಟ್ಟುಳಿ + –ಇಗ]

**ಅಟ್ಟುಳಿಗಾರ** (ನಾ). = ಅಟ್ಟುಳಿಗ$_2$: ಸುಟ್ಟಿತು ಬಿಸಿಲಂಗೋಪಾಂಗವ ನುರಿಯಟ್ಟುಳಿಗಾರನೆಂಬಂತೆ (ತರ್ಕಕಾ. ೫–೧೩).
[ಅಟ್ಟುಳಿ+ –ಗಾರ (< –ಕಾಱ)]

**ಅಟ್ಟುಳಿದೋಱು** (ಕ್ರಿ). ಕೋಟಲೆ ಉಂಟಾಗು: ಪರಮ ಋಷಿ ದೂರ್ವಾಸನತಿಶಾಪದಿಂಪಲಾ ಸುರಪಗಟ್ಟುಳಿದೋಱೆ (ಲಕ್ಷ್ಮಭಾ. ೫–ಸೂ).
[ಅಟ್ಟುಳಿ + ತೋಱು]

**ಅಟ್ಟುಳಿಯಾಳು** (ನಾ). ಬೇಟೆಯ ಮೃಗವನ್ನು ಅಟ್ಟಿಸಿಕೊಂಡು ಹೋಗಿ ಹೊಡೆಯುವ ಆಳು: ಬಲೆಯು ಗೋಡೆಯು ನಿಂತಿತು. ಒಡನೆ ಹನ್ನೆರಡುಜನ ಧೈರ್ಯಶಾಲಿಗಳು ಬಲೆಯನ್ನು ಪೂರ್ವಕ್ಕೆ ಬಿಟ್ಟು ಪಶ್ಚಿಮ ದಿಕ್ಕಿಗೆ ಬಲೆಗೆದುರಾಗಿ ಹತ್ತುಮಾರು ದೂರದಲ್ಲಿ ಕುಳಿತರು. ಇವರಿಗೆ ಉಳಿಯಾಳೆಂದು ಹೆಸರು. ಅವರಿಗೆ ಹಿಂದೆ ಹತ್ತುಮಾರು ದೂರದಲ್ಲಿ ಅಷ್ಟೇ ಜನ ಅಟ್ಟುಳಿಯಾಳುಗಳು ಕೂತರು (ಹುಟ್ಟಹ. ೨೫); "ಬುದ್ಧಿ, ಬೇಟೆಗೆ ಹೋಗೋ ಆಳುಗಳನ್ನೆಲ್ಲಾ ಉಳಿಯಾಳು, ಅಟ್ಟುಳಿಯಾಳು, ಅಂಚೆಆಳು ಅಂತ ವಿಭಾಗ ಮಾಡ್ತೀವಿ..." (ಬೈಸರ್ವೆ. ೧೦೨).
[ಅಟ್ಟುಳಿ + ಆಳು$_2$ (< ಆಳ್$_2$)]

**ಅಟ್ಟೆ$_1$** (ನಾ). ೧. ತಲೆಯಿಲ್ಲದ ದೇಹ; ಮುಂಡ: "ಅಟ್ಟೆಯೆಂದುಂ, ಕಡುಕೆಂದುಂ ಕಬಂಧಂ" (ಕಶಸಾ. ೧೪–೨೭೩); ಇನ್ನುಂ ತಲೆ ಮತ್ತ ಮಟ್ಟೆಗಳ ಮೇಲಿರ್ದಪ್ಪುವು (ಪಂಪಭಾ. ೭–೧೪); ತಲೆಯಿಲ್ಲದಟ್ಟೆಗೆ ಪಟ್ಟವ ಕಟ್ಟುವ ಉಭಯಭ್ರಷ್ಟರ ಮೆಚ್ಚುವನೆ (ಬಸವ. ೭೨); ತಣಿದ ನಂತಕನಟ್ಟೆಗಳ ಜಂಗಣದ ನಾಟಕದೊಳಗೆ (ಕುವ್ಯಾದ್ರೋ. ೧೦–೫); ಸೋತವರನ್ನು ಕೊಂದುಬಿಟ್ಟು, ಅವರ ಅಟ್ಟೆಗಳಿಂದ ಅರಮನೆಯ ಮುಂದುಗಡೆ ತೋರಣ ಕಟ್ಟಿಸುವನು (ಅಜಿತ. ೧೬). ೨. ಎಲುಬಿನ ಗೂಡು; ಅಸ್ಥಿಪಂಜರ: ಎಂತೆಂತೊ ಬೊಮ್ಮನಂದಂದುಡಿದ ಕಡಿಯೆಲ್ಗಳಿನಟ್ಟೆಯೊಂದಂ ಬಿಗಿದು ತೊವಲಂ ಪೊದೆಯಿಸಿ (ರಾಮಾಶ್ವ. ೬೧–೨೮).
**ಅಟ್ಟೆಯಾಟ** = ಯುದ್ಧರಂಗದಲ್ಲಿ ತಲೆ ಕತ್ತರಿಸಿಹೋದ ಮೇಲೂ ಉಳಿದಿರುವ ಮುಂಡದ ಕುಣಿದಾಟ: ನಾಳೆಯ ರಣಾಂಗಣದೊಳ್ ನಡೆನೋಡುವಿರ್ ಮರುಳ್ವಡೆಯೊಡಗೂಡೆ ತಾಂಡವಮನಾಡುವ ರಾವಣನಟ್ಟೆಯಾಟಮಂ (ಪಂರಾಮಾ. ೧೦–೨೩೩); (ಅರ್ಧನೇ. ೫–೪೧ ವ. ನೋ).
[**ದೇ.** ‖ **ತಮಿ.** ಅಟ್ಟೈ (ಅಟ್ಟೈಯಾಡಲ್ = ಅಟ್ಟೆಯಾಟ); **ತೆಲು.** ಅಟ್ಟ]

**ಅಟ್ಟೆ$_2$** (ನಾ). ೧. ಪಾದರಕ್ಷೆಯ ತಳಭಾಗದ ಹಲ್ಲೆ: "ಮುಂಡದೊಳ್ ಕೆರ್ಪಿನೊಳಗಟ್ಟೆ" (ಶಬ್ದಮಂ. ೯೦); ಸೆಳೆಗೋಲು ಪೊಂದಟ್ಟೆಯ ಕೆರಹು ನಾಯಿಗಳ ಬಾಯ್ಕಟ್ಟು (ಬಸಪು. ೩೧–೪); ಒಂದಟ್ಟೆಯ ಕೆರ್ಪ ನಲವಿಂದಂ ಮೆಟ್ಟುತ್ತೆ (ವೃಷವಿ. ೨೦–೬); ಮೆಟ್ಟಕೊಂಡಿದ್ದ ಜೋಡುಗಳು ದಪ್ಪವಾಗಿದ್ದರೂ ... 'ಅಟ್ಟೆ'ಗಳು ಹರಿದು ನಾಲಿಗೆಗಳು ಹೊರಚಾಚಿದ್ದವು (ಹೊಸಮೇ. ೪೬). ೨. ಚರ್ಮ; ತೊಗಟೆ (ಕಿ). ೩. ರಸತೆಗೆದ ಕಬ್ಬಿನ ಹಿಪ್ಪೆ (ಕಿ). ೪. ಹುಣಿಸೆಹಣ್ಣಿನ ಬಿಲ್ಲೆ, —ಮುದ್ದೆ (ಸ್ಯಾಂಡರ್). ೫. ಮಾಯುತ್ತಿರುವ ಗಾಯದ ಹೊರ ಪದರ; ಹಕ್ಕಳೆ (ಸ್ಯಾಂಡರ್).
[**ದೇ.** ‖ **ತಮಿ.** ಅಟ್ಟೈ; **ತುಳು.** ಅಟ್ಟೆ; **ಕೊಡ.** ಅಟ್ಟೆ = ಮರದ ತೊಗಟೆ; **ತೆಲು.** ಅಟ್ಟ]

**ಅಟ್ಟೆ₃** (ನಾ). ಜಿಗಣೆ (೬). 'ಅಟ್ಟೆವತ್ತುಗೆ' ಪರಾ.
[ದೇ. ‖ ತಮಿ. ಅಟ್ಟೈ ; ಮಲ. ಅಟ್ಟ ; ಕೊಡ. ಅಟ್ಟೆ]

**ಅಟ್ಟೆ₄** (ನಾ). ನೆಯ್ಗೆಯವರು ನೂಲು ಸುತ್ತುವ ಅರಟೆ ; ಲಾಳಿ : "ಹಟ್ಟೆಗಾಜರ ಅಟ್ಟೆ – ತ್ರಸರ ಸೂತ್ರಪ್ರವೇಷ್ಟನ" (ನಾಚಿರಾ. ೬).
[~ ಅರಟೆ ?]

**ಅಟ್ಟೆಕಟ್ಟು** (ಕ್ರಿ). ಪಾದರಕ್ಷೆಯ ತಳಕ್ಕೆ ಅಟ್ಟೆಯನ್ನು ಸೇರಿಸಿ ಹೊಲಿ : ಕೆರವಿಗೆ ಅಟ್ಟೆಕಟ್ಟುವುದಕ್ಕಾಗಿ ಒಂದು ಜೊತೆ ಕಾಲ್ಮರೆಗಳನ್ನು ಕೊಟ್ಟನು (ಪವನ. ೨). [ಅಟ್ಟೆ₂ + ಕಟ್ಟು₁]

**ಅಟ್ಟೆಗಾಲು** (ನಾ). ಬಗ್ಗಿದ ಕಾಲು ; ಡೊಂಕುಕಾಲು ; ಬಂಕಗಾಲು: ರೋಗದ ಲಕ್ಷಣ – ತೋರಿಕೆಗೆ ಲಿವರ್ ರೋಗದ ಹಾಗೆ ಹೊಟ್ಟೆ ದೊಡ್ಡದಾಗುತ್ತ ಬರುವುದು ; ಕೈಕಾಲು ಅಂಡುಗಳು ಬತ್ತಿ ಕ್ಷೀಣವಾಗುವವು. ಅಟ್ಟೆಗಾಲು ಆಗುವದು (ಮನೆಮ. ೨೯).
[ಅಟ್ಟೆ ? + ಕಾಲು₁ (< ಕಾಲ್₁)]

**ಅಟ್ಟೆಗೋಲು** (ನಾ). ಬಗ್ಗಿದ ಕೋಲು ; ಕವೆಗೋಲು (?) : ಕಱಿಮುಟ ದಾರಿವೆಂಚಿ . . . ಮೊಗಮೋಜನ ಕನ್ನಡಿ ಪಾದವಟ್ಟೆಗೋಲ್ ಸಱಿದನು ಮಲ್ಲಗಂಬ ನಿರಿ ಮುಂದಲೆ ಪಾಟ್ಮನೆ ಸೂರಪಿಂಡಿಯೆಂಬಱಿಕೆಯ ಸೂಳೆಯೊಳ್ ನೆರೆವವಂ ಧರೆಯೊಳ್ ಕಡುಗಾಂಪನಲ್ಲವೇ (ಕಾವ್ಯಸಾ. ೧೦೦೩). [ಅಟ್ಟೆ ? + ಕೋಲು (< ಕೋಲ್)]

**ಅಟ್ಟೆಯಾಡಿಸು** (ಕ್ರಿ). ಯುದ್ಧರಂಗದಲ್ಲಿ ತಲೆಯನ್ನು ಕತ್ತರಿಸಿಹಾಕಿ ಮುಂಡ ಕುಣಿದಾಡುವಂತೆ ಮಾಡು: ದುಟ್ಟನಾಯಕರನಟ್ಟೆ[ಟ್ಟೆ]ಲ್ವಂ ಮುಱಿದೊಟ್ಟಜಿ[ಜೆ]ಯಿಂದಟ್ಟೆಯಾಡಿಸುವ ಬಿರುದನಾಯಕರ (ಕಇ. I, ೨೫–೬೩ ; 1186). [ಅಟ್ಟೆ₁ + ಆಡು₁ + –ಇಸು₃]

**ಅಟ್ಟೆಯಿಡು** (ಕ್ರಿ). ಶರೀರವನ್ನು ಚಾಚು : ತೇಜಿಪಂ ನಿಟ್ಟಿಸಿ ಪೊಕ್ಕು ಪಾಯ್ದುಲಿವ ಘೋಟಾಯ್ಲರ್ಕಳಿಂ ವಾಜಿ ಕುಕ್ಕುಱಿಸುತ್ತಿರ್ದಿನಮುಟ್ಟೆಯಿಟ್ಟಳತೆವಾಱುತ್ತಿರ್ದಿನಂ (ಅನಂಪು. ೧೪–೪). [ಅಟ್ಟೆ₁ + ಇಡು]

**ಅಟ್ಟೆವತ್ತುಗೆ** (ನಾ). ಜಿಗಣೆಯಂತೆ ಅಂಟಿಕೊಳ್ಳುವುದು : ಮಂತ್ರಿಗಾರೊಳಮಟ್ಟೆವತ್ತುಗೆ[ಪಾಠಾಂ. ಮೆರ್ದೆವತ್ತುಗೆ]ಯಾಗಲಾಗದೆಂಬುದುತ್ತರವಾಕ್ಯಂ (ನೀತಿವಾ. ೯–೫೫). [ಅಟ್ಟೆ₃ + ಪತ್ತುಗೆ]

**ಅಟ್ಟೈಸು** (ಕ್ರಿ). ಹಿಂದಕ್ಕೆ ಓಡು (?) : ವಿರಥನಾದನು ಧರ್ಮಜನು ಸಂಗರಕೆ ಮೊಗದಿರುಹಿದನು ನಕುಲನು ತಿರುಗಿದನು ಸಹದೇವನಟ್ಟೈಸಿದನು ದ್ರುಪದಾಂಕ (ಕುವ್ಯಾದ್ರೋ. ಪರಿ. ಪು. ೨೯೧). [ಅಟ್ಟ₂ ? + –ಇಸು₃]

**ಅಟ್ಟೊತ್ತು** (ನಾ). ತಳಹತ್ತಿದ ಅನ್ನ; ತಳ ಸೀದ ಅನ್ನ (ಸ್ಯಾಂಡರ್). 'ಅಟ್ಟುರಿ' ಪರಾ. [< ಅಟ್ಟ₃ + ಹೊತ್ತು₁ (< ಪೊತ್ತು₁)]

**ಅಟ್ಟೋಗರ** (ನಾ). ಅನ್ನ (ಸ್ಯಾಂಡರ್). [ಅಟ್ಟ₃ + ಓಗರ]

**ಅಟ್ಟೋಲೆ** (ನಾ). ಅಟ್ಟಿದ ಓಲೆ; ಸಂದೇಶದ ಪತ್ರ; ದೂತನ ಮೂಲಕ ಕಳಿಸುವ ಪತ್ರ : ಅಟ್ಟೋಲೆಗಳನಟ್ಟಿ ಚಿಕ್ಕಚಿಕ್ಕನುಜರದಟ್ಟಿಸಿ ತಪಸಿಗೋಡಿಸಿದ ದಿಟ್ಟನೆಂಬುದನಱಿದೆನಗೀಗ ಕೆಳೆಯನನಟ್ಟಿದನೈ ಬಲ್ಲಿವೆಂದ (ಭರಚ. ೪೮–೪೯). [ಅಟ್ಟು₂ + ಓಲೆ]

**ಅಟ್ಟೋಳಿ** (ನಾ). = ಅಟ್ಟಳಿ (ಚತುನಿ. ೧–೯ ೬).
[← ? ತುಳು. ಅಟ್ಟೊಳಿಗೆ]

**ಅಟ್ಣವಣೆ** 'ಅಟ್ಟವಣೆ' ನೋ.

**ಅಟ್ಠಾಣ** (ನಾ). ಸೈನ್ಯ ಮೊದಲಾದವುಗಳ ಠಾಣ್ಯ, —ಕಟಕ (?). 'ಅಟ್ಠಾಣಾಂತರ' ಪರಾ. [ಪ್ರಾ. ಅಟ್ಠಾಣ (< ಸಂ. ಆಸ್ಥಾನ)]

**ಅಟ್ಠಾಣಾಂತರ** (ನಾ). ಬೇರೊಂದು ಠಾಣ್ಯ, —ಕಟಕ; ಠಾಣ್ಯಗಳಲ್ಲಿ, ಕಟಕಗಳಲ್ಲಿ ಒಂದು (?) : ಸೋವನಾಥಯ್ಯಂಗಳ ಬೆಸದಿಂ × ಪ್ಪಟೂರಟ್ಠಾಣಾನ್ತರದ ಪಾಸುಂಗಲ್ಲಯ್ಯೂಱಟ್ಠಾಣಾನ್ತರದ ಕೇಣಿಕಾಜ[ರ]ಧಿಷ್ಠಾಯ[ಕ]ನಾಗವರ್ಮ್ಮಯ್ಯನುಂ (ಎಇ. XVI, ೩೩೯–೧೨ ; 1053). [ಅಟ್ಠಾಣ + ಅಂತರ]

**ಅಟ್ರಾಕಣಿ** (ನಾ). (ತಿರಸ್ಕಾರ ಸೂಚಕವಾಗಿ) ಕೆಲಸಕ್ಕೆ ಬಾರದ ಮನುಷ್ಯ; ಅಪ್ರಯೋಜಕ ವ್ಯಕ್ತಿ: ಆದೊಂದು ಹುಡುಗ ಸಿಕ್ಕಿದ್ದಾನಲ್ಲ – ಚನ್ನಪ್ಪಯ್ಯ. ಅವನಿಗೆ ಈ 'ಅಟ್ರಾಕಣಿ'ಗಳೆಲ್ಲಾ ಸಾಟಿ (ಹಹಸ. ೬೪). [?]

**ಅಟ್ಲು**, ಅಡಲು₃, ಅಡ್ಲು (ನಾ). ಕೆಸರು; ಪಂಕ. 'ಅಟ್ಲುಗದ್ದೆ' ಪರಾ. **ಅಡಲು₃**: ನುಡಿದ ನುಡಿಗಳ ಸ್ಮರಣೆ ಮೋಡದ ಗುಡುಗು ಚಿತ್ತಕ್ಕಿತ್ತು ದುಃಖದ ಅಡಲಿನೊಳಗೆನ್ನೊಗೆದು ವಿರಹಾಗ್ನಿಯನು ಪೆರ್ಚಿಸಿತು (ರಘುವಂ. ೧೪೨–೨೮). **ಅಡ್ಲು** (೬). 'ಅಱಿಲ್' ಪರಾ.
[< *ಅಟ್ಟಲ್ ?]

**ಅಟ್ಲುಗದ್ದೆ** (ನಾ). ಕೆಸರುಗದ್ದೆ : ನೀರಾವರಿಯ ಪ್ರದೇಶಗಳಲ್ಲಿ ಅಟ್ಲುಗದ್ದೆಗಳು ವಿಶೇಷವಾಗಿರುತ್ತವೆ (ರೂಢಿ). [ಅಟ್ಲು + ಗದ್ದೆ (< ಗಱ್ದೆ)]

**ಅತರಾ** 'ಅತಾರಾ' ನೋ.

**ಅತರಾಖಾನೆ** 'ಅತಾರಖಾನೆ' ನೋ.

**ಅತವಣೆ₁** 'ಅಟ್ಟವಣೆ' ನೋ.

**ಅತವಣೆ₂**, ಅಟವಣೆ₂ (ನಾ). ೧. ಜ್ಞಾಪಿಸುವುದು. ೨. ಜ್ಞಾಪಿಸಿಕೊಳ್ಳುವುದು ; ಜ್ಞಾಪಕ (ಸ್ಯಾಂಡರ್). **ಅಟವಣೆ₂** : ೨ (೬).
[← ಮರಾ. ಅಠವಣ್ = ಧ್ಯಾನ, ಸ್ಮರಣೆ]

**ಅತವಣೆ ಇಲಾಖೆ** 'ಅಟ್ಟವಣೆ ಇಲಾಖೆ' ನೋ.

**ಅತವಣೆ ಕಚೇರಿ** 'ಅಟ್ಟವಣೆ ಕಚೇರಿ' ನೋ.

**ಅತವಣೆ ಭೂಮಿ** (ನಾ). ಭೂಕಂದಾಯದ ಇಲಾಖೆಗೆ ಸೇರಿದ ಭೂಮಿ ; ಸರ್ಕಾರದ ಭೂಮಿ : ದೇವಸ್ಥಾನದ ಹೋಬಳಿಗೆ ಬದಲು ಭೂಮಿಯಂನೂ ಅತವಣೆಭೂಮಿಯಲ್ಲಿ ವಿಂಗಡಿಸಿಕೊಟ್ಟು (ಮೈಆರಿ. ೧೯೩೮, ೬೯–೧೪ ; 1849). [ಅತವಣೆ₁ (< ಅಟ್ಟವಣೆ) + ಭೂಮಿ]

**ಅತವಣೆ ಹೋಬಳಿ** (ನಾ). ಭೂಕಂದಾಯದ ಇಲಾಖೆಯ ಒಂದು ವಿಭಾಗ : ಜಾನಸಾಲೆ ಶ್ಯಾನಭಾಗರ ಜ೨ಕೆ೨ಉಂ ಹಳಗ ೨॥೩॥೦ ಅತವಣೆ ಹೋಬಳಿಗೆ ಪಾರುಪತ್ಯಗಾರ (ಮೈಆರಿ. ೧೯೩೩, ೩೧–೩೪, 1737).

**ಅತವಣೆ ಹೋಬಳಿ ಭೂಮಿ** = ಅತವಣೆ ಹೋಬಳಿಗೆ ಸೇರಿದ ಭೂಮಿ : ಆ ಬಳಿಯಣ ಅತವಣೆ ಹೋಬಳಿ ಭೂಮಿಯಂನೂ ದೇವಸ್ಥಾನದ ವಳಿತದ ಭೂಮಿಯಂನ್ನೂ ವಿಂಗಡಿಸಿ ಕೊಡಿಸಿ (ಮೈಆರಿ. ೧೯೩೮, ೬೯–೧೦ ; 1849). [ಅತವಣೆ₁ (< ಅಟ್ಟವಣೆ) + ಹೋಬಳಿ]

**ಅತಾಣ** (ನಾ). [ಸಂಗೀತ] ಒಂದು ರಾಗ : ಬಳಿಕ ಸಮಸ್ತ ರಾಗಂಗಳೊಳಗೆ ರಾಮಕ್ರಿಯೆ . . . ಅಠಾಣ, ಅರಭಿ, ತೋಡಿ, ಮಧ್ಯಮಾವತಿಯೆಂಬ ಮೂವತ್ತಾಱು ರಾಗಂಗಳೇ ಮುಖ್ಯಮಾಗಿ ಬಳಿಕೆಯಿಂದಧುನಾತನರಲ್ಲಿ ಪ್ರಸಿದ್ಧಗೊಂಡಿರ್ಪವು (ವಿವೇಕ. ೨೩೪).
[? ಪ್ರಾ. ಅಟ್ಠಾಣ (< ಸಂ. ಆಸ್ಥಾನ)]

**ಅತಾರ** 'ಅತಾರಾ' ನೋ.

**ಅತಾರಖಾನೆ**, ಅತರಾಖಾನೆ (ನಾ). ಸರಕಾರದ ಹದಿನೆಂಟು ಕಚೇರಿಗಳು. ಅವು ಯಾವುವೆಂದರೆ:— "೧. ತೋಷೀಖಾನೆ. ೨. ದಫ್ತರಖಾನೆ. ೩. ಷಿಕಾರಖಾನೆ. ೪. ಕಲ್‌ಬತ್‌ಖಾನೆ. ೫. ಶೆತಾಖಾನೆ. ೬. ಸರಾಫಖಾನೆ. ೭. ಬಬರ್ಚಿಖಾನೆ. ೮. ತಾಲೀಂಖಾನೆ. ೯. ಚಿರಾಬಖಾನೆ. ೧೦. ಷೆಮುರ್‌ಖಾನೆ. ೧೧. ನಗಾರಖಾನೆ. ೧೨. ಪೇಷ್‌ಖಾನೆ. ೧೩. ಫರಾಸ್‌ಖಾನೆ. ೧೪. ಜಹೀರ್‌ಖಾನೆ. ೧೫. ದಿವಾನಖಾನೆ. ೧೬. ಅದಸ್‌ಖಾನೆ. ೧೭. ನಜರ್‌ಖಾನೆ. ೧೮. ಮುಜರಾಖಾನೆ" (ಬಖೈರು. ೪. ಅಡಿಟ) : ಹಸವಾಯಿ ಜಗಜಂಪ

ಸುಗುಣ ಕನ್ನಡಜಾಣ ಪಾದಷಹನು ರತ್ನಖಚಿತವಾದ ವಸಂತಮಹಲಿನಲ್ಲಿ ಸಭೆಮಾಡಿಕೊಂಡು ಎಪ್ಪತ್ತೆರಡು ನಿಯೋಗ, ಅಠಾರಖಾನೆ, ಹನ್ನೆರಡು ಮಹಲು ವಿದ್ವಜ್ಜನ ಸಮೇತವಾಗಿ ಸದರು ಮಾಡಿಕೊಂಡು ಕುಳಿತಿದ್ದನು (ಬಖೈರು. ೪). **ಅಠರಾಖಾನೆ** (ಸ್ಯಾಂಡರ್). ℙ ಸ್ಯಾಂಡರ್‌ಸನ್ ಅವರು ಕೊಡುವ ಸರಕಾರದ ಹದಿನೆಂಟು ಕಚೇರಿಗಳು: ೧. ತೋಷೆಖಾನೆ (=ಖಜಾನೆ). ೨. ಜವಾಹೀರಖಾನೆ (=ಅರಮನೆಯ ಒಡವೆ ವಸ್ತುಗಳ ಶಾಲೆ). ೩. ಮೋದೀಖಾನೆ (= ಆಹಾರ ಪದಾರ್ಥಗಳ ಉಗ್ರಾಣ). ೪. ದಿರ್ವಾಖಾನೆ (= ಸಭಾಭವನ). ೫. ಫೀಲ್ಖಾನೆ (= ಗಜಶಾಲೆ). ೬. ಷುತರಖಾನೆ (= ಒಂಟೆಗಳ ಶಾಲೆ). ೭. ಗಾವುಖಾನೆ (= ಗೋಶಾಲೆ). ೮. ಗಾಡೀಖಾನೆ (= ವಾಹನ ಮುಂತಾದವುಗಳ ಶಾಲೆ). ೯. ಕಬೂತರಖಾನೆ (= ಪಕ್ಷಿಗಳ ಶಾಲೆ). ೧೦. ನವುಬತಖಾನೆ(=ಸಂಗೀತಗಾರರ ಮತ್ತು ವಾದ್ಯಗಳ ಶಾಲೆ). ೧೧. ಘಡಿಯಾರಖಾನೆ (= ಘಂಟೆ ಹೊಡೆಯುವ ಕಚೇರಿ). ೧೨. ಕಾರಖಾನೆ (= ಸಾಮಾನು ಸರಂಜಾಮುಗಳ ಉಗ್ರಾಣ). ೧೩. ತೋಫುಖಾನೆ (= ಮದ್ದು ಗುಂಡುಗಳ ಉಗ್ರಾಣ). ೧೪. ಅಂಬಾರಖಾನೆ (= ಧಾನ್ಯ ಮತ್ತು ಹುಲ್ಲಿನ ಉಗ್ರಾಣ). ೧೫. ಬಬರ್ಚಿಖಾನೆ (= ಪಾಕಶಾಲೆ). ೧೬. ಜಾಮುದಾರಖಾನೆ (= ರಾಜನ ಉಡಿಗೆತೊಡಿಗೆಗಳ ಉಗ್ರಾಣ). ೧೭. ಮಷಾಲಖಾನೆ. (= ದೀಪ, ಪಂಜು ಮುಂತಾದವುಗಳ ಉಗ್ರಾಣ). ೧೮. ಪಾಯಖಾನೆ (= ಶೌಚಸ್ಥಾನ). [ಅಠಾರ (< ಅಠಾರಾ) + ಖಾನೆ]

**ಅಠಾರಾ,** ಅಠರಾ, ಅಠಾರ (ನಾ). ಹದಿನೆಂಟು. 'ಅಠಾರಾ ಕಚೇರಿ' ಪರಾ. **ಅಠರಾ** (೩). **ಅಠಾರ** : 'ಅಠಾರಖಾನೆ' ಪರಾ.
[← **ಹಿಂ.** ಅಠಾರಹ್ ; **ಮರಾ.** ಅಠರಾ. /. **ಪ್ರಾ.** ಅಟ್ಠಾರ, ಅಟ್ಠಾರಸ, ಅಟ್ಠಾರಹ, ಅಟ್ಠಾರಾಹ (< **ಸಂ.** ಅಷ್ಟಾದಶ)]

**ಅಠಾರಾಕಚೇರಿ,** ಅಠಾರಾಕಛೇರಿ (ನಾ). ೧. ಸರಕಾರದ ಹದಿನೆಂಟು ಇಲಾಖೆಗಳುಳ್ಳ ಕಚೇರಿ. ℙ ಡಿಲ್ಲಿಯ ಆಡಳಿತ ಕ್ರಮವನ್ನು ಅನುಸರಿಸಿ ಚಿಕ್ಕದೇವರಾಜ ಒಡೆಯರು ತಮ್ಮ ರಾಜ್ಯದಲ್ಲಿ ಸ್ಥಾಪಿಸಿದ ಆಡಳಿತದ ಕಚೇರಿಗಳು :— ೧. ನಿರೂಪದ ಚಾವಡಿ. ೨. ಆಯಕಟ್ಟಿನ ಚಾವಡಿ. ೩. ಮೈಸೂರ ಹೋಬಳಿಯ ವಿಚಾರದ ಚಾವಡಿ. ೪. ಪಟ್ಟಣದ ಹೋಬಳಿಯ ವಿಚಾರದ ಚಾವಡಿ. ೫. ಸೀಮೆಯ ಕಂದಾಚಾರದ ಚಾವಡಿ. ೬. ಬಾಗಿಲ ಕಂದಾಚಾರದ ಚಾವಡಿ. ೭. ಸುಂಕದ ಚಾವಡಿ. ೮. ಪೊಮ್ಮಿನ ಚಾವಡಿ. ೯. ತೊಡಾಯದ ಚಾವಡಿ. ೧೦. ಪಟ್ಟಣದ ಹೋಬಳಿ ಅಷ್ಟಗ್ರಾಮದ ಚಾವಡಿ. ೧೧. ಮೈಸೂರ ಹೋಬಳಿ ಅಷ್ಟಗ್ರಾಮದ ಚಾವಡಿ. ೧೨. ಬೆಣ್ಣೆಯ ಚಾವಡಿ. ೧೩. ಪಟ್ಟಣದ ಚಾವಡಿ. ೧೪. ಬೇಹಿನ ಚಾವಡಿ. ೧೫. ಸಮುಖದ ಚಾವಡಿ. ೧೬. ದೇವಸ್ಥಾನದ ಚಾವಡಿ. ೧೭. ಕಬ್ಬಿಣದ ಚಾವಡಿ. ೧೮. ಹೊಗೆಸೊಪ್ಪಿನ ಚಾವಡಿ (ಮಹಾವಂ. I, ೧೪೬, ೧೫೦ ನೋ). ೨. ರಾಜ್ಯದ ಸಮಸ್ತ ಆಡಳಿತ ಶಾಖೆಗಳನ್ನೂ ಒಳಕೊಂಡ ಮುಖ್ಯ ಕಚೇರಿ. **ಅಠಾರಾ ಕಛೇರಿ** : ೨. ಬೆಂಗಳೂರಿನಲ್ಲಿ ಸರ್ಕಾರದ ಮುಖ್ಯ ಕಾರ್ಯಾಲಯಕ್ಕೆ ಅಠಾರಾಕಛೇರಿ ಎಂಬ ಹೆಸರು ತುಂಬ ಪ್ರಚುರವಾಗಿತ್ತು (ರೂಢಿ). 'ಅಠಾರಖಾನೆ' ಪರಾ. [ಅಠಾರಾ + ಕಚೇರಿ]

**ಅಠಾರಾಕಛೇರಿ** 'ಅಠಾರಾಕಚೇರಿ' ನೋ.

**ಅಠಾವಣೆ** 'ಅಟ್ಟವಣೆ' ನೋ.

**ಅಡ**₁ 'ಅಡ್ಡ₃' ನೋ.

**ಅಡ**₂ (ನಾ). ಒಂದು ತೆರಿಗೆ (?) : ಯಿಾ ಭೂಮಿಗೆ ಸಲುವ ಚತುಸ್ಸೀಮೆಯೊಳಗೆ ಅಡ ಆಗಾಮಿ ವತ್ತಿ ನೆಟ ಅಡಕೆಯ ಮರ (ಎಕ. VIII, ತೀರ್ಥಹ. ೧೬೬–೩೭ ; 1610) ; ನೂರು ವರಹಂನು ಅಡದ ಭೂಮಿಯನು ಶಿವಾರ್ಪಿತವಾಗಿ ಬಿಟೆವಾಗಿ (ಎಕ. VIII, ತೀರ್ಥಹ. ೯೨–೫೪ ; 1664). [?]

**ಅಡಂಕೆ** 'ಅಡ್ಡಂಕೆ' ನೋ.

**ಅಡಂಗಕಾಱ** (ನಾ). = ಅಡಂಗಾಯ್ತ : "ರಂಗವಳಿಗಳೆನೆ ಪಿರಿದುಮ ಡಂಗಾಯ್ತರೆನಲ್ಕಡಂಗಕಾಱರೊಳಪ್ಪರ್" (ಕರ್ಣಾನಿ. ೨೪).
[< ? ಡಂಗ + -ಕಾಱ]

**ಅಡಂಗಲ್** (ನಾ). (ಕರಾ) ಗ್ರಾಮದ ಭೂಮಿಯ ಬಗೆ, ವಿಸ್ತೀರ್ಣ, ಸ್ವಾಮಿತ್ವ ಮುಂತಾದ ವಿವರಗಳನ್ನೊಳಕೊಂಡ ದಾಖಲೆಯ ಪುಸ್ತಕ ; ವಾರ್ಷಿಕ ಆದಾಯವನ್ನು ಗೊತ್ತುಮಾಡುವುದಕ್ಕೆ ಮೊದಲು ಗ್ರಾಮಾಧಿಕಾರಿಗಳು ಮಾಡುವ ಸಾಗುವಳಿಯಾದ ಜಮಿಾನಿನ ಪರೀಕ್ಷೆ; ಗ್ರಾಮಸಾಗುವಳಿ ಪರೀಕ್ಷೆ (ಕಿಸಂಗ್ಲಾ. ೧೩೯). 'ಪಹಣಿ' ಪರಾ. [← **ತಮಿ.** ಅಡಙ್ಗಲ್]

**ಅಡಂಗಾಯಿತ**₁ 'ಅಡಂಗಾಯ್ತ' ನೋ.

**ಅಡಂಗಾಯಿತ**₂ (ನಾ). ತೆಂಗಿನ ಮತ್ತು ಅಡಕೆಯ ಕಾಯನ್ನು ಕೊಯ್ಯುವುದೇ ಉದ್ಯೋಗವಾಗುಳ್ಳ ಒಂದು ಜಾತಿಯವನು (ಸ್ಯಾಂಡರ್). [?]

**ಅಡಂಗಾಯ್ತ,** ಅಡಂಗಾಯಿತ₁ (ನಾ). ಕೋಟೆಯ ರಕ್ಷಣೆ ಮಾಡುವವನು : "ಕುಱುಂಬರೆಂದುಂ ಅಡಂಗಾಯ್ತರೆಂದುಂ ಕೊಟ್ಟವಳರ್" (ಕಶಸಾ. ೧೮–೩೫೧) ; ಕಲ್ಲಾಯ್ತರಡಂಗಾಯ್ತರಚ್ಚುಳಾಯ್ತರ ರಭಸಂ (ಶಮದ. ೧೯೪ ಪ್ರಯೋ) ; ನಾಯಕರ ಅಡಪವಳ್ಳರ ಪಡಿಯಱರಡಂಗಾಯ್ತರ ಸಿಡುಗೇರಿಗಳೊಪ್ಪಿದವು (ಕುರಾಸಾಂ. ೪–೧೧೧) ; ತಮ್ಮಡಂಗಾಯ್ತರ್ಗಿರ್ಪರಿಯಂ ಕೇಳಿಪುದುಂ ಪಡೆವಳರೆಲ್ಲರ್ ದಿಮ್ಮನೆಬ್ಬು (ರಾಮಾಶ್ವ. ೧೩೫–೩೦) ; (ಕಶಮಂ. ೪೬ ; ಕಬ್ಬಿಕೈ. ೩೬ ; ಕರ್ಣಾನಿ. ೨೪ ನೋ).
**ಅಡಂಗಾಯಿತ**₁ : ಸುಱಿವ ಸೂಱಾಯಿತರುಂ ಸುತ್ತಿದಡಂಗಾಯಿತರುಂ (ಲೀಲಾವ. ೭–೬೪ ವ). ℙ ಮೇಲಿನ ಅನೇಕ ಪ್ರಯೋಗಗಳಲ್ಲಿ ಈ ಶಬ್ದವನ್ನು "ಡಂಗಾಯ್ತ" ಎಂದು ಬಿಡಿಸುವುದೂ ಸಾಧ್ಯ. ಇದರ ಮೂಲಪಾಠ "ಡಂಗಾಯ್ತ" ಎಂದೇ ಇದ್ದಿರಬಹುದು. 'ಡಂಗ', 'ಡಂಗಾಯ್ತ' ಪರಾ. [< ? ಡಂಗ + -ಆಯ್ತ]

**ಅಡಂಗಿ** (ನಾ). ದೊಣ್ಣೆ ; ಕೋಲು (ಸ್ಯಾಂಡರ್). [~ ಡಂಗೆ]

**ಅಡಂಗಿಸು,** ಅಡಗಿಸು (ಕ್ರಿ). ೧. ಮರೆಮಾಡು; ಮುಚ್ಚು; ಬಚ್ಚಿಡು: ಅವರೊಳೊರ್ವನಾ ಮೂವರುಮಂ ಬಂಚಿಸಿ ಬಿಟ್ಟು ನೋಡಿಯೊಂದು ಪೊಟ್ಟಣಮನಡಂಗಿಸಿರ್ಪುದುಂ (ಸುಕುಮಾ. ೭–೮ ವ) ; ಪೆರ್ಬಲವೆಲ್ಲಮಂ ಮರ್ಬಿನೊಳಡಂಗಿಸೆ (ನಂಬಿರ. ೧೮–೩೯). ೨. ದಮನಮಾಡು ; ಧ್ವಂಸಮಾಡು : ಬಿರುದರನೊತ್ತಿ ಬೀರರನಡಂಗಿಸಿ ಕೊಂಕಿಗರಂ ಕಟಿಲ್ಚಿ (ಪಂಪಭಾ. ೬–೧೮) ; ನಿನ್ನನೆ ನೋಡಿ ಶೋಕಮನಡಂಗಿಸಿ ಬಾಚಿಕ್ಕೆಯೆ ಲೇಸೆನುತ್ತಮಿರ್ಪನ್ನೆಗಂ (ಕಾದಂಪೂ. ೧೮೨) ; ಜನಪದಸ್ನೇಹಮೆಂಬ ದಂಡಿಂ ವೇದನೀಯಮೆಂಬ ಗಡಿಯ ನಾಯಕರನಡಂಗಿಸದೆ (ಧರ್ಮಾಮೃ. ೭–೯೭ ವ). **ಅಡಗಿಸು** : ೧. ಒಡಲೊಳಬುಜಭವಾಂಡಕೋಟಿಯನಡಗಿಸಿಪ್ಪ ಮಹಾಮಹಿಮಗಾಯ್ತಡಕ ತೊಟ್ಟಿಲಲಮಳ ನಿಗಮಾಳಿಗಳು ಬೆಱಗಾಗೆ (ತೊರರಾ. ೧–೮–೭೩); ಲಿಂಗದೊಳು ತಮ್ಮಯ ತನುವನಡಗಿಸಿದರೆಲೆ ಶಂಭುವೆ (ಪಾಸೋಪು. ೧೫–೧೩) ; ಆ ರತ್ನವನ್ನು ಅಡಗಿಸಿಟ್ಟಿರುವ ಸ್ಥಳವನ್ನು ತೋರಿಸು (ಮಣಿಸ.೧೦). ೨. ಕಾಮನ ಹೆಸರನಡಗಿಸಲು ಥಾಳಿಡುವ ಪಡೆಯೋ (ಸಿದ್ಧರಾ. ೨–೪೦) ; ಅರಿ ಹಿಮುಕೂಟನನಡಗಿಸಿ ಜಾಜಿಯ ಬಿರುದನೀಡಾಡಿಸಿ ನಗುತ (ಕಂಸವಿ. ೯–೭) ; ಕೃಷ್ಣನು ಪಾಂಡವರನ್ನು ನೆವಮಾಡಿಕೊಂಡು . . . ಮೂಢರಾದ ಸುಯೋಧನಾದಿಗಳನ್ನು

ಅಡಗಿಸುವನು (ಕೃವಾಉ. ೧೧೮). ೩. ಒಳಪಡಿಸು ; ಅಡಕಮಾಡು : ವಿಷಯಗಳನ್ನೆಲ್ಲಾ ಒಂದು ಸೂತ್ರದಲ್ಲೋ ನಿಯಮದಲ್ಲೋ ಅಡಗಿಸಿಟ್ಟು ಕೊಳ್ಳುವ ಮಾನಸಿಕ ಸಂಸ್ಕರಣವಾಗುತ್ತದೆ (ಶಿಕ್ಷದ. ೨೩೪).

**ಅಡಗಿಸಿಕೊ**= ೧. ಪ್ರಕಟವಾಗದಂತೆ ತಡೆದುಕೊ; ಅದುಮಿಕೊ: ಕೋಪವನ್ನು ಅಡಗಿಸಿಕೊ; ದುಃಖವನ್ನು ಅಡಗಿಸಿಕೊ (ರೂಢಿ). ೨. ಒಳಕೊಳ್ಳು; ಸೇರಿಸಿಕೊಂಡಿರು : ಪಿಂಡದಲ್ಲಿ ಶಿವತತ್ತ್ವನನಡಗಿಸಿಕೊಂಡಿರ್ದ ಆತ್ಮನ ಅಂತರಂಗದೊಳಗಣ ಶಿವತತ್ತ್ವನೇ ಜ್ಞಾನಾಂಕುರಸ್ವರೂಪಮಾಗಿ (ಶೂನ್ಯಸಂ. ೪-೧೭). [ಅಡಂಗು₁ + -ಇಸು₃]

**ಅಡಂಗು₁**, ಅಡಗು₁ (ಕ್ರಿ). ೧. ಮರೆಯಾಗು ; ಮುಚ್ಚಿಹೋಗು ; ಅದೃಶ್ಯವಾಗು ; ಅವಿತುಕೊ ; ಬಚ್ಚಿಟ್ಟುಕೊ : "ಅಡಂಗು– ಗೋಪನೇ" (ಶಮಧಾ) ; ಬೆಟ್ಟುಗಳ್ ನೆಲದೊಳಡಂಗುವಂತೆ ನೆಲದೊಳ್ ಸಮನಾದುವು ಸೈನ್ಯಘಾತದಿಂ (ಕಾವ್ಯಸಾ. ೪೬೪ ; ಶೂದ್ರಕ) ; ನಾರದನಿರದೆ ಗಗನತಳಕ್ಕೊಗೆದು ಮುಗಿಲ ಪೊರೆಯೊಳಡಂಗಿದಂ (ಪಂಪಭಾ. ೬-೨೦ ವ); ಘನಲಿಂಗಮಂ ಕೊಂಡಡಂಗಿದನಿಮಿಷನಂದಮೆನಗಿಲ್ಲ (ಚೆಬಪು. ೬-೭). ೨. ತಗ್ಗು ; ಕುಗ್ಗು ; ಹಿಂದಕ್ಕೆ ಸರಿ : ಎವೆಯಿಲ್ಲದ ಕೊಟಿಗಣ್ . . . ಸೋಲಮನೀಯದಿರವು ಕರ್ಪಿಂ ಸಮಸಂದೊಡಲಲರ್ದ ಮೂಗಡಂಗಿದ ಗಲ್ಲಂ (ಧರ್ಮಾಮೃ. ೭-೨೨೩); ಅಂಕದ ಮುಖದೊಳಡಂಗದೆ ಕರ್ಮಕಲಂಕರೆನಿಪ ಬೌದ್ಧರನು . . . ಗೆಲಿದಕಲಂಕರಿಗೊಲಿದೆಜಗುವೆನು (ನೇಮಿಸಂ. ೧-೧೭). ೩. ಶಮನವಾಗು : ಈಗಳಡಂಗಿತೆಮ್ಮ ಹೃದ್ರೋಗಮನೇಕ ಮಂಗಳಪರಂಪರೆಗಳ್ ದೊರೆಕೊಂಡುವೀಗಳ್ (ಪಂಪಭಾ. ೭-೬೦) ; ಅಂತಾ ಕಳಕಳರವಮಡಂಗಲೊಡನೆ (ಕಾದಂಪೂ. ೧೬೩) ; ಅಡಂಗೆ ರೇಣುಪಟಲಂ (ಉದ್ಭಟ. ೯-೧೩೯). ೪. ಸೇರಿಹೋಗು ; ಲೀನವಾಗು : ಮನದೊಳಡಂಗೆ ಸಿದ್ಧಪರಮೇಷ್ಠಿಗಳಷ್ಟಗುಣಂ (ಸುಕುಮಾ. ೦೨೫. ೮-೫೫) ; ತಲ್ಲಕ್ಷ್ಯದೊಳ್ ಮನವಡಂಗಿ ಪರವಶೀಭೂತನಾಗುತ್ತ (ಪದ್ಮರಾ. ೨-೪೯). ೫. ಮುಗಿದು ಹೋಗು ; ಕೊನೆಗೊಳ್ಳು ; ನಷ್ಟವಾಗು : ಕಡವಿನ ಕಂಪಡಂಗಿದುದು ಜಾದಿಯ ಕಂಪೊದವಿತ್ತು (ಪಂಪಭಾ. ೭-೬೯) ; ನಟ್ಟ ಕಿವಿಯಡಂಗುವ ಸುಯ್ಲಿಂ ಸರಳಂ ಮಾಜುತೆ ಹರಿಣಂ ಸರಳಿಸಿತು (ಗಿರಿಕ. ೧-೯೧) ; ದುರ್ದಿನಮಡಂಗೆ ಸುದಿನಂ ಪೊರ್ದಲ್ . . . ಎಬ್ಬುದು ಬೆಳ್ಪಿಳಗು (ಉದ್ಭಟ. ೧೦-೪) ; ಹೊಳೆಗಳುಜಿ ಬತ್ತಿದುವು ನಿರ್ಝರ ಜಲವಡಂಗಿದವಜಿತವಗ್ಗದ ಕೊಳನು (ತೊರರಾ. ೧-೫-೧೭). ೬. ವಶವಾಗಿರು ; ವಿಧೇಯತೆಯಿಂದಿರು ; ಪರಿಮಿತಿಗೆ ಒಳಪಡು : ಕಪ್ಪಮೀಯದೆ ಚಪ್ಪರಿಸುವ ಮಂಡಳಿಕರುಮಂ ಅಡಂಗದಾಟವಿಕರುಮಂ . . . ಅಜಿದು (ಆದಿಪು. ೪-೮೨ ವ) ; ಈ ಪುತ್ರಂ ಕಾರಣಿಕನಾಗಿರ್ದಪಂ ನಮ್ಮ ಕಯ್ಯೊಳಡಂಗುವನಲ್ಲ (ನಂಬಿರ. ೨-೭೯). **ಅಡಗು₁** : ೧. "ಅಡಗಿದನೆಂಬುದಕೆ ಕರೆದನೆಂಬರ್ ಕವಿಗಳ್" (ಕವಿಕಂ. ೧೮೮) ; ಎನ್ನೊಡವುಟ್ಟಿದರುಂ ತಂದೆಯುಮಡಗಿರ್ದರ್ ಖಳಕೃತಾಂತದಂತಾಂತರದೊಳ್ (ಆದಿಪು. ೩-೩೪) ; ಮರುಳೆಂದು ಬಗೆದರೆಂದಡಗಿದೆಯೊ (ಸಿದ್ಧರಾ. ೨-೪೯) ; ವಡಬಾನಲಗಂಜಿ ಕಡಲ ಜೀವನ ಬಂದಡಗಿದಂತಾ ಪುರವರದ ಕಡೆಯಗಳಿನೊಳಿಡೆವಿಡದಿಹ ಜಲವನು ಮೃಡರಿಪು ವೊಡೆಯನೆ ಬಲ್ಲ (ಅಂಜಚ. ೩-೭) ; ಅಡಗಿತಾ ವರಮೂರ್ತಿ ಕುಂಡದ ನಡುವೆ(ತೊರರಾ. ೧-೭-೫೭). ೨. ಸಿಡಿಲು ಮೊಜೆದರೆ ಸರ್ಪನಂಜುವುದಡಗುವನೆ ಗರುಡನು (ಕುವ್ಯಾದ್ರೋ. ೧೫-೬೬); ಕಡುಹು ನಿಮ್ಮವಗಿನಿತಿರಲು ನಾವಡಗಬಹುದೇ ಬಹೆ ನಡೆಯಿ (ತೊರರಾ. ೪-೪-೬). ೩. ಕಿಡಿ ಕಿಡಿ ಕೆದಜಿದೊಡೆ ಹಸಿವು ತೃಷೆ ಅಡಗಿತೆಂಬೆನು (ಮಹದೇ. ೨೪-೫) ; ಶಿವನಿಲ್ಲದಧ್ವರವ ಮಾಡಿದ ದೋಷವಡಗಬೇಕೆಂದು (ಹಚಕಾ. ೧೦-೪೪) ; ನರನ ಚಿತ್ತದ ತಾಪವಡಗಲು ತಂಪನೆಜೆದನು ತರುಣಶಶಿಮೌಳಿ (ಕುವ್ಯಾಇ. ೬-೩೭) ; ಮನದ ಡಗೆಯಡಗಿತು (ನಳಚ. ೫-೬೧); ನಿನ್ನ ನಗುಮುಖವನ್ನು ನೋಡಿ ನನ್ನ ಬಳಲಿಕೆಯೆಲ್ಲ ಅಡಗಿತು (ರೂಢಿ). ೪. ನೀನೆನ್ನ ಕಾಯದಲ್ಲಿ ಅಡಗಿ ನೀನೆನ್ನ ಪ್ರಾಣದಲ್ಲಿ ಅಡಗಿ (ಶೂನ್ಯಸಂ. ೧೩-೫) ; ಆ ವೃಕ್ಷವು ಮರಳಿ ಬೀಜದೊಳಡಗಿತ್ತು (ಮಹದೇ. ೩೯-೧) ; ಮಳೆಗಾಲದ ನೀರು ಶರಧಿಯೊಳಡಗುವಂತೆ (ಮೋಹತ. ೧೭-೧) ; ಕಡಲು ಸಾಸಿವೆಯೊಳಡಗಿದಂತೀ ಮೂಜು ಪೊಡವಿಯಷ್ಟಗಲದ ಹಂಸ ಬಡವ್ಯೆಯೊಳಿರ್ದುದ ನೆನೆದು (ಭರಚ. ೩-೨೨). ೫. ಭೂತಳನಾಥಂ ಕೊಟ್ಟನವನ ಬಡತನಮಡಗಲ್ (ದಶಕು. ೬-೧೧೬) ; ನರನೊಳಿನ್ನಜುಹುವೆನು ಘನಸಂಗರದೊಳಡಗಿದ ರಾಜಕುವರನ ಮರಣವಾರ್ತೆಯನು (ಕುವ್ಯಾದ್ರೋ. ೮-೩) ; ಸೀತಾಲಲನೆಯನು ನಾವಗಲಿ ತಿಂಗಳು ತಿಳಿಯಲ್ಕೆಡಡಗಿದವು (ತೊರರಾ. ೪-೮-೯) ; ಮಾರ್ತಂಡನ ಕಡು ಝಳದುಬ್ಬರಕಾಗ ಅಡಗುವ ಹಿಮದೊಲಿಪ್ಪತ್ತು ಸಾವಿರ ಬಲ ಮಡಿದುದು (ಕಂಸವಿ. ೧೫-೮೯). ೬. ಹುಳುಕು ಹೊದ್ದದ ವಿದುರನೀತಿಯಲಿಹರು ಪಾಂಡವರು . . . ತಾವಡಗಿಗುಣದಲಿ (ಸಂಭಪ. ೧೭-೬೪) ; ಪತಿಯಾಣತಿಯ ಬಂದಿಯೊಳಡಗಿರ್ಪುದು ಸತಿಯ ಧರ್ಮದ ಸರ್ವಸ್ವ (ಹದಿಬ. ೩-೫).

**ಅಡಂಗಿಕೊಳ್, ಅಡಗಿಕೊ** = ಮರೆಯಾಗಿರು; ಅವಿತುಕೊ: ಜಯಪರಮೇಶ್ವರ ಪರಮಾತ್ಮ ಯೀಶ್ವರನುರ್ವ್ವೀ ಪರ್ವ್ವಿಯಡಂಗಿಕೊಂಡಿಪ್ಪನು (ಎಇ. XXIII, ೧೯೪-೫ ; 1265) ; ನೀನು ಈ ಪೊದೆಯ ಹಿಂದುಗಡೆ ಅಡಗಿಕೊ (ರೂಢಿ).

[**ದೇ.** ‖ **ತಮಿ.** ಅಡಙ್ಕು ; **ತುಳು.** ಅಡೆಂಗು, ಡೆಂಗುನಿ ; **ತೆಲು.** ಅಡಗು ; **ಕೋಲಾ.** ಡಾಂಗ್]

**ಅಡಂಗು₂**, ಅಡಗು₂ (ನಾ). ೧. ಅಡಗಿಕೊಳ್ಳುವುದು ; ಮರೆಯಾಗುವುದು (ಕ). ೨. ಅಡಗಿಕೊಳ್ಳುವ ಸ್ಥಳ (ಕ). **ಅಡಗು₂**: ೩. ರಹಸ್ಯ: "ಗೋಪ್ಯವು ಮಾಂಸವಡಗರ್ಕು[ಕ್ಕು]" (ಶಬ್ದಮಂ. ೮೫).

[< ಅಡಂಗು₁]

**ಅಡಂಗು₃** 'ಅಡಗು₃' ನೋ.

**ಅಡಂಗುಜುಚಾಟ**, ಡಂಗುಜುಚಾಟ (ನಾ). ಕಣ್ಣುಮುಚ್ಚಾಟ; ಕಣ್ಣುಮುಚ್ಚಾಲೆಯ ಆಟ : "ಚಿಟ್ಟುಮುಜಿ ಪುಮ್ಮೆಯೊಳಕ್ಕುಮಡಂಗುಜುಚಾಟಂ ಕಣ್ಣಮುಚ್ಚುವಾಟಂ" (ಕವಿಕಂ. ೨೨೭) ; "ಅಡಂಗುಜುಚಾಟಮೆಂದು ಕಣ್ಣಮುಚ್ಚಾಟಂ" (ಕಶಸಾ. ೨೭-೫೬೪); ನಗಿಸುವ ಕೋಡಗಂ . . . ಆಡುವ ಕುರಂಗವಡಂಗುಜುಚಾಟಮಂ ಪ್ರಿಯರ್ಗೆಗೆಯಿಪವಂಗಜನ್ಮನ ಬೆಸಂಬಡೆದಂತೆ ಲತಾಗೃಹಂಗಳೊಳ್ (ಸೂಕ್ತಿಸು. ೧೧-೭೪). **ಡಂಗುಜುಚಾಟ** : "ಪುಚ್ಚಳಿಯೆ ಕೇಡು ಡಂಗುಜುಚಾಟವೆನೆ ಕಣ್ಣಮುಚ್ಚಾಟ" (ಶಬ್ದಮಂ. ೫೬). [< ಅಡಂಗುಜುಚಾಡು]

**ಅಡಂಗುಜುಚಾಡು** (ಕ್ರಿ). ಕಣ್ಣುಮುಚ್ಚಾಲೆಯ ಆಟವನ್ನು ಆಡು : ಸಂಕಲ್ಪಜನ್ಮಜಂಗಮಲತಾಂಗಿ ಸಂಭೋಗಲೋಭದಿನಡಂಗುಜುಚಾಡಿ [ಪಾಠಾಂ. ನಡಂಗಿ ಕೊಜುಚಾಡಿ] ಕಾಡಿದ ಚಂದನಲತಾಮಂದಿರಮಂ (ಪಂರಾಮಾ. ೯-೧೨೦ ವ). [ಅಡಂಗು + ಉಜು + -ಚು + ಆಡು₁]

**ಅಡಂಗೆಡೆ** 'ಅಡ್ಡಂಗೆಡೆ' ನೋ.

**ಅಡಂಗೊತ್ತು** (ಕ್ರಿ). ಅಡಗಿಹೋಗುವಂತೆ ಅದುಮು ; ಪರಿಹಾರ ಮಾಡು : ಅಜಿವುಳ್ಳಂ ರುಜೆ ಪೆರ್ಚೆ ತೀರ್ಚುವೊಡದಂ ಮರ್ದಿಂದಡಂಗೊತ್ತದಂದುಜಿ [ಪಾಠಾಂ. ಮರ್ದಿಂಗಡಂಗೊತ್ತಿದಂದು] ಬೇಗಂ ತೊಜಿಯೆಂಬುದಿಂತು ಮನೆಯೊಳ್ ಕಿರ್ಚೆಟ್ಟೊಡಾ ಕಿರ್ಚನೀತೆಜದಿಂ ಬೇಗಮಡಂಗಿಸಿರ್ಪೊಡೆ (ಜೀವಸಂ. ೧೧-೧೪). [ಅಡಂಗು₁ + ಒತ್ತು₁]

**ಅಡಂಬರ್** 'ಅಡ್ಡಂಬರ್' ನೋ.

**ಅಡಂಬಳ್ಳಿ** (ನಾ). ಒಂದು ಗಿಡ ಮೂಲಿಕೆ (ವೈನಿಗಿ. ೪೬-೯೧೩).

[ಅಡ ? + ಬಳ್ಳಿ]

**ಅಡಂಬೆ** (ನಾ). (ಕರಾ). ದನದ ಕೊಟ್ಟಿಗೆಯ ಬಾಗಿಲಲ್ಲಿ ನಿಲ್ಲಿಸುವ, ಆಚೆಯಿಾಚೆಯ ತೂತುಗಳ ಮೂಲಕ ಸರಿಸಲು ಬರುವಂತಿರುವ ಗೂಟಗಳುಳ್ಳ ಕದ: ಕೊಟ್ಟಿಗೆಗೆ ದನ ಬಂತು; ಅಡಂಬೆಗುಟ್ಟಿ ತೆಗೆ (ರೂಢಿ). [← **ತುಳು.** ಅಡಮ್ಮೆ, ತಡಮ್ಮೆ, ಹಡಮ್ಮೆ]

**ಅಡಕ**$_1$ (ನಾ). ೧. ವಶದಲ್ಲಿಟ್ಟುಕೊಳ್ಳುವುದು; ಸಂಯಮ; ಹಿಡಿತ; ವಿಧೇಯತೆ: ಓವಿ ಜೀವಮನಡಕಂಬೆರಸಯ್ದು ಸಮಿತಿಯೊಳ್ ಮುನಿ ನೆಗಳ್ದಂ (ಆದಿಪು. ೬-೨೮); ಒರ್ವನೆ ಬಾಲನೆಂದಡಕದೊಳ್ ನಿಲಿಸಿ ಕೊಳ್ಳದೆ ಪಿರಿದು ಲಾಲನದಿನಾ ತಂದೆತಾಯಿಗಳ್ ಸಲಹಿದುದಜಿಂ (ಸಮ್ಯಕೌ. ೧೦-೧೦); ಮಿಡುಕುಳ್ಳ ತೇಜಿಯ ತೆಜಪಿಸೊಳೇಜಿ ಮತ್ತಡಕಕೆ ತಹ ಜಾಣನಂತೆ (ಭರತೇ. ೪೧-೫೪); ಮನದನ್ನರೊಡನೆ ಬಾಳುವರಡಕದೊಳು (ಹದಿಬ. ೧-೫೬); ಕೇಳದಿರು, ಕೆಣಕದಿರು, ನಿನಗಡಕಂ ಒಳ್ಳಿತ್ತು (ಅಶ್ವತ್ಥಾ. ೨೪-೧೬). ೨. ಹಿಡಿತಕ್ಕೆ ತಕ್ಕಷ್ಟಿರುವುದು; ಮಿತಿ; ಹಾಳತ: ಅಡಕದೊಳೊಮ್ಮೆ ಹೆಚ್ಚಿನೊಳೊಮ್ಮೆ ಕಾಮುವ ನಡಿಸುತಿಹನು ಸತಿಯರೊಳು (ಭರತೇ. ೧೦-೧೨೨); ಅಡಕವಾಗಿದೆ ಬಸುಜದಜ ಮೇಲಿಧೆ ಬಲಗಡೆಯಣ ಕುಡಿಯುಳ್ಳ ಪೊಣ್ಮೆ (ನಾಗಕು. ೫-೪೫); ಈ ಪುಸ್ತಕ ನನ್ನ ಕೈಗೆ ಅಡಕವಾಗಿದೆ (ದಕ. ಕ); ಭರತವರ್ಷದ ಬಹುರೀತಿಯ ಸೌಭಾಗ್ಯದ ಒಂದು ಮುಖ್ಯಾಂಶ ಒಂದು ದೇಶದ ಅಡಕದ ಜೊತೆಗೆ ಒಂದು ಖಂಡದ ವಿಸ್ತಾರವನ್ನೂ ವೈವಿಧ್ಯವನ್ನೂ ಪಡೆದಿದೆ ಎನ್ನುವುದು (ಚಿಕರಾ. ೧); ಅಡಕವಾದ ಮನೆ ವಾಸಕ್ಕೆ ಅನುಕೂಲ (ರೂಢಿ). ೩. ನಿಯಮ; ಕಟ್ಟುಪಾಡು: ಯಿಾ ಶಾಸನದ ಅ[ಅ]ಡಕಕ್ಕೆ ತಪ್ಪಿದವರುಳ್ಳರೆ ಪೊಳಲದೇವಿಯ ಪ್ರತಿಮೆಯ್ಯನು ಭಿ(೦)ನ್ನವ ಮಾಡಿದ ದೋಷ (ಸೌಇಇ. IX–ii, ೪೬೦-೨೬; 1465); ಬಾಳಿಸಿ ಕೊಡುವೆವು ಯಿಾ ಅಡಕಕ್ಕೆ ನಾಲು ತಪ್ಪೆಉ (ಸೌಇಇ. ೧೯೩೧, ಮಂಗಳೂ. ೩೩೯-೧೯; ?); ಅಜತನುಜ ನುಡಿದಡಕವೇ ನಿಜರಾಜಕಾರ್ಯಕೆ ರಾಜಪಥವೆಂದ (ತೊರರಾ. ೪-೧೨-೩೧). ೪. ಒಳಸೇರಿರುವುದು; ಲೀನತೆ: ಒಡಲೊಳಬುಜಭವಾಂಡ ಕೋಟಿಯನಡಗಿಸಿಪ್ಪ ಮಹಾಮಹಿಮಗಾಯ್ತಡಕ ತೊಟ್ಟಿಲಲಮಳನಿಗಮಾಳಿಗಳು ಬೆಜಗಾಗೆ (ತೊರರಾ. ೧-೮-೭೩); ತೃಪ್ತರಾದರೆಂದೊರೆವೆನಷ್ಟಜಿಕೊಳ್ಳಲ್ಲವಡಕ (ಭರತೇ. ೪೬-೧೫೨). ೫. ಅಡಗಿಕೊಂಡಿರುವುದು; ಅಗೋಚರವಾಗಿರುವುದು: ನಿರುತಮಿದಿರ್ಗಂ ನಿಲ್ಲದೀ ತಮವಿದಂ ಮುಜಿಯೊಳಡಕದಿಂ ಪಿಡಿಯಲೆಂದು ಸರಸಿಜಸಖಂ ತನ್ನ ಬಲವನಲ್ಲಲ್ಲಿ ಮೈಗರೆದುಮಿರಲೆಂದು ನೇಮಿಸಿದನೋ (ಚೆಬಪು. ೯-೮). ೬. "ಪತ್ರದ ಜೊತೆಯಲ್ಲಿ ಲಕೋಟೆಯಲ್ಲಿಡುವ ಇತರ ಕಾಗದ ಮೊದಲಾದವು" (Enclosure. ಇಂಕನಿ).

**ಅಡಕವಾಗಿರು** = ೧. ಒಳಪಟ್ಟಿರು; ಅಧೀನವಾಗಿರು: ಶಿಷ್ಯನು ಗುರುವಿನ ಅಪ್ಪಣೆಗೆ ಅಡಕವಾಗಿದ್ದಾನೆ (ಕ). ೨. ಸೇರಿಹೋಗಿರು; ಲೀನವಾಗಿರು (ಕ). **ಅಡಕಮಾಗು, ಅಡಕವಾಗು** = ೧. ಅಡಗಿರು; ಮರೆಯಾಗಿರು: ಒಡೆಯನಾಜ್ಞಾಪಿಸಿದ ಕುಜುಹಿನ ಕಡುಹು ಕೆಲವಿವೆ ಕಾಣಿಸದೆ ಕೆಲವಡಕವಾಗಿವೆ ಯೇನಮಾಡುವೆನೆನುತ ಮನದೊಳಗೆ ಮಿಡುಕುವನು ಸಂತೈಸುವನು (ತೊರರಾ. ೫-೨-೭೮); ನರಹರಿಭಟ್ಟರ ಮಾತಿನಲ್ಲಿ ಅಡಕವಾದ ದಾರಿದ್ರ್ಯದ ಕಲ್ಪನೆಯು ಸ್ಪಷ್ಟವಾದಾಗ ಅವರು ವಿಹ್ವಲರಾದರು (ಹಬ್ಬಬ. ೧೦೮). ೨. ವಶವಾಗು; ಅಧೀನವಾಗು: ಅರಾರ್ಗಮಡಕಮಾಗದ ವಾರುವರನ್ನಂಗಳಳ್ಕಿ ಬಸಮುಪ್ಪುದಜಿಂ (ಚಿಕವಿ. ೪-೧೬೨). ೩. ಸೇರಿಹೋಗು; ಲೀನವಾಗು: ಒಂದಕ್ಷೋಹಿಣೀ ಸಂಖ್ಯೆಯುಳ್ಳ ಚತುರಂಗಬಲವು . . . ಸಮುದ್ರವನ್ನು ಸೇರುವ ನದಿಯಂತೆ, ಪಾಂಡವರ ಬಲವನ್ನು ಪ್ರವೇಶಿಸಿ ಅಡಕವಾಯಿತು (ಕೃವಾಉ. ೨೩). ೪. (ಸಾಲ ಮೊದಲಾದವಕ್ಕೆ ಆಧಾರಪಡಿಸಿದ್ದರಲ್ಲಿ) ಒಳಪಟ್ಟಿರು: ವೆಂಕಪ್ಪಯ್ಯನ ಮೊದಲನೆಯ ಮಗಳು ಸರೋಜಳ ಮದುವೆಗೆ ಮಾಡಿದ್ದ ಸಾಲಕ್ಕೆ ಆ ತರೀಜಮಿಾನೂ ಅಡಕವಾಗಿತ್ತು (ವಿದ್ಯಾರಿ. ೬).

[< ಅಡಗು$_1$. ‖ **ತಮಿ.** **ಮಲ.** ಅಡಕ್ಕವುವ್; **ತುಳು.** ಅಡಕ; **ತೆಲು.** ಅಡಕಮು, ಅಡಕುವ, ಅಣಕುವ]

**ಅಡಕ**$_2$ (ನಾ). ೧. ಒಂದರ ಮೇಲೊಂದನ್ನು ಪೇರಿಸಿರುವುದು; ಒಟ್ಟಿಲು; ರಾಶಿ. 'ಹುಲ್ಲಡಕ' ಪರಾ. ೨. ಕೂಡಿಡುವುದು; ದಾಸ್ತಾನು (ಕ).

**ಅಡಕದ ಕೋಣೆ** = ಪದಾರ್ಥಗಳನ್ನು ಕೂಡಿಡುವ ಕೋಣೆ; ಉಗ್ರಾಣ: ಸಾಣೆಕಲ್ಲನುಲೇಪನದ ಪಾಷಾಣವಡಕೆಲೆಯಡಕೆಗತ್ತಿಯು ಹಡಪ ಸಂಬಳಿಗೆ ವೀಣೆ ವಸ್ತ್ರಾಭರಣದಡಕದ ಕೋಣೆ ಬೀಯಗವುಚಿತವಸ್ತು ಶ್ರೇಣಿಯಿಂದೊಪ್ಪಿದುದು ವಾರನಿತಂಬಿನೀಸದನ (ಬಸವು. ೧೨-೧೦).

[< ಅಡಕು$_2$]

**ಅಡಕಂಗೆಯ್**, ಅಡಕಗೆಯ್ (ಕ್ರಿ). ಒಳಕೊಳ್ಳು; ಲೀನಗೊಳಿಸು: ಕಾರ ಮೇಘದೊಳು ಮಿಂಚಡಗಿ ತೋಜದ ತೆಜದಿ, ನೀರೊಳಡಕಂಗೆಯ್ದ ಕಿಚ್ಚಿನಂತೆ, ಬೀಜುತಿಹ ಫಲರಸದೊಳಿಪ್ಪ ನವರುಚಿಯಂತೆ (ಶಿವಗೀ. ೧-೨). **ಅಡಕಗೆಯ್**: ಅವನಿಧರಸುತೆಯರಸನೊಲಿದು ಕರವೀರ ಭೂಧವನ ತನ್ನೊಳಡಕಗೆಯ್ಯಲಾಕ್ಷಣ ಸಗ್ಗದವರು ಪೂಮಳೆಗಜಿಯೆ (ಪ್ರೌಢರಾ. ೩-೩೪). [ಅಡಕ$_1$ + ಗೆಯ್]

**ಅಡಕಗೆಯ್** 'ಅಡಕಂಗೆಯ್' ನೋ.

**ಅಡಕಗೊಳಿಸು** (ಕ್ರಿ). ಒತ್ತಿ ಗಾತ್ರವನ್ನು ಚಿಕ್ಕದು ಮಾಡು; (ಹತ್ತಿಯನ್ನು ಚೀಲದಲ್ಲಿ ಹೇಗೋ ಹಾಗೆ) ಅಮುಕಿ ಒಳಸೇರಿಸು (ಕ). [ಅಡಕ$_1$ + ಕೊಳ್ + -ಇಸು$_3$]

**ಅಡಕತ್ತರಿ** 'ಅಡಕೆಕತ್ತರಿ' ನೋ.

**ಅಡಕತ್ತಿ** 'ಅಡಕೆಗತ್ತಿ' ನೋ.

**ಅಡಕನಗೆ** (ನಾ). ಅದುಮಿಟ್ಟುಕೊಂಡ ನಗೆ; ಪರಿಮಿತವಾದ ನಗೆ: ಅಡಕನಗೆ ಕುಲುಕುಲಿಸಿ ಕಣ್ಣಮುಚ್ಚಾಣಿಕೆಯಲಿ ಮುಟ್ಟಾಟ ಹುಡುಕಾಟ ವಾಡುತಿಹುದು (ಗಂಗಾತ. ೬೧-೧೧). [ಅಡಕ$_1$ + ನಗೆ]

**ಅಡಕಮಾಡು** (ಕ್ರಿ). ೧. ಕುಗ್ಗಿಸು; ಸಂಕ್ಷೇಪಿಸು; ಸಂಗ್ರಹಮಾಡು. ೨. ಒಳಗೆ ಸೇರಿಸು; ಒಳಪಡಿಸು: ಇನ್ನು ಕೆಲವರು ಧ್ವನಿಯ ಬಗೆಯೆಲ್ಲವನ್ನೂ ಲಕ್ಷ್ಯಾರ್ಥದಲ್ಲೇ ಅಡಕಮಾಡಲು ನೋಡಿದರು (ಭಾರವಿಾ. ೭೮).

[ಅಡಕ$_1$ + ಮಾಡು$_1$]

**ಅಡಕಲಿಡು** 'ಅಡಕಿಲಿಡು' ನೋ.

**ಅಡಕಲು** 'ಅಡಕಿಲ್' ನೋ.

**ಅಡಕಲುಕೋಣೆ** (ನಾ). ಸಾಮಾನನ್ನು ಅಡಕಲಾಗಿ ಇಟ್ಟಿರುವ ಕೋಣೆ; ಉಗ್ರಾಣ: ಅಡಿಗೆಮನೆಯಲ್ಲಿಯೋ ಅಡಕಲುಕೋಣೆಯಲ್ಲಿಯೋ ಕುಳಿತು ಹೊನ್ನಮ್ಮ ಏನೇನೋ ಮನೆಗೆಲಸ ಮಾಡುತ್ತಿರುವಳು (ಜನಜೀ. ೪೦). [ಅಡಕಲು (< ಅಡಕಿಲ್) + ಕೋಣೆ]

**ಅಡಕಲುಗಡಿಗೆ** (ನಾ). ಒಂದರ ಮೇಲೊಂದರಂತೆ ಪೇರಿಸಿಟ್ಟ ಗಡಿಗೆಯ ಸಾಲು: ಧಡಧಡನೆ ಮತ್ತೂ ನಾಲ್ಕು ಹೆಜ್ಜೆ ಮುಂದೆ ಹೋಗಿ ಆ ಮೂಲೆಯಲ್ಲಿರುವ ಅಡಕಲುಗಡಿಗೆಗಳನ್ನೂ ನುಗಿಸಿದಳು (ಬರಹಾ. ೩೪).

[ಅಡಕಲು (< ಅಡಕಿಲ್) + ಗಡಿಗೆ]

**ಅಡಕಲೇರಿಸು** (ಕ್ರಿ). ಒಂದರ ಮೇಲೊಂದನ್ನು ಇಡು; ಪೇರಿಸು: ನೀನು ಅಡಕಲೇರಿಸಿದ ಗಡಿಗೆಗಳನ್ನು ಯಾರು ಮಾಡಿದರು? (ಮುಂಬಯಿ. ೪-೧೬೩); ಒಂದರ ಮೇಲೊಂದು ಅಡಕಲೇರಿಸಿದ ಟ್ರಂಕುಗಳ ಹಿಂದೆ ಬಾಳೆಯ ಎಲೆಗಳು ಸೂರೆಯಾಗಿ ಬಿದ್ದಿದ್ದುವು (ವೈನಿ. ೧೧).

[ಅಡಕಲು (< ಅಡಕಿಲ್) + ಏರಿಸು (< ಏಜಿಸು)]

**ಅಡಕವಂತ** (ನಾ). ಸಂಯಮದಿಂದ ವರ್ತಿಸುವವನು ; ವಿಧೇಯ : ಪಱುಗೋಲನೇಱಿದನಂತಡಕಮುಳ್ಳನುಂ ರಾಜಸೇನಕನಂತಡಕವಂತನುಮಪ್ಪುದು (ಧರ್ಮಾಮೃ. ೫–೯೯) ; ಸಕಲಪರೀಷಹಂಗಳಂ ಗೆಲಲಾರ್ಪರುಂ ಅಡಕವಂತರುಂ ಪರಮತಪೋಧನರುಮಪ್ಪ ಮಹಾನುಭಾವರುಂ (ಶಾಸ್ತ್ರಟೀ. ೯೫–೯). [ಅಡಕ$_1$ + –ವಂತ]

**ಅಡಕಿಲ್**, ಅಡಕಲು, ಅಡಕಿಲು, ಅಡಿಕಿಲ್, ಅಡಿಕಿಲ, ಅಡಿಕಿಲಿ, ಅಡಿಕಿಲು$_1$ (ನಾ). ೧. ಒಂದರ ಮೇಲೆ ಒಂದನ್ನು ಪೇರಿಸಿ ಇಡುವುದು; ಒಂದರ ಮೇಲೆ ಒಂದನ್ನು ವರಸೆಯಾಗಿ ಇಡುವುದು; ಒಂದರ ಮೇಲೆ ಒಂದನ್ನು ಪೇರಿಸಿ ಇಟ್ಟದ್ದು : ಅಡಕಿಲ ಮಡಕೆಗಳೆಂಟುಂ ಬೆಡಂಗು ನಿಲೆ ನೆಲವುವಿಡಿದು ನಿಲ್ವಂತೆ (ಶಾಂತಿಪು. ೧೨–೫೧) ; ಅರಸಿನ ಮೇಲರಸಾದೊಡೆ ಮೊದಲಾಗೆ ನಾಡೆಲ್ಲಂ ಕೆಟ್ಟು ಪಾೞಪ್ಪುದೆಂದೊಡೆ ಜಗದೊಳಡಕಿಲ ದೈವಮಾದೊಡೆ ಕಿಡದಿರ್ಕುಮೆ (ಧರ್ಮಾಮೃ. ೭–೪೧) ; ಏಳ್ಲೋಕಮುಮನಡಕಿಲ್ಗಳಾಗಿ ನಿರ್ಮಿಸುತಲಿ (ಚೆಬಪು. ೧೫–೫). ೨. ರಾಶಿ ; ಒಟ್ಟಿಲು : ಎಲ್ವಿನ ಪರ್ವತಂ ಕರುಳ್ಪಿಣಿಲ ಪೊದಟ್ಕೆರುಂಡದಡಕಿಲ್ ನರದುರ್ಬು (ಜಗವಿ. ೭–೮೪). **ಅಡಕಲು** : ೧. ಅಲ್ಲಿ ಗಡುಗಂಚಿಗಳ ಮೇಲೆ ಕಾಳಿನ ಚೀಲಗಳ ಸಾಲುಗಳು ಅಡಕಲಾಗಿ ನಿಂತಿವೆ (ಹಬ್ಬಬ.೧೯). ೨. ಗಾಳಿಗೂ ಸ್ಥಳವಿಲ್ಲದಷ್ಟು ಜನರು ಮೂರನೆಯ ವರ್ಗದ ಒಂದು ಡಬ್ಬಿಯಲ್ಲಿ ಕಿಕ್ಕಿರಿದು, ಅಡಕಲಾಗಿ ತುಂಬಿರುವಾಗ, ನಿಲ್ಲುವುದಕ್ಕೂ ಸಹ ಜಾಗೆಯಿಲ್ಲದಂತಹ ವಾಹನದಲ್ಲಿಯೂ ಸೊಗವನ್ನು ಕಾಣುವುದೀಗ ನಿಜವಾದ ರಸಿಕತೆಯೆನ್ನಬಹುದು (ಮುಂಗಾಪು. ೨೬). **ಅಡಕಿಲು** : ೧. ತುಡುಕಿದವು ತಂಬಟದ ದನಿ ಜಗದಡಕಿಲನು (ಕುವ್ಯಾದ್ರೋ. ೧–೪೭) ; ಪಿಡಿದು ಚಾಪವನೇಱಿಸಿಯೆ ಜೇವಡೆಯೆ ಜಗದಡಕಿಲು ಜರಿದು ಗಿರಿ ಕೆಡೆದುರುಳಿದವು (ಸಾಳ್ವಭಾ. ೮–೬೯) ; ಅಡಕಿಲನಡಸಬಲ್ಲುದೆಯಾ ಶ್ವಾನನು ಕೆಡಹಬಲ್ಲಂತೆ ಸುಕೃತಿಯ (ಗೋಪಟೀ. ೧–೩೭) ; ಅದರಲ್ಲಿ ಗಿರ್ದ ಭಾಗ ಜಗುಲಿ. ಇನ್ನೊಂದು ಗಿರ್ದ ಭಾಗ ಗಡಿಗೆಗಳ ಅಡಕಿಲು (ಕಾಳರಾ. ೨೫). ೨. ಹೂರಿಗೆಗಳಿಡುಗುಡ್ಡೆ ಸಣ್ಣ ಸೇವಗೆಯ ಮೆದೆಯೆಱೆಯಪ್ಪಡಡಕಿಲಿಡ್ಡಲಿಗೆಗಳ ಬೋನ ದೋಸೆಯ ಲಗ್ಗೆ (ಸಮ್ಯಕೌ. ೭–೨೫). **ಅಡಿಕಿಲ್** : ೧. ಕೆಂಡದೊಂದಡಿಕಿಲ್ ಮಾಣಿಕದಿಂದೆ ಕಾಯ್ವು ತಪನಂ ಚಂದ್ರಂ . . . ಎನಿಪ್ಪುದೊಂದು ಪೆಸರಂ ತಾಂ ಮಾಡಿದಂತಿರ್ದುದಾ ಕಡುಪಿಂ ತನ್ನಯ ಕಾಲದಲ್ಲಿ ಹಿಮರಾಜಂ (ಗಿರಿಕ. ೯–೭೦). **ಅಡಿಕಿಲ** : ೧. ಜಗದಡಿಕಿಲದ ಜೋಡಿಯ ಜರುಹಿದುವು (ಕುವ್ಯಾಅ. ೧೫–೨೦) ; ತಿಳಿನೀಲಿಯ ಬಾನಂಚಿನ ಕರೆಗೆ ಪ್ರಭಂಜನವೇ ಅಡಿಕಿಲವಾಗೆ (ಚೈತ್ಯಾಲ. ೩೭). **ಅಡಿಕಿಲಿ** : ೧. 'ಅಡಿಕಿಲಿಕಲ್ಲು' ಪರಾ. **ಅಡಿಕಿಲು$_1$** : ೧. ಸತ್ಯದಡಿಕಿಲು ನಿತ್ಯದುಂಡೆಗಳು ರುದ್ರಾಕ್ಷಿ (ರುದ್ರಾರ. ೫–೫) ; ಸಕಲ ಜಲಧಿಗಳೇಕರೂಪದಲಿ ಧರೆಯ ಮುಳುಗಿಸಿ ಮೇಲೆ ಮೇಲುಬ್ಬರಿಸಿ ಜಗದಡಿಕಿಲಿನ [ಪಾಠಾಂ. ಲದ] ಜೋಡಿಯ ಜರುಹಿದುವು (ಕುವ್ಯಾಅ. ೧೪–೧೯) ; ಶಾರ್ಙ್ಗವ ಪಿಡಿದೆತ್ತಿ ಶಿಂಜಿನಿಗೊಳಿಸಿ ನುಡಿಸಿದ ಶ್ರೀಕೃಷ್ಣ ಬ್ರಹ್ಮಾಂಡಭಾಂಡಗಳಡಿಕಿಲುಹೊಱೆ ಮುಗಿವಂತೆ (ಮೋಹತ. ೩೯–೨೩).

**ಅಡಕಲ ಕೋಣೆ, ಅಡಕಿಲ ಕೋಣೆ** = ಅಡಕಲು ಕೋಣೆ : ನಮ್ಮ ಅಡಕಿಲ ಕೋಣೆಗೆ ನಾನು ಓಡುತ್ತಾ ಹೋದೆನು (ಚೀನಬಾ. ೭೪) ; ಅವರ ಹಿರಿಯ ಮಗನು ವ್ಯಾಧಿಯಿಂದಲೋ ಬಾಧೆಯಿಂದಲೋ ಮನೆಯ ಒಂದು ಭಾಗವನ್ನು (ಇದ್ದ ಒಂದು ಅಡಕಲ ಕೋಣೆ) ಹಿಡಿದು ನರಳುತ್ತಿದ್ದ (ನಿರಾಭ. ೪೩). **ಅಡಕಲ ಗಡಿಗೆ** = ಅಡಕಲುಗಡಿಗೆ : ಒಲೆಯಲ್ಲಿ, ಕುಳ್ಳಿನಲ್ಲಿ, ಇದ್ದಲಿಯಲ್ಲಿ, ಕಟ್ಟಿಗೆಗಳಲ್ಲಿ, ಹಾಲುಮೊಸರಿನ ಕಪಾಟಿನಲ್ಲಿ, ಅಡಕಲ ಗಡಿಗೆಗಳಲ್ಲಿ ನಾಯಿಗಳೇ ನಾಯಿಗಳು ಅವಳ ದೃಷ್ಟಿಗೆ ಬೀಳುತ್ತಿದ್ದವು (ಮೊಪಾಸ. ೨೫). **ಅಡಕಿಲಾಗು, ಅಡಿಕಿಲಾಗು** = ಒಂದರ ಮೇಲೊಂದು ಕೂಡು ; ರಾಶಿಯಾಗು : ಕುಲಶೈಲವೇೞುಮೊಂದಡಕಿಲಾದುವೆನಲ್ (ಶಾಂತಿಪು. ೩–೨೦) ; ಪೊಡವಿ ಬಾಯ್ವಿಟ್ಟು ನರರಂ ತಿಂಬೊಡಂ ಮೇಗಣಡಿಕಿಲಾಗಿರ್ದಜಾಂಡಂಗಳೊಂದೊಂದಾಗಿ ನಡುನೆತ್ತಿಯೊಳ್ ಬೀಳ್ವೊಡಂ . . . ಶಿವಭಕ್ತರಿತರಧನಕೆಳಸುವರೆ (ಪದ್ಮರಾ. ೬–೧೭).
[ಅಡಕ್ಕು$_3$ (< ಅಡುಕು) + –ಇಲ್]

**ಅಡಕಿಲಿಡು**, ಅಡಕಲಿಡು (ಕ್ರಿ). ಒಂದರ ಮೇಲೊಂದನ್ನು ಪೇರಿಸು : ಇಲ್ಲಿ ಸಪ್ತಪಾಷಾಣಮೆಂಬುವೊಳವು, ಅವನೊಂದಱ ಮೇಲೊಂದನಡಕಿಲಿಟ್ಟು ನಿಱಿಸಿದಾತಂ ಚಕ್ರವರ್ತಿಯಪ್ಪನೆನೆ (ಚಾವುಂಪು. ೧೦೪–೨೪) ; ಸೊಡರ್ಗುಡಿಯಗೆಯಂ ಪಚ್ಚೆಯ ಪಡಲಗೆಗಳೊಳಡಕಿಲಿಟ್ಟು ರತಿ ಪೊಯ್ದವೊಲೇಂ ಜಡಿದುದೊ ಸಂಪಗೆನನೆಯಿಂ (ಅನಂಪು. ೬–೭೯) ; ತಪ್ಪದೆ ಮೂಱುವಾಯುವಿನಾಧಾರದಿಂದಿಪ್ಪುದು ಲೋಕ ಮತ್ತೊಳಗೆ ಇಪ್ಪುದು ತ್ರಸನಾಳ ಲೋಕ ಮೂಱದಱೊಳಗೊಪ್ಪಿಹುದಡಕಿಲಿಟ್ಟಂತೆ (ನಾಗಕು. ೨–೧). **ಅಡಕಲಿಡು** : ಇಡುತಲಾನೆಯ ಕೊಂಡು ಕಡುಕೆಯ್ವ ಗಜಘಟೆಯನಡಕಲಿಟ್ಟಂ ಹೆಣನ ಮೇಲೆ ಹೆಣನಂ (ಕುಮುರಾ. ೬–೩೭).
[ಅಡಕಿಲ್ + ಇಡು]

**ಅಡಕಿಲು** 'ಅಡಕಿಲ್' ನೋ.

**ಅಡಕಿಲುಗೊಳ್** 'ಅಡಕಿಲ್ಗೊಳ್' ನೋ.

**ಅಡಕಿಲುಜಗ** (ನಾ). ಒಂದರಮೇಲೊಂದರಂತೆ ಜೋಡಣೆಯಾಗಿರುವ ಲೋಕಸಮೂಹ : ಗಾಂಡೀವಿ ಚಾಪವ ಮಿಡಿದ ನಿಷ್ಠುರರಾವತಿವಿದುದು ಜರಿದವಡಕಿಲುಜಗದ ಜೋಡಿಗಳ (ಕುವ್ಯಾದ್ರೋ. ೯–೩೭) ; ಬಿರಿಯೆ ನೆಲನಳ್ಳಿಱೆವ ವಾದ್ಯದ ಹರುಷತರ ನಿರ್ಘೋಷದಬ್ಬರ ಜರಿಹಿತಡಕಿಲುಜಗದ ಜೋಡಿಯನರಸ ಕೇಳೆಂದ (ಕುವ್ಯಾಶ. ೨–೫).
[ಅಡಕಿಲು (< ಅಡಕಿಲ್) + ಜಗ]

**ಅಡಕಿಲುವಾಸು** 'ಅಡಕಿಲ್ವಾಸು' ನೋ.

**ಅಡಕಿಲ್ಕೂಟ** (ನಾ). ಒಂದರ ಮೇಲೊಂದನ್ನು ಪೇರಿಸಿದಂತೆ ಕಾಣುವ ಶಿಖರಗಳ ಸಾಲು : ಗಂಡಶೈಲಮಡಕಿಲ್ಕೂಟಂ . . . ರಯ್ಯಮಾ ಬೆಟ್ಟದೊಳ್ (ಸೂಕ್ತಿಸು. ೩–೨). [ಅಡಕಿಲ್ + ಕೂಟ$_2$]

**ಅಡಕಿಲ್ಗಿರಿ** (ನಾ). ಒಂದರ ಮೇಲೊಂದರಂತೆ ಜೋಡಿಸಿದ ಬೆಟ್ಟಗಳ ರಾಶಿ : ಕಪಿವ್ರಜಂ ಪರಿದು ಬೆಟ್ಟಗಳಂ ನೆಱೆ ಕಿಳ್ತು ನೆತ್ತಿಯೊಳ್ ಸಂದಿಸಿ ಮೂಱುನಾಲ್ಕನಡಕಿಲ್ಗಿರಿಯಾಗಿರೆ ಪೊತ್ತು ಬೇಗದಿಂ ತಂದು ಸಮುದ್ರಮಂ ಕ್ಷಣದೆ ಕಟ್ಟಿದರ್ (ಧರ್ಮಪ. ೮–೨೧). [ಅಡಕಿಲ್ + ಗಿರಿ$_1$]

**ಅಡಕಿಲ್ಗೊಡೆ** (ನಾ). ಕೊಡೆಯ ಮೇಲೆ ಏರಿಸಿದ ಕೊಡೆ : ಕಡುಚೆಲ್ವ ತನಕ್ಕಡಕಿಲ್ಗೊಡೆವಿಡಿದಂತಳಿಗಳೋಳಿ ಮುಡಿಯಲರ್ಗಂಪಿಂಗೆಡೆವಿಡದೆ ಮೇಲೆ ತುಱುಗಿರೆ (ಶಾಂತೀಶ್ವ. ೧೦–೬೮). ℙ ಇದು ಸಾರ್ವಭೌಮತ್ವದ ಒಂದು ಚಿಹ್ನೆ. 'ಮುಕ್ಕೊಡೆ' ಪರಾ. [ಅಡಕಿಲ್ + ಕೊಡೆ$_1$]

**ಅಡಕಿಲ್ಗೊಳ್**, ಅಡಕಿಲುಗೊಳ್, ಅಡಿಕಿಲ್ಗೊಳ್ (ಕ್ರಿ). ೧. ಒಂದರ ಮೇಲೊಂದಾಗಿ ಪೇರಿಸಿರು : ಅಡಕಿಲ್ಗೊಂಡೊಪ್ಪುವ ಕೌಳುಡೆಯಿಂ ಸೊಗಯಿಸುವ ಪಾಸಿನೊಳ್ ಪಟ್ಟಿರ್ದಂ (ಕಾದಂಉ. ೮೮) ; ಮೃಡನಡಕಿಲ್ಗೊಂಡ ದೋರ್ಮ್ಮಂಡಲಂ ತಾನೆನಿಕುಂ ಪ್ರಾಕಾರಮಾಶಾಮದಕರಿಕಟ ಕಂಡೂವಿನೋದಪ್ರದೇಶಂ (ಎಇ. XIII, ೪೭–೬೬ ; 1112). ೨. ಒತ್ತೊತ್ತಾಗು ; ದಟ್ಟವಾಗು : ಕಡೆಗಡೆಯೊಳಡಕಿಲ್ಗೊಂಡು ನೋಡುವ ಜನಂಗಳಧರಬಂಧೂಕದ ನಾಸಿಕಾಚಂಪಕದ ನಯನಕುವಳಯದ (ವರ್ಧಪು. ೯–೪೩ ವ) ; ಬಡವರ್ಗೊಲವಿಂ ಸಾಹ್ಯಮನೊಡರಿಸದವರೆಡೆಯೊಳಿರ್ಪ ವಿತ್ತಸಮೂಹಂ ನಡುವೂರೊಳಗಿರ್ಪಿಟ್ಟಿಯೊಳಡಕಿಲ್ಗೊಂಡೆಸೆವ ಪಣ್ಗೆ ಪಾಸಟಿಯಕ್ಕುಂ (ನೀತಿಮಂ. II, ೩೪೮). **ಅಡಕಿಲುಗೊಳ್** : ೨. ಬಂದು ಪುಳಕಂಗಳಡಕಿಲುಗೊಳುತ್ತಂ ಪೊಣ್ಮೆ (ಮೆಱೆಕಿರ. ೩೩–೧).

**ಅಡಿಕಿಲ್ಗೊಳ್** : ೧. ಗೋತ್ರಾಚಳಂಗಳ್ ಬಿಡದೊಡನಡಿಕಿ[ಪಾಠಾಂ. ಡಕೀ]ಲ್ಗೊಂಡೊಡಂ (ಸಮುಪ. ೧೫–೮೭) ; ಚಾಂದ್ರನಿರ್ಮಳಬಿಂಬತ್ರಯ ಮೊಳ್ಪಿನಿಂದಮಡಿ[ಪಾಠಾಂ. ಡ]ಕಿಲ್ಗೊಂಡಂತೆ ಚೆಲ್ವಾದುದಂ ನಲವಿಂ ದೆತ್ತಿದರಿಕ್ಕಿದರ್ ಚಮರಮಂ (ಪಾರ್ಶ್ವಪು. ೧೬–೧೫೮) ; ಅಡಿಕಿಲ್ಗೊಂಡೊಪ್ಪುವೇೞುಂ ನೆಲೆಗಳ ಮಣಿಮಾಡಂಗಳಿಂದಂ (ಬಾಧಪು. ೧–೧೫೫).
[ಅಡಕಿಲ್ + ಕೊಳ್$_{1}$]

**ಅಡಕಿಲ್ಜವ್ವನ** (ನಾ). ಏರಿಸಿದ ಯೌವನ : ಪಡೆದಂ ಪದ್ಮಜನೆಂತೊ ಭೂಷಣಕೆ ಭೂಷಾಲಕ್ಷ್ಮಿಯಂ ಜವ್ವನಕ್ಕಡಕಿಲ್ಜವ್ವನಮಂ ವಿರಾಜಿಸುವ ಲಾವಣ್ಯಕ್ಕೆ ಲಾವಣ್ಯಮಂ (ಜಗವಿ. ೧೦–೭೧). [ಅಡಕಿಲ್ + ಜವ್ವನ]

**ಅಡಕಿಲ್ದಟ್ಟೆ** (ನಾ). ಒಂದರ ಮೇಲೊಂದಾಗಿ ಪೇರಿಸಿದ ತಟ್ಟೆ : ಕಂಪುಗುವ ಪಾರಿಜಾತದ ಮಂದಾರದ ದುಂಡುಮಲ್ಲಿಗೆಯ ಸೆಂಡುಮಲ್ಲಿಗೆಯ ಬಿರಿಮುಗುಳಂ ತಿಱಿದೊಟ್ಟ ಮಾಣಿಕದಡಕಿಲ್ದಟ್ಟೆಯೊಳ್ ತುಂಬಿ (ರಾಮಾಶ್ವ. ೬೩–೧೭). ℙ ಈ ಪ್ರಯೋಗದಲ್ಲಿ 'ಅಡಕಿಲ್ವಟ್ಟೆ' ಎಂದು ಕೆಲವು ಮುದ್ರಣಗಳಲ್ಲಿ ಕಾಣಬರುವುದು ಅಪಪಾಠ.
[ಅಡಕಿಲ್ + ತಟ್ಟೆ]

**ಅಡಕಿಲ್ದೆರೆ** (ನಾ). ಒಂದರ ಮೇಲೊಂದು ನುಗ್ಗಿಬರುವ ತೆರೆ; ಸಾಲು ಸಾಲಾಗಿ ಬರುವ ಅಲೆ : ಇಡುಕುದೆರೆಯಟ್ಟುದೆರೆ ಕಟ್ಟುದೆರೆಯಡಕಿಲ್ದೆರೆಗಳುಲಿದು ಹಳಚಲು ಘುಜಹು ಮುಱುಗಿ ಕಡೆದು ಮಲ್ಲಣಿಗಡಲನೊಡೆಗಲಿಸಿ ಕುಡಿದು (ಸೋಮುಚ. ೧–೬೫). [ಅಡಕಿಲ್ + ತೆರೆ$_{3}$]

**ಅಡಕಿಲ್ಬೊಟ್ಟು** (ನಾ). (ಹಣೆಯಲ್ಲಿ) ಒಂದರಮೇಲೊಂದರಂತೆ ಇಟ್ಟುಕೊಂಡ ಬೊಟ್ಟು ; ಬೊಟ್ಟಿನ ಮೇಲೆ ಬೊಟ್ಟು : ಮಳಯಜ ಮೃಗಮುದಪಂಕಂಗಳಿನಡಕಿಲ್ಬೊ[ಪಾಠಾಂ. ಕಿಲ್ವೊ]ಟ್ಟನೊರ್ವಳಾಕೆಯ ಭಾಳಸ್ಥಳಿಯೊಳಳವಡಿಸಿದಳ್ ಸ್ಮರಕುಳದೇವತೆ ಮಿಸುಪ ನೊಸಲ ಕಣ್ದೋಱಿದವೋಲ್ (ಚಂದ್ರಪು. ೬–೬೫). [ಅಡಕಿಲ್ + ಬೊಟ್ಟು$_{2}$]

**ಅಡಕಿಲ್ವಾಸು**, ಅಡಕಿಲುವಾಸು, ಅಡಿಕಿಲುವಾಸು, ಅಡಿಕಿಲ್ವಾಸು (ನಾ). ಒಂದರಮೇಲೊಂದಾಗಿ ಪೇರಿಸಿದ ಹಾಸಿಗೆ : ಸಜ್ಜೆವನೆಯ ಸಿರಿಮಂಚದ ಹಂಸತೂಳದಡಕಿಲ್ವಾಸಿನೊಳ್ ಭರದಿಂ ನೆರೆವಾಗಳ್ (ಗಿರಿಕ. ೪–೧೪೮ ವ) ; ನಾರಿ ಶಯ್ಯಾಗೃಹದ ಹಂಸತೂಳದ ತಲ್ಪದೋರಣದ ಚೆಲ್ವಿನಡಕಿಲ್ವಾಸಿನೊಳ್ ಪತಿಯ ಸಾರಿ (ಭಾವಚಿಂ. ೩–೪೯). **ಅಡಕಿಲುವಾಸು**: ಬಾಳೆಗಳ ಮೃದುದಳದ ನಳಿನಮೃಣಾಳದಡಕಿಲುವಾಸಿನಲಿ ಭೂಪಾಲಕನ ನೂಕಿದಸು (ತೊರರಾ. ೩–೧೧–೪೬). **ಅಡಿಕಿಲುವಾಸು** : ತರಿಸಿದನು ನವಹೇಮಮಣಿಭಾಸುರದ ಮಂಚದ ಮೇಲೆ ಲಲಿತಾಸ್ತರಣದಡಿಕಿಲುವಾಸ[ಸು]ಗಳ ನಿರ್ಮಳವಿಹಾರಗಳ (ಕುವ್ಯಾಸ. ೮–೫). **ಅಡಿಕಿಲ್ವಾಸು** : ಕಾಂತನಿರ್ದ ಸಿರಿಮಂಚದಂಚೆದುಪ್ಪುಳಡಿಕಿಲ್ವಾಸಿನೊಳ್ ಮೆಲ್ಲನೆ ಚೆಲ್ಲದಿಂ ಕುಳ್ಳಿರ್ದು (ರಾಜಶೇ. ೪–೧೪ ವ). [ಅಡಕಿಲ್ + ಪಾಸು$_{2}$]

**ಅಡಕಿಲ್ವುಣ್** (ನಾ). ಹುಣ್ಣಿನ ಮೇಲೆ ಹುಣ್ಣು : ಉರದಡಕಿಲ್ವುಣ್ಣಂ ಕರ್ದುಕಿರದಧರದ ಪುಣ್ಗೆ ವಾಯ್ದು ಮಿಾಂಗಗಿದು ತಳೋದರಿ ದರಿಯುನೆಯ್ದು ವಿನಮಾ ಸರೋವರಂ ಕದಡೆ ಬೆರ್ಚಿ ದೆಸೆದೆಸೆವರಿದಳ್ (ಶಾಂತಿಪು. ೮–೪೪).
[ಅಡಕಿಲ್ + ಪುಣ್]

**ಅಡಕಿಲ್ವೆಸರ್** (ನಾ). ಇದ್ದ ಹೆಸರಿನ ಮೇಲೆ ಮತ್ತೆ ಸೇರಿಸಿಕೊಂಡ ಹೆಸರು ; ಪೇರಿಸಿಕೊಂಡ ಹೆಸರು : ಧರೆಯುಂ ಕುಡುವಂದೆನಗಂ ಗುರುತನಗಂ ರಾಜನಾಮಮಂ ಕೊಟ್ಟೊಡೆ ನೋಡಿರೆ ತನಗೀಗಳ್ ರಾಜಾಧಿರಾಜನೆಂದಿಟ್ಟುಕೊಂಡನಡಕಿಲ್ವೆಸರಂ (ಆದಿಪು. ೧೪–೭೮).
[ಅಡಕಿಲ್ + ಪೆಸರ್]

**ಅಡಕಿಲ್ವೆಳ್ಪು** (ನಾ). ಬಿಳುಪಿನ ಮೇಲೆ ಬಿಳುಪು; ರಾಶಿ ಹಾಕಿದ ಬಿಳಿಯ ಬಣ್ಣ : ಗಂಗೆಗಡಲ್ಗಳ ನೊರೆಗಂ ತಿಂಗಳ ಬೆಳ್ಪಿಂಗಮೊದವಲಡಕಿಲ್ವೆಳ್ಪಿಂ ಸಂಗಳಿಸಿ ತೀವಿದತ್ತೆಱೆಯಂಗನ ಜಸಮುಖಿಳಭುವನಾಂತರದೊಳು (ಮೈಅರಿ. ೧೯೩೯, ೩೭–೩೧ ; 1096). [ಅಡಕಿಲ್ + ಬೆಳ್ಪು]

**ಅಡಕಿಲ್ವೊಂದು** (ಕ್ರಿ). ಒಂದರ ಮೇಲೊಂದಾಗಿ ಇರುವಂತೆ ಸೇರು : ಬಿಂದುವನುಸ್ವಾರಂ ತಾನೆಂದಕ್ಕುಂ ಸೊನ್ನೆ ಮುತ್ತುವೋಲ್ ವೃತ್ತತೆಯಿಂ ಸಂದಿರ್ಪುದಂತದಡಕಿಲ್ವೊಂದಿರೆ ಮಣಿಗೊಪ್ಪುವೋಲ್ ವಿಸರ್ಗಮೆನಿಕ್ಕುಂ (ಶಮುದ. ೧೧). [ಅಡಕಿಲ್ + ಪೊಂದು$_{1}$]

**ಅಡಕು$_{1}$** 'ಅಡುಕು' ನೋ.

**ಅಡಕು$_{2}$** (ನಾ). ೧. ನಿರ್ಬಂಧ ; ನಿಯಮ ; ಕಟ್ಟಳೆ : ಮಠ ಪರಿಹಾರವ ತೆರುವ ಆಡಕು ಮುಂದಕೆ ಆಯಿನವಳಿ (ಸೌಇಎ. ೧೯೩೧, ಮಂಗಳೂ. ೩೩೫–೯ ; 1335). ೨. ಹಿಡಿತ ; ಸಂಯಮ : '. . . ಒಂದಿಷ್ಟು ಅಡಕಿನಿಂದ ಮಾತುಗಳನ್ನು ವಕ್ರೋಕ್ತಿಗಿಳಿಸಿದರೂ ಭಾವಕ್ಕೆ ಬಾಧೆಯಿದೆಯೇ?' (ನಿರಾಭ. ೩೪). ೩. ನೆಯ್ಗೆಯಲ್ಲಿ ಒತ್ತಿ ಸೇರಿಸಿದ ನಾಲ್ಕು ದಾರದ ಎಳೆ : ಉದಾ— ನಲವತ್ತಡಕಿನ ಸೀರೆ, ಅರುವತ್ತಡಕಿನ ಸೀರೆ.
[< ಅಡಕು$_{1}$ (< ಅಡುಕು). ‖ ತಮಿ. ಅಡುಕ್ಕು]

**ಅಡಕುಪಾತ್ರೆ** (ನಾ). ೧. ಒಂದರಮೇಲೊಂದನ್ನಿಟ್ಟು ಪೇರಿಸಿದ ಪಾತ್ರೆ (ದಕ. ೬). ೨. ಒಂದರೊಳಗೊಂದು ಕ್ರಮವಾಗಿ ಹಿಡಿಸುವ ಪಾತ್ರೆಗಳ ಸಮೂಹ : ಮನೆ ಚಿಕ್ಕದಾಗಿದ್ದರೆ ಅಡಕುಪಾತ್ರೆಗಳನ್ನು ಕೊಂಡುಕೊಳ್ಳುವುದು ಉತ್ತಮ (ರೂಢಿ).
[ಅಡಕು$_{1}$ (< ಅಡುಕು) + ಪಾತ್ರೆ. / ತಮಿ. ಅಡುಕ್ಕುಪ್ಪಾತ್ತಿರಮ್]

**ಅಡಕುಮಡಕೆ** (ನಾ). ಒಂದರ ಮೇಲೊಂದಾಗಿ ಪೇರಿಸಿದ ಮಣ್ಣಿನ ಪಾತ್ರೆ : ನಾನು ಅಡಕುಮಡಕೆ ಸಾಲಲ್ಲಿ ಅಡೀಮಡ್ಕೇಲಿ ಮೂರು ರಾಜರ ಗೋಳ ಮೂರುತಲೆ ರೂಪಾಯ ಬಟ್ಟೇಲಿ ಕಟ್ಟಿಟ್ಟದ್ದೆ (ಹುಟ್ಟಹ. ೧೪೦).
[ಅಡಕು$_{1}$ (< ಅಡುಕು) + ಮಡಕೆ]

**ಅಡಕೆ$_{1}$**, ಅಡಕ್ಕೆ, ಅಡಿಕೆ, ಅಡ್ಕೆ, ಅಳಕೆ (ನಾ). ೧. ತಾಳೆಯ ಜಾತಿಗೆ ಸೇರಿದ ಒಂದು ಮರ; ಕ್ರಮುಕ; ಕೌಂಗು; ಅದರ ಹೂವು, ಹಣ್ಣು, ಕಾಯಿ, ಎಲೆ ಇತ್ಯಾದಿ : "ಗುವಾಕಃ ಪೂಗಃ – ಈ ೨ ಅಡಕೆಯ ಮರಂ" (ಹಲಾಯು. ೩೩–೪೭) ; "ಕ್ರಮುಕಂ ಪೂಗವೆನಲಡಕೆ" (ಮಂಗರಾ. ೩೪–೧೦) ; ಆಡಕೆಯ ಪೇಱಿಂಗೆ ಮೂನೂಱು (ಎಇ. IX, ೨೨–೮ ; 800) ; ಅವಱ ಮೇಲಿರ್ದಲೆಯಡಕೆಯುಮಂ (ಪಂಪಭಾ. ೫–೪೭ ವ) ; ಪಲ್ಲ ಸಂದಿಯಡಕೆಯಂತೆ (ಧರ್ಮಾಮೃ. ೯–೨೩) ; ಸಲೆ ತೂಗಿ ತೊನೆವಡಕೆಗಳ (ತೊರರಾ. ೧–೯–೧೩) ; ಇರ್ತಡಿಗಾಲುವೆಯಿಂದವೆ ನೆಱೆ ಮುಸುಕಿ ಬೆಳೆದ ಚೆಂದೆಂಗೊಳ್ವಾಳೆಯಡಕೆ ಪಸುರೆಲೆವಳ್ಳಿ (ಜಯಕಾ. ೧–೩೮) ; ಐದೂವರೆ ಸಾವಿರ ಅಡಕೇ ಮರನ ಕ್ಷೇತ್ರ (ಎಕ. VI, ಶೃಂಗೇರಿ. ೧೨–೨೮ ; 1629) ; ಅಡಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದು (ಗಾದೆ). ℙ ಕಾಯಡಕೆ, ಗೋಟಡಕೆ, ಚಿಕ್ಕಡಕೆ, ಚೂರಡಕೆ, ನೆಲವತ್ತಿಯಡಕೆ, ಬೆಟ್ಟಡಕೆ, ಹಣ್ಣಡಕೆ ಹೋ. ೨. ಅತ್ಯಂತ ಕಡಮೆ ಬೆಲೆಯ ವಸ್ತು ; ಅಲ್ಪ ಪದಾರ್ಥ : ಒಡಮೆಯನರ್ಥಿಗಿತ್ತೆ ನವನೀತಳಮಂ ಗುರುಗಿತ್ತೆನೀಗಳೊಂದಡಕೆಯುಮಿಲ್ಲ ಕಯ್ಯೊಳ್ (ಪಂಪಭಾ. ೨–೪೬). **ಅಡಕ್ಕೆ** : ೧. 'ಅಡಕ್ಕೆದೋಟ' ಪರಾ. **ಅಡಿಕೆ** : ೧. ಸ್ಥೂಲವಡಿ[ಡ?]ಕೆಯಾದಂತೆ ಸೂಕ್ಷ್ಮ ಪರ್ಣವಾದಂತೆ (ಮೋಳಮಾ. ೧೦೮–೪೩೦) ; ನಿತ್ಯತಾಂಬೂಲ ಯಲೆ ೧೫ಕ್ಕೆ ಅಡಿಕೆ ೩ಕ್ಕೆ (ಎಕ. VI, ಶೃಂಗೇರಿ. ೧೧, ಪು. ೩೭೨–೧೧ ; 1652). **ಅಡ್ಕೆ** : 'ಅಡ್ಕೆತೋಟ' ಪರಾ. **ಅಳಕೆ** : ೧. ತೋಟದಿಂದ ಅಳಕೇ ಮರ ೧೨೦೦ ಕೆ ಗ ೬೦ (ಎಕ. VIII, ತೀರ್ಥಹ. ೬೫–೧೪ ; 1667).

**ಅಡಕೆಗೆ ಎಣಿಸು, ಅಡಕೆಗೆ ಕೊಳ್ಳು, ಅಡಕೆಗೆ ಬಗೆ**=ಒಂದು ಅಡಕೆಯಷ್ಟು ಅಲ್ಪಬೆಲೆಯುಳ್ಳದ್ದಾಗಿ ಭಾವಿಸು ; ಅಲ್ಪವಾಗಿ ಕಾಣು :

ಆ ಭಾರತಿಯುಂ ವಿದ್ಯಾಗುಣಕ್ಕೊಂದಡಕೆಗಮೆಣಿಸಳ್ (ಅರ್ಧನೇ. ೩–೪) ; ಎನ್ನ ಮಾತನೊಂದಡಕೆಗೆಣಿಸದೆ ಬಂದು ಕೈಪಿಡಿದನೆಮ್ಮಯ್ಯಂ (ಸೋಮುಚ. ೨–೧೩೫); ಆತನ ಮಾತನೊಂದಡ[ಪಾಠಾಂ. ಡಿ]ಕೆಗೆ ಕೊಳ್ಳಂ (ಭಾಷಾಭೂ. ೪–೮೨) ; ನೀನಾತನನೊಂದಡಕೆಗೆ ಬಗೆದ್ಯೆ (ಶಬ್ದಾನು. ೨೧೮–೧೪).

[ದೇ. ‖ **ತಮಿ.** ಅಡ್ಕೈಕ್ಕಾಯ್ ; **ಮಲ.** ಅಟಕ್ಕ, ಅಟಿಕ್ಕ ; **ಕೊಡ.** ಅಡಕೆ ; **ತೆಲು.** ಅಡ]

**ಅಡಕ್ಕೆ₂** (ನಾ). ಅಡಕ ; ನಿಯಮ ; ಕಟ್ಟುಪಾಡು : ದೇವರಿಗೆ ನಡಸಿಬಹ ಭತ್ತಂ ಮೂಡೆ ೧೦೦ ಈ ಭ[ತ್ತ] ನಡೆಯದೆ ವುಳಿದಡೆ ಆ ಮೂಲವನೂ ಒಪ್ಪಿಸುವ ಅಡಕೆ ಯೀ ಧರ್ಮವನು ಪಾಲಿಸಿದವರಿಗೆ (ಸೌ ಇ ಇ. IX–ii, ೪೧೬–೧೨ ; 1377). [~ ಅಡಕ್ಕ₂]

**ಅಡಕೆಕತ್ತರಿ,** ಅಡಕತ್ತರಿ (ನಾ). ೧. ಅಡಕೆಯನ್ನು ಕತ್ತರಿಸಿ ಚೂರುಮಾಡುವ ಒಂದು ಸಾಧನ. ೨. ಕಷ್ಟದ ಪರಿಸ್ಥಿತಿ; ಉಭಯ ಸಂಕಟ : ಹೀಗೆಲ್ಲ ಮಾಡಿ ನನ್ನನ್ನು ಅಡಕೆಕತ್ತರಿಗೆ ಸಿಕ್ಕಿಸಬೇಡ (ರೂಢಿ). **ಅಡಕತ್ತರಿ :** ೨. ಎಂತಹ ಸಂದಿಗ್ಧ ಅಡಕತ್ತರಿಯಲ್ಲಿ ಸಿಕ್ಕುಬಿದ್ದ ದಾಮು (ವೈದ್ಯವಿ. ೧೮). [ಅಡಕೆ₁ + ಕತ್ತರಿ]

**ಅಡಕೆಕುಳಿ** (ನಾ). ೧. ಅಡಕೆಯ ಸಸಿಯನ್ನು ನೆಡುವುದಕ್ಕಾಗಿ ಮಾಡಿರುವ ಗುಂಡಿ. ೨. ಹೈವೆರಾಜ್ಯದ ಒಂದು ಊರಿನ ಹೆಸರು : ಅಡಕೆಕುಳಿಯ ಪುರವರಾಧೀಸ್ವರ ದುಷ್ಟನಿಗ್ರಹ ಸ್ರಿಷ್ಟ ಪ್ರತಿಪಾಲಕ ರಣಗಬ್ಬಿನಾಯಕರ ತಂ[ಮ] ದೇಉ ನಾಯಕರು (ಕಇ. I, ೬೩–೧೦; 1481). [ಅಡಕೆ₁ + ಕುಳ್ಳಿ₂ (< ಕುಟ್ಟಿ₂)]

**ಅಡಕೆಗತ್ತಿ,** ಅಡಕತ್ತಿ, ಅಡಗತ್ತಿ (ನಾ). ೧. = ಅಡಕೆ ಕತ್ತರಿ ೧ : ಠಾಣದೀವಿಗೆ ಮಂಗಳಾರತಿ ಸಾಣೆಕಲ್ಲನುಲೇಪನದ ಪಾಷಾಣವಡಕೆಲೆಯಡಕೆಗತ್ತಿಯು ಹಡಪ ಸಂಬಳಿಗೆ (ಬಸವು. ೧೨–೧೦). ೨. ಅಡಕೆಕಾಯ ಸಿಪ್ಪೆಯನ್ನು ಸುಲಿದು ಹೋಳುಮಾಡಲು ಬಳಸುವ ಕತ್ತಿ. **ಅಡಕತ್ತಿ :** ೧. ಗೇರ ಹರಳ ನೂರಂ ಅಡಕತ್ತಿಯಲ್ಲಿ ನಾಲ್ಕು ಭಾಗವ ಮಾಡಿ ಒಮ್ಮಾನ ಎಣ್ಣೆಯಲ್ಲಿ ಹಾಕಿ ಚಿತ್ರಮೂಲದ ಬೇರಿನ ಚೂರ್ಣವ ಹಾಕಿ (ವಿವೈವಿ. ೮೧). **ಅಡಗತ್ತಿ :** ೧ (ಕಿ). [ಅಡಕೆ₁ + ಕತ್ತಿ]

**ಅಡಕೆಚಿಟ್ಟು** (ನಾ). ಒಂದು ಮೂಲಿಕೆ : ಅಡಕೆಚಿಟ್ಟನ ಬೇರಂ ಬೆಂಬೂದಿಯಲ್ಲಿ ಹಾಕಿ ಜೀರಿಗೆ ಶುಂಠಿ ಸಹ ಅರೆದು ಬಿಸಿನೀರಲ್ಲಿ ಕುಡಿಯಲು ಶೀತಜ್ವರ ಮಾಣ್ಗುಂ (ವಿವೈವಿ. ೧೧೩). [ಅಡಕೆ₁ + ಚಿಟ್ಟು]

**ಅಡಕೆತಾಳಿಲ,** ಅಡಕೆದಾಳಿಲ (ನಾ). ಒಂದು ಬಗೆಯ ಪಲ್ಯ, — ತಾಳಿದ ; ಪರಿಮಳಂ ಪೋಗದಂದದಿ ನೀರು ಮಣ್ಣುಗೊಡಲುರಿಗೆಂಡದಾಮೇಲೆ ಹೊತ್ತದಂದದೊಳವಂ ತಿರುಪಿ ದೋರೆಯ ಮಾಡಿ ಹದನಱಿದು ಹಸನಾಗಿ ಯಿರಿಸಿ ಪಾಕಂ ಮಾಡಿದ ಸರಸ ಕೂಷ್ಮಾಂಡಫಲವಡಕೆತಾಳಿಲವೆಸರ ಧರಿಯಿಸಿತು (ಸೂಪಶಾ. ೫–೨೨). **ಅಡಕೆದಾಳಿಲ :** ಮತ್ತಮಾತೆಱದಿ ಬಾಳೆಯ ಹೊಡೆಯ ಹಿರಿದು ಹಸನಾಗಿ ಪಾಕಂ ಮಾಡಿಯದಱಡಕೆದಾಳಿಲವೆಸರ ಕರೆವುದು (ಸೂಪಶಾ. ೫–೨೨) ; ಪುಳಿಚಾರು ಪೊನ್ನವಟ್ಟಿ ಭುಂಜಿತಶಾಕ ತುಳಿವುದಾಳಿಲ ಶಾಖವಂಗಿ ಶೂಲ್ಯಕ ಮನಂಗೊಳಿಪ ಚಳಿಸಾ ಕೆ ವಿಚಿತ್ರ ಪಾಕಂ ಕಹರಿಯಡಕೆದಾಳಿಲವೆಸರನು (ಸೂಪಶಾ. ೬–೧೩).

[ಅಡಕೆ₁ ? + ತಾಳಿಲ]

**ಅಡಕೆದಾಳಿಲ** ‘ಅಡಕೆತಾಳಿಲ’ ನೋ.

**ಅಡಕೆದೋಂಟ,** ಅಡಕೆದೋಟ, ಅಡಕ್ಕೆದೋಟ, ಅಡ್ಕೆತೋಟ (ನಾ). ಅಡಕೆಯ ಮರಗಳನ್ನು ಬೆಳಸುವ ತೋಟ : ಮತ್ತವಾಕೆಱೆಯ ಕೆಳಗಣಡಕೆದೋಂಟ ಮತ್ತರೆರಡು (ಎಕ. VII, ಶಿಕಾರಿ. ೧೨೫–೩೪ ; 1019) ; ಮತ್ತವರ ಕೆಱೆಯ ಕೆಳಗಣಡಕೆದೋಂಟ ಮತ್ತರೊಂದು (ಇಆ. V, ೧೬–೩೪ ; 1161). **ಅಡಕೆದೋಟ :** ಹಿರಿಯ ಕೆಱೆಯ ಹಿಂದಣ ಮೊದಲೇರಿ ಅಡಕೆದೋಟ ಅಡಕೆಯ ಮರ (ಎಕ. VI, ಕಡೂರು. ೧೨೪–೪೬ ; 1272 ?). **ಅಡಕ್ಕೆದೋಟ :** ದೇವರ್ಗೆ ನಿತ್ಯಪೂಜೆಗೆ ಹೂವಿನ ತೋಟಮುನಡಕ್ಕೆದೋಟಗಳು (ಸೌ ಇ ಇ. IX–i, ೧೪೧–೪೨; 1174). ℙ ಇದೇ ಶಾಸನದಲ್ಲಿ ‘ಅಡಕೆ’ ಎಂಬ ರೂಪವೂ ದೊರೆಯುತ್ತದೆ. **ಅಡ್ಕೆತೋಟ :** ಕಲ್ಲಿದೇವ ಅಧಿಕಾರಿಗಳ ಮಕಳು ವಿದ್ಯಾನಾಥ ಅಧಿಕಾರಿಗಳಿಗೆ ಅಡ್ಕೆತೋಟದ ಒತ್ತಿನ ಕಲಾನ್ವಿತಯನ ಕಯ್ಯ ಮೂಲ ಗುತ್ತಿಗೆಯ ಮಾಡಿಕೊಂಡ ಕ್ರಮ (ಮೈಆರಿ. ೧೯೩೪, ೨೬–೧೨ 1403). [ಅಡಕೆ₁ + ತೋಂಟ]

**ಅಡಕೆದೋಟ** ‘ಅಡಕೆದೋಂಟ’ ನೋ.

**ಅಡಕೆಪುಟ್ಟ** (ನಾ). ಒಂದು ಜಾತಿಯ ಗಿಡ : ಬೆಲ್ಲವತ್ತದ ಬೇರು, ಉಳ್ಳಿ, ನುಗ್ಗೆತೊಕ್ಕು, ಹುರುಳಿ, ಚಿತ್ರಮೂಲ, ಚವ್ಯ, ಹಿಪ್ಪಲಿ, ಹಿಪ್ಪಲೀಮೂಲ, ಶುಂಠಿ, ಅಡಕೆಪುಟ್ಟನ ಬೇರು, ಹೊಂಗೆನಾರು, ಅಳಲೆಕಾಯಿ, ಗಂಟುಭಾರಂಗಿ ಇಷ್ಟನು ಸಮಾಂಶವಾಗಿ ಹಾಕಿ ಕಷಾಯವ ಮಾಡಿ ಸೇವಿಸಲು ಸಕಲ ಮೂಲವ್ಯಾಧಿಹರ (ವೈದ್ಯಸಾ. ೨೦೩–೧೭ ಟೀಕೆ) ; (ವೈದ್ಯಸಾ. ೨೪೪–೨೨೬ ಟೀಕೆ ನೋ). [ಅಡಕೆ₁ ? + ಪುಟ್ಟ ?]

**ಅಡಕೆಲೆ** (ನಾ). ಅಡಕೆ ಮತ್ತು ವೀಳೆಯದೆಲೆ; ತಾಂಬೂಲ : ಅಡಕೆಲೆಯಡಕೆಗತ್ತಿಯು ಹಡಪ ಸಂಬಳಿಗೆ . . . ಉಚಿತವಸ್ತುಶ್ರೇಣಿಯಿಂದೊಪ್ಪಿದುದು ವಾರನಿತಂಬಿನೀಸದನ (ಬಸವು. ೧೨–೧೦) ; ಬಾಳೆಯ ಹಣ್ಣು ಅಡಕೆಲೆ ಸಹ (ಎಕ. XV, ಬೇಲೂರು. ೭೦–೪೪ ; 1484) ; ಅಡಕೆಲೆ ಅಂಗಡಿ ಸಿದ್ಧಯ್ಯನಿಗೂ ತಲೆಗೂ ರೇಷ್ಮೆಹುರಿ ಚೌಕ, ಮೈಗೆ ಬಿಳಿಯ ಮಲ್ಲಿನ ಜುಬ್ಬ, ಕಾಲಿಗೆ ಗಿರಕಿ ಚಡಾವು ಬಂದಿತ್ತು (ಘಾಟೀಮು. ೬೮).

**ಅಡಕೆಲೆಕೊಡು** = ೧. ತಾಂಬೂಲವನ್ನು ಕೊಟ್ಟು ಕಳಿಸು ; ಬೀಳ್ಕೊಡು : ಅವರಿಗೆ ಅಡಕೆಲೆಕೊಟ್ಟು ಕಳಿಸು (ರೂಢಿ). ೨. ಕೆಲಸದಿಂದ ನಿವೃತ್ತಿ ಮಾಡು : ಗಿರಣಿಯವರು ಈ ದಿನ ಇದ್ದಕ್ಕಿದ್ದ ಹಾಗೆ ನನಗೆ ಅಡಕೆಲೆ ಕೊಟ್ಟು ಕಳಿಸಿಬಿಟ್ಟರು (ರೂಢಿ). [ಅಡಕೆ₁ + ಎಲೆ₁]

**ಅಡಕೆಹಂಗು** (ನಾ). ಅತ್ಯಲ್ಪ ವಸ್ತುವಿನ ಹಂಗು : ಹಿಂದೆ ನಿನ್ನೊಳು ಪುಟ್ಟಿದದುನೊದಲಿಂದುತನಕೊಂದಡಕೆಹಂಗಿನೊಳೊಂದೆನುಸಿಕನೆ ನಿನ್ನನಾನೋಲೈಸಿದೆನು ಹೊಂದಿ (ಬಸವು. ೬೧–೫೭). [ಅಡಕೆ₁ + ಹಂಗು]

**ಅಡಕೊತ್ತು,** ಅಡಕೋತು (ನಾ). (ಉಕ) ೧. = ಅಡಕೆಕತ್ತರಿ ೧ : ಮಡದಿಯೂ ಪುರುಷನೂ ನಡೆದೊಡನೆ ಬರುವಾಗ ಅಡಕೊತ್ತು ಮಱಸಿ ತರಹೋಗಿ ಪಾಪವನು ನಡೆಸಿದುದ ಕಂಡೆ (ಸರ್ವಜ್ಞ. ೧೮೬೦) ; ಗೂಡಿನಲ್ಲಿ ಎಲೆಯಡಕೆಯ ಡಬ್ಬಿ. ಅದರ ಬಳಿಯಲ್ಲಿ ಒಂದು ಅಡಕೊತ್ತು (ತಿಡುಗು. ೩೧) ; ಮಧುರೆ ಅತಂತ್ರವಾಗಿ ನಿನ್ನ ಸೈನ್ಯದ ಅಡಕೊತ್ತಿನಲ್ಲಿ ಒಮ್ಮೆ ಸಿಕ್ಕು ಹೋಗಳಾದೀತು (ವಿಜಸಾ. ೭೪). ೨. = ಅಡಕೆಕತ್ತರಿ ೨ : ಆಚಾರ್ಯರನ್ನು ಅಡಕೊತ್ತಿನಲ್ಲಿ ಹಿಡಿಯುವ ಸಾಹಸವು ಅವನದಿತ್ತು (ಸಮುಜೀ. ೩೯೭). **ಅಡಕೋತು :** ೧. ಅಡಕೋತಿನಲ್ಲಿ ಸಿಕ್ಕ ಅಡಕೆಯಂತಾಯಿತು ಅವಳ ಸ್ಥಿತಿ (ಅಸ್ಥಿಪಂ. ೧೩೮).

[ಅಡಕೆ₁ + ಒತ್ತು₂. / **ತೆಲು.** ಅಡಕತ್ತು, ಅಡಕತ್ತೆರ, ಅಡಕೊತ್ತು ; **ಮರಾ.** ಅಡಕಿತ್ತಾ]

**ಅಡಕೋತು** ‘ಅಡಕೊತ್ತು’ ನೋ.

**ಅಡಕ್ಕೆ** ‘ಅಡಕೆ₁’ ನೋ.

**ಅಡಕ್ಕೆದೋಟ** ‘ಅಡಕೆದೋಂಟ’ ನೋ.

**ಅಡಗಟ್ಟಿಸು** (ಕ್ರಿ). ತಡೆದು ನಿಲ್ಲಿಸುವಂತೆ ಮಾಡು : ಇದೆ ಪೊಱಮಟ್ಟು ದಾನೆಯಡಗಟ್ಟಿಸು ಪೊಕ್ಕಿಱಿ ಮುಂದೆ ನಟ್ಟಿಯುಂ ಪಡೆದಿಡು (ಉದ್ಭಟ. ೨–೫೩). [ಅಡಗಟ್ಟು (< ಅಡ್ಡಂಗಟ್ಟು) + -ಇಸು₃]

**ಅಡಗಟ್ಟು** ‘ಅಡ್ಡಂಗಟ್ಟು’ ನೋ.

**ಅಡಗಡಿ** (ಕ್ರಿ). ಅಡ್ಡಲಾಗಿ ಕಡಿ : ಪೊಡೆ ಶಿರಗಳನಡಗಡಿವುದೆಂದುದ್ಘಟ ಸುತ್ತ ಬಿಡದೆ ಬೆಂಬತ್ತಿ ಕೆಡಪುವುದವರನು (ತ್ರಿಪುಸಾಂ. ೨೧೫).
[< ಅಡ್ಡ$_1$ + ಕಡಿ$_1$]

**ಅಡಗಡು** (ಕ್ರಿ). ಮಾಂಸವನ್ನು ಬೇಯಿಸು : ಅಡಗಟ್ಟ ಮಡಕೆಯಂ ಪೊಱಗಿಡುವಂತೆ ಕೂಟನಟ್ಟ ಮಡಕೆಯನೇಕೆ ಪೊಱಗಿಡರ್ (ಧರ್ಮಾಮೃ. ೭–೪೩); ಅಡಗಟ್ಟ ಮಡಕೆಗಳನೊಳಗಿಡಲಾರ್ಪರೆ (ಧರ್ಮಾಮೃ. ೯–೯೫).
[ಅಡಗು$_3$ + ಅಡು$_1$]

**ಅಡಗತ್ತಿ** 'ಅಡಕೆಗತ್ತಿ' ನೋ.

**ಅಡಗಾಣಿಸು** (ಕ್ರಿ). ೧. ಅಡ್ಡವಾಗಿ ಕಂಡುಬರು; ಅಡಚಣೆಯಾಗು; ತಡೆ; ಅಡ್ಡಿಮಾಡು : ಪೊಡವಿಯೊಳಗಿದ್ದ ಪ್ರತಿಕೂಲಗಳು ಎಲ್ಲ ಕಡಲ ಶಯನ ಹರಿಯ ಗುಣಕರ್ಮನಾಮಂಗಳ ನುಡಿ ನುಡಿ ನುಡಿದವಗೆ ಅಡಗಾಣಿಪವೇನೋ (ವಿಸಾಸು. ೨–೨೦೭); ಅಡಗಾಣಿಪ ಭವಗಡಲಾಯಾಸವನು ಬಿಡದೆ ದಾಟಲಿವುಂಟು . . . ವಿಜಯವಿಠ್ಠಲನ ಪಾದವ ಬಿಡದೆ ನೆರೆ ನಂಬೆ (ತೀರ್ಥಮ. ೧೧೦); ಆ ದ ರೆ ನನ್ನ ಹೊಟ್ಟೆಯಲ್ಲಿ ಮಿಸುಕಾಡುವ ಈ ಜೀವದಿಂದ ಎಲ್ಲವೂ ಅಡಗಾಣಿಸಿ ನಿಂತಿದೆ (ಚೀನಬಾ. ೨೯೬). ೨. (ತಿರಸ್ಕಾರಸೂಚಕವಾಗಿ) ಅಗತ್ಯಬೀಳು : ನನಗೇನ ಅಡಗಾಣಿಸೈತೇನು? (ಮಣ್ಣುಹೆ. ೧೦೨). [< ಅಡ್ಡ$_1$ + ಕಾಣ್ + –ಇಸು$_3$]

**ಅಡಗಾಳು** (ನಾ). ದ್ವಿದಳ ಧಾನ್ಯ; ಅಕ್ಕಡಿಕಾಳು (?) : ಮುಂಬಯಿ ಕರ್ನಾಟಕದ ಮಲೆನಾಡು, ಗಡಿನಾಡು, ಎರೆನಾಡು ಈ ಮೂರು ನೈಸರ್ಗಿಕ ಪ್ರದೇಶಗಳಲ್ಲಿ ಬೆಳೆಯುವ ತೃಣಧಾನ್ಯಗಳು, ಅಡಗಾಳುಗಳು, ಎಣ್ಣೆಯ ಕಾಳುಗಳು, ನಾರು ಮತ್ತು ಹಣ್ಣಿನ ಬೆಳೆಗಳು ಇವುಗಳಿಗೆ ತಗಲಿದ ಕೀಟಕಪಿಡುಗುಗಳ ಬಗೆಗೆ ೧೯೪೭ ರಿಂದ ೧೯೫೧ಕ್ಕೆ ಕೊನೆಗೊಂಡ ಐದು ವರ್ಷಗಳ ಅವಧಿಯಲ್ಲಿ ಸಮೀಕ್ಷಣೆ ಮಾಡಲಾಗಿದೆ (ಕೀಟವಿ. ೧೫).
[< ಅಡ್ಡ$_1$ + ಕಾಳು]

**ಅಡಗಿಂಡೆ** (ನಾ). ಮಾಂಸದ ಮುದ್ದೆ; ಮಾಂಸ ಪಿಂಡ : ನಟ್ಟೆರ್ದ ಮೂವತ್ತೆರಡಾಯುಧಂಗಳ ಮೇಲೆ ಬಿಟ್ಟು ಸಿಡಿಲ್ದುಚ್ಚಳಿಸಿ ನೆಲದೊಳ್ ಬಿಟ್ಟಡಗಿಂಡೆಯಾಗೆ ನೆಱನಂ ನಟ್ಟುರ್ಚಿದುಗ್ರಾಯುಧಾವಲಿಯಿಂದುರ್ವಿಸುವಿಂದ್ರಜಾಲಿಗನವೋಲ್ ಜೋಲ್ದುಂ (ಶಾಂತಿಪು. ೭–೮೮ ವ, ೮೯). 'ಅಡಗಿಂಡೆಯಾಡು' ಪರಾ. [ಅಡಗು$_3$ + ಇಂಡೆ$_1$]

**ಅಡಗಿಂಡೆಯಾಡು** (ಕ್ರಿ). ಮಾಂಸದ ಮುದ್ದೆಗಳನ್ನು ಚೆಲ್ಲಾಡು : ಬಳರಿಗೆ ಕೊಂಡು ಪೋಗಿ ಕುಱಿಯಂ ತಱಿದಲ್ಲಿಯೆ ತಿಂದು ಪೀರ್ದುಕಳ್ಗಳನಡಗಿಂಡೆಯಾಡುವರೆ ಮೆಚ್ಚುವರ್ (ಸಮಪ. ೧೩–೪೬); ಅಡಗಿಂಡೆಯಾಡಿ ಕಳ್ಳಂ ಕುಡಿದುಂ ಪೊಲೆಯರೊಡಗೂಡಿಯಾಡುವರಂ ಕಂಡೊಡೆ ನಲಿವರಾಗಳುಂ . . . ದುಶ್ಚರಿತರ್ (ಸಮಪ. ೧೩–೪೭); ಬಿಡದಡರೆ ಪೊಣರುವ ವೈರಿಯ ಕಡುಗಾಯಿಪಿಂದಟ್ಟ ಮುಟ್ಟ ರಣರಂಗದಲ್ಯಾದಿಯಡಗಿಂಡಿ[ಡೆ]ಯಾಡಿ ಗೆಲುವನು ಪೊಡವಿಯಲತಿಸುಭಟ ವಿಕ್ರಮಾಂಕಚಮೂಪಂ (ಸೌಇಇ. IX–i, ೨೭೬–೩೧ ; 1183). [ಅಡಗಿಂಡೆ + ಆಡು$_1$]

**ಅಡಗಿಸು** 'ಅಡಂಗಿಸು' ನೋ.

**ಅಡಗಿಸುಹ** (ನಾ). ಮರೆಮಾಡುವಿಕೆ; ಬಚ್ಚಿಡುವಿಕೆ : "ಅವಹಿತ್ಥೆ ಆಕಾರಗುಪ್ತಿ ಶರೀರವನಡಗಿಸುಹ" (ನಾಚಿರಾ. ೬).
[ಅಡಗಿಸು + –ಹ (< –ಪ)]

**ಅಡಗು$_1$** 'ಅಡಂಗು$_1$' ನೋ.

**ಅಡಗು$_2$** 'ಅಡಂಗು$_2$' ನೋ.

**ಅಡಗು$_3$**, ಅಡಂಗು$_3$ (ನಾ). ಮಾಂಸ; ಬಾಡು : "ಅಡಗು, ಬಿಕ್ಕು, ಬಾಡು – ೩ ಮಾಂಸಂ" (ಕಶಸಾ. ೭–೧೨೩); "ಸುಟ್ಟಡಗು ಭೂತಿಯೆಂಬುದು, ತಾಳಿಸಿದಡಗು ಭರೂಟಕಮೆಂಬುದು, ಅಟ್ಟಡಗು ಉಖ್ಯಮೆಂಬುದು" (ಹಲಾಯು. ೫೪–೧೬೮); ಬಿಸುನೆತ್ತರ್ ನೆಣನಡಗೆಲ್ವು ಸಮಸ್ತಂ ಸುರಿಯೆ (ಪಂಪಭಾ. ೮–೭೭); ಕಾಗೆಯಡಗು ಬೋನಂಬುಗದು ಎಂಬುದು ಲೋಕಪ್ರಸಿದ್ಧಂ (ಪಂಚತಂ. ೧೪೫–೯); ಅಡಗಿನ ಬಸನಿಗರ್ಗ್ಗಂ ಕಳ್ಳುಡಿವವರ್ಗ್ಗಂ ವೃತ್ತಿಲೋಪಮೆಂಬೀ ನುಡಿಯುಂ ಕಡೆಗಣ್ಣಿಣಿಸದೆ ಮೊದಲಿಂದಂ ಕಿಡಿಪುದದಂ (ಸೌಇಇ. IX–i, ೧೧೭–೩೭ ; 1055); ಉಂಬುದೆಲ್ಲ ಕಿಲ್ಬಿಷ, ತಿಂಬುದೆಲ್ಲ ಅಡಗು, ಕುಡಿವುದೆಲ್ಲ ಸುರೆ, ಹುಸಿಯೆಂಬುದೇ ಹೊಲೆ (ಮ ಹಾ ಸಾ. ೪೫–೧೩೧). ℙ ಕಾರಡಗು, ಬಿಕ್ಕಡಗು, ಬೆನ್ನಡಗು, ಮೀಸಲಡಗು ಹೋ. **ಅಡಂಗು$_3$** : ನೀ ಪೊದೆದಿರ್ದಾ ನವಕಂಬಳವನಡಂಗೆನುತವೆ ಕರ್ಚಿ ತವಕದಿನಡರ್ದುದಾಗಸಕೆ (ಶ್ರೀಪಾಲ. ೭–೭೦); ಮಿಗಗಳನೊಕ್ಕಲಿಕ್ಕುವಂದದಿ ಕೊಂದು ಮುಗುಳ್ದವಱಡಂಗುಗಳ ತುಕ್ಕಡಿಸಿ [ಪಾಠಾಂ. ಅಡಂಗ ಕಡಿದಿಕ್ಕಿ] (ಸಮ್ಯಕೌ. ೧೦–೨೬).

**ಅಡಗಡಗಾಗು** = ಮಾಂಸದ ಮುದ್ದೆಯಾಗು; ಕೇವಲ ಮಾಂಸವಾಗು : ನಡುವುಡಿವನ್ನ ಮೇಱ ಬರಿಯೆಲ್ವುಡಿವನ್ನೆಗಮೊತ್ತಿ ಮೆಟ್ಟೆ ಮೆಯ್ಯಡಗಡಗಾಗೆ ಮುನ್ನುರಮನಿರ್ಬಗಿಯಾಗಿರೆ ಪೋೞ್ದು (ಗದಾಯು. ೫–೪). [ದೇ.]

**ಅಡಗು$_4$** (ನಾ). ೧. ಸೇರಿಕೆ; ಜೋಡಣೆ; ಹೊಂದಾವಣೆ. (೬). ೨. ಸೊಗಸು; ಅಂದ (೬). [~ ? ಅಡಂಗು$_2$]

**ಅಡಗು$_5$** (ನಾ). ವಸ್ತುಗಳನ್ನು ಅಡವಿಟ್ಟುಕೊಂಡು ಸಾಲಕೊಡುವ ವೃತ್ತಿ (?) : ಭೂಮಿಯನು ಹಿರಣ್ಯೋದಕ ಧಾರಾಪೂರ್ವಕವಾಗಿ ಯೆಱದುಕೊಟ್ಟ ಕಲ್ಲುಗನಾದವ ಆತನ ಅಳಿಯಂದಿರು ಬಟ್ಟಕಳದ ಅಡಗಿನ ಅಂಣಿಸೆಟ್ಟಿಯ ಮಕ್ಕಳು ಶಾಂತಂಣಸೆಟ್ಟಿ (ಕಇ. I, ೪೧–೩೭ ; 1417 ?).
[~ ? ಅಡವು (< ಅಡರ್ಪು)]

**ಅಡಗುಗಳ್ಳ** (ನಾ). ಅಡವಿಟ್ಟ ಪದಾರ್ಥವನ್ನು ಹಿಂದಕ್ಕೆ ಕೊಡದೆ ದಕ್ಕುಹಾಕಿಕೊಳ್ಳುವವನು; ನ್ಯಾಸಾಪಹಾರಿ (?) : ಶ್ರೀ ಗುರು ಕುಱುಹಕೊಟ್ಟು ಕುಱುಹಿನ ಬೆಂಬಳಿಯಲ್ಲಿ ಅಱ ಎಂದು ಹೇಳಲಿಕಾಗಿ ಆ ಉಭಯವ ಮಱದು ಬೇಱಿೊಂದಱವಿನ ಮುಖದಲ್ಲಿ ಒಡಗೂಡಿಹೆನೆಂಬ ಅಡಗುಗಳ್ಳರ ನೋಡಾ (ದಾಸೋಸಂ. ೧೪). [ಅಡಗು$_5$ + ಕಳ್ಳ$_1$]

**ಅಡಗುಚುಚ್ಚುಗ** (ನಾ). "ಮಾಂಸವನ್ನು ಸುಡುವಾಗ ಉಪಯೋಗಿಸುವ ಹಿಡಿಕೆಯ ಮೊನಚಾದ ಸೆಳೆ, —ಚುಚ್ಚುಗ" (ಕಸ್ತೂರಿ).
[ಅಡಗು$_3$ + ಚುಚ್ಚುಗ]

**ಅಡಗುಣ್** (ಕ್ರಿ). ಮಾಂಸವನ್ನು ತಿನ್ನು : ಪಿಶಾಚಾನಿವಹಮನಡಗುಣಿಮೆಂದು ನವವೇದಮುಂ [ಪಾಠಾಂ. ಕಡಗುಣಿಸುತೆ] ಪೇೞ್ವರಲ್ಲಿ ರಕ್ಕಸಪಾರ್ವರ್ (ಗದಾಯು. ೪–೩೯). [ಅಡಗು$_3$ + ಉಣ್]

**ಅಡಗುಣಿಸು** (ಕ್ರಿ). ಮಾಂಸವನ್ನು ತಿನ್ನಿಸು. 'ಅಡಗುಣ್' ಪ್ರಯೋಗದ ಪಾಠಾಂತರವನ್ನು ನೋಡಿ.
[ಅಡಗು$_3$ + ಉಣ್ + –ಇಸು$_3$]

**ಅಡಗುತಿನ್**, ಅಡಗುದಿನ್, ಅಡದಿನ್ (ಕ್ರಿ). ಮಾಂಸವನ್ನು ತಿನ್ನು : ಅಸುರರನಾಸುರಂ ಮುಸಗಿ ಕೊಂದಡಗುತಿಂಬ ಬಳಾರಿ (ಸಮಪ. ೯–೧೧೨); ಬಿಲ್ಲರ ನೆರವಿಯೊಕ್ಕಡಗುತಿಂದುದು ರಕುತಗುಡಿದುದು ಕೆಡೆದುದಾ ವಾಗುರೆಯೆಱಯನೊಂದಂಬಿನೇಱಂದ (ಸಾಳ್ವಭಾ. ೫–೩೪).
**ಅಡಗುದಿನ್** : "ಅಡಗುದಿಂಬವನಂ ಪೌಷ್ಕಳನೆಂಬುದು" (ಹಲಾಯು. ೫೮–೧೯೬). **ಅಡದಿನ್**: ಪಿಡಿ ಪಿಡಿ ಕಟ್ಟು ಕಟ್ಟು . . . ಪೆಱವೆಣ್ಗೆ ಸೋಲ್ವ ಕಳ್ಳುಡಿವಡದಿಂಬ ನಂಬಿದರನೋವದೆ ಛಿದ್ರಿಪ ಕಳ್ವ ಕಳ್ಳರೊಳ್ ನುಡಿವಳಿಯಾದನೆಂದು ನವನಾರಕರಂ ಪರಿದೆಯ್ದಿ ನಾರಕರ್ (ಅಜಿಪು. ೧೧–೧೦); ಮರುಳ್ಗಳಡದಿಂಬುತ್ಸಾಹದೆ ಪಲ್ಲಂ ಮುಸೆದುವು (ಜಗವಿ. ೭–೪೮); ಅಡದಿಂದರುಣಜಲಂಗುಡಿದೆಲುವಂ ಕಡಿದು ಮಿದುಳನುಂಡೊಣನರಮಂ

ಕಾರ್ದಡಿಸಿ ನೊಣೆದು ನೆಣನಂ . . . ಮುಕ್ಕುವ ಮರುಳೊಪ್ಪಿದುವು (ಜಯಕಾ. ೭–೨೫) ; ಅಡದಿನ್ನದಜಿನ ದೂಸಱಿನೊಡಲೊಳ್ ನೆಲಸುವುವು ಜೀವಿಗಳ್ಗಸುಗಳವಂ ಕಿಡಿಸಿಯಡದಿನ್ಬ ನರನಂ ಪಡಿದೆಱಿದೇಂ ಪೊಱಗೆ ಪೋಗಲೀಗುಮೆ ನರಕಂ (ನೀತಿಮಂ. II, ೨೧೫). [ಅಡಗು$_3$ + ತಿನ್]

**ಅಡಗುದಱಿ$_1$** (ಕ್ರಿ). ಮಾಂಸವನ್ನು ಚೂರು ಚೂರಾಗಿ ಕತ್ತರಿಸು : ಎಮ್ಮಯ ಮಡದಿಗನ್ಯರು ಮನವಿಡಲು ಬಳಿಕಡಗುದಱಿವೆನೆನುತ್ತ ಹೊಕ್ಕನು ಭೀಮನವಗಡಿಸಿ (ಕುವ್ಯಾಭೀ. ೫–೧೩) ; ಅಡಗುದಱಿದ [ಪಾಠಾಂ. ದುಳಿದ]ನನೇಕ ಭೂಪರ ಗಡಣವನು (ಕುವ್ಯಾದ್ರೋ. ೧೧–೧೨).
[ಅಡುಗು$_3$ + ತಱಿ$_1$]

**ಅಡಗುದಱಿ$_2$** (ನಾ). ಮಾಂಸದ ಚೂರುಚೂರಾದ ಸ್ಥಿತಿ.
**ಅಡಗುದಱಿಯಾಗು** = ಚೂರು ಚೂರಾಗು ; ತುಂಡುತುಂಡಾಗಿ ಬೀಳು: ಅಡಗುದಱಿಯಾಯ್ತು ಖಿಳಬಲದುಗ್ಗಡದ ವೀರರು(ಕುವ್ಯಾದ್ರೋ. ೧೦–೨೨) ; ಅಡಗುದಱಿಯಾಯ್ತು ಶ್ವಚಯ ಸಾವಿರದ ಮೂನೂಱು (ಕುವ್ಯಾಶ. ೩–೧೭). [< ಅಡಗುದಱಿ$_1$]

**ಅಡಗುದಾಣ** (ನಾ). ಅವಿತುಕೊಳ್ಳುವ ಸ್ಥಳ ; ಮರೆಯಾಗಿರುವ ಜಾಗ : ನಿನ್ನಡಗುದಾಣದಿಂ ನೀಂ ಪೊರಮಡುಪವೊಲ್ (ಶ್ರೀರಾಮಾ. ೬೯೩–೪೨೭). [ಅಡಗು$_1$ (< ಅಡಂಗು$_1$) + ತಾಣ$_1$]

**ಅಡಗುದಿನ್** 'ಅಡಗುತಿನ್' ನೋ.

**ಅಡಗುದುಳಿ** (ಕ್ರಿ). ಮಾಂಸವಾಗುವಂತೆ ತುಳಿ ; ಧ್ವಂಸಮಾಡು : ಅಡಗುದುಳಿದರು ಮೋಹರವನೊಗ್ಗೊಡೆದು ಚೂಣಿಯ ಗೋಣ ಬನದಲಿ ಖಡುಗ ನರ್ತಿಸಲು (ಕುವ್ಯಾಭೀ. ೪–೬೧).
[ಅಡಗು$_3$ + ತುಳಿ (< ತುೞಿ$_1$)]

**ಅಡಗುಮೆಟ್ಟು** (ಕ್ರಿ). ಅಡಗುವಂತೆ ತುಳಿ; ದಮನಮಾಡು; ಅಡಗಿಸಿ ವಶಮಾಡಿಕೊ : ದುಷ್ಟರಾದವರನ್ನು ಅಡಗುಮೆಟ್ಟುತಾ ರಾಜ್ಯದ ಆಡಳಿತವನ್ನು ಬಿಗಿಯಾಗಿ ನೋಡಿಕೊಳ್ಳುತಾ (ಪಾಳಿಗಾ. ೧೧) ; 'ಆ ಸಾವ್ಕಾರ ಸಂಕನ್ನ ಹೇಗೆ ಅಡಗುಮೆಟ್ಟಬೇಕು . . .' (ಬೆಳುಮ. ೧೦೩) ; ಮನಸ್ಸನ್ನು ನಾವು ಅಡಗುಮೆಟ್ಟುತಾ ಮೆಟ್ಟುತಾ ಅಭ್ಯಾಸವಾದರೆ, ಹಾಗೆಯೇ ಆ ಕರ್ಮ ಫಲವು ಹೋಗಿಬಿಡುತ್ತೆ (ಮಾಮರಾ. ೧೦೯).
[ಅಡಗು$_1$ (< ಅಡಂಗು$_1$) + ಮೆಟ್ಟು$_1$]

**ಅಡಗುಶೇ[ಸೇ]ಕೆ** (ನಾ). (ಶರೀರಕ್ಕೆ) ಮಾಂಸವನ್ನು ಒತ್ತಿ ಕೊಡುವ ಕಾವು; ಮಾಂಸದ ಶಾಖ: ದಾನಿಯಾದೊಡೆ ಪೇಳ್ವೆನೊಂದನೆ ಮಾನವನ ಬರಿಯಡಗುಶೇ[ಸೇ]ಕದಿ ಬೇನೆ ಮಾಱುವುದಲ್ಲದಿರೆ ತಾಂ ಸಾವೆ (ಸಾಳ್ವಭಾ. ೭–೫೪). [ಅಡಗು$_3$ + ಸೇಕ]

**ಅಡಗೂಟ** (ನಾ). ಮಾಂಸದ ಊಟ : ಅರಸುತ್ತಂಚಿಯ ಬೇಟೆಯಾಡಿ ಮೊಲನಂ ತಂದಂದದಿಂ ಗಿಣ್ಣನೊಳ್ ಬೆರಸುತ್ತಟ್ಟಡಗೂಟಮಂ ಬೆಳಗಿದರ್ ತಮ್ಮೊಂದಿದಭ್ಯಾಸದಿಂ (ಮೈಸೂಮ. ೬–೬೭). [ಅಡಗು$_3$ + ಊಟ]

**ಅಡಗೆಡಹು** 'ಅಡ್ಡಂಗೆಡವು' ನೋ.

**ಅಡಗೆಡೆ** 'ಅಡ್ಡಂಗೆಡೆ' ನೋ.

**ಅಡಗೈ** (ನಾ). ಹೊಟ್ಟೆಯಲ್ಲಾಗಲಿ, ಗರ್ಭದಲ್ಲಾಗಲಿ, ಗಾಳಿ ತುಂಬಿಕೊಂಡು ಉಂಟಾಗುವ ಒಂದು ರೋಗ (ಕಿ). [?]

**ಅಡಗೊಚ್ಚು** (ಕ್ರಿ). ಅಡ್ಡಲಾಗಿ ಕತ್ತರಿಸು : ಎಚ್ಚ ಶರವನು ಗದೆಯಲಣೆದಡಗೊಚ್ಚಿ ಪೊಕ್ಕನು [ಪಾಠಾಂ. ದಿಡುಗಿಚ್ಚು ಹೊಕ್ಕಂದದಲಿ] ರಥವನು ಬಿಚ್ಚಿ ಬಿಸುಟನು (ಕುವ್ಯಾದ್ರೋ. ೨–೭೬). [< ಅಡ್ಡ$_1$ + ಕೊಚ್ಚು$_1$]

**ಅಡಗೋಂಟೆ** (ನಾ). ಅಡ್ಡಲಾಗಿ ಸುತ್ತುಗಟ್ಟಿರುವ ಕೋಟೆ : ಚಿತ್ತಜನಡಗೋಂಟೆಯಂತೆ ಪಲ್ಲಕ್ಕಿಯ ಸುತ್ತಲೆಯ್ದಿತು ಕೆಳದಿಯರು (ಮೋಹತ. ೨೪–೨೭). [< ಅಡ್ಡ$_1$ + ಕೋಂಟೆ]

**ಅಡಗೋಡೆ** 'ಅಡ್ಡಗೋಡೆ' ನೋ.

**ಅಡಗೌತಣ** (ನಾ). ಮಾಂಸದ ಔತಣ : ಊಳ್ವ ನರಿನಾಯ್ಗಳ್ಗೆ ನಿಮ್ಮಾ ಶರೀರದಡಗೌತಣಮನುಸುರಬಂದವನಲ್ಲದಾನೂಳ್ವನಲ್ಲ (ಚೆಬಪು. ೩೧–೨೨). [ಅಡಗು$_3$ + ಔತಣ (< ಅವುತಣ)]

**ಅಡಚಣೆ** (ನಾ). ಅಡ್ಡಿ ; ತೊಂದರೆ ; ಹರಕತ್ತು : ಪುನರ್ಜನ್ಮವನ್ನು ಒಪ್ಪದಿರಲು ಇರುವ ದೊಡ್ಡ ಅಡಚಣೆಯೆಂದರೆ ಸ್ಮೃತಿ (ಜ್ಞಾಪಕ) ಇಲ್ಲದಿರುವಿಕೆ (ಜೀವಾತ್ಮ. ೧೮೬) ; ಹಣದ ಅಡಚಣೆಬಂದಾಗ ಮಾಸ್ತರು ಸಂಪೂರ್ಣ ಪಶುವಿನಂತೆ ವರ್ತಿಸುತ್ತಾರೆ (ಕಾವೇರಿ. ೧೬೯) ; ತಕ್ಕಷ್ಟು ಜನವಿಲ್ಲದ್ದರಿಂದ ಕೆಲಸಕ್ಕೆ ತುಂಬ ಅಡಚಣೆಯಾಗಿದೆ (ರೂಢಿ).
[← ? **ಮರಾ.** ಅಡಚಣ್ ; **ಹಿಂ.** ಅಡ್‌ಚನ್]

**ಅಡಚು$_1$** 'ಅಡಚರ್ು' ನೋ.

**ಅಡಚು$_2$** (ಕ್ರಿ). ಹೊಡೆ ; ಬಡಿ ; ಚಚ್ಚು ; ಜಜ್ಜು (ಕಿ).
[← ? **ತೆಲು.** ಅಡಚು, ಅಡುಚು]

**ಅಡಜಂಬರ** (ನಾ). ಅಡ್ಡಕೆಲಸ; ಬೇರೊಂದು ಕೆಲಸ : ಇವು ಯಾವತ್ತು ಇಂಗೇ ಕಾನತ್ತೆ . . . ಎಲ್ಲಿಗಾರ ನಾವು ಹೊಂಟುನಿಂತಾಗ ಅಡಜಂಬರ ಎಂದು ಸಿಡುಕಿದಳು (ಸರ್ಪಮಂ. ೪೨). [< ಅಡ್ಡ$_1$ + ಜಂಬರ]

**ಅಡಜಾತಿ** 'ಅಡ್ಡಜಾತಿ' ನೋ.

**ಅಡಣಿಗೆ** 'ಅಡ್ಡಣಿಗೆ' ನೋ.

**ಅಡತಟ್ಟೆ** (ನಾ). ತಾಂಬೂಲ ಮೊದಲಾದವನ್ನು ಕೊಡುವುದಕ್ಕೆ ಉಪಯೋಗಿಸುವ ತಟ್ಟೆ (ಸ್ಟ್ಯಾಂಡರ್). [< ಅಡ್ಡ$_1$ + ತಟ್ಟೆ]

**ಅಡತಡೆ** (ನಾ). ಅಡ್ಡಿ; ಪ್ರತಿಬಂಧಕ : ಪ್ರಗತಿಶೀಲ ಶಕ್ತಿಗಳಿಗೆ ಈ ಬಂಡವಲುವಾದ ಸಾಮ್ರಾಜ್ಯವಾದ ತತ್ತ್ವಗಳೇ ಪ್ರಬಲ ಅಡತಡೆ (ಎಅಗ್ನೇ. ೧೦).
[< ಅಡ್ಡ$_1$ + ತಡೆ$_2$]

**ಅಡತರ** 'ಅಡ್ಡತರ' ನೋ.

**ಅಡತಾಳ** 'ಅಟ್ಟತಾಳ' ನೋ.

**ಅಡತಾಳೆ** (ನಾ). ನಂಬಿಕೆಗೆ ಅನರ್ಹವಾಗಿರುವಿಕೆ (ಕಿ).
[← ? **ಮರಾ.** ಅಡತಾಳಾ]

**ಅಡತಿ** (ನಾ). ೧. ದಳ್ಳಾಳಿ ; "ತರಗು" ವ್ಯಾಪಾರಿ : ಕೋಟಿಗಟ್ಟಲೆ ರೂಪಾಯಿಗಳ ವ್ಯಾಪಾರವನ್ನು ಸಾಗಿಸುವ ಗುಜರಾತಿ ಅಡತಿಯು ಕೊಡ್ರುವ ಬಂಕವು ಸಹ ಒಂದು ಅಂಗಡಿಯೇ ! (ತಕ್ಕಡಿ. ೧೫). **೨.** = ಅಡತಿ ಅಂಗಡಿ : ಮನೆಯಲ್ಲಿ ಥಡೆ, ಒಂದೂವರೀ ಥಡೆ ಬಂಗಾರ ಇದೆ. ಅಡತಿಯಲ್ಲಿ ಇಪ್ಪತ್ತು ಮೂವತ್ತು ಸಾವಿರ ಶಿಲ್ಕು ಇದೆ (ದೀಪಹ. ೬).
[← ? **ಮರಾ.** ಅಡತ್ಯಾ, ಅಡತ್. / **ತಮಿ.** ಅಡತ್ತಿ; **ತೆಲು.** ಅಡಿತಿ]

**ಅಡತಿಅಂಗಡಿ** (ನಾ). ದಳ್ಳಾಳಿಯ ಅಂಗಡಿ ; ವಟ್ಟ ವ್ಯವಹಾರದ ಅಂಗಡಿ : ಈ ಅಜ್ಞಾನ ಮತ್ತು ಭಯದ ಮೂಲಕ ಪೇಟೆಯ ವ್ಯವಹಾರವು ಅಡತಿಅಂಗಡಿ ಇಲ್ಲವೆ 'ಪೇಢಿ'ಗಳ ಮುಖಾಂತರವಾಗಿ ಇದೂವರೆಗೆ ನಡೆದಿರುವದು (ಬ್ಯಾಂಕಕ್ಕೈ. ೧). [ಅಡತಿ + ಅಂಗಡಿ (< ಅಂಗಾಡಿ)]

**ಅಡಥಳಾ** (ನಾ). (ಉಕ) ಅಡ್ಡಿ ; ತಡೆ ; ಪ್ರತಿಬಂಧಕ; ಅಡಚಣೆ : ಸರಕಾರೀ ಕೆಲಸಕ್ಕೆ ನೀವು ಅಡಥಳಾ ಮಾಡಲಿಕ್ಕೆ ಹತ್ತೀರಿ ನೋಡಿ ಮಾಸ್ತರೇ (ಮೂರಾಬ. ೧೪೯). [← **ಮರಾ.**]

**ಅಡದಲಿಕಿ** (ನಾ). (ಉಕ) ಆಳು ; ಜವಾನ (ಮುಂಬಯಿ. ೫–೨೮೪, ಕಿ).
[← **ಮರಾ.** ಅಡದಲ್, ಅಡದಲೀ ; **ಇಂ.** Orderly]

**ಅಡದಿಗೆ** 'ಅಣದಿಗೆ' ನೋ.

**ಅಡದಿನ್** 'ಅಡಗುತಿನ್' ನೋ.

**ಅಡದೋಱು** 'ಅಡ್ಡದೋಱು' ನೋ.

**ಅಡನಾಡಿ,** ಅಡ್ನಾಡಿ (ನಾ). ವಕ್ರಸ್ವಭಾವದವನು ; ಒರಟ ;

ಅಯೋಗ್ಯ: ಅತ್ತೆಯೆಂಬೋಳು ಬಲು ಖೋಡಿ ಎನ್ನೊತ್ತಿ ಆಳುವ ಪುರುಷ ಹೇಡಿ ಮತ್ತೆ ಮಾವ ಅಡನಾಡಿ (ಪುರಂದ. ೪–೧೬–೩); ಇಂಥ ವರ್ತನೆಯಿಂದ ಹುಡುಗರು ಅಡನಾಡಿಗಳಾಗುತ್ತಾರೆ (ಪವನ. ೯೨). **ಅಡ್ನಾಡಿ :** 'ಯಾಕೋ ಅಡ್ನಾಡಿ ನಾ ಯಾರಂತ ತಿಳಿದೀ? ಹೋಗಿಲ್ಲಿಂದ ಎದ್ದು!' (ಅನ್ನ.೨೦೨); ಎಲೆಲೆ! ಅಡ್ನಾಡಿಯೆ! ನಿನಗೇನು ಧಾಡಿಯೆ (ಚಿಲುನಿ.೫೩).
[< ? ಅಡ್ಡಂ + ಅಡು₁ + –ಇ₃. / **ತುಳು.** ಅಡ್ನಾಡಿ]

**ಅಡನಿಕೊಡ್ಡು** (ನಾ). ಗುರಾಣಿಯ ಹಾಗೆ ಏಟು ತಡೆಯಲು ಉಪಯೋಗಿಸುವ ಕೊರಡು (?): ಹತ್ತಿದೊಡಲು ಹಂಕಣಿದಲೆ ಕೈಯಲಿ ಎತ್ತಿದ ಅಡನಿಕೊಡ್ಡುಗಳು . . . ಸಾರುವ ಮುರುಳುಗಳು (ಹರಿಸಾಂ. ೩–೪೭). [ಅಡನಿ₀ (< ಅಡ್ಡಣ) + ಕೊಡ್ಡು (< ಕೊರಡು ?)]

**ಅಡನಿಬ್ಬಣಿಗ** (ನಾ). (ಉಕ) ೧. ಮದುವೆಯ ಮೆರವಣಿಗೆಯಲ್ಲಿ (ಮದುವಣಿಗನ ತಂಡದವರ ಪ್ರಯಾಣ ಕಾಲದಲ್ಲಿ) ನಡುವೆ ಬಂದು ಸೇರಿಕೊಳ್ಳುವವನು. ೨. ಹತ್ತಿರದ ಸಂಬಂಧವಿಲ್ಲದವನು: ಭಿಕ್ಷೆಯೇ ನಮ್ಮ ವಂಶಪರಂಪರೆಯ ರೂಢಿಯೆಂದು ಹೇಳುವ ಅಡನಿಬ್ಬಣಿಗರು ಕೆಲವರು ಹೀಗೆ ಬಂದು ಮೊಲಕ್ಕೆ ಒಂಬತ್ತು ನಾಯಿಗಳು ಬೆನ್ನಟ್ಟಿದಂತೆ ನಮ್ಮ ಕುತ್ತಿಗೆ ಹಿಚುಕುತ್ತಿರುವರು (ಕಾಳರಾ. ೮೪).
[ಅಡ್ಡ₀ (< ಅಡ್ಡ₁) + ನಿಬ್ಬಣಿಗ]

**ಅಡನುಡಿ** 'ಅಡ್ಡನುಡಿ' ನೋ.

**ಅಡಪ** 'ಅಡೆಪ' ನೋ.

**ಅಡಪಂಬಿಡಿ,** ಹಡಪಂಬಿಡಿ (ಕ್ರಿ). ಅಡಪವನ್ನು (= ಎಲೆಯಡಕೆಯ ಸಂಚಿಯನ್ನು) ಹಿಡಿದುಕೊ: ಅಜಿತತೀರ್ಥಕರ್ತರ್ಗೆ ಕುಂಚಂಬಿಡಿದಿರ್ಪ ಕೆಲದೊಳಡಪಂಬಿಡಿದಿರ್ಪ ಸುರೇಂದ್ರನಾಯಕರ್ ಸೊಗಯಿಸಿದರ್ (ಅಜಿಪು. ೫–೭೪). **ಹಡಪಂಬಿಡಿ :** ಆ ನಂಬಿಯಣ್ಣಂಗೆ ಗಮಳಾಕ್ರಿಯಾ ವಿಶೇಷಮದಾವುದೆಂದು ಹಡಪಂಬಿಡಿದನಾ ವಿಶ್ವಪತಿ (ಕೊಟ್ಟುಬ. ೩–೭೭).
[ಅಡಪ (< ಅಡೆಪ) + ಪಿಡಿ₁]

**ಅಡಪಗಿತ್ತಿ** (ನಾ). = ಅಡಪವಳಿತಿ: ಮೃಗಶಾಬನೇತ್ರೆಗಾನಡಪಗಿತ್ತಿಯೆಂಬಂತಿರೆಲೆಯ ಮಡಿಸಿ ಕುಡುತ್ತಂ ಮೊಗದೊಳ್ ಮುಳಿಸೊಗೆಯಲ್ (ದಶಕು. ೪–೧೧೦). [ಅಡಪ (< ಅಡೆಪ) + –ಗಿತ್ತಿ]

**ಅಡಪಟಲೆಹಾಕು** (ಕ್ರಿ). (?): ಉಭಯ ಮಾರ್ಗದ ಮೂಡಲು ಬಡಗಲು ಸ್ಥಳವಳನಾಡು ಮುಂತಾದ ಅಡಪಟಲೆಹಾಕಿ ಹೇರುವ ಮಹಾನಾಡ ಸೆಟಿ ಸಮಸ್ತರು (ಎಕ. VIII, ಸಾಗರ. ೧೨೩–೧೫; 1607).
[ಅಡಪಟಲ್ಲೆ₀ + ಹಾಕು (< ಪಾಯ್ಕು₁)]

**ಅಡಪವಳ,** ಅಡಪವಳ್ಳ, ಹಡಪವಳ (ನಾ). ೧. (ತನ್ನ ಒಡೆಯನ) ಎಲೆಯಡಕೆಯ ಸಂಚಿಯನ್ನು ಹಿಡಿಯುವವನು: "ಅಡಪವಳಂ ಹಡಪವಿಡಿವನಕ್ಕುಂ" (ಕವಿಕಂ. ೧೫೯); "ಹಡಪವಳನೆಂದು ಹಡಪಿಗಂ" (ಕಶಸಾ. ೧೪–೩೫೭); ಅಡಪವಳಂ ಪಡಿವಳ್ಳಂ ಮುಡಿವಳ್ಳಂ ಸೆಜ್ಜೆವಳ್ಳ ನಜ್ಜಂ ಬೆಜ್ಜಂ (ಕಾವ್ಯಾವ. ೩೨೭); ಸಚಿವನೆಯ್ದಿದನಸ್ರುಲೇಖನೆಂಬಡಪವಳಂ (ಕುಸುಮಾ. ೧೨–೯೯); ಅಡಪವಳಚ್ಚುಳಾಯತರ ಕೇರಿಗಳೆಡೆವಿಡದೊಪ್ಪಿದುವಲ್ಲಿ (ಶ್ರೀಪಾಲ. ೧–೭೫); ನಡೆವಣಿಗ ಘೋಳಾಯ್ಲ ಸೂಳಾಯ್ತಡಪವಳ ಬಳೆಗಾಱ ಕಮ್ಮಱ ನುಡಿಗ ಕುಂಬಱ ಕಂಚುಗಾಱರ ಕೇರಿ ಮೆಱೆದಿಹವು (ಸಾಳ್ವಭಾ. ೨–೮). ೨. ಕ್ಷೌರಿಕ; ನಾಪಿತ (ಚತುನಿ. ೨–೧೧೭. ಟಿ). **ಅಡಪವಳ್ಳ :** ೧. "ಅಡಪವಳಂ, ಅಡಪವಳ್ಳಂ; ಮಡಿವಳಂ, ಮಡಿವಳ್ಳಂ" (ಭಾಷಾಭೂ. ೧೭೦ ಉದಾ); ಅಡಪವಳ್ಳಂ ನೀಡಿದಾರ್ದ್ರಪೂಗೀಫಲಂಗಳುಮಂ (ಸುಕುಮಾ. ೧೧–೩೨ ವ); ಗಡಿಯ ಮನ್ನೆಯರ ನಾಯಕರ ಅಡಪವಳ್ಳರ ಪಡಿಯಜಡಂಗಾಯ್ತರ (ಕುರಾಸಾಂ. ೪–೧೧೧). **ಹಡಪವಳ :** ೧. ಪಸಾಯಿತಂ ಸೇನಾಧಿಪತಿ ಮನೆವೆರ್ಗ್ಗಡೆ ಹಡಪವಳ ದಣ್ಡನಾಯಕಂ ಬಮ್ಮ್ಮದೇವಯ್ಯಂಗಳ್ (ಸೌಇಇ. IX–i, ೨೩೨–೧೦; 1135); ಸಾಮನ್ತ ಕಾಮದೇವಸ್ಯ ಹಡಪವಳೇನ (ಎಇ. III, ೨೧೦–೧೪; 1143); ಹಡಪವಳನ ಹಡಪದೊಳಿರ್ದಡಕೆಗಳಂ ಮಾಡಿಯಾಡಪಿಕ್ಕೆಗಳಂ ಮತ್ತೆಡೆಯುಡುಗದೆಲೆಗಳಂ ಮೆಳ್ಪಡಲೆಕ್ಕೆಯ ನೀಳ್ಪಿನೆಲೆಗಳಾಗಲ್ (ಪುಣ್ಯಾಸ್ರ. ೮–೩೬). [ಅಡಪ (< ಅಡೆಪ) + –ವಳ]

**ಅಡಪವಳಿತಿ,** ಅಡಪವಳ್ತಿ (ನಾ). (ತನ್ನ ಒಡತಿಯ ಅಥವಾ ಒಡೆಯನ) ಎಲೆಯಡಕೆಯ ಸಂಚಿಯನ್ನು ಹಿಡಿಯುವವಳು: ವಸುಧಾಧೀಶನ ಪರಮಪ್ರಸಾದಭಾಗಿನಿಯನಡಪವಳಿತಿಯನವಧಾರಿಸು (ಕಾದಂಉ. ೨೩೪). **ಅಡಪವಳ್ತಿ :** ಚಾಪಳೆಯಪ್ಪಡಪವಳ್ತಿ ನುಡಿದ ನುಡಿಗೆ ಪೊಡವೀಶಂ ಮೆಚ್ಚುತ್ತುಂ (ಶಾಂತೀಶ್ವ. ೧೦–೫೫ ವ); ಕೆಲದಡಪವಳ್ತಿಯಂ ನೋಡಲ್ (ಪುಷ್ಪಪು. ೩–೧೦೫). [ಅಡಪವಳ + –ಇತಿ₁]

**ಅಡಪವಳ್ತಿ** 'ಅಡಪವಳಿತಿ' ನೋ.

**ಅಡಪವಳ್ಳ** 'ಅಡಪವಳ' ನೋ.

**ಅಡಪಾಳಿ** (ನಾ). = ಅಡಪಿಗ (ಸ್ಯಾಂಡರ್).
[ಅಡಪ (< ಅಡೆಪ) + –ಆಳಿ₁]

**ಅಡಪಿಗ,** ಹಡಪಿಗ (ನಾ). = ಅಡಪವಳ ೧. ನಿಯೋಗಕ್ಕೆ – ಅಡಪಿಗಂ, ಚಾಮರಿಗಂ (ಶಮದ.೧೯೭ ಪ್ರಯೋ). **ಹಡಪಿಗ :** ಮಾಱುವೊಡೆ ಕೊಂಡು ಹೊಂಗುಡುವೆನಾನೆಂದು ತನ್ನ ಹಡಪಿಗನಿಂದ ಕೇಳಿಸಿದನು (ಹಚಕಾ. ೧೧–೧೭); ಒಜಲಿ ಕೆಡೆದರು ಹಡಪಿಗರು ಸೀಗುರಿಯವರು ಸತ್ತಿಗೆಯವರು (ಕುವ್ಯಾಭೀ.೧೦–೧೨); ನಾರದಂ ತನ್ನ ಹಡಪಿಗನಾಗಿ ನಂದೀಶನೊಡವರಲು (ರಾಘಚ. ೭–೧೨). [ಅಡಪ (< ಅಡೆಪ) + –ಇಗ]

**ಅಡಪಿಡು** (ಕ್ರಿ). ಆಧಾರವಾಗಿ ಕೊಡು; ಅಡವಿಡು; ಒತ್ತೆಯಿಡು: ಅಡಪಿಟ್ಟ ಸೀರೆಯನುಟ್ಟುಕೊಂಡಾಗ ಬರಲು (ಚಿಬಪು. ೬೨–೬೫); ಹಣವಿದ್ದವನ ಬಳಿಯಲ್ಲಿ ಅಡಪಿಟ್ಟು ಅಕ್ಕರೆಯಂ ತೀರಿಸಿಕೊಳ್ಳಬಹುದು (ಸ್ಯಾಂಡರ್). [ಅಡಪು₁ (< ಅಡರ್ಪು₂) + ಇಡು]

**ಅಡಪು₁** 'ಅಡರ್ಪು₂' ನೋ.

**ಅಡಪು₂** (ನಾ). ೧. ದೇವಸ್ಥಾನದ ಒಂದು ಊಳಿಗ: ಗೋವಿಂದರಾಜದೇವರ ನೈವೇದ್ಯ ಪ್ರಸಾದವನೂ ತಿರುಪತಿಯವರಿಗೆ ಕಾಣಿಪರಾಗಿ ನಾಲ್ಕು ಹರಿವಾಣಖೂ . . . ಮಿಕ್ಕ ಹರಿವಾಣಗಳನೂ ತಿರುಮಲೆಯ ಸಂಧಿಯ ಅಡಪಿನ ವಿಳುಕಾಡಿನಲೂ ಹಂಚಿಕೊಂಬುದು (ಸೌಇಇ. IX–ii, ೪೬೨–೨; 1467); ಡೋಲು ನಾಗಸರ ಕೊಂಬಿನವ ಜನ ೬ಕ್ಕೆ ಗ ೩೬ ಅಡಪಿನ ಮುಲತ್ತಿಯ ಜನ ೨ಕ್ಕೆ ಅಕ್ಕಿಮುಡಿ ೧೬ (ಇಆ. V, ೪೨–೨೨; 1587). ೨. ದೇವಸ್ಥಾನಕ್ಕೆ ಸಂಬಂಧಿಸಿದ ಒಂದು ಊಳಿಗದವನು: ಉತ್ತನೂರ ಮಡವಳದ ಗಉರಿದೇವಿಯ ಸ್ಥಾನಿಕ ಕೂರಇಕೊಳ ಅಡಪುಗಳೂ ನಗರತ್ತರೂ ಮಂಗರಸಗೆ ಕೊಟ್ಟ ಕೆಱೆಯ ಕಟ್ಟುಗೊಡಗಿಯ ಮಾನ್ಯದ ಗದ್ದೆಯ ಶಾಸನ (ಎಕ. X, ಮುಳಬಾ. ೧೩೧–೩; 1407).
[← **ತೆಲು.** ಅಡಪು = ತೋರಿಸುವುದು. P ಶಾಸನಗಳಲ್ಲಿ ಮಾತ್ರ ಇದರ ಪ್ರಯೋಗವು ಕಾಣಬರುತ್ತದೆ]

**ಅಡಪು₃,** ಅಡವು₃, ಅಡಹು₃ (ನಾ). [ನಾಟ್ಯ] ಒಂದು ಭಂಗಿ, —ನಿಲವು: ಬಾಯೊಳ್ ಗಾನಮುಂ ಕೈಯೊಳಭಿನಯಮುಂ ದೃಷ್ಟಿಯೊಳ್ ರಸಮುಂ ಪದತಳದೊಳ್ ತಾಳಮುಂ ಬೀಸರಂಬೋಗಲೀಯದೆ ಸೆಱೆವಿಡಿದು ರೂಪು ನೇರು ಲಾಗು ಲವಣಿಯಡಪು ತಿರುಪು ಕೈಮುಱೆ ಕಳಾಸ ಕೂಟಮಾನಂಗಳಂ ಸಂಗಳಿಸಿ . . . ಚತುರ್ವಿಧ ನರ್ತನಮಂ ಚತುರಜನ ಮೆಚ್ಚುನಂತೆ ತೋರ್ಪ ನರ್ತಕಿಯರಿಂ (ರಾಜಶೇ. ೫–೧೯ ವ). **ಅಡವು₃:** ಮತ್ತಮೊರ್ವ ನರ್ತಕಿ ನೃತ್ಯಕ್ಕೆ ತಕ್ಕ ನೇಪಥ್ಯಮಂ ಧರಿಸಿ ಲವಣಿ ಲಾಗು ಮುಳುಹು ಗುಂಡಲ ಲಾಗನುಲಾಗು ಬೀಸುಗಾಲು ದೂಷಿ . . . ಮೊದ

ಲಾದವಗಡದಡವುಗಳನಳವಡಿಸಿ . . . ತರಹರ ನಿಸ್ಸರಣೆ . . . ಮೊದಲಾದ ಅಂದವುಳ್ಳಡವುಗಳಂ [ಪಾಠಾಂ. ವುಳ್ಳ ಡಾವುಗಳಿಂ] (ವಿರೂಪಾ. ೮೭ ವ); ಮುಡಿಯ ಮುಂಗಾರ ಮೇಘದೆ ಸೋಗೆನವಿಲಾಟದಡವ ತೋಱಿದರಂಗ ನೆಯರು (ಕಂಸವಿ. ೮–೬೫). **ಅಡಹು₃** : ನೇರು ಬಿತ್ತರ . . . ಎನಿಪ್ಪಡಹು ಗಳನು . . . ಅಡಿದಳ್ (ರೇವಣ. ೩೨–೪೮). [< ? ಅಡರ್ + –ಪು]

**ಅಡಪು₄** (ನಾ). ಒಂದು ಬಗೆಯ ಕಜ್ಜಿ ; ತೆವಳಿ ; ನಾಯಿಕಜ್ಜಿ : ಮುಪ್ಪಾದರೆ ನಾಯಿಗಳಿಗೆ ಅಡಪು ಹತ್ತುತ್ತದೆ (ಮುಂಬಯಿ. ೫–೨೯ ೬); ಪಾವಟಿಗೆಗಳ ಮೇಲೆ ಅಡಪುಹತ್ತಿದ ನಾಯಿಯೊಂದು ತೂಕಡಿಸುತ್ತ ಮಲ ಗಿತ್ತು (ಗ್ರಾಮಾಯ. ೫೯೪). [?]

**ಅಡಪ್ಪು** (ಕ್ರಿ). (ಕರಾ) ಗಿಡಿ ; ತುರುಕು. [← **ತುಳು.** ಅಡೆಪ್ಪು]

**ಅಡಬಡಿಸು** 'ಅಡವಡಿಸು' ನೋ.

**ಅಡಬಡೆ** (ನಾ). ಸಂಭ್ರಮ. 'ಅಡಬಡೆಬಡಿಸು' ಪರಾ. [?]

**ಅಡಬಡೆಬಡಿಸು** (ಕ್ರಿ). ಸಂಭ್ರಮಗೊಳಿಸು : ಬೆಡಗಿಯ ಕಂಡಾಗ ಕಡುಹು ಮರೆತು ಖಳರು ಸೋಲುತ ಮಿಡುಮಿಡುಕುತಲವರು ಸ್ಮರಶರ ತಡೆಯದೆ ಅಡಬಡೆಬಡಿಸುತ್ತ ಪಡಿನುಡಿದುದು ಬಿಡೆಬಿಡೆವಿವಳನೆನುತ (ಸಮುಮ. ೩೦). [ಅಡಬಡೆ + ಪಡು₁ + –ಇಸು₃]

**ಅಡಬರಿಸು** 'ಅಡವಡಿಸು' ನೋ.

**ಅಡಬಹಳ** (ನಾ). "ದಾಯಾದ್ಯ" (ಷಟ್ಪನಿ) : ಪೊಡವಿಪತಿ ಕೇಳಿಂತು ತಮ್ಮೊಳಗಡಬಹಳರೊಂದಾಗಿ ಕಡಲನು ಕಡೆದರಾ ಕಡೆಗೋಲು ಮಂದರ ಶೈಲವಾಗಿರಲು (ನಿಭಾಗ. ೮–೭–೮). [?]

**ಅಡಬಳ₁** 'ಅಡುವಳ' ನೋ.

**ಅಡಬಳ₂** (ನಾ). ೧. ಮಾಂಸ ; ಬಾಡು : "ಅಡಬಳಮೆಂದೆನೆ ಮಾಂಸಂ" (ಭಾರನಿ. ೪); ಹರನೇತ್ರವಹ್ನಿಯೊಳಡಬಳವ ಸುಡಬಗೆದೆಲಾ (ಕುವ್ಯಾಸ. ೧೪–೩೭); ಸಿಡಿಲುವಕ್ಕಿಯ ಪಕ್ಕವನು ಕಿತ್ತಡಬಳದ ಬಾಣಸವ ಮಾಡುವ ಕಡುಗಲಿಗಳಾರುಂಟು (ಪ್ರಭುಲೀ. ೮–೧೩); ತಲೆಯ ಬೋಳಿಸಿಕೊಂಡು ಮತ್ತಡಬಳವ ತಿಂದೀ ಹೆಂಡವನು ಕುಡಿಯಲಿವ ಪರಿಯಂತರವು (ಅರ್ಜಾವಿ. ೧೩–೫೩). ೨. = ಅಡಬಳಿಗ : ಎಡಬಲದಡಬಳರ ಸದೆದೀತ [ಪಾಠಾಂ. ಎಡಬಲದಡಬಳಿಗರನು ಸದೆದು] ತಪ್ಪಿಸಿ ಹಾಯ್ದನೂರೊಳಗೆ (ತೊರರಾ. ೫–೨–೧೦). [< ಅಡಗು₃ + ಪಲ]

**ಅಡಬಳಿಗ** (ನಾ). ಮಾಂಸವನ್ನು ತಿನ್ನುವವನು ; ರಾಕ್ಷಸ : ತೊಡಚಿ ದೆನು ಬೊಮ್ಮಾಸ್ತ್ರವನು . . . ನಿವಾತಕವಚರಿಗೆ ಕಡುಹಿನಿಂದಾಗ್ನೇಯ ವಾರುಣದಡಬಳಿಗರನು ಬಾಚಿದವು (ಕುವ್ಯಾಅ. ೧೨–೪೬); ಹೇಳಿದಳಡ ಬಳಿಗ ರಕ್ಕಸಗೆ ಖಳೆ ವೃತ್ತಾಂತಸಂಗತಿಯ (ನಿಭಾಗ. ೯–೧೦–೬).
[ಅಡಬಳ₂ + –ಇಗ]

**ಅಡಬೀಳು** 'ಅಡ್ಡಂಬೀೞ್' ನೋ.

**ಅಡಬು** (ನಾ). ಡಬ್ಬು ; ಆಡಂಬರ (?) : ಅಸಮುಖಿ ಗೋವಿಪ್ರವಧೆ ತಾಮಸದ ಕರ್ಮವಧರ್ಮವಡಬಿನ ದೆಸೆಯ ದಾತತ್ವತೆಯ (ನಿಭಾಗ. ೧೨–೧–೨೭). 'ಡಬ್ಬು' ಪರಾ. [?. / **ಹಿಂ.** ಢಬ್ = ರೀವಿ, ರೀತಿ]

**ಅಡಬೆ**, ಹಡಬೆ (ನಾ). ೧. ತುಂಟತನ ; ತೊಂಡು (೬). **ಹಡಬೆ** : ೧. ಆ ಹೊಲದಲ್ಲಿ ಹಡಬೆಯ ದನಗಳ ಸುಳಿವಿಲ್ಲ (ಬೆಳುಮ. ೧೬೪). ೨. ಕೆಟ್ಟಚಾಳಿ (ಹೆಂಗಸಿನ ವಿಷಯದಲ್ಲಿ). 'ಹಡಬೆಬೀಳು' ಪರಾ.
[**ದೇ.** ?. / **ತುಳು.** ಅಡಬೆ, ಹಡಬೆ = ಜಾರಸ್ತ್ರೀ ; **ಕೋಲಾ.** ಅಡವು = ತುಂಟ]

**ಅಡಮಾನ** (ನಾ). ಅಡವು ; ಆಧಾರ ; ಒತ್ತೆ : ಜಫ್ತಿಯು ಆಗಿದ್ದಲ್ಲಿ ಹಾಗೆ ಜಫ್ತಿಯಾದ ಸ್ವತ್ತನ್ನು ಸದರಿ ಜಫ್ತಿಯು ಜಾರಿಯಲ್ಲಿರುವ ಕಾಲ ದಲ್ಲಿ ವಿಕ್ರಯ, ದಾನ, ಅಡಮಾನ, ಈ ಮೂಲಕ ಯಾ ಇತರ ವಿಧದಲ್ಲಿ ಖಾಸಗಿ ಯಾಗಿ ಪರಭಾರೆಮಾಡುವುದೂ . . . ಅಸಿದ್ಧವಾಗಿರತಕ್ಕದ್ದು (ಗ್ರಾಮಾಕ. ೩೭); ಅಲ್ಪಕಾಲಾವಧಿಯ ಅಡಮಾನಗಳ ಮೇಲೆ ಸಾಲ ಕೊಡುವುದಕ್ಕುಪಕ್ರಮಿಸಿದರು (ಭಾಗ್ಯಶಿ. ೨೮).
**ಅಡಮಾನದ ಬ್ಯಾಂಕು** = ಜಮೀನು ಮೊದಲಾದವುಗಳ ಆಧಾರದ ಮೇಲೆ ಸಾಲವನ್ನು ಕೊಡುವ ಬ್ಯಾಂಕು.
[← ? **ತಮಿ.** ಅಡೈಮಾನವ್ ; **ಮಲ.** ಅಡಮಾನವ್ ; **ತೆಲು.** ಅಡಮಾನಮು]

**ಅಡಮಾನದಲ್ಲಾಳಿ** (ನಾ). ಒತ್ತೆಯನ್ನು ಇಟ್ಟುಕೊಂಡು ಸಾಲ ಕೊಡುವವನು. [ಅಡಮಾನ + ದಲ್ಲಾಳಿ]

**ಅಡಮಾನಪತ್ರ** (ನಾ). ಅಡವು ಇಟ್ಟದ್ದಕ್ಕೆ ದಾಖಲೆಯಾಗಿ ಬರೆದು ಕೊಡುವ ಪತ್ರ : ಸ್ಟಾಕುಗಳು, ಬಾಂಡುಗಳು, ಸಾಲ, ಅಡಮಾನಪತ್ರ ಗಳು, ಜಾಮೀನುಪತ್ರಗಳು – ಇಲ್ಲಿ ಒಂದು ಹಣದ ಜಗತ್ತೇ ಇತ್ತು (ಎಳಕ. ೬೬). [ಅಡಮಾನ + ಪತ್ರ]

**ಅಡಮು** (ನಾ). ವಿರೋಧ ; ತಕರಾರು : ಯೀ ಹೆಂಣಾಳು ಹುಡುಗಿ ಯಂನ್ನು ನಿಮಗೆ ಕ್ರಯಮೂಲಕ್ಕೆ ಕೊಟ್ಟೆನಾಗಿ ಯೀ ಹೆಂಣಿಗೆ ಅದಿ ಅಡಮು ಅಡ್ಡಿ ಸಡ್ಡಿಯೇನು ಉಂಟಾದ್ದಂನ್ನು ನಾನೇ ನೋಡಿಕೊಂಡೇನು ಯೆನ್ದು ಬರಸಿಕೊಟ್ಟ ಕ್ರಯಚೀಟು (ಮೈಆರಿ. ೧೯೨೮, ೬೭–೧೧ ; 1808).
[← ? **ತೆಲು.** ಅಡಮು = ಪ್ರತಿಕೂಲ]

**ಅಡಮುಟ್ಟ** (ನಾ). (ಉಕ) ಒರಟ ; ಮೊಂಡ ; ಹಟಮಾರಿ : ಆಗ ಪಂಡಿತರು 'ಅಡಮುಟ್ಟ ದೇವದಾಸ ನಿನ್ನನ್ನು ತಳ್ಳಿ ಓಡಿಹೋದನೆ? ಬರಲಿ ಅವನು ಇನ್ನೊಮ್ಮೆ, ಚೆನ್ನಾಗಿ ಕೆನ್ನೆಯ ಮೇಲೆ ಕೊಡುತ್ತೇನೆ' ಎಂದರು (ದೇವದಾ. ೪).
[← ? **ಮರಾ.** ಅಡಮುಠ್ಯಾ, ಅಡಮುಟ್ಯಾ = ಹೆಡ್ಡ, ವಕ್ರ]

**ಅಡಮುರಿ** (ಕ್ರಿ). ಅಡ್ಡಲಾಗಿ ತಿರುಗು ; ಪಕ್ಕಕ್ಕೆ ಹೊರಳಿ ತಪ್ಪಿಸಿ ಕೊಂಡು ಹೋಗು ; ವಿಮುಖವಾಗು : ಕಂಡವರಡಮುರಿದು ಮೋಱೆ ಯನು ನೋಡದೆ ಹೋಹ ಪಾಪಿಯನು ಪೊಡವಿ ಹೊಱುವುದೆ (ನಿಭಾಗ. ೬–೨–೩೦); ನಿನ್ನ ತಲೆಗೆ ಹೊಣೆಕಾರ ನಾನಾಗಿಹೆನುಯಡಮುರಿಯದೆ ನಿಲ್ಲೆಲವೊ . . . ಕೆಲತೊಲಗದಿರಲ್ಲಿ ಕೊಡು ಕಾಳಗವನು (ತುರಂಗ. ೫೭–೫೩). [< ಅಡ್ಡ₁ + ಮುರಿ₁]

**ಅಡಮುಸುಕು** 'ಅಡ್ಡಮುಸುಕು' ನೋ.

**ಅಡರ್**, ಅಡರು₁ (ಕ್ರಿ). ೧. ಮೇಲಕ್ಕೆ ಹತ್ತು ; ಏರು ; ಆರೋಹಿಸು : "ಅಡರ್ –ಆರೋಹಣೇ" (ಶಮಧಾ) ; ಕಟವಪ್ರಶೈಲಮಡಱ್ದೇ [ರ್ದೇ] ನಮ್ಮಾ ಕಳನ್ತೂರನಂ ಬಾಲೇ ಪೆಗ್ಗೂರವಂ ಸಮಾಧಿ ನೆಱೆದೋನ್ (ಎಕ. II, ೨೨–೩ ; 700); ಮುಕ್ತಿಪ್ರಾಸಾದಮನಡರಲಿವುವೆ ಸೋಪಾನಂಗಳ್ (ಆದಿಪು. ೫–೬೦); ಪ್ರತಿಮಾಯೋಗದೊಳ್ ನಿಂದ ಬಾಹುಬಲಿಯ ಮೆಯ್ಯ ನಡರ್ವ ಬಳ್ಳಿಗಳಂ . . . ಬಿಡಿಸಿ ಕಳೆದರ್ (ಚಾವುಂಪು. ೭೦); ಮುನ್ನ ಮಮುರರುಂಡಮೃತಮನೀಂ ಕಾಱಿಸುವೆನೊ ಖಚರರನಡರ್ದೇಱಿಸು ವೆನೊ ಮೇರುಗಿರಿಯ ತುಱುಗಲ ತುದಿಯಂ (ಗದಾಯು. ೬–೧೭); ಗರು ಡಂಗಂ ಆಡರಲ್ಬಾರದ ಸಮುತ್ತುಂಗಶಿಖರಂಗಳ್ (ಪಂಚತಂ. ೨೧೫–೧೨); ಕೌರವೇಶ್ವರನೆಗ್ಗ ನೋಡುವೆನೆಂಬವೊಲು ರವಿಯಡರ್ದನಂಬರವ (ಕುವ್ಯಾಶ. ೨–೨); ತಡಿತಡಿಗಡರ್ವ ಜಲದೊತ್ತುಗಳ ಮುತ್ತುಗಳ ಪಡೆಪಿನಿಂ ಕಡಲೆಸೆದುದು (ಚಿಬಪು. ೨–೪). ೨. ಹಬ್ಬು ; ವ್ಯಾಪಿಸು ; ಆವರಿಸು : ಮುನಿಯ ಕರನಖರುಚಿಗಳ್ ಪುದಿದಡರ್ದು ಬೆಳಗಿದುವು ಪೂಸಿದ ಚಂದನ ರಸಲಲಾಮದಂತಿರೆ ನೊಸಲೊಳ್ (ಕಾದಂಪೂ. ೮೩೨); ಗುರುವಂ ಕಂಡು ನವಸಾತ್ವಿಕಂ ಸಮಂತಡರೆ ದಂಡಪ್ರಣಾಮವನೆಸಗಿ (ಪದ್ಮರಾ. ೧೨–೪); ಕಾರ್ಮುಗಿಲ ಸೊಂಪಡರ್ದ ಸೋರ್ಮುಡಿ (ಸೌಂದಪು. ೭–೧೦); ಆ

ಮಹಾಪತ್ತಡರೆ ಭವ್ಯಸ್ತೋಮಮುಮನುದ್ಧರಿಸಿದರು (ಸಾಳ್ವಭಾ. ೧–೧೬). ೩. ಸೇರು; ಕೂಡು: ಸಮಾಸದೊಳಮಸಮಾಸದೊಳಂ ರೇಫೆಯಡರ್ದ ಕ್ಕರಕ್ಕೆ ದ್ವಿತ್ವಮುಕ್ಕುಂ (ಶಮದ. ೧೮೪ ವೃತ್ತಿ). ೪. ಮೇಲೆ ಬೀಳು; ಆಕ್ರಮಿಸು: ಅವರೊಡನಡರ್ದು ಸ್ತ್ರೋನ್ ಅಜ್ಜರನೂ (ಎಕ. VIII, ಸೊರಬ. ೧–೭; 797); ಬಿಡದಡರೆ ಪೊಣರುವ ವೈರಿಯ ಕಡುಗಾಯಿಪಿಂ ದಟ್ಟ ಮುಟ್ಟ ರಣರಂಗದಲ್ಲಾದಿ (ಸೌಇಇ. IX–i, ೨೭೬–೩೦; 1183); ಖಂಡೆಯವ ಜಡಿವುತ್ತ ತುರಗವನು ನಂಬಿಯು ದಳದ ಮೇಲಡರಲು (ಸೌಂದಪು. ೧೬–೨೨). ೫. ಉನ್ನತವಾಗು: ಬಿಡುಜಡೆ ಕರ್ಣಕುಂಡಲ ಮಡರ್ದ ಘಟಸ್ತನಂ . . . ತನ್ನೊಳೊಪ್ಪುತಿರಲೊರ್ಬ ತಪಸ್ವಿನಿ ಬಂದು (ದಶಕು. ೧೧–೩೨). ೬. ಚುಚ್ಚು; ನಾಟು: ದರ್ಭೆಯ ಮೊನೆ ಕಾಲ ತಳಮನಡರಲದರ ಸಮೂಲಮನಗಳ್ದು ಕಿತ್ತು (ಕಗವಿ. ೯೨, ರಾಜಾವ).

**ಅಡರು**$_1$: ೧. ಆಕಾಶವನಡರುವಂಗೆ ಅಟ್ಟಗೋಲ ಹಂಗೇಕೋ (ಅವಚಂ. ೧೮೬–೮೫೯); ಮಂದರವನಡರಿ ಭೂವರನ ಮುಂದಾಡುತಿಹ . . . ವಾಜಿಗಳ್ (ಹಚಕಾ. ೩–೨೧); ನಾನಕಟ ಗರ್ವದ ಗಿರಿಯನೇನಡರಿರ್ದನೋ ಮೇಣ್ ದುರುಳತನದಲಿಯೆನ್ನ ನಡೆನುಡಿ ತಪ್ಪನಪ್ಪಿದುವೋ (ಪ್ರಭುಲೀ. ೧೪–೧೮); ಪ್ರಾಣನಾಥನ ಕಾಣಲುಪ್ಪರಿಗೆಯನು ಬಿನ್ನಾಣದಿಂದಡರಿದ್ದರಾಗ (ಭರಚ. ೫–೧೦). ೨. ಅಡರಿ ಕಟಾಕ್ಷಚಂದ್ರಿಕೆ ಪಳಂಚಿಗೆವಾಕ್ಷದ ಚಂದ್ರಕಾಂತದಿಂದುಡುಗದೆ ಸೋರ್ವ ನೀರ್ವನಿಗಳ್ (ಮಲ್ಲಿಪು. ೨–೭೦); ಬೆಜಗಡರಿ ಮುಖದಿರುಹಿ ಹಿಂದಣೆನಿಜೀದ ಕರ್ಣನ ನೋಡಿ (ಕುವ್ಯಾದ್ರೋ. ೬–೩೩); ಆ ದೇಹಕ್ಕೆ, ಆ ಹೆಸರಿಗೆ, ಆ ಮನೆತನಕ್ಕೆ ಕೊನೆಗೆ ಆ ದೇಶಕ್ಕೇ ಅಡರುವುದು (ಬಾಬಲ. ೮೨). ೪. ನೀನು ಮಾಡಿದ ಒಂದೊಂದು ಪಾಪಕ್ಕೂ ಒಬ್ಬೊಬ್ಬರಂತೆ ಬಂದು ನಾವು ನಿನ್ನನ್ನಡರಿದೆವು (ಮುಂಗಾಮು. ೩).

**ಅಡರೆಗೊಳ್** = ಹತ್ತಿಕೊಂಡಿರು; ಅಂಟಿಕೊಂಡಿರು: ತನುಲತೆಯಂ ಪುತ್ತಡರ್ದತ್ತೆನೆ ಮಳವಿಡಿದಡರೆಗೊಂಡು ತೀವಿರ್ದುದಜಿಂ (ಸುಕುಮಾ. ೯–೭). **ಅಡರೆಗೊಂಡು ತಿನ್ನು** = ಗಬಗಬನೆ ತಿನ್ನು; ಅತ್ಯಧಿಕವಾಗಿ ತಿನ್ನು (ಉಕ). **ಅಡರೆ ತೊಡರೆ** = ಹಾಸುಹೊಕ್ಕಾಗಿ; ಸಮಗ್ರವಾಗಿ: ಸೂಸಿದ ಪುಷ್ಪಾಂಜಳಿಯನೆ ಬಾಸಣಿಸಿದ ಮದವದಳಿಕುಳಂಗಳ ಬೆಳ್ವಂ ಮಾಸಿಸಿದುವು ವಾಸವನ ವಿಳಾಸಂಬೆರಸಡರೆ ತೊಡರೆ ಬಳಸುವ ಕಣ್ಗಳ್ (ಆದಿಪು. ೭–೧೧೬); ಬುಧಸಾಮಾಜಿಕಮತಮನೆ ಪೇಟ್ದು ವಿರಾಜಿತಮನನಡರೆ ತೊಡರೆ ನುಡಿಗುಂ ನಯಮಂ (ಶಾಂತಿಪು. ೨–೨೯). **ಅಡರೆ ನುಡಿ** = ಮೇಲೆ ಬಿದ್ದು ಮಾತಾಡು; ದುಡುಕಿ ಮಾತಾಡು: ಎಂದತಿಕ್ರಮಿಸಿ ವಿಕ್ರಮದಿನಡರೆ ನುಡಿದ ದೂತನ ದುರುಕ್ತಿಗೆ ಮಹೀಶನೀಷದುದ್ಗತಭ್ರುಕುಟಿಯುಂ . . . ಆಗಿ (ಪುಷ್ಪಪು. ೭–೬೧ ವ). **ಅಡರೆ ತೊಳಗು** = ಅತಿಶಯವಾಗಿ ಹೊಳೆ; ಬಹಳವಾಗಿ ಪ್ರಕಾಶಿಸು: ಅಮರೇಂದ್ರಾಶಾವಧು ಚಂದ್ರಮುಖಿ ಸುಧಾರಶ್ಮಿ ಸೀಧುರಸಧಾರೆಯನಂದುಮುಟಿತಿ ನಭಃಕೇಸರಮೆಯ್ದೆ ಮುಗುಳ್ತಂದಡರೆ ತೊಳಗಿದುವು ತಾರಗೆಗಳ್ (ಲೀಲಾವ. ೨–೧೭). **ಅಡರೆ ನೋಡು** = ಆಪಾದಮಸ್ತಕವಾಗಿ ನೋಡು; ಸಮಗ್ರವಾಗಿ ನೋಡು: ಲೋಕೈಕಚಕ್ಷು . . . ಎರಡುಮನೀಕಂಗಳನಡರೆ ನೋಡುವಂತುದಯಿಸಿದಂ (ಪಂಪಭಾ. ೧೦–೫೧); ಮನದೊಂದಳ್ಕಜಿಕೊಳೆನ್ನನೊಲ್ದಡರೆ ನೋಡುತ್ತಿರ್ಪುದಂ (ಕಾದಂಪೂ. ೭೫೪). **ಅಡರೆ ಬೆಮರ್** = ಹೆಚ್ಚಾಗಿ ಬೆವರುಂಟಾಗು: ಉದಯಿಸೆ ಕಾಂತನ ಮುಖೇಂದು ಕರಕಮಳಂ ಮಾಣದೆ ನಡುಗಿದುದಡರೆ [ಪಾಠಾಂ. ನಡನಡುಗಿ ಪೊಡೆ] ಬೆಮರ್ತುದು ತನುಶಶಿಮಣಿಶಲಾಕೆ ದಳಿತೀಕ್ಷ್ಣಣೆಯಾ (ಲೀಲಾವ. ೭–೯೦).

[**ದೇ.** ‖ **ತಮಿ.** ಅಡರ್ = ಒತ್ತಾಗು, ದಟ್ಟವಾಗು, ಮುತ್ತು, ಕೊಲ್ಲು; **ತೆಲು.** ಅಡರು]

**ಅಡರಾಟಿ** (ನಾ). ೧. ಮೇಲೆ ಏರಿಹೋಗುವುದು; ಹೋರಾಟ; ಜಗಳ: ಈತನೆನ್ನಣ್ಣನಮಗಂ, ಸನಿಹದಾರ್ಯರೊಡನಡರಾಟದಲಿ ಮಡಿಯಲಾತನಾತನ ಪಾಳ್ಯದೊಡೆತನಂ ಬಾಲನೀತನ ಸಾಕಣೆಯುಮೆನಗೆ ಬಂತು (ಹಬ್ಬಿರ. ೬–೨೫). ೨. ಸ್ಪರ್ಧೆ; ಪೈಪೋಟಿ (ಕ).
[ಅಡರ್ + ಅಟ]

**ಅಡರಾಸು,** ಅಡ್ಡರಸು, ಅಡ್ಡರಾಸು (ಕ್ರಿ). (ಉಕ) ೧. ತವಕಪಡು; ಅವಸರಪಡು: ಅಡರಾಸಿ ಏಳೂತ ನೋಡ್ಯಾಳ ಚೆನ್ನವ್ವ ಕೆಂಪ ಕೆರಿಮ್ಯಾಗ ಹೊರಪಂಜು ಕಿತ್ತೂರ ಸುದ್ದಿ ಹೋದಾವು ಮನಿಮನಿಗೆ (ಲೋಕಗೀ. ೨೨೧–೧೩); ನನಗೆ ಅವನ ಗೊಡವೆ ಬೇಡ. ನಾನು ಬರುವುದಿಲ್ಲ ಎಂದು ಹೇಳಿಕಳುಹಿದನು. ಉಳಿದವರಿಬ್ಬರೂ ಅಡರಾಸಿ ಬೀರಬಲ್ಲನನ್ನು ಕಾಣಲಿಕ್ಕೆ ಅವನ ಮನೆಗೆ ಬಂದರು (ಬೀರಬ. ೪೦); ತಾವ ನಿಮಗ ಫಲ ಕೊಡಬೇಕು ಅಂತ ಮಹಾರಾಜರು ಅಡರಾಸಿ ಬಂದರು (ನಾಥಾರಿ. ೮೧). **ಅಡ್ಡರಸು**: ೧. ಮನೆಯ ಯಜಮಾನತಿ ಅಡ್ಡರಸಿ ಓಡಿಬಂದು (ನಿರಾಭ. ೫೩). **ಅಡ್ಡರಾಸು**: ೨. ಕೂಗು; ಕಿರಿಚು: ನಡುರಾತ್ರಿಯಲ್ಲಿ ನಿದ್ರೆಯಿಂದೆಚ್ಚತ್ತು 'ಅವ್ವ' ಎಂದು ತಾಸು ಹೊತ್ತಿನ ತನಕ ಅಡ್ಡರಾಸುವನು (ಬಿಟ್ಟಹೊ. ೧೦). [<? ಅಡರ್ + ಪಾಯ್ + –ಇಸು$_3$]

**ಅಡರಾಳಿ** (ನಾ). ರೇಗಿ ಮೇಲೆ ಬೀಳುವವನು (ಸ್ಯಾಂಡರ್).
[ಅಡರ್ + –ಆಳ್$_2$]

**ಅಡರಿ,** ಅಡಲಿ (ನಾ). ಎಣ್ಣೆಯ ಬೀಜವನ್ನು ಅರೆದು ನೀರಿನಲ್ಲಿ ಕದಡಿಟ್ಟ ಮಿಶ್ರಣ; ಈ ಮಿಶ್ರಣದಿಂದ (ಕಾಯಿಸಿ) ತೆಗೆದ ಎಣ್ಣೆ. 'ಅಡರಿಗೊಳ್' ಪರಾ. **ಅಡಲಿ**: 'ಅಡಲಿಯೆಣ್ಣೆ' ಪರಾ.
[<? ಅಡರ್]

**ಅಡರಿಗೊಳ್** (ಕ್ರಿ). ಅಡರಿಯನ್ನು (ಎಂದರೆ, ಕದಡಿದ ಮಿಶ್ರಣದಲ್ಲಿ ಮೇಲಕ್ಕೇರಿ ಬಂದು ತೇಲಿದ ಎಣ್ಣೆಯನ್ನು) ತೆಗೆದುಕೊ: ಪರಿಪಕ್ವ ಬಿಲ್ವಬೀಜಮನರೆದೆಣ್ಣೆಯೊಳಿಕ್ಕಿ ನೆಟಿಲೊಳೊಣಗಿಸಿ ಜಲದಿಂದಿರದಡರಿಗೊಂಡು ತಳಿ ಹಿಮಕರನಂ ಕರ್ಪೂರತೈಲಮುತ್ತಮಮಕ್ಕುಂ (ಲೋಕೋಪ. ೬–೨೫); ಅವನುದಕದಲ್ಲಿ ಅಡರಿಗೊಂಡು –ಆ ತೈಲಮಂ ತೆಗೆದುಕೊಂಡು (ಲೋಕೋಪ. ೭–೨೫ ಟೀಕೆ). [ಅಡರಿ + ಕೊಳ್$_1$]

**ಅಡರಿಚು** 'ಅಡರ್ಚು' ನೋ.

**ಅಡರಿಸು** (ಕ್ರಿ). ೧. ಹತ್ತಿಸು; ಏರಿಸು: ವಿಕಟಕೂಟ ಶಾಲ್ಮಲಿಗಳನಡಿಗಡಿಗಡರಿಸುತ್ತುಂ (ಅಜಿಪು. ೧೧–೧೦ ವ); ನೀರೊಳು ಹೊಗಿಸಿದನು ಹರಿಹಯ ಚತುಷ್ಟಯವ . . . ಮುರಾಂತಕ ತಡಿಯನಡರಿಸಿದ [ಪಾಠಾಂ. ಚಿದ] (ಕುವ್ಯಾದ್ರೋ. ೧೦–೩೪); ಭದ್ರಾಸನಕ್ಕೆ ಬಲದ ಮೊದಲ ಗದ್ದುಗೆಗೆ ಎಚ್ಚರಿಂದಡರಿಸಿ ನಿವಿಷ್ಟಮಾಡಿ (ಬಿಟ್ಟಅ. ೩೯–೧). ೨. ಹಬ್ಬಿಸು: ತವರಾಜದ ಸಸಿಯ ಮೇಲೆ ಸವಿಯ ಬಳ್ಳಿಯನಡರಿಸು [ಪಾಠಾಂ. ಯಂ ನಡಯಿಸು] ವಂತೆ (ನಂಬಿರ. ೧೪–೩೪); ಇದೇತಜ ಹುಳುವೊ ಲಿಂಗದ ಮೇಲೆ ನಿಚ್ಚಂ ಬಳಸಿ ಹೊಲ್ಲಹ ನೂಲನಡರಿಸಿ ಹೋಗುತಿದೆ (ಬಸಪು. ೧೮–೪೦). 'ಅಡರ್ಚು' ಪರಾ. [ಅಡರ್ + –ಇಸು$_3$]

**ಅಡರು**$_1$ 'ಅಡರ್' ನೋ.

**ಅಡರು**$_2$ (ನಾ). ಊರೆ; ಆಸರೆ; ಆಧಾರ; ಅವಲಂಬನ: ನಂಬಿಸುವ ಸೋಲಿಸುವಡರುಗಳು ಕಡುಯಂತ್ರತಂತ್ರಂಗಳಿಗೆ ಬಿತ್ತುಗಳು . . . ಗಣಿಕೆಯರ ಮಾತುಗಳು (ಬಸಪು. ४೦–೬೨, ೬೩). [< ಅಡರ್]

**ಅಡರು**$_3$ (ನಾ). (ಕರಾ) ೧. ಚಿಕ್ಕ ರೆಂಬೆ: ಆತ ಸ್ವಲ್ಪ ಕುಂಯ್ ಕುಂಯ್ ಎಂದರೆ ಬೆನ್ನಿಗೆ ಹುಣಿಸೆ ಅಡರಿನ ಪೂಜೆಯೇ ಆಗುತ್ತಿತ್ತು (ಕೈಮಾಂಸ. ೫); ಬಿದಿರಿನ ಸಲಿಕೆ ಕಟ್ಟಿ ಗಿಡಗಳ ಅಡರು ಚುಚ್ಚಿದರೂ ಸಾಕು (ಬಾಳಿಗಿ. ೪೧). ೨. ಕಡ್ಡಿ; ಪುಳ್ಳೆ; ಉರುವಲು: ಹಸಿ ಅಡರು,

ಒಡ್ಡೆಯಾದ ತರಗೆಲೆಗಳನ್ನು ಉರಿಸಿ ಮನೆತುಂಬ ಹೊಗೆ (ಮರಮ. ೭) ; ಮಳೆಯಲ್ಲಿ ಅಡರು ಕಟ್ಟಿಗೆ ಮೊದಲಾದುವನ್ನು ಜಮಾಯಿಸಿದರು (ಕುಡಿಕೂ. ೭೪) ; ಶಾಲೆಯ ಬಾವಿಯನ್ನು ನೀನು ಕಂಡಿಲ್ಲ. ನಾಲ್ಕು ಹೊರೆ ಅಡರು, ಎರಡು ರಾಶಿ ಹಂಚಿನ ಒಡಕು, ಒಂದು ತಿಪ್ಪೆ ಕಟ್ಟಿಕೊಂಡಿದೆ (ಕಾವೇರಿ. ೪೫). [← ? **ತುಳು.** ಅಡರು]

**ಅಡರುಗಚ್ಚೆ** (ನಾ). ಮೇಲಕ್ಕೆ ಎತ್ತಿ ಕಟ್ಟಿದ ಕಚ್ಚೆ : ಭಟ್ಟರು ತಲೆಗೆ ಮುಂಡಾಸು ಸುತ್ತಿ ಅಡರುಗಚ್ಚೆ ಹಾಕಿ ಹೊರಟರು (ರೂಢಿ).
[ಅಡರು$_1$ (< ಅಡರ್) + **ಕಚ್ಚೆ**$_1$]

**ಅಡರುಗಟ್ಟು** (ಕ್ರಿ). ಧೋತ್ರ, ಸೀರೆಯ ನಿರಿ ಮೊದಲಾದವನ್ನು ಮೇಲಕ್ಕೆ ಎತ್ತಿ ಕಟ್ಟು (ಕಿ). [ಅಡರು$_1$ (< ಅಡರ್) + ಕಟ್ಟು$_1$]

**ಅಡರುಗಾಲು** (ನಾ). ನಡೆಯುವಾಗ ಮೇಲಕ್ಕೆ ಎತ್ತಿದ ಕಾಲು. (ಕಿ). [ಅಡರು$_1$ (< ಅಡರ್) + ಕಾಲು$_1$ (< ಕಾಲ್$_1$)]

**ಅಡರುಮಾಡು** (ಕ್ರಿ). ಆಶ್ರಯವಾಗಿ ಮಾಡು : ವಿಕ್ರಮದೊಳು ಅವನಿಯೆಲ್ಲವನಾಳಿ ಕೀರ್ತಿವಲ್ಲರಿಗಾ ಭುವನವನಡರುಮಾಡಿದನು (ನೇಮಿಸಂ. ೪–೭೮). [ಅಡರು$_2$ + ಮಾಡು$_1$]

**ಅಡರುಹತ್ತು** (ಕ್ರಿ). ಹಣತೆಯಲ್ಲಿ ಎಣ್ಣೆ ಮುಗಿದಾಗ (ಉರಿಗೆ ಆಶ್ರಯವಾದ) ಬತ್ತಿ ಹೊತ್ತಿಕೊ (ದಕ. ಕಿ).
[ಅಡರು$_2$ + ಹತ್ತು$_2$ (< **ಪೊತ್ತು**$_1$)]

**ಅಡರ್ಚು**, ಅಡಚು$_1$, ಅಡರಿಚು (ಕ್ರಿ). ೧. ಹತ್ತಿಸು ; ಏರಿಸು : ಮಡಿವಸನವನುಟ್ಟು ಪೂರ್ವದಿಗ್ವನಿತೆಯು ಮುಡಿಯೊಳು ಹೊತ್ತ ಹೊಂಗಳಸನಿಡಿನಿಂದ ರಥದ ಮೇಲಡರ್ಚಿದ ರನ್ನಗನ್ನಡಿಯಂತೆ ಸೂರ್ಯ ಮೂಡಿದನು (ಮೋಹತ. ೧೮–೧೯) ; ವರವಧೂಟಿಯ ಕೆಯ್ಯ ಪಿಡಿದು ಮನ್ಮಥ ತೊಡೆಯೆಡೆಗಡರ್ಚಿದನು (ಮೋಹತ. ೧೬–೩೬). ೨. ಸೇರಿಸು ; ಕೂಡಿಸು : ಕಡುಗಲಿ ಕಾಮ ತನ್ನುಭಯಹಸ್ತದ ಗದೆಗಡರ್ಚಿದ ಮಣಿಗಟ್ಟಿನಂತೆ ಬಿಡಯವಿಲ್ಲದೆ ಕುಮರಿಯ ತೋಳ ಭಾಪುರಿ ಕಡಗಕಂಕಣವನಿಕ್ಕಿದರು (ಮೋಹತ. ೨೩–೪೧). ೩. ನೂಕು ; ತಳ್ಳು : ಬಲದೊಳು ಹೊಕ್ಕು ಬಲ್ಲಿದರ ನೆಗ್ಗೊತ್ತಿ ಹಿನ್ನೆಲಕಡರ್ಚಿದರು ಸೂಠಿಯಲಿ (ಮೋಹತ. ೩೯–೧೮). **ಅಡಚು**$_1$ : ೪. ತುಂಬಿಕೊ ; ಒತ್ತಾಗಿ ಸೇರು : ಒಡಲು ಶಾಶ್ವತವಲ್ಲ ಮಡದಿ ಮಕ್ಕಳು ಯೆಂಬ ತೊಡಕು ವೃಷ್ಟಿಗಳಿಂದ ಅಡಚಿದ ನೆರೆಯಂತೆ (ಚಂದ್ರಾವ. ೪೧). **ಅಡರಿಚು** : ೧. ಪೊನ್ನಂದಳವನಡರಿಚಿಯನೇಕ ಮಂಗಳವಾದ್ಯವೆರಸಿ (ಸೌಂದಪು. ೧೩–೪೨). [ಅಡರ್ + –ಚು]

**ಅಡರ್ತೆ** (ನಾ). (ಉಕ) ಗೋಡೆಯನ್ನು ಕಟ್ಟುವಾಗ ಒಂದು ಕಲ್ಲಿನಿಂದ ಮತ್ತೊಂದು ಕಲ್ಲು ಬಿಟ್ಟುಹೋಗದಂತೆ ಮಾಡಲು ಉಪಯೋಗಿಸುವ ಗಾರೆ. [< ? ಅಡರ್ + –ತೆ$_2$]

**ಅಡರ್ಪು**$_1$ (ಕ್ರಿ). ಒದಗಿಸು ; ಸಿದ್ಧಪಡಿಸು : ಅಲ್ಪಾಹಾರಮಂ ಅನೇಕ ಮಂದಿಗಡರ್ಪಲಾವನಿಂದಲಾಗದು (ಸ್ಯಾಂಡರ್) ; ಸಕಲಸನ್ನಾಹಮಡರ್ಪಲ್ ಸರದಾರನಾಜ್ಞಾಪಿಸಿದನು (ಸ್ಯಾಂಡರ್). 'ಅಡರ್ಚು' ಪರಾ.
[ಅಡರ್ + –ಪು$_2$]

**ಅಡರ್ಪು**$_2$, ಅಡಪು$_1$, ಅಡವು$_2$, ಅಡಹ, ಅಡಹು$_2$ (ನಾ). ೧. ಊರೆ ; ಆಸರೆ; ಆಧಾರ; ಅವಲಂಬನ : "ಅಂಕೆಯುಮಡರ್ಪುಂದು ನೆಮ್ಮುಗೆಗೆ ನಾಮಮಕ್ಕುಂ" (ಕಬ್ಬಿಕೈ. ೭೩) ; ಇನ್ತಾರ್ ಪೊಗತ್ತೆಗಡರ್ಪ್ಪಾದ ಮಹಾಮುಹರ್ (ಎಇ. XIII, ೩೨೯–೨ ; 929) ; ಕಳೆಗೆ ಕುಲಭವನಮುಂ ಪ್ರತಾಪಕ್ಕಡರ್ಪುಮಾಗಿ ಬಳೆವನ್ನೆಗಂ (ಆದಿಪು. ೬–೨೨ ವ) ; ಮೃಗಧರಕುಲಲಕ್ಷ್ಮೀವಲ್ಲಿಗೆ ಪೆಜರಾರ್ ನೀನೆ ಮುನ್ನಡರ್ಪೆನಲಿರ್ದೈ (ಗದಾಯು. ೩–೭೮) ; ಶಿವನ ಕೀರ್ತಿಗೆ ಮೂರ್ತಿಯಾದೆ ಎಲೆ ರಾಮಯ್ಯ ಭವನ ಕೀರ್ತಿಯ ಲತೆಗಡರ್ಪಾದೆ ರಾಮಯ್ಯ (ಏಕಾಂರ. ೧೪೫–೨೩) ; ಉಡುವಂತೆ ವಿಜಯವಲ್ಲರಿಯಡರ್ಪು ತದ್ಧ್ವನಿ ಪಳಂಚೆ ಕೇಕಿಧ್ವಜವಂದುಡಿದುದು (ಜಗವಿ. ೧೮–೮) ; ಮುಂದೆ ಸೃಜಿಯಿಸುವ ಲೋಕಂಗಳು ಜರಿದಪವಕ್ಕಡರ್ಪಾಗಿರಲ್ವೇಳ್ಕೆಂದು ಗುರುತರಸುವರ್ಣದ ಸಲಾಕೆಯಂ ಬಲಿದರೋ (ಚೆಬಪು. ೧೬–೪೩). ೨. ಸಾಲವಾಗಿ ಕೊಟ್ಟ ಹಣದ ಭರವಸೆಗಾಗಿ ಚಿನ್ನ, ಬೆಳ್ಳಿ, ಪಾತ್ರೆ, ಪದಾರ್ಥ, ಭೂಮಿ ಮುಂತಾದವನ್ನು (ಹಣ ಕೊಟ್ಟವನ) ವಶದಲ್ಲಿಡುವುದು ; ಹಾಗೆ ಇಟ್ಟದ್ದು : "ಅಡರ್ಪೊತ್ತೆಯಭಿಧಾನಂ" (ಕಶರ. ೯). ೩. ಔನ್ನತ್ಯ ; ಉತ್ಸಾಹ : ಬಿಡದೆಚ್ಚು ಸರಲ್ ತವೆ ಮನದಡರ್ಪು ತವದುರ್ವಿ ಮೈಯೊಳಿರ್ದಂಬಂ ಕೈಯುಡುಗದೆ ಕಿಚಿತ್ತಿಚ್ಚರ್ . . . ವೀರಭಟರ್ (ಚಂದ್ರಪು. ೧೦–೭೭). ೪. "ಸನ್ನೆ ಮರದ ಕೆಳಗೆ ಅಡ್ಡಲಾಗಿ ಹಾಕುವ ಮರ" (ಕರ್ಣಾಭಾ. ೫). **ಅಡಪು**$_1$ : ೧. ಕೈಕೊಂಡ ತೆಜದವಂ ಕಟ್ಟುಗ್ರನಭ್ಯಾಸದವರಿಲ್ಲ ಚಾಚಲಡಪಿಲ್ಲ ತಾನಭಿಮಾನವ ಬಿಟ್ಟು ತಿರಿವವನಲ್ಲ (ಹಚಕಾ. ೧೧–೧). ೨. ಒರ್ವ ಜಂಗಮನಾತನ ಅರಸಿಯಡಪಿಟ್ಟ ಸೀರೆಯನುಟ್ಟುಕೊಂಡಾಗ ಬರಲದಜಸೆಜಗಬೇಡಿದೊಡಿತ್ತು ಬಳಿಕದಕೆ ಪರಮಪಾದೋದಕವ ತಳಿಯಲಾ ಸೆಜಗು ಬರಲಡಪಿನವಗಿತ್ತು ಮೆಜೆವಂ (ಚೆಬಪು. ೬೨–೬೫) ; ಅಡಪು ಕೊಟ್ಟು ಹೋಗು (ಸ್ಯಾಂಡರ್). **ಅಡವು**$_2$ : ೧. ನಡುವಣಂತ್ಯದ ಭವಕೆ ನಮಗಾರಡವು ದೇವ (ಪ್ರಹ್ಲಾಚ. ೨–೧೯). ೨. ನಿನ್ನ ಕೊರಳಿನೊಳಿರ್ದ ಕಡುಚೆಲುವ ತಾಳಿಯನದನ್ನಡವನಿರಿಸಿ ನೀ [ಪಾಠಾಂ. ಐದೆದಾಳಿಯ ಕಂಡು ನೀನಿದನಡವಿರಿಸಿ] ಬಿಡಿಸಿಕೋ ಬಳಿಕವೆನಲು (ಹಚಕಾ. ೧೨–೩೮) ; ಸಿಂಗಾಪುರದ ಗಿರಿಭಟ್ಟರು ಯಂಬವರು ಈ ದೊಡ್ಡಂಣಭಟ್ಟಗೆ ಹತ್ತು ಇಪ್ಪತ್ತು ಹಣಕೊಟ್ಟು ಈ ಭೂಮಿಯನ್ನು ಅಡವ ಮಾಡಿಕೊಂಡು ಅನುಭವಿಸಿದ್ದದನ್ನು (ಮೈಆರಿ. ೧೯೨೯, ೧೮–೧೦೪ ; 1402) ; ಈ ಕ್ಷೇತ್ರವ ಅಡವ ಹಿಡಿದಂತಾವರು ಹೊಸವೊಳಲ ಕೆಂಪಪ್ಪನ ಮಗ ಚೆನ್ನಣ್ಣ . . . ಕೆರಸಿ ನಿಮ್ಮ ಅಡವಿನ ಸಾಲವನು ತೀರಿಸೇನು ಯೆಂನಲಾಗಿ (ಎಕ. II, ೨೫೦–೧೦ ; 1634); ಮರುಗಳಿಗೆಯಲ್ಲಿಯೇ 'ಛೆ ಛೆ! ಅಸ್ತಿಯೆ? ಅಡವೇ? ಹೊಲವೆ? ಮನೆಯೆ? ಏನು ನೋಡಿಕೊಟ್ಟಾರು? ಈ ಬಡಪಾಪಿಗೆ ಯಾರು ಹೆಣ್ಣು ಕೊಟ್ಟಾರು? . . .' (ಬೆಳುವು. ೬). ೪. (ಕಿಸಂಗ್ಲಾ. ೮೫). ೫. ತಡೆ ; ತಡೆಯಾಗಿಡುವ ವಸ್ತು. (ಉದಾಹರಣೆಗೆ) ಕದ ಮುಚ್ಚಿಕೊಳ್ಳದಂತೆ ಅಡ್ಡಲಾಗಿ ಇಡುವ ಕಲ್ಲು : ಅಡವು ಅನಿಸು, ಅಡವು ಇಡು (ಕಿ). **ಅಡಹ** : ೨. ಅಡಹದ ವೃತ್ತಿ ಶ್ರೀಅರಮನೆಯ ಅಧೀನವಾಗಿರಲು (ಮೈಆರಿ. ೧೯೨೮, ೧೧೨–೮ ; 1598). **ಅಡಹು**$_2$ : ೧. ಜೀವಿತಕ್ಕೆ ಅಡಹಿಲ್ಲ (ಕೋಲಶಾಂ. ೯೨) ; ಸಿರಿ ದರಿದ್ರತೆಗಡಹು ಜನನವೆ ಮರಣಫಲವು (ಕುವ್ಯಾದ್ರೋ. ೭–೩೦) ; ಕುಡುವಿಲ್ಲ ರಕ್ಷೆಗಟ್ಟಿದ ಮಂತ್ರಲೇಖನದಡಹೆನೆ ಪುಷ್ಟಿಯೊಪ್ಪಿದುವು (ಕಂನವಿ. ೨೪–೩೨). ೨. ತನ್ನ ಲಿಂಗವನಡಹನ್ನಿಟ್ಟು (ಮೋಳಿಮಾ. ೫–೧೦೫) ; ದಾರದತ್ತವಾಗಿ ಯಿ ಅಡಹಿನ ಪತ್ರ ಸಾಲವನು . . . ಧಾರಾಪೂರ್ವ್ವಕವಾಗಿ ಕೊಟ್ಟೆಉ (ಎಕ. II, ೨೫೦–೨೩ ; 1634) ; ಕೊಡಗೆ ಉಂಬಳಿ ದಾನ ಪಾರಿತೋಷಕ ಅಡಹು ಈ ಮುಂತಾದವುಗಳಿಗೆ (ಮಂತ್ರಶ. ೧೯–೧೦). ೫. ಕಲಿತನ ಕೈಮಿಜಲೇಜಿದೊಡವನನು ನಿಲಿಸಿಕೊಂಬುದಕಡಹಾಗಿ ಬಲಿದಳು ಸೆಲದ ರಾವುತರನವಳು (ಕುರಾಸಾಂ. ೪೩–೩೯) ; ಮಾಡದಾದೆನು ಅನ್ನದಾನವ ಪೀಡಿಸುವ ಕ್ಷುಧೆಗಡಹ ಮಾಡಿದುದಿಲ್ಲ ದ್ವಿಜಗಣಕೆ (ಉತ್ತರಾ. ೩೬–೧೭).

**ಅಡಪಂ ಹಾಕು, ಅಡಪ ಹಾಕು** = ಒತ್ತೆಯಿಡು ; ಅಡವಿಡು : ಹರುಷದಿಂ ಮಜ್ಜನೋದಕದಲ್ಲಿ ಮಾಡಿದಂ ಪರುಷವಂ ಹಾವಲೇವಳವನಡಪಂ ಹಾಯ್ಕಿ ತರಿಸಿದಂ ದ್ರವ್ಯಮಂ (ಚೆಬಪು. ೫೭–೮೩) ; ಮುಂನೂರು ವರಹನ ಸಾಲವ ತೆಗದುಕೊಂಡು ಅಡಪ ಹಾಕಿ ಶಾಸನವನೂ ಕೊಟೆದಲಿ (ಎಕ. VIII, ತೀರ್ಥಹ. ೫೭–೧೫ ; 1690). 'ಅಡವುಹಾಕು' ಪರಾ.

**ಅಡವಾಗು** = ಆಧಾರವಾಗು; ಒತ್ತೆಯಾಗು : ಹಿರಿಯರ ಮನೆ ಸಾಲಕ್ಕೆ ಅಡವಾಗಿತ್ತು (ವಾತ್ಸಲ್ಯ. ೧೧).
[ಅಡರ್ + –ಪು. / **ತಮಿ.** ಅಡರ್‍ಪ್ಪವ್ = ಒತ್ತಾಗಿರುವಿಕೆ; **ತುಳು.** ಅಡೆಪ್ಪು]

**ಅಡರ್ಪುಗುಡು** (ಕ್ರಿ). ಊರೆಕೊಡು ; ಆಶ್ರಯಕೊಡು : ಕೋಮಳಾಂಗುಳಿಜಾಳಕಂ ಮೆಱೆಯೆ ಕೇದಗೆಯ ಗಱಿಯಂ ತೀಡುವ ನೆವದಿಂ ಸೆಳ್ಳುಗುರ್ಗಳ ಬಳ್ಳಿವೆಳಗಿಂಗೆ ಚಂದ್ರಕಳೆಯ ಕವಳಿಗೆಯನಡರ್ಪುಗುಡುವಂತೆಯುಂ (ಅನಂಪು. ೮–೭ ವ). [ಅಡರ್ಪು$_2$ + ಕುಡು$_1$ (< ಕೊಡು)]

**ಅಡರ್ಪುಮಾಡು** (ಕ್ರಿ). ಆಶ್ರಯವಾಗಿ ಮಾಡು ; ಆಧಾರವಾಗಿ ಮಾಡು : ಅಯನಯಪರಾಕ್ರಮೋಪಾಶ್ರಯಂಗಳಂ ಶ್ರೀಗಡಡರ್ಪುಮಾಡಿದ ನಿನ್ನಿಂದ್ರಿಯಜಯಮೆ ಕೂಡೆ ಲೋಕತ್ರಯದಿಂ ಪೊಗೞಿಸಿದುದು (ಪಂಪಭಾ. ೯–೩೫) ; ಪಾಡುವೆಕ್ಕಲಗಾಣರ ಸಂಮಾನವಣಿಯ ಗೀತಲತಿಕೆಗೆ ಸಮುಚಿತೋತ್ತರಂಗಳನಡರ್ಪುಮಾಡಿ ಬಳಯಿಸುತ್ತುಂ (ವರ್ಧಪು. ೯–೪೩ ವ). [ಅಡರ್ಪು$_2$ + ಮಾಡು$_1$]

**ಅಡಲ್**, ಅಡಲು$_4$ (ನಾ). ಹೊದರು ; ಮೆಳೆ. 'ಅಡಲ್ಸೀಗೆ' ಪರಾ. **ಅಡಲು$_4$** : ಅಡಲ ಹೊಕ್ಕಡಗಿಯಾಳ್ಗಳ ಕೊಂದು ತಾನೇಱುವಡೆದ ಹೆಬ್ಬುಲಿಗಿದಿರಾಗಿ ನಡೆದು ಲೀಲಾಮಾತ್ರದಿ ಕೊಂದು ಕೆಡಹಿದ ಕಡುಗಲಿ ತನದಿ ವಿಂಧ್ಯಕನು (ನೇಮಿಸಂ. ೨–೫೭) ; ಬಹುಮೃಗಂಗಳಂ ಕೆಡಹಿ ಕೊಂದು ಕೊಬ್ಬಿಱಿದು ಕಡುಲಹರಿಯಿಂದಡಲನೆಯ್ದುವ ಹುಲಿಗಳ್ (ಸಮ್ಯಕೌ. ೧೦–೨೫). [~ ಅಡರ್]

**ಅಡಲಿ** 'ಅಡರಿ' ನೋ.

**ಅಡಲಿಯೆಣ್ಣೆ** (ನಾ). ಅಡಲಿ ಹಾಕಿ ತೆಗೆದ ಎಣ್ಣೆ.
[ಅಡಲಿ (< ಅಡರಿ) + ಎಣ್ಣೆ]

**ಅಡಲಿಸು** (ಕ್ರಿ). ಸಂಕಟಪಡಿಸು ; ವ್ಯಥೆಪಡಿಸು (ಸ್ಯಾಂಡರ್).
[ಅಡಲು$_1$ + –ಇಸು$_3$]

**ಅಡಲಿಹಾಕು** (ಕ್ರಿ). ಎಣ್ಣೆಯ ಬೀಜವನ್ನು ಅರೆದು ನೀರಿನಲ್ಲಿ ಕದಡಿ ಕುದಿಸಿ ಎಣ್ಣೆಯನ್ನು ತೆಗೆ.
[ಅಡಲಿ (< ಅಡರಿ) + ಹಾಕು (< ಪಾಯ್ಕು$_1$)]

**ಅಡಲು$_1$** (ಕ್ರಿ). ೧. ನರಳು ; ವ್ಯಥೆಪಡು ; ಸಂಕಟಪಡು : ಹಂದೆವಟ್ಟ ತ್ತಿತ್ತಲಲ್ಲದಡಲುತ್ತಡಿಗೆ ಬಂದೆಜಗಿದರ ಕಾಯಲೆಂದರುಹಂ (ಮದೇಪು. ೨೫–೨೮) ; ಬೇನೆಯಿಂದ ಲಂಪಟನಾಗಿ ರಾತ್ರಿ ಹಗಲು ಅಡಲುತ್ತಾನೆ (ಸ್ಯಾಂಡರ್). 'ಅಟಿಲ್$_1$' ಪರಾ. ೨. ಹೆದರು ; ಗಾಬರಿಪಡು : ಅಡಲ ಕಾರಣವೇನು ? (ಸ್ಯಾಂಡರ್). [← ? **ತೆಲು.** ಅಡಲು]

**ಅಡಲು$_2$** (ನಾ). ೧. ನಡುಕ ; ಭಯ (ಕ). ೨. ದುಃಖ (ಕ). ೩. ಭ್ರಮೆ (ಕ).
**ಅಡಲ ಭ್ರಮಣೆ** = ಹುಚ್ಚು ; ಸನ್ನಿ : ಹಣವನ್ನು ಕಳಕೊಂಡು ಪೈತ್ಯವು ಹೆಚ್ಚಿ ಅಡಲ ಭ್ರಮಣೆಯಾಗಿ ತಿರುಗುವನು (ಸ್ಯಾಂಡರ್). **ಅಡಲ ಪಡು** = ನಡುಗು ; ಅದುರು : ಗುಂಡಿಗೆಗಳು ಅಡಲಪಡುವ ಗುಡುಗು ಗುಡಿಗಿತು (ಸ್ಯಾಂಡರ್). **ಅಡಲ ಮಾಡು** = ಸಂಕಟಪಡಿಸು ; ವ್ಯಥೆಪಡಿಸು : ದುಷ್ಪುತ್ರ ಪಿತೃಮಾತೃಗಳಂ ಚಿಂತೆಯಿಂದಡಲಮಾಡುತ್ತಾನೆ (ಸ್ಯಾಂಡರ್). [← **ತೆಲು.** ಅಡಲು = ಶೋಕ, ಬಾಧೆ, ಭಯ]

**ಅಡಲು$_3$** 'ಅಟ್ಲು' ನೋ.

**ಅಡಲು$_4$** 'ಅಡಲ್' ನೋ.

**ಅಡಲು$_5$** (ನಾ). "ಸಮುದ್ರದಲ್ಲಿ ಸುತ್ತಲೂ ಚಕ್ರಾಕಾರವಾಗಿ ಬೆಳೆದು ಮಧ್ಯೆ ಆಳವಿಲ್ಲದ ನೀರನ್ನೊಳಕೊಂಡ ಹವಳದ ದಿಬ್ಬ ; ಅಡಲು" (Atoll. ಇಂಕನಿ). [?]

**ಅಡಲುಕಾಣಿಕೆ** (ನಾ). ಸೌದೆಯ ಮೇಲಿನ ಸುಂಕ (?): ವಿಷ್ಣುಗ್ರುಹದ ಆಳಗಪೆರುಮಾಳು ದೇವರ . . . ಅಡಲುಕಾಣಿಕೆ ನಿಬಂದಿ ಅನ್ಯಾಯ ಮಂನ್ಯಯ × ವನೂ (ಎಕ. XIV, ತಿರುಮ. ೨೬೩–೧೩ ; 1279). [ಅಡಲು$_0$ (< ಅಡು$_1$) + **ಕಾಣಿಕೆ** (< ಕಾಣ್ಕೆ)]

**ಅಡಲುಹುಳು** (ನಾ). ಕೆಸರಿನಲ್ಲಿ ಗಿರಗಿರನೆ ಸುತ್ತುವ ಒಂದು ರೆಕ್ಕೆ ಹುಳು ; ಕುಂಬಾರಹುಳು (ದಕ. ಕ).
[ಅಡಲು$_3$ (< ಅಟ್ಲು) + ಹುಳು (< ಪುೞು)]

**ಅಡಲ್ಸೀಗೆ** (ನಾ). ಮೆಳೆಯಾಗಿ ಬೆಳೆಯುವ ಒಂದು ಗಿಡ ; ಸೀಗೆಯ ಮೆಳೆ (?): ಬಿದಿರ್ವಿಂಡಿಲು ಮುಳ್ಳುಗುಜ್ಜಿ ಬಲ್ಮೆಳೆ ಬೆತ್ತ ಪುದಿದಡಲ್ಸೀಗೆ ಬಲ್ವೊದಜು (ಶ್ರೀಪಾಲ. ೭–೧೨). [ಅಡಲ್ + ಸೀಗೆ]

**ಅಡವಟ್ಟೆ** (ನಾ). ಒಂದು ಬಗೆಯ ಬಟ್ಟೆ : ಕುಡುಗುಂ ಚಿತ್ರಾವಳಿ ಪಳಿಯಡವಟ್ಟೆ ಸುವರ್ಣಚೇಲಮುಂ . . . ವಸನಾಂಗಂ (ಶಾಂತಿಪು. ೬–೧೧೧).
[ಅಡ ? + ಪಟ್ಟೆ$_1$]

**ಅಡವಡಿಕೆ** (ನಾ). ಆತಂಕ ; ತೊಡಕು (?) : ತಡೆತಡೆದು ಕಾಂತನಲ್ಲಿಗೆ ನಡೆಯಲ್ ಬಗೆದೆನಗೆ ಕಾರ ಕಾರಿರುಳೊಳ್ ಸಯ್ತು ಡವಡಿಕೆಗಳಂ [ಪಾಠಾಂ. ಸಯ್ತುಡಿವಡಿಕೆಗಳಿಂ] ತೊಡೆದತ್ತೆಡೆವಱಿಯದೆ ಪೊಳೆವ ಮಿಂಚು ಮುಗಿಲೆಡೆಯೆಡೆಯೊಳ್ (ಕವಿರಾ. ೩–೧೨೫). 'ಅಡಿವಡಿಕೆ' ಪರಾ.
[ಅಡವಡಿಸು + –ಇಕೆ]

**ಅಡವಡಿಸು**, ಅಡಬಡಿಸು, ಅಡಬರಿಸು, ಅಡವರಿಸು, ಅಡಹಡಿಸು (ಕ್ರಿ). ೧. ತವಕಪಡು ; ಆತುರಪಡು ; ಚಡಪಡಿಸು : ನುಡಿಯಲ್ ನೋಡಲ್ಗೊಲ್ಲೊಂ[ನೋಡಲ್ವೊಲ್ಲೆಂ]ಕಲ್ಕಡವಡಿಪೊಡಮೋತು ಸತಿ ಯೊಲ್ಲೋಪನ ಮಾತಿಂಗೆಡೆಗೊಂಡು ಪೊಗಬ್ಬು ಮುಗುಬ್ಬುಂ ನುಡಿಯಿಸುವಡಮಱಿಗೆ ಕೂರ್ತಳೆಂದಾ ವಧುವಂ (ಮದತಿ. ೧೧–೪೯) ; ಬೆಂಬತ್ತಿ ಪಿಡಿಯಲಡವಡಿಪಾ ಬೊಜಗನ ತವಕಮುಂ ಕಾರುಣ್ಯನಿಧಿ ಕಿನ್ನರಯ್ಯಂ ಕಂಡು (ವೃಷವಿ. ೧೭–೮ ವ). ೨. ತವಕಿಸುವಂತೆ ಮಾಡು ; ಆತುರಗೊಳಿಸು (?) : ರಚ್ಚೆಗಂ ಬೀದಿಗಂ ಬರಿಸಿತೆನ್ನಯ ಭಕ್ತಿ ಆಚ್ಚಿಗಂಗೊಳಿಸಿತಡವಡಿಸಿ [ಪಾಠಾಂ. ಕಳವಳಿಸಿ]ತೆನ್ನಯ ಭಕ್ತಿ (ತಿರುರ. ೨೮–೪). **ಅಡಬಡಿಸು** : ೧. ಜಾಱುವ ಹೊಳೆವ ಹೆಣಗುವ ಬೆಸುಗೆಬಿಡಿಸುವ ದಿಟ್ಟವಾಳರು ತಿವಿದರಡಬಡಿಸಿ [ಪಾಠಾಂ. ಹೊಕ್ಕು ಹೆಣಗಿದರು] (ಕುವ್ಯಾಸ. ೨–೧೦೫) ; ಎದೆಯ ನೊರಲಿ ಹೊಡಕೊಳ್ಳುವಂ ಕೆಡೆದೇಳ್ವನಡಬಡಿಪನು (ಮಹಾಂತೇ. ೯–೩೪). ೩. ಗಾಬರಿಪಡು : ಆ ಸಪ್ಪಳಕ್ಕೆ ಕೂಸು ಅಡಬಡಿಸಿ ಎಚ್ಚತ್ತಿತು (ಮುಂಬಯಿ. ೩–೫೧) ; ದೇವರಾಯನು ಅಡಬಡಿಸಿ ಎದ್ದು ಒಂದು ಕಬ್ಬಿನ ತೋಟವನ್ನು ಸೇರಿದನು (ಕವೀರ. ೧೧೨). **ಅಡಬರಿಸು** : ೧. ಬಿಂದಣ್ಣ ಗಾಬರಿಗೊಂಡು ಪುಟದು ಬಿದ್ದ. ಎಲ್ಲಿ ನೆಲಕ್ಕೆ ಬೀಳುವನೋ ಎಂದು ಅಡಬರಿಸಿ ಅವನ ಕೈಹಿಡಿದೆ (ವೈನಿ. ೫೭). **ಅಡವರಿಸು** : ೧. ಸಡುಗುಡುನಾಡುವ ಬಾಲಕನಂತೆ ನಾನಡವರಿಸಿ ಹೋಗಿ ಕೆಡಹಿದೆನೆಂಬಂತೆ ಅಱವಿಗೇಕೆ ಗೆಲ್ಲಸೋಲು (ಮೋಳಿಮಾ. ೯೯–೩೯೭) ; ಕೊತವಾಲನು ಅಡವರಿಸಿ ಹತ್ತಿರ ಹೋದ (ಕೊತಕಾ. ೧೯). **ಅಡಹಡಿಸು** : ೧. ನಿಲಲೆಡೆಯಿಲ್ಲ ದಡಹಡಿಸಿ ಸುಡುಮಿಡುವಂದು ನಡನಡ ನಡುಗಿ (ಅಜಿಪು. ೧೧–೧೦ ವ) ; ಅಯೆಡೆಯಿಂದೆ ತಳರ್ದು ಕಿಱಿದೆಡೆ ನಡೆವುದುಮಡಹಡಿಸಿ [ಪಾಠಾಂ. ಅಡದಡಿಸಿ] ಮಸಗಿಬಿಡೆ ಜಡಿಯುತ್ತುಂ ಬೀದಿಬೀದಿಗಳೊಳ್ ಸೋದಿಸಿ ಕಾವ ತಳಾಱಂ ಕಂಡು (ಸುಕುಮಾ. ೭–೧೯, ವ) ; ತಾಪಸಂ ಮದನ ಸಂತಾಪನ ಶರಪಾತಕ್ಕೆ ಸುಗಿದು ಕೈವಿಡಿಯಲಡಹಡಿಸುವುದುಂ (ಪಂಚಾಮಾ. ೮–೬೧ ವ) ; ನಡುಗಿ ತಡವರಿಸಿ ಬೆಂಕೆಯ **ಕಡು**ಗಾಯ್ಪಿಂಗಗಿದು ಜಡೆಗಳಿಡುವಿನೊಳಹಿಗಳ್ ತೊಡರ್ದು ನುಸುಳ್ದೋಡಿ ಗಂಗೆಯ ಮಡುಗಳ ನಡಹಡಿಸಿ ಪುಗುವಿನಂ ಭಯವಶದಿಂ (ಕಾವ್ಯಾವ. ೪೧೧) ; ಪಿಡಿದಡಸಿ

ಸುಂಗಿ ಪಸಿದಡಹ[ಪಾಠಾಂ. ವ]ಡಿಸುವ ಭೇತಾಳಸುರಿವ ಪೆರ್ವೆಣನಂ (ಅರ್ಧನೇ. ೫–೨೮); ಆ ತಿರಿಕೊಳ ತೆಲುಂಗರೊಡೆಯನಿಗೆ ಉತ್ತರವೇನೆಂಬು ದನ್ನರಿತುಕೊಳ್ಳಲು ನಾವೆಲ್ಲ ಅಡಹಡಿಸುತ್ತಿರುವೆವು (ಮಂತ್ರಶ. ೧೯–೧೬). 'ಅಡಾವುಡಿ' ಪರಾ.

[< ? *ಅಡಪಡ + –ಇಸ್ಸು. / ಮರಾ. ಹಡ್‌ಬಡ್ ; ಹಿಂ. ಹಡ್‌ಬಡೀ ; ನೇಪಾ. ಹಡ್‌ಬಡ್ ; ಪಂಜಾ. ಹಡ್‌ಬಡೀ ; ಗುಜ. ಹಡ್‌ಬಡ್ ; ಒರಿ. ಹಡಬಡಿ ; ಸಿಂಧಿ. ಹಡಬಡಾನು]

**ಅಡ[ಡು ?]ವನೆ** (ನಾ). ಅಡಿಗೆಮನೆ ; ಪಾಕಶಾಲೆ (?) : ಮಾಣಿಕ್ಯೇಶ್ವರ ದೇವರ್ಗ್ಗೆ ಕೊಟ್ಟ ಅಡ[ಡು ?]ವನೆಯೆಂಟು ಕಯ್ಯ ನೀಳ (ಮುಂಬರಾ. X, ೨೪೮–೬೬ ; 1219). 'ಅಡುಮನೆ' ಪರಾ.

[ಅಡು$_1$ ? + ಮನೆ]

**ಅಡವರಿಸು** 'ಅಡವಡಿಸು' ನೋ.

**ಅಡವಳಿ** (ನಾ). ಒಂದು ಊರಿನ ಹೆಸರು : ಅನ್ತೆಬಳಿ ಪುಣುಶೆಯೆ ಅಳರಿಯ ಕಿಱುಕೆಱೆಯೆ ಅನ್ತೆಪೋಗಿ ಕಲ್ಕುಪ್ಪೆಯೆ ಅನ್ತೆಪೋಗಿ ಮುಕ್ಕಲ್ಲೆ ಪೋಗಿ ಅಡವಳಿಕೆಱೆಯ ಪಡುವಣ ಖಡೆ ಗೋಡೆ (ಎಕ. XVI, ತಿಪಟೂ. ೧೪೦–೬೯ ; 900). [< ? ಅಡ್ಡ$_1$ + ಪಳ್ಳಿ]

**ಅಡವಳಿಸು** (ಕ್ರಿ). "ಅಳವಡಿಸು, ಹೊಂದಿಸು, ಜೋಕೆಮಾಡು, ಕೂಡಿಸು, ಸೇರಿಸು" (ಪ್ರಭಣ್ಣ ೩೩). [< ಅಳವಡಿಸು]

**ಅಡವಾಯ್** 'ಅಡ್ಡವಾಯ್' ನೋ.

**ಅಡವಾರ** (ನಾ). (ಉಕ) ವಾರದಲ್ಲಿ ಸಂತೆ ನಡೆಯದ ದಿನ.

[< ಅಡ್ಡ + ವಾರ$_2$]

**ಅಡವಿ** (ನಾ). ಕಾಡು ; ಅರಣ್ಯ : "ಟಕಾರಕ್ಕೆ ಡಕಾರಂ : ಅಟವಿ–ಅಡವಿ" (ಶಮದ. ೨೫೫ ಪ್ರಯೋ) ; ಎಡೆಯೊಳಡವಿಯೊಳ್ ಕಳ್ಳರ್ ಬಟ್ಟೆಗಟ್ಟಿ ಮೇಲ್ವಾಯ್ದಿಱಿದೊಡೆ (ವಡ್ಡಾರಾ. ೭೬–೧೨) ; ಆವಡವಿಗಳೊಳ್ ಪಣ್ಪಲ ಮಾವಗಸೊಳವು (ಪಂಪಭಾ. ೭–೪೬) ; ಒಂದಡವಿಯೊಳ್ ಬೀಡಂ ಬಿಟ್ಟು (ಧರ್ಮಾಮೃ. ೨–೧೪೨ ವ) ; ಅಡವಿಯಲೊಂದು ಮನೆಯ ಮಾಡಿ ಆಶ್ರಯವಿಲ್ಲದಂತಾಯಿತ್ತು (ಅವಚಂ. ೫೧–೨೨೦) ; ಅಡವಿಯೇ ಸಾಮ್ರಾಜ್ಯ ನಿಮ್ಮಡಿಯೊಡನಿರಲು ನೀವಿಲ್ಲದಾ ಪುರವಡವಿ ನಮಗಹುದು (ಕುವ್ಯಾವಿ. ೧–೯) ; ಅಬ್ಬರಕಂಜಿ ಅಡವಿಯ ಹೊಕ್ಕರೇನೆಂಬೆ (ಕಂನವಿ. ೧೧–೫೩).

**ಅಡವಿಯ ಕಾಗೆ** = ಕಾಡಿನಲ್ಲಿ ವಾಸಿಸುವ ಕಾಗೆ: "ಕಾಕೋಲಃ . . . ವನಾಶ್ರಯಃ –ಈ ೫ ಅಡವಿಯ ಕಾಗೆ" (ಹಲಾಯು. ೪೧–೯೩).

**ಅಡವಿ ಅಂಟರಿಕೆ** = ಒಂದು ಬಗೆಯ ಅಂಟುಪುರಲೆ ಹುಲ್ಲು (ಕಿ).

[ಸಂ. ಅಟವಿ. ℙ 'ಅಡವಿ' ಎಂಬುದು ಮೂಲತಃ ದ್ರಾವಿಡಶಬ್ದವೆಂದು ಆಧುನಿಕ ವಿದ್ವಾಂಸರ ಅಭಿಪ್ರಾಯ.]

**ಅಡವಿಕಡಲೆ** (ನಾ). ಒಂದು ಔಷಧಿಯ ಗಿಡ; ಕಾಡುಕಡಲೆ (ಪಂಡಿತ. ೮). [ಅಡವಿ + ಕಡಲೆ]

**ಅಡವಿಕೋಣ** (ನಾ). "ಗವಯ – ಅಡವೀ ಕೋಣ" (ಗಂಗಾಮು. ೧೧೩). [ಅಡವಿ + ಕೋಣ$_1$]

**ಅಡವಿಕೋಳಿ** (ನಾ). "ಕುಕ್ಕುಭ – ಅಡವೀಕೋಳಿ" (ಗಂಗಾಮು. ೮೨).

[ಅಡವಿ + ಕೋಳಿ (< ಕೋೞಿ)]

**ಅಡವಿಕ್ಕು**, ಅಡಹಿಕ್ಕು (ಕ್ರಿ). ಒತ್ತೆಯಿಡು (ಕಿ). **ಅಡಹಿಕ್ಕು** : ತನ್ನಾತ್ಮಜೆಯನಡಹಿಕ್ಕಿ ಶಿವಪೂಜೆಯವಸರಕ್ಕೆ ತರಲು ಪನ್ನೆರಡು ಪೊನ್ನಂ (ಪಾಸೋಪು. ೪–೪೫). [ಅಡವು$_2$ (< ಅಡರ್ಪು$_2$) + ಇಕ್ಕು]

**ಅಡವಿಖಾರಗೆಣಸು** (ನಾ). ಕಾಡುಶುಂಠಿ (ಪಂಡಿತ. ೮).

[ಅಡವಿ + ಖಾರಗೆಣಸು]

**ಅಡವಿಗಡಿತ** (ನಾ). ಕಾಡನ್ನು ಕಡಿಯುವುದು : ಪರಿದುದೋಲಗವಿತ್ತು ಭುವನದೊಳಿರುಳಡವಿಗಡಿತಕ್ಕೆ ಹರಿದವು ಕಿರಣ ತೆತ್ತಿದವಭ್ರದಲಿ ತಾರಕೆಯ ತೇರುಗಳು (ಕುವ್ಯಾದ್ರೋ. ೪–೧೨). [ಅಡವಿ + ಕಡಿತ$_1$]

**ಅಡವಿಗಾವೆ** (ನಾ). ಒಂದು ಊರಿನ ಹೆಸರು : ಮಹಾಪ್ರಭು ಅಡವಿಗಾವೆಯ ಸಿಂದಗಾಮುಣ್ಡನ × ಒಕ್ಕಲು (ಎಕ. VII, ಶಿವಮೊ. ೩೭–೪ ; 1140) ; ಜನ್ಮಭೂಮಿಯುರ್ಗ್ಗಳು ಬಿದಿರೆಯಡವಿಗಾವೆಯ × × × × × ಹಿರಿಯೂರು (ಎಕ. VII, ಶಿವಮೊ. ೫೫–೭೯ ; 1167).

[ಅಡವಿ + ಗಾವೆ$_0$ (< ಸಂ. ಗ್ರಾಮ)]

**ಅಡವಿಗಿಚ್ಚು** 'ಅಡವಿಗಿರ್ಚು' ನೋ.

**ಅಡವಿಗಿರ್ಚು**, ಅಡವಿಗಿಚ್ಚು (ನಾ). ಅಡವಿಯಲ್ಲಿ ಹಬ್ಬುವ ಬೆಂಕಿ ; ಕಾಡುಕಿಚ್ಚು. 'ಅಡವಿಗಿರ್ಚುಗೊಳ್' ಪರಾ. **ಅಡವಿಗಿಚ್ಚು** : ಪರವಾದಿಗಳ ಸಂಭ್ರಮಾಟವಿಗುಣ್ಮುವಡವಿಗಿಚ್ಚಿನ ಬೀಜದಂತೆ . . . ಷಣ್ಮುಖನಖಿಳಶಕ್ತಿ ಬಂದೊಳಪೊಕ್ಕು ಶೋಭಿಸುತಿರೆ (ಪದ್ಮರಾ. ೪–೨೮); ಅಡವಿಗಿಚ್ಚಟ್ಟಿದೆಳವುಲ್ಲೆಯಂತೆರ್ದೆ ದಡಂದಡಿಸಿ (ಚಬಪು. ೧೯–೪೩).

[ಅಡವಿ + ಕಿರ್ಚು]

**ಅಡವಿಗಿರ್ಚುಗೊಳ್** (ಕ್ರಿ). ಕಾಡುಕಿಚ್ಚಿಗೆ ಸಿಕ್ಕಿ ಬೀಳು : ತೋೞ ಲೊಡನಾ ರುಂಡಮುಂ ಮುಂಡಮುಂ ಕಂಡಡವಿಗಿರ್ಚು[ಪಾಠಾಂ. ಗಿಚ್ಚು] ಗೊಂಡ ಪುಲ್ಲೆಯಂತೆ ಹರಣಂ ಹಮ್ಮೈಸಿ (ರಾಜಶೇ. ೧೩–೧೦೪ ವ).

[ಅಡವಿಗಿರ್ಚು + ಕೊಳ್$_1$]

**ಅಡವಿಗುಂಬಳ** (ನಾ). ಕಾಡುಕುಂಬಳ (ಕಿ). [ಅಡವಿ + ಕುಂಬಳ]

**ಅಡವಿಗುಱಿ** (ನಾ). ಕಾಡಿನಲ್ಲಿ ಅಲೆದಾಡುವ ಕುರಿ ; ಕಾಡುಕುರಿ : ಆತ ದಾಯಾದ್ಯರಿಗೆ ಕಪಟದ್ಯೂತದಲಿ ಸಾಮ್ರಾಜ್ಯಲಕ್ಷ್ಮಿಯ ಸೋತು ಸತಿಸಹಿತಡವಿಗುಱಿಯಾದನು ಕಣಾ (ತೊರರಾ. ೩–೨–೧೩). ℙ ಅಡವಿ ಗುಱಿಯಾಗು ಎಂಬುದಕ್ಕೆ ಅಡವಿಗೆ ಗುರಿಯಾಗು, ಕಾಡುಪಾಲಾಗು ಎಂದು ಅರ್ಥಮಾಡುವುದೂ ಸಾಧ್ಯ. [ಅಡವಿ+ಕುಱ್$_2$]

**ಅಡವಿಗೆಣಸು** (ನಾ). ಕಾಡುಗೆಣಸು : ಕೂಲಿಗೆ ಬರುವುದಿಲ್ಲವೆಂದು ಹೇಳಿದವನು ಹೊಟ್ಟೆಗೆ ಅಡವಿಗೆಣಸು ಮುಂತಾದ ಆಹಾರವ ಹುಡುಕುವುದಕ್ಕೆ ತಿರುಗಬೇಕಾದೀತು (ಮುಂಬಯಿ. ೫–೯೯ ; ಕಿ). [ಅಡವಿ + ಗೆಣಸು]

**ಅಡವಿಗೋಟಲೆ** (ನಾ). ಕಾಡಿನಲ್ಲಿ ಅನುಭವಿಸುವ ಸಂಕಟ : ದನುಜಾದಿ ಖಳರೊಡನಡವಿಗೋಟಲೆಯೆಂದು ಬಿಸುಸುಯ್ದ (ಕುವ್ಯಾಅ. ೧೭–೯).

[ಅಡವಿ + ಕೋಟಲೆ]

**ಅಡವಿಗೋರಂಟಿ** (ನಾ). ಒಂದು ಬಗೆಯ ಗಿಡ ; ಕಾಡುಗೋರಂಟಿ.

[ಅಡವಿ + ಗೋರಂಟಿ]

**ಅಡವಿಜಟ್ಟಿಣ್ಣ** (ನಾ). ಒಂದು ದೇವತೆಯ ಹೆಸರು.

**ಅಡವಿಜಟ್ಟಣ್ಣನ ಮಾಡು** = ಜಟ್ಟಣ್ಣ ಎಂಬ ದೇವತೆಯ ಆರಾಧನೆ ಮಾಡು : ಅಡವಿಜಟ್ಟಣ್ಣನ ಮಾಡಲಿಕ್ಕೆ ಸಡಗರ ಸಂಪತ್ತಿನಿಂದ ಹೆಡಿಗೆತುಂಬ ಹೋಳಿಗೆ ತುಂಬಿ ಕೊಡ ನೀರಿಗೆ ಹೋದೇವೆ (ಕನಕ. ೧೨೦–೨). [ಅಡವಿ + ಜಟ್ಟಣ್ಣ]

**ಅಡವಿಡು**, ಅಡಹಿಡು (ಕ್ರಿ). ಒತ್ತೆಯಿಡು : ಅವನು ತನ್ನ ಹೆಂಡತಿಯ ಮೈಮೇಲಿನ ಒಡವೆಗಳನ್ನೆಲ್ಲಾ ಅಡವಿಟ್ಟು ಹಣವನ್ನು ತಂದುಕೊಟ್ಟನು (ರೂಢಿ). **ಅಡಹಿಡು** : ನಿರುಪಮನೆ ಸಲಹೆಂದು ಪಾಡಿ ಒಲಿಸಿ ಮುಂತಡಹಿಟ್ಟ ಅಕ್ಷಯನಿಧಾನಮಂ ಪಳೆಯಂತೆ ಪಡೆದು ತುಂಬುರ ಮಂತ್ರಿಯೊಳು ಮನಂಗೊಳಿಪಂತೆ ಪೊಂದೇರನಿನ್ನಲಂಕರಿಪುದೆಂದೊರೆದನಾ ನಂಬ್ಯಣ್ಣನು (ಸೌಂದಪು. ೧೧–೩೫). [ಅಡವು$_2$ (< ಅಡರ್ಪು) + ಇಡು]

**ಅಡವಿತಗಚೆ** (ನಾ). ಕಾಡುತಗಚೆ ಗಿಡ (ಕಿ). [ಅಡವಿ + ತಗಚೆ]

**ಅಡವಿತಿರುಕ** (ನಾ). ಕಾಡಿನಲ್ಲಿ ಅಲೆಯುವವನು : ರಾಮ ಅಡವಿತಿರುಕ,. ಬುದ್ಧ ಬತ್ತಲೆತಿರುಕ (ನಿರಾಭ. ೧೩೧). [ಅಡವಿ + ತಿರುಕ]

**ಅಡವಿದಾಣ** (ನಾ). ಅರಣ್ಯ ಪ್ರದೇಶ: ಕ್ಷೋಣಿಪ ಸುಧನ್ವನಕ್ಷೀಣ ವಿಕ್ರಮು ಶಿಖಿಯ ಚೂಣಿಯ ಮಹಾಜ್ವಾಲೆ ಕೇಣಿಗೊಂಡರಿಬಲಶ್ರೇಣಿಯೆಂಬೊಂದಡವಿದಾಣಮಂ ಹೊಕ್ಕಂತಿರೆ (ಜೈಮಿಭಾ. ೧೨-೪೨). [ಅಡವಿ + ತಾಣ$_2$]

**ಅಡವಿನೆಲ್ಲಿ** (ನಾ). ಒಂದು ಮೂಲಿಕೆ ; ಕಾಡುನೆಲ್ಲಿ (ಕಿ).
[ಅಡವಿ + ನೆಲ್ಲಿ]

**ಅಡವಿಪಾರಿವಾಳ** (ನಾ). ಕಾಡುಪಾರಿವಾಳ: ಅಡವೀಪಾರಿವಾಳಗಳು ಮನುಷ್ಯರನ್ನು ನಂಬುವದಿಲ್ಲ (ಮುಂಬಯಿ. ೩-೧೧೦).
[ಅಡವಿ + ಪಾರಿವಾಳ]

**ಅಡವಿಪಾಲು** (ನಾ). ಕಾಡುಪಾಲು ; ದಿಕ್ಕುಕೆಟ್ಟುಹೋಗುವುದು ; ಹಾಳಾಗುವುದು.
ಅಡವಿಪಾಲಾಗು=ಕೆಟ್ಟುಹೋಗು ; ಹಾಳಾಗು. [ಅಡವಿ + ಪಾಲು$_2$]

**ಅಡವಿಬಾರಿ** (ನಾ). ಒಂದು ಬಗೆಯ ಗಿಡ ; "ಮಧುರ" (ಗುವಿನೊ).
[ಅಡವಿ + ಬಾರಿ$_4$]

**ಅಡವಿಬೀಳು** (ಕ್ರಿ). ೧. ಕಾಡಿಗೆ ಓಡಿಹೋಗು ; ಕಾಡಿನಲ್ಲಿ ಸಿಕ್ಕಿಕೊ : ನಿಜಗುಣಿಯು ದಾರಿತಪ್ಪಿ ಅಡವಿಬಿದ್ದನು (ಮುಂಬಯಿ. ೩-೧೨೧). ೨. ಅಡ್ಡದಾರಿ ಹಿಡಿ (ಉಕ). ೩. (ಹೊಲಗದ್ದೆ) ಹಾಳುಬೀಳು ; ಬಂಜರುಬೀಳು. [ಅಡವಿ + ಬೀಳು$_1$ (< ಬೀೞ್$_1$)]

**ಅಡವಿಬೆಕ್ಕು** (ನಾ). ಕಾಡುಬೆಕ್ಕು. [ಅಡವಿ + ಬೆಕ್ಕು (< ಬೆರ್ಕು)]

**ಅಡವಿಮಲ್ಲಿಗೆ** (ನಾ). ಕಾಡುಮಲ್ಲಿಗೆ (ಪಂಡಿತ. ೮).
[ಅಡವಿ + ಮಲ್ಲಿಗೆ]

**ಅಡವಿಮೃಗ** (ನಾ). ೧. ಕಾಡಿನಲ್ಲಿ ವಾಸಮಾಡುವ ಪ್ರಾಣಿ; ಕಾಡುಮೃಗ : ಕಪ್ಪೆಯುಂ ಮುಂಗುರಿಯುಂ ಮೊದಲಾಗೊಡೆಯ ಅಡವಿಮೃಗಂಗಳುಂ [ಪಾಠಾಂ. ಸ್ಥಲಚರಂಗಳುಂ] (ವಡ್ಡಾರಾ. ೯೭-೭). ೨. ಏನೂ ತಿಳಿವಳಿಕೆಯಿಲ್ಲದ ಮನುಷ್ಯ. [ಅಡವಿ + ಮೃಗ]

**ಅಡವಿಯಾಡು** (ನಾ). ಕಾಡಿನ ಆಡು (ಮುಂಬಯಿ. ೫-೨೪. ಕಿ).
[ಅಡವಿ + ಆಡು$_2$]

**ಅಡವಿಯೊಗು** (ಕ್ರಿ). ಕಾಡನ್ನು ಪ್ರವೇಶಮಾಡು : ತಂದೆ ನಿಖಿಳಾವನಿಯ ರಾಜ್ಯವನಂದು ತನಗಿತ್ತಡವಿಯೊಗಲರವಿಂದಸಾಭನ ಭಕ್ತನಾ ಧ್ರುವ ನೊಲಿದು ರಾಜ್ಯದಲಿ ನಿಂದಂ (ನಿಭಾಗ. ೪-೯-೬). [ಅಡವಿ + ಪೊಗು]

**ಅಡವಿರಾಗಿ** (ನಾ). ಒಂದು ಬಗೆಯ ಹುಲ್ಲು (ಕಿ). [ಅಡವಿ + ರಾಗಿ$_1$]

**ಅಡವಿರಿಸು** (ಕ್ರಿ). ಅಡವಿಡು ; ಒತ್ತೆಯಿಡು : ಅಡವಿರಿಸಿ ಮಕ್ಕಳಂ ಸಿರಿಯಡಿಯೂಳಿಗವೆಸಗಿ ದೊರೆಗಳಪ್ಪನಿತಱೊಳೆ ಅಡವಿನೆಳೆಯೂಳಿಗದವರ್ ಪಡೆದರ್ ಚಿಕದೇವರಾಯನಿಂ ದೊರೆತನಮಂ (ಅಪ್ರತಿ. ೧೧೧-೭).
[ಅಡವು$_2$ (< ಅಡರ್ಪು) + ಇರ್ + -ಇಸು$_3$]

**ಅಡವಿರುದ್ರಾಕ್ಷಿ** (ನಾ). ಒಂದು ಮೂಲಿಕೆ ; ಕಾಡುರುದ್ರಾಕ್ಷಿ ಗಿಡ : (ಕಿ). [ಅಡವಿ + ರುದ್ರಾಕ್ಷಿ]

**ಅಡವಿವೂ** (ನಾ). ಕಾಡುಹೂವು : ಅಲರ್ದಡವಿವೂಗಳನು ಬನದುಳ್ಳಲರ ನೆಲ್ಲವನಾಯ್ದು (ಸಾಳ್ವಭಾ. ೭-೨೨). [ಅಡವಿ + ಪೂ$_2$]

**ಅಡವಿವೆಣ್ಣು** (ನಾ). ಕಾಡಿನಲ್ಲಿ ವಾಸಮಾಡುವ ಹೆಂಗಸು; ಬೇಡಿತಿ : ತಮ್ಮ ಕಣ್ಮನವ ಕೈಸೆಱೆಗೊಟ್ಟರಡವಿವೆಣ್ಣುಗಳು (ಮೋಹತ. ೧೯-೭೮).
[ಅಡವಿ + ಪೆಣ್ಣು (< ಪೆಣ್)]

**ಅಡವಿಸಣಬು** (ನಾ). ಕಾಡುಸೆಣಬಿನ ಗಿಡ (ಕಿ).
[ಅಡವಿ + ಸಣಬು (< ಸಣಂಬು)]

**ಅಡವಿಸೀಗೆ** (ನಾ). ಕಾಡುಸೀಗೆ (ಕಿ). [ಅಡವಿ + ಸೀಗೆ]

**ಅಡವಿಹತ್ತಿ** (ನಾ). ಕಾಡುಹತ್ತಿಯ ಗಿಡ (ಕಿ).
[ಅಡವಿ + ಹತ್ತಿ (< ಪಱ್ತಿ)]

**ಅಡವಿಹಾಗಲ** (ನಾ). ಕಾಡುಹಾಗಲ ಗಿಡ (ಪಂಡಿತ. ೮).
[ಅಡವಿ + ಹಾಗಲ (< ಪಾಗಲ)]

**ಅಡವಿಹೆಸರು** (ನಾ). ಕಾಡುಹೆಸರು ಗಿಡ (ಗಂಗಾಮು. ೩೨೫).
[ಅಡವಿ + ಹೆಸರು$_1$ (< ಪೆಸಱು$_1$)]

**ಅಡವೀಸಿಂಗ** (ನಾ). ಕಾಡಿನಲ್ಲಿರುವ ಸಿಂಹ : ಮಳಲೊಳ್ ತೈಲಂಗಳಂ ಹಿಂಡಲಕ್ಕಡವೀಸಿಂಗವ ತಿದ್ದಲಕ್ಕು (ಸೋಮೇಶ. ೪೯).
[ಅಡವಿ + ಸಿಂಗ$_2$]

**ಅಡವು$_1$**, ಅಡಹು$_1$ (ನಾ). ೧. ರೀತಿ ; ಹದ : ಲಿಂಗಮೊಡಲುಸುರನೊಳಕೊಂಡವರ್ ಸುಲಿಂಗಪ್ರಾಣಿಗಳ್ ದಲೆನಿಪರವರ್ಕಳಾ ಅಡವೆಲ್ಲ ಲಿಂಗದಡವು (ಪದ್ಮರಾ. ೧೨-೪೧) ; ಬೆರಲ ಸೇವಗೆಯಾವಿ[ಪಾಠಾಂ. ದಿ]ಯಡವಾದ ಕಜ್ಜಾಯಗಳಂ ತೆಗೆದುಕೊಂಡು (ಸೂ. ಪ. ಶಾ. ೩-೭) ; ಆ ಪಡೆಯ ಪರಾಕ್ರಮದಡವ ನಾನೇನ ಬಣ್ಣಿಪೆನು (ಕಂನವಿ. ೧೧-೨೦). 'ಅಡವು ಗಾಣ್' ಪರಾ. ೨. ಹಿಡಿತಕ್ಕೆ ಉಚಿತವಾದ ಗಾತ್ರ; ಯೋಗ್ಯವಾದ ಪ್ರಮಾಣ : ಈ ಬಡಶೌರಿ ತನಗೊಂದಡವೆ ಹೇಳೆಂದ (ಪ್ರಹ್ಲಾಚ. ೧೩-೬೦) ; ಸಮುದ್ರಗಳ ಲಂಘಿಸುವಂಗೊಂದಡವೋ ಕೊಳಚೆಯುದಕ (ಪ್ರಹ್ಲಾಚ. ೧೩-೧೦೦) ; ೩. ಸಮೃದ್ಧಿ : ಜನಕ್ಕಾಗುವ ಹಾಗೆ ಆಹಾರ ವೆಲ್ಲವನ್ನು ಅಡವಾಗಿ ಕೊಂಡು ಬಾ (ಸ್ಯಾಂಡರ್) ; ಮಳೆ ಅಡವಾಗಿ ಬಂತು, ಪಯ್ರು ಅಡವಾಗಿ ಬೆಳೆದವು (ಕಿ). ೪. ಒತ್ತೊತ್ತಾಗಿರುವಿಕೆ; ದಟ್ಟವಾಗಿರುವಿಕೆ (ಉಕ) : ಹೊಲವೆಲ್ಲವು ಗುಂಪುಗುಂಪಾಗಿ ಎದ್ದದೆ, ಬಿತ್ತಿದ ಬೀಜವು ಬಹು ಅಡವು (ಸ್ಯಾಂಡರ್). **ಅಡಹು$_1$** : ೨. ಫಳವೊಳಗುಕೊಳೆತು ಹೊಜಗೆ ಈಡಾದರೆ ಮೆಲುವರಿಗೆ ಅಡಹೆ (ಸುಂಕಬಂ. ೫೯) ; ಅಡಹುಳ್ಳ ಕಾಂತೆಯನವಚಿಕೊಂಡು (ಸೋಮಚ. ೪-೪೫). ಹೊಯಿವುದಕ್ಕೆ ಕೈಗೆ ಅಡಹಿಲ್ಲ (ಏಲೀಶ್ವ. ೬೨) ; ನನ್ನಸಿಗೆ ನೀನಡಹಲ್ಲ ಬಲ್ಲುದಮಾಡು ಹೋಗೆಂದ (ಸಾಳ್ವಭಾ. ೭-೫೯).
[ದೇ. ‖ ತಮಿ. ಅಡೈವು ; ಮಲ. ಅಡವು]

**ಅಡವು$_2$** 'ಅಡರ್ಪು$_2$' ನೋ.

**ಅಡವು$_3$** 'ಅಡಪು$_3$' ನೋ.

**ಅಡವುಗಾಣ್** (ಕ್ರಿ). ರೀತಿಯನ್ನು ಕಾಣು : ಮುಡಿ ಸಡಿಲ್ದಾವರಿಸೆ ರಾತ್ರಿಯಾಯ್ತೆಂದು ಸಿಡಿಮಿಡಿಗೊಳ್ವ ಜಕ್ಕವಕ್ಕಿಗಳನಾ ಚೆಲ್ವ ಮೊಗದಡವು ಗಂಡಿಂದುಮಂಡಲಮುದಯವಾಯ್ತೆಂದು ನಸುಮುಗಿವ ಬಿಸಜಂಗಳಂ (ಪದ್ಮರಾ. ೮-೪೫). [ಅಡವು$_1$ + ಕಾಣ್]

**ಅಡವುಚೀಟು** (ನಾ). ಒಂದು ವಸ್ತುವನ್ನು ಅಡವಾಗಿ ಇಟ್ಟದ್ದಕ್ಕೆ ಬರೆದುಕೊಡುವ ಪತ್ರ. (ಕಿಸಂಗ್ಲಾ. ೪೭).
[ಅಡವು$_2$ (< ಅಡರ್ಪು$_2$) + ಚೀಟು$_2$]

**ಅಡವುಹಾಕು** (ಕ್ರಿ). ಅಡವಿಡು ; ಒತ್ತೆಯಾಗಿ ಕೊಡು ; ಆಧಾರ ಮಾಡು : ರಾಮಕೃಷ್ಣ ಆಸ್ತಿ ಅಡವುಹಾಕಿದನೆಂದು ಯಾರಲ್ಲೂ ಬಾಯಿ ಬಿಡಬೇಡ, ಜೋಕೆ. ನಾಳೆ ತೊಂದರೆಯಾದೀತು. (ತ್ಯಾಗಮ. ೬೧).
[ಅಡವು$_2$ (< ಅಡರ್ಪು$_2$) + ಹಾಕು (< ಪಾಯ್ಕು$_1$)]

**ಅಡವುಳಿ** (ನಾ). ಅಡಿಗೆ ಮಾಡಿಕೊಂಡು ಜೀವಿಸುವವನು (ಸ್ಯಾಂಡರ್). [< ಅಡು + -ಉಳಿ$_6$]

**ಅಡವೆಟ್ಟೆ** 'ಅಡ್ಡವೆಟ್ಟೆ' ನೋ.

**ಅಡವೊಡ್ಡು** 'ಅಡ್ಡವೊಡ್ಡು' ನೋ.

**ಅಡವೊಯ್ಲು** 'ಅಡ್ಡವೊಯ್ಲು' ನೋ.

**ಅಡಸಟ್ಟೆ** (ನಾ). ೧. ಅಂದಾಜು ; ಅಂದಾಜುಮಾಡುವುದು (ಸ್ಯಾಂಡರ್). (ಗು). ೨. ಹೆಚ್ಚುಕಡಮೆ ಇರುವ ; ನಂಬಲರ್ಹವಲ್ಲದ ; ಕರಾರುವಾಕಲ್ಲದ (ಸ್ಯಾಂಡರ್). 'ಸಟ್ಟಾ' ಪರಾ.

**ಅಡಸಟ್ಟೆ ನೋಡು** = ಅಂದಾಜುಮಾಡು (ಸ್ಯಾಂಡರ್). **ಅಡಸಟ್ಟೆ ಲೆಕ್ಕ** = ಅಂದಾಜಿನ ಮೇಲೆ ಮಾಡಿದ ಲೆಕ್ಕ (ಸ್ಯಾಂಡರ್).

[ ← **ಮರಾ.** ಅಡಸಟಣೇ = ಅಂದಾಜುಮಾಡು. / **ಗುಜ.** ಅಡಸಟ್ಟೋ = ಅಂದಾಜು]

**ಅಡಸರಣೆ** (ನಾ). "ಅಡ್ಡ ಬರುವ ತೊಡಕು" (ಸಿರಿಕೋ).

[← **ಮರಾ.** ಅಡಸರ್]

**ಅಡಸರಿ** (ನಾ). = ಅಡ್ಡಮಳೆ : ಅಡಸರಿ ಬಲ್ಸರಿ ವರವಳೆಯಿಡುಕುಂಬನಿ ನಟ್ಟವನಿ ತುಷಾರಂ ಬಿಡಹಂ ಜಡಿ ಜಿನುಗು ಜುಂಜುರ್ ತುಂತುರ್ ಬಿಡದಡಿಯಿಡಗೊಡದೆ ಕರೆದವಿರುಳುಂ ಪಗಲುಂ (ತ್ರಿಪುವಿ. ೮–೩೯).

[< ಅಡ್ಡ$_1$ + ಸರಿ$_2$]

**ಅಡಸಲ$_1$** 'ಅಡ್ಡಸರ' ನೋ.

**ಅಡಸಲ$_2$** (ನಾ). (ಉಕ) ಹೆಚ್ಚಾಗಿ ಬೆಂದುಹೋದದ್ದು : ಅನ್ನ ಅಡಸಲವಾಗಿ ಹೋಯಿತು (ಕಸ್ತೂರಿ. ೧೯೬೫, ಮಾರ್ಚ್, ೧೦೪).

[~ ಅಡು$_1$. / **ತಮಿ.** ಅಡಿಚಿಲ್ = ಅನ್ನ]

**ಅಡಸಲ$_3$** (ನಾ). (ಉಕ) ನೇಗಿಲು ಹೂಡುವವನು ಕೈಯಲ್ಲಿ ಹಿಡಿಯುವ, ನೇಗಿಲಿಗೆ ಜೋಡಿಸಿದ ಒಂದು ಉಪಕರಣ ; ಮೇಟಿ : ಅಡಸಲ ಹಿಡಿಯಲು ಬಾರದ ರೈತ ಅಳಿದರೇನು ಉಳಿದರೇನು ? (ರೂಢಿ). [?]

**ಅಡಸಲು** (ನಾ). ಹೆಗ್ಗಣವನ್ನು ಹಿಡಿದು ಕೊಲ್ಲಲು ಉಪಯೋಗಿಸುವ ಒಂದು ಸಾಧನ (?) : ಅಡಸಲಿನ ಪೆಟ್ಟಿಗೆ ಸಿಕ್ಕಿದ ಮೂಷಕಗಳಂತೆ (ಸೌಗಂಧಿ. ೨೪೯–೯). [?]

**ಅಡಸಲುಬಡಸಲು** (ಅ). (ಉಕ) ಅವ್ಯವಸ್ಥಿತವಾಗಿ : ಏನೋ ಮಹಾ ಘಟನೆ ನಡೆದಿರಬೇಕು ಎಂದು ತೋಚಿ ಅಡಸಲು–ಬಡಸಲು ಸಾಮಾನು ತುಂಬಿದ ನಮ್ಮ ಅಡಕಿಲ ಕೋಣೆಗೆ ಓಡುತ್ತ ನಾನು ಹೋದೆನು (ಚೀನಬಾ. ೬೪). [?]

**ಅಡಸಾರ** 'ಅಡ್ಡಸರ' ನೋ.

**ಅಡಸಾಲ** 'ಅಡ್ಡಸರ' ನೋ.

**ಅಡಸು** (ಕ್ರಿ). ೧. ಬಿಗಿಯಾಗಿ ಒತ್ತು ; ಅಮುಕು ; ಅದುಮು : ಬೆಳರೆಮುಖಾಬ್ಜಮಾಯ್ತುಡಸಿದೊಳ್ಳೆಲೆಯಂತೆ (ಕಾವ್ಯಸಾ. ೧೬೦ ; ಶೂದ್ರಕ) ; ತೊಡೆದು ತಿಲತೈಲಮಂ ಕರಪು(ವು)ಡಿ ಸಾಸಿವೆ ಲೋಯಿಸರದ ತಿರುಳೆಂಬಿವನಿಟ್ಟಡಸಿ ಬಿಗಿತಾಗಿ ಕಟ್ಟಲ್ ನಿಡುಪೊಂಗುಡಿದಿರ್ದ ಕೆಯ್ಗೆ ಭಂಗಂಬಡುಗುಂ (ಲೋಕೋಪ. ೯–೧೩೨) ; ಕಲಹಂಸೆಗಳ್ ಬಲ್ಲಿತಪ್ಪುದೊಂದು ದಕ್ಕಂ ತಂದದಱಿರಡು ಕಡೆಯುಮಂ ತಾವಡಸಿ ಕರ್ಚಿ (ಪಂಚತಂ. ೧೫೭–೧೪) ; ತೆಂಗಿನ ಪೊಸನೇಣಿಂದಜುದಿಂಗಳ್ವರಮುಡಸಿ ಕಂಬಿಯಿಂ ಕಟ್ಟದೊಡಂ (ಧರ್ಮಾಮೃ. ೨–೯೨) ; ಮಡದಿಯೆಡೆಗೊರಳ ನಡುವಡಸಿ ಮೂಡಿದನು . . . ವಿಶ್ವನಾಥಂ (ಹಚಕಾ. ೧೩–೧೯) ; ಅಡಸಿ ಪೊಡೆವ ಝುಗಡೆ (ಶಮುದ. ೨೦) ; ನಿಂಬ ಸುಪತ್ರದೊಳಂ ಬಜೆಯಂ ಬೆರಸದನಡಸಿ ಮೆಲಿದು ತೇಟ್ಗೂಡಿದನ ಕರ್ಣಂಬುಗಲೂದಲ್ ವಿಷಮಿಟಿಗುಂ (ಖಮದ. ೧೧–೨೩). ೨. ಒತ್ತಿ ಒಳಸೇರಿಸು ; ತುರುಕು ; ಗಿಡಿ : "ಅಡಸು – ಗಾಢಪ್ರವೇಶೇ" (ಶಮುಧಾ); ತನ್ನ ಪಿರಿಯ ಮಗನಪ್ಪ ವೃಷಸೇನನನಂತಕನ ಣಲೊಳಡಸಿ ತನ್ನುಮನಣಲೊಳಡಸಲೆಂದಿರ್ದ ವಿಕ್ರಮಾರ್ಜುನನಂ ನೋಡಿ (ಪಂಪಭಾ. ೧೨–೧೯೭ ವ) ; ಎರಡು ಕರದ ಬೆರಳಂ ಕಿವಿಯೊಳಡಿದಡಸಿ ಸರ್ವಮುನಿವರರಿಂದ ಕೈಮುಗಿಸಿಕೊಂಬ (ಹಚಕಾ. ೮–೩೧) ; ಒಳಗಡಸಿ ಕರುಳನು ಮುಚ್ಚಿ ಮಂತ್ರಿಸಿ ತೊಡೆದರಖಿಳೌಷಧಿಗಳನು (ಕುವ್ಯಾಭೀ. ೫–೪೨) ; ಏಱ ಬಾಯ್ಗೆ ಬಾಯೊಡ್ಡಿ ರಕ್ತವನೀಂಟಿ ತನಿಯಡಗನಡಸಿ ತಿಂದು (ಸಾಳ್ವಭಾ. ೧೫–೨೩). ೩. ಹದಿ ; ಮೆಟ್ಟು ; ಕೆತ್ತು : ಗಾಂಡೀವಜ್ಯಾಘಾತದೊಳಿಂದ್ರನೀಲಂಗಳನಡಸಿದಂತಿರ್ದರಡುಂ ಮುಂಗೆಯ್ಗಳ ಕರ್ಪಂ ತೀವೆ ತೊಟ್ಟ ಬಳೆಗಳ್ (ಪಂಪಭಾ. ೮–೫೫ ವ) ; ನವರತ್ನಗಳಡಸಿದ ವಿಷ್ಟರದೆ ವಿಗಡರಕ್ಕಸರಾಯ ಕುಳಿತಿರ್ದ (ಮೋಹತ. ೧೧–೩೨) ; ೪. ಒತ್ತಿ ಹಿಡಿದುಕೊ : ಅಂಗುಳೊಳಡಸಿದ ವಿಷಮುಂ ಭಂಗುರತರವಿಷಮದೃಷ್ಟಿಯುಂ . . . ಅಮರ್ದಿರೆ (ಕಾವ್ಯಾವ. ೭೬೩) ; ಸಂಜನಿಸಿದುದು ವಿಷವದು ಕಂಧರದೊಳಡಸಿ ಪಶುಪತಿ ನೀಲಕಂಠನಾದ (ಸೌಂದಪು. ೪–೫೩); ಕಸ ಕಡ್ಡಿ ಅಡಸಿಕೊಂಡು ಬಚ್ಚಲದ ನೀರು ಹೊರಗೆ ಹೋಗವಲ್ಲದು (ದಕ. ೬). ೫. ಮೇಲೆ ಬೀಳು ; ಮುತ್ತು ; ಆಕ್ರಮಿಸು : ನಡನಡನಡುಗುವಿನಮಡಸಿ ತಡೆಯದೆ ಖಳನಂ ಪಿಡಿದುಡಿಯೆ (ವಡ್ಡಾರಾ.೧೨೭–೬); ಇಡಿದಡರೆ ಕಾಯ್ತು ಚೂತಮನಡಸಿ ಸಿಡಿಲ್ ಪೊಯ್ದುದೆನಿಸೆ (ಆದಿಪು. ೩–೩೪) ; ಗಿರಿದುರ್ಗಂಗಳಂ ವಜ್ರಧರನಂತಡಸಿ ಘುಡುಘುಡಿಸಿ ಪುಡಿಗುಟ್ಟುವ (ಗಿರಿಕ. ೨–೧೦೫ ವ). ೬. ಪ್ರಾಪ್ತವಾಗು ; ಸಂಭವಿಸು : ಕೇಡಡಸಿದೊಡಂ ಬಗೆಯಂ ಕೂಡದು (ಕವಿರಾ. ೧–೭೩) ; ದಿಕ್ಕರಿಗಳಂಬುಜಪತ್ರಪುಟಾಂಬುವಿಂ ಬೆಡಂಗಡಸಿರೆ ಮಜ್ಜನಂಬುಗಿಪುದಂ ಸತಿ ಕಂಡು (ಪಂಪಭಾ. ೧–೧೪೦) ; ಅಕ್ಕಟನಗೀ ಪೊಲೆವಟ್ಟನ ಮೇಲೆ ಬೀಟ್ಬುದೊಂದಡಸಿದುದಾವ ಪಾಪಮನೆ ಮಾಡಿದೆಂ (ಕಾದಂಉ. ೭೪೨) ; ತೀವ್ರ ಕರ್ಮೋದಯದಿಂದಡಸುವ ಸಾವುಂ ನೋವುಂ ಏಗೆಯ್ದುಂ ತಪ್ಪಲಱಿಯದು (ಧರ್ಮಾಮೃ. ೭–೧೦೦) ; ಉತ್ತರದೇಶದಲ್ಲಿ ಕ್ಷಾಮ ಅಡಸಿದಾಗ ಶ್ರಮಣರ ತಂಡವೊಂದು ಇಲ್ಲಿಗೆ ಬಂದು . . . ಉಸಿರುಳಿಸಿಕೊಂಡು ಬೆಳೆಯಿತು (ಸಣ್ಣಕ. ೬–೨೩). ೭. ಒತ್ತಿ ಮುಂದುವರಿ ; ನುಗ್ಗು : ಜಂಬೂವೃಕ್ಷದ ಕೆಲದೊಳಡಸಿ ರಸದ ತೊಱೆ ಪರಿವಂತೆ ಕನಕಗಿರಿಯನಲೆದು ಪರಿವ ಜಂಬೂನದಮೆಂಬ ತೊಱೆಯೊಳ್ (ಪಂಪಭಾ. ೬–೩೦ ವ); ಒಂದಱ ಪಿಂದೊಂದಡಸಿ . . . ಸುರಿವಾನಂದಜಲಬಿಂದುಗಳ್ (ಕಾದಂಪೂ. ೮೬೫) ; ಅಡಸಿ ಬಂದುದು ಚಾಪವಾ ರಘುಭೂಪನಿದ್ದೆಡೆಗೆ (ತೊರರಾ. ೩–೬–೫೦). ೮. ನಾಟು ; ಚುಚ್ಚು : ಒಡಲ ಜಡಿದವು ರೋಮರೋಮದೊಳಡಸಿ ದಂಬುಗಳ್ (ಕುವ್ಯಾಭೀ. ೧೦–೨೪). ೯. ಬೆರಸು ; ಸೇರಿಸು ; ಕೂಡಿಸು : ಕುಡಿಬಿದಿರ ಕುಡಿಯ ಮಾವಿನ ಮಿಡಿಯ ಮಾರುದಿನ ಮೆಣಸುಗಡಲೆಯ ಪುಡಿಯೊಳಡಸಿದಲ್ಲವಲ್ಲಣಿಗೆಯ ಚಿಕ್ಕಣಂಗಳಂ ಸವಿಸವಿದು (ಪಂಪಭಾ. ೪–೮೭ ವ) ; ಮುಡಿಸಿದೆಲೆಯ ಗಳಿಗೆಯ ಕೆಂಬಲ್ಲುದಿಗಡಸಿ ಬಾಯೊಳು ಬಾಯಿಗೂಡಿ (ಕಂನವಿ. ೯–೧೨೫). ೧೦. ಸೇರು ; ಕೂಡು : ಅಡಸುವುದು ಬಹುವ್ರೀಹಿಯ ಕಡೆಗತ್ವಂ (ಶಮನ. ೧೮೬). ೧೧. ತೀವ್ರವಾಗಿ ಉಂಟುಮಾಡು : ಕಡುಮುದದ ಕಾಡಾನೆ ಹೊಕ್ಕೊಡನೊಡನೆ ಕಲಕಿದ ಕೊಳನವೊಲು ಭಯವನಡಸುತಿಹೆ ಪವನಜನ ರಣಪಥವೆನುತ (ಕುವ್ಯಾದ್ರೋ.೧೩–೪); ಆಕಾಶವೆಂಬ ಮೃಡನರೆಗಣ್ಣ ತೇಱಿದವೊಲು ನಡುನೇಸಱಡಸಿದುದಂದು ಬಲ್ವಿಸುಪ (ಶ್ರೀಪಾಲ. ೪–೫೩). ೧೨. ಕೈಹಾಕು : ಪಾಪಕ್ಕಡಸಿ ತರುವಲಿ ಮೂಢನಕಟಾ ಮೃಡನ ಬೋನವನಿಂತು ತುಡುಗಿಂ ತಿಂದ (ಬಸವು. ೨೪–೫೭). ೧೩. ಒತ್ತಾಗಿ ಸೇರು ; ತುಂಬಿಕೊ ; ಗುಂಪುಸೇರು : ಹೊಸ ಹಾಲ ಹನಿಗಳಡಸಿದ ತೆಱದ ತೆನೆಗಳಂ (ಸಿದ್ಧರಾ. ೨–೨೯) ; ನಡುಹಗಲು ಕತ್ತಲೆಯಡಸಿತಾಕಾಶದಲಿ (ಕುವ್ಯಾಸ. ೧೫–೪೩) ; ಗಂಧವ ಮುಗುಳ್ಚುವ ಹೆಂಗಳಡಸಿದಂಗಡಿಗಳೊಪ್ಪಿದುವು (ಮೋಹತ. ೩–೧೪). ೧೪. ಅಡಗಿಕೊ ; ತಲೆ ಮರಸಿಕೊ (?) : ಬಿಡದಲ್ಪುಗೆ ಲೋಕಾಯತನೆಯ್ದೆ ಶಾಂಖ್ಯನಡಸಲ್ಕಮ್ಮನ್ಮ ಷಟ್ತರ್ಕವೀಥಿಗಳೊಳ್ ತೂಳ್ದಿತು ಗೋಪಣನ್ದಿದಿಗಿಭಪ್ರೋದ್ಭಾಸಿ ಗಂಧದ್ವಿಪಂ (ಎಕ. II, ೬೯–೪೫ ; 1100).

**ಒಂದಡಸಲೇೞ(ಳ)ಡಸು** = ಒಂದು ಕಷ್ಟಬಂದರೆ ಅದರ ಜೊತೆಗೆ ಮತ್ತೆ ಏಳು ಕಷ್ಟ ಬರು ; ಕಷ್ಟಾನಿಷ್ಟಗಳು ಪರಂಪರೆಯಾಗಿ ಬರು : ಅಡಸಿದ ನಲ್ಲಳ ತಪ್ಪಂ ತಡವಿಕ್ಕಿದೊಡೇಟು ಭವದ ಕೇಡಡಸುವ ಕಿಟ್ಟುಡಿಯಂ ನುಡಿದಳ್ ತಾಯ್ ಒಂದಡಸಿದೊಡೇೞಡಸಿತೆಂಬ ನುಡಿ

ತಪ್ಪುಗುಮೇ (ಯಶೋಚ. ೩–೧೨) ; ತಂದೆ ತಾಯಂ ಬಿಟ್ಟುದೊಂದು . . . ಇಂದುಜೂಟಂ ಪೋಗಲೇಳಾದುದೀಗಲೆನಗೊಂದಡಸಲೇಳಡಸಿತೆಂಬ ನುಡಿ ನಿಜವಾದುದೆಂದಗಜೆ ಚಿಂತಿಸಿದಳು (ಚಿಬಪು. ೩೫–೩೪). **ಅಡಸಿಕೊ** = ತುಂಬಿಕೊ ; ತುರುಕಿಕೊ : ಮತಿಯುಳ್ಳವನಾಗಿದ್ದರೆ ಈ ಭೀಮರಕ್ಕಸನ ಬಲಿಗೆ ಒದವಿಸಿದ ಕೂಳನ್ನು ತನ್ನ ಹೇರೊಡಲಿಗೆ ಅಡಸಿಕೊಳ್ಳುತ್ತಿದ್ದನೆ ? (ಬಿದುರಿ. ೧೦).

[**ದೇ.** ‖ **ತಮಿ.** ಅಡ್ಯೆಚು = ಗುಂಪುಕೂಡು, ಒಟ್ಟಾಗಿ ಸೇರು]

**ಅಡಹ** ‘ಅಡರ್ಪು’ ನೋ.

**ಅಡಹಡಿಸು** ‘ಅಡವಡಿಸು’ ನೋ.

**ಅಡಹಾಯ್** ‘ಅಡ್ಡವಾಯ್’ ನೋ.

**ಅಡಹಾಯಿ** ‘ಅಡ್ಡವಾಯ್’ ನೋ.

**ಅಡಹಾಯ್ಸು** (ಕ್ರಿ). ಅಡ್ಡಲಾಗಿ ನುಗ್ಗು : ಅಸಮಬಲನಡಹಾಯ್ಸಿಕೊಂಡನು ನೆಲನನಳವಿಯಲಿ (ಕುವ್ಯಾಕ. ೧೨–೨೩) ; ಬಿಸುನೆತ್ತರ ಕಡಲೊಳಡಹಾಯ್ಸಿ ವಸುದೇವನ ರಥವು ಪರಿಯೆ (ಸಾಳ್ವಭಾ. ೮–೭೦).

[ಅಡಹಾಯ್ (< ಅಡ್ಡವಾಯ್) + –ಸು]

**ಅಡಹಿಕೆ** (ನಾ). ಆದಾಯ ; ಗಳಿಕೆ ; ಸಂಪಾದನೆ : ನ್ಯಾಯವಾದ ಅಡಹಿಕೆಯನ್ನು ಬಿಟ್ಟು ಅನ್ಯಾಯವಾದ ಅಡಹಿಕೆಯನ್ನು ಅಡೆಯಲತಿ ನಷ್ಟವಾಗುವದು (ಸ್ಯಾಂಡರ್) ; ಅಡಹಿಕೆಯ ಪಾಲು ; ಅಡಹಿಕೆಗೆ ಹಾನಿ (ಕಲ್ಪದ್ರು). [ಅಡಹು ? + –ಇಕೆ]

**ಅಡಹಿಕ್ಕು** ‘ಅಡವಿಕ್ಕು’ ನೋ.

**ಅಡಹಿಡು** ‘ಅಡವಿಡು’ ನೋ.

**ಅಡಹು$_1$** ‘ಅಡವು$_1$’ ನೋ.

**ಅಡಹು$_2$** ‘ಅಡರ್ಪು$_2$’ ನೋ.

**ಅಡಹು$_3$** ‘ಅಡಪು$_3$’ ನೋ.

**ಅಡಹುಗಾರ** (ನಾ). ಅಡವಿಟ್ಟುಕೊಂಡವನು ; ಆಧಾರ ಹಾಕಿಕೊಂಡವನು : ಅಡಹುಗಾರರೂ ಭೋಗ್ಯದಾರರೂ . . . ಅನುಭವಿಸಿಕೊಂಡು ಬರುತ್ತಿರುವರೆಂದೂ (ಬೆಟ್ಟಅ. ೪೦–೫).

[ಅಡಹು$_2$ (< ಅಡರ್ಪು$_2$) + –ಗಾರ (< –ಗಾಱ)]

**ಅಡಹೊಗು** ‘ಅಡ್ಡಹೊಗು’ ನೋ.

**ಅಡಹೊಯ್ಲು** ‘ಅಡ್ಡವೊಯ್ಲು’ ನೋ.

**ಅಡಾಣಿ** (ನಾ). (ಉಕ) ಕೂಲಿ ಕೊಡದೆ ಒತ್ತಾಯದಿಂದ ಮಾಡಿಸುವ ಕೆಲಸ ; ಬಿಟ್ಟಿ ಕೆಲಸ (೬).

**ಅಡಾಣಿ ಎತ್ತು** = ಬಾಡಿಗೆ ಕೊಡದೆ ದುಡಿಸಿಕೊಳ್ಳುವ ಬೇರೊಬ್ಬರ ಎತ್ತು ; ಬಿಟ್ಟಿಯೆತ್ತು : ಅಷ್ಟೇಕೆ ಭಾರವಂ ಹೊರಿಸುತ್ತೀ ? ಆದೇನು ಅಡಾಣಿ ಎತ್ತೋ ? (ಸ್ಯಾಂಡರ್).

[?. / **ತುಳು.** ಅಡಾಣಿ ; **ಮರಾ.** ಅಡಾಣ = ವ್ಯವಸಾಯದ ಕಸಬಿನಲ್ಲಿಲ್ಲದವನು ; ಅಡಾಣೀ = ಅನಿಪುಣ, ಗ್ರಾಮ್ಯ]

**ಅಡಾಯ** (ನಾ). ಅತಿಯಾದ ಸಲಿಗೆ ; ಸದರ : ಈ ಬಡ್ಡೀಮಕ್ಕಳಿಗೆಲ್ಲ ಅಡಾಯ ಆಗ್ಯೆತೆ. ಒಬ್ಬನಿಗೆ ಸಂದುಕೊಟ್ಟರೆ ಊರೆಲ್ಲಾ ಇವನಂಗೇ ತಿರುಗಿಬಿದ್ದಾರು (ದಿವಾಬ. ೨೬). [?]

**ಅಡಾಯಿಲ** (ನಾ). “ಅಡಿಗೆಯವನು” (ಕರ್ಣಾಭಾ).

[ಅಡು$_1$ + –ಆಯಿಲ]

**ಅಡಾಯಿಸು** (ಕ್ರಿ). ೧. ಅಡ್ಡಗಟ್ಟು ; ತಡೆ ; ನಿಲ್ಲಿಸು ; ಅಡ್ಡ ಹಾಕು (೬). ೨. (ಕುದುರೆಯಂತೆ) ಚಡಪಡಿಸು (೬). ೩. (ಒಬ್ಬನ) ಮುಂದಿಡು ; ಗಮನಕ್ಕೆ ತರು (೬).

[ಅಡ್ಡಾ$_0$ + –ಇಸ್ಸು. **P** ಅಡಾ ← **ಹಿಂ.** ಅಡಾನಾ]

**ಅಡಾಯುಧ** ‘ಅಡ್ಡಾಯುಧ’ ನೋ.

**ಅಡಾಯ್ದ** ‘ಅಡ್ಡಾಯುಧ’ ನೋ.

**ಅಡಾರ** (ನಾ). ಒಂದು ಜಾತಿಯ ಗಿಡ ; ಹಿರಿಮದ್ದಿನ ಗಿಡ : “ಅಡಾರಂ – ಅಂಗುರು” (ಓಷಧಿ. ೨). ‘ಅಂಗುರು’ ಪರಾ. [?]

**ಅಡಾವಣಿ** (ನಾ.) ಅಡ್ಡಿ ; ಅಡಚಣೆ ; ತೊಂದರೆ (ಉಕ. ೬).

[← **ಮರಾ.** ಅಡವಿಣೀ]

**ಅಡಾವುಜ** ‘ಅಡ್ಡಾವುಜ’ ನೋ.

**ಅಡಾವುಡಿ** (ನಾ). ೧. ಗದ್ದಲ ; ಕ್ಷೋಭೆ ; ಕಾಟ ; ಉಪದ್ರವ (ದಕ) : ನಾನು ಚಿಕ್ಕವನಾಗಿದ್ದಾಗ ನಮ್ಮ ಅಜ್ಜಿ ತನ್ನ ಬಾಲ್ಯಕಾಲದ ಹಲವು ಸಂಗತಿಗಳನ್ನು ವಿವರಿಸಿ ಹೇಳುತ್ತಿದ್ದರು. ‘ರಂಗಪ್ಪನಾಯಕನ ಅಡಾವುಡಿ’ ಅವುಗಳಲ್ಲೊಂದು (ನಾಪದ. ೧೪೭). ೨. ಆತುರ ; ಅವಸರ ; ದುಡುಕು ; ಗಡಿಬಿಡಿ (ಉಕ. ೬). ೩. ಅವ್ಯವಸ್ಥೆ : ಅಜೀರ್ಣವಾಗುವಷ್ಟು ಹಲವು ಉಂಡಿವೆ, ಉಪವಾಸ ಕೆಲವು ಮಲಗಿವೆ. ಹೋಂ ಗವರ್ನ್‌ಮೆಂಟು ಅಡಾವುಡಿಯಾದರೆ ಇದೇ ಗತಿ (ಹುಚ್ಚುಹು. ೭೬). ೪. ಹದ್ದುಮೀರುವ ವ್ಯಕ್ತಿ : ಇವಳೆಂಥ ಅಡಾವುಡಿ ? ನೆಲೆಯಾಗಿ ಒಂದು ಸ್ಥಳದಲ್ಲಿ ನಿಲ್ಲಳು (ಸ್ಯಾಂಡರ್) ; ಪುರುಷ ಆಳದ ಹೆಣ್ಣು ಅಡಾವುಡಿಯಾಗಿ ಕೆಟ್ಟುಹೋಗುವದು (ಸ್ಯಾಂಡರ್). ೫. ಆಡಂಬರ : ಗಂಡನ ಮನೆಯಲ್ಲಿ ಗರತಿಯಾಗಿ ಬಾಳೋಳಿಗೆ ಈ ಸೀರೆ ಅಡಾವುಡಿ ಯಾಕೋ ನಾ ಕಾಣೆ (ಅಷಾಭೂ. ೪). ‘ಅಡವಡಿಸು’ ಪರಾ.

[~ ? ಅಡವಡಿಸು. / **ತಮಿ.** ಅಡಾವಡಿ = ಕೇಡು ಮಾಡುವುದು, ಕಾಟ ; **ತೆಲು.** ಅಡಾವಡಿ, ಅಡಾವುಡಿ = ಸಂಭ್ರಮ, ಗಡಿಬಿಡಿ, ತೊಂದರೆ]

**ಅಡಾವುಡಿಗಾರ** (ನಾ). ನೆಮ್ಮದಿಯನ್ನು ಹಾಳುಮಾಡುವವನು (ಸ್ಯಾಂಡರ್). [ಅಡಾವುಡಿ + –ಗಾರ (< –ಕಾಱ)]

**ಅಡಾವುಡಿಗಿರಾಕಿ** (ನಾ). ಭಯ ಹುಟ್ಟಿಸುವವನು ; ದಬ್ಬಾಳಿಕೆ ಮಾಡುವವನು (ಸ್ಯಾಂಡರ್). [ಅಡಾವುಡಿ + ಗಿರಾಕಿ]

**ಅಡಾವುಡಿಪಾರುಪತ್ಯ** (ನಾ). ದಬ್ಬಾಳಿಕೆಯ ಆಡಳಿತ (ಸ್ಯಾಂಡರ್).

[ಅಡಾವುಡಿ + ಪಾರುಪತ್ಯ]

**ಅಡಾವುಡಿಮಾಡು** (ಕ್ರಿ). ಗದ್ದಲಮಾಡು ; ಗಡಿಬಿಡಿ ಮಾಡು : ಅವ ನಾವನೋ ಏನಡಾವುಡಿ ಮಾಡುತ್ತಾನೆ (ಸ್ಯಾಂಡರ್).

[ಅಡಾವುಡಿ + ಮಾಡು$_1$]

**ಅಡಾವುಡಿಮಾತು** (ನಾ). ೧. ಭಯವನ್ನು ಹುಟ್ಟಿಸುವ ಮಾತು (ಸ್ಯಾಂಡರ್). ೨. ಅಸಂಬದ್ಧ ಪ್ರಲಾಪ (ಸ್ಯಾಂಡರ್).

[ಅಡಾವುಡಿ + ಮಾತು]

**ಅಡಾವೆ** (ನಾ). (ಕರಾ) ಆಯವ್ಯಯಗಳ ಪಟ್ಟಿ.

[← **ಮರಾ.** ಅಡಾವ್, ಅಡಾವಾ, ಅಥಾವ್, ಅಥಾವಾ]

**ಅಡಿ$_1$** (ನಾ). ೧. ಹರಡಿನಿಂದ ಕೆಳಗಿರುವ ಕಾಲಿನ ಭಾಗ ; ಪಾದ ; ಹೆಜ್ಜೆ : “ಪಾದತಳಮದಡಿಯೆನೆ ಪಡೆಗುಂ” (ವಸ್ತುಕೋ. ೬೭–೨) ; “ಅಡಿಯೆಂದು ಕಾಲೆಂದು ಪಾದಕ್ಕೆ ಪೆಸರಕ್ಕು” (ಶಬ್ದಮಂ. ೭೧) ; ಈ ಧರ್ಮಮಾನ್ನಿರಕ್ಷಿಚ್ಚಿದೋನ್ನಡಿಯೆನ್ತಲೆಮೇಲೊ (ಎಕ. X, ಕೋಲಾರ. ೬–೧೦ ; 753) ; ತಿಳಿಪಲಡಿಗೆಜಗಿದೋಪನ ತಳಂಗಳಾ ತೀಟದಿಂ ಪದಂಗಳೊಳೊಗೆದಾ ಪುಳಕಚಯಂಗಳ್ ಕಳೆದುವು ಮುಳಿಸಂ (ಕವಿರಾ. ೩–೧೧೮) ; ಸುದರ್ಶನಮೆಂಬ ಶಿಬಿಕೆಯನೇಱಿದಾಗಳ್ . . . ಏಟಡಿವರಂ ಭೂಪಾಲರುಯ್ದರ್ ವಿಯಚ್ಚರರತ್ತೇಟಡಿಯಂ ವಿಯದ್ಗಮನದಿಂ ದಾಂತುಯ್ದರ್ (ಆದಿಪು. ೯–೭೨ ವ, ೭೩) ; ಕಾಲಿಂಗಡಿಯೆಂತುಟಂತುಟೆ ಚಿರಾವಾಸಕ್ಕಧಿಷ್ಠಾನಮೆಂತುಟು ತಾನಂತುಟೆ ದರ್ಶನಂ ಸಕಲಧರ್ಮಕ್ಕಂ (ಧರ್ಮಾನ್ಯ. ೧–೭೩) ; ಲುಬ್ಧಕನತ್ತಿತ್ತಂ ಶಬರಿಯಿಲ್ಲದೊಂದಡಿಯನಿಡಂ

(ಗಿರಿಕ. ೧–೧೧೬); ಅಡಿಯಲ್ಲಿ ಸಿಲ್ಕಿದ ಮುಳ್ಗಳಂ ನಿಲ್ಲದೊತ್ತಿ ಪುಳುಂ ಬಿನಿಂ ಕಳೆಯುತ್ತೆ (ಉದ್ಭಟ. ४–೧೨೦); ಅಡಿಯನೂಱುತ್ತಿನಿತು ದೂರಂ ನಡೆದು (ಬಸವು. ४३–४೫); ಅಡಿಯೆಂಬ ರಂಘ್ರಿಗಳನಲ್ಲದೀ ನುಡಿಗಳಂ ನುಡಿಯರಾ ಜನಪದದೊಳು (ಚಿಬಪು. ೬–४४); ಬಸಿವ ನೆತ್ತರ ಗಾಯದೆಡ ದಡಿಯ ವೇದನೆಗೆ ಪಸುಳೆ ಹರಿಹರಿಯೆಂದೊಜಲ್ದಳುತಿರಲ್ (ಜೈನಿಭಾ. ೨೮–೩೫); ಅಡಿಯ ಮುಂದಿಡೆ ಸ್ವರ್ಗ ಅಡಿಯ ಹಿಂದಿಡೆ ನರಕ ಅಡಿಗಶ್ವ ಮೇಧಫಲ ಸ್ವಾಮಿಕಾರ್ಯಕ್ಕೆ ಮಡಿಯಲೇಬೇಕು (ಸರ್ವಜ್ಞ. ೭४೧). ೨. ಕಾಲು: ನಡೆವುದಾದಿಯುಗಂಗಳೊಳ್ ನಾಲ್ಕಡಿಯೊಳುನ್ನತ ಧರ್ಮವಾ ಮೂಱಡಿಯ ನಡೆವುದು ಧರ್ಮವಾ ತ್ರೇತಾಯುಗಂಗಳಲಿ ನಡೆವುದೀರಡಿಯಿಂದೆ ಧರ್ಮಂ ಬಿಡದೆ ತದ್ವಾಪರ ನಿಕರದೊಳ್ ನಡೆವು ದೊಂದಡಿಯಿಂದೆ ಧರ್ಮಂ ಕಲಿಯುಗಂಗಳೊಳು (ಬಸಪು. ೨–೫). 'ಆಱಡಿ', 'ಎಂಟಡಿ' ಪರಾ. ೩. ಒಂದು ಉದ್ದಳತೆ; ಮನುಷ್ಯನ ಹೆಜ್ಜೆಯಷ್ಟು ಉದ್ದ; ೧೨ ಅಂಗುಲದ ಅಳತೆ: ಚೊತ್ತಮ್ಮನ್... ವಿಟ್ಟುದು ಒನ್ದಡಿ ಪಾನಿಯೆಮೇಱುಂ ಒನ್ನತ್ತೆ ದಿವಸಂ (ಎಕ. III, ಮೈಸೂರು. ೫೫–೭; 740); ಧರೆಗೊಡೆಯಂ ಚಕ್ರೇಶಂ ತಿರಿವನೆ ಬಲಿಯಲ್ಲಿ ಬೇಡಿ ಮೂಱಡಿ ನೆಲನಂ (ಸಮುಪ. ೮–೧४४); ಅಡಿಮೂಱೀಯೆನಲೀಯನೇ ಬಲಿನೃಪಂ (ಸೋಮೇಶ. ४४); ೬೦ ಅಡಿ ಉದ್ದ ४೦ ಅಡಿ ಅಗಲವುಳ್ಳ ನಿವೇಶನಕ್ಕೆ ಹತ್ತುಸಾವಿರ ರೂಪಾಯಿಗಳನ್ನು ಕೊಟ್ಟು ನನ್ನ ಸ್ನೇಹಿತ ಕೊಂಡುಕೊಂಡನು (ರೂಢಿ). ४. ಗುರುಹಿರಿಯರ ವಿಷಯದಲ್ಲಿ ಗೌರವ ಸೂಚಕವಾಗಿ (ದೇವರು, ಸ್ವಾಮಿ ಎಂಬಂತೆ) ಉಪಯೋಗಿಸುವ ಶಬ್ದ: ಚಿತ್ತೂರ ಮೋಣಿಗುರವಡಿಗಳ ಶಿಷಿತ್ತಿಯರ್ (ಎಕ. II, ೨೦–೧; 700); 'ಕಿತ್ತಡಿ', 'ತಮ್ಮಡಿ', 'ನಿಮ್ಮಡಿ', 'ಪೇರಡಿ' ಪರಾ. ಸಂಸ್ಕೃತದ ತಾತಪಾದ, ಭಗವತ್ಪಾದ ಹೋ. ℙ ಇದು (ಅಪ್ಪ, ಅಯ್ಯ ಎಂಬಂತೆ) ಹೆಸರಿನ ಕೊನೆಯಲ್ಲೂ ಸೇರುವುದುಂಟು: ವಳ್ಳಿಗ್ರಾಮೆಯರ ದಾಸಡಿಯುಂ ಅಮಲಿಯರ ದೇವಡಿಯುಂ ವೆದೆವಳ್ಳಿ ಯರಾ ದೇವಡಿಯುಂ... ಮುಖ್ಯವಾಗೆ... ಪ್ರಸಾದಂ ಕೆಯ್ದಾರ್ (ಎಕ. VII, ಶಿಕಾರಿ. ೧೫४–೭; ಸು. 685). ೫. ಬ್ರಾಹ್ಮಣರಲ್ಲಿ ಒಂದು ಪಂಗಡದವನು: ಮೇಲುಶಾಂತಿ ಕೀಳುಶಾಂತಿ ಬಲಿ ದೇವರ ಹೊಱುವ ಬ್ರಹ್ಮಣ ಸಹ ಅಂತು ಮುವರು ಅಡಿಗಳು ಅವರಿಗೆ ಬಿಟ್ಟ ಬಾಳು (ಸೌಇಇ. IX–ii, ४೭೦–४೬; 1428); ಹವಿಕರು: ಸಭಾಹಿತ, ಮಧ್ಯಸ್ಥ, ದೀಕ್ಷಿತ (ಯಾಜೀ) ಭಟ್ಟ... ಅಡಿ, ಕಡ್ಗಿ, ಗೋಪಿ, ಕಾರಂತ (ತುಳುನಾ. ೧೮೦). ೬. ಕೆಳಭಾಗ; ತಳ; ಬುಡ: ಅಡಿಯಿಂ ಮೇಗಣ್ಗೆತ್ತುವ ಕಡುಗಾಳಿಯ ಪೊಯ್ಲೊಳ್ (ಆದಿಪು. ೧೩–೫೨); ಕೊಡನೊಳುದಕವ ತುಂಬಿಯಡಿಯ ಲಗ್ಗಿಯನಿರಿಸಿ ಬಿಡದುರುಹಲುಷ್ಣವಾಗದೆ (ದೀಕ್ಷಾಬೋ. ೧೩೭–४); ಮೃಡನಱಿದು ನಗುತೊತ್ತಲಾ ಗಿರಿಯಡಿಯಲೇ ಕೈಸಿಕ್ಕಿಯಜ ನಡನಡುಗ ಲೊದಱಿದನವನು ವರುಷ ಸಹಸ್ರ ಪರಿಯಂತ (ತೊರರಾ. ೧–೮–೩೨); ದೃಢವಿಲ್ಲದ ಭಕ್ತಿ ಅಡಿ ಒಡೆದ ಕುಂಭದಲ್ಲಿ ಸುಖಜಲವ ತುಂಬಿದಂತೆ (ಜಗದಾ. ೧೩); ಕುಡಿ ಕಿತ್ತರೂ ಅಡಿ ಸಾಯುವುದೇ? (ಗಾದೆ); ಅಡಿ ಹತ್ತಬೇಕೆ, ಮೇಲೆ ಸೀಯಬೇಕೆ, ನಿನಗೇನು? (ಗಾದೆ). ೭. ಮರ್ಮ; ರಹಸ್ಯ: ತುಡುಗುಣಿಯಲಿ ಮಾಸಲುಂಟೇ? ಅಡೆ[ಡಿ]ಯನಱಿಯದೆ ಅಱಿದವಂಗೆ ಮೃಡಭಕ್ತಿಯುಂಟೇ? (ಮೋಳಿಮಾ. ೧೫೩–೫೭೬); ಅವನ ಅಡಿ ಆಳ ಯಾರಿಗೂ ಗೊತ್ತಾಗುವುದಿಲ್ಲ (ರೂಢಿ). ೮. ಆಧಾರ; ಆಶ್ರಯ: ಪಡೆಯ ಪೊಱೆಗಿದು ಶೇಷಂ ಪೆಡೆಗಳನುಡುಗುವುದುಮೆಳೆ ಬೊದಿಲ್ಲೆನೆ ಬಿಟ್ಟತ್ತಡಿಗಿಡೆ (ಪಂಪಭಾ. ೧೧–೭೦); ಅವನಿಗೆ ಅಡಿಯಿಲ್ಲ ಆಕಾಶವಿಲ್ಲ ಯಾವ ಧೈರ್ಯದ ಮೇಲೆ ಹೆಣ್ಣು ಕೊಡುವುದು? (ರೂಢಿ). ೯. ಆದಿ; ಮೂಲಕಾರಣ: ದುರ್ನಿಮಿತ್ತಂಗಳ್ಗೆ ರಾಜಂ ಪಿರಿದುಂ ಕೊರಗಿ ಏನಾನು ಮೊಂದಡಿಯಿರ್ಕುಮೆಂದು ತಱಿಸಂದು (ರಾಮಾಶ್ವ. ೬೬–೧೨); ಔತ್ಪಾತಿಕ ಮಿಂತಾಗಲಿದೞಡಿಯಱಿಯದೆ ನಾಡೊಡೆಯನಪ್ಪ ಸಹಸ್ರಕಂಠರಾವಣಂ ಕಣ್ಗೆಟ್ಟು (ಅದ್ಭುತ. ४೨–೧೯); ಏತಕೆ ಕಾದಾಡಿದರೊ ಅದ ನಾ ಬೇರೆ ಕಾಣೆನು ಚೆನ್ನಾಗಿ ಅಡಿಯ (ಇಂಗೀತ. ೩೩–೧೦). ೧೦. ಅಳತೆ; ಲೆಕ್ಕ: ಸತ್ತವರ್ಗಡಿಯಿಲ್ಲ ಸಾವವರ್ಗಡಿಯಿಲ್ಲ ಹೊತ್ತ ಘಾಯದೊಳುರುಳ್ವ ಬೀಳು ವರ್ಗಡಿಯಿಲ್ಲ ತತ್ತಱಂದಱಿಯಿಸಿಕೊಳುತ್ತ ಹೊಯ್ದಾಡುವರ್ಗಡಿಯಿಲ್ಲ ತೆನೆಯ ಹಿಡಿದು ಹತ್ತುವರ್ಗಡಿಯಿಲ್ಲ (ಸಮ್ಯಕೌ. ೮–४೧). ೧೧. ಪದ್ಯದ ಒಂದು ಪಂಕ್ತಿ, —ಪಾದ, —ಚರಣ: ತೋಱುವ ಮಾತ್ರೆಯ ಷಟ್ಪದಿಗಾಱಾಱಡಿಯೆರಡಱಲ್ಲಿಯೊಂದೇ ನಿಯಮಂ (ಛಂದೋಂಬು. ೬. ೩೧೫). ೧೨. ಕಟ್ಟಡದ ನಿವೇಶನ; "ಸೈಟು": ಅಕ್ಕಸಾಲಿಯ ಮನೆಗೆ ಸಮೀಪವಾಗಿ ಒಬ್ಬಿಬ್ಬರು ಬುದ್ಧಿಕೆಟ್ಟೋ, ಗ್ರಹಚಾರ ಹಿಡಿದೋ, ಮನೆ ಅಡಿ ಮಾಡಿಕೊಂಡು ನರಳುತ್ತಿರುವವರಿದ್ದಾರೆ (ಹಹಸ. ३८). 'ಅಡಿಸ್ಥಳ' ಪರಾ. ೧೩. = ಅಡಿಗಲ್ಲು: ಮದಗಜಮಸ್ತಕವಡಿಯಾಗಲಾ ಮೇಗಣಘಟರುಗಳ ಸದೆಬಡಿವ ಗಣಿಯೆ ಕೊಡತಿಯಾಗಲು ಭೀಮಸೇನ ನೊಪ್ಪಿದನಾ ಕಮ್ಮಾಱನಂತೆ (ನೇಮಿಸಂ. ३०–२०).

**ಅಡಿಗಿಕ್ಕು** = ಕೆಳಕ್ಕೆ ಹಾಕು; ತುಳಿ; ನಾಶಮಾಡು: ಮೊದ ಲೊಳ್ ನೀನೆಮಗೆ ನುಡಿದ ತೆಱದಿಂದಡಿಗಿಕ್ಕಿದೆ ಕಂಸನನೆಮ್ಮಂ ನೆಗಪಿದೆ ಚಿಂತಾವಾರ್ಧಿಯೊಳಗೆ ಮುಳುಗಿರ್ದವರಂ (ಜಗವಿ. ೬–८६); ತಿಳಿವನುಗಿ ದಡಿಗಿಕ್ಕಿ ಮಱವೆಯ ಕಳಕಳವೆ ಮೇಲಾಯ್ತು ತಾಮಸಜಲನಿಧಿಯ ತಾಯ್ಮಳಲ ಮುಟ್ಟಿತು ಮನ ಧನಂಜಯನ (ಕುವ್ಯಾಅ. ೬–३०). **ಅಡಿ ಯಾಱಱ ವ[ಪ]ಕ್ಕಿ**= ಆರು ಪಾದಗಳುಳ್ಳ ಹಕ್ಕಿ; ಆರಡಿ; ಷಟ್ಪದ; ತುಂಬಿ: ನುಡಿವ ಕನ್ನಡವಕ್ಕಿ ಜಿನುಗುವ ಅಡಿಯಾಱಱವಕ್ಕಿ[ಪಕ್ಕಿ]ಯಾ ವನದೊಳು ಪಗಲೊಡೆಯನುದಯಕಾಲದೊಳು (ಶ್ರೀಪಾಲ. ೧೨–३३).

[ದೇ. ‖ ತಮಿ. ಮಲ. ತುಳು. ಅಡಿ; **ಕೊಡ.** ಅಡಿ = ತಳಭಾಗ, ತಳ; **ತೆಲು.** ಅಡುಗು; **ಕೊಲಾ.** ಅಱ]

**ಅಡಿ₂** (ನಾ). ವಿರೋಧ: "ಅಡಿಯೆಂದು ವಿರೋಧಭಾವಂ" (ಶಬ್ದಸಾ. ೧३–२४೯). [~ ? ಅಡಿ₁]

**ಅಡಿಕಚ್ಚು** (ಕ್ರಿ). (ನೀರಿನಲ್ಲಿ ಮುಳುಗಿದವನ ವಿಷಯದಲ್ಲಿ) ತಳವನ್ನು ಹಿಡಿ. [ಅಡಿ₁ + ಕಚ್ಚು₂ (< ಕಚ್ಚು₁)]

**ಅಡಿಕಾಸು** (ನಾ). ಸಂತೆಯಲ್ಲಿ ಅಂಗಡಿಯ ನಿವೇಶನದ ಮೇಲೆ ಹಾಕುವ ಒಂದು ಬಗೆಯ ತೆರಿಗೆ: ಶ್ರೀ ಭೈರವದೇವರ ಸಂನಧಿಯ ಸಂತೆ ಕಿಲವಾಗಿರಲಾಗಿ ಪ್ರತಿಹುಟ್ಟಿಸಿ ಅಳ್ಳು ಅಡಿಕಾಸು ಸಹ ದ್ರವ್ಯ ಮುಖದಿಂ ದೇವರ ದೀಪಾರಾಧನೆಗೆ... ಕಟ್ಟಳೆಯನಿಕ್ಕಿ (ಸೌಇಇ. IX–ii, ३३२–೯; 1530). [ಅಡಿ₁ + ಕಾಸು₂]

**ಅಡಿಕಿಲ್** 'ಅಡಕಿಲ್' ನೋ.

**ಅಡಿಕಿಲ** 'ಅಡಕಿಲ್' ನೋ.

**ಅಡಿಕಿಲಿ** 'ಅಡಕಿಲ್' ನೋ.

**ಅಡಿಕಿಲಿಕಲ್ಲು** (ನಾ). ರಾಶಿಹಾಕಿದ ಕಲ್ಲು; ಕಲ್ಲೊಟ್ಟಲು: ಅಲ್ಲಿಂದ ಬಡಗಲು ದಾರಿ ಮೇರೆ ಅಡಿಕಿಲಿಕಲ್ಲ ಬಳಿಯ ನೆಟ್ಟ ಕಲು (ಎಕ. XII, ಪಾವುಗ. ೭೫–೧೨೧; 1533).

[ಅಡಿಕಿಲಿ (< ಅಡಕಿಲ್) + ಕಲ್ಲು₁ (< ಕಲ್₂)]

**ಅಡಿಕಿಲು₁** 'ಅಡಕಿಲ್' ನೋ.

**ಅಡಿಕಿಲು₂** (ನಾ). ಒಂದು ಜಾತಿಯ ಗಿಡ: "ಕಟಲ್ಲಕಾ – ಬೆಳ್ಳ, ಅಡಿ ಕಿಲು" (ಓಷಧಿ. २३). [?]

**ಅಡಿಕಿಲುವಾಸು** 'ಅಡಕಿಲ್ವಾಸು' ನೋ.

**ಅಡಿಕಿಲ್ಗೋಡೆ** (ನಾ). ಒಂದರ ಮೇಲೊಂದರಂತೆ ಪೇರಿಸಿದ ಗೋಡೆ:

ಆಗಳ್ ದಿಕ್ಕರಿಗಳ್ಗೆ ಗಿರಿಗಳ್ಗೆ ದೊರೆವರ್ಪ ಕರ್ವೇಡರ್ . . . ಕವಲ್ದೋಲ ಅಡಿಕಿಲ್ಗೂಡೆಯ ನೇಣ ಕಡಿಗತ್ತಿಯ ಬಿಲ್ಲಂಬುಗಳ ಬಲ್ಪೊಱೆವೊತ್ತು (ರಾಮಾಶ್ವ. ೮೩-೨೪). [ಅಡಿಕಿಲ್ (< ಅಡಕಿಲ್) + ಗೂಡೆ$_1$]

**ಅಡಿಕಿಲ್ಪೆಱು** (ಕ್ರಿ). ಒಂದರ ಮೇಲೊಂದು ಪೇರಿಸಿರು : ಮುತ್ತಿನ ಕೈಯಿಂದಡಿಕಿಲ್ಪೆತ್ತುಱುಶೃ[ಭೃ]ಂಗಾರ ಘಟವಿತತಿಯಿಂ . . . ಕಣ್ಗೆಸೆದತ್ತು . . . ಆ ಪಂದಲ್ (ಉದ್ಭಟ. ೮-೬).
[ಅಡಿಕಿಲ್ (< ಅಡಕಿಲ್) + ಪೆಱು]

**ಅಡಿಕಿಲ್ಗೊಳ್** 'ಅಡಕಿಲ್ಗೊಳ್' ನೋ.

**ಅಡಿಕಿಲ್ವಾಸು** 'ಅಡಕಿಲ್ವಾಸು' ನೋ.

**ಅಡಿಕು** 'ಅಡುಕು' ನೋ.

**ಅಡಿಕೆ** 'ಅಡಕೆ$_1$' ನೋ.

**ಅಡಿಕೆಕಸ** (ನಾ). ಬತ್ತದ ಗದ್ದೆಗಳಲ್ಲಿ ಬೆಳೆಯುವ ಒಂದು ಬಗೆಯ ಗಿಡ್ಡನೆಯ ಕಳೆ (ಕ). "ಮೂಡುಗಟ್ಟನ ಗಿಡ, ಬೋಡು ಕಡಲೆ ಸೊಪ್ಪು, ಕರಂಡೆ, ಮೂಡಿಗಿಡ" (ಮೈಔಗ. ೬೧-೧೪೬೦).
[ಅಡಿಕೆ ? + ಕಸ$_1$]

**ಅಡಿಗ$_1$** (ನಾ). ೧. ಆಳು ; ಸೇವಕ ; ದಾಸ : ನಾನೊಡೆಯ ಇವನಡಿಗನೆಂದು ಪಡಿಪುಚ್ಚವ ಮಾಡುವನ್ನಕ್ಕ ಅದು ತುಡುಗುಣಿಯ ಸವಿತ (ಮೋಳಿಮಾ. ೧೮-೬೮) ; ಒಸೆದು ನಿಮ್ಮಯ ಕರುಣದೆಸಕದಿಂದೊಲಿದು ರಕ್ಷಿಸಬೇಹುದೆನ್ನ ನಿಮ್ಮಡಿಗನೆಂದು (ಮನೋವಿ. ೧-೨) ; "ನಿಮ್ಮ ಕೃಪೆಯ ಪೆರ್ಮೆಯಿಂ ನಿಮ್ಮ ಮರೆವೊಕ್ಕನೆಂದು ಎನ್ನಂ ರಕ್ಷಿಸಬೇಕೆಂಬುದರ್ಥಂ" (ಮನೋವಿ. ೧-೨ ವ್ಯಾಖ್ಯಾ). ೩. ಪೂಜಾರಿ (ಕರಾ). ೪. ಒಂದು ಮನೆತನದ ಹೆಸರು (ಕರಾ). [ಅಡಿ$_1$ + -ಗ]

**-ಅಡಿಗ$_2$** (ಪ್ರ). "ಇದರಲ್ಲಿ ವರ್ತಿಸುವವನು" ಮುಂತಾದ ಅರ್ಥಗಳಲ್ಲಿ ಬರುವ ಒಂದು ತದ್ಧಿತ ಪ್ರತ್ಯಯ : "ಅಡಿಗ ಪ್ರಕಟ ಪ್ರತ್ಯಯಮಕ್ಕುಂ ಸುಕವಿಗಳಿಂ ತದನುಕೂಲವರ್ತನ ವಿಧಿಯೊಳ್ . . . ಅಡಿಗ ಪ್ರತ್ಯಯಕ್ಕೆ ದೇವಡಿಗಂ, ಪಾವಡಿಗಂ, ಪೂವಡಿಗಂ" (ಶಮದ. ೨೦೩, ಪ್ರಯೋ) ; "ದೇವಾದಡಿಗೋರ್ಹತಿ" ; "ದೇವರಂ ಪೂಜಿಸುವಂ ದೇವಡಿಗಂ" (ಶಬ್ದಾನು. ೪೧೩, ವ್ಯಾಖ್ಯಾ). '-ವಡಿಗ' ಪರಾ.

**ಅಡಿಗಂಟಲ್** (ನಾ). ಗಂಟಲಿನ ತಳ, —ಬುಡ : ಪೊಟ್ಟೆ ಪೊಟ್ಟಣೆ(ಳೆ)ಸೆ ಕ[ತ]ನ್ನಡಿಗಂಟಲೆ ಕೆತ್ತುಪೋಗೆ ಗೋಣೊಜಗಿರೆ ಮೂಗಿನೊಳ್ ನುಡಿಯೆ ಬಾಯ್ ಪೆಡೆ ದಷ್ಟನ ಸಾವು ನಿಶ್ಚಯಂ (ಲೋಕೋಪ. ೧೦-೯) ; ಅವನು ಯಾಕೋ ಅಡಿಗಂಟಲಲ್ಲಿ[= ಕ್ಷೀಣಧ್ವನಿಯಲ್ಲಿ] ಮಾತಾಡುತ್ತಾನೆ ; ತುಂಬ ಆಯಾಸವಾಗಿರಬಹುದು (ರೂಢಿ). [ಅಡಿ$_1$ + ಗಂಟಲ್]

**ಅಡಿಗಂಟು** (ನಾ). ೧. "ತಳದ ಕೆಸರು, ಮಡ್ಡಿ" (ಕಸ್ತೂಕೋ); "ಗಸಿ" (ನಾನಾಶ). ೨. "ಮುಗ್ಗಿದ ಧಾನ್ಯ" (ನಾನಾಶ). [? ಅಡಿ$_1$ + ಗಂಟು]

**ಅಡಿಗಂಟುಮಾತು** (ನಾ). ಕೀಳುಮಾತು (ಸ್ಯಾಂಡರ್).
[ಅಡಿಗಂಟು + ಮಾತು]

**ಅಡಿಗಂಡಿ** (ನಾ). ೧. ಕೆಳಗಣ ರಂಧ್ರ. ೨. ಯೋನಿ (ದಕ. ಕ).
[ಅಡಿ$_1$ + ಕಂಡಿ$_1$]

**ಅಡಿಗಚ್ಚು** 'ಅಡಿಗರ್ಚು' ನೋ.

**ಅಡಿಗಚ್ಚುಕಾಣಿಕೆ** 'ಅಡಿಗರ್ಚುಕಾಣಿಕೆ' ನೋ.

**ಅಡಿಗಟ್ಟು$_1$** (ಕ್ರಿ). ತಳಪಾಯ ಹಾಕು ; ಆಧಾರವನ್ನು ಸಿದ್ಧಪಡಿಸು ; ಒಡನೆ ಭಾರತಿಕನು ರಂಗಂಬೊಕ್ಕು ನಾಟ್ಯಘಟನ ಪ್ರಸ್ತಾವನೆಗೆ ಅಡಿಗಟ್ಟಿದನು (ಕಗದ್ಯ. ೧೬೦). [ಅಡಿ$_1$ + ಕಟ್ಟು$_1$]

**ಅಡಿಗಟ್ಟು$_2$** (ನಾ). ೧. ತಳಹದಿ ; ಅಸ್ತಿವಾರ ; ಆಧಾರ : ತರ್ಕಿಸಲಿಕ್ಕೆ ಅಡಿಗಟ್ಟೇನೋ ಇದೆ (ನಾಡೋಜ. ೧೫) ; ಭದ್ರವಾದ ಅಡಿಗಟ್ಟನಲ್ಲಿ ನೆಲೆಗೊಂಡಿರಲಿಲ್ಲ (ನಾಡೋಜ. ೩೫೧). ೨. ಮೂಲಧನ ; ಬಂಡವಾಳ : ದೊಡ್ಡ ದೊಡ್ಡ ವ್ಯಾಪಾರ ಮಾಡಲು ತುಂಬಾ ಅಡಿಗಟ್ಟು ಬೇಕು. ಹಾಗಾಗಿ ಅವರು ಸಾಲ ಎತ್ತಿ ಹಣ ಸಂಗ್ರಹಿಸಿ ವ್ಯಾಪಾರವನ್ನು ವಿಸ್ತರಿಸುವ ಯೋಜನೆಯನ್ನು ಕೈಗೊಂಡರು (ಕುರುಕಾ. ೩೯). [ಅಡಿ$_1$ + ಕಟ್ಟು$_2$]

**ಅಡಿಗಟ್ಟು$_3$** (ನಾ). "ಉರುವಲ ; ಕಟ್ಟಿಗೆ" (ಕಸ್ತೂಕೋ) ; "ಸೌದೆ" (ಶಾಮಣ್ಣ). [< ? ಅಡಿಗೆ (< ಅಡುಗೆ) + ಕಟ್ಟು$_2$]

**ಅಡಿಗಟ್ಟೆ** (ನಾ). ೧. ಕೆಳಗಿನ ಕಟ್ಟೆ. ೨. ಒಂದು ಊರಿನ ಹೆಸರು : ಅರಸಿಮಯ್ಯಂ ನಾಱ್ಗಾವುಣ್ಡುಗೆಯ್ಯೆ ಅಡಿಗಟ್ಟೆಯ ಗೊಗ್ಗಿಸೆಟ್ಟಿಯ ಮಗಂ (ಎಕ. VII, ಶಿಕಾರಿ. ೮೩-೧೩ ; 1058). [ಅಡಿ$_1$ + ಕಟ್ಟೆ$_1$]

**ಅಡಿಗಡಿ** 'ಅಡಿಗಡಿಗೆ' ನೋ.

**ಅಡಿಗಡಿಗೆ**, ಅಡಿಗಡಿ (ಅ). ೧. ಒಂದೊಂದು ಹೆಜ್ಜೆಯಿಡುವಾಗಲೂ ; ಹೆಜ್ಜೆಹೆಜ್ಜೆಗೂ : ಉಡಿದಿರ್ದ ಕಯ್ದು ನೆತ್ತರ ಕಡಲೊಳಗಡಿಗಡಿಗೆ ತಳಮನುರ್ಚುತ್ತಿರೆ ಕಾಲಿಡಲೆಡೆವಡೆಯದೆ ಕುರುಪತಿ ದಡಿಗವೆಣಂಗಳನೆ ಮೆಟ್ಟಿ ನಡೆಯುತ್ತಿರ್ದಂ (ಗದಾಯು. ೪-೧೪) ; ಜೀವನಿಕರಮಂ ರಕ್ಷಿಸದಿರ್ದಡೆ ಪಾಪಮಕ್ಕುಮೆಂದೆಂದಡಿಗಡಿಗಾರೈದು ನೋಡಿ ನಡೆವಂ ಜೈನಂ (ಸಮಪ. ೫-೬). ೨. ಮೇಲೆ ಮೇಲೆ ; ಮತ್ತೆ ಮತ್ತೆ ; ಆಗಾಗ್ಗೆ : ವನಜಮುಖಿ ಪಿರಿದುಮನುರಾಗದಿಂದಡಿಗಡಿಗೆ ಸೊಗಯಿಸಿದಳಾಗ ಮೊಗರಾಗದಿಂ (ಆದಿಪು. ೬-೨೬ ರ) ; ಅಡಿಗಡಿಗೆ ಬೆಚ್ಚುಗುಂ ಹಾಲಂಕಾಱುಗುಂ (ಬಾಲಚಿ. ೧೨೬-೧೯) ; ಅಡಿಗಡಿಗಾತ್ಮತತ್ವದೊಳಿರ್ದು ಕರ್ಮವ ಕೆಡಿಸುತಿಹನು ಕಿಱಿದಾಗಿ (ಭರಚ. ೨-೩೦). **ಅಡಿಗಡಿ :** ೨. ಪೊಡವೀಶನಾ ಹರಿಶ್ಚಂದ್ರ ಕೊಳನಂ ಹೊಕ್ಕು ಅಡಿಗಡಿ ಸಚೇಲದಸ್ನಾನಮಂ ಮಾಡಿ ಹೊಱವಟ್ಟಾಗ (ಹಚಕಾ. ಪರಿ. ೨೧೫-೨೬).
[< ಅಡಿ$_1$ + ಅಡಿ$_1$. / **ತಮಿ. ಮಲ.** ಅಡಿಕ್ಕಡಿ]

**ಅಡಿಗಣ್ಣು** (ನಾ). ೧. ಕಾಲಿನ ಹರಡು (ದಕ. ಕ). ೨. ಕೆಳಮುಖವಾದ ಕಣ್ಣು ; ಕೆಳನೋಟ : ಆಚಾರ್ಯ ಮಹಾಶಯರು ಅಡಿಗಣ್ಣಲ್ಲೇ ಒಮ್ಮೆ ರತ್ನಳನ್ನು ನೋಡಿ ನಗುತ್ತಾ ಹೇಳಿದರು (ಕೆಲಕ. ೧೫).
[ಅಡಿ$_1$ + ಕಣ್ಣು (< ಕಣ್)]

**ಅಡಿಗನ ಕೆಱೆ** (ನಾ). ಒಂದು ಕೆರೆಯ ಹೆಸರು : ಅಲ್ಲಿಂ ಮೂಡಲಾಲದ ಮರಂಗಳಲ್ಲಿಂ ಮೂಡಲು ಕಡಲ ಸರಿವಲ್ಲಿಂ ಮೂಡಲು ಬಿಳಿಯ ಕಲ್ಗಳಲ್ಲಿಂ ಮೂಡಲು ಅಡಿಗನ ಕೆಱೆಯ ಮಧ್ಯದಲ್ಲಿ ಬಸುರಿಯ ಮರ (ಸೌಇಇ. IX-i, ೨೫೪-೪೩ ; 1148). [ಅಡಿಗ$_1$ + ಕೆಱೆ]

**ಅಡಿಗಬು** 'ಅಡುಗಬ್ಬು' ನೋ.

**ಅಡಿಗಬ್ಬು** 'ಅಡುಗಬ್ಬು' ನೋ.

**ಅಡಿಗರಟ** (ನಾ). ತೆಂಗಿನಕಾಯಿಯ ಕೆಳಭಾಗದ (ಎಂದರೆ, ಕಣ್ಣುಗಳಿಲ್ಲದ ಭಾಗದ) ಚಿಪ್ಪು : ನಾನೊಂದು ಗಿಣಿಯ ತಂದೆ . . . ಪಂಜರಕ್ಕೆ ಸಂದ ಕೊಡುವ ಸಂಗದವನಿಲ್ಲ, ಕೊರೆಕೂಳನಿಕ್ಕುವುದಕ್ಕೆ ಅಡಿಗರಟವಿಲ್ಲ ಗಿಣಿಯ ಹಿಡಿದು ನಾ ಕೆಟ್ಟೆ (ಮನುಗುಂ. ೧೬-೯೨).
[ಅಡಿ$_1$ + ಕರಟ$_2$]

**ಅಡಿಗರ್ಚು**, ಅಡಿಗಚ್ಚು (ನಾ). ಕಾಲನ್ನು ತೊಳೆಯುವುದು. **ಅಡಿಗಚ್ಚು** : 'ಅಡಿಗರ್ಚುಕಾಣಿಕೆ' ಪರಾ.
[ಅಡಿ$_1$ + ಕರ್ಚು$_2$ (< ಕಚ್ಚು$_1$)]

**ಅಡಿಗರ್ಚುಕಾಣಿಕೆ**, ಅಡಿಗಚ್ಚುಕಾಣಿಕೆ (ನಾ). (ಗುರುಗಳು ಮೊದಲಾದವರ) ಕಾಲು ತೊಳೆಯುವಲ್ಲಿ ಕೊಡುವ ಕಾಣಿಕೆ ; ಪಾದಪ್ರಕ್ಷಾಳನೆಯ ಕಾಣಿಕೆ : ಅಡೆ[ಡಿ]ಗಚ್ಚುಕಾಣಿಕೆ ಸೇಸೆ ಬಿದ್ದುರ್ಬೀಯ ಮೊದಲಾಗೆ (ಎಕ. VIII, ನಗರ. ೩೬-೧೫೫ ; 1077) ; ಆ ಪೂರೊಳಾದ ಸೇಸೆ ಬಿದ್ದುರ್ಬೀಯಂ ದೇವಿದೆಱೆ ಅಡಿಗಚ್ಚುಕಾಣಿಕೆ . . .

ಸರ್ವ್ವಬಾಧಾ ಪರಿಹಾರಂ ಮಾಡಿಬಿಟ್ಟರ್ (ಎಕ. VIII, ತೀರ್ಥಹ. ೧೯೨–೪೬ ; 1103). **ಅಡಿಗಚ್ಚು ಕಾಣಿಕೆ :** ಪಾಯದ್ರಮ್ಮಂ ಅಡಿಗಚ್ಚು ಕಾಣಿಕೆ (ಬೊಂಕಶಾ. ೧೯೩೪, ಬಂಕಾಪು. ೩–೧೯ ; 1062).
[ಅಡಿಗರ್ಚು + ಕಾಣಿಕೆ (< ಕಾಣ್ಕೆ)]

**ಅಡಿಗಲ್$_1$**, ಅಡಿಗಲ್ಲು$_1$ (ನಾ). ೧. ಅಡಿಪಾಯದ ಕಲ್ಲು ; ತಳಹದಿ ; ಆಧಾರ : ಜಿನಚೈತ್ಯಕೋಟಿಗಡಿಗಲ್ ತಾನೆಂದು ರೂಪ್ಯಾಶ್ಮರಶ್ಮಿಗಳಿಂದಂ ನಗುವಂತುಟಾಯ್ತು ವಿಜಯಾರ್ಧಾದ್ರೀಂದ್ರನದ್ರೀಂದ್ರನಂ (ಶಾಂತಿಪು. ೨–೮೮). ೨. ನೆಲಕ್ಕೆ ಹಾಸುವ ಕಲ್ಲು (?) : ಮನೆಮನೆದಪ್ಪದೆಯುಂ ಪಳುಕಿನ ಕೇರ್ಗಳ್ ಪವಳದೆಸೆವ ಕಂಬಂ ಕರ್ಕೇತನದ ತೊಲೆ ಪೊನ್ನ ಪೊಸಜಂತೆ ನೀಲದಡಿಗಲ್ಗಳೆಂ[ಪಾಠಾಂ. ನಿಂದಡಕಿಲ್ಗಳಂ]ದೊಡೇವಣ್ಣಿಪುದೋ (ಕಾವ್ಯಾವ. ೫೧೮). ೩. ಬೀಸುವ ಕಲ್ಲಿನ ಕೆಳಗಡೆಯ ಹೋಳು (ದಕ. ಕ) : ಅಂದೊಳ್ಳೆ ಅಡಿಗಲ್ಲೆ ಚೆಂದೊಳ್ಳೆ ಮೇಗಲ್ಲೆ ಚಂದ್ರಮತಿಯೆಂಬೊ ಗೆರಸಿ(ಯ) ರಾಗಿಕಲ್ಲೆ (ನಾಪದ. ೬೪–೧೧). **ಅಡಿಗಲ್ಲು$_1$:** ೧. ಕಷ್ಟವೇ ನಿಜವಾದ ಜೀವನದ ಅಡಿಗಲ್ಲು (ತ್ಯಾಗಮು. ೧೦೩); ಈ ಬಗೆಯ ಶರಣಾಗತಿಯೇ ಸಾಧನೆಗೆ ಅಡಿಗಲ್ಲು (ಹಂಗೀತೆ. ೮೫). [ಅಡಿ$_1$ + ಕಲ್$_2$]

**ಅಡಿಗಲ್$_2$** 'ಅಡೆಗಲ್' ನೋ.

**ಅಡಿಗಲ್ಲಿಕ್ಕು** (ಕ್ರಿ). ತಳಪಾಯದ ಕಲ್ಲನ್ನು ಇಡು ; ತಳಹದಿ ಹಾಕು : ಕುಳಿಶಾವಳಿಗಳನಮರ್ದಿಂ ತೊಳೆದಡಿಗಲ್ಲಿಕ್ಕಿ ಬೆಳ್ಳಿಯಿಟ್ಟಗೆಯಿಂ ಚೌಪಳಿಯಿಕ್ಕಿದಂತೆ ತೊಳತೊಳ ತೊಳಗಿ (ಶಾಂತಿಪು. ೧೦–೨೯).
[ಅಡಿಗಲ್$_1$ + ಇಕ್ಕು]

**ಅಡಿಗಲ್ಲು$_1$** 'ಅಡಿಗಲ್$_1$' ನೋ.

**ಅಡಿಗಲ್ಲು$_2$** 'ಅಡೆಗಲ್' ನೋ.

**ಅಡಿಗಾಣ್** (ಕ್ರಿ). ೧. ತಳವನ್ನು ಕಾಣು ; ಮರ್ಮವನ್ನು ತಿಳಿ : ಆಯುಃಪ್ರಮಾಣದಡಿಗಾಣಲೊಡಂ ಮಱುಗುವುದಂಗಜಶರದಿಂ ತುಱುಗುವುದೆನೆ ದೇವಗತಿಯೊಳೇಂ ಸುಖಮುಂಟೆ (ಅಜಿಪು. ೨–೬೨). ೨. ಪಾದವನ್ನು ಕಾಣು ; ದರ್ಶನ ಮಾಡು : ದೇವರಡಿಗಂಡು ಕಪ್ಪಮನೀವರ್ ಚಪ್ಪನ್ನ ದೇಶದರಸರ್ (ರಾಜಶೇ. ೫–೧೨೬). [ಅಡಿ$_1$ + ಕಾಣ್]

**ಅಡಿಗಾರ** (ನಾ). ಗ್ರಾಮದ ಪಟೇಲ : ಪಟೇಲನಿಗೆ— ಪಟೇಲ, ಗೌಡ, ನಾಡುಗೌಡ, ಎಜಮಾನ, ರಡ್ಡಿ, ಪೆದ್ದಕಾಪು, ಮಾನ್ಯಕರಣಂ, ಮಣೆಗಾರ ಅಥವಾ ಅಡಿಗಾರ, ನಾಯಿಡು ವಗೈರೆ ಹೆಸರುಗಳುಂಟು (ಗ್ರಾಮಾಕ. ೧).
[ಅಡಿ$_1$ + –ಕಾರ$_1$ (< –ಕಾಱ)]

**ಅಡಿಗಾಲು** (ನಾ). ಮೊಳಕಾಲಿನಿಂದ ಕೆಳಗಿನ ಪಾದದ ಭಾಗ (ಸ್ಯಾಂಡರ್). [ಅಡಿ$_1$ + ಕಾಲು$_1$ (< ಕಾಲ್$_1$)]

**ಅಡಿಗಿಡಿಸು** (ಕ್ರಿ). ಹೆಜ್ಜೆ ತಪ್ಪುವಂತೆ ಮಾಡು; ನೆಲೆದಪ್ಪಿಸು; ಉರುಳಿಸು : ಆತನ ಮಗಂ ಬಿರುದರಂ ತಡಂಗಾಲುವೊಯ್ದಡಿಗಿಡಿಸುವ ತಡಂಗಾಲ ಮಾಧವಂ (ಎಕ. VII, ಶಿವಮೊ. ೪–೪೦ ; 1122).
[ಅಡಿ$_1$ + ಕಿಡು (< ಕೆಡು) + –ಇಸು$_3$]

**ಅಡಿಗಿಡು** 'ಅಡಿಗೆಡು' ನೋ.

**ಅಡಿಗೀಟು** (ನಾ). (ಬರೆವಣಿಗೆಯಲ್ಲಿ) ಶಬ್ದದ ಅಥವಾ ವಾಕ್ಯಭಾಗದ ಕೆಳಗಡೆ ಎಳೆದ ಗೆರೆ: ಹಸ್ತಪ್ರತಿಯಲ್ಲಿ ಅಡಿಗೀಟು ಹಾಕಿ ತೋರಿಸಿರುವ ಶಬ್ದಗಳನ್ನು ದಪ್ಪಕ್ಷರಗಳಲ್ಲಿ ಅಚ್ಚುಮಾಡಬೇಕು (ರೂಢಿ).
[ಅಡಿ$_1$ + ಗೀಟು]

**ಅಡಿಗುಟ್ಟು** (ಕ್ರಿ). ಕಾಲನ್ನು ಒತ್ತು, —ಹಿಸುಕು : ಸೊಗಯಿಸುವ ಮೃದುತಲ್ಪದೊಳ್ ಲಲಿತಗಂಗಾನದೀಲಹರಿಕಾತಲ್ಪದೊಳ್ ದೇವವನಿತೆಯರೆ ಪರಿವಿಡಿಯೊಳಡಿಗುಟ್ಟೆಯುಂ (ಆದಿಪು. ೬–೨೭ ರ) ; ಮುಡಿಯಿಕ್ಕುವಡಿಯೂಡುವಡಿಗುಟ್ಟುವಾರತಿಯೆತ್ತುವ . . . ಪಲವುಂ ನಿಯೋಗದನ್ನಯಾಗತೆಯರುಮಪ್ಪ ಆಕಾರವತಿಯರಂ (ಚಂದ್ರಪು. ೬–೮೫ ವ) ; ಕಮಳವದನೆಗೆ ನೀಡಿ ಡವಕೆಯಂ ಕೆಲ ಕೆಲರ್ ಕುಮುದದಳನಯನಯುಗೆಗಡಿಗುಟ್ಟೆ ಕೆಲಕೆಲರ್ (ವರ್ಧಪು. ೧೩–೫೨). [ಅಡಿ$_1$ + ಕುಟ್ಟು$_2$]

**ಅಡಿಗುಪ್ಪೆ** (ನಾ). ಧಾನ್ಯದ ತೆನೆಗಳ ಕುಪ್ಪೆಯ ಕೆಳಭಾಗ (ದಕ. ಕ).
[ಅಡಿ$_1$ + ಕುಪ್ಪೆ$_1$]

**ಅಡಿಗೂಂಟೆ**, ಅಡಿಗೂಟ (ನಾ). ೧. ಚರ್ಮವನ್ನು ಕತ್ತರಿಸುವಾಗ ಅಡಿಯಲ್ಲಿ ಆಧಾರವಾಗಿ ಇಟ್ಟುಕೊಳ್ಳುವ ಗೂಟ: ಬ್ರಹ್ಮವನಱಿದಲ್ಲಿ ಬ್ರಾಹ್ಮಣ ಸರ್ವಜೀವಹತಕರ್ಮಕ್ಕೊಳಗಾದಲ್ಲಿ ಸಮ್ಮಗಾಱ ಈ ಉಭಯವನಱಿದು ಮಱೆಯಲಿಲ್ಲ ಕೈಯುಳಿಗತ್ತಿ ಅಡಿಗೂಂಟೆ[ಟ]ಕೆಡೆಯಾಗಬೇಡ ಅಱಿ ನಿಜಾತ್ಮರಾಮರಾಮನಾ (ವಚಶಾ. I, ೩೬೩–೪) ; [ಅಡಿಗೂಂಟೆಕೆಡೆಯಾಗು = ಕಷ್ಟಕ್ಕೆ ಸಿಕ್ಕು ; ನರಕಕ್ಕೆ ಗುರಿಯಾಗು]. **ಅಡಿಗೂಟ** : ೨. ಬೀಸುವ ಕಲ್ಲು ಮೊದಲಾದವುಗಳಲ್ಲಿ ಕೆಳಗಡೆಯ ಹೋಳಿನ ಮಧ್ಯದಲ್ಲಿ ಹದಿದಿರುವ ಗೂಟ ; ತಳಗೂಟ.
[ಅಡಿ$_1$ + ಗೂಂಟ]

**ಅಡಿಗೂಟ** 'ಅಡಿಗೂಂಟೆ' ನೋ.

**ಅಡಿಗೆ** 'ಅಡುಗೆ' ನೋ.

**ಅಡಿಗೆಕಲ್ಲು** (ನಾ). ಕೃತಕವಾಗಿ ತಯಾರಿಸಿದ ವಜ್ರ, —ರತ್ನ (ದಕ. ಕ). [ಅಡಿಗೆ (< ಅಡುಗೆ) + ಕಲ್ಲು$_1$ (< ಕಲ್$_2$)]

**ಅಡಿಗೆಗಾರ್ತಿ** (ನಾ). ಅಡಿಗೆಮಾಡುವವಳು; ಅಡಿಗೆಯ ಪರಿಚಾರಿಕೆ: ಪಳಿದ್ಯವನೆಸರುಗಳ ಮಿತಿಯಿಲ್ಲದಡಿಗೆಗಾರ್ತಿಯರು ನೀಡಲ್ಕೆಯಚ್ಯುತ ಹೆಂಗಳೊಡನೆ ಭುಂಜಿಸಿದ (ಮೋಹತ. ೧೪–೧೧).
[ಅಡಿಗೆ (< ಅಡುಗೆ) + –ಗಾಱ (< –ಕಾಱ) + –ತಿ]

**ಅಡಿಗೆಜನ** (ನಾ). ಅಡಿಗೆ ಮಾಡುವ ಜನ ; ಅಡಿಗೆಯ ಪರಿಚಾರಕ : ಅಡಿಗೆಜನ ೧ಕ್ಕೆ ಸಂಬಳ ಗ ೫ ॥ ೦ (ಎಕ. VI, ಶೃಂಗೇರಿ. ೧೧. ಪು. ೩೭೨–೩೧ ; 1652). [ಅಡಿಗೆ (< ಅಡುಗೆ) + ಜನ]

**ಅಡಿಗೆಜ್ಜೆ** (ನಾ). ಕಾಲಿಗೆ ಕಟ್ಟಿದ ಗೆಜ್ಜೆ : ಮಗು ಓಡಾಡುವಾಗ ಅದರ ಅಡಿಗೆಜ್ಜೆಯ ಶಬ್ದ ಮನೆಯನ್ನೆಲ್ಲ ತುಂಬುತ್ತಿತ್ತು (ರೂಢಿ). [ಅಡಿ$_1$+ಗೆಜ್ಜೆ]

**ಅಡಿಗೆಡಪು** (ಕ್ರಿ). ಬುಡಸಹಿತವಾಗಿ ಉರುಳಿಸು ; ಮೂಲೋತ್ಪಾಟನ ಮಾಡು : ಮರಂಗಳನಡಿಗೆಡಪಿದುವಿರದೆ ಪರಿವ ಪೂರದೆ ನದಿಗಳ್ (ಪಾರ್ಶ್ವಪು. ೮–೧೮). [ಅಡಿ$_1$ + ಕೆಡಪು]

**ಅಡಿಗೆಡು**, ಅಡಿಗಿಡು (ಕ್ರಿ). ೧. ನಡಗೆ ತಪ್ಪಿಹೋಗು ; ನಡಗೆ ನಿಂತುಹೋಗು. ೨. ಶಕ್ತಿಗುಂದು : ಕಿಱಿ ತನ್ನ ಬಲಂ ಪೆಱಭಾಗದಲ್ಲಿ ಬಂದಡಿಗೆಡದಂದೆ ವ[ವಾ]ಜಿಯೊಳೆ ಪಾಯಿಸಿ ಮೂಲವೆಲ್ಲಮಂ ಪಡಲ್ವಡಿಸಿ (ಎಕ. II, ೧೩೮–೮; 940). **ಅಡಿಗಿಡು** : ೧. ಬಿಡೆ ಬೀಸಿದೊಡೊಡನೆ ಬೀಸಿ ನಿಮಿರ್ದಡಿ ಕಾಲಿಟ್ಟಡಿಗಿಡೆ ನಿಘಾತದಿಂ ಪೊಯ್ದೊಡಾಂಕೆಗೊಂಡಣ್ಮಿ ಕಾದಿದರ್ ಕಡುಗಲಿಗಳ್ (ಗದಾಯು. ೮–೯) ; ಮನಂ ವಿಕಳಮಾಗೆ ನುಡಿಗಳ್ ಮೊದಲಿಂದಡಿಗಿಡೆ ಕಾಲ್ ತಡತಡವರೆ (ಕಾವ್ಯಾವ. ೬೨). ೨. ಆ ಶಿಖಂಡಿ ಪೊಕ್ಕಡಿಗಿಡೆ ಬಂದು ಮುಂದೆ ನಿಲೆಯುಂ ಮೊಗಮಂ ನಡೆನೋಡಿಯಾತನಾದೋರ್ಡನೊಡನೆಚ್ಚೊಡೆಚ್ಚ ಮೊನೆಯಂಬುಗಳಟ್ಟಿಡಿವೋಗೆಯುಂ ಮನಂಗಿಡಂ . . . ಸುರಸಿಂಧುನಂದನಂ (ಪಂಪಭಾ. ೧೧–೪೮) ; ೩. ನೆಲೆ ತಪ್ಪು ; ಆಧಾರ ಇಲ್ಲವಾಗು ; ನಾಶವಾಗು : ಪಡೆಯ ಪೊಱಿಗಗಿದು ಶೇಷಂ ಪೆಡೆಗಳನುಡುಗುವುದುಮೆಳೆ ಬೊದಿಲ್ಲನೆ ಬಿಟ್ಟುತ್ತಡಿಗಿಡೆ ಕೂರ್ಮನ ಬೆನ್ನಂದೊಡೆದು ಸಿಡಿಲ್ದೊಡನೆ ನುಚ್ಚುನೂಱಪ್ಪಿನೆಗಂ (ಪಂಪಭಾ. ೧೦–೭೦); ಜಾತಿಯ ನೀತಿಯ ಸೈಪಿನ ಮಾತಡಿಗಿಡೆ ಪತಿಯುಮಂ ಪುರೋಹಿತನುಮನಾ ಪಾತಕಿ ವಿಷದಿಂ ಕೊಂದಳ್ (ಪಂರಾಮಾ. ೧೫–೩೬).
[ಅಡಿ$_1$ + ಕೆಡು]

**ಅಡಿಗೆಡೆ** (ಕ್ರಿ). ೧. ಕಾಲಿಗೆ ಬೀಳು; ನಮಸ್ಕರಿಸು: ಹಸ್ತಿಚರ್ಮಾವರಣ ಶರಣೆನುತ್ತಡಿಗೆಡೆದನು (ಚೆಬಪು. ೨೦–೬); ಜಯ ಜಯ ಜನಾರ್ದನ ಕೃಷ್ಣ ರಕ್ಷಿಸೆಂದಡಿಗೆಡೆದನು (ತುರಂಗ. ೪೬–೩). ೨. ಬುಡಕಳಚಿ ಕೆಳಗೆ ಬೀಳು: ಅರಮನೆಯೊಳಗೆ ನೆಲ ಬಾಯ್ದೆಗೆದುದಡಿಗೆಡೆದುದು ಪಿರಿಯ ಮಾಡ (ಸಾಳ್ವಭಾ. ೧೧–೩೪). [ಅಡಿ$_1$ + ಕೆಡೆ]

**ಅಡಿಗೆನೀರು** (ನಾ). ಅಡಿಗೆಯ ಕೆಲಸ ಮತ್ತು ನೀರು ತರುವ ಕೆಲಸ: ಅಲ್ಲಿ ಕೆಲಸ ಮಾಡುವವರಾರು? ಅಡಿಗೆನೀರು ಮಾಡುವವರಾರು? (ಮಹಾಪೂ. ೫). [ಅಡಿಗೆ (< ಅಡುಗೆ) + ನೀರು (< ನೀರ್)]

**ಅಡಿಗೆಪ್ಪು** (ನಾ). ಕಾಲಿನ ಎಕ್ಕಡ; ಪಾದರಕ್ಷೆ: ಮೃಡಶರಣರಾರವರ ಮನೆಯ ದಾಸಿಯು ಮೆಟ್ಟುವಡಿಗೆಪ್ಪನಾಂತವಳ್ಗೊರೆಯಲ್ಲವಾನು (ಮದೇಪು. ೨೮–೪೪). [ಅಡಿ$_1$ + ಕೆಪ್ಪು$_2$ (< ಕೆರ್ಪು)$_2$]

**ಅಡಿಗೆಭಟ್ಟ** (ನಾ). ಅಡಿಗೆ ಮಾಡುವ ಬ್ರಾಹ್ಮಣ; ಅಡಿಗೆಯ ಪರಿಚಾರಕ; ಬಾಣಸಿಗ: "... ಬಂಡತನ ನಿನ್ನ ಸಾಹಸಕ್ಕೆ ಭೂಷಣವೇ. ಅಡಿಗೆಭಟ್ಟ! ದೂಷಣಕ್ಕೆ ಹೆದರುವ ಮನುಷ್ಯ ನೀನಲ್ಲ" (ಬಿದುರೆ. ೧೧); ಪುಣ್ಯಾತ್ಮ ಅಡಿಗೆಭಟ್ಟನಿನ್ನೂ ಬಂದಿರಲಿಲ್ಲ (ದೀಪದ. ೭೬). [ಅಡಿಗೆ (< ಅಡುಗೆ) + ಭಟ್ಟ]

**ಅಡಿಗೆಮನೆ** (ನಾ). ಮನೆಯಲ್ಲಿ ಅಡಿಗೆ ಮಾಡುವುದಕ್ಕಾಗಿ ಇರುವ ಕೋಣೆ; ಅಡಿಗೆ ಮಾಡುವ ಮನೆ: ತಡೆದಿರಾದೊಡೆ ನಿಮ್ಮನಿವಳೊಡನಡಿಗೆಮನೆಯೊಳಗೈದೆ ಬೇಯಿಸಿಯಡಗನಾರೋಗಿಸುವೆನೆಂದರಮನೆಗೆ ತೆರಳಿದನು (ರಾಮಾಸಂ. ೫–೨–೨೨). [ಅಡಿಗೆ (< ಅಡುಗೆ) + ಮನೆ]

**ಅಡಿಗೆಮಾಡು** (ಕ್ರಿ). ಆಹಾರವನ್ನು ಬೇಯಿಸಿ ಸಿದ್ಧಪಡಿಸು: ತನಗೆ ಅಡಿಗೆಮಾಡೆಂದವಂ ಶುನಕನಡಗಂ ತಿಂದ ಪಾತಕನುಮಂತವಂ (ದೀಕ್ಷಾಬೋ. ೯೩–೨೦); ಅಡಿಗೆ ಮಾಡುವವನ ಮಕ್ಕಳು ಉಪವಾಸ ಬಿದ್ದಾರೋ? (ಗಾದೆ. ೬). [ಅಡಿಗೆ (< ಅಡುಗೆ) + ಮಾಡು$_1$]

**ಅಡಿಗೆಯಿಳಿಸು** (ಕ್ರಿ). ದ್ರಾವಣವನ್ನು ಕಾಸಿ ಕುದಿಸಿ ಅದರಿಂದ ಸಿದ್ಧಗೊಳಿಸು: ತೊಳದು ಕಾಯಿಸಿ ತೆಗೆದ ಉಪ್ಪು, ಡೊಣೆ ಉಪ್ಪು ಮತ್ತು ಪೆಟ್ಲುಪ್ಪು ಮುಂತಾದ ಅಡಿಗೆಯಿಳಿಸಿದ ಕೃತ್ರಿಮ ಲವಣಕ್ಕೂ ಬಿಡಾಲವಣಕ್ಕೂ ಹೆಸರು (ಸಿದ್ಧಾಂತಿ. ೨೪೫). [ಅಡಿಗೆ (< ಅಡುಗೆ) + ಇಳಿಸು]

**ಅಡಿಗೆಯುಪ್ಪು** (ನಾ). ಅಡಿಗೆಗೆ ಉಪಯೋಗಿಸುವ ಉಪ್ಪು; ಸಮುದ್ರಲವಣ. [ಅಡಿಗೆ (< ಅಡುಗೆ) + ಉಪ್ಪು]

**ಅಡಿಗೆರೆ** (ನಾ). = ಅಡಿಗೀಟು. [ಅಡಿ$_1$ + ಗೆರೆ]

**ಅಡಿಗೆವಜ್ರ** (ನಾ). ಕೃತಕವಾಗಿ ತಯಾರಿಸಿದ ವಜ್ರ (ಗ್ಯಾರೆಟ್). 'ಅಡಿಗೆಕಲ್ಲು' ಪರಾ. [ಅಡಿಗೆ (< ಅಡುಗೆ) + ವಜ್ರ]

**ಅಡಿಗೆಸಾಲೆ** (ನಾ). ಅಡಿಗೆಯ ಮನೆ; ಪಾಕಶಾಲೆ. [ಅಡಿಗೆ (< ಅಡುಗೆ) + ಸಾಲೆ$_2$]

**ಅಡಿಗೇಡು** (ನಾ). ಬುಡ ಸಹಿತವಾಗಿ ಹಾಳಾಗುವುದು; ಸಮೂಲ ನಾಶ. 'ಅಡಿಗೇಡುಮಾಡು' ಪರಾ. [ಅಡಿ$_1$ + ಕೇಡು]

**ಅಡಿಗೇಡುಮಾಡು** (ಕ್ರಿ). ಬುಡಸಹಿತ ಹಾಳುಮಾಡು; ಮೂಲೋತ್ಪಾಟನ ಮಾಡು; ಧ್ವಂಸಮಾಡು: ಸಿಂಹನಾದಮಾಡಿ, ನಿನ್ನ ಪಾಡು ಪಂತದ ಕಾರವನ್ನೂ ಸಂಶಯಭಯಗಳನ್ನೂ ಅಡಿಗೇಡುಮಾಡಿ ತೀರಿಸಿ ಬಿಡು (ಬೆಟ್ಟಅ. ೨೧೫–೬). [ಅಡಿಗೇಡು + ಮಾಡು$_1$]

**ಅಡಿಗೈ$_1$** (ಕ್ರಿ). "ಕೀಳು ಮಾಡು, ಸೋಲಿಸು, ಕೆಳಗೆಹಾಕು" (ಕಸ್ತೂಕೋ). [ಅಡಿ$_1$ + ಗೈ (< ಕೆಯ್$_1$)]

**ಅಡಿಗೈ$_2$** (ನಾ). ೧. ಕೆಳಗೆ ಒಡ್ಡಿದ ಕೈ: ದಾನವಂ ಕೊಡುವನ ಕೈ ಮೇಲ್ಗೈಯಾಗಿಯೂ, ದಾನವಂ ಪಿಡಿವನ ಕೈ ಅಡಿಗೈಯಾಗಿಯೂ ಇರುವದು (ಸ್ಯಾಂಡರ್). ೨. (ಏನನ್ನಾದರೂ ಬೇಡಿ) ಕೈಯೊಡ್ಡಿದವನು; ಕೆಳಮಟ್ಟದಲ್ಲಿ, ಹೀನಸ್ಥಿತಿಯಲ್ಲಿ ಇರುವವನು: ಮೇಲ್ಗೈಯಾದವ ನಡಿಗೈಯಾಗಲತಿಹೀನವಾಗಿರುವದು (ಸ್ಯಾಂಡರ್). [ಅಡಿ$_1$ + ಕೈ$_2$ (< ಕೆಯ್$_2$)]

**ಅಡಿಗೊಳ್** (ಕ್ರಿ). ಹೆಜ್ಜೆಹಾಕು; ಓಡು: ಅಡಿಗೊಳ್ವ ಪೆರ್ಮರೆ... ಎತ್ತಲುಂ ನೆಱೆದಿರೆ ಕಾಡೊಳ್ (ರಾಜಶೇ. ೫–೮೩). [ಅಡಿ$_1$ + ಕೊಳ್]

**ಅಡಿಗೊಳಂಗು** (ನಾ). ಗೊರಸಿನ ಕೆಳಭಾಗ: ಸಮಸ್ತ ಸಮುದ್ರಮುದ್ರಿತ ಮೇದಿನಿಯನಡಿಗೊಳಂಗಿನೊಳ್ ಮಡಂಗಿರಿಸಲ್ ಬಗೆದು ಗರ್ವಪರ್ವತಾರೂಢನಾಗಿ ಪರ್ವತಮಂ ತಾಗೆ (ಪಂಚತಂ. ೪೬–೮). [ಅಡಿ$_1$ + ಕೊಳಂಗು]

**ಅಡಿಗೋಂಟೆ** (ನಾ). ಮುಖ್ಯವಾದ ಕೋಟೆ; ವಶದಲ್ಲಿರುವ ಕೋಟೆ (?): ರಾಣಾ ಜಗದೇವರಾಯರಸನಗ್ಗಳನೆಂಬುದು ಚಿತ್ತಕ್ಕೆ ವೇದ್ಯಮೈಸೆ, ಅವನಡಿಗೋಂಟೆಗಳೆಮ್ಮ ನೆರೆಯೊಳಿರ್ಪುವು (ಚಿಕವಂ. ೧೬–೯). [ಅಡಿ$_1$ + ಕೋಂಟೆ]

**ಅಡಿಗೋಲು** (ನಾ). ೧. ಮರದ ಅಗಣಿ (ಸ್ಯಾಂಡರ್). ೨. ಮರದ ಸೌಟು (ಸ್ಯಾಂಡರ್). [ಅಡಿ$_1$ + ಕೋಲು (< ಕೋಲ್)]

**ಅಡಿಟಿಪ್ಪಣಿ** (ನಾ). ಪುಟದ ಕೆಳಗಡೆ(ಅಡ್ಡಗೀಟು ಹಾಕಿ) ಬರೆದಿರುವ ಟಿಪ್ಪಣಿ: ಗೋವಿಂದ ಪೈಗಳು ... ಕವಿತೆ ಬರೆದರೂ ಅಡಿಟಿಪ್ಪಣಿ ಇದ್ದದ್ದೇ (ಹಕ್ಕಿನೋ. ೪೮). [ಅಡಿ$_1$ + ಟಿಪ್ಪಣಿ]

**ಅಡಿತಟ್ಟೆ** (ನಾ). "ಹಡಗಿನ ಅಥವಾ ದೋಣಿಯ ಕಟ್ಟಡಕ್ಕೆಲ್ಲ ಆಧಾರವಾಗಿ, ಅತ್ಯಂತ ತಳಭಾಗದಲ್ಲಿ ಉದ್ದಕ್ಕೂ ಹಾಸಿರುವ ಮರದ ದಿಮ್ಮಿ" (Keel. ಇಂಕನಿ): ಇಲ್ಲಿ ಮೊದಲಿಗೆ, ಇಳಿಜಾರಾದ ಮೆಟ್ಟಲುಗಳಂತೆ ಇರಿಸಿ ಮರದ ತುಂಡುಗಳನ್ನು, ರಚಿಸಬೇಕಾದ ಹಡಗಿನಷ್ಟೇ ಉದ್ದಕ್ಕೆ ಹಾಸಿ ಅದರ ಮೇಲೆ ಹಡಗಿನ ಅಡಿತಟ್ಟೆ(Keel)ಯನ್ನು ಜೋಡಿಸಿರುವರು (ಬಾಲಪ್ರ. II, ೮೧೫). [ಅಡಿ$_1$ + ತಟ್ಟೆ]

**ಅಡಿತಲೆಹಾಕು** (ಕ್ರಿ). ತಲೆಯನ್ನು ಕೆಳಗೆ ಹಾಕು; ತಲೆ ತಗ್ಗಿಸು: ಜೀವನನು ನೆಲದ ಮೇಲೆ ಕುಳಿತುಕೊಂಡು ಅಡಿತಲೆ ಹಾಕಿ ನೆಲವನ್ನೇ ಎವೆಯಿಕ್ಕದೆ ನೋಡುತ್ತಿದ್ದನು (ಹರಿಕೋ. ೬). [ಅಡಿ$_1$ + ತಲೆ$_1$ + ಹಾಕು (< ಪಾಯ್ಕು$_1$)]

**ಅಡಿತಳ** 'ಅಡಿದಳ$_1$' ನೋ.

**ಅಡಿತುಂಡು** (ನಾ). ಒಂದು ವಸ್ತುವಿನ ಕೆಳಗೆ ಅದಕ್ಕೆ ಆಧಾರವಾಗಿ ಇಟ್ಟ ತುಂಡು: ಬಡಗಿಯವನು ಮರಕೆಲಸ ಮಾಡುವದಕ್ಕಾಗಿ ತನ್ನ ಮುಂದೆ ಇಟ್ಟುಕೊಂಡಿರುವ ಮರ ಪಟ್ಟಡಿಯೆಂಬ ಅಡಿತುಂಡು—ಉದ್ಘನ (ಸಿದ್ಧಾಂತಿ. ೩–೧೪೮). [ಅಡಿ$_1$ + ತುಂಡು]

**ಅಡಿದ** (ನಾ). ಒಂದು ಬಗೆಯ ಆಯುಧ; ಕತ್ತಿ: ಗದಾಘಾತಗಳಿಂದ ನುಗ್ಗುನುಗ್ಗುಮಾಡಿ ಅಡಿದ(?)ವೆಂಬ ಆಯುಧದಲ್ಲಿ ತಲೆಗಳಂ ಕಡಿದು (ಮಡಿಕ್ಯಾ. I, ೨೫೭; ರಾಮಾಯ). 'ಅಡಾಯುಧ' ಪರಾ. [?. / ತೆಲು. ಅಡಿದಮು = ಕತ್ತಿ]

**ಅಡಿದಳ$_1$**, ಅಡಿತಳ (ನಾ). ಪಾದತಲ; ಅಂಗಾಲು: ತಲೆವಾಗಿ ತಳಿರಡಿದಳಕೆ (ಪ್ರಭಂಜ. ೧–೪೧). **ಅಡಿತಳ**: ನುಡಿಯು ದಾಂಗುಡಿಪಾಡು ಅಡಿತಳದ ಅರಿಮೆಟ್ಟು, ಗಂಡುಮೆಟ್ಟು – ವೀರಸಿರಿ ಕಲೆಬೀಡು ಎನ್ನ ತಾಯ್ನಾಡು (ದ್ರಾಕ್ಷಿದಾ. ೪). [ಅಡಿ$_1$ + ತಳ$_1$]

**ಅಡಿದಳ$_2$** (ನಾ). (ಕರಾ). ತಳಹದಿ. 'ಅಡಿಸ್ಥಳ' ಪರಾ. [ಅಡಿ$_1$ + ತಳ$_2$]

**ಅಡಿದಳಿರ್**, ಅಡಿದಳಿರು (ನಾ). ಚಿಗುರಿನಂತಿರುವ ಪಾದ; ಕೋಮಲವಾದ ಪಾದ; ಜಳಗಂಧಾಕ್ಷತೆ... ಧೂಪಫಲಂಗಳ್ ಕುಳಿಶಾಯುಧ

ನರ್ಚಿಸೆ ತೊಳತೊಳ ತೊಳಗಿದುವೆಳಸಿ ಬಳಸಿ ಜಿನನಡಿದಳಿರೊಳ್ (ಆದಿಪು. ೭–೧೦೪); ಅಡಿದಳಿರ್ಗೆ ಧರಾವಲಯಂ ಕಡುವೆಟ್ಟತ್ತಾಗೆ ನಡೆಯಲಱ ಯದೆ ಮನುಜರ್ ಸೆಡೆಯೆ (ಪಂರಾಮಾ. ೧–೭೬); ಎಲೆ ಮುನಿಪ ನಿಮ್ಮಡಿ ದಳಿರ ಕರುಣದಿನೆನಗೆ ಫಲಿಸಿತು ಪುಣ್ಯವೆಂದೆಱಗಿದನು (ನಳಚ. ೯–೬೫). **ಅಡಿದಳಿರು** : ನನ್ನಯ್ಯನಡಿದಳಿರುಗಳಾಣೆ ದೋಷವಿಲ್ಲಿನ್ನೆಲ್ಲ ಬನ್ನಿ ನೀವೆಂದ (ಭರಜ. ೪–೪೩). [ಅಡಿ$_1$ + ತಳಿರ್$_2$]

**ಅಡಿದಳಿರು** 'ಅಡಿದಳಿರ್' ನೋ.

**ಅಡಿದಾವರೆ** (ನಾ). ತಾವರೆಯಂತಿರುವ ಹೆಜ್ಜೆ; ಪಾದಕಮಲ: ಅನಘ ಸಕಲೇಶಮಾದರಸರಡಿದಾವರೆಯೊಳನುದಿನಂ ನಿಜಮನೋಮಧು ಕರನನಾಡಿಸುತೆ (ಪದ್ಮರಾ. ೨–೨೭); ವಲ್ಲಭನ ಅಡಿದಾವರೆಗಳ ಕಾಣದೆ ನಯನದಿಂ ಮಿಡಿದಳು ಬಾಷ್ಪಾಂಬುವನು (ಮೋಹತ. ೨೪–೮); ಅಹಿಪತಿ ಪೀತವಾಸನಂ ಪೊಡಮಟ್ಟನಡಿದಾವರೆಗೆ (ಜೈಮಿಭಾ. ೨೪–೬೧); ತಮ್ಮ ಅಡಿದಾವರೆಗಳಲ್ಲಿಯೇ ಎಲ್ಲವನ್ನೂ ಅರ್ಪಿಸಬೇಕೆಂದು ಸಂಕಲ್ಪಿಸಿದ್ದಾರೆ (ಬಾಣಅ. ೫೭). [ಅಡಿ$_1$ + ತಾವರೆ (< ತಾಮರೆ)]

**ಅಡಿದೀಪ** (ನಾ). (ನಾಟಕರಂಗದ ಮುಂಭಾಗದಲ್ಲಿ ಕೆಳಮಟ್ಟದಲ್ಲಿ ಮರಸಿಟ್ಟಿರುವ) ದೀಪ (Footlights. ಇಂಕನಿ). [ಅಡಿ$_1$ + ದೀಪ]

**ಅಡಿದೆಱ** (ನಾ). ಒಂದು ಬಗೆಯ ತೆರಿಗೆ; ನಿವೇಶನದ ಮೇಲೆ ಹಾಕುವ ತೆರಿಗೆ (?): ಮೊಟ್ಟಸುಂಕ ಕಾವಲಿದೆಱ ಅಡಿದೆಱ ಯಿಷ್ಟೂ ಪುರದ ವೀರಭದ್ರದೇವರು ಅಂಗರಂಗಭೋಗಕ್ಕೆ ಸಲುಉ[ದು] ಎಂದು (ಎಕ. XIV, ಕೃಷ್ಣರಾ. ೮೧–೧೧; 1402). 'ಅಡಿಕಾಸು' ಪರಾ. [ಅಡಿ$_1$ + ತೆಱ$_3$]

**ಅಡಿದೊಳೆ** (ಕ್ರಿ). ಕಾಲುತೊಳೆ; ಪಾದವನ್ನು ತೊಳೆ: ಅಚ್ಯುತನಿ ಗರ್ಚನೆಗೈವಂತಡಿದೊಳೆದು ತೊಡೆದು ದುಗುಲದೊಳು (ಹದಿಬ. ೩–೧೫). [ಅಡಿ$_1$ ? + ತೊಳೆ$_1$]

**ಅಡಿದೋಱು** (ಕ್ರಿ). ೧. ಹೆಜ್ಜೆಯನ್ನು ತೋರಿಸು; ಓಡು; ಪಲಾಯನ ಮಾಡು: ಎಡವಂಕ ಮುಱದುದು ಬಲವಂಕ ಬೆನ್ನಿತ್ತುದಡಿದೋಱ ದುದು ದಳ[ಪಾಠಾಂ. ಸಿಡಿದೋಡಿದುದು ಜನ]ಪತಿಯ ಪಡೆ (ಕುರಾಸಾಂ. ೧೩–೧೪೧). ೨. ಮರ್ಮವನ್ನು ಕಾಣಿಸು. [ಅಡಿ$_1$ + ತೋಱು]

**ಅಡಿನೀರು** (ನಾ). ಎರಡುಮೂರನೆಯ ಬೆಳೆಗಳನ್ನು ತೆಗೆದುಕೊಂಡ ಮೇಲೆ ಮುಂದೆ ಮಳೆ ಬರುವವರೆಗೂ ಗದ್ದೆಯಲ್ಲಿ ತಡೆದು ನಿಲ್ಲಿಸಿದ ನೀರು (ಕಿಸಂಗ್ಲಾ). [ಅಡಿ$_1$ + ನೀರು (< ನೀರ್)]

**ಅಡಿನೆರಳು** 'ಅಡಿನೆಳಲು' ನೋ.

**ಅಡಿನೆಲ** (ನಾ). ಅಧೋಲೋಕ; ಪಾತಾಳ: ಎಲ್ಲರನ್ ನಿದ್ರೆಯಿನ್ ಕೆಡುಪುವಾದೇವನ್, ಅಡಿನೆಲನ ದೇವನ್, ಎನ್ನನ್ ಕೊಂಡು ಸಾಗಿಪನ್ (ಅಂತಿಗೊ. ೩೭–೭೫೧). [ಅಡಿ$_1$ + ನೆಲ]

**ಅಡಿನೆಳಲು, ಅಡಿನೆರಳು** (ನಾ). ಪಾದದ ನೆರಳು: ಆಶ್ರಯ; ರಕ್ಷಣೆ: ಹಳುವವೇ ಸಾಮ್ರಾಜ್ಯ ನಿನ್ನಡಿನೆಳಲಿನಲ್ಲಿರೆ ನೀನುಯಿಲ್ಲದ ನಿಳಯವೇ ನನಗಡವಿಯೆಂದೆಱಗಿದಳು (ನಳಚ. ೫–೧೦). **ಅಡಿನೆರಳು** : ಆತನೊಬ್ಬನ ಅಡಿನೆರಳಿನಲ್ಲಿ ಅನೇಕ ಸಂಸಾರಗಳು ಬಾಳುತ್ತಿವೆ (ರೂಢಿ). [ಅಡಿ$_1$ + ನೆಳಲು (< ನೞಲ್)]

**ಅಡಿಪಟ್ಟೆ** (ನಾ). ಬಾಗಿಲುವಾಡದ ಕೆಳಹಲಗೆ; ಹೊಸಿಲು; ಹೊಸ್ತಿಲು (ದಕ. ೬). [ಅಡಿ$_1$ + ಪಟ್ಟೆ]

**ಅಡಿಪತ್ರಿಕೆ** (ನಾ). ಬರೆಯುವಾಗ ಆಧಾರವಾಗಿ ಇಟ್ಟುಕೊಳ್ಳುವ ಕಾಗದದ ಹಾಳೆ (ಕಿಸಂಗ್ಲಾ. ೯೮). [ಅಡಿ$_1$ + ಪತ್ರಿಕೆ]

**ಅಡಿಪಾಯ** (ನಾ). ನೆಲಗಟ್ಟು; ತಳಹದಿ; ತಳಪಾಯ; ಆಧಾರ: ಉದ್ದನೆ ದಂತಗಳಿರುವ ಆನೆಗಳನ್ನು ಬಿಟ್ಟು, ಬಾಗಿಲುಗಳನ್ನು ಹಿಡಿದು ನಿಲ್ಲಿಸಿರುವ ಅಡಿಪಾಯವನ್ನೇ ಅಗೆಯಿಸಿರಿ (ಶಾಂತಲಾ. ೪೦೧). [ಅಡಿ$_1$ + ಪಾಯ್ದು$_1$]

**ಅಡಿಪಾಯಹಾಕು** (ಕ್ರಿ). ತಳಹದಿ ಹಾಕು; ಪೀಠಿಕೆ ಹಾಕು: "ಈಗ ಮುಂದಿನ ಕತೆಗೆ ಅಡಿಪಾಯ ಹಾಕಬೇಕಾಗಿದೆ . . ." (ಹಾಹುತ್ತ. ೪೦). [ಅಡಿಪಾಯ + ಹಾಕು (< ಪಾಯ್ದು$_1$)]

**ಅಡಿಪು** (ನಾ). (ನೆಲವನ್ನು, ಕಸವನ್ನು) ಗುಡಿಸುವುದು: ಡೋಳು ನಾಗಸರ ಕೊಂಬಿನವರ ಜನ ೬ಕ್ಕೆ ಗ ೩೬ ಅಡಿಪಿನ ಮೂಲಿಕಿಯರ ಜನ ೭ಕ್ಕೆ ಅಕ್ಕಿ ಮೂಡೆ ೧೬ (ಎಇ. VIII, ಪು. ೧೩೩–೪೦; 1586). [← ತುಳು. ಅಡಿಪು = ಗುಡಿಸು]

**ಅಡಿಪೌಂಡು** (ನಾ). "ಒಂದು ಪೌಂಡು ದ್ರವ್ಯ ಪರಿಮಾಣವನ್ನು ಒಂದು ಅಡಿ ಎತ್ತರಕ್ಕೆ ಎತ್ತಲು ಬೇಕಾಗುವ ಶಕ್ತಿಯ ಮೊತ್ತ" (Foot-pound. ಇಂಕನಿ). [ಅಡಿ$_1$ + ಪೌಂಡು]

**ಅಡಿಬಂಡ** (ನಾ). ಕುರಿಯ ಹೊಟ್ಟೆಯ ಕೆಳಭಾಗದ ಉಣ್ಣೆ (ದಕ. ೬). [ಅಡಿ$_1$ + ಬಂಡ$_1$]

**ಅಡಿಬೀಳು$_1$** (ಕ್ರಿ). ೧. ಅಡಿಗಳ ಮೇಲೆ ಬೀಳು; ಕಾಲಿಗೆ ಬೀಳು: ಅವನ ಅಡಿಬಿದ್ದನು (ದಕ. ೬). ೨. ಕೆಳಕ್ಕೆ ಬೀಳು; ಸೋಲು (ಕರಾ). [ಅಡಿ$_1$ + ಬೀಳು$_1$ (< ಬೀೞ್$_1$)]

**ಅಡಿಬೀಳು$_2$** (ನಾ). (ಕರಾ) ಗಂಟೆಯಾಕಾರದ ಕೆಂಪು ಹೂವು ಬಿಡುವ ಒಂದು ಬಳ್ಳಿ. [ಅಡಿ$_1$ + ಬೀಳು$_3$ (= ಬಳ್ಳಿ)]

**ಅಡಿಬೆಸನ** (ನಾ). ಪಾದಸೇವೆಯ ಕಾರ್ಯ: ನಿನ್ನ ಅಡಿಬೆಸನಕ್ಕೆ ಇಟ್ಟ ಮಣಿಪೀಠಕ್ಕೆ ತಲೆಗೊಟ್ಟು ಕೈಯ ಮುಗಿದು (ಮುಕ್ತಕಂ. ೨೧–೧೧). [ಅಡಿ$_1$ + ಬೆಸನ]

**ಅಡಿಮುಂಚಿಕೆ** 'ಅಡೆಮುಂಚಿಕೆ' ನೋ.

**ಅಡಿಮುಂಡೆ** (ನಾ). (ಕರಾ) ತಳದಲ್ಲಿ ಬಳೆಯಾಕಾರದ ಆಧಾರ ವಿರುವ ಒಂದು ಬಗೆಯ ಗುಂಡುಪಾತ್ರೆ. [ಅಡಿ$_1$ + ಮುಂಡೆ ?]

**ಅಡಿಮುಗುಚು** (ಕ್ರಿ). ಬುಡಮೇಲಾಗು; ತಳಮೇಲಾಗು: ನಡುಗಿತವನೀತಳ ಮಹೋದಧಿಯಡಿಮುಗುಚಿದುದು [ಪಾಠಾಂ. ಗಡಿಯ ಮಾಱತು] (ತೊರರಾ. ೩–೧೧–೫೫); ನಡೆಯುವಾಗ ಕಾಲು ಅಡಿಮುಗುಚಿ ಹೋಯಿತು (ರೂಢಿ). [ಅಡಿ$_1$ + ಮಗುಚು (< ಮಗುೞ್ಚು)]

**ಅಡಿಮುಣೆ** 'ಅಡಿವಣೆ' ನೋ.

**ಅಡಿಮುಲರ್** (ನಾ). "ಪಾದಕಮಲ" (ಪ್ರಭಣ್ಣ. ೩೭). [ಅಡಿ$_1$ + ಮುಲರ್$_2$]

**ಅಡಿಮುಲೆ** (ನಾ). ೧. ಬೆಟ್ಟದ ಕೆಳಭಾಗ. ೨. ಒಂದು ಊರಿನ ಹೆಸರು: ಅಡಿಮುಲೆ ಸೀಮೆ ವಿಂಗಡದಿಂದತ್ತಂ ಬಟ್ಟನ ವಿನಾಯಕ ದೇವರ ಸ್ವಾಸ್ಥೆ ಯಿಂದ (ಎಕ. VIII, ತೀರ್ಥಹ. ೭೯–೪೭; 1702). [ಅಡಿ$_1$ + ಮುಲೆ]

**ಅಡಿಮುಳಲು** (ನಾ). ತಳದ ಮರಳು; ತಾಯ್ಮರಳು: ನಿಡುಗೊಂಬು ಗಳ ಚಂಬಕನ ನಿರ್ಘೋಷ ಡೋಱುಗಳೆದುವು ನೆಲನನುದಧಿಯ ಕಾಱಸಿ ದವಡಿಮುಳಲನೆನೆ ಹುರಿಯೇಱತಬ್ಬರ (ಕುವ್ಯಾಕ. ೨೧–೭); ಒತ್ತಿ ಕಾಲಿಡ ಲೊಡನೆ ಗಿರಿ ತಲೆಗುತ್ತುತಿರ್ದುದು . . . ಜಲಧಿಯಡಿಮುಳಲೆತ್ತುತಿರ್ದುದು (ತೊರರಾ. ೪–೧೨–೨೪); ಹುಡಿಯಾಗಲುರ್ವಿ ಪರ್ವತ ಸಪ್ತಶರಧಿಗಳಡಿ ಮುಳಲಾಗೆ. . . ಮಹೇಶ್ವರ ಹಿಡಿದನು ವರತ್ರಿಶೂಲವನು (ಮೋಹತ. ೩೯–೩೮). [ಅಡಿ$_2$ + ಮುಳಲು (< ಮುೞಲ್)]

**ಅಡಿಮಾಡು** (ಕ್ರಿ). ಕೀಳಾಗಿ ಮಾಡು: ತೊಡೆ ರಂಭಾಮದಮಂ ಮಿಗೆ ತೊಡೆದುದು ನುಣ್ಪಿಂದಮೆಂಬ ಪುರುಡಿಂದಡಿ ತಾನಡಿಮಾಡಿದುದುರು ರಂಭಾವಿಡಂಬಮಂ ವಿತತನೃತ್ಯದೊಳ್ ನರ್ತಕಿಯಾ (ರಾಜಶೇ. ೧೨–೮೫). [ಅಡಿ$_1$ + ಮಾಡು$_1$]

**ಅಡಿಮಿಡುಕು** (ಕ್ರಿ). ಹೆಜ್ಜೆಯನ್ನು ಅಲುಗಿಸು, —ಚಲಿಸು : ಮೋಹದಿಂದಾ ಪೊನ್ನಂ ತಡೆಯದೆ ನೋಡುತ್ತಿರ್ಪವೊಲಡಿಮಿಡುಕದೆ ನಿಂದು (ಧರ್ಮಾಮೃ.೭–೨೪); ಗುರುಸುತನನಡಿಮಿಡುಕಲೀಯದೆ ಬಿಗಿದು ಕರ್ಣನ ಧನುವ ಖಂಡಿಸಿದ (ಕುಮ್ಯಾದ್ರೋ. ೬–೧೭). [ಅಡಿ$_1$ + ಮಿಡುಕು$_1$]

**ಅಡಿಮುಖ** (ನಾ). ೧. ಕೆಳಭಾಗ (ಸ್ಯಾಂಡರ್). ೨. ಕೆಳಮುಖ (ಸ್ಯಾಂಡರ್). [ಅಡಿ$_1$ + ಮುಖ]

**ಅಡಿಮುಟ್ಟ** (ಅ). ತಳ ಮುಟ್ಟುವವರೆಗೆ; ಸಂಪೂರ್ಣವಾಗಿ; ಕೂಲಂಕಷವಾಗಿ : ಬಾವಿಯನ್ನು ಅಡಿಮುಟ್ಟ ಹುಡುಕಿದರೆ ಶವ ಸಿಕ್ಕಬಹುದು (ರೂಢಿ). ಈ ರಹಸ್ಯವನ್ನು ಅಡಿಮುಟ್ಟ ಶೋಧಿಸಬೇಕು (ರೂಢಿ).
[< ಅಡಿಮುಟ್ಟು]

**ಅಡಿಮುಟ್ಟು** (ಕ್ರಿ). ತಳವನ್ನು ಮುಟ್ಟು; ಬುಡವನ್ನು ಸೇರು.
[ಅಡಿ$_1$ + ಮುಟ್ಟು$_1$]

**ಅಡಿಮುಡಿ** (ನಾ). ಮೊದಲು ಮತ್ತು ಕೊನೆ; ತುದಿ – ಮೊದಲು; ಆದಿ–ಅಂತ್ಯ : ಮನೋರಮೆ—(ಪುಸಿಯ ನಸುಮುನಿಸಿಂ) . . . ಎನಗೆ ತಲೆನೋವುದು. ಮುದ್ದ—ಅಂತದೇತಜಿನರಸಿ ? ಮನೋ—ಅಡಿಮುಡಿಯಿಲ್ಲದ ನಿನ್ನ ಕತೆಗೆ. ಮುದ್ದ—ಆಃ ಎನ್ನ ಬಿತ್ತರದ ಬಣ್ಣನೆಯ ನಲ್ಗತೆಯೊಳೇನಡಿಮುಡಿಯ ಕೊಱತೆ ? (ರಾಮಾಶ್ವ. ೯೯–೧೪).
[ಅಡಿ$_1$ + ಮುಡಿ$_2$]

**ಅಡಿಮುಡಿದೋಱು** (ಕ್ರಿ). ಅಡಿಯನ್ನೂ ಮುಡಿಯನ್ನೂ ತೋರಿಸು; ಪಾದವನ್ನೂ ತಲೆಯನ್ನೂ ಕಾಣಿಸು ; ಆದ್ಯಂತಗಳನ್ನು ಕಾಣಿಸು: ಹರಿವಿರಿಂಚಿಗಳಿಗೆಡಮುಡಿದೋಱದಾ ಮಹಿಮಾವಲಂಬಂಗೆ ಉಣಿಸುಗಳ ತಂದೊಟ್ಟೆ ಮುಟ್ಟಿಸಿ ತಣಿಸುವೆನು (ಪ್ರಭುಲೀ. ೨೩–೩೬).
[ಅಡಿಮುಡಿ + ತೋಱು]

**ಅಡಿಮುಡಿಯಳಿ** (ಕ್ರಿ). ಬುಡದಿಂದ ತುದಿಯವರೆಗೆ ಹಾಳಾಗು ; ಆಮೂಲಾಗ್ರವಾಗಿ ನಾಶವಾಗು : ನೀವೆಲ್ಲರೂ ಅಡಿಮುಡಿಯಳಿದು ಸರ್ವನಾಶವಾಗಿ ಹೋಗುವಿರಿ (ಬೆಟ್ಟಅ. ೧೪೪–೧೪).
[ಅಡಿಮುಡಿ + ಅಳಿ$_1$ (< ಅೞಿ$_1$)]

**ಅಡಿಮುರುಂಟು** (ಕ್ರಿ). ಹೆಜ್ಜೆ ಸುರುಟಿಹೋಗು ; ಕಾಲು ಮಡಿಸಿಹೋಗು : ಅಡಿಮುರುಂಟ ಕೊರಗಿ ಸಾಗೆಮು ! ನರನ ತೊಡರ ಕಲೆಗಳಿಲ್ಲಂ (ಸಂಸಪ. ೫–೮). [ಅಡಿ$_1$ + ಮುರುಂಟು]

**ಅಡಿಮೆ**, ಅಡುಮೆ (ನಾ). ೧. ಕೆಳಗಿರುವಿಕೆ ; ಅಧೀನತೆ ; ದಾಸ್ಯ ; ಗುಲಾಮಗಿರಿ (ಕಿ). ೨. ದಾಸ (?) : ಮೂಲಿಭಕ್ತನು ಮಾಡ್ಸಿದ ಕಂಭ ಸ್ತ[ಸ್ಥಾ ?]ನಕ್ಕೆ ಅಡಿಮೆಯಾಗಿಹನು (ಎಕ. XIV, ಚಾಮರಾ. ೨೬೩–೫ ; ?). **ಅಡುಮೆ** : ೨. ಮೂಱಜ ಮಲಕ್ಕೆ ಸಿಕ್ಕದೆ ಆಱಜಡಿಗೆ ಅಡುಮೆಯಾಗದೆ (ಅಂಬಿವ. ೪೦).
[ಅಡಿ$_1$ + –ಮೆ. / **ತಮಿ.** ಅಡಿಮೈ = ದಾಸ್ಯ, ದಾಸ, ಭಕ್ತ ; **ಮಲ.** ಅಡಿಮ ; **ತೆಲು.** ಅಡಿಮೆ]

**ಅಡಿಮೆಟ್ಟು** (ಕ್ರಿ). ಕಾಲಿನಿಂದ ತುಳಿ ; ಕೆಳಕ್ಕೆ ಹೋಗುವಂತೆ ಅದುಮು ; ಅಡಗಿಸು : ಪರರನಡಿಮೆಟ್ಟೆ ದೂರೀಕರಿಸುವುದೆ ದುರಾತ್ಮರ ಕರ್ಮ (ಹೆಬ್ಬೆರ. ೪೨–೪). [ಅಡಿ$_1$ + ಮೆಟ್ಟು$_1$]

**ಅಡಿಮೇಲಾಗು** (ಕ್ರಿ). ೧. ಬುಡ ಮೇಲಕ್ಕೆ ಹೋಗು; ತಳಮೇಲಾಗು ; ತಲೆಕೆಳಗಾಗು : ನಾ ತಿವಿದ ಖಡ್ಗಕೆ ನರನ ಮೈ ಲವಲವಿಸಲಡಿಮೇಲಾಗಿ ಹೊರಳ್ದರೆ ಧನ್ಯ ತಾನೆಂಬ (ಕುಮ್ಯಾಕ. ೮–೪೦) ; ತಿರುಗುತ್ತೈತಹ ಪರಿಘ ಕಾಂತರೆ ಗಿರಿಗಳಡಿಮೇಲಹವು (ಕುಮ್ಯಾದ್ರೋ. ೧೬–೪೨). ೨. ಸಮತೆ ತಪ್ಪು ; ಹದಗೆಡು ; ಹಾಳಾಗು : ಇಂಥಹ ಜಗಳದಿಂದಾಗಿ ಇಸ್ಟೇಟಿನ ಮೂಲ್ಯ ಮತ್ತು ಆದಾಯ ಅಡಿಮೇಲಾಗಬಹುದು (ಪ್ರಕಾಶ. ೧೪೬) ; ಇಲ್ಲಿ ಏನಾದರೂ ಸ್ವಲ್ಪ ಅವ್ಯವಸ್ಥೆಯುಂಟಾದರೆ ಸಾಕು ; ಈ ಕೇಂದ್ರದ ಎಲ್ಲಾ ಬಗೆಯ ಚಟುವಟಿಕೆಗಳು ಅಡಿಮೇಲಾದಂತೆಯೇ ಸರಿ (ಕಾಲಯಾ. ೮೯).
[ಅಡಿ$_1$ + ಮೇಲು (< ಮೇಲ್) + ಆಗು$_1$]

**ಅಡಿಮೈ** (ನಾ). (ಮೈಯ) ಅಥವಾ ವಸ್ತುವಿನ ತಳಭಾಗ : ಆ ಮೇಲೆ ಹಡಗಿನ ಅಡಿಮೈ ಕಾಣಬರುತ್ತದೆ (ಭೂಪಿವ. ೩೮).
[ಅಡಿ$_1$ + ಮೈ (< ಮೆಯ್)]

**ಅಡಿಮೊದಲ್** (ನಾ). ಅಡಿಯ ತಳಭಾಗ ; ಹೆಜ್ಜೆಯ ಬುಡ ; ಪಾದಮೂಲ : ವಾಮಪದನಖರುಚಿ ಕಾಂಚನಹರಿಪೀಠಮುಮಂ ಮುತ್ತಿನ ಪೀಠಮಿದೆನಿಸಿತವನಿಪತಿಯಡಿಮೊದಲೊಳ್ (ಶಾಂತಿಪು. ೩–೪೭) ; ಕೆಡೆದಿರ್ದುದು ಷಣ್ಣವತಿಸಹಸ್ರಾಂಗನಾಳಿ ನೃಪನಡಿಮೊದಲೊಳ್ (ಅಜಿಪು. ೧೦–೩೪) ; ಕಾಲ್ಗೆಱಗಿದವೋಲಡಿಮೊದಲಂ ಸಾರ್ದ ನೆಟಿಲ್ ನಡುವಗಲಂ ನಿಗದಿಸಿತ್ತು (ವರ್ಧಪು. ೩–೨). [ಅಡಿ$_1$ + ಮೊದಲ್]

**ಅಡಿಯ** (ನಾ). ೧. ದಾಸ ; ಸೇವಕ ; ಶರಣ : ಎಲೆ ದೇವ ನಾ ನಿಮಗೆ ಕೊಡಲು ತಕ್ಕವನೆ ನಿಮ್ಮಡಿಯರಡಿಯ [ಪಾಠಾಂ. ನಿಮ್ಮವರಡಿಯವನಾ]ನೆಂದು ನುಡಿದು ಭೈರವದೇವನಿರಲು (ಭೈರವೇ. ೪–೪೫) ; ದೇವರು ಕೃಪೆಯಿಂದ ಅಡಿಯನಿಗೆ ಅರುಳ್ಗೈಯ್ಯಬೇಕು (ಮಡಿಕ್ಯಾ. VI, ೧೫೪೪ ; ರಾಮಾವಿ). ೨. (ಕರಾ) ಕಾಡಿನಲ್ಲಿ ನೆಲವನ್ನು ಕೃಷಿಮಾಡುವ ಮತ್ತು ಕೂಲಿ ಮಾಡುವ ಕನ್ನಡ ಜಿಲ್ಲೆಯ ಒಂದು ಜಾತಿಯ ಜನ (ಗ್ಯಾರಿಟ್). **ಅಡಿಯಳ್** (ಸ್ತ್ರೀ). ದಾಸಿ ; ಸೇವಕಿ : ಜೋಡಿಕರಮುಡಿಯಳಾರೊಡಗೂಡಿಯುಮವರ್ಗಲ್ಲಳೆನಿಪ ವಸುಧಾಂಗನೆಯಂ ಕೋಡೊಳೆ ತಳೆದುಂ ಸೊಬಗಿನ ಗಾಡಿಗೆ ಮುಯ್ವಾಂತ ಸೊಬಗಿದಾವುದು ಗಜೆಗಾ (ಕಾವ್ಯಾವ. ೭೫೮).
[ಅಡಿ$_1$ + –ಅ$_7$. / **ತಮಿ.** ಅಡಿಯವನ್, ಅಡಿಯಾನ್, ಅಡಿಯೋನ್ ; ಅಡಿತ್ತಿ, ಅಡಿಚ್ಚಿ (ಸ್ತ್ರೀ) ; **ಮಲ.** ಅಡಿಯಾನ್ ; ಅಡಿಯಾತ್ತಿ (ಸ್ತ್ರೀ) ; **ತೆಲು.** ಅಡಿಯ, ಅಡಿಯಡು]

**ಅಡಿಯಳ್** ‘ಅಡಿಯ’ ನೋ.

**ಅಡಿಯೞಿ** (ಕ್ರಿ). ಬುಡಸಹಿತ ಹಾಳಾಗು ; ಸಮೂಲವಾಗಿ ನಾಶವಾಗು : ದಾನವರ ಬಳಗಮೆಲ್ಲಮಡಿಯೞಿದು ಪೋಗಲ್ ಸೀತೆಯಂ ಪ್ರಸನ್ನಳಾಗಿಸೆ ಬೊಮ್ಮಂ ಮುನಿಗಣಂಬೆರಸು ಬಗೆಬಗೆಯೊಳ್ ತುತಿಸಿದಂ (ಅದ್ಭುತ. ೫೨–೧೫). [ಅಡಿ$_1$ + ಅೞಿ$_1$]

**ಅಡಿಯಾಡಿಸು** (ಕ್ರಿ). (ಮೊಸರು, ಎಸರು ಮೊದಲಾದವನ್ನು) ತಳದಿಂದ ಅಲ್ಲಾಡುವಂತೆ ಕಲಕು ; ತಳಮೇಲು ಮಾಡು (ದಕ. ಕಿ).
[ಅಡಿ$_1$ + ಆಡು$_1$ + –ಇಸು$_3$]

**ಅಡಿಯಾಡು** (ಕ್ರಿ). ಅಡ್ಡಾಡು ; ಸುತ್ತಾಡು : ನಾನೆದ್ದು ನೈಲನದಿಯ ದಂಡೆಗುಂಟೆಲ್ಲ ಅಡಿಯಾಡಿದೆ (ಪ್ರವಾತೋ. ೫೭). [ಅಡಿ$_1$ + ಆಡು$_1$]

**ಅಡಿಯಾಳು** (ನಾ). ಪೂರ್ತಿಯಾಗಿ (ಒಬ್ಬನ) ಅಧೀನದಲ್ಲಿರುವವನು ; ಊಳಿಗದಾಳು ; ದಾಸ ; ಗುಲಾಮ : ಹಸಿದು ದಾಸ್ಯದ ಅಡಿಯಾಳಾಗುವುದಕ್ಕಿಂತ ಅನ್ನ ತಿನ್ನದಿರುವುದು ಪರಮ ಸುಖ (ಕಾವೇರಿ. ೨೭) ; “ತಡೆಯದಿರು ತಡೆಯದಿರು ನೆರೆ ನಂಬಿದಡಿಯಾಳ ಗುರಿವಿಡಿದು ಹೋಗು . . .” (ನಡೆದಾ. I, ೪೩೬). [ಅಡಿ$_1$ + ಆಳು$_3$ (< ಆಳ್$_2$)]

**ಅಡಿಯಾಳುತನ** (ನಾ). ದಾಸತ್ವ ; ದಾಸ್ಯ ; ವಿಧೇಯತೆ : ಒಂದು ಕೊನೆ ಕ್ರೌರ್ಯ ಅಥವಾ ದಬ್ಬಾಳಿಕೆ, ಮತ್ತೊಂದು ಕೊನೆ ಪೌರುಷವಿಲ್ಲದ ಅಡಿಯಾಳುತನ (ಇಸ್ಲಾಂಸಂ. ೨೩೬) ; ಮೂಲ ಉದ್ದೇಶಕ್ಕೆ ಬೇಕಾದ ಅಡಿಯಾಳುತನ ಅವರಲ್ಲಿ ಕಾಣಿಸಬೇಕು (ಯಕ್ಷಬ. ೧೨೩).
[ಅಡಿಯಾಳು + –ತನ]

**ಅಡಿಯಿಟ್ಟೆ** (ನಾ). ಈಟೆಯ ತಳಭಾಗ: "ಇಟ್ಟೆಯ ಅಡಿ, ಅಡಿಯಿಟ್ಟೆ" (ಶಬ್ದಾನು. ೩೪೮ ಪ್ರಯೋ). [ಅಡಿ$_1$ + ಇಟ್ಟೆ$_2$]

**ಅಡಿಯಿಡು** (ಕ್ರಿ). ೧. ಹೆಜ್ಜೆಹಾಕು; ನಡೆ; ಮುಂದುವರಿ: ಅಪವರ್ಗ್ಗಕ್ಕಡಿಯಿಟ್ಟೊನಜಿದೊನನುಪಮ ಕವಿಯಂ (ಎಇ. X, ೧೫೨-೫೬; 915); ನಿಜಸಕಲಚಕ್ರವರ್ತಿತ್ವಕ್ಕಂಡಡಿಯಿಡುವಂತೆ ನಿರಂತರಮಡಿಯಿಟ್ಟಂ ಪದ್ಮರಾಗಕುಟ್ಟಿಮತಳದೊಳ್ (ಆದಿಪು. ೮-೪೧); ಅತ್ತಿತ್ತಡಿಯಿಡದೆ ಲಕ್ಷ್ಮೀತಳವೆಳಗಾದಳ್ (ಗದಾಯು. ೯-೧೬); ಅಡಿಯಿಟ್ಟ ಧರೆ ಮಹಾ ಕ್ಷೇತ್ರ ವಜಿಯದೆ ಹೊಕ್ಕ ಮಡು ದಿವ್ಯತೀರ್ಥ ತುಡುಕಿದ ಜಲಂ ಸಿದ್ಧಾಂಬು (ಸಿದ್ಧರಾ. ೨-೨೧); ದೈತ್ಯ ಬಲವುಲಿದಡಿಯಿಡಲು ಮೇಲುಸುರು ಮುಸಗಿತು ಫಣಿಪ ಕಮಠರಿಗೆ (ಕುವ್ಯಾದ್ರೋ. ೧೫-೪೬); ತಡೆಯದಡಿಯಿಡೆ ಹಾದಿಗೊಡು ಪೋಪೆನೆನೆ (ವೆಂಕಾರಾ. ೫-೩-೧೨). ೨. ಮೊದಲು ಮಾಡು; ತೊಡಗು; ಪ್ರಾರಂಭಿಸು: ಲಲಿತಲತಾಂಗಿ ನೂತವಿಪರೀತರತಕ್ಕಡಿಯಿಟ್ಟಳ್ (ಆದಿಪು. ೧೨-೩೦); ಗರುಡಂ ತಾನಡಿಯಿಟ್ಟನಿಂತಮೃತಮಂ ಕೊಂಡುಯ್ವುದರ್ಕೆಂತುಮಿಲ್ಲಿ ರಿಸಲ್ಬಾರದು (ಕುಸುಮಾ. ೯-೩೬). [ಅಡಿ$_1$ + ಇಡು]

**ಅಡಿಯೂಟೆ** (ನಾ). (ಅರಗಿನ ರಸ ಮೊದಲಾದವನ್ನು) ಹೆಜ್ಜೆಗೆ ಬಳಿಯುವುದು; ಪಾದಲೇಪನ: ಸುಪ್ರಣೀತೆಯುಂ ಯಶೋಧರೆಯುಂ . . . ಎಂಬೀ ದೇವರ ನಂಬಿಕೆಯ ಸೀಗುರಿಯ ಸಿರಿಮುಡಿಯ ಕನ್ನಡಿಯ ಪಡಿಯಜಿಕೆಯ ಕೊಡೆಯ ಡವಕೆಯಡಪದಡಿಯೂಟದ ಪಡಿವೆಸಕ್ಕೆ ಬೆಸಸಿದಂ (ಅನಂಪು. ೪-೭೬ ವ). [ಅಡಿಯೂಡು + -ಅ$_6$]

**ಅಡಿಯೂಡು** (ಕ್ರಿ). (ಅರಗಿನ ರಸ ಮೊದಲಾದವನ್ನು) ಹೆಜ್ಜೆಗೆ ಬಳಿ; ಪಾದಕ್ಕೆ ಲೇಪಿಸು: ಅಡಿಯೂಡಲ್ಕಲತಗೆಯಂ . . . ಕುಡುವಮುರಿ ಕಲ್ಪಲತೆಯನೆ ಪೋಲ್ತಳ್ (ಆದಿಪು. ೭-೧೧); ಇಂಬಿನೊಳಡಿಯೂಡುವ ಸಖಿಯಂ ಬಾರಿಸಿ ತೆಗೆದು (ಶಾಂತಿಪು. ೬-೭); ನಯಂಬೆರಸೆಡೆಯಾಡುವಾಗಳಡಿಯೂಡಿದ ಮೆಲ್ಲಡಿವಜ್ಜೆಗಳ್ (ಮಲ್ಲಿಪು. ೪-೧೦೬); ಮುಡಿಯಿಸುವಣ್ಣನಿಕ್ಕುವಡಿಯೂಡುವ ಕನ್ನಡಿದೋರ್ಪ ತಿರ್ದಿ ಬೊಟ್ಟಿಡುವಬಳಾಕದಂಬದಿನದೇನೆಸೆದಿರ್ದಳೊ ರತ್ನಪೀಠದೊಳ್ (ವರ್ಧಪು. ೫-೪೪). [ಅಡಿ$_1$ + ಊಡು]

**ಅಡಿಯೂಱು** (ಕ್ರಿ). ೧. ಹೆಜ್ಜೆಯನ್ನು ಊರು; ಭದ್ರವಾಗಿ ಕಾಲಿಡು. ೨. ಸ್ಥಿರವಾಗಿ ನಿಲ್ಲು; ನೆಲಸು: ಪುಸಿಯನವನೀತಳದೊಳಡಿಯೂಱದಂತೆ ತೊಲಗಿಸಿ (ಚಿಬಪು. ೮-೧೬). [ಅಡಿ$_1$ + ಊಱು]

**ಅಡಿಯೂಳಿಗ** (ನಾ). ಪಾದಸೇವೆ; ಆಶ್ರಯಿಸಿ ಸೇವೆಮಾಡುವುದು: ಅರಸ ಕೇಳಿನಗೆ ನಿನ್ನಡಿಯೂಳಿಗಮೊಂದರಸಿಯರಡಿಯೊಲ್ಮೆಯೊಂದು ಪರಿಕಿಪೊಡಖಿಳಾರ್ಥಸಾಧನಂಗಳಿಗಿವು ನೆರವಾಗಿಹವು (ಜದಿಬ. ೧-೩೧); ತಮ್ಮ ಅಡಿಯೂಳಿಗದೊಳಿಡೆ ಇತ್ತರದೆ ಸಾಕು (ಹೆಬ್ಬೆರ. ೧೨-೧೦). [ಅಡಿ$_1$ + ಊಳಿಗ]

**ಅಡಿಯೆತ್ತು** (ಕ್ರಿ). ೧. ಹೆಜ್ಜೆಯನ್ನು ಎತ್ತು. ೨. ಹೊರಡು: ಪೆರ್ಜಸಮನೆ ಪಿಡಿದೆನ್ನನೆ ರಣದೊಳಜಿವೆನಿರದಡಿಯೆತ್ತಿಂ (ಪಂಪಭಾ. ೯-೮೭). [ಅಡಿ$_1$ + ಎತ್ತು$_1$]

**ಅಡಿಯೇೞ್** (ಕ್ರಿ). ಹೆಜ್ಜೆಯೆತ್ತಿ ಏಳು; ನಡೆ: ಇಂತಿರಲಿವರ್ ಮೆಲ್ಲನೆ ಅಡಿಯೆೞ್ದು ಮೆಯ್ಗೊಡದ ರಾವಣಸೇನೆಯಂ ತಡೆದರ್ (ಅದ್ಭುತ. ೪೭-೧). [ಅಡಿ$_1$ + ಏೞ್$_1$]

**ಅಡಿರಜ** (ನಾ). ಕಾಲಿನ ರಜಸ್ಸು; ಪಾದದ ಧೂಳಿ: ಆಡಿನ ಅಡಿರಜವು ತೀಡಲಾಗದು ಎಂದು ಆಡನೇ ತಿಂದರಿಹುದಿಂದ್ರಪದವೆಂಬ ನಾಡಿದುವೆ ನೋಡ (ಸರ್ವಜ್ಞ. ೯೪೧). [ಅಡಿ$_1$ + ರಜ$_1$]

**ಅಡಿರಾಶಿ, ಅಡಿರಾಸಿ, ಅಡೆರಾಶಿ** (ನಾ). ಧಾನ್ಯದ ರಾಶಿಯ ಕೆಳಭಾಗ (ದಕ. ಕ). **ಅಡಿರಾಸಿ** (ಕ). **ಅಡೆರಾಶಿ**: ಅವನಿಗೆ ಸಂಬಳ, ಮಾನ್ಯ, ಮ್ಯಾರೆ . . . ಅಡೆರಾಶಿ ಮುಂತಾದ ಜೀವನಗಳು ನಡೆಯುವುವು (ಕಥಾಮಂ. IV, ೨೩). 'ಅಡಿಗುಪ್ಪೆ' ಪರಾ. [ಅಡಿ$_1$ + ರಾಶಿ]

**ಅಡಿರಾಸಿ** 'ಅಡಿರಾಶಿ' ನೋ.

**ಅಡಿರುಚಿ** (ನಾ). ಹೆಜ್ಜೆಯ ಕಾಂತಿ; ಅಂಗಾಲಿನ ಹೊಳಪು: ಎಡೆಯಾಡುವಬಲೆಯರಡಿರುಚಿತಳಿರನು ಪಡೆದು ನೀಲದ ನೆಲನುಗುರ ಬಿಡುವೆಳಗಂಗಳರಾಗಿ ನೋಡುವರಕ್ಷಿಗೊಡರಿಪುದದುವೆ ಸತ್ಫಲವ (ವರ್ಧಚ. ೫-೪೪). [ಅಡಿ$_1$ + ರುಚಿ]

**ಅಡಿವ** (ನಾ). "ಹುಟ್ಟು; ಜನ್ಮ" (ಸಿರಿಕೋ. ರಮಾಕಾಂ). [?]

**ಅಡಿವಜ್ಜೆ** (ನಾ). ೧. ಹೆಜ್ಜೆಯ ತಳದ ಗುರುತು: ಅನ್ನೆಗಮರಸನಡಿವಜ್ಜೆಯಂ ನೋಡುತ್ತಂ (ವಡ್ಡಾರಾ. ೧೧೧-೧೦); ಕೊಳನಂ ಮುಟ್ಟೆವಂದದಱ ತಡಿಯೊಳ್ ಶಂಖಚಕ್ರಹಳಕುಳಿಶಲಾಂಛಿತಮಾಗಿರ್ದಡಿವಜ್ಜೆಯಂ ಕಂಡು (ಪಂಪಭಾ. ೧೩-೭೬ ವ); ಬೇಂಟೆಕಾಱನಂತೆ ಅಡಿವಜ್ಜೆಯನಱಿಯಿಯಂ (ಗದಾಯು. ೬-೨೮ ವ). ೨. ಪದ್ಧತಿ; ಸಂಪ್ರದಾಯ: ಕೆಱೆದೇಗುಲಂಗಳೆಲ್ಲವು ಹಿಂದಣ ಅಡಿವಜ್ಜೆಗೊಳಗು (ಶೂನ್ಯಸಂ. ೫೭-೨೫). [ಅಡಿ$_1$ + ಪಜ್ಜೆ]

**ಅಡಿವಡಿಕೆ** (ನಾ). ಹೆಜ್ಜೆಯೂರುವುದು; ಪಾದವಿನ್ಯಾಸ (?). 'ಅಡವಡಿಕೆ' ಎಂಬುದರ ಪ್ರಯೋಗದಲ್ಲಿಯ ಪಾಠಾಂತರವನ್ನು ನೋಡಿ. [ಅಡಿ$_1$ + ಮಡಿಕೆ]

**ಅಡಿವಡೆ** (ಕ್ರಿ). ಕಾಲುಗಳನ್ನು ಪಡೆ: ಕಡುನಿಡಿಯವಹ ಬಾಜುವಟ್ಟಗಳಡಿವಡೆದು ನಡೆತಂದವೋ ಎನೆ . . . ಅಡಯಿಡುವ ಚಾಣೂರ ಮುಖ್ಯರು (ಸಾಳ್ವಭಾ. ೧೨-೫೬). [ಅಡಿ$_1$ + ಪಡೆ$_1$]

**ಅಡಿವಣಲ್** (ನಾ). = ಅಡಿಮುಳಲ್: ಹ್ರದಿನೀ ಸರ್ವಾಂಬುವಂ ಪೀರ್ದನಿತನಡಿ[ಪಾಠಾಂ. ನದಿ]ವಣಲ್ಗಾಣಿಸುತ್ತುಂ (ಶಾಂತೀಶ್ವ. ೧೨-೧೯). 'ತಾಯ್ಮಳಲ್' ಪರಾ. [ಅಡಿ$_1$ + ಮಣಲ್ (< ಮಱಲ್)]

**ಅಡಿವಣಿ** (ನಾ). ಕೆಸರಿನಲ್ಲಿ ಆಗಿರುವ ಹೆಜ್ಜೆಯ ಗುರುತು: "ಅಡಿವಣಿಯೆಂದು ಕೆಸಱಿನೊಳಾದ ಪಜ್ಜೆ" (ಶಬ್ದಸಾ. ೧೬೪); "ಅಡಿವಣಿಯೆಂದೆನಲಕ್ಕುಂ ಸಡಗರದಿಂ ಕೆಸಱಿನೊಳಾದ ಪಜ್ಜೆಯದೆಂದುಂ" (ಕವಿಕಂ. ೯೭). ☞ ಇದು 'ಅಡಿವಣಿಗೆ' ಎಂಬುದರ ಅಪಪಾಠವೆಂದು ತೋರುತ್ತದೆ. [ಅಡಿ$_1$ + ?]

**ಅಡಿವಣಿಗೆ** (ನಾ). = ಅಡಿವಣಿ: ಅಡಿ[ಪಾಠಾಂ. ಅಡೆ]ವಣಿಗೆಯೆಂದು ಕೆಸಱಿನೊಳಾದ ಪಜ್ಜೆ (ಶಮುದ. ಪರಿ. ೨); "ಅಡಿವಣಿಗೆಯೆನೆ [ಪಾಠಾಂ. ಅಡಿವಣಿಯೆನಲ್] ಕೆಸಱಿನೊಳಿರದಾದ ಪಜ್ಜೆ" (ಕಬ್ಬಿಕೈ. ೭೫). [ಅಡಿ$_1$ + ಪಣಿಗೆ ?]

**ಅಡಿವಣೆ, ಅಡಿಮಣೆ** (ನಾ). ೧. "ಕೂತುಕೊಳ್ಳುವ ಪೀಠ" (ಕಲ್ಪದ್ರು. ೨). **ಅಡಿಮಣೆ**: ೨. (ಕರಾ) ಕೆಳಗಡೆ ಆಧಾರವಾಗಿ ಇಡುವ ಮಣೆ: ಅಕ್ಕಿಯ ಚೀಲವನ್ನು ಅಡಿಮಣೆಯ ಮೇಲೆ ಇರಿಸಿದ್ದಾರೆ (ರೂಢಿ). [ಅಡಿ$_1$ + ಮಣೆ]

**ಅಡಿವತ್ತಳಿ** (ನಾ). (ಕರಾ) ಬರೆಯುವಾಗ ಒತ್ತಿಗೆ ಇಟ್ಟುಕೊಳ್ಳುವ ಸಾಧನ; ಅಡಿವೊತ್ತು. [ಅಡಿ$_1$ + ಪತ್ತಳಿ]

**ಅಡಿವಳಿ** 'ಅಡುವಲಿ' ನೋ.

**ಅಡಿವಿಡಿ** (ಕ್ರಿ). ೧. ಕಾಲನ್ನು ಹಿಡಿದುಕೊ: ಜಡಿದು ಝಂಕಿಸಿ ಪೊಡೆಯ ಬಂದಡೆ ಕಾಲುವಿಡಿವಂತೆ ಅಡಿವಿಡಿದು ಪೊಡವಿಗೆ ಕೆಡಹಿ ತಾ ಹಿಡಿದೆಳೆವ (ಸಾಳ್ವಭಾ. ೧೧-೫೪). ೨. ನಮಸ್ಕಾರ ಮಾಡು; ವಂದಿಸು: "ಅಡಿವಿಡಿ ಬಾಗೆಱಗು ಮೊಗ್ಗು ತುಱಿಲ್ಗೆಯ್ಯೆನ್ನಲ್ ಬಿಡದದುವೆ ವಂದನಾರ್ಥದಿ ತೊಡರ್ಗುಂ" (ಕವಿಕಂ. ೧೮೯); ಅಡಿವಿಡಿದೆರಡು ದಂಪತಿಗಳನುಱೆ

ಸಿರಿಮುಡಿವಿಡಿದೆತ್ತಿದ ಬಳಿಕ (ಮೋಹತ. ೪೧-೪೩). ೩. ಬುಡದಿಂದ ಮೊದಲಾಗು : ಅಡಿವಿಡಿದಿಟ್ಟ ಪುತ್ತುಗಳ ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗಳ್ (ಆದಿಪು. ೧೪-೧೪೦). ೪. ಮೂಲವನ್ನು ಹಿಡಿ ; ರಹಸ್ಯವನ್ನು ತಿಳಿ : ಬಿಡೆ ತಿರ್ದಿದ ಶಕುನದ ನಯದಡಿವಿಡಿದು ಪುರೋಹಿತಂ ನೃಪಂಗೀ ನುಡಿಯಂ ನುಡಿದಂ (ಆದಿಪು. ೫-೬). [ಅಡಿ$_1$ + ಪಿಡಿ$_1$]

**ಅಡಿವೊಣರ್** (ನಾ). ಪಾದಗಳ ಜೋಡಿ ; ಪಾದಯುಗ್ಮ : ಚಾರಣ ರಿಷಿಯರಡಿವೊಣರನರ್ಚಿಸಿದ ಪುಣ್ಯದಿಂದಂ (ವಡ್ಡಾರಾ. ೩೮-೧೩).
[ಅಡಿ$_1$ + ಪೊಣರ್$_2$]

**ಅಡಿವೊತ್ತು** (ನಾ). ೧. ಬರೆವಣಿಗೆಯಲ್ಲಿ ಸಂಯುಕ್ತಾಕ್ಷರದ ಕೆಳ ಭಾಗದ ಒತ್ತು. ಉದಾ— "ಅಕ್ಕ" ಶಬ್ದದಲ್ಲಿ '್ಕ'; "ಅಸ್ತ್ರ" ಶಬ್ದದಲ್ಲಿ '್ತ', '್ರ'. ೨. ತಳದಲ್ಲಿ ಇರಿಸುವ ಆಧಾರ: ಬಿಸಿಯಾಗಿರುವ ಇನೆಮಲ್ ಸಾಮಾನುಗಳನ್ನಿರಿಸಲು ಮರದ ಅಡಿಒತ್ತು [ವೊತ್ತು]ಗಳನ್ನು ಉಪಯೋಗಿಸುವುದು ಒಳ್ಳೆಯದು (ಅಡುಸಾ. ೪೬). ೩. ಬರೆಯುವಾಗ ಆಧಾರವಾಗಿ ಇಟ್ಟುಕೊಳ್ಳುವ ರಟ್ಟು, ಹಲಗೆ ಇತ್ಯಾದಿ (ಕರಾ). ೪. ಪಾದರಕ್ಷೆ; ಮೆಟ್ಟು. [ಅಡಿ$_1$ + ಒತ್ತು$_3$]

**ಅಡಿವೋಜೆ** (ನಾ). ಪಾದಪೂಜೆಯ ಮರ್ಯಾದೆಗಾಗಿ ಕೊಡುವ ಕಾಣಿಕೆ (?): ಬೂತಗಾವುಂಡ್ಡಂ ಸಾಸಿರ್ವರ್ಗ್ಗೆ ಎಂಟು ಗದ್ಯಾಣ ಹೊನ್ನನಡಿ[ವೋ]ಜೆಯ ಕೊಟ್ಟ ಗೋಡುವಳ್ಳಿಯ ಬಯಲ ಹ[ಳ್]ಗಿನ ಗರ್ದ್ದೆಯಲ್ಲಿ (ಕಇ. IV, ೩೨-೨೩ ; 1088). [ಅಡಿ$_1$ + ಓಜೆ$_1$]

**ಅಡಿಸಡಿ** 'ಅಡ್ಡಿಸಡ್ಡಿ' ನೋ.

**ಅಡಿಸು** (ಕ್ರಿ). ಅಡಿಗೆಯನ್ನು ಮಾಡಿಸು: ಕೊಲಿಸಿದನರ್ಜ್ಜುನನಿಂ ಕರ್ಣನಂ ಕೃಷ್ಣಂ, ಅಡಿಸಿದಂ ಬಾಣಸಿಗನಿನನ್ನಮನರಸಂ ಇತ್ಯಾದೌ (ಶಬ್ದಾನು. ೫೪೮ ವ್ಯಾಖ್ಯಾ). [ಅಡು$_1$ + -ಇಸು$_3$]

**ಅಡಿಸ್ಥಳ** (ನಾ). (ಕರಾ) ಕಟ್ಟಡದ ನಿವೇಶನ (ಕಿಸಂಗ್ಲಾ. ೮೦).

ಅಡಿಸ್ಥಳದ ಬಾಡಿಗೆ = ಮತ್ತೊಬ್ಬರ ನಿವೇಶನವನ್ನು ಉಪಯೋಗಿಸಿಕೊಳ್ಳುವುದಕ್ಕಾಗಿ ಕೊಡುವ ಬಾಡಿಗೆ. [ಅಡಿ$_1$ + ಸ್ಥಳ]

**ಅಡಿಹತ್ತು$_1$** (ಕ್ರಿ). (ಬೇಯಿಸುವಾಗ ಅನ್ನ ಮೊದಲಾದದ್ದು) ತಳ ಹತ್ತು, —ತಳವನ್ನು ಸುಡು (ದಕ. ಕ).
[ಅಡಿ$_1$ + ಹತ್ತು$_2$ (< ಪೊತ್ತು$_1$)]

**ಅಡಿಹತ್ತು$_2$** (ಕ್ರಿ). ತಳಕ್ಕೆ ಅಂಟಿಕೊ (ದಕ. ಕ).
[ಅಡಿ$_1$ + ಹತ್ತು$_1$ (< ಪತ್ತು$_1$)]

**ಅಡಿಹುಡಿ** (ನಾ). ಪಾದಧೂಳಿ : ಶುಭಮುಹೂರ್ತದಲ್ಲಿ ಅಚಲೆ ಆಟ್ಟ ಇಳಿದಳು ; ರಾಮುಬಾಬುಗಳ ಅಡಿಹುಡಿ ಮುಡಿದಳು (ಅರಗಿ. ೨೩೩). 'ಅಡಿರಜ' ಪರಾ. [ಅಡಿ$_1$ + ಹುಡಿ (< ಪುಡಿ)]

**ಅಡಿಹೊಟ್ಟೆ** (ನಾ). ನಾಭಿಯಿಂದ ಕೆಳಕ್ಕಿರುವ ಹೊಟ್ಟೆಯ ಭಾಗ ; ಕೆಳಹೊಟ್ಟೆ ; ಕಿಬ್ಬೊಟ್ಟೆ (ದಕ. ಕ). [ಅಡಿ$_1$+ ಹೊಟ್ಟೆ (< ಪೊಟ್ಟೆ)]

**ಅಡೀಚು** (ನಾ). (ಉಕ) "ಎರಡೂವರೆ" (ಜಾನಕೋ. ೧೦; ರಮಾಕಾಂ).
[← ಮರಾ. ಅಡೀಚ್]

**ಅಡೀಸೇರು** (ನಾ). ಎರಡೂವರೆ ಸೇರು ; ೬೦ ತೊಲದ ತೂಕ : ಅಡೀಸೇರು ಬೆಣ್ಣೆಗೆ ಐದುರೂಪಾಯಿ ಕೊಟ್ಟುತರಬೇಕಾಗಿ ಬಂದಿದೆಯಲ್ಲ! (ರೂಢಿ). [← ? ಮರಾ. ಅಡೀಚ್ + ಶೇರ್]

**ಅಡು$_1$** (ಕ್ರಿ). ೧. ಬೇಯಿಸು ; ಅಡಿಗೆ ಮಾಡು ; ಪಾಕಮಾಡು :"ಅಡು- ಪಚನೇ" (ಶಮುಧಾ) ; ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನಮಾನಟ್ಟು ಬಡ್ಡಿಸು (ಕವಿರಾ. ೨-೧೪೫) ; ನಮ್ಮಯ ಭಕ್ಷದೊಳಡು ಪಣ್ಣಡು ಪೋಗು ನೀನುಮಾನುಂ ತಿಂಬಂ (ಪಂಪಭಾ. ೩-೧೨) ; ಸುರಿಗಿಯಿಲ್ಲದೆ ಕಳನೇಱುವೆ ನೆಂಬಂತೆ ಮಡಕೆಯಿಲ್ಲದಡುವೆನೆಂಬಂತೆ (ಧರ್ಮಾಮೃ. ೪-೫೦); ಅಕ್ಕಿಯಂ ಕರಂ ಭಾವಿಸೆ ಸೇರೆಗೊಂಡಡುವ ದೋಲಿಗರಿಂದೆಸೆದಂ ವಣಿಗ್ವರಂ (ದಶಕು. ೪-೭೮) ; ದಿಟ್ಟನಹೆ ಬಾಣಸಿಗ ಸವಿಯೊಳಗಟ್ಟ ಕೂಳನು ತಿಂದು (ಕುವ್ಯಾವಿ. ೪-೬೪) ; "ಒಳ್ಳೆಯದು ನೀನೇ ಅಡು. ನಡೆ, ಎಲ್ಲಿ ಏನಿದೆ ತೋರಿಸುತ್ತೇನೆ" (ಅರಗಿ. ೮೯) ; ಅಟ್ಟ ಮೇಲೆ ಒಲೆ ಉರಿಯಿತು, ಕೆಟ್ಟಮೇಲೆ ಬುದ್ಧಿ ಬಂತು (ಗಾದೆ) ; ಅಟ್ಟರೂ ಶಿವ ಕೊಟ್ಟಲ್ಲದೆ ಇಲ್ಲ (ಗಾದೆ). ೨. ಬೇಯಿ ; ಕುದಿ : ಅಡುವಂತಾದಪು[ದೀಗಳಿ]ನ್ನವಯವಂಗಳ್ (ಕಾದಂಪೂ. ೮೫೩). **ಅಟ್ಟ$_3$** (ಭೂತಕೃ) ; **ಅಟ್ಟು** (ಭೂತನ್ಯೂ).

**ಅಟ್ಟಿಕ್ಕು**= ಅಡಿಗೆ ಮಾಡಿ ಇಡು, —ಬಡಿಸು : ಸಿರಿಯಾಳನೀಶಂಗೆ ಮಗನನಟ್ಟಿಕ್ಕೆಯಾ ಪರಿಯೊಳೇ ಮನುಚೋಳನುಂ ಮಗನನಟ್ಟಿಕ್ಕಿ ಹರುಷದೆ (ಚೆಬಪು. ೫೫-೪೧) ; ಅಟ್ಟಿಕ್ಕುವವನಿಗೆ ಹೆಂಡತಿ ಆಗಬೇಡ, ಮೊಟ್ಟೆ ಹೊರುವವನಿಗೆ ಆಳಾಗಬೇಡ (ಗಾದೆ). **ಅಟ್ಟೇಱಿಸು** =ಪಾಕಮಾಡಿ ಸಿದ್ಧಪಡಿಸು ; ಬೇಯಿಸಿ ಇಡು : ಕಟ್ಟಿದ ಕುಱಿಗಳ್ ಬೋನದೊಳಟ್ಟೇಱಿಸಿ ಬಯ್ತ ಬಾಡುಗಳ್ . . . ಅಂತಕಂಗೆ ಜನಂಗಳ್ (ಅಜಿಪು. ೧೦-೨೬).

[ದೇ. ‖ ತಮಿ. ಅಡು ; ಮಲ. ಅಟುಕ ; ತುಳು. ಅಡುಪಿನಿ ; ಗೊಂಡಿ. ಅಟ್ಟಾನಾ, ಅಟನ, ಅಟಾನಾ ; ಕುಇ. ಅಡ]

**ಅಡು$_2$** 'ಅಡುವು$_1$' ನೋ.

**ಅಡುಂಕು** 'ಅಡುಕು' ನೋ.

**ಅಡುಂಕುವೆಣ** (ನಾ). ಒಂದರಮೇಲೊಂದು ಪೇರಿಸಿದ ಹೆಣ ; ರಾಶಿ ಹಾಕಿದ ಹೆಣ: ತವಿಸುವುದಾಯಿಸಮಿದಜುಳ್ಳುವದಾಡೆಯಡುಂಕುವೆಣನ ನೀಕ್ಷಿಸಿದರ ಕಣ್ಣೆವೆಯಿಕ್ಕದ ಮುನ್ನೆನಲ್ (ಶಬ್ದಾನು. ೫೪೩ ಪ್ರಯೋ).
[ಅಡುಂಕು (< ಅಡುಕು) + ಪೆಣ]

**ಅಡುಂಬು** (ನಾ). ಒಂದು ಜಾತಿಯ ಗಿಡ ಅಥವಾ ಬಳ್ಳಿ: ಮೇಲಯೇರಿ ತಟುಂದಾಟಿ [ತ]ಟುದಾಟಿ ಅಡುಮ್ಬು ಅಡು[ಂ]ಬಿನಿನ್ದಂ ವಾಯವ್ಯ[ದ] ಕೋಣ (ಎಇ. X, ೬೭-೭೮ ; 897).

[ದೇ. ‖ ತಮಿ. ಅಡಮ್ಬು, ಅಡುಮ್ಬು ; ಮಲ. ಅಟಮ್ಬು ; ತುಳು. ಅಡುಂಬು]

**ಅಡುಕೆಲ್** 'ಅಡಕಿಲ್' ನೋ.

**ಅಡುಕೆಳ** (ನಾ). ಅಡಿಗೆ ಮಾಡುವ ಸ್ಥಳ ; ಅಡಿಗೆಯ ಮನೆ : ನೀಂ ದರ್ವೀಕರನಪ್ಪೊಡೀ ಕಳನೊಳೇನಡುಕಳದೊಳಡುವಳನಕ್ಕುಂ(ರಾಮಾಶ್ವ. ೧೪೪-೨೯). [ಅಡು$_1$ + ಕಳ$_3$. / ತಮಿ. ಅಡುಕ್ಕಳೈ]

**ಅಡುಕು**, ಅಡಕು$_1$, ಅಡಿಕು, ಅಡುಂಕು (ಕ್ರಿ). ೧. ಬೇರೆ ಕಡೆಗೆ ಒಯ್ಯಿ ; ಒಂದು ಕಡೆಯಿಂದ ಇನ್ನೊಂದು ಕಡೆಗೆ ತಂದಿಡು ; ಸಾಗಿಸು : "ಅಡುಕು-ಸ್ಥಾನಾಂತರ ಪ್ರಣೀತೇ" (ಶಮುಧಾ) ; ನಾನಾವಿಧ ಧಾನ್ಯಂಗಳಂ ಪದನಱಿದುಡುಗುವ ಕಣಂಮಾಡುವೊಕ್ಕುವಡುಕುವ ಬಯ್ತಿಡುವಕ್ಕಿಮಾಡುವ (ಆದಿಪು. ೬-೭೭ ವ) ; ಆನೆಯುಮುಗುರ್ವುಗಿಡುಗುಮುದಾನಂ ಸಾಹಣಕೆ ಪುಲ್ಲನಡುಕುಗುಂ (ಶಾಂತಿಪು.೨-೩೩); ಉಲಾಯಮಾಗಿ ಜನಿಸಿರ್ದೋರಂದದಿಂದುರ್ವುವೇಱಿನೆ ಪೊತ್ತಿಂತಡುಕುತ್ತುಮಿರ್ದುದೆನೆ (ಶಾಂತೀಶ್ವ. ೫-೬೫) ; ಒಳಗಣಿಂ ತಂದುತಂದಿಡುತಿರ್ದರರಸಗೆ ಬೆಳಗ ಹೊತ್ತಡುಕುವಂದದೊಳು (ಭರಚ. ೪-೬೦). **ಅಡಕು$_1$** : ೧. ಕೋಣನಾಗಿ ಪುಟ್ಟ ತತ್ಪುರದ ಪರದರ ಮನೆಯೊಳುಪ್ಪನಡಕಿ ಬಡವಾಗಿ ತನ್ನಾಳ್ದನೊಳಪ್ಪ ವೈರಂ ಕಾರಣಮಾಗಿ ಸತ್ತು (ಚಾವುಂಪು. ೫೪-೨೩) ; ನಿನ್ನ ಮಡದಿಗಿರಲೆಂದರೆ ಮಡದಿಯ ಕೃತಕ ಬೇಱಿ ; ನಿನ್ನೊಡಲು ಕೆಡೆಯಲು ಮತ್ತೊಬ್ಬನಲ್ಲಿಗಡಕದೆ ಮಾಣ್ಬಳೆ ? (ಬಸವ. ೨೦೧) ; ಮೇದಿನೀಪ್ರಭುಗಳ ಸಭೆಗೆ ಲೀಲೆಯಿನೋಲೆಗಳನಡಕಿ [ಪಾಠಾಂ. ಲೆಯನಡಿಕಿ] ಸಂಬಳಂಬಡೆದು (ವರ್ಧಪು. ೩-೧೨ ವ) ; ಸರ್ವವಿತ್ತವನಡಕಿತನಿಲಜನಾಳು (ಕುವ್ಯಾಸ. ೪-೨). ೨. ಒಂದರಮೇಲೊಂದನ್ನು ಪೇರಿಸು ; ರಾಶಿ

ಹಾಕು; ತುಂಬು: ಆ ಸಭೆಯೊಳ್ ಹರಿ ಕರವಿನ್ಯಾಸಂಗಳ್ ನುಡಿಯ ನಡಕುವಂತಿರೆ ನುಡಿದಂ (ಪಂಪಭಾ. ೯-೩೪); ಹೊನ್ನನಡಕಲು ಹೋದ ನತ್ತಲು (ಹ ಚ ಕಾ. ೧೧-೨೯); ಸಾಗುದುರೆಗೆ ಪುಲ್ಲನಡಕಿ ಕೆಡುವನೆ ಚದುರಂ (ಯಶೋಚ. ೩-೧೫); ತಂದಡಕುತಿರ್ದರು ಸಕಲಸಾಧನವ (ಪ್ರಭುಲೀ. ೨೩-೩೧). **ಅಡಿಕು**: ೧. ಮಱಿಗಾಲಮುಂಟೆಂದು ತಪ್ಪಿದ ಜೋಯಿಸಂ ಬಾವಿಯ ನೀರನಡಿ[ಡು?]ಕಿ ನೀರ್ವೊಯ್ದನೆಂಬ ಕಥೆಯಂತೆ (ಪಂಚತಂ. ೧೨೭-೩). **ಅಡುಂಕು**: ೨. 'ಅಡುಂಕುವೆಣ' ಪರಾ.

ಅಡಕಿಕೊ = ಸಂಗ್ರಹಿಸಿ ತುಂಬಿಕೊ, —ಒಟ್ಟಿಕೊ: ಮೂವತ್ತಿರ್ಕೋಟಿಯನಂತಾವಗಮನುದಿನದಿನಡಕಿಕೊಂಡುಂ ಮತ್ತಾ ಕಾವಲೆಯುದು ನೆಱೆಯದೆ ದುರ್ಭಾವೆ ಕರಂ ಬೇಡಿಯುಟ್ಟಿದಳ್ ಮಱುದೆವಸಂ (ನೇಮಿಪು. ೪-೫೮); ಮಾಯಾಮೋಹನಂಗಳಲಿ ತೊಡಚಿಕೊಂಬ ಸಮಸ್ತ ವಸ್ತುವನಡಕಿಕೊಂಬ ವಿದಗ್ಧಮುಗ್ಧೆಯರುಡಿಗೆಗಳ ತೊಡಿಗೆಗಳಲೆಸೆದರು (ತೊರರಾ. ೧-೫-೩೦).

[**ದೇ.** ‖ **ತಮಿ.** ಅಡುಕ್ಕು; **ಮಲ.** ಅಟಕ್ಕುಕ; **ತುಳು.** ಅಡಕ್ಕು; **ಕೊಡ.** ಅಡಂಗ್; **ತೆಲು.** ಅಡುಕು]

**ಅಡುಕುಂಗಲ್** (ನಾ). ಒಂದರಮೇಲೊಂದನ್ನು ಪೇರಿಸಿರುವ ಕಲ್ಲಿನ ರಾಶಿ: ದಕ್ಷಿಣಂ ನೋಡಿ . . . ಕಗ್ಗಲ್ಲ ಮೊಱಡಿಎ(ಯೆ) ಅಡುಕುಂಗಲ್ಲೆ ಒಱೆಕೋಡಿನ ಕೊಮರಮಂಗಲದ ಉಗುರೆವಾಡಿಯ ತ್ರಿಸನ್ಧಿ (ಇಆ. VIII, ೨೧೩-೨೩; 950 ?). [ಅಡುಕು + ಕಲ್$_2$]

**ಅಡುಕುಂಗಾಲ್** (ನಾ). ಒಂದರಮೇಲೊಂದು ಅಡ್ಡಲಾಗಿ ಇರಿಸಿದ ಕಾಲು: ಮುರಿದ ಮುಖದ ಮೆಯ್ಯುಮ್ಮಟ್ಟೆದ ಚುಬುಕದ ತಿರಿದ ತಳೋದರದಡುಕುಂಗಾಲ್ಗಳ . . . ಕನ್ಯಾಜನವೊಪ್ಪಿದುದರಲಸರಂ ಚಿತ್ರಿಸಿದ ತ್ರಿಭಂಗಿಯ ತೆಱನಾಗಿ (ಜಯಕಾ. ೧೧-೫೫). [ಅಡುಕು + ಕಾಲ್$_1$]

**ಅಡುಕುಳಿ** (ನಾ). ಅಡಿಗೆ ಮಾಡುವುದೇ ಶೀಲವಾಗಿ ಉಳ್ಳವನು; ಅಡಿಗೆಯ ಕೆಲಸದವನು: "ಅಡುಕುಳಿ, ಪಚನಶೀಲಃ" (ಶಬ್ದಾನು. ೫೪೫ ವ್ಯಾಖ್ಯಾ). [ಅಡು$_1$ + -ಕುಳಿ$_3$]

**ಅಡುಗಟ್ಟಿಗೆ** (ನಾ). ಅಡಿಗೆಗಾಗಿ ಉಪಯೋಗಿಸುವ ಸೌದೆ; ಉರುವಲು: ಹಿಡಿದುಗ್ಗದ ನೀರ ಮಡಕೆ ಮಯ್ಯಡಕೆ ಮಂಡೆಯ ಮೋಗಣಡುಗಟ್ಟಿಗೆ ಚಿರದಕ್ಷಿ ಹೆಡತಲೆಯೊಳು ಜೋಲುತಿರಲುಸ್ಸೆನುತ ನಡೆತಂದರಲ್ಲಿ ಕೆಲಬರು (ಶ್ರೀಪಾಲ. ೧೩-೧೦೩). [ಅಡು$_1$ + ಕಟ್ಟಿಗೆ]

**ಅಡುಗಬು** 'ಅಡುಗರ್ಬು' ನೋ.

**ಅಡುಗಬ್ಬು** 'ಅಡುಗರ್ಬು' ನೋ.

**ಅಡುಗರಿ** (ನಾ). ಅಡಿಗೆಗಾಗಿ ಉರಿಸುವ ಕರಿ, —ಇದ್ದಲು: ಅಡುಗಬು ಅಡುಗರಿ ಅಡುಗರಿಸುವ ಕೂಲಿ ಸಹ ಗ ೧೨ (ಸೌಇಇ. IX-ii, ೬೫೩-೫; 1554). [ಅಡು$_1$ + ಕರಿ$_2$]

**ಅಡುಗರಿಸು** (ಕ್ರಿ). ಇದ್ದಲನ್ನು ಮಾಡು. 'ಅಡುಗರಿ' ಎಂಬುದರ ಪ್ರಯೋಗವನ್ನು ನೋಡಿ. [ಅಡುಗರಿ + -ಇಸು$_3$]

**ಅಡುಗರ್ಬು**, ಅಡುಗಬು, ಅಡುಗಬ್ಬು (ನಾ). ಸೌದೆ; ಕಟ್ಟಿಗೆ; ಉರುವಲು: ಸೂರ್ಯನೆಂಬಗ್ನಿಯಿಂ ಪಗಲಿರುಳೆಂಬ ಅಡುಗರ್ಬುಗಳಿಂ ಮಾಸ ಋತುಗಳೆಂಬ ಸಟ್ಟುಗದಿಂ (ಪಂಚತಂ. ೬೫-೫); ಅಡಕೆ ೨೫ ಎಲೆ ೫೦ ಅಡುಗರ್ಬು ತಿಂಗಳಿಂಗೆ ಬಣ್ಣಿ೧ (ಸೌಇಇ. IX-i, ೨೫೮-೨೭; 1153); ಕತಿಪಯದಿನಂಗಳಂ ಕಳಿಯೆ ಕಾವುತ್ತಿರಲೊಡನಡುಗರ್ಬುಗಳಂ ಸಮೆಯೆ (ವೃಷವಿ. ೧೦-೧೩ ವ). **ಅಡುಗಬು**: ಕಾ ಗ ೯೨ ಅಡುಗಬಿಗೆ ಕಾಟ ೯೨ (ಬೊಂಕಶಾ. ೧೯೪೦, ಕುಮುಟ. ೧೧೩-೩೮; 1475); 'ಅಡುಗರಿ' ಎಂಬುದರ ಪ್ರಯೋಗವನ್ನು ನೋಡಿ. **ಅಡುಗಬ್ಬು**: "ಇಂಧನಂ ಹುತವಹಾಹಾರ ಮೇಧಸ್ಸಮಿಧೆ ಕಾಷ್ಠವಡುಗಬ್ಬುಕ್ಕು" (ಮಂಗರಾ. ೧೫-೯); "ಇಂಧನೇನ – ಅಡುಗಬ್ಬುಗಳಿಂದಂ" (ಪ್ರಕಟೀ. ೨೭-೬); ನಡೆದಲ್ಲಲ್ಲಿ ಹೋಗಿ ಹಲವಂದದಡುಗಬ್ಬನಾಯ್ದೊಟ್ಟೆ ಹೊಱೆಗಟ್ಟಿ (ಹಚಕಾ. ೧೨-೭); ಆ ಸಮಯದೊಳೊರ್ವ ನಾಲ್ಕೆರ್ತಿನೊಳು ಪೂಡಿದಡುಗಬ್ಬಿನ ಭಂಡಿಯಂ ಕಂಡು ಮನಂಗೊಂಡು (ಪುಣ್ಯಾಸ್ರ. ೧೨-೧೪ ವ); ತಬ್ಬಿ ತಂದಡುಗಬ್ಬುಗಳಿಗುರಿಹಬ್ಬಿಸುತ (ಬಸಪು. ೧೬-೨೦); ಪಾತಾಳವೊಲೆ ಶೇಷನಡುಗಬ್ಬು ತಲೆರನ್ನವೇ ತುದಿಯ ಕೆಂಡವವನಿಯೆ ಮಡಕೆ (ಚೇರಮ. ೭-೩೨). [ಅಡು$_1$ + ಕರ್ಬು (< ಕರ್ವು)]

**ಅಡುಗಲ** (ನಾ). ಅಡಿಗೆ ಮಾಡುವ ಪಾತ್ರೆ; ಅಡಿಗೆಯ ಪಾತ್ರೆ. (ಸ್ಯಾಂಡರ್). [ಅಡು$_1$+ ಕಲ. / **ತಮಿ.** ಅಡುಗಲನ್]

**ಅಡುಗಾಯಿ** (ನಾ). "ಬಿಸಿಮಾಡಿದ ಉಪ್ಪಿನಕಾಯಿ" (ಕಸ್ತೂಕೋ). [ಅಡು$_1$ + ಕಾಯಿ (< ಕಾಯ್$_3$)]

**ಅಡುಗಿಗ** (ನಾ). ಅಡಿಗೆಯ ಕೆಲಸದವನು; ಬಾಣಸಿಗ: ಅಡುಗುಳಿಗಂ, ಅಡುಗಿಗಂ (ಶಬ್ದಾನು. ೪೧೦ ಪ್ರಯೋ). [ಅಡುಗೆ + -ಇಗ]

**ಅಡುಗು$_1$** (ಕ್ರಿ). ಸೇರು; ಒಂದಾಗು; ಕೂಡು: ಜೀವಂ ಮಲ್ಲಿನಾಥನೆಡೆಗೆ ಹಿಂಡುಗೊಂಡಡು[ಪಾಠಾಂ. ಡೊದ]ಗುತಿರೆ (ಸಿದ್ಧರಾ. ೬-೨೮). [~ ಅಡುಕು]

**ಅಡುಗು$_2$** (ನಾ). (?): ನಯಿವೇದ್ಯಕೆ ಪೂಜೆ ಗ ೧ ಕಂ ಅಕ್ಕಿ ಹೆಸರು ಚ ಗ ೩ ಮೇಲೋಗರ ಉಪು ಮೆಣಸು ತುಪ ಮೊಸರು ಬೆಲ್ಲ ಬಾಳೆಹಂನು ಸಹ ಚ ಗ ೧ ತೆಂಗಿನಕಾಯಿ ಚ ಗ ೧ ಅಡುಗು ಚ ಗ ‖೩‖ (ಸೌಇಇ. IX-ii, ೬೫೩-೬; 1554). [?]

**ಅಡುಗುಲಜ್ಜಿ** 'ಅಡುಗೂಲಜ್ಜಿ' ನೋ.

**ಅಡುಗುಳಿಗ**, ಅಡಿಗುಳಿಗ (ನಾ). = ಅಡುಗಿಗ: ಅಡುಗುಳಿಗಂ, ಅಡುಗಿಗಂ (ಶಬ್ದಾನು. ೪೧೦ ಪ್ರಯೋ). **ಅಡಿಗುಳಿಗ**: ಅಡಿಗುಳಿಗನು, ಅಡಿಗೆಯವನು (ಹೊನುಗ. ೯೦). [ಅಡುಗೆ + -ಉಳಿಗ$_3$]

**ಅಡುಗೂರ್** (ನಾ). "ಬೇಯಿಸುವ ಅನ್ನ" (ಪ್ರಭಣ್ಣ). [ಅಡು$_1$ + ಕೂರ್$_3$ (< ಕೂೞ್)]

**ಅಡುಗೂಲಜ್ಜಿ**, ಅಡುಗುಲಜ್ಜಿ, ಅಡುಗೂಳಜ್ಜಿ, ಅಡುಗೋಲಜ್ಜಿ, (ನಾ). (ಹಿಂದಿನ ಕಾಲದಲ್ಲಿ ಹಣ ತೆಗೆದುಕೊಂಡು ಆಗಂತುಕರಿಗೂ ಪ್ರವಾಸಿಗಳಿಗೂ) ಅಡಿಗೆ ಮಾಡಿ ಹಾಕುತ್ತಿದ್ದ ಮುದುಕಿ: ಇದರ ಮಾತನಡುಗೂಲಜ್ಜಿಗಳು ಹರಡಿದರೆಲ್ಲೆಡೆ ಜಾತ್ರೆ ನೆರೆಯಿತು (ಗಣೇಶ. ೬೦-೨೨). **ಅಡುಗುಲಜ್ಜಿ**: ಮಾರು ಮಾರಿಗೆ ನಿಂತು ಮಾರುತ ಲಜ್ಜೆಯಂ ಪೆಸರಿಲ್ಲದ ಅಡುಗುಲಜ್ಜಿಯರು ಕೆಲಂಬರು (ಸೌಗಂಧಿ. ೧೩೭-೮). **ಅಡುಗೂಳಜ್ಜಿ**: ಕಂಡವರ್ಗೆಲ್ಲ ಬರ್ಪ ಬೇಡರ್ಗೆಲ್ಲಮುಣಿಸಿತ್ತು ಬೀಡಿತ್ತು ಮೆಲ್ಪಾಸನೀಯೆ ನಾನೇನು ಅಡುಗೂಳಜ್ಜಿ ಅಲ್ಲ ಕಾಣಯ್ಯ (ಶ್ರೀರಾಮಾ. ೨೬೯-೧೭೯). **ಅಡುಗೋಲಜ್ಜಿ** (ಉಕ. ಕಿ).

**ಅಡುಗೂಲಜ್ಜಿಯ ಕಥೆ** = ಹಿಂದಿನ ಕಾಲಕ್ಕೆ ಸಂಬಂಧಿಸಿದ ಕಥೆ; ಪ್ರಯೋಜನಕ್ಕೆ ಬಾರದ ವಿಷಯ: ಇವೆಲ್ಲ ಅಡುಗೂಲಜ್ಜಿಯ ಕಥೆಗಳೆಂದಮೇಲೆ ಯಾರು ನಂಬುತ್ತಾರೆ (ರೂಢಿ). [ಅಡು$_1$ + ಕೂಲಿ + ಅಜ್ಜಿ]

**ಅಡುಗೂಲಿ$_1$** (ನಾ). = ಅಡುಗೂಲಜ್ಜಿ: ಪುಣ್ಯ ಸಂಗಡಿಸೆ ಜಾತ್ರೆಯ ನೋಡುವಂತೆ ಆಡುಗೂಲಿ ಮನೆಯಲ್ಲಿ ಮಿಂದುಂಬನಂತೆ ಬೇರ್ಪಡೆ ನೋಡಿ ಭೋಗಿಸುತಿರ್ದ (ಭರಚ. ೭೫-೫೪). [ಅಡು$_1$ + ಕೂಲಿ]

**ಅಡುಗೂಲಿ$_2$** (ನಾ). (ದಕ – ಪ್ರಾದೇ) ಹಿಂದಿನ ಕಾಲದಲ್ಲಿ ಊಟವನ್ನು, ಇತ್ತೀಚೆಗೆ ದವಸಧಾನ್ಯವನ್ನು, ಕೂಲಿಗೆ ಪ್ರತಿಯಾಗಿ ಪಡೆಯುವ ಆಳು. [ಅಡು$_1$ ? + ಕೂಲಿ]

**ಅಡುಗೂಲಿಕಾಱ** (ನಾ). = ಅಡುಗೂಲಿ$_2$ (?): ಒಡೆಯರು ಭಕ್ತರಲ್ಲಿ ಕೃಷಿಯಿಲ್ಲದೆ ಬೇಡಿ ತಂದು ತನ್ನ ಮಡದಿ ಮಕ್ಕಳ ಹೊರೆದು ಮಿಕ್ಕಿದುದ

ಒಡೆಯರಿಗಿಕ್ಕಿಹೆನೆಂಬ ಅಡುಗೂಲಿಕಾಜನ ಗಂಜಿಗುಡಿಹಿಯ ಭಕ್ತಿ ತನ್ನ ಸಂಸಾರದ ಅಡಿಯೊಳಗೆ ಅಡಗಿತ್ತು (ಏಲೇಶ್ವ. ೧೫೬).

[ಅಡುಗೂಲ್ಲಿ₂ ? + -ಕಾಜ]

**ಅಡುಗೂಳ್** 'ಅಡುಗೂೞ್' ನೋ.

**ಅಡುಗೂಳಜ್ಜಿ** 'ಅಡುಗೂಲಜ್ಜಿ' ನೋ.

**ಅಡುಗೂೞ್**, ಅಡುಗೂಳ್ (ನಾ). ಅನ್ನ; ಬೇಯಿಸಿ ಸಿದ್ಧಪಡಿಸಿದ ಆಹಾರ: ಸುಡುಗಾಡಿಡುಗಿಜ್ಜಡುಗೂೞುಡುಗೊಡಿಯುಂ (ಶಮುದ. ೧೬೧). **ಅಡುಗೂಳ್**: ಅಡುಗೂಳವರ್ ದೋಸೆ ಕಜ್ಜಾಯ ರೊಟ್ಟಿ ಹೊಯಿಗಡುಬತಿರಸಂಗಳುಪ್ಪಿನಕಾಯಿ . . . ಮಾಜುವರ್ ಬರುತಿರ್ದರು (ಚಿಬಪು. ४೭-४೨). [ಅಡು₁ + ಕೂೞ್]

**ಅಡುಗೆ**, ಅಡಿಗೆ, ಅಟ್ಟಿಗೆ (ನಾ). ೧. ಬೇಯಿಸುವುದು; ಪಾಕಕ್ರಿಯೆ: ಕಿಚ್ಚಿಲ್ಲದಡುಗೆಯುಂ ನಚ್ಚಿಲ್ಲದ ಪೆಂಡತಿಯುಂ (ಧರ್ಮಾಮೃ. ೧-೭೫); ನಾ ನಿಮ್ಮನಜಿಯದೆ ಮೂಢಮತಿಯವಿವೇಕಿ ತುರಗವ ಹೂಡಿದಾಗಲೆ ರಥಕೆಯಡಿಗೆಯೊಳಜಿದೆನೇ ತಾನು (ನಳಚ. ೯-೫). ೨. ಬೇಯಿಸಿ ಸಿದ್ಧಪಡಿಸಿದ ಊಟದ ಪದಾರ್ಥ; ಬಗೆಬಗೆಯ ಆಹಾರ; ಪಾಕ: "ಅಡುಗೆಯೊಳಗೆಯುಂ ಷೈಷ್ಟಿಕ ಭಕ್ತಂ" (ವಸ್ತುಕೋ. ೯४-೧೨); ಎನ್ನಟ್ಟಡುಗೆಯನುಂಡೊಡೆ ಬಿನ್ನಣಮೇನರಸ ಸರೆಗಳಾಗವು (ಪಂಪಭಾ. ೮-೫४); ಸತ್ರದಡುಗೆಯ ಸವಿಧಿಗೆ ಮೊದಲ್ಗೊಟ್ಟ ಗದಾಣ್ಯಮೆರಡು (ಸೌಇಇ. XI-i, ೯೨-೩೫; 1054); ತುೞಿಕಲಡುಗೆಗಳೊಳೇಂ ಪೞಗೞವೆಯ ಕೊೞ್ ತಿವುಡುಗಳೆದ ತೊವರಿಯ ತೊವೆ ಕಾಯ್ದುೞಿಪಿದ ತುಪ್ಪಂ ಕೋಡುವ ಕಟಿಲಲ್ಲದೆ ದಿವ್ಯಭೋಜನಂ ಪೆಜತುಂಟೆ (ಕಾವ್ಯಾವ. ೨४೧); ಅವರ ಕಾಲದೊಂದು ಮೆಟ್ಟಂ ಶತಚೂರ್ಣಂ ಮಾಡಿ ಬಾಯ್ಗೆ ರುಚಿಯಪ್ಪಡುಗೆಗಳೊಳ್ ಕಲಸಿ ಉಣಲಿಕ್ಕಲ್ (ಪುಣ್ಯಾಸ್ರ. ೭-४೨ ವ). **ಅಡಿಗೆ**: ೧. ಎಳೆವದದ ಹಲಸಿನಕಾಯನೊಡವೆರಸಿ . . . ಕಡುಗಂಪಿತಾದ ತುಪ್ಪದೊಳು ಕೆಂಪಾಗುವಂತಡಿಗೆಯುಂ ಮಾಡಿ (ಸೂಪಶಾ. ೫-೫೨); ಇನ್ನೂ ಅಡಿಗೆ ಆಗಿಲ್ಲ; ಆಗಲೆ ಊಟಕ್ಕೆ ತಟ್ಟೆ ಹಾಕಿಕೊಂಡಿದ್ದಾನೆ (ರೂಢಿ). ೨. ಪಸಿದೆನೆಂದಾಗಳಡಿಗೆಯುಂ ಮಾಡಿ ಉಣಲಿಕ್ಕೆಂದು ಎನ್ನ ಪೆಂಡತಿಗೆ ಪೇೞ್ದು (ಧರ್ಮಪ. ೯-೩೩ ವ); ತನಗೆ ಅಡಿಗೆ ಮಾಡೆಂದವಂ ಶುನಕನಡಗಂ ತಿಂದ ಪಾತಕನುಮಂತವಂ (ದೀಕ್ಷಾಬೋ. ೯೩-೨೦); ಮತ್ತೆ ಕೆಲವು ಅಡಿಗೆಗಳನಳವಡಿಸಿ (ಪುಣ್ಯಾಸ್ರ. ೩-೩೮ ವ); ಅಟ್ಟ ಅಡಿಗೆ [ಪಾಠಾಂ. ಅಡುಗೆ] ಉಣಲು ಬಿಡನು ಕೊಟ್ಟ ಸಾಲ ಕೇಳ ಬಿಡನು (ಪುರಂದ. ೨-೫೧-೨); ಈ ಹೊತ್ತು ನಿಮ್ಮ ಮನೆಯಲ್ಲಿ ಏನು ಅಡಿಗೆ ಮಾಡಿದ್ದರು? (ರೂಢಿ). ೩. (ಆಲೆಯ ಮನೆಯ ಬೆಲ್ಲದ ವಿಷಯದಲ್ಲಿ) ಒಂದು ಸಲ ಕಾಯಿಸಿ ಸಿದ್ಧಪಡಿಸಿದಷ್ಟು ಪರಿಮಾಣ: ಆರು ಹೇರು ಅಡಕೆ ಒಂದಡಿಗೆ ಬೆಲ್ಲ . . . ನೂರು ಕಾಯಿತ್ತರು (ನಾಪದ. ೧೯೪-೧೦); ಇವತ್ತು ನಾಲ್ಕಡಿಗೆ ಬೆಲ್ಲ ಆಯಿತು (ರೂಢಿ). **ಅಟ್ಟಿಗೆ**: ೧. ಅಟ್ಟಿಗದ ಬಿಲ್ವಡೆ ಮಾಣದೆ ತಟ್ಟಿಗದ ರಥಮೆಯ್ದೆ ಬಗಿದ ಪುಣ್ಗಳ ಪೋೞಿಯಿಂ ಮೊಟ್ಟಿಗದ ಕರಿಘಟೆ ಜವನನಡುವಟ್ಟಿಗೆಯನನುಕರಿಸೆ ವೀರಭಟ ರಣರಂಗಂ (ಪಂಪಭಾ. ೧೧-೬४).

**ಅಡಿಗೆಯ ಬಾಳು** = ದೇವರ ನೈವೇದ್ಯಕ್ಕಾಗಿ ಕೊಟ್ಟ ಭೂಮಿ: ಆ ಚಕ್ಕರೆಯ ಊರ × ಮೂ × × × ಪೊಕ್ಕಲು ತಾಲು ಬಿಟ್ಟ ಅಡಿಗೆಯ ಬಾಳಿನ × × × ಶಿವರಾತ್ರಿಗೆ ದೇವರಿಗೆ ರಂಗಪೂ × × × (ಸೌಇಇ. IX-ii, ४೦೭-೧४; 1364). **ಅಡಿಗೆಯ ಬ್ರಾಹ್ಮಣ, ಅಡಿಗೆಯ ಭಟ್ಟ** = ಅಡಿಗೆ ಕೆಲಸ ಮಾಡುವ ಬ್ರಾಹ್ಮಣ: ಹೊಜಗೂಲಿಗೆ ಅಡಿಗೆಯ ಬ್ರಾಹ್ಮಣಗೆ (ಸೌಇಎ. ೧೯೩೨, ಉಡುಪಿ. ೨೬೩-೧೭; 1437). **ಅಡಿಗೆಯಿಳಿ** = ಹದವಾಗಿ ಪಾಕವಾಗು; ಪಾಕ ಚೆನ್ನಾಗು. **ಅಡಿಗೆಯಿಳಿಸು** = ಸರಿಯಾಗಿ ಕುದಿದ ಪಾಕದಿಂದ ಘನರೂಪದಲ್ಲಿ ಪದಾರ್ಥವನ್ನು ಇಳಿಸು. **ಅಡಿಗೆಯ ಸಾಮಾನು, ಅಡಿಗೆಯ ಸಾಹಿತ್ಯ** = ೧. ಅಡಿಗೆಗೆ ಬೇಕಾದ ಅಕ್ಕಿ ಬೇಳೆ ಮುಂತಾದ ಪದಾರ್ಥಗಳು (ದಕ). ೨. ಅಡಿಗೆಯ ಪಾತ್ರೆಗಳು (ಕಿ). [ಅಡು₁ + -ಗೆ]

**ಅಡುಗೋಲಜ್ಜಿ** 'ಅಡುಗೂಲಜ್ಜಿ' ನೋ.

**ಅಡುಪಾಡು** (ಕ್ರಿ). ಹೊಡೆದಾಡು; ತಿವಿದಾಡು: "ಅಡುಪಾಡೆನೆ ತಿವಿದಾಟದ ನುಡಿ" (ಭಾರಸಿ. ೬४).

[*ಅಡುಪು (= ಹೊಡೆತ) ? + ಅಡು₁. / ತಮಿ. ಅಡಿ = ಹೊಡೆ]

**ಅಡುಪಾತ್ರೆ** (ನಾ). "ಅಡಿಗೆಯ ಪಾತ್ರೆ ಸಲಕರಣೆಗಳು; ಅಡುಪಾತ್ರೆ; ಪಾಕಿ" (Cooker. ३೦೫೨). [ಅಡು₁ + ಪಾತ್ರೆ]

**ಅಡುಪಾಯ**, ಅಡುಪಾಯಿ (ನಾ). ೧. ಮಲ್ಲಯುದ್ಧದಲ್ಲಿ ಆಕ್ರಮಣದ ಒಂದು ಕ್ರಮ; ಪಟ್ಟು: ಕೈಜೋಡಿಸಿದ ಮಲ್ಲನಸುರ್ಬುತ್ತೊಯ್ಯನೊಳಪೊಕ್ಕು ಮಿಕ್ಕು ಪರಿದಿಕ್ಕಿ ಮುರಿವ ಅಡುಪಾಯದಳವಿಂಗೆ [ಪಾಠಾಂ. ಪಾಯ್ದಳವಿಗೆ] ಕಡಂಗುವ ಮಲ್ಲನಂ (ಗಿರಿಕ. ೨-೧೦೫ ವ); ಭುಜಯುದ್ಧದಲಿ ಬಲುಗೈದುವಿದೆಲಾ ಮುಷ್ಟಿ ನಿನಗಡುಪಾಯ ಚೊಕ್ಕೆಯವ ಕಾಯ್ದುಕೊಳ್ಳನುವಾಗು (ಕುವ್ಯಾಅ. ೬-೨೩). **ಅಡುಪಾಯಿ**: ೧. ಗಾಯದಲಿ ಮೇಣ್ ಡೊಕ್ಕೆಯದಲಡುಪಾಯಿಗಳಲುಪ [ಪಾಠಾಂ. ಡೊಕ್ಕೆಯದೊಳಡಿಪಾಯದಂಡೆಯೊಳಡೆಯೊಳಗುಪ] ಕಾಯದೊಳಗೆ ನವಾಯಿಗಳ ಬಿನ್ನಾಣದಲಿ ಬಳಿಸಂದು . . . ದಾಯವಜಿವವನವನೆ ಮಲ್ಲನು (ಕುವ್ಯಾಉ. ೩-೯೭); ರಾಯನೊಡನೆ ಸಮಸ್ತ ಬಲವಡುಪಾಯ ಲೌಕಿತು ಪಾರ್ಥ ಸಾತ್ಯಕಿ ವಾಯುಸುತರಾಣೆಯಲಿ ಮೇಳೈಸಿತ್ತು ನೃಪಸೇನೆ (ಕುವ್ಯಾಶ. ३-೬४). ೨. ಒಂದು ಆಯುಧ (?): ಸಿಂಗಶರಭವನಳವಿಗೊಡಲವರಂಗುಲಿಯಲಡುಪಾಯ ಲೌಡಿಯ ಜಂಗುಳಿಯ ಜೋಡಿಸಿದನಂದು ಜವಾಯ್ಲುಜಾಯಿಲನ (ಕುವ್ಯಾಅ. ೧೩-೧೯).

[*ಅಡುಪು (= ಹೊಡೆತ) + ?]

**ಅಡುಪಾಯಿ** 'ಅಡುಪಾಯ' ನೋ.

**ಅಡುಪಾಯ್ಬೇಗೆ** (ನಾ). ಹೊಟ್ಟೆಕಿಚ್ಚು; ಮಾತ್ಸರ್ಯ (?): ಇತ್ತಲಡುಪಾಯ್ಬೇಗೆ ಬಿಸುಗುದಿ ಕಿತ್ತಡವು ಕಾರ್ಪಣ್ಯ ಕಪಟಖಳೋತ್ತಮರ ಹೃದಯದಲಿ ಮೂಡಿತು (ಕುವ್ಯಾಸ. ೧೬-೨).

[? ಅಡು₁ + ಪಾಯ್ + ಬೇಗೆ]

**ಅಡುಬಾಣಲೆ** (ನಾ). ಹುರಿಯುವ ಬಾಣಲೆ. [ಅಡು₁ + ಬಾಣಲೆ]

**ಅಡುಮುದ್ದು** (ನಾ). ಬೇಯಿಸಿ ಸಿದ್ಧಪಡಿಸಿದ ಮುದ್ದು; "ಪೋಲ್ಟೀಸು" (?): ಖಡುಗದಡವೊಯ್ಲುಗಳಲಡುಮುದ್ದಡಸಿದರು ಸೂಕರನ ತುಪ್ಪವ ತೊಡೆದರು (ಕುವ್ಯಾಭೀ. ೫-४೨).

[ಅಡು₁ + ಮುದ್ದು (< ಮುರ್ದು)]

**ಅಡುಮನೆ** (ನಾ). ಅಡಿಗೆಯ ಮನೆ; ಪಾಕಶಾಲೆ. [ಅಡು₁ + ಮನೆ]

**ಅಡುಮೆ** 'ಅಡಿಮೆ' ನೋ.

**ಅಡುರ್ಕೆ** (ನಾ). ವ್ಯಾಪಿಸುವುದು; ಹಬ್ಬುವುದು: ಅನೆ ಭಾಜನವೆನಿಸಿರ್ದನಂತಕನಡುರ್ಕೆಗೆ ಪೋ ಪೆಜತಾವುದೆಂಬ ದುರ್ಮನದೊಳೆ ದಕ್ಷಿಣಾಶೆ ನಿಡುಸುಯ್ವ ಪೊಲಾದುದು ದಕ್ಷಿಣಾನಿಲಂ (ಚಂದ್ರಪು. ೭-೩೯).

[ಅಡುರ್ + -ಕೆ]

**ಅಡುವಲ** (ನಾ). ಹುಲ್ಲುಗಾವಲು; ಗೋಮಾಳ (?): ಅಗ್ರಹಾರದ ಕೊಟ್ಟ ಆ ಅಡುವಲದ ಭೂಮಿಯ ಚತುಸ್ಸೀಮೆಯ ವಳಿಯಕ (ಮೈಆರಿ. ೧೯३೧, ೫४-೫೯; 1413). [ಅಡು₃ + ವಲ₀ (< ಪೊಲ)]

**ಅಡುವಲಿ**, ಅಡಿವಳಿ (ನಾ). ವಧುವಿನ ಊಟ ಉಪಚಾರದ ಸಲುವಾಗಿ ತೌರುಮನೆಯವರು ಕೊಡುವ ಉಪಹಾರ (?);

"ಬಳುವಳಿ" (ಸಮ್ಯಕೌ. ಕೋಶ) ; ಚಿಂತಾರತ್ನಂ ಚೈತನ್ಯಂಬಡೆದಂತಡುವಲಿಯಂ ದಣಿವಂತಿತ್ತಾ ಕಂತುಸದೃಶಜಯನೃಪನಂ ರವಿಕೀರ್ತಿಯುಮಂ ಬೀಳ್ಕೊಟ್ಟಂ (ಜಯಕಾ. ೯-೨) ; ನಾಡೊಡೆಯನು ತನ್ನ ಮಗಳಿಗೆ ಅಡುವಲಿಯನು ಕೊಟ್ಟನಿನ್ನು ಚಿಂತಾಮಣಿ ಪಡೆದಂತೆ ಚೈತನ್ಯವನು (ಚಂಪ್ರಸಾಂ. ೧೩-೨೦). **ಅಡಿವಳಿ:** ಇಂತುಣ್ಬಳಿಯಡಿವಳಿಬಳಿವಲಿಯ ಭೂಕಾಂತ ಮಗಳಿಗಿತ್ತು ಕಳುಹಿ ಅಂತರಿಸಧೆಯಲ್ಲಿಂ ಪೊಜಮಟ್ಟಳಾಕಾಂತೆ ಬಂದಳು ತಾಯ ಬಳಿಗೆ (ರಾಮವಿ. ೮-೬೧). [ಅಡು₁ + ಬಲ್ಲಿ₂]

**ಅಡುವಲಿಗೊಡು** (ಕ್ರಿ). "ಅಡುವಲಿ"ಯನ್ನು ಕೊಡು : ಮದುವೆಯಂ ಮಾಡಿ ಪಲವಂದದಡುವಲಿಗೊಟ್ಟು ನಿಜಸುತೆಯನಾ ಅಳಿಯನೊಂದಾಗಿ ಕಳುಹಿ (ಸಮ್ಯಕೌ. ೯-೨೪). [ಅಡುವಲಿ + ಕೊಡು]

**ಅಡುವಳ,** ಅಡಬಳ₁, ಅಡುವಳ್ಳ (ನಾ). ಅಡಿಗೆಯನ್ನು ಮಾಡುವವನು ; ಬಾಣಸಿಗ : ಮಡಿವಳ್ಳಂ ಸೆಜ್ಜೆವಳ್ಳನಜ್ಜಂ ಬೆಜ್ಜಂ ಅಡುವಳ [ಪಾಠಾಂ. ಅಡಬಳ, ಅಡೆಬಳ]ನೆಂದಿಂತಿವರಂ ಕಡಂಗಿ ಬಿಡೆ ಜಡಿಯದಿರ್ಕೆ ನಯಮುಱಿವರಸಂ (ಕಾವ್ಯಾವ. ೩೨೬) ; ನಳಚಕ್ರವರ್ತಿಯನಡುವಳನೆನಿಸಿದೆ ಪಾಪಿ ವಿಧಿಯೇ (ಕೈಕವ. ೬೮-೪) ; ನೀಂ ದರ್ವೀಕರನಪ್ಪೊಡೀ ಕಳನೊಳೇನಡುಕಳದೊಳಡುವಳನಕ್ಕುಂ (ರಾಮಾಶ್ವ.೧೪೪-೨೯). **ಅಡಬಳ₁:** "ಅಡಬಳಂ=ಬಾಣಸಿಗಂ" (ಶಮದ. ಪರಿ. ೨) ; ಶೂಲಧರ ನಿಮ್ಮಡಬಳಂ ಸಿರಿಯಾಳ ಬಾಣಸಗಿತ್ತಿ ಚಂಗಳೆ (ಬಸವು. ೯-೪೦) ; ಕಡುಸುಗಿದು ಘೋರ ರಾಕ್ಷಸನಾರ್ಭಟಕ್ಕಮರರಡಬಳಂ ತೋರೆ ಗರ್ಭಿಣಿಯಾದ ತನ್ನಾನಿಯ ಮಡದಿಯಂ ಕಂಡೆತ್ತಿಕೊಂಡೊಯ್ದಂ (ಶೀಪರಾ. ೮-೯). **ಅಡುವಳ್ಳ:** ವಳ್ಳಕ್ಕೆ – ಅಡಪವಳ್ಳಂ . . . ಸೆಜ್ಜೆವಳ್ಳಂ ಅಡುವಳ್ಳಂ (ಶಮದ. ೧೯೪, ಪ್ರಯೋ). [ಅಡು₁ + -ವಳ. / **ತೆಲು.** ಅಡಬಾಲ = ಅಡಿಗೆಯವನು]

**ಅಡುವಳ್ಳ** 'ಅಡುವಳ' ನೋ.

**ಅಡುವು₁,** ಅಡು₂ (ನಾ). ಹುಲ್ಲುಗಾವಲು ; ದನಗಳು ಮೇಯುವ ಬಯಲು ; ಗೋಮಾಳ (?) : ನನ್ದಿಗುನ್ದರ್ಗೆ ದಾನಂಗೊಟ್ಟದು ಕೆಸುಗೊಳದ ಮಾಜನಂ ಒನ್ದಡುವು ಮದೂರ್ಗಿರೊಳ್ (ಎಕ. IV, ಹೆಗ್ಗಡ. ೪-೩೭; 750) ; ಅಯ್ನೊಳ ಕಟಿನಿ ಪದಿಕೊಳಂ ಅಡುವು ರೊತಣ್ಣ (ಎಕ. IX, ಹೊಸಕೋ. ೧೧೧-೭ ; 900) ; ಬೊಂಮ್ಮನಹಳ್ಳಿ ಸ್ಥಳದ ಯಲ್ಲಿ ಸರಹದ್ದಿನ ಕಂಮ್ಮರವಳ್ಳಿಯ ವಳಗೆರೆ ತೋಟ ಬೆದ್ದಲು ಅಡುವು ಸಹಾಕಂಗು (ಎಕ. III, ಮೈಸೂರು. ೭-೨೨ ; 1685) ; ಆಲಗೂಡ ಕಾರೆಮಾಳದ ಅಡುವಿಗೆ ಮು (ಎಕ. III, ತಿರುಮ. ೬೩-೨೬೮ ; 1748). **ಅಡು₂:** ಹಿರಿ ಊರು ಕೆರೆಕಟ್ಟೆ ಕಾಲ್ವೆ ಹೊಳೆ ಬೆಟ್ಟ ಅಡು ಹುಲು ಹೊರೆ ಒಕಲ ಸುಂಕ ಸುವರ್ಣಾದಾಯ . . . ತೇಜಸ್ವಾಮ್ಯಂಗಳು ಏನುಂಟಾದವೂ (ಎಕ. XIV, ತಿರುಮ. ೪೨-೧೭ ; 1523). [?]

**ಅಡುವು₂** (ನಾ). ಒತ್ತಾಗಿರುವಿಕೆ ; ದಟ್ಟವಾಗಿರುವಿಕೆ : ಬೀಜಗಳನ್ನು ಚೆಲ್ಲುವ ವೇಳೆಯಲ್ಲಾದರೂ ಸಸಿಗಳು ಬಹಳ ಅಡುವಾಗಿದ್ದರೆ ಕಿತ್ತಿ ಅಂಗಲಾದಲ್ಲಿ ಹಚ್ಚಬೇಕು (ಕೃಷಿಪ್ರ. ೫೫).

[← ? **ತಮಿ.** ಅಡುಪ್ಪು = ಸೇರಿರುವುದು ; ಕೂಡಿಕೊಂಡಿರುವುದು]

**ಅಡುವುಱ್ಗಿ** (ನಾ). ಹದವಾಗಿ ಬೇಯಿಸಿದ ಹುಗ್ಗಿ : ದೆಸೆವಲಿಗುಡಲೆಂದಂತಕನಡುವುಱ್ಗಿಯನಟ್ಟಂತಿರೆ ಕಡಿಖಂಡಮಾಯ್ತು ರಣಮಂಡಲದೊಳ್ (ಪಂಪರಾಮಾ. ೧೩-೯೬). [ಅಡು₁ + ಪುಱ್ಗಿ]

**ಅಡುಸು** (ನಾ). ಜೇಡಿ ; ಕೆಸರು (೩). [← ? **ತೆಲು.** ಅಡುಸು = ಕೆಸರು]

**ಅಡುಸೋಗೆ** 'ಅಡುಸೋಗೆ' ನೋ.

**ಅಡುಱ್** (ಕ್ರಿ). ಮೇಲೆಬೀಳು ; ಕವಿ ; ಆಕ್ರಮಿಸು : ಅಸುರರ ಮೆಯ್ಯೊಳಾದ ವಿರಹಾಗ್ನಿಯನಾಱಿಸುತಿಂತೆ ತನ್ನ ಕೂರಸಿಯೊಳಡುರ್ತು ಕೊಂದಸಿಯಳಿ[ರ್ಕ]ಸಿಯೊಳ್ (ಪಂಪಭಾ. ೧-೬) ; ಕಡೆಗಾಲದ ಜವನೆಟ್ಟಿರವೊಡರಿಸೆ ಲಕ್ಷ್ಮಣನಡುರ್ತು ಕಾದುತ್ತಿರ್ದಂ (ಪಂರಾಮಾ. ೯-೭೦); ರಸಾತಳಕ್ಕಸುರನಡುರ್ತ್ತು ನೂಂಕಿದ ಪರಾಭವಂ (ಎಇ. XIII, ೪೩-೨೮ ; 1112) ; ಯೆತ್ತದ ಮುನ್ನವೆತ್ತಿನಡೆಗೊಳ್ಳದ ಮುನ್ನವಡುರ್ತು ಕೋಪದಿಂ ಮುತ್ತದ ಮುನ್ನಂ (ಮೈಆರಿ. ೧೯೩೦ ; ೧-೨೨ ; 1173–1220) ; ಹರಿ[ಯ] × ರನಡುತ್ತಾಟನ್ದು ಬೆಂನಟ್ಟಿ ಗೋಳ್ಮುರಿಗೊಂಡರ್ತ್ಥಮುಮಂ ಗಜೋತ್ಕರಮುಮಂ ತಾಂ ಕೊಳ್ವುದಂ ಕೇಳ್ದು (ಸೌಇಇ. XV, ೧೩೪-೮ ; 1178) ; ಹೃದಯದೊಳಿನ್ನವರ್ ಪೆಜವರ್ ಧನಿಕರ್ ಬಡವರ್ ಸಮಂತು ಬೇಡದವರಡುರ್ತು ಬೇಡಿದವರೆನ್ನದೆ (ಚಂದ್ರಪು. ೬-೮೧) ; ಸುಂಡಿಲಿನೆತ್ತಿ ಸುತ್ತ ನಾಲ್ಗೆಲದೊಳಡುರ್ತು ಪಾಯ್ದು ಪರಿದಾಡುವ (ಧರ್ಮನಾ. ೩-೧೧೪) ; ಕಡಿಕಡಿಯೆನುತುಂ ಬೊಬ್ಬಿಟ್ಟಡುರ್ತಿರ್ವರ್ಲಮುಱಿ ಪಣಂಚಿಸೆಣಸಿತ್ತಾಗಳ್ (ವೀರವಿ. ೫-೩೧) ; ಕರವಾಳಂ ಜಡಿಯುತೆ ತನ್ನೆರಡುಂ ಕಾಲ್ಗಳನಡುರ್ತು ತುಂಡಿಸಿ (ವೃಷವಿ. ೨೭-೩೬). **ಅಡುತ್ತು, ಅಡುರ್ತು** (ಭೂತನ್ಯೂ). [ದೇ.]

**ಅಡೆ₁** (ಕ್ರಿ). ಬೆರಳಿನಿಂದ ಹೊಡೆ ; ಪ್ರಹಾರಮಾಡು : "ಅಡೆ–ಅಂಗುಲಿ ಪ್ರಹರಣೇ, ಪಂಚಕಾರುಕಕರ್ಮದಾರೌ ಚ" (ಶಮಧಾ); ತಲೆಯಂ ತೂಂತಾಗಡೆಯಡೆ ಕೊಯಿರ್ ಕೊಯಿರ್ ಮಗುಱಿ ಮಗುಱಿ ಸೀಳಿರ್ದೆಯಂ (ಧರ್ಮಾಮೃ. ೬-೧೯೨) ; ಅಡೆವಂ ಗೋಣ್ಮುರಿಗೊಂಡು ಬೋಚಿದಲೆಯಂ ಮುಂಗೆಯ್ಗಳಿಂ ಮೂರಿಗೊಂಡಿಡುವಂ (ಅರ್ಧನೇ. ೭-೮೪) ; ಒಡೆದ ಮೂಗುಮಂ ಅಡೆದ ನೆತ್ತಿಯಂ ಬುಗುಟುಮಂಡೆಯುಮಂ ಯಶೋದೆಗೆ ತೋಱಿ ದೂಱಿ (ಅರ್ಧನೇ. ೭-೮೫ ವ).

[**ದೇ.** ‖ **ತಮಿ.** ಅಡಿ = ಹೊಡೆ ; **ಮಲ.** ಅಡಿ, ಅಡಿಕ್ಕ ; **ಕೊಡ.** ಅಡಿ = ಸಿಡಿಲು ಹೊಡೆತ ; **ತೆಲು.** ಅಡುಚು ; **ಪರ್ಜಿ.** ಅಟ್]

**ಅಡೆ₂** (ಕ್ರಿ). ೧. ಗಿಡಿದು ತುಂಬು ; ಭರ್ತಿಮಾಡು : "ಕಿಕ್ಕಿಱಿದಂದದಿಂ ಪೂರಣಂಗೈವಲ್ಲಿ . . . ಅಡೆ ಶಬ್ದವು" (ಶಬ್ದಮಂ. ೯೨). ೨. ಮುಚ್ಚಿ ಹೋಗಿರು ; ಕಟ್ಟಿಕೊಂಡಿರು: ಬಚ್ಚಲು ಅಡೆದುಕೊಂಡಿದೆ (ರೂಢಿ). 'ಅಡೆಯೊತ್ತು₁' ಪರಾ. [**ದೇ.** ‖ **ತಮಿ.** ಅಡೈ = ದಾರಿಕಟ್ಟಿಕೊ]

**ಅಡೆ₃** (ಕ್ರಿ). ೧. ಪಡೆ ; ಹೊಂದು : ಅರಿಯೊಣಗಿದಿಂಧನದಿ ಇಂತೆ ಹೊಗೆವುದು ಬೆಂಕಿ ತನ್ನ ನಿಜ ತಾನಡೆವ ಮುನ್ನ (ಅಹಲ್ಯೆ. ೩೮). ೨. ಕೈಗೆ ಬರು ; ಒದಗು : ಬೇಡದೆ ಬೇಕಾದುದಡೆಯೆ, ಬೇಡದುದಂ ಬೇಡಿ ಪಡೆಯೆ ಏಕೆ ವ್ಯಥಾ ಶ್ರಮಂ (ಗಿಳಿವಿಂ. ೮೬-೮೨)

[← **ತಮಿ.** ಅಡೈ = ಪಡೆ, ಹೊಂದು]

**ಅಡೆ₄** (ನಾ). ೧. ಮುಚ್ಚಿಟ್ಟಿದ್ದು ; ಮಾಗಿಸುವುದಕ್ಕಾಗಿ ಹುಲ್ಲು ಮುಂತಾದವುಗಳಲ್ಲಿ ಮುಚ್ಚಿಟ್ಟ ಮಾವಿನಕಾಯಿ, ಬಾಳೆಯಕಾಯಿ ಇತ್ಯಾದಿ: "ಪ್ರಚ್ಛನ್ನ ನೆಮ್ಮುಗೆಗಳಡೆ ಶಬ್ದವು" (ಶಬ್ದಮಂ. ೯೨); ಅಡೆಯ ಮಾವಿನಹಣ್ಣು ಕಡಿದ ಕಬ್ಬಿನ ಗಣಿಕೆ ಪಡೆದ ಒಡವೆಯನು ಮಡದಿಯನು ಪರರಲ್ಲಿ ಬಿಡುವವನೆ ಹೆಡ್ಡ (ಸರ್ವಜ್ಞ. ೧೫೩೫). 'ಅಡೆಹಾಕು' ಪರಾ. [**ದೇ.** ‖ **ತಮಿ.** ಅಡೈ]

**ಅಡೆ₅** (ನಾ). ೧. ಊರೆ ; ಆಶ್ರಯ ; ಆಧಾರ : "ಪ್ರಚ್ಛನ್ನ ನೆಮ್ಮುಗೆಗಳಡೆ ಶಬ್ದವು" (ಶಬ್ದಮಂ. ೯೨) ; ಶ್ರೀಗಂಧದ ಮರನ ಕಡಿದು ಬೇವಿಂಗೆ ಅಡೆಯನಿಕ್ಕುವರೆ? (ಬಸವ. ೫೯೫). ೨. ಬಡಗಿ, ಕಮ್ಮಾರ, ಮುಂತಾದವರು ಸಿದ್ಧಪಡಿಸುವ ವಸ್ತುಗಳನ್ನು ಬಡಿಯಲು ಆಧಾರವಾಗಿ ಉಪಯೋಗಿಸುವ ಮರದ ದಿಮ್ಮಿ ; ಅಡಿಗೊರಡು ; ಅಡಿಗಲ್ಲು : "ಅಡೆ–ಅಂಗುಲಿಪ್ರಹರಣೇ, ಪಂಚಕಾರುಕ ಕರ್ಮದಾರೌ ಚ" (ಶಮಧಾ); ತ್ರಿವಿಧದ ಹುಱಿಯಲ್ಲಿ ಅಡೆಯನಿಕ್ಕಿ ಅಡೆಗೊಡ್ಡಿದಂತೆ ಬಿದ್ದಿರುತ್ತ ಮತ್ತಱಿಕೆಯ ಮಾತ ನುಡಿದಡೆ ಅದು ಬಱುಕಟೆಯೆಂಬರು (ಬಾಬೊಮ್ಮ. ೧೮); ಚತುರ್ದಶ ಷೋಡಶವೆಂಬ ಗಳಿಗೆಯಂ ಮಾಡಿದನು ಸಮಾಧಾನವೆಂಬ

ಅಡೆಯ ಮೇಲಿರಿಸಿ ಸಮಗುಣವೆಂಬ ಕೊಡತಿಯಲ್ಲಿ ಘಟ್ಟಿಸಿದನು (ಬಸಹೆ. ೩೪೩); ಮಾಯೆಗಲುಗದ ಧೈರ್ಯವೆಂಬಡೆಯ ಮೇಲಿರಿಸಿ ನಿತ್ಯವೆಂದೆಂಬ ಚಮ್ಮಟಿಕೆಯಿಂ ಪೊಡೆವುತಂ (ಇಱಿರ. ೪೨–೩) ; ಅದು ಕಮ್ಮಱರ ಡೆಯಂ ಕೊಱೆದಂತಿರ್ಪ ಪೆರ್ಬಾಯುಂ (ಲೀಲಾವ. ೬–೧೭). ೩. ಅಡವು; ಒತ್ತೆ : ಚಿಂತಾಮಣಿಯನಡೆಗಿತ್ತು ಗಾಜಿನ ಮಣಿಗೊಂಡ ಮರುಳ್ಗೆ ಮುನಿವರಂ ದೊರೆಯಾದಂ (ಶಾಂತೀಶ್ವ. ೭–೯೦).

**ಅಡೆಗಿಕ್ಕು**= ಅಡಿಗೊರಡಿನ ಮೇಲಿಡು : ಪೆರ್ಗುಡುಗೋಲುಗಳಿಂದಲಡೆಗಿಕ್ಕಿ ಖಂಡಿಸುವರು ಕಬ್ಬುಗಳನು (ಮೋಹತ.೨–೪೯). **ಅಡೆಯ ಹಣ**= ಅಡಿಗಲ್ಲನ್ನು ಇಟ್ಟುಕೊಂಡಿರುವುದಕ್ಕಾಗಿ ಕೊಡಬೇಕಾದ ಸುಂಕ : ಬಡಗಿ ಕಂಮಾರ . . . ಉವೋಜುಗಳು ತೆಱುವ ಅಡೆಯ ಹಣ ಅರ್ಥಿಪ್ರಹಾರ (ಸೌಇಇ. IX–ii, ೫೫೪–೪೬ ; 1533).

[**ದೇ.** ‖ **ತಮಿ.** ಅಡ್ಡೈ ; **ತುಳು.** ಅಟ್ಟೆ]

**ಅಡೆ$_6$** (ನಾ). ೧. ಸಗಣಿ ; ಬೆರಣಿ: "ಅಡೆಯೆಂದು ಗೋಮಯಂ"(ಕಶಸಾ. ೬–೧೩೧) ; "ಅಡೆಯೆನೆ ಗೋಮಯಮಕ್ಕುಂ" (ಕವಿಕಂ. ೮೮) ; ಒಂದು ಹರಿಣನೆಯ್ತಂದೆಡೆಯ ಸಗಣಿಯೊಳಗೆಡಹಿ . . . ಬಿದ್ದುದಾ ಸಿದ್ಧರಾಮಂ ಕರುಣದಿಂ . . . ನೆಗಪೆ ನೆಗಪಿಸಿಕೊಂಬ ಕೋಡು ಕೈಯಾಗೆ ತನು ಪುಣ್ಯತನುವಾಗೆ ಶಿರ ಶಿರವಾಗಲಡೆ[ಪಾಠಾಂ. ಲೆದೆ]ಯನೊಡೆದು . . . ಕೀರ್ತಿಸುವ ಗಂಧರ್ವನಂ ಕಂಡು (ಸಿದ್ಧರಾ. ೪–೪೨, ೪೩) ; ಅಡೆಯಂ ಕೋದೆತ್ತುತುಂ ಮಾರ್ದನಿಗೆ ಮುಸಗುತುಂ ದರ್ಪದಿಂ ಛಾಯೆಯೊಳ್ ಕೋಡಿಡುತುಂ (ಅರ್ಧನೇ. ೮–೧೮). 'ಅಡೆಕುಣಿ', 'ಅಡೆತಿಪ್ಪೆ' ಪರಾ.

[**ದೇ.** ?]

**ಅಡೆ$_7$** (ನಾ). ೧. (ಹುಣಿಸೆಹಣ್ಣು, ಖರ್ಜೂರ, ಸಕ್ಕರೆ, ಕೂದಲು ಮೊದಲಾದವು ರೊಟ್ಟಿಯಹಾಗೆ ಕಟ್ಟಿಕೊಂಡಿರುವ ಅಂಟಂಟಾದ) ಮುದ್ದೆ; ಬಿಲ್ಲೆ ; ಹಲ್ಲೆ ; ಹೆಪ್ಪು (ಕಿ) : ದೊಡ್ಡಿತಂ ಕೆಲಕಿರಿಸಿಯಡೆ ನಿಡುಗಡ್ಡ ಘೂಳಪ್ಪಂತೆ ಧರಣಿಯೊಳಡ್ಡಬೀಳುತೆ ಪೋದರ್ (ಶಂಕದಾ. ೮–೪). ೨. ಬೆಲ್ಲದ ಹೂರಣವನ್ನು ಒಳಕೊಂಡ ಅಕ್ಕಿಯ ದೋಸೆ. 'ಅಡೆಹಬ್ಬ' ಪರಾ. ೩. ಗುಂಪು ; ರಾಶಿ ; ಸಮ್ಮರ್ದ : ಅಡೆಯುಡುಗದುಱುಬಿದುದು ದಾನವೇಶ್ವರನ ವಂಗಡ ಮಹಾಪದ್ಮಂ (ಚಿಬಪು. ೩೮–೩೦).

[**ದೇ.** ‖ **ತಮಿ.** ಅಡ್ಡೈ = ತೆಳ್ಳನೆಯ ರೊಟ್ಟಿ ; **ಮಲ.** ಅಡ = ಒಂದು ಬಗೆಯ ರೊಟ್ಟಿ ; **ತುಳು.** ಅಡ್ಡೆ$_1$ = ರೊಟ್ಟಿ]

**ಅಡೆ$_8$** (ನಾ). ೧. ಬಟ್ಟೆ (ಕರಾ). 'ನೀರಡೆ' ಪರಾ. ೨. ಬಟ್ಟೆ (ಅಥವಾ ಕಂಬಳಿ)ಯ ತುದಿಗಳಲ್ಲಿ ನೇಯದೆ ಬಿಟ್ಟಿರುವ ಬಿಡಿ ನೂಲೆಳೆಗಳು ; ಕರೆ (ಕಿ). 'ಅಡೆಕಟ್ಟು' ಪರಾ. ೩. ಅಂಚು ; ತುದಿ ; ಪಕ್ಕ; ಸಮೀಪ : ಆ ಬೇಲಿಯ ಅಡೆಯಲ್ಲೇ ಸ್ವಲ್ಪ ದೂರ ಹೋದರೆ ದಾರಿ ಸಿಕ್ಕುತ್ತದೆ (ರೂಢಿ). [?. / **ತಮಿ.** ಅಡ್ಡೈ = ಬಟ್ಟೆ]

**ಅಡೆಕಟ್ಟು** (ಕ್ರಿ). ಬಟ್ಟೆಯ ಕರೆಯ ಬಿಡಿನೂಲುಗಳನ್ನು ಬಣ್ಣದ ಅಥವಾ ಸಾಧಾರಣ ದಾರದಿಂದ ಹೆಣೆದು ಕಟ್ಟು ; ಕರೆಕಟ್ಟು (ಕಿ).

[ಅಡೆ$_8$ + ಕಟ್ಟು$_1$]

**ಅಡೆಕಲು** 'ಅಡೆಗಲ್' ನೋ.

**ಅಡೆಕಲುವಣ** (ನಾ). ಅಕ್ಕಸಾಲೆ ಕಮ್ಮಾರರು ಉಪಯೋಗಿಸುವ ಅಡಿಗಲ್ಲಿನ ಮೇಲೆ ಹಾಕುವ ಸುಂಕ : ಬೀರವಣ ಕೊಡತಿವಣ ಕತ್ತರಿವಣ ಅಡೆಕಲುವಣ ಹಡವಳೆಯ ಹದಿಯರಾಯ ಕುಂಬಱಬಿಟ್ಟಿ ಕಂಮರವಿಟ್ಟಿ (ಮೈಆರಿ. ೧೯೩೨, ೧೬–೩೧ ; 1069). 'ಅಡೆದೆಱೆ' ಪರಾ.

[ಅಡೆಕಲು + ಪಣ$_1$]

**ಅಡೆಕುಣಿ** (ನಾ). ಸಗಣಿಯನ್ನು ತುಂಬುವ ಗುಣಿ ; ತಿಪ್ಪೆ.

[ಅಡೆ$_6$ + ಕುಣಿ$_2$ (< ಕುೞಿ$_2$)]

**ಅಡೆಗಟ್ಟು** (ಕ್ರಿ). (ತಲೆಗೂದಲಂತೆ) ಜಡೆಗಟ್ಟು ; ಮುದ್ದೆಯಾಗು ; ಹೆಪ್ಪುಗಟ್ಟು (ದಕ. ಕಿ). [ಅಡೆ$_7$ + ಕಟ್ಟು$_1$]

**ಅಡೆಗಲ್**, ಅಡಿಗಲ್$_2$, ಅಡಿಗಲ್ಲು$_2$, ಅಡೆಕಲು (ನಾ). (ಕಮ್ಮಾರ, ಅಕ್ಕಸಾಲೆ ಮೊದಲಾದವರು) ಲೋಹದ ವಸ್ತುಗಳನ್ನು ಇಟ್ಟು ಬಡಿಯಲು ಆಸರೆಯಾಗಿ ಉಪಯೋಗಿಸುವ ಕಬ್ಬಿಣದ ಗಟ್ಟಿ : ಭರದಿನುದಯಗಿರಿಯೆಂಬಡೆಗಲ್ಲೊಳಗಿರಿಸಿ ಪೊಳೆವ ಪೊಸಲೋಹದುರುಳಿಯಂ ಪಿರಿದುಂ ಪೋಲ್ತುದು ಮುಂದೆಸೆಯೊಳ್ ಮೂಡುವ ಹಿಮಕರಬಿಂಬಂ (ಜಯಕಾ. ೧೪–೪). **ಅಡಿಗಲ್$_2$** : ಹದನೆಱೆ ಕಾಯ್ದುರಿವಾ ಲೋಹದ ಬಟ್ಟಂ ನಿಱಿಸಿ ಹೇಮಣಿಗನಡಿಗಲ್ಲಾಗ್ರದೊಳಿಕ್ಕುಳಿಂದೆ ಪಿಡಿದೊಡ್ಡಿದನೆನೆ ರವಿಯೆಸೆದನಸ್ತಗಿರಿ ಮಸ್ತಕದೊಳ್ (ಧರ್ಮಪ. ೭–೪೩) ; ಮತ್ತು ಮಿರ್ಕುಱಿಯ ತಂಡಸದ ಕರ್ತರಿಯ ಸುತ್ತಿಗೆಯ ಕೈವಾರದ ಕಂಬಚ್ಚಿನ ಕೊಟಿವೆಯಡ[ಡಿ]ಗಲ್ಲ ಆರನ (ರಾಮಾಶ್ವ. ೧೦೩–೨೦). **ಅಡಿಗಲ್ಲು$_2$**: ಕಮ್ಮಾರನು ಕಬ್ಬಿಣದ ತುಂಡನ್ನು ಕೆಂಪಗೆ ಕಾಸಿ ಅಡಿಗಲ್ಲಿನ ಮೇಲಿಟ್ಟು ಸುತ್ತಿಗೆಯಿಂದ ಬಡಿದು ಬೇಕಾದ ಆಕಾರಕ್ಕೆ ತರುತ್ತಾನೆ (ರೂಢಿ). **ಅಡೆಕಲು** : 'ಅಡೆಕಲುವಣ' ಪರಾ. [ಅಡೆ$_5$ + ಕಲ್$_2$]

**ಅಡೆಗಲ್ಲು** (ನಾ). ಜಡೆಗಟ್ಟಿಕೊಂಡು ಕಲ್ಲಿನಂತೆ ಗಟ್ಟಿಯಾಗಿರುವುದು: ಅವಳ ಕೂದಲು ಅಡೆಗಲ್ಲಾಗಿದೆ (ಕಿ).

[ಅಡೆ$_7$ + ಕಲ್ಲು (< ಕಲ್$_2$)]

**ಅಡೆಗೆಡಹು** (ಕ್ರಿ). ಅಡ್ಡವಾಗಿ ಬೀಳಿಸು : ಹೊಡೆದುರುಳಿಸು (?) : ದುರುಳರಿಂದಡೆಗೆಡಹೆ ಭಷಕನು ಧರಣಿಯೊಳು ಬಸವಳಿದು ತನು ಜರ್ಜರಿತವಾಗಿಯೆ . . . ಹರಣವನು ಬಿಡುತಿರಲು (ಜೀವಂಚ. ೧೦–೫).

[ಅಡೆ$_0$ (< ಅಡ್ಡ$_1$) + ಕೆಡಹು (< ಕೆಡಪು)]

**ಅಡೆಗೆಡೆ** (ಕ್ರಿ). ಅಡ್ಡವಾಗಿ ಬೀಳು, —ಬಿದ್ದುಹೋಗು : ಕಾಡಾನೆಗಳೊತ್ತಿ ಕಿೞ್ತಡೆಗೆಡೆದ ಮರಂಗಳಿಂ ಕೊಂಕುವೆತ್ತ ಬಟ್ಟೆಗಳೊಳಂ (ಕಾದಂಉ. ೨೬೬) ; ಉಭಯಬಲದಲಿ ಲೂನನಿವಹದ ಹಯವನಡೆಗೆಡೆವಾನೆಗಳ ಹೊದಱೆದ್ದು (ಕುವ್ಯಾಭೀ. ೬–೩) ; ದಿವ್ಯಾಸ್ತ್ರದಿಂದೆಸೆಯೆ ಗಜಮಸ್ತಕಂ ಕೂಡೆ ಪಱಿದುದು ಮುಂಡಮಿಳೆಯೊಳಡೆಗೆಡೆದುದು (ಚಿಬಪು. ೨೮–೩೩) ; ಅಡೆಗೆಡೆದ ರುಂಡದಿಂ ಮುಂಡದಿಂ (ಚಿಬಪು. ೪೩–೪೪) ; (ಚಿಬಪು. ೩೨–೧೭, ೪೦–೧೮, ೪೪–೪೦ ನೋ).

[ಅಡೆ$_0$ (< ಅಡ್ಡ$_1$) + ಕೆಡೆ]

**ಅಡೆತಡೆ** (ನಾ). ಅಡ್ಡಿ ; ಪ್ರತಿಬಂಧ : ". . . ಜನಗಳ ಬಾಯಿಗೆ ಅಡೆತಡೆಯೂ ಇಲ್ಲದೆ ಇರುವಾಗ ವಿಷಯ ಯಾವ ಪರಿಣಾಮವನ್ನು ಹೊಂದಬಹುದು ಊಹಿಸು" (ಮರಳಿ. ೮೭) ; ಶ್ರಮಶಕ್ತಿಯನ್ನು ಇಷ್ಟವಿದ್ದ ಬೆಲೆಗೆ ಕೆಲಸದಲ್ಲಿ ತೊಡಗಿಸಲು ಯಾವ ಅಡೆತಡೆಯೂ ಇರಕೂಡದು (ಮಾವಾದ. ೧೨೪) ; ಪ್ರಾಸಗಳ ತ್ರಾಸ, ಭಾವನೆಗಳ ಬಂಧನ, ವಿಚಾರಗಳ ವೈಶಿಷ್ಟ್ಯ ಇವು ಯಾವುದರ ಅಡೆತಡೆ– ವಿಘ್ನವಿಡ್ಡೂರಗಳೂ ಅಲ್ಲಿ ನಡೆಯುವಾಗ ತಡೆಯುವುದಿಲ್ಲ (ರೂಪಸಂ. ೪೩). [ಅಡೆ$_0$ + ತಡೆ$_2$]

**ಅಡೆತಿಪ್ಪೆ** (ನಾ). ಸಗಣಿಯ ತಿಪ್ಪೆ; ಗೊಬ್ಬರದ ರಾಶಿ : ಅಡೆತಿಪ್ಪೆಯ ತೆಱನಂತೆ ವಿಚಾರಿಸಿ[ಸೆ] ಷಡುರಸಬಲದಿಂದಿಹ (ಕಲ್ಯಾಣೇ. ೫೩).

[ಅಡೆ$_6$ + ತಿಪ್ಪೆ]

**ಅಡೆತೆಗೆ** (ಕ್ರಿ). ಹಣ್ಣನ್ನು ಅಡೆ ಹಾಕಿ ಅದು ಮಾಗಿದ ಮೇಲೆ ಹೊರಕ್ಕೆ ತೆಗೆ (ಕಿ). [ಅಡೆ$_4$ + ತೆಗೆ]

**ಅಡೆದೆಱೆ** (ನಾ). ಅಕ್ಕಸಾಲೆ, ಕಮ್ಮಾರ, ಬಡಗಿ ಮುಂತಾದವರು ಕೊಡುವ ಸುಂಕ; ಪಟ್ಟಡೆ ಸುಂಕ : ಮಗ್ಗಮನೆ ಬೆಲ್ಲಸುಂಕ ಅಡೆದೆಱೆ ಮಾದಾಱಿಕೆ ವೋಜನ ವರಿ (ಎಕ. XIV. ಗುಂಡ್ಲುಪೇ. ೧೨೯–೯೯; 1521). 'ಅಡೆಕಲುವಣ' ಪರಾ. [ಅಡೆ$_5$ + ತೆಱೆ$_3$]

**ಅಡೆಪ,** ಅಡಪ, ಹಡಪ (ನಾ). ೧. ಅಡಕೆಲೆಯ ಚೀಲ: ಪಟ್ಟಂಗಟ್ಟಿ ಏಜಲ್ ಕುದುರೆ ಕೊಡೆ ಅಡೆಪದ[ವಂಕೆ] ಕುಂಚಂ ತಳಿಗೆ ಕೀಟ್ಟಿಟ್ಟ ಲಡ್ಡಣಿಗೆ ಗದ್ದಿಗೆ ರಾಜಚಿನ್ನಮುಮ್ ಕೊಟ್ಟು (ಸೌಇಇ. ೧೯೩೨, ೪೮–೧೪ ; 960) ; ಅಡೆಪದ ಆದಯ್ಯಂ ಮಾಡಿಸಿದ (ಎಕ. IV, ನಾಗಮಂ. ೫೧–೨೬ ; 972). **ಅಡಪ :** ೧. ಚಾಮರದಡಪದ ಡವಕೆಯ ಕನ್ನಡಿಯ ಪರಿಚಾರಿಕೆಯರುಂ (ಆದಿಪು. ೩–೨೩ ವ) ; ಅಡಪದ ದಾಸಿರಾಜನೆಸೆವಂ (ಬೊಂಕಶಾ. ೧೯೩೩, ಹಾವೇರಿ. ೫೫–೪೭ ; 1104) ; ಕೊಡೆಯಿಲ್ಲದಡಪಮಿಲ್ಲದೆ ಮಡದಿಯರೊಡವಪ್ಪರಿಲ್ಲದಾಳ್ಗಳಿಲ್ಲದೆ ನೀನ್ ನಡೆದೊರ್ವನೆ ಬಂದೆ (ಬಂಹರಿ. ೧೪–೨) ; ಅಡಪ ಡವಕೆ ಕೈಪಿಡಿ ಕೌಳುಡೆ . . . ಕರಗಂಬೊತ್ತ ಮಡದಿಯರ್ಗ೦ (ಜಯಕಾ. ೨–೧೧). ೨. ಕೈಚೀಲ ; ಸಂಚಿ : ಏಕಾಂತದೊಳೀ ಲೇಖಮನಾ ಕನ್ನೆಗೆ ಪೋಗಿ ಕುಡುವುದೆಂದಟ್ಟಿದನೆಂದಾಕೆ ನುಡಿವುತ್ತ ಮಂದಪ್ರಾಕಟವದನಡಪದೊಳಗಣಿಂ ತೆಗೆದಾಗಳ್ (ಕಾದಂಪೂ. ೭೯೪) ; ಅಡಪದೊಳಿರ್ದಾ ಕಮನ ಕುಸುಮಾವಳೀ ಚಿತ್ರಮನಾಗಳ್ ತೋಱಿದಂ (ಕುಸುಮಾ. ೧೩–೮). **ಹಡಪ:** ೧. "ಹಡಪವೆಂದಡಪಂ" (ಕರ್ಣಾನಿ. ೬೭); ಚಾಮರ ಸೀಗುರಿಯ ದರ್ಪಣದ ಹಡಪದ ಶಂಖದ ಬಿಂಕದ ಬಾಹತ್ತರ ನಿಯೋಗಂ (ನಂಬಿರ. ೮–೧೭) ; ಆ ಸೋಮೆಯ ದಣ್ಣಾಯಕಂ ಹಡಪದ ಸಾಯಂಣ್ಣನು (ಎಕ. XIV, ಕೃಷ್ಣರಾ. ೪೪–೪ ; 1303) ; ತನ್ನಯ ಬಳಿಯ ಹಡಪದ ಬಾಲಕನ ಹಿಂದಿಕ್ಕಿ ನಡೆತಂದು (ಕುವ್ಯಾವಿ. ೨–೧೬) ; ಹಡಪ ಕಾಳಂಜಿ ಬಹುವಿಧಾಭರಣವಿತತಿಗಳನಾಂತ ಕನ್ನೆಯರು . . . ನೆರೆದಿರ್ದರು (ರಾಘಚ. ೭–೪೪). ೨. ತೊಟ್ಟ ಕುಪ್ಪಸ ಬಟ್ಟಹ ಸುತ್ತು ನೊಸಲೊಳಗಿಟ್ಟ ಗಂಧವು ಮುಡಿಲೊಳಗೆ ಕಟ್ಟಿದ ಮುಡಿಚೀಲವು ಹಡಪಗಳಿಂದ ಸೆಟ್ಟಿಗಳಿರುತಿಹರಲ್ಲಿ (ಅಂಜಚ. ೩–೮೦) ; ನಿನ್ನ ತಮ್ಮನ ಹೆಗಲಲಾತನ ಹಡಪ ಹಾಯ್ಕಿರಲಿ (ಕುವ್ಯಾಕ. ೫–೨೭). ೩. ಕ್ಷೌರಕನ ಸಲಕರಣೆಯ ಚೀಲ : ಕ್ಷೌರ ಮಾಡುವುದಕ್ಕೆ ಹಡಪವಿಲ್ಲದೆ ಬಂದರೆ ಹೇಗೆ? (ರೂಢಿ).

**ಅಡಪದವ, ಹಡಪದವ** = ಎಲೆಯಡಕೆಯ ಸಂಚಿಯನ್ನು ಹಿಡಿದಿರುವವನು : ಕುಳ್ಳಿರ್ದರಂದೋಳಿಗಳಿಂ . . . ಘಾತಕರಡಪದವರ್ ನೆತ್ತಕರ್ (ಅನಂಪು. ೨–೨೬) ; ಅರಸನನು ಕಂಡಳಲಿದರು ಚಾಮರದ ಛತ್ರದ ಹಡಪದವರಾಪ್ತರು ವಿಘಾತಿಯಲಂಬಕಿತ್ತರು ಬಹಳ ಶೋಕದಲಿ (ಕುವ್ಯಾಕ. ೧೧–೫೫) ; ಹಡಪದವರಂ ಬಿಜ್ಜಣಿಗರನಾ ಕಾಳಾಂಜಿವಿಡಿವರಂ (ಚಿಬಪು. ೫–೪೫).

[ದೇ. ‖ ತಮಿ. ಅಡ್ಡೈಪ್ಪೈ ; ಮಲ. ಅಡಪ್ಪಮ್ ; ತುಳು. ಅಡಪ, ಹಡಪ ; ತೆಲು. ಅಡಪಮು, ಹಡಪಮು]

**ಅಡೆಪಟ್ಟಿ** (ನಾ). ಬಂಡಿಯ ಒಂದು ಭಾಗ (ಕ) ; ಬಂಡಿಯ ಅಡ್ಡ ಪಟ್ಟಿ. [ಅಡೆ$_8$ + ಪಟ್ಟಿ$_2$]

**ಅಡೆಪೈಸರ** (ನಾ). ಒಂದು ಬಗೆಯ ನಾಟ್ಯ (?) : ಕಡಲ ಮೊಮ್ಮಗನ ಕರಸಿ ಶರ್ವಾಣಿಯರೆಲ್ಲ ಅಡೆಪೈಸರಪ[ದ] ನಾಟ್ಯವೆರಸಿ (ದೇವಾಂಪು. ೧–೭೬). [ಅಡೆ$_6$ + ಪೈಸರ]

**ಅಡೆಬರು** (ಕ್ರಿ). (ಕಾಯಿ) ಮಾಗುವ ಸ್ಥಿತಿಗೆ ಬರು (ಕ).
[ಅಡೆ$_4$ + ಬರು (< ಬರ್)]

**ಅಡೆಮುಂಚಿಕೆ,** ಅಡಿಮುಂಚಿಕೆ (ನಾ). ಮೃದುಪದಾರ್ಥಗಳನ್ನು ಕತ್ತರಿಸುವುದಕ್ಕೆ ಆಧಾರವಾಗಿಟ್ಟುಕೊಳ್ಳುವ ಕಾಲ್ಮಣೆ : ಕೈರಂದಱಿಯಲ್ಕೆ ಮಾಡಿದಡೆಮುಂಚಿಕೆ [ಪಾಠಾಂ. ಡಡಮುಂಚಿಗೆ] ಮಿಂಚಿದುದಾ ಶ್ಮಶಾನದೊಳ್ (ಕಾವ್ಯಾವ. ೫೭). **ಅಡಿಮುಂಚಿಕೆ :** ಸಿಸಿರಮನೆ ಪಿಡಿದು ಪರಕೆಗೆ ಬಸಂತನಲರ್ವೋದ ಮಾವಿನಡಿಮುಂಚಿಕೆಯೊಳ್ ಕುಸುರಿದಱಿದಡಗಿನಂತೆವೊಲೆಸೆದುವು ತದ್ವನದೊಳುದಿರ್ದ ಮುತ್ತದ ಮುಗುಳ್ಗಳ್ (ಯಶೋಚ. ೧–೩೭). [ಅಡೆ$_6$ + ಮುಂಚಿಕೆ]

**ಅಡೆಮನೆ** (ನಾ). ಸಾಮಾನುಗಳನ್ನಿಡುವ ಮನೆ ; ಉಗ್ರಾಣ (ದಕಪ್ರಾದೇ). [ಅಡ್ಡೆ ? + ಮನೆ]

**ಅಡೆಯಾಳ** (ನಾ). ಗುರುತು ; ಚಿಹ್ನೆ : ತಂಮ ಸ್ನೇಹ ಇರುವದಕ್ಕೆ ಅಡೆಯಾಳವಾಗಿ ಸಂವತ್ಸರದಲ್ಲಿ ಕೆಲವು ತೆಗದುಕೊಳ್ಳುವದು (ರಾಜೇಂದ್ರ. ೧೦೯).

[← ? ತಮಿ. ಅಡೈಯಾಳಮ್ ; ಮಲ. ಅಡಯಾಳಮ್ ; ತೆಲು. ಅಡಿಯಾಲಮು]

**ಅಡೆಯೊಡ್ಡಿಸು** (ಕ್ರಿ). ಅಡಿಗೊರಡಿಗೆ ಒಡ್ಡುವಂತೆ ಮಾಡು : ವಲ್ಲಭನಸಿಯಧಾರೆಗೆ ಕೊರಳನಡೆಯೊ[ಪಾಠಾಂ. ಗೊಡ್ಡಿ, ಗೆಡಹಿ]ಡ್ಡಿಸಿದನಾ ಮುನಿಪ (ತೊರರಾ. ೩–೨–೨೯). [ಅಡೆ$_5$ + ಒಡ್ಡು$_1$ + –ಇಸು$_1$]

**ಅಡೆಯೊಡ್ಡು** (ಕ್ರಿ). ಅಡಿಯ ಕೊರಡಿಗೆ ಚಾಚು ; ಪಟ್ಟಡಿಯ ಮೇಲಿಡು : ಒಡನೆ ಪ್ರಾಪಕರ್ಮನಡೆಯೊಡ್ಡಿದ ಮಾಟಿಕ್ಕೆಯೊಳಿರ್ದ ನಳ್ಳಿಯಂ ಕೋಡುಱಿ ನಟ್ಟುವೆಯ್ದೆ ಕರುಳೊಕ್ಕುವು (ವರ್ಧಪು. ೩–೧೧).
[ಅಡೆ$_5$ + ಒಡ್ಡು$_1$]

**ಅಡೆಯೊತ್ತು** (ಕ್ರಿ). ಮುಚ್ಚಿಕೊಳ್ಳುವಹಾಗೆ ಅಮುಕು, —ಒತ್ತು : ತೂಗಿಸಿ ತೊಲೆಯೊಳ್ ಬಾಯಂ ಮೂಗುಮನ[ಪಾಠಾಂ. ನೊ]ಡೆಯೊತ್ತಿ ಕೊಂದ ಕಳ್ಳನ ದೇಹಂ ತೂಗಿದೊಡೆ ಕುಂದದು (ಯಶೋಚ. ೪–೨೧).
[ಅಡೆ$_1$ + ಒತ್ತು$_1$]

**ಅಡೆರಾಶಿ** 'ಅಡಿರಾಶಿ' ನೋ.

**ಅಡೆವಣ** (ನಾ). = ಅಡೆದೆಱೆ : ಬೂದಿಹಾಳ ಸೀಮೆಯೊಳಗೆ ನೀಉ ತೆಱುವಂತು ಅಡೆವಣವನೂ ನಂಮ ತಂದೆಗಳು ರಂಗರಾಜಯ್ಯನವರಿಗೆ ಪುಂಣ್ಯವಾಗಬೇಕೆಂದು ಬಿಟ್ಟೆಉ (ಎಕ. XII, ಚಿಕ್ಕನಾ. ೮–೧೭ ; 1573).
[ಅಡೆ$_5$ + ಪಣ$_1$]

**ಅಡೆವೊತ್ತು** (ಕ್ರಿ). ಸುತ್ತಲೂ ಹೊತ್ತಿಕೊ ; ಪೂರ್ತಿಯಾಗಿ ಹೊತ್ತಿಕೊ : ಅಡೆವೊ[ಪಾಠಾಂ. ಎಡೆವೊ, ಅದೆವೊ, ಅಡಿಗೆ, ಅಡೆಯೊ]ತ್ತದೆ ಕಿಱಿಕಿಱಿದನೆ ಸುಡದಿನಿಸರೆ ಪೊರಿಕನಾಗದೆ[ಯೆ] ಸಸಿದಂದೊಡೆಯೊಳಗೊಟ್ಟಿರ್ದರಳೆಯನೊಡನಳುರ್ವಂತಳುರ್ದನನಲನರಗಿನ ಮನೆಯಂ (ಪಂಪಭಾ. ೩–೫). ☞ "ಅರೆವಾಸಿ ಹೊತ್ತಿಕೊಳ್ಳು" (ಪಂಪಭಾ. ಕೋಶ); ಮೃಣಾಳನಾಳವೊಂದೊಂದ[ಡೆ] [ಪಾಠಾಂ. ದೊಡ, ದಡ] ವೊತ್ತಿ ಪತ್ತಿದವು (ಪಂಪಭಾ. ೫–೭) ; ಅಡೆವೊತ್ತಿದ[ಪಾಠಾಂ. ನ] ತಳಿರ್ವಾಸಿನ ಪಿಡಿದಿರ್ದಂ ಬುಜದ ನಡುವೆ ಮದನನಿನೊಡನೆರ್ದೊಡಲುರಿಪದೆ ಪುಟಪಾಕಂಗುಡೆ ಸುಡುವಂತಿರ್ಪುವಲ್ಲಿ ವಿರಹಿಜನಂಗಳ್ (ಅಜಿಪು. ೨–೧೦) ; ಕಡೆಗಾಲದೊಳಡೆವೊತ್ತಿ ಸುತ್ತಲುಂ ನೆಗೆವನಲನ ಪೊಗೆಯಂತೆಯುಂ (ಪಂರಾಮಾ. ೪–೫೪ ವ) ; ಅಡೆ[ಪಾಠಾಂ. ಅಡಿ]ವೊತ್ತೆ ಕೋಪಶಿಖಿ ಕಣ್ ಕಿಡಿಯಂ ಕೆಂಡ ಮುಮುನುಗುಳೆ (ಪಂರಾಮಾ. ೬–೧೩೮) ; ಅಡೆವೊ[ಪಾಠಾಂ. ಡಿಯೊ]ತ್ತುವ ಬೇಸಗೆಯೊಳ್ ಪಡೆವಣಿ ಬಿಡೆಕಾಯ್ದು ನೆತ್ತಿ ಛಿಟಛಿಟಲೆನುತುಂ ನಡೆಗೊಳ್ಳಿಯಂತೆ ನಡೆದುದು . . . ಅಹಿಪಂ (ಸೂಕ್ತಿಸು. ೧೦–೧೧೦).
[ಅಡೆ ? + ಪೊತ್ತು]

**ಅಡೆಹಬ್ಬ** (ನಾ). ಮಾನಸಂಕ್ರಮಣದಲ್ಲಿ ಬೆಲ್ಲದ ಹೂರಣವನ್ನೊಳಕೊಂಡ ಅಕ್ಕಿಯದೋಸೆಯನ್ನು ಅರ್ಪಿಸಿ ಲಕ್ಷ್ಮಿಯನ್ನು ಪೂಜಿಸುವ ಹೆಂಗಸರ ಒಂದು ಹಬ್ಬ ; ಮೂರುದೋಸೆಯ ಹಬ್ಬ. ☞ ಇದು ತಮಿಳರಲ್ಲಿ ಪ್ರಚುರವಾಗಿರುವ ಒಂದು ಹಬ್ಬ. [ಅಡೆ$_7$ + ಹಬ್ಬ]

**ಅಡೆಹಾಕು** (ಕ್ರಿ). (ಮಾವಿನಕಾಯಿ, ಬಾಳೆಯಕಾಯಿ ಮೊದಲಾದವನ್ನು) ಹಣ್ಣುಮಾಡುವುದಕ್ಕಾಗಿ ಶಾಖ ಹುಟ್ಟುವಂತೆ ಹುಲ್ಲಿನಲ್ಲಿ ಮುಚ್ಚಿಡು ; ಮಾಗುಹಾಕು : ಗಿಡದ ಮೇಲೆ ಪಣ್ಣಾಗುತ್ತಿದ್ದದ್ದನ್ನು ಇಲ್ಲಿಗೆ ತಂದು ಅಡೆಹಾಕಿಕೊಂಡು ಹೋದರು (ಶ್ರೀಕಥೆ. ೧೬೫) ; "ನಿನ್ನ

ಸಂಗೀತವನ್ನು ಉಗ್ರಾಣದಲ್ಲಿ ಅಡೆ ಹಾಕಬೇಕೆಂದು ಮಾಡಿರುವೆಯೇನು ?" (ನಟಸಾ. ೧೭೮). [ಅಡೆ$_4$ + ಹಾಕು (< ಪಾಯ್ಕು$_1$)]

**ಅಡ್ಕ** (ನಾ). (ಕರಾ) ವಿಶಾಲವಾದ ಸಮತಲ ಪ್ರದೇಶ: ಮನೆಯಿಂದ ಹೊರಟ ಕೋಟಿ ಚೆನ್ನಯರು ಬಲ್ಲಾಳನ ಆಳುಗಳೊಂದಿಗೆ ಪಾಲೆ ದಾಟಿ, ಬೈಲು ಕಳೆದು, ಬೆಟ್ಟ ಹತ್ತಿ, ಹಿತ್ತಲಿಗೆ ಇಳಿದು, ಅಡ್ಕವನ್ನು ಅಡರಿ, ಹೊಡೆಯಲ್ಲಿ ಹೋಗಿ (ಕೋಟಿಚೆ. ೧೪). ℙ ಈ ಶಬ್ದ 'ಕಲ್ಲಡ್ಕ', 'ಹಿರಿಯಡ್ಕ' ಮೊದಲಾದ ಊರುಗಳ ಹೆಸರುಗಳಲ್ಲೂ ಕಾಣಬರುತ್ತದೆ. [← ತುಳು. ಅಡ್ಕ]

**ಅಡ್ಕೆ** 'ಅಡಕೆ$_1$' ನೋ.

**ಅಡ್ಕೆತೋಟ** 'ಅಡಕೆದೋಂಟ' ನೋ.

**ಅಡ್ಡ$_1$** (ನಾ). ೧. ಪಕ್ಕದಿಂದ ಪಕ್ಕಕ್ಕೆ ಸಾಗಿರುವುದು; "ತಿರ್ಯಕ್" ಆಗಿರುವುದು. ℙ 'ಉದ್ದ' ಎಂಬುದಕ್ಕೆ ಇದು ಎದುರುಮಾತು. ೨. ಎದುರುಗಡೆ ಅಡ್ಡಿಯಾಗಿರುವುದು; ತಡೆ; ಪ್ರತಿಬಂಧಕ: ಮಿಱುಗುವ ತೋರಹಾರಮುಮನಪ್ಪಿನ ಕಾಳಸೆಗಡ್ಡಮೆಂಬ ಬೇಸಱಿನೊಳೆ ಕಟ್ಟಲೊಲ್ಲದೆ (ಪಂಪಭಾ. ೪-೧೦೫); ತದ್ವಿಯಚ್ಚರ ವಿಮಾನಕ್ಕಡ್ಡಮಾಗಿ ನಿಂದಾಗಳ್ (ಶಾಂತಿಪು. ೬-೩೨ ವ); ಇವಳ ಲಲಾಟಮೆಂಬ ಸಸಿಯಂ ನೆಱೆ ನೋಡುವವೆಂದೊಡೀ ಮನೋಭವನೆಮಗಡ್ಡಮಾಗಿ ನಿಡುವುರ್ವುಗಳೆಂಬ ಪೊದಳ್ದ ಚಾಪಮಂ . . . ಇಕ್ಕಿದಂ (ಧರ್ಮಾಮೃ. ೬-೨೦೦). ೩. (ಕರಾ) ತೊಲೆ: ಬಡವರು ಮನೆ ಕಟ್ಟುವಾಗ ತಾಳೆಯ ಮರದ ತುಂಡನ್ನು ಅಡ್ಡಕ್ಕೆ ಉಪಯೋಗಿಸುತ್ತಾರೆ (ರೂಢಿ).

**ಅಡ್ಡಉದ್ದದ ನ್ಯಾಯ** = ಬಗೆಹರಿಯದ ನ್ಯಾಯ; ಒಂದಕ್ಕೊಂದು ಹೊಂದಿಕೆಯಾಗದ ವಾದ: ನಮ್ಮ ನಿಮ್ಮ ಅಡ್ಡಉದ್ದದ ನ್ಯಾಯ ಬದಿಗಿಟ್ಟು, ಉದ್ದಕ ಹಾಂಗ ಒಳಗ ಹೋಗಬೇಕಂಬೊ ಪಂಚಮರಿಗೆ ಅಡ್ಡಾಗಿ ನಿಲ್ಲೋಣ (ಹೊಸಂಸಾ. ೩೭). **ಅಡ್ಡಂ ಮಾಡು** = ಅಡ್ಡಿ ಮಾಡು; ಪ್ರತಿಬಂಧಿಸು: ಮೃಗಮನವುಂಕಿಸಲುಮೊಲ್ದುಮೊಲ್ಲದ ನಲ್ಲರಂತೆ ಮಿಡುಕಿಸಲುಂ ಪಣಮುಡಿದರಂತಡ್ಡಂ ಮಾಡಲುಮೆಸೆದ ದೆಸೆಗಳ್ಗೋಡಿಸಲುಂ . . . ಆನೆ ಬಲ್ಲಂ (ಪಂಪಭಾ. ೫-೪೩ ವ). **ಅಡ್ಡಡ್ಡ** = ವಿರುದ್ಧ; ವ್ಯತಿರಿಕ್ತ: ಸಮಾಜದಲ್ಲಿ ಎಲ್ಲ ಕಡೆಗೆ ಅಡ್ಡಡ್ಡ ಸಂಗತಿಗಳು ನಡೆದರೆ ಅಡ್ಡಹೊತ್ತಿಗೂ ಬರಬೇಕು (ಹೊಸಂಸಾ. ೯). **ಅಡ್ಡಡ್ಡಲಾಗಿ** = ಪಕ್ಕದಿಂದ ಪಕ್ಕಕ್ಕೆ. **ಅಡ್ಡಲಾಗು, ಅಡ್ಡವಾಗು** = ಎದುರುಗಡೆ ಅಡ್ಡಿಯಾಗು: ಈ ಮಿತ್ರನ ತೇಜಕ್ಕಡ್ಡಲಾದೆಂ (ರಾಜಶೇ. ೬-೪).

[ದೇ. ‖ ತಮಿ. ಮಲ. ಅಟ್ಟಂ; ತುಳು. ತೆಲು. ಅಡ್ಡ]

**ಅಡ್ಡ$_2$**, ಅಡ$_1$ (ನಾ). ೧. ಅರ್ಧ: ಒಡನೆಯೆ ಜನಕಂ ತನ್ನ ಪುಣ್ಯದೊಳಡ್ಡಮಂ ಧಾರೆಯನೆಱೆವುದುಂ (ರಾಮಾಶ್ವ. ೧೦೭-೫). ೨. ಹಿಂದೆ ಪ್ರಚಾರದಲ್ಲಿದ್ದ "ಹಣ"ದ ಅರ್ಧ ಬೆಲೆಯ ಒಂದು ನಾಣ್ಯ. ℙ ಇದು ಹಿಂದಿನ ಏಳು ದುಡ್ಡು ಎಂದರೆ ೨೮ ಕಾಸುಗಳಿಗೆ ಸಮನಾಗಿತ್ತು: ಪಡುವಣ ಪೊಲದಲು ಶಿವೆಯಗೆರಿಯಾಱು ಮತ್ತರ್ವ್ವರುಗೆಯಂ [ಮತ್ತ]ರಿಂಗಡ್ಡ ಚಿನ್ನ ಲೆಕ್ಕದಿಂದಱುವಣ[ಮು]ಂ ಮೂಱು ಪಣಮಂ ತೆತ್ತುಂಬಂತಾಗಿ (ಸೌಇಇ. V, ೮೪೯-೩೫; 1044); ದೇವರ್ಗ್ಗೆ ಬಿಟ್ಟ ಅಡ್ಡವೊಂದು ಹಾಗವೊಂದು (ಎಇ. XIX, ೩೮-೩೭; 1144); ಹಸುವಿಗೆ ಹಾಗ ಎತ್ತಿಗೆ ಹಣವಡ್ಡ ಕೆಱುವಿಗೆ ಮೂಱು ಹಣ (ತುಱುಗಾ. ೧); ಸೂಜಿಯ ಕಾಯಕದಿ ಬಂದಡ್ಡದರೆಯನು ಬೀಯದರ್ಥಕೆ ಮೇಲುವೆಚ್ಚಕೆ (ಶಂಕದಾ. ೬-೨೦); ತನ್ನ ಕಾಯಕದಿಂದ ಬಂದಡ್ಡದಲ್ಲಿ ಸತಿಸುತರು ಸಮಯಾಚಾರದಯ್ಯ ಬಂದೆಲ್ಲ ಮಾಹೇಶ್ವರರ ಸಂತುಷ್ಟಿವಡಿಸುವುದು ನಿತ್ಯನೇಮವದಾಗಿರೆ (ಗುರುಚಾ. ೧೫-೪೮); ಅಗ ಜೈಮಿನಿಭಾರತ, ಅಮರ, ರಾಮಾಯಣ, ಅಡ್ಡ ಹಾಗ ಮುಪ್ಪಾಗದ ಲೆಕ್ಕಗಳು ಇವೆಲ್ಲಾ ಬಳಕೆಯಲ್ಲಿದ್ದವು (ಹುಟ್ಟಿಹ. ೮); ಎರಡಡ್ಡ ಒಂದು ಹಣ (ಗಾದೆ); (ಮೈಆರಿ. ೧೯೨೭, ೩೪-೬; 11ನೆಯ ಶತ. ನೋ). ೩. ಒಂದು "ವರಹ"ದ ತೂಕದಲ್ಲಿ ೧/೩೨ ಭಾಗ (ಕಿ): ಅಡ್ಡಾದುಡ್ಡಿಗೆ ಮೂರಾದರೆ ದುಡ್ಡು ಅಡ್ಡಕ್ಕೆ ಎಷ್ಟು (ಗಾದೆ. ಕಿ). ℙ ಇದು "ಹಣತೂಕ"ದಲ್ಲಿ ಅರ್ಧ. **ಅಡ$_1$**: ೨. ಹೊಂನೆಯ ಕೆಱೆಯ ಮಾರಗವುಡಂಗೆ ನಾಡ ಹೆಗ್ಗಡೆತನವಂ ಕೊಟ್ಟವು ೪೦ ವೂರಿಂಗೆ ವೊಂದೊಂಪಣ ೩೦ ವೂರಿಂಗೆ ಅಡ ಅಡ ಸಂತೆಯಾಯ ಮುಂತಾಗಿ ಕೊಟ್ಟವು (ಎಕ. XI, ಹೊಳಲ್ಕೆ. ೧೩೭-೮೬; 1307); ಹದಿನಾಲ್ಕು ವರಹನು ಅರು ಹಣಅಡವನು ಯಿಾ ಬಸವಗೆ . . . ಉಂಬಳಿಯಾಗಿ ಉತ್ತಾರವ ಕೊಟ್ಟಿಹೇವೆ (ಎಕ. VII, ಶಿಕಾರಿ. ೨೧೦-೧೬; 1758).

[ಪ್ರಾ. ಅಡ್ಢ (< ಸಂ. ಅರ್ಧ)]

**ಅಡ್ಡಓಣಿ** (ನಾ). ದೊಡ್ಡ ರಸ್ತೆಗೆ ಅಡ್ಡಲಾಗಿ ಇರುವ ಓಣಿ; "ಅಡ್ಡ ಓಣಿ" (By-lane. ಇಂಕನಿ). [ಅಡ್ಡ$_1$ + ಓಣಿ]

**ಅಡ್ಡಂ** (ಅ). ಅಡ್ಡಲಾಗಿ: ಅಡ್ಡಂ ನಿಮಿರ್ದ ಲತೆಯ ಮೇಲೆ ವಿಳಾಸಂ ನಿಲೆ ನೀಡಿ ಕಾಲಂ (ಆದಿಪು. ೧೧-೭೮); ಸಿದ್ಧಪದಮಂ ಕೆಯ್ಕೊಳ್ವುದರ್ಕಡ್ಡ ಮೊಡ್ಡಣಮೊಡ್ಡಿರ್ದಘಸೈನ್ಯಮಂ ತುಱಿಯಿಸಲ್ (ಶಾಂತಿಪು. ೧-೭); ಕಾಲಂ ಪಿಡಿದು ಬೀಸಿಯುಮಡ್ಡಂ ಪಿಡಿದು ಕಾಸಿಯುಂ (ಅಜಿಪು. ೧೧-೧೦ ವ); ಪಲರಂ ಸೋಲಿಸುತೆ ಬಱಿಕ್ಕೆ ತೊಡೆಗಳ ಮೇಲಡ್ಡಂ ಕೊರಡನಿಟ್ಟುರಾಗದಿ ಬಡಿಗುಂ (ಬಂಹರಿ. ೩-೨೩); ಕಲಮಕ್ಷೇತ್ರಂಗಳೊಳ್ ಪಾಮರಿಯರ ನವಲಾವಣ್ಯವಾರಾಶಿಯಡ್ಡಂ ನಿಲೆ ನಿಲ್ಕುಂ ಸಿಲ್ಕಿ ಕಾಲ್ ಕುಪ್ಪಳಿಸಿ ನಡೆಯದಲ್ಲಿಂದೆ ಪಾಂಥಪ್ರತಾನಂ (ಕಾವ್ಯಸಾ. ೧೧೩).

**ಅಡ್ಡಮುಂ ತಿಗಟಮುಂ** = ಅಡ್ಡಡ್ಡಲಾಗಿ ಮತ್ತು ತ್ರಿಕೋಣಾಕಾರವಾಗಿ: ಪಾಸುಂ ಪೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂ ತಿಗಟಮುಂ ಪರಿದು (ಗದಾಯು. ೬-೨೮ ವ); ನಲವೇಱಿ ಪುಟವೇಳು ತಡ್ಡಮುಂ ತಿಗಟಮುಂ [ಪಾಠಾಂ. ತ್ರಿಗುಟಮಂ] ಪರಿದಾಡಿ (ಪುಷ್ಪರ. ೯-೫); (ಅನಾರ. ೫೪-೭ ನೋ). [< ಅಡ್ಡ$_1$]

**ಅಡ್ಡಂಕೆ** (ನಾ). ೧. ಎಡದಿಂದ ಬಲಕ್ಕೆ ಅಡ್ಡಡ್ಡಲಾಗಿ ಬರೆದಿರುವ ಅಂಕೆಗಳು (ಕಿ). ೨. (ಮೇಲಿನಿಂದ ಕೆಳಕ್ಕೆ ಬರೆದಿರುವ ಸಂಖ್ಯೆಗಳ ಸಾಲುಗಳ ಕೆಳಗೆ ಅಡ್ಡಗೀಟು ಹಾಕಿ ಬರೆದ ಆ ಸಂಖ್ಯೆಗಳ) ಮೊತ್ತ (ದಕ. ಕಿ). 'ಉದ್ದಂಕೆ' ಪರಾ. [ಅಡ್ಡ$_1$+ ಅಂಕೆ$_2$]

**ಅಡ್ಡಂಗಟ್ಟು**, ಅಡಗಟ್ಟು, ಅಡ್ಡಕಟ್ಟು$_1$, ಅಡ್ಡಗಟ್ಟು$_1$ (ಕ್ರಿ). ೧. ಅಡ್ಡಲಾಗಿ ದಾರಿಯನ್ನು ಕಟ್ಟಿ ನಿಲ್ಲು; ತಡೆದು ನಿಲ್ಲಿಸು: ಮಲ್ಲಿಕಾರ್ಜುನಯತೀಂದ್ರನನಱಸಿ ಪೋಪ ಪಥದಲ್ಲಿಯಡ್ಡಂಗಟ್ಟೆ ಭಸ್ಮಾದ್ರಿವೊಲ್ ಕುಱುಪನೆಲ್ಲಿಯುಂ ಕಾಣಿಸದೆ (ಪದ್ಮರಾ. ೨-೨೧). **ಅಡಗಟ್ಟು**: ೧. "ಅಡಗಟ್ಟದನೆನಲಡ್ಡಲಾದಂ" (ಭಾರನಿ. ೪೫); ಕರ್ಣನ ಥಟ್ಟಣೆಯ ಕಂಡನಿಲಸುತನಡಗಟ್ಟಿದನು (ಕುವ್ಯಾಕ. ೧೦-೧೩); (ಕುವ್ಯಾದ್ರೋ. ೩-೪೫; ೩-೪೮; ಕುವ್ಯಾಕ. ೧೧-೩೪; ೧೪-೧೪ ನೋ); ಮುಟ್ಟವಿಸಿ ಬಹ ರಕ್ಕಸಿಯನಡಗಟ್ಟ ನಿಂದನು (ತೊರರಾ. ೧-೧೦-೧೨); ಪೋಪ ಕುವರಿಯ ಮುಂತಡಗಟ್ಟೆ ನೋಳ್ಪವರು ಭ್ರಾಂತರಾದರು (ಮೋಹತ. ೨೫-೪೦). **ಅಡ್ಡಕಟ್ಟು$_1$**: ೧. ಘೋರಾರಣ್ಯದಿ ತಿರುಗುವ ಮೃಗಗಳು ಅಡ್ಡಕಟ್ಟೆ [ಪಾಠಾಂ. ಗಟ್ಟ]ದರೇನು (ಪುರಂದ. ೧-೧೩೮-೧). ೨. ಅಡ್ಡಲಾಗಿ ಜೋಡಿಸು, —ರಚಿಸು. ℙ ಉದ್ದವಾಗಿ ಅಥವಾ ಮೇಲ್ಮುಖವಾಗಿ ಅಲ್ಲ: ಒಂದು ಕ್ಷಣದೊಳಗೆ ಆ ಕಲ್ಲು ಅಡ್ಡಕಟ್ಟಿದ ತೊಲೆಯ ಮೇಲೆ ನಿಂತಿರುವ ಒಬ್ಬ ಉಪ್ಪಾರನಿಗೆ ಹೋಗಿ ಮುಟ್ಟಿತು (ಮುಂಬಯಿ. ೪-೧೪೬). **ಅಡ್ಡಗಟ್ಟು$_1$**: ೧. ಕಾವೇರಿಯಿತ್ತಡಿಯನಡ್ಡಗಟ್ಟುವೆನೆನುತ ಭಾವದಿಂ ಶಿವನುಮಂ ನೆನೆದು ಕಟ್ಟುವೆನೆಂದು (ಸೋಮಾರ. ೬೯-೨); ಲಿಂಗವಂತನ ಬರವಿಗವರುಗಳಡ್ಡಗಟ್ಟಿರಲು (ಬಸವು. ೨೧-೯೯); ಮುಟ್ಟಿದಬಲೆಯರಡ್ಡ

ಗಟ್ಟಿ ಬರ್ಪಲ್ಲಿ ಬಲ್ಪಿಂದಲೆಳೆದೊಯ್ದುರೋ (ಚೆಬಪು. ೧೦–೩೩) ; ಅಂಗನೆ ಪುಸಿಗೆ ದುಃಖಿಸುತ್ತೈದಿಯಾತನ ಮುಂಗಡೆಯಡ್ಡಗಟ್ಟಿದಳು (ಕಂಸವಿ. ೬–೧೬೬). [ಅಡ್ಡಂ + ಕಟ್ಟು$_1$]

**ಅಡ್ಡಂಗೆಡಪು,** ಅಡಗೆಡಹು, ಅಡ್ಡಗೆಡಹು (ಕ್ರಿ). ೧. ಅಡ್ಡಲಾಗಿ ಬೀಳಿಸು. ೨. ನಮಸ್ಕರಿಸುವಂತೆ ಮಾಡು ; ಅಡ್ಡಬೀಳಿಸು ; ಶರಣಾಗುವಂತೆ ಮಾಡು : ಆ ಗದಾಧರನ ಕರೆದು ತಂದಾಗಳೂರ್ಧ್ವರೇತಂಗೆಯಡ್ಡಂಗೆಡಪಿದನಾ . . . ಶಂಕರ ದಾಸಿಮಯ್ಯಗಳು (ಪಾಸೋಪು. ೪–೧೨೬). **ಅಡಗೆಡಹು :** ೧. ಅಡಗೆಡಹಿದರು ಗಜಗಿರಿಗಳನು (ಕುವ್ಯಾಭೀ. ೫–೯) ; ಕಡು ಮನದ ಕೈಸೂಞಿಗಾಜಿರನಡಗೆಡಹಿದನು (ಕುವ್ಯಾಭೀ. ೫–೨೩) ; ತಡೆತಡೆದು ಕಡುಗಲಿಗಳಡಗೆಡಹುತಿರ್ಪುದಂ . . . ಫಲುಗುಣಂ ನೋಡಿ ಖತಿಯಿಂದೆ ಘುಡುಘುಡಿಸಿ ಕಿಡಿಕಿಡಿಯಾದನು (ಜೈಮಿಭಾ. ೨೨–೪೪). **ಅಡ್ಡಗೆಡಹು :** ೧. ಬಿಲ್ಲಿನಲಿ ಬಡಿದಡ್ಡಗೆಡಹುವೆನೆಂದನಾ ಕರ್ಣ (ಕುವ್ಯಾಭೀ. ೧–೩೬) ; ರಣದೊಳಗಡ್ಡಗೆಡಹಿದನಾ ರಾಮು (ಕುರಾಸಾಂ. ೧೩–೧೯೯). ೨. ಒಡ್ಡಿದ ಶೂಲವ ಹಾಯ್ದು ಮೈಲಾರದ ದೊಡ್ಡಯ ದೇವರಿಂದವನ ಅಡ್ಡಾಕಿಲ್ಲದೆ ತರಿಸಿ ನಿನ್ನಯ ಕಾಲಿಗಡ್ಡಗೆಡಹುವೆನಂಜದಿರು (ಕುರಾಸಾಂ. ೨೪–೩೭). [ಅಡ್ಡಂ + ಕೆಡಪು]

**ಅಡ್ಡಂಗೆಡೆ,** ಅಡಂಗೆಡೆ, ಅಡಗೆಡೆ, ಅಡ್ಡಗೆಡೆ (ಕ್ರಿ). ೧. ಅಡ್ಡಲಾಗಿ ಬೀಳು. ೨. ಅಡ್ಡಬೀಳು; ನಮಸ್ಕಾರಮಾಡು : ತೊಲಗದಡ್ಡಂಗೆಡೆದು ಪೊನ್ನಂಬಲದ ಪರಿಸೂತ್ರದೊಳು ಪೆರ್ಚಿದ ಜಲರುಹೋದರನೆಂಬ ಕಸವಂ ಕಳೆದು (ಸಾನಂಚ. ೯–೨೯). **ಅಡಂಗೆಡೆ :** ೧. ಭೂಧರೋತ್ಕರಮಿರದೆಯ್ದೆ ಬೇರ್ಕೊಱೆದಡಂಗೆಡೆಯುತ್ತಿರೆ (ಕುಸುಮಾ. ೬–೩೧) ; (ಶಾಂತೀಶ್ವ. ೧೨–೫೩ ನೋ). **ಅಡಗೆಡೆ :** ೧. ನೂಱು ಮಕ್ಕಳು ಬೀಯವಾದರೆ ಮಾವ ಎಂದರು ಸೊಸೆಯರಡಗೆಡೆದು (ಕುವ್ಯಾಕ. ೧–೫) ; ಹಾಹಾಯೆಂದು ದನುಜರಡಗೆಡೆದವನಿಗೊಡನೆದ್ದು ಬಾಯನಂಗೈಗಳಿಂ ಬಡಿದು (ಚೆಬಪು. ೨೧–೨೮) ; ಪತಿಯ ಮೇಲಡಗೆಡೆದು ದುಃಖದಿಂದ (ತುರಂಗ. ೭೮–೮). ೨. ಕಾಯಬೇಕೆಲೆ ದೇವ . . . ಎಂದಡಗೆಡೆದನವನಿಯಲಿ (ತೊರರಾ. ೬–೩–೨೨) ; ನಡುಗಿ ಭಯದಲಿ ಕಾಲಮೇಲಡಗೆಡೆದು ಬಿನ್ನಹ ಮಾಡಿದನು (ನಿಭಾಗ. ೧–೧೨–೨೩) ; ಹರಿಯ ಮುಂಪಥದೊಳಡಗೆಡೆಯುತೆಲೆ ದೇವ ಬಿಜಯಂಗೈದೆ ಕಥನವನೆನಗೆ ನಿರೂಪಿಸಬೇಹುದು (ಜೈಮಿಭಾ. ೧೪–೨೮). ೩. ಉರುಳಿಬೀಳು ; ಸಾಯಿ : ರಣದೊಳಿವನಡಗೆಡೆದನಾದರೆ ಮಣಿಯ ದಿಱಿದಪೆನೆನ್ನೆಬರ ಮಾರ್ಗಣೆಯನಾಹವದೊಳಗೆ ಸಂಧಿಸೆನೆಂದನಾ ಕರ್ಣ (ಕುವ್ಯಾಭೀ. ೧–೩೭). **ಅಡ್ಡಗೆಡೆ :** ೨. ತಪ್ಪು ತಪ್ಪೆನ್ನ ರಕ್ಷಿಸೆನ್ನೊಡೆಯಯೆಂದೆನುತಡ್ಡಗೆಡೆದ (ಭರಚ. ೨೫–೬೫). [ಅಡ್ಡಂ + ಕೆಡೆ$_1$]

**ಅಡ್ಡಂಚು** (ನಾ). ಪಂಚೆ, ಸೀರೆ ಮುಂತಾದವುಗಳ ಸೆರಗಿನಲ್ಲಿ ಅಡ್ಡಡ್ಡಲಾಗಿರುವ ಬಣ್ಣದ ಪಟ್ಟಿ, —ಗೆರೆ (ಸ್ಯಾಂಡರ್). [ಅಡ್ಡ$_1$ + ಅಂಚು$_2$]

**ಅಡ್ಡಂಪಾಱು** 'ಅಡ್ಡಂಬಾಱು' ನೋ.

**ಅಡ್ಡಂಬರ್,** ಅಡಂಬರ್, ಅಡ್ಡಬರ್, ಅಡ್ಡಬರು, ಅಡ್ಡವರ್ (ಕ್ರಿ). ೧. ಅಡ್ಡಲಾಗಿ ಬರು: ಒಂದೊಂದಱ ಸೌಂದರ್ಯಮನೊಂದೊಂದೀಕ್ಷಿಸಲೊಡರ್ಚಿ ನಾಸಿಕಮಡ್ಡಂ [ಪಾಠಾಂ. ನಾಸಿಕೆಯಡ್ಡಂ ; ನಾಸಿಕವಡ್ಡಂ] ಬಂದಂದಮನೀಕ್ಷಿಸಿ ಪೆಱನಿಂ[ದಂ]ದೀಕ್ಷಿಸು[ವು]ವವಳ ನಿಡಿಯ ಸಳ್ಗಣ್ಗಳ್ (ಕವಿರಾ. ೩–೨೩೩) ; ಪರಮಾಯುವ ಬರೆಗಡ್ಡಂಬರೆ ರೇಖೆಗಳೊಳಗೆ ಕುತ್ತದಿಂ ಪೊಱಗಸ್ರೋತ್ಕರದಿನಪಮೃತ್ಯುವಕ್ಕುಂ (ಲೋಕೋಪ. ೧೧–೧೬) ; (ಲೀಲಾವ. ೩–೪೨ ; ಶಮದ. ೧೦೪, ಪ್ರಯೋ. ನೋ) ; ೨. ಅಡ್ಡಿಯಾಗು ; ಅಡ್ಡಿಮಾಡು ; ತಡೆಗಟ್ಟು: ಆನವರ್ಗೆ ಪಟ್ಟಮಂ ಕಟ್ಟಿ ನೆಲನಂ ಪಚ್ಚುಕೊಡುವಾಗಳಡ್ಡಂಬರ್ಪ ಗಂಡರಂ ನೋಟ್ಟಪ್ಪೆನೆಂದು ಭೀಷ್ಮರ್ ಬಗ್ಗಿಸಿದೊಡೆ (ಪಂಪಭಾ. ४–೭ ವ) ; ಆಂ ಬರ್ಪಾಗಳೊಂದು ಸಿಂಹಂ ಬರಲೀಯದೆ ತಡೆದಡ್ಡಂ ಬಂದೆನ್ನ ಬರವಿನ ವೃತ್ತಾಂತಮಂ ಬೆಸಗೊಂಡಿಂತೆಂದುದು (ಪಂಚತಂ. ೯೦–೩); (ಸುಕುಮಾ. ೭–೫೫ ; ಧರ್ಮಾಮೃ. ೯–೨೩ ನೋ). **ಅಡಂಬರ್ :** ೧. ಮೊಲನಂ ಬಡಿಕೋಲಿನಿಂದಡಂಬಂದಿಡು ಡಂಗೆಯಿಂದೆ ಪೊಡೆ ಪೇರುಡುವಂ (ಮಹಾನೀ. ೨–೧೪). **ಅಡ್ಡಬರ್ :** ೨. ಅಂತಕಂ ಗೋಣ್ಮುರಿಗೊಂಡೆಟಿದುಯ್ವೊಡಡ್ಡಬರ್ಪರುಮೊಳರೇ (ಅಜಿಪು. ೨–೮೫). **ಅಡ್ಡಬರು :** ೨. ನಮ್ಮ ದೇಶದೊಳಗಿನ ಜಾತೀಯತೆಯು ರಾಷ್ಟ್ರೀಯ ಸೈನ್ಯನಿರ್ಮಾಣಕ್ಕೆ ಬಗೆಬಗೆಯಾಗಿ ಅಡ್ಡಬರುತ್ತಿದೆ (ಯಕ್ಷಪ್ರ. ೬೨). **ಅಡ್ಡವರ್ :** ೧. ಮಿನುಗುವ ಕೊಂಬಿನಚ್ಚುಕಿಱುಗೊಂಬಿನ ತಳ್ತರಗಿಲ್ ಕವಲ್ತ ಕೊಂಬಿನ ಮಡವಡ್ಡವಂದ ನಳಿಗೊಂಬಿನ ಪತ್ತುಗೆ . . . ಚೆಲ್ವೆನೆ ನಡೆತಂದುವಂದಸುಗೆಯೆಂಬ ನೆಗಟ್ತೆಯ ತೇರ್ಗಳೆತ್ತಲುಂ (ಕಬ್ಬಿಕಾ. ೨೧೩). [ಅಡ್ಡಂ + ಬರ್]

**ಅಡ್ಡಂಬರಿ** (ಕ್ರಿ). ಅಡ್ಡಲಾಗಿ ಹರಿ; ನುಗ್ಗು : ಇದಪೂರ್ವಂ ವಾರ್ಧಿಯಡ್ಡಂಬ[ಪಾಠಾಂ. ಪ]ರಿದುದಿಳೆಯೊಳೆಂಬಂತೆ ತಾಂ ಗುಣ್ಪುಪೆಂಪಂ ಪುದಿದತ್ಯಾಶ್ಚರ್ಯಮೆಂಬಂತೆ . . . ನದಿ ಚೆಲ್ವಾದತ್ತು (ಚಂದ್ರಪು. ೧–೮೩). [ಅಡ್ಡಂ + ಪರಿ$_1$]

**ಅಡ್ಡಂಬರಿಯಿಸು** (ಕ್ರಿ). ಅಡ್ಡಲಾಗಿ ಹರಿಯುವಂತೆ ಮಾಡು, — ನುಗ್ಗಿಸು : ಪೊಱಮಡಿಪಿದಿರೇಱಿಪಡ್ಡಂಬರಿಯಿಪ . . . ಘೋಳಾಯಿಲರ್ ನೆರೆದು (ರಾಜಶೇ. ೬–೧೧ ವ). [ಅಡ್ಡಂಬರಿ + –ಇಸು$_3$]

**ಅಡ್ಡಂಬಾಱು,** ಅಡ್ಡಂಪಾಱು (ಕ್ರಿ). ಅಡ್ಡಲಾಗಿ ಹಾರು ; ನೆಗೆ : ಮುಕ್ತಾಹಾರಮುಂ ನೀಲಕುಂತಳಮುಂ ನರ್ತಿಸೆ ಮೇಲುದುಂ ನಿಱಿಯುಮಡ್ಡಂಬಾಱೆ (ಜಗವಿ. ೧೬–೮೪). **ಅಡ್ಡಂಪಾಱು:** ತೊಡರಿಯಡ್ಡಂಪಾರ್ವ ಜೀವಿಗಳೆಡೆಗುಪದ್ರವವಾದುದೋ ಪೋಪೆಡೆಯೊಳೆನುತಂ ಕೈಗಳಂ ತವೆ ಬೀಸದಿಹನಂತೆ (ಬಸಪು. ೩೮–೯). [ಅಡ್ಡಂ + ಪಾಱು$_1$]

**ಅಡ್ಡಂಬೀೞ್,** ಅಡಬೀಳು, ಅಡ್ಡಬೀಳ್, ಅಡ್ಡಬೀಳು (ಕ್ರಿ). ೧. ಅಡ್ಡಲಾಗಿ ಬೀಳು: ಬೇಂಟೆಯ ನೆವದಿಂದ[ಲ್ಲಿಂ ತಳರ್ದು] ಬಟ್ಟೆಯ ಕಣ್ಣೊಳಡ್ಡಂಬಿಟ್ಬಿರ್ದ ವೃದ್ಧವಾನರನಂ ಕಂಡು (ಪಂಪಭಾ. ೮–೩೧ ವ). ೨. ಅಡ್ಡಿಮಾಡು ; ಪ್ರತಿಭಟಿಸು : ಬಿಟ್ಟ ದತ್ತಿಯಾರಡ್ಡಬಿದ್ದಡವರ್ಗ್ಗೆ ಪಾಪ (ಸೌಇಇ. IX-i, ೧೩೩–೪೦ ; 1068). **ಅಡಬೀಳು :** ೧. ಕರೆಕರೆದು ಕಡುಚಪಳೆಯರು . . . ಅರೆನಗೆಯ ಬಿಱುನಗೆಯ ನಗೆಗಳ ಹೊರಳಿಗಳಲಡಬಿದ್ದು ಕೈ ದಾವರೆಯ ಕಮಲಂಗಳಲಿ ತೆವರಿದರಿಟ್ಟು ಭೂಭುಜರ (ತೊರರಾ. ೧–೧೫–೮). ೩. ನಮಸ್ಕರಿಸು : ನಿರ್ದೈವದೈತ್ಯ . . . ತನ್ನಂತರಂಗದೊಳಿಡಿದಿರ್ದ ವಿದ್ಯವ ರತೀಶ್ವರಗೆ ನಿರ್ಧರವಾಗಿ ಸಮರ್ಪಿಪ ತೆಱದಡಬಿದ್ದ ಭೇತಾಳ ದೇವರಿಗೆ (ಮೋಹತ. ೧೧–೬೪) ; ನಾಡಿಗ ಯಂಕಪನು ಅಡಬಿದ್ದು ವೇಡಿಕೊಂಡಾಗ (ಎಕ. VII, ಶಿವಮೊ. ೧೦೭–೨೭ ; 1576). **ಅಡ್ಡಬೀಳ್ :** ೧. ಮುಳುಗುವೆನಡ್ಡಬೀಳ್ವೆನು ತೆರೆಯ ಹೊಯ್ಲಿನಲಿ (ಕುವ್ಯಾಅ. ೧೪–೨೫). ೨. ಹಗೆ ಹೊಕ್ಕಿಱಿವರಿನ್ನಾರಡ್ಡಬೀಳ್ವರು ನಿನ್ನ ಮಕ್ಕಳಿಗೆ (ಕುವ್ಯಾದ್ರೋ. ೧–೭). **ಅಡ್ಡಬೀಳು:** ೧. ದೊಡ್ಡತನವನು ನೀಗಿ ಗಡ್ಡದ ತಾಪಸನಡ್ಡಬಿದ್ದಿರೆ ಗೋಪಿಯರು ಗಡ್ಡವ ಪಿಡಿದು ತೂಗುತ ಗೋಪರೊಳು ಪೇಳ್ವರಡ್ಡಬಿದ್ದದ್ದು ನಗುವರು (ಅಂಜಚ. ೨–೭೭) ; ನಗೆಯೊಳಗಡ್ಡಬಿದ್ದಳು ಪಾಂಡುಪುತ್ರರ ಬೊಡ್ಡಿ (ಕುವ್ಯಾಸ. ೧೨–೪೩) ; ಅವದಿರ ಬೀಸರಕೆ ಬಂದಡ್ಡಬೀಳುವ ಭಟರ ಕೆಡೆಯೆಚ್ಚ (ಕುವ್ಯಾದ್ರೋ. ೫–೭೫). ೩. ಸಿದ್ಧರಾಮ ತಂದೆಗಳು ಅಡ್ಡಬಿದ್ದು ಬಿನ್ನೈಸುವ ಪ್ರಸ್ತಾವದ ವಚನ (ಶೂನ್ಯಸಂ. ४೭–४) ; ಮುಂದಿಯೊಳಗಡ ಹಾಯ್ದನೆತ್ತಿ ಪದನಡ್ಡಬಿದ್ದವರ (ಕುವ್ಯಾಅ. ೫–೪೦) ; ಹೆದ್ದೊರೆಗಳು ಕೈಗಾಣಿಕೆಯಿತ್ತಡ್ಡಬಿದ್ದರು ಬಿಂಕವ ಬಿಸುಟು (ಮೋಹತ. ೨೨–೫೪) ; ಆಗಲ್ಕೆ

ನೀವಿದಕಡ್ಡಬೀಳಲದೇಕೆ ಮಾಗಧ ನೀನೆಂದ ನುಡಿಯ ಹೋಗಲಾಡುವೆನೆ (ಭರಚ. ೩೫–೩೮). [ಅಡ್ಡಂ + ಬೀೞ್$_1$]

**ಅಡ್ಡಂಬು** (ನಾ). ಅಡ್ಡಲಾಗಿ ಬಿಡುವ ಬಾಣ; ಅಡ್ಡಬಾಣ: ರಥಮಂ ಮೂವಳಸಾಗೆ ಮುತ್ತಿಕೊಂಡು ಪೋಗಪಡ್ಡಂಬಿನ [ಕೂರಂಬಿನ ಕವಲಂಬಿನ] . . . ಬಲ್ಸರಿಯಂ ಸುರಿಯೆ (ಧರ್ಮಾಮೃ. ೧೩–೧೨೪). [ಅಡ್ಡ$_1$ + ಅಂಬು$_1$]

**ಅಡ್ಡಂಬುಡುಕ**, ಅಡ್ಡಾಬುಡುಕ, ಅಡ್ಡೆಬಡಕ (ನಾ). ೧. ಎರಡು ಪಕ್ಷಗಳಲ್ಲೂ ಸಮಸಂಖ್ಯೆಯ ಆಟಗಾರರು ಇರಬೇಕಾದ ಆಟದಲ್ಲಿ ಒಂದುಕಡೆ ಒಬ್ಬ ಆಟಗಾರ ಕಡಮೆಯಾಗಿದ್ದರೆ, ಎರಡುಕಡೆ ಗಳಲ್ಲೂ ತಾನು ಸೇರಿಕೊಂಡು ಆಟವಾಡುವ ವ್ಯಕ್ತಿ: ಆ ಸಂಜೆಯ ಚೆಂಡಾಟದಲ್ಲಿ ಒಂದು ಕಡೆ ಐದು ಜನ, ಇನ್ನೊಂದು ಕಡೆ ನಾಲ್ಕು ಜನ ಇದ್ದರು. ಆದ್ದರಿಂದ ಗುಂಡಣ್ಣ ಅಡ್ಡಂಬುಡುಕನಾಗಬೇಕಾಯಿತು(ರೂಢಿ). ೨. ಪರಸ್ಪರ ವಿರೋಧಿಗಳಾದ ಎರಡು ಪಕ್ಷಗಳ ಜೊತೆಗೂ ಸೇರಿ ಕೊಳ್ಳುವವನು: ಆ ಹಳ್ಳಿಯಲ್ಲಿ ಕೆಲವು ಮಂದಿ ಅಡ್ಡಂಬುಡುಕರು ಇದ್ದರು (ರೂಢಿ). **ಅಡ್ಡಾಬುಡುಕ** (ದಕ). **ಅಡ್ಡೆಬಡಕ** (ಉಕ). ೨. ಅವನು ಅಡ್ಡೆಬಡುಕನಿದ್ದಾನೆ; ಅವನನ್ನು ನಂಬಬೇಡಿರಿ (ರೂಢಿ). [ಅಡ್ಡ$_1$ + ?]

**ಅಡ್ಡಂಬುಡುಕೆ** (ನಾ). ಅಡ್ಡಂಬುಡುಕನ ಸ್ಥಿತಿ, —ವರ್ತನೆ: ನಿನ್ನ ಅಡ್ಡಂಬುಡುಕೆ ನನ್ನ ಹತ್ತಿರ ಸಾಗುವುದಿಲ್ಲ (ರೂಢಿ). [< ಅಡ್ಡಂಬುಡುಕ]

**ಅಡ್ಡಕಂಡು** (ನಾ). ಅಡ್ಡಡ್ಡಲಾಗಿ ಕತ್ತರಿಸುವುದು; ಅಡ್ಡಕೊಯ್ತ. [ಅಡ್ಡ$_1$ + ಕಂಡು (< ಖಂಡ)]

**ಅಡ್ಡಕಂಬಿ**, ಅಡ್ಡಗಂಬಿ (ನಾ). ೧. ಕೊರಳ ಹಿಂಭಾಗದ ಮೇಲೆ ಅಡ್ಡಡ್ಡಲಾಗಿ ಇಟ್ಟುಕೊಂಡು ಹೊರುವ ಕಂಬಿ; ಅಡ್ಡೆ (ಕ). ೨. ಪಂಚೆ, ಸೀರೆ ಮುಂತಾದವುಗಳ ಸೆರಗಿನ ತುದಿಯಲ್ಲಿ ಅಡ್ಡಡ್ಡ ಲಾಗಿರುವ ಬಣ್ಣದ ಪಟ್ಟಿ; ಅಡ್ಡಂಚು. ೩. ಪೆಟ್ಟಿಗೆ ಮೊದಲಾದವು ಗಳ ಸುತ್ತ ಅಡ್ಡಡ್ಡಲಾಗಿ ಜೋಡಿಸಿದ ಲೋಹದ ಪಟ್ಟಿ; ಅಡ್ಡಪಟ್ಟಿ (ಕ). **ಅಡ್ಡಗಂಬಿ**: ೨. ಅಗಸರವನಿಗೆ ಪಂಚೆ ಹಾಕಿದ ಮೇಲೆ ಅದರ ಅಡ್ಡಗಂಬಿಯೆಲ್ಲಾ ಕದಡಿಹೋಯಿತು (ರೂಢಿ). [ಅಡ್ಡ$_1$ + ಕಂಬಿ$_1$]

**ಅಡ್ಡಕಟ್ಟಿಗೆ** (ನಾ). ಒಂದು ಬಗೆಯ ವಾದ್ಯ: ಉಪ್ಪಂಗ, ಏಕನಾದ, ಕಯ್ತುಮ್ಮಟಿ, ಅಡ್ಡಕಟ್ಟಿಗೆ . . . ಒಂದೂ ಇಲ್ಲ ಕಣಾ (ಸುಗುಗಂ. ೯೬–೧೩). [ಅಡ್ಡ$_1$ + ಕಟ್ಟಿಗೆ]

**ಅಡ್ಡಕಟ್ಟು**$_1$ 'ಅಡ್ಡಂಗಟ್ಟು' ನೋ.

**ಅಡ್ಡಕಟ್ಟು**$_2$ (ನಾ). ೧. ಅಡ್ಡಲಾಗಿ ಹಾಕಿರುವ ಕಟ್ಟು, —ತಡೆ. 'ಅಡ್ಡಕಟ್ಟುವಡೆ' ಪರಾ. ೨. ಕೆಲಸಗಾರರು ಕೆಲಸಮಾಡುವಾಗ ತಮ್ಮ ಧೋತ್ರದ ಕೊನೆಯನ್ನು ಹೆಗಲಮೇಲಿನಿಂದ ಹಿಂದಕ್ಕೆ ತೆಗೆದುಕೊಂಡು ಹಿಂಭಾಗದಲ್ಲಿ ಬಿಗಿದು ಕಟ್ಟಿಕೊಳ್ಳುವ ಕಟ್ಟು (ಉಕ. ಕ). [ಅಡ್ಡ$_1$ + ಕಟ್ಟು$_2$]

**ಅಡ್ಡಕಟ್ಟುವಡೆ** (ಕ್ರಿ). ಅಡ್ಡಕಟ್ಟನ್ನು ಪಡೆ; ತಡೆಯನ್ನು ಹೊಂದಿರು: ಸಂಧ್ಯಾನಯುಕ್ತಾತ್ಮಪತಿಗಳ ಜನ್ಮಜಾಡ್ಯದೊಳ್ ತಾನಡ್ಡಕಟ್ಟುವಡೆದಾ ಕಾವಗಟ್ಟಿ ಸ್ಮರವೈರಿಯಾಕ್ಷಣಘಾತಕೆ ಆನದೊಡೆ (ಚೆಬಪು. ೨೦–೨೦). [ಅಡ್ಡಕಟ್ಟು$_2$ + ಪಡೆ$_1$]

**ಅಡ್ಡಕಟ್ಟೆ**, ಅಡ್ಡಗಟ್ಟೆ (ನಾ). (ನದಿ ಮೊದಲಾದವಕ್ಕೆ) ಅಡ್ಡಲಾಗಿ ಹಾಕಿರುವ ಕಟ್ಟೆ. **ಅಡ್ಡಗಟ್ಟೆ** (ಕ). [ಅಡ್ಡ$_1$ + ಕಟ್ಟೆ$_1$]

**ಅಡ್ಡಕತ್ತರಿ** (ನಾ). "ಕತ್ತರಿತೀರು"ಗಳನ್ನು ಬಂಧಿಸುವ ಅಡ್ಡತೀರು (ಕಸಂಗ್ಲಾ. ೨೬). [ಅಡ್ಡ$_1$ + ಕತ್ತರಿ]

**ಅಡ್ಡಕಥೆ** (ನಾ). ಮುಖ್ಯಕಥೆಯಲ್ಲಿ ನಡುವೆ ಪ್ರಾಸಂಗಿಕವಾಗಿ ಬರುವ ಬೇರೆಯ ಕಥೆ; ಉಪಕಥೆ: ಹರಿಕಥೆಯವರ ಅಡ್ಡಕಥೆ, ಅಡ್ಡ ಮಾತು, ಅಡ್ಡನಗೆ ಇವೆಲ್ಲವೂ ಇಂದಿನ ಹರಟೆಗೆ ಸಂಸ್ಕಾರವನ್ನು ಕೊಡು ವುವು (ಸಾಹಿವಿ. ೧೧೫). [ಅಡ್ಡ$_1$ + ಕಥೆ]

**ಅಡ್ಡಕಪ್ಪಟತೀರ್ಥಕ** (ನಾ). ಅರ್ಧಬಟ್ಟೆಯನ್ನು ಧರಿಸಿದ ಸಂನ್ಯಾಸಿ ಗಳ ಸಂಪ್ರದಾಯ: ನೀವಿಲ್ಲಿಂದಿತ್ತ ರಾತ್ರಿಯೊಳನ್ನಮಂ ಬೇಡಿಬಪ್ಪಾ ಗಳ್ ಬಿಳಿಯ ಕಂಬಳಿಯಂ ಪೊದೆದು . . . ಬಪ್ಪುದಲ್ಲದೆ ಬಂದಂದನರ್ಥ ಮುಕ್ಕುಮೆಂಧೊಡಾ ಪ್ರಕಾರದೊಳೆ ಕೆಲವು ದಿವಸಂ ನಡೆಯಲವರ್ಗಡ್ಡ ಕಪ್ಪಟತೀರ್ಥಕರೆಂಬ ಪೆಸರಾಗಲ್ (ಕಗವಿ. ೧೧೧–೨೦ ರಾಜಾವ). [ಅಡ್ಡ$_2$ + ಕಪ್ಪಟ + ತೀರ್ಥಕ]

**ಅಡ್ಡಕರಡಿಗೆ** (ನಾ). (ಉದ್ದಕ್ಕಿಂತ) ಅಗಲ ಹೆಚ್ಚಾಗಿರುವ ಕರಡಿಗೆ. [ಅಡ್ಡ$_1$ + ಕರಡಿಗೆ]

**ಅಡ್ಡಕಲ್ಲು** (ನಾ). "ಬೀಸುವ ಕಲ್ಲು" (ಕಸ್ತೂಕೋ). [ಅಡ್ಡ$_1$ + ಕಲ್ಲು]

**ಅಡ್ಡಕಸಬಿ** (ನಾ). ೧. ತನಗೆ ಸಹಜವಲ್ಲದ ವೃತ್ತಿಯನ್ನು ಹಿಡಿದ ವನು: ಒಂದು ಜೀವನ ಚರಿತ್ರೆಯನ್ನು ಕೂಡ ಬರೆಯಲು ಯೋಗ್ಯತೆ ಯಿಲ್ಲದ ಅಡ್ಡಕಸಬಿಯ . . . ಜಡಬುದ್ಧಿಯ ಕೆಲಸ ಗ್ರಂಥಸಂಪಾದನೆ ಎಂಬ ಅಭಿಪ್ರಾಯವಿದೆ (ಕನ್ನಸಂ. ೨೬೯). ೨. ಕೆಲಸದಲ್ಲಿ ನುರಿಯದ ವನು; ಕೆಲಸವನ್ನು ಸರಿಯಾಗಿ ಮಾಡಲಾರದವನು: ಸರಿಯಾದ ದೃಷ್ಟಿಯಿದ್ದಲ್ಲಿ ಸಣ್ಣ ವಯಸ್ಸಿನ ಅಡ್ಡಕಸಬಿಗಳೂ ಕೂಡ ಬೇಗನೆ ತಮ್ಮ ಕೆಲಸದಲ್ಲಿ ಜಾಣ್ಮೆಯನ್ನೂ ಕುಶಲತೆಯನ್ನೂ ಹೊಂದುವರು (ನಿಮ್ಮದೃ. ೩೭). ೩. [ಅಶಿಷ್ಟ] ವೇಶ್ಯೆ (ಉಕ). [ಅಡ್ಡಕಸಬು + –ಇ$_3$]

**ಅಡ್ಡಕಸಬು**, ಅಡ್ಡಕಸುಬು (ನಾ). ೧. ಸ್ವಂತ ಸಂಪ್ರದಾಯಕ್ಕೆ ಹೊಂದಿರದ ಕಸಬು; ಮುಖ್ಯವೃತ್ತಿಗಿಂತ ಬೇರೆಯಾದ ಕಸಬು: (ಸ್ಯಾಂಡರ್). **ಅಡ್ಡಕಸುಬು**: ೧. ವರ್ತಕನು ವೈದಿಕತನವಂ ಮಾಡು ವದು ಅಡ್ಡಕಸುಬು (ಸ್ಯಾಂಡರ್). ೨. (ಮುಖ್ಯ ವೃತ್ತಿಯ) ಜೊತೆಗೆ ಇಟ್ಟುಕೊಂಡಿರುವ ಬೇರೆಯ ಕಸಬು; ಉಪವೃತ್ತಿ. [ಅಡ್ಡ$_1$ + ಕಸಬು]

**ಅಡ್ಡಕಸುಬು** 'ಅಡ್ಡಕಸಬು' ನೋ.

**ಅಡ್ಡಕಾಲು** 'ಅಡ್ಡಗಾಲು' ನೋ.

**ಅಡ್ಡಕಾಲುಹಾಕು** 'ಅಡ್ಡಗಾಲುಹಾಕು' ನೋ.

**ಅಡ್ಡಕಾಲುವೆ** (ನಾ). ದೊಡ್ಡ ಕಾಲುವೆಯಿಂದ ಹೊರಡುವ ಸಣ್ಣ ಕಾಲುವೆ; ಕವಲುಗಾಲುವೆ (ಕ). [ಅಡ್ಡ$_1$ + ಕಾಲುವೆ]

**ಅಡ್ಡಕಾವಡಿ** (ನಾ). ಕೊರಳ ಹಿಂಭಾಗದಲ್ಲಿ ಅಡ್ಡಲಾಗಿಟ್ಟುಕೊಂಡು ಹೊರುವ ಕಾವಡಿ (ಕ). [ಅಡ್ಡ$_1$ + ಕಾವಡಿ]

**ಅಡ್ಡಕಾವಲಿ** (ನಾ). = ಅಡ್ಡಕಾಲುವೆ. [ಅಡ್ಡ$_1$ + ಕಾವಲಿ$_3$ (< ಕಾಲುವೆ)]

**ಅಡ್ಡಕೀಲಿ** (ನಾ). (ಬಾಗಿಲಿಗೆ) ಅಡ್ಡಲಾಗಿ ಹಾಕುವ ಅಗಳಿ (ಉಕ. ಕ). [ಅಡ್ಡ$_1$ + ಕೀಲಿ]

**ಅಡ್ಡಕುಂಟೆ** (ನಾ). (ಹೊಲದಲ್ಲಿ) ಅಡ್ಡಲಾಗಿ ಹೊಡೆಯುವ ಕುಂಟೆ. [ಅಡ್ಡ$_1$ + ಕುಂಟೆ$_1$]

**ಅಡ್ಡಕೂಸು**, ಅಡ್ಡಗೂಸು (ನಾ). ೧. ಕೈಗಳ ಮೇಲೆ ಅಡ್ಡಲಾಗಿ ಮಲಗಿಸಿ ಎತ್ತಿಕೊಂಡಿರುವ ಮಗು; ಕೈಯಲ್ಲಿ (ಸೊಂಟದ ಮೇಲಲ್ಲ) ಎತ್ತಿಕೊಂಡ ಮಗು (ಕ). ೨. ಜನನಕಾಲದಲ್ಲಿ ಗರ್ಭ ಕೋಶದಲ್ಲಿ ಅಡ್ಡಲಾಗಿರುವ ಮಗು (ಕ). **ಅಡ್ಡಗೂಸು** (ಕ). [ಅಡ್ಡ$_1$ + ಕೂಸು]

**ಅಡ್ಡಕೆಯ್**, ಅಡ್ಡಗೆಯ್, ಅಡ್ಡಗೈ (ನಾ). ೧. ಅಡ್ಡಲಾಗಿ ಇಟ್ಟ

ರುವ ಕೈ (ಕ). ೨. ಯಕೃತ್ತಿನ ಒಂದು ರೋಗ. **ಅಡ್ಡಗೆಯ್**: ೧. (ಕ). **ಅಡ್ಡಗೈ**: ೨. ಅಡ್ಡಗೈಗೆ:— ಹಾಗಲ ಬೇರಂ ಮೊಸರಲ್ಲಿ ಅರೆದು ಅವುಡಲದ ಎಣ್ಣೆಯಲ್ಲಿ ಕಲಸಿ ತೊಡೆಯುವುದು (ವಿವೈವಿ. ೧೯೭).
[ಅಡ್ಡ$_1$ + ಕೆಯ್$_3$]

**ಅಡ್ಡಕೆಲಸ** (ನಾ). ೧. ಪ್ರಕೃತವಲ್ಲದ ಬೇರೆ ಕೆಲಸ; ಹೆಚ್ಚಿನ ಕೆಲಸ (ಮುಂಬಯಿ. ೫–೨೪೫ ಕ). ೨. ಮಾಡಬಾರದ ಕೆಲಸ (ಉಕ).
[ಅಡ್ಡ$_1$ + ಕೆಲಸ]

**ಅಡ್ಡಕೊಯ್ತು** (ನಾ). (ಕರಾ) ಅಡ್ಡಡ್ಡಲಾಗಿ ಕೊಯ್ಯುವುದು, — ಸೀಳುವುದು. 'ಅಡ್ಡಕಂಡು' ಪರಾ. [ಅಡ್ಡ$_1$ + ಕೊಯ್ತು]

**ಅಡ್ಡಕೋಲು** (ನಾ). ಅಡ್ಡಡ್ಡಲಾಗಿರುವ ಕೋಲು ಅಥವಾ ಮರದ ಪಟ್ಟಿ (ಕ). [ಅಡ್ಡ$_1$ + ಕೋಲು (< ಕೋಲ್)]

**ಅಡ್ಡಗಂಬಿ** 'ಅಡ್ಡಕಂಬಿ' ನೋ.

**ಅಡ್ಡಗಟ್ಟಲ್** (ನಾ). ಅಡ್ಡಗಟ್ಟೆ; ಏರಿ: ಅಲ್ಲಿಂ ಬರ ತೋಟವೊಳಗಾಗಿ ಪಡುವಣ ಮೇರೆ ಅಡ್ಡಗಟ್ಟಲಿಂ ಬರ ತೆಂಕಣ ಮೇರೆ (ಸೌಇಇ. IX–i, ೨೭೩–೯೬ ; 1179). [ಅಡ್ಡಗಟ್ಟು$_2$ + –ಅಲ್]

**ಅಡ್ಡಗಟ್ಟಿಗೆ** (ನಾ). ಮರದ ಅಡ್ಡಪಟ್ಟಿ. [ಅಡ್ಡ$_1$ + ಕಟ್ಟಿಗೆ]

**ಅಡ್ಡಗಟ್ಟು$_1$** 'ಅಡ್ಡಂಗಟ್ಟು' ನೋ.

**ಅಡ್ಡಗಟ್ಟು$_2$** (ನಾ). = ಅಡ್ಡಕಟ್ಟೆ. [ಅಡ್ಡ$_1$ + ಕಟ್ಟು$_3$]

**ಅಡ್ಡಗಟ್ಟೆ** 'ಅಡ್ಡಕಟ್ಟೆ' ನೋ.

**ಅಡ್ಡಗಣೆ** (ನಾ). ಹಡಗಿನ ಕೂವೆಮರ (ಕಿಸಂಗ್ಲಾ. ೧೩೩).
[ಅಡ್ಡ$_1$ + ಗಣೆ]

**ಅಡ್ಡಗಯ್ದು** (ನಾ). ಒಂದು ಬಗೆಯ ಕತ್ತಿ; ಅಡಾಯುಧ (?). 'ಅಡ್ಡಗಯ್ದುವಿಡಿ' ಪರಾ. [ಅಡ್ಡ$_1$ + ಕಯ್ದು]

**ಅಡ್ಡಗಯ್ದುವಿಡಿ** (ಕ್ರಿ). ಅಡ್ಡಗಯ್ದುವನ್ನು ಹಿಡಿ: ಅನುವರದೊಳ್ ಕುದುರೆಯೇಱಿದಾತನಾನೆಯೇಱಲಕ್ಕುಮಾನೆಯೇಱಿದಾತಂ ಕುದುರೆ ಯೇಱಲಾಗ ಬಿಲ್ವಿಡಿದಾತನಡ್ಡಗಯ್ದುವಿಡಿಯಲಕ್ಕುವಡ ಗಯ್ದುವಿಡಿದಾತಂ ಬಿಲ್ವಿಡಿಯಲಾಗ (ಬಂಹರಿ. ೧೧–೧೦೨ ವ). [ಅಡ್ಡಗಯ್ದು + ಪಿಡಿ$_1$]

**ಅಡ್ಡಗರಗಸ** (ನಾ). ಸಣ್ಣ ಗರಗಸ; ಕೈಗರಗಸ: ಒಡ್ಡಿದ ಸಿಡಿ ಡೆಂಕಣಿ ಶೂಲ ಸೂನಂಗಿಯಡ್ಡಗರಗಸ ಕತ್ತರಿಗಿಚ್ಚು ಅಡ್ಡಾಯುಧ ತೀವಿದ ಬಾವಿನೆಲಹು ಕಂಗೆಡ್ಡಮಾಗಿರ್ದವಾ ಹುರದೊಳು (ಸೊಬಸೋ. ೯–೨೮). [ಅಡ್ಡ$_1$ + ಗರಗಸ (< ಕರಗಸ)]

**ಅಡ್ಡಗಲ** (ನಾ). ಅಡ್ಡಳತೆ; ಅಗಲದ ಅಳತೆ: "ಅಂಗುಲಿಗಳೊಂದೊಂದಱಡ್ಡಗಲದ ಪ್ರಮಾಣೆಂಟು ಜವೆಯಳತೆಯಕ್ಕುಂ" (ಮಂಗರಾ. ೯೬–೧೦); ನಾವು ಮೊನ್ನೆ ಕೊಂಡುಕೊಂಡ ದುಪ್ಪಟಿಯ ಅಡ್ಡಗಲ ಬಹಳ ಹೆಚ್ಚು (ರೂಢಿ). [ಅಡ್ಡ$_1$ + ಅಗಲ$_1$. / ತುಳು. ಅಡ್ಡಗೆಲ]

**ಅಡ್ಡಗಲು** (ನಾ). ಅಡ್ಡಳತೆ ಹೆಚ್ಚಾಗಿರುವ, ಬಾದಾಮಿಯಾಕಾರದ ಊಟದ ತಟ್ಟೆ: "ಸೊನ್ನಲಿಗೆ – ಅಡ್ಡಗಲು" (ಗಂಗಾಮು. ೩೩೬).
[ಅಡ್ಡ$_1$ + ಅಗಲ್ಲು$_2$ (< ಅಗಲ್$_2$)]

**ಅಡ್ಡಗಲ್ಲು** (ನಾ). ೧. ಅಡ್ಡಲಾಗಿ, ತಡೆಯಾಗಿ ಇರುವ ಕಲ್ಲು: ಕೋಡಗದ ಅಣಲಿನಲ್ಲಿ ಮೂಜಗುಳ ಕಂಡೆ ಒಂದು ಚಪ್ಪೆಗಲ್ಲಿನಂದ ಒಂದು ಅಡ್ಡಗಲ್ಲಿನಂದ (ಮೋಳಿಮಾ. ೨೨೫–೭೭೮); "ಪ್ರಾರಬ್ಧಯೋಗವು ಸಾತ್ವಿಕಗುಣಸಂಬಂಧವಾದ ತನುಸ್ವರೂಪವಾಗಿಹುದೆಂಬುದೀಗ ಒಂದ ಗುಳು ಅಡ್ಡಗಲ್ಲಿನಂದವೆಂಬ ಶಬ್ದಕ್ಕರ್ಥ" (ಮೋಳಿಮಾ. ಟೀಕು); ಈ ಸಿದ್ಧಾಂತಕ್ಕೂ ಹಾಗೂ ವಿಶ್ವಸೃಷ್ಟಿವಾದದ ಅನೇಕ ಪ್ರತಿಪಾದನೆಗಳಿಗೂ ಯಾವುದು ಒಂದು ಅಡ್ಡಗಲ್ಲಿನಂತಿದ್ದಿತೋ ಅದೇ ಲೆಪ್ಲಾಸನ ವಾದಕ್ಕೆ ಪ್ರತಿಸಿದ್ಧಾಂತವಾಗಿ ಪರಿಣಮಿಸಿತು (ಭೂಹುಟ್ಟು. ೧೬). ೨. ತಡೆ; ಅಡ್ಡಿ: ಈ ಬಯಕೆಗೆ ರಂಗನು ಅಡ್ಡಗಲ್ಲಾದನು (ರಂಗರೋ. ೨೮)
[ಅಡ್ಡ$_1$ + ಕಲ್ಲು (< ಕಲ್$_2$)]

**ಅಡ್ಡಗವಿತೆ** (ನಾ). ೧. ವಕ್ರವಾದ ಕವಿತ್ವ. ೨. ಅರ್ಥಾಂತಕವಾಗಿ ರುವ, ಪೂರ್ಣವಲ್ಲದ ಕವಿತೆ. ೧,೨ : ತಾವುಮಡ್ಡಗವಿತೆಯಂ ಮಾಡಿ ಮಹಾವ್ಯವಸಾಯಂಗೆಯ್ವ ಮರುಳ್ಗವಿಗಳ್ ತಾವೇಂ ಗುಣಾಢ್ಯರಂ ಮಸುಳಿಸರೇ (ಗದಾಯು. ೪–೧೧). [ಅಡ್ಡ$_{1,2}$ + ಕವಿತೆ]

**ಅಡ್ಡಗಾಲಿಕ್ಕು** (ಕ್ರಿ). ತಡೆಮಾಡು; ಅಡ್ಡಿಪಡಿಸು; ವಿಘ್ನಮಾಡು: ಒಳ್ಳೆಯ ಕೆಲಸಕ್ಕೆ ಅಡ್ಡಗಾಲಿಕ್ಕುವವರೇ ಬಹಳ ಜನ (ರೂಢಿ).
[ಅಡ್ಡಗಾಲು + ಇಕ್ಕು]

**ಅಡ್ಡಗಾಲು**, ಅಡ್ಡಕಾಲು (ನಾ). ೧. ನಡೆಯುವಾಗ ಅಡ್ಡಡ್ಡಲಾಗಿ ಇಡುವ ಕಾಲು. ೨. ಬೇರೊಬ್ಬರ ನಡಗೆಗೆ ಅಡ್ಡಲಾಗಿ ಒಡ್ಡುವ ಕಾಲು; ತೊಡರುಗಾಲು. 'ಅಡ್ಡಗಾಲು ಹಾಕು' ಪರಾ. **ಅಡ್ಡ ಕಾಲು**: 'ಅಡ್ಡಕಾಲು ಹಾಕು' ಪರಾ.
[ಅಡ್ಡ$_1$+ ಕಾಲು$_1$ (< ಕಾಲ್$_1$)]

**ಅಡ್ಡಗಾಲು ಹಾಕು**, ಅಡ್ಡಕಾಲು ಹಾಕು (ಕ್ರಿ). = ಅಡ್ಡಗಾಲಿಕ್ಕು: ಗಂಗನಹಳ್ಳಿಯಲ್ಲಿ ಈ ಕರಡೀ ಮಜಲನ್ನು ಎರಡು ಮನೆತನದವರು ಮಾಡುತ್ತಿದ್ದರು . . . ಒಂದು ಮನೆತನದವರು ಇದನ್ನು ಬಾರಿಸತೊಡಗಿದರೆ ಇನ್ನೊಂದು ಮನೆತನದವರು ಅತ್ತ ಸುಳಿಯುತ್ತಿದ್ದಿಲ್ಲ, ಒಮ್ಮೊಮ್ಮೆ ಅಡ್ಡಗಾಲು ಹಾಕಲು ಪ್ರಯತ್ನಿಸುತ್ತಿದ್ದರು (ಹಬ್ಬಬ. ೩೬); ತನ್ನ ಚಿನ್ನದ ಹುಚ್ಚಿಗಾಗಿ ಇನ್ನೊಬ್ಬರ ಅನ್ನಕ್ಕೆ ಅಡ್ಡಗಾಲು ಹಾಕತಾ ನಿಂತಾನ (ಜನಜೀ. ೬). **ಅಡ್ಡಕಾಲು ಹಾಕು**: ಯಾವ ಕೆಲಸಕ್ಕೂ ಅಡ್ಡಕಾಲು ಹಾಕುತ್ತಾನೆ (ಸ್ಯಾಂಡರ್). [ಅಡ್ಡಗಾಲು + ಹಾಕು (< ಪಾಯ್ಕು$_1$)]

**ಅಡ್ಡಗಾಳಿ** (ನಾ). ಪಕ್ಕದಿಂದ ಬೀಸುವ ಗಾಳಿ (ಕಿಸಂಗ್ಲಾ. ೧೩೪).
[ಅಡ್ಡ$_1$ + ಗಾಳಿ]

**ಅಡ್ಡಗಿಸು** 'ಅಡ್ಡಯಿಸು' ನೋ.

**ಅಡ್ಡಗೀಚು$_1$** (ಕ್ರಿ). ೧. ಅಡ್ಡಲಾಗಿ ಗೆರೆ ಎಳೆ (ಕ). ೨. ಒಂದು ಬರಿವಣಿಗೆಯ ಮೇಲೆ ಅಡ್ಡಲಾಗಿ ಗೆರೆಯೆಳೆದು ಹೊಡೆದುಹಾಕು (ಕ).
[ಅಡ್ಡ$_1$ + ಗೀಚು$_1$]

**ಅಡ್ಡಗೀಚು$_2$** (ನಾ). ಅಡ್ಡಲಾಗಿ ಎಳೆದ ಗೆರೆ (ಕ). [ಅಡ್ಡ$_1$ + ಗೀಚು$_2$]

**ಅಡ್ಡಗೀಟು** (ನಾ). ೧. = ಅಡ್ಡಗೀಚು$_2$. ೨. ಕೆಳಮಟ್ಟದ ಸ್ಥಾನ: 'ಬಹ ಜನ್ಮ ಮದುವೆಯೇ ಆಗುವ, ಇದು ಬೇಡ, ಕೊಡಿಕೊಂಡವರೆಂಬ ಅಡ್ಡಗೀಟು; ಒಲಿದವರು ಎಂಬುದನು ಕಂಡನೇ ದೇವರಿಗೆ ಇದ ನೀಡುವುದು ಏನು ದೊಡ್ಡಮಾತು ?' (ಗೌಮಲ್ಲಿ. ೨೯). 'ಅಡ್ಡಪಂಕ್ತಿ' ಪರಾ.
[ಅಡ್ಡ$_1$ + ಗೀಟು]

**ಅಡ್ಡಗೀರು** (ನಾ). = ಅಡ್ಡಗೀಚು$_2$. [ಅಡ್ಡ$_1$ + ಗೀರು$_2$ (< ಗೀಱು$_2$)]

**ಅಡ್ಡಗುಡ್ಡೆ** (ನಾ). ಅಡ್ಡಲಾಗಿ ಹಾಕಿರುವ ರಾಶಿ; ಅಡ್ಡದಿಣ್ಣೆ: ಸೊಣ್ಣನ ಕಟ್ಟೆಯಿಂದಂ ಹಾಳಬಸ್ತೀಕಟ್ಟೆಯಿಂದಂ ಅಡ್ಡಗುಡ್ಡೆಯಿಂದಂ ಪಡುವಲು (ಎಕ. XIV, ಮಂಡ್ಯ. ೧೫೫–೩೩ ; 1622). [ಅಡ್ಡ$_1$ + ಗುಡ್ಡೆ$_1$]

**ಅಡ್ಡಗೂಸು** 'ಅಡ್ಡಕೂಸು' ನೋ.

**ಅಡ್ಡಗೆಡಹು** 'ಅಡ್ಡಂಗೆಡಪು' ನೋ.

**ಅಡ್ಡಗೆಡೆ** 'ಅಡ್ಡಂಗೆಡೆ' ನೋ.

**ಅಡ್ಡಗೆಯ್** 'ಅಡ್ಡಕೆಯ್' ನೋ.

**ಅಡ್ಡಗೆರೆ** (ನಾ). = ಅಡ್ಡಗೀಚು: "ಸುಟ್ಟುಂಬೆಯಡ್ಡಗೆರೆ ಹತ್ತುನೂಱಂ ಖರಂ ತುಟ್ಟತುದಿ ಲಕ್ಕ ಬೆರಳಂ ಮಡಿಯೆ ಸೊನ್ನಕ್ಕು ನೆಟ್ಟನಂಗೈಯ ನೌಂಕಲು ಹಾಗಮಿಂತೈದೆ ಕೈಮಾಟ ಸಂಜ್ಞೆಯಕ್ಕುಂ" (ಮಂಗರಾ. ೧೦೩–೭). [ಅಡ್ಡ$_1$ + ಗೆರೆ]

**ಅಡ್ಡಗೆರೆಮುಕ್ಕಾಲು** (ನಾ). (ಹಿಂದಿನ ಕಾಲದ) ತಕ್ಕಡಿಯ ಗುರುತಿನ ಕಾಲಾಣೆ ನಾಣ್ಯ (ಕಿಸಂಗ್ಲಾ. ೬೨). [ಅಡ್ಡಗೆರೆ + ಮುಕ್ಕಾಲು]

**ಅಡ್ಡಗೆಲ್ಲು** (ನಾ). ಅಡ್ಡಲಾಗಿ ಒಡೆದ ಕೊಂಬೆ (ಕಿಸಂಗ್ಲಾ. ೪೪). [ಅಡ್ಡ$_1$ + ಗೆಲ್ಲು$_2$]

**ಅಡ್ಡಗೈ** 'ಅಡ್ಡಕೆಯ್' ನೋ.

**ಅಡ್ಡಗೊಂಬು** (ನಾ). ಅಡ್ಡಲಾಗಿ ಚಾಚಿರುವ ಕೊಂಬೆ: ಬಡವಂಗೊಪ್ಪುವ ರಾಜ್ಯಲಕ್ಷ್ಮಿ ಕುರುಡಂಗಕ್ಷಿದ್ವಯಂ ಕೋಪದೊಳ್ ಕೆಡೆವಂಗಡ್ಡಯಿಪಡ್ಡಗೊಂಬು ರುಜೆಯೊಳ್ ಬೇವಂಗೆ ದಿವ್ಯೌಷಧಂ (ಧರ್ಮಾಮೃ. ೩-೧೭). [ಅಡ್ಡ$_1$ + ಕೊಂಬು$_2$]

**ಅಡ್ಡಗೋಡೆ, ಅಡಗೋಡೆ** (ನಾ). ೧. ಅಡ್ಡಲಾಗಿರುವ ಗೋಡೆ: ಆ ಗಿರಿಗುತ್ತರದಿಕ್ಕಿನೊಳದಕೆ ಮೀಟಾಗಿ ಪೂರ್ವಾಪರಾಬ್ಧಿಗಳ ತಾಗಿ ಮತ್ತೊಂದಡ್ಡಗೋಡೆಯೆಂಬಂತೆ ಪೆಂಪಾಗಿರುತಿಹುದು ಹೇಮಾದ್ರಿ (ಭರಚ. ೨೮-೭೦); ಅಡ್ಡಗೋಡೆ ಹಾಕಿ ಮನೆಯನ್ನು ಎರಡು ಪಾಲು ಮಾಡಿದರು (ರೂಢಿ). ೨. ಮನೆಯ ಒಂದು ಭಾಗವನ್ನು ಪ್ರತ್ಯೇಕಿಸುವುದಕ್ಕಾಗಿ ಹಾಕಿರುವ ಮೋಟುಗೋಡೆ: ಅಡ್ಡಗೋಡೆಯ ಮೇಲೆ ದೀಪ ಇಟ್ಟಹಾಗೆ (ಗಾದೆ). **ಅಡಗೋಡೆ** (ಕಿ).

**ಅಡ್ಡಗೋಡೆಯ ಮಾತು** = ಖಚಿತವಲ್ಲದ, ಸಂದಿಗ್ಧವಾದ ಹೇಳಿಕೆ: ಹೀಗೆ ಅಡ್ಡಗೋಡೆಯ ಮಾತನ್ನು ಆಡಬೇಡಿ. ನಿಮ್ಮ ಮನಸ್ಸಿನಲ್ಲಿ ಇರುವುದನ್ನು ಖಚಿತವಾಗಿ ಹೇಳಿ (ರೂಢಿ). **ಅಡ್ಡಗೋಡೆಯ ಮೇಲಿನ ದೀಪ** = [ಆಲಂ] ಎರಡು ಕಡೆಗೂ ಅನುಕೂಲವಾಗುವ ಮಾತು; ಖಚಿತವಲ್ಲದ ಅಭಿಪ್ರಾಯ: ಅಡ್ಡಗೋಡೆ ಮೇಲಿನ ದೀಪದಂತಹ ಮಾತು ನಿಮ್ಮದು (ನಿಂದೆಸೆ. ೫). [ಅಡ್ಡ$_1$ + ಗೋಡೆ]

**ಅಡ್ಡಗೋಲಿಕ್ಕು** (ಕ್ರಿ). ಅಡ್ಡಗೋಲನ್ನು ಇಡು: ಕಾಯ ಕಟ್ಟಿದ ನೆಲಹನೊಲೆಯುಮೇಲೆಯಿಳುಹಿಯುದು ಬೀಳದಂದದೊಳಡ್ಡಗೋಲಿಕ್ಕಿ ತೊಳೆದ ಗೋಣಿಯ ಪಟ್ಟೆಯಂ ಮುಚ್ಚಿ (ಸೂಪಶಾ. ೫-೨೬). [ಅಡ್ಡಗೋಲು + -ಇಕ್ಕು]

**ಅಡ್ಡಗೋಲು** (ನಾ). ೧. ಅಡ್ಡಲಾಗಿ ಇರಿಸಿದ ಕೋಲು. 'ಅಡ್ಡಗೋಲಿಕ್ಕು' ಪರಾ. ೨. ಅಡ್ಡಿ; ತಡೆ: ನಮಗ ಇಡಬೇಕಂಬೋ ಅಡ್ಡಗೋಲs ನಿಮಗೆ ಒಡ್ಯಾರ (ನಿರಾಭ. ೧೧೦). [ಅಡ್ಡ$_1$ + ಕೋಲು (< ಕೋಲ್)]

**ಅಡ್ಡಚಾಟು** (ನಾ). (ಮಳೆ ಬಿಸಿಲುಗಳಿಂದ ರಕ್ಷಣೆ ಪಡೆಯುವುದಕ್ಕಾಗಿ) ಅಡ್ಡಲಾಗಿರುವ ಚಾಟು, —ಮರೆ.

**ಅಡ್ಡಚಾಟು ಹಿಡುಕೊಳ್ಳು** = ಆಶ್ರಯವನ್ನು ಪಡೆ (ಕಿ). [ಅಡ್ಡ$_1$ + ಚಾಟು$_2$]

**ಅಡ್ಡಚಾಳಿ** (ನಾ). ನೆಟ್ಟಗಿಲ್ಲದ ನಡತೆ; ಕೆಟ್ಟ ಚಾಳಿ: ಊರ ಒಕ್ಕಲು ಮನೆಗಳ ಮತ್ತು ಇತರ ಕೆಲವು ಅಡ್ಡಚಾಳಿಯ ಹೆಣ್ಣುಗಳ ಕುರಿತು ಅವನ ಬೇಟೆಯ ಹೊಂಚು ನಡೆಯುತಿತ್ತು (ಒಡ್ಡಿಉ. ೫೯). [ಅಡ್ಡ$_1$ + ಚಾಳಿ]

**ಅಡ್ಡಚಿನ್ನ** (ನಾ). ಚಿನ್ನದ ನಾಣ್ಯದ ಅರ್ಧಭಾಗ; ಅರ್ಧ ಹೊನ್ನಿನ ಬೆಲೆಯ ಒಂದು ನಾಣ್ಯ (?): ಮತ್ತರಿಂಗಡ್ಡಚಿನ್ನ ಲೆಕ್ಕದಿಂದಱುವಣಮಂ ಮೂಱು ಪಣಮುಂ ತೆತ್ತುಂಬಂತಾಗಿ ಶ್ರೀ ಯಾಪನೀಯ ಸಂಘದ ಪುನ್ನಾಗವೃಕ್ಷ ಮೂಲಗಣದ ಶ್ರೀ ಬಾಳಚಂದ್ರಭಟ್ಟಾರಕದೇವರ ಕಾಲಂ ಕರ್ಚ್ಚಿ (ಎಇ. XVIII, ೧೭೫-೩೫; 1044). [ಅಡ್ಡ$_2$ + ಚಿನ್ನ]

**ಅಡ್ಡಚೌಕ** (ನಾ). ೧. "ಆಯ"ದ ಆಕಾರದ ವಸ್ತ್ರ (ಕಿ). ೨. = ಅಡ್ಡಕರಡಿಗೆ. [ಅಡ$_1$+ ಚೌಕ]

**ಅಡ್ಡಚ್ಚು** (ನಾ). ಅಡ್ಡಲಾಗಿರುವ ಅಚ್ಚಿನ ಮರ (ಸ್ಯಾಂಡರ್). [ಅಡ್ಡ$_1$ + ಅಚ್ಚು$_7$]

**ಅಡ್ಡಜಡ್ಡು** (ನಾ). (ಉಕ) ಒಂದು ರೋಗದ ಜೊತೆಗೆ ಬರುವ ಬೇರೊಂದು ರೋಗ; ಉಪರೋಗ: ಈಗ ಅಡ್ಡಜಡ್ಡು ಸಂಪೂರ್ಣ ಗುಣವಾಗಿದೆ (ಬೆಳಗು. ೨೦); ಈಗ ಕೊನೆಗೆ ಸದ್ಯದ ಮಟ್ಟಗಿನ ಅಡ್ಡಜಡ್ಡು ಸಂಪೂರ್ಣ ಮಾಯವಾಗುವವರೆಗಾದರೂ ನಿಲ್ಲಿಸೋಣವೆಂದು ಹಾಗೆ ಮಾಡಿದ್ದನು (ಕಾಳರಾ. ೫೮). [ಅಡ್ಡ$_1$ + ಜಡ್ಡು$_2$]

**ಅಡ್ಡಜಾಡಿ** (ನಾ). ಅಡ್ಡಲಾಗಿ ಹೊದೆದಿರುವ ಕಂಬಳಿ: ಬೋಳುಮಂಡೆಯು ಬೊದಡೆ ಪುಸ್ತಕ ತೋಳಿನಲ್ಲಾಧಾರ ಕಾವಿಯ ಹೋಳು ಪಾವಡೆವಡ್ಡಜಾಡಿಯ ಅಧಿಕ ಷಟ್ಸ್ಥಲದ (ಶರಲೀ. ೫೯೩-೩). [ಅಡ್ಡ$_1$ + ಜಾಡಿ$_1$]

**ಅಡ್ಡಜಾತಿ, ಅಡಜಾತಿ** (ನಾ). ಮಿಶ್ರಜಾತಿ: ಶಹಾಮೃಗವು ಕೆಲವು ಲಕ್ಷಣಗಳಲ್ಲಿ ಪಶುಗಳನ್ನೂ ಕೆಲವು ಲಕ್ಷಣಗಳಲ್ಲಿ ಪಕ್ಷಿಗಳನ್ನೂ ಹೋಲುವದರಿಂದ, ಆದು ಪಶುಜಾತಿಗೂ ಪಕ್ಷಿಜಾತಿಗೂ ನಡುವೆ ಅಡ್ಡಜಾತಿಯದಾಗಿ ಇರಬಹುದೆಂದು ವಿದ್ವಾಂಸರು ತರ್ಕಿಸುತ್ತಾರೆ (ಮುಂಬಯಿ. ೪-೧೮೯). **ಅಡಜಾತಿ** (ಕಿ). [ಅಡ್ಡ$_1$ + ಜಾತಿ. / **ತುಳು.** ಅಡಜಾತಿ; **ತೆಲು.** ಅಟುಜಾತಿ]

**ಅಡ್ಡಜ್ಞಾನ** (ನಾ). ಬೇರೆ ಕಡೆಗೆ ತಿರುಗಿದ ಮನಸ್ಸು: ಅಡ್ಡಜ್ಞಾನದಲ್ಲಿ ಕೇಳಬೇಕಾದುದನ್ನೆ ಕೇಳದೆ ಮರೆತಿದ್ದೆ (ಕೃಷ್ಣಭೂ. ೩೫); ಪುಸ್ತಕದ ಹಾಳೆಗಳನ್ನು ಅಡ್ಡಜ್ಞಾನದಿಂದ ತಿರುವಿಹಾಕುತ್ತಾ ಏನೋ ಯೋಚಿಸುತ್ತಿದ್ದರು (ರಾಮಾನೆ. ೮೫). [ಅಡ್ಡ$_1$ + ಜ್ಞಾನ]

**ಅಡ್ಡಡಿ** (ನಾ). ೧. ಪಾದದ ಅಗಲ: ಅಡ್ಡಡಿ ಎರಡಱುಂಗೇಣು (ಪಸಾರ. ೧೨೩-೮). ೨. ಅಡ್ಡಲಾಗಿ ಅಥವಾ ಒಳಮುಖವಾಗಿ ತಿರುಚಿಕೊಂಡ ಪಾದ (ಸ್ಯಾಂಡರ್); ಅಂಗವಕ್ರನು ಅಡ್ಡಡಿಯಾಗಿ ನಡೆಯುತ್ತಾನೆ (ಸ್ಯಾಂಡರ್). [ಅಡ್ಡ$_1$ + ಅಡಿ$_1$]

**ಅಡ್ಡಣ, ಅಡ್ಡಣಿ$_1$, ಅಡ್ಡಣೆ$_1$** (ನಾ). ಗುರಾಣಿ; ಹರಿಗೆ; ಢಾಲು: "ಅಡ್ಡಣಮೆಂದೆನಲ್ ಪರಿಗೆ" (ಕರ್ಣಾನಿ. ೧೮); "ಅಡ್ಡಣಮೆಂದು ಖೇಟಕಂ" (ಕಶಸಾ. ೧೪-೨೬೮); ಕಾಮು[ನ][ಪಾಠಾಂ. ನೊ]ಡ್ಡಣದಂತೆ ದೊಡ್ಡಿತ್ತಾಗಿ ಮಿಱುವುದ್ವೃತ್ತನೃತ್ತತೆಯನೀೞ್ದು (ಪಂಪಭಾ. ೨-೩೯ವ); ಮಾಯೆಯೆಂಬಡ್ಡಣಮಂ ಪಿಡಿದು ಮೋಹಮೆಂಬ ಸುರಗಿಯಂ ಕಟ್ಟಿ (ಧರ್ಮಾಮೃ. ೧೦-೮೭ವ); ಹರನ ಹಗೆಯಡ್ಡಣ ವಿಳಾಸಿನಿಯರ ಮನೋರಥಫಲವೆನಲು ಮಿಗೆ ಮೆಱೆದನುದಯಾಚಲದ ಚಾವಡಿಯಲಿ ಸುಧಾಸೂತಿ (ಕುವ್ಯಾದ್ರೋ. ೧೭-೧೭); (ಶಾಂತಿಪು. ೮-೩೮; ಚಂದ್ರಪು. ೧೦-೭೨ ನೋ). **ಅಡ್ಡಣಿ$_1$**: ತಳಿಗರ್ಾವಿಯುಡೆಯನಡ್ಡಣಿಗೆಯ್ದಿಂ (ಚಿಕವಿ. ೬-೧೨೨). **ಅಡ್ಡಣೆ$_1$**: ಥಳಥಳಿಸುವ ಖಡ್ಗವಿಡಿದೆಡಗೈಯೊಳು ತಳೆದಡ್ಡಣೆಗಳ ಭಟರು ಕುಳಿತು ಮುಂಡಿಯ ಹೂಡಿ (ಜೀವಂಸಾಂ. ೮-೩೫). [**ಪ್ರಾ.** ಅಡ್ಡಣ (< **ಸಂ.** ಅಡ್ಡನ). / **ತುಳು.** ಅಡ್ಡಣ, ಅಡ್ಡಣೆ; **ತೆಲು.** ಅಡ್ಡನ]

**ಅಡ್ಡಣದೊಲೆ** (ನಾ). ಮೇಲೆ ಬೀಳುವ ಆಯುಧಗಳನ್ನು ತಡೆಯಲು ಗುರಾಣಿಯಂತೆ ಉಪಯೋಗಿಸುವ ತೊಲೆ (?): ಎಸೆವ ಕೀಲಾಯುಧ ಬಲಿದಡ್ಡಣದೊಲೆ ಕಣ್ಗೆಸೆದುವು ತೆನೆಯ ಸಂದಿನಲಿ (ಕಂನವಿ. ೬-೨೨). [ಅಡ್ಡಣ + ತೊಲೆ]

**ಅಡ್ಡಣಾಯತ** 'ಅಡ್ಡಣಾಯ್ತು' ನೋ.

**ಅಡ್ಡಣಾಯತವಡೆ** (ನಾ). ಗುರಾಣಿಯನ್ನು ಹಿಡಿದವರ ಸೈನ್ಯ: ತಲೆಮುಟ್ಟಲಿದೊರ್ಮೆಯೆ ನೂಂಕುವಡ್ಡಣಾಯತವಡೆಯಂ ಕುಮಾರನಿಸೆ (ಶಾಂತೀಶ್ವ. ೩-೯೯). [ಅಡ್ಡಣಾಯತ (< ಅಡ್ಡಣಾಯ್ತು) + ಪಡೆ$_2$]

**ಅಡ್ಡಣಾಯಿತ** 'ಅಡ್ಡಣಾಯ್ತು' ನೋ.

**ಅಡ್ಡಣಾಯ್ತು, ಅಡ್ಡಣಾಯತ, ಅಡ್ಡಣಾಯಿತ** (ನಾ). ಅಡ್ಡಣ

ವನ್ನು, ಗುರಾಣಿಯನ್ನು ಹಿಡಿದಿರುವವನು ; ಹರಿಗೆಕಾರ : ನಿಲ್ಲ ದಾಗಳು ಸಿಂಹರಥನಾ ಬಿಲ್ಲ ಪಡೆ ತಾಗಿದುದು ಬೇಗದಿ ಚೆಲ್ಲಿದೊಡೆ ತನ್ನಡ್ಡ ಣಾಯ್ತರು ಕಾಳಗವ ತೊಡಲು (ಸಾಳ್ವಭಾ. ೯–೧೩). **ಅಡ್ಡಣಾಯತ** : 'ಅಡ್ಡಣಾಯತನಡೆ' ಪರಾ. **ಅಡ್ಡಣಾಯಿತ** : ಬಿಲ್ವಡೆಯೊಳಡ್ಡ ಣಾಯ್ತರಬ್ಬರದಡ್ಡಣಾಯಿತರೊಡನೆ ತುರಗದಳವಶ್ವಸಂಕುಲದೊಡನೆ (ಸಾಳ್ವಭಾ. ೧೫–೧೦). [ಅಡ್ಡಣ + –ಆಯ್ತ]

**ಅಡ್ಡಣಿ$_1$** 'ಅಡ್ಡಣ' ನೋ.

**ಅಡ್ಡಣಿ$_2$** (ನಾ). = ಅಡ್ಡಣಿಗೆ : ಚಿನ್ನದ ಕಾಲ ಬೆಳ್ಳಿಯ ಕಾಲ ಮಂಚ ಸುವರ್ಣದಡ್ಡಣಿ ಸುಪ್ಪತಿಗೆ ರನ್ನವಿಟ್ಟರ ರತ್ನಗಂಬಳಿ (ಮೋಹತ. ೧೫–೧೭). [< ***ಸಂ.** ಆಸ್ಥಾಪನ. / **ಮರಾ.** ಅಡಣೀ]

**ಅಡ್ಡಣಿ$_3$** (ನಾ). ಮಗ್ಗದಲ್ಲಿ ಹಾಸಿಗೆ ಅಡ್ಡಲಾಗಿರುವ ನೂಲಿನೆಳೆ; ಅಡ್ಡೆಳೆ (ಕಿ) : ಅಡ್ಡಣಿಹಾಕು (ಸ್ಯಾಂಡರ್). [ಅಡ್ಡ$_1$ + ಅಣಿ]

**ಅಡ್ಡಣಿಗೆ,** ಅಟ್ಟಣಿಕೆ, ಅಡಣಿಗೆ (ನಾ). ಊಟದ ತಟ್ಟೆ ಮುಂತಾದ ವನ್ನು ಇಡುವ ಪೀಠ; ಮಣೆ; ಮುಕ್ಕಾಲುಮಣೆ: "ಪಾತ್ರಧರ ಮಡ್ಡಣಿಗೆ" (ಮಂಗರಾ. ೬೩–೨೫); ಪಿರಿಯ ಪೊನ್ನ ತಳಿಗೆಯು ಮುಚ್ಚಮುಪ್ಪಡ್ಡಣಿಗೆಯುಮನಿಟ್ಟು (ಪಡ್ಡಾರಾ. ೭೮–೧೨) ; ಆರವೆಯೊಳ್ ×× ಲ್ ಅಡ್ಡಣಿಗೆಯುಂ ತಳಿಗೆಯುಂ ಆತನಾ ×××× ಣ್ಣನು (ಎಕ. XI, ಚಿತ್ರದು. ೭೫–೧೪ ; 941) ; ಶಾಸ್ತ್ರವೆ ಅಡ್ಡಣಿಗೆಯಾಗಿ ಆಗಮವೆ ಹರಿ ವಾಣವಾಗಿ (ಕೋಲಶಾಂ. ೧೨) ; ಸುಣ್ಣದ ಕುಡಿಕೆ ಮಣಿವುಪಕರಣತತಿ ಬಟ್ಟಲು ಪಡಿಗವಡ್ಡಣಿಗೆ ಪರಿಯಾಣ (ಬಸಪು. ೧೨–೧೨) ; ನವರತ್ನ ಕೆತ್ತಿ ದಡ್ಡಣಿಗೆಯ ಮೇಲೆ ತೆತ್ತಿಸಿ ಹೊಂಬರಿಯಣವಿಟ್ಟು (ಮೋಹತ. ೧೪–೭) ; ಆಚಲೆ ಉತ್ತರಕೊಡದೆ ಅಡ್ಡಣಿಗೆಯೊಂದನ್ನು ಹತ್ತಿರ ಎಳೆದು, ಚಾದ ಬಟ್ಟಲನ್ನು ಆದರ ಮೇಲಿಟ್ಟಳು (ಅರಗಿ. ೧೫೮). **ಅಟ್ಟಣಿಕೆ** : ಯುವತಿ ಯೋರ್ವಳು ನೀಲದಟ್ಟಣಿಕೆಯ ಮೇಲೆ ನವಸ್ವರ್ಣಪಾತ್ರವನಿರಿಸೆ (ಜ್ಞಾನಚ. ೨–೧೨೪). **ಅಡಣಿಗೆ** : ಮಾಡಿದ ಧರ್ಮ ಯಿಾ ನೆಯಿವೇದ್ಯಕ್ಕೆ ವೊ× ಅಡಣಿಗೆ ೧ ಮಾರಿ ×× ಕ್ಕಂ ಮಂಗಳ (ಎಕ. V, ಬೇಲೂರು. ೫೫–೮ ; 1405). [< ***ಸಂ.** ಆಸ್ಥಾಪನಿಕಾ]

**ಅಡ್ಡಣಿಗೆಯ್** (ಕ್ರಿ). ಗುರಾಣಿಯನ್ನಾಗಿ ಮಾಡಿಕೊ : ಪೊಸ ಮೆಯ್ವೆತ್ತಸಮಶರಂ ಸಸಿಯ ನೆರಂಗೊಂಡು ಗಂಡು ಮಿಾಜುತ್ತಾರ್ಪಿನಿಂದಿ ಸುತಿಸುತಿದೆ ಮುಸಗಿದಪಂ ಪಸಮುಡಿತಳಿರ್ಗಾವಿಯುಡೆಯನಡ್ಡಣಿಗೆಯ್ದುಂ (ಚಿಕವಿ. ೬–೧೨೨). [ಅಡ್ಡಣಿ (< ಅಡ್ಡಣ)+ ಗೆಯ್]

**ಅಡ್ಡಣೆ$_1$** 'ಅಡ್ಡಣ' ನೋ.

**ಅಡ್ಡಣೆ$_2$** (ನಾ). ಅಡ್ಡಕಟ್ಟೆ ; ಏರಿ. 'ಅಡ್ಡಣೆಕಂಡಿ' ಪರಾ. [ಅಡ್ಡ$_1$ + ಅಣೆ$_3$]

**ಅಡ್ಡಣೆ$_3$** (ನಾ). ಒಂದು ಮೂಲಿಕೆ (ವೈಔಗಿ. ೧೧೭೬). [?]

**ಅಡ್ಡಣೆಕಂಡಿ** (ನಾ). ಅಡ್ಡಕಟ್ಟೆಗೆ ಮಾಡಿರುವ ಕಂಡಿ ; ತೂಬು (?): ಗ್ರಾಮಕ್ಕೆ ಆಗ್ನೇಯದಲ್ಲಿ ಅಡ್ಡಣೆಕಂಡಿ ಬಳಿಯ ಪಡುವ ಮುಖವಾಗಿ ನೆಟ್ಟ ಕಲ್ಲು (ಎಕ. XIV, ನಂಜನ. ೨೯೫, ಪು. ೧೫೦ ; 1716). [ಅಡ್ಡಣೆ$_2$+ಕಂಡಿ$_1$]

**ಅಡ್ಡತರ,** ಅಡತರ (ನಾ). ೧. ಅಡ್ಡಲಾಗಿ ನಿಲ್ಲುವ ಅಥವಾ ಚಲಿಸುವ ರೀತಿ: ಕದಂಪಿನೊಳ್ ಕನಕ ಕುಂಡಲವಡ್ಡತರಕ್ಕೆವಂದು ನಿಶ್ಚಲಮೆನಿ ಪಂಕ್ತಿಯೊಂದೆಸೆಯೆ (ಚಂದ್ರಪು. ೩–೫೧) ; ಶಂಕೆಯಿಲ್ಲದೆ ಬಂದು ಪಿಂಡಾನೆಗಳೊಂದುಗೂಡಿ. . . ವಿಸಟಂಬರಿಯಿಪಡ್ಡತರದೊಳಿಕ್ಕುವ ಥಟ್ಟು ವರಿಯಿಪ (ರಾಜಶೇ. ೬–೧೧ ವ). ೨. ಅಡ್ಡಲಾಗಿ ಮಲಗಿ ವಿಶ್ರಮಿಸಿ ಕೊಳ್ಳುತ್ತಿರುವ ಸ್ಥಿತಿ: ದೇವರಡ್ಡತರಮುಱಿಯದೆಯುಂ ಕರುಮಾಡ ಮನಿಱಿಯದೆಯುಂ ಸುಖಮಿರ್ಪುದಾಮೆ ಸಾಲ್ವೆನೆಮಗೆ ಬೆಸಸುವುದು (ಶಾಂತಿಪು. ೩–೭೨ ವ). **ಅಡತರ** : ೧. ಅಲ್ಲಲ್ಲಿ ಕುರುಸೇನೆ ಓಸರಿಸಿತಡ ತರದ ಮುಖದಲಿ ಸೂಸಿದರು ಸಮರಥರು (ಕುವ್ಯಾಅ. ೧೯–೪೨) ; ಕೃಪಾ ಣದಲಿ ಕಡಿ ನಾಲ್ಕ ತೋಱಿಸುವ ಅಡತರದಲವನಿಪರ ಹಯ ಮುಂಗು ಡಿಯ ಮುಱಿದು ವಿಘಾತಿಯಲಿ ಥಟ್ಟೊಡೆದು ಹಾಯ್ವುತಿ ಭಾಷೆಗಳ ಬಿರು ದಂಕರೇಱಿದರು (ಕುವ್ಯಾಭೀ. ೪–೫೭). ೩. ವಕ್ರತೆ (ಉಕ) : ಆತ ಬಹಳ ಆಡತರದ ಮನುಷ್ಯ (ರೂಢಿ). ೪. ಇಕ್ಕಟ್ಟು ; ದುರ್ಗಮ : ಆ ದಾರಿ ಬಹಳ ಆಡತರವಾಗಿ ಇತ್ತು (ರೂಢಿ). [ಅಡ್ಡ$_1$ + ತರ$_1$]

**ಅಡ್ಡತಲೆ,** ಅಡ್ಡದಲೆ (ನಾ). ಮಾಟವಿಲ್ಲದ ತಲೆ ; ವಿಕಾರವಾದ ತಲೆ (ಕಿ). **ಅಡ್ಡದಲೆ** (ಕಿ). [ಅಡ್ಡ$_1$ + ತಲೆ$_1$]

**ಅಡ್ಡತಳಿ** (ನಾ). "ಭಿನ್ನವಂಶಗಳಿಗೆ ಅಥವಾ ಭಿನ್ನಪ್ರಭೇದಗಳಿಗೆ ಸೇರಿದ ಪ್ರಾಣಿಗಳ (ಅಥವಾ ಸಸ್ಯಗಳ) ಕೂಡಿಕೆಯಿಂದ ಹುಟ್ಟಿದ ಬೆರಕೆಯ ಪ್ರಾಣಿ, ಸಸ್ಯ" (Hybrid. ಇಂಕನಿ). [ಅಡ್ಡ$_1$ + ತಳಿ$_2$]

**ಅಡ್ಡತಾಕು$_1$** (ಕ್ರಿ). ೧. ಅಡ್ಡಲಾಗಿ ತಾಗು, —ಹೊಡೆ. ೨. ಅಡ್ಡಿ ಮಾಡು ; ತಡೆ (ಕಿ). [ಅಡ್ಡ$_1$ + ತಾಕು$_1$]

**ಅಡ್ಡತಾಕು$_2$** (ನಾ). ೧. ಒಂದು ದೊಡ್ಡಜಮಿಾನಿನ ಎಲ್ಲೆಯನ್ನು ಮುಟ್ಟುವ ಅಥವಾ ಆದರಲ್ಲಿ ಹಾದು ಹೋಗುವ ಸಣ್ಣ ಜಮಿಾನು (ಕಿ). ೨. ಒಂದು ಜಮಿಾನಿನ ಎಲ್ಲೆಯಿಂದ ಹೊರಚಾಚಿಕೊಂಡು, ಅದಕ್ಕೆ ಸೇರಿಸಿದಂತೆ ಕಾಣುವ ಒಂದು ಭಾಗ (ಸ್ಯಾಂಡರ್). [ಅಡ್ಡ$_1$+ ತಾಕು$_2$]

**ಅಡ್ಡತಿಡ್ಡ$_1$** 'ಅಡ್ಡಾದಿಡ್ಡಿ$_1$' ನೋ.

**ಅಡ್ಡತಿಡ್ಡ$_2$** 'ಅಡ್ಡಾದಿಡ್ಡಿ$_2$' ನೋ.

**ಅಡ್ಡತಿನಿಸು** (ನಾ). (ಉಕ) ಊಟದ ಕಡೆ ಗಮನ ಕೊಡದೆ ನಡು ನಡುವೆ ತಿನ್ನುವ ತಿಂಡಿತಿನಿಸು : ಅವನಿಗೆ ಅಡ್ಡತಿನಿಸೇ ಹೆಚ್ಚು ಸೇರು ತ್ತದೆ (ರೂಢಿ). [ಅಡ್ಡ$_1$ + ತಿನಿಸು$_2$]

**ಅಡ್ಡತಿರುಗು** (ಕ್ರಿ). ಬೇರೆಯ ಕಡೆಗೆ ತಿರುಗು : ತಿಂಮನ ತಲೆ ಮುಂದೊಮ್ಮೆ ಅಡ್ಡತಿರುಗಿ ಇನ್ನೊಂದು ಹಾದಿ ಹಿಡಿಯಿತು (ಹುಚ್ಚುಹು. ೧೭). [ಅಡ್ಡ$_1$ + ತಿರುಗು$_2$]

**ಅಡ್ಡತಿರುವು$_1$** (ಕ್ರಿ). ನೇರವಾಗಿ ಹೋಗದಂತೆ ಮಗ್ಗುಲಿಗೆ ತಿರುಗಿಸು; ಅಡ್ಡಲಾಗಿ ತಿರುಗಿಸು (ಕಿ). [ಅಡ್ಡ$_1$ + ತಿರುವು$_1$]

**ಅಡ್ಡತಿರುವು$_2$** (ನಾ). ೧. ಅಡ್ಡಲಾಗಿ ತಿರುಗುವ ಮೂಲೆ. ೨. = ಅಡ್ಡ ರಸ್ತೆ (ಉಕ) : ನಮ್ಮ ಮಿತ್ರನ ಮನೆ ಮುಖ್ಯ ಬೀದಿಯ ಹತ್ತನೆಯ ಅಡ್ಡತಿರುವಿನಲ್ಲಿದೆ (ರೂಢಿ). [ಅಡ್ಡ$_1$ + ತಿರುವು$_2$]

**ಅಡ್ಡತೊಡರು$_1$** (ಕ್ರಿ). ಅಡ್ಡಿಪಡಿಸು ; ತಡೆ : ನನಗೆ (ಅಥವಾ ನನ್ನ ಕೆಲ ಸಕ್ಕೆ) ಅಡ್ಡತೊಡರಿದನು (ದಕ. ಕಿ). [ಅಡ್ಡ$_1$ + ತೊಡರು$_1$]

**ಅಡ್ಡತೊಡರು$_2$** (ನಾ). ನಡುವೆ ಬಂದ ಅಡ್ಡಿ ; ವಿಘ್ನ (ಕಿ). [ಅಡ್ಡ$_1$ + ತೊಡರು$_2$]

**ಅಡ್ಡತೊಲಗು** (ಕ್ರಿ). ದಾರಿಯಿಂದ ಆಚೆಹೋಗು, —ಹೊರಟು ಹೋಗು (ಕಿ). [ಅಡ್ಡ$_1$ + ತೊಲಗು]

**ಅಡ್ಡತೊಲೆ,** ಅಡ್ಡದೊಲೆ (ನಾ). ಅಡ್ಡಲಾಗಿ ಹಾಕಿರುವ ತೊಲೆ. **ಅಡ್ಡದೊಲೆ** (ಕಿ). [ಅಡ್ಡ$_1$ + ತೊಲೆ]

**ಅಡ್ಡತೋಳು** 'ಅಡ್ಡದೋಳು' ನೋ.

**ಅಡ್ಡದಂಡಿ** (ನಾ). ತಕ್ಕಡಿಯ ಅಡ್ಡಕೋಲು (ಕಿ). [ಅಡ್ಡ$_1$ + ದಂಡಿ]

**ಅಡ್ಡದಂಡಿಗೆ** (ನಾ). ೧. ನೆಯ್ಗೆಯಲ್ಲಿ ಹೊಕ್ಕಿನ ನೂಲಿನ ಎಳೆಯ ಮೇಲೆ ಹಾದು ಹೋಗುವ ಮರದ ದಂಡ (ಕಿ). ೨. ತಕ್ಕಡಿಯ ಅಡ್ಡಕೋಲು (ಕಿ). ೩. ಪಲ್ಲಕ್ಕಿಯನ್ನು ಹೊರಲು ಉಪಯೋಗಿ ಸುವ ಬಿದಿರಿನ ಬೊಂಬು (ಕಿ). ೪. ಅಡ್ಡಪಲ್ಲಕ್ಕಿ (ಕಿ). ೫. ಎದುರು

ಬದುರಾಗಿರುವ ಎರಡು ಗೋಡೆಗಳಿಗೆ ಸೇರಿಸಿ ಬಡುವಿನಂತೆ ಹಾಕಿರುವ ಗಳು (ಕಿ). [ಅಡ್ಡ$_1$ + ದಂಡಿಗೆ]

**ಅಡ್ಡದಂಡೆ** (ನಾ). ಹಗೇವಿನ ಬಾಯಿಯ ಒಳಅಗಲ (ಕಿ). [ಅಡ್ಡ$_1$ + ದಂಡೆ$_1$ ?]

**ಅಡ್ಡದಬ್ಬೆ** (ನಾ). ಅಡ್ಡಲಾಗಿ ಇರಿಸಿದ ದಬ್ಬೆ. [ಅಡ್ಡ$_1$ + ದಬ್ಬೆ$_1$]

**ಅಡ್ಡದಲೆ** 'ಅಡ್ಡತಲೆ' ನೋ.

**ಅಡ್ಡದಾರಿ** (ನಾ). ೧. ಮುಖ್ಯವಾದ ದಾರಿಗೆ ಅಡ್ಡಲಾಗಿರುವ ದಾರಿ; ಅಡ್ಡರಸ್ತೆ: ಪೂರಿಂ ಮೂಡಯಾ(ಯ)ಡ್ಡದಾರಿಯಿಂ ಪಡುವ (ಎಇ. XIX, ೧೯೬–೩೪ ; 1220) ; ಹಂದಿಯು ಅಡ್ಡದಾರಿ ಹಿಡಿದು ಬಲಗಡೆಗೆ ತಿರುಗಿತು (ಹುಟ್ಟಹ. ೨೬) ; ಅವರಿಗೆ ಕಾಣಿಸದಂತೆ ಯಾವುದೋ ಅಡ್ಡದಾರಿಗೆ ನುಗ್ಗಿ ತಪ್ಪಿಸಿಕೊಂಡ (ಶಾಲೆಮು. ೧೪೯). ೨. ತಪ್ಪುದಾರಿ: ಪಿತೃಕುಲವನ್ನು ಧಿಕ್ಕರಿಸಿದ, ಅಡ್ಡದಾರಿಯನ್ನು ಹಿಡಿದ, ಧರ್ಮಚ್ಯುತಳಾದ ಮಗಳಿಗೆ ಉಡುಗೊರೆಯಾಗಿ ಕಳಿಸಿದ್ದಾರೆ (ಎರಸೆ. ೪೧) ; ನೂರು ರೂಪಾಯಿಗಳ ನ್ನೊಪ್ಪಿಸಿ ಅವರೊಡನೆ ರಾಜೀ ಮಾಡಿಕೊಂಡೆ. ಅಂದಿನಿಂದ ನಾನು ಅಡ್ಡ ದಾರಿ ಹಿಡಿದೆ (ಪಂಜಪಂ. ೧೬೪). [ಅಡ್ಡ$_1$ + ದಾರಿ]

**ಅಡ್ಡದುಡ್ಡು$_1$** (ನಾ). ೧. ಅರ್ಧದುಡ್ಡು ; ಎರಡು ಕಾಸು : ಸತ್ಕೀರ್ತಿಯಂ ಧರೆಯೊಳ್ ಬಿತ್ತುವಗಡ್ಡದುಡ್ಡು ಜಜಕೆವರ್ಗಿಷ್ಟಾರ್ಥದಾನಂಗಳುಂ (ಸೋಮೇಶ. ೬೦). ೨. ಬಹಳ ಕಡಮೆ ಬೆಲೆಯ ನಾಣ್ಯ. [ಅಡ್ಡ$_2$ + ದುಡ್ಡು]

**ಅಡ್ಡದುಡ್ಡು$_2$** (ನಾ). (ನ್ಯಾಯವಲ್ಲದೆ) ಬೇರೆ ರೀತಿಯಿಂದ ಬರುವ ಹಣ; ಲಂಚ : ಪ್ರಯತ್ನದಿಂದ ಗಳಿಸುವ ದುಡ್ಡಿಗಿಂತ ಅಡ್ಡದುಡ್ಡಿನ ಆಸೆಯಿದ್ದವರೆ ಬಹಳ ಜನ (ನಿರಾಭ. ೧೬೦). [ಅಡ್ಡ$_1$ + ದುಡ್ಡು]

**ಅಡ್ಡದುರುಬು** (ನಾ). ತಲೆಯ ಒಂದು ಕಡೆಗೆ ಓರೆಯಾಗಿ ಕಟ್ಟಿಕೊಂಡಿರುವ ಕೂದಲಿನ ಗಂಟು. [ಅಡ್ಡ$_1$ + ತುರುಬು (< ತುಱುಂಬು)]

**ಅಡ್ಡದೆಱೆ** (ನಾ). "ಅಡ್ಡ" ಎಂಬ ಹೆಸರಿನ ಸುಂಕ (?): ಕುಪ್ಪುದ ಲೂರ ಭೊದರಿಯೂರು ಮನ್ನುಕ್ಕಂಡಕ್ಕೆ ಬಿಟ್ಟ ಸ್ತಿತಿಕ್ರಮಮಾವುವೆನ್ದಡೆ ಅಡ್ಡ ದೆಱೆ ಕಾಱುದೆಱೆ ನಾಟ್ಟಿ × × × ಣನಲ್ಪ (ಎಕ. IX, ಚನ್ನಪ. ೧೬೧–೭ ; 913). [ಅಡ್ಡ$_2$ + ತೆಱೆ$_3$]

**ಅಡ್ಡದೊಡ್ಡ** (ನಾ). ಅಡ್ಡಡ್ಡಲಾಗಿ ಪರಿಮಿತಿ ಮೀರಿ ಬೆಳೆದಿರುವವನು: ಅಡ್ಡದೊಡ್ಡ ನಾನಲ್ಲಯ್ಯಾ ; ದೊಡ್ಡ ಬಸುಱು ಎನಗಿಲ್ಲಯ್ಯಾ ; ದೊಡ್ಡವರಲ್ಲದೆ ನಿಮ್ಮ ಶರಣರು ಮನ್ನಿಸರಯ್ಯಾ ! (ಬಸವ. ೪೧೨). [ಅಡ್ಡ$_1$ + ದೊಡ್ಡ]

**ಅಡ್ಡದೊಲೆ** 'ಅಡ್ಡತೊಲೆ' ನೋ.

**ಅಡ್ಡದೋಳು**, ಅಡ್ಡತೋಳು (ನಾ). ೧. ಅಡ್ಡಲಾಗಿ ಚಾಚಿರುವ ತೋಳು (ಕಿ). **ಅಡ್ಡತೋಳು** : ೨. = ಅಡ್ಡತೊಲೆ : (ಕಿಸಂಗ್ಲಾ. ೨೬). [ಅಡ್ಡ$_1$ + ತೋಳು (< ತೋಳ್)]

**ಅಡ್ಡದೋಱು**, ಅಡದೋಱು (ಕ್ರಿ). ಅಡ್ಡಲಾಗಿ ಕಾಣಿಸು : "ರೇಖೆ ಯೆರಡಡ್ಡದೋಱೆ [ಪಾಠಾಂ. ಯಡದೋಱಿರಲು, ಯೆರಡಡದೋಱೆ] ಬೇಳೆ" (ಮಂಗರಾ. ಕಿ. ೧೦೫–೧೨). **ಅಡದೋಱು** : ಮೇಲಿನ ಪ್ರಯೋಗದಲ್ಲಿಯ ಪಾಠಾಂತರವನ್ನು ನೋಡಿ. [ಅಡ್ಡ$_1$ + ತೋಱು]

**ಅಡ್ಡನಗೆ** (ನಾ). ತಿರಸ್ಕಾರ ಸೂಚಕವಾದ ಅರೆನಗು ; ವ್ಯಂಗ್ಯವಾದ ನಗು ; ಅಪಹಾಸ್ಯ : ಸಲೆದೊಡ್ಡಿದರು ರಘುಸಗರರವರೊಳಗಡ್ಡನಗೆ ಹೊಗದಂತೆ ಮಾಡುವುದುಚಿತ (ತೊರರಾ. ೨–೨–೪೩) ; ದೊಡ್ಡಮ್ಮ :– . . . (ಭುಜಾಸ್ಫಾಲನೆ ಮಾಡಿಕೊಂಡು ಮುಷ್ಟಾಮುಷ್ಟಿಯನ್ನಭಿನಯಿಸಿ ಅಡ್ಡನಗೆಯಿಂದ) ಬಾರಯ್ ಮಿಹಿಕಾಕ್ಷಮಲ್ಲ (ಮಂತ್ರಶ. ೬೩–೧೦). [ಅಡ್ಡ$_1$ + ನಗೆ]

**ಅಡ್ಡನಾಮ** (ನಾ). ೧. ಅಡ್ಡಹೆಸರು ಅಥವಾ ಕುಲದ ಹೆಸರು. (ಕಿ). ೨. ಸ್ಮಾರ್ತರು ಹಣೆಯ ಮೇಲೆ ಅಡ್ಡಲಾಗಿ ಇಟ್ಟುಕೊಳ್ಳುವ ಗಂಧದ ಗೆರೆ (ಕಿ). [ಅಡ್ಡ$_1$ + ನಾಮ. / **ಮರಾ.** ಅಡನಾಂವ್]

**ಅಡ್ಡನಾಲಗೆ** (ನಾ). ೧. ಸುಳ್ಳು ಹೇಳುವ ನಾಲಗೆ. ೨. ಬಾವಿಯ ಬಾಯಿಗೆ ಅಡ್ಡಲಾಗಿ ಹಾಸಿರುವ ಕಲ್ಲು (ಸ್ಯಾಂಡರ್).

**ಅಡ್ಡನಾಲಗೆ ಹಾಕು** = ೧. ಮಾತಿನ ನಡುವೆ ಬಾಯಿ ಹಾಕು ; ಪ್ರತಿಭಟಿಸು (ದಕ. ಕಿ). ೨. ಸಾಯಿ (ಕರಾ). [ಅಡ್ಡ$_1$ + ನಾಲಗೆ]

**ಅಡ್ಡನಿಗೆ** (ನಾ). ೧. ಬಟ್ಟೆಗಳನ್ನು ತೂಗಹಾಕುವ ಚೌಕಟ್ಟು (ಸ್ಯಾಂಡರ್). ೨. ಮೇಜಿನ ಅರೆ (ಸ್ಯಾಂಡರ್). [< ? ಅಡ್ಡಣಿಗೆ]

**ಅಡ್ಡನಿಲುವು** (ನಾ). ೧. ಉದ್ದಗಲ; ಹಾಸುಹೊಕ್ಕು : ಹಚ್ಚಡವೆಲ್ಲವು ಅಡ್ಡನಿಲುವು ಒಂದೇ ನೇಯಿಗೆಯಾಗಿದೆ (ಸ್ಯಾಂಡರ್). ೨. "ಆಯ"ದ ಆಕಾರದ ವಸ್ತ್ರ ; ಅಡ್ಡ (ಕಿ). [ಅಡ್ಡ$_1$ + ನಿಲುವು$_1$]

**ಅಡ್ಡನುಡಿ**, ಅಡನುಡಿ (ನಾ). ವಿರುದ್ಧವಾದ ಮಾತು ; ಅಡ್ಡಮಾತು (ಕಿ). **ಅಡನುಡಿ** : ನುಡಿಯಲೊಡಂ ಮಿಂ ಪೇೞ್ವಡನುಡಿಯಂ ತನ್ನಿದಿರೊಳಾ ಖಳಂ ಕಡೆಗಣ್ಣಿಂ ಕಿಡಿಸೂಸೆ ಘೃತಾಹುತಿಯಂ ಪೊಡೆವ ಶಿಖಿಜ್ವಾಲೆಯಂತೆ ಬಾಲೆ ಕನಲ್ದಳ್ (ಅನಂಪು. ೧೧–೪೯). [ಅಡ್ಡ$_1$ + ನುಡಿ$_2$]

**ಅಡ್ಡನೆ** (ಅ). ಅಡ್ಡಲಾಗಿ ; ಪ್ರತಿಬಂಧಕವಾಗಿ (ಕಿ). [ಅಡ್ಡ$_1$ + –ಅನೆ. / **ತಮಿ.** ಅಟ್ಟನ್ಯೆ]

**ಅಡ್ಡಪಂಕ್ತಿ** (ನಾ). ೧. ಒಂದು ಸಾಲಿನ ಕೊನೆಯಲ್ಲಿ ಅಡ್ಡಲಾಗಿ ಊಟಕ್ಕೆ ಕುಳಿತುಕೊಳ್ಳುವವರ ಮತ್ತೊಂದು ಸಾಲು (ಕಿ) : ಅಡ್ಡ ಪಂಕ್ತಿಯಲ್ಲಿ ಊಟಕ್ಕೆ ಕುಳ್ಳಿರಿಸಿದರೆ ಅಂತಸ್ತಿನಲ್ಲಿ ಕೀಳೆಂದು ಭಾವಿಸುತ್ತಿದ್ದರು (ರೂಢಿ). ೨. ಜೊತೆಗೂಡಿ ಒಂದೇ ಸಾಲಿನಲ್ಲಾಗಲಿ, ಆ ಸಾಲಿಗೆ ಸಮಾನಾಂತರವಾಗಿರುವ ಬೇರೆ ಸಾಲುಗಳಲ್ಲಾಗಲಿ ಊಟಕ್ಕೆ ಕುಳಿತುಕೊಳ್ಳುವ ಅರ್ಹತೆಯಿಲ್ಲದೆ, ಆ ಸಾಲುಗಳ ಕೊನೆಯಲ್ಲಿ ಬೇರೊಂದು ಅಡ್ಡಸಾಲಿನಲ್ಲಿ ಊಟಕ್ಕೆ ಕುಳಿತುಕೊಳ್ಳುವ ಬ್ರಾಹ್ಮಣರ ಒಂದು ಪಂಗಡ (ಸ್ಯಾಂಡರ್). ೩. ಸಾಂಪ್ರದಾಯಿಕವಾದ ಒಂದು ಸಾಲಿಗೆ ಹೊಂದಿಕೊಳ್ಳದೆ ಬೇರೆ ನಿಲ್ಲುವ ಸಾಲು : ಸಾಕ್ರಟೀಸನು ಅಥೆನ್ಸಿನ ತಾತ್ವಿಕ ತಾರ್ಕಿಕ ಗೋಷ್ಠಿಗಳಲ್ಲಿ ಅಡ್ಡಪಂಕ್ತಿಯ ಮನುಷ್ಯ ನೆನಿಸಿಕೊಂಡು ಪ್ರಸಿದ್ಧನಾಗಿದ್ದಂತೆ ತೋರುತ್ತದೆ (ಸೋಕ್ರಮ. ೧೬). [ಅಡ್ಡ$_1$ + ಪಂಕ್ತಿ]

**ಅಡ್ಡಪಂತಿ** (ನಾ). = ಅಡ್ಡಪಂಕ್ತಿ : ಜಾತಿಯವರಾರೂ ಇವನ ಮನೆಗೆ ಊಟಕ್ಕೆ ಬರುವಂತಿಲ್ಲ. ಇನ್ನಾರ ಮನೆಯಲ್ಲಾದರೂ ಊಟ ಮಾಡಬೇಕಾದರೆ ಅಡ್ಡಪಂತಿ. ತನ್ನ ಎಂಜಲೆಲೆ ತಾನೆ ಎತ್ತಿ ಸಾರಿಸಬೇಕು – ತಾನು ಭ್ರಷ್ಟ ಎಂಬುದನ್ನು ಲೋಕಕ್ಕೆ ತಾನೇ ಸಾರಬೇಕು (ಅನಾಥೆ. ೧೨೮). [ಅಡ್ಡ$_1$ + ಪಂತಿ]

**ಅಡ್ಡಪಟ್ಟಿ** (ನಾ). ೧. ಅಡ್ಡಲಾಗಿ ಹಾಕಿರುವ ಪಟ್ಟಿ : ಹಿಂಭಾಗದಲ್ಲಿದ್ದ ಮನುಷ್ಯನು ಅಡ್ಡಪಟ್ಟಿಯ ಮೂಲಕ ತನ್ನ ಕೈಯನ್ನು ಜಾರಿಸುತ್ತ ಜಾಗರೂಕತೆಯಿಂದ ಮುಂದೆ ಸರಿಯುತ್ತಿದ್ದ. ಅನಂತರ ಹುಟ್ಟು ಹಾಕುವ ಜಾಗದಲ್ಲಿದ್ದ ಮನುಷ್ಯ ತನ್ನ ಕೈಯನ್ನು ಅಡ್ಡಪಟ್ಟಿಯ ಮೂಲಕ ಸರಿಸುತ್ತ ನಿಧಾನವಾಗಿ ಬರುತ್ತಿದ್ದ (ಮಹಾತ್ಮಾ. ೧೨೧). ೨. ಬಾಗಿಲಿನ ಅಥವಾ ಕಿಟಕಿಯ ಚೌಕಟ್ಟಿನ ಮೇಲ್ಭಾಗದ ಅಥವಾ ಕೆಳಭಾಗದ ಪಟ್ಟಿ. [ಅಡ್ಡ$_1$ + ಪಟ್ಟಿ$_4$]

**ಅಡ್ಡಪಟ್ಟಿಗೆ** (ನಾ). = ಅಡ್ಡಪಟ್ಟಿ ೨. (ಸ್ಯಾಂಡರ್). [ಅಡ್ಡ$_1$ + ಪಟ್ಟಿಗೆ]

**ಅಡ್ಡಪರ** (ನಾ). (?) : ಅಂತು ಬಡ್ಡೋಲಗವಡ್ಡಪರವೆಡ್ಡಮಾಗಿರ್ದುದು

(ಅನಂಪು. ೨–೩೨ ವ); ಸಕಳ ಸಾಮ್ರಾಜ್ಯ ಲೀಲಾವಿಭವಕ್ಕಿದುವೆ ಪರಮ ಸೀಮೆಯೆಂಬಂತಿರೊಡ್ಡೋಲಗವಡ್ಡಪರವೆಡ್ಡವಾಗಿರ್ದುದು (ಬಾ ಥ ಪು. ೧೬). [ಅಡ್ಡ$_1$ + ?]

**ಅಡ್ಡಪಲ್ಲಕ್ಕಿ**, ಅಡ್ಡಪಾಲಕಿ (ನಾ). (ಗೌರವ ಸೂಚಕವಾಗಿ ದೇವರನ್ನೂ ಗುರುಗಳನ್ನೂ ಪಲ್ಲಕ್ಕಿಯಲ್ಲಿ ಕೂರಿಸಿ ಮೆರವಣಿಗೆ ಮಾಡಿಕೊಂಡು) ಅಡ್ಡಡ್ಡಲಾಗಿ ಹೊರುವ ಪಲ್ಲಕ್ಕಿ. **ಅಡ್ಡಪಾಲಕಿ**: ಕೆಳಗೆ ಕಾಣಿಸಿದ ಗ್ರಾಮ, ನಗರ, ಪಟ್ಟಣಗಳಲ್ಲಿ ಅಡ್ಡಪಾಲಕಿ ಸಕಲ ಬಿರುದಾವಳಿಗಳೊಡನೆ ಮಹೋತ್ಸವಗಳುಸಂಭ್ರಮದಿಂದ ನೆರವೇರಿ (ಗುರುದ. ೧೧). [ಅಡ್ಡ$_1$ + ಪಲ್ಲಕ್ಕಿ]

**ಅಡ್ಡಪಳಿ** (ನಾ). = ಅಡ್ಡಪಟ್ಟೆ (ಉಕ): ಹುಡುಗರು ಅಂಗಳಕ್ಕೆ ಬೀಳಬಾರದೆಂದೋ ಏನೋ ಜಗಲಿಯ ಕಂಬಗಳಿಗೆ ಸೊಂಟದಷ್ಟು ಎತ್ತರದವರೆಗೆ ಅಡ್ಡಪಳಿ ಹೊಡೆದಿರುವರು (ಕೈಹಿಕಾ. ೧೯).
[ಅಡ್ಡ$_1$ + ಪಳಿ (< ಫಳಿ$_2$)]

**ಅಡ್ಡಪಾಲಕಿ** 'ಅಡ್ಡಪಲ್ಲಕ್ಕಿ' ನೋ.

**ಅಡ್ಡಪಿಡ್ಡಗೆ** (ಅ). ಅಡ್ಡಲಾಗಿ ಮತ್ತು ಕೆಳಮುಖವಾಗಿ: ಒಡ್ಡಿತಾಗಳೆ ಮುಗಿಲಾಕಾಶ ತುಂಬಿ ಮಾಱೊಡ್ಡಿದಾನೆಯ ಹಿಂಡಿನಂತೆ ಅಡ್ಡಪಿಡ್ಡಗೆ ಸುಳಿದುವು ಕಾಲರಾಹುವಿನೊಡ್ಡು ಸಂಚಲಿಸುವಂದದೊಳು (ಭರಚ. ೩೪–೪೫). [ಅಡ್ಡ$_1$ + ಪಿಡ್ಡ + –ಅಗೆ]

**ಅಡ್ಡಪುರಿ** (ನಾ). [ನಾಟ್ಯ] ಒಂದು ಕಾಲನ್ನು ಮೇಲಕ್ಕೆತ್ತಿ ಮತ್ತೊಂದು ಕಾಲಿನಿಂದ ತಾಳಕ್ಕೆ ಸರಿಯಾಗಿ ನೆಲವನ್ನು ಕುಟ್ಟುವ ಒಂದು ನೃತ್ಯ ವಿಶೇಷ: ಉಗುರ್ವೆಳಗು ಬಿಣ್ಣಿತೆಂದದನುಗುಱ್ವಂತಿರೆ ತೋಱುವಂತೆ ತಳೆದೆಳೆಗೆಂಪಂ ಬಗೆಗೊಳಿಸುವಡ್ಡಪುರಿಯಂ ಪುಗುತುಂ ಪುರಿಯಂ ವಿಳಾಸವತಿ ಪೊಱಮಟ್ಟಳ್ (ಲೀಲಾವ. ೪–೧೩೯).
[? ಸಂ. ಅರ್ಧಪುರಾಟಿಕಾ]

**ಅಡ್ಡಪೆಟ್ಟಿಗೆ** (ನಾ). ನಗನಾಣ್ಯಗಳ ಪೆಟ್ಟಿಗೆ (?): ಅಷ್ಟರಲ್ಲಿ ವಸ್ತಗಾರ ಪೆಟ್ಟಿಗೆ ಬೂವ್ವದ ಪೆಟ್ಟಿಗೆ ಅಡ್ಡಪೆಟ್ಟಿಗೆ ಇವುಗಳನ್ನೂ ಬೀದಿಯಲ್ಲಿ ಮೆರವಣಿಗೆ ಮಾಡಿಸಿ ಹೆಣ್ಣಿನ ಮನೆಯಲ್ಲಿಟ್ಟರು (ಹುಟ್ಟಹ. ೧೩).
[ಅಡ್ಡ$_0$ + ಪೆಟ್ಟಿಗೆ]

**ಅಡ್ಡಪ್ರಶ್ನೆ** (ನಾ). ಮುಖ್ಯ ವಿಷಯಕ್ಕೆ ಸಂಬಂಧಿಸದಂತೆ ಕೇಳುವ ಪ್ರಶ್ನೆ; ಅಸಂಬದ್ಧ ಪ್ರಶ್ನೆ: ಅಡ್ಡಪ್ರಶ್ನೆಗಳಿಂದ ಸಾಕ್ಷಿಗಳ ವಿಚಾರಣೆಯಿಂದ ಗದರಿಸುವಿಕೆಯಿಂದ ನಾನಾ ಉಪಾಯಗಳಿಂದ ನ್ಯಾಯವನ್ನು ಕಂಡುಹಿಡಿದು (ಹುಟ್ಟಹ. ೨೧). [ಅಡ್ಡ$_1$ + ಪ್ರಶ್ನೆ]

**ಅಡ್ಡಬಟ್ಟೆ** 'ಅಡ್ಡವಟ್ಟೆ' ನೋ.

**ಅಡ್ಡಬಡ್ಡಿ** (ನಾ). ರೂಢಿಯ ಬಡ್ಡಿಗಿಂತಲೂ ಹೆಚ್ಚಾದ ಬಡ್ಡಿ; ಅಧಿಕ ಬಡ್ಡಿ (?): ಅಡ್ಡಬಡ್ಡಿಯು ಹೊಲ್ಲ ಗಿಡ್ಡಬಾಗಿಲು ಹೊಲ್ಲ ಹೆಡ್ಡರೊಡನಾಟ ತರವಲ್ಲ (ಸರ್ವಜ್ಞ. ೧೪೧೮); ಅಡ್ಡಬಡ್ಡೀ ತೆಗೆದು ಒಡ್ಯಾಣ ಮಾಡ್ಸಿಟ್ಟು ದೊಡ್ಡೋರ ಮಗಳೆಂದು (ಹುಟ್ಟಹ. ೧೫೪). [ಅಡ್ಡ$_1$+ಬಡ್ಡಿ$_2$]

**ಅಡ್ಡಬರ್** 'ಅಡ್ಡಂಬರ್' ನೋ.

**ಅಡ್ಡಬರು** 'ಅಡ್ಡಂಬರ್' ನೋ.

**ಅಡ್ಡಬಲಿಪ** 'ಅಡ್ಡಬಲಿಪ್ಪ' ನೋ.

**ಅಡ್ಡಬಲಿಪ್ಪ**, ಅಡ್ಡಬಲಿಪ (ನಾ). ಅಡ್ಡಬರೆಗಳುಳ್ಳ ಹುಲಿ; ಪಟ್ಟೆಯ ಹುಲಿ: ಕಳೆದ ತಿಂಗಳಲ್ಲಿ ಒಂದು 'ಅಡ್ಡಬಲಿಪ್ಪನೋ, ಬೇಂಗಪಲ್ಲಿ'ಯೋ ಒಬ್ಬ ಗೌಡನ ತೋಳನ್ನು ಕಚ್ಚಿ ಹರಿದುಬಿಟ್ಟಿತಲ್ಲ (ಜಿಟ್ಟಜೀ. ೨೨). **ಅಡ್ಡಬಲಿಪ**: ಆ ಕಣಿವೆಯಲ್ಲಿ ಒಂದು ಹುಲಿ 'ಅಡ್ಡಬಲಿಪ' ಬಿದ್ದು ಸಾಯದೇ ಉಳಿದರೂ ನಿಮ್ಮ ಊರಿಗೆಷ್ಟು ಪ್ರಯೋಜನವಾಗುವುದಿಲ್ಲ? (ಗಂಗಾವ. ೧೮೧). [ಅಡ್ಡ$_1$+ ಬಲಿಪ್ಪ. P **ತುಳು. ಬಲಿಪೆ**=ಅರಸು ಹುಲಿ]

**ಅಡ್ಡಬಾಯಿಹಾಕು** (ಕ್ರಿ). ಬೇರೆಯವರ ಮಾತಿನ ನಡುವೆ ಮಾತಾಡು; ಅಧಿಕಪ್ರಸಂಗತನದ ಮಾತಾಡು: ನೀ ಅಡ್ಡಬಾಯಿ ಹಾಕಬ್ಯಾಡೋ ಭಗತಾ! ಗುಡಿ ಬಂದಮ್ಯಾಗ ಬಾಯಿಗೆ ಬಂದದ್ದು ಹಾಡು ಅಲ್ಲಿ (ಹೊಸಂಸಾ. ೨೬); 'ಅವ್ವಾ, ನಾ ಹೋಗಿ ವೈನಿನ್ನ ಕರಕೊಂಡು ಬರ್ಲೇನು?' ಎಂದು ನಾನು ಅಡ್ಡಬಾಯಿ ಹಾಕಿದೆ (ವೈನಿ. ೬೧).
[ಅಡ್ಡ$_1$ + ಬಾಯಿ$_1$ (< ಬಾಯ್) + ಹಾಕು (< ಪಾಯ್ಕು$_1$)]

**ಅಡ್ಡಬಾರು** (ನಾ). ಪಾದರಕ್ಷೆ ಮುಂತಾದವುಗಳ ಮೇಲ್ಭಾಗದಲ್ಲಿ ಅಡ್ಡಲಾಗಿ ಹಾಕಿರುವ ಚರ್ಮದ ಪಟ್ಟಿ: ಅವರ ಖಾಕೀಕೋಟು, ಎತ್ತರವಾದ ಟೊಪ್ಪಿಗೆ, ಎರಡು ಅಡ್ಡಬಾರಿನ ಚಪ್ಪಲಿಗಳು ಅವರಲ್ಲಿರುವ ದರ್ಪಬುದ್ಧಿಗೆ ಸಾಕ್ಷಿನುಡಿಯುತ್ತಿದ್ದವು (ರಂಗರೋ. ೧).
[ಅಡ್ಡ$_1$ + ಬಾರು$_1$ (< ಬಾರ್$_3$)]

**ಅಡ್ಡಬೀಳ್** 'ಅಡ್ಡಂಬೀೞ್' ನೋ.

**ಅಡ್ಡಬೀಳಿಕು** (ಕ್ರಿ). ಅಡ್ಡಲಾಗಿ ಬೀಳುವಂತೆ ಹೊಡೆ: ಕೊಡಹಿ ಕುಸುಕಿಱಿದಡ್ಡಬೀಳಿಕಿ [ಪಾಠಾಂ. ದಡ್ಡಬಳಿಕೀ, ದಡ್ಡಬೀಳಿಸಿ, ದಡಱಿಕೋಪದಿ] ಮಡದಲುಱಿಘಟ್ಟಿಸಿ ಕೃಪಾಣವ ಜಡಿದು (ಕುವ್ಯಾದ್ರೋ. ೧೪–೧೧).
[ಅಡ್ಡ$_1$ + ಬೀಳ್$_1$ (< ಬೀೞ್$_1$) + ಇಕು$_0$ (< ಇಕ್ಕು)]

**ಅಡ್ಡಬೀಳು** 'ಅಡ್ಡಂಬೀೞ್' ನೋ.

**ಅಡ್ಡಬೂದಿ** (ನಾ). ೧. ಶೈವರು ಹಣೆಯ ಮೇಲೆ ಅಡ್ಡಲಾಗಿ ಧರಿಸಿಕೊಳ್ಳುವ ಬೂದಿ; ವಿಭೂತಿ. ೨. (ವ್ಯಂಗ್ಯವಾಗಿ) ವಿಭೂತಿಯನ್ನು ಧರಿಸಿಕೊಂಡವನು: ದೊಡ್ಡಮುದ್ರೆ ಅಡ್ಡಬೂದಿ ನಡೆದುವೆಷ್ಟೊ ಗೊಡ್ಡುತತ್ವ ಹೇಳಿಕೊಂಡು (ಕವಿಸೋ. ೪೦). [ಅಡ್ಡ$_1$ + ಬೂದಿ]

**ಅಡ್ಡಬೆಲಗು** (ನಾ). ಎದುರು ಬದುರಾಗಿರುವ ಎರಡು ಗೋಡೆಗಳ ಇಳಿಜಾರಿನಲ್ಲಿ ಅಡ್ಡಲಾಗಿ ಹಾಕಿರುವ ತೊಲೆ: ಮುಂದೆ ತಲೆಬೆಲಗಿನಿಂದ ಎರಡು ಪಕ್ಕಗಳಿಗೂ ಅಡ್ಡಬೆಲಗುಗಳ ಮೇಲೆ (ಮುಂಬಯಿ. ೪–೧೧೮). [ಅಡ್ಡ$_1$ + ಬೆಲಗು]

**ಅಡ್ಡಬೊಟ್ಟು** (ನಾ). ಹಣೆಯಲ್ಲಿ ಅಡ್ಡಲಾಗಿ ಇಟ್ಟುಕೊಳ್ಳುವ ಬೊಟ್ಟು: ಕೆಲಕ್ಕೆ ನಸುಗೊಂಕಿದ ಕತ್ತುರಿಯಡ್ಡಬೊಟ್ಟು ತಳ್ತಿಕ್ಕಿದ ಚಂದನಂ (ಅರ್ಧನೇ. ೩–೯೯); ಕತ್ತುರಿಯಡ್ಡಬೊಟ್ಟಸೆಯೆ ಮುತ್ತಿನ ಮೂಗುತಿಯೊಪ್ಪೆ (ಲೀಲಾವ. ೨–೩೬); ಚಂದನದ ಅಡ್ಡಬೊಟ್ಟಪರಂಜಿ ಸೆಳವೆವಿಡಿದು ಬಂದು ಅಡ್ಡಬಿದ್ದನು ರಾಯನಡಿಗೆ (ಭರಚ. ೧೩–೧೯).
[ಅಡ್ಡ$_1$ + ಬೊಟ್ಟು$_2$]

**ಅಡ್ಡಮರ** (ನಾ). ಬಾಗಿಲಿಗೆ ಅಡ್ಡಲಾಗಿ ತಡೆಯಿಡುವ ಮರ (೬).
[ಅಡ್ಡ$_1$ + ಮರ]

**ಅಡ್ಡಮಳೆ** (ನಾ). ಅಕಾಲದಲ್ಲಿ ಬರುವ ಮಳೆ; ಅಕಾಲವರ್ಷ: ಒಮ್ಮೆ ಬೇಸಗೆಯಲ್ಲಿ ಅಡ್ಡಮಳೆ ಬಿದ್ದುದರಿಂದ ಹುತ್ತಗಳೊಳಗಿಂದ ಇರುವೆಗಳು ಮೇಲೆ ಬಂದುವು (ಬುದ್ಧಜಾ. ೧೪೧). 'ಅಡಸರಿ' ಪರಾ.
[ಅಡ್ಡ$_1$ + ಮಳೆ (< ಮೞೆ). / **ತಮಿ.** ಅಡ್ಡೈಮೞೈ; **ಮಲ.** ಅಡೆಮೞೆ, ಅಡಲ್ಮೞೆ = ನಿರಂತರವಾದ ಮಳೆ, ಎಡೆಬಿಡದ ಮಳೆ]

**ಅಡ್ಡಮಾತು** (ನಾ). ೧. ಪ್ರಸಕ್ತವಾದ ವಿಷಯಕ್ಕೆ ಸಂಬಂಧಪಡದ ಮಾತು. ೨. ಅಡ್ಡಿಯನ್ನು ತರುವ ಮಾತು: ನಿಮ್ಮ ಪಟ್ಟಾಭಿಷೇಕಕ್ಕೆ ಅಡ್ಡಮಾತು ಹೇಳಬೇಡಿ (ಚಿದೇವ. ೨೪). ೩. ಅಪಶಕುನದ ಮಾತು. 'ಅಡ್ಡನುಡಿ' ಪರಾ. [ಅಡ್ಡ$_1$ + ಮಾತು$_1$]

**ಅಡ್ಡಮಾರ್ಗ** (ನಾ). ೧. ಅಡ್ಡದಾರಿ; ಕಾಲುಹಾದಿ. ೨. ತಪ್ಪುದಾರಿ: ಅವನ ಸಹವಾಸ ಈ ಹುಡುಗನನ್ನು ಅಡ್ಡಮಾರ್ಗಕ್ಕೆ ಎಳೆಯಿತು (ರೂಢಿ). [ಅಡ್ಡ$_1$ + ಮಾರ್ಗ]

**ಅಡ್ಡಮಿರ್** (ಕ್ರಿ). ಅಡ್ಡಲಾಗಿರು; ತಡೆಯಾಗಿರು: ಪಡೆಗಡ್ಡಮಿರ್ದ

ಬೆಟ್ಟಟ್ಟಿಡೆ ಮುಟ್ಟನಿಜುಂಬಮೆಂಬಿವಂ ಸಣ್ಣಿಸಿ (ಆದಿಪು. ೧೧-೪೭) ; ಪರಿಮಳದ ನಾವೆಯಂತಡ್ಡಮಿರ್ದ ನಾಸಿಕಮಂ ದಾಂಟಲಾಱದುಭಯಪಕ್ಷದಿಂ ಸುತ್ತಿಬಪ್ಪಾಸೆಯೊಳು ಬಟ್ಟೆಗೊಡುವುದೆಂದು . . . ಗಂಡಮಂಡಲದೊಳು ಮಾರ್ಪೊಳೆವ ಕರ್ಣಪಾಲಿಕೆಗಳ (ಬಸರ. ೧೨-೮೨) ; ಮೊಗಕಡ್ಡಮಿರ್ಪ ಕಡುನಾಣ್ಚಿಕೆಯಂ ತೊಳೆವಂತೆ ತೋರ ಬಾಷ್ಪದ ಪನಿದಂದಲಂ ಸುರಿಯುತುಂ (ಕುಸುಮಾ. ೧೨-೧೪೪). [ಅಡ್ಡಂ + ಇರ್]

**ಅಡ್ಡಮುಖ** (ನಾ). = ಅಡ್ಡಮುಸುಡು: ಮುಖಕ್ಕೆ ಮುಖಕೊಟ್ಟು ಮಾತನಾಡದೆ ಅಡ್ಡಮುಖವಾಗಿ ಮಾತನಾಡುವ ಈ ಡೊಂಕು ನಮ್ಮ ಆಟವಲ್ಲ (ಮಾಮುಲ್ಲಿ. ೧೦೮). [ಅಡ್ಡ$_1$ + ಮುಖ]

**ಅಡ್ಡಮುಡಿ** (ನಾ). ಅಡ್ಡಡ್ಡಲಾಗಿ ಕಟ್ಟಿದ ತುರುಬು; ತಲೆಯ ಒಂದು ಪಕ್ಕಕ್ಕೆ ಕಟ್ಟಿದ ತುರುಬು ; ಓರೆಮುಡಿ : ಅಡ್ಡಮುಡಿಯ ಸೋರುಮುಡಿಯ ಸೊನ್ನಾರದ ದೊಡ್ಡಮುಡಿಯ ತೆಕ್ಕೆದುಱುಬ ಒಡ್ಡು ದೋಱದೆ ಬಿಟ್ಟು ಬೇಸಱುಮುಡಿಗಟ್ಟ ಖಡ್ಡಳಿದೆಯ್ತಂದರೊಸೆದು (ಭರಚ. ೧೬-೨೪). [ಅಡ್ಡ$_1$ + ಮುಡಿ$_2$]

**ಅಡ್ಡಮುಸುಕು**, ಅಡಮುಸುಕು (ನಾ). (ಮುಖದ ಮೇಲೆ) ಅಡ್ಡಲಾಗಿ ಹಾಕಿಕೊಳ್ಳುವ ಮುಸುಕು : ನಾನು ನೋಡಿದಾಗ ಆಕೆ ಅಡ್ಡಮುಸುಕನ್ನು ಹಾಕಿಕೊಂಡಿದ್ದಳು (ರೂಢಿ). **ಅಡಮುಸುಕು** : ಅನಿಲಜನು ಇಳಿಯಲಡಮುಸುಕಿನಲಿ ಜೀವರ ಹೊಳಹಿನಂತಿರೆ ಬಳಲಿ ಬೆವರುತ ಬಳಿಕ ಬಂದಾ ಮರದ ಬುಡವನು ಹಿಡಿದು ಕುಳ್ಳಿದನು (ಸಂಭಪ. ೧೭-೧೩). [ಅಡ್ಡ$_1$ + ಮುಸುಕು$_2$]

**ಅಡ್ಡಮುಸುಡು** (ನಾ). ಅಡ್ಡಲಾಗಿ, ಬೇರೆ ಕಡೆಗೆ, ತಿರುಗಿಸಿದ ಮುಖ : ಮಾಱಂಕ ಜಂಗಮು ಮನೆಗೆ ಬಂದಡೆ, ಕಾಣದಂತಡ್ಡಮುಸುಡಿಟ್ಟಡೆ, ಕೂಡಲಸಂಗಮದೇವ, ಜಾಣ,ಮೂಗ ಹಲುದೋಱಿ ಕೊಯ್ವ ! (ಬಸವ. ३೦೦). [ಅಡ್ಡ$_1$ + ಮುಸುಡು]

**ಅಡ್ಡಮೊಗ** (ನಾ). = ಅಡ್ಡಮುಸುಡು. 'ಅಡ್ಡಮೊಗವಿಕ್ಕು' ಪರಾ. [ಅಡ್ಡ$_1$ + ಮೊಗ]

**ಅಡ್ಡಮೊಗವಿಕ್ಕು** (ಕ್ರಿ). ಮುಖವನ್ನು ಬೇರೆಯ ಕಡೆಗೆ ತಿರುಗಿಸು : ಸನ್ನೆಯ ಹೊಯ್ಲಾಗಳರಸನ ಮೊಗನೋಳ್ಪೆನನ್ನೆಗವೊಲೆದಿರ್ಪೆನೆಂದು ಸನ್ನಿಧಿಯವರಿಗೆ ಪೇಳ್ದಡ್ಡಮೊಗವಿಕ್ಕಿ ಗನ್ನದೊಳಿರ್ದನಾ ಮದನ (ಭರಚ. ೫೧-೫೫). [ಅಡ್ಡಮೊಗ + ಇಕ್ಕು]

**ಅಡ್ಡಮೊಗವಿಡು** (ಕ್ರಿ). = ಅಡ್ಡಮೊಗವಿಕ್ಕು : ನೋಡಲಾಗದಲ ಪಾತಕರನೆನುತಡ್ಡಮೊಗವಿಟ್ಟಾ ತೆಱದೊಳೇಕಾಂತರಾಮನು ಭೂತಳೇಶನ ಕೈಯಲಾ ಜಯಪತ್ರವಂ ಕೊಡಲು (ಬಸವು. ೫೨-೪೭). [ಅಡ್ಡಮೊಗ + ಇಡು]

**ಅಡ್ಡಮೊಗವೀ** (ಕ್ರಿ). = ಅಡ್ಡಮೊಗವಿಕ್ಕು : ನೋಡದವನನಡ್ಡಮೊಗವಿತ್ತು ಕದಪಲಿ ನೀಡುತ ಹಸ್ತಾಂಬುಜವ ಕೂಡೆ ಪಾತ್ಸ್ಯಾವು ತನ್ನಾಪ್ತ ಮಂತ್ರಿಯ ಕರೆದಾಡಿದನೇನ ಬಣ್ಣಿಸುವೆ (ಕಂನವಿ. ೧೬-೩). [ಅಡ್ಡಮೊಗ + ಈ$_1$]

**ಅಡ್ಡಮೋರೆ** 'ಅಡ್ಡಮೋಱೆ' ನೋ.

**ಅಡ್ಡಮೋರೆಮಾಡು** (ಕ್ರಿ). ಮುಖವನ್ನು ಬೇರೆ ಕಡೆಗೆ ತಿರುಗಿಸಿ ಅಸಮ್ಮತಿಯನ್ನು ತೋರಿಸು. [ಅಡ್ಡಮೋರೆ (< ಅಡ್ಡಮೋಱೆ) + ಮಾಡು$_1$]

**ಅಡ್ಡಮೋರೆಹಾಕು** (ಕ್ರಿ). = ಅಡ್ಡಮೋರೆಮಾಡು : ದುಗ್ಗಮ್ಮನು ಮುಂದೆ ಬಂದ ತಕ್ಷಣ ಕಳಸಯ್ಯ ಅಡ್ಡಮೋರೆ ಹಾಕಿಕೊಂಡು ಹೊರಡಲು ಸಿದ್ಧನಾದ (ಹಂಗಾಳ. ೫೨). [ಅಡ್ಡಮೋರೆ (< ಅಡ್ಡಮೋಱೆ) + ಹಾಕು (< ಪಾಯ್ಕು$_1$)]

**ಅಡ್ಡಮೋಱೆ**, ಅಡ್ಡಮೋರೆ (ನಾ). ೧. ಬೇರೆಯ ಕಡೆಗೆ ತಿರುಗಿಸಿದ ಮುಖ : ದೃಷ್ಟಿಸಿ ನೋಡಿ ಮಾತಾಡು ಭ್ರಷ್ಟರಂತಡ್ಡಮೋಱೆಯೊಳೇಕೆ ನುಡಿವೆವೃತ್ಕೃಷ್ಟಧೀರೆಯೆಂದನೊಡನೆ (ಭರಚ. ೧೪-೯೮). 'ಅಡ್ಡಮುಸುಡು' ಪರಾ. ೨. (ಉದ್ದಕ್ಕಿಂತ ಅಗಲವು ಹೆಚ್ಚಾಗಿ) ವಿಕಾರವಾಗಿರುವ ಮುಖ : ಅಡ್ಡಮೋಱೆಯ ಗಂಟು ಮೂಗಿನ . . . ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ (ನಳಚ. ೬-೧೪). **ಅಡ್ಡಮೋರೆ** : ೧. ಗಿಡ್ಡುರೂಪಿನ ಭ್ರಷ್ಟರಂತೆ ಅಡ್ಡಮೋರೆಯಲ್ಲಿ ಏಕೆ ನುಡಿದೇವು ? (ಮಾಮುಲ್ಲಿ. ೧೦೭). [ಅಡ್ಡ$_1$ + ಮೋಱೆ]

**ಅಡ್ಡಮೋಱೆದೆಗೆ** (ಕ್ರಿ). ಮುಖವನ್ನು ಬೇರೆಯ ಕಡೆಗೆ ತಿರುಗಿಸಿಕೊ: ನೋಡುವಳೊಡನೋರೆಗಣ್ಣಿಂದ ಭಾವನ ಕೂಡಡ್ಡಮೋಱೆದೆಗೆವಳು ನೋಡುವಾಗಿಷ್ಟು ಚಿಂತೆಯ ತೋಱಿ ಮೊಗವಡ್ಡಮಾಡಿಕೊಂಡುಱಿ ನಗುತಿಹಳು (ಭರಚ. ೯-೬೮). [ಅಡ್ಡಮೋಱೆ + ತೆಗೆ$_1$]

**ಅಡ್ಡಯಿಸು**, ಅಡ್ಡಗಿಸು, ಅಡ್ಡಯ್ಸು, ಅಡ್ಡವಿಸು, ಅಡ್ಡೈಸು (ಕ್ರಿ). ೧. ತಡೆ ; ಅಡ್ಡಗಟ್ಟು ; ಅಡ್ಡಿಮಾಡು : ಬಡವಂಗೊಪ್ಪುವ ರಾಜ್ಯಲಕ್ಷ್ಮಿ ಕುರುಡಂಗಕ್ಷಿದ್ವಯಂ ಕೂಪದೊಳ್ ಕೆಡೆವಂಗಡ್ಡಯಿಪಡ್ಡಗೊಂಬು . . . ಕೈಸಾರ್ದೊಡೆ ಭಾವಿಪಂದವನೆ ಧನ್ಯಂ (ಧರ್ಮಾಮೃ. ३-೧೭) ; ಕಣ್ಬೊಣರನಡ್ಡಯಿಪ ತೆಱದೆ ಪೊಱಮಡುವ ಕಣ್ಬನಿಯುಂ (ವರ್ಧಪು. ೬-೧೨ ವ) ; ಕುಂಭಾಂಡನ ಕೊಂದು ದಂತಿಗರಡ್ಡಯಿಸಿದರು (ಮೋಹತ. ३೪-३೭). **ಅಡ್ಡಗಿಸು** : ೧. ಕಾವೇರಿ, ಪತಿ ಇಂತು ಅಡ್ಡಗಿಸಿ ದಾರಿಯಲಿ ಕೆಡೆದಿರಲು, ಅವನ ತಪ್ಪಿಸಲೆಂದು ಒಡನೆ ತಾ ಎರಡಾಗಿ ಎರೆಯನನು ಬಳಸಿ ಮುಂಬರಿಯುವಳು (ನವರಾ. ४-೬೭). **ಅಡ್ಡಯ್ಸು** : ೧. ನಿಜಮನೋರಥವಿವಕ್ಷೆಯಿನೀಕ್ಷಿಸುವ ಗಾಂಭೀರ್ಯವಾರಿಧಿಯ ಜಿಹ್ವಾ ಲೋಲಕಲ್ಲೋಲತೆಯನಡ್ಡಯ್ಸುತಿರ್ಪಲಂಘ್ಯ ಲಜ್ಜಾಮರ್ಯಾದೆಗೆ ನೆರಂ ಬರ್ಪಂತೆ ಬಂದು (ವರ್ಧಪು. ४-८೭ ವ). **ಅಡ್ಡವಿಸು**: ೧. ಆ ಮುನಿವರರಾಜ್ಞೆಗಡ್ಡವಿ[ಪಾಠಾಂ. ಯಿ]ಸರಲ್ಲಿಯ ಕಾಪಿನ ಯಕ್ಷರಾಕ್ಷಸರ್(ಪಂಚಾಮಾ. ೭-೧३೭); ಕರಿರಾವುತ ಪಾಯಕರುರ್ಬಿ ಕೊರ್ಬಿ ಬಂದಡ್ಡವಿಸುತ್ತೆ ನಿಲ್ತುಸುರನೊಳ್ ಮಿಗೆ ಪೋರ್ದರಖರ್ವಗರ್ವದಿಂ (ಉದ್ಭಟ. ४-೭೭) ; ಧುರದೊಳುಳಿದಂತಿಂದ್ರ ಯಮ ಭಾಸ್ಕರ ವಿರಿಂಚಿಗಳಡ್ಡವಿಸಿದರೆ ಶಿರವನರಿವೆನು ನಾಳೆ ಬೈಗಿಂದೊಳಗೆ ಸೈಂಧವನ (ಕುವ್ಯಾದ್ರೋ. ೮-३६). **ಅಡ್ಡೈಸು** : ೧. ಪುದಿದ ಪುಳಕಂಗಳಡ್ಡೈಸದಿರವೆನುತ್ತಂಜಿದಂತೆ ನಳಿತೋಳ್ಗಳಿನಪ್ಪದೆ ಕಾಂತೆ ಹೃದಯದಿಂದಪ್ಪಿದಳ್ (ಕಾದಂಉ. ८೬) ; ರಣದಲಿ ಶೂಲಿಯಡ್ಡೈಸಿದರೆ ಹಿಡಿವೆನು (ಕುವ್ಯಾದ್ರೋ. ४-೯) ; ಸಾರಥರ್ಮದ ಮುಂದಧರ್ಮವಡ್ಡೈಸುವದೆ (ಚಿಬಪು. ೪೪-३८) ; (ಧರ್ಮಾಮೃ. ೨-೬೦ ; ತೊರರಾ. ೬-೧३-೪೮ ನೋ). ೨. ಅಡ್ಡಲಾಗಿ ಹಿಡಿ ; ಮರೆಮಾಡು : ಚೀನಾಂಶುಕದ ಸೆಱಗನಡ್ಡೈಸುತುಂ ನಾಡೆಯುಂ ಮೆಲ್ಲಡಿಗೆಂಪಿಂ ಧಾತ್ರಿಯಂ ಚಿತ್ರಿಸುತುಮುಸತಿಯರ್ ಪೋದರ್ (ಕುಸುಮಾ. ४-३४). [ಅಡ್ಡ$_1$ + -ಇಸು$_1$. / **ತೆಲು.** ಅಡ್ಡಗಿಂಚು]

**ಅಡ್ಡಯ್ಸು** 'ಅಡ್ಡಯಿಸು' ನೋ.

**ಅಡ್ಡಯ್ಸುಹ** (ನಾ). ಅಡ್ಡಲಾಗಿ ಹೋಗುವುದು ; ಅಡ್ಡಿಪಡಿಸುವುದು : "ತಿರ್ಯಗರ್ಥ = ಅಡ್ಡಯ್ಸುಹ" (ನಾಚಿರಾ. ೩). [ಅಡ್ಡಯ್ಸು + -ಹ (< -ಪ)]

**ಅಡ್ಡರಸು** 'ಅಡರಾಸು' ನೋ.

**ಅಡ್ಡರಸ್ತೆ** (ನಾ). ೧. ಒಂದು ರಸ್ತೆಗೆ ಅಡ್ಡಲಾಗಿರುವ ಬೇರೊಂದು ರಸ್ತೆ : ಈ ಅಡ್ಡರಸ್ತೆಯಲ್ಲಿ ಒಂದುಕಡೆ ಹೋದರೆ ಬೇಲೂರು ಇನ್ನೊಂದು ಕಡೆ ಹೋದರೆ ಹಾಸನ ಸಿಕ್ಕುತ್ತದೆ (ರೂಢಿ). ಚಾಮರಾಜಪೇಟೆಯ ನಾಲ್ಕನೆಯ ಅಡ್ಡರಸ್ತೆಯಲ್ಲಿ ಬಸ್ಸುಗಳು ನಿಲ್ಲುತ್ತವೆ (ರೂಢಿ). ೨. ರಸ್ತೆಗಳು ಒಂದನ್ನೊಂದು ಸಂಧಿಸುವ ಸ್ಥಳ. [ಅಡ್ಡ$_1$ + ರಸ್ತೆ]

**ಅಡ್ಡರಾಸು** 'ಅಡರಾಸು' ನೋ.

**ಅಡ್ಡರುಚಿ** (ನಾ). ಸ್ವಾಭಾವಿಕವಲ್ಲದ ರುಚಿ; ಸಲ್ಲದ ಅಭಿಲಾಷೆ: "ಕಾದಂಬರಿಯನ್ನು ಕಟ್ಟುವೆನೋ ಕೆಡಹುವೆನೋ ಗೊತ್ತಿಲ್ಲ. ಆದರೂ ಗಂಡಸರ ಈ ಅಡ್ಡರುಚಿಯ ಅರ್ಥಮಾಡಿಕೊಳ್ಳದೇ ನನಗೆ ನಿದ್ದೆಯಿಲ್ಲ" (ನಿರಾಭ. ೩೭). [ಅಡ್ಡ$_1$ + ರುಚಿ]

**ಅಡ್ಡಲ್**, ಅಡ್ಡಲು (ನಾ). = ಅಡ್ಡ$_1$. **ಅಡ್ಡಲು** (ಕ).

**ಅಡ್ಡಲಾಗಿ** = ೧. ಪಕ್ಕಕ್ಕೆ ತಿರುಗಿ: ಈ ರಸ್ತೆಯಲ್ಲಿ ಹೀಗೆಯೇ ನೆಟ್ಟಗೆ ಹೋಗಿ ಆಮೇಲೆ ದೀಪದ ಕಂಬದ ಬಳಿ ಅಡ್ಡಲಾಗಿ ತಿರುಗಿಕೊ. ಸ್ವಲ್ಪದರಲ್ಲೇ ನಿನಗೆ ಆ ಮನೆ ಸಿಕ್ಕುತ್ತದೆ (ರೂಢಿ). ೨. ಎದುರಾಗಿ: ಅವನು ಓಡಿಬರುತ್ತಿದ್ದ ಗೂಳಿಗೆ ಅಡ್ಡಲಾಗಿ ನಿಂತನು (ರೂಢಿ). **ಅಡ್ಡಲಾಗು**=ಅಡ್ಡಿಯಾಗು; ಪ್ರತಿಬಂಧಿಸು; ತಡೆಗಟ್ಟು: ಸಂಗ್ರಾಮಕೆಂದು ನಿನ್ನೊಡೆಯನು ನಡೆದುಬಂದೊಡೆ ತನ್ನ ಪೆಸರಂ ಮೃಡನಡ್ಡಲಾಗಿ ಬರಲು ಬಿಡೆ ತೊಡೆವೆನು (ಅಂಜಚ. ೬–೪೫); ಅರಸು ರಾಮರ ಪಂಥಕಡ್ಡಲಾದೆನು ಎಂದು ಮುಱುಗಿದ ಮಹಾತ್ಮನುದ್ಧುರುಟು ಹನುಮಂತ (ಪುರಂದ. ೨–೬೫–೪); ಗಂಡ ಮಾಡುವ ದಾನಕಡ್ಡಲಾಗುವಳಿವಳ್ (ಚೆಬಪು. ೫೬–೩೯). **ಅಡ್ಡಲಾನ್** = ಪ್ರತಿಭಟಿಸಿ ನಿಲ್ಲು: ಕಡ್ಡಿಗೆಣಿಸದೆ ತಳಿಗಳಂ ಮುಱಿದು ಕೊಂಡಗಳೊಳಡ್ಡಲಾತ[ಪಾಠಾಂ. ದ]ಮರರಂ ತಱಿವುತುಂ ಪುರವನೊಳ ಪೊಗುತಿರ್ದರ್ (ಚೆಬಪು. ೪೨–೨೮). [ಅಡ್ಡ$_1$+ –ಅಲ್]

**ಅಡ್ಡಲಾಕು** (ನಾ). ೧. ಗಿಡದ ಬುಡದ ಮಗ್ಗುಲಲ್ಲಾಗಲಿ, ಬೇರಿನಿಂದಾಗಲಿ ಒಡೆದು ಚಿಗುರಿದ ಮೊಳಕೆ (ಕಿಸಂಗ್ಲಾ. ೪೩). ೨. ಕೂಳೆಬೆಳೆ (ಸ್ಯಾಂಡರ್).

**ಅಡ್ಡಲಾಕಿಡು, ಅಡ್ಡಲಾಕೊಡೆ** = ಕವಲೊಡೆಯುವಂತೆ ಚಿಗುರು; ರೆಂಬೆ ಹುಟ್ಟಿಕೊ (ಸ್ಯಾಂಡರ್). [ಅಡ್ಡ$_1$ + ಲಾಕು]

**ಅಡ್ಡಲಿಡು** (ಕ್ರಿ). ಅಡ್ಡಲಾಗಿ ಇಡು; ಮರೆಮಾಡು: ನೋಡಲ್ಕಂಜಿ ದೃಷ್ಟಿಗೆ ನೆರೆ ಕರಾಗ್ರಮನಡ್ಡಲಿಡುತಂ ಮಂಟಪದೊಳಿರ್ದು (ಬಸಪು. ೨೬–೨೯). [ಅಡ್ಡಲ್ + ಇಡು]

**ಅಡ್ಡಲು** 'ಅಡ್ಡಲ್' ನೋ.

**ಅಡ್ಡಲುವೊಡ್ಡು** (ಕ್ರಿ). ಅಡ್ಡಲಾಗಿ ಇರಿಸು; ತಡೆಯೊಡ್ಡು: ಕಾಲ ನಡ್ಡಲುವೊಡ್ಡಿನಿಲ್ಲುತ ಜೋಲಿ ನಡೆವುತ (ಬಸಪು. ೨೦–೧೩). [ಅಡ್ಡಲು + ಒಡ್ಡು$_1$]

**ಅಡ್ಡಲೋವೆ** (ನಾ). ಗೋಡೆಯಿಂದ ಮುಂದಕ್ಕೆ ಚಾಚಿದ ಚಾವಣಿಯ ಮುಂಭಾಗ, —ತಲೆಕಟ್ಟು; ಪರಟೆ (ಕಿಸಂಗ್ಲಾ. ೮೧). [ಅಡ್ಡ$_1$ + ಲೋವೆ]

**ಅಡ್ಡವಂತಿಕೆ** (ನಾ). ಒಂದು ತೆರದ ಸುಂಕ; ಅಡ್ಡಸುಂಕ: ಕಳೆದುಳಿದ ಲೆಕ್ಕಗುತ್ತಿಗೆಗಳ ನಿಲಹದ ನಾಮಿಯಡ್ಡವಂತಿಕೆ ನಾನಾ ಸುಲಿಗೆ ಲಾವಣಿಗೆಯೆಂಬೀ ಗಳಬಳಮಂ ನಿಲಿಸಿ ಸುಂಕಮಂ ಬಾಳಿಸಿದಂ (ಕೆಳನೃ. ೭–೩೦). 'ಅಡ್ಡಬಡ್ಡಿ' ಪರಾ. [ಅಡ್ಡ$_1$ + ವಂತಿಕೆ$_1$]

**ಅಡ್ಡವಟ್ಟೆ**, ಅಡ್ಡಬಟ್ಟೆ (ನಾ). ೧. ಮುಖ್ಯವಾದ ದಾರಿಗೆ ಅಡ್ಡಲಾಗಿ ಹೋಗುವ ದಾರಿ; ಅಡ್ಡ ರಸ್ತೆ: ಮಾಗುಣ್ಡಿಗೆ ಪೋದ ಅಡ್ಡವಟ್ಟೆ ಪಡುವಣ ಮೇರೆ ಬಡಗಸೆಟ್ಟಿವೊಲಂ ಮೇರೆ (ಸೌಇಇ. XI-i, ೯೭–೩೧; 1062); ಆಯೆರಡುಂ ಪೊಳೆಗೆ ಬರ್ಪಡ್ಡವಟ್ಟೆಯ ಖಾಸಟದ ಮಳವೆ (ಎಇ. XIX, ೧೮೯–೨೩; 1079). **ಅಡ್ಡಬಟ್ಟೆ**: ಅಡ್ಡಬಟ್ಟೆ ಕೂಡಿದಲ್ಲಿ ಬಲಿಯಂ ಕೊಡುವುದು (ಬಾಲಚಿ. ೧೩೩–೩). ೨. ಒಂದು ಸುಂಕ; ಅಡ್ಡರಸ್ತೆಗೆ ಬರುವ ಪದಾರ್ಥಗಳ ಮೇಲೆ ವಸೂಲು ಮಾಡುವ ಸುಂಕ: ಸುಂಕದವರು ಗಣಪತಿ ದೇವಂಗೆ ಪುಣ್ಯವಾಗಲು ಹೆಜ್ಜುಂಕ ಅಡ್ಡವಟ್ಟ[ಟ್ಟೆ]ಯಂ ಮಾನ್ಯಂಮ್ಮಾಡಿ ಕೊಟ್ಟ ಗಾಣ ೧ ಸುಂಕಾಧಿಕಾರಿ ಮಂಚ್ಯರಸಂಗೆ ಪುಣ್ಯವಾಗಲು ಅಡ್ಡವಟ್ಟೆಯ ಸುಂಕವನು ಮಾನ್ಯವಾಗಿ ಶ್ರೀಗವಱೇಶ್ವರ ದೇವರಿಗೆ ವಿಶ್ವನಾಥದೇವನು ಬಿಟ್ಟ ಕೋಣ ೧೦ (ಕಇಅ. ೪೪, ೬೩–೨೫; 1229). ⓟ ತೆಲುಗಿನ "ಅಡ್ಡವಟ್ಟ" (ಸೌಇಇ. X, ೩೧೪–೧೪; 1247); "ಅಡ್ಡವಟ್ಟ ಸುಂಕಮು" (ಸೌಇಇ. X; ೪೨೭–೨೫; 1270) ಇದನ್ನು ಹೋಲಿಸಿ. [ಅಡ್ಡ$_1$ + ಬಟ್ಟೆ$_1$]

**ಅಡ್ಡವಡೆ** (ನಾ). ಸೈನ್ಯದ ಅರ್ಧಭಾಗ: ನಾಲ್ಗಳಿಗೆಯೊಳೆ ರಕ್ಕಸ ಬಲದೊಳಡ್ಡವಡೆ ನಿದ್ದೆಗೊಂಡುದು (ಅದ್ಭುತ. ೪೭–೧೨). [ಅಡ್ಡ$_2$ + ಪಡೆ$_2$]

**ಅಡ್ಡವಣೆ** (ನಾ). ಕಂಬಗಳಮೇಲೆ ಅಡ್ಡಲಾಗಿ ಜೋಡಿಸಿರುವ ಮಣೆ: ಕೇಳೀನಿಳಯದ ಕೆಲದೊಳ್ ನಟ್ಟ ಕನಕಯಷ್ಟಿಗಳ ಮೇಗಣಡ್ಡವಣೆಗಳೊಳ್ ಕಣ್ಮುಚ್ಚಿ ಬೆಚ್ಚಿದಂತಿರ್ದು (ಲೀಲಾವ. ೩–೨೦ ವ). [ಅಡ್ಡ$_1$ + ಮಣೆ]

**ಅಡ್ಡವರ್** 'ಅಡ್ಡಂಬರ್' ನೋ.

**ಅಡ್ಡವರಿ$_1$** 'ಅಡ್ಡಂಬರಿ' ನೋ.

**ಅಡ್ಡವರಿ$_2$** (ನಾ). ೧. ಅಡ್ಡಲಾದ ಓಟ: ತೋರಣದೊಳ್ ನುಸುಳ್ವಂತೆ ತಲೆದರ್ಗಿ ಪರಿವ ಕಳಕಳಮನಾಲಿಸುತಡ್ಡವರಿಯೊಳಾಂತು ನಿಂದಿದಿರ್ಚಿ ಪರಿವೊಟ್ಟಜೆಯಿಂ ಸಿಲ್ಕಿದರಂ ಪಿಡಿವ (ರಾಜಶೇ. ೬–೧೧ ವ). ೨. ಸಣ್ಣ ಹಾದಿ; ಕಾಲುದಾರಿ (ಸ್ಯಾಂಡರ್). [ಅಡ್ಡ$_1$ + ಪರಿ$_1$]

**ಅಡ್ಡವರಿ$_3$** (ನಾ). ಮನೋರಂಜನೆಯ ಕಾರ್ಯಕ್ರಮ ಮೊದಲಾದ ಪ್ರಾಸಂಗಿಕವಾದ ವೆಚ್ಚಗಳಿಗಾಗಿ ಎತ್ತುವ ತೆರಿಗೆ ಅಥವಾ ವಂತಿಗೆ (ಸ್ಯಾಂಡರ್). [ಅಡ್ಡ$_1$ + ವರಿ]

**ಅಡ್ಡವರಿಗೆ** (ನಾ). ಅಡ್ಡಲಾಗಿ ಹಿಡಿದುಕೊಳ್ಳುವ ಗುರಾಣಿ, —ಢಾಲು: ಹೆಗಲಡ್ಡವರಿಗೆಯ ನೀಡಿ ಮೈಮಣಿದೌಕಿ ತಿವಿದಾಡಿದರು ಸಬಳಿಗರು (ಕುವ್ಯಾಭೀ. ೮–೧೬); ಮೇಲೆ ಬೀಳ್ವ ಕಠೋರಶಸ್ತ್ರವ್ರಜವ ನೂಕಿದ ನಡ್ಡವರಿಗೆಯಲಿ (ಕುವ್ಯಾಕ. ೨೦–೫). 'ಅಡ್ಡವಲಗೆ' ಪರಾ. [ಅಡ್ಡ$_1$ + ಪರಿಗೆ]

**ಅಡ್ಡವಲಗೆ** (ನಾ). ೧. ಅಡ್ಡಲಾಗಿ ಹಾಕಿರುವ ಅಥವಾ ಹಿಡಿದಿರುವ ಹಲಗೆ: ನಾದಬಿಂದುಗಳಡ್ಡವಲಗೆಗಳಾದಿ ಶಕ್ತಿಯೆ ತಿಗುರಿ ಮೂಜಕ್ಕಾದಿಯಾದವು (ಬಸಪು. ೨೧–೨೭). ೨. = ಅಡ್ಡವರಿಗೆ: ಒಡ್ಡಿದ ಶೂಲ ವರಾಹನ ತಲೆ ನೂಕುವಡ್ಡವಲಗೆ ಕವಣೆಗಳು ಅಡ್ಡಾಯುಧ ಗರಗಸ ಮೊನೆಗಲ್ಲು ಕಣ್ಗೆಡ್ಡವಾಗಿಯೆ ರಾಜಿಸಿಹುವು (ಕಂನವಿ. ೬–೨೦). [ಅಡ್ಡ$_1$ + ಪಲಗೆ]

**ಅಡ್ಡವಳಿ** (ನಾ). ಬೆರಕೆಯ ತಳಿ; ಮಿಶ್ರರಕ್ತದಿಂದಾದ ತಳಿ, —ವಂಶ (ಸ್ಯಾಂಡರ್). [ಅಡ್ಡ$_1$ + ಬಳಿ$_2$ (< ಬೞಿ$_3$)]

**ಅಡ್ಡವಾತಿ** (ನಾ). ಅಡ್ಡಲಾಗಿ ಹಾಯುವುದು, —ಹೋಗುವುದು (?): ಸಡ್ಡೆಮಾಡದೆ ರಕ್ಕಸನ ಕೂರ್ಗಣೆಗಳ ವಿಡ್ದೂರವನು ಹಾಱಿಹೊಯ್ದು ಅಡ್ಡವಾತಿಯಲಿ [ಪಾಠಾಂ. ವಾರಿಯಲಿ, ವಾರಿನಲಿ] ಸ್ಯಂದನ ಸೂತ ವಾಜಿಯ ಒಡ್ಡವಣೆಯ ಖಂಡಿಸಿದ (ಮೋಹತ. ೪೦–೫೪); ಖಾತಿಗೆಟ್ಟುದು ಬಲಾಢ್ಯರು ಕಾಮಸುತನಡ್ಡವಾತಿಯ [ಪಾಠಾಂ. ಗಡವಾಕಿನ] ಕೋಲ್ಗಳುಬ್ಬಟೆಗೆ ಭೀತಿಸಿ ಹಿಮ್ಮೆಟ್ಟ ಸಾರ್ದರು ರಣರಂಗ ನೀತಿಬಾಹಿರರಾದೆವೆನುತೆ (ಮೋಹತ. ೩೫–೨೪).

[← ತೆಲು. ಅಡ್ಡವಾತಿಯಮ್ಮು = ಒಂದು ವಿಧವಾದ ಬಾಣ]

**ಅಡ್ಡವಾಯ್**, ಅಡವಾಯ್, ಅಡಹಾಯ್, ಅಡಹಾಯಿ, ಅಡ್ಡಹಾಯ್, ಅಡ್ಡಹಾಯು (ಕ್ರಿ). ಅಡ್ಡಲಾಗಿ ನುಗ್ಗು; ಅಡ್ಡಗಟ್ಟು; ತಡೆ: ಅದಾವವನಡ್ಡವಾಯ್ದನೆಲೆಲೇ ಎನುತೆ ಮುನಿದು ಸಿತಗರಗಂಡನುರವಣಿಸುತೆಯ್ತರುತೆ (ಇಹರ. ೪೩); ಎಱಗುವ ತುಂಬಿವಿಂಡಗಿಯೆ ಬಗ್ಗಿಪ ಕೋಗಿಲೆ ಕೊಂಬುಗೊಂಡು ಬಳ್ಕುಱೆ ಮುಳಿದಡ್ಡವಾಯ್ದ ಗಿಳಿ ಮಲ್ಲಳಿ

ಗೊಂಡೊಳಸಾರೆ (ಕಬ್ಬಿಕಾ. ೩೧೧). **ಅಡವಾಯ್ :** ಭೀತಿಯೊಳೋಡುವ ದೀರ್ಘಬಾಹು ಸೈನ್ಯವನಡವಾಯ್ದು ಸಂಹರಿಸಿದೆಂ (ದಶಕು. ೫-೪೫); ಪೊಸಕೋಂಟೆಯಂ ಕೊಂಬೆಡೆಯೊಳಡವಾಯ್ದುದಂ ನೆನೆದು (ಚಿಕವಂ. ೫೫-೭). **ಅಡಹಾಯ್ :** ಪಿನಾಕಧರನಡಹಾಯ್ದರೆಯು ಬಿಡೆವೆಮ್ಮ ವಾಸಿಗಳ (ಕುವ್ಯಾಅ. ೬-೬); ಬಹ ದಿವ್ಯಾಯುಧಕೆ ಚಾಚಿದನು ವಕ್ಷಃಸ್ಥಳವನಸುರಾರಾತಿಯಡಹಾಯ್ದು (ಕುವ್ಯಾದ್ರೋ. ೩-೬೦); ಜನನಿಯ ಮೇಲೆ ಮುಳಿದಳಿವಿಂಗೆ ಜಡಿದನು ಬಾಳ ಬಳಿಕ ವಸಿಷ್ಠ ಕಂಡಡಹಾಯ್ದನಾಯುಧಕೆ (ತೊರರಾ. ೨-೬-೫); ಅಗಸೆಗಳ್ ಗಗನಕಡಹಾಯ್ವಂತೆ ನಲಿವುದಿಲ್ಲಿ (ಅರ್ಜಾವಿ. ೨೩-೩); ಕೌಂತೇಯನಂ ತಜುಬಲಡಹಾಯ್ದು ವೃಷಕೇತು ಬರಲಾತನೊಳ್ ಸರಿಯಾಗಿ ಕಾದುತಿರಲು (ಜೈಮಿಭಾ. ೮-೩೬). **ಅಡಹಾಯಿ :** ಏತಕ್ಕೆ ನೀನಡಹಾಯಿದೆಯೆನುತೆ ಶ್ರೀನಾಥಗೆ ಕೈದುಡುಕಿದನು (ಮೋಹತ. ೩೮-೨೧). **ಅಡ್ಡಹಾಯ್ :** ೧. ತನ್ನನು ನಿಟಿಲಲೋಚನನಡ್ಡಹಾಯ್ದರೆ ಹಿಡಿವೆನೆನುತೆಚ್ಚ (ಕುವ್ಯಾದ್ರೋ. ೨-೩೬); ರಿಪುಜಾಲವನು ಜಜಿದಡ್ಡಹಾಯ್ದನು ಗಾಳಿಗುದಿಸಿದ ವೀರ ನದ್ಭುತ ಸಿಂಹನಾದದಲಿ (ಕುವ್ಯಾಕ. ೧೩-೨೩). ೨. ಬೇರೊಬ್ಬರ ಮುಂದೆ ನಡೆದಾಡು, —ಸುಳಿ (ಕ). **ಅಡ್ಡಹಾಯು** (ಉಕ).
[ಅಡ್ಡ$_1$ + ಪಾಯ್$_1$]

**ಅಡ್ಡವಾಸನೆ** (ನಾ). ಒಂದು ವಸ್ತುವಿಗೆ ಸ್ವಾಭಾವಿಕವಲ್ಲದ, ಕೆಟ್ಟ ಬಗೆಯ ವಾಸನೆ : "ಏನೋ ಅಡ್ಡವಾಸನೆ ಬರುತಾ ಇದೆ" (ಮಹಾಲ. ೨೯). [ಅಡ್ಡ$_1$ + ವಾಸನೆ]

**ಅಡ್ಡವಿಚಾರಣೆ** (ನಾ). ಸಾಕ್ಷಿಗೆ ಪ್ರತಿಪಕ್ಷದ ವಕೀಲರು ಪ್ರಶ್ನೆಗಳನ್ನು ಹಾಕಿ ಮಾಡುವ ವಿಚಾರಣೆ; ಪಾಟೀಸವಾಲು : ಅವರೆಲ್ಲರನ್ನೂ ಅಪ್ರಮೇಯ ಅಡ್ಡವಿಚಾರಣೆ ಮಾಡಿದನು (ಮುಸುಗ. ೧೬೧). 'ಅಡ್ಡಸವಾಲು' ಪರಾ. [ಅಡ್ಡ$_1$ + ವಿಚಾರಣೆ]

**ಅಡ್ಡವಿಜಿ** (ಕ್ರಿ). ಅಡ್ಡಲಾಗಿ ಇರಿ ; ಪಕ್ಕಕ್ಕೆ ತಿವಿ : "ಅಡ್ಡವಿಜಿವಾನೆ ಪರಿಣತಮೆಂಬುದು" (ಹಲಾಯು. ೩೭-೬೬). [ಅಡ್ಡ$_1$ + ಇಜಿ$_1$]

**ಅಡ್ಡವೆಟ್ಟ**, ಅಡವೆಟ್ಟ (ನಾ). ಅಡ್ಡಲಾಗಿರುವ ಬೆಟ್ಟ : ಆಯೂರಿಂಗೆ ಸೀಮೆಊರಿಂ ಮೂಡಲಡ್ಡವೆಟ್ಟದ ಮೂಡಣ ಮೊನೆಯ ಪುಣುಸೆಯ ಕುಪ್ಪೆ (ಸೌಇಇ. XI-i, ೧೧೬-೨೫; 1075). **ಅಡವೆಟ್ಟ :** ಪೊಲದ ಸೀಮೆ ಮೂಡಲಡವೆಟ್ಟ (ಎಇ. XIII, ೧೬೨-೪೨; 1055).
[ಅಡ್ಡ$_1$ + ಬೆಟ್ಟ (< ವೆಟ್ಟ)]

**ಅಡ್ಡವೇಷ** (ನಾ). = ಅಡ್ಡಸೋಗು. [ಅಡ್ಡ$_1$ + ವೇಷ]

**ಅಡ್ಡವೇಳೆ** (ನಾ). ಸಮಯವಲ್ಲದ ಸಮಯ ; ಅವೇಳೆ : 'ಡಾಕ್ಟರ್ನ ಕರಕೊಂಡು ಬರ್ಲೇನು' ಎಂದು ಕೇಳಿ ಅಂಥ ಅಡ್ಡವೇಳೆಯಲ್ಲಿ ಒಬ್ಬನೇ ಹೋದ (ವೈನಿ. ೧೯೮). [ಅಡ್ಡ$_1$ + ವೇಳೆ]

**ಅಡ್ಡವೊಡ್ಡು**, ಅಡವೊಡ್ಡು (ಕ್ರಿ). ಅಡ್ಡಲಾಗಿ ಒಡ್ಡು ; ತಡೆಯಾಗಿ ಹಿಡಿ : ಗವಾಕ್ಷರಂಧ್ರದೊಳ್ಪೆಳಗನಿನಾಂಶುವೆಂದು ಬಗೆದೇಕೆ ಕರಾಬ್ಜಮನಡ್ಡವೊಡ್ಡುವಯ್ (ಕಾದಂಪೂ. ೧೦೦೮). **ಅಡವೊಡ್ಡು :** ಬಿಸಿಲ್ಗೆ ಮೆಯ್ಯನಡವೊಡ್ಡಿ ತದೀಯ ತಟಂಗಳಲ್ಲಿಯಿಂಬಿಲ ಕಡುಗೊಂಬುಗಳ್ ತುಜುಗಿ ಬಿರ್ದವೊಲಿರ್ದುವು . . . ಮೊಸಳೆಗಳ್ (ಶಾಂತೀಶ್ವ. ೧೨-೮೪).
[ಅಡ್ಡ$_1$ + ಒಡ್ಡು$_1$]

**ಅಡ್ಡವೊಯ್ಲು**, ಅಡವೊಯ್ಲು, ಅಡಹೊಯ್ಲು (ನಾ). ಕತ್ತಿಯನ್ನು ಅಡ್ಡಲಾಗಿ ಬೀಸಿ ಹೊಡೆಯುವುದು ; ಅಡ್ಡಹೊಡೆತ : ಕೊರಲಗಿನಾಜಿರಡು ಮೊನೆಯುನಿರದಜುಪುತ್ತೆ ನಾಲ್ಕು ತೆಜನಾದ ಧಾರೆಯನಲ್ಲಿ ಬೀಜುತ್ತೆ ನಾಲ್ಕುತೆಜದಡ್ಡವೊಯ್ಲಂ ಜನಕೆ ತೋಜುತ್ತೆ (ಮೊಸೆರ.೧೪೧-೩). **ಅಡವೊಯ್ಲು :** ಖಡುಗದಡವೊಯ್ಲುಗಳಲಡುಮುದ್ದಡಸಿದರು ಸೂಕರನ ತುಪ್ಪವ ತೊಡೆದರಿಜಿದೇಜಿನೊಳು ಬಿಟ್ಟರು ತೈಲಧಾರೆಗಳ (ಕುವ್ಯಾಭೀ. ೫-೪೨); ನಾಲ್ಕು ತೆಜದ ಧಾರೆಯಂ ಮೂಜು ತೆಜದ ನಿವಾರಣೆಯಂ ನಾಲ್ಕು ತೆಜದಡವೊಯ್ಲಂ ಕಾಯ್ದು ಹೆಣಗಿದರು ಬಿತ್ತರಿಸಿ (ತ್ರಿಪುವಿ. ೨೩-೧೪ ವ). **ಅಡಹೊಯ್ಲು :** ಉಪ್ಪರಕೆ ಜಾಜಿದರು ಪಡಿತಳಕೆ ಮೆಯ್ದೆಗೆದರಡಹೊಯ್ಲಿನಲಿ ಬಲುಗಯ್ದುಕಾಜರು . . . ಹೊಯ್ದಾಡಿದರು (ಸಂಭಪ. ೧೪-೫೬). [ಅಡ್ಡ$_1$ + ಪೊಯ್ಲು]

**ಅಡ್ಡವೊರಗು** (ನಾ). ಒರಗಿಕೊಳ್ಳುವುದಕ್ಕೋಸ್ಕರ ಅಡ್ಡಲಾಗಿ ಇಡುವ ದಿಂಬು : ಹಂಸತೂಲಿಕಾತಲ್ಪದಲ್ಲಿ ಅನಂದಾನುಭವವಾದ ಅಡ್ಡವ[ವೊ]ರಗು ಯಿರುವುದು (ಸೌಗಂಧಿ. ೧೧೪-೩).
[ಅಡ್ಡ$_1$ + ಒರಗು$_2$ (< ಒಜಗು$_2$)]

**ಅಡ್ಡವೊಜಿ**, ಅಡ್ಡಹೊಜಿ (ನಾ). ಅಡ್ಡೆ ; ಕಾವಡಿ : "ಕಾಸು ವಿಹಂಗಿಕೆಯದಡ್ಡವೊಜಿಯಕ್ಕು" (ಮಂಗರಾ. ೬೩-೨೬). **ಅಡ್ಡಹೊಜಿ :** "ವಿಹಂಗಿಕೆ ಅಡ್ಡಹೊಜಿ ಕಂಬಿ" (ನಾಚಿರಾ. ೪). [ಅಡ್ಡ$_1$ + ಪೊಜಿ]

**ಅಡ್ಡಸರ**, ಅಡಸಲ$_1$, ಅಡಸಾರ, ಅಡಸಾಲ (ನಾ). ಆಡುಸೋಗೆಯ ಗಿಡ. **ಅಡಸಲ$_1$ :** ಆಡಸಲವು ವಾಂತಿ, ಕೆಮ್ಮು ಮುತ್ತು ವಿಶೇಷವಾಗಿ ರಕ್ತಪಿತ್ತವನ್ನು ನಾಶಮಾಡುತ್ತದೆ (ಅಷ್ಟಾಂಗ. ೧೩೫-೭೮). **ಅಡಸಾರ:** ಕಾಶೀದಾಶಿವಾಳ ಅಡಸಾರ (ಕೃಷಿಪ್ರ. ೨೦೧). **ಅಡಸಾಲ** (ಉಕ).
[?. / ತೆಲು. ಅಡ್ಡಸರಮು]

**ಅಡ್ಡಸರ್ಪ** (ನಾ). ಒಂದು ಜಾತಿಯ ಗಿಡ. (ವೈಶಿಗಿ. ೫-೮೪).
[ಅಡ್ಡ$_1$ + ಸರ್ಪ ?]

**ಅಡ್ಡಸವಾಲು** (ನಾ). ಪಾಟೀಸವಾಲು. 'ಅಡ್ಡವಿಚಾರಣೆ' ಪರಾ. (ಕಿಸಂಗ್ಲಾ. ೭೮). [ಅಡ್ಡ$_1$ + ಸವಾಲು]

**ಅಡ್ಡಸಾರಿಗೆ** (ನಾ). = ಅಡ್ಡತಾಕು$_2$ : ೨. ಆ ನಾಗಂಣ್ಣನ ಮಗ ನಾರಸಿಂಹದೇವ ಕೊಟ್ಟ ಅಡ್ಡಸಾರಿಗೆಯೊಂದು (ಎಕ. XV, ಹೊಳೆನ. ೯೩-೨೨; 1237). [ಅಡ್ಡ$_1$ + ಸಾರಿಗೆ]

**ಅಡ್ಡಸಾರ್ಚು** (ಕ್ರಿ). ಪಕ್ಕದಲ್ಲಿ ನಿಲ್ಲಿಸು : ಮೊಗಂ ಮುರಿದು ಮೊಲೆಯೂಡಲಡ್ಡಸಾರ್ಚಿದ ಪುಲ್ಲೆಯಿರ್ದಂತೆ ಪರಿಚಯಕ್ಕೆ ಪರಿತಂದು ಕಡೆವಾಯ ಪಾಲಂ ತೊಡೆಯೊಳ್ ತಡಗಾಲ್ವೊಡೆದು (ಅರ್ಧನೇ. ೧-೯೨ ವ).
[ಅಡ್ಡ$_1$ + ಸಾರ್ಚು]

**ಅಡ್ಡಸಾಲು** (ನಾ). ೧. ಅಡ್ಡಲಾಗಿ ಇರುವ ಸಾಲು. ೨. ಅಡ್ಡಪಂಕ್ತಿ (ಕ). ೩. ನೇರವಾಗಿ ಹೊಡೆದ ಉಕ್ಕೆಯ ಸಾಲಿಗೆ ಅಡ್ಡಲಾಗಿ ಹೊಡೆದ ಸಾಲು (ಕ). [ಅಡ್ಡ$_1$ + ಸಾಲು$_2$ (< ಸಾಲ್$_2$)]

**ಅಡ್ಡಸುತ್ತು** (ನಾ). ಅಡ್ಡಲಾಗಿ ಸುತ್ತಿದ ಬಟ್ಟೆ : ಕಾಳಿಂದಿಯ ನೊರೆಯೋ ಎಂಬಂತೆ ಆ ಕೂದಲಿನ ಮೇಲೆ ಒಂದು ಬಿಳಿಯ ತೆಳ್ಳನೆಯ ಚೀನಾಂಬರದ ಅಡ್ಡಸುತ್ತು (ಮಾಮುಲ್ಲಿ. ೧೨೪). [ಅಡ್ಡ$_1$ + ಸುತ್ತು$_2$]

**ಅಡ್ಡಸುಳಿ$_1$** 'ಅಡ್ಡಸುಟಿ' ನೋ.

**ಅಡ್ಡಸುಳಿ$_2$** (ನಾ). ೧. (ಮರದ ದಿಮ್ಮಿಯಲ್ಲಿ) ಅಡ್ಡಲಾಗಿ ಕಾಣಿಸಿಕೊಳ್ಳುವ ಸುಳಿ. ೨. (ಪ್ರಾಣಿಗಳಲ್ಲಿ) ಹೀನಸುಳಿ.
[ಅಡ್ಡ$_1$ + ಸುಳಿ$_2$ (< ಸುಟಿ$_2$)]

**ಅಡ್ಡಸುಟಿ**, ಅಡ್ಡಸುಳಿ$_1$ (ಕ್ರಿ). ೧. ಎದುರಿಗೆ ಸುಳಿದಾಡು, —ಸಂಚರಿಸು : ಅರಲಂಬಿಂ ಗಜಿಸನ್ನೆದೋಜುವನನಂಗಂ ಚಂದವಂ ಕೂಂಕುವಂ ಕರದಿಂ ತೆಂಬೆಲರೆಂಬನಡ್ಡಸುಟಿವಂ ಚೈತ್ರಂ ಪಿಕಾರಾವದಿಂ ಕರೆವಂ ನಲ್ಲನಗಲ್ವೊಡೆ (ಅನಂಪು. ೮-೨೧). **ಅಡ್ಡಸುಳಿ$_1$ :** ೧. ನಿಮ್ಮ ಬೀದಿಯಲ್ಲಿ ಆಗಾಗ ಅಡ್ಡಸುಳಿಯುವ ಆ ಹುಡುಗ ಯಾರು ? (ರೂಢಿ). ೨. ಅಪ್ಪಿತಪ್ಪಿ, ಅಕಸ್ಮಾತ್ತಾಗಿ ಆದರೂ, ಬರು : ಕಳೆದ ನಾಲ್ಕು ತಿಂಗಳಿಂದ ಅವನು ಈ ಕಡೆ ಅಡ್ಡಸುಳಿದಿಲ್ಲ (ರೂಢಿ). [ಅಡ್ಡ$_1$+ ಸುಟಿ$_1$]

**ಅಡ್ಡಸೆರಗು** (ನಾ). ಹೆಣ್ಣುಮಕ್ಕಳು ಎದೆ ಮುಚ್ಚುವಂತೆ ಕಂಕುಳಿನ ಕೆಳಗಿನಿಂದ ಅಡ್ಡಲಾಗಿ ಹೊದೆಯುವ ಸೀರೆಯ ತುದಿ, —ಕೊನೆ.
ಅಡ್ಡಸೆಱಗು ಕಟ್ಟಿ ನಿಲ್ಲು (ಉಕ) = ಕೆಲಸ ಮಾಡಲು ಸಿದ್ಧವಾಗಿ ನಿಲ್ಲು. [ಅಡ್ಡ$_1$ + ಸೆರಗು$_2$ (< ಸೆಱಂಗು)]

**ಅಡ್ಡಸೋಗು** (ನಾ). (ಉಕ) ನಾಟಕ ಮೊದಲಾದವುಗಳಲ್ಲಿ ನಡುವೆ ವಿನೋದಕ್ಕಾಗಿ ಬರುವ ಪಾತ್ರ. [ಅಡ್ಡ$_1$ + ಸೋಗು]

**ಅಡ್ಡಹಚ್ಚು** (ಕ್ರಿ). ೧. (ಹಣೆಯ ಮೇಲೆ ಮತಸೂಚಕವಾದ ಚಿಹ್ನೆಯನ್ನು) ಅಡ್ಡಲಾಗಿ ಧರಿಸು. ೨. ಅಸಂಬದ್ಧ ರೀತಿಯಲ್ಲಿ ವಿರೋಧಿಸು (ಉಕ). [ಅಡ್ಡ$_1$ + ಹಚ್ಚು$_1$ (< ಪತ್ತಿಸು)]

**ಅಡ್ಡಹರವು** (ಕ್ರಿ). ಅಡ್ಡಡ್ಡಲಾಗಿ ಹರಡು : ತಲೆಬೆಲಗಿನಿಂದ ಎರಡೂ ಪಕ್ಕಗಳಿಗೂ ಅಡ್ಡಬೆಲಗುಗಳ ಮೇಲೆ ಎಳೆಗಳನ್ನು ಹಾಕಿ, ಅವುಗಳ ಮೇಲೆ ಸೀಬು ಅಡ್ಡಹರವಿ, ಹುರಿಗಾತಿಯಿಂದ ಹೆಗ್ಗಟ್ಟು ಬಿಗಿದು, ತಾಟು ಸಿದ್ಧ ಮಾಡುತ್ತಾರೆ (ಮುಂಬಯಿ. ೪–೧೧೮). [ಅಡ್ಡ$_1$ + ಹರವು$_1$]

**ಅಡ್ಡಹಾಕು** (ಕ್ರಿ). ೧. ಅಡ್ಡಲಾಗಿ ಹಾಕು ; ಅಡ್ಡಲಾಗಿ ಇರಿಸು (ಕ). ೨. (ಗುರುವಿನ ಪಾದದ ಮುಂದೆ ಆಶೀರ್ವಾದಕ್ಕಾಗಿ ಮಕ್ಕಳನ್ನು) ಅಡ್ಡಲಾಗಿ ಮಲಗಿಸು ; (ರಾಜನ ಮುಂದೆ ಕ್ಷಮೆಗಾಗಿ ಅಪರಾಧಿಯನ್ನು) ಅಡ್ಡಬೀಳಿಸು (ಕ). ೩. ತಡೆದು ನಿಲ್ಲಿಸು ; ತಡೆಗಟ್ಟು : ದಾರಿಯಲ್ಲಿ ಹೋಗುತ್ತಿದ್ದ ಶ್ರೀಮಂತನನ್ನು ಒಬ್ಬ ಕಳ್ಳ ಅಡ್ಡಹಾಕಿದನು (ರೂಢಿ). [ಅಡ್ಡ$_1$ + ಹಾಕು (< ಪಾಯ್ಕು$_1$)]

**ಅಡ್ಡಹಾದಿ** (ನಾ). ೧. ಅಡ್ಡರಸ್ತೆ : ಸಂಜೆಯ ಬಸ್ಸು ಮಂಗಳೆಯನ್ನೂ ದುರ್ಗಿಯನ್ನೂ ಮೈಸೂರು–ಮಂಗಳೂರು ಹೆದ್ದಾರಿಯಲ್ಲಿ ಕೊತ್ತೆಗಾಲಕ್ಕೆ ಹೋಗುತ್ತಿದ್ದ ಅಡ್ಡಹಾದಿಯಲ್ಲಿ ಇಳಿಸಿ ಹೋಯಿತು (ಸರ್ವಮಂ. ೩೩೧). ೨. ತಪ್ಪುದಾರಿ : ನಮ್ಮನ್ನ ಅಡ್ಡಹಾದಿಗೇ ಹಚ್ಚಬೇಕೂಂತ, ಟೊಂಕಾ ಕಟ್ಟೇ ನಿಂತಾರೇನೋ ಎಲ್ಲ ಅಪ್ಪಗೋಳು ? (ಹೊಸಂಸಾ. ೧೩).
[ಅಡ್ಡ$_1$ + ಹಾದಿ (< ಪಾದಿ). / **ತುಳು.** ಅಡ್ಡಸಾದಿ]

**ಅಡ್ಡಹಾಯ್** 'ಅಡ್ಡವಾಯ್' ನೋ.

**ಅಡ್ಡಹೆಸರು** (ನಾ). ೧. ಹುಟ್ಟಿದಾಗ ಇಟ್ಟ ಹೆಸರಲ್ಲದೆ ರೂಢಿಯಲ್ಲಿರುವ ಬೇರೊಂದು ಹೆಸರು ; ನಿಜವಾದ ಹೆಸರಿಗೆ ಬದಲಾಗಿ ಅಥವಾ ಆ ಹೆಸರಿನ ಜೊತೆಗೆ ವಿನೋದಕ್ಕಾಗಿ ಉಪಯೋಗಿಸುವ ಹೆಸರು (ದಕ). ೨. ಇಟ್ಟ ಹೆಸರಿನ ಜೊತೆಗೆ ಸೇರಿಸುವ, ಕೆಲವು ವೇಳೆ ವಂಶಪಾರಂಪರ್ಯವಾಗಿ ಬರುವ, ಹುಟ್ಟಿದ ಊರು, ಕಸಬು, ಸಾಧಿಸಿದ ಕಾರ್ಯ ಮೊದಲಾದವನ್ನು ತಿಳಿಸುವ, ಹೆಚ್ಚಿನ ಹೆಸರು ; ಒಂದು ಮನೆತನದವರಿಗೆಲ್ಲ ಸಾಮಾನ್ಯವಾದ ಹೆಸರು ; ಮನೆತನದ ಹೆಸರು ; ಉಪನಾಮ (ಉಕ) : ತಿರಿದಿಹರೆ ಕೂಳಕ್ಕು ಕೆರೆದಿಹರೆ ಜೋಳಕ್ಕು ಕರೆದಿಹರೆ ಅಡ್ಡಹೆಸರಕ್ಕು ನಿಜವಿರಲು ಸ್ಥಿರಗೊಳ್ಳಲಕ್ಕು (ಸರ್ವಜ್ಞ. ೪೦೩) ; ಮಿಕ್ಕವರೆಲ್ಲ ಅಡ್ಡಹೆಸರನ್ನು ಸ್ವೀಕರಿಸುವ ಕಾಲಕ್ಕೆ ಇವರೂ ಫ್ರ್ಯಾಂಕ್ಲಿನ್ ಎಂಬ ಹೆಸರನ್ನು ಇಟ್ಟುಕೊಂಡರಷ್ಟೆ (ಬೆಂಜಮಿನ್. ೯) ; ಲೀಲೆಯು . . . ಅವೆಲ್ಲವಕ್ಕೂ ಹೆಸರು ಹಾಕಬೇಕಾದರೆ ತನ್ನ ಹೆಸರು, ಶಂಕರನ ಹೆಸರು, ಅವನ ಅಡ್ಡಹೆಸರುಗಳನ್ನು ಅಗಲೇ ಹಾಕಿಟ್ಟಿದ್ದಳು (ಹೂಬಿಸಿ. ೧೩). [ಅಡ್ಡ$_1$ + ಹೆಸರು$_1$ (< ಪೆಸರ್)]

**ಅಡ್ಡಹೇರು$_1$** (ಕ್ರಿ). ಅಡ್ಡಡ್ಡಲಾಗಿ ಹೊರೆಯನ್ನು ಹೊರಿಸು : ತಾಟು ಮಾಡಬೇಕಾದರೆ, ಮೊದಲು ಚಂದೀಗೋಡೆಗಳ ಮೇಲೆ ಬೆಲಗುಗಳನ್ನು ಅಡ್ಡಹೇರುವರು (ಮುಂಬಯಿ. ೪–೧೧೮).
[ಅಡ್ಡ$_1$ + ಹೇರು$_1$ (< ಪೇಱು$_1$)]

**ಅಡ್ಡಹೇರು$_2$** (ನಾ). ಅಡ್ಡಡ್ಡಲಾಗಿ ಹೊರಿಸಿದ ಹೊರೆ (ಕ).
[ಅಡ್ಡ$_1$ + ಹೇರು$_2$ (< ಪೇಱು$_2$)]

**ಅಡ್ಡಹೊಗು**, ಅಡಹೊಗು (ಕ್ರಿ). ಅಡ್ಡಲಾಗಿ ಪ್ರವೇಶಿಸು ; ನಡುವೆ ನುಗ್ಗು : ಮುಕ್ಕಣ್ಣನೈತರುತುಭಯವೀರರಿಗಡ್ಡಹೊಕ್ಕನು ಮಧ್ಯಸ್ಥನಾಗಿ (ಮೋಹತ. ೪೦–೮೨). **ಅಡಹೊಗು :** ಕೆಡಬಡಿವೆವೆನುತಡಹೊಕ್ಕು ಪೈದುಡುಕಿದರೆ ನಗುತಲಿ ಸಿಕ್ಕಿದವದಿರಿಗಲ್ಲಮಪ್ರಭುರಾಯನಿಂತೆಂದ (ಪ್ರಭುಲೀ. ೧೩–೧೦). [ಅಡ್ಡ$_1$ + ಹೊಗು (< ಪೊಗು)]

**ಅಡ್ಡಹೊಡೆತ** (ನಾ). ಅಡ್ಡಡ್ಡಲಾಗಿ ಹೊಡೆದ ಪೆಟ್ಟು ; ಪಕ್ಕದಿಂದ ಹೊಡೆದ ಏಟು : ಅಡ್ಡಹೊಡೆತದ ನೋವು ಹೆಚ್ಚು (ರೂಢಿ).
[ಅಡ್ಡ$_1$ + ಹೊಡೆತ]

**ಅಡ್ಡಹೊತ್ತು** (ನಾ). ಹೊತ್ತಲ್ಲದ ಹೊತ್ತು ; ಅಕಾಲ ; ಅವೇಳೆ : ಏನು, ಸ್ವಾಮಿಜಿಯವರು ಈ ಅಡ್ಡಹೊತ್ತಿನಲ್ಲಿ ಮನೆತನಕ ಬರೋಣಾಯಿತು ? (ಹೊಸಂಸಾ. ೯) ; "ನಮ್ಮವನು ಎದ್ದಿದ್ದಾನು, ಇಂದು ಅಡ್ಡ ಹೊತ್ತಿಗೆ ಮಲಗಿದ್ದ" (ನಿರಾಭ. ೫೦).
[ಅಡ್ಡ$_1$ + ಹೊತ್ತು$_2$ (< ಪೊಟ್ತು)]

**ಅಡ್ಡಹೊಯ್** (ನಾ). = ಅಡ್ಡಹೊಡೆತ : ತಿವುಳ ತೆಲುಗ ರಾವುತರಡ್ಡ ಹೊಯ್ಗಳ ವಿವರವ ಬಲ್ಲರೆ ನನ್ನ ಬವರದೊಳಗೆ ರಾಮುನ ಹೊಯ್ಯದೊಡೆ ನನಗವನಿಪ ಮಾಡಿಸಾಜ್ಞೆಯನು (ಕುರಾಸಾಂ. ೧೬–೭).
[ಅಡ್ಡ$_1$ + ಹೊಯ್$_2$ (< ಪೊಯ್$_2$)]

**ಅಡ್ಡಹೊಱೆ** 'ಅಡ್ಡವೊಱೆ' ನೋ.

**ಅಡ್ಡಳತೆ** (ನಾ). ೧. (ವಸ್ತುವಿನ) ಅಗಲದ ಅಳತೆ, —ಪ್ರಮಾಣ. ೨. ಮೋಸದ ಅಳತೆ (ದಕ). [ಅಡ್ಡ$_1$ + ಅಳತೆ]

**ಅಡ್ಡಳಿ** (ನಾ). ಅಡ್ಡಲಾಗಿ ಸುಳಿಯುವ ತುಂಬಿ, —ಭ್ರಮರ : ಪಡ್ಡಳಿಯ ಪೊಗಸಿ ಬರುತಿರ್ಪಡ್ಡಳಿಯಂ ಸೋವಿ ತಿಱಿದಳಾ ಪಡ್ಡಳಿಯೊಳ್ ದೊಡ್ಡಲರಂ ಕಾಂತೆ (ದಶಕು. ೬–೭೦). [ಅಡ್ಡ$_1$ + ಅಳಿ$_4$ (= ಅಲಿ)]

**ಅಡ್ಡಾಕೆ** (ನಾ). ಪ್ರತಿಭಟನೆ : ಒಡ್ಡಿದ ಶೂಲವ ಹಾಯ್ದು ಮೈಲಾರದ ದೊಡ್ಡಯ ದೇವರಿಂದವನ ಅಡ್ಡಾಕಿಲ್ಲದೆ ತರಿಸಿ ನಿನ್ನಯ ಕಾಲಿಗಡ್ಡಗೆಡಹುವೆನಂಜದಿರು (ಕುರಾಸಾಂ. ೨೪–೩೭) [ಅಡ್ಡಾಕಿಲ್ಲದೆ = ಅಡ್ಡಾಕೆ + ಇಲ್ಲದೆ] ; ಮಾಱಕೊಡ್ಡಿನ ವೈರಿಭಟರನು ಕಡ್ಡಿಗೆಣಿಸದೆ ಕದನದೊಳು ತೆರಳಿದನಡ್ಡಾಕೆಯಿಲ್ಲದಾ ರಾಮು (ಕುರಾಸಾಂ. ೪೫–೩೧) ; ದೊಡ್ಡವರೆಂತಾಡಿದಂತೆ ಸಲುವುದದಕಡ್ಡಾಕೆಯಿಲ್ಲದಱಿಂದ ಗುಡ್ಡದ ಮೇಲಿರ್ದೆ ಬರ ಹೇಳಲೊಡನೆ ನಾನೊಡ್ಡಿ ನಿಂದೆನೆ ಬಂದೆನೆಂದ (ಭರಚ. ೩೯–೧೦೬); ಹೆದ್ದರಿಗಿರಲೀ ಖಡ್ಗ ಸಾಕೆನುತಡ್ಡಾಕೆಯಿಲ್ಲದೆಯ್ದಿದನು (ಭರಚ. ೪೬–೩೬) ; ಬಡ್ಡಿಸಿದಿಡ್ಡಲಿಗೆಯ ಮುಂದೆ ಕುಳ್ಳಿರ್ದು ಗಡ್ಡಮಿಸೆಯ ನೀವಿಕೊಳುತ ಅಡ್ಡಾಕಿಲ್ಲದುಂಬುವ ಕಾರ್ಯವ ಬಿಟ್ಟು ದೊಡ್ಡ ಕಾರ್ಯವನೆಣಿಸಿದಿರಿ (ನೇಮಿಸಂ. ೨೩–೨೭೫). [ಅಡ್ಡ$_1$ + ಆಕೆ$_1$ (< ಅಂಕೆ)]

**ಅಡ್ಡಾಗು** (ಕ್ರಿ). ೧. ಅಡ್ಡಲಾಗು ; ಅಡ್ಡಿಯಾಗು : ಕೈಕೆಯದಕಡ್ಡಾಗಿ ಭರತನಿಗೆ ರಾಜ್ಯಮಿರಲೀ ಕುಮಾರಂ ವನಕೆ ಗಮಿಸಲಿ (ಪರಶು. ೨–೬). ೨. ಅಲ್ಪವಿಶ್ರಾಂತಿಗಾಗಿ ಮಲಗು ; ಮಗ್ಗುಲಾಗು (ಉಕ): ದಣುವು ಆರಿಸಿಕೊಳ್ಳುವುದರ ಸಲುವಾಗಿ ಅಡ್ಡಾದನು (ಮುಂಬಯಿ. ೪–೧೫೧) ; ಧೊರೆಗಳು ಮಂಚದ ಮೇಲೆ ಅಡ್ಡಾಗಿದ್ದಾರೆ (ಹೊಸಂಸಾ. ೯೫).
[ಅಡ್ಡ$_1$ + ಆಗು$_1$]

**ಅಡ್ಡಾಡಿಸು** (ಕ್ರಿ). ತಿರುಗಾಡಿಸು ; ಅತ್ತಿತ್ತ ಸುತ್ತಾಡಿಸು : ಆ ಕೋಣೆಯ ಸುತ್ತೆಲ್ಲ ನನ್ನನ್ನು ಅಡ್ಡಾಡಿಸಿದಳು (ಹಳ್ಳಿಹಾ. ೬೪).
[ಅಡ್ಡಾಡು + –ಇಸು$_3$]

**ಅಡ್ಡಾಡು** (ಕ್ರಿ). ೧. ಅತ್ತಿತ್ತ ಸುಳಿದಾಡು : ಉಭಯ ಸುಭಟರ್ಗಳ್ ಅರ್ಭಟಿಸಿ ತೋಳ್ವೊಯ್ದು ಪಟುಭಟವಾಜಿವರ್ಗಮಂ ರಾವ್ತರಡ್ಡಾಡಿದರ್ ಶೀಡಿದರ್ ಬಿಲ್ಲವರ್ ಸಿಂಜಿನಿಯನು (ಜೆಬವು. ೨೪–೩). ೨. (ವಾಯು

ಸೇವನೆಗಾಗಿ) ಸಂಚರಿಸು : ಹೊರಗೆ ಎಲ್ಲಿಯೋ ಅಡ್ಡಾಡಲಿಕ್ಕೆ ಹೋಗಿರುತ್ತಾನೆ (ಮೋಹಿನೀ. ೫); ಸ್ವಲ್ಪ ಹೊತ್ತಿನಮೇಲೆ ನೀಲಾ, ಗುಣೇಂದ್ರ ಇಬ್ಬರೇ ಅಡ್ಡಾಡಲು ಹೋದರು (ಪ್ರಣಸ. ೨೮).
[ಅಡ್ಡ$_1$ + ಆಡು$_1$. / **ತುಳು.** ಅಡ್ಡಾಡು]

**ಅಡ್ಡಾತಿಡ್ಡಿ** 'ಅಡ್ಡಾದಿಡ್ಡಿ$_1$' ನೋ.

**ಅಡ್ಡಾದಿಡ್ಡಿ$_1$**, ಅಡ್ಡತಿಡ್ಡ$_1$, ಅಡ್ಡಾತಿಡ್ಡಿ (ನಾ). ಕ್ರಮಬದ್ಧವಲ್ಲದಿರುವುದು; ಅಸಂಬದ್ಧತೆ: ಕೆಲವು ಸಂದರ್ಭಗಳಲ್ಲಿ ಅಡ್ಡಾದಿಡ್ಡಿಯಾಗಿ ಕತ್ತರಿಸಿಹೋದಂತೆ ಕಾಣುತ್ತವೆ (ಜ್ಯೋತಿರ್ವಿ. ೧೩೩). **ಅಡ್ಡತಿಡ್ಡ$_1$** : ಅಡ್ಡತಿಡ್ಡಾದ ಅಕ್ಷರಗಳಿಂದ ಒಂದು ಹೊಲಸು ಕಾಗದದ ಮೇಲೆ ಬರೆಯಲ್ಪಟ್ಟ ಪತ್ರವೊಂದನ್ನು (ಕಳ್ಳಕಾ. ೪). **ಅಡ್ಡಾತಿಡ್ಡಿ** : ಹೀಗೆ ಅಡ್ಡಾತಿಡ್ಡಿಯಾಗಿ ವಿಷಯಾಂತರವಾದಾಗ ನಾನು ವೃದ್ಧನಾಗಿರುವೆನೆಂಬುದು ನನ್ನ ಲಕ್ಷ್ಯಕ್ಕೇ ಬರುತ್ತದೆ (ಬೆಂಜನ್. ೧೯).
ಅಡ್ಡಾದಿಡ್ಡಿ ಬೆಲೆ = ಅಸಂಬದ್ಧವಾದ ಬೆಲೆ; ಪ್ರಮಾಣಕ್ಕೆ ಮೀರಿದ ಬೆಲೆ: ಸಮಯ ನೋಡಿ ಪಟೀಲ, ಗೌಡರೂ ಒಂದಾಗಿ ಅಡ್ಡಾದಿಡ್ಡಿ ಬೆಲೆಗೆ ಮಾರುತ್ತಾ ಬಂದರು (ಸಂಧ್ಯಾರಾ. ೩).
[?. / **ತಮಿ.** ಅಟ್ಟಾದುಟ್ಟ, ಅಷ್ಟಾದುಷ್ಟಿ, ಅಷ್ಟಾದುಷ್ಟಂ; **ತುಳು. ತೆಲು.** ಅಡ್ಡಾದಿಡ್ಡಿ]

**ಅಡ್ಡಾದಿಡ್ಡಿ$_2$**, ಅಡ್ಡತಿಡ್ಡ$_2$, ಅಡ್ಡಾದುಡ್ಡಿ (ಅ). ಕ್ರಮಬದ್ಧವಲ್ಲದೆ; ಅಸಂಬದ್ಧವಾಗಿ; ಯದ್ವಾತದ್ವಾ; ಸಿಕ್ಕಾಬಟ್ಟೆ: ಶಸ್ತ್ರಾಗಾರದಲ್ಲಿ ಅಡ್ಡಾದಿಡ್ಡಿ ಬಾಣಗಳನ್ನು ಬಿಸುಟಂತೆ, ನಮ್ಮ ಜ್ಞಾನವೆಲ್ಲಾ ಅಸ್ತವ್ಯಸ್ತವಾಗಿ ಬಿದ್ದಿರುವುದು (ಗುರುಚೆ. ೧೫). **ಅಡ್ಡತಿಡ್ಡ$_2$** : ಇವು ಅಡ್ಡತಿಡ್ಡ ನಡೆದಾಗ್ಯೂ ತೀವ್ರ ಓಡುತ್ತವೆ (ಮುಂಬಯಿ. ೩-೨೪); ಅಡ್ಡತಿಡ್ಡ ಪ್ರಶ್ನೆ ಮಾಡಿದರೆ ನನ್ನಿಂದ ತಡೆಯುವವರಾಗುವದಿಲ್ಲ (ಮಣ್ಣಿಮು.೬೯); ತಲೆಯಲ್ಲಿ ಹತ್ತೆಂಟು ಕಡೆಗೆ ಅಡ್ಡತಿಡ್ಡ ಪಿನ್ನು ಚುಚ್ಚಿಕೊಂಡಿದ್ದಳು (ಗಂಮಾಯಿ.೮೩).
**ಅಡ್ಡಾದುಡ್ಡಿ** (ಕ). [< ಅಡ್ಡಾದಿಡ್ಡಿ$_1$]

**ಅಡ್ಡಾದುಡ್ಡಿ** 'ಅಡ್ಡಾದಿಡ್ಡಿ$_2$' ನೋ.

**ಅಡ್ಡಾನು** (ಕ್ರಿ). ಎದುರಿಸು; ಪ್ರತಿಭಟಿಸು: ಅವರಿರ್ವರೆಡೆಯೊಳಡ್ಡಾಂತು ನಿಂದುದು ಬೆಳೆದು ಚಿನಕಡಿದ ಶರಗಿರಿಯದೇನೆಂಬೆನದ್ಭುತವನು (ಜೈಮಿಭಾ. ೪-೩೮). [ಅಡ್ಡ$_1$ + ಆನು$_1$ (< ಆನ್$_1$)]

**ಅಡ್ಡಾಬುಡುಕ** 'ಅಡ್ಡಂಬುಡುಕ' ನೋ.

**ಅಡ್ಡಾಯದ**, ಅಡ್ಡಾಯಿದ (ನಾ).=ಅಡ್ಡಾಯುಧ(?) : ನರಸಿಂಹೋರ್ವೀಶನಡ್ಡಾಯದದ [ಪಾಠಾಂ. ನಡ್ಡಾಯ್ದದ] ಹರಿಹರಂ ದಂಡನಾಥಾಗ್ರಗಣ್ಯಂ (ಎಕ. III, ಮಂಡ್ಯ. ೧೨೧-೩೨; 1235); ಅಡ್ಡಾಯದದ ಹರಿಯಂಣ್ಣನ ಮಕ್ಕಳು (ಎಕ. III, ಮಂಡ್ಯ. ೧೨೩-೭೬; 1269). **ಅಡ್ಡಾಯಿದ** : ಪರಬಲಸಾಧಕನೆನಿಸಿದಡ್ಡಾಯಿದದ ಹರಿಹರ ದಣ್ಣಾಯಕನನ್ವಯಾವತಾರವೆಂತೆಂದೊಡೆ (ಎಕ. III, ಮಂಡ್ಯ. ೧೨೧-೨೫; 1235). [?]

**ಅಡ್ಡಾಯಿದ** 'ಅಡ್ಡಾಯದ' ನೋ.

**ಅಡ್ಡಾಯಿಲ** (ನಾ). ಎದುರಾಳಿ (ಕ); "ಎದುರಾಳಿ, ವಿರೋಧಿ, ಶತ್ರು" (ಪ್ರಭಣ್ಣ): ಕನ್ನಡಕ್ಕೆ ಓಜಾಯಿಲಂ, ಅಡ್ಡಾಯಿಲಂ, ಗೋಟಾಯಿಲಂ (ಶಮುದ. ೨೧೫ ಪ್ರಯೋ). [ಅಡ್ಡ$_1$ + -ಆಯಿಲ]

**ಅಡ್ಡಾಯು** (ನಾ). ಕತ್ತಿವರಸೆಯಲ್ಲಿ ಒಂದು ಕ್ರಮ, —ರೀತಿ: ಗತಿಪಸರವಡ್ಡಾಯುವಂಕತಿಕೆ ಭಾವನೆ ಚಕಿತವಪರಭಾಗ ಸಿಂಹಾನೀಕ ಚಟಯೆಂಬ ಚತುರ ಠಾಣದ ತರಹರದೊಳು ಹಲಗೆಯ ಮುಗ್ಗುಲೊಳು ಖಡ್ಗವಂ ಜಡಿದರು (ಸೋಮಚ. ೫-೧೪). [ಅಡ್ಡ$_1$ + ಆಯು ?]

**ಅಡ್ಡಾಯುಧ**, ಅಡಾಯುಧ, ಅಡಾಯ್ದ (ನಾ). ಒಂದು ಬಗೆಯ ಕತ್ತಿ: ವಣಿಕ್ಖಡ್ಗಯಷ್ಟಿರಿವ = ಪರದನ ಕಯ್ಯಡ್ಡಾಯುಧದಂತೆ (ನೀತಿವಾ. ೯-೬೦); ನಾರಾಯಣನ ಚಕ್ರಮಂ ಸುದರ್ಶನಮೆಂಬುದು . . . ಅತನ ಅಡ್ಡಾಯುಧಮಂ ನಂದಕಮೆಂಬುದು (ಹಲಾಯು.೬-೨೭ ಟೀಕು); ಅತ್ಮಾಂಗುಳಿಗಳಡ್ಡೈಸಿದೆಡೆಯೊಳಡ್ಡಾಯುಧದಿಂ ಪಜಿಸಿಯೆಯುಂ (ನೇಮಿಪು. ೬-೩೨ ವ); ಒಡ್ಡಿದ ಸಿಡಿ ಡೆಂಕಣಿ ಶೂಲ ಸೂನಂಗಿಯಡ್ಡಗರಗಸ ಕತ್ತರಿಗಿಚ್ಚು ಅಡ್ಡಾಯುಧ ತೀವಿದ ಬಾವಿನೆಲಹು ಕಂಗೆಡ್ಡಮಾಗಿರ್ದವಾಹುರದೊಳು (ಸೊಬಸೋ. ೯-೨೮); ಅಡ್ಡಾಯುಧ ಗರಗಸ ಮೊನೆಗಲ್ಲು ಕಣ್ಗೆಡ್ಡವಾಗಿಯೆ ರಾಜಿಸಿಹುವು (ಕಂಸವಿ. ೬-೨೦). **ಅಡಾಯುಧ** : "ನಿಸ್ತ್ರಿಂಶಃ ಕರವಾಳಃ, ಖಡ್ಗಃ . . . ಈ ೧೦ ಅಡಾಯುಧಂ" (ಹಲಾಯು. ೭೮-೩೧೮); "ಅಕ್ಕಜದಡಾಯುಧಂ ನಂದಕಮೆನಿಕ್ಕು" (ಮಂಗರಾ. ೬-೨೦); ಪಾಪಿ ಹೂವನೇಱಿಸಲು ಮಸೆದಡಾಯುಧದ ಗಾಯ (ಬಸವ. ೬೫೧); ವಧಾರ್ಥಂ ಮುನಿಯ ಕೆಯ್ಯಡಾಯುಧಮಿತ್ತಳ್ (ದಶಕು. ೮-೨೭); ಪಾರ್ಥನ ತಱುಬಿ ನಿಂದನು ಸೆಳೆದಡಾಯುಧದಿ (ಕುವ್ಯಾಕ. ೧೪-೨೧); ದೀಹದೇಣ ನುಡಿಯಲ್ಲಿಯಡಾಯುಧಮುಡ್ಡಣಂ ಸೊಡರ್ಗಿಡ ಗಮೆನಿಪ್ಪವಂ ಪಿಡಿದು (ರಾಜಶೇ. ೫-೫೨). **ಅಡಾಯ್ದ** : ತಲೆವೆಸೆಯೊಳಿರ್ದಡಾಯ್ದಮನೊಲವಿಂದಾನುರ್ಚಿ (ದಶಕು. ೯-೬೮); ಉಗಿದಡಾಯ್ದದ ಮೊನೆಯ ತುದಿನಾಲಗೆಗಳಲಿ ಮಾತಾಡಬಲ್ಲರೆ ಸೊಗಸುವೆವು ನಾವು (ಕುವ್ಯಾಕ. ೧೦-೪೫). 'ಅರ್ಧಾಯುಧ' ಪರಾ. [ಅಡ್ಡ$_3$? + ಆಯುಧ]

**ಅಡ್ಡಾವುಜ**, ಅಡಾವುಜ (ನಾ). ಅವುಜ ಎಂಬ ವಾದ್ಯದಲ್ಲಿ ಒಂದು ಬಗೆ: ಮತ್ತಮಾ ಶಬ್ದರೂಪನೆನಿಪ ಶ್ರೀವಿರೂಪಾಕ್ಷನೋಲಗದಲ್ಲಿ ಅಡ್ಡಾವುಜ ಪಟ್ಟಾವುಜ ಕಂಡಾವುಜಕಾಜರಿಂ ಮುನ್ನವೆ (ವಿರೂಪಾ. ೮೧ ವ). **ಅಡಾವುಜ** : ಕಂದಾವುಜಂ ಪಂಚಾವುಜವಡಾವುಜ ತುಂಬಿವೊಂದೆಸೆಯೊಳುಲಿಯೆ (ರೇವಣ. ೩-೪೫). [ಅಡ್ಡ$_1$ ? + ಅವುಜ]

**ಅಡ್ಡಾಳಿ** (ನಾ). ದಾಸಿ; ಸೇವಕಿ(?): ಸಾಲಿಗದೆರೆಯೊಳಗೆ ದೇವರಡ್ಡಾಳಿಗೆಂದುಯರಸುಗಳು ಬಿಟ್ಟ ವೊಕ್ಕಲು (ಸೌಇಇ. XV, ೧೯-೫೪; 1176; ಕೊಲ್ಹಾಶಾ. ೧೪-೫೪). ℙ "ಕೊಲ್ಹಾಶಾ" ಸಂಪಾದಕರು ಈ ಶಬ್ದವನ್ನು maid servant ಎಂದು ಭಾಷಾಂತರ ಮಾಡಿದ್ದಾರೆ. [?]

**ಅಡ್ಡಿ$_1$** (ನಾ). ತಡೆ; ವಿಘ್ನ; ತೊಂದರೆ: ಲಲನೆಯರ್ಗಂಗರಾಗಮುದುರ್ವಹಮುಂಶುಕಭಾರವಂಗಸಂಚಲತೆಗೆ ಕಾರಣಂ ಕುಸುಮಮಾಲಿಕೆಯುಂ ಪೊಱೆ ಪುಷ್ಪದಾಮ ಮೇಖಲೆ ನಡೆಗಡ್ಡಿ ಕಣ್ಮಲರ್ಗೆ ಕಾಡಿಗೆ ಬಿಣ್ಣಿತು (ಕಾದಂಪೂ. ೧೦೦೩); ಮುಂತಣಾಟಕಡ್ಡಿಯಕ್ಕುಮೆನುತೆ ಮನಂದಂದು (ಅದ್ಭುತ. ೧೫-೧); ಪ್ರಾಣಪ್ರಿಯನನ್ನು ಕೂಡುವುದಕ್ಕೆ ಅವಳ ಸಂಕೋಚದ ಸ್ವಭಾವವೇ ಎಲ್ಲಕ್ಕೂ ಹೆಚ್ಚಿನ ಅಡ್ಡಿ (ಕಾವ್ಯಸ. ೪೫).
**ಅಡ್ಡಿ ತಕ್ಕೊಳ್ಳು** = ಆಕ್ಷೇಪಣೆಮಾಡು: ಮೊದಲು ನಮ್ಮ ಜನರು ಪರನಾಡುಗಳಿಗೆ ಹೋಗಲಿಕ್ಕೆ ಬಹಳ ಅಡ್ಡೀ ತಕ್ಕೊಳ್ಳುತ್ತಿದ್ದರು (ಮುಂಬಯಿ. ೪-೧೮೪). **ಅಡ್ಡಿಯಿಲ್ಲ** = ಬಾಧಕವಿಲ್ಲ; ತೊಡಕಿಲ್ಲ. ℙ ಇದು ಸಮ್ಮತಿಯನ್ನು ಸೂಚಿಸುವ ಮಾತು. **ಅಡ್ಡಿ ಹರಕತ್ತು** = ವಿಘ್ನ; ತೊಂದರೆ: ಫೌಜಿಗೆ ರಸದು ಬರುವಂಥ ಮಾರ್ಗಗಳ ಕಟ್ಟಿ ಇಂಥಾ ಯೋಗ್ಯ ಅಲ್ಲದ ಅಡ್ಡಿ ಹರಕತ್ತು ಮಾಡುವದಕ್ಕೆ ಪ್ರಾರಂಭಿಸಿದರು (ರಾಜೇಂದ್ರ. ೩೭). [**ದೇ.** ‖ **ತಮಿ.** ಅಟ್ಟೆ; **ತುಳು. ತೆಲು.** ಅಡ್ಡಿ]

**ಅಡ್ಡಿ$_2$** (ನಾ). ೧. ಗೌರವ; ದೊಡ್ಡಸ್ತಿಕೆ: ನಡತೆಯನ್ನು ಉಳಿಸಿಕೊಳ್ಳದೆ ಹೋದರೆ ಮನುಷ್ಯನಿಗೆ ಅಡ್ಡಿ ಬರುತ್ತದೆಯೇ ? (ರೂಢಿ). ಸಿಕ್ಕಾಬಟ್ಟೆ ನಡೆದರೆ ಮನುಷ್ಯನ ಅಡ್ಡಿ ಕೆಟ್ಟುಹೋಗುತ್ತದೆ (ರೂಢಿ). (ದಕ-ಪ್ರಾದೇ). ೨. ಆಡಂಬರ (ಸ್ಯಾಂಡರ್).
[?. / **ಮರಾ.** ಅಡ್ಡಾ = ದೊಡ್ಡಸ್ತಿಕೆ, ಆಢ್ಯತೆ]

**ಅಡ್ಡಿಕೆ**, ಅಡ್ಡಿಗೆ$_1$, ಅಡ್ಡುಗೆ (ನಾ). ಕೊರಳಲ್ಲಿ ಧರಿಸುವ ಅರ್ಧಚಂದ್ರಾಕಾರದ ಒಂದು ಆಭರಣ; ಟಿಕ್ಕೆ : ಅಡ್ಡಿಕೆ, ಒಡ್ಡಾಣಂ

(ಶಬ್ದಾನು. ೬೭ ವ್ಯಾಖ್ಯಾ); ಜಡೆಯಡ್ಡಿಕೆಯ ಜಾಣೆಯ ರಂಗಾಯೆಂಬ ಮಡದಿ ಮೈದೋರ್ವಳಿನ್ನೆಂದೊ (ಶತಸಾಂ. ೨೬-೩೫); ಸರಪದಕಗಳು ಸರಿಗೆಯಡ್ಡಿಕೆ ಥರಥರದ ಕಟ್ಟಾಣಿಗಳಿಸೆಯೆ (ಕುಚೇಲೋ.೧೨೭); ದೇವರು ಕೊಟ್ಟ ಬುಗಡಿ, ಚಳತುಂಬು, ಅಡ್ಡಿಕೆ, ನಾಗರಮುರಿ, ತೋಳಬಂದಿ, ಡಾಬು ಹಾಕಿಕೊಂಡು (ಚಂದತೋ. ೧೧೧); ನಿನ್ನ ಆ ಹಳೇ ತರಹದ ಅಡ್ಡಿಕೆ ಗಿಡ್ಡಿಕೆ ಹೊರಗೆ ತೆಗೀಬೇಡ ಮಹಾರಾಯತಿ. ಆಮೇಲೆ ಬೀಗರು ನಕ್ಕಾರು (ಹಸ್ನೊಂದ. ೮೭). **ಅಡ್ಡಿಗೆ$_1$** : ಅಡ್ಡಿಗೆಯಂ ಕೊರಳೊಳ್ ಕಟ್ಟ (ಸೌಗಂಧಿ. ೧೭೦-೧೭). **ಅಡ್ಡುಗೆ** : ಪೊಳಪೊಗೆವ ಮಣಿಯಡ್ಡುಗೆಯ ಡಾಬಿನ ಮೇಖಲಾಂಚಿತದ (ಅನಂರಾ. ೧-೩-೩೫).

[? **ಸಂ.** ಅರ್ಧಿಕಾ. / **ತಮಿ.** ಅಟ್ಟಿಗೈ ; **ಕೊಡ.** ಅಡ್ಡಿಗೆ ; **ತೆಲು.** ಅಡ್ಡಿಗ]

**ಅಡ್ಡಿಕ್ಕು** (ಕ್ರಿ). ೧. ಅಡ್ಡಲಾಗಿ ಇಡು, —ಹಿಡಿ : ಬಿಸಲು ಹೊಡೆ ತಗಲದ ಹಾಗೆ ಕೊಡೆ ಅಡ್ಡಿಕ್ಕು (ಸ್ಯಾಂಡರ್). ೨. ಲಂಚಕೊಡು : ಅಧಿಕಾರಿಗಳಿಗೇನಾದರೂ ಅಡ್ಡಿಕ್ಕಿ ಅವರಿಂದಲಾ ಕೆಲಸವಂ ಮಾಡಿಕೊಳ್ಳು (ಸ್ಯಾಂಡರ್). [ಅಡ್ಡ$_1$ + ಇಕ್ಕು]

**ಅಡ್ಡಿಗ** (ನಾ). ಅಡ್ಡಿ ಮಾಡುವವನು ; ಪ್ರತಿಭಟಿಸುವವನು (ಸ್ಯಾಂಡರ್). [ಅಡ್ಡಿ$_1$ + –ಗ$_2$]

**ಅಡ್ಡಿಗೆ$_1$** 'ಅಡ್ಡಿಕೆ' ನೋ.

**ಅಡ್ಡಿಗೆ$_2$** (ನಾ). (?) ; "ಅಡಗಲ್ಲು" (ಮೋಳಿಮಾ. ಕೋಶ) : ಆ ಕಲ್ಲಿನ ತುದಿಯಲ್ಲಿ ನಿಂದು ಕೋಡಗವ ಕೊಂದೆ ಚಪ್ಪಗಲ್ಲನಪ್ಪಳಿಸಿದೆ ಅಡ್ಡಗಲ್ಲ ನಡ್ಡಿಗೆಯನಿಕ್ಕಿ ಒಡೆದೆ ನಿಂದ ಕಲ್ಲ ಸಂದೇಹವಿಲ್ಲದೆ ತಳ್ಳಿದೆ (ಮೋಳಿಮಾ. ೨೨೫-೭೭೮). [?]

**ಅಡ್ಡಿತರು** (ಕ್ರಿ). = ಅಡ್ಡಿಮಾಡು ೧ : ಯಾರೂ ಅಡ್ಡಿತರದೆ ಇದ್ದರೆ ಕೆಲಸ ಬೇಗ ಮುಗಿಯುತ್ತದೆ (ರೂಢಿ). [ಅಡ್ಡಿ$_1$ + ತರು$_1$ (< ತರ್)]

**ಅಡ್ಡಿಪಡಿಸು** (ಕ್ರಿ). = ಅಡ್ಡಿಮಾಡು ೧ : ಗಲ್ಲಿಗೆ ಏರಿಸಿದ್ದರೂ ಯಾರೂ ಅಡ್ಡಿಪಡಿಸುವಂತಿರಲಿಲ್ಲ (ಪೈಮಹ. ೯೪). [ಅಡ್ಡಿ$_1$ + ಪಡು$_1$ + –ಇಸು$_3$]

**ಅಡ್ಡಿಮಾಡು** (ಕ್ರಿ). ೧. ತಡೆಯನ್ನು ಒಡ್ಡು ; ವಿಘ್ನವನ್ನು ತರು: ನಮ್ಮ ನಮ್ಮ ಸಂಧಿಗೆ ನೀನು ಅಡ್ಡಿಮಾಡಿದರೆ ನಿನ್ನ ಗಂಡನ ಕಾರ್ಯವು ಸರಿಯೆಂದು ನೀನೂ ಒಪ್ಪಿಕೊಂಡಂತಾಗುವುದು (ಆರ್ಯಕ. ೧೭). ೨. ತಡಮಾಡು: ಅಡ್ಡೀ ಮಾಡಿದಷ್ಟೂ ಬಡ್ಡಿ ಹೆಚ್ಚುವದು ಅಡಿಗೇ ಮಾಡಿದಷ್ಟೂ ಉಂಡು ತೀರುವದು (ಗಾದೆ. ೬). [ಅಡ್ಡಿ$_1$ + ಮಾಡು$_1$]

**ಅಡ್ಡಿಸಡಿ** 'ಅಡ್ಡಿಸಡ್ಡಿ' ನೋ.

**ಅಡ್ಡಿಸಡ್ಡಿ**, ಅಡಿಸಡಿ, ಅಡ್ಡಿಸಡಿ (ನಾ). ಅಡ್ಡಿಅಡಚಣೆ ; ತಂಟೆ ತಕರಾರು : ಯಿಾ ಹೆಂಣಿಗೆ ಆದಿ ಅಡವು ಅಡ್ಡಿಸಡ್ಡಿಯೇನು ಉಂಟಾದಂನ್ನು ನಾನೇ ನೋಡಿಕೊಂಡೇನು ಯೆಂದು ಬರಸಿಕೊಟ್ಟ ಕ್ರಯ ಚೀಟು (ಮೈಆರಿ. ೧೯೨೮, ೬೬-೧೨ ; 1808). **ಅಡಿಸಡಿ** : ಯಿವರ್‍ರು ವಡವೆ ತೆಗೆದುಕೊಂಡಿದ್ದವರ ವಿಚಾರಣೆ ಮಾಡಿ ಬರಮಾಡಿಕೊಳುವಲ್ಲು ನೀಉ ಅಡಿಸಡಿಗಳ ಮಾಡದಂತೆ ಸಾಬಕ್ಕೂ ದಸ್ತೂರು ಪ್ರಕಾರಕ್ಕೆ ಸರರಾಸು ನಡ್ಸಿಕೊಂಡು ಬರ್‍ರುವದು (ಮೈಆರಿ. ೧೯೩೦ ; ೪೩-೨೭ ; 1812). **ಅಡ್ಡಿಸಡಿ** : ಅಡ್ಡಿಸಡಿ ಮಾಡದಂತೆ ಪ್ರಾಕ್ಕು ಕಚೇರಿ ತಾಕಿತಿಯು ಬರದ ಬಂದ್ದ ಮೆರ್‍ರೆಗೆ (ಮೈಆರಿ. ೧೯೩೦ ; ೪೩-೧೮ ; 1812). [ಅಡ್ಡಿ$_1$ + ಸಡ್ಡಿ]

**ಅಡ್ಡುಕ** (ನಾ). ಒಂದು ಅಧಿಕಾರ (?) : ವೀರಪ್ರತಾಪದೇವರಾಯ ಮಹಾರಾಯರ ಅರಮನೆಯ ಚಿಂನಭಂಡಾರದ ಅಡ್ಡುಕಧ ಸಮಯ ಚಕ್ರವರ್ತಿ ನಖರಾಚಾರಿಯರ ಮಕ್ಕಳು ಮಲಪಾಚಾರಿಯರು (ಎಕ. IX (S), ಕಾನಕಾ. ೬೫-೬ ; ಸು. 1380). 'ಅದ್ದಿಕ' ಪರಾ. [?]

**ಅಡ್ಡುಗೆ** 'ಅಡ್ಡಿಕೆ' ನೋ.

**ಅಡ್ಡೆ$_1$** (ನಾ). ಬಿದಿರುದಬ್ಬೆಯ ಎರಡು ತುದಿಗಳಿಗೆ, ನೆಲುವುಗಳನ್ನು ಜೋಡಿಸಿ ಅವುಗಳಲ್ಲಿ ವಸ್ತುಗಳನ್ನಿಟ್ಟುಕೊಂಡು, ಹೆಗಲ ಮೇಲೆಯೋ ಕೊರಳಮೇಲೆಯೋ ಹೊರುವುದಕ್ಕಾಗಿ ಮಾಡಿರುವ ಸಾಧನ ; ಕಂಬಿ ; ಕಾವಡಿ : ಧೊಡ್ಡದೊಡ್ಡವರೆಯ್ದುಲುಂಗುರುಡಿಗೆ ಮಾಡಿ ದೊಡ್ಡಿತಾಗಿರೆ ಹೆಣ್ಣ ಕೊಡದೆ ಅಡ್ಡೆಯ ಹೊಱೆಯಂತೆ ಕೊಂಡೆಯ್ದಿ ಕೊಡುವಾಗ ಕಡ್ಡಾಯದೊಡವೆಯೆಯೆಂದ (ಭರಚ. ೩೮-೧೨೭) ; ಶಿವಾಜಿಯು . . . ಪ್ರತಿದಿನವೂ ಕುಕ್ಕೆಗಳಲ್ಲಿ ಹಣ್ಣುಹಂಪಲುಗಳನ್ನಿಟ್ಟು ಅಡ್ಡೆಗಳಿಗೆ ಕಟ್ಟಿ ಹೊರಿಸಿ ಬ್ರಾಹ್ಮಣರಿಗೆ ಕಳುಹಿಸುವದನ್ನು ಮೊದಲುಮಾಡಿದನು (ಭಜ್ಯೋತಿ. ೧೭೫) ; ಅವನು ಪ್ರತಿನಿತ್ಯವೂ ಹೊಳೆಯಿಂದ ಅಡ್ಡೆಯಲ್ಲಿ ನೀರನ್ನು ತರುತ್ತಾನೆ (ರೂಢಿ).

[~ ಅಡ್ಡ$_1$. / **ಮರಾ.** ಅಢೇ, ಅಡೇ = ಹೆಗಲಮೇಲೆ ಇಡುವ ಗಳು]

**ಅಡ್ಡೆ$_2$** (ನಾ). ಬೀಜವನ್ನು ಬಿತ್ತುವ ಒಂದು ಉಪಕರಣ : "ಸಡ್ಡೆಯಡ್ಡೆಯಕ್ಕುಂ" (ಮಂಗರಾ. ೧೯೯-೧). [?]

**ಅಡ್ಡೆ$_3$** (ನಾ). (ಉಕ) ೧. ಜನ ಸೇರುವ ಸ್ಥಳ ; ಕಟ್ಟೆ ; ಚಾವಡಿ : ಅಂಗಡಿಯೆಂದರೆ ನಾಲ್ಕೈದು ನಿರುದ್ಯೋಗಿಗಳೊಡನೆ ಹರಟೆಹೊಡೆಯುವ ಅಡ್ಡೆಯಾಗಿ ಪರಿಣಮಿಸಿತು (ಗೃಹದಾ. ೮೮) ; ಪೋಸ್ಟ ಆಫೀಸು ಹರಟೆಯ ಅಡ್ಡೆಯಾಗಿತ್ತು (ದರ್ಶನ. ೯೪) ; "ಇನ್ನೇನು ವಿಚಾರ ಮಾಡುತ್ತೀರಿ? ನಿಮಗೆ ವರ್ಗವಾಗಿದೆ. ನಿಮ್ಮ ಮನೆ ಅಡ್ಡೆಯಾಯಿತು –ನಾನು ಬಲ್ಲೆ. . ." (ಪಹಾರ. ೯). ೨. ಅಂಗಡಿ ; ಮಳಿಗೆ : ಈಗ ಸೌದೆ ಅಡ್ಡೆ ಇರುವ ಸ್ಥಳದಲ್ಲಿ ಮೊದಲು ಬಸ್‌ನಿಲ್ದಾಣವಿತ್ತು (ಮುಳ್ಳಿಹಾ.೭೩) ; ಕೊತವಾಲನು ವಿಚಾರ ಮಾಡುತ್ತಲೇ ದೊಡ್ಡ ದೊಡ್ಡ ಹೆಜ್ಜೆ ಹಾಕುತ್ತ ನಡೆದ. ಆ "ಅಡ್ಡೆದಲ್ಲಿ ಹೆಡ್ಡದಾಟ ನಡೆದಿರಬಹುದೆ" ಕಾಜಿಯನ್ನು ಕೇಳಿದ (ಕೊತಕಾ. ೫). [← **ಮರಾ. ಹಿಂ.** ಅಡ್ಡಾ]

**ಅಡ್ಡೆ$_4$** (ನಾ). (ಉಕ) ಸಾಧಾರಣ ಎತ್ತರದ ಅಡ್ಡಗೋಡೆ : ಪಾಗಾರ ಹಾರುವ ಎತ್ತು ಅಡ್ಡೆಯನ್ನು ಬಿಟ್ಟೀತೆ (ಗಾದೆ). [~ ? ಅಡ್ಡ$_1$]

**ಅಡ್ಡೆದಬ್ಬೆ** (ನಾ). = ಅಡ್ಡೆ$_1$ (೬). [ಅಡ್ಡೆ$_1$ + ದಬ್ಬೆ]

**ಅಡ್ಡೆಬಡಕ** 'ಅಡ್ಡಂಬುಡುಕ' ನೋ.

**ಅಡ್ಡೆವೊಱೆ** (ನಾ). ಅಡ್ಡೆಯ ಮೂಲಕ ಹೊರುವ ಹೊರೆ. 'ಅಡ್ಡೆವೊಱೆಯಾಳ್' ಪರಾ. [ಅಡ್ಡೆ$_1$ + ಪೊಱೆ$_2$]

**ಅಡ್ಡೆವೊಱೆಯಾಳ್** (ನಾ). ಅಡ್ಡೆಯ ಮೂಲಕ ಹೊರೆಯನ್ನು ಹೊರುವ ಆಳು : ಮಣಿಮಂಚ ಸುಪ್ಪತಿಗೆ ಮಂಡೆ ಮಲಗುಗಳಡ್ಡೆವೊಱೆಯಾಳ್ಗಳಿಟ್ಟಣಿಸಿ ನಡೆತಂದುದೇವೇಳ್ವೆನು (ಚೆಬಪು. ೪೭-೪೦).

[ಅಡ್ಡೆವೊಱೆ + ಆಳ್$_2$]

**ಅಡ್ಡೆಸಗು** (ಕ್ರಿ). ವಿರುದ್ಧವಾದ ಪ್ರಯತ್ನವನ್ನು ಮಾಡು (೬).

[ಅಡ್ಡ$_1$ + ಎಸಗು]

**ಅಡ್ಡೆಸುಗೆ** (ನಾ). ೧. ಗುರಿಯಿಲ್ಲದೆ ಪ್ರಯೋಗಿಸಿದ ಬಾಣದ ಹೊಡೆತ (ಸ್ಯಾಂಡರ್). ೨. ಪಕ್ಕದಿಂದ ಬಂದ ಬಾಣದ ಹೊಡೆತ (ಸ್ಯಾಂಡರ್). 'ಅಡ್ಡೇಟು' ಪರಾ. [ಅಡ್ಡ$_1$ + ಎಸುಗೆ]

**ಅಡ್ಡೆಹೊರು** (ಕ್ರಿ). ಅಡ್ಡೆಯನ್ನು ಹೊರು (೬).

[ಅಡ್ಡೆ$_1$ + ಹೊರು (< ಪೊಱು)]

**ಅಡ್ಡೆಳೆ** (ನಾ). ಅಡ್ಡಲಾಗಿರುವ ಎಳೆ ; ನೆಯ್ಗೆಯ ಹಾಸು ಹೊಕ್ಕುಗಳಲ್ಲಿ ಅಗಲದ ಕಡೆಯ ಎಳೆ ; "ನೇಯಿಗೆಯಲ್ಲಿ ಅಡ್ಡೆಳೆ : ಹೊಕ್ಕು" (Abb. ಇಂಕನಿ). 'ಉದ್ದೆಳೆ' ಪರಾ.

**ಅಡ್ಡೆಳೆಯ ಸರ** = ಅಡ್ಡಡ್ಡಲಾಗಿ ಎಳೆಗಳನ್ನು ಜೋಡಿಸಿ ಮಾಡಿದ ಸರ, —ಹಾರ : ಭುಜಲತೆಯೆ ಚಂಪಕಾಕುಸುಮದಡ್ಡೆಳೆಯ ಸರದಂತೆ (ಸೌಗಂಧಿ. ೨೬೩-೨೦). [ಅಡ್ಡ$_1$ + ಎಳೆ$_4$ (< ಎೞೆ$_2$)]

**ಅಡ್ಡೇಟು** (ನಾ). ಗುರಿಯಿಲ್ಲದೆ ಹೊಡೆದ ಪೆಟ್ಟು: ಎಲ್ಲಿಯೋ ಒಂದೊಂದು ವೇಳೆ ಅಡ್ಡೇಟಿಗೊಂದು ಗುಡ್ಡೇಟು ಎಂದು ಸರಿಹೋದರೂ ಸರಿಹೋಗಬಹುದು (ಘಾಟೀಮು. ೧೩೦); ಅಡ್ಡೇಟಿಗೆ ಒಂದು ಗೊಡ್ಡೇಟು (ಕನ್ನಗಾ. ೪). 'ಅಡ್ಡೆಸುಗೆ' ಪರಾ. [ಅಡ್ಡ$_1$ + ಏಟು]

**ಅಡ್ಡೇಟುಗಾರ** (ನಾ). ಗುರಿಗೆ ಸರಿಯಾಗಿ ಹೊಡೆಯದವನು (ಕ). [ಅಡ್ಡೇಟು + – ಗಾರ (< –ಕಾಱ)]

**ಅಡ್ಡೇರಿ** (ನಾ). (ಪ್ರವಾಹಕ್ಕೆ) ಅಡ್ಡಲಾಗಿ ಕಟ್ಟಿದ ಏರಿ. [ಅಡ್ಡ$_1$+ ಏರಿ]

**ಅಡ್ಡೈಸು** 'ಅಡ್ಡಯಿಸು' ನೋ.

**ಅಡ್ಡೊಕ್ಕಲು** (ನಾ). ಒಂದು ಊರಿಗೆ, ಬೀದಿಗೆ ಅಥವಾ ಮನೆಗೆ ಹೊಸದಾಗಿ ಬಂದು ಸೇರಿದ ಕುಟುಂಬ; "ಹೊಸ ಒಕ್ಕಲು" (ಜಾನಕೋ. ೧೧); ಅಡ್ಡೊಕ್ಕಲು ಬಂದರೆ ಹಳ್ಳಿಯ ಗೌಡ ಶಾನಭಾಗರಿಗೆ ಅತಿ ಸಂತೋಷವಾಗುವದು (ಸ್ಯಾಂಡರ್). [ಅಡ್ಡ$_1$+ ಒಕ್ಕಲು (< ಒಕ್ಕಲ್$_2$)]

**ಅಡ್ಡೊರಗು** (ಕ್ರಿ). = ಅಡ್ಡಾಗು (ಸ್ಯಾಂಡರ್): ತೂಕಡಿಸಲ್ಯಾಕೆ ಸ್ವಲ್ಪ ಅಡ್ಡೊರಗು (ಸ್ಯಾಂಡರ್). [ಅಡ್ಡ$_1$ + ಒರಗು$_1$ (< ಒಱಗು$_1$)]

**ಅಡ್ಡೋಟ** (ನಾ). ನೇರವಲ್ಲದ, ಓರೆಕೋರೆಯಾದ ಓಟ (ಸ್ಯಾಂಡರ್). [ಅಡ್ಡ$_1$ + ಓಟ]

**ಅಡ್ಡೋಡು** (ಕ್ರಿ). ಓರೆಕೋರೆಯಾಗಿ, ಸಿಕ್ಕಾಬಟ್ಟೆಯಾಗಿ ಓಡು (ಸ್ಯಾಂಡರ್). [ಅಡ್ಡ$_1$ + ಓಡು$_1$]

**ಅಡ್ನಾಡಿ** 'ಅಡನಾಡಿ' ನೋ.

**ಅಡ್ನಾಡಿವೇಳೆ** (ನಾ). ಹೊತ್ತಲ್ಲದ ಹೊತ್ತು; ಅವೇಳೆ: ಇವರ ಈ 'ಅಡ್ನಾಡಿ' ವೇಳೆಯನ್ನು ನಾವು ಹೇಗೆ ನೆನಪಿಡಬೇಕೋ! (ಮುಂಗಾರು. ೬೨). [ಅಡ್ನಾಡಿ (< ಅಡನಾಡಿ) + ವೇಳೆ]

**ಅಡ್ನಾಡಿಹೊತ್ತು** (ನಾ). = ಅಡ್ನಾಡಿವೇಳೆ: "ಇಂದುಮತೀ, ಅಡ್ನಾಡಿ ಹೊತ್ತಿನಲ್ಲಿ ನೀನು ಕಾಲೇಜನ್ನು ಬಿಟ್ಟು ಹೇಗೆ ಬಂದಿ?" (ತೊಳಿಮು. ೨೩). [ಅಡ್ನಾಡಿ (< ಅಡನಾಡಿ) + ಹೊತ್ತು$_2$ (< ಪೊೞ್ತು)]

**ಅಡ್ವೊಕೇಟ್** (ನಾ). ನ್ಯಾಯವಾದಿ; ವಕೀಲ: ನಮ್ಮ ಅಡ್ವೊಕೇಟರು ಬೆಳಗ್ಗೆ ಮನೆಯಲ್ಲಿರಲಿಲ್ಲ (ರೂಢಿ). [← ಇಂ. Advocate]

**ಅಡ್ವೊಬ್ಬೆ** (ನಾ). ಅಡ್ಡಲಾದ ಬೇಲಿ; ಪಾರ್ಶ್ವದಲ್ಲಿಯ ಬೇಲಿ: ಹಳೆ ಮುಳ್ಳೂರ ಅಡ್ವೊಬ್ಬೆಯಿಂ ಕಾಲ್ವೆಯಿಂ ತೆಂಕಣ ವಳಗೆರೆಯ ಹೊಡಕೆ ಹಳ್ಳಕ್ಕಂ (ಎಕ. III, ತಿರುಮ. ೪೨–೧೨; 1521). [ಅಡ್ಡ$_1$ + ಒಬ್ಬೆ$_1$ (< ಒಟ್ಟೆ)]

**ಅಥಾಳ** (ನಾ). "ಎತ್ತರವಾದ ಧ್ವಜ" (ನಿಘಂನಿ): ವರ್ಗಚತುರ್ಥಾಕ್ಷರಂಗಳ್ಗೆ – ಘುಟಿಯಂ . . . ಢೊಂಕಣಿ, ಢೆಂಕಣ, ಅಥಾಳಂ [ಪಾಠಾಂ. ಢಾಳಂ, ಅಥಾಣಂ] (ಶಮುದ. ೧೫ ಪ್ರಯೋ). [? ಪ್ರಾ. / ಮರಾ. ಅಥಾಲ್ = ನಿಶಾನೆ]

**ಅಣ್$_1$**, ಅಣ್ಣು (ಕ್ರಿ). ಅಂಟು; ಸೋಕು; ಮುಟ್ಟು: ಈಳಿಯ ಸಾಂದುಮಂ ಪಸಿಯ ಕತ್ತುರಿ ತೀವಿದ ಪೊನ್ನ ಸಿರ್ಪುಮಂ ಗಾಳಿಯುಮಣ್ಣದಂತದರೆ ಕೆಂದಳದಿಂದಮೆ ಮುಚ್ಚಿಕೊಂಡು (ಅರ್ಜನೇ. ೫–೭). **ಅಣ್ಣು**: ಅಣ್ಣೆನೆಂಬಣ್ಣಗಳ ಅಣ್ಣಿಸುವುದು ಹೊನ್ನು ಅಣ್ಣೆನೆಂಬಣ್ಣಗಳ ಅಣ್ಣಿಸುವುದು ಹೆಣ್ಣು ಅಣ್ಣೆನೆಂಬಣ್ಣಗಳ ಅಣ್ಣಿಸುವುದು ಮಣ್ಣು ಹೊನ್ನ ಕಂಡಬಳಿಕ ಅಣ್ಣದಣ್ಣಗಳಾರು ಹೆಣ್ಣ ಕಂಡ ಬಳಿಕ ಅಣ್ಣದಣ್ಣಗಳಾರು ಮಣ್ಣ ಕಂಡ ಬಳಿಕ ಅಣ್ಣದಣ್ಣಗಳಾರು (ಗಣಭಾ. ೪೨–೫; ವಚಶಾ. I, ೨೪೬–೧೧). [ದೇ.]

**ಅಣ್$_2$** (ನಾ). ನಾಯಿಯನ್ನು ಕಟ್ಟಿಹಾಕುವ ಹಗ್ಗ: ಅಣ್ಣ ಮೊಱೆಗೊಳಿಸಿ ಚೋಳಿಕರಣ್ಣಲೆಯಂ ತಳಿರನುಡಿಸಿ ನನ್ನುಗೆಯಂ ಮೂವಣ್ಣಂ ಬರಿಸಿದನುರ್ವರೆ ಬಣ್ಣಿಸಲೆಱೆಯಂಗ ನೃಪತಿ (ಎಕ. V, ಅರಸೀ. ೧೦೨–೧೩; 1100). [ಅಣ್ಣ ಮೊಱೆಗೊಳಿಸು = ನಾಯಿಯನ್ನು ಕಟ್ಟುವ ಹಗ್ಗಕ್ಕೆ ಒಳಪಡಿಸು]. [?. / ತಮಿ. ಅಣ್]

**–ಅಣ** (ಪ್ರ). ಕೃದಂತ ಭಾವನಾಮ ಪ್ರತ್ಯಯ: ಯುಕ್ತವಾದಂಥಾದ್ದು ಅಯುಕ್ತವಾಗಿಯೂ ಪ್ರವರ್ತಿಸುವಣ ಯಿವುಗಳಿಂದ ಮಹದ್ಭಯ ತೋರುವಣ, ವಾದ್ಯಂಗಳಂ ನುಡಿಸದೆ ಬಡಿಯದೆ ಧ್ವನಿಯಾಗುವಣ ನುಡಿಸಿದರೂ ಬಡಿದರೂ ಧ್ವನಿಯಾಗದೆ ಇಹಣ (ಶುಕಸ. ೩೧೨). ಹೊಟ್ಟೆ ಮುಟ್ಟದರೆ ಮಿದುವಾಗಿ ಇರುವಣ . . . ನರಗಳು ಹೊಟ್ಟೆಯಮೇಲೆ ಬಹಳವಾಗಿ ವ್ಯಾಪಿಸಿಕೊಂಡು ಇಹಣ (ವೈದ್ಯಸಾ. ೨೭೬–೩೮೧ ಟೀಕೆ). '–ಓಣ' ಪರಾ.

**ಅಣಂ**, ಅಣಂ (ಅ). ೧. ಸ್ವಲ್ಪವೂ; ಕೊಂಚವೂ; ಎಳ್ಳಷ್ಟೂ: "ಏನುಮೆನಿಪ್ಪರ್ಥಮನಿರದಾನಿಪರಣಮಾಣಮೆಂದು ನುಡಿವವ್ಯಯದೊಳ್" (ಶಮುದ. ೩೦೩); ಅಗಳುಮಿಂದುಸೂರ್ಯರಣಮಿಲ್ಲದೆ ಕೆಟ್ಟಲೆಯೆಂಬುದಿಲ್ಲ (ಪಂಪಭಾ. ೪–೧೬); ಆತಂ ಮನಮೊಸೆದು ನೋಡುತಿರ್ಪುದಱಿನಾಗಳಣಮಱಿದಿಲ್ಲ ಪೊಟ್ಟಿನ ಪವಣಂ (ಕಾದಂಉ. ೧೦೦); ಪೆಂಡಿರ ಮಾತಂ ಸಲೆ ಕೈಕೊಂಡವರಭಿಮತದೆ ನಡೆವನಪ್ಪೊಡೆ ಗಂಡಂ ಗಂಡನಣಮಾಗಲಱಿಯಂ (ಪಂಚತಂ. ೧೫೪–೨೨); ಕಾಲಪುರುಷಂಗೆ ಗುಣಮಣಮಿಲ್ಲಂ ಗಡ (ರಾಮಾಶ್ವ. ೧–೧). ೨. ಬಹಳವಾಗಿ; ಅತಿಶಯವಾಗಿ: "ಅಣಂಪಿರಿದೆಂಬ ಮಾತು" (ಕರ್ಣಾನಿ.೨೮); ನೀನಗ್ನಿಪುತ್ರಿಯ್ಯೆ ಪವಮಾನತನೂಭವನೆನಾನಣಂ ಕೂಡೆ ಸುಸಂಧಾನಮರಿನೃಪರೊಳೆಂತು (ಗದಾಯು. ೧–೬೬); ರಥಾಂಗಚಯಂ ವಿಯೋಗ ಭೇ[ಖೇ]ದಮನಣಮೆಯ್ದೆ (ಕುಸುಮಾ. ೧–೩೯); ಪುರಾಣಕವೀಂದ್ರರಖಿಳಕಾವ್ಯಂಗಳ ಗೂಢಪದಪ್ರಯೋಗಮಂ ನೆರಪಿ ಪದಾರ್ಥಂಗಳನಣಂ ಮನಂಬುಗೆ ಪೇೞ್ವೆಂ (ಶಮುದ. ೩೨೩). **ಆಣಂ**: ೧. ಮೇಲೆ 'ಅಣಂ ೧'ಕ್ಕೆ ಕೊಟ್ಟಿರುವ (ಶಮುದ. ೩೦೩) ಸೂತ್ರಭಾಗವನ್ನು ನೋಡಿ: ಅಣಂ, ಆಣಂ, ಆವಗಂ, ನೀಡುಂ, ಕರಂ, ಆದಂ, ಕೆನ್ನಂ, ಪೀನಂ, ಎಲ್ಲಂ, ಅಲ್ಲಂ, ಇಲ್ಲಂ . . . ಇತಿ ಅಣಮಾದಿರಾಕೃತಿಗಣಃ (ಶಬ್ದಾನು. ೨೦ ಪ್ರಯೋ).

**ಅಣಂಚು**, ಅಣಚು$_1$ (ಕ್ರಿ). ಅಡಗಿಸು; ತಗ್ಗಿಸು; ಹೀನಾಯಗೊಳಿಸು (ಕ). **ಅಣಚು$_1$** (ಕ). [← ? ತೆಲು. ಅಣಚು]

**ಅಣಂಬಿ** 'ಅಳಂಬೆ' ನೋ.

**ಅಣಂಬೆ** 'ಅಳಂಬೆ' ನೋ.

**ಅಣಕ$_1$** (ನಾ). ಅತಿಶಯ; ಅದ್ಭುತ; ಆಶ್ಚರ್ಯ: ಎಣಿಕೆಗಳುಂಬಮುಂ ಪಿರಿದುಮಾದ ಪದಾತಿ ವರೂಥ ವಾಜಿ ವಾರಣಬಲದಿಂದಮಿರ್ಮಡಿಸೆ ಧಾತ್ರಿಯ ಬಿಣ್ಪೆನಗೆಂದಿನಂದವಲ್ಲಣಕಮಿದೆಂದು ತಿಣಿಕಿದನಾನಲುಮ್ಮಳಿಸಿ ಶೇಷನಶೇಷಮಹೀವಿಭಾಗಮಂ (ಪಂಪಭಾ. ೯–೯೯); ಖ್ಯಾತಿವಡೆದಿರ್ದ ನಾಲ್ಕುಂ ಜಾತಿಗಳೊಳ್ ಮದುವೆಯಾಗಲಕ್ಕುಂ ಪಾರ್ವಂಗೀ ತೆಱದಿ ನೆಂಬರೇನಾ ಜಾತಿಗಳಿಕ್ಕಿದುದನುಣ್ಣೆವೆಂಬುದಿದಣಕಂ (ಸಮುಪ. ೬–೯೨); ಪನ್ನಗಭೂಷಣ ತಲೆದೂಗುತ್ತಿರೆ ಇರಲೊಂದಣಕದ ಜವನಿಕೆ ಮೂಡಲು ಸುರಸಭೆ ಕೌತುಕದಿಂದಂ ನೋಡಲು (ಭೃಂಗೀರ. ೧೩–೨೩); ಓರೊರ್ವರಂ ಚಾಳಿಸುವ ಪದದೊಳಾವೇಗವಾ ಕೋಪವಾ ಮಚ್ಚರವಾ ಬಲ್ಪಾ ಪೊಡರ್ಪುರ್ವಿಗೆಯಣಕಮುಗುರ್ವದ್ಭುತಂ ದುರ್ನಿವಾರಂ (ಜಗವಿ.೬–೬೪); ಬಲವದ್ಬಲ್ಲಾಳನುಗ್ರಾಹವ ಪಟಹರವಂ ಕರ್ಣಮಂ ತಾಗೆ ವಿದ್ವಿಟ್ಕುಲ ಕಾಂತಾಕರ್ಣಪತ್ರಂ ಕೆಡುವುದಣಕಮಲ್ತೊಂದೆ ಕೇಳ್ ವಿಸ್ಮಯಂ ಕಣ್ಮಲರಿಂ ಬಾಷ್ಪಾಂಬು ಕೆಯ್ಯಿಂ ಕಡಗಮಡಿಗಳಿಂ ನೂಪುರಂ ವಕ್ತ್ರದಿಂ ಸುಯ್ ತಲೆಕಟ್ಟಿಂ ಮಾಲೆವೂವಾಕೆಗಳ ಗಳಕದಿಂ ಬೀಳ್ವುದುತ್ತಾರಹಾರಂ (ಎಕ. VIII, ಸೊರಬ. ೧೪೦–೬; 1198); ತೋರ್ಪೆಂ ನಿನಗೆನ್ನಣಕದ ವಿದ್ಯಾವಿನೋದದೊಳ್ ಕಾಮಿನಿಯಂ (ದಶಕು. ೬–೧೨೬). [?]

**ಅಣಕ್ಕ$_2$** (ನಾ). ೧. ಕುಚೋದ್ಯ ; ಅಪಹಾಸ್ಯ : ಲೋಗರೇನಾನುಮೊಂದಣಕದಿನೆಂದೊಡೆ ಮನದೊಳ್ ಸೆಣೆಯುದಿರ್ದೊಳ್ತಪದೊಳರ್ತಿಗುಂದದಿರಿನಿಸುಂ (ಧರ್ಮಾಮೃ. ೫-೧೫೪) ; ಎನಗೆ ಸುಂಕಮನಿಕ್ಕಿ ಪೋಗಿಂ ನಿಲ್ಲಿಮಾಂ ಪಂಕಜೋದರನೀಯೆ ಪಡೆದೆನೀ ವನದೊಡೆಯನೆನಲಾ ಪಡೆಯ ಕಡುಗಲಿಗಳಿಲ್ಲಂ ನಕ್ಕಣಕಕ್ಕೆ ನಿಲ್ವುದುಂ (ನೇಮಿಪು. ೭-೧೭೬ ವ) ; ಸಭೆಯೊಳಭಯಂ ನಿರರ್ಗಳಂ ಗಳಿಪುವಣಕಕ್ಕೆ ಕೆಳರ್ದು (ವರ್ಧಪು. ೭-೪೧ ವ) ; ನೀನಾಡುವಂದವನುವಾಗಿರದೆನುತ್ತ ಕೌಶಿಕನಣಕದಿಂದಾಡಲೆಮ್ಮ ಕೂಡಿನಿತಣಕವೇಕೆಂದು ವಾಸಿಷ್ಠಮುನಿ ನುಡಿದನು (ಹ ಚ ಕಾ. ೨-೨೮) ; ಹುಲುಪರದನ ಸುತೆ ನಿನಗೆ ಮೋಹಿಸಿ ಬರೆ ಬಲುಹೇಕೆ ಸುರಮಂಜರಿಯ ವೊಲಿಸೆ ನಿನಗೆ ಪಂಥ ಸಲುವುದೆಂದಣಕದಿ ಕೆಳೆಯನೊರ್ವನು ವಚನಿಸಿದ (ಜೀವಂಸಾಂ. ೧೬-೨೭) ; ಈ ಅಣಕ ಅವನನ್ನು ಅಸಹ್ಯವಾದ ಸಂಕಟಕ್ಕೆ ಈಡು ಮಾಡಿತ್ತು (ರೂಪಸ. ೭) ; ತಂಗಿಯ ಮಾತಿನ ಧ್ವನಿಯಲ್ಲಿ ಅಣಕವಿತ್ತು (ತೀಮೋಡ. ೯೬). ೨. ಅಲ್ಲಗಳೆಯುವುದು ; ಹೀಯಾಳಿಸುವುದು ; ಮೂದಲಿಕೆ : "ತೆಗಟ್, ಪಟು, ಚುನ್ನಂ, ಕೋಟಚಾಟಂ, ಏಳಿದಂ, ಅಣಕಂ – ಈ ೬ ನಿಂದೆ" (ಕಶಸಾ. ೧೩-೨೫೬) ; "ತೋಟಬೆಂ[ಕೋಟಬೆಂ]ದಣಕಂ" (ಕರ್ಣಾನಿ. ೮) ; "ಕೋಟಚಾಡಿದುದೆನಲಣಕಮುಪ್ಪುದು" (ಚತುನಿ. ೨೨) ; "ಅಣಕಮೇಳಿಸುಂ ಕೋಟಚಾಟಂ ಬಲಿದು ತೆಗಟೆನ್ನಲದು . . . ನಿಂದಾಖ್ಯಂ" (ಕವಿಕಂ. ೧೨೨) ; ಅರಸನನರಸಿಯನೂರಂ ಪರಿಜನಮಂ ನಾಡನಡವಿಯಂ ಬಿಟ್ಟೊಳಗಾಗಿರೆ ಮುನಿ ತೇಜೋವೃದ್ಧಿಯಿನುರಿಪಿದನಣಕಕ್ಕೆ ಸವಣನುಂ ಸ್ಯೆರಿಪನೇ (ಪಂರಾಪೂ. ೯-೧೩) ; "ಎತ್ತಿ ಹಾಕಿ ಮಾತನಾಡುವಿಕೆ" (ಪಂರಾಪೂ. ೯-೧೩ ; ಕೋಶ) ; ತ್ರಿಣಯನನಂ ಹರನಂ ನಿರ್ಗುಣನಂ ಸಥಿಪಥ ರತೀಶನಿಸುವನೆ ಹೋ ಬೇಡಣಕದ ಮಾತು (ಗಿರಿಕ. ೮-೪೦) ; ಪರಶೌರ್ಯೋತ್ಕರ್ಷಮಂ ಮಾಱ್ಪಣಕದ ನುಡಿಗಳ್ ಕರ್ಣಮಂ ತಾಗೆ . . . ದೈತೇಯಾಂತಕಂ . . . ಮಹೋಗ್ರಾಂತಕಾಕಾರನಾದಂ (ಜಗನ. ೧೩-೨೮) ; ದೋಷಮುಂ ಗುಣಹೀನಂ ಕೃತಿಬಂಧದೊಳ್ ಪ್ರಕಟಿಸುತ್ತಿರ್ಪಂ ಗುಣಗ್ರಾಹಿಯಲ್ಲಣಕಕ್ಕಗ್ರಣಿಯಾದಂ (ಖಮುದ. ೧-೬೧). ೩. ಹುಡುಗಾಟಿಕೆ ; ವಿನೋದ : ಘೋರನೊರ್ವಂ ಬಿಸಿಲಡಸಿ ಬಂದು ತಾರೆಲೆ ನಾರಿ ವಾರಿಯನೆನೆಯವಳ್ ಬಟಿಯ ಸಸಿಗಲ್ಲ ತೋರಕರಗವನಣಕದಿಂದೆ ತಂದಿತ್ತು ನೋಡುತಿರೆ (ಪದ್ಮರಾ. ೮-೧೦) ; ಈ ಬಣಗುಗಳ ಕೊಂಬನೆ ಕುಮಾರಕನಣಕವಲ್ಲೆಂದಸುರರಿಪು ತಿರುಹಿದನು ನಿಜರಥವ (ಕುಮಾವ್ಯದ್ರೋ. ೪-೨೮) ; ತ್ರಿಣಯನಶರಣನಾದಿಮಯ್ಯನಣಕದ ಮಾತಿಗಣಿಯರದೊಳ್ಳಿದಿ ಕರೆಯಲ್ಕೆ ಸೌರಾಷ್ಟ್ರಪತಿಯೆಣಿಸಲೇಂ ಬಂದು (ಸಿದ್ಧೇಪು. ೭-೭೨). ೪. ನಟನೆ ; ಸೋಗು ; ಬೂಟಾಟಿಕೆ : ಆಕಟಕಟ ನೊಂದಳೆತ್ತಿರೆ ಸುಕುಮಾರಿಯನೆನುತುಮಿನಿತು ಕೊಂಕಿಂ ನುಡಿದಂ ಪ್ರಕಟಿತಚಿತ್ತಂ ಭೂನಾಯಕನವಳಣಕಕ್ಕೆ ಸವಣನುಂ ಸ್ಯೆರಿಪನೇ (ಯಶೋಚ. ೨-೬೮) ; ಅಣಕವಿದಲ್ತ ಜೀವನವನ ಬಲ್ಪಿನ ಹವಣಂ (ದಶಕು. ೮-೨೮೬) ; ಇನಿತೆಲ್ಲ ತಥ್ಯವೋ ಅಣಕವೋ ಲೇಸಾಗಿ ನೋಡು (ಕೋಗಯ. ೧೭-೮೨). ೫. ಅನುಕರಣ : ಅತಿಲಲಿತನದೀವಾರಿಯಂ ತನ್ನದೀಜೀವನದೊಳ್ ಕೂರ್ತರ್ಘ್ಯವೀವೊಂದಣಕಮುವನಿಯೊಳ್ ಮಾಟ್ಪವೋಲ್ ತೋರ್ಪುದೆನ್ನೊಳ್ (ದಶಕು. ೮-೧೨೨). ೬. ಕುಚೋದ್ಯದ ಉದ್ದೇಶವುಳ್ಳ ಅನುಕರಣ (Parody). 'ಅಣಕವಾಡು$_2$' ಪರಾ. ೭. ಕಟಕಿಯಿಂದ ಕೂಡಿದ ಚುಚ್ಚುಮಾತು (Satire) : ಮಾರ್ಮಿಕವಾದ ನಗೆಯ ಚಿತ್ರ(Cartoon)ದಂತೆ, ಇಲ್ಲವೇ ಸೂಕ್ಷ್ಮವಾದ ಅಣಕ (Satire) ದಂತೆ, ಇಲ್ಲವೆ ಜಾಣತನದ ಟೀಕೆ(Criticism)ಯಂತೆ ಅವುಗಳ ಕೆಲಸ (ಹಿಡುಗು. ಪೀ. ೪). ೮. ಅನುಚಿತ (?) : ಅಟಲಿಸಿ ಕುಮುದಿನಿಯನಿಳಾವಳಯಕ್ಕತಿತಾಪಮಿತ್ತೆನಿದು ತಕ್ಕದೆ ಸಂಗಳಿಗಣಕಮೆಂದು ಕಡಲೊಳ್ ಬಿಟಿಲೆಂದನುಗೆಯ್ದನರ್ಕನಸ್ತಾಚಲದಿಂ (ಶಬ್ದಾನು. ೪೭೮ ವ್ಯಾಖ್ಯಾ). [?]

**ಅಣಕ್ಕ$_3$** (ನಾ). ೧. ಒತ್ತಾಗಿರುವುದು ; ಅಡಕವಾಗಿರುವುದು : ಎಣಿಕೆಯ ಪದಿನಜುಸಾಸಿರ ಗಣಿಕೆಯರೊಳ್ ನೆರೆವ ಮೂರ್ತಿಯಂ ಧ್ಯಾನಿಪುದೋ ತ್ರಿಣಯನನೆರ್ದೆಯೊಳ್ ನೆಲಸಿರ್ಪಣಕದ ಮೂರ್ತಿಯನೆ ವೈಷ್ಣವಂ ಧ್ಯಾನಿಪುದೋ (ಸಮಪ. ೮-೧೪೬) ; ಅಣಕವಾದ ಹತ್ತಿ ಪಿಂಡಿ (ಕಿ) ; ಅಣಕವಾದ ಕೆರೆ ಅನೇಕ ನೀರು ಕೊಳ್ಳುವುದು (ಗಾದೆ. ಕಿ). ೨. ವಿಧೇಯತೆ ; ನಮ್ರತೆ : ಹುಡುಗ ಬಹು ಅಣಕವಾಗಿದ್ದಾನೆ (ರೂಢಿ). [< ಅಣಕು]

**ಅಣಕ್ಕ$_4$** (ನಾ). ನೀಚವಾದ ವಸ್ತು : ಅವಾರ್ಣಂ, ಅಣಕಂ, ಅಪಶದಂ . . . ಪಾಪಂ, ರೇಪಸಂ— ಈ ೧೩ ಹೊಲ್ಲಹ ವಸ್ತು (ಹಲಾಯು. ೫೬-೧೮೨) ; "ಪಾಪಿ ಖೇಟಂ ಕಾಂಡನಪಕೃಷ್ಟನಪಶದಂ ರೇಫಸಂಚಳ(ನ)ನವಾರ್ಣನಣಕಮುವದ್ಯನಾಪೀಡಯುವಮುಂ" (ಮಂಗರಾ. ೬೭-೪). [ಸಂ.]

**ಅಣಕಂ** (ಅ). ಅತಿಶಯವಾಗಿ : ಬತ್ತಲೆ ಪೂಜ್ಯಮಲ್ಲದೊಡೆ ಬತ್ತಲೆಯಪ್ಪ ದಿನೇಶಬಿಂಬಮುಂ ಬತ್ತಲೆಯಿರ್ಪ ಮಕ್ಕಳುಗಳಂ ರತಿಯಿಂ ನೆರೆವಲ್ಲಿ ರಾಗದಿಂ ಬತ್ತಲೆಯಿರ್ಪ ಪೆಂಡತಿಯನೋವಣಕಂ ನೆಱೆ ಕಂಡು ಮಾನಿಸರ್ ಸತ್ತವರಾರೊ ಭಾವಿಪೊಡೆ ಬತ್ತಲೆಯಿಲ್ಲದ ವಸ್ತುವಾವುದೋ (ಧರ್ಮಾಮೃ. ೯-೭೬) ; ನೆಱೆಯಲ್ ಮಹಾಪುರಾಣಮುನಜೀವಳವಡೆ ಪೇೞ್ದ ವದನಮಿರೆ ತಮಗೊಲ್ದಾನೆಜಗೆ ಗುಣಭದ್ರದೇವರ ಮಿಱುಪಂಘ್ರಿಗಳಿತ್ತುವೆನಗೆ ಕವಿತೆಯನಣಕಂ (ಅರ್ಧನೇ. ೧-೧೮). [< ಅಣಕ್ಕ$_1$]

**ಅಣಕಚಣಕ** 'ಅಣಕಸಣಕ' ನೋ.

**ಅಣಕಚಣಕಂಗೆಡೆ** (ಕ್ರಿ). ಕುಚೋದ್ಯಮಾಡು ; ಅಪಹಾಸ್ಯಮಾಡು : ಚಪಳರ್ ಜಿನತಪಸ್ವಿಗಳಂ ಜಿನತತ್ತ್ವಮನಿಂತುಟಂತುಟೆಂದು ಬಾಯ್ಗೆವಂದಂತಣಕಚಣಕಂಗೆಡೆದು ನಗೆನಗೆಯೊಳೆ ಪಾಪಮಂ ಪೊರ್ದಿ (ಧರ್ಮಾಮೃ. ೪-೩೮). [ಅಣಕಚಣಕ (< ಅಣಕಸಣಕ) + ಕೆಡೆ]

**ಅಣಕಚಿತ್ರ** (ನಾ). ವಿಡಂಬನಚಿತ್ರ ; ವ್ಯಂಗ್ಯಚಿತ್ರ : ಅವನ ಅಣಕಚಿತ್ರ ಏಕೆ ಬರೆಯಲಿಲ್ಲ (ಶಾಲೆಮ. ೫೨). [ಅಣಕ್ಕ$_2$ + ಚಿತ್ರ]

**ಅಣಕದೋಱು** (ಕ್ರಿ). ಅಣಕಿಸು : ಕಣುಗಿಡಿಯ ಭೇತಾಳಜಟ್ಟಿಗರಣಕ [ಪಾಠಾಂ. ಣುಕು]ದೋಱುವ ಬೊಮ್ಮರಕ್ಕಸ ರಣಪಿಶಾಚಿಗಳಜಿವ ಹೊಗಗುಡದಂಜನಾಸುತನ (ತೊರರಾ. ೫-೨-೫). [ಅಣಕ್ಕ$_1$ + ತೋಱು]

**ಅಣಕನುಡಿ** (ನಾ). ಅಣಕಿಸುವ ನುಡಿ ; ಅಪಹಾಸ್ಯದ ಮಾತು : ಧನಿಕರ ಮನೆಗೆ ಕ್ಷಣಕ್ಷಣಕೆ ಹೋಗಿ ತನು ಬಾಡಿ ತುಟಿಯೊಣಗಿ ಅಣಕನುಡಿ ಕೇಳುವ ಕೃಪಣಮನಕ್ಕೆಂತಹುದು ನಿನ್ನಯ ಭಕುತಿ (ಪುರಂದ. ೧-೬೪-೧). [ಅಣಕ್ಕ$_2$ + ನುಡಿ$_2$]

**ಅಣಕವಾಡು$_1$** (ಕ್ರಿ). ಅಪಹಾಸ್ಯಮಾಡು ; ಕುಚೋದ್ಯಮಾಡು : ಮದಮತಿಗೋತು ವೃಷಭನನಣಕವಾಡುತ ಮಾತನಾಡಿದರಲ್ಲಿ ಕೆಲಬರು (ಪ್ರಭುಲೀ. ೮-೨೭) ; ರಣದೊಳು ಜಯವಧೂಟಿಯ ಮುಂದೆ ನಿನ್ನಯ ಜೊಣಗನ ಬಿಟ್ಟುಕೊಂಡಿರಲು ಅಣಕವಾಡುವರಪ್ಸರಗಣಿಕೆಯರು (ಮೋಹತ. ೩೯-೪) ; ಸಿದ್ಧಿಗಳ್ ಶುದ್ಧಿಗಳ್ಗೆ ಅಣಕವಾಡುವ ಮಹಾಸುಪ್ರಸಿದ್ಧರ್ (ನಂದಿಮಾ. ೫-೩೭) ; ಚಿದಂಬರರು – ನಿನಗೆ ಯಾರಿಲ್ಲವೇ ? ಎಂದ್ದು ನೂರು ಸಾರೆ ಅಣಕವಾಡಿದ್ದುಂಟು (ಚಿದಂಬ. ೧೩). [ಅಣಕ್ಕ$_2$ + ಆಡು$_1$]

**ಅಣಕವಾಡು$_2$** (ನಾ). ಗ್ರಂಥಕರ್ತನ ಭಾವನೆ, ನುಡಿಗಟ್ಟು ಮೊದಲಾದವುಗಳ ವಿಶಿಷ್ಟ ಲಕ್ಷಣ ಸ್ವರೂಪಗಳನ್ನು ಅನುಕರಿಸಿ ಹಾಸ್ಯಾಸ್ಪದವೆಂಬಂತೆ ತೋರ್ಪಡಿಸುವ ಪದ್ಯಕೃತಿ : ಬೇಂದ್ರೆಯವರ ನಗೆ–ಹಾಡುಗಳಲ್ಲಿ ಕೆಲವು ಅಣಕವಾಡು (Parody) ಇವೆ. ಅಣಕವಾಡು ಆಂಗ್ಲ

ಸಾಹಿತ್ಯದಿಂದ ಕನ್ನಡಕ್ಕೆ ಬಂದುದು (ನಿರಾಭ. ೧೧) ; 'ಅಣಕವಾಡು'ಗಳ ವಿಷಯದಲ್ಲಿ ಒಂದು ಮಾತು ಹೇಳಬಯಸುತ್ತೇನೆ (ತುಟಿವಿಾ. ೧೩೯).
[ಅಣಕ್ಕ₂ + ಪಾಡ್ಕು₂]

**ಅಣಕವಾತು** (ನಾ). ಕುಚೋದ್ಯದ ಮಾತು; ಕಟಕಿಯ ಮಾತು: ಅಕ್ಕಕ್ಕು ಮಿಂತಪ್ಪ ಪಾಪಭೀತರ್ ಸಮರ್ಥರ್ ಸತ್ಯರೀ ಧರೆಯೊಳೊಳರೆ ನೀವಳಿವುವವರೇ . . . ಎಂದಣಕವಾತಿನಿಂ ಬೆಸಗೊಳ್ವನಿತಜಲ್ಲಿ (ಪದ್ಮರಾ. ೬–೨೦). [ಅಣಕ್ಕ₂ + ಮಾತು₁]

**ಅಣಕಸಣಕ,** ಅಣಕಚಣಕ (ನಾ). ಕುಚೋದ್ಯ; ಅಪಹಾಸ್ಯ: ಎಲವೊ ನೀನಾ ಸತಿಯ ಕಂಡಾ ಕಲಹ ಮುಂಚಿತ ಕಂಡೆನಲ್ಲದೆ ಗಲಭೆ ಕಾಜರು ಘಾಸಿಮಾಡಿದರಣಕಸಣಕದಲಿ (ತೊರರಾ. ೫–೭–೨೯) ; ಅಣಕ ಸಣಕದ ಬಳಕೆ ಗಡ ತನ್ನೊಡನೆನುತ ಹಲುಗಡಿದನಸುರೇಂದ್ರ (ಉತ್ತರಾ. ೫–೧೩) ; ಪರಿಹಾಸಮುಜ್ಞಾನ ಕೃತ್ರಿಮಾಡಂಬರಂ ಪರಿಪರಿಯಲಣಕ ಸಣಕಂಗಳಿಂದಾದಡಂ ಸ್ಮರಣೆಗೈದಡೆ ಮುಕ್ತಿ ದೊರೆದಪುದು (ವೆಂಕಾರಾ. ೪–೧೨–೧೯). **ಅಣಕಚಣಕ** : 'ಅಣಕಚಣಕಂಗೆಡೆ' ಪರಾ.
[ಅಣಕ್ಕ₂ + ಸಣಕ್ಕ₀. / **ತುಳು.** ಅಣಕಸಣಕ]

**ಅಣಕಸೂತ** (ನಾ). ತೋರಿಕೆಯ ಸೂತ; ಸೂತನಂತೆ ನಟಿಸುವವನು: ಸುರರ ಕಾಹಿಂಗರಸನಾಗಿಹ ದುರುಳರಾಕ್ಷಸ ಶಿಕ್ಷೆಗತಿಭೀಕರ ತರದ ಯಮರಾಜನಾಗಿಹನಣಕಸೂತರ್ಗೆ ಅರಿಯದಾಗಿಹ (ಕೋಗಯ. ೯–೧೦೪). [ಅಣಕ್ಕ₂ + ಸೂತ]

**ಅಣಕಾಟ** (ನಾ). ೧. ಹಾಸ್ಯ; ವಿನೋದ: "ಐ ಸುಮ್ಮನಿರಿ ಅಂದ್ರೆ ! . . . ನಿಮಗೆ ಅಣಕಾಟ" (ಬೆಳುಮ. ೯೧). ೨. ಉಪಹಾಸ ವ್ಯಂಗ್ಯ (Irony): ಶಾಮು ! ಇದು ನಿನ್ನ ಹುಣ್ಣಿಮೆಯಂತೆ ! ಬೀದಿ ಬೀದಿಗೆ ನಿನ್ನ ಬೆಂಕಿ–ಛಾಯಿಗೆ ಕೊಟ್ಟು ನಿನ್ನ ಸಾವಿನ ಹರುಷ ಹುಚ್ಚಿನಲಿ ಬೊಬ್ಬಿರಿವ ದಿನವಂತೆ ! ಅಯ್ಯೋ ಅಣಕಾಟವೇ ! (ಬಾಸಿಗ. ೨೬). [ಅಣಕ್ಕ₂ + ಅಟ]

**ಅಣಕಿ** (ನಾ). ಕುಚೋದ್ಯಗಾತಿ (?) : ಠಕ್ಕಿತೆಯರಥಮೆಯರು ಕತ್ತಿಗೆ ಮಿಕ್ಕ ಗೋಟಗಳಣಕಿಗಳು ಶಠದಿಕ್ಕೆಯರು ಬಂಡಿತೆಯರಾಗಳು ಕೊಂಡೆಗಿತ್ತಿಯರು (ಬಸವು. ೪೦–೫೨). [ಅಣಕ್ಕ₂ + –ಇ₃]

**ಅಣಕಿಗ₁** (ನಾ). ಪರಾಕ್ರಮಿ; ಶೂರ (?) : ರಣವನೀಗಳೆ ಕಾಣಬಹುದೆಂಬಣಕಿಗರನೆಬ್ಬಿಸುವವೊಲು ಸುಳಿದಣೆದು ಹೊದಱಿದ್ದುದು ಸುಧಾದೀಧಿತಿಯ ಕರನಿಕರ (ಕುವ್ಯಾದ್ರೋ. ೧೭–೧೩); ಕೆಣಕಿದರು ಪಾಂಚಾಲನಾಯಕ ರಣಕಿಗನ ಕೈಕೊಳ್ಳದುಱಿ ಸಂದಣಿಸಿದರು ಸಮರಥರು (ಕುವ್ಯಾದ್ರೋ. ೧೭–೩೪). [ಅಣಕ್ಕ₁ ? + –ಇಗ]

**ಅಣಕಿಗ₂** (ನಾ). ಕುಚೋದ್ಯಗಾರ; ಅಪಹಾಸ್ಯ ಮಾಡುವವನು: ಪುರದೊಳಗಣಾರುಹತರೆಲ್ಲರಯ್ತಂದು ಕಂಡಣಕಿಗರಿದಾರಾದಿಮಯ್ಯನೇ ಹದುಳವೇ ನೀನೆಮ್ಮ ಬಸದಿಯೊಳಗಿರಲು ತಂದ ಸೌರಾಷ್ಟ್ರದೊಡೆಯನೀ ಸುತ್ತಿಗೆಯ ಹಿಡಿದವನೊ . . . ಎಂದರು (ಸೋಮುಚ. ೪–೨೧) ; ಅಣಕಿಗ ರಾಯರ ಗಂಡನಾಜಿಯ ಕಂಡೆಣಿಪ ರಾಯರ ಗಂಡನೆನಿಪ ಮಣಿದೊಡರೆಸೆದುದು (ಕುರಾಸಾಂ. ೧೯–೩೪) ; ಇಣಿಕಿ ನೋಡರದಾರುಮೆನ್ನುವೆಡೆ ಕಾದಿಹನು ಅಣಕಿಗ ಮನಸ್ಸಾಕ್ಷಿ (ಮಂಕುಕ. ೬೫೦). [ಅಣಕ್ಕ₂ + –ಇಗ]

**ಅಣಕಿಸು** (ಕ್ರಿ). ೧. ಅಪಹಾಸ್ಯಮಾಡು: ಅಣಕಿಸುಗುಮೆ ತನ್ನನಿತುಂ [ಪಾಠಾಂ. ಅಣಮೇನೊ ತನ್ನನಿತ್ತುಂ, ಅಣಕಿಸುಮೆ ತನ್ನನಿತ್ತುಂ] ತಣಿಯದೆ ಕಡುನಲ್ಲನೆಱಿದೊಡಂ ಕುಡನೇ (ಲೀಲಾವ. ೧೪–೨೬); ಮಾಡುವುದಂ ಮಾಡೆನುತಂ ಧೀರಂ ಇರೆ ಮಾನಿನಿಯಣಕಕ್ಕಣಕಿಸುತಂ ಹರಭಕ್ತಂ ಕೊಂಡೊಯ್ದಪೆನೆನುತಂ (ಉದ್ಭರ. ೧೫೬–೨೩) ; ಅಣಕಿಸುವರೆನ್ನೊಡನೆ ಹಿರಿಯುಬ್ಬಣವ ತೆಗೆಯಿರಿ (ಕುವ್ಯಾಸ. ೧೦–೫೪) ; ಸುರಪನ ಪುರವನಣಕಿಸುತಿರ್ದುದಾ ಸತ್ಯಾವತೀ ನಗರ (ತೊರರಾ. ೧–೯–೧೦) ; "ಅಯ್ಯೋ ಬೆಸ್ತರ ಹೆಣ್ಣಾದ ಮಾತ್ರಕ್ಕೇ ನೀನು ತೆರೆಹಾಯಬಲ್ಲೆಯಾ ಪೆದ್ದೆ ?" ಅಣಕಿಸಿ ನುಡಿದ ಈರ (ಮುಂಗಾಮು. ೭೪). ೨. ಕುಚೋದ್ಯಕ್ಕಾಗಿ ಅನುಕರಣ ಮಾಡು : ಆ ವಿಚಿತ್ರಮುಂ ನಿಮ್ಮೊಳು ಕಾಣಲ್ಬಂದುದೆಂದಣಕಿಸುವ ಮಕ್ಕಳ ಮಾತಂ ಪ್ರಭಾವತಿ ಕೇಳ್ದು (ಪುಣ್ಯಾಸ್ರ. ೧೨–೧೫ ವ); ಆ ಶಾಲೆಯಲ್ಲಿ ಉಪಾಧ್ಯಾಯರು ಹುಡುಗರನ್ನು ಶಿಕ್ಷಿಸುತ್ತಾರೆ ; ಹುಡುಗರು ಉಪಾಧ್ಯಾಯರನ್ನು ಅಣಕಿಸುತ್ತಾರೆ (ರೂಢಿ).
[ಅಣಕ್ಕ₂ + –ಇಸ್ಕು₃]

**ಅಣಕು** (ಕ್ರಿ). ತುರುಕು ; ಗಿಡಿ (?). [~ ಅಡಕು ?]

**ಅಣಕುವೆ** (ನಾ). ದೈನ್ಯ; ನಮ್ರತೆ; ವಿನಯ (?). 'ಅಣಕ್ಕ₃', 'ಅಣಗು' ಪರಾ. [← **ತೆಲು.** ಅಣಕುವ]

**ಅಣಗಿಸು** (ಕ್ರಿ). ೧. ಅಡಗಿಸು ; ದಮನಮಾಡು ; ಧ್ವಂಸಮಾಡು : ಗುಣದಿ ಲೋಕಾದಿಲೋಕಂಗಳಂ ಬೀಱಿ ನಿರ್ಗುಣನಿಲಹು ಸುಪ್ರಭೆಯ ತಾಂ ಮಿಾಱಿ ಮಾಯೆಯೆಂದಣ[ಣ]ಗಿಸುತನಖಿಲ ಪ್ರಪಂಚನೆಲ್ಲವನು ವಶವರ್ತಿಗೊಳಿಸಿ ಸುತಲೀಲೆಯಿಂ (ಲಕ್ಷ್ಮಭಾ. ೧–೨೨–೧) ; ಪರರಾಯ ದರ್ಪವನ್ನು ಅಣಗಿಸುವನಿಗೆ ದರ್ಪಣವಂ ಕೊಡಿಸಿ (ಸೌಗಂಧಿ. ೪೪–೧೬) ; ರಾಜಒಡೆಯನನ್ನು ಅಣಗಿಸುವುದು ಹೇಗೆಂಬ ಚಿಂತೆಯು ನನ್ನನ್ನು ಬಾಧಿಸುತ್ತಿಲ್ಲ (ಶ್ರೀರಾಯ. ೧೫೦). ೨. **ಮರೆಮಾಡು; ಮುಚ್ಚಿಡು:** ಈ ಗ್ರಂಥಕರ್ತರು ತಾವು ವರ್ಣಿಸುವ ವೀರರ ಕುಂದುಗಳನ್ನು ಬಚ್ಚಿಟ್ಟರಬಹುದು ; ಅವರ ಕೊರತೆಗಳನ್ನು ಅಣಗಿಸಿ(ಮರೆಮಾಚಿ)ರಬಹುದು (ಅಕ್ಬರ. ೧೩೯). [ಅಣಗು + –ಇಸ್ಕು. / **ತೆಲು.** ಅಣಗಿಂಚು]

**ಅಣಗು** (ಕ್ರಿ). ೧. ಅಡಗು ; ಉಪಶಮನ ಹೊಂದು : ದಿಗ್ದಂತಿ ತಲೆಗೊಡಹೆಯುರಗೇಂದ್ರನ ನಾಲಗೆಗೆ ದ್ರವಮಣಗೆಯುತ್ತರದ ದಿಶೆಗೈದಿ ಕೋಲಾಹಳಂಗಳಿಂ ಗೋವ್ರುಗಳ ಪಿಡಿಯೆ (ಲಕ್ಷ್ಮಭಾ. ೪–೪–೩); ಸಂಸಾರ ಮನಸ್ಸಿನಲ್ಲಿಯೆ ಅಣಗಿಹೋಗುವದು (ಸೌಗಂಧಿ. ೯೨೭–೬೨) ; ಆ ಬಳಿಕ ಧರ್ಮರಾಯನ ಹಣೆಯಲ್ಲಿ ರಕ್ತವು ಅಣಗಿದ ಮೇಲೆ (ಕೃವಾವಿ. ೧೨೦) ; ಮನುಜರಳಿವರು ಮನುಜಸಂತಾನ ನಿಂತಿಹುದು ಅಣಗದಾತ್ಮದ ಸತ್ತ್ವ (ಮಂಕುಕ. ೧೨೨). ೨. **ಅಡಗಿಕೊ; ಅವಿತುಕೊ:** ಸ್ತ್ರೀಯ ಪ್ರೇಮದ ಸ್ಪರ್ಶವು ಮನುಷ್ಯನಲ್ಲಿ ಅಣಗಿದ್ದ ಶಕ್ತಿಗಳನ್ನು ಉರಿಯ ಉಲ್ಬಣದಂತೆ ಪ್ರೋಜ್ವಲಗೊಳಿಸುವುದು (ಎಳಿಕ. ೧೦೬).
[**ದೇ.** ‖ **ತಮಿ.** ಅಣಙ್ಕು ; **ತೆಲು.** ಅಣಗು]

**ಅಣಗೊತ್ತು** (ಕ್ರಿ). ಅಣಗುವಂತೆ ಒತ್ತು ; ತಗ್ಗುವಂತೆ ಅದುಮು : ರಣದೊಳಗೆ ವೇಗ ಫಲ್ಗುಣನ ವರೂಥವ ಅಣಗೊತ್ತಿ ಫಣಿವಾಣ ಕಣೆಯ ಮುರಿದ ಪಾದ (ತೀರ್ಥಮ. ೧೪೪–೩) ; ಮನಯೆರಗಿದ ವಂಚನೆ ಪ್ರಯೋಜನಂಗಳು ಅಣಗೊತ್ತಿ ಕಾವುತಿಪ್ಪ ಅಣೋರಣಿ ಅಹಾ ವಿಭುವೆ (ವಿಸಾಸು. ೭೨–೧). [ಅಣಗು + ಒತ್ತು₁]

**ಅಣಚಿ** (ನಾ). ೧. ಸುಮಂಗಲಿ ; ಮುತ್ತೈದೆ. 'ಅಣಚಿತನ' ಪರಾ. ೨. (ಮುತ್ತೈದೆಯ ಕೊರಳಿನ) ಮಾಂಗಲ್ಯ; "ತಾಳಿ (?)" (ಬಸವ. ಕೋಶ): ಲಿಂಗವಂತರಿಸಿದವಂಗೆ ಒಳುನುಡಿಯೇಕೆ ? ಅಯಿದೆ–ಅಣಚಿ [ಪಾಠಾಂ. ಐದೇರವೋಚಿ, ಐರೆಯಣಚಿ] ಯಿಲ್ಲದವಳಿಗೆ ಸೌಭಾಗ್ಯದ ಹೂವಿನ ಬೊಟ್ಟೇಕೆ ? (ಬಸವ. ೬೩೨). [?]

**ಅಣಚಿತನ** (ನಾ). ಸೌಮಂಗಲ್ಯ; ಮುತ್ತೈದೆತನ: ಅಣಚಿತನವಂ ಕೈಕೊಳ್ ನಿನ್ನೋಲೆಭಾಗ್ಯದ ಭದ್ರಲಕ್ಷಣದ ಪದದೊಳ್ ಸಂದೀ ಸೌಭಾಗ್ಯದಿಂ ಸ್ವಜನಂಗಳಂ ತಣಿಸಿ (ಸೂಕ್ತಿಸು. ೬–೮೧). [ಅಣಚಿ + –ತನ]

**ಅಣಚು₁** 'ಅಣಂಚು' ನೋ.

**ಅಣಚು₂** 'ಅಣಸು₁' ನೋ.

**ಅಣಚು₃** 'ಅಣಸು₂' ನೋ.

**ಅಣದಿಗೆ,** ಅಡದಿಗೆ (ನಾ). ನೀರಿನ ಗಡಿಗೆ; ಹೂಜಿ: "ಗಳಂತಿಕೆಯೆಂದು ಅಣದಿಗೆ" (ಶಮದ. ನ. ೨೬೯ ಅಡಿಟಿ); "ಅಣ [ಪಾಠಾಂ. ಅಣಿ] ದಿಗೆಯ ಪೆಸರು ವರ್ಧನಿ ಗಳಂತಿಗೆ ಗಣಿತಿಯೆನಿಸಿಕ್ಕು" (ಮಂಗರಾ. ೬೨–೨೩); "ಕರ್ಕರಿ, ಆಲು, ಗಲನ್ತಿಕೆ = ಅಣದಿಗೆ" (ನಾಚಿರಾ. ೬). **ಅಡದಿಗೆ** (ಕಸ್ತೂಕೋ). [?]

**ಅಣರು** (ಕ್ರಿ). ತಿವಿ; ಚುಚ್ಚು: ನೆರೆದ ವಿಟಸಂತತಿಯ ನಖಭೀಕರದ ಸುರಗಿಯಲಣರುತತಿವಿಸ್ತರದಿ ಕಾಮನ ಸೇನೆ ನಡೆದುದು ಸತಿಯ ಬಳಸಿನಲಿ (ಜೀವಂಚ. ೮–೪೨). 'ಅಣೆ' ಪರಾ.

[**ದೇ.** ‖ **ತಮಿ.** ಅಣರ್ = ಮೇಲಕ್ಕೆ ಹೋಗು]

**ಅಣಲ್,** ಅಣಲು (ನಾ). ಬಾಯಿಯ ಒಳಭಾಗ; ಅಂಗುಳು; ದವಡೆ: ತನ್ನ ಪಿರಿಯ ಮಗನಪ್ಪ ವೃಷಸೇನನನಂತಕನಣಲೊಳಡಸಿ ತನ್ನುಮನಣಲೊಳಡಸಲೆಂದಿರ್ದ ವಿಕ್ರಮಾರ್ಜುನನಂ ನೋಡಿ (ಪಂಪಭಾ. ೧೨–೧೬೯ ವ); ಖಚರನನುರಗಾಕೃತಿಯಿಂದಮಣಲೊಳಡಸುವ ಪದದೊಳ್ (ಶಾಂತಿಪು. ೯–೨೧); ಪೊಳೆವ ಕುಡುದಾಡೆಗಳ್ ಪೊಳೆವೆಳವೆಱೆಗಳನಣಲೊಳಡಸಿದಂತಿರೆ (ಲೀಲಾವ. ೪–೧೦೩); ಅಜೀವನಣಲೊಳಗಿಕ್ಕಿ ಅಗಿವುತಿಹೆ ಮರ್ತ್ಯಲೋಕವೆಲ್ಲವು (ಶೂನ್ಯಸಂ. ೨೨–೨೭). **ಅಣಲು₁:** ಪ್ರಳಯಫಣಿಯಣಲ ಹೊಳಲೊಳಗೆ ಕೆಯ್ಯ ನೀಡಿ ದಾಡೆಯಂ ಮುಱಿಯುಬಡಿವಂತೆ (ಹಚಕಾ. ೮–೧೧); ಭೈರವನ ಅಣಲೊಳು ಪೊಕ್ಕು ಸುಳಿದಾಡಬಹುದು (ಅಂಜಚ. ೧೪–೬); ಅಣಲೊಳಷ್ಟಾದಶ ಮಹಾಕ್ಷೋಹಿಣಿಗಳಡಗಿದವೆಂಬುದಿದು ಭೂಷಣವೆ (ಕುವ್ಯಾಭೀ. ೩–೮೫); ಎಲವೊ ರಕ್ಕಸಮಾರಿಯಣಲಿಗೆ ಸಿಲುಕಿ ಶಿಶು ಜೀವಿಸುವುದೇ (ತೊರರಾ. ೬–೧೯–೬೫); ಲಲಿತಕರ್ಪೂರತಾಂಬೂಲಮಂ ತಮ್ಮಣಲೊಳಳವಡಿಸಿ (ಚಿಬಪು. ೧೬–೩೬).

[**ದೇ.** ‖ **ತಮಿ. ಮಲ.** ಅಣಲ್, ಅಣರಿ = ಬಾಯ ಅಟ್ಟ]

**ಅಣಲು** 'ಅಣಲ್' ನೋ.

**ಅಣಸು₁,** ಅಣಚು₂ (ಕ್ರಿ). ಆಕ್ರಮಿಸು; ಮುತ್ತು: ಹುಲಿಯೆಂದನಣಸುವಂ ಫಣಿಕುಳಮ × × × ವನೊಪ್ಪೆ ಮಾರಿಡುವಂ ಜಕ್ಕುಲಿಪಂ ಜವನಂ ನಿಚ್ಚಟಗಲಿ ಉಃಸಿ ಪೋಪೊ ವಿಕ್ರಮಭೂಪಂ (ಎಇ. XX, ೧೨–೬; 1187); ಕೆಣಕಿದೊಡೆ ಕಲ್ಪಾಂತಕನ ಹಿಡಿದಣಸಿ ಕೀಳುವೆ ಹಲ್ಲ (ಪ್ರಹ್ಲಾಚ. ೧೩–೬೧). **ಅಣಚು₂:** ಕ್ಷಣದೊಳು ಗಗನಾಂಗಣಕ್ಕೆ ಬೆಳೆದು ಅಣಿಚಿ [ಅಣಚಿ] ಬಲಿಯ ತುಳಿದು ಘನ ಉಂಗುಟದಿಂದ (ವಿಸ್ತೋಸು. ೪೦–೫).

[~ ಅಡಸು]

**ಅಣಸು₂,** ಅಣಚು₃ (ನಾ). ೧. ಆಯುಧದ ಹಿಡಿ; ಬಾಣದ ಹಿಳುಕು: ಖಟ್ವಾಂಗಮೆ ಕೋಲಾಗೆ ಚಂದ್ರಾದಿತ್ಯರ್ಕಳಣಸಾಗೆಯುಂ (ಕಇ. IV, ೫೫–೧೩; 1000 ?); ಅಲಗಂ ಚೋಳಾವನೀಶಂಗಣಸನಣಿಯರಂ ಲಾಳಭೂಪಂಗೆ ಬಾಹಾಬಳದಿಂದಂ ತೋಱಿ ಮಾಱುತ್ತೆ (ವೈಆರಿ. ೧೯೨೯; ೬೫–೧೬; 1025); ಅಲರಂಬಿಂಗಣಸಂ ಮಣಿಕುಲದಿಂ ಸಮೆದಂಗಜಂ ಪದಂಗೊಳಿಸಿದವೋಲ್ ತಳತಳಿಸಿ ಪೊಳೆಯುತಿರ್ಕುಂ ಲಲನೆಯ ಪೆಂಪೆಸೆವ ಬೆರಳಮಣಿಮುದ್ರಿಕೆಗಳ್ (ದಶಕು. ೬–೬೦); ಬಿಳಿಯ ಚೌರಿಗಳೆಸೆವ ಘಂಟಾವಳಿಗಳಣಸಿನ ಹೊಗರನುಗುಳುವ ಹೊಳೆವ ಧಾರೆಯ ಭಾರಿಶಕ್ತಿಯ ತೂಗಿಧನು ಕರ್ಣ (ಕುವ್ಯಾದ್ರೋ. ೧೬–೫೧). ೨. ಒನಕೆಯ ತುದಿ, ದನಕರುಗಳ ಕೋಡು, ಆನೆಯ ದಂತ ಮುಂತಾದವಕ್ಕೆ ಅಳವಡಿಸುವ ಲೋಹದ ಕಟ್ಟು ಅಥವಾ ಕೊಳವೆ, —ಗೊಣಸು: ಈ ಲಾಕುಳದ ಮಧ್ಯಮನಾಂ ಪಿಡಿದಪೆಂ ನೀವಿಬ್ಬರಿರ್ದೆಸೆಯಣಸುಗಳಂ ಬೇಱೆವೇಱೆ ಪಿಡಿವುದು (ತ್ರಿಪುವಿ. ೭–೧೦೮ ವ); ನೆಗಳ ಸೊಂಡಿಲ ಚಿನ್ನದಣಸಿನ ಪಲ್ಲಕ್ಕಿ ಸೊಗಯಿಪ ರತ್ನವಿಮಾನ . . . ಮುಂತಾದ ವಸ್ತುಗಳನಿತ್ತನು (ಮೋಹತ. ೧೫–೨೦); ಸಾಮಾನ್ಯ ಸೇವಕಿಯರು ಬೆಳ್ಳಿಯಣಸಿನ ನಾಮುದಂಡಿಗೆಯೊಳೆಯ್ದಿದರು (ಭರಚ. ೨೧–೩೬); ಮೂಗುಧಾರ ತುಂಡು ೨ ಕಾನಶಿಲ್ ಕುಚ್ಚು ೨ ಕೊಂಬಿನ ಅಣಸು ಕೊಂಬಿಗೆ ಬೆಲುಪಟ್ಟಿ (ಎಕ. XIV, ನಂಜನ. ೨೮೯–೭; 1847). ೩. ಜೋಡಣೆಯ ಸ್ಥಾನ; ಕೀಲು: ಮಿನುಕಣಸುಂ ಪೊದಬ್ಬಿಮಳನೀಳಶಿಳಾಮಯಬದ್ಧ ಭೂಮಿ ಕಂಪಿನ ಕರಮುಪ್ಪಕತ್ತುರಿಯ ನೀರ್ದಳಿಪುಂ (ಶಾಂತೀಶ್ವ. ೧–೧೧೬); ಕುಣಿದವಿಬ್ಬರ ಮುಷ್ಟಿಯಿಬ್ಬರ ಹಣೆಯಲೆದೆಯಲಿ ಮೋಱೆಯಲಿ ಭುಜದಣಸಿನಲಿ ಕಂದದಲಿ ಶಿರದಲಿ ಬದಿಯಲುದರದಲಿ (ಕುವ್ಯಾಸ. ೨–೧೦೭). ೪. ಆಯುಧದ ಮೊನೆ, —ತುದಿ: ಯೋಗಿಗೆತ್ತಿದ ಖಡುಗಧಾರೆ ವಿಯೋಗಿಗೆತ್ತಿದ ಸಬಳವಖಿಳವಿರಾಗಿಗಳ ಹೆಡತಲೆಯ ದಡಿ ನೈಷ್ಠಿಕರಿಗಲಗಣಸು (ಕುವ್ಯಾಆ. ೫–೬); ಅಣೆವ ಹರಿಗೆಯನೊಬ್ಬರೊಬ್ಬರನಣಸಿನಲಿ ತಿವಿದಗಿವ ಭಟರೊಡ್ಡಣೆ ಸಘಾಡಿಸಿತು (ಕುವ್ಯಾಭೀ. ೨–೫). **ಅಣಚು₃:** ೪. ಉಕ್ಕಿನಣಚಿಂದಸುವ ತಿವಿಯಿರೊ ಬೀಸಿ ಪಾಶವನೆಸೆದು ಸದೆಯಿರೊ (ಅಂಬಿಕಾ. ೪–೩೬). ೫. ಸೌಟು, ಚಮಚ ಮುಂತಾದ ಸಾಮಗ್ರಿಗಳನ್ನು ತೂಗು ಹಾಕಲು ಅನುಕೂಲವಾಗುವಂತೆ ಮರದಿಂದ ತಯಾರಿಸಿದ ರಂಧ್ರಗಳುಳ್ಳ ಚೌಕಟ್ಟು (ಕರಾ–ಪ್ರಾದೇ).

[**ದೇ.** ‖ **ತುಳು.** ಅಣಸು]

**ಅಣಸುಗಲ್ಲ** (ನಾ). ಆಯುಧದ ಹಿಡಿಯ ಮೇಲೆ ಊರಿಕೊಂಡ ಗಲ್ಲ: ಕೌರವನ ಹೊರೆಗೈತಂದು ನಿಂದನು ಸವಡಿಗೈ ಗದೆಯಣಸುಗಲ್ಲದ ಗಾಢಗರ್ವದಲಿ ಪವನಸುತ (ಕುವ್ಯಾಗ. ೮–೭). [ಅಣಸು₂ + ಗಲ್ಲ]

**ಅಣಿ₁** (ಕ್ರಿ). ೧. ಸಿದ್ಧವಾಗು: ಪಣಿದಂಬೊಯ್ದಂ ತೊಟಲ್ದಂ ಪಿರಿಯ ಕಳವುಮಂ ಕಳ್ದನಿಂದಣ್ಮಿ ಸಾಯಲ್ಕಣಿದೆಂ ಪೊತ್ತತ್ತು ಸೂಲಂ ಬಲದ ಪೆಗಲೊಳ್ (ಅರ್ಧನೇ. ೫–೩೬). ೨. ಕಟ್ಟು; ರಚಿಸು: ಪೊಚಿಲನಣಿವ ಭಾವಮನ್, ಕಲ್ತುಕೊಂಡನಾಳವನ್ (ಅಂತಿಗೊ. ೩೩೫). [**ದೇ.**]

**ಅಣಿ₂** (ನಾ). ೧. ಅಚ್ಚುಕಟ್ಟು; ಸೊಗಸು; ಮನೋಹರತೆ; ಅಲಂಕಾರ: "ಇರದಣಿಯನುವೆಡ್ಡಮೆನೆ ಮನೋಹರಮಕ್ಕುಂ" (ಕವಿಕಂ. ೯೯); ಕಾವ್ಯನಾಟಕವ ಅಣಿಯಱಿತುಸಿರುವ ಕವಿಗಳ ವೀಧಿ ಸಂದಣಿಸಿಹುವಾ ಪುರದೊಳಗೆ (ಕಂನವಿ. ೬–೪೨); ರಣಕಿದಿರಾದ ತುರುಕರ ಕ್ಷಣದೊಳಗಿಱಿದಾಗ ಬೀಳಗೆಡಹಿ ಶೌರ್ಯದಣಿಯ ಮೆಱೆದರೇವೇಳ್ವೆ (ಕಂನವಿ. ೧೪–೯೫). ೨. ಸಿದ್ಧತೆ; ಸಜ್ಜು: ರಣದೊಳಾದುದು ಬೋನವಾರೋಗಣೆಗೆ ಬಿಜಯಂಗೈವುದನುಚರಗಣಸಹಿತವೆಂದತಿಬಲರು ಕಾಲಂಗೆ ದೂತರನು ಅಣಿಯೊಳಟ್ಟಿದರೆನಲು (ಕುವ್ಯಾಭೀ. ೪–೫); ತನಗೆ ಶತ್ರುವಾಗಿರುವವನನ್ನು ತನಗೆ ಅಣಿಯಿಲ್ಲದಿರುವ ಸಮಯದಲ್ಲಿ ಸುಮ್ಮನೆ ಬಿಟ್ಟು (ಕೃವಾಅ. ೨೬೭); ಲಾಜಾಹೋಮಕ್ಕೆ ಎಲ್ಲವೂ ಅಣಿಯಾಯ್ತು (ಶಾಂತಲಾ. ೧೧೦). ೩. ಅವಕಾಶ; ಅನುಕೂಲತೆ: ದರ್ಶನವಿಂದಿಗಣಿಯಿಲ್ಲೆನಲು ಕಿಡಿಕಿಡಿವೋದರಾ ದ್ವಿಜರು (ಪ್ರಹ್ಲಾಚ. ೨–೧೦). ೪. ನೆಯ್ಗೆಯ ಮಗ್ಗದ ಹಾಸುಹೊಕ್ಕುಗಳ ಜೋಡಣೆ; "ಕೆಚ್ಚುವ ಹಾಲಿನ ಕೋಲು, ಬಿಜಗರೆ" (ಮೋಳಿಮಾ. ಕೋಶ): ಕಟ್ಟಣೆಯೊಳಗಣ ಕಾಂಸ್ಯದಂತೆ ಅಣಿಯೊಳಗಣ ಕೇಣದಂತೆ ಚಿನ್ನದೊಳಗಣ ಬಣ್ಣದಂತೆ (ಆದವ. ೮); ಪರಬ್ರಹ್ಮದ ಬಣ್ಣಕ್ಕೆ ಅದ್ವೈತದ ಅಣಿಯನಿಟ್ಟು ನಿರ್ಧರಿಸಿದ ನಿಜ ಬಣ್ಣವ (ಆದವ. ೧೫೫); ಉಂಕಿಯ ನಿಗುಚಿ ಸರಿಗೆಯ ಸಮಗೊಳಿಸಿ ಸಮಗಾಲನಿಕ್ಕಿ ಅಣಿಯೊಳು ಏಳ ಮೆಟ್ಟದೆ ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು ಈ ಸೀರೆಯ ನೆಯ್ದವ ನಾನೋ ನೀನೋ (ದೇದಾಪ್ರ. ೧೩೨–೧೪೮); ಅಯಸ್ಕಾಂತದ ಶಿಲೆಯ ಲೋಹದಂತಿರಬೇಕು ಅಣಿಯೊಳಗಣ ನೇಣೆನಂತಿರಬೇಕು (ಮೋಳಿಮಾ. ೧೮–೭೨).

**ಅಣಿಯಾಗು** = ಸಿದ್ಧವಾಗು: ಮೃದಂಗ ಡಿಂಡಿಮ ಡಕ್ಕೆಯ ಬಾರಿಸೆ ಮರುಳ್ಗಳಣಿಯಾಗಿರೆ (ಗಣೇಶ. ೧೫–೩೯೩); ಅಲ್ಲಿ ಪೂಜಾ ಸಾಮಗ್ರಿ

ಗಳೆಲ್ಲ ಅಣಿಯಾಗಿರುವದನ್ನು ಪರೀಕ್ಷಿಸಿ ಇನ್ನೇನು ಆಚಮನ ಮಾಡುವ ದರಲ್ಲಿದ್ದರು (ರಂಗರೋ. ೭೦). [< ಅಣಿ$_1$. / **ತಮಿ.** ಅಣಿ]

**ಅಣಿ$_3$** (ನಾ). ೧. ಸೈನ್ಯದ ಒಂದು ಅಂಗ; ಪದಾತಿ ಸೈನ್ಯ: ಭೂಮಣ್ಡಲದೊಳಾಗೆ ವಿಲ್ಲಣ್ಣಮನಣಿಯ ತುರಗಸುನಾಜ್ಞರ ಭಣ್ಡಣಜ್ಞಣ ದೊಳಗಿತ್ತಿ (ಎಕ. VIII, ಸೊರಬ. ೨೨-೬; 800); ಇಱಿದಡೆ ಗಣ್ಡರ್ ಮಱುಮಕ್ಕಳಣಿಯನಾ ಆನೆಯುಮ್ ಕುದುರೆಯಂ (ಎಕ. X, ಬಾಗೇಪ. ೬೨-೭; 900); ಕುದುರೆ ಕುದುರೆಯೊಳ್ ರಥಂ ರಥದೊಳಣಿಯಣಿಯೊಳ್ ಘಟಿಯಾನೆ ಘಟೆಯಾನೆಯೊಳ್ ತಳ್ತು ತಾಗಿ (ವಡ್ಡಾರಾ. ೧೪೮-೬); ಕರಿಘಟೆ ನೀಳಮೇಘಘಟೆಯಂತೆ... ರಥಂ ಮಕರಂಗಳಂತಗುರ್ವುರಿ ವರಿಯುತ್ತುಮಿರ್ಪಣಿ ಬೃಹದ್ಬಡಬಾನಳನಂತೆ ತೋಱಿ (ಪಂಪಭಾ.೮-೯೯); ಎರಡುಂ ಪಡೆಗಳೊಡ್ಡಿ ಕೈಯಂ ಬೀಸಿದಾಗಳ್ ಬಿಲ್ಲು ಬಿಲ್ಲೊಳ್ ದಟಿಂ ದಟಿದೊಳ್ ತೇರ್ ತೇರೊಳಾನೆಯಾನೆಯೊಳಣಿಯಣಿಯೊಳ್ ತಾಗಿ ಕಾದಿದಾಗಳ್ (ಬಂಹರಿ. ೮-೬೨ ವ). ೨. ಸೈನ್ಯ; ಸೈನ್ಯದ ವ್ಯೂಹ: "ದಟಿ ಮಣಿ ಪಡೆಯೊಡ್ಡು ಪೌಜು ಬಲ ಸೈನ್ಯಂ" (ಕವಿಕಂ. ೧೨೭); ಊಣುಕಲ್ಲ ಕೋಟೆಯೊಳಗಿಬ್ಬಣಿ ಸನ್ನದ್ಧಣಿಯಾಗೆ (ಸೌಇಇ. XI-i, ೫೧-೫; 1006); ಪಡಲಿಡೆ ಕಾದಿದುವೆರಡಣಿ (ನೇಮಿಪು. ೧೧-೧೫೯); ಮುಱಿದುದು ಮುಂಗುಡಿಯೊಳಗಡ್ಡಣದಣಿ ಬಿಱಿತೋಡಿತು (ಜಯಕಾ. ೭-೩); ಗಣನೆಯಿಲ್ಲದ ಗಜ ತುರಗ ಸುಭಟರ ಸಂದಣಿವೆರಸತಿಲೀಲೆಯಿಂದ ಅಣಿಯೊಳೆಸೆದನಂದು ದಳಪತಿ ನರಸಿಂಗು (ಕುರಾಸಾಂ. ೧೨-೩೫); ಕಾಪಿಡುತ ಮುಗಿಲಣಿಯ ತಾರೆಯಕ್ಷೋಹಿಣಿಯ ಶಾಂತಮಾನಸಳಾಗಿ ನಿಂತೆ ಮುಗುಮುಗುದೆ (ಪಯಣ. ೯೯).

**ಅಣಿ ಮುಟ್ಟಿ ಗಂಡ, ಅಣಿ ಮುಟ್ಟಿ ಧುರಂಧರ** = ಶತ್ರು ಸೈನ್ಯ ಎದುರಾಗಿ ನಿಂತಾಗ ತನ್ನ ಪರಾಕ್ರಮವನ್ನು ತೋರಿಸುವ ವೀರ. ⓟ ಇವು ಬಿರುದುಗಳು: ಅಣಿಮುಳ್ದಿ(ಳ್ದಿ)[ಟ್ಟಿ]ಗಂಡಂ... ಪೆರ್ಜುಂಕದ ಪೆರ್ಗ್ಗಡೆ ಚಟ್ಟಮಯ್ಯಂ (ಎಇ. XVI, ೩೩೯-೧೫; 1053); ನಾಗದೇವನಣಿಮುಟ್ಟಿ ಧುರಂಧರನಾಗದೇವನೆಂಬಿನಮಿಱಿದಿಕ್ಕಿದಂ ಸೆಣಸಿ ಪೊಕ್ಕರನಾಜಿಯೊಳ್ (ಅಜಿಪು. ೧-೪೩). 'ಧಳ ಮುಟ್ಟಿ ಗಂಡ' ಪರಾ. ('ದಟಿ' ದ ಕೆಳಗೆ). **ಅಣಿಯೊ[ೞ]ಡೆ ಗಂಡ** = ತನ್ನನ್ನು ಕಂಡೊಡನೆಯೇ ಶತ್ರುಸೈನ್ಯವು ಓಡಿಹೋಗುವಂತೆ ಮಾಡುವ ಶೂರ; ಒಂದು ಬಿರುದು: ಗಂಗಕುಳಕಮಳಮಾರ್ತಂಡನುಂ ಅಣಿಯೊ[ೞ]ಡೆ ಗಂಡನುಂ ರಣರಙ್ಗನೀಱನುಂ (ಎಕ. VI, ತರೀಕೆ. ೬೧-೩೪; 1154); ಅಣಿಯೊ[ೞ]ಡೆ ಗಂಡನುಂ ರಣರಂಗನೀಱನುಂ ಬಿಲ್ಲಂಕಕಾಱನುಂ (ಎಕ. VII, ಚನ್ನಗಿ. ೬೪-೩೭; 1214); (ಎಕ. VI, ಕಡೂರು. ೧೫೬-೪೪; 1190 ನೋ). ಪಡೆಯೋಡೆ ಗಂಡ ಹೋ. [**ದೇ.** ‖ **ತಮಿ.** ಅಣಿ]

**ಅಣಿ$_4$** (ನಾ). (ಕರಾ) ಭೂತದ ಕುಣಿತದವನು ಬೆನ್ನ ಹಿಂದಕ್ಕೆ ಕಟ್ಟಿಕೊಳ್ಳುವ, ಕೆದರಿದ ನವಿಲುಗರಿಯಂತಿರುವ ಅಲಂಕಾರ ವಿಶೇಷ. [← **ತುಳು.** ಅಣಿ]

**ಅಣಿ$_5$** (ನಾ). ೧. ರಥ ಮುಂತಾದ ವಾಹನಗಳ ಚಕ್ರದ ಕಡಾಣಿ: "ಅಣಿಃ, ಅಕ್ಷಃ, ಅಗ್ರಕೀಲಿಕಾ – ಈ ೩ ಕಡೆಗೀಲ್" (ಹಲಾಯು. ೭೪-೨೯೪); "ಅಚ್ಚಿನ ಕಡೆಕೀಲಲ್ಲಿ ಅಣಿ ಎನಿಸುಗು" (ನಾಚಿರಾ. ೧೩೪). ೨. ಸೂಜಿಯ ಮೊನೆ. ೩. ಮೂಲೆ; ಕೋಣ. ೪. (ಪ್ರಾಣಿಗಳ ವಧೆಗಾಗಿ ಮೀಸಲಾಗಿಟ್ಟಿರುವ) ಮನೆಯ ಒಂದು ಮೂಲೆ. ೫. ಎಲ್ಲೆಕಟ್ಟು; ಮೇರೆ. [**ಸಂ.**]

**ಅಣಿಕಟ್ಟು** (ಕ್ರಿ). ನೆಯ್ಗೆಯ ಮಗ್ಗದ ಹಾಸಿನ ಮೇಲುಭಾಗದ ಮತ್ತು ಕೆಳಭಾಗದ ದಾರಗಳನ್ನು ಜೋಡಿಸಿ ಕಟ್ಟು (ಸ್ಯಾಂಡರ್). [ಅಣಿ$_5$ + ಕಟ್ಟು$_1$]

**ಅಣಿಕಟ್ಟುಮಾತು** (ನಾ). ಸೊಗಸಾದ ಮಾತು; ಅಚ್ಚುಕಟ್ಟಾದ ಮಾತು (ಸ್ಯಾಂಡರ್). [ಅಣಿ$_2$ + ಕಟ್ಟು$_2$ + ಮಾತು$_1$]

**ಅಣಿಕಲ್ಲು** 'ಅಣ್ಣೆಕಲ್ಲು' ನೋ.

**ಅಣಿಕಾರ** (ಅ). ಅಣುಮಾತ್ರ; ಸ್ವಲ್ಪ: ನಾವು ನಿಮ್ಮನ್ನು ಕೆಟ್ಟ ಅಭಿಪ್ರಾಯದಿಂದ ತರಲಿಲ್ಲ. ಕಾರಣಾಂತರದಿಂದ ತಂದೆವು. ಈ ಸ್ಥಳದಲ್ಲಿ ನಿಮ್ಮ ಮಾನಮರ್ಯಾದೆಗಳು ಅಣಿಕಾರವೂ ವ್ಯತ್ಯಾಸಹೊಂದದು (ಚಿತ್ರಾಜೋ. ೪೪). [< ಅಣಿ$_5$ ?]

**ಅಣಿಕಿ** (ನಾ). ಬರೆಯುವ ಕಡ್ಡಿ; ಲೇಖನಿ: ಪಾಣಿ ಭೂಪತ್ರಮಾಡಿ ಮೇರುಶೈಲ ತಾನಣಿಕಿಯ ಪಿಡಿದು ಸಪ್ತಸಾಗರವೆಂಬೊ ನಾನಾ ಬಣ್ಣದ ಕಪ್ಪಿನಿಂದ ನಿತ್ಯಜ್ಞಾನವಧಿಕಳಾಗಿ ಬಲುಪರಿಯಿಂದಲ್ಲಿ ಧೇನಿಸಿ ನಿನ್ನ ಮಹಿಮೆ ಬರಹ ಬರೆದೆ (ವಿಪ್ರಸು. ೧೮-೧). [?]

**ಅಣಿಕೀಲು** (ನಾ). ಗುಪ್ತವಾದ ಬೀಗದ ಒಳಕೀಲು, —ಸ್ಪ್ರಿಂಗು (ಸ್ಯಾಂಡರ್). [ಅಣಿ$_1$ ? + ಕೀಲು$_2$ (< ಕೀಲ್)]

**ಅಣಿಕೂಸು** (ನಾ). ಚೊಚ್ಚಲ ಮಗು; ಮೊದಲನೆಯ ಸಂತಾನ (ಸ್ಯಾಂಡರ್). [ಅಣಿ$_0$ + ಕೂಸು]

**ಅಣಿಕೆ** (ನಾ). ಒಂದು ಗಿಡ: "ಜೀವಂತೀ – ಸಿಹಿಪಾಲೆ, ಮೆದೆ, ಹೊಂಬಾಳೆ, ಅಣಿಕೆ, ಶ್ರೇಷ್ಠಶಾಕ" (ಒಷಧಿ. ೬೩). [?]

**ಅಣಿಕೋಲು** (ನಾ). ಮಗ್ಗದ ಹೊಕ್ಕಿನ ಕುಣಿಕೆಯನ್ನು ಹಾಸಿನಿಂದ ಬೇರೆಯಾಗಿರಿಸುವ ಕೋಲು ಅಥವಾ ದಬ್ಬೆ (ಸ್ಯಾಂಡರ್). [ಅಣಿ$_5$ + ಕೋಲು (< ಕೋಲ್)]

**ಅಣಿಗ** (ನಾ). ೧. ಅಲಂಕಾರ ಮಾಡುವವನು (?): ಸಜ್ಜಿವಳರ್ ಬಾಣಸಿಗರ್ ಮಜ್ಜನವಳರಣಿಗರಂಗರಕ್ಷಕರಾಗಿರ್ಪುಜ್ಜುಗಕಮರರ ಗಣಮನೆ ಪಜ್ಜತಿಯಿಂದಿರಿಸಿ ಶತಮುಖಂ ಕೃತಕೃತ್ಯಂ (ಪುಷ್ಪಪು. ೧೨-೫೬). ೨. ಒಬ್ಬನ ಹೆಸರು: ಶ್ರೀ ಅಣಿಗನ್ (ಎಕ. XVI, ತುಮಕೂ. ೧೧೧; 940). [ಅಣಿ$_3$ + –ಗ]

**ಅಣಿಗಂಟು** (ನಾ). ಅತ್ತಿತ್ತ ಜಾರಿಸಬಹುದಾದ ನೂಲಿನ ಕುಣಿಕೆಯ ಗಂಟು (ಸ್ಯಾಂಡರ್). [ಅಣಿ$_5$ + ಗಂಟು]

**ಅಣಿಗಟ್ಟು** (ಕ್ರಿ). (ಕರಾ) ೧. ಅಂದವಾಗಿ ವಿನ್ಯಾಸಗೊಳಿಸು: ಬೈಗಿನ ಕಿಱುಮುಗಿಲೊಡ್ಡಂ ಕಂಡುಲ್ಲಸದಿಂ ಪೊಂಗಿ ಇಡಿಕಿಱಿದ ಪೀಲಿಗಳಂ ಬಿದಿರ್ಚಿಯುಮಣಿಗಟ್ಟಿ ಕೇಗಿ ತನ್ನೊಂದಾಡಂಬರದಿಂ ಮಯೂರಂ ತಾಂಡವಕ್ಕಾರಂಭಿಸಲೊಡಂ (ರಾಮಾಶ್ವ. ೪೨-೧೮). ೨. (ಭೂತದ ಕುಣಿತದವನು) ಬೆನ್ನ ಹಿಂದಕ್ಕೆ ಕೆದರಿದ ನವಿಲುಗರಿಯಂತಿರುವ ಅಲಂಕಾರವನ್ನು ಕಟ್ಟಿಕೊ: ಭೂತವೆಂದರದು ಅಣಿಗಟ್ಟಿ ಬಾರಣೆ ಮುಕ್ಕುವ ಈ ಹೊರಗಿನ ಭೂತವಲ್ಲ (ನಡೆದಾ. I, ೪೬). [← **ತುಳು.** ಅಣಿಗಟ್ಟು]

**ಅಣಿಗಾರ** (ನಾ). ೧. ಅಣಿಮಾಡುವವನು (ಸ್ಯಾಂಡರ್). ೨. ಜಾಣ; ವಿವೇಕಿ (ಸ್ಯಾಂಡರ್). ೩. ಯಜಮಾನ; ಹಿರಿಯ; ಮುಖಂಡ (ಸ್ಯಾಂಡರ್). ೪. ನೆಯ್ಗೆಯ ಹಾಸುಹೊಕ್ಕುಗಳನ್ನು ಸಿದ್ಧಪಡಿಸುವವನು (ಸ್ಯಾಂಡರ್). [ಅಣಿ$_3$ + –ಗಾರ (< –ಕಾಱ)]

**ಅಣಿಗಿಡು, ಅಣಿಗೆಡು** (ಕ್ರಿ). ಸಾಲು ಕೆಟ್ಟುಹೋಗು; ವ್ಯೂಹ ಭಂಗವಾಗು; ಕ್ರಮತಪ್ಪು: ಸೆಣಸಿ ಚಿಕದೇವರಾಯನೊಳಣಿಗೆಟ್ಟರ್ ಭಾಗವಿಜಯನಗರದ ಶಾಹರ್ (ಅಪ್ರತಿ. ೬೦-೨೦). **ಅಣಿಗೆಡು**: ರಣವ ಸಾರಿಸಿ ಹೆಣಗಳನೆತ್ತುವೊಡೊಂದು ಕ್ಷಣ ನಿಲಲಂಜಿ ಚೌಧೆಸೆಗೆ ಕುಣಪಗಳೀಡಾಡಿ ಬಿರುದ ಬಿಸುಟು ಹಿಂದಕಣಿಗೆಟ್ಟು ಸರಿದರೇನೆಂಬೆ (ಕಂನವಿ. ೧೮-೧೧೮). [ಅಣಿ$_3$ + ಕಿಡು (< ಕೆಡು)]

**ಅಣಿಗೆ** (ನಾ). ನೆಯ್ಗೆಯವರ ಮಗ್ಗದ ಅಚ್ಚು (?).

ಅಣಿಗೆಕಟ್ಟು = ನೆಯ್ಗೆಯ ಹಾಸಿನ ಎಳೆಗಳ ನಡುವೆ ಅಣಿಯನ್ನು ಜೋಡಿಸು (ಸ್ಯಾಂಡರ್). [< ಅಣ್ಯ]

**ಅಣಿಗೆಡು** 'ಅಣಿಗಿಡು' ನೋ.

**ಅಣಿಗೆಯ್**, ಅಣಿಗೈ (ಕ್ರಿ). ಸಿದ್ಧಮಾಡು : ಕಲಿಯಾಗಿ ಪೆಟ್ಟುವೆರ್ಚೆ ಬೊಬ್ಬಿಱಿದು ದೊಣೆಯಂ ಕಣೆಯಿನಣಿಗೆಯ್ದುಂ ಕೈಯ ತೆಳ್ಪಾಳಂ ಮಸೆದುಂ (ರಾಮಾ.ಶ್ವ. ೯೫-೨); ಕೆಲರ್ ಗರವಟದ ಸನ್ನೆಯುಮನಣಿಗೆಯ್ಯುತಿರ್ಪರ್ (ಅದ್ಭುತ. ೧-೧೧). **ಅಣಿಗೈ** : ಮೋದಕನೈವೇದ್ಯವನಣಿಗೈಯೆ (ಗಣೇಶ. ೩-೫೫). [ಅಣ್ಯ + ಗೆಯ್ (< ಕೆಯ್₁)]

**ಅಣಿಗೆಲಸ** (ನಾ). ಪದಾರ್ಥಗಳನ್ನು ಅಣಿಗೊಳಿಸುವ ಕೆಲಸ(ದಕ). [ಅಣ್ಯ + ಕೆಲಸ]

**ಅಣಿಗೈ** 'ಅಣಿಗೆಯ್' ನೋ.

**ಅಣಿಗೊಳಿಸು** (ಕ್ರಿ). ಸಿದ್ಧಪಡಿಸು ; ಸಜ್ಜುಗೊಳಿಸು : ಒಂದು ದಿನ ದೂತಿಯಿನ ಬಹನೆಂದು ಹೇಳಿರಲು ಗಂಧಹೂವುಪಹಾರವಣಿಗೊಳಿಸುತ (ವಿಸೀಗೀ. ೨೭); ಪ್ರತಿಯೊಬ್ಬ ರಾಜಕಾರಣಿಯೂ ಕೂಡ ಈ ಪತ್ರಿಕೆಗಳನ್ನು ಓದಿ, ತನ್ನ ವಿಚಾರಗಳನ್ನು ಅಣಿಗೊಳಿಸುತ್ತಿದ್ದನು (ಪತ್ರಿಕಾ. ೨); ಚಾರುಸ್ಮಿತೆ ನನ್ನ ಅನುರೋಧದಿಂದ ರತ್ನಾವಳಿಯಾಗಲು ಒಪ್ಪಿದಳು . . . ಅವಳನ್ನು ಅಣಿಗೊಳಿಸಲು ಸ್ವಲ್ಪವೂ ಪರಿಶ್ರಮವಾಗಲಿಲ್ಲ (ಬಾಣಭ. ೩೯೭). [ಅಣ್ಯ + ಕೊಳ್ + -ಇಸು₃]

**ಅಣಿಚಿಲ್** (ನಾ). ಅಳಿಲು : ಬ್ರಹ್ಮಂ ಲಿಂಗಪ್ರದೇಶದಿಂದಣಿಚಿಲಾ [ಪಾಠಾಂ. ಚಿನಾ]ಕೃತಿಯಿಂದೆ ತಳೆದುಮನೇಕ ಕ್ಲೇಶಾಯಾಸದಿಂದೆ ತಾನುಂ ನಾಭೀಪ್ರದೇಶಮನೆಯ್ದಿ (ಧರ್ಮಪ. ೬-೨೭ ವ). [~ ಅಣಿಲ್]

**ಅಣಿಚೆಲ್ವ** (ನಾ). ಸೈನ್ಯದಲ್ಲಿ (ಪರಾಕ್ರಮದಿಂದ) ಶೋಭಿಸುವವನು; ಒಂದು ಬಿರುದು (?) : ಶ್ರೀಮಹಾವಲಿ ಬಾಣರಸರ್ ಪ್ರಿಥುವೀ ರಾಜ್ಯಂಗೆಯೆ ಅಣಿಚೆಲ್ವನಣುಮಪರಾಕ್ರಮನ್ವಿರ ಮಹಾಮೇರು ಪೊಕ್ಕಿಱಿವೊರ ದೊಗರಾಜನ್ನನ್ನನಾಳ್ವ ಪ್ರಭುಮೇರು ಬೆಸಸೆ (ಎಕ. X, ಶ್ರೀನಿವಾ. ೬-೪; 780). 'ಇಱುವ ಬೆಡಂಗ' ಪರಾ. [ಅಣ್ಯ + ಚೆಲ್ವ]

**ಅಣಿಜಾಣ** (ನಾ). ಅಣಿಮಾಡುವುದರಲ್ಲಿ ಚದುರ; ತುಂಬ ಜಾಣ (ಸ್ಯಾಂಡರ್). [ಅಣ್ಯ + ಜಾಣ]

**ಅಣಿಜಾಣೆ** (ನಾ). ಅಣಿಮಾಡುವುದರಲ್ಲಿ ಚದುರೆ; ತುಂಬ ಜಾಣೆ : ಸರೋಜ ಸಂಗೀತದಲ್ಲಿ ಅಣಿಜಾಣೆ (ರೂಢಿ). [ಅಣ್ಯ + ಜಾಣೆ]

**ಅಣಿತುಳಿ** (ಕ್ರಿ). ನೆಯ್ಗೆಯ ಹಾಸಿನ ಜೋಡಣೆಯ ಯಂತ್ರವನ್ನು ಕಾಲಿನಿಂದ ಮೆಟ್ಟು (ಕಿ). [ಅಣ್ಯ + ತುಳಿ (< ತುಱಿ)]

**ಅಣಿದಪ್ಪು** (ಕ್ರಿ). ಕ್ರಮ ತಪ್ಪಿಹೋಗು ; ಸಿದ್ಧತೆ ಕೆಡು ; ಹದಗೆಡು : ಚಪ್ಪರಿಸಲರಿದೀ ನಿಶಾಟನ ನಿಪ್ಪಸರದಿಂ ಪಾಂಡವರಿಗಣಿದಪ್ಪಿತೆಂದರೆ ಸಾಮವೇ ಹಿತವೆಂದು ನಡೆತಂದ (ಸಾಳ್ವಭಾ. ೧೮-೨೭). [ಅಣ್ಯ + ತಪ್ಪು₁]

**ಅಣಿದಬ್ಬೆ** (ನಾ). = ಅಣಿಕೋಲು. [ಅಣ್ಯ + ದಬ್ಬೆ₁]

**ಅಣಿದಾರ** (ನಾ). ನೆಯ್ಗೆಗೆ ಸಿದ್ಧಪಡಿಸಿದ ಹಾಸಿನ ಎಳೆ (ಸ್ಯಾಂಡರ್). [ಅಣ್ಯ + ದಾರ₁]

**ಅಣಿದೋಱು** (ಕ್ರಿ). ಸೈನ್ಯವನ್ನು, ಯುದ್ಧಸಿದ್ಧತೆಯನ್ನು ಪ್ರದರ್ಶಿಸು : ಗುಣಕೆಱಗುವೆನಹುದಣ್ಣನೆಂದೊಮ್ಮೆ ಝುಂಕಣೆಗೆಱಗುವೆನೆ ತಾನೀಗ ಅಣಿದೋಱಿ ನಿಂದು ಬಣ್ಣಕೆ ನಿನ್ನ ಕಳುಹಿ ಪ್ರೇರಣೆಸುತಿದ್ದನು ಭಾಪು ನೋಡ (ಭರಚ. ೪೯-೪೧). [ಅಣ್ಯ + ತೋಱು]

**ಅಣಿನೆರೆ** (ಕ್ರಿ). ಸಿದ್ಧವಾಗಿ ಸೇರು : ಈ ಜನರೆಲ್ಲ ಸ್ವಾತಂತ್ರ್ಯದ ಮಹಾಯಜ್ಞಕ್ಕಾಗಿ ಎಂದಾದರೂ ಅಣಿನೆರೆಯುವುದು ಸಾಧ್ಯವೆ? ಎನಿಸಿತು ಅಪ್ಪುವಿಗೆ (ಚಿರಸ್ಮ. ೨೩೫). [ಅಣ್ಯ + ನೆರೆ₁]

**ಅಣಿಪಾಡು** (ನಾ). ಒಂದು ವ್ಯಾಪಾರದ ಅಥವಾ ವೃತ್ತಿಯ ಗುಟ್ಟು, —ರೀತಿ (ಸ್ಯಾಂಡರ್). [ಅಣ್ಯ + ಪಾಡು₂]

**ಅಣಿಪು** 'ಅಳಿಪು' ನೋ.

**ಅಣಿಮಣಿ** 'ಅಣಿವಿಣಿ' ನೋ.

**ಅಣಿಮಣಿಕೆ** 'ಅಣುಮಣಿಕೆ' ನೋ.

**ಅಣಿಮಾಡು** (ಕ್ರಿ). ಸಿದ್ಧಗೊಳಿಸು ; ಅಚ್ಚುಕಟ್ಟುಮಾಡು ; ಓರಣಗೊಳಿಸು: ಸುತ್ತಣ ಮಣಿ ಅಣಿಮಾಡಿಕೊಂಡು ಯಿಹದಕ್ಕೆ ಬಾವಿ ಹೂಳಿದರೆ ತೋಡುವುದಕ್ಕೆ . . . ಮಿಕ್ಕ ಎರಡು ಭಾಗೆ ಸಲುವುದು (ಸೌಇಇ. IX–ii, ೪೩೬–೨೫; 1412) ; ಜವದಿಂದ ಮೃಗನಾಭಿ ಮೈಗೆ ಪೂಸುವೆನೆಂದು ಯುವತಿಯಣಿಮಾಡಿ ಮುಂದಿರಿಸಲ್ಕೆ (ಪ್ರೌಢರಾ. ೨-೩೩) ; ದೇಶಬಾಂಧವರನ್ನು ಎಚ್ಚರಿಸಿ ಅವರನ್ನು ಸ್ವಾತಂತ್ರ್ಯದ ಹೋರಾಟಕ್ಕೆ ಅಣಿಮಾಡುವುದೇ ಪತ್ರಿಕೆಗಳ ಹೊಣೆಯಾಗಿತ್ತು (ಪತ್ರಿಕಾ. ೨೩). [ಅಣ್ಯ + ಮಾಡು₁]

**ಅಣಿಮಿಣಿ** 'ಅಣಿವಿಣಿ' ನೋ.

**ಅಣಿಮುಱಿ** (ಕ್ರಿ). ತುಂಬ ಕೆಡು : ಅಱಿಪಿದಡಿದನಾಳಿಯರಿಗೆ ನಾಣಣಿಮುಱಿವುದು ಚಿಃ ಬೇಡ ಸುಡಲೆಂದು ಸಱಿವಿಡಿದೆರ್ದೆಯ ಬಳಿಕಲವಳಿದ್ದಳು (ಸೊಬಸೋ. ೨೪-೫೧). [ಅಣ್ಯ + ಮುಱಿ₁]

**ಅಣಿಮೆ** (ನಾ). ೧. ಅಣುತ್ವ; ಸೂಕ್ಷ್ಮತ್ವ. ೨. ಅತ್ಯಂತ ಸೂಕ್ಷ್ಮವಾದ ರೂಪವನ್ನು ಹೊಂದಬಲ್ಲ ಶಕ್ತಿ; ಅಷ್ಟಸಿದ್ಧಿಗಳಲ್ಲಿ ಒಂದು : "ಕಿಱಿಯ ಶರೀರಮಂ ಕಯ್ಕೊಳ್ವುದು ಅಣಿಮೆಯೆಂಬುದು" (ಶಾಸ್ತ್ರಟೀ. ೯೦-೩) ; ಅಣಿಮೆ ಮೊದಲಾದಷ್ಟಸಿದ್ಧಿಗಳನೆಲ್ಲಮಂ ತೃಣವೆಂದು ಕಂಡು (ಸಿದ್ಧೇಪು. ೨೨-೧೫೫). [ಸಂ. ಅಣಿಮಾ]

**ಅಣಿಮೆಟ್ಟು** (ನಾ). ೧. ಪಾದದಲ್ಲಿ ಧರಿಸುವ ಒಂದು ಆಭರಣ : ಪದಕ ಮೆಂಟಿಗೆ ಪಿಲ್ಲಿ ಅಣಿಮೆಟ್ಟೊದವಿದುಂಗುರ ಗೆಜ್ಜೆ ಸರಪಣಿಯಿಂದ ಸಿಂಗರಿಸಿ (ಜಿನಭಾ. ೧೭-೨೭). ೨. ಅಂದವಾದ ಪಾದರಕ್ಷೆ. [ಅಣ್ಯ ? + ಮೆಟ್ಟು₂]

**ಅಣಿಯಂಕಕಾಱ** (ನಾ). ಇಡೀ ಸೇನೆಯನ್ನೇ ಎದುರಿಸಿ ಯುದ್ಧಮಾಡುವ ಏಕಾಂಗವೀರ ; ಒಂದು ಬಿರುದು : ಅಣಿಯಂಕಕಾಱ(ಂ) ನಾಹ[ವಾದಿ]ತ್ಯಂ ಸಾಹಸಭೀಮಂ ಶೌಚವೆಡಂಗ . . . ಸುನ್ನವತ್ತಿ ಪನ್ನೆರಡುವನ್ನಾಳುತ್ತಮಿರೆ (ಸೌಇಇ. IX–i, ೭೭-೯; 992). [ಅಣ್ಯ + ಅಂಕ₂ + -ಕಾಱ]

**ಅಣಿಯಂಕಧರ** (ನಾ). (?) : ತ್ರಿಣಯನ ರೂಪು ಪ್ರಜ್ವಲಿಸುವಲ್ಲಿ ಅಣಿಯಂಕಧರನೊಳಗೆ ಅಣಿಯನೆತ್ತುತಿಹನು (ಮಿಶ್ರಸ್ತೋ. ೮೧). [ಅಣ್ಯ + ಅಂಕ₂ + ಧರ]

**ಅಣಿಯರ** (ನಾ). ೧. ಅತಿಶಯ ; ಆಧಿಕ್ಯ ; ಹಿರಿಮೆ : "ಅಣಿಯರಮೆಂದು ಪಿರಿದು" (ಶಮದ. ಪರಿ. ೨) ; ಅಱಿಕೆಯ ಕೂರ್ಗಣೆಗಳೊಳೆ ಪೂಣ್ದು ತನ್ನಳವಣಿಯರಮೆನೆ ನಾಲ್ಕು ಶರದೆ ಪಾರ್ಥನನೆಚ್ಚಂ (ಪಂಪಭಾ. ೧೨-೧೬೪) ; ಅಣಿಯರದೊಳೆನ್ನ ಭಕ್ತಿಯನಿಳೆಗೆ ಕೂಡುತ್ತೆ (ಬಸರ. ೧-೮೨) ; ಕಣ್ಣಣಿಯರಮಾದಲಂಪುವಡೆದೀಶಸಭಾಂತಮನ್ನೆದಿತಳ್ಕಱಿಂ (ಉದ್ಭಟ. ೧೨-೧೩) ; ಅಣಿಯರದಿನತನುತನುಲತೆಗೆಣೆಸದೆ ಲಾವಣ್ಯರಸಮನೆತ್ತುವ ಪೊಸಜಾಟಣಮಾಲೆಯಂತಿರೆಸೆದುದು ಮಣಿಹಾರಂ (ಧರ್ಮನಾ. ೩-೭೫) ; ಅಣಿಯರದೆ ದಾನಧರ್ಮಂಗಳಂ ಸಕಲಜನ ತಣಿವಂತೆ ಮಾಡಿ (ಭಾವಚಿಂ. ೪-೬). ೨. ಶೀಘ್ರತೆ; ಸಡಗರ; ರಭಸ : ತ್ರಿಣಯನವಿರಹಿತಯಾಗಕ್ಕಣಿಯರದಿಂ ಪೋಗಿ ಮುಂದೆ ನಿಲೆ ದಕ್ಷಂ ನಿರ್ಗುಣನಂ ನಿಂದಿಸೆ ದಾಕ್ಷಾಯಣಿ ಕೇಳದೆ (೧೧ಕ. ೩-೧೩) ; ಆದಿಮಯ್ಯನಣಕದ ಮಾತಿಗಣಿಯರದೊಳೆಯ್ದಿ ಕೆರೆಯಲ್ಕೆ (ಸಿದ್ಧೇಪು. ೭-೭೨). [ದೇ. ?]

**ಅಣಿಯರಂ** (ಅ). ೧. ಹೆಚ್ಚಾಗಿ ; ಅತಿಶಯವಾಗಿ ; ವಿಶೇಷವಾಗಿ :

ಅಣಿಯರನೊದವಿದ ಮುಳಿಸಿನೊಳಣಮುಱಿದವರೆಂದು ರಣದೆ ಜಯಿಸಲ್ (ಪಂಪಭಾ. ೧೦–೧೧) ; ಅಣಿವಿಣಿಗೆಯ್ದೀ ಧರ್ಮಮನಣಿಯರಮಳಿದಂಗೆ ಪೆಱತು ಗತಿಯಿಲ್ಲ (ಎಕ. VII(S), ಶಿಕಾರಿ. ೩೪೨–೫೪; 1050); ತನ್ನೊಳ್ಗೋರ್ವರ ಮೇಲಣಿಯರಮೆತ್ತುವ ಮುತ್ತುವ ಪೊಣರ್ವ ಕಱುತ್ತಿಱಿವನೇಕ ನೃಪರಂ ಕಂಡಂ (ಜಗವಿ. ೫–೧೧೨) ; ತಣಿವಂತಿರೆ ರಸದಿಂ ಬುಧರಣಿಯರಮೆಸಗುವುದು (ಪುಷ್ಪಪು. ೧–೬೦) ; ಮಾಸದ ದುಷ್ಪಟಿಯಂ ತಾನಣಿಯರನೊಲ್ದಿತ್ತಾ ದೇವಂ ತದ್ಭೂಪತಿಗಿಂತೆಂದಂ (ಜಯಕಾ. ೩–೬೧). ೨. ಬೇಗನೆ ; ಶೀಘ್ರವಾಗಿ : ದ್ರುಪದನಂ ಗಡ ಕೋಡಗಗಟ್ಟುಗಟ್ಟಿ ತಂದಣಿಯರನೊಪ್ಪಿಸಿಂತಿದನೆ ಬೇಡಿದೆನಾಂ ಪರಸೈನ್ಯಭೈರವಾ (ಪಂಪಭಾ. ೨–೬೧); ಸಾಮಂತ ಚೂಡಾಮಣಿಯನಣಿಯರಂ ಬಂದು ಕಂಡಂ ಸುರೇಂದ್ರಂ (ಪಂಪಭಾ. ೭–೯೫). [< ಅಣಿಯರ]

**ಅಣಿಯರಬಿರುದ** (ನಾ). ಅತಿಶಯವಾದ ಬಿರುದುಳ್ಳವನು : ಅಣಿಯರಬಿರುದಂ ಚೋಳಂ ಗಣಿಕಾಸನ್ದೋಹದನ್ತೆ ಮುಡಿಯಂ ಪೊತ್ತಂ (ಮೈಅರಿ. ೧೯೨೯; ೬೫–೨೭ ; 1081). [ಅಣಿಯರ + ಬಿರುದು + –ಅ$_7$]

**ಅಣಿಯರನೆಱು** (ಕ್ರಿ). ಅತಿಶಯವನ್ನು ಪಡೆ ; ಮೇಲ್ಮೆಯನ್ನು ಹೊಂದು : ಕಣಕಾಲ ಚೆಲುವೆಯ ಕಂತುಕಗುಳ್ಪೆಯ ಅಣಿಯರವೆತ್ತ ಹಿಮ್ಮಡದ ಎಣೆತೊಣೆಯಿಲ್ಲದಡಿಯ ರಂಗಾಯೆಂಬ [ರ]ಮಣಿ ಮೈದೋರ್ಪಳಿನ್ನೆಂದೊ (ಶತಸಾಂ. ೨೨–೧೧). [ಅಣಿಯರ + ಪೆಱು]

**ಅಣಿಲ್**, ಅಣಿಲು$_1$, ಅಳಿಲು (ನಾ). ರೋಮ ಮುಂಗುಸಿ ಮುಂತಾದ ಪ್ರಾಣಿಗಳ ಜಾತಿಗೆ ಸೇರಿದ, ಸಾಧಾರಣವಾಗಿ ಮರಗಳ ಮೇಲೆ ಓಡಾಡುವ, ಒಂದು ಸಣ್ಣ ಸಾಧುಪ್ರಾಣಿ ; ಅಳ್ಳಿಕುಂಚ ; ಇಣಚಿ : ಅಣಿಲ ಪಡವು ಬಸುರಿಯ ಪಣ್ಣೆಂಬಂತೆ(ಧರ್ಮಾಮೃ.೭–೨೨೯); ಪೇರಣಿಲ್ ಮರದಣಿಲೆಂಬಿವಂ ಕೆಡಪಿಯೇಂ ತಿರುಗಿತ್ತೊ ಕಿರಾತಸಂಕುಳಂ (ದಶಕು. ೨–೧೨೦). **ಅಣಿಲು$_1$** : ಉದಧಿಯನಣಿಲು ತುಡುಕಿತೆಂಬ ನಾಣ್ನುಡಿಗಧಿರಾಜನಾದೆ ನಾನಿಂದು (ಅಂಜಚ. ೧–೧೦೦). **ಅಳಿಲು** : ಮರೆ ಮೂಗುರಿ ಕೊರಂಗಿಯಳಿಲು ಬೆಕ್ಕರಲೆ ಕೊಱವ ಮುಸು ಸಾರಗ ಸೀರುಡವೆಕ್ಕಲ ಕಪಿ ಪಂದಿ (ಜಯಕಾ. ೧೫–೨೯) ; ಆಕಾಶವ ನುಂಗಿತು ಅಳಿಲು (ಪುರಂದ. ೨–೧೯–೩) ; ಬಡವನಳಿಲುಸೇವೆಯೆಂದು ಧನ್ಯನಾದೆನು (ಹೊಂಗಳು. ೮–೧೩); ಅಳಿಲು ಏರಿದರೆ ಅರಳಿಮರ ಅಳ್ಳಾಡೀತೇ (ಗಾದೆ) ; ಅಳಿಲ ಭಕ್ತಿ ಮಳಲ ಸೇವೆ (ಗಾದೆ).

[ದೇ. ‖ ತಮಿ. ಅಣಿಲ್, ಅಣಿಲವಮ್ ; **ತುಳು.** ಅಣಿಲ್]

**ಅಣಿಲು$_1$** 'ಅಣಿಲ್' ನೋ.

**ಅಣಿಲು$_2$** 'ಅಣಿಲೆ$_1$' ನೋ.

**ಅಣಿಲೆ$_1$**, ಅಣಿಲು$_2$, ಅಳಲೆ, ಅಳಿಲೆ (ನಾ). ಒಂದು ಮರ ; ತ್ರಿಫಲ ವೃಕ್ಷಗಳಲ್ಲಿ ಒಂದಾದ ಹರೀತಕೀವೃಕ್ಷ; ಕರಕ್ಕಾಯಿಮರ: "ಅಭಯಾ – ಅಣಿಲೆ" (ಒಷಧಿ. ೪) ; ತೆಜ್ಜಣ ತಲೆಯ ಪುಣುಸೆ ಅಣಿಲೆಯ ಮರಂ (ಎಕ. XII, ಶಿರಾ. ೩೮–೪೩ ; 878) ; ಜೇವಿಂಗೆ ಕೈಪೆಯೆಂತು ಸಹಜಂ ಅಣಿಲೆಗೆ ತೊಗರೆಂತು ಸಹಜಂ ಸುಂಟಗೆ ಕಾರಮೆಂತು ಸಹಜಂ (ಧರ್ಮಾಮೃ. ೪–೪೦) ; ಇದೆಯಣಿಲೆಯೊತ್ತಿನೊಳೆ ಸಿಂಗದುಗುರ್ಗೊನೆ ವಜ್ಜೆಯಿದೆ (ಭಾವಚಿಂ. ೫–೧೦) **ಅಣಿಲು$_2$**: ಕಣಗಿಲು ಕಕ್ಕೆ ಬಿಕ್ಕೆಯಣಿಲು ಕದಳಿ ಹಾದರಿಯ ಮರ ಮೊದಲಾದುವುರ್ವಿಹವು (ಸಾಳ್ವಭಾ. ೫–೩). **ಅಳಲೆ**: ಕರಂಜಿಗೆಯರನೇಱಿಲಳಲೆ ಮುಳ್ಳುಗ ಮಳ್ತಿ ಕಜ್ಜುರ (ಜಯಕಾ. ೧೫–೨೪). **ಅಳಿಲೆ** : ಬ್ರಹ್ಮನೆಂಬ ಅಳಿಲೆಕಾಯಲ್ಲಿ ವಿಷ್ಣುವೆಂಬ ನೀರು ಹೊಯ್ದು (ಅಂಬಿಚ. ೨೧) ; ಬೇರುಡಿಯೆ ಬೆಳಲತ್ತಿ ಕಮ್ಮರ ಗೇರಳಿಲೆ [ಪಾಠಾಂ. ಗೇರಣಿಲೆ, ಬೇರಣಿಲೆ] ಹಿಂತಾಳ ತಾಳ ತಮಾಲ ತಡಸುಗಳ '. . . ಭೂರಿ ಭೂಜಗಳಿಂದ ಹೊಯ್ದಾಡಿದರು (ತೊರರಾ. ೪–೪–೨೩). **ಅಳಲೆಕಾಯಿಪಂಡಿತ** = ಎಲ್ಲ ಕಾಯಿಲೆಗಳಿಗೂ ಅಳಲೆಯ ಕಾಯನ್ನೇ ಕೊಡುವ ವೈದ್ಯ; ವೈದ್ಯದಲ್ಲಿ ಹೆಚ್ಚಾಗಿ ಅನುಭವವಿಲ್ಲದವನು. [ದೇ. ‖ ತಮಿ. ಅಜ್ಞಾನ ; **ತುಳು.** ಅಣಿಲೆ]

**ಅಣಿಲೆ$_2$** (ನಾ). ಕಾಯಕ್ಲೇಶ (?) : ಹಾಸುಗಳಿಲ್ಲದೊಡೆಂತು ಗೆ ಪಾಸಱೆಯೊಳ್ ಪಡುವೆ ದಂ[ದಿಂ]ಬುದೊಱೆವೆಯದೆಂತಭ್ಯಾಸಿಸುವೆಯಣಿಲೆಯಂ [ಪಾಠಾಂ. ಯಣಿಲೆಯಂ] ಮ[ಮು]ತ್ತೋಸರಿಸಲ್ಕೆಂತು ತಾಳ್ವೆ ರುದ್ರಾಕ್ಷಿಗಳಂ (ದಶಕು. ೮–೩೦). [?]

**ಅಣಿಲೆಗಾಲ್** (ನಾ). ಒಂದು ಕಾಲುವೆಯ ಹೆಸರು : ಅನ್ತೆ ಬನ್ದು ಅಣಿಲೆಗಾಲ ಪಡುವಣ ಪೇರೊಟ್ಟಿಯಿಂ (ಎಕ. III, ನಂಜನ. ೧೩೯–೨೫ ; 915). [ಅಣಿಲೆ$_1$ + ಕಾಲ್$_2$]

**ಅಣಿಲೆಯ** (ನಾ). ಒಬ್ಬನ ಹೆಸರು: ಅಣಿಲೆಯರಮಗನೆಲ್ಲಮ್ಮಲ್ಲ ಅಣ್ಣಮ್ಮರ್ನಱಿಯ[ಪಾಠಾಂ. ನಳಿಯೆ] ತೊಱುವನಿಕ್ಕಿಸಿ ಸಗ್ಗಿಯಾದಂ (ಎಕ. IX, ಹೊಸಕೋ. ೧೧೦–೬ ; 900). [ಅಣಿಲೆ$_1$ + ಅಯ್ಯ$_0$ (< ಅಯ್ಯ$_1$)]

**ಅಣಿವರಿ** (ಕ್ರಿ). ಕ್ರಮವಾಗಿ ನಡೆ ; ಸಾಲಾಗಿ ಹೋಗು : ಐದಿದರು ಮಿಗೆ ಮುಂಗುಡಿಯಲಣಿವರಿದೊಕ್ಕಲಿಕ್ಕುತ ಮಡದಿಯರು ಮಾಯಾಂಗನೆಯ ದಂಡಿಗೆಯ ಬಳಸಿನಲಿ (ಪ್ರಭುಲೀ. ೪–೨೭) ; (ಪ್ರಭುಲೀ. ೪–೪೯ ; ೨೨–೧೦ ; ೨೩–೩೭ ನೋ). [ಅಣಿ$_5$ + ಪರಿ$_1$]

**ಅಣವಿಣ** 'ಅಣಿವಿಣಿ' ನೋ.

**ಅಣಿವಿಣಿ**, ಅಣಿಮಣಿ, ಅಣಿಮಿಣಿ, ಅಣಿವಿಣ (ನಾ). ೧. ಬಿಕ್ಕಟ್ಟು ; ಅಡ್ಡಿ ; ತಡೆ ; ನಿರೋಧ (?) : ಪಾಱುವ ವಿಮಾನದಣಿವಿಣಿಗಾಱದೆ ಮೇಘಾಳಿದೇವರದನಂಬರದೊಳ್ ಕೀಱಿ ನಿಱಿಸಿದವೊಲತಿಜವಮಾಱದೆ ನಿಂದ ಪೊಲದೂರ್ಜಘನಘನಕತಳಂ (ಶಾಂತಿಪು. ೪–೬೧). **ಅಣಿಮಣಿ** : ೨. ಹಿಂದುಮುಂದು ನೋಡುವುದು (?) : ರಣಮುಖೋದ್ಗತ ವೀರ ಕಲಿಗುಣಮಣಿಯು ಮೃತವಿಡಿದಿನ್ನು ಸಾಳ್ಪಟ್ಟಣವ ದೂಳಿಸದಿರನು ರಾಮನು ಯೆಂದು ಯೋಚಿಸುತಾ ಅಣಿಮಣಿಯ ಮಾಡದಲೆ ಮತ್ತಾಕ್ಷಣದೊಳು (ಪಶುಭಾ. ೧೦–೪) ; ಗುಣಕೆ ಗುಣಮಣಿಯಾದ ಕಲಿ ಫಲ್ಗುಣಗೆ ಯಣಿಯಾರಂಬುಜಾಕ್ಷಿಯೆ . . . ಎಣಿಸಬೇಡವನಲ್ಲಿಯದರೊಳು ಅಣು[ಣಿ]ಮಣಿಯನರಿ ತಾನು ಸೂಚಿಪ ಗುಣಿಯು ಕಡು ಕಾತರಿಸನೆಂದಳು (ಜಿನಭಾ. ೨೯–೧೧). **ಅಣಿಮಿಣಿ** : ೨. 'ಅಣಿಮಿಣಿ ಹತ್ತು' ಪರಾ. **ಅಣಿವಿಣ** : ೧. ಮುಸುಱುವ ಪಱಮೆಗಳಣಿವಿಣಮುಸಿ [ಪಾಠಾಂ. ನುಸಿ, ಗುಸಿ]ರ್ಪೋಗದೆ ಮಾಣದೆಂದದೇಂ ಬಗೆದಳೊ ತನ್ನೆಸೆವೀಕ್ಷಣಚಂದ್ರಿಕೆಯಿಂದೊಸರ್ವಿಂದೂಪಳದ ಪೊಳೆವ ಕಲಶಮನಾಗಳ್ (ಲೀಲಾವ. ೧೧–೫೮). [?. / **ಮರಾ.** ಅಣೀಬಾಣೀ]

**ಅಣಿವಿಣಿಗೆಯ್** (ಕ್ರಿ). ಅಡ್ಡಿಮಾಡು (?) : ಅಣಿವಿಣಿಗೆಯ್ದಾ ಧರ್ಮಮನಣಿಯರಮಳಿದಂಗೆ ಪೆಱತು ಗತಿಯಿಲ್ಲಾ (ಎಕ. VII, ಶಿಕಾರಿ. ೧೫೩–೩೫ ; 1039). [ಅಣಿವಿಣಿ + ಗೆಯ್ (< ಕೆಯ್$_1$)]

**ಅಣಿವಿಣಿಹತ್ತು**, ಅಣಿಮಿಣಿಹತ್ತು (ಕ್ರಿ). (ದಕ-ಪ್ರಾದೇ) ಹಿಂದು ಮುಂದು ನೋಡು ; ಮೇಲೆ ಕೆಳಗೆ ನೋಡು ; ದೀರ್ಘ ವಿಚಾರ ಮಾಡು : ಯಾಕೆ ಅಣಿವಿಣಿ ಹತ್ತುತೀ, ಇಷ್ಟವಿದೆಯೋ ಇಲ್ಲವೋ ಕೊಡಲಿಕ್ಕೆ (ರೂಢಿ). **ಅಣಿಮಿಣಿಹತ್ತು** : ೨. ಯಾಕೆ ಮೇಲೂ ಕೆಳಗೂ ನೋಡುತಾ ಸುಮ್ಮನೆ ಅಣಿಮಿಣಿ ಹತ್ತುತೀಯೆ ? (ರೂಢಿ).

[ಅಣಿವಿಣಿ + ಹತ್ತು$_1$ (< ಪತ್ತು$_1$). / **ತುಳು.** ಅಣಾವುನಿ = ಮೇಲೆ ನೋಡು]

**ಅಣಿವಿತ್ತಿ** (ನಾ). ಅನುಕ್ರಮ ; ವಂಶಪಾರಂಪರ್ಯ (?) : ಮೂಲದ ಬಾಳು ಅಣಿವಿತ್ತಿಯ ಗದೆ (ಸೌಇಎ. ೧೯೩೨ ; ಉಡುಪಿ. ೩೧೮–೧೧; 1293).

[**ಪ್ರಾ.** ಅಣುವತ್ತಿ (< **ಸಂ.** ಅನುವೃತ್ತಿ)]

ಪ್ರಗತಗುಣಗಣನನರಿಬಲವಿಘಟನನಂ ಕಂಡನಣುವನಾ ರಾಘವನಂ (ಕವಿರಾ. ೨–೩೬); ಸತ್ಯವಾಕ್ಯ ಪೆರ್ಮ್ಮಾಡಿಯ ಕಲಿಯುಗಗದಣುವ ನಾಗತರನೊಳ್ ಇರ್ಪ್ಪಾಲಿಯೂರೊಡೆಯ ಇರುಗಮಯ್ಯನ ಮಗಂ (ಎಕ. IX, ಬೆಂಗಳೂ. ೭೯–೩; 870); ನಿಮ್ಮಣ್ಣನಪ್ಪಣುವನೆನಾನಪ್ಪೆನೆಂದು ಪೇೞ್ದುದು ಮಾಗಳ್ ಸಾಷ್ಟಾಂಗಮೆಱಗಿ ಪೊಡೆವಟ್ಟ ಭೀಮಸೇನನಂ ಪರಸಿ(ಪಂಪಭಾ. ೮–೩೩ ವ); ನುಂಗಿದನಣುವಂ ಭಾಸ್ಕರನಂ ಗಡ ಕಂಡಿಂದ್ರನಣುವನಂ ವಜ್ರದಿನಿಟ್ಟಂ ಗಡ (ಸಮುಪ. ೧೦–೧೪೬); ಮಣಿಮುದ್ರಿಕೆಯನಿತ್ತಣುವನ ಬೀಳ್ಕೊಡೆ ಮಣಿದು ಮಹೀಶರೆಲ್ಲರಿಗೆ (ಅಂಜಚ. ೧೪–೧೩); ಆ ವೇಳೆಯೊಳ್ ಶತ್ರುಹಂಗೆ ಬೆನ್ನೊಳೆ ಹೊಂಚುವ ಸಂಚುವೆತ್ತಣುವಂ ತನ್ನೊಡೆಯನಂ ಪಿಂದುೞಿಪಿ ತಾಂ ಮುಂಜರಿದು(ರಾಮಾಶ್ವ. ೯೭–೨೫). **ಅಣುಮ:** ರಾಮಂಗಣುಮನ ತೇಜದಿಂ ರಾಮಮಹೀವಲ್ಲಭಂಗೆ ತಿಪ್ಪಾಮಾತ್ಯಂ (ಎಕ. XI, ದಾವಣ. ೭೦–೨೧; 1275). **ಅಣುವಂತ:** ರಾಮಮುನಿಯುಮಣುವಂತರು[ಂ] ಮುಕ್ತಿಗೆ ಸಂದರ್ (ಚಾವುಂಉ. ೩೩೪).

[ಸಂ. ಹನುಮಾನ್]

**ಅಣುವಂತ** 'ಅಣುವ' ನೋ.

**ಅಣುವ್ರತ,** ಅಣುಬ್ರತ (ನಾ). [ಜೈನ] ಗೃಹಸ್ಥರು ಪಾಲಿಸಬೇಕಾದ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ಐದು ವ್ರತಗಳಲ್ಲಿ ಒಂದು: ತನ್ನಂ ತಾನೆ ಪೞಿದು ನಿಂದಿಸಿ ಪಾಪಕ್ಕಂಜಿ ಅಣುವ್ರತಂ ಮೊದಲಾಗೊಡೆಯ ಶ್ರಾವಕಬ್ರತಂಗಳಂ ಕೈಕೊಂಡಾಗಳ್ (ವಡ್ಡಾರಾ. ೧೧–೩೦). **ಅಣುಬ್ರತ:** ಕೊಲ್ಲದುದು ಪುಸಿಯದುದು ಕಳವಿಲ್ಲದುದುಂ ತ್ರಿಕರಣತ್ವದಿಂ ಪಾದರದೊಳ್ ಸಲ್ಲಮುದು ಕಾಂಕ್ಷೆಯೊಳ್ ತಱಿಸಲ್ಲದುದೆಂದಯ್ದಣುಬ್ರತಂ ಜಿನಮತದೊಳ್ (ಸುಕುಮಾ. ೫–೪೦). ☞ ಜೈನ ಗೃಹಸ್ಥರಿಗೆ ಅನ್ವಯಿಸುವ ಪರಿಮಿತರೂಪದಲ್ಲಿ ಈ ವ್ರತಗಳಿಗೆ ಅಣುವ್ರತಗಳೆಂದೂ, ಜೈನಯತಿಗಳಿಗೆ ಅನ್ವಯಿಸುವ ಸಮಗ್ರರೂಪದಲ್ಲಿ ಇವಕ್ಕೆ ಮಹಾವ್ರತಗಳೆಂದೂ ಹೆಸರು. 'ಮಹಾವ್ರತ' ಪರಾ. [ಅಣು + ವ್ರತ]

**ಅಣುವ್ರತಧಾರಿ** (ನಾ). ಅಣುವ್ರತಗಳನ್ನು ಕೈಕೊಂಡು ನಡಸುವವನು: ಶ್ರೀಸಮ್ಯಗ್ದರ್ಶನವಿಶುದ್ಧನುಮಣುವ್ರತಧಾರಿಯುಮಪ್ಪ ಶ್ರಾವಕಂ ಮಧ್ಯಮಪಾತ್ರಂ (ಆದಿಪು. ೧೦–೯ ವ).

[ಸಂ. ಅಣುವ್ರತಧಾರಿನ್]

**ಅಣುಶಕ್ತಿ** (ನಾ). ಪರಮಾಣುವನ್ನು ಭೇದಿಸುವುದರಿಂದ ಉತ್ಪನ್ನವಾಗುವ ಶಕ್ತಿ: ಇಂದು ಜೀವನಕ್ಕೇ ಮುಳುವಾದ ಅಣುಶಕ್ತಿ ನಾಳೆ ಭೂಮಿಯನ್ನೇ ನಂದನವನವಾಗಿಸಬಹುದು (ನವ್ಯಕಾ. ೨೨). 'ಪರಮಾಣು ಶಕ್ತಿ' ಪರಾ. [ಅಣು + ಶಕ್ತಿ]

**ಅಣೂತ್ತರೆ** (ನಾ). [ಜೈನ] ಲೋಕಾಕಾಶದ ತುದಿಯ ನೆಲೆಯಲ್ಲಿರುವ ಐದು "ವಿಮಾನ" ಗಳಲ್ಲಿ ಒಂದು: ಅಯ್ದಣೂತ್ತರೆಗಳೊಳ್ ಮಧ್ಯಮವರ್ತಿಯಪ್ಪ ಸರ್ವಾರ್ಥಸಿದ್ಧಿಯಹಮಿಂದ್ರರುಂ (ಶಾಂತಿಪು. ೧೨–೪೩ ವ); ಅಲ್ಲಿಂ ಮೇಗೆ ವಿಜಯ ವೈಜಯಂತ ಜಯಂತಾಪರಾಜಿತ ಸರ್ವಾರ್ಥಸಿದ್ಧಿಗಳೆಂಬ ಪಂಚಾಣೂತ್ತರೆಗಳಕ್ಕುಂ (ಆಜಿಪು. ೧೧–೨೯ ವ). ☞ "ತತ್ತ್ವಪ್ರ" ಮೊದಲಾದ ಜೈನಶಾಸ್ತ್ರ ಗ್ರಂಥಗಳಲ್ಲಿ ಇದು 'ಅನುತ್ತರೆ' ಎಂಬ ರೂಪದಲ್ಲಿ ದೊರೆಯುತ್ತದೆ. 'ಅನುತ್ತರೆ' ಪರಾ. [ಸಂ. ಅನುತ್ತರಾ]

**ಅಣೆ₁** (ಕ್ರಿ). ೧. ತಿವಿ; ಇರಿ; ಚುಚ್ಚು: ಮತ್ತಹಸ್ತಿಯನಣೆದು ತೋಱಿ ಕೊಟ್ಟಾಗಳ್ (ಪಂಪಭಾ. ೧೨–೮೩ ವ); ಕೊಟ್ಟಕ್ಕಣೆ[ಕೋಟ್ಟಳೆ?]ನಣೆದು ನೆಲಂ ಬಿರಿಯೆ ಕೆಲೆದು ಮಲೆದೊಲೆದಿದಿರೊಳ್ (ಅನಂಪು. ೪–೧೧೧); ಅಗಸಮುನಣೆವ ಕೋಡುಂಗಲ್ಲಿಂ ನೀೞ್ಪಿಂ ತಳೆದಾ ಬೆಟ್ಟದ ತಾೞ್ ಪುದಿದ ಬನಂಗಳಲ್ಲಿ ಬೀಡಂ ಬಿಟ್ಟಂ (ಕಬ್ಬಿಕಾ. ೨೩೭); ಏಱಿದ ಗಜಮನಂಕುಶದಿಂದಣೆ[ಣೆ]ಯಲಂತದಣೆಯರಮೆದ್ದು ಜಾತಿಸ್ಮರನಾಗಿ ಗಾಳಿಗೆ ಗಜಿ ಮೂಡಿದಂತೆ (ಪುಣ್ಯಾಸ್ರ. ೨–೩೭ ವ); ಮಿಱುಗುವ ದಾಡೆಯಿಂದಣೆದು ಪೆರ್ದರಿಯಂ ಕರದಿಂದಮೆತ್ತುತುಂ (ಕಾವ್ಯಸಾ. ೧೧೧೨). ೨. ಹೊಡೆ; ಅಪ್ಪಳಿಸು: ಭುಜದೊಳಣೆದುರದೊಳ್ ತೀದು (ಗಿರಿಕ. ೨–೧೦೫ ವ); ಪಣೆಯಂ ಪಣೆಯಿಂದೊಯ್ಯನಣೆದಣೆದು ತಣಿಯದೆ ಚಯ್ಯಾಡುವ ತನಯನೆನಗದೆಂದಾದಪನೊ (ಧರ್ಮನಾ. ೩–೧೨೦); ಎಚ್ಚ ಶರವನು ಗದೆಯಲಣೆದಿಡುಗಿಚ್ಚು ಹೊಕ್ಕಂದದಲಿ ರಥವನು ಬಿಚ್ಚಿ ಬಿಸುಟನು (ಕುವ್ಯಾದ್ರೋ. ೨–೭೬); ಸುರಕರಿಯ ಶಿರವಣೆದು ಬಿರಿಸಾದ ಬೆರಲಾಂತು ಮೆರೆವಮರಪತಿಯ ಭುಜವ (ದಿಲೀಚ. ೩–೫೮). ೩. ಮುಟ್ಟು; ಸೋಕು; ಸೇರು: "ಅಣೆ – ಅಂಗುಲಿಪ್ರಹರಣೇ ಜಲಪ್ರತಿಬಂಧನೇ (ಅಣೆಕಟ್ಟು) ಸ್ಪರ್ಶನೇ ಚ" (ಶಮಧಾ); ಮಣಿಪೀಠಮನಿಳಿದಾ ರಾವಣನಾ ಕ್ಷಣದೊಳು ತನ್ನ ಪುಷ್ಪಕಮಂ ಅಣೆದಡರ್ದೆಸೆದನಾದಿತ್ಯಬಿಂಬದೊಳು ಕಂಡಣೆಸಿದ ರಾಹುವಂದದಲಿ (ಅಂಜಚ. ೧೩–೧೧೦). ೪. ಆವರಿಸು; ವ್ಯಾಪಿಸು; ಮುತ್ತು: ಮಣಿದನಣುವ ಮಣಿಮಕುಟದ ರುಚಿಮಣಿಯಣೆಯಲೀರೆಂಟು ದಿಕ್ತಟಕೆ (ಅಂಜಚ. ೧೪–೧೦೭); ರಣವನೀಗಳೆ ಕಾಣಬಹುದೆಂಬಣಕಿಗರನೆಬ್ಬಿಸುವವೊಲು ಸುಳಿದಣೆದು ಹೊದಱಿದ್ದುದು ಸುಧಾದೀಧಿತಿಯ ಕರನಿಕರ (ಕುವ್ಯಾದ್ರೋ. ೧೭–೧೩); ಅಱಿವೆಂಬ ಬೆಳಗನಣೆದುದು ಮೋಹವೆಂಬ ಕಾರಿರುಳು (ಸೌಂದಪು. ೧೩–೨೫); ಭೋರೆಂದಣೆದು ದಂಬರದುದಿಯ ನಾನಾ ವಾದ್ಯನಿರ್ಘೋಷ (ತೊರರಾ. ೬–೨೯–೩೦); ಬೃಂಹಿತಂಗೆಯ್ದಂಗಡಿಗಳನಣೆದು ಪೊಯ್ದು ಮಾಮಸಕಂಮಸಗಿ ಕೋಲಾಹಲಮನೆಸಗಿ (ರಾಜಶೇ. ೬–೧೧ ವ). ೫. ಮಸೆ; ತಿಕ್ಕು: ಬಿದಿರಣೆವ ಚೀತ್ಕಾರದಿಂ ಪ್ರಳಯದ ಸಿಡಿಲುಗಳ ಬಳಗದಾಗರವೆನಿಸಿತಾ ವಿಪಿನ (ಸಾಳ್ವಭಾ. ೬–೬). ೬. ಗುಣಾಕಾರ ಮಾಡು; ಗುಣಿಸು: ಇಱಿ, ಅಣೆ, ಬಡಿ, ಮೋದು . . . ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೧೧); ಎಣಿಸಿದನು ಹಲವಂಗದಲಿ ಖಳನಣೆದಣೆದು ರಣಮುಖದ ಮಾರ್ಗದ ಗುಣಿತದಲಿ ರಿಪುಜಯವ ಕಾಣದೆ (ತೊರರಾ. ೬–೨೬–೧೦). ೭. ವಾದ್ಯಗಳನ್ನು ಬಾರಿಸು: ಕುರುರಾಜೋತ್ತಮನ ಹಿಂದೆ ಅಣೆವ ಭೇರಿಯ ರವಕೆ ಜಗ ತಲ್ಲಣಿಸಿ ದಿಕ್ತಟ ಬಿರಿಯೆ (ಕೋಗಯ. ೧೭–೪೩). ೮. ಸರಿಹೋಗು; ಉಚಿತವಾಗು (?): ಅಣೆಯದು ಚಕ್ರಿಯಾಪ್ತಿಗರೆಯ್ದಲೆಮ್ಮ ಪಟ್ಟಣದೊಳಹೊಗಿಸಬೇಡೆಂದು ಗುಣವಸಂತಕ ಮೊದಲಾದರ ಕಳುಹಿ ಪೂಗಣೆಯ ಹೊಕ್ಕನು ನಿಜಾಲಯವ (ಭರಚ. ೪೮–೧೧೨).

**ಅಣೆದಾಡು** = ತಿವಿದಾಡು: ಗೊಂದಣದಾನೆಯನಂದಣೆದಾಡುವ ಕುಂದಣಮಿಲ್ಲದ ವಾಜಿಯ ರಾಜಿಯ ಸಂದಣೆಯಿಂದಿಳಿದ (ಉದ್ಭದೇ. ೫–೧೪); ಸಲೆ ಮುದಂ ಪೆಚ್ಚಿ ತರುಲತೆಯನಣೆದಾಡಿ . . . ನಿಚ್ಚಮೆಳವೆಲರೆಂಬ ಸೊಕ್ಕಾನೆ ತಾನೆ ತನ್ನಿಚ್ಚೆಯಿಂ ತಿರುಗುತಿದೆ (ಜೈಮಿಭಾ. ೩–೨೪). **ಅಣೆದು ನೂಂಕು, ಅಣೆದು ಬಿಟ್ಟಕ್ಕು** = ಗುರಿಯನ್ನು ತೋರಿಸಿ ತಟ್ಟಿ ಮುಂದಕ್ಕೆ ಬಿಡು, — ನುಗ್ಗಿಸು: ಕಂಡಣೆದು ನೂಂಕಿ ಮದವೇತಂಡಮನಿದಿರಾದ ವಿಪುಳಕಂಠನನಿನಿಸಂ ಕೊಂಡಿರದೆ ಕೊಂದು ಗೆಲ್ಲಂಗೊಂಡಂ (ಶಾಂತಿಪು. ೫–೫೫); ಕುದುರೆಯ ತಟ್ಟಂ ಕಂಡಣೆದು ನೂಂಕಿ ಬಲ್ಮಾವಂತರ್ (ಕಬ್ಬಿಕಾ. ೨೮೧); ಪೂರ್ವಾಪರ ಪಾರಾವಾರಪತಿಗಳಿರ್ವರುಮೊರೊರ್ವರೊಳ್ ಗರ್ವದಿಂ ಹಸ್ತಿನಿಯುದ್ಧಕ್ಕೆಂದಣೆದು ಬಿಟ್ಟಕ್ಕೆ ಮೊಗಂ ಬೊಕ್ಕು (ಶಾಂತಿಪು. ೩–೧೯ ವ); ಶಚೀಸಂಯುಕ್ತನಾಗಿರ್ಪಿಭಮನಣೆದು ಬಿಟ್ಟಕ್ಕಲೆಂದಿರ್ದ (ಜಗವಿ. ೧೩–೬೬).

[ದೇ. ‖ ತಮಿ. ಅಣ್ಣೆ, ಅಣವು, ಅಣಿ = ಮುಟ್ಟು, ಸೋಕು, ಸಮೀಪಿಸು; **ಮಲ.** ಅಣಯುಕ, ಅಣುಕುಕ = ಮುಟ್ಟು, ಸೋಕು, ಸಮೀಪಿಸು]

**ಅಣುಕು$_3$** (ನಾ). ತುಣುಕು ; ಚೂರು (?) : ಪೊಡೆವ ಸಿಡಿಲ್ಗಳನೆಳೆಯೊಳ್ ಕೆಡೆದೇಟಿಿಂಟಣುಕು ನೆಗೆದು ನುರ್ಗಪ್ಪಿನೆಗಂ ಪೊಡೆದಂ ಗೋವಳಿಗೋಲಿಂ ಪೊಡೆಸೆಂಡಾಡುವವೊಲೇಂ ಬಲಸ್ಥನೊ ಕೃಷ್ಣಂ (ಅರ್ಧನೇ. ೮–೯). [? ಸಂ. ಅಣುಕ]

**ಅಣುಕು$_4$** (ನಾ). ಸಂಗೀತಶಾಸ್ತ್ರದಲ್ಲಿ ಒಂದು ಪಾರಿಭಾಷಿಕ ಶಬ್ದ : ಕಾಳಸಿ ಬೈಸಿಕೆ ಪಟ್ಟಕಾಂತಿ ಕೊಂಕಣುಕಸುಜಾಯಿ . . . ಪೆಲ್ಲಣೆ ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮಂ (ಜಗವಿ. ೫–೩); ಭಣಿತೆ ಗಮಕವನುಗುಳೆ ಗಮಕವರಿದಂ ತೊಡರೆ ಅಣುಕು ನಯದೊಳು ಮೊಳೆಯೆ ನಯವಿಂಪಿನೊಳಗಡರೆ (ಆನಾರ. ೧೮೨). [?]

**ಅಣುಕೇಳು** (ಕ್ರಿ). ಸಿಡಿದು ಏಳು; ಥಟ್ಟನೆ ಏಳು (?) : ಪಿಡಿದ ತುಂಬಿಯ ನಾರಿಯಚ್ಚ ಕಬ್ಬಿನ ಬಿಲ್ಲ ಬೆಡಗನಣುಕೆದ್ದಾರ್ದು (ಸೋಮಚ. ೨–೫೧); ಎಸೆವ ಜವ್ವನದ ಶಬರಿಯರು ಪದೆದುಲಿದು ಕುಸಿದು ತೆಗೆದಣುಕೆದ್ದು ಹರಿವ ಹುಲ್ಲೆಗಳನೆಸೆವುದ ಕಂಡನು (ಸೋಮಚ. ೩–೧೪); ಕಂಡು ನಂಟರು ನಲ್ಲರೈತಂದು ಕೇಳ್ ನಿನ್ನ ಗಂಡನಾ ಬಂದನೆನಲಣುಕೆದ್ದು [ಪಾಠಾಂ. ಬಂದೈದನೆನಲೆದ್ದು] ಸಂತಸದಿ (ಸೋಮಚ. ೪–೧೮); ಉಣಲುಣ ಹೆಣನಾಗುತ್ತಿಹ ಬದುಕಿಂಗಣುಕೆದ್ದತಿಮುದದಿಂ ಮುಂದಱಿಯದೆ (ಯೋಗಾಂವಿ. ೨–೯). [ಅಣುಕು$_3$ + ಏಳು$_1$ (< ಏೞ್$_1$)]

**ಅಣುಗ** ‘ಅಣುಂಗ’ ನೋ.

**ಅಣುಗಗಲಹ** (ನಾ). ಪ್ರಣಯಕಲಹ; ಪ್ರೀತಿಯ ಜಗಳ : ಪಕ್ಷಪಾತಂ ಹಂಸೆಗಳೊಳು ಕುಲದ ಬೇರ್ಗೆ ಕುಡುಗೋಲ್ಗೊಂಬುದುರದೆ ಮುಡಿವಾಳದೊಳ್ ಕೂರ್ಗೆಯ್ವುದಣುಗಗಲಹದೊಳಲ್ಲದಿಲ್ಲ (ಉದ್ಭದೇ. ೨–೧೬). [ಅಣುಗ + ಕಲಹ]

**ಅಣುಗಜೀವಿತ** ‘ಅಣುಂಗಜೀವಿತ’ ನೋ.

**ಅಣುಗದಮ್ಮ** (ನಾ). ಪ್ರೀತಿಪಾತ್ರನಾದ ತಮ್ಮ; ಅಚ್ಚುಮೆಚ್ಚಿನ ತಮ್ಮ : ಎನ್ನಣುಗದಮ್ಮನಿಲ್ಲದೆ ಬಿನ್ನನೆ ಸಾಮ್ರಾಜ್ಯಮಿನಿತುಮಾದೆಱಕ ಮುಮತ್ಯುನ್ನತಿಯಲ್ತು (ಆದಿಪು. ೧೪–೬೨); ಎನ್ನಬಲೆಂತು ಪೋಕುಮೆಂದಡಿಗಡಿಗಟ್ಟಿ ತನ್ನಣುಗದಮ್ಮನನೀಕ್ಷಿಸಿದಂ ಸುಯೋಧನಂ (ಗದಾಯು. ೫–೪); ವಸುಧೇಶನಣುಗದಮ್ಮಂ ವಸುದೇವಂ ಧರೆಗೆ ಕಣ್ಣುಮುಳ್ಳಾಗಿರ್ದಂ (ಅರ್ಧನೇ. ೪–೧೩೧); ಸಾವಂತಮನ್ನೆಯರಂ ಬೞಿಯಟ್ಟಿ ಅಣುಗದಮ್ಮನಂ ಲಕ್ಷ್ಮಣನಂ ತಕ್ಕಂತಿರೆ ಕರೆದು ತರ್ಪುದೆಂದು ಕಳಿಪಿದಂ (ರಾಮಾಶ್ವ. ೧೧–೪). [ಅಣುಗ + ತಮ್ಮ]

**ಅಣುಗನಿಭ** (ನಾ). ಮಗನಿಗೆ ಸಮಾನನಾದವನು; ಮಗನಂಥವನು : ಜಿನಮತವೇದವನಧಿಪಾರಗನು ಮಾದೇವಿಯಣುಗನಿಭನು ಪಂಡಿತಾಖ್ಯನ ಪಾದಯುಗಕೆ ನಮಿಸುವೆನು (ಅಂಜಚ. ೧–೭೩). [ಅಣುಗ + ನಿಭ]

**ಅಣುಗಮಗ** (ನಾ). ಪ್ರೀತಿಪಾತ್ರನಾದ ಮಗ; ಅಚ್ಚುಮೆಚ್ಚಿನ ಮಗ: ಎನಗೀ ಮಿಾಂಗುಲಿಗನ ಮೋಗನಿಮಿತ್ತಂ ಪ್ರೇಮಮಣುಗಮಗನೊಳ ಮೊಲ್ವಂಗನೆಯೊಳಮಾಗದುದಾಯ್ತು (ಅರ್ಧನೇ. ೪–೪). ℙ ಅಣುಗಮಕ್ಕಳ್ (ಬಹುವ). “ಪ್ರೀತಿಯ ಪ್ರಜೆಗಳು” (ಪಾರಸಿ. ಕೋಶ) : ಯುದ್ಧಂ ಮುರಿದುದನ್ ಶ್ರೀ ಕ್ಷಯಾರ್ಷನ್ ಕಂಡು, ತನ್ನಣುಗ ಮಕ್ಕಳ್ಗೆನೊಂದು (ಪಾರಸಿ. ೧೮–೧೨). [ಅಣುಗ + ಮಗ]

**ಅಣುಗಮಯ್ದುನ** (ನಾ). ಪ್ರೀತಿಪಾತ್ರನಾದ ಮೈದುನ: ಒಂದಕ್ಷೋಹಿಣೀಬಲಂಬೆರಸುಮಯ್ವತ್ತು ಸಾಸಿರ ಮದದಾನೆವೆರಸು ನಿಂದಂ ಸುಯೋಧನನಣುಗಮಯ್ದುನಂ ಸಿಂಧುದೇಶಾಧೀಶ್ವರಂ ಜಯದ್ರಥಂ (ಪಂಪಭಾ. ೧೦–೫೭ ವ). [ಅಣುಗ + ಮಯ್ದುನ]

**ಅಣುಗಾಳ್** (ನಾ). ಮೆಚ್ಚಿನ ಸೇವಕ; ಪ್ರೀತಿಪಾತ್ರನಾದ ಬಂಟ: ಸೂಳೆಯಂತೆ ಕೞಿವುೞಿವನಱಿದುಂ ರಸವಾದಿಯಂತೆ ಕಟ್ಟಯುಂ ಪೆರ್ಜೋಡೆಯಂತೆ ಸುಣ್ಣತಂವೇೞ್ದುಮಣುಗಾಳಂತೆ ದಾಯಂಬಡೆದು[ಂ] (ಪಂಪಭಾ. ೬–೭೨ ವ); ಮಹಾಭಾರತ ಸಮರಸಾಗರ ಸಮುತ್ತರಣಪರಿಣತಾಂತಃಕರಣ ಪರಿಣತಕರ್ಣಧಾರನುಮೆನಿಸಿದ ತನ್ನಣುಗಾಳಪ್ಪ ಕರ್ಣನ ಸಾವಿನೊಳಂ (ಗದಾಯು. ೨–೧೦ ವ); ಅಣುಗಾಳ್ಗಾಯ್ಯರ್ದ ಶೌರ್ಯ್ಯದಾಳ್ವಿಜಯದಾಳ್ಚಾಳುಕ್ಯರಾಜ್ಯಕ್ಕೆ (ಎಕ. VII, ಶಿಕಾರಿ. ೧೩೬–೧೯; 1068). [ಅಣುಗ + ಆಳ್$_2$]

**ಅಣುಗಿ** ‘ಅಣುಂಗಿ’ ನೋ.

**ಅಣುಗಿಱ** (ಕ್ರಿ). ಅತ್ಯಂತ ಸಮಿಾಪಕ್ಕೆ ಬರು. ‘ಅಣುಗಿಱವೊಯ್’ ಪರಾ. [ಅಣುಗು (< ಅಣುಂಗು) ? + –ಇಱ$_3$]

**ಅಣುಗಿಱವೊಯ್** (ಕ್ರಿ). ಅತ್ಯಂತ ಸಮಿಾಪಕ್ಕೆ ಬಂದು ಹೊಡೆ; “ಹತ್ತಿರ ತಿವಿದು ಹೊಡೆ” (ಪಂಪಭಾ. ಕೋಶ); ಮುಳಿದು ತಳಮಳಿಸಿ ತಳರದೆ ತೊಳಗುವ ಕರವಾಳನುರ್ಚಿ ಮೆಯ್ವೆರ್ಚಿ ಪೊದೞ್ದಳವಮರೆ ಪಿಡಿದು ರಥದಿಂದಿಳೆಗಿೞಿದವನವನಿಪತಿಯನಣುಗಿಱವೊಯ್ದಂ [ಪಾಠಾಂ. ನಣೆದುಱಿ ಪೊಯ್ದಂ] (ಪಂಪಭಾ. ೧೩–೪೭). [ಅಣುಗಿಱ + ಪೊಯ್$_1$]

**ಅಣುಗು** ‘ಅಣುಂಗು’ ನೋ.

**ಅಣುಗುಂಡು** (ನಾ). = ಅಣುಬಾಂಬು : ಅಣುಗುಂಡಿನಂತೆ ಪರಿಣಮಿಸಿತು ಈ ಮಾತು ನನ್ನ ಹೃದಯಕ್ಕೆ (ಪತಿ. ೯೪). [ಅಣು + ಗುಂಡು$_1$]

**ಅಣುಗುಜೀವಿತ** ‘ಅಣುಂಗಜೀವಿತ’ ನೋ.

**ಅಣುಗೂಸು** (ನಾ). ಎಳೆಯ ಮಗು; ತುಂಬ ಚಿಕ್ಕ ಮಗು: ಭಿಲ್ಲನಕ್ಕೆ ಅಣುಗೂಸೈಸೆ? ಹಾಲುಹಲ್ಲುದುರಿಲ್ಲ (ಹೆಬ್ಬೆರ. ೩೩–೧೫). [ಅಣು + ಕೂಸು]

**ಅಣುಗೆ** ‘ಅಣುಂಗಿ’ ನೋ.

**ಅಣುಚಟನ** (ನಾ). ಕೆಂಪಗೆ ಕಾಯ್ದ ಕಬ್ಬಿಣ ಮೊದಲಾದವನ್ನು ಚಮ್ಮಟಿಗೆಯಿಂದ ಬಡಿಯುವಾಗ ಕಿಡಿಗಳು ಚಟಚಟನೆ ಹೊರಸೂಸುವುದು : ಅಣುಚಟನಮೆಂಬುದು ತಪ್ತಾಯಃಪಿಂಡಾದಿಗಳ ನಯೋಘನಾದಿಗಳಿಂ ಪೊಯ್ವಲ್ಲಿ ಪುಟ್ಟಿದ ವಿಸ್ಫುಲಿಂಗನಿರ್ಗಮಂ (ತಸೂವೃ. ೧೯೯). [ಸಂ. (ಅಣು + ಚಟನ)]

**ಅಣುಜೀವಿ** (ನಾ). ಅತ್ಯಂತ ಸೂಕ್ಷ್ಮವಾದ ಜೀವಿ : ಕೆಲವು ಅಣುಜೀವಿಗಳು ಬಹಳ ಅಪಾಯಕರವಾಗಿವೆ (ಮಾನಸಾ. ೭); ನಮ್ಮ ಕಣ್ಣಿಗೆ ಕಾಣದೆ ನಮ್ಮ ಸುತ್ತಲೂ ಲೆಕ್ಕವಿಲ್ಲದಷ್ಟು ಅಣುಜೀವಿಗಳು ಆವರಿಸಿಕೊಂಡಿವೆ (ಸಸ್ಯಶಾ. ೧೩೮). [ಅಣು + ಜೀವಿ]

**ಅಣುಪು** ‘ಅಣ್ಪು’ ನೋ.

**ಅಣುಪ್ರಾಣಿ** (ನಾ). ಅಣುಜೀವಿ ; “ಸೂಕ್ಷ್ಮತಮ ಪ್ರಾಣಿ; ಅಣುಪ್ರಾಣಿ” (Animalcule. ಇಂಕನಿ). [ಅಣು + ಪ್ರಾಣಿ]

**ಅಣುಬಾಂಬು** (ನಾ). ಪರಮಾಣುಶಕ್ತಿಯಿಂದ ಸಿಡಿಸುವ ಬಾಂಬು : ಅಣುಬಾಂಬಿನ ತಯಾರಿಕೆಗೆ ಐನ್‌ಸ್ಟೈನನ ಸಂಶೋಧನೆಗಳೇ ಮೂಲಕಾರಣವೆನ್ನಬಹುದು (ರೂಢಿ). [ಅಣು + ಬಾಂಬು]

**ಅಣುಬ್ರತ** ‘ಅಣುವ್ರತ’ ನೋ.

**ಅಣುಮ** ‘ಅಣುವ’ ನೋ.

**ಅಣುಮಣಿ** ‘ಅಣಿವಿಣಿ’ ನೋ.

**ಅಣುಮಪರಾಕ್ರಮ** (ನಾ). ಆಂಜನೇಯನಷ್ಟು ಪರಾಕ್ರಮವುಳ್ಳವನು; ಒಂದು ಬಿರುದು : ಅಣಿಚೆಲ್ವನಣುಮಪರಾಕ್ರಮನ್ವೀರ ಮಹಾಮೇರುಪೊಕ್ಕಿಱಿವೊರದೊಗರಾಜನ್ (ಎಕ. X, ಶ್ರೀನಿವಾ. ೬–೪ ; 780). [ಅಣುಮ (< ಅಣುವ) + ಪರಾಕ್ರಮ]

**ಅಣುವ, ಅಣುಮ, ಅಣುವಂತ** (ನಾ). ಹನುಮಂತ; ಆಂಜನೇಯ:

**ಅಣಿಹಗ್ಗ** (ನಾ). ನೆಯ್ಗೆಯ ಮಗ್ಗದ ಹಾಸನ್ನು ಜೋಡಿಸಿ ಮೇಲಕ್ಕೆ ತೂಗುಕಟ್ಟಿರುವ ಹಗ್ಗ (ಸ್ಯಾಂಡರ್). [ಅಣ್ಣಿ₂ + ಹಗ್ಗ]

**ಅಣಿಹಚ್ಚು** (ಕ್ರಿ). "ಆರಂಭಮಾಡು" (ಪ್ರಭಣ್ಣ). [ಅಣ್ಣಿ₂ + ಹಚ್ಚು₁ (< ಪತ್ತಿಸು₁)]

**ಅಣೀಯ** (ನಾ). ತುಂಬ ಸಣ್ಣದು. [ಸಂ. ಅಣೀಯಸ್]

**ಅಣು** (ನಾ). ೧. ಅತ್ಯಂತ ಸಣ್ಣದಾದ, ಸೂಕ್ಷ್ಮವಾದ ವಸ್ತು. ೨. ವಸ್ತುವಿನ ಅಥವಾ ಕಾಲದ ಅತ್ಯಂತ ಸೂಕ್ಷ್ಮಾಂಶ. ೩. ಶಿವ. ೪. ಒಂದು ಬಗೆಯ ಧಾನ್ಯ; ಬತ್ತದಲ್ಲಿ ಸಣ್ಣನಾದ ಒಂದು ಜಾತಿ: "ಅತಿಸೂಕ್ಷ್ಮಂ ಬಹುಧಾನ್ಯಮೆಂಬಿವಣುವಕ್ಕುಂ" (ನಾನಾರ. ೧೩೩); "ನೆಲ್ಲಲ್ಲಿಯುಂ ಅಣುವೆಂಬುದುಂ"(ಹಲಾಯು. ೧೩೬–೨೮). ೫. [ವಿಜ್ಞಾ] ವಿಭಜಿಸಲು ಸಾಧ್ಯವಲ್ಲದಷ್ಟು ಸೂಕ್ಷ್ಮ ಪರಿಮಾಣದ ಕಣ. ℙ Atom ಎಂಬ ಪಾರಿಭಾಷಿಕ ಶಬ್ದವನ್ನು ಕೆಲವರು "ಅಣು" ಎಂದೂ, ಕೆಲವರು "ಪರಮಾಣು" ಎಂದೂ ಭಾಷಾಂತರಿಸುತ್ತಾರೆ. 'ಪರಮಾಣು' ಪರಾ. [ಸಂ.]

**ಅಣುಂಕು** (ಕ್ರಿ). ಕುಗ್ಗಿಸು; ದೈನ್ಯಪಡಿಸು; ಹಾಳುಮಾಡು (ಕಿ). [~ ತೆಲು. ಅಣುಚು]

**ಅಣುಂಗ**, ಅಣುಗ (ನಾ). ೧. ಪ್ರೀತಿಪಾತ್ರನಾದವನು; ಅಚ್ಚುಮೆಚ್ಚಿನವನು.'ಅಣುಂಗಜೀವಿತ' ಪರಾ. **ಅಣುಗ₁**: ೧. ಅವರೊಳ್ ಕಿಱಿಯಾತನೆ ನೃಪತಿಗಂ ಪರಿವಾರಕ್ಕಮಣುಗನಾಗಿ ಬಳೆಯೆ (ಆದಿಪು. ೨–೩೭ ವ); ಅಣುಗ ಕೇಳ್ಕೆ ನಿಮ್ಮವರ ಮಾರ್ಗಣಗಳುಬ್ಬರಿಸಿದುವು (ತೊರರಾ. ೧–೧೧–೧೦); ಅಣುಗ ಕೇಳ್ ಮುನ್ನೀಶನನು ಭಜಿಸಿರ್ದ ಹರಿಯಿರದೆ ರಣಕೆ ನಿಂದತಿಘೋರತರದಿಂ ಸೆಣಸಿ (ಕೋಗಯ. ೧೦–೮೮). ೨. ಮಗ; ಪುತ್ರ: "ತನೂಜಾಹ್ವಯದೊಳೆಯಣುಗಂ" (ಕರ್ಣಾನಿ. ೪೮); ಆರಸಿಯರ್ಕಳುಮಣುಗರ್ಕಳುಂ [ಪಾಠಾಂ. ಮುನಿಬರ್ ಮಕ್ಕಳುಂ] ಬೆರಸು (ವಡ್ಡಾರಾ. ೧೩೬–೨೦); ಅರಸಿಯರನಣುಗರಂ ಬೇಟ್ಪುರುಮಂ ಮೊನೆಗಾಱರಂ ಪ್ರಗೀತರನಿಂಬಾಗಿರೆ ಚೌಪಳಿಗೆಗಳೊಳ್ ಕುಳ್ಳಿರಿಸಿದರ್ (ಪಂಪಭಾ. ೨–೬೭); ಇಭಕುಂಭದ ಮೇಲೆ ಬರ್ಪನಂ ಪರಿದಿದಿರ್ಗೊಂಡಣುಗನನದೆಂತು ನಿವಳಿಸಿದಪನೋ (ಅನಂಪು. ೧೨–೫೩); ಹರನಣುಗ ಸೌಂದರನ ಮೇಲೆ ಧವಳಾಕ್ಷತೆಯ ಸುರಿವಂತೆ (ಸೌಂದಪು. ೮–೩); ದಪ್ಪಗ ನಣುಗನ ಬಲದ ಮಸ್ತಕದ ಮೇಲಪ್ಪಳಿಸಿದ (ಮೋಹತ. ೧೯–೪೪); (ಸಿದ್ಧರಾ. ೨–೪೫; ಸಾನಂಚ. ೪–೧ ರ; ಪದ್ಮರಾ. ೩–೩೪; ಸೌಂದಪು. ೨–೧೯; ಭಾವಚಿಂ. ೪–೮; ಕಂಸವಿ. ೪–೧೦೨; ಅಪ್ರತಿ. ೫೩–೫ ನೋ). ೩. ಅಚ್ಚುಮೆಚ್ಚಿನ ಭಕ್ತ: ಅಕ್ಷರಜ್ಞಾನಮುಂಟದನ್ನೆದೆ ಮಾಱುವೆಂ ತ್ರಕ್ಷ್ಯನಣುಗರ್ಗಾದ ಹೊಂಗಳಂ ಬೀಱುವೆಂ (ಬಸರ. ೫–೧೨); ಕೈಲಾಸವೇ ತವರ್ಮನೆಯೆಂದು ನಂಬುವಳು ಶೂಲಿಯಣುಗರ್ ಸೋದರಂಗಳೆಂದುಬ್ಬುವಳು (ಕಾರಿರ. ೨೮೨). ೪. ಒಬ್ಬನ ಹೆಸರು: ರಾಚನ ಮಗನಣುಗನ್ ಚಿಳಿಬರಸು ಮಾಡಿಸಿದೊನ್ (ಸೌಇಇ. IX–i, ೨೨–೧೪; 923).

[ದೇ. ‖ ತಮಿ. ಅಣುಕ್ಕನ್ = ಹತ್ತಿರದವನು, ಶಿಷ್ಯ; ತೆಲು. ಅನುಂಗು, ಅನುಗು = ಪ್ರಿಯ, ಪ್ರೀತಿಪಾತ್ರ]

**ಅಣುಂಗಜೀವಿತ**, ಅಣುಗಜ್ಞೀವಿತ, ಅಣುಗುಜೀವಿತ (ನಾ). ಪ್ರೀತಿಪಾತ್ರರಿಗಾಗಿ ಬಿಟ್ಟ ಕೊಡಿಗೆ; ಒಲುಮೆಯ ಕೊಡಿಗೆ: [ಶ್ರೀ]ಮತ್ ತೈಲಪರಸ[ರ್] ××× [ತರ್ದ್ದ]ವಾಡಿ [ಸಾ]ಸಿರಮುಮನಣುಂಗಜೀವಿತ ಮಾಳುತ್ತ (ಸೌಇಇ. XI–i, ೪೦–೬; 965). **ಅಣುಗಜೀವಿತ**: ಶ್ರೀಮತ್ ಮಾರಸಿಂಘ ಪೆರ್ಮ್ಮಾಡಿ ಪುರಿಗೆಱೆ ಮೂನೂಱು ಬೆಳ್ವಲ ಮೂನೂಱುಮನಣುಗಜೀವಿತಮಾಗಾ[ಳು]ತ್ತಿರೆ (ಸೌಇಇ. XI–i, ೪೩–೧೦; 970); ಎಱಡೆಱುನೂಱಱ ಸುಂಕಮುಮನಣುಗಜೀವಿತವಾಳುತ್ತಿರೆ (ಸೌಇಇ. XI–i, ೫೦–೧೪; 1005); ಮೋಜಂಗೆಱೆ ಮೊದಲಾಗಾಱುಂ ಬಾಡಮುಮನಣುಗಜೀವಿತವಾಗಿ ತ್ರಿಭೋಗಾಭ್ಯನ್ತರಸಿದ್ಧಿಯಿನಾಳುತ್ತಂ (ಸೌಇಇ. IX–i, ೧೧೪–೧೫; 1045). **ಅಣುಗುಜೀವಿತ**: ಪಲವುಂ ಬಾಡಂಗಳಂ ಕುತ್ತುಂ ಬಿತ್ತಿಯಣುಗುಜೀವಿತದಿನಾಳುತ್ತವಿರೆ (ಎಇ. XVI, ೮೩–೬; 1067). [ಅಣುಂಗ + ಜೀವಿತ]

**ಅಣುಂಗಿ**, ಅಣುಗಿ, ಅಣುಗೆ (ನಾ). ೧. ಮಗಳು: ಸತ್ತಿಗನಣುಂಗಿ ರೂಪ ವಿ[ಳಾಸೆ]ಯತ್ಯುದಾರ ಸಾ[ಳ]ಣಿ (ಸೌಇಇ. XI–i, ೬೧–೩೪; 1024); ಅಭಿನವಸರಸ್ವ[ತಿ] ಶ್ರೀಮದಾಹವಮಲ್ಲದೇವರು[ರ]ಣುಂಗಿ ಶ್ರೀಮದ್ಭುವನೈಕಮಲ್ಲದೇವರ ತಂಗೆ ಶ್ರೀಮತ್ ಸುಗ್ಗಲ ದೇವಿಯರು (ಸೌಇಇ. XI–i, ೧೧೭–೧೨; 1076). **ಅಣುಗಿ**: ೧. ಬಾಚಿಯಣುಗಿ ಕುನ್ದಲದೇವೀ (ಎಇ. XV, ೩೩೧–೧೨; 1028); ಲಕ್ಷ್ಮೀನೊಳಂಬನಣುಗಿ ಉಚಿತ [ವೆಡಂ]ಗಿ (ಸೌಇಇ. IX–i, ೯೧–೧೭; 1036); ಆ ಧನಿಕನಣುಗಿಯಾ ಪುಣ್ಯಾಧಿಕೆ ಪೆಂಪೆಸೆವ ಪೆಸರ ಹೇಮಪ್ರಭೆ (ದಶಕು. ೪–೫೬); ಕುಳಿರ್ವೆಟ್ಟನಣುಗಿಯಾಣ್ಮನು ಕುಂಟಣಿಗನಾಗಿ ತನಗಿಂತು ನಡಸುವನುವ ತಿಳಿಹುವಂದದೊಳಿಡುವ ದಟ್ಟಡಿಗಳೊಪ್ಪಿ (ಸೌಂದಪು. ೩–೭); ಇಂಗೋಲನ ತಾಯಿಗಿಂಗದಿರನ ತಂಗಿಗಿಂಗಡಲಣುಗಿಗಿಂದಿರೆಗೆ (ಹದಿಬ. ೨–೨). **ಅಣುಗೆ**: ೧. ಶ್ರೀಪಾಲ ನರನಾಥನನು ತನ್ನಣುಗೆ ಜಯಾವತಿ ಸಹಿತ ತತ್ಪುರವೊಕ್ಕು (ಶ್ರೀಪಾಲ. ೧೩–೧); ವರ ಜಂಗಮಕೆ ಮಾನಕಂಜನಣುಗೆಯ ಮುಡಿಯನರಿದಿತ್ತು (ಚೆಬಪು. ೫೫–೪೧); ಅನಿಲಕೇತು ನೃಪನವಳ ನುಡಿಗೇಳ್ದಣುಗೆ ನೀನಘಟಿತದ ವರನನುನ್ನಿಸಿದೆ (ಜೈಮಿಭಾ. ೯–೬). ೨. ಪ್ರೀತಿಗೆ ಪಾತ್ರಳಾದವಳು; ಸಖಿ; ಕೆಳದಿ: ವಿರಾಟನ ಮಹಾದೇವಿಗಾವಗಮಣುಗೆಯಾಗಿ ಪಾಂಚಾಳಿಯಿರ್ದಳ್ (ಪಂಪಭಾ. ೮–೫೭ ವ).

[ಅಣುಂಗ + –ಇ₂. / ತಮಿ. ಅಣುಕ್ಕಿ]

**ಅಣುಂಗು**, ಅಣುಗು (ನಾ). ಪ್ರೀತಿ; ಒಲುಮೆ: ಶ್ರೀಮತ್ ಕನ್ನಯ್ಯ ಆಡನೂರನಭ್ಯನ್ತರಸಿದ್ಧಿಯಾಗೆ ಏಳುಂ ಗೌಡಳುಂ ಸಾಯಿರದ ಕೊಮರ ಗದ್ಯಾನಮುಮನಣುಂಗಿನೊಳಾಳುತ್ತಿರೆ (ಎಕ. XI, ಹೊಳಲ್ಕೆ. ೩೦–೬; 964). **ಅಣುಗು**: ಎಂದಿಂತು ತಮ್ಮತಮ್ಮಣುಗಿಂದಂ ಪೆಸರಿಟ್ಟು ಬುಧಸಮೂಹಮಿದಂ ಪೇೞೆಂದೊಡೆ (ಆದಿಪು. ೧–೩೪); ಅಣುಗಿನೊಳೆ ರಾಜಚೂಡಾಮಣಿ ಮಾರ್ಗ್ಗಡೆ ಮಲ್ಲನೀಯೆ (ಎಕ. II, ೧೩೪–೫೬; 982); ಅಣುಗಿನ ಕೆಳದಿಯೆನಾಂ ಸದ್ಗುಣಿಯೆನಿಸಿದ ನಿಮ್ಮ ರಾಜಪತ್ನಿಯ ನಾರಾಯಣದತ್ತೆಯೆಂಬೆಂ (ಧರ್ಮಾಮೃ. ೪–೧೯೬); ನಿನ್ನಣುಗಿನ ಮಗನಂ ನೀನೆಂತು ಕಡಿಕಡಿದು ತಿಂದೆ (ಪುಣ್ಯಾಸ್ರ. ೬–೬೩ ವ); ಹುಟ್ಟಿದಣುಗು ಹುಟ್ಟುವ ಬಗೆವಡೆದಿಹ ದಿಟ್ಟಿಗಳೊಳಗೆ (ಉದ್ಭದೇ. ೪–೧೭).

**ಅಣುಗಿನವರ್** (ಬಹುವ) = ಪ್ರೀತಿಪಾತ್ರರು; ಮೆಚ್ಚಿನವರು: ಜಗಧೀಶಂ ನೋೞ್ಪ ಕಣ್ಗಂ ನುಡಿವ ದನಿಗಮಿಂಬಾಗಿ ಕುಳ್ಳಿರ್ದರಂದೋಳಿಗಳಿಂ... ನಗೆಕಾಱರ್ ವಾದ್ಯಕರ್ ಚಿತ್ರಕನಣುಗಿನವರ್ ಸೂಳೆವಾಳರ್ ಪಯಾಳರ್ (ಅನಂಪು. ೨–೨೬). [< ಅಣುಂಗ + –ಉ₂]

**ಅಣುಕು₁** (ಕ್ರಿ). ಸಮೀಪಿಸು; ಆಕ್ರಮಿಸು: ಕೆಣಕಿದವು ಕರಿಘಟೆಗಳೊಂದೆಸೆಯಣುಕಿದವು ಹಯರಥವದೊಂದೆಸೆ ಕಣೆಗೆದಱೆ ಕಾಲಾಳದೊಂದೆಸೆ ಮುಸುಕಿತರ್ಜುನನ (ಕುವ್ಯಾಭೀ. ೮–೪೯).

[ದೇ. ‖ ಮಲ. ಅಣ್ಯೆಕು = ಸಮೀಪಿಸು; ತುಳು. ಅಣೆಪುನಿ]

**ಅಣುಕು₂** (ನಾ). ಒಂದು ಬಗೆಯ ಛತ್ರಿ: ಕೊಡೆ ಹೀಲಿದಳೆಯಣುಕುಗಳ ನಡುವೆ ಮೆಱೆವುತುಂ ನುಡಿವ ಕವಿ ಗಮಕಿ ವಾಗ್ಮಿಗಳನುಪಚರಿಸುತುಂ (ನಂಬರ. ೩–೬೩); ತಳಿತ ಬೆಳುಗೊಡೆಯ ತುಱುಗಿದ ಹೀಲಿದಳೆಯ ಮುಂಡಳಿಸಿದಣುಕುಗಳ ನೆಳಲೊಳು ನಡೆವ ಶತರಥಂಗಳ ಮುಂದೆ (ಸಿದ್ಧರಾ. ೩–೨೦). [ದೇ. ‖ ತಮಿ. ಅಣುಕ್ಕನ್ = ಕೊಡೆ]

**ಅಣೆ₂** (ಕ್ರಿ). ಆರಿಹೋಗು ; ನಂದಿಹೋಗು (ಕ). [← ತಮಿ. ಅಣೈ]

**ಅಣೆ₃** (ನಾ). ೧. ನದಿ, ಹಳ್ಳ ಮೊದಲಾದವುಗಳ ಪ್ರವಾಹವನ್ನು ತಡೆದು ಜಲಾಶಯವನ್ನು ನಿರ್ಮಿಸಲು ಹಾಕಿರುವ ಅಡ್ಡಗಟ್ಟೆ ; ಅಣೆಕಟ್ಟು: "ಅಣಿ–ಅಂಗುಲಿ ಪ್ರಹರಣೇ ಜಲಪ್ರತಿ ಬಂಧನೇ (ಅಣೆಕಟ್ಟು) ಸ್ಪರ್ಶನೇ ಚ" (ಶಮುಧಾ) ; ಬ್ರಹ್ಮಪುರಿಯಾಗಿ ಬಿಟ್ಟ ಗದ್ದೆ ಚನ್ನಗವುಡಿಯ ಕಲೆಯನ ಕೆಱೆಯ ಹಿಂದೆ ಆಣೆಯೊಳಗೆ ಕೊಳಗ ಹತ್ತು (ಎಕ. XVI, ಚಿಕ್ಕನಾ. ೬೦–೨೨ ; 1235) ; ಪಾಲಾಜ ಹಳದಲಿ ಆರಳಿಯ ಆಣೆ ಯೆಂಬುದು ಅನಾದಿಕಾಲ ತೊಡಗಿ ಒಡದು ನೆಲ ಸರಿತವಾಗಿ ಹಾಳಾಗಿ (ಎಕ. X, ಮುಳಬಾ. ೭–೫ ; 1416) ; ಚತುಸ್ಸೀಮೆಯೊಳಗಾದ ಕೆಱೆ ಕುಂಟೆ ಏತ ಗುಯ್ಯಲು ಗದೆ ಬೆದ್ದಲು ಅಣೆ[ಣೆ] ಅಚ್ಚುಕಟ್ಟು ಸಹವಾಗಿ . . . ಧಾರೆಯನೆಱದು ಸಮರ್ಪಿಸಿದೆವಾಗಿ (ಸೌಇಇ. IX–ii, ೪೭೪–೧೭ ; 1497) ; ಚತುಃಸೀಮೆ ಒಳಗುಳ್ಳ ಗದ್ದೆ ಬೆದ್ದಲು ತೋಟ ತುಡಿಕೆ ಅಡು ಮನೆ ಅಣೆ ಅಚ್ಚುಕಟ್ಟು ಕಾಡಾರಂಭ ನೀರಾರಂಭ (ಎಕ. XIV, ಮಂಡ್ಯ. ೧೫೫–೪೫ ; 1622) ; ಯಿ ಗ್ರಾಮುಕ್ಕೆ ಸಲುವಂಥ ಗದ್ದೆ ಬೆದ್ದಲು ತೋಟ ತುಡಿಕೆ ಅಣೆ ಅಚ್ಚುಕಟ್ಟು ನಿಧಿ ನಿಕ್ಷೇಪ (ಮೈಆರಿ.೧೯೩೦, ೮೭–೧೩; 1736); ತಾರಾದ್ರಿ ತತ್ಶಿಖರವು ಅಣೆಯಾಗಿ ತಡೆಯಲ್ಕೆ ಕೋಪದಿಂ ರಾವಣಂ ಮಣಿದೆತ್ತಲಾ (ಪರಶು. ೧೪–೨೬) ; ಪರಿವ ಪೊನಲಂ ತಡೆವುದು ಪಿರಿದು ಅಣೆಯನಱದು ಪರಿಯಿಪುದರಿದೇ (ನೀತಿಮಂ. ೧–೮). **೨.** ಬೆಟ್ಟದ ತಪ್ಪಲು; ಸಾನುಪ್ರದೇಶ: ಅವು ಪಿರಿಯವು ಭಾವಿಪೊಡಿಂತಿವು ಕಿಱಿಯವೆನಿಪ್ಪುದಿದುವೆ ಭೇದಂ ಪೆಱತಿಲ್ಲಿವಱವಂತರಮೆನಿಸಿದುವವನೀಧರದಣೆಯ ಪುಲಿಗಳುಂ ಬೆಕ್ಕುಗಳುಂ (ಕಾವ್ಯಾವ. ೯೦) ; ಬೆಳ್ಪೆಳಗಿನ ಸಂತಾನ ಮನುಗುಱುತ್ತಮರವಿಮಾನಾವಳಿ ಸಾರ್ದುದಿಂತು ಮಂದರದಣೆಯಂ (ಶಾಂತೀಶ್ವ. ೧೪–೯೩). **೩.** ಊರೆ; ಆಧಾರಸ್ತಂಭ: 'ಅಣೆಯಿಡು' ಪರಾ. [ದೇ. || ತಮಿ. ಅಣೈ ; ಮಲ. ಅಣ ; ತೆಲು. ಅನೆ]

**-ಅಣೆ₄** (ಪ್ರ). ಒಂದು ಭಾವನಾಮ ಪ್ರತ್ಯಯ : ಕಳಕಂಠಿಯ ಬಗ್ಗಣೆಯೇವುವೆಂಬ (ಅಜಿಪು. ೬–೨೬) ; ಆಗಳಾ ಬಲಿ ಕೀಲಣೆವೆತ್ತು ಪುಯ್ಯಲ್ಚೆ (ನೇಮಿಪು. ೫–೯ ವ). 'ಜೋಡಣೆ' (= ಜೋಡಿಸು + –ಅಣೆ₄), 'ಸಾಕಣೆ' (= ಸಾಕು + –ಅಣೆ₄), 'ಹಂಗಣೆ' (= ಹಂಗಿಸು + –ಅಣೆ₄) ಇತ್ಯಾದಿ ಪರಾ.

**ಅಣೆಕಟ್ಟು, ಅಣೆಗಟ್ಟು** (ನಾ). ನೀರಿನ ಪ್ರವಾಹಕ್ಕೆ ಅಡ್ಡಲಾಗಿ ಹಾಕಿದ ಕಟ್ಟೆ; ಅಡ್ಡಗಟ್ಟೆ : ಚಂದ್ರಶೇಖರ ಪ್ರತಾಪರು ಅವಳ ಜೀವನ ಪ್ರವಾಹಕ್ಕೆ ಎರಡು ದಡಗಳು. ಅವುಗಳಲ್ಲಿ ಒಂದು ಬಿದ್ದುಹೋಗಿ ಇನ್ನೊಂದು ಅಣೆಕಟ್ಟಾಯಿತು (ಬಂಕಿಮ. ೨೦೦) ; ನಂಬಿಕೆಯ ಅಣೆಕಟ್ಟೆನಲ್ಲಿ ಅತಿಕಿರಿದಾದ ಅನುಮಾನದ ಬಿರುಕು ಕಾಣಿಸಿದರೂ ಸಾಕು (ಸರ್ವಮಂ. ೧೩೮). **ಅಣೆಗಟ್ಟು** : 'ಅಣೆಗಟ್ಟುವಡೆ' ಪರಾ. [ಅಣೆ₃ + ಕಟ್ಟು₂]

**ಅಣೆಕಟ್ಟೆ** (ನಾ). = ಅಣೆಕಟ್ಟು. [ಅಣೆ₃ + ಕಟ್ಟೆ₁]

**ಅಣೆಕಲ್ಲಾಟ** 'ಅಣ್ಣೆಕಲ್ಲಾಟ' ನೋ.

**ಅಣೆಕಲ್ಲು** 'ಅಣ್ಣೆಕಲ್₁' ನೋ.

**ಅಣೆಗಟ್ಟು** 'ಅಣೆಕಟ್ಟು' ನೋ.

**ಅಣೆಗಡಿ** (ನಾ). ಅಣೆಕಟ್ಟಿನ ಪ್ರದೇಶ; ಕೆರೆಯ ಏರಿಯ ಎಲ್ಲೆ: ಅಳಿದ ಅಣೆ[ಣೆ]ಗಡಿ ಕಡಿದ[ಕುಳ]ಗಡಿ ಬಡಗಲು ಉಳ್ಳೆಱಗಿದ ಅಣೆ ××× ಮೂಡಲುಯಿ××× ದ ಅಣೆಗಡಿಯಿಂಬೊಳಗುಳ್ಳ ಪ್ರಿತ್ತಿಯನೇ (ಕಇ. I, ೩೭–೧೧ ; 1408). [ಅಣೆ₃ + ಗಡಿ₁]

**ಅಣೆಪ** (ನಾ). ತಿವಿತ; ಇರಿತ; ಹೊಡೆತ: ಅಣೆಪಂ ನೊಣೆಪಂ ಪೊರೆಪಂ (ಶಬ್ದಾನು. ೫೭೧ ಪ್ರಯೋ). [ಅಣೆ₂ + –ಪ್ಪ₂]

**ಅಣೆಯಿಡು** (ಕ್ರಿ). ಊರೆಯಾಗಿ ನಿಲ್ಲಿಸು ; ಆಧಾರ ಕೊಡು : ಮೇರುವಿಂಗಣೆಯಿಟ್ಟ [ಪಾಠಾಂ. ಆನಿಸಿದ] ರಜತಸ್ತಂಭವೋ . . . ಎಂಬಂದದಲಿ ಗಂಗೆಯ ಧಾರೆ ಮೆಱೆದಿಹುದು (ಕುವ್ಯಾಅ. ೮–೩೫). [ಅಣೆ₃ + ಇಡು]

**ಅಣೆಯಿಸು, ಅಣೆಸು** (ಕ್ರಿ). ಹೊಡೆಯಿಸು: ಬೂತುಗಳಿನಾತನ ಮಂಡೆಯನಣೆಯಿಸುತ್ತುಂ (ಪಾರ್ಶ್ವಪು. ೪–೨೪ ವ). **ಅಣೆಸು** : ಗಂಡರಂ ಕೊಂಡಾಡುವರ ಮಂಡೆಯನಣೆ[ಪಾಠಾಂ. ನಣ]ಸುವಂ ಬಲ್ಲರಂ ಕೊಲ್ಲದ ಕೋಲೆಯಿಂ ಬಾಧಿಪಂ (ಧರ್ಮಾಮೃ. ೨–೬೭ ವ). 'ಅಣಸು₁' ಪರಾ. [ಅಣೆ₂ + –ಇಸು₃]

**ಅಣೆಸು** 'ಅಣೆಯಿಸು' ನೋ.

**ಅಣೋರಣೀಯ** (ಗು). ಅಣುವಿಗೂ ಅಣುವಾದ; ಸೂಕ್ಷ್ಮಕ್ಕಿಂತ ಸೂಕ್ಷ್ಮವಾದ; ಅತ್ಯಂತ ಕಿರಿದಾದ: ಅವನೊಬ್ಬನಣೋರಣೀಯನದಾವನುರುಮಹತೋಮಹೀಯನದಾವ ನಿರುತಂ ದೃಷ್ಟಿಸಂಗತ ವಿಶ್ವಸಮಯದಲಿ (ಕುವ್ಯಾಅ. ೬–೬೩). [ಸಂ. ಅಣೋಃ ಅಣೀಯಸ್]

**ಅಣ್ಕು** (ಕ್ರಿ). ಮುಳುಗು : ನೆಗಱ್ದಾ ಮನೋಜರಾಜನ ವರಕೀರ್ತಿವಾರಿಧಿಯೊಳಣ್ಕದ ಕಾಮಿನಿಯರ್ಕಳಂತೆ ಕಾಮಿನಿಯರದೇಂ ಮನಂಗೊಳಿಸುತಿರ್ದರೊ ದೇಹದ ಶುಭ್ರಶೋಭೆಯಿಂ (ಶಾಂತೀಶ್ವ. ೧೦–೧೭೧). [< ಅಟ್ಕ್]

**ಅಣ್ಕೆ, ಅಂಕೆ₂** (ನಾ). ಲೇಪನ; ಬಳಿಯುವುದು; ಬಣ್ಣ ಹಾಕುವುದು: ಮೃಣಾಳನಾಳಿಕೆಗೆ ಚಂದನದಣ್ಕೆಗೆ . . . ಒಡಲಂ ಗುಱಿಯಾಗೆ ಮಾಡುವರ್ (ಮಲ್ಲಿಪು. ೩–೨೮) ; ಚಿತ್ರಪ್ರವರ್ತನಮೆಂಬಾಱುಂ ತೆಱದಣ್ಕೆಯುಮುಂ (ಮಲ್ಲಿಪು. ೫–೪೨) ; ರಸಚಿತ್ರಂ ಧೂಳೀಚಿತ್ರಮೆಂಬೆರಡೋಜೆಯೊಳಂ ಪುಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಂ ಉದ್ವರ್ತನಂ ಚಿತ್ರವರ್ತಮೆಂಬಾಱುಮಣ್ಕೆಗಳೊಳಂ (ಚಂದ್ರಪು. ೧೫–೭೦ ವ) ; ಕತ್ತುರಿಗಂಧದಣ್ಕೆ ಚೆಲ್ವಪ್ಪಮುಳಾಂಬರಂ . . . ಪದೆಪಿನಿಂ ಸತಿಗಿತ್ತೊಡಗೊಂಡು ಬೇಗದಿಂ ಬಪ್ಪುದು (ದಶಕು. ೪–೧೦೮) ; ಸಂದಣಿಸಿದ ನವಚಿತ್ರ ಸುವರ್ತಕವೆಂದೆಂಬಱುತೆಱದಣ್ಕೆ ಕರಂ ಮನಸಂದುದು (ಜಯಕಾ. ೩–೫) ; (ಅರ್ಥನೇ. ೪–೧೩೭ ; ಸಾಹಿಸಂ. ೨೩೭ ನೋ). **ಅಂಕೆ₂** : ಕುಂಕುಮಸಾರದಿಂ ಮಳಯಜದ್ರವದಿಂ ಘನಸಾರಚೂರ್ಣದಿಂ ಪಂಕಿಲವಾದ ತಮ್ಮ ತನುಗಳ್ ಪೊಸಲೆಪ್ಪದಿನೀಗಳೆಗಳಿಟ್ಟಂಕೆಯಿದೆಂಬಿನಂ (ನಳಚಂ. ೪೭೮). [ಅಣ್₂ + –ಕೆ]

**ಅಣ್ಕೆಗೆಯ್** (ಕ್ರಿ). ೧. ಲೇಪಿಸು ; ಬಳಿ; ಬಣ್ಣ ಹಾಕು : ಪೂಸಿದ ಚಂದನದ ಭೂರಿ ಭುಜಶಿಖರದೊಳಣ್ಕೆಗೆಯ್ದ ಕುಂಕುಮದ ಬಿಂಕಂ (ಅನಂಪು. ೨–೨೬ ವ) ; ತನ್ನಾಕೃತಿ ಬರೆದಣ್ಕೆಗೆಯ್ದ ರಸಚಿತ್ರಗತ ಸ್ತ್ರೀಕುಂಜರಮಂ ಪೋಲ್ತತ್ತು (ಪುಷ್ಪಪು. ೧೦–೪೯); ಗಂಧರಸವನ್ನೆತ್ತಿಯೆತ್ತಿ ತನ್ನ ಮುದ್ರಿಕೆಗೆ ಅಣ್ಕೆಗೆಯ್ಯುತ್ತ (ಮಂತ್ರಶ. ೧೨೦–೮). ೨. ನೇವರಿಸು; ಸವರು : ಮಱಿಯ ಕೊರಲ ಕಿಱುದುಪ್ಪುಳಂ ಚಂಚುಮುಖದಿನಣ್ಕೆಗೆಯ್ದುಂ (ಮಲ್ಲಿಪು. ೩–೧೦೫). [ಅಣ್ಕೆ + ಗೆಯ್ (< ಕೆಯ್₁)]

**ಅಣ್ಣ₁** (ನಾ). ೧. ಒಡಹುಟ್ಟಿದವರಲ್ಲಿ ಹಿರಿಯ; ಹಿರಿಯ ಸಹೋದರ : "ಪೂರ್ವಜಃ ಅಗ್ರಿಯಃ ಅಗ್ರಜಃ – ಈ ೩ ಒಡಹುಟ್ಟಿದ ಅಣ್ಣನು" (ನಾಚಿರಾ. ೧೧೯) ; ಒಡಿವೆಟ್ಟಿರಾಯಿಳನ್ ನಿಗ್ಗೊಳನ್ನನುಜಾಗರನ್ ಅಣ್ಣನವತಿಗನ್ ಅನ್ತಕಜ್ಜಱ್ದೊನ್ (ಮೈಆರಿ. ೧೯೩೯, ೨೨–೧೭ ; 8 ನೆಯ ಶತ) ; ಮಂತ್ರಿಯೆಮ್ಮಣ್ಣಂ ಸೂರ್ಯಮಿತ್ರನೆಂಬೊಂ (ವಡ್ಡಾರಾ. ೩–೪) ; ಎನಗಂ ಸಮ್ಮೋಹನಮಾದುದಕ್ಕುಮಂದಣ್ಣನ ಸೂನೃತವಚನಮೆಂಬ ಮಂತ್ರಾಕ್ಷರದಿಂ (ಗದಾಯು. ೧–೬೨) ; ದೇವದ್ವಿಜಗುರು ಸಾಕ್ಷಿಯಂ ಅಣ್ಣ[ಣ್ಣ]ಂ ವಿಜಯಾದಿತ್ಯದೇವನ ಪ್ರಧಾನ ಪದ್ಮನಾಭಯ್ಯನ ಗುಣವರ್ಮಯ್ಯನ ನಾರಿಯರ ದೇಗುಲದ ಕೆಱೆಯ ಕೆಳಗೆ (ಎಕ. VII,

ಶಿಕಾರಿ. ೨೦–೧೪ ; 1032); ನಿಮ್ಮಣ್ಣನಾಡಿ ದುಹಾರದಲಿ ಸೆಜಿಯೋದ ನಾತನ ಹರಿಬವೇ ನಿಮಗೆ (ಕುವ್ಯಾಕ. ೨೦–೧೩); ಸಣ್ಣವನೆನಬೇಡ ಹರಿ ತನ್ನ ಪೆತ್ತವಳಣ್ಣನ ಮಡುಹಿ ಮೇದಿನಿಯ ತಿಣ್ಣವನಿಳುಹಿದ (ಮೋಹತ. ೧೨–೧೭); ಅಣ್ಣಗೆ ಸುಣ್ಣವಿಲ್ಲ ಎತ್ತಿಗೆ ಹುಲ್ಲು ಇಲ್ಲ (ಗಾದೆ). ℙ ತಂದೆಯನ್ನು ಕುರಿತು ಮಾತಾಡುವಾಗ 'ಅಣ್ಣ' ಎಂದು ವ್ಯವಹರಿಸುವುದು ಕೆಲವು ಕಡೆ ರೂಢಿಯಲ್ಲಿದೆ. ೨. ಗಂಡಸರನ್ನು ಪ್ರೀತಿಯಿಂದ ಅಥವಾ ಗೌರವದಿಂದ ಸಂಬೋಧಿಸುವಾಗ ಸರ್ವಸಾಧಾರಣವಾಗಿ ಉಪಯೋಗಿಸುವ ಮಾತು: ತೊನ್ನಂ ರೂಪಪರಾವರ್ತನಂಗೆಯ್ದು . . . ಅರಸನ ಕಾಪಿನವರನೆಂದನೆಲೆಯಣ್ಣಗಳಿರಾ ನೀಮಿ ಾತನಂ ಕೊಂದಿರ್ (ವಡ್ಡಾರಾ. ೧೨೫–೨); ಮಡದಿಯ ಹಚ್ಚಡಮುಱಿ ಸುಲಿವೆಡೆಯೊಳ್ ಕೇಳಣ್ಣ ಕಿವಿಯ ಕೊಪ್ಪಂ ನೀಂ ಕೊಳ್ವೊಡೆ ನೋಯದಂತೆ ತೆಗೆಯೆಂದೊಡೆ ಮೋನಂಗೆಟ್ಟಳಿವಳೆ ಸೋತವಳೆಂದೆಂ (ಧರ್ಮಪ. ೯–೨೧); ಏನಣ್ಣ ಭರತೇಶಗನುಜೆಯ ಕುಡೆನೆಂದು ನೀನತಿರಭಸದೋರ್ಪೆಗಡ (ಭರತೇ. ೩೭–೪೩). ೩. ತಿರಸ್ಕಾರವನ್ನು ಸೂಚಿಸುವುದಕ್ಕಾಗಿ ವ್ಯಂಗ್ಯವಾಗಿ ಬಳಸುವ ಮಾತು: ಕುಡವೇಟ್ಟಿನ ಕುಡುವನ ಕುಡೆ ಪಡೆವನ ಪೆಂಪೇಂ ನೆಗೞ್ತೆವಡೆಗುಮೊ ಕುಡವೇೞ್ಗಿಮ ಪೇೞ್ವಂ ಕೊಡುವಣ್ಣಂ ಕುಡುಗೆಮ ಕುಡೆ ಕೊಳ್ವ ಕಲಿಯನಜಿಯಲ್ಕಕ್ಕುಂ (ಪಂಪಭಾ. ೬–೪೯); ಮೊಲೆವೊತ್ತ ತೈಲಜನನಿಯ ಕೆಲದೊಳ್ ರಂಜಿಪರೆ ಮಾಸೆವೊತ್ತಣ್ಣಂಗಳ್ (ಅಜಿಪು. ೧–೬೫); ಬಿದಿಯೆಂಬಣ್ಣಂ ಬನ್ನಂಬಟ್ಟುದನಱಿಯನೆ (ಕಬ್ಬಿಕಾ. ೧೮೬); ಹೆಣ್ಣು ಹೊನ್ನುಗಳನ್ನು ಹಣ್ಣಾದ ಫಲಗಳನು ಕಣ್ಣಿಂದ ಕಂಡು ಮನದಲ್ಲಿ ಬಯಸದಾ ಅಣ್ಣಗಳು ಯಾರೊ (ಸರ್ವಜ್ಞ. ೧೧೬೦); ಹರೆಯದೋಳ್ ಸೊಕ್ಕಿದಣ್ಣರು ಮರುತನಂದನನ ಮುಸುಕೆ . . . ಸೀಳಿದ ಮಲತು ಸಿಂದವರ ಭೀಮ (ತುರಂಗ. ೫೫–೩೨); ೪. "ಅಂತಃಪುರದಲ್ಲಿರುವ ನಪುಂಸಕರು" (ಮೋಹತ. ಅಡಿಟಿ): ಎಂದೊಡಾ ಮಾತಿಂಗೊಡನೆದ್ದು ದೈತ್ಯ ಹೊನ್ನಂದಣದಣ್ಣರ ಕಳುಹೆ ಸಂದಣಿಸಿದರಣ್ಣಗಳು ನಿಯೋಗಿಗಳ್ ಬಂದರು ರತಿಯಿದ್ದ ಬಳಿಗೆ (ಮೋಹತ. ೧೦–೮); ಸಂದಣಿಸಿದರಣ್ಣಗಳು ದಾದಿಯರು ಹೊನ್ನಂದಣದೆಡದ ಭಾಗದಲಿ (ಮೋಹತ. ೨೪–೨೩). ℙ ಈ ಅರ್ಥವುಳ್ಳ 'ಅಣ್ಣ' ಎಂಬ ಶಬ್ದವು ಸಂಸ್ಕೃತದ 'ಷಂಡ' ಎಂಬುದರಿಂದ ಬಂದಿರಬಹುದೆಂಬ ಅಭಿಪ್ರಾಯವೂ ಉಂಟು. ತಮಿ. ಅಣ್ಣಗನ್ ಹೋಲಿಸಿ. ೬. ಗಂಡಸರ ಹೆಸರಿನ ಕೊನೆಯಲ್ಲಿ ಗೌರವಾರ್ಥದಲ್ಲಿ ಅಪ್ಪ, ಅಯ್ಯ ಮೊದಲಾದವುಗಳಂತೆ ಸೇರುವ ಮಾತು. ಉದಾ— ಕಲ್ಲಣ್ಣ, ಬಸವಣ್ಣ, ಬೋರಣ್ಣ, ಮಲ್ಲಣ್ಣ, ರಾಮಣ್ಣ, ಶಾಮಣ್ಣ. ℙ ಅಣ್ಣಂಗಳ್, ಅಣ್ಣಂದಿರ್, ಅಣ್ಣಗಳು, ಅಣ್ಣರ್ (ಬಹುವ). ಎಮ್ಮಣ್ಣಂಗಳಪ್ಪ ಭಟಾರರ್ ಚರಿಗೆವಂದಪ್ಪೊರೆಂದು (ವಡ್ಡಾರಾ. ೧೧೭–೧೧); ತಮ್ಮಯ ಬಲ್ಲತನವನೇ ಮೆಱೆವಣ್ಣಂಗಳ ಬಲ್ಲತನದ ಬಾಯೊಳು ಬಳಹರಿ ಬಲ್ಮೆನಿಸುದಳಿದು ಹೊಗಲಿ (ಜಯಕಾ. ೧–೧೭); ಬಣ್ಣಿಸಲಱಿಯೆ ಮೂವಣ್ಣದಣ್ಣಗಳನು ಹೆಣ್ಣ ಮಾಡಿಯೆ ಹಿಡಿತಹೆನು (ತ್ರಿಪುಸಾಂ. ೧೨–೧೩೧); ಬಾಳಿನಲ್ಲಿ ಕೈಹಿಡಿದು ನಡೆಸಿದಿರಿ ಜೊತೆಯ ಅಣ್ಣಗಳನು ತಮ್ಮಗಳಿಗೆ ಕಂಡದ್ದ ತೋರಿ ತೆರೆಸಿದಿರಿ ಕಣ್ಣುಗಳನು (ಹೃದಸ. ೭೪–೧೭); ಜನಮೆಲ್ಲಂ ನೆರೆದಕ್ಕಟಣ್ಣರಿವರಿಂದೇವಂದರೇವೋದರೆಂಬಿನಂ (ಪಂಪಭಾ. ೩–೬೫).

**ಅಣ್ಣನಂಕಕಾಱ** = ಅಣ್ಣನ ವಶವರ್ತಿಯಾಗಿ ಯುದ್ಧಮಾಡುವ ವೀರ: ಪರಬಳಭೀಮ ಸಾಹಸೋತ್ತುಂಗ ಅಣ್ಣ[ಣ್ಣ]ನಂಕಕಾಱ ಸತ್ಯ ರಾಧೇಯ ಪುಸಿದು ನುಡಿವರ ಗಂಡ (ಕಇ. IV, ೪೮–೨೩ ; 1247). **ಅಣ್ಣನ ಗಂಧವಾರ[ಣ]** = ಅಣ್ಣನ ವಶವರ್ತಿಯಾಗಿ ಮದ್ದಾನೆಯಂತೆ ಪರಾಕ್ರಮದಿಂದ ಹೋರಾಡುವವನು: ಏಕಾಂಗವೀರನಸಹಾಯ ಸೂರ ಮಂನೆಯ ಬೇಂಟೆಕಾಱ ಅಂಣನ[ಅಣ್ಣನ]ಗ ಂಧವಾರ[ಣ]ನು (ಎಕ. XVI, ಚಿಕ್ಕನಾ. ೬೨–೨೮ ; 1242). **ಅಣ್ಣನ ಬಂಟ** = ಅಣ್ಣನ ಸೇವಕ; ಭ್ರಾತೃಭಕ್ತ: ಪ್ರಚಣ್ಡಂ ಅಣ್ಣನ ಬಣ್ಟ ಬಟಧರನನ್ದಂ (ಇಆ. XIV, ೭೬–೭ ; 977); ಮಾಪ್ಪಡೆಗೋಜಂಟನಣ್ಣ[ಣ್ಣ]ನ ಬಂಟ (ಎಕ. II, ೧೩೮–೩ ; 940). **ಅಣ್ಣನ ವತಿಗ** = ಅಣ್ಣನಿಗೆ ವಿಧೇಯ (?): ಒಡಿವೆಚ್ಚಿ ರಾಯಿಳನ್ನಿಗ್ಗೊಳನ್ಮನುಜಾಗರನ್ ಅಣ್ಣನ ವತಿಗನ್ ಅನ್ತಕಜ್ಞಿಜ್ಞದೊನ್ (ಮೈಆರಿ. ೧೯೩೯, ೨೨–೧೬ ; 750). **ಅಣ್ಣನ ಸಿಂಗ** = ಅಣ್ಣನ ವಶವರ್ತಿಯಾಗಿ ಸಿಂಹದಂತೆ ಪರಾಕ್ರಮದಿಂದ ಹೊರಾಡುವವನು: ರಾಜವಿದ್ಯಾಭುಜಂಗಂ ಅಣ್ಣನ ಸಿಂಗಂ (ಎಇ. IV, ೨೧೫–೫ ; 1072). **ಪರವೆಂಡಿರಣ್ಣ** = ಪರಸ್ತ್ರೀಯರಿಗೆ ಅಣ್ಣನಂತಿರುವವನು, ಪರನಾರೀ ಸಹೋದರ: ಶ್ರೀ ಪರವೆಣ್ಡಿರಣ್ಣ[ಣ್ಣ]ನೀಸರಯ್ಯ (ಎಕ. II, ೪೪೮ ; 900). ℙ ಇವೆಲ್ಲವೂ ಬಿರುದುಗಳು.

[**ದೇ.** ‖ **ತಮಿ.** ಅಣ್ಣನ್ = ಹಿರಿಯ ಸಹೋದರ; ಅಣ್ಣಾರ್ = ಗೌರವಾರ್ಥದಲ್ಲಿ ಹಿರಿಯ ಸಹೋದರನನ್ನು ನಿರ್ದೇಶಿಸುವ ಬಹುವಚನ ರೂಪ; ಅಣ್ಣಾ = ಹಿರಿಯ ಸಹೋದರ, ತಂದೆ; **ಮಲ.** ಅಣ್ಣನ್ = ಹಿರಿಯ ಸಹೋದರ; **ಕೊಡ.** ಅಣ್ಣ = ಹಿರಿಯ ಸಹೋದರ ಅಥವಾ ಸೋದರ ಬಾಂಧವ್ಯದ ನಂಟ; **ತುಳು.** ಅಣ್ಣೆ = ಹಿರಿಯ ಸಹೋದರ; ಸೋದರ ಮಾವ, ಹಿರಿಯ ವ್ಯಕ್ತಿ; **ತೆಲು.** ಅನ್ನ = ಹಿರಿಯ ಸಹೋದರ; **ಕೋಲಾ.** ಅನ್ನಾಕ್ = ಹಿರಿಯ ಸಹೋದರ; **ಗೊಂಡಿ.** ತನ್ನಾಲ್ = ಹಿರಿಯ ಸಹೋದರ]

**ಅಣ್ಣ**2 (ನಾ). ತೊರೆ; ಹಳ್ಳ (?): ಪಿರಿಯ ಪ[ರಿ]ವು [ಪಾಠಾಂ. ಪರವು] ಗಳ ಸುತ್ತಿದ ಪರಿಕಾಲ್ಗಳ ತುಱುಗಿದಣ್ಣಗಳ ತೀವಿದ ಪೊಕ್ಕರಣೆಗಳ ನೆಱೆದ ಕೆಱೆಗಳ ಸರೋವರಂಗಳ ಬೆಡಂಗಗುಂದಲೆ ಪುರದೊಳ್ (ಸುಕುಮಾ. ೯–೫೧). [**ಪ್ರಾ.** ಅಣ್ಣ (= ನೀರು) (< **ಸಂ.** ಅರ್ಣ)]

**ಅಣ್ಣ**3 (ನಾ). ಮುಟ್ಟು; ನೈಲಿಗೆ (?): "ಅಣ್ಣವೆನಲ್ಮುಟ್ಟದು ಸಲೆ ಬಣ್ಣಂ ವರ್ಣದೊಳೆ" (ಕರ್ಣಾನಿ. ೪೪). [?]

**ಅಣ್ಣಗಾರ** (ನಾ). (ವ್ಯಂಗ್ಯವಾಗಿ) ಅಣ್ಣ: ಬನ್ನಿ ಬನ್ನೀಗ ಹೆಣ್ಣಿಗೆ ಬಯಸಿ ಬಂದ ಅಣ್ಣಗಾರರು ಐವತ್ತುಆರು ದೇಶದರಸರೊಳಗಾವರಾಗಲಿ (ಸೌಗಂಧಿ. ೭೯–೨). [ಅಣ್ಣ1 + –ಗಾರ (< –ಕಾಱ)]

**ಅಣ್ಣನೆ** (ಅ). ೧. ಹಿತವಾಗಿ; ಸುಖಕರವಾಗಿ: ವ್ಯಸ್ತರಜಸ್ತತಿಯಾಯ್ತಾವಳಯಮುತ್ತಮಸೌರಭಮೂದಿತ್ತಣ್ಣನೆ ಪಣ್ಣನೆ ತಣ್ಣೆಲರ್ (ಚಂದ್ರಪು. ೩–೯೪). ೨. ತುಂಬ; ಬಹಳವಾಗಿ; ಹೆಚ್ಚಾಗಿ: ಅಣ್ಣನೆ ದಣಿದು (ಸ್ಯಾಂಡರ್). [ಅಣ್ ? + –ಅನೆ]

**ಅಣ್ಣಪ್ಪ** (ನಾ). ಅತಿಸಾಮಾನ್ಯನಾದ ವ್ಯಕ್ತಿ: ಅಣ್ಣನೆಂಬಾಗ ನಿನ್ನಣ್ಣನೆಲ್ಲರ ಪಾಟಿಯಣ್ಣನೆ ತಮ್ಮನೆಂಬಾಗ ಅಣ್ಣಪ್ಪಂದಿರ ಪಾಟಿಯನುಜನೆ ನೀನಿಂತು ಬಿಣ್ಣಿತು ತೋರ್ಪರೆ ಸ್ವಾಮಿ (ಭರತೇ. ೪೮–೬೬); ಅಣ್ಣಪ್ಪ ಊರಿನಲ್ಲಿದ್ದರೂ ಒಂದೇ ದಂಡಿನಲ್ಲಿದ್ದರೂ ಒಂದೇ (ಗಾದೆ); ಉಂಬೋಕೆ ಉಡೋಕೆ ಅಣ್ಣಪ್ಪ ಕೆಲಸಕ್ಕೆ ಮಾತ್ರ ದೊಣ್ಣಪ್ಪ (ಗಾದೆ). ℙ ಅಣ್ಣಪ್ಪಂದಿರು (ಬಹುವ). [ಅಣ್ಣ1 + ಅಪ್ಪ1]

**ಅಣ್ಣಮ್ಮ**, ಅಣ್ಣಮ್ಮ (ನಾ). ಒಬ್ಬನ ಹೆಸರು: ಶ್ರೀಮತ್ ಪೆರ್ಮ್ಮನಡಿಗಳ್ ಪಟ್ಟಂಗಟ್ಟಿದ ಆಯ್ದಾನೆಯ ವರಿಷ ಗೆಟ್ಟಿವಡಿಯ ಅಣ್ಣ[ಣ್ಣ]ಮ್ಮನಾಳುತುಮಿರೆ (ಎಕ. III, ನಂಜನ. ೯೭–೪ ; 893). **ಅಣ್ಣಮ್ಮ**: ತದರ ಬಣ್ಡಿ ಅಣಿಲೆಯರ ಮಗನೆಲ್ಮಲ್ಲ ಅಣ್ಣಮ್ಮನಟಿಯ [ಪಾಠಾಂ. ನಳಿಯೆ] ತೊಱುವನಿಕ್ಕಿಸಿ ಸಗ್ಗಿಯಾದಂ (ಎಕ. IX, ಹೊಸಕೋ. ೧೧೦–೬; 900).

[ಅಣ್ಣ1+ಅಮ್ಮ2]

**ಅಣ್ಣಯ್ಯ**, ಅಣ್ಣೆಯ (ನಾ). ೧. ಹಿರಿಯ ಸಹೋದರನನ್ನು ಗೌರವ ಪೂರ್ವಕವಾಗಿ ನಿರ್ದೇಶಿಸುವ ಮಾತು. ೨. ಕಿರಿಯರನ್ನು ಪ್ರೀತಿಯಿಂದ ಸಂಬೋಧಿಸುವಾಗ ಬಳಸುವ ಮಾತು. ೩. ಒಂದು ಅಂಕಿತನಾಮ : ಅವರ ಪುತ್ರರಣ್ಣ[ಣ್ಣ]ಯ್ಯನುಂ ಚಟಯ್ಯನುಂ (ಎಕ. VII, ಶಿಕಾರಿ. ೨೮೭–೧೧ ; 900) ; ಶ್ರೀವರಮತಿಶಾಗರಪಣ್ಡಿತಭಟಾರರ ಬೆಸದೊಳಣ್ಣ[ಣ್ಣ]ಯ್ಯನುಂ ದೇವಕುಮಾರನುಂ (ಎಕ. III, ಶ್ರೀರಂಗ. ೧೪೮–೧೦ ; 904). **ಅಣ್ಣೆಯ :** ೩. ಸ್ವಸ್ತಿ ಶ್ರೀ ಅಣ್ಣೆ[ಣ್ಣೆ]ಯ ಪ್ರಿತಿವೀ ರಾಜ್ಯಂಗೆಯ್ಯುತ್ತಿವಿರೆ (ಎಕ. XI, ಚಳ್ಳಕೆ. ೫೬–೩ ; 925).

[ಅಣ್ಣ$_1$ + ಅಯ್ಯ$_1$]

**ಅಣ್ಣರ್ಕಱೆ** (ನಾ). ಒಂದು ಹೆಸರು (?) : ಪಾಱ್ವರ ಅಣ್ಣರ್ಕ್ಕಱೆ ಪುನ್ನಣಿ ಮಾಣಿಯಿಱಿದು ಬೀೞ್ದನ್ (ಎಇ. XXIV, ೨೬–೧೧; 885). [?]

**ಅಣ್ಣರ್ಮ** 'ಅಣ್ಣಮ್ಮ' ನೋ.

**ಅಣ್ಣಲದೇವ** (ನಾ). ಒಬ್ಬನ ಹೆಸರು : ಶ್ರೀಮದಣ್ಣ[ಣ್ಣ]ಲದೇವ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತ (ಎಕ. VII, ಶಿಕಾರಿ. ೫೩–೧೭ ; 1027). [ಅಣ್ಣಲ್$_0$ + ದೇವ]

**ಅಣ್ಣಲೆ** (ನಾ). "ದೊರೆ, ರಾಜ" (ಶಾಪಮಂ. ಕೋಶ) : ತೊಡರ್ವ ವಿರೋಧಿಗೆಂಟಿರ್ದೆಯೆ ಮೀಱುವ ವೈರಿಗೆ ಮೂಱು ಕಣ್ಣೆ ಮಾರ್ನುಡಿವವನೇಂ ಚತುರ್ಭುಜನೆ ಮಚ್ಚರಿಪಣ್ಣಲೆ ಬರ್ಮನೊಳ್ ಬರಂ ಪಿಡಿದನೆ ಮೀಱಿ ಬಾಳ್ವೊಡವನೇಂ ಜವನೇ (ಎಕ. VIII, ಸಾಗರ. ೧೧೯–೩೬ ; 1042) ; ಪಲರುಂ ಚಕ್ರಿಯೊಳಿಂತೆ ನಿಮ್ಮ ತೇಜದಿಂ ಮುಂ ಕಾದುವುದ್ಯೋಗದಣ್ಣಲೆಗಳ್ ಮೆಚ್ಚಿಸಿ ಕಾದಲೆಂದು ಕಳದೊಳ್ ಮಾಱಂಕಮಂ ಬೇಡಿ ಬಂದುಲಿವರ್ (ವರ್ಧಪು. ೭–೫೪) ; ಅಣ್ಣ[ಣ್ಣ] ಮೊಱೆಗೊಳಿಸಿ ಚೋಳಿಕರಣ್ಣ[ಣ್ಣ]ಲೆಯಂ ತಳಿರನುಡಿಸಿ ನನ್ನುಗೆಯಂ ಮೂವಣ್ಣಂ ಬರಿಸಿದ ಸುರ್ವ್ವರೆ ಬಣ್ಣಿಸಲೆಱೆಯಂಗನೃಪತಿ ಚಕ್ರಿಯ ಬೆಸದಿ (ಎಕ. V, ಅರಸೀ. ೧೦೨–೧೩ ; 1100) ; ಉರವಣಿಯಿಂದೆ ಬಂದ ಮುಗಧಾಂಧ್ರ ಕಳಿಂಗ ಚಳುಕ್ಯ ಪಾಂಡ್ಯ ಗೂರ್ಜರರೆನಿಪಗ್ಗದಣ್ಣ[ಣ್ಣ]ಲೆಗಳೆನ್ನೊಳೆ ಭಂಗಮನಾಂತು ಪೋದರ್ (ಸೌಇಇ. IX–i, ೨೯೭–೧೯ ; 1177).

[←? ತಮಿ. ಮಲ. ಅಣ್ಣಲ್=ಹಿರಿಮೆ, ಔನ್ನತ್ಯ, ಅತ್ಯುನ್ನತ ವ್ಯಕ್ತಿ, ದೊರೆ, ದೈವ]

**ಅಣ್ಣವಸಯ್ಯ** (ನಾ). ಒಬ್ಬನ ಹೆಸರು : ನೊಱಂಬರಂ ಕಾದಿ ಗೆಲ್ದು ಕಾಳೆಗದೊಳಣ್ಣ[ಣ್ಣ]ವಸಯ್ಯ ಬಿಸುಗೆ ಕಳನಾಗಿ ಸುರಿಗಿಱಿದು ಕಾದಿ ಸತ್ತಂ (ಎಕ. XV, ಅರಸೀ. ೨೩೭–೭ ; 971). [? + ಅಯ್ಯ$_1$]

**ಅಣ್ಣವಳಿ** (ಕ್ರಿ). ಅಂದಗೆಡು (?) : ತಳಿರ ತೊಟ್ಟಲೊಳಿಟ್ಟು ಸಣ್ಣ ನನೆಗಳ ನನೆಯಕ್ಕಿಯನಿಕ್ಕಿ ಪಣ್ಣ ಬಾಯಿನಮನಣ್ಣ[ಪಾಠಾಂ. ಮಂ ಬಣ್ಣ]ವಳಿಯದೆ ಕೊಟ್ಟು ಚೂತವಲ್ಲಭನೆಂದು ಪೆಸರಿಟ್ಟು (ಗಿರಿಕ. ೨–೭೧ ವ). **ಅಣ್ಣವಳಿ :** ಅಣ್ಣವಳಿಯದೆ ಬಣ್ಣಗುಂದದೆ ಹುಣ್ಣಿಮೆಯ ಸಸಿಯಂತೆ ಚೆಲುಚೆಲುವೆಣ್ಣುಗಳು ಸಹ ಬಂದನು (ಸಾಳ್ವಭಾ. ೮–೯೬). [ಅಣ್ಣ$_0$ + ಅೞಿ$_1$]

**ಅಣ್ಣಾಜಿ** (ನಾ). ಅಣ್ಣನನ್ನು ಗೌರವದಿಂದ ಅಥವಾ ಪ್ರೀತಿಯಿಂದ ಕರೆಯುವಾಗ ಅಥವಾ ನಿರ್ದೇಶಿಸುವಾಗ ಉಪಯೋಗಿಸುವ ಮಾತು : ಎಲೆ ಅಣ್ಣಾಜಿ ನೀಂ ಪಿರಿಯನೆಂದು ಭಾವಿಸದೆ ಅವಿವೇಕದಿಂ ವಿನಯಂ ಮಾಡದಾದೆ (ಪೂರ್ವಪು. ೫೨) ; ನಾನಿತ್ತ ತೆಜದೊಳೆನ್ನಣ್ಣಾಜಿ ಕೊಂಡ (ಭರತ. ೩೫–೭೯) ; ಪೋದವ ಶ್ರೀಧರನಿದ್ದವ ಫಣಿಸುತ ಭೇದ ಬೇಡಣ್ಣಾಜಿಯೊಳು (ನಾಗಕು. ೧೧–೩೭).

[ಅಣ್ಣ$_1$ + –ಜಿ (< ಜೀಯ). / ತಮಿ. ಅಣ್ಣಾಚ್ಚಿ = ಹಿರಿಯ ಸಹೋದರ]

**ಅಣ್ಣಾವಂಟಗಾರ** 'ಅಣ್ಣಾವಟ್ಟಗಾರ' ನೋ.

**ಅಣ್ಣಾವಟ್ಟಗಾರ**, ಅಣ್ಣಾವಂಟಗಾರ (ನಾ). (ದಕ) ಕೆಲಸಕ್ಕೆ ಬಾರದವನು ; ಸೋಮಾರಿ ; ಕೆಲಸವನ್ನು ಮಾಡದೆ ಸುಮ್ಮನೆ ಅಲೆಯುವವನು : ಅಣ್ಣಾವಟ್ಟಗಾರನಾದರೆ ಸುಣ್ಣವೂ ದೊರಕದು (ಗಾದೆ). **ಅಣ್ಣಾವಂಟಗಾರ :** ಆ ಅಣ್ಣಾವಂಟಗಾರರೆಲ್ಲ ಸೇರಿಕೊಂಡು ಕೆಲಸವನ್ನು ಹಾಳುಮಾಡಿಬಿಟ್ಟರು (ರೂಢಿ). [?]

**ಅಣ್ಣಾವಾರ** (ನಾ). ಅಡಕೆಯಲ್ಲಿ ಒಂದು ಜಾತಿ : ಕೊರಪ ಲವಂಗ ಚೂರು ಮೋಡಿ ಅಣ್ಣಾವಾರ ದೇಶಾವಾರ ಎಂದು ಬೇರೆ ಬೇರೆ ರಾಶಿಗಳನ್ನು ಮಾಡುತ್ತಾರೆ (ಕೃಷಿಪ್ರ. ೧೫೨).

[?. P ಇದು ಒಂದು ಊರಿನ ಹೆಸರೆಂದು ತೋರುತ್ತದೆ]

**ಅಣ್ಣಿ$_1$** (ನಾ). ೧. ಒಬ್ಬನ ಹೆಸರು : ಶ್ರೀಮತ್ ಪಿಟ್ಟುವಿಪತಿಯ ಮಗನನ್ನಿಯ ಗಂಗನಣ್ಣಿಯೆಂಬ ಗಂಡಬೀರನೊಱಮ್ಪುಂ ತಾಗಿ ಶಾನ್ತರನೆಱೆಯ ರಟ್ಟದೊಡೆ (ಎಕ. X, ಗೋರೀಬಿ. ೪–೧೦ ; 920). ೨. ಹೆಂಗಸರನ್ನು (ಕೆಲವು ವೇಳೆ ಗಂಡಸರನ್ನೂ) ಪ್ರೀತಿಯಿಂದ ಕರೆಯುವಾಗ ಅಥವಾ ನಿರ್ದೇಶಿಸುವಾಗ ಉಪಯೋಗಿಸುವ ಮಾತು. 'ಅಕ್ಕಣ್ಣಿ', 'ಅಮ್ಮಣ್ಣಿ', 'ಅಪ್ಪಣ್ಣಿ' ಪರಾ.

[< ಅಣ್ಣ$_1$. / ತಮಿ. ಅಣ್ಣಿ = ಅತ್ತಿಗೆ; ಪ್ರಾ. ಅಣ್ಣೀ = ಭಾವನ ಹೆಂಡತಿ, ಗಂಡನ ಸಹೋದರಿ, ತಂದೆಯ ಸಹೋದರಿ]

**ಅಣ್ಣಿ$_2$** (ನಾ). ಪ್ರೀತಿ (?): ಅಣ್ಣನಂತೆ ಸಂಬೋಧಿಸುವ ಶರೀಫ ಸಾಹೇಬರ ಅಣ್ಣಿಯ ಹಾಡು (ಸಾಹಿವಿ. ೨೨) ; ಅಣ್ಣಿಯಗಡಲಿನ ತಣ್ಣನ್ನ ತಿಳಿಯಲ್ಲಿ ಬೆಣ್ಣೆಯಾಗುತ ತೇಲು ರಾಮು ರಾಮಾ (ಅರಳು. ೪೬೧). [~ ? ಅಣ್$_1$]

**ಅಣ್ಣಿ$_3$** (ನಾ). (ದಕ – ಪ್ರಾದೇ) ಎಣ್ಣೆಗೆಸರು ; ಕಳ್ಳಕೆಸರು : ಜೋಕೆ, ಅತ್ತಕಡೆ ಕಾಲಿಡಬೇಡ ; ಅಣ್ಣಿ ಇದೆ, ಆನೆಯಾದರೂ ಹೂತುಹೋಗುತ್ತದೆ (ರೂಢಿ). [~ ಅಣ್$_1$]

**ಅಣ್ಣಿಕೆ** (ನಾ). ಪರಿಹಾರ ; ನಿವಾರಣೋಪಾಯ (ಸ್ಯಾಂಡರ್). [?]

**ಅಣ್ಣಿಗ$_1$** (ನಾ). ಒಬ್ಬನ ಹೆಸರು : ಮಹಬಲಿ ವಂಸ ನಿಜಪನ ಮಗ ಅಣ್ಣಿಗ ಇರ್ಬರರಸುಗಳಲ್ಲಿ ಪಡೆದು ದೇವಭೋಗ (ಎಕ. IX, ಬೆಂಗಳೂ. ೪೦–೬ ; 830) ; ಶ್ರೀಮನ್ನೊಱಂಬಾಧಿರಾಜ ಅಯ್ಯಪದೇವನ ಮಗ ಅಣ್ಣಿಗ ಬೀರನೊಱಮ್ಪು (ಎಕ. X, ಗೋರೀಬಿ. ೪–೩ ; 920) ; ಸಿರಿವುರದೊ ಅಣ್ಣಿ[ಣ್ಣಿ]ಗನೊಳ್ ಕಾದಿ (ಮೈಆರಿ. ೧೯೩೨, ೩೭–೩ ; 950). [ಅಣ್ಣ$_1$ + –ಇಗ]

**ಅಣ್ಣಿಗ$_2$** (ನಾ). ೧. ಹೆಣ್ಣಿಗ ; ಹೇಡಿ (ಕಿ). ೨. ತಂತ್ರಿ ; ಮೋಸಗಾರ (ಸ್ಯಾಂಡರ್). ೩. ಕಾಮುಕ (ಸ್ಯಾಂಡರ್).

[←? ತಮಿ. ಅಣ್ಣಗನ್ = ನಪುಂಸಕ]

**ಅಣ್ಣಿಗಧನಂಜಯ** (ನಾ). ಒಬ್ಬನ ಹೆಸರು : ಸ್ವಸ್ತಿಶ್ರೀ [ಪ್ರವರ] ಮೇರು ಅಣ್ಣಿಗಧನಞ್ಜಯನ್ವವನ × × × ಆ ಮಹೇಶ್ವರ ಸಾಹಣಿಯ ಮಗ (ಸೌಇಇ. IX–ii, ೭೦೭–೧ ; 800 ?). [ಅಣ್ಣಿಗ$_1$ + ಧನಂಜಯ]

**ಅಣ್ಣೆಗೆಱೆ**, ಅನ್ನಿಗೆಱೆ (ನಾ). ಒಂದು ಊರಿನ ಹೆಸರು : ಬೆನೆಯಿತವುರಂ ಅಣ್ಣೇ[ಣ್ಣ]ಗೆಱೆ ಇಟ್ಟಗೆ . . . ಏತೇಷಾಂ (ಇಆ. VII, ೨೨೦–೨೮ ; 658) ; ಸ್ವಸ್ತ್ಯಕಾಲವರ್ಷ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟಾರರ ರಾಜ್ಯಮುತ್ತರಾಭಿವೃದ್ಧಿ × × × ಅ[ಣ್ಣೆ][ಣ್ಣೆ]ಗೆಱೆ (ಸೌಇಇ. XI–i, ೩೩–೧ ; 875) ; ಚಂಥಾವುರ ಅರಗ ಚಂದ್ರಗುತ್ತಿ ಅಣ್ಣೆಗೆಱೆ ಹುಲಿಗೆಱೆ ನಿಡುಗಲ್ಲು (ಎಕ. V, ಬೇಲೂರು. ೭೫–೭೧ ; 1382). **ಅನ್ನಿಗೆಱೆ :** ಬೆಳ್ವೊಲ ಮೂನೂಱುಮನಾಳುತ್ತುಮನ್ನಿ(ಣ್ಣೆ ?)ಗೆಱೆಯೊಳಿರೆ (ಇಆ. XII, ೨೧೯–೧೯ ; 814).

**ಅಣ್ಣೆ[ಣ್ಣೆ]ಗೆಱೆಯಗೋಲು** = ಅಣ್ಣೆಗೆಱೆ ಎಂಬ ಊರಿನಲ್ಲಿ ಬಳಕೆಯಲ್ಲಿದ್ದ ಒಂದು ಅಳತೆಯ ಕೋಲು : ಪುರಿಗೆಱೆ ನಾಡೊಳಗಣ ಮುೞ್ತೆಯವಾಡದ ತೆಂಕ್ಕಣ ಪೊಲದೊಳಗೆಯಣ್ಣೆ[ಣ್ಣೆ]ಗೆಱೆಯ

ಗೋಲೋಳ್ಸರ್ವ್ವಬಾಧಾಪರಿಯರಂ ಸರ್ವ್ವನಮಶ್ಯಂ ಕೊಟ್ಟ ಮತ್ತರ್ ನೂಱು (ಸೌಇಇ. XI-i, ೪೮–೧೧ ; 1002). [ಅಣ್ಣೆ$_1$ + ಕೆಱೆ]

**ಅಣ್ಣಿಸು** (ಕ್ರಿ). ಬಯಸುವಂತೆ ಮಾಡು; ಆಸೆಪಡಿಸು; ಆಕರ್ಷಿಸು: ಅಣ್ಣೆನೆಂಬಣ್ಣಗಳ ಅಣ್ಣಿಸುವುದು ಹೊನ್ನು. ಅಣ್ಣೆನೆಂಬಣ್ಣಗಳ ಅಣ್ಣಿಸುವುದು ಹೆಣ್ಣು. ಅಣ್ಣೆನೆಂಬಣ್ಣಗಳ ಅಣ್ಣಿಸುವುದು ಮಣ್ಣು (ಗಣಭಾ. ೪೨–೫; ವಚಶಾ. I, ೨೪೭–೧೧). [ಅಣ್$_1$ + – ಇಸು$_3$]

**ಅಣ್ಣು$_1$** 'ಅಣ್$_1$' ನೋ.

**ಅಣ್ಣು$_2$** (ನಾ). ಹೆಂಗಸು (?). [← ? ತೆಲು. ಅನ್ನು = ಹೆಂಗಸು]

**ಅಣ್ಣು$_3$** (ನಾ). ಮಕ್ಕಳನ್ನು ಪ್ರೀತಿಯಿಂದ ಸಂಬೋಧಿಸುವಾಗ ಬಳಸುವ ಮಾತು (ಸ್ಯಾಂಡರ್). [< ಅಣ್ಣ$_1$]

**ಅಣ್ಣೆ$_1$** (ನಾ). ಬಯಕೆ (?): ಸುರಕುಜದಾವೆಗಳುಮಂ ಸೊಗಯಿಪ ಸುರಭಿಯ ಹಿಂಡುಗಳಂ ಚಿಂತಾಮಣಿಯುರುತರಕರಿಗಳನವರಿವರೆನ್ನದೆ ಮೊಗನೋಡದೆ ಕೊಟ್ಟು ಎರೆವಣ್ಣೆಯ ತೀರ್ಪಱಿದುಂ ವಿತರಣ ಸುರಗಿರಿ ಮನೆಮನೆದಪ್ಪದೆ ಬಂದಿರೆ [ವರತರ]ಚಾಗದ ಮಹಿಮೆಯ ಮೆಱೆದಂ ಜನಕಂ ವಸುಧಾಜನಕಂ (ಕುಮುರಾ. ೪–೫೭). [< ಅಣ್$_1$]

**ಅಣ್ಣೆ$_2$** (ನಾ). ಅಣ್ಣೆಸೊಪ್ಪು (?): ಅವನುಪಕಾರಮನಾಂ ಪೇ[ೞ] ವೇೞ್ಪುದೆ ನಮ್ಮ ತಿರಿದು ತಂದುಣ್ಬಶನಕ್ಕವ[ರ]ಣ್ಣೆ ಸೂಱಿಮೊನೆಯೆನಿಸು ವೆಣ್ಣೆಯುಂ ಬಂಗುಮಾದ ಕಟಿಯುಂ ಪೇೞ್ಗುಂ (ಸುಕುಮಾ. ೨–೬೮). [ದೇ.?]

**ಅಣ್ಣೆ$_3$** (ನಾ). ಏಟು; ಹೊಡೆತ; ಬೆರಳಿನ ಗೆಣ್ಣುಗಳ ಮೇಲೆ ಹೊಡೆಯುವುದು (ಸ್ಯಾಂಡರ್).

**ಅಣ್ಣೆಹಾಕು** = ಬೆರಳ ಗೆಣ್ಣುಗಳ ಮೇಲೆ ಹೊಡೆ: ಅಂಕೆಗಳು ತಪ್ಪಿದರೆ ಅಯ್ಯನವರು ಹತ್ತಣ್ಣೆಗಳ ಹಾಕುವರು (ಸ್ಯಾಂಡರ್). [?]

**ಅಣ್ಣೆ$_4$** (ಗು). ಉತ್ತಮವಾದ; ಶ್ರೇಷ್ಠವಾದ. 'ಅಣ್ಣೆನೂಲು' 'ಅಣ್ಣೆವಾಲ್' ಪರಾ. [?]

**ಅಣ್ಣೆಕಲ್$_1$**, ಅಣೆಕಲ್ಲು, ಅಣ್ಣೆಕಲ್ಲು (ನಾ). ಆಟವಾಡುವಾಗ ಮೇಲಕ್ಕೆ ಹಾರಿಸಿ ಕೈಯೊಡ್ಡಿ ಹಿಡಿದುಕೊಳ್ಳುವ ಸಣ್ಣ ಕಲ್ಲು; "ತಿಱಿಕಲ್ಲು": "ತಿಱಿಕಲ್ಲೆನುತುಂ ಕವಿಗಳ್ ನೆಱೆ ಪೇೞಲ್ಕಣ್ಣೆಕಲ್ಲದಕ್ಕುಂ" (ಕವಿಕಂ. ೨೨೭); ಬೆಸಸಬಹುದೇ ರಾಯ ನನಗೀ ಬೆಸನನಕಟಾ ಚಂದ್ರಸೂರ್ಯರ ಹೊಸೆದು ಮುಕ್ಕದ್ರಿಗಳ ಕಿತ್ತಾಡಣ್ಣೆಕಲ್ಲುಗಳ ವಿಸದಿಯನು ಕುಡಿಯೆನಲು ಮಾಡೆನೆ (ಸಾಳ್ವಭಾ. ೧೨–೪೮); ಉಣ್ಣದುರಿವತಿ ಬಲರ ಶಿರಗಳನಣ್ಣೆಕಲ್ಗಳನಾಡಿ (ಕೋಗಯ. ೨೫–೮೭). **ಅಣೆಕಲ್ಲು** (ಸ್ಯಾಂಡರ್). **ಅಣ್ಣೆಕಲ್ಲು**: ದಣ್ಣನೆ ದಣಿದಾಡುವಣ್ಣೆಕಲ್ಲವರುಱೆ ಹಣ್ಣೆ ಕೊಂಡಿಟ್ಟಾಡುವವರು (ಭೈರವೇ. ೪–೧೬೪). 'ಅಣ್ಣೆಕಲ್ಲಾಟ', 'ಅಣ್ಣೆಕಲ್ಲಾಡು' ಪರಾ. [ಅಣ್ಣೆ$_0$ + ಕಲ್$_2$]

**ಅಣ್ಣೆಕಲ್$_2$** (ನಾ). ಆಲಿಕಲ್ಲು: "ಆಲಿಕಲ್ಲು; ಆಲಿವರಲು–ಅನೆಕಲ್ಲು, ಅಣ್ಣೆಕಲ್ಲು, ಕರಕವು" (ಗಂಗಾಮ. ೨೮). [ಅಣ್ಣೆ$_0$ ? + ಕಲ್$_2$]

**ಅಣ್ಣೆಕಲ್ಲಾಟ**, ಅಣೆಕಲ್ಲಾಟ (ನಾ). ಅಣ್ಣೆಕಲ್ಲುಗಳಿಂದ ಆಡುವ ಆಟ: ನೆಗಹಿ ಗಗನಕೆ ಬೀಳ್ವ ಗಿರಿಗಳ ತೆಗೆದು ಹಸ್ತದೊಳಣ್ಣೆಕಲ್ಲಾಟಗಳ ನಾಡುತ ತಂದು ಕೊಟ್ಟರು ವಾಯುವೇಗದಲಿ (ಅನಂರಾ. ೫–೪–೪೦). **ಅಣೆಕಲ್ಲಾಟ** (ಸ್ಯಾಂಡರ್). [ಅಣ್ಣೆಕಲ್$_1$ + ಆಟ]

**ಅಣ್ಣೆಕಲ್ಲಾಡಿಸು** (ಕ್ರಿ). ಅಣ್ಣೆಕಲ್ಲಿನ ಹಾಗೆ ಎಸೆದಾಟಕ್ಕೆ ಒಳಗಾಗುವಂತೆ ಮಾಡು; ತಿರಿಕಲ್ಲಾಡಿಸು; ಎಸೆದಾಡು: ದಿಕ್ಪಾಲರ ಬೆರ್ಚಿಸುತುಮುಗಮನೋರಂದದಿಂದಣ್ಣೆಕಲ್ಲಾಡಿಸುತುಂ ಪರ್ವಿತ್ತುರ್ವಿಂ ತಳೆದೊಗೆದ ಗಂಭೀರಭೇರೀನಿನಾದಂ (ಶಾಂತೀಶ್ವ. ೧೫–೩೪).
[ಅಣ್ಣೆಕಲ್$_1$ + ಆಡು$_1$ + –ಇಸು$_3$]

**ಅಣ್ಣೆಕಲ್ಲಾಡು** (ಕ್ರಿ). ೧. ಅಣ್ಣೆಕಲ್ಲಾಟವನ್ನು ಆಡು. ೨. ಅಣ್ಣೆಕಲ್ಲಾಟದ ಕಲ್ಲುಗಳ ಹಾಗೆ ಎಸೆದಾಡು; ತಿರಿಕಲ್ಲಾಡು: ಬೆಟ್ಟನಶ್ರಮದಿನಾಟಂದಣ್ಣೆಕಲ್ಲಾಡಿದಂ ತಿಱಿಕಲ್ಲಾಡಿದನೇನತಿಪ್ರಬಳನೋ (ಎಕ. VI, ಚಿಕ್ಕಮ. ೨೧–೧೭; 1178); ಅಲಿವರಲಂ ಪೊಯ್ದಣ್ಣೆಕಲ್ಲಾಡಲುಂ ತಿಱಿಕಲ್ಲಾಡಲದೇಂ ತಗುಳ್ದುವೊ ಮನಸ್ಸಂಪ್ರೀತಿಯಿಂ ಚಾತಕಂ (ಅನಂಪು. ೯–೯); ಬೆಟ್ಟನಣ್ಣೆಕಲ್ಲಾಡುವ ಚಂದ್ರನಂ ಪಿಡಿದು ಸೂಡುವ (ಸೂಕ್ತಿಸು. ೮–೩೭೬); ಅಣ್ಣತಮ್ಮಂದಿರಿರ್ವರುಂ . . . ಬಿಲ್ಗೊಂಡೆದ್ದು ಕೋಪದಿಂದಣ್ಣೆಕಲ್ಲಾಡಿದರ್ ಪಟುಭಟರ ತಲೆಗಳಂ ಬಾಣಪ್ರಯೋಗದಿಂದೆ (ಜೈನಿಭಾ. ೨೧–೧೨); (ಕಬ್ಬಿಕಾ. ೨೫೫; ಭರಚ. ೪೯–೧೨೬; ಚಿಬಪು. ೨೫–೨೭ ನೋ). [ಅಣ್ಣೆಕಲ್$_1$ + ಆಡು$_1$]

**ಅಣ್ಣೆಕಲ್ಲು** 'ಅಣ್ಣೆಕಲ್$_1$' ನೋ.

**ಅಣ್ಣೆಕಲ್ಲೊಡ್ಡು** (ನಾ). ಆಟವಾಡುವುದಕ್ಕಾಗಿ ಕುಪ್ಪೆಹಾಕಿ ಜೋಡಿಸಿದ ಅಣ್ಣೆಕಲ್ಲುಗಳ ರಾಶಿ: ತೊಳಪ ಸಾಲಗ್ರಾಮಫಲದಿಂದೆ ಬಾಲಕಂ ಕೆಳೆವಕ್ಕಳೊಡನಾಟದಶ್ಮಗೋಳಕಮೆಂದು ತಿಳಿದಣ್ಣೆಕಲ್ಲೊಡ್ಡುಗಳನಾಡುತದಱಿಂದೆ ಗೆಲ್ದೆಲ್ಲರಂ ಜಱೆಯುತೆ (ಜೈನಿಭಾ. ೨೮–೨೪).
[ಅಣ್ಣೆಕಲ್$_1$ + ಒಡ್ಡು$_2$]

**ಅಣ್ಣೆನೂಲು** (ನಾ). ಶ್ರೇಷ್ಠವಾದ ದಾರ; ಹಸನಾದ ನೂಲು: ಹತ್ತು ಬೆರಳಿಗೆ ವಜ್ರಕೆತ್ತಿಸಿದುಂಗುರ ಗುತ್ತಾಪಟ್ಟೆಗೆ ಹಚ್ಚಿಮಣಿಯಣ್ಣೆನೂಲೂದುತ್ತಾ ಮಾಯಾರಾಣಿ ಸುರಹೊನ್ನ ಪಾದಾ ಸರಶಕ್ತೀ ಬಿರುದುಗಳಾ ಧರಿಸಿದಳು ಕೊರಳಿಗೆ (ಶ್ರೀಕೃಪಾ. ೫೪).
[ಅಣ್ಣೆ$_4$ + ನೂಲು$_2$ (< ನೂಲ್$_2$)]

**ಅಣ್ಣೆಪಲ್ಯ** (ನಾ). ಒಂದು ಬಗೆಯ ಕಾಯಿಪಲ್ಯ (ಸ್ಯಾಂಡರ್).
[ಅಣ್ಣೆ$_2$ + ಪಲ್ಯ]

**ಅಣ್ಣೆಯ** 'ಅಣ್ಣಯ್ಯ' ನೋ.

**ಅಣ್ಣೆವಾಲ್**, ಅಣ್ಣೆವಾಲು (ನಾ). ಶ್ರೇಷ್ಠವಾದ ಹಾಲು; ಶುದ್ಧವಾದ ಹಾಲು: ಸವಿಗೆ ಸವಿಯೆನಿಪ ಮೇಲೋಗರಂಗಳನಿಕ್ಕಿ ರಾಗದಿಂದಣ್ಣೆವಾಲ್ ಸಕ್ಕರೆಗಳಂ ಬಡಿಸಿ (ಬಸರ. ೭–೧೧೩); ಪರದನಣ್ಣೆವಾಲಂ ಕೆನೆಮೊಸರಂ ಸದ್ಯಘೃತಮುಮಂ ಮನಮೊಸೆದುಣಲಿಕ್ಕಲ್ (ಧರ್ಮಪ. ೮–೭); ಆಣ್ಣೆವಾಲಿಂ ಬೆರಸಿದ ಸಕ್ಕರೆಯ ತುಯ್ಯಲಿಕ್ಕಿದರರೆಬರ್ (ನಳಚಂ. ೪೪೧); ಕನ್ನೆ ತಂದಿಟ್ಟಣ್ಣೆವಾಲಂ ಮುನ್ನವೀಂಟುತ ಕಲ್ಲಿನಾಥಂ ತನ್ನುದರದೊಳಗಿರಿಸಿದಂ ಕೋಳೂರ ಕೊಡಗೂಸ (ಬಸವು. ೧೪ ಸೂ). **ಅಣ್ಣೆವಾಲು**: ಅಣ್ಣೆವಾಲಿನಿದ ರಾಯಂಚೆಯುಂಬಂತೆ ಬಕನುಣ್ಣಬಲ್ಲದೆ (ಮದೇಪು. ೧–೧೭). [ಅಣ್ಣೆ$_4$ + ಪಾಲ್]

**ಅಣ್ಣೆವಾಲು** 'ಅಣ್ಣೆವಾಲ್' ನೋ.

**ಅಣ್ಣೆವಾಲೆರೆ** (ಕ್ರಿ). ಶ್ರೇಷ್ಠವಾದ ಹಾಲನ್ನು ಹೊಯ್ಯಿ; ಸೊಗಸಾದ ಹಾಲನ್ನು ಸುರಿ: ರಾಜಾನ್ನದಕ್ಕಿಯನ್ನ ಶಾಕವು ಅಣ್ಣೆವಾಲೆರೆದ ಪಾಯಸವು (ಚಂದ್ರಹಾ. ೨–೩೧). [ಅಣ್ಣೆವಾಲ್ + ಎರೆ$_1$ (< ಎಱೆ$_1$)]

**ಅಣ್ಣೆವಾಲೂತಣ** (ನಾ). ಶ್ರೇಷ್ಠವಾದ ಹಾಲಿನಿಂದ ಸಿದ್ಧಪಡಿಸಿದ ಆಹಾರ ಪದಾರ್ಥವುಳ್ಳ ಔತಣ; ಉತ್ಕೃಷ್ಟವಾದ ಭೋಜನ ಸಮಾರಂಭ: ಅಣ್ಣೆವಾಲೌತಣ ಮಾಡಿ ವ್ಯಂತರಿಗರನುಣ್ಣದೂಟದಿ ತಣಿಪಿದನು (ಭರಚ. ೫೩–೭೨). [ಅಣ್ಣೆವಾಲ್ + ಔತಣ]

**ಅಣ್ಣೆಸೊಪ್ಪು** (ನಾ). ಹೊಲಗಳಲ್ಲಿ ಕಳೆಯಾಗಿ ಬೆಳೆಯುವ ಒಂದು ಜಾತಿಯ ಗಿಡದ ಸೊಪ್ಪು: "ಅಣ್ಣೆಸೊಪ್ಪು" (ಮೈಔಗಿ. ೧೯–೩೫೦): ಕುಯ್ದು ತಂದ ಆಣ್ಣೇಸೊಪ್ಪು ಕೊಂಡುಕೊಂಡ ರಾಗಿ (ಹುಟ್ಟಹ. ೧೯೯).
[ಅಣ್ಣೆ$_2$ + ಸೊಪ್ಪು]

**ಅಣ್ಪೆಕ್ಕು** (ಕ್ರಿ). (ಸುಗಂಧದ್ರವ್ಯವನ್ನು) ಲೇಪಿಸು; ಬಳಿ; ಸವರು:

ಅಣ್ಪಿಕ್ಕಿದ ಮಲಯಜಮುಂ ಕೂಡೆ ಲಾವಣ್ಯಶೋಭಾಸ್ಪದಮಪ್ಪಂಗಂಗಳೊಳ್ ನಾಣ್ ಪೊಡರೆ ತೊಡೆಯುತಂ (ಕಾದಂಬ. ೫೧೭); ಬಿಸಿಲೊಳ್ ಬೆಮರ್ತ ವಿದ್ಯಾಧರಪ್ರಮದೆಯರ ಕದಪುಗಳ ಕುಂಕುಮದ್ರವಮನಾತ್ಮಪ್ರಸಾರಿತಕರಂಗಳಿಂ ತೆಗೆದಣ್ಪಿಕ್ಕಿಕೊಂಡನೆಂಬಂತೆಯುಂ (ವರ್ಧಪು. ೬–೨೩ ವ); ವೀಳೆಯಂಗುಡುವ ಮೇಲುದಂ ಪಿಡಿವಣ್ಪಿಕ್ಕುವ ತಲೆಯುಂ ಪಿರ್ಕುವ (ಪಾರ್ಶ್ವಪು. ೧೨–೬ ವ); ಮಿದುಳಿಂದಣ್ಪಿಕ್ಕಿ ಬಂಬಲ್ಗುರುಳ ಪಿಣಿಲ ಪೂಮಾಲೆಯುಂ ಸೂಡಿ (ರಸರ. ೨–೧೨೪). [ಅಣ್ಪು$_1$ + ಇಕ್ಕು]

**ಅಣ್ಪಿಸು** (ಕ್ರಿ). = ಅಣ್ಪಿಕ್ಕು : ಜವಾದಿಯನಣ್ಪಿಸುತೆಳದುಪ್ಪುಳಮಂ ಸೋದಿಸಲೆನುತೊರ್ವಳ್ ಕಿಱುವೆರಲುಗುರ್ಗೊನೆಯಿಂ ಕರ್ದುಕುತಿರೆ (ಜಯಕಾ. ೧–೬೧). [ಅಣ್ಪು$_1$ + -ಇಸು$_3$]

**ಅಣ್ಪು$_1$, ಅಂಪು** (ನಾ). ೧. ಬಳಿಯುವುದು; ಸವರುವುದು; ಲೇಪಿಸುವುದು; ಲೇಪನ: "ಅಣ್ಪೆಂದು ಲೇಪನಕ್ರಿಯೆ" (ಕಶಸಾ. ೨೪–೪೯೬); "ಅಣ್ಪೆಂದು ಲೇಪನಕುಸಿರ್ವರ್" (ಕವಿಕಂ. ೨೦೦); ಮೃಗಮದದಣ್ಪು ಜಾಜಿಯ ಬಟಿಲ್ಮುಡಿ . . . ಎಂಬಿವು ಮನಂಗೊಳೆ (ಆದಿಪು. ೧೨–೧೨); ಎಳವಸುಱಾಗೆ ಬಾಳಕಿಗೆ ಬೆಳ್ಪಡರ್ದಂಗದೊಳಣ್ಪನಿಕ್ಕಿದರ್ ಮಳಯಜಪಂಕದಿಂ (ಅರ್ಧನೇ. ೪–೯೪); ಹರಿಚಂದನದಣ್ಪಿಂ ಹಂದೆ ಸುಧಾಕರಕಿರಣಾಮೃತಮಂ ಕಾಗೆ ಸರೋವರ ಸರಸಿಜಮಂ ಕಪ್ಪೆ ಒಲ್ಲದೊಡೇಂ ಗಳಕೆಟ್ಟುವೆ (ಕುಮುರಾ. ಪೀ. ೩೪); ಕಪ್ಪುರವಳುಕಂ ಘುಸೃಣಮನೊಳ್ಗತ್ತುರಿಯಂ ಚಂದನರಸಮಂ ಪನಿನೀರೊಳ್ ಮೇಳಿಸಿ ಸಂತಸದಣ್ಪಿಂಗೈದುಂ (ಉದ್ಭದೇ. ೩–೪೬); ಪರಿಪರಿಯುಡೆತೊಡವುಗಳ ಪೂಸರಗಳ ಪರಿಮಳದಣ್ಪು ಬಯಸದೆ ಗರತಿಯರಿದನುಳಿದಿರಲಾಗದೆಂಬಲಂಕರಣ ಮಾತ್ರವ ಧರಿಸಿಹಳು (ಹದಿಬ. ೭–೯). ೨. ಮೈಗೆ ಲೇಪಿಸಿಕೊಳ್ಳುವ ಸುಗಂಧದ್ರವ್ಯ; ಲೇಪನವಸ್ತು: ಬೆಳ್ನೊರೆ ಸಿರಿಕಂಡದಣ್ಪಿನೆ ವಿರಾಜಿಸೆ (ರಾಜಶೇ. ೨–೬). **ಅಂಪು**: ೧. "ಅಂಪೆಂದನುಲೇಪನದೊಳ್" (ಕರ್ಣಾನಿ. ೨೮); ಮುಡಿಯಿಸುವಂಪ[ಪಾಠಾಂ. ವಣ್ಪ]ನಿಕ್ಕುವಡಿಯೂಡುವ ಕನ್ನಡಿದೋರ್ಪ (ವರ್ಧಪು. ೫–೪೪). [ಅಣ್$_1$ + -ಪು]

**ಅಣ್ಪು$_2$** (ನಾ). ನಂಟತನ; ಬಾಂಧವ್ಯ; ಸ್ನೇಹ (ಕಿ).
[← ? ತಮಿ. ಮಲ. ಅನ್ಪು = ಪ್ರೀತಿ, ಪ್ರೇಮ, ಭಕ್ತಿ]

**ಅಣ್ಪುಗೆಯ್** (ಕ್ರಿ). ಬಳಿ; ಲೇಪಿಸು: ಮಿಱುಗುವ ವಜ್ರದೋಲೆಗಳ ಪಾಲೆಗಳೊಳ್ ತಳೆದಣ್ಪುಗೆಯ್ದು ಬಾಂದೊಱೆನೊರೆಯಂತೆ ತೋರ್ಪ ಸಿರಿಖಂಡಮನೊರ್ವ ಬೆಡಂಗಿ (ರಾಜಶೇ. ೭–೮).
[ಅಣ್ಪು$_1$ + ಗೆಯ್ (< ಕೆಯ್$_1$)]

**ಅಣ್ಪುವಿಡಿ** (ಕ್ರಿ). ಲೇಪನವನ್ನು ಹೊಂದು; ಬಳಿದುಕೊ: ಶ್ರೀಪಾಲ್ಗುರ್ಜರ ಭಕ್ತಿಯಣ್ಪುವಿಡಿದಾ ಶ್ರೀಶೈಲಮಂ ಮಾಣ್ದು (ಎಕ. XVI, ಗುಬ್ಬಿ, ೬೨–೪ ; 1896). [ಅಣ್ಪು$_1$ + ಪಿಡಿ$_1$]

**ಅಣ್ಮ** (ನಾ). ಪ್ರೀತಿಪಾತ್ರ (?): ಶ್ರೀಮತು ವೀರಬಲ್ಲಾಳದೇವ ಮಚ್ಚಿ ಸೂಳಾಯ್ತು ಕನ್ನಯನಣ್ಮ ಮುದ್ದಗಲುಡಂಗಪೆತ್ತಿ × × × ಗವುಡಕಯ (ಎಕ. XVI, ತಿಪಟೂ. ೩೯–೧೩ ; 1300). [< ? ಅಣ್$_1$]

**ಅಣ್ಮು$_1$, ಅಮ್ಮು$_1$, ಅೞ್ಮು** (ಕ್ರಿ). ೧. ಪೌರುಷವನ್ನು, ಪರಾಕ್ರಮವನ್ನು ತೋರಿಸು: "ಅಣ್ಮು – ಪೌರುಷೇ" (ಶಮುಧಾ); ಒಡನೆ ದರಿದ್ರರೆಲ್ಲಮಭಿಮಾನಿಗಳಪ್ಪೊಡಂ . . . ಆಜಿಯೊಳುರ್ಚಿ ಕೈದುವಂ ಪಿಡಿವವರೆಲ್ಲಮಣ್ಮುವೊಡಮಿಾ ಯುಗಮೇಕೆ ಕನಿಷ್ಠಮಪ್ಪುದೋ (ಕಾವ್ಯಸಾ. ೪೨೩; ಶೂದ್ರಕ); ಸಂಗ್ರಾಮದೊಳಂಜಿದ ವಿದ್ಯಾಧರರ್ಗಭಯಂಗೊಟ್ಟಣ್ಮಿ ಕಂಡರ ತಲೆಯೊಳ್ ಕೆಯ್ಯಿಟ್ಟು ಅಂಜದಿರಿಮಂಜದಿರಿಮೆಂದು (ಶಾಂತಿಪು. ೪–೫೭ ವ); ಗೆಲಲಾರ್ಪೊಡಿಱಿದು ಗೆಲ್ವುದು ಗೆಲಲಾಱದೊಡಣ್ಮಿ ಸಾವುದಾಳ್ಗಿನಿತೆ ಗುಣಂ (ಗದಾಯು. ೨–೨೧); ಕಿಚ್ಚನಿಕ್ಕಿ ಜಲಮಂ ಮೇಣಕ್ಕೆ ಪಾಯ್ದಣ್ಮಿ ಸತ್ತೀ ದುಃಖಾಗ್ನಿಯನೋವೊ ನೀಗದಿರಲಿಂದೀ ಬಾೞ್ಕೆ ಮೇಣ್ ಪಟ್ಟಮೋ (ಧರ್ಮಾಮೃ. ೪–೮೨). ೨. ಸಮರ್ಥವಾಗು; ಶಕ್ತವಾಗು: ಅಣ್ಣನ ಕಣ್ಸನ್ನೆಗೆ ಮಿಾಱಲ[ಣ್ಮ]ದೆ ಸಮಂತಿರ್ದರ್ ಪೃಥಾಪುತ್ರರ್ (ಪಂಪಭಾ. ೭–೯); ಭಯಂಕರಧ್ವಾನಮಂ ಕೇಳ್ದಲ್ಲಿಯುಂ ನಿಲಲಣ್ಮದೆ ಓಡಿ ಬರ್ಪುದುಂ (ಪಂಚತಂ. ೪೧–೭); ಶಿವನ ವಿವಾಹೋನ್ನತಿಯಾಕೃತಿಯೆಂದೆನೆ ಭಾರತಿಯೆನಗನುಕೂಲೆಯಾಗದಿರಲಣ್ಮುವಳೇ (ಗಿರಿಕ. ೧–೯); ಮಂಡಳಿಕ ಮಾರ್ತಂಡಂಗೆ ಮೆಯ್ದೋಱಲಣ್ಮದೆ (ಪುಷ್ಪಪು. ೪–೫). **ಅಮ್ಮು$_1$**: ೧. ಆಹುದೆನಲಮ್ಮೆನು ಅಲ್ಲೆನಲಮ್ಮೆನು (ಪ್ರಭುಪ. ೪೨–೩೨); ಬವರದೊಳಮ್ಮಿ ಕಾದುವರಿಭೂಭುಜರಂ ಭುಜರಮ್ಯಖಡ್ಗದಿಂದಮಿಱಿದಗಲ್ಚುವಂ ಹರಣದಿಂ (ಕೊಲ್ಹಾಶಾ. ೯–೩೫ ; 1170); ಉಮ್ಮಳಿಯಪ್ಪಿನವರಿಬಲವಮ್ಮಿ ಕಱುತ್ತಿಱಿದನುಱದೆ ನಾಯಕ ಮೈಲಂ (ಎಕ. VII, ಹೊನ್ನಾಳಿ. ೩೮–೫; 1196). ೨. ತಲೆಯುಂ ಬಾಗಿ ದೂರದೊಳ್ ಪೊಡವಟ್ಟು ಕೆಲಕ್ಕೆ ಪೋಗಲಮ್ಮ[ಣ್ಮ ?]ದಗಲೆ ಕುಳ್ಳಿರ್ದ ಚಂದ್ರಾಪೀಡನಂ ನೋಡಿ (ಕಾದಂಬ. ೪೭೪); ದೃಷ್ಟಿಮಾರೆ ನಿಮ್ಮ ನೋಡಲೊಡನೆ ಬೆಟ್ಟದಷ್ಟು ತಪ್ಪುಳ್ಳೊಡೆ ಮುಟ್ಟಲಮ್ಮುವು ನೋಡಾ (ಮಹದೇ. ೯–೧); ಆಮಱಿವೊಡಮುಸಿರಲಮ್ಮೆವಾಳ್ದನ ಗತಿಯಂ (ಶಮದ. ೨೨೪ ಪ್ರಯೋ); ತಂದೆತಾಯ್ಗಳ ಮಾತುಗಳ ನಾನೆಂದುವುಂ ಧಿಕ್ಕರಿಸಲಮ್ಮೆನು (ಬಸಪು. ೨೪–೧೫); ರಿಪುಬಲದೇಱ ನಾಲಗೆ ಹೊಗಳಲಮ್ಮದು (ಕುವ್ಯಾಕ.೧೧–೧೫); ಅಮ್ಮನಯ್ಯೋ ಸ್ತ್ರೀಯರೊಳು ಮನ ನೆಮ್ಮಿಹುದು (ಸಾಳ್ವಭಾ. ೧೦–೫೨). **ಅೞ್ಮು**: ೧. ತುೞಬಱವಹನಿಣಿಂಗರಾಯಂಗೞ್ಮಿ ಸತ್ತ (ಎಕ. X, ಮುಳಬಾ. ೨೬–೧೦; 890); ತಳ್ತಿಱಿದು ಅೞ್ಮಿ ಸತ್ತಂ (ಎಕ. IX, ಕಾನಕಾ. ೪೮–೧೮ ; 899). [ದೇ.]

**ಅಣ್ಮು$_2$, ಅಮ್ಮು$_2$** (ನಾ). ಪೌರುಷ; ಪರಾಕ್ರಮ; ಸಾಹಸ: "ಅಣ್ಮೆಂದೆನೆ ಪೌರುಷದೊಳ್" (ಕರ್ಣಾನಿ. ೧೩); "ಸಾಸ ದಪ್ಪಮದಟೂಪರ್ಣ್ಮೆಂದೆನ್ನಲ್ ಪರಾಕ್ರಮಾಖ್ಯಂ" (ಕವಿಕಂ. ೧೨೫); ಭುವನಭವನಕ್ಕೆಲ್ಲಮಾಯುಮುಮುಳವುಮಱಿವುಮಣ್ಮುಂ ಪುಟ್ಟುವಂತೆ ಪುಟ್ಟಿ (ಪಂಪಭಾ. ೧–೬೭ ವ); ರವಿನಂದನ ನನ್ನಿ ಚಾಗಮಣ್ಮೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾದೈ (ಗದಾಯು. ೫–೧೭); ಏತಱ ಮಾತೊ ಭೂತಳದೊಳರ್ಥವಿಹೀನನ ಶೌಚಮಣ್ಮು ಪೆರ್ಮಾತು ಕುಲಂ ನೆಗೞ್ತೆಯಿನಿತುಂ ವಿಫಲಂ (ಕಾವ್ಯಾವ. ೫೩); ನಿನ್ನಂ ಗೆಲ್ದಲ್ಲದೆ ಕಾೞ್ಗೆಡೆದೆನಾದೊಡೀ ಬಿಲ್ ಊಱುಂಗೋಲಕ್ಕೆ ಅಣ್ಮು ಕಣ್ಮಾಯಮಕ್ಕೆ (ರಾಮಾಶ್ವ. ೯೨–೨೦). **ಅಮ್ಮು$_2$**: ಭರಂಗೆಯ್ದು ನಿಂದಲ್ಲಿಯಮ್ಮುಂ ಚಲಮುಂ ಪೆರ್ಚುತ್ತಿರಲು ಪೊಯ್ಸಿದಂ (ಎಕ. V, ಹಾಸನ. ೬೫–೩೩ ; 1557). [< ಅಣ್ಮು$_1$]

**ಅಣ್ಮುಕಾಱ** (ನಾ). ಪರಾಕ್ರಮಿ; ಸಮರ್ಥ; ಸಾಹಸಿ: ಧರೆ ಲೇಸೆಂಬಾಸೆಗಾಱಂ . . . ಸಿರಿಯೊಳ್ ಕಟ್ಟಣ್ಮುಕಾಱಂ ವಿತತವಿತರಣೋತ್ಸಾಹದೊಳ್ ಗೆಲ್ಲಕಾಱಂ (ಅರ್ಧನೇ. ೧–೩೭). [ಅಣ್ಮು$_2$ + -ಕಾಱ]

**ಅಣ್ಮುಗಿಡು** (ಕ್ರಿ). ಪರಾಕ್ರಮ, ಪೌರುಷ ನಾಶವಾಗು; ಶಕ್ತಿಹೀನವಾಗು: ಅನ್ವಯಾಗತ ನಭೋಗತಿಗಳ್ ಬಿಲ್ಗಂ ಸರಳ್ಗಮಣ್ಮುಗೆಟ್ಟು ಮಿಟ್ಟೆಡೆಯುಮಾಗಿ ತೊಟ್ಟನೆ ನೆರೆದುರುಳೆ (ಶಾಂತಿಪು. ೪–೩೩ ವ); ತೃಷೆಯೊದವಿಂಗಳ್ಕಿ ಬಾಯ್ವಿಟ್ಟು ಬೇಗಂ ಕುಸಿದೋರಂತಣ್ಮುಗೆಟ್ಟೋಡದೆ . . . ನಿಂದಂ ಯೋಗಿವಂದ್ಯಂ (ಧರ್ಮಾಮೃ. ೧೧–೨೦೧).
[ಅಣ್ಮು$_2$ + ಕಿಡು (< ಕೆಡು)]

**ಅಣ್ಮುಗುಂದು** (ಕ್ರಿ). ಪರಾಕ್ರಮಗುಂದು; ಪೌರುಷ ಕಡಮೆಯಾಗು: ಪೂಣ್ದು ಪೂಣ್ಕೆ ನೇರ್ಪಡೆ ನಡೆವನ್ನೆಗಂ ನಡೆದನಳ್ಕದೆ ಬಳ್ಕದೆ ತನ್ನೊಡಲ್ ಪಡಲ್ವಡುವಿನಮಣ್ಮುಗುಂದನೆ ದಲೇನಭಿಮಾನಧನಂ ಸುಯೋಧನಂ (ಪಂಪಭಾ. ೧೩–೯೭). [ಅಣ್ಮು$_2$ + ಕುಂದು$_1$]

**ಅಣ್ಮುಗೆ,** ಅಮ್ಮುಗೆ (ನಾ). ಪರಾಕ್ರಮ; ಪೌರುಷ; ಸಾಹಸ: ನಗೆಯಲ್ತೇ . . . ಬಿಟ್ಟ ಕಣ್ಣಿಗಿದಂತಾ ಭಯದಿಂದೆ ಬೆಂದ ಮದನಸಂಗಂದಾಮಹಾಭಾಗರಣ್ಮುಗೆಯೆಂದೀ ವಿಭು ಬೊಪ್ಪದೇವನಲೆವಂ ಸತ್ವಾಧಿಕಾನ್ವಾಘಮಂ (ಎಕ. VII, ಶಿಕಾರಿ. ೧೯೭–೫೩; 1181). **ಅಮ್ಮುಗೆ:** ಕಾಳಗದಮ್ಮುಗೆಯ ವಿಕ್ರಮದ ವಿವರಣವಿದ್ಯೆ ಫಲಿಸುವುದೇ (ಕುವ್ಯಾವಿ. ೮–೫೩); ಎಡೆಗೊಂಡುದೇತಕೆ ದೌರ್ಮನಸ್ಯದ ದಾ ವ ಶಿ ಖಿ ಮನದಮ್ಮುಗೆಯ ಸುರಕುಜವನು (ನಿಭಾಗ. ೩–೧–೬). [ಅಣ್ಮು₁ + -ಗ್ಗೆ]

**ಅಣ್ಮುಟ್ಟು** (ನಾ). ಸೋಕುವಷ್ಟು ಹತ್ತಿರ; ಅತ್ಯಂತ ಸಮೀಪ: ಅ ಸ ದ ಳ ಮಿ ಾ ಕಾರ್ಯವೆಂಬಲ್ಲಿಗಂ ಸಂಗರಮಣ್ಮುಟ್ಟೆಂದುದೆಂಬಲ್ಲಿಗ ಮೆರ್ದೆಗದರುಂ ಬೀಡಿಗೆಂಬಲ್ಲಿಗಂ . . . ಬಾಪ್ಪುರೆ ಪಾರ್ಥೇನ್ದ್ರೇಜ್ಯ ಭೀಮಾನ್ತಕ ಬಲಿಮನು ತಾನೆಂದೊಡಿಂ ಧನ್ಯನಾವಂ (ಎಕ. VII. ಶಿಕಾರಿ. ೨೯೭–೨೫; 1180) [ಅಣ್ಮುಟ್ಟಿನ್ = ತೀರ ಹತ್ತಿರಕ್ಕೆ ಬಂದಿತು ಎನ್ನುವ ಹಾಗೆ ಆಗು]; ನರಸಿಂಹಂ ನರಸಿಂಹನಂತೆ ಮುನಿಸಿಂ ಮಾಜಾಂತ ವೀರಾರಿ ಭೂಪರನಣ್ಮುಟ್ಟಿನೊಳಿಂತು ಕಂಡೊಡೆ ಬಳಿಕ್ಕಮ್ಮಮ್ಮ ಪೋಬ್ದಿಕ್ಕಿ . . . ಬೀರಸಿರಿಗೆತ್ತಂ ತೋರಣಂಗಟ್ಟನೇ (ಎಕ. VI. ತರೀಕೆ. ೪೨–೧೮; 1205).

**ಅಣ್ಮುಟ್ಟಾಗು** = ಅತ್ಯಂತ ಸಮೀಪವಾಗು: ಮೊದಲೊಳ್ ಪುಟ್ಟಿದ ಭವಬದ್ಧ ವೈರದಿಂ ದಿತಿಸುತನಣ್ಮುಟ್ಟಾಗೆ ಬಂದು ಕಡನಂ ಕೊಟ್ಟರ್ ಕೊಳ್ವಂತೆ ನಾಗಪಾಶದಿನಾಗಳ್ . . . ಕಟ್ಟಿ (ಶಾ ಂ ತಿ ಪು. ೮–೪೯ ವ); ತತ್ಕಟಕದೊಳ್ ಬೀಡಿಂಗೆ ಪಾಂಗಾಗೆ ತದ್ವಿಜಯಶ್ರೀಕಟಕೋಪಮಂ ಕಟಕಮಣ್ಮುಟ್ಟಾಗೆ ಬಿಟ್ಟಿರ್ಪಿನಂ (ಶಾಂತಿಪು. ೧೧–೨೯).
[ಅಣ್₁ + ಮುಟ್ಟು₁]

**ಅತ್** (ನಾ). ಸಂಸ್ಕೃತ ವ್ಯಾಕರಣ ಪ್ರಕ್ರಿಯೆಯ ಮೇರೆಗೆ ಅಕಾರವನ್ನು ನಿರ್ದೇಶಿಸುವ ಒಂದು ರೀತಿ; ಹ್ರಸ್ವ ಅಕಾರ: ಮಮಿಂಕೆಯದದೊಳ್ ಎಂದಿಂತೀ ತೆಱದಿಂದೇಟಕ್ಕುಂ ಖ್ಯಾತವಿಭಕ್ತಿಗಳ್ (ಕಾ ವ್ಯಾ ವ. ೮೪); ಪಿಂತೆ ಪೇಟ್ದ ನಾನಾ ತೆಱದ ಲಿಂಗಂಗಳ್ಗೆ ಪರವಾಗಿ ನಾವು ವಿಭಕ್ತಿಗಳ್ ಮ್, ಅಮ್, ಇಮ್, ಕೆ, ಅತ್, ಅತ್, ಒಳ್ ಎಂದು . . . ಏೞಾಗಿ ಕಾರಕ ವಶದಿಂ ಪತ್ತುಗುಂ (ಶ ಮ ದ. ೯೩ ವೃತ್ತಿ). 'ಅದಂತ' ಪರಾ. [ಸಂ.]

**ಅತ ಏವ** (ಅ). ಆದ್ದರಿಂದಲೇ; ಆದಕಾರಣವೇ: ಅತ ಏವ ಗದಾಯುದ್ಧವು ಸತ್ಯಾಶ್ರಯನ ಆಳಿಕೆಯಲ್ಲಿ ತಾನೆ ರಚಿತವಾಯಿತೆಂದು ಕಂಡಿತವೇ ಸರಿ (ಮೂರುಉ. ೫೪). [ಸಂ. (ಅತಃ + ಏವ)]

**ಅತಂತ್ರ** (ಗು). ೧. ತಂತಿಯಿಲ್ಲದ; ಹಗ್ಗವಿಲ್ಲದ. ೨. ಕೇಳುವವರೂ ಮೇಲ್ವಿಚಾರಕರೂ ಇಲ್ಲದ; ಅನಾಯಕವಾದ; ಅವ್ಯವಸ್ಥಿತವಾದ: ಅಲ್ಲಿ ಕೇಳುವವರೇ ದಿಕ್ಕಿಲ್ಲ, ಎಲ್ಲಾ ಅತಂತ್ರವಾಗಿ ಬಿಟ್ಟಿದೆ (ರೂಢಿ). ೩. ಅಸ್ಥಿರವಾದ; ಬಿಗಿಯಿಲ್ಲದ; ಭದ್ರವಿಲ್ಲದ: ಅತಂತ್ರವಾದ ಕೆಲಸ ಬಾಳಿಕೆ ಬರಲಾರದು (ಸ್ಟ್ಯಾಂಡರ್). [ಸಂ.]

**ಅತಂದ್ರ** (ಗು). ತೂಕಡಿಕೆಯಿಲ್ಲದ; ಆಲಸ್ಯವಿಲ್ಲದ; ಜಾಗರೂಕನಾದ: ನಿರ್ವಾಣಸಾಮ್ರಾಜ್ಯನಿವಾಸಕ್ಕೊರ್ವನಂತರ್ಮುಖನಭಿಮುಖನಾದಿತ್ಯಬಿಂಬಕ್ಕೆ ಯೋಗೀಂದ್ರನತಂದ್ರಂ ನಿರ್ನಿಮೇಷಂ ನಗನಿಕಟ ಹಟದ್ರತ್ನಕೂಟಂಬೊಲಿರ್ದಂ (ಪಂರಾಮಾ. ೨–೧೪); ಯಾಮಿನಿಮಾತೆಯ ವಂಚಿಸಿ ಚಂದ್ರ ಹಣಿಕಿದನಿದೆಕೋ ಮುಗಿಲೊಳತಂದ್ರ (ಗೋ ಕು ನಿ. ೨–೮). [ಸಂ.]

**ಅತಃ ಪರ₁** (ಗು). ೧. ಇಲ್ಲಿಂದ ಮುಂದಿನ. (ನಾ). ೨. ಇದಕ್ಕಿಂತ ಬೇರೆಯ ವಸ್ತು: ಮಾಡಿಕೋ ಮತ್ತೊಬ್ಬ ಸತಿಯಂ ಕೂಡದೆನ್ನಂ ಬಿಟ್ಟು ಕಳೆ ಶಶಿಚೂಡನಲ್ಲದತಃಪರವನಾನಱಿಯೆನಲ್ಲದೊಡೆ ನಾಡ ಮಾತುಗಳೇಕೆ (ಬಸವು. ೫೧–೯). [ಸಂ. (ಅತಃ + ಪರ)]

**ಅತಃ ಪರ₂** (ಅ). ಅಲ್ಲಿಂದ ಮುಂದೆ; ಅಲ್ಲಿಂದ ಮುಂದಕ್ಕೆ.
[ಸಂ. ಅತಃಪರಂ (ಅತಃ + ಪರಂ)]

**ಅತಟ** (ಗು). ೧. ತೀರವಿಲ್ಲದ; ದಡವಿಲ್ಲದ. ೨. ಕಡಿದಾದ. (ನಾ). ೩. ಕಮರಿ; ಪ್ರಪಾತ. [ಸಂ.]

**ಅತನು** (ಗು). ೧. ಸಣ್ಣಗಿಲ್ಲದ; ಕೃಶವಲ್ಲದ. 'ಅತನೂದರ' ಪರಾ. (ನಾ). ೨. ದೇಹವಿಲ್ಲದವನು; ಮನ್ಮಥ: ಅತನುವಿರೋಧಮುಂ ತನುವಿರೋಧಮುಮೊಪ್ಪುಗುಮತ್ತಿಮಬ್ಬೆಯೊಳ್ (ಅಜಿಪು. ೧–೪೯). [ಸಂ.]

**ಅತನುವೈರಿ** (ನಾ). ಮನ್ಮಥನ ಶತ್ರು; ಶಿವ: ಕುಳಿರ್ಮಲೆಮಗಳ ಮೆಯ್ಗೆ ಮೆಯ್ಗೊಟ್ಟು ಮೆಯ್ಗೆಟ್ಟತನುವೈರಿಗಡ ನೋಡೆ ನಿನ್ನ ಹೊಲಬಾರ್ಗೆ ಹೊಗಲರಿದರಿದು (ಉದ್ಭದೇ. ೩–೨೫). [ಅತನು + ವೈರಿ]

**ಅತನುಹರ** (ನಾ). ಮನ್ಮಥನನ್ನು ಧ್ವಂಸಮಾಡಿದವನು; ಶಿವ: ತಾರಾಚಳಮನಸದಳಂ ನುಣ್ಣಿಪಂತೆೊರ್ವಳತ್ಯುತ್ತಮ ದಿವ್ಯಾಕಾರೆ ಕುಳ್ಳಿರ್ದತನುಹರನನಾರಾಧಿಸುತ್ತಿರ್ದಳಾಗಳ್ (ಕಾದಂಪೂ. ೬೫).
[ಅತನು + ಹರ]

**ಅತನೂದರ** (ನಾ). ೧. ಕೃಶವಲ್ಲದ ಹೊಟ್ಟೆ. ೨. ಕೃಶವಲ್ಲದ ಹೊಟ್ಟೆಯುಳ್ಳ ವ್ಯಕ್ತಿ; ನಡು ತೆಳ್ಳಗಿಲ್ಲದೆ ತುಂಬಿಕೊಂಡಿರುವ ಪ್ರಾಣಿ: ಸುನಿವೃತ್ತಾಯಾಮಕಾಂಡನನತನೂದರನಂ... ಜಯಮಂ ಜಯಪರ್ವತಯಾನನಾಗಮಂ (ಶಾಂತಿಪು. ೧೦–೧೪೨ ವ, ೧೪೪). [ಅತನು + ಉದರ]

**ಅತರ್ಕಿತ** (ಗು). ೧. ಊ ಹಿ ಸ ದಿ ರು ವ; ಯೋಚಿಸದೆ ಇರುವ. ೨. ಅನಿರೀಕ್ಷಿತ. [ಸಂ.]

**ಅತರ್ಕ್ಯ** (ಗು). ಊಹಿಸಲು ಆಗದ, —ಶಕ್ಯವಿಲ್ಲದ; ಆಲೋಚನೆಗೆ ಮೀರಿದ; ಭವ್ಯವಾದ. [ಸಂ.]

**ಅತರ್ಕ್ಯಗೋಚರ** (ಗು). ೧. ಊಹೆಗೆ ಮೀರಿದಷ್ಟು ಸಂಖ್ಯೆಯ ಗೋವುಗಳ ಸಂಚಾರದಿಂದ ಕೂಡಿದ. ೨. ಊಹಿಸುವುದಕ್ಕಾಗಲಿ ಇಂದ್ರಿಯಗಳಿಂದ ತಿಳಿಯುವುದಕ್ಕಾಗಲಿ ಶಕ್ಯವಿಲ್ಲದ: ೧,೨. ಮತ್ತಮಾ ಮಹಾವನಂ . . . ನಾಕಿನಿಳಯದಂತೆ ಅನೂನಾಪ್ಸರೋಗಣಪ್ರಣೂತಮುಮತರ್ಕ್ಯಗೋಚರಮುಂ (ಚಂದ್ರಪು. ೫–೫೨ ವ).
[ಅತರ್ಕ್ಯ + ಗೋಚರ]

**ಅತಲ,** ಅತಳ (ನಾ). ೧. ತಳವಿಲ್ಲದ್ದು. ೨. ಏಳು ಅಧೋಲೋಕಗಳಲ್ಲಿ ಒಂದು. ೩. ಒಂದು ನರಕದ ಹೆಸರು (ಕಿ). ೪. ಶಿವ. **ಅತಳ:** ೨. ಆದ್ದುದತಳಕೆ ಅವಸಿಯೆನೆ ಹೊದಱಿದ್ದು ನಡೆದುದು ದಂತಿಘಟೆ (ಕುವ್ಯಾದ್ರೋ. ೯–೧೩). [ಸಂ.]

**ಅತಲಕುತಲ** (ನಾ). ಗದ್ದಲ; ಅಕ್ರಮ; ಅವ್ಯವಸ್ಥೆ; ಗೊಂದಲ: (ಕಿ); "ಕೋಲಾಹಲ, ಜಗಳ, ದೊಡ್ಡ ಸದ್ದು" (ಜಾನಕೋ).
[←? ತೆಲು. ಅತಲಕುತಲಮು = ವ್ಯತ್ಯಸ್ತ]

**ಅತಲಜಲ** (ನಾ). ಅಧೋಲೋಕದ ನೀರು; ಪಾತಾಳಜಲ: ಇದುವರೆಗೂ ಕೂಡಿಟ್ಟ ಸುಕೃತವನ್ನೆಲ್ಲ ಅತಲಜಲದಲ್ಲಿ ಈಡಾಡಬೇಡ (ಅಗ್ರಹ. ೩–೩೬). [ಅತಲ + ಜಲ]

**ಅತಲಸ್ಪರ್ಶ,** ಅತಳಸ್ಪರ್ಶ (ನಾ). ತಳವನ್ನು ಮುಟ್ಟಲು ಶಕ್ಯವಿಲ್ಲದ್ದು; ಅಗಾಧವಾದದ್ದು. **ಅತಳಸ್ಪರ್ಶ:** "ಅತಳಸ್ಪರ್ಶಮಗಾಧಂ" (ಹಲಾಯು. ೧೧೭–೨೭). [ಅತಲ + ಸ್ಪರ್ಶ]

**ಅತಸಿ** (ನಾ). ಅಗಸೆ: "ಅತಸೀ, ಉಮಾ, ಕ್ಷುಮಾ – ಈ ೩ ಎಳ್ಳಗಸೆ" (ಹಲಾಯು. ೯೫–೪೨೮). [ಸಂ. ಅತಸೀ]

**ಅತಸೀಕುಸುಮ** (ನಾ). ಅಗಸೆಯ ಹೂವು: ಅತಸೀಕುಸುಮಗಾತ್ರನಂ ಕಮಲನೇತ್ರನಂ ಸ್ಮಿತರುಚಿರಶುಭರದನನಂ . . . ಕಲಿ ಸುಧನ್ವಂ ಕಂಡನು (ಜೈಮಿಭಾ. ೧೩–೨೬). [ಸಂ. (ಅತಸೀ + ಕುಸುಮ)]

**ಅತಸೀಪುಷ್ಪ** (ನಾ). = ಅತಸೀಕುಸುಮ : ಅತಸೀಪುಷ್ಪಾವಭಾಸಂ ತನು ವೆಸೆವಿನೆಗಂ ಕಿಂಕಿರಾತಪ್ರಸೂನಪ್ರತಿಮಂ ಪೀತಾಂಬರಂ ರಂಜಿಸುವಿನಂ (ಜಗವಿ. ೨-೯೯). [ಸಂ. (ಅತಸೀ + ಪುಷ್ಪ)]

**ಅತಳ** 'ಅತಲ' ನೋ.

**ಅತಳಸ್ಪರ್ಶ** 'ಅತಲಸ್ಪರ್ಶ' ನೋ.

**ಅತಾಂತ** (ಗು). ಬಳಲಿಕೆಯಿಲ್ಲದ; ಆಯಾಸವಿಲ್ಲದ. [ಸಂ.]

**ಅತಾಂತಂ** (ಅ). ಶ್ರಮವಿಲ್ಲದೆ; ಆಯಾಸವಿಲ್ಲದೆ: ಅತಿದಿವಿಜೇಂದ್ರ ವಿಳಾಸನೊಳತಾಂತಮಿಾತನೊಳಡಂಗಿ . . . ದಕ್ಷಿಣದಿಶಾಸತಿಗೆ ವಿಳಾಸವತಿ ಸವತಿಯಾಗಿರು ಸುಖದಿಂ (ಶಾಂತಿಪು. ೫-೧೪೪). [< ಅತಾಂತ]

**ಅತಾಪಿಸು** 'ಅಥಾಪಿಸು' ನೋ.

**ಅತಾಲವ್ಯ** (ಗು). ೧. ತಾಲವ್ಯವಿಲ್ಲದ. ೨. ತಾಲವ್ಯವಲ್ಲದ. (ನಾ). ೩. ಇಕಾರ ಚವರ್ಗ ಯಕಾರ ಶಕಾರಗಳಿಲ್ಲದ ವಾಕ್ಯ ಅಥವಾ ಪದ್ಯ. [ಸಂ.]

**ಅತಿ₁** (ಗು). ೧. ತುಂಬ ಹೆಚ್ಚಾದ; ಅತಿಶಯವಾದ: ಅತಿನಿರ್ಭರ ಭಕ್ತಿಭರದಿನತ್ಯಾದರದಿಂ ಪರಿಣಾಮಶುದ್ಧಿಯಿಂ ವಂದಿಸಿದಂ (ಸುಕುಮಾ. ೪-೨೦); ಪತಿಸೇವೆಯೊಳಂತು ಪಸಿದ ಪಾರ್ವನ ಮರೆದತಿವಿಳಂಬವ ನಾಚರಿಸೆ (ಹದಿಬ. ೨-೩೯). ೨. ಮಿಾರಿದ; ಮಿತಿಮಿಾರಿದ: ಅತಿಯಾಸೆ ಗತಿ ಕೆಡಿಸಿತು (ಗಾದೆ). (ನಾ). ೩. ಹೆಚ್ಚು; ಅತಿಶಯ: ಮಣ್ಣಿನ ಮೇಲಿನ ಮೋಹ ಅತಿಗಳ ಮುಟ್ಟಿದು ಹರಿವರಿಯಾದಾಗಲೆ ದಣಿಯಿತ್ತು (ನಗೆಮಾ. ೪೯); ಇರುಳಿನತಿಗೆ ಬಳಲಿ ಬೆಳಗ ಮಲಗಿ ಕಳೆವನೊ (ಮಾಂದಳ. ೧೧). [ಸಂ.]

**ಅತಿ₂** (ಅ). ತುಂಬ ಹೆಚ್ಚಾಗಿ; ಅಧಿಕವಾಗಿ; ಮಿತಿಮಿಾರಿ : ಆ ಹುಡುಗನನ್ನು ಅತಿ ಹೊಗಳಬೇಡ; ಅವನ ಜಂಬ ಮತ್ತಷ್ಟು ಹೆಚ್ಚೀತು (ರೂಢಿ). [ಸಂ.]

**ಅತಿಕರ** (ನಾ). ೧. ಗುಂಪು; ಸ್ತೋಮ : "ನಿಕುರುಂಬಮುತ್ಕರಂ . . . ತತಿ ವ್ರಾತಮತಿಕರಂ [ಪಾಠಾಂ. ತರಂ] . . . ಸ್ತೋಮಕ್ಕೆ ನಾಮಮಕ್ಕುಂ" (ಮಂಗರಾ. ೧೨೬-೧). ೨. ಅತಿಕ್ರಮ; ಮಿಾರಿದ್ದು : ಈ ಜನರನತಿ ಶಯದಿ ಸಂತಸಂಗೊಳಿಪುದಿದು ಸದ್ಧರ್ಮಕತಿಕರಮಿದಲ್ಲೆನುತ ಗುರು ಬೆಸಸೆ (ವೆಂಕಾರಾ. ೨-೩೪-೧೮). [ಸಂ.]

**ಅತಿಕರಿಸು** (ಕ್ರಿ). ೧. ಅತಿಕ್ರಮಿಸು; ಮಿಾರು; ದಾಟು : ಹುರಿವು ದಾಮಿಷವನತಿಕರಿಪುದಾಸೆಗಳನಿಟ್ಟುರುಹುವುದು ಮಾಯಾವಿಡಂಬತತಿಯಂ (ಸಾನಂಚ. ೧-೩೯); ವಿಶ್ವವಿನೋದಿಯಂಘ್ರಿಸರೋಜವನೆಸೆದುದು ಜಗವನತಿ ಕರಿಸಿ (ನಿಭಾಗ. ೮-೧೮-೨೬). ೨. ಹೆಚ್ಚಿಸು; ಅಧಿಕವಾಗಿ ಮಾಡು : ಮಲಿನವಸ್ತ್ರಕೆ ಕಾರ ಸೇರಿಸಿ ಮಲಿನತೆಯನತಿಕರಿಸಿ ಮತ್ತಂ ಮಲಿನತೆಯ ನೆಲ್ಲವನಲುಂಬುತೆ ಕಳೆವನತಿಕರಿಸಂ (ಸೌನಂದ. ೧೦-೪೨). [ಅತಿಕರ + -ಇಸು₁]

**ಅತಿಕರ್ಮ** (ನಾ). ಕೆಟ್ಟ ಕೆಲಸ; ಪಾಪ : ಕರ್ಮಪಾಶವನುಜ್ಜಿ ಪಜ್ಜಿದು ದುಷ್ಕರ್ಮರಜ್ಜುಗಳಂ ತೊಡುವುದತಿಕರ್ಮವಲ್ಲ್ಯೆ (ಬಸವು. ೩-೪೮). [ಅತಿ₁ + ಕರ್ಮ]

**ಅತಿಕರ್ಮಿ** (ನಾ). ಬಹಳ ಕೆಟ್ಟ ಕೆಲಸಗಳನ್ನು ಮಾಡಿದವನು; ಪಾಪಿ: ದೊರಕುವುದೆ ನಿಃಸ್ಪೃಹತೆಯೆನಗತಿಕರ್ಮಿಗಕಟಕಟ (ಬಸವು. ೨೦-೨೭). [ಸಂ. ಅತಿಕರ್ಮಿನ್]

**ಅತಿಕಾಯ** (ನಾ). ೧. ಅಳತೆಗೆ ಮಿಾರಿದ ಶರೀರವುಳ್ಳವನು. ೨. ರಾವಣನ ಮಕ್ಕಳಲ್ಲಿ ಪ್ರಸಿದ್ಧನಾದ ಒಬ್ಬನ ಹೆಸರು: ಲಕ್ಷ್ಮಣ ನಾಹವದೊಳತಿಕಾಯನನು ಗೆಲಿದೊಲಿಸಿದನು ಭುಜವಿಜಯಭಾಮಿನಿಯ (ತೊರರಾ. ೬-೩೪ ಸೂ). [ಸಂ.]

**ಅತಿಕಾರ** (ನಾ). ಅಧಿಕಾರ: ಭಂಡಾರಕ್ಕೆ ಹಿರಿಯ ತಿಮ್ಮಪ್ಪಯ್ಯನವರು ಅತಿಕಾರಾವಿರಲು (ಎಕ. IX, ಚನ್ನಪ. ೭೪-೬೦; 1535). [ಸಂ. ಅಧಿಕಾರ]

**ಅತಿಕಾರಿ** (ನಾ). ಅಧಿಕಾರಿ : ಇಂತಪ್ಪುದಕ್ಕೆ ಸಾಕ್ಷಿಗಳು ಅತಿಕಾರಿ ಕಾಂತ ಸೆಟ್ಟಿ ಚಟ ಬಿಕ್ರಸೆಟ್ಟಿ (ಎಇ. XX, ೮-೫೮; 1556). [ಸಂ. ಅಧಿಕಾರಿನ್]

**ಅತಿಕಾರ್ಶ್ಯ** (ನಾ). ತುಂಬ ಕೃಶವಾಗಿರುವುದು. 'ಅತಿಕಾರ್ಶ್ಯಂದಳೆ' ಪರಾ. [ಅತಿ₁ + ಕಾರ್ಶ್ಯ]

**ಅತಿಕಾರ್ಶ್ಯಂದಳೆ** (ಕ್ರಿ). ತುಂಬ ಕೃಶವಾಗು; ಬಹಳ ಬಡವಾಗು : ಆ ರಾಜಶಿಖಾಮಣಿಯಗಲಲ್ ನವನೀರಜನಳಲೋಚನೆಯಭಿನವ ಭಾಗೀರಥಿಯೆನೆ ಸೊಗಯಿಪ ಸತಿಯತಿಕಾರ್ಶ್ಯಂದಳೆದೊಪ್ಪಿದಳು (ಜಯಕಾ. ೪-೫೫). [ಅತಿಕಾರ್ಶ್ಯ + ತಳೆ₁]

**ಅತಿಕೃತಿ** (ನಾ). [ಛಂದ] ಅಕ್ಷರ ಛಂದಸ್ಸಿನಲ್ಲಿ ಇಪ್ಪತ್ತೈದನೆಯ ಛಂದಸ್ಸಿನ ಹೆಸರು; ಒಂದು ಪಾದದಲ್ಲಿ ಇಪ್ಪತ್ತೈದು ಅಕ್ಷರಗಳಿ ರುವ ಸಮವೃತ್ತಗಳ ಸಮುದಾಯ: ೧ ಉಕ್ತೆ, ೨ ಅತ್ಯುಕ್ತೆ . . . ೨೪ ಸಂಕೃತಿ, ೨೫ ಅತಿಕೃತಿ, ೨೬ ಉತ್ಕೃತಿ ಎಂದಿಪ್ಪತ್ತಾಱುಂ ಛಂದಂ ಗಳಕ್ಕುಂ (ಛಂದೋಂಬು. ೧-೫೫ ವ). [ಅತಿ₁ + ಕೃತಿ]

**ಅತಿಕ್ರಮ** (ನಾ). ೧. ಕ್ರಮವನ್ನು ಮಿಾರುವುದು, —ಉಲ್ಲಂಘಿಸು ವುದು. ೨. ನಿಯಮ ವಿರುದ್ಧವಾದದ್ದು : ಇವಯ್ದನ್ನಂಗಳತಿಕ್ರಮಂ ಗಳ್ ಭೋಗೋಪಭೋಗಪರಿಮಿತಗತಿಯೊಳ್ (ಸುಕುಮಾ. ೯-೨೪). ೩. ಮರ್ಯಾದೆಯನ್ನು ಮಿಾರಿದ ನಡೆವಳಿಕೆ. [ಸಂ.]

**ಅತಿಕ್ರಮಣ** (ನಾ). ೧. ಹದ್ದು ಮಿಾರುವುದು; ಕ್ರಮವನ್ನು ಉಲ್ಲಂ ಘಿಸುವುದು. ೨. ಹಕ್ಕು ಇಲ್ಲದ ಕಡೆ ಹೋಗುವುದು. ೩. ಎಲ್ಲೆ ಮಿಾರುವುದು; ಅವಿಧೇಯತೆ. [ಸಂ.]

**ಅತಿಕ್ರಮಪ್ರವೇಶ** (ನಾ). ನಿಷೇಧಿಸಿರುವ ಸ್ಥಳಕ್ಕೆ ಪ್ರವೇಶಮಾಡು ವುದು : ಇಲ್ಲಿ ಅತಿಕ್ರಮಪ್ರವೇಶ ಮಾಡಿದವರು ಶಿಕ್ಷೆಗೆ ಗುರಿಯಾಗು ತ್ತಾರೆ (ರೂಢಿ). [ಅತಿಕ್ರಮ + ಪ್ರವೇಶ]

**ಅತಿಕ್ರಮಿಸು** (ಕ್ರಿ). ೧. ಮಿಾರು; ಉಲ್ಲಂಘಿಸು : ತಾಯ ವಚನ ಮನತಿಕ್ರಮಿಸಲಾಱದೆ (ವಡ್ಡಾರಾ. ೬೬-೧೬); ಕಿರಾತದೂತಂ ತನ್ನನತಿ ಕ್ರಮಿಸಿ ನುಡಿದುದರ್ಕೆ ಮುಳಿದು ಪರಾಕ್ರಮಧವಳನಿಂತೆಂದಂ (ಪಂಪಭಾ. ೮-೧೮ ವ); ಅವನೊರ್ವಂ ಸಜ್ಜನರ ಬುದ್ಧಿಯನತಿಕ್ರಮಿಸಿ ದುರ್ಜನರ ವಶದೊಳಿರ್ದಪಂ ಆತಂ ತಾನಿರ್ದ ಠಾವಿನಲ್ಲೆ ಹಗೆವರ್ಗೆ ಸಾಧ್ಯವಹಂ (ಪಂಚತಂ. ೧೦೨-೩). ೨. ಕಡೆಗಣಿಸು : ತಾಯಿದೆಸೆಯಿಂ ಬಂದನ್ವಯ ಶುದ್ಧಿಯದನಱಿದು ಕಂಡಾನೆ ಶುದ್ಧಜಾತಿಯನೆಂಬ ಗರ್ವದಿಂ ಧಾರ್ಮಿಕ ರನತಿಕ್ರಮಿಸುವುದು ಜಾತಿಮದಂ (ಶ್ರಾವಕಾ. ೧೧೦-೧೬). ೩. ದಾಟು : ಈ ಕ್ರಮದೊಳೆಚ್ಚಾಡುತಿರಲೊಂದು ಬಾಣದಿನತಿಕ್ರಮಿಸಿ ಹರಿಯಿಸಲ್ ದನುಜನಂದಾಕಾಶಚಕ್ರದೊಳ್ ರಥವೆರಸಿ ಪಾಱಿದಂ ಕೀಱಿದಂ ಕೋಪದಿಂ ಬೊಬ್ಬಿಱಿವುತೆ (ಚೆಬಪು. ೨೫-೨೦); ಈ ಯುದ್ಧಸಮುದ್ರ ವನ್ನು ಅತಿಕ್ರಮಿಸಿ ಧರ್ಮರಾಯನು ಇರುವ ತಾವಿಗೆ ರಥಾಶ್ವಗಳನ್ನು ಶೀಘ್ರವಾಗಿ ನಡೆಸು ಎನಲು (ಕೃವಾಕ. ೧೨೩). ೪. ಹೊರಹೊಮ್ಮು : ಚಮರೀಜಕಾಂತೆಯರ್ ಸಿತಚಮರದ ವಿಕ್ಷೇಪದಿಂದಮೆಸೆದರ್ ಭೂಪೋ ತ್ತಮನ ವರತನುವಿಂದಮತಿಕ್ರಮಿಸುವ ಲಾವಣ್ಯರಸದೊಳೋಲಾಡುವ ವೊಲ್ (ಕಾದಂಪೂ. ೪೭೩). [ಅತಿಕ್ರಮ + -ಇಸು₁]

**ಅತಿಕ್ರಾಂತ** (ಗು). ೧. ಮಿಾರಿದ; ಅತಿಕ್ರಮಿಸಿದ. ೨. ಮುಗಿದು ಹೋದ; ತೀರಿಹೋದ : ಆ ಸೋಮವಂಶದೊಳನೇಕರರಸುಮಕ್ಕಳು ಮತಿಕ್ರಾಂತರಾದರ್ (ಗದಾಯು. ೫-೪೪ ವ). (ನಾ). ೩. ಆನೆಯ ಏಳು ಮದಾವಸ್ಥೆಗಳಲ್ಲಿ ಒಂದು. ೪. (ನೃತ್ಯದಲ್ಲಿ) ಕೈಗಳನ್ನು ಮುಂದೆ ಚಾಚುವ ಒಂದು ಭಂಗಿ, —ನಿಲುವು (ಭನಾಟ್ಯ. ೧೦). [ಸಂ.]

**ಅತಿಕ್ಲೇಶ** (ನಾ). ೧. ಅಧಿಕವಾದ ಕ್ಲೇಶ, —ವ್ಯಥೆ. [ಅತಿ$_1$+ ಕ್ಲೇಶ]

**ಅತಿಗಂಡ** (ನಾ). [ಜ್ಯೋತಿ] ವಿಷ್ಕಂಭ ಮೊದಲಾದ ಇಪ್ಪತ್ತೇಳು "ಯೋಗ" ಗಳಲ್ಲಿ ಒಂದು. [ಅತಿ$_1$ + ಗಂಡ$_2$]

**ಅತಿಗಂಧ** (ನಾ). ೧. ಕಟುವಾದ ವಾಸನೆಯುಳ್ಳದ್ದು. ೨. ಗಂಧಕ. ೩. ಭೂತೃಣವೆಂಬ ಕಟುವಾದ ವಾಸನೆಯಿಂದ ಕೂಡಿದ ಹುಲ್ಲು; ಮಜ್ಜಿಗೆ ಹುಲ್ಲು (?). [ಅತಿ$_1$ + ಗಂಧ]

**ಅತಿಗಮನ** (ನಾ). ಮೀರುವುದು; ಅತಿಕ್ರಮಿಸುವುದು. [ಸಂ.]

**ಅತಿಗಮಿಸು** (ಕ್ರಿ). ಮೀರು; ಉಲ್ಲಂಘಿಸು: ಅತಿವಿಭೇದವನುಳಿದು ತತ್ವಜ್ಞಾನನಿಷ್ಠೆಯಲಿ ಕ್ಷಿತಿಪನೋಲಾಡುತ್ತವಸ್ಥಾತ್ರಿತಯ ಸಾಕ್ಷಿಯೆನಿಪ್ಪ ತುರ್ಯವನತಿಗಮಿಸಿ ನಿತ್ಯಾತ್ಮಸುಖಮಯನಾದನವನೀಶ (ನಿಭಾಗ. ೫–೧–೩೭). [ಅತಿಗಮನ + –ಇಸು$_3$]

**ಅತಿಗಳೆ** (ಕ್ರಿ). ೧. ಮೀರು; ಉಲ್ಲಂಘಿಸು: ದಿಟಪುಟವನತಿಗಳೆದು ಸಟೆಯ ಬಯಸುವರೆ (ಶೂನ್ಯಸಂ. ೨೩–೧೦); ಅನೃತಕೆ ಸೋಲಲಹುದೇ ತಮ್ಮ ತಂದೆಯ ಮಾತನತಿಗಳೆದು (ತೊರರಾ. ೨–೩–೧೬); ತನ್ನ ವಚನವ ನತಿಗಳೆಯಬೇಡೆಂದ (ನಿಭಾಗ. ೧೦–೩೧–೩೭). ೨. ಕಡೆಗಣಿಸು; ಅಲ್ಲಗಳೆ; ಜರೆ: ಪಾಂಡ್ಯನಂ ಪರಿಹರಿಸಿ ಪಾಂಡವರನರವರಿಸಿ ಕುರುಕುಳರ ನತಿಗಳೆದು ಮರುಪತಿಯನಸಕಳಿದು (ಜಗವಿ. ೧೭–೧೧೮); ಪರರನು ಹೊರೆದು ತನ್ನಾಶ್ರಿತರನತಿಗಳೆದಾಪ್ತಬಾಂಧವರ ಸರಕು ಮಾಡದೆ (ಕುವ್ಯಾಉ. ೩–೧೧೦); ರತಿಯ ಸೊಬಗತಿಗಳೆದು ಸುರಪನ ಸತಿಯ ರೂಪನು ಪಳಿದು (ಕೋಗಯ. ೧೧–೧೧); ಕ್ಷೋಣಿಯಮರರ ಪೊಗಳ ಕುಕವಿಗಳನತಿಗಳೆದು ಸತ್ಕವಿಗಳಂ ಧ್ಯಾನಿಸಿ (ಪರಶು. ೧–೧೭). ೩. ದೂರ ಮಾಡು; ಪರಿಹರಿಸು: ದೇಹದಿಚ್ಛೆಯನತಿಗಳೆದು ನಮ್ಮ ಸಕಳೇಶ್ವರ ದೇವನಂಗೋತು ನಾನೆಂಬ ಭ್ರಮೆಯಳಿಯಾ ಮರುಳೆ (ಸಮಾವ. ೪–೧೩); ಸಂಸಾರದ ಘಾತಕತನ ಅಜೀವಿನ ಮಾತಿನ ಮಾಲೆ ಉಭಯವನತಿಗಳೆಯದೆ ಅಜೀಯಬಾರದು (ಮಧುವ. ೯೪); ಎನ್ನ ಜನ್ಮವ ತೊಡೆದ ನೀ ಧರ್ಮಿ ಎನ್ನ ಜನ್ಮವನತಿಗಳೆದ ನೀ ಧರ್ಮಿ ಎನ್ನ ಭವಬಂಧನವ ನೀಕರಿಸಿದೆಯಾಗಿ ಶಿವನೇ ಗತಿಮತಿಯೆಂದು ನಂಬಿದೆನಯ್ಯ (ಬಸವ. ೪೮೧). ೪. (ಕಾಲವನ್ನು) ಕಳೆ, —ತಳ್ಳು: ವಿರಹಾಕುಳಿತಹೃದಯನು ದಿನ ಹಲವನತಿಗಳೆವುತಿದ್ದನು (ನಿಭಾಗ. ೧೦–೮೦–೪೬). ೫. (ಕಾಲ) ಮುಗಿದು ಹೋಗು, —ಕಳೆದು ಹೋಗು: ಶತಕವಿಪ್ಪತ್ತೈದು ವರುಷಗಳತಿಗಳೆದ ವಿಂದಿನಲಿ (ನಿಭಾಗ. ೧೧–೧೧–೩೭). [ಅತಿ$_1$ + ಕಳೆ$_1$]

**ಅತಿಗಳೆಯ** (ನಾ). ಕೈ ಮೀರಿದ್ದು; ಅತಿಕ್ರಮಿಸಿದ್ದು; ಕಳೆದು ಹೋದದ್ದು: ಅತಿಗಳೆಯಮಾದ ಕಾರ್ಯಂ ಹದಕೆ ಬರ್ಪುದೇ ಗತ ಜೀವನೇನ ಖಲು ಸೇತುಬಂಧವೆಂಬ ನೀತಿಯಿಂ ಬಾಲಕರಿರಾ (ಸಮ್ಯಕೌ. ೨–೩೪). [ಅತಿಗಳೆ + –ಅ$_7$]

**ಅತಿಗಳೆಯಿಸು** (ಕ್ರಿ). ಕಡೆಗಣಿಸುವಂತೆ ಮಾಡು; ತಿರಸ್ಕರಿಸುವಂತೆ ಮಾಡು: ಸುರಭಿವಿಲೇಪನ ಸುರುಚಿರ ರತ್ನಾಭರಣಮನತಿಗಳೆಯಿಸಿ ತಲೆಯೋಡೆಲುಗುರುಳ ತೊವಲ್ದೂವೆಗಳೀಶನ ಸಾಮ್ಯಪ್ಯಂ ಬಡೆವಂತೆ (ಜಯಕಾ. ೧–೧೯). [ಅತಿಗಳೆ + –ಇಸು$_3$]

**ಅತಿಗಟಿ** (ಕ್ರಿ). ಮೀರು; ತಿರಸ್ಕರಿಸು: ಘನಜಘನವಿಭಕುಂಭ ವಿಭ್ರಮ ಮನತಿಗಟಿಯೆ (ಪುಷ್ಪಪು. ೯–೬೦). [ಅತಿ$_1$ + ಕಟಿ$_1$]

**ಅತಿಚದುರ** (ನಾ). ತುಂಬ ಚದುರ; ಬಹಳ ಜಾಣ: ಅತಿಚದುರನೆಂ [ವ್ಯಾಕಾಂ. ಅತಿಚತುರನೆನ್] (ಶಮದ. ೨೨೦ ಪ್ರಯೋ). [ಅತಿ$_1$+ ಚದುರ]

**ಅತಿಚದುರೆ** (ನಾ). ತುಂಬ ಚದುರೆ; ಬಹಳ ಜಾಣೆ: ರತಿಕಲೆಯೊಳತಿ ಚದುರೆ ಅತಿಮಿತಿಯು ಮಾತಿನೊಳು (ಸರ್ವಜ್ಞ. ೧೬೫೩). [ಅತಿ$_1$ + ಚದುರೆ]

**ಅತಿಚರೆ** (ನಾ). ೧. ಮೀರಿ ನಡೆಯುತಕ್ಕವಳು; ಚಪಲಸ್ವಭಾವದ ಹೆಂಗಸು. ೨. ಕಾಶ್ಮೀರದಲ್ಲಿ ಬೆಳೆಯುವ ಬೆಟ್ಟದಾವರೆ. [ಸಂ. ಅತಿಚರಾ]

**ಅತಿಚಾರ** (ನಾ). ಮೀರಿ ನಡೆಯುವುದು; ಅತಿಕ್ರಮಿಸಿದ ನಡೆ; ಶಾಸ್ತ್ರಕ್ಕೂ ಪದ್ಧತಿಗೂ ವಿರುದ್ಧವಾದ ನಡೆವಳಿಕೆ. [ಸಂ.]

**ಅತಿಚ್ಛತ್ರ** (ನಾ). ೧. ಅಣಬೆ; ನಾಯಿಕೊಡೆ (?). ೨. ಒಂದು ಜಾತಿಯ ಗಿಡ. [ಅತಿ$_1$ + ಛತ್ರ]

**ಅತಿಚ್ಛತ್ರೆ** (ನಾ). ಕಾಡು ಸಬ್ಬಸಿಗೆ ಗಿಡ: "ಕಾಡು ಸಬ್ಬಸೀಗೆ ಹೆಸರು" (ಸಿದ್ಧಾಂತಿ. ೧೨೯). [ಸಂ. ಅತಿಚ್ಛತ್ರಾ (ಅತಿ$_1$ + ಛತ್ರ + –)]

**ಅತಿಜಗತಿ** (ನಾ). [ಛಂದ] ಅಕ್ಷರ ಛಂದಸ್ಸಿನಲ್ಲಿ ಹದಿಮೂರನೆಯ ಛಂದಸ್ಸಿನ ಹೆಸರು; ಒಂದು ಪಾದದಲ್ಲಿ ಹದಿಮೂರು ಅಕ್ಷರಗಳಿರುವ ಸಮವೃತ್ತಗಳ ಸಮುದಾಯ: ೧ ಉಕ್ತೆ, ೨ ಅತ್ಯುಕ್ತೆ . . . ೧೩ ಅತಿಜಗತಿ, ೧೪ ಶಕ್ವರಿ . . . ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೧–೫೫ ವ). [ಸಂ. ಅತಿಜಗತೀ (ಅತಿ$_1$ + ಜಗತೀ)]

**ಅತಿಜಾಗರ** (ಗು). ೧. ತುಂಬ ಎಚ್ಚರದಿಂದ ಕೂಡಿದ. (ನಾ). ೨. ಬಹಳವಾದ ಎಚ್ಚರಿಕೆ. ೩. ಕರಿಯ ಕೊಕ್ಕರೆ. [ಸಂ.]

**ಅತಿಜಾಣ** (ನಾ). ತುಂಬ ಜಾಣ; ಬಹಳ ಬುದ್ಧಿವಂತ: ಜಾಣರಿಗಿನ್ನತಿಜಾಣ ಜಾಣ ಕಾಣೆ ಚಂದ್ರಯ್ಯ (ಗೌರಪ. ೧೬–೫). [ಅತಿ$_1$ + ಜಾಣ]

**ಅತಿಜೋಲಿ** (ನಾ). ತುಂಬ ತಡ; ಸಾವಕಾಶ: ಅಡಬಾರದು ದೊಡ್ಡ ಕಾರ್ಯವುಂಟತಿಜೋಲಿಮಾಡದಿಂದೆ ನೀನು ಬಹುದು ನಾಡಿದು ನಾಳೆಯೆಂದರೆ ನನ್ನ ಕಾಣ್ಬುದು ಕೂಡದು (ಭರಚ. ೫೯–೮೫). [ಅತಿ$_1$ + ಜೋಲಿ]

**ಅತಿತಾಳು** (ನಾ). ಒಂದು ಪ್ರದೇಶ (?): ಮಚನಹಳ್ಳಿವೊತ್ತಿನ ಅತಿತಾಳ ಕೆಳಗೆ ನೆಟ್ಟ ಕಲ್ಲು (ಎಕ. XVI, ಮೈಸೂರು. ೧೧೫–೩೬೫; 1674). [?]

**ಅತಿತೃಷ್ಣೆ** (ನಾ). ಬಹಳವಾದ ಬಾಯಾರಿಕೆ: ಕಡುವಿಸಿಲಕಾಯ್ಪಿನಿಂ ಬಿದುವೊಡೆದುಗೆ ಬಿಸುಮುತ್ತು ಸೋರ್ವ ಸೀರ್ಪನಿಗೆತ್ತೊಂದೆಡೆಮಡಗದೆ ನೊಣೆದು ನವಿಲ್ ಮಿಡುಕಿದುದತಿತೃಷ್ಣೆಯಾಗುಮುರ್ದೆಗದವಟಲಂ (ಚಂದ್ರಪು. ೯–೭೩). [ಅತಿ$_1$ + ತೃಷ್ಣೆ]

**ಅತಿಥಿ** (ನಾ). ೧. (ಮಾರ್ಗ ಮಧ್ಯದಲ್ಲಿ) ಅನಿರೀಕ್ಷಿತವಾಗಿ ಮನೆಗೆ ಬಂದ ಸಭ್ಯಗೃಹಸ್ಥ: ಅತಿಥಿಗಳಭ್ಯಾಗತರೊಡನಥವರ ಯತಿ ಯಾಚಕರೆಲ್ಲರನು ಪತಿಕರಿಸುವುದು (ಹದಿಬ. ೮–೩೨). ೨. ಆಮಂತ್ರಣವನ್ನು ಪಡೆದು ಅಥವಾ ಪಡೆಯದೆಯೆ ಮನೆಗೆ ಬಂದ ಗೌರವಸ್ಥ: ಅಂದಿನ ಭೋಜನ ಸಮಾರಂಭಕ್ಕೆ ಅನೇಕ ಮಂದಿ ಅತಿಥಿಗಳು ಬಂದಿದ್ದರು (ರೂಢಿ). ೩. ಸಿಟ್ಟು (ಗುವಿಮೋ. ?). ೪. ಶ್ರೀರಾಮನ ಮೊಮ್ಮಗನಾದ ಸುಹೋತ್ರ. [ಸಂ.]

**ಅತಿಥಿಪೂಜೆ** (ನಾ). = ಅತಿಥಿಸತ್ಕಾರ: ಶ್ರುತಿಪಠಣವೋ ತರ್ಪಣವೊ ಮೇಣತಿಥಿಪೂಜೆಯೊ ಭೂತಯಜ್ಞವೊ (ಕುವ್ಯಾದ್ರೋ. ೧೮–೫೭). [ಅತಿಥಿ + ಪೂಜೆ]

**ಅತಿಥಿಸತ್ಕಾರ** (ನಾ). ಅತಿಥಿಗೆ ಮಾಡುವ ಸತ್ಕಾರ. [ಅತಿಥಿ+ಸತ್ಕಾರ]

**ಅತಿದವಡ** (ನಾ). ತುಂಬ ದುಷ್ಟ, —ನೀಚ (?): ಹಿಡಿದ ನೆವದಿ ಕೊಂದನು ಭಕ್ತರೊಳಗತಿದವಡ ಬೊಮ್ಮಯನುಮೆಂಬವಗಡೆಯನೆಂದೆನಲು ಬಿಜ್ಜಳನತಿಕುಪಿತನಾಗಿ (ಬಸಪು. ೨೮–೨೮). [ಅತಿ$_1$ + ದವಡ ?]

**ಅತಿದವಡಿತಿ** (ನಾ). ತುಂಬ ದುಷ್ಟೆಯಾದ, ನೀಚಳಾದ ಹೆಂಗಸು (?): ಜಗಳಗಂಟೆಯರು ಕಾಮಾತುರಿಯರತಿದವಡಿತಿಯರಂತಃಕರಣ ಮಲಿನೆಯರು (ಬಸಪು. ೪೦–೫೩). [ಅತಿದವಡ + –ತಿ (< –ಇತಿ)]

**ಅತಿದುಷ್ಷಮ** (ನಾ). [ಜೈನ] ಜ್ಞಾನ, ಆಯುಷ್ಯ ಮೊದಲಾದವು ಹ್ರಾಸಹೊಂದುತ್ತಾ ಹೋಗುವ ಅವಸರ್ಪಿಣಿ ಎಂಬ ಕಾಲದಲ್ಲಿ

ಕಡೆಯ ವಿಭಾಗ. ℙ ಇದಕ್ಕೆ "ದುಷ್ಷಮದುಷ್ಷಮ" ಎಂದೂ ಹೆಸರುಂಟು: ಅಯ್ದನೆಯದು ದುಷ್ಷಮಮೆನಿಪ್ಪ ಕಾಲಂ ಬೞಿಕಾಱನೆಯದತಿದುಷ್ಷಮಂ (ಪಂರಾಮಾ. ೧–೫೭). [ಅತಿ$_1$ + ದುಷ್ಷಮ]

**ಅತಿಧವಳ** (ಗು). ಬಹಳ ಬೆಳ್ಳಗಿರುವ; ತುಂಬ ಸ್ವಚ್ಛವಾಗಿರುವ: ಅತಿಧವಳಜಳದ ಜಳಧರಪಥಮುಂ ತೊಳಪೆಳವೆಱೆಯುಂ ಕಳೆದುವು ಮುಳಿಸಂ ಕಾಮಿಗಳ ಚಿತ್ತದೊಳ್ ನೆಲಸಿದುದಂ (ಕವಿರಾ. ೩–೧೬೭). [ಅತಿ$_1$ + ಧವಳ]

**ಅತಿಧೃತಿ** (ನಾ). [ಛಂದ] ಅಕ್ಷರ ಛಂದಸ್ಸಿನಲ್ಲಿ ಹತ್ತೊಂಬತ್ತನೆಯ ಛಂದಸ್ಸಿನ ಹೆಸರು; ಒಂದು ಪಾದದಲ್ಲಿ ಹತ್ತೊಂಬತ್ತು ಅಕ್ಷರಗಳಿರುವ ಸಮವೃತ್ತಗಳ ಸಮುದಾಯ: ೧ ಉಕ್ತೆ, ೨ ಅತ್ಯುಕ್ತೆ . . . ೧೮ ಧೃತಿ, ೧೯ ಅತಿಧೃತಿ . . . ಎಂದಿಪ್ಪತ್ತಾಱುಂ ಛಂದಂಗಳಕ್ಕುಂ (ಛಂದೋಂಬು. ೧–೫೫ ವ). [ಅತಿ$_1$ + ಧೃತಿ]

**ಅತಿನೀಲ** (ನಾ). ಗಾಢವಾದ ನೀಲಿಯ ಬಣ್ಣ; ಕಾಗು: "ಕಾಗೆನಲತಿನೀಲಂ" (ಭಾರನಿ. ೫೫). [ಅತಿ$_1$ + ನೀಲ]

**ಅತಿನೇತ್ರೆ** (ನಾ). ಅಗಲವಾದ ಕಣ್ಣುಳ್ಳವಳು; ವಿಶಾಲನೇತ್ರೆ: ಸತಿಯರಾಲಿಸಲಿತ್ತಲತಿವೇಗದಿಂದಪ್ರತಿಮನೊಡನೆ ಪರಿತಂದು ಸತಿಕುಳವೆತ್ತಿ ಮನ್ಮಥರೂಪ ನಿಲ್ಲೆಂದು ಅತಿನೇತ್ರೆಯರು ತುಡುಕಿದರು (ನಿಜಸಾಂ. ೪೮–೮೧). [ಸಂ. ಅತಿನೇತ್ರಾ (ಅತಿ$_1$ + ನೇತ್ರ + –)]

**ಅತಿನೇರಿಳೆ** (ನಾ). ವರ್ಣಪಟಲದಲ್ಲಿ (Spectrum) ನೇರಿಳೆಬಣ್ಣದ ಆಚೆಗೆ ಇರುವ, ಕಣ್ಣಿಗೆ ಕಾಣಿಸದ, ಬಣ್ಣ: ಸೂರ್ಯನ ಬೆಳಕಿನಲ್ಲಿ ಕಣ್ಣಿಗೆ ಕಾಣುವ ಏಳು ಬಣ್ಣಗಳಿಗಿಂತ ಇನ್ನೆರಡು ಹೆಚ್ಚಿನ ಬಣ್ಣಗಳಿವೆ. ಅವಕ್ಕೆ ಅತಿನೇರಿಳೆ (Ultra–violet), ಅಲ್ಪಾರುಣ (Infra-red) ಎಂಬ ಹೆಸರಿವೆ (ಬಾಲಪ್ರ. II, ೮೧೧). [ಅತಿ$_1$ + ನೇರಿಳೆ (< ನೇಱಿಲ್)]

**ಅತಿಪಾತ** (ನಾ). ೧. ತೀರಿಹೋಗುವುದು; ಕಳೆದುಹೋಗುವುದು. ೨. ಕ್ರಮವನ್ನು ಮೀರುವುದು. ೩. ತೂರಾಡಿ ಬೀಳುವುದು. ೪. ಮಹಾಪಾಪ: ೩, ೪. ಅತಿಪಾತಂ ಮಧುಪಾನವ್ಯಸನದೊಳ್ ಮಧುಪಾನವ್ಯಸನಂ ಆಱಡಿಯೊಳ್ (ರಾಮಾಶ್ವ. ೮–೧). [ಸಂ.]

**ಅತಿಪಾರ್ಥಿಸು** (ಕ್ರಿ). ಪಾರ್ಥನನ್ನು, ಅರ್ಜುನನನ್ನು (ಶೌರ್ಯ ಮೊದಲಾದವುಗಳಲ್ಲಿ) ಮೀರು: ಏಂ ಜಗದಿ ಪಾರ್ಥನನ್ನತಿಪಾರ್ಥಿಸುವನೊಳನೆ (ಹೆಬ್ಬರ. ೨೬–೧೨). [ಅತಿ$_1$ + ಪಾರ್ಥ + –ಇಸು$_3$]

**ಅತಿಪೀಡನ** (ನಾ). ೧. ಸಾಮಾನ್ಯವಾಗಿ ಒತ್ತುವುದಕ್ಕಿಂತ ಹೆಚ್ಚಾಗಿ ಒತ್ತುವುದು: ಅತಿಪೀಡನದಿಂ ರೇಫಾಶ್ರಿತಮಾದ ಱಕಾರಮುಂ ಸಮಂತು ಡಕಾರಾಶ್ರಿತಮಾದ ೞಕಾರಮುಮಂಗೀಕೃತಪದಲತ್ವಕ್ಕೆ ಬೆಟ್ಟತೆನಿಸಿದ ಕುಳನುಂ (ಶಮದ. ೧೮). ೨. ತುಂಬ ಹಿಂಸಿಸುವುದು. [ಅತಿ$_1$ + ಪೀಡನ]

**ಅತಿಪ್ರಸರಣ** (ನಾ). ೧. ಅಧಿಕವಾಗಿ ಹರಡುವುದು. ೨. (ಹಣದ) ಮಿತಿಮೀರಿದ ಚಲಾವಣೆ, —ಉಬ್ಬರ: ಇತ್ತೀಚಿಗಿನ ಮಹಾಯುದ್ಧದ ಕಾಲದ ಅತಿಪ್ರಸರಣದ ದೆಸೆಯಿಂದಾಗಿ ರೈತರ ಸಾಲ ಸ್ವಲ್ಪ ಮಟ್ಟಿಗೆ ಸಂದಾಯವಾಗಿರಬೇಕು (ಏಶಿಸಂ. ೫೦). [ಅತಿ$_1$ + ಪ್ರಸರಣ]

**ಅತಿಪ್ಲುತತೆ** (ನಾ). ಪ್ಲುತಸ್ವರಗಳು ಹೆಚ್ಚಾಗಿರುವುದು: ಛಂದಸ್ಸಿನ ನಾವೀನ್ಯದೊಡನೆ ವೃತ್ತದ ವಿಕ್ಷಿಪ್ತತೆ, ಅತಿಪ್ಲುತತೆಯೂ ಸರಳರಗಳೆ ಮೊದಲಾದುವುಗಳಲ್ಲಿ ಕಂಡುಬರುವುದು (ಸಾಹಿವಿ. ೬೮). ೨. ಬಹಳವಾಗಿ ನೆನೆದಿರುವುದು; ದ್ರವದಲ್ಲಿ ತುಂಬ ಮುಳುಗಿರುವುದು. [ಸಂ. ಅತಿಪ್ಲುತತಾ (ಅತಿ$_1$ + ಪ್ಲುತ + –)]

**ಅತಿಬಜೆ** (ನಾ). ಒಂದು ಔಷಧ ದ್ರವ್ಯ: ಬಜೆ ಸಂವರ್ಚಲ ಹಿಂಗತಿಬಜೆ ಕೊಡಸಿಕೆಯೆಂಬಿವಿನಿತುಮಂ ಕುಡಿಯಿಸಲುಷ್ಣಜಲಾನ್ವಿತಮದು ಕಿಡಿಸುಗು ಮಜಸ್ರಮೆನೆ ನಡೆವ ನುಣ್ಪುಮಂ ನೆತ್ತರುಮಂ (ಲೋಕೋಪ. ೯–೧೨೦). [ಅತಿ$_1$ + ಬಜೆ ?. / ತೆಲು. ಅತಿವಸ]

**ಅತಿಬಯಸು** (ಕ್ರಿ). ತುಂಬ ಆಸೆಪಡು: "ರತಿಕಲೆಯೊಳತಿಚದುರೆ ಅತಿಮಿತಿಯು ಮಾತಿನೊಳು ಖತಿಗಳೆದ ಮೊಗವು ಸೊಬಗಿನ ಸುದತಿ ಕಂಡತಿ ಬಯಸದಿಹರೆ" (ಸರ್ವಜ್ಞ. ೧೬೫೩). [ಅತಿ$_1$ + ಬಯಸು]

**ಅತಿಬಲ, ಅತಿಬಳ** (ಗು). ೧. ಹೆಚ್ಚಾದ ದೇಹಶಕ್ತಿಯುಳ್ಳ; ತುಂಬ ಬಲಿಷ್ಠವಾದ: ಕುಲವೃದ್ಧರಿರ್ ಅಪ್ತರಿರ್ ಅತಿಬಲರಿರ್ (ಶಮದ. ೨೨೦ ಪ್ರಯೋ); ಅತಿಬಲ ನೇಮಿಖಾನಗೆ ಸರಿಯಪ್ಪ ಸೇನಾನಿಗಳುಂಟೆ (ಕುರಾಸಾಂ. ೧೭–೩೦). (ನಾ). ೨. ಗಾಳಿ. 'ಅತಿಬಲಾಯನ' ಪರಾ. **ಅತಿಬಳೆ**: ೧. ಅತಿಬಳ ಪಾಯ್ದಳವನಿರಿಸಿದನು ವಳಯದಲಿ(ಕುವ್ಯಾದ್ರೋ. ೪–೧೫). [ಅತಿ$_1$ + ಬಲ$_1$]

**ಅತಿಬಲಾಯನ** (ನಾ). ಕಿಟಕಿ; ಜಾಲರಿ; ವಾತಾಯನ: ರಾಘವನ ನೋಳ್ಪೆವೆಂದು ತಾಮತಿಬಲಾಯನದೊಳೀಕ್ಷಿಸುತ ಸೌಧಾಗ್ರದೊಳ್ ಬಾಲೆಯರ್ ನೆಲಸಿರ್ದರು (ಶ್ರೀರಾಮು. ೨೨–೧೨). [ಅತಿಬಲ + ಅಯನ]

**ಅತಿಬಳ** 'ಅತಿಬಲ' ನೋ.

**ಅತಿಭವ** (ನಾ). ಕಳೆದ ಜನ್ಮ; ಹಿಂದಿನ ಜನ್ಮ: ಅತಿಭವ ಸೌಧರ್ಮಿಕೆಯ ಕೂರ್ಮೆಯ ಭರದಿಂದೆಱಗುವಂತೆಱಗಿ (ಶಾಂತಿಪು. ೫–೬ ವ). [ಅತಿ$_1$ + ಭವ]

**ಅತಿಮಧುರ** (ನಾ). ೧. ಬಹಳ ಸಿಹಿಯಾದ. ೨. ಮಾಧುರ್ಯವೆಂಬ ಕಾವ್ಯಗುಣದಿಂದ ಕೂಡಿದ: ಕರಮುಸ್ತಾಕ್ಷರಮುಚಿತಾಕ್ಷರಮುವಲಂಬ ಪ್ರಸನ್ನಮತಿಮಧುರಮಲಂಕರಣಯುತಮೆನಿಸಿ ಪೇಟಿಲ್ ಧರೆಯೊಳ್ ಕವಿರಾಜಹಂಸನೊರ್ವಂ ಬಲ್ಲಂ (ಛಂದೋಂಬು. ೧–೯). (ನಾ). ೩. ಇಷ್ಟಮೋದಕ, ಮಧುಕ ಎಂಬ ಮೂಲಿಕೆ; "ಜ್ಯೇಷ್ಠಮಧು" (ವೈಶಿಗಿ. ೩೯–೭೭೯). [ಅತಿ$_1$ + ಮಧುರ]

**ಅತಿಮನೋಋತ** (ನಾ). ಮನಸ್ಸಿನ ಎಲ್ಲೆಗೆ ಮೀರಿದ ಸತ್ಯ; ಅತಿಮಾನಸ ಸತ್ಯ: ರಾಮಾಯಣದೊಳತಿಮನೋಋತದ ಸಂಘಟನೆ ಸಂಭವಿಸಲಿರ್ಪ ತಾಣಂ ತಾನದೆಂದರಿವರೇಂ (ಶ್ರೀರಾಮಾ. ೩೬–೨೨೩). [ಸಂ. (ಅತಿಮನಸ್ + ಋತ)]

**ಅತಿಮರ್ಯಾದ** (ಗು). ಎಲ್ಲೆಯನ್ನು ಮೀರಿದ; ಅಳತೆಗೆಟ್ಟ. [ಸಂ. (ಅತಿ$_1$ + ಮರ್ಯಾದಾ + –)]

**ಅತಿಮಾತ್ರ** (ಗು). ೧. ಅಳತೆಗೆ ಮೀರಿದ; ಬಹಳ ಹೆಚ್ಚಾದ. (ನಾ). ೨. ನಾಲ್ಕು ಬಗೆಯಾದ ಯೋಗಕ್ರಮದಲ್ಲಿ ಒಂದು: ಮೃದು ಮಧ್ಯ ಅತಿಮಾತ್ರ ಅತಿಮಾತ್ರತರವೆಂದು ಚತುರ್ವಿಧಯೋಗಕ್ರಮದಿಂದಂ (ವಿವೇಕ. ೧೪೮). [ಅತಿ$_1$ + ಮಾತ್ರ]

**ಅತಿಮಾನಸ** (ನಾ). ಮನಸ್ಸಿನ ಎಲ್ಲೆಗೆ ಮೀರಿದ ಸತ್ಯ: ಮಾನಸ ಅಧಿಮಾನಸಕೇರೆ ಅತಿಮಾನಸ ಮೈದೋರೆ ಅನಂದಾಮೃತ ಸೋರೆ (ಅನಿಕೇ. ೧). [ಅತಿ$_1$ + ಮಾನಸ$_1$]

**ಅತಿಮಾನುಷ** (ಗು). ಮನುಷ್ಯನ ಶಕ್ತಿಗೆ ಮೀರಿದ; ಮನುಷ್ಯರಿಗೆ ದೊರೆಯದ: ಕೃಷ್ಣನತಿಮಾನುಷಪುಷ್ಪಮನೊಲ್ದು ನೋಡಿ (ಜಗಎ. ೧೨–೬೫). [ಅತಿ$_1$ + ಮಾನುಷ]

**ಅತಿಮಾರ್ಗ** (ನಾ). ಮಾರ್ಗವನ್ನು ಅತಿಕ್ರಮಿಸಿದವನು; ದಾರಿ ಬಿಟ್ಟವನು. [ಅತಿ$_1$ + ಮಾರ್ಗ]

**ಅತಿಮಿತಿ** (ನಾ). ಬಹಳ ಕಡಮೆ; ತುಂಬ ಹಿಡಿತ: "ರತಿಕಲೆಯೊಳತಿ ಚದುರೆ ಅತಿಮಿತಿಯು ಮಾತಿನೊಳು . . . ಸೊಬಗಿನ ಸುದತಿ" (ಸರ್ವಜ್ಞ. ೧೬೫೩). [ಅತಿ$_1$ + ಮಿತಿ]

**ಅತಿಮುಕ್ತ** (ಗು). ೧. ಪೂರ್ಣವಾಗಿ ಬಿಡುಗಡೆ ಹೊಂದಿದ. ೨. ಕಾಮ

ಕ್ರೋಧಗಳಿಂದ ಬಿಡಲ್ಪಟ್ಟ. ೩. ಬೀಜರಹಿತವಾದ. ೪. (ಬಿಳುಪಿನಲ್ಲಿ) ಮುತ್ತುಗಳನ್ನು ಮೀರಿದ. (ನಾ). ೫. ಬಂಜೆಯಾದ ತಳಿ. ೬. ಇರವಂತಿಗೆ: ಅತಿಮುಕ್ತದಲರುಮುಂ ತಮಾಳದ ತಳಿರುಮುಂ . . . ತಂದು (ಮಲ್ಲಿಪು. ೫-೪೯). ೭. ಹುಗಿಲುಮರ. [ಅತಿ$_1$ + ಮುಕ್ತ]

**ಅತಿಮುಕ್ತಕ** (ನಾ). ಹೊಂಗೆಯ ಮರ; "ಹುಲಿಗಲಿ, ನಮ್ಮಿ, ಹೊಂಗೆ" (ಸಿದ್ಧಾಂತಿ). [ಸಂ. (ಅತಿಮುಕ್ತ + -)]

**ಅತಿಮೂತ್ರ** (ನಾ). ತುಂಬ ಹೆಚ್ಚಾಗಿ ಮತ್ತು ಹಲವುಬಾರಿ ಮೂತ್ರ ವಿಸರ್ಜನೆಯನ್ನುಂಟುಮಾಡುವ ಒಂದು ರೋಗ; ಬಹುಮೂತ್ರ ರೋಗ; ಮಧುಮೇಹ ರೋಗ. [ಅತಿ$_1$ + ಮೂತ್ರ]

**ಅತಿಮೋಹ** (ನಾ). ಬಹಳವಾದ ಮೋಹ; ಅತ್ಯಾಸಕ್ತಿ: ಅತಿಮೋಹಂ ಗತಿಯಂ ಕರಂ ಕಿಡಿಕುಮೆಂಬೀ ಮಾತು ಕೈಗೂಡೆ (ಪಾರ್ಶ್ವಪು. ೪-೪೮). [ಅತಿ$_1$ + ಮೋಹ]

**ಅತಿರ** (ನಾ). ಅಸ್ಥಿರ; ನಿಲುಗಡೆಯಿಲ್ಲದ್ದು (ಕಿ). [ಸಂ. ಅಸ್ಥಿರ]

**ಅತಿರಂಜಿತ** (ಗು). ವಸ್ತುಸ್ಥಿತಿಗೆ ತುಂಬ ದೂರವಾದ: ಆ ಕಾದಂಬರಿಯಲ್ಲಿ ಅತಿರಂಜಿತವಾದ ವರ್ಣನೆಗಳೇ ಹೆಚ್ಚಾಗಿವೆ (ರೂಢಿ). [ಅತಿ$_1$ + ರಂಜಿತ]

**ಅತಿರಂಜಿಸು** (ಕ್ರಿ). ತುಂಬ ಮನೋಹರವಾಗು: ಸಿರಿಯಣುಗಂ ಸಮ್ಮೋಹನಶರದಿಂ ವಿರಹಿವಿತಾನಮನೆಚ್ಚು ಕೆಡಹಿ ಕಡುಭರದಿಂ ಬಾಜಿಪ ಶಂಖಮೆನಲ್ ನುಣ್ಗೊರಲತಿರಂಜಿಸಿತು (ಜಯಕಾ. ೩-೩೯). [ಅತಿ$_1$ + ರಂಜಿಸು]

**ಅತಿರಕ್ತ** (ಗು). ೧. ತುಂಬ ಕೆಂಪಾದ; ಕಡುಗೆಂಪಾದ. (ನಾ). ೨. ಅತಿಶಯವಾದ ಆಸಕ್ತಿಯುಳ್ಳವನು, —ಪ್ರೀತಿಯುಳ್ಳವನು. [ಅತಿ$_1$ + ರಕ್ತ]

**ಅತಿರಕ್ತೆ** (ನಾ). ಅತಿಶಯವಾದ ಪ್ರೀತಿಯುಳ್ಳವಳು: ರಕ್ತೆಯನುರಕ್ತೆಯತಿರಕ್ತೆಯೆಂದಿಂತು ಮೂಜು ತೆಜದಿಂ ಬೇಟಮುಕ್ಕುಂ (ಮದತಿ. (೧೧-೨೬). [ಸಂ. ಅತಿರಕ್ತಾ (ಅತಿ$_1$ + ರಕ್ತ + -)]

**ಅತಿರಥ** (ನಾ). ಅತಿರಥ, ಮಹಾರಥ, ಸಮರಥ, ಅರ್ಧರಥ—ಎಂಬ ನಾಲ್ಕು ಬಗೆಯ ರಥಿಕರಲ್ಲಿ ಅತ್ಯಂತ ಶ್ರೇಷ್ಠನಾದವನು; ಅಪರಿಮಿತ ಸಂಖ್ಯೆಯ ಶತ್ರುಗಳೊಡನೆ ಯುದ್ಧಮಾಡುವ ರಥಿಕ: ರಥಿಗಳನಗ್ರಸ್ಥಿತ ಸಾರಥಿಗಳನಿಸೆ ಸೀರಪಾಣಿ ಸಲೆ ರಥದ ಮನೋರಥದೊಡನೆ ಮಡಿದರಂದತಿರಥ ಸಮರಥರಾ ಮಹಾರಥಾರ್ಧರಥರ್ಕಳ್ (ಶಾಂತಿಪು. ೪-೧೨); ಅತಿರಥನಾದರೂ ಗತಿಗೆಡಬಾರದು (ಗಾದೆ); (ಗದಾಯು. ೩-೫೦; ಪಂರಾಮಾ. ೧೩-೭೨; ಕುವ್ಯಾವಿ. ೭-೩೩ ನೋ). [ಅತಿ$_1$ + ರಥ]

**ಅತಿರಮ್ಯ** (ಗು). ತುಂಬ ಮನೋಹರವಾದ. 'ಅತಿರಮ್ಯಂಬಡೆ' ಪರಾ. [ಅತಿ$_1$ + ರಮ್ಯ]

**ಅತಿರಮ್ಯಂಬಡೆ** (ಕ್ರಿ). ತುಂಬ ಮನೋಹರವಾಗಿರು, —ಸುಂದರವಾಗಿರು: ಕುವರನ ಚೆಲ್ವಂ ಚಿತ್ರದ ನಳಿನವಿಲೋಚನೆ ನೋಡುವೆನೆನುತುಂ ಗಳಿಲನೆ ಮುಸುಕಂ ತೆಗೆದಂದದಿನತಿರಮ್ಯಂಬಡೆಯಿತ್ತು (ಜಯಕಾ. ೩-೭). [ಅತಿರಮ್ಯ + ಪಡೆ$_1$]

**ಅತಿರಸ** (ಗು). ೧. ಬಹಳ ಹೆಚ್ಚು ರಸವುಳ್ಳ. (ನಾ). ೨. ಅಕ್ಕಿ, ತೆಂಗಿನಕಾಯಿ, ಬೆಲ್ಲ ಇವುಗಳನ್ನು ರುಬ್ಬಿ ಅಥವಾ ಅರೆದು ತುಪ್ಪದಲ್ಲಿ ಕರಿದು ಮಾಡುವ ಒಂದು ಬಗೆಯ ಭಕ್ಷ್ಯ: ಧೂಪದೀಪ ನಇವೇದ್ಯಕೆ ಅಹುತಿಗೆ ಮಾನ ೧ . . . ಕರುಚಿಯ ಅಪ್ಪ ೫, ಅತಿರಸ ೫, ಸುಖಿನಪ ೫, ಯೆಂಣೆ ಹೂರಿಗೆ ೫ (ಸೌಇಇ. IV, ೨೫೦-೮; 1521); ತಿರುನಂದಾದೀಪಕೆ ಚಿಲುವಾನ್ನದೀವಿಗೆ ೪೦ ಆರೋಗಣೆಗೆ ನೈವೇದ್ಯದ ಹರಿವಾಣ ೩ ಅಪ್ಪ ಪಡಿ ೧ ಕಂ ಅಪ್ಪ ೫೧ ಅತಿರಸ ಪಡಿ ೧ ಕಂ ಅತಿರಸ ೫೧ (ಸೌಇಇ. IX-ii, ೪೪೯-೪೦; 1513). [ಅತಿ$_1$ + ರಸ]

**ಅತಿರಾಗಿ** (ನಾ). ತುಂಬ ಅನುರಾಗವುಳ್ಳವನು: ಅದಜಿಳೊಳಿದ್ದುದು ಯಕ್ಷ ಕಿನ್ನರ ಸುದತಿಯರು ಕಿಂಪುರುಷರತಿರಾಗಿಗಳು ಸುಖಮಯರು (ಕುವ್ಯಾಸ. ೩-೩೨). [ಸಂ. ಅತಿರಾಗಿನ್ (ಅತಿ$_1$+ ರಾಗ + -)]

**ಅತಿರಾಜಿಸು** (ಕ್ರಿ). ಬಹಳವಾಗಿ ಪ್ರಕಾಶಿಸು, —ಹೊಳೆ: ಆ ಹೆಣ್ಣಳ ರನ್ನೆಗೆ ಪಲ್ಲವಕವ್ಯೂಹದೆರ್ದೆಯನಿಳ್ಕುಳಿಗೊಂಡತಿರಾಜಿಸಿದುವು ತಿವಳಿಗಳು (ಜಯಕಾ. ೩-೩೫). [ಅತಿ$_1$ + ರಾಜಿಸು]

**ಅತಿರಾತ್ರ** (ನಾ). ೧. ಒಂದು ಯಜ್ಞದ ಹೆಸರು: ದೇವಯಜ್ಞ . . . ಅತಿರಾತ್ರ ಉಕ್ಥ್ಯ ಷೋಡಶ ವಾಜಪೇಯ ಪೌಂಡರೀಕಾದಿ ಮಹಾಕ್ರತುಗಳಂ (ವಿವೇಕ. ೧೩೪). ೨. ನಡುರಾತ್ರಿ. [(ಅತಿ$_1$ + ರಾತ್ರಿ + -)]

**ಅತಿರಾವ** (ನಾ). ತುಂಬ ಬಿರುಸಾದ ಸದ್ದು: ಹೇವದಲಿ ಕೆಡಹಲ್ಕೆ ಬೀಳ್ವರು ಸಾವಿರದಸಂಖ್ಯಾತಬಲವತಿರಾವದಲಿ ಬಳಿಕೆರಡು ತಟ್ಟನ ಬಿಲ್ಲಿನತಿಬಲರು (ಕೋಗಯು. ೨೧-೬). [ಅತಿ$_1$ + ರಾವ]

**ಅತಿರಿಕ್ತ** (ಗು). ೧. ಬಿಟ್ಟುಹೋದ; ಕಳೆದುಹೋದ. ೨. ಮೀರಿದ; ಬಹಳ ಹೆಚ್ಚಾದ. ೩. ಆಚೆಯ: ದೇಹಕ್ಕೆ ಅತಿರಿಕ್ತವಾದ ಆತ್ಮವೆಂಬುದೊಂದಿದೆ (ಜೀವಾತ್ಮ. ಮು. ೨). (ನಾ). ೪. ತುಂಬ ಬಡವ. [ಸಂ.]

**ಅತಿರಿಕ್ತಹಣ** (ನಾ). ಹೆಚ್ಚಿನ ಹಣ; ಹೆಚ್ಚುವರಿ ಮೊಬಲಗು: ವೆಚ್ಚದ ಅಂದಾಜು ಮೊಬಲಗನ್ನು ತೋರಿಸತಕ್ಕ ಇನ್ನೊಂದು ವಿತ್ತವಿವರಣೆಯನ್ನು . . . ಅತಿರಿಕ್ತಹಣಕ್ಕೆ ಒಂದು ಅಭಿಯಾಚನೆಯನ್ನು ಲೋಕಸಭೆಯ ಮುಂದೆ ಇರಿಸುವಂತೆ ಏರ್ಪಡಿಸತಕ್ಕುದು (ಭಾಧಾಸ. ೬೦). [ಅತಿರಿಕ್ತ + ಹಣ]

**ಅತಿರುಜೆ** (ನಾ). ಪ್ರಬಲವಾದ ರೋಗ: ಮೃತಮೆನಿಪ ಸೂತಕಕೆ ಮನೆಯಾಗತಿರುಜೆಯ ಶರಧಿಯೊಳು ಮುಳುಗುವನ್ನತನಿಜಸ್ಥಿತಿಯಾಂತುದೀ ದೇಹಂ ತ್ರಿಕಾಲದಲಿ (ವಿವೇಥ. ೪-೮). [ಅತಿ$_1$ + ರುಜೆ]

**ಅತಿರೂಢ** (ಗು). ಬಹಳವಾಗಿ ಬಳಕೆಯಲ್ಲಿರುವ; ಪ್ರಸಿದ್ಧವಾದ: ಅತಿರೂಢಾರ್ಥಮಗೂಢಂ ಪ್ರತೀತಿ ಸುಭಗಂ ಪ್ರಸನ್ನಮೆನೆ ಪಡೆಗುಮಪಾಕೃತನಿಷ್ಠುರಾಕ್ಷರಂ (ಕಾವ್ಯಾವ. ೫೧೨). [ಅತಿ$_1$ + ರೂಢ]

**ಅತಿರೇಕ** (ನಾ). ೧. ರೂಢಿಗೆ ವಿರೋಧವಾದ ನಡೆ. ೨. ಅಳತೆಗೆ ಮೀರಿದ ಸ್ಥಿತಿ; ಅತಿಶಯ: ಎಲೆ ಕೃಷ್ಣ ನಿನ್ನ ರೂಪಮುಂ ಸೌಷ್ಠವ ಪ್ರತಿಷ್ಠೆಯುಂ . . . ವಿವೇಕಾತಿರೇಕಮುಂ ನೋಡಲ್ ನೀಂ ಪರದೈವತ ಕಳಾಸ್ವರೂಪನಾಗಿ ತೋರ್ಪೆ (ಜಗವಿ. ೪-೭೯ ವ). ೩. [ಕಾವ್ಯಮೀ] ವ್ಯತಿರೇಕಾಲಂಕಾರ: ವರಜಾತಿ ರೂಪಕಾರ್ಥಾಂತರವಿನ್ಯಾಸಾತಿರೇಕಯಾಥಾಸಂಖ್ಯಾಸ್ಥಿರದೀಪ ಕೋಪಮಾಬಂಧುರಾತಿಶಯ ಸದೃಶಯೋಗಿತಾಕ್ಷೇಪಂಗಳ್ (ಕವಿರಾ. ೩-೨). [ಸಂ.]

**ಅತಿವರ್ತಿ** (ಗು). ೧. ಬಹಳ ಹೆಚ್ಚಿನ. ೨. ಮೊಟ್ಟಮೊದಲನೆಯ. ೩. ಕ್ರಮವನ್ನು ಮೀರಿ ನಡೆಯುವ; ಅತಿಕ್ರಮಿಸಿ ನಡೆಯುವ: ಚಕ್ರವರ್ತಿಯಾಗಿಯುಮತಿವರ್ತಿಯೇ (ಶಾಂತಿಪು. ೧೧-೬೬); ಅತಿವರ್ತಿಗಳ್ಗೆ ದಾನವಪತಿಗಜಿಪುವರಿಲ್ಲ ತಕ್ಕುದಂ ಪರಿಜನದೊಳ್ ಹಿತನಂಜದೆ ಪೇೞ್ದು ಸುಭಾಷಿತಮಂ ಕೈಕೊಳಿಸುಗುಂ ವಿಭೀಷಣನೆ ವಲಂ (ಪಂರಾಮಾ. ೧೧-೨೧). [ಸಂ. ಅತಿವರ್ತಿನ್]

**ಅತಿವರ್ತಿತ** (ಗು). ೧. ಮೀರಿಹೋದ. (ನಾ). ೨. ಆನೆಗಳಿಗೆ ಉಂಟಾಗುವ ಏಳು ಮದಾವಸ್ಥೆಗಳಲ್ಲಿ ಒಂದು: ಆ ಪಟ್ಟಣದ ನರಸಿಂಗ ಮೊನೆಯರ ಪಟ್ಟದಾನೆ ಸಂಚಿತ ತಿಲಕಿತ ಅರ್ಧಕಪೋಳಿತ ಅತಿವರ್ತಿತ ಅಧೋನಿಬಂಧಿನಿ ಕ್ರೋಧಿನಿ ಗಂಧಚಾರಿಣಿಯೆಂಬ ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ (ನಂಬಿರ. ೨-೨೧). [ಸಂ.]

**ಅತಿವಸ್ತು** (ನಾ). ಸಾಮಾನ್ಯಸ್ಥಿತಿಗೆ ಮೀರಿದ ವಸ್ತು; ಅಪೂರ್ವವಾದ ವಸ್ತು: ನೀನು ಬಹಳ ಧರ್ಮವನ್ನು ಕಂಡವನು, ಪ್ರಪಂಚಕ್ಕೆ ಅತಿವಸ್ತು (ಅಗ್ರಹ. ೩೭). [ಅತಿ$_1$ + ವಸ್ತು]

**ಅತಿವಳಿಗೆ** 'ಅತ್ತಿವಳಿಗೆ' ನೋ.

**ಅತಿವಳೆ** (ನಾ). ಮಿತಿಮೀರಿದ ಮಳೆ: ಸುರಿದುದತಿವಳೆಯೆಂದು ಕುಲಗಿರಿ ಕರಗುವುದೆ (ಕುವ್ಯಾಕ. ೪-೨೨). [ಅತಿ$_1$ + ಮಳೆ (< ಮೞೆ)]

**ಅತಿವಾಕ್ಯ** (ನಾ). ಎಲ್ಲೆ ಮೀರಿದ ಮಾತು; ಚುಚ್ಚುಮಾತು (*). [ಅತಿ$_1$ + ವಾಕ್ಯ]

**ಅತಿವಾದ** (ನಾ). ೧. ಮಿತಿಮೀರಿ ಮಾತಾಡುವುದು. ೨. ಮಿತಿಮೀರಿದ ಚರ್ಚೆ: ಈ ಅತಿವಾದದಿಂದ ನಮ್ಮ ಸಮಾಜಕ್ಕೇ ಅಪವಾದವು ಪ್ರಾಪ್ತವಾಗಿದೆ (ಆರ್ಯಧ. ೧೬೪). ೩. ನಿಂದೆಯ ಮಾತು. [ಅತಿ$_1$+ ವಾದ]

**ಅತಿವಾದಿ** (ನಾ). ೧. ತುಂಬಮಾತಾಡುವವನು. ೨. ಅತಿಯಾಗಿವಾದ ಮಾಡುವವನು: ಅತಿವಾದಿಗೆ ಉತ್ತರವಿಲ್ಲ(ಗಾದೆ). [ಸಂ. ಅತಿವಾದಿನ್]

**ಅತಿವಾಹಕ** (ನಾ). ೧. ಹೆಚ್ಚಾಗಿ ಶ್ರಮಪಡುವ ಸ್ವಭಾವದವನು; ಕಷ್ಟಶೀಲ. ೨. ನರಕದಲ್ಲಿನ ಒಂದು ಪ್ರೇತ: "ಪ್ರೇತೆಯತಿವಾಹಕಂ ಜಂತುವೆನೆ ನಾರಕಂ" (ಮಂಗರಾ. ೧೧೬-೧). ೩. ಸೂಕ್ಷ್ಮಶರೀರದಿಂದ ಜೀವನನ್ನು ಬೇರೆ ಶರೀರಕ್ಕೆ ಒಯ್ಯುವ ದೇವತೆ. [ಅತಿ$_1$ + ವಾಹಕ]

**ಅತಿವಿಷೆ** (ನಾ). 'ಅತಿಬಜೆ' ಎಂಬ ಪ್ರಸಿದ್ಧವಾದ ಔಷಧಿಯ ಮೂಲಿಕೆ. [ಸಂ. ಅತಿವಿಷಾ (ಅತಿ$_1$ + ವಿಷ + –)]

**ಅತಿವೃತ್ತ** (ನಾ). ೧. ತುಂಬ ಗುಂಡಾಗಿರುವುದು: ಅತಿವೃತ್ತದೆ ರವಿಬಿಂಬಾಕೃತಿ ಯೋಜನಶತಸಹಸ್ರವಿಷ್ಕಂಭಂ ವಿಶ್ರುತಜಂಬೂವೃಕ್ಷ ಮಹಾಪ್ರತೀತಿಯಿಂ ನೆಗಳ್ದುದಿಳೆಗೆ ಜಂಬೂದ್ವೀಪಂ (ಆದಿಪು. ೧-೪೯). ೨. ನಡತೆಗೆಟ್ಟವನು; ಅನಾಚಾರಿ. [ಅತಿ$_1$ + ವೃತ್ತ]

**ಅತಿವೃಷ್ಟಿ** (ನಾ). ಎಷ್ಟು ಬೇಕೋ ಅಷ್ಟಕ್ಕಿಂತ ಹೆಚ್ಚಾದ ಮಳೆ; ಮಿತಿ ಮೀರಿದ ಮಳೆ: ಕಳೆದ ವರ್ಷ ಅತಿವೃಷ್ಟಿಯಿಂದ ಬಹಳ ಅನಾಹುತಗಳಾದುವು (ರೂಢಿ). [ಅತಿ$_1$ + ವೃಷ್ಟಿ]

**ಅತಿವೇಲ** (ಗು). ೧. ಸಮುದ್ರದ ದಡವನ್ನು ಮೀರಿದ. ೨. ಕಾಲವನ್ನು ಮೀರಿದ. ೩. ಮೇರೆಮೀರಿದ; ಅತ್ಯಧಿಕ. (ನಾ). ೪. ಅತಿಮೂತ್ರವೆಂಬ ರೋಗ: "ಅತಿಮೂತ್ರಾತಿಶಯಂ ಸಮುದ್ರತಟ ಕಾಲಾತಿಕ್ರಮಂ ತಾವಿವಿಂತತಿವೇಲಾಖ್ಯ" (ನಾನಾರ. ೧೩೩). [ಸಂ. (ಅತಿ$_1$ + ವೇಲಾ + –)]

**ಅತಿವ್ಯಕ್ತ** (ಗು). ತುಂಬ ಸ್ಪಷ್ಟವಾದ; ತುಂಬ ಪ್ರಸಿದ್ಧವಾದ: ಏಕವಚನ ಬಹುವಚನಂಗಳ್ ಕನ್ನಡದೊಳತಿವ್ಯಕ್ತಂಗಳ್; ದ್ವಿವಚನಮನೌಚಿತ್ಯದಿನಱಿವುದು (ಶಮದ. ೯೪ ವೃತ್ತಿ). [ಅತಿ$_1$ + ವ್ಯಕ್ತ]

**ಅತಿವ್ಯಾಪ್ತಿ** (ನಾ). [ನ್ಯಾಯ] ಲಕ್ಷ್ಯಕ್ಕೆ ಹೊರತಾದ ವಿಷಯದಲ್ಲಿ ಲಕ್ಷಣವು ಅನ್ವಯಿಸುವಂತೆ ನಿರೂಪಿಸುವ ಒಂದು ದೋಷ: ಲಕ್ಷಣವು ವರ್ಣನೆಯುಲ್ಲ. ಇದರಲ್ಲಿ ಅತಿವ್ಯಾಪ್ತಿ, ಅವ್ಯಾಪ್ತಿ ಮೊದಲಾದ ದೋಷಗಳಿರಕೂಡದು (ಭಾರಮಿ. ೧೪೬). 'ಅವ್ಯಾಪ್ತಿ' ಪರಾ. [ಅತಿ$_1$ + ವ್ಯಾಪ್ತಿ]

**ಅತಿಶಕ್ವರಿ** (ನಾ). [ಛಂದ] ಅಕ್ಷರ ಛಂದಸ್ಸಿನಲ್ಲಿ ಹದಿನೈದನೆಯ ಛಂದಸ್ಸಿನ ಹೆಸರು; ಒಂದು ಪಾದದಲ್ಲಿ ಹದಿನೈದು ಅಕ್ಷರಗಳಿರುವ ಸಮವೃತ್ತಗಳ ಸಮುದಾಯ: ೧೨ ಜಗತಿ, ೧೩ ಅತಿಜಗತಿ, ೧೪ ಶಕ್ವರಿ, ೧೫ ಅತಿಶಕ್ವರಿ . . . ಎಂದಿಪ್ಪತ್ತಾಱುಂ ಛಂದಂಗಳಕ್ಕುಂ (ಛಂದೋಂಬು. ೧-೫೫ ವ). [ಸಂ. ಅತಿಶಕ್ವರೀ (ಅತಿ$_1$ + ಶಕ್ವರೀ)]

**ಅತಿಶಯ** (ನಾ). ೧. ಹೆಚ್ಚಳ; ಮೇಲ್ಮೆ; ವಿಶೇಷ. ೨. [ಕಾವ್ಯಮೀ] ಒಂದು ಅಲಂಕಾರ; ಅತಿಶಯೋಕ್ತಿ: ಮೇರೆಗಳೆದಿರೆ ವಿಶೇಷವಿಚಾರಮನಧಿಕೋಕ್ತಿಯೊಳ್ ತಗುಳ್ಚುವುದಕ್ಕುಂ ಸಾರತರಮತಿಶಯಾಲಂಕಾರಂ (ಕವಿರಾ. ೩-೯೧); ಸವಿಶೇಷವಚನಮತಿಶಯಂ (ಉದಯಾ. ೯). ೩. [ಕಾವ್ಯಮೀ] 'ಕಾವ್ಯಾವಲೋಕನ'ದ ಮೇರೆಗೆ ಅರ್ಥಾಲಂಕಾರಗಳ ನಾಲ್ಕು ಪ್ರಕಾರಗಳಲ್ಲಿ ಒಂದು. ವಿರೋಧ, ಉತ್ಪ್ರೇಕ್ಷೆ ಮೊದಲಾದವು ಇದರ ಪ್ರಭೇದಗಳು: ನಾಡಾಡಿಗಱಿವಿನಂ ಕೆಯ್ಗೂಡಿದ ವಸ್ತೂಪವರ್ಣನಂ ವಿಸ್ಮಯಮಂ ಮಾಡುವೊಡತಿಶಯಮಕ್ಕುಂ (ಕಾವ್ಯಾವ. ೭೨೫). ೪. ಅಸಾಧಾರಣವಾದ ಮಹಿಮೆ: ಅತಿತುಂಗಾಕೃತಿಯಾದೊಡಾಗದದಱೊಳ್ ಸೌಂದರ್ಯಮೌನ್ನತ್ಯಮುಂ ನುತಸೌಂದರ್ಯಮುಮಾಗೆ ಮತ್ತತಿಶಯಂ ತಾನಾಗದು (ಎಕ. II, ೨೩೪-೧೬; 1180). [ಸಂ.]

**ಅತಿಶಯಧವಳ** (ಗು). ೧. ತುಂಬ ಬಿಳುಪಾದ; ಅತಿನಿರ್ಮಲವಾದ. (ನಾ). ೨. ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನ ಒಂದು ಬಿರುದು: ಕೃತಕೃತ್ಯಮಲ್ಲನಪ್ರತಿಹತವಿಕ್ರಮನೊಸೆದು ವೀರನಾರಾಯಣನಪ್ಪತಿಶಯಧವಳಂ ನಮಗೀಗತರ್ಕಿತೋಪಸ್ಥಿತಪ್ರತಾಪೋದಯಮಂ (ಕವಿರಾ. ೧-೨). [ಅತಿಶಯ + ಧವಳ]

**ಅತಿಶಯವಡೆ** (ಕ್ರಿ). ಹೆಚ್ಚಳವನ್ನು ಹೊಂದು; ಮೇಲ್ಮೆಯನ್ನು ಪಡೆ: ವ್ರತಹೋಮನಿಯಮೋಪವಾಸದಾನಗಳಿಂದತಿಶಯವಡೆವ ಧರ್ಮಗಳು (ಹದಿಬ. ೩-೬). [ಅತಿಶಯ + ಪಡೆ$_1$]

**ಅತಿಶಯಿತ** (ಗು). ಶ್ರೇಷ್ಠ; ಉತ್ಕೃಷ್ಟ: ಅತಿಶಯಿತ ವಸ್ತುವಿಷಯಪ್ರತೀತಿಯಂ ಮಱಸಿ ನಿಱಿಸಿ ಪೇೞ್ವುದು (ಕವಿರಾ. ೩-೧೮೨). [ಸಂ.]

**ಅತಿಶಯಿಸು** (ಕ್ರಿ). ಮೀರು; ಮೇಲಾಗು. [ಅತಿಶಯ + –ಇಸು$_3$]

**ಅತಿಶಯೋಕ್ತಿ** (ನಾ). ೧. ಸ್ವಲ್ಪವನ್ನು ಮಹತ್ತರವಾಗಿ ಮಾಡಿ ಹೇಳುವುದು: "ತಾಲ್ಲೂಕ ರಾಜಾಸ್ತೋತ್ರ" ದಲ್ಲಿ ಅತಿಶಯೋಕ್ತಿಯಿದೆಯೆಂದು ಹೇಗೆ ಹೇಳುವದು? (ಸಮುಜೀ. ೭). ೨. [ಕಾವ್ಯಮೀ] ಒಂದು ಕಾವ್ಯಾಲಂಕಾರ. ℙ ಇದರಲ್ಲಿ ರೂಪಕಾತಿಶಯೋಕ್ತಿ, ಭೇದಕಾತಿಶಯೋಕ್ತಿ, ಅತ್ಯಂತಾತಿಶಯೋಕ್ತಿ ಮೊದಲಾದ ಹಲವು ಪ್ರಭೇದಗಳುಂಟು (ಕೈಪಿಡಿ. ೩೩೨-೩೩೪ ನೋ): ಕಾವ್ಯನಾಟಕಗಳಲ್ಲಿ ಅತಿಶಯೋಕ್ತಿ, ಉತ್ಪ್ರೇಕ್ಷೆ ಮೊದಲಾದ ಅಲಂಕಾರಗಳಿಗೆ ವಿಶೇಷ ಪ್ರಾಧಾನ್ಯವುಂಟು. ಅತಿಶಯೋಕ್ತಿಯಂತೂ ಒಂದಲ್ಲ ಒಂದು ಬಗೆಯಲ್ಲಿ ಎಲ್ಲ ಅಲಂಕಾರಗಳ ತಳಹದಿ (ಭಾರಮಿ. ೪೧೪). [ಅತಿಶಯ + ಉಕ್ತಿ]

**ಅತಿಶಯೋಪಮೆ** (ನಾ). [ಕಾವ್ಯಮೀ] 'ಕವಿರಾಜಮಾರ್ಗ'ದ ಮೇರೆಗೆ, ಉಪಮಾಲಂಕಾರದಲ್ಲಿ ಒಂದು ಬಗೆ; ಉಪಮಾನದಲ್ಲಿರುವುದಕ್ಕಿಂತ ಉಪಮೇಯದಲ್ಲಿ ಒಂದು ವಿಶೇಷವನ್ನು ವರ್ಣಿಸುವುದು: ವದನಂ ಮದೀಯಲೋಚನಮುದಾವಹಂ ಕಮಳಮಳಿಕುಳೋತ್ಸವಜನಕಂ ವಿಜಿತ ವಿಭೇದ ಕ್ರಮಮಿಂತಿದಲ್ಲದಿಲ್ಲೆಂಬುದತಿಶಯೋಪಮೆ ಸತತಂ (ಕವಿರಾ. ೩-೬೬). [ಅತಿಶಯ + ಉಪಮೆ]

**ಅತಿಸಂಧಾನ** (ನಾ). ಮೋಸ; ವಂಚನೆ; ಕೃತ್ರಿಮ: "ವಂಚನಂ, ಅತಿಸಂಧಾನಂ, ವ್ಯಳೀಕಂ, ಪ್ರತಾರಣಂ – ಈ ೪ ಅೞಿಗೊಳ್ವುದು" (ಹಲಾಯು. ೧೨೩-೬೩). [ಸಂ.]

**ಅತಿಸಂಧಿತೆ** (ನಾ). ವಂಚಿತಳಾದವಳು; ಮೋಸಕ್ಕೆ ಗುರಿಯಾದವಳು: ಅತಿಸಂಧಿತೆಯಂತೆ ವಿರಳೋತ್ಕಳಿಕಾತರಳೆಯುಂ (ಚಂದ್ರ ಪು. ೧೫-೩೦ ವ). [ಸಂ. ಅತಿಸಂಧಿತಾ]

**ಅತಿಸರ್ಜನ** (ನಾ). ೧. ಬಹಳವಾಗಿ ದಾನಮಾಡುವುದು; ಕೊಡುಗೈತನ. ೨. ಕೊಲೆ; ಸಂಹಾರ. [ಸಂ.]

**ಅತಿಸಾಂಗ** (ಗು). ಸಂಪೂರ್ಣವಾದ; ಸಮಗ್ರವಾದ: ನಿನ್ನತಿಸಾಂಗ ಭಕ್ತಿಗೆ ಮೆಚ್ಚಿದೆವು ನಾವಬ್ಜದಳನೇತ್ರೆ (ಬಸಪು.೫೭-೬೧). [ಅತಿ$_1$+ಸಾಂಗ]

**ಅತಿಸಾರ** (ಗು). ೧. ಅತಿಶಯವಾದ ಸತ್ತ್ವದಿಂದ ಕೂಡಿದ; ರಸಮಯವಾದ: ನುತಿಸಿ ನುತಿಸಿಯವರನತಿಸಾರಮೃದುಗಾಂಧರ್ವದಿಂ ಪಾಡುತ್ತ ಹಾಡುತ್ತೆ (ಬಸಪು. ೬-೨೬). (ನಾ). ೨. ಬಹಳವಾಗಿ ಭೇದಿಯಾಗುವ ಒಂದು ರೋಗ: "ಬಸಿಕುರ್ತ್ತಮತಿಸಾರವಕ್ಕು" (ಮಂಗರಾ. ೧೧೪-೩); ಕುಸುಬೆಎಣ್ಣೆ, ತುಪ್ಪ ಇವಂ ಕುಡಿಸೆ ಅತಿಸಾರ ಮಾಣ್ಗುಂ (ವಿವೈವಿ. ೧೦೯). [ಅತಿ$_1$ + ಸಾರ$_1$]

**ಅತಿಸಾರಕಿ** (ನಾ). ಅತಿಸಾರ ರೋಗದಿಂದ ನರಳುವವನು. [ಸಂ. ಅತಿಸಾರಕಿನ್]

**ಅತಿಸೂಕ್ಷ್ಮ** (ಗು). ಬಹಳ ಸೂಕ್ಷ್ಮವಾದ: ಅವಳ ಮನಸ್ಸು ಅತಿ ಸೂಕ್ಷ್ಮ; ಒಂದು ಗೆರೆಯಷ್ಟು ಹೆಚ್ಚುಕಡಮೆಯಾದರೂ ನೊಂದುಕೊಳ್ಳುತ್ತಾಳೆ (ರೂಢಿ). [ಅತಿ$_1$ + ಸೂಕ್ಷ್ಮ]

**ಅತಿಸ್ಥಾನ** (ನಾ). ಮೂಲಭೂತವಾದ ದೇವಸ್ಥಾನ: ಶ್ರೀ ಅನಂತಾಪುರದ ಊರಮುಂದೆ ಅತಿಸ್ಥಾನದ [ಗುಡಿ] ಖಿಲವಾಗಿರಲಾಗಿ . . . ಪ್ರಜೆಗಳ ಸನ್ಮತದಲಿ ಆ ಖಿಲವಾದ ಅತಿಸ್ಥಾನವನು ಜೀರ್ಣೋಧಾರವ ಮಾಡಿ (ಸೌಇಇ. IX–ii, ೬೨೩-೧೧; 1507). [ಸಂ. ಅಧಿಷ್ಠಾನ]

**ಅತಿಸ್ನೇಹ** (ನಾ). ಮಿತಿಮೀರಿದ ಗೆಳೆತನ: ಅತಿಸ್ನೇಹ ಗತಿಗೆಡಿಸಿತು (ಗಾದೆ). [ಅತಿ$_1$ + ಸ್ನೇಹ]

**ಅತೀಂದ್ರಿಯ** (ಗು). ೧. ಇಂದ್ರಿಯಗಳಿಗೆ ಗೋಚರವಾಗದ; ಇಂದ್ರಿಯಗಳಿಗೆ ಸಂಬಂಧಿಸದೆ ಇರುವ; ಸೂಕ್ಷ್ಮವಾದ; ಪರೋಕ್ಷವಾದ. (ನಾ). ೨. ಆತ್ಮ. ೩. ಪ್ರಕೃತಿ. ೪. ಮನಸ್ಸು. [ಅತಿ$_1$ + ಇಂದ್ರಿಯ]

**ಅತೀಂದ್ರಿಯದೃಷ್ಟಿ** (ನಾ). "ಕಣ್ಣಿಗೆ ಕಾಣದ ವಿಷಯಗಳನ್ನು ಪ್ರತ್ಯಕ್ಷವಾಗಿ ಕಂಡಂತೆ ಮನಸ್ಸಿನಲ್ಲಿ ಗ್ರಹಿಸುವುದು; ಅತೀಂದ್ರಿಯ ದೃಷ್ಟಿ (ಶಕ್ತಿ); ಕೇವಲ ಸೂಕ್ಷ್ಮದೃಷ್ಟಿ; ಅಸಾಧಾರಣ ಪ್ರಜ್ಞೆ" (Clairvoyance. ಇಂಕನಿ). [ಅತೀಂದ್ರಿಯ + ದೃಷ್ಟಿ]

**ಅತೀಂದ್ರಿಯಸೌಖ್ಯ** (ನಾ). ಇಂದ್ರಿಯಗಳ ಸಂಬಂಧವಿಲ್ಲದ, ಕೇವಲ ಆತ್ಮಕ್ಕೆ ಸಂಬಂಧಿಸಿದ ಸುಖ: ಅನಶ್ವರಶ್ರೀವನಿತೇಶರೀಗೆಮಗೆ ಸಿದ್ಧರತೀಂದ್ರಿಯಸೌಖ್ಯಸಿದ್ಧಿಯಂ (ಚಂದ್ರಪು. ೧-೨). [ಅತೀಂದ್ರಿಯ + ಸೌಖ್ಯ]

**ಅತೀತ** (ಗು). ೧. ಮೀರಿದ: ನೆನಪುಗಳಿಗೆಯತೀತನಪ್ಪ ಮಹಾನುಭಾವ ಪ್ರಜ್ಞಮಾನಸನು (ಬಸಪು. ೮-೧೨). ೨. ದಾಟಿದ; ಎಲ್ಲೆಯನ್ನು ಮೀರಿದ. ೩. ಸತ್ತುಹೋದ; ಗತಿಸಿದ. ೪. ಕಳೆದುಹೋದ; ಮುಗಿದುಹೋದ: ಭಾವಿಯೆನಿಸಿರ್ದ ಭೋಗದೊಳಾವುದು ನಿಶ್ಚಯಮತೀತಮುದತೀತಮೆ ದಲ್ ಜೀವಂ ತದಾತ್ವಸುಖಲವಸೇವೆಗೆ ಕಳವಳಿಪುದು (ಚಂದ್ರಪು. ೨-೩೬). (ನಾ). ೫. ಅತಿಕ್ರಮ; ಕ್ರಮತಪ್ಪಿದ ನಡತೆ: ಜಾತಂ ವಿನೀತನಾಗಲಿ ಧೂರ್ತನಾಗಿರಲಿ ತಾತಂಗೆ ವಿರಹಿತವೆ ನೋಡದಿರ್ ಬಾಲಕರತೀತಮಂ ಕ್ಷಮಿಸೆಂದು ವಾಲ್ಮೀಕಿ ನುಡಿಯೆ (ಜೈಮಿಭಾ. ೨೧-೫೪). ೬. ಇಂದ್ರಿಯಗಳ ಹಿಡಿತಕ್ಕೆ ಮೀರಿದವನು; ಸಂಸಾರದ ಆಚೆಗಿರುವವನು; ಯತಿ. 'ಅತೀತಮಠ' ಪರಾ. ೭. (?): ಅನಾದಿಯ ಮಗನು ಆದಿ ಆದಿಯ ಮಗನತೀತ ಅತೀತನ ಮಗನು ಆಕಾಶ (ಅವಚಂ. ೧೬೪-೭೪೩). [ಸಂ.]

**ಅತೀತಕಾಲ** (ನಾ). ೧. ಕಳೆದುಹೋದ ಕಾಲ. ೨. [ವ್ಯಾಕ] ಭೂತಕಾಲ: ಆಖ್ಯಾತವಿಭಕ್ತಿಗಳಕ್ಕುಮತೀತಭವದ್ಭಾವಿಕಾಲ ವಿಧ್ಯಾದಿಗಳೊಳ್ (ಕಾವ್ಯಾವ. ೩೭೪). [ಅತೀತ + ಕಾಲ$_1$]

**ಅತೀತಕ್ರಿಯೆ** (ನಾ). ೧. ಆಗಿಹೋದ ಕೆಲಸ. ೨. ಕೈಮೀರಿ ಹೋದ ಕೆಲಸ. [ಸಂ. ಅತೀತಕ್ರಿಯಾ (ಅತೀತ + ಕ್ರಿಯಾ)]

**ಅತೀತಜನ್ಮ** (ನಾ). ಕಳೆದ ಜನ್ಮ; ಹಿಂದಿನ ಜನ್ಮ. [ಅತೀತ + ಜನ್ಮ]

**ಅತೀತಭವ** (ನಾ). = ಅತೀತಜನ್ಮ: ನೀನತೀತಭವದೊಳ್ ಉಪಾರ್ಜಿತೋದಾತ್ತಪುಣ್ಯನೆಯಾಗಿ ಸೌಧರ್ಮಕಲ್ಪದೊಳ್ ದೇವನಾದೈ (ಶಾಂತಿಪು. ೬-೮೫). [ಅತೀತ + ಭವ]

**ಅತೀತಮಠ** (ನಾ). ಯತಿಗಳ, ಸಂನ್ಯಾಸಿಗಳ, ಮಠ: ಕುರುಕ್ಷೇತ್ರದಲ್ಲಿ ರಾಜಿಸುತಿಪ್ಪ ಯತಿವ್ರತಿಗಳಿಗೆ ಗೊತ್ತೆಂದೆಂಬಂತತೀತಮಠವಿರಲೊಂದು ದಿವಸದಲ್ಲಿ (ಪ್ರೌಢರಾ. ೮-೫೪). [ಅತೀತ + ಮಠ]

**ಅತೀತಾವಸ್ಥೆ** (ನಾ). ಪ್ರಕೃತಿಯನ್ನು ಅತಿಕ್ರಮಿಸಿದ ಸ್ಥಿತಿ; ಆತ್ಮನು ಪ್ರಕೃತಿಯ ಮೂಲಾಧಾರ ಚಕ್ರದಲ್ಲಿ ನಿಲ್ಲುವ ಒಂದು ಬಗೆಯ ಯೋಗಸಾಧನೆ: ಮೂಲಾಧಾರದಲ್ಲಿ ಬೀಳಲ್ಕತೀತಾವಸ್ಥೆಯೈ (ವೀಶೈಪು. ೬-೬-೩೨). [ಅತೀತ + ಅವಸ್ಥೆ]

**ಅತೀತೆ** (ನಾ). ಜೈನಾಗಮವನ್ನು ಅನುಸರಿಸಿ ದೀಕ್ಷೆಪಡೆದ ಹೆಂಗಸು; ಜೈನಸಂನ್ಯಾಸಿನಿ; ಕಂತಿ: "ಜೈನಾಗಮಂಗೊಂಡವಳತೀತೆ [ಪಾಠಾಂ. ಳ್ಕಂತಿ]ಯಕ್ಕುಂ" (ಮಂಗರಾ. ೯೦-೩ ಕ). [ಸಂ. ಅತೀತಾ]

**ಅತೀವ** (ಗು). ತುಂಬ; ಅತ್ಯಧಿಕ: ಸಂಯಮಿಗಳ ಮುಂದೆ ನಿಂದೆಜಗಿ ಕಾಣ್ಕೆಯನಿತ್ತುದತೀವ ಭಕ್ತಿಯಿಂ (ರಾಜಶೇ. ೧-೧೨೭); ಪ್ರಮೀಳೆಯು ಉಸುರಿದ ದಾರುಣಸತ್ಯದಿಂದ ವಿಷ್ಣೂನಿಗಾದ ಅತೀವ ವ್ಯಥೆ (ಸಮಜೀ. ಪೀ. ೩೯). [ಸಂ. (ಅತಿ$_1$ + ಇವ)]

**ಅತುಕು, ಅದುಕು** (ಕ್ರಿ). ಕೂಡಿಸು; ಬೆಸಗೆ ಹಾಕು (ಸ್ಯಾಂಡರ್). **ಅದುಕು** (ಸ್ಯಾಂಡರ್). [← ತೆಲು. ಅತುಕು]

**ಅತುಚ್ಛ** (ಗು). ತುಚ್ಛವಲ್ಲದ; ಪ್ರಬಲವಾದ ಶಕ್ತಿಯುಳ್ಳ: 'ಅತುಚ್ಛಬಾಣ' ಪರಾ. [ಸಂ.]

**ಅತುಚ್ಛಬಾಣ** (ನಾ). ಪ್ರಬಲವಾದ ಶಕ್ತಿಯುಳ್ಳ ಬಾಣ: ಸಿಂಹಳಭೂಪತಿ ಮುಚ್ಚಿ ಚಂಡಕೋದಂಡಮನಾರ್ಪಿನಿಂ ಸೆಳೆದು ಬೊಬ್ಬಿಱಿದೆಚ್ಚನತುಚ್ಛಬಾಣಮಂ (ರಾಜಶೇ. ೬-೮೮). [ಅತುಚ್ಛ + ಬಾಣ]

**ಅತುಲ, ಅತುಳ** (ಗು). ೧. ಹೋಲಿಕೆಯಿಲ್ಲದ; ಅಸಮಾನವಾದ; ಎಣೆಯಿಲ್ಲದ. ೨. ತೂಕವಿಲ್ಲದ; ಹಗುರ. (ನಾ). ೩. ಎಳ್ಳು. ೪. ಕಫ; ಕೆಮ್ಮಲು. **ಅತುಳ**: ೧. ಅಂಗರುಚಿ ಶರಭಬಲಮಂ ಬಲದ ವಾಜಿ ಕರಣಂಗಳಂ ಲೋಹಿತಾಕ್ಷಿಗಳತುಳ ಭೂಧರಶೃಂಗಮಂ (ಹಚಕಾ. ೫-೩೮); ಅತುಳಹರುಷದ ಹೊನಲಿನಲಿ ಹೊದಱಿದ್ದು ವಿಕಸಿತ ವನರುಹಾಸನನಾಗಿ ನುಡಿದನು (ತೊರರಾ. ೧-೫-೧೦). [ಸಂ.]

**ಅತುಲಿತ, ಅತುಳಿತ** (ಗು). ಹೋಲಿಕೆಯಿಲ್ಲದ; ಅಸಮಾನವಾದ: ನಿಷ್ಕಾವಿಶೇಷಾತುಲಿತ ಭಕ್ತಿಯನಿತ್ತೆನಾತಂಗೆ (ಬಸಪು. ೨-೮). **ಅತುಳಿತ**: ಆ ವಿಕ್ರಮಾಂಕ ಸಕಳ ಮಹೀವಲ್ಲಭನಾತ್ಮಜಾತನತುಳಿತ ಭುಜಶೌರ್ಯಾವಷ್ಟಂಭೋದ್ಧರಣದ (ಕಇಅ. ೧೭, ೧-೨೯; 1127). [ಸಂ.]

**ಅತುಳ** 'ಅತುಲ' ನೋ.

**ಅತುಳಭಾಷೆ** (ನಾ). ಅಸಾಧಾರಣವಾದ ಪ್ರತಿಜ್ಞೆ: ಅಟ್ಟಿ ಹಿಡಿವೆನಮರರ . . . ಮಿಕ್ಕಿನ ನರರನು ಕಟ್ಟಿತಹೆನೆಂದು ತೊಟ್ಟನತುಳ [ಪಾಠಾಂ. ನಖಿಲ] ಭಾಷೆಯನು (ತ್ರಿಪುಸಾಂ. ೧೩-೧೪೨). [ಅತುಳ (= ಅತುಲ) + ಭಾಷೆ]

**ಅತುಳಿತ** 'ಅತುಲಿತ' ನೋ.

**ಅತೃಪ್ತಿ** (ನಾ). ತೃಪ್ತಿಯಿಲ್ಲದಿರುವುದು; ಮನಸ್ಸು ತಣಿಯದಿರುವುದು; ಅಸಮಾಧಾನ: ಆಹಾರದ ಕೊರತೆ ಜನರಲ್ಲಿ ಅತೃಪ್ತಿಯನ್ನುಂಟುಮಾಡಿದೆ (ರೂಢಿ). [ಸಂ.]

**-ಅತೆ** (ಪ್ರ). ಒಂದು ಭಾವನಾಮ ಪ್ರತ್ಯಯ; ಉದಾ—ಅಳತೆ; ಕೊಱತೆ: ಅಳತೆಗೆ ತೂಕಕ್ಕೆಣಿಕೆಗೆಯೊಳಗಾದುವು ಸಕಳವಸ್ತುಗಳ್ (ಆದಿಪು. ೧೦-೫೩); ಕೆಸಱ ಕೊಱತೆಗೆ ಕತ್ತುರಿಯಂ ಕೊಳುವಂತೆ (ಆದರ. ೧೪೮-೨); ಕೊಂಕು ಕೊರತೆಗಳಿಲ್ಲ (ಅಮೃತ. ೫-೧೬).

**ಅತೋನಾತ** (ನಾ). (ಉಕ) ಅತಿಶಯ; ಪರಮಾವಧಿ; "ಅತಿಶಯ, ಅತಿಬಹಳ, ಹೆಚ್ಚಿಚ್ಚು" (ಜಾನಕೋ. ೧೨).
[← **ಮರಾ.** ಅತೋನಾತ್ (< **ಸಂ.** ಅತೋನಾತಃ=ಅತಃ ನ ಅತಃ)]

**ಅತ್ತ** (ನಾ). ೧. (ಮಾತಾಡುವವನು ದೂರಪ್ರದೇಶವನ್ನು ನಿರ್ದೇಶಿಸುವಲ್ಲಿ) ಆ ಕಡೆ; ಆ ಪಕ್ಕ; ಆ ದಿಕ್ಕು; ಆ ಸ್ಥಳ: ಕುದಿಕುದಿದತ್ತಣಿಂ ಕುದುರೆ ನೂಱಱೊಳಾ ಬಲದಾನೆ ಪತ್ತು ತಾಗಿದುವು (ಕವಿರಾ. ೧-೧೧೯); ಅತ್ತ ಸುರೇಶ್ವರಾವಸಥಮಿತ್ತ ಪನ್ನಗೋದಾತ್ತ ಸಮಸ್ತ ಲೋಕಮಱದಂತಿರೆ ಪೂಣ್ದನಗೆ (ಪಂಪಭಾ. ೧-೬೫); ಎನ್ನ ಮನದ ದುರಾಶೆಯ ಮಾಣಿಸಿ ನಿಮ್ಮತ್ತ ತೋಱಾ ಚೆನ್ನಮಲ್ಲಿಕಾರ್ಜುನಾ (ಮಹದೇ. ೨-೧); ದೈವವದೆತ್ತಲೊಲೆದಿಹುದತ್ತ ವಿಜಯಶ್ರೀಯ ಕುಡಿನೋಟ (ಕುವ್ಯಾದ್ರೋ. ೪-೨); ಕಡೆಮೊದಲಿಲ್ಲದೆ ಖಳರಾಯರಾವುತಪಡೆ ಬಿದ್ದುದಿತ್ತ ಮೇಣತ್ತ ತಡೆಯದೆ ಬಾಣಕುಂಭಾಂಡರ್ ಖೇಚರದಿಂದೆ ಕೆಡಹಿದರ್ (ಮೋಹತ. ೪೦-೭೨). ೨. ಹೊರಗೆ; ಬೇರೊಂದು ಕಡೆ: ಅನ್ನೆಗಮತ್ತ ಯಮನಂದನಂ ಮೂವರ್ ತಮ್ಮಂದಿರ ಬರವಂ ಕಾಣದೆ ಭಗ್ನಮನನಾಗಿ (ಪಂಪಭಾ. ೮-೪೧ ವ); ಸುಯೋಧನಂಗೆ ರಣಭೂಮಿಯೊಳೆಂತುಟವಸ್ಥೆಯೋ ಕನಲ್ದುರಿದಪುದೆನ್ನ ಮೆಯ್ಯೆನುತುಮತ್ತಣ ಪಂಬಲ ಬಂಬಲೊಳ್ ತೆಱಂದಿರಿದುದು ಚಿತ್ತಮಾ ದೊರೆಯ ಯೋಗಿಗಂ (ಪಂಪಭಾ. ೧೩-೬೩). ೩. ನಿರ್ದಿಷ್ಟವಾದ ಸ್ಥಳ, ಕಾಲ, ವಸ್ತು ಮೊದಲಾದದ್ದರಿಂದ ಆಚೆ, —ಆ ಮುಂದೆ, —ಆ ಮೇಲೆ: ಜಸಕ್ಕಾಗರಮಾದ ಬದ್ದೆಗನಿನಾ ನರಸಿಂಹನಿನತ್ತ ನಾಲ್ವೆರಲ್ ಮೇಗು ಪೊದಟ್ಟು ಚಾಗದೊಳಮೊಂದಿದ ಬೀರದೊಳಂ ಗುಣಾರ್ಣವಂ (ಪಂಪಭಾ. ೧-೫೦); ದುರ್ಮಾರ್ಗಮಂ ಪೊರ್ದಿದೆನಗೆ ಶರಣ್ ಧರ್ಮದಿಂದತ್ತ ಮತ್ತಿಲ್ಲ (ಸುಕುಮಾ. ೩-೪೫); ತಪಸಿಗಳಿಂದತ್ತ ಮತ್ತೆ ಪಿರಿಯರುಮೊಳರೇ (ಸಮುಪ. ೬-೯೭); ವಾಚ್ಯ-ಲಕ್ಷ್ಯಗಳಿಂದತ್ತಣ ಈ ಧ್ವನಿಯೇ ಕಾವ್ಯಾತ್ಮವಾಗಿರುವುದು ಉತ್ತಮ ಕಾವ್ಯವು (ನಾಡೋಜ. ೩೫೬). ℙ ಇದರ ತೃತೀಯಾವಿಭಕ್ತಿ ರೂಪಗಳಾದ **ಅತ್ತಣಿಂ, ಅತ್ತಣಿಂದಂ, ಅತ್ತಣಿಂದೆ** ಎಂಬುವು ಪಂಚಮೀವಿಭಕ್ತಿಯ ಪ್ರತ್ಯಯಗಳೆಂದು ಹಳಗನ್ನಡದ ವ್ಯಾಕರಣಗಳಲ್ಲಿ ಉಕ್ತವಾಗಿದೆ. (ಷಷ್ಠೀ) **ಅತ್ತಣ, ಅತ್ತಳ**: ರಿಸಿಗಳತ್ತಣೊಂದು ಮೈಮೆಯಿಂ ಗೆಯ್ಮೆಯಿನಿಂತಾದುದು (ರಾಮಾಶ್ವ. ೧೩೬-೧೭); ಕತ್ತಲೆಯ ಪುರವ ಕಳ್ಳರು ಮುತ್ತಲು, ಪುರಪತಿ ಮುತ್ತಿಗೆಗೊಳಗಾದನು ನೋಡಾ ಅಯ್ಯಾ, ಅತ್ತಳ (ಅತ್ತಣ) ಊರಿಂದ ಬೆಳಗು ಪಸರಿಸಲು ಮುತ್ತಿಗೆ ತೆಗೆದೋಡಿತ್ತು ಕಾಣಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ (ಸಿದ್ಧೇವ. ೧೪೩); "ಅತ್ತಳ ಊರೇ ಬ್ರಹ್ಮರಂಧ್ರ" (ಸಿದ್ಧೇವ. ಟೀಕೆ). (ಸಪ್ತಮೀ) **ಅತ್ತಲ್, ಅತ್ತಲು**: ೧. ಅತ್ತಲಸುರಾರಿ ಬೆಸಸಿದನಿತ್ತಲ್ ರುದ್ರಾವತಾರನೆಱೆದೊಯ್ದಪಂ (ಗದಾಯು. ೯-೧೬); ಎತ್ತಲೊಲೆವುದು ಧರ್ಮಬಲ ತಾನತ್ತಲೊಲೆವುದು ದೈವ (ಕುವ್ಯಾದ್ರೋ. ೪-೨); ಅತ್ತಲು ವೃಷಭನ ಪ್ರಾಣಂ ಮತ್ತೆ ನಿಸದೆ ಪೋದುದಮರವಾಸಮನಯ್ದಲು (ಮೈಆರಿ. ೧೯೨೭, ೩೪-೪; 11ನೆಯ ಶತ); ಆದೆ ವಿಜಯನಸ್ತ್ರಾಘವತ್ತಲು (ಕುವ್ಯಾದ್ರೋ. ೧೦-೯). ೨. ಕತ್ತಲೆಯೆಂಬುದು ಇತ್ತಲೆಯಯ್ಯ, ಗುಹೇಶ್ವರನೆಂಬುದು ಅತ್ತಲೆಯಯ್ಯ (ಅವಚಂ. ೫೧-೨೧೯); ಅಲ್ಲಿಂದತ್ತಲ್ ಮೂವರ್ ಮಧ್ಯಮರ್ (ಸುಕುಮಾ. ೬-೩೭); ಪ್ರಾಕ್ತೈಜಸಾತ್-ತೈಜಸದಿಂದತ್ತಲೆ (ತಸೂವ್ಯ. ೫೩). ℙ ಶಮದ. ೧೧೯ ಪ್ರಯೋ. ಮೇರೆಗೆ ಅತ್ತಲ್ ಎಂಬುದು ಪ್ರಥಮಾವಿಭಕ್ತಿಯ ರೂಪವೂ ಆಗುತ್ತದೆ. ಅತ್ತಲ್, ಅತ್ತಲು ಎಂಬುವನ್ನು ಅವ್ಯಯಗಳೆಂದು ಭಾವಿಸುವವರೂ ಉಂಟು.

**ಅತ್ತತ್ತ, ಅತ್ತತ್ತಲ್** (ದ್ವಿರುಕ್ತಿ) ೧. ತುಂಬ ಆಚೆಗೆ; ತುಂಬ ದೂರ: ಉಬ್ಬಸಮುಪ್ಪದತ್ತೆಯತ್ತತ್ತ ಸಾರಿಮೆಂದು (ಧರ್ಮಾಮೃ. ೨-೨೦೬); ಅಯ್ಯಾ ಪಾತಾಳವಿತ್ತಿತ್ತ, ಶ್ರೀಪಾದವತ್ತತ್ತ (ಮಹದೇ. ೬-೪); ಹೊದ್ದುವರೆ ಸಮೀಪ, ಹತ್ತೆ ಸಾರುವರೆ ಅತ್ತತ್ತ ತೋಱುತ್ತದೆ (ಶೂನ್ಯಸಂ. ೧೨-೬); ಘನಪಟಲದಿನತ್ತತ್ತ ಮಿಕ್ಕಂ ಹಿಮೋರ್ವೀಧರದಿಂದತ್ತತ್ತ ಪೋದಂ ರವಿಯ ರಥದಿನತ್ತತ್ತ ಮೈವೆರ್ಚಿದಂ (ಅರ್ಧನೇ. ೬-೨೮). ೨. ತುಂಬ ಕೀಳು, —ಹೀನ: ಒತ್ತಿಸಿದ ಕಸಕಿಂತ ಅತ್ತತ್ತ ಈ ದೇಹ ಹೊತ್ತುಕೊಂಡೊಯ್ದು ಅಗ್ನಿಯಲಿ ಬಿಸುಡುವರು (ಪುರಂದ. ೧-೧೫೨-೧೧); ಬರೆವಣಿಗೆಯೋ ಆಸ್ಪತ್ರೆಯಲ್ಲಿ ವೈದ್ಯರು 'ಪ್ರಿಸ್ಕ್ರಿಪ್ಷನ್' ಚೀಟಿ ಬರೆಯುತ್ತಾರಲ್ಲ ಆ ಬರೆವಣಿಗೆಗಿಂತ ಅತ್ತತ್ತ (ಸುಪಸಂ. ೯). ೩. ತುಂಬ ಮೇಲು: ಮೂದೇವರುಗಳಿಂದಲತ್ತತ್ತ ಮಹಲಿಂಗ (ದೀಕ್ಷಾಬೋ. ೧೪೦-೭); ಸೌರಾಷ್ಟ್ರ ಸೋಮೇಶ್ವರನೆಂಬ ಲಿಂಗಕಲ್ಪಿತಕ್ಕತ್ತತ್ತಲೆ (ಆದವ. ೫); ಅಜಂಗತ್ತತ್ತಲಚ್ಯುತಗ[ನ]ಚ್ಯುತಂಗತ್ತತ್ತಲತ್ತಲು ರುದ್ರ (ಬಸಪು. ೬೧-೫೩). **ಅತ್ತ ಕೆರೆ ಇತ್ತ ಬಾವಿ, ಅತ್ತ ಪುಲಿ ಇತ್ತ ದರಿ** = ಯಾವ ಕಡೆಗೆ ತಿರುಗಿದರೂ ಅಪಾಯಕ್ಕೊಳಗಾಗಬಹುದಾದ ಸಂದರ್ಭ; ಇಕ್ಕಟ್ಟು; ವಿಷಮ ಸ್ಥಿತಿ: ಅತ್ತ ಕೆರೆ ಇತ್ತ ಬಾವಿ ಎಂಬಂತೆ ಆವನ ಸ್ಥಿತಿಯಾಗಿತ್ತು (ರೂಢಿ); ಅತ್ತಲಸುರಾರಿ ಬೆಸಸಿದನಿತ್ತಲ್ ರುದ್ರಾವತಾರನೆಱೆದೊಯ್ದಪನೆಂದತ್ತ ಪುಲಿಯಿತ್ತ ದರಿಯೆಂದತ್ತಿತ್ತಡಿಯಿಡದೆ ಲಕ್ಷ್ಮಿ ತಳವೆಳಗಾದಳ್ (ಗದಾಯು. ೯-೧೬). **ಅತ್ತಲ ಬಾಯಿ** = ಎಲ್ಲಿಂದಲೋ ಬಂದವನು; ತೀರ ಅಪರಿಚಿತ; 'ಯಃಕಶ್ಚಿತ' (ಉಕ. ೬). **ಅತ್ತಲಾಗಿ ಇಡು, ಅತ್ತಿಡು** (ಉಕ) = ದೂರಕ್ಕೆ ಸರಿಸು; ಗಮನಿಸದೆ ಇರು: ನಿನ್ನ ಟೀಕೆಯನ್ನೆಲ್ಲಾ ಅತ್ತಲಾಗಿ ಇಟ್ಟು, ಮುಂದೆ ಏನು ಮಾಡಬೇಕೆಂಬುದರ ಕಡೆಗೆ ಗಮನಕೊಡು (ರೂಢಿ); "ನೀನು ಯುದ್ಧಮಾಡುವುದಾದರೆ ಅದನ್ನೆಲ್ಲ ಅತ್ತಿಡುವೆನು . . ." (ನಡೆದಾ. II, ೧೪೩೫); ತಾನು ವಿಶ್ವಸೃಕ್ಕೇ ಆದರೂ, ಎಲ್ಲವನ್ನೂ ಸೃಷ್ಟಿಮಾಡುವವನಾದರೂ, ತನ್ನ ಅಹಂಕಾರವನ್ನು ಅತ್ತಿಟ್ಟು, ಪ್ರಯತ್ನಪೂರ್ವಕವಾಗಿ ಮಾಡಬೇಕು (ನಡೆದಾ. II, ೧೫೫೪). **ಅತ್ತಲಿಂ ಮುನ್ನ, ಅತ್ತ ಮುನ್ನಲ್** = ಅದಕ್ಕಿಂತ ತುಂಬ ಮುಂಚೆಯೇ; ಬಹಳ ಮೊದಲೇ: ಅಜಹರಿಗಳು ಜನಿಸದತ್ತತ್ತಲಿಂ ಮುನ್ನ (ಬಸಪು. ೯-೫೦); ಆಱುವತ್ತು ಮೂವರಿಗೆ ಅತ್ತ ಮುನ್ನಲುದಾತ್ತ ಬುದ್ಧಿ . . . ಲಿಂಗೈಕ್ಯಭಾವಂಬೆತ್ತು ನಡವುತ (ಬಸಪು. ೫೩-೩೮). [**ದೇ.**]

**ಅತ್ತಂ** (ಅ). ೧. ಆ ಕಡೆಗೆ; ಅತ್ತಲಾಗಿ: ಎಲೆ ಸ್ವಾಮೀ, ನೀವತ್ತಂ ಪೋಗೆನಲ್ (ಪಂಚತಂ. ೧೯-೧೯). ೨. ಆ ಬಳಿಕ: ಇರನವಂ ಬಾಲನೇಱುವರ್ಷದಿನತ್ತಂ (ಜಾತತಿ. ೬-೨೬).

**ಅತ್ತಂ ಇತ್ತಂ** = ಆ ಕಡೆ ಮತ್ತು ಈ ಕಡೆ: ಗುಂಡಿಗೆಯಂ ಕಾಣದತ್ತಮಿತ್ತಂ ನೋೞ್ಪನ್ನೆಗಂ (ವಡ್ಡಾರಾ. ೯೧-೧೧); ಉದರಶಿಖಿಜ್ವಾಲೆಯಿಂದತ್ತಮಿತ್ತಂ ಕುಸಿಯುತ್ತಂ (ರಕ್ಷಾಶ. ೩). [< ಅತ್ತ]

**ಅತ್ತಪರ** (ನಾ). ಢಾಲು; ಗುರಾಣಿ: "ಅತ್ತಪರಂ = ಕಾಳೆಗವಲಗೆ" (ಶಮದ. ಪರಿ. ೨); ಕಿಟ್ಟು ಬಾಳುಮತ್ತಪರಮುಮಭೇದ್ಯಕವಚಮುಂ ಬೆರಸೊಗೆದ ಧೃಷ್ಟದ್ಯುಮ್ನನೆಂಬ ಮಗನುಮಂ (ಪಂಪಭಾ. ೩-೩೨ ವ); ಪಕ್ಕದ ಬಾಳುಮತ್ತಪರಮುಂ ಪೊಳೆಯುತ್ತಿರೆ ಪಾಱಿದಳ್ ನಭೋಗ್ರಕ್ಕತಿವೇಗದಿಂ ಖಚರಕಾಮಿನಿ (ಅರ್ಧನೇ. ೬-೧೦). [?]

**ಅತ್ತರ್** 'ಅತ್ತರು' ನೋ.

**ಅತ್ತರ** (ನಾ). ಹಬೆಯಲ್ಲಿ ಪದಾರ್ಥಗಳನ್ನು ಬೇಯಿಸುವುದಕ್ಕಾಗಿ ಪಾತ್ರೆಯ ಮೇಲಿಡುವ ಅಥವಾ ಅದರ ಬಾಯಿಗೆ ಮುಚ್ಚುವ ಅಥವಾ ಕಟ್ಟುವ ವಸ್ತ್ರಾದಿ ಸಾಧನ (?): ಅತ್ತರದ ಮೇಲುಂಡೆ ಬದನೆಗಾಯಿಗಳನಿಟ್ಟು ಮೆತ್ತನಪ್ಪಂತು ಬೇಯಿಸಿ ತುಪ್ಪ ಹುಳಿಯಲ್ಲ ಕೊತ್ತುಂಬರಿಯ ರಸಮುಂ ತುಪ್ಪದೊಳಗಿಕ್ಕಿ ಮತ್ತಾ ಕಾಯನಟ್ಟು (ಸೂಪಶಾ. ೪–೧೪); ಅತ್ತರದಿ ಬೆಂದ ಬಾಳೆಯ ಮುಗುಳ ಕಿಱಿದಾಗಿ ಕತ್ತರಿಸಿಯುದಕೆ ಬಸಿಕೊಂಡಾ ಹಾಲ ಹುಡಿ ಚಿತ್ತಳಿಸಿದಲ್ಲ ನೀರುಳ್ಳಿ ಮೆಣಸಿನ ಚೂರ್ಣ ಹುರಿದ ತೆಂಗಾಯ ಕುಸುರೆ ಇತ್ತು (ಸೂಪಶಾ.೪–೩೭); ಅದಱಂತೆ ಬಾಳೆ ಸೋರೆ ಹೀರೆ . . . ಮೊದಲಾದ ಕಾಯ್ಗಳ ರಸಂಗಳ ತೆಗೆದು ಹದವಡಿಸಿಯತ್ತರದೊಳಿರಿಸಿ ಪರಿಮಳಗೊಳಿಸಲು (ಸೂಪಶಾ. ೫–೪೩). [? ಸಂ. ಅಸ್ತರ]

**ಅತ್ತರಣ** (ನಾ). ೧. ಕುಳಿತುಕೊಳ್ಳಲು ಅಥವಾ ಮಲಗಿಕೊಳ್ಳಲು ಹಾಸುವ ಮೆತ್ತೆ, —ಪೀಠ. ೨. ಆನೆಯ ಬೆನ್ನಿನ ಮೇಲೆ ಹಾಕುವ ಗವಸಣಿಗೆ: "ಅತ್ತರಣ[ಪಾಠಾಂ. ಅಸ್ತರಣ, ಆತರಣ]ಮಾ ಪ್ರವೇಣಿಯೆನೆ ಗವಸಣಿಗೆಯಕ್ಕು" (ಮಂಗರಾ. ೬೦–೧೬ ಕ). [ಸಂ. ಅಸ್ತರಣ]

**ಅತ್ತರದಾಣಿ** 'ಅತ್ತರುದಾನಿ' ನೋ.

**ಅತ್ತರದಾನು** 'ಅತ್ತರುದಾನಿ' ನೋ.

**ಅತ್ತರು, ಅತ್ತರ್** (ನಾ). ಹೂವುಗಳಿಂದ ಭಟ್ಟಿಯಿಳಿಸಿ ತೆಗೆದ ಸುಗಂಧದ್ರವ್ಯ; ಪುಷ್ಪಸಾರ: ಕಸ್ತೂರಿ ಗಂಧ ಅತ್ತರು ಹೊಸ ಚಿನ್ನಮಯ ತಬಕಿನಲಿ ಪಿಡಿದವರು ಕೆಲರು (ಶ್ರೀಕೃಪಾ. ೩೭); ಅತ್ತರಿನ ಸೀಸೆಗಳನ್ನು ನಂದೂಲಾಲನ ಕೈಗೆ ಒಪ್ಪಿಸಿದನು (ವಿಧಿವ್ಯೆ. ೩೯); "ಅವನ ಸಾಲೆಯನ್ನು ಬಿಡಿಸಿ ಅತ್ತರು ಮಾರಲು ಹಚ್ಚಬೇಕೆನ್ನುತ್ತೀಯೇನು"? (ರಂಗಲೋ. ೨೧); ದರಿಯಾಬೀಬಿಯು ಔರಂಗಜೇಬನ ಅಂತಃಪುರಕ್ಕೆ ಅತ್ತರು ಸುರ್ಮಾ ಮುಂತಾದವುಗಳನ್ನು ಮಾರುವುದಕ್ಕೆ ಹೋಗುತ್ತ, ಹೊರಗಣ ವರ್ತಮಾನವನ್ನು ತಿಳಿಸುತ್ತ ಇದ್ದಳು (ಬಂಕಿಮ. ೨೧೭); ಅತ್ತರು ಮಾಸಬಾರದು, ಬಿತ್ತಿದ ಹೊಲ ತುಳಿಯಬಾರದು (ಗಾದೆ). **ಅತ್ತರ್**: ಅತ್ತರತ್ತರತ್ತರೆಂದು ಹೊತ್ತು ಮೂರು ನುಡಿವೆ ನೀನ್, ಬಲ್ಲೆ ನೀನತ್ತರನ್! ಬಲ್ಲಯತ್ತರಿತ್ತಳನ್? (ಶಾಂತಿ. ೪೯).

[← ಹಿಂ. ಅತರ್. / **ತಮಿ.** ಅತ್ತರ್; **ತುಳು.** ಅತ್ತರು; **ತೆಲು.** ಅತ್ತರು, ಅತ್ತರುವು]

**ಅತ್ತರುತಟ್ಟೆ** (ನಾ). ಬಿದಿರು ಚಾಪೆ; ತಡಿಕೆ: ಗೌರವಕ್ಕಷ್ಟೇ ಅವುಗಳನ್ನು ಮನೆಗಳೆನ್ನಬೇಕು. ಗಾಡಿಯ ಮಾಡಿನಷ್ಟು ಕಿರಿದಾದುವು. ಅವಕ್ಕಿಂತ ತುಸು ಅಗಲವಾದ ಅತ್ತರುತಟ್ಟೆಯ ಗೂಡುಗಳು (ಜಾರುದಾ.೧೮೮).

[ಅತ್ತರು₀ + ತಟ್ಟೆ. / **ತುಳು.** ಅತ್ತರ್, ಅತ್ತರ = ಬಿದಿರುದಬ್ಬೆಯಿಂದ ಮಾಡಿದ ಒಂದು ರೀತಿಯ ಚಾಪೆ, —ತಡಿಕೆ]

**ಅತ್ತರುದಾನಿ, ಅತ್ತರದಾಣಿ, ಅತ್ತರದಾನು** (ನಾ). ಅತ್ತರನ್ನು ಹಾಕಿಡುವ ವಿಶೇಷಾಕೃತಿಯ ಪಾತ್ರೆ; "ರಂಧ್ರಗಳಿರುವ ಮುಚ್ಚಳವುಳ್ಳ ಸುಗಂಧದ್ರವ್ಯಸಂಪುಟ, ಪನ್ನೀರುದಾನಿ, ಅತ್ತರುದಾನಿ" (Cassolette. ಇಂಕನಿ). **ಅತ್ತರದಾಣಿ**: ಎಲೆ ಅಡಿಕೀ ತಾಟು, ಶಹಾಪುರದ ಡಬ್ಬಿ—ಅತ್ತರದಾಣಿ ಗುಲಾಬದಾಣೀ—ಬೇಕು ಬೇಕಾದ್ದು ತರೋಣು! (ಕಿಡುಗು. ೬೨). **ಅತ್ತರದಾನು**: ಅತ್ತರದಾನು, ಊದುದಾನು, ಬಂಗಾರದ ಪುಷ್ಪಪಾತ್ರೆಗಳಲ್ಲಿ ತುಂಬ ಹೂವು (ದೇವಿಚೌ. ೧೪೫). 'ಪನ್ನೀರುದಾನಿ' ಪರಾ.

[← ಹಿಂ. ಅತರ್‌ದಾನ್; **ಮರಾ.** ಅತ್ತರ್‌ದಾಣೀ, ಅತ್ತರ್‌ದಾನೀ]

**ಅತ್ತಲ್** 'ಅತ್ತ' ನೋ.

**ಅತ್ತಲಗ್ಗ** 'ಅತ್ತಳಗ' ನೋ.

**ಅತ್ತಲು** 'ಅತ್ತ' ನೋ.

**ಅತ್ತಳ** (ಗು). ಅತಿಶಯ (?): ಮದನವಿಜಯಮೆಂದೊಲವೆರ್ದೆಯಂ ಪತ್ತಿರೆ ಪೆಸರಿಟ್ಟರಿದಕ್ಕತ್ತಳ[ಪಾಠಾಂ. ಕ್ಕಗ್ಗಳ]ವೆನಿಪುದೆನೆ ಮಿಸುಪ ಪೆಸರೆಸೆವಿನೆಗಂ (ಕಬ್ಬಿಕಾ. ೩೪೭). 'ಅತ್ತಳಗ' ಪರಾ. [ದೇ. ?]

**ಅತ್ತಳಕೊತ್ತಳ** (ನಾ). ಕಳವಳದ ಸ್ಥಿತಿ; ಅಸ್ತವ್ಯಸ್ತತೆ: ಉತ್ತರಿಯು ಸುರಿಯದಿರೆ ಹೆತ್ತವ್ವೆ ಪೊರೆಯದಿರೆ ಸತ್ಯವಂತರು ಹುಸಿದರೆ ಮತ್ರ್ಯಕ್ಕೆ ಅತ್ತಳಕೊತ್ತ[ಳ]ವು ಸರ್ವಜ್ಞ (ಕೃಷಿಪ್ರ. ೩೧೨); ಉತ್ತರಿ ಕಾರ್ತಿ ಅತ್ತಳಕೊತ್ತಳ, ಹಸ್ತ ಕಾರ್ತಿ ಅಸ್ತವ್ಯಸ್ತ ಎಂದು ಗಾದೆಯುಂಟು (ಕೃಷಿಪ್ರ. ೧೭೦). [? ಸಂ. ಅಸ್ಥಲಕುಸ್ಥಲ]

**ಅತ್ತಳಗ, ಅತ್ತಲಗ್ಗ** (ನಾ). ೧. ಅತಿಶಯ; ಹೆಚ್ಚಿಗೆ: ಒದವಿದ ಬೇಟವಪ್ಪೊಡೆನಗತ್ತಳಗಂ ಬಗೆವೇಟಿಪ್ಪೊಡೆನ್ನ ಮೇಳದ ಕೆಳೆಯರ್ಕಳಿಲ್ಲ (ಪಂಪಭಾ. ೪–೭೯); ಬೇಟದಿಂದತ್ತಳಗಂ [ಪಾಠಾಂ. ದತ್ತಾಲಗಳಂ, ದತ್ತಲಗಳಂ] ಪೆಜತುಂಟೆ (ಮದಕಿ. ೧೧–೨೪); ತನ್ನ ಪೆಂಪತ್ತಳಗಮೆನಿಸಿದಂ ಹೆಮ್ಮರ್ಮಾಂಧಾತ ಭೂಪಂ (ಎಕ. VII, ಶಿವಮೊ. ೬೪–೪; 1112); ಸಂಯಮಮಂ ಚರಿತ್ರಂ ತಪಮೆಂಬಿವತ್ತಳಗಮಿಂತು ದಿವಾಕರನಂದಿ ಧೇವಸಿದ್ಧಾಂತಿಗರ್ಗೆಂದೊಡೊಂದು ರಸನೋಕ್ತಿಯೊಳಾನದನೆಂತು ಬಣ್ಣಿಪೆಂ (ಎಕ. II, ೩೫೧–೧೫; 1119); ಜಳದಂಗಳ ಮಳಿನತೆಯಂ ಕಳೆದುದು ನಿಜದಿಂದಮೆನೆ ಜಳಾಶಯಜಳದಾ ಮಳಿನತೆಯಂ ಕಳೆದುದಿದತ್ತಳಗಮೆಪೇಟಿನಿಸಿ ವಿಮಳಮಾದುದು ಶರದಂ (ಪಾರ್ಶ್ವಪು. ೪–೬೭). ೨. ಅಸಾಧ್ಯ; ಅಶಕ್ಯ: ತವೆ ನೋಡಲ್ ನೋಡಿ ಮೆಚ್ಚಲ್ ಮನದೊಳಸದಳಂ ಮೆಚ್ಚಿ ನಾನಾ ವಿಶೇಷಸ್ತವದಿಂದಂ ಕೀರ್ತಿಸಲ್ಕತ್ತಳಗಮಮರನಾಥಂಗಮೆಂಬನ್ನೆಗಂ ರೂಪವಿಳಾಸಶ್ರೀಯೊಳಾ ಶ್ರೀಧರನಧಿಕ ಯಶಃಶ್ರೀಧರಂ ಪುತ್ರನಾದಂ (ಆದಿಪು. ೫–೧೦೦); ಧರಾತಳದೊಳ್ ಪುರಮಿನ್ನದಿನ್ನಮಿಲ್ಲೆಂಬ ಪೊಗಟ್ತೆಗತ್ತಳಗಮೆಂಬ ನೆಗಟ್ತೆಗೆ ಜನ್ಮಭೂಮಿ (ಸುಕುಮಾ. ೧–೭೯); ನೆತ್ತಮನಾಡಲೀ ಘನ ಸುವೃತ್ತಪಯೋಧರೆಯೊಳ್ ಪೊಣರ್ಕೆ ಕೇಳತ್ತಳಗಂ ದಿಟಂ ನಿಮಗದೆಮ್ಮೊಡನಾಡುವುದೆಂದೊಡೆಂದಂ (ನೇಮಿಪು. ೪–೫೩); ನೋಡಲ್ಕತ್ತಳಗಂ ಸಹಸ್ರನಯನಂಗಂ ರೂಪು ಮಾಕೊರ್ಂಡು ಮಾತಾಡಲ್ಕದ್ಭುತಮಂತಕಂಗವೆನಸುಂ (ಎಕ. V, ಅರಸೀ. ೬೨–೪೮; 1177); ಸತ್ತ ಚತುರಂಗಮಿನಿತೆನಲತ್ತಳಗಂ ಬಗೆದು ನೋಟ್ಪೊಡಾ ಬ್ರಹ್ಮಂಗಂ (ಮಹಾನೇ. ೧೨–೧೩೯). ೩. ವ್ಯಥೆ; ಕಳವಳ; ಚಿಂತೆ: ಪಗೆಯೊಡ್ಡು ಗೆಲಲ್ಕಳುಂಬಮೆಂಬನಿತುವರಂ ಮನಕ್ಕೆ ನಿಮಗತ್ತಳಗಂ ಬರೆ ಮತ್ತೆ ಮಾಣ್ಪೆನೇ (ಪಂಪಭಾ. ೧೧–೮೮); ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವವಿಯೋಗಮಪ್ಪುದೆಂದಿರದೆರ್ದೆಗಪ್ಪುದತ್ತಳಗಮಾ ನರೆಪಂ ನರೆ ಬಂದ ಪೊಂಗಳಂ ಸುರಿವೊಡಮಾರೊ ಸೈರಿಸುವರಾತನ ಪಲ್ಲಿಲಿವಾಯ ನಾತಮಂ (ಪಂಪಭಾ. ೪–೧೦೦). **ಅತ್ತಲಗ್ಗ**: ೨. ಈ ಬೆಸಕಣ್ಣ ನೀನೆಯಾಂ ತಮ್ಮನೆನಾಳಿನಾಳ್ವೆಯೆನಗಪ್ಪೊಡೆ ನೀನೆನಗತ್ತಲಗ್ಗಮೆಂದಾಂ ಮಗುಟ್ದೆಂದು ನಿಮ್ಮಡಿಗೆ ಸೂಟಿದಱಿಂ ಬೆಸಸೆನ್ನನನ್ನೆಗಂ (ಶಾಂತಿಪು. ೪–೨).

[**ದೇ.** ? / **ತಮಿ. ಮಲ.** ಅತ್ತಳಿ = ಗಲಾಟೆ, ತಳಮಳ, ಕಳವಳ]

**ಅತ್ತಳಗಂ** (ಅ). ಹೆಚ್ಚಾಗಿ; ಅತ್ಯಧಿಕವಾಗಿ: ಇರ್ಪ್ಪತ್ತಮ್ಮರ್ದದಿಂದಿತ್ತರ್ದ್ದವಸದ ಸುಂಕಮನತ್ತಳಗಂ ಸೋಂವಿಮಯ್ಯನುಂ ಬೀರಣನು (ಸೌ ಇ ಇ. IX–i, ೧೬೫–೬೩; 1099); ಅತ್ತಳಗಮುರಿದು ಬಟಿಕೆವಿಯತ್ತಳಚರನಂದು ಚಿತ್ತಭವನಂ ಕೊಲಲೆಂದುತ್ತರಳನಾದನುಗ್ರತೆವೆತ್ತನೊಳಕ್ಕುಮೆ ಸುಸಾರಮಪ್ಪ ವಿಚಾರಂ (ನೇಮಿಪು. ೭–೧೫೨).

[< ಅತ್ತಳಗ]

**ಅತ್ತಾಣಿ** (ನಾ). ಒಬ್ಬನ ಹೆಸರು (?); ಒಂದು ಅಧಿಕಾರದ ಹೆಸರು (?): ಎಲ್ಲಾ ಸಾಮನ್ತರುಮತ್ತಾಣಿಯುಂ ಸಾಕ್ಷಿ ಚಾಟ್ಟೊರುಂ

ಪೆರ್ಮ್ಮಾರ್ಣುರುಂ ಸಮೀಪಮಪ್ (ಮೈಆರಿ. ೧೯೪೧, ೧–೩೫; 643 ಅಥವಾ 788 ?); ಪುತ್ತೂರತ್ತಾಣಿಗೆ ಅಯ್ದೂಂಬು ಕಟುನಿಯುಂ ಅಯ್ದೂಂಬು ತೊಟ್ಟಪ್ಪಟ್ಟುಂ ಕೊಟ್ಟರ್ (ಎಕ. X, ಕೋಲಾರ, ೨೨೯–೪೯; 750). [?]

**ಅತ್ತಾರುಗ** (ನಾ). ಒಂದು ಊರಿನ ಹೆಸರು(?): ಸ್ವಸ್ತಿ ಶ್ರೀ ಅತ್ತಾರುಗ ನಾಗಯ್ಯನ ಮಗನ್ ಕನ್ದೆಱೆಯನ್ ಕೊಟ್ಟುದು ಸೊಡರು ಪನ್ನೆರಡು ಗದ್ಧಣ ಆಚನ್ದ್ರತಾರಕಂ (ಎಕ. VII, ಶಿಕಾರಿ. ೪೫–೬೫; 890). [?]

**ಅತ್ತಿ$_1$** (ನಾ). ೧. ಆಲ, ಅರಳಿ ಮುಂತಾದ ಹಾಲುಮರಗಳ ಜಾತಿಗೆ ಸೇರಿದ, ಕೆಂಪಾದ ಹಣ್ಣುಗಳನ್ನು ಬಿಡುವ ಒಂದು ಜಾತಿಯ ಮರ; ಉದುಂಬರ ವೃಕ್ಷ: ಮೂಡ್ಪೆ ನೋಕ್ಕಿ ದಿಣ್ಣೆ ಬಡಗ್ಪೆ ಪೆವ್ವುತ್ತು ಅತ್ತಿಯಿನ್ತೆಂಕ್ಪೆ ದಿಣ್ಣೆಯಿನ್ ಪಡುವಯ್ನೋಡಿಪೋದ ಒಟ್ಬೆಯೊಳಲೆ (ಎಕ. X (S), ಚಿಕ್ಕಬ. ೬೬–೧೯; 850); ಚಾಗದೊಳ್ಪಿನಚ್ಚೊತ್ತದೆ ಮಾಣ್ದು ಬಾಟ್ವ ಪುಟುವಾನಸನೆಂಬನಜಾಂಡಮೆಂಬುದೊಂದತ್ತಿಯ ಪಣ್ಣೊಳಿರ್ಪ ಪುಟುವಲ್ಲದೆ ಮಾನಸನೇ (ಪಂಪಭಾ. ೫–೭೫); ಪಿಕ್ಕುವೊಡತ್ತಿಯ ಪಣ್ಣತ್ತಿಮಬ್ಬೆಯಲ್ಲದರ ಗುಣಂ (ಅಜಿಪು. ೧–೭೧) [ಅತ್ತಿಯ ಪಣ್ = ಏನೊಂದೂ ಹುರುಳಿಲ್ಲದ ವಸ್ತು]; ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ ವಿಚಾರಿಸಿದೊಡೇನೂ ಹುರುಳಿಲ್ಲವಯ್ಯಾ (ಬಸವ. ೨೯); ಅತ್ತಿ ಆಲ ಗೋಳಿ ಬಸುರಿಯರಳಿಯಿವಂ ನೀರಲ್ಲಿ ಹಾಕಿ ಕಾಸಿ ಶಿಸುವಿಗೆ ಮಿಾಯಲೆಱೆವುದು (ಬಾಲಚಿ. ೧೨೪); ಬೇರುಡಿಯೆ ಬೆಳಲತ್ತಿ ಕಮ್ಮರ ಗೇರಳಿಲೆ ಹಿಂತಾಳ . . . ಭೂಜಗಳಿಂದ ಹೊಯ್ದಾಡಿದರು (ತೊರರಾ. ೪–೪–೨೩). 'ಕಲ್ಲತ್ತಿ', 'ಕಾಡತ್ತಿ', 'ನಾಯತ್ತಿ' ಪರಾ. ೨. ಕುರುಬರ ಜಾತಿಯಲ್ಲಿ ಒಂದು ಕುಲ (ಎಸಮೈ. I, ೨೮). ೩. ಗಂಗಡಿಕಾರರಲ್ಲಿ ಒಂದು ಕುಲ (ಎಸಮೈ. XXVII, ೯).

[**ದೇ.** ‖ **ತಮಿ. ಮಲ.** ಅತ್ತಿ; **ತುಳು.** ಅರ್ತಿ; ಅತ್ತಸ; **ಕೊಡ. ತೆಲು.** ಅತ್ತಿ]

**ಅತ್ತಿ$_2$** 'ಅಟ್ಟಿ' ನೋ.

**ಅತ್ತಿಕಾಯ್** (ನಾ). ೧. ಅತ್ತಿಮರದ ಕಾಯಿ. ೨. ಮಕ್ಕಳಿಗೆ ಅತ್ತಿಕಾಯಿಯ ಆಕಾರದಲ್ಲಿ ಮಾಡಿ ಹಾಕುವ ಒಂದು ಒಡವೆ: ಅಳಲೆರೆಯತ್ತಿ[ಪಾಠಾಂ. ಅರಳೆಲೆ ಮತ್ತಿ]ಕಾಯ್ ಪುಲಿಯುಗುರ್ ನಿಗಳಂ ಕಿಱುಗೆಜ್ಜೆ ಬಂದಿ (ಸೂಕ್ತಿಸು. ೭–೭೫). [ಅತ್ತಿ$_1$ + ಕಾಯ್$_2$]

**ಅತ್ತಿಗೆ$_1$** (ನಾ). ೧. ಅಣ್ಣನ ಹೆಂಡತಿ: ಮುನ್ನಿನ ಜನ್ಮಾಂತರದತ್ತಿಗೆಯಪ್ಪ ಪೆಣ್ಣರಿಯಿಂದಂ (ವಡ್ಡಾರಾ. ೨–೧); ಸೊಸೆಯತ್ತೆಯತ್ತಿಗೆ ಮಗಂ ಮೊಮ್ಮಂ ಕರಂ ಕೂರ್ಮೆಯಂಗನೆಯೆಂದಿಂತಿವರಾರುಮಾರ್ಗ ಬಗೆವರ್ (ಸುಕುಮಾ. ೧೨–೫೮); ಅತ್ತಿಗೆಯರ ಮಿಾಜಲಾಜೆನು (ಮಹದೇ. ೮–೧೦); ಅತ್ತಿಗೆಯಾವೆಡೆ ಏನು ಕಾರಣ ಭೂಪೋತ್ತಮ ಬರವಿಲ್ಲಿಗೆನಲು ಚಿತ್ತವಲ್ಲಾಡೆ ನುಡಿದ ಸಿಂಗನಾದ ಬೆಂಬತ್ತಲೊಡನೆ ಬಂದೆನೆಂದು (ಅಂಜಚ. ೧೩–೧೬೧); ರಾಮನ ಶಶಿಮುಖಿಯನಪ್ರತಿಮ ಲಕ್ಷ್ಮಣದೇವನತ್ತಿಗೆಯ ಅಸುರವಂಶಾಧಮನು . . . ಕೊಂಡೊಯ್ದನೆಂದುಸುರುವುದು ರಾಮುಂಗೆ (ತೊರರಾ. ೩–೧೦–೮); ಅತ್ತಿಗೆ ಕೇಳು ನನ್ನಣ್ಣಾಜಿಯೊಳು ನೀನು ಚಿತ್ತವಿತ್ತುದ ಕಂಡು ನನ್ನ ಚಿತ್ತ ಮೆಚ್ಚಿತು (ಭರಚ. ೭–೬೦); ಅಣ್ಣ ತನ್ನವನಾದರೆ ಅತ್ತಿಗೆ ತನ್ನವಳೆ ? (ಗಾದೆ); ಬಡವನ ಹೆಂಡತಿ ಊರಿಗೆಲ್ಲಾ ಅತ್ತಿಗೆ (ಗಾದೆ). ೨. ಗಂಡನ ಸಹೋದರಿ: ಅತ್ತೆಯ ಕಾಟಕ್ಕಿಂತ ಅತ್ತಿಗೆಯ ನೋಟ ಕಷ್ಟ (ಗಾದೆ). ೩. ಹೆಂಗಸರನ್ನು ಗೌರವದಿಂದ ಅಥವಾ ಪ್ರೀತಿಯಿಂದ ನಿರ್ದೇಶಿಸುವಾಗ ಉಪಯೋಗಿಸುವ ಮಾತು(ಅಕ್ಕ, ಅಮ್ಮ ಎಂಬಂತೆ): ಅತ್ತೆಯ ಮಾತ ದೊಕ್ಕನೆ ಮಿಾಱಿ ನೆರೆಮನೆಯತ್ತಿಗೆಯನು ಹತ್ತಲೊತ್ತಿ ಚಿತ್ತೇಶ್ವರನಿದಿರಾಗೆ ಕೈಗಳ ಮುಗಿದುತ್ತಮೆ ಬಂದು ನೋಡಿದಳು (ಅನಂಚ. ೨೫–೧೦೪).

[**ಸಂ.** ಅತ್ತಿಕಾ. (= ಜ್ಯೇಷ್ಠಭಗಿನಿ; ಅಕ್ಕ) / **ತಮಿ.** ಅತ್ತಾಚ್ಚಿ = ಅಣ್ಣನ ಹೆಂಡತಿ, ಗಂಡನ ಸಹೋದರಿ; **ತುಳು.** ಅತ್ತಿಗೆ = ಅಣ್ಣನ ಹೆಂಡತಿ]

**ಅತ್ತಿಗೆ$_2$** 'ಅಟ್ಟಿಗೆ' ನೋ.

**ಅತ್ತಿಗೇರಿ** (ನಾ). ಒಂದು ಊರಿನ ಹೆಸರು: ನಾಗಣನ್ದ್ಯಾಚಾರ್ಯರ್ಪ್ಪಡೆದೋರತ್ತಿಗೇರಿಯ ಬಟಿ ಇದಕ್ಕೆ ಸಾಕ್ಷಿ (ಕಇ. II, ೫–೧೧; 859). [ಅತ್ತಿ$_1$ + ಕೇರಿ]

**ಅತ್ತಿನೆಲ್ವಾಗಿಲ್** (ನಾ). ಒಂದು ಊರಿನ ಹೆಸರು: ದೊಣೆಯ ಅಟಿ ಆಲುಕುರ ಕೆಱೆ ಕುಸುಗ ಕೆಱೆಯ ಪುಳುಮ್ಸೆ ಆಳರಿ ಅತ್ತಿನೆಲ್ವಾಗಿಲ್ಕೆಱೆಯು ಕವ್ಯ (?)ಱೆಪುಳಿಯು (ಇಆ. XIV, ೨೩೩–೬೦; 9 ನೆಯ ಶತ). [ಅತ್ತಿ$_1$ + ನೆಲ್ + ಬಾಗಿಲ್]

**ಅತ್ತಿಮಬ್ಬೆ**, ಅತ್ತಿಯಬ್ಬೆ (ನಾ). ಒಬ್ಬಾಕೆಯ ಹೆಸರು. ℙ ಈಕೆ ರನ್ನ ಕವಿಗೆ ಆಶ್ರಯದಾತೆಯಾಗಿದ್ದಳು: ಬಿಳಿಯರಳೆಯಂತೆ ಗಂಗಾಜಳದಂತೆಸೆವಜಿತಸೇನ ಮುನಿಪತಿಯ ಗುಣಾವಳಿಯಂತೆ ನೆಗಟ್ದ ಕೊಪಣಾಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ (ಅಜಿಪು. ೧೨–೬); ತೈಲನ ತಾಯ್ದುಸಕ್ಕೆ ಭಾಜನಮೆನಿಪತ್ತಿಮಬ್ಬೆ ಜಿನಶಾಸನಮಂ ಬೆಳಗುತ್ತಮಿಟ್ದಪಳ್ (ಸೌಇಇ. XI–i, ೫೨–೨೮; 1007). **ಅತ್ತಿಯಬ್ಬೆ**: ದಿಶಾದನ್ತಿಯದನ್ತಕಾನ್ತಿ ನಿಜಸೌಧವಿಶಾಳವಿಲೋಳಭಿತ್ತಿಯೊಳ್ಸಂತತಮೊಪ್ಪುತಿರ್ಪ್ಪನೆಗಮೂರ್ಜ್ಜಿತಮಪ್ಪಿನಮತ್ತಿಯಬ್ಬೆ ಜೈರನ್ತನ ಚೇಳಿನೀಚರಿತೆ ಮಾಡಿಸಿದಳ್ತಿನ ರಾಜಗೇಹಮಂ (ಸೌಇಇ. XI–i, ೫೨–೪೨; 1007).

[ಅತ್ತಿ$_0$ + –ಮ್$_0$ (< ಅಮ್ಮ$_1$) + ಅಬ್ಬೆ$_1$]

**ಅತ್ತಿಮಯ್ಯ** (ನಾ). ಒಬ್ಬನ ಹೆಸರು: ಶ್ರೀಮನ್ಮಹಾಪ್ರಧಾನಂ ಗೋತ್ರಪವಿತ್ರ ಹೆಗ್ಗಡೆ ಅತ್ತಿಮಯ್ಯಂಗಳು (ಸೌಇಇ. IX–i, ೨೮೩–೬; 1190). 'ಅತ್ತಿಮಬ್ಬೆ' ಪರಾ. [ಅತ್ತಿ$_0$ + –ಮ್$_0$ (<ಅಮ್ಮ$_1$) + ಅಯ್ಯ$_1$]

**ಅತಿಯಬ್ಬೆ** 'ಅತ್ತಿಮಬ್ಬೆ' ನೋ.

**ಅತ್ತಿರಸ** (ನಾ). = ಅತಿರಸ ೨: ಅಚ್ಚ ತುಪ್ಪ ಪಕ್ವವಾಗಿ ಅತ್ತಿರಸ ಹುಗ್ಗಿಯನ್ನು ಮೆಚ್ಚಿ ಉಂಡ (ವಾದಿಕೀ. ೪೦). [**ಸಂ.** ಅತಿರಸ]

**ಅತ್ತಿವಣ್** (ನಾ). ಅತ್ತಿಯ ಹಣ್ಣು: ಅಂಡಜಾಂಡಕೋಟಿಗಳೆಲ್ಲವವು ಹರಿಬ್ರಹ್ಮರೆಂಬಾ ಗುಂಗುರುಗಳನೊಳಕೊಂಡತ್ತಿವಣ್ಣಿನಂತೆ (ವೀಶೈಪು. ೮–೧೭–೧೦). [ಅತ್ತಿ$_1$ + ಪಣ್$_2$]

**ಅತ್ತಿವಳಿಗೆ**, ಅತಿವಳಿಗೆ (ನಾ). ಒಂದು ಊರಿನ ಹೆಸರು: ಕೆಱಗಲೂರು ಅತ್ತಿವಳಿಗೆಯ ಮಣಲಿ ನಾಡ ಮೊರಸು ಹಂನೆರಡು ನೆಕ್ಕುನಾಡ ಕೆಸಕೋಡು ಹಳ್ಳಿಗಳು ಸಹಿತ (ಎಕ. V, ಬೇಲೂರು. ೭೧–೨೩೭; 1117). **ಅತಿವಳಿಗೆ**: ಬಳ್ಳವಿನಾಡ ಹಡಿಯವೊಳಲು ಆತಿವಳಿಗೆಯ ಮಣಲಿನಾಡ ಮರಸು ಹಂನೆರಡು ನೆಕ್ಕುನಾಡ ಕೆಸುಕೋಡು ಹಳ್ಳಿಗಳು (ಎಕ. V, ಬೇಲೂರು. ೫೮–೮೩; 1117). [ಅತ್ತಿ$_1$ + ?]

**ಅತ್ತಿಶಯ** (ನಾ). ಅತಿಶಯ: ಉತ್ತಮ ಗುಣದಲ್ಲಿ ಇರಲಾಗಿ ಎನ್ನ ಮನಸು ಈತ್ತೆರದಲಿ ಪೋಗಿ ಹೊರಗೆ ಚರಿಸುತಿದೆ ಹೊತ್ತು ಹೊತ್ತಿಗೆ ಇಂತು ಆಗುವದನುಚಿತವೊ ಅತ್ತಿಶಯವೇನೊ ನಿನ್ನ ಚರಣಸೇವೆ ಸತ್ಯ ಸಂಕಲ್ಪ (ಮೋಕ್ಷದೀ. ೧೨೮). [**ಸಂ.** ಅತಿಶಯ]

**ಅತ್ತೆ$_1$** (ನಾ). ೧. ಹೆಂಡತಿಯ ಅಥವಾ ಗಂಡನ ತಾಯಿ: ಮುತ್ತಬ್ಬೆ ಮತ್ತತ್ತಿಗೆ ಕೂಸಿತ್ತತ್ತೆಯೆಂಬೀ ಮೊಱೆಯ ವನಿತೆಯರ್ (ಶಾಂತಿಪು. ೬–೮೭) [ಕೂಸಿತ್ತ ಅತ್ತೆ = ಹೆಣ್ಣು ಕೊಟ್ಟ ಅತ್ತೆ]; ಅತ್ತೆ ಮಾವ ಮೈದುನ ಭಾವ ಗಂಡರಿಗೆ ಮನೆಗಳಂ ಬಿಟ್ಟು (ಚೆಬಪು. ೨೦–೧೮); ಅತ್ತೆಗೊಂದು ಕಾಲ ಸೊಸೆಗೊಂದು ಕಾಲ (ಗಾದೆ); ಅತ್ತೆಯ ಮೇಲಿನ ಕೋಪ ಕೊತ್ತಿಯ ಮೇಲೆ ಬಿಟ್ಟಳು (ಗಾದೆ); ಅತ್ತೆ ಒಡೆದ ಪಾತ್ರೆಗೆ ಬೆಲೆಯಿಲ್ಲ (ಗಾದೆ).

೨. ತಂದೆಯ ಒಡಹುಟ್ಟಿದವಳು; ಸೋದರ ಮಾವನ ಹೆಂಡತಿ; ಸೋದರತ್ತೆ: ತಮ್ಮತ್ತೆವಿರಪ್ಪ ವಿಜಯಮತಿ ಕಂತಿಯರ್ ಕಂತಿಯರಾಗೆ ತಪಂಬಟ್ಟು (ವಡ್ಡಾರಾ. ೧೩೪-೧); ಇತ್ತ ಕುಂತೀಭೋಜನೆಂಬ ನೃಪೋತ್ತಮನ ಭವನದಲಿ ಮುರಹರನತ್ತೆ ಬೆಳೆವುತ್ತಿರ್ದಳಾ ವಸುದೇವ ನೃಪನನುಜೆ (ಕುವ್ಯಾಅ. ೩-೧೩). ℙ ಅತ್ತೆಗಳ್, ಅತ್ತೆಯರು, ಅತ್ತೆವಿರ್ (ಬಹುವ): ಮಾವನುಮೆಮ್ಮತ್ತೆವಿರುಂ (ಅಜಿಪು. ೬-೧೨೨); ಅತ್ತೆವಿರ್, ಅತ್ತೆಗಳ್ (ಭಾಷಾಭೂ. ೪೨).

ಅತ್ಯಮ್ಮ = ಅತ್ತೆಯನ್ನು ಗೌರವದಿಂದ ನಿರ್ದೇಶಿಸುವಾಗ ಬಳಸುವ ಮಾತು: ಕಂಡಿರಾ ಅತ್ಯಮ್ಮ ನಿಮ್ಮಲ್ಲಿ ವ್ರತವ ಕೈಕೊಂಡು ನಾವೆಯ್ದಿದ ಫಲದಿ (ಭರಚ. ೪೬-೮೨).

[ದೇ. ‖ ತಮಿ. ಅತ್ತೈ; ತುಳು. ಅತ್ತೆ; ತೆಲು. ಅತ್ತ; ಗೊಂಡಿ. ಆತೀ; ಕುವಿ. ಅತ್ತ. / ಪ್ರಾ. ಅತ್ತಾ; ಸಂ. ಅತ್ತಾ]

**ಅತ್ತೆ₃** (ನಾ). ಒಂದು ಬಗೆಯ ಬೆತ್ತದ ಕಾವಡಿ; ಕಂಬಿ; ಅಡ್ಡೆ. 'ಅತ್ತೆವೊಕ್ಕಲಿಗ' ಪರಾ. [?]

**ಅತ್ತೆತನ** (ನಾ). ಅತ್ತೆಯಾಗಿರುವುದು; ಅತ್ತೆಯ ಪದವಿ; ಅತ್ತೆ ನಡಸುವ ಅಧಿಕಾರ: ಅತ್ತೆತನಕ್ಕೆ ಅವಕಾಶವಿಲ್ಲದೇನೇ ಎಲ್ಲಿ ತನ್ನ ಅವತಾರವೇ ಮುಗಿದು ಹೋಗುತ್ತದೆಯೋ ಎಂದು ಒಂದೇ ಕಣ್ಣಿನಲ್ಲಿ ಅತ್ತಳು ನರಸಿಂಹನ ಜನನಿ (ಮಾಮನೆ. ೩೩); ಅತ್ತೆತನದ ಅಧಿಕಾರಕ್ಕೆ ಮೊದಲಾಯಿತು. ಅತ್ತೆತನದ ಅಧಿಕಾರವೆಂದರೆ ಸೊಸೆಯಂದಿರನ್ನು ಗೋಳು ಹೊಯ್ಯುವುದೊಂದೆ – ಎಂದು ಯಾರಿಗೆ ಗೊತ್ತಿಲ್ಲ (ಒಡ್ಡಿಉ. ೧೧೨).

[ಅತ್ತೆ₁ + -ತನ]

**ಅತ್ತೆಮನೆ** (ನಾ). ೧. ಅತ್ತೆಯ ಮನೆ. ೨. [ಆಲಂ] ಊಟ ಉಪಾಹಾರಗಳ ಗೃಹ; ಹೋಟಲು: ಹೆಂಡತಿಯನ್ನು ತೌರುಮನೆಗೆ ಕಳಿಸಿದ ಬಳಿಕ ರಾಮಣ್ಣನಿಗೆ ಅತ್ತೆಮನೆಯ ಭೋಜನಸೌಖ್ಯ ಒದಗಿತು (ರೂಢಿ). 'ಮಾವನ ಮನೆ' ಪರಾ. ೩. [ಆಲಂ] (ಉಕ) ಜೈಲು; ಸೆರೆಮನೆ: ತಲೆತಿರುಕ ತಂದೆ ರಾಗಿಅಂಬಲಿ ಮುದ್ದೆ ತಿನ್ನಲಿಕ್ಕೆ ತಾನಾಗಿ ಅತ್ತೆ ಮನೆಗೆ ಹೋದ (ಕುರುಕಾ. ೧೧೯). [ಅತ್ತೆ₁ + ಮನೆ]

**ಅತ್ತೆವೊಕ್ಕಲಿಗ** (ನಾ). ಒಕ್ಕಲಿಗರಲ್ಲಿ ಒಂದು ಪಂಗಡ: ಅತ್ತೇವೊಕ್ಕಲಿಗರು – ಇವರು ಅಂಕೋಲಾ, ಯಲ್ಲಾಪುರ ತಾಲ್ಲೂಕುಗಳ ನಟ್ಟಡವಿಯಲ್ಲಿ ವಾಸಿಸುವರು. 'ಅತ್ತೆ'ಯೆಂಬೊಂದು ಬಗೆಯ ಬೆತ್ತದ ಕಾವಡಿಯಲ್ಲಿ ಭಾರ ಹೊತ್ತಿರುವ ಕಾರಣ ಇವರಿಗೆ ಅತ್ತೇವೊಕ್ಕಲಿಗರೆಂಬ ಹೆಸರು ಬಂದದೆ (ಕಭಾಗೆ. ೧೪೨). [ಅತ್ತೆ₃ + ಒಕ್ಕಲಿಗ]

**ಅತ್ಯಂಗ** (ನಾ). ಒಂದು ಬಗೆಯ ಬಟ್ಟೆ: ಪಸೆಯೊಳ್ ಪಾಸಿದ ಬೊಂಗಮುಲ್ಲವದ ದೇವಾಂಗಂ ಮಣಿಸ್ತಂಭದೊಳ್ ಪೊಸೆವತ್ಯಂಗಮಪೂರ್ವಮಾಗೆ ಹರಿ ಪೌರೋಹಿತ್ಯಮಂ ತಾಳ್ದೆ . . . ಜಿನಂಗೆಸೆದುದಂತಾ ನಾಮಕರ್ಮೋತ್ಸವಂ (ಶಾಂತಿಪು. ೧೧-೭೮). [?]

**ಅತ್ಯಂತ** (ಗು). ೧. ಎಲ್ಲೆ ಮೀರಿದ; ಕೊನೆಯಿಲ್ಲದ. ೨. ಎಲ್ಲಕ್ಕೂ ಹೆಚ್ಚಿನ; ಮೇಲಾದ: ಅರಿಕೇಸರಿಯೆಂಬಂ ಸುಂದರಾಂಗನತ್ಯಂತ ವಸ್ತುವಂ ಮದಕರಿಯಂ ಹರಿಯಂ ಪಡಿವಡೆಗುರ್ಚಿದ ಕರವಾಳನೆ ತೋಱಿ ನೃಪತಿ ಗೆಲ್ಲಂಗೊಂಡಂ (ಪಂಪಭಾ. ೧-೧೯); ಸಮಚತುರಶ್ರಮುಪ್ಪ ಸಂಸ್ಥಾನ ಸಂಹನನಮುಂ ಅತಿಶಯರೂಪತೆಯುಂ ಅತ್ಯಂತ ಸುರಭಿನಿಃಶ್ವಾಸತೆಯುಂ (ಶಾಂತಿಪು. ೧೦-೯೪ ವ). [ಅತಿ₁ + ಅಂತ₂]

**ಅತ್ಯಂತಗಾಮಿ** (ನಾ). ಎಲ್ಲೆ ಮೀರಿ ನಡೆಯುವವನು; ಉಗ್ರಗಾಮಿ; ತೀವ್ರಗಾಮಿ. (ದಕ. ೩). [ಸಂ. ಅತ್ಯಂತಗಾಮಿನ್]

**ಅತ್ಯಂತಾತಿಶಯೋಕ್ತಿ** (ನಾ). [ಕಾವ್ಯಮೀ] ಅತಿಶಯೋಕ್ತ್ಯಲಂಕಾರದ ಒಂದು ಭೇದ; "ಕಾರಣಕ್ಕೂ ಕಾರ್ಯಕ್ಕೂ ಇರಬೇಕಾದ ಪೌರ್ವಾಪರ್ಯವು ತಲೆಕೆಳಗಾಗಿ ವರ್ಣಿತವಾದರೆ ಅದು ಅತ್ಯಂತಾತಿಶಯೋಕ್ತಿ" (ಕೈಪಿಡಿ. ೨೭೬). [ಅತ್ಯಂತ+ಅತಿಶಯೋಕ್ತಿ]

**ಅತ್ಯಂತಾಭಾವ** (ನಾ). ಸಂಪೂರ್ಣವಾಗಿ ಇಲ್ಲದಿರುವುದು; ಇರುವಿಕೆಗೆ ಅವಕಾಶವೇ ಇಲ್ಲದಿರುವುದು: ಗಗನಕುಸುಮಮನತ್ಯಂತಾಭಾವಮಂ ನಿಷೇಧಮಾತ್ರದಿಂದಮುಂಟುಮಾಡಲಕ್ಕುಮೆ (ಶಾಂತಿಪು. ೮-೧೩೮ ವ); ವಂಧ್ಯಾಪುತ್ರ ಶಶವಿಷಾಣ ಗಗನಾರವಿಂದಾದಿಗಳೆಂದಿಗೂ ಇಲ್ಲವೆಂಬುವದೇ ಅತ್ಯಂತಾಭಾವಮಕ್ಕುಂ (ವಿವೇಕ. ೨೩). [ಅತ್ಯಂತ + ಅಭಾವ]

**ಅತ್ಯಂತೀನ** (ಗು). ಅತಿದೂರಕ್ಕೆ ಅಥವಾ ಅತಿವೇಗವಾಗಿ ಹೋಗುವ. 'ಅತ್ಯಂತೀನವಾದ' ಪರಾ. [ಸಂ.]

**ಅತ್ಯಂತೀನವಾದ** (ನಾ). ಮಿತಪಕ್ಷದ ಅಭಿಪ್ರಾಯಗಳನ್ನು ನಿರಾಕರಿಸಿ, ಅತ್ಯಂತ ತೀವ್ರವಾಗಿರುವ ಅಭಿಪ್ರಾಯಗಳನ್ನೇ ಪಟ್ಟು ಹಿಡಿಯುವುದು: ಎರಡು ಮೂರು ದಾರಿಗಳು ಕಣ್ಣಿಗೆ ಕಾಣುತ್ತಿರುವಲ್ಲಿ ಆ ಎಲ್ಲ ದಾರಿಗಳೂ ಅನುಕೂಲ ಪ್ರತಿಕೂಲಗಳಲ್ಲಿ ಸಮಸಮವಾಗಿಯೇ ಇರುವುದು ಶಕ್ಯವೇ. ಅದ್ದರಿಂದ ರಾಜಕೀಯದಲ್ಲಿ ಅತ್ಯಂತೀನವಾದ (ಎಕ್ಸ್‌ಟ್ರೀಮಿಸಮ್) ಸಲ್ಲದು (ರಾಜ್ಯಶಾ. ೨೫೫).

[ಅತ್ಯಂತೀನ + ವಾದ]

**ಅತ್ಯಗತ್ಯ** (ಗು). ತುಂಬ ಆವಶ್ಯಕವಾದ; ಬಹಳವಾಗಿ ಬೇಕಾದ: ಕಲಿತರೆ ಬರುವ ಭಕ್ತಿ ಇದಲ್ಲ. ಅನುಗ್ರಹ, ಸಂಸ್ಕಾರ ಇದಕ್ಕೆ ಅತ್ಯಗತ್ಯ (ಜಗದಾ. ೧೧೪). [ಅತಿ₁ + ಅಗತ್ಯ]

**ಅತ್ಯಗಲಿಕೆ** (ನಾ). ಅತಿಯಾದ, ವಿಶೇಷವಾದ ಅಗಲಿಕೆ: "ಅಪಜಯದೊಳತ್ಯಗಲಿಕೆಯೊಳುಂ ಪ್ರತ್ಯವಾಯಮೆಂಬುದು" (ಮಂಗರಾ. ೧೪೨-೫೫). [ಅತಿ₁ + ಅಗಲಿಕೆ (< ಅಗಲ್ಕೆ)]

**ಅತ್ಯಧಮ** (ನಾ). ಬಹಳ ಅಧಮ; ತುಂಬ ನೀಚ: ಕ್ರೂರರತ್ಯಧಮರುದ್ರೇಕಿಗಳು ದುರ್ಜನಾಕಾರಿಗಳು ಧೂರ್ತರೊಳಗಾಗಿ ಶರಣೆನಲು ನಿಜವೈರಮಂ ಬಿಡುವರ್ (ಹಚಕಾ. ೮-೨೧). [ಅತಿ₁ + ಅಧಮ]

**ಅತ್ಯಧಿಕ** (ಗು). ತುಂಬ ಹೆಚ್ಚಾದ: ಅಂತಃಪುರದೊಳರಸಿರಲತ್ಯಧಿಕದೆಚ್ಚರಿಕೆಯಿರಬೇಕೆಂದನಾ ಶಕುನಿ (ಕುವ್ಯಾಅ. ೮-೩೪). [ಅತಿ₁ + ಅಧಿಕ]

**ಅತ್ಯಪೂರ್ವ** (ಗು). ಬಹಳ ಅಪೂರ್ವ: ಅಂಬುಜ ಸೌರಭಂ ತನಗೆ ಗಾವಣಜೇವಣಮತ್ಯಪೂರ್ವಮಾಸ್ಯಾಂಬುಜಗಂಧಮೆಂದೆಱಗಿ ಬಗ್ಗಿಸೆ (ಶಾಂತಿಪು. ೮-೮೭). [ಅತಿ₁ + ಅಪೂರ್ವ]

**ಅತ್ಯಯ** (ನಾ). ೧. ಅತಿಕ್ರಮ; ಹದ್ದು ಮೀರುವುದು; ಎಲ್ಲೆ ಮೀರುವುದು: ಮತಿಗೆಟ್ಟಂಗೀಗುಮತ್ಯಯಂ ವ್ಯತ್ಯಯಮಂ (ಚಂದ್ರಪು. ೬-೫೫). ೨. ಕಡೆ; ಮುಕ್ತಾಯ. ೩. ಅಭಾವ; ಮರೆಯಾಗುವುದು. ೪. ಕೇಡು; ಅಪಾಯ: ರತಿಲಂಪಟಂ ಮದಯುತಂ ಮಾನಾತ್ಯಯಾಭೀತನುದ್ಧತವೃತ್ತಂ (ರಾಜಶೇ. ೬-೧೨೪). ೫. ಸಾವು; ನಾಶ. ೬. ಕಷ್ಟ; ದುರ್ದಶೆ. ೭. ಮೇಲೆ ಬೀಳುವುದು; ಆಕ್ರಮಣ. ೮. ಅಪರಾಧ; ದೋಷ. ೯. ಶಿಕ್ಷೆ. [ಸಂ.]

**ಅತ್ಯರ್ಘ** (ಗು). ೧. ಅಳತೆಗೆ ಮೀರಿದ; ಬಹಳ; ತುಂಬ: "ನಿತಾಂತಮತ್ಯರ್ಘಮತಿವೇಳಂ ಪ್ರಕಾಮಮತಿಮರ್ಯಾದಮೆನಲು ಪಿರಿದೆನಿಕು" (ಮಂಗರಾ. ೧೯೯-೧೪). ೨. ಒಳ್ಳೆಯ: "ಅತ್ಯರ್ಘಂ = ಒಳ್ಳೆಯದು" (ಧನಂನಿ). [ಅತಿ₁ + ಅರ್ಘ]

**ಅತ್ಯಲಘು** (ಗು). ೧. ತುಂಬ ಭಾರವಾದ. ೨. ಬಹಳ ದೊಡ್ಡದಾದ: ಮಲೆವುತಾತನ ಕಟ್ಟದಿರೊಳತ್ಯಲಘುಗಜವುನ್ಮದವೊದಗಿ ಭುಜನಿಭಾಸುರನೀಶ್ವರನ ಮೇಲೆ ಬಪ್ಪಂತೆ (ಬಸವು. ೨೨-೧೩). [ಅತಿ₁ + ಅಲಘು]

**ಅತ್ಯಲ್ಪ** (ಗು). ೧. ತುಂಬ ಕಡಮೆ; ಬಹಳ ಸ್ವಲ್ಪ. ೨. ಬಹಳ ಹೀನ; ಅತಿ ತುಚ್ಛ. [ಅತಿ₁ + ಅಲ್ಪ]

**ಅತ್ಯವೇಕ್ಷಣ** (ನಾ). ನಮಗೆ ಬೇಕಾದ ಅಂಶವನ್ನು ವಸ್ತುವಿನಲ್ಲಿ ಅದು ಇಲ್ಲದಿದ್ದರೂ ಸೇರಿಸಿಕೊಂಡು ಕಾಣುವ ದೋಷ: ಈ ದೃಷ್ಟಿ ದೋಷಗಳಲ್ಲಿ ಮೊದಲನೆಯದನ್ನು ಅನವೇಕ್ಷಣವೆಂದೂ ಎರಡನೆಯದನ್ನು ಅತ್ಯವೇಕ್ಷಣವೆಂದೂ ಕರೆಯಬಹುದು . . . ನಮಗೆ ಬೇಡವಾದುದನ್ನು ಬಿಡುವಂತೆಯೇ ಬೇಕಾದುದನ್ನು ಸೇರಿಸಿಕೊಳ್ಳುವುದೂ ನಮ್ಮ ಮನಸ್ಸಿಗೆ ಹತ್ತಿಬಂದ ಇನ್ನೊಂದು ದೋಷ (ಕಗದ್ಯ. ೧೪೮, ೧೪೯). [ಅತಿ$_1$ + ಅವೇಕ್ಷಣ]

**ಅತ್ಯಷ್ಟಿ** (ನಾ). [ಛಂದ] ಅಕ್ಷರ ಛಂದಸ್ಸಿನಲ್ಲಿ ಹದಿನೇಳನೆಯ ಛಂದಸ್ಸಿನ ಹೆಸರು; ಒಂದು ಪಾದದಲ್ಲಿ ಹದಿನೇಳು ಅಕ್ಷರಗಳಿರುವ ಸಮವೃತ್ತಗಳ ಸಮುದಾಯ: ೧೪ ಶಕ್ವರಿ, ೧೫ ಅತಿಶಕ್ವರಿ, ೧೬ ಅಷ್ಟಿ, ೧೭ ಅತ್ಯಷ್ಟಿ . . . ಎಂದು ಇಪ್ಪತ್ತಾಱುಂ ಛಂದಂಗಳಕ್ಕುಂ (ಛಂದೋಂಬು. ೧–೫೫ ವ). [ಅತಿ$_1$ + ಅಷ್ಟಿ]

**ಅತ್ಯಾಕಾರ** (ನಾ). ತಿರಸ್ಕಾರ; ನಿಂದೆ [ಸಂ.]

**ಅತ್ಯಾಚಾರ** (ನಾ). ೧. ಆಚಾರವನ್ನು ಮೀರಿದ ನಡೆವಳಿಕೆ; ಕೆಟ್ಟ ನಡತೆ: ಅನ್ಯವಿತ್ತಾಹೃತಿ ಪರವ್ಯಾಪಾದವಾತ್ಮಸ್ತುತಿ ಪರಸ್ತ್ರೀವ್ಯಸನವತ್ಯಾಚಾರ ಬಕವೃತ್ತಿ . . . ಇವು ದೋಷಾಂಕುರಂಗಳು (ಕುವ್ಯಾಅ. ೧೫–೧೪). ೨. ದೌರ್ಜನ್ಯದಿಂದ, ದುರಾಚಾರದಿಂದ ಕೂಡಿದ ಹಿಂಸೆ: ಈ ಅತ್ಯಾಚಾರವನ್ನೆಲ್ಲ ಸಹಿಸಿಕೊಂಡು ಕಾಪಾಲಿ ಅಲ್ಲಿಯೇ ಇದ್ದುಬಿಟ್ಟಿದ್ದ (ಆಶ್ರಮ. ೪೮); ಅವಳು ಅವರ ಮನೆಯಲ್ಲಿ ಇದ್ದಾಗ ಅತ್ಯಾಚಾರಕ್ಕೂ ಒಳಗಾಗಬೇಕಾಯಿತು (ರೂಢಿ). [ಅತಿ$_1$ + ಆಚಾರ]

**ಅತ್ಯಾಜಿ** (ನಾ). ಅತ್ತೆಯನ್ನು ಗೌರವದಿಂದ ಅಥವಾ ಪ್ರೀತಿಯಿಂದ ನಿರ್ದೇಶಿಸುವಾಗ ಉಪಯೋಗಿಸುವ ಮಾತು: ಏನು ಕಾರ್ಯವೊ ದೇವರತ್ಯಾಜಿಯರು ತಮ್ಮ ಮಾನಿನಿಯರ ಕೇಳುಹಿದರು (ಭರಚ. ೩೭–೬೩). [< ಅತ್ತೆ$_1$ + -ಜಿ (< ಜೀಯ)]

**ಅತ್ಯಾದರ** (ನಾ). ತುಂಬ ಉಪಚಾರ; ಬಹಳವಾದ ಅಕ್ಕರೆ: ಅತ್ಯಾದರದ ಆಹ್ವಾನವನ್ನು ತಿರಸ್ಕರಿಸುವುದು ಯೋಗ್ಯವಲ್ಲ (ರೂಢಿ). [ಅತಿ$_1$ + ಆದರ]

**ಅತ್ಯಾದರಿಸು** (ಕ್ರಿ). ಬಹಳವಾಗಿ ಉಪಚರಿಸು; ತುಂಬ ಸತ್ಕಾರ ಮಾಡು: ಎಲೆ ಬಸವ . . . ನಿನ್ನ ನೇಮವಿದಾರ್ಗುಂಟು ಗುರುಲಿಂಗದೊಳೆರಡಿಲ್ಲದಿರ್ಪ ಶರಣರಂ ಸಂಗನೆಂದೆ ಕಾಣ್ಬೆ ಬಂದ ಭಕ್ತರನತ್ಯಾದರಿಪೆ ಬಪ್ಪ ಭಕ್ತರಂ ಹರುಷದೊಳಿದಿರ್ಗೊಂಬೆ (ಬಸರ. ೮–೩೯). [ಅತಿ$_1$ + ಆದರಿಸು]

**ಅತ್ಯಾಧಾನ** (ನಾ). ೧. ಬಹಳ ಹೆಚ್ಚಾಗಿ ಇಡುವುದು; ಬೇಕಾದಷ್ಟಕ್ಕಿಂತಲೂ ಹೆಚ್ಚಾಗಿ ಇರಿಸುವುದು. ೨. ಮೀರುವುದು; ಅತಿಕ್ರಮ; ಕಟ್ಟಳೆ ಮೀರಿದ ನಡೆವಳಿಕೆ: "ಅತ್ಯಾಧಾನಂ, ಅತಿಕ್ರಮಃ – ಈ ೨ ಮಾಱುಹ" (ಹಲಾಯು. ೧೨೪–೬೯). [ಅತಿ$_1$ + ಆಧಾನ]

**ಅತ್ಯಾಧುನಿಕ** (ಗು). ತುಂಬ ಹೊಸದಾದ; ಇತ್ತೀಚಿನ; ನವನವೀನ: ಅತ್ಯಾಧುನಿಕ ರೀತಿಯ ಅಡುಗೆಮನೆಗಳಲ್ಲಿಯೂ ಈ ಒಲೆಯನ್ನುಪಯೋಗಿಸಬಹುದು (ಅಡುಸೌ. ೨೬). [ಅತಿ$_1$ + ಆಧುನಿಕ]

**ಅತ್ಯಾಯತ** (ಗು). ಬಹಳ ವಿಸ್ತಾರವಾದ: ಸಕಲಜೀವೋತ್ಪತ್ತಿಸಂಸ್ಥಾನಮೂರ್ಜಿತಮತ್ಯಾಯತಮಪ್ರಮೇಯಕಮಥೋಮಧ್ಯೋರ್ಧ್ವಭೇದಂ ಜಗತ್ತ್ರಿತಯಂ ನಿಂದುದು (ಸುಕುಮಾ. ೧೧–೪೧). [ಅತಿ$_1$ + ಆಯತ]

**ಅತ್ಯಾಯಾಮ** (ಗು). ಬಹಳ ವಿಸ್ತಾರವಾದ; ತುಂಬ ಉದ್ದವಾದ: ಜೀವಿತಾಶಯದಂತೆ ಅತ್ಯಾಯಾಮಮುಮುಂ ಮುಕ್ತಜ್ವರದಂತೆ ನಿರ್ಮುಕ್ತೋಷ್ಮಮುಂ ಮೂರ್ಛಾಪ್ರಾಪ್ತನಂತೆ ತಮೋಮಯಮುಮಪ್ಪ ತಮಿಸ್ರಗುಹೆಯನೆಯ್ದಿದಾಗಳ್ (ಆದಿಪು. ೧೩–೪೭ ವ). [ಅತಿ$_1$ + ಆಯಾಮ]

**ಅತ್ಯಾರ್ಪು** (ನಾ). ಹೆಚ್ಚಿನ ಶಕ್ತಿ, —ಪೌರುಷ: ಒತ್ತೆಗೆಂದು ವಿಪಣಿಯೊಳು ರೂಪಜೀವೆಯರಿರುತಿರಲು ಆ ಪುರವರದೊಳಗುಳ್ಳ ವಿಟರುಗಳ ತ್ಯಾರ್ಪಿನಿಂದೊಡಗೂಡುತಿಹರು (ಅಂಜಚ. ೩–೧೩೦). [ಅತಿ$_1$+ ಆರ್ಪು$_1$]

**ಅತ್ಯಾಲೀಢ** (ಗು). ಪರಮಾವಧಿಯ; ಬಲವತ್ತರವಾದ; ತುಂಬ ಹೆಚ್ಚಿನ: ಗುರುವಿರೋಧ ಮಹೀಬುಧರ ಮತ್ಸರವು ದೈವದ್ರೋಹ ಗುಣಸಾಗರನ ಬಂಧುದ್ವೇಷವತ್ಯಾಲೀಢ ದೀನತನ . . . ಅಂಗೈಸೆ ಭೂಪನ ಸಿರಿಗೆ ಮೊಳೆಯದೆ ಕೇಡು (ಕುವ್ಯಾಉ. ೩–೬೯). [ಅತಿ$_1$ + ಆಲೀಢ]

**ಅತ್ಯಾವಶ್ಯಕ** (ಗು). ಬಹಳ ಆವಶ್ಯಕವಾದ. [ಅತಿ$_1$ + ಆವಶ್ಯಕ]

**ಅತ್ಯಾಶೆ** (ನಾ). ಮಿತಿಮೀರಿದ ಆಸೆ; ಹೆಚ್ಚಿನ ಆಸೆ; ಅತಿಯಾಸೆ. [ಸಂ. ಅತ್ಯಾಶಾ (ಅತಿ$_1$ + ಆಶಾ)]

**ಅತ್ಯಾಶ್ಚರ್ಯ** (ನಾ). ತುಂಬ ಸೋಜಿಗ; ಬಹಳ ಆಶ್ಚರ್ಯ: ಅತ್ಯಾಶ್ಚರ್ಯವತ್ಯದ್ಭುತವತಿಕೌತುಕ (ವಿವೇಕ. ೨೯೨). [ಅತಿ$_1$ + ಆಶ್ಚರ್ಯ]

**ಅತ್ಯಾಸನ್ನ** (ಗು). ಬಹುಸಮೀಪವಾದ; ಬಹಳ ಹತ್ತಿರದ: ಆದಿದೇವನ ಪರಿನಿಷ್ಕ್ರಮಣಕಲ್ಯಾಣಮತ್ಯಾಸನ್ನಮೆಂಬುದಂ (ಆದಿಪು. ೯–೮ ವ). [ಅತಿ$_1$ + ಆಸನ್ನ]

**ಅತ್ಯಾಸುರ** (ಗು). ೧. ಬಹಳ ಭಯಂಕರವಾದ; ತುಂಬ ರೌದ್ರವಾದ. (ನಾ). ೨. ಹೆಚ್ಚಿನ ಆವೇಶ, —ರಭಸ: ಕರಿಣಿಯ ಕಾರಣದಿಂ ಮದಕರಿಗಳ್ ವೈಭಾವದಿಂದೆ ತಮ್ಮೊಳಗತ್ಯಾಸುರಮಾಗೆ ಪೋರ್ದು ಸತ್ತು (ಶಾಂತಿಪು. ೯–೪೭); ವಾಸುದೇವನೆ ದೇವನೆಂದತ್ಯಾಸುರದಿ ನುಡಿದು ವ್ಯಾಸದೇವಂ ಕೈಯನೆತ್ತಿದಡೆ (ಬಸಪು. ೫೪–೪೯). [ಅತಿ$_1$ + ಆಸುರ]

**ಅತ್ಯಾಸ್ವಾದಿ** (ಗು). ೧. ಅತಿಯಾದ ಆಸ್ವಾದವನ್ನುಂಟುಮಾಡುವ. ೨. ಅತಿಯಾದ ಆಸ್ವಾದವನ್ನು ಪಡೆಯುವ: ಕಡವೆಗತ್ಯಾಸ್ವಾದಿಯೆಂಬ [ಪಾಠಾಂ. ಕಾಡಾನೆಗಲಿಯೆಂದೆಂಬ] ನರಿ ಮೊಲಗಳಿಗೆ ದಡಿವೊಯಿಲನೆಂಬ . . . ಬೇಡವಡೆಯೊಡೆಯರೆಲ್ಲರು ನೆರೆದು (ಹಚಕಾ. ೫–೭). [ಅತಿ$_1$ + ಆಸ್ವಾದಿ]

**ಅತ್ಯಾಹಿತ** (ನಾ). ೧. ದೊಡ್ಡ ಅನಿಷ್ಟ; ಪ್ರಬಲವಾದ ಅಪಾಯ; ವಿಶೇಷವಾದ ಕೇಡು. ೨. ಜೀವದ ಹಂಗನ್ನು ತೊರೆದು ಮಾಡುವ ಸಾಹಸ; ದುಡುಕಿನಿಂದ ಮಾಡುವ ರಾಕ್ಷಸೀ ಕೃತ್ಯ. ೩. ಮಹತ್ತರವಾದ ಭಯ (ಕಿ). [ಅತಿ$_1$ + ಆಹಿತ]

**ಅತ್ಯುಕ್ತ** (ನಾ). = ಅತ್ಯುಕ್ತೆ: "ವಿತತೋಕ್ತಮತ್ಯುಕ್ತ ಮಧ್ಯಮ . . . ಇಪ್ಪತ್ತಾಱು ಛಂದಂಗಳಕ್ಕುಂ" (ಮಂಗರಾ. ೧೦೭–೧೪). [ಅತಿ$_1$ + ಉಕ್ತ]

**ಅತ್ಯುಕ್ತಿ** (ನಾ). ೧. ಇರುವುದನ್ನು ತುಂಬ ಹೆಚ್ಚುಮಾಡಿ ಹೇಳುವುದು: ಪಿಡಿಯಿರೇ ಕಯ್ಯನಕ್ಕಕ್ಕುಬ್ಬಟೆಯ ಭಕ್ತಿ ಪಿಡಿಯಿರೇ ಎನಿತು ಕಾಲದೊಳಿಂತಿದತ್ಯುಕ್ತಿ (ತಿರುರ. ೨೨); ಅನೇಕ ಸಂದರ್ಭಗಳಲ್ಲಿ ಸಾಕಾದಷ್ಟು ಅಂಶಗಳನ್ನು ತೃಪ್ತಿಕರವಾಗಿ ಪರೀಕ್ಷಿಸಲು ಸಾಧ್ಯವೂ ಇಲ್ಲ. ಕೆಲವೆಡೆ ಅತ್ಯುಕ್ತಿಯನ್ನು ಹೇಳಿಬಿಡುವ ಸಂಭವವೂ ಉಂಟು (ಜೀವಾತ್ಮ. ೨೫೦); ಆಯಾ ಮತೀಯರಿಗೆ ರುಚಿಸುವಂಥಾ ಅತ್ಯುಕ್ತಿಯನ್ನೂ ಆತ್ಮನಿರಾಕರಣೆಯನ್ನೂ ಉಚ್ಚರಿಸಿಬಿಡುತ್ತಿದ್ದರು (ಕಬಸಾ. ಪೀ. ೧೧). ೨. [ಕಾವ್ಯಮೀ] ಒಂದು ಅಲಂಕಾರ; "ಅದ್ಭುತವಾಗಿಯೂ ಅಸಂಭಾವಿತವಾಗಿಯೂ ಇರುವಂತೆ ಹೇಳಿದ ಶೌರ್ಯೌದಾರ್ಯ ಸೌಂದರ್ಯಾದಿಗಳ ವರ್ಣನೆ ಅತ್ಯುಕ್ತ್ಯಲಂಕಾರವೆನಿಸಿಕೊಳ್ಳುವುದು" (ಕೈಪಿಡಿ. ೨೭೬). [ಅತಿ$_1$ + ಉಕ್ತಿ]

**ಅತ್ಯುಕ್ತೆ** (ನಾ). [ಛಂದ] ಅಕ್ಷರ ಛಂದಸ್ಸಿನಲ್ಲಿ ಎರಡನೆಯ ಛಂದಸ್ಸಿನ ಹೆಸರು; ಒಂದು ಪಾದದಲ್ಲಿ ಎರಡು ಅಕ್ಷರಗಳಿರುವ ಸಮವೃತ್ತಗಳ ಸಮುದಾಯ: ೧ ಉಕ್ತೆ, ೨ ಅತ್ಯುಕ್ತೆ, ೩ ಮಧ್ಯೆ,

೪ ಪ್ರತಿಷ್ಠೆ, ೫ ಸುಪ್ರತಿಷ್ಠೆ, ೬ ಗಾಯತ್ರಿ . . . ಎಂದಿಪ್ಪತ್ತಾಱುಂ ಛಂದಂಗಳಕ್ಕುಂ (ಛಂದೋಂಬು. ೧–೫೫ ವ). [ಸಂ. ಅತ್ಯುಕ್ತಾ]

**ಅತ್ಯುಗ್ರ** (ಗು). ಬಹಳ ಭಯಂಕರವಾದ; ತುಂಬ ಘೋರವಾದ: ಪತ್ತಿಪ್ರಮಾದಫಲಕಮನತ್ಯುಗ್ರಗ್ರಾಹನಿವಹಸಂಕ್ಷೋಭಿತದೊಳ್ (ಕವಿರಾ. ೨–೩೪); ಗಂಡಹೆಂಡಿರನತ್ಯುಗ್ರದಿ ಶಿಕ್ಷಿಸಲ್ . . . ಮಾತೆ ವಿಷಮಂ ಪೆತ್ತರ್ಭಕಂಗೂಡಿಸಲ್ ಹರ ಕೊಲ್ಲಲ್ ಪರಕಾಯ್ವನೇ (ಸೋ ೯ ಮೇ ೯ ಶ. ೨೯). [ಅತಿ$_1$ + ಉಗ್ರ]

**ಅತ್ಯುಜ್ಜ್ವಲ,** ಅತ್ಯುಜ್ವಲ (ಗು). ತುಂಬ ಪ್ರಕಾಶಮಾನವಾದ; ಬಹಳ ಹೊಳೆಯುವ. **ಅತ್ಯುಜ್ವಲ:** ಧರಿತ್ರೀಸ್ತುತ್ಯನತ್ಯುಜ್ವಲನಿರುಪಮದೇಹ ಪ್ರಭಾದಿವ್ಯಸರ್ವಾವಧಿ ಬೋಧಂ ತುಷ್ಟನಾದಂ(ಸುಕುಮಾ. ೩–೪೮). [ಅತಿ$_1$ + ಉಜ್ಜ್ವಲ]

**ಅತ್ಯುಜ್ವಲ** 'ಅತ್ಯುಜ್ಜ್ವಲ' ನೋ.

**ಅತ್ಯುತ್ಕೃಷ್ಟ** (ಗು). ಬಹಳ ಶ್ರೇಷ್ಠವಾದ; ತುಂಬ ಉತ್ತಮವಾದ. [ಅತಿ$_1$ + ಉತ್ಕೃಷ್ಟ]

**ಅತ್ಯುತ್ತಮ** (ಗು) = ಅತ್ಯುತ್ಕೃಷ್ಟ. [ಅತಿ$_1$ + ಉತ್ತಮ]

**ಅತ್ಯುತ್ಸಾಹ** (ನಾ). ತುಂಬ ಉತ್ಸಾಹ: ಮೊನ್ನೆ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಈ ಹುಡುಗರು ಅತ್ಯುತ್ಸಾಹದಿಂದ ಎಲ್ಲ ಕೆಲಸಗಳನ್ನೂ ಮಾಡಿದರು (ರೂಢಿ). [ಅತಿ$_1$ + ಉತ್ಸಾಹ]

**ಅತ್ಯುದ್ಗಾರಿಸು** (ಕ್ರಿ). ಬಲವಾಗಿ ಕಾರು; ಬಹಳವಾಗಿ ಹೊರಚೆಲ್ಲು, —ಕಕ್ಕು: ಪೂರಿಸುವ ನೆವದೆ ಮುಂ ಪೀರ್ದಾ ರುಚಿ ಮುತ್ತಾಂಚಜನ್ಯರಶ್ಮಿಯನತ್ಯುದ್ಗಾರಿಪವೊಲ್ ದಂತದ್ಯುತಿ ರಾರಾಜಿಸಿ ಮುಖದಿನುಣ್ಮೆ ನುಡಿದಂ ಕೃಷ್ಣಂ (ಜಗವಿ. ೧೦–೧೪). [ಅತಿ$_1$ + ಉದ್ಗಾರ + –ಇಸು$_3$]

**ಅತ್ಯುದ್ದಾಮ** (ನಾ). ಬಹಳ ಶ್ರೇಷ್ಠವಾದ; ತುಂಬ ಮೇಲಾದ: ದಶಮ ದಿನದೊಳ್ ಅತ್ಯುದ್ದಾಮಮುಮಂ ಶ್ರೀವರ್ಮನಾಮಮುಮನಿಟ್ಟು (ಚಂದ್ರಪು. ೬–೧೦೨ ವ). [ಅತಿ$_1$ + ಉದ್ದಾಮ]

**ಅತ್ಯುನ್ನತ** (ಗು). ತುಂಬ ಎತ್ತರವಾದ; ಅತ್ಯಂತ ಶ್ರೇಷ್ಠವಾದ: ಪ್ರತ್ಯುತ್ಥಾನಾನಂತರಮತ್ಯುನ್ನತ ಕನಕಪೀಠಮಂ ಮುನಿಗಿತ್ತು (ಜಗವಿ. ೨–೪೨). [ಅತಿ$_1$ + ಉನ್ನತ]

**ಅತ್ಯುಪಚಾರ** (ನಾ). ೧. ಹೆಚ್ಚಾದ ಸತ್ಕಾರ; ಆದರ; ಮಿತಿ ಮೀರಿದ ಉಪಚಾರ. ೨. [ಆಲಂ] ಲಂಚ; ಹೆದರಿಕೊಂಡು ಕೊಡುವ ಹಣ: "ಅತ್ಯು[ಪಾಠಾಂ. ಕ್ಕು]ಪಚಾರಮೆನಲಂಜಿಕೊಡುವ ಧನಮುಕ್ಕು" (ಮಂಗರಾ. ೮೦–೯). [ಅತಿ$_1$ + ಉಪಚಾರ]

**ಅತ್ಯುಪಧ** (ಗು). ಪರೀಕ್ಷೆಗೆ ಮೀರಿದ; ವಿಶ್ವಾಸ ಯೋಗ್ಯವಾದ; ನಂಬಲರ್ಹವಾದ (ಕಿ). [ಸಂ. (ಅತಿ + ಉಪಧಾ + –)]

**ಅತ್ಯುಷ್ಣ** (ಗು). ತುಂಬ ಬಿಸಿಯಾದ; ಬಹಳ ತೀಕ್ಷ್ಣವಾದ (ಕಿ). [ಅತಿ$_1$ + ಉಷ್ಣ]

**ಅತ್ಯುತ್ಸುಕ** (ಗು). ತುಂಬ ತವಕವುಳ್ಳ; ಅತ್ಯಂತ ಸಂಭ್ರಮದ: ವಿಶ್ವಸೇನ ಪ್ರಮುಖ ಸೇನಾಭಿಜ್ಞಾನತೆಯಿಂ ರಾಜಲೋಕಮಱಿದತ್ಯುತ್ಸುಕರಾಗಿ ಶಶಿವಂಶಕೇತುಗೆ ರಾಜ್ಯಾಭಿಷೇಕಂಗೆಯ್ಯೆ (ಶಾಂತಿಪು. ೧೦–೧೦೨ ವ). [ಅತಿ$_1$ + ಉತ್ಸುಕ]

**ಅತ್ಯೂರ್ಜಿತ** (ಗು). ಬಹಳ ಏಳಿಗೆ ಹೊಂದಿದ; ತುಂಬ ಪ್ರಭಾವಶಾಲಿಯಾದ: ನೀಲಾಂಬುಜಲೀಲಾಕಾರದಿಂ ಕಾಂತಿಯುತನಿನನಿನತ್ಯೂರ್ಜಿತಂ (ಶಾಂತಿಪು. ೯–೨೧೦). [ಅತಿ + ಊರ್ಜಿತ]

**ಅತ್ರಪಾತ್ಮಿಕೆ** (ನಾ). ನಾಚಿಕೆಯಿಲ್ಲದವಳು; ಲಜ್ಜೆಗೆಟ್ಟಾಕೆ; ಸಕಲ ದುಃಖಾವಾಸೆಯಿಂ ಜೀವಿತಕ್ಕೆ ನಿಬದ್ಧಾಸೆಯೆನತ್ರಪಾತ್ಮಿಕೆಯಿಂ (ಕಾದಂಬ. ೫೪೫). [ಸಂ. ಅತ್ರಪಾತ್ಮಿಕಾ(ಅತ್ರಪಾ + ಆತ್ಮನ್ + –)]

**ಅತ್ರಿಗೋತ್ರಜ** (ನಾ). = ಅತ್ರಿಪುತ್ರ ೧: "ಇಂದು ಜೈವಾತೃಕಂ . . . ಚಂದ್ರಮಂ ವಿಧು ಸೋಮನತ್ರಿಗೋತ್ರಜನಬ್ಧಿನಂದನಂ ದ್ವಿಜರಾಜನೆನೆ ಸುಧಾಂಶುಮೆನಿಕ್ಕು" (ಮಂಗರಾ. ೧೧–೪). [ಅತ್ರಿ$_0$ + ಗೋತ್ರಜ]

**ಅತ್ರಿಜ** (ನಾ). = ಅತ್ರಿಪುತ್ರ ೧: ಕ್ಷಾರಕ್ಷೀರಾಂಬುಧಿಗಂ ಕ್ಷೀರೋದಭವಾತ್ರಿಜೇಂದುಗಳ್ಗಂ ಮುರಜಿನ್ನಾರಾಯಣರ್ಗಂ ಸಿರಿಗಂ ಶ್ರೀರಾಮೆಗಮತನುಗಂ ಭವಾರಿಗಮೈಕ್ಯಂ (ಕಾವ್ಯಾವ. ೯೦೬). [ಸಂ.]

**ಅತ್ರಿನೇತ್ರಪ್ರಸೂತ** (ನಾ). ಅತ್ರಿಋಷಿಯ ಕಣ್ಣಿನಿಂದ ಹುಟ್ಟಿದವನು; ಚಂದ್ರ. [ಅತ್ರಿ$_0$ + ನೇತ್ರ + ಪ್ರಸೂತ]

**ಅತ್ರಿಪುತ್ರ** (ನಾ). ೧. ಅತ್ರಿಯ ಮಗ; ಚಂದ್ರ: ಆ ಕ್ಷತ್ರಪುತ್ರಂ ಸಿತಪಕ್ಷದತ್ರಿಪುತ್ರನಂತೆ ಕಳಾಕಳಾಪೋಪಚಯಮುಮನಪ್ಪುಕೆಯ್ದಿರೆ (ಚಂದ್ರಪು. ೪–೪ ವ). ೨. ದುರ್ವಾಸಋಷಿ: ಅತ್ರಿಪುತ್ರನ ಕೈಗುಂಡಿಗೆಯಂ ಕೀಱ್ಮಾಡುವೊಂದು ಪಳಿಕಿನ ಕರವತಿಗೆಯಿಂ (ರಾಮಾಶ್ವ. ೭೫). [ಅತ್ರಿ$_0$ + ಪುತ್ರ]

**ಅತ್ವ** (ನಾ). [ವ್ಯಾಕ] ಅಕಾರ. 'ಅತ್ವವಿಧಿ' ಪರಾ. [ಸಂ.]

**ಅತ್ವವಿಧಿ** (ನಾ). [ವ್ಯಾಕ] ಅಕಾರವನ್ನು ಸೇರಿಸಬೇಕೆಂಬ ನಿಯಮ: ದೊರೆಕೊಳ್ವುದತ್ವವಿಧಿಯಂತರಾಳದೊಳ್ ಬಹುಳಮಾಗಿ ಮಧ್ಯಪದಕ್ಕಂ ದೊರೆಕೊಳ್ವುದದರ್ಶನವಿಧಿ ವಿರಳತೆಯಿಂ ಕರ್ಮಧಾರಯಕ್ಕಱಿವವರಿಂ (ಶಮದ. ೧೭೮). [ಅತ್ವ + ವಿಧಿ]

**ಅತ್ವಾಂತ** (ನಾ). [ವ್ಯಾಕ] ಕೊನೆಯಲ್ಲಿ ಅಕಾರವುಳ್ಳದ್ದು; ಅಕಾರಾಂತ (ಶಬ್ದ): ಅತ್ವಾಂತಮುಮಿತ್ವಾಂತಮುಮುತ್ವಾಂತಮುಮಾಋದಂತಮುಂ ನಿಜಲಿಂಗಂ ಋತ್ವಕ್ಕಾರಾದೇಶಂ ತತ್ವಂ ಪೀನಂ ವಿಧಾತೃಶಬ್ದಂ ರಾಂತಂ (ಶಮದ. ೮೪). [ಅತ್ವ + ಅಂತ$_3$]

**ಅಥ** (ನಾ). ಪ್ರಾರಂಭ: ಒಂದು ದಿನ ಆತನ ಮಗನು ತನ್ನ ತಂದೆಯ ಬೀರುವಿನಿಂದ ಕನ್ನಡಕದ ಎರಡು ಗಾಜುಗಳನ್ನು ತೆಗೆದು ಒಂದರ ಮುಂದೊಂದಿಟ್ಟು ನೋಡುವಾಗ ದೂರದ ಚರ್ಚಿನ ಶಿಖರ ಬುಡಮೇಲಾಗಿ ಕಂಡಿತು. ಅದುವೇ ದೂರದರ್ಶಕದ 'ಅಥ' (ವೈಜ್ಞಾಪ್ರ. ೪೮).

ಅಥದಿಂದ ಇತಿಯವರೆಗೆ = ಮೊದಲಿನಿಂದ ಕೊನೆಯವರೆಗೆ, ಆಮೂಲಾಗ್ರವಾಗಿ.

[ಸಂ. P 'ಅಥ' ಎಂಬುದು ಸಂಸ್ಕೃತದಲ್ಲಿ ಅವ್ಯಯ; ಇದು ಗ್ರಂಥ, ಪ್ರಕರಣ ಮೊದಲಾದವುಗಳ ಪ್ರಾರಂಭದಲ್ಲಿ ಬರುತ್ತದೆ.]

**ಅಥರ್ವ** (ನಾ). ೧. ಪುರೋಹಿತ; ಬ್ರಾಹ್ಮಣ. ೨. ಪುರಾಣಪ್ರಸಿದ್ಧನಾದ ಒಬ್ಬ ಋಷಿ. ೩. ವೇದಗಳಲ್ಲಿ ನಾಲ್ಕನೆಯದು; ಅಥರ್ವಣವೇದ. [ಸಂ. ಅಥರ್ವನ್]

**ಅಥರ್ವಕುಶಲ** (ನಾ). ೧. ಅಥರ್ವಣ ವೇದದಲ್ಲಿ ನಿಪುಣ. ೨. ಮಂತ್ರ, ಮಾಟ ಮೊದಲಾದವುಗಳಲ್ಲಿ ನಿಪುಣ: ವೇದವಿದಂ ಕಾಲತ್ರಯವೇದಿ ಬಹುಶ್ರುತನಥರ್ವಕುಶಲಂ ಶುಭವಂಶೋದಯನುತ್ತಮನಾಶೀರ್ವಾದಪರಂ ಪರಹಿತಂ ಪುರೋಹಿತನಕ್ಕುಂ (ಶಮದ. ೧೦೫). [ಸಂ. (ಅಥರ್ವನ್ + ಕುಶಲ)]

**ಅಥರ್ವಣ** (ನಾ). ನಾಲ್ಕನೆಯ ವೇದ. [ಸಂ.]

**ಅಥರ್ವಣಕೆಲಸ** (ನಾ). ಮಾಯೆ; ಮಾಟ; ತಂತ್ರ; ಮೋಸಗಾರಿಕೆ: ಸಂಜೀವರಾಯರು ಕಾಣುವವರ ಮಟ್ಟಿಗೆ ಉದಾರಿಯಾಗಿ ಬೆಣ್ಣೆಯಂತಹ ನುಣ್ಣಗಿನ ಮನುಷ್ಯರು. ಆದರೆ ಮಾಡುವುದು ಸಂಪೂರ್ಣ ಅಥ[ಥ]ರ್ವಣ ಕೆಲಸ. ಗೋಳಿಗುಡ್ಡೆ ಶ್ಯಾಮಣ್ಣಶಾಸ್ತ್ರಿಗಳು ನಡುಬೈಲು ಮಾಪಣ್ಣಭಟ್ಟರು ಮೊದಲಾದವರ ಜಮೀನುಗಳು ಸಂಜೀವರಾಯರ ಬಗಲೊಳಗೆ ಬಿದ್ದುದು ಹೀಗೆಯೇ ಅಲ್ಲವೆ? (ಕುರುಕಾ. ೫೩). [ಅಥರ್ವಣ + ಕೆಲಸ]

**ಅಥವಾ** (ಅ). ಪರ್ಯಾಯ, ಪಕ್ಷಾಂತರ ಮೊದಲಾದವನ್ನು ಸೂಚಿಸುವ, ಇಲ್ಲವೆ ಎಂಬ ಅರ್ಥವುಳ್ಳ ಅವ್ಯಯ : ಅವನು ಮೋಸಗಾರನಾಗಿರಬೇಕು, ಅಥವಾ ನೀನು ಹುಚ್ಚನಾಗಿರಬೇಕು (ಮಧ್ಯಮ. ೧೬೧) ; ಈಗ ನನಗೆ ಬೇಕಾಗಿರುವುದು ಕಾಫಿ ಅಥವಾ ಟೀ, ಗಂಜಿಯಲ್ಲ (ರೂಢಿ).
[ಸಂ. (ಅಥ + ವಾ)]

**ಅಥಾಂಗ** (ಅ). ಆಳವಾಗಿ ; ತಳದವರೆಗೆ : ಗಂಗೆಯಲ್ಲಿ ಅಥಾಂಗವಾಗಿ ಮುಳುಗುಹಾಕದೆ, ಬರಿ ಬಾಹ್ಯಪ್ರಕ್ಷಾಳನೆಯಿಂದ ಅಂತರಂಗವು ಆರ್ದ್ರವಾದೀತೆ ? (ಮಸಾಹಿ. ೧೨). [← ಮರಾ. ಅಥಾಂಗ್]

**ಅಥಾಪಿಸು**, ಅತಾಪಿಸು (ಕ್ರಿ). (?) : ಅವರು ಹಮೇಷಾ ಶಿಕಾರಿಗೆ ಹೋಗುತ್ತಾ ಇದ್ದಾರೆ. ಅವಾಗ್ಯೆ ಸಂದರ್ಭವಾದಲ್ಲಿ ಹೊಡಿಸುತ್ತೇನೆ. ಅಥಾಪಿಸಿ [ಪಾಠಾಂ. ಅಥಾಪಿ] ಈ ಯೆರಡು ಬಗೆಯಲ್ಲು ಸಂದರ್ಭ ಶಿಕ್ಕದೆ ಹೋದರೆ ಶಿವರಾತ್ರೆ ಹಬ್ಬದ ದಿವಸ ಮಹದೇವ ಪುರದಲ್ಲಿ ಬಹಳ ಫಿಕೀರಿನಲ್ಲಿ ಖುಷಿಯಿಂದ ಹಬ್ಬಾಮಾಡುತ್ತಾ ಇರುತ್ತಾರೆ (ರಾಜೇಂದ್ರ. ೫೫). **ಅತಾಪಿಸು** : ಅತಾಪಿಸಿ ತಾವು ಅವರಿಗೆ ಶಿಕ್ಷೆಮಾಡದೆ ಇದ್ದರೆ (ರಾಜೇಂದ್ರ. ೧೨). [?]

**ಅದಂಡ್ಯ** (ಗು). ದಂಡಿಸಬಾರದ ; ದಂಡನೆಗೆ ಅರ್ಹವಲ್ಲದ : ಧರ್ಮದೊಳು ಸ್ಥಿರನಪ್ಪ ದ್ವಿಜನದಂಡ್ಯಂ ದಂಡ್ಯಾದಂಡ್ಯ ವಿಚಾರದೊಳು ಧಾರ್ಮಿಕನೆ ಸಮರ್ಥಂ (ಚಾವುಂಪು. ೨೫೯). [ಸಂ. (ಅ- + ದಂಡ್ಯ)]

**ಅದಂತ$_1$** (ನಾ). ಅಕಾರಾಂತ : ಅಕ್ಕುಮನುಸ್ವಾರಮದಂತಕ್ಕೆ ಸಮಂತೆಲ್ಲಿಯಾದೊಡಂ (ಕಾವ್ಯಾವ. ೯೬). [ಅತ್ + ಅಂತ$_2$]

**ಅದಂತ$_2$** (ಗು). ಹಲ್ಲಿಲ್ಲದ. [ಸಂ. (ಅ- + ದಂತ)]

**ಅದಂತ್ಯ** (ಗು). ೧. ಹಲ್ಲಿಗೆ ಯೋಗ್ಯವಲ್ಲದ. ೨. [ವ್ಯಾಕ] ದಂತ್ಯಾಕ್ಷರವಲ್ಲದ. (ನಾ). ೩. ಹಲ್ಲಿಲ್ಲದಿರುವುದು. [ಸಂ.]

**ಅದಕಿಸು** (ಕ್ರಿ). ಅದುಮಿಸು ; ಅಮುಕುವಂತೆ ಮಾಡು (ದಕ. ೩).
[ಅದಕು$_1$ + -ಇಸು$_3$]

**ಅದಕು$_1$** (ಕ್ರಿ). ೧. ಹಿಸುಕು ; ಅದುಮು ; ಒತ್ತು (ದಕ. ೩). ೨. (ಪಾತ್ರೆ) ತಗ್ಗು ; ನೆಗ್ಗು ; ಜಜ್ಜಿಹೋಗು (ದಕ. ೩).
[ದೇ. ॥ ತಮಿ. ಅದಕ್ಕು, ಅದುಕ್ಕು, ಅದುಙ್ಙು ; ಮಲ. ಅತಕ್ಕುಕ, ಅತುಕ್ಕುಕ]

**ಅದಕ್ಕು$_2$** (ನಾ). ಲೋಹದ ಪಾತ್ರೆಯಲ್ಲಿ ಉಂಟಾದ ತಗ್ಗು, — ನೆಗ್ಗು (ದಕ. ೩). [< ಅದಕು$_1$. / ತಮಿ. ಅದುಕ್ಕು]

**ಅದಕ್ಷ** (ಗು). ದಕ್ಷನಲ್ಲದ ; ಅಸಮರ್ಥ : ಅಂದು ದಕ್ಷನದಕ್ಷನೆನಿಸಿಯಮುಂದಗರ್ವಿತನಾಗಿ ಹರನಂ ನಿಂದಿಸಲು (ಬಸಪು. ೬೧-೧೬).
[ಸಂ. (ಅ- + ದಕ್ಷ)]

**ಅದಗುಂತಿ** 'ದಗುಂತಿ' ನೋ.

**ಅದಟ**, ಅದಟ್ಟ, ಅಧಟ (ನಾ). ಶೂರ ; ಪರಾಕ್ರಮಿ : "ಅದಟನೆನೆ ಕಡುದಿಟ್ಟಂ" (ಭಾರನಿ. ೫೪) ; ಅದಟಂ ಪುಟ್ಟಿದನಭಿಮನ್ಯು ಕಲಿತನಂ ಪುಟ್ಟುವವೋಲ್ (ಪಂಪಭಾ. ೫-೨೯) ; ದಿನಕೃತ್ತನೂಭವಂಗತಿ ಘನವಾನಿಗೆ ನಿಖಿಳಭುವನಸಂಕೀರ್ಣಯಶೋಧನಗೆ ನುತಶೌರ್ಯಶಾಳಿಗೆ ವನಧಿವೃತಾವನಿಯೊಳದಟರಾರ್ ದೊರೆ ಪೇೞಿಂ (ನೇಮಿಪು. ೧೧-೧೩೦) ; ಜೋಡೊಡೆದು ಥಟ್ಟುಗಿದು ಬೆನ್ನಲಿ ಮೂಡಲದಟರ ಸೀಳಿದನು (ಕುವ್ಯಾದ್ರೋ. ೫-೫) ; ಇದು ನೆಜಿಗುಡಿಯ ಕೋಟಿಯ ಸೇನೆಯುಜ್ಜನಿಯದಟರುಗಳ ಪೌಜ ನೋಡು (ಕಂನವಿ. ೧೧-೧೦೦) ; ಅತನು ಅದಟನಾದರೂ ಅತ್ಯಂತ ದುರ್ದೈವಿಯು (ಕವೀರ. ೨೯). **ಅದಟ್ಟ** : ಸಾನ್ತಯ್ಯ ಕೊಟಗಪ್ಪುನ್ನು ತುಱುವ ಕೊಣ್ಡು ಪೋಪಾಗದಟ್ಟ ಬಿನ್ನಾಂಡಿ ತುಱುವ ಮಗುೞ್ಚಿ ಸುರರ ಗತಿಗೆ ಸನ್ದ (ಮೈಆರಿ. ೧೯೪೧, ೨೫-೧೪ ; 1030).

**ಅಧಟ** : ಇವರೊಳ್ ಪೇೞ್ ಬವರಕ್ಕೆ ನಿಲ್ವಧಟರಾರ್ (ನೇಮಿಪು. ೬-೨೦೦) ; ಆ ಲಾಳದೇಶ ಮಧ್ಯಸ್ಥಳದೊಳಧಟ ಭೂಪಾಲವೆಸರಂ ತಳೆದ ಪಂಕೇಜಸಖಕುಲದ ಪೀಳಿಗೆಯ ರಾಯರ್ಗೆ (ಹಚಕಾ. ೧-೩೫) ; ಶಕ್ರ ಶಿಖಿ ಯಮ ಪವನ ಧನದೀಶಾನರೊಳಗೀ ಹವಣೆನಧಟರ ಕಾಣೆನಾಹವದಂಗ ಲೇಸೆಂದ (ತೊರರಾ. ೧-೧೧-೧೫) ; ಹೊಣಕೆಯುಳ್ಳಧಟರೊತ್ತರಿಸಿದರ್ (ನಂದಿಮಾ. ೧೩-೪೮).

**ಅದಟರ ದೇವ** = ಶೂರರ ಒಡೆಯ ; ವೀರಶ್ರೇಷ್ಠ ; ಒಂದು ಬಿರುದು : ಜಯಲಕ್ಷ್ಮೀಧಾಮಂ ಜಯಸಿಂಘದೇವನದಟರ ದೇವ (ಸೌಇಇ. XX, ೨೧-೪೨ ; 1019) ; ನಾಗದೇವನದಟರ ದೇವಂ (ಸೌಇಇ. XI-i, ೭೮-೬೪ ; 1045) ; ಬರ್ಮದೇವನದಟರ ದೇವಂ (ಎಕ. VII, ಶಿವಮೊ. ೫೭-೩೯ ; 1115). **ಅದಟರ ಭೀಮ** = ಶೂರರಿಗೆ ಭಯಂಕರನಾದವನು ; ಒಂದು ಬಿರುದು : ಧರೆಯೊಳ್ ಬೀರದ ಪೆಂಪಿಂ ನರನಿಂದಿರ್ಮಡಿ ಬಕಾರಿಯಿಂ ಮೂವಡಿ ಭಾಸ್ಕರಸುತನಿಂ ನಾಲ್ವಡಿ ಶಂಕರನಿಂದೈವಡಿ ನೆಗೞ್ತೆಯದಟರ ಭೀಮಂ (ಕಾವ್ಯಾವ. ೭೦).
[< ಸಂ. ಅಧೃಷ್ಟ / ಮರಾ. ಅಧಟ = ಅತಿಪರಾಕ್ರಮಿ]

**ಅದಟಂಕೆಗಳ್ಳ** (ನಾ). (ಶತ್ರುವಿನ) 'ಅದಟ' ಎಂಬ ಬಿರುದನ್ನು ಅಪಹರಿಸತಕ್ಕವನು ; ಶೂರನಾದ ಶತ್ರುವನ್ನು ಸೋಲಿಸತಕ್ಕವನು ; ಒಂದು ಬಿರುದು : ವೈರಿಬಳಜಳಧಿಜಳದ ಪ್ರಭಂಜನ ದವಾನಲಂ ವಿಜಯಲಕ್ಷ್ಮೀವಲ್ಲಭನದಟಂಕೆಗಳ್ಳನಯ್ಯನ ಚಕ್ರ (ಎಕ. III, ಮೈಸೂರು. ೩೬-೮ ; 990). [ಅದಟ + ಅಂಕ$_2$ + ಕಳ್ಳ$_1$]

**ಅದಟಕಾಳಾನಳ** (ನಾ). ಶೂರರಿಗೆ ಪ್ರಳಯಾಗ್ನಿಯಂಥವನು ; ಶೂರರಾದ ಶತ್ರುಗಳನ್ನು ಧ್ವಂಸಮಾಡುವವನು : ಬಿಜೆಯಕೀರ್ತ್ತಿಧ್ವಜಂ ಚಕ್ರಗೊಟ್ಟದಾವನಳಂ[ನದ]ಟ ಕಾಳಾನಳಂ ಚೋಳಕುಳಕಾಳದಣ್ಡಂ (ಸೌಇಇ. XI-i, ೯೭-೮ ; 1062).
[ಅದಟ + ಕಾಳ (= ಕಾಲ$_2$) + ಅನಳ (= ಅನಲ)]

**ಅದಟತನ** (ನಾ). = ಅದಟತೆ : ಸದಮಲ ಶ್ರುತಿವಾಕ್ಯಗೋಚರನದಟು[ಟ]ತನವನು ಗಣಿಸಬಹುದೇ (ಸಂಭಪ. ೪-೩೭) ; ಕಂಡರಮರರು ಚಾಪವಿದ್ಯಾ ಖಂಡಪರಶುವಿನದಟು[ಟ]ತನವನು (ಸಂಭಪ. ೨೦-೮೮).
[ಅದಟ + -ತನ]

**ಅದಟತೆ** (ನಾ). ಪರಾಕ್ರಮ ; ಶೌರ್ಯ : ಬೆದಜಲಿದಿರ್ಚಿದುದ್ಭಟ ಭಟರ್ಕಳನಿರ್ವರುಮರ್ವಿಸಲ್ಕೆ ಕೊಂಡದಟತೆಯಿಂದಮಾಗಳೆ ಧನಂಜಯನಂಜದೆ ಕಂಜವಕ್ತ್ರೆಯಂ ಪದೆದತಿವೇಗದಿಂ ಪೆಗಲನೇಱಿಸಿಕೊಂಡು ಬರುತ್ತುಂ (ನೇಮಿಪು. ೭-೪೪). [ಅದಟ + -ತೆ$_1$]

**ಅದಟರಕ್ಕಸ** (ನಾ). ಪರಾಕ್ರಮಿಯಾದ ರಾಕ್ಷಸ : ಪದಿನಾಲ್ಕು ಭುವನವೆಲ್ಲವು ಪುರುಷೋತ್ತಮನುದರದೊಳಿರುತಿರ್ದು ತಾನು ಅದಟರಕ್ಕಸನ ಮೇಲಿರದೆ ಸಂಗ್ರಾಮವನೊದವಿಸಿದುದು ಚಿತ್ರವಲ್ತೆ (ತ್ರಿಪುಸಾಂ. ೩೪).
[ಅದಟ + ರಕ್ಕಸ]

**ಅದಟರಸ** (ನಾ). ಪರಾಕ್ರಮಿಯಾದ ರಾಜ : ಹಣಿದನಲ್ಲಿಂದಿತ್ತ ಮಿಗೆ ಪಡುವಣ ದಿಗಂತದಲದಟರಸ [ಪಾಠಾಂ. ಲದಟಿಗರ] ಪಟ್ಟಣದವರ ಪಂಚನದ ಭೂಮಿಯ ಭೂಮಿಪರ ಗೆಲಿದ (ಕುವ್ಯಾಸ. ೬-೪).
[ಅದಟ + ಅರಸ]

**ಅದಟರಾಯಝುಳಪ್ಪ** (ನಾ). ಶೂರರಾದ ರಾಜರನ್ನು ಆಕ್ರಮಿಸಿ ಹೊಡೆಯುವವನು ; ಒಂದು ಬಿರುದು : ಶ್ರೀಮತ್ ತ್ರಿಭುವನಮಲ್ಲಂ ಸಾಮಜರಿಪುವಿಕ್ರಮಂ ಪರಾಕ್ರಮತುಂಗಂ ಸಾಮಾನ್ಯಮಲ್ಲನೆಳೆಯೊಳ್ ಸೋಮೇಶ್ವರನನುಜನದಟರಾಯಝುಳಪ್ಪಂ (ಸೌಇಇ. XX, ೫೫-೭ ; 1082). [ಅದಟ + ರಾಯ + ಝುಳಪ್ಪ (< ಪ್ರಾ. ಝುಡಪ್ಪ)]

**ಅದಟಲೆ** (ಕ್ರಿ). ೧. ಶೌರ್ಯದಿಂದ ಕಾಡು, —ಪೀಡಿಸು: ಮಾಜಿಾನ್ತ ವಿದ್ವಿಷ್ಟರನದಟಲೆಯಲ್ಬಣ್ಣಿಸಲ್ಬಣ್ಣಿಸಲ್ಜ[ಕ್ಕ]ನ ಚಕ್ರಂ ಸೊಕ್ಕೆ (ಸೌಇಇ. XX, ೩೧–೨೬ ; 1044) ; ಬಲಿವಲೆವ ಮಲೆವ ಕೆಲೆವದಟಲೆವ ಪಳಂಚಲೆವ ಮಲೆಪರೆಲ್ಲಂ ಮುಱಿದಂ. . .ಲಕ್ಷ್ಮನೃಪಂ (ಎಕ.VII, ಶಿಕಾರಿ. ೧೩೬–೨೪; 1068) ; ಆವಂ ಮುರನಂ ಕೊಂದನದಾವಂ ಬಕಕಂಸಕೇಶಿಗಳನದಟಲೆದಂ (ಶಮುದ. ೧೫೧ ಪ್ರಯೋ); ಮೂಲೋಕಮನೆಲ್ಲಮನದಟಲೆವ ಮತ್ತ ಹಿರಣ್ಯ ಕಶಿಪುವಂ ಕೊಲ್ವೆನೆನುತ್ತಾ ಸ್ತಂಭೋದರದೊಳ್ ಜನಿಸಿ (ಜಯಕಾ. ೮–೫). ೨. ನಿಗ್ರಹಿಸು; ಉಡುಗಿಸು; ಸೋಲಿಸು: ಅಂದಮದಟಲೆಯೆ ಮನಸಿಜನಂದಮನಳವಳವಿಗಳೆದು ಕೇಸರಿಯುಳವಂ ಬೆಂದಗುಳೆ ವಜ್ರ ಬಾಹು ಪುರಂದರರೆಂಬಿರ್ವರವರ್ಗೆ ನಂದನರಾದರ್ (ಪಂರಾಮಾ.೧–೧೩೭); ಕರ್ಮಾರಿಯನದಟಲೆವಾನಂದವೀರರ್ ತಪಃಶ್ರೀವನಿತಾಳಂಕಾರರೆಮ್ಮಂ ದಪಹರಿಸುಗೆ ದುರ್ಮೋಹಮಂ ಸಾಧುವರ್ಗಂ (ಧರ್ಮಾಮೃ. ೧–೫); ವೇದ ವೇದಾಂಗ ರಹಸ್ಯಮನದಟಲೆದುದೆನಲ್ ಕಂಸಮಥನ ಬಣ್ಣಿಸುವರಳವೆ ನಿನ್ನ ಮಹತ್ವಂ (ಜಗವಿ. ೬–೮೩). [ಅದಟ್ಟು$_2$ + ಅಲೆ$_1$]

**ಅದಟಸಾಮಂತ** (ನಾ). ಶೂರನಾದ ಸಾಮಂತ ರಾಜ: ಅದಟ ಸಾಮಂತ ಸಂದೋಹಮಂ ವಿಗುರ್ವಿಸಿ ಭೇರಿಯಂ ಸೂಳೈಸಿ ನಿಂದರೊಡ್ಡಿ (ಜ್ಞಾನಚಂ. ೧–೮೧). [ಅದಟ + ಸಾಮಂತ]

**ಅದಟಾನು** (ಕ್ರಿ). ಪರಾಕ್ರಮವನ್ನು ತಾಳು, —ಹೊಂದು: ನುಡಿ ದುವು ದೇವದುಂದುಭಿ ದೈತ್ಯನ ಸಿರಿಮುಡಿಯಲ್ಲಿ ಹೂಮಳೆಗಱೆಯೆ ಕುಡಿವರಿದದಟಾಂತು ಸಾಸಿರತೋಳಿಂದ ಹಿಡಿದನು ರಣಭೈರವನ (ಮೋಹತ. ೩೫–೪೮). [ಅದಟ್ಟು$_2$ + ಆನು$_1$ (< ಆನ್$_1$)]

**ಅದಟಿಗ** (ನಾ). ಶೂರ; ಪರಾಕ್ರಮಿ: 'ಅದಟರಸ' ಶಬ್ದದ ಪ್ರಯೋಗದ ಪಾಠಾಂತರವನ್ನು ನೋಡಿ. [ಅದಟ್ಟು$_2$ + –ಇಗ]

**ಅದಟ್ಟು$_1$** (ಕ್ರಿ). ೧. "ನಿಂದಿಸು, ಜರೆ" (ಗುವಿಮೋ) ; "ಗದರಿಸು" (ಮಂಕುಕ. ಕೋಶ); ಹದವರಿತು ವಿಧಿ ತಾನೆ ಕುದುರಿಸುವನೆಲ್ಲವನು ಅದಟ ದಿರು ನೀನವನ (ಮಂಕುಕ. ೫೪೯). ೨. ಅದುಮು; ಅಡಗಿಸು (ಕ).
[← ? ತಮಿ. ಅದಟ್ಟು = ಗದರಿಸು; ಬಯ್ಯಿ]

**ಅದಟ್ಟು$_2$**, ಅಧಟು (ನಾ). ೧. ಪರಾಕ್ರಮ; ಶೌರ್ಯ; ಸತ್ತ್ವ: ಅದಟನಳುರ್ಕೆಯಂ ಮೆಱೆದು ಸಾವುದು ಬೋಯಿಗನನ್ತಿಳಾಗ್ರದೊಳ್ (ಎಕ. II, ೧೩೮–೧೪ ; 940) ; ಎಮ್ಮಂ ಪಿಡಿದೆಱೆವಂದಿನ ನಿಮ್ಮದಟುಗ ಳೀಗಳೆತ್ತವೋದುವೊ (ಪಂಪಭಾ. ೭–೩೯) ; ಭಟಸಂಘಕ್ಕದಟೆಂತುಟಂತುಟಿ ಮುಖಾಂಭೋಜಕ್ಕೆ ಮೂಗೆಂತುಟಂತುಟಿ . . . ದರ್ಶನಂ ಸಕಲ ಧರ್ಮ ಕ್ಕಂ ಧರಾಚಕ್ರದೊಳ್ (ಧರ್ಮಾಮೃ.೧–೭೨) ; ಹಸುಳೆಯದಟನ ನುಡಿಯ ಕೇಳಿದು ನಸುನಗುತ ಧರ್ಮಜನು ಘನ ಪೌರುಷವು ನಿನಗುಂಟೆಂದು ಕಂದನ ತೆಗೆದು ಬಿಗಿಯಪ್ಪಿ (ಕುವ್ಯಾದ್ರೋ. ೪–೩೬). ೨. ದರ್ಪ; ಗರ್ವ: "ಹಮ್ಮದಟು ಮತ್ತೆ ಗಬ್ಬಂ ದಿಮ್ಮದರಿಂ ಬಿಂಕ ಪುಗ್ಗುಮುಕ್ಕೆವಮೆನ್ನಲ್ ಗಮ್ಮನೆ ಗರ್ವಮದಕ್ಕುಂ" (ಕವಿಕಂ. ೧೧೩) ; ಮುಕುಂದಂ ಸಭಾಂ ತರಮಂ ಪೊಕ್ಕನಳುರ್ಕೆವೆತ್ತದಟನಾ ಪೀತಾಂಬರಾಡಂಬರಂ (ನೇಮಿಪು. ೬–೧೧೭) ; ಪಂಚೇಂದ್ರಿಯಂಗಳದಟಂ ವಂಚಿಸುವಾಯಾಸವೇಕೆ ಕೂರ್ತೀ ಸ್ಥಲದೊಳ್ ಪಂಚಾಕ್ಷರಿಯಂ ಸಲೆ ಸಂದಂಚಿತ ಗೃಹಿಯಾಗೆ ಸಾಕು ಕೇಳ್ ಜನನಾಥಾ (ಉದ್ಭಟ. ೩–೭೨) ; ಮಾಣು ಬಱುಮಾತುಗಳೆನುತಾ ಪ್ರಾಣವಲ್ಲಭಗೆಂದಳಾ ಶರ್ವಾಣಿಯೆನ್ನಯ ಪೈಜೆಯಿದೆಯಹುದೆಂದಳದ [ಪಾಠಾಂ. ಧ]ಟನಲಿ (ಪ್ರಭುಲೀ. ೨–೪೦) ; ಧರೆಯೊಳ್ ಮಲೆಪರದಾ ರೆಂದು ನಿಂದನಂದದಟೆಂದಂ (ಚಕವಿ. ೨–೪೦). ೩. ಅಬ್ಬರ: "ಅದ ಟಬ್ಬರ ಪರಾಕ್ರಮಕ್ಕೆ" (ಕಶರ. ೮). **ಅಧಟು**: ೧. ಕಯ್ಯಂಬೇಱೆ ನಧಟುಮಸ್ತ್ರಕದಂಬಕಮುಂ ಸೋರೆ (ಶಾಂತಿಪು. ೬–೮೮) ; ಶಿವಪದ ದ್ರೋಹಿಗಳ ಸಜ್ರನೆ ಸವರಿ ಸೀಳ್ದಪ್ಪಳಿಸುವಧಟನ ತವಕ ತಕ್ಕೆಯ ವೀರ ಭದ್ರನು ಮುಂದೆ ಮೋಹಿಸಿದ (ಪ್ರಭುಲೀ. ೨–೨೨) ; ತನ್ನಧಟಿಂಗಗಿ ದಾಶಾಧಿಪರುಳಿದುನ್ನತಿಕೆಯೊಳಿತ್ತಾಕಪ್ಪದ ದೆಸೆಗನ್ನೆಯರೆನಲ್ (ಜಯಕಾ. ೩–೨) ; ಅವಳು ಕದನದಲ್ಲಿ ತೋರಿಸಿದ ಅಧಟೂ ಕಿಸುಕಾಡು ನಾಡಿನಲ್ಲಿ ಅರಸುಗೈದ ಚಾಣಾಕ್ಷತೆಯೂ ವರ್ಣನಾತೀತವಾಗಿವೆ (ಕರತ್ನ. ೫೨). ೨. ಪರವೆನಾಚಿಯ ಲೋಚನಂಗಳಿಂದೀವರದಳಂಗಳಂತೊಪ್ಪಿದುವು ಮನ್ಮಥಮಹಾವೀರನೊರೆಯಿಂದಲುಗಿದಧಟನಿಂ ಪಿಡಿದು ಜಡಿವ ಕರವಾಳಿ ನಂತೆ (ಸೌಂದಪು. ೬–೫). [< ಅದಟ. / **ತೆಲು.** ಅದಟು]

**ಅದಟ್ಟೆ** 'ಅದಟ' ನೋ.

**ಅದದು** (ನಾ). ಒಂದು ಆಭರಣ: ಕಾಲಂದುಗೆ ಕಾಂಚಿಯದ [ಪಾಠಾಂ. ದು]ದು ನಿಚ್ಚಳದೋಲೆ ಪುಸ್ತಿಯು ಚಿಂತಾಕು ಬಾಳದೊಳೆಸೆವ ಮುತ್ತಿನ ಬೊಟ್ಟು ತಳೆದಿಹ ನೀಲಾಳಕಿಯರೊಪ್ಪಿದರು (ಕಂನವಿ. ೬–೧೦೩). ☞ ಕಾಂಚಿಯದದು ಎಂಬುದು ಕಾಂಚಿಯ ದಾಮ ಎಂಬುದರ ಅಪಲಿಖಿತವಿರಬಹುದು. [?]

**ಅದನಾ** (ಗು). ತುಚ್ಛವಾದ; ನೀಚವಾದ. [← **ಅರ. ಹಿಂ.** ಅದನಾ]

**ಅದಪು$_1$** 'ಅದಪುರ್' ನೋ.

**ಅದಪು$_2$**, ಅದುಹು$_2$ (ಕ್ರಿ). ಆವೇಶದಿಂದ ಮಾತಾಡು; ನಿಂದಿಸು; ಜರೆ. **ಅದುಹು$_2$**: ಈ ವಿಪ್ರನಂ ಪೊಗಲೀಯದಿರೀ ವೃದ್ಧನಂ ಪೊಗಿಸ ದಿರೆಂದು ಬಾಗಿಲವನನದುಹುತ್ತೆ ಕದವನಿಕ್ಕಿ ಒಳಗಂ ಪೊಗುವೈಸಕ್ಕೆ (ನಂಬಿರ. ೬–೫೭) ; ಕೊಟ್ಟ ಗಿರಿಗಳ ಕೊಡುವ ಗಿರಿಗಳ ಕಟ್ಟೆಯಲಿ ಕೌಚಿಕ್ಕಿ ಕೋಪದ ದಿಟ್ಟಿಯಲಿ ಗಿರಿ ಬರಲಿ ಬೇಗೆಂದದುಹಿ[ಪಾಠಾಂ. ಬೇಗೆನುತ ದೂಡಿ, ಬೇಗೆನುತದುರಿಂ, ಬೇಗಳುತುರುಬಿ, ಬೇಗೆಂದುರುಬಿ]ದನು ಭಟರ (ತೊರರಾ. ೬–೫–೨೨). [**ದೇ.** ‖ **ತಮಿ.** ಅದಮ್ಬು ; **ತೆಲು.** ಅದಲ್ಪು]

**ಅದಬ್**, ಅದಬ್ಬು (ನಾ). ೧. ವಿನಯ; ನಮ್ರತೆ: 'ಅದಬ್‌ಸಲಾಂ' ಪರಾ. ೨. ಹತೋಟಿ; ಹದ್ದುಬಸ್ತು: ಮುಖ್ಯ ಹರೆಯದ ಪ್ರಾಯ ದಲ್ಲಿ ಅದಬ್‌ನಲ್ಲಿರಬೇಕು, ಮನುಷ್ಯ (ಚೆಂಗೂಲಿ. ೧೭೪). **ಅದಬ್ಬು**: ೧. ಸಲಾಂ ಮಾಡಿ ಅದಬ್ಬಿನಿಂದ ನಿಂತುಕೊಂಡನು (ದೌಲತ್. ೩೦). ೨. ಅವರು ತಮ್ಮ ಹೆಂಡತಿಯನ್ನು ಬಹಳ 'ಅದಬ್ಬಿ'ನಲ್ಲಿಟ್ಟಿದ್ದರು (ಅವತಂ. ೧೪೪).
[← **ಅರ. ಹಿಂ.** ಅದಬ್ / **ತಮಿ.** ಅದಪ್ಪು = ಮರ್ಯಾದೆ]

**ಅದಬ್‌ಸಲಾಂ** (ನಾ). ವಿನಯಪೂರ್ವಕವಾದ ನಮಸ್ಕಾರ: ಆ ಸಾಹೇಬರು ಇಂಗ್ಲಿಷ್ ಸರದಾರರ ಮಾಮೂಲಿನಂತೆ ಅದಬ್‌ಸಲಾಂ ಮಾಡಿ . . . ಕುಳಿತುಕೊಂಡು . . . ತಮ್ಮ ಸಂತೋಷವನ್ನು ಶ್ರುತಪಡಿಸಿ ದರು (ಮಹಾವಂ. II, ೩೬). [ಅದಬ್ + ಸಲಾಂ]

**ಅದಬಳಿ** (ನಾ). ಅದರ ಬಳಿ, —ಸಮೀಪ (?): ಕೆಯಿ ಕಂಬ ೪೦೦ ಅದಬಳಿಯ ಹಕ್ಕಸಹಿತ ಅಂಗಡಿ ಬೀದಿಯಲಿ ರಾಜಬೀದಿಯಿಂ ಪಡು ವಲು (ಸೌಇಇ. XV, ೨೩೨–೮ ; 1206). [ಅದು + ಬಳಿ$_2$ (< ಬಱಿ$_3$)]

**ಅದಬ್ಬು** 'ಅದಬ್' ನೋ.

**ಅದಭ್ರ** (ಗು). ಸಮೃದ್ಧಿಯಾದ: ಮುಂದೊಂದೆಡೆಯೊಳ[ದ]ಭ್ರಾಭ್ರ ವಿಭ್ರಮಭ್ರಾಜಿತೋತ್ತುಂಗಶೈಲಮುಂ ಕಂಡು (ಪಂಪಭಾ. ೪–೨೫ ವ).
[ಸಂ.]

**ಅದಯ** (ಗು). ೧. ದಯೆಯಿಲ್ಲದ; ನಿರ್ದಯವಾದ. 'ಅದಯಾ ಲಿಂಗನ' ಪರಾ. (ನಾ). ೨. ದಯೆಯಿಲ್ಲದವನು; ಕ್ರೂರ: ಅದಯನೆನಿಪ್ಪ ಮನ್ಮಥನ ದುರ್ಜಯವೃತ್ತಿಯದೊಂದು ಪಾಪದ ಫಲದಿಂ ವಿಧಾತೃವಶದಿಂ ಭವಿತವ್ಯತೆಯಿಂದಮಿಂತು ಮಾಣದೆ (ಕಾದಂಉ. ೫೬೦).
[**ಸಂ.** (ಅ– + ದಯ)]

**ಅದಯಾಲಿಂಗನ** (ನಾ). ಅತಿಗಾಢಾಲಿಂಗನ : ಅದಯಾಲಿಂಗನ ದಂತಚ್ಛದ ಕೇಶಗ್ರಹಣಮತನುಕೇಳೀವಿಭವಂ ಮೃದು ಕಠಿನಾತ್ಮಕಮಂ ತದು ಸುದತಿಗೆ ಕುಟ್ಟಮಿತಮೆಂಬ ಪೆಸರಂ ಪಡೆಗುಂ (ಶೃಂಗಾರ. ೨–೭೨).
[ಅದಯ + ಆಲಿಂಗನ]

**ಅದರಟ್ಟು** (ಕ್ರಿ). ಗದರಿಸಿ ಓಡಿಸು ; "ನಡುಗಿಸು" (ಸಿದ್ಧರಾ. ಕೋಶ) : ಮುಟ್ಟ ಮಂತ್ರಾಕ್ಷತೆಯೊಳಗ್ನಿಕುಂಡವನು ಮುಳಿದಿಟ್ಟಡೆ ನಿದಾಘವನ ಮೋಘಕಾರ್ಗಾಲವದರಟ್ಟ [ಪಾಠಾಂ. ವದನಟ್ಟ] ತಾಗುವ ತೆಜದಿ ತಾಗಲ್ (ಸಿದ್ಧರಾ. ೬–೨೯) ; ಸಿಂಗಮುನದಱ[ರ]ಟ್ಟುವ [ಪಾಠಾಂ. ನದಿಱಟ್ಟುವ] ಮುನಿಸಿಂಗಮುವನ ಸಾಹಸಕ್ಕಮುಮಿದು ಮೃಗಂಗಳ್ ಸಂಗಡದೆ ಸಾಯ ವೆಂದೆನೆ ಸಂಗಡದೇಂ ಮಿಾಱುವನ್ನಮಿನ್ನೇನೊಳವೆ (ಪಾರ್ಶ್ವಪು. ೧೨–೮೨) ; ಮ ಹೀ ಭು ಜ ರ್ ಕಡುಮುಳಿದಾರ್ದು ಕೋಲ್ವೊಳೆಯನಿರ್ದೆಸೆಯೊಳ್ ಸುರಿಯಲ್ ಕೆರಳ್ದು ಬೊಬ್ಬಿಡುತದರಟ್ಟಿದಂ ನಳನೃಪಾಲಕನುಗ್ರಲಯಾಗ್ನಿಯಂದದಿಂ (ನಳಚಂ. ೪೧೫). [ಅದರು (< ಅದಿರ್$_1$) + ಅಟ್ಟು$_2$]

**ಅದರಿಂದ** 'ಅದಱಿಂ' ನೋ.

**ಅದರಿಸು** 'ಅದ್ದಲಿಸು' ನೋ.

**ಅದರು** 'ಅದಿರ್$_1$' ನೋ.

**ಅದರು ಬೆದರು** (ನಾ). ನಡುಕ; ಭಯ (ಕ).
[ಅದರು (< ಅದಿರ್$_1$) + ಬೆದರು$_2$ (< ಬೆದಱ್$_2$)]

**ಅದರ್ಪು**, ಅದಪು$_1$, ಅದಹು$_1$ (ಕ್ರಿ). (?) : ಮಹಾದೇವನನ್ನುನಿಪುಣ್ಣವನ್ನ ದರ್ಪ್ಪಿ ಕಳುಪೆರ್ದ್ದಪಂ ಮಹಾತವನ್ನರಣಮುಪ್ಪೆ ತನಗಾ (ಎಕ. II, ೮೦–೧; 700). **ಅದಪು$_1$** : ಪೆರ್ಗಲ್ಲಿಂದದಪುತ್ತುಂ ಕರ್ಗಲ್ಲಂ ನೆರಪಿ ತಂದು ಬರಿಯೆಲ್ವೆಲ್ಲಂ ನುರ್ಗಾಗಿ ಚಟಿಲ್ ಚಟಿಲೆನೆ ಕುರ್ಗುತ್ತುಂ ನೆಲದೊಳೊರಸಿ ಮೇಲ್ಕುತ್ತುತ್ತಂ (ಧರ್ಮಾಮೃ. ೬–೧೯೦). **ಅದಹು$_1$** : ಪಗೆಯಾದ ರಟ್ಟಹಳ್ಳಿಯನಗರ್ದ್ದದಹಿಯೆ ಕೊನ್ದು ಪಲರವ[ಲೆ]ಯಂ ಕೊಣ್ಡಾ ಹಗೆಯನೆ ಕೆಳೆಮಾಡಿದಂ (ಕಇ. IV, ೩೪–೨೭ ; 1106). [?]

**ಅದರ್ಶನ** (ನಾ). ೧. ನೋಡದಿರುವುದು. ೨. ಕಾಣಿಸಿಕೊಳ್ಳದಿರುವುದು; ಮರೆಯಾಗುವುದು. ೩. [ವ್ಯಾಕ] ಲೋಪ: ಪಡೆಗುಂ ವಿಭಾಷೆಯಿಂದಂ ಕಡೆಯೊಳದಂತತೆಯನಸ್ವರಂ ವೃದ್ಧನವೋಲ್ ಪಡೆಗುಮದರ್ಶನಮಂ ಮೇಣ್ ಪಡೆಗುಂ ದ್ವಿರ್ಭಾವವೃತ್ತಿಯಂ ಮೇಣ್ ಶ್ರುತಿವೋಲ್ (ಕಾವ್ಯಾವ. ೧೯೦) ; ಚರಮುಕ್ಕದರ್ಶನಂ ಮೂಱಿರೆ ಬರೆ ಕಪವರ್ಗಮುಗ್ರದೊಳ್ ದ್ವಿರ್ಭಾವಂ (ಶಮದ. ೧೮೮).
[ಸಂ. (ಅ – + ದರ್ಶನ)]

**ಅದರ್ಶನವಿಧಿ** (ನಾ). ಲೋಪವಾಗುವ ನಿಯಮ ; ಲೋಪವಿಧಿ : ಮಧ್ಯಪದಕ್ಕಂ ದೊರೆಕೊಳ್ಳುದದರ್ಶನವಿಧಿ ವಿರಳತೆಯಿಂ ಕರ್ಮಧಾರಯಕ್ಕಱಿವವರಿಂ (ಶಮದ. ೧೭೮). [ಅದರ್ಶನ + ವಿಧಿ]

**ಅದಲ್** (ನಾ). ಒಂದು ಬಗೆಯ ಮಿಾನು : ಸೀಗಡಿ ಕೊರವಂ ಬಂಪು ಬಸೇಗಂ ಗೊರವಂ ಗೆಂಡೆ ಬಾಳೆ ಸಕ್ಕರೆಗಂಟೆಂದಿಗನಾನೆಮೂಗಮದಲೆಂಬ ಗಣಿತ ಶಫರಾಳಿಗಳನೆ ತೆಗೆದರ್ ಬೇಡರ್ (ತ್ರಿಪುವಿ. ೨೭–೯೧).
[ದೇ ‖ ತಮಿ. ಅಯಿಲೈ ; ಮಲ. ಅಯಲ, ಅಯಿಲ, ಐಲ]

**ಅದಲಾಬದಲು** 'ಅದಲು ಬದಲು' ನೋ.

**ಅದಲಿಸು** 'ಅದ್ದಲಿಸು' ನೋ.

**ಅದಲುಬದಲಾವಣೆ** (ನಾ). = ಅದಲು ಬದಲು : ಈ ಹೆಸರಿನ ಅದಲುಬದಲಾವಣೆ ನೆಕ್ಲುದೋವನಿಗೆ ತಿಳಿದಿತ್ತು (ಪುನರು. ೫೧೮).
[ಅದಲು$_0$ + ಬದಲಾವಣೆ]

**ಅದಲುಬದಲು**, ಅದಲಾಬದಲು (ನಾ). ಒಂದಕ್ಕೆ ಪ್ರತಿಯಾಗಿ ಮತ್ತೊಂದು; ವಿನಿಮಯ : ಅವರ ಅವಕಾಶಗಳು ಕೆಲವು ದಿವಸದಿಂದಾ ಅದಲುಬದಲಾಗಿ ಇರುವದು (ರಾಜೇಂದ್ರ. ೮೪) ; ಆ ಮದುವೆಯ ಮನೆಯ ಗದ್ದಲದಲ್ಲಿ ಕೆಲವರ ಛತ್ರಿಗಳು ಅದಲುಬದಲಾದವು (ರೂಢಿ). **ಅದಲಾಬದಲು** : ಗಾಡಿಯ ಅದಲಾಬದಲಿನಿಂದ ಪಾಪಿಯಾದ ನಾನು ವಸಂತಸೇನೆಯನ್ನು ಪುಷ್ಪಕರಂಡಕವೆಂಬ ಜೀರ್ಣೋದ್ಯಾನಕ್ಕೆ ಕರೆಕೊಂಡು ಹೋದೆನು (ಮುಂಬಯಿ. ೬–೨೧೩).
[← ಅರ. ಹಿಂ. ಅದಲ್ ಬದಲ್ ; ಮರಾ. ಅದಲಾಬದಲ್]

**ಅದನ**, ಅದುವ (ನಾ). ಅಂಗಹೀನ; ಊನ: "ವಿಕಲಾಂಗ – ಅ[ಅ]ದವ" (ಗಂಗಾಮ. ೨೮೮). **ಅದುವ** : ಮರದಿಂದ ಬಿದ್ದು ಕಾಲು ಮುರಿದುಕೊಂಡ ಅದುವನನ್ನು ಕಟ್ಟಿಕೊಂಡು ಹೆಣಗುತಿದ್ದಾಳೆ (ರೂಢಿ).
[?. / ಮರಾ. ಅಧು, ಅಧೂ = ವಿಕಲಾಂಗ]

**ಅದವಟಿಲ್** (ನಾ). ಸಂತಾಪ; ಬೇಗುದಿ; ವ್ಯಥೆ; ಕ್ಷೋಭೆ; ತ ಳ ಮ ಳ : "ಬೇಗುದಿಯದವಟಿಲೆಂದುಬ್ಬೆಗಮೆನಲ್ಕದನುತಾಪಕಕ್ಕುಂ ಪೆ ಸ ರ್ಗ ಳ್" (ಕವಿಕಂ. ೧೧೦) ; "ಅದ[ಪಾಠಾಂ. ಅರ್ದ]ವಟಿಲೆಂದು ಮಱುಕಂ" (ಶಮದ. ನ. ೩೩ ವೃತ್ತಿ) ; ನಲ್ಲಳಗಲ್ಕೆಯಿಂದಮಾದದವಟಿ ಲಚ್ಚಿಗಂ ಮಱುಕಮೆಂಬಿವಱಿಂದೆ ಕನಲ್ದು (ಆದಿಪು. ೧೨–೨೩) ; ನಿಂದ ಬಿರಯಿಗದವಳ[ಟ]ಲ್ ಕುಂದದೆನಿಪ ಪೊಱವೊಟಿಲ್ (ಅಜಿಪು. ೨–೮) ; ಅಱಿಪಿನೊಳೀ ಧಮ್ಮಕ್ಕದವಟಿಲುಮಂ ಗಂಗೆಯುಮುನಾ ××× ಮಱಿದಂ ಸಪ್ತಮ ನರಕಕ್ಕಿಱಿದನಿದಂ ಕಾದ ನೃಪತಿ ತನ್ನಂ ಕಾದಂ (ಎಕ. VII (S), ಶಿ ಕಾ ರಿ . ೩೪೨–೫೪ ; 1050) ; ಅತಿತೃಷ್ಣೆಯೀಗುಮೆರ್ದೆಗದವಟಿಲಂ (ಚಂದ್ರಪು. ೯–೭೩). 'ಎರ್ದೆವಟಿಲ್' ಪರಾ.
[ಅದ್ಧ$_0$ + ಬಟಿಲ್. ‖ ತೆಲು. ಅದವದ]

**ಅದವು**, ಅದುವು (ನಾ). ೧. ಊನವಾಗಿರುವುದು ; ನ್ಯೂನತೆ. ೨. "ಅಧಮ–ಅದವು" (ಗಂಗಾಮ. ೬); "ಕ್ಷುದ್ರೆ–ಅದವಾದ ಸ್ತ್ರೀಯಳು" (ಗಂಗಾಮ. ೩೫೬). **ಅದುವು** : ಮೊನ್ನೆ ಜರುಗಿದ ಕುಸ್ತಿಯಲ್ಲಿ ಆತನ ಹೆಬ್ಬೆರಳು ಅದುವಾಗಿದೆ (ರೂಢಿ). [< ಅದವ]

**ಅದಹು** 'ಅದರ್ಪು' ನೋ.

**ಅದಱಿಂ**, ಅದರಿಂದ, ಅದಱಿಂದ (ಅ). ಆದಕಾರಣ; ಅದರ ಪರಿಣಾಮವಾಗಿ : ಪದ್ಯರಚನೆಯೊಳ್ ಕಾಳಿದಾಸನುಂ ಗದ್ಯರಚನೆಯೊಳ್ ಬಾಣನುಂ ಮುಂ ಕವಿಗಳಿರ್ವರುಂ ನೆಗೞ್ದರದಱಿಂ ಸತ್ಕವಿಗಳಿರ್ವರು ಮೆಮಗಭಿವಂದ್ಯರ್ (ಗದಾಯು. ೧–೯) ; ಇನ್ನುಮಿವಂದಿರನೀಯಂದದೊಳಿರಿಸಿದೆನಪ್ಪೊಡೆ ಅವಿನೀತರಾಗಿ ಪಗೆವರ್ಗೆ ವಶಗತರಪ್ಪರದಱಿಂ ಶ್ರುತವಿನಯಸಂಪನ್ನರಂ ಮಾಡಲ್ವೇೞ್ಪುದು (ಪಂಚತಂ. ೧೬–೧೨) ; ಅದಱಿನಾ ಪಾಂಡವರೊಳ್ವೆವರ ಮೊದಲಿಗನು ನೀನಿರಲು ಧರಣಿಯ ಕದನವಿತ್ತಂಡಕ್ಕೆ ಕಾಮಿತವಲ್ಲ ಭಾವಿಸಲು (ಕುವ್ಯಾಉ. ೧೦–೬). **ಅದರಿಂದ** : ಇಂದು ನಮ್ಮ ಮನೆಗೆ ಅನಿರೀಕ್ಷಿತವಾಗಿ ಸ್ನೇಹಿತರು ಬಂದರು. ಅದರಿಂದ ಕಚೇರಿಗೆ ಸಕಾಲಕ್ಕೆ ಬರಲು ಸಾಧ್ಯವಾಗಲಿಲ್ಲ (ರೂಢಿ). **ಅದಱಿಂದ** : ಅದಱಿಂದ ನಾರಿ ಕೇಳ್ ನಿನ್ನಯ ಧೈರ್ಯವ ಕದಲಿಸದಿರು ಕಾಮಶರಕೆ ಎದೆಗೊಡದಿರು (ಕಂನವಿ. ೯–೧೫೬). ℙ "ಅದು" ಎಂಬ ಸರ್ವನಾಮದ ತೃತೀಯಾ ಏಕವಚನದ ರೂಪ.

**ಅದಱಿಂದ** 'ಅದಱಿಂ' ನೋ.

**ಅದಾಗಿ** 'ಅದು$_1$' ನೋ.

**ಅದಾಡ** (ನಾ). ಒಂದು ಬಗೆಯ ಕತ್ತಿಯ ವರಸೆ : ಎಡದ ಪಾದ ಮುಂದಾಗಿ, ಎಡದ ಕೈಯನ್ನು ಇಳಿಬಿಟ್ಟು ಪಾರ್ಶ್ವದಲ್ಲಿ ಭ್ರಮಣವನ್ನು ಮಾಡಬೇಕು. ಅದು ಅದಾಡ ಎಂದು ತಿಳಿಯಲ್ಪಟ್ಟಿತು (ಖಡ್ಗಟೀ. ೪–೨೧). [?]

**ಅದಾತಾರ** (ನಾ). = ಅದಾತೃ. [ಸಂ. ಅದಾತೃ]

**ಅದಾತೃ** (ನಾ). ಕೊಡದವನು; ದಾನಿಯಲ್ಲದವನು; ಲೋಭಿ. [ಸಂ. (ಅ– + ದಾತೃ)]

**ಅದಾಲತ** 'ಅದಾಲತು' ನೋ.

**ಅದಾಲತು**, ಅದಾಲತ, ಅದಾಲತ್ತು (ನಾ). ನ್ಯಾಯಸ್ಥಾನ; ಕೋರ್ಟು: 'ಅದಾಲತು ಕಚೇರಿ' ಪರಾ. **ಅದಾಲತ**: ಕಡೆಗೆ ಆ ವಿಷಯದಲ್ಲಿ ಮಾಡಲ್ಪಟ್ಟ ದಾವೆಯು ಅದಾಲತ ಅಧಿಕಾರಿಯ ಕಚೇರಿಯಲ್ಲಿ ವಿಮರ್ಶೆಗೆ ಬಂತು (ವಾಗ್ದೇವಿ. ೨೦೨). **ಅದಾಲತ್ತು**: ನಮ್ಮ ತಂದೆ ಉಕ್ತ ಅದಾಲತ್ತಿನ ಜೀವಿಗಳಿಗೆಲ್ಲ ಅತ್ಯಂತ ಸನ್ಮಾನ ಮಾಡುತ್ತಿದ್ದರು (ಇಪ್ಪಕ. ೮). 'ಅದಾಲತ್ತು ಕೋರ್ಟು' ಪರಾ.
[← ಅರ. ಹಿಂ. ಮರಾ. ಅದಾಲತ್ / ತಮಿ. ಅದಾಲತ್ತು]

**ಅದಾಲತು ಕಚೇರಿ** (ನಾ). ನ್ಯಾಯಾಧಿಪತಿಯ ಕಚೇರಿ (ಠ).
[ಅದಾಲತು + ಕಚೇರಿ]

**ಅದಾಲತ್ತು** 'ಅದಾಲತು' ನೋ.

**ಅದಾಲತ್ತುಕೋರ್ಟು** (ನಾ). ನ್ಯಾಯಸ್ಥಾನ; ಕೋರ್ಟು: ಗುಲಾಂ ಮೊಹಿಯುದ್ದೀನ್ ಮೇಕ್ರಿಯವರೇ ಖಾವಂದರವರ ಅಜ್ಞಾನುಸಾರ . . . ಅದಾಲತ್ತುಕೋರ್ಟಿನ ಜಡ್ಜಿಗಳಲ್ಲಿಯೂ ಒಬ್ಬರಾಗಿ ಅಧಿಕಾರ ಮಾಡಿದರು (ಮಹಾವಂ. II, ೪೬). [ಅದಾಲತ್ತು (< ಅದಾಲತು) + ಕೋರ್ಟು]

**ಅದಾವತಿ** 'ಅದಾವತ್ತು' ನೋ.

**ಅದಾವತ್ತು**, ಅದಾವತಿ (ನಾ). (ಉಕ) ಶತ್ರುತ್ವ; ವೈರ; ಮಾತ್ಸರ್ಯ: "ವೈರಂ ವಿರೋಧಃ ವಿದ್ವೇಷಃ – ೩ ವೈರದ ಹೆಸರುಗಳು ಅಂದರೆ ಅದಾವತ್ತು" (ಸಿದ್ಧಾಂತಿ. ೫೯). **ಅದಾವತಿ**: ಅವಳಿಗೆ ಕೇಡು ಬಗೆಯಲಿಕ್ಕೆ ಅವಳ ಮೇಲೆ ನನಗೇನು ಆದಾವತಿಯೆ? (ರೂಢಿ).
[← ಅರ. ಹಿಂ. ಮರಾ. ಅದಾವತ್]

**ಅದಾಹ್ಯ** (ಗು). ಸುಡಲಾಗದ. [ಸಂ. (ಅ– + ದಾಹ್ಯ)]

**ಅದಿಕೆ** (ನಾ). ವಿಶೇಷೋತ್ಸವ; ಅಧಿಕೋತ್ಸವ: ಹಿರಿಯ ಹಂದಿಗುಳದ ಚಂದ್ರನಾಥ ಸ್ವಾಮಿಗಳ ಚೈತ್ಯಾಲಯದೊಳು ಪೂಜೆ ಆದಿಕೆ ಶ್ರೀಕಾರ್ಯ್ಯ ನಡೆವಂತಾಗಿ ವ್ರಿತ್ತಿಯನೂ ಬಿಟ್ಟು ಶಾಸನವ ಹಾಕಿಸಿದರು (ಮೈಆರಿ.೧೯೨೮, ೧೯–೩೦; 1392). [< ಸಂ. ಅಧಿಕ ?]

**ಅದಿಗು** 'ಅದುಗು' ನೋ.

**ಅದಿಗುದಿ** (ನಾ). ಸಂತಾಪ; ತಳಮಳ: ಕುದುರುವುದದೆಂತು ಈಯವ್ಯವಸ್ಥೆಯ ಪಾಡು ಅದಿಗುದಿಯೆ ಗತಿಯೇನೊ? (ಮಂಕುಕ. ೭). 'ಎದೆಗುದಿ' ಪರಾ. [ಅದ್ದಿ$_0$ + ಕುದ್ದಿ$_2$]

**ಅದಿಗೊ** 'ಅದೆಕೊಳ್' ನೋ.

**ಅದಿತಿ** (ನಾ). ೧. ಭೂಮಿ. ೨. ಹಸು. ೩. ಮಾತು. ೪. ಕಶ್ಯಪರ ಪತ್ನಿಯರಲ್ಲಿ ಒಬ್ಬಳು; ದೇವತೆಗಳ ಜನನಿ. [ಸಂ.]

**ಅದಿತಿಜ** (ನಾ). ಅದಿತಿಯ ಮಗ; ದೇವತೆ. [ಸಂ.]

**ಅದಿತಿಜಪುರ** (ನಾ). ೧. ದೇವತೆಗಳ ನಗರ; ಅಮರಾವತಿ. ೨. ಸ್ವರ್ಗ. ೩. [ಛಂದ] ಮೂರು ಲಘುಗಳುಳ್ಳ ಅಕ್ಷರಗಣ; ನಗಣ (ᑌᑌᑌ). ೨, ೩: ಅದಿತಿಜಪುರಮಿರೆ [ಪಾಠಾಂ. ನಿವಹಮೆ] ಮದಗಜದೆಡೆಗಳೊಳೊದವಿರೆ ನಯದೊಳೆ ಬಂದು (ಛಂದೋಂಬು. ೨–೧೪೯). [ಅದಿತಿಜ + ಪುರ$_2$]

**ಅದಿತಿನಂದನ** (ನಾ). = ಅದಿತಿಜ. [ಅದಿತಿ + ನಂದನ]

**ಅದಿಬದಿ** (ನಾ). ಎರಡು ಪಕ್ಕ; ಮೇಲುಭಾಗ ಮತ್ತು ಕೆಳಭಾಗ: ಈ ರೀತಿ ಬಾಹ್ಯ ಹಾಗೂ ಅಂತಃಪ್ರಗತಿಯ ಸಂಬಂಧವು ನಿಕಟವೂ, ಅಪರಿಹಾರ್ಯವೂ ಹಾಗೂ ಒಂದೇ ನಾಣ್ಯದ ಅದಿಬದಿಯಿದ್ದಂತೆ ಇರುವದು (ಯಾತ್ರಿಕ. ೩೦). [ಅದ್ದಿ$_0$ + ಬದ್ದಿ$_3$]

**ಅದಿಯಮ** 'ಅದಿಯಮ್ಮ' ನೋ.

**ಅದಿಯಮರಸ** (ನಾ). ಒಬ್ಬಾತನ ಹೆಸರು: ಶ್ರೀಮದದಿಯಮರಸರು [ಪಾಠಾಂ. ಸಿರು] ಚಾಳುಕ್ಯ ವಿಕ್ರಮಕಾಲದ ೪೯ತೆನೆಯ ಕ್ರೋಧಿ ಸಂವತ್ಸರದ . . . ಶ್ರೀಮದದಿಯಮರಸರುಂ ಪೆರ್ಗ್ಗಡೆ ಪಾಂಸಾಂಡರು ಊರಡೆಯ ಚಂಡಿಮಯ್ಯ ನಾಯಕರು (ಎಕ. XI, ದಾವಣ. ೧೨೨–೧೯, ೨೬; 1124). [ಅದಿಯಮ (< ಅದಿಯಮ್ಮ) + ಅರಸ]

**ಅದಿಯಮ್ಮ**, ಅದಿಯಮ (ನಾ). ಒಬ್ಬಾತನ ಹೆಸರು: ಕೊತ್ತಮಜ್ಜಲದ ದುಗ್ಗಯ್ಯ ಬರೆದ ಎಜೆಗಾರಿಯ ನಟವಿದ ಮಗ ಅದಿಯಮ್ಮ ಕಲ್ಲ ನಿಜಿಸಿದ (ಎಕ. V, ಚೆನ್ನರಾ. ೨೬೨–೩೦; 971). **ಅದಿಯಮ**: ಶ್ರೀ ಮತ್ತಿ್ರಭುವನಮಲ್ಲ ಪೊಯ್ಸಳ ಬಿಟ್ಟಿದೇವ ತಳಕಾಡ ಹರಿಯಿಟ್ಟಡೆ ಅದಿಯಮನಿದಿರಾನ್ತು ಕಾದಿ (ಮೈಆರಿ. ೧೯೩೪, ೧೨–೪; 1117); ಅದಿಯಮ ಚೇರ ಪಾಂಡ್ಯ ಮಕರೋದ್ಧತ ಕಾಡವರಂ ಕವರ್ತ್ತೆಗೊಂಡು ದನದನೇಕೆ ಬಂಣಿಸುವೆ (ಎಕ. V, ಚನ್ನರಾ. ೨೦೩–೧೦; 1223).

**ಅದಿಯಮ ಘರಟ್ಟ** = 'ಅದಿಯಮ' ನಿಗೆ ಬೀಸುವ ಕಲ್ಲಿನಂತಿರುವವನು; ಒಂದು ಬಿರುದು: ಮಲೆಪರೊಳ್ ಗಂಡ ಕದನಪ್ರಚಂಡ ಗಂಡಭೇರುಂಡ ಅಸಹಾಯಶೂರ ಸನಿವಾರಸಿದ್ಧಿ ಗಿರಿದುರ್ಗ್ಗಮಲ್ಲ ಮಗರರಾಜ್ಯದಿಶಾಪಟ್ಟ ಅದಿಯಮ[ಪಾಠಾಂ. ಅದಿಯಮ]ಘರಟ್ಟ ಚೋಳರಾಜ್ಯ ಪ್ರತಿಷ್ಠಾಚಾರ್ಯ್ಯಂ (ಎಕ. IV, ನಾಗಮಂ. ೨೯–೧೯; 1218). **ಅದಿಯಮನ ಯಮ** = 'ಅದಿಯಮ' ನಿಗೆ ಯಮನಂತಿರುವವನು; ಒಂದು ಬಿರುದು: ಚಲದಂಕರಾಮ ವೈರೀಭ ಕಂಠೀರವ ಅದಿಯಮನ ಯಮ ಪು××× ಕಾ××× ಚಿ ಕಾಂಚನ ಚೋಳರಾಯ (ಎಕ. XI, ಹೊಳಲ್ಕೆ. ೧೩೬–೨೩; 1307). **ಅದಿಯಮ ನಿವಾರಣ** = 'ಅದಿಯಮ' ನನ್ನು ಅಡಗಿಸುವವನು; ಒಂದು ಬಿರುದು: ವಿಜಯಲಕ್ಷ್ಮೀಭವನ ಮಂಗಳ ಮಣಿತೋರಣಂ ಅದಿಯಮ ನಿವಾರಣ ಮಣ್ಡಳಿಕಘಟಸರ್ಪ್ಪ ರೂಪಕಂದರ್ಪ್ಪ (ಎಕ. V, ಅರಸಿ. ೩೪–೧೨; ಸು.1101). **ಅದಿಯಮ ಮದ ನಿವಾರಣ** = 'ಅದಿಯಮ'ನ ಅಹಂಕಾರವನ್ನು ಅಡಗಿಸಿದವನು; ಒಂದು ಬಿರುದು: ವಿಜಯಲಕ್ಷ್ಮೀಭವನ ಮಂಗಳ ಮಣಿತೋರಣಂ ಅದಿಯಮ [ಪಾಠಾಂ. ಅದಿಯರುಂ] ಮದನಿವಾರಣಂ ಮಂಡಳಿಕ ಪುಂಜಸರ್ಪ್ಪಂ (ಎಕ. V, ಹಾಸನ. ೬೯–೧೬; 1174 ?)
[? / ತಮಿ. ಅದಿಯಮಾನ್]

**ಅದಿಯರ** (ನಾ). ಅಧಿರಾಜ; ಚಕ್ರವರ್ತಿ: ಶ್ರೀ ಪ್ರಿಥಿವೀವಲ್ಲಭ ಪರಮೇಸ್ವರ ಪಲ್ಲವದಿಯರನ್ಗೊಟಿಂಬಳ್ಗೆ (ಎಕ. XI, ಚಳ್ಳಕೆ. ೩೩–೩೭; 815). 'ಅಧಿರಾಜ' ಪರಾ. [ಅದ್ದಿ$_0$ (< ಸಂ. ಅಧಿ) + ಅರ$_4$]

**ಅದಿರ್**$_1$, ಅದರು, ಅದಿರು$_1$, ಅದುರು$_1$ (ಕ್ರಿ). ೧. ನಡುಗು; ಕಂಪಿಸು; ಅಲುಗು; ಅಲ್ಲಾಡು: "ಅದಿರ್–ಕಂಪನೇ" (ಶಮುಧಾ); ಪುದಿದು ಕವಿದಿಡಿದ ತೆಮದೊಡ್ಡದಿರ್ವಿನಮೊರ್ವೊದಲೊಳೆರ್ದ ಕಟಿವೆಯ ಸಸಿಪೋಲ್ ಕದಿರ್ಗಳೊಳೆ ತುಜುಗಿ ಮೂಡಿದನುದಯಾದ್ರಿಯೊಳರುಣ ತರುಣ ಕಿರಣಪ್ರಸವಂ (ಕಾವ್ಯಸಾ. ೮೭೦ ಶೂದ್ರಕ); ಅದಿರ್ದತ್ತು ದಲೇಜಿದ ಸಿಂಹಪೀಠಂ (ಶಾಂತಿಪು. ೩–೧೦೫); ಅದಿರ್ದುದು ಧರೆ ಖುರಘಾತದಿಂ (ಎಕ. VII, ಶಿವಮೊ. ೫೬–೨೭; 1125); ಅದಿರ್ವ ಖುಡುಗದ ಕಾಂತಿ ಸೂರ್ಯನ ಹೊದಿಸಿದುದು (ಕುವ್ಯಾದ್ರೋ. ೧೨–೭); ನಿನ್ನೀ ತೊಡಿಗೆಗಳೊಮ್ಮೆಯುಮದಿರ್ವುದಿಲ್ಲ (ಚಿಬಪು. ೧೧–೫೩). ೨. ಹೆದರು; ಭಯಪಡು: ಪ್ರತಿಜ್ಞಾಗಾಂಗೇಯಂಗದಿರದಿದಿರ್ನಿಲ್ವನ್ನರೊಳರೇ (ಪಂಪಭಾ. ೧–೮೦); ಕದನದೊಳದಿರದೆ ಪಗೆವಡೆಗಿದಿರ್ಚಿ ನಡೆವಾತನಭ್ಯಮಿತ್ರೀಣನವಂ (ವಸ್ತುಕೋ. ೮೩–೧೦); ಮುಪ್ಪಿನಾ ಹೇಯಮುಂ ಸಾವ ನಿರೋಧಸ್ತೋಮಮುಂ ಕಂಡಲಸಿದೆನದಿರ್ದೆಂ ಪೇಸಿದೆಂ ನೊಂದೆನೋರಂ

ತನುಗೆಟ್ಟಿಂ ದೇವ (ರಕ್ಷಾಶ. ೪೨). ೩. ನಡುಗಿಸು ; **ಕೊಡಹು** : ಪಸಿದ ಲಂಪಿನಿಂದಂ ಬಿಸಿಯಂಬಲಿಯುಂ ಬಾಯೊಳಿಟ್ಟಾಗಳ್ ಕಯ್ಯುಂ ಬಾಯುಂ ಬೆಂದೊಡೆ ಮೆಯ್ಯನದಿರ್ದು ಕಯ್ಯಂ ಬಿದಿರ್ದವನಂ ಬಿರ್ದಿ ಕಂಡು ನಕ್ಕು (ವಡ್ಡಾರಾ. ೧೮೮-೨೦). **ಅದರು** : 'ಅದರಟ್ಟು' ಪರಾ. **ಅದಿರು₁** : ೧. ಕಟಕವದಿರಿತು ಲೋಕವಳುಕಿದುವು (ಬಸವು. ೨೮-೫೪) ; ಬೆದಱಿ ಭೂಕಂಪದಲಿ ಕುಲಗಿರಿಯದಿರುವಂತಿರೆ ಚರಿಸಿ ಕಾಯುವ ಬಿದಿರಿ ಮರಳುವ ಕಂಗಳಲಿ ಕಲಿಕರ್ಣ ಮೈಮಱೆಯೆ (ಕುವ್ಯಾದ್ರೋ. ೫-೨೯) ; ಅರ್ಭಟಿಸಿ ಶಕ್ತಿಯನವಂ ಪಿಡಿಯೆ ಬ್ರಹ್ಮಾಂಡಗರ್ಭಮದಿರಿದುದು (ಚಬಪು. ೪೩-೪೯). **ಅದುರು₁** : ೧. ಪದದ ಬಲುಘಟ್ಟಣೆಗೆ ಭೂತಳವದುರಿ ಹಸ್ತಾಂಗುಲಿಯ ತಾಕಿದೊಡದುರಿ ಬಿದ್ದುವೊ ಭುಜಗರಾಜಿಗಳಂಘ್ರಿ ಮೇಲಾಗಿ (ಕುವ್ಯಾಸ. ಓರಿಇ. ೭-೧೧) ; ಆಗ ನಳಭೂವರನ ದಕ್ಷಿಣಭಾಗ ಭುಜನಯನಂಗಳದು ರಿದುವು (ನಳಚ. ೨-೪೩) ; ಸುರನರೋರಗರದುರಲಾ ದಿಕ್ಕರಿ ಕಮಠರೆದೆ ಬಿದುರೆ (ಕೋಗಯು. ೨೧ ಸೂ) ; ಅವನ ಅಬ್ಬರವನ್ನು ಕೇಳಿ ನನ್ನ ಎದೆ ಅದುರಿತು (ರೂಢಿ).

[**ದೇ.** ‖ **ತಮಿ.** ಅದಿರ್ ; **ಮಲ.** ಅದಿರುಕ ; **ತುಳು.** ಆದ್‌ರುನಿ, ಅದುರುನಿ ; **ತೆಲು.** ಅದರು]

**ಅದಿರ್₂** ಅದಿರು₂ (ನಾ). ಕಂಪನ; ನಡುಕ. **ಅದಿರು₂** : ಆದಿರಲುಗು ಮಿಸುಕೆನಲ್ ಚದುರ ಲೀಲಾವಿನೋದದ ರೂಪವೆಂದೊಡಾಸ್ಪಂದೆಯೆನಲು ವಿಧಮೊಂದೆ ತಿಳಿಯಲಿಂತಿದಱ ಪರಿಯಾಯವೆಂಬುದು ಸಿದ್ಧ (ಮಸೋವಿ. ೨-೧೭) ; ನಾದ ಮೊದಲೆಂದು ನಿನ್ನೊಳಾಡಿದೆವೈಸೆ ತಿಳಿದಿರೀ ವಿಧವನೆನಲು ಸದುಗುರುವೆ ಪೇಳ್ವುದೆನಗದಿರುನಾದಂಗಳೊಳ್ ಮೊದಲಾವುದಱಿಪೆ ನಲ್ಕಿಂತೆಂದನು (ಮಸೋವಿ. ೨-೧೯). [< ಅದಿರ್₁]

**ಅದಿರಾಟ** (ನಾ). ಅದುರುವಿಕೆ ; ಅಳ್ಳಾಟ. [ಅದಿರ್₁ + ಆಟ]

**ಅದಿರಾಸು** (ನಾ). ತೆನೆಯಿಂದ ಉದುರಿದ ಕಾಳು ; ಹಕ್ಕಲು (ಕಿಸಂಗ್ಲಾ. ೭). [ಅದಿರ್₁ + ?]

**ಅದಿರಾಜು** (ನಾ). ಒಂದು ಊರಿನ ಹೆಸರು : ಪೆರ್ಮ್ಮಾಡಿಯುಂ ಮಹಾದೇವಿಯುಂ ಎಜಯಪನು ಆಯ್ದಾಮನ್ತರುಮಿಬ್ಬು ಅದಿರಾಜು ಪನ್ನೆರಡುಮ ಕಲ್ನಾಡಿತ್ತರ್ (ಎಕ. III, ನಂಜನ. ೧೩೦-೯ ; 900). [?]

**ಅದಿರಿಲ್ಲಂದಿ** (ನಾ). ಒಬ್ಬಾತನ ಹೆಸರು : ಶ್ರೀಪುರುಷ ಪೃಥಿವೀ ರಾಜ್ಯಂ ಕೆಯೆ ಅದಿರಿಲ್ಲಂದಿಗಳ್ಗೆ ಕೆಯ್ದು ಕಪೊ ××× ಮಾ ಪೊಜಕಲ್ಲ (ಎಕ. III, ನಂಜನ. ೨೩-೨ ; 750). [ಅದಿರ್₂ + -ಇಲ್₄ + ಅಂದಿ₀]

**ಅದಿರಿಸು** (ಕ್ರಿ). ೧. ನಡುಗಿಸು ; ಅಲ್ಲಾಡಿಸು. ೨. ಪರಿಹರಿಸು ; ನಿವಾರಿಸು : ಖದಿರಪ್ರಸೂನಮಾ ಖದಿರದ ರಸಮುಂಬಿಲಮುಮಾವ್ರ ಗೋಕ್ಷೀರಮುಮೊಳ್ಪಿದುವಪ್ಪ ಬೆಣ್ಣೆಯುಂಗುರು ಮದಿರಿಪುದೊಂದೊಂದೆ ಕಣೆಗಿಲುಗ್ರಮನನಿತಂ (ಖಮುದ. ೨-೩೮). [ಅದಿರ್₁ + -ಇಸು₃]

**ಅದಿರು₁** 'ಅದಿರ್₁' ನೋ.

**ಅದಿರು₂** 'ಅದಿರ್₂' ನೋ.

**ಅದಿರು₃**, ಅದುರು₃ (ನಾ). ಲೋಹಾಂಶವುಳ್ಳ ಖನಿಜದ್ರವ್ಯ : ಚಿನ್ನದ ಅದಿರು ಸಾಮಾನ್ಯವಾಗಿ ಗಣಿಗಳಲ್ಲಿ ಬಂಡೆಗಳಲ್ಲಿ ಸಿಕ್ಕುವುದು (ಭೂವಿಪ. I, ೫೦). **ಅದುರು₃** : ಅಕೃತವೆಂದರೆ ಗಣಿಯಿಂದ ತೆಗೆದು ಕರಗದೆ ಇರುವ ಅದುರು (ಸಿದ್ಧಾಂತಿ. ೨೬೦) ; ಕೆಮ್ಮಣ್ಣುಗುಂಡಿಯಲ್ಲಿ ಕಬ್ಬಿಣದ ಒಳ್ಳೆಯ ಅದುರು ಹೇರಳವಾಗಿ ಸಿಕ್ಕುತ್ತದೆ (ರೂಢಿ).

[**ದೇ.** ‖ **ತಮಿ.** ಅಯಿಲ್ = ಕಬ್ಬಿಣ ; **ಮಲ.** ಅಯಿರ್, ಅಯಿರಮ್ = ಕಬ್ಬಿಣದ ಹುಡಿ ; ಯಾವುದಾದರೂ ಲೋಹದ ಅದುರು ; **ತುಳು.** ಅದ್‌ರ್]

**ಅದಿರುಗಂತಿ** 'ಅದಿರ್ಗಂತಿ' ನೋ.

**ಅದಿರುಘಾಯ** (ನಾ). ಒಂದು ಬಗೆಯ ಕತ್ತಿಯ ವರಸೆ : ಶರೀರವ ಚಲಿಸುವದನ್ನು ಮಾಡಿ ವೈರಿಗೆ ಭಯವನ್ನು ಹುಟ್ಟಿಸಿ ವೈರಿಯ ಪರಜಿನಲ್ಲಿ ಬಂಡಿಕೋಲಿನ ಪೆಟ್ಟು ಆವದು ಅದು ಅದಿರುಘಾಯ ಎಂದು ಸಮ್ಮತವು (ಖಡ್ಗಟೀ. ೫-೭೦). [ಅದಿರು₁ (< ಅದಿರ್₁) + ಘಾಯ]

**ಅದಿರುದುಟಿ** (ನಾ). ನಡುಗುತ್ತಿರುವ ತುಟಿ ; ಕಂಪಿಸುವ ತುಟಿ : ತಿರುಗೆ ತಿರುಗುತ್ತಿರುವ ಕಣ್ಣು ಮಿಣುಕುತ್ತಿಹವು ಅದಿರುದುಟಿ ಕೆಚ್ಚನೆಯೆ ಅರಳುತಿಹವು (ಹಾಡುಪಾ. ೧೭). [ಅದಿರು₁ (< ಅದಿರ್₁) + ತುಟಿ]

**ಅದಿರೆ** (ನಾ). (ದಕ - ಪ್ರಾದೇ) (ದನಗಳ ವಿಷಯದಲ್ಲಿ) ಬೆದೆ. 'ಅದಿರೆಗಟ್ಟು', 'ಅದಿರೆದನ' ಪರಾ. [< ಅದಿರ್₁]

**ಅದಿರೆಗಟ್ಟು** (ಕ್ರಿ). (ದಕ - ಪ್ರಾದೇ) ಬೆದೆಹತ್ತಿ ಮೇಲೇರು : ಬೀದಿ ದನಗಳು ಅದಿರೆಗಟ್ಟಿ ಗುಂಪಾಗಿ ನಿಂತಿರುವುದರಿಂದ ಓಡಾಟಕ್ಕೆ ತೊಂದರೆ ಯಾಗಿದೆ (ರೂಢಿ). [ಅದಿರೆ + ಕಟ್ಟು₁]

**ಅದಿರೆದನ** (ನಾ). (ದಕ - ಪ್ರಾದೇ) ಬೆದೆಹತ್ತಿದ ದನ : ಬೀದಿಯಲ್ಲಿ ಅದಿರೆದನಗಳ ಹಾವಳಿ ಹೆಚ್ಚು (ರೂಢಿ). [ಅದಿರೆ + ದನ]

**ಅದಿರ್ಕೆ** (ನಾ). ನಡುಕ ; ಕಂಪನ : ಮಡಲ್ಕೆ, ಅದಿರ್ಕೆ, ಬಿದಿರ್ಕೆ (ಶಬ್ದಾನು. ೫೫೭ ಪ್ರಯೋ). [ಅದಿರ್₁ + -ಕೆ]

**ಅದಿರ್ಗಂಚಿ** 'ಅದಿರ್ಗಂತಿ' ನೋ.

**ಅದಿರ್ಗಂತಿ**, ಅದಿರುಗಂತಿ, ಅದಿರ್ಗಂಚಿ, ಅದಿರ್ಗುಂತೆ, ಅದುರುಗಂಚಿ, ಅದುರ್ಗಂತಿ (ನಾ). ಒಂದು ಬಗೆಯ ಹೂವು ; ಮಾಧವಿ : "ಅದಿಮುರ್ತ್ತೆಯದೆಂದೆನ್ನುತ್ತದಿರ್ಗಂತಿಯುಮೆಂದೆನಲ್ಕೆ ಮಾಧವಿಯಕ್ಕುಂ" (ಕವಿಕಂ. ೭೫); ಪೊಳೆವದಿರ್ಗಂತಿಯುಣ್ಮೆ ಮಧುಮಾಸ ಮೊಡರ್ಚಿದುದನ್ಯಪುಷ್ಪನಿಂ ಕಳರುತಿ ಹತ್ತೆಸಾರ್ದುದು (ಗಿರಿಕ. ೭-೩೭) ; ಕರಮೊಪ್ಪಿದುವಲ್ಲಿ ಕರವೀರಮದಿರ್ಗಂತಿ ಮರುಗ ಮಲ್ಲಿಗೆ ಇರವಂತಿ (ನೇಮಿಸಂ. ೧-೬೯) ; ಅದಿರ್ಗಂತಿಯುಂ ತಾಟ ಮಾಲತಿಯುಂ ಮುಟ್ಟ (ರಾಮಾಶ್ವ. ೫೪-೧). **ಅದಿರುಗಂತಿ** : "ಅತಿಮುಕ್ತಕಃ ಪುಂಡ್ರಕಃ — ಈ ೨ ಅದಿರುಗಂತಿ [ಪಾಠಾಂ. ಅದಿರುಗಂಟಿ]" (ನಾಚಿರಾ. ೧೦೮ ಕಿ). **ಅದಿರ್ಗಂಚಿ** : ಚೆಂಗಣಿಗಿಲೆ ನಂದ್ಯಾವರ್ತ ದವನ ಬೆಳ್ದಿಂಗಳ ಸಖಿಯಿರವಂತಿ ಹೊಂಗೇದಗೆಯದಿರ್ಗಂಚಿ ಕಮ್ಮಲರ್ಗಳ ತೊಂಗಲು ಮೆಱೆದುವಭ್ರದಲಿ (ಮೋಹತ. ೧೭-೧೯). **ಅದಿರ್ಗುಂತೆ** : ಕೇದಗೆ ಸಂಪಗೆ ನಾಗಂ ಹಾದರಿಯದಿರ್ಗುಂತೆ ಸುರಯಿ ವಕುಳ ಲವಂಗಂ ಜಾದಿ ಮೊದಲಾದನೇಕಂ ಪೂದೋಂಟಂ ಸುರಭಿ ಪರಿಮಳಾಮೋದಂಗಳ್ (ಎಕ. VIII, ಸಾಗರ. ೧೦೯-೫೦ ; 1042) ; ಅಜಾತಷಂಡದಿಂ ಮಾಳತಿ ಮೊಲ್ಲೆ ಮಲ್ಲಿಯದಿರ್ಗುನ್ತೆಯ ಪೆ(ಂ)ರ್ಮ್ಮಳೆಯಲ್ಲಿ ಮತ್ತ ಭೃಂಗಾಳಿಯ ತಾರ ಮಂದ್ರ ಮಧುರಸ್ವನದಿಂ (ಸೌಇಇ. XX, ೧೭೯-೪೭ ; ?). **ಅದುರುಗಂಚಿ** : ಅದುರುಗಂಚಿ[ಪಾಠಾಂ. ಅದ್ರಗಂಚಿ]ಯ ಸೊಪ್ಪು, ಶ್ರೀಗಂಧ, ಸೊಗದೆ . . . ಸಕಲ ಪಿತ್ತರೋಗ . . . ಪರಿಹರಿಸುವುದು (ವೈದ್ಯ ಸಾ. ೧೧೨). **ಅದುರ್ಗಂತಿ** : ಮಲ್ಲಿಗೆ ಶಾವಂತಿಗೆ ಇರುವಂತಿಗೆ ಅದುರ್ಗಂತಿ . . . ಮೊದಲಾದ ಲತಾಗೃಹಗಳಿಂದಲೂ (ಕೃವಾಅ. ೯೭). [?]

**ಅದಿರ್ಗುಂತೆ** 'ಅದಿರ್ಗಂತಿ' ನೋ.

**ಅದಿರ್ಗೋಲ್** (ನಾ). ಕಳ್ಳರನ್ನು ಹೆದರಿಸುವುದಕ್ಕಾಗಿಯೂ ಜನರಿಗೆ ಎಚ್ಚರಿಕೆಯನ್ನು ಕೊಡುವುದಕ್ಕಾಗಿಯೂ ತಳವಾರರು ಸದ್ದುಮಾಡುವ ಕೋಲು : ಅಂಗಜವೀರನಬಿಲ್ದು ಸಂಗರಂಗೊಳಲಿದೆ ಬರ್ಪನೆಂದೊದಱಿ ತುಂಬಿಗಳೆಂಬದಿರ್ಗೋಲನಾಂತೆಲರ್ ತಳವಜನಂತೆ ಸಾಱುತನುಗೆಯ್ದುದು ದರ್ಪಕವೀರಸೇನೆಯಂ (ಚಿಕವಿ. ೬-೩೭) ; ಸಿಂಗದ ರವಂಗೇಳ್ದಾನೆವಿಂಡಿನಂತೆಯುಂ ತಳವಜರದಿರ್ಗೋಲುಲಿಗೇಳ್ದ ಮಱಿಗಳ್ಳರಂತೆಯುಂ . . . ಬೆರ್ಚಿ (ಚಿಕವಂ. ೪೧-೭). [ಅದಿರ್₁ + ಕೋಲ್]

**ಅದಿರ್ಚು** (ಕ್ರಿ). ನಡುಗಿಸು : ಅಘೌಘಮೆನಿಪ ಕೋಟಿಗ್ಸಜಂ ಕರ್ಚಿ ಪಗೆಗಳನದಿರ್ಚಿ ಹರಿಸಮನೊಡರ್ಚಿ (ಉದ್ಭದೇ. ೩–೬೪).
[ಅದಿರ್$_1$ + –ಚು]

**ಅದಿರ್ಪು$_1$**, ಅದುಹು$_1$ (ಕ್ರಿ). **೧.** ನಡುಗಿಸು ; ಬೆದರಿಸು : ನಕುಳನಂ ಯಮುನನದಿರ್ಪಲ್ವೇೞ್ವಂತೆ ದಕ್ಷಿಣದಿಶಾಭಾಗಕ್ಕೆ ಬೆಸಸಿ (ಪಂಪಭಾ. ೬–೨೮ ವ); ಶತ್ರುಗಳುಮನಾಭ್ಯಂತರ ಶತ್ರುಗಳಾಱುಮನದಿರ್ಪಿ [ಪಾಠಾಂ. ನಿದಿರ್ಚಿ]ಗೆಲ್ದುದಱಿಂದಂ . . . ಜಿತಶತ್ರುನಾಮಮಾಯ್ತನ್ವರ್ಥಂ (ಅಜಿಪು. ೨–೯೯) ; ತುರುಷ್ಕ ಮಾಗಧೋತ್ತುಂಗ ನೃಪಾಳಜಾಳಮನದಿರ್ಪಿದ ಮೆಯ್ಗಲಿ ಪಾಂಡ್ಯಭೂಭುಜಂ (ಸೌಇಇ. IX–i, ೨೫೪–೧೩ ; 1169) ; ಅವಳನದಿರ್ಪದು ಕೃಷ್ಣನ ರೂಪವಿಭ್ರಮಂ (ಜಗವಿ. ೧೧–೪). **೨.** ಅಡಗಿಸು ; ದಮನಮಾಡು : ಮದಯುತರಪ್ಪ ವಾದಿಗಳ ದರ್ಪ ಮನೋವದದಿರ್ಪಿ ತತ್ಸಭಾಸದರಭಿವರ್ಣಿಪಂತು (ಪಂರಾಮಾ. ೧–೨೨) ; ಮದನಮದಾಂಧಕಾರಮನದಿರ್ಪಿ ಮಹೋದ್ಧತಮೋಹಮಲ್ಲನಂ ವಿದಳಿಸಿ (ವರ್ಧಪು. ೧೫–೮೩) ; ಪೊಸದೇಸೆಯೆನಲ್ಕೆ ಕೋಕಿಲಧ್ವನಿಯನದಿರ್ಪಿ ಯೆನ್ನ ಮನಮುಕ್ಕಿರೆ ಪಾಡಿದೆನಾ ವನಾಂತದೊಳ್ (ದಶಕು. ೫–೭೯). **೩.** ಧಿಕ್ಕರಿಸು ; ಮೀರು : ವನಮಾಲಾಸ್ಪದನೆಂದು ಯಾದಃಪತಿಯ ನದಿರ್ಪಿಯುಂ (ಜಗವಿ. ೯–೫೩ ವ) ; ಹುಸಿವನ ಮಾತುಗುಟ್ಟದಿರು ಲೋಬನ ಮಾತನಡಂಗಿಸಾಜಿಯೊಳ್ ಕುಸಿವನ ಮಾತುಗೇಳದಿರು ಹಂದೆಯ ಮಾತನದಿರ್ಪು ಕೂಡೆ ಛಿದ್ರಿಸ್ವ[ಸುವ]ನ ಮಾತುಗೊಳ್ಳದಿರು . . . ಹಬ್ಬೆಯ ನಾಯಕನಿರ್ದ್ದ ತಾಣದೊಳೂ (ಕಇ. I, ೨೫–೪೭ ; 1186) ; ಬಲ್‌ಸಿಡಿಲಂ ದಾಡೆಯ ಕೂರ್ಪ್ಪುದಿರ್ಪ್ಪಿ ಹುಲಿಯೊಂದಾಕಸ್ಮಿಕಂ . . . ಪಾಯ್ದುದುಜ್ಜೃಂಭಿಳಂ (ಎಕ. XI, ದಾವಣ. ೨೫–೧೯ ; 1224). **ಅದುಹು$_1$** : **೪.** ಚುಚ್ಚು ; ತಿವಿ ; ಚೋದಿಸು : ರಾವು ಫಲುಗುಣ ಯೆನುತ ಪಾರ್ಥನ ಭಾವ ಕುಡಿಚಮ್ಮಟಗೆಯಲಿ ತುರಗಾವಳಿಯನದುಹಿ ದನು ಸುಳಿಸಿದನಾಹವಕೆ ರಥವ (ಕುವ್ಯಾದ್ರೋ. ೯–೩೭). **೫.** ಭ್ರಮಿಸು ; ಸಂದೇಹಪಡು (?) : ವಿದಿತ ಲೌಕಿಕ ವೈದಿಕಕೆ ಜಗವದುಹದಂತಿರೆ ಚಿತ್ತ ಗೊಡಬೇಕೆಂದು ಕೈಮುಗಿದ (ತೊರರಾ. ೭–೫೩–೨೭). [ಅದಿರ್$_1$ + –ಪು]

**ಅದಿರ್ಪು$_2$** (ನಾ). **೧.** ಅದುರುವಿಕೆ ; ಕಂಪನ ; ಅಳ್ಳಾಟ : ಉಟ್ಟುದಂ ಕಳೆಯದೆ ಕೂಡು ಬೇನೆ ತಳೆದಪ್ಪುದು ಪೊಯ್ಯದಿರೊತ್ತಿಯಾಱುತಿಂಗಳ ಬಸಿಱೇಕೆ ಪಾಯ್ತೆಯದಿರ್ಪಿಂ [ಪಾಠಾಂ. ದಿರ್ಪಿಂ]ಬಣವೋಡಿದುದಿಂದು ನೋಡೆ ಕೂಸಿಱಿವುದು ಕಾವುದೀ ಮೊಗಮನಿತ್ತೆನುತುಂ ಪೆಱಗಾಗಿ ಕೂಡಿದಳ್ (ಸೂಕ್ತಿಸು. ೧೪–೬೪). **೨.** ಹೆದರಿಕೆ ; ಭಯ : "ಅಗುರ್ಪು . . . ಅದಿರ್ಪು – ಈ ೧೦ ಭಯಂ" (ಕಶಸಾ. ೧೧–೨೨೩) ; "ಅಳರು ಪೆಳರೆಂದದಿರ್ಪೆಂದು ಭಯಮಕ್ಕು" (ಕಬ್ಬಿಕೈ. ೪೧) ; "ಅದಿರ್ಪು ಬೆಗಳ್ ಪೆಳರಬಲೆಂದೆಲ್ಲಿಯು . . . ಭಯನಾಮು" (ಕವಿಕಂ. ೧೦೮).
[ಅದಿರ್$_1$ + –ಪು]

**ಅದಿರ್ಪುಗೆಯ್** (ಕ್ರಿ). ಅದುರಿಸು ; ನಡುಗಿಸು ; ಅಳ್ಳಾಡಿಸು : ಮದಗಂಧಮೆಂದೆ ಸಪ್ತಚ್ಛದಗಂಧಮನೀ ವನೇಭಮಾಘ್ರಾಣಿಸಿ ಪೆರ್ಚಿದ ಮಸಕದಿಂದೆ ಪಾಯಲ್ಕದಿರ್ಪುಗೆಯ್ದಪುದು ನೋಡ ವನವೇದಿಕೆಯಂ (ಆದಿಪು. ೧೧–೬೪). [ಅದಿರ್ಪು$_2$ + ಕೆಯ್$_1$]

**ಅದಿರ್ಮುತ್ತೆ** (ನಾ). = ಅದಿರ್ಗಂತಿ : "ಅದಿರ್ಮುತ್ತೆಯೆಂದೆನ್ನುತ್ತ ದಿರ್ಗಂತಿಯುಮೆಂದೆನಲ್ಕೆ ಮಾಧವಿಯಕ್ಕುಂ" (ಕವಿಕಂ. ೭೫) ; ಎಱೆ ವಾಯದಿರ್ಮುತ್ತೆ ಪೊದಱ್ದಿರ್ದೆಯೆಂಬಿವು ಸಹಜ ಶಿಥಿಲವೃತ್ತಿಯನಾಳ್ಗುಂ (ಶಮುದ. ೪೫). ℙ ಇದಕ್ಕೆ ವಸಂತದೂತಿಯೆಂಬ ಇನ್ನೊಂದು ಹೆಸರೂ ಉಂಟು : ಮುಗುಳ್ವದನಾದ ಸಂಪಗೆ ಮಡಲ್ತದಿರ್ಮುತ್ತೆ ಮುರಲ್ದರಲ್ದ ಮಲ್ಲಿಗೆ (ಪಂಪಭಾ. ೫–೩೫) ; ಮಲ್ಲಿಗೆಯಿಂ ಕೇದಗೆಯಿಂ ಮೊಲ್ಲೆಯಿನದಿರ್ಮುತ್ತೆ ಸುರಗಿಯಾ ಪಾದರಿಯಿಂ ಮೆಲ್ಲನೆ ತೀಡುವ ಗಾಳಿ ಯೊಳೆಲ್ಲೆಡೆಯುಂ ಕುಸುಮ ರಜದೆ ರಂಜಿಸುತಿರ್ಕುಂ (ಸೌಇಇ. IX–i, ೨೪೯–೨೪ ; 1147) ; ನಿನಗೆ ವಸಂತದೂತಿವೆಸರೊಪ್ಪುವುದೆಂತೆನೆ ಮುಂತೆ ಬಂದು ನೀನೆನಗೆ ವಸಂತನಾಗಮನಮಂ ನೆಱೆ ಸೂಚಿಸಿಕೊಟ್ಟೆಯೆಂದು ನಂದನವನಲಕ್ಷ್ಮಿ ಕೀರರವದಿಂ ಪೊಗೞ್ದಿತ್ತ ಪಸಾಯದಚ್ಚಮುತ್ತಿನ ಪೊಸಪಚ್ಚಮಂ ತಳೆದವೋಲದಿರ್ಮುತ್ತೆ ಮುಗುಳ್ತುದೆತ್ತಲುಂ (ಚಂದ್ರಪು. ೭–೪೧). [< **ಸಂ.** ಅತಿಮುಕ್ತ, ಅತಿಮುಕ್ತಕ]

**ಅದಿವರಿ** (ನಾ). ಒಂದು ಬಗೆಯ ಹೆಚ್ಚಿನ ಸುಂಕ (?) : ಬಾವಿಸೆಟ್ಟಿ ಯರು ಕೊಟ್ಟರ್ ಗೌರಬ್ಬೆಗೆ ಆದಿವರಿ ಕೊಟ್ಟರ್ (ಮೈಆರಿ. ೧೯೩೬, ೫೫–೯ ; 1054). [ಅದಿ$_0$ (< **ಸಂ.** ಅಧಿ) + ವರಿ$_2$]

**ಅದೀಪನ** (ಗು). **೧.** ಜೀರ್ಣಕಾರಿಯಲ್ಲದ. (ನಾ). **೨.** ಅಜೀರ್ಣ.
[**ಸಂ.** (ಅ– + ದೀಪನ)]

**ಅದೀರ್ಘ** (ಗು). ದೀರ್ಘವಲ್ಲದ ; ಉದ್ದವಲ್ಲದ.
[**ಸಂ.** (ಅ– + ದೀರ್ಘ)]

**ಅದು$_1$** (ಸ). ರೂಪಗಳು (ಪುಂ. ಏಕ). **ಅವ, ಅವಂ, ಅವನ್, ಅವನು, ಆತ** (ಸ್ತ್ರೀ. ಏಕ). **ಅವಳ್, ಅವಳು, ಆಕೆ** (ನಪುಂ. ಏಕ). **ಅದು** (ಪುಂ. ಬಹುವ). **ಅವಂದಿರ್, ಅವಂದಿರು, ಅವದಿರು, ಆತಂಗಳ್, ಆತಗಳು** (ಸ್ತ್ರೀ. ಬಹುವ). **ಅವಳ್ದಿರ್** (ಪುಂ. ಸ್ತ್ರೀ. ಬಹುವ). **ಅವರ್, ಅವರು, ಅವರ್ಗಳ್** (ನಪುಂ. ಬಹುವ). **ಅವು, ಅವುಗಳು** (ವಿಶೇ). **ಆ. ೧.** ದೂರದ ವಸ್ತುವನ್ನಾಗಲಿ ವಿಷಯವನ್ನಾಗಲಿ ನಿರ್ದೇಶಿಸಲು ಬಳಸುವ ಸರ್ವನಾಮ : ಪಲ್ಮಿಡಿಗೆ ಕುಱುಪ್ಪುಡಿ ವಿಟ್ಟಾರ್ ಆದಾನಳಿ[ೞಿ]ವೊನ್ಗೆ ಮಹಾಪಾತಕಮ್ ಸ್ವಸ್ತಿ (ಮೈಆರಿ. ೧೯೩೬, ೧೬–೧೫ ; 450) ; ಆದಾನಱಿವೋರುಂ (ಎಕ. VI, ಕೊಪ್ಪ. ೩೮–೮ ; 675) ; ಅದೆಂತೆಂದೊಡೆ (ವಡ್ಡಾರಾ. ೭೩–೯) ; ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ (ಕವಿರಾ. ೧–೩೬) ; ಅದು ಪಿರಿದುಂ ಪ್ರಮಾದಮದುವುಂ ಕುರುರಾಜನಿನಾಯ್ತು (ಪಂಪಭಾ. ೪–೪) ; ಅದಂ ಕೇಳ್ದಾ ಕುಮಾರರಿಂತಪ್ಪ ಕಥೆಯನಿನ್ನೊಂದಂ ಪೇೞಿಮೆಂಬುದುಂ (ಪಂಚತಂ. ೨೦–೧೦) ; ಕನ್ನಡದೊಳಗೊಂದು ಕಥೆಯ ಪೇಳುವೆನದು ನಿನ್ನಾಜ್ಞೆ ಕಂಡಾ ನನ್ನೊಡೆಯಾ (ಭರತ. ೧–೫) ; ನಾನು ಬಡವಿ ಆತ ಬಡವ ಒಲವೆ ನಮ್ಮ ಬದುಕು ಬಳಸಿಕೊಂಡೆವದನೆ ನಾವು ಅದಕು ಇದಕು ಎದಕು (ನಾದಲೀ. ೫೯). **೨.** ಪ್ರಶ್ನಾರ್ಥಕ ಸರ್ವನಾಮದ ಆದಿಯಲ್ಲಿ 'ಅದು' ಎಂಬುದನ್ನು ನಿರ್ದೇಶಕವಾಗಿ ಸೇರಿಸುವುದೂ ಉಂಟು : ಅದಾವನಿಲ್ಲಿಗೆ ಬಂದಂ (ಬಸವು. ೧೮–೩೩) ; ನಿನ್ನ ಕೋಮಲತನುವನು ಪೊಯ್ದವರದಾರ್ (ಜೈಮಿಭಾ. ೧೮–೧೦) ; ಯಾರದು ಕೂಗುವವರು (ರೂಢಿ). 'ದಾರು', 'ದಾವುದು' ಪರಾ. **ಅವ :** ಇಂಥವರ ದೆಸೆಯಿಂದ ಇಂತುಟಾದುದೆಂದು ಚಿಂತಿಸುತ್ತಿಪ್ಪ ಭಾಷೆಗೆಟ್ಟ ಮನದವ ನಾನಲ್ಲವಯ್ಯ (ಸಮಾವ. ೧೨) ; ಬಿಡಿಸಿದನು ಬಂದಜನು ಮೊಮ್ಮನು ಹಡೆದ ಮಗನಿವ ನೆಂದು ವಂದಿಸಿ ಮೃಡಗೆ ಬಳಿಕವ ಭಜಿಸಿದನು ಬಾಲೇಂದುಶೇಖರನ (ತೊರರಾ. ೧–೮–೩೩) : ಮತ್ತೊರ್ವಳು ವಿಟನಿಗೆ ಸನ್ನೆಯ ಮಾಡುವರ್ತಿ ಯೊಳ್ ಮಲ್ಲಿಗೆಯರಳ ಕತ್ತುರಿಯೊಳಗದ್ದಿ ಕೈತುಂಬಿ ಕೊಡಲದ ಮುತ್ತವ ನಗುತ್ತಿದಿದನು (ಕಂಸವಿ. ೨–೮೪). **ಅವಂ :** ಅವಂ, ಇವಂ (ಶಬ್ದಾನು. ೧೮೨–೧೯). **ಅವನ್ :** ಅಸಿತೋತ್ಪಲ ವರ್ಣನವನ್ (ಎಕ. XI, ಚಿತ್ರದು. ೪೩–೩. ಸು. 500) ; ಶ್ರೀ ಚಿಕುರಾಪರವಿಯ ಗುರವರ ಸಿಷ್ಯರ್ ಸರ್ಬಣನ್ದಿ ಅವನ್ ಶ್ರೀ ಬಸುದೇವನ್ (ಎಕ. II, ೩೬ ; 750). **ಅವನು :** ನೆಲೆಯನಱಿಯದವ ಕೊಲಿಸು ರಾಮನನೆಂದು ಬಲಿದು ಮಂತ್ರಿಗೆ ಪೇಳಲ ವನು ನೆಲಮಾಳಿಗೆಯೊಳಿಟ್ಟವನ ಕೊಲಿಸಿದೆ (ಕುರಾಸಾಂ. ೧–೮೮) ;

ಗಣಿತದಲ್ಲಿ ಗಟ್ಟಿಗನಾದ ಅವನು ಲೆಕ್ಕಹಾಕಿದ (ನಾಡಿಗೇ. ೪೭). **ಆತ :** ಇದಂ ಕೆಡಿಸಿದರೊಳ(ಳಾ)ರಪ್ಪೊಡೆ ಇಂತಪ್ಪಾತ (ಇಆ. XI, ೧೨೭–೧೩ ; 804); ಉಱಿದವರಾರಾತನ ಮಸಪ ಮಸಕದೆಸಕಮನಿಱಿಪರ್ (ಕಾವ್ಯಸಾ. ೨೩೯ ಶೂದ್ರಕ) ; ತೊಡರ್ಚಲಱಿವಾತನಾತನಿಂದಂ ಜಾಣಂ (ಕವಿರಾ. ೧–೧೬) ; ಆತಂ ನಿಜಭುಜವಿಜಯಖ್ಯಾತಿಯನಾಳ್ದಾಳ್ದನ್ (ಪಂಪಭಾ. ೧–೧೬) ; ಆತನನು ಕಂಡುದು ತಪಸ್ವಿವ್ರಾತ (ಕುವ್ಯಾಆ. ೨–೧); ಕೃತಿಯ ಪೇಳ್ವಾತ ಸಾಮಾನ್ಯನಹುದು (ಭರಚ. ೧–೧೬) ; ಆತಂ ಈತಂ ಊತಂ (ಶಬ್ದಾನು. ೧೮೧–೨೧) ; ಈತನ ಮಾತಿಗೆ ಆತ ಸೋತ (ಗಾದೆ. ೩೦೨). **ಅವಳ್ :** ತೊಟ್ಟಗೆ ಕೊಳೆ ಮೇಲೆ ಪಾಯ್ದುವಳನಪ್ಪಿದನಾ ವಿಭು ತನ್ನ ಶಾಪಮಂ ಬಗೆಯದೆ ಮಿಟ್ಟುದೇವತೆಯನಟ್ಟ್ಕಜಳುರ್ಕೆಯಿನಪ್ಪುವಂತೆವೋಲ್ (ಪಂಪಭಾ. ೨–೧೮) ; ಮುಳಿದೆನ್ನನನಪರಾಧೆಯನಟಿಲ್ದವಳನಿಂತನಾಥೆಯಂ ಮೋದಿದ ಕಾಲ್ಗಳನಾವ ಜನ್ಮಜನ್ಮಂಗಳೊಳಗಾಗಿಯುಮಕ್ಕೆಮುಂದೆಕೇಳ್ ತಿನ್ನದಿರೆಂ (ಸುಕುಮಾ. ೫–೮) ; ಸತಿಯುವಳ್ (ಶಬ್ದಾನು. ೨೬ ಪ್ರಯೋ). **ಅವಳು :** ಹಿಂದಣ ಬಲಿಯ ತಂಗಿ ಬಳಿಕ್ಕ ದೂರಾಯ್ತುವಳ ದೆಸೆಯಿಂದ ಬಲವಿರೋಧಿಗೆ (ತೊರರಾ. ೧–೧೦–೧೦) ; ಸಲ್ಲಲಿತ ರಾಜಕೀರನ ನುಡಿಗೇಳಿ ವಲ್ಲಭ ಬಾರೆಂದಳವಳು (ಕಂನವಿ. ೯–೨೦೦) ; ಎಲ್ಲ ಜನರನ್ನೂ ವಸ್ತುಗಳನ್ನೂ ವಿಷಯುಗಳನ್ನೂ ಅವನು, ಅವಳು, ಅವರು, ಅದು ಮೊದಲಾದುವು ಸೂಚಿಸುತ್ತವೆ (ಮಧ್ಯಮ. ೨೯); ಅವಳಿಗೂ ಸಹ ತನ್ನಲ್ಲಿ ಅನಾದರಣೆ (ಮಹಾಗ. ೧೨). **ಆಕೆ:** ಶರೀರದೊಳೆತ್ತಂ ಬೋವಾಂಚ ಕಂಚುಕಂ ಮದಿರಾಮದವಾಗಿಸೆ ತೆಗಟ್ಟನಾಕೆಯ ನುಡಿಯೊಳ್ (ಕವಿರಾ. ೩–೯) ; ಆಕೆಯುಮಾ ಪಾಂಗಿನೊಳ್ ದಿವಸಕ್ಕಂ ಬಡ್ಡಿಸೆ (ವಡ್ಡಾರಾ. ೭೧–೫) ; ಪೊಸತಲರ್ದ ಬಿಳಿಯ ತಾವರೆಯೆಸಟ್ಗಳ ನಡುವಿರ್ಪ ಸಿರಿಯುಮಾಕೆಯ ಕೆಲದೊಳ್ ನಸುಮುಸುಳ್ದು ತೋರ್ಪಳೆನೆ (ಪಂಪಭಾ. ೧–೪೦) ; ಇರಸಲ್ಲದೆಂದು ಮುತ್ತಿನ ಸರಮನದಂ ಕೊರಲೊಳಾಕೆ ಕಟ್ಟಿದಳಾಗಳ್ (ಕಾದಂಬ. ೧೨೨) ; ಆಕೆಗೆ ಋತುಕಾಲ ಪ್ರಾಪ್ತಿಯಿಂ ಗರ್ಭಮಾಗೆ (ಪಂಚತಂ. ೧೮೪–೧೦); ಭೂಮಿ ತಾ ಬೇಡಿದಳು ಪುತ್ರನನಾಕೆಯಲಿ ಜನಿಸಿದನು ನರಕಾಸುರನು (ಕುವ್ಯಾಕ. ೩–೭೧) ; ನನ್ನಾಕೆ ಒಲೆಯ ಮೇಲೆ ಹಾಲಿಟ್ಟು ಬಂದು "ಕಾಫಿ ಪುಡಿ ಇಲ್ಲ" ಎಂದಳು ಕುಂದಿದ ಧ್ವನಿಯಲ್ಲಿ (ಮುಗಮಾಂ. ೪೯). **ಅವಂದಿರ್ :** ಪಲರುಮನೋಡಿಸಿ ಇಪ್ಪತ್ತಲ ಆರ್ಕೊರ್ನ್ದು ತಾಕ ಅವನ್ಹಿರುಳ್ಳಟ್ಟುದೀ ಶೂರಗತಿ ಪೆತ್ತು (ಎಕ. X, ಕೋಲಾರ. ೨೩೨–೪ ; 750) ; ಅವಂದಿರಾಗಳೆ ಬೀಡಿಂಗೆವರಿದು ರಜಸ್ವಲೆಯಾಗಿರ್ದೆಂ ಮುಟ್ಟಲಾಗದೆನೆಯುಮೊತ್ತಂಬದಿಂದೊಳಗಂ ಪೊಕ್ಕು (ಪಂಪಭಾ. ೭–೪ ವ) ; ಅವರ ಪೋದೊಡವಂದಿರ ಕಬ್ಬಮಿನ್ನುಮಿರ್ಪುವು (ಗದಾಯು. ೧–೪೭) ; ಅವಂದಿರ್ ಅತಿವರ್ತಿಯಪ್ಪ ಮತ್ತಗಜಂ ಕಂಭಕ್ಕೆ ತರ್ಪಂತೊತ್ತಂಬದಿಂ ಬಂದು ಪಿಡಿವೆತ್ತ ಕಳ್ಳನಂತೆ ಸಿಡಿಮಿಡಿಗೊಳುತ್ತಿರ್ದುಂ (ಪಂಚತಂ. ೧೮–೧೯). **ಅವಂದಿರು :** ತನ್ನ ಮಱೆದು ಲಿಂಗವ ಮಱೆವುದು ತನ್ನ ಮಱೆಯದೆ ಲಿಂಗವ ಮಱೆವ ಯೋಗವಿನ್ನೆಂಥಾದೋ? ಸುಡು ಸುಡು ಅವಂದಿರು ಗುರುದ್ರೋಹಿಗಳು, ಆಚಾರಭ್ರಷ್ಟರು (ಅವಚಂ.೧೫೩–೭೦೩). **ಅವದಿರು :** ಎನಲಿಕವದಿರಲೊಬ್ಬರೊಬ್ಬರ ತಿನಲಿಕೆದ್ದರು (ಸಂಭಪ. ೫–೨೨); ಭೂಪತಿತಿಲಕ ಸಿಕ್ಕಿದನವದಿರೊಡ್ಡಿದ ಬಲೆಗೆ ಬಂದನು (ಕುವ್ಯಾಸ. ೧೪–೪೬) ; ತುಡುಗುಣಿಗಳ[ಪಾಠಾಂ. ಳಿ]ವದಿರು ನಭೋಗ್ರಕೆ ಸಿಡಿದು ಹವಿಗೊಂಬಮರನಿಕರದ ಹೆಡಕ ಬಾರಿಸಿ ಬಾಚುತಿರ್ದರು ಬಾಯ ತುತ್ತುಗಳ (ತೊರರಾ. ೧–೧೧–೮). **ಆತಂಗಳ್ :** ಆತಂಗಳ್, ಈತಂಗಳ್, ಊತಂಗಳ್ (ಶಮದ. ೧೫೦ ಪ್ರಯೋ). **ಆತಗಳು :** ಸೋತುದರಿಬಲ ಹೋಗೆನುತ ಮುಯ್ಯಾಂತು ಮನ್ನಿಸಿ ಹೊನ್ನಬಟ್ಟಲೊಳಾತಗಳಿಗೊಲಿದಿತ್ತನೈ ಕರ್ಪುರದ ವೀಳೆಯವ (ಕುವ್ಯಾದ್ರೋ. ೪–೧೧) ; ಕರೆ ನಿಪ್ಮಾತಗಳನೀ ಭ್ರೂಣಹತ್ಯಾಪಾತಕಕ್ಕಂಜುವೆನೆನುತ ಕೈಕೊಂಡನಾ ದ್ರೋಣ (ಕುವ್ಯಾದ್ರೋ. ೫–೨೩). **ಅವಳ್ದಿರ್ :** ತಳಂಗಳ್ ನೋಯವೇ ಮೆಟ್ಟಿದಂದೆಂದವಱಿಸಳನವಳ್ದಿರ್ ಮೆಟ್ಟದರ್ ಮೆಟ್ಟರೆಂಬಂತೆ (ಆದಿಪು. ೭–೫೬) ; ಗಾಣತಿಯುರಿರ್ವರುಂ ಮತ್ತಾಣದಿನಗ್ಗಳಮುವಳ್ದಿರಂ ಭಯವಶದಿಂ ಕ್ಷೋಣೀಶಂ ಕುಡೆ ಕೊಳ್ಳದೆ ಮಾಣೆಂ (ಶಾಂತಿಪು. ೨–೬೨) ; ಗೋಳಿಟ್ಟು ಸತಿಯರಂ ವೈಹಾಳಿಯನೇಱಿದನವಳ್ದಿರ ಡಾವಣಿಯಂ ಲೀಲೆಯೊಳೆ ಕಟ್ಟಿದಂ (ಸೌಇಇ. IX–i, ೧೧೮–೪೩; 1057). **ಅವರ್:** ಅವರ್ ಸ್ವರ್ಗಾಗ್ರಮಾನೇಱಿದಾರ್ (ಎಕ. II, ೨೭–೨ ; 700) ; ಇವರವರ್ಗೆ ಕಪಟದಿಂದಂ ಸವಿನಯದಿಂದೆಱಿಯೆ (ಧರ್ಮಾಮೃ. ೨–೨೦೪) ; ಅವರಿಂ ಕಿಱಿಯಂ ಪಿರಿಯಂ ಭುವನ ಜನಕ್ಕೆ (ನೇಮಿಪು. ೧–೩೪); ಅವರ್ಪೋದರ್ (ಶಬ್ದಾನು. ೨೭ ಪ್ರಯೋ) ; (ಶಾಂತಿಪು. ೧–೪೬ ; ಎಕ. II, ೧೩೩–೫೦ ; 982 ; ಅಜಿಪು. ೧–೯ ; ಸುಕುಮಾ. ೪–೨ ವ ; ಧರ್ಮಾಮೃ. ೨–೨೦೪ ನೋ). **ಅವರು :** ಅವರೊಳಗಲಕೆ ನಿಂದ ರಿಪುಗಳ ಜವನ ಬೋನವ ಮಾಡದಿದ್ದರೆ (ಕುವ್ಯಾದ್ರೋ. ೪–೩೯) ; ಆ ಜನೇಶ್ವರನಿರಿಸಿ ಮುದದಲಿ ಪೂಜಿಸಿದನವರುಗಳ (ತೊರರಾ. ೧–೭–೩೯) ; ಅವರೆಡೆಯೊಳಗಾ ಪುರಕಧಿಪತಿಯಾವ ಭುವನೇಶನ ದಿವ್ಯಭವನ . . . ರಾಜಿಸಿತು (ಕಂನವಿ. ೨–೭೮). **ಅವರ್ಗಳ್ :** ಪದ್ಮರಥನೆಂಬೊನರಸನಾತನ ಮಹಾದೇವಿ ಪದ್ಮಶ್ರೀಯೆಂಬೊಳಂತವರ್ಗಳಿಷ್ಟವಿಷಯಕಾಮಭೋಗಂಗಳನನುಭವಿಸುತ್ತಿರೆ (ವಡ್ಡಾರಾ. ೬೭–೧೪). **ಅವು :** ನವನಳಿನೀವನಂಗಳ ಪರಾಗರಜಂಗಳನುಂಡು ಮುನ್ನಮಂತವನೆ ವಿಯತ್ತಳಭ್ರಮಣವಿಹ್ವಲನಾಗಿ ಬೞಲ್ದು ಕಾಱುವಂತೆವೊಲಿರೆ ಕೆಂಪು (ಪಂಪಭಾ. ೪–೪೬) ; ಪೂಣ್ದೆರಡಂ ತೀರ್ಚದೆನಿರ್ದಪುವೆರಡುಮವಂ ತೀರ್ಚೆ ತೀರ್ಚದಿರ್ಪನೆ ಪಗೆಯಂ (ಗದಾಯು. ೧–೬೯) ; ಹರಂ ಗಿರಿಸುತೆಗೆ ಪೇೞ್ದಾ ಕಥೆಗಳಂ ಪೈಶಾಚಕ ಭಾಷೆಯೊಳ್ ಬೃಹತ್ಕಥೆಗಳಂ ಮಾಡಿ ಪೇೞ್ದೊಡವಂ ವಸುಭಾಗಭಟ್ಟಂ ಕೇಳ್ದು (ಪಂಚತಂ. ೧೩–೨) ; ಇವು ಲೇಸವು ಲೇಸೆಂಬೀ ವಿವರದೊಳೇಂ (ಧರ್ಮಾಮೃ. ೧–೧೫೩). **ಅವುಗಳು :** ಅವರ ರಾಜಕೀಯ ಕಾರ್ಯಕಲಾಪಗಳು ಅಪ್ರತ್ಯಕ್ಷವಾಗಿ ಕಾವ್ಯೋನ್ನತಿಗೆ ಸಹಾಯಕವಾಗಿದ್ದರೂ ಅವುಗಳಿಂದ ಸಾಹಿತ್ಯಕ್ಷೇತ್ರದಲ್ಲಿ ಬಹುನಷ್ಟ ಸಂಭವಿಸಿದೆಯೆಂದು ಊಹಿಸಿದರೆ ತಪ್ಪಾಗಲಾರದು (ಸಾಹಿಸಂ. ೯೫). **ಆ :** ಆ ಪ್ರಸ್ತಾವದೊಳ್ (ಆದಿಪು. ೨–೪೦ ವ) ; ಆ ಕೃತಿ ಮುನ್ನಂ ಚೆಲ್ವಿಂಗಾಕರಮೆನಿಸಿರ್ದುಮತ್ತೆ ಕನ್ನಡಿಸಿತ್ತಿನ್ನೀ ಕವಿತೆಯಂ (ಕಾದಂಪೂ. ೬) ; ಇತ್ತಲರ್ಜುನನಾ ತ್ರಿಗರ್ತಂಗಿತ್ತನವಸರವನು (ಕುವ್ಯಾದ್ರೋ. ೨–೨೮) ; ಆ ಅಧಿಕಾರಿಯು ಈ ಹುಡುಗನನ್ನು ತನ್ನ ವಶಕ್ಕೆ ಕೊಡಬೇಕೆನ್ನುತ್ತಾನೆ (ಚಿತ್ರಕೂ. ೩೩).

**ಅದಲ್ಲದೆ, ಅದಲ್ಲದೆಯುಂ, ಅದುಮಲ್ಲದೆ, ಅದುಮಲ್ಲದೆಯುಂ, ಅದೆಂತೆಂದೊಡೆ** = ವಿಷಯವನ್ನು ಮುಂದುವರಿಸಿ ಹೇಳುವಲ್ಲಿ ಬಳಸುವ ಉಕ್ತಿ : ನೀತಿಶಾಸ್ತ್ರಮುಂಟದಲ್ಲದೆಯುಂ (ಪಂಚತಂ. ೧೬–೧೯) ; ಅದೆಂತೆಂದೊಡೆ (ವಡ್ಡಾರಾ. ೨–೬) ; ಜಗನ್ಮಯನಾದ ಆಗಿಯೂ ಜಗದ ಸ್ಥಿತಿಗತಿ ಇಲ್ಲ ಅದೆಂತೆಂದೊಡೆ (ಆದವ. ೯). **ಅದಾಗಿ** = ಪತ್ರವ್ಯವಹಾರದಲ್ಲಿ ಪ್ರಸ್ತುತವಿಷಯವನ್ನು ಪ್ರವೇಶಗೊಳಿಸುವ ಮಾತು : ಅದಾಗಿ ಉಭಯ ಕುಶಲೋಪರಿ ಸಾಂಪ್ರತ (ರೂಢಿ) ; ರಾಮಪ್ಪನು ತಿಮ್ಮಪ್ಪನಿಗೆ ಬರೆದುಕೊಟ್ಟ ಕ್ರಯಪತ್ರ ಅದಾಗಿ (ರೂಢಿ). **ಅದು ಇದು ಎನ್ನು, ಅದಿದೆನ್ನು** = ಹಿಂದು ಮುಂದು ನೋಡು ; ಸಂಶಯಪಡು: ಅದಿದೆನ್ನದೆ ಜಾತಕತಿಲಕದೊಳಱಿವುದು ಗಣಿತಧರ್ಮಮಂ ಸಕಳಜಗದ್ವಿದಿತಂ ಚಂದ್ರಪ್ರಭಚರಿತದೊಳಱಿವುದು ಕಾವ್ಯಧರ್ಮಮಂ ಬುಧನಿವಹಂ (ಜಾತತಿ. ೨೪–೪೦) ; ಅದು ಇದು ಎನ್ನದೆ ಹೇಳಿದ್ದಕ್ಕೆ ಒಪ್ಪಿಕೊ (ರೂಢಿ) ; ಅದು ಇದು ಎಂದುಕೊಂಡು ಕೆಲಸ ಕೆಟ್ಟುಹೋಯಿತು (ರೂಢಿ). **ಅದೆತಾನೆ, ಅದೇತಾನೆ** = ಆಗತಾನೆ: ಅವನೊಬ್ಬ ವರ್ತಕ. ಅವನು ಅದೆತಾನೆ

ಉಪಾಹಾರ ಪಾನೀಯಾದಿಗಳನ್ನೂ ಮುಗಿಸಿ ತುಂಬ ಹುರುಪಿನಿಂದಿದ್ದನು (ಪುನರು. ೨೩); ಅದೇತಾನೆ ಪೊಟ್ಟಣದಿಂದ ತೆಗೆದ ಗಮಗಮಿಸುತ್ತಿದ್ದ ಸಾಬೂನನ್ನು ಅವಳು . . . ಈಸಿಕೊಂಡು ಬಂದಿದ್ದಳು (ಪುನರು. ೬೫). **ಅದೇ ಹತ್ತಿಗದೇ ನೂಲು** = ಹೇಳಿದ್ದನ್ನೇ ಹೇಳುವುದು; ಚರ್ವಿತ ಚರ್ವಣ: ಎಲ್ಲವೂ ಅದೇ ಹತ್ತಿಗದೇ ನೂಲು (ನಾಡೋಜ. ೩೬೦). 'ಅದಱಿಂ' ಪರಾ.

[**ದೇ.** || **ತಮಿ. ಮಲ.** ಅದು; **ತುಳು.** ಅವು; **ಕೊಡ.** ಅದಿ; **ತೆಲು.** ಅದಿ; **ಕೊಲಾ. ಗೊಂಡಿ.** ಅದ್; **ಕುಇ.** ಅರಿ]

**-ಅದು$_2$** (ಪ್ರ). ಕೆಲವು ಕ್ರಿಯಾವಿಶೇಷಣಗಳನ್ನು ಸಾಧಿಸುವ ಪ್ರತ್ಯಯ: ಅನುಕೃತಿ ಪದಮೊದವೆಯುಮದುವನೆಯೆಂಬೆರಡುಂ ಪದಾಂತ್ಯದೊಳ್ ಬರೆಯುಂ ನೆಟ್ಟನೆ ತಾವವ್ಯಯಮಪ್ಪುವು . . . ಅದುಗೆ ನೂಂಕದು (ನೂಕದು), ನೂಳದು, ತೆತ್ತದು (ತೆಕ್ಕದು) (ಶಮದ. ೩೦೦, ಪ್ರಯೋ).

**ಅದುಕಾರಣ** (ಅ). ಆ ಕಾರಣದಿಂದ; ಅದರ ಪರಿಣಾಮವಾಗಿ: ಆತನುಂ ನೀಮುಮೊಂದೆಡೆಯೊಳಿರೆ ಕಿಸುಜುಂ ಕಲಹಮುಮೆಂದುಂ ಕುಂದದದುಕಾರಣಂ ಗಂಗಾನದಿಯ ದಕ್ಷಿಣ ತಟದೊಳ್ (ಪಂಪಭಾ. ೨-೯೨ ವ); ತೊಲಗದಗ್ಗದ ಭಾಷೆಯದುಕಾರಣವತುಳಬಲನು (ಬಸವು. ೨೧-೪೪); ಅದುಕಾರಣದಿಂ ನಿಜಧೈರ್ಯದೆ ಗಣಿಸದೆ ಮುಂದೆ ಬರ್ಪುದಂ ಬುಧರಲ್ತೆಂಬುದನೆಸಗದೆ ಬೆಳ್ಗಸವಾಳ್ವುದು ಕಜ್ಜಂ ಸಜ್ಜನಾಬ್ಜವನದಿನನಾಥಾ (ರಾಜಶೇ. ೧೩-೧೮). ℙ 'ಅದುಕಾರಣದಿಂ' ಎಂಬ ತೃತೀಯಾಂತರೂಪವೂ ದೊರೆಯುತ್ತದೆ. [ಅದು$_1$ + ಕಾರಣ]

**ಅದುಕು** 'ಅತುಕು' ನೋ.

**ಅದುಕುಳಿ** (ನಾ). "ಹರ್ಷ" (ಚತುನಿ. ೬. I, ೬೩). [?]

**ಅದುಗಾಣ್** (ಕ್ರಿ). ಅದನ್ನು ನೋಡು: ಒಗೆದ ಸಮಗ್ರಚಂದ್ರನ ವಿಹಾರಮೆನಲ್ಕೆ ಕುಮಾರಕಂ ಬರಲ್ ಸೊಗಯಿಸೆ ಭಾಮಿನೀಕುವಳಯೋತ್ಸವಮಂತದುಗಂಡು ಮಾಣ್ಬುಮೆ (ನೇಮಿಪು. ೩-೧೩೦).

[ಅದು$_1$ + ಕಾಣ್]

**ಅದುಗಿಡು** (ಕ್ರಿ). ಅದು (=ಹಿಂದೆ ನಿರ್ದೇಶಿಸಿರುವುದು) ತಪ್ಪಿಹೋಗು; ಕೆಟ್ಟುಹೋಗು: ಜನಕಂಗೆ ಜಲಾಂಜಲಿಯಂ ತನೂಭವಂ ಕುಡುವುದುಚಿತಮದುಗೆಟ್ಟೀಗಳ್ ನಿನಗಾಂ ಕುಡುವಂತಾದುದೆ ತನೂಜ ನೀಂ ಕ್ರಮವಿಪರ್ಯಯಂ ಮಾಡುವುದೇ (ಗದಾಯು. ೪-೬೧); ನೀನಿನಿತು ಕಾಲಂ ನಾಂ ಬರ್ಪಾಗಳಿದಿರ್ವಂದು ಸೇವೆಯಂ ಮಾಡುತ್ತಿರ್ದ ಈಗಳದುಗೆಟ್ಟು ಕರೆದೊಡಂ ಮೊದಲಾಗಿ ಸರಂದೋಱಿದಪೆಯಿಲ್ಲ (ಪಂಚತಂ. ೩೮-೧೦). [ಅದು$_1$ + ಕಿಡು (< ಕೆಡು)]

**ಅದುಗಿಸು** (ಕ್ರಿ). ೧. ಒತ್ತಿ ಮೆತ್ತಗೆ ಮಾಡು (೬). ೨. ಕುಗ್ಗಿಸು; ಉಡುಗಿಸು: ಇದುವರೆಗೆ ತಾ ಕೊಡುವ ಧನವನು ವದಗಿಸದೆ ಇವನಿರ್ದ ಕಾರಣ ಅದುಗಿಸುತ ಬಂಧದೊಳು ಮಾರುವೆ ಕೊಡುವ ಧನಕೀಗ (ಹಮಚ. ೧೧೬). [ಅದುಗು + -ಇಸು$_3$]

**ಅದುಗು**, ಅದಿಗು (ಕ್ರಿ). ತಗ್ಗು; ಕುಗ್ಗು; ಅಮುಕಿಹೋಗು; ಉಡುಗು: ಉದುರಿ ಹಲು ಬೆನ್ನುಱುಗಿ ಕೈಕಾಲದುಗಿ ಮಸ್ತಕ ನಡುಗಿ (ಪ್ರಹ್ಲಾಚ. ೮-೫೫); ಚದರಿದಳಿಕುಂತಳವು ಅಲಿಗಳದುಗಿದಂಬಕ ಹಸ್ತಗಳ ಮುಗಿದಿದೆಯ ಭಾವದೊಳಿರ್ದ ಸತಿಯನು ಕಂಡ ಮಾರುತಿಯು (ಜಿನಭಾ. ೫೨-೪೪); ಬೆದರುವುದು ತರವಲ್ಲ ಅದುಗಿ ವ್ಯಾಕುಲದಿ (ಹಮಚ. ೨೬). **ಅದಿಗು**: ಫಣಿಪತಿಯುಗಿಯೆ ಕೂರ್ಮಪತಿಯದಿಗಿಯೆ ತಾರಾಗಣಂ ಪುದಿರೆ ನೆಲನದಿರೆ ಕುಲಗಿರಿಗಳಳ್ಳಾಡೆಯಣುವನದಟಂ ಸಿಂಹಲಂಘನದೆ ಲಂಘಿಸಿದ ನಂಬುಧಿಯ ದಾಂಟಿ ಲಂಕಾದ್ವೀಪಕೆ (ಕುಮುರಾ. ೧೩-೧೨).

[**ದೇ.** || **ತಮಿ.** ಅದುಙ್ಗು. **ತೆಲು.** ಅದುಕು = ಅಂಟಿಕೊಳ್ಳು; ಕೂಡು; ಸೇರು]

**ಅದುಗೊ** 'ಅದೆಕೊಳ್' ನೋ.

**ಅದುಬುತ** 'ಅದುಭುತ' ನೋ.

**ಅದುಭುತ**, ಅದುಬುತ, ಅದ್ಭೂತ, ಅರ್ಬುತ, ಅರ್ಬುದ (ನಾ). ಅತ್ಯಾಶ್ಚರ್ಯ; ಸೋಜಿಗ; ಅದ್ಭುತ: ಗೌರೀರಮಣನದುಭುತವನೊಂದಿದನು (ಬಸವು. ೫೭-೬೩); ಪದಹತಿಯೊಳದುಭುತವ ತೋಱಿದುದಾ ಮಹಾಸಭೆಗೆ (ಕುವ್ಯಾವಿ. ಒರಿಇ. ೪-೬೭); ಕೆದಱಿತಧ್ವರ್ಯಾದಿ ಋತ್ವಿಜರದುಭುತದ ಭೀತಿಯಲಿ (ತೊರರಾ. ೧-೧೧-೧೨). 'ಅದುಭುತಕಣೆ', 'ಅದುಭುತಬೊಬ್ಬೆ' ಪರಾ. **ಅದುಬುತ**: ಅತಿಚಿತ್ರವಿಧಗಳಿಂ ಸಿಂಗರವಗೊಂಡಿರುವ ಅದುಬುತದ ಸೌಂದರ್ಯದಾಳಿಕೆಯನು (ವಿಸೀಗೀ. ೨೪). **ಅದ್ಭೂತ**: ಆ ಪುರದ ಲಿಂಗಸಂದೋಹವೊಡನೆ ಉರುಳುತೆಯ್ದಿದವು ಪುರಕದ್ಭೂತವಾಯ್ತೆಂದು (ಗುರುಚಾ. ೧೧-೨೨). **ಅರ್ಬುತ**: ಹಬ್ಬಿದಾ ಮಲೆ ಮಧ್ಯದೊಳಗೆ ಅರ್ಬುತಾನೆಂತೆಂಬ ವ್ಯಾಘ್ರನು ಗಬ್ಬಿತನದೊಳು ಬೆಟ್ಟದಾ ಅಡಿಕಿಬ್ಬಿಯೊಳು ತಾನಿರುವನು (ಗೋಹಾಡು. ೪೭). **ಅರ್ಬುದ**: ಅರ್ಬುದದ ಕಾನನದ ಮಧ್ಯದಿ ನಿರ್ಝರದಿ ಮಾತೆಯನು ನಾಲ್ವರನೊಬ್ಬುಳಿಯೊಳೊರಗಿಸಿದ (ಜಿನಭಾ. ೧೪-೪). [**ಸಂ.** ಅದ್ಭುತ]

**ಅದುಭುತಕಣೆ** (ನಾ). ಅದ್ಭುತವಾದ ಬಾಣ: ಕಱಿದರದುಭುತಕಣೆಯ ಸಱಿವಳೆಯ (ಕುವ್ಯಾದ್ರೋ. ೩-೨೬). [ಅದುಭುತ + ಕಣೆ]

**ಅದುಭುತಬಲ** (ನಾ). ಅದ್ಭುತವಾದ ಸೈನ್ಯ: ಕವಿದುದದುಭುತಬಲ ಮುರಾರಿಯ ತಿವಿದರಡಗಟ್ಟಿದರು (ಕುವ್ಯಾಕ. ೧೪-೧೪).

[ಅದುಭುತ + ಬಲ$_2$]

**ಅದುಭುತಬೊಬ್ಬೆ** (ನಾ). ಅದ್ಭುತವಾದ ಗದ್ದಲ; ಅತಿ ಪ್ರಬಲವಾದ ಸದ್ದು: ವಾದ್ಯದ ರಣಿತವದ್ರಿಯನೊದೆದುದದುಭುತಬೊಬ್ಬೆಗಳ ಲಳಿಯ (ಕುವ್ಯಾಗ. ೧-೭). [ಅದುಭುತ + ಬೊಬ್ಬೆ$_1$]

**ಅದುಭುತರಣ** (ನಾ). ಅದ್ಭುತವಾದ ಯುದ್ಧ: ಅಲ್ಲಿಯದುಭುತರಣವನಪ್ರತಿಮಲ್ಲ ಮಾರುತಿ ಕೇಳಿದನು (ಕುವ್ಯಾಕ. ೧೩-೩೦).

[ಅದುಭುತ + ರಣ]

**ಅದುಭುತಾಕಾರ** (ನಾ). ಅದ್ಭುತವಾದ ಆಕಾರ; ಅತಿ ದೊಡ್ಡ ಆಕಾರ: ಬೆದಱಿ ಹಾಯ್ದುದು ಘೋರರಕ್ಕಸನದುಭುತಾಕಾರದ ಮಹಾಭಯಕಥಟಭಟರಸು (ತೊರರಾ. ೬-೨೮-೧೦).

[ಅದುಭುತ + ಆಕಾರ]

**ಅದುಮು** (ಕ್ರಿ). ಅಮುಕು; ಒತ್ತು: ಇಷ್ಟುಹೊತ್ತಿನವರೆಗೆ ಅದುಮಿ ಹಿಡಿದಿದ್ದ ನೋವಿನ ಬಾಧೆ ಈಗ ಕಾಣಿಸಿತು (ರಂಗರೋ. ೧೮); ಗಂಟಲಿಗೆ ಬಂದ ದುಃಖ ಅದುಮಿ ಹಿಡಿದು ಬಂದ ಮಾತು (ನಡೆದಾ. II, 1229); ಈ ದೈಹಿಕಾಕರ್ಷಣೆಯನ್ನೇಕೆ ಅದುಮಿಡಬೇಕು? (ಸೋತುಗೆ. ೧೦೦).

[**ದೇ.** || **ತೆಲು.** ಅದುಮು; **ಕೊಲಾ. ನಾಯ್ಕಿ.** ಅದುಮ್; **ಗೊಂಡಿ.** ಅದ್ಮನ]

**ಅದುರು$_1$** 'ಅದಿರ್$_1$' ನೋ.

**ಅದುರು$_2$** (ಕ್ರಿ). "ಒಣಗು" (ಜಾನಕೋ. ೧೨); ಬೆಳೆ ಅದುರಿದವು (ಜಾನಕೋ. ೧೨); ಉದುರಲಿಹ ತರಗೆಲೆಯು ಅದುರಿ ಬೆಳ್ತಿರುವಂತೆ ಅದುರಿ ಬಸವಳಿದೆಂದಿಗೂ ದಣಿವೆವೇಕೊ (ವಿಸೀಗೀ. ೭). [**ದೇ.** ?]

**ಅದುರು$_3$** 'ಅದಿರು$_3$' ನೋ.

**ಅದುರು$_4$** (ನಾ). ತಲೆಯ ಕೂದಲ ಬುಡದಲ್ಲಿ ಕಾಣಿಸಿಕೊಳ್ಳುವ ಹೊಟ್ಟಿನಂಥ ಬಿಳಿಯ ಪುಡಿ; ಹಗರು (೬). [**ದೇ.** ?]

**ಅದುರುಗಂಟಿ** 'ಅದಿರ್ಗಂತಿ' ನೋ.

**ಅದುರುಗುಂಡಿಗೆ** (ನಾ). ೧. (ಹಲವು ಕಾರಣಗಳಿಂದ ಉಂಟಾಗುವ) ಹೃದಯ ಕಂಪನವೆಂಬ ವ್ಯಾಧಿ; ಹೃದಯವ್ಯಾಧಿ. ೨. ಪುಕ್ಕಲುತನ; ಅಂಜುಬುರುಕತನ: ತಾತಾ ಅವರು ಅದುರು ಗುಂಡಿಗೆಯವರಲ್ಲ (ಭಾಗ್ಯಶಿ. ೧೧). ೩. "ಮೂರ್ಛೆ ಹೊಂದುವುದು" (ಜಾನಕೋ. ೧೨). [ಅದುರು$_1$ (< ಅದಿರ್$_1$) + ಗುಂಡಿಗೆ$_1$]

**ಅದುರುರೋಗ** (ನಾ). ಮೈಕೈಯ ನಡುಕ ಬರುವ ಒಂದು ರೋಗ; ನಡುಗುವ ರೋಗ: ನನ್ನ ಕುರಿಗಳ ಹಿಂಡಿಗೆ ಇಂಥಾ ಅದುರುರೋಗ ಬಂದು ಎಲ್ಲಾ ಉದುರಿ ಹೋಯಿತು (ಕಥಾಮಂ. ೯-೧೦). [ಅದುರು$_1$ (< ಅದಿರ್$_1$) + ರೋಗ]

**ಅದುರುವಾಯು** (ನಾ). ಶರೀರದ ಎಲ್ಲ ಅವಯವಗಳಾಗಲಿ ಯಾವುದಾದರೊಂದು ಭಾಗವಾಗಲಿ ಅದುರುವಂತೆ ಮಾಡುವ ಒಂದು ವಾತರೋಗ: ಚಿಕ್ಕವೀರಪ್ಪ ಒಡೆಯರವರು ಚಿಕ್ಕಂದಿನಾರಭ್ಯ ಶಿರೆಮನೆವಳಗೆ ಇದ್ದದ್ದರಿಂದ ಶರೀರದಲ್ಲಿ ಅದ[ದು]ರುವಾಯು ಸಂಭವಿಸಿ ಕೊಂಡು ಇತ್ತು (ರಾಜೇಂದ್ರ. ೮). [ಅದುರು$_1$ (<ಅದಿರ್$_1$) + ವಾಯು]

**ಅದುರ್ಗಂತಿ** 'ಅದಿರ್ಗಂತಿ' ನೋ.

**ಅದುವ** 'ಅದವ' ನೋ.

**ಅದುವದು** (ನಾ). ೧. ವಿಚಾರಮಾಡುವುದು; ವಿಮರ್ಶಿಸುವುದು: "ಅದುವದು = ವಿಚಾರಿಸುಹಂ" (ಶಮುದ. ಪರಿ. ೨). ೨. ಸಂಶಯ; ಸಂದೇಹ; ದಿಗ್ಭ್ರಮೆ (ಕಿ). [?]

**ಅದುವು** 'ಅದವು' ನೋ.

**ಅದುಷ್ಟ** (ಗು). ದುಷ್ಟವಲ್ಲದ; ದೋಷವಿಲ್ಲದ; ಸಭ್ಯ. [ಸಂ.]

**ಅದುಷ್ಟಕಾರಕ** (ನಾ). [ವ್ಯಾಕ] ಹೊಂದಿಕೆಯಾಗದ ವಿಭಕ್ತಿ ಪ್ರತ್ಯಯಗಳನ್ನು ಹತ್ತಿಸದೆ ಸರಿಯಾದುವನ್ನು ಬಳಸಿ ನಾಮ ವಾಚಕಗಳನ್ನು ಪ್ರಯೋಗಿಸುವುದು: ವರವೆಮಗೀಗೆ ದೇವತೆಗಳಾದರದಿಂ ಕರುಣಿಪ್ಪುದಕ್ಕೆ ಬಂಧುರಗುಣಬಂಧುಸಂತತಿಯನೆಂಬುದು ಕಾರಕ ದೋಷಮಾಗಳುಂ ಬರವನಮೋಘಮಾಗೆಮಗೆ ದೇವತೆಗಳ್ ಕರುಣಿಪ್ಪುದಕ್ಕೆ ಬಂಧುರಗುಣಬಂಧುಸಂತತಿಗೆ ನಿಕ್ಕುವಮೆಂಬುದದುಷ್ಟಕಾರಣ(ಕ)ಂ (ಕವಿರಾ. ೧-೧೧೫). [ಅದುಷ್ಟ + ಕಾರಕ]

**ಅದುಹು$_1$** 'ಅದಿರ್ಪು$_1$' ನೋ.

**ಅದುಹು$_2$** 'ಅದಪು$_2$' ನೋ,

**ಅದೂರದರ್ಶಿ** (ನಾ). ದೂರದರ್ಶಿಯಲ್ಲದವನು; ಮುಂದಾಲೋಚನೆಯಿಲ್ಲದವನು. [ಸಂ. ಅದೂರದರ್ಶಿನ್]

**ಅದೂಷ್ಯ** (ಗು). ದೂಷ್ಯವಲ್ಲದ; ನಿಂದೆಗೆ ಆಸ್ಪದವಲ್ಲದ: ರತ್ನ ಸಂಚಯಪುರಮಂ ಪೊಜಮಟ್ಟು ನಡೆದು ಬಟಿಯಂ ಕ್ರೋಶದ್ವಿತಯ ಮಾತ್ರದೊಳ್ ಪ್ರಸಿದ್ಧದೂಷ್ಯಮಾಗಿಯುಮದೂಷ್ಯಮುಂ . . . ಪ್ರಸ್ಥಾನ ಶಿಬಿರಮಂ ಪೊಕ್ಕು (ಚಂದ್ರಪು. ೧೦-೧೭ ವ). [ಸಂ. (ಅ- + ದೂಷ್ಯ)]

**ಅದೃಢ** (ಗು). ೧. ದೃಢವಲ್ಲದ. (ನಾ). ೨. ಚಂಚಲನಾದವನು: ಕಡುಗೋಪದವನ ಬಹುಭಕ್ಷಕನ ಖೂಳನನದೃಢನ ಕುತ್ಸಿತನ . . . ಲಕ್ಷ್ಮಿ ತೊಲಗದೆ ಮಾಣ್ಬಳೆ (ಜೈಮಿಭಾ. ೫-೬೯). [ಸಂ. (ಅ- + ದೃಢ)]

**ಅದೃಶ್ಯ** (ಗು). ೧. ಕಾಣಿಸದ; ಕಣ್ಣಿಗೆ ಬೀಳದ: ಭರದಲೆದ್ದನು ಕುಂಭಕರ್ಣನು ಸುರಮುನೀಂದ್ರನದೃಶ್ಯನಾದನು (ಕೌಶಿರಾ. ೨೪-೧೩). ೨. ನೋಡಲಾಗದ; ಕಾಣಬಾರದ.

ಅದೃಶ್ಯವಾಗು = ಕಣ್ಣಿಗೆ ಕಾಣದಂತಾಗು: ಇನ್ನೇವೆನಿನ್ನೇವೆ ನಯ್ಯೋ ಮಹಾದೇವ ಇನ್ನೇನನೆಂದಪೆಂ ಕರುಣಿಸು ಮಹಾದೇವ ಇದ್ದಿದ್ದದೃಶ್ಯವಾಗೆನೆ ಭಸ್ಮವಾಗೆನೇ ಇದ್ದ ನೆಲನೊಳಕೊಳ್ಳದೇ ಜೀರ್ಣವಾಗೆನೇ (ಶಿರುರ. ೨೧). [ಸಂ. (ಅ- + ದೃಶ್ಯ)]

**ಅದೃಶ್ಯಂದಳೆ** (ಕ್ರಿ). ಅದೃಶ್ಯತ್ವವನ್ನು ಪಡೆ; ಕಣ್ಣಿಗೆ ಕಾಣದಂತಾಗು: ಬಳಿಕತ್ಯಾತುರದಿಂದೊಳಪೊಕ್ಕಂ ಲಲಿತಾಂಗಂ ನಿಜಸತಿ ರತಿಯಲ್ಲದೆ ಯಿಳೆಯ ಜನದ ಕಣ್ಗೆಯದೃಶ್ಯಂದಳೆದಲರ್ವಿಲ್ಲನ ತೇಜದಿಂ (ಜಯಕಾ. ೪-೮). [ಅದೃಶ್ಯ + ತಳೆ$_1$]

**ಅದೃಶ್ಯಕಿರಣ** (ನಾ). ಕಣ್ಣಿಗೆ ಅಗೋಚರವಾದ ಕಿರಣ. [ಅದೃಶ್ಯ + ಕಿರಣ]

**ಅದೃಶ್ಯಮುಸಿ** (ನಾ). ಕಣ್ಣಿಗೆ ಕಾಣಿಸದ ಮಸಿ, —ಶಾಯಿ: "(ಶಾಖಕ್ಕೆ ಹಿಡಿಯುವುದು, ಮೊ. ಗಳಿಂದ ಮಾತ್ರ ರೂಪುಗೊಂಡು ಕಣ್ಣಿಗೆ ಬೀಳುವ) ಅದೃಶ್ಯಮುಸಿ" (Invisible Ink. ಇಂಕನಿ). [ಅದೃಶ್ಯ + ಮುಸಿ$_2$]

**ಅದೃಶ್ಯರೂಪ** (ನಾ). ೧. ಬೇರೆಯವರ ಕಣ್ಣಿಗೆ ಕಾಣಿಸದ ರೂಪ: ಈಶಾನೇಂದ್ರಂ ಬಣ್ಣಿಸೆ ತಮ್ಮ ಬಂದುದನದೃಶ್ಯರೂಪದಿನಭ್ಯಂಗನ ಕಾಲದೊಳ್ ಕಂಡುದುಮಂ ಸಪ್ರಪಂಚಮಜಿಪಿ (ಶಾಂತಿಪು. ೯-೧೦೧ ವ). ೨. ರೂಪ ಮರೆಯಾದವನು; ಕಣ್ಣಿಗೆ ಕಾಣಿಸದೆ ಹೋದವನು: ಅಂತು ನೋಡೆ ನೋಡೆ ಶರತ್ಸಮಯಸಮುದಿತ ಜಳಧರ ರೂಪದಿಂದ ಮದೃಶ್ಯರೂಪನಾಗಿ (ಆದಿಪು. ೩-೮ ವ). [ಅದೃಶ್ಯ + ರೂಪ]

**ಅದೃಶ್ಯೆ** (ನಾ). ಅದೃಶ್ಯಳಾದವಳು; ಕಣ್ಣಿಗೆ ಕಾಣಿಸದವಳು: ನಿಕುಂಭಿನಿ . . . ಬಂದ ಪಥದಲದೃಶ್ಯೆಯಾದಳು ಇಂದ್ರಜಿತು ಹೋಮದಲಿ ಪೂರ್ಣಾಹುತಿಯ ಬೇಳಿದನು (ಕೌಶಿರಾ. ೧೯-೩೯). [ಸಂ. ಅದೃಶ್ಯಾ]

**ಅದೃಷ್ಟ** (ಗು). ೧. ಕಾಣದ; ಗೋಚರಿಸದ. (ನಾ). ೨. ಜನ್ಮಾಂತರ ಕರ್ಮಫಲ (ಒಳ್ಳೆಯದು ಅಥವಾ ಕೆಟ್ಟದ್ದು); ವಿಧಿ; ಹಣೆಯ ಬರಹ: ಅವಳ ಅದೃಷ್ಟ ಹಾಗಿದ್ದರೆ ನಾವೇನು ಮಾಡುವುದಕ್ಕಾಗುತ್ತದೆ (ರೂಢಿ). ೩. ಭಾಗ್ಯವಿಶೇಷ; ಸುದೈವ: ನೀನು ನನಗೆ ಇಲ್ಲಿ ಸಿಕ್ಕಿದ್ದು ನನ್ನ ಅದೃಷ್ಟ (ರೂಢಿ). [ಸಂ. (ಅ- + ದೃಷ್ಟ)]

**ಅದೃಷ್ಟಪರೀಕ್ಷೆ** (ನಾ). ಭಾಗ್ಯವಿಶೇಷದ ಪರೀಕ್ಷೆ; ವಿಧಿ ಪರೀಕ್ಷೆ: ಅದು ಕೇವಲ ಅದೃಷ್ಟಪರೀಕ್ಷೆಯಂತಿದೆಯೇ ಹೊರತು ನಿಜವಾದ ಅಭಿವೃದ್ಧಿಯನ್ನು ಅಳೆಯುತ್ತಿಲ್ಲ (ಶಿಕ್ಷದ. ೩೫೦); ಹೈದರನ ಅದೃಷ್ಟ ಪರೀಕ್ಷೆಯಾದಂತಾಯಿತು (ಒಡೆಕ. ೮೯). [ಅದೃಷ್ಟ + ಪರೀಕ್ಷೆ]

**ಅದೃಷ್ಟಪುರುಷಸಂಧಿ** (ನಾ). [ರಾಜ್ಯಶಾ] ಹದಿನಾರುಬಗೆಯ ಸಂಧಿಗಳಲ್ಲಿ ಒಂದು: ಎನ್ನ ಕಾರ್ಯಮಂ ನಿನ್ನ ಬಲ್ಲಮಾಟ್ಕೆಯಿಂ ತೀರ್ಚಿದೊಡೆ ನೀನೆಂದುದಂ ಮಾಟ್ಪೆನೆಂಬುದು ಅದೃಷ್ಟಪುರುಷಸಂಧಿಯೆಂಬುದಕ್ಕುಂ (ಪಂಚತಂ. ೨೨೦-೧೭). [ಅದೃಷ್ಟ + ಪುರುಷ + ಸಂಧಿ]

**ಅದೃಷ್ಟಪೂರ್ವ** (ಗು). ಹಿಂದೆ ಕಂಡಿರದ; ಆ ಮೊದಲು ಕಂಡುಬಾರದ: ಅದೃಷ್ಟಪೂರ್ವಕೃತಕಮಂ ಬಣ್ಣಿಸುತ್ತುಂ (ಶಾಂತಿಪು. ೪-೭೫ ವ); ತನಗದೃಷ್ಟಪೂರ್ವಮಪ್ಪ ಜಿನಾರ್ಭಕನ ಸರ್ವಾಂಗ ಸೌಂದರ್ಯಮುಂ ಸರ್ವಲಕ್ಷಣ ಸಂಪತ್ತಿಯುಂ ಚಿತ್ತಮಂ ಕೌತುಕಂಗೊಳಿಸೆ (ಪುಷ್ಪಪು. ೧೦-೧೬ ವ). [ಅದೃಷ್ಟ + ಪೂರ್ವ]

**ಅದೃಷ್ಟವಂತ** (ನಾ). ಭಾಗ್ಯಶಾಲಿ; ಪುಣ್ಯವಂತ: ಅವನು ಒಳ್ಳೆಯ ಅದೃಷ್ಟವಂತ, ಅವನಿಗೆ ಲಾಟರಿಯಲ್ಲಿ ಬಹುಮಾನ ದೊರೆಯಿತು (ರೂಢಿ). [ಅದೃಷ್ಟ + -ವಂತ]

**ಅದೃಷ್ಟವಶ** (ಗು). ೧. ಅದೃಷ್ಟಕ್ಕೆ ವಶವಾದ; ಭಾಗ್ಯಾಧೀನವಾದ. (ನಾ). ೨. ಭಾಗ್ಯವಿಶೇಷ; ಸುದೈವ: ನನ್ನ ಅದೃಷ್ಟವಶದಿಂದ ನನಗೆ ಒಳ್ಳೆಯ ಹೆಂಡತಿ ಸಿಕ್ಕಿದಳು (ರೂಢಿ). [ಅದೃಷ್ಟ + ವಶ]

**ಅದೃಷ್ಟವಶಾತ್** (ಅ). ಭಾಗ್ಯವಿಶೇಷದಿಂದ; ಸುದೈವದಿಂದ: ಮೊನ್ನೆ ನಡೆದ ಅಪಘಾತದಲ್ಲಿ ನನ್ನ ಸ್ನೇಹಿತ ಅದೃಷ್ಟವಶಾತ್ ಉಳಿದುಕೊಂಡನು (ರೂಢಿ). [ಸಂ. (ಅದೃಷ್ಟ + ವಶಾತ್)]

**ಅದೃಷ್ಟವಾದಿ** (ನಾ). ಅದೃಷ್ಟದಲ್ಲಿ ನಂಬಿಕೆಯುಳ್ಳವನು; ದೈವವಾದಿ. [ಸಂ. ಅದೃಷ್ಟವಾದಿನ್]

**ಅದೃಷ್ಟಶಕ್ತಿ** (ನಾ). ಅಗೋಚರವಾದ ಶಕ್ತಿ; ವಿಧಿಶಕ್ತಿ: ಯಾವ ಜನ್ಮದ ಋಣಾನುಬಂಧವೋ ನಾಲ್ಕುದಿನದ ಒಡನಾಟದಲ್ಲಿ ಅದೃಷ್ಟಶಕ್ತಿಯೊಂದು ಇಬ್ಬರ ಹೃದಯವನ್ನು ಹಾಗೆ ಬೆಸೆದಿತ್ತು (ಹೊಸಕ್ಷಿ. ೩೬). [ಅದೃಷ್ಟ + ಶಕ್ತಿ]

**ಅದೃಷ್ಟಶಾಲಿ** (ನಾ). = ಅದೃಷ್ಟವಂತ: ಅವನು ಅದೃಷ್ಟಶಾಲಿ; ಅವನಿಗೆ ಒಳ್ಳೆಯ ಕೆಲಸವೂ ಸಿಕ್ಕಿತು, ಒಳ್ಳೆಯ ಹೆಂಡತಿಯೂ ದೊರೆತಳು (ರೂಢಿ). [ಸಂ. ಅದೃಷ್ಟಶಾಲಿನ್]

**ಅದೃಷ್ಟಸಂಧಿ** (ನಾ). = ಅದೃಷ್ಟಪುರುಷಸಂಧಿ: ಅರಿವಿಜಿಗೀಷುಗೆ ಭೂಮ್ಯೇಕಪ್ರದೇಶಮಂ ಕೊಟ್ಟು ಮಾಳ್ಪುದು ಅದೃಷ್ಟ[ಪಾಠಾಂ. ಅದುಷ್ಟ] ಸಂಧಿಯೆಂಬುದಕ್ಕುಂ (ಪಂಚತಂ. ೨೨೦-೧೮). [ಅದೃಷ್ಟ + ಸಂಧಿ]

**ಅದೃಷ್ಟಹೀನ** (ನಾ). ಅದೃಷ್ಟವಿಲ್ಲದವನು; ಭಾಗ್ಯಹೀನ: ಈ ಅದೃಷ್ಟಹೀನನ ಮಗ್ಗುಲಲ್ಲಿ ಸ್ವಲ್ಪ ವಯಸ್ಸಾದ ಕುಳ್ಳುಶರೀರದವನೊಬ್ಬನು ಎತ್ತರವಾದ ಟೋಪಿಯನ್ನು ಧರಿಸಿ ಕುಳಿತಿದ್ದನು (ಯೋಧಪು. ೫೩). [ಅದೃಷ್ಟ + ಹೀನ]

**ಅದೆ$_1$** (ಕ್ರಿ). ದೊರಕು; ಸಿಕ್ಕು: ನಿನ್ನಡಿದಾವರೆಯೆದೆಯಲಿ ಮನ್ಮನೋಭ್ರಮರಕದೆಯಲಿ ತೃಷಾಂತಮಚ್ಚರಂ (ಗಿಳಿವಿಂ. ೯೧-೧೯೫); "ಅದೆಯಲಿ = ದೊರಕಲಿ" (ಗಿಳಿವಿಂ. ೧೩೬ ಟಿ). [?]

**ಅದೆ$_2$** (ಅ). ಉಂಟು, ಇದೆ ಎಂಬ ಅರ್ಥವನ್ನು ಕೊಡುವ ಏಕವಚನದ ರೂಪ: ನನ್ನ ಹತ್ತಿರ ಒಂದು ಆಣೆ ರೊಕ್ಕ ಅದೆ (ಮುಂಬಯಿ. ೪-೪೪). [ಅದು + -ಎ$_3$]

**ಅದೆ$_3$**, ಅದೇ (ಅ). ೧. ಗಮನವನ್ನು ಸೆಳೆಯಲು ಉಪಯೋಗಿಸುವ ಅಗೋ ಎಂಬ ಅರ್ಥವುಳ್ಳ ಮಾತು: ಅದೆ ಜಕ್ಕವಕ್ಕಿಗಳ ಹೃದಯದ ರಾಗಂ ಪುದಿದುದೆನಿಸಿ ಕೆಂಪಂ ಕಯ್ಕೊಂಡುದಯಾದ್ರಿಯಿಂದಮುದಯಿಸಿದುದು ಬಿಂಬಂ ಚಕ್ರವಾಕ ಚಕ್ರೇಶ್ವರನಾ (ಕಾದಂಬ. ೧೬೭); ಅ ಹೊಗುವಳು ಹೊಗುವಳದೆಯಿದೆ ಹೋಹಳ್ (ಬಸಪು. ೧೪-೩೩); ಕಲಿ ಭೀಮ ಸಾತ್ಯಕಿ ರೂಹುದೋಱದರದೆ ಘಟೋತ್ಕಚ ಪಾರ್ಥಸುತರೊಡನೆ (ಕುವ್ಯಾದ್ರೋ. ೨-೬೫). **ಅದೇ**: ೨. ಹಿಂದೆ ಹೇಳಿದ್ದನ್ನು ಅಥವಾ ನಡೆದದ್ದನ್ನು ಸ್ಥಿರೀಕರಿಸುವಲ್ಲಿ ಉಪಯೋಗಿಸುವ ಮಾತು: ಅದೇ ಒಬ್ಬರಿಗೊಬ್ಬರು ಸುಖಪಡಿಸುವ ಹಾಗೆ ಮಾಡಿದರೆ ಸಹಜವಾಗಿ ಎಲ್ಲರಿಗೂ ಸುಖವುಂಟಾಗುವದು (ಮುಂಬಯಿ. ೪-೧೫೩ ಕಿ). [ಅದು + -ಎ$_3$]

*__ಅದೆಕೊಳ್__, ಅಕೊ, ಅಕ್ಕೊ, ಅಗೊ, ಅಗೋ, ಅದಿಗೊ, ಅದುಗೊ (ಅ). ದೂರದ ವಸ್ತುವಿನ ಅಥವಾ ವಿಷಯದ ಕಡೆಗೆ ಗಮನ ಸೆಳೆಯಲು ಉಪಯೋಗಿಸುವ ಮಾತು. **ಅಕೊ**: ಕಡೆಗಾಲವಿದು ನೀನು ಕೆಡುವೆ ಅಕೊ ಹುಲ್ಲ ಹಿಡಿದು ಸಾರಿದೆನೆಂದಳೊಡನೆ (ಭರತ. ೫೦-೫೭). **ಅಕ್ಕೊ**: ಅಕ್ಕೊ ಶ್ಯಾಮ ಅವಳೆ ರಾಧೆ ನಲಿಯುತಿಹರು ಕಾಣಿರೆ (ಗೋಕುನಿ. ೨೮). **ಅಗೊ**: ಅಗೊ ಅಲ್ಲಿ ಹೋಗುತ್ತಿರುವ ಮುದುಕನೇ ನಿನ್ನೆ ನಮ್ಮಮನೆಗೆ ಬಂದಿದ್ದವನು (ರೂಢಿ). **ಅಗೋ**: (ಬೆಟ್ಟದ ಕಡೆ ಕೈತೋರಿ) ಅಗೋ (ಆರ್ಯಕ. ೧೪). **ಅದಿಗೊ**: ನೋಡದಿಗೊ ತೋರುತಿದೆ ಬಿರಿದಿನ ಪತಾಕೆ (ಜಿನಮು. ೪೭-೪೧). **ಅದುಗೊ**: (ಕಿ). [ಅದೆ$_3$ + ಕೊಳ್$_1$]

**ಅದೆಬದೆ** 'ಹದಿಬದೆ' ನೋ.

**ಅದೆಯಱಿನಾಡು** (ನಾ). ಒಂದು ಪ್ರದೇಶದ ಹೆಸರು: ಅದೆಯಱಿನಾಡ ಚಿತ್ತೂರ ಮೋನಿಗುರವಡಿಗಳ ಶಿಷಿತ್ತಿಯರ್ ನಾಗಮತಿಗನ್ತಿಯರ್ ಮೂಱುತಿಙ್ಗಳ್ ನೋನ್ತು ಮುಡಿಪ್ಪಿದರ್ (ಎಕ. II, ೨೦-೧; ಸು. 700). [ಅದೆಯಱಿ$_0$ + ನಾಡು]

**ಅದೇ** 'ಅದೆ$_3$' ನೋ.

**ಅದೇಯ** (ಗು). ಕೊಡಬಾರದ: ಎಮ್ಮರಸನನ್ವಯಾಗತಂ ಕುಲಧನಮಾರ್ಗಮದೇಯಮುಮದ್ವಿತೀಯಮುಮಿದು ನಿನ್ನ ಬರವಿಂಗಂ ಚಕ್ರವರ್ತಿಯನುರಾಗಕ್ಕಂ ತಕ್ಕುದು (ಶಾಂತಿಪು. ೨-೭೧ ವ). [ಸಂ. (ಅ- + ದೇಯ)]

**ಅದೈವೆ** (ನಾ). ದೈವಬಲವಿಲ್ಲದವಳು; ಭಾಗ್ಯಹೀನೆ: ಭಾವೆ ಭಾವಿತನೂಭವಾನುಕ್ರಮಪ್ರಭವಭಾವಂಗಳಂ ಭಾವಿಸಿ ಪಲುಂಬಿ ಪಂಬಲಿಸಿಯುಂ . . . ಸನ್ನಿಹಿತದೈವೆಯಾಗಿಯುಮದೈವೆಯಂತೆಯುಂ . . . ಇರ್ಪಿನೆಗಂ (ಚಂದ್ರಪು. ೩-೫೦ ವ). [ಸಂ. ಅದೈವಾ]

**ಅದೊ**, ಅದೋ (ಅ). ಅಗೊ: ಅದೊ ರಜನಿಯನನುರಾಗದೆ ಹೃದಯಮನೇಱಿಸಿದನೆಂಬಿನಂ ಮಂಡಲಮಧ್ಯದೊಳೆಸೆಯಲಾತ್ಮಲಾಂಛನಮುದಯಿಸಿದಂ ರಜನಿನಾಥನುದಯಾಚಲದಿಂ (ಕಾದಂಬ. ೧೪೪). **ಅದೋ**: "ಸ್ಮರಣೆ ಸಂಬೋಧೆಯಲಿ ಹೋ ಅದೋಯೆಂದೆನಿಕು" (ಮಂಗರಾ. ೧೫೬-೭೩). [ಅದು + -ಒ$_3$]

**ಅದೋ** 'ಅದೊ' ನೋ.

**ಅದ್ಗಡಿ** (ನಾ). ಕೂಗಾಟ; ಕಿರಿಚಾಟ (?): ಎಲ್ಲಿಯುಂ ಗೋವುಗಳ ಸರಗಳುಂ ಮೊರಗಳುಂ ಯೆಲ್ಲಿಯುಂ ವತ್ಸಗಳ ಸೀತ್ಕರದ ಪೂತ್ಕರದಲೆಲ್ಲಿಯುಂ ಗೋಪಾಲರದ್ಗಡಿಯ ಹೊದ್ಗಡಿಯ ಹಾಯೆಂದು ನಿಲ್ಲಿಸುತಲಿ (ಜಿನಮು. ೨೧-೪). [?]

**ಅದ್ಗಣಿ** 'ಅದ್ದಗಣಿ' ನೋ.

**ಅದ್ದ** (ನಾ). ೧. ಎರಡರಲ್ಲಿ ಒಂದು ಪಾಲು; ಅರ್ಧ: "ಅದ್ದವೆನಲರ್ಧಂ" (ಕರ್ಣಾನಿ. ೬೦); ದ್ವಿತ್ವಾಗ್ರರೇಫಲೋಪಕ್ಕೆ ಅರ್ಧ - ಅದ್ದ ಕರ್ಕಶ - ಕಕ್ಕಸ (ಶಮದ. ೨೬೧ ಪ್ರಯೋ). ೨. (ಒಂದು ಅಳತೆ) ಬಹುಶಃ ಒಂದು 'ಮಾನ'ದ ಅರ್ಧ: ಅಕ್ಕಿವಸರಕ್ಕೆ ಅಕ್ಕಿಯದ್ದಂ . . . ಗಾಣಕ್ಕೆ ನಿಚ್ಚ(ವೆ)ಣ್ಣೆಯದ್ದಂ (ಎಇ. XIII, ೨೨-೫೫; 1204). 'ಅದ್ದನ' ಪರಾ. [ಪ್ರಾ. ಅದ್ಧ (< ಸಂ. ಅರ್ಧ)]

**ಅದ್ದಕ** (ನಾ). = ಅದ್ದುಗೆ ೨ (ಕಿ). [ಅದ್ದು (< ಅಬ್ದು) + -ಕ$_2$]

**ಅದ್ದಕಾಣಿ** 'ಅದ್ದಗಾಣಿ' ನೋ.

**ಅದ್ದಗಣಿ**, ಅದ್ಗಣಿ, ಅದ್ದುಗಾಣಿ (ನಾ). (ಅಕ್ಕಸಾಲೆ ಉಪಯೋಗಿಸುವ) ಅಡಿಗಲ್ಲು (ಉಕ. ಕಿ). **ಅದ್ಗಣಿ**: ನೀನು ಅದ್ಗಣಿ ಮುಂದೆ ಕುಳಿತರೂ ಆಗಲಿಕ್ಕಿಲ್ಲ (ಹಹಸ. ೩೬). **ಅದ್ದುಗಾಣಿ**: ಕಮ್ಮಾರನ ಅದ್ದುಗಾಣಿಯ ಮೇಲೆ ಸಂತತವಾಗಿ ಸುತ್ತಿಗೆಗಳ ಹೊಡೆತಗಳು ಸಪ್ಪಗಾಗಿ ಕಂಡವು (ಪ್ರೇಮನಿ. ೨೨೧). [?]

**ಅದ್ದಗಾಣಿ**, ಅದ್ದಕಾಣಿ (ನಾ). ಕಾಣಿಯಲ್ಲಿ ಅರ್ಧದಷ್ಟು ಬೆಲೆಯ ನಾಣ್ಯ: ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ ಹರದ ಕುಳ್ಳಿರ್ದ ನಮ್ಮ ಮಹದೇವಸೆಟ್ಟಿ ಒಮ್ಮನವಾದರೆ ಒಡನೆ ನುಡಿವನು; ಇಮ್ಮನವಾದರೆ ನುಡಿಯನು. ಕಾಣಿಯ ಸೋಲ ಅದ್ದ[ಪಾಠಾಂ. ಅರ್ಧ] ಗಾಣಿಯ ಗೆಲ್ಲ (ಬಸವ. ೧೧೫); ಸೀರೆ೧ಕ್ಕೆ ಅದ್ದಗಾಣಿಯೆರಡೆಂಬುದು ವಂದು ಕಾಣಿ (ವ್ಯವಹಾ. ೪೦). **ಅದ್ದಕಾಣಿ**: ಕಾಣಿಯನು ಗಳಿಸದ್ದ ಕಾಣಿಯನು ಈಯುವುದು ಕೇಣದಿಂ ಗಳಿಸಿ ಕಡೆಯಲಿ ಕೊಡುವೆನೆನೆ ಪ್ರಾಣ ಶಾಶ್ವತವೆ (ಸರ್ವಜ್ಞ. ೬೯೪). [ಅದ್ದ + ಕಾಣಿ$_1$]

**ಅದ್ದಣ** 'ಅದ್ದನ$_1$' ನೋ.

**ಅದ್ದನ$_1$**, ಅದ್ದಣ (ನಾ). ಒಂದು ಸಣ್ಣ ಅಳತೆ: ಅದ್ದನ ಜೋಳ ಅರೆ ಮಾನ ಎಣ್ಣೆಯ ಕೊಂಡು (ಮಡಿಮಾ. ೩೪); ಉಪ್ಪಿನ ಹೇಱಿಗೆ ಸೊಲಗೆ ೨

ಹೆಡಗೆಗೆ ಸೊಲಗೆ ೧ ತುಪ್ಪದ ಹೇಱಿಗೆ ಅದ್ದನ ೧ (ಎಕ. XII, ಪಾವುಗ. ೫೦-೬೩ ; 1246) ; ನಂದಾದೀವಿಗೆಯ ಯಂಣೆ ಮೂರುಸೊಲ್ಲಗೆ ಸಖರೆ ಅದ್ದನದಲು ವರುಷ ವೊಂದಕ್ಕಂ (ಎಕ. XI, ಮೊಳಕಾ. ೩೧-೯ ; 1386) ; ಪಾಲ್ಗಡಲೊಳದ್ದನ ಸುಧೆಯ ಬೆರಸುವೆನೆಂಬ ಗಾಂಪನೊಲು (ಶಂಕದಾ. ೬-೧೮). **ಅದ್ದಣ** (ಕಿ). [< ಸಂ. ಅರ್ಧಮಾನ ?]

**ಅದ್ದನ್ನ** (ನಾ). "ಅಡಗಲ್ಲು" (ಗುರುಚಾ. ಕೋಶ) : ಪಂಚಾಳ ಸಮಯ ಗುರುಭ್ರಾಂತಿನಿಂ ಲಿಂಗಂಗಳೆಲ್ಲ ತಮ್ಮಿಂದೆನಲು ಕಾಂತೆಯಳ ಕುಚಮಳಲು ಹಿಕ್ಕೆಯದ್ದನ [ಪಾಠಾಂ. ಬಳ್ಳವು] ಗುಂಡುಕೊರೆದುವುರಿ ಲಿಂಗೋದ್ಭವಂ ಮುಂತಾದುವೆಲ್ಲ ನಿಮ್ಮಿಂದವೇ ಶಿವಭಕ್ತನಂತರಂಗವೆ ಲಿಂಗವೆಂದು ಗೀತವ ಹಾಡಿ (ಗುರುಚಾ. ೧೫-೫೬). 'ಅದ್ದಗಣೆ' ಪರಾ. [?]

**ಅದ್ದಯಿಸು** (ಕ್ರಿ). ಒತ್ತಿ ಒಳಹೊಗಿಸು ; ಅದುಮಿಬಿಡು : ಗೋಣನು ತಿರುಹಿ ಬಸುಱೊಳಗದ್ದಯಿಸಿಯರೆದರೆದು ಕಾಲಲಿ ತಿಕ್ಕಿದನು ಭೀಮ (ಕುವ್ಯಾವಿ. ಓರಿಇ. ೪-೬೦). [ಅದ್ದು + -ಇಸು]

**ಅದ್ದರ**₁ 'ಅದ್ದಲ' ನೋ.

**ಅದ್ದರ**₂, ಅದ್ರ (ಗು). (ಉಕ). ಶಿಥಿಲ ; ಅಸ್ಥಿರ ; ಗಟ್ಟಿಯಲ್ಲದ : ದರಿನಿಲ್ಲದಂಥ ಭಾವಿಗಳಿಗೆ ವಿಚಾರವರಿಯದೆ ಕೆಲವರು ಅದ್ದರವಾಗಿ ಹಂದರ ಭಾವಿಯನ್ನು ಮಾಡಿಸಿ ಮೊಟ್ಟೆಯ ಸಾಗಿಸುವಲ್ಲಿ (ಕೃಷಿಪ್ರ. ೧೦೬). **ಅದ್ರ** : ಈ ಮನುಷ್ಯ ಅದ್ರ ಇದ್ದಾನೆ (ರೂಢಿ). 'ಅದಿರಾಟ' ಪರಾ. [< ಅದಿರ್₁ ?]

**ಅದ್ದರಕ್ಷೆ** (ನಾ). (?) : ಎದ್ದು ಪರಿತಹ ದೇವವೃಂದವನದ್ದಿಸುವೆನೆನೆ ಶಂಭುದಾನವನುದ್ದುರುಟನೆಂದಱಿದು ನಿಂದಾ ದೈತ್ಯಗಿದಿರಾಗಿ ಅದ್ದರಕ್ಷೆ ಯೊಳವನನಾಕ್ಷಣಕದ್ದಿದನು ಭಯರಸದಿ (ಸಂಭಪ. ೬-೩೨). ☞ ಈ ಶಬ್ದ ಅರ್ದು < ಅದ್ದು + ಅರಕ್ಷೆ ಎಂದು ಸೇರಿ ಆಗಿರುವ ಅಪಶಬ್ದವಿರ ಬಹುದು. [?]

**ಅದ್ದರಚಿದ್ದರ** (ನಾ). ಪಡಿಯಚ್ಚು ; ತದ್ರೂಪ ; ಪ್ರತಿಬಿಂಬ : ನಮ್ಮ ಜಾನಕಮ್ಮ ಕೃತಯುಗದ ಹುಡುಗಿ, ಐಶ್ವರ್ಯಕ್ಕೆ ತಕ್ಕ ರೂಪು, ರೂಪಿಗೆ ತಕ್ಕ ಗುಣ, ಗುಣಕ್ಕೆ ತಕ್ಕ ಗಾಂಭೀರ್ಯ, ಎಲ್ಲಾ ತಾಯಿಯ ಅದ್ದರ ಚಿದ್ದರ (ಅದೂಟ. ೩೮). [?]

**ಅದ್ದರಣೆ** (ನಾ). ಒಂದು ಜಾತಿಯ ಗಿಡ : "ಬಹುಪುತ್ರೀ – ಅದ್ದರಣೆ" (ಓಷಧಿ. ೧೦೬). [?]

**ಅದ್ದರಿಸು** 'ಅದ್ದಲಿಸು' ನೋ.

**ಅದ್ದಲ**, ಅದ್ದರ₁, ಅದ್ದಳ (ನಾ). **೧.** ಅಬ್ಬರ ; ಬೊಬ್ಬೆ ; ಘೋಷ : ಪದ್ದುಪಾಡಿಂಗಿಲ್ಲದಾಪ್ತನು ಇದ್ದು ಫಲಮೇನೆನ್ನ ಸಾಹಸದದ್ದಲವ ನೋಡೆಂದು ಬೆಂಬತ್ತಿದನು ಧೂಮ್ರಾಕ್ಷ (ಅಂಬಿಕಾ. ೨೧-೫೬). **ಅದ್ದರ**₁ : 'ಅದ್ದರಿಸು' ಪರಾ. **ಅದ್ದಳ** : **೧.** ನೀರೊಟ್ಟಿಲುಗಳೇಳೊಳದ್ದಳಂ ಮಸಗಿತಾಗ (ವೆಂಕಾರಾ. ೬-೨೮-೫). **೨.** ನಡುಕ ; ಭಯ : ಬದ್ದವಣೆ ಗಳು ಸೂಳೈಸಿದವರಿಗಳಿಗದ್ದಳವನು ಪುಟ್ಟಿಪಂತೆ (ಗೋವುಟೀ. ೩-೫೪).
[ಅರ್₁ + -ದಲ್ + -ಅ]

**ಅದ್ದಲಿಸು**, ಅದರಿಸು, ಅದಲಿಸು, ಅದ್ದರಿಸು, ಅದ್ದಳಿಸು (ಕ್ರಿ). **೧.** ಗಟ್ಟಿಯಾಗಿ ಸದ್ದುಮಾಡು ; ಅರ್ಭಟಿಸು ; ಬೆದರಿಸು : ತಿದ್ದಿ ಮೀಸೆಯ ಮುರುಹಿ ರಕ್ಕಸನೆದ್ದು ನಿಂದಿದ್ದನುಚರರ ಬಿಡದದ್ದಲಿಸೆ ತಂದೊಟ್ಟಿದರು ಗತಜೀರ್ಣವಸ್ತ್ರಗಳ (ತೊರರಾ. ೫-೮-೩) ; ಮಹಾ ಕಾಯಬಲ ನೀನೆಯೆಂದು ಆ ಕದವೆನ್ನನದ್ದಲಿಸುತ ಪೋಪಂತೆ ಗೀಕು ಗಿರ್ರೆನುತ ತೆಱೆದುದು (ಭರಚ. ೩೪-೮) ; ಬರೆದೋದಿ ಮಿಗೆ ನಲಿದಾಡು ತಿರ್ದನನಿಪನ ಕಡೆಯಿಂ ಕೇಡು ಬಹುದೆಂದದ್ದಲಿಸಿ ಚೆನ್ನಾಗಿ ಬರೆಯೆಂದ (ಪ್ರಹ್ಲಾಚ. ೬-೩) ; ಹೊದ್ದಿ ರವಿ ಪಡುಗಡಲೊಳಡಗಿದರದ್ದಲಿಸಿ ಖಳನಲ್ಲಿ ಕಹಳೆಗಳೆದ್ದು ಭೋರ್ಗರದುಲುಹು ಕೇಳಿಸಿತಾಗ (ಅಂಬಿಕಾ. ೧೧-೪೧) ; **ಅದರಿಸು** : **೨.** ಆದುರು ; ನಡುಗು ; ಅಲ್ಲಾಡು (ಕಿ). **ಅದಲಿಸು** : **೨.** (ಕಿ). **ಅದ್ದರಿಸು** : **೧.** ಕಳ್ಳಂ ಎಲೆ ಬ್ರಾಹ್ಮಣಾ ನಿನ್ನಂ ಬ್ರಹ್ಮ ರಾಕ್ಷಸಂ ಪಿಡಿಯಲ್ ಬಂದಿರ್ದಪಂ ಬೇಗಮೇಱೆಂಬುದುಮದಂ ಕೇಳ್ದು ಬ್ರಾಹ್ಮಣನೆಚ್ಚೆತ್ತುದಾರೆಲವೋ ಎಂದದ್ದರಿಸಿ [ಪಾಠಾಂ. ದಬ್ಬರಿಸಿ] ಬರ ಲೊಡಂ ತಸ್ಕರನುಂ ಬ್ರಹ್ಮರಾಕ್ಷಸನುಮೋಡಿ ಪೋದರ್ (ಪಂಚತಂ. ೨೪೮-೧) ; ಮುಟ್ಟುವುದಕ್ಕೆ ಮುನ್ನವೆ ಅಟ್ಟಿ ಅದ್ದರಿಸಿ ಕುಟ್ಟಿ ಓಡಿಸುವವು (ಏಲೇಶ್ವ. ೧೭೮) ; ಅದ್ದರಿಸಿ ಕೋಡಗವ ಕಡಿ ಕವಿಯೆನುತಲುರವಣಿಸೆ (ಮೈರಾಕಾ. ೪-೧೭) ; ಮುಳಿದು ಕಣ್ಗಿಡಿಗೆದಱುತ ಖಾನ ಹಿನ್ನೆಲೆಗೆಳಸಿ ದೊಜ್ಜೀರ ಮುಲುಕರ ಸಲೆ ಜಱೆದದ್ದರಿಸುತ ಪೌಜನಲ್ಲಲ್ಲಿ ಬಲಿದನು ಬಹುಳ ಸನ್ನಹದೆ (ಕಂಠವಿ. ೧೫-೨೭) ; ಎತ್ತುಗಳನ್ನು ಅದ್ದರಿಸಿ ಬಂಡಿ ಯನ್ನು ಬೇಗ ಬೇಗ ನಡಸು (ರೂಢಿ). **೨.** ಧ್ವನಿಯು ಬಹು ದೊಡ್ಡದಾ ದರೆ . . . ಒಮ್ಮೊಮ್ಮೆ ಕಿಡಿಕೆಗಳು ಅದ್ದರಿಸಿ ಅವುಗಳ ಕನ್ನಡಿಗಳು ಒಡೆ ಯುತ್ತವೆ (ಮುಂಬಯಿ. ೫-೧೦೬). **ಅದ್ದಳಿಸು** : **೧.** ರುದ್ರಭೇತಾಳಿಯಂ ಕೂಡಿಕೊಂಡೊಂಕಾಳಿಯಾ ದುರ್ಗಿಬೊಬ್ಬಿಡುತಾಯುಮೆ ವಾಲಗಕೆ ಬರು ತಹಳೆ ಅದ್ದಳಿಪಳದಕೆ ನೀ ನಡುಗದಿರುವುದುಗದಿರು ಗಾಢದಿಂ ನೋಡೆಂ ದನೂ (ಗುಭಚ. ೪೨-೮೬).
[ಅದ್ದಲ + -ಇಸು. / **ತುಳು.** ಅದ್ದಲಿಪುನಿ ; **ತೆಲು.** ಅದಲಿಂಚು]

**ಅದ್ದಳ** 'ಅದ್ದಲ' ನೋ.

**ಅದ್ದಳಂಗೈ** (ಕ್ರಿ). ಗರ್ಜಿಸು ; ಸಿಂಹನಾದಮಾಡು : ಅದ್ದಳಂಗೈವ ದಶಶಿರನ ವಧಿಸಲ್ ಸಮಯುಬದ್ಧಮೆಸಗಿ (ವೆಂಕಾರಾ. ೬-೫೩-೧).
[ಅದ್ದಳ (= ಅದ್ದಲ) + ಗೈ (< ಕೆಯ್₁)]

**ಅದ್ದಳವೇಳು** (ಕ್ರಿ). ಮೊರೆಯೇಳು ; ಕ್ಷೋಭೆಗೊಳ್ಳು : ಅದ್ದಳವೆದ್ದು ದಂಬುಧಿ ಗಗನದೊಳಿದ್ದು ಬಿದ್ದುವು ನಕ್ಷತ್ರ ನಿಚಯ ಎದ್ದುವು ಧೂಮ ಕೇತುಗಳು ಬಾಣಾಸುರನದ್ದರಿಸಲು ಕುಮಾರಕನ (ಮೋಹತ. ೩೫-೨೭) ; ಶರಧಿಯ ಮಥಿಸಲದ್ದಳವೆದ್ದು ಮೇರುವ ತೆರೆಗಳಪ್ಪಳಿಸಿ ಪೊಯ್ವಂತೆ (ನಾಗಕು. ೩೦-೧೪೭). [ಅದ್ದಳ (< ಅದ್ದಲ) + ಏಳು₁ (< ಏೞ್₁)]

**ಅದ್ದಳಿಸು** 'ಅದ್ದಲಿಸು' ನೋ.

**ಅದ್ದಾನ** (ನಾ). ಕಷ್ಟ ; ಸಂಕಟ : ವಿದ್ಯವೆ ಮಾತಾಪಿತರುಂ ಬುದ್ಧಿಯೆ ಸೋದರರು ವಿನಯವಚನಮೆ ನಂಟಂ ಅದ್ದಾನ ಹಿಂಗಿ ಸುಖದಿಂದಿದ್ದುದೆ ತನ್ನೂರು ಕೇಳು ಚೂಡಾರತ್ನಾ (ನೀತಿಸಾ. ೨೨). [ಸಂ. ಅಧ್ವಾನ]

**ಅದ್ದಿಕೆ**, ಅದ್ದಿಗ₁ (ನಾ). **೧.** ಅಧ್ಯಕ್ಷ ; ಮೇಲುವಿಚಾರಣೆ ಮಾಡುವ ಅಧಿಕಾರಿ ; ಮುಖ್ಯಾಧಿಕಾರಿ : "ಯತ್ವಮಿಶ್ರ ಧಕಾರಕ್ಕಿತ್ವಂ ಬೆರಸಿದ ದಕಾರಂ – ಅಧ್ಯಕ್ಷ – ಅದ್ದಿಕ" (ಶಮದ. ೨೭೬ ಪ್ರಯೋ) ; ಯಾ ಸ್ಥಳಂ ಗಳಿಗೆ ಅಧಿಕಾರ ಅದ್ದಿಕ ಕೋಲುಕಾಱರು ಮುಂತಾಗಿ ಆರೂ ಹೊಗಸಲ್ಲ (ಎಕ. III, ತಿರುಮ. ೧೦೦-೩೩ ; 1281) ; " . . . ಭಾರತದ ಅದ್ದಿಕ ನಾದ ಜಸೋಯೆಯ ಮಗನ ಹಾಗೆ ತಾನೂ ತಿಕ್ಕಬಿಜ್ಜೆಯವನಾದನು" (ಭಾಷಾಶಾ. ೨೯೨). **೨.** ಮೇಲ್ವಿಚಾರಣೆ ; ಮುಖ್ಯಾಧಿಕಾರ : ಸೋಮ್ಮೆಯ ದಣ್ಣಾಯಕರ ಅದ್ದಿಕದ ನರಸಿಂಹದೇವ (ಎಕ. VI, ಚಿಕ್ಕಮ. ೮೯-೨೮ ; 1265) ; ಆ ಅದ್ದಿಕದ ಗೋವಿಂದದೇವ (ಎಕ. XIV, ಬೇಲೂರು. ೨೫೦-೪ ; 1298) ; ಕೊಂಡರಾಜಗಳ ಅದ್ದಿಕ (ಇಆ. X, ೬೪-೫ ; 1543). **೩.** ಸಮಕ್ಷ ; ಸಮ್ಮುಖ : ವೂರು ಜಗತ್ತು ಅದ್ದಿಕದಲೂ ಕುಡಾಕೂರ ದೇವಂಣಸೇನಬೋವ ಮಾಡಿಸಿದ ಧರ್ಮವೂ ನಡೆಯದೆ ಯಿರಲಾಗಿ (ಸೌಇಇ. IX-ii, ೪೪೧-೧೩ ; 1425) ; ಆ ಖೂನಿ ದರ್ಯಾಫ್ತನ್ನು ಮಾಡಿಯಾ ಜನರೆಲ್ಲರಂ ಅದ್ದ[ದ್ದಿ]ಕದಿ ಕರದುಕೊಂಡೈದುವಂತೆಯು

. . . ಉಸುರು ನೀನು (ಅರ್ಚಾವಿ. ೩೧-೩೪). **ಅದ್ದಿಗ$_1$ : ೨.** ಉತ್ಪತ್ತಿ ಎಂಬ ಬ್ರಹ್ಮನ ಬಲೆಯಲ್ಲಿ ಸಿಲುಕಿ ಮುಳುಗಿದರು ಬಲ್ಲೆನೆಂಬ ಬ್ರಹ್ಮಿಗಳು ಇಂತೀ ಅಳಿಉಳಿವ ಕಳೆದು ತನ್ನ ತಾನಱಿದು ಅಱಿವಿನ ಘನದಱಿವಿನಲ್ಲಿ ಪರಿಪೂರ್ಣವಾದವಂಗೆ ಮಾಯೆಯ ಅದ್ದಿಗನ[ವಿ]ಲ್ಲ (ಪೋಳಿವಾ. ೧೪೪-೭೦೪).

**ಅದ್ದಿಕದವನು** = ಅಧ್ಯಕ್ಷ ಸ್ಥಾನದಲ್ಲಿರುವವನು; ಗೊತ್ತುಗಾರ; ಮುಖಂಡ: "ತುಱುಹಟ್ಟಿಯ ಅದ್ದಿಕದವನು = ಗೋಷ್ಠಾಧ್ಯಕ್ಷ" (ನಾಚಿರಾ. ೬); ಅದ್ದಿಕದವರಾಜ್ಞೆಯಲಿ ಸಂಕಲ್ಪವ ತಿದ್ದಿಕೊಂಡೊಳ ಪುಗುವುದಕೆ ಗುಬ್ದಾಡಿದರು ಬಾಗಿಲು ಹಿಡಿಯದೆ ಪೊಕ್ಕು ಗದ್ದುಗೆವಿಡಿದ ರಿಕ್ಕೆಲದಿ (ಮೋಹತ. ೩-೪೪). 'ಅದ್ದುಕ' ಪರಾ. [ಸಂ. ಅಧ್ಯಕ್ಷ]

**ಅದ್ದಿಕೆ** 'ಅದ್ದುಗೆ' ನೋ.

**ಅದ್ದಿಗ$_1$** 'ಅದ್ದಿಕ' ನೋ.

**ಅದ್ದಿಗ$_2$** (ನಾ). ಕುದುರೆಯ ಒಂದು ಲಕ್ಷಣ(?): ಅದ್ದಿಗನರೆವಾಲ ಬಿದ್ದ ಕಿವಿಯ ತೇಜಿ ಹೊದ್ದಲೀಯದ ಹೋಜಕಾಲಂ ಇದ್ದೆಡೆ ಯಿರದ ಹಯವ ಹಲ್ಲಣಿಸಿಯೆ ಹೊದ್ದ ಹಿಡಿದು ತೋಱಿದರು (ಅಂಜಚ. ೬-೮೭). [?]

**ಅದ್ದಿಟ್ಟು** (ನಾ). **೧.** ಹಪ್ಪಳ, ಪೂರಿ, ಚಿರೋಟಿ ಮುಂತಾದವನ್ನು ಒತ್ತುವಾಗ ಮಣೆಗೂ ಲಟ್ಟಣಿಗೆಗೂ ಹಸಿಯ ಹಿಟ್ಟು ಅಂಟದಿರು ವುದಕ್ಕಾಗಿ ಅದ್ದಿಕೊಳ್ಳಲು ಇಡುವ ಹಿಟ್ಟು ಅಥವಾ ಪುಡಿ; ಅದ್ದುವ ಹಿಟ್ಟು: ಈಗ ತಾನೆ ಪಾರ್ವತಮ್ಮ ಅದ್ದಿಟ್ಟನ್ನು ತಯಾರಿಸುವ ಕೆಲಸಕ್ಕೆ ಕೈಹಚ್ಚಿದ್ದಾಳೆ (ಹಂಕತೆ. ೨೫). **೨.** ಬೋಂಡ ಮೊದಲಾದ ಕರಿಯುವ ಪದಾರ್ಥಗಳನ್ನು ಅದ್ದಿಹಾಕುವುದಕ್ಕೆ ಉಪಯೋಗಿ ಸುವ ಕಲಸಿದ ಹಿಟ್ಟು: ಕಡಲೆಬೇಳೆಯ ಹಿಟ್ಟನ್ನು ಬಜಿ ಮತ್ತು ಬೋಂಡಕ್ಕೆ ಅದ್ದಿಟ್ಟಾಗಿಯೂ, ಸಿಹಿತಿಂಡಿಗಳನ್ನು ತಯಾರಿಸುವುದಕ್ಕಾ ಗಿಯೂ ಉಪಯೋಗಿಸುತ್ತಾರೆ (ಅಡುಸೌ. ೭೭). 'ಒತ್ತಿಟ್ಟು' ಪರಾ. [ಅದ್ದು (< ಅಬ್ದು) + ಹಿಟ್ಟು (< ಪಿಟ್ಟು)]

**ಅದ್ದಿಯಾಪಳ್ಳಿ** (ನಾ). ಒಂದು ಸ್ಥಳದ ಹೆಸರು: ಇಡುಗುರ ಗವುಣ್ಡ ತನದಕಯ್ಯ ಅದ್ದಿಯಾಪಳ್ಳಿಯೊಳ್ ತುಱುಗೊಳೊಳ್ಸತ್ತ (ಎಕ. XIV, ನಾಗಮಂ. ೧೧೧-೩; 961). [?]

**ಅದ್ದಿಸು$_1$** 'ಅರ್ದಿಸು$_1$' ನೋ.

**ಅದ್ದಿಸು$_2$** 'ಅರ್ದಿಸು$_2$' ನೋ.

**ಅದ್ದು** 'ಅಬ್ದು' ನೋ.

**ಅದ್ದುಗಾಣಿ** 'ಅದ್ದಗಣಿ' ನೋ.

**ಅದ್ದುಗೆ,** ಅದ್ದಿಕೆ (ನಾ). **೧.** ಮುಳುಗುವುದು: ಭಯರಸದದ್ದುಗೆಯ ಮಂಜಿಡಿಕೆ ಮನದವರಿದ್ದು ಫಲವೇನು (ಕುವ್ಯಾಅ. ಒರಿ೩. ೨೦-೨೭). **೨.** ಅದ್ದುವುದು; ಮುಳುಗಿಸುವುದು: ಬಿದ್ದುದರಸನ ದೃಷ್ಟಿ ಮೋಹನ ದದ್ದುಗೆಯ [ಪಾಠಾಂ. ಗದ್ದುಗೆಯ] ಮೋಹಿನಿಯ ಮೇಲೊಡನಿದ್ದುದೈ ನೃಪಗೇಕಪತ್ನೀವ್ರತಪರಿಜ್ಞಾನ (ತೊರರಾ. ೩-೪-೮). **ಅದ್ದಿಕೆ : ೨.** (೬). **೩.** ಬಣ್ಣಹಾಕುವುದು (ದಕ. ೬). [ಅದ್ದು (< ಅಬ್ದು) + -ಗೆ]

**ಅದ್ದುತ[ಕ]ಮುದ್ರೆ** (ನಾ). ಅಧ್ಯಕ್ಷನು ಅಧಿಕಾರ ಸೂಚಕವಾಗಿ ಕೊಡುವ ಮುದ್ರೆ (?): ದಾಸವೂಳಿಗಕ್ಕೆ ಯಾರೂ ಇಲ್ಲವೆಂದು ಅರ್ಚಕರು ರಂಗಪತಿ ಆಚಾರ್ಯರೂ ಹೇಳಲಾಗಿ . . . ಲೋವಿದಾಸಗೆ ಶ್ರೀ ಸ್ವಾಮಿಯವರ ಪಾರಿವೂಳಿಗ ಶಂಖು ಜಾಗಟೆ ಗುಡಿಕಾವಲು ಅದ್ದುತ [ಕ]ಮುದ್ರೆ ಸಹ ಅಪ್ಪಣೆ ಪಾಲಿಸಿ (ಮೈಆರಿ. ೧೯೨೯, ೭-೧೬; 1673). ಮಠಮುದ್ರೆ ಹೋ. ℙ ಈ ಶಬ್ದವನ್ನು ಅದ್ದುಕ ಮತ್ತು ಮುದ್ರೆ ಎಂದೂ ಬಿಡಿಸಬಹುದು. [ಅದ್ದುಕ$_0$ (ಅದ್ದು + -ಕ) + ಮುದ್ರೆ]

**ಅದ್ದೂರಿ** 'ಅದ್ಧೂರಿ' ನೋ.

**ಅದ್ದೆ** (ಗು). ಬೇರೊಬ್ಬನ ಸ್ಥಾನದಲ್ಲಿಯ; ಬದಲಿ. 'ಅದ್ದೇಕೆಲಸ', 'ಅದ್ದೇಚಾಕರಿ' ಪರಾ. [← ತೆಲು. ಅದ್ದೆ = ಬಾಡಿಗೆ]

**ಅದ್ದೆಪರ** (ನಾ). ಒಬ್ಬಾತನ ಹೆಸರು: ಶ್ರೀಪುರುಷ ರಾಜ್ಯಂಗೆಯ್ಯುತ್ತಿರೆ ಅದ್ದೆಪರ ಕೆಱೆಯ ಕಟ್ಟೆ (ಮೈಆರಿ. ೧೯೧೪; ೧೪-೭; 788). [?]

**ಅದ್ದೇಕೆಲಸ** (ನಾ). ಒಬ್ಬನು ಮಾಡಬೇಕಾದ ಕೆಲಸವನ್ನು ಮತ್ತೊಬ್ಬನು ಮಾಡುವುದು (ದಕ. ೬). [ಅದ್ದೆ + ಕೆಲಸ]

**ಅದ್ದೇಚಾಕರಿ** (ನಾ). = ಅದ್ದೇಕೆಲಸ (ದಕ. ೬). [ಅದ್ದೆ + ಚಾಕರಿ]

**ಅದ್ದೇಲಿ** (ನಾ). (ಉಕ). ಒಂದು ಬಿಡಿಕಾಸು: ಪೇಟಿಯಲ್ಲಿ ದುಡ್ಡು ಅದ್ದೇಲಿಯ ಸಾಮಾನೂ ಉದ್ದರಿಯಾಗಿ ಹುಟ್ಟುತ್ತಿರಲಿಲ್ಲ (ಪ್ರೇಮಾಶ್ರ.೬). [← ಮರಾ. ಅಧೇಲಿ = ಅರ್ಧರೂಪಾಯಿ, ಅರ್ಧಪೈಸ. / ತುಳು. ಅದೇಲಿ, ಅದೋಲಿ = ಅರ್ಧಾಣೆ]

**ಅದ್ದೊರೆಯ** (ನಾ). ದೇವರ ಅಭಿಷೇಕಕ್ಕಾಗಿ ನೀರು ತರುವವನು (?): ಅಘಣಿಯ ತಹ ಅದ್ದೊರೆಯರ ಜನ ಎರಡಕಂ ಪ್ರತಾಪ ಮೂವ ತ್ತಾರು ಭೋಗಮುದ್ಧಲೆ ಸಹ ಜನ ಏಳಕಂ ಪ್ರತಾಪಯೆಪ್ಪತ್ತೆಂಟು (ಎಕ. XI, ಮೊಳಕಾ. ೩೧-೧೭; 1386). [?]

**ಅದ್ದುರಿ** 'ಅದ್ಧೂರಿ' ನೋ.

**ಅದ್ಧೂರಿ,** ಅದ್ದೂರಿ, ಅದ್ದುರಿ (ನಾ). **೧.** ವೈಭವ; ವಿಜೃಂಭಣೆ: ದುರ್ಯೋಧನನು ತುಂಬ ಉತ್ಸಾಹದಿಂದ ಯಜ್ಞ ನಡಸಿದನು . . . ಎಲ್ಲವೂ ಅದ್ಧೂರಿಯಿಂದ ನಡೆಯಿತು (ವಚಭಾ. ೧೬೪); ಕಮಲ ಬದುಕಿದ್ದಾಗ ತನ್ನ ಮನೆ ಅದ್ಧೂರಿಯಾಗಿ ನಡೆಯುತ್ತಿದ್ದ ದಿನಗಳನ್ನು ಜ್ಞಾಪಿಸಿಕೊಳ್ಳುವಳು (ಶನಿಸಂ. ೩). **ಅದ್ದೂರಿ : ೧.** ಮದುವೆಯ ಸಂಜೆ ಆರತಕ್ಷತೆ ತುಂಬಾ ಅದ್ದೂರಿಯಾಗಿ ನಡೆಯಿತು (ಮುಚ್ಚಿಬಾ. ೩೦); ನಂಜುಂಡಪ್ಪ ಹೆಸರಾಂತ ಹಾಸ್ಯನಟ. ಒಂದು ಕಾಲದಲ್ಲಿ ನೂರಾರು ರೂಪಾಯಿ ಸಂಬಳ ತೆಗೆದುಕೊಳ್ಳುತ್ತಿದ್ದ. ಎಷ್ಟೋ ಅದ್ದೂರಿಯಾಗಿದ್ದ (ಮಧುಸಂ. ೩೫); ಆರಿದ್ರೆ ಮಳೆ ಅದ್ದೂರಿ ಬೆಳೆ (ಗಾದೆ). **ಅದ್ದುರಿ : ೨.** ಉತ್ಕೃಷ್ಟ: ಅದ್ದುರಿಯ ಜಂಬೀರ ಲವಣ ಶಾಕಂಗಳ ಪ್ರಬುದ್ಧೆ ಕಾಂತೆಗಂದಿಕ್ಕಿ (ಪರಶು. ೧೫-೩೩). [ಸಂ.]

**ಅದ್ಭುತ** (ಗು). **೧.** ಅತ್ಯಾಶ್ಚರ್ಯಕರವಾದ; ವಿಸ್ಮಯವನ್ನುಂಟು ಮಾಡುವ. (ನಾ). **೨.** ಅತ್ಯಾಶ್ಚರ್ಯಕರವಾದ ವಸ್ತು ಅಥವಾ ಸಂಗತಿ: ಹೆಜ್ಜೆಯ ಹಿಡಿದು ಬಳಿಸಲಿಸಿದನು ಬರೆಬರೆ ಕಂಡನದ್ಭುತವ (ಕುವ್ಯಾಅ. ೨೩-೨೭); ಅಲ್ಲಿ ನಾವು ನೋಡುತ್ತಿದ್ದಂತೆಯೇ ಒಂದು ಅದ್ಭುತ ನಡೆದುಹೋಯಿತು (ರೂಢಿ). **೩.** [ಕಾವ್ಯಮೀ] ನವರಸ ಗಳಲ್ಲಿ ಒಂದು: ವಿಸ್ಮಯ ಭಾವಾಶ್ರಯಮುದ್ಭುತರಸಮೆನಿಪ್ಪ ಪೆಸರಂ ಪಡೆಗುಂ (ಕಾವ್ಯಾವ. ೮೨೧). [ಸಂ.]

**ಅದ್ಭುತಚಿತ್ತ** (ಗು). ವಿಸ್ಮಯದಿಂದ ಕೂಡಿದ ಮನಸ್ಸುಳ್ಳ; ಅತ್ಯಾಶ್ಚರ್ಯ ಹೊಂದಿದ: ಅತ್ತಲೆಲ್ಲಾ ಪುರಜನಂಗಳ ಮೊತ್ತವದ್ಭುತ ಚಿತ್ತರಾಗುತ್ತತ್ತ ಬಿಜ್ಜಳನೊಡನೆ ತಾವೈತಂದು ನೋಡುತಿರೆ (ಬಸಪು. ೨೨-೫೭). [ಅದ್ಭುತ + ಚಿತ್ತ]

**ಅದ್ಭುತರಸ** (ನಾ). = ಅದ್ಭುತ ೩: ಹೆಬ್ಬಿದಿರಿನ ಅತ್ಯೌನ್ನತ್ಯವನ್ನು ಮನ ಗಾಣಿಸುವ ಕೆಳಗಿನ ಪದ್ಯದಲ್ಲಿ ಉತ್ಪ್ರೇಕ್ಷೆ ಅದ್ಭುತರಸಕ್ಕೆ ಅಂಗವಾಗಿ ಬಂದಿರುವುದನ್ನು ನೋಡಬಹುದು (ಭಾರವಿಾ. ೪೧೪). [ಅದ್ಭುತ + ರಸ]

**ಅದ್ಭುತಾಕೃತಿ** (ನಾ). ಬೃಹತ್ಪ್ರಮಾಣದ ಆಶ್ಚರ್ಯಕರವಾದ ಆಕಾರ, —ರೂಪ: ಅದ್ಭುತಾಕೃತಿಯನಾಂತಾ ರಾಮನಂ ಪೊತ್ತು ಕೊಂಡು . . . ನಾಕಂಬರಂ ಪಾಱುತುಂ (ಜಗವಿ. ೪-೫೩). [ಅದ್ಭುತ + ಆಕೃತಿ]

**ಅದ್ಭುತೋಪಮೆ** (ನಾ). [ಕಾವ್ಯಮೀ] ಒಂದು ಬಗೆಯ ಉಪಮಾಲಂಕಾರ: ಕನುಳಂ ಲಲಿತಭ್ರೂವಿಭ್ರಮುಮಂ ವಿಸ್ಮಿತವಿಲೋಲಲೋಚನಯುಗಮಂ ಸಮವಾಯುಮುಳ್ಳೊಡದು ನಿನ್ನ ಮೊಗಕ್ಕೆಣೆಯೆಂಬುದದ್ಭುತೋಪಮೆ ನಿಯತಂ (ಕವಿರಾ. ೩-೬೮). [ಅದ್ಭುತ + ಉಪಮೆ]

**ಅದ್ಭೂತ** 'ಅದುಭುತ' ನೋ.

**ಅದ್ಮರ** (ನಾ). ಅತಿಯಾಗಿ ತಿನ್ನುವವನು; ಹೊಟ್ಟೆಬಾಕ: "ಭಕ್ಷಕಃ, ಘಸ್ಮರಃ, ಅದ್ಮರಃ – ಈ ೩ ತಿನ್ನಾಳಿ" (ಹಲಾಯು. ೫೮–೯೫). [ಸಂ.]

**ಅದ್ಯತನ** (ಗು). ೧. ಈಚಿನ; ಈಗಿನ; ಆಧುನಿಕ. (ನಾ). ೨. ಈಚಿನವನು; ಈಗಿನ ಕಾಲದವನು: ಈ ರಘುವಂಶ ರಾಮಕೃತಿಯೊಳ್ ಪತ್ತೆಂಟುಪದ್ಯಂಗಳಂ ಪೊಸೆವೆಂ ಯತ್ನದಿನಾದ್ಯರದ್ಯತನರೇಕಾರಾದೊಡಂ ಪೇಟಿರೇ (ಪಂರಾಮಾ. ೧–೩೩); ಅದ್ಯತನನಾಗಿಯುಂ ನೆಗಳ್ದಾದ್ಯರ ದೊರೆಯೆನಿಸಿ ನೆಜಿದು ಸಾಹಿತ್ಯಕಳಾಹೃದ್ಯತೆಯಿನೆಸೆವನಾ ನಿರವದ್ಯಗುಣಂ ಸಂದ ನಾಗಚಂದ್ರ ಕವೀಂದ್ರಂ (ನೇಮಿಪು. ೧–೨೨). [ಸಂ.]

**ಅದ್ಯಾಪಿ** (ಅ). ಇನ್ನೂ; ಇಲ್ಲಿಯ ತನಕವೂ: ಕೊಲ್ಲಾಪುರದ ಲಕ್ಷ್ಮೀಸೇನ ಮಠಾಧಿಪತಿಗಳು . . . ತಮ್ಮ ಶಿಷ್ಯವರ್ಗಕ್ಕೆ ಅದ್ಯಾಪಿ ಕಳುಹಿಸಿಕೊಡುತ್ತಿರುವ ಕನ್ನಡ ಶ್ರೀಮುಖಗಳೂ ಸಾಕಾದ ನಿದರ್ಶನಗಳಾಗಿವೆ (ಕವಿಚ. III, XX ಮು); ವರಾನ್ವೇಷಣೆಯಲ್ಲಿ ಎಷ್ಟೋವರುಷ ಕಳೆಯಿತು. ಅದ್ಯಾಪಿ ನನ್ನ ಮಗಳ ಮದುವೆ ಆಗಿಲ್ಲ (ರೂಢಿ).
[ಸಂ. (ಅದ್ಯ + –ಅಪಿ)]

**ಅದ್ರ** 'ಅದ್ದರ್ಯ' ನೋ.

**ಅದ್ರವ್ಯ** (ನಾ). ದ್ರವ್ಯವಲ್ಲದ್ದು. [ಸಂ. (ಅ– + ದ್ರವ್ಯ)]

**ಅದ್ರಿ** (ನಾ). ೧. ಬೆಟ್ಟ; ಪರ್ವತ: ತುಱುಗಿದ ತಾರಾಪುಂಜದೆ ಮಿಱುಗುತ್ತಿರ್ದಪುದೊ ಪಕ್ಷಿಮಾದ್ರೀಂದ್ರಮೆನಲ್ (ಕಾದಂಪೂ. ೩೨). ೨. ಕಲ್ಲು. ೩. ಮರ: "ವೃಕ್ಷಃ, ಅಂಘ್ರಿಪಃ . . . ಅದ್ರಿಃ . . . ಪಾದಪಃ – ಈ ೧೯ ಮರಂ" (ಹಲಾಯು. ೨೯–೩೩). ೪. ಸೂರ್ಯ: "ಆದಿತ್ಯನಲ್ಲಿಯುಂ ಅದ್ರಿಯೆಂಬುದು" (ಹಲಾಯು. ೧೩೭–೩೪). ೫. ಏಳು ಎಂಬ ಸಂಖ್ಯೆಯ ಸಂಕೇತ: "ಸಪ್ತ, ಭಯ, ಅದ್ರಿ, ಗಿರಿ . . . ಅಶ್ವ ಇಂತಿನಿತುಂ ೭ಕ್ಕೆ ಹೆಸರು" (ವ್ಯವಹಾ. ೧೦). ೬. ಒಂದು ಅಳತೆ. [ಸಂ.]

**ಅದ್ರಿಕನ್ಯೆ** (ನಾ). (ಹಿಮಾಲಯ) ಪರ್ವತದ ಮಗಳು; ಪಾರ್ವತಿ; ಗಿರಿಜೆ: ನೆತ್ತರ್[ಪೊರೆದದ್ರಿ]ಕನ್ಯೆಯಡಿಯಂತಿರಲೇನೆಸೆದಿರ್ದುವಡಿಗಳಾಕನ್ನಿಕೆಯ (ಕಾದಂಪೂ. ೪೪). [ಅದ್ರಿ + ಕನ್ಯೆ]

**ಅದ್ರಿಕೀಲೆ** (ನಾ). ಭೂಮಿ. [ಸಂ. ಅದ್ರಿಕೀಲಾ (ಅದ್ರಿ + ಕೀಲಾ)]

**ಅದ್ರಿಜ** (ನಾ). ೧. ಬೆಟ್ಟದಲ್ಲಿ ಹುಟ್ಟಿದುದು. ೨. ಶಿಲಾಜಿತು. [ಸಂ.]

**ಅದ್ರಿಜಾತ** (ನಾ). ೧. = ಅದ್ರಿಜ ೧. ೨. ಕಾಡುಕಿಚ್ಚು.
[ಅದ್ರಿ + ಜಾತ]

**ಅದ್ರಿಜೆ** (ನಾ). = ಅದ್ರಿಕನ್ಯೆ: ಅವರದ್ಭುತಾಕಾರದಿಂದಿರ್ದರದ್ರಿಜೆ ನಿರೀಕ್ಷಿಸಿ ಮಹಾಹರುಷಮಂ ತಳೆವುತಿರೆ ತೆರಳಲನುವಾದರು (ವೀಶೈಪು. ೩–೩–೩೨). [ಸಂ. ಅದ್ರಿಜಾ]

**ಅದ್ರಿತನಯೆ** (ನಾ). = ಅದ್ರಿಕನ್ಯೆ: ಭವನ್ನೇಮಂಗಳಂ ಪೊಗಳಲೆನ್ನಳವೆಯೆನ್ನುತಂ ನುತಿಗೈದಳದ್ರಿತನಯೆ (ವೆಂಕಾರಾ. ೫–೧೨–೧).
[ಸಂ. ಅದ್ರಿತನಯಾ (ಅದ್ರಿ + ತನಯಾ)]

**ಅದ್ರಿದಳನ** (ನಾ). ೧. ಪರ್ವತಗಳನ್ನು ಭೇದಿಸುವುದು. ೨. ಪರ್ವತಗಳನ್ನು ಸೀಳುವವನು; ಇಂದ್ರ. ೩. ವಜ್ರಾಯುಧ (ಸ್ಯಾಂಡರ್).
[ಅದ್ರಿ + ದಳನ (= ದಲನ)]

**ಅದ್ರಿಧರ** (ನಾ). ಪರ್ವತವನ್ನು ಧರಿಸಿದವನು; ವಿಷ್ಣು: ತನ್ನೊಳಗಿರ್ದ ಮೌಕ್ತಿಕವಿಳಾಧರಮದ್ರಿಧರಾಂಗರೋಚಿಗಳ್ ತನ್ನೊಳಗೊಳ್ಪುವೆತ್ತು ಪೊಜಪೊಣ್ಮುವವೊಲ್ ಜಳಶೀಕರಂಗಳಿಂದುನ್ನತಮಾದ ಬಟ್ಟೆರೆಗಳಿಂ (ಎಕ. VIII, ಸೊರಬ. ೨೬೧–೧೦; 1408). [ಸಂ.]

**ಅದ್ರಿಭೇದನ** (ನಾ). = ಅದ್ರಿದಳನ. [ಅದ್ರಿ + ಭೇದನ]

**ಅದ್ರಿರಾಜ** (ನಾ). ಪರ್ವತಗಳ ರಾಜ; ಹಿಮಾಲಯ: ಶ್ರೀರಮಣೀ ಮನೋರಮಣಂ ವಾಗ್ರಮಣೀರಮಣಾದ್ರಿರಾಜಪುತ್ರೀರಮಣೀ ಮನೋರಮಣಂ (ಕಇಅ. ೧–೨–೨; 1058). [ಅದ್ರಿ + ರಾಜ]

**ಅದ್ರಿಶತ್ರು** (ನಾ). ಪರ್ವತಗಳ ಶತ್ರು; ಇಂದ್ರ. [ಅದ್ರಿ + ಶತ್ರು]

**ಅದ್ರಿಸಾರ** (ಗು). ೧. ಪರ್ವತದಷ್ಟು ಸತ್ವವುಳ್ಳ. (ನಾ). ೨. ಕಬ್ಬಿಣ.
[ಅದ್ರಿ + ಸಾರ]

**ಅದ್ರೀಶ** (ನಾ). = ಅದ್ರಿರಾಜ. [ಅದ್ರಿ + ಈಶ]

**ಅದ್ರುತ** (ಗು). ತ್ವರೆಯಿಲ್ಲದ; ಮಂದಗತಿಯುಳ್ಳ. [ಸಂ.]

**ಅದ್ರೋಹ** (ನಾ). ದ್ರೋಹವಿಲ್ಲದಿರುವಿಕೆ; ನಿರ್ವಂಚನೆ: ಅದ್ರೋಹ, ದಾನ, ಸತ್ಯ ಇವು ಮೂರು ಉತ್ತಮ ಗತಿಯನ್ನು ಪಡೆಯುವುದಕ್ಕೆ ಸಾಧನಗಳೆಂದು ಹೇಳುತ್ತಾರೆ (ವಚಭಾ. ೩೫೭). [ಸಂ.]

**ಅದ್ಲೆ** (ನಾ). ಗಳುವನ್ನು ಸೀಳಿ ಮಾಡಿದ ದಬ್ಬೆ: ಅದ್ಲೆ ಚೆನ್ನಾಗಿದ್ದರೆ ಹಲಗೆಯ ಯೋಗ್ಯತೆ ಬಂದೀತೇ? (ರೂಢಿ). 'ಅದ್ಲೆಪಟ್ಟಿ' ಪರಾ. [?]

**ಅದ್ಲೆಪಟ್ಟಿ** (ನಾ). ಬಂಡಿ ಅಥವಾ ಗಾಡಿಯ ಪಕ್ಕಗಳಲ್ಲಿ ಸೀಳಿದ ದಬ್ಬೆಗಳಿಂದ ಕಟ್ಟಿದ ತಡಿಕೆ: ಗೊಬ್ಬರದ ಬಂಡಿಯ ಹಿಂದೆ 'ಅದ್ಲೆಪಟ್ಟಿ' ಯನ್ನು ಹಿಡಿದು ನಿಂತು ಬಂಡಿಸವಾರಿ ಮಾಡಬೇಕು (ಬೆಳುಮು. ೧೩೭). [ಅದ್ಲೆ + ಪಟ್ಟಿ]

**ಅದ್ವಂತಿಕೆ** (ನಾ). ನೆವ.
**ಅದ್ವಂತಿಕೆ ಹೇಳು** = ನೆವಹೇಳು (ಸ್ಯಾಂಡರ್). [?]

**ಅದ್ವಂದ್ವ** (ಗು). ೧. ಸುಖ – ದುಃಖ, ರಾಗ – ದ್ವೇಷ ಮೊದಲಾದ ದ್ವಂದ್ವಗಳಿಲ್ಲದ. ೨. ಎರಡಿಲ್ಲದ; ಅದ್ವಿತೀಯ: ಬಂದು ದೂರತರಾಘೌಘಪರಾರ್ಥ್ಯರತ್ನನಿಚಯಾದ್ವಂದ್ವಂ ಮಹಾಪುಣ್ಯದಿಂ ಕೃತಮಾಲಾಮರನಾಥನಂದೆಱಗಿದಂ ಶಾಂತೀಶಪಾದಾಬ್ಜದೊಳ್ (ಶಾಂತಿಪು. ೧೧–೩೫). [ಸಂ.]

**ಅದ್ವಯ** (ಗು). ೧. ಎರಡಲ್ಲದ. ೨. ಎರಡಿಲ್ಲದ; ತಾನೊಂದೇ ಆದ. (ನಾ). ೩. = ಅದ್ವೈತ ೪. ೪. ಪರಮಾರ್ಥ. ೫. ಬುದ್ಧ. [ಸಂ.]

**ಅದ್ವಯವಾದಿ** (ನಾ). ೧. ಒಂದೇ ಹೊರತು ಎರಡಿಲ್ಲವೆಂದು ವಾದಿಸುವವನು; ಬ್ರಹ್ಮಕ್ಕಿಂತ ಭಿನ್ನವಾದದ್ದು ಬೇರೊಂದಿಲ್ಲವೆಂದು ಹೇಳುವವನು; ಅದ್ವೈತಿ. ೨. ಬುದ್ಧ. ೩. ಜಿನ. ೪. ಜೈನ (ಕ).
[ಸಂ. ಅದ್ವಯವಾದಿನ್ (ಅದ್ವಯ + ವಾದಿ + –)]

**ಅದ್ವಯಿತ** (ನಾ). = ಅದ್ವೈತ ೧: ಅದ್ವಯಿತ ತಾನಾಗಿ ಯುದ್ಧವಿನ್ನಾರೊಡನೆ (ಸರ್ವಜ್ಞ. ೩೯೫). [ಸಂ. ಅದ್ವೈತ]

**ಅದ್ವಾರ** (ನಾ). ಪ್ರವೇಶಮಾಡಬಾರದ ಬಾಗಿಲು; ಹಿತ್ತಲುಬಾಗಿಲು: ಮೂಱುಕೋಟಿಯ ಮುಱಿದರದ್ವಾರದಲಿ (ಕುವ್ಯಾಸ. ಓರಿಇ. ೨–೭೧; ೨–೭೭. ನೋ). [ಸಂ.]

**ಅದ್ವಾರಪ್ರವೇಶ** (ನಾ). ಪ್ರವೇಶಮಾಡಬಾರದ ಬಾಗಿಲಿನಿಂದ ಪ್ರವೇಶಮಾಡುವುದು; ಹಿತ್ತಲುಬಾಗಿಲಿನಿಂದ ಬರುವುದು: ಸ್ನಾತಕರು ನಾವ್ ವೈರಿಕುಲದಲಭೀತರದ್ವಾರಪ್ರವೇಶವನೀತಿಯಲ್ಲ ಪುರಾಣಸಿದ್ಧವಿದು (ಕುವ್ಯಾಸ. ಓರಿಇ., ೨–೭೪). [ಅದ್ವಾರ + ಪ್ರವೇಶ]

**ಅದ್ವಿಜ** (ಗು). ೧. ದ್ವಿಜರಿಲ್ಲದ. ೨. ಹಲ್ಲಿಲ್ಲದ: "ಶಿವಿಯಿಲ್ಲವಂ ಮೂಳನಕ್ಕದ್ವಿಜಂ [ಪಾಠಾಂ. ಅದಿಜಂ] ಬೋಡನಕ್ಕುಂ" (ಮಂಗರಾ. ೧೧೫–೬). (ನಾ). ೩. ದ್ವಿಜನಲ್ಲದವನು; ಶೂದ್ರ. ೪. ಕರ್ಮಲೋಪದಿಂದ ಪತಿತನಾದ ದ್ವಿಜ. [ಸಂ.]

**ಅದ್ವಿತೀಯ** (ಗು). ಎರಡನೆಯದಿಲ್ಲದ; ತನಗೆ ಸಮಾನವಾದ ಬೇರೊಂದಿಲ್ಲದ; ಅಸಮಾನ: ಸಹಸ್ರಪುಸ್ತಕಪ್ರಸರಮನತ್ತಿಮಬ್ಬೆ ಪರ ಮಾದರದಿಂ ಬರೆಯಲ್ಕೆವೇಟ್ಟು ಪೆಂಪಸದಳಮದ್ವಿತೀಯಮಸಮಂ ಸಲೆ ಭಾವಿಸಲೆಯ್ದೆ ಬಣ್ಣಿಸಲ್ (ಶಾಂತಿಪು. ಪರಿ.೧–೨); ರುದ್ರನದ್ವಿತೀಯನೆಂದು ನಂಬುವುದು (ಬಸವ. ೫೩೧). [ಸಂ.]

**ಅದ್ವಿತ್ವ** (ನಾ). ೧. ಎರಡಾಗಿಲ್ಲದಿರುವಿಕೆ. ೨. ಸಮಾನವಾದ ಒತ್ತಕ್ಷರ ಬಾರದಿರುವುದು: ಮೊದಲೊಳ್ ಹ್ರಸ್ವೈಕಸ್ವರಮೊದವೆ ಪರಂ ಸ್ವರಮದಾಗೆ ನಣಲಯಳಂಗಳ್ಗುದಯಿಸುಗುಂ ದ್ವಿತ್ವಂ ಪೂರ್ವದೀರ್ಘ ಕವ್ಯಯಕೆ ವರ್ಣತತಿಗದ್ವಿತ್ವಂ (ಶಮದ. ೬೯); ಅದ್ವಿತ್ವ ಧಕಾರಕ್ಕೆ ಜಕಾರಂ – ಧಾತು – ಜಾದು . . . ಆ ಷಕಾರಕ್ಕೆ ಅದ್ವಿತ್ವ ಟಕಾರಂ – ಜ್ಯೇಷ್ಠಾ – ಜೇಟೆ; ಪ್ರತಿಷ್ಠಾ – ಹದಿಟೆ; ಸೌರಾಷ್ಟ್ರ – ಸೊರಟ (ಶಮದ. ೨೮೩ ಪ್ರಯೋ). [ಸಂ.]

**ಅದ್ವೈತ** (ಗು). ೧. ತನಗೆ ಎರಡನೆಯದಿಲ್ಲದ; ತಾನೇ ತಾನಾದ. ೨. ಎಣೆಯಿಲ್ಲದ; ಅಸಮಾನ. (ನಾ). ೩. ವಿಕಾರವಿಲ್ಲದಿರುವಿಕೆ; ಸಮತ್ವ. ೪. [ಅದ್ವೈತ] ಬ್ರಹ್ಮ ಮತ್ತು ಜೀವ ಎಂಬ ಎರಡೂ ಬೇರೆ ಬೇರೆ ಅಲ್ಲ, ಒಂದೇ ಎಂದು ಪ್ರತಿಪಾದಿಸುವ ತತ್ತ್ವ: ಅದ್ವೈತವೆಂಬ ಪದವು ಎರಡು ವಿಧವಾದ ಅರ್ಥದಲ್ಲಿ ಉಪಯೋಗಿಸಲ್ಪಡು ವುದು. ಒಂದನೆಯದು ಭೇದನಿಷೇಧ. ಎರಡನೆಯದು ಐಕ್ಯೋಪದೇಶ (ಹಿಂದಸಾ. ೨೧೨). ೫. ಅದ್ವೈತಿ: ಬೌದ್ಧರುಗಳ ಮದೋದ್ಧತಿಯೆಂಬ ಕಾನನವ ಸವಡಿ ಅದ್ವೈತರನಪಹರಿಸಿ ತವಿಸಿ ಚಾರ್ವಾಕರನವನಿಯೊಳು ಶಿವನ ಭಕ್ತಿಯ ತಾಂ ಪ್ರತಿಷ್ಠಿಸಿ (ಬಸಪು. ೫೩–೧೦); 'ಅದ್ವಯ' ಪರಾ. [ಸಂ.]

**ಅದ್ವೈತಚರಿತ್ರ** (ನಾ). ನಡೆಯಲ್ಲಿ ಎರಡಿಲ್ಲದಿರುವುದು; ಅಂತರಂಗ ಬಹಿರಂಗ ಒಂದೇ ಆಗಿರುವುದು: ಜ್ಞಾನಾಜ್ಞಾನ ಭಾವ ನೋಟ ತಾನಲ್ಲ ಅಱಿವಿನ ಭಾವ ಸ್ವತಂತ್ರವಿಲ್ಲ ಕಾಣಾ ಆಕಾಯದಲ್ಲಿ ಅದ್ವೈತ ಚರಿತ್ರ ಅಱಿವಿನಲನುಗ್ರಹಿಸಿ ಸಕಾಯದಲ್ಲಿ ಸದ್ವೈವಚರಿತ್ರ (ಅವಚಂ. ೧೩೮–೬೨೩). [ಅದ್ವೈತ + ಚರಿತ್ರ]

**ಅದ್ವೈತಭಕ್ತಿ** (ನಾ). ತನ್ನನ್ನು ಪೂರ್ಣವಾಗಿ ಮರೆತು ಮಾಡುವ ಭಕ್ತಿ; ತನ್ಮಯ ಭಕ್ತಿ: ಇದರೊಳು ದ್ವೈತವದ್ವೈತಭಕ್ತಿಗಳೆಂದು ಪದುಮಾಕ್ಷಿದ್ವಯವಾಗಿ ತೋರ್ಪುದು (ವೇದಾಂಪ್ರ. ೯).
[ಅದ್ವೈತ + ಭಕ್ತಿ]

**ಅದ್ವೈತಮತಿ** (ನಾ). ೧. ಒಮ್ಮನಸ್ಸು; ಏಕಾಗ್ರಚಿತ್ತ: ತೊಡಗಿ ನಾ ಮೂಜವಸರದೊಳುಂ ಮೃಡಸಮಾರ್ಚನೆಗಳನಲರ್ದಳವಡಿಸೆನೇ ಯದ್ವೈತಮತಿಯಿಂದೀ ಪರಿಯೊಳವ್ವ (ಬಸಪು. ೪೫–೧೦). ೨. ಅಭೇದ ಬುದ್ಧಿ. ೩. ಭಿನ್ನಭಾವವಿಲ್ಲದವನು. [ಅದ್ವೈತ + ಮತಿ]

**ಅದ್ವೈತವಾದ** (ನಾ). ಅದ್ವೈತವನ್ನು ಪ್ರತಿಪಾದಿಸುವ ವಾದ; ಏಕತತ್ತ್ವ ವಾದ. [ಅದ್ವೈತ + ವಾದ]

**ಅದ್ವೈತಿ** (ನಾ). ಅದ್ವೈತ ಮತವನ್ನು ಅವಲಂಬಿಸಿದವನು.
[ಸಂ. ಅದ್ವೈತಿನ್]

**ಅಧಃಕರಣ** (ನಾ). ಕೀಳುಮಾಡುವುದು; ಧಿಕ್ಕರಿಸುವುದು. 'ಅಧಃ ಕರಿಸು' ಪರಾ. [ಸಂ.]

**ಅಧಃಕರಿಯಿಸು** 'ಅಧಃಕರಿಸು' ನೋ.

**ಅಧಃಕರಿಸು**, ಅಧಃಕರಿಯಿಸು (ಕ್ರಿ). ೧. ಕೀಳುಮಾಡು; ಧಿಕ್ಕರಿಸು: ತನ್ನ ದರ್ಶನಂ ತ್ರಿದರ್ಶನಮನಧಃಕರಿಸೆ ಸುಪ್ರತಿಷ್ಠ ಪ್ರತಿಪನನುಕ್ರಮದಿ ನೇಕಾದಶಾಂಗಧರನಾಗಿ (ಅರ್ಥನೇ. ೪–೬೫ ವ); ಪ್ರವಾಳಮಂ ಜಡಾ ಶ್ರಯವೆಂದೊಲ್ಲದವನಧಃಕರಿಸಿ (ಬಸರ. ೧೨–೯೦). ೨. ದಾಟು; ಕಳೆ: ದಿವಸಕ್ರಮದಿನಧಃಕರಿಸಿದನಾ ನೃಪತನೂಭವಂ ಶೈಶವಮಂ (ಮಲ್ಲಿಪು. ೪–೧೩೩). ಅಧಃಕರಿಯಿಸು: ೨. ಗುರುವಿರಹಜನಿತ ಚಿಂತಾ ತರಂಗಿಣೀ ರಯಮನಾತ್ಮ ಕುಲವೃದ್ಧ ವಚಸ್ತರಣಿಯಿನೆಂತಾನುಮಧಃಕರಿ ಯಿಸಿದಂ ಪಿತೃನಿಯೋಗಮೇಂ ದುಸ್ತರಮೋ (ಚಂದ್ರಪು. ೨–೬೦).
[ಅಧಃಕರಣ + –ಇಸು₁]

**ಅಧಃಕೃತ** (ಗು). ೧. ಕೆಳಗೆ ಮಾಡಲ್ಪಟ್ಟ; ಹತ್ತಿಕೊಂಡ; ಏರಿದ: ಜಿತಬಾಣಂ ಹರಿಯಂತಧಃಕೃತ [ಪಾಠಾಂ. ಹರಿಯಂತಿರಲ್ ಪ್ರಿಯ]ಮಯೂರಂ ತಾರಕಾರಾತಿಯಂತತಿಮಾಘಂ ಶಿಶಿರಾಂತ್ಯದಂತೆ. . . ವಾಗ್ಗುಂಫದೊಳ್ ನಾಕಿಗಂ (ಛಂದೋಂಬು. ೬–೭). ೨. ಕೀಳು ಮಾಡಲ್ಪಟ್ಟ; ಧಿಕ್ಕರಿಸಲ್ಪಟ್ಟ: ಆ ವಿತತಹಾರಮಧಃಕೃತ ತಾರಕಾಂತಿ (ಶಾಂತಿಪು. ೩–೪೦). [ಸಂ. (ಅಧಸ್ + ಕೃತ)]

**ಅಧಃಕ್ಷಿಪ್ತ** (ಗು). ೧. ಕೆಳಗೆ ಎಸೆದ. ೨. ತಗ್ಗಿದ: "ನ್ಯಂಚಿತಂ, ಅಧಃಕ್ಷಿಪ್ತಂ –ಈ ೨ ನೆಗ್ಗಿದುದು" (ಹಲಾಯು. ೧೨೬–೮೩).
[ಸಂ. (ಅಧಸ್ + ಕ್ಷಿಪ್ತ)]

**ಅಧಃಕ್ಷೇಪ** (ನಾ). ೧. ಕೆಳಕ್ಕೆ ಹಾಕುವುದು, —ಎಸೆಯುವುದು; ಕೆಳಗೆ ಇಡುವುದು. ೨. [ವಿಜ್ಞಾನ] ಒಂದು ದ್ರವದ ತಳದಲ್ಲಿ ತಂಗಿದ ಗಟ್ಟಿಯಾದ ವಸ್ತು. [ಸಂ. (ಅಧಸ್ + ಕ್ಷೇಪ)]

**ಅಧಃಪತನ** (ನಾ). ೧. ಕೆಳಕ್ಕೆ ಬೀಳುವುದು. ೨. ದುರ್ಗತಿಗಿಳಿಯು ವುದು: ೧, ೨: ಹಿರಣ್ಯರೋಮಂ . . . ಮುನ್ನಿನ ದುಷ್ಕೃತವನನುಭವಿಸಿ ದಲ್ಲದೆ ಪೋಗದೆಂಬುದನಱಿವುವಂತಧಃಪತನಮಪ್ಪ ಬಿಲನಂ ಪೊಕ್ಕುದು (ಪಂಚತಂ. ೨೯೪–೧೮). ೨. ಮ್ಲೇಚ್ಛಾಚಾರಿ ಪುಸ್ತಕಗಳನ್ನು ಓದಿಯೇ ಆರ್ಯಸಂತಾನದ ಅಧಃಪತನವಾಗುತ್ತಿದೆ (ಎರಸೆ. ೩೦).
[ಸಂ. (ಅಧಸ್ + ಪತನ)]

**ಅಧಃಪಾತ** (ನಾ). = ಅಧಃಪತನ: ಆ ಕ್ಷಿತಿಪಂಗೆನ್ನಂದದಿಂದಂ ಸಮುನಿ ಸುಗುಮಧಃಪಾತಮುಸ್ತಾಬ್ಧಿಯೊಳ್ (ಚಂದ್ರಪು. ೨–೪೫); ಅವತಾರವೆಂದೆ ಎಂದಾರೆ ತಾಯಿ ಈ ಅಧಃಪಾತವನ್ನೇ (ಗಂಗಾತ. ೯).
[ಸಂ. (ಅಧಸ್ + ಪಾತ)]

**ಅಧಃಪಾತಾಳ** (ನಾ). ೧. ತುಂಬ ಕೆಳಗಿನ ಪಾತಾಳಲೋಕ. ೨. ಅತ್ಯಂತ ದುರ್ಗತಿ; ತುಂಬ ಹೀನಸ್ಥಿತಿ: ಅಷ್ಟು ಮೇಲ್ಮಟ್ಟ ದಲ್ಲಿದ್ದವನು ಎಂಥ ಅಧಃಪಾತಾಳಕ್ಕೆ ಬಿದ್ದ (ರೂಢಿ).
[ಸಂ. (ಅಧಸ್ + ಪಾತಾಳ)]

**ಅಧಃಪಾತಿಸು** (ಕ್ರಿ). ಕೆಳಕ್ಕೆ ಬೀಳಿಸು; ದುರ್ಗತಿಗೆ ಇಳಿಸು: ಮೊದಲೊಳಾಂ ಬ್ರಾಹ್ಮಣಂ, ವರ್ಣಧರ್ಮವನಧಃಪಾತಿಸಲೆ? (ಹೆಬ್ಬೆರ. ೧೧–೧೧). [ಅಧಃಪಾತ + –ಇಸು₁]

**ಅಧಃಪ್ರಭಾವ** (ನಾ). ಕಡಮೆಯಾದ ಪ್ರಭಾವ; ತಗ್ಗಿಹೋದ ಪ್ರಭಾವ: ಹಯಗ್ರೀವನಧಃಪ್ರಭಾವನೆರ್ದೆಗೆಟ್ಟೆರ್ದೋಡಿಡಂ (ಪುಷ್ಪಪು. ೬–೨೭). [ಸಂ. (ಅಧಸ್ + ಪ್ರಭಾವ)]

**ಅಧಃಸ್ಥಲ** 'ಅಧಸ್ಸ್ಥಲ' ನೋ.

**ಅಧಃಸ್ಥಳ** 'ಅಧಸ್ಸ್ಥಲ' ನೋ.

**ಅಧಃಸ್ಥಳಂಬಿಡಿ** (ಕ್ರಿ). ತಳಭಾಗವನ್ನು ಅವಲಂಬಿಸು, —ಆಶ್ರ ಯಿಸು: ನೆಲಸಿರ್ಪಪ್ಪುದಧಃಸ್ಥಳಂಬಿಡಿದಧೋಲೋಕಂ ಸಮಂತೆಯ್ದೆ ಸುತ್ತಲುಮಿರ್ಪಪ್ಪುದು ಮಧ್ಯಲೋಕಂ (ಆದಿಪು. ೧–೫೦).
[ಅಧಃಸ್ಥಳ (= ಅಧಸ್ಸ್ಥಲ) + ಪಿಡಿ₁]

**ಅಧಃಸ್ಥಿತ** (ಗು). ಕೆಳಗೆ ಇರುವ; ಕೆಳಗಿನ.
[ಸಂ. (ಅಧಸ್ + ಸ್ಥಿತ)]

**ಅಧಃಸ್ರಂಸನ** (ನಾ). ಕೆಳಕ್ಕೆ ಜಾರುವುದು, —ಬೀಳುವುದು:

"ಬಿಚಿಲ್ಚು – ಅಧಃಸ್ರಂಸನೇ (ಕೆಳಕ್ಕೆ ಬೀಳು, ಬೀಳಿಸು), ನಿಶ್ಚೇಷ್ಟಾಯಾಂ (ಅಲಸಿಕೆಮಾಡು) " (ಶಮುಥಾ). [**ಸಂ.** (ಅಧಸ್ + ಸ್ರಂಸನ)]

**ಅಧಟ** 'ಅದಟ' ನೋ.

**ಅಧಟರಾಯರಾವುತ** (ನಾ). ಪರಾಕ್ರಮಶಾಲಿಯಾದ ಶ್ರೇಷ್ಠ ಸವಾರ: ರಾಜಪುತ್ರರನಧಟರಾಯರಾವುತರಂ ವಿರಾಜಿಸುವ ನಾಯಕರಂ ... ಇವರ್ ಮೊದಲೆನಿಪ ಜನಸಮಾಜಮಂ ಕರೆಯಲ್ (ಪದ್ಮರಾ. ೯–೨೧). [ಅಧಟ (< ಅದಟ) + ರಾಯ + ರಾವುತ]

**ಅಧಟು** 'ಅದಟ್ಟು' ನೋ.

**ಅಧಟುದೋಱು** (ಕ್ರಿ). ಪರಾಕ್ರಮವನ್ನು ತೋರಿಸು; ಸಾಹಸವನ್ನು ಕಾಣಿಸು: ಒಂದ ಹೊಯ್ದರೆ ತಾನೊಡ್ಡಿಕೊಂಡೆರಡಹೊಯ್ದಂದಣ್ಣಗ ಧಟುದೋಱಿದನು (ಭರತ. ೬೩–೩೪). [ಅಧಟು (< ಅದಟ್ಟು) + ತೋಱು]

**ಅಧನ** (ಗು). **೧.** ಧನವಿಲ್ಲದ; ಆಸ್ತಿಯಿಲ್ಲದ. (ನಾ). **೨.** ಕೇಡು; ಅನರ್ಥ; "ಡಮರ, ಈತಿ". (ಮಂಗರಾ. ೩೭ ಕ) [**ಸಂ.**]

**ಅಧನದ** (ನಾ). ಧನವನ್ನು ಕೊಡದವನು; ಲೋಭಿ: ಧನದರಲ್ಲದ ಧನದರಿಲ್ಲ ತಕ್ಕರಲ್ಲದೆ ಟಕ್ಕರಿಲ್ಲ ಜನ್ನಮಲ್ಲದೆ ಬನ್ನಮಿಲ್ಲ (ಅಜಿಪು. ೧–೨೧ ವ). [**ಸಂ.** (ಅ– + ಧನದ)]

**ಅಧಮ** (ಗು). **೧.** ಅತ್ಯಂತ ಕೆಳಗಿನ; ಅತ್ಯಂತ ಹೀನವಾದ: ಸೋಂಕಿಂಗೆ ಹೊಲೆಯುಂಟಾಯ್ತು ಕೂಡಿರ್ದ ಪಂಚೇಂದ್ರಿಯಂಗಳೊಳು ನಾಲ್ಕಧಮವೊಂದಧಿಕವೇ ಎಂದರು (ಹಜಕಾ. ೭–೧೯). **೨.** ಕೀಳಾದವನು; ನೀಚ: ನಿಂದೆಗೆಯ್ದನ್ಯಾಯ ಪಾಪಿ ಚಂಡಾಲನೆನ್ನಿಂದಧಮರಿಲ್ಲಯ್ಯ (ಹಜಕಾ. ೯–೧೨); ಈ ಕೃತಘ್ನನ ಮಾಂಸವನ್ನು ತಿನ್ನುವುದಕ್ಕೆ ನಾವೇನು ಅಂಥ ಅಧಮರೆ ? (ನೀತಿಚಿಂ. ೧೨–೧೫). **೩.** ನಾಚಿಕೆಯಿಲ್ಲದ ಕಾಮುಕ. **೪.** [ಜ್ಯೋತಿಷ] ದುರ್ದಶೆಯನ್ನು ಸೂಚಿಸುವ ಒಂದು ಗ್ರಹಸಂಯೋಗ. [**ಸಂ.**]

**ಅಧಮಕಾವ್ಯ** (ನಾ). ಕೆಳಮಟ್ಟದ ಕಾವ್ಯ: ವ್ಯಂಗ್ಯಾರ್ಥವೇ ಇಲ್ಲದೆ ಇದ್ದರೆ 'ಚಿತ್ರ' ಅಥವಾ 'ಅಧಮಕಾವ್ಯ'ವಾಗುವುದು (ಕೈಪಿಡಿ. ೧೮೨). [ಅಧಮ + ಕಾವ್ಯ]

**ಅಧಮಕುಲ** (ನಾ). ಕೀಳಾದ ಕುಲ; ಹೀನವಂಶ: ಆರೊಡನೆ ಕಾದುವೆನು ಕೆಲಬರು ಹಾರುವರು ಕೆಲರಂತಕನ ನೆರೆಯೂರವರು ಕೆಲರಧಮ ಕುಲದಲಿ ಸಂದು ಬಂದವರು (ಕುವ್ಯಾವಿ. ೫–೨೦). [ಅಧಮ + ಕುಲ]

**ಅಧಮತನ** (ನಾ). ನೀಚತನ: ಅನು ಮನುಜೇಂದ್ರಪದವ ನಚ್ಚಿದುರ್ದಧಮತನವೆನುತ ಕೊಕ್ಕರಿಸಿದನಾಗ (ಭರಚ. ೮೦–೮); ಅಧಮತನದಿಂ ಹಸಿಸಿದುದಱಿಂದಲಿದಱ ಜನ್ಮದಿ ಜನಿಸು ಪೋಗೆನಲು (ಪ್ರೌಢರಾ. ೮–೧೩). [ಅಧಮ + –ತನ]

**ಅಧಮಬಿಸಿಗೆ** 'ಅಧಮಬೀಸಿಗೆ' ನೋ.

**ಅಧಮಬೀಸಿಗೆ,** ಅಧಮಬಿಸಿಗೆ (ನಾ). ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಪ್ಲವಂಗದಿಂದ ಕ್ಷಯದವರೆಗಿನ ಕೊನೆಯ ಇಪ್ಪತ್ತು ಸಂವತ್ಸರಗಳ ಗುಂಪು: (ದಕ). **ಅಧಮಬಿಸಿಗೆ:** (ದಕ). 'ಉತ್ತಮ ಬೀಸಿಗೆ,' 'ಮಧ್ಯಮ ಬೀಸಿಗೆ' ಪರಾ. ℙ ಇದನ್ನು 'ಕನಿಷ್ಠಂಬಿಸಿಗೆ' ಎಂದು ಕರೆಯುವ ರೂಢಿಯೂ ಕೆಲವು ಕಡೆ ಉಂಟು. [ಅಧಮ + ಬೀಸಿಗೆ]

**ಅಧಮರ್ಣ** (ನಾ). ಸಾಲವನ್ನು ತೆಗೆದುಕೊಂಡವನು; ಸಾಲಗಾರ: ಅಧಮರ್ಣರನ್ನು ಒಳ್ಳೆಯ ಮಾತುಗಳಿಂದ ವಶಪಡಿಸಿಕೊಂಡು ಈ ಪತ್ರಗಳನ್ನವರಿಗೆ ಕೊಟ್ಟು ಧನಸಂಗ್ರಹವನ್ನು ಮಾಡುವುದು ಮೂರನೆಯದು (ಲಕ್ಷ್ಮೀಪ್ರ. ೧೬೩). '**ಉತ್ತಮರ್ಣ**' ಪರಾ. [**ಸಂ.**]

**ಅಧಮೆ** (ನಾ). **೧.** ನೀಚಳಾದ ಹೆಂಗಸು; ದುಷ್ಟೆ: ಶಕ್ತಿತೆಯರಧಮೆಯರು ಕತ್ತಿಗೆ ಮಿಕ್ಕ ಗೋಟುಗಳಣಕಿಗಳು ಶಠದಿಕ್ಕೆಯರು (ಬಸಪು. ೪೦–೫೨). **೨.** [ಕಾವ್ಯಮೀ] ಹಿತೈಷಿಯಾದ ಪತಿಯ ಮೇಲೆ ಕೋಪಿಸಿಕೊಳ್ಳುವವಳು; ನಾಯಿಕಾಭೇದಗಳಲ್ಲಿ ಒಂದು. [**ಸಂ.** ಅಧಮಾ]

**ಅಧಮೋಪಮೆ** (ನಾ). [ಕಾವ್ಯಮೀ] ಉತ್ತಮವಾದ ವಸ್ತುವಿಗೆ ಹೀನವಾದ ಹೋಲಿಕೆಯನ್ನು ಹೇಳುವ ಅಲಂಕಾರದೋಷ; ಹೀನೋಪಮೆ: ವೈರಿಪದವಪಶಬ್ದವಚಮತ್ಕಾರವಧಮೋಪಮೆ ನಿಯತಿ ಪದಪೂರಕಂ ದುಸ್ಸಂಧಿಯನಿಬದ್ಧಂ ವಿರುದ್ಧಾರ್ಥ ... ಎನಿಪ್ಪ ಪೊಳ್ಳಂ ತೂಱಿ ಕಳೆದಿಂತು (ಬಸಪು. ೧–೧೪). [ಅಧಮ + ಉಪಮೆ]

**ಅಧರ** (ಗು). **೧.** ಕೆಳಗಡೆಯ. **೨.** ಕೀಳಾದ; ಹೀನ: ವಿದ್ಯಾಧರರಧರರಾಗೆಯುಂ ಪನ್ನಗರ್ ಪನ್ನತಿಕೆಯಿಂ ಬಂದಾಂತೊಡೆ (ಪಂಪಭಾ. ೫–೮೮ ವ). **೩.** ಅಧರೋಷ್ಠ; ಕೆಳತುಟಿ; ತುಟಿ: ಆದ್ಯರ ವಚನ ಪರುಷ ಕಂಡಣ್ಣಾ ... ಅಧರಕ್ಕೆ ಕಹಿ, ಉದರಕ್ಕೆ ಸಿಹಿ (ಬಸವ. ೧೭೧); ಕೆಡಿಸಿತಧರದ ರಾಗ ರಾಗವ ಬಡತನವ ಹೆಚ್ಚಿಸಿತು ನಡುವಿನ ಬಡತನವು ವಿಟಜನ ಕೆನಲು ನಡೆತಂದಳಿಂದುಮುಖಿ (ಕುವ್ಯಾವಿ. ೫–೩೫); ಒಂದು ಶೂನ್ಯ ಅಧರವಾಗೆ ಒಂದು ಶೂನ್ಯ ಓಷ್ಠವಾಗೆ (ಅನಿಕೇ. ೧೯). **೪.** ಕೆಳಭಾಗ. **೫.** ವಾದದಲ್ಲಿ ಬಾಯಿಕಟ್ಟಿಹೋದವನು; ಮಾತಾಡಲಾರದವನು; ಸೋತವನು: "ಅಧರಃ, ಹೀನವಾದೀ – ಈ ೨ ಸೋಲೆನುಡಿವವಂ " (ಹಲಾಯು. ೬೦–೨೦೯). **೬.** ಸಮಾನ. **೭.** ಕೆಂಪು: "ಅಧೋಭಾಗ ಸಮಾನ ಹೀನ ದಶನಚ್ಛದ ಕೆಂಪಧರಾಖ್ಯೆ ಸಂತತಂ " (ನಾನಾರ. ೬೮). [**ಸಂ.**]

**ಅಧರಂಮಾಡು** (ಕ್ರಿ). ಕೀಳುಮಾಡು: ಅಧರಮನಧರಂ ಮಾಡಿ ಪೊಳೆವ ಸುಳಿಪಲ್ಲ ಪೊಳೆಪುಂ (ಆದಿಪು. ೪–೪೧ ವ). [ಅಧರ + ಮಾಡು]

**ಅಧರತಾವಾಪ್ತಿ** (ನಾ). ಕೀಳುತನವನ್ನು ಹೊಂದುವುದು: ಪಡೆವನ್ನಂ ಪಕ್ವಬಿಂಬಕ್ಕಧರಮಧರತಾವಾಪ್ತಿಯಂ ... ಯೌವನಶ್ರೀ ಪಡೆದುದು ನೃಪ ಪುತ್ರಾಂಗದೊಳ್ ನಾಡೆ ಚೆಲ್ವಂ (ಚಂದ್ರಪು. ೨–೨೩). [**ಸಂ.** (ಅಧರತಾ + ಅವಾಪ್ತಿ)]

**ಅಧರತೆ** (ನಾ). **೧.** ಕೆಳಗಡೆ ಇರುವಿಕೆ. **೨.** ಕೀಳಾಗಿರುವಿಕೆ; ಕೀಳುತನ: **೧, ೨:** ಅಧರತೆಯೋಷ್ಠದೊಳ್ ... ಮಹಾಮಾತ್ರವರ್ತನಂ ಸ್ತಣಿಯೊಳಲ್ಲದಿಲ್ಲಮೆಲ್ಲಿಯುಂ (ಚಂದ್ರಪು. ೩–೯ ವ). [**ಸಂ.** ಅಧರತಾ]

**ಅಧರರಾಗ** (ನಾ). **೧.** ತುಟಿಯ ಕೆಂಪು ಬಣ್ಣ. **೨.** ತುಟಿಗೆ ಹಚ್ಚಿಕೊಳ್ಳುವ ಬಣ್ಣ: ಯಾವ ಅಧರರಾಗವನ್ನೂ ಅಪೇಕ್ಷಿಸದ ಕೆಂದುಟಿ (ರಾಗಿಣಿ. ೭೭). [ಅಧರ + ರಾಗ]

**ಅಧರಾಮೃತ** (ನಾ). ತುಟಿಯ ರಸ: ಅಧರಾಮೃತಸೇವನೆಯಿಂದೆ ಪಿತ್ತಂ ... ಪೋಗುಗುಂ (ಸೂಕ್ತಿಸು. ೧೪–೪). [ಅಧರ + ಅಮೃತ]

**ಅಧರಿತ** (ಗು). ಕೀಳುಮಾಡಲ್ಪಟ್ಟ; ಧಿಕ್ಕರಿಸಲ್ಪಟ್ಟ: ಬಧಿರಿತ ಸಮಸ್ತ ದಿಕ್ತಟಮಧರಿತ ಸರ್ವೇಭ್ಯಗರ್ವಿತಂ ಕ್ಷುಭಿತಾಂಭೋನಿಧಿ ಸಲಿಲಂ ಪರೆದುದು ಧುರವಿಧಾನ ಪಟು ಪಟಹ ಕಹಳ ಭೇರೀರಭಸಂ (ಪಂಪಭಾ. ೧೨–೧೭೧). [**ಸಂ.**]

**ಅಧರಿಸು** (ಕ್ರಿ). ಕೀಳುಮಾಡು; ಧಿಕ್ಕರಿಸು: ಅವಳಧರಂ ಮಾಣದಧರಿಕುಂ ಪಲ್ಲವಮಂ (ಜಗವಿ. ೧೧–೩೭). [ಅಧರ + –ಇಸು]

**ಅಧರೋಷ್ಠ** (ನಾ). ಕೆಳತುಟಿ: ಉಕ್ಕಿದುವು ಕಂಬನಿಗಳಧರೋಷ್ಠ ಮದಿರಿತಲಗಿಕ್ಕಿ ತಿರಿಪಿದವೊಲಾಯ್ತೊಡಲೊಳ್ (ಜೈಮಿಭಾ. ೧೯–೧೪). [ಅಧರ + ಓಷ್ಠ]

**ಅಧರ್ಮ** (ನಾ). ೧. ಧರ್ಮವಲ್ಲದ್ದು; ಧರ್ಮಕ್ಕೆ ವಿರುದ್ಧವಾದದ್ದು: ಕಂಸಂ . . . ಧರ್ಮಜ್ಞರಧರ್ಮಮೆನೆ ಪಾಸಟಿಯೊಳ್ ಕೂಸನಪ್ಪಳಿಸಿ (ಜಗವಿ. ೨–೫೩ ವ); ಅಜ್ಞರವದಿರು ನೀವು ನೆಱೆ ಸರ್ವಜ್ಞರವದಿರಧರ್ಮ ನಿಷ್ಠರು (ಕುವ್ಯಾಸ. ೧೧–೩೨). ೨. [ಜೈನ] ಷಡ್ದ್ರವ್ಯಗಳಲ್ಲಿ ಒಂದು; ಜೀವ ಪುದ್ಗಲಗಳ ಅಸಂಚಾರದ ಸ್ಥಿತಿಗೆ ಸಹಾಯಕವಾದ ದ್ರವ್ಯ: ಅದು ಗತಿಸ್ಥಿತ್ಯವಗಾಹಶರೀರಾದಿ ವರ್ತನಾಹೇತು ಧರ್ಮಾ ಧರ್ಮಾಕಾಶ ಪುದ್ಗಲ ಕಾಲಭೇದದಿಂ ಪಂಚವಿಧಂ (ಆದಿಪು. ೧೦–೬೩ ವ). [ಸಂ. (ಅ– + ಧರ್ಮ)]

**ಅಧರ್ಮಿ** (ನಾ). ಅಧರ್ಮವನ್ನು ಆಚರಿಸುವವನು; ಧರ್ಮನಿಷ್ಠ ನಲ್ಲದವನು. [ಸಂ. ಅಧರ್ಮಿನ್]

**ಅಧವ** (ನಾ). ಅನಾಥ; ದಿಕ್ಕಿಲ್ಲದವನು: ಅತಿಥಿಗಳಭ್ಯಾಗತರೊಡ ನಧವರ ಯತಿಯಾಚಕರೆಲ್ಲರನು ಪತಿಕರಿಸುವುದು ಬಳಿಕ ಸಂತಸದೊಳು ಸತಿಯರು ಸವಿವುದನ್ನವನು (ಹದಿಬ. ೮–೩೨). [ಸಂ.]

**ಅಧವೆ** (ನಾ). ಗಂಡನಿಲ್ಲದವಳು; ವಿಧವೆ. [ಸಂ. ಅಧವಾ]

**ಅಧಶ್ಚರ** (ಗು). ಕೆಳಗೆ ಸಂಚರಿಸುವ. [ಸಂ. (ಅಧಸ್ + ಚರ)]

**ಅಧಸ್ತನ** (ನಾ). ಕೆಳಗಡೆ ಇರುವ; ಕೆಳಗಣ. [ಸಂ. (ಅಧಸ್ + –ತನ)]

**ಅಧಸ್ಸ್ಥಲ** ≡ ಅಧಃಸ್ಥಲ, ಅಧಃಸ್ಥಳ ≡ ಅಧಸ್ಸ್ಥಳ (ನಾ). ಕೆಳಗಿನ ನೆಲ, —ಪ್ರದೇಶ. **ಅಧಃಸ್ಥಲ**: ಧನದಾಚಲದಧಃಸ್ಥಲಮನೆಯ್ದಿ (ಪಂಶಾಮಾ. ೧೦–೧೬೪ ವ). **ಅಧಃಸ್ಥಳ**: ಉದ್ಯಾನಮಧ್ಯಪ್ರದೇಶದ ಶಾಲದ್ರುಮಾಧಃಸ್ಥಳ ನಿವಾಸಿಗಳಾಗಿರ್ದ (ಸುಕುಮಾ. ೩–೨೩ ವ); ಪಂಶಿ ಕಂಠನ ಶಂಕರಂ ಪಾದಾಂತದಿಂದೊತ್ತಿದೊಡಧಃಸ್ಥಳಕಿಳಿದು ಹೋದನಲ (ಬಸವು. ೫೪–೫೦). **ಅಧಸ್ಸ್ಥಳ**: ಅಧಸ್ಸ್ಥಳ ಪ್ರಸರ್ಪತ್ಸಿಂಧುವಾಹ ಪ್ರವಾಹ ವಿರಾಜಿತಮುಂ (ಆದಿಪು. ೧೩–೪೬ ವ). [ಸಂ. (ಅಧಸ್ + ಸ್ಥಲ)]

**ಅಧಿಕ** (ಗು). ೧. (ಪರಿಮಾಣದಲ್ಲಾಗಲಿ, ಸಂಖ್ಯೆಯಲ್ಲಾಗಲಿ) ಹೆಚ್ಚಾದ. ೨. ಮೇಲಾದ; ಉತ್ತಮವಾದ; ಶ್ರೇಷ್ಠವಾದ: "ಅಧಿಕಂ ತಾನಗ್ಗಳಕ್ಕೆ ನಾಮುಂ" (ಕವಿಕಂ. ೨೩೨); ಸತ್ತನಧಿಕಂ ಪಂಪಯ್ಯಂ (ಸೌಇಇ. XI–i, ೩೬–೨೧; 942); ಕವಿಯಧಿಕನಿರ್ದೊಡೇಂ ಕೇಳ್ವರಿಲ್ಲದೊಡೆ (ಹಚಕಾ. ೧–೨೫). ೩. (ಬೇಕಾದಷ್ಟಕ್ಕಿಂತಲೂ) ಹೆಚ್ಚಾದ. (ನಾ). ೪. ಹೆಚ್ಚಿಗೆ; ಸಮೃದ್ಧಿ. ೫. ಅತಿಶಯೋಕ್ತಿ ಯಂಥ ಒಂದು ಅರ್ಥಾಲಂಕಾರ: ಆರಬ್ಧಕ್ಕಧಿಕಮಸಾಧಾರಣ ಗುಣಮಧಿಕಮೆಂಬುದಕ್ಕುಂ ಸದೃಶಾಕಾರ ವಿಶೇಷಣಮರ್ಥಮುದಾರಂ ಬೇಱೊಂದು ತೋರ್ಪೊಡವಿಶೇಷಾಖ್ಯಂ (ಕಾವ್ಯಾವ. ೬೬೨); ಪಿರಿದೆನಿ ಸುವಾಧಾರದತ್ತಣಿಂದಾಧೇಯಂ ಮಿಕ್ಕುಂ ಪಿರಿದಾಗಿರ್ಕುಮೆಂದು ಪೇೞ್ದ ಯಧಿಕಾಲಂಕಾರಂ (ಅಪ್ರತಿ. ೩–೪೦ ವೃತ್ತಿ). ೬. (ಉಕ) ಅಧಿಕ ಪ್ರಸಂಗಿ: ಇವನು ಅಧಿಕ ಇದ್ದಾನೆ (ರೂಢಿ). [ಸಂ.]

**ಅಧಿಕಂ** (ಅ). ಹೆಚ್ಚಾಗಿ; ಬಹಳ. [< ಅಧಿಕ]

**ಅಧಿಕಕಟ್ಟಳೆ** (ನಾ). ಶ್ರಾದ್ಧ; ಹೆಚ್ಚುಗಟ್ಟಳೆ; ವಿಶೇಷ: ನಾಳೆ ನಮ್ಮ ಮನೆಯಲ್ಲಿ ಅಧಿಕಕಟ್ಟಳೆ. ಅದಕ್ಕೆ ಇಂದೇ ಎಲ್ಲ ಸಿದ್ಧತೆಗಳನ್ನು ಮಾಡಿ ಕೊಳ್ಳಬೇಕು (ರೂಢಿ). [ಅಧಿಕ + ಕಟ್ಟಳೆ]

**ಅಧಿಕಕೋಣ** (ನಾ). [ಗಣಿತ] ತೊಂಬತ್ತು ಡಿಗ್ರಿಗಿಂತಲೂ ಮಿಾರಿದ ಕೋಣ. [ಅಧಿಕ + ಕೋಣ೨]

**ಅಧಿಕತಾದ್ರೂಪ್ಯರೂಪಕ** (ನಾ). [ಕಾವ್ಯಮಿಾ] ರೂಪಕಾಲಂಕಾರ ದಲ್ಲಿ ಒಂದು ಬಗೆ: ಆಸ್ಯಚಂದ್ರಂ ಎಂಬಲ್ಲಿ 'ಅಧಿಕತಾದ್ರೂಪ್ಯರೂಪಕ' (ಕೈಪಿಡಿ. ೨೬೪). [ಸಂ. (ಅಧಿಕ + ತಾದ್ರೂಪ್ಯ + ರೂಪಕ)]

**ಅಧಿಕದಿನ** (ನಾ). ನಾಲ್ಕು ವರ್ಷಗಳಿಗೊಮ್ಮೆ ಫೆಬ್ರುವರಿ ತಿಂಗಳಲ್ಲಿ ಬರುವ ಇಪ್ಪತ್ತೊಂಬತ್ತನೆಯ ದಿನ (Leap Day. ಇಂಕನಿ). [ಅಧಿಕ + ದಿನ]

**ಅಧಿಕಪದ** (ನಾ). [ಕಾವ್ಯಮಿಾ] ಕಾವ್ಯದೋಷಗಳಲ್ಲಿ ಒಂದು: "ಅಧಿಕಪದ – ಪ್ರಕೃತಕ್ಕೆ ಬೇಡದೆ ಇರುವ ಹೆಚ್ಚು ಪದಗಳನ್ನು ಉಪ ಯೋಗಿಸಿರುವುದು" (ಕೈಪಿಡಿ. ೨೨೮); ವಿದಿತಸ್ಫುಟಾಕ್ಷರಾಧಿಕಪದ ವಿರ ಚಿತಮುಪ್ಪುದಕ್ಕುಮಾ ಸ್ಫುಟಬಂಧಂ (ಕವಿರಾ. ೨–೫೫). [ಅಧಿಕ + ಪದ್ಯ]

**ಅಧಿಕಪಾಠ** (ನಾ). ಒಂದು ಗ್ರಂಥದ ಪ್ರತಿಯಲ್ಲಿ ಗ್ರಂಥಕರ್ತನು ಬರೆದದ್ದೆಂದು ರೂಢಿಯಾಗಿ ಅಂಗೀಕೃತವಾಗಿರುವುದಕ್ಕಿಂತ ಹೆಚ್ಚಾಗಿ ದೊರೆಯುವ ಭಾಗ; ಪ್ರಕ್ಷಿಪ್ತ: ಇಡಿಪದ್ಯಗಳು, ಸಂಧಿಗಳು ಅಥವಾ ಪರಿಚ್ಛೇದಗಳು, ಇಡಿಗ್ರಂಥಗಳು –ಇವುಗಳನ್ನು ಅಧಿಕಪಾಠ ವಾಗಿ ಪ್ರಕ್ಷೇಪಮಾಡುವುದು (Insertion, Interpolation) (ಕನ್ನಸಂ. ೧೧೪). [ಅಧಿಕ + ಪಾಠ]

**ಅಧಿಕಪ್ರಸಂಗ** (ನಾ). ತನಗೆ ಸಂಬಂಧವಿಲ್ಲದ ವಿಷಯಗಳಲ್ಲಿ ನಡುವೆ ಪ್ರವೇಶಿಸುವುದು; ಔಚಿತ್ಯವನ್ನು ಮಿಾರಿ ವರ್ತಿಸುವುದು: ತಂದೆ–ತಾಯಿಗಳಿಗಿಂತ ಇವರು ಯಾಕೆ ಹೆಚ್ಚಿನ ಜಾಗ್ರತೆ ಹೇಳುತ್ತಾರೆ? ದುಡ್ಡು ಕೊಟ್ಟರೆ ಊಟ ಹಾಕಿದರೆ ಸಾಕಲ್ಲವೆ? ಈ ಎಲ್ಲಾ ಅಧಿಕಪ್ರಸಂಗಗಳೇಕೆ? ಎಂದೆನಿಸತೊಡಗಿತು (ತ್ಯಾಗವು. ೧೮೪); "ಏ ನಿನಗೆ ಯಾಕೋ ಇಷ್ಟು ಅಧಿಕ ಪ್ರಸಂಗ? . . . " (ಮೂರುದಾ. ೨೬೦); "ಆಗಲಿ, ನೀವು ಹೇಳಿ ದಂತೆ ಮಾಡುವುದು ನನ್ನ ಕೆಲಸ, ಹೆಚ್ಚಿನ ಅಧಿಕಪ್ರಸಂಗ ನನಗೇಕೆ?" (ದೀಪದ. ೧೩೫). [ಅಧಿಕ + ಪ್ರಸಂಗ]

**ಅಧಿಕಪ್ರಸಂಗಿ** (ನಾ). ತನಗೆ ಸಂಬಂಧವಿಲ್ಲದ ವಿಷಯದಲ್ಲಿ ನಡುವೆ ಪ್ರವೇಶಿಸುವವನು: ಆಗ ಚಾರಕ, ದೂತ, ಹಾಸ್ಯಗಾರ, ಹನುಮ ನಾಯಕನೆಂಬ ಬಹುಕಾರ್ಯದ ಏಕಮುಖಿಯಾದ ಅಧಿಕಪ್ರಸಂಗಿಯು ಬಂದು ಮಾತಿಗೆ ತೊಡಗುತ್ತಾನೆ (ಯಕ್ಷಬ. ೪೪); ಮುಚ್ಕೋ ಬಾಯಿ ಅಧಿಕಪ್ರಸಂಗಿ (ಹನ್ನೊಂದ. ೬೪). [ಅಧಿಕಪ್ರಸಂಗ + –ಇ೨]

**ಅಧಿಕಮಾಸ** (ನಾ). ಸೌರಮಾನವರ್ಷದ ಪ್ರಮಾಣಕ್ಕೆ ಸರಿ ಹೊಂದಿಸುವುದಕ್ಕಾಗಿ ಸುಮಾರು ಮೂರು ವರ್ಷಕ್ಕೊಂದು ಸಲ ಚಾಂದ್ರಮಾನ ಸಂವತ್ಸರಕ್ಕೆ ಹೆಚ್ಚಾಗಿ ಸೇರಿಸಿದ ತಿಂಗಳು; ಹೆಚ್ಚಿನ ತಿಂಗಳು: ದುರ್ಭಿಕ್ಷದಲ್ಲಿ ಅಧಿಕಮಾಸ (ಗಾದೆ). [ಅಧಿಕ + ಮಾಸ]

**ಅಧಿಕರಣ** (ನಾ). ೧. ಅಧಿಕಾರ. ೨. [ವ್ಯಾಕ] ಕಾರಕಗಳಲ್ಲಿ ಒಂದು; ಸಪ್ತಮಿಾ ವಿಭಕ್ತಿಯ ಅರ್ಥ; ಅವುದಾಧಾರಮದು ಅಧಿ ಕರಣಂ; ಅಲ್ಲಿ ಸಪ್ತಮಿಯಕ್ಕುಂ (ಶಮದ. ೧೩೩ ವೃತ್ತಿ); ವಿಭಕ್ತ್ಯರ್ಥ ಗಳು ಕರ್ತೃ . . . ಸಂಬಂಧ ಅಧಿಕರಣ ಎಂದು ಏಳು ವಿಧ (ಕೈಪಿಡಿ. ೫೩). ೩. ಒಂದು ವಿಷಯವನ್ನು ಕುರಿತು ಹೇಳುವ ಗ್ರಂಥಭಾಗ: ಚಂದ್ರ ರಾಜನಾಗಮ ಲೌಕಿಕ ವಿರೋಧಮುಂ ಕಳೆದು ಸಾರಾಂಶಮಂ ಕೊಂಡು ಪಲವು ಮತಂಗಳನೊಂದುಮಾಡಿ ಪದಿನೆಂಟಧಿಕರಣಂಗಳಿಂದಳಂಕಾರಂ ಕೃತಮಾಗೆ ನಾನಾಛಂದದಿಂ . . . ಪೇೞ್ದಂ (ಮದತಿ. ೧–೫೮ ವ); ಕವಿಸಮಯಮೆಂಬುದು ಪಂಚಮಾಧಿಕರಣಂ ಸಮಾಪ್ತಂ (ಕಾವ್ಯಾವ. ೯೬೫ ವ). ೪. ಪರಮಾಧಿಕಾರ. ೫. ಸರಕಾರ (ಕ). ೬. ಆಡಳಿತದ ಒಂದು ಶಾಖೆ. [ಸಂ.]

**ಅಧಿಕರಿಸು** (ಕ್ರಿ). ೧. ಅಧಿಕಾರವನ್ನು ಪಡೆ, —ಹೊಂದು: ತ್ವತ್ಪಾದಕಮಲದಾಶ್ರಯದಿಂದೆ ನಾನಾ ವಿಪತ್ಪರಂಪರೆಗಳಂ ದಾಂಟ ದೆವು ರಾಜಸಂಪತ್ಪದವನಧಿಕರಿಸಿದೆವು (ಜೈಮಿಭಾ. ೨–೫೬). ೨. (ಕಲೆ ಅಥವಾ ಶಾಸ್ತ್ರವನ್ನು) ಅಭ್ಯಾಸಮಾಡು; ಪೂರ್ಣವಾಗಿ ತಿಳಿ:

ಅಂಗಸಹಿತಖಿಳ ವೇದಂಗಳಂ ನೀತಿಗಳನು ಸಲ್ಲಲಿತ ಶಬ್ದಾದಿಶಾಸ್ತ್ರ ಸಿದ್ಧಾಂತಂಗಳೆಲ್ಲಮಂ ಗುರುಮುಖದೊಳಧಿಕರಿಸಿ . . . ಚತುರನಾದನವನು (ಜೈಮಿಭಾ. ೨೯-೭). ೩. ಅವಲಂಬಿಸು ; ಆಶ್ರಯಿಸು : ಅರಸನಭ್ಯುದಯವನು ನೀನಧಿಕರಿಸಿ [ಪಾಠಾಂ. ಪತಿಕರಿಸಿ] ಗೆಲುವಡೆ ನಿನ್ನ ಹಂಗೇ ಕರಿಗಳನು ಜಯಿಸುವರು ನಮ್ಮಿ ಛತ್ರಧಾರಕರು (ಕುವ್ಯಾಕ. ೯-೩೪). ೪. ಗುರಿಯಲ್ಲಿಟ್ಟುಕೊ : ಈ ದಿನ ನೀವು ಯಾವ ವಿಷಯವನ್ನು ಅಧಿಕರಿಸಿ ಭಾಷಣಮಾಡುತ್ತೀರಿ (ರೂಢಿ). [ಅಧಿಕರಣ + -ಇಸು]

**ಅಧಿಕರ್ತ** (ನಾ). ಅಧಿಕಾರಿ ; ಯಜಮಾನ (ಸ್ಯಾಂಡರ್). [ಸಂ.]

**ಅಧಿಕರ್ಧಿ** (ನಾ). ಹೆಚ್ಚಾದ ಸಂಪತ್ತು ; ವಿಶೇಷವಾದ ಏಳಿಗೆ ; ಸಮೃದ್ಧಿ. [ಅಧಿಕ + ಋದ್ಧಿ]

**ಅಧಿಕರ್ಮಿಕ** (ನಾ). ಸಂತೆ ಅಥವಾ ಮಾರುಕಟ್ಟೆಯ ಮೇಲ್ವಿಚಾರಕನಾಗಿರುವ ಅಧಿಕಾರಿ. [ಸಂ.]

**ಅಧಿಕವರ್ಷ** (ನಾ). ಅಧಿಕದಿನದ ಎಂದರೆ ೩೬೬ ದಿನಗಳು ಬರುವ ವರ್ಷ. [ಅಧಿಕ + ವರ್ಷ]

**ಅಧಿಕಹುಣ್ಣಿಮೆ** (ನಾ). ಅಧಿಕಮಾಸದಲ್ಲಿ ಬರುವ ಹುಣ್ಣಿಮೆ. [ಅಧಿಕ + ಹುಣ್ಣಿಮೆ]

**ಅಧಿಕಾಂಗ** (ನಾ). ೧. ಇರಬೇಕಾದದ್ದಕ್ಕಿಂತ ಹೆಚ್ಚಾಗಿ ಇರುವ ಅಂಗ ; ಅನಾವಶ್ಯಕವಾದ ಭಾಗ : ಉದಾ—ಕೆಲವರಿಗೆ ಕೈಯಲ್ಲಿ ಅಥವಾ ಕಾಲಿನಲ್ಲಿ ಇರುವ ಆರನೆಯ ಬೆರಳು. ೨. (ಯುದ್ಧಕವಚದ ಮೇಲೆ ಧರಿಸುವ) ನಡುಕಟ್ಟು,—ಪಟ್ಟಿ. [ಅಧಿಕ+ಅಂಗ]

**ಅಧಿಕಾಂಶ** (ನಾ). ಹೆಚ್ಚು ಭಾಗ ಅಥವಾ ವಿಷಯ. [ಅಧಿಕ + ಅಂಶ]

**ಅಧಿಕಾಕ್ಷರ** (ನಾ). [ಛಂದ] ೧. ಗೊತ್ತಾದ ಪ್ರಮಾಣಕ್ಕಿಂತ ಹೆಚ್ಚಾಗಿರುವ ಅಕ್ಷರ. ೨. ಅಧಿಕಾಕ್ಷರವಿರುವ ಪದ್ಯ ಅಥವಾ ಪದ್ಯದ ಪಾದ. ೩. ಅಧಿಕಾಕ್ಷರದಿಂದಾಗುವ ದೋಷ : ಮೊದಲ ಪದಂ ನ್ಯೂನಾಕ್ಷರಮದಱಿಂದೆ ಬಱಿಕ್ಕಮರ್ಧಮಧಿಕಾಕ್ಷರಮಿಂತಿದಱಿಂ ಛಂದೋಭಂಗಂ (ಕವಿರಾ. ೧-೯೨). [ಅಧಿಕ + ಅಕ್ಷರ]

**ಅಧಿಕಾರ** (ನಾ). ೧. (ಯಾವುದಾದರೊಂದು ಕಾರ್ಯವನ್ನು) ನಡಸುವ, ವಿಧಿಸುವ ಅಥವಾ ನಿರ್ಣಯಿಸುವ ಶಕ್ತಿ. ೨. ಕಾರ್ಯನಿರ್ವಾಹಕಸ್ಥಾನ ; ಪದವಿ. ೩. ಆಡಳಿತ ; ಆಳಿಕೆ ; ಪ್ರಭುತ್ವ : ಇಂಗ್ಲಿಷರು ಸುಮಾರು ಎರಡು ಶತಮಾನಗಳ ಕಾಲ ಭಾರತದಲ್ಲಿ ಅಧಿಕಾರ ನಡಸಿದರು (ರೂಢಿ). ೪. ಸ್ವಾಮ್ಯ ; ಹಕ್ಕು : ಆ ಸ್ವತ್ತಿನ ಮೇಲೆ ನಿನಗೇನು ಅಧಿಕಾರವಿದೆ (ರೂಢಿ). ೫. ಯೋಗ್ಯತೆ ; ಅರ್ಹತೆ : ಉಪನಯನವಾಗದೆ ವೇದಾಧ್ಯಯನ ಮಾಡುವ ಅಧಿಕಾರವಿಲ್ಲ ಎಂದು ಕೆಲವರು ಹೇಳುತ್ತಾರೆ (ರೂಢಿ) ; ಟಿಕೀಟಿಲ್ಲದವರಿಗೆ ಪ್ರವೇಶಿಸುವ ಅಧಿಕಾರವಿಲ್ಲ (ರೂಢಿ). ೬. ಗ್ರಂಥದ ಒಂದು ಒಳವಿಭಾಗ : ನಾಗವರ್ಮ ವಿರಚಿತ ಛಂದೋಂಬುರಾಶಿಯೊಳ್ . . . ಸಂಜ್ಞಾಧಿಕಾರಂ (ಛಂದೋಂಬು. ೬. ೧-೭೦ ವ). ೭. (ವ್ಯಾಕರಣ ಮುಂತಾದ ಶಾಸ್ತ್ರಗಳಲ್ಲಿ) ಮುಂದಿನ ಹಲವು ಸೂತ್ರಗಳ ಮೇಲೆ ಯಾವುದಾದರೊಂದು ಸೂತ್ರಕ್ಕೆ ಇರುವ ವ್ಯಾಪ್ತಿ. ೮. ವಿಶೇಷಜ್ಞಾನ ; ಪ್ರವೀಣತೆ : ವ್ಯಾಕರಣಶಾಸ್ತ್ರವನ್ನು ಕುರಿತು ಮಾತನಾಡುವ ಅಧಿಕಾರ ನನಗಿಲ್ಲ (ರೂಢಿ).

ಅಧಿಕಾರ ನಡಸು=ಅಧಿಕಾರವನ್ನು ಚಲಾಯಿಸು ; ಆಜ್ಞಾಪಿಸು : ಅಧಿಕಾರ ನಡಸುವ ಜನರು ಸ್ವಾರ್ಥರಹಿತರಾಗಿರಬೇಕು (ರೂಢಿ). [ಸಂ.]

**ಅಧಿಕಾರಕ್ಷೇತ್ರ** (ನಾ). ಅಧಿಕಾರವ್ಯಾಪ್ತಿಯುಳ್ಳ ಪ್ರದೇಶ. [ಅಧಿಕಾರ + ಕ್ಷೇತ್ರ]

**ಅಧಿಕಾರನಿಮಿತ್ತ** (ಅ). ಅಧಿಕಾರವನ್ನು ನಿರ್ವಹಿಸುವ ಸಲುವಾಗಿ. [ಅಧಿಕಾರ + ನಿಮಿತ್ತ]

**ಅಧಿಕಾರಪತ್ರ** (ನಾ). ಅಧಿಕಾರವನ್ನು ವಹಿಸಿಕೊಡುವ ಪತ್ರ. [ಅಧಿಕಾರ + ಪತ್ರ]

**ಅಧಿಕಾರಪ್ರಯುಕ್ತ** (ಅ). ೧. = ಅಧಿಕಾರನಿಮಿತ್ತ : ಜಿಲ್ಲಾಧಿಕಾರಿಗಳು ಅಧಿಕಾರಪ್ರಯುಕ್ತ ಆ ಹಳ್ಳಿಗೆ ಹೋಗಿದ್ದರು (ರೂಢಿ). ೨. ಸ್ಥಾನಬಲದಿಂದ : ಮುಖ್ಯವಿದ್ಯಾಧಿಕಾರಿಗಳು ವಿಶ್ವವಿದ್ಯಾನಿಲಯದ ಸೆನೆಟ್ಟಿನಲ್ಲಿ ಅಧಿಕಾರಪ್ರಯುಕ್ತ ಸದಸ್ಯರಿದ್ದಾರೆ (ರೂಢಿ). [ಅಧಿಕಾರ + ಪ್ರಯುಕ್ತ]

**ಅಧಿಕಾರವಾಣಿ** (ನಾ). ಅಧಿಕಾರಸ್ಥಾನದಿಂದ ಅಥವಾ ಅಧಿಕಾರಯುಕ್ತವಾಗಿ ಆಡುವ ಮಾತು : ನಾನು ಈ ಮಾತನ್ನು ಈ ಸಂಸ್ಥೆಯ ಅಧ್ಯಕ್ಷನಾಗಿ ಅಧಿಕಾರವಾಣಿಯಿಂದ ಹೇಳುತ್ತಿದ್ದೇನೆ (ರೂಢಿ). [ಅಧಿಕಾರ + ವಾಣಿ]

**ಅಧಿಕಾರವ್ಯಾಪ್ತಿ** (ನಾ). = ಅಧಿಕಾರಕ್ಷೇತ್ರ : ನ್ಯಾಯಾಲಯವು ತನ್ನ ಅಧಿಕಾರವ್ಯಾಪ್ತಿಯ ಸ್ಥಾನೀಯ ಸರಹದ್ದಿನಲ್ಲಿ . . . ಯಾವುದಾದರೂ ಶಕ್ತಿಯನ್ನಾಗಲಿ ಚಲಾಯಿಸುವಂತೆ ಆ ನ್ಯಾಯಾಲಯಕ್ಕೆ ಸಂಸತ್ತು ವಿಧಿದ್ವಾರಾ ಶಕ್ತಿಕೊಡಬಹುದು (ಭಾಧಾನ. ೩). [ಅಧಿಕಾರ + ವ್ಯಾಪ್ತಿ]

**ಅಧಿಕಾರಶಾಹಿ** (ನಾ). (ಆಳರಸರ ಪರವಾಗಿ) ಅಧಿಕಾರ ನಡಸುವುದು. [ಅಧಿಕಾರ + ಶಾಹಿ]

**ಅಧಿಕಾರಸೂತ್ರ** (ನಾ). ೧. (ವ್ಯಾಕರಣ ಮುಂತಾದ ಶಾಸ್ತ್ರಗಳಲ್ಲಿ) ಮುಂದಿನ ಅನೇಕ ಸೂತ್ರಗಳಲ್ಲಿ ಅನ್ವಯಿಸುವಂತೆ ಮತ್ತೆ ಮತ್ತೆ ಅನುವೃತ್ತಿ ಹೊಂದುತ್ತ ಬರುವ ಸೂತ್ರ : ಇದು ಅಧಿಕಾರಸೂತ್ರ, ಮುಂದೆ ಹೇಳಲ್ಪಡುವ ವಿಧಾನಗಳು ಸಂಧಿಯಲ್ಲಿ ಆಗುತ್ತವೆಂದು ತಿಳಿಯತಕ್ಕದ್ದು (ಭಾಷಾಭೂ. ೧೮ ತಾ). ೨. ಅಧಿಕಾರದ ಹೊಣೆ ; ಆಡಳಿತದ ಹತ್ತೋಟಿ : ಹೊಸದಾಗಿ ನೇಮಕಹೊಂದಿದ ಮಂತ್ರಿಗಳು ಈ ದಿನ ಅಧಿಕಾರಸೂತ್ರವನ್ನು ವಹಿಸಿಕೊಂಡರು (ರೂಢಿ). [ಅಧಿಕಾರ + ಸೂತ್ರ]

**ಅಧಿಕಾರಸ್ಥ** (ನಾ). ೧. ಅಧಿಕಾರದಲ್ಲಿರುವವನು ; ಅಧಿಕಾರಿ : "ಅದು ಹೌದು ಬಿಡು ; ನಿನಗೆ ಅಧಿಕಾರ ಎಂದರೆ ಏನು ಎಂದೇ ಗೊತ್ತಿಲ್ಲ. ನಿಮ್ಮಲ್ಲಿ ಯಾರೂ ಅಧಿಕಾರಸ್ಥರು ಇದ್ದಿದ್ದರೆ, ಅದರ ಸುಖ ಗೊತ್ತಿದ್ದರೆ, ಇಂದು ನೀನು ಹೀಗೆ ಹೇಳುತ್ತಿರಲಿಲ್ಲ" (ತೀಮೋಡ.೩೫). ೨. ಅಧಿಕಾರ ಹೊಂದಿದವನು ; ಹಕ್ಕುಬಾಧ್ಯತೆಗಳುಳ್ಳವನು ; ಹಕ್ಕುದಾರ. [ಸಂ.]

**ಅಧಿಕಾರಸ್ಥಾನ** (ನಾ). ಪದವಿ ; ಹುದ್ದೆ : ಅನಾರೋಗ್ಯದ ನಿಮಿತ್ತದಿಂದ ರಾಜ್ಯಪಾಲರು ಅಧಿಕಾರಸ್ಥಾನವನ್ನು ಬಿಟ್ಟುಕೊಟ್ಟರು (ರೂಢಿ). [ಅಧಿಕಾರ + ಸ್ಥಾನ]

**ಅಧಿಕಾರಿ₁** (ನಾ). ೧. ಅಧಿಕಾರವನ್ನು ನಡಸುವವನು ; ಅಧಿಕಾರಸ್ಥಾನದಲ್ಲಿರುವವನು. ೨. ಹಕ್ಕುಳ್ಳವನು ; ಸ್ವಾಮಿ ; ಪ್ರಭು. ೩. ಯೋಗ್ಯತೆಯುಳ್ಳವನು ; ಅರ್ಹ : ಕರ್ಮಗಳಿಂದ ಉಂಟಾಗುವ ಪ್ರಯೋಜನದಲ್ಲಿ ಅಪೇಕ್ಷೆಯುಳ್ಳವನಾದರೆ ಅಧಿಕಾರಿಯೆನ್ನಲ್ಪಡುವನು (ಹಿಂದಸಾ. ೨೫೮). ೪. ಒಂದು ಮನೆತನದ ಹೆಸರು : ಕಂಚಧಿಕಾರಿಯ ಪೆಂಡತಿ ಮಾಳಧಿಕಾರಿತಿಗೆ ಪುಟಿದ ಪಾರಿಸಣಧಿಕಾರಿಯ ತಂಗೆ (ಎಕ. VIII, ಸಾಗರ. ೫೪-೮೭ ; 1560). [ಸಂ. ಅಧಿಕಾರಿನ್]

**ಅಧಿಕಾರಿ₂** (ನಾ). (ಶಕ್ತಿ ಸ್ಥಾನ ಮೊದಲಾದವುಗಳಲ್ಲಿ) ಅಧಿಕನಾದ ವೈರಿ ; ದೊಡ್ಡ ವೈರಿ : ಅಧಿಕಾರಿಗಳೆನೆ ಸೈರಿಸೆವಧಿಕಾರಿಗಳಾಗಿ ಬಾಟಿಗ್ಗೆ ಬಡವುಗಳವರ್ಗಾಯುಧ ಭಾರಮೇಕೆ (ಗದಾಯು. ೩-೩೫) ; ಅಧಿಕಾರಿಗಳರೆಬಬ್ಬರ್ಭರ್ಗಧಿಕಾರಿಗಳೆನಿಪರಲ್ಲದಿಂತೀತನವೋಲಧಿಕಾರಿಗಳೆನಿಪವರಾರ್ (ಎಕ. VII, ಶಿಕಾರಿ. ೧೦೨-೨೦ ; 1162). [ಅಧಿಕ + ಅರಿ₆]

**ಅಧಿಕಾರಿಣಿ** (ನಾ). ಅಧಿಕಾರವುಳ್ಳವಳು ; ಅಧಿಕಾರವನ್ನು ನಡಸುವವಳು. [ಸಂ. ಅಧಿಕಾರಿಣೀ]

**ಅಧಿಕಾರಿತಿ** 'ಅಧಿಕಾರ್ತಿ' ನೋ.

**ಅಧಿಕಾರಿವರ್ಗ** (ನಾ). ಅಧಿಕಾರಿಗಳ ಗುಂಪು : ಅಧಿಕಾರಿವರ್ಗದವರೂ ಜನರೂ ಜೊತೆಗೂಡಿ ಮನಸ್ಸುಪೂರ್ತಿ ದುಡಿದಾಗ ಮಾತ್ರ ದೇಶದ ಏಳಿಗೆ ಸಾಧ್ಯ (ರೂಢಿ). [ಅಧಿಕಾರಿ + ವರ್ಗ]

**ಅಧಿಕಾರ್ತಿ,** ಅಧಿಕಾರಿತಿ (ನಾ). ೧. = ಅಧಿಕಾರಿಣಿ. ೨. 'ಅಧಿಕಾರಿ' ಎಂಬ ಹೆಸರಿನ ಮನೆತನಕ್ಕೆ ಸೇರಿದ ಹೆಂಗಸು : ಬೊಂಮರಸ ಅಧಿಕಾರಿಗಳ ಮದವಳಿಗೆ ನಾಗರಸಿ ಅಧಿಕಾರ್ತಿಗಳು (ಕಇ. III, ೧೪–೩೯; 1545). **ಅಧಿಕಾರಿತಿ :** ಕಂಚಧಿಕಾರಿಯ ಪೆಂಡತಿ ಮಾಳಧಿಕಾರಿತಿಗೆ ಪುಟದ ಪಾರಿಸಣಧಿಕಾರಿ (ಎಕ. VIII, ಸಾಗರ. ೫೫–೮೭ ; 1560). [ಅಧಿಕಾರಿ + –ತಿ (< –ಇತಿ)]

**ಅಧಿಕೃತ** (ಗು). ೧. ಅಧಿಕಾರದಲ್ಲಿ ನಿಯೋಜಿಸಲ್ಪಟ್ಟ : ಅನ್ನೋಽ ಡರ್ಜುನನೆಂಬೆನಂತಕಸುತಂ ಭರ್ತಾರನೆಂಬಾತನಕ್ಕುಂ... ಗವಾಧಿಕೃತನಾ ಸಾದೇವಂ (ಕಾವ್ಯಾವ. ೧೭೪). ೨. ಅಧಿಕಾರ ಹೊಂದಿದ; ಅಧಿಕಾರದಿಂದ ಕೂಡಿದ. ೩. ಕುರಿತು ಹೇಳಲ್ಪಟ್ಟ : ಅಧಿಕೃತ ಸತ್ಪುರುಷಾರ್ಥ ಪ್ರಧಾನ ಧರ್ಮಾರ್ಥ ಕಾಮಮೋಕ್ಷಂಗಳ್ (ಕವಿರಾ. ೧–೨೦). ೪. ಪ್ರಮಾಣಭೂತವಾದ. 'ಅಧಿಕೃತ ಮುದ್ರಣ' ಪರಾ. (ನಾ). ೫. = ಅಧಿಕಾರಿ, ೧ : ಜನನಾಥಂ ಗೋತ್ರಮಿತ್ರಾಧಿಕೃತ ಸಚಿವ ಸಾಮಂತ ಶುದ್ಧಾಂತ ಕಾಂತಾಜನಕಾತ್ಮೋದ್ಯೋಗಮಂ ಪೇಳ್ದು (ಚಂದ್ರಪ್ರ. ೪–೬೦). [ಸಂ.]

**ಅಧಿಕೃತಗ್ರಂಥ** (ನಾ). ಪ್ರಮಾಣಾರ್ಹವಾದ ಗ್ರಂಥ; ಶಾಸ್ತ್ರೀಯವಾದ ಗ್ರಂಥ; ಎಲ್ಲ ವಿಷಯಗಳನ್ನೂ ಒಳಕೊಂಡ ಗ್ರಂಥ : ಕನ್ನಡದ ನೂತನ ಛಂದಸ್ಸನ್ನು ಕುರಿತು ಒಂದು ಅಧಿಕೃತಗ್ರಂಥ ಬೇಕಾಗಿದೆ (ನವ್ಯಕಾ. ೬). [ಅಧಿಕೃತ + ಗ್ರಂಥ]

**ಅಧಿಕೃತನಿವಾಸ** (ನಾ). ಅಧಿಕೃತವಾಗಿ ವಾಸಿಸುವ ಸ್ಥಳ : ರಾಜ್ಯಪಾಲರು ಸಂಸತ್ತಿನ ಅಧಿವೇಶನವನ್ನು ಉದ್ಘಾಟಿಸಿ ತಮ್ಮ ಅಧಿಕೃತ ನಿವಾಸಕ್ಕೆ ಹಿಂತಿರುಗಿದರು (ರೂಢಿ). [ಅಧಿಕೃತ + ನಿವಾಸ]

**ಅಧಿಕೃತಭಾಷೆ** (ನಾ). ಅಧಿಕೃತವಾಗಿ ಬಳಸುವ ಭಾಷೆ ; ಆಡಳಿತದ ಭಾಷೆ: ಕನ್ನಡ ನಾಡಿನಲ್ಲಿ ಕನ್ನಡವೇ ಅಧಿಕೃತಭಾಷೆಯಾಗುವುದು ಅವಶ್ಯ (ರೂಢಿ). [ಅಧಿಕೃತ + ಭಾಷೆ]

**ಅಧಿಕೃತಮುದ್ರಣ** (ನಾ). ಸಪ್ರಮಾಣವಾದ ಮುದ್ರಣ ; ಆಧಾರಭೂತವಾದ ಮುದ್ರಣ : ಪ್ರಾಚೀನ ಕಾವ್ಯಗಳ ಅಧಿಕೃತಮುದ್ರಣಗಳು ಇಂದು ಬಹಳ ಅವಶ್ಯವಿವೆ (ರೂಢಿ). [ಅಧಿಕೃತ + ಮುದ್ರಣ]

**ಅಧಿಕೋಪಮೆ** (ನಾ). [ಕಾವ್ಯಮಿ] ಅಲ್ಪವಸ್ತುವಿಗೆ ಮಹತ್ತರವಾದ ಹೋಲಿಕೆಯನ್ನು ಕೊಟ್ಟು ಹೇಳುವ ಒಂದು ಕಾವ್ಯದೋಷ : ಅಧಿಕೋಪಮೆಗೆ – ಮುಂಬಿಟ್ಟು ಪರೆದ ಕಟ್ಟಿಲೆಯಂ ಬೆದಱಿ ತೆರಳ್ದ ಬೆಳಪ ಬೆಳಗಿಂದೆಸೆದಿರ್ಪಂಬುಜಸಖನಂತಿರೆ ಮಿಾನಂಬುಖು ಬೆಳಗಿದಪುದಖಿಳ ಗಗನಾಂತರಮಂ (ಕಾವ್ಯಾವ. ೬೮೨). 'ಹೀನೋಪಮೆ' ಪರಾ. [ಅಧಿಕ + ಉಪಮೆ]

**ಅಧಿಕ್ರಮ** (ನಾ). ೧. ಮುಂದುವರಿಯುವುದು ; (ಒಂದು ಕಡೆಗೆ) ಹೋಗುವುದು. ೨. ಮೇಲೆ ಬೀಳುವುದು ; ದಾಳಿ ; ಆಕ್ರಮಣ. ೩. ನಡಸುವುದು ; ಅನುಸರಣ. 'ಆಚಾರಾಧಿಕ್ರಮ' ಪರಾ. [ಸಂ.]

**ಅಧಿಕ್ಷಿಪ್ತ** (ಗು). ೧. ಆಕ್ಷೇಪಿಸಲ್ಪಟ್ಟ ; ನಿಂದಿಸಲ್ಪಟ್ಟ. ೨. ತಿರಸ್ಕರಿಸಲ್ಪಟ್ಟ. ೩. ಕೆಳಕ್ಕೆ ಎಸೆಯಲ್ಪಟ್ಟ. ೪. ಇಡಲ್ಪಟ್ಟ. ೫. ಕಳಿಸಲ್ಪಟ್ಟ. [ಸಂ.]

**ಅಧಿಕ್ಷೇಪ** (ನಾ). ೧. ಆಕ್ಷೇಪ ; ನಿಂದೆ. ೨. ತಿರಸ್ಕಾರ. ೩. ಒಂದರ ಮೇಲೆ ಇಡುವುದು ; ಸ್ಥಾಪನೆ. ೪. ಎಸೆಯುವುದು. ೫. ಕಳಿಸಿಬಿಡುವುದು. [ಸಂ.]

**ಅಧಿಗತ** (ಗು). ೧. ಸಂಪಾದಿಸಲ್ಪಟ್ಟ ; ಪಡೆದ ; ಪ್ರಾಪ್ತವಾದ : ಅದ್ವಿತೀಯ ಮಹಿಮಾತಿಶಯನುಂ ಅಧಿಗತ ಸಿದ್ಧಿತ್ರಯನುಂ (ಪಂಚತಂ. ೧೫–೮). ೨. ಕಲಿತ ; ಅಭ್ಯಾಸಮಾಡಿದ : ಅನುಮತನುಮಾಪ್ತನುಮಧಿಗತಶಾಸ್ತ್ರನುಂ . . . ಅಪ್ಪ ದೂತಮುಖ್ಯನನಟ್ಟೆ (ಶಾಂತಿಪು. ೨–೫೧ ವ) ; ಅಧಿಗತಧರ್ಮಶಾಸ್ತ್ರನುಂ (ಕಾದಂಪೂ. ೩೦೭). [ಸಂ.]

**ಅಧಿಗಮ** (ನಾ). ೧. ಪಡೆಯುವುದು ; ಸಂಪಾದನೆ ; ಪ್ರಾಪ್ತಿ. ೨. ಕಲಿಯುವುದು ; ಅಭ್ಯಾಸ ; ಜ್ಞಾನ : "ಅಧಿಗಮಃ–ಅಜಿತಮಕ್ಕುಂ" (ತಸೂವ್ಯ. ೮) ; ಆ ಸಮ್ಯಕ್ತ್ವಂ ನಿಸರ್ಗದಿಂದಮಧಿಗಮದಿಂದಮಕ್ಕುಮಲ್ಲಿಯೆಂಟಂಗಮೆಂಬುವಾವುವೆಂದಡೆ (ರತ್ನಕ. ೧–೩ ವ). ೩. (ವ್ಯಾಪಾರದಿಂದ ಬರುವ) ಲಾಭ. [ಸಂ.]

**ಅಧಿಗಮನ** (ನಾ). ಕಲಿಯುವಿಕೆ ; ಅಭ್ಯಾಸ : ನಿಜನಂದನನಂ ವೈಶಂಪಾಯನಂಬೆರಸು ವಿದ್ಯಾಧಿಗಮನದೊಳ್ ಸಮರ್ಪಿಸಿ (ಕಾದಂಪೂ. ೪೩೩). [ಸಂ.]

**ಅಧಿಗೃಹ** (ನಾ). ದೊಡ್ಡಮನೆ ; ಉಪ್ಪರಿಗೆ : ವಿತತೋದ್ಯಾನ ಲತಾಳಿಯಿಂದಧಿಗೃಹಂ ಕಂಗೊಳ್ವುದಾನಂದದಂ (ವೈಸೂಮ. ೩–೬೨). [ಸಂ.]

**ಅಧಿಜಿಹ್ವೆ** (ನಾ). ಒಂದು ಬಗೆಯ ರೋಗ : ಪಿತ್ತ ರಕ್ತ ಶ್ಲೇಷ್ಮಂಗಳಿಂದ ಅಧಿಜಿಹ್ವೆ ಎಂಬ ಜಿಹ್ವಾರೋಗ ಉಂಟಾಗುವುದು. ನಾಲಿಗೆಯ ಮೂಲ ಬಾತುಕೊಂಬುದು (ವೈದ್ಯಸಾ. II, ೧೧೭). [ಸಂ. ಅಧಿಜಿಹ್ವಾ]

**ಅಧಿಜ್ಯ** (ಗು). ಹೆದೆಯೇರಿಸಿದ. 'ಅಧಿಜ್ಯಧನು' ಪರಾ. [ಸಂ.]

**ಅಧಿಜ್ಯಧನು** (ಗು). ಹೆದೆಯೇರಿಸಿದ ಬಿಲ್ಲುಳ್ಳ : ಬೆಂಬಳಿವಿಡಿದಟ್ಟುತ್ತುಂ ತಾಂ ಬರೆವರೆ ಬಿಡದಧಿಜ್ಯಧನು ಶಬರೇಶಂ ಮುಂಬರಿದು (ಶಬಶಂ. ೪–೨೪). [ಸಂ. ಅಧಿಜ್ಯಧನ್ವನ್]

**ಅಧಿತ್ಯಕ,** ಅಧಿತ್ಯಕೆ (ನಾ). ಬೆಟ್ಟದ ಮೇಲುಗಡೆಯ ಕಾಡುಪ್ರದೇಶ : "ವನಮುದಾ ಗಿರಿಯ ಮೇಲಿರಲಧಿತ್ಯಕಮಕ್ಕುಂ" (ಮಂಗರಾ. ೪೫–೯೯) ; ಶಂಖಾಚಳಕ್ಕೆ ಪೋಗಿ ಭವದೀಯಾಧಿತ್ಯಕಾವಾಸದೊಳಿರ್ದ ಸರ್ವಗುಪ್ತ ಮುನಿಗಳಂ ಕಂಡು ಬಂದಿಸಿ (ಶಾಂತಿಪು. ೯–೮೩ ವ). **ಅಧಿತ್ಯಕೆ** (ಕ). [ಸಂ. ಅಧಿತ್ಯಕಾ]

**ಅಧಿತ್ಯಕೆ** 'ಅಧಿತ್ಯಕ' ನೋ.

**ಅಧಿದೇವತೆ** (ನಾ). ೧. ಒಂದು ವಸ್ತು ಅಥವಾ ಕ್ಷೇತ್ರಕ್ಕೆ ಸಂಬಂಧಿಸಿದ ದೇವತೆ ; ಅಭಿಮಾನಿ ದೇವತೆ. ೨. ಎಲ್ಲಾ ದೇವತೆಗಳಿಗೂ ಮುಖ್ಯವಾದ ದೇವತೆ : ಪೂಜಿಸಿಮೊನ್ನನಿಲ್ಲಿಗಧಿದೇವತೆಯಾನೆನುತದ್ರಿಯಲ್ಲಿ ನಿಂದು (ಜಗವಿ. ೪–೮೨). [ಸಂ. ಅಧಿದೇವತಾ]

**ಅಧಿದೇವಿ** (ನಾ). = ಅಧಿದೇವತೆ : ಗ್ರೀಷ್ಮಋತುವಿಂ ನವೆದ ಕಾಂತಾರದಧಿದೇವಿ ತಾನೆನಲ್ (ಜೈಮಿಭಾ. ೧೯–೩೪) ; ಕಾಂತಾರದಧಿದೇವಿಯರಿಗೆ . . . ಬಲಶಾಂತಿಕರ್ಮಂಗಳಂ ನೆಗಳ್ದು (ಶ್ರೀರಾಮಾ. ೧೪೪–೬೬). [ಸಂ. ಅಧಿದೇವೀ]

**ಅಧಿದೈವ** (ನಾ). = ಅಧಿದೇವತೆ : ಆದಿಸುಭೂತಾಧ್ಯಾತ್ಮವಧಿದೈವದೊಳು ಕರೆಸುವ ಪ್ರಾಣನಾಗಾಭಿದನು (ಹಸಾರ. ೬–೯). [ಸಂ.]

**ಅಧಿದೈವತ** (ನಾ). = ಅಧಿದೇವತೆ : ಇನ್ನೊಂದು ಅಧಿದೈವತಕ್ಕಾಗಿ ನನ್ನ ಜೀವನವು ಮೀಸಲೆಂದು ಆಕೆಗೆ ನಾನು ಹೇಳಿದೆ (ಸಮುಜೀ. ೪೦೪). [ಸಂ.]

**ಅಧಿನಾಥ** (ನಾ). ಸರ್ವಾಧಿಕಾರವುಳ್ಳ ಒಡೆಯ ; ಪ್ರಧಾನಾಧಿಕಾರಿ ; ಮುಖ್ಯಸ್ಥ ; ಪ್ರಭು : ಸೈನ್ಯಾಧಿನಾಥನಧಿನಾಥನ ಕೆಲದೊಳ್ ಪಕ್ಷಗಜಾಧಿರೂಢನಾಗಿ (ಆದಿಪು. ೧೩–೪೫ ವ).

**ಅಧಿನಾಥಳು** = ಸರ್ವಾಧಿಕಾರವುಳ್ಳವಳು ; ಒಡತಿ : ಈ ವಸುಧೆಯಧಿನಾಥಳೆನಿಸಿ ಮದ್ಭಾಗ್ಯಮುಂ ರಕ್ಷಿಸುವುಪಾಯಮೊಂದ ಸಾವಧಾನದೊಳಿರ್ಪು (ವೆಂಕರಾರಾ. ೨–೫–೧೦). [ಸಂ.]

**ಅಧಿನಾಯಕ** (ನಾ). = ಅಧಿನಾಥ: ಹೊಗೆಯನಾಗಳು ಕಾಣುತಿದೆಗಳು ಧಿಗಿಲುಧಿಗಿಲೆನೆ ಬೆಗಡುಗೊಂಡತಿವಿಗತಚೇತಸರಾದರಷ್ಟದಿಶಾಧಿನಾಯಕರು (ಬಸವು. ೫೪–೬೧). [ಸಂ.]

**ಅಧಿನೇತೃ** (ನಾ). = ಅಧಿನಾಥ: "ಪ್ರಭು, ಒಡೆಯ" (ಗಂಗಾಮ. ೭). [ಸಂ.]

**ಅಧಿಪ** (ನಾ). = ಅಧಿನಾಥ: ನಿಖಿಲಾವನೀಪರಧಿಪರ್ ಮಾಣಿಕ್ಯ ಪರ್ಯಂಕ ಕೀರ್ತಿಮುಖಾಧಾರ ಕಿರೀಟದಿಂದಮನೆ ಸಂದೊಂ ವಿಶ್ವಸೇನಾಧಿಪಂ (ಶಾಂತಿಪು. ೯–೧೫೧). [ಸಂ.]

**ಅಧಿಪತಿ** (ನಾ). = ಅಧಿನಾಥ: ಆಸಾದಿತ ಕೇವಳಲೋಚನನಾ ದೇವಂ ಮೋಕ್ಷಲಕ್ಷ್ಮಿಗಧಿಪತಿಯಾದಂ (ಶಾಂತಿಪು. ೭–೫೨). [ಸಂ.]

**ಅಧಿಪತಿತನ** (ನಾ). ಒಡೆಯನಾಗಿರುವುದು; ಆಧಿಪತ್ಯ; ಅಧಿಕಾರ: ಭೂತಳಕಧಿನಾಥನಾಗಿ ಕಂಧರದೇವಂ ಪ್ರೀತಿಯಲುದಯಿಸಲರಿನ್ನೃಪರಾತಂಕವನೆಯ್ದೆ ಬಿಟ್ಟರಧಿಪತಿತನಮಂ (ಎಕ. XI, ದಾವಣ. ೫೯–೨೦; 1280). [ಅಧಿಪತಿ + –ತನ]

**ಅಧಿಪತ್ರ** (ನಾ). ಅಧಿಕಾರವನ್ನು ಕೊಡುವ ಪತ್ರ; ಆಜ್ಞಾಪತ್ರ: ಉಚ್ಚತಮ ನ್ಯಾಯಾಲಯದ ಪ್ರತಿಯೊಬ್ಬರು ನ್ಯಾಯಾಧೀಶರನ್ನೂ . . . ರಾಷ್ಟ್ರಪತಿಯವರು ಅವರ ಹಸ್ತಾಕ್ಷರ ಮತ್ತು ಮೊಹರುಸಹಿತವಾಗಿರತಕ್ಕ ಅಧಿಪತ್ರದ ಮೂಲಕ ನೇಮಕ ಮಾಡತಕ್ಕುದು (ಭಾಧಾನ. ೬೬). [ಸಂ.]

**ಅಧಿಪಾಣ್ಣ[ಣ್ಣ]** (ನಾ). ಅಧಿಪತಿಯ ಅಣ್ಣ (?): ಸಕವರ್ಷ ಎಣ್ಟುನೂಱ ಅಯ್ದನೆಯ ವರ್ಷಂ ಪ್ರವರ್ತ್ತಿಸುತ್ತಿರೆ ಕಿಡಲೆಗಧಿಪಾಣ್ಣ[ಣ್ಣ]ನ್ ಎಱೆಯಮ್ಮಂ [ನಿ]ವುದಿ ತೊಱುಗೊಳೊಳ್ಕಾದಿ ಸತ್ತೋನ್ (ಸೌಇಇ. XI–i, ೧೯–೩; 883). [ಅಧಿಪ + ಅಣ್ಣ₁]

**ಅಧಿಪಾಲ** (ನಾ). = ಅಧಿನಾಥ: ದೇವಾನಕಂಗಳ್ ಮೊಱಗೆ ಪಲವುಮಾ ಕಾಲದೊಳ್ ದೇವಚಾಪಂ ಜ್ಯೋತಿರ್ಲೋಕಾಧಿಪಾಲಾಭರಣಕಿರಣದಿಂದುರ್ವಿಯಂ ಪರ್ವೆ ಬಂದರ್ (ಶಾಂತಿಪು. ೮–೧೨೧). [ಸಂ.]

**ಅಧಿಭಕ್ತಿ** (ನಾ). ಹೆಚ್ಚಿನ ಭಕ್ತಿ (?): ಭಕ್ತಿಯುಳ್ಳವಂಗೆ ನಿಷ್ಠುರದ ಮಾತೇಕೆಂಬರು ನಾಲ್ಕುಱ ಮುಕ್ತಿಯ ಭಕ್ತರ ನಿಷ್ಠೆವಂತರಿಗಧಿಭಕ್ತಿ ಅನಿತ್ಯವ ಹಱಿದ ನಿಚ್ಚಟಂಗೆ ಮಿಥ್ಯವನಾರಾಡಿದಡೇನು ನುಡಿಯಲ್ಲಿ ಸತ್ಯವಿದ್ದ ಮತ್ತೆ (ಮೋಳಿಮಾ. ೪೨–೧೭೬). [ಸಂ.]

**ಅಧಿಭೂತ** (ನಾ). ೧. ಪರವಸ್ತು ಅಥವಾ ಅದರ ಅಂತರ್ಯಾಮಿತ್ವ. ೨. ಪಂಚಭೂತಗಳು: "ಅಧಿಭೂತ ಎಂದರೆ ಪಂಚಭೂತಗಳು" (ಹಸಾರ. ೬–೯ ಟೀಕೆ); "ಅಧಿಭೂತ ಎಂದರೆ ಭೂತಗಳಿಗೆ ಸಂಬಂಧಪಟ್ಟದ್ದು" (ಬ್ರಹ್ಮಭಾ. ೨೪೧ ಅಡಿಟಿ); ಅಧ್ಯಾತ್ಮ– ಅಧಿಭೂತಗಳ ಸಮನ್ವಯದಲ್ಲಿಯೇ ಸುಖಜೀವನವಿದೆಯೆಂದು ನಮ್ಮ ಅನುಭಾವಿಗಳು ಹೇಳಿರುವಂತೆ (ಜನಜೀ. ೨೭). [ಸಂ.]

**ಅಧಿಮಾಂಸ** (ನಾ). ದುರ್ಮಾಂಸ ಬೆಳೆಯುವ ಒಂದು ರೋಗ: ಅಧಿಮಾಂಸ ಎಂಬ ದಂತಮೂಲ ರೋಗದಲ್ಲಿ ದಾಡೆಗಳ ಮೂಲಗಳ ಸಂದುಗಳಲ್ಲಿ ಬಾತುಕೊಂಡು ವೆಗ್ಗಳವಾಗಿ ನೋವು ಉಂಟಾಗಿಹುದು (ವೈದ್ಯಸಾ. II, ೧೨೫). [ಸಂ.]

**ಅಧಿಮಾಸ** (ನಾ). = ಅಧಿಕಮಾಸ: "ಅಧಿಮಾಸ (ಅಧಿಕಮಾಸ) – ಸಂಕ್ರಮಣವಿಲ್ಲದಿರುವ ಚಾಂದ್ರಮಾಸ" (ಜಾತತಿ. ಪರಿ. ೩೬೦). [ಸಂ.]

**ಅಧಿಯಜ್ಞ** (ಗು). ೧. ಯಜ್ಞಕ್ಕೆ ಸಂಬಂಧಿಸಿದ. (ನಾ). ೨. ಯಜ್ಞಕ್ಕೆ ಅಧಿಪತಿಯಾದ ದೈವ: ಯಜ್ಞವಿಸ್ತರದಲ್ಲಿ ಅಧಿಯಜ್ಞನಾದವನು ಕ್ಷೇತ್ರಜ್ಞನಾಗಿ ಪ್ರತಿಕ್ಷೇತ್ರಕಿಳಿದವನು (ಮುಕ್ತಕಂ. ೪೭–೩). [ಸಂ.]

**ಅಧಿರಾಜ** (ನಾ). ರಾಜರಿಗೆಲ್ಲ ಮೇಲಿನವನಾದ ರಾಜ; ಚಕ್ರವರ್ತಿ: ಶ್ರೀ ಪೃಥಿವೀವಲ್ಲಭ ಪರಮೇಶ್ವರ ಪಲ್ಲವಾಧಿರಾಜಸ್ನೊಱಮ್ಪಳ್ಗೆ (ಎಕ. XI, ಚಳ್ಳಕೆ. ೩೪–೧೦; 815); ತಮ್ಮನೊಳಾದ ಸ್ನೇಹದಿಂ ವಿಶಾಖಭೂತಿಯು ಮನಧಿರಾಜಪದವಿಯೊಳ್ ವಿಶ್ವನಂದಿಯಂ ಯುವರಾಜ ಪದವಿಯೊಳ್ ನಿಯೋಜಿಸಿ (ಶಾಂತಿಪು. ೭–೫೧ ವ). [ಸಂ.]

**ಅಧಿರೂಢ** (ಗು). ಹತ್ತಿದ; ಮೇಲೆ ಏರಿದ: ಶ್ರೀ ವಿಜಯನತ್ತಮುಗುಱ್ದು ನಮೂವಾಸ್ಕೆಯೊಳೊಡನೆ ನಡೆದು ಕಡೆಯೊಳ್ ರವಿ ರಾಜೀವರಿಪುವಿಂದಗಲ್ದವೊಲಾವಿರ್ಭೂತಪ್ರತಾಪನಧಿರೂಢರಥಂ (ಶಾಂತಿಪು. ೬–೨೧). [ಸಂ.]

**ಅಧಿರೋಹಣ** (ನಾ). ಹತ್ತುವುದು; ಮೇಲೆ ಏರುವುದು: ಮೋಕ್ಷಪ್ರಾಸಾದಾಧಿರೋಹಣ . . . ಅಪೂರ್ವಕರಣ ಕ್ಷಪಕ ಪ್ರಥಮಶುಕ್ಲಧ್ಯಾನಪರಿಣತನಾಗಿರ್ದು (ಆದಿಪು. ೧೦–೧೪ ವ). [ಸಂ.]

**ಅಧಿರೋಹಿಣಿ** (ನಾ). ಏಣಿ; ನಿಚ್ಚಣಿಗೆ: "ನಿಶ್ರೇಣಿಃ, ಅಧಿರೋಹಿಣಿ – ಈ ೨ ನಿಚ್ಚಣಿಗೆ" (ಹಲಾಯು. ೫೦–೧೪೭). [ಸಂ. ಅಧಿರೋಹಿಣೀ]

**ಅಧಿವಾಸ₁** (ನಾ). ೧. ವಾಸಸ್ಥಳ; ನಿವಾಸ; ಮನೆ. ೨. ಹುಟ್ಟಿದ ಸ್ಥಳ; ಜನ್ಮಸ್ಥಾನ. ೩. ದೇವತಾವಿಗ್ರಹವನ್ನು ಪ್ರತಿಷ್ಠಿಸುವ ಮೊದಲು ಧಾನ್ಯ, ನೀರು ಮೊದಲಾದವುಗಳಲ್ಲಿ ನೆಲೆಗೊಳಿಸಿರುವುದು, —ವಾಸಮಾಡಿಸುವುದು. ೪. ಸಮೀಪ ಪ್ರದೇಶ; ಸುತ್ತುಮುತ್ತು; ಪರಿಸರ: ಬಡಗದ ಕೆರೆಯ ಅಧಿವಾಸದಲು ಕಾರಬಯಲ ಬಾಳಿನ ಚತುಸೀಮೆ (ಸೌಇಇ. IX–ii, ೪೨೯–೯; 1365); ಅರಮನೆಗೆ ತೆಱುವ ಬಿಂಜಾಡಿಯ ಅಧಿವಾಸದ ಒಳಗೆ ತಂನ ಹದಿಮೊದಲು ಅಪ್ಪಣೆಯ ಬಗೆಯಿಂದ ಕಾಟಗ ೫೫ . . . ಕೊಜವಡಿಯ ಅಧಿವಾಸದ ಒಳಗೆ ತಂನ ಹದಿಮೊದಲು ಅಪ್ಪಣೆಯ ಬಗೆಯಿಂ ಕಾಟಗ ೪೫ (ಸೌಇಇ. IX–ii, ೪೬೧–೧೪; 1467). ೫. ಸುಗಂಧವನ್ನು ಲೇಪಿಸುವುದು; ವಾಸನೆ ಕಟ್ಟುವುದು. ೬. ಸುಗಂಧದ್ರವ್ಯ. ೭. ಪರಿಮಳ; ಸುವಾಸನೆ. [ಸಂ.]

**ಅಧಿವಾಸ₂** (ನಾ). ಮೇಲೆ ಹೊದಿಸುವ ಬಟ್ಟೆ; ಹೊದಿಕೆ: ನಿಕ್ಷಿಪ್ತಾಧಿವಾಸನೀಲನಲಿನದಲ [ಪಾಠಾಂ. ನಿಕ್ಷಿಪ್ತಾನೀಳನಳಿನ] ದ್ಯುತಿಪಟಲವಿಭ್ರಾಂತಿಯಂ ಪಡೆವ ಸಲಿಲಂಗಳಿಂದಂ (ಆದಿಪು. ೮–೬೯ ವ). [ಸಂ. ಅಧಿವಾಸಸ್]

**ಅಧಿವಾಸನ** (ನಾ). ೧. ಸುಗಂಧದ್ರವ್ಯಗಳಿಂದ ವಾಸನೆ ಕಟ್ಟುವುದು. ೨. ಯಜ್ಞಾದಿ ಕರ್ಮಗಳನ್ನು ಪ್ರಾರಂಭಿಸುವ ಮೊದಲು ಮಾಡುವ ದೇವತಾಸ್ಥಾಪನೆ, —ಪೂಜೆ. ೩. ಹೊಸದಾಗಿ ನಿರ್ಮಿಸಿದ ವಿಗ್ರಹಗಳಿಗೆ, ಅವುಗಳಲ್ಲಿ ದೇವತೆ ನೆಲಸುವಂತೆ ಮಾಡುವ ಪ್ರಾಣಪ್ರತಿಷ್ಠಾಪನೆ. [ಸಂ.]

**ಅಧಿವಾಸಿತ** (ಗು). ೧. ಪ್ರತಿಷ್ಠಾಪನೆ ಮಾಡಿದ; ಪೂಜಿಸಿದ: ಅಧಿವಾಸಿತ ಜೈತ್ರಾಸ್ತ್ರಂ ವಿಧುವಿಶದದುಕೂಲವಸನಶೋಭಂ ನಾನಾವಿಧಮಂತ್ರಾನುಷ್ಠಾನಂ ಪ್ರಧಾನನುಪವಾಸದಿಂ ತ್ರಿರಾತ್ರಮನಿರ್ದಂ (ಆದಿಪು. ೧೨–೭೪). ೨. ಸುಗಂಧಯುಕ್ತವಾದ: ಒರ್ವಂ ಸರ್ವಾಂಗೀಣ ಮಲಯರುಹ ಮೃಗಮದಕದಂಬಪರಿಮಳಾಧಿವಾಸಿತವಿಲಾಸಿನೀಸೌಧಮಂ (ಚಂದ್ರಪು. ೮–೮೨ ವ). [ಸಂ.]

**ಅಧಿವಾಸಿಸು** (ಕ್ರಿ). ೧. ನೆಲಸು; ವಾಸಮಾಡು: ಇವು ದಿವದೊಳಗಗ್ಗಳಮೆನಿಸುವ ರತ್ನವ್ರಾತಮೆಮ್ಮ ಮನೆಯೊಳ್ ಮಿಗಿಲಪ್ಪುವು ನಿಧಿಗಧಿವಾಸಿಸಲಪ್ಪುವೆಂದು ರತ್ನಂಗಳನಿತುಮಂ ಮುಂದಿಟ್ಟಂ (ಆದಿಪು. ೧೨–೧೧೬). ೨. ಪೂಜಿಸು: ಧವಳಛತ್ರಚಾಮರ ಸಿಂಹಾಸನ ಪಟ್ಟವರ್ಧನ ಕುಲಧನಾದಿ ರಾಜ್ಯಚಿಹ್ನಂಗಳಂ ವಿವಿಧ ವಿಧಾನದಿಂದಮಧಿವಾಸಿಸಿ (ಪಂಪಭಾ. ೧೪–೧೭ ವ). ೩. ಸುಗಂಧಮಯವಾಗಿ ಮಾಡು; ಪರಿಮಳಯುಕ್ತವಾಗಿ ಮಾಡು; ವಾಸನೆ ಕಟ್ಟು: ಅಲ್ಲಲ್ಲಿಗೆ ಕರ್ಪೂರಪಲ್ಲವರಸದಿನಧಿವಾಸಿಸಿದ ತಾವರೆಯ ನೂಲದುಗುಲಂಗಳುಮಂ (ಕಾದಂಉ. ೨೧೬). [ಅಧಿವಾಸ₁ + –ಇಸು]

**ಅಧಿವಿನ್ನೆ** (ನಾ). ಎರಡನೆಯ ಮದುವೆ ಮಾಡಿಕೊಂಡವನಿಗೆ ಇರುವ ಮೊದಲ ಹೆಂಡತಿ : ರಾಮಾಯಣದಲ್ಲಿ ಕೌಸಲ್ಯೆಯು ಅಧಿವಿನ್ನಳಾದರೂ ಅಶ್ವಮೇಧ ಪುತ್ರಕಾಮೇಷ್ಟಿಗಳಲ್ಲಿ ದಶರಥನೊಡನೆ ಸಹಕರಿಸಿದ್ದೇ ದೃಷ್ಟಾಂತ (ಆರ್ಯಧ. ೧೪೪). [ಸಂ. ಅಧಿವಿನ್ನಾ]

**ಅಧಿವೇತ್ತ** (ನಾ). ಒಬ್ಬ ಹೆಂಡತಿಯು ಇದ್ದಂತೆಯೇ ಇನ್ನೊಬ್ಬಳನ್ನು ಮದುವೆಯಾದವನು : ಅಧಿವೇದನನೆಂದರೆ ಒಬ್ಬ ಪತ್ನಿಯಿದ್ದ ಹಾಗೆಯೇ ಮತ್ತೊಬ್ಬಳನ್ನು ಮದುವೆಯಾಗುವುದು. ಮಾಡಿಕೊಳ್ಳುವವನು ಅಧಿವೇತ್ತನು (ಆರ್ಯಧ. ೧೪೭). [ಸಂ. ಅಧಿವೇತ್ತೃ]

**ಅಧಿವೇದನ** (ನಾ). : "ಅಧಿವೇದನವೆಂದರೆ ಒಬ್ಬ ಪತ್ನಿಯಿದ್ದ ಹಾಗೆಯೇ ಮತ್ತೊಬ್ಬಳನ್ನು ಮದುವೆಯಾಗುವುದು" (ಆರ್ಯಧ. ೧೪೭). [ಸಂ.]

**ಅಧಿವೇಶನ** (ನಾ). ಕೂಟ; ಸಭೆಕೂಡುವುದು; ಸಮಾವೇಶ: ಲೋಕಸಭೆಯು ಐದುವರ್ಷಗಳ ಅವಧಿಗಿಂತಲೂ ಮುಂಚಿತವಾಗಿ ವಿಘಟನವಾಗದೆ ಇದ್ದಲ್ಲಿ ಅದರ ಮೊಟ್ಟಮೊದಲನೆಯ ಅಧಿವೇಶನಕ್ಕೆ ಗೊತ್ತು ಮಾಡಿರತಕ್ಕ ತಾರೀಖಿನಿಂದ ಐದು ವರ್ಷಗಳ ಕಾಲ ನಡೆದುಬರತಕ್ಕುದು (ಭಾಧಾನ. ೪೧). [ಸಂ.]

**ಅಧಿಶ್ರಯಣಿ** (ನಾ). ಅಡಿಗೆಯ ಒಲೆ: "ಚುಲ್ಲೀ, ಅಶ್ಮಂತಕಂ, ಉತ್ತಾನಂ, ಅಧಿಶ್ರಯಣೀ –ಈ ೪ ಒಲೆ" (ಹಲಾಯು. ೫೨–೧೫೪). [ಸಂ. ಅಧಿಶ್ರಯಣೀ]

**ಅಧಿಶ್ರಾವಕ** (ನಾ). ಪ್ರಧಾನ ಶ್ರಾವಕ (?) : ಮೂಜುಲಕ್ಕೆ ದೃಢ ಬ್ರತಾಧಿಶ್ರಾವಕರುಂ ಅಯ್ದುಲಕ್ಕೆ ಸುವ್ರತೆ ಮೊದಲಾಗೆ ಪರಮಶ್ರಾವಕಿಯರುಂ (ಆದಿಪು. ೧೬–೪೦ ವ). [ಸಂ.]

**ಅಧಿಷ್ಠಾತ್ರಿ** (ನಾ). ಮೇಲಧಿಕಾರ ನಡಸುವವಳು; ಮೇಲ್ವಿಚಾರಕಳು; ಮುಖ್ಯಸ್ಥಳು : ಗಿರಿಜಾಂಬೆ ಈ ಎಲ್ಲ ಹೋರಾಟದ ಅಧಿಷ್ಠಾತ್ರಿಯಾದಳು (ರಾಜ್ಯೋದ. ೧೪೭). [ಸಂ. ಅಧಿಷ್ಠಾತ್ರೀ]

**ಅಧಿಷ್ಠಾನ** (ನಾ). ೧. ಒಂದು ಕಡೆ ಇರುವುದು; ನೆಲಸಿರುವುದು. ೨. ನೆಲೆ; ಆಧಾರ; ಆಶ್ರಯಸ್ಥಾನ: ಸತ್ಯಕಧಿಷ್ಠಾನಮೆಂದಱಿತಂ ಕೈಮಿಗೆ ಕೂರ್ತು ಕೀರ್ತಿಸುವುದು (ಪಂಚತಂ. ೧೧–೭). ೩. ತಳಹದಿ; ನೆಲೆಗಟ್ಟು: ಶಿಲ್ಪಜ್ಞರಂ ಕರಸಿ ನಾನಾ ನವೀನವೆನೆ ತನ್ನಿಚ್ಛೆಯಲಿ ಮಾಡಿಸಿದನೀಶನಿಲಯಂಗಳ ಏನೆಂಬೆನೀ ಹಸ್ತವೀಯಳತೆಯಿಾಯಧಿಷ್ಠಾನವೀ ರೇಖೆಯಿಾ ಖಂಡೆಯಂ (ಸಿದ್ಧರಾ. ೩–೪೩). ೪. ಪಟ್ಟಣ; ನಗರ. ೫. ಅಧಿಕಾರ; ಪ್ರಭುತ್ವ. ೬. (ಬಂಡಿ ಮೊದಲಾದವುಗಳ) ಚಕ್ರ. ೭. ನಿಯಮ; ಕಟ್ಟು; ಕಟ್ಟಳೆ. ೮. ಹರಕೆ; ಆಶೀರ್ವಾದ. [ಸಂ.]

**ಅಧಿಷ್ಠಾನಂಗಟ್ಟು** (ಕ್ರಿ). ಅಸ್ತಿವಾರ ಹಾಕು; ತಳಹದಿ ಹಾಕು: ಗಾಂಗೇಯಂ . . . ಮುನ್ನೆ ತನ್ನ ನುಡಿದ ನುಡಿವಳಿಯೆಂಬ ಪ್ರಾಸಾದಕ್ಕಧಿಷ್ಠಾನಂಗಟ್ಟುವಂತೆ ಚಿತ್ರಾಂಗದಂಗೆ ಪಟ್ಟಮಂ ಕಟ್ಟಿ (ಪಂಪಭಾ. ೧–೭೩ ವ). [ಅಧಿಷ್ಠಾನ + ಕಟ್ಟು$_1$]

**ಅಧಿಷ್ಠಾನಗೊಳ್** (ಕ್ರಿ). ಭದ್ರವಾಗಿ ನೆಲಸು; ಸ್ಥಿರವಾಗಿರು: ಅವಳ ಹೃದಯದಲ್ಲಿ ಪತಿಪ್ರೇಮ ಅಧಿಷ್ಠಾನಗೊಂಡಿದ್ದಂತೆಯೇ ಭ್ರಾತೃಪ್ರೇಮವೂ ಪ್ರತಿಷ್ಠಾಪನೆಗೊಂಡಿತ್ತು (ಪುನರು. ೪೭೦). [ಅಧಿಷ್ಠಾನ + ಕೊಳ್$_1$]

**ಅಧಿಷ್ಠಾಯಕ** (ನಾ). ಮೇಲಧಿಕಾರ ನಡಸುವವನು; ಮೇಲಧಿಕಾರಿ: ಪೆರ್ಗ್ಗಡೆ ಸೋಮನಾಥಯ್ಯಂಗಳ ಬೆಸದೆ ಕುಪ್ಪಟೂರಟ್ಠಾಣೆಯದ ಅಧಿಷ್ಠಾ[ಷ್ಠಾ]ಯಕಂ ನಾಗವರ್ಮಯ್ಯನುಂ (ಸೌಇಇ. XX, ೩೪–೮; 1053); ತತ್ಪಾದಪದ್ಮೋಪಜೀವಿಯೆನಿಸಿದ ಸುಂಕದಧಿಷ್ಠಾಯಕಂ ದೇವಧರ ದಂಡನಾಯಕನ ಬೆಸದಿಂ (ಎಕ. VII (S), ಶಿಕಾರಿ. ೩೪೪–೧೮; 1100); ಶ್ರೀಮನ್ಮಹಾಪಸಾಯಿತಂ ಸೂಳಾಯ್ಯರಧಿಷ್ಠಾಯಕಂ ಮಣ್ಣಿಳಿಕಂ ಕಾಟಿಯಣಂ (ಎಇ. XXVII, ೭೩–೫೦; 1114); ಅವರ ಸೇನಬೋವ ಹೊಲ್ಲಣನೀ ಧರ್ಮ್ಮಕ್ಕಧಿಷ್ಠಾಯಕನಾಗಿ ನಡಸುತಿರ್ದ್ದ (ಕಇ. IV, ೧೦–೫೨; 1121). [ಸಂ.]

**ಅಧಿಷ್ಠಿತ** (ಗು). ೧. ನೆಲೆಯನ್ನು ಪಡೆದ; ವಾಸಿಸಲ್ಪಟ್ಟ: ಸರ್ಪೋಪಜೀವಿಯಂದದಿ ಕೌಶಿಕಾಧಿಷ್ಠಿತಂ ಪಾಂಡವಾವಾಸದಂತೆ . . . ಎನಿಸಿತತಿಭೀಕರಾಕಾರದಿಂದ ಘೋರಾರಣ್ಯವು (ಹಚಕಾ. ೫–೧೯); ಯುಧಿಷ್ಠಿರ ಸದ್ಮದಂತೆ ವೃಕೋದರ ವಿಲಸದರ್ಜುನನಕುಲಾಧಿಷ್ಠಿತಮುಂ (ರಾಜಶೇ. ೫–೭೪ ವ). ೨. ಅಧಿಷ್ಠಾನವನ್ನು ಪಡೆದ; ಮೇಲಧಿಕಾರವನ್ನು ಹೊಂದಿದ; ಪ್ರಭುತ್ವ ನಡಸುವ: ಅಚ್ಯುತೇಂದ್ರಂ . . . ಲೋಕಪಾಲಚತುಷ್ಟಯಾಧಿಷ್ಠಿತನುಂ . . . ಆಗಿ (ಆದಿಪು. ೬–೧೩ ವ). [ಸಂ.]

**ಅಧಿಷ್ಠಿಸು** (ಕ್ರಿ). ೧. ಆಧಾರವಾಗಿ ಹೊಂದು; ನೆಲೆಗೊಳ್ಳು; ನೆಲಸು: ವಿಶದಯಶಸ್ಸಿದ್ಧಾಧಿಷ್ಠಾನಪೀಠಮೆನಿಪ ಮಜ್ಜನಪೀಠಮನಧಿಷ್ಠಿಸಿದಾಗಳ್ (ಆದಿಪು. ೮–೬೯ ವ). ೨. ಅಧಿಕಾರಮಾಡು; ಪ್ರಭುತ್ವ ನಡಸು; ಮೇಲ್ವಿಚಾರಣೆ ಮಾಡು. [ಅಧಿಷ್ಠಾನ + –ಇಸು]

**ಅಧಿಸೂಚನೆ** (ನಾ). ಅಧಿಕಾರಯುತವಾಗಿ ಕೊಡುವ ತಿಳಿವಳಿಕೆ; ವಿಧಿವತ್ತಾದ ಸೂಚನೆ: "ವಿಧಿ" ಎಂಬುದರಲ್ಲಿ, ಯಾವುದೊಂದು ಅಧ್ಯಾದೇಶ ಆದೇಶ ಉಪವಿಧಿ ನಿಯಮ ವಿನಿಮಯ ಅಧಿಸೂಚನೆ ಭಾರತ ರಾಜ್ಯಕ್ಷೇತ್ರದಲ್ಲಿ ವಿಧಿಯಂತೆಯೇ ಪ್ರಭಾವವುಳ್ಳ ರೂಢಿ ಅಥವಾ ಪದ್ಧತಿ ಸೇರಿರುತ್ತದೆ (ಭಾಧಾನ. ೭). [ಸಂ. ಅಧಿಸೂಚನಾ]

**ಅಧೀಕ್ಷಣ** (ನಾ). ಮೇಲ್ವಿಚಾರಣೆ; ಮೇಲ್ತನಿಖೆ: ಪ್ರತಿಯೊಂದು ನ್ಯಾಯಾಲಯಕ್ಕೂ, ಅದು ಯಾವರಾಜ್ಯಕ್ಷೇತ್ರಗಳ ಸಂಬಂಧದಲ್ಲಿ ಅಧಿಕಾರವ್ಯಾಪ್ತಿಯನ್ನು ಚಲಾಯಿಸುತ್ತದೆಯೋ ಆ ರಾಜ್ಯಕ್ಷೇತ್ರಗಳಲ್ಲೆಲ್ಲ ಇರತಕ್ಕ ಎಲ್ಲ ನ್ಯಾಯಾಲಯಗಳ ಮತ್ತು ನ್ಯಾಯಾಧಿಕರಣಗಳ ಮೇಲೂ ಅಧೀಕ್ಷಣ ನಡೆಯಿಸಲು ಶಕ್ತಿಯಿರತಕ್ಕುದು (ಭಾಧಾನ. ೧೨೪). [ಸಂ.]

**ಅಧೀತ** (ಗು). ೧. ಅಧ್ಯಯನಮಾಡಿದ; ಕಲಿತ. (ನಾ). ೨. ಓದಿದವನು; ವಿದ್ಯಾವಂತ; ಪಂಡಿತ (ದಕ. ೬). [ಸಂ.]

**ಅಧೀನ** (ಗು). ೧. (ಒಬ್ಬರ) ಕೈಕೆಳಗಿರುವ; ಪರವಶನಾದ; ಆಶ್ರಿತನಾದ; ಅಸ್ವತಂತ್ರನಾದ. (ನಾ). ೨. ಅಧೀನತೆ; ವಶ: ಈ ಮನೆ ನನ್ನ ಅಧೀನದಲ್ಲಿದೆ (ರೂಢಿ). [ಸಂ.]

**ಅಧೀನಕ್ರಿಯೆ** (ನಾ). [ವ್ಯಾಕ] ಮುಖ್ಯ ಕ್ರಿಯಾಪದಕ್ಕೆ ಅಧೀನವಾದ ಕ್ರಿಯಾಪದ: ಕಾದುತ್ತುಂ ಬಂದಂ; ಕಡೆದೊಡೆ ಪಾಲ್ಗಡಲ್ ವಿವಿಧವಸ್ತುವನೀಯದೆ . . . ಮೊದಲನೆಯ ವಾಕ್ಯದಲ್ಲಿ ಬರುವುದೂ ಎರಡನೆಯ ವಾಕ್ಯದಲ್ಲಿ ಈವುದೂ ಪ್ರಧಾನಕ್ರಿಯೆಗಳು; ಕಾದುವುದು ಕಡೆವುದು ಅಧೀನಕ್ರಿಯೆಗಳು (ಕೈಪಿಡಿ. ೪೯). [ಅಧೀನ + ಕ್ರಿಯೆ]

**ಅಧೀನವಾಕ್ಯ** (ನಾ). [ವ್ಯಾಕ] ಪ್ರಧಾನವಾದ ಬೇರೊಂದು ವಾಕ್ಯಕ್ಕೆ ಅಧೀನವಾಗಿರುವ ವಾಕ್ಯ: "ಒಂದು ಉಪವಾಕ್ಯವು ಮತ್ತೊಂದು ಉಪವಾಕ್ಯಕ್ಕೆ ಕರ್ತೃವೋ, ಕರ್ಮವೋ, ಅದರಲ್ಲಿರುವ ನಾಮಪದ ಕ್ರಿಯಾಪದಗಳಿಗೆ ವಿಶೇಷಣವೋ ಆಗಿ ಅದಕ್ಕೆ ಅಧೀನವಾಗಿ ಬಂದಿದೆ. ಇಂಥ ಉಪವಾಕ್ಯವನ್ನು ಅಧೀನವಾಕ್ಯವೆಂದೂ ಯಾವುದಕ್ಕೆ ಅದು ಅಧೀನವಾಗಿದೆಯೋ ಆ ಉಪವಾಕ್ಯವನ್ನು ಪ್ರಧಾನವಾಕ್ಯವೆಂದೂ ಕರೆಯುತ್ತಾರೆ" (ಮಧ್ಯಮ. ೧೯೭). [ಅಧೀನ + ವಾಕ್ಯ]

**ಅಧೀರ** (ಗು). ೧. ಧೈರ್ಯವಿಲ್ಲದ. ೨. ಮನಃಸ್ಥೈರ್ಯವಿಲ್ಲದ; ಕಳವಳಗೊಂಡ: "ಲೋಲಂ, ಚಪಲಂ . . . ಅಧೀರಂ . . . ಸಂಚಳಂ– ಈ ೧೦ ಸಂಚಳಂ" (ಹಲಾಯು. ೧೧೫–೧೦); ಕಡೆತನಕ ಪಾಲಿಸಬೇಕಾದ ವಿಷಯ ಇದು; ಹೀಗೆ ವಚನಕೊಟ್ಟರೆ ಮುಂದೇನು ಗತಿಯೆಂದು ಅವರು ತುಸು ಅಧೀರರಾದರು (ಸಮಜೀ. ೨೪೨). [ಸಂ.]

**ಅಧೀರತೆ** (ನಾ). ಮನಃಸ್ಥೈರ್ಯವಿಲ್ಲದಿರುವಿಕೆ; ಕಳವಳ: ಶೀನು ಮೇಲಿಂದ ಮೇಲೆ ತನ್ನ ಕಡೆಗೆ ನೋಡುತ್ತಿರುವುದು ಅವಳಲ್ಲಿ ತುಸು ಅಧೀರತೆಯನ್ನು ಉಂಟುಮಾಡಿತ್ತು (ಸಮುಜೀ. ೧೩೩). [ಸಂ. ಅಧೀರತಾ]

**ಅಧೀರೆ** (ನಾ). ಮನಃಸ್ಥೈರ್ಯವಿಲ್ಲದವಳು; ಕಳವಳಗೊಂಡವಳು: ಮನೆಯಾಕೆಯಾರೋಗ್ಯವಿದ್ದ ಕ್ಕಿದ್ದಂತೆಯೆ ಕೆಟ್ಟಿತದೇತಕೊ ಅರಿಯೆ ಅಂಜಿಕೆಯೆನಲಾರೆ ಶಂಕೆಯೆಂದೆನಲಾರೆ ತಾನಾದಳೊಮ್ಮೆಗಧೀರೆ (ಇಂಚಾಪ. ೪೩–೨). [ಸಂ. ಅಧೀರಾ]

**ಅಧೀವಾಸ** (ನಾ). = ಅಧಿವಾಸ್ತ: ಸಾಧಾರಣವಾಗಿ ಅಧೀವಾಸ ಮತ್ತು ನೀವಿಗಳೆಂಬ ಎರಡು ವಸ್ತ್ರಗಳನ್ನೇ . . . ಉಪಯೋಗಿಸುತ್ತಿದ್ದರು (ಭಾಇಪ್ರ. ೪೪). [ಸಂ. ಅಧೀವಾಸಸ್]

**ಅಧೀಶ** (ನಾ). ಒಡೆಯ; ಪ್ರಭು: "ಆರ್ಯಃ . . . ಅಧಿಪಃ, ಅಧೀಶಃ, ಅಧಿಪತಿಃ – ಈ ೧೦ ಒಡೆಯಂ" (ಹಲಾಯು. ೫೭–೧೮೪); ಶ್ರೀ ಶಾಂತೀಶಂ ತ್ರಿಜಗದಧೀಶಂ (ಶಾಂತಿಪು. ೧೨–೧). [ಸಂ.]

**ಅಧೀಶ್ವರ** (ನಾ). ೧. (ಅನೇಕ ಅಧಿಕಾರಿಗಳ ಮೇಲೆ) ಅಧಿಕಾರವುಳ್ಳ ಪರಮಾಧಿಕಾರಿ; ಸರ್ವಪ್ರಭು. ೨. (ಅನೇಕ ರಾಜರಮೇಲೆ) ಅಧಿಕಾರವುಳ್ಳ ಅಧಿರಾಜ; ಚಕ್ರವರ್ತಿ: ಅಸಿತಪಯೋಜನೇತ್ರೆಯರತಿಪ್ರಿಯಕಾಂತೆಯರಾಸೆವಟ್ಟು ವೀಕ್ಷಿಸುವರಧೀಶ್ವರಾಗಮನಕಾಲಮನಿರ್ದುದಿಗಂತದೊಳ್ (ಶಾಂತಿಪು. ೨–೪೮). ೩. ಪರಮೇಶ್ವರ: ವಿಶ್ವಲೋಕಾಧೀಶ್ವರಾಯ ಧರೇಶ್ವರಾಯ ವರೇಶ್ವರಾಯ ಮದೀಶ್ವರಾಯ ನಮೋ (ಬಸವು. ೬೧–೪೬). [ಸಂ.]

**ಅಧುನಾತನ** (ಗು). ೧. ಈಗಿನ; ಆಧುನಿಕ. (ನಾ). ೨. ಈಗಿನವನು; ಇತ್ತೀಚಿನವನು: ರಾಮಕ್ರಿಯೆ . . . ಆರಭಿ ತೋಡಿ ಮಧ್ಯಮಾವತಿ ಯೆಂಬ ಮೂವತ್ತಾಱು ರಾಗಂಗಳೇ ಮುಖ್ಯಮಾಗಿ ಬಳಿಕೆಯಿಂದಧುನಾತನರಲ್ಲಿ ಪ್ರಸಿದ್ಧಗೊಂಡಿರ್ಪವು (ವಿವೇಕ. ೨೩೪). [ಸಂ.]

**ಅಧೃತಿ** (ನಾ). ೧. ಸ್ಥೈರ್ಯವಿಲ್ಲದಿರುವುದು; ಅಧೈರ್ಯ. ೨. ಬಿಗಿಯಾಗಿಲ್ಲದಿರುವುದು; ಹಿಡಿತವಿಲ್ಲದಿರುವುದು; ಶಿಥಿಲತೆ. ೩. ಸಂಯಮಹೀನತೆ; (ವಿಷಯ) ಲಂಪಟತನ. ೪. ಸುಖವಿಲ್ಲದಿರುವಿಕೆ; ಅಸುಖ. [ಸಂ.]

**ಅಧೃಷ್ಟ** (ಗು). ೧. ದಿಟ್ಟನಲ್ಲದ; ಧೂರ್ತತನವಿಲ್ಲದ. ೨. ನಾಚುವ ಸ್ವಭಾವದ; ಸಂಕೋಚಪ್ರಕೃತಿಯ. ೩. ಸೋಲಿಸಲಾಗದ; ಅಜೇಯ; ಅಜಿತ. [ಸಂ.]

**ಅಧೇಲಾ** (ನಾ). ವಿಷವಿಲ್ಲದ ಒಂದು ಜಾತಿಯ ಹಾವು: ನಿರ್ವಿಷ ಸರ್ಪಗಳಲ್ಲಿ . . . ಧಿವಡ, ಧಾಮಣ, ಅಧೇಲಾ ಮುಂತಾದ ಜಾತಿಗಳು ಹಲವುಂಟು (ಕಭಾಗೆ. ೬೭). [← ಮರಾ. ಅಧೇಲಾ = ಕೀಟವಿಶೇಷ]

**ಅಧೇಲಿ** (ನಾ). ಒಂದು ಬೆಳ್ಳಿಯ ನಾಣ್ಯದ ಹೆಸರು; ಅರ್ಧ ರೂಪಾಯಿ: ಪಾವಲಿ, ಅಧೇಲಿಗಳು ಕುಣಿದಾಡಬಹುದು (ಮರಮ. ೧೩೧). [← ಮರಾ. ಹಿಂ. ಅಧೇಲೀ = ಅರ್ಧರೂಪಾಯಿ]

**ಅಧೈರ್ಯ** (ನಾ). ಧೈರ್ಯವಿಲ್ಲದಿರುವಿಕೆ; ಮನಃಸ್ಥೈರ್ಯವಿಲ್ಲದಿರುವುದು; ದಿಗಿಲು; ಪುಕ್ಕಲುತನ: 'ಅಧೈರ್ಯಗೊಳ್' ಪರಾ. [ಸಂ.]

**ಅಧೈರ್ಯಗೊಳ್** (ಕ್ರಿ). ಭಯಪಡು; ಹೆದರು; ಅಂಜು: ಹೃದಯ ಭೇದಕವಾದ ಮಾತಿಗೆ ಕೊತವಾಲನು ಅಧೈರ್ಯಗೊಳ್ಳದೆ ಕಳ್ಳರನ್ನು ಗೊತ್ತುಹಚ್ಚುವ ಸಲುವಾಗಿ ವಿಶ್ವಪ್ರಯತ್ನಮಾಡಿ (ಮುಂಬಯಿ. ೪–೨೦); ಎಂಟಾನೆಂಟು ದಿವಸಗಳಾದರೂ ಅವನ ಮನೆಯ ಕಡೆಗೆ ಹಾಯಲಿಲ್ಲ. ಅದರಿಂದ ಚಿನಿವಾರನು ಅಧೈರ್ಯಗೊಂಡು (ಮುಂಬಯಿ. ೪–೫೩). [ಅಧೈರ್ಯ + ಕೊಳ್$_1$]

**ಅಧೋಂಶುಕ** (ನಾ). ೧. ಮೈಯ ಕೆಳಭಾಗದಲ್ಲಿ ಧರಿಸುವ ಬಟ್ಟೆ, —ಉಡುಪು; ಕೆಳಬಟ್ಟೆ, —ಉಡುಪು. ೨. ಒಳಗಡೆಯ ಬಟ್ಟೆ, —ಉಡುಪು. ೩. "ಉಟ್ಟುಕೊಳ್ಳುವ ವಸ್ತ್ರ" (ಗಂಗಾಮ. ೭). [ಸಂ.]

**ಅಧೋಕ್ಷಜ** (ನಾ). ೧. ವಿಷ್ಣು. ೨. ಕೃಷ್ಣ; ವಾಸುದೇವ: ಅಧಿರಾಜಂಬರೆಗಂ ಕದನಧುರೀಣಂ ಗಂಡನಾವನೆನೆ ಮುನಿದು ಘನಪ್ರಧನರತಂ ಸಿಂಹೋದರನಧೋಕ್ಷಜಂಗೊರೆಯಿನುರ್ಚಿದಂ ಕೂರಸಿಯಂ (ಪಂರಾಮಾ. ೭–೫೬). [ಸಂ.]

**ಅಧೋಗ** (ಗು). ಕೆಳಮುಖವಾಗಿ ಹೋಗುವ, —ಇಳಿಯುವ: ನೆರೆದಿರ್ದುಮೆಂತು ಮೂಲಾಂಕುರಂಗಳೊಳಗೊಂದಧೋಗಮೊಂದೂರ್ಧ್ವಗಮುಂತಿರೆ ವಾಸುದೇವ ಬಲದೇವರೊಳೊರ್ವನಧೋಗನೊರ್ವನೂರ್ಧ್ವಗನಾದೊಂ (ಶಾಂತಿಪು. ೪–೧೧೧). [ಸಂ.]

**ಅಧೋಗಂತೃ** (ನಾ). ೧. ಕೆಳಕ್ಕೆ ಹೋಗುವವನು. ೨. "ಇಲಿ" (ಗಂಗಾಮ. ೭). [ಸಂ.]

**ಅಧೋಗತ** (ನಾ). ಕೆಳಕ್ಕೆ ಹೋಗುವವನು; ಅವನತಿ ಹೊಂದಿದವನು: ಒದವಿದ ಮೋಹದಿಂದಳಿಪಿಕೊಳ್ವನಧೋಗತನಕ್ಕು ಮಾಯೆಕೊಳ್ಳದ ಗುಣವಂತನೂರ್ಧ್ವಗತನೆಂಬುದಂ (ಜೀವಸಂ. ೯–೧೪). [ಸಂ.]

**ಅಧೋಗತಿ** (ನಾ). ೧. ಕೆಳಮುಖವಾಗಿ ಹೋಗುವುದು; ಕೆಳಕ್ಕಿಳಿಯುವುದು; ಅವನತಿ: ಸತಿಸುತರಿಗಿರಲೆಂದು ಸುಕೃತ ಉಳಿದಿರಲಧೋಗತಿ ನಿನಗೆ. ತದನುಭವ ಅವರ್ಗೊ? ಬಳಿಕಾರ್ಗೊ? (ಕಪು. ೫೦); ಹಿಂದಿನವರ ಪವಿತ್ರದೃಷ್ಟಿ ಈಗ ಅಧೋಗತಿಗಿಳಿಯುತ್ತಿರುವುದನ್ನು ಅರಿಯದೆ ನಮ್ಮ ಹಲವು ಆಚಾರವ್ಯವಹಾರಗಳು ಜನಾಂಗದ ವಿನಾಶಕ್ಕೆ ಕಾರಣವಾಗುತ್ತಿರುವುದನ್ನು ಪರಿಶೀಲಿಸಬೇಕು (ಶಿಕ್ಷದ. ೨೪). ೨. ದುರ್ಗತಿ; ನರಕ: ಧರ್ಮಗುಣಚ್ಯುತದಿನಧೋಗತಿಗೆ ಬೀಳ್ವುದೊಂದಚ್ಚರಿಯೆ (ಗದಾಯು. ೪–೩೩); ಈ ಧರ್ಮಮನೋನ್ತಿರೆ ಕಿಡಿಸಿದವರಧೋಗತಿಗಿಳಿವರು (ಸೌಇಇ. XX, ೧೭೫–೬೨; 1190); ಎಳಸುವೆನು ನಿಮಿಷದೊಳಧೋಗತಿಗೆ (ಬಸವು. ೫೪–೬೬). [ಸಂ.]

**ಅಧೋಗಮನ** (ನಾ). = ಅಧೋಗತಿ ೧. [ಸಂ.]

**ಅಧೋಗಮನೆ** (ನಾ). ಕೆಳಮುಖವಾಗಿ ಹೋಗುವವಳು; ಕೆಳಕ್ಕೆ ಹರಿಯುವವಳು: ನತರಜನನಭಂಗವನಳಿವಳತ್ಯಧೋಗಮನೆಯಾಗಿಯುಮುಟ್ಟಿದವರನೆಸೆವೂರ್ಧ್ವಗಮನರ ಮಾಳ್ಪಳಾವಗಂ . . . ವಿರುದ್ಧಸ್ವಭಾವೆ ಗಂಗಾನದಿ ಧರಾತಳದೊಳು (ಹಚಕಾ. ೧೦–೩೧). [ಸಂ. ಅಧೋಗಮನಾ]

**ಅಧೋಗಾಮಿ** (ನಾ). = ಅಧೋಗತಿ ೧: ಆಕಾಶದಲ್ಲಿ ಸೂರ್ಯ ಚಂದ್ರರು ಇರುತ್ತ ಜಲವು ಅಧೋಗಾಮಿಯಾಗಿ ಹೋಗುವುದೇತಕೆ (ಕಪಾಕುಂ. ೮೫). [ಸಂ. ಅಧೋಗಾಮಿನ್]

**ಅಧೋಗ್ರೈವೇಯಕ** (ನಾ). [ಜೈನ] ಒಂಬತ್ತು ಗ್ರೈವೇಯಕಗಳೆಂಬ ಕಲ್ಪಾತೀತ ಸ್ವರ್ಗಗಳಲ್ಲಿ ಕೆಳಗಿನದು: ತಪೋಭರದೊಳ್ ನಾಲ್ವರುಂ ನಿಂದು ಜೀವಿತವ್ಯಪಾಯದೊಳಧೋಗ್ರೈವೇಯಕದೊಳಹಮಿಂದ್ರಪದವಿಯಂ ತಾಳ್ದಿದರ್ (ಆದಿಪು. ೫–೨೭ ವ). 'ಗ್ರೈವೇಯಕ' ಪರಾ. [ಸಂ.]

**ಅಧೋನಿಬಂಧಿನಿ** (ನಾ). ಆನೆಗಳಿಗೆ ಉಂಟಾಗುವ ಏಳು ಮದಾವಸ್ಥೆಗಳಲ್ಲಿ ಐದನೆಯದು: ಆ ಪಟ್ಟಣದ ನರಸಿಂಗಮೊನೆಯರ ಪಟ್ಟದಾನೆ ಸಂಚಿತ ತಿಲಕಿತ ಅರ್ಧಕಪೋಲಿತ ಆತಿವರ್ತಿತ ಅಧೋನಿಬಂಧಿನಿ [ಪಾಠಾಂ. ಅಧೋಬಂಧಿನಿ, ಅದೋನಿಬಂಧಿನಿ, ಅದೋನುಬಂದಿನಿ, ಅಧೋನುಬಂಧಿನಿ, ಅನುಬಂಧಿನಿ] ಕ್ರೋಧಿನಿ ಗಂಧಚಾರಿಣಿಯೆಂಬ ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ (ನಂಬಿರ. ೨–೨೧). [ಸಂ.]

**ಅಧೋಬಿಂದು** (ನಾ). ೧. ಕೆಳಗಿನ ಬಿಂದು (ಕಿಸಂಗ್ಲಾ. ೩೩). ೨. ಅತ್ಯಂತ ಕೆಳಗಿನ ಬಿಂದು; ಅತ್ಯಂತ ಅವನತಿಯ ಸ್ಥಾನ (ಪಾರಿಪ. ೭೩). [ಸಂ.]

**ಅಧೋಭಾಗ** (ನಾ). ಕೆಳಗಿನ ಭಾಗ (ಕಿಸಂಗ್ಲಾ. ೩೩). [ಸಂ.]

**ಅಧೋಭೂಮಿ** (ನಾ). ಕೆಳಗಿನ ಲೋಕ: ರಮಣೀಜಾತಿಯೊಳತ್ತೆ ನಂಬಿದವರ್ಗಳ್ ಸಮ್ಯಕ್ತ್ವಮಂ ಪುಟ್ಟಿರಾರುಮಧೋಭೂಮಿಯೊಳ್ (ಆದಿಪು. ೫–೬೩). [ಸಂ.]

**ಅಧೋಮಾಯೆ** (ನಾ). ಪ್ರಕೃತಿ: ಶುದ್ಧಶಕ್ತಿಗೆ ಚಿತ್‌ಶಕ್ತಿ ಅಥವಾ ಊರ್ಧ್ವಮಾಯೆ ಎಂದೂ, ಜಡಶಕ್ತಿಗೆ ಅಧೋಮಾಯೆ ಅಥವಾ ಪ್ರಕೃತಿ ಎಂದೂ ಹೆಸರು (ಶಕ್ತಿವಿ. ೨೭). [ಸಂ.]

**ಅಧೋಮುಖ** (ನಾ). ೧. ಕೆಳಕ್ಕೆ ತಿರುಗಿದ ಮುಖ; ಕೆಳಮುಖ: ಇಂದುಮುಖಿಯಳ ಹೃದಯಸರಸಿಯೊಳು ಸೊಕ್ಕೇಜಿಸಿ ಚಂದದಿ ಅಧೋಮುಖದಿ ಬೆಳೆದ ಕೆಂದಾವರೆಗಳೋ ಎನಲು ತೋಳ್ಗಳೊಪ್ಪೆ (ಪ್ರೌಢರಾ. ೯–೯). ೨. ಮುಖ ಕೆಳಕ್ಕೆ ತಿರುಗಿಸಿದ ಸ್ಥಿತಿ; ಕೆಳಮುಖವಾದ ರೀತಿ. ೩. ತಲೆಯನ್ನು ಕೆಳಕ್ಕೆ ಬಾಗಿಸಿ ನಡೆಯುವವನು: "ಶಿರಬಾಗಿ ನಡೆವವನಧೋಮುಖನಕ್ಕು" (ಮಂಗರಾ. ೭೨–೨೨). ೪. ತಲೆಕೆಳಗು. ೫. ವಿಷ್ಣು. ೬. ನರಕದ ಒಂದು ಭಾಗ. [ಸಂ.]

**ಅಧೋಮುಖಪ್ರವಾಹ** (ನಾ). ಕೆಳಮುಖವಾಗಿ ಹರಿಯುವ ಪ್ರವಾಹ: ಸಮುದ್ರತಳದಲ್ಲಿ ನೀರಿನ ಚಲನೆಯಿಂದ ತಳೋದಕ ಪ್ರವಾಹಗಳೂ ತಣ್ಣಗಿರುವ ನೀರು ಕಾದ ನೀರಿಗೆ ಅವಕಾಶಮಾಡಿ ಕೆಳಕ್ಕಿಳಿಯುವುದರಿಂದ ಅಧೋಮುಖಪ್ರವಾಹಗಳೂ ಹುಟ್ಟುತ್ತವೆ (ಭೂವಿವ. ೯೧). [ಅಧೋಮುಖ + ಪ್ರವಾಹ]

**ಅಧೋಮುಖಿ** (ನಾ). ೧. ಮುಖವನ್ನು ಕೆಳಕ್ಕೆ ಮಾಡಿದವಳು, —ತಗ್ಗಿಸಿದವಳು. ೨. ಒಂದು ಗಿಡ; ಗೋಬಂಧಿನಿ (ಓಷಧಿ. ೫೧). ೩. ದಾಗುಡಿಗಿಡ: "ದಾಗುಡಿಯಧೋಮುಖಿ [ಪಾಠಾಂ. ಅಧೋಮೂಲಿ]" (ಮಂಗರಾ. ೩. ೪೦–೩೩). [ಸಂ. ಅಧೋಮುಖೀ]

**ಅಧೋಮೂಲಿ** (ನಾ). ಒಂದು ಗಿಡ; ದಾಗುಡಿ. 'ಅಧೋಮುಖಿ'ಯ ಪಾಠಾಂತರವನ್ನು ನೋಡಿ. [ಸಂ. ಅಧೋಮೂಲೀ]

**ಅಧೋಲೋಕ** (ನಾ). ಕೆಳಗಿನ ಲೋಕ: ನೆಲಸಿರ್ದಪ್ಪುದಧಃಸ್ಥಳಂ ಬಿಡಿದಧೋಲೋಕಂ ಸಮಂತೆಯ್ದೆ ಸುತ್ತಲುಮಿರ್ದಪ್ಪುದು ಮಧ್ಯಲೋಕಂ (ಆದಿಪು. ೧–೫೦). [ಸಂ.]

**ಅಧೋವದನೆ** (ನಾ). = ಅಧೋಮುಖಿ ೧: ಮಾಸ್ಲೋವ ಅಧೋವದನೆಯಾಗಿ . . . ಮತ್ತೆ ಕುಳಿತುಕೊಂಡಳು (ಪುನರು. ೨೧೭). [ಸಂ. ಅಧೋವದನಾ]

**ಅಧೋವಲೋಕನ** (ನಾ). ೧. ಕೆಳಗಡೆ ನೋಡುವುದು; ಕೆಳನೋಟ. ೨. ಕೆಳನೋಟವುಳ್ಳವನು: ವನಜಲಕೇಳಿಯರ್ಥಿಯೊಡೆಯಂ ನಯಸಾಧ್ಯನಧೋವಲೋಕನಂ . . . ಕುಳೀರಸಂಭವಂ (ಜಾತತಿ. ೧೭–೪); "ಕರ್ಕಾಟಕರಾಶಿಯಲ್ಲಿ ಹುಟ್ಟಿದವನು . . . ಕೆಳನೋಟವುಳ್ಳವ" (ಜಾತತಿ. ಟೀಕೆ). [ಸಂ.]

**ಅಧೋವಾಯು** (ನಾ). ೧. ಕೆಳಮುಖವಾಗಿ ಸಂಚರಿಸುವ ಗಾಳಿ. ೨. ಅಪಾನವಾಯು; ಹೂಸು. [ಸಂ.]

**ಅಧ್ಯಂಡೆ** (ನಾ). ೧. ನಸುಗುನ್ನಿ ಗಿಡ, —ಬೀಜ (ಕಿ). ೨. ಕಿರುನೆಲ್ಲಿ; ನೆಲನೆಲ್ಲಿ. [ಸಂ. ಅಧ್ಯಂಡಾ]

**ಅಧ್ಯಕ್ಷ** (ಗು). ೧. (ಇಂದ್ರಿಯಗಳಿಗೆ) ಗೋಚರವಾದ. ೨. ಮೇಲ್ವಿಚಾರಣೆ ಮಾಡುವ. (ನಾ). ೩. ಮೇಲ್ವಿಚಾರಕ; ಮುಖ್ಯಾಧಿಕಾರಿ; ಯಜಮಾನ; ಪ್ರಭು: ಜಗದಧ್ಯಕ್ಷ ರಕ್ಷಿಸು ನಮ್ಮನನವರತ (ಹರಿಸಾ. ೫೩). ೪. ಸಭಾನಾಯಕ; ಸಭಾಪತಿ: ನನ್ನ ಆಪ್ತ ಸ್ನೇಹಿತರೊಬ್ಬರು ನಗರಸಭೆಯ ಅಧ್ಯಕ್ಷರಾಗಿ ಚುನಾಯಿತರಾದರು (ರೂಢಿ). ೫. ಹಾಲೆಮರ. ೬. ಮೇಲ್ವಿಚಾರಣೆ; ಅಧ್ಯಕ್ಷಸ್ಥಾನ: [ಮ]ಹಾಜನಂಗ × × × [ನೂ]ರ್ವ್ವರಧ್ಯಕ್ಷದೊಳ್ ವೇದವಾ[ಹ]ನ ಭಟ್ಟಾರಕರ ಕಾಲಂ ಕರ್ಚಿ (ಸೌಇಇ. XI–i, ೨೨–೧೦; 897); ದೇವಾಲ್ಯಕ್ಕಂ ಸತ್ರಕ್ಕಂ ನಡವಧ್ಯಕ್ಷದವಂಗೆ ಗ ೩ (ಎಕ. III, ಮಂಡ್ಯ. ೧೨೨–೬೭; 1237); (ನಿಘಾಗ. ೧೦–೮೦–೨ ನೋ). [ಸಂ.]

**ಅಧ್ಯಕ್ಷತನ** (ನಾ). ಅಧ್ಯಕ್ಷತೆ; ಸಭಾನಾಯಕತ್ವ; ಮೇಲ್ವಿಚಾರಣೆ. [ಅಧ್ಯಕ್ಷ + –ತನ]

**ಅಧ್ಯಕ್ಷತೆ** (ನಾ). = ಅಧ್ಯಕ್ಷತನ: ಶ್ರೀಗಳವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು (ರೂಢಿ). [ಸಂ. ಅಧ್ಯಕ್ಷತಾ]

**ಅಧ್ಯಕ್ಷಿಣಿ** (ನಾ). = ಅಧ್ಯಕ್ಷೆ: ಅವರೇ ನಮ್ಮ ಅಧ್ಯಕ್ಷಿಣಿ (ಭಾರತಿ. ೪೯). [ಸಂ. ಅಧ್ಯಕ್ಷಿಣೀ]

**ಅಧ್ಯಕ್ಷೆ** (ನಾ). ಅಧ್ಯಕ್ಷಸ್ಥಾನದಲ್ಲಿರುವವಳು; ಮುಖ್ಯಾಧಿಕಾರಿಣಿ; ಯಜಮಾನಿ: ನನ್ನ ಗೃಹಿಣಿ ಭೋಜನದಧ್ಯಕ್ಷೆ ಮನೆವಾಳ್ತನದೊಳು ಬಲು ಬಲು ದಕ್ಷೆ ಅವಳಾಳ್ತನದೊಳೆ ನನ್ನಯ ರಕ್ಷೆ (ಗಣೇಶ. ೩–೫೧). [ಸಂ. ಅಧ್ಯಕ್ಷಾ]

**ಅಧ್ಯಯ** (ನಾ). ೧. ಕಲಿಯುವುದು; ಅಭ್ಯಾಸ ಮಾಡುವುದು; ಪಠನಮಾಡುವುದು. ೨. ಅಧ್ಯಾಯ; ಸಂಧಿ. [ಸಂ.]

**ಅಧ್ಯಯನ** (ನಾ). ೧. (ವೇದವನ್ನು) ಓದುವುದು, —ಕಲಿಯುವುದು; ವೇದಾಭ್ಯಾಸ; ℙ ದ್ವಿಜರಿಗೆ ಮುಖ್ಯವಾದ ಷಟ್ಕರ್ಮಗಳಲ್ಲಿ ಒಂದು: ಭವಿಷ್ಯದ್ವಿಜನ್ಮವರ್ಣಕಧ್ಯಯನಾಧ್ಯಾಪನ ದಾನಪ್ರತಿಗ್ರಹ ಯಜನ ಯಾಜನ ವಿಶಿಷ್ಟವೃತ್ತಿಯುಮಂ (ಆದಿಪು. ೮–೬೩ ವ); ಬಂದ ಪುಣ್ಯದಿನದೊಳು ಯಜ[ನ ಯಾ]ಜನಾಧ್ಯಯನಾಧ್ಯಾಪನ ದಾನ ಪ್ರತಿಗ್ರಹ ಷಟ್ಕರ್ಮ್ಮ ನಿರತರುಂ (ಸೌಇಇ. V, ೮೪೮–೨೫; 1092); ಅಧ್ಯಯನ ಓದುವವರಿಗೆ ಮಧ್ಯಾಹ್ನಕ್ಕೆ ಹಿಟ್ಟಿಲ್ಲ (ಗಾದೆ). ೨. ಓದು; ವ್ಯಾಸಂಗ; ಅಭ್ಯಾಸ: ಪೊಣ್ಮಿತುಚ್ಛ್ಛಂಖಲಂ ಗೋತ್ರಗಿರಿಚ್ಛಾತ್ರಾನುವಾದಾಧ್ಯಯನ ಗುರು ಜರಾಸಂಧಭೇರೀನಿನಾದಂ (ಜಗವಿ. ೭–೩೯); ಮನೋವಿಜ್ಞಾನಕ್ಕೂ ಆಧ್ಯಾತ್ಮವಾದಕ್ಕೂ ಗೂಢಸಂಬಂಧವಿದೆ. ಇವೆರಡರ ಅಧ್ಯಯನವನ್ನು ನಾವು ಪರಸ್ಪರ ಹೊಂದಿಸಿಕೊಂಡು ಮಾಡಿದಲ್ಲದೆ ನಿಧಿಯಿಲ್ಲ (ಜೀವಾತ್ಮ. ೪೩). [ಸಂ.]

**ಅಧ್ಯಯನತಂಡ** (ನಾ). ಓದುವವರ ಗುಂಪು; ವ್ಯಾಸಂಗಮಾಡುವವರ ಸಮೂಹ: ಈ ಮಂಡಳಿಗಳು ಆಯಾ ಪ್ರದೇಶದ ಆರ್ಥಿಕ ಸ್ಥಿತಿಗತಿಗಳನ್ನು ಪರಿಶೀಲಿಸಿ ಸೂಕ್ತಕ್ರಮಗಳನ್ನು ಶಿಫಾರಸು ಮಾಡುವುದಕ್ಕಾಗಿ ಅನೇಕ ಉಪಸಮಿತಿಗಳನ್ನೂ, ಕ್ರಿಯಾತಂಡಗಳನ್ನೂ (Working Groups) ಅಧ್ಯಯನ ತಂಡಗಳನ್ನೂ (Study Groups) ರಚಿಸಿವೆ (ಅಂತಸಂ. ೧೯). [ಅಧ್ಯಯನ + ತಂಡ]

**ಅಧ್ಯಯನನಿಯಮ** (ನಾ). (ನಿರ್ದಿಷ್ಟ ಪಂಗಡದವರು ಮಾತ್ರ) ಅಧ್ಯಯನ ಮಾಡಬೇಕೆಂಬ ನಿಯಮ: ವೇದವಾಕ್ಯಗಳಲ್ಲಿ ಕೆಲವು, ಪುರಾಣಗಳಲ್ಲಿ ಅಲ್ಲಲ್ಲಿ ಕಂಡುಬರುವುವು. ಆದರೂ ಅವುಗಳಿಗೆ ಅಧ್ಯಯನ ನಿಯಮವಿಲ್ಲದಿರುವುದರಿಂದ ಜನಸಾಮಾನ್ಯ ಓದಬಹುದು (ಹಿಂಚಸಾ. ೧೪೯). [ಅಧ್ಯಯನ + ನಿಯಮ]

**ಅಧ್ಯಯನಮಂದಿರ** (ನಾ). = ಅಧ್ಯಯನಶಾಲೆ: ಸಕಲ ಸೌಭಾಗ್ಯಗಳನ್ನೊಳಗೊಂಡು . . . ವೈಭವೋಪೇತವಾಗಿದ್ದ ಅಧ್ಯಯನ ಮಂದಿರವನ್ನು ಅವನು ಅಸಂತುಷ್ಟಮನಸ್ಸಿನಿಂದ ಪ್ರವೇಶಿಸಿದನು (ಪುನರು. ೨೦). [ಅಧ್ಯಯನ + ಮಂದಿರ]

**ಅಧ್ಯಯನಮಾಡು** (ಕ್ರಿ) ವ್ಯಾಸಂಗಮಾಡು: ಇತರ ಶೈವಧರ್ಮಗಳಿಂದ ವೀರಶೈವಧರ್ಮ ಎಲ್ಲಿ ಎಲ್ಲಿ ಭಿನ್ನವಾಗಿದೆಯೆಂಬುದನ್ನು . . . ಶಾಸ್ತ್ರೀಯವಾಗಿ ಅಧ್ಯಯನಮಾಡಬೇಕಾಗಿದೆ (ಶೂನ್ಯಕು. ೧೪೬). [ಅಧ್ಯಯನ + ಮಾಡು$_1$]

**ಅಧ್ಯಯನಯೋಗ್ಯ** (ನಾ). ಕಲಿಯುವುದಕ್ಕೆ, ವೇದಾಭ್ಯಾಸ ಮಾಡುವುದಕ್ಕೆ ಅರ್ಹತೆಯುಳ್ಳವನು : ಎಲವೋ ಪಾರ್ಥ ನಿಮ್ಮಯ್ಯರಿಗೆ ಜನಕನು ಪಾಂಡು ನೀವಧ್ಯಯನಯೋಗ್ಯರಲಾ (ಕುವ್ಯಾಕ. ೨೨–೨೩). [ಅಧ್ಯಯನ + ಯೋಗ್ಯ]

**ಅಧ್ಯಯನಶಾಲೆ** (ನಾ). ವ್ಯಾಸಂಗಮಾಡುವ ಶಾಲೆ ; ಪಾಠಶಾಲೆ: ಒಪ್ಪತ್ತಾದರೂ ಅಧ್ಯಯನಶಾಲೆಗೆ ಹೋಗಿ ಏನಾದರೂ ಮಂತ್ರವನ್ನಾದರೂ ಕಲಿಯುತ್ತೇನೆ (ಹೊಸಕ್ಷಿ. ೩೧). [ಅಧ್ಯಯನ + ಶಾಲೆ]

**ಅಧ್ಯಯನಾಂತರಾಯ** (ನಾ). ಶಾಸ್ತ್ರಾಭ್ಯಾಸಕ್ಕೆ, ಪಾಠಕ್ಕೆ ಉಂಟಾಗುವ ಅಡ್ಡಿ, —ತಡೆ; ಪಾಠವಿಘ್ನ: ಅಧ್ಯಯನಂ ನಿನಗನಿಷ್ಟಮಪ್ಪುದಱಿನಧ್ಯಯನಾಂತರಾಯಮಂ ಮಾಡಲೆಂದು (ಆದಿಪು. ೩–೩೮ ವ). [ಅಧ್ಯಯನ + ಅಂತರಾಯ]

**ಅಧ್ಯವಸಾನ** (ನಾ). ಪ್ರಯತ್ನ; ಎಡೆಬಿಡದೆ ಮಾಡುವ ಅಭ್ಯಾಸ: ಮನೋಜ್ಞಾ ಸಂಪ್ರಯೋಗಾನುತ್ಪತ್ತಿ ಸಂಕಲ್ಪಾಧ್ಯವಸಾನಮೆಂದುಂ(ಅಜಿಪು. ೮–೨೮ ವ). [ಸಂ.]

**ಅಧ್ಯವಸಾಯ** (ನಾ). ೧. ಮನೋನಿಶ್ಚಯ ; ನಿಶ್ಚಿತಜ್ಞಾನ: ಮರನಿದುವೆ ನರನಲ್ಲ ಕರಿಯಿದಲ್ಲಶ್ವಮೆಂದರಿವುದಧ್ಯವಸಾಯಮದೆ ಬುದ್ಧಿ (ವೆಂಕಾರಾ. ೩–೬–೨೨) ; ಹುಚ್ಚನು ಕೌಶಲದಿಂದ ಪಲಾಯನನಾಗುತ್ತಿರುವನು . . . ಅಧ್ಯವಸಾಯವೂ, ದೃಢಸಂಕಲ್ಪವೂ ಇಂತಹ ಪ್ರತ್ಯುತ್ಪನ್ನಮತಿಯೂ ಹುಚ್ಚರಿಗಿರಲು ಸಾಧ್ಯವೇ? (ಚಿನ್ನಬೇ. ೧೩೪). ೨. ಪ್ರಯತ್ನ; ಅಭ್ಯಾಸ; ನಿರಂತರ ಪರಿಶ್ರಮ ; ವ್ಯವಸಾಯ : ನಮ್ಮ ಅಜ್ಞಾನದ ಪರಿಮಿತಿ ಎಷ್ಟೆಂಬ ಜ್ಞಾನವನ್ನು ಪಡೆಯಲಿಕ್ಕೆ ನಾವು ಮಾಡಬೇಕಾದ ಅಧ್ಯವಸಾಯವಿನ್ನೂ ಉಳಿದಿದೆ (ಜಗತ್ತು. ೧೫೭). ೩. ಕಾರ್ಯಸಿದ್ಧಿಯಾಗುವವರೆಗೂ ಬಿಡದೆ ಮಾಡುವ ಪ್ರವೃತ್ತಿ. [ಸಂ.]

**ಅಧ್ಯಸ್ತ** (ನಾ). ೧. ಒಳಗೆ ಇರಿಸಿದ, —ಇಟ್ಟ: ನಿನ್ನೊಳಗೀ ಸಮಸ್ತಮಧ್ಯಸ್ತಮಾಗಿದೆ ನೀನೇ ಸತ್ಯರೂಪ (ಜೈಮಿಭಾ. ೧೩–೨೮). ೨. ಒಂದನ್ನು ಮತ್ತೊಂದನ್ನಾಗಿ ಭಾವಿಸಿದಾಗ ಹಾಗೆ ಭಾವಿಸಲಾದ ಆ ಮತ್ತೊಂದು ; ಆರೋಪಿತ: "ಕಪ್ಪೆಯ ಚಿಪ್ಪನ್ನು ಬೆಳ್ಳಿಯೆಂದು ತಿಳಿಯುವಂತೆ ಯಾವುದನ್ನು ತಪ್ಪಾಗಿ ಗ್ರಹಿಸುವೆವೋ ಅದು ಅಧಿಷ್ಠಾನವೆನಿಸುವುದು. ಯಾವುದೆಂದು ಗ್ರಹಿಸುವೆವೋ ಅದು ಆರೋಪಿತ ಅಥವಾ ಅಧ್ಯಸ್ತ" (ಬ್ರಹ್ಮಭಾ. ೨–೧೪) ; ಹಗ್ಗ ಹಾವಾಗಿ ತೋರುವಂತೆ ಬ್ರಹ್ಮವೇ ಸತ್ಯ –ಜಗತ್ತಾಗಿ ಭಾಸವಾಗುತ್ತದೆ ಎಂದು ಅಧ್ಯಸ್ತ ವಿವರ್ತವಾದಿಗಳು ; ಜಗತ್ತಿನ ಹುಟ್ಟು – ಗುಟ್ಟಿನ ಈ ವಿರೋಧಾಭಾಸವನ್ನು ಬಗೆಹರಿಸಲು ಹೋಗಿ ಮೂರುಮತಗಳಿಂದ ನೂರುಮತಗಳನ್ನು ಹುಟ್ಟಿಸಲಿಲ್ಲವೆ ? (ಮಾವಾದ. ೪೮). [ಸಂ.]

**ಅಧ್ಯಾತ್ಮ** (ಗು). ೧. ಆತ್ಮಕ್ಕೆ ಸಂಬಂಧಿಸಿದ; ಜೀವವನ್ನಾಗಲಿ, ಬ್ರಹ್ಮವನ್ನಾಗಲಿ ಕುರಿತ. (ನಾ). ೨. ಆತ್ಮಕ್ಕೆ ಸಂಬಂಧಿಸಿದ್ದು ; ಬ್ರಹ್ಮವನ್ನು ಕುರಿತದ್ದು; ಬ್ರಹ್ಮಜ್ಞಾನ ; ತತ್ತ್ವಶಾಸ್ತ್ರ: ಮತ್ತಮಾ ಮಹಾತ್ಮನಧ್ಯಾತ್ಮಮಂ ಮನದೊಳವಲಂಬಿಸುತ್ತುಂ (ಸುಕುಮಾ. ೧೨–೨೬ ವ). ೩. ಆತ್ಮತತ್ತ್ವ ; ಪರಬ್ರಹ್ಮ. ೪. ಇಂದ್ರಿಯ: ಪದುಮನಾಭನು ಅಚ್ಯುತಾದಿ ಅನಂತರೂಪದಲಿ ಅಧಿಸುಭೂತಾಧ್ಯಾತ್ಮವಧಿದೈವದೊಳು ಕರೆಸುವ ಪ್ರಾಣನಾಗಾಭಿದನು (ಹಸಾರ. ೬–೯) ; ಅಧ್ಯಾತ್ಮವೆಂದರೆ —ದೇಹೇಂದ್ರಿಯ ವಿಜ್ಞಾನ ಸಂಘಾತವು (ಹಿಂದಸಾ. ೩೦). [ಸಂ.]

**ಅಧ್ಯಾತ್ಮಕ** (ನಾ). ವೇದಾಂತ; ಆತ್ಮಜ್ಞಾನ: "ಜ್ಞಾನಂ ಚಾರಿತ್ರ ಮೋಕ್ಷಾಗಮತತಿ . . . ಯಜನಾಧ್ಯಾತ್ಮಕಂ ವೇದವಿಪ್ರಂ . . . ಬ್ರಹ್ಮ ಶಬ್ದಂ" (ನಾನಾರ. ೮೦). [ಸಂ.]

**ಅಧ್ಯಾತ್ಮಗುಣ** (ನಾ). ಆತ್ಮಕ್ಕೆ ಸಂಬಂಧಿಸಿದ ಗುಣ ; ಆತ್ಮತತ್ತ್ವದ ಗುಣ : ರಣಕಥೆ ಜಾರಚೋರರ ಕಥೆ ಸ್ಮರಕಥೆ ಗಣಿಕಾಕಥೆಗೆದೆಸೋತು ಗಣನೆಯಿಲ್ಲದ ಭವಕೊಳಗಹರಧ್ಯಾತ್ಮಗುಣಕೆ ಮೆಚ್ಚುವರಾರು ನೃಪತಿ (ಭರಚ. ೨–೫). [ಅಧ್ಯಾತ್ಮ + ಗುಣ]

**ಅಧ್ಯಾತ್ಮದರ್ಶನ** (ನಾ). "ವೇದಾಂತದರ್ಶನ ಅಧ್ಯಾತ್ಮದರ್ಶನ ಎಂದರೆ, ಆತ್ಮನನ್ನು ಸಾಧಿಸುವ ದರ್ಶನವೆಂದರ್ಥ" (ಹಿಂದಸಾ. ೧೯೨). [ಅಧ್ಯಾತ್ಮ + ದರ್ಶನ]

**ಅಧ್ಯಾತ್ಮಧ್ಯಾನ** (ನಾ). ಆತ್ಮತತ್ತ್ವವನ್ನು ನೆನೆಯುತ್ತಿರುವುದು; ಆತ್ಮಧ್ಯಾನ : ಸುಧರ್ಮಾಚಾರ್ಯರುಜ್ಜಯಂತ ಪರ್ವತದೊಳಧ್ಯಾತ್ಮಧ್ಯಾನಾಧೀನಮಾನಸರಾಗಿ (ಸುಕುಮಾ. ೪–೨ ವ). [ಅಧ್ಯಾತ್ಮ + ಧ್ಯಾನ]

**ಅಧ್ಯಾತ್ಮರಸ** (ನಾ). ಆತ್ಮಕ್ಕೆ ಸಂಬಂಧಿಸಿದ ಆನಂದ ; ಬ್ರಹ್ಮಾನಂದ: ದೇವ ನೀನಧ್ಯಾತ್ಮಸೂರ್ಯ ನಿನ್ನಿದಿರಲ್ಲಿ ನಾವೆಲ್ಲರಧ್ಯಾತ್ಮರಸವಾ ಈ ವಿಧವೆಂಬುದು ರವಿಗೆ ಪ್ರಕಾಶವ ದೀವಿಗೆಗಳು ತೋರ್ಪ ರೀತಿ (ಭರಚ. ೨–೮೩). [ಅಧ್ಯಾತ್ಮ + ರಸ]

**ಅಧ್ಯಾತ್ಮವಾಸನೆ** (ನಾ). ತತ್ತ್ವಜ್ಞಾನದ ಸಂಸ್ಕಾರ : ತನಯ ಕೇಳಧ್ಯಾತ್ಮವಾಸನೆಯನವರತ ಶಾಸ್ತ್ರಾರ್ಥಚಿಂತನೆ ಘನವಿವೇಕ . . . ಮೊದಲಾದಿನಿತು ಸದ್ವರ್ತನೆಯೊಳೊಂದಿಹ ಮನುಜನೇ ತತ್ತ್ವಾಧಿಕಾರಿ ಮುಮುಕ್ಷುವೆನಿಸುವನು (ಅಮೃತ. ೧–೩೦). [ಅಧ್ಯಾತ್ಮ + ವಾಸನೆ]

**ಅಧ್ಯಾತ್ಮವಿದ್ಯೆ** (ನಾ). ಆತ್ಮನ ಸ್ವರೂಪವನ್ನೂ ಗುರಿಯನ್ನೂ ತಿಳಿಸುವ ಶಾಸ್ತ್ರ ; ಬ್ರಹ್ಮವಿದ್ಯೆ. [ಅಧ್ಯಾತ್ಮ + ವಿದ್ಯೆ]

**ಅಧ್ಯಾತ್ಮವಿಶಾರದ** (ನಾ). ತತ್ತ್ವಶಾಸ್ತ್ರದಲ್ಲಿ ನಿಪುಣನಾದವನು; ಬ್ರಹ್ಮಜ್ಞಾನವನ್ನು ಚೆನ್ನಾಗಿ ಪಡೆದವನು : ಅಂತು ಭಾವಿತಾತ್ಮನಧ್ಯಾತ್ಮ [ಪಾಠಾಂ. ವಿದ್ಯಾ] ವಿಶಾರದನಾಗಿ ಪರಮಾತ್ಮನೊಳ್ ಕೂಡಿದನಾಗಳ್ (ಪಂಪಭಾ. ೧೨–೨೯ ವ). [ಅಧ್ಯಾತ್ಮ + ವಿಶಾರದ]

**ಅಧ್ಯಾತ್ಮಶಾಸ್ತ್ರ** (ನಾ). = ಅಧ್ಯಾತ್ಮವಿದ್ಯೆ: ಉತ್ತರಮೀಮಾಂಸಾ ಶಾಸ್ತ್ರವನ್ನು ಶಾರೀರಕಮೀಮಾಂಸೆಯೆಂದು ಹೇಳುತ್ತಾರೆ. ಶಾರೀರಕ ಪದಕ್ಕೆ ಶರೀರದೊಳಗಿರುವ ಆತ್ಮನೆಂದರ್ಥ. ಆತ್ಮವಿಚಾರಶಾಸ್ತ್ರವಾದುದರಿಂದ ಅಧ್ಯಾತ್ಮಶಾಸ್ತ್ರವೆಂದೂ ಹೇಳುತ್ತಾರೆ (ಹಿಂದಸಾ. ೧೮೬). [ಅಧ್ಯಾತ್ಮ + ಶಾಸ್ತ್ರ]

**ಅಧ್ಯಾತ್ಮಾಂಗಿ** (ನಾ). ಅಧ್ಯಾತ್ಮವನ್ನು ಅನುಸರಿಸುವವನು (?): ಜನನ ಮರಣಕ್ಕೆ ಒಳಗಾಹ ಆತ್ಮನು ಪರಿಭವಕ್ಕೆ ಬಪ್ಪುದಿಲ್ಲವೆಂದು ನುಡಿವರು ಅಧ್ಯಾತ್ಮಾಂಗಿಗಳು ಶರೀರದಲ್ಲಿಸೋಂಕಿದ ವ್ಯಾಧಿಗಳು ಆತ್ಮಂಗಲ್ಲದೆ ಶರೀರಕ್ಕುಂಟೇ (ಮೋಕ್ಷಮಾ. ೨೯–೧೨೧). [ಸಂ. ಅಧ್ಯಾತ್ಮಾಂಗಿನ್]

**ಅಧ್ಯಾತ್ಮಿಕ** (ಗು). ೧. ಅಧ್ಯಾತ್ಮಕ್ಕೆ ಸಂಬಂಧಿಸಿದ. ೨. ತನ್ನಿಂದ ಉಂಟಾದ; ತನ್ನ ಆತ್ಮದಿಂದ ಉಂಟಾದ. 'ಆಧ್ಯಾತ್ಮಿಕ' ಪರಾ. [ಸಂ.]

**ಅಧ್ಯಾಪಕ** (ನಾ). ೧. ಪಾಠ ಹೇಳಿಕೊಡುವವನು; ಉಪಾಧ್ಯಾಯ; ಶಿಕ್ಷಕ: "ಅಧ್ಯಾಪಕ, ಉಪಾಧ್ಯಾಯ – ಈ ೨ ಓದಿಸುವಾತಂ" (ಹಲಾಯು. ೬೬–೨೪೬). ೨. ವೇದವನ್ನು ಕಲಿಸುವ ಗುರು. ೩. ವ್ಯಾಖ್ಯಾನ ಮಾಡುವವನು; ವಿವರಣೆ ಹೇಳುವವನು : "ಓದೊಂದು ಪೇಳುವನುಪಾಧ್ಯಾಯನಧ್ಯಾಪಕಂ ವಿವರಣಂ ವ್ಯಾಖ್ಯಾನ ವ್ಯಾಖ್ಯೆಮುಕ್ಕುಂ" (ಮಂಗರಾ. ೭೪–೪). [ಸಂ.]

**ಅಧ್ಯಾಪಕವೃತ್ತಿ** (ನಾ). ಉಪಾಧ್ಯಾಯನ ಕೆಲಸ; ಶಿಕ್ಷಕನ ಕಾರ್ಯ: ಶಾಸನ ಸಭೆಯ ಸದಸ್ಯರಾಗಿ ಚುನಾಯಿತರಾದಮೇಲೆ ಗೋಖಲೆಯವರ ಕೆಲಸ ಇನ್ನೂ ಹೆಚ್ಚಿತು. ಆದರೂ ಕಾಲೇಜಿನ ಅಧ್ಯಾಪಕವೃತ್ತಿಯನ್ನು ಶ್ರಮವಹಿಸಿಯೇ ಮಾಡುತ್ತಿದ್ದರು (ಸ್ವಾವೀರ. ೩೬). [ಅಧ್ಯಾಪಕ + ವೃತ್ತಿ]

**ಅಧ್ಯಾಪನ** (ನಾ). ೧. ವೇದವನ್ನು ಕಲಿಸುವುದು. ೨. ಪಾಠವನ್ನು ಕಲಿಸುವುದು; ಓದಿಸುವುದು: ಉಪಾಸಕಾಧ್ಯಯನಾಧ್ಯಾಪನಾನಂತರಂ (ಆದಿಪು. ೧೫–೧೩೪); ಅಧ್ಯಾಪನವನ್ನೆ ಅವಲಂಬಿಸಿರಬೇಕಾದಂಥ ಬ್ರಾಹ್ಮಣನಿಗಂತು ಪ್ರಾಚೀನಕಾಲದಲ್ಲಿ ವ್ಯಾಕರಣ ಅಭ್ಯಾಸವು ತೀರ ಅವಶ್ಯಕವಾಗಿತ್ತಂತೆ (ಭಾಷಾಶಾ. ೫೯). [ಸಂ.]

**ಅಧ್ಯಾಪಿಕೆ** (ನಾ). ಪಾಠವನ್ನು ಕಲಿಸುವವಳು; ಉಪಾಧ್ಯಾಯಿನಿ; ಶಿಕ್ಷಕಿ: ರಮಾಬಾಯಿ ಬಿ. ಎ., ಬಿ. ಟಿ. ಆಗಿದ್ದರು. ನಮ್ಮೂರ ಹೆಣ್ಣುಮಕ್ಕಳ ಹೈಸ್ಕೂಲಿನಲ್ಲಿ ಅಧ್ಯಾಪಿಕೆಯರಾಗಿದ್ದರು. ಅಧ್ಯಾಪಿಕೆಯರ ವರ್ಗಕ್ಕೆ ಸೇರಿದವರು ಅವಿವಾಹಿತೆಯರಾಗಿರುವದೇ ಹೆಚ್ಚು (ಕುಂಕುಮ. ೨೮). [ಸಂ. ಅಧ್ಯಾಪಿಕಾ ?]

**ಅಧ್ಯಾಪಿಸು** (ಕ್ರಿ). ೧. ವೇದವನ್ನು ಹೇಳಿಕೊಡು; ಅಧ್ಯಯನ ಮಾಡಿಸು. ೨. ಓದಿಸು; ಕಲಿಸು: ದ್ವಿಜರು ತಮ್ಮಯ ವಿದ್ಯೆಯಂ ದ್ವಿಜೇತರರಿಗಧ್ಯಾಪಿಸರು ! (ಹೆಬ್ಬೆರ. ೨೩–೧೦). [ಅಧ್ಯಾಪನ + –ಇಸು$_3$]

**ಅಧ್ಯಾಯ** (ನಾ). ೧. ಗ್ರಂಥದ ಒಂದು ಭಾಗ; ಪಾಠ; ಪ್ರಕರಣ: ಒಂದೊಂದು ಅಧ್ಯಾಯದ ಆದಿಯಲ್ಲೂ ಅದರಲ್ಲಿರುವ ವಿಷಯದ ಸ್ಥೂಲ ಪರಿಚಯವಿದ್ದರೆ ಅನುಕೂಲ (ಶಿಕ್ಷದ. ೨೬೯). ೨. ಓದುವುದು; ವ್ಯಾಸಂಗ; ವೇದಾಭ್ಯಾಸ. ೩. ವ್ಯಾಸಂಗಕ್ಕೆ ತಕ್ಕ ಕಾಲ. 'ಅನಧ್ಯಾಯ' ಪರಾ. ೪. (ಸಮಾಸದ ಉತ್ತರಪದವಾಗಿ) ಓದುವವನು; ಅಭ್ಯಾಸಿ. 'ವೇದಾಧ್ಯಾಯ' ಪರಾ. [ಸಂ.]

**ಅಧ್ಯಾರೋಪ** (ನಾ). ೧. ಮೇಲಿಡುವುದು; ಏರಿಸುವುದು; ಪೇರಿಸುವುದು. ೨. ಒಂದು ವಸ್ತುವಿನ ಗುಣವನ್ನು ಮತ್ತೊಂದಕ್ಕೆ ಅನ್ವಯಿಸುವುದು, —ಆರೋಪಿಸುವುದು; ತಪ್ಪುಗ್ರಹಿಕೆಯಿಂದ ಒಂದನ್ನು ಮತ್ತೊಂದಾಗಿ ಭಾವಿಸುವುದು; ಭ್ರಾಂತಿ: "ಸದ್ರೂಪಮಾದ ಬ್ರಹ್ಮದಲ್ಲಿಲ್ಲದ ಮಾಯಾಪ್ರಪಂಚದ ಕಲ್ಪನೆಯೇ ಅಧ್ಯಾರೋಪವೆನಿಸುವದು" (ವಿವೇಕ. ೨೧). ೩. [ವ್ಯಾಕ] ಬಿಟ್ಟುಹೋಗಿರುವ ಮಾತುಗಳನ್ನು ಊಹಿಸಿ ಸೇರಿಸಿಕೊಳ್ಳುವುದು; ಅಧ್ಯಾಹಾರ: ಕಾರಕಮುಂ ಕ್ರಿಯೆಯುಂ ಕ್ರಿಯೆ ಕಾರಕದಿಂದನ್ವಿತಾರ್ಥಮಾಗಿರ್ಪಿನಮಧ್ಯಾರೋಪಮೆಯ್ದುಗುಂ ತತ್ಕಾರಕಗತಿಯೊಳ್ ವಿಭಕ್ತಿ ಪರಿಣತಮಕ್ಕುಂ (ಕಾವ್ಯಾವ. ೧೪೩); ಕಾರಕಕ್ಕಂ ಕ್ರಿಯೆಗಂ ನೇಯದ ದೋಷಮಿಲ್ಲದಂತಧ್ಯಾರೋಪಮಂ ಮಾಳ್ಪುದು (ಶಮದ. ೧೪೫ ವೃತ್ತಿ). [ಸಂ.]

**ಅಧ್ಯಾರೋಪಣ** (ನಾ). ೧. ಮೇಲಿಡುವುದು. ೨. (ಬೇರೊಂದರ ಗುಣವನ್ನು) ಆರೋಪಿಸುವುದು. 'ಅಧ್ಯಾರೋಪಣಂಗೆಯ್' ಪರಾ. [ಸಂ.]

**ಅಧ್ಯಾರೋಪಣಂಗೆಯ್** (ಕ್ರಿ). ಇಲ್ಲದ ಗುಣಗಳನ್ನು ಆರೋಪಿಸು; ಅಧ್ಯಾರೋಪಣಮಾಡು: ಎನಸುಂ ಕೈವಾರದಿಂದಿಲ್ಲದ ಗುಣಗಣಮುಂ ರಾಗದಿಂ ಕೆಮ್ಮನೀ ಪಾಂಥನೊಳಧ್ಯಾರೋಪಣಂಗೆಯ್ದೆನಗನವರತಂ ಬಣ್ಣಿಸುತ್ತಿರ್ದಳ್ (ಕಾದಂಉ. ೨೬೨). [ಅಧ್ಯಾರೋಪಣ + ಗೆಯ್ < ಕೆಯ್$_1$]

**ಅಧ್ಯಾರೋಪಿಸು** (ಕ್ರಿ). ೧. ಬೇರೆ ಗುಣಗಳನ್ನು ಮೇಲಿಡು; (ಕೆಟ್ಟ ಹೆಸರು ಮುಂತಾದವುಗಳು) ಮೇಲೆ ಬರುವಂತೆ ಮಾಡು; ಹೊರಿಸು; ಆರೋಪಣೆಮಾಡು: ಆರಾನುಂ ದೋಷಮನಧ್ಯಾರೋಪಿಸೆ ಗುಣಿಗಳರಮೆ ನೋವರೆನಲ್ ತಮ್ಮಾರಾಧ್ಯರೆ ದೋಷಮನಧ್ಯಾರೋಪಿಸೆ ನೋವುದರ್ಕೆ ಪೇಚಿಟ್ ಕಡೆಯುಂಟೆ (ಕಾದಂಉ. ೪೮೦). ೨. [ವ್ಯಾಕ] ಬಿಟ್ಟುಹೋಗಿರುವುದನ್ನು ತಂದು ಸೇರಿಸಿಕೊ; ಅಧ್ಯಾಹಾರ ಮಾಡಿಕೊ: ಕಡುಗಲಿಯೆಂಬಲ್ಲಿ ಆತನೆಂಬ ಪ್ರಥಮೆಯಂ . . . ಜಯಮೆಮೆಚಿವುದೆಂಬಲ್ಲಿ ಆತನೊಳೆಂಬ ಸಪ್ತಮಿಯಂ ಈ ತೆಱದಿನಧ್ಯಾರೋಪಿಸಿಕೊಳ್ವುದು (ಶಮದ. ೧೪೫ ಪ್ರಯೋ). [ಅಧ್ಯಾರೋಪಣ + –ಇಸು$_3$]

**ಅಧ್ಯಾಸ** (ನಾ). ಒಂದನ್ನು ಮತ್ತೊಂದಾಗಿ ಭಾವಿಸುವುದು; ಅದಲ್ಲದ್ದರಲ್ಲಿ ಅದು ಎಂಬ ಭಾವನೆಯನ್ನು ಇಡುವುದು; ಭ್ರಮಿಸುವುದು: ಮುತ್ತಮಲ್ಲದದಱಲ್ಲಿ ಅಹುದೆಂಬ ಬುದ್ಧಿಯೇ ಶುಕ್ತಿಕಾರಜತದೃಷ್ಟಾಂತದಿಂದಧ್ಯಾಸಲಕ್ಷಣವಹುದು (ವಿವೇಕ. ೩೬); ಹಿಂದೆ ಕಂಡಿದ್ದ ಒಂದು ವಸ್ತುವು (ಪೂರ್ವದೃಷ್ಟಃ) ಮತ್ತೊಂದರಲ್ಲಿ ಸ್ಮೃತಿರೂಪವಾಗಿ ತೋರುವುದೇ ಅಧ್ಯಾಸವು (ಬ್ರಹ್ಮಭಾ. ೨); ಒಂದು ವಸ್ತು ತನ್ನ ಸ್ವರೂಪಕ್ಕೆ ಹಾನಿಯಿಲ್ಲದೆ ಮತ್ತೊಂದು ವಸ್ತುವಾಗಿ ಆಗುವುದು, ಹಾಗೆ ಕಾಣುವುದು. ಇದಕ್ಕೆ ಅಧ್ಯಾಸವೆಂದೂ ಹೆಸರು (ಹಿಂದಸಾ. ೨೦೭). [ಸಂ.]

**ಅಧ್ಯಾಸನ** (ನಾ). ೧. ಮೇಲೆ ಕುಳಿತುಕೊಳ್ಳುವುದು. ೨. ಅಧ್ಯಕ್ಷತೆ ವಹಿಸುವುದು. ೩. ಉತ್ತಮವಾದ ಆಸನ; ಪೀಠ. [ಸಂ.]

**ಅಧ್ಯಾಸಿತ** (ಗು). ಇಡಲ್ಪಟ್ಟ; ನೆಲೆಗೊಳಿಸಿದ; ನೆಲಸಿದ: ಪ್ರಧಾನಪುರುಷಾಧ್ಯಾಸಿತಂಗಳಪ್ಪ ಪುರಂಗಳುಮಂ . . . ಮಾಡಿದಂ (ಆದಿಪು. ೮–೬೩ ವ). [ಸಂ.]

**ಅಧ್ಯಾಹರಣ** (ನಾ). = ಅಧ್ಯಾಹಾರ. [ಸಂ.]

**ಅಧ್ಯಾಹಾರ** (ನಾ). ೧. ತರ್ಕ; ಊಹೆ. ೨. [ವ್ಯಾಕ] ಬಿಟ್ಟುಹೋಗಿರುವುದನ್ನು ಊಹಿಸಿ ತಿಳಿದುಕೊಳ್ಳುವುದು, —ತಿಳಿಯುವುದು: ಆ ಸಮುಚ್ಚಯದ = ಆ ಸಮುಚ್ಚಯಾರ್ಥದ, ಉಮುಗಂ = ಉಂಕಾರಕ್ಕೆಯುಂ ಪೇೞ್ವುದು = ಅಧ್ಯಾಹಾರಮಂ ಪೇೞ್ವುದು (ಶಮದ. ೧೪೫ ಟೀಕೆ); ವಾಕ್ಯದಲ್ಲಿ ಇಲ್ಲದಿರುವ ಪದಗಳನ್ನು ಅರ್ಥಪೂರ್ತಿಗಾಗಿ ಊಹಿಸಿಕೊಂಡು ಸೇರಿಸುವುದಕ್ಕೆ ಅಧ್ಯಾಹಾರವೆಂದು ಹೆಸರು (ಮಧ್ಯಮ. ೧೮೮). [ಸಂ.]

**ಅಧ್ಯಾಹಾರ್ಯ** (ಗು). ೧. [ವ್ಯಾಕ] ಅರ್ಥಪೂರ್ತಿಮಾಡುವುದಕ್ಕಾಗಿ ಬಿಟ್ಟುಹೋಗಿರುವ ಪದ ಮೊದಲಾದವುಗಳನ್ನು ಊಹಿಸಿ ಸೇರಿಸಿಕೊಳ್ಳತಕ್ಕ. (ನಾ). ೨. ಹಾಗೆ ಸೇರಿಸಿಕೊಳ್ಳಬೇಕಾದ ಶಬ್ದ ಮೊದಲಾದದ್ದು: ಸಮುಚ್ಚಯದುಮುವಿಂಗೆ – ಆಯುಂ ಸಿರಿ ತಾಯುಂ ತಂದೆ ಕಣ್ಣುಂ ಗತಿಯೆನಿಸಿದಪಂ ಸಿಂಹಸೇನಕ್ಷಿತೀಶನೆಂಬಲ್ಲಿ ಸಮುಚ್ಚಯದುಮುವ್ ಅಧ್ಯಾಹಾರ್ಯಂ (ಶಮದ. ೧೪೫ ಪ್ರಯೋ). [ಸಂ.]

**ಅಧ್ಯಾಹೃತ** (ಗು). ಅಧ್ಯಾಹಾರಮಾಡಿಕೊಂಡ; ಇರಬೇಕೆಂದು ತಿಳಿದುಕೊಂಡ. [ಸಂ.]

**ಅಧ್ಯುಷಿತ** (ಗು). ಮೇಲೆ ನಿಂತ; ನೆಲಸಿದ; ವಾಸಮಾಡಿದ: ತೃಣಶಿಖರಾಧ್ಯುಷಿತಾಂಭಃಕಣಸಂಚಳಂ . . . ತನುಭೃದ್ಗಣಯೌವನರೂಪ ವಿಭವ ಭೋಗಾಭೋಗಂ (ಆದಿಪು. ೪–೭೫). [ಸಂ.]

**ಅಧ್ಯೂಢೆ** (ನಾ). ಹಿರಿಯ ಹೆಂಡತಿ; ದೊಡ್ಡ ಹೆಂಡತಿ. [ಸಂ. ಅಧ್ಯೂಢಾ]

**ಅಧ್ಯೇಷಣೆ** (ನಾ). ಪ್ರಾರ್ಥನೆ; ಕೋರಿಕೆ. [ಸಂ. ಅಧ್ಯೇಷಣಾ]

**ಅಧ್ರುವ** (ಗು). ೧. ಸ್ಥಿರವಲ್ಲದ; ಅಸ್ಥಿರ; ಅಶಾಶ್ವತ; ಚಂಚಲ: ಭೋಗೀಂದ್ರಭೋಗಂ ಮಹೇಂದ್ರಮಹೈಶ್ವರ್ಯಮಿವೆಲ್ಲಮಧ್ರುವಂ (ಆದಿಪು. ೧೦–೫೯); ಇಲ್ಲಿಯಧ್ರುವವಿಭವವಮರತೆಯಲ್ಲಿ ಕಿಲ್ಬಿಷವಿಲ್ಲಿ ಶಿವಮಯವಲ್ಲಿ ನೀವಿಂದೇನ ನೆನೆದಿರಿ (ಕುವ್ಯಾಗ. ೧–೨೧). ೨. ನಿಶ್ಚಯವಿಲ್ಲದ; ನಿರ್ಧಾರವಿಲ್ಲದ. ೩. (ದೇಹದ ಕೆಲವು ಭಾಗಗಳಂತೆ

ಹೆಚ್ಚು ಅಪಾಯವಿಲ್ಲದೆ) ಬೇರ್ಪಡಿಸಬಹುದಾದ; ತೆಗೆದುಹಾಕಬಹುದಾದ. (ನಾ). ೪. [ಜೈನ] ದ್ವಾದಶ ಅನುಪ್ರೇಕ್ಷೆಗಳಲ್ಲಿ ಒಂದು; ಸುಖ, ಆಯುಸ್ಸು, ಬಲ, ಸಂಪತ್ತುಗಳೆಲ್ಲ ಅನಿತ್ಯವಾದುವೆಂದು ಚಿಂತಿಸುವುದು. ℗ ಇದನ್ನು 'ಅನಿತ್ಯತ್ವ ಭಾವನೆ' ಎಂದೂ ಕರೆಯುತ್ತಾರೆ: ಅಧ್ರುವಾದಿ ದ್ವಾದಶಾನುಪ್ರೇಕ್ಷಾಭಾವನಾಭಾವಿತಾಂತಃಕರಣನಾಗಿ (ಆದಿಪು. ೧೦–೧೪); [ಸಂ.]

**ಅಧ್ರುವತ್ವ** (ನಾ). ಸ್ಥಿರವಿಲ್ಲದಿರುವುದು; ಅಸ್ಥಿರತೆ; ಅಶಾಶ್ವತತೆ: ಜೀವನದ ಅಧ್ರುವತ್ವವನ್ನು ತಿಳಿದವರು ಅನ್ಯಾಯಕ್ಕೆ ಕೈಹಾಕಲಾರರು (ರೂಢಿ). [ಸಂ.]

**ಅಧ್ವ** (ನಾ). ೧. ದಾರಿ; ಹಾದಿ; ಮಾರ್ಗ; ರೀತಿ; ಕ್ರಮ: ಚತುರಕವಿ ಪ್ರತಾನರಚಿತಾಧ್ವಕೃತಿ ಪ್ರಕರೈಕ ಪಾತ್ರಸಂಸ್ಥಿತ ಗುಣದೋಷದುಗ್ಧಜಳಭೇದನಮಂ ಕವಿನಾಮಧಾರಕಂ (ಚಂದ್ರಪು. ೧–೩೮); ಅಟವಿಯ ಕುಟಿಲ ಪಥದಲಿ ಹಠಾತ್ತೆನಲ್ ಭ್ರಷ್ಟಮಾದುದು ಪರಿಚಿತಾಧ್ವಮಾ ಕುಶಿಕಸೂನುವಿಗೆ (ಶ್ರೀರಾಮಾ. ೩೫–೨೦೮). ೨. ಕಾಲ; ವೇಳೆ. ೩. ಆಕಾಶ; ವಾಯುಮಂಡಲ. ೪. ವೇದಗಳಲ್ಲಿ ಒಂದು ಶಾಖೆ. ೫. ಸ್ಥಳ. ೬. ಪ್ರಯಾಣಮಾಡಬೇಕಾದ ದೂರ. [ಸಂ. ಅಧ್ವನ್]

**ಅಧ್ವಗ** (ನಾ). ಪ್ರಯಾಣಮಾಡುವವನು; ದಾರಿಹೋಕ: "ಪಾಂಥಃ, ಅಧ್ವಗಃ, ಅಧ್ವನೀನಃ, ಅಧ್ವನ್ಯಃ, ಪಥಿಕಃ –ಈ ೫ ಬಟ್ಟೆನಡೆವಾತಂ" (ಹಲಾಯು. ೫೯–೨೦೨); ಮಱೆದು ನೀರ್ಗುಡಿವಂದಮನಂದು ನಿಂದು ನಿಸ್ಸಾರಮುಖಂ ಮನೋಭವನ ಬಾಣದ ಬಾರಿಗೆ ಬಂದನಧ್ವಗಂ (ರಾಜಶೇ. ೨–೨೬). [ಸಂ.]

**ಅಧ್ವಗಜನ** (ನಾ). ಪ್ರಯಾಣಮಾಡುವ ಜನ; ದಾರಿಹೋಕರು; ಪ್ರಯಾಣಿಕರು: ಬುದ್ಧಿವೇೞ್ವಂತೆವೊಲಾದುದಧ್ವಗಜನಕ್ಕೆ ಕನತ್ಕಳ ಕೋಕಿಳಸ್ವನಂ (ಚಂದ್ರಪು. ೭–೪೬). [ಅಧ್ವಗ + ಜನ]

**ಅಧ್ವಗಮನ** (ನಾ). ದಾರಿ ನಡೆಯುವುದು; ಪ್ರಯಾಣ; ಪ್ರವಾಸ: ಕನಕತ್ವಕ್‌ನಖದಂತದಿನನುವರದಿಂ ನೃಪರಿನಧ್ವಗಮನದಿನಕ್ಕುಂ ಧನಂ (ಜಾತತಿ. ೯–೧೭). [ಅಧ್ವ + ಗಮನ]

**ಅಧ್ವಜ$_1$** (ಗು). ದಾರಿಯಲ್ಲಿ ಹುಟ್ಟಿದ; ಪ್ರಯಾಣದಿಂದ ಉಂಟಾದ; ಪ್ರವಾಸದಿಂದಾದ. 'ಅಧ್ವಜ ಕ್ಲೇಶ' ಪರಾ. [ಸಂ.]

**ಅಧ್ವಜ$_2$** (ಗು). ಧ್ವಜವಿಲ್ಲದ; ಬಾವುಟವಿಲ್ಲದ. [ಸಂ.]

**ಅಧ್ವಜಕ್ಲೇಶ** (ನಾ). ದಾರಿಯಲ್ಲಿ ಸಂಭವಿಸುವ ತೊಂದರೆ; ಮಾರ್ಗದಲ್ಲಿ ಉಂಟಾಗುವ ಅಡ್ಡಿ: ಪೂರ್ವಸ್ಥಾನಸ್ಥಿತನಂ ಕಂಡಂ ಮೃಗಗಣಪತಿಯಂ ಮೃಗಧೂರ್ತನಧ್ವಜಕ್ಲೇಶಾರ್ತಂ (ಪಂಚತಂ. ೪೫–೧೧). [ಅಧ್ವಜ$_1$ + ಕ್ಲೇಶ]

**ಅಧ್ವನೀನ** (ಗು). ೧. ಪ್ರಯಾಣಮಾಡುವುದಕ್ಕೆ ಸಮರ್ಥವಾದ; ವೇಗದಿಂದ ಪ್ರಯಾಣಮಾಡುವ. (ನಾ). ೨. = ಅಧ್ವಗ: "ಪಾಂಥಃ, ಅಧ್ವಗಃ, ಅಧ್ವನೀನಃ, ಅಧ್ವನ್ಯಃ, ಪಥಿಕಃ — ಈ ೫ ಬಟ್ಟೆನಡೆವಾತಂ" (ಹಲಾಯು. ೫೯–೨೦೨); ನಿಜೇಶಕಾರ್ಯಧುರೀಣಂ ಮನುವಿಹಿತ ಧರ್ಮಮಾರ್ಗಾಧ್ವನೀನನಿವನೆಂದು [ದುರ್ಗನೆನಿಸಿ] ದನಲ್ತೇ (ಪಂಚತಂ. ೧೧–೩). [ಸಂ.]

**ಅಧ್ವನ್ಯ** (ಗು). ೧. = ಅಧ್ವನೀನ ೧. (ನಾ). ೨. = ಅಧ್ವಗ ೨. ಜಳಪಾನಚ್ಛಳದಿಂ . . . ಪೀಯೂಷ ಸಂಕುಳಮಂ ಚಿತ್ತದಿನೀಂಟಿ ತದ್ವಿಷಯದಧ್ವನ್ಯರ್ ಮನಂಬೆರ್ಚುವರ್ (ಚಂದ್ರಪು. ೧–೯೯). ೩. ಪ್ರಯಾಣಕ್ಕೆ ಸಿದ್ಧವಾದ ರಥ, —ವಾಹನ; ಹೂಡಿ ನಿಲ್ಲಿಸಿದ ರಥ: "ಅಧ್ವನ್ಯಃ, ಪಾರಿಯಾತ್ರಿಕಃ, ಕರ್ಣೀರಥಃ — ಈ ೩ ಪಯಣದ ರಥಂ" (ಹಲಾಯು. ೭೩–೨೯೧). [ಸಂ.]

**ಅಧ್ವಯೋಗ** (ನಾ). [ಛಂದ] ಷಟ್ಪ್ರತ್ಯಯಗಳಲ್ಲಿ ಒಂದು: ದ್ವಿಗುಣಿಸಿ ವೃತ್ತಮನದಱೊಳ್ ತೆಗೆದೊಂದಂ ಕಳೆದಡಕ್ಕುಮಂಗುಲಿಗಳವಂ ಮಿಗಿಲಾಗಲಧ್ವಯೋಗಂ ನೆಗೞ್ದುಪದೇಶದೊಳಪರಿಮಿತಂ ಪ್ರಸ್ತಾರಂ (ಛಂದೋಂಬು. ೬–೬). ℗ ಈ ಶಬ್ದವನ್ನು 'ಅಧ್ವನ್' ಎಂದೂ ಕೆಲವು ಛಂದೋಗ್ರಂಥಗಳಲ್ಲಿ ಹೇಳಿದೆ. [ಅಧ್ವ + ಯೋಗ]

**ಅಧ್ವರ** (ನಾ). (ಸೋಮಪಾನವೇ ಪ್ರಧಾನವಾದ) ಯಜ್ಞ; ಯಾಗ: "ಯಾಗಃ, ಯಜ್ಞಃ . . . ಮಖಃ, ಅಧ್ವರಃ . . . ಸತ್ರಂ — ಈ ೧೨ ಯಾಗಂ" (ಹಲಾಯು. ೬೮–೨೬೦); ಭರತನನೇಕಾಧ್ವರಭರನಿರತಂ ಜಸಮುೞಿಯೆ ಕೞಿಯೆ ಭೂಪರ್ ಪಲರಾದರಿಸಿದ ಧರಣೀಭರಮಂ ಧರಿಯಿಸಿದಂ (ಪಂಪಭಾ. ೧–೬೪). [ಸಂ.]

**ಅಧ್ವರತುರಂಗ** (ನಾ). ಯಜ್ಞದ ಕುದುರೆ: ಬೞಿವೋಪ ರಾಮನಧ್ವರತುರಂಗಮಂ ತಡೆದು ನಡೆಗಿಡಿಪಯ್ (ರಾಮಾಶ್ವ. ೧೩೮–೨). [ಅಧ್ವರ + ತುರಂಗ]

**ಅಧ್ವರರಕ್ಷೆ** (ನಾ). ಯಜ್ಞವನ್ನು ಕಾಪಾಡುವುದು; ಯಾಗರಕ್ಷಣೆ. 'ಅಧ್ವರರಕ್ಷೆಗೆಯ್' ಪರಾ. [ಅಧ್ವರ + ರಕ್ಷೆ]

**ಅಧ್ವರರಕ್ಷೆಗೆಯ್** (ಕ್ರಿ). ಯಜ್ಞರಕ್ಷಣೆಯನ್ನು ಮಾಡು; ಯಾಗವನ್ನು ಕಾಪಾಡು: ದೇಶಮಂ ನೋಡಿ ಪಾಲಿಸಧ್ವರರಕ್ಷೆಗೆಯ್ಯಗ್ರಹಾರಂಗಳಂ ಬಿಡು . . . ಉತ್ತಮಕುಲಾಚಾರವೆರಸಿ ನಡೆಯೆಂದೆನ್ನದೀ ಹೊಲತಿಯರ ಕೂಡಿ ನಡೆಯೆಂಬರೇ ಮುನಿಗಳು (ಹಚಕಾ. ೮–೨೮). [ಅಧ್ವರರಕ್ಷೆ + ಗೆಯ್ (< ಕೆಯ್$_1$)]

**ಅಧ್ವರಶಾಲೆ** (ನಾ). ಯಜ್ಞಶಾಲೆ; ಯಾಗಶಾಲೆ: ಅವನಿಪ ಮೆಱೆದನಧ್ವರಶಾಲೆಯಲಿ ಮಾಡಿದ ಮಹಾಕ್ರತುವ (ಕುವ್ಯಾಅ. ೨೧–೭೦). [ಅಧ್ವರ + ಶಾಲೆ$_2$]

**ಅಧ್ವರಿ** (ನಾ). ಯಜ್ಞವನ್ನು ಮಾಡುವವನು; ಯಾಗದೀಕ್ಷಿತ: ಹೋತೃವೆ ನಾನಧ್ವರಿಯಯ್ ಭ್ರಾತೃವೆ ನೀನುೞಿದ ಋತ್ವಿಜರ್ ಯಾದವರ್ (ಕಾವ್ಯಾವ. ೧೭೭). [ಸಂ. ಅಧ್ವರಿನ್]

**ಅಧ್ವರಿಯು** (ನಾ). = ಅಧ್ವರ್ಯು: ಕರೆಸಿದರು ಋತ್ವಿಕ್ಕುಗಳನಧ್ವರಿಯನಾದನು ಯಾಜ್ಞವಲ್ಕ್ಯನು (ಕುವ್ಯಾಸ. ೭–೨೩). [< ಸಂ. ಅಧ್ವರ್ಯು]

**ಅಧ್ವರೋಚಿತ** (ಗು). ಯಜ್ಞಕ್ಕೆ ತಕ್ಕ, —ಯೋಗ್ಯವಾದ: ಆ ಮಹಾಧ್ವರೋಚಿತ ರಚನಾ ವಿಶೇಷಮಂ ನಿರೀಕ್ಷಿಸುವುದೆಂದು ಪುಂಡರೀಕಾಕ್ಷನನೊಡಂಗೊಂಡುಯ್ದು (ಜಗವಿ. ೧೭–೬ ವ). [ಅಧ್ವರ + ಉಚಿತ]

**ಅಧ್ವರ್ಯ** (ನಾ). ವೈಭವ; ವಿಜೃಂಭಣೆ; ಅದ್ಧೂರಿ: ನಮ್ಮಾ ಬಾರಕೂರಂದು ಅಧ್ವರ್ಯದಲಿ ಬಾಳುತಿರುವಂದು ಒಂದು ಸಲ ಯಾವನೋ ಸನ್ಯಾಸಿ ಅರಮನೆಯ ಮುಂಗಡೆಗೆ ಬಂದು ಭಿಕ್ಷಾಂದೇಹಿ ಎಂದು ಕೂಗಿದನಂತೆ (ನವರಾ. ೨–೪೫). [ಸಂ. ಅಧ್ವರೀಯ ?]

**ಅಧ್ವರ್ಯು** (ನಾ). ೧. ಯಜುರ್ವೇದವನ್ನು ಬಲ್ಲವನಾಗಿ ವೇದಿಕೆಯನ್ನು ರಚಿಸುವುದು ಮೊದಲಾದ ಕೆಲವು ವಿಶೇಷ ಕರ್ಮಗಳನ್ನು ಮಾಡುವ ಪುರೋಹಿತ: ಋಷಿಗಳ್ ಅಧ್ವರ್ಯೂದ್ಗಾತೃಹೋತಾರರುಂ ಋತ್ವಿಜರುಂ ಸಾಮಾಜಿಕರುಮಾಗೆಸೆದರ್ (ರಾಮಾಶ್ವ. ೪೬–೨೬); ಅಧ್ವರ್ಯು ಎಂಬುವನು ಯಜುರ್ವೇದ ಮೂಲಕ ಹೋಮ ಮೊದಲಾದುವನ್ನು ಮಾಡುತ್ತಾನೆ (ಹಿಂದಸಾ. ೧೫೭); ನಾನು . . . ಮಾಠರಸಗೋತ್ರದ ಕಲ್ಪಶಾಖೆಯ ಅಧ್ವರ್ಯುವಾದ ಕೇಶವದಾಸನೆಂಬ ಬ್ರಾಹ್ಮಣನು (ಭಾಸನಾ. ೧೬–೪). ೨. ಯಜ್ಞದಲ್ಲಿ ಭಾಗವಹಿಸುವ ಪುರೋಹಿತ. ೩. ಯಜ್ಞವನ್ನು ನಡಸುವವನು. ೪. ಮುಂದಾಳು; ನಾಯಕ. [ಸಂ.]

**ಅಧ್ವಶ್ರಮ** (ನಾ). ದಾರಿನಡೆದು ಆದ ಆಯಾಸ; ಪ್ರಯಾಣದ ಬಳಲಿಕೆ: ಅವನಿಪಂಗಧ್ವಶ್ರಮಂ ಪಿಂಗುವಂತು ನಿಶಾನಿರ್ಗಮ ಸೂಚಕಂ ತಳರ್ದು ತೀಡಿತ್ತೊಂದು ಮಂದಾನಿಲಂ (ಕಾದಂಬ. ೪೨೮) ; ಮುರುಹಿ ನಿಂದವು ಕೊಡಹಿದವು ಕೇಸರವನಧ್ವಶ್ರಮದ ಧಗೆ ಪರಿಹರಿಸೆ ನೀರೊಳು ಹೊಗಿಸಿದನು ಹರಿ ಹಯಚತುಷ್ಟಯವ (ಕುವ್ಯಾದ್ರೋ. ೧೦–೩೪). [ಅಧ್ವ + ಶ್ರಮ]

**ಅಧ್ವಸಹ** (ನಾ). ಮಾರ್ಗಾಯಾಸವನ್ನು ಸಹಿಸಬಲ್ಲವನು: ನಿಡಿಯಂ ಕರ್ಕಶಲೋಮನಧ್ವಸಹನನ್ಯಸ್ತ್ರೀಧನಾಂಹೋರತಂ ನಿಡುಗೋಣಂ ಶಠನಂಗನಿರ್ಗತ ಶಿರಾಜಾಲಂ ಘುಟಪ್ರೋದ್ಭವಂ (ಜಾತತಿ. ೧೬–೧೧). [ಅಧ್ವ + ಸಹ]

**ಅಧ್ವಾನ₁** (ನಾ). = ಅಧ್ವ **೧**: ಸಂದ ಗತಪ್ರತ್ಯಾಗತಮೆಂದೀ ಕೃತಿಯೊಂದಿವಕ್ಕೆ ಗೆಲ್ಗಂ ನೀಂ ಪೇೞ್ವೊಂದೆರಡು ಮುಕ್ತಕಂ ಪೆಜರೊಂದೊಂದಧ್ವಾನಮೇಂ ಕುರುಳ್ಗಳ ಸವಣಾ (ಶಾಂತಿಪು. ೧೨–೭೪) ; ಪ್ರಣುತಗುಣರೆನಿಪ ವಿಬುಧಾಗ್ರಣಿಗಳ್ ಕೆಯ್ಕೊಂಡು ಪೊಗೞೆ ಸಲೆ ನೆಗೞ್ದುವು ಧಾರಿಣಿಯೊಳಗೆ ನಾಗವರ್ಮನ ಗುಣವರ್ಮನ ಶಂಖವರ್ಮನಧ್ವಾನಂಗಳ್ (ಕಾವ್ಯಾವ. ೧೮೫). [ಸಂ. ಅಧ್ವನ್]

**ಅಧ್ವಾನ₂** (ಗು). ೧. ದನಿಯಿಲ್ಲದ; ಹೀನಸ್ವರವುಳ್ಳ. (ನಾ). **೨.** ಕಾಡು; ವನ: "ಇರದಾಪತ್ತುಮರಣ್ಯ ಹೀನಸರಮಿಂತಧ್ವಾನಮಕ್ಕುಂ" (ನಾನಾರ. ೧೬೫) ; ಅಧ್ವಾನಪದಪರಿಶ್ರಮಶ್ರಾಂತರ್ ನಿದ್ರಾಭ[ರ]ಪರವಶರಾಗಿರೆ (ಪಂಪಭಾ. ೩–೧೦ ವ). **೩.** ಕಷ್ಟ; ತೊಂದರೆ; ಆಪತ್ತು: ನಿಮ್ಮಡಿನೀಮೆನಗೆ ಪ್ರಾಣೋಪಕಾರಂಗೆಯ್ದಿರ್ ನಿಮಗೇನಾನುಮಧ್ವಾನಮಾದಾಗಳೆನ್ನಂ ನೆನೆದೊಡಾಂ ಬಂದು ದೇವರಸೇವೆಯಂ ಮಾಡಿಪೋಪೆನ್ (ಪಂಚತಂ. ೧೧೦–೬) ; ವಿದ್ಯವೇ ತಾಯ್ತಂದೆ ಬುದ್ಧಿಯೇ ಸೋದರನು ಅಧ್ವಾನಕಾದರವ ನೆಂಟ ಸುಖದಿ ತಾನಿದ್ದುದೇ ರಾಜ್ಯ (ಸರ್ವಜ್ಞ.೧೩೨೨) ; ಅಧ್ವಾನಕಾಲದಲ್ಲಿ ಮಧ್ಯಾಹ್ನದ ಊಟವೋ (ಗಾದೆ). **೪.** ತುಂಬ ಹದಗೆಟ್ಟ ಸ್ಥಿತಿ; ಅಸ್ತವ್ಯಸ್ತತೆ: "... ನಮ್ಮ ಸ್ಕೂಲು ಟೈಂಟೇಬಲ್ಲು ತುಂಬಾ ಅಧ್ವಾನ ..." (ಸ್ವಾಮಿಸ್ನೇ. ೧೫೬). [ಸಂ.]

**ಅಧ್ವಾನಸಂಗೀತ** (ನಾ). ತೀರ ಹದಗೆಟ್ಟ ಸಂಗೀತ: ಇವಳು ಷೂಟಿಂಗ್ ಸಮಯದಲ್ಲಿ ಅದನ್ನು ಅಭ್ಯಾಸಮಾಡಿ ಅಧ್ವಾನಸಂಗೀತದ ಸವಿತೋರಿದಳು ! (ನಾಡಿಗೇ. ೫೯). [ಅಧ್ವಾನ₂ + ಸಂಗೀತ]

**–ಅನ್** (ಪ್ರ). ಪುಲ್ಲಿಂಗ ಸಾಧಕ ಪ್ರತ್ಯಯ : ಶ್ರೀಮತ್ಕದಂಬಪನ್ ತ್ಯಾಗಸಂಪನ್ನನ್ ಕಲಭೋರ [ನಾ] ಅರಿಕಕುಸ್ಥಭಟ್ಟೋರನಾಳೆ (ಮೈಆರಿ. ೧೯೩೬, ೧೬–೩; 450) ; ತಾಂ ತೊನ್ನನಾಗಿ ಮುರುಂಟಿದ ಕೈಯುಂ ಕಾಲುಂ ಬೆರಸು (ವಡ್ಡಾರಾ. ೧೨೨–೨೨) ; ಮೆಲ್ಲೆರ್ದೆಯನ್ ನಿಡುವಣೆಯನ್ (ಕೈಪಿಡಿ. ೩೫).

**–ಅನ** 'ಅನೆಯ್₂' ನೋ.

**ಅನಂಗ** (ಗು). ೧. ಶರೀರವಿಲ್ಲದ. (ನಾ). **೨.** ಮನ್ಮಥ : ಬಿರಯಿಗಳ ನಿಸಲನಂಗಂಗರಲಂಬಿನ ಪೊದೆಯನಖಿಳ ವನದೇವತೆಯರ್ ವಿರಚಿಸಿ ನೀಡಲ್ ಬಂದಂತಿರಲೆಸೆವರ್ ಪುಷ್ಪಮಾಲಿಕಾಧಾರಿಣಿಯರ್ (ಪುಷ್ಪಪು. ೨–೭೯) ; ಬೇಡವೆಣ್ಬಂದು ನಿಂದೆಡೆಯೊಳ್ನಿಲ್ವನನಂಗನಾಂತು ಮುಗುಳಂಬಂ ಪುಷ್ಪಕೋದಂಡಮಂ (ರಾಜಶೇ. ೫–೧೧೨) ; ಅನಂಗನ ಶಕ್ತಿಯ ಮುಂದೆ ಯಾವುದು ತಾನೆ ನಿಲ್ಲುವುದು ? (ಆರ್ಯಕ. ೯೬). **೩.** ಆಕಾಶ. **೪.** ಗಾಳಿ. **೫.** ಮನಸ್ಸು. [ಸಂ.]

**ಅನಂಗಪರವಶೆ** (ನಾ). ಕಾಮಕ್ಕೆ ಅಧೀನಳಾದವಳು : ರತ್ನಮುದ್ರಿಕೆಯೊಳ್ ಬರೆದ ಶ್ರೀಪಾಲನಾಮಾಕ್ಷರಂಗಳಂ ಕಂಡಾಕೆಯುಮನಂಗಪರವಶೆಯಾದಳ್ (ಚಾವುಂಪು. ೧೦೫–೧೮). [ಅನಂಗ + ಪರವಶೆ]

**ಅನಂಗಪಾಶ** (ನಾ). ಮನ್ಮಥನ ಹಗ್ಗ : ಕಣ್ಗೆಸೆದಳ್ ನವರತ್ನಮಾಲೆ ಕೆಂದಳದೊಳನಂಗಪಾಶಮೆನೆ ಕೈಕೆ ಮನೋಜನ ಬಯ್ತ ಬಯ್ಕೆವೋಲ್ (ಪಂರಾಮಾ. ೩–೪೨). [ಅನಂಗ + ಪಾಶ]

**ಅನಂಗಮುದ್ರೆ** (ನಾ). **೧.** ಮನ್ಮಥನ ಮುದ್ರಿಕೆ. **೨.** ಮನ್ಮಥಪರವಶತೆಯನ್ನು ಸೂಚಿಸುವ ಭಂಗಿ, —ಆಕಾರ : ಕಲಶಕುಚಂ ಕದಕ್ಕದಿಸೆ ಸುರ್ಕುಸಿರಿಂ ನಡುಗಿತ್ತು ಚಿತ್ತಂ ... ಜಾನಕಿಗೆ ಮುದ್ರಿಕೆ ಕೊಟ್ಟುದನಂಗಮುದ್ರೆಯಂ (ಪಂರಾಮಾ. ೧೧–೮೮). [ಅನಂಗ + ಮುದ್ರೆ]

**ಅನಂಗರಾಗ** (ನಾ). ಕಾಮಾಸಕ್ತಿ ; ಮೋಹ : ಪುಳಿಯೊಳಲೆದ ಪವಳದ ಬಟ್ಟನಂತೆ ಸೊಗಯಿಸುವ ಸಂಸಾರಸಾರೋದಯನ ಬಿಂಬಾಧರಮನಂಗ ರಾಗರಸದುರುಳಿಯಂತಾದುದು (ಪಂಪಭಾ. ೨–೩೯ ವ). [ಅನಂಗ + ರಾಗ]

**ಅನಂಗರಾಜ** (ನಾ). ಕಾಮ ; ಮನ್ಮಥ : ರಾಜಿಸುತಿರ್ದುವು ... ಮತ್ತಷಟ್ಪದೀರಾಜಿಯ ವರ್ಣಸಂಕರತೆಯಿಂದೆ ಕೊಳಂಗಳನಂಗರಾಜನೀರಾಜನಲೀಲೆಗೆಂದು ರತಿ ತೀವಿದ ಬಣ್ಣವುರಂಗಳಂದದಿಂ (ಜಗವಿ. ೪–೬೫). [ಅನಂಗ + ರಾಜ]

**ಅನಂಗರಾಜ್ಯ** (ನಾ). ಕಾಮನ ರಾಜ್ಯ : ಒರ್ವಳನಂಗರಾಜ್ಯಲಕ್ಷ್ಮೀ ವಿಭವಂ ಗೃಹಾಂಗಣದ ಮುಂದೆಸೆದಿರ್ದವೊಲೊಪ್ಪಿ ತೋಱಿದಳ್ (ಶಾಂತಿಪು. ೮–೮೩). [ಅನಂಗ + ರಾಜ್ಯ]

**ಅನಂಗರಿಪು** (ನಾ). ಮನ್ಮಥನ ಶತ್ರು ; ಶಿವ : ಲಿಂಗನಿಷ್ಠೈಕಪ್ರಲೀನನು ಭೃಂಗಿನಾಥನನಂಗರಿಪುವರ್ಧಾಂಗಿಯಹ ಪಾರ್ವತಿಗೆ ನಮಿಸದೆ (ಬಸಪು. ೫೩–೩೬). [ಅನಂಗ + ರಿಪು]

**ಅನಂಗಲೋಕ** (ನಾ). ಮನ್ಮಥನ ಲೋಕ : ಫಣಿಲೋಕಮನುಗ್ರನಾಗಸಾಧನದಿನನಂಗಲೋಕಮನನೂನರತಿ ಪ್ರಮದಾಂಗದಿಂದದೇನನು ಕರಿಸಿತ್ತೊ ರಾಜಭವನಂ (ಶಾಂತಿಪು. ೩–೧೨). [ಅನಂಗ + ಲೋಕ]

**ಅನಂಗವೈರಿ** (ನಾ). = ಅನಂಗರಿಪು : ಲಿಂಗಮೂರ್ತಿಗೆ ಕೂರ್ಪ ಬಸವಂ ಜಂಗಮಾರ್ಚಕನಾದಿಬಸವನನಂಗವೈರಿಯ ಶರಣರೊಳು ಸಲೆ ಸಂದ ದಾಸೋಹಿ (ಬಸಪು. ೧–೩೨). [ಅನಂಗ + ವೈರಿ]

**ಅನಂಗಸಂಗಿ** (ನಾ). ಕಾಮಾಸಕ್ತಿಯುಳ್ಳವನು : ಕೂಡಲ ಸಂಗನ ಶರಣರ ಬಂದ ಬರವ ನಿಂದ ನಿಲವ ಅನಂಗಸಂಗಿಗಳೆತ್ತ ಬಲ್ಲರು (ಬಸವ. ೧೨೫). [ಸಂ. ಅನಂಗಸಂಗಿನ್]

**ಅನಂಗಸುಭಗ** (ನಾ). **೧.** ಮನ್ಮಥನಂತೆ ಸೌಂದರ್ಯವುಳ್ಳವನು. **೨.** ನ್ಯೂನಾಂಗನಾಗಿರುವ ಸುಂದರ; ಅಂಗರಹಿತನಾದ ಸುಂದರ (?) **೧, ೨** : ಮತ್ತಮಾ ನೃಪಂ ... ಅನಂಗಸುಭಗನಾಗಿಯುಂ ಅನಂಗ ಸುಭಗನಲ್ತು (ಪುಷ್ಪಪು. ೯–೩೯ ವ). [ಅನಂಗ + ಸುಭಗ]

**ಅನಂಗಾಗ್ನಿ** (ನಾ). ಕಾಮತಾಪ : ಅರಸಿಯುರತನುಶ್ಯಾಮಕಾಗ್ರಂಗಳೊಳ್ ಸ್ನೇಹವಶಾನಂಗಾಗ್ನಿಯುಂ ನೀರ್ದಳಿದು ನದಿಪುವಂತಾದನಂ ಭೋದಲೀಲಂ (ಶಾಂತಿಪು. ೮–೩೧). [ಅನಂಗ + ಅಗ್ನಿ]

**ಅನಂಗಾಲೇಖನ** (ನಾ). ಪ್ರೇಮಪತ್ರ : ಕಂದಿರ್ಪ ಕಂಜಾತಪತ್ರದೆ ಸೂಕ್ಷ್ಮಾಗ್ರನಖಂಗಳಿಂ ಬರೆದನಂಗಾಲೇಖನಂ ತಾನಿದಂತಿದು (ಶಾಕುಂತ. ೪೩–೭೭) [ಅನಂಗ + ಆಲೇಖನ]

**ಅನಂಗಿತಿಗಡು** (ನಾ). ಒಂದು ಗಿಡದ ಹೆಸರು : ಅಜಮೋದ ... ಅನಂಗಿತಿಗಡು, ಲವಂಗಲೋಧ್ರ, ಕಾಚು ... ಇಷ್ಟನ್ನೂ ಸಮಾನವಾಗಿ ಚೂರ್ಣವ ಮಾಡಿ ಬೇಲದ ಹಣ್ಣಿನ ರಸವಾಗಲೀ ... ದೇಹದ ಬಲವರಿತು ಕೊಡುವುದು (ವಿವೈವಿ. ೩೩). [ಅನಂಗಿ + ತಿಗಡು ?]

**ಅನಂಗೇಭ** (ನಾ). **೧.** ಮನ್ಮಥನ ಆನೆ. **೨.** ಮನ್ಮಥನೆಂಬ ಆನೆ: ತಳಿರ ತಟ್ಟಿಂದೆನಿಸಿದ ಪ್ರಧಾನಾನಂಗೇಭಂ ಬೆದಱಿ ನೆರೆದಿರ್ದುಂ ಮದುವೆಯೊಳ್ (ಶಾಂತಿಪು. ೬–೧೩). [ಅನಂಗ + ಇಭ]

**ಅನಂಗೋತ್ಸವ** (ನಾ). ಕಾಮಕ್ರೀಡೆ : ದಿವ್ಯಾಂಗನಾಭಾವಾಪಾಂಗ ನಿರೀಕ್ಷಣಾಮೃತಕೃತಾನಂಗೋತ್ಸವಂ (ಆದಿಪು. ೨–೬).
[ಅನಂಗ + ಉತ್ಸವ]

**ಅನಂತ** (ಗು). ೧. ಕೊನೆಯಿಲ್ಲದ; ಮೇರೆ ಮೀರಿದ; ಗಣನಾತೀತ ವಾದ; ಅಸಂಖ್ಯವಾದ : ಸ್ವಸ್ತಿಶ್ರೀಪ್ರಿಯನರ್ಜುನೋರ್ಜಿತಯಶಂ ವಾಜೀಶ ಯಾನೋತ್ಸವಂ ನ್ಯಸ್ತಾನಂತಸುಭೋಗ ಭೋಗಿವಿನುತಂ (ಎಕ. V, ಬೇಲೂರು. ೧೧೪–೩ ; 1173); ಜೀವವು ಮಾಯೆಯಲ್ಲ ಅದು ಅನಾದಿ, ಅನಂತ (ರಾಮಾನಿ. ೧೧೬). (ನಾ). ೨. ಗುಂಪು; ಸಮೂಹ: "ನಿಕರಂ ನಿಕಾಯಂ . . . ಪೇಟಕಮನಂತಂ ರಾಶಿ ಚಯ ಕುಳಮೆನಲ್ ಮತ್ತೆ ಸ್ತೋಮಕ್ಕೆ ನಾಮಮಕ್ಕುಂ" (ಮಂಗರಾ. ೧೨೬–೧). ೩. ವಿಷ್ಣು. ೪. ಕೃಷ್ಣ : ಸರೋಜೆಯಂ ಮೆಚ್ಚಿ ಪೊಗಚ್ಚು ಜಲಕ್ರೀಡೆಯಾಡಲ್ ಬಗೆದು ತಾನುಮನಂತನುಮಂತಃಪುರ ಪರಿವಾರಂಬೆರಸು (ಪಂಪಭಾ. ೫–೫೮ ವ). ೫. ಶಿವ; ಈಶ್ವರ. ೬. ಬಲರಾಮ : "ಬಲದೇವಃ, ಬಲಭದ್ರಃ . . . ಅನಂತಃ . . . ಹಲಾಯುಧಃ – ಈ ೧೮ ಬಲದೇವನ ಪೆಸರ್" (ಹಲಾಯು. ೬–೨೯) ; ರೋಹಿಣಿಗನಂತನಂದುದಯಿಸಿದಂ (ಜಗವಿ. ೨–೮೮) ; ತೋಯಜನಾಭನನಂತಸಹಾಯಂ ನಲಿದಿಂತು ವತ್ಸ ಕುಲಮಂ ಕಾದಂ (ಜಗವಿ. ೩–೭೭). ೭. ಸರ್ಪರಾಜ; ಆದಿಶೇಷ: "ಫಣದನಂತಂ ವಾಸುಕಿಪ್ರಬಲ ತಕ್ಷಕಾಖ್ಯನು ಸುಕಾರ್ಕೋಟಕಂ" (ಮಂಗರಾ. ೧೧೯–೪). ೮. ಆದಿಶೇಷನ ತಮ್ಮ ವಾಸುಕಿ. ೯. ಆಕಾಶ; ವಾಯುಮಂಡಲ : ಕಾಂತಾರದಲ್ಲಿ ಕಣ್ಣಾಣದಳಲುತ್ತಿರಲನಂತ ನುಡಿ ಯಿತ್ತಹೋ ಸಾರಂಗಧರಕುವರ ದುಃಖವೇತಕೆ ಸೈರಿಸು . . . ಎನಲ್ (ಗುರುಚಾ. ೧೩–೫೩). ೧೦. ಭೂಮಿ. ೧೧. [ಜೈನ] ಹದಿನಾಲ್ಕನೆಯ ತೀರ್ಥಂಕರ : ಅನಂತ . . . ಎಂಬಿಪ್ಪತ್ತುನಾಲ್ಕು ತೀರ್ಥಕರರ್ (ಚಾವುಂಉ. ೪೨೦–೧೪) ; ಅನಂತಜಿನ್ನಾಮನೆನಿಪ್ಪನೀಗೆಮಗನಂತ ಜಿನೇಂದ್ರನನಂತಸೌಖ್ಯಮಂ (ಅನಂಪು. ೧–೧). ೧೨. [ಜೈನ] ಒಂದು ಪ್ರದೇಶದ ಹೆಸರು : ಲೋಕಮಸಂಖ್ಯಾತ ಪ್ರದೇಶಿಯಾಗಿಯುಂ ಅನಂತ ಪ್ರದೇಶಕಲಿತಸ್ಕಂಧಕ್ಕಂ ಅನಂತಾನಂತಪ್ರದೇಶೋಪೇತಸ್ಕಂಧಕ್ಕಂ ಆಧಾರಮಪ್ಪುದು ವಿರೋಧಮಲ್ತು (ತತ್ತ್ವಪ್ರ. ೨೩೪) ; ಪುದ್ಗಲದಲ್ಲಿ ಸಂಖ್ಯಾತ, ಅಸಂಖ್ಯಾತ, ಅನಂತಗಳೆಂಬ ಮೂರುವಿಧ ಪ್ರದೇಶಗಳಿರು ವುವು (ಹಿಂದಸಾ. ೮೧).

**ಅನಂತಚತುರ್ದಶಿ, ಅನಂತನ ವ್ರತ, ಅನಂತಪದ್ಮನಾಭ ವ್ರತ** = ಭಾದ್ರಪದ ಶುಕ್ಲಪಕ್ಷದ ಚತುರ್ದಶಿ ದಿನದಂದು ಕಲಶಗಳನ್ನಿಟ್ಟು ಆಚರಿಸುವ ಒಂದು ವ್ರತ. [ಸಂ.]

**ಅನಂತಕಾಂತಿ** (ನಾ). ಮೇರೆ ಮೀರಿದ ಪ್ರಕಾಶ; ಅತಿಶಯವಾದ ಕಾಂತಿ : ಹರಿಪೀಠದೊಳ್ ದಾಂಗುಡಿವಿಟ್ಟುದನಂತಕಾಂತಿ ಶಾಂತೀಶ್ವರನಾ (ಶಾಂತಿಪು. ೧೦–೮೩). [ಅನಂತ + ಕಾಂತಿ]

**ಅನಂತಕಾಯ** (ನಾ). [ಜೈನ] ಅನಂತ ಜೀವಗಳಿರುವ ವನಸ್ಪತಿ : ಜೈನಸಿದ್ಧಾಂತದ ಪ್ರಕಾರ ಹಸಿರು ತೊಪ್ಪಲುಗಳಿಗೆ ಎರಡು ಅವಸ್ಥೆ ಗಳಿವೆ. ಒಂದು ಸಪ್ರತಿಷ್ಠಿತ. ಇನ್ನೊಂದು ಅಪ್ರತಿಷ್ಠಿತ. ಸಪ್ರತಿಷ್ಠಿತ ಅವಸ್ಥೆಯಲ್ಲಿ ವನಸ್ಪತಿಯೊಳಗೆ ಅಗಣಿತ ಜೀವಗಳು ವಾಸಿಸುತ್ತವೆ. ಎಂತಲೇ ಆ ವನಸ್ಪತಿಗೆ ಅನಂತಕಾಯವೆಂದು ಹೇಳಲಾಗಿದೆ (ಜೈನಪ. ೪೭೧).
[ಅನಂತ + ಕಾಯ]

**ಅನಂತಗಣನೆ** (ನಾ). ಮೇರೆ ಮೀರಿದ ಲೆಕ್ಕ ; ಅಸಂಖ್ಯಾತವಾದ ಲೆಕ್ಕ : ಕವಿಗಳುಮನಾದಿ ಲೋಕೋದ್ಭವರಪ್ಪುದಱಿಂದನಂತಗಣನಾನು ಗತಂ (ಕವಿರಾ. ೨–೪೭). [ಅನಂತ + ಗಣನೆ]

**ಅನಂತಗುಣ** (ನಾ). ಅಸಂಖ್ಯಾತವಾದ ಗುಣ : ಕನಸುಗಳಿವು ಪೆಜ ಪೆಜತೇನನಂತಗುಣನಿಳಯನಾದಿದೇವಂ ಪಲಬರ್ ಮುನಿಪತಿಗಳ್ವೆರ ಸಡರ್ದಪನನಶ್ವರಾಸ್ಪದಮನೆಂಬುದಂ ಸೂಚಿಸುಗುಂ (ಆದಿಪು. ೧೬–೪೯).
[ಅನಂತ + ಗುಣ]

**ಅನಂತಗೊಂಡೆಹುಲ್ಲು** (ನಾ). ಒಂದು ಜಾತಿಯ ಹುಲ್ಲು (ವೈಔಗಿ. ೪೯–೪೬). [ಅನಂತ + ಗೊಂಡೆ + ಹುಲ್ಲು (< ಪುಲ್)]

**ಅನಂತಚತುಷ್ಟಯ** (ನಾ). [ಜೈನ] ತೀರ್ಥಂಕರರಾಗುವವರಿಗೆ ಕರ್ಮಪರಿಣಾಮಗಳು ನಷ್ಟವಾದ ಮೇಲೆ ಉಂಟಾಗುವ ನಾಲ್ಕು ಗುಣಗಳು. ಅವು ಅನಂತಜ್ಞಾನ, ಅನಂತದರ್ಶನ, ಅನಂತ ಸುಖ, ಅನಂತವೀರ್ಯ : ಅಗ್ಗಳಿಸಿದನಂತಚತುಷ್ಟಯ ವಿಳಾಸಿ ಕೈವಲ್ಯ ಲಕ್ಷ್ಮಿಯಂ ಯತಿ ಪಡೆದಂ (ಆದಿಪು. ೧೦–೧೪). [ಅನಂತ + ಚತುಷ್ಟಯ]

**ಅನಂತಜ್ಞಾನ** (ನಾ). [ಜೈನ] ಅನಂತಚತುಷ್ಟಯಗಳಲ್ಲಿ ಒಂದು : ಸೂಕ್ಷ್ಮರೂಪನುಮನಂತಜ್ಞಾನಾದಿ ಗುಣರೂಪನುಂ (ಆದಿಪು. ೨–೧೦ ವ); ದುರಿತಾರಾತಿಯನಿಕ್ಕಿ ಗೆಲ್ವುದುಮನಂತಜ್ಞಾನಮುಂ ತಾನಿದಚ್ಚರಿಯೆಂ ಬಂತೆ . . . ನಿನ್ನೊಳ್ ಕರಂ ದೊರೆವೆತ್ತಿರ್ದುದು (ಸುಕುಮಾ. ೪–೫೨).
[ಅನಂತ + ಜ್ಞಾನ]

**ಅನಂತತೆ** (ನಾ). ಕೊನೆಯಿಲ್ಲದಿರುವುದು; ಪರಿಮಿತಿಯಿಲ್ಲದಿರುವುದು: ಆವರು ವಿಶ್ವದ ಅನಂತತೆ ಮತ್ತು ಅಪರಿಮಿತ ವ್ಯಾಪಕತೆಗಳನ್ನರಿಯಲಿಲ್ಲ (ಮುಕ್ಸಾರ. ಪೀ ೫). [ಸಂ. ಅನಂತತಾ]

**ಅನಂತದರ್ಶನ** (ನಾ). ೧. ಪರಿಮಿತಿಯಿಲ್ಲದ ನೋಟ. ೨. [ಜೈನ] ಅನಂತಚತುಷ್ಟಯಗಳಲ್ಲಿ ಒಂದು: ಸಮ್ಯಕ್ತ್ವಮುಮನಂತಜ್ಞಾನಮು ಮನಂತದರ್ಶನಮುಂ . . . ಎಂಟುಂ ಗುಣಂಗಳಾತ್ಮಾಯತ್ತಮಾಗೆ (ಶಾಂತಿಪು. ೧೨–೫೧ ವ). ೩. ಅನಂತದರ್ಶನವುಳ್ಳವನು : ಇತ್ತ ಚಕ್ರ ವರ್ತಿಗೃಹೀತಸದ್ದರ್ಶನನನಂತದರ್ಶನನಂ ತ್ರಿಶುದ್ಧಿಯಿಂ ತ್ರಿಃಪ್ರದಕ್ಷಿಣಂ ಗೆಯ್ದು (ಚಂದ್ರಪು. ೬–೨೭ ವ). [ಅನಂತ + ದರ್ಶನ]

**ಅನಂತ(ನ)ಗೊಂಡೇಸೊಪ್ಪು** (ನಾ). ಒಂದು ಜಾತಿಯ ಸೊಪ್ಪಿನ ಗಿಡ ; ಬೋಳದರಗ. [ಅನಂತನಗೊಂಡೆ + ಸೊಪ್ಪು]

**ಅನಂತಪೀಠ** (ನಾ). ಆದಿಶೇಷನ ಆಕಾರವುಳ್ಳ ಪೀಠ : ಬಳಿಕಾ ಶಿವಾರ್ಚನೆಗುಪಯುಕ್ತಮಾಗಿ ಅನಂತಪೀಠ, ಕಮಠಪೀಠ, ಶೇಷಪೀಠ, ಸಿಂಹಪೀಠ, ಪದ್ಮಪೀಠ . . . ಎಂದುಪಕಲ್ಪಿತಮಾದ ದಿವ್ಯಮಂಟಪ ಮಧ್ಯಗತ ಸಿಂಹಾಸನಕ್ಕೆ (ವಿವೇಕ. ೧೦೪). [ಅನಂತ + ಪೀಠ]

**ಅನಂತಪ್ರಬೋಧ** (ನಾ). ೧. = ಅನಂತಜ್ಞಾನ. ೨. [ಜೈನ] ಅನಂತ ಜ್ಞಾನವುಳ್ಳವನು ; ಸರ್ವಜ್ಞ : ಪರಮಾತ್ಮನೆನ್ನನೆಂದೊಡೆ ಚರಮಾಂಗ ಪ್ರಮಿತನಖಿಳಲೋಕಸಮಾನಂ ನಿರವಯವ ನಿರಂಜನ ನಿರ್ದುರಿತನನಂತ ಪ್ರಬೋಧದರ್ಶನಸೌಖ್ಯಂ (ಯಶೋಚ. ೪–೨೭).
[ಅನಂತ + ಪ್ರಬೋಧ]

**ಅನಂತಭೋಗ** (ನಾ). ೧. ಅಪರಿಮಿತವಾದ ಸುಖ. ೨. ಆದಿಶೇಷನ ಶರೀರ. ೧, ೨ : ಕಮಳಾಕ್ಷಂ ಪುರುಷೋತ್ತಮಂ ವಿಬುಧಲೋಕಾಹ್ಲಾ ದನಂ ದ್ವಿಷ್ಟದೈತ್ಯಮದಧ್ವಂಸನನಂತಭೋಗಯುತನುರ್ವೀದಾರ ಧೌರೇ ಯಂ (ಎಕ. V, ಅರಸೀ. ೬೨–೧೬ ; 1177) ; ಅನಂತಭೋಗಲಸದಂಗಂ . . . ಅಪ್ರತಿಮನೆಮ್ಮಂ ಪಾಲಿಕೆ (ದಿವ್ಯಚ. ೧–೧). 'ಅನಂತಭೋಗ ನಿಲಯ' ಪರಾ. [ಅನಂತ + ಭೋಗ]

**ಅನಂತಭೋಗನಿಲಯ** (ನಾ). ೧. ಅಪರಿಮಿತವಾದ ಸೌಖ್ಯಕ್ಕೆ ಆವಾಸವಾಗಿರುವವನು. ೨. ಆದಿಶೇಷನ ಶರೀರವೇ ನೆಲೆಯಾಗಿ ಉಳ್ಳವನು. ೧, ೨ : ಶ್ರೀಯುವತೀಪ್ರಿಯಂ ಬಲಯುತಂ ಬಲಿದರ್ಪ ಹರಂ ಜಿತಾರಿದೈತೇಯನನಂತಭೋಗನಿಲಯಂ (ಗದಾಯು. ೧–೧) ; ಅನಂತಭೋಗನಿಲಯಂ ಲಕ್ಷ್ಮೀಸಮೇತಂ . . . ತೋಡಾಯ್ತುಪೇಂದ್ರಂಗೆ

ಮಜ್ಜನಕಂಗೀ ಮರನೆಂದು ಮಾಮರಕ್ಕೆ ಕಾಮಂ ಕೊಟ್ಟನಾತಿಥ್ಯಮಂ (ಪುಷ್ಪಪು. ೮–೮೦). [ಅನಂತ + ಭೋಗ + ನಿಲಯ]

**ಅನಂತಭೋಗೀಶ್ವರ** (ನಾ). ಸರ್ಪರಾಜ; ಆದಿಶೇಷ: ಅನಂತ ಭೋಗೀಶ್ವರನಾ ದೇವಕಿಯ ಗರ್ಭದೊಳ್ ಜನಿಯಿಸಿದಂ (ಜಗವಿ. ೨–೬೦). [ಅನಂತ + ಭೋಗ + ಈಶ್ವರ]

**ಅನಂತಮಡಿ** (ಗು). ೧. ಲೆಕ್ಕವಿಲ್ಲದಷ್ಟು ಸಲದ; ಹಲವು ಬಾರಿಯ: ನಮಗಿಂತ ಅನಂತಮಡಿ ಶಕ್ತಿವಂತನೂ ಗುಣವಂತನೂ ಆದ ಪರವಸ್ತುವೊಂದಿರುವುದು (ಜಗದಾ. ೨೦೭). (ನಾ). ೨. ಲೆಕ್ಕವಿಲ್ಲದಷ್ಟು ಸಲ, —ಬಾರಿ: ಮರಳಿ ತನಗರ್ಪಿಸಲು ಕೊಟ್ಟುದನನಂತಮಡಿ ಮಾಡಿ ಪರಿಪರಿಯಲಿಂದುಣಿಸಿ ಸುಖಸಾಗರದಿ ಲೋಲಾಡಿಸುವ (ಹಸಾರ. ೨–೧೫). [ಅನಂತ + ಮಡ್ಡಿ]

**ಅನಂತಮಣಿ** (ನಾ). ೧. ಅಪರಿಮಿತವಾದ ರತ್ನ; ಲೆಕ್ಕವಿಲ್ಲದಷ್ಟು ರತ್ನ. ೨. ಸೂರ್ಯ: ಆ ಮಂಟಪಂ . . . ದಿವದಂತನಂತಮಣಿಕಿರಣಾಲಂಕೃತಮುಂ (ರಾಜಶೇ. ೮–೮ ವ). [ಅನಂತ + ಮಣಿ]

**ಅನಂತಮರ** (ನಾ). ಒಂದು ಜಾತಿಯ ಮರ (ಮೈಶಿಗಿ. ೬೬–೧೩೩೭). [ಅನಂತ + ಮರ]

**ಅನಂತರ**$_1$ (ಗು). ೧. ಅಂತರವಿಲ್ಲದ; ಒಳಭಾಗವಿಲ್ಲದ. ೨. ವಿರಾಮವಿಲ್ಲದ; ಎಡೆಬಿಡದ. ೩. ವ್ಯತ್ಯಾಸವಿಲ್ಲದ. [ಸಂ.]

**ಅನಂತರ**$_2$, ಅನಂತರಂ (ಅ). ಅದು ಆದಬಳಿಕ; ಆಮೇಲೆ; ಆ ತರುವಾಯ: ಕೊಡಗೂಸು . . . ಕಾಂತೆ ಮಡಗಿದ ಜನ್ನಿಗೆಯ ಪಾಲಂ ತೆಗೆದು ಚೆನ್ನಾಗಿ ಕಾಸಿದನಂತರದೊಳಾ ತರುಣಿವೊಬ್ಬಳವಳಿದು (ಬಸಪು. ೧೪–೫); ಅನಂತರದಲ್ಲಿ ಆ ರೇವೆಯನ್ನು ತೆಗೆದು ಕಬ್ಬಿಣದ ಕೊಪ್ಪರಿಗೆಯೊಳಗೆ ಹಾಕಿ (ಮುಂಬಯಿ. ೪–೫೫). **ಅನಂತರಂ:** ಮತ್ತಮಾಗಾಮಿ ಕಾರ್ಯಮನಱಿಪಿ ಪರಸಿ ಪೋಪುದುಮನಂತರಂ (ಜಗವಿ. ೩–೨೬ ವ). [< ಅನಂತರ$_1$]

**ಅನಂತರಂ** 'ಅನಂತರ$_2$' ನೋ.

**ಅನಂತರೂಪ** (ನಾ). ೧. ಅಪರಿಮಿತವಾದ ಆಕಾರ; ಅಸಂಖ್ಯವಾದ ಆಕಾರ: ಮುರಾಂತಕನಗಣಿತೋಪಮ ಮಹಿಮನಲ್ಲಾ ಸಗುಣ ನಿರ್ಗುಣನಾ ಮಹಾತ್ಮನನಂತರೂಪವನು ವಿಗಡಿಸಲು ಜಯವಹುದೆ (ಕುವ್ಯಾಭೀ. ೧–೨೧). ೨. ಅಸಂಖ್ಯಾತವಾದ ಆಕಾರವುಳ್ಳವನು: ಅಂತ್ಯರಹಿತನನಪ್ರಮೇಯನನಂತರೂಪನನಂಘ್ರಿಭಜಕಭವಾಂತಕನನುದ್ದಂಡ ದೈವವ ಕಂಡನಬುಜಭವ (ಕುವ್ಯಾಕ. ೬–೧೮). [ಅನಂತ + ರೂಪ]

**ಅನಂತವಸ್ತುಪ್ರಕಾಶಿ** (ಗು). ಎಲ್ಲ ಪದಾರ್ಥಗಳೂ ಗೋಚರವಾಗುವಂತೆ ಮಾಡುವ: ಮಾನಕಷಾಯಂ ಮುನಿಪತಿಗೆ ಪೋಗೆ ಪುಟ್ಟಿದುದನಂತವಸ್ತುಪ್ರಕಾಶಿ ಕೇವಳಬೋಧಂ (ಆದಿಪು. ೧೪–೧೪೫). [ಸಂ. (ಅನಂತ + ವಸ್ತು + ಪ್ರಕಾಶ + –)]

**ಅನಂತವಿಧ** (ನಾ). ಹಲವು ಬಗೆ; ಅನೇಕ ರೀತಿ: ಸವಿಶೇಷೋಕ್ತಿಗಳುಮನಂತವಿಧಂಗಳನಂತಭೇದವದಱಿಂ ಮಾರ್ಗಂ (ಕವಿರಾ. ೨–೪೭). [ಅನಂತ + ವಿಧ]

**ಅನಂತವೀರ್ಯ** (ನಾ). ೧. ಅಪರಿಮಿತವಾದ ಶಕ್ತಿ; ವಿಶೇಷವಾದ ಪರಾಕ್ರಮ: ನಿನ್ನೊಳ್ ಕರಂ ದೊರೆವೆತ್ತಿರ್ದುದನಂತವೀರ್ಯಮುಮನನಂತಾನಂತ ಸೌಖ್ಯಾಸ್ಪದಂ (ಸುಕುಮಾ. ೪–೫೨). ೨. ಅತ್ಯಧಿಕ ಪರಾಕ್ರಮವನ್ನುಳ್ಳವನು. ೩. ಒಬ್ಬನ ಹೆಸರು: ಆ ರಾತ್ರಿಯೊಳಿಂ ತನಂತವೀರ್ಯಂ ಕಂಡಂ (ಆದಿಪು. ೧೬–೪೬). ೪. [ಜೈನ] ಅನಂತ ಚತುಷ್ಟಯಗಳಲ್ಲಿ ಒಂದು. [ಅನಂತ + ವೀರ್ಯ]

**ಅನಂತಶಯನ** (ನಾ). ೧. ಆದಿಶೇಷನ ಮೇಲೆ ಮಲಗುವವನು; ವಿಷ್ಣು: ಅಂತನಂತಂ ಅನಂತಶಯನನಾಜ್ಞೆಯಿಂ ಬಂದು ದೇವಕೀ ಗರ್ಭದೊಳ್ ನೆಲಸೆ (ಜಗವಿ. ೨–೬೦ ವ). ೨. ಒಂದು ನಗರದ ಹೆಸರು. [ಅನಂತ + ಶಯನ]

**ಅನಂತಸಂಜ್ಞ** (ನಾ). 'ಅನಂತ' ಎಂಬ ಹೆಸರುಳ್ಳವನು: ತಮಾಲ ಧಾತ್ರೀರುಹಮೂಲ ಭೂತಲಕೆವರ್ಪನನಾಗಳನಂತಸಂಜ್ಞನಂ ಚಾರಣ ಯೋಗಿಯಂ ನೃಪತಿ ಕಂಡಂ (ಚಂದ್ರಪು.೩–೬೯). [ಸಂ. ಅನಂತಸಂಜ್ಞಾ]

**ಅನಂತಸುಖ** (ನಾ). ೧. ಅಪರಿಮಿತವಾದ ಸೌಖ್ಯ; ಕೊನೆಯಿಲ್ಲದ ಆನಂದ: ಸಮಂತಿರಿಸುವೆನನಂತಸುಖಸಂಗತ ಮಂಗಳ ಕಾರಣಂಗಳಂ (ಕವಿರಾ. ೨–೧೦೨); ನಿಮ್ಮ ನೋಟವನಂತಸುಖ ಕೂಟ ಪರಮಸುಖ . . . ಕೂಡಲ ಸಂಗಮದೇವಯ್ಯಾ (ಬಸವ. ೪೯೧). ೨. [ಜೈನ] ಅನಂತ ಚತುಷ್ಟಯಗಳಲ್ಲಿ ಒಂದು. [ಅನಂತ + ಸುಖ]

**ಅನಂತಸೌಖ್ಯ** (ನಾ). = ಅನಂತಸುಖ ೧: ಭವಸಂಭವದೋಷದೂಷಜೋದಂತಮನಂತಸೌಖ್ಯನಿರತಂ (ಶಾಂತಿಪು. ೧೨–೨೯). [ಅನಂತ + ಸೌಖ್ಯ]

**ಅನಂತಾಂಶ** (ನಾ). ಅನಂತನ ಒಂದು ಅಂಶ: ಎಲೆ ಮಾಯಾದೇವಿ . . . ನೀಂ ದೇವಕೀಗರ್ಭದ ಶಿಶುವನನಂತಾಂಶಮಂ ಕರ್ಷಣಂಗೆಯ್ದು (ಜಗವಿ. ೨–೫೪, ೫೯). [ಅನಂತ + ಅಂಶ]

**ಅನಂತಾಖ್ಯ** (ನಾ). ೧. ಲೆಕ್ಕವಿಲ್ಲದಷ್ಟು ಹೆಸರು. ೨. ಅನಂತ ಎಂಬ ಹೆಸರುಳ್ಳ ವಸ್ತು ಅಥವಾ ವ್ಯಕ್ತಿ: ಅನಂತಾಖ್ಯಮೆಂದು ಭೂಮಿಯಂ ತಿಗುರಿದಿರುಪಿಯುಂ (ಜಗವಿ. ೯–೫೩ ವ). [ಅನಂತ + ಆಖ್ಯ]

**ಅನಂತಾತ್ಮಕ** (ನಾ). ಲೆಕ್ಕವಿಲ್ಲದಷ್ಟು ಬಗೆಯುಳ್ಳದ್ದು: ಇಂತಿಂತೆ ಪೇೞ್ವೊಡೆಲ್ಲಮನಂತಾತ್ಮಕಮಕ್ಕುಮಾ ವಿರುದ್ಧದ ಭೇದಂ (ಕವಿರಾ. ೧–೧೧೦). [ಸಂ. (ಅನಂತ + ಆತ್ಮಕ)]

**ಅನಂತಾಧಾರ** (ನಾ). ೧. ಕೊನೆಯಿಲ್ಲದ ಆಶ್ರಯ. ೨. ವಿಷ್ಣುವಿನ ಆಶ್ರಯಸ್ಥಾನ. ೩. ಆದಿಶೇಷನ ಆಸರೆ: ಆ ಮಹಾರ್ಣವಂ . . . ಮುಕ್ತಾಧಾರಮಾಗಿಯುಮನಂತಾಧಾರಮುಂ . . . ಎನಿಸಿದುದು (ಜಗವಿ. ೧–೪೪ ವ). [ಅನಂತ + ಆಧಾರ]

**ಅನಂತಾನಂತ** (ನಾ). ಕೊನೆಯಿಲ್ಲದಷ್ಟು; ಬಹಳ ಹೆಚ್ಚು: ಇವುಗಳೆಲ್ಲ ಬಹು ಸುಂದರವಾಗಿ ಸೌಮ್ಯ ಕೋಮಲವಾಗಿ ಅನಂತಾನಂತವಾಗಿ ಕೆತ್ತಲ್ಪಟ್ಟದ್ದುವು (ಶಾಂತಲಾ. ೧೪೦). [ಅನಂತ + ಅನಂತ]

**ಅನಂತಾನುಬಂಧಿ** (ನಾ). [ಜೈನ] ಅನಂತಕಾಲದವರೆಗೆ ಜೀವನನ್ನು ಹುಟ್ಟುಸಾವುಗಳ ಸಂಸಾರದಲ್ಲಿ ಸುತ್ತಾಡಿಸುವ ಕ್ರೋಧ ಮಾಯ ಮಾನ ಲೋಭಗಳೆಂಬ ಕಷಾಯಗಳು: ಮಿಥ್ಯಾದರ್ಶನಾನಂತಾನುಬಂಧಿ ಕ್ರೋಧ ಮಾನ ಮಾಯಾಲೋಭಾಭಿಭೂತರುಂ (ಅಜಿಪು. ೧೧–೭ ವ); ಅನಂತಾನುಬಂಧಿ ಕ್ರೋಧಮಾನ ಮಾಯಾ ಲೋಭಂಗಳ್ ಸಮ್ಯಕ್ತ್ವಮನಾಗಲೀಯವು (ತತ್ತ್ವಪ್ರ. ೨೧೪); ಅನಂತಾನುಬಂಧಿ ಕ್ರೋಧ ಮಾನಾದಿ ಚತುಃಕಷಾಯವ್ಯಪಾಯಮುಂ (ಪುಷ್ಪಪು. ೧೪–೧೬ ವ). [ಅನಂತ + ಅನುಬಂಧಿ]

**ಅನಂತೆ** (ನಾ). ೧. ಭೂಮಿ: ಅಂತಕಾಂತಕನೊಡನೆ ಕಡುಮಾಱಾಂತು ಕಾಮನು ವರುಷ ವರುಷಕನಂತೆಯೊಳು ಜನವಱಿಯಲೆಲ್ಲಾ ಬೇವುತಿದ್ದಹನು (ಬಸಪು. ೫೪–೫೦); ನೀರ್ ನಭದಿಂದನಂತೆಯಲಿ ಬಿದ್ದೊಡನೆಯಾಂತಪುದೊ ಬಗೆಬಗೆಯುಪ್ಪ ರುಚಿಯ (ಶ್ರೀರಾಜ. ೧–೧೭). ೨. ಪಾರ್ವತಿ. ೩. ತುರುಚಿಯ ಗಿಡ. ೪. ಅಳಲೆಯ ಕಾಯಿ. ೫. ಹಿಪ್ಪಲಿ. ೬. ನೆಲ್ಲಿಯ ಕಾಯಿ. ೭. ಗರಿಕೆ. ೮. ಅಮೃತವಳ್ಳಿ. ೯. ಸೊಗದೆ ಬೇರು; ನೆಲಮಾಗಳಿ. [ಸಂ. ಅನಂತಾ]

**ಅನಂತೇಶ** (ನಾ). ಭೂಮಿಯ ಒಡೆಯ; ರಾಜ: ಅನಂತೇಶನಸ್ತ್ರಗಳ ನುಳಿದು ತನ್ನ (ದಿಲೀಚ. ೨–೫೮). [ಅನಂತ + ಈಶ]

**ಅನಕ**$_1$ 'ಅನ್ನಕ್ಕಂ' ನೋ.

**ಅನಕ**$_2$ (ನಾ). ಕೀಳು; ಅಧಮ (?): ಅನಕಂ ಕುಂಡಲಿ ಭಾಭ್ರು ವೀರ್ಯನತಿಲೌಲ್ಯಂ ... ನಿರ್ದಯನಲ್ಪವೀರ್ಯನೆನಿಪಂ ಚಾರಾಯಣಂ ಜತ್ತಡಂ ತನುಹೀನಂ ದೊರೆಯಲ್ಲರಿಂತಿನಿಬರುಂ ಪ್ರತ್ಯಕ್ಷಕಂದರ್ಪನೊಳ್ (ಮದತಿ. ೧–೫೨). [< ಅಣಕ$_4$ ?]

**ಅನಕಟ್ಟುಹುಲ್ಲು** (ನಾ). ಒಂದು ಬಗೆಯ ಹುಲ್ಲು (ವೈಶಿಗಿ. ೧೩–೨೪೯). [ಅನಕಟ್ಟು$_{10}$ + ಹುಲ್ಲು (< ಪುಲ್)]

**ಅನಕರ** 'ಅನ್ನಕರ' ನೋ.

**ಅನಕಾ** 'ಅನ್ನಕ್ಕಂ' ನೋ.

**ಅನಕು** (ನಾ). ಗಟ್ಟಿಯಲ್ಲದುದು; ನೀರಾದುದು (ಸ್ಯಾಂಡರ್). [< ಅಳಕ ?]

**ಅನಕೋಜ** (ನಾ). ಒಬ್ಬಾತನ ಹೆಸರು: ಪಟಣದ ಕಂಚಗಾಜಿ ಮಾರಾಳನಿಂದೋಜನ ಮಕಳು ಕಾಳೋಜ ಅನಕೋಜಗಳು ಮಾಡಿದು (ಎಕ. V, ಬೇಲೂರು. ೬೧–೪; 1395). [ಅನಕ ? + ಓಜ$_1$]

**ಅನಕ್ಷರ** (ನಾ). ೧. ಉಚ್ಚರಿಸಲು ಯೋಗ್ಯವಲ್ಲದ್ದು; ಅವಾಚ್ಯ; ಅಸಂಬದ್ಧವಾದ ನುಡಿ. ೨. ಉಚ್ಚರಿಸಲಾಗದ್ದು. ೩. ವಿದ್ಯೆಯಿಲ್ಲದವನು. 'ಅನಕ್ಷರ ಜಠರ' ಪರಾ. [ಸಂ.]

**ಅನಕ್ಷರಜಠರ** (ನಾ). ಓದುಬರಹ ಇಲ್ಲದವನು; ನಿರಕ್ಷರಕುಕ್ಷಿ: ಸಕಳಕಳಾಕುಶಲಂಗೆ ಪುಟ್ಟಿಯುಮನಕ್ಷರಜಠರರೇವಂದೆವೆಂಬ ಕಷ್ಟತೆಯೊಳಂ (ಸುಕುಮಾ. ೨–೩೨ ವ). [ಅನಕ್ಷರ + ಜಠರ]

**ಅನಕ್ಷರತೆ** (ನಾ). ಓದುಬರಹ ಬಾರದಿರುವುದು: ಅನಕ್ಷರತೆ ಹೋದ ಹೊರತು ದೇಶದ ಏಳಿಗೆಯಾಗಲಾರದು (ರೂಢಿ). 'ಸಾಕ್ಷರತೆ' ಪರಾ. [ಸಂ. ಅನಕ್ಷರತಾ]

**ಅನಕ್ಷರಧ್ವನಿ** (ನಾ). ಅಸ್ಪಷ್ಟವಾದ ಶಬ್ದ; ಅಕ್ಷರಗಳನ್ನು ಗುರುತಿಸಲು ಶಕ್ಯವಲ್ಲದ ಧ್ವನಿ: "ಮತ್ತೀಳುನಾದದೊಳನಕ್ಷರಧ್ವನಿಯೊಳಮುದಾತ್ತವನುದಾತ್ತ ಸ್ವರಿತಮೆಂಬ ರವದೊಳ್ವೆವತ್ತೆರಡು ಸಂಖ್ಯೆಯಕ್ಷರದೊಳಾ ಪ್ರತ್ಯಾಭಿಹಾರದೊಳ್ ಸ್ವರಮೆನಿಕ್ಕುಂ" (ಮಂಗರಾ. ೧೪೬–೩೬). [ಅನಕ್ಷರ + ಧ್ವನಿ]

**ಅನಕ್ಷರಸ್ಥ** (ನಾ). ಓದುಬರಹ ಬಾರದವನು; ಅವಿದ್ಯಾವಂತ: ಒಂದು ವರ್ಷದ ಅವಧಿಯಲ್ಲಿ ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡಿ (ಕನ್ನನು. ೧–೭). [ಸಂ.]

**ಅನಕ್ಷರಾಳಾಪ** (ನಾ). ಅಕ್ಷರಗಳು ಸ್ಪಷ್ಟವಾಗಿ ಕೇಳದ ಮಾತು; ಅಸ್ಪಷ್ಟವಾದ ಮಾತು; ತೊದಲು ನುಡಿ: ಅನಿಮಿತ್ತ ದರಸ್ಮಿತದಿಂ ದನಕ್ಷರಾಳಾಪದಿಂದೆ ... ಹರಿಯೆಸೆದಂ (ಜಗವಿ. ೩–೨೮). [ಅನಕ್ಷರ + ಆಳಾಪ (= ಆಲಾಪ)]

**ಅನಗತ್ಯ** (ನಾ). = ಅನಾವಶ್ಯಕ: ವಿಜ್ಞಾನಶಾಸ್ತ್ರವನ್ನು ವಿವಿಧಶಾಖೆಗಳಾಗಿ ವಿಂಗಡಿಸಿರುವರು ... ಪ್ರೌಢಶಾಲೆಯಲ್ಲಿ, ಹಾಗೂ ಮೊದಲ ತರಗತಿಗಳಲ್ಲಿ ಅದು ಅನಗತ್ಯ (ಶಿಕ್ಷದ. ೧೭೦). [ಸಂ.]

**ಅನಗಾರ** (ನಾ). [ಜೈನ] ಮನೆಯಿಲ್ಲದವನು: ಸಾಗಾರಮನಗಾರಮೆಂದು ಧರ್ಮಮೆರಡು ತೆಱನಕ್ಕುಂ (ಚಾವುಂಉ. ೪೬೦–೧೮); ಅಗಾರೀ ಪ್ರತಿಕಂ ಮನೆಯುಳ್ಳನುಂ, ಅನಗಾರಶ್ಚ – ಮನೆಯಿಲ್ಲದನುಮೆಂದಿತ್ತೆಱಂ (ತತ್ತ್ವಪ್ರ. ೨೭೫). 'ಅಗಾರ' ಪರಾ. [ಸಂ. ಅನಗಾರಿನ್]

**ಅನಗಾರಕೇವಳಿ** (ನಾ). [ಜೈನ] ಮನೆಯಲ್ಲಿ ವಾಸಮಾಡದ, ಕೇವಲ ಜ್ಞಾನವನ್ನು ಪಡೆದ ಮುನಿ: ತೀರ್ಥಕರ ಗಣಧರಾನಗಾರಕೇವಳಿಗಳ ಪರಿನಿರ್ವಾಣಕ್ಷೇತ್ರದೊಳ್ (ಆದಿಪು. ೧೫–೧೬ ವ). [ಅನಗಾರ + ಕೇವಳಿ (= ಕೇವಲಿ)]

**ಅನಗಾರವೇಳೆ** (ನಾ). [ಜೈನ] ಜೈನವ್ರತಿಗಳು ಚರಿಗೆಗಾಗಿ ಸಂಚರಿಸುವ ಸಮಯ, —ಕಾಲ: ಆ ಮುನೀಂದ್ರೋತ್ತಮಂ... ಅನಗಾರ ವೇಳೆಯೊಳ್ ಮಾದಿರಾಭಿಧಾನಪುರಕ್ಕೆ ಚರಿಗೆಗೆವರೆ (ಶಾಂತಿಪು. ೧೧–೧೦೬ ವ). [ಅನಗಾರ + ವೇಳೆ]

**ಅನಗಾರಸಮಯ** (ನಾ). [ಜೈನ] = ಅನಗಾರವೇಳೆ: ಅನಗಾರ ಸಮಯದೊಳ್ ದ್ವಾರಾಪೇಕ್ಷೆಯೊಳಿರೆ (ಶಾಂತಿಪು. ೬–೬೯ ವ). [ಅನಗಾರ + ಸಮಯ]

**ಅನಘ** (ನಾ). ೧. ಪಾಪರಹಿತ: ಸನ್ಯಾಸನವಿಧಿ ಇಸ್ತು ಮುಡಿಪ್ಪಿದಾರ್ ನಾಗಸೇನಮುನಘಂ ಗುಣಾಧಿಕಂ (ಎಕ. II, ೩೪–೨; 700); ಜನವಿನುತ ನನಘನನುಪಮನನುನಯಪರನರಸನಿನಿಸು ನೆನೆನೆನೆದು (ಕವಿರಾ. ೨–೪೦); ಅನಘ ನಿನ್ನಗಲಿ ಅರಗಳಿಗೆ ಜೀವಿಸಲಾಱೆ (ಪ್ರೌಢರಾ. ೭–೨೮). ೨. ದೋಷರಹಿತ. ೩. ನಿರಪರಾಧಿ. ೪. ಶುಚಿ. [ಸಂ.]

**ಅನಘಸ್ಥಾನ** (ನಾ). ಪಾಪವಿಲ್ಲದ ಸ್ಥಳ; ದೋಷರಹಿತ ಪ್ರದೇಶ: ಮುಕ್ತಿಯ ಸುಖದೊಂದಾದಾನಮನುಪಮಾನಮನಾದಿನಿರಸ್ತಾವಸಾನಮನಘಸ್ಥಾನಂ (ಶಾಂತಿಪು. ೯–೨೨೧). [ಅನಘ + ಸ್ಥಾನ]

**ಅನಘೆ** (ನಾ). ಪಾಪರಹಿತಳು; ನಿರ್ದೋಷಿ: ಅನಘೆ ನಿನ್ನ ಕೋಪಾಗ್ನಿಯಿಂದ ಕೌರವರು ಬೆಂದುಹೋಗದಿರುವುದು ಅವರ ಭಾಗ್ಯವೇ ಸರಿ (ಭೀಷ್ಮಚ. ೧೧೬). [ಸಂ. ಅನಘಾ]

**ಅನಚ್ಛ** (ಗು). ತಿಳಿಯಾಗಿರದ; ಕೊಳಕಾದ; ನಿರ್ಮಲವಲ್ಲದ; ಕದಡಿದ. [ಸಂ.]

**ಅನಡುಹ** (ನಾ). ೧. = ಅನಡ್ವ. ೨. ಒಬ್ಬ ಋಷಿ. [ಸಂ. ಅನಡುಹ್]

**ಅನಡುಹಿ** (ನಾ). ಹಸು: "ಉಸ್ರಾ, ಅರ್ಜುನೀ, ರೋಹಿಣೀ, ಅನಡುಹೀ, ಅನಡ್ವಾಹೀ – ಈ ೫ ಹಸು" (ಹಲಾಯು. ೪೫–೧೧೪). [ಸಂ. ಅನಡುಹೀ]

**ಅನಡ್ವ** (ನಾ). ಎತ್ತು; ಗೂಳಿ: "ಉಕ್ಷಂ ವೃಷಂ ... ಅನಡ್ವಂ ಬಲಾಧ್ಯಕ್ಷನಾ ವೃಷಭಂ ... ಎತ್ತೆನಿಕ್ಕುಂ" (ಮಂಗರಾ. ೫೩–೧). [ಸಂ. ಅನಡ್ವಾ]

**ಅನಡ್ವಜಿಹ್ವೆ** (ನಾ). ಎತ್ತಿನ ನಾಲಗೆ ಗಿಡ; ಸೀಮೆ ಓಮು: "ಎತ್ತುನಾಲಗೆಯನಡ್ವಜಿಹ್ವೆಯೆನಿಕ್ಕು" (ಮಂಗರಾ. ೪೪–೪೬). [ಅನಡ್ವ + ಜಿಹ್ವೆ]

**ಅನಡ್ವನಾಹ** (ನಾ). ಎತ್ತನ್ನು ವಾಹನವಾಗಿ ಉಳ್ಳವನು; ಶಿವ: "ಪ್ರಚಂಡದೆತ್ತೇಱುವನನಡ್ವವಾಹಂ" (ಮಂಗರಾ. ೭೩–೨೬). [ಅನಡ್ವ + ವಾಹ]

**ಅನಡ್ವಾಹ** (ನಾ). = ಅನಡ್ವ: ಬಿಡದಿರೆಡಬಲಕೆನುತೆ ಸುತ್ತಲುಂ ಕಟ್ಟಿಕೊಂಡಡಿಗಡಿಗೆ ಬೀಸಿದರ್ ಸಿಕ್ಕಿದುದನಡ್ವಾಹಮುಡಿ ಕೊಚ್ಚು ತಱಿಯಿಱಿಯೆನುತ್ತೆ ಕೋಳಾಹಳದೊಳುಱುಬಿದರ್ ವೃಷಪತಿಯನು (ಚೆಬಪು. ೪೪–೧೫). [ಸಂ.]

**ಅನಡ್ವಾಹಿ** (ನಾ). = ಅನಡುಹಿ: "ಉಸ್ರಾ ... ಅನಡ್ವಾಹೀ – ಈ ೫ ಹಸು" (ಹಲಾಯು. ೪೫–೧೧೪). [ಸಂ. ಅನಡ್ವಾಹೀ]

**ಅನಡ್ವಿ** (ನಾ). = ಅನಡುಹಿ: "ರೋಹಿಣಿಯನಡ್ವಿಯರ್ಜುನಿ ವೃಷೆ ಗೋವೃಷಭವಾಹಿಯೆನೆ ಹಸು" (ಮಂಗರಾ. ೫೩–೩). [ಸಂ. ಅನಡ್ವೀ]

**ಅನತ** (ಗು). ೧. ಬಗ್ಗಿಲ್ಲದ; ನೆಟ್ಟಗಿರುವ. ೨. ನಮಸ್ಕರಿಸದ; ವಿನಯವಿಲ್ಲದ; ಗರ್ವಿಷ್ಠನಾದ: ಅನತೋದ್ವೃಪ್ತಾರಿ××× ಪಾಳರನ ದಟಲೆದಾಟಂದು ಜೀಯಯ್ಯ ಬಾಪ್ಪೆಂಬಿನೆಗಂ ಪಾದಾನತಕ್ಷತ್ರಿಯ (ಎಕ. VII, ಶಿಕಾರಿ. ೧೪೯–೫; 1062); ಘನಮುಹತ್ವವೆನಿಪ್ಪ ಗದೆಯಿಂದನತ

ಪರವಾದಿಗಳೆನಿಪ ಗರ್ಜನೆಯ ಮೃಗಸಂದೋಹಮಂ ಬೆಂಬತ್ತಿ ನುರ್ಗೊತ್ತಿ (ಬಸವು. ೩೪-೩೫). [ಸಂ.]

**ಅನತಾರಾತಿಬಳೆ** (ನಾ). ತಗ್ಗಿ ನಡೆಯದ ವೈರಿಗಳ ಗುಂಪು; ಗರ್ವಿಷ್ಠರಾದ ಶತ್ರುಗಳ ಸೈನ್ಯ: ಅನತಾರಾತಿಬಳಕ್ಕೆ ದಣ್ಡಧರನಿರ್ಪ್ಪ ನ್ತಿರ್ದ್ದಪಂ ಕಾಮಿನೀಜನ ಕೇಳೀವಿಭವಕ್ಕೆ ಚಿತ್ತಭವನಿರ್ಪ್ಪನ್ತಿರ್ದ್ದಪಂ (ಸೌಇಇ. XX, ೭೪-೨೬; 1112). [ಅನತ + ಅರಾತಿ + ಬಳ್ವ (= ಬಲ್ಪ)]

**ಅನತಿಕಾಲ** (ನಾ). ಸ್ವಲ್ಪ ಹೊತ್ತು, —ಕಾಲ: ಈಗಿನ ಬೊಂಬಾಯಿ ನಗರ ಇರುವ ಪ್ರದೇಶದಲ್ಲಿ ಅನತಿಕಾಲದ ಹಿಂದೆ ಏಳು ಪಾಳುದ್ವೀಪ ಗಳಿದ್ದವು (ದಾವಾನ. ೧). [ಸಂ. (ಅನತಿ + ಕಾಲ)]

**ಅನತಿಜರಠ** (ಗು). ಹೆಚ್ಚು ಮುಪ್ಪಾಗದ; ಮಧ್ಯಪ್ರಾಯದ; ಹೆಚ್ಚು ಜೀರ್ಣಿಸಿ ಹೋಗದ: ಅನತಿಜರಠಕರ್ಣಿಕಾಮುಕುಳಸ್ಥೂಳತ್ರಿಚತುರ ಸುವರ್ಣಕಂದೋದರ ಕಂಧರಂ... ಇದು ಮಹಾನಾಟಕಬಲಂ (ಆದಿಪು. ೧೩-೪೫ ವ). [ಸಂ. (ಅನತಿ + ಜರಠ)]

**ಅನತಿದೂರ** (ನಾ). ಸ್ವಲ್ಪ ದೂರ; ಸಮೀಪ: ತನಗನತಿದೂರದೊಳ್ ನಂದನವನದೊಳ್ (ಸುಕುಮಾ. ೩-೮); ನರಾಶ್ವಗಳಿಗೆ ಅನತಿದೂರ ದಲ್ಲಿದ್ದು ಸ್ವಸ್ತಿಕದ ಆಕೃತಿಯಲ್ಲಿ ಕಂಗೊಳಿಸುವ (ಜ್ಯೋತಿರ್ವಿ. ೪೬). [ಸಂ. (ಅನತಿ + ದೂರ)]

**ಅನತಿಶಯ** (ಗು). ಅತಿಶಯವಲ್ಲದ; ಸಾಧಾರಣವಾದ; ಅಲ್ಪ ವಾದ. [ಸಂ.]

**ಅನದ್ಯತನ** (ನಾ). ಇಂದಿನದಲ್ಲದ್ದು; ಈಗಿನದಲ್ಲದ್ದು. [ಸಂ.]

**ಅನಧಿಕಾರಿ** (ನಾ). ೧. ಅಧಿಕಾರಿಯಲ್ಲದವನು: '... ಅನಧಿಕಾರಿಗಳಲ್ಲಿ (ಸರ್ಕಾರಿ ಅಧಿಕಾರಿಗಳಲ್ಲದ ಸ್ವತಂತ್ರ ಜೀವಿಗಳು) ನೀವೇ ನಮ್ಮೂರಿಗೆ ಹಿರಿಯರು' ಎಂದು ಹೇಳುತ್ತಿದ್ದಾರೆ (ರಾಯಕ. ೮೦). ೨. ಅರ್ಹತೆ ಯಿಲ್ಲದವನು; ಯೋಗ್ಯತೆಯಿಲ್ಲದವನು. [ಸಂ. ಅನಧಿಕಾರಿನ್]

**ಅನಧಿಕೃತ** (ಗು). ಅಧಿಕೃತವಲ್ಲದ: ಅನಧಿಕೃತವಾಗಿ ಕಟ್ಟಿದ ಮನೆಗಳಿಗೆ ಮಾನ್ಯತೆಯಿಲ್ಲ (ರೂಢಿ). [ಸಂ.]

**ಅನಧೀನತೆ** (ನಾ). ಇತರರ ಅಧೀನಕ್ಕೆ ಒಳಪಡದಿರುವುದು; ಸ್ವಾತಂತ್ರ್ಯ. [ಸಂ. ಅನಧೀನತಾ]

**ಅನಧ್ಯಕ್ಷ** (ಗು). ೧. ಪ್ರತ್ಯಕ್ಷವಲ್ಲದ; ಇಂದ್ರಿಯಾತೀತ. ೨. ಅಧ್ಯಕ್ಷ ರಿಲ್ಲದ; ಮೇಲ್ವಿಚಾರಕರಿಲ್ಲದ. [ಸಂ.]

**ಅನಧ್ಯಯನ** (ನಾ). ೧. ಅಧ್ಯಯನವಿಲ್ಲದಿರುವುದು. ೨. ಅಧ್ಯ ಯನ ಮಾಡಬಾರದ ದಿನಗಳು; ವೇದಾಭ್ಯಾಸಮಾಡಬಾರದ ದಿನಗಳು: ಅನಧ್ಯಯನ ಕಳೆಯಿತು (ಮಾಮರಾ. ೩೭); ಅನಧ್ಯಯನದ ದಿನಗಳಲ್ಲಿ ಅಕ್ಕದಿರನ್ನು ತೋಟಕ್ಕೋ... ಕರೆದುಕೊಂಡು ಹೋಗುವು ದೆಂದರೆ ಕುವರವಿಷ್ಣುವಿಗೆ ಬಹು ಆಸೆ (ಶಾಂತಲಾ. ೧೨೨). [ಸಂ.]

**ಅನಧ್ಯಾಯ** (ನಾ). ೧. ವ್ಯಾಸಂಗಕ್ಕೆ ಬಿಡುವು; ರಜ. ೨. ವೇದಾ ಭ್ಯಾಸ ಮಾಡದವನು, —ಓದದವನು: "ಓದಿಲ್ಲದಂ ನಿರಾಕೃತಿಯ ನಧ್ಯಾಯನಕ್ಕು" (ಮಂಗರಾ. ೭೫-೬). [ಸಂ.]

**ಅನನನಾಟಿ** (ನಾ). ಒಂದು ಊರಿನ ಹೆಸರು: ಸ್ವಸ್ತಿಶ್ರೀ ಅನನನಾಟಿ ನಾಙ್ಗಾವುಣ್ಡ ಕಾಳುಗಯನ ಮಗ ಕಾಟಗಾವುಣ್ಡ (ಮೈಅರಿ. ೯೫೨೫, ೧೧೩-೧; ?). [?]

**ಅನನಸ** 'ಅನಾನಸ್' ನೋ.

**ಅನನಾಸು** 'ಅನಾನಸ್' ನೋ.

**ಅನನೀಕ** (ಗು). ಸೈನ್ಯವಿಲ್ಲದ: ಕಿಂಪುರುಷರಂ ಕಾಪುರುಷರ್ಮಾಡಿ ಬಾಹ್ಲಿ ಕರನ[ನನೀ]ಕರೆನಿಸಿ ಮಾಳವಿಗರಂ ಕೆಟಗಿವಿಗೆಯ್ಯಲೀಯದಾಟಂಬು (ಪಂಪಭಾ. ೬-೨೯ ವ). [ಸಂ.]

**ಅನನುಕರಣ** (ಗು). ಅನುಕರಣವಲ್ಲದ: ಇದೇ ತತ್ತ್ವವನ್ನು ಇಂದಿನ "ಅನನುಕರಣ" (Non representational) ಕಲೆಗಳಿಗೂ ಅನ್ವಯಿಸ ಬಹುದು (ಅರಿಕಾ. ೧೩೯ ಅಡಿಟಿ). [ಸಂ.]

**ಅನನುಕೂಲ** (ಗು). ಅನುಕೂಲವಲ್ಲದ; ವಿರುದ್ಧವಾದ; ಪ್ರತಿ ಕೂಲವಾದ. [ಸಂ.]

**ಅನನುಗಾಮಿ** (ಗು). ಅನುಸರಿಸಿ ಬಾರದ; ಜೊತೆಯಲ್ಲಿ ನಡೆಯದ: ಆ ಷಡ್ವಿಕಲ್ಪದೊಳ್ ಅನುಗಾಮಿಯೆಂಬುದು ಭಾಸ್ಕರಪ್ರಕಾಶದವೊಲ್ ಎತ್ತವೋಪಡಂ ಒಡವರ್ಪುದು ಅನನುಗಾಮಿಯೆಂಬುದು ಗೃಹಪುರುಷಾ ಕರ್ಣಿತವಚನದವೊಲ್ ಪುಟ್ಟಿದಲ್ಲಿಯೆ ಕಿಡುಗುಂ (ತತ್ತ್ವಪ್ರ. ೬೮). [ಸಂ. ಅನನುಗಾಮಿನ್]

**ಅನನುನಾಸಿಕ** (ನಾ). ಅನುನಾಸಿಕವಲ್ಲದ್ದು; ಮೂಗಿನ ಸಹಾಯ ವಿಲ್ಲದೆ ಉಚ್ಚರಿಸಬಹುದಾದ ವರ್ಣ: ಅನುನಾಸಿಕಮುಂ ಯವಲ ಮನನನುನಾಸಿಕಮುಂ ದಲೆಂಬರ್ (ಶಮದ. ೧೬). [ಸಂ.]

**ಅನನುಭೂತ** (ಗು). ಅನುಭವಿಸಿಲ್ಲದ; ಕಂಡು ಕೇಳದ: ಶ್ರೀಮೂರ್ತಿ ಪದಕೆರಗುತೀ ಸನಾತನ ಜೀವಮಿಾ ಸನಾತನಚಿತ್ತನೀತಂ ಪಡೆಯುತಿಹ ದಿವ್ಯಾನುಭೂತಿಯಿದು ಅನುಭೂತಮನನುಭೂತಂ (ಮಲೆದೇ. ೨೧-೧೦). [ಸಂ.]

**ಅನನುರೂಪತೆ** (ನಾ). ಅನುರೂಪವಲ್ಲದಿರುವಿಕೆ; ಸಂಪ್ರದಾಯ ವಿರುದ್ಧತೆ. (Inconformity. ಇಂಕನಿ). [ಸಂ. ಅನನುರೂಪತಾ]

**ಅನನೃತವಚನ** (ನಾ). ಸುಳ್ಳಲ್ಲದ ಮಾತು; ನಿಜವಾದ ಮಾತು; ಸತ್ಯವಾಕ್ಯ: ಮನೋಜನಿತಮುದನನಿಲತನಯನನನೃತವಚನ ಪ್ರಪಂಚ ನಿಂತಿರೆ ನುಡಿದಂ (ಕವಿರಾ. ೨-೪೦). [ಸಂ. (ಅನನೃತ + ವಚನ)]

**ಅನನ್ಯ** (ಗು). ೧. ಬೇರೆಯಲ್ಲದ; ತಾನೇ ಆದ. ೨. ತನಗಿಂತ ಬೇರಿಲ್ಲದ; ಅದ್ವಿತೀಯ: ನಿತ್ಯನನನ್ಯನಮಳಜ್ಞಾನರೂಪನೆ ತನ್ನ ನಿಜ ವೆಂದಱಿದು (ಕುವ್ಯಾದ್ರೋ. ೧೮-೭೦). (ನಾ). ೩. ಒಂದನ್ನೇ ಆಶ್ರಯಿಸಿದವನು; ಏಕನಿಷ್ಠ. ೪. ಬೇರೆಯಲ್ಲದವನು; ಭಿನ್ನವಲ್ಲ ದವನು: ಮತಿಶೂನ್ಯಂ ಡಂಭಮಾನ್ಯಂ ವಿಷಯವಿಸರದನ್ಯಂ ವಿಮೂ ರ್ಧರ್ಗನನ್ಯಂ [ಪಾಠಾಂ. ಧಾಗ್ರಗಣ್ಯಂ] (ರಕ್ಷಾಶ. ೪೦). [ಸಂ.]

**ಅನನ್ಯಜ** (ನಾ). ಮನ್ಮಥ. [ಸಂ.]

**ಅನನ್ಯತ್ವ** (ನಾ). ಬೇರೆಯಲ್ಲದಿರುವುದು; ಒಂದೇ ಆಗಿರುವುದು: ಆಗ ಬಾಲಕನಾಗಿದ್ದವನೇ ಈಗ ಯುವಕನಾಗಿದ್ದಾನೆಂದು ಹೇಳುವುದರಲ್ಲಿ ಅನನ್ಯತ್ವ (Identity) ದ ಭಾವನೆಯಿದೆ (ಜೀವಾತ್ಮ. ೧೮೩). [ಸಂ.]

**ಅನನ್ಯಮನಸ್ಕ** (ನಾ). ಬೇರೆಯ ಕಡೆಗೆ ಮನಸ್ಸನ್ನು ಹರಿಸದವನು; ಏಕಾಗ್ರಚಿತ್ತ: ಅನನ್ಯಮನಸ್ಕನೆಂಬೊಂ ಶ್ರವಣೇಂದ್ರಿಯ ವಿಷಯದೊಳ್ ನಿವರ್ತಿತಮನಸ್ಕಂ (ಚಾವುಂಪು. ೬). [ಸಂ. (ಅನನ್ಯ + ಮನಸ್ಕ)]

**ಅನನ್ಯವೃತ್ತಿ** (ನಾ). ಬೇರೊಂದರ ಮೇಲೆ ಗಮನವಿಲ್ಲದಿರುವುದು; ಏಕಾಗ್ರಚಿತ್ತ. [ಅನನ್ಯ + ವೃತ್ತಿ]

**ಅನನ್ಯಸಾಧಾರಣ** (ನಾ). = ಅನನ್ಯಸಾಮಾನ್ಯ. [ಅನನ್ಯ + ಸಾಧಾರಣ]

**ಅನನ್ಯಸಾಧ್ಯ** (ಗು). ಬೇರೆಯವರಿಂದಾಗಲಿ ಅಥವಾ ಬೇರೆ ರೀತಿ ಯಿಂದಾಗಲಿ ಸಾಧ್ಯವಾಗದ: ಇದು ಅನನ್ಯಸಾಧ್ಯ = ಶಬ್ದ ವ್ಯಾಪಾರೈಕಜನ್ಯ ಎಂದು ವ್ಯಾಖ್ಯಾನ ಮಾಡಿದ್ದಾನೆ (ಧ್ವನ್ಯಾಲೋ. ೧೯೧). [ಅನನ್ಯ + ಸಾಧ್ಯ]

**ಅನನ್ಯಸಾಮಾನ್ಯ** (ಗು). ಇತರರಲ್ಲಿಲ್ಲದೆ ಒಬ್ಬನಲ್ಲಿ ಮಾತ್ರ ಇರುವ; ಅಸಾಧಾರಣವಾದ: ಮೂವತ್ತುಮೂಱು ಸಾಗರೋಪಮಾಯುಷ್ಯಂ ಬರಮನನ್ಯಸಾಮಾನ್ಯದಿವ್ಯಸುಖಮನನುಭವಿಸುತ್ತುಮಿರೆ (ಶಾಂತಿಪು ೯-೧೬೧ ವ). [ಅನನ್ಯ + ಸಾಮಾನ್ಯ]

**ಅನನ್ಯಾಸಕ್ತಿ** (ನಾ). ಬೇರೊಂದು ಕಡೆ ಗಮನವಿಲ್ಲದಷ್ಟು ಆಸಕ್ತಿ; ವಿಶೇಷವಾದ ಶ್ರದ್ಧೆ: ಮೇರಿಯಾ ಪಾವ್‌ಲೋವ್ನಾನ... ಮಧುರವಾಗಿ ಬಾಲಭಾಷೆಯಲ್ಲಿ ತೊದಗಿದ್ದ ಚೆಂಗೂದಲ ಚೆಲುಕೂಸಿನ ಬಳಿ ಅನನ್ಯಾಸಕ್ತಿಯಿಂದ ಕುಳಿತಿದ್ದಳು (ಪುನರು. ೫೨೧). [ಅನನ್ಯ + ಆಸಕ್ತಿ]

**ಅನನ್ವಯ** (ನಾ). ೧. ಒಂದಕ್ಕೊಂದು ಹೊಂದದಿರುವುದು; ವಿಪರೀತವಾಗಿರುವುದು: ಹುಡುಕುತ್ತಾ ಹೋದರೆ ಆಕಾಂಕ್ಷೆಗೆ ಕೊನೆಯೆ ಇಲ್ಲ... ಆದರಲ್ಲಿ ಶ್ರದ್ಧೆಯನ್ನಿಡಲೇಬೇಕಾಗುವುದು. ಇಡದಿದ್ದರೆ ಅನನ್ವಯಕ್ಕೇ ಇಟ್ಟುಕೊಳ್ಳುತ್ತದೆ (ಅರ್ಯಾಥ. ೩೩). ೨. [ಕಾವ್ಯಮೀ] = ಅನನ್ವಯಾಲಂಕಾರ: ಸಮಾಸೋಕ್ತಿ...ಅನನ್ವಯ... ಉದಾತ್ತಾದ್ಯಲಂಕಾರಗಳೊಡಗೂಡಿ (ವಿವೇಕ. ೨೨೫). [ಸಂ.]

**ಅನನ್ವಯಾಲಂಕಾರ** (ನಾ). [ಕಾವ್ಯಮೀ] ಒಂದು ಕಾವ್ಯಾಲಂಕಾರ: "ಉಪಮಾನೋಪಮೇಯಭಾವಗಳೆರಡೂ ಒಂದರಲ್ಲಿಯೇ ಇದ್ದಲ್ಲಿ ಅನನ್ವಯಾಲಂಕಾರವೆನಿಸಿಕೊಳ್ಳುವುದು" (ಕೈಪಿಡಿ. ೨೫೮). [ಅನನ್ವಯ + ಅಲಂಕಾರ]

**ಅನನ್ವಿತ** (ಗು). ೧. ಒಂದಕ್ಕೊಂದು ಸಂಬಂಧವಿಲ್ಲದ; ಅಸಂಬದ್ಧ: ವೀರಸಿಂಹನು ಅದುವರೆಗೆ ತನಗುಂಟಾಗಿದ್ದ ಅನಂದವನ್ನು ಅನನ್ವಿತವಾದ ಮಾತುಗಳಿಂದಲೂ ಮುಖಭಾವಗಳಿಂದಲೂ ತೋರುತ್ತಲಿದ್ದು (ರಾಜಾಮು. ೨೨೫). ೨. (ಉಕ). ಅತ್ಯಂತ: ಅನನ್ವಿತ ಅತ್ಯಾಚಾರಗಳನ್ನು ನಡೆಸಬಹುದು (ಆಗಸ್ಟ್. ೧೦೮). [ಸಂ.]

**ಅನಪಕಾರಿ** (ಗು). ಅಪಕಾರಮಾಡದ; ಕೇಡನ್ನು ಬಗೆಯದ. [ಸಂ. ಅನಪಕಾರಿನ್]

**ಅನಪತ್ಯ₁** 'ಅನುಪತ್ಯ' ನೋ.

**ಅನಪತ್ಯ₂** (ನಾ). ಮಕ್ಕಳಿಲ್ಲದವನು: ಶನಿ... ಸಿಂಹದೊಳ್ ಕೂಡಿದಂದನಪತ್ಯಂ (ಜಾತತಿ. ೧೭–೩೪); ನೀನು ಅನಪತ್ಯನು: ಮಿಥ್ಯಾ ಧರ್ಮವನ್ನು ಆಚರಿಸುವವನು (ಭೀಷ್ಮಜ. ೯೯). [ಸಂ.]

**ಅನಪತ್ಯೆ** (ನಾ). ಮಕ್ಕಳಿಲ್ಲದವಳು; ಬಂಜೆ: ಅನಪತ್ಯೆ ಪತಿವ್ರತೆ ಕೈಯನೆತ್ತಿದಳ್ ತೊಡುಗೆಗಳ್ಗೆ ಕರವಮರ್ಥಿನಿ ರೂಪಿನ ಕಣಿ ಸೂಚೀಕರ್ಮಾಯ್ತೆ ನಿಪುಣೆ ಮಿಥುನಾಲಯಾದಿಮದ್ರೇಕ್ಕಾಣಂ (ಜಾತತಿ. ೧೯–೭). [ಸಂ. ಅನಪತ್ಯಾ]

**ಅನಪರಾಧಿ** (ನಾ). ಅಪರಾಧಿಯಲ್ಲದವನು; ತಪ್ಪುಮಾಡದವನು; ನಿರಪರಾಧಿ (ದಕ. ೬). [ಸಂ. ಅನಪರಾಧಿನ್]

**ಅನಪರಾಧೆ** (ನಾ). ಅಪರಾಧಮಾಡದವಳು; ತಪ್ಪುಮಾಡದವಳು; ನಿರಪರಾಧೆ: ಮುಳಿದೆನ್ನನನಪರಾಧೆಯನಬಿಲ್ದವಳನಿಂತನಾಥೆಯಂ ಮೋದಿದ ಕಾಲ್ಗಳನಾವ ಜನ್ಮಜನ್ಮಂಗಳೊಳಗಾಗಿಯುಮಕ್ಕೆ ಮುಂದೆ ಕೇಳ್ ತಿನ್ನದಿರೆಂ (ಸುಕುಮಾ. ೫–೮). [ಸಂ. ಅನಪರಾಧಾ]

**ಅನಪವರ್ತಿ** (ಗು). ಕಡಮೆಯಾಗದ; ಕುಂದದ; ಕುಗ್ಗದ: ಚತುರಶೀತಿಲಕ್ಷಣ ಪೂರ್ವಾನಪವರ್ತ್ಯಾಯುಷ್ಯನುಂ ಅಪ್ರತಿಹತಶಾಸನನುಮಾಗಿ (ಆದಿಪು. ೧೫–೩ ವ). [ಸಂ.]

**ಅನಪವರ್ತಿತ** (ಗು). = ಅನಪವರ್ತಿ: ಲಕ್ಷಸಮಾಸಮ್ಮಿತಾನಪವರ್ತಿತ ದೀರ್ಘಾಯುಷ್ಯಮುಂ (ಶಾಂತಿಪು. ೧೦–೯೪ ವ). [ಸಂ.]

**ಅನಪಾಯ** (ಗು). ೧. ಅಪಾಯವಿಲ್ಲದ; ಹಾಳಾಗದ. ೨. ಭದ್ರವಾದ; ಶಾಶ್ವತವಾದ: ಕುಂಡಳೇಶ್ವರ... ದಂಡಿತ ಪ್ರತಿಪಕ್ಷಸಮುಯನಿಕಾಯನನಪಾಯ (ಬಸಪು. ೩೨–೧). (ನಾ). ೩. ಅಪಾಯವಿಲ್ಲದ ಸ್ಥಿತಿ: ಇಹಪರವೆರಡುಮನನಪಾಯದೆ ಸಂಗ್ರಹಿಸಿದ ಚತುರನ ಜಸದೆಸಕಮನೀ ಮಹಿಯೊಳ್ದೆಸೆದೆಸೆಯೊಳ್ಪೂರಿಸಿ (ಉದ್ಭದೇ. ೨–೭). [ಸಂ.]

**ಅನಪಾಯಕ** (ನಾ). ಅಪಾಯದಿಂದ ದೂರಮಾಡುವವನು: ಕಾಯಜಾಂತಕನಣುಗಿನಣುಗನತಿಥೀಯುತ ವಿನಾಯಕಂ ವಿದ್ಯಾಧಿನಾಯಕಂ ತತಮತಿಸಹಾಯಕಂ ಸತತಾನಪಾಯಕನಮಾಯಕಂ ಸಲಹುಗೆಮ್ಮಂ ಸಂತತಂ (ಉದ್ಭದೇ. ೧–೯). [ಸಂ.]

**ಅನಪಾಯಿ** (ಗು). ಅಪಾಯವಿಲ್ಲದ; ನಿರಪಾಯವಾದ: ಚಂಡಪ್ರಭೆಯೊಳಜಿಯಿಸುತ್ತಾಯವಸ್ಥೆಗಳ ಮುಟ್ಟದನಪಾಯಿಯಪ್ಪಾ (ವೀಶೈಪು. ೫–೭–೧೯). [ಸಂ. ಅನಪಾಯಿನ್]

**ಅನಪಾಯಿನಿ** (ನಾ). ೧. ನಾಶರಹಿತಳು; ಶಾಶ್ವತೆ. ೨. ಲಕ್ಷ್ಮಿ: ಶ್ರೀ ನಾರಾಯಣಂಗನಪಾಯಿನಿ ಪತ್ನಿಯಾದಳ್ (ವಿಷ್ಣುಪು. ೨–೯೩). [ಸಂ. ಅನಪಾಯಿನೀ]

**ಅನಪೇಕ್ಷಕ** (ನಾ). ೧. ಅಪೇಕ್ಷೆಯಿಲ್ಲದವನು. ೨. ಬೇರೊಂದರ ನೆರವನ್ನು ಕೋರದವನು: ಅಕಾರಣಮಿವಜಿಳಗನಪೇಕ್ಷಕನೆನಿಸಿ ನೆಗಟ್ದನಿಜಿವಬೆಡಂಗಂ (ಗದಾಯು. ೨–೮). [ಸಂ.]

**ಅನಪೇಕ್ಷಿತ** (ಗು). ಬಯಸದ; ಬೇಡದ; ಅಪೇಕ್ಷಿಸದ: ಯಾವುದು ನಡೆಯಬಾರದು ಎಂದು ಅವರು ಶತಪ್ರಯತ್ನಮಾಡಿದ್ದರೋ ಅದೇ ಅತ್ಯಂತ ಅನಪೇಕ್ಷಿತವಾದ ರೀತಿಯಲ್ಲಿ ನಡೆದುಹೋಗಿತ್ತು (ಮೂರುವಾ. ೨೫೨). [ಸಂ.]

**ಅನಪೇಕ್ಷೆ** (ನಾ). ಅಪೇಕ್ಷೆಯಿಲ್ಲದಿರುವುದು; ಬಯಕೆಯಿಲ್ಲದಿರುವುದು; ನಿಃಸ್ಪೃಹತೆ: ಜನ ಬದುಕಬೇಕೆಂದು ಕಾವ್ಯಮುಖದಿಂ ಪೇಳ್ದನನಪೇಕ್ಷೆಯಿಂದ ಕವಿ ರಾಘವಾಂಕಂ (ಹಚಕಾ. ೧೪–೩೩). [ಸಂ. ಅನಪೇಕ್ಷಾ]

**ಅನಪೇತ** (ಗು). ೧. ಹೊರಟುಹೋಗದ. ೨. ಬಿಟ್ಟಿಲ್ಲದ; ಅಗಲದ. ೩. ಮೀರದಿರುವ; ತಪ್ಪದೆ ಅನುಸರಿಸುವ. [ಸಂ.]

**ಅನಪೇಯ** (ಗು). ಅಪೇಯವಲ್ಲದ; ಕುಡಿಯಲರ್ಹವಾದ: ಅನುದಿನಂ ಭುಂಜಿಸಿದ ಶವದ ಶಿರದಕ್ಕಿಯಲ್ಲನಪೇಯ ಚಾಂದ್ರಾಯಣಂ ಪುತ್ರನಳಿವು ಜನ್ಮನಿಕಾಯದಳಿವಂಗನಾಹನನ ಮಾಯಾಹನನವಂಜಬೇಡೆಂದನು (ಹಚಕಾ. ೧೪–೭). [ಸಂ.]

**ಅನಫಾಯೋಗ** (ನಾ). [ಜ್ಯೋತಿ] ಯೋಗಗಳಲ್ಲಿ ಒಂದು: "ಸೂರ್ಯನನ್ನು ಬಿಟ್ಟು ಕುಜಾದಿ ಐದು ತಾರಾಗ್ರಹಗಳಲ್ಲೊಂದು ಚಂದ್ರನಿಗೆ ಹನ್ನೆರಡನೆಯ ಸ್ಥಾನದಲ್ಲಿದ್ದರೆ ಅನಫಾಯೋಗ" (ಜಾತತಿ. ಟೀಕೆ); ಇನವರ್ಜ್ಯಂ ಕ್ಷಿತಿಜಾದಿಗಳ್ ಹಿಮಮಯೂಖಂಗಂತ್ಯದೊಳ್ ಕೂಡಿದಂದನಫಾಯೋಗಮುದಕ್ಕುಂ (ಜಾತತಿ. ೧೪–೧). [ಸಂ. (ಅನಫಾ + ಯೋಗ)]

**ಅನಫಾಸಂಭವ** (ನಾ). ಅನಫಾಯೋಗದಲ್ಲಿ ಹುಟ್ಟಿದವನು: ಅನಫಾಸಂಭವನಿಂದ್ರಿಯಾರ್ಥಸುಖಿ ವಿಖ್ಯಾತಂ ಪ್ರಧಾನಂ ಸುಶೀಲನೆನಿಕ್ಕುಂ (ಜಾತತಿ. ೧೪–೩). [ಸಂ. (ಅನಫಾ + ಸಂಭವ)]

**ಅನಫೆ** (ನಾ). [ಜ್ಯೋತಿ] = ಅನಫಾಯೋಗ. 'ಅನಫಾಸಂಭವ' ಪರಾ. [ಸಂ. ಅನಫಾ < ಗ್ರೀಕ್. ಅನಫೇ = ಸೋಕದ; ಮುಟ್ಟದ]

**ಅನಭಿಜ್ಞತೆ** (ನಾ). ತಿಳಿವಳಿಕೆ ಸಾಲದಿರುವಿಕೆ: ವಾಕ್ಯದೋಷವೆಂಬ ದೋಷ ಬರುವುದಲ್ಲವೆ? ಎಂದು ಕೇಳುವುದು ಅವರ ಅನಭಿಜ್ಞತೆಯನ್ನೇ ತೋರಿಸುತ್ತದೆ (ಧ್ವನ್ಯಾಲೋ. ೫೦). [ಸಂ. ಅನಭಿಜ್ಞತಾ]

**ಅನಭಿಜ್ಞಾತ** (ಗು). ಚೆನ್ನಾಗಿ ತಿಳಿಯದ; ಪರಿಚಯವಿಲ್ಲದ; ಅಪ್ರಸಿದ್ಧ: ಅನಭಿಜ್ಞಾತ ಕುಲಕ್ರಮಂಗೆ ಪಥಿಕಂಗೇಕಾಕಿಗೊಲ್ದೀವ ಠಕ್ಕಿನೊಳಿರ್ದಪ್ಪೆ... ಅರಯ್ಯೆ ಸದ್ವಸ್ತು ಭಾಜನನಪ್ಪೆನ್ನೊಳೆ ಮಾಳ್ಪುದಾಕೆಗೆ ವಿವಾಹೋದ್ಯೋಗಮುಂ ರಾಗದಿಂ (ಚಂದ್ರಪು. ೬–೨೧). [ಸಂ.]

**ಅನಭಿಮಾನ** (ನಾ). **೧.** ಆತ್ಮಗೌರವವಿಲ್ಲದಿರುವುದು. **೨.** ಆತ್ಮಗೌರವವಿಲ್ಲದಿರುವವನು. **೩.** ಪ್ರೀತಿ ಅಥವಾ ಆಸಕ್ತಿಯಿಲ್ಲದಿರುವುದು. **೪.** ಅಹಂಕಾರ ಅಥವಾ ಮಮಕಾರವಿಲ್ಲದಿರುವುದು: ಚರಿಸುತಿರ್ದನು ಸಕಲಜೀವರ ಭರಿತಪುಣ್ಯದ ಪುಂಜದಂತಿರಲನಭಿಮಾನದಲಿ (ನಿಭಾಗ. ೫–೮–೪೪). [**ಸಂ.**]

**ಅನಭಿಲಪ್ಯ** (ನಾ). [ಬೌದ್ಧ] ಪರಮಾರ್ಥವಾದ ಶೂನ್ಯತತ್ತ್ವವನ್ನು ವಿವರಿಸುವ ಶಬ್ದಗಳಲ್ಲಿ ಒಂದು: ಪರಮಾರ್ಥ ಶೂನ್ಯತತ್ತ್ವವನ್ನು ಅನಭಿಲಪ್ಯ, ಅನಾಜ್ಞೇಯ . . . ಇತ್ಯಾದಿ ಶಬ್ದಗಳಿಂದ ಉಪದೇಶಿಸುವರು (ಹಿಂದಸಾ. ೪೧). [**ಸಂ. ?**]

**ಅನಭಿಷಿಕ್ತ** (ಗು). ಅಭಿಷೇಕ ಹೊಂದದ; ಪಟ್ಟಕಟ್ಟಿಲ್ಲದ: ಹೈದರ್ ಅಲ್ಲೀಖಾನ್ ಅನಭಿಷಿಕ್ತ ದೊರೆಯಾಗಿ ರಾಜ್ಯವಾಳಿದನು (ರೂಢಿ). [**ಸಂ.**]

**ಅನಭಿಷ್ವಂಗ** (ನಾ). ಅನಾಸಕ್ತಿ; ಸೋಂಕಿಲ್ಲದಿರುವುದು: ದೇಹದುಃಖಿತಿತಿಕ್ಷಾ ವಿಷಯ ಸುಖಾನಭಿಷ್ವಂಗ ಶುಭಶುದ್ಧಧ್ಯಾನಾಭ್ಯಾಸ ಪ್ರವಚನ ಪ್ರಭವನಾದ್ಯರ್ಥಂ (ತತ್ತ್ವಪ್ರ. ೩೪೧). [**ಸಂ.**]

**ಅನಭ್ಯುದಯ** (ನಾ). ಅಭ್ಯುದಯವಿಲ್ಲದಿರುಕೆ; ಅಶ್ರೇಯಸ್ಸು: ಅದಱಿಂದಂ ಜೀವಕ್ಕಭ್ಯುದಯಮನಭ್ಯುದಯಮೆಂಬಿದಂ ಧರ್ಮಾಧರ್ಮಮತಿಯೆ ಮಾಳ್ಕುಂ (ಶಾಂತಿಪು. ೬–೨೭). [**ಸಂ.**]

**ಅನಮಿತಂಪಚ** (ಗು). "ಕೃಪಣ, ಜೀನ" (ಗಂಗಾಮ. ೮). [**ಸಂ.**]

**ಅನಮ್ಯ** (ಗು). ಬಗ್ಗಿಸಲಾಗದ; ಬಾಗದ. [**ಸಂ.**]

**ಅನಯ** (ನಾ). **೧.** ಅಕ್ರಮ; ತಪ್ಪುದಾರಿ: ಮನೆ ನಿನಗೆ ನಂದಗೋಪಾಲನ ಮನೆ ತುಱುಗಾರ್ತಿ ನಿನಗೆ ಮನೆವೆಂಡಿತಿ ಪಚ್ಚನೆ ಪಸಿಯ ಗೋವನ್ನೆ ಕರಮ[ನ] [ಪಾಠಾಂ. ನೆ]ಯದೆ ನಿನ್ನಳವಿಗಳವನಱಿಯದೆ ನೆಗೞ್ದೈ (ಪಂಪಭಾ. ೬–೫೨). **೨.** ಅನಿಷ್ಟವುಂಟುಮಾಡುವ ವಿಧಿ; ದುರ್ದೈವ: "ಅನಿಷ್ಟಮಂ ಮಾಳ್ಪ ದೈವವದನಯಮೆನಿಸಿಕ್ಕು" (ಮಂಗರಾ. ೮–೨೭). **೩.** ಅನೀತಿ; ಕೆಟ್ಟ ನಡವಳಿಕೆ. **೪.** ನೀತಿರಹಿತ; ನಯವಿಲ್ಲದವನು: ಮುನಿಶಾಪದಿಂ ಪಾಂಡುವಳಿಯೆ ಹಸ್ತಿನಪುರದೊಳನಯ ಕೌರವ ಪಾಂಡವರ್ಗೆ ಮತ್ಸರಮಾಗಿ ಮನಮೊಲ್ದು ವಾರಣಾವತದೊಳಿರುತರಗುವನೆಯುಂ ಕಳೆದು ಪೊಱಮಟ್ಟರು (ಚೆಬಪು. ೫೪–೧೦). [**ಸಂ.**]

**ಅನರ** (ನಾ). ನರನಲ್ಲದವನು; ಅಮರ್ತ್ಯ; ದೇವತೆ. 'ಅನರೇಂದ್ರೇಜ್ಯ' ಪರಾ. [**ಸಂ.**]

**ಅನರೇಂದ್ರ** (ನಾ). ದೇವತೆಗಳ ಒಡೆಯ; ಇಂದ್ರ. 'ಅನರೇಂದ್ರೇಜ್ಯ' ಪರಾ. [ಅನರ + ಇಂದ್ರ]

**ಅನರೇಂದ್ರೇಜ್ಯ** (ನಾ). ದೇವತೆಗಳ ಗುರು; ಬೃಹಸ್ಪತಿ: ಅನ[ಪಾಠಾಂ. ಸು]ರೇಂದ್ರೇಜ್ಯನಿವಾಸದಲ್ಲಿ ಕನಕತ್ರಿಂಶಾಂಶಕಂ ಲಗ್ನಮಾಗೆ ನಿಶಾವಲ್ಲಭನಲ್ಲಿ ಕೂಡಿರೆ ಗುಣೌಘಾನ್ವಿತೆ . . . ಅಕ್ಕುಂ (ಜಾತತಿ. ೨೨–೮). [ಅನರೇಂದ್ರ + ಇಜ್ಯ]

**ಅನರ್ಗಲ**, ಅನರ್ಗಳ (ಗು). ತಡೆಯಿಲ್ಲದ; ಅಡ್ಡಿಯಿಲ್ಲದ; ಸ್ವಚ್ಛಂದವೃತ್ತಿಯ. **ಅನರ್ಗಳ**: "ಉತ್ತುಂಗಮುಚ್ಛೃಂಖಳಮನರ್ಗಳಂ" (ಮಂಗರಾ. ೧೩೨–೨೩). ನಿರರ್ಗಳ ಹೋ.

ಅನರ್ಗಳವಾಗಿ=ತಡೆಯಿಲ್ಲದೆ; ನಿರಾತಂಕವಾಗಿ: ಅನೇಕಮಾರ್ಗಗಳನ್ನು ಅನರ್ಗಳವಾಗಿ ಪ್ರಯೋಗಿಸಿ (ಕೃವಾಭೀ. ೧೧೩). [**ಸಂ.**]

**ಅನರ್ಗಳ** 'ಅನರ್ಗಲ' ನೋ.

**ಅನರ್ಗಳತೆ** (ನಾ). ತಡೆಯಿಲ್ಲದಿರುವುದು; ಅಡ್ಡಿಯಿಲ್ಲದಿರುವುದು: ಅವರ ಸ್ವಭಾವದಲ್ಲಿ ಅನರ್ಗಳತೆಯ ಬದಲು ಗಂಭೀರತೆಯ ಸಮಾವೇಶವಾಗಿತ್ತು (ಪ್ರೇಮಾಶ್ರ. ೬೭). [ಅನರ್ಗಳ (= ಅನರ್ಗಲ) + -ತೆ]

**ಅನರ್ಘ** (ಗು). **೧.** ಬೆಲೆ ಕಟ್ಟಲಾಗದ; ಬಹಳ ಬೆಲೆಯ; ಅಮೂಲ್ಯ. **೨.** ಶ್ರೇಷ್ಠವಾದ. 'ಅನರ್ಘರತ್ನ' ಪರಾ. [**ಸಂ.**]

**ಅನರ್ಘರತ್ನ** (ನಾ). ಬೆಲೆಕಟ್ಟಲಾಗದಂಥ ರತ್ನ; ಅಮೂಲ್ಯವಾದ ರತ್ನ: ದೊರೆಯಱಿವ ವಸ್ತುಪುರುಷರ್ಪರಿಕಿಸಿ ಬೆಲೆಮಾಡೆ ಗಂಗಮಂಡಲಚಕ್ರೇಶ್ವರ ಕಟಕೋತ್ತಮನಾಯಕ ವಿರಚನೆಯಿನನರ್ಘರತ್ನಮಾದಂ ರತ್ನಂ (ಗದಾಯು. ೧–೪೦); ನಾನಾಗುಣಾನರ್ಘರತ್ನೋತ್ಕರಮಂ ರತ್ನಾಕರಂ ತಾನೆನೆ . . . ಚಿಣ್ಣದಂಡಾಧಿನಾಥಂ (ಎಕ. V, ಬೇಲೂರು. ೧೭–೫೭; 1136). [ಅನರ್ಘ + ರತ್ನ]

**ಅನರ್ಘಾಕಾರ** (ನಾ). **೧.** ಶ್ರೇಷ್ಠವಾದ ರೂಪ. **೨.** ಶ್ರೇಷ್ಠವಾದ ರೂಪವುಳ್ಳ ವಸ್ತು: ಆನೀತಾಖಿಳ ರಾಜಲೋಕಮನನರ್ಘಾಕಾರಮಂ ಮಿಕ್ಕ ಕನ್ಯಾನುರೂಪೋಚಿತರತ್ನಮಂ ತನಗೆ ಮಾಡಲ್ಕೆಂದು ಬಂದಿರ್ದನೀ ಶ್ರೀನಾಥಂ (ಶಾಂತಿಪು. ೫–೮೧). [ಅನರ್ಘ + ಆಕಾರ]

**ಅನರ್ಘ್ಯ** (ಗು). = ಅನರ್ಘ. 'ಅನರ್ಘ್ಯಮಣಿ', 'ಅನರ್ಘ್ಯರತ್ನ' ಪರಾ. [**ಸಂ.**]

**ಅನರ್ಘ್ಯಮಣಿ** (ನಾ). = ಅನರ್ಘ್ಯರತ್ನ: ಶಿವಚಿದಂಚಿತನೇತ್ರ ದುಃಖಾರ್ಣವ ವಹಿತ್ರ ಮಹೇಶಪುತ್ರ ತ್ರಿವಿಧ ಭಕ್ತಿಕಳತ್ರ ಶರಣಾನರ್ಘ್ಯಮಣಿಸೂತ್ರ (ಬಸಪು. ೫೯–೪೪); ಮುಕ್ತಾಳಿ ವಿದ್ರುಮರತ್ನವರ್ಗಂಗಳಿಲ್ಲಿ ಸೇರಿದುವೆಂಬೊಲೊಪ್ಪಿದವನರ್ಘ್ಯಮಣಿವಸರಂಗಳು (ಜೈಮಿಭಾ. ೬–೧೩). [ಅನರ್ಘ್ಯ + ಮಣಿ$_3$]

**ಅನರ್ಘ್ಯರತ್ನ** (ನಾ). = ಅನರ್ಘರತ್ನ: ತಮ್ಮ ಮನೆಯೊಳುಳ್ಳನರ್ಘ್ಯರತ್ನಂಗಳೆಲ್ಲಮಂ ಬೞಿವೞಿಗೊಟ್ಟು (ಆದಿಪು. ೧೩–೮೦ ವ); ಕೆಲಬರ್ ಬಾಲೆಯರೊಡನುಪ್ಪರಿಗೆಯೊಳಿರ್ದನರ್ಘ್ಯರತ್ನಮಂ ಕಂಡು (ನಂಬಿರ. ೪–೫೯); ಮೆಲ್ಲಡಿಗನರ್ಘ್ಯರತ್ನಂಗಳಂ ಸುರಿದು ಕರಪಲ್ಲವದ್ವಿತಯಮಂ ಮುಗಿದು (ಜೈಮಿಭಾ. ೧೭–೪೬). [ಅನರ್ಘ್ಯ + ರತ್ನ]

**ಅನರ್ಥ** (ಗು). **೧.** ಅರ್ಥವಲ್ಲದ. **೨.** ಅರ್ಥವಿಲ್ಲದ; ಹೊಂದಿಕೆಯಿಲ್ಲದ. **೩.** ಉಪಯೋಗವಿಲ್ಲದ. (ನಾ). **೪.** ವೈಪರೀತ್ಯ; ಕೇಡು; ಅನಿಷ್ಟ; ಅಪಾಯ: ಬಲ್ಲವರು ಹೇಳಿದಂತೆ ಕೇಳಬೇಕಲ್ಲದೆ, ಸುಮ್ಮಸುಮ್ಮನೆ ತಮ್ಮ ಜಾಣತನ ಮೆರಿಸಹೋದರೆ ಬಹಳ ಅನರ್ಥವಾಗುವದು (ಮುಂಬಯಿ. ೩–೨೯); ಯಾವುದೊಂದು ಅತಿಯಾದರೂ ಅದರಿಂದ ಅನರ್ಥವಾದೀತು (ಶಿಕ್ಷದ. ೮೨); ಅರ್ಥಕ್ಕೆ ಕಡಿಮೆಯಾದರೂ ಅನರ್ಥಕ್ಕೆ ಕಡಿಮೆ ಇಲ್ಲ (ಗಾದೆ). **೫.** ದ್ರವ್ಯವಿಲ್ಲದವನು; ಬಡವ.

**ಅನರ್ಥಮಾಡು** = ಕೇಡನ್ನು ತರು; ಅಪಾಯಮಾಡು: ತಾಂಬೂಲದ ಸುಣ್ಣ ಉದುರಿಬಿದ್ದರೂ ದಾಸದಾಸಿಯರಿಗೆ ಅವಳು ಸಿಕ್ಕಾಪಟ್ಟೆ ಬೈದು ಅನರ್ಥಮಾಡಿಬಿಡುತ್ತಾಳೆ (ಇಪ್ಪಕ. ೨೬೦). [**ಸಂ.**]

**ಅನರ್ಥಕ** (ಗು). **೧.** ಅರ್ಥವಿಲ್ಲದ: ತದುಪನ್ಯಸ್ತ ಕುಹೇತು ಕುದೃಷ್ಟಾಂತಾನರ್ಥಕವಚನರಚನಾಪ್ರಳಾಪಮನವ್ಯಗ್ರಕುಶಾಗ್ರೀಯ ಬುದ್ಧಿಸಮೃದ್ಧಂ ಸ್ವಯಂಬುದ್ಧನವಧಾರಿಸಿ (ಆದಿಪು. ೨–೯ವ). **೨.** ಪ್ರಯೋಜನವಿಲ್ಲದ: ಎರಡಱೊಳೊಂದಱ ಫಲಮುಂ ಪರಿಣತಿಗಾಯ್ತಿಲ್ಲನರ್ಥಕಂ ವಾಕ್ಯಾರ್ಥಂ (ಗದಾಯು. ೨–೧೪); ಗರ್ಭಂ ಬಳೆಯದ ಬಾಳಕಿಯ ಬಸಿಱನರ್ಥಕಮಲ್ತೇ (ಮಲ್ಲಿಪು. ೩–೧೧೦). (ನಾ). **೩.** [ಕಾವ್ಯಮೀ] ವಾಕ್ಯದೋಷಗಳಲ್ಲಿ ಒಂದು: ಅನರ್ಥಕ ಶ್ರುತಿಕಠೋರ ವ್ಯಾಹತಾರ್ಥ ಅಲಕ್ಷಣ . . . ಯೆಂಬ ಯೆಂಟು ವಾಕ್ಯದೋಷಂ (ವಿವೇಕ. ೨೨೬). [**ಸಂ.**]

**ಅನರ್ಥಕಪದ** (ನಾ). ಅರ್ಥವಿಲ್ಲದ ಅಥವಾ ಉಪಯೋಗವಿಲ್ಲದ ಮಾತು: ಮಿಗೆ ದಲ್ ವಲಂ ವೆಱಂ ಮತ್ತೆ ಗಡಂ ಗಳ ಕೆನ್ನಮೆಂಬನರ್ಥಕಪದಮಂ ಸೊಗಯಿಸೆ ವಾಕ್ಯಾಲಂಕೃತಿ ನೆಗೞ್ವೆಡೆಯೊಳ್ ಪೇೞೆ ಪೇೞದಿರ್ಕುೞಿದೆಡೆಯೊಳ್ (ಕಾವ್ಯಾವ. ೪೮೫). [ಅನರ್ಥಕ + ಪದ$_2$]

**ಅನರ್ಥಕರ** (ನಾ). ೧. ಪ್ರಯೋಜನವಿಲ್ಲದುದು. ೨. ಕೇಡನ್ನು ತರತಕ್ಕುದು; ಅಪಾಯಕರವಾದುದು : ಭೂತವಾದಿಗಳು ಪರಮಾಣುವನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ಸೃಷ್ಟಿಯ ವ್ಯಾಖ್ಯಾನವನ್ನು ಮಾಡಲು ಉಪಕ್ರಮಿಸುತ್ತಾರೆ. ಇದು ಬಹಳ ಅನರ್ಥಕರ (ಜೀವಾತ್ಮ. ೧೦೭). [ಸಂ.]

**ಅನರ್ಥಕ್ಯ** (ನಾ). ೧. ಪ್ರಯೋಜನವಿಲ್ಲದ ಕೆಲಸ. ೨. ಕೇಡನ್ನು ತರುವ ಕೆಲಸ. ೩. ಕೆಲಸಕ್ಕೆ ಬಾರದ ಸ್ಥಿತಿ; ಪ್ರಯೋಜನವಿಲ್ಲದಿರುವುದು : ಪೆರ್ಚಿದ ಮೌಖರ್ಯಮನರ್ಥಕ್ಯದೊಳ್ ವ್ಯತಿಕ್ರಮುಮತಿಪ್ರಸಾ[ಧ]ನ ಸಹಿತಂ (ಸುಕುಮಾ. ೬–೨೦). [ಸಂ.]

**ಅನರ್ಥಕ್ರಾಂತಿ** (ನಾ). ಕೇಡನ್ನು ಉಂಟುಮಾಡುವ ವಿಪ್ಲವ : ಅನರ್ಥಕ್ರಾಂತಿ, ವಿಪ್ಲವ, ಪ್ರಳಯಗಳುಂಟಾಗಿ (ಸುಗುಗಂ. ೧೩–೧೬). [ಅನರ್ಥ + ಕ್ರಾಂತಿ]

**ಅನರ್ಥದಂಡ** (ನಾ). [ಜೈನ] ನಿರರ್ಥಕವಾದ ಹಿಂಸೆ; ಪ್ರಯೋಜನವಿಲ್ಲದೆ ಇತರರಿಗೆ ಮಾಡುವ ಹಾನಿ. ℙ ಇದು ಐದು ವಿಧವಾಗಿದೆ : ಅಪಧ್ಯಾನ, ಪಾಪೋಪದೇಶ, ಪ್ರಮಾದಚರಿತ, ಹಿಂಸಾಪ್ರದಾನ, ಅಶುಭಶ್ರುತಿ : ಅಪಧ್ಯಾನಂ ಪಾಪೋಪದೇಶಂ ಪ್ರಮಾದಚರಿತಂ ಹಿಂಸಾಪ್ರದಾನಮಶುಭಶ್ರುತಿಯೆಂದು ನಿರರ್ಥಕಪಾಪಹೇತು ಭೂತಾನರ್ಥದಂಡಂ ಐದುತೆಱಂ (ತತ್ತ್ವಪ್ರ. ೨೭೬). 'ಅನರ್ಥದಂಡವಿರತಿ' ಪರಾ. [ಅನರ್ಥ + ದಂಡ]

**ಅನರ್ಥದಂಡವಿರತಿ** (ನಾ). [ಜೈನ] ಅನರ್ಥದಂಡಗಳನ್ನು ಮಾಡದಿರುವುದು. ℙ ಇದು ಮೂರು ಗುಣವ್ರತಗಳಲ್ಲಿ ಒಂದು : ದಿಗ್ದೇಶಾನರ್ಥದಂಡವಿರತಿಯೆಂಬ ಮೂಱು ಗುಣವ್ರತಂಗಳುಮಂ (ಚಾವುಂಉ. ೨೦೬); ಹಿಂಸಾರಾಗಾದಿವರ್ಧನ ದುಷ್ಟಕಥಾಶ್ರವಣ ವ್ಯಾಪಾರಮಶುಭಶ್ರುತಿ ಇಂತೀ ಐದುಮಂ ತೊಱೆವುದು ಅನರ್ಥದಂಡವಿರತಿವ್ರತಂ (ತತ್ತ್ವಪ್ರ. ೨೭೭). [ಅನರ್ಥದಂಡ + ವಿರತಿ]

**ಅನರ್ಥವಚನ** (ನಾ). ೧. ಅರ್ಥವಿಲ್ಲದ ಮಾತು. ೨. ಅರ್ಥವಿಲ್ಲದ ಮಾತುಗಳನ್ನು ಆಡತಕ್ಕವನು; ಪ್ರಯೋಜನವಿಲ್ಲದ ಮಾತುಗಳನ್ನು ಆಡುವವನು : ನೆನೆನೆನೆದು ಪೆಜರ ಮಾತುಗಳನೆ ನೆಗೞ್ದಿರೆ ಕೃತಿಯೊಳಿಡುವನ(ವ)ಂ ನಗದ ಗುಹಾಧ್ವನಿಯವೊಲನರ್ಥವಚನಂ ತನಗಾಗಿಸಲಱಿಯನುಚಿತವಾಕ್ಚತುರತೆಯಂ (ಕವಿರಾ. ೧–೧೪). [ಅನರ್ಥ + ವಚನ]

**ಅನರ್ಥಸಾಧನ** (ನಾ). ಕೇಡಿಗೆ ಕಾರಣ, —ಮೂಲ: ಕೋಪವೆಂಬುದನರ್ಥಸಾಧನ ಕೋಪವೇ ಸಂಸಾರಬಂಧನ (ಕುವ್ಯಾಉ. ೩–೧೧೩). [ಅನರ್ಥ + ಸಾಧನ]

**ಅನರ್ಥಾಯಾಸ** (ನಾ). ವ್ಯರ್ಥವಾದ ಆಯಾಸ; ಪ್ರಯೋಜನವಿಲ್ಲದ ಶ್ರಮ : ಪ್ರತಿಕೂಲನಾಗಿ ನಿಲೆ ವಿಧಿಮತನಯಮನುಕೂಲಮಾಗಿ ನಿಲೆಯುಂ ಕಾರ್ಯಸ್ಥಿತಿಯಂ ಸಾಧಿಸಲಾಗದು ಮೃತಕಕೃತೋಪಕೃತಿಯವೊಲನರ್ಥಾಯಾಸಂ (ಕವಿರಾ. ೩–೧೪೫). [ಅನರ್ಥ + ಆಯಾಸ]

**ಅನರ್ಪಿತ** (ಗು). ಅರ್ಪಿತವಲ್ಲದ; ದೇವರು, ಗುರು ಮುಂತಾದವರಿಗೆ ನಿವೇದಿಸದೆ ಇರುವಂಥ : ಲಿಂಗ ಜಂಗಮದ ಪ್ರಸಾದಕ್ಕಲ್ಲದೆ ಬಾಯ್ದೆಱೆಯೆನೆಂಬುದೆನ್ನ ಭಾಷೆ ಅನರ್ಪಿತವಾದರೆ ತಪ್ಪೆನ್ನದು ಮೂಗ ಕೊಯಿ, ಕೂಡಲ ಸಂಗಮದೇವಾ (ಬಸವ. ೭೨೭). [ಸಂ.]

**ಅನರ್ಪಿತಮುಖ** (ನಾ). (ದೇವರಿಗೆ) ಅರ್ಪಿಸದೆ ಬಳಸಿದ್ದು, —ತಂದುದು (?) : ಗುರುವಿಂಗೆ ಪ್ರಸಾದವಾದುದು, ಶಿಷ್ಯಂಗೆ ಓಗರ ಲೌಕಿಕ ನಾಯಕನರಕ; ಅರ್ಪಿತಮುಖವನಱಿಯದೆ ಅನರ್ಪಿತಮುಖ ನಾಯಿತ್ತು ಗುಹೇಶ್ವರಾ (ಅವಚಂ. ೪೦–೧೭೧). [ಅನರ್ಪಿತ + ಮುಖ]

**ಅನರ್ಹತೆ** (ನಾ). ಅರ್ಹತೆಯಿಲ್ಲದಿರುವುದು. [ಸಂ. ಅನರ್ಹತಾ]

**ಅನಲ** (ನಾ). ೧. ಅಗ್ನಿ; ಬೆಂಕಿ : "ಅಗಿನಿ ಮರಗೂಳನಿಂಗಳನಗ್ಗಿ ಹಗ್ಗಿ ಸಗ್ಗಿಗರಡಬಳಂ ಕಿಚ್ಚು ಕೆಂಗಿಡಿಯೆಲರ್ಗೆಳೆಯ ತಗರ್ದೇರ ಪೊಗೆವಳಯಿಗೆಯ ಕಾರ್ವಟ್ಟೆಗನಿವೈದೆಯನಲನ ನಾಮವು" (ಶಬ್ದಮಂ. ೧೨); ಗಾಂಗೇಯನುಂ ಸತ್ಯವತಿಯುಮತ್ಯಂತ ಶೋಕಾನಲದಹ್ಯಮಾನ ಮಾನಸರ್ಕಳಾಗಿ (ಪಂಪಭಾ. ೧–೮೦ ವ). ೨. ಅಗ್ನಿದೇವ. ೩. ಜಠರಾಗ್ನಿ; ಜೀರ್ಣಶಕ್ತಿ. ೪. [ಛಂದ] ರಗಣ (–∪–) ಎಂಬ ಅಕ್ಷರಗಣ : ಶೀತಕರಾನಲೇಂದ್ರಪುರ ಚಂದ್ರಶಶಾಂಕ ಹುತಾಶನರ್ (ಛಂದೋಂಬು. ೨–೧೨೭). ೫. ಚಿತ್ರಮೂಲ ಎಂಬ ಗಿಡ : ಅನಲಂ ಗುಳೂಚಿ ಮೊಸರೆಳ್ಳಿನಿತುಮನೊಳಗೂಡಿ ಕೊಡುವುದಿರ್ಪತ್ತೊಂದುಂ ದಿನವರೆಗಂ ಕುದಿರೆಗೆ ಬಲಮನುಲೋಮಂ ಪೆರ್ಚೆ ಪೆರ್ಚುಗುಂ ಕ್ಷೀಣಂಗಳ್ (ಅಶ್ವಶಾ. ೬–೫೨). ೬. 'ಮೂರು' ಎಂಬ ಸಂಖ್ಯೆಯ ಸಂಕೇತ : ಹರನಯನವಹ್ನಿ ಪುರಶಿಖಿ ವರರತ್ನಂಮೂರ್ತಿ ಲೋಕವಿಮಲತ್ರಿತಯಂ ಪರಮುಗುಣತ್ರಯಮನಲಂ ಸುರನದಿಮಾರ್ಗತ್ರಯಮದು ಮೂಱಱ ನಾಮಂ (ವ್ಯವಹಾ. ೯–೩). ೭. ಕೃತ್ತಿಕಾನಕ್ಷತ್ರ. ೮. 'ರ' ಎಂಬ ವರ್ಣಕ್ಕೆ ಕೊಟ್ಟ ಒಂದು ಸಂಕೇತ. [ಸಂ.]

**ಅನಲಂಕೃತ** (ಗು). ಅಲಂಕಾರ ಮಾಡಿಲ್ಲದ. [ಸಂ.]

**ಅನಲಗಣ್** (ನಾ). ಬೆಂಕಿಯನ್ನು ಕಾರುವ ಕಣ್ಣು : ಅನಲಗಣ್ಣಿನ ತೆಱೆದ ರೌದ್ರಾನನದ ದಾಡೆಯ ದಳ್ಳುರಿಯ ಸುಯ್ಲಿನ ಭಯಂಕರ ರೂಪ ನೆಸೆದನು ರುದ್ರನಂದದಲಿ (ನಿಭಾಗ. ೬–೯–೯). [ಅನಲ + ಕಣ್]

**ಅನಲಗರ್ಭ** (ಗು). ೧. ಬೆಂಕಿಯನ್ನೊಳಗೊಂಡಿರುವ; ಬೆಂಕಿಯನ್ನು ಕಾರುವ : ಎನುತ ಸುರಿದನು ಸರಳಸಾರವನನಲಗರ್ಭದ ಬಾಯ ಧಾರೆಗಳನಿಲಗರ್ಭದ ಗಱಿಗಳಶನಿಯ ಗರ್ಭಮಿಂಟಿಗಳ (ಕುವ್ಯಾನಿ. ೮–೩೫). (ನಾ). ೨. ಅರಣಿ (ಗರ್ಭದಲ್ಲಿ ಬೆಂಕಿಯುಳ್ಳದ್ದು). [ಅನಲ + ಗರ್ಭ]

**ಅನಲಜೆ** (ನಾ). ಅಗ್ನಿಯಲ್ಲಿ ಹುಟ್ಟಿದವಳು; ದ್ರೌಪದಿ: ಮುಂದಲೆಯಂ ಪಿಡಿದೆನ್ನಯ ಮುಂದೆಱೆದನಲಜೆಯನುಯ್ದು ಪರಿಭವಿಸಿಯೆ ದಳ್ಳೆಂದುರಿದು ಸೊರ್ಕಿದವನಂ ಕೊಂದೆಂ (ಗದಾಯು. ೬–೨೬). [ಸಂ. ಅನಲಜಾ]

**ಅನಲನಯನ** (ನಾ). = ಅನಲಾಕ್ಷ. [ಅನಲ + ನಯನ]

**ಅನಲನೇತ್ರ** (ನಾ). = ಅನಲಾಕ್ಷ : ಅನಲನೇತ್ರಂ ಕೋಪಿಸಿದಡಿಂತನಘ ಭಕ್ತರು ಕಾಯಲಾರ್ಪರದಲ್ಲದುಳಿದಂತೆ ಘನತರೋದ್ಧತ ಭಕ್ತನಿಕರಂ ಮುನಿದೊಡೀಂ ಕಾಯಲ್ಕೆ ಶಕ್ಯಮೆ (ಬಸವು. ೨೬–೧೬). [ಅನಲ + ನೇತ್ರ]

**ಅನಲಮರೀಚಿ** (ನಾ). ೧. ಅಗ್ನಿಯ ಕಿರಣ. ೨. ಅಗ್ನಿಜ್ವಾಲೆಯಂತೆ ತೀಕ್ಷ್ಣವಾದ ಕಿರಣಗಳುಳ್ಳವನು; ಸೂರ್ಯ : ಅಮೃತಮಯಕಿರಣನೆಂಬುದುಮುಮರದು ಶಿಶಿರಾಂಶುವೆಂಬುದುಂ ಶಶಿಗೆಂದುಂ ಸಮನಿಸಿ ವಿಷಕಿರಣನುಮನಲಮರೀಚಿಯುಮೆಂದೆನಲ್ಕೆ ಮೋಹಾಪೋಹಂ (ಕವಿರಾ. ೩–೧೪೩). [ಅನಲ + ಮರೀಚಿ]

**ಅನಲಮುಖ** (ನಾ). ೧. ಅಗ್ನಿಮುಖ; ಬೆಂಕಿಯ ಬಾಯಿ : ಈಕೆಯಪದೆಸೆಯುದಯದಲಿ ಕುಂತೀಕುಮಾರಕರನಲಮುಖದಲಿ ನಾಕದಲಿ ನೆಲೆಗೊಂಡರೆಂದುಮ್ಮಳಿಸುವನು ದ್ರುಪದ (ಕುವ್ಯಾಆ. ೧೧–೧೦). ೨. ಅಗ್ನಿಯೇ ಬಾಯಾಗಿ ಉಳ್ಳವನು; ದೇವತೆ. [ಅನಲ + ಮುಖ]

**ಅನಲಾಕ್ಷ** (ನಾ). ಬೆಂಕಿಯನ್ನು ಕಾರುವ ಕಣ್ಣುಳ್ಳವನು; ಈಶಾನ; ಈಶ್ವರ : ಕುಬೇರನನಲಾಕ್ಷಂ . . . ಸೇರಿ ನೆರೆದೊಪ್ಪಿರೆ ಕೃಪಾರಸಸಮುದ್ರ ನಗಜಾರಮಣನುಜ್ಜ್ವಳಪುರಾರಿ ಮೆಱೆದಿರ್ದಂ (ರಾಜಶೇ. ೧೪–೮೪). [ಅನಲ + ಅಕ್ಷ]

**ಅನಲಾರ್ಚಿ** (ನಾ). ಬೆಂಕಿಯ ಜ್ವಾಲೆ : ಮಲಯರುಹದೊಳನಲಾರ್ಚಿ ನಿನ್ನ ವದನೋದರದೊಳ್ ಪರುಷತರವಚನಮುಪ್ಪುದು ದು ರ ವಾ ಪ ಂ (ಕವಿರಾ. ೩–೭೯). [ಅನಲ + ಅರ್ಚಿ]

**ಅನಲಾಸ್ತ್ರ** (ನಾ). ಬೆಂಕಿಯನ್ನು ಕಾರುವ ಅಸ್ತ್ರ ; ಅಗ್ನಿಬಾಣ ; ಆ ಗ್ನೇ ಯಾ ಸ್ತ್ರ : ಅನಲಾಸ್ತ್ರದಿನಿಸೆ ದಿವಿಜಂ ದ ನು ಜೇ ಂ ದ್ರ ಂ ವಾರುಣಾಸ್ತ್ರದಿಂ ಖಂಡಿಸಿದಂ (ಪಂರಾಮಾ. ೧೦–೨೦೭). [ಅನಲ + ಅಸ್ತ್ರ]

**ಅನಲು**$_1$ (ಕ್ರಿ). (ಕರಾ). ಉರಿ; ಜ್ವಲಿಸು : ಬೆಂಕಿ ಸುಮ್ಮನೆ ಅನಲುತ್ತಿದೆ. ಒಲೆಯ ಮೇಲೆ ಪಾತ್ರೆ ಇರಿಸು (ರೂಢಿ).
[ದೇ. ? ‖ ತಮಿ. ಅನಲ್ = ಬೇಯಿಸು, ಸುಡು]

**ಅನಲು**$_2$ (ನಾ). ೧. ಸೆಕೆ; ಸಂತಾಪ. (ಸ್ಯಾಂಡರ್). ೨. ಬೆಂಕಿ. (ಸ್ಯಾಂಡರ್). ೩. ಕೋಪ. (ಸ್ಯಾಂಡರ್). ೪. ದುಃಖ (ಸ್ಯಾಂಡರ್).
[< ಅನಲು$_1$. / ತಮಿ. ಮಲ. ಅನಲ್ (< ಸಂ. ಅನಲ)]

**ಅನಲೋಷ್ಮ** (ನಾ). ಬೆಂಕಿಯ ತಾಪ : ಅನಲೋಷ್ಮಾವಳಿಯಿಂ ಮಹೋಗ್ರಮೆನೆ ಕಾಯ್ದುಷ್ಮಾತಪಜ್ವಾಲೆಗಳ್ಕಿ (ಕುಸುಮಾ. ೮–೧೪೪).
[ಅನಲ + ಊಷ್ಮ]

**ಅನಲ್ಪ** (ಗು). ೧. ಅಲ್ಪವಲ್ಲದ; ಬಹಳ; ದೊಡ್ಡದಾದ : ನಗರ ಮನೋಹರವ್ಯಾಪಾರಮನಲ್ಪಮೆನೆಯುಂ (ಶಾಂತಿಪು. ೧೨–೨೩ ವ); ಶರೀರ ಭೋಗಮಂ ತೊಱೆದನದರ್ಕವಂಗೆ ಕುಡಲಾಗದನಲ್ಪನಿತಂಬ ಬಿಂಬೆಯಂ (ಶಮುದ. ಸ. ೧೨೪ ಪ್ರಯೋ). ೨. ಹೆಚ್ಚಿನ; ಮೇಲಾದ; ಶ್ರೇಷ್ಠ : ಈಡಿತಜಿನವರಶಾಸನ ಚೂಡಾಮಣಿ ಬುಧರ್ಗನಲ್ಪಕಲ್ಪಕುಜಂ ಕೆಯ್ನೀಡಿದ ಬೇಟ್ಪರ ನೆರವಿಗೆ ನೀಡಿಲ್ಲದೆ ಕುಡುವುದಾತ್ತನಾ ಜಿನಚಂದ್ರಂ (ಶಾಂತಿಪು. ೧–೩೨) ; ಧವಳತಲ್ಪಮೆಸೆದುದನಲ್ಪಂ (ಜಗವಿ. ೨–೭೪). [ಸಂ.]

**ಅನಲ್ಪವಿಕಲ್ಪ** (ನಾ). ಬಹಳವಾದ ವಿಕಲ್ಪಗಳುಳ್ಳದ್ದು ; ಹಲವು ಬಗೆಯ ಬೇರೆ ಬೇರೆಯ ರೂಪರೇಖೆಗಳುಳ್ಳದ್ದು : ವಿದಿತೋತ್ತರ ಮಾರ್ಗಗತಂ ಪ್ರತೀತ ವಕ್ರೋಕ್ತಿಕೃತಮನಲ್ಪವಿಕಲ್ಪಂ (ಕವಿರಾ. ೨–೫೧).
[ಅನಲ್ಪ + ವಿಕಲ್ಪ]

**ಅನವಕಾರ್ಯ** (ಗು). ಕಡೆಗಣಿಸಲಾಗದ ; ತಿರಸ್ಕರಿಸಬಾರದ : ಅನುಕೂಲಕನುಮನಾಲಸ್ಯನುಮನವಕಾರ್ಯನುಂ ಲಬ್ಧಿಬುದ್ಧಸದೃಶನುಂ. . . ಶ್ರೋತೃವೆಂಬೊನಕ್ಕುಂ (ಅಜಿಪು. ೧೧–೨ ವ). ℙ ಇದು ಶ್ರೋತೃವಿನ ದಶಗುಣಗಳಲ್ಲಿ ಒಂದು. [ಸಂ.]

**ಅನವಗಮ** (ನಾ). ತಿಳಿಯದಿರುವುದು ; ಅರಿವಾಗದಿರುವುದು : ಜ್ಞಾನಾವರಣೀಯಕರ್ಮಪ್ರಕೃತಿಗೆ ದೇವತಾಮುಖವಸ್ತ್ರದವೋಲ್ ಅರ್ಥಾನವಗಮಂ ಸ್ವಭಾವಂ (ತತ್ತ್ವಪ್ರ. ೫೧). [ಸಂ.]

**ಅನವಚ್ಛಿನ್ನ** (ಗು). ೧. ನಡುವೆ ಭಂಗವಿಲ್ಲದಿರುವ. ೨. ವಿಭಾಗವಾಗದ. ೩. ಹೀಗೆಂದು ನಿರೂಪಿಸದ ; ನಿಶ್ಚಯವಾಗದ ; ಸ್ವರೂಪ ತಿಳಿಯದ. [ಸಂ.]

**ಅನವದ್ಯ** (ಗು). ೧. ನಿರ್ದೋಷವಾದ ; ಸ್ವಚ್ಛವಾದ ; ನಿಷ್ಕಳಂಕವಾದ : ಇಂತನವದ್ಯಮಪ್ಪ ಪದದೊಳ್ ಪತಿಯಂ ನಡೆಯಲ್ಕೆ ಪೇೞ್ದು (ಆದಿಪು. ೨–೬೧). (ನಾ). ೨. [ಛಂದ] ಒಂದು ಸಮವೃತ್ತದ ಹೆಸರು : ಕನಕಕುಂಡಲಮಂಡಿತ ಗಂಡೇ ನೀನಿದನೋದನವದ್ಯಮಂ (ಛಂದೋಂಬು. ೨–೧೨೬) ; ನ ಭ ಭ ಮ ಂ ಸ ಸ ಲ ಂ ಗ ಮು ಮೊ ಪ್ಪ ಲ್ ಪೇೞ್ದಪರಾ ಅನವದ್ಯಮಂ (ಕೈಪಿಡಿ. ೮೭). [ಸಂ.]

**ಅನವದ್ಯಚರಿತ** (ನಾ). ೧. ಶುದ್ಧವಾದ ನಡವಳಿಕೆ. ೨. ಶುದ್ಧವಾದ ಚರಿತ್ರವುಳ್ಳವನು : ಅನವದ್ಯಚರಿತನೆಂದೞ್ದನಿಬರ ಕಡೆವುಟ್ಟಿದಾಕೆ ಹನುಮಂಗಸ್ಮಜ್ಜನಕಂ ದಧಿಮುಖನಗರೀಜನಪತಿ ಗಂಧರ್ವನೆಂಬನಂಬರಗಮನಂ (ಪಂರಾಮಾ. ೧೧–೬೨). [ಅನವದ್ಯ + ಚರಿತ]

**ಅನವದ್ಯತ್ವ** (ಗು). [ಜೈನ] ಹತ್ತು ಅಧಿಕಾರಗಳಲ್ಲಿ ಒಂದು : ಅನವದ್ಯತ್ವಮುಗಣ್ಯತ್ವಮನಾರ್ಹತ್ವಂ . . . ಎಂಬ ಪತ್ತು ಅಧಿಕಾರಂಗಳ್ಗ ಮುಱಿಪಿ (ಚಾವುಂಉ. ೨೩೦). [ಸಂ.]

**ಅನವದ್ಯಯ್ಯ** (ನಾ). ಒ ಬ್ಬಾ ತ ನ ಹೆ ಸ ರು : ಬರೆದನನವದ್ಯಯ್ಯನಳಿಯ ದುಗ್ಗಮಾಯ್ಯನ ಮಗ ಪೋಚಯ್ಯ ಬೆಸೆಗೆಯ್ದುಗಲ್ಲ ನಿಱಿಸಿ (ಎಕ. IV, ಹುಣಸೂ. ೬೪–೧೦ ; 976). [ಅನವದ್ಯ + ಅಯ್ಯ$_1$]

**ಅನವದ್ಯಸುಖ** (ನಾ). ೧. ನಿರ್ದುಷ್ಟವಾದ ಸುಖ ; ಅಕಳಂಕವಾದ ಸೌಖ್ಯ ; ಮೋಕ್ಷ ; ಬ್ರಹ್ಮಾನಂದ : ಆರ್ಯಶೀಲಸ್ಕಂದದಿಂದ ಕೂಡಿ, ಅನವದ್ಯಸುಖವನ್ನು ಆ ಧ್ಯಾ ತ್ಮ ದ ಲ್ಲಿ ಅನುಭವಿಸುವವನು (ಬುದ್ಧಪ. ೧೯೯). ೨. ದೋಷರಹಿತವಾದ ಸುಖವುಳ್ಳವನು.
[ಅನವದ್ಯ + ಸುಖ]

**ಅನವದ್ಯಾಚರಣ** (ನಾ). = ಅನವದ್ಯಾಚಾರ : ಅನವದ್ಯಾಚರಣಕ್ಕುದಾಹರಣಮುದ್ಯತ್ಕೀರ್ತಿಗಾಧಾರಮಾಳ್ದನ ಕಾರ್ಯಕ್ಕೆ . . . ಪೊಗಟ್ಟುಂ (ಪಂಚತಂ. ೧೨–೧೭). [ಅನವದ್ಯ + ಆಚರಣ]

**ಅನವದ್ಯಾಚಾರ** (ನಾ). ೧. ನಿರ್ದುಷ್ಟವಾದ ಆಚಾರ. ೨. ನಿರ್ದುಷ್ಟವಾದ ನಡತೆಯುಳ್ಳವನು : ಅನುರೂಪಂಗೆ ಕುಲೀನಂಗೆ ನಿಖಿಲವಿದ್ಯಾವಿದಂಗೆ ತೇಜೋನಿಳಯಂಗನವದ್ಯಾಚಾರಂಗೀ ವನಜಾಕ್ಷಿಯನೀವೆನೆಂದು (ಪಂಚತಂ. ೨೫೭–೧೦). [ಅನವದ್ಯ + ಆಚಾರ]

**ಅನವದ್ಯೆ** (ನಾ). ದೋಷರಹಿತೆ ; ನಿರ್ಮಲೆ : ಅನವದ್ಯೆಯರಾಗಳ್ ಮುತ್ತಿನ ಸೇಸೆಯನಿಕ್ಕಿ ಪರಸಿದರ್ ಮನದೊಲವಿಂ (ರಾಜಶೇ. ೮–೭೬).
[ಸಂ. ಅನವದ್ಯಾ]

**ಅನವಧಾನ** (ನಾ). ೧. ಅವಧಾನವಿಲ್ಲದಿರುವುದು ; ಗಮನವಿಲ್ಲದಿರುವುದು; ಮೈಮರವು ; ಪ್ರಮಾದ : "ಅನವಧಾನಮಾ ಪ್ರಮಾದಮೆನಲ್ಕೆ ಮೈಮಱಹು" (ಮಂಗರಾ. ೧೩೩–೨೯). ೨. [ಸಂಗೀತ] "ಅನವಧಾನ–ಗಮಕಸ್ವರೂಪ ತಿಳಿಯದೆ ಹಾಡುವವನು" (ಸಂಗೀಚಂ. ೧೦೩).
[ಸಂ.]

**ಅನವಧಾರಣ** (ನಾ). ಮನಸ್ಸಿಗೆ ತಂದುಕೊಳ್ಳದಿರುವುದು ; ಗಮನವಿಲ್ಲದಿರುವುದು : ಈ ಪ್ರಕಾರವಿಲ್ಲದಿದ್ದರೆ ಮಿಥ್ಯಾಜ್ಞಾನವಾಗುವದು, ಅದು ಸಂಶಯ ಭ್ರಾಂತಿ ಸಂಭಾವನೆ ಅನವಧಾರಣ ಮೊದಲಾದ ಬಹು ಪ್ರಭೇದವುಳ್ಳದ್ದು (ಹಿಂದಸಾ. ೧೭೪). [ಸಂ.]

**ಅನವಧಿ** (ಗು). ಮೇರೆಯಿಲ್ಲದ; ಎಲ್ಲೆಯಿಲ್ಲದ; ಅಪಾರವಾದ. 'ಅನವಧಿತ್ಯಾಗ,' 'ಅನವಧಿಬೋಧ' ಪರಾ. [ಸಂ.]

**ಅನವಧಿತ್ಯಾಗ** (ನಾ). ಅಪಾರವಾದ ತ್ಯಾಗ ; ಎ ಲ್ಲೆ ಯಿ ಲ್ಲ ದ ಔ ದಾ ರ್ಯ : ಕಲ್ಪಮಹೀಜದಿಂದನವಧಿತ್ಯಾಗಪ್ರಭಾವಂ . . . ಶ್ರೀನಿಳಯಂ ಸುಪುತ್ರನೊಗೆತರ್ಕುಂ (ಪುಷ್ಪಪು. ೩–೧೨೨).
[ಅನವಧಿ + ತ್ಯಾಗ]

**ಅನವಧಿಬೋಧ** (ನಾ). ಅಪಾರವಾದ ಜ್ಞಾನವುಳ್ಳವನು; ಸರ್ವಜ್ಞ : ಭವ್ಯತೆ ಮೂಟ್ಟುಂ ನಿಜಸೇವಾವ್ಯಸನಮನದಱಿನಱಿವು ಸಮುನ್ನಿಕುಮುಱಿವಿ ಂ ದ ವ್ಯಾ ಮೋ ೯ ಹ ತೆ ಸಾರ್ಗುಮದವ್ಯಾಹತಸುಖಮನೀಗುಮನವಧಿಬೋಧಾ (ಚಂದ್ರಪು. ೭–೧೪). [ಅನವಧಿ + ಬೋಧ]

**ಅನವರತ**$_1$ (ಗು). ಎಡೆಬಿಡದ; ನಿರಂತರವಾದ : ದೇವಾಸುರ ಯುದ್ಧಕ್ಕೆ ಕರಗಂಬೊತ್ತೆಂಬಂತನವರತ ಬಾಷ್ಪವಾರಿಧಾರಾಪೂರ ಪರಿವಾಹಿತ ಪಲ್ಲವನೇತ್ರೆಯುಂ (ಗದಾಯು. ೧–೫೫ ವ); ಅನವರತಪರಮಸುಖಸಾಧನಚರಿತಂ ಜಿನಕುಮಾರ ಸದೃಶಂ [ಭವ್ಯಂ] ನಿನಗೆ ಮಗಂ ಪುಟ್ಟುಗುಂ (ಸುಕುಮಾ. ೧೦–೨). [ಸಂ.]

**ಅನವರತ**$_2$ 'ಅನವರತಂ' ನೋ.

**ಅನವರತಂ,** ಅನವರತ್ನ (ಅ). ಎಡೆಬಿಡದೆ; ನಿರಂತರವಾಗಿ; ಬಿಡುವಿಲ್ಲದಂತೆ; ಯಾವಾಗಲೂ: ಅವಗುಣಮಿನಿತಾದೊಡಮಾ ಕವಿತಾ ಬಂಧನಮಶೇಷಮುಂ ದೂಷಿಸುಗುಂ ಸವಿಳಾಸಲೋಲಲೋಚನ ವಿವರ ಮನೆಡೆವೆತ್ತ ಕಸದವೋಲನವರತಂ (ಕವಿರಾ. ೧-೪೩). **ಅನವರತ್ನ**: ಅನವರತ ಮಾಡಿಹೆನೆಂದು ಉಪ್ಪರಗುಡಿಯ ಕಟ್ಟಿ ಮಾಡುವ ಭಕ್ತನ ಮನೆಯದು ಅಂದಣಗಿತ್ತಿಯ ಮನೆ (ಬಸವ. ೨೨೬); ಸುರಪುರನಿಲಯ ಚೆನ್ನಿಗರಾಯ ಚತುರೋಪಾಯ ರಕ್ಷಿಸು ನಮ್ಮನನವರತ (ಹರಿಸಾ. ೧-೧).
[< ಸಂ. ಅನವರತ$_1$]

**ಅನವಲ್ಯ** (ನಾ). (ಉಕ). ಹೆಚ್ಚಿನ ಕಷ್ಟ; ಕ್ಲೇಶ; ತೊಂದರೆ: ಸೂನಬಾಯೀ ಅನ್ನುತ್ತಾಳೆ – ನಿನ್ನ ಊಟ ಉಪಚಾರದ ಅನವಲ್ಯವಾಗುತ್ತಿರಬೇಕೆಂದು; ಅದೂ ಖರೆ (ದೀಪಹ. ೨೦); 'ಛಲೋ ಮಾಡಿದಿ ಮಾರಾಯಾ ಇಲ್ಲದಿದ್ದರ ಮಕ್ಕಳ ಅನವಲ್ಯಾ ನೀನ ಕಣ್ಣಿಲೆ ನೋಡ ಬೇಕಾಗತಿತ್ತು' (ವೈನಿ. ೧೯೯); ಅನವಲ್ಯಕ್ಕೆ ಆಯುಷ್ಯ ಬಹಳ (ಗಾದೆ). 'ಅನವಲ್ಯಬಡಿಸು', 'ಅನವಲ್ಯಬಡು' ಪರಾ. [?]

**ಅನವಲ್ಯಬಡಿಸು** (ಕ್ರಿ). (ಉಕ). ತೊಂದರೆಪಡಿಸು; ಕಷ್ಟಕ್ಕೆ ಗುರಿಮಾಡು: ಹಿಂದೆ ಇದ್ದಷ್ಟು ದಿನ ಇನ್ನೇನು ಬದುಕುವುದಿಲ್ಲ. ಇರೋ ನಾಲ್ಕುದಿನ ಅನವಲ್ಯಬಡಿಸಬಾರದು (ಪೂಜಾಫ. ೩).
[ಅನವಲ್ಯಬಡು + -ಇಸು$_3$]

**ಅನವಲ್ಯಬಡು** (ಕ್ರಿ). (ಉಕ). ತೊಂದರೆಪಡು; ಹೆಚ್ಚಿನ ಕಷ್ಟಕ್ಕೆ ಗುರಿಯಾಗು: ನಮ್ಮ ರಾಘವೇಂದ್ರರಾಯರು ಸರಕಾರೀ ಖಾತೇದಾಗ ನವಕರಿಮಾಡಿ ಅನವಲ್ಯಬಡುತ್ತಿದ್ದನ್ನ ಕಮಲಕ್ಕ ಕಣ್ಣಾರೆ ಕಂಡಿದ್ರು (ವೈನಿ. ೧೩); ಅಂಥಾಂಗ ಥಣ್ಣಗ ತೌರುಮನ್ಯಾಗ ಇರಬಾರದ ನಮ್ಮವ್ವಾ ಇಲ್ಲಿಷ್ಟು ಅಲ್ಲಿಷ್ಟು ಅನವಲ್ಯಬಡೂದರಕಿಂತಾ (ನಡುಮು. ೮೧).
[ಅನವಲ್ಯ + ಪಡು$_1$]

**ಅನವಶ್ಯ** (ಗು). ಅವಶ್ಯವಿಲ್ಲದ; ಅಗತ್ಯವಿಲ್ಲದ. [ಸಂ.]

**ಅನವಶ್ಯಕ** (ನಾ). = ಅನಾವಶ್ಯಕ: ಶ್ರೀಯುತರು ಸಂಭಾಷಣೆಗೆ ತೊಡಗಿದಾಗ ಅನವಶ್ಯಕವಾಗಿ ಕಾಲಹರಣಮಾಡುತ್ತಿದ್ದರು (ರೂಢಿ). [ಸಂ.]

**ಅನವಸರ** (ಗು). ೧. ವಿರಾಮವಿಲ್ಲದ. (ನಾ). ೨. ಉಚಿತವಲ್ಲದ ಸಮಯ. ೩. ಕಾಲೋಚಿತವಲ್ಲದುದು: ಖುಲ್ಲನಾಗಿಂತ ನವಸರವಾದಲ್ಲಿ ಗುಡಿಯೊಳು ಹೊಗುವ ಸಲಿಗೆಯದೆಲ್ಲಿಯದು ತನಗಾರು ಕೊಟ್ಟರು ಮಾಣದಶ್ರಾಂತ (ಬಸಪು. ೪೩-೮೦). [ಸಂ.]

**ಅನವಸಾದ** (ನಾ). ಕುಗ್ಗದಿರುವುದು; ಕುಂದದಿರುವುದು: ದೇಶ ಕಾಲ ವೈಗುಣ್ಯದಿಂದಲೂ, ಶೋಕನಿಮಿತ್ತವಾದ ವಸ್ತು ಮುಂತಾದುವುಗಳನ್ನು ಸ್ಮರಿಸುವುದರಿಂದಲೂ, ಅವುಗಳಿಂದುಂಟಾಗುವ ದೈನ್ಯತೆ ಮನಸ್ಸಿನ ಕಾಂತಿಹೀನತೆಯೇ ಅವಸಾದವು ಎಂದೂ – ಅದಕ್ಕೆ ವ್ಯತಿರಿಕ್ತವಾದುದೇ ಅನವಸಾದವು – ಅಂದರೆ ಮನಸ್ಸಿನಲ್ಲಿ ದೈನ್ಯಭಾವವಿಲ್ಲದಿರುವಿಕೆ – ಎಂದು ... ಅರ್ಥಮಾಡಿದ್ದಾರೆ (ಶಾಂಪಜೀ. ೮೯). [ಸಂ.]

**ಅನವಸ್ಕರ** (ನಾ). ೧. ಕಲ್ಮಷವಿಲ್ಲದ ಹಾಗೆ ಶುದ್ಧಿಗೊಳಿಸಲ್ಪಟ್ಟದ್ದು; ಪರಿಶುದ್ಧವಾದುದು; ನಿರ್ಮಲವಾದುದು. ೨. ವಂಚನೆಯಿಲ್ಲದಿರುವುದು. [ಸಂ.]

**ಅನವಸ್ಥಾದೋಷ** (ನಾ). [ತತ್ತ್ವಶಾ] ವ್ಯವಸ್ಥೆಯಿಲ್ಲದ ಸ್ಥಿತಿ: ಅದು ಅನಾದಿಜನ್ಯವಲ್ಲವೆಂದು ಹೇಳಿದರೆ ವ್ಯವಸ್ಥೆಯು ಸಿದ್ಧಿಸುತ್ತಿರುವಲ್ಲಿ ಅದಕ್ಕೊಂದು ಕಾರಣವೆಂಬ ಕಲ್ಪನೆಯಲ್ಲಿ ಪರ್ಯವಸಾನವಿಲ್ಲ. ಅನವಸ್ಥಾದೋಷ ಬರುತ್ತದೆ (ಹಿಂದಸಾ. ೫೭). [ಸಂ. (ಅನವಸ್ಥಾ + ದೋಷ)]

**ಅನವಸ್ಥಾಪ್ರಸಂಗ** (ನಾ). ವ್ಯವಸ್ಥೆಯಿಲ್ಲದಿರುವ ಪ್ರಸಂಗ, — ಸಂದರ್ಭ [ಸಂ. (ಅನವಸ್ಥಾ + ಪ್ರಸಂಗ)]

**ಅನವಸ್ಥಿತ** (ಗು). ೧. ಚಂಚಲವಾದ; ಅಸ್ಥಿರವಾದ; ನೆಲೆಯಿಲ್ಲದ; ಅವ್ಯವಸ್ಥಿತವಾದ. (ನಾ). ೨. ಅನಿಶ್ಚಿತ ಸ್ಥಿತಿ: ಅನವಸ್ಥಿತಮೆಂಬುದು ಸಮ್ಯಗ್ದರ್ಶನಾದಿ ಗುಣವೃದ್ಧಿಹಾನಿ ಯೋಗದಿಂ ಎನಿಬಿರಿದು ಪುಟ್ಟತ್ತು ಅಲ್ಲಿಂ ತೊಟ್ಟು ವಾಯುವೇಗ ಪ್ರಚಲಿತ ಜಲೋರ್ಮಿಯವೋಲ್ ಸ್ವೋಚಿತ ಸ್ಥಾನಂಬರಂ ಕುಂದುತ್ತಂ ಪೆರ್ಚುತ್ತಂ ಇರ್ಪುದು (ತತ್ತ್ವಪ್ರ. ೬೮). [ಸಂ.]

**ಅನವಸ್ಥಿತಿ** (ನಾ). ವ್ಯವಸ್ಥೆಯಿಲ್ಲದಿರುವುದು; ಅವ್ಯವಸ್ಥೆ. [ಸಂ.]

**ಅನವಸ್ಥಿತಿಕೆ** (ನಾ). ನೆಲೆಯಿಲ್ಲದುದು; ಅಸ್ಥಿರ; ಚಂಚಲ; ಹೆಚ್ಚುಕಾಲ ನಿಲ್ಲದುದು; ಕ್ಷಣಿಕ: ಭಾವಂ ಬಹಿರರ್ಥಸಮುದ್ಭಾವಿತಮನುಭವಭವಂ ವಿಭಾವಂ ರಸಸದ್ಭಾವವಿಹಿತಾಭಿನಯಮನುಭಾವಂ ಸಂಚಾರಿ ಭಾವಮನವಸ್ಥಿತಿಕಂ [ಪಾಠಾಂ. ಸ್ಥಿತಕಂ] (ಕಾವ್ಯಾವ. ೬೯೭). [ಸಂ.]

**ಅನವಸ್ಥೆ** (ನಾ). ೧. ವ್ಯವಸ್ಥೆಯಿಲ್ಲದಿರುವುದು; ಕ್ರಮವಿಲ್ಲದಿರುವುದು: ತಂದೆಯ ವ್ಯವಸ್ಥೆಯು ಜಯಪಾಲನಿಗೆ ಒಂದು ಬಗೆಯ ಅನವಸ್ಥೆಯೆನಿಸಿತು (ಜಯಂತ. ೧೫೩). ೨. [ತತ್ತ್ವಶಾ] "ಒಂದು ಜ್ಞಾನವು ಮತ್ತೊಂದು ಜ್ಞಾನದಿಂದ ಅರಿಯಲ್ಪಟ್ಟತೆಂದರೆ ಅದಕ್ಕೆ ಮತ್ತೊಂದು ಜ್ಞಾನದ ಅಪೇಕ್ಷೆಯಾಗಬಹುದು. ಹೀಗೆ ಕೊನೆಯಾಗದೆ ಇರುವಂಥ ದೋಷಕ್ಕೆ ಅನವಸ್ಥೆ ಎಂದು ಹೆಸರು" (ಅಮೃತ. ೩-೧೩೦ ಟೀಕು).
[ಸಂ. ಅನವಸ್ಥಾ]

**ಅನವೀಕೃತತ್ವ** (ನಾ). [ಕಾವ್ಯಮೀ] ನವ್ಯತೆಯಿಲ್ಲದಿರುವುದು; ಅರ್ಥದೋಷಗಳಲ್ಲಿ ಒಂದು: ಅನವೀಕೃತತ್ವ—ಅನೇಕ ಸಂಗತಿಗಳಿದ್ದರೂ ಅವುಗಳನ್ನು ಹೊಸ ಹೊಸ ಬಗೆಯಲ್ಲಿ ಹೇಳದೆ ಒಂದೇ ಬಗೆಯಲ್ಲಿ ಹೇಳಿರುವುದು (ಕೈಪಿಡಿ. ೨೨೯). [ಸಂ.]

**ಅನವೇಕ್ಷಣ** (ನಾ). ನೋಡದಿರುವುದು; ಪರೀಕ್ಷೆ ಮಾಡದಿರುವುದು: ದೃಷ್ಟಿದೋಷಗಳಲ್ಲಿ ಮೊದಲನೆಯದನ್ನು ಅನವೇಕ್ಷಣವೆಂದೂ ಎರಡನೆಯದನ್ನು ಅತ್ಯವೇಕ್ಷಣವೆಂದೂ ಕರೆಯಬಹುದು (ಕಗದ್ಯ. ೧೪೮). [ಸಂ.]

**ಅನವ್ಯ** (ಗು). ೧. ಹೊಸದಲ್ಲದ; ಹಳೆಯದಾದ. (ನಾ). ೨. ಹಳೆಯದು: "ಅನವ್ಯಂ ಪುರಾಣಂ ಪುರಾತನಮೆನಲು ಹಳತಿಂಗೆ ನಾಮ ಮಕ್ಕುಂ" (ಮಂಗರಾ. ೧೨೯-೧೩). [ಸಂ.]

**ಅನವ್ಯಯ** (ನಾ). (ಕರಾ). ಅನಾವಶ್ಯಕವಾದ ವೆಚ್ಚ; ದುಂದು: ಮದುವೆ, ಮುಂಜಿ ಮತ್ತು ವ್ಯಾಜ್ಯಕ್ಕೆ ಜನ ಅನವ್ಯಯವಾಗಿ ಹಣ ಖರ್ಚು ಮಾಡುತ್ತಾರೆ (ರೂಢಿ). [ಸಂ. ?]

**ಅನಶನ** (ಗು). ೧. ಅಶನವಿಲ್ಲದ. (ನಾ). ೨. ಆಹಾರವಿಲ್ಲದಿರುವುದು; ಊಟ ಮಾಡದಿರುವುದು; ಉಪವಾಸ: "ಪ್ರಾಯಸ್ಸನಶನಮೆನಲುಣ್ಣದಿರುಹಂ" (ಮಂಗರಾ. ೧೩೫-೩೮); ಕೃತಾನುಶಯನನಶನವಿಧಾನ ದಿನಸುವಂ ವಿಸರ್ಜಿಸಿ (ಆದಿಪು. ೨-೧೭ ವ); ಅನಶನಮುಂ ಕೈಕೊಂಡಳ್ ಮನದೊಳ್ ಸತಿ ಪತಿಯ ಕುಶಲವಾರ್ತೆಯ ನಾಂ ಕೇಳ್ವಿನಮುಣ್ಣೆನೆಂದು (ಪಂರಾಮಾ. ೯-೧೫೦). [ಸಂ.]

**ಅನಶನತಪ,** ಅನಶನತಪಸ್ಸು (ನಾ). ಅನಶನವ್ರತದಿಂದ ಕೂಡಿದ ತಪಸ್ಸು; ಉಪವಾಸವ್ರತವೆಂಬ ತಪಸ್ಸು: ಏಕವಿಹಾರದೊಳ್ ಮಹಾರಣ್ಯನಿವಿಷ್ಟಂ ಮೊದಲ ಸಾಕಾರ ನಿರಾಕಾರ ಭೇದಭಿನ್ನಮಪ್ಪನಶನ ತಪದೊಳಂ (ಶಾಂತಿಪು. ೯-೧೧೫ ವ); ಮುನೀಂದ್ರನನಶನತಪದೊಳ್ ತಱಿಸಂದ ಸಲನದೊಂದಾಶ್ಚರ್ಯಂ (ಸುಕುಮಾ. ೪-೪). **ಅನಶನ ತಪಸ್ಸು**: ಶ್ರಮಣ ಸಂಪ್ರದಾಯದ ಅನಶನತಪಸ್ಸನ್ನು ನೆನಪಿಗೆ ತಂದರೆ ಕದಾಚಿತ್, ವೈದಿಕಮತದವರೇ ಯಜ್ಞದಲ್ಲಿ ಉಪವಾಸವನ್ನು ಸ್ವೀಕರಿಸ ಬಹುದೆಂದೂ ಹೇಳಬಹುದು (ಜೈನಪ. ೫೩೫). [ಅನಶನ + ತಪ]

**ಅನಶನತಪಸ್ಸು** 'ಅನಶನತಪ' ನೋ.

**ಅನಶನದೀಕ್ಷೆ** (ನಾ). ಆಹಾರವನ್ನು ತೆಗೆದುಕೊಳ್ಳುವುದಿಲ್ಲವೆಂಬ ನಿಯಮ, —ವ್ರತ : ಕುರುನರೇಂದ್ರನರಸಿಯರ್ ಮೊದಲಾಗೆಲ್ಲರು ಮನಶನದೀಕ್ಷೆಯಂ ಕೈಕೊಂಡುತ್ತಮ ಮೋಕ್ಷಮಂ ತಾಳ್ದಿದರ್ (ಗದಾಯು. ೧೦–೨೦ ವ). [ಅನಶನ + ದೀಕ್ಷೆ]

**ಅನಶನವೃತ್ತಿ** (ನಾ). ಉಪವಾಸದಿಂದಿರುವುದು ; ಆಹಾರವನ್ನು ತೊರೆಯುವುದು : ಅನಶನವೃತ್ತ್ಯಾದಿ ತಪೋನುಷ್ಠಾನಮುಂ . . . ಪೇೞ್ದು ಕೈಕೊಳಿಸಿ (ಆದಿಪು. ೧೫–೧೩ ವ). [ಅನಶನ + ವೃತ್ತಿ]

**ಅನಶನವ್ರತ** (ನಾ). = ಅನಶನದೀಕ್ಷೆ : ಜಿನಮುನಿಗಳ ಸಮಕ್ಷದಲ್ಲಿ ಅ ವನಜಮುಖಿಯರು ದಿನವ್ರತ, ದಿಗ್ವ್ರತ, ಮಿತಪರಿಗ್ರಹವ್ರತ, ಅನಶನ ವ್ರತ ಇವುಗಳನ್ನು ಕೈಕೊಂಡರು (ಮಾಮಲ್ಲಿ. ೧೨೭). [ಅನಶನ + ವ್ರತ]

**ಅನಶ್ವರ** (ಗು). ನಶ್ವರವಲ್ಲದ ; ನಾಶ ಹೊಂದದಿರುವ ; ಸ್ಥಿರವಾದ ; ಶಾಶ್ವತವಾದ : ಉಪಶಿಷ್ಟಗುಣಾಷ್ಟಕರಾದನಶ್ವರ ಶ್ರೀವನಿತೇಶರೀಗೆಮಗೆ ಸಿದ್ಧರತೀಂದ್ರಿಯ ಸೌಖ್ಯಸಿದ್ಧಿಯಂ (ಚಂದ್ರಪು. ೧–೨). [ಸಂ.]

**ಅನಸು** (ನಾ). (ಉಕ). ಜೋಳ ಮುಂತಾದ ಗಿಡಗಳನ್ನು ಕತ್ತರಿಸಿದ ಮೇಲೆ ಬುಡದ ಗಂಟಿನಲ್ಲಿ ಒಡೆಯುವ ಚಿಗುರು ; ಟಿಸಲು : ಹೊಲದಲ್ಲಿ ಜೋಳ ಅನಸು ಒಡೆದಿದೆ (ರೂಢಿ). [?]

**ಅನಸೂಯ** (ಗು). ಅಸೂಯೆಯಿಲ್ಲದ ; ಹೊಟ್ಟೆಕಿಚ್ಚಿಲ್ಲದ. [ಸಂ.]

**ಅನಸೂಯಕ** (ಗು). = ಅನಸೂಯ : ಬರ್ಹಿಧ್ವಜನ ತನುಜನನಸೂಯಕಂ ಧೀರನು (ಜೈಮಿಭಾ. ೨೫–೧೫). [ಸಂ.]

**ಅನಸೂಯೆ** (ನಾ). ೧. ಅಸೂಯೆಯಿಲ್ಲದಿರುವುದು ; ಹೊಟ್ಟೆಕಿಚ್ಚಿಲ್ಲದಿರುವುದು. ೨. ಹೊಟ್ಟೆಕಿಚ್ಚಿಲ್ಲದ ಹೆಂಗಸು. ೩. ಅತ್ರಿಮಹರ್ಷಿಯ ಹೆಂಡತಿ : ವರಪುಷ್ಪಪಲ್ಲವದ ಪೊಂಗಳಸಮುಂ ತುಂಬಿ ಕರದೊಳನಸೂಯೆಗೀಯಲ್ಕವಳರುಂಧತಿಯ ಶಿರಕೆ ಪೊಱಸಿದೊಡಾಕೆ ರುಕ್ಮಿಣಿಯ ಸಿರಿಮುಡಿಯೊಳಿರಿಸಿ ನಗುತ (ಜೈಮಿಭಾ. ೩೪–೧). [ಸಂ. ಅನಸೂಯಾ]

**ಅನಸ್ತಿತ್ವ** (ನಾ). ಇಲ್ಲದಿರುವಿಕೆ : ವಿಶ್ವವೆಲ್ಲ ಈ ಪ್ರೇಮದಿಂದ ಪರ ಸೌಂದರ್ಯವಾದ ದೇವರ ಕಡೆಗೆ ಎಳೆಯುತ್ತದೆ, ಅನಸ್ತಿತ್ವ ಒಬ್ಬರಿಗೂ ಬೇಡ (ಇಸ್ಲಾಂಸಂ. ೨೨೪). [ಸಂ.]

**ಅನಹಂಕೃತಿ** (ನಾ). ಅಹಂಕಾರವಿಲ್ಲದಿರುವುದು ; ಹೆಮ್ಮೆಯಿಲ್ಲದಿರುವುದು (ದಕ. ೬). [ಸಂ.]

**ಅನಹಂವಾದಿ** (ನಾ). ನಾನು ಎಂದು ನುಡಿಯದವನು ; ಅಹಂಕಾರವಿಲ್ಲದವನು : ಸುಹೃದನನಹಂವಾದಿ ಅಪ್ರಮತ್ತಂ ಸಾಧು ಪಾಪಿ ತಾನೆಂದೆಯೇ ಹಲುಬುತಿಹ ಪದವೇ (ಮಲೆದೇ. ೧೭–೭).
[ಸಂ. ಅನಹಂವಾದಿನ್]

**ಅನಹತ** (ನಾ). [ತಂತ್ರಶಾ] = ಅನಾಹತಚಕ್ರ : ಮೀರಿ ಸ್ವಾಧಿಷ್ಠಾನವನು ಅದ ಹಾರಿ ಮಣಿಪೂರಕವ ಅನಹತಕೈದಬೇಕೆಂದ (ಜ್ಞಾನಸಿಂ. ೧೫–೨೩). [< ಸಂ. ಅನಾಹತ]

**ಅನಹಿತ** (ಗು). ೧. ಅಹಿತವಲ್ಲದ ; ಹಿತವಾದ. (ನಾ). ೨. ಶತ್ರುವಲ್ಲದವನು ; ಮಿತ್ರ. ೩. ಅಡ್ಡಿ ; ಆತಂಕ ; ನಷ್ಟ. (೬). [ಸಂ.]

**ಅನಾಕರ್ಷಕ** (ಗು). ಆಕರ್ಷಕವಲ್ಲದ : ಉಳಿದ ವಿಚಾರಗಳೆಲ್ಲ ಅವನ ದೃಷ್ಟಿಯಲ್ಲಿ ಕನಿಷ್ಠವಾಗಿ ಹಾಗೂ ಅನಾಕರ್ಷಕವಾಗಿ ಕಾಣುತ್ತಿದ್ದುವು (ಪುನರು. ೩೩೩). [ಸಂ.]

**ಅನಾಕಾರ** (ಗು). ಆಕಾರವಿಲ್ಲದ ; ರೂಪರಹಿತವಾದ : ಮುಕ್ತಜೀವ ನಪ್ಪೊಡೇಕಪ್ರಕಾರನುಮನಾಕಾರನು[ಮ]ಶರೀರಾಕಾರದಿಂ ಕಿಂಚಿದೂನನುಂ (ಸುಕುಮಾ. ೮–೧೪ ವ). [ಸಂ.]

**ಅನಾಕುಲ**, ಅನಾಕುಳ (ಗು). ೧. ವ್ಯಾಕುಲವಿಲ್ಲದ ; ಕ್ಷೋಭೆಗೊಳ್ಳದ ; ಕದಡದ ; ಶಾಂತವಾದ. (ನಾ). ೨. ವ್ಯಾಕುಲವಿಲ್ಲದ ಸ್ಥಿತಿ : ಸಗರರ ಮೇಲೆ ಗಂಗೆಯನನಾಕುಲದಿಂ ತರಲಾ ಭಗೀರಥಂ (ಪಂಪಭಾ. ೪–೧೩). **ಅನಾಕುಳ** : ೧. ಆಕುಳನೆನಾಗಿ ಸುೞಿದೆನನಾಕುಳಮಪ್ಪೆಡೆಯನಱಸಿ ಕಾಣೆಂ ಮೂಱುಂ ಲೋಕದೊಳಂ (ಆದಿಪು. ೧೦–೫೫). [ಸಂ.]

**ಅನಾಕುಲಂ**, ಅನಾಕುಳಂ (ಅ). ಕ್ಷೋಭೆಗೊಳ್ಳದೆ; ನಿಶ್ಚಿಂತೆಯಿಂದ; ನಿರಾಯಾಸವಾಗಿ : ತತ್ಪರಿವಾರ ದೇವತಾಕುಲಮುಮನಂಗನಾಜ್ಞೆಯೆನೆ ಬಂದುದು ರಾಜಕುಲಕ್ಕನಾಕುಲಂ (ಮಲ್ಲಿಪು. ೧೧–೭೭). **ಅನಾಕುಳಂ** : ಅನಾಕುಳಂ ಮನದಲಂಪಿನೊಳಾ ಮದನೋಪಮಾನನೊಳ್ ನೆರೆವೆಂ (ಕವಿರಾ. ೨–೧೦೩) ; ಏಕೆ ನಿನ್ನನಾಳ್ದಂ ನಿನ್ನಂ ಮನಮೊಲ್ದು ನಚ್ಚಿಯಟ್ಟಿದನನಾಕುಳಂ ದೂತನಿಂತು ನುಡಿಯಲ್ವೇೞ್ಕುಂ (ಆದಿಪು. ೧೪–೬೫). [ಸಂ.]

**ಅನಾಕುಳ** ‘ಅನಾಕುಲ’ ನೋ.

**ಅನಾಕುಳಂ** ‘ಅನಾಕುಲಂ’ ನೋ.

**ಅನಾಖ್ಯೇಯ** (ನಾ). ಮಾತಿನಲ್ಲಿ ಹೇಳಲಾಗದುದು : ವಿಶೇಷ ಲಕ್ಷಣಗಳೆಲ್ಲವನ್ನೂ ಪರಿಶೀಲಿಸಿದ ಮೇಲೆಯೂ ಅದು ‘ಅನಿರ್ವಾಚ್ಯ’ ಅಥವಾ ‘ಅನಾಖ್ಯೇಯವೇ’ ಆಗುವುದಾದರೆ (ಧ್ವನ್ಯಾಲೋ. ೫೨). [ಸಂ.]

**ಅನಾಗತ** (ಗು). ೧. ಇನ್ನೂ ಬಾರದ ; ಮುಂದಿನ. ೨. ದೊರೆತಿಲ್ಲದ ; ಕೈಗೆ ಸಿಕ್ಕದ. ೩. ತಿಳಿಯದ ; ಗೊತ್ತಿಲ್ಲದ. (ನಾ). ೪. ಭವಿಷ್ಯ : ಕೆಲರನಾಗತಮನಱಿವ ಬುದ್ಧಿಯೊಡೆಯರಿಂತೆಂಬರ್ (ಪಂಪಭಾ. ೨–೮೭ ವ) ; ನಾರದಾದ್ಯರನಾಗತವನಱುಹಿದರು (ಕುವ್ಯಾಸ. ೧೪–೫೩). [ಸಂ.]

**ಅನಾಗತಂ** (ಅ). ಭವಿಷ್ಯಜ್ಞಾನದ ಮೂಲಕ : ವ್ಯಾಸಭಟ್ಟಂ ಮಹಾಭಾರತಕಥಾಪ್ರಪಂಚಮನನಾಗತಂ ಕಂಡದಂ ಗ್ರಂಥವಿಸ್ತರಂ ಮಾಡಲ್ಬಗೆದು (ಪಂಚತಂ. ೬೫–೧೯). [< ಅನಾಗತ]

**ಅನಾಗತಕರ್ತೃ** (ನಾ). ಭವಿಷ್ಯವನ್ನು ಅರಿತು ಬರೆಯುವವನು ; ಪರೋಕ್ಷವನ್ನು ಕಂಡು ಬರೆಯುವವನು : ಮುನ್ನಂ ವಾಲ್ಮೀಕಿಮುನಿ ರಾಮಾಯಣಮನನಾಗತಂ ಕಂಡದಂ ಗ್ರಂಥವಿಸ್ತರಂಗೆಯ್ದಲ್ಲಿ ಇನ್ನೆಮ್ಮಂತಪ್ಪನಾಗತಕರ್ತೃಗಳುಮಾಗದಿರ್ಕೆಂದಾಜ್ಞೆಯಂ ಮಾಡಿದ ಕಾರಣಂ (ಪಂಚತಂ. ೬೫–೨೧). [ಅನಾಗತ + ಕರ್ತೃ]

**ಅನಾಗತಗ್ರಹ** (ನಾ). [ಸಂಗೀತ] “ಗೀತ ಪ್ರಾರಂಭವಾಗುವುದಕ್ಕೆ ಮುಂಚೆ, ತಾಳಘಾತದಿಂದ ಪ್ರಾರಂಭವಾಗಿ ಕೆಲವು ಅಕ್ಷರಕಾಲ ನಡೆದಮೇಲೆ ಗೀತ ಪ್ರಾರಂಭವಾಗುವುದು ಅನಾಗತಗ್ರಹ. ಈ ಗ್ರಹಕ್ಕೆ ಎಡುಪು ಎಂದೂ ಹೆಸರು” (ಸಂಗೀಚಂ. ೫೫).
[ಅನಾಗತ + ಗ್ರಹ]

**ಅನಾಗತಜ್ಞ** (ನಾ). ಭವಿಷ್ಯವನ್ನು ಬಲ್ಲವನು; ಮುಂದಾಗುವುದನ್ನು ತಿಳಿದವನು: ಅಸುರಾರಿಪೊಲಾವನನಾಗತಜ್ಞಂ(ಜಗವಿ.೧೭–೭೪). [ಸಂ.]

**ಅನಾಗತಪೂಜೆ** (ನಾ). ತಿಳಿಯದ ಪೂಜೆ ; ಮೌಢ್ಯದಿಂದ ಮಾಡುವ ಆರಾಧನೆ(?) : ಪೂಜಿಸಿ ಕೆಳಯಿಂಕೆ ಇಳುಹಲದೇನೋ ? ಅನಾಗತ ಪೂಜೆಯ ಮಾಡಲದೇನೋ ? ದೇಹವೇ ಪಿಂಡಿಗೆ ಜೀವವೇ ಲಿಂಗ ಗುಹೇಶ್ವರ (ಅವಚಂ. ೪೩–೧೮೪). [ಅನಾಗತ + ಪೂಜೆ]

**ಅನಾಗತಮತಿ** (ನಾ). = ಅನಾಗತಜ್ಞ : ಮುನಿವರರೆಂತೀಗಿರಿಗೆ ಚರಿಗೆವರ್ಪರನಾಗತಮತಿ ಬಗೆಯ ನೀನುಪಾಯಾಂತರಮಂ (ಆದಿಪು. ೫–೭).
[ಅನಾಗತ + ಮತಿ]

**ಅನಾಗತಸಿದ್ಧಿ** (ನಾ). ಭವಿಷ್ಯದ ಸಿದ್ಧಿ; ಮುಂದೆ ಒದಗಲಿರುವ ಸಿದ್ಧಿ: ಸಂಸಾರಕ್ಕೆ ಬೋಧೆಗೆ ಸಿಕ್ಕಿರೆ ಅನಾಗತಸಿದ್ಧಿಯ ಹೋದ ಹೊಲಬನಱಿಯದೆ ಕೆಟ್ಟರಯ್ಯಾ (ಮೋಳಿಮಾ. ೯೧–೩೬೨). [ಅನಾಗತ + ಸಿದ್ಧಿ]

**ಅನಾಗತಾರ್ತವೆ** (ನಾ). ಮೈನೆರೆಯದ ಹುಡುಗಿ : “ಮೈನೆರೆಯದ ಹೆಂಗಸು” (ಗಂಗಾಮು. ೮). [ಸಂ. ಅನಾಗತಾರ್ತವಾ]

**ಅನಾಗರಿಕ** (ಗು). ೧. ನಾಗರಿಕನಲ್ಲದ; ನಾಗರಿಕವಲ್ಲದ. (ನಾ). ೨. ನಾಗರಿಕತೆಯಿಲ್ಲದವನು : ನಿನ್ನೆ ನಾವು ಮಾತಾಡಿಸಿದ ವ್ಯಕ್ತಿ ತೀರ ಅನಾಗರಿಕನಂತೆ ಕಾಣುತ್ತಿದ್ದನು (ರೂಢಿ). [ಸಂ.]

**ಅನಾಚಾರ** (ನಾ). ಆಚಾರವಲ್ಲದುದು ; ಸದಾಚಾರವನ್ನು ಬಿಟ್ಟು ನಡೆಯುವಿಕೆ ; ತಪ್ಪುನಡೆ : ಆಚಾರವೇ ಸ್ವರ್ಗ ಅನಾಚಾರವೇ ನರಕ (ಬಸವ. ೨೪೯) ; ನ್ಯಾಯ, ಧರ್ಮದ ಅರಿವಿಲ್ಲದೆ ಅನಾಚಾರಗಳೆನ್ನೆಸಗುವುದು ಈ ಶಾಲೆಯಲ್ಲಿ ತುಂಬಿಹೋಗಿದೆ (ಕಾವೇರಿ. ೮೮) ; ಮಾಡೋದು ಅನಾಚಾರ ಮನೆಯ ಮುಂದೆ ಬೃಂದಾವನ (ಗಾದೆ). [ಸಂ.]

**ಅನಾಚಾರವಂತ** (ನಾ). ಆಚಾರವನ್ನು ಬಿಟ್ಟವನು ; ಪೂರ್ವಪದ್ಧತಿಯನ್ನು ಮೀರಿ ನಡೆಯುವವನು. 'ಅನಾಚಾರವಂತಕ' ಪರಾ. [ಸಂ. ಅನಾಚಾರವಾನ್]

**ಅನಾಚಾರವಂತಕ** (ನಾ). = ಅನಾಚಾರವಂತ : ಅಳುಪಿದನ ಪರಸತಿಗೆ ದ್ವಿಜಸಂಕುಳವ ದೂಷಿಸಿದವನ ಕೋದೊಡಗಲಿಸಿದನು ಗುರುನಿಂದಕನನಾಚಾರವಂತಕನ . . . ಕೊಲ್ಲದಿರ್ದಡೆ ನಾಳೆ ಸೈಂಧವನ (ಕುವ್ಯಾದ್ರೋ. ೬೦೩. ಪರಿ. ೨೮೪). [ಅನಾಚಾರವಂತ + –ಕ್ಕ]

**ಅನಾಚಾರಿ** (ನಾ). ಆಚಾರವನ್ನು ಬಿಟ್ಟು ನಡೆಯುವವನು; ಕೆಟ್ಟ ನಡತೆಯುಳ್ಳವನು : "ಅನಾಚಾರಿ ದುರ್ವೃತ್ತನುದಾಸೀನನಕ್ಕು" (ಮಂಗರಾ. ೭೫–೬) ; ಹೆತ್ತ ತಾಯ ಕೊಂದ ಅನಾಚಾರಿ (ಮೋಳಿಮಾ. ೧೮೨–೬೮೫). [ಸಂ. ಅನಾಚಾರಿನ್]

**ಅನಾಜು** (ನಾ). ಧಾನ್ಯ; ಕಾಳು; ದವಸ: ರಾತ್ರಿ ಕಾಲದಲ್ಲೂ ಮೈಸೂರು ಸೀಮೆಗೆ ಹೋಗಿ ಅನಾಜು ವಗ್ಯೆರೆ ಲೂಟ ಮಾಡಿಕೊಂಡು ಬಂದು ತಂಮ ಕಡೆಯ ಮಂದಿಗೆ ಊಟದ ಬಗ್ಯೆ ಕೊಡಿಸುತ್ತಾ (ರಾಜೇಂದ್ರ. ೨೧) ; ರಾಗಿ ಮುಂತಾದ ಅನಾಜು ತಂದು ನಮಗೂ ನಂಮ ಮಕ್ಕಳಿಗೂ ಅಂನಾ ಮಾಡಿಕೊಂಡು (ರಾಜೇಂದ್ರ. ೧೩೦). [← ಹಿಂ. ಮರಾ. ಅನಾಜ್]

**ಅನಾಡಂಬರ** (ನಾ). ಆಡಂಬರವಿಲ್ಲದಿರುವುದು ; ಸರಳತೆ. [ಸಂ.]

**ಅನಾತಪ** (ನಾ). ಬಿಸಿಲಿಲ್ಲದಿರುವುದು ; ನೆರಳು. [ಸಂ.]

**ಅನಾತುಮ** (ನಾ). = ಅನಾತ್ಮ: ಆತುಮನು ತಾನಾಗಲಜೀವದನಾತುಮಾಖಿಳ ಜೀವಕರಣವ್ರಾತನಾತ್ಮನೆ ನೋಡೆ ಮಿಥ್ಯಜ್ಞಾನಕೃತವೆಂದ (ನಿಭಾಗ. ೩–೧೨–೩೫). [< ಸಂ. ಅನಾತ್ಮ]

**ಅನಾತ್ಮ** (ನಾ). ೧. ಆತ್ಮವಿಲ್ಲದುದು. ೨. ಆತ್ಮವಲ್ಲದುದು ; ಆತ್ಮನಿಗಿಂತ ಬೇರೆಯಾದುದು ; ಜಡವಸ್ತು : ಅನಾತ್ಮನೆಂಬುದಾರೆಂದರೆ ಸಮಷ್ಟಿವ್ಯಷ್ಟ್ಯಾತ್ಮಕವಾದಂಥ ಶರೀರತ್ರಯವು ಅನಾತ್ಮನೆಂದು ಹೇಳಪಡುವುದು (ವೇಸಾರ. ೬).

**ಅನಾತ್ಮರು** = ಆತ್ಮಜ್ಞಾನವಿಲ್ಲದವರು : ಭೀಮಕರ್ಮಿಗಳಾರ್ಯವೈರಿಗಳ್ ಅನಾತ್ಮರಂ ಋಷಿಕಂಟಕರನಿರಿವುದೆನ್ನಯ ಮನಂ (ಶ್ರೀರಾಮಾ. ೧೮೩–೨೦೧). [ಸಂ.]

**ಅನಾತ್ಮಜ್ಞ** (ನಾ). ೧. ಆತ್ಮಸ್ವರೂಪವನ್ನು ತಿಳಿಯದವನು. ೨. ತನ್ನ ಯೋಗ್ಯತೆಯನ್ನು ತಾನು ಅರಿಯದವನು. 'ಅನಾತ್ಮಜ್ಞತ್ವ' ಪರಾ. [ಸಂ.]

**ಅನಾತ್ಮಜ್ಞತ್ವ** (ನಾ). ೧. ಆತ್ಮದ ಸ್ವರೂಪವನ್ನು ತಿಳಿಯದಿರುವುದು. ೨. ತನ್ನ ಯೋಗ್ಯತೆಯನ್ನು ತಾನೇ ಅರಿಯದಿರುವುದು: ಮೊದಲೊಳ್ ಸಂಭಾಷಣಂಗೆಯ್ದುದೆ ವಲಮಿಟಿಕೆಯ್ವಂದಂ . . . ಪ್ರೀತಿಯಂ ಮಾಱ್ಪುದನಾತ್ಮಜ್ಞತ್ವಮಿವುದೆ ವಿಭವದ ಗರ್ವಂಬೊಲಾದಪ್ಪುದೀಗಳ್ (ಕಾದಂಉ. ೧೧೨). [ಸಂ.]

**ಅನಾತ್ಮವಸ್ತು** (ನಾ). ಆತ್ಮಕ್ಕಿಂತ ಭಿನ್ನವಾದ ವಸ್ತು ; ಆತ್ಮವಲ್ಲದ ವಸ್ತು : ನಿತ್ಯವಿಭೂತಿ, ಲೀಲಾವಿಭೂತಿ . . . ಈ ನಾಲ್ಕು ದ್ರವ್ಯಗಳು ಅಚೇತನವಸ್ತುಗಳು, ಅನಾತ್ಮವಸ್ತುಗಳು, ಜೀವೇಶ್ವರ ವಸ್ತುಗಳು, ಚೇತನವಸ್ತುಗಳೆಂದು ವಿಭಾಗ (ಹಿಂದಸಾ. ೨೪೯). [ಅನಾತ್ಮ + ವಸ್ತು]

**ಅನಾತ್ಮವಾದ** (ನಾ). ಆತ್ಮನೆಂಬ ವಸ್ತುವಿಲ್ಲವೆಂದು ಮಾಡುವ ವಾದ : ವಿವಿಧ ಇಂದ್ರಿಯಗಳು ವಿವಿಧ ವಿಷಯಗಳನ್ನು ಗ್ರಹಿಸುವಂತೆ ಏರ್ಪಟ್ಟಿರುವ ವ್ಯವಸ್ಥೆಯೇ ಆತ್ಮನನ್ನೂ ಸಿದ್ಧಪಡಿಸುತ್ತದೆ. ಅನಾತ್ಮವಾದಕ್ಕೆ ಇರುವ ಪ್ರಮಾಣವೇ ಆತ್ಮವಾದಕ್ಕೂ ಪ್ರಮಾಣ (ಜೀವಾತ್ಮ. ೬೫). [ಅನಾತ್ಮ + ವಾದ]

**ಅನಾತ್ಮವಾದಿ** (ನಾ). ಆತ್ಮವಿಲ್ಲವೆಂದು ವಾದಿಸುವವನು ; ನಾಸ್ತಿಕ. [ಸಂ. ಅನಾತ್ಮವಾದಿನ್ (ಅನಾತ್ಮ + ವಾದ + –)]

**ಅನಾಥ** (ಗು). ೧. ನಾಥರಿಲ್ಲದ ; ಕಾಪಾಡುವವರಿಲ್ಲದ ; ದಿಕ್ಕಿಲ್ಲದ. (ನಾ). ೨. ದಿಕ್ಕಿಲ್ಲದವನು ; ತಬ್ಬಲಿ : ಧರೆಯೊಳಗನಾಥರಂ ಸಲಹು ದುಷ್ಟರನು ಪರಿಹರಿಸು (ಹಚಕಾ. ೮–೨೮) ; ಕಡೆಗೆ ಧೃತರಾಷ್ಟ್ರಾವನೀಶನು ಮಡದಿಸಹಿತಲನಾಥನಾಗಿಯೆ ಕೆಡುವನೆಂಬುದ ಬಲ್ಲೆ ನಾ ಪಾಂಡವರ ರಾಜ್ಯದಲಿ (ಕುವ್ಯಾಉ. ೯–೩೬). [ಸಂ.]

**ಅನಾಥತಂತ್ರ** (ನಾ). ಒಡೆಯನಿಲ್ಲದ ಸೈನ್ಯ : ವನದುರ್ಗಸ್ಥಿತಕಾಮುನಾ ಮುನಿಗೆ ಬೆಂಗೊಟ್ಟೋಡೆ . . . ಕೀರಪಿಕ ವೃಂದಂ ಗೂಡುಗೊಂಡಿರ್ದುವೆಂಬಿನವಂತಿರ್ದುವನಾಥತಂತ್ರಮಧಿಕರ್ ಬಂದೆಯ್ದೆ ಬಲ್ಗೆಯ್ದುಮೇ (ಪುಷ್ಪವು. ೧೪–೨೨). [ಅನಾಥ + ತಂತ್ರ]

**ಅನಾಥತ್ವ** (ನಾ). ನಾಥನಿಲ್ಲದಿರುವುದು ; ರಕ್ಷಕನಿಲ್ಲದ ಸ್ಥಿತಿ : ಇತ್ತಲು ನಂಬಿಯಣ್ಣಂ ಶರ್ವಕಾರುಣ್ಯ ಸಾಮ್ರಾಜ್ಯ ಸದ್ಭಕ್ತಿ ಸಾರ್ವಭೌಮನಾಗಿ ಅನಾಥತ್ವಂ ಪಿಂಗಿ ಸನಾಥನಾಗಿ (ನಂಬಿರ. ೮–೬). [ಸಂ.]

**ಅನಾಥಬಂಧು** (ನಾ). ಗತಿಯಿಲ್ಲದವರಿಗೆ ನಂಟ ; ದಿಕ್ಕಿಲ್ಲದವರನ್ನು ಕಾಪಾಡುವವನು : ನೀನೇ ಅನಾಥಬಂಧು ಕಾರುಣ್ಯಸಿಂಧು (ಪುರಂದ. ೨–೧೧೬–೧). [ಅನಾಥ + ಬಂಧು]

**ಅನಾಥಾಲಯ** (ನಾ). ಅನಾಥರಿಗೆ ಆಶ್ರಯಕೊಡುವ ಸಂಸ್ಥೆ, — ವಸತಿಸ್ಥಾನ : ಮೈಸೂರಿನಲ್ಲಿರುವ ಅನಾಥಾಲಯವು ಶ್ರೀ ವೆಂಕಟಕೃಷ್ಣಯ್ಯನವರಿಂದ ಸ್ಥಾಪಿಸಲ್ಪಟ್ಟಿತು (ರೂಢಿ). [ಅನಾಥ + ಆಲಯ]

**ಅನಾಥಾಶ್ರಮ** (ನಾ). = ಅನಾಥಾಲಯ : ಆ ಮಗುವಿಗೆ ಶಾಸ್ತ್ರೋಕ್ತವಾಗಿ ಜಾತಕರ್ಮ ಮಾಡಿಸಿದೆ. ಆಮೇಲೆ ಅದನ್ನು ಅನಾಥಾಶ್ರಮಕ್ಕೆ ಕಳಿಸಿದೆವು (ಪುನರು. ೨೮೪). [ಅನಾಥ + ಆಶ್ರಮ]

**ಅನಾಥೆ** (ನಾ). ರಕ್ಷಕರಿಲ್ಲದವಳು ; ದಿಕ್ಕಿಲ್ಲದ ಹೆಂಗಸು : ಮುಳಿದೆನ್ನನನಪರಾಧೆಯನಬಲ್ಲವಳನಿಂತನಾಥೆಯಂ ಮೋದಿದ ಕಾಲ್ಗಳನಾವ ಜನ್ಮಜನ್ಮಂಗಳೊಳಗಾಗಿಯುಮಕ್ಕೆ ಮುಂದೆ ಕೇಳ್ತಿನ್ನದಿರೆಂ (ಸುಕುಮಾ. ೫–೮); ಅನಾಥೆ ಇವಳಿನ್ನೊಬ್ಬಳೀ ಜನ್ಮ ರೋಸಿ, ವೇಧೆಯನು ತಾಳದೆಯೆ ಮುಳುಗಿದಳು ಹೊಳೆಗೆ (ಇಂಗೀತ. ೬೧). [ಸಂ. ಅನಾಥಾ]

**ಅನಾದರ** (ಗು). ೧. ಆದರವಿಲ್ಲದ ; ಉಪೇಕ್ಷಿಸಿದ; ಅಲಕ್ಷ್ಯಮಾಡಿದ: ತಪ್ಪನದೆಂತು ಹೊಱುವೆನನಾದರೋದ್ಧತ ದಂಡಪಾಣಿಯ ದಂಡಹತಿಗಾಱೆ (ಬಸವು. ೩೯–೩೨). (ನಾ). ೨. ಆದರವಿಲ್ಲದವನು : ಪರಮಶ್ರೀಪತಿ ದೇವವಂದ್ಯಂ . . . ಮೋಹಾಧಿರಾಜಂಗನಾದರನಾದಂ (ಶಾಂತಿಪು. ೮–೧೧೬). [ಸಂ.]

**ಅನಾದರಣ,** ಅನಾದರಣೆ (ನಾ).= ಅನಾದರ. **ಅನಾದರಣೆ:** ಊರ್ಮಿಳೆಯ ಲಂಗವು ಅನಾದರಣೆಯಾಗಿ ಮೇಜಿನ ಮೇಲೆ ಕಾಗದದ ಪೊಟ್ಟಣದೊಡನೆ ಪೊಟ್ಟಣವಾಗಿ ಬಿದ್ದಿದ್ದಿತು (ಮೊಗ್ಗು. ೪೩). [ಸಂ. ಅನಾದರಣ]

**ಅನಾದರಣೀಯ** (ಗು). ಆದರಿಸಬಾರದ ; ಆದರಕ್ಕೆ ಪಾತ್ರವಲ್ಲದ: ಕೋವಿದರ ಮತ್ತು ಉದ್ದಾಮ ಮೇಧಾವಿಗಳ "ಇನ್‌ವಿಸಿಬಲ್‌ಕಾಲೇಜು" ಒಂದು ಅನಾದರಣೀಯ ವಿಜ್ಞಾನ ಸಂಘವಾಗಿತ್ತು (ವಿಕಾಸ. ೫). [ಸಂ.]

**ಅನಾದರಣೆ** 'ಅನಾದರಣ' ನೋ.

**ಅನಾದರಣೆಗೈ** (ಕ್ರಿ). ಉದಾಸೀನವಮಾಡು; ಅಲಕ್ಷಿಸು: ಅರಸೀ ಮುರವೆಯೊಳಾನಂದೊರಸಲನಾದರಣೆಗೈದ ನಿನ್ನಯ ಪಕ್ಷ್ಮಾಂತರ ಲಗ್ನಬಾಷ್ಪ ಬಿಂದುವನೊರಸುತಮಿಂದೆನ್ನ ದುಗುಡವಂ ಪರಿಹರಿಪೆಂ (ಶಾಕುಂತ. ೧೧೦–೧೮೮). [ಅನಾದರಣೆ + ಗೈ (< ಗೆಯ್)]

**ಅನಾದರತ್ವ** (ನಾ). ಆದರವಿಲ್ಲದಿರುವಿಕೆ; ಉದಾಸೀನತೆ: ಪರಾರ್ಥಾಪಹಾರಪ್ರಾರಂಭಾನಾದರತ್ವಂ ಪರಯುವತಿರತಾನಾಭಿಲಾಷೋದ್ಯಮಂ... ಇಂತಿವು ಜಿನಗದಿತಾಣುಬ್ರತಂಗಳ್ (ಸುಕುಮಾ. ೬–೯). [ಸಂ.]

**ಅನಾದವಿಧ**(ನಾ). ವೀಣೆಯಂತಹ ಒಂದು ಬಗೆಯ ತಂತೀವಾದ್ಯ: ವಲ್ಲಕಿ, ಅಳಾವಿನಿ, ಅನಾದವಿಧ, ಕಚ್ಛಪವೀಣೆ . . . ಯೆಂಬ ಮೂವತ್ತು ಮೂಱು ತಂತ್ರೀವಾದ್ಯಂಗಳು (ವಿವೇಕ. ೨೩೭). [ಸಂ. ?]

**ಅನಾದಿ** (ಗು). ೧. ಆದಿಯಿಲ್ಲದ; ಮೊದಲಿಲ್ಲದ: ಆಸೆಯಿಲ್ಲದ ಭಕ್ತಚಿತ್ತಾವಾಸವಾಗಿದ್ದವನ ಭಕ್ತರಿಗೋಸರಿಸುವವನಾದಿಗಾದಿಗನಾದಿಯಾದವನು (ಬಸವು. ೫೧–೫೦). ೨. ಮೊದಲನ್ನು ತಿಳಿಯಲಾಗದ; ಪುರಾತನಕಾಲದಿಂದಿರುವ: ಕಾದಲಾಪರೆ ಮಗನೆ ಪರರಿಗೆ ಭೇದಿಸುವ ರೆಳವಲ್ಲ ಕವಚವನಾದಿಯದು ಕೊಳ್ಳೆಂದು ಕೊಟ್ಟನು ಗವಸಣಿಗೆದೆಗೆದು (ಕುವ್ಯಾದ್ರೋ. ೧೦–೪೭). (ನಾ). ೩. ಸ್ವರ್ಗ: "ಸ್ಥಿತಿಯುಂ ಸೃಷ್ಟಿಯನಾದಿ ನಾಕಸುಖಮುಂ ಸ್ವರ್ಗಾಪ್ವಯಂ" (ನಾನಾರ. ೧೫೫). ೪. ತೊಣಸೆಗಿಡ. 'ಅನಾದಿಕಸ' ಪರಾ. [ಸಂ.]

**ಅನಾದಿಕರ್ಮ** (ನಾ). ಎಂದು ಮೊದಲಾಯಿತೆಂದು ಗೊತ್ತಿಲ್ಲದ ಕರ್ಮ; ಪುರಾತನವಾದ ಕರ್ಮ: ಸಕಲ ಪ್ರಾಣಿಗಳಿಗೆ ಅನಾದಿಕರ್ಮದೊಳಗೆ ವಂದೆ ಕರ್ಮ ವೆಚ್ಚವಾಗಿಯಿರಲು ವುಳಿದ ಅನಾದಿಕರ್ಮ ಶೇಷ ಪ್ರಾರಬ್ಧಕರ್ಮ ಯಿರುತದೆ (ಅಧ್ಯಾಮ. ೯೨). [ಅನಾದಿ + ಕರ್ಮ]

**ಅನಾದಿಕವಿ** (ನಾ). ಬಹಳ ಮೊದಲಿನ ಕವಿ: ಅನಾದಿಕವಿ ಪರಮಪುರುಷೋತ್ತಮಂ, ಸರ್ವೇಶ್ವರಂ (ಶ್ರೀರಾಮಾ. ३–೫೭).
[ಅನಾದಿ + ಕವಿ]

**ಅನಾದಿಕಸ** (ನಾ). ಒಂದು ಗಿಡದ ತೊಪ್ಪಲು, —ಸೊಪ್ಪು: "ತೊಣಸೆ ತೊಪ್ಪಲು" (೬). [ಅನಾದಿ + ಕಸ]

**ಅನಾದಿಕಾಲ** (ನಾ). ಆದಿ ಯಾವುದೆಂದು ಗೊತ್ತಿಲ್ಲದ ಕಾಲ; ಬಹುಪುರಾತನ ಕಾಲ: ಮದುವೆ ಅನಾದಿಕಾಲದಿಂದಲೂ ನಡೆದು ಬಂದಿರುವ ಪದ್ಧತಿ (ರೂಢಿ). [ಅನಾದಿ + ಕಾಲ]

**ಅನಾದಿಗಾನ** (ನಾ). ಆದಿಯಿಲ್ಲದ ಗಾನ; ಮೊದಲಿಲ್ಲದ ಗಾನ: ಅನಾದಿಗಾನವು ನಾನು – ಹೇ ಅನಂತಗಾಯಕನೇ – ನಿನ್ನ (ಅಗ್ನಿಹಂ. ३೦–೧). [ಅನಾದಿ + ಗಾನ]

**ಅನಾದಿನಿಧನ** (ಗು) ಮೊದಲು ಕೊನೆಗಳಿಲ್ಲದ; ಹುಟ್ಟು ಸಾವುಗಳಿಲ್ಲದ; ಶಾಶ್ವತವಾದ: ಅಕೃತ್ರಿಮಮುಮನಾದಿನಿಧನಮುಮುತ್ಪಾದ ವ್ಯಯ ಧ್ರೌವ್ಯನಿರ್ವರ್ತ್ಯಮುಂ (ತತ್ತ್ವಪ್ರ. ೧೧೭). [ಅನಾದಿ + ನಿಧನ]

**ಅನಾದಿಪರ್ಯವಸಾನ** (ನಾ). [ಜೈನ] ಮೊದಲಿಲ್ಲದುದು; ಆದರೆ ಕಡೆಯುಳ್ಳದ್ದು; ಮಿಥ್ಯಾತ್ವ ಕಾಲದ ಒಂದು ವಿಭಾಗ (?): ಕಾಲಂ ನಿರೂಪಿಸಪಡುಗುಂ ಅದು . . . ಏಕಜೀವಾಪೇಕ್ಷೆಯಿಂ ಅನಾದ್ಯಪರ್ಯವಸಾನಮುಂ ಅನಾದಿಪರ್ಯವಸಾನಮುಂ ಸಾದಿಪರ್ಯವಸಾನ ಮುಮೆಂದು ಭಂಗತ್ರಯಮುಕ್ಕುಂ (ತತ್ತ್ವಪ್ರ. ३೧). 'ಅನಾದಿಸಾಂತ' ಪರಾ. [ಅನಾದಿ + ಪರ್ಯವಸಾನ]

**ಅನಾದಿಪುರುಷ** (ನಾ). ಆದಿಯಿಲ್ಲದ ಪುರುಷ; ಪುರಾತನ ಪುರುಷ; ಭಗವಂತ: ಕಮಲೋದರನು ಕೈಕೊಂಡನಗ್ಗದನಾದಿಪುರುಷಶ್ರೀನಿಜವ ವಿಶ್ವಾತ್ಮಕಾಕೃತಿಯ (ಕುವ್ಯಾಭೀ. ३–೬೪). [ಅನಾದಿ + ಪುರುಷ]

**ಅನಾದಿಪ್ರಭವ** (ನಾ). ಅನಾದಿಕಾಲದಲ್ಲಿ ಉಂಟಾದದ್ದು: ಇದನಾದಿ ಪ್ರಭವಂ ಭವಭ್ರಮಣ ದುಃಖೋಗ್ರಾಗ್ನಿಯೊಳ್ ಮಗ್ಗಿದಪ್ಪುದು ಜೀವಂಗಳನೆಂಬಿನಂ (ಆದಿಪು. ೧೫–೧೯). [ಅನಾದಿ + ಪ್ರಭವ]

**ಅನಾದಿಬಂಜರು** (ನಾ). ಬಹಳ ಹಿಂದಿನ ಕಾಲದಿಂದಲೂ ಬೀಳು ಬಿದ್ದ ಭೂಮಿ (ದಕ. ೬). [ಅನಾದಿ + ಬಂಜರು]

**ಅನಾದಿಬೋಧ** (ನಾ). ಆದಿಯಿಲ್ಲದ ಜ್ಞಾನವುಳ್ಳವನು: ಅಂತಪ್ಪ ಸರ್ವಜ್ಞತಾ ತೃಪ್ತಿ ಎನುತಂತನಾದಿಬೋಧಾಯೆಂದಾ ಸ್ವತಂತ್ರನಿತ್ಯನು ಲುಪ್ತಶಕ್ತಿಯನು (ವೀಶೈಪು. ೫–೮–೧೮). [ಅನಾದಿ + ಬೋಧ]

**ಅನಾದಿಮಿಥುನ** (ನಾ). ಆದಿಯಿಲ್ಲದ ಜೋಡಿ; ಅತಿ ಪುರಾತನ ಕಾಲದಿಂದಲೂ ಇರುವ ದಂಪತಿಗಳು: ಒಲವಿಗೆ ನಲಿಯುವ ಅನಾದಿ ಮಿಥುನ ಒಂದನೆ ನೂರೊಂದೆನಿಸುವ ರತುನ (ಸೂರ್ಯಪಾ. ३೨–೭).
[ಅನಾದಿ + ಮಿಥುನ]

**ಅನಾದಿಮಿಥ್ಯಾತ್ವ** (ನಾ). [ಜೈನ] ಅನಾದಿಕಾಲದಿಂದ ಬಂದಿರುವ ತಪ್ಪುನಂಬಿಕೆ: ಕದಡಿದ ನೀರ್ ಕತಕದಿನಲ್ಲದೆ ತಿಳಿಗುಮೆ ಪುದಿದನಾದಿ ಮಿಥ್ಯಾತ್ವದೆ ಮುಚ್ಚಿದ ಮತಿಯದು ನಿನ್ನಿಂದಲ್ಲದೆ ಪಜ್ಜಳಿಸುಗುಮೆ (ಚಂದ್ರಪು. ೭–೮). [ಅನಾದಿ + ಮಿಥ್ಯಾತ್ವ]

**ಅನಾದಿಮುಕ್ತ** (ನಾ). ಮೊದಲಿನಿಂದಲೂ ಮುಕ್ತನಾದವನು; ಈಶ್ವರ: ಇವರು ಆದಿಮುಕ್ತರು, ಪರಮಶಿವನು ಅನಾದಿಮುಕ್ತನು (ಹಿಂದಸಾ. ३೦೧). [ಅನಾದಿ + ಮುಕ್ತ]

**ಅನಾದಿಮೂರುತಿ** (ನಾ). = ಅನಾದಿಪುರುಷ: ಅನಾದಿಮೂರುತಿ ಸಲಹೊ ಗದುಗಿನ ವೀರನಾರಯಣ (ಕುವ್ಯಾಅ. ೧–೨३).
[ಅನಾದಿ + ಮೂರುತಿ]

**ಅನಾದಿವಾರ್ತೆ** (ನಾ). ಬಹಳ ಹಿಂದಿನಿಂದಲೂ ಬಂದ ಸಮಾಚಾರ; ಸಾಂಪ್ರದಾಯಿಕವಾಗಿ ಬಂದ ವೃತ್ತಾಂತ [ಅನಾದಿ + ವಾರ್ತೆ]

**ಅನಾದಿಶೈವ** (ನಾ). ೧. ಏಳು ಬಗೆಯ ಶೈವಗಳಲ್ಲಿ ಒಂದು. ೨. ಶಿವ: ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರ ಶೈವ, ಪ್ರವರಶೈವ, ಅಂತರಶೈವವೆಂಬವೇ ಸಪ್ತಶೈವಂಗಳವುಗಳಲ್ಲಿ ಶಿವನೇ ಅನಾದಿಶೈವನು (ವಿವೇಕ. ೭೨). [ಅನಾದಿ + ಶೈವ]

**ಅನಾದಿಷ್ಟ** (ಗು). ಆದೇಶವಾಗಿ ಬಾರದ; ಸಹಜವಾದ: ಸ್ವರದಿಂ ಯಲದಿನನಾದಿಷ್ಟರೇಫದಿಂ ಪರದೊಳಮದುರ್ತೋಱೆ ಪವರ್ಗಂ ದೊರೆಕೊಳ್ಗುಂ ವಾದೇಶಂ (ಕಾವ್ಯಾವ. ೬३). 'ಆದಿಷ್ಟ' ಪರಾ. [ಸಂ.]

**ಅನಾದಿಷ್ಟರೇಫ** (ನಾ). [ವ್ಯಾಕ] ಶಕಟರೇಫ (= ಐ) ಕ್ಕೆ ಆದೇಶವಾಗಿ ಬರುವ 'ರ' ಕಾರವಲ್ಲದ ಸಹಜವಾದ ರೇಫ (= ರ್): ಅನಾದಿಷ್ಟರೇಫಕ್ಕೆ ‖ ಬೇರ್ವೆರಸು ಕಿಱು ಪಲವುಂ ನೀರ್ವೂಗಳನೊಟ್ಟಿಕೊಂಡು ಬರ್ಪ ಗಜೇಂದ್ರಂ ಸೋರ್ವ ಮದಧಾರೆ ಕಟದೊಳ್ ನೇರ್ವಟ್ಟರೆ ಸುರಕರೀಂದ್ರಮೆನಿಸಿದುದಾಗಳ್ (ಕಾವ್ಯಾವ. ೭೧). ☞ ಇಲ್ಲಿಯ ಬೇರ್, ನೀರ್, ಬರ್, ಸೋರ್, ನೇರ್ ಎಂಬ ಶಬ್ದಗಳಲ್ಲಿನ 'ರ' ಕಾರ ಅನಾದಿಷ್ಟರೇಫ. 'ಆದಿಷ್ಟರೇಫ' ಪರಾ.
[ಅನಾದಿಷ್ಟ + ರೇಫ]

**ಅನಾದಿಸಂಸಿದ್ಧ** (ಗು). ಬಹಳ ಹಿಂದಿನಿಂದ ಪ್ರಸಿದ್ಧಿ ಪಡೆದ: ಅನಾದಿ ಸಂಸಿದ್ಧಗ್ಗರುದ್ಧ ಪ್ರತಿಷ್ಠಿತರಮೋಘವರ್ಷಪ್ರತಿಪಾಳಕದ್ವಿಜಕುಳತಿಳಕರ್ (ಸೌಇಇ. XX, ೫೭–೮; 1084). [ಅನಾದಿ + ಸಂಸಿದ್ಧ]

**ಅನಾದಿಸಾಂತ** (ನಾ). = ಅನಾದಿಪರ್ಯವಸಾನ: ಯಾವುದು ಅನಾದಿ ಮಿಥ್ಯಾದೃಷ್ಟಿ ಭವ್ಯಜೀವವಿದೆಯೋ ಅದರ ಮಿಥ್ಯಾತ್ವಕಾಲವು ಅನಾದಿ ಸಾಂತ ಇದೆ. ಎಂದರೆ ಅನಾದಿಕಾಲದಿಂದಲೂ ಆ ಜೀವಕ್ಕೆ ಇನ್ನೂವರೆಗೆ ಸಮ್ಯಕ್ತ್ವದ ಪ್ರಾಪ್ತಿಯಾಗಿಲ್ಲ (ಜೈನಪ. ३೧೪). [ಅನಾದಿ + ಸಾಂತ]

**ಅನಾದಿಸಿದ್ಧ** (ಗು). ೧. ಅನಾದಿ ಕಾಲದಿಂದಲೂ ಸಿದ್ಧವಾದ. (ನಾ). ೨. ದೈವ; ಭಗವಂತ: ಅನಾದಿಸಿದ್ಧನ ಬರವ ಕಂಡನು ಬಾಗಿಲಲಿ ವಿದುರ (ಕುವ್ಯಾಉ. ೮-೯). [ಅನಾದಿ + ಸಿದ್ಧ]

**ಅನಾದೃತ** (ಗು). ಆದರಿಸಲ್ಪಡದ; ಕಡೆಗಣಿಸಿದ; ಉಪೇಕ್ಷೆಗೆ ಗುರಿಯಾದ. [ಸಂ.]

**ಅನಾದೇಯ** (ಗು). ೧. ತೆಗೆದುಕೊಳ್ಳಬಾರದ; ಸ್ವೀಕಾರಕ್ಕೆ ಯೋಗ್ಯವಲ್ಲದ; ಒಪ್ಪಲಾಗದ: ದೇವತೆಯ ನುಡಿದ ನುಡಿ ಸಾರಮಸಾರಂ ಉಪಾದೇಯಮನಾದೇಯಮೆಂಬಿನಿತಂ ನಿಮಗಱಿಯಲಕ್ಕುಮೆ (ಶಾಂತಿಪು. ೪-೧೦೨ ವ). (ನಾ). ೨. [ಜೈನ] ನಾಮುಕರ್ಮಗಳಲ್ಲಿ ಒಂದು ಬಗೆ. ☞ ಈ ಕರ್ಮದ ಸಂಬಂಧವುಂಟಾದರೆ ಜೀವನಿಗೆ ಕಾಂತಿರಹಿತವಾದ ದೇಹವುಂಟಾಗುವುದು: ಸ್ಥಿರಾಸ್ಥಿರ ಸುಭಗ ದುರ್ಭಗ ಸುಸ್ವರ ದುಸ್ವರಾದೇಯಾನಾದೇಯ ಯಶಸ್ಕೀರ್ತ್ಯಯಶಸ್ಕೀರ್ತಿ . . . ಪ್ರಕೃತಿಗಳಂ ದೂರೀಕೃತಂ ಮಾಡಿ (ಪಂಠಾಮಾ. ೧೬-೮೦ ವ). [ಸಂ.]

**ಅನಾದೇಶ** (ನಾ). [ವ್ಯಾಕ] ಬೇರೊಂದು ವರ್ಣಕ್ಕೆ ಆದೇಶವಾಗದೆ ಸಹಜವಾಗಿರುವ ವರ್ಣ: ವಿದಿತಸ್ವರದಿನನಾದೇಶದ ಸಹಜ ವ್ಯಂಜನಂಗಳಿಂ ಪರದ ಪವರ್ಗದ ನೆಲೆಗಕ್ಕುಂ ವತ್ವಂ ಪದವಿಧಿಯೊಳ್ ಬಹುಳ ವೃತ್ತಿಯಿಂ ವಾಕ್ಯದೊಳಂ (ಶಮದ. ೬೭). [ಸಂ.]

**ಅನಾದ್ಯ** (ಗು). ಆದ್ಯವಲ್ಲದ: ಅಪ್ರಚಿಂತ್ಯಮನಾದ್ಯಮಕ್ಷರಮಪ್ರಪಂಚವಸಾಧ್ಯಮಚಳಿತಮಪ್ರನಾಶಮನಂತಮೆನಲೊಪ್ಪುವುದು ಶಿವತತ್ವ (ಬಸವು. ೩೯-೯) [ಸಂ.]

**ಅನಾದ್ಯನಂತ** (ಗು). ಆದಿ ಅಂತ್ಯವಿಲ್ಲದ; ಮೊದಲು ಕೊನೆಯಿಲ್ಲದ: ಪದ್ಮಾಸೀನನಾದ ಬುದ್ಧನನ್ನು ಕುರಿತು ಹಾಡಿದ ಕವನದಲ್ಲಿ ಜೀವನದ ಅನಾದ್ಯನಂತವಾದ ಸತ್ಯಸಂಕಲ್ಪಗಳ ಚಿರಂತನತೆಯನ್ನು ಬಿಂಬಿಸುತ್ತಿರುವ . . . ರಮಣೀಯವಾದ ದರ್ಶನವು ಚಿತ್ರಿತವಾಗಿರುವುದು (ಪ್ರಬಂಧ. ೮೦). [ಅನಾದಿ + ಅನಂತ]

**ಅನಾದ್ಯನಿಧನ** (ನಾ). ಹುಟ್ಟುಸಾವಿಲ್ಲದುದು; ಮೊದಲಾಗಲಿ ಕೊನೆಯಾಗಲಿ ಇಲ್ಲದುದು: ತತ್ರತ್ಯಯಾಭಿಧಾನಂಗಳುಳ್ಳೊಡೆ ಅವೆಂತೊಳವಂತೆ ವಸ್ತುಗಳೆಲ್ಲಮೊಳವಪ್ಪುದಱಿನನಾದ್ಯನಿಧನ ಸ್ವಭಾವನುಂ. . . ಅಪ್ಪ (ಆದಿಪು. ೨-೧೦ ವ). [ಅನಾದಿ + ಅನಿಧನ]

**ಅನಾದ್ಯಪರ್ಯವಸಾನ** (ಗು). ೧. ಮೊದಲೂ ಕೊನೆಯೂ ಇಲ್ಲದ. (ನಾ). ೨. [ಜೈನ] ಮಿಥ್ಯಾತ್ವ ಕಾಲದ ಒಂದು ವಿಭಾಗ: ☞ ಯಾವುದಾದರೂ ಜೀವನಿಗೆ ಅನಾದಿಕಾಲದಿಂದಲೂ ಸಮ್ಯಕ್ತ್ವ ಪ್ರಾಪ್ತಿಯಿಲ್ಲದೆ ಉಂಟಾಗಿರುವ ಮಿಥ್ಯಾತ್ವವು ಕೊನೆಗಾಣದಂತಿರುವ ಪಕ್ಷಕ್ಕೆ ಆಕಾಲ ಅನಾದ್ಯಪರ್ಯವಸಾನ: ಏಕಜೀವಾಪೇಕ್ಷೆಯಿಂ ಅನಾದ್ಯಪರ್ಯವಸಾನಮುಂ ಅನಾದಿಪರ್ಯವಸಾನಮುಂ ಸಾದಿಪರ್ಯವಸಾನಮುಮೆಂದು ಭಂಗತ್ರಯಮಕ್ಕುಂ (ತತ್ತ್ವಪ್ರ. ೩೧). [ಅನಾದಿ + ಅಪರ್ಯವಸಾನ]

**ಅನಾಧಾರ** (ಗು). ೧. ಆಧಾರವಿಲ್ಲದ; ಆಸರೆಯಿಲ್ಲದ. (ನಾ). ೨. ನಿಸ್ಸಹಾಯ. ೩. ಆಧಾರವಿಲ್ಲದ ವಸ್ತು; ಬ್ರಹ್ಮ. [ಸಂ.]

**ಅನಾಧಾರತೆ** (ನಾ). ಆಧಾರವಿಲ್ಲದಿರುವಿಕೆ; ಆಶ್ರಯ ತಪ್ಪಿದ ಸ್ಥಿತಿ: ಮೇರುವನೊತ್ತಿ ಕಿಱಿತ್ತೊಡೆ ಪಯೋಮಯವಾಯ್ತೊ ನಭಂ ನೆಲಕ್ಕನಾಧಾರತೆಯಿಂದೆ ಬಿಟ್ಟುದೊ (ಚಂದ್ರಪು. ೫-೩೮). [ಸಂ.]

**ಅನಾಧೇಯ** (ಗು). ೧. ಯಾವ ಆಧಾರದಲ್ಲಿಯೂ ಇರಿಸಲಾಗದ. (ನಾ). ೨. ಆಧಾರವನ್ನು ಅಪೇಕ್ಷಿಸದವನು: ಧರೆಯಂ ಸದ್ಧರ್ಮಾಶ್ರಯಧರೆಯನನಾಧೇಯನಱಿಯದಾಕಲ್ಪಂ ನೀಂ ಧರಿಯಿಸೆ ತಪಮದೆ (ಚಂದ್ರಪು. ೯-೪೧). [ಸಂ.]

**ಅನಾನಂದ** (ನಾ). ೧. ಆನಂದವಲ್ಲದುದು. ೨. ಆನಂದವಿಲ್ಲದ ಸ್ಥಿತಿ; ದುಃಖ: ಅಸತ್ತು, ಅಚಿತ್ತು, ಅನಾನಂದಾದಿಗಳಿಲ್ಲದಂದು ಸಚ್ಚಿದಾನಂದ ಪರಬ್ರಹ್ಮ ನೀನೇ ಆಗಿ, ಎಲ್ಲಾ ತತ್ವಂಗಳಿಗೆ ನೀನಾಶ್ರಯವಾಗಿ . . . ನಿನಗೊಂದಾದಿ ಇಲ್ಲದೆ ನಿರಾದಿಯಾದ ಕಾರಣ ನಿಷ್ಕಲ ಶಿವತತ್ವವೆಂದಱಿದೆನು ನೋಡಾ (ಸಿದ್ಧೇವ. ೩೧). [ಸಂ.]

**ಅನಾನಸ** 'ಅನಾನಸು' ನೋ.

**ಅನಾನಸು**, ಅನನಸ, ಅನನಾಸು, ಅನಾನಸ, ಅನಾನಾಸು (ನಾ). ಒಂದು ಬಗೆಯ ಹಣ್ಣಿನ ಗಿಡ; ಪೈನಾಪಲ್ ಗಿಡ; ಪರಂಗಿ ಗಿಡ (ಕರಾ): ಅನಾನಸು ಮಲೆನಾಡಿನಲ್ಲಿ ವಿಶೇಷವಾಗಿ ಬೆಳೆಯುತ್ತದೆ (ರೂಢಿ). **ಅನನಸ**: ಯಕ್ಷಿಣಿಯು ತನ್ನ ಕೋಲು ತಿರುವಿದಾಕ್ಷಣವೇ . . . ತೋಟದೊಳಗಿರುವ ದವನ, ಮರುಗ, ಪಚ್ಚೆಗಳೆಲ್ಲ ಬದನೀ ಗಿಡಗಳಾದುವು. ಅನನಸಗಳು ಆಲೂಗಡ್ಡೆಗಳಾದುವು (ಮುಂಬಯಿ. ೫-೨೬೪). **ಅನನಾಸು**: ಅನನಾಸು ಮೊದಲಾದುವುಗಳನ್ನು ಡಬ್ಬಿಯಲ್ಲಿ ತುಂಬಿ ಹೊರಗಿನ ದೇಶಗಳಿಗೆ ಕಳುಹಿಸುವರು (ಬಾಲಪ್ರ. ೧-೨೦೪). **ಅನಾನಸ**: ಸಿಲೋನಿನಲ್ಲಿ ಉತ್ಕೃಷ್ಟ ಅನಾನಸನ್ನು ಬೆಳೆಯುತ್ತಾರೆ (ಸಸ್ಯಶಾ. ೧೩೨). **ಅನಾನಾಸು**: ಅನಾನಾಸು ಹಣ್ಣು (ವೈಔಗಿ. ೬-೧೦೪).
[ಅನ್ಯದೇ. ← **ಮರಾ.** ಅನನಸ್, ಅನನಾಸ್; **ಹಿಂ.** ಅನನಾಸ್; **ಗುಜ.** ಅನೆನಾಸ್; **ಒರಿ.** ಆನಾರಸ್; **ಸಿಂಧಿ.** ಅನಾನಾಸು. / **ತಮಿ.** ಅನ್ನಾಸಿ, ಅನ್ನಾಹಿ, ಅನ್ನಾಸಿಯಾ; **ಮಲ.** ಅನನಾಸ್; **ತೆಲು.** ಅನಾನಸು, ಅನಾಸು; < **ಪೋರ್ಚು.** ಅನಾನಾಸ್]

**ಅನಾನಾಸು** 'ಅನಾನಸು' ನೋ.

**ಅನಾನುಕೂಲ್ಯ** (ನಾ). ಅನುಕೂಲವಿಲ್ಲದಿರುವುದು. [ಸಂ.]

**ಅನಾಪತ್ತಿ** (ನಾ). ಆಪತ್ತು ಇಲ್ಲದಿರುವಿಕೆ: "ಅಗ್ನಿಹೀನನ ಅನ್ನವನ್ನು ಊಟ ಮಾಡಬಾರದು. ಮಾಡುವುದು ಧರ್ಮವಲ್ಲ" ಎಂಬುದು ಅನಾಪತ್ತಿಯ ವಿಷಯವು (ಆರ್ಯಧ. ೧೩). [ಸಂ.]

**ಅನಾಪ್ತ** (ಗು). ೧. ಹೊಂದದಿರುವ; ಇನ್ನೂ ಪಡೆಯದ; ಕೈಗೆ ಸಿಕ್ಕಿಲ್ಲದ. (ನಾ). ೨. ಆಪ್ತನಲ್ಲದವನು; ನಂಟನಲ್ಲದವನು: ಆಪ್ತನ ಮಾರ್ಗದೆ ನಡೆಯರನಾಪ್ತಾರಾಧಕ ಸಮಾಜಮಾರ್ಹತರಂತಲ್ಲಾಪ್ತನ ಪೇೞ್ದೊಂದೋಜೆಯೊಳಾಪ್ತಂ ನೆಗೞ್ವಂತೆ ನೆಗೞ್ವರೊಲ್ದಂತೆಸಗರ್ (ಸಮಪ. ೧೪-೭೪). ೩. ಅಯೋಗ್ಯ; ಜಾಣತನವಿಲ್ಲದವನು; ಹೊಂದಾವಣೆಯಿಲ್ಲದವನು. ೪. ಅಪರಿಚಿತ. [ಸಂ.]

**ಅನಾಪ್ತಾಗಮ** (ನಾ). ಆಪ್ತರಲ್ಲದವರಿಂದ ರಚಿತವಾದ ಶಾಸ್ತ್ರ: ಅಪ್ತಾಗಮಧರ್ಮಮುಮನನಾಪ್ತಾಗಮಮಾ ಕುಧರ್ಮಮೆಂಬೆರಡುಮನೊಲ್ದಾಪ್ತೋದಿತಮೆನಿಪ ಸುಖಾವಾಪ್ತಿಯನೊಲ್ವರ್ಗೆ ತಿಳಿಯೆ ಪೇೞ್ವೆಂ ಕ್ರಮದಿಂ (ಸಮಪ. ೧-೬೨). [ಅನಾಪ್ತ + ಆಗಮ]

**ಅನಾಭಿಲಾಷೆ** (ನಾ). ಅಭಿಲಾಷೆಯಿಲ್ಲದಿರುವುದು; ಅಪೇಕ್ಷಿಸದಿರುವುದು: ಅರಯ್ಯಲ್ ಜೀವಹಿಂಸಾವಿರತಿ ವಿತಥವಾಕ್ಯಂ ಪರಾರ್ಥಾಪಹಾರ ಪ್ರಾರಂಭಾನಾದರತ್ವಂ ಪರಯುವತಿರತಾನಾಭಿಲಾಷೋದ್ಯಮಂ ಬಹ್ವಾರಂಭಾಕಾಂಕ್ಷೆಯೆಂದಿಂತಿವು ಜಿನಗದಿತಾಣುಬ್ರತಂಗಳ್ (ಸುಕುಮಾ. ೬-೯). [ಸಂ. ಅನಾಭಿಲಾಷಾ]

**ಅನಾಮಕ** (ಗು). ೧. ಹೆಸರಿಲ್ಲದ; ಪ್ರಸಿದ್ಧಿ ಪಡೆಯದ. (ನಾ). ೨. ಕಿರುಬೆರಳ ಪಕ್ಕದ ಕೈಬೆರಳು; ಪವಿತ್ರದ ಬೆರಳು. ೩. ಮೊಳೆರೋಗ; ಮೂಲವ್ಯಾಧಿ. [ಸಂ.]

**ಅನಾಮತ** 'ಅನಾಮತ್ತು₂' ನೋ.

**ಅನಾಮತು₁** 'ಅನಾಮತ್ತು₁' ನೋ.

**ಅನಾಮತು₂** ಅನಾಮತ್ತು₂ ನೋ.

**ಅನಾಮತ್ತು$_1$**, ಅನಾಮತು$_1$ (ನಾ). = ಅಮಾನತ್ತು : ಮೊದಲು ಅನಾಮತ್ತಾಗಿ ದೊರೆಗಳ ವಶದಲ್ಲಿ ಇಟ್ಟು ಇದ್ದಂಥಾ ಜಂಗೀ ಸಾಮಾನು ಫಿರಂಗಿ ಮುಂತಾದ್ದನ್ನು ಪುನಃ ಅವರಿಗೆ ಕೊಟ್ಟಲ್ಲಿ (ರಾಜೇಂದ್ರ. ೭೪). **ಅನಾಮತು$_1$** : ದುರ್ದೈವದಿಂದ ನಾನು ಸತ್ತೆನೆಂದು ತಿಳಿ. ಆ ಹಣವು ಅನಾಮತ ಖಾತೆಗೆ ಜಮೆಯಾಗಿ ಹೋಗಬಾರದು (ಜಯಂತಿ. ೩೯೯).

**ಅನಾಮತು ಇಡು** = ಠೇವಣಿ ಇಡು.

[← **ಮರಾ.** ಅನಾಮತ್=ಠೇವಣಿ ; **ಅರ.** ಅಮಾನತ್, ಅನಾಮತ್]

**ಅನಾಮತ್ತು$_2$**, ಅನಾಮತ, ಅನಾಮತ್ತು$_2$ (ಅ). **೧.** ಸಂಪೂರ್ಣವಾಗಿ; ಪೂರ್ತಿಯಾಗಿ; ಎಲ್ಲಾ : ಅವರನ್ನು ಕಾಳೀದೇವಿಯು ಅನಾಮತ್ತಾಗಿ ನುಂಗಿಬಿಡುವಳು (ಝಾರಾಣಿ. ೧೪೦); ನನ್ನ ಹತ್ರ ಐದು ಹಣವಿದೆ. ನಿನ್ನ ಹತ್ರ ಅನಾಮತ್ತು ಸರಾಫ ಚೀಲವೇ ಇದೆ (ಕಥಾಮಂ. IV, ೧೮); ದೋಣಿಯೂ ಅದರಲ್ಲಿದ್ದ ಪ್ರಯಾಣಿಕನೂ ಅನಾಮತ್ತು ನಾಶವಾಗಿದ್ದರು (ಸ್ವಾಮಿಸ್ನೇ. ೪೦). **೨.** ಇದ್ದಕ್ಕಿದ್ದಂತೆ; ಒಮ್ಮಿಂದೊಮ್ಮೆಗೆ: ಅನಾಮತ್ತಾಗಿ ಗುಮಾನಿಸಬಾರದಾಗಿತ್ತು (ಚೆಂಗೂಲಿ. ೫೦). **೩.** = ಅಮಾನತು (ಕ). **ಅನಾಮತ** : **೧.** ಒಬ್ಬನು ಸೆಟ್ಟರನ್ನು ಅನಾಮತ ಎತ್ತಿ ಕುಣಿದು ಕೆಳಗಿರಿಸುತ್ತಾನೆ (ಜನನಾ. ೯೩). **ಅನಾಮತು$_2$**: **೧.** (ಕ). **೪.** ಅಧಿಕಾರದಿಂದ ಬರ್ತರ್ಫ (ಕ).

**ಅನಾಮತು ಕೊಡು** = ಪೂರ್ಣವಾಗಿ ಕೊಡು ; ಇಡಿಯಾಗಿ ಕೊಟ್ಟುಬಿಡು. **ಅನಾಮತ್ತು ಎತ್ತಿಕೊಂಡು ಹೋಗು** = ಎಲ್ಲವನ್ನೂ ತೆಗೆದುಕೊಂಡು ಹೋಗು. **ಅನಾಮತು ಹೋಯಿತು** = ಎಲ್ಲವೂ ಪೂರ್ಣವಾಗಿ ಹೋಯಿತು.

**ಅನಾಮಧೇಯ** (ನಾ). ಹೆಸರಿಲ್ಲದವನು ; ಅಪ್ರಸಿದ್ಧ ; ಅಲ್ಪ : ಮಾಸ್ತರನೆಂದರೆ ಕಂಡವರ ಮನೆಗೆ ಎಡತಾಕುವ ಅನಾಮಧೇಯನೆಂದು ನಿಮ್ಮ ಕಲ್ಪನೆಯೇ ? (ರಂಗರೋ. ೭೮); ಚರಿತ್ರೆಯಲ್ಲಿ ಅನಾಮಧೇಯನೂ ಬಲಹೀನನೂ ಆದವನನ್ನು ಮಹಾಪ್ರಭಾವಶಾಲಿಯೆಂದು ಕಥೆಗಳಲ್ಲಿ ತೆಗೆದುಕೊಳ್ಳುವುದಾಗಲೀ ಅದರ ಮೇಲೆಯೇ ಕಥೆಯನ್ನು ಕಟ್ಟುವುದಾಗಲೀ ಅಷ್ಟು ಉಚಿತವಲ್ಲ (ಶ್ರೀರಾಯ. ೨ ಮು).

**ಅನಾಮಧೇಯ ಪತ್ರ** = ಹೆಸರು ಕೊಡದೆ ಬರೆದ ಪತ್ರ ; ಮೂಗರ್ಜಿ : ಸರಕಾರದವರು ಅನಾಮಧೇಯ ಪತ್ರಗಳಿಗೆ ಬೆಲೆಕೊಡಬಾರದೆಂದು ತೀರ್ಮಾನಿಸಿದ್ದಾರೆ (ರೂಢಿ). [ಸಂ.]

**ಅನಾಮಯ** (ಗು). **೧.** ರೋಗವಿಲ್ಲದ ; ನೀರೋಗವಾದ. (ನಾ). **೨.** ಕ್ಷೇಮ ; ಆರೋಗ್ಯ : ಒಳಗೂ ಹೊರಗೂ ಕುಶಲವನ್ನೂ ಅನಾಮಯವನ್ನೂ ಕೇಳಿ (ಭಾಸನಾ. ೪೧–೧೭). [ಸಂ.]

**ಅನಾಮಯ ಶರೀರ** (ನಾ). **೧.** ರೋಗವಿಲ್ಲದ ಶರೀರ. **೨.** ರೋಗರಹಿತವಾದ ಶರೀರವುಳ್ಳವನು: ಪರಿಣತವಯಸ್ಕನುಂ ವಪುಷ್ಕಾಂತನುಂ ಅನಾಮಯಶರೀರನುಂ . . . ಪವಿತ್ರಚಾರಿತ್ರನುಮೆಂಬ ಅಷ್ಟವಿಧೋತ್ಕೃಷ್ಟ ಗುಣಂಗಳಿಂ ನೆಱೆದನಾಚಾರ್ಯನಕ್ಕುಂ (ಅಜಿಪು. ೧೧–೨ ವ).

[ಅನಾಮಯ + ಶರೀರ]

**ಅನಾಮಿಕ** (ಗು). **೧.** ಹೆಸರಿಲ್ಲದ ; ಅಪ್ರಸಿದ್ಧವಾದ : ಕೂಡಲಸಂಗಮದೇವಾ ನಿಮ್ಮ ನಾಮವಿಡಿದ ಅನಾಮಿಕ ನಾನು (ಬಸವ. ೯೩೩). **೨.** ಹೆಸರನ್ನು ಪ್ರಸಿದ್ಧಪಡಿಸದ ; ಹೆಸರು ಕೊಡದ : ಹೆಸರಿಗೆ ಬಿಪಿನುಚಂದ್ರಪಾಲರು ಸಂಪಾದಕರಾದರೂ, ಅನಾಮಿಕ ಸಂಪಾದಕರು ಅರವಿಂದ ಘೋಷ್ (ವಿಚಾಮಂ. ೯೩). (ನಾ). **೩.** ಚಂಡಾಲ ; ಹೊಲೆಯ : ಹೋಮದ ನೆವದಲ್ಲಿ ಹೋತನ ತಿಂಬ ಅನಾಮಿಕರೊಡನಾಡಿ ಗೆಲುವುದೇನು (ಬಸವ. ೫೭೮) ; ಕಡೆಗನಾಮಿಕನ ಕಿಂಕರನಾಗಿ ಸುಡುಗಾಡ ಕಾವಂತೆ ಮಾಳ್ಪೆನೆಂದು (ಹಚಕಾ. ೧೧–೧೬). [**ಸಂ.** ಅನಾಮಿಕಾ ?]

**ಅನಾಮಿಕೆ** (ನಾ). **೧.** ಕಿರುಬೆರಳ ಪಕ್ಕದ ಕೈಬೆರಳು ; ಉಂಗುರದ ಬೆರಳು ; ಪವಿತ್ರದ ಬೆರಳು : ಕನಿಷ್ಠಿಕೆ ಸಮಂತು ಮುಟ್ಟದಿರೆ ಪೃಥ್ವಿಯಂ ಱಂಡೆ ಮತ್ತನಾಮಿಕೆಯದುದ್ದಮಾಗೆ ಮಱುವಾಟಿತ್ತಿ (ಲೋಕೋಪ. ೧೧–೫೧); "ಅನಾಮಿಕೆ– ಕಿಱುಕುಣಿಕೆಯ ಒತ್ತಿನ ಬೆರಲ್" (ಲೋಕೋಪ. ಟೀಕೆ). **೨.** ಹೊಲತಿ : ಅವಗುಣಂಗಳ ಸಂಗದಿಂ ಕುಲಂ ಹಸಗೆಟ್ಟನಾಮಿಕೆಯರಾದರಲ್ಲದೆ ಸಂಗವಾರಕುಲಮಂ ಕೆಡಿಸದು (ಹಚಕಾ. ೭–೩). [**ಸಂ.** ಅನಾಮಿಕಾ ?]

**ಅನಾಯ** (ನಾ). ಒಂದು ತೆರಿಗೆ (?) : ಯೀ ಧರ್ಮಸ್ಥಳದಲ್ಲಿ ಬಳ್ಳಾಳರಿಗೆ ಅನಾಯ ಸನಾಯ ಸಲ್ಲದು ಇಲ್ಲ ಆ ಸ್ಥಳ(ಗ)ದಲು ಇದ್ದ ವೊಕ್ಕಲಿಗೆ ಬಿಟ್ಟಿ ಬಿಡಾರ ಸಲ್ಲದು (ಎಇ.XX, ೯–೫೩; 1556). [< **ಸಂ.** ಅನ್ಯಾಯ ?]

**ಅನಾಯಕ** (ಗು). ನಾಯಕನಿಲ್ಲದ ; ಒಡೆಯನಿಲ್ಲದ : ತನ್ನ ಸೈನ್ಯವನ್ನು ಅನಾಯಕವಾಗಿದ್ದ ಆ ಸೈನ್ಯದ ಮೇಲೆ ಬೀಳುವಂತೆ ಆಜ್ಞೆಕೊಟ್ಟನು. (ಒಡೆಕ. ೯೩) ; ದೇಶ ಅನಾಯಕವಾಯಿತು (ರೂಢಿ). [**ಸಂ.**]

**ಅನಾಯಕತ್ವ** (ನಾ). ನಾಯಕನಿಲ್ಲದ ಸ್ಥಿತಿ ; ಒಡೆಯನಿಲ್ಲದ ಸ್ಥಿತಿ; ಅವ್ಯವಸ್ಥೆ : ಪ್ರೀಯವಾಯ್ತುಪರಾಧವೆಲ್ಲಕನಾಯಕತ್ವವ ನೆನೆಯದಲೆ ಯುವರಾಯ ಪದವಿಯನಿತ್ತು ನೃಪತಿಗೆ ಸರಿಯ ನೃಪರುಂಟೆ (ಬಿಜ್ಜಪು. ೭೬–೧) ; ಪಂಜಾಬ್ ಇತ್ಯಾದಿ ರಾಜ್ಯಗಳಲ್ಲಿ ಅನಾಯಕತ್ವ ಬೆಳೆಯಿತು (ಋಕ್ಸಾರ. ಪೀ. ೧೧೩). [**ಸಂ.**]

**ಅನಾಯತ** (ಗು). **೧.** ಅಲ್ಪವಾದ ; ಸಣ್ಣದಾದ : ತಾಯೆ ತಾ ಬಿನ್ನೈಸಲಮ್ಮೆನನಾಯತದ ವರವೆಂದು ಮನದಲಿ ನೋಯಲಾಗದು ಸಲಿಸಲಾಗದು ಭಕ್ತರಭಿಮತವ (ನಿಭಾಗ. ೯–೮–೧೪). **೨.** ನಿರಾಧಾರವಾದ; ಆಸರೆಯಿಲ್ಲದ. **೩.** ಕ್ಷಣಿಕವಾದ ; ಅಸ್ಥಿರವಾದ. **೪.** ನಿಬಿಡವಾದ; ಅವಿಚ್ಛಿನ್ನವಾದ. (ನಾ). **೫.** "ಅಕ್ರಮಕೃತ್ಯ; ತಪ್ಪು ಕೆಲಸ" (ಬಸವ. ಕೋಶ) ; ಹಲವು ಕಾಲ ಧಾವತಿಗೊಂಡು ಒಟ್ಟದ ಹಿದಿರೆಯು ಒಂದು ಮಿಡುಕುಜಲ್ಲಿ ಬೇವಂತೆ ಸಲೆ ನೆಲೆ ಸನ್ನಿಹಿತನಾಗಿರ್ಪ ಶರಣನ ಭಕ್ತಿ ಒಂದನಾಯತದಿಂದೆ ಕೆಡುವುದು (ಬಸವ. ೨೧೩). [**ಸಂ.**]

**ಅನಾಯತನಸೇವೆ** (ನಾ). = ಅನಾಯತಸೇವೆ : ಮೂಱು ಮೂಢಮುಮಾಱನಾಯತನಸೇವೆಗಳುಮೆಂದಿಂತು ಇಪ್ಪತ್ತೈದುಂ ದೋಷಂಗಳಿಂದಗಲ್ದ ಸಮ್ಯಕ್ತ್ವಮಂ (ವಡ್ಡಾರಾ. ೬–೨೨) ; ಎಮ್ಮಜ್ಜಪಜ್ಜರು ಮಾಡಿಸಿದ ಧರ್ಮಂಗಳಿವಂ ಸಮುದ್ಧರಿಸಿದೊಡೆ ಯಾವುದು ದೋಷಮೆಂದು ಸ್ನೇಹದಿಂದಮಾನುಮಿದಂ ನೆಗಳದಂದು ಲೌಕಿಕದಿಂ ನಿರ್ಮ್ಮಲಮಾನುಮಿಾ ಪೇಳ್ದನಾಯತನಂಗಳ ಸೇವಿಸುವುದನಾಯತನ ಸೇವೆಯೆಂಬುದು (ಶ್ರಾವಕಾ. ೧೧೧–೧೫). [**ಸಂ.** (ಅನಾಯತನ + ಸೇವೆ)]

**ಅನಾಯತಸೇವೆ** (ನಾ). [ಜೈನ] ಆರು ಬಗೆಯ ಮಿಥ್ಯೆಗಳ ಸೇವೆ : ಮಿಥ್ಯಾದೇವರುಂ ಮಿಥ್ಯಾಲಯಮುಂ . . . ಎಂಬ ಷಡನಾಯತ[ಪಾಠಾಂ. ಕ]ಸೇವಾವಿರಹಿತಮುಂ (ಅಜಿಪು. ೧೨–೧ ವ) ; ಅನಾಯತಸೇವೆಗಳೆಂಬ ಪಟುಭಟರೇಱಿಸಿ ತಮ್ಮ ಪುರ್ವುಗಳ ಕಾಱುತ ಕಣ್ಣೊಳುರಿಯನಂದು ನುಡಿದರು ಧೀರರು ತಮ್ಮೊಳಿಂತೆಂದು (ತ್ರಿಪುಸಾಂ. ೧೪–೧೫೮).

[ಅನಾಯತ + ಸೇವೆ]

**ಅನಾಯಾಸ$_1$** (ನಾ). ಬಳಲಿಕೆಯಿಲ್ಲದಿರುವುದು ; ಕಷ್ಟವಿಲ್ಲದಿರುವುದು ; ಸುಲಭತೆ : ಕೆಲವು ಪಯಣಂಗಳಿಂದುತ್ತರಗುಹಾದ್ವಾರಮನನಾಯಾಸದೊಳ್ ತೆಱೆದು ಪೊಱಮಟ್ಟಾಗಳ್ (ಆದಿಪು. ೧೩–೫೩ ವ) ; ತನ್ನ ಬೇಟೆ ಅನಾಯಾಸದಿಂದ ಕೈಗೆ ಸಿಕ್ಕಬೇಕೆಂಬುದಾಗಿ, ಅದನ್ನು ತಂತುಗಳಿಂದ ಬಿಗಿಯುತ್ತದೆ (ಮುಂಬಯಿ. ೪–೧೧೯).

**ಅನಾಯಾಸವಾಗಿ** = ಕಷ್ಟವಿಲ್ಲದೆ; ತೊಂದರೆಯಿಲ್ಲದೆ: ಮನುಷ್ಯನು ಅನಾಯಾಸವಾಗಿ ಬಾಳಬೇಕೆಂದು ಬಯಸುತ್ತಾನೆ (ರೂಢಿ). [**ಸಂ.**]

**ಅನಾಯಾಸ₂** (ಅ). ೧. ಸುಖವಾಗಿ; ಕಷ್ಟವಿಲ್ಲದೆ; ತೊಂದರೆಯಿಲ್ಲದೆ: ಅನಾಯಾಸ ಇಲ್ಲಿಯೆ ಇದ್ದೀವಿ (ನಡೆದಾ. I, ೩೩೩). ೨. ಇದ್ದ ಕ್ಕಿದ್ದಂತೆ; ಅನಿರೀಕ್ಷಿತವಾಗಿ (ಸ್ಯಾಂಡರ್). [< ಅನಾಯಾಸ₁]

**ಅನಾಯಾಸಕೃತ** (ಗು). ಸುಲಭವಾಗಿ ಮಾಡಿದ; ಕಷ್ಟವಿಲ್ಲದೆ ನಡಸಿದ. [ಅನಾಯಾಸ₁ + ಕೃತ]

**ಅನಾಯುಧ** (ನಾ). ಆಯುಧವಿಲ್ಲದವನು; ಆಯುಧವನ್ನು ಹಿಡಿಯ ದವನು; ನಿರಾಯುಧ: ಕೈದುವಿಡಿಯೆನಾಂ ನಿನಗನಾಯುಧಂಗೆಂದು ಕೈಯ ಪಾವಂ ವಿನತಾತನಯಂ ಬಿಸುಡುವವೋಲ್ ತೊಟ್ಟನೆ ಬಿಸುಟಂ ಪಿಡಿದ ಬಡಿಯನಂತಾ ದಡಿಯಂ (ಚಂದ್ರಪು. ೫-೬೬). [ಸಂ.]

**ಅನಾರಂಭ** (ಗು). ೧. ಆರಂಭವಿಲ್ಲದ; ಕೆಲಸವನ್ನು ಪ್ರಾರಂಭಿಸ ದಿರುವ. (ನಾ). ೨. ಕೆಲಸವಿಲ್ಲದಿರುವುದು (?): ವ್ರತಶುದ್ಧಿಯೊಳು ದೇವದ್ವಿಜಂಗೆ ನಿರಾಮಿಷಭೋಜನಮುಂ ಕುಲಸ್ತ್ರೀಸೇವನಮುಂ ಅನಾ ರಂಭಮುಂ . . . ಆಗವೇಟ್ಟುದು (ಚಾವುಂಉ. ೨೫೪). [ಸಂ.]

**ಅನಾರತ** (ಗು). ಬಿಡುವಿಲ್ಲದ; ಸಂತತವಾದ; ನಿರಂತರವಾದ: ನೀರಸಂಗಳು ಕಲ್ಮಷಂಗಳಪಾರಮಾಲಿನ್ಯಪ್ರದಂಗಳನಾರತಾಶಾಪಾಶಬಂಧಂ ಗಳು ವಿಕಳತೆಗಳು (ಬಸವು. ೪೦-೬೪). [ಸಂ.]

**ಅನಾರತಂ** (ಅ). ಬಿಡುವಿಲ್ಲದೆ; ಯಾವಾಗಲೂ; ನಿರಂತರವಾಗಿ: ದೇವರುಂ ಗೊರವರುಂ ಗುಣವೃದ್ಧರನಾರತಂ ಕಾವರಕ್ಕರಸನಂ (ಕವಿರಾ. ೧-೧೩೧). [< ಅನಾರತ]

**ಅನಾರಸ** (ನಾ). ಅತಿರಸ; ಕಜ್ಜಾಯ: ಗಂಗವ್ವ ತುಪ್ಪದಲ್ಲಿ ಅನಾರಸ ಗುಳ್ಳೋರಿಗೆಗಳನ್ನು ಕರಿದು ಮಾಮಲೇದಾರರ ಮನೆಗೆ ಕಳಿಸಬಹುದಿತ್ತಲ್ಲ (ಗಂಮಾಯಿ. ೩೩). [← ಮರಾ. ಅನರಸಾ ?]

**ಅನಾರೋಗ್ಯ** (ನಾ). ಆರೋಗ್ಯವಿಲ್ಲದಿರುವುದು; ಮೈಯಲ್ಲಿ ಚೆನ್ನಾ ಗಿಲ್ಲದಿರುವುದು; ಅಸ್ವಸ್ಥತೆ: ಸೇವಿಸುವ ಆಹಾರದಲ್ಲಿ ಬಹುಕಾಲ ಜೀವಾತುಗಳ ಅಭಾವವಿದ್ದರೆ ಅನಾರೋಗ್ಯ ತಲೆದೋರುವುದು . . . ಸರಿ ಯಾದ ಪ್ರಮಾಣದಲ್ಲಿ ಜೀವಾತುಗಳಿರುವಂತೆ ವ್ಯವಸ್ಥೆಗೊಳಿಸುವುದರಿಂದ ಅನಾರೋಗ್ಯವನ್ನು ತಡೆಯಬಹುದು (ಅಡುಸೌ. ೬೦). [ಸಂ.]

**ಅನಾರ್ತ** (ಗು). ಆರ್ತನಲ್ಲದ; ಕಷ್ಟಕ್ಕೆ ಸಿಕ್ಕದ; ಹಿಂಸೆಗೆ ಗುರಿ ಯಾಗದ. [ಸಂ.]

**ಅನಾರ್ದ್ರ** (ಗು). ಆರ್ದ್ರವಲ್ಲದ; ಒದ್ದೆಯಲ್ಲದ; ಒಣಗಿದ: ಅನಾರ್ದ್ರ ಕ್ಕಿಂತಲೂ ಆರ್ದ್ರವಸ್ತ್ರವೇ ಶ್ರೇಷ್ಠವೆಂದು ಒದ್ದೆಯನ್ನುಟ್ಟು ಚಳಿಯಿಂದ ಪೀಡಿತರಾಗಿ (ಆರ್ಯಧ. ೩). [ಸಂ.]

**ಅನಾರ್ಯ** (ಗು). ೧. ಆರ್ಯನಲ್ಲದ. ೨. ಆರ್ಯನೆಂದು ಕರೆಯಲು ಅರ್ಹನಲ್ಲದ; ಗೌರವಿಸಲು ಯೋಗ್ಯನಲ್ಲದ: ಆತ್ಮಮನ್! ಅನಾರ್ಯ! ಅನಾರ್ಯನಾರ್, ಆರ್ಯನಾರ್? ನೋಟ್ಪಂ (ಅಶ್ವತ್ಥಾ. ೫೦-೮೫೦); ಅನಾರ್ಯರಿವರಂ ನಂಬಿ ಆರ್ಯಕುಲದೇವಿಯಂ ನಾನೆಂದು ತಂದ ಪೆವೊ ನಾನರಿಯೆ (ಶ್ರೀರಾಮಾ. ೩೦೧-೧೫). (ನಾ). ೩. ಆರ್ಯರಿಲ್ಲದ ಸಭೆ, ಪ್ರದೇಶ ಮುಂತಾದದ್ದು. ೪. ಆರ್ಯರು ಆಚರಿಸಬಾರದ್ದು; ಆರ್ಯರು ಆಚರಿಸದಂಥದು: ರಣದಿಂದ ಹಿಮ್ಮೆಟ್ಟುವುದು ಅನಾರ್ಯ ವಾದದ್ದು (ವಚಭಾ. ೩೦೪). [ಸಂ.]

**ಅನಾರ್ಯತಿಕ್ತ** (ನಾ). ನೆಲಬೇವಿನ ಗಿಡ; ಚಿರಾಯಿತವೆಂಬ ಗಿಡಮೂಲಿಕೆ. [ಸಂ.]

**ಅನಾರ್ಯೆ** (ನಾ). ೧. ಆರ್ಯಕುಲಕ್ಕೆ ಸೇರದವಳು. ೨. ಅಯೋ ಗ್ಯಳು; ಹೀನೆ; ದುಷ್ಟೆ: ಕಂಡ ಕಂಡವರೆಲ್ಲರುಂ ಕುಬ್ಜೆಯನನಾರ್ಯೆ ಯಂ . . . ನಾಯ್ಮರಿಗೆ ಕಡೆಯಾಗಿ ಭಾವಿಸಿದರೆ (ಶ್ರೀರಾಮಾ. ೨೨-೫೧). [ಸಂ. ಅನಾರ್ಯಾ]

**ಅನಾರ್ಷ** (ಗು). ಆರ್ಷವಲ್ಲದ; ಪ್ರಾಚೀನವಲ್ಲದ: ಆರ್ಷಾನಾರ್ಷ ಭೇದದಿಂ ದ್ವಿವಿಧಮಕ್ಕುಂ ಅವರೊಳಾರ್ಷಮೆಂಬುದಾದಿ ಬ್ರಹ್ಮೋಪದಿಷ್ಟಂ (ಚಾವುಂಉ. ೨೯೬). [ಸಂ.]

**ಅನಾಲಸ್ಯ** (ಗು). ೧. ಆಲಸ್ಯವಿಲ್ಲದಿರುವ. (ನಾ). ೨. ಆಲಸ್ಯವಿಲ್ಲ ದವನು: ಅನಾಲಸ್ಯನೆಂಬೊಂ ನಾಸ್ತಿಕ್ಯದೈನ್ಯನಿದ್ರಾದಿ ನಿರೀಕ್ಷಣಜೃಂಭಣ ವಿವರ್ಜಿತಂ (ಚಾವುಂಪು. ೬). [ಸಂ.]

**ಅನಾವರ** (ಗು). ಬಹಳವಾದ; ಹೆಚ್ಚಾದ: ಮನೆಯಲ್ಲಿ ತುಂಗಕ್ಕ ಹೇಳಿದ ಮಾತುಗಳು ನೆನಪಿಗೆ ಬಂದು ತನ್ನ ತಾಯ ಮೇಲೆ ಅನಾವರ ಸಿಟ್ಟು ಬಂತು (ಮೂರುದಾ. ೬೨); ಅವನಿಗೆ ನಗು ಅನಾವರವಾಯಿತು (ಹೊಸಕ್ಷಿ. ೧೬೯). [← ಮರಾ. ಅನಾವರ (< ಸಂ. ಅನಿವಾರ್ಯ)]

**ಅನಾವರಣ** (ನಾ). ೧. ಆವರಣವನ್ನು ತೆಗೆಯುವುದು; ಮರೆ ಯನ್ನು ಸರಿಸುವುದು. ೨. ಪ್ರಸಿದ್ಧಿಗೊಳಿಸುವುದು; ಪ್ರಕಟಿಸು ವುದು. ೩. ಮುಸುಕಾಗಲಿ, ಮುಚ್ಚಳವಾಗಲಿ ಇಲ್ಲದ ವಸ್ತು. ೪. ಪ್ರಾಕಾರ, ಗೋಡೆ, ಬೇಲಿ ಮುಂತಾದ ಆವರಣವಿಲ್ಲದ್ದು.

**ಅನಾವರಣಮಾಡು** = ಮರೆಯನ್ನು ಓಸರಿಸು; ಪ್ರಕಟಿಸು: ಶ್ರೀಯುತರು ಶಾಸ್ತ್ರಿ ಅವರ ಭಾವಚಿತ್ರವನ್ನು ಅನಾವರಣಮಾಡಿದರು (ರೂಢಿ). [ಸಂ.]

**ಅನಾವರಣೋತ್ಸವ** (ನಾ). (ಭಾವಚಿತ್ರ ಮೊದಲಾದುವುಗಳ) ಮರೆಯನ್ನು ತೆಗೆದು ಪ್ರಕಟಿಸುವ ಸಮಾರಂಭ: ಇಂದು ಗಾಂಧೀಜೀ ಅವರ ಭಾವಚಿತ್ರದ ಅನಾವರಣೋತ್ಸವವಿದೆ (ರೂಢಿ). [ಅನಾವರಣ + ಉತ್ಸವ]

**ಅನಾವಶ್ಯಕ** (ನಾ). ಅನವಶ್ಯವಾದದು; ಅಗತ್ಯವಿಲ್ಲದಿರುವುದು: ಆಹಾರಾಂಶಗಳು ಅನಾವಶ್ಯಕವಾಗಿ ಹಾಳಾಗದಂತೆ ಅಡುವುದರಿಂದ ಗೃಹಿಣಿಯು ಆಹಾರದ ಪೌಷ್ಟಿಕತೆಯನ್ನು ಹೆಚ್ಚಿಸಬಲ್ಲಳು (ಅಡುಸೌ. ೬೨). [ಸಂ.]

**ಅನಾವಿರ್ಭಾವ** (ನಾ). ಉಂಟಾಗದಿರುವುದು; ಕಾಣಿಸಿಕೊಳ್ಳದಿರು ವುದು; ತೋರದಿರುವುದು: ಪ್ರತಿಬಂಧಕಹೇತುಸನ್ನಿಧಾನದೊಳ್ ಅನದ್ಭೂತವೃತ್ತಿತ್ವದ ಅನಾವಿರ್ಭಾವರೂಪಂ ಉಚ್ಚಾದನಂ (ತತ್ತ್ವಪ್ರ. ೨೬೭). [ಸಂ.]

**ಅನಾವಿಲ, ಅನಾವಿಳ** (ಗು). ೧. ಕದಡದಿರುವ; ನಿರ್ಮಲವಾದ. (ನಾ). ೨. ಕದಡದಿರುವ ಅಥವಾ ನಿರ್ಮಲವಾದ ವಸ್ತು: "ವಿಮಳಂ, ವಿಶದಂ, ವೀಧ್ರಂ, ಉಜ್ವಳಂ, ಅನಾವಿಲಂ-ಈ ೫ ನಿರ್ಮಳ ಮಪ್ಪ ವಸ್ತು" (ಹಲಾಯು. ೨೨-೧೩೨). **ಅನಾವಿಳ**: "ವಿಮಳಂ ವಿಶದಂ ವೀಧ್ರಮುಜ್ವಳಂ ಸ್ಯಾದನಾವಿಳಂ" (ಹಲಾಯು. ೨೨-೧೩೨). [ಸಂ.]

**ಅನಾವಿಳ** 'ಅನಾವಿಲ' ನೋ.

**ಅನಾವೃತ** (ಗು). ಮುಚ್ಚಿಲ್ಲದ; ತೆರೆಯಲ್ಪಟ್ಟ: ಅನಾವೃತ ಪಾತ್ರೆ ಗಳಲ್ಲಿ ಕಸಕಡ್ಡಿ ಬಿದ್ದಿದೆ (ರೂಢಿ). [ಸಂ.]

**ಅನಾವೃಷ್ಟಿ** (ನಾ). ಮಳೆಯಿಲ್ಲದಿರುವುದು; ಬಹಳ ಕಾಲ ಮಳೆಯೇ ಆಗದಿರುವುದು: ಅಲ್ಲಿ ಅತಿವೃಷ್ಟಿ ಅನಾವೃಷ್ಟಿಗಳ ಭೀತಿಯಿಲ್ಲ (ಕಳಹು. ೯೨); ಅತಿವೃಷ್ಟಿ ಅನಾವೃಷ್ಟಿಗಳ ಖಂಡ ಏಷ್ಯಾಖಂಡ (ರೂಢಿ). 'ಅತಿವೃಷ್ಟಿ' ಪರಾ. [ಸಂ.]

**ಅನಾಸ** (ನಾ). (ಆರ್ಯರ ತಿರಸ್ಕಾರಕ್ಕೆ ಪಾತ್ರರಾಗಿದ್ದ) ಮೂಗು ಚಪ್ಪಟೆಯಾಗಿದ್ದ ಒಂದು ಪಂಗಡದ ಜನ: ದಸ್ಯುಗಳನ್ನು ಆರ್ಯರು ಮೊದಲು ಶತ್ರುಗಳಂತೆ ಕಂಡು, ಅವರು ಸೋತುಹೋದ ಮೇಲೆ ಅವರನ್ನು ದಾಸ ಅನಾಸ ಮುಂತಾದ ಹೆಸರುಗಳಿಂದ ಕರೆಯುತ್ತ . . . ದೂರ ವಾಗಿಯೇ ಇಟ್ಟಿದ್ದರು (ಭಾಇಪ್ರ. ೩೬). [ಸಂ. ಅನಾಸ = ಮೂಗಿಲ್ಲದ]

**ಅನಾಸಕ್ತ** (ಗು). ೧. ಆಸಕ್ತಿಯಿಲ್ಲದ; ನಿಸ್ಪೃಹವಾದ. (ನಾ). ೨. ಆಸಕ್ತಿಯಿಲ್ಲದವನು: "ನೀವಂತೂ ಬಂದೇ ಬರಬೇಕು; ಆದರೆ ದಯೆಯಿಟ್ಟು ಅನಾಸಕ್ತರಾಗಿ ಬನ್ನಿ" ಎಂದವಳು ಮಂದಹಾಸದಿಂದ ನೆಕ್ಲುದೋವನ ಕಡೆಗೆ ನೋಡಿದಳು (ಪುನರು. ೩೩೪). [ಸಂ.]

**ಅನಾಸಕ್ತಿ** (ನಾ). ೧. ಆಸಕ್ತಿಯಿಲ್ಲದಿರುವಿಕೆ. ೨. ಫಲಾಪೇಕ್ಷೆಯಿಲ್ಲದಿರುವಿಕೆ. 'ಅನಾಸಕ್ತಿಯೋಗ' ಪರಾ. [ಸಂ.]

**ಅನಾಸಕ್ತಿಯೋಗ** (ನಾ). ಫಲದ ಮೇಲೆ ಅಪೇಕ್ಷೆಯಿಲ್ಲದೆ ಕರ್ಮವನ್ನು ಯಥಾಪ್ರಕಾರವಾಗಿ ತಪ್ಪದೆ ಆಚರಿಸುವ ಕ್ರಮ, — ಉಪಾಯ: ಗಾಂಧೀಜಿಯವರು ಗೀತೆಯಲ್ಲಿ ಅನಾಸಕ್ತಿಯೋಗವನ್ನೇ ಪ್ರಧಾನವಾಗಿ ಎತ್ತಿಹಿಡಿದಿದ್ದಾರೆ (ರೂಢಿ). [ಅನಾಸಕ್ತಿ + ಯೋಗ]

**ಅನಾಸ್ತಿ** (ನಾ). ನಾಸ್ತಿಯಲ್ಲದ್ದು; ಇರುವಿಕೆ: ಕರ್ಮ ನಾಸ್ತಿಯೆಂಬೆ ಅನಾಸ್ತಿಯೆಂಬೆ ಜ್ಞಾನಕೊಬ್ಬಿನಲ್ಲಿ ಉಲಿವೆ ಉಲಿದಂತೆ ನಡೆವೆ ಸಂಗಡ ಸಹಿತ ಕರಸ್ಥಲಕ್ಕೆ ಬಂದು ನೀನೂ ಬಯಲಾಗೆ ಎನ್ನನು ಬಯಲು ಮಾಡೆ ಗುಹೇಶ್ವರಾ (ಅವಚಂ. ೨೫–೧೦೫). [ಸಂ.]

**ಅನಾಸ್ಥೆ** (ನಾ). ಆಸ್ಥೆಯಿಲ್ಲದಿರುವಿಕೆ; ಔದಾಸೀನ್ಯ: ಅವರ ಆ ದುಃಖಕ್ಕೆ ಕಾರಣ ಓದುಗರ ಅನಾಸ್ಥೆ. ಕವಿ ಕಷ್ಟಪಟ್ಟು ಬರೆದದ್ದನ್ನು ವಾಚಕರು ಓದುವುದಿಲ್ಲ, ಆನಂದಪಡುವುದಿಲ್ಲ (ಗಾಳಿಪ. ೧೯೪); ಯಾವ ರೀತಿಯಿಂದಲೂ ಅನಾಸ್ಥೆ ಬೆಳೆಯದಂತೆ ನೋಡಿಕೊಳ್ಳಬೇಕು (ಬೆಸಂಕ. ೯–೨–೧೯೬೫; ೨–೭). [ಸಂ. ಅನಾಸ್ಥಾ]

**ಅನಾಹತ** (ಗು). ೧. ಹೊಡೆಯಲ್ಪಡದ; ಏಟು ಬೀಳದ. (ನಾ). ೨. ಒಗೆಯದ ಅರಿವೆ; ನೂತನ ವಸ್ತ್ರ. ೩. ಅಭೇದ್ಯ: "ಆಯಾನ ಮೆನಲನಾಹತಮೆನಲಭೇದ್ಯಮದು" (ಮಂಗರಾ. ೧೩೫–೩೪). ೪. ಗುಣಿಸಲ್ಪಡದಿರುವುದು; ಗುಣಿಸದೆ ಇರುವುದು. ೫. [ಯೋಗಶಾ] = ಅನಾಹತಚಕ್ರ: ಆದಿಯನುಳ್ಳುದೆ ಆಧಾರ, ಅನಾಹತವ ಕೂಡಿಪ್ಪುದೆ ಸ್ವಾಧಿಷ್ಠಾನ (ಪದಗೋ. ೫೯–೨೨೧). ೬. [ಸಂಗೀತ] "ನಾದ ಆಹತ ಮತ್ತು ಅನಾಹತ ಎಂದು ಎರಡು ಬಗೆಯಾಗಿದೆ... ಅನಾಹತ ನಾದ ಸಾಕಷ್ಟು ಸಂಖ್ಯೆಯಲ್ಲಿ ಕಂಪನಾವರ್ತ ಅಥವಾ ಸ್ಪಂದನಗಳನ್ನು ಹೊಂದಿದಾಗ ಶ್ರವಣಯೋಗ್ಯತೆ ಪಡೆದು ಆಹತನಾದವಾಗುತ್ತದೆ" (ಸಂಗೀಚಂ. ೭). [ಸಂ.]

**ಅನಾಹತಂ** (ಅ). ಹೊಡೆಯಲ್ಪಡದೆ; ಏಟುಬೀಳದೆ: ಯಮಳಾರ್ಜುನಾವನೀಜಾತಮನಾಹತಂ ಕೆಡೆದುದಂ ನೆನೆದು (ಜಗನ್ನಿ. ೩–೭೪). [< ಅನಾಹತ]

**ಅನಾಹತಚಕ್ರ** (ನಾ). [ಯೋಗಶಾ] ಯೋಗಶಾಸ್ತ್ರಗಳಲ್ಲಿ ಪ್ರಸಿದ್ಧವಾದ ಆರು ಚಕ್ರಗಳಲ್ಲಿ ನಾಲ್ಕನೆಯದು; ಹೃದಯಸ್ಥಾನದಲ್ಲಿ ಸುಷುಮ್ನಾ ನಾಡಿಯ ಮಧ್ಯಪ್ರದೇಶದಲ್ಲಿ ದ್ವಾದಶದಳಪದ್ಮದಂತೆ ಆಕಾರವುಳ್ಳುದಾಗಿ ಎಣಿಸಲ್ಪಟ್ಟ ಒಂದು ಚಕ್ರ: ಕಲ್ಲುಕಾಷ್ಠ ಸಲಿಲನಿಷ್ಕಲದಿಂದಲಾಯಿತ್ತು ವಾಯುವಾಧಾರದ ಪವನಸಂಯೋಗದ ಅನಾಹತ ಚಕ್ರದಿಂದ ಮೇಲಣ ಆಜ್ಞಾಚಕ್ರದಲ್ಲಿ ನಿಂದು (ಅವಚಂ. ೧೪೯–೮೫೪). [ಅನಾಹತ + ಚಕ್ರ]

**ಅನಾಹತಮತಿ** (ನಾ). ಏಟಿಗೆ ಗುರಿಯಾಗದ ಬುದ್ಧಿ; ಕ್ಷೋಭೆಗೊಳ್ಳದ ಬುದ್ಧಿ; ದೃಢವಾದ ಮನಸ್ಸು: ಅಜಿತ ಸೋಮೇಶನೊಲಿದಿತ್ತನಾಹತಮತಿಯ ಕುಜುಹಿನಭಿನವಮಂಗನುಸಿರ್ದ ಸತ್ಕೃತಿಯನಿದ ಜಜಿಪರಾರ್ ಮಜಿಪರಾರ್ (ಮಂಗರಾ. ೩–೭). [ಅನಾಹತ + ಮತಿ]

**ಅನಾಹತಲೀಲೆ** (ನಾ). ಕುಗ್ಗದ ಆಟ, — ಲೀಲೆ: ಘನಗರಳಂ ವಿಜೃಂಭಿಸೆ ಫಣಾಮಣಿ ರಂಜಿಸೆ ಘೋರ ಫೂತ್ಕೃತಧ್ವನಿ ಮಿಗೆ ಪಾವು ಸುತ್ತಿರಲನಾಹತಲೀಲೆಯೊಳಂದು ಬಾಳಚಂದನಕುಜದಂತೆ ಕೃಷ್ಣನೆಸೆದಿರ್ದೊಡಂ (ಜಗನ್ನಿ. ೩–೯೧). [ಅನಾಹತ + ಲೀಲೆ]

**ಅನಾಹಾರ** (ನಾ). ೧. ಆಹಾರವಿಲ್ಲದಿರುವುದು; ನಿರಾಹಾರ; ಉಪವಾಸ: ಈ ಅನಿದ್ರೆಯಲ್ಲಿ, ಈ ಅನಾಹಾರದಲ್ಲಿ ಯಾರು ನನಗೆ ಬಲ ಒದಗಿಸಿದ್ದರೋ ನಾನರಿಯೆ (ಇಪ್ಪಕ. ೨೨೨). ೨. ಆಹಾರವಿಲ್ಲದವನು; ಆಹಾರವನ್ನು ಬಿಟ್ಟವನು. [ಸಂ.]

**ಅನಾಹಾರಕ** (ನಾ). ೧. ಆಹಾರವಿಲ್ಲದಿರುವವನು. ೨. [ಜೈನ] ಆಹಾರಕವಲ್ಲದ್ದು. ೩. ಆಹಾರಕವನ್ನು ಪಡೆಯದವನು: ಜೀವಸಮಾಸದಲ್ಲಿ ಆಹಾರಕ, ಅನಾಹಾರಕ ಎಂದು ಎರಡು ಪ್ರಕಾರಗಳಾಗುತ್ತವೆ (ಜೈನಪ. ೩೦೦). 'ಆಹಾರಕ' ಪರಾ. [ಸಂ.]

**ಅನಾಹುತ** (ನಾ). ಆಕಸ್ಮಿಕ; ಪ್ರಮಾದ; ಅನಿಷ್ಟ; ಕೇಡು: ನಿಜವನ್ನು ತಿಳಿಯದೆ ಎಷ್ಟು ಅನ್ಯಾಯಗಳಾಗಿಲ್ಲ! ನಂಬದೆ ಎಷ್ಟು ಅನಾಹುತಗಳಾಗಿಲ್ಲ (ರಾಮರಾ. ೫೯); ಹೆಂಗಸರು ಕೆನ್ನೆಯ ಮೇಲೆ ಬೆರಳಿಟ್ಟುಕೊಂಡು, ಯಾವುದೋ ಹೇಳಲಾಗದ ಅನಾಹುತವನ್ನು ಸೂಚಿಸುವಂತೆ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತಿದ್ದರು (ಮಗಮಾಂ. ೭೪); ಪೆಟ್ಟಿಗೆಯ ಬೀಗ ಏನೊಂದೂ ಅನಾಹುತಕ್ಕೆ ಎಡೆಯಾಗದೆ ಒಳಗಿದ್ದ ಸರ ಮಾತ್ರ ಮಾಯವಾಗಿದೆ (ಕಾವೇರಿ. ೧೭೯). [< ಸಂ. ಅನಾಹೂತ ?]

**ಅನಾಹೂತ** (ಗು). ೧. ಕರೆಯಲ್ಪಡದ; ಆಹ್ವಾನವಿಲ್ಲದ: ಔತಣಕ್ಕೆ ಅನಾಹೂತರಾಗಿದ್ದರೂ ಮರಿಗಳೂ ತಾಯಿಯ ಉಣಿಸಿನಲ್ಲಿ ಪಾಲುಕೊಂಡುವು (ಕಾನೂರು. ೪೩). ೨. ಪ್ರಮಾದ; ಕೇಡು: ಇನ್ನೇನು ಅನಾಚಾರ ಅನಾಹೂತಗಳನ್ನು ಮಾಡಿರುವೆ ಹೇಳು (ನಡುವು. ೧೫). [ಸಂ.]

**ಅನಾಹೂತಪರಿಚಯ** (ನಾ). ಕರೆಯದಿದ್ದರೂ ಹೋಗಿ ತಾನಾಗಿ ಮಾಡಿಕೊಳ್ಳುವ ಪರಿಚಯ: ಅವನಿಷ್ಟರೊಳಗೆ ಬ್ರಾಹ್ಮಣರ ಮನೆಗೆ ಹೋಗಿ ಅನಾಹೂತಪರಿಚಯ ಮಾಡಿಕೊಂಡು ಬಂದಿರಬಹುದೆಂದು ಅವನಿಗೇನು ಎನಿಸಿರಲಿಲ್ಲ (ಅರಗಿ. ೨೫). [ಅನಾಹೂತ + ಪರಿಚಯ]

**ಅನಿಂದ್ಯ** (ಗು). ನಿಂದೆಗೆ ಆಸ್ಪದವಲ್ಲದ; ನಿರ್ದೋಷವಾದ; ಶ್ರೇಷ್ಠವಾದ: ಸೊಗಯಿಸುಗುಂ ಕಾವ್ಯಬಂಧಮೆಂದುಮನಿಂದ್ಯಂ (ಕವಿರಾ. ೧–೫೬); ಧೀರನನಿಂದ್ಯನಪ್ರತಿಮನಾನತಸರ್ವಜಗಜ್ಜನಂ . . . ಪೊಜಮಟ್ಟ ಸೌಂದರಂ (ನಂಬಿರ. ೧೪–೧). [ಸಂ.]

**ಅನಿಂದ್ಯಗುಣ** (ನಾ). ೧. ನಿಂದೆಗೆ ಆಸ್ಪದವಿಲ್ಲದ ಗುಣ. ೨. ನಿಂದೆಗೆ ಆಸ್ಪದವಿಲ್ಲದ ಗುಣಗಳುಳ್ಳವನು: ರಣಮುಖದುಳ್ಳಿ ಕೋಲನೆರಿಯಕ್ಕುಮನಿನ್ದ್ಯಗುಣನ್ ಪ್ರಣಯಿಜನಕ್ಕೆ ಕಾಮನ್ (ಎಕ. XI, ಚಿತ್ರದು. ೪೩–೨; 500); ಕುಂದಕಬ್ಬೆಗಮನಿಂದ್ಯಗುಣನೆನಿಪ ದಾಮಮಯ್ಯಂಗಂ . . . ವೆಣ್ಣಮಯ್ಯನಗ್ರತನೂಜಂ (ಛಂದೋಂಬು. ೧–೧೯). [ಅನಿಂದ್ಯ + ಗುಣ]

**ಅನಿಂದ್ರಿಯ** (ನಾ). ಇಂದ್ರಿಯವಲ್ಲದುದು; ಮನಸ್ಸು: ಅನಿಂದ್ರಿಯಂ – ಮನಂ – ಅಂತಃಕರಣಂ ಎಂದೊಡೆ ಏಕಾರ್ಥಂ (ತತ್ತ್ವಪ್ರ. ೫೫). [ಸಂ.]

**ಅನಿಃಸೃತ** (ನಾ). ಹೊರಕ್ಕೆ ಹೊರಡದುದು: "ಅನಿಃಸೃತ–ಪೊಱಮಡದುದುಂ" (ತತ್ತ್ವಪ್ರ. ೫೬). [ಸಂ.]

**ಅನಿಕೆ** (ನಾ). ಎಣಿಕೆ; ಉದ್ದೇಶ; ಆಲೋಚನೆ: ಸಮುದ್ರ ದಡದಿಂದ ೭–೮ ಮೈಲು ದೂರ ಹೋದರೆ ಒಳ್ಳೆಯ ನಿರೋಗಿ ಮೀನು ದೊರೆತೀತು ಎಂಬುದೇ ಅವನ ವಿಚಾರ. ಆಶಾವಾದಿಯಾದ ಮನಸ್ಸು 'ಹೂ' ಎಂದಿತು . . . ಅನಿಕೆಯಂತೆ ಹುಟ್ಟುಹಾಕಿ, ದಡದಿಂದ ಹೊರಹೊರಗೆ ಬಂದ (ದಕ್ಷಿನ. ೯೩). [ಅನ್ನು (< ಅನ್ನು) + –ಇಕೆ]

**ಅನಿಕೇತ** (ನಾ). ೧. ಮನೆಯಿಲ್ಲದವನು; ನೆಲೆಯಿಲ್ಲದವನು. ೨. ನಿಯತವಾಗಿ ಒಂದು ನೆಲೆಯಲ್ಲಿ ನಿಲ್ಲದವನು; ಮನೆಮಠಗಳ ಮೋಹವಿಲ್ಲದವನು: 'ತಾಲೀಮಿ'ನ ಮನೆಯಲ್ಲಿಯೇ ಅನಿಕೇತ ಸ್ಥಿರಮತಿಗಳು ಅನೇಕರೊಡನೆ ಪ್ರಭುವೂ ಮಲಗಿಕೊಂಡನು (ಬೆಟ್ಟಹೊ. ೨೮). [ಸಂ.]

**ಅನಿಕೇತನ** (ನಾ). = ಅನಿಕೇತ: ಓ ನನ್ನ ಚೇತನ, ಆಗು ನೀ ಅನಿಕೇತನ! (ಅನಿಕೇ. ೬೦–೨). [ಸಂ.]

**ಅನಿಗಂ** 'ಅನ್ನೆಗಂ' ನೋ.

**ಅನಿಗಾಲ**, ಅನುಕಾಲ್ಕ, ಅನುಗಾಲ (ಅ). ಯಾವಾಗಲೂ; ಬಿಡುವಿಲ್ಲದೆ; ಸಂತತವಾಗಿ: ಇತ್ತನು ನಿಮಗಗಲಿಕೆಯ ನಿಮ್ಮಗಳ ಚಿತ್ತವೆನ್ನೊಳೆ ನಾಂಟಲೆಂದನಿಗಾಲ (ಯಾದವಾ. ೨೮); ಕಂದ! ಕೇಳದು ಸಾವಿನಿಂದತ್ತಲತ್ತ ನಿಂದು ತಾನನಿಗಾಲ ಎಸೆದೊಪ್ಪುತಿಹುದು (ಕಎಪು.೪೮). **ಅನುಕಾಲ್ಕ**: ಅನುಕಾಲ ನಿನ್ನನೆ ಬಯಸಿ ನೀ ಬಹ ದಾರಿಯನೆ ನೋಡಿ ಸಾರ್ದೀಗ ಮಣಿದ (ಭರಚ. ೭೮–೧೩೮). **ಅನುಗಾಲ**: ಜನಮನೆ ಬಿಟ್ಟೇಕಾಂತದಲಿ ಕೂಡಲಾಯಿತೆ ಜನವ ಮನೆಯ ಬಿಟ್ಟರದೆ ಅನುಗಾಲ ಗೂಬೆಯು (ಜಗದಾ. ೧೪೦); ಇವರಿಗೆ ಹೊಡೆಯುವ ಅಧಿಕಾರವು ಅನುಗಾಲವೂ ಇದೆ (ಹುಚ್ಚುಹು. ೧೩); ನನಗಂತೂ ಅನುಗಾಲ ಬಸುರು ಬಾಣಂತನ (ಹನ್ನೊಂದ. ೨೮). [ಅನಿತು + ಕಾಲ]

**ಅನಿಚ್ಛೆ** (ನಾ). ಅಪೇಕ್ಷೆಯಿಲ್ಲದಿರುವುದು; ಬಯಕೆಯಿಲ್ಲದಿರುವುದು; ಸೇರದಿರುವುದು. [ಸಂ. ಅನಿಚ್ಛಾ]

**ಅನಿತರ** (ಗು). ಬೇರೆ ಕಡೆಯ. 'ಅನಿತರ ಸಾಧಾರಣ' ಪರಾ. [ಸಂ.]

**ಅನಿತರಸಾಧಾರಣ** (ಗು). ಬೇರೆಕಡೆ ಕಾಣಬರದ; ಬೇರೆಯದಲ್ಲದ: ಅನಿತರಸಾಧಾರಣವಾದ ವಿವೇಕವನ್ನು ಪಡೆದಿರುವ ಮಾಲತಿಯು ಸಂಗಡವಿರುವುದರಿಂದ ಅನಂಗಸೇನೆಗೆ ಯಾವ ಬಾಧೆಯೂ ಉಂಟಾಗಲಾರದು (ರಾವಿಜ. ೩೦). [ಅನಿತರ + ಸಾಧಾರಣ]

**ಅನಿತು** 'ಅನಿತ್ತು' ನೋ.

**ಅನಿತ್ತು**, ಅನಿತು (ಅ). ಪರಿಮಾಣ ಸೂಚಿಸುವ ಶಬ್ದ; ಅಷ್ಟು: ಮೇಲಾದ ವಿಳಾಸದೊಡ್ಡವಿನಿತುಂ ದಿವದಿಂದೊಡವಂದುವೆಂಬನಿತ್ತಾದುದು ರೂಪು (ಆದಿಪು. ೩–೧೦). **ಅನಿತು**: "ಅನಿತು, ಇನಿತು, ಎನಿತು– ಎಂಬಿವು ಪ್ರಮಾಣ ಸೂಚನಂಗಳ್" (ಕಶಸಾ. ೨೬–೫೪೧); "ಅನಿತಿನಿತುಮೆನಿತೆನಲ್ತಾಂ ಘನತೆಯೊಳಿಂತಿವು ಪ್ರಮಾಣಸೂಚಕಮಕ್ಕುಂ" (ಕವಿಕಂ. ೨೧೬); ನಿಮಗಿಂದಿನ ದಿವಸದನಿತೆಯಾಯುಷ್ಯಮೆಂದು ಪೇೞ್ದುಂ (ವಡ್ಡಾರಾ. ೬೬–೨೬); ಅನಿತುಸುಖದನಿತುಭೋಗದ ಮನುಜಯುಗಂ ನೋಡೆ ನೋಡೆ (ಆದಿಪು. ೫–೨೬); ಎನಿತೋದನೋದಿಯುಂ ಮನದನಿತೆ ವಲಂ ಬುದ್ಧಿಯಕ್ಕುಂ (ಪಂಚತಂ. ೧೭–೧೬); ಅನಿತೊಂದಣ್ಮನಿತೊಂದು ದರ್ಪಮನಿತೊಂದೌದ್ಧತ್ಯಮುಂ (ಕಾವ್ಯಾವ. ೩೫೫); ಅನಿತರಲ್ಲಿ ಸಾಂತಣ್ಣ ರಾಜಕಾರ್ಯಗಳನ್ನು ಮುಗಿಸಿಕೊಂಡು ಸಂಗೀತಶಾಲೆ ಪ್ರವೇಶಿಸಿದ (ಹಾಹುತ್ತ. ೧೦).

**ಅನಿತ್ತನಿತ್ತು**, **ಅನಿತನಿತು** (ದ್ವಿರುಕ್ತಿ) = ಅಷ್ಟಷ್ಟು: ಅನಿತ್ತನಿತ್ತಂ ವನದೊಳ್ ವನೇಚರಂ ತನತ್ತು ಬಿಲ್ಲಾನದನೊತ್ತಿ ಕೀಸುಗುಂ (ಭಾಷಾಭೂ. ೩–೬೮ ಉದಾ). **ಅನಿತನೆಯ** = ಅಷ್ಟನೆಯ: "ಅನಿತನೆಯಂ, ಇನಿತನೆಯಂ" (ಶಮದ. ೨೦೭ ಪ್ರಯೋ). **ಅನಿತಿನಿತು** = ಅಷ್ಟಿಷ್ಟು: ಅನಿತಿನಿತೆಂದು ಲೆಕ್ಕಮಿಡಲಾನಱಿಯೆಂ (ಮಲ್ಲಿಪು. ೨–೪೮); ಈತನನಿತಿನಿತೆಂದು ಯೋಚನೆಗೇತಱಲಿ ಠಾವಿಲ್ಲ ಸತ್ವಗುಣಾತಿಶಯವೇ ಕಾಣಬಂದಿಹುದಣುಗ ಕೇಳೆಂದ (ತೊರರಾ. ೧–೮–೫). **ಅನಿತಱೊಳ್** = ಅಷ್ಟರಲ್ಲಿ: ಊಳಿಗವಾದೆಡೆಗಳೊಳ್ ಝೂಳೆಯಂಗೊಳುತ್ತುಮನಿತಱೊಳಂ ತಣಿಯದೆ (ಸುಕುಮಾ. ೭–೩೫ ವ); ಮೋನದಿಂದಿರ್ದನಿತಱೊಳೆ ಪಾತ್ರೆ ಹಿಂಗಿತೇ (ತಿರುರ. ೧೩); ಅನಿತಱೊಳ್ ವಲ್ಲಿತರುಗುಲ್ಮಕಾಸಾರದೊಳ್ (ಭಾವಚಿಂ. ೪–೨೭). **ಅನಿತುಸೂಳು** = ಅಷ್ಟು ಸಲ: ಕ್ರಮದಿನಂಗುಲಾ ಸಂಖ್ಯೇಯ ಭಾಗ ಪ್ರಮಿತಾಕಾಶ ಪ್ರದೇಶಂಗಳೆನಿತೊಳವನಿತುಸೂಳುಮಲ್ಲಿಯೆ ಪುಟ್ಟಿ (ಪಸಾರ. ೧೦೮೬–೧೭). **ಅನಿತ್ತೋರ್** = ಅಷ್ಟು ಜನರು: ಎಲ್ಲಮಾನ್ಸರ್ವ ಪರಿಹಾರಂ ಬಿಟ್ಟ ಮೊದಲಿನನಿತ್ತೋರ್ ನಿತ್ತನ್ತೆ ಬಿಟ್ಟ (ಎಕ. VI, ಕೊಪ್ಪ. ೩೮–೭; 675). **ಅನಿಬರ್**, **ಅನಿಬರು** = ಅಷ್ಟು ಜನ; ಅಷ್ಟು ಮಂದಿ: ಪುಗುವಾಗಳ್ ಪುಗಲೀಯವೆಂದನಿಬರುಂ ವೀರರ್ಕಳೇಂ ಕಾವರೇ (ಕಾವ್ಯಸಾ. ಶೂದ್ರಕ. ೪೩೭); ಸಂನ್ಯಸನಂಗೆಯ್ದು ಮುಡಿಪಿಯನಿಬರುಂ ದೇವಲೋಕಕ್ಕೆ ಪೋದರ್ (ವಡ್ಡಾರಾ. ೮೪–೩೧); ಅನ್ತನಿಬರ್ಮ್ಮರ್ಹಾಬ್ರಾಹ್ಮಣರುಮನಳಿದ ಪಞ್ಚಮಹಾಪಾತಕನಾಗಿ ನರಕಂ ಪುಗುಗುಂ (ಸೌಇಇ. XI–i, ೫೨–೬೦; 1007); ಇಂತುಟೆ ನಿಮ್ಮನಿಬರ ವಿಕ್ರಾಂತಮಾದೊಡಂ ಸ್ವೈರಿಸಿಮಿನ್ನಿನಿಸಂ (ಆದಿಪು. ೧೨–೯೫); ಕಱುಗಾವ ಮಕ್ಕಳುಗಳನಿಬರ್ಗೆ ದಣಿಯುಣಲಿಕ್ಕಿ ತಣಿದಲ್ಲಿ (ಸಿದ್ಧರಾ. ೨–೧೭); ಪವನಜನ ಸಮ್ಮುಖದೊಳನಿಬರು ಕೆಣಕಿನರು ಕಲ್ಪಾಂತಭೈರವನ (ಕುವ್ಯಾಕ. ೧೩–೩೩); ನಿನ್ನ ಚೆನ್ನಡಿಯೊಳಗದಿಂದ ಪಿನ್ನೇಳು ಮುನ್ನೇಳು ತರದವರನಿಬರುಮುನ್ನತಿವಡೆದರೆನ್ನಿಂದ (ಹದಿಬ. ೧–೩೯); ಜಾಣರನಿಬರು ಪೇಳ್ದುದೆಲ್ಲ ಪುಸಿಯೊ (ವಿಸೀಗೀ. ೧೯–೬).

[ದೇ. ‖ ತಮಿ. ಮಲ. ಅನ್ನೈತ್ತು]

**ಅನಿತ್ಯ** (ಗು). ನಿತ್ಯವಲ್ಲದ; ಅಸ್ಥಿರ; ಕ್ಷಣಿಕ: ಪದಾಂತ ಸಂಧಿಯು ಈಗಿನ ಪದ್ಯರಚನೆಯಲ್ಲಿ ಅನಿತ್ಯವೆಂಬ ಅಭಿಪ್ರಾಯವನ್ನು ಈ ಪುಸ್ತಕದಲ್ಲಿಯ ಅನೇಕ ಪದ್ಯಗಳು ತೋರಿಸುತ್ತವೆ (ಕಎಪು. ಪೀ); ಶ್ರುತಿದುಷ್ಟವೇ ಮೊದಲಾದ ದೋಷಗಳು ಅನಿತ್ಯಗಳೆಂದು ಹಿಂದಿನವರು ತೋರಿಸಿರುವುದು ಸರಿಯಷ್ಟೆ (ಧ್ವನ್ಯಾಲೋ. ೭೩). [ಸಂ.]

**ಅನಿತ್ಯತೆ** (ನಾ) ಅಸ್ಥಿರತೆ; ಅಶಾಶ್ವತವಾದ ಸ್ಥಿತಿ; ಕ್ಷಣಿಕತೆ; ಚಂಚಲತೆ: ಸತಿಸುತಾದಿಗಳನಿತ್ಯತೆಯೆಂದು ಪಳಿವುದೆ ಚಂದಮುಮು (ಕೈವಲ್ಯ. ೭೬–೧). [ಸಂ. ಅನಿತ್ಯತಾ]

**ಅನಿತ್ಯತ್ವ** (ನಾ). = ಅನಿತ್ಯತೆ. [ಸಂ.]

**ಅನಿದ್ರೆ** (ನಾ). ನಿದ್ರೆಯಿಲ್ಲದಿರುವ ಸ್ಥಿತಿ: ಈ ಅನಿದ್ರೆಯಲ್ಲಿ ಈ ಅನಾಹಾರದಲ್ಲಿ ಯಾರು ನನಗೆ ಬಲ ಒದಗಿಸಿದ್ದರೋ ನಾನರಿಯೆ (ಇಪ್ಪಕ. ೨೨೨). [ಸಂ. ಅನಿದ್ರಾ]

**ಅನಿಧನ** (ಗು). ೧. ನಾಶವಿಲ್ಲದ; ಅಂತ್ಯವಿಲ್ಲದ: ಆದನಾದ್ಯನಿಧನ ಗುಣಯುತಮದಕೃತ್ರಿಮಮದು ಮರುತ್ತಿ ಕಾವೇಷ್ಟಿತಂ (ಆದಿಪು.೧–೪೪). (ನಾ). ೨. ನಿರಾಶ್ರಿತ. 'ಅನಿಧನನಿಧನ' ಪರಾ. [ಸಂ.]

**ಅನಿಧನನಿಧನ** (ನಾ). ಆಶ್ರಯವಿಲ್ಲದವರಿಗೆ ಆಶ್ರಯನಾದವನು; ಶಿವ: ಅನಿಧನನಿಧನನಿಧನೋದ್ಭವ ಶಿವ ಶರ್ವಶ್ಚ ಎಂದೆನುತ ಪರಮಾತ್ಮ ಮಹೇಶ್ವರ ಮಹಾತೇಜ ಎನುತ (ವೀಶೈಪು. ೬–೪–೨೭).

[ಅನಿಧನ + ನಿಧನ]

**ಅನಿಬದ್ಧ** (ಗು). ೧. ಕಟ್ಟಿಗೆ ಸಿಲುಕದ. ೨. ಅಸಂಬದ್ಧವಾದ; ಹೊಂದಿಕೆಯಿಲ್ಲದ: ಅಧಮೋಪಮೆ ವಿಯತಿ ಪದಪೂರಕಂ ದುಸ್ಸಂಧಿಯನಿಬದ್ಧಂ ವಿರುದ್ಧಾರ್ಥ ... ಎನಿಪ್ಪ ಪೊಳ್ಳಂ ತೂಱಿ ಕಳೆದಿಂತು (ಬಸಪು. ೧–೧೮). (ನಾ). ೩. [ಜೈನ] ಇತರರಿಂದ ಉಂಟಾದ ಮಂಗಳ; ಎರಡು ಬಗೆಯ ಮಂಗಳಗಳಲ್ಲಿ ಒಂದು: ಮೇಣ್ನಿಬದ್ಧಾನಿಬದ್ಧಭೇದದಿಂ ಮಂಗಳಂ ದ್ವಿವಿಧಮಕ್ಕುಂ ತನ್ನಿಂ ಮಾಡೆಪಟ್ಟ ನಾಂದಿ ನಿಬದ್ಧಮಂಗಳಂ ಪರಕೃತಮನಿಬದ್ಧಮಂಗಳಂ (ತತ್ತ್ವಪ್ರ. ೪). [ಸಂ.]

**ಅನಿಬರ್** 'ಅನಿತ್ತು' ನೋ.

**ಅನಿಬರು** 'ಅನಿತ್ತು' ನೋ.

**ಅನಿಮಿತ್ತ** (ಗು). ಕಾರಣವಿಲ್ಲದ; ಆಕಸ್ಮಿಕವಾದ; ಅನಿರೀಕ್ಷಿತವಾದ; ನಿರ್ವ್ಯಾಜವಾದ; ಸ್ವೇಚ್ಛೆಯ: "ಸ್ವಚ್ಛಂದ ನಿರ್ನಿಮಿತ್ತಂ [ಪಾಠಾಂ. ೬. ಅನಿಮಿತ್ತಂ] ಯದೃಚ್ಛೆಯದು ತನ್ನಿಚ್ಛೆ" (ಮಂಗರಾ. ೧೩೩-೩೦); ಅನಿಮಿತ್ತ ಮುನಿವ ಮುನಿಪನ ಬೆಸದೊಳಗ್ನಿ ವಿಪ್ರನ ವೇಷದಿಂದ ಬಂದು (ಹಚಕಾ. ೧೧-೬). [ಸಂ.]

**ಅನಿಮಿತ್ತಂ** (ಅ). ಕಾರಣವಿಲ್ಲದೆ; ನಿಷ್ಕಾರಣವಾಗಿ: ಜಯ ಜಯ ಧ್ವನಿಗಳೊಡನೆ ಹಾಹಾಕ್ರಂದನಧ್ವನಿಗಳನಿಮಿತ್ತಮಾಕಾಶದೊಳ್ ನೆಗೞ್ದುಂ (ಪಂಪಭಾ. ೧೦-೨೬ ವ). [< ಅನಿಮಿತ್ತ]

**ಅನಿಮಿತ್ತಕ್ರೋಧಿ** (ನಾ). ಕಾರಣವಿಲ್ಲದೆ ಕೋಪಿಸಿಕೊಳ್ಳುವವನು: ಅನಿಮಿತ್ತಕ್ರೋಧಿ ಸಿಂಹೋದ್ಭವಂ (ಜಾತತಿ. ೧೭-೫). [ಅನಿಮಿತ್ತ + ಕ್ರೋಧಿ]

**ಅನಿಮಿತ್ತವೈರ** (ನಾ). ನಿಷ್ಕಾರಣವಾದ ದ್ವೇಷ: ಮುನಿಗೆ ಹೊಲೆಯಾವುದತಿಕೋಪ ಬದ್ಧದ್ವೇಷವನಿಮಿತ್ತವೈರವದಱಿಂದ ಹುಟ್ಟಿದರಾಗಿ ವನಿತೆಯರು ಕಡೆಗೆ ಹೊಲತಿಯರಾಗಿ (ಹಚಕಾ. ೭-೨). [ಅನಿಮಿತ್ತ + ವೈರ]

**ಅನಿಮಿತ್ತಶೋಕ** (ನಾ). ನಿಷ್ಕಾರಣವಾದ ದುಃಖ, —ಸಂತಾಪ: ಮರುಗಿ ಕರಗಿದುದು ರಾಮಾತ್ಮವನಿಮಿತ್ತಶೋಕದಿಂ (ಶ್ರೀರಾಮಾ. ೩೬-೨೩೨). [ಅನಿಮಿತ್ತ + ಶೋಕ]

**ಅನಿಮಿತ್ತಹಾಸ್ಯ** (ನಾ). ನಿಷ್ಕಾರಣವಾದ ಹಾಸ್ಯ, —ನಗು: ಇನಿಯನಿಂದನಿಮಿತ್ತಹಾಸ್ಯಂ ಜನಿಸಿದೊಡೆ ಸೂರುಳಿಸಿ ಕೇಳುವ ವನಿತೆಗೊರೆದನು ಗುರ್ಜರನು ನಗುತೋಹಿಲನ ಕತೆಯ (ಬಸವು. ೪೩ ಸೂ). [ಅನಿಮಿತ್ತ + ಹಾಸ್ಯ]

**ಅನಿಮಿಷ** (ಗು). ೧. ಕಣ್ಣು ಮಿಟುಕಿಸದ; ರೆಪ್ಪೆ ಹೊಡೆಯದ. (ನಾ). ೨. ಮೀನು: "ವೈಸಾರಿಣಃ . . . ಅನಿಮಿಷಃ, ಮೀನಃ . . . ಈ ೧೩ ಮೀನ್" (ಹಲಾಯು. ೧೦೮-೩೫); ಕೊಳದ ಜಲಮುಯ್ದ್ದೆ ಕಾಯ್ದೆ ಸರೊಳೆ ಕೊಟ್ಟುದಿವಂತೆ ಕುದಿದುವನಿಮಿಷತತಿಗಳ್ (ಗದಾಯು. ೭-೨೧). ೩. ದೇವತೆ: ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದು ಭಕ್ತದೇಹಿಕ ದೇವ ಅನಿಮಿಷನಾಗಿ (ಬಸವ. ೧೪೫); ಅನಿಮಿಷ ನರ ನಾಗ ಲೋಕಕಚ್ಚರಿಯಾಗಿ ನೆನಹಿಗೆ ನಿಲುಕದಂತಿಹುದು (ತ್ರಿಪುಸಾಂ. ೪-೩೬). ೪. ಎಚ್ಚರದಿಂದ ಕೂಡಿರುವವನು; ಜಾಗರೂಕ. ೫. [ಛಂದ] ಅಕ್ಷರಗಣಗಳಲ್ಲಿ ಮೂರು ಲಘುಗಳುಳ್ಳ (⏑⏑⏑) ನಗಣ: ಅನಿಮಿಷ ಭಾನು ದಿವಿಜ ಪವನಂ ಬರೆ ಸುರಪುರ ಪುರಗಣ ಭಾನು ಲಗಂ . . . ಮುನಿಮುತಮೆಂಬುದು (ಛಂದೋಂಬು. ೨-೧೪೮). ೬. ನಿಮಿಷವಲ್ಲದ ಕಾಲ: "ಕಾಲಮುಂ ಯಾದ ಸುಪರ್ವರಿಂತನಿಮಿಷಾಹ್ವಯ" (ನಾನಾರ. ೧೪೯). [ಸಂ.]

**ಅನಿಮಿಷಗತಿ** (ನಾ). ೧. ದೇವತೆಯಾಗಿ ಜನ್ಮವೆತ್ತುವುದು. ೨. [ಜೈನ] ಚತುರ್ಗತಿಗಳಲ್ಲಿ ಒಂದು. [ಅನಿಮಿಷ + ಗತಿ]

**ಅನಿಮಿಷಚಾಪ** (ನಾ). ಇಂದ್ರಧನುಸ್ಸು; ಕಾಮನ ಬಿಲ್ಲು: ಅನಿಮಿಷಚಾಪದಂತೆ ಸಿರಿ ಶಾರದ ನೀರದ ಕಾಂತಿಯಂತೆ ಯೌವನದೆಸಕಂ (ಪಂಚತಂ. ೫೯-೧೪). [ಅನಿಮಿಷ + ಚಾಪ]

**ಅನಿಮಿಷಜಾತ** (ನಾ). ದೇವತೆಗಳ ಸಮೂಹ: ಅನಂತಕೋಟಿ ದಿನೇಶದ್ಯೋತಾಭಮಿರ್ದುದನಿಮಿಷಜಾತಂ ಚಿರನಿಮಿಷಮಾಗೆ ಕಣ್ಬುಳ್ಳುವಿನಂ (ಜಗವಿ. ೧-೪೭). [ಅನಿಮಿಷ + ಜಾತ]

**ಅನಿಮಿಷತೆ** (ನಾ). ೧. ರೆಪ್ಪೆ ಮುಚ್ಚದಿರುವಿಕೆ: ನೀರೆಜೆವಬಲಾಜನದಾ ತೋರಮೊಲೆಗಳಿಗೆಜಗಿದ ಪಾಂಥರ ದಿಟ್ಟಿ ತೋಱಿದುವನಿಮಿಷತೆಯನು (ಕಂನವಿ. ೨-೫೪). ೨. ದೇವತ್ವ. [ಸಂ. ಅನಿಮಿಷತಾ]

**ಅನಿಮಿಷತೆವಡೆ** (ಕ್ರಿ). ರೆಪ್ಪೆ ಮುಚ್ಚದಿರುವಿಕೆಯನ್ನು ಹೊಂದು; ಕಣ್ಣು ತೆರೆ: ನೀಱಿಯೊರ್ವಳನುರಾಗದಿಂ ಭಿಕ್ಷಾನ್ನಮಂ ತಂದು ನೀಡಿ . . . ಪೋಗಲಾಜದೆಯನಿಮಿಷವಡೆದಿರಲ್ಕವಳ ನಾಗಭೂಷಣ ನಿಟ್ಟಿಸಲ್ (ಭಿಕ್ಷಾಚ. ೨-೩೬). [ಅನಿಮಿಷತೆ + ಪಡೆ$_1$]

**ಅನಿಮಿಷತ್ವ** (ನಾ). = ಅನಿಮಿಷತೆ: ಕೆಂಧೂಳಿ ಮಾಣಿಸಿತನಿಮಿಷತ್ವವನಮರಸಂತತಿಯ (ಕುವ್ಯಾದ್ರೋ. ೯-೨೯). [ಸಂ.]

**ಅನಿಮಿಷದ್ರೋಹ** (ನಾ). ೧. ದೇವತೆಗಳಿಗೆ ದ್ರೋಹ ಮಾಡುವವನು; ರಾಕ್ಷಸ: ಅನಿಮಿಷದ್ರೋಹನನಿಮಿಷಮಾರ್ಗದೊಳಿರ್ದ ದುರ್ಗಿಯಂ . . . ನೋಡುತ್ತುಮಿರೆ (ಜಗವಿ. ೩-೧೫ ವ). ೨. ದೇವತೆಗಳ ವಿಷಯದಲ್ಲಿ ದ್ರೋಹ. [ಅನಿಮಿಷ + ದ್ರೋಹ]

**ಅನಿಮಿಷಧ್ವಜ** (ನಾ). ಮೀನಿನ ಗುರುತನ್ನು ಧ್ವಜದಲ್ಲಿ ಉಳ್ಳವನು; ಮನ್ಮಥ: "ಅನಿಮಿಷಧ್ವಜನನಂಗಂ ಮಧುಪ್ರೇಮಿ ಹೃಜ್ಜನನಂ ರತಿಪ್ರಭು . . . ಮಾರನೆನೆ ಮದನನಕ್ಕು" (ಮಂಗರಾ. ೭-೨೨). [ಅನಿಮಿಷ + ಧ್ವಜ]

**ಅನಿಮಿಷನಗ** (ನಾ). ೧. ಮೇರು ಪರ್ವತ. ೨. ಮಂದರ ಪರ್ವತ: ಬೇಱೊಂದೆಳೆ ಬೇಱೊಂದಬ್ಧಿ ಬೇಱೊಂದನಿಮಿಷನಗಮೆತ್ತಾನುಮುಂಟಪ್ಪೊಡಕ್ಕುಂ (ಎಇ. XVI, ೬೧-೧೫; 1081). [ಅನಿಮಿಷ + ನಗ$_2$]

**ಅನಿಮಿಷನೇತ್ರ** (ನಾ). ೧. ರೆಪ್ಪೆ ಮುಚ್ಚದ ಕಣ್ಣುಳ್ಳವನು. ೨. ದೇವತೆ. [ಅನಿಮಿಷ + ನೇತ್ರ]

**ಅನಿಮಿಷಪತಿ** (ನಾ). = ಅನಿಮಿಷೇಂದ್ರ: ಅನಿಮಿಷಪತಿಯಂ ತ್ರಿಜಗಜ್ಜನಪತಿಯಂ ಪೊತ್ತು ಪಥಪರಿಶ್ರಮುಮೊದವಿತ್ತೆನೆ (ಅಜಿಪು. ೪-೭೪). [ಅನಿಮಿಷ + ಪತಿ]

**ಅನಿಮಿಷಪ್ರಕೀರ್ಣಕ** (ನಾ). ೧. ಮೀನುಗಳ ಸಮೂಹ. ೨. ದೇವತೆಗಳ ಸಮೂಹ: ಆ ಮಹಾರ್ಣವಂ . . . ನಾಕಲೋಕದಂತನಿಮಿಷಪ್ರಕೀರ್ಣಕವಮುಂ . . . ಎನಿಸಿದುದು (ಜಗವಿ. ೧-೪೪ ವ). [ಅನಿಮಿಷ + ಪ್ರಕೀರ್ಣಕ]

**ಅನಿಮಿಷಮಂತ್ರಿ** (ನಾ). ದೇವತೆಗಳ ಮಂತ್ರಿ; ಬೃಹಸ್ಪತಿ: ಅನಿಮಿಷಮಂತ್ರಿಯೊಳೊಂದಿದ ಶನಿಯಿಂದಂ ಮಡಕೆಮಾಟ್ಪಿನಡಲುಂ ಬಲ್ಲಂ (ಜಾತತಿ. ೧೫-೫). [ಅನಿಮಿಷ + ಮಂತ್ರಿ]

**ಅನಿಮಿಷಮಾರ್ಗ** (ನಾ). ದೇವತೆಗಳ ಮಾರ್ಗ; ಆಕಾಶ: ಅನಿಮಿಷದ್ರೋಹನನಿಮಿಷಮಾರ್ಗದೊಳಿರ್ದ ದುರ್ಗಿಯಂ . . . ನೋಡುತ್ತುಮಿರೆ (ಜಗವಿ. ೩-೧೫ ವ). [ಅನಿಮಿಷ + ಮಾರ್ಗ]

**ಅನಿಮಿಷಲೋಕ** (ನಾ). ದೇವಲೋಕ; ಸ್ವರ್ಗ: ಅಸಾರವಾದುದಿಂದನಿಮಿಷಲೋಕಂ . . . ಪಾರಿಜಾತಹರಣಂ ಮುರವೈರಿಯಿನಾದ ದೂಸಱಿಂ (ಜಗವಿ. ೧೩-೫೨). [ಅನಿಮಿಷ + ಲೋಕ]

**ಅನಿಮಿಷಲೋಚನ** (ನಾ). = ಅನಿಮಿಷನೇತ್ರ: ವಿನಿಹತ ಸಮಸ್ತ ರಿಪುಕುಳನನಿಮಿಷಲೋಚನದೆ ನೋಡಿ ನೀಡುಂ ಪ್ರಿಯೆಯಂ . . . ಆಶ್ಲೇಷಿಸಿದಂ (ಕವಿರಾ. ೨-೭೪). [ಅನಿಮಿಷ + ಲೋಚನ]

**ಅನಿಮಿಷಸೇವ್ಯ** (ಗು). ೧. ದೇವತೆಗಳಿಂದ ಪೂಜಿಸಲ್ಪಟ್ಟ, —ಸೇವಿಸಲ್ಪಟ್ಟ. ೨. ಮೀನುಗಳಿಂದ ಸೇವಿತವಾದ: ಚಾರುಪಯೋಧರೆ ಮಹಿಮಾಧಾರೆ ಸದಾನಿಮಿಷಸೇವ್ಯರಸಯುತೆ ವರಶೃಂಗಾರಾಜಿತೆಯೆನಿಸುವ ಕಾವೇರಿ ಧರಾಕಾಮಧೇನುವೆನಿಪುದು ಪುಸಿಯೇ (ರಾಜಶೇ. ೨-೮). [ಅನಿಮಿಷ + ಸೇವ್ಯ]

**ಅನಿಮಿಷಾಪಗೆ** (ನಾ). ದೇವಲೋಕದ ನದಿ; ಗಂಗೆ: ಅನಿಮಿಷಾಪಗೆಯನವರಸ್ಥಿಗಳ ಸೋಂಕಿಸಲ್ ಸ್ವರ್ಗಸ್ಥರಹರೆನಲ್ಕೆ (ಪ್ರಾಭರಾ. ೮-೯೫). [ಸಂ. ಅನಿಮಿಷಾಪಗಾ]

**ಅನಿಮಿಷಾರಿ** (ನಾ). ೧. ದೇವತೆಗಳ ಶತ್ರು; ರಾಕ್ಷಸ. ೨. ಮೀನುಗಳ ಶತ್ರು; ಬೆಸ್ತ: ದಶಗ್ರೀವನಂತಿರಲನಿಮಿಷಾರಿಗಳು . . . ಎನಿಸುವ ಕಿರಾತರು ನೆರೆದರು (ಹಚಕಾ. ೫-೪). [ಅನಿಮಿಷ + ಅರಿ₆]

**ಅನಿಮಿಷಾಲಯ** (ನಾ). ದೇವತೆಗಳ ವಾಸಸ್ಥಾನ; ಸ್ವರ್ಗ: "ನಭದಲ್ಲಿ ಅನಿಮಿಷಾಲಯದಲ್ಲಿ ಧರೆಯಲ್ಲಿ ನಾಕಮೆಂದೆನಿಸುವುದು" (ಮಂಗರಾ. ೧೩೫-೭). [ಅನಿಮಿಷ + ಆಲಯ]

**ಅನಿಮಿಷಾವಳಿ** (ನಾ). ೧. ದೇವತೆಗಳ ಗುಂಪು, —ಸಮೂಹ: ಅನಿಮಿಷಾವಳಿ ನೆರೆದುದಿಭಪುರಜನವೊಡನೆ ನಡೆತರಲು ಹರಿ ಬರುತಿರ್ದ ಸೋಲಗಕೆ (ಕುವ್ಯಾಉ. ೮-೪೯). ೨. ಮೀನುಗಳ ಗುಂಪು. [ಅನಿಮಿಷ + ಆವಳಿ]

**ಅನಿಮಿಷಾಶ್ರಯಮೂರ್ತಿ** (ನಾ). ೧. ಸರೋವರ. ೨. ವಿಷ್ಣು: ಅನಿಮಿಷಾಶ್ರಯಮೂರ್ತಿಯನಿಮಿಷಾಶ್ರಯಮೂರ್ತಿಯೆನೆ... ರಂಜಿಸುವ ಕಾಸಾರಮಂ ಸರ್ವಮಂಗಳೆ ಕಂಡಳು (ಜೈಮಿಭಾ. ೧೫-೧೨). [ಅನಿಮಿಷ + ಆಶ್ರಯ + ಮೂರ್ತಿ]

**ಅನಿಮಿಷೇಂದ್ರ** (ನಾ). ದೇವತೆಗಳ ಒಡೆಯ; ಇಂದ್ರ: ತಾರಕಾಸುರನ ಬಾಧೆಗಳ್ಗೆ ಅನಿಮಿಷೇಂದ್ರಾದಿ ದಿಕ್ಪಾಲರೆಲ್ಲರು ಕೂಡಿ ಧನಪಸಖನೆಚ್ಚಜಿಸಿ ದೂಱ ಪೇಳುವರಾರು (ಪ್ರೌಢರಾ. ೧೧-೧೨). [ಅನಿಮಿಷ + ಇಂದ್ರ]

**ಅನಿಮೇಷ** (ನಾ). ೧. ದೇವತೆ: ಅನಿಮೇಷರಕ್ಷಣಾರ್ಥಂ ನಿನಗೆ ತನು ಗ್ರಹಣಂ . . . ಕುಶೇಶಯನಯನಾ (ಜಗವಿ. ೩-೧೦೩). ೨. ಮೀನು: ಮಕರಾಂಕಿತಮುರ್ವರೇಶ್ವರಾಂಘ್ರಿವೊಲ್ ಅನಿಮೇಷ ಕೂರ್ಮ ಲಲಿತಂ . . . ಸರೋವರಂ (ಕಾದಂಪೂ. ೬೪೨). [ಸಂ.]

**ಅನಿಮೇಷಾಧಿಪತಿ** (ನಾ). = ಅನಿಮಿಷೇಂದ್ರ: ಅನಿಮೇಷಾಧಿಪತಿ ಸಹಸ್ರನೇತ್ರನಾಗಲ್ ಸಹಸ್ರಕರನಾದಂ (ಅಜಿಪು. ೫-೧೯). [ಅನಿಮೇಷ + ಅಧಿಪತಿ]

**ಅನಿಮೇಷಾವಳಿ** (ನಾ). = ಅನಿಮಿಷಾವಳಿ: ಅನಿಮೇಷಾವಳಿ ಮಾಳೆಗಟ್ಟೆ ತರದಿಂ ದುಗ್ಧಾಬ್ಧಿಯಂ ಮುಟ್ಟೆ (ಸುಕುಮಾ. ೧-೬೬). [ಅನಿಮೇಷ + ಆವಳಿ]

**ಅನಿಮೇಷಾಹಿತ** (ನಾ). = ಅನಿಮಿಷಾರಿ ೧: ಅನಿಮೇಷಾಹಿತನಾಸ್ಯಗಹ್ವರವಿನಿರ್ಯಲ್ಲೋಹಿತಂ . . . ಬಿಟ್ಟಿರ್ದಂ (ಜಗವಿ. ೪-೫೮). [ಅನಿಮೇಷ + ಅಹಿತ]

**ಅನಿಮ್ನ** (ಗು). ಆಳವಿಲ್ಲದ. 'ಅನಿಮ್ನನಾಭಿ' ಪರಾ. [ಸಂ.]

**ಅನಿಮ್ನನಾಭಿ** (ಗು). ಆಳವಿಲ್ಲದ ಹೊಕ್ಕುಳುಳ್ಳ: ಸಮಪಾರ್ಶ್ವನುಂ ಅಜಕುಕ್ಷಿಯುಂ ಗೋಘೋತ್ರಿಷ್ಟನುಂ ಮೋಹಜಘನಾಪರನುಂ ಅನಿಮ್ನನಾಭಿಯುಂ (ಆದಿಪು. ೧೨-೫೬ ವ). [ಅನಿಮ್ನ + ನಾಭಿ]

**ಅನಿಯತ** (ಗು). ನಿಯಮವಿಲ್ಲದ; ಹಿಡಿತಕ್ಕೆ ಸಿಕ್ಕದ; ಅನಿಶ್ಚಿತ. [ಸಂ.]

**ಅನಿಯತಲಿಂಗ** (ನಾ). [ವ್ಯಾಕ] ಲಿಂಗವು ಕ್ಲುಪ್ತವಲ್ಲದ್ದು; ನಿಯತವಾದ ಲಿಂಗವಲ್ಲದ್ದು. ವಾಚ್ಯಲಿಂಗ, ವಿಶೇಷ್ಯಾಧೀನಲಿಂಗ ಹೋ. [ಅನಿಯತ + ಲಿಂಗ]

**ಅನಿಯತವೃತ್ತಕ್ರಮ** (ಗು). ನಿಯಮಬದ್ಧವಾದ ನಡತೆಯಿಲ್ಲದ; ಕ್ಲುಪ್ತವಾದ ವೃತ್ತದಲ್ಲಿ ಸಂಚರಿಸದಿರುವ: ಪರಮೋದಯರಿರ್ಕಮಲಾಕರಬೋಧಕರಿರ್ದಿನೇಶನುಂ ನೀನುಂ ಭಾಸ್ಕರನನಿಯತವೃತ್ತಕ್ರಮನುನರಸಾ ನಿನ್ನಂತೆ ನಿಯತವೃತ್ತಿಸ್ಥಿತನ್ನೆ (ಕವಿರಾ.೩-೪೧). [ಅನಿಯತ + ವೃತ್ತ + ಕ್ರಮ]

**ಅನಿಯತವೃತ್ತಿ** (ನಾ). ನಿಯಮವಿಲ್ಲದ ಸ್ಥಿತಿ: ಘನಮೆರಡನೆಯದಜಿಳೊಳಮಾಜನೆಯ ವಿಭಕ್ತಿಯೊಳಮೊಳವು ಗುರುಲಘುಭೇದಂ ಅನಿಯತವೃತ್ತಿಯನಱಿದದನನುಮಾರ್ಗಕ್ರಮದೆ ಸಯ್ತುಮಾಡುಗೆ ನಿಪುಣಂ (ಕವಿರಾ. ೨-೧೪). [ಅನಿಯತ + ವೃತ್ತಿ]

**ಅನಿಯತಿಕೆ** (ನಾ). ನಿಯಮವಿಲ್ಲದಿರುವಿಕೆ: ಅನಿಯತಿಕೆಯಿಂದೆ ನಡೆಸಲ್ಕಿನಿತಾದುದು ಶಿಕ್ಷೆಗೆಟ್ಟ ಕಾರಣದಿಂದಂ (ಧರ್ಮಾಮೃ. ೨-೮೧). [< ಸಂ. ಅನಿಯತಿಕಾ?]

**ಅನಿಯಮಿತ** (ಗು). ನಿಯಮಕ್ಕೆ ಒಳಪಡದ; ಅನಿಶ್ಚಿತವಾದ: ಒಂದುದಿನ ಬೆಳಿಗ್ಗೆ, ಒಂದುದಿನ ಸಂಜೆಗೆ, ಒಂದುದಿನ ಮಧ್ಯಾಹ್ನಕ್ಕೆ ಹೀಗೆ ಅನಿಯಮಿತವಾಗಿ ಊಟಮಾಡಬಾರದು (ಮುಂಬಯಿ. ೪-೩೩). [ಸಂ.]

**ಅನಿಯಮೋಪಮೆ** (ನಾ). [ಕಾವ್ಯಮೀ] ಒಂದು ಕಾವ್ಯಾಲಂಕಾರ; ಒಂದು ವಸ್ತುವಿಗೆ ಒಂದೇ ಉಪಮಾನವೆಂಬ ನಿಯಮವಿಲ್ಲದೆ ಹಲವು ಉಪಮಾನಗಳನ್ನು ಸೂಚಿಸುವುದು: ಕಮಳಮಿದನ್ನೆಗಮಿನಿನ್ನ ಮುಖದೊಳೋರಂತೆ ಪೆಱದುಮಿದಱೊಳ್ ಸದೃಶಂ ಸಮವಾಯಮುಳ್ಳೊಡೆಲ್ಲಂ ಸಮನಿಸುಗಂತೆಂಬುದನಿಯಮೋಪಮೆಯಕ್ಕುಂ (ಕವಿರಾ. ೩-೬೫). [ಅನಿಯಮ + ಉಪಮೆ]

**ಅನಿಯೋಗ** (ನಾ). ೧. ನಿಯೋಗವಲ್ಲದ್ದು. ೨. [ವ್ಯಾಕ] ತನ್ನ ನಿರ್ದಿಷ್ಟವಾದ ಅರ್ಥವನ್ನು ಕಳೆದುಕೊಂಡಿರುವುದು: ಅವಧಾರಣೆಯ ಎಕಾರಂ ತನ್ನ ನಿಯತಾರ್ಥಮಂ ಬಿಟ್ಟು ಅನಿಯೋಗಮಾದಲ್ಲಿಯುಂ . . . ಸಂಧಿಯುಂಟು (ಶಮದ. ೬೪ ವೃತ್ತಿ). [ಸಂ.]

**ಅನಿಯೋಗಸಂಧಿ** (ನಾ). ಅವಧಾರಣೆಯ ಎಕಾರ ಅನಿಯೋಗಸ್ಥಿತಿಯಲ್ಲಿದ್ದಾಗ ಆಗುವ ಸಂಧಿ: ಅನಿಯೋಗ ಸಂಧಿಗೆ – ಮಾಮರನಲ್ಲದಿಲ್ಲ ತನಿಗಂಪಿನ ಮಲ್ಲಿಗೆಯಲ್ಲದಿಲ್ಲ (ಶಮದ. ೬೪ ಪ್ರಯೋ). 'ನಿಯೋಗ' ಪರಾ. [ಅನಿಯೋಗ + ಸಂಧಿ]

**ಅನಿರೀಕ್ಷಿತ** (ಗು). ನಿರೀಕ್ಷಿಸದೆ ಉಂಟಾದ: ಅನಿರೀಕ್ಷಿತವಾದ ಇಲ್ಲದ ಗಡಿಬಿಡಿಯಲ್ಲಿಯೇ ಆ ಭಾನುವಾರ ಮುಗಿದುಹೋಗಿತ್ತು (ಕತ್ತಬೆ.೨). [ಸಂ.]

**ಅನಿರುದ್ಧ** (ಗು). ೧. ತಡೆಯಿಲ್ಲದ. (ನಾ). ೨. ಪ್ರದ್ಯುಮ್ನನ ಮಗ; ಶ್ರೀಕೃಷ್ಣನ ಮೊಮ್ಮಗ: ಮತ್ತಮಾ ವನಂ . . . ಭವನದಂತನಿರುದ್ಧಬಲಕೃಷ್ಣಸಾರಸಮಂಚಿತಮುಂ (ರಾಜಶೇ. ೫-೭೪ ವ). ೩. [ವಿಶಿಷ್ಟಾ] ವಾಸುದೇವ, ಸಂಕರ್ಷಣ, ಅನಿರುದ್ಧ, ಪ್ರದ್ಯುಮ್ನ ಎಂಬ ನಾಲ್ಕು ವ್ಯೂಹಗಳಲ್ಲಿ ಒಂದು. [ಸಂ.]

**ಅನಿರ್ಜಿತ** (ಗು). ಗೆಲ್ಲಲ್ಪಡದ. 'ಅನಿರ್ಜಿತೇಂದ್ರಿಯ' ಪರಾ. [ಸಂ.]

**ಅನಿರ್ಜಿತೇಂದ್ರಿಯ** (ನಾ). ಜಿತೇಂದ್ರಿಯನಲ್ಲದವನು; ಇಂದ್ರಿಯಗಳಿಗೆ ವಶನಾದವನು: ಅನಿರ್ಜಿತೇಂದ್ರಿಯನಂ . . . ಗರ್ಜಿತನನೆನ್ನಂ ಸಲಹು ಮದಗರ್ವಮಂ ಹರಿಸಿ (ಬಸವಪು. ೨೨-೫೧). [ಅನಿರ್ಜಿತ + ಇಂದ್ರಿಯ]

**ಅನಿರ್ಣೀತ** (ಗು). ನಿರ್ಣೀತವಾಗಿಲ್ಲದ. [ಸಂ.]

**ಅನಿರ್ಣೇಯ** (ಗು). ೧. ನಿರ್ಣಯ ಮಾಡಲು ಆಗದ. (ನಾ). ೨. ನಿರ್ಣಯ ಮಾಡಲು ಆಗದುದು: ಕಾಯ ನಿರ್ಣೇಯವದರೊಳು ಮನವನಿರ್ಣೇಯ ಸ್ನಾಯು ಸಂಖ್ಯೇಯ ಜೀವಳಮಸಂಖ್ಯೇಯಮೇಯಾಪ್ರಮೇಯ ಮಿಶ್ರಣವಿಂತು ನರಜಂತು ನೇಯವದು ವಿಶ್ವಕಂ (ಮಂಕುಕ. ೧೦೨). [ಸಂ.]

**ಅನಿರ್ದಿಷ್ಟ** (ಗು). ನಿರ್ದಿಷ್ಟವಲ್ಲದ; ಖಚಿತವಲ್ಲದ: ಅನಿರ್ದಿಷ್ಟ ಭವಿಷ್ಯತ್ತೆ ನಮ್ಮ ಮುಂದಿರುವಾಗ . . . ಮಕ್ಕಳಿಗೆ ಕೇವಲ ಸಾಂಪ್ರದಾಯಕ ಶಿಕ್ಷಣದಿಂದ ಅಷ್ಟು ಅನುಕೂಲವಾಗಲಾರದು (ಶಿಕ್ಷದ. ೧೮). [ಸಂ.]

**ಅನಿರ್ಬಂಧ** (ಗು). ನಿರ್ಬಂಧವಿಲ್ಲದ: ಆ ಮಾತಿನ ನಡು ನಡುವೆ ಆ ಅನಿರ್ಬಂಧಸ್ನೇಹವಂತಳಾದ ವೇಣೂನ ತಾಯಿಯ ಪ್ರಸ್ತಾಪವೂ ಮತ್ತೆ ಮತ್ತೆ ತಲೆಯೆತ್ತತೊಡಗಿತು (ಇಪ್ಪಕ. ೩೨೦). [ಸಂ.]

**ಅನಿರ್ವಚನಬೋಧ್ಯ** (ನಾ). ಮಾತಿನಿಂದ ತಿಳಿಸಲಾಗದುದು : ಮರ್ತ್ಯಪೃಥಿವೀತತ್ತ್ವದೊಳ್ ಪ್ರಕಟನಾಸಾಧ್ಯಮಂ, ಅನಿರ್ವಚನ ಬೋಧ್ಯಮುಂ, ಪ್ರತಿಮಾವಿಧಾನದಿಂ (ಶ್ರೀರಾಮಾ. ೩-೬೬).
[ಸಂ. (ಅನಿರ್ವಚನ + ಬೋಧ್ಯ)]

**ಅನಿರ್ವಚನೀಯ** (ಗು). ೧. ಹೀಗೆ ಎಂದು ಹೇಳಲಾಗದ; ವರ್ಣಿಸಲು ಶಕ್ಯವಲ್ಲದ: ಮತ್ತೆ ಮತ್ತೆ ನೋಡಿದಡದಂ, ಸಾಮಾನ್ಯಮಂ, ಆ ಅನಿರ್ವಚನೀಯ ದೃಶ್ಯಮಂ! (ಶ್ರೀರಾಮಾ. ೩೪೫-೧೩೭). (ನಾ). ೨. ದೇವರು. ೩. ಮಾಯೆ. [ಸಂ.]

**ಅನಿರ್ವಚನೀಯವಾದ** (ನಾ). [ಅದ್ವೈತ] ಹೇಳಲಸಾಧ್ಯವಾದುದು ಎಂದು ತರ್ಕಿಸುವ ವಾದ; ಮಾಯಾವಾದ: ಅನಿರ್ವಚನೀಯವಾದವೆಂಬ ತಮ್ಮದೇ ಒಂದು ಹೊಸ ಪ್ರಕಾರವನ್ನು ಸೇರಿಸಿಕೊಂಡು ಅದೇ ಭಾಷ್ಯಾರ್ಥವೆಂದು ವರ್ಣಿಸಿರುತ್ತಾರೆ (ಬ್ರಹ್ಮಭಾ. ೨-೧೪); ಬ್ರಹ್ಮವು ವಿಚಿತ್ರ ಪ್ರಪಂಚರೂಪವಾಗಿ ಆಗುವುದು ಮತ್ತು ಕಾಣುವುದು. ಇದೇ ಅನಿರ್ವಚನೀಯವಾದ (ಹಿಂದಸಾ. ೨೦೭).
[ಅನಿರ್ವಚನೀಯ + ವಾದ]

**ಅನಿರ್ವಾಚ್ಯ** (ಗು). ೧. ವಿವರಿಸಿ ಹೇಳಲು ಸಾಧ್ಯವಿಲ್ಲದ : ಸೂರ್ಯನ ಮೇಲೆ ಅನಿರ್ವಾಚ್ಯವಾದ ಜ್ವಾಲೆಯು ಸರ್ವಕಾಲವೂ ಉರಿಯುತ್ತಿರುತ್ತದೆ (ಮುಂಬಯಿ. ೬-೩೬). (ನಾ). ೨. ದೇವರು. ೩. ಮಾಯೆ. ೪. ಜಗತ್ತು. [ಸಂ.]

**ಅನಿಲ,** ಅನಿಳ (ನಾ). ೧. ಗಾಳಿ; ವಾಯು : "ಗಾಳಿಯೆರಲನಿಲನೆನಲ್ ಕಂಪುವಡೆದೆಸೆವ ವಾಯುಗೆ" (ಕವಿಕಂ. ೩೮); ಜೀವಾನಿಲವ್ಯೋಮಾಂಬು ಪ್ರಕರಂಗಳಿಂ ಸಕಲಮಂ ರಕ್ಷಿಪ್ಪ ಸರ್ವೇಶ (ಪಂಪಾಶ. ೧); ಭೂಮಿಯು ಪೂರ್ವದಲ್ಲಿ ಘನವಾಗಿರದೆ ಅನಿಲಗಳ (Gases) ಗೋಲವಾಗಿತ್ತು (ಬಾಲಪ್ರ. I, ೭). ೨. ವಾಯುದೇವ. 'ಅನಿಲತನಯ' ಪರಾ. ೩. ಮರುತ್ತುಗಳೆಂಬ ದೇವಗಣಗಳಲ್ಲಿ ಒಬ್ಬ. ೪. ವಾತರೋಗ; ವಾಯುರೋಗ. ೫. ಸ್ವಾತಿ ನಕ್ಷತ್ರ. ೬. [ಛಂದ] ಸಗಣ (∪∪–) ಎಂಬ ಅಕ್ಷರಗಣ : ಇನಾನಿಲ ದಿನೇಶ ಮಾರುತ ಪಯೋಲಗಂಗಳ್ ಬೆಡಂಗ ನಾಲ್ಕು ನಿಲೆ... ಪೃಥ್ವಿಯೆಂಬ ನಾಮ (ಛಂದೋಂಬು. ೨-೧೧೪). **ಅನಿಳ:** ೨. 'ಅನಿಳತನಯ', 'ಅನಿಳಾಧ್ವ' ಪರಾ. [ಸಂ.]

**ಅನಿಲಕ** (ನಾ). ಚಿತ್ರಗಳಿಗೆ ಬಣ್ಣಹಾಕುವುದರಲ್ಲಿ ಒಂದು ರೀತಿ : ಅಱುಂ ತೆಱದ ಮೊದಲ ಬಣ್ಣಮುಮನವನೋರೊಂದಱೊಳ್ಬೆರಸುವ ಪರಿಣತಿಯುಮನನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಕಮುದ್ವರ್ತನಂ ಚಿತ್ರಪ್ರವರ್ತನಮೆಂಬಾಱುಂ ತೆಱದಣ್ಕೆಯುಮಂ ಚಿತ್ರಚಿತ್ರಾರ್ಥ ಚಿತ್ರಾಭಾಸಮೆಂಬ ಮೂಱುಂ ಪ್ರಕಾರಮುಮಂ (ಮಲ್ಲಿಪು. ೫-೪೨). [ಸಂ.]

**ಅನಿಲಗಂಧಿ** (ನಾ). ಕೆಂಪುರತ್ನಗಳಲ್ಲಿ ಒಂದು ಬಗೆ : ಗವಾಂಗವೆಂಬುವದು ಅನಿಲಗಂಧಿಯೆಂಬುವದು ಯಿವು ಯರಡುಬಗೆಯಾದ ಕೆಂಪುರತ್ನವು ಶೂದ್ರಜಾತಿಯು (ಸೌಗಂಧಿ. ೩೬೬-೩೩). [ಸಂ.]

**ಅನಿಲಗರ್ಭ** (ಗು). ಗಾಳಿಯನ್ನು ಒಳಕೊಂಡ : ಎನುತ ಸುರಿದನು ಸರಳಸಾರವನನಲಗರ್ಭದ ಬಾಯಧಾರೆಯನನಿಲಗರ್ಭದ ಗಱಿಗಳಶನಿಯ ಗರ್ಭಮಿಂಟೆಗಳ (ಕುವ್ಯಾವಿ. ೮-೩೫). [ಅನಿಲ + ಗರ್ಭ]

**ಅನಿಲಜ** (ಗು). ೧. ವಾಯುವಿನಿಂದ ಹುಟ್ಟಿದ. (ನಾ). ೨. ಭೀಮಸೇನ : ಚತುರಂಗಮಂ ನಿರ್ನಾಮವೆನಿಸಿ ವಾಜಿಗ್ರಹಣಕಾರ್ಯಮಂ ನಿರ್ಣಯಿಸಿಕೊಡುವೆನಿತ್ತಪುದೆಮಗೆ ವೀಳೆಯವನೆಂದನಿಲಜಂ ನುಡಿದನು (ಜೈಮಿಭಾ. ೨-೪೨). ೩. ಆಂಜನೇಯ : ಶರಧಿಯಂ ದಾಂಟಿ ಮೇದಿನಿಯ ಸುತೆಗಂಕಿತದ ಮುದ್ರಿಕೆಯನಿತ್ತು ... ಲಂಕೆಯಂ ಸುಟ್ಟು ಬಂದೊಸಗೆವೇಳ್ದನಿಲಜನನಸುರಾರಿ ಮನ್ನಿಸಿದನು (ಜೈಮಿಭಾ. ೧೮-೬). [ಸಂ.]

**ಅನಿಲತನಯ,** ಅನಿಳತನಯ (ನಾ). ೧. ವಾಯುಪುತ್ರ. ೨. ಭೀಮಸೇನ. ೩. ಆಂಜನೇಯ : ಮನೋಜನಿತಮುದನನಿಲತನಯನನನ್ನೃತವಚನ ಪ್ರಪಂಚನಿಂತಿರೆ ನುಡಿದಂ (ಕವಿರಾ. ೨-೪೦). **ಅನಿಳತನಯ :** ೩. ಎರೆದ ಮನುಜಂಗೆ ಸುರಭೂಮಿರುಹಂ ಶರಣೆಂದವಂಗೆ ಕುಳಿಶಾಗಾರಂ ಪರವನಿತೆಗನಿಳತನೆ[ರಿನ]ಯಂ ಧುರದೊಳು ಪೊಣರ್ದಂಗೆ ಮಿತ್ತು ವಿನಯಾದಿತ್ಯಂ (ಎಕ. V, ಚನ್ನರಾ. ೧೪೮-೧೧; 1094). [ಅನಿಲ + ತನಯ]

**ಅನಿಲದ್ವಾರ** (ನಾ). ವಾತಾಯನ; ಕಿಟಕಿ : ದ್ವಾರಬಂಧಕವಾಟಕನಿಲದ್ವಾರ ಗರ್ಭಾಗಾರಯುತ (ಬಸವು. ೧೮-೩೯). [ಅನಿಲ + ದ್ವಾರ]

**ಅನಿಲಪಥ** (ನಾ). ವಾಯುಮಾರ್ಗ; ಆಕಾಶ: ರಸೆ ಪತ್ತಿತ್ತೆತ್ತಮಾಕಾಶದೊಳನಿಲಪಥಂ ಧಾರಿಣೀ ಚಕ್ರದೊಳ್ ಕಾಳಸೆಗೊಂಡತ್ತೆಂಬಿನಂ ಮಂದಯಿಸಿ (ಆದಿಪು. ೧೪-೯೫). [ಅನಿಲ + ಪಥ]

**ಅನಿಲಪ್ರಿಯ** (ನಾ). ಗಾಳಿಗೆ ಪ್ರೀತಿಪಾತ್ರನಾದವನು : ಅಗ್ನಿ.
[ಅನಿಲ + ಪ್ರಿಯ]

**ಅನಿಲಪ್ರಿಯಾತ್ಮಜ** (ನಾ). ೧. ವಾಯುವಿನ ಪ್ರಿಯಪುತ್ರ. ೨. ಆಂಜನೇಯ. ೩. ಭೀಮಸೇನ: ಶುಚಿ ಸುರಸಿಂಧುಜಂ ಸುರಸರಿದ್ಭವನಿಂದನಿಲಪ್ರಿಯಾತ್ಮಜಂ ಶುಚಿ (ಎಕ. VII, ಶಿಕಾರಿ. ೧೨೪-೩೧; 1077).
[ಅನಿಲಪ್ರಿಯ + ಆತ್ಮಜ]

**ಅನಿಲಬಾಂಧವ** (ನಾ). ಗಾಳಿಯ ನಂಟ; ಅಗ್ನಿ : ಎಡೆಯೆಡೆಗೆ ಮಾಱಾಂತು ತಱುಬಿದ ದಡಿಗರಕ್ಕಸಭಟರ ಬೀದಿಯೊಳಡಸಿ ಸದೆವುತ ಸದನ ಸದನದೊಳನಿಲಬಾಂಧವನ ಬಿಡಿಸುತತಿವೇಗದಲಿ ... ಕಲಿ ಹನುಮ (ತೊರರಾ. ೫-೮-೪೧). [ಅನಿಲ + ಬಾಂಧವ]

**ಅನಿಲಮಾರ್ಗ** (ನಾ). = ಅನಿಲಪಥ. [ಅನಿಲ + ಮಾರ್ಗ]

**ಅನಿಲಯೋಗ** (ನಾ). ಪ್ರಾಣಾಯಾಮವೇ ಮೊದಲಾದ ಅಭ್ಯಾಸ : ಮೃದುಚಿತ್ತವೆಂದು ಕಠಿಣಚಿತ್ತವೆಂದುಂಟು ಮೃದುವಿಗನಿಲಯೋಗಬೇಡ ಮೃದುಗೆಟ್ಟ ಕಠಿನಚಿತ್ತವ ವಾಯುಜಯದಿಂದ ಮೃದುಮಾಡಿ ಬಗ್ಗಿಸಬೇಕು (ಭರಚ. ೬೯-೨೦). [ಅನಿಲ + ಯೋಗ]

**ಅನಿಲವೇಗ** (ನಾ). ೧. ವಾಯುವೇಗ. ೨. ವಾಯುವಿನಂತೆ ವೇಗವುಳ್ಳವನು : ನೆರವಿ ನೋಡಲು ಭೂಚರತ್ವದಿ ಪೊರಳಿ ಪೊರಳ್ದುರೆ ತೆರಳ್ವಲಿಂಗೋತ್ಕರವನನಿಲವೇಗದೊಳೆಡೆವಿಡದೆ ನಡೆವ ಲಿಂಗಚಯ (ಬಸವು. ೫೭-೪೫). [ಅನಿಲ + ವೇಗ]

**ಅನಿಲಸ್ಥಿತಿ** (ನಾ). ವಾಯುರೂಪ; ಅನಿಲರೂಪ; ಅನಿಲದ ಸ್ಥಿತಿ : "ಶಾಖದ ಮೂಲಕ ಘನಸ್ಥಿತಿಯಿಂದ ಅನಿಲಸ್ಥಿತಿಗೆ ತಂದು ಮತ್ತೆ ತಂಪಿಸಿ ಘನಸ್ಥಿತಿಗೆ ತರು; ಘನ ಭಟ್ಟಿಯಿಳಿಸು" (Sublimate. ಇಂಕನಿ).
[ಅನಿಲ + ಸ್ಥಿತಿ]

**ಅನಿಲಾತ್ಮಜ** (ನಾ). = ಅನಿಲತನಯ : ಮಾರ್ಗಮೇರ್ವಾಗಳನಿಲಾತ್ಮಜಂ, ಮಿತಭಾಷಿ (ಶ್ರೀರಾಮಾ. ೨೯೦-೧೪೧). [ಅನಿಲ + ಆತ್ಮಜ]

**ಅನಿಲಾಪ್ತ** (ನಾ). = ಅನಿಲಪ್ರಿಯ : ಹರಿ ರಂಭಾಪರಿರಂಭಿಯಾದವನನಿಲಾಪ್ತಂ ಪುಂಡರೀಕಾಶ್ರಯುಸ್ಥಿರನಾಚ್ಛಾಯೆಯೊಳೊಂದಿದಂ (ರಾಜಶೇ. ೫-೩೧). [ಅನಿಲ + ಆಪ್ತ]

**ಅನಿಲಾಮರ** (ನಾ). [ಜೈನ] ತೀರ್ಥಂಕರರ ವಿಹಾರ ಮಾರ್ಗವನ್ನು ಶೋಧಿಸುವ ದೇವತೆಗಳ ಗುಂಪು : ಆ ದಿವಿಜಾಧಿನಾಥ ಮತದಿಂ ... ತಣ್ಣಗೆ ಕಮ್ಮನಾಗೆ ಮೇಲಾದನಿಲಾಮರರ್ ಸುಟಿದು ಬೀಸುವರ್ (ಶಾಂತಿಪು. ೧೨-೨೨). [ಅನಿಲ + ಅಮರ]

**ಅನಿಲಾಹತ** (ಗು). ಗಾಳಿಯಿಂದ ಹೊಡೆಯಲ್ಪಟ್ಟ; ಗಾಳಿಯ ಪೆಟ್ಟಿಗೆ ಗುರಿಯಾದ : ಅನಿಲಾಹತಕೇತನಾಳಿ ಸೊಗಯಿಸಿ ತೋರ್ಕುಂ (ಕವಿರಾ. ೧-೯೫). [ಅನಿಲ + ಆಹತ]

**ಅನಿಲೀಕರಣ** (ನಾ). ಅನಿಲರೂಪಕ್ಕೆ ತಿರುಗಿಸುವುದು ; ದ್ರವ ಅಥವಾ ಘನರೂಪದ ವಸ್ತುವನ್ನು ಆವಿಯಾಗಿ ಮಾರ್ಪಡಿಸುವುದು : ಇಮರುವುದು ಎಂದರೆ ದ್ರವರೂಪದ ನೀರನ್ನು ಆವಿಯ ರೂಪವಾಗಿ ಮಾರ್ಪಡಿಸುವುದು– ಇದೇ ಅನಿಲೀಕರಣ (ಭೂವಿವ. ೭೦). [ಸಂ.]

**ಅನಿಲೀಕರಿಸು** (ಕ್ರಿ). ಅನಿಲರೂಪಕ್ಕೆ ತರು ; ಅನಿಲಸ್ಥಿತಿಗೆ ತರು ; ಅನಿಲೀಕರಿಸು ; ಬಾಷ್ಪೀಕರಿಸು (sublimate. ಇಂಕನಿ).
[ಅನಿಲೀಕರಣ + –ಇಸು$_3$]

**ಅನಿವ, ಅನುವು$_2$** (ನಾ). ನಿರ್ಬಂಧ ; ಒತ್ತಾಯ : ಮತ್ತಾವಾಗಳಡಿಗಡಿಗನಿವಿಸಲೆಮ್ಮನಿವಕ್ಕೆ ಸೈರಿಸದೆ . . . ಪೋಗಿಮಾಂ ಬರ್ಪುದಿಲ್ಲ (ಕಾದಂಉ. ೪೪೭). **ಅನುವು$_2$** : ದೂತಿಯಂ ಬೈದು ತಾಯನುವಿಂಗಂ ಮೊಗಸೋಲದಾವ ವಿಟರುಂ ಕೊಟ್ಟೊತ್ತೆಯಂ ಕೊಳ್ಳದಿರ್ಪನೆಗಂ (ಜಗವಿ. ೧೬–೧೨೦). ‘ಅನಿವಂಗೆಯ್’, ‘ಅನಿವಿಸು$_1$’ ಪರಾ. [?]

**ಅನಿವಂಗೆಯ್, ಅನುವಂಗೆಯ್** (ಕ್ರಿ). ೧. ನಿರ್ಬಂಧಪಡಿಸು ; ಒತ್ತಾಯಮಾಡು ; ಬಲಾತ್ಕರಿಸು : ನಿನಗೀ ವೈರಾಗ್ಯಮೇಕೊರ್ಮೊದಲೊಗೆದುದು . . . ನಿನ್ನನಾವೀ ತೆಱದೆ ನಿಲಿಸಿ ಪೋದಂದು ರಾಜೇಂದ್ರಚಂದ್ರಾಂಕನ ತಾರಾಪೀಡ ಭೂಪಾಲಕನ ಮುಳಿಸನಾರಾಂಪರೇಟ್ಪೋಪಮೆಂದಿಂತನಿವಂಗೆಯ್ಯುತ್ತಿರಲ್ಕಂ ನುಡಿಯನೆ ಶುಕನಾಸಾತ್ಮಜಂ(ಕಾದಂಉ. ೪೪೭); ಪತಿಚಿತ್ತಾನರ್ದ ನಿದ್ರಾವಿರಹಿತೆಯಿರುಳಿಂತಪ್ಪುದಂ . . . ಗಱಪುವ ಗಿಳಿಯಂ ತೊಂಕಡಂ ಕಾಣಲೀಯಳ್ ಕತೆಯಂ ಪೇೞೆಂದವಳ್ ಸಾರಿಕೆಯುಮನನಿವಂಗೆಯ್ದು ಕಣ್ಣೆಯ್ಯಲೀಯಳ್ (ಅರ್ಧನೇ. ೩–೧೦೭). ೨. ಆಕ್ಷೇಪಿಸು; ವಿರೋಧವಾಗಿ ನುಡಿ: ಅತಿಸ್ನೇಹಮುಂ ಮೋಹಮುಂ ತಿಣ್ಣಮಾಗೆ ನಿತ್ಯ(ಚ್ಚ)ಮಾತನ ಬೀಯಮುಂ ಸಲಿಸಿ ಕೊಂಡಾಡುವುದ ಕರ್ಣ್ಣಂಗಳ್ ಎಮ್ಮುಳ್ಳುದೆಲ್ಲಮಂ ನಿನ್ನ ಕಿಱಿಯ ಮಗನ ಬೀಯಕ್ಕೆ ಕೊಟ್ಟಪೆಮ್ಮಂ ಕಿಡಿಸಿದಪ್ಪೆಯೆಂದಬ್ಬೆಯಂ ನಿಚ್ಚನಿಚ್ಚಮನಿವಂಗೆಯ್ವ ಧನ್ಯಕುಮಾರನಂ ತಾಯ್ ಕರೆದಿಂತೆಂದಳ್ (ಜೀವಸಂ. ೧೯೫–೨೭ ವ). **ಅನುವಂಗೆಯ್** : ೧. ಅನುವಂಗೆಯ್ದುದಱಿಯೆಂಬ ತಾಯ ನುಡಿಯಂ ಕೈಕೊಂಡೆನೇ (ಆದಿಪು. ೧೨–೩೭). ‘ಅನಿವಿಸು$_1$’ ಪರಾ.
[ಆನಿವ + ಗೆಯ್ (< ಕೆಯ್$_1$)]

**ಅನಿವರ್ತಿ** (ಗು). ೧. ಮತ್ತೆ ಒದಗದ. (ನಾ). ೨. ಹಿಂತಿರುಗದವನು. ೩. ರಣದಿಂದ ವಿಮುಖನಾಗದವನು ; ಧೀರ. ೪. ವಿಷ್ಣುವಿನ ಸಹಸ್ರನಾಮಗಳಲ್ಲಿ ಒಂದು. [ಸಂ. ಅನಿವರ್ತಿನ್]

**ಅನಿವಾರ** (ಗು). ನಿವಾರಿಸಲಾಗದಂಥ; ಅತಿಶಯ; ಬಹಳ: ರಾಮನ ಮೇಲಿರುವ ಭರತನ ಅಕೃತ್ರಿಮವಾದ ಅನಿವಾರಪ್ರೇಮವನ್ನು ನೋಡಿದರೆ (ತುಳಸಿ. ೨೦೦). [ಸಂ.]

**ಅನಿವಾರಣ** (ನಾ). ನಿವಾರಿಸಲು ಶಕ್ಯವಿಲ್ಲದುದು ; ತಡೆಯಲಾಗದುದು : ತಾನೆ ಮತ್ತೆಱಕಮನಾಂತುದೀಗಳನಿವಾರಣಮೆನ್ನಯ ಚಿತ್ತವಾರಣಂ (ಚಂದ್ರಪು. ೪–೧೫). [ಸಂ.]

**ಅನಿವಾರಣೀಯ** (ನಾ). ನಿವಾರಿಸಲು ಸಾಧ್ಯವಿಲ್ಲದುದು ; ಗುಣಪಡಿಸಲಾಗದುದು ; ತಡೆಯಲು ಶಕ್ಯವಿಲ್ಲದುದು : ಈ ಜಾಡ್ಯ ಅನಿವಾರಣೀಯ (ಗುರುಚೆ. ೮೭). [ಸಂ.]

**ಅನಿವಾರಿತ** (ಗು). ತಡೆಯಿಲ್ಲದ ; ಹಿಂದಿರುಗಿಸದ ; ತಪ್ಪಿಸಲಾಗದ : ನಿನಗಂ ಮೈತ್ರೇಯರ್ ಕೊಟ್ಟೊರುಭಂಗಶಾಪಮನಿವಾರಿತಂ (ಪಂಪಭಾ. ೧೩–೬೫ ವ). [ಸಂ.]

**ಅನಿವಾರಿತದಾನ** (ನಾ). ತಡೆಯಿಲ್ಲದೆ ನಿರಂತರವಾಗಿ ಕೊಡುವ ದಾನ : ಕುಡುವನಿ [ಪಾಠಾಂ. ನ] ವಾರಿತದಾನಕ್ಕೆ ಪೋಲ್ವರಾರ್ ಬದ್ದೆಗನಂ (ಪಂಪಭಾ. ೧–೨೪). [ಅನಿವಾರಿತ + ದಾನ]

**ಅನಿವಾರ್ಯ** (ಗು). ೧. ತಡೆಯಲಾಗದ; ತಪ್ಪಿಸಲಾಗದ. ೨. ಗತ್ಯಂತರವಿಲ್ಲದಿರುವ (ನಾ). ೩. ಆವಶ್ಯಕ: ಸೈನ್ಯಶಿಕ್ಷಣ ನಮ್ಮ ಯುವಕರಿಗೆ ಅನಿವಾರ್ಯ (ಶಿಕ್ಷದ. ೧೬೨). ೪. ತೊಂದರೆ ; ಅಸೌಕರ್ಯ: ನಾಳೆ ಬರುವುದಕ್ಕೆ ನನಗೆ ಅನಿವಾರ್ಯವೊಂದಿದೆ (ರೂಢಿ); ಅವರ ಮನೆಯಲ್ಲಿ ಏನೋ ಒಂದು ಅನಿವಾರ್ಯ (ರೂಢಿ).

ಅನಿವಾರ್ಯವಾಗಿ = ಗತ್ಯಂತರವಿಲ್ಲದೆ ; ಬೇರೆ ದಾರಿಯಿಲ್ಲದೆ : ಅವರು ಯಾವ ಶಿಕ್ಷಕನ ಬಗ್ಗೆಯೂ ಲೆಕ್ಕಣೆ ಎತ್ತಿದ್ದವರಲ್ಲ. ಈಗ ಅನಿವಾರ್ಯವಾಗಿ ಅದನ್ನು ಮಾಡಬೇಕಾಯಿತು (ರಂಗರೋ. ೬೧). [ಸಂ.]

**ಅನಿವಿರಿದು** (ಗು). ಅಷ್ಟು ದೊಡ್ಡದು ; ಅಷ್ಟು ಹಿರಿಯದು : ಅನಿವಿರಿದೊಂದು ಯೌವನಮದಕ್ಕೆಡೆಯಾಗಿಯುಮಂದು ರಾಗಸಂಜನನಮನೆಯ್ದೆ ತಾಳ್ದಿದವಿನಶ್ವರಕೀರ್ತಿಯೊಳಂ (ಆದಿಪು. ೮–೬) ; ಅನಿವಿರಿದವಂತಿ ಮಾಳವಮನಾಳ್ವ ವೃಷಭಾಂಕನೃಪಂ ಬಾಚುಕ್ಕಿಯ ಸಿರಿ(ಸುಕುಮಾ.೯–೮೫); ಸಮ್ಯಗ್ದರ್ಶನಾದಿ ಗುಣಸ್ಥಾನದೊಳೆನಿವಿರಿದು ಪುಟ್ಟುತ್ತಿಸವಿರಿದೆ ಅಗಿ ಕುಂದದಡೆ (ತಸೂವ್ಯ. ೨೩); ಏಳುಂ ಜನ್ಮದೊಳನಿವಿರಿದುಂ ಕಾಲಮುಗಲ್ವುದಾಗದು (ರಾಮಾಶ್ವ. ೧೩–೮). [ಅನಿತು + ಪಿರಿದು]

**ಅನಿವಿಸು$_1$, ಅನುವಿಸು$_1$** (ಕ್ರಿ). ಬಲಾತ್ಕರಿಸು ; ಒತ್ತಾಯಮಾಡು: ಮತ್ತಾವಾಗಳಡಿಗಡಿಗನಿವಿಸಲೆಮ್ಮನಿವಕ್ಕೆ ಸೈರಿಸದೆ ಚಂದ್ರಾಪೀಡ ಭುಜಪರಿರಕ್ಷಿತಮಪ್ಪ ತುರಂಗಬಲಂಬೆರಸು . . . ಎಮ್ಮಂ ಬೆಟ್ಟವೆಟ್ಟನಾಗಿ ಪಱಿಪಡೆ ನುಡಿದು (ಕಾದಂಉ. ೪೪೭); ರಣಪ್ರಯಾಣಲಾಲಸೆಯನನಿವಿಸೆ [ಪಾಠಾಂ. ಆವಿಸು] ಶರೀರಮಾ ನೆಗಪಿದಂತಿರಸವಸದೆ ಬಱಿದೆ ಸಿಡಿದೇಟ್ವ (ವರ್ಧಪು. ೭–೪೧ ವ). **ಅನುವಿಸು$_1$** : ಘಳಿಲನೆ ಬಿಜಯಂಗೆಯ್ಯಿಮೆನ್ನೆಂದು ಮೇಧಾವಿಳನನುವಿಸೆ ತಾಂ ಕೇಳ್ದು ತದ್ವೇಗದಿಂ ಬಂದಲಸದೆಸಕದಿಂ ಮಜ್ಜನಾದಿ ಕ್ರಿಯಾಸಂಕುಳಮೆನೆ ನೆಗಟ್ದಂ (ಕುಸುಮಾ. ೧೦–೧೦೬) ; ಪಟ್ಟವರ್ಧನ ಗಜೇಂದ್ರಮನಾಗಳೆ ತಂದು ಸಾರ್ಚಿ ತಜ್ಜನಪತಿ ಬೇಗದಿಂದೆಲೆ ಮುನೀಶ್ವರ ನೀಮಿದನೇಱಿಕೊಳ್ಳಿಮೆಂದನುವಿಸಿದಂ ಕ್ರಿಯಾತುರನದೆಂತೞಿವಂ ಸಮಯೋಚಿತಂಗಳಂ (ಕುಸುಮಾ. ೪–೧೧೦); ಅನುವಿಸದಿರ್ ನರೇಂದ್ರವರ ವಾಹನಮೇಱುವುದೇ ತಪಸ್ವಿಗಳ್ಗನುಚಿತಮೊಲ್ಲೆವೆಂದು ಪದಮಾರ್ಗದೆ ಬರ್ಪುದಕುಜ್ಜುಗಂಗೆಯಲ್ (ಕುಸುಮಾ. ೪–೧೧೧) ; ಸಂಧಾನಿತ ಗುರುಭಾಷಾಸಿಂಧು ಸುಧಾಪಾನ ಸಮ್ಮದದೆ ಮತ್ತಮನೋಬಂಧುಜನ ವ್ಯಾಮೋಹ ನಿಬಂಧನಮನುವಿಸೆ ನೃಪೇಂದ್ರ ಬಿನ್ನವಿಸಿದಪೆಂ (ಅನಂಪು. ೩–೩). [ಅನಿವ + –ಇಸು$_3$]

**ಅನಿವಿಸು$_2$** ‘ಅನುವಿಸು$_2$’ ನೋ.

**ಅನಿವೃತ್ತ** (ಗು). ೧. ಹಿಂತಿರುಗದ. ೨. ನಿವೃತ್ತಿ ಹೊಂದದ. [ಸಂ.]

**ಅನಿವೃತ್ತಿ** (ನಾ). ಹಿಂತಿರುಗದೆ ಇರುವುದು ; ಬಿಡದಿರುವುದು ; ಬಿಡುಗಡೆಯಿಲ್ಲದಿರುವಿಕೆ. ‘ಅನಿವೃತ್ತಿಕರಣ’ ಪರಾ. [ಸಂ.]

**ಅನಿವೃತ್ತಿಕರಣ** (ನಾ). ೧. [ಜೈನ] ಮೂರು ಬಗೆಯ ಕರಣಲಬ್ಧಿಗಳಲ್ಲಿ ಒಂದು. ೨. ಒಂಬತ್ತನೆಯ ಗುಣಸ್ಥಾನದಲ್ಲಿ ಜೀವನಿಗೆ ಧ್ಯಾನದಿಂದ ಉಂಟಾಗುವ ಅತಿ ಪರಿಶುದ್ಧ ಭಾವಗಳು : ಪ್ರತಿಸಮಯಮನಂತಗುಣಶಕ್ತಿ ಖಚಿತೈಕ ಪರಿಣಾಮಾನಿವೃತ್ತಿಕರಣಕ್ಷಪಕನಾಗಿ (ಆದಿಪು. ೧೦–೧೪ ವ) ; ಅಧಃಪ್ರವೃತ್ತಿಕರಣ ಅಪೂರ್ವಕರಣ ಅನಿವೃತ್ತಿಕರಣಾಭಿಧಾನ ತ್ರಿವಿಧಕರಣಲಬ್ಧಿ ಮಧ್ಯದಲ್ಲಿ ನಿರಂತರಂ (ತತ್ತ್ವಪ್ರ. ೮೧).
[ಅನಿವೃತ್ತಿ + ಕರಣ]

**ಅನಿಶ** (ಗು). ೧. ರಾತ್ರಿಯಿಲ್ಲದ. ೨. ಬಿಡುವಿಲ್ಲದ ; ನಿರಂತರ. (ನಾ). ೩. ದೇವತೆ (?) : ರೋಷ ಕರಾಳ ವಹ್ನಿಯಲಿ ಮನ ಮುಳುಗಿ ಕೈಯಿಕ್ಕಿ ಹೆಡತಲೆಗನಿಶರಳುಕಲು ಕಿತ್ತು ಜಡೆಯನು ಜನಪನನು ತಿನ್ನೆನುತ ಬೀಸಾಡಿದನು ಮೇದಿನಿಗೆ (ನಿಭಾಗ. ೯–೩–೪೧). [ಸಂ. ಅನಿಶಾ]

**ಅನಿಶಂ** (ಅ). ಯಾವಾಗಲೂ ; ಎಡೆಬಿಡದೆ ; ನಿರಂತರವಾಗಿ : ಅನಿಶಂ ಪ್ರಸನ್ನತಾಯುತರನೂನ ಸದಸತ್ಪದಾರ್ಥ ದರ್ಶನ ನಿಪುಣರ್ (ಚಂದ್ರಪು. ೧–೧೬). [< ಅನಿಶ]

**ಅನಿಶ್ಚಯಿ** (ನಾ). ನಿಶ್ಚಯವಿಲ್ಲದವನು ; ಸಂದೇಹಿ. [ಸಂ. ಅನಿಶ್ಚಯಿನ್]

**ಅನಿಶ್ಚಿತ** (ಗು). ನಿಶ್ಚಯವಿಲ್ಲದ; ತೀರ್ಮಾನಿಸಿಲ್ಲದ; ಸಂದೇಹಾಸ್ಪದ : "ಕವಿಯ ಶಾಂತಿ ಬರಿಯ ಭ್ರಾಂತಿ. ಈ ಜಗತ್ತಿನ ಶಾಂತಿ ಯಾವಾಗಲೂ ಅನಿಶ್ಚಿತವೇ . . ." (ಧರ್ಮಸಾ. ೧೧೧). [ಸಂ.]

**ಅನಿಶ್ಚಿತಕ್ರಮ** (ನಾ). ನಿಶ್ಚಯವಾಗಿಲ್ಲದ ಕ್ರಮ ; ನಿರ್ಣಯಿಸಿ ಹೇಳಲಾಗದ ರೀತಿ : ನೆನೆದಱಿಪಲಾರ್ಪರಾರದನನಿಶ್ಚಿತಕ್ರಮ ವಿಶೇಷ ಗುಣಯುಕ್ತಕಮಂ (ಕವಿರಾ. ೨–೪೮). [ಅನಿಶ್ಚಿತ + ಕ್ರಮ]

**ಅನಿಷ್ಕೃಷ್ಟ** (ಗು). ನಿಷ್ಕರ್ಷೆಯಾಗದ ; ನಿರ್ಧರವಿಲ್ಲದ. [ಸಂ.]

**ಅನಿಷ್ಟ** (ನಾ). ೧. ಇಷ್ಟವಲ್ಲದುದು ; ಅಪ್ರಿಯವಾದುದು ; ಹಾನಿ ; ಅಪಾಯ : " . . . ದೇಶದ ಹಿತದೃಷ್ಟಿಯಿಂದ ಈ ಅನಿಷ್ಟವನ್ನೂ ಈಗ ಮಾಡಬೇಕಾಗಿದೆ " (ಶಾಂತಲಾ. ೧೬೧). ೨. ಬೇಕಿಲ್ಲದವನು ; ಕೆಟ್ಟವನು : ಬೇಡ ಬೇಡವೆಂದರೂ ಈ ಅನಿಷ್ಟ ಕೇಳೋದಿಲ್ಲ (ರೂಢಿ).

**ಅನಿಷ್ಟಕ್ಕೆ ಶನೀಶ್ವರ** = ಕೆಟ್ಟದಕ್ಕೆ ಶನಿ : ಕೆಟ್ಟ ಕಾಲದಲ್ಲಿ ಶನಿ ಬಂದಂತೆ ಅನಿಷ್ಟಕ್ಕೆ ಶನೀಶ್ವರ ಎಂದಂತೆ ಈ ಅಪರಕರ್ಮಕ್ಕೆ ಬೋಳು ತಲೆಯೇ ಸರಿಯಪ್ಪ (ಚಿಕರಾ. ೫೦೩). [ಸಂ.]

**ಅನಿಷ್ಟದಿನ** (ನಾ). ಕೆಟ್ಟ ದಿನ : ರಾಯರ ಶೌರ್ಯದಲ್ಲಿ ನನಗೆ ನಂಬಿಕೆ ಇದ್ದರೂ ಅಮಾವಾಸ್ಯೆ ಎಂಬ ಅನಿಷ್ಟ ದಿನದಿಂದ ಪುನಃ ಯೋಚನೆಗಾರಂಭವಾಯಿತು (ರಾಯುಕ. ೧೬). [ಅನಿಷ್ಟ + ದಿನ]

**ಅನಿಷ್ಟನಿವೃತ್ತಿ** (ನಾ). ಇಷ್ಟವಲ್ಲದುದರ ನಿವಾರಣೆ; ಕೇಡಿನ ನಿವಾರಣೆ : ಕರ್ಮದಿಂದ ಅನಿಷ್ಟನಿವೃತ್ತಿ (ಹಿಂದಸಾ. ೧೮೬). [ಅನಿಷ್ಟ + ನಿವೃತ್ತಿ]

**ಅನಿಷ್ಟಪುಣ್ಯ** (ನಾ). [ತತ್ತ್ವಶಾ] ತಾನು ಬಯಸದೆಯೇ ಒದಗಿದ ಪುಣ್ಯ : ಅಪರೋಕ್ಷಾನಂತರ ಮಾಡಿದ ಯಿಷ್ಟಪುಣ್ಯ ಅನಿಷ್ಟಪುಣ್ಯ ಯೆರಡರವೊಳಗೆ ಯಿಷ್ಟಪುಣ್ಯ ಅನಂದಾಭಿವೃದ್ಧಿಗೆ ಕಾರಣ. ಅನಿಷ್ಟಪುಣ್ಯ ತನಗೆ ವುಪಕಾರ ಮಾಡಿದವರ ಉದ್ಧಾರಕ್ಕೆ ಕಾರಣ (ಅಧ್ಯಾಮಾ. ೯೫). [ಅನಿಷ್ಟ + ಪುಣ್ಯ]

**ಅನಿಷ್ಟಪುಷ್ಟಿ** (ನಾ). ಕೇಡನ್ನು ಹೆಚ್ಚಿಸುವ ಸಾಧನ ; ಕೇಡಿನ ಏಳಿಗೆ : ಮಾನವರ ಕುಲವನಱಿಯದೆ ಬೆರಸುವತಿಚಾಪಳದಿರವುಗಳೆರವುಗಳುಱಿ ಮೊರೆಗಳನಱಸದೆಱಗುವ ಕೆಡಿಕೆಗಳನಿಷ್ಟಪುಷ್ಟಿಗಳು (ಬಸಪು. ೪೦–೫೮). [ಅನಿಷ್ಟ + ಪುಷ್ಟಿ]

**ಅನಿಷ್ಟಮದುವೆ** (ನಾ). ಬೇಡವಾದ ಮದುವೆ ; ಅಪ್ರಿಯ ವಿವಾಹ : ಈ ತಾಯಿಯ ಹೃದಯ ಏಕೋ ಏನೋ ಈ ಅನಿಷ್ಟಮದುವೆ ಬೇಡ ಎಂದು ಹೇಳುತ್ತಾ ಇದೆ (ಮಹಾಗ. ೨೦೮). [ಅನಿಷ್ಟ + ಮದುವೆ]

**ಅನಿಷ್ಟವಿಯೋಗ** (ನಾ). ಬೇಡವಾದುದರಿಂದ ಬಿಡುಗಡೆ ; ಅಪ್ರಿಯದ ನಿವೃತ್ತಿ. [ಅನಿಷ್ಟ + ವಿಯೋಗ]

**ಅನಿಷ್ಟಸಂಯೋಗ** (ನಾ). ಬೇಡವಾದದ್ದು ಒದಗುವುದು ; ಬೇಕಿಲ್ಲದುದರ ಸಂಬಂಧ : ಸಮನಿಸಿದನಿಷ್ಟಸಂಯೋಗಮನಿಷ್ಟವಿಯೋಗಮಂ ಚತುರ್ಗತಿಗಳೊಳಂ ಭ್ರಮಿಯಿಸಿ ಕೈಕೊಳ್ಗುಂ ತಾನೆ ಮತ್ತೆ ನೆರಮಿಲ್ಲ ದೇಹಿಗಿಂತೇಕತ್ವಂ (ಮಲ್ಲಿಪು. ೧೪–೬೭). [ಅನಿಷ್ಟ + ಸಂಯೋಗ]

**ಅನಿಷ್ಟಾರ್ಥ** (ನಾ). ೧. ಬೇಕಿಲ್ಲದ ವಸ್ತು ; ಬೇಡದ ಅರ್ಥ; ಅಪ್ರಿಯವಾದ ಅರ್ಥ. ೨. ವಿಪರೀತವಾದ, ವಿರುದ್ಧವಾದ ಅರ್ಥ ; ಬಯಸದೆ ಇರುವ ಅರ್ಥ : ಸ್ವವಿಕಲ್ಪಿತದೊಳನಿಷ್ಟಾರ್ಥವಾಗೆ ವಿಪರೀತ ಕಲ್ಪನಂ ತಾನಕ್ಕುಂ (ಕಾವ್ಯಾವ. ೪೩೯). [ಅನಿಷ್ಟ + ಅರ್ಥ]

**ಅನಿಷ್ಟೆ** (ನಾ). ಬೇಕಿಲ್ಲದವಳು ; ಕೇಡಾಳಿ : ಮಂಥರೆ ಅನಿಷ್ಟೆಯೆನುತಾ ಸವತಿ ಕೈಕೆಯಂ ಬಳಿಸೇರಿಸದೆ (ಶ್ರೀರಾಮಾ. ೨೫–೬೫೧). [ಸಂ. ಅನಿಷ್ಟಾ]

**ಅನಿಷ್ಪಂದ** (ಗು). ಅಲುಗದ. 'ಅನಿಷ್ಪಂದಗಾತ್ರ' ಪರಾ. [ಸಂ.]

**ಅನಿಷ್ಪಂದಗಾತ್ರ** (ನಾ). ಅಲುಗದ ಮೈಯುಳ್ಳವನು : ಎನಿತಾನುಂ ಪೊಟ್ತು ನಿಷ್ಪಂದಗಾತ್ರನುಮುದ್ಬಾಷ್ಪನಿಮಗ್ನನೇತ್ರನು ಮನಲ್ತನ್ಮಂತ್ರಿ ಮುಖ್ಯಾತ್ಮಜಂ (ಕಾದಂಉ. ೪೪೪). [ಅನಿಷ್ಪಂದ + ಗಾತ್ರ]

**ಅನಿಸಂ** (ಅ). = ಅನಿಶಂ : ಅನಿಸಂ [ಪಾಠಾಂ. ಅನಿಶಂ] ನಾಲ್ದೆಸೆಯಲ್ಲಿ ನಾಲ್ಕೆಸೆವುವರ್ಹನ್ಮಂದಿರಂ (ವರ್ಧಪು. ೧೪–೧೧). [< ಅನಿಶಂ]

**ಅನಿಸಿಕೆ** (ನಾ). ಭಾವನೆ; ಅಭಿಪ್ರಾಯ; ಎಣಿಕೆ: ಇದು ಅವನ ಸ್ವಂತದ ಅನಿಸಿಕೆಯೇ ಹೊರತು ಬೇರೆಯಲ್ಲ (ಸಮುಜೀ. ೩೪೮) ; ತನ್ನ ಅನಿಸಿಕೆ ನೆನಸಿಕೆಗಳಿಗೆ, ಧಾರಣೆ ಧೋರಣೆಗಳಿಗೆ ಹೇಗಾದರೂ ಬುದ್ಧಿಯ ಮೆರುಗನ್ನು ವಿಚಾರವಂತಿಕೆಯ ಒಪ್ಪವನ್ನು ಕೊಡುವದು (ವಿಚಾವಾ. ೪೩) ; ಇಂಥ ಅನಿಸಿಕೆ ನನ್ನೊಬ್ಬಳದೆ ಆಗಿದ್ದರೆ ಅದೊಂದು ಮಾತು ಬೇರೆ (ನಿರೀಕ್ಷೆ. ೧೦೮). [ಅನಿಸು$_1$ (< ಅನ್ನಿಸು) + –ಇಕೆ]

**ಅನಿಸಿಕೊ** 'ಅನ್ನಿಸಿಕೊ' ನೋ.

**ಅನಿಸು$_1$** 'ಅನ್ನಿಸು' ನೋ.

**ಅನಿಸು$_2$** (ನಾ). = ಅನಿತ್ತು : ಮೂಱುಕೋಟಿ ಕವಿಲೆ[ಗ]ಳುಮನನಿಬರು ಬ್ರಾಹ್ಮಣರುಮನಳಿದನಿಸು ಪಾಪಂ ಸಾರ್ಗ್ಗು೦ (ಸೌಇಇ. XI–i, ೧೦೩–೧೦ ; 1070) ; ಬೆಳಗೆಯ ರಸಭಾವಕ್ಕನಿಸೆ ಮಾರ್ಗ ಮಾರ್ಗಂ ಮುದಮಂ ದೇಶಿ ಪಡೆಯೆ (ಪುಷ್ಪಪು. ೧೦–೪೫). [?]

**ಅನಿಳ** 'ಅನಿಲ' ನೋ.

**ಅನಿಳತನಯ** 'ಅನಿಲತನಯ' ನೋ.

**ಅನಿಳಾಧ್ವ** (ನಾ). = ಅನಿಲಪಥ : ಅನಿಳಾಧ್ವದೊಳ್ ಪೊಳೆಯುತಿರ್ದುದು ಚಂಡಮರೀಚಿಮಂಡಲಂ (ಜಗವಿ. ೪–೭೧). [ಅನಿಳ (= ಅನಿಲ)+ಅಧ್ವ]

**ಅನೀಕ** (ನಾ). ೧. ಗುಂಪು ; ಸಮೂಹ : ನೀಳ್ದಿರ್ದ ಸೆಜಂಗು ಚಿತ್ರಿಸಿದ ಹಂಸಾನೀಕದಿಂ ಚೆಲ್ವನಾಳ್ದಿರೆ (ಕಾದಂಪೂ. ೨೮) ; ದನುಜಕ್ಷತ್ರಾಧ್ವನೂನೀಕಮನಗಣಿತಮಂ ಕೂಡೆ ನಿರ್ಮೂಲನಂಗೈಯ್ದನಿತುಂ ಭೂಭಾರಮಂ ಪಿಂಗಿಸಲುದಯಿಸಿದಂ ಚಕ್ರಿ (ಜಗವಿ. ೩–೪) ; ಪರಸುತ್ತಕ್ಷತೆಯುನಿಟ್ಟವೋಲೊಪ್ಪಿದಂ ಶರನ್ಮೇಘದೊಳ್ ಚಂದ್ರಮಂ ತಾರಕಾನೀಕದಿಂದ (ಭಾವಚಿಂ. ೬–೧೨). ೨. ಸೈನ್ಯ. ೩. ಸಾಲು. ೪. ಯುದ್ಧ ; ಕಾಳಗ. [ಸಂ.]

**ಅನೀಕಸ್ಥ** (ನಾ). ೧. ಸೈನ್ಯದಲ್ಲಿರುವವನು ; ಸೈನಿಕ. ೨. ಸೈನ್ಯಾಧಿಪತಿ : "ರಕ್ಷಿವರ್ಗಃ, ಅನೀಕಸ್ಥಃ, ಸೇನಾನೀಃ ವಾಹಿನೀಪತಿಃ — ಈ ೪ ದಂಡನಾಯಕಂ" (ಹಲಾಯು. ೬೧–೨೭೯) ; "ಚಮೂಪತಿಯನೀಕಸ್ಥನೆನೆ ದಂಡನಾಥನಕ್ಕು" (ಮಂಗರಾ. ೮೦–೮). ೩. ರಾಜಸೇವಕ ; ಕಾವಲುಗಾರ. ೪. ಗಜಶಿಕ್ಷಕ ; ಮಾವಟಿಗ. ೫. ಯುದ್ಧಭೇರಿ. [ಸಂ.]

**ಅನೀಕಿನಿ** (ನಾ). ೧. ಗುಂಪು ; ಸಮೂಹ. ೨. ಸೈನ್ಯ. ೩. ಅಕ್ಷೌಹಿಣಿಯ ಹತ್ತನೆಯ ಒಂದು ಭಾಗ : ಆನೆ ೨೧೮೭, ರಥ ೨೧೮೭, ಕುದುರೆ ೬೫೬೧, ಕಾಲಾಳು ೧೦,೯೩೫ ಯಿದು ಒಂದು ಅನೀಕಿನಿಯೆಂಬ ಬಲವಕ್ಕುಂ (ವ್ಯವಹಾ. ಅನು. ೧–೧೦) [ಸಂ.]

**ಅನೀತಿ** (ನಾ). ೧. ನೀತಿಯಲ್ಲದ್ದು ; ಕೆಟ್ಟನಡೆ ; ಅನ್ಯಾಯ : ನೀತಿ–ಅನೀತಿ ತಿಳಿಯದವನೇ ಪಶುವು (ಮುಂಬಯಿ. ೧–೧೬). ೨. ರೋಗ ಕ್ಷಾಮ ಮುಂತಾದ ಬಾಧೆಗಳಿಲ್ಲದಿರುವುದು. 'ಅನೀತಿರಹಿತ' ಪರಾ. [ಸಂ. (ಅ– + ನೀತಿ ; ಅ– + ಈತಿ)]

**ಅನೀತಿರಹಿತ** (ನಾ). ೧. ಅನೀತಿಯಿಲ್ಲದವನು; ಕೆಟ್ಟ ನಡತೆಯಿಲ್ಲದವನು. ೨. ರೋಗ, ಕ್ಷಾಮ ಮುಂತಾದ ಬಾಧೆಗಳುಳ್ಳವನು: ೧, ೨: ನೃಪಂ . . . ಪರಾರ್ಥಪರನಾಗಿಯುಂ ಪರಾರ್ಥಪರನಲ್ತು ಅನೀತಿರಹಿತನಾಗಿಯುಂ ಅನೀತಿರಹಿತನಲ್ತು (ಪುಷ್ಪಪು. ೯–೩೯ ವ).
[ಸಂ. (ಅನೀತಿ + ರಹಿತ; ಅ– + ಈತಿ + ರಹಿತ)]

**ಅನೀನು** (ನಾ). ಕಡಿವಾಣ; ಲಗಾಮು: ಅಶ್ವರತ್ನದ ಆಭರಣದ ಲೆಖ್ಖ . . . ೨ ಲಗಾಮು ತುಂಡು ೪ ಯಿದಕ್ಕೆ ಗುಬ್ಬಿಮೊಳೆ ೪ ಅನೀನು ೨ ಹರಡೆ ೧ ತನಾಲು ೧ ಸಹಾ (ಎಕ. XIV, ನಂಜನ. ೨೯೩, ಪು. ೧೪೩; 1847).
[← ಮರಾ. ಅನೀನಾ = ಲಗಾಮ್; ಅರ. ಇನಾನ = ಲಗಾಮ್]

**ಅನೀಪ್ಸಿತ** (ಗು). ೧. ಬಯಸದ; ಅಪೇಕ್ಷಿಸದೆ ಇರುವ. (ನಾ). ೨. ಅಪೇಕ್ಷೆಯಿಲ್ಲದಿರುವುದು: "ಉದ್ಭವಿಸಿದ = ಹುಟ್ಟಿದ, ಅನೀಪ್ಸಿತದೊಳ್ = ಅನಿಚ್ಛೆಯಲ್ಲಿ" . . . ಅನಿಷ್ಟಕ್ಕೆ –ಆತಂಗೆ ವಿಷಮನಿಕ್ಕಿದಂ, ಆತಂಗೆ ಕತ್ತಿಯುಂ ಮಸೆದಂ (ಶಮುದ. ೧೩೦, ಟೀ; ಪ್ರಯೋ). [ಸಂ.]

**ಅನೀಶ** (ಗು). ೧. ಒಡೆಯನಲ್ಲದ; ಅಸ್ವತಂತ್ರನಾದ; ಪರಾಧೀನನಾದ. (ನಾ). ೨. ಒಡೆಯನಿಲ್ಲದವನು; ಸ್ವತಂತ್ರ: ಮಂಗಳೋದಯ ನಿತ್ಯ ಪರಮೇಶಂಗನೀಶರು ಸರಿಯೆ (ಬಸಪು. ೫೪–೨೭). ೩. ದಿಕ್ಕಿಲ್ಲದವನು; ಅನಾಥ. ೪. ಅಸಮರ್ಥ. [ಸಂ.]

**ಅನೀಶತೆ** (ನಾ). ಸಾಮರ್ಥ್ಯವಿಲ್ಲದಿರುವುದು; ಅಧಿಕಾರವಿಲ್ಲದಿರುವುದು; ಅಶಕ್ತಿ; ಪರಾಧೀನತೆ: ನಸುಕು ಮುಸುಕೋಸರಿಸಿ ಬಯಲಿಗೆ ಬರಲಿ ನೇಸರನು ನಮ್ಮನೀಶತೆ ಹರಿದು ಓಡಲಿ ಮಾಡು ಈಶರನು (ಅರಳು. ೧೬). [ಸಂ. ಅನೀಶತಾ]

**ಅನೀಶ್ವರ** (ಗು). ೧. = ಅನೀಶ ೨: ಶರ್ವನನನೀಶ್ವರನಸುಜದೆ ತೆಗಳಲ್ ಶರ್ವೆ ನಿರ್ವೇಗದಿಂ ತನುವನುಳಿದೆಯ್ದಲು (ಉದ್ಭದೇ. ೫–೫). ೨. ಈಶ್ವರನು ಇಲ್ಲ ಎಂದು ಹೇಳುವವನು; ನಾಸ್ತಿಕ: ಅನೀಶ್ವರಾನ್ಯೇಶ್ವರಾನೇಕೇಶ್ವರಾಭಿಮತವಾದಿ ವಿವಾದಮಂ ಶ್ರುತ್ಯುಕ್ತಿಯುಕ್ತಿಗಳಿಂ ನಿರಾಕರಿಸಿ (ರಾಜಶೇ. ೫–೧೯ ವ). [ಸಂ.]

**ಅನೀಶ್ವರವಾದ** (ನಾ). ಈಶ್ವರನಿಲ್ಲವೆಂಬ ವಾದ: ದೇಶದಲ್ಲಿ ಬೆಳೆದು ಬಂದಿರುವ ಅನೀಶ್ವರವಾದ ಅನಾತ್ಮವಾದದ ಪರಿಣಾಮವಾಗಿ ಮಾನವನ ಭೋಗಲಾಲಸೆಗಳು ಎಲ್ಲೆಮೀರಿ . . . ಪ್ರಬಲಿಸಿ (ಜೀವಾತ್ಮ. ಮು. ೩).
[ಅನೀಶ್ವರ + ವಾದ]

**ಅನೀಹಿತ** (ಗು). ಅಪೇಕ್ಷಿಸಲ್ಪಡದ; ಬೇಡದ. [ಸಂ.]

**ಅನೀಹಿತವೃತ್ತಿ** (ನಾ). ಏನನ್ನೂ ಬಯಸದ ಸ್ಥಿತಿ; ಉದಾಸೀನತೆ; ಏನನ್ನೂ ಬೇಡದಿರುವ ವ್ರತ: ಆಸನ್ನಭವ್ಯ ಸಸ್ಯಸಮೃದ್ಧಿಯಂ ಮಾಡುತ್ತುಂ ಅನೀಹಿತವೃತ್ತಿಯಿಂ ಪುಣ್ಯಕ್ಷೇತ್ರಂಗಳಂ ವಿಹಾರಿಸಿ (ತತ್ತ್ವಪ್ರ. ೩೬೮). [ಅನೀಹಿತ + ವೃತ್ತಿ]

**ಅನು₁** 'ಅನ್ನು' ನೋ.

**ಅನು₂, ಅನುವು₁** (ನಾ). ೧. ಅಣಿ; ಅಂದ; ಅಚ್ಚುಕಟ್ಟು; ಸೊಗಸು; ಹದ; ಮನೋಹರತೆ: "ಅನು ಅಣಿ . . . ಈ ೧೪ ಮನೋಹರಂ" (ಕಶಸಾ. ೧೧–೨೧೧). ೨. ರೀತಿ; ಕ್ರಮ; ಸ್ವರೂಪ; ಸ್ಥಿತಿ: ಗೊಹೇಶ್ವರ ಲಿಂಗದಲ್ಲಿ ಭರಿತ ಬೋನದ ಅನು ಚೆನ್ನಬಸವಣ್ಣಂಗಾಯ್ತು (ಅವಚಂ. ೨೪೮–೧೧೩೦); ಛಲಗೆಟ್ಟರೆ ಕೆಡಬಹುದಲ್ಲದೆ ಭಕ್ತಿಯ ಅನು ಕೆಡಬಾರದು (ಬಸವ. ೮೯೭). **ಅನುವು₁**: ೧. "ಇರದಣಿಯನುವೆಡ್ಡವೆನೆ ಮನೋಹರಮಕ್ಕುಂ" (ಕವಿಕಂ. ೯೯); ಘನವಪ್ಪ ಬೋನವನು ಒಂದನುವಿನ ಪರಿಯಾಣದಲ್ಲಿ ಹಿಡಿದು ಗುರುಲಿಂಗವಾರೋಗಣೆಯ ಮಾಡಿ ಮಿಕ್ಕುದು ಪ್ರಸಾದ (ಅವಚಂ. ೪೦–೧೭೩); ಪೊಸಕಮ್ಮಂಗಳವೆಯ ತೆನೆಯ ತುದಿಯ . . . ಕುಳ್ಳಿದಿರ್ದಾಜಡಿವಸುಳಿಗಳು ಅನುವಂ ಪಡೆದುವು ತತ್ತೃಣರಾಜಿಯ ಕೊನೆಗರ್ಚಿದ ಹರಿನೀಲದ ಪರಲೆನೆ (ಜಯಕಾ. ೧–೩೯); ಎಡಬಲದೊಳನುವಾಗಿ ವಾಘೆಯಂ ಪಿಡಿದು ನಡೆತಪ್ಪ ನೃಪತನುಜರಿಂದಾ ಹಯಂ . . . ಐತರುತಿರ್ದುದು (ಜೈಮಿಭಾ. ೪–೬); ಅನಿಮಿಷಪತಿಸುತ ನರಲೋಕದ ಭೋಗದನುವ ನಿರೀಕ್ಷಿಸಬೇಕೆನುತ ಜನಿಸಿದ ನರರೂಪಿನೊಳಗೆಂಬೊಲು ತನ್ನ ಮನಕೆ ತೋಱಿದೆ ಮೋಹನಾಂಗಿ (ಕಂನವಿ. ೯–೧೩೧). ೨. ನಾ ನಿಮ್ಮ ಮನದನುವನಱಿಯೆನೆ ಮುನಿಪ (ಹಚಕಾ. ೮–೨೪); ಶಿವಲಿಂಗದ ನೆಲೆಯನಾ ಬಸವನೇ ಬಲ್ಲ ಪರಮನಱಿವಂ ಬಸವನನುವಂ (ಬಸಪು. ೧–೩೦); ಭಕ್ತಿಯನುವನು ತೀವಿ ತಿಳಿವಂತೆನಗೆ ವರಗುರುರಾಯ ಹೇಳೆಂದ (ಪ್ರಭುಲೀ. ೧೬–೫೧); ದೇಹ ಕೀರ್ತಿಗಳೊಳಗೆ ನಿಲುವುದು ದೇಹವೋ ಕೀರ್ತಿಯೊ ಮುರಾಂತಕ ಬೇಹುದನು ಬೆಸಸಿದಡೆ ಮಾಡೆನು ಬಲ್ಲಿರೆನ್ನನುವ (ಕುವ್ಯಾದ್ರೋ. ೧೯–೪೩); ಮೊನೆಗಾತಿ ಮುಗುಧೆ ಮುಸುಂಡಿಯಾಗಲಿ ನೆರೆವನೆ ಗರತಿಯ ನೀಕರಿಸದೆ ಮನೆಗೆ ಬಂದೆಡೆಯೊಳು ಮನ್ನಿಸಿ ಮನವೊಲಿದನುವಱಿತಾದರಿಸುವುದು (ಹದಿಬ. ೪–೩೭). ೩. ಕ್ಷೇಮ; ಕುಶಲ; ಆರೋಗ್ಯ: ಬಂದಿರೆ ಪರಿಣಾಮವೆ ಮನೆಯೊಳಗಕ್ಕಂದಿರನುವೆ ಮಕ್ಕಳು ಪದುಳವೆ (ಜಯಕಾ. ೧–೨೦); ಐದಾಱುದಿನ ಮೊದಲೆನ್ನಯ ಮೈಗೆ ಅನುವಲ್ಲೇಕೆಂದಱಿಯೆನು (ಕುರಾಸಾಂ. ೨೭–೧೫). ೪. ಸಜ್ಜು; ಸಿದ್ಧತೆ: ತನ್ನ ಮಹಾವ್ಯತಿಕರದೊಳ್ ಮುನ್ನವೆ ಬೆಂದವರ್ಗೆ ಮತ್ತೆ ಕಾದಂಬರಿಯಿಂದಂ ನೋವು ಬಂದುದಱಿಂದಿ[ನ್ನನುವಿನೊಳಾನೆ] ಶರಣಮಾ ವ್ಯತಿಕರದೊಳ್ (ಕಾದಂಪೂ. ೯೮೦). 'ಅನುಗೆಯ್' ಪರಾ. ೫. ಲಾಭ; ಪ್ರಯೋಜನ; ಪ್ರಾಪ್ತಿ: ಕೂಟದನುವಿಂಗೆ ತನು ವೆಗ್ಗಳಿಸಿ ಕೆತ್ತುತಿದೆ ಇನ್ನಿರಿಸಲಾಗದೀತನನೀತೆಱದೊಳೆಂದು (ನಂಬಿರ. ೩–೮೪); ಮಕ್ಕಳಿರಾ! ಒಬ್ಬರ ಸಮ್ಮತಿ ಇಲ್ಲದೆ ತಮ್ಮ ಅನುವಿಗಾಗಿ ಅವರ ಪದಾರ್ಥವನ್ನು ಒತ್ತಾಯದಿಂದ ತಕ್ಕೊಳ್ಳುವುದು ಅನ್ಯಾಯವೆಂದು ಲಕ್ಷ್ಯದಲ್ಲಿಡಿ (ಮುಂಬಯಿ. ೨–೯೩). ೬. ಸಾಮರ್ಥ್ಯ: ಅನುಪಮಬಲಂ ಬಭ್ರುವಾಹನಂ ಕಾದಲವನನುವನೊಪ್ಪಂಗಿಡಿಸಿ ಹಂಸಧ್ವಜನ ಜಯವನನುಕರಿಸಿ (ಜೈಮಿಭಾ. ೨೫–೩೦). ೭. ಅನುಕೂಲತೆ; ಅವಕಾಶ: ಉರವಣಿಸಿ ನಡೆತರುತ್ತುಂ ಗಿರಿಶಿಖರಮನೇಱಲಾಱದೆರಡುಂ ದೆಸೆಯೊಳ್ ಬರಲನುವಂ ಕಂಡು ದಿವಾಕರನಂದಿಂ ದಕ್ಷಿಣೋತ್ತರಾಯಣನಾದಂ (ಗಿರಿಕ. ೧–೫೩); ಮಗನು ಪಂಚದ್ರೌಪದೇಯರ ಬಗೆಯನೆನ್ನವನಿರಲು ರಾಜ್ಯವ ಹೊಗಿಸಲನುವಿಲ್ಲೆಂದು ಕಂದನ ರಣಕೆ ನೂಕಿದಿರಿ (ಕುವ್ಯಾದ್ರೋ. ೭–೧೫); ಮೆಣಸು ಹಿಪ್ಪಲಿ ಶುಂಠಿ ಜೀರಿಗೆಗಳೆಲ್ಲ ಸರಿ ಅನುವಪ್ಪುದೊಂದೊಂದು ರೋಗಕೊಂದೊಂದು (ಮಂಕುಕ. ೯೩೫); ಹಲವರಿಗೆ ಸಭೆಯಲ್ಲಿ ಮಾತನಾಡಲು ಅನುವು ದೊರೆತರೆ ಆಯಿತು ಎಚ್ಚರವೇ ತಪ್ಪುತ್ತದೆ (ಹುಚ್ಚುಹು. ೧೦೧). ೮. ಸ್ನೇಹ; ವಿಶ್ವಾಸ: ಅನುವಿನೊಳೆಲ್ಲ ಸೋದರರನು ಗೆಲಿದು (ವಿಸೀಗೀ. ೧–೧೧). ೯. "ಜೊತೆ" (ಮಂಕುಕ. ಕೋಶ); ಬಿಂದು ವಿಸರಗಳನುವು, ವಂಕುಸರಲಗಳನುವು ಚೆಂದ ಕಣ್ಣಿಗೆ ವರ್ಣವಿವಿಧಂಗಳನುವು ಚೆಂದ ವೇಗಸ್ತಿಮಿತದನುವು, ಹುಳಿಯುಪ್ಪನುವು (ಮಂಕುಕ. ೪೪೮).

ಅನುತನು = "ಪ್ರೇಮ" (ಜಾನಕೋ. ೧೨). **ಅನುವು ತನುವು** (ದ್ವಿರುಕ್ತಿ) = ಅನುಕೂಲ; ಸೌಕರ್ಯ: ಅವನಿಗೆ ತಾವು ಎಷ್ಟು ಕೊಟ್ಟರೂ ಕೊಂಡರೂ ಆದರೋಪಚಾರ ಮಾಡಿದರೂ ಅನುವು ತನುವು ನೋಡಿದರೂ ಅದನ್ನೆಲ್ಲ ಕೂಡಲೆ ಮರೆತು (ಬೀರಬ.೫೬). **ಅನುವು ತನುವು ನೋಡಿ ನಡಸು** = ಮನೋಧರ್ಮಕ್ಕನುಸಾರವಾಗಿ ನಡೆ; ಅಸಮಾಧಾನವಾಗದಂತೆ ವರ್ತಿಸು (ಸ್ಯಾಂಡರ್). **ಅನುವಾಪತ್ತು** = ಸುಖದುಃಖ; ಅನುಕೂಲ ಪ್ರತಿಕೂಲ: ನಿನ್ನ ಅನುವಾಪತ್ತುಗಳನ್ನು ಧೊರೆಯ ಮುಂದೆ ಹೇಳಿಕೋ (ಸ್ಯಾಂಡರ್). **ಅನುವು ತಪ್ಪಿದ ಸ್ಥಳ** =

೧. ಅಯೋಗ್ಯವಾದ ಸ್ಥಾನ, —ಜಾಗ (ಸ್ಯಾಂಡರ್). ೨. ಅಪಾಯಕರವಾದ ಅಥವಾ ರೋಗದ ಸ್ಥಳ (ಸ್ಯಾಂಡರ್). **ಅನುವಳಿ** = ಅಂದಗೆಡು : ನಿಮ್ಮ ತನುವು ಬೇಜಕೊಂದಂದವಾಯಿತು ಅನುವಳಿದು ವಿದ್ರೂಪಗೊಂಡುದು (ಬಸಪು. ೧೭–೧೩). **ಅನುವಾಗು** = ಸಿದ್ಧವಾಗು : ಹೆಡತಲೆಗೆ ಮೋಹಿ ಕಯ್ಯೆತ್ತಿ ಕಂಧರ ಹಱಿಯೆ ಹೊಡೆಯಲನುವಾದೆನನುವಾದೆನನುವಾಗಾಗು ಮಡದಿ ನೆನೆ ನಿನ್ನ ದೈವವನು ಬಿಡದೆನ್ನೊಡೆಯನಂ ಹರಸು (ಹಚಕಾ. ೧೩–೧೨) ; ಆಯುಧವನೊಂದಂ ಪಿಡಿದು ತಾನಿರ್ದನನುವಾಗಿ (ಬಸಪು. ೧೩–೧೮) ; ಎನ್ನು ತಾಮರಿ ನಡೆಯಲನುವಾಗೆ ತಿಳಿದು, ಮುನ್ನ ಎಣಿಸಿದ ತಂತ್ರ ಬಯಲಾಗೆ ಮುಳಿದು (ಕಎಪು. ೧೨–೫).

[ದೇ. ॥ ತಮಿ. ಅ, ಅಂ = ಅಂದ, ಚೆಲುವು ; ತುಳು. ಅನುತನ = ಯೋಗ್ಯತೆ, ಅವಕಾಶ ; ತೆಲು. ಅನುವು]

**ಅನು₃-** (ಪ್ರ). ಕಾಲ, ದೇಶ, ದರ್ಜೆಗಳಿಗೆ ಸಂಬಂಧಪಟ್ಟಂತೆ ತರುವಾಯ ಎಂಬ ಕ್ರಮುವನ್ನು ಸೂಚಿಸುವ ಉಪಸರ್ಗ. ೧. ತರುವಾಯ ; ಆ ಕೂಡಲೇ. ೨. ಯಥಾಕ್ರಮವಾಗಿ. ೩. ಜೊತೆಯಲ್ಲಿ ; ಸಂಗಡ. ೪. ಅನುಗುಣವಾಗಿ ; ಒಪ್ಪುವಂತೆ ; ಹೊಂದಿಕೊಂಡು. ೫. ಆ ದೆಸೆಯನ್ನು ಅನುಸರಿಸಿ ; ಉದ್ದಕ್ಕೂ. ೬. ಬೇರೆಬೇರೆಯಾಗಿ; ಒಬ್ಬರಾದ ಮೇಲೆ ಮತ್ತೊಬ್ಬರು ; ಒಂದಾದ ಮೇಲೆ ಒಂದರಂತೆ. 'ಅನುಕರಣ', 'ಅನುಕಾಲ', 'ಅನುಕೂಲ', 'ಅನುಗತಿ' ಪರಾ. [ಸಂ.]

**ಅನುಂಗೊಲೆ** (ನಾ). ನೋವಿನಿಂದ ಕೂಡಿದ ಕೊಲೆ ; ಯಾತನಾಮಯವಾದ ಕೊಲೆ : ಎಲೆ ಚೋಳಕ್ಷಿತಿಪಾಳ ಸನ್ತವೆಟ್ಟಿ ಯಂ ನೀಂ ನೀವಿ ಕೊಳ್ ನಿನ್ನನುಂಗೊಲೆ ಮಾಣ್ದತ್ತಿರು ಪಾಣ್ಡ್ಯಪಲ್ಲವ ಭಯಂಗೊಳ್ಳೋಡದಿರ್ ನ್ನಿನ್ನಮಣ್ಣಲದಿಂ ಪಿಂಗದೆ ನಿಲ್ವದೀಗ (ಎಕ. II, ೫೯–೧೧೨ ; 974).

[ಅನುಂಗು₀ + ಕೊಲೆ. / ತಮಿ. ಅನುಂಗು = ನೋವನ್ನು ಅನುಭವಿಸು, ಯಾತನೆಪಡು]

**ಅನುಕ** (ಗು). ೧. ಆಸೆಬುರುಕನಾದ. ೨. (ಪ್ರಣಯದಿಂದ) ಮೋಹಗೊಂಡ ; ಪರವಶನಾದ. (ನಾ). ೩. ಗಂಡ : "ಕಾಂತಃ, . . . ಪ್ರಾಣಾಧಿನಾಥಃ, ಅನುಕಃ – ಈ ೧೪ ಗಂಡಂ" (ಹಲಾಯು. ೮೨–೩೪೩) ; "ವರಯಿತಂ ಭರ್ತೃರ್ಧವನಭಿಕನನುಕಂ ಭೋಕ್ತೃ ವರನಭೀಕಂ ರಮಣನೆನೆ ಗಂಡನೆನಿಸಿಕ್ಕು" (ಮಂಗರಾ. ೯೧–೬). ೪. ಇಳಿಜಾರು ; ಇಳಿಕಲು. [ಸಂ.]

**ಅನುಕಂಪ**, ಅನುಕಂಪೆ (ನಾ). ಕರುಣೆ ; ದಯೆ ; ಕನಿಕರ ; ಸಹಾನುಭೂತಿ : ಪ್ರಧಾನರಿಗೆ ರಾಜಮಾತೆಯ ಮಾತುಗಳು ಹೃದಯದಲ್ಲಿ ಅನುಕಂಪ ಉಂಟುಮಾಡಿದವು (ಶಾಂತಲಾ. ೨೩). **ಅನುಕಂಪೆ** : ಕಂಡನುಕಂಪೆಯುಂ ಭಕ್ತಿಯುಂ ಕಾರಣವಾಗಿ (ವಡ್ಡಾರಾ. ೧೦೩–೨೬) ; ಜಾನಕಿ ಮೂರ್ಛಿತೆಯಾಗೆ ದಶಾನನನನುಕಂಪೆ ಪುಟ್ಟೆ ಕರುಣಿಸಿ (ಪಂರಾಮಾ. ೧೪–೧೧) ; ನಮ್ಮನುಕಂಪೆ ನೀತಿನಿಂದೆಯೊಳಿರದು (ಮಂಕುಕ. ೨೮೧).

[ಸಂ. ಅನುಕಂಪಾ]

**ಅನುಕಂಪನ** (ನಾ). ಅನುಸರಿಸಿದ ಸ್ಪಂದನ ; ಅನುಸರಿಸಿ ಅದುರುವಿಕೆ : ಸೀತೆ ನಿಂತು ನೋಡಿದಳಾತನಾತ್ಮದನುಕಂಪನಕೆ ಪ್ರತಿಕಂಪಿಸುವ ವೀಣೆಯುಜ್ವಲ ತಂತ್ರಿಯಂತೆ (ಶ್ರೀರಾಮಾ. ೧೫–೨೦೬). [ಸಂ.]

**ಅನುಕಂಪೆ** 'ಅನುಕಂಪ' ನೋ.

**ಅನುಕರ** (ಗು). ೧. ಬೇರೊಬ್ಬರು ಮಾಡಿದಂತೆ ಮಾಡುವ ; ಸಹಾಯಕವಾದ. (ನಾ). ೨. ಗುಂಡಿಬಟ್ಟಲು : "ಅನುಕರಂ ಗರ್ಶಕಂ ಗುಂಡಿವಟ್ಟಲಕ್ಕುಂ" (ಮಂಗರಾ. ೬೩–೨೫). [ಸಂ.]

**ಅನುಕರಣ**, ಅನುಕರಣೆ (ನಾ). ೧. (ಇತರರು) ನುಡಿದಂತೆ ನುಡಿಯುವುದು ; ನಡೆದಂತೆ ನಡೆಯುವುದು ; ಮಾಡಿದಂತೆ ಮಾಡುವುದು : ಕಲೆಗೆ ಅನುಕರಣವು ಸಾಧನ (ಸಾಹಿಜೀ. ೨೩) ; ಅನುಕರಣವು ಕವಿಯ ಸಾಧನ (ಅರಿಕಾ. ೧೩). ೨. ಹೋಲುವಿಕೆ ; ಸಾಮ್ಯ. ೩. ಪ್ರಕೃತಿಯಲ್ಲಿ ಉಂಟಾದ ಸದ್ದನ್ನು ಆ ರೀತಿಯಲ್ಲಿಯೇ ಉಚ್ಚರಿಸಿ ಸೂಚಿಸುವ ಪದ : ಅನುಕರಣಕ್ಕೆ ॥ . . . ನಿಶಾಟರನುಂಡನಗ್ನಿ ಛುಮ್ಮೆಂಬ ಛಟಚ್ಛಟೆಂಬ ಧಗಯೆಂಬ ಧಗದ್ಧಗಯೆಂಬ (ಕಾವ್ಯಾವ. ೨೮) ; ಅನುಕರಣಕ್ಕೆ – ಖಣಿಲ್ಲನೆ, ಖಟಿಲನೆ, ಛಮ್ಮನೆ (ಶಮುದ. ೧೪ ಪ್ರಯೋ) ; ಅವ್ಯಯಗಳನ್ನು . . . (iii) ಅನುಕರಣ. (iv) ತದ್ಧಿತಾಂತ. (v) ಕೃದಂತ ಎಂದು ವಿಭಾಗ ಮಾಡುತ್ತಾರೆ (ಕೈಪಿಡಿ. ೫೨). **ಅನುಕರಣೆ** : ೧. ಪದಾರ್ಥಕ್ಕಂ ವಾಕ್ಯವೇಷ್ಟನಕ್ಕಂ ಅನುಕರಣೆಗಂ ಸ್ವರಂ ಪರಮಾದೊಡಂ ಸಂಧಿವಿಕಲ್ಪಂ (ಶಮುದ. ೬೧ ವೃತ್ತಿ). ೪. ಅಭಿನಯ : "ಅನುಕರಣೆ ನಯಮೆನಿಕು" (ಮಂಗರಾ. ೨೮–೬). [ಸಂ.]

**ಅನುಕರಣಪದ** (ನಾ). ಉಂಟಾದ ಸದ್ದುಗಳನ್ನು ಅವು ಆದಂತೆಯೇ ಉಚ್ಚರಿಸಿ ತಿಳಿಸುವ ಪದ, —ಮಾತು : ಧಿಗಿಲನೆ, ಭುಗಿಲನೆ, ಭೋರನೆ ಎಂಬನುಕರಣಪದಂಗಳ್ (ಶಮುದ. ೩೦೦ ವೃತ್ತಿ).

[ಅನುಕರಣ + ಪದ₂]

**ಅನುಕರಣವಾರ್ತೆ** (ನಾ). ಇತರರು ಮೊದಲೇ ಹೇಳಿದ ಸಂಗತಿಯನ್ನೇ ತಾನೂ ಹೇಳುವುದು : ಜನಮುಱಿಯದನ್ನೆಗಂ ಮುನ್ನ ನಯಮನಱಿದಱಿಪಲಾರ್ಪೊಡದು ಮಂತ್ರಿಗುಣಂ ಜನವಾದಂ ನೆಗೞ್ದೆ ನಗಧ್ವನಿಪೋಲನುಕರಣವಾರ್ತೆ ಮಂತ್ರಿಯ ಗುಣಮೇ (ಕವಿರಾ. ೩–೧೪೩).

[ಅನುಕರಣ + ವಾರ್ತೆ]

**ಅನುಕರಣಶಬ್ದ** (ನಾ). = ಅನುಕರಣಪದ : ಅನುಕೃತಿಯೊಳಂ = ಅನುಕರಣಶಬ್ದಂಗಳಲ್ಲಿಯುಂ (ಶಮುದ. ೧೪ ಟೀಕು). [ಅನುಕರಣ + ಶಬ್ದ]

**ಅನುಕರಣಾವ್ಯಯ** (ನಾ). ಪ್ರಕೃತಿಯಲ್ಲಿ ಉಂಟಾದ ಸದ್ದನ್ನು ಆ ರೀತಿಯಲ್ಲಿಯೇ ಉಚ್ಚರಿಸಿ ಸೂಚಿಸುವ ಅವ್ಯಯ : ಅನುಕರಣಾವ್ಯಯಗಳು – ಗಟಗಟ, ಕವಕವ, ಛಟಿಲ್, ಛಿಟಿಲ್, ತಟತಟ, ನಿಟಿಲ್, ಪಠಿಲ್, ಭುಗಿಲ್ . . . ಭೋರ್, ಖಟಿಲನೆ, ದುಢುಮ್ಮನೆ ಇತ್ಯಾದಿ (ಕೈಪಿಡಿ. ೫೨). [ಅನುಕರಣ + ಅವ್ಯಯ]

**ಅನುಕರಣೆ** 'ಅನುಕರಣ' ನೋ.

**ಅನುಕರಿಸು** (ಕ್ರಿ). ೧. (ಇತರರು) ನುಡಿದಂತೆ ನುಡಿ ; ನಡೆದಂತೆ ನಡೆ ; ಮಾಡಿದಂತೆ ಮಾಡು ; ಅಭಿನಯಿಸು ; ನಟಿಸಿ ತೋರು : ಗಾಂಡೀವಿ . . . ಪಗೆವರ ಗಂಟಲ ಬಳೆಯನೊಡೆದು ಕಳೆವುದನನುಕರಿಸುವಂತೆ ತೀವಿ ತೊಟ್ಟ ಮುಂಗೆಯ್ಯ ಬಳೆಗಳನೊಡೆದು ಕಳೆದು (ಪಂಪಭಾ. ೮–೧೦೦ ವ) ; ಅಭವನ ತೊಡೆಯೊಳ್ ಮನದೊಲವಿಂ ಕುಳ್ಳಿರ್ಪುದನನುಕರಿಸುವ ತೆಜದೊಳಗಜೆ ಕುಳ್ಳಿರೆ ಕಲ್ತಳ್ (ಗಿರಿಕ. ೩–೬೧) ; ತಂದೆ ತಾಯಿಗಳನ್ನು ಅನುಕರಿಸುವುದು ಮಗುವಿನ ಗುಣಧರ್ಮವಾಗಿರುತ್ತದೆ (ರಂಗರೋ. ೧೨೬). ೨. ಹೋಲು : ಎನಿತಾನುಂ ಪಱಿಗಳ್ ಘನನಿನದಮನನುಕರಿಸೆ (ಆದಿಪು. ೬–೧೦೩) ; ಕುರುಕುಲ ಮಹೀಶನ ಕದಳೀಸ್ತಂಭಂಗಳನನುಕರಿಸುವ ತೊಡೆಗಳಂ (ಗದಾಯು. ೮–೩೭ ವ) ; ಈ ಶಿಳಾಶಾಸನಮಂ ಸ × × × [ಮು]ತ್ತಿನ ಸರಿಗೆಯನನುಕರಿಸೆ ಕನ್ನಪಯ್ಯಂ ಬರೆದಂ (ಸೌಇಇ. XI-i, ೧೧೧–೪೦ ; 1071). ೩. ಧರಿಸು : ವನಮಾಲಿ ಪಾತಕನಬದ್ಧಬುದ್ಧಾಕೃತಿಯನನುಕರಿಸಿ ನಿಂದು (ಪದ್ಮರಾ. ೧೦–೧೫೮) ; ಆತಂ ಬಂದು . . . ಸೂಕ್ಷ್ಮರೂಪಂ ಅನುಕರಿಸಿಯೊಳಪುಗುತುಂ (ಪದ್ಮರಾ. ೧೦–೨೯೯) ; ಅನುಕರಿಸಿದಮಲ ವಸ್ತ್ರಾಭರಣ ಗಂಧಮಾಲ್ಯಾದಿಗಳ ಪೂಜೆಯಿಂದೆ (ಜೈಮಿಭಾ. ೪–೬) ; ಪನ್ನೀರ ಮಿಂದು . . . ಸನ್ನುತ ಸುಯಕ್ಷಕರ್ದಮುವನನುಕರಿಸಿ ಕತ್ತುರಿ ತಿಲಕವಿಟ್ಟು ಪಣೆಗೆ (ಜೈಮಿಭಾ. ೧೧–೪೧).

೪. ತೆಗೆದುಕೊ; ಸ್ವೀಕರಿಸು: ಎನುತ ಸಂಭ್ರಮದಿಂದ ಮಾಯಾಂಗನೆಗೆಯುಪದೇಶವನು ಮಾಡಿದಡನುಕರಿಸಿ ಮಾಡುತ್ತಲಿರ್ದಳು ಭಕ್ತಿಯನು (ಪ್ರಭುಲೀ. ೩-೪೪); ಪರಮಹಿತಳಖಿಳ ಜನದುಬ್ಬರದ ದರುಶನಗಾಣಿಕೆಯನನುಕರಿಸುತನುಪಮ ವಿಷಯವೀಥಿಯ ನೋಡುತ್ತೈತಂದ (ತೊರರಾ. ೧-೬-೭); ನಿನಗೊಂದು ಪಲವು ಚಿತ್ರಾಂಬರ ವಿದ್ಯೆಯನನು ನಯದಿಂದೀವೆನದನು ಅನುಕರಿಸೆಂದದಜೊಂದುನ್ನತಿಕೆಯ ಮನವೊಲಿದೊರೆದನಿಂತೆಂದು (ಶ್ರೀಪಾಲ. ೪-೪೫). ೫. ಒಪ್ಪು; ಅಂಗೀಕರಿಸು: ಸರೇಫಮಿದಿರಾಗೆ ಶಿಥಿಲಮೆಂದನುಕರಿಪರ್ (ಶಮದ. ೫೯); ಮನದ ಸಂಶಯವಡಗಿತಿಬ್ಬರ ವಿನುತ ಮೂರ್ತಿಯನೇಕಭಾವದಲನುಕರಿಸಿದರು (ತೊರರಾ. ೧-೧೩-೧೫); ಸಾದರದೊಳೆನ್ನೊಡನೆ ರಮಿಸುವುದು ನಿನಗೆ ಸೊಗಸಾದರದನನುಕರಿಸುಮೇಣ್ಕಲಹಕೃತವೆ ಲೇಸಾದರದಟಂ ತೋಱಿಸು (ಜೈಮಿಭಾ. ೧೬-೧೩). ೬. ಅನುಸರಿಸಿ ನಡೆ; ಹಿಂಬಾಲಿಸು: ಶ್ರುತಿತದರ್ಥಸ್ಮೃತಿಗಳಲಿ ಪಂಡಿತರು ನಡೆವುದ ಮಾಡು ಮೂರ್ಖರ ಗತಿಯನನುಕರಿಸಿದರೆ ಬಳಿಕ ವಿಶೇಷವೇನೆಂದ (ಕುವ್ಯಾದ್ರೋ. ೧೮-೫೭). ೭. ಸಿದ್ಧಪಡಿಸು; ಒದಗಿಸು: ಎನುತ ತೃಣಧಾನ್ಯದಲಿ ಪಾಕವನನುಕರಿಸಿ ಜೀವಿಸುತಲಾ ಕಾನನದಿ (ಜೀವಂಚ. ೫-೪೫); ಮುನಿರೂಪಿನ ಕಲ್ಪವೃಕ್ಷ ಮಿಂತೀಗಳು ಯೆನಗಭಿಲಷಿತ ಫಲವನು ಅನುಕರಿಸಲು ಬಂದುದೆಂದಾ ನೃಪೇಂದ್ರನು (ಶಾಂತೀಚ. ೯-೨೦). ೮. ಹೊರಚೆಲ್ಲು; ವಿಸರ್ಜಿಸು: ಎನಲು ಗರ್ಜಿಸುತೆದ್ದು ಸಗಣವನನುಕರಿಸಿ ಗಾತ್ರವನು ಹೊಯ್ಯಲು (ಕುವ್ಯಾಆ. ಒರಿಇ. ೨೪-೭೧). ೯. ನಿರ್ದೇಶಿಸು: ಇ ಈ ಎಂಬಕ್ಕರಂಗಳನುಕರಿಸಿ ತೋಱುವಲ್ಲಿಯುಂ ನಡುವೆ ವತ್ವಂ – ಈವಿವು ಗ್ರಂಥಂಗಳ್, ಈವಿದು ಗ್ರಂಥಂ (ಶಮದ. ೫೫ ಪ್ರಯೋ). ೧೦. ಆಚರಿಸು; ನಡಸು; ನೆರವೇರಿಸು: ವಿನುತ ಸಂಧ್ಯಾವಂದನಾದಿಯನನುಕರಿಸಿ ಹರಿಪದ ಪಯೋಜವ ನೆನೆದು (ಕುವ್ಯಾದ್ರೋ. ೯-೧೪); ವಿನುತ ಸತ್ಕೃತಿ ಸಹಿತ ಗುರುಭಾವನೆಯಲೇ ಪೂಜಿಸಲು ಪೂಜೆಯನನುಕರಿಸಿ ಕೈಗೊಳಿಸಿದನು ಕಾಲೋಚಿತವ್ರತವ (ತೊರರಾ. ೨-೧-೨೦); ಆ ಮಹೇಶ್ವರನು . . . ನಿಕಾಮಲೋಕಪ್ರಳಯ ತಾಂಡವಾಡಂಬರಮನನುಕರಿಸಿದಂ (ಚಬಪು. ೧೨-೧೮). [ಅನುಕರಣ + –ಇಸು$_3$]

**ಅನುಕರುಷ** (ನಾ). = ಅನುಕರ್ಷ ೪: ಆಯಿತಲ್ಲಿ ವರೂಥ ನಕ್ಷತ್ರಾಯತವು ಬಳಿಯನುಕರುಷವೊಂದಾಯಿತಾ ಗ್ರಹರಾಜಿಯಾದವು ಮಾವ ಕೇಳೆಂದ (ಕುವ್ಯಾಕ. ೭-೪). [< ಸಂ. ಅನುಕರ್ಷ]

**ಅನುಕರ್ತ** (ನಾ). ಅಭಿನಯಿಸುವವನು; ನಟ: "ಅನುಕಾರ್ಯ"ರೆಂದು ತಮ್ಮನ್ನು ಕರೆದುಕೊಳ್ಳುತ್ತಾ ಅದಕ್ಕೆ ತಕ್ಕಂತೆ ವೇಷ ಧರಿಸಿ ರಂಗಭೂಮಿಯ ಮೇಲೆ ಸಾಕ್ಷಾತ್ತಾಗಿ ಓಡಾಡುವ ನಟನಟಿಯರು. ಇವರು "ಅನುಕರ್ತ"ರು (ಭಾರವಿಮಾ. ೩೫೮). [< ಸಂ. ಅನುಕರ್ತೃ]

**ಅನುಕರ್ತೃ** (ನಾ). ೧. ಅನುಕರಣ ಮಾಡುವವನು. ೨. ಪಾತ್ರಧಾರಿ: ಕವಿಯು ತಾನಾಗಿಯೇ ಮುಂದೆ ಬಂದು ಬಹಳ ಸ್ವಲ್ಪ ಹೇಳಬೇಕು. ಏಕೆಂದರೆ ಹಾಗೆ ಮಾಡುತ್ತಿರುವಾಗ ಅವನು ಅನುಕರ್ತೃವಾಗಿರುವುದಿಲ್ಲ (ಅರಿಕಾ. ೧೩೪). [ಸಂ.]

**ಅನುಕರ್ಷ** (ನಾ). ೧. ಆಕರ್ಷಣೆ; ಸೆಳೆತ. ೨. ವಿಗ್ರಹ ಮುಂತಾದುವುಗಳಲ್ಲಿ ಮಂತ್ರಪೂರ್ವಕವಾಗಿ ಮಾಡುವ ದೇವತೆಗಳ ಆವಾಹನೆ. ೩. [ವ್ಯಾಕ] ಹಿಂದಿನ ಕ್ರಮವನ್ನು ಅಥವಾ ಸೂತ್ರವನ್ನು ಅನುಸರಿಸುವುದು. ೪. ರಥದ ಅಚ್ಚಿನ ಮರ: "ಅನುಕರ್ಷ–ನೊಗದ ಕೆಳಗಿರುವ ಕೋಲೀಹಲಿಗೆಗೂ, ತೋಳುಮರಕ್ಕೂ ಸಾರಥಿ ಕೂಡುವ ಹಲಿಗೆಗೂ ಕೊಳವಿ ಹೂಟದ ಮಣಿಗೂ ಹೆಸರು" (ಸಿದ್ಧಾಂತಿ. ೨೧೮). [ಸಂ.]

**ಅನುಕಲ್ಪ** (ನಾ). ೧. ಮುಖ್ಯವಾದ ವಸ್ತುವಿಗೆ ಅಥವಾ ವಿಧಾನಕ್ಕೆ ಪ್ರತಿಯಾಗಿ, ಪ್ರತಿನಿಧಿಯಾಗಿ ಅಂಗೀಕರಿಸುವ ಎರಡನೆಯ ವಸ್ತು ಅಥವಾ ವಿಧಾನ; ಗೌಣಕಲ್ಪ; ಮಧ್ಯಮಪಕ್ಷ; ವಾಮಪಕ್ಷ. ೨. [ವೀಶೈ] = ಅನುಕಲ್ಪಭಸ್ಮ: ಸಮಸ್ತ ಭಸಿತಂಗಳಾದೊಡೆ ಕಲ್ಪ, ಅನುಕಲ್ಪ, ಉಪಕಲ್ಪ, ಅಕಲ್ಪವೆಂದು ನಾಲ್ಕು ತೆಱನಾಗಿರ್ಪುದದಱಲ್ಲಿ ವನದೊಳಗಿದ್ದ ಗೋಮಯಮಂ ಚೂರ್ಣೀಕರಿಸಿ ದಹಿಸಿ ಮಾಡಿಕೊಂಬುದೇ ಅನುಕಲ್ಪವೆನಿಸುವುದು (ವಿವೇಕ. ೭೪). [ಸಂ. / ತಮಿ. ಅನುಕಱ್ಪಂ]

**ಅನುಕಲ್ಪಭಸ್ಮ** (ನಾ). [ವೀಶೈ] ನಾಲ್ಕು ವಿಧವಾದ ಭಸ್ಮಗಳಲ್ಲಿ ಒಂದು; ಕಾಡುಬೆರಣಿಯನ್ನು ಸುಟ್ಟು ಮಾಡಿದ ಭಸ್ಮ: ಅರಣ್ಯದಲ್ಲಿ ಒಣಗಿದ ಗೋಮಯವನ್ನು ತಂದು ಪುಡಿಮಾಡಿ ಮೊದಲಿನಂತೆ ಶಿವಾಗ್ನಿಯಿಂದ ದಹಿಸಲ್ಪಟ್ಟ ಭಸ್ಮವೇ ಅನುಕಲ್ಪಭಸ್ಮವು (ಅಷ್ಟಾವಿ. ೪). [ಅನುಕಲ್ಪ + ಭಸ್ಮ]

**ಅನುಕಾಮೀನ** (ನಾ). ಸ್ವೇಚ್ಛೆಯಿಂದ ನಡೆಯುವವನು; ತನಗೆ ತೋರಿದಂತೆ ಮಾಡುವವನು. [ಸಂ.]

**ಅನುಕಾರ** (ನಾ). ೧. ವೇಷಧಾರಣ; ಅಭಿನಯ; ಅನುಕರಣ: ತಾನು ತೊಟ್ಟಿಲು ಕೃಷ್ಣನೆಂದನುಮಾನಿಸುತ ಮತ್ತೊಬ್ಬಳಾ ಶಕಟಾನುಕಾರದ ಕಾಂತೆಯನು ಕೆಡೆಯೊದೆದಳಂಬರಕೆ (ನಿಭಾಗ. ೧೦-೨೬-೨೫). ೨. ಹೋಲಿಕೆ; ಸಾದೃಶ್ಯ. [ಸಂ.]

**ಅನುಕಾರಿ** (ಗು). ಅನುಕರಿಸುವಂಥ; ಹೋಲುವಂಥ: ಬನರಾಣಿಯ ಕರತಳದ ಚೆಂಬೊಗರ್ಗನುಕಾರಿಯಪ್ಪೆಳದಳಿರಿಂ ತೀವಿ ತೋರ್ಪ ಚೆನ್ನಸುಗೆಯಿಂ (ರಾಮಾಶ್ವ. ೫೩-೫). [ಸಂ. ಅನುಕಾರಿನ್]

**ಅನುಕಾರ್ಯ** (ನಾ). ಅನುಕರಿಸಲ್ಪಡಬೇಕಾದ ವ್ಯಕ್ತಿ ಅಥವಾ ವಸ್ತು: ಅನುಕಾರ್ಯನ ಸ್ಥಾಯಿಭಾವವನ್ನು ನಟನು ಅನುಕರಣೆ ಮಾಡುತ್ತಾನೆ (ಭಾರವಿಮಾ. ೩೬೪); ನಾಟ್ಯದಲ್ಲಿ, ಅನುಕಾರ್ಯರಾದ ದುಷ್ಯಂತಾದಿ ವ್ಯಕ್ತಿಗಳು; ನಟ, ಕವಿ, ಸಾಮಾಜಿಕರು ಇಷ್ಟು ಜನರಿರುತ್ತಾರೆ (ಕೈಪಿಡಿ. ೧೯೪). [ಸಂ.]

**ಅನುಕಾಲ**$_1$ 'ಅನಿಗಾಲ' ನೋ.

**ಅನುಕಾಲ**$_2$ (ಅ). ಕಾಲಕ್ಕೆ ತಕ್ಕಂತೆ; ಸಂದರ್ಭೋಚಿತವಾಗಿ. [ಸಂ.]

**ಅನುಕೀರ್ತನೆ** (ನಾ). ಕೊಂಡಾಟ; ಗುಣಗಾನ: ಎನುತ ನಾನಾವಿಧದೊಳನುಕೀರ್ತನೆಗಳಂ ಮಾಡಲ್ಕೆ ತತ್ಪುರಜನರು ಜಯ ಜಯಘೋಷಣಂಗಳುವೆರಸಿ ಪೊಡಮಡಲು (ಬಸಪು. ೩೮-೬೯). [ಸಂ. ಅನುಕೀರ್ತನ]

**ಅನುಕೂಲ**, ಅನುಕೂಳ (ಗು). ೧. ತೀರವನ್ನು ಅನುಸರಿಸಿದ; ಪ್ರವಾಹಕ್ಕೆ ಅನುಗುಣವಾದ; ಮೇರೆ ಮೀರದ. ೨. ಹಿತಕರವಾದ; ಸುಖಕರವಾದ; ಸಹಾಯಕವಾದ: ಮನೆಯ ತೊಱೆದು ಮನವಾಳ್ತೆಯನುಳಿದು ತನ್ನನುಕೂಲದಾಸೆಯನಳಿದು ಬನದೊಳು ಗೈವ ಬರಿಯ ತಪಗಳು ಕುಲವನಿತೆಯರಿರವಿಗೆ ದೊರೆಯೆ (ಹದಿಬ. ೨-೨೪). (ನಾ). ೩. ಸಹಾಯಕ. ೪. ಸೌಕರ್ಯ: ಕೀಲು ಕಡೆಗೊಂಡೂಡಿ ಬೀಳಲು ಕಾಲಗತಿ ತಪ್ಪುವುದು ಅದಱನುಕೂಲ ನಿನ್ನೊಳಗಿಹುದು (ಹರಿಸಾ. ೮೭); ನಿನಗೆ ಆ ದಿನ ಬರಲು ಅನುಕೂಲ ಇದೆಯೋ ಇಲ್ಲವೋ? (ರೂಢಿ). ೫. ಬಡತನವಿಲ್ಲದ ಸ್ಥಿತಿ; ಹಣವಂತಿಕೆ: ಅವರು ತುಂಬ ಅನುಕೂಲವಂತರು (ರೂಢಿ). ೬. [ನಾಟ್ಯ] ಶೃಂಗಾರ ನಾಯಕನಲ್ಲಿ ಒಂದು ವಿಧ; ಅನ್ಯಸ್ತ್ರೀಯರಲ್ಲಿ ಆಸಕ್ತಿಯನ್ನು ತೋರಿಸದೆ ತನ್ನ ಪ್ರಿಯೆಯಲ್ಲಿಯೇ ಅನುರಕ್ತನಾಗಿರುವವನು: ಅನುಕೂಲನೆಂದರೆ, ಒಬ್ಬಳೇ ನಾಯಿಕೆಯಲ್ಲಿ ಅನುರಕ್ತನಾಗಿ ಇರುವವನು (ಕೈಪಿಡಿ. ೨೧೦). **ಅನುಕೂಳ**: ೨. ಪೆಂಪುವಡೆದ ಗೊಲ್ಲಣ ವಿಭುಗಂಗನುಕೂಳ ಮಂತ್ರಿ ನರಸಿಂಗ ನಾಯಕಂ (ಕಇಅ. ೭೫-೧೨-೩೭; 1170). [ಸಂ.]

**ಅನುಕೂಲತರ್ಕ** (ನಾ). ೧. "ಶಾಸ್ತ್ರಕ್ಕೆ ಅನುಕೂಲವಾದ ತರ್ಕ ಸತ್ತರ್ಕ. ಅನುಕೂಲತರ್ಕವೆಂದೂ ಹೆಸರು" (ಹಿಂದಸಾ. ೧೧೫). ೨. ಸಮಯಕ್ಕೆ ತಕ್ಕಂತೆ ಅಥವಾ ತಮ್ಮ ಅನುಕೂಲಕ್ಕೆ ತಕ್ಕಂತೆ ಮಾಡುವ ವಾದ. [ಅನುಕೂಲ + ತರ್ಕ]

**ಅನುಕೂಲತೆ** (ನಾ). ೧. ಹೊಂದಿಕೊಂಡಿರುವಿಕೆ; ಹಿತವಾಗಿರುವಿಕೆ. ೨. ಸೌಕರ್ಯ: ಎಲ್ಲ ಪ್ರಾಣಿಗಳಿಗೂ ಅವುಗಳ ಸ್ಥಿತಿಗತಿಗೆ ತಕ್ಕ ಅನ್ನಪಾನಾದಿಗಳ ಅನುಕೂಲತೆಯುಂಟು (ಮುಂಬಯಿ. ४-೫೯). ೩. ಸಂಪತ್ತು. [ಸಂ. ಅನುಕೂಲತಾ]

**ಅನುಕೂಲದಾಂಪತ್ಯ** (ನಾ). ಸಮರಸವಾಗಿರುವ ದಂಪತಿಗಳ ಜೀವನ: ಅನುಕೂಲದಾಂಪತ್ಯ ಮನೆಯಲ್ಲಿ ಸುಖ ನೆಲಸುವಂತೆ ಮಾಡುತ್ತದೆ (ರೂಢಿ). [ಅನುಕೂಲ + ದಾಂಪತ್ಯ]

**ಅನುಕೂಲನೆಲೆ** (ನಾ). ಹಿತಕರವಾದ ಸ್ಥಳ: ಮತ್ತವರ್ಗಳಿಗೆ ವನವಾಸವಾಗಲ್ ತನಗೆ ಚಿತ್ತಕನುಕೂಲನೆಲೆಯಿಲ್ಲದಿರೆ (ಲಕ್ಷ್ಮಭಾ. ವಿರಾಟ. ೧-೨೦). [ಅನುಕೂಲ + ನೆಲೆ]

**ಅನುಕೂಲಪವನ** (ನಾ). ೧. ಹಿತಕರವಾದ ಗಾಳಿ. ೨. ಉದ್ದೇಶಕ್ಕೆ ಅನುಸಾರವಾಗಿ ಚಲಿಸುವ ಪ್ರಾಣವಾಯು: ಅನುಕೂಲಪವನನಿಂ ಜೀವನಿಷ್ಟದಿಂ ನಾಭಿಮೂಲದಿಂ ಕಹಳೆಯ ಪಾಂಗಿನವೋಲ್ ಶಬ್ದದ್ರವ್ಯಂ ಜನಿಯಿಸುಗುಂ (ಶಮದ. ೨). [ಅನುಕೂಲ + ಪವನ]

**ಅನುಕೂಲವರ್ತನ** (ಗು). ಸನ್ನಿವೇಶಕ್ಕೆ ತಕ್ಕ; ಹೊಂದಿಕೆಯಾದ: ಉಕಕಳಿಯಾಳಿ ... ಅಡಿಗ ಪ್ರಕಟ ಪ್ರತ್ಯಯಮುಕ್ಕುಂ ಸುಕವಿಗಳಿಂತದನುಕೂಲವರ್ತನವಿಧಿಯೊಳ್ (ಶಮದ. ೨೦೩). [ಅನುಕೂಲ + ವರ್ತನ]

**ಅನುಕೂಲವಾತಾವರಣ** (ನಾ). ಹಿತಕರವಾದ ವಾತಾವರಣ: ಅಲ್ಲಿನ ಅನುಕೂಲವಾತಾವರಣ ಕೆಲಸಕಾರ್ಯಗಳಿಗೆ ಸೌಕರ್ಯವುಂಟು ಮಾಡಿದೆ (ರೂಢಿ). [ಅನುಕೂಲ + ವಾತಾವರಣ]

**ಅನುಕೂಲವೃತ್ತಿ** (ನಾ). ೧. ದಡವನ್ನು ಅನುಸರಿಸಿ ಹರಿಯುವುದು; ಮೇರೆಯನ್ನು ಮೀರದಿರುವುದು. ೨. ಪ್ರೀತಿಯಿಂದ ಕೂಡಿ ಇಷ್ಟಕ್ಕೆ ಅನುಸಾರವಾಗಿ ನಡೆಯುವುದು. ೧, ೨: ಅನುಕೂಲವೃತ್ತಿ ನದಿಯೊಳಂ ನಲ್ಲರೊಳಂ (ಜಗವಿ. ४-೭೫ ವ). [ಅನುಕೂಲ + ವೃತ್ತಿ]

**ಅನುಕೂಲಶಾಸ್ತ್ರ** (ನಾ). ಸಮಯಕ್ಕೆ ತಕ್ಕಂತೆ ತಮ್ಮ ನಡೆಗೆ ಅನುಕೂಲಿಸುವಂತೆ ಕಲ್ಪಿಸಿ ಶಾಸ್ತ್ರಕ್ಕೆ ಅರ್ಥ ಹೇಳುವ ಕ್ರಮ; ದಿಟವಾದ ಅರ್ಥ ಬೇರೆ ಇದ್ದರೂ ತಮ್ಮ ಅನುಕೂಲಕ್ಕೆ ತಕ್ಕಂತೆ ಅರ್ಥ ಕಲ್ಪಿಸಿ ಬಳಸುವ ರೀತಿ: ಈ ವಾದವನ್ನೆಲ್ಲಾ ತೆಗೆದರೆ "ಅನುಕೂಲಶಾಸ್ತ್ರ" ಎಂದು ಜನ ಕರೆದಾರು (ಸುವಸಂ. ೨೪). [ಅನುಕೂಲ + ಶಾಸ್ತ್ರ]

**ಅನುಕೂಲಸಿಂಧು** (ನಾ). ಸಮಯಕ್ಕೆ ತಕ್ಕಂತೆ ಅಥವಾ ತಮ್ಮ ಅನುಕೂಲಕ್ಕೆ ತಕ್ಕಂತೆ ಹೊಂದಿಸಿಕೊಳ್ಳುವುದು: ಹಿರಿಯನಾದ ನುರಿಯಾನೆ ಮತ್ತು ಅವನ ವಂಶಸ್ಥರು ಅನುಕೂಲಸಿಂಧು ಮಾರ್ಗ ಹಿಡಿದು ... ತಾವೂ ವೈಷ್ಣವರಾದರು (ರೂಲೀಖಾ. ೧೭೭). ☞ ಧರ್ಮಸಿಂಧು, ನಿರ್ಣಯಸಿಂಧು ಎಂದು ಪ್ರಸಿದ್ಧವಾದ ಧರ್ಮಶಾಸ್ತ್ರ ಗ್ರಂಥಗಳಲ್ಲಿರುವ ಆಚರಣೆಯ ಕ್ರಮವನ್ನು ಬಿಟ್ಟು ತಮ್ಮ ಅನುಕೂಲದಂತೆ ವರ್ತಿಸುವುದು. [ಅನುಕೂಲ + ಸಿಂಧು]

**ಅನುಕೂಲಸ್ಥ** (ನಾ). ತಕ್ಕಮಟ್ಟಿಗೆ ಒಳ್ಳೆಯ ಸ್ಥಿತಿಯಲ್ಲಿರುವವನು: ಇವು ಬೆಲೆ ಹೆಚ್ಚಾಗಿರುವ ಕಾರಣ ಇವುಗಳನ್ನು ಕೊಳ್ಳಲು ಅನುಕೂಲಸ್ಥರಿಗೆ ಮಾತ್ರ ಸಾಧ್ಯ (ಗೃಹವಿ. ೭೫); ಅನುಕೂಲಸ್ಥರ ಮನೆಗೆ ಹೆಣ್ಣು ಕೊಡಬೇಕು (ರೂಢಿ). [ಸಂ.]

**ಅನುಕೂಲಸ್ತ್ರೀ** (ನಾ). ಹೊಂದಿಕೊಂಡು ನಡೆಯುವ ಸ್ತ್ರೀ, — ಹೆಂಡತಿ: ತನ್ನ ಮುಪ್ಪಿನ ತಂದೆಯು ಅನುಕೂಲಸ್ತ್ರೀಯ ವಿಯೋಗದಿಂದ ಬಹು ದುಃಖಿತನಾಗಿದ್ದನು (ವಚಕಾ. ೩). [ಅನುಕೂಲ + ಸ್ತ್ರೀ]

**ಅನುಕೂಲಾನಿಲ** (ನಾ). = ಅನುಕೂಲಪವನ: ಅನುಕೂಲಾನಿಲಾಂದೋಳಾಯಮಾನರಾಜಕುಂಜರವಿಜಯಕದಳಿಕಾತರಂಗಿತಗಗನಾಂಗಣನುಂ (ಆದಿಪು. ೧೨-೬೧ ವ). [ಅನುಕೂಲ + ಅನಿಲ]

**ಅನುಕೂಲಿಗ** (ನಾ). ಅನುಕೂಲವಾಗಿ ಅಥವಾ ಹಿತವಾಗಿ ನಡೆದುಕೊಳ್ಳುವವನು; ಪ್ರೀತಿಯಿಂದ ಅನುಸರಿಸಿ ನಡೆಯುವವನು: ಇನಿತು ಸುಗುಣಗಳುಳ್ಳಿನಿಯನೆನ್ನೀ ಜನ್ಮಜನ್ಮಾಂತಮೆನ್ನ ತೋಳ್ವೆನೆಯೊಳಿರಲೆಂದೊರ್ವ ಕಾಂತೆಯನುಕೂಲಿಗನನಂದು ಸಖಿಯೊಳ್ ಪೊಗಳ್ದಳು (ಚಿಬಪು. ೧೦-೨೬). [ಅನುಕೂಲ + -ಇಗ]

**ಅನುಕೂಲಿನಿ** (ನಾ). = ಅನುಕೂಲೆ: ತನುವೇನು ಶಾಶ್ವತವೆ? ಮನಕೆ ನಿಶ್ಚಲವಿಹುದೆ? ... ವನಿತೆ ಅನುಕೂಲಿನಿಯೆ? ಮಗನು ಅಜ್ಞಾಧರನೆ? ಜನರೊಲುಮೆ ನಿಜವೆ? (ಕಎಪು. ४೯). [ಸಂ. ಅನುಕೂಲಿನೀ]

**ಅನುಕೂಲಿಸು** (ಕ್ರಿ). ಅನುಕೂಲವಾಗು; ಹಿತವಾಗು; ಸಹಾಯವಾಗು: ಜ್ಞಾನವೈರಾಗ್ಯೋಪರತಿಗಳೆಂಬ ಸಿದ್ಧಿತ್ರಯಮನುಕೂಲಿಸೆ ಮುಕ್ತಿ ಸಿದ್ಧಿಸುವದು (ವಿವೇಕ. ೫೭); ಯಾ ವಾಹನವು ಆವಶ್ಯಕ ಕಾರ್ಯ ಉಂಟಾದಲ್ಲಿ ಅನ್ಯರಿಗೂ ಅನುಕೂಲಿಸುವದೊ ಯಿಲ್ಲವೊ ಯಂದು ನೃಪತಿಯು ಕೇಳುತ್ತಿರಲು (ಸೌಗಂಧಿ. ೫೨-೮); ಗಾಳಿಯು ಅನುಕೂಲಿಸಿದಾಗ ಒಮ್ಮೆ ಪಟವನ್ನು ಇಳಿಬಿಟ್ಟರೆ ತೀರಿತು; ತೀವ್ರದಿಂದ ನಡೆಯುತ್ತದೆ (ಮುಂಬಯಿ. ४-೧೫೭); ಪೂರ್ವಕೃತ ಪಾಪಗಳಿಗೆ ಪ್ರಾಯಶ್ಚಿತ್ತವೂ ಮುಂದೆ ಪುನಃ ಅಕಾರ್ಯವನ್ನು ಮಾಡದ ಹಾಗೆ ವರ್ತಿಸುವುದಕ್ಕೂ ಅನುಕೂಲಿಸುವುದು (ಆರ್ಯಧ. ४३). [ಅನುಕೂಲ + -ಇಸು]

**ಅನುಕೂಲೆ** (ನಾ). ಅನುಕೂಲವಾದವಳು; ಅನುಸರಿಸಿ ನಡೆಯುವವಳು: ಕಾಲಕಾಲದ ಜಪಾನುಷ್ಠಾನ ಪೂಜೆಗಳಿಗಾಲಸ್ಯಮಂ ಮಾಡದೆನ್ನ ಪರಿಚರ್ಯೆಗನುಕೂಲೆಯಾಗಿರ್ದ ಮನೆವಾಳ್ತಿಯಂ ಸಾಗಿಪುದು (ಜೈಮಿಭಾ. ೧೦-೨೩); ಕ್ರಮವನಜಿಯದಳೆ ನೀನೆನಗೆ ಸ್ವೈರಿಸಲಳವೆ ಗಮನಕನುಕೂಲೆಯಾಗೆನುತೆ ಗಲ್ಲಂಬಿಡಿದು ಕಮಲಾಕ್ಷಿಯಂ ಮುದ್ದುಗೈದು (ಜೈಮಿಭಾ. ೧೧-೧೫). [ಸಂ. ಅನುಕೂಲಾ]

**ಅನುಕೂಳ** 'ಅನುಕೂಲ' ನೋ.

**ಅನುಕೃತ** (ಗು). ಅನುಕರಿಸಲ್ಪಟ್ಟ; ಅನುಕರಿಸಿದ: ಎಸೆದರ್ ವತ್ಸಪಾಲಕರ್ ಬಲಕೃಷ್ಣರ್ ... ಅನುಕೃತ ಮಯೂರ ಕೇಕಾನಿನಾದ ಮೃದುಗಾನ ತಾನ ನಿಪುಣರ್ (ಜಗವಿ. ೩-೭४, ೭೭). [ಸಂ.]

**ಅನುಕೃತಿ** (ನಾ). ೧. = ಅನುಕರಣ ೧. ೨. ಅನುಸರಿಸಿ ನಡೆಯುವುದು; ಒತ್ತಾಸೆಯಾಗುವುದು. ೩. ನಕಲು. ४. [ವ್ಯಾಕ] ಅನುಕರಣ ಶಬ್ದ: ಮಹಾಪ್ರಾಣಮುಮಂ ಮಾರ್ಗವಿದರ್ ಸಂಖ್ಯೆಯೊಳಂ ಭೋರ್ಗರೆವನುಕೃತಿಯೊಳಂ ಪ್ರಯೋಗಿಸುತಿರ್ಪರ್ (ಶಮದ. ೧४). 'ಅನುಕೃತಿಪದ' ಪರಾ. [ಸಂ.]

**ಅನುಕೃತಿಪದ** (ನಾ). = ಅನುಕರಣಪದ: ಅನುಕೃತಿಪದಂಗಳ್ಗಂ ಮೊದಲಪದದ ಕಡೆಯಕ್ಕರಕ್ಕೆ ಲೋಪಂ ... ಅನುಕರಣಾಂತ ಲೋಪಕ್ಕೆ— ತಟತಟನೆ ನೇಸರ್ಮೂಡಿದುದು ಬಕಂಗೆ ಮಿಟ್ಟು ಮೂಡುವ ತೆಜದಿಂ. ಗಟಗಟ ಕಣ್ಣಾನೀರ್ ಸುರಿಯೆ ಚಿಂತಿಪ ಪಾರ್ವನ (ಶಮದ. ಸ. ೧೯೩ ವೃತ್ತಿ, ಪ್ರಯೋ). [ಅನುಕೃತಿ + ಪದ]

**ಅನುಕೃತಿಸ್ವರ** (ನಾ). ಶಬ್ದವನ್ನು ಅನುಕರಣವೆಂದು ಗುರುತಿಸಲು ಬಳಸುವ ಅನ್, ಅನ್ನು, ಎನ್, ಎನ್ನು ಮುಂತಾದ ಶಬ್ದಗಳ ಮೊದಲನೆಯ ಸ್ವರ: ಅದಂತಮಪ್ಪನುಕೃತಿಪದಕ್ಕಮನುಕೃತಿಸ್ವರಂ

ಪರಮಾಗೆ, ಯತ್ವಂ ; ಅನುಕೃತಿಸ್ವರಕ್ಕೆ – ಪಟಪಟಯೆಂದಾಲಿಕಲ್ಗಳು ದಿರ್ದುವು ನಭದಿಂ (ಶಮುದ. ೫೪ ವೃತ್ತಿ, ಪ್ರಯೋ). [ಅನುಕೃತಿ + ಸ್ವರ]

**ಅನುಕೆಯ್** 'ಅನುಗೆಯ್' ನೋ.

**ಅನುಕೊಳಿಸು** 'ಅನುಗೊಳಿಸು' ನೋ.

**ಅನುಕ್ತ** (ಗು). ಉಚ್ಚರಿಸದ ; ಹೇಳಲ್ಪಡದ ; ಹೇಳದ. 'ಅನುಕ್ತವಾಣಿ', 'ಅನುಕ್ತಸಿದ್ಧ' ಪರಾ. [ಸಂ.]

**ಅನುಕ್ತವಾಣಿ** (ನಾ). (ಬಾಯಿಬಿಟ್ಟು) ಹೇಳದ ಮಾತು : ತಾನೇ ಹೋಗಬಹುದಿದ್ದಿತು ! ಎಂದು ಮತ್ತೆ ಅನುಕ್ತವಾಣಿಯು ಮನದ ಬಿರುಕಿನಿಂದ ತಲೆ ಎತ್ತಿದಂತೆನಿಸಿತು (ಜಯಂತ. ೩೧೨). [ಅನುಕ್ತ + ವಾಣಿ]

**ಅನುಕ್ತಸಿದ್ಧ** (ನಾ). ಬಾಯಲ್ಲಿ ಹೇಳದೆಯೇ ಸಿದ್ಧವಾದುದು ; ಸ್ಪಷ್ಟವಾದ ವಿಷಯ : ಪ್ರಸಿದ್ಧಾನಮಂ ಪಡೆದ ಪರಾರ್ಥಮಂ ಶಾಶ್ವತಮೆಂಬುದನುಕ್ತಸಿದ್ಧಂ (ಶಾಂತಿಪು. ೮–೧೩೪ ವ). [ಅನುಕ್ತ + ಸಿದ್ಧ]

**ಅನುಕ್ತಸೂತ್ರ** (ನಾ). ಗ್ರಂಥಕರ್ತನಿಂದ ರಚಿತವಾಗದೆ ಬೇರೆಯವರು ಸೇರಿಸಿರುವ ಸೂತ್ರ: ಅನುಕ್ತಸೂತ್ರಂ (ಶಮುದ. ಕಿ. ೧೨೨ ಬಿ, ೨೫೧ ಬಿ). [ಅನುಕ್ತ + ಸೂತ್ರ]

**ಅನುಕ್ರಮ** (ಗು). ೧. ಕ್ರಮಕ್ಕೆ ಅನುಸಾರವಾದ. (ನಾ). ೨. ಪರಿವಿಡಿ ; ಆನುಪೂರ್ವಿ : ಪೂರ್ವಚಕ್ರಾಯುಧರನುಕ್ರಮಮನಜಿಯೆ (ಶಾಂತಿಪು. ೧೦–೧೧೭ ವ) ; ಪರಿಣಾಮಕಾರಿಯಾಗಬಲ್ಲ ಯಾವ ಪಾಠಬೋಧನೆಯೇ ಆಗಲಿ, ಆ ಅನುಕ್ರಮದಲ್ಲಿ ಮಾತ್ರ ನಡೆಯಲೇಬೇಕು (ಶಿಕ್ಷದ. ೨೩೦). [ಸಂ.]

**ಅನುಕ್ರಮುಂದಪ್ಪು** (ಕ್ರಿ). ಸರಿಯಾದ ಕ್ರಮವನ್ನು ಬಿಡು, —ಮೀರು : ನಾಲ್ವರ ಭವಾವಳಿಯಂ ಬೆಸಗೊಳೆ ದಮವರ ಮುನಿನಾಥನವಧಿಬೋಧದಿಂದನುಕ್ರಮುಂದಪ್ಪದೆ . . . ನುಡಿದಂ (ಆದಿಪು. ೫–೨ ವ) ; ಪ್ರಬದ್ಧಮಣಿವಿಷ್ಟರಂಗಳೊಳನುಕ್ರಮುಂದಪ್ಪದಂತೆ ಬಂದು ಮಘವಾಗ್ನಿಧರ್ಮದಿತಿಜ ಪ್ರಚೇತೋಮರುತ್ಕುಬೇರ ಹರರಿರ್ಪುದುಂ ಸಭೆಯೊಳ್ (ಜಗವಿ. ೧೧–೭೨). [ಅನುಕ್ರಮ + ತಪ್ಪು₁]

**ಅನುಕ್ರಮಣ** (ನಾ). ಕ್ರಮವನ್ನು ಅನುಸರಿಸಿ ನಡೆಯುವುದು ; ಕ್ರಮವಾಗಿ ಹೆಜ್ಜೆಯಿಡುವುದು ; ಹಿಂಬಾಲಿಸುವುದು. [ಸಂ.]

**ಅನುಕ್ರಮಣಿಕೆ** (ನಾ). ಗ್ರಂಥದಲ್ಲಿಯ ವಿಷಯಗಳ ಕ್ರಮವನ್ನು ತಿಳಿಸುವ ಪಟ್ಟಿಕೆ ; ವಿಷಯ ಸೂಚಿಕೆ ; ಪರಿವಿಡಿ : ಅನುಕ್ರಮಣಿಕೆ (ಮುಂಬಯಿ. ೪–೫, ೬, ೭) ; ಎಲ್ಲಾ ಅಭಿವೃದ್ಧಿ ಪ್ರಾಜೆಕ್ಟುಗಳನ್ನೂ ಪರಿಶೀಲಿಸಿ ಪ್ರಾಮುಖ್ಯತೆಗೆ ಅನುಸಾರವಾಗಿ ಅನುಕ್ರಮಣಿಕೆಯನ್ನು ತಯಾರಿಸಿ (ಅಂತಸಂ. ೯೩). 'ವಿಷಯಾನುಕ್ರಮಣಿಕೆ' ಪರಾ. [ಸಂ. ಅನುಕ್ರಮಣಿಕಾ]

**ಅನುಕ್ರಮಾನುಗತ** (ಗು). (ಸಹಜವಾದ) ಕ್ರಮವನ್ನು ಅನುಸರಿಸಿ ಬಂದ ; ಉಚಿತವಾದ ಕ್ರಮವನ್ನು ಬಿಡದೆ ಪ್ರಾಪ್ತವಾದ : ಮುಂದೆ ಸಯ್ತುಕ್ಕುಮನುಕ್ರಮಾನುಗತದಿಂ ಬರಮಿಾಗೆಮಗೆಂಬ ಕಾರಕಂ (ಕವಿರಾ. ೧–೧೧೬). [ಅನುಕ್ರಮ + ಅನುಗತ]

**ಅನುಕ್ರಮಿಸು** (ಕ್ರಿ). ೧. ಅನುಸರಿಸಿ ನಡೆ ; ಕ್ರಮವಾಗಿ ನಡೆ. ೨. ಪರ್ಯಾಲೋಚಿಸು : ಚಕ್ರಿಯ ಕಟಕವ ಕಂಡು ಮಾಗಧನ ಪರಾಕ್ರಮ ಜಜ್ಜರವಾಯ್ತು ವಕ್ರ ಸಲ್ವುದೆ ಯಿವನೊಡನೆಂದು ಮನದೊಳನುಕ್ರಮಿಸುತ ಬರುತಿರ್ದಾ (ಭರಚ. ೨೫–೫೦). [ಅನುಕ್ರಮ + –ಇಸು₃]

**ಅನುಕ್ರಮೋಕ್ತಿ** (ನಾ). ಕ್ರಮವನ್ನು ಅನುಸರಿಸಿದ ಮಾತು ; ಪರಿವಿಡಿಯನ್ನು ಬಿಡದ ನುಡಿ : ತದನುಮತಲಕ್ಷ್ಯ ಲಕ್ಷಣ ನಿದರ್ಶನಂಗಳನನುಕ್ರಮೋಕ್ತಿಯೆ ಪೇೞ್ವೆಂ (ಕವಿರಾ. ೩–೫). [ಅನುಕ್ರಮ + ಉಕ್ತಿ]

**ಅನುಕ್ರೋಶ** (ನಾ). ದಯೆ ; ಕನಿಕರ ; ಸಹಾನುಭೂತಿ : "ಅನುಕ್ರೋಶಃ, ಕೃಪಾ, ಶೂಕಂ, ದಯಾ, ಕರುಣಾ, ಘೃಣಾ – ಈ ೬ ಕರುಣಂ" (ಹಲಾಯು. ೧೨೦–೩೯). [ಸಂ.]

**ಅನುಕ್ಷಣ** (ಅ). ಪ್ರತಿಕ್ಷಣವೂ ; ಪ್ರತಿಗಳಿಗೆಗೂ ; ಗಳಿಗೆ ಗಳಿಗೆಗೂ ; ಯಾವಾಗಲೂ : ಪುರವಾಸಿಗಳೂ ದೇಶವಾಸಿಗಳೂ ಪ್ರಬುದ್ಧನಾದ ದೇವವ್ರತನ ಗುಣಾತಿಶಯವನ್ನು ಅನುಕ್ಷಣವೂ ಹೊಗಳುತ್ತಿದ್ದರು (ಭೀಷ್ಮಚ. ೧೯). [ಸಂ.]

**ಅನುಗ** (ಗು). ೧. ಅನುಸರಿಸಿ ನಡೆಯುವ ; ಹಿಂಬಾಲಿಸುವ ; ಹೊಂದಿಕೊಂಡು ನಡೆಯುವ. (ನಾ). ೨. ಸೇವಕ ; ಅನುಚರ : "ಸೇವಕನನುಗನನುಚರನಾ ಸಹಾಯನನುಜೀವಿಯೋಲೆಯಕಾರನಕ್ಕು" (ಮಂಗರಾ. ೭೯–೫). ೩. ಜೊತೆಗಾರ. [ಸಂ.]

**ಅನುಗತ** (ಗು). ೧. ಅನುಸರಿಸಿ ಬಂದ ; ಹಿಂಬಾಲಿಸಿದ ; ಸಹಜವಾಗಿ ಪ್ರಾಪ್ತವಾದ ; ಹೊಂದಿಕೊಂಡು ಬಂದ : ಗಾನರಸಾಮೃತಮೆಸೆಗುಂ ಧ್ರುವಪ್ರಯೋಗಾನುಗತಂ (ಅಜಿಪು. ೫–೧೦). ೨. ಸಂಬಂಧಪಟ್ಟ. (ನಾ). ೩. ಜೊತೆಯಲ್ಲಿ ಬರುವವನು ; ಅನುಚರ : ಆಶ್ರಿತರ ಮುಂದೆಯೂ ಅನುಗತರ ಮುಂದೆಯೂ ನಿನ್ನ ಸೌಮ್ಯತೆಯನ್ನು ತೋರಿಸು (ಭೀಷ್ಮಚ. ೨೫) ; ನೆಂಟರಿಗೆ ಹಿತಕಾರಿ, ಸೇವಕರಲ್ಲಿ ದಯಾಳು, ಅನುಗತರ ಪಾಲಕ, ಶತ್ರುಜನಗಳಲ್ಲಿ ಜಗಳವಿಲ್ಲದವ (ಬಂಕಿಮು. ೫೭). ೪. ವಿಧೇಯತೆ ; (ಒಬ್ಬರನ್ನು) ಅನುಸರಿಸಿ ನಡೆಯುವುದು : ಕಾಯಿದರೊ ಕಾದಿದರೊ ಗುರುಗಾಂಗೇಯ ಸೈಂಧವ ಮಾದ್ರಪತಿ ರಾಧೇಯರನುಗತವಾಗದಿಹುದಪರಾಧ ನಮಗೆಂದ (ಕುವ್ಯಾಗ. ೪–೩೨). ೫. [ಛಂದ] = ಅನುಗತಪ್ರಾಸ : ಅಳಕಾನನ ನಯನಂಗಳಿನಳಿನಳಿನೋತ್ಪಲವಿಲಾಸಮಂ ಗೆಲ್ದುದಱಿಂ ಕಳಹಂಸಲೀಲಗಮನೇ ಕೊಳನಂ ನೀಂ ಪೋಲ್ವೆಯೆಂಬುದನುಗತಮಕ್ಕುಂ (ಕವಿರಾ. ೩–೫೦). [ಸಂ.]

**ಅನುಗತಪ್ರಾಸ** (ನಾ). [ಛಂದ] ಕಾವ್ಯಗಳಲ್ಲಿ ಯಾವುದಾದರೊಂದು ವರ್ಣವು ಹಲವು ಬಾರಿ ಕಾಣಿಸಿಕೊಳ್ಳುವ ಪ್ರಾಸ ; ಅನುಪ್ರಾಸ : ಜನವಿನುತನನಘನನುಪಮನನುನಯಪರನರಸನಿನಿಸು ನೆನೆನೆನೆದು ಮನೋಜನಿತ ಮುದನನಿಲತನಯನನನೃತ ವಚನ ರಚನನಂತಿರೆನೆ ನುಡಿದನವಂ ‖ ಇದು ಅನುಗತಪ್ರಾಸಂ (ಛಂದೋಂಬು. ಕಿ. ೧–೬೦). 'ಅನುಪ್ರಾಸ' ಪರಾ. [ಅನುಗತ + ಪ್ರಾಸ]

**ಅನುಗತಿ** (ನಾ). ಅನುಸರಿಸಿದ ನಡೆ ; ಅನುಕ್ರಮ ; ಪರಿವಿಡಿ : "ಅನುಗತಿ ವಿಶಾಯಮೆನಲು ಸುಪರಿವಿಡಿಯೆನಿಕು" (ಮಂಗರಾ. ೧೩೧–೧೯). 'ಅನುಗತಿವೆಱು' ಪರಾ. [ಸಂ.]

**ಅನುಗತಿಕ** (ಗು). ೧. ಬೇರೊಂದನ್ನು ಹಿಂಬಾಲಿಸಿದ ; ಅನುಸರಿಸಿ ನಡೆಯುವ. (ನಾ). ೨. ಹಿಂಬಾಲಿಸುವವನು. 'ಗತಾನುಗತಿಕ' ಪರಾ. [ಸಂ.]

**ಅನುಗತಿವೆಱು** (ಕ್ರಿ). ಕ್ರಮವನ್ನು ಪಡೆ ; ಕ್ರಮವಾಗಿರು ; ಅನುಸರಿಸಿರು : ಅನುಗತಿವೆತ್ತ ನಲ್ಲಳಡಿವಜ್ಜೆಗಳಲ್ಲಿಯೆ ನಿಂದುವಬ್ಜಲೋಚನ ನಡಿವಜ್ಜೆ (ಜಗವಿ. ೫–೨೯). [ಅನುಗತಿ + ಪೆಱು]

**ಅನುಗಪ್ಪುರ** (ನಾ). "ಹಿತಕರವಾದ ಕರ್ಪೂರ ; ಪಚ್ಚಕರ್ಪೂರ" (ಪ್ರಭಣ್ಣ). 'ಅನುಗಪ್ಪುರವತ್ತಿ' ಪರಾ. [ಅನ್ನು₂ + ಕಪ್ಪುರ]

**ಅನುಗಪ್ಪುರವತ್ತಿ** (ನಾ). ಹಿತಕರವಾದ ಕರ್ಪೂರದ ಬತ್ತಿ ; ಪಚ್ಚಕರ್ಪೂರದ ಬತ್ತಿ : ಮೃಗಮುದದಿಂಪು ನಾಸಿಕೆಗೆ ಕಣ್ಣನುಗಪ್ಪುರವತ್ತಿ ಮತ್ತೆ ನಾಲಗೆಗಮೃತದ್ರವಂ ಸರಸ ಚಂದನ ಚರ್ಚೆ ತೊವಲ್ಗೆ ಕರ್ಣಪಾಳಿಗೆ ಕಳಕೋಕಿಲಾರವಮನಾರತನಿರ್ವೃತಿ ಚಿತ್ತವೃತ್ತಿಗೆ (ಚಕವಿ. ೬–೧೫೭). [ಅನುಗಪ್ಪುರ + ವತ್ತಿ]

**ಅನುಗಮ** (ನಾ). ಅನುಸರಿಸುವುದು ; ಹೊಂದಿಕೆ : ಅದ್ಭುತಾರ್ಥತ್ವಂ ಸ್ವಾಧೀನರಸವೃತ್ತಿ ಸಂಬಂಧಾನುಗಮಂ ಭಾವಿಕಕ್ಕೆ ಭಾವಮಿವಕ್ಕುಂ (ಕಾವ್ಯಾವ. ೭೭೭). [ಸಂ.]

**ಅನುಗಮನ** (ನಾ). ೧. ಅನುಸರಿಸಿ ನಡೆಯುವುದು ; ಹಿಂಬಾಲಿಸುವುದು; ಜೊತೆಯಲ್ಲಿ ಹೋಗುವುದು. ೨. ಸಹಗಮನ. [ಸಂ.]

**ಅನುಗಮಿಸು** (ಕ್ರಿ). ಅನುಸರಿಸಿ ನಡೆ; ಜೊತೆಯಲ್ಲಿ ಹೋಗು : ಅಂತೆಂತಾನುಮುವರನನುಗಮಿಸಿ ಸೋಮಪ್ರಭನುಂ ಶ್ರೇಯಾಂಸನುಂ ಮಗುಬ್ದು ಬಂದು (ಆದಿಪು. ೧೦-೭ ವ) ; ಅಲಿಗಳಲನುಗಮಿಸಿದರು ಭೂಪಾಲಕರು (ನಿಘಾಗ. ೪-೧೯-೩೪). [ಅನುಗಮ + -ಇಸು₃]

**ಅನುಗಾಣ್** (ಕ್ರಿ). ೧. ಹಿತವನ್ನು ಕಾಣು ; ಸುಖವನ್ನು ಪಡೆ: ನೆನೆದು ಭವದುಃಖಚಿಂತೆಯಿಂದ ಮಿಗೆ ಬೆಂದು ಅನುಗಾಣೆನಿನ್ನೆಲ್ಲಿಯೆನುತ ಮನದೊಳು ನೊಂದು (ದೀಕ್ಷಾಬೋ. ೮೩-೧೭). ೨. ಸ್ವರೂಪವನ್ನು ತಿಳಿ ; ಸ್ಥಿತಿಗತಿಯನ್ನು ವಿಮರ್ಶಿಸು : ಆ ಗಿರಿವರದಾ ಅನುಗಾಣಲೆಂದು ನಾಲ್ದೆಸೆಯನಾಲಿಸಿ ನೋಡುವನಿತರೊಳಚ್ಚರಿಗಂಡಾ (ಶ್ರೀಪಾಲ. ೪-೭೭). [ಅನು₂ + ಕಾಣ್]

**ಅನುಗಾಮಿ** (ಗು). ೧. ಅನುಸರಿಸುವ ; ಜೊತೆಯಲ್ಲಿ ನಡೆಯುವ. (ನಾ). ೨. [ಜೈನ] ಕ್ಷಯೋಪಶಮನಿಮಿತ್ತಕವಾದ ಆರು ಅವಧಿ ಜ್ಞಾನಗಳಲ್ಲಿ ಒಂದು ; ವಿಶುದ್ಧಪರಿಣಾಮದಿಂದ ಕೂಡಿದುದು : ಹೀಯಮಾನ ವರ್ಧಮಾನಾವಸ್ಥಿತಾನವಸ್ಥಿತಾನುಗಾಮ್ಯನನುಗಾಮಿ ಸ್ವರೂಪದಿಂ ಷಟ್ಪ್ರಕಾರಮಪ್ಪ ದೇಶಪರಮ ಸರ್ವಾವಧಿಜ್ಞಾನಮುಂ (ಸುಕುಮಾ. ೮-೪ ವ) ; ಅನುಗಾಮಿಯೆಂಬುದು ಭಾಸ್ಕರ ಪ್ರಕಾಶದ ಪೊಲ್ ಎತ್ತವೋಪೊಡಂ ಒಡವಪ್ಪುದು (ತತ್ತ್ವಪ್ರ. ೭೮). [ಸಂ. ಅನುಗಾಮಿನ್]

**ಅನುಗಾಲ** 'ಅನಿಗಾಲ' ನೋ.

**ಅನುಗಿಡು** 'ಅನುಗೆಡು' ನೋ.

**ಅನುಗುಂದು** (ಕ್ರಿ). = ಅನುಗೆಡು ೧ : ತರಣಿಗಳ್ ಸರಣಿಗೆಟ್ಟಾಮನುಗಳನುಗುಂದಿ ಗರಗಳ್ ಕರಂಗಿ ವಸುಗಳ್ ಮುಸುಂಕಿಟ್ಟೋಡೆ (ಚಿಬಪು. ೩೧-೪೪). [ಅನು₂ + ಕುಂದು₁]

**ಅನುಗುಣ** (ಗು). ೧. ಅನುಸಾರವಾದ ಗುಣವುಳ್ಳ ; ಯೋಗ್ಯವಾದ; ಅನುರೂಪವಾದ : ನಿನ್ನಂತೆ ಸುರೇಶ್ವರನುತ್ಪನ್ನ ಮಹೈಶ್ವರ್ಯನೆಂಬುದುಂ ಜಲನಿಧಿ ತಾಂ ಸನ್ನುತಗಭೀರನೆಂಬುದುಮಿನ್ನದು ಹೀನಾಧಿಕ ಪ್ರಶಂಸಾನುಗುಣಂ (ಕವಿರಾ. ೩-೮೭). (ನಾ). ೨. [ಕಾವ್ಯಮೀ] ಒಂದು ಅರ್ಥಾಲಂಕಾರ. 'ಅನುಗುಣಾಲಂಕಾರ' ಪರಾ.

**ಅನುಗುಣಮಾಗು, ಅನುಗುಣವಾಗು** = ಹೊಂದಿಕೆಯಾಗು ; ಯೋಗ್ಯವಾಗು : ಪದದೊಳಿರ್ದರ್ಥಮಂ ತಂತಮ್ಮರ್ಥಾನುಗುಣಮಾಗಿ ವಿಭಾಗಿಸಿ ಕುಡುವವದಱಿಂ ವಿಭಕ್ತಿಯೆನಿಸುಗುಂ (ಶಮದ. ೩೫ ವೃತ್ತಿ) ; ನಿನ್ನಯ ಸೊಗಸಿಗನುಗುಣವಾದವರ ವರಿಸೆಂದು ಪೊಜಮುಡಿಸೆ (ತೊರರಾ. ೩-೪-೩೦). [ಸಂ.]

**ಅನುಗುಣಾಲಂಕಾರ** (ನಾ). [ಕಾವ್ಯಮೀ] = ಅನುಗುಣ ೨ : "ಮೊದಲೇ ಇದ್ದ ಗುಣಕ್ಕೆ ಅನ್ಯವಸ್ತುಸಂಬಂಧದಿಂದ ಉತ್ಕರ್ಷವುಂಟಾದಲ್ಲಿ ಅದು ಅನುಗುಣಾಲಂಕಾರ. ಲಕ್ಷ್ಯ – ಮೊದಲೊಳ್ ಸೊರ್ಕಿದವಂಗೆ ಕಳ್ ವಿಷದಿನಕ್ಕಿರ್ದಂಗೆ ದುರ್ನಿದ್ರೆ . . . ಅಂತಿರೆನಗಾದತ್ತು" (ಕೈಪಿಡಿ. ೨೮೭). [ಅನುಗುಣ + ಅಲಂಕಾರ]

**ಅನುಗೂಡು** (ಕ್ರಿ). ೧. ಅನುಸಾರವಾಗಿರು; ಉಚಿತವರಿತಿರು ; ಕ್ರಮವಾಗಿರು : ಪಂಚೇಂದ್ರಿಯಕೆ ಲಿಂಗಪ್ರಸಾದವನು ಕೂಡಿ ಪಂಚಿಕ್ಕುವ ತೆಱದೊಳನುಗೂಡಿ ಪಂಚಿಯನಿಕ್ಕಿ (ಬಸವಪು. ೪೩-೬) ; ಹಾಡುವನು ಮುಂಡಾಡುವನು ಕೊಂಡಾಡುವನು . . . ಹಸಿದಿರ್ದೊಡೆನಗನುಗೂಡಿ ಕರೆದಾರೋಗಣೆಗೆ ನೀಡೆಂಬನವ್ವೆಯನು (ಬಸವಪು. ೪೭-೩೯) ; ನೋಡಬೇಕಾರಾರು ಭಕ್ತಿಯ ಮಾಡಿ ಮುಕ್ತಿಯ ಹಡೆವೆನೆಂದನುಗೂಡಿ ನಿಚ್ಚಟರಾಗಿ ಧೀರೋದಾರ ವೃತ್ತಿಯಲಿ ಜೋಡಿ ಹೋಗದೆ ನಿರ್ವಹಿಸಿ ಹೇಡಾಡದವರನು ಕಾಬೆವು (ಪ್ರಭುಲೀ. ೧೮-೩೫). ೨. ಒಡನೆ ಸೇರು ; ಅನುಕೂಲವಾಗಿ ಕೂಡು : ಕೇಡು ತಪ್ಪದು ವೇಶಿಯರೊಳನುಗೂಡಿದವರಿಗೆ (ಬಸವು. ೪೦-೭೪) ; ಷಾಜಹಾನನಿಗೆ ಸಂಗೀತಕಲೆ ಶಿಲ್ಪಗಳಲ್ಲಿ ಸಹಜವಾಗಿದ್ದ ಅಭಿರುಚಿಯ ಜತೆಗೆ ದೇಶದ ಶಾಂತಿ ಸಂಪತ್ತುಗಳೂ ಅನುಗೂಡಿದುವು (ಇಸ್ಲಾಂಸಂ. ೧೬೩).

**ಅನುಗೂಡಿಬರು** = ಅನುಕ್ರಮವಾಗಿ ಬರು ; ಜೊತೆಗೂಡಿ ಬರು : ೧, ೩, ೫, ೭, ೯ ಮೊದಲಾದ ಬೆಸಸಂಖ್ಯೆಗಳೂ, ೨, ೪, ೬, ೮ ಮೊದಲಾದ ಸಮಸಂಖ್ಯೆಗಳೂ ಅನುಗೂಡಿ ಬರುವ ಸಂಖ್ಯೆಗಳಾಗಿವೆ (ರೂಢಿ). [ಅನು₂ + ಕೂಡು₁]

**ಅನುಗೆಡಿಸು** (ಕ್ರಿ). ಅತಿಕ್ರಮಿಸು ; ಮೀರು : ಪವನನಂ ಪರಿಭವಿಸುವ ಮನಮನನುಗೆಡಿಸುವ ದಿಟ್ಟಿಗಳನಿಟ್ಟಣಿಸಿ ದಾಂಟುವ ಕಡುವೇಗದಿಂ ಮೆಱೆದು . . . ಗಗನಮನಡರ್ವ ಜಾತ್ಯಶ್ವಂಗಳಂ (ಗಿರಿಕ. ೬-೫೫ ವ). ೨. ಸ್ಥಿತಿ ಕೆಡುವಂತೆ ಮಾಡು : ಅನುಪಮನೆನಿಪ್ಪ ಜಗದೀಶಂ ಮಹಾದೇವನಲ್ಲದುಳಿದವರುಗಳನು ಅನುಗೆಡಿಸುವೆಂ (ಲಶಿಚಿಂ. ೧೪-೨೬) ; ಜನಪರಿತಾಪಾಪಹ ಜೀವನಮೆನಿಸುತೆ ಘನನಿಕಾಯಮುಮಂ ನೆಗೞ್ದಂ ತಾನಿನಿಸು ನೆವಮಿಲ್ಲದದಱಿಂದನುಗೆಡಿಸುತ್ತುಂ ಪ್ರಭಂಜನನುಮುಱಿನೆಗೞ್ದಂ (ಚಿಕವಿ. ೧-೪೧). [ಅನುಗೆಡು + -ಇಸು₃]

**ಅನುಗೆಡು**, ಅನುಗಿಡು (ಕ್ರಿ). ೧. ಕ್ರಮ ಕೆಟ್ಟುಹೋಗು ; ದಾರಿ ತಪ್ಪು : ಅಧಮಸತಿಯರ ನೋಡಲಾಗದು . . . ಮುನ್ನಿಸಲಾಗದು ಅನುಗೆಟ್ಟು ಮುನ್ನಿಸಿದೊಡೆ ಮೇಗೇನುಮಂ ಕರೆದು ಕೊಡಲಾಗದು (ಹಚಕಾ. ೭-೨೧) ; ವನದೊಳು ತಪಸಿರ್ದ ವಿಶ್ವಾಮಿತ್ರನ ಘನಮೋಹಪಾಶಕೆ ಬಿಗಿದು ಮನಸಿಜನಲೆಗೈದಿಸಿದಳೂರ್ವಶಿ ನಮಗನುಗೆಡದಿಹರಾರು ಜಗದೆ (ಕಂಸವಿ. ೯-೧೪೭). ೨. ಅನುಕೂಲತೆ ತಪ್ಪು ; ಸೌಕರ್ಯವು ಹಾಳಾಗು ; ಗತಿಗೆಡು : ನೊಂದಿರಿ ಬಸವಳಿದಿರನುಗೆಟ್ಟಿರಖಿಳಾಯಸಕೆ ಸಂದಿರಿ (ತೊರರಾ. ೧-೮-೭೪) ; ಕುಮ್ಮಟವನು ತೆಗೆಯಿಸಿದಡೆ ಕಾರ್ಯವನುಗೆಡುವುದು (ಕುರಾಸಾಂ. ೩೭-೪೮) ; ಘನವಾದೊಡವೆ ಕೈಸೇರುವ ಪರಿಯಂತ ಮನೆದೇವರೆಂದುಪಚರಿಸು ಅನುಗೆಡಲಾತನ ಹೊರಡಿಸಿ ಮತ್ತೊಬ್ಬ ಧನವುಳ್ಳ ಪುರುಷನ ಕರೆಕೊ (ಕಂಸವಿ. ೬-೧೫೦). ೩. ಕಳವಳಪಡು : ಕನಸಿನ ಕಣ್ಬೇಟಮೊ ಎನ್ನ ಮನದನ್ನ ವಿನಯದಿಂದೈತಂದು ಕೂಡಿ ಚಿನುಮಯ ರೂಪಾದನೊ ಕಾಣೆನೆಂದವಳನುಗೆಟ್ಟಳೇನ ಬಣ್ಣಿಸುವೆ (ಕಂಸವಿ. ೯-೨೦೭); ಎಂತು ಕಾಪಿಟ್ಟೊಡಮೇನ ಬೆಸಸಿದೊಡಮಂತರಂಗದೊಳನುಗೆಡದೆ ಚಿಂತಿಸಿಯಳಲದೆ ಸಿಡಿಮಿಡಿಗೊಳದತಿ ಸಂತೋಷದೊಳು ಸಮ್ಮತಿಪುದು (ಹದಿಬ. ೪-೭). **ಅನುಗಿಡು** : ೧. ಮುಪ್ಪಿನಾ ಹೇಯಮುಮಂ ಸಾವ ನಿರೋಧಸ್ತೋಮಮುಮಂ ಕಂಡಲಸಿದೆನದಿರ್ದಂ ಪೇಸಿದೆಂ ನೊಂದೆ ನೋರಂತನುಗೆಟ್ಟಿಂ ದೇವ . . . ರಕ್ಷಿಪ್ಪುದೆನ್ನಂ (ರಕ್ಷಾಶ. ೪೨). [ಅನು₂ + ಕೆಡು]

**ಅನುಗೆಯ್**, ಅನುಕೆಯ್, ಅನುಗೈ (ಕ್ರಿ). ಸಿದ್ಧವಾಗು; ಸಜ್ಜಾಗು : ಮಾಟದ ತಲೆಯಿಟ್ಟಾಡುವನನಿಸಿಸು ಪೋಲ್ತನುಗೆಯ್ದಂ (ಪಂಪಭಾ. ೧೦-೮೫) ; ಇಱಿಯಲನುಗೆಯ್ದ ಕೈ (ಗದಾಯು. ೪-೨೭) ; ಖಳ ರಾಹು ಬಂದು ಸಂಪೂರ್ಣ ಸುಧಾಂಶುವಂ ಪಿಡಿಯಲೆಂದನುಗೆಯ್ಯೆ (ಬಾಹುಪು. ೪-೩೫) ; ಮುರದುಱುಗಲ ಕಟ್ಟಲೆಯಂ ಕಾರಿರುಳ್ಗೆತ್ತು ಸುಟಿಯಲನುಗೆಯ್ವ ಗೂಗೆಗಳುಮಂ (ಕಬ್ಬಿಕಾ. ೨೩೪) ; ಸತ್ಪುತ್ರನೊಬ್ಬನ ಸಾಧಿಸುವೆ

ನೆಂದೆನುತ ನಿರಹಂಕಾರನನುಗೆಯ್ದು (ಪ್ರಭುಲೀ. ೬–೧೫). **ಅನುಕೆಯ್ :** ಪೊಳೆವ ಕಕ್ಕಡೆ ಖಡುಗಕತ್ತಿಗಳನು ಭರದಿನನುಕೆಯ್ದು ಹೊಯ್ದಾಡಿದರು (ಸಾಳ್ವಭಾ. ೧೫–೧೨). **ಅನುಗೈ :** ಇನಮಂಡಲಮಂ ಪಿಡಿಯಲ್ಕನುಗೈದೆಳ್ತಂದು (ಉದ್ಭಟ. ೫–೪೨) ; ಅಗ್ಗಳನು ಪದ್ಮಾವತಿಯ ಮನೆಗೆಂದೆಳಸಿ ಬರಲನುಗೈದು (ಜೀವಂಚ. ೩–೧೨) ; ಶಂಭುವ ನೋಡಿ ಪಾಡಲೆಂದನುಗೈದನು (ಸೌಂದಪು. ೫–೨೫). [ಅನು₂ + ಕೆಯ್₁]

**ಅನುಗೆಯ್ತ** (ನಾ). ಯೋಗ್ಯವಾದ ಕೆಲಸ ; ಒಳ್ಳೆಯ ಕೆಲಸ : ಬಿನಯದ ಬಿತ್ತು ಬಿನ್ನಣದ ಪೆರ್ಮೊಳೆ ಬಿಜ್ಜೆಯ ಬೇರ್ ವಿವೇಕದೊಳ್ಗೊನರನುಗೆಯ್ತದೊತ್ತರದ ದಾಂಗುಡಿ (ಚಿಕವಿ. ೩–೧೭). [ಅನು₂ + ಗೆಯ್ತ]

**ಅನುಗೆಯ್ಮೆ** (ನಾ). = ಅನುಗೆಯ್ತ : ಅನುಗೆಯ್ಮೆಯಿನಜಮಜದಿಂ ವಿನಯಂ ವಿನಯದಿನಶೇಷಜನರಂಜನಮಾ ಜನರಂಜನದಿಂದೊಳ್ಪೆಸ ಮನಿತುಂ ಚಿಕದೇವರಾಯನೊಳ್ಮೆಯೊಳಿರ್ಕುಂ (ಅಪ್ರತಿ. ೯೫–೧೭). [ಅನು₂ + ಗೆಯ್ಮೆ]

**ಅನುಗೇಡು** (ನಾ). ಅಸೌಕರ್ಯ ; ತೊಂದರೆ ; ತೊಡಕು : ದಕ್ಷನಿಗಾದ ಕೊಜತೆಯನು ಹವ್ಯವಾಹನನಿಗಾದನುಗೇಡಂತಕನೆನಿಸುವವನಿಗಾದುರದೇಜುವನು ನೋಡಲು (ಕೈವಲ್ಯ. ೩–೯೨). [ಅನು₂ + ಕೇಡು]

**ಅನುಗೈ** 'ಅನುಗೆಯ್' ನೋ.

**ಅನುಗೊಡು** (ಕ್ರಿ). ಅವಕಾಶ ಕೊಡು ; ಆಸ್ಪದವನ್ನು ಕೊಡು : ಕರುಣಿಸದಿರನುಗೊಡ[ ಪಾಠಾಂ. ಅನುಗಿಡ]ದಿರಗಲದಿರು ಅನುಸರಿಸದಿರು (ಹಚಕಾ. ೯–೧೭) ; ಘನದೈನ್ಯಂಬಡುವರ್ ಗುರುತ್ವಗೆಡುವರ್ ಗ್ರಾಸಕ್ಕೆ ಕುಗ್ರಾಮವಾಗನುಗೊಟ್ಟರ್ಪರು ವೀಕ್ಷಣಕ್ಕೆ ಮುನಿವರ್ . . . ಮನುಜಗೆತ್ತಣ ನೀತಿಯ್ಯೆ (ಸೋಮೇಶ. ೪೮). [ಅನು₂ + ಕೊಡು]

**ಅನುಗೊಳ್, ಅನುಗೊಳ್ಳು** (ಕ್ರಿ). **೧.** ಕೈಕೊಳ್ಳು ; ಅಂಗೀಕರಿಸು : ಸಂಗವಿಲ್ಲದ ಸಂಬಂಧಸ್ವಯಮಪ್ಪ ಅನುಗ್ರಹವ ಅನುಗೊಂಬಂತೆ ಮಾಡಾ ಗುಹೇಶ್ವರಾ (ಅವಚಂ. ೧೬೬–೭೫೧). **ಅನುಗೊಳ್ಳು : ೨.** "ಯೋಗ್ಯನಾಗು" (ಗುವಿಮೋ. ೫). [ಅನು₂ + ಕೊಳ್₁]

**ಅನುಗೊಳಿಸು, ಅನುಕೊಳಿಸು** (ಕ್ರಿ). **೧.** ಅಣಿಮಾಡು ; ಸಿದ್ಧಪಡಿಸು ; ಅನುಕೂಲಪಡಿಸು : ಬಸವರಾಜನು ಸಹಿತವೈತಂದಸಮ ಜಂಗಮವೋಲಗಂಗೊಟ್ಟಿಸವುತಿರಲಾ ಸಮಯದಲಿ ಕೇಳಿಕೆಗಳನುಗೊಳಿಸಿ (ಬಸಪು. ೩೭–೨) ; ಭೋಜನಕೆ ಸಲುವುಪಕರಣವನಲ್ಲಲ್ಲಿಗೆಲ್ಲಕೆ ಚಳಚಳನನುಗೊಳಿಸಿದರು (ಭರಚ. ೪–೫೮) ; ಅನುಗೊಳಿಸಿ ಚಿಂದು ಜಕ್ಕಡಿ ಕೋಲಚಾರಿಗಳ್ . . . ನರ್ತಿಸುವ ನೃತ್ಯದಬಲಾಜನಂ ಕಣ್ಗೆಸೆದುದು (ಚಿಬವು. ೨–೨೯). **೨.** ಒದಗಿಸು ; ಉಂಟುಮಾಡು : ಪದ್ಮಾವತಿಗಿಳಿಯಂದಂಬಡೆದು ನಿನಗೆ ತನೂಭವದೋಹಳಮಂ ತಾನನುಗೊಳಿಸಿದುದಿದು ನಿಕ್ಕುವಂ (ಜಯಕಾ. ೨–೪೫) ; ಜನಮನಿತುಮನರಸುಗೆಯ್ತದಿಂ ಪೊರೆದಿಹದೊಳ್ ನೆನೆದಂ ಪರಸುಖಮನವರ್ಗನುಗೊಳಿಪಿರವಾವುದೆಂದು ಚಿಕದೇವೇಂದ್ರಂ (ಗೀತಗೋ. ೨–೮) ; ನಾರಾಯಣನಾದಿಕಾರಣನು ಆಯುರಾರೋಗ್ಯೈಶ್ವರ್ಯವ ಚಿಕದೇವರಾಯನಿಗನುಗೊಳಿಸುವನು (ಹದಿಬ. ೧–೧೨). **೩.** ಹೊಂದಿಸು ; ಜೊತೆಗೊಳಿಸು ; ಜೋಡಿಸು ; ಅಳವಡಿಸು : ವಿನುತ ಗಂಧಸುಮಾಲ್ಯಮಣಿಮಂಡನ ನವಾಂಬರಗಳಲಿ ಚಿತ್ತವನನುಗೊಳಿಸಿ ಕೈವಶಕೆ ತಂದರು ದಿವಸ ದಿವಸದಲಿ (ತೊರರಾ. ೧–೫–೫೧) ; ಕರ್ಣಾಟಕ ವ್ಯಾಕರಣ ಛಂದಸ್ಸಲಂಕಾರ ಶಬ್ದಂಗಳ ಅನುಗೊಳಿಸಿ ವರ್ಣಕಕ್ಕಿಲ್ಲ ಲಕ್ಷಣಮೆಂಬ ಜನರ ನಾಣ್ನುಡಿಯನಲ್ಲೆನಿಸಿ ಪೇಳ್ದೆಂ ವಿನೂತನ ಕಾವ್ಯಮಂ (ಚಿಬವು. ೧–೨೮) ; ಕುಟುಂಬಗಳ ಆದಾಯವನ್ನನುಸರಿಸಿ ಈ ಬಲೆಯನ್ನು ಅನುಗೊಳಿಸಬಹುದು (ಅಡುಸೌ. ೨೪). **೪.** ನಿಶ್ಚಯಿಸು ; ನಿರ್ಣಯಿಸು : ಘನಕುಚಶ್ರೀಪರ್ವತಾಗ್ರಗಳ ಕಂಡೆರ್ದೆಯೊಳನುಗೊಳಿಸಿದೆಂ ಧರೆಯೊಳುಳ್ಳ ದಿವ್ಯಕ್ಷೇತ್ರವೆನಿತವೆಜ ಮುಕ್ತಿಗಳ್ ನಿನ್ನೊಳೊಳವೆಂದು ರಮಿಸುತ್ತಿರ್ದನಾ ಚೋಳನು (ಭಾವಚಿಂ. ೩–೫೦). **೫.** ಅನುಸರಿಸಿ ನಡೆ ; ಹೊಂದಿಕೊಂಡು ನಡೆ : ಅನುಜೆಯ ರಕ್ಕಜು ಭಾವನ ಸಮ್ಮಾನ ತನುಜೆಯರೊಂದು ಸಂತೋಷ ಅನುಗೊಳಿಪಳಿಯಂದಿರುಚಿತದೊಳಿಪ್ಪತ್ತು ದಿನ ವಿದ್ದರಲ್ಲಿ ಮೈದುನರು (ಭರಚ. ೫೯–೩). **ಅನುಕೊಳಿಸು : ೧.** ಕಳಚಿ ನೊಗನನು ತೆಗೆದು ಕಬ್ಬಿಯನಿಳುಹಿ ಪಡಿವಾಘೆಗಳ ಸರಿದನುಕೊಳಿಸಿ ಪಿಡಿಯಲು ಪಾಡಿಗೈದವು ಮರಳಿಡೆಬಲಕೆ (ಕುವ್ಯಾದ್ರೋ. ೧೦–೩೩) ; ವೀರ ದೇವಾಂತಕ . . . ಮಹೋದರಾಸುರ ವೀರಯುದ್ಧೋನ್ಮತ್ತರನುಕೊಳಿಸಿದರು ಸಂಗರವ (ತೊರರಾ. ೬–೨೯ ಸೂ). [ಅನುಗೊಳ್ + – ಇಸು₃]

**ಅನುಗೊಳ್ಳು** 'ಅನುಗೊಳ್' ನೋ.

**ಅನುಗ್ರಹ** (ನಾ). **೧.** ಕೃಪೆ ; ದಯೆ : ನಿಮ್ಮನುಗ್ರಹದಿನೀಗಳ್ ನಿಶ್ಚಯಂ . . . ಈ ನಿವೃತ್ತಿ ದೊರೆಕೊಂಡತ್ತು (ಸುಕುಮಾ. ೧೨–೧೫) ; ನಿಗ್ರಹಾನುಗ್ರಹಸಮಗ್ರೋದಗ್ರಬಲಶೌರ್ಯವಿಗ್ರಹಂ (ಬಸಪು. ೫೩–೨) ; ಶೇಷರಾಮಾಯಣವನೋದಿದರ್ಗಂತು ಕೇಳ್ದರ್ಗೆ ಕೈಗೂಡುವುದು ವೇದಪಾರಾಯಣ ಫಲಂ . . . ಶ್ರೀರಾಮಚಂದ್ರಮನನುಗ್ರಹದೊಳು (ಶೇಷರಾ. ೨೯೩–೨೭). **೨.** ಅಂಗೀಕಾರ ; ಸ್ವೀಕಾರ.

ಅನುಗ್ರಹವಾಗು = ಕೃಪೆಯಾಗು ; ದಯೆಯುಂಟಾಗು : ಮೇಲೆ ನಿರುಪಮವೇದಶಾಸ್ತ್ರವಿಶಾಲವಕ್ತ್ರಗಳಾದರಲ್ಲಿಂಮೇಲನುಗ್ರಹವಾಯ್ತು ಮುನಿಪ ವಸಿಷ್ಠನಿಂ ಬಳಿಕ (ತೊರರಾ. ೧–೮–೮೨). [ಸಂ.]

**ಅನುಗ್ರಹಂಗೆಯ್** (ಕ್ರಿ). ಕೃಪೆದೋರು ; ದಯೆಯನ್ನು ತೋರಿಸು : ಅನುಗ್ರಹಂಗೆಯ್ಗೆ ಕರುಣದಿಂ ಮುನಿನಿವಹಂ (ಆದಿಪು. ೧–೧೪). [ಅನುಗ್ರಹ + ಗೆಯ್ (< ಕೆಯ್₁)]

**ಅನುಗ್ರಹಬುದ್ಧಿ** (ನಾ). ಕೃಪಾಬುದ್ಧಿ ; ದಯಾಬುದ್ಧಿ : ಅವನು ತನ್ನ ಶಿಕ್ಷಣದಿಂದ ಗರ್ವಿತನಾಗಿ ವಂಗಭಾಷೆಯನ್ನು ಅನುಗ್ರಹಬುದ್ಧಿಯಿಂದ ನೋಡಲಿಲ್ಲ (ಬಂಕಿಮು. ೧೧ ಮು). [ಅನುಗ್ರಹ + ಬುದ್ಧಿ]

**ಅನುಗ್ರಹಿಸು** (ಕ್ರಿ). ಕೃಪೆಮಾಡು ; ದಯೆತೋರು : ಪೊಂಪುಟಿವೋದ ಮಹಿಮೆಯದಗುಂತಿಯುದ್ದಾನಿಯ ಮಕುಟಬದ್ಧರನತಿಶುದ್ಧ ಕಟಾಕ್ಷವಿಕ್ಷೇಪದಿನನುಗ್ರಹಿಸುತ್ತುಂ (ಶಾಂತಿಪು. ೩–೫೧ ವ) ; ಎಮಗಭಯಮನನುಗ್ರಹಿಸಿ ಕಾಯಿರೇ (ಬಸಪು. ೫೭–೪೫) ; ಆತನ ಮಾಯಾಠಾಣದ ವಿದ್ಯಾವ್ರಾತವ ತನಗನುಗ್ರಹಿಸಿ ಭೇತಾಳವಿಘ್ನೇಶ್ವರರು ಕೊಟ್ಟರು (ಮೋಹತ. ೧೧–೭೫) ; ಭಗವಂತನು ನಿನ್ನ ಪ್ರಾರ್ಥನೆಗೆ ಅನುಗ್ರಹಿಸಿ ಬಿಟ್ಟನಲ್ಲೇ (ಮೊಗ್ಗು. ೩೧). [ಅನುಗ್ರಹ + – ಇಸು₃]

**ಅನುಗ್ರಾಮ** (ನಾ). ದೊಡ್ಡ ಹಳ್ಳಿಗೆ ಸೇರಿದ ಸಣ್ಣ ಹಳ್ಳಿ ; ಉಪಗ್ರಾಮ : ಹಾನುಂಗಲ್ಲಯ್ನೂಱಱ ಗ್ರಾಮಾನುಗ್ರಾಮದಲು (ಎಇ. XVI, ೪೦–೬೬ ; 1153) ; ಹಗರಿಟ್ಟಗೆ ೩೦೦ ಱ ಗ್ರಾಮಾನುಗ್ರಾಮದಲು ಚಂದ್ರಾರ್ಕ್ಕತಾರಂಬರಂ ಸಲ್ವಂತಾಗಿ ಪ್ರತ್ಯೇಕ ವೊಂದೊಂದು ಹೊಂನಂ ಕೊಟ್ಟರು (ಸೌಇಇ. XV, ೧೪೩–೨೬ ; 1181). [ಸಂ.]

**ಅನುಗ್ರಾಹಿಸು** (ಕ್ರಿ). ಉಪದೇಶಿಸು : ಪಂಡಿತನೊಡನಮೃತಾಕ್ಷರ ಗಂಡೂಷಮನುಗುಟ್ಟಿ ತೆಜದನುಗ್ರಾಹಿಸೆ ಭೂಮಂಡಳಪತಿ ತಾರ್ಕಿಕರೆರ್ದೆಗೊಂಡುದುಪನ್ಯಾಸಮಾ ಸಭಾಮಂಡಲದೊಳ್ (ಶಾಂತಿಪು. ೮–೧೪೯). [ಅನುಗ್ರಾಹ + – ಇಸು₃]

**ಅನುಗ್ರಾಹ್ಯ** (ಗು). ಅನುಗ್ರಹಕ್ಕೆ ಯೋಗ್ಯವಾದ ; ಉಪಕಾರಕ್ಕೆ ಪಾತ್ರವಾದ : ದಯಾದತ್ತಿಯೆಂಬುದುಮನುಕಂಪೆವೆರಸನುಗ್ರಾಹ್ಯಮಪ್ಪ ಪ್ರಾಣಿಗಳ್ಗೆ ತ್ರಿಶುದ್ಧಿಯಿನಭಯದಾನಮಂ ಕುಡುವುದು (ಚಾವುಂಪು. ೨೨೯). [ಸಂ.]

**ಅನುಗ್ರಾಹ್ಯೆ** (ನಾ). ಅನುಗ್ರಹಕ್ಕೆ ಯೋಗ್ಯಳು; ಉಪಕಾರಕ್ಕೆ ಪಾತ್ರಳು: ಅತ್ಯಂತ ಶುಚಿಗಳೇಕಾಂತನಿವಾಸ ನಿರತಿಶಯಚರ್ಯಾನುಪೂರ್ವಕಮನುಗ್ರಾಹ್ಯೆಯರಾರ್ಗಮೆಱಗುವರಲ್ಲರ್ (ಶಾಂತಿಪು. ೨–೮೧ ವ). [ಸಂ. ಅನುಗ್ರಾಹ್ಯಾ]

**ಅನುಚಣ** (ನಾ). ಒಬ್ಬ ಅಧೀನ ಅಧಿಕಾರಿಗೆ ಅಧೀನನಾದವನು. 'ಅನುಚಣಗೆಯ್' ಪರಾ. [< ಸಂ. ಅನುಕ್ಷಣ ?]

**ಅನುಚಣಗೆಯ್** (ಕ್ರಿ). ಒಬ್ಬ ಅಧೀನ ಅಧಿಕಾರಿಗೆ ಅಧೀನನಾಗಿ ಅಧಿಕಾರಮಾಡು : ತೈಲಪದೇವರಸರು ಬನವಾಸೆ ಪಂನಿಚ್ಛಾಸಿರಮುಮಾನಾಳುತ್ತಮಿರೆ ನಾಗರಖಂಡಕೆಪ್ಪತಕ್ಕೆ ಶ್ರೀಮದಱುವರವೆಗ್ಗಡೆ ತಿಕ್ಕಮೆಯ್ಯನುಯನುಚಣಗೆಯ್ಯುತ್ತಮಿರಲು (ಕಇ. IV, ೪೮–೧೯ ; 1247). [ಅನುಚಣ + ಗೆಯ್ (< ಕೆಯ್$_1$)]

**ಅನುಚರ** (ಗು). ೧. ಅನುಸರಿಸಿ ನಡೆಯುವ ; ಜೊತೆಯಲ್ಲಿ ಬರುವ. (ನಾ). ೨. ಸೇವಕ; ಸಹಾಯಕ; ಜೊತೆಗಾರ : "ಅನುಜೀವೀ, ಸಹಾಯಃ, ಸೇವಕಃ, ಅನುಚರಃ, ಅನುಗಃ —೫ ಓಲಗಿ[ಗ]ಕಾಱಂ" (ಹಲಾಯು. ೭೦–೨೭೪) ; ಅನುಚರನವೊಲಾಲೋಕಮಂ ಪತ್ತುವಿಟ್ಟೋಸರಿಸಿತ್ತಾವೇಗದೊಳ್ಪಾಸರಂ (ಕಾದಂಉ. ೮೧೮); ಅನುಚರನು ಬಂದುಸುರೆ ಬಸವೇಶ್ವರಂ ಬಂದು ವಿನಯದಿಂ ಪರಿದ ಲಿಂಗವ ತರಿಸಿ ಕೊಡಿಸಲ್ಕೆ (ಪ್ರೌಢರಾ. ೨–೧೯). [ಸಂ.]

**ಅನುಚರಿ** (ನಾ). ಅನುಸರಿಸಿ ನಡೆಯುವವಳು ; ಸಖಿ ; ಒಡನಾಡಿ ; ಜೊತೆಗಾತಿ : ಅನುಚರಿವೊಲ್ ಸಂಜೆ ಸಂಜಾತರಕ್ತಾಂಬರದಿಂದಂ ಬಾಸಣಿಪ್ಪಂತೆಸೆದುದಸದಳಂ ಸಾಂದ್ರ ಶೋಣಾಂಶುಜಾಲಂ (ಕಾದಂಉ. ೮೧೮). [ಸಂ. ಅನುಚರೀ]

**ಅನುಚಿತ** (ಗು). ೧. ಉಚಿತವಲ್ಲದ ; ಯೋಗ್ಯವಲ್ಲದ : ನಮ್ಮ ದೇಶದಲ್ಲಿ ವಿಶ್ವವಿದ್ಯಾನಿಲಯದ ಪದವಿಗಳಿಗೆ ಅನುಚಿತಪ್ರಾಧಾನ್ಯ ಬಂದುಬಿಟ್ಟಿದೆ (ಶಿಕ್ಷದ. ೭೪೫). ೨. ವಿಲಕ್ಷಣವಾದ. 'ಅನುಚಿತದಾನಿತನ' ಪರಾ. (ನಾ). ೩. ಉಚಿತವಲ್ಲದಿರುವುದು ; ಯೋಗ್ಯವಲ್ಲದಿರುವುದು : ಹೀನಂಗೆ ಮತಿಯಿಲ್ಲ ದೀನಗನುಚಿತವಿಲ್ಲ (ಸರ್ವಜ್ಞ. ೧೫೪). [ಸಂ.]

**ಅನುಚಿತದಾನಿ** (ನಾ). ೧. ಉಚಿತವರಿಯದೆ ದಾನಮಾಡುವವನು. ೨. ವಿಲಕ್ಷಣವಾಗಿ ದಾನಮಾಡುವವನು. 'ಅನುಚಿತದಾನಿತನ' ಪರಾ. [ಅನುಚಿತ + ದಾನಿ$_1$]

**ಅನುಚಿತದಾನಿತನ** (ನಾ). ೧. ಉಚಿತವಲ್ಲದ ಔದಾರ್ಯ. ೨. ವಿಲಕ್ಷಣವಾದ ದಾನಶೀಲತೆ: ಆ ವಿರಿಂಚಿ ಭವಾದಿಗಳ ಕುಲದೈವವೆತ್ತಲು ಬಲಿಯ ಬಾಗಿಲ ಕಾವಲೆಂಬರದೆತ್ತಲನುಚಿತದಾನಿತನವೆಂದ (ನಿಭಾಗ. ೮–೨೦–೬). [ಅನುಚಿತದಾನಿ + -ತನ]

**ಅನುಚಿತವೃತ್ತ** (ನಾ). [ಕಾವ್ಯಮಿ] ಒಂದು ಕಾವ್ಯದೋಷ : "ಅನುಚಿತವೃತ್ತ – (i). ಛಂದಸ್ಸಿಗೆ ಅನುಸಾರಿಯಾಗಿದ್ದರೂ ಕಿವಿಗೆ ಶ್ರಾವ್ಯವಲ್ಲದೆ ಇರುವುದು. (ii). ರಸಕ್ಕೆ ಅನುಗುಣವಲ್ಲದ ವೃತ್ತವನ್ನು ಉಪಯೋಗಿಸಿರುವುದು" (ಕೈಪಿಡಿ. ೨೨೮). [ಅನುಚಿತ + ವೃತ್ತ]

**ಅನುಚಿತಾರ್ಥ** (ನಾ). [ಕಾವ್ಯಮಿ] ಪದದೋಷಗಳಲ್ಲಿ ಒಂದು : "ಅನುಚಿತಾರ್ಥ – ಹೇಳಬೇಕೆಂದಿರುವ ಅರ್ಥದ ಸ್ವಾರಸ್ಯವನ್ನು ಕೆಡಿಸುವುದು" (ಕೈಪಿಡಿ. ೨೨೭). [ಅನುಚಿತ + ಅರ್ಥ]

**ಅನುಚಿತಾನ್ವಯ** (ನಾ). ೧. ಸರಿಯಲ್ಲದ ಅನ್ವಯ ; ಹೊಂದಿಕೆಯಾಗದ ಜೋಡಣೆ. ೨. [ಕಾವ್ಯಮಿ] ವಾಕ್ಯದೋಷಗಳಲ್ಲಿ ಒಂದು : ವ್ಯತಿಕೀರ್ಣ ಪದಕ್ರಮುಮನುಚಿತಾನ್ವಯಂ ವ್ಯವಹಿತಾನ್ವಯಂ ತಾನದು ದಲ್ ಮತಿ ಸಮ್ಮೋಹಮನಿದಿರವರ್ಗೆ ತೊಡರ್ಚಲ್ಪೇೞ್ದೊಡಲ್ಲಿಗಲ್ಲದು ದೋಷಂ (ಕಾವ್ಯಾವ. ೪೫೬). [ಅನುಚಿತ + ಅನ್ವಯ]

**ಅನುಚಿತೆ** (ನಾ). ಅಯೋಗ್ಯಳು; ಅಕ್ರಮವಾದ ನಡವಳಿಕೆಯುಳ್ಳವಳು : ವಿರಸೆಯರು ವಿಶ್ವಾಸಘಾತಕಿಯರು ವಿಕಾರಿಯರನುಚಿತೆಯರಸ್ಥಿರಚರಿತೆಯರು ವಿಗಡೆಯರು (ಬಸಪು. ೪೦–೫೩). [ಸಂ. ಅನುಚಿತಾ]

**ಅನುಚ್ಛಿಷ್ಟ** (ಗು). ೧. ಎಂಜಲಲ್ಲದ; ಉಚ್ಛಿಷ್ಟವಲ್ಲದ. (ನಾ). ೨. ಶುಚಿಯಾದದ್ದು : "ಪ್ರಯತಃ, ಅನುಚ್ಛಿಷ್ಟಃ – ಈ ೨ ಶುಚಿ" (ಹಲಾಯು. ೬೭–೨೪೮). [ಸಂ.]

**ಅನುಚ್ಛೇದ** (ನಾ). ೧. ನಾಶವಾಗದಿರುವುದು; ನಾಶವಲ್ಲದುದು ; ಹಾಳಾಗದಂಥದು. ೨. ಲೇಖನ ಅಥವಾ ಪ್ರಬಂಧದ ಒಳವಿಭಾಗ; ಪ್ರಕರಣ : ಮೈಸೂರಿನ ಭಾಷೆ (ಅನುಚ್ಛೇದ. ೯೫–೧೦೬) ; ಈ ವಿಭಾಗದಲ್ಲಿ, ಮೈಸೂರ ಹೊರಗಿನ ಕನ್ನಡಪ್ರದೇಶವನ್ನು ಹಕ್ಕಿಯನೋಟದಿಂದ ನೋಡಿದೆ (ಕಜಸಾ. ೧೫೪). [ಸಂ.]

**ಅನುಜ** (ಗು). ೧. (ತನ್ನ) ತರುವಾಯ ಹುಟ್ಟಿದ; ಅನುಸರಿಸಿ ಹುಟ್ಟಿದ. (ನಾ). ೨. ತಮ್ಮ : "ಕನಿಷ್ಠಃ, ಅವರಜಃ, ಅನುಜಃ – ಈ ೩ ತಮ್ಮಂ" (ಹಲಾಯು. ೮೩–೩೫೨); ಅನುಜಸಮೇತನೊಳಂತಕತನಯನೊಳನುಜವ್ಯಪೇತನೀಗಳ್ ದುರ್ಯೋಧನನಳುಪಿ ಸಂಧಿಗೆಯ್ದೊಡೆ ಮುನಿವರ ಮೆಚ್ಚುವರ ಮನಕೆ ಪಕ್ಕಾಗಿರೆನೇ (ಗದಾಯು. ೫–೪೮). [ಸಂ.]

**ಅನುಜನ್ಮ** (ನಾ). = ಅನುಜ : ಸನ್ಮತಿಯ ನುಡಿಯಂ ಕೇಳ್ದು ಮುನಿದು ಸಂವೃತಾಕಾರನುಂ ನಿಭೃತೇಂಗಿತನುಮಾಗಿ ದಕ್ಷಜನೋಪಲಕ್ಷಿತಾಕೂತನ ಪರಾಜಿತಾನುಜನ್ಮಂ ನುಡಿವಾಗಳ್ (ಶಾಂತಿಪು. ೨–೫೧ ವ). [ಸಂ.]

**ಅನುಜಾತ** (ನಾ). = ಅನುಜ : ಅನುಜಾತನಾದನಾತಂಗನಿಮಿಷಗುರುವೆನಿಪ ನಿಂಬದಣ್ಣಾಧಿಪಂ (ಕಇಆ. ೩–೨–೬೫ ; 1058). [ಸಂ.]

**ಅನುಜಾತೆ** (ನಾ). (ತನ್ನ) ತರುವಾಯ ಹುಟ್ಟಿದವಳು ; ಅನುಸರಿಸಿ ಹುಟ್ಟಿದವಳು ; ತಂಗಿ : ಆತನಂ ಮುಳಿದು ನೀಂ ಕೊಂದು ನಿನ್ನನುಜಾತೆಗೆ ವೈಧವ್ಯದೀಕ್ಷೆಯಂ ಕುಡುವುದು ಚದುರಲ್ಲ (ಪಂರಾಮಾ. ೧೦–೧೬೮ ವ). [ಸಂ. ಅನುಜಾತಾ]

**ಅನುಜಾಯ್** 'ಅನುಜಾಯಿ' ನೋ.

**ಅನುಜಾಯಿ, ಅನುಜಾಯ್** (ನಾ). [ಸಂಗೀತ] ತಾಳಲಯ ವಿನ್ಯಾಸದಲ್ಲಿ ಅಥವಾ ತಾಳವಾದ್ಯವನ್ನು ಬಾಜಿಸುವುದರಲ್ಲಿ ಒಂದು ಕ್ರಮ (?) : ಭಣಿತೆ ಬೆಡಂಗು ಕಾಕು . . . ಕೊಂಕಣುಕನುಜಾಯಿ ಗೀತಿಜತಿ . . . ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮಂ (ಜಗವಿ. ೫–೩) ; ಪೊಸದೇಸಿ ಪಜ್ಜಳಿಸೆ ಪಂಜಳಂ ಪಲ್ಲಯಿಸೆ ಮಿಸುಗುತಿರಲನುಜಾಯಿ ಹೂಂಕಾರವೊತ್ತರಿಸೆ (ಅನಾರ. ೧೮೨–೬) ; ಮದ್ದಳಿಗಂ ತನ್ನ ಮದ್ದಳೆಯಂ ತೆಗೆದುಕೊಂಡು . . . ಬಾರನೋರಣದಿಂ ಬಿಗಿದು ಕಟ್ಟಳೆಗೆ ತಂದು ಎಡಗೈ ಬಲಗೈಗಳ ಪಾಡುತಪ್ಪದೆ ಜಾಯಿ ಅನುಜಾಯಿಗಳ ಜೋಕೆ ಜಾಱದೆ ಬಂಧದ ಚಂದವಳಿಯದೆ ತಾಳದ ಕಟ್ಟಳೆ ಕೆಡದೆ . . . ಬಾಜಿಸುತಿರ್ದಂ (ವಿರೂಪಾ. ೮೦ ವ) ; ಲಳಿತ ಗಾಢ ಮಿಠಾಯಿ ಲಂಘಿತ ತಾಕು ಜಾಯನುಜಾಯಿ . . . ವಳಿ ಸುರಂಗಿತಮಾಯತಂ ವಣಿ ಕಂಪಿತಂ ಹಳುನಾಯಿ ಜೊಕ್ಕಳಮನುದ್ಗತವೃತ್ತಿಪಾಳಿವ ಮೋಕ್ಷಮಿಂಪುಲ್ಲಯಾಸ್ಪದಂ . . . ಬೆಡಂಗಮರೆ ಬಾಜಿಸುತೆ ಚಾರುವೀಣೆಯಂ (ವೃಷವಿ.೧೧–೯, ೧೦). **ಅನುಜಾಯ್** : ಗತಿ ಗಹಗಹಿಸಲ್ ಕಳಸೋನ್ನತಿಗಮಕಂ ವಹಣಿ ಕೊಂಕುಜಾಯ್ ನುಣ್ಪನುಜಾಯ್ [ಪಾಠಾಂ. ನುಣ್ಪೆನುಜಾಯ್] ಜತಿ ನೇವಣಿಮಿಗೆ ಸೊಂಪಾಹತ ಕಂಪಿತಮುಣ್ಮೆ ಪಾಡಿದಂ ಮುನಿಋಷಭಂ (ವೀರವಿ. ೬–೯೦). [ಸಂ. ಅನುಜಾತಿ ?]

**ಅನುಜೀವ** (ನಾ). = ಅನುಜೀವಿ : ತನ್ನೊಡವಂದ ಮ್ಲೇಚ್ಛರಾಜರಂ ರಾಜರಾಜಾನುಜೀವಾನುವೃತ್ತದಿಂ ಕೃತಾರ್ಥಮಾರ್ಡಿ (ಶಾಂತಿಪು ೧೧–೭೧ ವ). [ಸಂ.]

**ಅನುಜೀವಿ** (ಗು). ೧. ಬೇರೊಂದು ಆಶ್ರಯದಲ್ಲಿ ಬದುಕುವ. (ನಾ). ೨. ಸೇವಕ; ಆಳು : "ಅನುಜೀವೀ, ಸಹಾಯಃ, ಸೇವಕಃ, ಅನುಚರಃ, ಅನುಗಃ – ಈ ೫ ಓಲಗಿ[ಗ]ಕಾಱಂ" (ಹಲಾಯು. ೭೦–೨೭೪) ; ಆಳ್ದನ ಮನಮುನಱಿವನುಜೀವಿಗಳಂತೆ (ಶಾಂತಿಪು. ೪–೨೫ ವ).
[ಸಂ. ಅನುಜೀವಿನ್]

**ಅನುಜೀವಿವೃತ್ತ** (ನಾ). ಸೇವಕತನ; ಸೇವಾವೃತ್ತಿ : ಅನುಜೀವಿವೃತ್ತದಿನನುವರ್ತಿಸುವ ಸೇವಾವಿಚಕ್ಷಣಪ್ರೀಣನಕರಮಪ್ಪ ಜೀವಿಕಾಪ್ರಸ್ತಾವದೊಳ್ (ಶಾಂತಿಪು. ೭–೧೨೮ ವ). [ಅನುಜೀವಿ + ವೃತ್ತ]

**ಅನುಜೆ** (ನಾ). = ಅನುಜಾತೆ : ಅನುಜೆಯರೊಳ್ ಕಾಶ್ಯಪಿ ಮಯ್ದುನರ್ಗಳೊಳ್ ಸೋಮಶರ್ಮನ್ . . . ಎನಿಸಿದರಂ ಕಥೆಯೊಳಾದೊಡಂ ಕೇಳ್ವಱಿಯಂ (ಸುಕುಮಾ. ೨–೫೪) ; ಬಟಿಕಭಯರುಚಿಯುಮನುಜೆಯ [ಪಾಠಾಂ. ವನುಜಾ] ಸಹಿತಂ ಕ್ರಮದಿಂದಂ ಪೊಱಮಟ್ಟು (ಯಶೋಚ. ೪–೬೬). [ಸಂ. ಅನುಜಾ]

**ಅನುಜ್ಞಿಸು** (ಕ್ರಿ). ಅಪ್ಪಣೆಮಾಡು ; ಸಮ್ಮತಿಕೊಡು : ಮುದದಿಂದೆ ರಂಭೆಯಂ ಕರೆದು ನೀಂ ಶ್ವೇತಂಗೆ ಮೊದಲನುಜ್ಞಿಸಿದೆ ನೀನೇ ಭಕ್ತೆ ಭಲರೆಂದು ಶ್ವೇತನಂ ಮನ್ನಿಸಿದನು (ಚಬಪು. ೫೧–೩೨). [ಅನುಜ್ಞೆ + –ಇಸು$_3$]

**ಅನುಜ್ಞೆ** (ನಾ). ೧. ಅನುಮತಿ; ಒಪ್ಪಿಗೆ. ೨. ಆಜ್ಞೆ ; ಅಪ್ಪಣೆ: ನೀನೆ ಗುರುವಲ್ಲದೆನಗಿನ್ನಾರುಪೇಕ್ಷಿಸದನುಜ್ಞೆಯಂ ಕೊಡುವುದು (ಚಬಪು. ೫೧–೨೧) ; ಕಾಲಿನ ಮಿಾನಖಂಡದ ಸ್ನಾಯುವಿಗೆ ಮುದುರಲು ಅನುಜ್ಞೆಯಾಗಿ ಕಾಲು ಮಡಚುವುದು (ಬಾಲಪ್ರ. I, ೫೪೮). [ಸಂ. ಅನುಜ್ಞಾ]

**ಅನುತರ್ಷ** (ನಾ). ೧. ಬಾಯಾರಿಕೆ. ೨. ಬಯಕೆ; ಉತ್ಕಟವಾದ ಇಚ್ಛೆ. ೩. ಮದ್ಯವನ್ನು ಕುಡಿಯಲು ಬಳಸುವ ಪಾತ್ರೆ; ಮಧುಪಾತ್ರೆ : "ಗರ್ಹಕಃ, ಅನುತರ್ಷಃ, ಚಷಕಃ, ಸರಕಃ – ಈ ೪ ತಿಳಿವಟ್ಟಲ್" (ಹಲಾಯು. ೫೪–೧೭೨). ೪. ಕುಡಿತ. ೫. ಮದ್ಯ. [ಸಂ.]

**ಅನುತರ್ಷಣ** (ನಾ). = ಅನುತರ್ಷ ೩. [ಸಂ.]

**ಅನುತಾಪ** (ನಾ). ೧. ಮಾಡಿದ ತಪ್ಪಿಗಾಗಿ ಪಡುವ ಸಂಕಟ ; ಪಶ್ಚಾತ್ತಾಪ. ೨. ಸಹಾನುಭೂತಿ ; ಕನಿಕರ. ೩. ಬೇಗೆ ; ಸಂತಾಪ : ಬೆಚ್ಚಿ ಬೆಗಡುಗೊಂಡು ಅನುತಾಪವೇಱಿ ವಿರಹಂ ಹೊಮ್ಮಿ ಕಣ್ಗೆಟ್ಟಗಲಲಾಱದೆ (ಬಸರ. ೪–೨೬) ; ಕೋಪದಲಿ ಮುನ್ನೋತುಕೊಂಡಿಹ ತಾಪಸಂ ನಡೆತಂದು ಮನದನುತಾಪವಳಿದಷ್ಟಾಂಗವೆಱಗುತ ನಮಿಸಿ ಕೈಮುಗಿದು (ಬಸಪು. ೧೮–೭೯) ; ಕರೆದರೊಬ್ಬರನೊಬ್ಬರುಱೆ ಧಿಕ್ಕರಿಸಿದರು ತಮ್ಮೊಬ್ಬರೊಬ್ಬರ ಬಿರುದ ಹಿಡಿದರು ಬಯ್ದರಪಮಾನಾನುತಾಪದಲಿ (ಕುವ್ಯಾಗ. ೧–೨೪). [ಸಂ.]

**ಅನುತಾಪಗೊಳ್ಳು** (ಕ್ರಿ). ಸಂಕಟಪಡು ; ಪಶ್ಚಾತ್ತಾಪಗೊಳ್ಳು: ತನ್ನ ತಪ್ಪಿಗಾಗಿ ಅವನು ಅನುತಾಪಗೊಂಡು ಕ್ಷಮೆಬೇಡಿದನು (ರೂಢಿ).
[ಅನುತಾಪ + ಕೊಳ್ಳು$_1$ (< ಕೊಳ್$_1$)]

**ಅನುತಾಪಪಡು** (ಕ್ರಿ). ಕನಿಕರಿಸು ; ಸಹಾನುಭೂತಿಯನ್ನು ತೋರು : ಪರರ ಸಂಕಟವನ್ನು ಕಂಡು ಅನುತಾಪಪಟ್ಟು, ಅವರಿಗೆ ಸಹಾಯಮಾಡಬೇಕು (ನೀತಿಚಿಂ. ೧೩–೨೧). [ಅನುತಾಪ + ಪಡು$_1$]

**ಅನುತಾಪಿ** (ನಾ). ೧. ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪಪಡುವವನು. ೨. ಸಹಾನುಭೂತಿಯುಳ್ಳವನು ; ಕನಿಕರದಿಂದ ಕೂಡಿದವನು. [ಸಂ. ಅನುತಾಪಿನ್]

**ಅನುತಾಳ** (ನಾ). [ಸಂಗೀತ] ಒಂದು ಬಗೆಯ ತಾಳ : ಭಂಗತಾಳ . . . ಅನುತಾಳವೆಂಬಾಱು ವರ್ಗಸಂಖ್ಯಾಭೇದಮಾಗಿಹವೆಂದು ಪೇಳ್ವ ಭರತಶಾಸ್ತ್ರ ಪ್ರವೀಣರಪ್ಪ ತಾಳಧಾರಿಗಳಿಂ (ವಿವೇಕ. ೨೩೮).
[ಸಂ. / ತಮಿ. ಅನುತಾಳಂ]

**ಅನುತ್ಕಟ** (ಗು). ೧. ಉತ್ಕಟವಲ್ಲದ; ಸಾಧಾರಣವಾದ. (ನಾ). ೨. ಸಂಕ್ಷೇಪ; ಸಂಗ್ರಹ: "ಸಂಗ್ರಹಮನುತ್ಕಟಂ ಸಂಕ್ಷೇಪಮುಂ ಸಮಾಹಾರಮೆನೆ ಹವಣಿಸಲ್ಕಕ್ಕು ನಾಮಂ" (ಮಂಗರಾ. ೧೩೨–೨೪). [ಸಂ.]

**ಅನುತ್ತಮ** (ಗು). ತನಗಿಂತ ಬೇರೆ ಉತ್ತಮ ವಸ್ತುವಿಲ್ಲದ ; ಅತ್ಯುತ್ತಮವಾದ : ". . . ನಿನಗೆ ಬಗೆಯೊಪ್ಪೆ ರಚಿಸುವೆನನುತ್ತಮಂ ಪರ್ಣಕುಟಿಯಂ" (ಶ್ರೀರಾಮಾ. ೧೯೬–೫೬) ; ಅವನ ಕವಿತಾಶಕ್ತಿ ಅನುತ್ತಮವಾಗಿದೆ (ಕಸ್ತೂರಿ: ೪–೬, ೭೪ ; 1964). [ಸಂ.]

**ಅನುತ್ತರ** (ಗು). ೧. ಅತ್ಯುತ್ತಮವಾದ; ಶ್ರೇಷ್ಠವಾದ. ೨. ಕೀಳಾದ; ಹೀನವಾದ. ೩. ದಕ್ಷಿಣದಿಕ್ಕಿನ. ೪. ಮರುಮಾತಿಲ್ಲದ; ನೀರವವಾದ; ಮೌನವಾದ. ೫. ಪ್ರತ್ಯುತ್ತರಕ್ಕೆ ಯೋಗ್ಯವಲ್ಲದ; ಅವಶ್ಯವಿಲ್ಲದ. (ನಾ). ೬. ಉತ್ತರದಿಕ್ಕಲ್ಲದುದು ; ದಕ್ಷಿಣ ದಿಕ್ಕು. ೭. ಅಸಂಬದ್ಧವಾದ ಪ್ರತಿವಚನ ; ಹೊಂದಿಕೆಯಿಲ್ಲದ ಪ್ರತ್ಯುತ್ತರ ; ನೇರವಲ್ಲದ ಉತ್ತರ. ೮. ಬಾಯಿಗೆ ಬಂದುದನ್ನು ಗಳಹುವವನು. ೯. ಸ್ಥಿರ ; ದೃಢ. ೧೦. [ಜೈನ] = ಅಣೂತ್ತರೆ. [ಸಂ.]

**ಅನುತ್ತರೀಯ** (ಗು). ಉತ್ತರೀಯವಿಲ್ಲದ ; ಮೇಲುಹೊದಿಕೆಯಿಲ್ಲದ. 'ಅನುತ್ತರೀಯ ಕಂಟಕ' ಪರಾ. [ಸಂ.]

**ಅನುತ್ತರೀಯಕಂಟಕ** (ನಾ). ಮೇಲುಹೊದಿಕೆ ಇಲ್ಲದಿರುವುದರಿಂದ ಆಗುವ ತೊಂದರೆ (?) : ಅನೇಕ ರುಚಿ ವಿಚಿತ್ರ ವೇತ್ರ ವಿಶಿಖಾತಿರುಚಿರಪ್ರಾಂತ ಕುಂತಮನುತ್ತರೀಯಕಂಟಕಮತಿಸುಭಟಮದೋತ್ಕಂಠಮಿದು ಕರ್ಣಾಟಬಲಂ (ಆದಿಪು. ೧೩–೪೫ ವ).
[ಅನುತ್ತರೀಯ + ಕಂಟಕ]

**ಅನುದಾತ್ತ** (ಗು). ೧. ಉದಾತ್ತವಲ್ಲದ. ೨. (ವೇದಗಳನ್ನು ಹೇಳುವಾಗ) ತಗ್ಗಿನಲ್ಲಿ ಉಚ್ಚರಿಸುವ ಒಂದು ಬಗೆಯ ಸ್ವರ: ಸುರುಚಿರೋದಾತ್ತಾನುದಾತ್ತಸ್ವರಿತ ತತಪ್ರಚಯಂಗಳಿಂ ಪುಗೆ ಬೆರಸಿ ಪದವರ್ಗಕ್ರಮಾದಿಗಳೈದೆ ಕೂಡಿರಲು (ಬಸಪು. ೫೫–೫೧); ವೇದದಲ್ಲಿ ಹೇಳಲ್ಪಡುವ ಉದಾತ್ತಾನುದಾತ್ತ ಸ್ವರಿತ ಪ್ರಚಯಗಳೆಂಬ ಸ್ವರಗಳು ಬ್ರಹ್ಮಯಜ್ಞದಲ್ಲಿ ವೇದಜಪಕ್ಕೆ ಉಪಯೋಗವೇ ಹೊರತು ಅರ್ಥಜ್ಞಾನಕ್ಕೆ ಉಪಯೋಗವಿಲ್ಲವೆಂದು ನಿರ್ಣಯಿಸಿದ್ದಾರೆ (ಹಿಂದಸಾ. ೧೪೯). [ಸಂ.]

**ಅನುದಾರ** (ಗು). ೧. ಉದಾರವಲ್ಲದ; ಔದಾರ್ಯವಿಲ್ಲದ; ಧಾರಾಳವಿಲ್ಲದ ; ಘನತೆಯಿಲ್ಲದ. (ನಾ). ೨. ಲೋಭಿ; ಜಿಪುಣ. 'ಅನುದಾರತೆ' ಪರಾ [ಸಂ.]

**ಅನುದಾರತೆ** (ನಾ). ಔದಾರ್ಯವಿಲ್ಲದಿರುವುದು ; ಧಾರಾಳವಿಲ್ಲದಿರುವುದು : ಅಸಹನೆಯು ಅನುದಾರತೆಯ ಕುರುಹು (ದಾಬುತ್ತಿ. ೪) ; ಅನುಯಾಯಿ, ವಿರೋಧಿ ಎಂಬ ದೃಷ್ಟಿಯಿಂದ ದೇಶದ ಜನರನ್ನು ಇಬ್ಭಾಗಿಸುವ ಅನುದಾರತೆಯಿದೆ (ಸಾಸಮಾ. ೨೮). [ಸಂ. ಅನುದಾರತಾ]

**ಅನುದಿನ** 'ಅನುದಿನಂ' ನೋ.

**ಅನುದಿನಂ, ಅನುದಿನ** (ಅ). ಪ್ರತಿಯೊಂದು ದಿವಸವೂ ; ನಿತ್ಯವೂ : ಅನುದಿನಮೊರ್ವಳೆ ಗೀರ್ವಾಣನಾಥವಧು ನಾಕಲೋಕದಿಂ ಬಂದು (ಶಾಂತಿಪು. ೯–೧೮೧) ; ತದ್ವಿಶ್ವಪತಿಯ ತೇಜೋಮೂರ್ತಿಯದನನುದಿನಂ ಧ್ಯಾನಿಸೆಂದು (ಪದ್ಮರಾ. ೧೨–೧೮) ; ಕೈಯೊಳ್ಕೈಲಾಸಮೆಂಬೀ ನುಡಿಯನನುದಿನಂ ಪೇಳ್ವರ್ (ಮೈಸೂಮ. ೫–೧೮೭). **ಅನುದಿನ**: ಅನುದಿನ ನಿಮ್ಮ ನೆನೆಯಲು ಭಕ್ತಿಯಿಲ್ಲವಯ್ಯಾ (ಬಸವ. ೨೮೮) ; ಧ್ಯಾನದೊಳನುದಿನ ನೋಡಬೇಕಾತ್ಮನ ಧ್ಯಾನಕೂಡದ ಸಮಯದೊಳು (ಭರಚ. ೩೮–೭೮) ; ಅನುದಿನವೂ ಉದರಾಗ್ನಿಯ ಪ್ರಕೋಪಕ್ಕೆ ಕಟ್ಟುಬೀಳುತ್ತಿದ್ದ ಚಂದ್ರನಿಗೆ ಅವರಂತೆಯೇ ಸುಖಿಯಾಗಿ ನಲಿಯುವುದು ಸಾಧ್ಯವುಂಟೆ? (ಮುಂಗಾಮು. ೨೬). [ಸಂ.]

**ಅನುದಿಶೆ** (ನಾ). ೧. ಪ್ರತಿಯೊಂದು ದಿಕ್ಕನ್ನು ಅನುಸರಿಸಿದುದು; ಪ್ರತಿಯೊಂದು ದಿಕ್ಕಿನಲ್ಲಿಯೂ ಇರುವಂಥದು. ೨. [ಜೈನ] ನವ ಗ್ರೈವೇಯಕಗಳ ಮತ್ತು ಐದು ಅಣೂತ್ತರೆಗಳ ಮಧ್ಯೆ ಇರುವ ಒಂಬತ್ತು ಅಹಮಿಂದ್ರ ಸ್ವರ್ಗಗಳಲ್ಲಿ ಒಂದು: ನಾಕತ್ರಿಷಷ್ಟಿ ಪಟಲಾನೀಕಂ ಗ್ರೈವೇಯಕಂಗಳೊಂಭತ್ತೊಂಭತ್ತಾ ಕಡೆವರೆವನುದಿಶೆಗಳ್ ಲೋಕೋಪರಿಮಂಗಳಯ್ದಣೂತ್ತರೆಯಕ್ಕುಂ (ಶಾಂತಿಪು. ೧೨–೭). [ಸಂ. ಅನುದಿಶಾ]

**ಅನುದೇಶ** (ನಾ). ಮೊದಲು ಹೇಳಿದ ಕ್ರಮಕ್ಕನುಸಾರವಾಗಿಯೇ ಮುಂದೆಯೂ ಹೇಳುವುದು: ಮೊದಲೊಳೆ ಮುಂಪೇಳ್ದುದ್ದೇಶದಂದಮನುದೇಶಮಾಗದಂದಕ್ರಮಂ (ಕಾವ್ಯಾವ. ೪೬೪). [ಸಂ.]

**ಅನುದೇಶಿ** (ನಾ). ಸಂಖ್ಯಾನುಕ್ರಮಕ್ಕನುಸಾರವಾಗಿರುವ ವಿಷಯ ಅಥವಾ ಶಬ್ದ; ಮೊದಲು ಹೇಳಿದ ವಿಷಯಗಳ ಆನುಪೂರ್ವಿಯನ್ನು ಬಿಡದೆ ಹೇಳಿದ ಅವಕ್ಕೆ ಸಂಬಂಧಿಸಿದ ವಿಷಯ ಅಥವಾ ಶಬ್ದ: ನಿಯತೋದ್ದೇಶಿಯುಮನುದೇಶಿಯುಮನನುಮದೆಂತುಂ ಪೇೞೆ ಯಾಥಾಸಂಖ್ಯಾಹ್ವಯಮಕ್ಕುಂ (ಕವಿರಾ. ೧–೮೫). [ಸಂ. ಅನುದೇಶಿನ್]

**ಅನುದೋಱು** (ಕ್ರಿ). ಸರಿಯಾಗಿ ಕಾಣು; ನ್ಯಾಯವಾಗಿ ತೋರು; ಉಚಿತವೆನಿಸು: ಅನುದೋಱಿತದು ಸಾಕು ತಪಸಿಗೆಂದವರು ಯೋಚನೆಯ ಮಾಳ್ಪಾಗವರಲ್ಲಿ (ಭರಚ. ೭೧–೬೧). [ಅನ್ಯು + ತೋಱು]

**ಅನುದ್ಗತ** (ಗು). ೧. ಮೇಲಕ್ಕೆ ಏರದ; ತಗ್ಗಿನಲ್ಲಿರುವ. ೨. ಹೊರಹೊರಡದ; ಹೊರಹೊಮ್ಮದ. 'ಅನುದ್ಗತವೃತ್ತಿ' ಪರಾ. [ಸಂ.]

**ಅನುದ್ಗತವೃತ್ತಿ** (ನಾ). [ಸಂಗೀತ] ತಾಳ ಲಯವಿನ್ಯಾಸದಲ್ಲಿ ಒಂದು ಬಗೆ, —ಕ್ರಮ: ಲಳಿತ ಗಾಢ ಮಿಠಾಯಿ ಲಂಘಿತ ತಾಕು ಜಾಯನು ಜಾಯಿ . . . ಕಂಪಿತಂ ಹಳುನಾಯಿ ಜೊಕ್ಕಳಮನುದ್ಗತವೃತ್ತಿ ಪಾಳಿವ ಮೋಕ್ಷಮಿಂಪು ಲಯಾಸ್ಪದಂ (ವೃಷವಿ. ೧೧–೯). [ಅನುದ್ಗತ + ವೃತ್ತಿ]

**ಅನುದ್ದಿಶೆ** (ನಾ). = ಅನುದಿಶೆ ೨: ಲಕ್ಷ್ಮಿಯುಂ ಲಕ್ಷ್ಮಿಮಾಲಿನಿಯುಂ ವೈರೆಯುಂ ವೈರೋಚನನಮುಂ ಸೋಮಮುಂ ಸೋಮರೂಪಮುಂ ಅಂಕಮುಂ ಸ್ಫಟಿಕಮುಂ ಆದಿತ್ಯಮುಂ – ಎಂದು ಅನುದ್ದಿಶೆಗಳೊಂಬತ್ತು (ತತ್ತ್ವಪ್ರ. ೨೧೨). [< ಸಂ. ಅನುದಿಶಾ]

**ಅನುದ್ಧತ** (ಗು). ೧. ಉದ್ಧತನಲ್ಲದ; ತಗ್ಗಿ ನಡೆಯುವ; ಗರ್ವವಿಲ್ಲದ; ವಿನೀತನಾದ. (ನಾ). ೨. [ಜೈನ] ಒಂದು ವಿಮಾನದ ಹೆಸರು: ಸುಪ್ರಭೆಯುಂ ಸುದರ್ಶನ ಕಂಠಿಕೆಯರ ಸಾರೆ ರತ್ನಾವಳಿಯುಂ ನೋಂತು ಅಚ್ಯುತಕಲ್ಪದೊಳ್ ಅನುದ್ಧತ ವಿಮಾನದೊಳ್ ಪುಟ್ಟಿದಳ್ (ಚಾವುಂಪು. ೨೦–೩). [ಸಂ.]

**ಅನುದ್ಧತವೇಷ** (ನಾ). ೧. ನಮ್ರವಾದ ಉಡಿಗೆ ಮೊದಲಾದುದು. ೨. ವಿನೀತವಾದ ಉಡಿಗೆ ತೊಡಿಗೆಗಳಿಂದ ಕೂಡಿದವನು; ಸೌಮ್ಯವೇಷವುಳ್ಳವನು: ವಕ್ರೋಕ್ತಿ ನಿಪುಣನುಂ ಆಧೇಯವಚನನುಮನುದ್ಧತವೇಷನುಂ . . . ಅಪ್ಪ ಮಹತ್ತರನ ಕೈಯೊಳ್ (ಆದಿಪು. ೧೪–೪೩ ವ). [ಅನುದ್ಧತ + ವೇಷ]

**ಅನುದ್ಭೂತ** (ಗು). ೧. ಹುಟ್ಟಿಲ್ಲದ; ಒದಗದ; ಉಂಟಾಗದ. ೨. ಕಣ್ಣಿಗೆ ಬೀಳದ; ಗೋಚರವಾಗದ: ಪ್ರತಿಬಂಧಕಹೇತು ಸನ್ನಿಧಾನದೊಳ್ ಅನುದ್ಭೂತ ವೃತ್ತಿತ್ವದ ಅನಾವಿರ್ಭಾವರೂಪಂ ಉಚ್ಛಾದನಂ (ತತ್ತ್ವಪ್ರ. ೨೬೭). [ಸಂ.]

**ಅನುದ್ಯೋಗ** (ಗು). ಉದ್ಯೋಗವಿಲ್ಲದ; ಕೆಲಸವಿಲ್ಲದ: ಅವಿಶಾಲಾಂಬರವಪ್ರಸನ್ನದಿವವಸ್ಪಷ್ಟಾಧ್ವವಸ್ವಚ್ಛತೋಯವನುದ್ಯೋಗಜನೌಘವಸ್ತದವಸ್ಮೇರಾಬ್ಜಂ . . . ಒಪ್ಪಿರ್ದುದಭ್ರಾಗಮಂ (ಜಗವಿ. ೪–೨೬). [ಸಂ.]

**ಅನುದ್ರುತ** (ನಾ). [ಸಂಗೀತ] ತಾಳದಲ್ಲಿ ಒಂದು ಕಾಲಭೇದ: ಅನುದ್ರುತ, ದ್ರುತ, ಲಘು, ಗುರು, ಪ್ಲುತ ಮತ್ತು ಕಾಕಪಾದ ಇವೇ ಷಡಂಗಗಳು (ಸಂಗೀರಂ. ೫೪). [ಸಂ.]

**ಅನುದ್ವಿಗ್ನ** (ಗು). ಉದ್ವೇಗವಿಲ್ಲದ; ಕಳವಳಗೊಳ್ಳದ. [ಸಂ.]

**ಅನುದ್ವಿಗ್ನತೆ** (ನಾ). ಉದ್ವೇಗವಿಲ್ಲದಿರುವುದು; ಪ್ರಶಾಂತವಾಗಿರುವುದು. [ಸಂ. ಅನುದ್ವಿಗ್ನತಾ]

**ಅನುದ್ವ್ಯಂಜ್ಯ** (ಗು). ಉದ್ವೇಗಕ್ಕೆ ಕಾರಣವಲ್ಲದ; ಕಳವಳಗೊಳಿಸದ: ಅವಿರುದ್ಧಂ ನೃಪನೀತಿಗೆಂತುಮುಚಿತಂ ತಾನೀ ಪದಕ್ಕಾದಮುದ್ಭವಜೈತ್ರಪ್ರತಿಪಾದಕಂ ನಮಗನುದ್ವ್ಯಂಜ್ಯಂ ಜನಕ್ಕೆಂಬುದಂ . . . ಬೋಧಿಸಿದನೀಶಂ ಕಾರ್ಯತಾತ್ಪರ್ಯಮಂ (ಚಂದ್ರಪ್ರ. ೯–೧೧೫). [ಸಂ.]

**ಅನುಧಾವನ** (ನಾ). ಅನುಸರಿಸಿ ಓಡುವುದು; ಹಿಂದಟ್ಟಿ ಹೋಗುವುದು; ಬೆನ್ನಟ್ಟುವುದು. [ಸಂ.]

**ಅನುನಯ** (ನಾ). ೧. ನಯವಾದ ಮಾತುಗಳಿಂದ ಸಮಾಧಾನ ಮಾಡುವುದು, —ಮನವೊಲಿಸುವುದು: "ಪ್ರಣೀತಿಃ, ಅನುನಯಃ, ಪ್ರಣಿಪಾತಃ, ಸಾಂತ್ವನಂ – ಈ ೪ ಸಂತೈಸುಹ" (ಹಲಾಯು. ೧೨೩–೬೪); ಅನುನಯಶತಂಗಳಂ ನುಡಿದನುವಶಿಮಾಡಲ್ ವಿಯಚ್ಚರೇಂದ್ರನುಮೇನಾರ್ತನೆ ಜನಕಜೆಯಂ (ಪಂರಾಮಾ. ೯–೧೮೯). ೨. ಪ್ರೀತಿ; ಸ್ನೇಹ: "ಸ್ನೇಹವಾದದಲ್ಲಿಯುಂ ಅನುನಯಮೆಂಬುದು" (ಹಲಾಯು. ೧೩೬–೨೯); ಅನಂಗಸುಖೋಚಿತಂಗಳಾನನುನಯದಿಂದಿರಿಪ್ಪೆನ್ (ಕವಿರಾ. ೨–೧೦೪); ಈ ಕಥಾಭಿತ್ತಿಯನನುನಯದಿಂ ಪೇೞಲೆಂದೆತ್ತಿಕೊಂಡೆಂ (ಪಂಪಭಾ. ೧–೫೧); ಅನುನಯದೊಳೆಲ್ಲಮಂ ಕೊಡಬಹುದು ಬಿಡಬಹುದು (ಹಚಕಾ. ೭–೧೭); ಮನವೆಂಬಹಸ್ತದಿಂ ತನುವ ಸೋಂಕುವ ಸೌಖ್ಯವನು ಸಂತತಂ ಪ್ರಾಣಲಿಂಗಕೆ ಸಮರ್ಪಣವನನುನಯದಿ ಮಾಡಿ (ಸೌಂದಪು. ೬–೫೧). ೩. ಕ್ರಮ; ರೀತಿ: ಲಕ್ಷ್ಯಭೇದವನಱಿದು ನಡೆದು ವಿಲಕ್ಷವನು ಮುಱಿದಾತ್ಮರಕ್ಷೆಯನೀಕ್ಷಿಸುವುದನುನಯವಲ್ತೆ ಭೂಪಾಲ (ಕುವ್ಯಾಉ. ೩–೩೧). [ಸಂ.]

**ಅನುನಯಪರ** (ನಾ). ಮನವೊಲಿಸುವ ಸ್ವಭಾವವುಳ್ಳವನು; ಸ್ನೇಹಪರ; ವಿನಯಶಾಲಿ: ಅನುನಯಪರನರಸಂ . . . ಇಂತಿರೆ ನುಡಿದಂ (ಕವಿರಾ. ೨–೪೦). [ಅನುನಯ + ಪರ$_1$]

**ಅನುನಯವಚನ** (ನಾ). ಮನವೊಲಿಸುವ ಮಾತು; ಸ್ನೇಹಪರವಾದ ಮಾತು; ಸಮಾಧಾನದ ಮಾತು: ಅನುನಯವಚನದಿಂದ ನುಗೊಳಿಸುವನಿಗೆ ಮನವೀವರೆಳವಡದಿಯರು (ಹದಿಬ. ೬–೬೪). [ಅನುನಯ + ವಚನ]

**ಅನುನಯಿಸು, ಅನುನೈಸು** (ಕ್ರಿ). ೧. ಸಮಾಧಾನಗೊಳಿಸು; ಕೋಪವನ್ನು ಶಮನಮಾಡು. ೨. ಅನುಸರಣೆ ಮಾಡು; ಹಿಂಬಾಲಿಸು: ಕನಕದಿವ್ಯವಿಮಾನಪಙ್ತಿಗಳನನುನಯಿಸಿ ಬಂದೀಶ್ವರೇಶ್ವರ ಘನರಜತಪರ್ವತಕೆ ಕೊಂಡೊಯ್ವುವು ವಿಳಾಸದಲಿ (ಬಸವು. ೩೪–೧೯); ಮದುವೆಯ ಮನೆಯಲ್ಲೆಲ್ಲ ಅವನದೇ ಓಡಾಟವಾಗಿ, ಯಾವುದಕ್ಕೂ ಅವನ ಸಲಹೆ – ಸರಸಗಳನ್ನೆ ಅನುನಯಿಸಿ ನಡೆಯುವ ಅವನ ಜನಪ್ರಿಯತೆ ನನಗೆ ಹೇಗೊ ಅನಿಸಿತು (ಕಾಗೆಕ. ೧೨೧). **ಅನುನೈಸು**: ೧. ಅಕಾಲೋಪಸರ್ಪಣ ಕೋಪ[ಮಂ ನೋಡಿ]ದೊಡನನುನೈಸಲುಂ ಗುಣಾ[ನುವಾದದಿಂ ಲಜ್ಜಿತನಂ] ಬರೆತೆಗೆಯಲುಂ (ಕಾದಂಉ. ೪೦೪). [ಅನುನಯ + –ಇಸು$_3$]

**ಅನುನಾಯಕ** (ನಾ). ೧. ನಾಯಕನನ್ನು ಅನುಸರಿಸುವವನು: ಆಯೆತೆಲವೋ ಕರ್ಣ ನೀನನುನಾಯಕನೊ ನೃಪಹಾರದಲಿ ಮೇಣ್ ನಾಯಕನೊ ನೀನಾವನೆಂದನು ಕೃಪನು ಖಾತಿಯಲಿ (ಕುವ್ಯಾಆ. ೭–೫೧).

೨. [ನಾಟ್ಯ] ನಾಯಕನಿಗೆ ಅನುಕೂಲರಾದ ನಾಗರಿಕ, ವಿಟ, ವಿದೂಷಕ, ಪೀಠಮರ್ದಕ ಎಂಬ ನಾಲ್ಕು ಜನರಲ್ಲಿ ಒಬ್ಬ: ನಾಗರಕಂ ತರಕೋವಿದಂ ವಿಟಂ ಪ್ರಹಸನತತ್ಪರನೆನಿಸುವವಂ ವಿದೂಷಕನರಸಂಗನುಪೀಠಮರ್ದಕಂ ನಾಯಕರೊಳ್; ಅನುನಾಯಕರೀ ನಾಲ್ವರು (ಅನಂಪು. ೬–೯೨, ೯೩). [ಅನು + ನಾಯಕ]

**ಅನುನಾಸಿಕೆ** (ನಾ). ೧. ಮೂಗಿನ ಸಹಾಯದಿಂದ ಉಚ್ಚರಿಸುವ ವರ್ಣ; ವರ್ಗದ ಪಂಚಮಾಕ್ಷರಗಳಾದ ಙ, ಞ, ಣ, ನ, ಮ ಮುಂತಾದ ಅಕ್ಷರ: ವರ್ಗದಂತ್ಯಂಗಳನಱಿಯನುನಾಸಿಕಾಖ್ಯೆಯಂ ತಳೆದಿರ್ಕುಂ (ಶಮದ. ೧೫); ಅನುನಾಸಿಕಮುಂ ಯವಲಮನನುನಾಸಿಕಮುಂ ದಲೆಂಬರ್ (ಶಮದ. ೧೬). ೨. [ಸಂಗೀತ] ಹದಿನೈದು ಬಗೆಯ ಸ್ವರದೂಷಣೆಗಳಲ್ಲಿ ಒಂದು: ಕಂಪಿತ ಚಿಂತಿತ ಅನುನಾಸಿಕ . . . ಕಾಲಹೀನವೆಂಬ ಹದಿನೈದು ಸ್ವರದೂಷಣಂಗಳಂ ತೊಱೆದು (ವಿವೇಕ. ೨೩೬). [ಸಂ.]

**ಅನುನಿತ್ಯ** (ಅ). = ಅನುದಿನ: ಅಂದಿನ ದಿನಗಳಲ್ಲಿ ಇಂತಹ ಘಟನೆಗಳು ಫ್ರಾನ್ಸ್ ದೇಶದಲ್ಲಿ ಅನುನಿತ್ಯ ನಡೆಯುತ್ತಿದ್ದವು (ಯೋಧರು. ೧). [ಸಂ.]

**ಅನುನೀತ** (ಗು). ೧. ಸಮೀಪಕ್ಕೆ ಒಯ್ಯಲ್ಪಟ್ಟ. ೨. ಸಮಾಧಾನಗೊಳಿಸಲ್ಪಟ್ಟ: ಬುಧಗೋಗೀತು ಕಾವನನನುನೀತಗೃಹೀತವಾಕ್ಯಂ (ಕವಿರಾ. ೩–೨೨೬). [ಸಂ.]

**ಅನುನೀತಿ** (ನಾ). ಅನುಕೂಲವಾದ ಕ್ರಮ; ಉಚಿತವಾದ ಮಾರ್ಗ: ಆತ ನೋಡಿದನಾವುದಿದಕನುನೀತಿಯೆನೆ ಧೌಮ್ಯಾದಿ ಸುಜನವ್ರಾತ ನಿಶ್ಚೈಸಿದರು ಮನದಲಿ ಧರ್ಮನಿರ್ಣಯವ (ಕುವ್ಯಾಅ. ೬೦೯. ೨೫–೩೯). [ಸಂ.]

**ಅನುನೈಸು** 'ಅನುನಯಿಸು' ನೋ.

**ಅನುಪತ್ಯ**, ಅನಪತ್ಯ$_1$ (ನಾ). ೧. ಜೀವನಕ್ಕೆ ತೊಂದರೆಯಾದ ಸ್ಥಿತಿ; ಕಷ್ಟದ ಪರಿಸ್ಥಿತಿ: ನಂಜಣನೂ ತಂನ ಅನುಪತ್ಯ ಕುರಿತು ಕೆಂಚವನ ಕಯ್ಯ ಮುಂನೂರು ವರಹನ ಸಾಲವ ತೆಗೆದುಕೊಂಡು ಅಡವ ಹಾಕಿ (ಎಕ. VIII, ತೀರ್ಥಹ. ೫೭–೧೪; 1690); ನನ್ನ ಅನುಪತ್ಯದ ಕಾಲದಲ್ಲಿ ನೀನು ನನಗೆ ತುಂಬಾ ಸಹಾಯಮಾಡಿದುದರಿಂದ (ನಿಷ್ಕಾಮ. ೧೪೪). ೨. (ಹೆರಿಗೆಯ) ಬೇನೆ. ಅನಪತ್ಯ$_1$: ೧. ಕೈಯಲ್ಲಿ ಹಣವಿದ್ದರೆ ಖರ್ಚಾಗಿ ಹೋಗುತ್ತದೆ. ಆದಕ್ಕಾಗಿ ವೆಂಕಟಪ್ಪಯ್ಯನವರೊಡನೆ ಇಡಲಿಕ್ಕೆ ಕೊಟ್ಟರೆ ಅನಪತ್ಯಕ್ಕೆ ಬೇಕೆಂದಾಗ ದೊರೆಯುತ್ತದೆ (ಪರಾವ. ೧೬). ೩. ವಿಶೇಷಕಾರ್ಯ; ಸಮಾರಂಭ (ಕರಾ). [< ಸಂ. ಅನುಪಪತ್ತಿ]

**ಅನುಪದಂ** (ಅ) ೧. ಪ್ರತಿ ಪದವನ್ನೂ ಅನುಸರಿಸಿ; ಒಂದೊಂದು ಪದಕ್ಕೂ ಹೊಂದುವಂತೆ. ೨. ಹೆಜ್ಜೆಯನ್ನು ಅನುಸರಿಸಿ; ಹೆಜ್ಜೆಯ ಹಿಂದೆಯೇ; ಬೆಂಬಳಿಯಲ್ಲಿ: "ಅನುಪದಂ, ಅನ್ವಕ್, ಅನ್ವಕ್ಷಂ – ಈ ೩ ಬೞಿಸಲುಹ" (ಹಲಾಯು. ೧೨೧–೪೬). [ಸಂ.]

**ಅನುಪದಿ** (ನಾ). ಹುಡುಕುವವನು; ಹಿಂಬಾಲಿಸುವವನು: "ಅನ್ವೇಷ್ಟು, ಅನುಪದೀ – ಈ ೨ ಅಱಕೆಕಾರಂ" (ಹಲಾಯು. ೬೨–೨೨೫). [ಸಂ. ಅನುಪದಿನ್]

**ಅನುಪದೀನ** (ನಾ). ಹಾವುಗೆ; ಪಾದರಕ್ಷೆ; ಮೆಟ್ಟು: "ಪಾದುಕಾ, ಅನುಪದೀನಾ – ಈ ೨ ಹಾವುಗೆ" (ಹಲಾಯು. ೫೨–೧೫೬); "ಪಾದುಕಮುದನುಪದೀನಮೆನೆ ಹಾವುಗೆಯು" (ಮಂಗರಾ. ೬೧–೧೮). [ಸಂ. ಅನುಪದೀನಾ]

**ಅನುಪಪತ್ತಿ** (ನಾ). ೧. ಹೊಂದಿಕೆಯಿಲ್ಲದಿರುವುದು; ಸಿದ್ಧಿಸದಿರುವುದು: ಹಸ್ತಿದಂತವನ್ನು ಬೇಡನು ತರಲು ಆತನ ಗರ್ವವೇ ಮೊದಲಾದ ಬೇರೆ ಕಾರಣಗಳನ್ನು ಕೂಡ ಹೇಳಬಹುದು. ಆದ್ದರಿಂದ ಇಲ್ಲಿ ವಾಕ್ಯಕ್ಕೆ ಅನುಪಪತ್ತಿಯಿದೆಯೆನ್ನುವಂತಿಲ್ಲ (ಧ್ವನ್ಯಾಲೋ. ೧೩ ಅಡಿಟ). ೨. ಭಂಗ; ಅಪಜಯ. ೩. ಅನುಕೂಲತೆಯಿಲ್ಲದಿರುವುದು; ಆಧಾರವಿಲ್ಲದಿರುವಿಕೆ; ಅಸೌಕರ್ಯ. [ಸಂ.]

**ಅನುಪಪನ್ನ** (ಗು). ೧. ನೆರವೇರದ; ಸಿದ್ಧವಾಗದ; ಸಿದ್ಧಿಸದ. ೨. ಅನುಚಿತವಾದ; ಹೊಂದಿಕೆಯಿಲ್ಲದ; ಅಸಂಬದ್ಧವಾದ: ಯಾವ ವಾಚ್ಯಾರ್ಥವು ಅನುಪಪನ್ನವೋ, ಆದ್ದರಿಂದಲೇ ಅರ್ಥಾಂತರದ ಪ್ರತೀತಿಗೆ ಯಾವುದು ಕೇವಲ ಉಪಾಯಮಾತ್ರವಾಗಿದ್ದು ತಾನು ಓಡಿಹೋಗುವಂತಿರುವುದೋ ಅದು 'ತಿರಸ್ಕೃತ' ವಾಚ್ಯ (ಧ್ವನ್ಯಾಲೋ. ೫೪). ೩. ಅಶಕ್ಯವಾದ; ಅಸಾಧ್ಯವಾದ. ೪. ನಿರಾಧಾರವಾದ; ರುಜುವಾತಿಲ್ಲದ. ೫. ಜೀವನಕ್ಕಿಲ್ಲದ; ಉಪಾಯಗಾಣದ. [ಸಂ.]

**ಅನುಪಮ** (ಗು). ೧. ಹೋಲಿಕೆಯಿಲ್ಲದ; ಹೋಲಿಕೆಗೆ ಮೀರಿದ: ಶ್ರೀಭೂಮಿ ನೀಳಾನಾಥನಿಗನುಪಮ ವೈಭವ ವೈಕುಂಠಪತಿಗೆ ಸ್ವಾಭಾವಿಕ ಶುಭಗುಣನಿಧಿಗಂಬುಜನಾಭನಿಗಾನೆಜಗುವೆನು (ಹದಿಬ. ೩–೧); ಅವಳು ಎಳೆಹರೆಯದಲ್ಲಿ ಅನುಪಮ ಸುಂದರಿಯಾಗಿದ್ದಿರಬಹುದೆಂದು ಅವಳ ಮುಖಲಕ್ಷಣದಿಂದ ವೇದ್ಯವಾಗುತ್ತಿತ್ತು (ಪುನರು. ೧೪೧). (ನಾ). ೨. ಹೋಲಿಕೆಯಿಲ್ಲದವನು; ಅಸಮಾನನಾದವನು: ಅನುಪಮನಂ ಬರಿಪ್ಪೆನುರಾಗದೆ ನಲ್ಲನನಿಂದು (ಕವಿರಾ. ೨–೧೦೪).

ಅನುಪಮವಾಗು = ಉತ್ಕೃಷ್ಟವಾಗು; ಅಸಮಾನವಾಗು: ಕೂಡಲ ಸಂಗಮದೇವನ ಅಱಿವು ಅನುಪಮವಾಗಲೊಡನೆ ಬೆವಹಾರದೊಳಗಿರಲೀಯದಯ್ಯಾ (ಬಸವ. ೯೯೧). [ಸಂ.]

**ಅನುಪಮಗುಣ** (ನಾ). ೧. ಅಸಮಾನವಾದ ಗುಣ; ಎಣೆಯಿಲ್ಲದ ಸ್ವಭಾವ: ಅನುಪಮಗುಣದೊಳ್ ಶ್ರೀಶಂ ಘನಮೆನೆ ಮಾಲೋಪಮಾನಭೇದಮಿದಕ್ಕುಂ (ಕವಿರಾ. ೩–೮೧). ೨. ಅಸಮಾನವಾದ ಗುಣವುಳ್ಳವನು; ಅತ್ಯಂತ ಶ್ರೇಷ್ಠವಾದ ಸ್ವಭಾವವುಳ್ಳವನು: ಅನುಪಮಗುಣರನುಪಮತಪರನುಪಮಸಿದ್ಧಾಂತವಾರ್ಧಿಪಾರಗರೆಂದೀ ವನಧಿಪರೀತ ಸಕಳಾವನಿ ಪೊಗೞ್ವುದು ಸಕಳಚಂದ್ರಸೈದ್ಧಾಂತಿಗಳಂ (ಸುಕುಮಾ. ೧–೨೯). [ಅನುಪಮ + ಗುಣ]

**ಅನುಪಮಚರಿತ್ರ** (ನಾ). ೧. ಅಸಮಾನವಾದ ನಡತೆ, —ಶೀಲ; ಉತ್ಕೃಷ್ಟವಾದ ನಡತೆ, —ಶೀಲ. ೨. ತುಂಬ ಮೇಲಾದ ನಡತೆಯುಳ್ಳವನು: ನಮ್ಮ ಕೂಡಲಸಂಗನ ಶರಣರು ಕರ್ಮವಿರಹಿತರು, ಶರಣಸನ್ನಿಹಿತರು, ಅನುಪಮ ಚರಿತ್ರರು (ಬಸವ. ೫೭೭). [ಅನುಪಮ + ಚರಿತ್ರ]

**ಅನುಪಮತಪ** (ನಾ). ಎಣೆಯಿಲ್ಲದ ತಪಸ್ಸು; ಶ್ರೇಷ್ಠವಾದ ತಪಸ್ಸು: 'ಅನುಪಮಗುಣ' ಶಬ್ದದ ಪ್ರಯೋಗವನ್ನು ನೋಡಿ. [ಅನುಪಮ + ತಪ]

**ಅನುಪಮತೇಜ** (ನಾ). ೧. ಅಸಮಾನವಾದ ತೇಜಸ್ಸು, —ಕಾಂತಿ: ಅನುಪಮತೇಜಃಪ್ರಸರಂಗುಂದದೆ ಜನಸಂಸ್ತುತ ಸಜ್ಜಾತಿಯುತಂ ಸಮ್ಮನದಿ ಸದಾಲೋಕಹಿತಂಗೆಯ್ದಂ (ಜಯಕಾ. ೨–೭೩). ೨. ಎಣೆಯಿಲ್ಲದ ತೇಜಸ್ಸುಳ್ಳವನು. [ಅನುಪಮ + ತೇಜ]

**ಅನುಪಮದಾನಿ** (ನಾ). ಅಸಮಾನವಾದ ದಾನಗುಣವುಳ್ಳವನು: ಗೌರಿಯ ನೋನುವ ಬನ್ನಿರೇ, ಚಿಕ್ಕಮಕ್ಕಳೆಲ್ಲರೂ ನೆರೆದು ಅನುಪಮದಾನಿ ಕೂಡಲ ಸಂಗಮದೇವ ಗಂಡನಾಗಬೇಕೆಂದು (ಬಸವ. ೮೨); ಅನುಪಮದಾನಿಯಪ್ರತಿಮದಾನಿ ನಿರಂತರದಾನಿ . . . ಎಂದು ನಿನ್ನನೆ ಪೊಗೞುತ್ತುಮಿಂತಿರೆ (ಪಂಪಾಶ. ೧೩). [ಅನುಪಮ + ದಾನಿ$_1$]

**ಅನುಪಮಮಂಗಳ** (ನಾ). ೧. ಉತ್ಕೃಷ್ಟವಾದ ಮಂಗಳ; ಅಸಮಾನವಾದ ಶ್ರೇಯಸ್ಸು. ೨. [ಜೈನ] ಚಕ್ರವರ್ತಿಯಾದವನಿಗೆ ಒದಗುವ ಚಾಮರದ ಹೆಸರು: ಯಕ್ಷಕರವಿಧೂಯಮಾನಮಪ್ಪನುಪಮ

ಮಂಗಳಮೆಂಬ ಮೂವತ್ತೆರಡು ಚಾಮರಂಗಳುಂ (ಆದಿಪು. ೧೫-೩ ವ).
[ಅನುಪಮ + ಮಂಗಳ]

**ಅನುಪಮಮೂರ್ತಿ** (ನಾ). ಅಸಮಾನವಾದ ಮೂರ್ತಿಯುಳ್ಳವನು: ತನ್ನ ಶರೀರದ ಕೇಡಂ ಬಗೆಯದೆ ಮಹಾತಪದೊಳ್ನೆಗಳ್ದೆಡೆ ದಿವ್ಯಮೂರ್ತಿಯುಂ ಪರಮಮೂರ್ತಿಯುಂ ಅನುಪಮಮೂರ್ತಿಯುಂ ಪಡೆಯಲಕ್ಕುಂ (ಚಾವುಂಉ. ೨೪೮). [ಅನುಪಮ + ಮೂರ್ತಿ]

**ಅನುಪಮರೂಪ** (ನಾ). ಅಸಮಾನವಾದ ರೂಪವುಳ್ಳವನು: ಭೀಮಪರಾಕ್ರಮನೆನಿಸಿದನೀ ಮಹಿಯೊಳ್ ಪೃಥ್ವೀರಾಮನನುಪಮರೂಪಂ (ಸೌಇಇ. XX, ೧೮-೧೧; 980) ; ಅನುಪಮ ರೂಪನೇ ಸ್ಮರನು ದಗ್ರನೆ ನಿರ್ಜಿತಚಕ್ರಿ (ಎಕ. II, ೨೩೪-೨೬; 1180). [ಅನುಪಮ + ರೂಪ]

**ಅನುಪಮಾಂಬರ** (ನಾ). ೧. ಅತ್ಯುತ್ತಮವಾದ ವಸ್ತ್ರ; ಶ್ರೇಷ್ಠವಾದ ವಸ್ತ್ರ: ವನಜಮುಖಿ ವೀಳೆಯವನನುಲೇಪನವ ಮಲ್ಲಿಗೆಯರಳ ತೊಡಿಗೆಯನನುಪಮಾಂಬರವಿವೆ ಮನೋಹರವಹರೆ ಚಿತ್ತೈಸು (ಕುವ್ಯಾವಿ. ೩-೮೩). ೨. ಅಸಮಾನವಾದ ಆಕಾಶ, —ಗಗನ: ಕೆಡೆದ ರಥ ಸಲೆ ಕಾಂಚನಾದ್ರಿಯನಡಸಿದವು ನಾಟಿಕೆಯನಭ್ರದೊಳಿಡಿಯೆ ತಲೆ ಬೀಱಿದವು ಭಂಗವನನುಪಮಾಂಬರಕೆ (ಕುವ್ಯಾದ್ರೋ. ೬-೬).
[ಅನುಪಮ + ಅಂಬರ]

**ಅನುಪಮಾದ್ವಯ** (ನಾ). ಹೋಲಿಕೆಯಿಲ್ಲದ ಅದ್ವೈತ ಸ್ಥಿತಿ; ಅಸಮಾನವಾದ ಐಕ್ಯಸ್ಥಿತಿ: ಅನುಪಮಾದ್ವಯದಲ್ಲಿ ಮುಳ್ಳಿನ ಮೊನೆಗೆ ಮೋಹುವರಿಲ್ಲ ತೆಱಹೆಂಬಿನಿತು ಪರಿಪೂರ್ಣದಲಿ (ಕುವ್ಯಾಉ. ೯-೬೫).
[ಅನುಪಮ + ಅದ್ವಯ]

**ಅನುಪಮಾನ** (ಗು). = ಅನುಪಮ: ಮುಕ್ತಜೀವನಪ್ಪೊಡೇಕಪ್ರಕಾರನುಮನಾಕಾರನುಮಶರೀರಾಕಾರದಿಂ ಕಿಂಚಿದೂನನುಂ ಅನುಪಮಾನನುಂ ... ಅಕ್ಕುಂ (ಸುಕುಮಾ. ೮-೧೪ ವ) ; ನಮ್ಮ ಪುಣ್ಯದ ಸಾಮರ್ಥ್ಯಮನೂನಮನುಪಮಾನಮದಲ್ತೇ (ಚಂದ್ರಪು. ೨-೧೦೭). [ಸಂ.]

**ಅನುಪಮಿತ** (ಗು). ೧. ಹೋಲಿಸಲ್ಪಡದ. ೨. ಎಣೆಯಿಲ್ಲದ; ಹೋಲಿಕೆಯಿಲ್ಲದ: ದಿನಗಣನೆ ಹದಿನೆಂಟು ಕೋಟಿಯ ಕನಕವಂ ದಿನದಿನದಿ ಚೆಲ್ಲಿದನನುಪಮಿತ ಧನರತುನ ಭಂಡಾರವನು ತೆಗೆತೆಗೆಸಿ (ಕುವ್ಯಾಕ. ೮-೧೮). [ಸಂ.]

**ಅನುಪಮೆ** (ನಾ). ೧. ಎಣೆಯಿಲ್ಲದವಳು; ಅಸಮಾನಳು. ೨. ಆಗ್ನೇಯ ದಿಕ್ಕಿನ ಹೆಣ್ಣಾನೆ: ದಿಗ್ಗಜಗಳೆಂಟು ಅಭ್ರಮು ಕಪಿಲೆ ಪಿಂಗಳೆ ಅನುಪಮೆ ... ತಮ್ಮ ತಮ್ಮ ಸ್ತ್ರೀಗಜಗಳೊಡಗೂಡಿ (ವಿವೇಕ. ೧೭೭). [ಸಂ. ಅನುಪಮಾ]

**ಅನುಪಮ್ಮ** (ಗು). = ಅನುಪಮ. 'ಅನುಪಮ್ಮ ಚರಿತ' ಪರಾ.
[< ಸಂ. ಅನುಪಮ]

**ಅನುಪಮ್ಮಚರಿತ** (ನಾ). ಅಸಮಾನವಾದ ನಡೆಯುಳ್ಳವನು; ಉತ್ಕೃಷ್ಟವಾದ ಶೀಲವುಳ್ಳವನು: ವಿಜಯ ವಿಠಲನ್ನ ಅನುಪಮ್ಮ ಚರಿತ ಪರಬೊಮ್ಮ ತಿರುಮಲೇಶ (ವಿದಾಕೃ. ೬೩-೩). [ಅನುಪಮ್ಮ + ಚರಿತ]

**ಅನುಪಯುಕ್ತ** (ಗು). ಕೆಲಸಕ್ಕೆ ಬಾರದ; ಉಪಯೋಗಕ್ಕೆ ಬಾರದ: ಈ ನೇಗಿಲು ಅನುಪಯುಕ್ತವಾಗಿದೆ (ರೂಢಿ). [ಸಂ.]

**ಅನುಪಲಕ್ಷಿತ** (ಗು). ನೋಡಲ್ಪಡದ; ದೃಷ್ಟಿಗೆ ಬೀಳದ: ಕೌಮುದೀ ಮಹೋತ್ಸವಮಂ ನೋಡುವಟ್ಟಿಯೊಳ್ ಅಕೃತಕಾರಾಮಸಂವರಣನನುಪಲಕ್ಷಿತಭಾಷಾಸಂಕೇತಜನಂಗಳ್ವಿಡಿದು ಬರ್ಪೊಂ (ಶಾಂತಿಪು. ೮-೭೨ ವ).
[ಸಂ.]

**ಅನುಪಲಕ್ಷಿತಂಮಾಡು** (ಕ್ರಿ). ಗಮನಕ್ಕೆ ಬಾರದಂತೆ ಮಾಡು; ತಿಳಿಯದಂತೆ ಮಾಡು: ಅಂತಪೂರ್ವ ಮಂಗಳಾಶ್ಚರ್ಯಂಗಳಪರಾಜಿತಾನಂತವೀರ್ಯರ ಬರವನುಪಲಕ್ಷಿಸಿ ತಾಮನುಪಲಕ್ಷಿತಂ ಮಾಡೆ ಗಗನಗಮನದಿಂ ಮನಃಪವನ ಜವದಿನೆಯ್ದಿ (ಶಾಂತಿಪು. ೨-೮೭ ವ).
[ಅನುಪಲಕ್ಷಿತ + ಮಾಡು$_1$]

**ಅನುಪಲಬ್ಧ** (ನಾ). (ವಸ್ತು ಮುಂತಾದುದು) ದೊರೆಯದಿರುವುದು; ಲಭಿಸದಿರುವುದು: ಅನುಪಲಬ್ಧದೊಳಜಿತಮಂ ಮೆಜಿದುಪಲಬ್ಧದೊಳ್ನಿಶ್ಚಯಗ್ರಾಹಿಯಾಗಿ (ಮಲ್ಲಿಪು. ೩-೧೧). [ಸಂ.]

**ಅನುಪಲಬ್ಧಿ** (ನಾ). ೧. ಸಿಕ್ಕದಿರುವುದು; ದೊರೆಯದಿರುವಿಕೆ; ಅಭಾವ; ಅಪ್ರಾಪ್ತಿ. ೨. [ತತ್ತ್ವಶಾ] ಕಾಣದಿರುವುದು; ಗುರುತಿಸದಿರುವುದು: "ಪ್ರಮಾಣಕ್ಕೆ ಗೋಚರವಾಗಬೇಕಾಗಿದ್ದದ್ದು ಗೋಚರವಾಗಲಿಲ್ಲವೆಂಬ ಕಾರಣದಿಂದ ಅಭಾವವನ್ನು ನಿಶ್ಚಯಿಸುವದು ಅನುಪಲಬ್ಧಿ" (ಬ್ರಹ್ಮಭಾ. ೨-೨೬) ; "ಅನುಪಲಬ್ಧಿಯೆಂದರೆ ವಸ್ತುವನ್ನು ಗ್ರಹಿಸುವ ಮೇಲ್ಕಂಡ ಐದು ಪ್ರಮಾಣಗಳಿರದಿರುವುದರಿಂದ ವಸ್ತುವಿಲ್ಲವೆಂದು ತಿಳಿಯುವುದು" (ಹಿಂದಸಾ. ೧೮೦). [ಸಂ.]

**ಅನುಪಲ್ಲವಿ** (ನಾ). [ಸಂಗೀತ] ಪಲ್ಲವಿಯನ್ನು ಅನುಸರಿಸಿ ಕೂಡಲೇ ಹಾಡುವ ಕೃತಿಯ ವಿಭಾಗ.
[ಸಂ. ?. / ತಮಿ. ಅನುಪಲ್ಲವಿ. ತೆಲು. ಅನುಪಲ್ಲವ]

**ಅನುಪಸಂಹೃತ** (ಗು). ಉಪಸಂಹಾರಮಾಡದ; ಹಿಂದಕ್ಕೆ ತೆಗೆದುಕೊಳ್ಳದ; ನಿವಾರಿಸದ: ಆಕೆ ಕುಮಾರಂ ಬಿಜಯಂಗೆಯ್ದನೆಂದು ಮಹಾಶ್ವೇತೆಗಱಿಪುವುದುಮಾಕಾಂತೆಯನುಪಸಂಹೃತ ಮನ್ಯುವೇಗೆಯುಂ ಗದ್ಗದಿಕಾವಗೃಹ್ಯಮಾಣಕಂಠೆಯುಮಾಗಿ ಕುಮಾರನನಿಂತೆಂದಳ್ (ಕಾದಂಉ. ೫೪೪). [ಸಂ.]

**ಅನುಪಸ್ಥಿತಿ** (ನಾ). ೧. ಸಮೀಪದಲ್ಲಿಲ್ಲದಿರುವುದು; ದೂರದಲ್ಲಿರುವುದು; ಗೈರುಹಾಜರಿ: ಫೆಲ್ಪನನ ಆಶ್ಚರ್ಯಕರವಾದ ಅನುಪಸ್ಥಿತಿಯನ್ನು ವಿಂಟರನಿಗೆ ತಿಳಿಸುವಾಗ ಕೆಲಗಂಟೆಗಳ ತಡವಾಯಿತು (ಯೋಧರು. ೧೨೫) ; ಪ್ರತಿವಾದಿಯ ಅನುಪಸ್ಥಿತಿಯಲ್ಲಿ ನ್ಯಾಯಾಲಯವು ... ನಿರ್ಣಯಿಸಿತು (ಕಸ್ತೂರಿ. ೪-೬, ೧೨೨; 1964). ೨. ನೆನಪಿಗೆ ಬಾರದಿರುವುದು. [ಸಂ.]

**ಅನುಪಾತ** (ನಾ). ೧. ಹಿಂಬಾಲಿಸುವುದು; ಅನುಸರಿಸಿ ಬರುವುದು: ಪಕ್ಷಿಪಕ್ಷ ಚಂಚುಚರಣಾಭಿಘಾತದೊಳಂ ಶಿಶುಜನಸಾನುಪಾತ [ಪಾಠಾಂ. ಪಾತಾಪಾತ] ದಂಡಖಂಡಾಘಾತದೊಳುಮುದಿರ್ದು ನೆಲದೊಳ್ ಬಿರ್ದ ನೇಱಿಲಪಣ್ಗಳನಾ ಕೂಸಿನ ಪಕ್ಕಕ್ಕಾಗಿ ಸಾರ್ಚಿಕೊಟ್ಟು (ಸುಕುಮಾ. ೪-೬೩ ವ) ; ಮನುಷ್ಯನು ಕರ್ಮಯೋನಿ ಭೋಗಯೋನಿ ಎರಡೂ ಆಗಿರುವುದಾದರೆ ಕರ್ಮ ಮತ್ತು ಭೋಗಗಳ ಅನುಪಾತವು ಒಂದೇ ಆಗಿರದೆ ಭಿನ್ನವಿಸುತ್ತದೆ (ಜೀವಾತ್ಮ. ೨೬೫). ೨. ಒಂದರ ಪರಿಣಾಮವಾಗಿ ಒದಗುವುದು. ೩. [ಗಣಿತ] ಒಂದರ ಕ್ರಮವನ್ನು ಮತ್ತೊಂದು ಅನುಸರಿಸುವುದು: ಮೆದಳಿನ ಭಿನ್ನ ಭಿನ್ನ ಭಾಗಗಳ ಉದ್ದ – ಅಗಲ ಅಳತೆಗಳು ಬಾಹ್ಯೇಂದ್ರಿಯಗಳ ಉದ್ದ ಅಗಲಗಳ ಅನುಪಾತಕ್ಕೆ ತಕ್ಕಂತೆ ಇರುವುದಿಲ್ಲ (ಜೀವಾತ್ಮ. ೮೩) ; ನೆಲದ ಮೇಲಿನ ದೂರಕ್ಕೆ ಭೂಪಠದಲ್ಲಿ ತೋರಿಸಿರುವ ದೂರದ ಅನುಪಾತವೇ (Ratio) ಪರಿಮಾಣ (ಭೂವಿವ. ೩೩). [ಸಂ.]

**ಅನುಪಾತನ** (ನಾ). [ಗಣಿತ] ಅನುಪಾತಕ್ರಮದಿಂದ ಲೆಕ್ಕಮಾಡುವುದು: ಬಂದ ವಿಲಗ್ನದಲ್ಲಿ ತಾನೆನಿತೆನೆ ಸಲ್ಗು ಮುನ್ನನಿತೆ ನಾಟಿಕೆ ಜನ್ಮಘಟೀಪ್ರಮಾಣಮಾದಿನ ರಜನೀಪ್ರಮಾಣದನುಪಾತನದಿಂ ನಿಜಲಗ್ನಸಂಜ್ಞೆಯೊಳ್ (ಜಾತತಿ. ೩-೧೯). [ಸಂ.]

**ಅನುಪಾತ್ಯಯ** (ನಾ). ೧. ಅನುಕ್ರಮ; ಪರಿಪಿಡಿ; ಸರದಿಗೆ ತಪ್ಪದಿರುವುದು. ೨. ಕ್ರಮವನ್ನು ಅತಿಕ್ರಮಿಸದಿರುವುದು, —

ಕಡೆಗಣಿಸದಿರುವುದು; ಶಾಸ್ತ್ರವನ್ನಾಗಲೀ ವಿಧಿಯನ್ನಾಗಲೀ ಮೀರದಿರುವುದು : "ಪರಿಪಾಟೀ, ಅನುಪೂರ್ವೀ, ಉಪಶಾಯಃ, ಅನುಪಾತ್ಯಯಃ, ಅನುಕ್ರಮಃ, ಪರ್ಯಾಯಃ, ವಿಶಾಯಃ – ಈ ೭ ಪರಿವಿಡಿ" (ಹಲಾಯು. ೧೨೨-೫೫). [ಸಂ.]

**ಅನುಪಾದಾನ** (ನಾ). ತೆಗೆದುಕೊಳ್ಳದಿರುವುದು ; ಸ್ವೀಕರಿಸದಿರುವುದು : ಜ್ಞಾನ ದರ್ಶನ ವಿಶುದ್ಧಿಯು ಅನುಪಾದಾನವಾದ ಪರಿನಿರ್ವಾಣಕ್ಕಾಗಿ ಅಲ್ಲಿಯವರೆಗೆ ಮಾತ್ರ (ಬುದ್ಧಪ. ೧೩೯). [ಸಂ.]

**ಅನುಪಾದೇಯ** (ಗು). ತೆಗೆದುಕೊಳ್ಳಬಾರದ ; ಸ್ವೀಕಾರಕ್ಕೆ ಅರ್ಹವಲ್ಲದ. [ಸಂ.]

**ಅನುಪಾದೇಯತ್ವ** (ನಾ). ತೆಗೆದುಕೊಳ್ಳಬಾರದುದು : ಇಲ್ಲಿ 'ಪುನರುಕ್ತಿ' ಯೆಂಬ ವಾಚ್ಯಾರ್ಥ ಅಸಂಭವ; 'ಅನುಪಾದೇಯತ್ವ' ವೇ ಲಕ್ಷ್ಯಾರ್ಥ (ಧ್ವನ್ಯಾಲೋ. ೪೩). [ಸಂ.]

**ಅನುಪಾನ** (ನಾ). ೧. ಔಷಧದ ಜೊತೆಗೆ ಸೇವಿಸುವ ಪಾನೀಯ ಅಥವಾ ಕಲಸಿಕೊಳ್ಳುವ ತುಪ್ಪ, ಜೇನುತುಪ್ಪ ಮುಂತಾದುದು : ವೈದ್ಯನು ಕೆಲವು ಔಷಧದ ಚೀಟುಗಳನ್ನು ಕೊಟ್ಟು . . . ಸಕ್ಕರೆ ತುಪ್ಪ ಅನುಪಾನದೊಳಗೆ ತಕ್ಕೊಂಡರೆ, ತೀವ್ರ ನೆಟ್ಟಗಾಗಿ ಮೈಯಲ್ಲಿ ಶಕ್ತಿ ಬರುವುದು ಅಂದನು (ಮುಂಬಯಿ. ೩-೨೮). ೨. ಔಷಧಗಳನ್ನು ಸೇವಿಸುವ ಕ್ರಮ : ಚಿಕಿತ್ಸೆಗಳನ್ನು ಅರಿಸಿ, ಅವುಗಳ ಅನುಪಾನವನ್ನು ಸಹ ಕಲ್ಲಿನ ಮೇಲೆ ಬರೆಸಿ, ಎಲ್ಲರ ಕಣ್ಣಿಗೆ ಬೀಳುವ ಕಡೆಯಲ್ಲಿ ನೆಡಿಸಿದನು (ಭಜ್ಯೋತಿ. ೧೮); ಪಥ್ಯಪಾನೀಯಗಳೆಲ್ಲವು ನಡೆಯಿತು ಅನುಪಾನಕನುಸಾರವಾಗಿ (ಇಂಚಾಪ. ೪೪-೧೦). ೩. ರೋಗಿಗಳಿಗೆ ನಡಸುವ ಉಪಚಾರ, — ಪಥ್ಯ : ತಕ್ಕ ಅನುಪಾನವಿಲ್ಲದೆ ಇವನನ್ನಿಲ್ಲಿ ಬಿಟ್ಟರೆ ಸಾಯುವುದು ಖಂಡಿತ (ಜಾರುದಾ. ೯೫); ಇನ್ನೂ ಅನುಪಾನ ಹೇಳುವದುಳಿದಿದೆ (ಕುರಿಹಿಂ. ೫೧). [ಸಂ.]

**ಅನುಪಾಲ** (ನಾ). = ಅನುಪಾಲಕ : ನಿಜಸಮಯಾನುಪಾಲಾ ಬಸವ ಶರಣಾಗು (ಬಸಪು. ೨೧-೨); ಸದಾನುಪಾಲನು ದುಷ್ಟಸಂಸಾರ ಪ್ರಪಂಚ ವಿದೂರನೆನಲು (ಬಸಪು. ೩೩-೩). [ಸಂ.]

**ಅನುಪಾಲಕ** (ನಾ). ಕಾಪಾಡುವವನು ; ರಕ್ಷಿಸುವವನು : ಸುವಿಮಳ ಸದಾಚಾರಮಾರ್ಗ ಸದಾನುಪಾಲಕನು (ಬಸಪು. ೨೨-೧). [ಸಂ.]

**ಅನುಪಾಲನ** (ನಾ). ೧. ಕಾಪಾಡುವುದು ; ರಕ್ಷಿಸುವುದು : ಕಾಲ ಕರ್ಮ ವಿರಹಿತನುತ್ತಮಶೀಲ ನಿಜ ಭಾಷಾನುಪಾಲನಶಾಲಿ ಭವಿಸಂಸರ್ಗ ಪಥ ಸಂತತ ಪರಿತ್ಯಾಗಿ (ಬಸಪು. ೨೧-೩). ೨. ಹೇಳಿದ್ದನ್ನು ನಡಸುವುದು ; ವಿಧೇಯತೆ. 'ಅನುಪಾಲನಕ್ರಿಯ' ಪರಾ. [ಸಂ.]

**ಅನುಪಾಲನಕ್ರಿಯ** (ನಾ). ಹೇಳಿದ್ದನ್ನು ನಡಸುವವನು; ವಿಧೇಯ: ಧರೆಯೆ ಕೋಸಲ, ಪರಬ್ರಹ್ಮನೇ ರಘುವರನು ಭರತನವೊಲನುಪಾಲನ ಕ್ರಿಯರು ನಾವು (ಮಂಕುಕ. ೭೧೧).

[ಸಂ. (ಅನುಪಾಲನ + ಕ್ರಿಯಾ + –)]

**ಅನುಪಿಗಲು** (ನಾ). 'ಅನುಪು' ಎಂಬ ಸುಂಕವನ್ನು ವಸೂಲು ಮಾಡುವ ಸ್ಥಳವನ್ನು ಸೂಚಿಸುವ ಕಲ್ಲು (?) : ಪಡು ನಾಗಪುರವಾದ ಗೊಟ್ಟ ಗಡಿಯ ಅನುಪಿಗಲು ನೆಲೆಂ ಬಂಜೆಯಾಗಿ ಗ ೧ ಪ ೨ ನೂ ವರುಶಂ ಪ್ರತಿ ಆರು ಅನುಪಿನ × × × ಕವ ಮಾಡಿದಡವೂ (ಎಕ. VI, ತರೀಕೆ. ೮೦-೨೦ ; 1278). [ಅನುಪು$_2$ + ಕಲ್ಲು$_2$ (< ಕಲ್$_2$)]

**ಅನುಪು$_1$** (ಕ್ರಿ). ಕಳುಹಿಸು : ಇಂತಾ ಸೌಗಂಧಿಕಾ ದೇವಿಯು ಅನುಪಿದ ನವಮಲ್ಲಿಕೆಯು ಬಂದು ಆ ಮಹಾರಾಜಸಭಾಮಧ್ಯದಲ್ಲಿ ಮಂಡಿಸಿರುವ ಸುಗಂಧ ರಾಜೇಂದ್ರನಿಗೆ (ಸೌಪರಿ. ೧೩-೧೨೧) ; ಅರಸೆ ಈ ಕುವರಂಗೆ ಯುವರಾಜ್ಯಪಟ್ಟವಂ ನಿತ್ತು : ಮತ್ತು ಸರ್ವ ಸೇನೆಗಳಿತ್ತು ಸಕಲ ದಿಗ್ವಿಜಯಮಂ ಮಾಡಲೋಸುಗ ಅನುಪು ನೀಂ ಮಾನವೇಂದ್ರಾ (ಸೌಗಂಧಿ. ೨೯-೧೦). [← ತಮಿ. ಅನುಪ್ಪು ; ತೆಲು. ಅನುಪು]

**ಅನುಪು$_2$**, ಆನುಪು (ನಾ). ಊರಿನ ಗಡಿಯೊಳಕ್ಕೆ ಬರುವ ಹೊರಗಿನವರು ಕೊಡಬೇಕಾದ ಸುಂಕ (?) : ಗಂಗಮುಂಡಲಿಯ ರಾಜ್ಯದ ಸೂಗೂರ ಅನುಪು ಸುಂಕದ ವೊಳಗೆ ದಿನಂಪ್ರತಿ (ಎಕ. VII, ಶಿವಮೊ. ೭೮-೨೩ ; 1291) ; ಭಂಡಿಯ ಭತ್ತದ ಸುಂಕ ಉಪ್ಪರ ನೆಲವಳಿ ಅನುಪು ಆಳು ಅರ[ಕಾ]ಣಿಕೆ ಕಡಾಯಲು ದಂಣಾಯವಾರರು ಪಂನ್ ೭ ಕಬ್ಬಿನ ಮುದೆಯ (ಸೌಇಇ. IX–ii, ೪೩೮-೧೭ ; 1418) ; ನಾಡೋಪಾದಿಯಲ್ಲಿ ಬಾಹ ಉಂಬಳಿಯ ಚಿಕ್ಕ ಹೊಂಬಳಿ ಹೊಂಮಾರು . . . ತಳವಾರಿಕೆ ಅನುಪು ಕೊಡ ವೀಸ . . . ಮುಂದೆ ಹುಟ್ಟುವ ಪೂರ್ವಾದಾಯ ಸಹವಾಗಿ (ಮೈಆರಿ. ೧೯೩೪, ೨೭-೨೨ ; 1430) ; ಸ್ಥಳದ ಸುಂಕ ಸಾಮ್ಯ ತಳವಾಡಿಕೆಯ ರೊಕ ಭತಜೋಡಿ ಬಿರಾಡ ಗ್ರಾಮುಗಳ ನೀರ ಬಿರಾಡ ಅನುಪು ಹಾರಿಕಾಯಿ ಮೊದಲಾದ ಏನುಂಟಾದನು ಸರ್ವಮಾನ್ಯವಾಗಿ (ಸೌಇಇ. IX-ii, ೪೯೧-೧೭ ; 1513) ; ಊರಾದಿ ಕೊಳಗ ನಾಡಿನ ಬಳ್ಳಗಳ ಸರಿಮಾನದಳತೆಯ ಲೆಕ್ಕದ ಪೇಟೆಗೆ ಹೇಱು ಮೂಱಿಡೆ ತಾಕುವ ದಾರಿ ನೂಱೊಂದು ಮೂಱಾಱು ಸುಂಕ ಮುವ್ವತ್ತಾಱನುಪು (ಶಿವಗೀ. ೯೪೭).

**ಆನುಪು** : ಅನುಪು ಎತ್ತು ೧೦ಕ್ಕೆ ಇಪ್ಪಣವ ಕೊಟ್ಟರು (ಸೌಇಇ. IX–i, ೩೮೪-೨೪ ; 1287) ; ಹೊಳೆಯಾಚೆ ಅನುಪು ಕಟಿಗೆ ಪಣಬಿನ ಹಱುಗೋಲವರು ಕೊಡುವ ತೆಱಿಗೆ ಸಹವಾಗಿ (ಸೌಇಇ. IV, ೨೫೫-೧೧ ; 1513) ; ಶಿಪರಾಜನ ಹೋಬಳಿಯ ತೋಟ ೧ ಹೊ[ಳೆ]ಯ ದಂಡೆಯ ಅನುಪು ೧ (ಸೌಇಇ. IV, ೨೭೭-೨ ; 1513) ; ಸುಂಕ ತಳವಾಱ ಅನುಪು ಮಗಮೆ ಚಲವಾದಿ ಸಂಗಡಿ ಪಂತಗಾಱರಿಗೂ ಇದೇ ಭಾಷೆ (ಸೌಇಇ. IX-ii, ೫೩೨-೨೦ ; 1530). 'ಅನುಪುಮಾನ್ಯ', 'ಅನುಪುಸುಂಕ' ಪರಾ.

**ಅನುಪಿನ ಕಲ್ಲು** = ಅನುಪಿಗಲು: ಮೂಡಲು ಸಂತೆ ಕಡವೂರ ಗಡಿಯ ಅನುಪಿನ ಕಲ್ಲು (ಎಕ. VII, ಶಿವಮೊ. ೨೭-೨೪೪ ; 1524). **ಅನುಪಿನ ಹಳ್ಳಿ** = ಒಂದು ಹಳ್ಳಿಯ ಹೆಸರು : ಚಿಕದೇವರಾಯದುರ್ಗಕ್ಕೆ ಸಲುವ ಅನುಪಿನಹಳಿ[ಳ್ಳಿ]ಯಲಿ ಯೀ ಗ್ರಾಮುಕ್ಕೆ ಪೂರ್ವ ದಿಕ್ಕಿನಲ್ಲಿ (ಎಕ. XII, ತುಮುಕೂ. ೪೫-೩೦ ; 1699).

[ದೇ. ॥ ತೆಲು. ಅನುಪು = ಪಥಿಕರು ಸಲ್ಲಿಸುವ ಸುಂಕ]

**ಅನುಪುಮಾನ್ಯ** (ನಾ). 'ಅನುಪು' ಎಂಬ ಸುಂಕವನ್ನು ವಸೂಲು ಮಾಡುವ ಹಕ್ಕು (?) : ದಂಣಾಯಕರ ಸಾಮ್ಯ ತಱವಾಳಿಕೆ ಅನುಪುಮಾನ್ಯವಾಗಿ (ಎಕ. XII, ಶಿರಾ. ೭೭-೧೭; 1379). [ಅನುಪು$_2$ + ಮಾನ್ಯ]

**ಅನುಪುಸುಂಕ** (ನಾ). = ಅನುಪು$_2$ : ಗಂಗಮುಂಡಲಿಯ ರಾಜ್ಯದ ಸೂಗೂರು ಅನುಪುಸುಂಕದ ಒಳಗೆ ದಿನಂಪ್ರತಿ (ಎಕ. VII, ಶಿವಮೊ. ೭೮-೨೩ ; 1291). [ಅನುಪು$_2$ + ಸುಂಕ]

**ಅನುಪೂರಕ** (ಗು). ಪೂರ್ಣಗೊಳಿಸುವ ; ತುಂಬಿಕೊಡುವ : ಅಭಿವೃದ್ಧಿ ಸಹಾಯ ಸಂಸ್ಥೆಗಳ ಕಾರ್ಯಾಚರಣೆಗಳಿಗೆ ಅನುಪೂರಕ (Complementary)ವಾಗಿದೆ (ಅಂತಸಂ. ೧೪೨). [ಸಂ.]

**ಅನುಪೂರ್ವ** (ಗು). = ಅನುಪೂರ್ವಕ. [ಸಂ.]

**ಅನುಪೂರ್ವಕ** (ಗು). ಒಡಗೂಡಿದ ; ಕ್ರಮವಾದ : ಅಗಳರಸನ ಪೊರೆಗೆ ಭಕ್ತನು ಪೋಗಿ ಸುಸ್ನೇಹಾನುಪೂರ್ವಕವಾಗಲಿಂತೆಂದನು (ಬಸಪು. ೨೭-೧೧). [ಸಂ.]

**ಅನುಪ್ರತಿ** (ನಾ). ಅಸಲು ಪ್ರತಿಗೆ ಸರಿಯಾದ ನಕಲು : ಉತ್ತರಬಾಧ್ಯ ಸರಕಾರದ ಯೋಜನೆ – ನಮ್ಮ ದೇಶಕ್ಕೆ ತೀರಾ ಹೊಸದು. ಆದರ ಬಹು ಲಕ್ಷಣಗಳನ್ನು ನಾವು ಇಂಗ್ಲೆಂಡು ಅಮೇರಿಕಗಳಿಂದ ಅನುಪ್ರತಿ (ಕಾಪಿ) ಮಾಡಿಕೊಂಡಿದ್ದೇವೆ (ರಾಜ್ಯಶಾ. ೧೭). [ಸಂ.]

**ಅನುಪ್ರಧಾವಿತ** (ಗು). ಅನುಸರಿಸಿ ಓಡಿದ: ಇಂದ್ರಾಯುಧ ಪ್ರತ್ಯಭಿಜ್ಞೆಯೊಳಮ[ನುಪ್ರಧಾವಿ]ತ [ಪಾಠಾಂ. ತ್ರಿಪ್ರಚ್ಛಾರಿತ] ರಾಜಪುತ್ರ ಲೋಕದೊಳಂ ಚಂದ್ರಾಪೀಡನೆಂದಱಿದು (ಕಾದಂಬ. ೪೩೬). [ಸಂ.]

**ಅನುಪ್ರಯುಜ್ಯ** (ಗು). ಜೊತೆಗೆ ಪ್ರಯೋಗವಾಗತಕ್ಕ: ಧಾತುಗೆ ಕರ್ಮದಲ್ಲಿ ವಿಹಿತಮಾದ ಅಮಾದಿಗಳ್ಪರಮಾಗೆ -ಪಡು ಧಾತುವನು ಪ್ರಯುಜ್ಯ[ಪಾಠಾಂ. ತ್ಯ]ಮಾದಪುದು(ಶಮದ. ೨೬೩ ಪ್ರಯೋ). [ಸಂ.]

**ಅನುಪ್ರವೇಶ** (ನಾ). ಒಳಗೆ ಸೇರಿಕೊಳ್ಳುವುದು; ಒಳಹೊಕ್ಕಿರುವುದು: ಸೃಷ್ಟಿ, ಸ್ಥಿತಿ, ಸಂಹಾರ, ನಿಯಮ, ಅನುಪ್ರವೇಶ ಎಂಬ ಪಂಚ ಕೃತ್ಯಗಳಿಂದ ಪ್ರವೃತ್ತಿಮಾಡಿದಂಥ ಪದಾರ್ಥಗಳ ಪ್ರಪಂಚಮಯನಾದವನು (ಈಶ್ವರ) (ಅಮೃತ. ೩-೧೫೦ ಟೀಕೆ); ಸೃಷ್ಟಿಕಾಲದಲ್ಲಿ ಪ್ರತಿವಸ್ತುವಿನಲ್ಲೂ ಅನುಪ್ರವೇಶವೆಂಬ ಪರಮಾತ್ಮನ ಸಾನ್ನಿಧ್ಯವು ಬೇರೆ ಇರುವುದು (ಹಿಂದಸಾ. ೨೫೨). [ಸಂ.]

**ಅನುಪ್ರಾಸ** (ನಾ). [ಕಾವ್ಯಮೀ] ಏಕರೂಪದ ವರ್ಣ ಅಥವಾ ವರ್ಣಗಳು ಮತ್ತೆ ಮತ್ತೆ ಬರುವಂತೆ ಶಬ್ದಗಳನ್ನು ಜೋಡಿಸಿ ರಚಿಸಿದ ಒಂದು ಶಬ್ದಾಲಂಕಾರ: ಪ್ರಾಸಾನುಪ್ರಾಸಾಂತಪ್ರಾಸಂಗಳ್ ಮೂಱುಮತಿಶಯಂಗಳ್ ಪ್ರಾಸಾಭಾಸಂಗಳುಱಿದ ಮೂಱುಂ (ಕವಿರಾ. ೩-೪೩); ಸ್ಥಾನಂ ಕ್ರಿಯೆಯೆಂಬಿವಱೊಳನೂನ ಸಮಾನಾಕ್ಷರಾದಿಪದ ಸಾನ್ನಿಧ್ಯಂ ತಾನಕ್ಕುಂ ಮಾಧುರ್ಯಾಧೀನಮನುಪ್ರಾಸಮೆಂದು ಪೇೞ್ವರ್ ಕೆಲಬರ್ (ಕಾವ್ಯಾವ. ೫೬೬); "ಶಬ್ದಾಲಂಕಾರಗಳಲ್ಲಿ ೧. ಅನುಪ್ರಾಸ, ೨. ಯಮಕ, ೩. ಚಿತ್ರಕವಿತ್ವ ಎಂದು ಮುಖ್ಯವಾಗಿ ಮೂರುವಿಧ; ಅಕ್ಷರಗಳ ಆವೃತ್ತಿಯೇ ಅನುಪ್ರಾಸ" (ಕೈಪಿಡಿ. ೨೫೩). ಉದಾ:— ಎಳಗಿಳಿಗಳ ಬಳಗಂ ಗಳ| ಗಳನಿಳಿತಂದೆಳಸಿ ಬಳಸಿ ಸುಳಿದೊಳವುಗುತುಂ| ನಳನಳಿಸಿ ಬೆಳೆದು ಕಳಿಯದ| ಕಳವೆಯ ಕಣಿಶಂಗಳಂ ಕರಂ ಖಂಡಿಸುಗುಂ॥ (ಕೈಪಿಡಿ. ೨೫೩). [ಸಂ.]

**ಅನುಪ್ರೇಕ್ಷೆ** (ನಾ). [ಜೈನ] ಯತಿಗಳು ಧ್ಯಾನಮಾಡಬೇಕಾದ ಅನಿತ್ಯತ್ವ, ಅಶರಣತ್ವ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿ, ಆಸ್ರವ, ಸಂವರ, ನಿರ್ಜರೆ, ಲೋಕ, ಬೋಧಿದುರ್ಲಭತ್ವ, ಧರ್ಮ ಎಂಬ ಹನ್ನೆರಡು ತತ್ತ್ವಗಳ ಅನುಚಿಂತನೆ: ಅರ್ಹತ್ಪದಮಂ ನೆನೆಯುತ್ತುಮನುಪ್ರೇಕ್ಷೆಯೆ ಮನದೊಳ್ ತಣ್ಮಲೆಯೆ ಸೇಸೆಗೊಳ್ ಖಚರಪತೀ (ಆದಿಪು. ೨-೫೭); ವಾಚನೆಯುಂ ಪೃಚ್ಛನೆಯುಮನುಪ್ರೇಕ್ಷೆಯುಮಾಮ್ನಾಯಮುಂ (ಅಜಿಪು. ೧೨-೪ ವ). [ಸಂ. ಅನುಪ್ರೇಕ್ಷಾ]

**ಅನುಪ್ರೇಕ್ಷೆಗೆಯ್** (ಕ್ರಿ). ಅನುಪ್ರೇಕ್ಷೆ ಮಾಡು: ದ್ವಾದಶಾನುಪ್ರೇಕ್ಷೆಗೆಯ್ಯುತ್ತುಂ (ಸುಕುಮಾ. ೩-೩೯ ವ).
[ಅನುಪ್ರೇಕ್ಷೆ + ಗೆಯ್ (<ಕೆಯ್$_1$)]

**ಅನುಬಂಧ** (ನಾ). ೧. ಸಂಬಂಧ; ಸೇರುವೆ; ಜೋಡಣೆ: ಕಿಱಿದು ಪೊೞ್ತು ಶೋಕಾನುಬಂಧದೊಳ್ಕೋಪಾನುಬಂಧಮುಂ ಸಮರಾನುಬಂಧಮುಮಂತರಿಸಿರ್ದು (ಗದಾಯು. ೪-೧೩ ವ). ೨. ಜೊತೆ; ಸ್ನೇಹ: ವಿಗ್ರಹಸಮಗ್ರನಪ್ಪ ಸುಗ್ರೀವಂ ನಮ್ಮೊಳಾದನುಬಂಧದೊಳ್ ಶಿಥಿಲನಾಗಿರ್ಪ ಮಾತನೊಳನುಬಂಧಮುಳ್ಳುದಱಿಂ ಹನುಮನುಮೆಮಗಲ್ಲನೆಂಬುದುಂ (ಪಂರಾಮಾ. ೯-೧೯೪ ವ). ೩. [ವ್ಯಾಕ] ತಾನು ಪ್ರಯೋಗಕ್ಕೆ ಸಿಲುಕದೆ ಕಾರ್ಯವಿಶೇಷಗಳನ್ನು ಸೂಚಿಸಲು ಬರುವ 'ಇತ್' ಎಂಬ ಸಂಜ್ಞೆಯಿಂದಕೂಡಿದ ವರ್ಣ ಅಥವಾ ವರ್ಣಸಮುದಾಯ. ೪. ಮುಖ್ಯವ್ಯಕ್ತಿಯನ್ನು ಅನುಸರಿಸಿ ನಡೆಯುವ ಅಧೀನ ವ್ಯಕ್ತಿ. ೫. ಆರಂಭ. ೬. ತೊಡಗಿದ ಕೆಲಸವನ್ನು ಬಿಡದೆ ಅನುಸರಿಸುವುದು. ೭. ಗ್ರಂಥದ ಕೊನೆಯಲ್ಲಿ ಒಳಗಿನ ವಿಷಯಕ್ಕೆ ಸಂಬಂಧಪಟ್ಟ ವಿಶೇಷ ವಿಷಯಗಳ ನಿರೂಪಣೆ: ಪಾರಿಭಾಷಿಕ ಶಬ್ದಗಳನ್ನು ನಿಘಂಟಿನ ಕೊನೆಯಲ್ಲಿ ಅನುಬಂಧವಾಗಿ ಕೊಟ್ಟಿದೆ (ರೂಢಿ). ೮. [ಗಣಿತ] ಕೂಡುವುದು: ಯುತಂ, ಯುಕ್ತಂ . . . ಅನುಬಂಧಂ, ಯೋಗಂ, ಬೆರಸು, ಮಿದಿಸು . . . ಇಂತಿನಿತುಂ ಕೂಡೂದಕ್ಕೆ ಹೆಸರು (ವ್ಯವಹಾ. ೧೧-೧೨ ವ). [ಸಂ.]

**ಅನುಬಂಧಂಗಿಡು** (ಕ್ರಿ). ಸಂಬಂಧ ತಪ್ಪು; ಸಂಬಂಧವಿಲ್ಲದಂತಾಗು: ಪಲವುಕಾಲದಿಂದನುಬಂಧಂಗಿಡದೊಡಲೆರಡಸುವೊಂದೆನೆ ಗೆಡೆವಕ್ಕಿಗಳಂತೆ ಕೂಡಿ ನಲಿಯುತ್ತಿರ್ದರ್ (ಪಂರಾಮಾ. ೪-೬).
[ಅನುಬಂಧ + ಕಿಡು (< ಕೆಡು)]

**ಅನುಬಂಧಕ್ರಿಯೆ** (ನಾ). [ವ್ಯಾಕ] ಮುಖ್ಯಕ್ರಿಯಾವಾಚಕಕ್ಕೆ ಸೇರಿ ಬೇರೊಂದು ಅರ್ಥವನ್ನು ಕೊಡಲು ಬರುವ ಸಹಾಯಕ ಕ್ರಿಯೆ. ಉದಾ:— ಕಂಡುಕೊಳ್ಳು, ಸಿಕ್ಕಿಬಿಡು, ಹಾರಿಹೋಗು ಮುಂತಾದುವುಗಳಲ್ಲಿನ ಎರಡನೆಯ ಶಬ್ದ. [ಅನುಬಂಧ + ಕ್ರಿಯೆ]

**ಅನುಬಂಧಚತುಷ್ಟಯ** (ನಾ). ನಾಲ್ಕು ಬಗೆಯ ಅನುಬಂಧಗಳು: ಬಳಿಕ ಶಾಸ್ತ್ರದೊಳ್ ವಿಷಯ, ಸಂಬಂಧ, ಪ್ರಯೋಜನ, ಅಧಿಕಾರಿಗಳೆಂಬವೇ ಅನುಬಂಧಚತುಷ್ಟಯಮಾಗಿರ್ಪುದು (ವಿವೇಕ. ೧೪); ಶಾಸ್ತ್ರದ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧ ಈ ನಾಲ್ಕಕ್ಕೆ ಅನುಬಂಧ ಚತುಷ್ಟಯವೆಂದು ಹೆಸರು (ಶಿವಾಸೂ. ೧೦ ಅಡಿಟ).
[ಅನುಬಂಧ + ಚತುಷ್ಟಯ]

**ಅನುಬಂಧಿ** (ಗು). ೧. ಕಟ್ಟಲ್ಪಟ್ಟ; ಸಂಬಂಧವುಳ್ಳ: ಅನಂತಾನುಬಂಧಿ ಕ್ರೋಧಮಾನ ಮಾಯಾಲೋಭಾಭಿಭೂತರುಮಪ್ಪ ಮಹಾಪಾಪಿ ಜೀವಂಗಳ್ (ಸುಕುಮಾ. ೧೧-೪೧ ವ); ಪುಣ್ಯಂ ಸುಪುಣ್ಯಾನುಬಂಧಿಗೆ ಬಂದಂದದುವುಂ ಶುಭಂ ಸುಕೃತಮುಂ ಪಾಪಾನುಬಂಧಕ್ಕೆ ಮುಂ ಪುಗೆ ಪಾಪಕ್ಕನುಬಂಧಿ ಪಾಪಮಶುಭಂ (ರತ್ನಾಶ. ೩೮). (ನಾ). ೨. ಸಂಬಂಧವುಳ್ಳವನು; ಬಂಧು: ನಿನ್ನನ್ನೂ ನಿನ್ನ ಅನುಬಂಧಿಗಳನ್ನೂ ಕೊಂದು ಇದಕ್ಕೆ ಉತ್ತರ ಕೊಡುತ್ತೇನೆ (ವಚಭಾ. ೧೦೮); ನೀವೆಲ್ಲರೂ ನನಗೆ ಆಪ್ತರಾದ ಅನುಬಂಧಿಗಳು (ಪೈಗಂಬ. ೩೬). [ಸಂ. ಅನುಬಂಧಿನ್]

**ಅನುಬಂಧಿಕೆ** (ನಾ). ಸಂಬಂಧ; ಸಹವಾಸ; ಸ್ನೇಹ: ಕುಲಹೀನ ವನಿತಾಸ್ತನ್ಯೋಪಪುಷ್ಟನೊಳನುಬಂಧಿಕೆಯತಿಕಷ್ಟಮುಂ . . . ಅಪಹಾಸ್ಯಮುಮಪ್ಪುದು (ಜಗವಿ. ೫-೬೧ ವ); ತನ್ನ ವನಿತೆಯ ಕೊಂಡೊಯ್ವ ಶಕ್ತಿಯುಂಟವ ನಿಮ್ಮನುಬಂಧಿಕೆಯನು ಬಯಸಿ (ರಾಮವಿ. ೧೫-೨೬).
[ಸಂ. ಅನುಬಂಧಿಕಾ]

**ಅನುಬಂಧಿಸು** (ಕ್ರಿ). ೧. ಕಟ್ಟು; ಕೂಡು; ಸೇರಿಕೊಂಡು ಬರು: ಅನುಮಮಸ್ಮಜ್ಜನನೀಚರನಪ್ಪ ಲಲಿತಾಂಗದೇವನೊಳನುಬಂಧಿಸಿದ ಮೋಹಸಂಬಂಧದೊಳ್ ನಿನ್ನ ದೇವನಪ್ಪ ಲಲಿತಾಂಗಂಬೆರಸಿರ್ಪತ್ತಿರ್ವರ್ಲಲಿತಾಂಗರಂ ಕೊಂಡಾಡಿದೆಂ (ಆದಿಪು. ೩-೭೨ ವ); ಪಲತೆಱದಿಂ ಲೋಗರ್ ದಾನಲಾಭಭೋಗೋಪಭೋಗ ವೀರ್ಯಾದಿಗಳಂ ಸಲಿಸುವೆಡೆಗೆಡೆಗೆ ವಾಯ್ದುಂ ಬಟಿಸಂದೊಂಗಂತರಾಯಮನುಬಂಧಿಸುಗುಂ (ಸುಕುಮಾ. ೮-೨೬). ೨. ಅನುಸರಿಸಿ ನಡೆ; ಮುಂದುವರಿಸು: ಅಭಿಲಷಿತ ಸಿದ್ಧಿಗೆಂದಾವುದೊಂದು ಸದ್ವ್ರತಮನಾಚರಿಸುತ್ತಿರ್ದಿರದನೇ ನೀವನುಬಂಧಿಸುವುದು (ಕಾದಂಬ. ೬೨೫). [ಅನುಬಂಧ + -ಇಸು].

**ಅನುಬದ್ಧ** (ಗು). ಜೊತೆಗೆ ಕಟ್ಟಿದ; ಅನಂತರ ಸೇರಿದ; ಸಂಬಂಧಿಸಿದ: ವಿಳಸಿತಾಶಾಕಾಶಕೀರ್ತಿಯಚಳಿತಕಾರಣ ಪುಣ್ಯಮೂರ್ತಿ ವಿಮಳ ಶಿವಾಚಾರ ಪ್ರಸಿದ್ಧನು ಸಚ್ಚಿದನುಬದ್ಧ (ಬಸವು. ೩೪-೧). [ಸಂ.]

**ಅನುಬದ್ಧಕೇವಲ** (ನಾ). [ಜೈನ] ವರ್ಧಮಾನ ಜಿನನ ಅನಂತರ ಬಂದ ಗೌತಮ, ಸುಧರ್ಮಸ್ವಾಮಿ, ಜಂಬೂಸ್ವಾಮಿ ಎಂಬ ಮೂವರು ಕೇವಲ ಜ್ಞಾನಿಗಳು: ಅನುಬದ್ಧಕೇವಲರೆನಿಸಿದ

ಗೌತಮ ಸುಧರ್ಮ ಜಂಬೂಗಣಭೃದ್ವಿನುತರೆಮಗೀಗೆ ಶಾಶ್ವತಧನಮೆನಿಸಿದ ವಿಶ್ರುತ ಶ್ರುತಾರಾಧನಮಂ (ಪಂರಾಮಾ. ೧–೭). [ಅನುಬದ್ಧ + ಕೇವಲ]

**ಅನುಬದ್ಧಕೇವಲಿ, ಅನುಬದ್ಧಕೇವಳಿ** (ನಾ). [ಜೈನ] = ಅನುಬದ್ಧ ಕೇವಲ. **ಅನುಬದ್ಧಕೇವಳಿ**: ಮಳವಿಳಯನರೆನಿಸಿದ ಕೇವಳಿಗಳ ಶುದ್ಧಾನುಬದ್ಧ ಕೇವಳಿಗಳ ನಿಶ್ಚಳಿತ ಶ್ರುತಕೇವಳಿಗಳ ಚಳನಂ ನಮಗಚಳ ಸುಖಮನೀಗನವರತಂ (ಚಂದ್ರಪು. ೧–೧೩). [ಅನುಬದ್ಧ + ಕೇವಲಿ]

**ಅನುಬದ್ಧಕೇವಳಿ** 'ಅನುಬದ್ಧಕೇವಲಿ' ನೋ.

**ಅನುಬಲ** (ನಾ). ೧. ಸಹಾಯಕ ಸೈನ್ಯ: ಗ್ರಹಬಲಮಿಲ್ಲದ ಜನ್ಮಿಗನಂತೆ ಪೆರ್ಚಿಲ್ಲದೆ ಅನುಬಲಮಿಲ್ಲದ ಪೊಕ್ಕಿಱಿವನಂತೆ ಮನಂಗುಂದಿ (ಶಾಂತಿಪು. ೪–೩೦ ವ). ೨. ಬೆಂಬಲ; ಒತ್ತಾಸೆ; ಸಹಾಯ: ಗೋಗ್ರಹಣಮನೆ ನೆವಂ ಮಾಡಿ ಸುಯೋಧನನೆಂಬ ಪಾಪಕರ್ಮನ ಮಾಡಿದನುವರಂ ನಿಮ್ಮನುಬಲದೊಳಮರಿಕೇಸರಿಯ ಭುಜಬಲದೊಳಮೆಮಗಿಂಬುವಂದುದು (ಪಂಪಭಾ. ೯–೧೭ ವ); ಹರಿಯನುಬಲದಿಂ ಪಾಂಡವರರಿಯರ್ ಗೆಲಲ್ (ಗದಾಯು. ೯–೨೮). [ಸಂ.]

**ಅನುಬಿಂಬ** (ನಾ). ಪ್ರತಿಬಿಂಬ; ಪಡಿನೆಳಲು. [ಸಂ.]

**ಅನುಬಿಂಬಿಸು** (ಕ್ರಿ). ಪ್ರತಿಬಿಂಬಿಸು; ಪಡಿನೆಳಲಾಗು.
[ಅನುಬಿಂಬ + –ಇಸು೨]

**ಅನುಬೋಧ** (ನಾ). ೧. ಹಿಂದಿನ ತಿಳಿವನ್ನು ಅನುಸರಿಸಿ ಉಂಟಾದ ಜ್ಞಾನ; ತರುವಾಯ ಉಂಟಾದ ತಿಳಿವು. ೨. ಆಮೇಲೆ ಬಂದ ಯೋಚನೆ. ೩. "ಸುಗಂಧ ದ್ರವ್ಯಗಳಲ್ಲಿ ಅಡಗಿಕೊಂಡಿರುವ ಪರಿಮಳಾದಿಗಳನ್ನು ಪ್ರಕಾಶಗೊಳಿಸುವ ತೈಲಾದ್ಯುತ್ತೇಜಕ ಸಾಮಗ್ರಿಯ ಹೆಸರು" (ಸಿದ್ಧಾಂತಿ. ೧೭೮). [ಸಂ.]

**ಅನುಭ** (ನಾ). (?): ಮನೆ ಮಲಗದೆ ಅನುಭ ಸಹಿತ ಯಿಾ ಬಾಳಗೇಣಿ ಅಕ್ಕಿ ನಾಲ್ವಂಡೆಯಲು ಮು ೫ (ಸೌಇಇ. IX–ii, ೪೫೨–೨೧; 1450); ಚತುಸ್ಸೀಮೆ ಒಳಗುಳ ಸರ್ವ್ವಬಾಳು ಮನೆ ಠಾಉ ಮರ ಫಲ ಅನುಭ (ಸೌಇಇ. IX–ii, ೪೬೮–೧೯; 1472); ಅಲಿ ಮನೆ ಹಟಿ ಭಾವಿ ಕಣ ಅರ್ಥ ಕೆಱೆ ಅನುಭ ತೋಟ ಸಹಿತ ಬಿಡಾರುವಾರವ ಮಾಡಿಕೊಂಡು (ಸೌಇಇ. IX–ii, ೫೧೨–೨೪; 1520); ಕೆಳಗಣ ಬಾವಿ ಅನುಭ ಹೊಲನು ಮಣಸು ಮುಂತಾದ (ಸೌಇಇ. IX–ii, ೬೦೯–೨೪; 1544). [?]

**ಅನುಭವ** (ನಾ). ೧. ಇಂದ್ರಿಯಗಳ ಮೂಲಕ ಬರುವಜ್ಞಾನ; ಸ್ವಪ್ರಯತ್ನದಿಂದ ಅಥವಾ ಪ್ರಯತ್ನವಿಲ್ಲದೆ ಉಂಟಾಗುವ ಜ್ಞಾನ: ಅಪ್ರಮುಖ ವಸ್ತುಗಳ್ಗಲ್ಪತ್ವಮಳಿದುದಯ್ ಅನುಭವದ ಘನಮಹಿಮೆಯಿಂ (ಶ್ರೀರಾಮಾ. ೧೪೫–೯೦). ೨. ಸುಖ, ದುಃಖ, ದೈನ್ಯ, ಭಯ ಮುಂತಾದ ಭಾವಗಳನ್ನು ಪಡೆಯುತ್ತಿರುವ ಮನಸ್ಸಿನ ಸ್ಥಿತಿ: ಈ ಜ್ಞಾನದಲ್ಲಿ ಸ್ಮೃತಿ ಅನುಭವ ಎಂದು ಎರಡು ವಿಧ . . . ಅನುಭವದಲ್ಲಿ ಎರಡುವಿಧ, ಯಥಾರ್ಥಾನುಭವ ಅಯಥಾರ್ಥಾನುಭವ ಎಂದು (ಹಿಂದಸಾ. ೧೩೨). ೩. ಭೋಗಕ್ಕೆ ಒಳಪಟ್ಟಿರುವುದು; ಸ್ವಾಧೀನದಲ್ಲಿರುವುದು: ಈ ತೋಟ ಹತ್ತು ವರ್ಷದಿಂದ ನನ್ನ ಅನುಭವದಲ್ಲಿದೆ (ರೂಢಿ). ೪. ಅನುಭಾವ: ಚಿನ್ನಿಧಾನಂ ಭಾವಿಸುತ್ತಂ ಸನ್ನುತಿಗಳಂ ಮಾಡುತಂ ವಿನಯೋನ್ನತಿಯೊಳಾ ಮಾಚಿದೇವಗಳನುಭವದೊಳಿರ್ದ (ಬಸವು. ೬೧–೭೫). ೫. ಆರು ಬಗೆಯ ಭಕ್ತಿಗಳಲ್ಲಿ ಒಂದು: ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ, ಸಮರಸ (ಇವು ಆರು ಷಡ್ವಿಧ ಭಕ್ತಿಗಳು) (ಶಿವಾಸೂ. ೨ ಅಡಿಟ). [ಸಂ.]

**ಅನುಭವಜನ್ಯ** (ಗು). ಅನುಭವದಿಂದ ಉಂಟಾದ.
[ಅನುಭವ + ಜನ್ಯ]

**ಅನುಭವಣಿ** 'ಅನುಭವಣೆ' ನೋ.

**ಅನುಭವಣೆ, ಅನುಭವಣಿ** (ನಾ). ೧. ಆಡಳಿತ; ಅಧಿಕಾರ; ಸ್ವಾಮಿತ್ವ(?): ಅಂತೆನಿಸಿದ ಪೆರ್ಗ್ಗಡೆ ಪ್ರಭಾಕರಯ್ಯನನುಭವಣೆಯಲು (ಇಆ. XVIII, ೩೮–೩; 1076). ೨. ಅನುಭವ: ಅನುಭವಿಸದಂಗಜಾಗಮಮನೆ ಮಾಡಿ ಪಲರ್ಗೆ ತಾನು ಗತಿಕಾಲೋಕಯೆನಿಪಂತೆ ಮುನ್ನ ಪೇೞ್ದುದನನುಭವಣೆಗಮಾಗಮುಕ್ಕಮಳವಡೆ ಪೇೞ್ವೆಂ (ಮದತಿ. ೧–೫೫); ಅಱಿವಾದೊಡಮೇಂ ಬಂಧಂ ಪಱಿಪಡುಗುಮೆ ಕಾಲಲಬ್ಧಿ ದೊರೆಕೊಳ್ಳೆ ನೆಗಂ ತೊಱೆಯಲ್ಪಪದನುಭವಣೆಗೆ ನೆರೆಯಲೊಡಂಬಡಿವುದೊಳ್ಪು ಪುನೆಯೊಳ್ಮೆಯ್ಯಂ (ಜೀವಸಂ. ೧೧–೫೪); ಜ್ಞಾನಾವರಣಾದಿ ಕರ್ಮಂಗಳ ದ್ರವ್ಯಕ್ಷೇತ್ರಕಾಲಭಾವನಿಮಿತ್ತಮಪ್ಪ ಅನುಭವಣೆಯಂ ಕುರು[ಱು]ತ್ತು ಚಿತ್ತ ಪ್ರಣಿಧಾನಂ (ಶ್ರಾವಕಾ. ೯೦–೧೨); ಅನುಭವಣೆಯಳವಡುವ ಪರಿಯಂತನುಮುತವನೊಳಗೊಂಡು ನಿಶ್ಚಲದನುವನಂಗೀಕರಿಸಿ (ಪ್ರಭುಲೀ. ೧೮–೩೪). ೩. ಏರ್ಪಾಡು; ಸಿದ್ಧತೆ(?): ಈ ಯನುಭವಣೆಯ ಅರೊರ್ಬ್ಬರ್ ನಡೆವರವರದೆ ಧರ್ಮ (ಸೌಇಇ. XX, ೩೪–೨೧; 1053). **ಅನುಭವಣಿ**: ೧. ಆ ಮಹಾಸೇನಾಧಿಪತಿ ಶಿರಶ್ಚೇಖರನೆರಡೞು ನೂಱಱನುಭವಣಿಯೊಳಂ ಬನವಾಸೆನಾಡಧಿಕಾರದೊಳಂ ಕೊಣ್ಡೆ ನಾಡಾಳ್ಕೆಯೊಳಂ . . . ಅಗ್ರಗಣ್ಯನುಮಾಗಿ (ಸೌಇಇ. XI–ii, ೧೪೭–೧೨; 1099). [< ಸಂ. ಅನುಭಾವನಾ]

**ಅನುಭವದಾರ** (ನಾ). ೧. ಅನುಭವಿಸುತ್ತಿರುವವನು; ಹಿಡುವಳಿಯನ್ನು ಹೊಂದಿರುವವನು: ನಾನು ಈ ಜಮಿಾನಿನ ಅನುಭವದಾರ (ರೂಢಿ). ೨. ಅನುಭವವನ್ನುಳ್ಳವನು.
[ಅನುಭವ + –ದಾರ್ಸ]

**ಅನುಭವಭಕ್ತಿ** (ನಾ). ಅನನ್ಯವಾದ ಅನುಭವದಿಂದ ಕೂಡಿದ ಭಕ್ತಿ: ಶಿವನ ಸ್ಪರ್ಶರೂಪವನ್ನೇ ಅನುಭವಿಸುತ್ತ ಅವನಿಗಾಗಿಯೇ ಬಾಳಬೇಕು. ಇದುವೇ ಅನುಭವ ಭಕ್ತಿ (ಮಹಾಸಾ. ೫೩ ಪ್ರಸ್ತಾ); ಪ್ರಸಾದಿಸ್ಥಲಗತವಾದ ಅವಧಾನಭಕ್ತಿಯೇ ಸ್ವಾನುಭವದಿಂದ (ತನ್ಮಾತ್ಮರೂಪದಿಂದ ಅನನ್ಯವಾದ ಶಿವನ ಅನುಭವದಿಂದ) ಅನುಭವಭಕ್ತಿಯೆಂದೆನಿಸಿಕೊಂಡಿತು (ಶಿವಾಸೂ. ಅಡಿಟ). [ಅನುಭವ + ಭಕ್ತಿ]

**ಅನುಭವಭವ** (ಗು). ೧. ಅನುಭವದಿಂದ ಉಂಟಾದ, —ಹುಟ್ಟಿದ. (ನಾ). ೨. ಅನುಭವದಿಂದ ಉಂಟಾದುದು, —ಹುಟ್ಟಿದುದು: ಭಾವಂ ಬಹಿರರ್ಥಸಮುದ್ಭಾವಿತಮನುಭವಭವಂ ವಿಭಾವಂ (ಕಾವ್ಯಾವ. ೭೯೭). [ಅನುಭವ + ಭವ]

**ಅನುಭವಮಂಟಪ** (ನಾ). [ವೀಶೈ] ಕಲ್ಯಾಣ ಪಟ್ಟಣದಲ್ಲಿ ತತ್ತ್ವಜಿಜ್ಞಾಸೆಗಾಗಿ ಶಿವಶರಣರು ನೆರೆಯಲು ಬಸವಣ್ಣನವರು ಏರ್ಪಡಿಸಿದ್ದ ಸಭಾಸ್ಥಾನ: ಚೆನ್ನಬಸವನೆಂಬ ಪ್ರಸಾದಿಯಂ ಪಡೆದು ಅನುಭವಮಂಟಪವನನುಮಾಡಿ ಅನುಭವಮೂರ್ತಿಯಾದ ನಮ್ಮ ಬಸವಯ್ಯನು (ನೀಲವ. ೧); ಬಸವಣ್ಣನವರ ಗೃಹಾಂತಸ್ಥದನುಭವಮಂಟಪದೊಳೀಗ ಹರಭಕ್ತರುಂ ನೀಲಲೋಚನೆಯುಂ (ಚಬಪು. ೪–೧೮); ಬಸವರಾಜನನು ಭವಮಂಟಪವ ನೋಡುತಂ (ಪ್ರಭುಪು. ೭–೨೭೭). 'ಅನುಭಾವಗೋಷ್ಠಿ' ಪರಾ. [ಅನುಭವ + ಮಂಟಪ]

**ಅನುಭವವೇದ್ಯ** (ಗು). ಅನುಭವದಿಂದ ಗೊತ್ತಾಗುವ, —ತಿಳಿಯುವ: ಕೆತೆಯಲ್ಲಿಯ ಪ್ರತಿಮೆಗಳ ವ್ಯಂಜನಾಶಕ್ತಿ ಬೇರೆ ಬೇರೆ ಅರ್ಥಗಳ ಕಡೆಗೆ ಓಡುತ್ತಿರುವದರಿಂದ ಅಪರಿಚಯ ಆತ್ಮದ ನೋವಾಗಿ ಅನುಭವವೇದ್ಯವಾಗುವಂತೆ ಮೂಡುವುದಿಲ್ಲ (ಹೊಸಕ್ಷಿ. ೨೮೫).
[ಅನುಭವ + ವೇದ್ಯ]

**ಅನುಭವಶಾಲಿ** (ನಾ). ಅನುಭವವನ್ನುಳ್ಳವನು.
[ಸಂ. ಅನುಭವಶಾಲಿನ್ (ಅನುಭವ + ಶಾಲಿನ್)]

**ಅನುಭವಸಾಕ್ಷಿಕ** (ನಾ). ಅನುಭವವೇದ್ಯವಾದದ್ದು; ಅನುಭವದಿಂದ ತಿಳಿಯಬಹುದಾದದ್ದು: ಕಾವ್ಯದಿಂದ ದೊರೆಯುವ ಲೋಕೋತ್ತರವಾದ ಆಹ್ಲಾದವು ಅನುಭವಸಾಕ್ಷಿಕವಾದದ್ದು (ಭಾರವಿಾ. ೧೫೫). [ಅನುಭವ + ಸಾಕ್ಷಿಕ]

**ಅನುಭವಸಿದ್ಧ** (ಗು). ಅನುಭವದಿಂದ ನಿಶ್ಚಿತವಾಗಿರುವ,—ಗೊತ್ತಾಗಿರುವ: ನಿನಗೊಂದು ಅನುಭವಸಿದ್ಧವಾದ ಮಾತು ಹೇಳುತ್ತೇನೆ (ಮುಂಬಯಿ. ೪–೩೮). [ಅನುಭವ + ಸಿದ್ಧ]

**ಅನುಭವಸುಖಿ** (ನಾ). ಅನುಭವದ ಮೂಲಕ ಸುಖಪಡೆದವನು: ಗುಹೇಶ್ವರಾ ನಿಮ್ಮ ನಿಲವನನುಭವಸುಖಿ ಬಲ್ಲ (ಅವಚಂ. ೧–೨). [ಅನುಭವ + ಸುಖಿ]

**ಅನುಭವಸ್ಥ** (ನಾ). ಅನುಭವವುಳ್ಳವ್ಯಕ್ತಿ; ಪಳಗಿದ ವ್ಯಕ್ತಿ; ನುರಿತ ವ್ಯಕ್ತಿ: ಅವನ ಉಪಚಾರಕ್ಕಾಗಿ ಅನುಭವಸ್ಥರಾದ ದಾದಿಯರನ್ನು ನೇಮಕಮಾಡಿ (ಮಣಿಸ. ೪೨). [ಸಂ.]

**ಅನುಭವಿ** (ನಾ). ೧. ಅನುಭವವುಳ್ಳ ವ್ಯಕ್ತಿ: ತಾನು ತನ್ನ ಗಂಡನಿಗಿಂತಲೂ ಹೆಚ್ಚು ಅನುಭವಿ (ವಾತ್ಸಲ್ಯ. ೬೩). ೨. ಆತ್ಮಜ್ಞಾನಿ: ಶಿವರಹಸ್ಯಾಗಮ ನಿಗಮುದನುಭವಿಗಳೆನಿಸಿ ವಿನೋದಿಸುವರುಂ ಶಿವಗಣಾವಳಿಯಿಂತು ಸುಖಗೋಷ್ಠಿಯೊಳಿರಲು (ಬಸವು. ೪–೯). [ಸಂ. ಅನುಭವಿನ್]

**ಅನುಭವಿಕ** (ನಾ). = ಅನುಭವಸ್ಥ: ಮಂಗಳಾ ಹಿಂದಿನ ಅನುಭವಿಕ ಮನುಷ್ಯ (ಜಮಿನ್ದಾ. ೬೨); ಹಿಂದಕ್ಕೆ ಎಲ್ಲಿಯೋ ಕೇಳಿದ ಅನುಭವಿಕರ ಮಾತು ಅವನಿಗೆ ನೆನಪಾಯಿತು (ಅಪನಾ. ೨೨೫). [ಸಂ.]

**ಅನುಭವಿಸು** (ಕ್ರಿ). ೧. (ಸುಖ, ದುಃಖ ಮುಂತಾದುವನ್ನು) ಪಡೆ; ಹೊಂದು; ಭೋಗಿಸು: ದೇವಲೋಕದ ಸುಖಮನನುಭವಿಸಿ ಬಂದಿಲ್ಲಿ ನೀಂ ಸಂಪ್ರತಿ ಚಂದ್ರಗುಪ್ತನಾಗಿ ಪುಟ್ಟಿದೆ (ವಡ್ಡಾರಾ. ೮೮–೩೧); ಸಾಮ್ರಾಜ್ಯ ಸುಖಮನನುಭವಿಸುತ್ತಿರೆ (ಆದಿಪು. ೩–೬೫ ವ); ಬಳಿಕಲಾ ದಮಯಂತಿ ಭಾರಿಯ ಬಳಲಿಕೆಯನನುಭವಿಸಿ ತಂದೆಯ ನಿಳಯವನು ಸಾರಿದಳು (ತೊರರಾ. ೩–೨–೧೫). ೨. ಕಷ್ಟಪಡು (ಉಕ). [ಅನುಭವ + -ಇಸು₃]

**ಅನುಭಾಗ** (ನಾ). [ಜೈನ] ಕರ್ಮಪುದ್ಗಲಗಳಿಗಿರುವ ಸ್ವಗತ ಸಾಮರ್ಥ್ಯವಿಶೇಷ; "ಆತ್ಮನಿಗೆ ಕರ್ಮಗಳ ಫಲಕೊಡುವ ಶಕ್ತಿ" (ಆದಿಪು. ಕೋಶ); ಬಾದರ ಸಾಂಪರಾಯ ಕೃಷ್ಣರೂಪಾನುಭಾಗವ ನನಂತಗುಣ ಹಾನಿರೂಪದಿಂ ಕುಂದಿಸಿ (ಆದಿಪು. ೧೦–೧೮ ವ). [ಸಂ.]

**ಅನುಭಾವ** (ನಾ). ೧. ಭಗವಂತನ ಸಾಕ್ಷಾತ್ಕಾರಮಾಡಿಕೊಳ್ಳುವುದು; ಪರಮಾತ್ಮನೊಡನೆ ನೇರವಾದ ಸಂಪರ್ಕ ಪಡೆದುಕೊಳ್ಳುವುದು: ಅನುಭಾವದಿಂದ ಹುಟ್ಟಿತ್ತು ಲಿಂಗ, ಅನುಭಾವದಿಂದ ಹುಟ್ಟಿತ್ತು ಜಂಗಮ ಅನುಭಾವದಿಂದ ಹುಟ್ಟಿತ್ತು ಪ್ರಸಾದ, ಅನುಭಾವದನುವಿನಲ್ಲಿ ಗುಹೇಶ್ವರಲಿಂಗವನುಪಮಸುಖಿ (ಅವಚಂ. ೩೯–೧೬೦); ಕೂಡಲಸಂಗನ ಶರಣರ ಅನುಭಾವವಿಲ್ಲದವರು ಎಲ್ಲಿದ್ದರೇನು? ಎಂತಾದರೇನು? (ಬಸವ. ೧೨೨); ನಿಮ್ಮ ಒಡತಣ ಅನುಭಾವದಿಂದ ಗುರುಮುಖ ಸಾಧ್ಯವಾದುದಯ್ಯ (ಅವಚಂ. ೨೩೫–೧೦೬೪). ೨. [ನಾಟ್ಯ] ಮನಸ್ಸಿನ ಭಾವವನ್ನು ಅನುಸರಿಸಿ ಶರೀರದಲ್ಲಿ ಉಂಟಾಗುವ ವಿಕಾರ; ಅದನ್ನು ತೋರಿಸುವ ಅಂಗಚೇಷ್ಟೆ; ಅಭಿನಯ: "ರಸ ಸದ್ಭಾವವಿಹಿತಾಭಿನಯಮನುಭಾವಂ" (ಕಾವ್ಯಾವ. ೬೯೭); ಕಲಾ ಪ್ರಪಂಚದಲ್ಲಿ 'ಭಾವ'ದ ಕಾರಣಗಳನ್ನು 'ವಿಭಾವ' ಗಳೆಂದೂ ಕಾರ್ಯಗಳನ್ನು 'ಅನುಭಾವ' ಗಳೆಂದೂ ಕರೆಯುವುದೇ ಸಂಪ್ರದಾಯ (ಭಾರವಿಾ. ೩೪೯); ಸ್ಥಾಯಿಭಾವಗಳ ಜೊತೆಯಲ್ಲಿ ಬರುವ ಇತರ ಸಣ್ಣ ಭಾವಗಳಿಗೆ ಸಹಚಾರಿ ಅಥವಾ ಸಂಚಾರಿ ಭಾವಗಳೆಂದೂ ಅವುಗಳ ಫಲರೂಪವಾಗಿ ಹೊರಗೆ ತೋರತಕ್ಕ ಚಿಹ್ನೆ, ನಡೆಯತಕ್ಕ ಕಾರ್ಯ ಮುಂತಾದುವುಗಳಿಗೆ 'ಅನುಭಾವ' ಗಳೆಂದೂ ಹೆಸರು (ಕೈಪಿಡಿ. ೧೮೯). [ಸಂ.]

**ಅನುಭಾವಗೋಷ್ಠಿ** (ನಾ). = ಅನುಭವಮಂಟಪ: ಅನುಭಾವ, ಅನುಭಾವಿಗಳು . . . ಅನುಭಾವಗೋಷ್ಠಿ – ಈ ಬಗೆಯ ಶಬ್ದಗಳು ವಚನಗಳಲ್ಲಿ ಪದೇ ಪದೇ ಬರುತ್ತಿವೆ (ಶಿವಾಕೋ. ೪). [ಅನುಭಾವ + ಗೋಷ್ಠಿ]

**ಅನುಭಾವಭಕ್ತಿ** (ನಾ). = ಅನುಭವಭಕ್ತಿ: ಪ್ರಾಣಲಿಂಗಿಯ ಸ್ಥಲ. ಇವನದು ಅನುಭಾವಭಕ್ತಿ. ಪ್ರಾಣಲಿಂಗಿಗೆ 'ಫಲರೂಪ' ವೆಂದು ವಚನಕಾರರು ಹೇಳಿದ್ದಾರೆ (ನವ್ಯಕಾ. ೯೦). [ಅನುಭಾವ + ಭಕ್ತಿ]

**ಅನುಭಾವಶಾಸ್ತ್ರ** (ನಾ). ಅತೀಂದ್ರಿಯ ಅನುಭವವನ್ನು ವಿವರಿಸುವ ಶಾಸ್ತ್ರ: ಪರಿಪಾಕವಿಲ್ಲದೆ ಪರಿಣಾಮವಿಲ್ಲ – ಈ ಮಾತನ್ನು ಕಾಮಶಾಸ್ತ್ರವೇನು, ಕಾವ್ಯಶಾಸ್ತ್ರವೇನು, ಅನುಭಾವಶಾಸ್ತ್ರವೇನು, ಎಲ್ಲವೂ ಸಾರಿ ಸಾರಿ ಹೇಳುವವು (ಸಾಹಿವಿ. ೮೯). [ಅನುಭಾವ + ಶಾಸ್ತ್ರ]

**ಅನುಭಾವಿ** (ನಾ). ೧. ಅನುಭವವುಳ್ಳವನು: ಎಲ್ಲಜಲಿ ಅನುಭಾವಿಯಾದೊಡೇನು? ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ (ಬಸವ. ೧೮೮); ಆ ಮಾತು ಅವರಂತಹ ವ್ಯವಹಾರಚತುರರಾದ ಅನುಭಾವಿಗಳಿಗೆ ವಿರುದ್ಧವಾಗಿತ್ತು (ಹಳ್ಳಿಹಾ. ೪೮); ಅರಿತು ನಡೆದುಕೊಳ್ಳಬೇಕೆಂದು ಅನೇಕ ಅನುಭಾವಿಗಳು ಹೇಳಿದ್ದಾರೆ (ಗಾಳಿಗು. ೬೫). ೨. ಅಪರೋಕ್ಷಾನುಭವವುಳ್ಳವನು; ಸಾಕ್ಷಾತ್ಕಾರ ಹೊಂದಿದವನು: ಬೇಕಾದೊಡೀ ಹದನ ನಿಗಮುದಲಿ ಶಾಸ್ತ್ರದಲಿ ಅನುಭಾವಿಗಳ ನುಡಿಯಲಿ ಕೇಳುವದು (ಪ್ರಭುಲೀ. ೬–೩೯). ೩. [ನ್ಯಾಯಶಾ] ಪ್ರತ್ಯಕ್ಷ ಸಾಕ್ಷಿ. [ಸಂ. ಅನುಭಾವಿನ್]

**ಅನುಭಾವಿಸು** (ಕ್ರಿ). ಚಿಂತಿಸು; ಭಾವಿಸು; ಆಲೋಚಿಸು: ಮುಂದಕೆ ತನಗೆ ಬರ್ಪ ಅಪಕೀರ್ತಿಯನೊಂದಿನಿಸನುಭಾವಿಸದೆ (ಪ್ರಭಂಜ. ೨–೪೬); ಗರ್ಭಿತಗೃಹ ದಿವ್ಯಸ್ಥಳ ಅವಧಾನದ ನಿಷ್ಠೆ; ಅನುಭಾವಿಸಿ ಮಾಡಲ್ಲಿಯೆ ನವಲಿಂಗ ಪ್ರತಿಷ್ಠೆ (ಜೀವಲ. ೮೬). [ಅನುಭಾವ + -ಇಸು₃]

**ಅನುಭಾಷಣ** (ನಾ). (ಪ್ರಕೃತ ವಿಷಯಕ್ಕೆ) ಅನುಕೂಲವಾಗಿ ಮಾಡುವ ಭಾಷಣ. 'ಅನುಭಾಷಿಗ' ಪರಾ. [ಸಂ.]

**ಅನುಭಾಷಿಗ** (ನಾ). (ಪ್ರಸಕ್ತ ವಿಷಯಕ್ಕೆ) ಅನುಕೂಲವಾಗಿ ಮಾತನಾಡುವವನು: ಮುಜುದೆವಸಂ ಮುನ್ನಿನ ಚಕ್ರೋತ್ಪತ್ತಿ ಪೂಜಾನುಭಾಷಿಗನಪ್ಪ ಪ್ರಧಾನಂ ನಿಂದಿರ್ದು . . . ಚಕ್ರಾಯುಧನಂ ಬಿನ್ನಪಂಗೆಯ್ಯಲ್ವೇಟ್ಟುದುಂ (ಶಾಂತಿಪು. ೧೦–೧೨೨ ವ). [ಅನುಭಾಷಣ + -ಇಗ₁]

**ಅನುಭುಕ್ತ** (ಗು). ಅನುಭವಿಸಿದ; ಭೋಗಿಸಿದ; ಸವಿದ: ಮನದೊಳ್ ಪೂರ್ವಾನುಭುಕ್ತಪ್ರಿಯಲಲನೆಯ ಲಾವಣ್ಯಮಂ ರೂಪಮಂ ಯೌವನಮಂ (ಮಲ್ಲಿಪು. ೧೧–೫೨). [ಸಂ.]

**ಅನುಭೂತ** (ಗು). ೧. ಅನುಭವಿಸಿದ; ಕಂಡು ಕೇಳಿದ: ಮತ್ತಮವರನೆ ತಿಳಿಪುವ ಬಗೆಯಿಂ ದೃಷ್ಟಶ್ರುತಾನುಭೂತ ಕಥೆಗಳಂ ತದನ್ವಯ ಸಂಬಂಧಿಗಳನಿಂತೆಂದು ಪೇಟಲ್ಬಗುಳ್ದಂ (ಆದಿಪು. ೨–೧೧ ವ). ೨. ಈ ಹಿಂದಿನ; ಹಿಂದಿನ. 'ಅನುಭೂತಕ್ಷಣ', 'ಅನುಭೂತಪೂರ್ವ' ಪರಾ.

ಅನುಭೂತಂ ಮಾಡು = ತಾಳಿಕೊಳ್ಳು; ಸೈರಿಸು; ತಡೆದುಕೊ: ಬಾಯ್ಗೆವಂದಂದದೊಳಾ ದುರಾತ್ಮನಾ ಮಹಾತ್ಮನನಪ್ರತ್ಯಾಖ್ಯಾನಕ್ರೋಧ ಕಷಾಯೋದಯಮೂನಗರ್ವದಿನವಮಾನಿಸಿ ತಿರಸ್ಕರಿಸಿಯುಮಗ್ನಿಭೂತಿಯನುಭೂತಂ ಮಾಡಿ (ಸುಕುಮಾ. ೪–೨೮ ವ). **ಅನುಭೂತವಾಗು** = ಅನುಭವಕ್ಕೆ ಬರು; ಪ್ರತ್ಯಕ್ಷವಾಗು: ಯೋವೈ ಭೂಮಾತತ್ ಸುಖಮೆಂಬ ಋಷಿವಾಣಿ ಅನುಭೂತವಾಗುತಿರೆ (ಗಣೇಶ. ೩೫–೯). [ಸಂ.]

**ಅನುಭೂತಕ್ಷಣ** (ನಾ). ಹಿಂದೆ ಅನುಭವಿಸಿದ ಕ್ಷಣ; ಕಳೆದು ಹೋದ ಅಥವಾ ಹಿಂದಿನ ಕ್ಷಣ: ಅನುಭೂತಕ್ಷಣಮುತ್ತರಕ್ಷಣಮುಪಾರ್ಥಂ ವರ್ತಮಾನಕ್ಷಣಂ ತನಗಕ್ಕುಂ ಸುಖಹೇತುವೆಂದೊಡೆನಿತಾನುಂ ಕಾಲಮಿರ್ದುಂ ಪ್ರಯೋಜನಮೇಂ (ಮಲ್ಲಿಪು. ೧೩-೧೨೫). [ಅನುಭೂತ + ಕ್ಷಣ]

**ಅನುಭೂತಪೂರ್ವ** (ನಾ). ಹಿಂದೆ ಅನುಭವಿಸಿದುದು; ಈ ಮೊದಲೇ ಕಂಡು ಕೇಳಿ ಅನುಭವಿಸಿದುದು: ಅದು ನಮ್ಮನಿಬರ ಭವಾಳಿಯಿಂದೆ ನಮಗನುಭೂತಪೂರ್ವಂ (ಆದಿಪು. ೧೬-೫೭ ವ). [ಅನುಭೂತ + ಪೂರ್ವ]

**ಅನುಭೂತಿ** (ನಾ). ೧. ಅನುಭಾವ; ದರ್ಶನ; ಸಾಕ್ಷಾತ್ಕಾರ: ತಗುಳ್ದುದಾ ಅಲೌಕಿಕಂ ನೋಳ್ಪರ್ಗಮನುಭೂತಿ (ಶ್ರೀರಾಮಾ. ೩೭-೨೬೩); ಆತ್ಮನನ್ನು ಶರೀರವೆಂತಲೇ ಭಾವಿಸೋಣ; ಆಗಲೂ ಆಂತರಿಕ ಅನುಭೂತಿಯಿಂದ ಕೂಡಿದ ಶರೀರವನ್ನು ಶರೀರವಿಜ್ಞಾನದ ಸಂಶೋಧನೆಗೆ ಗುರಿಪಡಿಸಲು ಸಾಧ್ಯವಿಲ್ಲ (ಜೀವಾತ್ಮ. ೬೨). ೨. ಸ್ವಂತ ಅನುಭವಕ್ಕೆ ಬಂದಿರುವ ತಿಳಿವು, —ಜ್ಞಾನ. ೩. ಮನಸ್ಸಿನ ನಾಲ್ಕು ಬಗೆಯ (ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ) ವೃತ್ತಿಗಳಲ್ಲಿ ನಾಲ್ಕನೆಯದು: ಬಾರ್ಕಲೆಯು (notion) ಅನುಭೂತಿಯೆಂದು ಕರೆಯುವ ವಸ್ತುವೇ ನಾವು ಅಹಂಕಾರವೆಂದು ಕರೆಯುವ ನಾಲ್ಕನೆಯ ವೃತ್ತಿ (ಜೀವಾತ್ಮ. ೪೬). [ಸಂ.]

**ಅನುಭೋಕ್ತವ್ಯ** (ಗು). ಅನುಭವಿಸಲೇಬೇಕಾದ: ಏನನುಸುರುವೆನೆನ್ನ ಜನ್ಮಫಲಾನುಭೋಕ್ತವ್ಯಕ್ಕೆ ಮಿಗೆ ಸಂಧಾನವಾಯಿತು ಬದುಕಿದೆಂ (ಬಸಪು. ೩-೨೨); ಕರೆದುಕೊಂಡು ಹೋಗುವುದರಲ್ಲಿ ಆಶೆ ಕಾಣುತ್ತದೆ, ಅಪಾಯವೂ ಕಾಣುತ್ತದೆ . . . ಎರಡು ಸಂಕಟಗಳಲ್ಲಿ ಒಂದು ಈಗ ಯಾವುದು ಅನುಭೋಕ್ತವ್ಯ? (ಶಾಂತಲಾ. ೩೪೫). [ಸಂ.]

**ಅನುಭೋಕ್ತೃ** (ನಾ). ಅನುಭವಿಸುವವನು. [ಸಂ.]

**ಅನುಭೋಗ** (ನಾ). ೧. ಸುಖದುಃಖಾದಿಗಳ ಅನುಭವ: ನಿಜಾಂತರ್ಮಂದಿರದೊಳಂ ತನ್ನ ಸತಿಯುಂ ತಾನು ಸುರತಸುಖಾನುಭೋಗದಲಿ (ಬಸಪು. ೪೬-೨೦). ೨. ಸ್ವಾಮ್ಯಕ್ಕೆ ಒಳಪಟ್ಟಿರುವುದು; ಅನುಭವದಲ್ಲಿರುವುದು: ಈ ತೋಟ ಕಳೆದ ಹತ್ತು ವರ್ಷಗಳಿಂದಲೂ ನನ್ನ ಅನುಭೋಗದಲ್ಲಿದೆ (ರೂಢಿ). ೩. ಮಾಡಿದ ಸೇವೆಗಾಗಿ ಅನುಭವಿಸಿಕೊಂಡು ಬರುವಂತೆ ಕೊಟ್ಟ ದತ್ತಿ. [ಸಂ.]

**ಅನುಭೋಗದಾರ** (ನಾ). ಅನುಭವಿಸುವವನು; ಹೊಂದಿರುವವನು; ಮಾಲಿಕ (ಕಿಸಂಗ್ಲಾ. ೪೭). [ಅನುಭೋಗ + -ದಾರ್$_2$]

**ಅನುಭೋಗಿ** (ನಾ). ೧. ಅನುಭವವುಳ್ಳವನು. ೨. ಅನುಭವಿಸುವವನು; ಹಕ್ಕಿರುವವನು: ಉತ್ಪನ್ನ ಹಿಡಿತದ ಮೂಲಕ ಬೆಲೆ ಏರಿಸಿ ಅನುಭೋಗಿಗಳಿಗೆ ತೊಂದರೆ ಮಾಡದೆ, ಅನುಭೋಗಿಗಳನ್ನೂ ಸಮಭಾಗಿಗಳಾಗಿ ಸೇರಿಸಿಕೊಂಡು (ಅಂತಸಂ. ೨೦೫). [ಸಂ. ಅನುಭೋಗಿನ್]

**ಅನುಭೋಗಿಸು** (ಕ್ರಿ). ೧. ಅನುಭವಿಸು; ಭೋಗಿಸು: ಕರ್ಮಫಲ ಪೋಗದೆಂತುಂ ಮುನ್ನ ತಾವನುಭೋಗಿಸದೆ (ಬಸಪು. ೩೪-೧೨); ಹೆಣ್ಣುಮಕ್ಕಳಿಗೂ ಗಂಡುಮಕ್ಕಳಿಗೂ ಚಿಕ್ಕಂದಿನಲ್ಲಿ ಚೆನ್ನಾಗಿ ವಿದ್ಯೆ ಕಲಿಸುತ್ತಾರೆ. ಆದ್ದರಿಂದ ಅವರು ಸುಖವನ್ನು ಅನುಭೋಗಿಸುತ್ತಾರೆ (ಮುಂಬಯಿ. ೩-೩೩); ಇನ್ನೆಷ್ಟು ದಿನ ಈ ಯಾತನೆಗಳನ್ನನುಭೋಗಿಸುವೆ? (ಅಂಬಿಕೆ. ೩೦). ೨. ಕಷ್ಟಪಡು (ಉಕ). [ಅನುಭೋಗ + -ಇಸು$_3$]

**ಅನುಮತ** (ಗು). ೧. ಒಪ್ಪಿದ; ಸಮ್ಮತಿ ಹೊಂದಿದ; ಅಪ್ಪಣೆ ಪಡೆದ. (ನಾ). ೨. ಒಪ್ಪಿಗೆ; ಸಮ್ಮತಿ; ಅಪ್ಪಣೆ: ಸಂದುದು ನಾಕಿಗನನುಮತದಿಂ (ಧಂಮೋಂಬು. ೨-೧೪೧); ಸಂಚರಿಸುವುದನುಮತದೊಳ್ ಬಲ್ಲರಿನೇಕಾರಮುದೆಕಾರಮುವಧಾರಣೆಯೊಳ್ (ಶಮದ. ೩೧೧); ಬಸವನನುಮತದಿನ್ನಗರಿಯಂ ಶೋಭನಾರ್ಥಮಲಂಕರಿಸವೇಳ್ದ (ಬಸಪು. ೪-೨). ೩. ಇಷ್ಟ; ಪ್ರಿಯ. ೪. ಅಭಿಪ್ರಾಯ: ನಕುಲ ನೀ ಹೇಳನುಮತವ ನಿನ್ನುಕುತಿ ಸಮರವೊ ಸಾಮವೋ (ಕುವ್ಯಾಉ. ೬-೧೩). [ಸಂ.]

**ಅನುಮತಿ** (ನಾ). ೧. = ಅನುಮತ ೨: ಇಂತಾಚಾರ್ಯರ ಅನುಮತಿ ಇಲ್ಲದೆ ಸಮ್ಮತ ವಿಷ್ವಕ್ಸೇನರನೊಲ್ಲದೆ (ಗಣೇಶ. ೧-೧೫); ಸರ್ಕಾರದ ಖರ್ಚಿನಲ್ಲಿಯೇ, ಒಂದು ಆರು ತಿಂಗಳು ಪ್ರವಾಸಮಾಡಿ ತಮ್ಮ ಸಂಶೋಧನೆಗಳ ಪ್ರಚಾರಮಾಡಬಹುದೆಂದು ಅನುಮತಿ ದೊರೆಯಿತು (ಸಸ್ಯಕ. ೯೯); ತಾವು ಕೃಪೆಯಿಟ್ಟು ಅಣ್ಣ ಅತ್ತಿಗೆಯರನ್ನಾದರೂ ಒಂದು ತಿಂಗಳು ಇಲ್ಲೇ ಇರಲು ಅನುಮತಿಕೊಡಿ (ಪ್ರತಾಪ. ೬೬). ೨. ಉದಯ ಸಮಯದಲ್ಲಿ ಒಂದು ಕಲೆಯಷ್ಟು ಕಡಮೆಯಾಗಿರುವ ಚಂದ್ರನನ್ನುಳ್ಳ ಹುಣ್ಣಿಮೆ: "ಚಂದ್ರಂ ಕುಂದಿದ ಹುಣ್ಣಿಮೆ ಅನುಮತಿಯೆಂಬುದು" (ಹಲಾಯು. ೧೯-೧೧೨). [ಸಂ.]

**ಅನುಮತಿವಿರತ** (ನಾ). [ಜೈನ] ಮನೆಯಲ್ಲಿ ಸಂಸಾರ ದೊಡ್ಡದಿದ್ದರೂ, ಮನೆಯ ಯೋಗಕ್ಷೇಮ ಸಾಧನೆಯನ್ನು ಮಕ್ಕಳು ಮರಿಗೆ ವಹಿಸಿ, ಯಾವ ಕೆಲಸಕ್ಕೂ ತನ್ನ ಅನುಮತಿ ಅವರಿಗೆ ಅವಶ್ಯಕವಿಲ್ಲದಂತೆ ಕೇವಲ ಅತಿಥಿಯಂತೆ ವರ್ತಿಸುವ ಗೃಹಸ್ಥ: ಇಂತು ದರ್ಶನಿಕಂ ವ್ರತಿಕಂ . . . ಅನುಮತಿವಿರತಂ ಉದ್ದಿಷ್ಟವಿರತನೆಂದಿಂತು ಪನ್ನೊಂದು ವಿಕಲ್ಪಮನುಳ್ಳ ಶ್ರಾವಕರೊಳ್ (ಸುಕುಮಾ. ೬-೩೭ ವ). [ಅನುಮತಿ + ವಿರತ]

**ಅನುಮತಿಸು** (ಕ್ರಿ). ೧. ಒಪ್ಪು; ಸಮ್ಮತಿಸು; ಅಪ್ಪಣೆಕೊಡು: ಅತಿಥಿಪೂಜಾವಸರದೊಳು ನಿಜಸುತರು ತಾವೊಡನುಂಬರ್ ತಾವೊಲಿದನುಮತಿಸಿ ಪುರುಷರು ನಿನ್ನ ಕೈಯಂತಾಡುವುದು ಸಟ್ಟೆ (ಬಸಪು. ೨೪-೩೧); ವನವಾಸಬಂಧುವೀ ತರುವೃಂದಂ ಕೇಳುತನುಮತಿಸಿ ಕಲಕಂಠಾಲಾಪದನೆವದೆ ನುಡಿವುದಿದೊ ಪಡಿಮಾತಂ (ಶಾಕುಂತ. ೫೩). ೨. ಒಪ್ಪುವಂತೆ ಮಾಡು: ಹಿರಿಯ ಭಂಡಾರಾಧಿಪತ್ಯದೊಳಿರಲನುಮತಿಸಿ ಸಕಲ ರಾಜ್ಯೋದ್ಧರಣಕರಣಮನಿತ್ತು (ಬಸಪು. ೫-೧೯).
[ಅನುಮತ + -ಇಸು$_3$]

**ಅನುಮನ** (ನಾ). = ಅನುಮಾನ ೩: ತನಯ ಕೇಳ್ನಿಶ್ಚಯದ ನುಡಿಯಿದು ಅನುಮನವು ತಾನಿಲ್ಲ ಯಿಜಗಜನಿತಜೀವರುಯಿಲ್ಲ ತ್ರಿಗುಣಾತ್ಮಕವೆನಿಸುತಿರುತಿಹರು (ಜ್ಞಾನಸಿಂ. ೩೦-೨). [< ಸಂ. ಅನುಮಾನ]

**ಅನುಮನಸು** (ನಾ). ನಿಶ್ಚಯವಿಲ್ಲದೆ ಹಿಂದು ಮುಂದು ನೋಡುವುದು: ನಿನಗೆ ಅಭಯವ ಕೊಡುವೆ ಕೇಳು ಅನುಮನಸು ನೀ ಮಾಡಬ್ಯಾಡ ಯನಗೆ ತೋರಿದ ನಿಜವ ನಿನಗೆ ಘನದಿ ಭಾಷೆಯ ಕೊಡುವೆನು (ಗೋಹಾಡು. ಪು. ೨೮). [ಅನು ? + ಮನಸು]

**ಅನುಮರಣ** (ನಾ). ಸಹಗಮನ. [ಸಂ.]

**ಅನುಮಾಡಿಸು** (ಕ್ರಿ). ಸಿದ್ಧಪಡಿಸು: ಉರಿಯ ಬಾಣವ ತೊಡಚಿಕುಂಡದ ಉರಿಯನನುಮಾಡಿಸಿತು ××× ನಯ ಹಿರಿಯ ಧರ್ಮಜ ಭೀಮರಿಗೆ ನಮಿಸಿದನು ಮನದೊಳಗೆ . . . ಕಲಿಪಾರ್ಥ (ಕುವ್ಯಾದ್ರೋ. ಒರಿಇ. ಪರಿ ೨೯೭). [ಅನುಮಾಡು + -ಇಸು$_3$]

**ಅನುಮಾಡು** (ಕ್ರಿ). ೧. ಅಣಿಮಾಡು; ಸಿದ್ಧಗೊಳಿಸು; ಹದಗೊಳಿಸು: ರಂಗಮಂಟಪದೊಳು ನಮಸ್ಕಾರಮಂ ಮಾಡಿ ಲಿಂಗಕ್ಕೆ ಪರಿಪರಿಯ ಪೂಜೆಗೆಂದನುಮಾಡಿ (ಅನೀರ. ೮೨-೨೦); ಸಾರಥಿ ಬಿಲುರಥವನನುಮಾಡು (ಕುವ್ಯಾದ್ರೋ. ೧೩-೩೭); ಮೊಸರ ನಾಲ್ಕುಚಿಕೊಳೊಂದು ಭಾಗ ನೀರೆರೆಚಿದುಕೊಂಡದನು ಕಡೆದು ಅನುಮಾಡೆ ಸಿಂಧು [ಸೀಧು ?] ಪೆಸರಾಯ್ತು (ಸೂಪಶಾ. ೨-೧೩); ಖಾನಖಾನರು ಮನ ಹರುಷದೆ ತಮ್ಮ ಬಲವ ಅನುಮಾಡಿ ಬೇರೆ ಬೇರೈತಂದು ತೋಚುವ ಘನವಿವರವನೇವೇಳ್ದೆ (ಕಂನವಿ. ೧೧-೮೧). ೨. ಸಿದ್ಧವಾಗು; ಸಜ್ಜಾಗು:

ತನ್ನ ಹಿಂದೆಡಬಲದೊಳು ತುರಗ ಸಂದಣಿಸುತ ಬರೆ ಕಟ್ಟಿಗೆಯರು ಬೋಯೆಂದು ಬಾಗಲನುಮಾಡುವರು (ಗೋಮಟೇ. ೨-೨೫). 'ಅನುಗೆಯ್' ಪರಾ. [ಅನ್ನು$_2$ + ಮಾಡು$_1$]

**ಅನುಮಾನ** (ನಾ). ೧. ಹಿಂದಿನ ಅನುಭವದಿಂದ ತರ್ಕಿಸಿ ವಿಷಯವನ್ನು ತಿಳಿಯುವ ಕ್ರಮ ; ತರ್ಕ ; ಊಹೆ : ಶ್ರುತದಲ್ಲಿ ಕೇಳಿ ದೃಷ್ಟದಲ್ಲಿ ಕಂಡು ಅನುಮಾನದಲ್ಲಿ ಅಱಿದು ಭಾವ ನಿರ್ಭಾವವಾಗಿಯಲ್ಲದೆ ನಿಶ್ಚಯವಿಲ್ಲ (ಮೋ ೪ ಮಾ . ೮೫-೩೩೮) ; ಅನುಮಾನದಿಂದ ಮಱಿಗುಂ ನಗರೀಜನಮುಂತದೆಲ್ಲಮಂ (ಬಾಧಪು.-೪-೩೨); ಹೊಗೆಯಿಂದ ಬೆಂಕಿಯನ್ನು ಊಹಿಸುವಂತೆ ಹೆಗ್ಗುರುತಿನಿಂದ ಊಹಿಸಿ ತಿಳಿಯುವುದು ಅನುಮಾನ (ಬ್ರಹ್ಮಭಾ. ೨-೨೫) ; ಯಾವುದಾದರೂ ಒಂದು ಸಿದ್ಧಾಂತವನ್ನು ಮಾಡಬೇಕಾದರೆ ಪ್ರತ್ಯಕ್ಷ, ಅನುಮಾನ, ಆಗಮ ಎಂದು ಮೂರು ಆಧಾರಗಳ ಮೇಲೆ ಮಾಡುವರು (ಹಸಾರ. ೧೧-೧ ಟೀಕು) ; ಯಾವತ್ತು ಪದಾರ್ಥಗಳಲ್ಲಿ ಎರಡೂ ಜಾತಿಯ ವಿದ್ಯುಲ್ಲತೆಯು ಸಮಸಮಾನವಾಗಿ ವಾಸಿಸುತ್ತದೆಂದು ಮೇಲಿನ ಪ್ರಯೋಗದಿಂದ ಅನುಮಾನವಾಗುತ್ತದೆ (ಮುಂಬಯಿ. ೫-೨೯೯). ೨. ರೀತಿ ; ಹವಣು : ಮಱು [ಭಾವು] ಬಲ್ಲವರು ಬಲ್ಲೆವೆಂದೆಂಬರೆ? ಲಿಂಗವಂತರ ಮಹಿಮೆ ಈ ಹಿಂಗಿರಬೇಡಾ? ಗೊಹೇಶ್ವರನ ಆಪ್ಯಾನವನಡಗಿಸುವ ಅನುಮಾನವನು ನೀನಲ್ಲದೆ ಮಹೀತಳದೊಳು ಮತ್ತೆ ಬಲ್ಲವರಾರು ಹೇಳಾ ಸಂಗನ ಬಸವಣ್ಣ (ಅವಚಂ. ೨೫೭-೧೧೨೭). ೩. ಸಂಶಯ ; ಸಂದೇಹ : ಅನುಮಾನಕ್ಕೆಡೆಯಿಲ್ಲ ಬಾಜಿಪೊಡೆ (ಎಇ. XII, ೨೫೦-೧೬೭ ; 1077) ; ಏನಸಂಭಾವಿತವನಾದೊಡಂ ವೃದ್ಧರನುಮಾನವಿಲ್ಲದೆ ನುಡಿವರ್ (ಸಿದ್ಧರಾ. ೧-೪೪) ; ಅನುಮಾನವನು ಬಿಡಬೇಕು ತನ್ನ ತನುಮನಧನವನೊಪ್ಪಿಸಿ ಕೊಡಬೇಕು (ಪುರಂದ. ೧-೧೮೪-೩) ; ಈ ವಿಷಯದಲ್ಲಿ ನನಗೆ ಮೊದಲೇ ಅನುಮಾನವಿದ್ದಿತು (ಆರ್ಯಕ. ೬೨). ೪. ಉದ್ದೇಶ : ಏನಿದೆತ್ತಣ ರಭಸವೆಲೆ ಪವಮಾನಸುತ ಘಡ ಮರಳು ನಿನ್ನನುಮಾನವಾವುದು ಗಮನವೆಲ್ಲಿಗೆ ಮಾಡು ಬಿನ್ನಹವ (ಕುವ್ಯಾದ್ರೋ. ೧೨-೧೨). [ಸಂ.]

**ಅನುಮಾನಂಬಡು,** ಅನುಮಾನಪಡು (ಕ್ರಿ). ಸಂಶಯಪಡು ; ಸಂದೇಹವನ್ನು ಹೊಂದು: ಅನುಮಾನಂಬಡೆ ರಾಮನಗ್ನಿಯೊಳಪೊಕ್ಕಾ ಸೀತೆ ತಾನ್ಪೆತರಲ್ . . . ದೂರ್ ಪೋದುದೇ ಜನರಂ ಮೆಚ್ಚಿಸಲಾಗದ್ದೆ (ಸೋಮೇಶ. ೮೩). **ಅನುಮಾನಪಡು :** ಅವರು ನಮ್ಮಲ್ಲಿ ಯಾರ ಮೇಲೆ ಬೇಕಾದರೂ ಅನುಮಾನಪಡಬಹುದು (ಶಾಲೆಮ. ೩೫).

[ಅನುಮಾನ + ಪಡು$_1$]

**ಅನುಮಾನಪಡು** 'ಅನುಮಾನಂಬಡು' ನೋ.

**ಅನುಮಾನಪ್ರಮಾಣ** (ನಾ). ವಿಷಯಜ್ಞಾನಕ್ಕೆ ಸಾಧನವಾದ ಮೂರುಬಗೆಯ ಪ್ರಮಾಣಗಳಲ್ಲಿ ಒಂದು : ಅನುಮಾನ ಪ್ರಮಾಣಮವಸ್ಥಾ ದೇಶಕಾಲಾದಿಗಳ್ ಭಿನ್ನವಪ್ಪುದಱಿಂ ದ್ರವ್ಯಶಕ್ತಿಯಿಂ ಭಿನ್ನಂ (ಶಾಂತಿಪು. ೮-೧೨೮ ವ) ; ಪ್ರತ್ಯಕ್ಷ ಪ್ರಮಾಣ ಅನುಮಾನಪ್ರಮಾಣ ಆಗಮ ಪ್ರಮಾಣ ಐತಿಹ್ಯಪ್ರಮಾಣವೆಂಬವೇ ವಸ್ತುಸಿದ್ಧಿಗಪ್ಪ ಪ್ರಮಾಣಂಗಳು (ವಿವೇಕ. ೧೮) ; ಬೆಂಕಿಯನುಳಿದು ಪೊಗೆಯಿರದೆಂಬ ನೇಮಮಂ ಅಡಿಗೆವನೆಯೊಳ್ ನಿಶ್ಚಯಂಗೆಯ್ದು ಬೆಟ್ಟ ಮೊದಲಾದ ಪೆಱತೊಂದೆಡೆಯೊಳ್ಪೊಗೆಯಂ ಕಂಡು ಅಲ್ಲಿ ಬೆಂಕಿಯುಂಟೆಂದು ತಿಳಿವುದು ಅನುಮಾನ ಪ್ರಮಾಣವೆನಿಸುವುದು (ಚಿಕಬ. ೩ ವ). [ಅನುಮಾನ + ಪ್ರಮಾಣ]

**ಅನುಮಾನಾಲಂಕಾರ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ಬಗೆ : ಕಾರ್ಯದಿಂದ ಕಾರಣವನ್ನು ಊಹಿಸಿ ಕಂಡು ಹಿಡಿದಲ್ಲಿ ಅನುಮಾನಾಲಂಕಾರವಾಗುವುದು (ಕೈಪಿಡಿ. ೨೮೩).

[ಅನುಮಾನ + ಅಲಂಕಾರ]

**ಅನುಮಾನಿಸು** (ಕ್ರಿ). ೧. ಊಹಿಸಿ ತಿಳಿ : ಇಂತಿದು ಪೂಜ್ಯಸ್ಥಾನಮುಂ ತೀರ್ಥಸ್ಥಾನಮೆಂಬುದನರಸನನುಮಾನಿಸಿದಾಯವಸರದೊಳು (ಸೌಇ. IX-i, ೧೨೮-೩೮ ; 1065) ; ಮನದೊಳನುಮಾನಿಸಿದನೀ ಮಾನಿನಿ ಮಹಾಸತಿಯೆನುತ ವಿಸ್ಮಯಗೊಂಡ ಮನದೊಳಗೆ (ನಳಚ. ೭-೨೩) ; ಶ್ರೀ ಜಗನ್ನಾಥದಾಸರೇ ಮಾಡಿರುವ ಪದದಿಂದಲೂ ಇದನ್ನು ಅನುಮಾನಿಸಬಹುದು (ಜಗದಾ. ೧೫೦). ೨. ನಿರ್ಧಾರವಿಲ್ಲದೆ ಹಿಂದೆ ಮುಂದೆ ನೋಡು : ಎನಿತಂ ಬೆಸಗೊಂಡೊಡವಂತನಿತಕ್ಕಂ ತುಱಿಲ ಬಱಿಯ ಪರಕೆಯ ತೆಱದಿಂದನುಮಾನಿಸದೆ ಸದುತ್ತರಮನೆ ಕುಡುವರ್ ಬೇಗಮಂತೆ ಜೈನಬ್ರತಿಗಳ್ (ಸಮಪ. ೭-೨೭) ; ಅವುದಕ್ಕನುಮಾನಿಸದಿರೊಲಿದಾವ ಶಬ್ದಾರ್ಥಮುಮನಾದೊಡೆ ಭಾವಿಸಲ್ಕಿನಗಱಿಪಿ ನಿನ್ನಾತ್ಮದೊಳಗಲದಿರ್ದು (ಬಸಪು. ೧-೧೫) ; ದಾಶರಥಿಯಿನಿಸನುಮಾನಿಸದೆ ತಾನನ್ಯೂನ ದಯೆಯಿಂದಪ್ಪಿ ಕೊಟ್ಟಭಯವನು ಮೈತ್ರಿಯನು (ಸಂರಾಣಂ. ೧೭೧). ೩. ಭಾವಿಸು ; ಚಿಂತಿಸು : ತನಗೆ ಪರಹಿತಮೆ ಹಿತಮೆಂದನುಮಾನಿಸಿ ನೊಕ್ಕನೊಲ್ದು ಮಾಡಿಸೆ ವಿಶ್ವಾವನಿಯೊಳಗೆ ನೆಲ್ಲವತ್ತಿಯ ಜಿನಭವನಂ ರಿತುವಿಮಾನಮಂ ಪೋಲ್ತಿರ್ಕುಂ (ಎಕ. VII, ಶಿವಮೊ. ೧೦-೪೮ ; 1085) ; ಇನಿಯನಾರೋಗಿಸುತ್ತೆಡೆಯಲ್ಲಿ ಪಾನವನನುಮಾನಿಸುತ ಮನದಲ್ಲಿ ನೆನೆವಷ್ಟಱೊಳಗೆ ಗಿಂಡಿಯನೆತ್ತಿಕೊಡುವಳಾ ಮನವ ಪೊಕ್ಕಿದ್ದಳೆಂಬಂತೆ (ಭರಚ. ೧೦-೪೯).

[ಅನುಮಾನ + -ಇಸು$_3$]

**ಅನುಮಾನೋಕ್ತಿ** (ನಾ). ತರ್ಕ ; ಊಹೆ : "ಊಹಃ, ತರ್ಕಃ, ಅನುಮಾನೋಕ್ತಿಃ -ಈ ೩ ತರ್ಕದ ಪೆಸರ್" (ಹಲಾಯು. ೩-೧೦).

[ಅನುಮಾನ + ಉಕ್ತಿ]

**ಅನುಮಾಯಣ** (ನಾ). ಸಮ್ಮತಿ ; ಒಪ್ಪಿಗೆ (?) : ಮನದ ಖೇದಮನೆಯ್ದೆ ಮಾಣಿಸುವುದಿಂದು ನಾಳಿನೊಳೆ ತಪ್ಪುದು ತಡೆಯಲಾಗದಿದನಱಿದು ಪವನತನಯಗನು[ಪಾಠಾಂ. ಹನು]ಮಾಯಣಮನೊದವಿಸದಿರು ನಿನಗೆನ್ನಾಣೆಯೆಂದು ಬೀಳ್ಕೊಟ್ಟು ಕಳುಪೆ (ಕುಮುರಾ. ೧೩-೭).

[ಪ್ರಾ. ಅಣುಮೋಯಣ (< ಸಂ. ಅನುಮೋದನ ?)]

**ಅನುಮಾರ್ಗಕ್ರಮ** (ನಾ). ಸಂಪ್ರದಾಯದ ಮಾರ್ಗವನ್ನು ಅನುಸರಿಸಿದ ರೀತಿ : ಘನಮೆರಡನೆಯದಱೊಳಮಾಱನೆಯ ವಿಭಕ್ತಿಯೊಳಮೊಳವು ಗುರುಲಘುಭೇದಂ ಅನಿಯತವೃತ್ತಿಯನಱಿದದನನುಮಾರ್ಗಕ್ರಮದೆ ಸಯ್ತುಮಾಡುಗೆ ನಿಪುಣಂ (ಕವಿರಾ. ೨-೧೪).

[ಅನುಮಾರ್ಗ$_0$ + ಕ್ರಮ]

**ಅನುಮಿತ** (ಗು). ಊಹಿಸಲ್ಪಟ್ಟ ; ತರ್ಕಿಸಿದ : 'ಪ್ರತಿಪಾದ್ಯ' ವಿಷಯಗಳೂ 'ಲಿಂಗಿ' ಯ ಸ್ವರೂಪದಲ್ಲಿರುವಂತೆ ಕಾಣುವುದಿಲ್ಲ (ಎಂದರೆ ಶಬ್ದಗಳಿಂದ ಅನುಮಿತವಾಗುವುದಿಲ್ಲ) (ಧ್ವನ್ಯಾಲೋ. ೨೦೬). [ಸಂ.]

**ಅನುಮಿತಿ** (ನಾ). ಊಹೆ ; ತರ್ಕಬದ್ಧವಾದ ತೀರ್ಮಾನ ; ಹಿಂದಿನ ಅನುಭವದ ಆಧಾರದಿಂದ ತರ್ಕಿಸಿ ತಿಳಿಯುವುದು : ಸಾಧನಮಂ ಸಾಧ್ಯಕ್ಕವಿರೋಧಿಯನಱಿದೂಹೆಗೆಯ್ವುದನುಮಿತಿ[ಪಾಠಾಂ. ಮತಿ]ಯೆನಿಕುಂ (ಕಾವ್ಯಾವ. ೬೩೪) ; ಎನಗೆ ಸುಖವಿಲ್ಲವದರಿಂ ದೇವರಿರನೆನ್ನುವನು ಮಿತಿಯ ನೀಂ ಗೆಯ್ಯೆ,ಸುಖಿಯದೇನೆನುವಂ ? (ಮಂಕುಕ. ೫೧೪). [ಸಂ.]

**ಅನುಮಿತಿಸು** (ಕ್ರಿ). ಊಹಿಸು ; ತರ್ಕಿಸು ; ಅನುಮಾನದಿಂದ ತಿಳಿ : ತನಗಿಂತ ಹಿರಿದ ಭುವನಕ್ಕಿಂತ ಹಿರಿದೊಂದನನುಭವದ ಹಿಂದೆ ಸೃಷ್ಟಿಯ ನೆರಳ ಹಿಂದೆ ಅನುಮಿತಿಸಿ ಮನುಜನಾ ಹಿರಿದನೆಳಸುವನು (ಮಂಕುಕ. ೪೮೬). [ಅನುಮಿತಿ + -ಇಸು$_3$]

**ಅನುಮಿಸು** (ಕ್ರಿ). ೧. ಸಂದೇಹಪಡು ; ಶಂಕಿಸು ; ಹಿಂದು ಮುಂದು ನೋಡು (?) : ಎನಿತೆನಿತು ಚಳಿ ಪೋಗಲನಿತನಿತು ಪಸಿವಡಸೆ ಅನುಮಿಸುತೆ ಪಸಿದೆಂ ಹಸಿದೆಯೆನುತೆ ಲಟಲಟಿಸೆ (ಇಳೆರ. ೫೩) ; ಮುನಿಗಳು ಬಪ್ಪ

ಬಟ್ಟೆಯ ಚರ್ಮದೃಷ್ಟಿಯೊಳನುಮಿಸಿ ನೋೞುವನೊಮ್ಮೆ (ಭರತಚ. ೩-೨೬); ಇನಿಯಳ ಕೋಪಮಂ ತಿಳಿಪದಾಂ ಮಱವಟ್ಟವನಂತೆಗೆಯ್ದು ಕೆಮ್ಮನೆ ಬಗೆನೋಡಲಿರ್ದೊಡಿನಿಸಿರ್ದಿಲಾಱದೆಯೆನ್ನ ಮೇಲಿದೇನನಗಿದ ನೆಂದು ಮಂಚದೆಡೆಯಲ್ಲಿನಿಸತ್ತಲೆ ಸಾರೆನುತ್ತಮುರ್ದನುಮಿಸಿ ನೂಂಕಿ ನೋಡಿ ತೆಗೆದಪ್ಪುವ ನಲ್ಲಳನೆಲ್ಲಿ ಕಾಣ್ಬೆನೋ (ಶೃಂಗಾರ. ೩-೩೯). ೨. ಊಹಿಸು: ಪ್ರಕಾಶವೆಂಬ ಫಲವನ್ನು ಇದು ಉಂಟುಮಾಡಿ ಅದರಿಂದ ಅನುಮಿಸಲ್ಪಡಬೇಕಾಗಿರುವುದರಿಂದ ಇದು ಅನುಮೇಯಜ್ಞಾನವಾದ (ಹಿಂದಸಾ. ೧೭೭). ೩. ತಿಳಿಸು; ಬೋಧಿಸು: ಮಱೆಗೆಂದುಂ ಕೋಡದುಗ್ರಾತಪಕೆ ಸೆಡೆಯದುದ್ಯದ್ಧಿಮಕ್ಕಳ್ಕದೋರಂತೊಲವಿಂ ಸಮ್ಯಕ್ತಪೋಮಾರ್ಗದೊಳೊದವಿದವಂಗಕ್ಷಯಶ್ರೀ ಕರಂ ಕಯ್ಯೊಳಗಪ್ಪಳ್ ತಪ್ಪದೆಂದುರ್ವರೆಗನುಮಿ[ಪಾಠಾಂ. ವಿ]ಸುವಂತಾವಗಂ ತೋಱುವೀ ನಿಶ್ಚಲ ಮೂರ್ತಿ ಶ್ರೀಯ ಸಾಮರ್ಥ್ಯಮನಱಿಮರುಳರ್ ಬಲ್ಲರೇ ಗುಮ್ಮಟೇಶಾ (ಶಬ್ದಾನು. ೧೪೦ ವ್ಯಾ). 'ಅನುವಿಸು' ಪಠಾ.

[ಅನು ? + -ಇಸು]

**ಅನುಮೇಯ** (ನಾ). ಊಹಿಸಿ ತಿಳಿಯತಕ್ಕುದು; ತರ್ಕದಿಂದ ತಿಳಿಯಬಹುದಾದುದು: ಎರಡುಂ ಕಾಲದೊಳಗೆ . . . ಲೋಕಾಕಾಶ ಪ್ರದೇಶಪ್ರಮಾಣ ಪರಿಣಾಮಮುಮಂ ಅಸ್ಮದಾದ್ಯನುಮೇಯಮುಮಂ ಸರ್ವಜ್ಞ ಗೋಚರಮುಮಪ್ಪುದು ಮುಖ್ಯಕಾಲಂ (ಆದಿಪು. ೬-೪೮ ವ); ಅರ್ಥವು ವಾಚ್ಯ, ಅನುಮೇಯ ಎಂದು ಎರಡು ಬಗೆ (ಭಾರಮಿ. ೯೧). [ಸಂ.]

**ಅನುಮೇಯಿಸು,** ಅನುಮೈಸು (ಕ್ರಿ). ತರ್ಕಿಸು; ಊಹಿಸಿ ತಿಳಿ: ಭಗವಂತನ ಗುಣಗಳು ಎಂತಹವೆಂಬುದನ್ನು ಅನುಮೇಯಿಸಿ ಆ ಗುಣಗಳನ್ನು ಅನುಕರಣಮಾಡಬೇಕೆಂಬುದೇ ಮಹಮ್ಮದನ ಅಭಿಪ್ರಾಯ (ಪೈಗಂಬ. ೧೪೧). **ಅನುಮೈಸು:** ಸನುರುಚಿಯಾದ ಜನರ ಇದರಂತೆ ಪಾಲಿಸುವ ಅನುಮೈಸುವದು ಹರಿಯ ಪದ ಭಕುತಿ ಬಲ್ಲವರಾರು (ವಿಪ್ರಸು. ೧೬-೫). [ಅನುಮೇಯ + -ಇಸು]

**ಅನುಮೈಸು** 'ಅನುಮೇಯಿಸು' ನೋ.

**ಅನುಮೋದ** (ನಾ). ಸಂತೋಷ: ಅಂತು ತನ್ನಿರ್ವರಗ್ರಮಹಿಷಿಯರುಂ ದ್ವಿಜತನೂಜೆ ಸತ್ಯಭಾಮೆಯುಂ ಪರ್ಯಾಪ್ತಿಸಕ್ತೆಯರುಮನುಮೋದಾನುರಕ್ತೆಯರುಮಾಗಿರೆ (ಶಾಂತಿಪು. ೬-೭೨ ವ). ೨. ಒಪ್ಪಿಗೆ; ಸಮ್ಮತಿ: ಮತ್ತಮುತ್ತಮಪಾತ್ರದಾನಾನುಮೋದಫಲದಿಂದಲ್ಲಿ ಪುಟ್ಟುವ ಜೀವಂಗಳ್ (ಆದಿಪು. ೫-೪೧ ವ). [ಸಂ.]

**ಅನುಮೋದಕ** (ನಾ). ಅನುಮೋದನೆ ಮಾಡುವವನು; ಸಮ್ಮತಿಸುವವನು. [ಸಂ.]

**ಅನುಮೋದನ,** ಅನುಮೋದನೆ (ನಾ). ೧. ಸಂತೋಷವನ್ನು ಉಂಟುಮಾಡುವುದು. ೨. ನಂಬಿಸುವುದು: "ನಂಬಿಸು - ಅನುಮೋದನೇ" (ಶಮುಧಾ). ೩. ಸಮ್ಮತಿ. ೪. ಸಹಾನುಭೂತಿಯಿಂದ ಒದಗಿದ ಸಂತೋಷ. **ಅನುಮೋದನೆ:** ೩. ಈ ಚಲ್ಲಾಟದಲ್ಲಿ ಹಿರಿಯರೂ ಭಾಗವಹಿಸಿದ್ದರಿಂದ ವಿದ್ಯಾರ್ಥಿಗಳಿಗೆ ಅನುಮೋದನೆ ಸಿಕ್ಕಂತಾಗಿತ್ತು (ರಂಗರೋ. ೪೭); ಸೂಚನೆಗಳು ಇತರ ದೇಶಗಳ ಅತಿವಿಖ್ಯಾತ ಸಸ್ಯರೋಗ ಶಾಸ್ತ್ರಜ್ಞರ ಅನುಮೋದನೆಯನ್ನು ಪಡೆದಿದ್ದರೂ ದುರ್ದೈವದಿಂದ ನಮ್ಮ ದೇಶದಲ್ಲಿಯೇ . . . ಟೀಕೆಗಳಿಗೆ ಗುರಿಯಾದವು (ಸಸ್ಯಕ. ೧೪೦).

**ಅನುಮೋದನೆ ಕೊಡು, ಅನುಮೋದನೆ ಮಾಡು** = ಒಪ್ಪಿಗೆ ಸೂಚಿಸು; ಬೆಂಬಲ ಕೊಡು; ಪುಷ್ಟೀಕರಿಸು. [ಸಂ.]

**ಅನುಮೋದನಪುಣ್ಯ** (ನಾ). ಒಳ್ಳೆಯ ಕೆಲಸಕ್ಕೆ ಒಪ್ಪಿಗೆಯನ್ನು ಕೊಡುವುದರಿಂದ ಉಂಟಾಗುವ ಒಳ್ಳೆಯ ಫಲ: ಎನಗನುಮೋದನ ಪುಣ್ಯಂ ನಿನಗಂ ನಿಸ್ಸೀಮಮಪ್ಪ ಪುಣ್ಯಂ ಸಾಗ್ಗ್ರಂ (ಎಕ. XII, ತಿಪಟೂ. ೯೩-೧೨; 1174 ?); ನನ್ನ ಸಲ್ಲೇಖನಕ್ಕೆ ಒಡಂಬಡು! ನೀನು ಅನುಮೋದನಪುಣ್ಯವನ್ನು ಪಡೆದು ಪುನೀತನಾಗುವೆ (ದಾನಚಿಂ. ೨೨).

[ಅನುಮೋದನ + ಪುಣ್ಯ]

**ಅನುಮೋದನೆ** 'ಅನುಮೋದನ' ನೋ.

**ಅನುಮೋದಪುಣ್ಯ** (ನಾ). = ಅನುಮೋದನಪುಣ್ಯ: ಮಱಿವೊಕ್ಕ ವಧೂವರರುಮನುಮೋದಪುಣ್ಯಮಂ ಪಡೆವರ್ (ಚಾವುಂಪು. ೫೭-೨೨).

[ಅನುಮೋದ + ಪುಣ್ಯ]

**ಅನುಮೋದಫಲ** (ನಾ). ಅನುಮೋದನದಿಂದ ಬರುವ ಪುಣ್ಯ ಅಥವಾ ಪಾಪ. 'ಅನುಮೋದ'ದ ಪ್ರಯೋಗವನ್ನು ನೋಡಿ.

[ಅನುಮೋದ + ಫಲ]

**ಅನುಮೋದಮಾನ** (ಗು). ಅನುಮೋದನೆ ಮಾಡುವ; ಸಹಾನುಭೂತಿಯಿಂದ ಸಂತೋಷಗೊಂಡ: ಅಂತನುಮೋದಮಾನ ಶ್ರೀಪ್ರಭಾದೇವ್ಯಾದಿಕಂ ಜಿನೇಂದ್ರಪಾದಾರವಿಂದಂಗಳನರ್ಚಿಸಿ (ಶಾಂತಿಪು. ೭-೩೬ ವ). [ಸಂ.]

**ಅನುಮೋದಿ** (ನಾ). ೧. ಅನುಮೋದಿಸುವವನು. ೨. ಸಹಾನುಭೂತಿಯಿಂದ ಸಂತೋಷಪಡುವವನು: ಎನುತ ಚಿಂತಿಸಿ ಯೇಕಾಂತಕೆ ಬಂದೊರ್ವನನುಮೋದಿಯಪ್ಪ ಚಿತ್ರಕನ ಘನವೇಗದಿಂದ ಬರಿಸಿ (ಪ್ರಭಂಜ. ೨-೫೯). [ಸಂ. ಅನುಮೋದಿನ್]

**ಅನುಮೋದಿಸು** (ಕ್ರಿ). ೧. ಒಪ್ಪು; ಸಮ್ಮತಿಸು: ವಿಮಲೆಯ ಸೂಚನೆಯನ್ನು ಸಂಯುಕ್ತೆಯು ಸಂಪೂರ್ಣವಾಗಿ ಅನುಮೋದಿಸಿದಳು (ಹಿಂಕಿರು. ೨೦); ಪರ್ಯಾಲೋಚಿಸಿ ಯಾವ ನಿಷ್ಕರ್ಷೆಗೆ ಬಂದನೋ ಅದನ್ನು ಅವನ ಮಂತ್ರಿಮಂಡಲವು ಅನುಮೋದಿಸಿತು (ಝಾರಾಣಿ. ೧೪೭). ೨. ಬೇರೊಬ್ಬರ ಸೂಚನೆಯನ್ನು ಪುಷ್ಟೀಕರಿಸು. [ಅನುಮೋದ + -ಇಸು]

**ಅನುಯಾತ** (ಗು). ಅನುಸರಿಸಿಬಂದ; ಹಿಂಬಾಲಿಸಿದ: ಅನುಯಾತ ಮಧುವ್ರತ ಗೀತನಿಸ್ವನೋತ್ಪಾದಿತ ವಿಪ್ರಯುಕ್ತವನಿತಾಶ್ರವಣವ್ರಣನಾ ಸಮೀರಣಂ (ದಮುಸ್ವ. ೩-೫೮). [ಸಂ.]

**ಅನುಯಾಯಿ** (ನಾ). ೧. ಅನುಸರಿಸಿ ನಡೆಯುವವನು; ಹಿಂಬಾಲಕ: ದೇಶಕ್ಕಾಗಿ ನೀವೂ ಶ್ರಮಿಸಬೇಕು, ಆಗ ನಾವೆಲ್ಲರೂ ನಿಮ್ಮ ಅನುಯಾಯಿಗಳಾಗುವೆವು (ಕುರುಕಾ. ೧೧೯). ೨. ಯಾವುದಾದರೊಂದು ಪಂಥವನ್ನು ಹಿಡಿದು ನಡೆಯುವವನು: ಬ್ರಹ್ಮನನುಯಾಯಿಗಳು ನಾವೆಲ್ಲ ಹೇಯವದರೊಳಗೇನೊ (ಮುಂಕುಕ. ೬೦೨).

[ಸಂ. ಅನುಯಾಯಿನ್]

**ಅನುಯೋಗ** (ನಾ). ೧. ಪ್ರಶ್ನೆ; ಬೆಸಗೊಳ್ಳುವುದು: "ಪ್ರಶ್ನಃ, ಅನುಯೋಗಃ -ಈ ೨ ಬೆಸಗೊಳುಹ" (ಹಲಾಯು. ೨೫-೧೫೩). ೨. ದೋಷಾರೋಪಣೆ; ತಪ್ಪು ಹೊರಿಸುವುದು. ೩. ಶಿಕ್ಷಿಸುವುದು; ದಂಡನೆ. ೪. ಸಲಹೆ ಕೇಳುವುದು. ೫. ಆತ್ಮಧ್ಯಾನ; ಭಗವಂತನಲ್ಲಿ ಮನಸ್ಸನ್ನು ಒಂದುಗೂಡಿಸುವುದು. ೬. [ಜೈನ] ತೀರ್ಥಂಕರರು ಉಪದೇಶಿಸಿದ ಶಾಸ್ತ್ರಸಮುದಾಯ: "ಸೂತ್ರಗಳ ಮುಖಾಂತರ ಪ್ರತಿಪಾದಿಸಿದ ಅರ್ಥಕ್ಕೆ-ಅನುಕೂಲವಾಗಿರುವ ಸಂಬಂಧಕ್ಕೇ ಅನುಯೋಗವೆಂದು ಹೆಸರು" (ಜೈನಪ. ೧೫೮); ಅನುಯೋಗ ಕುಸುಮ ಪಾದಪಮನೇಕನಯಲತಿಕಮಂಗಫಲ ಮಹಿಜಂ ಸದ್ವನಜವನಮೆಮಗೆ ವಿಶ್ರಮವನಮಕ್ಕತಿ ವಿಶ್ರುತಶ್ರುತಸ್ಕಂದವನಂ (ಆದಿಪು. ೧-೧೦). ☞ ಇವು ಪ್ರಥಮಾನುಯೋಗ, ಕರಣಾನುಯೋಗ, ಚರಣಾನುಯೋಗ, ದ್ರವ್ಯಾನುಯೋಗ ಎಂದು ನಾಲ್ಕು ವಿಭಾಗಗಳು. [ಸಂ.]

**ಅನುಯೋಜನ** (ನಾ). ೧. ಪ್ರಶ್ನೆ; ಪ್ರಶ್ನೆ ಕೇಳುವುದು. ೨. ಸೇರಿಸುವುದು; ಜೋಡಣೆ; ಸಂಬಂಧಕಲ್ಪನೆ. [ಸಂ.]

**ಅನುಯೋಜಿಸು** (ಕ್ರಿ). ಜೋಡಿಸು ; ಸೇರಿಸು ; ಸಂಬಂಧ ಕಲ್ಪಿಸು (ದಕ. ೩). [ಅನುಯೋಜನ + –ಇಸು₁]

**ಅನುರಕ್ತ** (ನಾ). ಆಸಕ್ತಿಯುಳ್ಳವನು ; ಒಲಿದವನು ; ಭಕ್ತ : ಗುರು ನಿರಂತರ ಪರಿಚರಣವಿಸ್ತರಣ ಸದ್ಭಾವಾನುರಕ್ತಾ ವರದ ಗುರುಲಿಂಗ ವಿಮುಖಪದಾರ್ಥಕೋವಿದ ವಿರಕ್ತ (ಬಸವು. ೩೯–೬೮). [ಸಂ.]

**ಅನುರಕ್ತಂಮಾಡು** (ಕ್ರಿ). ಒಲಿಯುವಂತೆ ಮಾಡು : ತನಗನುರಕ್ತಂ ಮಾಡಿದಳನೇಕ ಕಾಮುಕ ಜನಮಂ (ಶಾಂತಿಪು. ೮–೨೧).
[ಅನುರಕ್ತ + ಮಾಡು₁]

**ಅನುರಕ್ತತೆ** (ನಾ). = ಅನುರಕ್ತಿ : ಅಂತು ಮನದೊಳೊಗೆದ ಕಾರುಣ್ಯ ರಸಮೆ ಸೀತೆಯೊಳಾದನುರಕ್ತತೆಯಂ ಕರ್ಚೆ ಕಳೆವುದುಂ (ಪಂರಾಮಾ. ೧೪–೧೧೩ ವ). [ಸಂ. ಅನುರಕ್ತತಾ]

**ಅನುರಕ್ತಿ** (ನಾ). ಒಲವು ; ಪ್ರೇಮ ; ಗಾಢವಾದ ಆಸಕ್ತಿ : ಯುಕ್ತ ಸಂಸಾರಾನುರಕ್ತಿ ವಿರಕ್ತಿಯೊಂದು ನಿರೂಪಣದೊಳುದ್ಯುಕ್ತವಹುದೆಂತೆನೆ (ಬಸವು. ೪೪–೬೫) ; ಭಾವಾವೇಶಕ್ಕೆ, ಅನುರಕ್ತಿಗೆ ಇಲ್ಲಿ ಅವಕಾಶವಿಲ್ಲ (ಯಕ್ಷಬ. ೮). [ಸಂ.]

**ಅನುರಕ್ತಿಸು** (ಕ್ರಿ). ಗಾಢವಾದ ಆಸಕ್ತಿಯನ್ನು ತೋರು : ಸಕ್ತ ನಿರ್ಮಲಿತಾಂಗಲಿಂಗ ನಿಯುಕ್ತ ಸತ್ಕ್ರಿಯೆಗಳಿನಲರ್ದನುರಕ್ತಿಸಲು ಸದ್ಯ ಪ್ರಸಾದ ಶರೀರಿಯಂ ಮಾಡಿ (ಬಸವು. ೪೯–೩೪). [ಅನುರಕ್ತ + –ಇಸು₁]

**ಅನುರಕ್ತೆ** (ನಾ). ಅನುರಕ್ತಳಾದವಳು ; ಒಲಿದವಳು : ರಕ್ತೆಯನು ರಕ್ತೆಯತಿರಕ್ತೆಯೆಂದಿಂತು ಮೂಱು ತೆಱದಿಂ ಬೇಟಮಕ್ಕುಂ (ಮದತಿ. ೧೧–೨೬) ; (ಶಾಂತಿಪು. ೬–೭೨ ನೋ). [ಸಂ. ಅನುರಕ್ತಾ]

**ಅನುರಣನ** (ನಾ). ೧. ಅನುಸರಿಸಿ ಮುಂದುವರಿದ ಧ್ವನಿ ; ಘಂಟೆ, ಜಾಗಟೆ, ಗೆಜ್ಜೆ ಮುಂತಾದುವುಗಳ (ಒಮ್ಮೆ ಹುಟ್ಟಿದ) ಧ್ವನಿ ಮತ್ತೆ ಬಾರಿಸದಿದ್ದರೂ ಮುಂದುವರಿದು ಹೆಚ್ಚುಕಾಲ ಕೇಳಿ ಬರುವುದು ; ಧ್ವನಿಪರಂಪರೆ : ಅನುರಣನಕಟವಿ ಕಂಪಿಸುವಂತೆ ಘೀಂಕರಿಸಿ ಪಣೆ ಪೆಣೆದು ಕೋಡುಗಳುಡಿದು ಸೆಣಸಿ ಕಾದುವ ವನೇಭಂಗಳೋಲ್ (ಶ್ರೀರಾಮಾ. ೭೫೫–೪೪೭) ; ಆ ಸದ್ದು ಅಲ್ಲಿಯೇ ಅಡಗಿ ಹೋಗುವುದಿಲ್ಲ ; ಹರಡುತ್ತದೆ, ಅಲೆ ಅಲೆಯಾಗಿ ಮುಂದುವರಿಯುತ್ತದೆ ; 'ಅನುರಣನ 'ವಾಗುತ್ತದೆ (ಧ್ವನ್ಯಾಲೋ. IX ಮು). ೨. ಒಂದು ವಾದ್ಯದ ನಾದಕ್ಕೆ ಅನುಗುಣವಾಗಿ ಮತ್ತೊಂದು ವಾದ್ಯ ನಾದ ಕೊಡುವುದು. ೩. ಅನುರಣನಧ್ವನಿ. [ಸಂ.]

**ಅನುರಣನಧ್ವನಿ** (ನಾ). [ಕಾವ್ಯಮೀ] ಧ್ವನಿಪ್ರಭೇದಗಳಲ್ಲಿ ಒಂದು ; ಸಂಲಕ್ಷ್ಯಕ್ರಮವ್ಯಂಗ್ಯಧ್ವನಿ : ಘಂಟೆಯನ್ನು ಬಾರಿಸಿದಮೇಲೆ ಅಲೆ ಅಲೆಯಾಗಿ ಹೊರಡುವ ನಾದದಂತೆ ವಾಚ್ಯಾರ್ಥ ಪ್ರತೀತಿಯಾದ ಬಳಿಕ ವ್ಯಂಗ್ಯವು ಇಲ್ಲಿ ಅನುರಣನವಾಗುವುದರಿಂದ "ಅನುರಣನ" ಧ್ವನಿಯೆಂದೂ, ವ್ಯಂಜಕ ವ್ಯಂಗ್ಯಗಳಿಗೆ ಇರುವ ಪೌರ್ವಾಪರ್ಯವು ಇಲ್ಲಿ ಗೋಚರವಾಗುವುದರಿಂದ ಸಂಲಕ್ಷ್ಯಕ್ರಮವೆಂದೂ ಹೆಸರು ಕೊಟ್ಟಿದ್ದಾರೆ (ಭಾರಮೀ. ೨೫೮). [ಅನುರಣನ + ಧ್ವನಿ]

**ಅನುರಣಿತ** (ನಾ). ಅನುಸರಿಸಿ ಶಬ್ದಮಾಡುವುದು : ನಗಂ ಶತಗುಹಾ ಧ್ವನಿಗಳಿಂ ಪ್ರತಿಘರ್ಜಿಪೋಲಂತೆ, ನೀರವ ಮುಹಾರಣ್ಯಮನುರಣಿತ ಮಪ್ಪಂತೆ . . . ಘರ್ಜಿಸಿದುದಾ ಅದ್ವೈತಿ ತಾಂ ದ್ವೈತಿಯಪ್ಪಂತೆ (ಶ್ರೀರಾಮಾ. ೧೪೩–೪೮).

**ಅನುರಣಿತವಾಗು** = ಅನುಸರಿಸಿ ಶಬ್ದಮಾಡು ; ಪ್ರತಿಧ್ವನಿಸು : ಆದೇಭಾವ ಅವಳ ಹೃದಯದಲ್ಲಿಯೂ ಅನುರಣಿತವಾಗುತ್ತಿತ್ತು (ಪುನರು. ೫೭). [ಸಂ.]

**ಅನುರಾಗ** (ನಾ). ೧. ಪ್ರೀತಿ ; ಗಾಢವಾದ ಆಸಕ್ತಿ ; ಪ್ರೇಮ : ಧರ್ಮದೊಳಪ್ಪನುರಾಗಮೊದವುಗುಂ ರತ್ನನ ಪೇೞ್ದಜಿತನ ಪುರಾಣಮಂ ಕೇಳಲೊಡಂ (ಅಜಿಪು. ೧೨–೩೨) ; ಎಲೆ ದೇವ ಅನುರಾಗವಾದಂತೆ ಮುಖರಾಗದಿಂ ದೇವ (ನಂಬಿರ. ೯–೧೮) ; ದೇವತೆಯ ಯೋಗಿಗಳೆರ್ದೆಗೊಳಿಪಂತಿನಿಯನೊಳನುರಾಗವೆರಸಿ ನಿಟ್ಟಿಪಳು (ಹದಿಬ. ೬–೪೨) ; ಲಕ್ಷ್ಮಣದೇವನೆಸೆದನಯ್ ರಾಗಾನುರಾಗದಲಿ, ವೇಗದಲಿ, ರಭಸದಲಿ (ಶ್ರೀರಾಮಾ. ೨೫–೬೮೫) ; ಆಕೆ ನನ್ನ ವಿಷಯದಲ್ಲಿ ತನ್ನ ಅನುರಾಗವನ್ನು ಚೆನ್ನಾಗಿ ಪ್ರಕಟಮಾಡಿದಳು (ಶಾಕುಂತ. ೨೫). ೨. ಕೆಂಪುಬಣ್ಣ ; ಕೆಂಪಾಗಿರುವಿಕೆ.

**ಅನುರಾಗಪಡು** = ಗಾಢವಾದ ಆಸಕ್ತಿಯನ್ನು ಹೊಂದು : ಈ ಬಾಲಕನಲ್ಲಿ ನನ್ನ ಮನಸ್ಸು ಅನುರಾಗಪಡುವುದು (ಶಾಕುಂತ. ೧೦೪). [ಸಂ.]

**ಅನುರಾಗಂದಳೆ** (ಕ್ರಿ). ಪ್ರೀತಿಸು ; ಒಲಿ : ಜನಕನಕಂಪಮಹೀನಾಥಂ ಮನಕನುರಾಗಂದಳೆದಾಕೆಗೆ ತಕ್ಕೊರ್ವನಿಯನದಾವೆಡೆಯಿರ್ದಪನೆನುತವೆ ಬಗೆಯೊಳ್ ಭಾವಿಸಿದಂ (ಜಯಕಾ. ೩–೬೪). [ಅನುರಾಗ + ತಳೆ₁]

**ಅನುರಾಗಂಬೆಱು** (ಕ್ರಿ). ಪ್ರೀತಿಯನ್ನು ಪಡೆ ; ಒಲವನ್ನು ಹೊಂದು : ಚಿತ್ತಪಲ್ಲವಿತಾನುರಾಗಂಬೆತ್ತು ಕನ್ನದ ಬೊಮ್ಮಿದೇವನುದಾತ್ತ ಭಕ್ತಿ ಸ್ಥಿತಿಯೊಳೆಂದಿನ ಪರಿಯೊಳಿರುತಿರ್ದ (ಬಸವು. ೩೧–೩೧). [ಅನುರಾಗ + ಪೆಱು]

**ಅನುರಾಗಂಮಾಡು** (ಕ್ರಿ). ಪ್ರೀತಿಸು ; ಒಲಿ : ಅಲರ್ವೊಡೆಯನೊಳಂ ಬುಜಪುತ್ರನೊಳ್ಪೆದಲೆಯಂ ಪಿರಿದನುರಾಗಂ ಮಾಳ್ಪಂತೆ (ಜಯಕಾ. ೨–೭೨). [ಅನುರಾಗ + ಮಾಡು₁]

**ಅನುರಾಗತೆ** (ನಾ). ಪ್ರೀತಿ ; ಪ್ರೇಮ : ನಿನ್ನ ವಿವೇಕದನುರಾಗತೆಗೆ ನಮ್ಮಯ ರೂಪು ಯೌವನಕೆ ನಾಕುಮಡಿಯಹ ಪುರುಷನ್ಯದನೆ ಸಾಕು ಹೋಗಾ ನಿಳಯದಲಿ (ತೊರರಾ. ೩–೪–೧೩). [ಸಂ. ಅನುರಾಗತಾ]

**ಅನುರಾಗಪತ್ರಿಕೆ** (ನಾ). ಪ್ರೇಮಪತ್ರ : ಅನಸೂಯೆ, ಆತನಿಗೆ ಇವಳು ಒಂದು ಅನುರಾಗಪತ್ರಿಕೆಯನ್ನು ಬರೆಯಲಿ (ಶಾಕುಂತ. ೩೭). [ಅನುರಾಗ + ಪತ್ರಿಕೆ]

**ಅನುರಾಗರಸ** (ನಾ). ಪ್ರೀತಿಯಿಂದ ಉಂಟಾದ ಆನಂದ : ಸೋಗೆ ಮುಗಿಲ ಕಂಡು ಸೊರ್ಕುವಂದದೊಳನುರಾಗರಸದ ಲಹರಿಯೊಳು ಬಾಗಿಲಿನೊಳಪೊಕ್ಕು ಬಂದನೆಂಬುದುಮತಿವೇಗದೊಳಿದಿರುಗೊಳುವುದು (ಹದಿಬ. ೩–೧೪). [ಅನುರಾಗ + ರಸ]

**ಅನುರಾಗಿ** (ನಾ). ಪ್ರೀತಿಯುಳ್ಳವನು ; ಒಲಿದವನು : ಆಗಮೋಕ್ತ ತ್ಯಾಗಿ ಸುಹೃದನುರಾಗಿ . . . ವಿಮಳ ಜ್ಞಾನಯೋಗಿಜನಕ್ಕೆ ತಾನಾಗಿ (ಬಸವು. ೭–೫) ; "ಒಂದು ದಾರಿಯಲೀಗ ಕ್ಷಣದಲ್ಲಿ ಸಾಗಿ ವಂದಿಸುವೆ ನಂದಿಸುವೆ ಮಾತಿನನುರಾಗಿ" (ಕವಪು. ೧೨–೪). [ಸಂ. ಅನುರಾಗಿನ್]

**ಅನುರಾಗಿಸು** (ಕ್ರಿ). ಪ್ರೀತಿಸು ; ಪ್ರೇಮಿಸು : ಮಂಜುಳರಾಗರಸವೊಸೆದೆಸೆಯಲನುರಾಗಿಸಿ ನುತಿಸುತಿರಲು (ಬಸವು. ೮–೫೭) ; ಹೊಟ್ಟೆಯಲ್ಲಿ ಹುಟ್ಟಿದ ಮಗನಲ್ಲಿ ಅನುರಾಗಿಸುವಂತೆ ಈ ಬಾಲಕನಲ್ಲಿ ನನ್ನ ಮನಸ್ಸು ಅನುರಾಗಪಡುವುದು (ಶಾಕುಂತ. ೧೦೪). [ಅನುರಾಗ + –ಇಸು₁]

**ಅನುರಾಧೆ,** ಅನೂರಾಧ, ಅನೂರಾಧೆ (ನಾ). [ಜ್ಯೋತಿಷ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿನೇಳನೆಯದು : ಭರಣಿಯನುರಾಧೆ ಮಾರುತನೆರಡುಂ ಭಾದ್ರಪದೆ ಶಕ್ರನೆಂಬಿವಱೊಳ್ ಭಾಸ್ಕರಸುತನಿರೆ ಶನಿವಾರಂ ಬರೆ ಮನೆಯಂ ಮಾಡಬೇಡ (ಲೋಕೋಪ. ೩–೬). **ಅನೂರಾಧ** (ರೈಸ್‌ಗ. ೫೪೨). **ಅನೂರಾಧೆ** : ಖಗೋಳದಲ್ಲಿ ಅಶ್ವಿನಿ . . . ಅನೂರಾಧೆ . . . ಎಂಬಿಪ್ಪತ್ತೇಳು ತಾರೆಗಳ್ (ವಿವೇಕ. ೨೫೮). [ಸಂ. ಅನುರಾಧಾ]

**ಅನುರೂಪ** (ಗು). ಅನುಗುಣವಾದ; ಯೋಗ್ಯವಾದ; ಸಮಾನವಾದ; ಉಚಿತವಾದ ; ತಕ್ಕ : ಅನುರೂಪಂಗೆ ಕುಲೀನಂಗೆ ನಿಖಿಲವಿದ್ಯಾವಿದಂಗೆ . . . ಈ ವನಜಾಕ್ಷಿಯನೀವೆನೆಂದು ದಿವ್ಯಮುನೀಂದ್ರಂ (ಪಂಚತಂ. ೨೫೭–೭) ; ನೋಟ್ಪಿಂದನುರೂಪಮಾದುದಶರೀರ ಸಹೋಕ್ತಿಗೆ ನಾರದೇರಿತಂ (ಜಗವಿ. ೨–೫೧).

**ಅನುರೂಪಮಾಗಿ, ಅನುರೂಪವಾಗಿ** = ಹೊಂದುವಂತೆ ; ಉಚಿತ ರೀತಿಯಲ್ಲಿ: ಅವರ್, ಉವರ್‌ಗಳ್ ಮಿಕ್ಕ ವಿಭಕ್ತಿಗಳ ಮೇಲೆಯನುರೂಪಮಾಗಿ ಪತ್ತುಗುಂ (ಶಮದ. ೧೨೨ ವೃತ್ತಿ). [ಸಂ.]

**ಅನುರೂಪಕ್ರಮ** (ನಾ). ೧. ಆಕಾರಕ್ಕೆ ಅನುಸಾರವಾಗಿ ಹೊಂದಿಕೊಂಡ ರೀತಿ. ೨. ಯುಕ್ತವಾದ ಕ್ರಮವುಳ್ಳದ್ದು : ವಿಕ್ರಮಮೂರ್ತಿಗೆ ತಾರಾಚಕ್ರಂ ಕಟಿಸೂತ್ರಮಾಗೆ ತತ್ಕಟಿಸೂತ್ರಂ ಚಕ್ರಿಗೆ ಬಾಲ್ಯಕ್ಕನುರೂಪಕ್ರಮಮಾಯ್ತೆನಿಸಿ ಮುತ್ತಿನುಡೆವಣಿಯೆಸೆಗುಂ (ಜಗವಿ. ೩–೪೬). [ಅನುರೂಪ + ಕ್ರಮ]

**ಅನುರೂಪತೆ** (ನಾ). ಗುಣ, ರೂಪ, ಶೀಲ ಮುಂತಾದುವುಗಳಲ್ಲಿ ಸಾದೃಶ್ಯ: ಜನಕನೊಳನುರೂಪತೆಯಂ ತನೂಭವಂ ತಾಳ್ದಿದಂ (ಚಂದ್ರಪು. ೪–೯). [ಸಂ. ಅನುರೂಪತಾ]

**ಅನುರೋಧ** (ನಾ). ೧. ಅನುಸರಿಸಿ ನಡೆಯುವುದು ; ಹೊಂದಿಕೊಂಡು ನಡೆಯುವುದು. ೨. ಒತ್ತಾಯ ; ಬಲಾತ್ಕಾರ : ಮಹಾಶ್ವೇತಾನುರೋಧದಿಂ ಕೃತಫಲ ಜಲಾಹಾರೆಯಾಗಿ (ಕಾದಂಉ. ೬೩೩) ; ತಾಯಿಯ ಅನುರೋಧಕ್ಕೆ ಒಂದು ದಿನ ಅವನು ಮರುನುಡಿಯಿತ್ತ (ಮಸಕೂ. ೧೦). [ಸಂ.]

**ಅನುರೋಧಿಸು** (ಕ್ರಿ). ಬಲಾತ್ಕರಿಸು ; ಒತ್ತಾಯಪಡಿಸು : ಮಂಚದಿಂದ ಇಳಿಯ ಬಿದ್ದಿದ್ದ ಅವರ ಕಾಲುಗಳನ್ನು ಹಿಡಿದುಕೊಂಡು ಅನುರೋಧಿಸಿದೆ (ಮಸಕೂ. ೫೫) ; ಮುಂದರಿಯು "ನಾನು ಯುದ್ಧದಲ್ಲಿ ಮಡಿದರೆ ಮುಂದೆಂದು ನಾಟಕ ನೋಡಬಲ್ಲೆನು"? ಎಂದು ಅನುರೋಧಿಸಿದಳು (ಝಾರಾಣಿ. ೩೧೭). [ಅನುರೋಧ + –ಇಸು₃]

**ಅನುಲಕ್ಷಿಸು** (ಕ್ರಿ). ಗಮನಿಸು ; ಗಮನವಿಟ್ಟು ನೋಡು : ಮಂಗಳೆ . . . ನವಿಲುಗಳನ್ನೇ ನೆಟ್ಟ ನೋಟದಿಂದ ಅನುಲಕ್ಷಿಸುತ್ತಿದ್ದಳು (ಸರ್ವಮಂ. ೧೨೩). [ಅನು₁ + ಲಕ್ಷಿಸು]

**ಅನುಲಾಪ** (ನಾ). ಒಮ್ಮೆ ಹೇಳಿದುದನ್ನು ಮತ್ತೆ ಮತ್ತೆ ಹೇಳುವುದು : "ಅನುಲಾಪಃ, ಮುಹುರ್ಭಾಷಾ– ಈ ೨ ಆಡಿಗಡಿಗೆ ನುಡಿದ ನುಡಿ" (ಹಲಾಯು. ೨೪–೧೪೪). [ಸಂ.]

**ಅನುಲಾಪದೋಱು** (ಕ್ರಿ). ಮತ್ತೆ ಮತ್ತೆ ಹೇಳು ; ಪುನಃ ಪುನಃ ನುಡಿ : ಬಹುವಾರ್ತೆ ಬಂದು ದೇವರಿಗೆ ಕಹಿದೋಱಿದುವು ನಮ್ಮ ಕಾರ್ಯಚೇಷ್ಟಿತವೆಂದು ಮುಹುರನುಲಾಪದೋಱಿದನು (ಭರಚ. ೫೮–೮೩). [ಅನುಲಾಪ + ತೋಱು]

**ಅನುಲಾಪಿಸು** (ಕ್ರಿ). ಹೇಳಿದುದನ್ನೇ ಮತ್ತೆ ಮತ್ತೆ ಹೇಳು (ದಕ. ೬). [ಅನುಲಾಪ + –ಇಸು₃]

**ಅನುಲಾಸಿ** (ಗು). ಅನುಸರಿಸಿ ಕುಣಿಯುವ. 'ಮೇಘನಾದಾನುಲಾಸಿ' ಪರಾ. [ಸಂ. ಅನುಲಾಸಿನ್]

**ಅನುಲೇಪ** (ನಾ). ೧. ಬಳಿಯುವುದು ; ಸವರುವುದು : ಅನುಲೇಪಾತಿಶಯಪ್ರಭಾವದಿನಿತಾಂಗೋಪಾಂಗಮುತ್ಕೋಕಿಲಸ್ವನ ಲೀಲಾಲಲಿತೋರು ಚಾರುನಿನದಂ (ಸುಕುಮಾ. ೫–೩೬). ೨. ಬಳಿಯುವ ದ್ರವ್ಯ ; ಮೈಗೆ ಹಚ್ಚಿಕೊಳ್ಳುವ ಸುಗಂಧದ್ರವ್ಯ : ಮೃಷ್ಟಾನ್ನ ಭೋಜನಕಂ ಸತ್ಫಲಕಂಜನಾದಿಯನುಲೇಪಂಗಳ್ಗೆ . . . ಆರಾಮೊಡಂ ಮನದೊಳ್ ಕಾಮಿಸದಿರ್ಪರೇ (ಸೋಮೇಶ. ೧೨). [ಸಂ.]

**ಅನುಲೇಪಂಗೆಯ್** (ಕ್ರಿ). ಬಣ್ಣ, ಸುಗಂಧದ್ರವ್ಯ ಮುಂತಾದುವನ್ನು ಬಳಿ, —ಸವರು: ಗಗನಮುನನುಲೇಪಂಗೆಯ್ದೊಡಲ್ಲಿ ಮುಸಿ ಪತ್ತುಗುಮೇ (ಪಂರಾಮಾ. ೯–೧೭೯). [ಅನುಲೇಪ + ಗೆಯ್ (< ಕೆಯ್₁)]

**ಅನುಲೇಪಕ** (ನಾ). ೧. ಬಳಿಯುವವನು ; ಲೇಪನಮಾಡುವವನು. ೨. ಬಳಿಯುವ ವಸ್ತು ; ಲೇಪನದ್ರವ್ಯ. [ಸಂ.]

**ಅನುಲೇಪನ** (ನಾ). = ಅನುಲೇಪ : ದಿವ್ಯಗಂಧಂಗಳಿಂದನುಲೇಪನಂಮಾಡಿ ನವ್ಯಕುಸುಮಂಗಳಂ ಸಿರಿಮುಡಿಯೊಳಗೆ ಸೂಡಿ ಕಪ್ಪುರದ ವೀಳೆಯಮುನಾದರಂ ಮಿಗೆ ಕೊಟ್ಟು (ತಿರುರ. ೬–೨೧). [ಸಂ.]

**ಅನುಲೇಪನಗೆಯ್** (ಕ್ರಿ). = ಅನುಲೇಪಂಗೆಯ್ : ಗಂಧಕತ್ತುರಿಯನುಲೇಪನಗೆಯ್ದೊಲವಿಂದೆ ಮನ್ಮಥ ತನ್ನ ಸತಿಯ (ಮೋಹತ. ೧೬–೫೩). [ಅನುಲೇಪನ + ಗೆಯ್ (< ಕೆಯ್₁)]

**ಅನುಲೇಪಿಸು** (ಕ್ರಿ). ಬಳಿ ; ಸವರು ; ಹಚ್ಚು : ಗಂಧಾದಿಗಳನೆಲ್ಲಂ ತೆಗೆದು . . . ಮೃಗನಯನೆಗನುಲೇಪಿಸಿದರು (ಬಸವು. ೪–೩೫). [ಅನುಲೇಪ + –ಇಸು₃]

**ಅನುಲೋಮ** (ನಾ). ೧. ರೂಢಿಯಲ್ಲಿರುವ ಕ್ರಮ ; ಯಥಾಕ್ರಮ : ಆ ಪತ್ತಕ್ಕರಂಗಳೊಳ್ ಎರಡೆರಡಕ್ಕರಂಗಳ್ ತಮ್ಮೊಳನುಲೋಮದೊಳಿರ್ದೊಡಂ ವಿಲೋಮದೊಳಿರ್ದೊಡಂ ಸವರ್ಣಸಂಜ್ಞೆಯಂ ಪಡೆಗುಂ (ಶಮದ. ೬ ವೃತ್ತಿ) ; ಕ್ರಮದೊಳೆ ಬಂದನುಲೋಮದೊಳೊಂದಿ ಪದದ್ವಯಂ ನಿಯತಂ (ಛಂದೋಂಬು. ೩–೮). ೨. [ಸಂಗೀತ] "ಪಲ್ಲವಿಯ ನೈಜ ಕಾಲ ಪ್ರಮಾಣದ ತಾಳ ಅನುಸರಿಸಿ, ಅದೇ ಕಾಲ ಪ್ರಮಾಣದಲ್ಲಿ ತಾಳ ಸ್ಥಿರವಾಗಿಟ್ಟು, ಪಲ್ಲವಿಯನ್ನು ಎರಡು ಮತ್ತು ಮೂರನೇ ಕಾಲಗಳಲ್ಲಿ ಹಾಡುವುದು ಅನುಲೋಮ" (ಸಂಗೀಚಂ. ೯೩). [ಸಂ.]

**ಅನುಲೋಮಜಾತಿ** (ನಾ). ಮೇಲು ಜಾತಿಯ ಪುರುಷನಿಂದ ಕೆಳ ಜಾತಿಯ ಸ್ತ್ರೀಯಲ್ಲಿ ಹುಟ್ಟಿದ ವ್ಯಕ್ತಿಯ ಜಾತಿ : ಅನುಲೋಮಜಾತಿ ೬ ಪ್ರತಿಲೋಮಜಾತಿ ೬ ಕೂರ್ಮಜಾತಿ ೧ ಗೋಳಕ ಜಾತಿ ೧ (ಅಧ್ಯಾಮಾ. ೯೫). [ಅನುಲೋಮ + ಜಾತಿ]

**ಅನುಲೋಮವಿವಾಹ** (ನಾ). ಮೇಲುಜಾತಿಯ ಗಂಡಿಗೆ ಕೆಳ ಜಾತಿಯ ಹೆಣ್ಣಿನೊಡನೆ ಆಗುವ ಮದುವೆ : ಆರ್ಯರಲ್ಲಿ–ಬ್ರಾಹ್ಮಣರಲ್ಲಿ ಚಿತ್ರವಿಚಿತ್ರರೂಪ, ಆಕಾರಗಳು ಕಾಣಿಸಿಕೊಳ್ಳುತ್ತಿರುವುದಕ್ಕೆ ಅನುಲೋಮವಿವಾಹವೇ ಮುಖ್ಯವಾದ ಕಾರಣವು (ಕರ್ಣಾಪೂ. ೧೦೬). [ಅನುಲೋಮ + ವಿವಾಹ]

**ಅನುಲೋಮಿ** (ನಾ). ಅನುಲೋಮವುಳ್ಳವನು ; ಬಳಕೆಯಲ್ಲಿರುವ ಕ್ರಮಕ್ಕೆ ತಕ್ಕಂತಿರುವವನು ; ಕ್ರಮವುಳ್ಳವನು (?) : ಸ್ವಾಮಿ ಜಯ ನಿಃಕಾಮಿ ಜಯ ಉದ್ದಾಮಿ ಜಯ ಸುಪ್ರೇಮಿ ಜಯ ವೈಲೋಮಿ ಜಯ ಅನುಲೋಮಿ ಜಯ (ಶಂಕದಾ. ೫–೪೭). [ಸಂ. ಅನುಲೋಮಿನ್]

**ಅನುಲ್ಲಂಘನೀಯ** (ಗು). ಮೀರಲಾಗದ: ಕರ್ಮವು ಅನುಲ್ಲಂಘನೀಯ ನಿಯಮ (ಶಾಂಪಜೀ. ೧೫). [ಸಂ.]

**ಅನುವಂಗೆಯ್** 'ಅನಿವಂಗೆಯ್' ನೋ.

**ಅನುವಂಶ** (ನಾ). ಮೂಲವಂಶ. 'ಅನುವಂಶತತ್ತ್ವ', 'ಅನುವಂಶವಾದಿ' ಪರಾ. [ಸಂ.]

**ಅನುವಂಶತತ್ತ್ವ** (ನಾ). "(ವಂಶಾರ್ಜಿತ ಲಕ್ಷಣಗಳು ಪುನರಾವೃತ್ತಿಯಾಗುವ ವಿಧಾನವನ್ನು ಸಂಖ್ಯಾತತ್ತ್ವಕ್ಕೆ ಇಳಿಸಲು ಪ್ರಯತ್ನಿಸುವ) ಮೆಂಡಲಿನ ಅನುವಂಶತತ್ತ್ವ" (Mendelism. ಇಂಕನಿ). [ಅನುವಂಶ + ತತ್ತ್ವ]

**ಅನುವಂಶವಾದಿ** (ನಾ). ಮೂಲಪುರುಷನ ಸ್ವಭಾವವು (ರೂಪ ಗುಣಾದಿಗಳು)ವಂಶದಲ್ಲಿ ಇಳಿದು ಬರುವುದೆಂದು ವಾದಿಸುವವನು; ಅನುವಂಶವಾದಿ (Hereditarian. ಇಂಕನಿ).
[ಸಂ. ಅನುವಂಶವಾದಿನ್]

**ಅನುವಂಶೀಯ** (ಗು). ವಂಶಪಾರಂಪರ್ಯವಾಗಿ ಬಂದ: ಶಿಕ್ಷಣ ಒಂದು ಕಲೆಯೆಂದೂ ಅದರಲ್ಲಿ ಅಭಿರುಚಿ ಆಸಕ್ತಿಗಳು ಅನುವಂಶೀಯ ವಾಗಿ ಬರಬೇಕೆಂದೂ ಅನೇಕರು ವಾದಿಸುವರು (ಶಿಕ್ಷದ. ೪೧೭). [ಸಂ.]

**ಅನುವಂಶೀಯತೆ** (ನಾ). "ತನ್ನಂತೆ ರೂಪ, ಗುಣಗಳಿರುವ ಸಂತತಿ ಯನ್ನು ಹುಟ್ಟಿಸುವ ಪ್ರವೃತ್ತಿ; ಅನುವಂಶೀಯತೆ; ವಂಶಾನು ಗತತ್ವ" (Heredity. ಇಂಕನಿ). [ಸಂ.]

**ಅನುವಡಿಸು** (ಕ್ರಿ). ಕ್ರಮಪಡಿಸು; ಹದಗೊಳಿಸು; ಸಿದ್ಧಮಾಡು: ಪಾರಾವಾರಕ್ಕೆ ಜಡರ್ ನೀರಡುಕುವ ತೆಜದೆ ಬಿನ್ನಪಂಗೆಯ್ದೆಂ ಸಂಸಾರದ ಮೋಕ್ಷದ ಪಕ್ಷದ ಸಾರೇತರಸುಖಮನೀಶ ನಿನಗಾರ್ ಪೇೞ್ವರ್ . . . ಎಂದು ಪರಮನಂತಃಕರಣಜಾತಮನನುವಡಿಸಿ ಮಾಣ್ದರ್ (ಶಾಂತಿಪು. ೮–೧೧೪, ೧೧೯ ವ); ಅನುವಡಿಸಿ [ಪಾಠಾಂ. ಅನುವರಿಸಿ] ಧರ್ಮಮಂ ಕಿವಿಗಿನಿದಾಗೆ ಪರತ್ರೆಗಿದುವೆ ಹಿತಮೆನಿಸಿದ ಮಾತನೆ ನುಡಿವರ್ (ಸಮುಪ. ೫–೩೪); ಅನುವಡಿಸಿ ವಾಲಾಗ್ರದಗ್ರಮುಕ್ತಾಫಲಿತವೆನಿಸೆ ಕೈಲಾಸ ಪಾಂಡುರಗೋಪತೀರೂಪನೆನಿಪಂತೆ ಗಿರಿತಟದಿ ವೀರಮಾರುತಿ ತೋರ್ದ ನದ್ಭುತಾವೇಶದಿಂದ (ವೆಂಕಾರಾ. ೫–೧–೧೧); ಪೊಡವಿಗತಿಗೀ ನಿನ್ನ ಅಡಿಯ ಗತಿಯನುವಡಿಸು ತಡೆಮಾಡದಿರು ಸಾಗು ಎಲ್ಲ ಸರಿಯಹುದು (ವಿಸೀಗೀ. ೫೫–೧೭). [ಅನು$_2$ + ಪಡು$_1$ + –ಇಸು$_3$]

**ಅನುವಡೆ** (ಕ್ರಿ). ಕ್ರಮವಾಗು; ಅನುಕೂಲ ಹೊಂದು; ಅಂದ ವಾಗು: ನನೆಗಣೆಯಿಂದೆಚ್ಚು ತಣಿಯದಂಗಜನಾವನಿತೆಯನಿಟ್ಟ ಮಲ್ಲಿ ಗೆಯ ಮಿನುಗುವ ಪೆಟ್ಟಲ ಗುಂಡೆನಲವಳ ಮುಂದನುವಡೆದಿರ್ದುದಾ ಚೆಂಡು (ಕುರಾಸಾಂ. ೩೧–೧೨೨). [ಅನು$_2$ + ಪಡೆ$_1$]

**ಅನುವತ್ಸರ** (ನಾ). ೧. ವರ್ಷದ ಅಧಿಪತಿಯಾದ ಪರಮಾತ್ಮನಿಗೆ ಒಂದು ಹೆಸರು: ವರ್ಷಕ್ಕೆ ನಿಯಾಮಕನಾದ ಪರಮಾತ್ಮನಿಗೆ ಅನುವತ್ಸರ ನೆಂದು ಹೆಸರು (ಹಸಾರ. ೫–೪೦ ಅಡಿಟಿ). ೨. ಐದು ವರ್ಷಗಳಿಗೊಮ್ಮೆ ಬದಲಾಯಿಸಿ ಹೊಸದಾಗಿ ಮೊದಲಾಗುವ ಬಾರ್ಹಸ್ಪತ್ಯಮಾನ ಸಂವತ್ಸರಗಳಲ್ಲಿ ಐದನೆಯದು. [ಸಂ.]

**ಅನುವದನ** (ನಾ). ಮುಖಕ್ಕೆ ಎದುರಾದ ಮುಖ. 'ಅನುವದನ ಚುಂಬನ' ಪರಾ. [ಸಂ.]

**ಅನುವದನಚುಂಬನ** (ನಾ). ಬಾಯಿಗೆ ಬಾಯಿಟ್ಟು ನಾಲಗೆಗೆ ನಾಲಗೆ ಸೋಕುವಂತೆ ಮುತ್ತಿಡುವುದು: ಮೊಗದೊಳ್ ಮೊಗವತ್ತಿಸಿ ಸೊಗಸೊಗೆವಿನಮೋರೊರ್ವರಾಕ್ಷಣದೆ ನಲ್ಲರ್ ನಾಲಗೆಗಳನೊಂದಿಸಿ ಪೋರಿಪ ಬಗೆ ನೆಗಳ್ದನುವದನಚುಂಬನಂ ತಾನೆನಿಕುಂ (ಮನ್ಮವಿ. ೧೨–೧೩).
[ಅನುವದನ + ಚುಂಬನ]

**ಅನುವದಿಸು** (ಕ್ರಿ). ೧. ಹೇಳಿಕೊಟ್ಟ ಹಾಗೆ ಹೇಳು, —ಉಚ್ಚರಿಸು: ಮುನಿಜನದೋದಿಸಿದೋಜೆಯೊಳನುವದಿಪುದಿದೊಂದೆ ಕೊಂಡಕುಂದಾ ನ್ವಯ ನಂದನವನ ಶುಕಂ (ಆದಿಪು. ೧–೧೪); ಜನಪತಿಗಳ್ ನುಡಿಯಲ್ ಮಾರ್ದನಿಯಂತನುವದಿಸಿ ಬರ್ದುಕಲೊಲ್ಲದೆ ಮಾರ್ಕೊಂಡನುಚಿತಮಿ ದೆಂದು ಮಾಣಿಪ ಮನುಜೋತ್ತಮರೆಲ್ಲಿಯಾನುಮಿರ್ಪರ್ ಜಗದೊಳ್ (ಕಾದಂಪೂ. ೫೪೨). ೨. ವ್ಯಾಖ್ಯಾನ ಮಾಡು: ಪೂರ್ವಪಕ್ಷದ ಪಕ್ಷ ಸಿದ್ಧಿಯ ವಿಸ್ತಾರಕ್ಕವಕಾಶಮುಪ್ಪಂತು ನುಡಿದು ಮಾಣ್ದರಸನ ನುಡಿಯಂ ಸವಿಸ್ತಾರಮನುವದಿಸಿ (ಶಾಂತಿಪು. ೨–೩೫ ವ). ೩. ಕೂಡಿ ಮಾತನಾಡು; ಸಂಭಾಷಿಸು: ದುಷ್ಪರೊಳಾಡೆನವರೊಳನುವದಿಸೆನವರ ಕಂಡರಾನು ಇದಿರೆಳ್ವು ಕೈಮುಗಿದಲ್ಲಿಂದ ತೊಲಗಿ ದೂರದೊಳಿಹೆನತಿಭೀತಿಯಿಂದ (ಕುರಾಸಾಂ. ೧–೫೭). ೪. ಹೇಳು; ನಿರೂಪಿಸು: ಅನುವರದೊಳ ಗಳಿವೆನಗಾರಿಂದದನನುವದಿಸೆನ್ನೊಡನೆಂದು (ಕುರಾಸಾ೦. ೩೯–೪೩); ಮುಂದೀತನೆ ನುಡಿದವೊಲು ಬೇಜಿ ಭೂಮಿಯನನುವದಿಸಿ ಕೊಡುವುದೆ ಉಪಾಯವುಯೆಂದರಾ ನೃಪರು (ಸಾಳ್ವಭಾ. ೨೨–೩೧); ತಂದೆ ತಾಯಿ ಗಳೊಡವುಟ್ಟಿದರತ್ತೆ ಮಾವಂದಿರು ಸಕಲ ಬಾಂಧವರು ಕುಂದದೆ ನಲ್ವೆಂಡಿರ ಕೊರ್ತುಪಚರಿಪಂದವನನುವದಿಸುವೆನು (ಹದಿಬ. ೫–೩). ೫. ಭಾಷಾಂ ತರಮಾಡು: ಅದೇ ಮೂಲವನ್ನು ಅನುವದಿಸಿದ ಕಥಾಂಶವು ಗಾತ್ರದಲ್ಲಿ ಹಿರಿದು ಗುಣದಲ್ಲಿ ಕಿರಿದು (ತವನಿ. ೧೮೪). [ಅನುವಾದ + –ಇಸು$_3$]

**ಅನುವರ$_1$** (ನಾ). ಯುದ್ಧ; ಕಾಳಗ: ಹರಿಬಲದಿಂ ಪಾಂಡವರನುವರಮಂ ಪೊತ್ತಿಸಿದರೆನ್ನೊಳ್ (ಪಂಪಭಾ. ೧೦–೬); ಅನುವರದೊಳ್ ಸಿಲ್ಕಿದನಂ ಜನಪತಿಗಳ್ ಭಂಗವಡಿಸಲಾಗದು (ದಶಕು. ೨–೩೨); ಅನುವರಘೊಳಗೆ ತಲೆಗಾಯಿದನ ದುರ್ಭಿಕ್ಷದಲಿ ಸಲಹಿದನ . . . ಮಜಿದವನಿಳಿವನ್ಯೆ ಕುಲ ಕೋಟಿ ಸಹಿತ ಮಹಾಂಧ ನರಕದಲಿ (ಕುವ್ಯಾ ಉ. ೩–೪೨); ಅನುವರ ದೊಳಿಂದು ಶೌರಿಗೆ ವಿಮುಖನಾಗಿ ನೀಂ ಬಂದೆಯಾದೊಡೆ ಮಾವನ ಮನೆ ಯೊಳಾಂ ತಲೆಯೆತ್ತಿ ನಡೆವೆನೆಂತು (ಜೈಮಿಭಾ. ೧೧–೬). [ಸಂ. ?]

**ಅನುವರ$_2$** (ನಾ). ಕಷ್ಟ; ಸಂಕಟ: ಎಲೆ ಮಗನೆ ನಿನಗೆ ಬಂದನುವರವ ನುಸುರು ಮಜಿ ಬೇಡೆಂದು ಕಟ್ಟುಮ್ಮಳಂಗೊಂಡು ಬೆಸಗೊಂಡ ತಾಯೊ ಡನೆ (ಸಮ್ಯಕ್‌ಕೌ. ೯–೧೫); ಒಳ್ಳೆಯ ನೆರೆಯಿದ್ದರೆ ಆಪತ್ತು ಅನುವರಕ್ಕೆ ಒದಗುತ್ತಾರೆ (ರೂಢಿ). [< ಸಂ. ಅನಿವಾರ್ಯ]

**ಅನುವರಭೂಮಿ** (ನಾ). ಯುದ್ಧಭೂಮಿ; ರಣರಂಗ: ಅನುವರ ಭೂಮಿ [ಪಾಠಾಂ. ಭೂವಿ]ಗೆ ಬಲವಾಹನನುಂ ರವಿಹನುಮನುಂ ಪ್ರಚಂಡಾರಿಯುಮುಗ್ರನುಮಾದಿಯಾಗೆ ಖೇಚರರನೇಕ ವಾಹನಮನೇಜಿ ನಡೆದರನೇಕರ್ (ಪಂರಾಮಾ. ೧೩–೩೦). [ಅನುವರ$_1$ + ಭೂಮಿ]

**ಅನುವರಿ** 'ಅನುವಜಿ' ನೋ.

**ಅನುವರಿಸು** (ಕ್ರಿ). ೧. ಆಲೋಚಿಸು; ಭಾವಿಸು: ಪರಮ ಹರುಷದಲಾ ಮುನಿಪನಾದರಿಸಿ ಬಳಿಕ ವಿದೇಹಭೂಪನ ಚರರ ಕಳುಹಿದ ಮನದೊಳನು ವರಿ[ಪಾಠಾಂ. ವದಿ, ಸರಿ]ಸಿದನು ಜಾನಕಿಯ ನರಚರಿತ್ರದ ರಾಮಚಂದ್ರಗೆ ಪರಿಣಯವ ಮಾಳ್ಪುಜ್ಜುಗವ ನಿರ್ಧರಿಸಿ (ತೊರರಾ. ೧–೧೨–೩). ೨. ಆದ ರಿಸು; ಗೌರವಿಸು: ಜನಕನಂ ಕೊಂದನಂ ಪಾಪಿಯಲ್ಲವೆ ತನ್ನನನುವರಿಸ ದಪ್ಪಳಿಸು ಗದೆಯೊಳೆಂದೆಜಗಿದಂ ಪಾರ್ಥಿ ಭೀಮನ ಪದದೊಳು(ಜೈಮಿಭಾ. ೨೪–೫೫). ೩. ಆರೋಪಿಸು: ಬಯಸಿದು ಬೇಡಲೀ ಹೊಮ್ಮಜಿ[ರೆ]ಯ ಲವಗುಣವ ಅನುವರಿಸಿ ಮಾತಾಡುವುದು ನಿನಗನುನಯವೆ (ತೊರರಾ. ೩–೮–೪೦). ೪. ಅನುಸರಿಸಿ ನಡೆ; ಪ್ರತಿಪಾಲಿಸು.
[ಅನುವರಣ$_0$ + – ಇಸು$_3$]

**ಅನುವರ್ಣನ** (ನಾ). ವಿವರಣೆ; ನಿರೂಪಣೆ; ಕುರಿತು ಮಾಡುವ ವರ್ಣನೆ: ಇದು . . . ಕವಿರಾಜಮಾರ್ಗದೊಳ್ ದೋಷಾದೋಷಾನು ವರ್ಣನ ನಿರ್ಣಯಂ ಪ್ರಥಮ ಪರಿಚ್ಛೇದಂ (ಕವಿರಾ. ೧–೧೪೯ ವ). [ಸಂ.]

**ಅನುವರ್ಣಿಸು** (ಕ್ರಿ). ೧. ವಿವರಿಸು; ನಿರೂಪಿಸು; ಅನುಸರಿಸಿ ವರ್ಣನೆ ಮಾಡು. ೨. ಬೇರೆಯವರು ಹೇಳಿದುದನ್ನು ಅನುಸರಿಸಿ ಹೇಳು; ಅನುಕರಿಸಿ ಮಾತನಾಡು: ನೃಪನೀತಿಶಾಸ್ತ್ರಮಂ ನೀನಪೂರ್ವಮಂ ನುಡಿಯೆ ಮತ್ತದನನುವರ್ಣಿಪನ ನುಡಿಗಳ್ ಪ್ರತಿ ಧ್ವನಿಯ ಪೋಲ್ವೆಗಳ್ ನಿನ್ನ ನುಡಿಗೆ ಸಮನಾದಪುದೇ (ಶಾಂತಿಪು. ೨–೩೬).
[ಅನುವರ್ಣನ + – ಇಸು$_3$]

**ಅನುವರ್ತ** (ನಾ). ತಡೆ; ಅಡ್ಡಿ: ಧರ್ಮಾರ್ಥರಾಗಿಹ ಯಕ್ಷರಿದಕನುವರ್ತ ಬರದೊಲ್ ಕಾಯ್ವುದು (ಬಿಜ್ಜಪು. ೪–೧೩). [< ಸಂ. ಅನುವಾರಿತ ?]

**ಅನುವರ್ತನ,** ಅನುವರ್ತನೆ (ನಾ). ೧. ಅನುಸರಿಸಿ ನಡೆಯುವುದು; ಒಬ್ಬರ ಇಷ್ಟದಂತೆ ನಡೆದುಕೊಳ್ಳುವುದು; ವಿಧೇಯತೆ; ಅನುಸರಣೆ : ಮಹಾರಾಜರ ಅನುವರ್ತನಮಾಡುವುದರಲ್ಲಿಯೇ ಎಲ್ಲರ ಹಿತವೂ ಅಪ್ಪಣೆ ಪಾಲಿಸುವುದರಲ್ಲಿಯೇ ಎಲ್ಲರ ಆನಂದವೂ ಇರುವವೆಂದು ನಾನು ಪ್ರತಿಜ್ಞಾಪೂರ್ವಕವಾಗಿ ಹೇಳುವೆನು (ತುಳಸಿ. ೧೯೩). ೨. ಸಮ್ಮತಿ ಸೂಚಿಸುವುದು; ಒಪ್ಪಿಗೆ ಕೊಡುವುದು. ೩. ಪರಿಣಾಮ; ಫಲಿತಾಂಶ. ೪. [ವ್ಯಾಕ] ಹಿಂದಿನ ಸೂತ್ರದಲ್ಲಿ ಹೇಳಿದ್ದು ಪ್ರಕೃತಕ್ಕೂ ಅನ್ವಯವಾಗುವುದು; ಅನುವೃತ್ತಿ. **ಅನುವರ್ತನೆ:** ದದಪಂಗಳ್ಪರಮಾದ ಎಂಬುದನುವರ್ತನೆ (ಶಮದ. ೨೩೪ ಟೀ). [ಸಂ.]

**ಅನುವರ್ತನೆ** 'ಅನುವರ್ತನ' ನೋ.

**ಅನುವರ್ತಿ** (ನಾ). ೧. ಅನುಸರಿಸಿ ನಡೆಯುವವನು; ವಿಧೇಯನಾದವನು; ಹೊಂದಿಕೊಂಡು ನಡೆಯುವವನು : ಅನುಸಾಲ್ವ ಪ್ರದ್ಯುಮ್ನ ವೃಷಕೇತು ಯೌವನಾಶ್ವನ ತನಯ ನೀಲಧ್ವಜರ್ ನರಂಗಿವರ್ಯರನುವರ್ತಿಗಳ್ (ಜೈಮಿಭಾ. ೧೫-೬). ೨. ಹೋಲುವಂಥ ವಸ್ತು ಅಥವಾ ವ್ಯಕ್ತಿ. 'ಕಮುಲಾನುವರ್ತಿ' ಪರಾ.
[ಸಂ. ಅನುವರ್ತಿನ್]

**ಅನುವರ್ತಿಸು** (ಕ್ರಿ). ೧. ಅನುಸರಿಸಿ ನಡೆ; ವಿಧೇಯವಾಗಿ ನಡೆ : ಪ್ರಬಲರಂ ದುರ್ಬಲರು ಅನುವರ್ತಿಸುವರು (ಸೌಗಂಧಿ. ೨೫೫-೧೬); '. . . ಈ ಮಂದಮತಿಯನ್ನ ಅನುವರ್ತಿಸುವ ರಾಜರಿಗೋಸ್ಕರ ನಾನು ವ್ಯಥೆಪಡುತ್ತೇನೆ' (ಭೀಷ್ಮಚ. ೧೩೯); ಸುಲ್ತಾನ ಮಹಾಶಯರೇ ನ್ಯಾಯದಿಂದ ಅನುವರ್ತಿಸಿರಿ (ಹಿಂಕಿರು. ೬೫). ೨. ಮಾಡು; ನೆರವೇರಿಸು : ತರಣಿ ಸಂಧ್ಯಾಸಮಯ ಕರ್ಮಾಂತರವನನುವರ್ತಿಸಲು [ಪಾಠಾಂ. ನಿರ್ವರ್ತಿಸಲು] ಪಶ್ಚಿಮಶರಧಿಗಿಳಿದನು (ತೊರರಾ. ೬-೧೭-೪೬). ೩. [ವ್ಯಾಕ] ಹಿಂದಿನ ಸೂತ್ರದಲ್ಲಿ ಹೇಳಿದ್ದು ಅನ್ವಯವಾಗಿ ಬರು; ಅನುವೃತ್ತಿಯಾಗಿ ಬರು : ಅಲ್ಲಿ ಮೊದಲ್ ಪೇೞ್ದ ತಾನ್ ನೀನ್ ಆನೆಂಬ ಪುರುಷತ್ರಯಕ್ಕೆ ಏಕಾನೇಕವಚನದೊಳ್ ಅಮ್ ಅರ್ ಅಯ್ ಇರ್ ಎನ್ ಎವುಗಳಕ್ಕುಂ ಎಂಬುದನುವರ್ತಿಸೆ ಪದಮಕ್ಕುಂ (ಶಮುದ. ಸ. ೨೬೩ ವೃತ್ತಿ). [ಅನುವರ್ತನ + -ಇಸು₃]

**ಅನುವಶ** (ಗು). ಅಧೀನನಾದ; ಹೇಳಿದಂತೆ ಕೇಳುವ : ಅನುಜಂ ರಿಪುದುಸ್ಸಹತೇಜನನುವಶಂ ತಾನೆ ನಡೆವುತಿರೆ . . . ಸೊಗಯಿಸಿದಂ (ಶಾಂತಿಪು. ೨-೩). [ಸಂ.]

**ಅನುವಶೆ** (ನಾ). ಅಧೀನಳು; ಹೇಳಿದಂತೆ ಕೇಳುವವಳು : ಅನುನಯಶತಂಗಳಂ ನುಡಿದನುವಶೆಮಾಡಲ್ ವಿಯಚ್ಚರೇಂದ್ರನುಮೇನಾರ್ತನೆ (ಪಂರಾಮಾ. ೯-೧೭೪). [ಸಂ. ಅನುವಶಾ]

**ಅನುವಸಥ** (ನಾ). ಆವಾಸಸ್ಥಳ; ಮನೆ: ಚ್ಯುತಯಾಥಾಸಂಖ್ಯಾರ್ಥಪ್ರತೀತ ದೋಷಾನುವಸಥಮೆಂದಱಿಗೆ ಬುಧರ್ (ಕವಿರಾ. ೧-೮೬).
[ಸಂ. ?]

**ಅನುವಱಿ,** ಅನುವರಿ (ಕ್ರಿ). ಕ್ರಮ ಅಥವಾ ರೀತಿಯನ್ನು ತಿಳಿ; ಔಚಿತ್ಯವನ್ನು ಅರಿ : ಅಂತನುವಱಿದೊಸಗೆಯೊಳಮರರಾಜನುಂ ಸನಾಭಿಗಳ್ವೆರಸು ನಾಭಿರಾಜನುಂ ಬಂದು . . . ಪಾಣಿಗ್ರಹಣಂಗೆಯಿಸಿದಾಗಳ್ (ಆದಿಪು. ೮-೨೨ ವ); ಮೂಜಗಭರಿತನನುವಱಿಯದಲ್ಲಿರ್ದನೆಂದು ಮುದ್ರಿಸಿ ಹೂಡಿ ನಡೆಗೊಂಡರು (ಸಿದ್ಧರಾ. ೯-೧೨); ಯುವತಿಯನುನುಡಿಸಲ್ಕೆ ನೋಳ್ಪನು ತವಕದನುವಱಿದಪ್ಪಿ ಮೊಗಗೊಡೆ ಪವಣಱಿದು ಚುಂಬಿಸುತೆ ಇಂದುಟಿಸುಧೆಯನೊಸೆದೀಂಟ (ಸಾಳ್ವಭಾ. ೪-೧೦); ಕೇತನಗಳಿಗೆ ಕುದುರೆಗಳಿಗೊಂದೇಬಾರಿ ತಾಕುವವೊಲನುವಱಿತು ತೆಗೆದೆಚ್ಚು (ಕೋಗಯ. ೨೧-೧೯); ಅನುವಱಿಯೆ ಕೇಳೆಯನೊಳ್ ವಿವರಿಸಿದಂ (ಚಿಕವಿ. ೪-೧೬೪). **ಅನುವರಿ :** ಅನುವರಿಯದಿಂತು ಕೊರಚಾಡಿದಿರಿ (ಮಹಾವಿ. ೪-೧೦೧). [ಅನು₃ + ಅಱಿ₁]

**ಅನುವಾಕ** (ನಾ). ೧. ಬೇರೊಬ್ಬರು ಹೇಳಿದುದನ್ನು ಅನುಸರಿಸಿ ಉಚ್ಚರಿಸುವುದು. ೨. ವೇದಗಳಲ್ಲಿನ ಒಂದು ಪ್ರಕರಣ, — ವಿಭಾಗ; ಅಧ್ಯಾಯ; ಋಗ್ವೇದ ಯಜುರ್ವೇದಗಳಿಂದ ಮಂತ್ರಗಳನ್ನು ಆಯ್ದು ಕೂಡಿಸಿ ನಿರೂಪಿಸಿದ ಒಂದು ಅಧ್ಯಾಯ, — ಪ್ರಕರಣ : ಮತ್ತಮಾ ವೇದದೊಳೆ ಯಜ್ಞಾನುವಾಕದೊಳ್ ಉತ್ತಮಾಗ್ನಿಯೆ ನಿನಗೆ ರುದ್ರನೇ ರಕ್ಷಕಂ (ಅರಾಜ. ೩-೨೪); ಅವುಗಳನ್ನು ೧೦ ಮಂಡಲಗಳಾಗಿಯೂ, ಪ್ರತಿಮಂಡಲವನ್ನು ಅನುವಾಕ, ಸೂಕ್ತ ಮುಂತಾದ ವಿಭಾಗಗಳಾಗಿಯೂ ಅಧ್ಯಯನಮಾಡುತ್ತಾರೆ (ಭಾಇಪ್ರ. ೨೯). ೩. ಬ್ರಾಹ್ಮಣಗಳ ಮಂತ್ರಗಳನ್ನು ಉದಾಹರಿಸುವ ವಚನ ಸಮುದಾಯ. [< ಸಂ. ಅನುವಚ್]

**ಅನುವಾಚಿಸು** (ಕ್ರಿ). ಕ್ರಮವಾಗಿ ಓದು : ವಿನಯವತ್ತಳೆಯಂ ವಿಪ್ರೋತ್ತಮನದನಂತರ್ಗತಚಿತ್ತದೊಳಿಂತೆಂದು ತನ್ನೊಳನುವಾಚಿಸಿದಂ (ಸುಕುಮಾ. ೨-೪೯). [ಅನುವಾಚನ₂ + -ಇಸು₃]

**ಅನುವಾತು** (ನಾ). ಹಿತವಾದ ಮಾತು : ಅನಿತುಂ ತಪ್ಪಂ ಸೈರಿಪಳನುವಾತಂ ಪೇೞ್ವಳನಿಬರ್ಗಭಯಮನೀವಳ್ (ಚಿಕವಿ. ೪-೧೧).

**ಅನುವಾತುವಣ್** = ಹಿತಕರವಾದ ಮಾತೆಂಬ ಹಣ್ಣು : ಬಿನಯದ ಬಿತ್ತು ಬಿನ್ನಣದ ಪೆರ್ಮೊಳೆ ಬಿಜ್ಜೆಯ ಬೇರ್ ವಿವೇಕದೊಳ್ಗೊನರ್ . . . ಅನುವಾತುವಣ್ಣ ಬಿಣ್ಗೊನೆಯೆನೆ ಚಿಕ್ಕದೇವನೆಸೆದಂ (ಅಪ್ರತಿ. ೧೬-೪೧).
[ಅನು₃ + ಮಾತು]

**ಅನುವಾದ** (ನಾ). ೧. ಬೇರೊಬ್ಬರು ಹೇಳಿದುದನ್ನು ಅನುಸರಿಸಿ ಹೇಳುವುದು; ಅನುಕರಣೋಚ್ಚಾರಣೆ: ಅನುಕರಣದೊಳೊಂದಿದ ಮಾತಿನಲ್ಲಿ ನಿರ್ದೋಷಮಾಗೆ ಸಲ್ಗುಂ ಪೇೞ್ದಿಂತಿನಿತುಂ ಸ್ವರೂಪಕಥನದೊಳನುವಾದಂ ಭಿನ್ನಶಬ್ದಮುಪ್ಪುದಱಿಂದಂ (ಕಾವ್ಯಾವ. ೪೫೨). ೨. ಮೊದಲೇ ಸಿದ್ಧವಾದ ವಿಷಯವನ್ನು ಮತ್ತೆ ನಿರೂಪಿಸುವುದು: ಅರ್ಥವು ಬೇರೊಂದು ಪ್ರಮಾಣದಿಂದ ತಿಳಿದುಬರುವುದರಿಂದ ಇದು ಅನುವಾದವು (ಬ್ರಹ್ಮಭಾ. ೫೧೧ ಟ). ೩. ಯಾವುದಾದರೊಂದು ಶಬ್ದವನ್ನು ಪ್ರಯೋಗಿಸುವುದು, —ಬಳಸುವುದು : ಇಂದ್ರಿಯಾನುವಾದದಿಂದ ಸಂಜ್ಞಿ ಪಂಚೇಂದ್ರಿಯಂಗಳ್ಗೆ ಸಮ್ಯಕ್ತ್ವತ್ರಿತಯಮುಂಟು ಉಳಿದುವಕ್ಕಿಲ್ಲ (ತಸೂವ್ಯ. ೧೧); ಸಮ್ಯಕ್ತ್ವಾನುವಾದದಿಂ ಕ್ಷಾಯಿಕ ಸಮ್ಯಗ್ದೃಷ್ಟಿಗಳೊಳ್ . . . ಅಂತರಮಿಲ್ಲ (ತತ್ತ್ವಪ್ರ. ೪೪). ೪. ಅರ್ಥವು ಸ್ಪಷ್ಟವಾಗುವಂತೆ ವಿವರಿಸುವುದು; ವ್ಯಾಖ್ಯಾನ: ಶ್ರೀ ಶಾಸ್ತ್ರಿಗಳವರು ಕುಮಾರವ್ಯಾಸ ಭಾರತದಿಂದ ಕಾವ್ಯವಾಚನ ಮಾಡುತ್ತಾರೆ. ಶ್ರೀ ಭಟ್ಟರ ಅನುವಾದವೂ ಉಂಟು (ರೂಢಿ). ೫. ಯಾವುದಾದರೂ ಗ್ರಂಥವನ್ನು ಮೂಲದ ಅಭಿಪ್ರಾಯಕ್ಕೆ ಕುಂದಿಲ್ಲದಂತೆ, ಏರುಪೇರುಗಳಿಲ್ಲದಂತೆ ಸಂಗ್ರಹಿಸಿ ಹೇಳುವುದು. ೬. ಹಾಗೆ ಮಾರ್ಪಡಿಸಿ ಹೇಳಿದ ರೂಪ; ಭಾಷಾಂತರ: 'ರಾಮವರ್ಮ ಲೀಲಾವತಿ' ಯು ಷೇಕ್ಸ್‌ಪಿಯರ್ ಕವಿಯ 'ರೋಮಿಯೋ ಅಂಡ್ ಜೂಲಿಯಟ್' ಎಂಬ ನಾಟಕದ ಕನ್ನಡ ಅನುವಾದ (ರೂಢಿ); ರವೀಂದ್ರನಾಥ ಠಾಕೂರರ 'ಗೀತಾಂಜಲಿ' ಬಂಗಾಳಿಯಿಂದ ಇಂಗ್ಲೀಷಿಗೆ ಅನುವಾದವಾಗಿದೆ (ರೂಢಿ). ೭. ಒಪ್ಪಿಗೆ; ಸಮ್ಮತಿ : ಮಂಗಳದೇವಿಯ ಗುಡಿಗೆ ಅರ್ಚನೆಗಾಗಿ ನಿನ್ನ ತಾಯಿಯೊಡನೆ ತೆರಳಲು ಅನುವಾದವನ್ನು ಪಡೆದರೆ ಸಾಕು (ಅಮಾನಂ. ೨೪೮).

**ಅನುವಾದಮಾಡು**=ಭಾಷಾಂತರ ಮಾಡು : ಹೊಸದಾಗಿ ಬಂಗಾಳೀ ಮೂಲವನ್ನಿಟ್ಟುಕೊಂಡು ಅನುವಾದಮಾಡಿದ್ದೇನೆ (ನಿಬಂಧ. ಮು. XIV).
[ಸಂ.]

**ಅನುವಾದಕ** (ನಾ). ಅನುವಾದ ಮಾಡುವವನು : ಅನುವಾದ ಹಗುರವಾದ ಕೆಲಸವಲ್ಲ, ಅನುವಾದಕನ ಸಮಸ್ಯೆಗಳು ಹಲವಾರು ಎಂಬುದನ್ನು ಮರೆಯಬಾರದು (ಸಾಹಿಪ್ರ. ಮು. XVII). [ಸಂ.]

**ಅನುವಾದಕತ್ವ** (ನಾ). **೧.** ಅನುವಾದಕನಾಗಿರುವುದು ; ಅನುವಾದಕತನ. **೨.** ಮೊದಲೇ ಇದ್ದುದನ್ನು ಹೊಸದಾಗಿ ಹೇಳುವುದು ; ಪುನರುಕ್ತಿ : ಸಿದ್ಧವಸ್ತುವು ಪ್ರತ್ಯಕ್ಷಾದಿಗಳಿಗೆ ವಿಷಯವಾಗುವುದರಿಂದ ಶಾಸ್ತ್ರಕ್ಕೆ ಅನುವಾದಕತ್ವವು ಬರುವುದೆಂಬ ದೋಷವನ್ನು ಇಲ್ಲಿ ಪೂರ್ವಪಕ್ಷಿಯು ತೆಗೆದಿರುತ್ತಾನೆ (ಬ್ರಹ್ಮಭಾ. ೨೨ ಟೀ). [ಸಂ.]

**ಅನುವಾದ ಚಿಹ್ನೆ** (ನಾ). ಉದ್ಧರಿಸಿದ ಭಾಗಗಳನ್ನು ಸೂಚಿಸಲು ಒಂದು ಕಡೆ ತಲೆಕೆಳಗಾಗಿಯೂ ಇನ್ನೊಂದು ಕಡೆ ನೆಟ್ಟಗೂ ಹಾಕುವ ಅಲ್ಪವಿರಾಮಗಳು ; " " ಮತ್ತು ' ' ಗುರುತು (Comma. ಇಂಕನಿ). [ಅನುವಾದ + ಚಿಹ್ನೆ]

**ಅನುವಾದಿ** (ನಾ). **೧.** ಅನುಸರಿಸುವಂಥದು ; ಹೊಂದುವಂಥದು ; ಅನುಗುಣ : ನಯಮುಳವಟ್ಟ ಜೀವೆಯುಳವಟ್ಟಧರೋತ್ತರತಂತ್ರಮಪ್ಪ ತಂತ್ರಿಯೊಳನುವಾದಿಯಾಗೆ ಪೊಸಮೂರ್ಛನೆ ರಂಜಿಸೆ . . . ವೀಣೆಯಂ ಮಿಡಿದಳ್ (ಶಾಂತಿಪು. ೯–೧೮೭). **೨.** ಅನುವಾದ ಮಾಡುವವನು. **೩.** [ಸಂಗೀತ] ವಾದಿ, ವಿವಾದಿ, ಸಂವಾದಿ, ಅನುವಾದಿ ಎಂಬ ನಾಲ್ಕು ಬಗೆಯ ಸ್ವರಗಳಲ್ಲಿ ಒಂದು. [ಸಂ. ಅನುವಾದಿನ್]

**ಅನುವಾದಿಸು** (ಕ್ರಿ). **೧.** ನಿರೂಪಿಸು ; ಹೇಳು : ಆದಿಕವಿ ಪಂಪನಂದನುವಾದಿಸಿ ವಾದಿಸಿ ವಿರೋಧಿ ವಿಪರೀತತೆಯಿಂದೋದೆ (ಧರ್ಮನಾ. ೧–೩೬). **೨.** ಭಾಷಾಂತರಿಸು : ಬೃಹತ್ಕಥೆಯನ್ನು ಪೈಶಾಚಿಭಾಷೆಯಿಂದ ಸಂಸ್ಕೃತಕ್ಕೆ ಅನುವಾದಿಸಿದ್ದು ಬಹುದೊಡ್ಡ ಕಾರ್ಯ (ಕಸಾಚ. ೧೭). **೩.** ಪ್ರತಿಯಾಗಿ ವಾದಮಾಡು : ಅವಳೊಡನನುವಾದಿಸಿದನಿಂತೆಂದು (ರಾಮಚ. ೨೫–೮೭). [ಅನುವಾದ + -ಇಸು$_3$]

**ಅನುವಾದಿಸ್ವರ** (ನಾ). [ಸಂಗೀತ] "ಸಂವಾದಿತ್ವ (Consonance) ಮತ್ತು ವಿವಾದಿತ್ವ (dissonance) ಎರಡೂ ಇಲ್ಲದಿರುವ ಸ್ವರಗಳೇ ಅನುವಾದಿ ಸ್ವರಗಳು" (ಸಂಗೀಚಂ. ೨೦). [ಅನುವಾದಿ + ಸ್ವರ]

**ಅನುವಾನ್** (ಕ್ರಿ). ಹಿತವಾಗು ; ಸೊಗಸಾಗು : ಪೊಳೆವಳಿಕಂ ಪೊದಟ್ಟ ಕದಪಂದದ ಕುಂದಣದೋಲೆ ನೀಳ್ದ ಕಣ್ಣಳನಗೆ ಮುದ್ದುವಾಯ್ದೆಱೆ ಸುಧಾರಸಧಾರೆ ಕಡಂಗಿ ಪೊಂಗಿಪಾಯ್ದುದೆನೆ ವಸುವಾಂತ ಮಾತಿನೆಸಕಂ ಮನಕಂ ಮುಸಕಂಗೊಳೆ ಕಣ್ಗೆವರ್ಪಳೀ ಲಳಿತಲತಾಂಗಿ (ಚಿಕವಿ. ೬–೧೮೦). [ಅನು$_2$ + ಆನ್$_1$]

**ಅನುವಾಸರಂ** (ಅ). ಪ್ರತಿದಿನವೂ ; ಅನುದಿನವೂ : ಬಯಸಿ ಕುಬೇರರಕ್ಷಿತ ದಿಗಂಗನೆಯೊಳ್ ರವಿಪೋಗಿ ಕೂಡಲಟ್ಟಿಯೊಳನುವಾಸರಂ ನೆರೆಯೆ ಸೂೞ್ ಸಮನಾಗಿರೆ (ಶಾಂತಿಪು. ೭–೧೨೬). [ಸಂ.]

**ಅನುವಿಡಿ** (ಕ್ರಿ). ಕ್ರಮವನ್ನು ಹಿಡಿ, —ಅವಲಂಬಿಸು : ಅನುವಿಡಿದು ಗುರುಲಿಂಗ ಜಂಗಮದನುವ ನಿಶ್ಚೈಸುವರು (ಪ್ರಭುಲೀ. ೨೩–೧). [ಅನು$_2$ + ಪಿಡಿ$_1$]

**ಅನುವಿದ್ಧ** (ಗು). **೧.** ಚುಚ್ಚಲ್ಪಟ್ಟ ; ರಂಧ್ರಮಾಡಿದ. **೨.** ಸೇರಿಕೊಂಡ ; ಆವರಿಸಿದ ; ವ್ಯಾಪ್ತವಾದ : ಮೀಮಾಂಸೆಯಂತೆ ಭಾವನಾನುವಿದ್ಧಮುಮಪ್ಪ ನೀತಿಯಿಂ (ಕಾದಂಪೂ. ೬೭೮). **೩.** ಕುಂದಣದಲ್ಲಿ ಕಟ್ಟಿದ, —ಕೆತ್ತಿಸಿದ. [ಸಂ.]

**ಅನುವಿಧಿಸು** (ಕ್ರಿ). ಮುಖ್ಯ ವಿಧಿಯ ಜೊತೆಗೆ ಬೇರೊಂದು ವಿಧಿಯನ್ನು ಹೇಳು : ಮನದೊಳಗೆ ರಾಗತ್ಯಾಗವನೆ ನಿಶ್ಚಯಿಸಿ ಕಾಮ್ಯವನಾಗಲೆಂದನುವಿಧಿಸಿದಲ್ಲದೆ ವಿಹಿತವಲ್ಲೆಂದ (ಭಾಗ. ೪–೧೭–೯). [ಅನು$_2$ + ವಿಧಿಸು]

**ಅನುವಿಸು$_1$** 'ಅನಿವಿಸು$_1$' ನೋ.

**ಅನುವಿಸು$_2$**, ಅನಿವಿಸು$_2$ (ಕ್ರಿ). **೧.** ಅನುನಯದಿಂದ ಕೇಳಿಕೊ ; ನಯವಾಗಿ ಕೇಳಿಕೊ : ನಿನ್ನನಾನನುವಿಪೆನೆನ್ನ ಮೆಯ್ಪಡವೊ ನಲ್ಲನ ಮೆಯ್ಪಡವೋ ನಿಶಾಕರಾ (ಆದಿಪು. ೧೨–೪೨) ; ಅನುವಿಸಿ ಕರೆದಟ್ಟಿಗೆ ಸೊರ್ಕಿನ ಸಿಂಧುರಮನಿಲಜವದ ವಾಜಿ ಪದಂಗಾಸಿನ ಪೊಂಗಳಲ್ಲದೀಯದ ನಿನಗೆಂತುಂ ಲೋಭಮುಂಟೆ ದಾನವಿನೋದಾ (ಲೀಲಾವ. ೪–೪೩). **೨.** ಬಯಸು ; ಆಸೆಪಡು ; ಅಪೇಕ್ಷಿಸು : ಗಂಧರ್ವ ನಿವಾಸಕ್ಕನುವಿಸುವೀ ಮನವಪ್ಪೊಡೆ ತನಗೆ ಮಾಱುವೋ[ದತ್ತೀಗಳ್] (ಕಾದಂಉ. ೨೬೩). **೩.** ತಡೆ ; ನಿರೋಧಿಸು : ವಿನಯದಿನಾಮಿಾಭುವನೈಕನಾಥನಂ ಸಲ್ಗೆವೆರಸು ಬೇಡುತ್ತಿರೆ ಬಂದನುವಿಸುವ ನಿಮ್ಮ ಮುದುಗಣ್ತನದೊಳಿದೇನ್ (ಆದಿಪು. ೯–೧೦೬) ; ಮೇಲೆವಾಯ್ದು ಬಯ್ದನುವಿಸಿ ಕಾಡಿ ನೋಡಿ ತಿಳಿದಟ್ಟಿ ಜನಿಟ್ಟು ಳಿಗೊಂಡಲಂಪುಗಳ್ ಕನಸಿನೊಳಂ ಪಳಂಚಲೆವು[ವೆ]ನ್ನೆರ್ದೆಯೊಳ್ (ಪಂಪಭಾ. ೪–೧೦೬) ; ಮನಮುನನುವಿಸ [ಪಾಠಾಂ. ಉಪಮಿಸ] ಲಾಜದಂತೆಯುಸಿರ್ ಮಿಟ್ಟಿಗೊಳಿಸುವ ಸವಿಯುಂ (ಲೀಲಾವ. ೧೦–೪೫ವ). **೪.** ವ್ಯಾಪಿಸು ; ಹರಡು : ಪವನಸೂನುವನೀಕ್ಷಿಸಿ ಕಣ್ಣಸೋಲಮಾರ್ದನುವಿಸೆ ಶೋಕಮುಂ ಮುಳಿಸುಮಂ ಮಱೆದು (ಪಂರಾಮಾ. ೧೧–೭೧) ; ಚಕ್ರಿ ತನ್ನಂ ಮುನಿಸನುವಿಸೆ ದಿವ್ಯಚಾಪಮಂ ನೀವಿ ಯಶೋಧನಿ ಜೇವೊಡೆಯಲ್ (ನೇಮಿಪು. ೧೨–೨೩೬) ; ಅನುವಿಪ ಸೊರ್ಕಿನಿಂ ಪಿಕನಿನಾದೆ ಪೆಜಳ್ ಗಱಿಪಂ ನೆಗಱ್ಚಿದಳ್ (ಜಗವಿ. ೧೬–೧೧೭) ; ಉತ್ತರವದಂ ಪರಿಕಿಸುವೆನೆಂಬ ಬಗೆ ಮನಮನನುವಿಸಲ್ (ಸಾನಂಚ. ೪–೪). **೫.** ಅಣಿಮಾಡು ; ಸಿದ್ಧಪಡಿಸು : ಅನುರೂಪರನಿವರಂ ಪಡೆದನುರಾಗಮನಾಗುಮಾಡಿ ಕನಸಿಂ ಕೂಡಲ್ಕನುವಿಸುತಿರ್ದಪನ್ (ಲೀಲಾವ. ೭–೯೮); ನಿನಗೆ ತನ್ನುಂಗುರಗಳ ತಂದು ಕೊಡುವೆವೆಂದನುವಿಸಿ ನಾವು ಬಹಾಗ (ಭರಚ. ೪೧–೪೬). **೬.** ಹೋಲು ; ಅನುಕರಿಸು : ಅನುವಿಸಿದುದು ರಜತಾಚಲದನರ್ಘ್ಯಮಣಿ ವಿಕಟಕೂಟಮಂ ದಶರಥರಾಮನ ಮಣಿಮಯಮಕುಟಂ (ಪಂರಾಮಾ. ೫–೧೩೩); ಮಣಿಮಕುಟಕಾಂತಿ ಪೊದಱ್ದು ನೀಳ್ದು ಮಿಗೆ ಪರ್ವಿ ಶಕ್ರಧನುವನನುವಿಸೆ ಕೆಳರ್ದ ಕೇಸರಿಗಳಂತೆ ನಡೆಯೆಯುಂ (ಪಂರಾಮಾ. ೧೪–೧೨೮ ವ) ; ತನಗೆಯೆ ತಾನಿರ್ಪುದೆನಿಪ ತತ್ತ್ವ ಸುಲೋಚನದೊಳ್ ನೋಟ್ಟಂತನುವಿಸಿ ತೋರ್ಪಂ ಕವಿ ನಿಜನೇತ್ರತೆಯಂ (ಸಂಸಪ. ೪೩–೭೮). **೭.** ಸೇರು ; ಕೂಡಿಕೊಳ್ಳು ; ಹೊಂದಿಕೊ : ಷಟ್ತ್ರಿಂಶ[ದುದ್ಯ]ದ್ಗುಣಂ ಬಿತ್ತರದಿಂದಂ ಸದ್ಗುಣವ್ರಾತದೊಳನುವಿಸೆ ಸಮ್ಯಕ್ತಪಃಶೀಲಜಾಲಂ ಪೊರೆದಂತೇವಾಸಿ ಭವ್ಯಾಳಿಗತುಳತಪಃಶೀಲಮಂ ಮಾಡೆ (ಪುಷ್ಪಪು. ೧–೩) ; ಅಮ್ರಕೂಷ್ಮಾಂಡಿನಿಯೊಪ್ಪುವ ಮಂತ್ರಮಿದುವೆ ಸಕಳ ವಿಧಾನಕ್ಕನುವಿಸೆ ಪರವಿದ್ಯಾಛೇದನಮುಂ ಮಾಱ್ಕುಂ (ಖಮದ. ೧೪–೧೫). **ಅನಿವಿಸು$_2$** : **೬.** ಅಂತರಂಗಸಂಗತಾವೇಗಭಾವಮೆ ರಣಪ್ರಯಾಣಲಾಲಸೆಯನನುವಿಸೆ ಶರೀರಮಾ ನೆಗಪಿದಂತಿರಸವಸದೆ ಬಱಿದೆ ಸಿಡಿದೇೞ್ವ ರಭಸಮೊಗೆವಿನಂ (ವರ್ಧಪು. ೭–೪೧ ವ). [ಅನುವು$_1$ (< ಅನು$_2$) + -ಇಸು$_3$]

**ಅನುವೀಚಿಭಾಷಣ** (ನಾ). ತಪ್ಪಿಲ್ಲದ ಮಾತು ; ನಿರ್ದೋಷವಾದ ನುಡಿ : ಅನುವೀಚಿಭಾಷಣಂಚ–ನಿರವದ್ಯಮಪ್ಪ ನುಡಿಯುಮೆಂಬ (ತತ್ತ್ವಪ್ರ. ೨೭೦). [ಸಂ.]

**ಅನುವೀಡು** (ನಾ). ಅನುಕೂಲವಾದ ಆವಾಸಸ್ಥಾನ ; ಹಿತಕರವಾದ ಮನೆ : ಆರೋಗ್ಯಕ್ಕನುವೀಡು ಕೃಷ್ಣನರಪಂಗೊಪ್ಪಿರ್ಪ ಕಣ್ಬೀಡು (ಮೈಸೂಮ. ೩–೮). [ಅನು$_2$ + ಬೀಡು$_1$]

**ಅನುವು$_1$** 'ಅನು$_2$' ನೋ.

**ಅನುವು$_2$** 'ಅನಿವ' ನೋ.

**ಅನುವೃತ್ತ** (ಗು). ೧. ಅನುಸರಿಸುವ; ಜೊತೆಗೆ ಬರುವ; ವಿಧೇಯ. ೨. ಹಿಂದೆ ನಿಂತಲ್ಲಿಂದ ಮುಂದುವರಿದ. ೩. (ವ್ಯಾಕರಣವೇ ಮುಂತಾದ ಶಾಸ್ತ್ರಗಳಲ್ಲಿ) ಹಿಂದಿನ ಸೂತ್ರದಿಂದ ಅನುಸರಿಸಿ ಬಂದ. ೪. ನಡತೆಗೆ ಹೊಂದುವ; ಅನುಗುಣವಾದ. (ನಾ). ೫. ಅನುಸರಿಸಿದ ನಡೆ; ವಿಧೇಯತೆ: ತನ್ನೊಡವಂದ ಮ್ಲೇಚ್ಛ ರಾಜರಂ ರಾಜರಾಜಾನುಜೀವಾನುವೃತ್ತದಿಂ ಕೃತಾರ್ಥರ್ಮಾಡಿ (ಶಾಂತಿಪು. ೧೧–೭೧ ವ). [ಸಂ.]

**ಅನುವೃತ್ತಿ** (ನಾ). ೧. ಅನುಸರಿಸಿ ನಡೆಯುವುದು; ಅನುಕರಣ. ೨. (ವ್ಯಾಕರಣವೇ ಮುಂತಾದ ಶಾಸ್ತ್ರಗಳಲ್ಲಿ) ಹಿಂದಿನ ಸೂತ್ರವಾಗಲಿ ಸೂತ್ರದಲ್ಲಿನ ಮಾತುಗಳಾಗಲಿ ಮುಂದಿನ ಸೂತ್ರದಲ್ಲಿ ಅಥವಾ ಸೂತ್ರಗಳಲ್ಲಿ ಅನ್ವಯಿಸುವಿಕೆ: ಸಮಮೆಂಬುದು ಬಂಧದೊಳವಿಷಮಂ ಮೃದು ಸ್ಫುಟವಿಮಿಶ್ರವಿನ್ಯಾಸಪದ ಕ್ರಮದಿಂ ಮೂಱುತೆಱಂ ಬಂಧಮುಂ ಯಥಾರ್ಥಾನುವೃತ್ತಿಯಿಂ ವರ್ತಿಸುಗುಂ (ಕಾವ್ಯಾವ. ೫೦೧). ೩. ಒಪ್ಪಿಗೆ ಕೊಡುವುದು; ಅನುಮೋದನೆ. ೪. ಆಶ್ರಯ; ಸೇವೆ: ಅವನ ಅನುವೃತ್ತಿ ಮಾಡಿ ಮಾಡಿ ಸಾಕಾಯಿತು. ಇನ್ನು ನಾನು ಅನುವೃತ್ತಿ ಮಾಡಲಾರೆ (ರೂಢಿ). ೫. ಪುನರಾವರ್ತನೆ. [ಸಂ.]

**ಅನುವೃತ್ತಿಗೈ** (ಕ್ರಿ). ಅನುಸರಿಸಿ ವರ್ತಿಸು; ಹಿತವಾಗಿ ನಡೆದುಕೊ; ವಿಧೇಯತೆಯಿಂದ ನಡೆ: ಅತ್ತೆ ಮಾವನು ಮೊದಲಾದ ಪೂಜ್ಯರೊಳನುವೃತ್ತಿಗೈದಾತ್ಮವಲ್ಲಭನ ಚಿತ್ತವಱಿತು ಸೇವೆಯೆಸಗುವ ಸತಿಯರ ವೃತ್ತವ ಬಿತ್ತರಿಸುವೆನು (ಹದಿಬ. ೪–೩). [ಅನುವೃತ್ತಿ + ಗೈ (< ಗೆಯ್)]

**ಅನುವೇಱು** (ಕ್ರಿ). ಸುಖವನ್ನು ಪಡೆ; ನೆಮ್ಮದಿಯನ್ನು ಹೊಂದು; ಅನುಕೂಲಹೊಂದು: ಅವನನಪ್ರತಿಮಂ ಬಳೆಯಿಕುಮನುವೆತ್ತಾ ತಿರುಮಲಾರ್ಯನಂತುಟು ನೆಗಟ್ಟಂ (ಅಪ್ರತಿ. ೧–೧೧); ಅಱ್ಟಿಯೊಳನುವೆತ್ತು ನೆಗಟ್ದನಾ ದೊಡದೇವಂ (ಚಿಕವಿ. ೪–೩). [ಅನ್ಉ$_2$ + ಏಱು]

**ಅನುವೇದನೆ** (ನಾ). ಸಹಾನುಭೂತಿ. [ಸಂ. ಅನುವೇದನಾ]

**ಅನುವೇರು** 'ಅನುವೇಱು' ನೋ.

**ಅನುವೇಷ್ಟಿಸು** (ಕ್ರಿ). ಚೆನ್ನಾಗಿ ಸುತ್ತುಗಟ್ಟು; ಬಳಸಿಕೊಳ್ಳು; ಆವರಿಸು: ಇಳೆಯಂ ಸಪ್ತಶರನಿಧಿಗಳನುವೇಷ್ಟಿಸಿರಲ್ (ಜೈಮಿಭಾ. ೨–೧). [ಅನುವೇಷ್ಟನ + –ಇಸು$_3$]

**ಅನುವೇಱು**, ಅನುವೇರು (ಕ್ರಿ). ಅಂದವನ್ನು ಪಡೆ; ಚೆನ್ನಾಗು; ಅನುಕೂಲತೆ ಹೊಂದು: ಮೂಱನೆಯಾವರಣದೊಳನುವೇಱಿರ್ಕುಂ ಪತ್ತುಮಾಳ್ದನವತಾರಂಗಳ್ (ಚಿಕವಿ. ೫–೧೨೬). **ಅನುವೇರು**: ಇಂತಹ ಈ ಉರವಣೆಯ ವಾಚಾಳತೆಯಿಂದ ಅವ ಅರಮನೆಯ ಗೌರವ ಮರ್ಯಾದೆಗಳೂ ಅನುವೇರುವಂತಿಲ್ಲ (ಬಿರುಗಂ. ೩೦–೨೨).
[ಅನುವು$_1$ (< ಅನ್ಉ$_2$) + ಏಱು$_1$]

**ಅನುವ್ಯಾಯಮಿತ** (ಗು). ಅನುಕೂಲವಾದ ಮತ್ತು ಕ್ರಮವಾದ ರೀತಿಯಲ್ಲಿ ಹರಡಿದ: ಶ್ಲಕ್ಷ್ಣಸ್ನಿಗ್ಧಮೃದು ಬಹುಳಾನುವ್ಯಾಯಮಿತ ಪ್ರತಿಯಾಂಕ ಸ್ನಿಗ್ಧಪ್ರಕಾಶ ಸೂಕ್ಷ್ಮಬಿಂದುಸಂದೋಹನುಂ (ಶಾಂತಿಪು. ೧೦–೧೪೩ ವ). [ಸಂ.]

**ಅನುವ್ರಜ್ಯೆ** (ನಾ). ಜೊತೆಗೆ ನಡೆಯುವುದು; ಪ್ರಯಾಣಮಾಡುವವರ ಜೊತೆಗೆ ಸ್ವಲ್ಪ ದೂರ ಹೋಗುವುದು.
[ಸಂ. ಅನುವ್ರಜ್ಯಾ]

**ಅನುಶಕ್ತ** (ಗು). ಅನುಸರಿಸಿ ಶಕ್ತಿಯನ್ನು ಪಡೆದ: ಗುರುಗುಣಗಣಾರತ ವಿರಚನಾಯತಚಿದನುಶಕ್ತ (ಬಸವು. ೩೯–೬೮). [ಸಂ.]

**ಅನುಶಕ್ತಿ** (ನಾ). ಅನುಸರಿಸಿ ಬಂದ ಶಕ್ತಿ; ಅನುಗುಣವಾದ ಸಾಮರ್ಥ್ಯ, —ಬಲ (?): ರಕ್ತಿಯಿಂದಯ್ಯಾಯೆನಲ್ಕನುಶಕ್ತಿಯಿಂ ದೋಯೆನುತಮಿಹ ಪೂರ್ವೋಕ್ತ ವಚನಂಗಳನುಡುಗಿ ವಾಲ್ಮೀಕವಲ್ಲಭನು (ಬಸವು. ೨೬–೨೪); ಸರಸಾಯತ್ತ ಲಿಂಗಾಭ್ಯರ್ಚನಕ್ರಿಯೆವೊತ್ತು ತಚ್ಛಿವಪರವಶಾಲೀಢಾನುಶಕ್ತಿಯಲಿ (ಬಸವು. ೩೫–೧). [ಸಂ.]

**ಅನುಶಯ** (ನಾ). ೧. ಸಮೀಪ ಸಂಬಂಧ. ೨. ಬಹಳ ಕಾಲದಿಂದ ಬಂದ ಹಗೆತನ. ೩. ಪಶ್ಚಾತ್ತಾಪ. ೪. ಮನಸ್ಸಿನ ಉದ್ವೇಗ; ಕಳವಳ: ಸಿಂಧುನಂದನ ಧೃತರಾಷ್ಟ್ರರಿರ್ದೊರೆಯೆ ನಮ್ಮರಸಂ ಮರಳ್ದಿಂಬುಕೆಯ್ಯುಮೆಂದನುಶಯಮಾದುದಿಂದೆನಗೆ ಸಂಶಯಮಂ ಕಳೆ ಕೌರವಾಂತಕಾ (ಗದಾಯು. ೧–೫೬); "ಅನುತಾಪಮನುದನುಶಯ" (ಮಂಗರಾ. ೧೨೯–೧೪). ೫. ಮುನಿಸು; ಕೋಪ: "ಮುನಿಸುದ್ವೇಗ ಸಹಾಯಮಿಂತನುಶಯಾಖ್ಯ" (ನಾನಾರ. ೧೪೩). ೬. ಜನ್ಮಾಂತರಗಳಿಗೆ ಕಾರಣವಾದ ಹಿಂದಿನ ದುಷ್ಕೃತದ ಪರಿಣಾಮ. ೭. ಬೇರೊಂದನ್ನು ಆಶ್ರಯಿಸಿಕೊಂಡು ಬಾಳುವ ವಸ್ತು; ಪರಾಶ್ರಯ: ಶರೀರದಲ್ಲಿ ಜೀವಿಗಳು ಇರಬಹುದಾದ ಸ್ಥಿತಿಯನ್ನು ಶಾಸ್ತ್ರಗಳು ಎರಡು ತೆರನಾಗಿ ವರ್ಣಿಸಿವೆ. ಒಂದು ಅಭಿಮಾನಿ, ಮತ್ತೊಂದು ಅನುಶಯ. ಒಂದಾನೊಂದು ಶರೀರವನ್ನು ಆಶ್ರಯಿಸಿಕೊಂಡು ಬಾಳುವುದು ಅನುಶಯ ಆದರೆ ಅದು ಸ್ವಂತ ಶರೀರವಲ್ಲ. ಹೇನು ಕೂರೆ ಇತ್ಯಾದಿಗಳು ಇದಕ್ಕೆ ಉದಾಹರಣೆ (ಜೀವಾತ್ಮ. ೨೪೪). [ಸಂ.]

**ಅನುಶಯಂಬಡು** (ಕ್ರಿ). ಅನುತಾಪ ಹೊಂದು; ಪಶ್ಚಾತ್ತಾಪ ಪಡು; ಮರುಗು: "ವಿಪ್ರತಿಸಾರಃ, ಅನುಶಯಃ, ಪಶ್ಚಾತ್ತಾಪಃ, ಅನುತಾಪಃ– ಈ ೪ ಅನುಶಯಂಬಡುವುದು" (ಹಲಾಯು. ೧೯೯–೩೧).
[ಅನುಶಯ + ಪಡು$_1$]

**ಅನುಶಾಸನ** (ನಾ). ೧. ನಿಬಂಧನೆ; ನಿರ್ದೇಶನ; ಕಟ್ಟುಪಾಡು; ಅಪ್ಪಣೆ: ಬಪ್ಪನನುಶಾಸನದಿ ಬನಕೆ ಪೋಗಲ್ವೇಗಲಪ್ಪಣೆಯನಿತ್ತು ಕಳುಪಿದೊಡೆ (ವೆಂಕಾರಾ. ೨–೯–೩೨). ೨. ಶಿಕ್ಷಣ; ಉಪದೇಶ: ಅನುಶಾಸನವೆಂದರೆ ವೇದಭಾಷೆಯಲ್ಲಿ ಉಪದೇಶವೆಂದರ್ಥ (ಹಿಂದಸಾ. ೯೩). 'ದರ್ಶನಾನುಶಾಸನ', 'ಶಬ್ದಾನುಶಾಸನ' ಪರಾ. ೩. ದಂಡನೆ; ನಿಗ್ರಹ; ಶಿಕ್ಷೆ: ಅಸದನುಶಾಸನಂ ಸದವನಂ ನೃಪಲಕ್ಷಣಂ (ಪಂರಾಮಾ. ೬–೧೧೩). [ಸಂ.]

**ಅನುಶಾಸಿಸು** (ಕ್ರಿ). ೧. ಹೇಳಿದಂತೆ ಕೇಳುವಹಾಗೆ ಮಾಡು; ನಿಯಮಿಸು; ವಿಧೇಯವಾಗಿಸು: ಆ ನಿಶಾಚರಾಧಿನಾಥಂ . . . ಶಮನನನುಶಾಸಿಸಿಯುಂ (ಜಗವಿ. ೧೧–೮೧ ವ). ೨. ದಂಡಿಸು; ಶಿಕ್ಷಿಸು: ಮೂಢೆ ಮದನನಿಂ ಲಘುವಾದೆಯೆಂದಾಭಿಜಾತ್ಯಮೆ [ತನ್ನನನುಶಾಸಿಪಂತೆಯುಂ] . . . ಅತಿಲಜ್ಜಿತೆಯಾಗಿ ತನ್ನೊಳಿಂತೆಂದಳ್ (ಕಾದಂಬ. ೭೫).
[ಅನುಶಾಸನ + –ಇಸು$_3$]

**ಅನುಶಾಸ್ಯ** (ಗು). ದಂಡಿಸಲು ಯೋಗ್ಯವಾದ; ಶಿಕ್ಷಾರ್ಹವಾದ: ಜಯವಧುಗಾಣ್ಮನಾಗಿಯುಮುಸೌಮ್ಯನೆ ವೃದ್ಧಪರೀತ ಮೂರ್ತಿಯಾಗಿಯುಮನುಶಾಸ್ಯನೇ (ಶಾಂತಿಪು. ೧೧–೬೬). [ಸಂ.]

**ಅನುಶೀಲನ**, ಅನುಶೀಲನೆ (ನಾ). ಪರಿಶೀಲನೆ; ಅಧ್ಯಯನ: ಕನಸಿನ ವೃತ್ತಾಂತವನ್ನೆಲ್ಲಾ ಅನುಶೀಲನಮಾಡಿಕೊಂಡು ಬಂದವರಿಗೆ ಇಲ್ಲಿ ಉದಾತ್ತವಾದ ಬೇರೊಂದು ಅರ್ಥ ನಿಸ್ಸಂದೇಹವಾಗಿ ಧ್ವನಿತವಾಗುತ್ತದೆ (ಭಾರಮಿಾ. ೨೬೪); 'ಧರ್ಮತತ್ತ್ವ'ದ ಪ್ರಥಮ ಭಾಗವಾದ 'ಅನುಶೀಲನವು' ಗುರು ಶಿಷ್ಯ ಸಂವಾದರೂಪದಲ್ಲಿದೆ (ಬಂಕಿಮ. ೪೧೨). **ಅನುಶೀಲನೆ**: ನಿರಂತರವಾಗಿ ಕಾವ್ಯದ ಅನುಶೀಲನೆಯಿಂದ ಮಾನಸದರ್ಪಣವು ನಿರ್ಮಲವಾಗಿರಬೇಕು (ಧ್ವನ್ಯಾಲೋ. ೧೦).
[ಸಂ. ಅನುಶೀಲನ]

**ಅನುಶೀಲನೆ** 'ಅನುಶೀಲನ' ನೋ.

**ಅನುಶೈವ** (ನಾ). ಶಿವದೀಕ್ಷೆ ಪಡೆದ ಕ್ಷತ್ರಿಯ ಅಥವಾ ವೈಶ್ಯ: ದೀಕ್ಷಾಯುಕ್ತಮಾದ ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ ... ಎಂಬವೇ ಸಪ್ತಶೈವಂಗಳು ... ಅವುಗಳಲ್ಲಿ ಶಿವಸಂಸ್ಕಾರಿಗಳಾದ ಕ್ಷತ್ರಿಯರೇ ಅನುಶೈವರು (ವಿವೇಕ. ೭೨) ; ಆದಿಶೈವ, ಮಹಾಶೈವ, ಅನುಶೈವ ... ಎಂಬ ಈ ಆಱು ಶೈವದ ನೀತಿಯಲ್ಲ (ಸಿದ್ಧೇವ. ೯). [ಸಂ.]

**ಅನುಶೋಣಿತ** (ಗು). ಬೇರೊಂದನ್ನು ಅನುಸರಿಸಿ ಕೆಂಪಾದ: ಲೀಲಾಕಮಲಾಕರಾನೀಕ ರಕ್ತಕಮಳಂಗಳನಾಸ್ಯಾನುಶೋಣಿತ ಶೋಣರಿಪು ನೃಪಶಿರಂಗಳಿಂದೆ ತುಱುಱಿಯಿಸಿಯುಂ (ಆದಿಪು. ೮-೪೧ ವ). [ಸಂ.]

**ಅನುಶ್ರುತ** (ಗು). **೧.** ವೇದಗಳಿಗನುಸಾರವಾಗಿ, ಪರಂಪರೆಯಿಂದ ಪ್ರಾಪ್ತವಾದ; ಶ್ರುತಿಗಳಿಗನುಸಾರವಾಗಿರುವ. **೨.** ಶಾಶ್ವತವಾದ; ನಿರಂತರವಾದ. (ನಾ). **೩.** ಕೇಳಿ ಕೇಳಿ ಪ್ರಖ್ಯಾತವಾದ, ಪ್ರಸಿದ್ಧವಾಗಿರುವ ವ್ಯಕ್ತಿ ಅಥವಾ ವಸ್ತು: ಸಕಲ ಜಗದೊಳಗೆ ಅನುಶ್ರುತನಾಗಿಪ್ಪೆಯಯ್ಯಾ; ನೀನೊಲಿದವನೇ ನಿಮ್ಮನಱಿವನು (ಬಸವ. ೫೦೭). **೪.** ವೃತ್ತಾಂತ; ಸುದ್ದಿ. [ಸಂ.]

**ಅನುಶ್ರೇಣಿ** (ನಾ). ಪಂಕ್ತಿಕ್ರಮ; ಸಾಲನ್ನು ಅನುಸರಿಸಿದ ಕ್ರಮ. 'ಅನುಶ್ರೇಣಿಗತಿ' ಪರಾ. [ಸಂ.]

**ಅನುಶ್ರೇಣಿಗತಿ** (ನಾ). ಪಂಕ್ತಿಕ್ರಮವನ್ನು ಅನುಸರಿಸಿ ನಡೆಯುವುದು: ಅನುಶ್ರೇಣಿಗತಿಃ ಅನುಶ್ರೇಣಿ-ಆಕಾಶಪ್ರದೇಶಪಙ್ಕ್ತಿಕ್ರಮದಿಂ, ಗತಿಃ-ಸಲವಕ್ಕುಂ (ತತ್ತ್ವಪ್ರ. ೧೦೦). [ಅನುಶ್ರೇಣಿ + ಗತಿ]

**ಅನುಷಂಗ** (ನಾ). **೧.** ಸಂಬಂಧ; ಸಹವಾಸ; ಜೊತೆ: ಪರಹಿತಕುಲಪ್ರಸಂಗಂ ನಿರಸ್ತದೋಷಾನುಷಂಗನಿಜಿಱುವಬೆಡಂಗಂ (ಗದಾಯು. ೧-೨೧); ದೂರೀಕೃತದೋಷಾನುಷಂಗನಭಿನವಪಂಪಂ (ಪಂರಾಮಾ. ೧೬-೧). **೨.** ದಯೆ; ಕನಿಕರ. **೩.** ಯಾವುದೋ ಉದ್ದೇಶಕ್ಕಾಗಿ ತೊಡಗಿದ ಕಾರ್ಯದಲ್ಲಿ ನಡುವೆ ಉಂಟಾಗುವ ಬೇರೆಯ ಪ್ರಯೋಜನ; ಉಪಪ್ರಯೋಜನ. **೪.** ಸಂದರ್ಭ; ಪ್ರಕರಣ; ಪ್ರಸಂಗ: ಇದರ ಹೊರತು ಬೇರೆ ಬೇರೆ ಅನುಪಾನಗಳಲ್ಲಿ ಬೇರೆ ಬೇರೆ ಅನುಷಂಗದಲ್ಲಿ ಕೊಡಬೇಕಾಗುತ್ತದೆ (ಔಷಧೀ. ೭೨). [ಸಂ.]

**ಅನುಷಂಗಿ** (ಗು). ಅನುಷಂಗವುಳ್ಳ. [ಸಂ. ಅನುಷಂಗಿನ್]

**ಅನುಷಕ್ತ** (ಗು). ಕೂಡಿದ; ಸೇರಿದ; ಜೊತೆಯಾದ: ಭೋಗ್ಯಂಗಳಂ ತರದಿಂದುಂಡು ಗುಣಾನುಷಕ್ತರೊಗೆವರ್ದೇವಾದಿ ದೇಹಾತ್ಮಕರ್ (ವೈಸೂಮ. ೫-೧೬೦). [ಸಂ.]

**ಅನುಷ್ಟುಪು** 'ಅನುಷ್ಟುಪ್ಪು' ನೋ.

**ಅನುಷ್ಟುಪ್ಪು**, ಅನುಷ್ಟುಪು (ಗು). **೧.** ಸ್ತೋತ್ರಕ್ಕೆ ಯೋಗ್ಯವಾದ (ನಾ). **೨.** ಭಾಷೆ; ಸರಸ್ವತಿ. **೩.** [ಛಂದ] ಪಾದ ಒಂದಕ್ಕೆ ಎಂಟು ಅಕ್ಷರಗಳಿಂದ ಕೂಡಿದ ಎಂಟನೆಯ ಛಂದಸ್ಸು: ಅನೆಯ ಅನುಷ್ಟುಪ್ಪು ಎಂಬ ಛಂದಸ್ಸಿನಲ್ಲಿ ಜರಂ ಲಗಂ ಪ್ರಮಾಣಿಕಂ (ಕೈಪಿಡಿ. ೭೯); ಅನುಷ್ಟುಪ್ಪು ಅಥವಾ ಶ್ಲೋಕ ಸಂಸ್ಕೃತ ಕಾವ್ಯಗಳಲೆಲ್ಲಾ ಬಹು ಪ್ರಚಾರವುಳ್ಳದ್ದು (ಕೈಪಿಡಿ. ೧೧೭). **೪.** ಎಂಟು ಎಂಬ ಸಂಖ್ಯೆಯ ಒಂದು ಹೆಸರು: ದುರಿತಾಷ್ಟಕ ಕರ್ಮಂ ವಸು ಕರಿ ದಿಙ್ನಾಗಂ ಮದವದನುಷ್ಟುಪ್ಛಂದಂ ಹರನತನು ಸಿದ್ಧಿವಾರಣಮಾರಯೆ ಯೆಂಟಕ್ಕೆ ನಾಮಂ (ವ್ಯವಹಾ. ೯-೮). **ಅನುಷ್ಟುಪು:** **೩.** "ಗಾಯತ್ರಿಯುಷ್ಣಿಕುಮನುಷ್ಟುಬ್ಬೃಹತಿ ... ಉತ್ಕೃತಿಗಳೆಂದೆನಿಪುವಿಪ್ಪತ್ತಾಱು ಛಂದಂಗಳಕ್ಕುಂ" (ಮಂಗರಾ. ೧೦೬-೧೮). [ಸಂ. ಅನುಷ್ಟುಭ್]

**ಅನುಷ್ಟುಭು** (ನಾ). = ಅನುಷ್ಟುಪ್ಪು **೩**: ಗಾಯತ್ರಿ ಉಷ್ಣಿಕ್ ಅನುಷ್ಟುಭ್ ಬೃಹತಿ ಪಂಕ್ತಿ...ಎಂದು ಇಪ್ಪತ್ತಾಱುಂ ಛಂದಂಗಳಕ್ಕುಂ (ಛಂದೋಂಬು. ೧-೫೫); ಅನುಷ್ಟುಭ್: – ನಾಲ್ಕು ಪಾದದ ಗಾಯತ್ರಿ: ೮ ಅಕ್ಷರವುಳ್ಳ ೪ ಪಾದಗಳು (ಕೈಪಿಡಿ. ೧೦೬); ವೈದಿಕ ಛಂದಸ್ಸಿನಲ್ಲಿ ಗಾಯತ್ರಿ, ಅನುಷ್ಟುಭ್, ತ್ರಿಷ್ಟುಭ್, ಜಗತಿ, ಪ್ರಗಾಥ ಹೀಗೆ ಐದು ಮುಖ್ಯ ಪ್ರಕಾರಗಳೆಂದು ತೋರುತ್ತದೆ (ಛಂದೋವಿ. ೪೬). [ಸಂ. ಅನುಷ್ಟುಭ್]

**ಅನುಷ್ಠಾನ** (ನಾ). **೧.** ಆಚರಣೆ ಮಾಡುವುದು; ಶಾಸ್ತ್ರಗಳಲ್ಲಿ ಹೇಳಿರುವುದನ್ನು ನಡೆ ನುಡಿಗಳಲ್ಲಿ ಅನುಸರಿಸುವುದು. **೨.** ಜಪ, ತಪ, ಪೂಜೆ ಮುಂತಾದುವುಗಳ ಆಚರಣೆ: ಯಮನಿಯಮ ಸ್ವಾಧ್ಯಾಯಧ್ಯಾನಧಾರಣ ಮೋನಾನುಷ್ಠಾನ ಜಪಸಮಾಧಿ ಶೀಳ ಸಂಪ್ಪನ್ನರ್ (ಸೌಇಇ. XX, ೪೬-೧೭; 1072); ಸತ್ಯ ಶುದ್ಧ ದೇವರಿಗೆ ಧ್ಯಾನ, ಮೌನ, ಅನುಷ್ಠಾನವುಂಟು (ಬಸವ. ೯೩೪); ಪ್ರಭುಗಳು ಹೋಗಿ ಕುಳಿತುಕೊಂಡು ಮಂತ್ರಾನುಷ್ಠಾನಮಾಡಿ ಅನಂತರ ಈಚೆಗೆ ಬಂದರು (ಶಾಂತಲಾ. ೨೩೬). [ಸಂ.]

**ಅನುಷ್ಠಾನಿ** (ನಾ). ಅನುಷ್ಠಾನ ಮಾಡುವವನು,—ಆಚರಿಸುವವನು: ವಾಲ್ಮೀಕಿ ಸಂತಸದಳೆದು ತಮಸಾನದಿಯ ತಟದಲಿ ಕುಳಿತು ಸಂಧ್ಯಾವಂದನಾನುಷ್ಠಾನಿಯಾಗಿರಲು (ಅನಂರಾ. ೧-೨-೨೮). [ಸಂ. ಅನುಷ್ಠಾನಿನ್]

**ಅನುಷ್ಠಿತ** (ಗು). ನೆರವೇರಿಸಿದ; ಮಾಡಲ್ಪಟ್ಟ; ಆಚರಿಸಿದ; ಅಭ್ಯಾಸಮಾಡಿದ: ಅಂತು ನೇಸರ್ಮೂಡುವುದುಮನುಷ್ಠಿತ ವಿಹಿತಾನುಷ್ಠಾನಂ ಧರ್ಮಸಹಾಯನಪ್ಪುದಱಿಂ ವಿವಿಧಾಯುಧ ನಿವೃತ್ತಿಗೆಯ್ದುಂ (ಮಲ್ಲಿಪು. ೧೦-೧೯). [ಸಂ.]

**ಅನುಷ್ಠಿಸು** (ಕ್ರಿ). ಆಚರಿಸು; ನೆರವೇರಿಸು; ನಡಸು: ಯುಧಿಷ್ಠಿರಂ ನಿಶ್ಚಿತಕಾರ್ಯಮನನುಷ್ಠಿಸೆ (ಪಂಪಭಾ. ೮-೫೦ ವ); ರಾಜ್ಯಲಕ್ಷ್ಮಿಯನನುಷ್ಠಿಸಿದಂ ನಯದಿಂ ಯುಧಿಷ್ಠಿರಂ (ಕಾವ್ಯಾವ. ೭೨೮); ಸತ್ಯಾಗ್ರಹ ಆಶ್ರಮಕ್ಕೆ ಸೇರಿ ಅಲ್ಲಿನ ನಿಯಮಗಳನ್ನು ಅನುಷ್ಠಿಸಿ ತನ್ನ ಬಾಳನ್ನು ಪವಿತ್ರಗೊಳಿಸಬೇಕೆಂಬ ಆಸೆಯು ಪ್ರಬಲವಾಯಿತು (ಶಾಂಪಜೀ. ೩). [ಅನುಷ್ಠಾನ + –ಇಸು]

**ಅನುಷ್ಠೇಯ** (ಗು). ಅನುಸರಿಸಬಹುದಾದ: ವರ್ಣಾಶ್ರಮಧರ್ಮಗಳು ಆಯಾವರ್ಣದವರಿಗೂ ಆಶ್ರಮದವರಿಗೂ ಅನುಷ್ಠೇಯಗಳು (ಆರ್ಯಧ. ೩೧) [ಸಂ.]

**ಅನುಷ್ಣ** (ಗು). **೧.** ಬಿಸಿಯಲ್ಲದ. **೨.** ಬಿಸಿಯಿಲ್ಲದ. **೩.** ಜಡವಾದ. **೪.** ತಣ್ಣನೆಯ; ಶೀತಲವಾದ; ತಂಪಾದ. (ನಾ). **೫.** ನೈದಿಲೆ; ಉತ್ಪಲ. [ಸಂ.]

**ಅನುಸಂಜಾತೆ** (ನಾ). ಅನುಸರಿಸಿ ಹುಟ್ಟಿದವಳು; ತಂಗಿ: ಎಲೆ ಮಾಯಾದೇವಿ ... ನೀಂ ದೇವಕೀಗರ್ಭದ ಶಿಶುವನನಂತಾಂಶಮಂ ಕರ್ಷಣಂಗೆಯ್ದು ... ನಂದಸ್ತ್ರೀಯ ಗರ್ಭಕ್ಕವತರಿಸಿ ಮದೀಯಾನುಸಂಜಾತೆಯಾಗು (ಜಗವಿ. ೨-೫೮, ೫೯). [ಸಂ. ಅನುಸಂಜಾತಾ]

**ಅನುಸಂಧಾನ** (ನಾ). **೧.** ಕ್ರಮವಾಗಿಡುವುದು; ಓರಣವಾಗಿ ಇರಿಸುವುದು; ಕ್ರಮ. **೨.** ಪರೀಕ್ಷಿಸುವುದು; ಹುಡುಕುವುದು; ಪರಿಶೀಲನೆ; ವಿಚಾರಿಸುವುದು; ವಿಮರ್ಶೆ: ಏನನೆಂಬೆನು ಜೀಯ ಬಹಳ ಕೃಪಾನಿಧಿಯಲಾ ಭೀಷ್ಮನನುಸಂಧಾನವಿಲ್ಲದೆ ಬೆಸಸಿ ಕಳುಹಿದ ನೆಂದನಾ ಕರ್ಣ (ಕುವ್ಯಾದ್ರೋ. ೧-೩೩). **೩.** ಯೋಜನೆ; ಏರ್ಪಾಡು: ಚತುರಂಗ ಸೇನೆಯಂ ಸಕಲ ಭಂಡಾರವಂ ... ಆನಂದದಿಂದಿತ್ತೆ ನಿನ್ನ ಸರ್ವಾನುಸಂಧಾನಮಂ ಬಿಟ್ಟು ಕರುಣಿಸಿ ಹರಸುತಿಹುದೆಂದು ಭೂನಾಥ ನೆಜಗಿ ಬೀಳ್ಕೊಂಡಡೆ (ಹಚಕಾ. ೮-೪೭); ರಂಗಸುಖ ಕೇಳೀ ವಿಲೋಲಾಸಂಗ ತತ್ಪರಯುಕ್ತಿ ಸುವ್ರತ ಜಂಗಮಪ್ರಾಣಾನುಸಂಧಾನೈಕ ನಿಜಭಕ್ತಿ ಪಿಂಗದೆ (ಬಸಪು. ೮-೨೬); ಸಮರದನುಸಂಧಾನದಲಿ ಸಂಭ್ರಮಿಸಿ ಶೌರಿ ಸಮೀರಸುತನಲಿ ಸಮತೆಯನು ಸೇರಿಸಿದನಂದು ಸಮಗ್ರಸೂಕ್ತಿಯಲಿ

(ಕುವ್ಯಾಉ. ೬ ಸೂ). ೪. ಧ್ಯಾನ; ಮಂತ್ರಾದಿಗಳ ಜಪ: ಈ ಮಂತ್ರವನ್ನು ಒಂದು ಮಂಡಲ ಅನುಸಂಧಾನ ಮಾಡುವುದರಿಂದ ಮಹತ್ತರವಾದ ಫಲವುಂಟು (ರೂಢಿ). [ಸಂ.]

**ಅನುಸಂಧಾನಂಗಿಡು** (ಕ್ರಿ). ಅನುಕ್ರಮದಲ್ಲಿ ವ್ಯತ್ಯಾಸವಾಗು; ಕ್ರಮ ತಪ್ಪು: ಅನುಸಂಧಾನಂಗಿಡದ್ದೈದನೆಯದು ದುಷ್ಟಮಮೆನಿಪ್ಪಕಾಲಂ ಬಟಿಕಾಜನೆಯದತಿದುಷ್ಟಮಂ ವರ್ತನಮಿಂತೀ ತೆ ಜ ನೆ ರಹಟಘಟಿಕಾ ನ್ಯಾಯಂ (ಪಂರಾಮಾ. ೧–೫೭). [ಅನುಸಂಧಾನ + ಕಿಡು (< ಕೆಡು)]

**ಅನುಸಂಧಾನಿಸು** (ಕ್ರಿ). ಪರಿಭಾವಿಸು; ಧ್ಯಾನಿಸು: ಪಿಂಡಾಂಡ ಬ್ರಹ್ಮಾಂಡಗಳಲ್ಲಿ ಭೂಮ್ಯಾದ್ಯಾತ್ಮಾಂತಮಾದ ತತ್ತ್ವಗಳ ಕ್ರಮದಿಂ ನಕಾರಾದಿ ಪ್ರಣವಾಂತಮಾದ ಅಕ್ಷರಾತ್ಮಕನೆಂದು ಅನುಸಂಧಾನಿಸಿ ಬಳಿಕ ನ್ಯಾಸಂಗೈಯಲಕ್ಕು (ವಿವೇಕ. ೪೭). [ಅನುಸಂಧಾನ + –ಇಸು₃]

**ಅನುಸಂಧಿ** (ನಾ). = ಅನುಸಂಧಾನ ೫: ಘನತತ್ತ್ವವೊಂದಕ್ಕೆ ದಿನ ರಾತ್ರಿ ಮ ನ ಸೊ ೯ ತು ನೆನೆಯದಿನ್ನೊಂದನೆಲ್ಲವ ನೀಡುತದರಾ ಅನುಸಂಧಿಯಲಿ ಜೀವಭಾರವನು ಮರೆಯುವುದು ಹನುಮಂತನುಪದೇಶ (ಮಂಕುಕ.೬೬೬). [ಸಂ.]

**ಅನುಸಂಧಿಸು** (ಕ್ರಿ). ೧. ಜೋಡಿಸು; ಹೊಂದಿಸು: ರಸಭಂಗಭಯದಿನಿಂದ್ರಂ ಪೊಸತೊಂದಾಧೊರೆಯ ಪಾತ್ರಮಂ ತಂದನುಸಂಧಿಸುವುದು ಮ ದ ನ ಣ ಮ ಱಿ ಯ ಲ್ಕೆ ಸುರಾಸುರಸಮಿತಿಗಾದುದಿಲ್ಲಾ ಕ್ಷಣದೊಳ್ (ಆದಿಪು. ೯–೪೨). ೨. ಸೇರು; ಕೂಡು: ಕಂದದ ಪೂರ್ವಾರ್ಧದೊಳನುಸಂಧಿಸದಾರ್ಯಾ [ಪಾಠಾಂ. ಅನುಸಂದಿಲಾರ್ಯ, ಅನುಸಂಧಿಸದಾರ್ಯಾ, ಅನುಸಂದಿಸಲಾರ್ಯಾ] ಪರಾರ್ಧಮದನುಕ್ರಮದಿಂದೊಂದಿರ್ದೊಡೆ ಸಂಕೀರ್ಣಕಮೆಂದಂ (ಛಂದೋಂಬು. ೪–೯). [ಅನುಸಂಧಿ + –ಇಸು₃]

**ಅನುಸಮ** (ನಾ). ಅನುರೂಪ; ಅನುಗುಣ: ಅನುಸಮಮಾಯ್ತೆನೆ [ಪಾಠಾಂ. ಅನುಮತಮಾದುದು] ದುರ್ಯೋಧನ ಶಬ್ದಂ ಭೀಮಸೇನ ಶಬ್ದಂ ದುರ್ಯೋಧನನೆ ಗಡಂ ಭೀಮಂ ಭೀಮನೆ ಗಡ ದುರ್ಯೋಧನಂ ಗಡೇಂ ಸಮಬಲರೋ (ಗದಾಯು. ೮–೨೧). [ಸಂ.]

**ಅನುಸರ** (ನಾ). = ಅನುಸಾರ.

**ಅನುಸರಬರು** = ಹೊಂದಿಕೊಂಡುಬರು; ಅನುಸಾರವಾಗಿರು: ಆತಗನುಸರಬರದ ಮಿಗಿಲಿನ ಮಾತುಯಿಲ್ಲವನಿಯಲಿ (ಜಿನಭಾ. ೪೪–೭). [ಸಂ. ಅನುಸಾರ]

**ಅನುಸರಣ**, ಅನುಸರಣೆ (ನಾ). ೧. ಅನುಸರಿಸಿ ನಡೆಯುವುದು; ಹಿಂಬಾಲಿಸುವುದು. ೨. ವಿಧೇಯತೆಯಿಂದ ಕೂಡಿ ಆಶ್ರಯಿಸುವುದು. ೩. ಅಭ್ಯಾಸ; ಪದ್ಧತಿ; ಮಾಮೂಲು. ೪. ನಡವಳಿಕೆ; ವ್ಯವಹಾರ. ೫. ಸಲಿಗೆ; ಸರಾಗ. **ಅನುಸರಣೆ:** ೪. ಪರಮಹಂಸರಿಗಧಿಕ ತೇಜಿಷ್ಠರಿಗೆ ತೇಜೋಭಂಗಮುಖದನುಸರಣೆ ಕೊಂಬುದೆ ಕೋಪದಲಿ ಬಳಿಕವರ ಬಗೆಗೊಳದೆ (ತೊರರಾ. ೧–೮–೧೮). ೫. ಶಿವ ಭಕ್ತರು ತಮ್ಮ ನಿಜ ಕೈಲಾಸಕ್ಕೆ ಹೋದರೆ, ಆವರರಸಿಯ ಪಾರ್ವತಿಯ ಸರಿ ಎಂದು ಕಾಣಲಿಬೇಕು. ಅಲ್ಲಿ ಅನುಸರಣೆಯ ಕೊಟ್ಟು ಬೆರಸಿ ಮಾತನಾಡುವ ನರಕಿಗಳನೇನೆಂಬೆ (ದೇದಾವ. ೩೨–೫೭).

**ಅನುಸರಣೆ ಮಾಡು** = ಆಶ್ರಯಿಸು: ಅವನು ನಿನ್ನನ್ನು ತುಂಬ ಅನುಸರಣೆ ಮಾಡುತ್ತಿದ್ದಾನೆ; ಉದ್ದೇಶ ಏನೋ ಕಾಣೆ (ರೂಢಿ); **ಅನುಸರಣೆಯಾಗು** = ಅನುಸರಿಸಲ್ಪಡು; ಅನುಸರಣೆಗೆ ವಿಷಯವಾಗು: ಆಚಾರ ಅನುಸರಣೆಯಾಗದಲ್ಲಿ, ಲಿಂಗಬಾಹ್ಯವಾದಲ್ಲಿ, ತನ್ನ ವ್ರತನೇಮಕ್ಕೆ ಅನುಕೂಲವಾಗದೆ ಭಿನ್ನಭಾವಿಗಳಾದಲ್ಲಿ (ಮೋಳಿಮಾ. ೧೬–೬೨). [ಸಂ.]

**ಅನುಸರಣೆ** 'ಅನುಸರಣ' ನೋ.

**ಅನುಸರಿ** (ನಾ). ಅನುಸರಿಸುವವನು: ನಂಮೊಳಗೆ ವೊಬ್ಬರಯಿದಿರಿಗೆ ವೊಬ್ಬರು ಮಥ[ರಿ]ಂದ ಸಲ್ಲದು ನಿಂಮ ಯಿದಿರಿಗೆ ಬಹ ಅನುಸರಿಗಳಿಗೆ ನೆರನ ಕೊಡಸಲ್ಲದು (ಸೌಇಇ. VII, ೨೬೩–೧೨; 1509). [< ಸಂ. ಅನುಸಾರಿ]

**ಅನುಸರಿಸು** (ಕ್ರಿ). ೧. (ರೀತಿ, ಕ್ರಮ, ಮಾರ್ಗ ಮೊದಲಾದುವುಗಳಿಗೆ ಹೊಂದಿಕೊಳ್ಳುವಂತೆ) ಆಚರಿಸು: ಇನನ ರಥಚಕ್ರ ಮಾರ್ಗವನನುಸರಿಸಿ ಜಲಪ್ರವಾಹಮೇ ಪರಿದಪುದು (ಕಾದಂಪೂ. ೫೦೮). ೨. ಹೊಂದಿ ಕೊಂಡುಬರು; ಅನ್ವಯವಾಗು: "ಸಂಧಂ ಸಲೆ ವಶಗತಿಯೊಳವೊಂದಿದಭಿಪ್ರಾಯದೊಳಮನುಸರಿಸಿರ್ಕುಂ" (ವಸ್ತುಕೋ. ೧೧೯–೧೦). ೩. ಇಷ್ಟದಂತೆ ನಡೆ: ದನಿಗೇಳದ ಮುನ್ನೆ ತಾನಿದಿರ್ಗೊಂಡವನನುವಱಿತನುಸರಿಸುವುದು (ಹದಿಬ. ೩–೧೩).

ಅನುಸರಿಸಿ ನಡೆ=ಹೊಂದಿಕೊಂಡು ನಡೆ. [ಅನುಸರಣ + –ಇಸು₃]

**ಅನುಸರ್ಗಾವ್ಯಯ** (ನಾ). "ವಿಭಕ್ತಿ ರೂಪಗಳಿಗೂ ವಿಶೇಷಣ ಕೃದಂತಗಳಿಗೂ ಮುಂದೆ ಸೇರಿಕೊಂಡು ಬರುವ ಅವ್ಯಯಗಳಿಗೆ ಅನುಸರ್ಗಾವ್ಯಯಗಳೆಂದು ಹೆಸರು"(ಮಧ್ಯಮ. ೧೫೪); ಉದಾ:— ಹೊಳೆಯತನಕಓಟ; ದೊರೆತನಕ ದೂರು; ಈ ಪುಸ್ತಕದ ಸಲುವಾಗಿ ನಾನು ಮತ್ತೆ ಮನೆಗೆ ಹೋಗಬೇಕಾಯಿತು (ಮಧ್ಯಮ. ೧೫೪); ಆ ಮಾತನ್ನು ಕೇಳಿದ ಕೂಡಲೆ ಸೀತೆ ಧೊಪ್ಪನೆ ನೆಲಕ್ಕೆ ಬಿದ್ದಳು . . . ಇಲ್ಲಿ ಸಾಮಾನ್ಯಾವ್ಯಯ ಅನುಸರ್ಗಾವ್ಯಯಗಳು ಕ್ರಿಯಾವಿಶೇಷಣಗಳಾಗಿವೆ (ಮಧ್ಯಮ. ೧೮೩). [ಅನುಸರ್ಗ + ಅವ್ಯಯ]

**ಅನುಸಾರ** (ನಾ). ಕ್ರಮವಾಗಿ ನಡೆಯುವುದು; ಹೊಂದಿಕೊಂಡು ಬರುವುದು. [ಸಂ.]

**ಅನುಸಾರಂ** (ಅ). ಹೊಂದಿಕೊಂಡು ಬರುವ ರೀತಿಯಲ್ಲಿ; ಕ್ರಮವಾಗಿ: ಕ್ಷಕಾರಕ್ಕೆ ದ್ವಿತ್ವಂ ಬೆರಸಿದ ಕಕಾರಮುಂ ಚಕಾರಮುಂ ಖಕಾರಮುಂ ಪ್ರಯೋಗಾನುಸಾರಮಾಗಿ ಬಹುಳದಿನಕ್ಕುಂ (ಶಮದ. ೨೬೨ ವೃತ್ತಿ). [ಸಂ.]

**ಅನುಸಾರಿ** (ಗು). ೧. ಅನುಸರಿಸುವ; ಹಿಂಬಾಲಿಸುವ: ಬುದ್ಧಿಯು ಕರ್ಮಾನುಸಾರಿಯಾಗಿರುತ್ತದೆ (ರೂಢಿ). ೨. ಅನುರೂಪವಾದ; ಹೋಲುವಂಥ; ಹೊಂದುವಂಥ: ಸ್ತ್ರೀರತ್ನಂ ಸ್ತ್ರೀರತ್ನದೊಳೋರಂತೊಡಗೂಡಿ ಕೂರ್ತು ಸುಖಮಿರ್ಕೆಂದಂಭೋರುಹನಯನೇ ನಿನಗನುಸಾರಿಯನಟ್ಟಿದನಪೂರ್ವಕನ್ಯಾದ್ವಯಮಂ (ಶಾಂತಿಪು. ೩–೫೫); ಈಕೆಗೀತನನುಸಾರಿಯಲ್ಲನೆಳಲತಿಕೆಯ ತಣ್ಪಿಂಗೆಳ ಮಾವೆ ದೊರೆಯೆಂಬಂತೆ (ಶಾಂತಿಪು. ೯–೧೭ ವ). [ಸಂ. ಅನುಸಾರಿನ್]

**ಅನುಸಾರಿಣಿ** (ನಾ). ೧. ಅನುಸರಿಸಿ ನಡೆಯುವವಳು (ದಕ. ೬). ೨. ತಂಬೂರಿಯ ನಾಲ್ಕು ತಂತಿಗಳಲ್ಲಿ ಮಂದ್ರದ ತಂತಿಯಿಂದ ಎರಡನೆಯದೂ ಪಂಚಮದಿಂದ ಮೂರನೆಯದೂ ಆದ ತಂತಿ; ವೀಣೆಯ ತಾಳದ ತಂತಿಗಳಲ್ಲಿ ಮೇಲಿನಿಂದ ಎರಡನೆಯ ಮತ್ತು ಕೆಳಗಿನಿಂದ ಮೂರನೆಯ ತಂತಿ. [ಸಂ. ಅನುಸಾರಿಣೀ]

**ಅನುಸುತೆ** (ನಾ). ತಂಗಿ; ಸಹೋದರಿ: ಕುಂದನ ಕುಲಲಲನೆ ಜಗದ್ವಂದಿತೆ ಜೋಗಬ್ಬೆ ರೂಪವತಿ ಗುಣವತಿ ಪೂರ್ಣೇಂದುಮುಖಿ ಸಂದ ಬಮ್ಮರ್ನ ನಂದನೆ ವಿಭುರಾಜಮಲ್ಲನನುಸುತೆ ನೆಗಟ್ದಳ್ (ಕಕುಲ. ೭–೯; .019). [< ಸಂ. ಅನುಸೂತಾ]

**ಅನುಸೂಚಿ** (ನಾ). ಪಟ್ಟಿ; ವಿವರಣ ಪಟ್ಟಿಕೆ: ಭಾರತದ ಸಂವಿಧಾನವು, ಎಂಟನೆಯ ಅನುಸೂಚಿಯಲ್ಲಿ ಕಾಣಿಸಿರುವ ಹದಿನಾಲ್ಕು ಭಾಷೆಗಳಿಗೂ ಸಂಸ್ಕೃತಕ್ಕೂ ಭಾಷಾಂತರವಾಗಬೇಕೆಂದು ರಾಷ್ಟ್ರಪತಿಯವರು ಆಜ್ಞೆ ಮಾಡಿದರು (ಭಾಧಾನ. ಪೀ). [ಅನು₂ + ಸೂಚಿ]

**ಅನುಸೂಚಿತ** (ಗು). ಪಟ್ಟಿ ಮಾಡಿದ; ಪಟ್ಟಿಯಲ್ಲಿ ವಿವರಿಸಿದ. 'ಅನುಸೂಚಿತ ಜಾತಿ' ಪರಾ. [ಅನು + ಸೂಚಿತ]

**ಅನುಸೂಚಿತಜಾತಿ** (ನಾ). ಸೂಚಿತವಾದ ಜಾತಿ; ನಿಮ್ನವರ್ಗ: ಅನುಸೂಚಿತ ಜಾತಿಗಳವರ ಮತ್ತು ಅನುಸೂಚಿತ ಆದಿಮಜಾತಿಗಳವರ ... ಹಿತಸಾಧನೆಯನ್ನು ವಿಶೇಷ ರೀತಿಯ ಜಾಗರೂಕತೆಯಿಂದ ನೆರವೇರಿಸತಕ್ಕುದು (ಭಾಧಾನ. ೨೪); ಅನುಸೂಚಿತ ಜಾತಿಗಳ ಮತ್ತು ಹಿಂದುಳಿದ ವರ್ಗಗಳ ಜನಗಳ ಯೋಗಕ್ಷೇಮವನ್ನು ... ವಹಿಸಿಕೊಳ್ಳ ಬಹುದು (ಭಾಧಾನ. ೧೩೧). [ಅನುಸೂಚಿತ + ಜಾತಿ]

**ಅನುಸೃಷ್ಟಿ** (ನಾ). ಮೂಲಸೃಷ್ಟಿಯನ್ನು ಅನುಸರಿಸಿ ಮಾಡಿದ ಹೊಸ ಸೃಷ್ಟಿ: ಕವಿ ಪ್ರತಿಭೆಯ ದೃಷ್ಟಿಕಾರ್ಯ ಸೃಷ್ಟಿಕಾರ್ಯಗಳು, ಸಹೃದಯ ಪ್ರತಿಭೆಯ ಅನುಸೃಷ್ಟಿ ಕಾರ್ಯ – ಈ ಮೂರನ್ನೂ ಈ ಪದ್ಯವು ಗ್ರಹಿಸಿ ಒಟ್ಟು ಪ್ರತಿಭಾತತ್ತ್ವಕ್ಕೇ ಕೈಗನ್ನಡಿಯಂತಿದೆ (ಭಾರವಿಮಾ. ೨೨೭). [ಸಂ.]

**ಅನುಸೌರ** (ಗು). ೧. ಸೂರ್ಯನನ್ನು ಅನುಸರಿಸಿದ. (ನಾ). ೨. ಸೌರಗತಿಗೆ ಸಂಬಂಧಪಟ್ಟುದು (ಒಂದು ರೀತಿಯ ಸಂವತ್ಸರ ಗಣನೆ): ಪರಮಾತ್ಮನು ಮೇಲೆ ಹೇಳಿದ ಪ್ರಕಾರ ಬಾರ್ಹಸ್ಪತ್ಯ, ಸೌರ, ಅನುಸೌರ, ನಾಕ್ಷತ್ರ, ಚಾಂದ್ರಮಾನಗಳೆಂಬ ಐದು ಬಗೆಯಾಗಿ ಗಣಿಸುವ ಪರಿವತ್ಸರಾದಿ ೫ ಹೆಸರುಗಳನ್ನು ಧರಿಸಿರುವನು (ಹಸಾರ. ೩೫೬). [ಸಂ.]

**ಅನುಸ್ಮರಣ** (ನಾ). ೧. ಎಡೆಬಿಡದೆ ನೆನೆಯುವುದು; ಧ್ಯಾನ: ಅಂತಿರ್ದನಿತ್ಯಾದಿ ದ್ವಾದಶಾನುಪ್ರೇಕ್ಷಾನುಸ್ಮರಣ ಪರಿಣತಾಂತಃಕರಣನಾಗಿ (ಆದಿಪು. ೬–೩೪ ವ). ೨. ಸ್ಮರಣೆ; ನೆನಪು: ಅನುಸ್ಮರಣಮಾತ್ರ ನಿಷ್ಪಾದಿತಸಪ್ತತಳಾದಿಪ್ರಾಸಾದಪ್ರಕರನುಮಪ್ಪ (ಆದಿಪು. ೧೧–೩ ವ). [ಸಂ.]

**ಅನುಸ್ಮೃತ** (ಗು). ಸ್ಮರಿಸಲ್ಪಟ್ಟ; ನೆನೆದ: ಲೋಕಪತಿಗಿಟ್ಟನನುಸ್ಮೃತಮಾತ್ರ ಪಾಪವಿಚ್ಛೇದನಮಂ ... ಶಾಂತಿನಾಮಮಂ (ಶಾಂತಿಪು. ೧೦–೭೯). [ಸಂ.]

**ಅನುಸ್ಯೂತ** (ಗು). ಹೊಂದಿಕೊಂಡು ಬಂದ; ಜೊತೆಯಲ್ಲಿಯೇ ಬೆರೆತ: ಎಲ್ಲ ನೀತಿಗಳಲ್ಲಿಯೂ ಅನುಸ್ಯೂತವಾಗಿದ್ದು ಮೆರುಗನ್ನು ಕೊಡುವಂಥ ವಿನಯವೆಂಬ ನೀತಿಯನ್ನು ಇಲ್ಲಿ ವಿವರಿಸಲಾಗುವುದು (ನೀಗಟ್ಟು. ೧೮೪); ಕವಿಗೆ ಪ್ರತಿಮೆಗಳು ಅಖಂಡವಾಗಿ, ಅನುಸ್ಯೂತವಾಗಿ ಬಂದವು (ವಿಳಜೀ. ೩೭). [ಸಂ.]

**ಅನುಸ್ವರ** (ನಾ). ಹೆಚ್ಚಿನ ಸ್ವರ (Overtone. ಇಂಕನಿ). [ಸಂ.]

**ಅನುಸ್ವಾರ** (ನಾ). (ಯೋಗವಾಹಗಳಲ್ಲಿ ಒಂದಾದ) ಒಂದು ಬಿಂದುವಿನ ಚಿಹ್ನೆಯಿಂದ ಗುರುತಿಸುವ ವರ್ಣ, —ಬಿಂದು: ಬಿಂದುವನುಸ್ವಾರಂ ತಾನೆಂದಕ್ಕು ಸೊನ್ನೆ ಮುತ್ತುವೋಲ್ ವೃತ್ತತೆಯಿಂ ಸಂದಿರ್ಪುದು (ಶಮದ. ೧೧); ಅನುಸ್ವಾರಕ್ಕೆ ಕನ್ನಡದಲ್ಲಿ ನಿಯತವಾದ ಉಚ್ಚಾರವಿಲ್ಲ (ಕೈಪಿಡಿ. ೫); ಹಂಸ ದುಃಖ ಎಂಬ ಎರಡು ಪದಗಳನ್ನು ಈಗ ಬಿಡಿಸಿ ನೋಡಿ ... ಅಕಾರಕ್ಕೂ ಸಕಾರಕ್ಕೂ ನಡುವೆ ಇರುವ ವರ್ಣಕ್ಕೆ (೦) 'ಅನುಸ್ವಾರ' ಎಂದೂ ... ಹೆಸರು (ಮಧ್ಯಮು. ೧೨). [ಸಂ.]

**ಅನುಹಾರ** (ನಾ). ೧. ಅನುಕರಣ; ಬೇರೊಬ್ಬರಂತೆ ಮಾಡುವುದು. ೨. ಹೋಲುವಿಕೆ; ಹೋಲಿಕೆ. [ಸಂ.]

**ಅನುಹಾರ್ಯ** (ಗು). ೧. ಆಚರಿಸತಕ್ಕ. (ನಾ). ೨. ಅಮಾವಾಸ್ಯೆಯಲ್ಲಿ ನಡೆಯಬೇಕಾದ ತರ್ಪಣವೇ ಮುಂತಾದ ಪಿತೃಕರ್ಮ. [ಸಂ.]

**ಅನೂಕ** (ನಾ). ೧. ಬೆನ್ನುಮೂಳೆ. ೨. ಹಿಂದಿನ ಜನ್ಮ. ೩. ಶೀಲ. ೪. ವಂಶ; ಕುಲ; ಕುಟುಂಬ; ಒಳ್ಳೆಯ ಕುಲ: "ಶೀಲದೊಳು ಕುಲಸೀಮೆಯೊಳನೂಕವೆಂದೆನಿಸಿರ್ಕು" (ಮಂಗರಾ. ೧೮೩–೨೧); "ಶೀಲ ಸತ್ಕುಲಮಿವನೂಕಮಕ್ಕು" (ನಾನಾರ. ೧೩೦). [ಸಂ.]

**ಅನೂಚಾನ** (ಗು). ೧. ವ್ಯಾಸಂಗ ಶೀಲನಾದ. (ನಾ). ೨. ಹಿಂದಿನಿಂದಲೂ ಪರಂಪರೆಯಾಗಿ ನಡೆದುಕೊಂಡು ಬಂದ ವಿಷಯ, —ಪದ್ಧತಿ: ಅನೂಚಾನವಾಗಿ ಬಂದ ಧರ್ಮವನ್ನು ಅನುಸರಿಸಿ ಪ್ರಜಾರಕ್ಷಣೆ ಮಾಡು (ವಚಭಾ. ೩೨೯). ೩. ಗುರುಕುಲದಲ್ಲಿ ವೇದ ವೇದಾಂಗಗಳನ್ನು ಪೂರ್ಣವಾಗಿ ಓದಿ ತಿಳಿದವನು ಮತ್ತು ಅನುಸರಿಸ ತಕ್ಕವನು: "ಪೂರ್ಯೈಸಿ ವೇದಮೋದಿದನನೂಚಾನನಕ್ಕು" (ಮಂಗರಾ. ೭೪–೩). ೪. ಉತ್ತಮವಾದ ನಡತೆಯುಳ್ಳವನು; ಆಚಾರಶೀಲ; ವಿನಯವಂತ. [ಸಂ.]

**ಅನೂತ್ನ** (ಗು). ಹೊಸದಲ್ಲದ; ಹಳೆಯ; ಪ್ರಾಚೀನ: ನೀವೆನ್ನನುದ್ಧರಿಸುವುದು ವಿಶ್ವಜಗನ್ನುತೈಕಾನೂತ್ನ ಸಜ್ಜನ ಭಕ್ತಿ ಚಾರಿತ್ರ (ಬಸವು. ೪–೨). [ಸಂ.]

**ಅನೂನ** (ಗು). ೧. ಕುಂದಿಲ್ಲದ; ಕೊರತೆಯಿಲ್ಲದ; ಅಧಿಕವಾದ: ದಿಕ್ಕರಿಯನನೂನದಾನಪರಿಶೋಭಿ ಮನಂಗೊಳೆ ಪೊರ್ದುವಂತೆ (ಪಂಪಭಾ. ೨–೩೯); ನಮ್ಮ ಪುಣ್ಯದ ಸಾಮರ್ಥ್ಯಮನೂನಮನುಪಮಾನಮುದಲ್ತೇ (ಚಂದ್ರಪು. ೨–೧೦೭); ಭೀಮನನೂನಶರಸಂಘಾತವನು ಖಂಡಿಸಿದನಾಕ್ಷಣಕೆ (ಕುವ್ಯಾಕ. ೧೨–೨೫). [ಸಂ.]

**ಅನೂನಕ** (ಗು). = ಅನೂನ. [ಸಂ.]

**ಅನೂನಗುಣ** (ನಾ). ೧. ಮೇಲಾದ ಗುಣ. ೨. ಅಧಿಕ ಗುಣಗಳುಳ್ಳವನು: ರತ್ನಮೊಂದೆರಡಿಲ್ಲಾದೊಡಮೇನನೂನಗುಣನಂ ಸನ್ಮಿತ್ರನಂ ಮಾಱ್ಪುದಾದರದಿಂದಂ (ಪಂಚತಂ. ೩೧೦–೨೩). [ಅನೂನ + ಗುಣ]

**ಅನೂನಪುಣ್ಯ** (ನಾ). ಕುಂದಿಲ್ಲದ ಪುಣ್ಯವುಳ್ಳವನು; ಅಧಿಕವಾದ ಪುಣ್ಯವುಳ್ಳವನು: ಅನೂನಪುಣ್ಯಂಗಸಾಧ್ಯಮಿಲ್ಲೆಂಬುದಂ ನನ್ನಿಮಾಡುವಂತೆ ಕೆಲವಾನುಂ ದಿವಸದೊಳ್ (ಚಂದ್ರಪು. ೭–೨೭ ವ). [ಅನೂನ + ಪುಣ್ಯ]

**ಅನೂನಫಲ** (ನಾ). ಅಧಿಕಫಲ: ಇಹಲೋಕ ಪರಲೋಕದೊಳನೂನಫಲಭೋಗವೈರಾಗ್ಯ ಶಮೆ ದಮೆಯುಪರತಿ ತಿತಿಕ್ಷೆಯಾಶ್ರದ್ಧೆಯೂ (ವೀಶೈಪು. ೫–೧೧–೫). [ಅನೂನ + ಫಲ]

**ಅನೂನಾಂಗಿ** (ನಾ). ಕುಂದಿಲ್ಲದ ಶರೀರವುಳ್ಳವಳು; ಅಂಗಸೌಷ್ಠವವುಳ್ಳವಳು: ನಿರುಪಮ ಲಕ್ಷಣಯುತೆಯರ್ ಸರೂಪೆಯರ್[ರ್] ನೃತ್ಯಗೀತ ವಾದ್ಯಾದಿ ಕಳಾಪರಿಣತೆಯರನೂನಾಂಗಿಯರರಸಿಯರತಿಮುಗ್ಧೆಯರ್ಕಳಾಗಲೆವೇೞ್ಕುಂ (ಮದತಿ. ೮–೫೬). [ಸಂ. ಅನೂನಾಂಗೀ]

**ಅನೂಪ** (ಗು). ೧. ನೀರು ಸಮೃದ್ಧಿಯಾದ; ಜಲ ತುಂಬಿರುವ 'ಅನೂಪ ದೇಶ' ಪರಾ. (ನಾ). ೨. ನೀರು ಸಮೃದ್ಧಿಯಾಗಿರುವ ಪ್ರದೇಶ: ದೇವಮಾತೃಕ ಸಾಧಾರಣಾನೂಪ ಜಾಂಗಲ ಭೇದಂಗಳುಂ (ಆದಿಪು. ೮–೬೩ ವ). ೩. ಜೌಗುಪ್ರದೇಶ. ೪. ನದಿಯತೀರ, —ದಡ. ೫. ಬೆಟ್ಟದ ತಪ್ಪಲು. ೬. ಕೆರೆ; ಕುಂಟೆ. ೭. ಎಮ್ಮೆ. ೮. ಕಪ್ಪೆ. ೯. ಆನೆ. ೧೦. ಒಂದು ದೇಶದ ಹೆಸರು. 'ಅನೂಪವಿಷಯ' ಪರಾ. [ಸಂ.]

**ಅನೂಪದೇಶ** (ನಾ). ನೀರು ಸಮೃದ್ಧಿಯಾಗಿರುವ ದೇಶ: ಜಾಂಗಲ, ಆನೂಪ, ಸಾಧಾರಣವೆಂದು ದೇಶ ಮೂರು ತೆರ ... ಬಹಳ ನೀರುಂಟಾದ ದೇಶ ಅನೂಪ ದೇಶವೆನಿಸಿಕೊಂಬುದು (ವೈದ್ಯಸಾ. I, ೧೦). [ಅನೂಪ + ದೇಶ]

**ಅನೂಪವಿಷಯ** (ನಾ). ಐವತ್ತಾರು ದೇಶಗಳಲ್ಲಿ ಒಂದು: ಧಾತ್ರೀತನೂಜೆ ಪರಿವಿಡಿಯೊಳ್ ತಂದಿದಿರೊಳ್ ನಿಜಿಸಿ ತಗುಳ್ದು ನುಡಿದಳ್ ಪ್ರಪಂಚಮನನೂಪವಿಷಯಾಧಿಪನಾ (ಶಾಂತಿಪು. ೫–೧೨೧). [ಅನೂಪ + ವಿಷಯ]

**ಅನೂರಾಧ** 'ಅನುರಾಧೆ' ನೋ.

**ಅನೂರಾಧೆ** 'ಅನುರಾಧೆ' ನೋ

**ಅನೂರು** (ನಾ). ೧. ತೊಡೆಯಿಲ್ಲದವನು. ೨. ಸೂರ್ಯನ ಸಾರಥಿ; ಅರುಣ: ರಥಮುಂ ನುರ್ಗೊತ್ತುತೆ ಸಾರಥಿಯಂ ತೊಡೆವಿಡಿದಿಭಂ ನಭಕ್ಕಿಡೆ ದಿನಕೃದ್ರಥದೊಳಗೆ ಬಿಳ್ದು ತತ್ಸಾರಥಿಯೆನಿಸಿದನವನನೂರು ವರುಣತೆಯಿಂದಂ (ರಾಜಶೇ. ೬-೮೬). [ಸಂ.]

**ಅನೂಷರ** (ನಾ). ಚೌಳಿಲ್ಲದ ಭೂಮಿ; ಫಲವತ್ತಾದ ಕ್ಷೇತ್ರ. [ಸಂ.]

**ಅನೂಹ್ಯ** (ಗು). ಊಹಿಸಲಾಗದ: ನಾವುನುಂತೆಯೆ ಸೃಷ್ಟಿ ಕೃತ್ರಿಮದ ಕೈಗೊಂಬೆ ಜೀವಮಾರ್ಗವನೂಹ್ಯ (ಮಂಕುಕ. ೭೩೨). [ಸಂ.]

**ಅನೃಜು** (ಗು). ೧. ನೆಟ್ಟಗಿಲ್ಲದ; ವಕ್ರವಾದ. (ನಾ). ೨. ಕಪಟಿ; ವಂಚಕ; ಸರಳಸ್ವಭಾವವಿಲ್ಲದವನು. [ಸಂ.]

**ಅನೃಣಿ** (ನಾ). ಋಣವಿಲ್ಲದವನು; ಸಾಲ ತೀರಿದವನು; ಋಣ ಮುಕ್ತ: ನಿನ್ನ ಈ ವಿನಯದ ಮಾತುಗಳಿಂದಲೇ ನೀನು ಅನೃಣಿ ಯಾಗಿರುತ್ತೀ (ಮಭಾರ. ಸಭಾ. ೨). [ಸಂ.]

**ಅನೃತ** (ನಾ). ೧. ಋತವಲ್ಲದುದು; ಸತ್ಯವಲ್ಲದುದು; ಸುಳ್ಳು: "ನೆರೆ ಸುಳ್ಳುಂ ತೊದಳೆನಲ್ಕಮನೃತಂ" (ಕವಿಕಂ. ೨೨೨); ಹಿಂಸಾ ನೃತಸ್ತೇಯಾ ಬ್ರಹ್ಮಪರಿಗ್ರಹ ಪರಿತ್ಯಾಗಮೆಂಬಯ್ದು ಮಹಾವ್ರತಂ ಗಳೊಳ್ ನೆರೆದು (ಆದಿಪು. ೬-೨೭ ವ); ದೇವೇಂದ್ರನಿದಿರಲಿ ಮುನಿಯ ಭಂಡನಂ ಮಾಳ್ಪೆ ಭೂಪತಿಯಲನೃತವನಿಲ್ಲಿ ಕಂಡೆನಾದಡೆ ಕಾಣ್ಬ ತೆಜ ನಾವುದೆಂದು ಚಿಂತಿಸಿದ ವಿಶ್ವಾಮಿತ್ರನು (ಹಚಕಾ. ೩-೮). ೨. ಕೃಷಿ; ವ್ಯವಸಾಯ. [ಸಂ.]

**ಅನೃತವಚನ** (ನಾ). ಸುಳ್ಳುಮಾತು; ಸುಳ್ಳುಮಾತಾಡುವವನು: ಕ್ರಮದಿಂದಾ ಜೀವಘಾತಾನೃತವಚನ ಪರಾರ್ಥಾಪಹಾರಾನ್ಯನಾರೀಗಮ (ಸುಕುಮಾ ೫-೪೩). [ಅನೃತ + ವಚನ]

**ಅನೃತಸ್ಪರ್ಧಿ** (ನಾ). ಸುಳ್ಳಿನಲ್ಲಿ ಸ್ಪರ್ಧಿಸುವವನು; ಮೋಡಿ ಇಂದ್ರ ಜಾಲಗಳಲ್ಲಿ ಸ್ಪರ್ಧೆಮಾಡುವವನು (?): (ದೇಶ ವಿದೇಶಗಳ ಗಾಯಕರು, ನಗೆಕಾರರು, ನರ್ತಕಿಯರು, ಓಲಗದ ಡೊಂಬರು ... ವಾದ್ಯ ಕಾರರು, ಅನೃತಸ್ಪರ್ಧಿಗಳು ... ಶಪನಪ್ರವೀಣರು – ಈ ಮೊದಲಾ ದವರು ತಂತಮ್ಮ ವಿದ್ಯಾಪರಿಶ್ರಮದ ಕಲಾಪರಿಣತಿಯ ಸಾಧಕಗಳಿಂದ ಆಸ್ಥಾಯಿಕೆಯ ಮನೋರಂಜನವನ್ನು ಸಿದ್ಧಿಗೊಳ್ಳತೊಡಗುವರು) (ಬೆಟ್ಟಅ. ೩೨). [ಅನೃತ + ಸ್ಪರ್ಧಿ]

**-ಅನೆ₁** (ಪ್ರ). ಕ್ರಿಯಾವಿಶೇಷಣಗಳನ್ನು ಸಾಧಿಸಲು ಉಪಯುಕ್ತ ವಾದ ಒಂದು ಪ್ರತ್ಯಯ: ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನ ಮಾನಟ್ಟು ಬಡ್ಡಿಸು (ಕವಿರಾ. ೨-೧೪೫); ಇಂಚರಂಗಳೊಳೆಲ್ಲಂ ದಿಗ್ಭಿತ್ತಿ ಗಳ್ ತೆಕ್ಕನೆ ತೀವೆ (ಪಂಪಭಾ. ೩-೫೪ ವ); ತೊಟ್ಟನೆ ಕೊಳೆ ನಿನಗೆ ಗಂಡಗರ್ವಮುಮಾಯ್ತೇ (ಗದಾಯು. ೭-೩೬); ತನುರುಚಿಯ ಮುಂದೆ ದಿನಪನ ಕಾಂತಿ ಕಪ್ಪ ಕಪ್ಪನೆ ಕೋಪದಿದಿರೊಳೌರ್ವಾನಳಂ ತಣ್ಣ ತಣ್ಣನೆ (ಹಚಕಾ. ೧-೪೧); ಅಟಕೇಶನ ಗುಡಿಯಾಗ ನೆಟ್ಟನೆ ನೋಡಿದನು ದಿಟ ಮಲ್ಲಯ್ಯನು ಇರಲಿಲ್ಲ – ಅದ ಕಂಡು ಚಟ್ಟನೆ ಎದ್ದು ನಡೆದನು (ಸಿದ್ಧಪು. ೫-೭೨).

**-ಅನ್ನೆ₂** '-ಅನೆಯ್ಯ₂' ನೋ.

**-ಅನೆಯ₁, -ಅನೇ** (ಪ್ರ). ವಸ್ತುಗಳ ಸ್ಥಾನವನ್ನೂ ಕ್ರಮವನ್ನೂ ತಿಳಿಸಲು ಸಂಖ್ಯಾ ಮತ್ತು ಪರಿಮಾಣ ವಾಚಕಗಳಿಗೆ ಸೇರುವ ತದ್ಧಿತ ಪ್ರತ್ಯಯ: ಏಱನೆಯಾ ನರಕದಾ ಪುಟು ಆಕುಂ (ಕ್ಕುಂ) (ಇಅ. X, ೬೦-೪ ; 578); ಮೂಱನೆಯ ಬಾಗಿಲೊಳ್ ಬಂದಿರ್ದನಂತನ ಬರವಂ ಪಡಿಯಱಂ ಬಿನ್ನಪಂಗೆಯ್ಯೆ (ಪಂಪಭಾ. ೯-೨೯ ವ); ಅನೆಯ ಪ್ರತ್ಯಯಕ್ಕೆ – ಅನಿತನೆಯಂ, ಇನಿತನೆಯಂ, ಎನಿತನೆಯಂ (ಶಮದ. ೨೦೬ ಪ್ರಯೋ); –ಅನೆಯ ಎಂಬ ಪ್ರತ್ಯಯವು ಉಕಾರಾಂತವಾದ ಸಂಖ್ಯಾ ವಾಚಕಗಳ ಮೇಲೂ ಅಷ್ಟು, ಇಷ್ಟು, ಎಷ್ಟು ಎಂಬುವುಗಳ ಮೇಲೂ ಸೇರಿ ಅನುಕ್ರಮವನ್ನು ತಿಳಿಸುತ್ತದೆ (ಮಧ್ಯಮ. ೧೩೪). **-ಅನೇ**: ಮೊದಲನೇ ಪುಸ್ತಕ (ಮುಂಬಯಿ. ೨-೧); ಸಾವಿರದೊಂಭೈನೂರು ಅರವತ್ತಾರನೇ ಇಸವಿ (ರೂಢಿ).

**-ಅನೆಯ್ಯ₂, -ಅನ, -ಅನ್ನೆ₂, -ಅನ್ನ₂, -ಅನ್ನೆ₃** (ಪ್ರ). ಕೆಲವು ಗುಣ ವಾಚಕಗಳ ಕಡೆಯಲ್ಲಿ ಕಾಣುವ ಪ್ರತ್ಯಯ: ಉದ್ದನೆಯ ಬಿಳಿಯ ಜುಬ್ಬ (ಆರ್ಯಕ. ೧). **-ಅನ**: ಉದ್ದನ, ನೆಟ್ಟನ(ಕಿ). **-ಅನ್ನೆ₂**: ದಪ್ಪನೆ ಬಟ್ಟೆ (ರೂಢಿ); ಉದ್ದನೆ ಮುಖ (ರೂಢಿ). **-ಅನ್ನ₂**: ಇರಾಣ ದೇಶದ ಬೆಕ್ಕುಗಳ ಮೈಮೇಲೆ ಉದ್ದನ್ನ ಕೂದಲೂ ಇರುತ್ತವೆ (ಮುಂಬಯಿ. ೩-೩೧). **-ಅನ್ನೆ₃**: ತಪ್ಪಲೆ ಚೊಂಬು ಬಿಟ್ಟು ಈ ಪರಿಯ ಕಪ್ಪಾನೆ ಕತ್ತಲೇಲಿ (ದುರ್ಗೇಶ. ೫೪).

**ಅನೆಯುಕೆ** (ಗು). ಅನೇಕ; ಹಲವು: ಮಣಿಖಚಿತ ರಂಜಿತದಿಂದನೆಯಕ ಧ್ವಜನಿವಹದೊಳು (ಅನಂಚ. ೫-೧೦೬); ಅನೆಯಕ ದೇವ ಮಾನವರನೆಲ್ಲರ ಗೆಲ್ದು ಘನಮುಹಿಮೆಯನೆಲ್ಲವನು (ಅನಂಚ. ೧-೧೨೦).
[ಸಂ. ಅನೇಕ]

**-ಅನೇ** '-ಅನೆಯ್ಯ₁' ನೋ

**ಅನೇಕ** (ಗು). ೧. ಒಂದಕ್ಕಿಂತ ಹೆಚ್ಚಾದ. (ನಾ). ೨. ಅನೇಕರು ಅಥವಾ ಅನೇಕ ವಸ್ತುಗಳು: ಸಗುಣನಗುಣನೇಕನನೇಕಂ ಕ್ಷರನಕ್ಷರ ನೆನಿಪಗಣಿತ ವಿರುದ್ಧಗುಣ ನಿನ್ನ ನಿಜವದೇಂ ಕೇವಳಮೋ (ಜಗವಿ. ೩-೯೭); ರಾಜ್ಯದ ಗಡಿಯ ಗ್ರಾಮದ ಆಡಳಿತಗಳಲ್ಲಿ ಅನೇಕಗಳು ಆಗ ಇರಲೇ ಇಲ್ಲವೆಂದೂ (ಬೆಟ್ಟಅ. ೬-೯); ಅನೇಕ ಮಂದಿ ಬಂದಿದ್ದರು (ರೂಢಿ). ೩. [ವ್ಯಾಕ] ಬಹುವಚನ: ನಿನತೆನತು ತನತೆನಿಪ್ಪವು ಜನಿ ಯಿಸುಗುಂ ನಿನ್ನದೆನ್ನದುಂ ತನ್ನದೆನಿಪ್ಪನಿತಱೊಳಂ ಮೇಣ್ ದ್ವಿತ್ವದಿ ನನೇಕದೊಳ್ ನತ್ವದೆಡೆಗೆ ಮುತ್ವಂ ಬರೆಯುಂ (ಶಮದ. ೧೪೭). [ಸಂ.]

**ಅನೇಕಜಿಹ್ವ** (ನಾ). ೧. ಒಂದಕ್ಕಿಂತ ಹೆಚ್ಚಿಗೆ ನಾಲಗೆಯುಳ್ಳುದು; ಹಾವು. ೨. ಹಲವು ನಾಲಗೆಯಿರುವವನು; ಆದಿಶೇಷ; ಸರ್ಪ ರಾಜ: ಕೈಲಾಸ ಗಿರಿಯನು ವಿಸ್ತರಿಪಡನೇಕಜಿಹ್ವನಿಗಲ್ಲದುಳಿದ ಲೋಕ ದೊಳುಳ್ಳ ಮಹಾಕವಿರಾಜರನೀಕಕ್ಕೆ ಗೋಚರವಹುದೆ (ತ್ರಿಪುಸಾಂ. ೭-೭೧). [ಅನೇಕ + ಜಿಹ್ವ]

**ಅನೇಕತರ** (ಗು). ಹಲವು ಬಗೆಯಾದ; ಹಲವಾರು ರೀತಿಯ: ಮನೆಗಿಂದು ಬರ್ಕುಮೆಂದಾನನೇಕತರವಸ್ತುವಾಹನಾದಿಯನೊಸೆದಿಂ ಬಿನೆ ಪಸರಿಸಿ ಕುಡಲಿರ್ದೆಂ (ಕವಿರಾ ೨-೩೧). [ಸಂ.]

**ಅನೇಕಪ** (ನಾ). ಎರಡು ಬಗೆಯಾಗಿ ನೀರು ಕುಡಿಯುವುದು; ಸೊಂಡಿಲಿಂದ ಒಮ್ಮೆ ಹೀರಿ ತರುವಾಯ ಬಾಯಿಂದ ಕುಡಿಯು ವುದು; ಆನೆ: ಇಂದ್ರಾನೇಕಪಂ (ಪಂಪಭಾ. ೩-೭೯); ತುರಗಾನೀ ಕಪರವತ್ಸರಾಜನನೇಕಪಭಗದತ್ತನಲ್ತೆ ಬಲ್ಲಾಳನೃಪಂ (ಎಕ. V, ಚೆನ್ನರಾ. ೧೫೦-೧೯ ; 1182); ಮನ್ಮಥನ ಪಟ್ಟದನೇಕಪವು ಬಪ್ಪಂತೆ ಬರುತಿರ್ದಳು ಸರಾಗದಲಿ (ಜೀವಂಚ. ೧೫-೩೩). [ಸಂ.]

**ಅನೇಕಭಂಗಿ** (ಗು). ಹಲವು ಆಕಾರ ಅಥವಾ ನಿಲುವುಳ್ಳ: ಕನಕ ರಜತಮಯಾನೇಕಭಂಗಿ ಭೃಂಗಾರಂಗಳುಂ (ಆದಿಪು. ೮-೧೫ ವ).
[ಅನೇಕ + ಭಂಗಿ]

**ಅನೇಕಭವ** (ನಾ). ಅನೇಕ ಜನ್ಮ; ಹುಟ್ಟು: ವಿಶಾಖನಂದಿಯು ಮಾಯುರವಸಾನದೊಳ್ ಸತ್ತನೇಕಭವಗಹನಪರ್ಯಟನದಿಂ ಬಂದು (ಶಾಂತಿಪು. ೭-೬೨ ವ). [ಅನೇಕ + ಭವ]

**ಅನೇಕಮುಖ** (ಗು). ೧. ಹಲವು ಮುಖವುಳ್ಳ. (ನಾ). ೨. ಹಲವು ರೀತಿ: ಅಂತು ಪಿರಿದಪ್ಪುದಱಿಂದನೇಕ ಮುಖದೊಳ್ ನಡೆವ ಸುರ ಕೋಟಿಯಂ ಕಂಡು (ಶಾಂತಿಪು. ೧೦–೨೩ ವ). [ಅನೇಕ + ಮುಖ]

**ಅನೇಕವಚನ** (ನಾ). [ವ್ಯಾಕ] ಬಹುವಚನ: ಕವದಿನಮುರಯಿರೆನೆ ವೆನಿಪ್ಪುವು ವರ್ತಿಕುಮನ್ಯಯುಷ್ಮದಸ್ಮದ್ವಿಷಯ ವ್ಯವಹೃತಿಗಳ್ಗೇಕಾನೇಕ ವಚನದಿಂ ಪ್ರತಿವಿಭಕ್ತಿ ಪುರುಷಾಖ್ಯಂಗಳ್ (ಕಾವ್ಯಾವ. ೩೭೯). [ಅನೇಕ + ವಚನ]

**ಅನೇಕವಾರಂ** (ಅ). ಹಲವು ಬಾರಿ, —ಸಲ: ಓರೊರ್ವರ್ ಸೆಣಸಿ ತಗುಳ್ದನೇಕವಾರಂ ವಾರಸ್ತ್ರೀ ಜನಮಿದಿರೊಳ್ ತುಳುಂಕೆ ನೀರಂ (ಕಾವ್ಯಾವ. ೫೪೮). [ಅನೇಕ + ವಾರಂ]

**ಅನೇಕವಿಧ** (ನಾ). ಹಲವು ಬಗೆ, —ವಿಧ: ಜನರು ದೇಶಕ್ಕೆ ಅನೇಕ ವಿಧದಲ್ಲಿ ಸೇವೆ ಸಲ್ಲಿಸಬಹುದು (ರೂಢಿ). [ಅನೇಕ + ವಿಧ]

**ಅನೇಕವೇಳೆ** (ಅ). ಹಲವು ಸಲ, —ಬಾರಿ: ನಾನು ಈ ಊರಿಗೆ ಹಿಂದೆ ಅನೇಕ ವೇಳೆ ಬಂದಿದ್ದೆ (ರೂಢಿ). [ಅನೇಕ + ವೇಳೆ]

**ಅನೇಕಾಂತ** (ನಾ). ೧. ಏಕಾಂತವಲ್ಲದ್ದು; ರಹಸ್ಯವಲ್ಲದ್ದು. ೨. [ಜೈನ] ಸರ್ವದೃಷ್ಟಿಗಳನ್ನುಳ್ಳ ತರ್ಕ; ಸ್ಯಾದ್ವಾದ; ಸಪ್ತಭಂಗಿ: ಸರ್ವಸ್ವಭಾವ ಧರ್ಮದಲ್ಲೂ ಇರುವುದಕ್ಕೆ ಅನೇಕಾಂತವೆಂದು ಅರ್ಥ (ಹಿಂದಸಾ. ೭೭). 'ಅನೇಕಾಂತವಾದ' ಪರಾ. [ಅನೇಕ + ಅಂತ$_2$]

**ಅನೇಕಾಂತದೃಷ್ಟಿ** (ನಾ). ಸರ್ವದೃಷ್ಟಿಗಳುಳ್ಳ ತರ್ಕ: ಜೈನರ ಅನೇಕಾಂತದೃಷ್ಟಿಯ ಕಾರ್ಯಪ್ರದೇಶವು ಬಹು ವಿಸ್ತಾರವಾಗಿದೆ. (ಜೈನಪ. ೫). [ಅನೇಕಾಂತ + ದೃಷ್ಟಿ]

**ಅನೇಕಾಂತವಾದ** (ನಾ). [ಜೈನ] ವಸ್ತುವಿನ ಅನೇಕ ಧರ್ಮಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರತಿಪಾದನೆ ಮಾಡುವ ತರ್ಕ; ಸ್ಯಾದ್ವಾದ: ಶಾಸ್ತ್ರಕಾರರು ಕೆಲವರು ಸರ್ವವಸ್ತುಗಳಿಗೂ ಸರ್ವ ಸ್ವಭಾವವನ್ನೂ ಅಂಗೀಕರಿಸಿ ವಿರೋಧಪರಿಹಾರ ಮಾಡಿರುವರು. ಇದಕ್ಕೆ ಅನೇಕಾಂತವಾದವೆಂದು ಹೆಸರು (ಹಿಂದಸಾ. ೫). [ಅನೇಕಾಂತ + ವಾದ]

**ಅನೇಕಾಕ್ಷರ** (ನಾ). ೧. ಒಂದಕ್ಕಿಂತ ಹೆಚ್ಚು ಅಕ್ಷರವುಳ್ಳದ್ದು: ಧಾತುಗನೇಕಾಕ್ಷರಕಾಖ್ಯಾತವಿಭಕ್ತಿಗಳ ಮೊದಲೊಳಿಸು ತಾನಕ್ಕುಂ (ಕಾವ್ಯಾವ. ೪೧೭); ಗದವಜಕಾರಮುವಿದಿರಿರೆ ಪದಮಧ್ಯಂ ವಿಷಯಮಾಗನೇಕಾಕ್ಷರದೊಳ್ ಪುದಿಯೆ ಲಘೂಪಧೆ ಕೆಲಕೆಲವೊದವಿರ್ಕುಂ ರಾಂತಳಾಂತಮುವು ಶಿಥಿಲತೆಯಂ (ಶಮದ. ೪೩). ೨. ಬಹುವಿದ್ಯಾಪರಿಣತ: ಲೌಕಿಕ ವೈದಿಕ ಶಾಸ್ತ್ರನನೇಕಾಕ್ಷರನೆನಿಸಿ [ಪಾಠಾಂ. ವಿವೇಕಿ ಕಲಾಭಿಜ್ಞನೆನಿಸಿ] ನೆಗಟ್ದ ಚತುರಸ್ರಗುಣಂ (ಛಂದೋಂಬು. ೬. ೧–೧೨). [ಅನೇಕ + ಅಕ್ಷರ]

**ಅನೇಕಾಕ್ಷರಧಾತು** (ನಾ). [ವ್ಯಾಕ] ಒಂದಕ್ಷರಕ್ಕಿಂತ ಹೆಚ್ಚುಳ್ಳ ಕ್ರಿಯಾಪ್ರಕೃತಿ: ಹ್ರಸ್ವಾದಿಗಳಪ್ಪ ಜಟಿಕುಳರೇಫಾಂತಂಗಳಪ್ಪನೇಕಾಕ್ಷರ ಧಾತುಗಳ್ಗೆ ಭೂತ ವರ್ತಮಾನ ಭವಿಷ್ಯಂತಿಗಾದ ದ, ದಪ, ವ ಎಂಬಿವು ಪರಮಾದೊಡಂ (ಶಮುದ. ೪೪ ವೃತ್ತಿ). [ಅನೇಕಾಕ್ಷರ + ಧಾತು]

**ಅನೇಕಾಗ್ರತೆ** (ನಾ). ೧. ಬಹುಮುಖವಾಗಿರುವುದು; ಮನಸ್ಸು ಒಮ್ಮೊಗವಾಗಿಲ್ಲದಿರುವುದು; ಚಂಚಲತೆ. ೨. ಹಲವು ಶಾಖೆ ಅಥವಾ ಕೊಂಬೆಗಳಿಂದ ಕೂಡಿರುವ ಸ್ಥಿತಿ: ಭೂರುಹದೊಳನೇಕಾಗ್ರತೆ ನವಾರಾಮುದೊಳ್ಮಹಾಶೋಕಂ ವಸಂತದೊಳ್ ಮಾರಹಿತಮುಂಟಲ್ಲದಿಲ್ಲನಿವು ಮತ್ತೆಲ್ಲಿಯುಂ ಧರ್ಮಜನ ನೆಲದೊಳು (ಜೈಮಿಭಾ. ೨–೮). [ಸಂ. ಅನೇಕಾಗ್ರತಾ]

**ಅನೇಕಾತ್ಮಕ** (ಗು). ಹಲವು ವಿಷಯಗಳನ್ನು ಒಳಕೊಂಡ; ಹಲವು ರೀತಿಯ; ನಾನಾ ವಿಧದ: ಜಿನೇಂದ್ರೋಕ್ತಂ ವಿಶುದ್ಧಾಂತರಂಗಮನೇಕಾತ್ಮಕಮುರ್ಚೆ ಸುತ್ತಱಿಯೆ ಕರ್ಮಧ್ಯಾನಬಂಧಂ ಕ್ರಮ್ಮಕ್ರಮದಿಂದಾದುದು (ಶಾಂತಿಪು. ೯–೨೩). [ಸಂ.]

**ಅನೇಕಾರ್ಥಕ** (ನಾ). ಹಲವು ಅರ್ಥಗಳನ್ನುಳ್ಳದ್ದು; ಹಲವು ಬಗೆಯ ಅರ್ಥವನ್ನು ಹೇಳಬಹುದಾದದ್ದು. [ಸಂ.]

**ಅನೇಕಾವರ್ತಿ** (ನಾ). ಹಲವು ಸಲ, —ಬಾರಿ: ಅನೇಕಾವರ್ತಿ ಹೇಳಿದರೆ ಬೇಸರಬರಬಹುದು (ರೂಢಿ). [ಸಂ. ಅನೇಕಾವೃತ್ತಿ]

**ಅನೇಕಾವೃತ್ತಿ** (ನಾ). = ಅನೇಕಾವರ್ತಿ: ಅನೇಕಾವೃತ್ತಿ ಹೇಳಿ ಹೇಳಿ ಸಾಕಾಯಿತು (ರೂಢಿ). [ಅನೇಕ + ಆವೃತ್ತಿ]

**ಅನೇಕೇಶ್ವರವಾದ** (ನಾ). ದೇವನು ಒಬ್ಬನಲ್ಲ ಹಲವರು ಎಂಬ ವಾದ: ಅನೇಕೇಶ್ವರವಾದದಲ್ಲಿ ಪರಸ್ಪರ ಈರ್ಷ್ಯಾಸೂಯೆಗಳಿಗೆ ಅವಕಾಶವಿರಬಹುದೆಂದು ಏಕೇಶ್ವರವಾದದವರು ಹೇಳುವರು (ಹಿಂದಸಾ. ೪೯). [ಅನೇಕ + ಈಶ್ವರ + ವಾದ]

**ಅನೇಕೇಶ್ವರವಾದಿ** (ನಾ). ದೇವನು ಒಬ್ಬನಲ್ಲ ಹಲವರು ಎಂದು ವಾದಿಸುವವನು. [ಸಂ. ಅನೇಕೇಶ್ವರವಾದಿನ್]

**ಅನೇಕೋಕ್ತಿ** (ನಾ). ೧. ಹಲವು ಮಾತು. ೨. [ವ್ಯಾಕ] ಬಹುವಚನ. [ಅನೇಕ + ಉಕ್ತಿ]

**ಅನೇಡಮೂಕ** (ನಾ). ೧. ಕಿವುಡ ಮತ್ತು ಮೂಗ: ಕವಿತಾರಹಸ್ಯಮಂ ಸತ್ಕವಿಯಱಿಗುಮನೇಕ[ಡ]ಮೂಕನೇಡಂ ಜಡನೆಂಬವನಱಿಗುಮೆ (ಆದಿಪು. ೧–೨೦). ೨. ಕುರುಡ; ಅಂಧ: "ಅಂಧಃ, ಅನೇಡಮೂಕಃ – ಈ ೨ ಕುರುಡಂ" (ಹಲಾಯು. ೧೦೦–೪೫೫). ೩. ದುಷ್ಟ; ಅಪ್ರಾಮಾಣಿಕ; ಮೋಸಗಾರ; "ಕೆಟ್ಟಮನಸಿನವ" (ಗಂಗಾಮು. ೯). [ಸಂ. (ಅನೇಡ + ಮೂಕ)]

**ಅನೈಕಮತ್ಯ** (ನಾ). ಒಗ್ಗಟ್ಟಿಲ್ಲದಿರುವಿಕೆ: ಭಾರತೀಯರ ಅನೈಕಮತ್ಯವೇ ದಾಸ್ಯಕ್ಕೆ ಕಾರಣವಾಯಿತು (ರೂಢಿ). [ಸಂ.]

**ಅನೈಕಾಂತಿಕ** (ಗು). ೧. ಒಂದೇ ಗುರಿಯಿಲ್ಲದ; ಚಂಚಲ ಸ್ವಭಾವದ; ಅನಿಶ್ಚಿತವಾದ. (ನಾ). ೨. ಏಕಾಂತಿಯಲ್ಲದವನು: ಅನೈಕಾಂತಿಕರ್ಕೆಲರ್ತನುತರತನುಗಳೊಳಮತಿವಿಶದ ಪ್ರಜ್ಞಾತಿಶಯಮಂ ಕಾಣಲಾದಪ್ಪುದು (ಆದಿಪು. ೨–೧೦ ವ). [ಸಂ.]

**ಅನೈಚ್ಛಿಕ** (ಗು). ಐಚ್ಛಿಕವಲ್ಲದ; ಕಡ್ಡಾಯವಲ್ಲದ: ತನ್ನ ಚಿಕ್ಕಮ್ಮನ ಸತ್ಸ್ವಭಾವದ ಪ್ರೇರಣೆಯಿಂದಾಗಿ ಅವನು ಅನೈಚ್ಛಿಕವಾಗಿಯೇ ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಿಬಿಟ್ಟನು (ಪುನರು. ೩೩೧) [ಸಂ.]

**ಅನೈಪುಣೋಕ್ತಿ** (ನಾ). ಪ್ರೌಢವಲ್ಲದ ಮಾತು; ನಿಪುಣತೆಯಿಲ್ಲದ ನುಡಿ: ಬಂದುವು ಪಾವುಡಂ ನೃಪತಿಗೆಂಬುದುಮಾನೆಗಳೀ ಪ್ರದೇಶದೊಳ್ನಿಂದುದಿದೆಂಬುದುಂ ವಚನದೋಷವಿಶೇಷಮನೈಪುಣೋಕ್ತಿಯಿಂ (ಕವಿರಾ. ೧–೧೧೭). [ಸಂ. (ಅನೈಪುಣ + ಉಕ್ತಿ)]

**ಅನೈಸರ್ಗಿಕ** (ಗು). ನೈಸರ್ಗಿಕವಲ್ಲದ; ಪ್ರಕೃತಿ ವಿರುದ್ಧವಾದ: ಮನುಷ್ಯನ ಹೃದಯವು . . . ಉತ್ಕಟಚಿಂತೆಯಿಂದ ವ್ಯಾಪ್ತವಾಗಿದ್ದರೆ ಬಾಹ್ಯಪ್ರಪಂಚದ ಮೇಲೆ ಅವನ ದೃಷ್ಟಿಯಿರುವುದಿಲ್ಲವಲ್ಲದೆ ಅನೈಸರ್ಗಿಕ (Unnatural) ಪದಾರ್ಥಗಳು ಕಣ್ಣಿಗೆ ಗೋಚರವಾದಂತೆ ಮನಸ್ಸಿಗೆ ತೋರುವುದು (ಕಪಾಕುಂ. ೧೨೭). [ಸಂ.]

**ಅನೊಳ** (ನಾ). ಒಂದು ಅಳತೆ (?): ಈ ಶೂರಗತಿಪೆತ್ತ ಅರಸು ಮತ್ತಾಣಿಯುಮೊಸದು ಅನೊಳ ಕಟಿನಿಯುಂ ಇಕೊಳ ಪಾಱುಮನೆ ಪರಿಹಾರಮುಂ ಕೊಟ್ಟ (ಎಕ. X, ಕೋಲಾರ. ೨೩೨–೫; 750). ℙ ಈ ಶಬ್ದ 'ಅಯ್ಗೊಳ' ಎಂಬುದರ ಅಪಲಿಖಿತವಿರಬಹುದು. [?]

**ಅನೋಕಹ** (ನಾ). ಮರ; ಗಿಡ: "ವೃಕ್ಷಃ, ಅಂಘ್ರಿಪಃ . . . ಅನೋಕಹಃ, ದ್ರುಃ, ವಿಷ್ಟರಃ . . . ಈ – ೧೯ ಮರಂ" (ಹಲಾಯು. ೨೯–೨೩); ಅನೇಕ ಸಹಕಾರಾಶೋಕಾನೋಕಹನಂದನವನಪ್ರಸ್ಥಮುನೀಂದ್ರಪ್ರಸ್ಥಮನೆಯ್ದೆವಂದು (ಪಂಪಭಾ. ೫–೨೨ ವ). [ಸಂ.]

**ಅನೋಜೆ** (ನಾ). ೧. ಓಜಸ್ಸಿಲ್ಲದಿರುವುದು. ೨. [ಕಾವ್ಯಮೀ] ಒಂದು ಕಾವ್ಯದೋಷ: ಅಸದರ್ಥಂ ವಿಪರೀತಕಲ್ಪನೆಯುಭವ್ಯಂ . . . ವಿಷಮಾಸೌಮ್ಯಮನೋಜೆಯೆಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೬. ೧–೪೦ ಅಡಿಟ). [ಸಂ. ಅನೋಜಸ್]

**ಅನೋಸಂಸಾರ** (ನಾ). [ಜೈನ] ಸಂಸಾರ, ಅಸಂಸಾರ, ನೋಸಂಸಾರ, ಅನೋಸಂಸಾರ ಎಂಬ ನಾಲ್ಕು ಬಗೆಯ ಸಂಸಾರಗಳಲ್ಲಿ ಒಂದು: ಸಯೋಗಕೇವಲಿಗಳಂತೆ ಜೀವಪ್ರದೇಶ ಪರಿಸ್ಪಂದಮಿಲ್ಲಪ್ಪುದಱಿಂ ಅಯೋಗಕೇವಲಿ ಜಿನಾವಸ್ಥಾನಂ ಅನೋಸಂಸಾರಮಕ್ಕುಂ (ತತ್ತ್ವಪ್ರ. ೩೨೭). [ಸಂ.]

**ಅನೌಚಿತ್ಯ** (ನಾ). ಔಚಿತ್ಯವಿಲ್ಲದಿರುವುದು. [ಸಂ.]

**ಅನೌಪಚಾರಿಕ** (ಗು). ೧. ಔಪಚಾರಿಕವಲ್ಲದ; ಯೋಗ್ಯತೆಗೆ ತಕ್ಕ. ೨. ಮೊದಲೇ ಏರ್ಪಾಡಿಲ್ಲದ; ಕ್ರಮವಾದ ರೀತಿಯಲ್ಲಿ ಏರ್ಪಡಿಸದ; ಪೂರ್ವಸಿದ್ಧತೆಯಿಲ್ಲದ: ರಾಷ್ಟ್ರಪತಿಗಳು ರಾಯಭಾರಿಯನ್ನು ಅನೌಪಚಾರಿಕವಾಗಿ ಭೇಟಿಮಾಡಿದರು (ರೂಢಿ). [ಸಂ.]

**ಅನೌಪಮ್ಯ** (ನಾ). ಹೋಲಿಕೆಯಿಲ್ಲದಿರುವುದು. [ಸಂ.]

**ಅನ್ನ**₁ (ಗು). ಆ ಪ್ರಕಾರವಾದ; ಅಂಥ:

**ಅನ್ನನ್, ಅನ್ನಂ** = ಆಪ್ರಕಾರದವನು; ಅಂಥವನು: ಅಂಜನೆಸುತನನ್ನ ಅನ್ನು ಕೇಸಿನಿಯ ಎಬಿದಾತನನ್ನನೆ (ಎಕ. VIII, ಸೊರಬ. ೨೨–೮; 800); ನಿನ್ನನ್ನಂ ವಿತತಯಶನಿಲಯ ತಾರಾಪತಿ ದಿನಕರ ಸದೃಶತೇಜನೆಂಬುದುಮುಂಟೇ (ಕವಿರಾ. ೩–೮೪); ದನುಜಾಂತಕನೆಂಬೀ ನಿನ್ನನಚ್ಚುವೋದಂಕಮೆಲವೊ ಮುನ್ನೆನ್ನನ್ನಂ ದನುಜಂ ಪುಟ್ಟಿದೆ ಸಂದುದು (ಪಂಪಭಾ. ೬–೫೪); ಅನ್ನಮಾದಿ ವಿಕಲ್ಪಕ್ಕೆ —ಸಿಡಿಲನ್ನಂ ಸಿಂಗದನ್ನಂ ಪುರಹರನುರಿಗಣ್ಣನ್ನನೀ ನಾರಸಿಂಹಂ (ಶಮುದ. ೧೬೦ ಪ್ರಯೋ). **ಅನ್ನಳ್** = ಆಪ್ರಕಾರದವಳು; ಅಂಥವಳು: ನಾಣ್ಚಿ ನೋಡಿದಳ್ ತಾಂ ಮನದನ್ನಳಪ್ಪ ಕಳಭಾಷಿಣಿಯಂ ನಯನತ್ರಿಭಾಗದಿಂ (ಚಂದ್ರಪು. ೩–೬೨); ಮುಳಿದೆನ್ನೊಳ್ ಮನದನ್ನಳೊಯ್ಯನೊಱಗಿರ್ದಳ್ ನಿದ್ರೆಗೆಯ್ವಂದದಿಂ (ರಾಜಶೇ. ೧೧–೧೨೮). **ಅನ್ನದು** = ಅಂಥದು; **ಅನ್ನರ್** = ಅಂಥವರು: ಜಕ್ಕಯ್ಯನನ್ನರಾ ಧರ್ಮದಱಿವಿನೊಳ್ (ಎಕ. VIII, ನಗರ. ೬೨–೪; 800); ನರರಾರ್ ನಿನ್ನನ್ನರಿನ್ನೀ ಭುವನಭವನದೊಳ್ ಗಂಗಚಕ್ರಾಯುಧಾಂಕಾ (ಕಾವ್ಯಸಾ. ೨೧೫ ಶೂದ್ರಕ); ಚೆನ್ನರಂ ತನ್ನರಂ ಜಾನಿಸಿ ಜಱಿದು ಕಾಮುನನ್ನರಂ ಲೆಕ್ಕಿಸದೆ ಕೀಱಿಮಿಱುತೆ ಜತಿಗಳನ್ನರಂ ಮರುಳ್ಮಾಡಿ ಹುರುಳುಗೆಡಿಸುತ್ತೆ (ಉದ್ಭದೇ. ೫–೨೫); ಕಲ್ತುಕೊಳವೇೞ್ಕುಮೋ ವೃದ್ಧರೆಮ್ಮನ್ನರ್, ಎಳೆಯನಿವನನ್ನನಿನ್? (ಅಂತಿಗೊ. ೬೭೧). **ಅನ್ನವು** = ಅಂಥವು: ಕಡೆದನ್ನವಪ್ಪ ಮೊಲೆಗಳ ನಿಡಿಯಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯಪ್ಪುವಾ ಪುರವರದೊಳ್ (ಕಾವ್ಯಸಾ. ೧೭೮ ಶೂದ್ರಕ).

[ದೇ. ‖ ತಮಿ. ಅನ್ನ = ಅಂಥ; ಅನ್ನನ್, ಅನ್ನಾನ್ = ಅಂಥವನು; **ಕುರುಖ್.** ಅನ್ನೇ]

–**ಅನ್ನ**₂ '–ಅನೆಯ್ಯ' ನೋ.

**ಅನ್ನ**₃ (ನಾ). ೧. ಆಹಾರ; ಊಟ: "ಅಂಧಃ, ಕೂರಂ, ಭಕ್ತಂ, ದೀದಿವಿಃ, ಅನ್ನಂ, ಓದನಂ, ಭಿಸ್ಸಾ, ಅಶನಂ, ಆಹಾರಃ— ಈ ೯ ಕೂೞ್" (ಹಲಾಯು. ೫೩–೧೬೪); ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತಿ ಪೋಗಿ ಕಾಣ್ಬನ್ನೆಗಮನ್ನಮುಂ ಬಿಸುಟು ಪರ್ವತಮಂ ಪರಿದೇಱಿ (ಆದಿಪು. ೧–೬೧; ಸೌಇಇ. XI-i, ೫೨–೧೯; 1008 ನೋ); ವೈದಿಕರಪ್ಪ ವೇದವಿತ್ತುಗಳೊಂದು ಕೋಟಿಗೆ ಅನ್ನವನಿಕ್ಕಿದ ಫಲಕ್ಕೆ ಕೋಟಿ ಮಿಗಿಲು ಶಿವಶರಣಂಗೆ ಒಂದು ಭಿಕ್ಷವನಿಕ್ಕಿದ ಫಲ (ಆದವ. ೨೨); ಉರಗನಾರಿಯರೀತನ ಗಾಡಿಗೆ ನೆಱೆ ಮರುಳಾಗಿಯನ್ನವ ತೊಱೆದು (ಕಂಠವಿ. ೯–೧೩೭); ಅನ್ನಗತೋ ಪ್ರಾಣ (ಗಾದೆ). ೨. ಬೇಯಿಸಿದ ಅಕ್ಕಿ. 'ಅನ್ನರಸ' ಪರಾ. ೩. ವಿಷ್ಣು. ೪. ಸೂರ್ಯ. ೫. ನೀರು. [ಸಂ.]

**ಅನ್ನಋಣ** (ನಾ). ೧. ಅನ್ನದ ಋಣ: ಭೀಷ್ಮ ದ್ರೋಣ ಕೃಪ ಇವರಿಗೆ ಇಬ್ಬರಲ್ಲಿಯೂ ಒಂದೇ ಭಾವನೆ ಇದ್ದರೂ, ಅನ್ನಋಣವನ್ನು ತೀರಿಸಿಕೊಳ್ಳುವುದಕ್ಕಾಗಿ ಅವರು ಯುದ್ಧರಂಗದಲ್ಲಿ ಜೀವ ಕೊಡುತ್ತಾರೆ (ವಚಭಾ. ೧೨೩); ಅನ್ನದ ಋಣ ಇನ್ನೂ ತೀರಿಲ್ಲ ಬದುಕಿದ್ದಾನೆ (ರೂಢಿ). ೨. ಅನ್ನದ ಹಂಗು. [ಅನ್ನ₃ + ಋಣ]

**ಅನ್ನಂ** (ಅ). ೧. ಅಷ್ಟರೊಳಗೆ; ಆ ಅವಧಿಯೊಳಗೆ; ಅದಕ್ಕೆ ಮುಂಚೆ: ಎಯ್ದೆ ಜೀವಂ ಬಿಡದನ್ನಂ ಬೇಗಮಿಂತೀ ಗಿಳಿಯ ಮಱಿಯನಬ್ಜಾಕರಕ್ಕೊಯ್ವಮೀಗಳ್ (ಕಾದಂಪೂ. ೨೧೧); ನೆರೆವನ್ನಂ ರವಿ ನಿಲ್ಲದಸ್ತಗಿರಿಯಂ ಸಾರ್ದಂ ಪ್ರಿಯಂ ಪೋಗಲಾತುರನಾಗಿರ್ದಂ (ಕಾವ್ಯಾವ. ೮೫೭). ೨. ವರೆಗೆ; ತನಕ: ಒಳಗಂ ಭೇದಿಸದನ್ನಂ ಚಳಬುದ್ಧಿಗೆ ಪೊಱಗು ಬೆಟ್ಟತಾಗಿರ್ಕುಂ (ಸಮುಪ. ೩–೨೭); ಮನಂ ದಣಿವನ್ನಮೋಲಾಡಿ ಪೊಡೆ ಕೋಡುವನ್ನಂ ಬರೆಪೀರ್ದು (ರಾಮಾಶ್ವ. ೩–೯). ೩. ಹಾಗೆ; ಆ ಪ್ರಕಾರವಾಗಿ; ಅಷ್ಟು ಮಟ್ಟಿಗೆ: ಜಯವರ್ಮನಿರ್ದೋಡಮುವಂ ಮುಟ್ಟಲ್ಲನೆಂದೊಳ್ಪೊಡಂಬಡುವನ್ನಂ ಕಿಱಿಯಾತನಂ ನಿಱಿಸಿದಂ ಶ್ರೀವರ್ಮನಂ ರಾಜ್ಯದೊಳ್ (ಆದಿಪು. ೨–೩೮).

[< ಅನ್ನ₁. / ತೆಲು. ಅನ್ನ]

**ಅನ್ನಂತ** (ನಾ). = ಅನಂತ: ಅಭಯಾ ಕೊಟ್ಟು ಬೆನ್ನು ಕಾಯಲಿಬೇಕು ಬೀಸಿ ಬಿಸಾಟದಲೆ ಅನ್ನಂತ ಕರ್ಮದಾಧಾರಧೀರ (ಮೋಕ್ಷದೀ. ೭).

[< ಸಂ. ಅನಂತ]

**ಅನ್ನಂಬಡೆ** (ಕ್ರಿ). ಆಹಾರವನ್ನು ಪಡೆ: ಬಡತನದೊದವಿಂದನ್ನಂಬಡೆಯದೆ ಮಱುಗಿ ಕರಸ್ನೋೞವಿಂ ಪೆಂಪುಗೆಟ್ಟು ನಮೆಯುತ್ತಿರ್ದರ್ (ಧರ್ಮಾಮೃ. ೮–೧೬೦). [ಅನ್ನ₃ + ಪಡೆ₁]

**ಅನ್ನಂಬರಂ** 'ಅನ್ನೆವರಂ' ನೋ.

**ಅನ್ನಕ** 'ಅನ್ನಕಂ' ನೋ.

**ಅನ್ನಕಂ**, ಅನಕ₁, ಅನಕಾ, ಅನ್ನಕ, ಅನ್ನಕ್ಕ (ಅ). ೧. ವರೆಗೆ; ತನಕ; ಅಷ್ಟು ದೂರ, —ಕಾಲ: ಚಿಂತೆ ಬೇಡನ್ನಕಂ ಗೋಪಿಯೊಳಿರಿಸವನನೆನೆ (ಸಿದ್ಧರಾ. ೪–೪೦); ಬೆಳಗನ್ನಕ್ಕಂ ಹೊಂದಿದೆನದೊಂದೇ ಛಂದದುರು ಸುಖವ (ಬಸಪು. ೧೨–೧೦); ಕೌರವನ ಹರಣವಿರುವನ್ನಕಂ ನಮಗೆ ಧರೆ ಬಹುದೆ (ತುರಂಗ. ೬೨–೧೩). ೨. ಆ ವೇಳೆಗೆ; ಆ ಸಮಯಕ್ಕೆ: ಅನ್ನಕಂ ಧೃತರಾಷ್ಟ್ರದೂತರಿವರರಮನೆಗಳನ್ನು ಪೊಕ್ಕರು (ತುರಂಗ. ೨೪–೨); ಸರಸಿಯಂ ಬಿಡದೆಯಿರಲನ್ನಕಂ ರಾಯದಳ ಮೆರೆವುತಂ . . . ತೆರಳಿ ಬರೆ (ತುರಂಗ. ೭೪–೪೩). **ಅನಕ**₁: ೧. ಜಡಜಭವನಭವನ ಸಮಯಮುಂ ಪಡೆವನಕ ದೇಗುಲದ ಹೊಱಗೆ ಯೆರಡು ಕರಂ ಮುಗಿದಿಹನು (ಬಸಪು. ೪೩–೪೨); ಧನಕನಕವುಳ್ಳನಕ ದಿನಕರನವೋಲಕ್ಕು (ಸರ್ವಜ್ಞ. ೧೨೩೭). ೩. ಸ್ವಲ್ಪಕಾಲದ ವರೆಗೆ: ಅನಕ ಅವರ ತಾಯಿ ನೋಡಿಕೊಳ್ಳಲಾರಳೆ (ಬೆಟ್ಟಹೊ. ೫೭). **ಅನಕಾ**: ೧. ಹೊರಗೆ ಹೋದವ ಇನ್ನೂ ಅನಕಾ ಮನೆಗೆ ಬಂದಿದ್ದಿಲ್ಲಪಾ (ಕಾಲಚ. ೧೧). ೩. ನನ್ನ ಗೆಳೆಯನ ಹತ್ತರ ಇದ್ದ ಎರಡು ಪ್ರತಿಗಳನ್ನು ಅನಕಾ ಇಸಕೊಂಡಿದ್ದೇನೆ (ಮುಂಬಯಿ. ೪–೧೯೨). **ಅನ್ನಕ**: ೧. ಈಶ್ವರಾರ್ಚನೆ ವೇಳೆಯೊಳು

ಬೆಳಗನ್ನಕಿರ್ದನು ಮುಗ್ಧಸಂಗಯ್ಯ (ಬಸವು. ೧೨ ಸೂ) ; ಒಡ್ಡಿದಂಕವ ನಾನು ಗೆಲ್ವೆ ನೀನನ್ನಕ ದೊಡ್ಡಣ್ಣನೊಡನಿರು (ಭರಚ. ೫೦–೧೧೬). **ಅನ್ನಕ್ಕೆ** : ೧. ಸಂದೇಹವುಳ್ಳನ್ನಕ್ಕ ನತಾಂಗಿಯಲ್ಲ ಅಲಗಿನ ಮೊನೆ ಗಂಜುವನ್ನಕ್ಕ ಪಟುಭಟನಲ್ಲ (ಏಲೇಶ್ವ. ೫೯); ಶಿವಕರುಣವಿಡಿಯದನ್ನಕ್ಕ ಪ್ರಸಾದಿ ಎಂತೆಂಬೆ? (ಸಿದ್ಧವ. ೨–೯) ; ಏನಾದಡೇನಯ್ಯ ತಾನಾಗದನ್ನಕ್ಕ ತಾನಾಗಿ ತನ್ನನಜೀದವನು ಲೋಕದಲಿ ಏನಾದಡೇನು (ಸರ್ವಜ್ಞ. ೪೦೮). 'ಅನ್ನಕ್ಕರ' ಪರಾ. [?]

**ಅನ್ನಕಂಟಕ** (ಗು). ೧. ಊಟಕ್ಕೆ ತೊಂದರೆ ಮಾಡುವ. (ನಾ). ೨. ಊಟಕ್ಕೆ ತೊಂದರೆ ಮಾಡುವವನು : ಯಾರಿಗೂ ಅನ್ನಕಂಟಕ ನಾಗಬೇಡ (ರೂಢಿ). [ಅನ್ನ$_3$ + ಕಂಟಕ]

**ಅನ್ನಕಂಟಕತನ** (ನಾ). ಆಹಾರಕ್ಕೆ ಅಡ್ಡಿಪಡಿಸುವ ಸ್ವಭಾವ; ಜೀವನಕ್ಕೆ ಕಲ್ಲು ಹಾಕುವುದು. [ಅನ್ನ$_3$ + ಕಂಟಕ + –ತನ]

**ಅನ್ನಕರ** 'ಅನ್ನಕ್ಕರ' ನೋ.

**ಅನ್ನಕಲ್ಪಕ** (ನಾ). ಅನ್ನವನ್ನು ಒದಗಿಸುವವನು ; ಆಹಾರವನ್ನು ಕೊಡುವವನು : ಬ್ರಹ್ಮಾದ್ಯಖಿಳಚೇತನಕನ್ನಕಲ್ಪಕನಾಹನನಿರುದ್ಧಾದಿ ನಾಮದಲಿ (ಹಸಾರ. ೧೨–೨೪). [ಅನ್ನ$_3$ + ಕಲ್ಪಕ]

**ಅನ್ನಕ್ಕೆ** 'ಅನ್ನಕಂ' ನೋ.

**ಅನ್ನಕ್ಕರ,** ಅನ್ನಕರ (ಅ). = ಅನ್ನಕಂ : ೧. ಮರನುಳ್ಳನ್ನಕ್ಕರ ಎಲೆ ಉಲಿವುದ ಮಾಬುದೆ (ಅವಚಂ. ೧೦೭–೪೮೭) ; ಅಂಗ ಲಿಂಗವೆಂಬನ್ನಕ್ಕರ ಕಾಯದ ಸೂತಕ ಪ್ರಾಣಲಿಂಗವೆಂಬನ್ನಕ್ಕರ ಮನದ ಸೂತಕ (ಮಾಧೂಳ. ೨). **ಅನ್ನಕರ** : ನೆಲನೂ ನೇಸಱುಳ್ಳನ್ನಕರ ಬದುಕೆನುತಾ ಸುಕನ್ಯೆಯ ನಪ್ಪಿ (ನಿಭಾಗ. ೯–೨–೨೬) ; ಧರಿಪುದು ಘಟಿಸುವನ್ನಕರ (ರಾಮವಿ. ೧೪–೧೬೬). [?]

**ಅನ್ನಗತ** (ಗು). ಅನ್ನಕ್ಕೆ ಸೇರಿದ; ಆಹಾರಕ್ಕೆ ಸಂಬಂಧಿಸಿದ. 'ಅನ್ನಗತ ಪ್ರಾಣ' ಪರಾ. [ಅನ್ನ$_3$ + ಗತ]

**ಅನ್ನಗತಪ್ರಾಣ** (ನಾ). ಸ್ವಲ್ಪ ಹೊತ್ತು ಆಹಾರವಿಲ್ಲದಿದ್ದರೂ ತಡೆಯಲಾರದ ವ್ಯಕ್ತಿ ; ಹಸಿವನ್ನು ತಡೆಯಲಾರದವನು : ಅನ್ನ ಗತಪ್ರಾಣ ಚರ್ಮಗತ ದೃಷ್ಟಿ (ಗಾದೆ) [ಅನ್ನಗತ + ಪ್ರಾಣ]

**ಅನ್ನಗದಕ** (ನಾ). ಆಹಾರದ ವಿಷಯದಲ್ಲಿ ಮೋಸಗೊಳಿಸುವವನು; ಊಟಮಾಡಿದ್ದರೂ ಮಾಡಿಲ್ಲವೆಂದು ನಟಿಸುವವನು (ಉಕ. ೩). [ಅನ್ನ + ಗದಕ]

**ಅನ್ನಗೆಡೆ** (ನಾ). ಒಂದು ಊರಿನ ಅಥವಾ ಪ್ರದೇಶದ ಹೆಸರು (?) : ಕೆಱೆಯ ಕೆಳಗೆ ಗುಣಿಗಗಳೆಯೊಳ್ಕಮ್ಮ ೫೦ ಸೆಜ್ಜೆ ಗದ್ದೆ ಮತ್ತ ೧ ಕಮ್ಮ ೨೫ ಪಡಿಸಲಿಸುವುದರ್ಕ್ಕಂ ಭೋಗಕ್ಕಂ ಎಡೆನಾಡ ೭೦ ಬಳಿಯನ್ನಗೆಡೆಯಂ ಸರ್ವನಮಸ್ಯಂ ಬಿಟ್ಟಂ (ಎಕ. VIII, ಸೊರಬ. ೧೮೪–೨೪ ; 1033 ?). [?]

**ಅನ್ನಗ್ರಹಣ** (ನಾ). ಆಹಾರವನ್ನು ತೆಗೆದುಕೊಳ್ಳುವುದು : ಊಟಕ್ಕೆ ಕುಳಿತುಕೊಳ್ಳುವಾಗಲೂ ರಂಗನು ಈ ಪ್ರಾರ್ಥನೆಯನ್ನು ಅಂದ ಬಳಿಕವೇ ಅನ್ನಗ್ರಹಣವನ್ನು ಮಾಡುತ್ತಿದ್ದನು (ರಂಗರೋ. ೧೬). [ಅನ್ನ$_3$+ಗ್ರಹಣ]

**ಅನ್ನಚತ್ರ,** ಅನ್ನಛತ್ರ (ನಾ). ಉಚಿತವಾಗಿ ಆಹಾರ ದಾನಮಾಡುವ ಧರ್ಮಶಾಲೆ: ಇದೇನು ಮನೆಯೋ ಅನ್ನಚತ್ರವೋ (ರೂಢಿ). **ಅನ್ನಛತ್ರ** (ತ್ರೈಸ್‌ಗೆ. ೫೪೨). [ಸಂ. ಅನ್ನಸತ್ರ]

**ಅನ್ನಛತ್ರ** 'ಅನ್ನಚತ್ರ' ನೋ.

**ಅನ್ನಜ** (ಗು). ಆಹಾರದಿಂದ ಹುಟ್ಟಿದ ; ಆಹಾರಕ್ಕೆ ಸಂಬಂಧಿಸಿದ: ಅನ್ನಜ ಜೀವಜ ಮಾನಜ ಭೀತಿಗಳಂ ನಿರ್ಧರಿಸೆಲೆ ಬಾಲಕ (ಯೋಗಾಂವಿ. ೩–೩೧). [ಸಂ.]

**ಅನ್ನದ** (ನಾ). = ಅನ್ನದಾತ : ಅನ್ನದನ್ನಾದನ್ನಮಯ ಸ್ವಯಮನ್ನ ಬ್ರಹ್ಮಾದ್ಯಖಿಳ ಚೇತನಕನ್ನಕಲ್ಪಕ ನಾಹನನಿರುದ್ಧಾದಿನಾಮದಲಿ (ಹಸಾರ. ೧೨–೨೪). [ಸಂ.]

**ಅನ್ನದಟ್ಟು** (ನಾ). ಅನ್ನದ ಅಭಿಷೇಕ : ಯಿಂತೀ ಪಂಚಲಿಂಗದೇವರೊಳಗಾದ ದೇವರುಗಳ ಅಂನದಟ್ಟಿನ ತ್ರಿಕಾಲದ ಪೂಜಾ ಪುನಸ್ಕಾರ ಅಮೃತ ಪಡಿ . . . ವಿಶಿಷ್ಟೋತ್ಸವಂಗಳಿಗೆ (ಎಕ. XI, ಚಿತ್ರದು. ೩೨–೫೫ ; 1286). ಅನ್ನಾಭಿಷೇಕ ಹೋ. [ಅನ್ನ + ಅಟ್ಟು$_2$]

**ಅನ್ನದಾತ** (ನಾ). ಅನ್ನವನ್ನು ಕೊಡುವವನು ; ಆಹಾರವನ್ನು ಒದಗಿಸುವವನು : ಧರೆಯೊಳಿಂತಪ್ಪನ್ನದಾತರ ಸರಿಯಿಡುವರಾರಯ್ಯ ನಿನಗತಿ ಸಾಂಗವಾಯಿತ್ತು (ಬಸವು. ೨೪–೨೬). [ಅನ್ನ$_3$ + ದಾತ]

**ಅನ್ನದಾನ** (ನಾ). ಆಹಾರವನ್ನು ಉಚಿತವಾಗಿ ಕೊಡುವುದು ; ಭೋಜನವನ್ನು ಮಾಡಿಸುವುದು ; ಧರ್ಮಕ್ಕಾಗಿ ಆಹಾರವನ್ನು ನೀಡುವುದು: ವ್ರತಹೀನರ್ ಸನ್ಮಾರ್ಗಪ್ರತಿಕೂಲರ್ ವ್ಯಸನ ವಶಗತರ್ ಪಾಪಿಗಳಿಂತತಿಕಷ್ಟರಪ್ಪರವನಿಯೊಳತಿಥಿಯೊಳಿನ್ನನ್ನದಾನಮಂ ಕುಡುವೆಡೆಯೊಳ್ (ಆದಿಪು. ೧೫–೪೦) ; ತನಯನಿಲ್ಲದ ಮನೆಯೊಳೆಮಗೆಂತನುಭವಿಸ ಬಹುದನ್ನದಾನವನನುಮತವೆ ಹೇಳಾ ನಪುತ್ರಸ್ಯ ಗತಿರ್ನಾಸ್ತಿ ಎನೆ (ಬಸವು. ೨೪–೩೨) ; ಅನ್ನದಾನದ ಮಹಿಮೆ ತಾನನ್ನಮಯಕೆ (ಅನಿಕೇ. ೫೬–೮). [ಅನ್ನ$_3$ + ದಾನ]

**ಅನ್ನದಾನಿ** (ನಾ). ಅನ್ನವನ್ನು ದಾನ ಮಾಡುವವನು : ಅನ್ನದಾನಿಗಳ ಸಂಖ್ಯೆ ದೇಶದಲ್ಲಿ ಕಡಿಮೆಯಾಗುತ್ತಿದೆ (ರೂಢಿ). [ಅನ್ನ$_3$ + ದಾನಿ$_1$]

**ಅನ್ನದಾನೀಶ** (ನಾ). ೧. ಅನ್ನದಾನವನ್ನು ಮಾಡುವವರ ಒಡೆಯ, —ಪ್ರಭು. ೨. ಒಬ್ಬನ ಹೆಸರು : ಘನಶಿಷ್ಯವೃಂದಮಂ ದೇಶಿಕಶೇಖರಂ ಪಡೆವುತಾತ್ಮಸಮಾನರನುರ್ವಿಗನ್ನದಾನೀಶನೆನಿಪ್ಪ ನಾಮಮಭಿರಾಮತೆ ವೆತ್ತಿರೆ ತೋರ್ದನೂರ್ಜಿತಂ (ರಾಜಶೇ. ೧–೬೦). [ಅನ್ನ$_3$+ ದಾನ + ಈಶ]

**ಅನ್ನದ್ರೋಹ** (ನಾ). ಉಂಡಮನೆಗೆ ಎರಡು ಬಗೆಯುವುದು. [ಅನ್ನ + ದ್ರೋಹ]

**ಅನ್ನದ್ವೇಷ** (ನಾ). ಅನ್ನವನ್ನು ಕಂಡರೆ ಆಗದ ಸ್ಥಿತಿ ; ಆಹಾರದ ಮೇಲೆ ಇಚ್ಛೆಯಿಲ್ಲದಿರುವುದು : ಜ್ವರದಿಂದ ಬಾಯಿ ಕೆಟ್ಟು ಅನ್ನದ್ವೇಷ ವುಂಟಾಗಿದೆ (ರೂಢಿ). [ಅನ್ನ$_3$ + ದ್ವೇಷ]

**ಅನ್ನನಾಳ** (ನಾ). ಗಂಟಲಿನಿಂದ ಜಠರದವರೆಗೆ ಆಹಾರವನ್ನು ಸಾಗಿಸುವ ನಾಳ. [ಅನ್ನ$_3$ + ನಾಳ]

**ಅನ್ನನೀರು** (ನಾ). = ಅನ್ನಪಾನ : ಹೊತ್ತುಹೊತ್ತಿಗೆ ಅನ್ನನೀರನು ಹವಣಿಸಿ ಮಕ್ಕಳ ಗಿಣಿಯಂತೆ ಸಾಕಿ (ಇಂಚಾಪ. ೧೬–೬೭). [ಅನ್ನ$_3$ + ನೀರು]

**ಅನ್ನಪಕ್ಷಿ** (ನಾ). ಒಂದು ಬಗೆಯ ಹಂಸಪಕ್ಷಿ : ನಾಲ್ಕನೆಯ ಕಟ್ಟನಲ್ಲಿ ಸುಂದರವಾದ ಹಂಸಪಕ್ಷಿ ಅನ್ನಪಕ್ಷಿಗಳೂ . . . ಕೆತ್ತಲ್ಪಟ್ಟಿದ್ದುವು (ಶಾಂತಲಾ. ೧೩೯). [ಅನ್ನ$_0$ + ಪಕ್ಷಿ. / ತಮಿ. ಅನ್ನಂ = ಹಂಸ]

**ಅನ್ನಪಚನ,** ಅನ್ನಪಚನೆ (ನಾ). ೧. ಆಹಾರವನ್ನು ಬೇಯಿಸುವುದು; ಅನ್ನವನ್ನು ಬೇಯಿಸುವುದು. ೨. ಆಹಾರವು ಜೀರ್ಣಿಸುವುದು ; ಜೀರ್ಣಶಕ್ತಿ : ಆಹಾರವು ಕಡಮೆಯಾದರೆ ರಕ್ತಾಭಿಸರಣ, ಶ್ವಾಸೋಚ್ಛ್ವಾಸ, ಅನ್ನಪಚನ ಇತ್ಯಾದಿ ವ್ಯಾಪಾರಗಳು ಮಂದವಾಗಿ, ದೇಹಕ್ಕೆ ದುರ್ಬಲತ್ವ ಉಂಟಾಗುತ್ತದೆ (ಮುಂಬಯಿ. ೫–೧೬೨). **ಅನ್ನಪಚನೆ** : (ದಕ. ೩). [ಅನ್ನ$_3$ + ಪಚನ]

**ಅನ್ನಪಚನೆ** 'ಅನ್ನಪಚನ' ನೋ.

**ಅನ್ನಪದಾರ್ಥ** (ನಾ). ಅನ್ನ ಮತ್ತು ಪಲ್ಯ ಅಥವಾ ತಾಳದ (೩) [ಅನ್ನ$_3$ + ಪದಾರ್ಥ]

**ಅನ್ನಪಾನ** (ನಾ). ಅನ್ನ ಮತ್ತು ನೀರು : ಎಲ್ಲ ಪ್ರಾಣಿಗಳಿಗೂ ಆವುಗಳ ಸ್ಥಿತಿಗತಿಗೆ ತಕ್ಕ ಅನ್ನಪಾನಾದಿಗಳ ಅನುಕೂಲತೆಯುಂಟು (ಮುಂಬಯಿ. ೪–೫೯). [ಅನ್ನ$_3$ + ಪಾನ]

**ಅನ್ನಪೂರ್ಣೆ** (ನಾ). ಆಹಾರಕ್ಕೆ ಅಧಿದೇವತೆ; ದುರ್ಗಿಯ ಒಂದು ರೂಪ. [ಸಂ. ಅನ್ನಪೂರ್ಣಾ]

**ಅನ್ನಪ್ರಾಶನ** (ನಾ). ಮಕ್ಕಳಿಗೆ ಮೊಟ್ಟ ಮೊದಲು ಅನ್ನವನ್ನು ಉಣಿಸುವ ಒಂದು ಸಂಸ್ಕಾರ ; ಷೋಡಶ ಕರ್ಮಗಳಲ್ಲಿ ಒಂದು : ಮಾಸ ಷಟ್ಕಂ ಪೋಗೆ ಪೂಜಾವಿಧಿಪೂರ್ವಕಂ ಯಥಾಕ್ರಮದಿನಗೞೂಡುವುದು ಅನ್ನಪ್ರಾಶನಕ್ರಿಯೆ (ಚಾವುಂಉ. ೨೬೨) ; ಗರ್ಭಾಧಾನ ಪುಂಸವನ ಸೀಮಂತ ಜಾತಕರ್ಮ ನಾಮಕರಣ ಅನ್ನಪ್ರಾಶನ ಚೌಲ ಉಪನಯನ . . . ಎಂಬ ಷೋಡಶ ಕರ್ಮಗಳೊಡನೆಯು (ವಿವೇಕ. ೫) ; ಆರನೆಯ ತಿಂಗಳಲ್ಲಿ ಅನ್ನಪ್ರಾಶನವನ್ನು ಮಾಡುವುದು ; ಮಗುವಿಗೆ ಸ್ವತಂತ್ರವಾದ ಆಹಾರ ಸೇವನೆಯನ್ನು ಆರಂಭಿಸುವ ಕರ್ಮವು (ಆರ್ಯಧ. ೧೨೩). [ಅನ್ನ$_3$ + ಪ್ರಾಶನ]

**ಅನ್ನಬರ** 'ಅನ್ನೆವರಂ' ನೋ.

**ಅನ್ನಬರೆ** 'ಅನ್ನೆವರಂ' ನೋ.

**ಅನ್ನಭೇದಿ** (ನಾ). ಕಬ್ಬಿಣ ಮತ್ತು ಗಂಧಕಾಮ್ಲಗಳ ಸಂಯೋಗದಿಂದ ಉಂಟಾಗುವ ಒಂದು ಬಗೆಯ ಲವಣ; ಕಾಸೀಸ; ಹಿರಾಕಸ: ಅನ್ನಭೇದಿ ೪ ತೊಲ (ಗ್ರಾಮಾಕ. ೧೪೦) ; ಅಳಲೆಕಾಯಿ ಅನ್ನಭೇದಿ ಮುಂತಾದುವುಗಳಿಂದ ಮಸಿಯನ್ನು ತಯಾರಿಸುತ್ತಿದ್ದರು (ಕನ್ನಸಂ. ೪೪). [ಸಂ.]

**ಅನ್ನಮದ** (ನಾ). ಅನ್ನಕ್ಕೆ ಸಾಕಾಗುವಷ್ಟು ಆಸ್ತಿ ಇದೆ ಎಂಬ ಗರ್ವ; ಅನ್ನದ ಅಧಿಕತೆಯಿಂದ ಉಂಟಾಗುವ ಸೊಕ್ಕು : ಅನ್ನಮದ ಅರ್ಥಮದ ಅಖಿಲ ವೈಭವದ ಮದ ಮುನ್ನ ಪ್ರಾಯದ ಮದವು ರೂಪಮದವು (ಪುರಂದ. ೨–೧೫೧–೨). [ಅನ್ನ$_3$ + ಮದ]

**ಅನ್ನಮಯ** (ನಾ). ಪಂಚಕೋಶಗಳಲ್ಲಿ ಒಂದು ; ಸ್ಥೂಲದೇಹ : ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಐದು ಕೋಶಸ್ವರೂಪನಾಗಿ (ಹಸಾರ. ೪–೧೬) ; ಈ ಸ್ಥೂಲಶರೀರವೇ ಅನ್ನ ಪರಿಣಾಮವಾದುದರಿಂದ ಪ್ರತ್ಯಕ್ಷವಾದ ಕೋಶವು ಅನ್ನಮಯ (ಹಿಂದಸಾ. ೧೯೬). 'ಅನ್ನಮಯಕೋಶ' ಪರಾ. [ಅನ್ನ$_3$ + ಮಯ$_2$]

**ಅನ್ನಮಯಕೋಶ** (ನಾ). = ಅನ್ನಮಯ : ತಂದೆಯು ತಿಂದ ಅನ್ನದಿಂದ ಉತ್ಪನ್ನವಾದ ವೀರ್ಯದಲ್ಲಿ ಹುಟ್ಟಿ ಅದೇ ಅನ್ನದಿಂದಲೇ ವೃದ್ಧಿಗೊಳ್ಳತಕ್ಕದ್ದು ಅನ್ನಮಯಕೋಶ (ಜೀವಾತ್ಮ. ೧೫೦). [ಅನ್ನಮಯ + ಕೋಶ]

**ಅನ್ನಮಾನಿ** (ನಾ). ಅನ್ನದ ಅಭಿಮಾನಿ ದೇವತೆ : ಅನ್ನಮಾನಿ ಶಶಾಂಕನೊಳು ಕಾರುಣ್ಯಸಾಗರ ಕೇಶವನು ಪರಮಾನ್ನದೊಳು ಭಾರತಿಯು ನಾರಾಯಣನು ಭಕ್ಷ್ಯದೊಳು . . . ಇರುತಿಪ್ಪನೆಂದೆಂದು (ಹಸಾರ. ೩೧–೧೪). [ಅನ್ನ$_3$ + ಮಾನಿ]

**ಅನ್ನಮುಹೂರ್ತ** (ನಾ). = ಅನ್ನಪ್ರಾಶನ : ಇಂದು ಮಗುವಿಗೆ ಅನ್ನಮುಹೂರ್ತ ಮಾಡಿಸಬೇಕು (ರೂಢಿ). [ಅನ್ನ$_3$ + ಮುಹೂರ್ತ]

**ಅನ್ನಯ** 'ಅನ್ನೆಯ' ನೋ.

**ಅನ್ನರಸ** (ನಾ). ಅನ್ನದ ಸಾರ ; ಸಾರು ಮಜ್ಜಿಗೆ ಮುಂತಾದ ದ್ರವವಸ್ತುಗಳೊಡನೆ ಕಿವಿಚಿ ತೆಗೆದ ಅನ್ನದ ಸತ್ತ್ವ : ಯಮನು ಅವನಿಗೆ ಅನ್ನರಸವನ್ನೂ ಧರ್ಮಸ್ಥಿತಿಯನ್ನೂ ಕೊಟ್ಟನು (ವಚಭಾ. ೧೩೧). [ಅನ್ನ$_3$ + ರಸ]

**ಅನ್ನವರ** 'ಅನ್ನೆವರಂ' ನೋ.

**ಅನ್ನವರ್ಜಿತವ್ರತ** (ನಾ). ಅನ್ನವನ್ನು ಬಿಟ್ಟಿರುವ ನಿಯಮ; ಉಪವಾಸವ್ರತ. [ಅನ್ನ$_3$ + ವರ್ಜಿತ + ವ್ರತ]

**ಅನ್ನವಸ್ತ್ರ** (ನಾ). ಆಹಾರ ಮತ್ತು ಬಟ್ಟೆ. [ಅನ್ನ$_3$ + ವಸ್ತ್ರ]

**ಅನ್ನವಾಟಿಕೆ** (ನಾ). ಅಡಿಗೆಯ ಮನೆ ; ಪಾಕಶಾಲೆ : ಅನ್ನವಾಟಿಕೆಗಳೊಳ್ ಪಾಕಮಂ ಮಾಡಿಸುವ ಮಣಿಹಮಂ ಕೃತವರ್ಮಕಂ ತಾಳ್ದನು (ಜೈಮಿಭಾ. ೩೪–೭). [ಅನ್ನ$_3$ + ವಾಟಿಕೆ]

**ಅನ್ನವಾಸ** (ನಾ). ೧. ಭೋಜನ ಶಾಲೆ ; ಊಟದ ಮನೆ : ನೆಗೞ್ದ ಮಾತಜೀವರ ಸಬ್ಬವದವರೊಡನಂತೊಸೆದನ್ನವಾಸದೋಲಗದೊಳಿರ್ದನಾಗಳ್ ಹರಿಗಂ (ಪಂಪಭಾ. ೩–೮೦) ; ಅಮೃತಮತಿಯೆಂಬಳ್ ಅಮೃತಾಹಾರದ ಬೋನಮಂ . . . ವಿಳಾಸದಿಂದನ್ನವಾಸಕ್ಕೆ ನಡೆಯಿಸಿಯುಂ (ಚಂದ್ರಪು. ೧೧–೧೪೫ ವ) ; ಮಡದಿಗೆ ಬೋನವೆತ್ತುವೆಡೆಯಾಡುವ ಬಡ್ಡಿಪ ಸೋದಿಪೊಳ್ಪಿತಂ ನುಡಿಸುವ ಕಂಚನುಗ್ಘಡಿಪ ಕೆಯ್ಗೞಿವಾರತಿದೋರ್ಪ . . . ನೆರೆದರಿಂದ್ರಲತಾಂಗಿಯರನ್ನವಾಸದೊಳ್ (ಪುಷ್ಪಪು. ೯–೮೭). [ಅನ್ನ$_3$ + ವಾಸ$_2$]

**ಅನ್ನವ್ವೆ** (ನಾ). ಒಬ್ಬಾಕೆಯ ಹೆಸರು : ತೊರೆಯರ ಮಾರಣ್ಣಗಂ ಅನ್ನವ್ವೆಯಕ್ಕಂಗಂ ಪುಟ್ಟಿದವರ ತಾತಣ್ಣ (ಎಕ. IV, ಗುಂಡ್ಲುಪೇ. ೮೪–೨ ; 1000 ?). [ಅನ್ನ$_3$ + ಅವ್ವೆ]

**ಅನ್ನಶಾಂತಿ** (ನಾ). ಅನ್ನದಿಂದ ಉಂಟುಮಾಡುವ ತೃಪ್ತಿ ; ಅನ್ನದಾನದ ಮೂಲಕ ನಡಸುವ ಶಾಂತಿ : ಗ್ರಾಮದೇವತೆಗೆ ಅನ್ನಶಾಂತಿ ಮಾಡಬೇಕು (ರೂಢಿ). [ಅನ್ನ$_3$ + ಶಾಂತಿ]

**ಅನ್ನಶುದ್ಧಿ** (ನಾ). ೧. ಆಹಾರಶುದ್ಧಿ. ೨. ತುಪ್ಪ : ಅವರ ಹೆಂಡತಿಯವರು ಮುಂದಿನ ಆರು ತಿಂಗಳಿಗೆ ಬೇಕಾಗುವಷ್ಟು "ಅನ್ನಶುದ್ಧಿಯನ್ನು" (ತುಪ್ಪ) ಸಂಗ್ರಹಿಸಿಬಿಟ್ಟರು (ಶಿವರಾ. ೧೫). [ಅನ್ನ$_3$ + ಶುದ್ಧಿ]

**ಅನ್ನಶ್ರಾದ್ಧ** (ನಾ). ಬೇಯಿಸಿದ ಆಹಾರವನ್ನು ಬಡಿಸಿ ಮಾಡುವ ಶ್ರಾದ್ಧ, —ತಿಥಿ. 'ಆಮಶ್ರಾದ್ಧ' ಪರಾ. [ಅನ್ನ$_3$ + ಶ್ರಾದ್ಧ]

**ಅನ್ನಸಂತರ್ಪಣೆ** (ನಾ). ಅನ್ನದಾನದಿಂದ ಜನರನ್ನು ತೃಪ್ತಿಪಡಿಸುವುದು ; ದಾಸೋಹ : ಈ ಊರಿನಲ್ಲಿ ಇಂದು ಅನ್ನಸಂತರ್ಪಣೆ (ರೂಢಿ). [ಅನ್ನ$_3$ + ಸಂತರ್ಪಣೆ]

**ಅನ್ನಸಂಸ್ಕಾರ** (ನಾ). ೧. ಪಾಕವಿದ್ಯೆ ; ಅಡಿಗೆಮಾಡುವ ಕಲೆ : ಅವನು ಋತುಪರ್ಣನಲ್ಲಿಗೆ ಹೋಗಿ, "ನಾನು ಅಶ್ವವಿದ್ಯೆಯನ್ನು ಬಲ್ಲೆ ; ಅನ್ನಸಂಸ್ಕಾರವನ್ನು ಬಲ್ಲೆ ; ಇತರರು ಅರಿಯದ ಶಿಲ್ಪಗಳನ್ನು ಬಲ್ಲೆ" ಎಂದು ಹೇಳಿದನು (ವಚಭಾ. ೧೫೬). ೨. ಬಡಿಸಿದ ಅನ್ನವನ್ನು ಮಂತ್ರಪೂರ್ವಕವಾಗಿ ಶುದ್ಧಿಗೊಳಿಸುವುದು. [ಅನ್ನ$_3$ + ಸಂಸ್ಕಾರ]

**ಅನ್ನಸತ್ಯಾಗ್ರಹ** (ನಾ). ಉದ್ದೇಶ ನೆರವೇರಿದ ಹೊರತು ಆಹಾರವನ್ನು ತೆಗೆದುಕೊಳ್ಳುವುದಿಲ್ಲವೆಂಬ ಪ್ರತಿಜ್ಞೆ, —ಹಠ: ಸಿರ್ಸಿಯಲ್ಲಿ ನಡೆದದ್ದು ಏನೆಂಬುದನ್ನು ಸ್ಪಷ್ಟಹೇಳದಿದ್ದರೆ ತಾನು ಊಟವನ್ನೇ ಮಾಡಲಾರೆನೆಂದು ಹೆಂಡತಿ ಅನ್ನಸತ್ಯಾಗ್ರಹ ಮಾಡುವಷ್ಟರ ಮಟ್ಟಿಗೆ ಪರಿಸ್ಥಿತಿ ಬಂತು (ಮೂರುದಾ. ೧೯೬). [ಅನ್ನ$_3$ + ಸತ್ಯಾಗ್ರಹ]

**ಅನ್ನಸತ್ರ** (ನಾ). = ಅನ್ನಛತ್ರ (ರೈಸ್ಗ. ೫೪೨). [ಸಂ.]

**ಅನ್ನಳ್** 'ಅನ್ನ$_2$' ಪರಾ.

**ಅನ್ನಾಂಗ** (ನಾ). ೧. [ಜೈನ] ಆಹಾರವನ್ನು ಒದಗಿಸಿಕೊಡುವ ಕಲ್ಪವೃಕ್ಷ; ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು : ವಸನಾಂಗಾತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗಾನ್ನಾಂಗ ಸುರಾಂಗ ಭಾಜನಾಂಗಾವಸಥಾಂಗ ವಿಭೂಷಣಾಂಗ ದಶಕಲ್ಪಕುಜಂ (ಚಂದ್ರಪು. ೩–೩೪). ೨. ಜೀವಾಣು ; ವಿಟಮಿನ್ನು : "ಇದು ಒಂಭತ್ತನೆಯ ಮಗು

. . . ಈಗ ನಾವು ಮಗುವನ್ನು ಗಡಸುಪಟ್ಟಿಯಲ್ಲಿ ಹಾಕಿ ಅನ್ನಾಂಗ ಮತ್ತು ಹಾಲು ಕೊಟ್ಟು ಪೋಷಿಸಬೇಕು" (ಚಿಕಿತ್ಸ. ೭೮) ; ಉತ್ತಮ ಅನ್ನಾಂಗ ಗಳನ್ನು ತಿನ್ನುವುದರಿಂದ ಇವು ಪುಷ್ಟಿಗೊಳ್ಳುತ್ತವೆ (ಜೀವಾತ್ಮ. ೧೫೨).
[ಅನ್ನ$_3$ + ಅಂಗ$_2$]

**ಅನ್ನಾಥಬಂಧು** (ನಾ). = ಅನಾಥಬಂಧು : ಚನ್ನಾಗಿ ನಂಬಿದವನೊ ಚೆನ್ನಿಗಗೋವಳೀಶ ಅನ್ನಾಥಬಂಧುವೆಂಬೊ ಘನ್ನತೆಂತೋ (ಮೋಕ್ಷದೀ. ೬). [ಅನ್ನಾಥ$_0$ (< ಸಂ. ಅನಾಥ) + ಬಂಧು]

**ಅನ್ನಾದ** (ನಾ). ಅನ್ನವನ್ನು ತಿನ್ನತಕ್ಕವನು : ಅನ್ನದನ್ನಾದನ್ನಮಯ ಸ್ವಯಮನ್ನ ಬ್ರಹ್ಮಾದ್ಯಖಿಳ ಚೇತನಕನ್ನಕಲ್ಪಕನಾಹನನಿರುದ್ಧಾದಿ ನಾಮ ದಲಿ (ಹಸಾರ. ೧೨–೨೪). [ಸಂ.]

**ಅನ್ನಾನ್ನಗತಿಕ** (ನಾ). ಆಹಾರಕ್ಕಾಗಿ ಹಂಬಲಿಸುವವನು : ಕಲಾ ವಿದನಿಗೆ ಬದುಕಿಲ್ಲ. ದಾರಿದ್ರ್ಯ ಅವನ ಬೆನ್ನು ಹತ್ತುತ್ತದೆ . . . ಅನ್ನಾನ್ನ ಗತಿಕನಾಗಿ ಅವನು ಬಾಳಬೇಕಾಗುತ್ತದೆ (ರಂಗರೋ. ೧೯೯).

**ಅನ್ನಾನ್ನಗತಿಕವಾಗು** = ಕೂಳಿಲ್ಲದೆ ಹೋಗು (ಉಕ) : ಮಾನವ ಜೀವ ಹುಳುಗಳಹಾಗೆ ಸಾಯುವ ಸ್ಥಿತಿ ಬಂದಿದೆ ; ಅನ್ನಾನ್ನಗತಿಕವಾಗಿದೆ (ಬನಸಿ. ೧೧೦). [< ಸಂ. ಅನ್ನಾನ್ನಗತಿಕ ?]

**ಅನ್ನಾಭಾವ** (ನಾ). ಆಹಾರವಿಲ್ಲದಿರುವುದು ; ಊಟಕ್ಕೆ ಗತಿಯಿಲ್ಲ ದಿರುವುದು : ಇಂದು ದೇಶದಲ್ಲಿ ಅನ್ನಾಭಾವವಿದೆ (ರೂಢಿ).
[ಅನ್ನ$_3$ + ಅಭಾವ]

**ಅನ್ನಾಭಿಷೇಕ** (ನಾ). ದೇವರಿಗೆ ಅನ್ನದಿಂದ ಮಾಡುವ ಅಭಿಷೇಕ.
[ಅನ್ನ$_3$ + ಅಭಿಷೇಕ. / ತಮಿ. ಅನ್ನಾಭಿಷೇಕಂ]

**ಅನ್ನಾರಿ** (ನಾ). ಒಬ್ಬಾಕೆಯ ಹೆಸರು : ಶ್ರೀ ಕೊಣ್ಣಲ ಗಾ ಮು ಣ್ಡ ರ ಮ ಗ ಳ ನ್ನಾ ರಿ ಯ ರ್ ಕಾಡೆಮ ಗಾಮುಣ್ಡಜ್ಗಿ ಕೊಟ್ಟರ್ ಅನ್ನಾರಿಯು ಮಾಡಿಸಿದ ತೂಮ್ಬು (ಎಕ. X, ಶ್ರೀನಿವಾ. ೨೫–೨ ; 950). [?]

**ಅನ್ನಾರ್ಥಿ** (ನಾ). ಆಹಾರವನ್ನು ಬೇಡುವವನು ; ಭಿಕ್ಷುಕ (ದಕ. ೩).
[ಅನ್ನ$_3$ + ಅರ್ಥಿ]

**ಅನ್ನಾಶಯ** (ನಾ). ಅನ್ನಕೋಶ : ಮೊದಲು ಇವು ಅನ್ನಾಶಯದಲ್ಲಿ ರುವ ಹೈಡ್ರೋಕ್ಲೋರಿಕಾಮ್ಲ ಮತ್ತು ವಿಶಿಷ್ಟ ರಾಸಾಯನಿಕ ಕಿಣ್ವಗಳ ಮೂಲಕ ವಿಭಜನೆ ಹೊಂದಿ . . . ಮಾರ್ಪಡುತ್ತವೆ (ನಿರಶಾ. ೨೩).
[ಅನ್ನ$_3$ + ಆಶಯ]

**ಅನ್ನಾಸನಪಂಕ್ತಿ** (ನಾ). ಭೋಜನ ಪಂಕ್ತಿ ; ಊಟದ ಸಾಲು : ತಮ್ಮ ತಮ್ಮವರ ತಾವಱಿಯದಖಂಡಿತರು ಒಡಲ ಗುಣಧರ್ಮದಿಂದ ಅನ್ನಾಸನ ಪಂಕ್ತಿಗೆ ಹೋರುವರಿಗೇಕೆ ಶಿವನ ವೇಷ (ಅವಚಂ. ೨೫೮–೧೧೭೩).
[ಅನ್ನ$_3$ + ಆಸನ + ಪಂಕ್ತಿ]

**ಅನ್ನಿಗ** (ನಾ). ಬೇರೆಯವನು ; ಹೊರಗಿನವನು : ನಿನ್ನ ಪೇೞ್ದು ದೊಂದಂದಮನೊಲ್ಲದನ್ನಿಗರ ಪೇೞ್ದುದು ಗೆಯ್ದೆನೊ (ಪಂಚತಂ. ೩೪–೨) ; ಎನ್ನವರನ್ನಿಗರೆನುತುಂ ಮಱುಕಂ ಮಚ್ಚರಗೊಳ್ಳದ ಸತ್ಯಕ್ಕೆಱವಟ್ಟಿನಿಸುವ ಸಾಧುಸಮಿತಿಗತಿ ಸಮತೆಯೊಳೆಱಗುವೆನು (ಜಯಕಾ. ೧–೫) ; ಇನ್ನುಳಿದ ಮಾತೇನು ಭೂತಳಕನ್ನಿಗಂ ನೀನಾದೆ (ಮದೇಪು. ೨೭–೪೨).
[< ಸಂ. ಅನ್ಯಕ]

**ಅನ್ನಿಗೆ** (ನಾ). ಕಂಚುಕ ; ಹೊದೆಯುವ ವಸ್ತ್ರ (?) : ಕಳಚಿ ಪಳಂಚಿ ಪುಂಗುರವನುಟ್ಟಳವಟ್ಟರೆ ಮಲ್ಲಗಂಟಿನೊಳ್ಪಳವಡೆ ಕಟ್ಟಿ ಚೊಲ್ಲೆಯಮ ನನ್ನಿಗೆಯಂ ಸಮಕಟ್ಟಿ ತೊಟ್ಟು ಕೆಂದಳದೊಳಮರ್ಚಿ ಬಾರಿಸುತೆ ಬೊಂ ದುಗೆಯಂ ಕುಱುಪಿಂಗೆ ಪೋದಳವ್ವಳಿಸುತಮಾಗಳೊರ್ವಳಭಿಸಾರಿಕೆ ವೀರ ವಿಡಂಬಯಾನದಿಂ (ಸೂಕ್ತಿಸು. ೮–೧೪೨). [< ಸಂ. ಅನ್ಯಕಾ ?]

**ಅನ್ನಿಗೆಱೆ** 'ಅಣ್ಣಿಗೆಱೆ' ನೋ.

**ಅನ್ನಿಸು, ಅನಿಸು** (ಕ್ರಿ). **೧.** ಹೇಳಿಸು ; ಇತರರು ಆಕ್ಷೇಪಿಸುವಂತೆ ಮಾಡು ; ಬೈಯಿಸು : ಚಾಡಿ ಹೇಳಿ ಅವರಿವರ ಕೈಯ್ಯಲ್ಲಿ ಯಾಕೆ ಅನ್ನಿಸುತ್ತೀ ? (ರೂಢಿ). **೨.** ಮನಸ್ಸಿಗೆ ತೋರು ; ಭಾಸವಾಗು : ಹಾಗೆ ತಾನು ಹಿಂದಿರುಗಲು ದೈವೀಪ್ರೇರಣೆಯೇ ಕಾರಣವಾಗಿರಬೇಕೆಂದು ಈಗ ಅವನಿಗನ್ನಿಸುತ್ತಿತ್ತು (ಆಶ್ರಮು. ೬) ; ದುಷ್ಪರಿಣಾಮ ಹುಟ್ಟಿಸತಕ್ಕ ಪರೀಕ್ಷೆಗಳು ಏಕೆ ಹೋಗಬಾರದೆಂದು ಹಲವರಿಗಾದರೂ ಅನ್ನಿಸದಿರದು (ಶಿಕ್ಷದ. ೩೪೨). **ಅನಿಸು :** **೩.** ಅವುಗಳಿಂದ ಏನಾಗಬೇಕಾಗಿದೆ ಎಂದು ಸಹ . . . ನಮಗೆ ಅನಿಸೀತು (ಮುಂಬಯಿ. ೪–೬೦) ; ಹೇಗೆ ಮಾಡಿದರೆ ಆತನ ಪೂರ್ಣಾನುಗ್ರಹ ಲಭಿಸುತ್ತದೆ ಎಂದು ಜಿಜ್ಞಾಸುವಿಗೆ ಅನಿಸುವುದು ಸಹಜ (ಜಗದಾ. ೨೬೦) ; "ಮಾನ್ಯ ಅತಿಥಿಯನ್ನು ಸತ್ಕರಿಸಿ ಉಪಚರಿಸು ವುದು ಗೃಹಿಣಿಯ ಧರ್ಮವೆಂದು . . . ನನಗನಿಸುವುದು" (ಹಾಹುತ್ತ. ೩೧).

**ಅನ್ನಿಸಿಕೊಳ್ಳು** = ಇತರರಿಂದ ಬೈಯಿಸಿಕೊ ; ಆಕ್ಷೇಪಕ್ಕೆ ಗುರಿ ಯಾಗು : ಅಂಗೈ ತೋರಿಸಿ ಅವಲಕ್ಷಣ ಅನ್ನಿಸಿಕೊಂಡ (ಗಾದೆ).
[ಅನ್ನು + –ಇಸು$_3$. / ತೆಲು. ಅನಿಪಿಂಚು]

**ಅನ್ನು, ಅನ್ನು$_1$** (ಕ್ರಿ). ಅಂದು (ಭೂ ತ ಕೃ). **೧.** ಹೇಳು ; ನುಡಿ : ನೀನೀಗಂದ ನುಡಿಯಕಟಾ ಹೇಯವಾಗಂದುದನು ಕೇ ಳ ಲಿ (ಸೀತಾಚ. ೪–೨೦–೨೧) ; ಇಂತಹ ಉತ್ತಾರಕವಾದ ಸಾ ಹಿ ತ್ಯ ಕ್ಕೆ ಎಣೆಯಾದದ್ದು ಮತ್ತೊಂದಿಲ್ಲವೆಂದೇ ಅನ್ನಬಹುದು (ಜಗದಾ. ೭೨) ; ಕೃಷ್ಣಾಕುಮಾರಿ ಯಾದಿ ಜನರು ಅಂದಿರಬಹುದು ಅಥವಾ ಅಂದಿರಲಿಕ್ಕಿಲ್ಲ ; ಅನ್ನಬಾರ ದಂಥ ಮಾತುಗಳನ್ನೇನು ನಾನು ಬರೆದಿಲ್ಲವಾದ್ದರಿಂದ (ಕೃಷ್ಣಾಕು. ೪ ಮು). **೨.** ಹಾಡು : ಹೇಗೋ ಒಂದು ಪ ದ ವ ನ್ನು ಅನ್ನು, ನೋಡೋಣ (ಮಂದಾಕಿ. ೧೮) ; ಏನಾದರೂ ಸ್ವಲ್ಪ ಅನ್ನಯ್ಯಾ ಕೇಳೋಣ ? (ರೂಢಿ). **೩.** ಹೆಸರುಕೊಡು ; ಹೆಸರನ್ನಿಡು ; ಹೆ ಸ ರು ಹೇ ಳು : ಅರಿಶಿಣ ಬಣ್ಣಕ್ಕೆ ಏನು ಅನ್ನುತ್ತಾರೆ ? (ಮುಂಬಯಿ. ೧–೧೨) ; ಮಲ್ಲಿಗೆ ಹೂವಿಗೆ ಮರಾಟಿಯಲ್ಲಿ ಏನನ್ನುತ್ತಾರೆ ? (ಮು ಂ ಬ ಯಿ . ೫–೨೩) ; ಇದನ್ನು ಮೊಸರು ಅ ನ್ನು ತ್ತಾ ರೆ (೩). **೪.** ಭಾವವನ್ನು ವಿಶದಪಡಿಸು : ಹೆತ್ತೆ ಹೊಟ್ಟೆ ಹ್ಯಾಗೆ ಚುರಕ್ ಅನ್ನುತ್ತೆ ಅನ್ನೋದು ನಿನಗೆ ಹ್ಯಾಗೆ ಗೊತ್ತಾ ದೀತು (ನಡೆದಾ. II, ೯೨೬) ; ಹೂ ಗಮಗಮ ಅನ್ನುತ್ತದೆ, ಗಾಡಿ ಗಡಗಡ ಅನ್ನುತ್ತದೆ (ರೂಢಿ). **ಅನು$_1$** (೩).

**ಅಂದಾಡು, ಅಂದು ಆಡು** = ಒಬ್ಬರನ್ನೊಬ್ಬರು ಆಕ್ಷೇಪಿಸು ; ಪರ ಸ್ಪರವಾಗಿ ನಿಂದಿಸು : ಜನ ಅಂದಾಡೋದಕ್ಕೇನು ಬಂದದ್ದು (ಜೀವನ. ೧೧) ; ಆನಂದನನ್ನು ಸಿಕ್ಕಾಪಟ್ಟೆ ಅಂದು ಆಡಿದ್ದು ಬೇರೆ ಕಳವಳವುಂಟು ಮಾಡಿತ್ತು (ಮುರಳಿ. ೧೬೪). **ಅಂಬುದು** = ಅನ್ನುವುದು ; ಹೇಳುವುದು : ತೊಱದುಱೆ ಮೋಹಪಾಶಮನಸುಂಗೊಳೆಯೊತ್ತಿದರುತ್ತಮಾದಮಿನ್ನುಱು ಗುಱೆ ಬಾಬಲೀಯದಿದು ನಿಕ್ಕುವಮುಂಬುದನೊಪ್ಪೆ ನಂಬಿ ತಾನ್ನೆಱಿದ ಕದಂಬ (ಎಕ. XV, ಹೊಳೆನ. ೬೬–೭ ; 950). **ಅನ್ನುವುದು, ಅನ್ನೋದು** = ಎಂಬ ವಸ್ತು ; ಈ ಹೆಸರಿನ ಪದಾರ್ಥ : ಹಾಲು ಅನ್ನುವುದು ಆಪ ರೂಪವಾಗಿ ಹೋಯಿತು (ರೂಢಿ) ; ನ್ಯಾಯನೀತಿ ಅನ್ನೋದು ಬೇಡವೆ ? (ರೂಢಿ). [< ಎನ್]

**ಅನ್ನುಮಾನ** (ನಾ). = ಅನುಮಾನ : ಸಣ್ಣವನ ಕ್ಲೇಶ ಕಡಿಗೆ ಮಾಡು ಅನ್ನುಮಾನ ಸಲ್ಲ, ಅಸಾಧ್ಯವೆನ್ನದೆ ಪ್ರಸನ್ನವದನನಾಗು (ಮೋಕ್ಷದೀ. ೮).
[< ಸಂ. ಅನುಮಾನ]

**ಅನ್ನೆ** (ನಾ). ಅಂಥವಳು ; ಆ ರೀ ತಿ ಯ ವ ಳು : ಪತ್ನಿಗಂತಃ ಕರಣದನ್ನೆಯಿಾಯಕನೆನಿಪ್ಪುದನುದಾಹರಿಸುವಂತೆ (ಸೌಂದಪು. ೧೩–೪೦). 'ಮನದನ್ನೆ' ಪರಾ. [ಅನ್ನ$_2$ + –ಎ$_4$]

**ಅನ್ನೆಗ** 'ಅನ್ನೆಗಂ' ನೋ.

**ಅನ್ನೆಗಂ,** ಅನಿಗಂ, ಅನ್ನೆಗ (ಅ). ೧. ಆ ವರೆಗೆ; ಆ ತನಕ; ಅಲ್ಲಿಯ ವರೆಗೆ: "ಅನ್ನೆಗಂ . . . ಇವು ಸೀಮಾಪ್ರಮಾಣಶಬ್ದಂಗಳ್" (ಕಶಸಾ. ೨೬–೫೪೭); ತಳ್ತಿಱಿದಸುಂಗೊಳ್ವನ್ನೆಗಂ ಕಾದಿ (ಎಕ. XIV, ಎಡತೊ. ೩೧–೯; 900); ಈ ಪಸವು ಕೞಿವನ್ನೆಗಂ ನೀಮುಮೆಡದ ಕೈಯನೆಟಲಿಕ್ಕಿ ಪಗಲುಣ್ಣಿಂ (ವಡ್ಡಾರಾ. ೬೨–೧೬); ಎನ್ನೆವರಂ ಸಚೇತನೆಯನೆನ್ನೆವರಂ ಲಘುವಾಗದಿರ್ಪನೋ ಅನ್ನೆಗಮೀಗಳೀ ಯೆಡೆಯಿನಾಂ ತೊಲಗಿರ್ಪುದು ಕಜ್ಜಮಲ್ಲದು (ಕಾದಂಪೂ. ೭೫೨); ನುಡಿಯದಿರ್ಪನ್ನೆಗಂ ಧೈರ್ಯಮಕ್ಕುಂ ಕೂಡದನ್ನೆಗಂ ಕೂಡದಂ[ತಿ]ರಲಕ್ಕುಂ ಬಸಮಾಗದನ್ನೆಗಂ ಬಳಸಲಕ್ಕುಂ (ಸುಕುಮಾ. ೭–೧೩). ೨. [ವ್ಯಾಕ] ಸತಿಸಪ್ತಮಿಯ ಪ್ರತ್ಯಯ; ಹೀಗಿರುವಲ್ಲಿ; ಆ ಸನ್ನಿವೇಶದಲ್ಲಿ: "ಇನೆಗಮುದುಮನ್ನಮನ್ನೆಗಮಿನಮಲೊಡಂ ಸೊನ್ನೆವೆರಸು ಸತ್ಯರ್ಥದೆಕಾರ ನಿಜಸ್ಥಾನದೊಳಪ್ಪುವು" (ಶಮದ. ೨೪೬); ಭದ್ರಬಾಹುವೆಂಬ ಮಾಣಿಯೊಂದು ಬಟ್ಟನ ಮೇಗೆ ಪದಿನಾಲ್ಕು ಬಟ್ಟನೊಂದಜಮೇಗೋಳಿಯೊಳಿಟ್ಟಾಡುತಿರ್ಪನ್ನೆಗಂ (ವಡ್ಡಾರಾ. ೭೯–೧೩); ಅದಂ ವಿದಾರಿಸಿ ನೋಟ್ಪನ್ನೆಗಂ ಬಾಳೆಯ ಗರ್ಭದೊಳಿರ್ದ ಬಾಳೆಯಂ ಬಾಳನುಮಂ ಕಂಡೆತ್ತಿಕೊಂಡು (ಪಂಪಭಾ. ೧–೬೮ ವ); ತನ್ನನ್ನಾಶ್ರಯಿಸಿ ಬರ್ಪವರ್ ಬರ್ಪನ್ನೆವರಮಿರ್ಪನ್ನೆಗಂ (ಧರ್ಮಾಮೃ. ೧–೯೪). ೩. ಅಷ್ಟುಮಟ್ಟಿಗೆ: ರನ್ನದ ಕಳಶಕ್ಕೆಣೆಯೆಂಬನ್ನೆಗಮುದು ಸುಖಸುಧಾಕರಂ ಸ್ವಸ್ತಿಕರಂ (ಆದಿಪು. ೬–೩೫); ದೇಸೆ ಪೊಚ್ಚಪೊಸತಾಯ್ತೆಂಬನ್ನೆಗಂ ಮಾಟ್ಕೆ ನೂತನ ಕಂದರ್ಪನನೂನದಾನಗುಣದಿಂ ಚಾಳುಕ್ಯಕಂದರ್ಪನಾ (ಗದಾಯು. ೧–೬). ೪. ಅಷ್ಟರಲ್ಲಿ; ಆ ವೇಳೆಗೆ; ಆ ಸಮಯದಲ್ಲಿ: ಅನ್ನೆಗಮಿತ್ತ ಧರ್ಮಪುತ್ರಂ ಶಲ್ಯವಧೆಯಿಂ ಬೞಿಯಿಂ ರಾಜರಾಜನಂ ಕೊಳುಗುಳದೊಳಱಸಿಯುಂ . . . ಕಾಣದೆ (ಪಂಪಭಾ. ೧೩–೭೪ ವ); ಅನ್ನೆಗಮವರೆಲ್ಲರ್ ಪೊಡೆದೆನ್ನಂ ಕೈವಿಡಿದು ಕಟ್ಟಿ ಮನದತಿಮುಳಿಸಿಂ ಬನ್ನಕ್ಕೆ . . . ತಂದೊಡೆ (ದಶಕು. ೮–೨೩೬); ಅನ್ನೆಗಂ ಶಿವಶಿವೆಯರಿನಿತೆಸಗಿದೀ ವಿವರಮನ್ನೆಲಕೆ ಸಾರ್ವಂತೆ ಮುಂಗೋಳಿಗಳ್ ಕೂಗೆ (ಚಬಪು. ೫–೩೧); ಅನ್ನೆಗಮೊರ್ಮೆ ರಾಯನೊಡ್ಡೋಲಗಂಗೊಟ್ಟು (ಅದ್ಭುತ. ೮–೪). ೫. ಅದಕ್ಕೆ ಮುಂಚೆ; ಆ ಕಾಲಕ್ಕೆ ಮೊದಲೇ: ಜರೆ ನಿಜಶಕ್ತಿಯಿಂ ಪಿಡಿದು ಪಿಂಡಿಸದನ್ನೆಗಮಾತ್ಮದೇಹದೊಳ್ ನರೆ ತಲೆದೋಱದನ್ನೆಗಮನಾಕುಳಮಿಂದ್ರಿಯದೇೞ್ಗೆಯುಳ್ಳಿನಂ . . . ಅರ್ಥಿಯಿಂ ಜಿನೇಶ್ವರನನಹರ್ನಿಶಂ ನೆನೆವುದು (ಸಮುಪ. ೧–೧೧೫); ಬಗೆಗಿಡೆ ಮುಪ್ಪು ಚಪ್ಪರಿಸದನ್ನೆಗಮುನ್ನತ ಶಕ್ತಿ ಕುಂದದನ್ನೆಗವೆಳವೆಂಡಿರಿಚ್ಚೆ ಕಿಡದನ್ನೆಗಮೆತ್ತಿದ ಕುತ್ತಮೊತ್ತದನ್ನೆಗಂ . . . ಉಗ್ರಮೃತ್ಯು ಬಂದಗುಟ್ಟುಗದನ್ನೆಗಂ ಪರಮದೀಕ್ಷೆಗುಪೇಕ್ಷಿಸಿದಂ ವಿವೇಕಿಯೇ (ಪುಷ್ಪಪು. ೧೩–೩೪). **ಅನಿಗಂ:** ೧. ಪುರಕೆ ಬೊಪ್ಪಡಂ ಮಗನೆ ನಾ ದೀಕ್ಷೆಯಂ ಧರಿಸಿದನಿಗಂ ನಗರವಾಸಂಗಳು ಸಲ್ಲದೈ (ತುರಂಗ. ೮೨–೪೪). **ಅನ್ನೆಗ:** ೧. ನೆಟ್ಟನೊರ್ವನೆ ಬೈಗಿನಿಂ ರವಿ ಪುಟ್ಟುವನ್ನೆಗ ಜಾನಜಪವಳವಟ್ಟು ನಿಲುವಾ (ಸಾಳ್ವಭಾ. ೧–೨೨). [ಅನ್ನೆ$_0$ + –ಗಂ]

**ಅನ್ನೆಬರ** 'ಅನ್ನೆವರಂ' ನೋ.

**ಅನ್ನೆಯ,** ಅನ್ನಯ (ನಾ). ೧. = ಅನ್ಯಾಯ: ಇಂತನ್ನೆಯದಿಂದೀ ಪಟುವಿನೊಳೆನ್ನರಸನನಿಂತು ಬಿದಿಯೆ ತಂದಿಕ್ಕುವುದೇ (ಪಂಪಭಾ. ೨–೨೨); ಭೂವರನಾ ದುರಾಚಾರಿಯಾ ಅನ್ನೆಯದ ಮಾತಿಂಗೆ ಮರುಳಾಗಿ ಸೂಳಾಯ್ತರಂ ನೋಡಿ (ಪದ್ಮರಾ. ೯–೧೮); ನನ್ನದು ನನ್ನಿಯೋ ಅನ್ನೆಯವೊ ಹೇಳೆಂದಳೆಂದುಮುಖಿ (ಸಾಳ್ವಭಾ. ೧೮–೫೧); ಅನ್ನೆಯವಾಯಿತು ನನ್ನದು ಬಾಳು (ಚೆಲುವು. ೫೦). ೨. ಒಂದು ವಿಧವಾದ ತೆರಿಗೆ: ಮನ್ನೆಗಾಣಿಕೆ ಸೇಸೆ ತಪ್ಪನ್ನೆಯವಾಯದಾಯಮಿವು ಸಲ್ಲವು (ಸೌಇಇ. IX–i, ೨೫೧–೪೫; 1149). **ಅನ್ನಯ:** ೧. "ಅನ್ನಯಮೆಂದನ್ಯಾಯಂ" (ಕಶಸಾ. ೨೨–೪೬೮); "ಮಿಗೆಯನ್ನಯಮೆನಲನ್ಯಾಯಮೆನಿಸಿಕೊಂಬುದು" (ಕವಿಕಂ. ೮೦); ಕುಲಕನ್ನೆಯರ್ಗಿದನ್ನಯಮೆಂದು ಮಹತ್ವಮೆ ಗರ್ಹಿಪಂತೆಯುಂ (ಕಾದಂಉ. ೭೫); ಅನ್ನಯದೆ ಪತ್ರಮಂ ಸುಟ್ಟು ಕಂಗೆಟ್ಟರೈ (ವೀಶೈಪು. ೪–೯–೩೬); ಅನ್ನಯವಿದಲ್ತಲ್ತು (ಉದ್ಭದೇ. ೨–೨); ಜನರೊಳನ್ನಯಮುಂಟೆ (ಶ್ರೀರಾಪ. ೧೭–೫೬). [< ಸಂ. ಅನ್ಯಾಯ]

**ಅನ್ನೆವರ** 'ಅನ್ನೆವರಂ' ನೋ.

**ಅನ್ನೆವರಂ,** ಅನ್ನಂಬರಂ, ಅನ್ನಬರ, ಅನ್ನವರ, ಅನ್ನೆಬರ, ಅನ್ನೆವರ, ಅನ್ನೆವರೆ (ಅ). ೧. ಅಲ್ಲಿಯವರೆಗೆ; ಆ ತನಕ: "ಅನ್ನೆವರಮನ್ನೆವರೆಗಮನ್ನೆಗಮೆಂದು . . . ಕಾಲಪ್ರಮಾಣಂ" (ಕವಿಕಂ. ೨೨೦, ೨೨೧); "ಅನ್ನೆವರಂ . . . ಇವು ಸೀಮಾಪ್ರಮಾಣ ಶಬ್ದಂಗಳ್" (ಕಶಸಾ. ೨೬–೫೪೭); ನರರರೆಬರ್ ವೈರಾಗ್ಯಂ ದೊರೆಕೊಂಡೊಡೆ ತೊಱೆವೆವೆಂಬರನ್ನೆವರಂ ಸ್ಥಿತಿರಲೀಯ್ದಂತಕಂ ಗೋಣ್ಮುರಿಗೊಂಡೆೞೆದುಯ್ವೊಡಡ್ಡವರ್ಪರುಮೊಳರೇ (ಅಜಿಪು. ೨–೮೫); ದುರಿತಂ ಕಿಡದನ್ನೆವರಂ ಪರಮಜಿನಾಗಮಮನಱಿಯದನ್ನೆವರಂ ನಿಷ್ಠುರಮಪ್ಪದುಃಖಚಯಮುಂ ಮರಣಮುಮಾಪಾವ ಭವದೊಳೇಂ ಪಿಂಗುಗುಮೇ (ಧರ್ಮಾಮೃ. ೭–೯೬); ಸುಖಮಿರಲೀಧರೆ ಶಶಿರವಿಯುಳ್ಳನ್ನೆವರಂ (ಜಯಕಾ. ೧–೨೧). ೨. [ವ್ಯಾಕ] ಸತಿ ಸಪ್ತಮಿಯ ಅರ್ಥ; ಹಾಗಿರುವಲ್ಲಿ; ಅಷ್ಟರಲ್ಲಿ; ಆ ಸನ್ನಿವೇಶದಲ್ಲಿ: ಆಂ ಜನಕನೆಱಕೆಯೊಳಗಿರ್ದಂಜುತ್ತಂ ಕೇಳುತಿರ್ದೆನಿರ್ಪನ್ನೆವರಂ ಬಿಂಜಡದಡವಿಯೊಳಗೆಲ್ಲಂ ನಂಜಿನ ಮಱೆ ಕೊಂಡು ಬಿಟ್ಟ ತೆಱನಾಯ್ತಾಗಳ್ (ಕಾದಂಪೂ. ೧೬೧). ೩. ಅಷ್ಟುಮಟ್ಟಿಗೆ: ಉಪವಾಸಪ್ರಚುರತೆಯಿಂ ವಪು ಗಿಡಿಗಿಡಿ ಜಂತ್ರಮಾದುದನ್ನೆವರಂ ಕ್ಷಪಿಯಿಸೆ ಮುನೀಂದ್ರನನಶನತಪದೊಳ್ ತಱಿಸಂದ ಸಲವದೊಂದಾಶ್ಚರ್ಯಂ (ಸುಕುಮಾ. ೪–೪). **ಅನ್ನಂಬರಂ:** ೧. ಚನ್ದ್ರಾದಿತ್ಯರ್ಕರ್ಳ್ ಉಳ್ಳನ್ನಂಬರಂ ನಡೆವುದು (ಎಕ. IV, ಚಾಮರಾ. ೪೮–೧೩; 965). **ಅನ್ನಬರ:** ೧. ಸಂಗಸುಖ ಕೊಡಲಹನ್ನಬರ ಶಿವಲಿಂಗಪೂಜೆಯ ಮಾಡಬೇಕು (ಶಿವಮಂ. ೫೬); ನರನ ನುಡಿ ಪೊಳ್ಳಾಗದಾ ಮುರಹರನ ಬಲುಹುಳ್ಳನ್ನಬರ (ಕುವ್ಯಾದ್ರೋ. ೮–೬೩). ೨. ವಿಶಿಷ್ಟ ಸುಖಾನುರಾಗದಿಂ ಘನಪರಿಣಾಮಿಯಾಗಿರುತಿಹನ್ನಬರೊಯ್ಯನೆ ನಿದ್ರೆ ತೀರೆ (ಶತಕ. ೨೪–೩೨). **ಅನ್ನವರ:** ೧. ಅನ್ನವರವೇ ದ್ರವಿಣದೇಹಸುಹೃನ್ನಿಮಿತ್ತಭಯಂಗಳೆನಿತನಿತನ್ನವರವೇ ಶೋಕಮೋಹ ಮದಾಂಧಕಾರವಿವು (ನಿಭಾಗ. ೩–೪–೨೩). **ಅನ್ನೆಬರ:** ಚ[ನ್ದ್ರಾ]ದಿತ್ಯರುಳ್ಳನ್ನೆಬರಂ ಪ್ರತಿಪಾ[ಳಿ]ಸುವರ್ (ಸೌಇಇ. XX, ೨೨–೧೭; 1027); ಜನಪರನ್ನೆಬರೊಬ್ಬದೂತನ ವಿನಯದಲಿ ಕಳುಹುವುದು (ಕುವ್ಯಾಉ. ೧–೧೦). **ಅನ್ನೆವರ:** ೧. ತಾರಾರ್ಕರುಳ್ಳನ್ನೆವರಮಲ್ಲಿ ಕಾರ್ಜುನನೋರಂತೆ ಪಾಲಿಪನೊಲವಿಂದೆ (ತ್ರಿಭುತಿ. ೧–೫೫). **ಅನ್ನೆವರೆ:** ೧. ಹರನವಸರಮಹನ್ನೆವರೆ ತಾವರೆಗಳಂ ಪಿಡಿದ ಹಿಮಕಿರಣಂ ತಿರುಗುತಿರ್ಪಂ (ಬಸವು. ೪೩–೪೩). 'ಅನ್ನೆಗಂ', 'ಅನ್ನೆವರೆಗಂ' ಪರಾ. [ಅನ್ನೆ$_0$ + –ವರಂ]

**ಅನ್ನೆವರೆ** 'ಅನ್ನೆವರಂ' ನೋ.

**ಅನ್ನೆವರೆಗಂ** (ಅ). = ಅನ್ನೆಗಂ: "ಅನ್ನೆವರೆಗಂ . . . ಇವು ಸೀಮಾಪ್ರಮಾಣ ಶಬ್ದಂಗಳ್" (ಕಶಸಾ. ೨೬–೫೪೭); "ಅನ್ನೆವರೆಗಮನ್ನೆಗಮೆಂದು . . . ಕಾಲಪ್ರಮಾಣಂ" (ಕವಿಕಂ. ೨೨೦, ೨೨೧); ನೀನಾ ದ್ವಿಜನ್ಮಜಾತಿಯಂ ಒಳ್ಳಿತ್ತಂ ಮಾಡಿದೆಯದನ್ನೆವರೆಗಂ ಒಳ್ಳಿತ್ತಾಗಿ ನಡೆಗುಂ (ಚಾವುಂಪು. ೭೪–೨೧). [ಅನ್ನೆ$_0$ + –ವರೆಗಂ]

**ಅನ್ನೋಣ** (ನಾ). ಹೇಳಿಕೆ; ಅಭಿಪ್ರಾಯ: ಏ ಕಳ್ಳೀ, ನಿನ್ನ ಅನ್ನೋಣ ವಾದರೂ ಏನಿನ್ನು? (ಹುಚ್ಚಾಟ. ೭೦).

[ಅನ್ನು + –ವಣ]

**ಅನ್ಮಕುಂದ,** ಅನ್ಮಕುಂದೆ (ನಾ). ಒಂದು ಊರಿನ ಹೆಸರು. ℙ ಓರಂಗಲ್ಲಿನ ಸಮೀಪದಲ್ಲಿರುವ ಈಗಿನ ಹನುಮಕೊಂಡ (?): ಅನ್ಮಕುನ್ದ ಪುರವರೇಶ್ವರಂ (ಎಇ. IX, ೨೬೩–೧೬; 1117). **ಅನ್ಮಕುಂದೆ**: ಅನ್ಮಕುನ್ದೆಯ ಭೀಮಂ ಅಯ್ಯಣಯ್ಯ (ಸೌಇಇ. XX, ೧೯–೧೬; 1015). [< ಹನುಮಕೊಂಡ ?]

**ಅನ್ಮಕುಂದೆ** 'ಅನ್ಮಕುಂದ' ನೋ.

**ಅನ್ಯ** (ಸ). ೧. ಬೇರೆಯ. ೨. ಮತ್ತೊಂದು; ಮತ್ತೊಬ್ಬ. ೩. ಸರ್ವನಾಮಗಳಲ್ಲಿ ಪ್ರಥಮ ಪುರುಷ: ಕವದಿನಮಯಿರೆನೆವೆನಿಪ್ಪವು ವರ್ತಿಕುಮನ್ಯಯುಷ್ಮದಸ್ಮದ್ವಿಷಯ ವ್ಯವಹೃತಿಗಳ್ಗೇಕಾನೇಕ ವಚನದಿಂ ಪ್ರತಿವಿಭಕ್ತಿ ಪುರುಷಾಖ್ಯಂಗಳ್ (ಕಾವ್ಯಾವ. ೩೭೯).

ಅನ್ಯದ ದಿನ = ಬೇರೆಬಗೆಯ ದಿನ; "ಅನ್ಯಾಯದ ದಿನ" (ಮಲ್ಲಿಗೆ. ಟೀ); ಗಂಡುಳ್ಳಬಾಲ್ಯಾರು ಭಿಕ್ಷಾಕ ಹೋದರು ಅನ್ಯದದಿನ ಬಂದು ಮಳಿರಾಜಾ (ಮಲ್ಲಿಗೆ. ೨೬). [ಸಂ.]

**ಅನ್ಯಂಟೆ** (ನಾ). ಒಬ್ಬನ ಅಥವಾ ಒಂದು ವಂಶದ ಹೆಸರು (?): ಹಲರು ಸೆಟ್ಟಿಕಾಜರು ಅನ್ಯಂಟರ ಬಳಿಯ ಸಂಕರಸೆಟ್ಟಿಯ ಮಗ ಕುಡೆಯರ ಬಳಿಯ ನಾರಣಸೆಟ್ಟಿಗೆ ಕೊಟ್ಟ ಮೂಲಶಾಸನದ ಕ್ರಮ (ಸೌಇಇ. IX–ii, ೪೪೯–೮; 1444); ಹೊಂನೆಯಹಡವಳರ ಮಗ ಅನ್ಯಂಟರ ಬಳಿಯ ತಿರುಮಹಡವಳನನೂ ಮಾದಶೆಟ್ಟಿಯ ಮಗ ಅತಿಮುದ್ದನ ಬಳಿಯ ಬೆಂಮುಸೆಟ್ಟಿಯನೂ (ಸೌಇಇ. IX–ii; ೪೫೦–೧೨; 1444). [?]

**ಅನ್ಯಕ** (ನಾ). ೧. ಬೇರೆಯದು; ಬೇರೆಯವನು. ೨. ಮತ್ತೊಂದು; ಮತ್ತೊಬ್ಬ (ದಕ. ೩). [ಸಂ.]

**ಅನ್ಯಕರ್ತೃ** (ನಾ). ಬೇರೆಯ ಕರ್ತೃ; ಪ್ರೇರಣೆಯನ್ನು ಮಾಡುವ ಕರ್ತೃ: ಅನ್ಯಕರ್ತೃಗೆ– ನುಡಿಯಿಸಿದಂ, ಮುಡಿಯಿಸಿದಂ, ಕಡಿಯಿಸಿದಂ (ಶಮದ. ೨೩೧ ಪ್ರಯೋ). [ಅನ್ಯ + ಕರ್ತೃ]

**ಅನ್ಯಕಾರಿ** (ನಾ). ಅನ್ಯಾಯಕಾರಿ; ನ್ಯಾಯವನ್ನು ಬಿಟ್ಟು ನಡೆಯುವವನು: ನಿನ್ನ ಬಸುರಲಿ ಏಕೆ ಹುಟ್ಟಿದೆ ಅನ್ಯಕಾರಿ ಪಾಪಿ ನಾನು ಇನ್ನು ಅಮ್ಮನೆನುತ ಯಾರನು ಎನ್ನ ಪ್ರೇಮದಿ ಕರೆಯಲಿ (ಗೋಹಾಡು. ೮೮). [< ಸಂ. ಅನ್ಯಾಯಕಾರಿನ್]

**ಅನ್ಯಚಿತ್ತ** (ನಾ). ಬೇರೆಯ ಕಡೆಗೆ ಹರಿಯುವ ಮನಸ್ಸು: ಅನ್ಯಚಿತ್ತವಿರಿಸದಿರಯ್ಯಾ ನಿಮ್ಮ ಚಿತ್ತವಿರಿಸಯ್ಯಾ (ಬಸವ. ೪೮). [ಅನ್ಯ + ಚಿತ್ತ]

**ಅನ್ಯಜಾತ** (ನಾ). ಬೇರೆಯ ಕುಲದಲ್ಲಿ ಹುಟ್ಟಿದವನು: ಅನ್ನವನು ಇಕ್ಕುವ ಅನ್ಯಜಾತನೆ ಕುಲಜ ಅನ್ನವನು ಇಕ್ಕದುಣುತಿಪ್ಪ ಕುಲಜಾತ ಅನ್ಯನೆಂದಱಿಗು (ಸರ್ವಜ್ಞ. ೬೫೪). [ಅನ್ಯ + ಜಾತ]

**ಅನ್ಯಜಾತಿ** (ನಾ). ಬೇರೆಯ ಜಾತಿ ಅಥವಾ ಪಂಗಡ, —ಕುಲ: ಅನ್ಯಜಾತಿಯ ಸಂಗವ ಮಾಡದಂತೆ ಎನ್ನ ಪ್ರತಿಪಾಲಿಸು ಕೂಡಲಸಂಗಮದೇವಾ (ಬಸವ. ೨೬೩). [ಅನ್ಯ + ಜಾತಿ]

**ಅನ್ಯತರ** (ಸ). ಎರಡರಲ್ಲಿ ಒಂದು; ಇಬ್ಬರಲ್ಲಿ ಒಬ್ಬ. [ಸಂ.]

**ಅನ್ಯತರವೇದನೀಯ** (ನಾ). [ಜೈನ] ಸಾತಾವೇದನೀಯ ಅಸಾತಾವೇದನೀಯ ಎಂಬ ಎರಡು ಕರ್ಮ ಪ್ರಕೃತಿಗಳಲ್ಲಿ ಒಂದು: ನಿಜದ್ವಿಚರಮಸಮಯದೊಳ್ ಅನ್ಯತರವೇದನೀಯ ದೇವಗತಿತತ್ರಯೋಗ್ಯಾನುಪೂರ್ವ ಶರೀರಬಂಧನ ಸಂಘಾತವರ್ಣರಸಪಂಚಕ ಸಂಸ್ಥಾನ ಸಂಹನನ ಪಂಚಷಟ್ಕಾಂಗೋಪಾಂಗದ್ವಿಕಂ ಗಂಧದ್ವಿಕಂ (ಆದಿಪು. ೧೬–೪೯ ವ). [ಅನ್ಯತರ + ವೇದನೀಯ]

**ಅನ್ಯತ್ರ** (ಅ). ೧. ಬೇರೆಯ ಕಡೆ: ಹರಿಹರಾತ್ಮಕ ನಾಮಕೀರ್ತನವೆರಸಿ ಬದುಕುವನೊಬ್ಬನೀ ನಾಲ್ವರುಗಳಲ್ಲದೆ ಭುವನದೊಳಗನ್ಯತ್ರವಿಲ್ಲೆಂಬ (ಕುವ್ಯಾಉ. ೩–೧೧೬). ೨. ಬೇರೊಂದು ಸಂದರ್ಭದಲ್ಲಿ; ಮತ್ತೊಂದು ಸನ್ನಿವೇಶದಲ್ಲಿ. [ಸಂ.]

**ಅನ್ಯತ್ವ** (ನಾ). ೧. ಬೇರೆಯಾಗಿರುವುದು: ಮೂಲಭೂತವಾದ ಪ್ರಕೃತಿಧರ್ಮಗಳು ಹತ್ತು:– ಅಸ್ತಿತ್ವ ಏಕತ್ವ ಅರ್ಥವತ್ತ್ವ ಅನ್ಯತ್ವ ಪರಾರ್ಥತ್ವ ಭೇದ ಸಂಯೋಗವಿಯೋಗ ಶೇಷತ್ವ ಅಕರ್ತೃತ್ವ – ಇವುಗಳು (ಹಿಂದಸಾ. ೫೬). ೨. ಆತ್ಮನು ದೇಹಕ್ಕೆ ಸಂಬಂಧಿಸಿದ ವಸ್ತುಗಳಿಗಿಂತಲೂ ದೇಹಕ್ಕಿಂತಲೂ ಬೇರೆಯೆಂಬ ಸ್ಥಿತಿ. ೩. [ಜೈನ] ಹನ್ನೆರಡು ಅನುಪ್ರೇಕ್ಷೆಗಳಲ್ಲಿ ಒಂದು. [ಸಂ.]

**ಅನ್ಯತ್ವಾನುಪ್ರೇಕ್ಷೆ** (ನಾ). [ಜೈನ] ದೇಹ ಬೇರೆ ಜೀವ ಬೇರೆ ಎಂಬ ಚಿಂತನೆ, —ಅಭ್ಯಾಸ: ಶರೀರಾದಿ ಸಮಸ್ತ ವಸ್ತುಗಳು ಪರವಸ್ತುಗಳು ವ್ಯವಹಾರ ನಯದಿಂದಾತ್ಮಸಂಬಂಧಿಗಳಾಗಿಯುಂ ನಿಶ್ಚಯನಯದಿಂದವೇಱೆಯಾನವರತ್ತಣಿಂ ಬೇಱೆಂಬುದು ಅನ್ಯತ್ವಾನುಪ್ರೇಕ್ಷೆ (ಶ್ರಾವಕಾ. ೧೪೬–೧೬). [ಅನ್ಯತ್ವ + ಅನುಪ್ರೇಕ್ಷೆ]

**ಅನ್ಯಥ** (ನಾ). ಬೇರೊಂದು; ಬೇರೆಯದು: ಆವೆಡೆಯೊಳನ್ಯಥವನಱಿಯೆನು (ಬಸಪು. ೧೫–೨೦); ಅನಘ ನೀನು ನಿರೋಗಿಯಾಗಿ ಸುಮನದ ಸುಖನಿಧಿಯಾಗಿ ಶಾಶ್ವತತನು ಶುಭಸ್ಥಿತನಾಗಿರನುದಿನವನ್ಯಥವನೊಲ್ಲೆ (ಬಸಪು. ೧೫–೩೪). [ಸಂ. ಅನ್ಯಥಾ]

**ಅನ್ಯಥಾ** (ಅ). ಬೇರೊಂದು ರೀತಿಯಾಗಿ; ಬೇರೆ ಬಗೆಯಾಗಿ; ವಿರೋಧವಾಗಿ: ಇವುಗಳಿಂದ ಇಂತಿಂತಹ ವಸ್ತುಗಳಾಗುವ ಸಂಭವವುಂಟು ಎಂದು ತಿಳಿಯುತ್ತಾನೆ, ಸಮ್ಮತಿಸುತ್ತಾನೆ; ಅಥವಾ ಅನ್ಯಥಾ ಭಾವಿಸುತ್ತಾನೆ (ಜೀವಾತ್ಮ. ೩೫); ನನ್ನ ಮಾತನ್ನು ತಾವು ಅನ್ಯಥಾ ಭಾವಿಸಬಾರದು (ರೂಢಿ). [ಸಂ.]

**ಅನ್ಯಥಾಕಲ್ಪನ** (ನಾ). ಬೇರೆಯ ಭಾವನೆ; ಬೇರೊಂದು ಕಲ್ಪನೆ: ಸುರನೋ ಸಿದ್ಧನೊ ಯಕ್ಷನೋ ಗರುಡನೋ ನೀನಾರ್ಗೆ ಪೇೞೆಂದು ಗೋಪರೆನಲ್ ಸಪ್ರಣಯ ಪ್ರಕೋಪಿ ಹರಿ ಕೇಳ್ದಾನಾರುಮಲ್ಲೆಂ . . . ಭಾವಿಪುದೆನ್ನನಾತ್ಮಸಮನೆಂದೇಕನ್ಯಥಾಕಲ್ಪನಂ (ಜಗವಿ. ೪–೧೧೦). [ಅನ್ಯಥಾ + ಕಲ್ಪನ]

**ಅನ್ಯಥಾಖ್ಯಾತಿ** (ನಾ). [ತರ್ಕಶಾ] ಸತ್ಯಕ್ಕಿಂತ ತೋರಿಕೆಯು ಬೇರೆಯೆಂಬ ತರ್ಕ; ಇಂದ್ರಿಯಗಳಿಗೆ ಗೋಚರವಾದುದೆಲ್ಲಾ ಗೋಚರವಾದಂತೆಯೆ ಸತ್ಯವಾಗಿ ಇರುವುದಿಲ್ಲವೆಂಬ ವಾದ; ಕಂಡುಬಂದ ವಸ್ತುವೆಲ್ಲಾ ದೃಷ್ಟಿಗೆ ಬಿದ್ದಂತೆಯೇ ಇರುವುದೆಂಬ ನಿಯಮವಿಲ್ಲವೆಂಬ ವಾದ: ತಾರ್ಕಿಕರು ಅನ್ಯಥಾಖ್ಯಾತಿವಾದಿಗಳು ಎಂದರೆ ಭ್ರಾಂತಿಯಲ್ಲಿ ತೋರಿಬರುವ ವಸ್ತುಗಳು ಇಲ್ಲಿಲ್ಲದಿದ್ದರೂ ಅನ್ಯತ್ರವಿರುವುದರಿಂದ ನಿರ್ವಿಷಯಜ್ಞಾನವಿಲ್ಲವೆಂದು ಭಾವ (ಹಿಂದಸಾ. ೨೦೯); ಬೆಳ್ಳಿಯು ಎಲ್ಲಿಯೂ ಇರುವುದಿಲ್ಲವೆಂದು ಇಟ್ಟುಕೊಂಡರೆ, ಕಪ್ಪೆಯ ಚಿಪ್ಪಿನಲ್ಲಿ ಬೆಳ್ಳಿಯೆಂದು ಭ್ರಮೆಯಾಗುವುದಕ್ಕೇ ಕಾರಣವಿಲ್ಲ ಎಂಬುದು ಇವರ ಅಭಿಪ್ರಾಯ. ಇದು ನೈಯಾಯಿಕರೇ ಮುಂತಾದವರು ಹೇಳುವ ಅನ್ಯಥಾಖ್ಯಾತಿ (ಬ್ರಹ್ಮಭಾ. ೨–೧೩). [ಅನ್ಯಥಾ + ಖ್ಯಾತಿ]

**ಅನ್ಯಥಾಜ್ಞಾನಿ** (ನಾ). ಒಂದನ್ನು ಬೇರೊಂದನ್ನಾಗಿ ತಿಳಿಯುವಂಥವನು: ತಾರತಮ್ಯ ಜ್ಞಾನವು ಯೋಗ್ಯರಿಗೆ ಮಾತ್ರವೆ ಮುಕ್ತಿಗೆ ಮಾರ್ಗವೆಂದು ತೋರುವುದೇ ಹೊರತು ಮಿಥ್ಯಾಜ್ಞಾನಿಗಳು ಅನ್ಯಥಾಜ್ಞಾನಿಗಳಿಗೆ ಇದು ಕರ್ಣಕಠೋರವಾಗಿರುವುದು (ಹಸಾರ. ೨೦–೨೩ ತಾ). [ಸಂ. ಅನ್ಯಥಾಜ್ಞಾನಿನ್ (ಅನ್ಯಥಾ + ಜ್ಞಾನ + –)]

**ಅನ್ಯಥಾನುಪಪತ್ತಿ** (ನಾ). ಬೇರೆಯ ರೀತಿಯಲ್ಲಿ ಸಾಧಿಸಲಾಗದಸ್ಥಿತಿ: ಅದು ಸಾಧನದೂಷಣಪ್ರಯೋಗಾನ್ಯಥಾನುಪಪತ್ತಿಯಿಂ ಬಹಿರರ್ಥ ಸಿದ್ಧಿಯಕ್ಕುಂ (ಆದಿಪು. ೨–೧೦ ವ). [ಅನ್ಯಥಾ + ಅನುಪಪತ್ತಿ]

**ಅನ್ಯಥಾವಾಸ** (ನಾ). (ಎಲ್ಲರಂತಲ್ಲದೆ) ಬೇರೆಯ ರೀತಿಯಲ್ಲಿ ವಾಸಮಾಡುವುದು ; ಅಜ್ಞಾತವಾಸ : ಧರ್ಮಪುತ್ರಂ ಪನ್ನೆರಡು ವರುಷಂಬರಂ ನಾಡಂ ಪುಗದರಣ್ಯದೊಳಿರ್ಪಂತುಮನ್ಯಥಾವಾಸದೊಂದು ವರುಷದೊಳಾರಾನುಮಱಿದರಪ್ಪೊಡೆ ಮತ್ತಂ ದ್ವಾದಶಾಬ್ದಂಬರಂ ನಾಡ ದೆಸೆಯಂ ನೋಡದಂತಾ[ಗೆ] (ಪಂಪಭಾ. ೭–೩ ವ). [ಅನ್ಯಥಾ + ವಾಸ]

**ಅನ್ಯಥಾಸಿದ್ಧ** (ಗು). ೧. ಬೇರೆಯ ರೀತಿಯಲ್ಲಿ ಸಿದ್ಧವಾದ; ಬೇರೆ ಪ್ರಮಾಣದಿಂದ ಸಿದ್ಧವಾದ. (ನಾ). ೨. [ತರ್ಕಶಾ] ಯಾವುದಾದರೊಂದು ಕಾರ್ಯಕ್ಕೆ ನೇರವಾದ, ನೈಜವಾದ ಸ್ವತಂತ್ರ ಕಾರಣಗಳನ್ನು ನಿರೂಪಿಸಿ ಹೇಳಬಹುದಾಗಿರುವಾಗ, ಸಹಜವಲ್ಲದ ಆಕಸ್ಮಿಕ ವಿಷಯಗಳನ್ನು ಅದಕ್ಕೆ ಕಾರಣವಾಗಿ ನಿರೂಪಿಸಿ ವಾದಿಸುವುದು ; ಅಕ್ರಮ ತರ್ಕ : ಮಡಕೆ ಮಾಡುವುದಕ್ಕೆ ಮಣ್ಣು, ಕುಂಬಾರ, ಆವನ ಚಕ್ರ, ಅದನ್ನು ತಿರುಗಿಸುವ ಕೋಲು, ಇವೇ ಮೊದಲುಗೊಂಡು ಕಾರಣಗಳಾಗುತ್ತವೆ . . . ಮಡಕೆಮಾಡುವ ಮಣ್ಣನ್ನು ಕತ್ತೆ ಮೇಲೆ ಹೇರಿ ತರುತ್ತಾರೆ. ಇಷ್ಟುಮಾತ್ರಕ್ಕೆ ಕತ್ತೆಯು ಮಡಕೆಯಾಗುವುದಕ್ಕೆ ಒಂದು ಕಾರಣವಲ್ಲ ಇದೇ ಮೊದಲಾದ ಅಪ್ರಕೃತವಾದ ಸಂಗತಿಗಳಿಗೆ ತರ್ಕಶಾಸ್ತ್ರದಲ್ಲಿ ಅನ್ಯಥಾಸಿದ್ಧಗಳೆಂದು ಹೆಸರು (ಕುರಾಚ. ೧೯). [ಅನ್ಯಥಾ + ಸಿದ್ಧ]

**ಅನ್ಯಥೋಪಾಸಕ** (ನಾ). ಬೇರೆಯ ಕ್ರಮದಲ್ಲಿ ಉಪಾಸನೆ ಮಾಡುವವನು : "ಅನ್ಯಥೋಪಾಸಕರೆಂದರೆ ನಾನೇ ಬ್ರಹ್ಮನೆಂದು ಉಪಾಸನೆ ಮಾಡುವವರೆಂದರ್ಥ" (ಹಸಾರ. ೧೩–೧೪ ತಾ). [ಅನ್ಯಥಾ + ಉಪಾಸಕ]

**ಅನ್ಯದಾರ** (ನಾ). ಬೇರೆಯವನ ಹೆಂಡತಿ; ಪರಸ್ತ್ರೀ. 'ಅನ್ಯದಾರ ವಿದೂರ' ಪರಾ. [ಅನ್ಯ + ದಾರ$_1$]

**ಅನ್ಯದಾರವಿದೂರ** (ನಾ). ಪರಸ್ತ್ರೀಯರಿಂದ ದೂರವಾಗಿರುವವನು : ಭರತಕ್ಷೇತ್ರದ ಶಂಖಪುರಮನಾಳ್ವನನ್ಯದಾರವಿದೂರಂ ಉದಾರನೆಂಬೊಂ (ಶಾಂತಿಪು. ೫–೮೩ ವ). [ಅನ್ಯದಾರ + ವಿದೂರ]

**ಅನ್ಯದೃಷ್ಟಿ** (ನಾ). ಬೇರೆಯ ನೋಟ ; ಬೇರೆಯವರ ದೃಷ್ಟಿ ; ಇತರರ ಅಭಿಪ್ರಾಯ : ಭಯಮುಖಿಲಕಾಂಕ್ಷೆ ವಿಚಿಕಿತ್ಸೆಯನ್ಯದೃಷ್ಟಿ ಪ್ರಶಂಸೆ ಸಂಸ್ತವನಮೆಂಬೀ ಕ್ರಿಯೆ ಸಮ್ಯಗ್ದೃಷ್ಟಿಗೆ ನೋಡೆ ಯಥಾಕ್ರಮದಿಂ ವ್ಯತಿಕ್ರಮಂ ತಾನಕ್ಕುಂ (ಸುಕುಮಾ. ೭–೪೫). [ಅನ್ಯ + ದೃಷ್ಟಿ]

**ಅನ್ಯದೇಶೀಯ** (ಗು). ೧. ಬೇರೆಯ ದೇಶಕ್ಕೆ ಸಂಬಂಧಿಸಿದ; ಪರದೇಶದ. (ನಾ). ೨. ಬೇರೆಯ ದೇಶದವನು ; ಪರದೇಶದವನು. [ಸಂ. ಅನ್ಯದೇಶೀ]

**ಅನ್ಯದೇಶ್ಯ** (ಗು). ೧. ಬೇರೆಯ ದೇಶಕ್ಕೆ ಸಂಬಂಧಿಸಿದ. (ನಾ). ೨. [ವ್ಯಾಕ] ಪರಭಾಷೆಯಿಂದ ಬಂದ ಶಬ್ದಗಳು : ಹೊರಗಿನ ಭಾಷೆಗಳಿಂದ ಬಂದು ಸೇರುವ ಶಬ್ದಗಳಿಗೆ ಅನ್ಯದೇಶ್ಯಗಳೆಂದು ಹೆಸರು (ಮಧ್ಯಮ. ೧೬೭) ; ಯಾವ ಭಾಷೆಯನ್ನು ತೆಗೆದುಕೊಂಡರೂ ಅದರಲ್ಲಿ ದೇಶ್ಯಶಬ್ದಗಳೂ ಅನ್ಯದೇಶ್ಯ ಶಬ್ದಗಳೂ ಸೇರಿರುತ್ತವೆ (ಕೈಪಿಡಿ. ೧೪). [ಅನ್ಯ + ದೇಶ್ಯ]

**ಅನ್ಯದೈವ** (ನಾ). ಬೇರೆಯ ದೇವರು ; ಪರದೇವತೆ : ನಮ್ಮ ಕೂಡಲ ಸಂಗಮದೇವರಲ್ಲದೆ ಅನ್ಯದೈವವುಂಟೆನ್ನದಿರು (ಬಸವ. ೭೫೦). [ಅನ್ಯ + ದೈವ]

**ಅನ್ಯಧರ್ಮ** (ನಾ). ೧. ಬೇರೆಯ ಧರ್ಮ; ಪರಧರ್ಮ. ೨. ಸ್ವಧರ್ಮವಲ್ಲದುದು. ೩. ಬೇರೆ ವಸ್ತುವಿನ ಸ್ವಭಾವ. [ಅನ್ಯ + ಧರ್ಮ]

**ಅನ್ಯನರೇಂದ್ರ** (ನಾ). ೧. ಬೇರೆಯ ರಾಜ. ೨. ಶತ್ರುರಾಜ : ಅನ್ಯನರೇಂದ್ರ ಗಂಧವಾರಣ ಮದವಾರಣಂ (ಗದಾಯು. ೧–೧೭). [ಅನ್ಯ + ನರೇಂದ್ರ]

**ಅನ್ಯನಾರಿ** (ನಾ). ಬೇರೆಯ ಹೆಂಗಸು ; ಪರಸ್ತ್ರೀ : ಜೀವಘಾತಾನೃತವಚನಪರಾರ್ಥಾಪಹಾರಾನ್ಯನಾರೀಗಮ ಬಹ್ವಾರಂಭಪಾರಿಗ್ರಹಮೆನಿಸುವ ವಯ್ದುಂ ಮಹಾಪಾತಕಂ (ಸುಕುಮಾ. ೫–೪೩). [ಅನ್ಯ + ನಾರಿ]

**ಅನ್ಯಪರಿಭಂಗ** (ನಾ). ಬೇರೆಯವರನ್ನು ಮುರಿಯುವುದು, —ಸೋಲಿಸುವುದು, —ಅಪಮಾನ ಮಾಡುವುದು : ಮರಗೊಂಬಂಮುಱಿವಲ್ಲಿ ತಳ್ತ ಮರವಾವೊಂದಾತ್ಮಶುಂಡಾಗ್ರದೊಳ್ ಭರದಿಂ ಪೊಕ್ಕೊಡೆ . . . ಬಾಯ್ವಿಟ್ಟು ಶೋಕರಸಂದಾಳ್ದುದಿಭಂ ವೃಥಾನ್ಯಪರಿಭಂಗಂ ಭಂಗಮಂ ಸಾರ್ಚದೇ (ರಾಜಶೇ. ೫–೭೩). [ಅನ್ಯ + ಪರಿಭಂಗ]

**ಅನ್ಯಪಾಕ** (ನಾ). ಇತರರು ಮಾಡಿದ ಅಡಿಗೆ (ದಕ. ಕ). [ಅನ್ಯ + ಪಾಕ]

**ಅನ್ಯಪುರುಷ** (ನಾ). ೧. ಪರಪುರುಷ. ೨. [ವ್ಯಾಕ] ಪ್ರಥಮ ಪುರುಷ ಸರ್ವನಾಮ : ಪ್ರಥಮಪುರುಷದ = ಅನ್ಯಪುರುಷದ (ಶಮದ. ಕ. ೨೨೫ ಟೀ). [ಅನ್ಯ + ಪುರುಷ]

**ಅನ್ಯಪುಷ್ಟ** (ಗು). ೧. ಬೇರೆಯವರಿಂದ ಪೋಷಿತವಾದ, —ಸಾಕಲ್ಪಟ್ಟ. (ನಾ). ೨. ಕೋಗಿಲೆ : "ಪಿಕಂ ಕೋಕಿಳಂ ಕಳಕಂಠಮನ್ಯಭೃತಮನ್ಯಪುಷ್ಟಂ ಕೋಗಿಲೆಯದೆನಿಕ್ಕುಂ" (ಮಂಗರಾ. ೫೦–೩) ; ಚಂದ್ರಿಕೆಯನೆಳಸಿದತ್ತನ್ಯಪುಷ್ಟಸ್ವನಕ್ಕಾದುದು ಬಾಳಕ್ರೀಡೆ (ಮಲ್ಲಿಪು. ೫–೩). [ಅನ್ಯ + ಪುಷ್ಟ]

**ಅನ್ಯಪೂರ್ವಿಕತ್ವ** (ನಾ). ಅನ್ಯಪೂರ್ವಿಕಳ ಸ್ಥಿತಿ. 'ಅನ್ಯಪೂರ್ವಿಕೆ' ಶಬ್ದದ ಪ್ರಯೋಗ ನೋಡಿ. [ಸಂ.]

**ಅನ್ಯಪೂರ್ವಿಕೆ** (ನಾ). ಮದುವೆಗೆ ಮೊದಲೇ ಬೇರೊಬ್ಬನ ಸಹವಾಸವನ್ನು ಮಾಡಿಕೊಂಡಿರುವ ಹೆಂಗಸು : ತ್ಯಾಗದೋಷವು ಸ್ತ್ರೀಗೆ ಕನ್ಯಾವಸ್ಥೆಯಲ್ಲಿಯೂ ಪತ್ನ್ಯವಸ್ಥೆಯಲ್ಲಿಯೂ ಪ್ರಾಪ್ತವಾಗಬಹುದು. ದೋಷವನ್ನು ಹೀಗೆ ವಿವರಿಸಿದ್ದಾರೆ–ಅನ್ಯಪೂರ್ವಿಕತ್ವವೇ ಆ ದೋಷವು. ಪುನರ್ಭೂ, ಸ್ವೈರಿಣಿ ಎಂದಿಬ್ಬರು ಅನ್ಯಪೂರ್ವಿಕರು (ಆರ್ಯಧ. ೧೫೦). [ಸಂ. ಅನ್ಯಪೂರ್ವಿಕಾ]

**ಅನ್ಯಭವ** (ನಾ). ಬೇರೆಯ ಜನ್ಮ : ಹಾರಮಿದನ್ಯಭವಾಲಂಕಾರಮನನುಕರಿಸಿಮುದ್ವಿತೀಯನ ಗತಿಸಂಸ್ಕಾರಮನಱಿಪಿದೊಡೆ (ಶಾಂತಿಪು. ೨–೨೭). [ಅನ್ಯ + ಭವ]

**ಅನ್ಯಭಾವ** (ನಾ). ೧. ಬೇರೆಯ ಅಭಿಪ್ರಾಯ. ೨. ಬೇರೆಯವರ ಮನಸ್ಸು (ದಕ. ಕ). [ಅನ್ಯ + ಭಾವ]

**ಅನ್ಯಭೃತ** (ನಾ). = ಅನ್ಯಪುಷ್ಟ : ಅಸ್ವರಾನ್ಯಭೃತವಂದೊಪ್ಪಿರ್ದುದ ಭ್ರಾಂಗಮುಂ (ಜಗವಿ. ೪–೨೯) [ಅನ್ಯ + ಭೃತ]

**ಅನ್ಯಮನಸ್ಕ** (ನಾ). ಬೇರೆಯ ಕಡೆಗೆ ಮನಸ್ಸಿಟ್ಟವನು; ಪ್ರಕೃತ ವಿಷಯದಲ್ಲಿ ಗಮನವಿಲ್ಲದವನು. [ಅನ್ಯ + ಮನಸ್ಕ]

**ಅನ್ಯಮನಸ್ಕತೆ** (ನಾ). ಬೇರೆಯ ಕಡೆಗೆ ಮನಸ್ಸಿಟ್ಟಿರುವುದು; ಪ್ರಕೃತ ವಿಷಯದಲ್ಲಿ ಮನಸ್ಸಿಲ್ಲದಿರುವುದು. [ಸಂ. ಅನ್ಯಮನಸ್ಕತಾ]

**ಅನ್ಯಮಾರ್ಗ** (ನಾ). ೧. ಬೇರೆಯ ದಾರಿ. ೨. ಬೇರೆಯವರ ಮಾರ್ಗ, —ಕ್ರಮ : ದ್ವಿಪ್ರಾಸ ದ್ವಂದ್ವಪ್ರಾಸ ತ್ರಿಪ್ರಾಸ ಅಂತಾದಿ ಪ್ರಾಸ ಈ ನಾಲ್ಕು ಬೇಱೆ ಅನ್ಯಮಾರ್ಗ ಲಕ್ಷಣಂ (ಕವಿರಾ. ೩–೨೩೫ ವ). [ಅನ್ಯ + ಮಾರ್ಗ]

**ಅನ್ಯರಜ** (ನಾ). ಅನ್ಯಸ್ತ್ರೀಯ ರಜಸ್ಸು (?) ; "ಅನ್ಯಪಿಂಡ" (ಪ್ರಭುವ. ಟೀ) : ಅನ್ಯರಜವ ಸೋಂಕದೆ ತನ್ನ ರಜವ ಬಾಧಿಸದೆ ರವಿಯ ಬೆಳಸ ಬಳಸದೆ ಲಿಂಗದ ಬೆಳಸ ತಂದು ಜಂಗಮದಲ್ಲಿ ಸವಸುತಿಪ್ಪ ಲಿಂಗಭಕ್ತ ಆ ಭಕ್ತನಲ್ಲಿ ಗುಹೇಶ್ವರಲಿಂಗವಿಪ್ಪನು (ಅಪಚಂ. ೩೨–೧೩೭). [ಅನ್ಯ + ರಜ$_1$]

**ಅನ್ಯಲಿಂಗ** (ನಾ). [ವ್ಯಾಕ] ಬೇರೊಂದರ ಲಿಂಗವನ್ನು ಅನುಸರಿಸುವಂಥದು; ವಿಶೇಷಣ. [ಅನ್ಯ + ಲಿಂಗ]

**ಅನ್ಯಲಿಂಗಕೆ** (ನಾ). = ಅನ್ಯಲಿಂಗ. [ಅನ್ಯ + ಲಿಂಗಕ]

**ಅನ್ಯಲಿಂಗಿ** (ನಾ). **೧.** ಬೇರೆಯ ಲಾಂಛನವುಳ್ಳವನು. **೨.** ಬೇರೆಯ ಮತಕ್ಕೆ ಸೇರಿದವನು. **೧, ೨:** ಕಾಗೆಗಳ್ ಗೂಗೆಗಳಂ ಮುಸುಱಿ ಬಾಧಿಸುವುದಂ ಕಂಡುದಱಿಂದಂ ಅನ್ಯಲಿಂಗಿಗಳ್ ಲೌಕಿಕಧರ್ಮತತ್ತ್ವಮನಪ್ರತಿಬಂಧದಿಂ ಪ್ರಕಟಂ ಮಾೞ್ಪರ್ (ಚಾವುಂಉ. ೪೮). [ಸಂ. ಅನ್ಯಲಿಂಗಿನ್]

**ಅನ್ಯವಧು** (ನಾ). ಬೇರೆಯವನ ಹೆಂಡತಿ; ಪರಸ್ತ್ರೀ: ಹೋಗಬಿಟ್ಟು, ಮರಳಿ ಹಿಂದೆ ನೋಡಿ ಮತ್ತಾಗಬೇಕೆಂಬ ಸಂದೇಹವುಳ್ಳನ್ನಕ್ಕ ಆದೆ ಪಾರದ್ವಾರ ನಾಯಕ ನರಕ ತಪ್ಪದು ಅನ್ಯವಧುವೆಂಬುದು ನಿಮ್ಮ ರಾಣಿವಾಸ ಇದೆ ದಿವ್ಯ ಕೂಡಲಸಂಗಮದೇವಾ (ಬಸವ. ೭೫೫). [ಅನ್ಯ + ವಧು]

**ಅನ್ಯವರ್ಣ** (ನಾ). **೧.** ಬೇರೆಯ ಬಣ್ಣ. **೨.** ಬೇರೆಯ ಜಾತಿ. [ಅನ್ಯ + ವರ್ಣ]

**ಅನ್ಯವಾದಿ** (ನಾ). ಬೇರೆಯ ಮತವನ್ನು ಪ್ರತಿಪಾದಿಸುವವನು: ದಿಟನುಡಿವನ್ಯವಾದಿ ಮುಖಮುದ್ರಿತನುದ್ಧತವಾದಿ ವಾಗ್ಬಳೋದ್ಭಟಜಯ ಕಾಳದಂಡಂ (ಎಕ. II, ೬೯–೪೮; 1100). [ಸಂ. ಅನ್ಯವಾದಿನ್]

**ಅನ್ಯವಿತ್ತ** (ನಾ). ಬೇರೆಯವರ ದ್ರವ್ಯ; ಪರರ ಹಣ. 'ಅನ್ಯವಿತ್ತಾಹೃತಿ' ಪರಾ. [ಅನ್ಯ + ವಿತ್ತ]

**ಅನ್ಯವಿತ್ತಾಹೃತಿ** (ನಾ). ಬೇರೆಯವರ ಹಣವನ್ನು ಅಪಹರಿಸುವುದು; ಪರದ್ರವ್ಯಾಪಹಾರ: ವಿತಥಭಾಷಿತವನ್ಯವಿತ್ತಾಹೃತಿ ಪರವ್ಯಾಪಾದವಾತ್ಮಸ್ತುತಿ ಪರಸ್ತ್ರೀವ್ಯಸನವತ್ಯಾಚಾರ ಬಕವೃತ್ತಿ . . . ಇವು ದೋಷಾಂಕುರಂಗಳು (ಕುವ್ಯಾಅ. ೧೫–೧೪). [ಅನ್ಯವಿತ್ತ + ಆಹೃತಿ]

**ಅನ್ಯವಿಷಯ** (ನಾ). **೧.** ಇತರ ವಿಷಯ; ಬೇರೆಯ ವಿಚಾರ: ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ ಇರಿಸಯ್ಯಾ (ಬಸವ. ೨೬೪). **೨.** ಬೇರೆಯ ದೇಶ. [ಅನ್ಯ + ವಿಷಯ]

**ಅನ್ಯಸಮಯ** (ನಾ). ಬೇರೆಯ ಮತ; ಅನ್ಯಧರ್ಮ: ಶ್ರೀ ಜೈನಧರ್ಮಂ ಪೊದಱ್ದುದವುತ್ತಿರ್ಪುದು ಮತ್ತಿನನ್ಯಸಮಯಕ್ಕುತ್ಪತ್ತಿಯಿಲ್ಲೊಂದಱೊಳ್ (ಆದಿಪು. ೧–೫೧). [ಅನ್ಯ + ಸಮಯ]

**ಅನ್ಯಸಮಯಿ** (ನಾ). ಬೇರೆಯ ಮತಕ್ಕೆ ಸೇರಿದವನು; ಪರಧರ್ಮಿ: ಇಲ್ಲಿರ್ದ ಮುನಿಗಳೆಲ್ಲ ಮೃಡನ ಮಱೆದನ್ಯಸಮಯಿಗಳಾಗಲ್ಕೆ (ವೀಶೈಪು. ೩–೩–೧೩). [ಸಂ. ಅನ್ಯಸಮಯಿನ್]

**ಅನ್ಯಸ್ಥ** (ಗು). ಬೇರೆಯ ಕಡೆ ಇರುವ; ಬೇರೆಯವರೊಡನೆ ಇರುವ (ದಕ. ೬). [ಸಂ.]

**ಅನ್ಯಾಂಗ** (ನಾ). **೧.** ಬೇರೆಯ ಶರೀರ. **೨.** ಬೇರೆಯವರ ಶರೀರ. 'ಅನ್ಯಾಂಗಪ್ರವೇಶ' ಪರಾ. [ಅನ್ಯ + ಅಂಗ$_2$]

**ಅನ್ಯಾಂಗನಾರತಿ** (ನಾ). ಬೇರೆಯ ಹೆಂಗಸರಲ್ಲಿನ ಆಸಕ್ತಿ: ಅನ್ಯಾಂಗನಾರತಿಯಿಂ ಕೀಚಕನಂ ಬಕಾರಿ ಮುಱಿದಂ ಸುಗ್ರೀವನಿಂ ವಾಲಿ ತಾಂ ಹತನಾದಂ (ಸೋಮೇಶ. ೩೯). [ಸಂ. (ಅನ್ಯಾಂಗನಾ + ರತಿ)]

**ಅನ್ಯಾಂಗನಾಸ್ಪೃಹೆ** (ನಾ). = ಅನ್ಯಾಂಗನಾರತಿ: ಅನ್ಯಾಂಗನಾಸ್ಪೃಹೆಯಂ ತಾಳ್ದಿದನಲ್ತೆ ಕಾಲವಶದಿಂ ಲಂಕೇಶ್ವರಂ (ಪಂರಾಮಾ. ೯–೮೬). [ಸಂ. ಅನ್ಯಾಂಗನಾಸ್ಪೃಹಾ (ಅನ್ಯಾಂಗನಾ + ಸ್ಪೃಹಾ)]

**ಅನ್ಯಾಂಗನೆ** (ನಾ). ಬೇರೆಯ ಹೆಂಗಸು; ಪರಸ್ತ್ರೀ: ಕಯ್ಯಾನ್ತದೀನಾವಳಿಗಿಂದ್ರೋರ್ವೀಜನನ್ಯಾಂಗ[ನೆ]ಗೆ ಪವನಜ (ಸೌಇಇ. XX, ೨೧–೩೨; 1019). [ಸಂ. ಅನ್ಯಾಂಗನಾ]

**ಅನ್ಯಾಂಗಪ್ರವೇಶ** (ನಾ). **೧.** ಬೇರೆಯವರ ಶರೀರವನ್ನು ಪ್ರವೇಶಿಸುವುದು; ಪರಕಾಯ ಪ್ರವೇಶ. **೨.** ಪರಕಾಯ ಪ್ರವೇಶವೆಂಬ ವಿದ್ಯೆಯನ್ನು ಬಲ್ಲವನು: ಸುಧಾರುಗ್ವಶೀಕಾರ ನಿರ್ಣಯಕನನ್ಯಾಂಗಪ್ರವೇಶಂ ಹಿಮಸಮಯ ಮಹಾಸಿದ್ಧನೊಪ್ಪಿರ್ದನಾಗಳ್ (ರಾಜಶೇ. ೯–೮). [ಅನ್ಯಾಂಗ + ಪ್ರವೇಶ]

**ಅನ್ಯಾದೃಶ** (ಗು). **೧.** ಬೇರೆ ರೀತಿಯ. **೨.** ಅಸಾಧಾರಣವಾದ. [ಸಂ.]

**ಅನ್ಯಾಪದೇಶ** (ನಾ). ಬೇರೆಯವರನ್ನು ಕುರಿತು ಹೇಳುವಂತೆ ನೆಪ ಮಾಡಿಕೊಂಡು ಇದಿರಿಗಿರುವವರಿಗೆ ಸಂಬಂಧಿಸಿದಂತೆ ನುಡಿಯುವ ಮಾತು; ಒಂದು ಕಾವ್ಯಾಲಂಕಾರ; ಅನ್ಯೋಕ್ತಿ: ನೆವದಿಂದೊರೆದನಾ ಗೊಗ್ಗಯ್ಯಗಿಂತೀಪರಿಯನಲ್ಲಮಲಿಂಗನೊಲಿದನ್ಯಾಪದೇಶದಲಿ (ಪ್ರಭುಲೀ. ೧೧–೧೬); ಅವನನ್ನು ನೋಡಿ ಶೈವರು ವೈಷ್ಣವ ಕಾಗಿ ನೆಲದಮೇಲೆ ನಡೆಯುತ್ತದೆ. ಹಾರಿಹೋಗಬಾರದೋ ಎಂದು ಅನ್ಯಾಪದೇಶವಾಗಿ ನಿಂದಿಸುತ್ತಾ ಇರುವರು (ಕಥಾಮಂ. ೫೪). [ಅನ್ಯ + ಅಪದೇಶ]

**ಅನ್ಯಾಯ** (ನಾ). ನ್ಯಾಯವಲ್ಲದುದು; ಅಕ್ರಮ; ಸರಿಯಲ್ಲದುದು; ಉಚಿತವಲ್ಲದುದು: ಆವನಿಲ್ಲಿಗೆ ಬಂದನೆಂತಹ ಮ್ಲೇಂಛನೋಯೆಂದಿಂತು ಈ ಅನ್ಯಾಯಮಂ ಮಾಡಿದಪನವನೆನುತ (ಬಸಪು. ೧೮–೩೩); ಅನ್ಯಾಯದಲ್ಲಿ ಸಂಪಾದಿಸಿದ್ದು ಅಸಡ್ಡಾಳದಲ್ಲಿ ಹೋಯಿತು (ಗಾದೆ). [ಸಂ.]

**ಅನ್ಯಾಯಕಾರ** (ನಾ). ನ್ಯಾಯವನ್ನು ಬಿಟ್ಟು ನಡೆಯುವವನು; ಇತರರ ವಿಷಯದಲ್ಲಿ ತಪ್ಪುಮಾಡುವವನು: ನ್ಯಾಯದೂರರನಪಜಯರನನ್ಯಾಯಕಾರರನಧಿಕ ಕಪಟೋಪಾಯರಂ (ಬಸಪು. ೨೮–೬೨). [ಅನ್ಯಾಯ + -ಕಾರ]

**ಅನ್ಯಾಯವೃತ್ತಿ** (ನಾ). ನ್ಯಾಯವನ್ನು ಬಿಟ್ಟ ನಡೆವಳಿಕೆ; ತಪ್ಪು ನಡೆವಳಿಕೆ; ಉಚಿತವಲ್ಲದ ಹಾದಿ: ಅಧಿರಾಜಕುಮಾರಂ ನಳಿನಕೇತು ಕಂಡವರಂ ತತ್ಸುಕುಮಾರಾಂಗಿಗೆ ಸೋಲ್ತೆೞೆದುಕೊಂಡನನ್ಯಾಯವೃತ್ತಿಯಿಂ ಕೋಮಳೆಯಂ (ಶಾಂತಿಪು. ೯–೧೦). [ಅನ್ಯಾಯ + ವೃತ್ತಿ]

**ಅನ್ಯಾಯಾರ್ಜಿತ** (ಗು). ಅನ್ಯಾಯವಾಗಿ ಸಂಪಾದಿಸಿದ, —ಗಳಿಸಿದ. [ಅನ್ಯಾಯ + ಅರ್ಜಿತ]

**ಅನ್ಯಾಯಿ** (ನಾ). = ಅನ್ಯಾಯಕಾರ: ಅಳಿದನಾ ಕಬ್ಬಿಲರ ಹೆಂಪಂ ಕಳೆದನನ್ಯಾಯಿಗಳ ಪಲ್ಲಂ ತಳೆದನುನ್ನತಿಯ (ಬಸಪು. ೫೯–೫೪); ನೀನನ್ಯಾಯಿಯಲ್ಲವೆ ಹೇಳು (ತೊರರಾ. ೪–೪–೪೭). [ಸಂ. ಅನ್ಯಾಯಿನ್]

**ಅನ್ಯಾಯೋಪಾರ್ಜಿತ** (ಗು). = ಅನ್ಯಾಯಾರ್ಜಿತ: ಧರ್ಮದೊಳ್ ಬಹಿರ್ಮುಖನುಂ ಅರ್ಥದೊಳನ್ಯಾಯೋಪಾರ್ಜಿತಾರ್ಥನುಂ ಕಾಮದೊಳತಿಕಾಮಿಯುಂ ಮೋಕ್ಷದೊಳ್ ನಿರಪೇಕ್ಷಕನುಮಾಗಿ (ಪಂಚತಂ. ೨೮–೭). [ಅನ್ಯಾಯ + ಉಪಾರ್ಜಿತ]

**ಅನ್ಯಾರ್ಥ** (ನಾ). **೧.** ಬೇರೆಯ ವಿವರಣೆ, —ಅರ್ಥ; ಸಮಾಸದಲ್ಲಿ ಪೂರ್ವಪದ ಮತ್ತು ಉತ್ತರಪದ ಇವೆರಡರ ಅರ್ಥವನ್ನೂ ಬಿಟ್ಟು ಬೇರೊಂದು ಅರ್ಥ. **೨.** [ವ್ಯಾಕ] ಪ್ರಥಮಪುರುಷ ಸರ್ವನಾಮ: ಅನ್ಯಾರ್ಥ ವಿವಕ್ಷೆಯಲ್ಲಿ . . . ಅಮಾದಿಗಳಕ್ಕುಂ (ಶಮದ. ನ. ೨೬೩ ಪ್ರಯೋ). [ಅನ್ಯ + ಅರ್ಥ]

**ಅನ್ಯಾವನಿಪ** (ನಾ). = ಅನ್ಯನರೇಂದ್ರ **೧, ೨:** ಅನುಪಮರವನಿಪರನ್ಯಾವನಿಪ ಶ್ರೀ ಕುಂತ[ಳ] [ಕ್ಕೆ] ಕೈನಿದಿ[ನೀಡಿ] ನಿಜಾವನಿಗೆ ತೆಗೆಯಲ್ತದೀಯಾವನಿ ಕುಂತಳವಿಷಯವೆನಿಸಿ ಪೆಸರ್ವೆತ್ತೆಸೆಗುಂ (ಕಇಅ. ೨–೨–೨೧; 1058). [ಅನ್ಯ + ಅವನಿಪ]

**ಅನ್ಯೂನ** (ಗು). ಕಡಮೆಯಿಲ್ಲದ; ಕೊರತೆಯಿಲ್ಲದ; ಕುಂದಿಲ್ಲದ. 'ಅನ್ಯೂನತೆ' ಪರಾ. [ಸಂ.]

**ಅನ್ಯೂನತೆ** (ನಾ). ಕುಂದಿಲ್ಲದಿರುವ ಸ್ಥಿತಿ; ಕೊರತೆಯಿಲ್ಲದಿರುವುದು: ನೂತ್ನತೆಯ ಪೂರ್ಣತೆಯನನ್ಯೂನತೆಯ ಗಳಿಪ ಯತ್ನಮೇ ಪೌರುಷ ಪ್ರಗತಿ (ಮಂಕುಕ. ೨೨೭). [ಸಂ. ಅನ್ಯೂನತಾ]

**ಅನ್ಯೆ** (ನಾ). ೧. ಬೇರೆಯವಳು. ೨. ಬೇರೆಯವರಿಗೆ ಸೇರಿದವಳು: ನಾಯಿಕೆಯರಲ್ಲಿ 'ಸ್ವೀಯೆ' (ತನ್ನವಳು) 'ಅನ್ಯೆ' (ಇತರಳು) 'ಸಾಧಾರಣೆ' (ವೇಶ್ಯೆ) ಎಂದು ಮೂರು ವಿಧ (ಕೈಪಿಡಿ. ೨೧೦). [ಸಂ. ಅನ್ಯಾ]

**ಅನ್ಯೇಶ್ವರ** (ನಾ). ಬೇರೆಯ ಪ್ರಭು; ಮತ್ತೊಂದು ದೈವ: ಅನೀಶ್ವರಾನ್ಯೇಶ್ವರಾನೇಕೇಶ್ವರಾಭಿಮತವಾದಿ ವಾದಮಂ ಶ್ರುತ್ಯುಕ್ತಿಗಳಿಂ ನಿರಾಕರಿಸಿ (ರಾಜಶೇ. ೫-೧೯ ವ). [ಅನ್ಯ + ಈಶ್ವರ]

**ಅನ್ಯೋಕ್ತಿ** (ನಾ). ೧. ಬೇರೆಯ ಮಾತು; ಬೇರೆಯವರ ಮಾತು. ೨. [ವ್ಯಾಕ] ಪ್ರಥಮಪುರುಷ ಸರ್ವನಾಮ: ನೀನಾಂ ತಾನೆನಿಕುಂ ಪ್ರಥಮಾ ನಿರ್ದೇಶಕ್ಕೆ ನಿನಗೆಯೆನಗೆ ತನಗೆಯೆಂಬೀ ನುಡಿ ಚತುರ್ಥಿಯೊಳ್ ಸಲೆ ತಾನಕ್ಕುಂ ಯುಷ್ಮದಸ್ಮದನ್ಯೋಕ್ತಿಗಳೊಳ್ (ಕಾವ್ಯಾವ. ೧೫೨). ೩. [ಕಾವ್ಯಮೀ] ಅನ್ಯಾಪದೇಶವೆಂಬ ಕಾವ್ಯಾಲಂಕಾರ. 'ಅನ್ಯಾಪದೇಶ' ಪರಾ. [ಅನ್ಯ + ಉಕ್ತಿ]

**ಅನ್ಯೋನ್ಯ** (ಗು). ೧. ಪರಸ್ಪರ; ಒಂದಕ್ಕೊಂದು: ಇಷ್ಟು ಅನ್ಯೋನ್ಯವಾಗಿ, ಏಕದೇಹನ್ಯಾಯವಾಗಿ . . . ಬೆಳೆಯಿತು ಈ ಮಕ್ಕಳ ಸಖ್ಯ (ಶಾಂತಲಾ. ೧೧). (ನಾ). ೨. ಪರಸ್ಪರ ಸ್ನೇಹ; ಪ್ರೀತಿ: "ದೇವಿ, ನಿಮ್ಮಿಬ್ಬರ ಅನ್ಯೋನ್ಯಗಳನ್ನು ಕಂಡಷ್ಟೂ, ಕೇಳಿದಷ್ಟೂ ನನಗೆ ಅಮೃತವನ್ನುಂಡಷ್ಟು ತೃಪ್ತಿಯಾಗುತ್ತದೆ" (ಶಾಂತಲಾ. ೧೯೬). ೩. [ಕಾವ್ಯಮೀ] ಒಂದು ಅಲಂಕಾರ. ℙ ಇದನ್ನು ಸಂಸ್ಕೃತ ಆಲಂಕಾರಿಕರು ಅನ್ಯೋನ್ಯವೆಂದು ಕರೆದಿದ್ದಾರೆ (ಕಾವ್ಯಾವ. ಕ. ಪು. ೨೯೨). [ಸಂ.]

**ಅನ್ಯೋನ್ಯಕಲಹ** (ನಾ). ಪರಸ್ಪರವಾದ ಜಗಳ (ದಕ. ೩). [ಅನ್ಯೋನ್ಯ + ಕಲಹ]

**ಅನ್ಯೋನ್ಯಪೆಟ್ಟು** (ನಾ). ಒಬ್ಬರಿಗೊಬ್ಬರು ಹೊಡೆದ ಏಟು: ಮದ್ಯಪಾನದಿಂದ ಮತ್ತರಾಗಿ . . . ಬಾಣಗಳನ್ನು ಕೈಕೊಂಡು ಅನ್ಯೋನ್ಯಪೆಟ್ಟುಗಳಿಂದ ಹತರಾದದ್ದು (ಕೃವಾಅ. ೩೦). [ಅನ್ಯೋನ್ಯ + ಪೆಟ್ಟು₂]

**ಅನ್ಯೋನ್ಯಪ್ರೀತಿ** (ನಾ). ಒಬ್ಬರಿಗೊಬ್ಬರಲ್ಲಿ ಸ್ನೇಹ; ಪರಸ್ಪರವಾದ ಪ್ರೀತಿ: ಪ್ರೇಮದಿಂ ಕಾಮಸುಖಮನನುಭವಿಸುತ್ತಿರಲನ್ಯೋನ್ಯಪ್ರೀತಿಬೀಜದಿಂ ಜನಿಸಿದ . . . ರಾಗವಿಷಯವಲ್ಲರಿ ಫಲಿತಮಾದುದು (ಜಗವಿ. ೨-೫೨ ವ). [ಅನ್ಯೋನ್ಯ + ಪ್ರೀತಿ]

**ಅನ್ಯೋನ್ಯಭಾವ** (ನಾ). ಪರಸ್ಪರವಾದ ಸ್ನೇಹ; ಸ್ನೇಹಭಾವ: ಸೊಕ್ಕಿ ಮಱೆದರನ್ಯೋನ್ಯಭಾವವನವರ್ಗಳು (ಜೈಮಿಭಾ. ೧೧-೨೩). [ಅನ್ಯೋನ್ಯ + ಭಾವ]

**ಅನ್ಯೋನ್ಯಯುದ್ಧ** (ನಾ). ಒಬ್ಬರಿಗೊಬ್ಬರು ಹೊಡೆದಾಡುವುದು; ಪರಸ್ಪರ ಯುದ್ಧ: ಕೆಲವು ಮಾಂಸಭಕ್ಷಕರಾದ ದುರಾತ್ಮರಿಂದ ತಿನ್ನಲ್ಪಡುವುವು. ಕೆಲವು ಅನ್ಯೋನ್ಯಯುದ್ಧಗಳಿಂದ ಮರಣವನ್ನೈದುವುವು (ಶೀಷಧ. ೧೮-೨೩). [ಅನ್ಯೋನ್ಯ + ಯುದ್ಧ]

**ಅನ್ಯೋನ್ಯವಿರುದ್ಧ** (ಗು). ಪರಸ್ಪರ ವಿರೋಧವಾದ: ಅನ್ಯೋನ್ಯವಿರುದ್ಧ ಪದಾರ್ಥನ್ಯಾಸಮೆ ತಾಂ ವಿರೋಧಂ (ಕಾವ್ಯಾವ. ೭೨೬). [ಅನ್ಯೋನ್ಯ + ವಿರುದ್ಧ]

**ಅನ್ಯೋನ್ಯವಿಸಾರಿ** (ಗು). ಪರಸ್ಪರವಾಗಿ ಹರಡುವ: ಓರೋರ್ವರ ಕಣ್ಗಳ್ ಸಂಚಾರಿಕಟಾಕ್ಷೇಕ್ಷಣಂಗಳಲೆದುವೊ ಲಜ್ಜಾಪ್ರಾರಂಭಮನನ್ಯೋನ್ಯವಿಸಾರಿ ನವಪ್ರಣಯದಿಂ ಕ್ರಿಯಾವಿರಮಣದೊಳ್ (ಶಾಂತಿಪು. ೬-೧೫). [ಅನ್ಯೋನ್ಯ + ವಿಸಾರಿ]

**ಅನ್ಯೋನ್ಯಸಂಘರ್ಷಣ** (ನಾ). ಒಬ್ಬರಿಗೊಬ್ಬರಿಗೆ ಜಗಳ; ಪರಸ್ಪರ ತಿಕ್ಕಾಟ: ಪಡೆಯೊಳನ್ಯೋನ್ಯಸಂಘರ್ಷಣದೊಳುಗುವ ಪೊಂದೊಡವುಗಳ ರೇಣುಗಳೊ . . . ಎಂಬಿನಂ ಕೆಂಧೂಳಿ ಮಸಗಿತಾಗ (ಜೈಮಿಭಾ. ೧೨-೭). [ಅನ್ಯೋನ್ಯ + ಸಂಘರ್ಷಣ]

**ಅನ್ಯೋನ್ಯಸಲ್ಲಾಪ** (ನಾ). ಪರಸ್ಪರವಾದ ಮಾತು ಕತೆ; ಒಬ್ಬರಿಗೊಬ್ಬರಿಗೆ ನಡೆಯುವ ಸಂಭಾಷಣೆ: ಚೇತೋವಿಕಾಸದೊಳತಿಚತುರಮನ್ಯೋನ್ಯಸಲ್ಲಾಪಭಾವನೋಕ್ತಿಗಳಿಂಪು ಮಿಗೆ (ಬಸಪು. ೫೯-೯). [ಅನ್ಯೋನ್ಯ + ಸಲ್ಲಾಪ]

**ಅನ್ಯೋನ್ಯಸ್ಪೃಷ್ಟ** (ಗು). ಪರಸ್ಪರವಾಗಿ ಮುಟ್ಟಿದ, —ಸಂಬಂಧವುಳ್ಳ: ಸೃಷ್ಟಿಚೋದನೆಗಳಿಂ ನರನೊಳಿಷ್ಟಗಳುದಯವಿಷ್ಟಸಿದ್ಧಿಗೆ ಯಂತ್ರತಂತ್ರಗಳ ಯುಕ್ತಿ ತ್ವಷ್ಟೃಕುಶಲದೆ ಸೃಷ್ಟಿವಿಕೃತಿ: ಇಂತನ್ಯೋನ್ಯಸ್ಪೃಷ್ಟರ್ ಪ್ರಕೃತಿ ನರರು (ಮಂಕುಕ. ೮೬೦). [ಅನ್ಯೋನ್ಯ + ಸ್ಪೃಷ್ಟ]

**ಅನ್ಯೋನ್ಯಾಭಾವ** (ನಾ). ೧. ಪರಸ್ಪರ ಸ್ನೇಹವಿಲ್ಲದಿರುವುದು; ಐಕಮತ್ಯವಿಲ್ಲದಿರುವುದು. ೨. ಸಂಬಂಧವಿಲ್ಲದಿರುವುದು: "ಘಟವು ಪಟಮಲ್ಲ, ಪಟವು ಘಟಮಲ್ಲ ಘಟಪಟೋಭಯ ಘಟವೂ ಪಟವೂ ಸಹಾದೊಡಂ ಘಟವೂ ಅಲ್ಲ ಪಟವೂ ಅಲ್ಲವೆಂಬುದು ಮೊದಲಾದುದೇ ಅನ್ಯೋನ್ಯಾಭಾವಮೆನಿಸುವುದು" (ವಿವೇಕ. ೨೩). [ಅನ್ಯೋನ್ಯ + ಅಭಾವ]

**ಅನ್ಯೋನ್ಯಾವಮರ್ದ** (ನಾ). ಪರಸ್ಪರವಾದ ವಿವಾದ, —ಕಲಹ, —ಘರ್ಷಣೆ: ಕೋವಿದರ ಕಳಕಳಿಯನ್ಯೋನ್ಯಾವಮರ್ದದ ರಭಸವೀ ಭೂಪಾಳಿಗಳುಪಹಾಸ್ಯಘೋಷಕೆ ಕವಚವಾಯ್ತೆಂದ (ಕುವ್ಯಾಸ. ೭-೩೨). [ಅನ್ಯೋನ್ಯ + ಅವಮರ್ದ]

**ಅನ್ಯೋನ್ಯಾಶ್ರಯ** (ನಾ). ೧. [ತರ್ಕಶಾ] ಪ್ರಸಕ್ತವಾದ ಒಂದು ವಸ್ತು ಅಥವಾ ವಿಷಯವನ್ನು ತಿಳಿಯುವುದಕ್ಕೆ ಬೇರೊಂದು ವಸ್ತು ಅಥವಾ ವಿಷಯದ ತಿಳಿವು ಅವಶ್ಯವೆಂದು ಹೇಳಿ, ಆ ಬೇರೆಯದನ್ನು ತಿಳಿಸುವುದಕ್ಕೂ ಪ್ರಸಕ್ತ ವಸ್ತು ಅಥವಾ ವಿಷಯದ ಜ್ಞಾನವು ಅವಶ್ಯವೆಂದು ನಿರೂಪಿಸುವ ತರ್ಕದೋಷ: ಅರ್ಥಕ್ಕೆ ವ್ಯಂಜಕತ್ವವು ಬರಬೇಕಾದರೆ ಶಬ್ದಕ್ಕೆ ವ್ಯಂಜಕತ್ವ ಸಿದ್ಧಿಯಾಗಬೇಕು; ವ್ಯಂಜಕತ್ವ ಸಿದ್ಧಿಯಾಗಬೇಕಾದರೆ, ವ್ಯಂಗ್ಯಾರ್ಥವು ಮೊದಲಿರಬೇಕು. ಹೀಗೆ ಅನ್ಯೋನ್ಯಾಶ್ರಯವೆಂಬ ದೋಷವು ಬರುವುದರಿಂದ ಯಾವುದೂ ನಿಶ್ಚಿತವಾಗುವುದಿಲ್ಲ! (ಧ್ವನ್ಯಾಲೋ. ೧೯೩). ೨. ಪರಸ್ಪರ ಒಂದು ಮತ್ತೊಂದಕ್ಕೆ ಅಧೀನವಾಗಿರುವುದು: ಕಲೆಯನ್ನು ಸಾಧಿಸುವುದಕ್ಕೆ ಶಾಸ್ತ್ರವು ಸಾಧನ; ಶಾಸ್ತ್ರಾಭ್ಯಾಸದ ಫಲ ಕಲೆ. ಇವೆರಡೂ ಅನ್ಯೋನ್ಯಾಶ್ರಯವಾದವು (ಸಾಹಿಜೀ. ೮). ೩. ವಿಷಮಚಕ್ರ (vicious circle. ಇಂಕನಿ). [ಅನ್ಯೋನ್ಯ+ಆಶ್ರಯ]

**ಅನ್ಯೋನ್ಯೋಪಮಾನ** (ನಾ). [ಕಾವ್ಯಮೀ] (ಉಪಮಾನೋಪಮೇಯಗಳನ್ನು) ಪರಸ್ಪರವಾಗಿ ಹೋಲಿಸಿ ವರ್ಣಿಸುವ ಒಂದು ರೀತಿಯ ಕಾವ್ಯಾಲಂಕಾರ: ಕಮಳಮಿದು ನಿನ್ನ ಮುಖದಂತೆ ಮುಖಮುಮೀ ಕಮಳದಂತೆ ನಿಕ್ಕುವಮೆಂದಿಂತಮರ್ದಿರೆ ಪೇೞ್ದುದನಱಿಗುತ್ತಮರನ್ಯೋನ್ಯೋಪಮಾನ ನಾಮಾಂಕಿತಮಂ (ಕವಿರಾ. ೩-೬೩). [ಅನ್ಯೋನ್ಯ + ಉಪಮಾನ]

**ಅನ್ಯೋನ್ಯೋಪಮೆ** (ನಾ). = ಅನ್ಯೋನ್ಯೋಪಮಾನ: ಅನ್ಯೋನ್ಯೋಪಮೆಗೆ: ತಳಮುಂ ಕೆಂದಳಿರುಂ ಕುಚದ್ವಿತಯಮುಂ ಪೂಗೊಂಚಲುಂ ತೋಳ್ಗಳುಂ ಸೆಳೆಗೊಂಬುಂ . . . ಒಂದೊಂದಱೊಳ್ ಪೋಲ್ತೆಯಾಗೆ ಲತಾಕೋಮಳೆ ಸಾರ್ದಶೋಕಲತೆಯಂ ಪೂಗೊಯ್ದಳಂತೞ್ತಿಯಿಂ (ಕಾವ್ಯಾವ. ೬೭೧). [ಅನ್ಯೋನ್ಯ + ಉಪಮೆ]

**ಅನ್ಯೋಪಗಮು** (ನಾ). ಇತರರ ಬಳಿ ಸೇರುವುದು.
ಅನ್ಯೋಪಗಮು ಪುರಸ್ಕಾರ=ಬೇರೆಯವರ ಸಹವಾಸ; ಇತರರನ್ನು ಕೊಂಡಾಡುವುದು : ಸ್ವಗುಣಪ್ರಚ್ಛಾದನಮನ್ಯಗುಣಾವಿಷ್ಕರಣಮಾತ್ಮ ದೂಷಣಮನ್ಯೋಪಗಮುಪುರಸ್ಕಾರಮುಪಾರಗುಣಗಣಂ ಗುಚ್ಛಗೋತ್ರ ದಾಸ್ರವಮಕ್ಕುಂ (ಸುಕುಮಾ. ೮–೨೫). [ಅನ್ಯ + ಉಪಗಮು]

**ಅನ್ಯೋರ್ವಿ** (ನಾ). ಬೇರೆಯ ದೇಶ. 'ಅನ್ಯೋರ್ವೀಶ್ವರ' ಪರಾ. [ಅನ್ಯ + ಉರ್ವಿ]

**ಅನ್ಯೋರ್ವೀಶ್ವರ** (ನಾ). ಬೇರೆಯ ದೇಶದ ದೊರೆ; ಬೇರೆಯ ದೊರೆ : ಅನ್ಯೋರ್ವೀಶ್ವರವ್ರಾತದೂತಕುಳಸ್ತೂಪಿತರತ್ನರುಕ್ಛಬಳಿತಂ . . . ರಾಜಗೇಹಾಜಿರಂ (ಚಂದ್ರಪು. ೧–೧೫೧). [ಅನ್ಯೋರ್ವಿ + ಈಶ್ವರ]

**ಅನ್ವಂಗಂ** (ಅ). ಬೆಂಬಳಿಯಲ್ಲಿ; ಒಡನೆ; ತರುವಾಯ : "ಅನ್ವಕ್ಷಮನು ಪದಮನ್ವಂಗಮೆನೆ ಬೆಂಬಟಿ" (ಮಂಗರಾ. ೧೩೧–೨೩). 'ಅನ್ವಕ್ಷ' ಪರಾ. [ಸಂ.]

**ಅನ್ವಕ್ಷ** (ಅ). ಇಂದ್ರಿಯದ ಬೆಂಬಳಿಯಲ್ಲಿ, —ಒಡನೆ, —ತರುವಾಯ : "ಅನುಪದಂ, ಅನ್ವಕ್, ಅನ್ವಕ್ಷಂ — ಈ ೩ ಬಟಿಸಲುಹ" (ಹಲಾಯು. ೧೨೧–೪೬) ; "ಅನ್ವಕ್ಷಮನುಪದಮನ್ವಂಗಮೆನೆ ಬೆಂಬಟಿ" (ಮಂಗರಾ. ೧೩೧–೨೩). [ಸಂ.]

**ಅನ್ವಯ** (ನಾ). **೧.** ವಂಶ ; ಕುಲ : "ಅನ್ವವಾಯಃ, ಅನ್ವಯಃ . . . ಕುಳಂ— ಈ ೬ ಕುಲಂ" (ಹಲಾಯು. ೬೬–೨೪೨) ; ಕಣ್ಣೀರ್ಗಳನಿಕ್ಕೆ ಚಂದ್ರಧವಳಂ ನಿನ್ನನ್ವಯಂ ಮಾಸದೇ (ಪಂಪಭಾ. ೧೨–೩೫). **೨.** [ವ್ಯಾಕ]. ವಾಕ್ಯದಲ್ಲಿ ಕರ್ತೃ ಕರ್ಮ ಕ್ರಿಯಾಪದಗಳಿಗೆ ಮತ್ತು ಅವುಗಳ ವಿಶೇಷಣಗಳಿಗಿರುವ ಕ್ರಮವಾದ ಸಂಬಂಧ. **೩.** ಹೊಂದಿಕೆ ; ಹೊಂದಾವಣೆ ; ಸಂಬಂಧ. **೪.** ಅನುಸರಿಸಿ ನಡೆಯುವವನು. **೫.** ತಾತ್ಪರ್ಯ : ಓಂಕಾರಮಂ ಬರೆಯಲೆನ್ನ ಕೈವಿಡಿದರ್ಥಮಂ ಕೇಳ್ದೊಡೆ ಮೊದಲನ್ವಯಂಗೇಳ್ವ (ಭಾವಚಿಂ. ೧–೩೮). [ಸಂ.]

**ಅನ್ವಯಕ್ರಮ** (ನಾ). **೧.** ವಂಶಾನುಕ್ರಮ. **೨.** [ವ್ಯಾಕ] "ವಾಕ್ಯದಲ್ಲಿ ಕರ್ತೃ ಕರ್ಮ ಕ್ರಿಯಾಪದಗಳೂ ಅವುಗಳ ವಿಶೇಷಣಗಳೂ ಬಂದಿರತಕ್ಕ ಕ್ರಮಕ್ಕೆ ಅನ್ವಯಕ್ರಮವೆಂದು ಹೆಸರು" (ಮಧ್ಯಮ. ೧೮೭). [ಅನ್ವಯ + ಕ್ರಮ]

**ಅನ್ವಯಕ್ಷಯ** (ನಾ). ಕುಲದ ಹಾನಿ; ವಂಶನಾಶ: ಇನಿವಿರಿದನ್ವಯಕ್ಷಯದಪವಾದದ ಪೆರ್ಪೊರ್ಜಿಯಂ ಅನೊರ್ವಳೆನಗಂ ಪೊತ್ತು ನಿಸ್ತರಿಸಲಾರ್ಪುದೆ (ಶಾಂತಿಪು. ೪–೭೯ ವ). [ಅನ್ವಯ + ಕ್ಷಯ]

**ಅನ್ವಯಘಾತಕ** (ನಾ). ಕುಲಕ್ಕೆ ಕೇಡನ್ನು ತರುವವನು ; ವಂಶನಾಶಕ: ಅನ್ವಯಘಾತಕರು ತಮ್ಮಿಂದ ತಾವಳಿದರು ರಣಾಗ್ರದಲಿ (ಕುವ್ಯಾಗ. ೧೧–೭೯). [ಅನ್ವಯ + ಘಾತಕ]

**ಅನ್ವಯತಿಲಕ** (ನಾ). ವಂಶಕ್ಕೆ ಅಲಂಕಾರದಂತಿರುವವನು; ಕುಲಕ್ಕೆ ಶ್ರೇಷ್ಠನಾದವನು: ಅಗಣಿತ ಮಹಿಮನನ್ವಯತಿಲಕನನುಪಮ ಚರಿತ ದೈವಾಪರನು ಪುಣ್ಯನಿಧಿ (ಕುವ್ಯಾಉ. ೪–೪೦). [ಅನ್ವಯ + ತಿಲಕ]

**ಅನ್ವಯದತ್ತಿ** (ನಾ). [ಜೈನ] ತನ್ನ ವಂಶವನ್ನು ಸ್ಥಿರವಾಗಿ ನೆಲೆಗೊಳಿಸುವುದಕ್ಕಾಗಿ ಮಗನಿಗಾಗಲಿ ತನ್ನ ಗೋತ್ರದಲ್ಲಿ ಹುಟ್ಟಿದ ಬೇರೆಯವನಿಗಾಗಲಿ ಧರ್ಮವನ್ನೂ ಸರ್ವಸ್ವವನ್ನೂ ಒಪ್ಪಿಸಿ ಕೊಡುವುದು : ಸಕಲದತ್ತಿಯೆಂಬುದು – ತನ್ನ ಸಂತತಿಯಂ ನಿಜಿಸಲೆಂದು ಪುತ್ರಂಗಕ್ಕೆ ಗೋತ್ರಜಂಗಕ್ಕೆ ಧರ್ಮಮಂ ಸರ್ವಸ್ವಮುಮನಪ್ಪಯಿಸಿ ಕೊಡುವುದು ಅನ್ವಯದತ್ತಿಯೆಂಬುದು – ಅನ್ವಯಂ (ಅಜಿಪು. ೧೨–೧ ವ) ; ಆತ್ಮೀಯ ಸಂತತಿಸ್ಥಾಪನಾರ್ಥಂ ಪುತ್ರಂಗಂ ಗೋತ್ರಜಂಗಂ ಮೇಣ್ ಧರ್ಮಮುಮಂ ದ್ರವ್ಯಮುಮಂ ಸಮರ್ಪಿಸಿ ಕುಡುವುದು ಸಕಲದತ್ತಿಯೆಂಬುದು, ಅನ್ವಯದತ್ತಿಯುಮಿದುವೆ (ತತ್ತ್ವಪ್ರ. ೨೮೮). [ಅನ್ವಯ + ದತ್ತಿ]

**ಅನ್ವಯಪ್ರದೀಪ** (ನಾ). ಕುಲಕ್ಕೆ ದೀಪದಂತಿರುವವನು; ವಂಶವನ್ನು ಬೆಳಗತಕ್ಕವನು : ತನೂಭವಂ ತನಗೆ ಪುಟ್ಟ ಭೂಭಾಗಮಂ ತದೀಯ ಭುಜದಂಡದೊಳ್ ತಳೆದು ನಮ್ಮದೊಂದನ್ವಯಪ್ರದೀಪನೆನಿಸಲ್ಕೆ[ಸಲ್ಲನೆ] ನುತುಂ-ಮನಕ್ಕುಮ್ಮಳಂ ಪೊದಟ್ದುದೆನಗಂ (ಮಲ್ಲಿಪು. ೪–೨೫). [ಅನ್ವಯ + ಪ್ರದೀಪ]

**ಅನ್ವಯವೃದ್ಧಿ** (ನಾ). ವಂಶದ ಅಭಿವೃದ್ಧಿ ; ಕುಲದ ಏಳಿಗೆ : ಪ್ರಿಯಕಾರಿಣಿಯೆಂಬೊಳನನ್ವಯವೃದ್ಧಿಗೆ ಮದುವೆ ಮಾಡೆ (ಶಾಂತಿಪು. ೯–೯). [ಅನ್ವಯ + ವೃದ್ಧಿ]

**ಅನ್ವಯವ್ಯತಿರೇಕ** (ನಾ). ಒಂದಿದ್ದರೆ ಮತ್ತೊಂದುಂಟು ಆ ಒಂದಿಲ್ಲದಿದ್ದರೆ ಈ ಮತ್ತೊಂದೂ ಇಲ್ಲ ಎಂಬ ವಿವರ : ಅನ್ವಯವ್ಯತಿರೇಕವೆಂದರೆ – ಕರ್ಮವುಂಟಾದರೆ ಶರೀರವುಂಟು, ಕರ್ಮವಿಲ್ಲದಿದ್ದರೆ ಶರೀರವಿಲ್ಲವೆಂಬಂಥದು ಅನ್ವಯವ್ಯತಿರೇಕವೆನಿಸುವುದು (ವೇಸಾರ. ೪). [ಅನ್ವಯ + ವ್ಯತಿರೇಕ]

**ಅನ್ವಯಸ್ವತಂತ್ರ** (ನಾ). ಅರ್ಥದ ನಿರ್ಣಯಕ್ಕಾಗಿಯೂ ಹೊಂದಿಕೆಗಾಗಿಯೂ ಬೇರೆಯ ಪದವನ್ನು ಕೋರದೆ ಸ್ವತಂತ್ರವಾಗಿರುವ ಶಬ್ದ : ಆವಂ ಆವಳ್ ಆದು ಎಂಬಿವನ್ವಯಸ್ವತಂತ್ರಗಳ್ ಆವಂ ಆವಳ್ ಆವುದು ತಾನೆಂಬಿವು ಅವಂ ಅವಳ್ ಅದು ಎಂಬಿವಂ ಪಾರದೆ ಅನ್ವಯಿಸಿಕೊಳಲಜಿಯವಾಗಿ ಪರತಂತ್ರಂಗಳ್ (ಶಮದ. ೧೪೩ ವೃತ್ತಿ). [ಅನ್ವಯ + ಸ್ವತಂತ್ರ]

**ಅನ್ವಯಾಗತ** (ಗು). ವಂಶಕ್ರಮದಿಂದ ಬಂದ ; ಕುಲಕ್ರಮದಿಂದ ಪ್ರಾಪ್ತವಾದ: ರವಿವಂಶದಿಕ್ಷ್ವಾಕುಭೂವರನು ಮೊದಲನ್ವಯಾಗತವಾಗಿ ಬಂದುದೀ ಪರಿವಾರವೀ ದೇಶವೀ ನಗರವು (ಹಚಕಾ. ೯–೧೪). [ಅನ್ವಯ + ಆಗತ]

**ಅನ್ವಯಿಸು** (ಕ್ರಿ). **೧.** ಕ್ರಮವರಿತು ಜೋಡಿಸು ; ಹೊಂದಿಸು : "ಅಹಿಂಸಾ ಪರಮೋಧರ್ಮಃ" ಎಂಬ ಸೂತ್ರವನ್ನು ರಾಜ್ಯಸ್ಥಾಪನೆಯಲ್ಲೂ ಅನ್ವಯಿಸಬಾರದೇಕೆ ? (ಚಿಕ್ಕದೇ. ೧೫೦) ; ಜಯಿಸಿ ಮದನನ ಬಳಿಕ ತನ್ನೊಡಲೊಳುಮೆಯನನ್ವಯಿಸಿಕೊಂಡಿಹುದೇನು ? (ಮಂಕುಕ. ೬೧೩). **೨.** ಹೊಂದು ; ಸಂಬಂಧಿಸು : ಮೇಲಿನ ಎರಡು ಸಂಗತಿಗಳು ನಮ್ಮ ಇಂದಿನ ಸ್ಥಿತಿಗೆ ಹೆಚ್ಚಾಗಿ ಅನ್ವಯಿಸುತ್ತವೆ (ಅಡುಸಾ. ೧೮). **೩.** [ವ್ಯಾಕ] ಕರ್ತೃ ಕರ್ಮ ಕ್ರಿಯೆಗಳನ್ನು ಹೊಂದಿಸಿ ಹೇಳು : ವಿಶೇಷಣ ಪದಂಗಳ್ ಪ್ರಥಮಾವಿಭಕ್ತಿಯಂ ಪಡೆದು ವಾಕ್ಯದ ಮೊದಲೊಳಿರ್ದು ಅನ್ವಯಿಸುವಲ್ಲಿ ತುದಿಯ ಕಾರಕಪದದ ವಿಭಕ್ತಿಯನೆ ತಳೆವುವು (ಶಮದ. ೧೪೦ ವೃತ್ತಿ). [ಅನ್ವಯ + –ಇಸು₃]

**ಅನ್ವಯೋಚಿತ** (ಗು). ಅನ್ವಯಕ್ಕೆ ತಕ್ಕ ; ಕುಲಕ್ಕೆ ಯೋಗ್ಯವಾದ : ಎಂದವರನಾತ್ಮೀಯಾನ್ವಯೋಚಿತ ವ್ರತಂಗಳೊಳ್ ದೃಢವ್ರತರಂ ಮಾಡಿ (ಆದಿಪು. ೧೫–೧೫ ವ). [ಅನ್ವಯ + ಉಚಿತ]

**ಅನ್ವಯೋದ್ಧರಣ** (ನಾ). ವಂಶವನ್ನು ಉದ್ಧರಿಸುವುದು ; ವಂಶಕ್ಕೆ ಮೇಲ್ಮೆಯುಂಟುಮಾಡುವುದು : ಆತ್ಮೀಯಾನ್ವಯೋದ್ಧರಣಸಮರ್ಥನಪ್ಪ ನಿಜಾತ್ಮಜಂಗೆ (ಸುಕುಮಾ. ೬–೨೫ ವ). [ಅನ್ವಯ + ಉದ್ಧರಣ]

**ಅನ್ವರ್ಥ** (ಗು). ಅರ್ಥಕ್ಕೆ ಅನುಸಾರವಾದ ; ಸಾರ್ಥಕವಾದ : ಜೀವರತ್ನಂ ಸ್ಥಿರತ್ವಮನ್ವರ್ಥಮಾಗಿ ತಳರವೆ (ಶಾಂತಿಪು. ೧೧–೫೬) ; ಶತ್ರುಂತಪನೆನಿಸಿದ ಜಿತಶತ್ರುನಾಮಮಾಯ್ತನ್ವರ್ಥಂ (ಅಜಿಪು. ೨–೪೯); ದುರ್ಲಂಘ್ಯಪುರಮೆಂಬ ಪೆಸರನನ್ವರ್ಥಂ ಮಾಡಿ (ಪಂರಾಮಾ. ೧೦–೧೮೬ ವ). [ಸಂ.]

**ಅನ್ವರ್ಥಕ** (ನಾ). = ಅನ್ವರ್ಥ: ಚಿತ್ರ ರೇಖಾನಿರ್ಮಿತವಾದ್ದರಿಂದ ಅಥವಾ ಕಲಾಮಾತ್ರವಾದ್ದರಿಂದ ಚಿತ್ರವೆಂಬ ಹೆಸರು ಅನ್ವರ್ಥಕ (ಧ್ವನ್ಯಾಲೋ. ೨೬). [ಸಂ.]

**ಅನ್ವರ್ಥತೆ** (ನಾ). ಅರ್ಥಕ್ಕೆ ಅನುಸಾರವಾಗಿರುವುದು : ಉತ್ತಮ ತಪಂಗಳಿಂದತ್ಯುತ್ತಮದೇಹರ್ ವಿದೇಹರಪ್ಪುದಱಿಂ ಮೆಯ್ವೆತ್ತನ್ವರ್ಥತೆಯಂ ತಾಳ್ದಿತ್ತು ವಿದೇಹಂ ವಿದೇಹಮೆಂಬೀ ಪೆಸರಂ (ಆದಿಪು. ೧–೫೩). [ಸಂ. ಅನ್ವರ್ಥತಾ]

**ಅನ್ವರ್ಥನಾಮ** (ನಾ). ಗುಣಕ್ಕೆ ಮತ್ತು ಅರ್ಥಕ್ಕೆ ಅನುಸಾರವಾದ ಹೆಸರು; ಅರ್ಥಪೂರ್ಣವಾದ ಹೆಸರು : ಪುರೋಹಿತಂ . . . ತನಯರ್ಗೆ ರಾಮಕೃಷ್ಣರೆಂಬ ನಾಮಕರಣಂ ಮೊದಲಾಗೆ ಪಲವುಮನ್ವರ್ಥನಾಮಮನಿಟ್ಟು (ಜಗನ್ನಿ. ೩–೨೬ ವ) ; ರೂಢನಾಮಮೆಂದುಂ, ಅನ್ವರ್ಥನಾಮಮೆಂದುಂ, ಅಂಕಿತನಾಮಮೆಂದುಂ ನಾಮಂ ಮೂದೆಱನಾಗಿರ್ಪುದು . . . ಅನ್ವರ್ಥನಾಮಂ ಗುಣಾನುರೂಪಮೆಂದುಂ, ಅರ್ಥಾನುರೂಪಮೆಂದು ಮಿರ್ತೆಱನಾಗಿರ್ಪುದು (ಶಮದ. ೭೬ ವೃತ್ತಿ) ; ಕುರುಡ, ಕುಂಟ, ಹೆಳವ ಮೊದಲಾದ ನಾಮವಾಚಕಗಳನ್ನು ಅನ್ವರ್ಥನಾಮಗಳೆಂದು ಕರೆಯುವುದುಂಟು (ಮಧ್ಯಮ. ೨೬). [ಅನ್ವರ್ಥ + ನಾಮ]

**ಅನ್ವರ್ಥಾಭಿಧಾನ** (ನಾ). = ಅನ್ವರ್ಥನಾಮ : ಜನ್ಮೋತ್ಸವಾನಂತರಮಾ ಬಾಳಕಂಗೆ ಬಾಹುಬಲಿಯೆಂಬನ್ವರ್ಥಾಭಿಧಾನಮನಿಟ್ಟು (ಆದಿಪು. ೮–೫೦ ವ). [ಅನ್ವರ್ಥ + ಅಭಿಧಾನ]

**ಅನ್ವವಾಯ** (ನಾ). ವಂಶ ; ಮನೆತನ ; ಪೀಳಿಗೆ : “ಅನ್ವವಾಯಃ, ಅನ್ವಯಃ . . . ಕುಳಂ – ಈ ೬ ಕುಲಂ” (ಹಲಾಯು. ೬೬–೨೪೨) ; ಬಗೆದುಂ ನಿನ್ನನ್ವವಾಯೋನ್ನತಿಯನಿವಳತಿಸ್ನೇಹಸಂಬಂಧಮುಂ . . . ಪಾಲಿಪ್ಪುದು (ಆದಿಪು. ೪–೫೩). [ಸಂ.]

**ಅನ್ವಾದಿ** (ನಾ). ಭೋಗ್ಯದಾರನಾದವನು ತಾನು ಭೋಗ್ಯಮಾಡಿಕೊಂಡಿದ್ದ ಆಸ್ತಿಯನ್ನು ಬೇರೊಬ್ಬನಿಗೆ (ಬದಲಾಯಿಸಿ) ಭೋಗ್ಯಮಾಡುವುದು (ಕಿಸಂಗ್ಲಾ. ೪೭). ‘ಅನ್ವಾದಿದಾರ’ ಪರಾ. [< ಸಂ. ಅನ್ವಾಧಿ]

**ಅನ್ವಾದಿದಾರ** (ನಾ). ಆಸ್ತಿಯನ್ನು ಮೊದಲು ಭೋಗ್ಯಮಾಡಿಕೊಂಡಿರುವವನಿಂದ ಆತನ ಹಣವನ್ನು ಕೊಟ್ಟು ತನಗಾಗಿ ಭೋಗ್ಯಮಾಡಿಕೊಳ್ಳುವವನು (ಕಿಸಂಗ್ಲಾ. ೪೭) ; (ವೈಗೆಜೆ. IV, ೭೬೩). ‘ಭೋಗ್ಯದಾರ’ ಪರಾ. [ಅನ್ವಾದಿ + –ದಾರ್]

**ಅನ್ವಾಧಾನ** (ನಾ). ಹೋಮಾಗ್ನಿಗೆ ಸಮಿತ್ತುಗಳನ್ನು ಹಾಕಿ ಉಜ್ವಲಗೊಳಿಸುವುದು ; ಅಗ್ನಿಸಂಧಾನ : ಅರಣಿಯನು ಮೃಗವೆಳೆದು ಕೊಂಡೀ ಹೊದಱ ಹೊಕ್ಕುದು ಬಹಳಕಾನನದ ಆಳಿದುದನ್ವಾಧಾನವಿತರರ ಹಳಿವಿಗಾನೊಳಗಾದೆನೆನೆ (ಕುವ್ಯಾಅ. ೨೩–೭). [ಸಂ.]

**ಅನ್ವಾಯ** (ನಾ). = ಅನ್ವಯ : ಭರತಾನ್ವಾಯಕ್ಕೆ ಕಲಂಕಮಾಗದಂತಿರೆ ನೆಗೞ್ವೆಂ (ಗದಾಯು. ೬–೪). [ಸಂ.]

**ಅನ್ವಾಸನ** (ನಾ). ೧. ಒಬ್ಬರು ಕುಳಿತುಕೊಂಡ ಮೇಲೆ ತಾನು ಕುಳಿತುಕೊಳ್ಳುವುದು ; ಇತರರಿಗೆ ಆಸನಕೊಟ್ಟು ಆಮೇಲೆ ತಾನು ಆಸನದಲ್ಲಿ ಕುಳಿತುಕೊಳ್ಳುವುದು. ೨. ಸೇವೆ ; ಪೂಜೆ ; ಸತ್ಕಾರ. ೩. ಪಶ್ಚಾತ್ತಾಪ ; ಪರಿತಾಪ. ೪. ಕಾರ್ಖಾನೆ ; ಉದ್ಯೋಗಶಾಲೆ ; ಕಮ್ಮಾರರೇ ಮುಂತಾದವರ ಕೆಲಸದ ಮನೆ : “ಕರ್ಮಶಾಲಾ, ಅನ್ವಾಸನಂ – ಈ ೨ ಪಂಚಕಾರುಕರುಂ ಕೆಲಸಂಗೆಯ್ವ ಮನೆ” (ಹಲಾಯು. ೫೦–೧೪೨). ೫. [ವೈದ್ಯ]ಸ್ನೇಹವಸ್ತಿ ಎಂಬ ಉಪಚಾರ; ಎನಿಮಾ; ಆಸನದ್ವಾರದ ಮೂಲಕ ಮೃದುವಾದ ದ್ರವದ್ರವ್ಯವನ್ನು ಕರುಳಿಗೆ ಸೇರಿಸಿ ಸ್ವಲ್ಪಹೊತ್ತಿನ ಮೇಲೆ ಹೊರಕ್ಕೆ ಬಿಡುವ ಚಿಕಿತ್ಸೆ. [ಸಂ.]

**ಅನ್ವಾಹಾರ್ಯ** (ನಾ). ೧. ಪುರೋಹಿತರಿಗೆ ಅಥವಾ ನಿಮಂತ್ರಿತರಿಗೆ ಶ್ರಾದ್ಧಾದಿಗಳಲ್ಲಿ ಕೊಡುವ ದಕ್ಷಿಣೆ ಇತ್ಯಾದಿ. ೨. ಪ್ರತಿ ಅಮಾವಾಸ್ಯೆಯಲ್ಲಿ ಪಿತೃಗಳಿಗಾಗಿ ನಡಸುವ ದರ್ಶಶ್ರಾದ್ಧ ; ಮಾಸಿಕ ಶ್ರಾದ್ಧ. [ಸಂ.]

**ಅನ್ವಾಹಿತ** (ನಾ). ೧. ಸರಿಯಾದ ಹಕ್ಕುದಾರನಿಗೆ ತಲಪಿಸಬೇಕೆಂದು ಕೋರಿ ಒಬ್ಬರಲ್ಲಿ ನ್ಯಾಸವಾಗಿಟ್ಟಿರುವ ವಸ್ತು. ೨. ಸರಿಯಾಗಿ ನೋಡಿಕೊಳ್ಳದಿರುವುದರಿಂದ ಆರಿಹೋಗಿದ್ದು ಮತ್ತೆ ಹೊತ್ತಿಸಿ ಹುತಗೊಳಿಸಿದ ಹೋಮಾಗ್ನಿ. ೩. ಮದುವೆಯ ಹೆಣ್ಣಿಗೆ ಆಕೆಯ ತಾಯಿತಂದೆಗಳಾಗಲಿ, ಗಂಡನ ಕಡೆಯವರಾಗಲಿ ಬಹುಮಾನವಾಗಿ ಕೊಡುವ ಸ್ತ್ರೀಧನ. [ಸಂ.]

**ಅನ್ವಿತ** (ಗು). ೧. ಅನುಸರಿಸಲ್ಪಟ್ಟ ; ಒಡಗೂಡಿದ ; ಯುಕ್ತನಾದ. ೨. ಊಹಿಸಿ ತಿಳಿಯಬಹುದಾದ. (ನಾ). ೩. ಸೇರಿದವನು ; ಸಂಬಂಧಿಸಿದವನು. ೪. ಹಿತ ; ಉಚಿತರೀತಿ : ಉಣ್ ಪ್ರತ್ಯಯ ಮೊದಲ್ಗುಮನ್ವಿತದಿನುಣ್ಬನಿದನೆಂಬೆಡೆಯೊಳ್ . . . “ಅನ್ವಿತದಿಂ = ಹಿತದಿಂದೆ” (ಶಮದ. ೨೦೨ ಟೀ). ೫. ತಿಳಿದವನು ; ವಿದ್ವಾಂಸ : ವ್ಯಾಪ್ತ ದಿಗಂತಂ ಕಾವ್ಯಮೆಂದನ್ವಿತಸುಕವಿಜನಂ ಮೆಚ್ಚೆ (ಆದಿಪು. ೧–೨೬) ; ಮುನ್ನಾರುಂ ಜಾತಕಮಂ ಕನ್ನಡದಿಂ ವ್ಯಕ್ತಮಾಗಿ ಪೇೞ್ದನ್ವಿತರಿಲ್ಲ (ಜಾತತಿ. ೧–೧೬) ; “ಅನ್ವಿತರ್ = ವಿದ್ವಾಂಸರ್” (ಶಮದ. ೨೧೫ ಟೀ).

**ಅನ್ವಿತಮಾಗು** = ಕೂಡಿಬರು ; ಅಳವಡು ; ಸಮಾವಿಷ್ಟವಾಗು : ಪುರಾಣಸ್ಥಿತಿಯೊಳೆ ಕವಿರತ್ನನಿನನ್ವಿತಮಾದುದು ಸಗರಚಕ್ರವರ್ತಿಯ ಚರಿತಂ (ಅಜಿಪು. ೧೨–೨೮). [ಸಂ.]

**ಅನ್ವಿತಾಭಿಧಾನ** (ನಾ). [ತತ್ತ್ವಶಾ] ಪದಗಳ ಸಾಮರ್ಥ್ಯದಿಂದಲೇ ಪದಾರ್ಥಗಳಿಗಿರುವ ಪರಸ್ಪರ ಸಂಬಂಧವು ತಿಳಿಯುವುದು : ಸಂಬಂಧವು ಪದಶಕ್ತಿಯಿಂದಲೇ ತಿಳಿಯುವುದೆಂದು ಪ್ರಾಭಾಕರರು ಹೇಳುವರು. ಇದಕ್ಕೆ ಅನ್ವಿತಾಭಿಧಾನವೆಂದು ಹೆಸರು (ಹಿಂದಸಾ. ೧೪೫). [ಅನ್ವಿತ + ಅಭಿಧಾನ]

**ಅನ್ವಿತಾಭಿಧಾನವಾದ** (ನಾ). [ತತ್ತ್ವಶಾ] ಪದಗಳ ಸಾಮರ್ಥ್ಯದಿಂದಲೇ ಪದಾರ್ಥಗಳಿಗಿರುವ ಸಂಬಂಧವು ತಿಳಿಯುವುದೆಂಬ ವಾದ : ಭಾಷಾಜ್ಞಾನವುಳ್ಳ ಮನುಷ್ಯನಿಗೆ ಪದಗಳ ಶ್ರವಣವಾದರೆ ಪದಾರ್ಥಗಳ ಸ್ಮರಣೆ ಬರುವುದು. ಅನಂತರ ಆಕಾಂಕ್ಷಾಯೋಗ್ಯತಾ, ಸಂದರ್ಭ, ಪ್ರಕರಣ, ತಾತ್ಪರ್ಯ ಮೊದಲಾದ ಪರಾಮರ್ಶದಿಂದ ಪದಗಳು ಶೋಧಿತಗಳಾಗಿ ವಾಕ್ಯಾರ್ಥವೆಂಬ ಪರಸ್ಪರಾನ್ವಿತ ಪದಾರ್ಥಗಳ ಜ್ಞಾನ ಉದಯಿಸುವುದು. ಇದೇ ಅನ್ವಿತಾಭಿಧಾನವಾದ (ಹಿಂದಸಾ. ೧೪೫). [ಅನ್ವಿತಾಭಿಧಾನ + ವಾದ]

**ಅನ್ವಿತಾಭಿಧಾನವಾದಿ** (ನಾ). [ತತ್ತ್ವಶಾ] ಪದಗಳ ಸಾಮರ್ಥ್ಯದಿಂದಲೇ ಪದಾರ್ಥಗಳಿಗಿರುವ ಸಂಬಂಧವು ತಿಳಿಯುವುದು ಎಂದು ವಾದಮಾಡುವವನು : ಅಭಿಹಿತಾನ್ವಯವಾದವನ್ನು ಒಪ್ಪದಿರುವ ಪಕ್ಷವೂ ಹಿಂದಿನಿಂದ ಉಂಟು. ಅನ್ವಯವಿಶಿಷ್ಟವಾಗಿಯೇ ವಾಕ್ಯದ ಪದಗಳ ಅರ್ಥವನ್ನು ಗ್ರಹಿಸುತ್ತೇವೆ ; ಆದಕಾರಣ ಪದಗಳ ಅರ್ಥವೇ ವಾಕ್ಯದ ಅರ್ಥ ; ಇವೆರಡೂ ಬೇರೆ ಬೇರೆಯಲ್ಲ ಎಂದು ಇವರ ಮತ. ಈ ಕಾರಣದಿಂದ ಅವರಿಗೆ ಅನ್ವಿತಾಭಿಧಾನವಾದಿಗಳೆಂಬ ಹೆಸರು ಬಂದಿದೆ (ಭಾರವಿಮಾ. ೨೪೯). [ಸಂ. ಅನ್ವಿತಾಭಿಧಾನವಾದಿನ್ (ಅನ್ವಿತಾಭಿಧಾನ + ವಾದ + –)]

**ಅನ್ವಿತಾರ್ಥ** (ನಾ). ೧. ಸ್ಪಷ್ಟವಾದ ಅರ್ಥವುಳ್ಳದ್ದು : ಸಾಮಾನ್ಯಮಲ್ಲಿದು ಪದಾರ್ಥದೊಳನ್ವಿತಾರ್ಥಂ ನಾಮಂ ವಸಂತತಿಲಕಂ ಕಮಲಾಯತಾಕ್ಷೀ (ಛಂದೋಂಬು. ೨–೯೬). ೨. ಅರ್ಥ ಹೊಂದಿಕೆಯಾಗುವ ಸ್ಥಳ : ಸ್ವರದಿನನಾದಿಷ್ಟರೇಫದಿಂ ಪರದೊಳಮರ್ದು ತೋಱೆ ಪವರ್ಗಂ

ದೊರೆಕೊಳ್ಗುಂ ವಾದೇಶಮುದರೆ ಉಱಿ ವಾ ಕ್ಯ ದೊ ಳ ಮ ನ್ವಿ ತಾ ರ್ಥ ದೊಳಕ್ಕುಂ [ಪಾಠಾಂ. ರ್ಥಂಗಳೊಳಕ್ಕುಂ] (ಕಾವ್ಯಾವ. ೬೩).
[ಅನ್ವಿತ + ಅರ್ಥ]

**ಅನ್ವಿತೆ** (ನಾ). ಹೊಂದಿದವಳು ; ಯುಕ್ತಳು : ಕಾಂತಿಯೆಂಬ ಗುಣ ದೊಳನ್ವಿತೆಯಪ್ಪ ವಾ ಕ್ಕೆಂ ಬ ದೇವಿಗೆ . . . ನಮಸ್ಕರಿಸುವಾತನಪ್ಪೆಂ (ಶಮದ. ೧ ವೃತ್ತಿ). [ಸಂ. ಅನ್ವಿತಾ]

**ಅನ್ವಿಷ್ಟ** (ಗು). ಹುಡುಕಲ್ಪಟ್ಟ ; ಹುಡುಕಿದ. [ಸಂ.]

**ಅನ್ವೀಕ್ಷಣ**, ಅನ್ವೀಕ್ಷಣೆ (ನಾ). **೧.** ಹುಡುಕುವುದು ; ಅರಸುವುದು. **೨.** ಪರಾಮರ್ಶೆ. **೩.** ಧ್ಯಾನ ; ಚಿಂತನೆ. **ಅನ್ವೀಕ್ಷಣೆ ೧.** (ಕ). [ಸಂ.]

**ಅನ್ವೀಕ್ಷಣೆ** 'ಅನ್ವೀಕ್ಷಣ' ನೋ.

**ಅನ್ವೀಕ್ಷೆ** (ನಾ). = ಅನ್ವೀಕ್ಷಣ. [ಸಂ. ಅನ್ವೀಕ್ಷಾ]

**ಅನ್ವೇಷಕ** (ನಾ). ಹುಡುಕುವವನು : 'ಎಕ್ಸ್‌ಪ್ಲೋರರ್' ಎಂದರೆ 'ಅನ್ವೇಷಕ' (ಬೇರೆ ಪ್ರದೇಶಕ್ಕೆ ಹೋಗಿ ಪರೀಕ್ಷಿಸುವವ) ಎಂದು ಅರ್ಥ (ಆಕಾಶ. ೪೭) ; ವರ್ಷಗಟ್ಟಲೆ ಆ ಪ್ರಾಂತದಲ್ಲೇ ಅಲೆಯುತ್ತಿದ್ದ ಅವನಿಗೆ 'ಅನ್ವೇಷಕ' ನೆಂದೇ ಹೆಸರಾಗಿ ಹೋಗಿತ್ತು (ಯೋಧಪು. ೫೩). [ಸಂ.]

**ಅನ್ವೇಷಣ**, ಅನ್ವೇಷಣೆ (ನಾ). ಹುಡುಕುವುದು ; ಪರಿಶೋಧನೆ : ಯಮಕವನ್ನು ಪ್ರಯೋಗಿಸುವ ಕಾಲದಲ್ಲಿ ವಿಶಿಷ್ಟ ಶಬ್ದಗಳ ಅನ್ವೇಷಣ ವೆಂಬ ಪ್ರಯತ್ನಾಂತರವು ಕವಿಯಲ್ಲಿ ಕಂಡೇ ಕಾಣುತ್ತದೆ (ಧ್ವನ್ಯಾಲೋ. ೭೯). **ಅನ್ವೇಷಣೆ** : ಪುಣ್ಯದನ್ವೇಷಣೆಗೆ ಪೋಪ ಪಾಪದ ತೆರದಿ ಪೊರ ಮಟ್ಟಳರಮನೆಯಿನಾ ಮುದುಕಿ (ಶ್ರೀರಾಮಾ. ೧೨೧--೨೬೭) ; ಅಭಿರುಚಿ ಗಳ ಅನ್ವೇಷಣೆಯ ಕಾರ್ಯವನ್ನೂ ಸಾಧಿಸಬೇಕು (ಶಿಕ್ಷದ. ೧೮೮). [ಸಂ.]

**ಅನ್ವೇಷಣೆ** 'ಅನ್ವೇಷಣ' ನೋ.

**ಅನ್ವೇಷಿತ** (ಗು). = ಅನ್ವಿಷ್ಟ. [ಸಂ.]

**ಅನ್ವೇಷಿಸು** (ಕ್ರಿ). ಹುಡುಕು ; ಪರಿಶೋಧಿಸು : "ನನ್ನ ಜೀವನದಲ್ಲೆಲ್ಲ ನನ್ನ ಗೀತಗಳ ಮೂಲಕ ನಾನು ನಿನ್ನನ್ನು ಅನ್ವೇಷಿಸಿದ್ದೇನೆ" (ಧರ್ಮಸಾ. ೮೭). [ಅನ್ವೇಷಣ + –ಇಸು$_3$]

**ಅನ್ವೇಷ್ಟೃ** (ನಾ). ಹುಡುಕುವವನು ; ವಿಚಾರಶೀಲ : "ಅನ್ವೇಷ್ಟಾ, ಅನುಪದೀ – ಈ ೨ ಅಱಿಕೆಕಾಱಂ" (ಹಲಾಯು. ೬೨–೨೨೫). [ಸಂ.]

**ಅಪ** 'ಅಪ್ಪ$_1$' ನೋ.

**ಅಪಕರ್ಷ** (ನಾ). ಕುಂದು ; ದುರ್ದೆಶೆ; ಕೀ ಳು ದೆ ಸೆ; ಕಷ್ಟದ ಸನ್ನಿವೇಶ : ಜಡರನ್ಯಾಪಕರ್ಷದಿಂ ರಾಗಿಸರೇ (ಪಂರಾಮಾ. ೧೧–೧೮೧). ಉತ್ಕರ್ಷ ಹೋ. [ಸಂ.]

**ಅಪಕರ್ಷಕ** (ಗು). ೧. ದುರ್ದೆಶೆಯನ್ನುಂಟುಮಾಡುವ ; ಕುಂದು ಕೊರತೆಯನ್ನು ತರತಕ್ಕ. (ನಾ). **೨.** ದೇಹದ ಯಾವ ಭಾಗವ ನ್ನಾದರೂ ಅದರ ನಿಯತಸ್ಥಾನದಿಂದ ಎ ಳೆ ಯು ವ ಸ್ನಾಯು (Abductor. ಇಂಕನಿ). [ಸಂ.]

**ಅಪಕರ್ಷಣ** (ನಾ). **೧.** ಇರುವ ಕಡೆಯಿಂದ ಬೇರೆ ಕಡೆಗೆ ಸೆಳೆಯು ವುದು. **೨.** ಕುಗ್ಗಿಸುವುದು ; ಕಡಮೆ ಮಾಡುವುದು ; ತೆಗೆಯು ವುದು: ತೀವಿದುದ್ಧಾರಪಲ್ಯಂ ತದಂತರ್ಗತ ರೋಮಂಗಳಂ ಪ್ರತಿಸಮಯ ಮೊಂದೊಂದಂ ಅಪಕರ್ಷಣಂ ಮಾಡಿದೊಡೆಂದಾಗೆ ರಿಕ್ತಮಕ್ಕುಮಾ ಕಾಲಮಂ ಉದ್ಧಾರಪಲ್ಯೋಪಮಮೆಂಬುದು (ತತ್ತ್ವಪ್ರ. ೧೭೫). [ಸಂ.]

**ಅಪಕಾರ** (ನಾ). ಅಹಿತವನ್ನು ಮಾಡುವುದು ; ಕೆಡುಕು ಮಾಡು ವುದು; ಕೆಡುಕು; ದ್ರೋಹ: "ಕೆಟ್ಟುದು ದ್ರೋಹಮುಪಕಾರಮುಕ್ಕುಂ" (ಮಂಗರಾ. ೧೩೨–೨೬) ; ಪೃಥಿವಿ ನೆನೆದಪಕಾರ ಲೋಕಪ್ರಥಿತವಾಯಿತು (ಕುವ್ಯಾಕ. ೨೬–೪೬) ; ಅಪಕಾರ ಮಾಡುವವ ಅಪಕೀರ್ತಿಗೆ ಅಂಜಿಯಾನೆ (ಗಾದೆ). [ಸಂ.]

**ಅಪಕಾರಕ** (ಗು). ಕೆಡುಕನ್ನುಂಟುಮಾಡುವ ; ಅಪಕಾರವನ್ನು ಮಾಡುವ : ರೋಗಿ ಎಷ್ಟೇ ಉತ್ತಮವಾದ ಔಷಧವನ್ನು ಸೇವಿಸುತ್ತಿ ದ್ದರೂ ಅಹಿತವಾದ ಆಹಾರ ಅಪಕಾರಕವಾಗುತ್ತದೆ (ರೂಢಿ). [ಸಂ.]

**ಅಪಕಾರಿ** (ನಾ). ಅಹಿತವನ್ನು ಮಾಡುವವನು ; ವಿರೋಧವನ್ನು ಆಚರಿಸುವವನು ; ಅಪಕಾರ ಮಾಡುವವನು : ಕೌರವನ ಮೇಲಿಲ್ಲ ದಗ್ಗದ ವೈರವೀತನಮೇಲೆ ನಮಗಪಕಾರಿಯೀತನು (ಕುವ್ಯಾಕ. ೨೬–೨೪) ; ಅಪಕಾರಿಗುಪಕಾರವೆಸಗುವುದಾದರೆ ಅ ದ ರೊ ಳು ಹಿ ರಿ ತ ನ ವುಂ ಟು (ಇಂಚಾಪ. ೨೨೨–೯೯). [ಸಂ. ಅಪಕಾರಿನ್]

**ಅಪಕೀರ್ತಿ** (ನಾ). ಕೆಟ್ಟ ಹೆಸರು ; ದುರ್ಯಶ ; ನಿಂದೆ : ಜನಪನಪ ಕೀರ್ತ್ಯಂಗನೆಗೆ ತೊಡಿಸಿದನು ಭೂಷಣವ (ಕುವ್ಯಾಉ. ೨–೨೨) ; ಆಱವು ಮಱಿದಪಕೀರ್ತಿನಾರಿಯ ಸೆಱಗ ಹಿಡಿದರು (ಕುವ್ಯಾದ್ರೋ. ೬–೨೭). [ಸಂ.]

**ಅಪಕೃತ** (ನಾ). **೧.** ಅಪಕಾರ ಹೊಂದಿದವನು; ಕೇಡಿಗೆ ಗುರಿಯಾದ ವನು. **೨.** ಕೇಡು ; ಅಪಕಾರ ; ಅಹಿತ. **೩.** ಅನಿಷ್ಟ ; ದುಷ್ಕರ್ಮ ಪರಿಣಾಮ : ಏ ನೆಂ ಬೆ ನ ಪ ಕೃ ತ ದ ಸೂಚಕವನು (ಜೈಮಿಭಾ. ೧೭–೫೦). [ಸಂ.]

**ಅಪಕೃತಿ** (ನಾ). **೧.** = ಅಪಕಾರ : ಉಪಕೃತಿಯಂ ನೆನೆಯದೆ ನೀನಪ ಕೃತಿಯನೊಡರ್ಚಿದ್ದೈ ದುರಾತ್ಮನೆ (ಪಂರಾಮಾ. ೧೧–೧೩೭). **೨.** ತಪ್ಪು ಕೆಲಸ : ಇತ್ತಲಪಕೃತಿಯಂ ಗುರುಗಳೊಡನಾಲೋಚಿಸಿ (ಪಂರಾಮಾ. ೧೦–೧೭೮ ವ). [ಸಂ.]

**ಅಪಕೃತ್ಯ** (ನಾ). = ಅಪಕಾರ. [ಸಂ.]

**ಅಪಕೃಷ್ಟ** (ಗು). **೧.** ದೂರಕ್ಕೆ ಒಯ್ಯಲ್ಪಟ್ಟ ; ಕೆಳಕ್ಕೆ ಇಳಿಸಿದ ; ಅಗಲಿಸಿದ. **೨.** ನೀಚ ; ಹೀನ. 'ಉತ್ಕೃಷ್ಟ' ಪರಾ. [ಸಂ.]

**ಅಪಕ್ರಮ** (ನಾ). **೧.** ದೂರ ಹೋಗುವುದು ; ಹಿಂದೆ ಸರಿಯು ವುದು. **೨.** ತಪ್ಪಿಸಿಕೊಂಡು ಓಡಿಹೋಗುವುದು ; ಪಲಾಯನ. **೩.** ಕ್ರಮಕ್ಕೆ ವಿರೋಧವಾದುದು ; ಅ ಕ್ರ ಮ : ಜನಿಯಿಸುಗು ಮಧಿಕರಾಗಮನೆನಸುಮಪಕ್ರಮದೆ ವಾ ರು ಣೀ ಸಂಶ್ಲೇಷಂ (ಕವಿರಾ. ೩–೩೪). [ಸಂ.]

**ಅಪಕ್ರಮಣ** (ನಾ). ದೂ ರ ಹೋ ಗು ವು ದು ; ತಪ್ಪಿಸಿಕೊಂಡು ಹೊರಟು ಹೋಗುವುದು ; ಹಿಂದೆ ಸರಿಯುವುದು. [ಸಂ.]

**ಅಪಕ್ರಾಂತ** (ನಾ). **೧.** ಹಿಂದಕ್ಕೆ ಸ ರಿ ಯು ವು ದು **೨.** ಹಿಂದಕ್ಕೆ ಸರಿದವನು ; ಓಡಿಹೋದವನು. **೩.** [ನಾಟ್ಯ] ನಾಟ್ಯಕ್ರಮದಲ್ಲಿ ಹಿಂದೆ ಸರಿಯುವ ಒಂದು ಭಂಗಿ. [ಸಂ.]

**ಅಪಕ್ವ** (ಗು). **೧.** ಬೇಯದೆ ಇರುವ ; ಬೇಯಿಸದೆ ಇರುವ ; ಹಸಿಯ. **೨.** ಮಾಗಿಲ್ಲದ ; ಹಣ್ಣಾಗದಿರುವ. **೩.** ಜೀರ್ಣವಾಗದ. [ಸಂ.]

**ಅಪಕ್ವತೆ** (ನಾ). ಪಕ್ವವಾಗಿಲ್ಲದಿರುವಿಕೆ : ಇಪ್ಪತ್ತೈದು ವರ್ಷಗಳ ಹಿಂದಿನ ಕಾಗದದಲ್ಲಿ ಅಪಕ್ವತೆಯೂ ಅತಿರೇಕವೂ ಸಹಜವಾಗಿಯೇ ಇದ್ದರೂ (ಸಮಾಲೋ. ೪). [ಸಂ. ಅಪಕ್ವತಾ]

**ಅಪಕ್ವಸ್ಥಿತಿ** (ನಾ). ಪರಿಪಾಕವಲ್ಲದ ಸ್ಥಿತಿ. [ಅಪಕ್ವ + ಸ್ಥಿತಿ]

**ಅಪಕ್ಷಪತಿತ** (ನಾ). ಪಕ್ಷಪಾತವಿಲ್ಲದವನು ; ನಿಷ್ಪಕ್ಷಪಾತಿ : ಜಯ ವಾದಮುನಖಿಳ ಜಗಜ್ಜಯಪತ್ರಮುನಪಕ್ಷಪತಿತರ್ ಕುಡೆ ಕೊಂಡಯ ನಯವಿನಯಪರಂ ಮಾಣಿಯುನವಮನ್ನಿಸದೆ ವಿಭು ಕರಂ ಮನ್ನಿಸಿದಂ (ಶಾಂತಿಪು. ೮–೧೫೦). [ಸಂ.]

**ಅಪಕ್ಯಾತಿ** (ನಾ). ಅಪಕೀರ್ತಿ ; ಕೆಟ್ಟ ಹೆಸರು ; ದೂರು : ಈ ಮನೇಲಿ ಏ ನಾ ದ ರೂ ಅವಳಿಗೆ ಆಯ್ತು ಅನ್ನೋ ಅ ಪ ಕ್ಯಾ ತಿ ಒಂದು ಬೇಡ (ಚಿಕರಾ. ೧೨). [< ಸಂ. ಅಪಖ್ಯಾತಿ]

**ಅಪಕ್ಷ್ಮತೆ** (ನಾ). ಕಣ್ಣುರೆಪ್ಪೆ ಬಡಿಯದಿರುವುದು ; ರೆಪ್ಪೆ ಮಿಟುಕಿಸದಿರುವುದು : ಅನ್ವಿತ ಚತುರಾನನತ್ವಮಖಿಳಾಗಮವಿತ್ತ್ವಮಪಕ್ಷ್ಮತಾಸಮಾಯುತ ಗಗನಪ್ರಚಾರಮುಪಜೀವವಧಂ . . . ಏಂ ಜಿನನೊಳ್ ಪೊದಱ್ದುವೋ (ಆದಿಪು. ೧೦–೪೨). [ಸಂ. ಅಪಕ್ಷ್ಮತಾ]

**ಅಪಕ್ಷ್ಮಪಾತ** (ನಾ). ರೆಪ್ಪೆ ಬಡಿತವಿಲ್ಲದವನು ; ರೆಪ್ಪೆ ಮಿಟುಕಿಸದವನು : ಬಿಲ್ಲುಂಬೆಱಗುಮಾಗಿ ಚಿತ್ರನ್ಯಸ್ತರೂಪುಗಳಂತೆ ನಿಶ್ಚಳೀಭೂತರುಮಪಕ್ಷ್ಮಪಾತರುಮಾಗಿ ನೀಡುಂ ನೋಡಿ (ಶಾಂತಿಪು. ೪–೧೧ ವ). [ಸಂ. (ಅಪಕ್ಷ್ಮ + ಪಾತ)]

**ಅಪಕ್ಷ್ಮಸ್ಪಂದ** (ನಾ). ೧. ರೆಪ್ಪೆಗಳ ಅಲುಗಾಟವಿಲ್ಲದೆ ಇರುವುದು. ೨. ರೆಪ್ಪೆಗಳ ಬಡಿತವಿಲ್ಲದವನು. 'ಅಪಕ್ಷ್ಮಸ್ಪಂದತ್ವ' ಪರಾ. [ಸಂ. (ಅಪಕ್ಷ್ಮ + ಸ್ಪಂದ)]

**ಅಪಕ್ಷ್ಮಸ್ಪಂದತ್ವ** (ನಾ). ರೆಪ್ಪೆಗಳ ಬಡಿತವಿಲ್ಲದಿರುವ ಸ್ಥಿತಿ : ಅಪಕ್ಷ್ಮಸ್ಪಂದತ್ವಮುಂ ಗವ್ಯೂತಿಶತಚತುಷ್ಟಯಸುಭಿಕ್ಷತ್ವಮುಂ (ಚಾವುಂಪು. ೭೩). [ಅಪಕ್ಷ್ಮಸ್ಪಂದ + –ತ್ವ]

**ಅಪಖ್ಯಾತಿ** (ನಾ). ಅಪಕೀರ್ತಿ ; ಕೆಟ್ಟ ಹೆಸರು : ಮಗನನೀವೆನೆ ಪಾರಲೌಕಿಕವಗಡಹುದಪಖ್ಯಾತಿ ತನ್ನನು ತಗುಹುದೈಹಿಕದಲ್ಲಿ (ಕುವ್ಯಾಆ. ೧೦–೧೩). [ಸಂ.]

**ಅಪಗಂಟು** (ನಾ). ಬಿಡಿಸಲಾಗದ ಗಂಟು ; ಕಗ್ಗಂಟು (?) : ಸಾವಪುಟ್ಟುವ ಕುತ್ತಮೊಪ್ಪುವ ಮುಪ್ಪು ಚಪ್ಪರಿಪೀಯವಸ್ಥಾವಿಶೇಷಮೆ ತನ್ನ ಮೆಯ್ಸಿರಿಯಾದ ಸಂಸ್ಕೃತಿವಾರ್ಧಿಯೊಳ್ ಜೀವಿಪಾಸೆ ಧನಾಸೆಯೆಂಬಪಗಂಟು ಪಣ್ಣಿದ ಕಣ್ಣಿಯಿಂ ಜೀವನಂ ಗಡ ಕಟ್ಟಿ ನೆಟ್ಟನೆ ಕರ್ಮಮೞ್ದುಗುಮೊರ್ಮೆಯುಂ (ವರ್ಧಪು. ೧೨–೯೪). [< ಸಂ. ಅಪಗ್ರಂಥಿ ?]

**ಅಪಗತ** (ಗು). ೧. ದೂರ ಸರಿದ ; ಬಿಟ್ಟು ಹೋದ; ತೊಲಗಿದ : ಸ್ವಪರದ್ರವ್ಯಾದಿಗಳಿಂದಪಗತನಪ್ಪಂತೆ ಕಲ್ಲಿನಿಂಕಳಧೌತಂಸ್ವಪರದ್ರವ್ಯಾದಿಗಳಿಂದಪಗತನಕ್ಕುಂ ನಿಜಾತ್ಮನುಂ ನಿಜದಿಂದಂ (ಪರಮಾ. ೫೯–೬೪). ೨. ತೀರಿಹೋದ : ಅರಮನೆಯ ಗಜಬಜದ ಹದನಱಿದರಸನಪಗತನೆಂದು ಪಾಳಯದಿರುಳು ನಡುಗಿತು (ಕುವ್ಯಾದ್ರೋ. ೭–೫). [ಸಂ.]

**ಅಪಗತಕಪಟ** (ನಾ). ೧. ವಂಚನೆಯಿಲ್ಲದ ಸ್ಥಿತಿ : ಅಪಗತಕಪಟದೆ ನಟನದನುಪದೇಶಂಗೆಯ್ದು ಪರಸಿ ಪೋಗೆನೆ (ಪಂಪಭಾ. ೧೧–೧೩೧). ೨. ಮೋಸವನ್ನುಳಿದವನು ; ಕಪಟವಿಲ್ಲದವನು : ನಿರ್ಮಲ ಶುಕ್ಲಧ್ಯಾನನಿವಗಲ್ಲದೇಕಸ್ಥಾನಂ ಪೆಱರ್ಗುಂಟೆ ಬಗೆವೊಡಪಗತಕಪಟಾ (ಜಿನಾಲೆ. ೧೧). [ಅಪಗತ + ಕಪಟ]

**ಅಪಗತಗ್ಲಾನಿ** (ನಾ). ಶ್ರಮವು ಪರಿಹಾರವಾದ ಸ್ಥಿತಿ : ದ್ರುಪದಸುತೆಯುತ್ಸವವ ಮುನಿಜನದಪಗತಗ್ಲಾನಿಯನು ಪರಿಜನದುಪಚಿತಾನಂದವನು ಬಣ್ಣಿಸಲರಿದು ತನಗೆಂದ (ಕುವ್ಯಾಆ. ೧೨–೭೩). [ಅಪಗತ + ಗ್ಲಾನಿ]

**ಅಪಗತತಂದ್ರ** (ನಾ). ತೂಕಡಿಕೆಯಿಲ್ಲದವನು; ಆಲಸ್ಯವಿಲ್ಲದವನು ; ಜಾಗರೂಕ ; ಎಚ್ಚರವುಳ್ಳವನು : ಅಪರಾಜಿತಚರನಚ್ಯುತೇಂದ್ರನಪಗತತಂದ್ರಂ (ಶಾಂತಿಪು. ೫–೧) ; ಧರಣೀಧ್ವಜನೆಂಬಂ ಖೇಚರೇಂದ್ರನಪಗತತಂದ್ರಂ (ಚಂದ್ರಪು. ೬–೬). [ಅಪಗತ + ತಂದ್ರ]

**ಅಪಗತತ್ವ** (ನಾ). ದೂರ ಸರಿಯುವುದು; ಬಿಟ್ಟುಹೋಗುವುದು : ಭರ್ತೃಸೇವೆಯಿಂದಪಗತತ್ವವ ಪಡೆದೊಡಾಕೆ ಪಾಪಿನಿಯೆನಿಪಳಿದು ಲೋಕಸಮ್ಮತದಲಿ (ವೆಂಕಾರಾ. ೨–೧೦–೧೫). [ಅಪಗತ + –ತ್ವ]

**ಅಪಗತಮತಿ** (ನಾ). ೧. ಬುದ್ಧಿಯಿಲ್ಲದ ಸ್ಥಿತಿ ; ಮತಿಗೆಟ್ಟ ಅವಸ್ಥೆ: ತದೀಯ ಪಾದಪದ್ಮಂಗಳಂ ಕರಪಲ್ಲವಂಗಳಿನೊತ್ತುತ್ತುಂ ಅಪಗತಮತಿಯಿಂ (ಸುಕುಮಾ. ೩–೪೪ ವ). ೨. ಬುದ್ಧಿಯಿಲ್ಲದವನು ; ಬುದ್ಧಿ ಕೆಟ್ಟವನು. [ಅಪಗತ + ಮತಿ]

**ಅಪಗತಮೋಹ** (ನಾ). ೧. ಮೋಹವಿಲ್ಲದವನು ; ಭ್ರಾಂತಿ ಬಿಟ್ಟುಹೋದವನು : ಅಂತಪಗತಮೋಹನಾದ ರಾಮುಂಗೆ ದೇವರಿರ್ವರುಂ ತಮ್ಮ ದಿವ್ಯಸ್ವರೂಪಮುಂ ತೋಱಿ (ಪಂರಾಮಾ. ೧೬–೫೬ ವ). ೨. ಮೂರ್ಛೆ ತಿಳಿದವನು. [ಅಪಗತ + ಮೋಹ]

**ಅಪಗತರಜ** (ನಾ). ೧. ರಜೋಗುಣವಿಲ್ಲದವನು. ೨. ಧೂಳಿಲ್ಲದ್ದು: ೧, ೨ : ಆಗಳುದಯಿಸಿದಾ ಮಹಾತ್ಮನಪಗತರಜನೆಂಬುದಂ ಪೇೞ್ವಂತಿಳಾವಳಯಮುಪಗತರಜಮಾದುದು (ಚಂದ್ರಪು. ೧೨–೩೩ ವ). [ಅಪಗತ + ರಜ₂]

**ಅಪಗತರಾಗ** (ನಾ). ರಾಗವಿಲ್ಲದವನು ; ಮೋಹವುಳಿದವನು ; ಲೌಕಿಕವಾದ ವಸ್ತುಗಳಲ್ಲಿ ಆಸಕ್ತಿಯಿಲ್ಲದವನು : ಮಱಿಗಿದ ಮತಿಯದು ನಿನ್ನಿಂದಲ್ಲದೆ ಪಜ್ಜಳಿಸುಗುಮೆ ಬೇಗಮುಪಗತರಾಗಾ (ಚಂದ್ರಪು. ೭–೮). [ಅಪಗತ + ರಾಗ]

**ಅಪಗತವಿಗ್ರಹ** (ನಾ). ೧. ಶರೀರವಿಲ್ಲದವನು. ೨. ಯುದ್ಧದ ಗೋಜಿಲ್ಲದವನು ; ವಿವಾದವಿಲ್ಲದವನು : ಸಿದ್ಧಪದವೀ ಪ್ರಾಪ್ತನಂತಪಗತವಿಗ್ರಹನುಂ (ಚಂದ್ರಪು. ೨–೧೧ ವ). [ಅಪಗತ + ವಿಗ್ರಹ]

**ಅಪಗತಸುಖಿ** (ನಾ). ಸುಖವು ತಪ್ಪಿಹೋದವಳು; ಸುಖವಿಲ್ಲದವಳು : ಪುಂಡರೀಕ ದೇವನ ವೃತ್ತಾಂತದಿನಪೇತಕೌತುಕೆಯುಮಪಗತಸುಖಿಯುಂ . . . ಆಗಿ (ಕಾದಂಉ. ೫೫೭). [ಸಂ. ಅಪಗತಸುಖೀ (ಅಪಗತ + ಸುಖ + –)]

**ಅಪಗತಿ** (ನಾ). ೧. ದೂರ ಹೋಗುವುದು. ೨. ಕೀಳುದೆಸೆ; ದುರ್ದೆಶೆ ; ಕಷ್ಟದ ಸ್ಥಿತಿ. [ಸಂ.]

**ಅಪಗಮ** (ನಾ). ೧. ಹೊರಟು ಹೋಗುವುದು ; ಬಿಟ್ಟು ಹೋಗುವುದು. ೨. ಅಗಲಿಕೆ; ವಿರಹ. ೩. ಸಾವು. [ಸಂ.]

**ಅಪಗಮನ** (ನಾ). = ಅಪಗಮ. [ಸಂ]

**ಅಪಗಮಿತ** (ಗು). ೧. ದೂರ ಹೋದ ; ಬಿಟ್ಟು ಹೋದ. (ನಾ). ೨. ವ್ಯಯ ; ನ್ಯೂನತೆ : ಮಮತೆ ಜಾಱಿದುದೇನನೆಂಬೆನು ಕುಮತಿ ತಾನೆಂತಱಿವೆನೆಂತಪಗಮಿತವಾದುದು ಕರುಣೆಗಳ ದಾತಾರನೊಲವಿನಲಿ (ನಿಭಾಗ. ೩–೨–೪೭). [ಸಂ.]

**ಅಪಗಮಿಸು** (ಕ್ರಿ). ಹಿಂದಕ್ಕೆ ಸರಿ; ಬಿಟ್ಟುಹೋಗು ; ದೂರ ನಡೆ: ವೀರಸಮರಕ್ಷೋಣಿಯಿಂದಪಗಮಿಸುವವನಿಂತೆಂದನುಱೆ ಮುಳಿದು (ನಿಭಾಗ. ೧೦–೮೧–೩೩). [ಅಪಗಮ + –ಇಸು₃]

**ಅಪಘನ** (ನಾ). ೧. ಶರೀರ ; ಮೈ : ಉಪಸರ್ಗಂ ಪೆಱಪಡುವಿನಮುಪಘನಮಾಹಾರಮೆಂಬಿವಂ ತೊಱೆದು (ಪಂರಾಮಾ. ೮–೫೩). ೨. ಅವಯವ; ಅಂಗಾಂಗ ; ಕೈಕಾಲು ಮುಂತಾದ ದೇಹಭಾಗ : ರಿಪುನಿರ್ಮೂಲ ಸರ್ವಾಪಘನ ಭಸಿತೋದ್ಧೂಳ ಶಿವಲೀಲ (ಬಸಪು. ೩೮–೬೮). ೩. ಮೋಡಗಳಿಲ್ಲದ್ದು : ಅಪಘನಮಾಗಿಱ್ದ ರೋದೋಂತರಾಳಂ ಪೊಗೆಯಿಂದಂ ಮೇಘಬೃಂದಾನ್ವಿತಮೆನಿಸುವಿನಂ (ಎಕ. V, ಬೇಲೂರು. ೫೮–೧೧ ; 1117) ; ನಭಮುಪಘನಮಾಯ್ತು ತನುವಿನಂತೆ (ಮಲ್ಲಿಪು. ೧೨–೩). [ಸಂ.]

**ಅಪಘನಕಿರಣ** (ನಾ). ಶರೀರದ ಪ್ರಭೆ : ನಭೋಮಣಿ ಪೂರ್ವಾಚಳಚೂಡಾಮಣಿಯೆನಿಸಿದನೆನೆ ಪೊದಱ್ದುದಪಘನಕಿರಣಂ (ಮಲ್ಲಿಪು. ೧೪–೩). [ಅಪಘನ + ಕಿರಣ]

**ಅಪಘಾತ** (ನಾ). ಅನಿರೀಕ್ಷಿತವಾಗಿ ತಗುಲಿದ ಪೆಟ್ಟು ; ಅಪಾಯ ; ಆಕಸ್ಮಿಕವಾದ ಕೆಡುಕು,—ಸಾವು,—ನೋವು : ಅಪಘಾತವೆಂದಿಗೆ ಬಂದೆರಗುವುದೆನುವುದನು ಬಲ್ಲವರಾರು ಮತ್ತೆ (ಇಂಚಾಪ. ೨೩೪–೬೦) ; ಅಲ್ಲಿ ನಾವು ನೋಡುತ್ತಿದ್ದಂತೆಯೇ ಒಂದು ಅಪಘಾತ ನಡೆದುಹೋಯಿತು (ರೂಢಿ). [ಸಂ.]

**ಅಪಘಾತಿ** (ನಾ). ಅಪಾಯ ; ಭಯಂಕರವಾದ ಸಾವು ನೋವುಗಳ ಸಂದರ್ಭ ; ಪೆಟ್ಟು : ಗೆದ್ದನೈ ನಿನ್ನಾತನೊಸಗೆಯ ಬಿದ್ದಿನರಲ್ಲೈ ನಾವು ಪರರಿಗೆ ಬಿದ್ದುದೊಂದಪ [ಪಾಠಾಂ. ದುವಿ] ಘಾತಿಯೆಂದನು ಸಂಜಯನು ನಗುತ (ಕುವ್ಯಾಕ. ೨೪–೫೭). [ಸಂ.]

**ಅಪಚನ** (ನಾ). ಜೀರ್ಣಕ್ಕೆ ಬಾರದಿರುವುದು ; ಅಜೀರ್ಣ : "... ಅಪಚನದಿಂದ ಉಂಟಾಗುವ ನಗೆಯನ್ನು ಪೂರ್ವಜನ್ಮದ ಸ್ಮರಣೆಯೆಂದರೆ ! " ಎಂದು ಶೀನು ಮಾತೆತ್ತಿದ (ಸಮುಜೀ. ೫೪೧). [ಸಂ.]

**ಅಪಚಯ** (ನಾ). ೧. ಕಡಮೆಯಾಗುವುದು ; ಕುಂದುವುದು ; ಹ್ರಾಸ : ಅದು ಶರೀರ ಬಳಾಯುರ್ದೇಹ ಪ್ರಮಾಣೋಪಚಯಾಪಚಯ ಹೇತುತ್ವದಿಂದಮುತ್ಸರ್ಪಿಣಿಯವಸರ್ಪಿಣಿ ನಾಮಮಂ ಪಡೆದುದು (ಆದಿಪು. ೬–೪೮ ವ) ; ವೃದ್ಧಿಹ್ರಾಸೌ ಉಪಚಯಾಪಚಯಂಗಳಪ್ಪುವು (ತತ್ತ್ವಪ್ರ. ೧೬೯). ೨. ಸಂಗ್ರಹಿಸುವುದು ; ಶೇಖರಣೆ. 'ಪು ಷ್ಪಾ ಪ ಚ ಯ ' ಪರಾ. [ಸಂ.]

**ಅಪಚರಿಸು** (ಕ್ರಿ). ಅಪಚಾರ ಮಾಡು ; ತಿರಸ್ಕರಿಸು : ಅಪಚರಿಸಿ ಪಾಪಣ್ಣನನ್ನೂ ವೇದಿಕೆ ಕೆಳಗೆ ಕೂಡಿಸಿದರು (ವೈದ್ಯವಿ. ೧೦೦) ; ಏಕಾಂಗಿಯಾಗಿ, ಪ್ರಪಂಚದಲ್ಲಿ ಕ್ರೂರರೀತಿಯಿಂದ ಅಪಚರಿಸಲ್ಪಟ್ಟ ಆ ಅಬಲೆ ಆ ರೀತಿ ಕಂಪಿಸುವುದನ್ನು ರಂಗಣ್ಣ ಸಹಿಸದಾದ (ದುಂಬಿಕ. ೧೧೬).
[ಅಪಚಾರ + –ಇಸು₃]

**ಅಪಚಾರ** (ನಾ). ೧. ವಿರುದ್ಧವಾದ ಆಚರಣೆ ; ತಪ್ಪು ನಡವಳಿಕೆ ; ಅಗೌರವ : ಕಂಸಂ ಮಾಟ್ಪೊಂದಪಚಾರದಿಂದಿಟಿದುದಿಂದೀ ದೇವಕೀ ಗರ್ಭಂ (ಜಗವಿ. ೨–೬೧) ; ಉಪಚಾರವೆಸಗುವ ನೆಪದೊಳು ದಿನದಿನ ನಾ ಗೈಯುವಪಚಾರಗಳನು ಕ್ಷಮಿಸೆಂದು ಬೇಡುವೆ (ಇಂಚಾಪ. ೧೪೩–೧). ೨. ಅಗಲಿಕೆ ; ಬಿಟ್ಟು ಹೋಗುವುದು ; ಸಾವು. ೩. ಅಭಾವ ; ಇಲ್ಲದಿರುವುದು. ೪. ನ್ಯೂನತೆ ; ದೋಷ. [ಸಂ.]

**ಅಪಚಿ₁** (ನಾ). ಒಬ್ಬನ ಹೆಸರು : ನಿರೂಪದಿಂದ ನಂಬಿಗಳು ಅಪಚಿ ಅನತಪಗಳಿಗೆ (ಸೌಇಎ. 1934 ; ಪುಂಗನೂ. ೧೫೭–೪ ; 1419) ; ಶ್ರೀ ನಾರಸಿಹ್ವ ಕಾಣಿಯಾಚಿಕಾಜಿ ನಂಬಿಗಳ ವೊಪ್ಪಗಳು ಅ ಪ ಚಿ ಯ ಬರಹ (ಎಕ. X, ಮುಳಬಾ. ೧೭೨–೨೨ ; 1496). [?]

**ಅಪಚಿ₂** (ನಾ). ಕುತ್ತಿಗೆಯ ಗ್ರಂಥಿಗಳು ದೊಡ್ಡವಾಗಿ ಊದಿಕೊಂಡು ತೊಂದರೆ ಕೊಡುವ ಒಂದು ಬಗೆಯ ರೋಗ : ಬಜೆ, ಅಣಿಲೆಕಾಯಿ, ಅರಗು, ಕಟುಕರೋಹಿಣಿ, ಚಂದನ ಇವಿಷ್ಟನೂ ಸಮಾಂಶವಾಗಿ ಚೂರ್ಣಿಸಿ ಹಾಕಿ ತೈಲವ ಕಾಸಿ ಆ ತೈಲವಂ ಪಾನವಮಾಡಿಸಲು ಅಪಚಿ ಎಂಬ ಗ್ರಂಥಿ ಪರಿಹರವಹುದು (ವೈದ್ಯಸಾ. II, ೧೬೯). [ಸಂ. ಅಪಚೀ]

**ಅಪಚಿತ** (ಗು). ೧. ಕುಗ್ಗಿದ ; ಕಡಮೆಯಾದ ; ಕ್ಷಯಿಸಿದ. ೨. ಪೂಜಿಸಲ್ಪಟ್ಟ ; ಗೌರವಕ್ಕೆ ಪಾತ್ರವಾದ. [ಸಂ.]

**ಅಪಚಿತಿ** (ನಾ). ೧. ಕ್ಷಯ ; ಹಾನಿ ; ಕೇಡು. ೨. ವೆಚ್ಚ ; ಖರ್ಚು. ೩. ಪ್ರಾಯಶ್ಚಿತ್ತ : ಸತತ ಶಿಷ್ಯರೊಳ್ಪೆದೆ ಸಂದೇಹಗೊಳ್ಳದಪಚಿತಿಯ ಕೈಕೊಂಡಾವ ಕಾಮ್ಯಂಗಳಂ ಬೆಸಗೊಂಡರತಿಶಯದಿ (ಪರಶು. ೧೯–೫). ೪. ಶಿಕ್ಷೆ ; ದಂಡನೆ. ೫. ಪೂಜೆ ; ನಮಸ್ಕಾರ ; ಮನ್ನಣೆ : ಸರ್ವರಿಂದೀಪರಿಯು ಜಗದಂಬೆಯಪಚಿತಿಯ ನಿರ್ವಿಘ್ನಸಾರದಿಂ ಕೊಳುತಿರ್ಪಳ್ (ಪರಶು. ೧೯–೧೪). [ಸಂ.]

**ಅಪಚಿತಿಗೈ** (ಕ್ರಿ). ನಮಸ್ಕರಿಸು ; ಪೂಜಿಸು ; ಗೌರವಿಸು : ಬರವ ನೀಕ್ಷಿಸುತಾಗ ನೆರೆದ ವಿದ್ವಜ್ಜನರು ಹರುಷರಸಮಂಕುರಿಸಿ ಥರಥರದೊಳಿದಿರೆದ್ದು ಭರದೊಳಪಚಿತಿಗೈದರರ್ಘ್ಯಪಾದ್ಯಾಸನಗಳಿತ್ತು (ವೆ ಂ ಕಾ ರಾ. ೧–೨–೨). [ಅಪಚಿತಿ₂ + ಗೈ (< ಕೆಯ್ಯ್₁)]

**ಅಪಛಂದಸ್ಸು** (ನಾ). [ಕಾವ್ಯಮಿ] ಛಂದಸ್ಸು ಕೆಟ್ಟಿರುವುದು ; ಛಂದೋದೋಷ : ಅನರ್ಥಕ ಶ್ರುತಿಕಠೋರ . . . ಅಪಛಂದಸ್ಸು . . . ಎಂಬ ಎಂಟು ವಾಕ್ಯದೋಷವಿಲ್ಲದೆ (ವಿವೇಕ. ೨೨೬).
[ಸಂ. ಅಪಛಂದಸ್]

**ಅಪಜಯ** (ನಾ). ಸೋಲು ; ಭಂಗ : ಧುರದಲಪಜಯವಾಯ್ತಲಾ (ಕೌಶಿರಾ. ೨೩–೨). [ಸಂ.]

**ಅಪಜಯಧಾಮ** (ನಾ). ಭಂಗಕ್ಕೆ ನೆಲೆ ; ಸೋಲಿಗೆ ಆವಾಸಸ್ಥಾನ : ಈ ಮನುಷ್ಯಶರೀರವಪಜಯಧಾಮವಲ್ಲಾ (ಕುವ್ಯಾಅ. ೧೦–೨೨).
[ಅಪಜಯ + ಧಾಮ]

**ಅಪಜಯಪಡಿಸು** (ಕ್ರಿ). ಸೋಲಿಸು ; ಭಂಗಿಸು.
[ಅಪಜಯ + ಪಡು₁ + –ಇಸು₃]

**ಅಪಜಯಹೊಂದು** (ಕ್ರಿ). ಸೋಲು ; ಭಂಗಪಡು.
[ಅಪಜಯ + ಹೊಂದು]

**ಅಪಜಯಾವಹ** (ಗು). ಸೋಲನ್ನು ತರುವ ; ಭಂಗವನ್ನುಂಟುಮಾಡುವ : ಇದಜಿ ಫಲ ನಿ ಮ ಗ ಪ ಜ ಯಾ ವ ಹ ವೆ ಂ ದ ನಾ ಮುನಿಪ (ಕುವ್ಯಾಸ. ೧೧–೨೯). [ಅಪಜಯ + ಆವಹ]

**ಅಪಜಿಹ್ಮ** (ನಾ) ೧. ವಕ್ರವಿಲ್ಲದಿರುವಿಕೆ ; ಮೋಸವಿಲ್ಲದಿರುವಿಕೆ : ತ್ಯಾಗಮಕಿಂಚನತ್ವಮಪಜಿಹ್ಮಂ ಬ್ರ ಹ್ಮ ಚ ರ್ಯ ಂ ದಲೆಂಬತುಳಂಗಳ್ ಕುಶಲಂಗಳಿಂತು ದಶಧರ್ಮಂಗಳ್ (ಚಂದ್ರಪು. ೧೧–೭). ೨. ಮೋಸವಿಲ್ಲದವನು ; ನೇರವಾದ ನಡೆವಳಿಕೆಯುಳ್ಳವನು. [ಸಂ.]

**ಅಪಜ್ಞಾನ** (ನಾ). ಮುಚ್ಚುಮರೆ ; ಅಪಲಾಪ ; ಕಂಡು ಕೇಳಿದುದನ್ನು ಇಲ್ಲವೆನ್ನುವುದು ; ಮುಚ್ಚಿಡುವುದು : "ಅಪಹ್ನವಃ, ಅಪಲಾಪಃ, ಅಪಜ್ಞಾನಂ [ಪಾಠಾಂ. ಅಪಾತ್ಯಯ], ಅಪವ್ಯಯಃ – ಈ ೪ ಮಱಸುಹ" (ಹಲಾಯು. ೧೨೧–೪೫) ; "ಅಪಹ್ನವಮದಪಜ್ಞಾನಮುಪಲಾಪಮಾ ಅಪವ್ಯಯಮೆನಲು ಮಱಹಕ್ಕುಂ" (ಮಂಗರಾ. ೧೩೧–೧೯). [ಸಂ.]

**ಅಪಟೀ** (ನಾ). ತೆರೆ ; ಮರೆ ; ಪರದೆ : "ಅಪಟೀ, ಕಾಂಡಪಟಃ, ಪ್ರತಿಸೀರಾ, ಯವನಿಕಾ, ತಿರಸ್ಕರಿಣೀ – ಈ ೫ ತೆರೆ" (ಹಲಾಯು. ೫೨–೧೫೪).
[ಸಂ. ಅಪಟೀ]

**ಅಪಟು** (ಗು). ೧. ಅಸಮರ್ಥ ; ಚಟುವಟಿಕೆಯಿಲ್ಲದ ; ಕೌಶಲವಿಲ್ಲದ. (ನಾ). ೨. ರೋಗಿ. [ಸಂ.]

**ಅಪತಿಕ** (ಗು). ಒಡೆಯನಿಲ್ಲದ ; ಅನಾಥನಾದ. [ಸಂ.]

**ಅಪತೃಷ್ಣೆ** (ನಾ). ದುರಾಶೆ ; ಕೆಟ್ಟ ಆಸೆ : ಕೊಲ್ಲದ ಪರನಾರಿಗಾಟಸದ ಕಳ್ಳದಸತ್ಯದೊಳೊಂದದಾಗಳುಂ ಕುದಿದಪತೃಷ್ಣೆಯಂ ಕುಸಿದು ಮಾಣಿಸುವಯ್ದುಮಣುವ್ರತಂಗಳಂ (ಆದಿಪು. ೬–೭). [ಸಂ. ಅಪತೃಷ್ಣಾ]

**ಅಪತ್ನೀಕ** (ನಾ). ೧. ಹೆಂಡತಿಯಿಲ್ಲದವನು : ಈತನು ಅಪತ್ನೀಕ (ಆರ್ಯಧ. ೫೨). ೨. ಹೆಂಡತಿ ಜೊತೆಗೆ ಇಲ್ಲದವನು. ಸಪತ್ನೀಕ ಹೋ. [ಸಂ.]

**ಅಪತ್ಯ** (ನಾ). ಸಂತಾನ ; ಮಗ ; ಮಗಳು : ಜಾಬಾಲಿಗಳೆಂಬತ್ಯುತ್ತಮಯತಿಪತಿಗಳಪತ್ಯಂ ಹಾರೀತನಾಮಂ (ಕಾದಂಪೂ. ೧೯೯). [ಸಂ.]

**ಅಪತ್ಯಪ್ರೇಮ** (ನಾ). ಮಕ್ಕಳ ವಿಷಯದಲ್ಲಿ ಪ್ರೇಮ ; ಪುತ್ರವಾತ್ಸಲ್ಯ : ಅದೇ ಅವನನ್ನು ಅವರು ಅಪತ್ಯಪ್ರೇಮದಿಂದ ಕಾಣಲು ಕಾರಣವಾಗಿತ್ತು (ಹೊಸಕ್ಷಿ. ೩೭). [ಅಪತ್ಯ + ಪ್ರೇಮ]

**ಅಪತ್ಯಾಂತರಭಗಿನಿ** (ನಾ). ಮಕ್ಕಳಿಲ್ಲದ ಸೋದರಿ : ಪರಮಧರ್ಮವನಾವ ಬಯಸುವನವನ ಭವನದಲಿ ನಿರುತ ವೃದ್ಧಜ್ಞಾನಿ ವಂಶೋತ್ತರ ದರಿದ್ರಪ್ರಿಯನಪತ್ಯಾಂತರಭಗಿನಿಯೀ ನಾಲ್ವರಿರಬೇಕೆಂದನಾ ವಿ ದು ರ (ಕುವ್ಯಾಉ. ೩–೩೪).
[ಸಂ. ಅಪತ್ಯಾಂತರಭಗಿನೀ (ಅಪತ್ಯ + ಅಂತರ + ಭಗಿನೀ)]

**ಅಪತ್ಯೋದಯ** (ನಾ). ಸಂತಾನಲಾಭ ; ಪುತ್ರೋತ್ಪತ್ತಿ: ಅಪತ್ಯೋದಯಮುಹೂರ್ತ ಫಲಪ್ರಭಾವಭಾವನಾಜಾತ ವಿಸ್ಮಯಾಂದೋಳಿತ ಶಿರಸ್ಸರೋರುಹಂ (ಚಂದ್ರಪು. ೩–೯೬ ವ). [ಅಪತ್ಯ + ಉದಯ]

**ಅಪತ್ರಪ** (ನಾ). ನಾಚಿಕೆಗೆಟ್ಟವನು ; ಲಜ್ಜೆಯಿಲ್ಲದವನು. [ಸಂ.]

**ಅಪತ್ರಪಿಷ್ಣು** (ನಾ). ನಾಚಿಕೆಯ ಸ್ವಭಾವದವನು ; ಲಜ್ಜಾಶೀಲ. [ಸಂ.]

**ಅಪತ್ರಪೆ** (ನಾ). ೧. ನಾಚಿಕೆ; ಲಜ್ಜೆ ; ಸಂಕೋಚ. ೨. ಲಜ್ಜೆಗೆಟ್ಟ ಹೆಂಗಸು. [ಸಂ. ಅಪತ್ರಪಾ]

**ಅಪಥ** (ನಾ). ೧. ದಾರಿಯಿಲ್ಲದ್ದು. ೨. ದಾರಿಯಲ್ಲದ್ದು; ಅಮಾರ್ಗ; ತಪ್ಪುದಾರಿ. ೩. ದಾರಿಯಿಲ್ಲದ ಸ್ಥಿತಿ ; ಹಾದಿಗಾಣದ ಸನ್ನಿವೇಶ ; ದಾರಿಯೇ ಇಲ್ಲದ ಸ್ಥಳ. ೪. ಪಾಷಂಡಿತನ. ೫. ಯೋನಿ. [ಸಂ.]

**ಅಪಥ್ಯ** (ನಾ). ೧. ಹಿತವಲ್ಲದ್ದು ; ಒಳ್ಳೆಯದಲ್ಲದ್ದು : ಬಿಡು ಕನ್ಯಾರತ್ನಮನೀಗಡೆ ಚಕ್ರಿಪದದ್ವಯಕ್ಕೆ ತಡೆದಿರದೆಜಗೇಪಡೆಮಾತೊ ಬಂದು ಕಾಣ್ ಕಂಡೊಡೆ ಪಥ್ಯಮಪಥ್ಯಮಿಾ ಕನಿಷ್ಠಾಚರಣಂ (ಶಾಂತಿಪು. ೩–೮೯). ೨. ಪಥ್ಯ ಮಾಡದಿರುವುದು ; ಅಹಿತವಾದ ಆಹಾರ ವಿಹಾರ: ಅಪಥ್ಯ ಮಾಡಿ ರೋಗ ಹೆಚ್ಚಿಸಿಕೊಂಡ (ರೂಢಿ). [ಸಂ.]

**ಅಪದಗಾಮಿ** (ಗು). ೧. ಕಾಲಿಲ್ಲದೆ ನಡೆಯುವ. (ನಾ). ೨. ಹಾವು. [ಸಂ. ಅಪದಗಾಮಿನ್]

**ಅಪದಶೆ** (ನಾ). ಕೀಳುದೆಸೆ; ದುರ್ದಶೆ. [ಸಂ. ಅಪದಶಾ]

**ಅಪದಸ್ಥ** (ನಾ). ಅಧಿಕಾರದಲ್ಲಿಲ್ಲದವನು; ಅಧಿಕಾರ (ಪದವಿ) ತಪ್ಪಿದವನು ; ಸ್ಥಾನಚ್ಯುತ : ಜನನಾಥಂ ಪಿತೃ ಸಾಯೆ ನಮ್ಮನಪದಸ್ಥರ್ ಮಾಡಿ ಬೋಡಾದುದಂ ಜನನೀಯಗ್ರಜನಲ್ಲಿಗೆಯ್ದಿ (ಸುಕುಮಾ. ೫–೨೫). [ಸಂ.]

**ಅಪದಾಂತರ** (ನಾ). ನೆರೆ ಹೊರೆ; ಒಂದು ಹೆಜ್ಜೆಯ ದೂರವೂ ಇಲ್ಲದಷ್ಟು ಸಮೀಪ : "ಆಸನ್ನಮಪದಾಂತರಂ ಸನ್ನಿಕೃಷ್ಟಂ ಸಮೀಪಮಕ್ಕುಂ" (ಮಂಗರಾ. ೧೨೬–೩). [ಸಂ.]

**ಅಪದಾನ** (ನಾ). ೧. ಮಹಾಕಾರ್ಯ ; ಉದಾತ್ತವಾದ ಕೆಲಸ; ಕೊಂಡಾಟಕ್ಕೆ ಯೋಗ್ಯವಾದ ಕಾರ್ಯ : ಆ ನಾಗಪಾಶಮಂ ಜಗತೀನಾಥಂ ಪೊಸೆಯೆ ಕಟ್ಟುಗಳ್ ಬಿಚ್ಚಿರೆ ಪೋಲ್ತೇನೆಸೆದುದೊ ನೃಪಸುತನಪದಾನದ ಶಾಸನಕೆ ಲೆಕ್ಕಮಿಟ್ಟಕ್ಕರಮಂ (ಶಾಂತಿಪು. ೮–೫೪). ೨. ಹಿಂದಿನ ಮತ್ತು ಮುಂದಿನ ಜನ್ಮಗಳ ವೃತ್ತಾಂತ ಕಥೆ. [ಸಂ.]

**ಅಪದೂರು** 'ಅಪದೂಱು' ನೋ.

**ಅಪದೂಱು,** ಅಪದೂರು (ನಾ). ಸುಳ್ಳು ದೂರು; ಅಪವಾದ : ದೂರ ತಪ್ಪಿಸಿಕೊಂಡು ಬಱಿಯಪದೂಱ ಹೊಱಿಸಿದೆ ಜೀವನಲಿಯಿದನಾರು ಮೆಚ್ಚುವರಕಟ ರಕ್ಷಿಸು ನಮ್ಮನನವರತ (ಹಭಸಾ. ೯೬). **ಅಪದೂರು** : ಎಷ್ಟು ಅಪದೂರಿಗೆ ಗುರಿಯಾದ (ದೌಲತ್. ೯೬). [ಅಪ್ಪ$_0$ + ದೂಱು$_2$]

**ಅಪದೃಕ್ಸಾರ** (ನಾ). ೧. ಕಣ್ಣಿನ ಶಕ್ತಿಯನ್ನು ಹೋಗಲಾಡಿಸ ತಕ್ಕುದು ; ದೃಷ್ಟಿಶಕ್ತಿಯನ್ನು ಹಾಳುಮಾಡುವಂಥದು : ಇದು ಕಾಮನ ಕಾರಲಗೆನಿಸಿದುದಪದೃಕ್ಸಾರಮಂಧಕಾರಮಪಾರಂ (ಚಂದ್ರಪು. ೮–೨೦). ೨. ದೃಷ್ಟಿಶಕ್ತಿ ಕಡಮೆಯಾದವನು ; ಕಣ್ಣಿನ ನೋಟ ಕೆಟ್ಟವನು. [ಸಂ.]

**ಅಪದೆಸೆ,** ಅವದೆಶೆ (ನಾ). = ಅಪದಶೆ : ಮೌನವೇತಕೆ ಮರುಳುತನ ಬೇಡಾನು ನಿನ್ನಪದೆಸೆಯ ಬಯಸುವನಲ್ಲ (ಕುವ್ಯಾ ಉ. ೧೦–೧೩) ; ತನ್ನ ತಂದೆಯ ಅಪದೆಸೆಗೆ ಏನು ಕಾರಣವಿರಬಹುದೆಂಬ ಯೋಚನೆ ಆತನಿಗೆ ಹೆಚ್ಚಾಯಿತು (ರಾಜಸೂ. ೭). **ಅವದೆಶೆ** : ಆ ಅವದೆಶೆಗಳೆಲ್ಲ ಯಾತಕ್ಕಾಗಿ ಬಂದುವು ? ಯಾರಿಂದ ಬಂದವು ? (ಬೆಟ್ಟಹೊ. ೪೬). [< ಸಂ. ಅಪದಶಾ]

**ಅಪದೇಶ** (ನಾ). ೧. ನಿಮಿತ್ತ ; ನೆಪ; ವ್ಯಾಜ. ೨. ಗುರಿ ; ಲಕ್ಷ್ಯ. ೩. ಒಳ್ಳೆಯ ಹೆಸರು ; ಕೀರ್ತಿ. ೪. ಮೋಸ. ೫. ಒಳ್ಳೆಯದಲ್ಲದ ಸ್ಥಳ ; ಸಲ್ಲದ ಜಾಗ. [ಸಂ.]

**ಅಪದೋಷ** (ನಾ). ತಪ್ಪಿಲ್ಲದವನು ; ದೋಷರಹಿತ : ಅಪದೋಷನ ನೇಳಿಸಿ ಕೊಂದ ಪಾಪಿಯಂ ಪಲವು ತೆಱದ ಕೊಲೆಗಳಿನೀ ನಿಷ್ಕೃಪನಂ ಕೊಲ್ (ಸುಕುಮಾ. ೬–೫೩). [ಸಂ.]

**ಅಪಧಮನಿ** (ನಾ). ಹೃದಯದ ಕಡೆಯಿಂದ ದೇಹದ ಇತರ ಭಾಗಕ್ಕೆ ರಕ್ತವನ್ನು ಸಾಗಿಸುವ ರಕ್ತನಾಳ. 'ಅಭಿಧಮನಿ' ಪರಾ. [ಸಂ.]

**ಅಪಧೈರ್ಯ** (ನಾ). ಅಂಜಿಕೆ ; ಅಂಜುಬುರುಕತನ ; ಅಧೈರ್ಯ : ಪೆಣ್ಗಳೊಳ್ ಪ್ರಕಟಿಸುವಳಪಧೈರ್ಯಮಂ ! ಆ ಅಣುಗಿ ಬೆಪ್ಪಾಡಿದುದ ನೆಲ್ಲಮಂ ನೀನುಮೊಪ್ಪಿದೆಯಲಾ (ಶ್ರೀರಾಮಾ. ೬೫೪–೩೩೪). [ಸಂ.]

**ಅಪಧ್ಯಾನ** (ನಾ). ೧. [ಜೈನ] ದುಷ್ಟಚಿಂತನೆ; ಇತರರಿಗೆ ಹಾನಿಯನ್ನು ಬಯಸುವುದು : ಜಯ ಪರಾಜಯವಧಬಂಧಾಂಗಚ್ಛೇದ ಸರ್ವಸ್ವಹರಣಾದಿಗಳ್ ಪೆಱಂಗೆಂತಕ್ಕುಮೆಂದು ಮನದೊಳ್ ಬಗೆವುದು ಅಪಧ್ಯಾನಂ (ತತ್ತ್ವಪ್ರ. ೨೭೬) ; ಗುರುಗಳೊಳ್ ಸಮಾತ್ಸರ್ಯಮು ಪಧ್ಯಾನಮಹರ್ಷಮವಿನಯಂ ಜ್ಞಾನದೃಗಾವರಣದಾಸ್ರವಕ್ಕೆ ನಿಮಿತ್ತಂ (ಸುಕುಮಾ. ೮–೧೬). ೨. [ಜೈನ] ಅನ್ಯಧರ್ಮದ ಕಾವ್ಯಗಳನ್ನು ಮನಸ್ಸಿನಲ್ಲಿ ಚಿಂತಿಸುವುದು : ಪ್ರಯೋಜನಮಿಲ್ಲದೆ ಪಾಪಕ್ಕೆ ಕಾರಣ ಮಪ್ಪ ಪರಸಮಯದ . . . ಕಾವ್ಯಂಗಳಂ ಮನದಿಂ ಚಿಂತಿಸುವುದುಮಪಧ್ಯಾನಮೆಂಬ ಮೂಱನೆಯನರ್ಥದಂಡಮಕ್ಕುಂ (ಶ್ರಾವಕಾ. ೧೩೦–೨೩). 'ಅರ್ಥದಂಡ' ಪರಾ. [ಸಂ.]

**ಅಪಧ್ವಂಸ** (ನಾ). ೧. ಕೀಳಾಗುವುದು ; ಪತಿತನಾಗುವುದು ; ವರ್ಣಸಂಕರ. ೨. ಪತಿತ ; ಜಾತಿಗೆಟ್ಟವನು ; ಸಂಕರಜಾತಿಯವನು ; (ಬೈಗುಳ) ಹಾಳಾದವನು : ಇವನೆಷ್ಟು ಗರ್ವದಿಂದ ಮಾತಾಡುತ್ತಾನೆ ! ಎಲಾ ಅಪಧ್ವಂಸ ! (ಭಾಸನಾ. ೩೪–೨೬). [ಸಂ.]

**ಅಪಧ್ವಂಸಿ** (ನಾ). ೧. ನಾಶಮಾಡುವವನು. ೨. ಜಾತಿಸಂಕರವನ್ನುಂಟುಮಾಡುವವನು ; ಕುಲಗೆಡಿಸುವವನು. [ಸಂ. ಅಪಧ್ವಂಸಿನ್]

**ಅಪಧ್ವಸ್ತ** (ಗು). ೧. ತಿರಸ್ಕಾರಕ್ಕೂ ನಿಂದೆಗೂ ಗುರಿಯಾದ ; ಬಹಿಷ್ಕಾರ ಹೊಂದಿದ. ೨. ಚೂರ್ಣಿಸಿದ ; ಪುಡಿಮಾಡಿದ. [ಸಂ.]

**ಅಪನಂಬಿಕೆ,** ಅಪನಂಬಿಗೆ, ಅಪನಂಬುಗೆ (ನಾ). ನಂಬಿಕೆಯಿಲ್ಲದಿರುವುದು ; ಅವಿಶ್ವಾಸ : ನೀನು ನನ್ನ ಪರಾಕ್ರಮದಲ್ಲಿ ಅಪನಂಬಿಕೆ ಪಡುವೆಯೇನು ? (ಶ್ರೀರಾಯ. ೧೨೨). **ಅಪನಂಬಿಗೆ** (ಕ). **ಅಪನಂಬುಗೆ** (ಕ). [ಅಪ್ಪ$_0$ + ನಂಬಿಕೆ]

**ಅಪನಯನ** (ನಾ). ೧. ದೂರಕ್ಕೆ ಒಯ್ಯುವುದು. ೨. ಹೊರದೂಡುವುದು : ಆತನ ಕಾಲದೊಳ್ ಮಕ್ಕಳ್ ಪುಟ್ಟೆ ಗರ್ಭಮಲನಿರಾಕರಣಮುಂ ಮೂತ್ರಪುರೀಷ ದೋಷಾಪನಯನಮುಮಾದುದು (ಚಾವುಂಪು. ೧೦). [ಸಂ.]

**ಅಪನಿ** 'ಅಪಿನಿ' ನೋ.

**ಅಪನಿಂದೆ** (ನಾ). ಅನ್ಯಾಯವಾದ ಬೈಗುಳು ; ಅಪವಾದ : ಇಂತಹ ಅಪನಿಂದೆಯು ನನಗೆ ಬಂದಿರುವುದರಿಂದ ನನ್ನ ಮನಸ್ಸು ಬಹಳ ತಲ್ಲಣಿಸುತ್ತಿದೆ (ರಾವಿಜ. ೩).

**ಅಪನಿಂದೆ ಹೊರಿಸು** = ಅನ್ಯಾಯವಾಗಿ ನಿಂದೆಗೆ ಗುರಿಮಾಡು : "ನಿಕಾರ, ವಿಪ್ರಕಾರ = ಅಪನಿಂದೆಯನು ಹೊರಿಸಿ ಅಪಕಾರಮಾಡುವಿಕೆ" (ಸಿದ್ಧಾಂತಿ). 'ಅವನಿಂದೆ' ಪರಾ. [ಸಂ. ಅಪನಿಂದಾ]

**ಅಪನಿರೂಪಣ** (ನಾ). ತಪ್ಪು ನಿರೂಪಣೆ. [ಸಂ.]

**ಅಪನೀತ** (ಗು). ತೆಗೆದುಹಾಕಲ್ಪಟ್ಟ; ತೆಗೆದುಹಾಕಿದ; ಹೋಗಲಾಡಿಸಿದ: ಚಂದ್ರಾಪೀಡದೇವಂ ತದಾಶ್ರಮಮನೆಯ್ದಿವಂದು ಕಿಱಿದಾನುಂ ದೂರದೊಳ್ ನಿವೇಶಿತ ತುರಂಗಸೈನ್ಯನಪನೀತ ಸಮಾಯೋಗನಾಗಿ (ಕಾದಂಉ. ೫೪೧). [ಸಂ.]

**ಅಪನೋದ** (ನಾ). ಹೋಗಲಾಡಿಸುವುದು; ನಿವಾರಣೆ: ಪ್ರಿಯಮಧುರಂಗಳುಂ ಶೋಕಾಪನೋದನಿಪುಣಂಗಳುಂ . . . ಅಪ್ಪ ವಚನನಿಚಯಂಗಳಿಂ (ಕಾದಂಪೂ. ೩೬೨). [ಸಂ.]

**ಅಪನೋದನ** (ನಾ). = ಅಪನೋದ: ಆ ಮಂತ್ರಿಮುಖ್ಯಂ ತದವಸ್ಥನಾಗಿಯುಂ ಸುಹೃದ್ದುಃಖಾಪನೋದನಾರ್ಥಂ ಸ್ವಸ್ಥನಂದದಿಂ ನರೇಂದ್ರನನಿಂತೆಂದಂ (ಕಾದಂಉ. ೬೪೫). [ಸಂ.]

**ಅಪನೋದಿತ** (ಗು). ಹೋಗಲಾಡಿಸಲ್ಪಟ್ಟ; ನಿವಾರಿಸಿದ: ಸ್ವೇದಾಪನೋದಿತ ಪಟಚ್ಚರ ಪರಿವೀಜ್ಯಮಾನೆ ಮನೆಯ ಮುಂದ್ಮೆಮೆಯ್ಯನಾಗಳಾಱಿಸಲೆಂದು (ಶಾಂತಿಪು. ೮–೮೩ ವ). [ಸಂ.]

**ಅಪಪ** 'ಅಪ್ಪ$_3$' ನೋ.

**ಅಪಪದ** (ನಾ). **೧.** ತಪ್ಪಾದ ಸ್ಥಾನ (?). **೨.** ಅಸಾಧುವಾದ ಪದ: ತುರೀಯೋಪಾಂತ್ಯದೊಳು ವಿಹರಿಸುತಲಿರುವ ಯಾತ್ರಿಕರ ಕಾಣುತ್ತ, ಹಗುರಾದ ಜೀವವಿದರಪಪದಕೆ ಎತ್ತೆತ್ತಿ ಆತುಕೊಳುತಿರುವ (ಮಲೆದೇ. ೩೯–೮). [ಸಂ. ?]

**ಅಪಪಾಠ** (ನಾ). (ಗ್ರಂಥಸಂಪಾದನೆಯಲ್ಲಿ) ನ್ಯಾಯವಾಗಿರಬೇಕಾದ ಪಾಠಕ್ಕೆ ಪ್ರತಿಯಾಗಿ ಬಿದ್ದಿರುವ ತಪ್ಪಾದ ಪಾಠ: ಉದಾ— ಅವಿರಳಕೇತಕಪರಿಮಳನವಾಪ್ತಶೈತ್ಯಂ ಸಮಾಂದ್ಯನಳಿನೀಳಗುಣಂ [ಪಾ ಠಾಂ. ಸಮುದ್ಯನಳಿನೀಳಗಳಂ] ಪವನಪವನಾಶನೀಂಟು [ಪಾ ಠಾಂ. ನಿಂದು]ವುದು ವಿಯೋಗಿಪ್ರಾಣಪವನನಂ ಪುರವರದೊಳ್ (ಅರ್ಥನೇ. ೩–೧೧೫). ℙ ಈ ಪದ್ಯದಲ್ಲಿ ಹಲವು ಅಪಪಾಠಗಳಿರುವುದರಿಂದ ಅರ್ಥವಾಗುವುದು ಕಷ್ಟವಾಗಿದೆ. ಅವಿರಳಕೇತಕ ಪರಿಮಳಂ ಎಂಬಲ್ಲಿ ಕೈತಕ ಪದಕ್ಕೆ ಪ್ರತಿಯಾಗಿ ಕೇತಕವೆಂಬ ಶಬ್ದವೂ, ಸಮುದ್ಯನಳಿನೀಳಗಳಂ ಎಂಬುದಕ್ಕೆ ಪ್ರತಿಯಾಗಿ ಸಮಾಂದ್ಯನಳಿನೀಳಗಳಂ ಎಂಬುವೂ ಅಪಪಾಠವಾಗಿ ಸೇರಿವೆ. [ಸಂ.]

**ಅಪಪ್ರಚಾರ** (ನಾ). **೧.** ಸುಳ್ಳು ಸುದ್ದಿ ಹರಡುವುದು. **೨.** ವಿಷಯಗಳನ್ನು ತಪ್ಪಾಗಿ ವಿವರಿಸಿ ಹರಡುವುದು; ಇಲ್ಲ ಸಲ್ಲದ ಸಂಗತಿಗಳನ್ನು ಹುಟ್ಟಿಸಿ ಹೇಳುವುದು. **೩.** ಒಬ್ಬರ ವಿರುದ್ಧವಾಗಿ ಪ್ರಚಾರ ಮಾಡುವುದು: ನನ್ನ ವಿಷಯದಲ್ಲಿ ಎಷ್ಟು ಅಪಪ್ರಚಾರ ಮಾಡಿದರೂ ಅವರಿಗೆ ಸಮಾಧಾನವಿಲ್ಲ (ಕಮನೆ. ೭). [ಸಂ.]

**ಅಪಪ್ರಥೆ** (ನಾ). ಅಪವಾದ; ಕೆಟ್ಟ ಹೆಸರು; ಅಪಕೀರ್ತಿ: ಪರಾಶ್ರಯಿಗಳು ಎಂಬ ಅಪಪ್ರಥೆ ಬರುವುದಿಲ್ಲವೆ? (ಅಲೆಮ. ೯೪); ಎಲ್ಲಿ ನನ್ನ ಮೇಲೆ ಅಪಪ್ರಥೆಯನ್ನು ಹರಡುತ್ತಿರುವಳೋ ದೇವರೇ ಬಲ್ಲ (ಶ್ರೀರಾಯ. ೩೫೨). [ಸಂ. ಅಪಪ್ರಥಾ]

**ಅಪಪ್ರಯೋಗ** (ನಾ). **೧.** [ವ್ಯಾಕ] ತಪ್ಪಾಗಿ ಬಳಸುವುದು; ಅಶುದ್ಧವಾದ ಶಬ್ದದ ಬಳಕೆ: ಗೊತ್ತಿಲ್ಲದೆ ಏಕೆ ಅಪಪ್ರಯೋಗ ಮಾಡುತ್ತೀಯೆ (ರೂಢಿ). **೨.** ಸಲ್ಲದ ವಸ್ತುವಿನ ಪ್ರಯೋಗ. [ಸಂ.]

**ಅಪಭ್ರಂಶ** (ನಾ). **೧.** ಜಾರಿಬೀಳುವುದು; ಪತನ. **೨.** ಸಂಸ್ಕೃತ ಅಥವಾ ಪ್ರಾಕೃತದಿಂದ ವಿಕಾರಹೊಂದಿ ಬಳಕೆಗೆ ಬಂದಿರುವ ಶಬ್ದ; ತದ್ಭವ ಶಬ್ದ: ಕ್ರಮದಿಂದೆ ಸಂಧಿನಾಮಂ ಸಮಾಸಮಾ ಪೊದಟ್ಬಾಖ್ಯಾತಂ ಪ್ರಮುದಿತ ಧಾತುವಪಭ್ರಂಶಮವ್ಯಯಂ ಸಂಧಿ ಶಬ್ದಮಣಿದರ್ಪಣದೊಳ್ (ಶಮದ. ೧). **೩.** ಅಪಭ್ರಂಶ ಭಾಷೆ; ಒಂದು ಪ್ರಾಕೃತಭಾಷೆಯ ಹೆಸರು: ಸಂಸ್ಕೃತಪ್ರಾಕೃತಮಪಭ್ರಂಶಂ ಪೈಶಾಚಿಕಮೆಂಬ ಮೂಱುವರೆ ಭಾಷೆಗಳೊಳ್ (ಛಂದೋಂಬು. ೧–೫೫ ವ). [ಸಂ.]

**ಅಪಭ್ರಂಶತೆ** (ನಾ). ರೂಪದ ಮಾರ್ಪಾಡು; (ಶಬ್ದವು) ವಿಕಾರ ಹೊಂದಿ ಬಳಕೆಗೆ ಬರುವ ರೀತಿ: ದಾಡಿಮಮಾ ಕೂಷ್ಮಾಂಡಂ . . . ಅಱಿ ರೂಢಿಯ ಕುಳನೆಂದು ಜಟಿದಪಭ್ರಂಶತೆಯೊಳ್ (ಶಮದ. ೨೦). [ಸಂ. ಅಪಭ್ರಂಶತಾ]

**ಅಪಭ್ರಂಶನುಡಿ** (ನಾ). ತಪ್ಪುನುಡಿ; ತೊದಲು ಮಾತು: ಶೌರ್ಯಮಂ ತೋರಿ ಜಸಮಾಂತು ಪಿಂತಿರುಗಲತಿಲೇಸಲ್ಲದೋರಂತೆ ಚಿಣ್ಣನೊಲಪಭ್ರಂಶನುಡಿಗಳಿಂದೇ ಫಲವು ದಾನವೇಶ (ವೆಂಕಾರಾ. ೬–೩೩–೨೬). [ಅಪಭ್ರಂಶ + ನುಡಿ$_2$]

**ಅಪಭ್ರಷ್ಟ** (ಗು). **೧.** ನಡತೆಗೆಟ್ಟ. **೨.** ಅಸಾಧುವಾದ; ಅಶುದ್ಧವಾದ. [ಸಂ.]

**ಅಪಮತಿ** (ಗು). ಬುದ್ಧಿಗೆಟ್ಟ; ತಿಳಿಗೇಡಿಯಾದ: ಮಯ್ದುನನ ಪೊಟಿಲ್ಲಪಮತಿ ಸಂಭಿನ್ನಂಬೆರಸುವೋದಂ (ಶಾಂತಿಪು. ೬–೩೬). [ಸಂ.]

**ಅಪಮರ್ಯಾದೆ** (ನಾ). ಅಗೌರವ: ಗ್ರಾಮದಲ್ಲಿ ಸರಕಾರದ ವಿರುದ್ಧವಾಗಿ ಕಾರ್ಯಕ್ರಮಗಳು ಜರುಗುತ್ತಿರುವುದು ತುಂಬ ಅಪಮರ್ಯಾದೆಯ ಸಂಗತಿ (ಕುರುಕಾ. ೧೧೪). [ಸಂ. ಅಪಮರ್ಯಾದಾ]

**ಅಪಮಾನ** (ನಾ). ಅವಮಾನ; ಅಗೌರವ. [ಸಂ.]

**ಅಪಮಾನಂಬಡು, ಅಪಮಾನಪಡು** (ಕ್ರಿ). ಅಗೌರವವನ್ನು ಹೊಂದು; ಅಪಮಾನಕ್ಕೆ ಗುರಿಯಾಗು; ಮರ್ಯಾದೆಯನ್ನು ಕಳೆದುಕೋ: ನಮ್ಮರಸನೀಗಳ್ . . . ಅಪಮಾನಂಬಟ್ಟ ಉಪಧಾವಿಶುದ್ಧನಪ್ಪ ಮಂತ್ರಿಯಂತಾಕಾರಸಂವರಣೆಯನುಂಟುಮಾಡಿಕೊಂಡಿರ್ಪುದಾವಕಾರಣಂ (ಪಂಚತಂ. ೨೬–೧೮). **ಅಪಮಾನಪಡು**: ಅವನು ತುಂಬಾ ಅಪಮಾನಪಟ್ಟುಕೊಂಡು ಹೋದ (ರೂಢಿ). [ಅಪಮಾನ + ಪಡು$_1$]

**ಅಪಮಾನಪಡು** 'ಅಪಮಾನಂಬಡು' ನೋ.

**ಅಪಮಾನಮಾಡು** (ಕ್ರಿ). ಅವಮಾನವಾಗುವಂತೆ ಮಾಡು. [ಅಪಮಾನ + ಮಾಡು$_1$]

**ಅಪಮಾನವಚನ** (ನಾ). ಅವಮಾನವನ್ನುಂಟುಮಾಡುವ ಮಾತು. [ಅಪಮಾನ + ವಚನ]

**ಅಪಮಾನಹತ** (ಗು). ಅಪಮಾನಕ್ಕೆ ಸಿಕ್ಕಿದ; ಗುರಿಯಾದ: ಈ ನುಡಿಯು ಸಲಿಸಿದೊಡೆ ಇವನಪಮಾನಹತನಿದು ಧರ್ಮನಿಶ್ಚಯವೇನು ಸಂಶಯವಿಲ್ಲ (ಕುವ್ಯಾಅ. ೨೨–೪೦). [ಅಪಮಾನ + ಹತ]

**ಅಪಮಾನಿತ** (ಗು). = ಅಪಮಿತ. [ಸಂ.]

**ಅಪಮಾನಿಸು** (ಕ್ರಿ). ಅಗೌರವವನ್ನುಂಟುಮಾಡು; ಮರ್ಯಾದೆಯನ್ನು ಕಳೆ; ಮಾನಕ್ಕೆ ಭಂಗತರು: ಅಪಮಾನಿಸಿ ಪೊಱಮಟ್ಟಳತ್ತೆ ಮನೆಯಿಂದಾಗಳ್ (ಪಂಚತಂ. ೧೫೬–೧೧); ಅಸುರನ ಚರನೆಂದಪಮಾನಿಸುಗುಮೊ ಮೇಣ್ ಭಕ್ತನೆಂದು ಮನ್ನಿಸುಗುಮೊ . . . ಕೃಷ್ಣಂ (ಜಗವಿ. ೫–೭೫). [ಅಪಮಾನ + –ಇಸು$_3$]

**ಅಪಮಾರ್ಜನ** (ನಾ). ತೊಡೆದುಹಾಕುವುದು; ಅಳಿಸುವುದು; ಗುಡಿಸುವುದು; ಶುದ್ಧಗೊಳಿಸುವುದು. [ಸಂ.]

**ಅಪಮಿತ** (ಗು). ಅಪಮಾನಕ್ಕೆ ಗುರಿಯಾದ; ಮಾನ ಕಳೆದುಕೊಂಡ: ಅಪಮಿತಜನಕ್ಕಮಭೇದ್ಯಾವಲಿಗಂ . . . ಪರಮಸುಖಮನೊಸೆದೀಯುತ್ತುಂ (ಶಾಂತಿಪು. ೩–೫೧). [ಸಂ.]

**ಅಪಮಿತ್ಯ** (ನಾ). ಸಾಲ; ಋಣ: "ಅಪಮಿತ್ಯಕಂ, ಉದ್ಧಾರಃ, ಋಣಂ, ಪರ್ಯುದಂಚನಂ – ಈ ೪ ಸಾಲಂ" (ಹಲಾಯು. ೯೪–೪೧೮). [ಸಂ.]

**ಅಪಮೂರ್ಧ** (ನಾ). ತಲೆಯಿಲ್ಲದ ಅಟ್ಟೆ ; ಮುಂಡ.
[ಸಂ. ಅಪಮೂರ್ಧನ್]

**ಅಪಮೃತಿ** (ನಾ). = ಅಪಮೃತ್ಯು. [ಸಂ.]

**ಅಪಮೃತ್ಯು** (ನಾ). **೧.** ಅಕಾಲದಲ್ಲಿ ಉಂಟಾದ ಸಾವು ; ಚಿಕ್ಕಂದಿನ ಮರಣ : ಮಜುಕಮಾಮಯಮುಪ್ಪಪಮೃತ್ಯುವೆಂಬಿವಲ್ಲಿಗೆ ಪೊಜಗು (ಆದಿಪು. ೫–೩೦). **೨.** ಆಕಸ್ಮಿಕವಾದ ಮರಣ ; ದುರ್ಮರಣ ; ಅಪಘಾತ : ಸುಪ್ರಭಾತ ಸಮಯದಲ್ಲಿ ಆರ್ತಿಯಲ್ಲಿ ಲಿಂಗವ ನೆನೆದರೆ ತಪ್ಪುವುವು ಅಪಮೃತ್ಯು ಕಾಲಕರ್ಮಂಗಳಯ್ಯಾ (ಬಸವ. ೧೭೭). **೩.** ಗಂಡಾಂತರ : ಹೋದುದೊಂದಪಮೃತ್ಯು ಲೋಕಕೆ ತೀದುದಿಲ್ಲಾಯುಷ್ಯ (ಕುವ್ಯಾಭೀ. ೬–೪೭). [ಸಂ.]

**ಅಪಮೌಲ್ಯ** (ನಾ). ಮೌಲ್ಯವನ್ನು ತಗ್ಗಿಸುವುದು, —ಇಳಿಸುವುದು: ಸಂಸತ್ತಿನಲ್ಲಿ ಆರ್ಥಿಕ ಮಂತ್ರಿಗಳು ರೂಪಾಯಿನ ಅಪಮೌಲ್ಯವುಂಟಾಗುವುದಿಲ್ಲವೆಂದು ಭರವಸೆ ನೀಡಿದರು (ರೂಢಿ). [ಸಂ.]

**ಅಪಯಶ** (ನಾ). ಕೆಟ್ಟ ಹೆಸರು ; ಅಪಕೀರ್ತಿ : ಗುರುತರ ಕಾರ್ಯದೊಳಪಯಶ ಸಹ ಚಂದವಪ್ಪುದು ಮಹಿಮವಂತರಿಗೆ (ಇಂಚಾಪ. ೭೦–೩೭). [**ಸಂ.** ಅಪಯಶಸ್]

**ಅಪಯಾನ** (ನಾ). ಹಿಂದಿರುಗುವುದು ; ಹಿಂದಿರುಗಿ ಓಡುವುದು ; ಪಲಾಯನ ; ತಪ್ಪಿಸಿಕೊಂಡು ಓಡುವುದು. [ಸಂ.]

**ಅಪರ** (ಗು). **೧.** ಬೇರೆಯ ; ಅನ್ಯ. **೨.** ಆಮೇಲಿನ ; ತರುವಾಯದ. **೩.** ಕೀಳಾದ ; ಕಡಮೆ ದರ್ಜೆಯ. **೪.** ಹಿಂದುಗಡೆಯ. **೫.** ಎದುರುಗಡೆಯ ; ದೂರದ. **೬.** ತನಗಿಂತ ಉತ್ತಮವಾದುದು ಬೇರೊಂದಿಲ್ಲದ ; ಅತ್ಯುತ್ತಮವಾದ : ಪರನಪರಂ ಭವನಭವಂ ಚರನಚರಂ ಸಗುಣನಗುಣನೇಕನನೇಕಂ ಕ್ಷರನಕ್ಷರನೆನಿಪಗಣಿತವಿರುದ್ಧಗುಣ ನಿನ್ನ ನಿಜವದೇಂ ಕೇವಳಮೇ (ಜಗವಿ. ೩–೯೭). (ನಾ). **೭.** ಮನೋಹರ ; ಸುಂದರ : "ರಮಣೀಯಮಪರಂ ಜಯಂ ಮಂಜುಳಂ ವರೇಣ್ಯಂ" (ಮಂಗರಾ. ೧೨೭–೨). **೮.** ಪಶ್ಚಿಮ ದಿಕ್ಕು. **೯.** ಆನೆಯ ಹಿಂಗಾಲಿನ ಹೆಜ್ಜೆ. **೧೦.** ಶತ್ರು. [ಸಂ.]

**ಅಪರಂಜಿ** (ನಾ). **೧.** ಚೊಕ್ಕ ಚಿನ್ನ ; ಪರಿಶುದ್ಧವಾದ ಬಂಗಾರ : ತಚ್ಚೋಳಾವನೀ ಪ್ರಭೂತದೆಸಕಂ ತನ್ನುರ್ವರಾಮಂಡಳಕ್ಕಚ್ಚಂಬೊಯ್ದಪರಂಜಿಯಾದುದು (ಉದ್ಭಟ. ೧೨–೭೩); ಬಡನಡುವಿನ ಭಾಮಿನಿ ತಳಿಗೈಯೊಳ್ ಪಿಡಿದಪರಂಜಿಯ ಸೆಳೆಯುಲರ್ವಿಲ್ಲನ ಪಡಿಯಜತಿಯ ಕೈಯೊಳಗೊಪ್ಪುವ ಸೆಳೆಯಂತೆ ವಿರಾಜಿಸಿತು (ಜಯಕಾ. ೨–೪೭) ; ಅಪರಂಜಿಯಂತೆ ವಯಿನವಾಗಿದ್ದ ಸಂಸಾರ (ಮಹಾಗ. ೨). **೨.** ನಿಷ್ಕಳಂಕ ಮತ್ತು ಅತ್ಯುತ್ತಮ : "ರೂಪ, ಗುಣ ಎರಡರಲ್ಲೂ ಅಪರಂಜಿ" (ಕೀಲುಗೊಂ. ೧೩).
[**ದೇ ?. ‖ ತಮಿ.** ಅಪರಂಚಿ ; **ತೆಲು.** ಅಪರಂಜಿ]

**ಅಪರಂಜಿಕೊಡ** (ನಾ). ಚೊಕ್ಕ ಚಿನ್ನದ ಬಿಂದಿಗೆ ; ಶುದ್ಧ ಬಂಗಾರದ ಕೊಡ: ಕಂಜಾತಾಕರದಲ್ಲಿ ವಲಂ ಜನಿಸಿದ ಸುಟಿಯ ಮಧ್ಯದೊಳ್ಸುಪರಜಃಪುಂಜಮಯ ಕಂಜಮೆನಲಪರಂಜಿಗೊಡಂ ಪೂರಿತಾಳಿಯಿಂದೊಂದೆಸೆಗುಂ (ಉದ್ಭಟ. ೫–೬೧). [ಅಪರಂಜಿ + ಕೊಡ$_3$]

**ಅಪರಂಜಿಗೇದಂಗೆ** 'ಅಪರಂಜಿಗೇದಗೆ' ನೋ.

**ಅಪರಂಜಿಗೇದಗೆ,** ಅಪರಂಜಿಗೇದಂಗೆ (ನಾ). ಹೊಂಬಣ್ಣದ ಕೇದಗೆ ಹೂ ; ಹೊಂಗೇದಗೆ : ಕಂಜಾಸ್ತ್ರನಾ ವನದುರ್ಗದಂತಾಯ್ತುಪರಂಜಿಗೇದಗೆಯ ಬಾಳ್ವೇಲಿ (ಶ್ರೀಪಾಲ. ೧–೬೪). **ಅಪರಂಜಿಗೇದಂಗೆ :** ಕೆಂಜಾಜಿ ನಾಗಸಂಪಗೆ ಬಂದುಗೆಯಪರಂಜಿಗೇದಂಗೆಯೊಳ್ಪರಲಾ ಮಂಜರಿಗಳಿನರ್ಚಿಸಿದರು (ಶ್ರೀಪಾಲ. ೧೨–೩೭). [ಅಪರಂಜಿ + ಕೇದಗೆ]

**ಅಪರಂಜಿದಗಡು** (ನಾ). ಚೊಕ್ಕ ಚಿನ್ನದ ತಗಡು : ಅಪರಂಜಿದಗಡುಗಳ ದೊರೆಯಾದುವು ನುಣ್ಗದುಪುಗಳಾ ಶ್ಯಾಮೆಗೆ (ಜಯಕಾ. ೩–೪೩).
[ಅಪರಂಜಿ + ತಗಡು]

**ಅಪರಂಜಿದೊಡವು** (ನಾ). ಶುದ್ಧ ಚಿನ್ನದ ಒಡವೆ: ಅರುಣಾಂಬರವುಟ್ಟಪರಂಜಿದೊಡವಿಟ್ಟು ಸರಸಕುಂಕುಮರಮೆಯೊರೆದು (ಶ್ರೀಪಾಲ. ೨–೪೭). [ಅಪರಂಜಿ + ತೊಡವು]

**ಅಪರಂಜಿಮಿಗ** (ನಾ). ಚೊಕ್ಕ ಚಿನ್ನದ ಬಣ್ಣದ ಜಿಂಕೆ ; ಸುವರ್ಣಮೃಗ : ಅಲರಶರನ ಬೀಡಪರಂಜಿಮಿಗದಾಡುವೊಲ ಕಾಮುಪಶು ಮೇವಕಾಡು (ನೇಮಿಸಂ. ೧–೬೧). [ಅಪರಂಜಿ + ಮಿಗ]

**ಅಪರಂಜಿಸರಿಗೆ** (ನಾ). ಶುದ್ಧ ಚಿನ್ನದ ಸರಿಗೆ ; ಚಿನ್ನದ ಜರತಾರಿ : ಅಪರಂಜಿಸರಿಗೆದುಪ್ಪಟಿಯಂ ಹೊದ್ದು (ಯನಳ.೭೨). [ಅಪರಂಜಿ+ಸರಿಗೆ]

**ಅಪರಂಪಾರ** (ನಾ). ಅನಂತ ; ಎಲ್ಲೆಮೀರಿದ್ದು : ಪಾಂಡವರ ಧನರಾಶಿಯಾದರೂ ಎಷ್ಟು ಅಪರಂಪಾರವಾದುದು (ಮಭಾರ. ೨–೮೩) ; ತಲೆಗೆ ಭಾರವಾಗಿಹುದು ಅಪರಂಪಾರವಾದ ದುಃಖದ ರಾಶಿ (ಉಯ್ಯಾಲೆ. ೭೯–೬) ; ಅಪರಂಪಾರ ! ಅಪಾರ ! ಈ ಜಗಜಗಗಳ ಹಾರ ! (ಬಾಸಿಗ. ೮೦).
[ಅಪರ + ಪಾರ]

**ಅಪರಕ್ರಿಯೆ** (ನಾ). ಸತ್ತವರಿಗಾಗಿ ನಡಸುವ ಸಂಸ್ಕಾರ ; ಉತ್ತರಕ್ರಿಯೆ ; ಅಂತ್ಯಸಂಸ್ಕಾರ : ಅವರ ಅಪರಕ್ರಿಯೆಗಳೆಲ್ಲ ಮುಗಿಯುವತನಕ ಪೆನುಗೊಂಡೆಯಲ್ಲಿದ್ದು . . . ಮುಂಬಯಿಗೆ ಮರಳಿದರು (ಒಂಟಿದ. ೨೩೨). [ಅಪರ + ಕ್ರಿಯೆ]

**ಅಪರಗಿರಿ** (ನಾ). ಪಶ್ಚಿಮ ಪರ್ವತ ; ಪಡುವಣ ಪರ್ವತ: ಅರುಣದಿನಮಣಿ ಬಯಲ್ದಾವರೆಯನೆ ಪೋಲ್ತಿರ್ಪನಪರಗಿರಿವರಶಿರದೊಳ್ (ಕಾವ್ಯಸಾ. ೮೮೦. ಶೂದ್ರಕ). [ಅಪರ + ಗಿರಿ]

**ಅಪರಗೆ** (ನಾ). ಪಶ್ಚಿಮ ಸಮುದ್ರಕ್ಕೆ ಹರಿಯುವ ನದಿ.
[**ಸಂ.** ಅಪರಗಾ]

**ಅಪರಜ$_1$** (ನಾ). ಒಂದು ನಾಣ್ಯ (?) : ಆರು ತಪಿದರು ದೇವಲೋಕಮರ್ತ್ಯಲೋಕಕ್ಕೆ ಹೊರಗು ಅರಮನೆ ಅಪರಜ ೧೨೧ ಕೂಲಿ ಅಪರಜ ೧೨೦ (ಎಕ. X (S), ಕೋಲಾರ. ೩೫೦–೫ ; ೧೬ನೆಯ ಶತ). [?]

**ಅಪರಜ$_2$** (ಗು). **೧.** ದೂಳಿಲ್ಲದ. **೨.** ರಜೋಗುಣವಿಲ್ಲದ : **೧, ೨ :** ತಿಳಿನೀರಂತಪರಜರ್ (ಶಾಂತಿಪು. ೧೧–೫೫). [**ಸಂ.** ಅಪರಜಸ್]

**ಅಪರಜಲಧಿ** (ನಾ). ಪಡುವಣ ಕಡಲು ; ಪಶ್ಚಿಮ ಸಮುದ್ರ : ಹೇಮಕೂಟದ ಗಿರಿ ಹಿಮಾಲಯವಾಗಪರಜಲಧಿಯನು ಮುಟ್ಟಿಹವು (ಕುವ್ಯಾಅ. ೭–೪೨). [ಅಪರ + ಜಲಧಿ]

**ಅಪರಜಲನಿಧಿ** (ನಾ). = ಅಪರಜಲಧಿ : ಭೀಷ್ಮನು ಫಲುಗುಣನು ಕಾದಿದರು ದಿನಕರನಪರಜಲನಿಧಿಗೆ ಇಳಿಯೆ (ಕುವ್ಯಾಭೀ. ೭–೩).
[ಅಪರ + ಜಲನಿಧಿ]

**ಅಪರಜ್ಞಾನ** (ನಾ). ಅತ್ಯುತ್ತಮ ಜ್ಞಾನ : ಜ್ಞಾನ, ವಿಜ್ಞಾನ, ಸುಜ್ಞಾನ, ಮಹಾಜ್ಞಾನ, ಅಪರಜ್ಞಾನ ಇಂತೀ ಪಂಚಜ್ಞಾನವ ದಹ್ಯಮಾಡಿ (ಮೋಳಿಮಾ. ೧೫೪–೫೮೧). [ಅಪರ + ಜ್ಞಾನ]

**ಅಪರದಿಕ್ಕು** (ನಾ). ಪಡುವಲು ; ಪಶ್ಚಿಮದಿಕ್ಕು. [ಅಪರ + ದಿಕ್ಕು]

**ಅಪರದಿಗ್ಭಾಗ** (ನಾ). ಪಶ್ಚಿಮದಿಕ್ಕಿನ ಪ್ರದೇಶ ; ಪಡುವಲು : ತದಪರದಿಗ್ಭಾಗದೊಳನಗಾರಕೇವಳಿ ಹುತಾಶನ ಕುಂಡಮಂ ಸ್ಥಾಪನಂಗೆಯ್ದು (ಆದಿಪು. ೧೬–೫೨ ವ). [**ಸಂ.** (ಅಪರದಿಕ್ + ಭಾಗ)]

**ಅಪರನಾಮಧೇಯ** (ನಾ). **೧.** ಬೇರೊಂದು ಹೆಸರು. **೨.** ಬೇರೊಂದು ಹೆಸರುಳ್ಳವನು : ವಿಷ್ಣುವರ್ಧನಾಪರನಾಮಧೇಯನುಂ (ಗದಾಯು. ೨–೭ ವ). [ಅಪರ + ನಾಮಧೇಯ]

**ಅಪರಪಕ್ಷ** (ನಾ). ೧. ಕೃಷ್ಣಪಕ್ಷ: ಪರಪಕ್ಷಾಪರಪಕ್ಷಂ ದೊರೆಕೊಂಡುದು ವಿಧಿಗೆನುತ್ತೆ ಬಯ್ವಳ್ ಸುಯ್ವಳ್ (ಹಮ್ಮೀರ. ೨-೮೨). ೨. ಎದುರು ಕಡೆ; ಶತ್ರುಪಕ್ಷ; ಪ್ರತಿವಾದಿ. [ಅಪರ + ಪಕ್ಷ]

**ಅಪರಭಾಗ** (ನಾ). ಹಿಂಭಾಗ; ಹಿಂದುಗಡೆ: ಇದಿರೊಳಾನಿಹೆ ಶಲ್ಯನೆಡವಂಕದಲಿ ಬಲದಲಿ ಕೃಪನಪರಭಾಗದಲಿ ನೀ ಬಂದೆ (ಕುವ್ಯಾದ್ರೋ. ೬-೨೮). [ಅಪರ + ಭಾಗ]

**ಅಪರರಾತ್ರಿ** (ನಾ). ರಾತ್ರಿಯಲ್ಲಿ ಎರಡನೆಯ ಅರ್ಧಭಾಗ; ನಡುರಾತ್ರಿ ಕಳೆದ ಮೇಲೆ ಬೆಳಗಿನವರೆಗಿನ ಕಾಲ. [ಅಪರ + ರಾತ್ರಿ]

**ಅಪರವಯಸ್ಸು** (ನಾ). ಇಳಿವಯಸ್ಸು; ಮುಪ್ಪು: ಈ ಅಪರವಯಸ್ಸಿನಲ್ಲಿಯೂ ನಿಮಗೆ ಇಷ್ಟು ಶಕ್ತಿ ಮತ್ತು ಉತ್ಸಾಹಗಳಿರುವುದು ಆಶ್ಚರ್ಯ (ರೂಢಿ). [ಅಪರ + ವಯಸ್ಸು]

**ಅಪರವಾರಿಧಿ** (ನಾ). = ಅಪರವಾರ್ಧಿ: ಆಗಸದಿನಪರಸಂಧ್ಯಾರಾಗಾವಿಲನರ್ಕನಪರವಾರಿಧಿಗಿೞಿದಂ (ಪಂರಾಮಾ. ೯-೧೮೮). [ಅಪರ + ವಾರಿಧಿ]

**ಅಪರವಾರ್ಧಿ** (ನಾ). ಪಶ್ಚಿಮಸಮುದ್ರ; ಪಡುವಣ ಕಡಲು: ಇನನಪರವಾರ್ಧಿಗಿೞಿದಂ (ಚಿಬಪು. ४೭-४೭). [ಅಪರ + ವಾರ್ಧಿ]

**ಅಪರಶರೀರ** (ನಾ). ಬೇರೆಯ ಶರೀರ; ಅನ್ಯದೇಹ: ನಾನು ಬೇಡಿಕೊಂಡುದನು ವ್ಯರ್ಥವ ಮಾಡದೆ ನನ್ನ ಸಂಗಡಲೆ ಹೇಮಕೂಟಕ್ಕೆ ಬಂದು ನನಗೆ ಅಪರಶರೀರವಾದ ಕಾದಂಬರಿಯ ದುರಾಲೋಚನೆಯ ಬಿಡಿಸಿ (ವಚಕಾ. ४೮). [ಅಪರ + ಶರೀರ]

**ಅಪರಸಂಧ್ಯೆ** (ನಾ). (ಹಗಲಿನ ಕೊನೆಯ) ಸಂಜೆ; ಸಾಯಂಸಂಧ್ಯೆ: ಅಪರಸಂಧ್ಯಾ ಸಂಪಠನತತ್ಪರಪುಣ್ಯಪಾಠಕನಿಕರ (ಚಂದ್ರಪು. ೮-೨४ ವ). [ಅಪರ + ಸಂಧ್ಯೆ]

**ಅಪರಾಂಬುಧಿ** (ನಾ). ಪಶ್ಚಿಮಸಮುದ್ರ: ಅಂಬರತಳದಿಂದಿನನಪರಾಂಬುಧಿಯೊಳ್ಬೀೞೆ (ಕಾದಂಪೂ. ೨೭೯). [ಅಪರ + ಅಂಬುಧಿ]

**ಅಪರಾಂಬುರಾಶಿ** (ನಾ). = ಅಪರಾಂಬುಧಿ: ವಾರಿಜನಾಥನನಾಥನಾಗಿ ತೊಟ್ಟಗೆ ಮು[ೞುಪ]ಂತೆವೊಲ್ ಮುೞುಗಿದಂ ಕಡುಕೆಯ್ದಪರಾಂಬುರಾಶಿಯೊಳ್ (ಪಂಪಭಾ. ೧೩-೧೦೬). [ಅಪರ + ಅಂಬುರಾಶಿ]

**ಅಪರಾಂಭೋರಾಶಿ** (ನಾ). = ಅಪರಾಂಬುಧಿ: ಅಪರಾಂಭೋರಾಶಿವೇಳಾವನಮಮರ ಪುರೋದ್ಯಾನಮಂ ನೋಡಲೆೞ್ದಂದಪುದೋ (ಪಂರಾಮಾ. ೭-೧४೨). [ಅಪರ + ಅಂಭೋರಾಶಿ]

**ಅಪರಾಗ**$_1$ (ಗು). ೧. ಅನುರಾಗವಿಲ್ಲದ; ವ್ಯಾಮೋಹವಿಲ್ಲದ. (ನಾ). ೨. ಕೆಂಪುಬಣ್ಣವನ್ನು ಕಳೆದುಕೊಂಡಿರುವುದು: ಅಪರಾಗಂ ಮುನಿಪತಿವೋಲಪಗತಗುಣನಾಗಿಯುಂ ನಿಜಾಯತದೋಷಂ ವಿಪುಳಯಶೋಧನಲೋಭಂ ನೃಪವೃಷಭನರಾತಿನಿಕರ ತರುದವದಹನಂ (ಕವಿರಾ. ३-೧३೭). [ಸಂ. (ಅಪ$_0$ + ರಾಗ)]

**ಅಪರಾಗ**$_2$ (ನಾ). ಪಶ್ಚಿಮದಿಕ್ಕಿನ ಪರ್ವತ. [ಅಪರ + ಅಗ]

**ಅಪರಾಜಿತ** (ಗು). ೧. ಸೋಲಿಸಲ್ಪಡದ; ಸೋಲದ. (ನಾ). ೨. ವಿಷ್ಣು. ३. ಶಿವ. ४. ಜಿನ. [ಸಂ.]

**ಅಪರಾಜಿತತ್ವ** (ನಾ). ಸೋಲಿಲ್ಲದಿರುವುದು: ತನಗಪರಾಜಿತತ್ವಮಳವಟ್ಟಿರೆ ತೇಜದಳುರ್ಕೆಯಿಂ . . . ನನೆಯಿ(ಸು)ವಂ ಪುರಾತನ ಮಹಾತ್ಮರ ನಿಮ್ಮಡಿದಂಡನಾಯಕಂ (ಎಕ. V, ಬೇಲೂರು. ೧೭-೭೧ ; 1136). [ಸಂ.]

**ಅಪರಾಜಿತೆ** (ನಾ). ೧. ಸೋಲದವಳು; ಜಯಶೀಲೆ. ೨. ದುರ್ಗಾದೇವಿ. ३. [ಜೈನ] ದಿಗ್ವನಿತೆಯರಲ್ಲಿ ಒಬ್ಬಳ ಹೆಸರು: ಜಯಂತೆ ಅಪರಾಜಿತೆ . . . ಎಂಬೆಣ್ಬರುಂ ದಿಗ್ವನಿತೆಯರುಂ (ಆದಿಪು. ೭-३ ವ). [ಸಂ. ಅಪರಾಜಿತಾ]

**ಅಪರಾತ್ರಿ** (ನಾ). ೧. ಅಪರರಾತ್ರಿ (ಈ). ೨. ರಾತ್ರಿಯಲ್ಲಿ ಅವೇಳೆ: ಆ ಪ್ರಚಂಡವಾದ ಮಳೆಯಿಂದ ಆ ಅಪರಾತ್ರಿಯ ಭೀಷಣತೆಯು ಮತ್ತಷ್ಟು ಹೆಚ್ಚುತ್ತಲಿದೆ (ಅಂಬಿಕೆ. ३). [ಸಂ.]

**ಅಪರಾದಿತ್ಯ** (ನಾ). ೧. ಪಶ್ಚಿಮ ದಿಕ್ಕಿನಲ್ಲಿರುವ ಸೂರ್ಯ. ೨. ಒಬ್ಬ ರಾಜನ ಹೆಸರು: ಜಲಧಿಯ ಸತ್ವಾಶ್ರಯಬಲ ಜಲಧಿಯ ನಡುವಳುರ್ವ ಕೋಪಶಿಖಿಗಳ ನಡುವಿರ್ಣಲೆವೊತ್ತಿದ ಪುಳ್ಳಿಯ ಪುೞುವೊಲಿರ್ದನತಿಚಕಿತ ಚಿತ್ತನಪರಾದಿತ್ಯಂ (ಗದಾಯು. ೧-೨३). [ಅಪರ + ಆದಿತ್ಯ]

**ಅಪರಾದ್ರಿ** (ನಾ). ಪಡುವಣ ಬೆಟ್ಟ; ಪಶ್ಚಿಮಗಿರಿ; ಅಸ್ತಾಚಲ: ಇನನಪರಾದ್ರಿಶಿಖರನಾದಂ (ಪುಷ್ಪಪು. ೮-೯೭). [ಅಪರ + ಅದ್ರಿ]

**ಅಪರಾಧ** (ನಾ). ೧. ತಪ್ಪು; ತಪ್ಪುಕೆಲಸ: ಅಪರಾಧಂಗಳನೆಯ್ದೆ ಮಾಣಿಸಿಯಜಸ್ರಂ ನಂಬಿಯಂ ತೊತ್ತುಗೊಂಡು (ನಂಬಿರ. ೮-೨). ೨. ದಂಡ; ಜುಲ್ಮಾನೆ: ಆತನು ತನ್ನ ತಪ್ಪಿಗಾಗಿ ಹತ್ತು ರೂಪಾಯಿ ಅಪರಾಧವನ್ನು ತೆತ್ತ (ರೂಢಿ).

**ಅಪರಾಧ ಕೊಡು** = ಜುಲ್ಮಾನೆಯನ್ನು ತೆರು; ದಂಡವನ್ನು ಕೊಡು: ಯಿದಕ್ಕೆ ತಪ್ಪಿದರೆ ಅರಮನೆ ಗುರುಮನೆಗೆ ಅಪರಾಧ ಕೊಡಬೇಕೂ (ಸೌಇಇ. IX-ii, ೬೯೮-३२ ; 1691). **ಅಪರಾಧ ತೆರು**=ಜುಲ್ಮಾನೆ ಕೊಡು: ತಪ್ಪಿದವರು ಅಪರಾಧ ತೆರಬೇಕಾಗುತ್ತದೆ (ರೂಢಿ). [ಸಂ.]

**ಅಪರಾಧಂಗೆಯ್** (ಕ್ರಿ). ತಪ್ಪುಮಾಡು; ತಪ್ಪುಕೆಲಸವನ್ನು ನಡೆಸು: ಇಂತಪ್ಪಪರಾಧಂಗೆಯ್ದುಂ ತಾನಲ್ಲದವೊಲೆಸೆವುದೀ ಶುಕಂ (ಕಾದಂಉ. ೭೧). [ಅಪರಾಧ + ಗೆಯ್ (< ಕೆಯ್$_1$)]

**ಅಪರಾಧಕಾಣಿಕೆ** (ನಾ). ಮಾಡಿದ ತಪ್ಪಿಗಾಗಿ ಕೊಡುವ ದಂಡದ ಹಣ. [ಅಪರಾಧ + ಕಾಣಿಕೆ]

**ಅಪರಾಧದ್ರವ್ಯ** (ನಾ). = ಅಪರಾಧ ಕಾಣಿಕೆ: “. . . ನಾನು ಮಾತಿಗೆ ತಪ್ಪುವ ಪಕ್ಷದಲ್ಲಿ ನಿರ್ದಾಕ್ಷಿಣ್ಯವಾಗಿ ನಿನ್ನ ಮನಸ್ಸಿಗೆ ತೋರಿದಷ್ಟು ಅಪರಾಧದ್ರವ್ಯವನ್ನು ತೆಗೆದುಕೊಳ್ಳಬಹುದು” ಎಂದು ಹೇಳಿದನು (ಕವಿಕ. ४). [ಅಪರಾಧ + ದ್ರವ್ಯ]

**ಅಪರಾಧರತಿ** (ನಾ). ತಪ್ಪುಮಾಡುವುದರಲ್ಲೇ ಆಸಕ್ತಿಯುಳ್ಳವನು: ಬೋಧವಕ್ರೋಪಕ್ರಮಿಗಳಪರಾಧರತಿಗಳು ಸುಕೃತಧರ್ಮವಿರೋಧಿಗಳು (ಬಸಪು. ४೦-೬೭). [ಅಪರಾಧ + ರತಿ]

**ಅಪರಾಧಸ್ಥ** (ನಾ). ಅಪರಾಧವನ್ನು ಮಾಡಿದವನು; ತಪ್ಪಿತಸ್ಥ: [ಸಂ.]

**ಅಪರಾಧಿ** (ನಾ). ತಪ್ಪುಮಾಡಿದವನು: ದುರೋದರವ್ಯತಿಕರದೊಳ್ ಪರಾಭವಿಸಿ ಕೃಷ್ಣೆಯನುಯ್ದಪರಾಧಿಯೆಲ್ಲಿದಂ (ಗದಾಯು. ೬-೨೯); ಇಲ್ಲಿ ಬರುವ ಎಳೆಯ ಮಕ್ಕಳು ಅಪರಾಧಿಗಳಲ್ಲ (ರಂಗರೋ. ೫೬). [ಸಂ. ಅಪರಾಧಿನ್]

**ಅಪರಾಬ್ಧಿ** (ನಾ). = ಅಪರಾಂಬುಧಿ: ಅಂದು ಮಾರ್ತಂಡನಪರಾಬ್ಧಿಗಿಳಿಯಲ್ಕಿಂತೆ ನಡೆತಂದು (ನಂಬಿರ. ೧೭-೧४೮). [ಅಪರ + ಅಬ್ಧಿ]

**ಅಪರಾರ್ಕ** (ನಾ). = ಅಪರಾದಿತ್ಯ. [ಅಪರ + ಅರ್ಕ]

**ಅಪರಾರ್ಧ** (ನಾ). ಎರಡನೆಯ ಅರ್ಧಭಾಗ; ಉತ್ತರಾರ್ಧ: ಸನ್ನುತಮಪರಾರ್ಧಂ ಸಂಪನ್ನಶ್ಲಿಷ್ಟಾಕ್ಷರೋಪರಚಿತಮದೋಷಂ (ಕವಿರಾ. ೧-೯೬). [ಅಪರ + ಅರ್ಧ]

**ಅಪರಾವತಾರ** (ನಾ). ಬೇರೊಂದು ಅವತಾರ; ಬೇರೆಯ ರೂಪ: ಕೇಳಿ ಕೃತಕೃತ್ಯನಾದೆಂ ಹರಿಧ್ವಂಸಮುಂ ಭಾಳಾಕ್ಷನಪರಾವತಾರ ಹಲಗೆಯ ಗುರುವೆ (ವೀಶೈಪು. ३-೧೨-३); ವರಾಹ ಮಿಹಿರಾಚಾರ್ಯರ ಅಪರಾವತಾರವೇ ಆಗಿದ್ದರೆಂದರೆ ಅತಿಶಯೋಕ್ತಿಯಾಗಲಾರದು (ಕುರುಕಾ. ೧೯). [ಅಪರ + ಅವತಾರ]

**ಅಪರಾಶಾಕುಂಭಿ** (ನಾ). ಪಶ್ಚಿಮದಿಕ್ಕಿನ ಆನೆ; ಅಂಜನವೆಂಬ ಹೆಸರಿನ ದಿಗ್ಗಜ: ಅಪರಾಶಾಕುಂಭಿ ಶುಂಭತ್ಕರಟತಟಗಳದ್ದಾನಸಂಭ್ರಾಂತ ಭೃಂಗೌಘಪಯೋದಾಲಂಬಿ . . . ರಾವಂ ಸುಳಿದುದು (ರಾಜಶೇ. ೮-೯೩). [ಸಂ. ಅಪರಾಶಾಕುಂಭಿನ್]

**ಅಪರಾಶೆ** (ನಾ). ಪಶ್ಚಿಮದಿಕ್ಕು: ಅಪರಾಶಾಪರ್ವತದಗ್ರದೊಳ್ ಕಲಾಪತಿಕಲೆ ಸಂಜೆ ಸರಿಯೆ ತೋರ್ಪವೊಲೆಸೆಗುಂ (ರಾಜಶೇ. ೧೦-೪೯). [ಸಂ. ಅಪರಾಶಾ]

**ಅಪರಾಹ್ಣ**, ಅಪರಾಹ್ನ (ನಾ). ನಡುಹಗಲಾದ ಮೇಲೆ ಸಂಜೆಯವರೆಗಿನ ಕಾಲ; ಹಗಲಿನ ಉತ್ತರಭಾಗ: ಜ್ಯೇಷ್ಠಮಾಸದ ಸಿತಚತುರ್ದಶಿಯೊಳ್ ಭರಣೀನಕ್ಷತ್ರದೊಳಪರಾಹ್ಣದೊಳ್ ಪರಮದೀಕ್ಷೆಯಂ ಕೆಯ್ಕೊಳ್ವುದುಂ (ಶಾಂತಿಪು. ೧೧-೧೦೬ ವ). **ಅಪರಾಹ್ನ**: ಇಂದು ಅಪರಾಹ್ನ ಭೇಟಿಮಾಡಿ ಅವರೊಂದಿಗೆ ಭೋಜನ ಸ್ವೀಕರಿಸಿದರು (ಬೆಸಂಕ. ೧-೧; ೧೦-೨-೬೫). [ಸಂ. ಅಪರಾಹ್ಣ]

**ಅಪರಾಹ್ನ** 'ಅಪರಾಹ್ಣ' ನೋ.

**ಅಪರಿಗ್ರಹ** (ನಾ). ೧. ಪರಿಗ್ರಹ ಮಾಡದಿರುವುದು. ೨. [ಜೈನ] ಯಾರಿಂದಲೂ ಏನನ್ನೂ ದಾನವಾಗಿ ತೆಗೆದುಕೊಳ್ಳದಿರುವ ವ್ರತ; ಪಂಚಾಣು ವ್ರತಗಳಲ್ಲಿ ಒಂದು: "ಅಪರಿಗ್ರಹವೆಂದರೆ ಜೀವ ಅಜೀವ ಬಾಹ್ಯ ಅಂತರ ಮೊದಲಾದ ಸಕಲ ವಸ್ತುಗಳನ್ನು ಪರಿತ್ಯಾಗಮಾಡುವುದು" (ಹಿಂದಸಾ. ೮೮). [ಸಂ.]

**ಅಪರಿಚಿತ** (ಗು). ೧. ಗುರುತಿಲ್ಲದ; ಪರಿಚಯವಿಲ್ಲದ. (ನಾ). ೨. ಗುರುತಿಲ್ಲದವನು: "ನಗರದ ಒಳಗೆ ಅಪರಿಚಿತರಿಗೆ ರಾತ್ರಿಯಲ್ಲಿ ಪ್ರವೇಶವಿಲ್ಲ, ಅರುಣೋದಯದವರೆಗೆ ಕಾದಿರಬೇಕು" ಎಂದರು (ಮಣಿಸ. ೩೮). [ಸಂ.]

**ಅಪರಿಚ್ಛಿನ್ನ** (ಗು). ೧. ಕತ್ತರಿಸದೆ ಇರುವ; ವಿಚ್ಛಿತ್ತಿಯಿಲ್ಲದ; ಎಡೆಬಿಡದ; ನಿರಂತರವಾದ: ಉನ್ನತಾನಂದಾಶ್ರು ಸಲಿಲೋತ್ಪನ್ನ ವದನಾಂಬುಜದಿನಪರಿಚ್ಛಿನ್ನ ಗದ್ಗದಕಂಠದಿಂ ಕೈಮುಗಿದು ಕೀರ್ತಿಸಲು (ಬಸಪು. ೨-೨೨). ೨. ನಿರ್ಣಯವಾಗದ; ಅಳತೆಗೆ ಸಿಕ್ಕದ. [ಸಂ.]

**ಅಪರಿಣತ** (ಗು). ಪರಿಣತನಲ್ಲದ; ಎಳಸಾದ; ಬಲಿಯದ. [ಸಂ.]

**ಅಪರಿಣಾಮ** (ಗು). ಪರಿಣಾಮವಿಲ್ಲದ; ಕೆಟ್ಟ ಪರಿಣಾಮವನ್ನುಂಟುಮಾಡುವ. 'ಅಪರಿಣಾಮವಿಹಾರ' ಪರಾ. [ಸಂ.]

**ಅಪರಿಣಾಮವಿಹಾರ** (ನಾ). ಕೆಟ್ಟ ಪರಿಣಾಮವನ್ನುಂಟುಮಾಡುವ ವಿಹಾರ, —ಕ್ರೀಡೆ: ಈ ಖೇಚರನ ಹಾರಮಪಥ್ಯಾಹಾರದಂತೆಯುಮಪರಿಣಾಮವಿಹಾರದಂತೆಯುಮೆನಗಿನಿತು ಬೇಗಂ ಪ್ರಮೋದಸಂಹಾರಮಂ ಮಾಡಿದ ಕಾರಣಂ (ಶಾಂತಿಪು. ೨-೨೬ ವ). [ಅಪರಿಣಾಮ + ವಿಹಾರ]

**ಅಪರಿತ್ರಾಣ** (ಗು). ೧. ರಕ್ಷಣೆಯಿಲ್ಲದ: ಸರ್ವಾಶುಚಿ ನಿದಾನಮುಂ ಅನಿತ್ಯಮುಂ ಅಪರಿತ್ರಾಣಮುಂ ಅಕ್ಕುಂ ಈ ತನುವೆಂದು (ತತ್ತ್ವಪ್ರ. ೩೩೬). (ನಾ). ೨. ರಕ್ಷಣೆಯಿಲ್ಲದಿರುವುದು. [ಸಂ.]

**ಅಪರಿಪಕ್ವ** (ಗು). ೧. ಚೆನ್ನಾಗಿ ಬೇಯದಿರುವ. ೨. ಪಕ್ವವಲ್ಲದ; ಹದಕ್ಕೆ ಬಾರದ; ಪರಿಣತವಲ್ಲದ: ಹೀಗೆ ತನ್ನ ಅಪರಿಪಕ್ವವಾದ ಮನಸ್ಸಿನ ಉದ್ವೇಗದ ಎಳೆತ ಒಂದು ಕಡೆಯಲ್ಲಿ (ಶಾಂಪಜೀ. ೧೦೫). [ಸಂ.]

**ಅಪರಿಪಾತ್ರ** (ನಾ). [ನಾಟ್ಯ] ಒಂದು ಬಗೆಯ ನೃತ್ಯಭೇದ: ತಾಂಡವ ನಾಟ್ಯ, ನೃತ್ತ, ಲಾಸ್ಯ . . . ಅಪರಿಪಾತ್ರ . . . ಎಂಬ ದಶವಿಧ ಪಾತ್ರಂಗಳಂ ಬೀಜಾ (ವಿವೇಕ. ೨೪೯). [ಸಂ.]

**ಅಪರಿಭಿನ್ನ** (ಗು). ಭಿನ್ನವಾಗದ; ಒಡೆಯದ: ಅಪರಿಭಿನ್ನಾಂತಶ್ಲಕ್ಷ್ಣಶ್ಲಿಷ್ಟ ಸಂನಿನಿಕಾಂತರಸುಸನ್ನಿವಿಷ್ಟಸುಸಂವೃತ್ತಾಂತರರ್ಧಚಂದ್ರಾಕಾರವಿಂಶತಿನಖನುಂ (ಆದಿಪು. ೧೨-೫೬ ವ). [ಸಂ.]

**ಅಪರಿಮಿತ** (ಗು). ಮಿತಿಯಿಲ್ಲದ; ಅಳತೆ ಮೀರಿದ; ಎಲ್ಲೆಯಿಲ್ಲದ: ಕೈಕೊಂಡತ್ತಪರಿಮಿತರಾಗಮುರ್ದೆಯಂ (ಕವಿರಾ. ೨-೨೦). [ಸಂ.]

**ಅಪರಿಮೇಯ** (ಗು). ಅಳತೆಮಾಡಲು ಶಕ್ಯವಿಲ್ಲದ; ಅಳತೆಗೆ ಮೀರಿದ: ಅಪರಿಮೇಯಮೆ ದೋಷಗುಣೌಘಮಿಂತುಪಚಿತಕ್ರಮದಾರಯೆ ಕಾವ್ಯದೊಳ್ ವಿಪುಳವೃತ್ತಿಯೊಳೊಂದಿರೆ ಪೇಟ್ಸಿಂ (ಕವಿರಾ. ೩-೧೪೨). [ಸಂ.]

**ಅಪರಿವರ್ತ್ಯ** (ಗು). ಬದಲಾಯಿಸಲು ಸಾಧ್ಯವಿಲ್ಲದ. [ಸಂ.]

**ಅಪರಿಶುದ್ಧ** (ಗು). ಪರಿಶುದ್ಧವಲ್ಲದ; ಅಶುಚಿಯಾದ: ಆರ್ಯಪುತ್ರನ ಹಾಗಿಲ್ಲವಲ್ಲಾ! ಇವನಾವನು, ಕಟ್ಟಿದ ರಕ್ಷೆಯಿಂದ ಮಂಗಳಾಂಗನಾದ ನನ್ನ ಮಗನನ್ನು ಮುಟ್ಟಿ ಅಪರಿಶುದ್ಧನನ್ನು ಮಾಡುವನು (ಶಾಕುಂತ. ೧೮೯-೫). [ಸಂ.]

**ಅಪರಿಹಾರ್ಯ** (ಗು). ಪರಿಹರಿಸಲು ಸಾಧ್ಯವಿಲ್ಲದ; ತಪ್ಪಿಸಲಾಗದ: ಯೋಚಿಸಿದಂತೆಲ್ಲ ಪ್ರಶ್ನೆಗಳು ಹಿಂಡು ಹಿಂಡಾಗಿ ಅವನ ಮನಸ್ಸಿನಲ್ಲಿ ಮೂಡಿ ಅವು ಅಪರಿಹಾರ್ಯವೆಂಬಂತೆ ಕಂಡುವು (ಪುನರು. ೨೬೭). [ಸಂ.]

**ಅಪರೀಕ್ಷ್ಯ** (ಗು). ಪರೀಕ್ಷೆ ಮಾಡಲಾಗದ; ಪರೀಕ್ಷಿಸಬಾರದ: ಮಾಯೆಯಂತಪರೀಕ್ಷ್ಯ ಸತ್ತ್ವದೀಕ್ಷ್ಯಕೃತಿ (ಮಂಕುಕ. ೧೪೪). [ಸಂ.]

**ಅಪರುದ್ಧ** (ಗು). ೧. ನಿವಾರಿಸಿದ. ೨. ತಡೆಗಟ್ಟಿದ; ತಡೆಯಲ್ಪಟ್ಟ: ಅಘಮೂಲೋದ್ಧರಣಂಗೆಯ್ವವೊಲಪರುದ್ಧಾಸ್ರವನಾತ್ಮಕೇಶತತಿಯಂ ಪಱಿದಂ (ಶಾಂತಿಪು. ೧೧-೧೦೪). [ಸಂ.]

**ಅಪರೂಪ$_1$**, ಅಪರೂಪು, ಅಪುರೂಪು (ಗು). ೧. ಅಪೂರ್ವವಾದ; ಸಾಮಾನ್ಯವಾಗಿ ದೊರೆಯದ; ವಿರಳವಾದ: ಅಭಿಜ್ಞನಾದ ಮಹಾಮಂತ್ರಿಯು ಅಪರೂಪವೆಂತ ಅರಿಯಬೇಕು (ಕಥಾಮಂ. ೪-೭೬); "ತುಷಾರ ನಗರದಲ್ಲಿ ಕುಲೀನೆಯರಾದ ಕನ್ನೆಯರು ಅಪರೂಪವಲ್ಲ . . . ಎಂದು ಉತ್ತರ ಕೊಟ್ಟನು (ಆರ್ಯಕ. ೮೪). (ನಾ). ೨. ಅಪೂರ್ವತೆ; ವಿರಳತೆ: ಪ್ರಾಣದಂಗಸಖನಿಂದು ತಾನು ಬಂದನಪರೂಪದಿಂದಲೆ (ಕುಚೇಲೋ. ೧೧೩). **ಅಪರೂಪು: ೧.** (೬). **ಅಪುರೂಪು: ೧.** ಇಂದು ಪರ್ವವು ಲಕ್ಷ್ಮೀವಾಸರವೆಂದು ಅಪುರೂಪಾದ ಭಕ್ಷವ ಸುಂದರದಿ ವಿರಚಿಸುವರವನೀಸುರರು (ಜಿನಭಾ. ೧೬-೪). [< ಸಂ. ಅಪೂರ್ವ]

**ಅಪರೂಪ$_2$** (ಗು). ೧. ರೂಪವಿಲ್ಲದ. ೨. ರೂಪಗೆಟ್ಟ. [ಸಂ.]

**ಅಪರೂಪದರ್ಶನ** (ನಾ). ಎಷ್ಟೋ ಕಾಲದ ಮೇಲೆ ಆದ ಭೇಟಿ; ಅಪೂರ್ವವಾದ ಭೇಟಿ. [ಅಪರೂಪ$_1$ + ದರ್ಶನ]

**ಅಪರೂಪದಿನ** (ನಾ). ಎಷ್ಟೋ ಕಾಲಕ್ಕೊಮ್ಮೆ ಒದಗುವ ದಿವಸ; ಅಪೂರ್ವವಾದ ದಿವಸ: ಇಂತಹ ಅಪರೂಪದಿನಗಳಲ್ಲಿ ಪ್ರಭುಗಳೂ ಇವರ ಸಂಗಡ ಸೇರಿ, ಪಾದಚಾರಿಗಳಾಗಿ ಬೆಟ್ಟಗುಡ್ಡಗಳನ್ನು ಹತ್ತಿ ಇಳಿದು, ಅರಣ್ಯಗಳಲ್ಲಿ ಸಂಚರಿಸಿ (ಶಾಂತಲಾ. ೧೨೨). [ಅಪರೂಪ$_1$ + ದಿನ]

**ಅಪರೂಪಮನುಷ್ಯ** (ನಾ). ತುಂಬ ಒಳ್ಳೆಯ ವ್ಯಕ್ತಿ; ಸಾಮಾನ್ಯವಾಗಿ ದೊರೆಯದ ವ್ಯಕ್ತಿ. [ಅಪರೂಪ$_1$ + ಮನುಷ್ಯ]

**ಅಪರೂಪು** 'ಅಪರೂಪ$_1$' ನೋ.

**ಅಪರೂಪುತನ** (ನಾ). ಅಪೂರ್ವವಾಗಿರುವುದು; ಸಾಮಾನ್ಯವಾಗಿ ದೊರೆಯದಿರುವಿಕೆ. [ಅಪರೂಪು (< ಅಪರೂಪ$_1$) + -ತನ]

**ಅಪರೋಕ್ಷ** (ಗು). ೧. ಪರೋಕ್ಷವಲ್ಲದ; ಇಂದ್ರಿಯಗಳಿಗೆ ಗೋಚರಿಸುವ; ಪ್ರತ್ಯಕ್ಷವಾದ. (ನಾ). ೨. ಸಾಕ್ಷಾತ್ಕಾರ: ಅರ್ಣವವ ಕಣ್ಣಿಂದೆ ಕಂಡ ಬೆರಗಾದೀತೆ ವರ್ಣನೆಯನೋದಿದೊಡೆ, ತೆರೆಯನೆಣಿಸಿದೊಡೆ? ಪೂರ್ಣವಸ್ತುಗ್ರಹಣವಪರೋಕ್ಷದಿಂದಹುದು ನಿರ್ಣಯ ಪ್ರತ್ಯಕ್ಷ (ಮಂಕುಕ. ೬೮೮). [ಸಂ.]

**ಅಪರೋಕ್ಷಜ್ಞಾನ** (ನಾ). ಮನಸ್ಸಾಕ್ಷಾತ್ಕಾರದಿಂದ ಪಡೆದ ಜ್ಞಾನ: ಅಪರೋಕ್ಷಜ್ಞಾನವು ಅತಿಪರಿಪಕ್ವ ಭಕ್ತಿಯೋಗಕ್ಕೆ ಸಾಧನವು (ಗೀತಾಸಂ. ೧೪೦). [ಅಪರೋಕ್ಷ + ಜ್ಞಾನ]

**ಅಪರೋಕ್ಷಜ್ಞಾನಿ** (ನಾ). ಅಪರೋಕ್ಷಜ್ಞಾನವುಳ್ಳವನು. [ಸಂ. ಅಪರೋಕ್ಷಜ್ಞಾನಿನ್]

**ಅಪರೋಕ್ಷಾನುಭೂತಿ** (ನಾ). ಅಪರೋಕ್ಷವಾದ ಅನುಭವ. [ಅಪರೋಕ್ಷ + ಅನುಭೂತಿ]

**ಅಪರ್ಣ** (ಗು). ಎಲೆಯಿಲ್ಲದ. 'ಅಪರ್ಣಾನ್ವಿತ' ಪರಾ. [ಸಂ.]

**ಅಪರ್ಣಾನ್ವಿತ** (ಗು). ೧. ಪಾರ್ವತಿಯೊಡನೆ ಕೂಡಿದ. ೨. ಎಲೆಯಿಲ್ಲದ. ೧, ೨ : ಆ ಮಹಾವನಂ . . . ಸ್ಥಾಣುನಿವಸನಮಾಗಿಯುಂ ಅಪರ್ಣಾನ್ವಿತಮಲ್ತು (ಚಂದ್ರಪ್ರ. ೫–೫೨ ವ). [ಸಂ. (ಅಪರ್ಣಾ + ಅನ್ವಿತ, ಅ– + ಪರ್ಣ + ಅನ್ವಿತ)]

**ಅಪರ್ಣೆ** (ನಾ). (ತಪಸ್ಸಿನ ಸಮಯದಲ್ಲಿ) ಎಲೆಗಳ ಆಹಾರವನ್ನು ಕೂಡ ತೊರೆದವಳು ; ಪಾರ್ವತಿ : ಮಹಾವಟವೃಕ್ಷದ ಕೆಳಗೆ ವಿಪುಳ ತಪದಿಂದೆ ಅಪರ್ಣೆಯೊಪ್ಪುತ್ತುಮಿರೆಯಿರೆ (ಗಿರಿಕ. ೯–೫೮ ವ). [ಸಂ. ಅಪರ್ಣಾ]

**ಅಪರ್ಯಂತ** (ಗು). ಮೇರೆಯಿಲ್ಲದ ; ಎಲ್ಲೆಯಿಲ್ಲದ : ಇಂತುಪಮಾಕ್ರಮುಮನಪರ್ಯಂತ ಗುಣಗಣಮನಱಿದು ಪೇೞ್ಗೆ ಕವೀಶರ್ (ಕವಿರಾ. ೩–೯೦). [ಸಂ.]

**ಅಪರ್ಯಾಪ್ತ** (ಗು). ೧. ಸಾಲದ; ತಕ್ಕಷ್ಟಿಲ್ಲದ. (ನಾ). ೨. ಸಮರ್ಥವಾದದ್ದು : ಭಾವಕ್ಕೆ ಭಾಷೆ ಅಪರ್ಯಾಪ್ತವಲ್ಲ (ಸಮಾಲೋ. ೩೮). ೩. [ಜೈನ] ತನ್ನ ಶಕ್ತಿಯು ಪೂರ್ಣಗೊಳ್ಳಲಿಕ್ಕೆ ತಕ್ಕಷ್ಟು 'ದ್ರವ್ಯ'ವನ್ನು ಸ್ವೀಕರಿಸದಿರುವುದು : ಸಕಾಲದಲ್ಲಿ ಹೆರಿಗೆಯಾಗದೆ ಹೊಟ್ಟೆಯಿಂದ ಹೊರಬೀಳುವ ಭ್ರೂಣವೂ ಅಪರ್ಯಾಪ್ತವೆನಿಸುತ್ತದೆ (ಜೈನಪ. ೨೯೪). ೪. ಮೇರೆಯಿಲ್ಲದ ; ಎಲ್ಲೆಯಿಲ್ಲದ. [ಸಂ.]

**ಅಪರ್ಯಾಪ್ತಕ** (ನಾ). = ಅಪರ್ಯಾಪ್ತ ೩ : ಆ ನರಕಂಗಳೇೞಱಿಂ ಕೆಳಗೆ ನಿತ್ಯನಿಗೋದಮೆಂಬ ನರಕಮಿರ್ಪುದು ಅಲ್ಲಿ ಸೂಕ್ಷ್ಮಬಾದರ ಪರ್ಯಾಪ್ತಕಾಪರ್ಯಾಪ್ತಕ ಭೇದದಿಂ ಸೂಕ್ಷ್ಮ ವನಸ್ಪತಿ ಕಾಯಂಗಳ್ . . . ಸಾಯುತ್ತುಂ ಪುಟ್ಟುತ್ತುಮಿರ್ಕುಂ (ಮಲ್ಲಿಪು. ೧೩–೧೫೪). [ಸಂ.]

**ಅಪರ್ಯಾಪ್ತಿ** (ನಾ). ೧. ಅಸಂಪೂರ್ಣತೆ. ೨. [ಜೈನ] (ಆಹಾರಾದಿಗಳನ್ನು ಸ್ವೀಕರಿಸಲು) ಶಕ್ತಿಯಿಲ್ಲದಿರುವಿಕೆ; ಅಸಾಮರ್ಥ್ಯ : ಅಪರ್ಯಾಪ್ತಿನಾಮಕರ್ಮ : ಇದರಿಂದ ಪರ್ಯಾಪ್ತಿಗಳು ಪೂರ್ಣವಾಗದೆ ಇರುವುವು (ಜೈನಪ. ೩೭೬). [ಸಂ.]

**ಅಪಲಗ್ನ** (ನಾ). ಕೆಟ್ಟ ಲಗ್ನ ; ಅಶುಭವಾದ ಗಳಿಗೆ (ಶ). [ಸಂ.]

**ಅಪಲಪನ** (ನಾ). = ಅಪಲಾಪ. 'ಅಪಲಪಿಸು' ಪರಾ. [ಸಂ.]

**ಅಪಲಪಿಸು** (ಕ್ರಿ). ೧. ಉಂಟಾದುದನ್ನು ಇಲ್ಲವೆನ್ನು ; ಇಲ್ಲದ್ದನ್ನು ಉಂಟೆನ್ನು : ಪೆಱತೊಂದು ವಸ್ತುವಿನ ಧರ್ಮಮನಾರೋಪಿಸಿ ಪೇೞ್ವುದರ್ಕಾಗಿ ಮುನ್ನಿರ್ಪ ಧರ್ಮಮನಪಲಪಿಸುವುದು ಶುದ್ಧಾಪಹ್ನವಾಲಂಕಾರಮೆನಿಪುದು (ಅಪ್ರತಿ. ೪೩–೧೮) ; ಇರುವುದನ್ನು ಇಲ್ಲವೆಂದು ಅಪಲಪಿಸುವುದುಂಟು (ಭಾರಮಿಾ. ೩೦೩) ; ಉತ್ತರವನ್ನು ಹೇಗೆ ಅಪಲಪಿಸಿ ಹೇಳೋಣವೆಂದು ದೊಂಬ ತನ್ನ ಮನಸ್ಸಿನಲ್ಲಿಯೇ ಯೋಚಿಸುತ್ತಾ ನಿಂತಿರಲು (ಅದೂಟ. ೧೭೯). ೨. ನಿರಾಕರಿಸು : ಈ ಸೇವೆಗೆ ಆರು ಅಪಲಪ್ಸಿ[ಪಿಸಿ]ದವರು ದೇವರ ಪಾದಕ್ಕೆ ತಪ್ಪಿದವರು (ಎಕ. VI, ಕಡೂರು.೧೪–೮ ; ?). [ಅಪಲಪನ + –ಇಸು₃]

**ಅಪಲಾಪ** (ನಾ). ೧. ತಪ್ಪುಮಾತು ; ಉಂಟಾದುದನ್ನು ಇಲ್ಲವೆನ್ನುವುದು ; ಇಲ್ಲವಾದುದನ್ನು ಉಂಟೆನ್ನುವುದು ; ಅಸತ್ಯ ; ಮುಚ್ಚುಮರೆಯ ಮಾತು : ಯಾರಾದರೂ ತನ್ನ ಅಪಲಾಪವನ್ನು ಕೇಳಿದರೋ ಎಂದು ಸುತ್ತಲೂ ನೋಡಿದ (ಚೀನಾಬಾ. ೧೫೨). ೨. ಅರ್ಥವಿಲ್ಲದ ಮಾತು. 'ಅಪಲಾಪಿಸು' ಪರಾ.

ಅಪಲಾಪಮಾಡು = ಅಸತ್ಯವನ್ನು ಹೇಳು ; ಸುಳ್ಳಾಡು : ಮಂಡಲೇಶ್ವರನಿಗೆ ಕಳುಹಿಸಿದ ಪ್ರತ್ಯುತ್ತರದಲ್ಲಿ ಅಪಲಾಪಮಾಡಿದ ದೋಷವೊಂದು (ಶ್ರೀರಾಯ. ೨೬೯). [ಸಂ.]

**ಅಪಲಾಪಗೊಳಿಸು** (ಕ್ರಿ). ಇರುವುದನ್ನು ಇಲ್ಲವಾಗಿಸು ; ಬಚ್ಚಿಡು ; ಇಲ್ಲವೆನ್ನು : ನಿಹ್ನವ = ಅ ಪ ಲಾ ಪ ಗೊ ಳಿ ಸು ವಿ ಕೆ (ಸಿದ್ಧಾಂತಿ. ಶ). ಅಪಲಾಪಿಸು ಹೋ. [ಅಪಲಾಪ + ಕೊಳ್₁ + –ಇಸು₃]

**ಅಪಲಾಪನ** (ನಾ). = ಅಪಲಾಪ ೧. : ಕಾಪುರುಷನೇ ಧೂರ್ತನೇ ಅಪಲಾಪನಾಲಾಪನೆ ದುರುಳನೇ (ಬಸಪು. ೪೫–೨೨). [ಸಂ.]

**ಅಪಲಾಪನೆ** (ನಾ). = ಅಪಲಾಪ ೧. : ಪಾಪಕರ್ಮವೆ ಧರ್ಮವುಲಿವಪಲಾಪನೆಯೆ ಜಪವಾಡುವದುರಾಲಾಪವೇ ಮಂತ್ರವು ನಿನಗೆ (ಬಸಪು. ೪೧–೯). [ಸಂ. ಅಪಲಾಪನಾ]

**ಅಪಲಾಪಿಸು** (ಕ್ರಿ). ೧. ಇರುವುದನ್ನು ಇಲ್ಲವೆನ್ನು ; ಇಲ್ಲವಾದುದನ್ನು ಉಂಟೆನ್ನು ; ಸುಳ್ಳು ಹೇಳು : ನೆತ್ತದಲಿ ಭಕ್ತಂಗೆ ಹಿರಿದಹ ವಿತ್ತಮಂ ಸೋಲ್ತೀಯಲೊಲ್ಲದೆ ಕೃತ್ತಿಧರನದೆಯಿದೆಯೆನುತ್ತಪಲಾಪಿಸುವುದರಿದು (ಬಸಪು. ೪೪–೬೧) ; ಶಪಥವ ಗೆಯ್ದುದನಪಲಾಪಿಸುವುದಿದು ನೃಪಧರ್ಮವೇನೋ ನರೇಂದ್ರ (ಶಾಕುಂತ. ೬೮ ಅಡಿಟ). ೨. ಅರ್ಥವಿಲ್ಲದ ಮಾತುಗಳನ್ನು ಆಡು ; ಕೂಗಿಕೊಳ್ಳು : ಪೋಪನಲ್ಲಿಯೆ ನಿಲುವನ್ನೈದಪಲಾಪಿಸುವ [ಪಾಠಾಂ. ಸುತ] ಮರುಳಾದ ತೆಜದಿಂದಾ ಪೊಳಲನಾತಂ ಪೊಱಮಡುವ ನೋಡುವನು ಮತ್ತೆ (ಬಸಪು. ೪೫–೩೩). [ಅಪಲಾಪ + – ಇಸು₃]

**ಅಪಲಿಖಿತ** (ನಾ). ತಪ್ಪು ಬರವಣಿಗೆ : ಕಾಂಚಿಯದದು ಎಂಬುದು ಕಾಂಚಿಯ ದಾಮ ಎಂಬುದರ ಅಪಲಿಖಿತವಿರಬಹುದು (ಕನ್ನನಿ. ೧೯೪). [ಸಂ.]

**ಅಪಲೆ** (ಅ). (ಉಕ) ಅಂತೆ; ಹಾಗೆ : ನಾ ಮಾಡಿದ ಕೆಲಸದಪಲೆ ಮಾಡು (ರೂಢಿ). [?]

**ಅಪವರಕ** (ನಾ). ೧. ಕೊಠಡಿ ; ಗರ್ಭಗೃಹ; ಒಳಮನೆ : "ಅಪವರಕಂ, ಗರ್ಭಗೃಹಂ – ಈ ೨ ಓವರಿ" (ಹಲಾಯು. ೪೯–೧೩೭). ೨. ವಾತಾಯನ ; ಗವಾಕ್ಷದ ರಂಧ್ರ. [ಸಂ.]

**ಅಪವರ್ಗ** (ನಾ). ೧. ತೊರೆಯುವುದು ; ಬಿಡುವುದು ; ತ್ಯಾಗ : ೨. ಮೋಕ್ಷ ; ಬಿಡುಗಡೆ : ಭವ್ಯಜನಕೆಲ್ಲಂ ಶಾಂತಿಮಿಚ್ಛಂತಿ ಸಾಧವ ಎಂಬುತ್ತಮಸಾಧುವರ್ಗಮೆ ನೆರಂ ಸ್ವರ್ಗಾಪವರ್ಗಂಬರಂ (ಅಜಿಪು. ೧–೫) ; ಎರವಹುದೆ ಸ್ವರ್ಗಾಪವರ್ಗದ ಸಿರಿಯದೆಂಬುದನಱಿದು ನಡೆವಂಗರಿದೆನಿಸುವದದಾವುದೈ (ಕುವ್ಯಾಉ. ೪–೭೭). ೩. ಕೆಲಸದ ಪೂರೈಕೆ ; ಕಾರ್ಯದ ಸಮಾಪ್ತಿ. ೪. ನಿಯಮಕ್ಕೆ ಹೊರತಾದುದು ; ವರ್ಗಕ್ಕೆ ಸೇರದುದು. ೫. ಪವರ್ಗಕ್ಕೆ ಸೇರದ ಅಕ್ಷರ ; ಪವರ್ಗದ ಅಕ್ಷರವಿಲ್ಲದೆ ಇರುವ ಶಬ್ದ ಅಥವಾ ವಾಕ್ಯ. ೬. ಎಸೆಯುವುದು ; ಎಸುಗೆ. ೭. ದಾನ ; ಕೊಡುಗೆ.

ಅಪವರ್ಗವಾಗು = ಸಾಯು ; ಕೊನೆಗಾಣು (?) : ಅಲ್ಲಿ ನಾನಾ ವಿಕಾರಂಗಳಾದಾವು ಎಪ್ಪತ್ತೇಳು ದುರ್ಗದವರು ಅಪವರ್ಗವಾದಾರು (ಕಾಲಸಂ. ೮). [ಸಂ.]

**ಅಪವರ್ಗಪದ** (ನಾ). ಮೋಕ್ಷಪದವಿ : ಶತಬಳನಂ ಸಹಸ್ರಬಳ ಖೇಚರನಿಟ್ಟು ತಪೋನಿಯೋಗ ನಿಶ್ಚಿತಮನನಾಗಿ ಸಂದನಪವರ್ಗಪದಕ್ಕೆ (ಆದಿಪು. ೨–೧೯). [ಅಪವರ್ಗ + ಪದ]

**ಅಪವರ್ಗಮಾರ್ಗ** (ನಾ). ಮೋಕ್ಷಮಾರ್ಗ : ಬೋಧಿಪದದೊಳ್ ನಿಲಲೆಂದಪವರ್ಗಮಾರ್ಗದಗ್ರೇಸರನಾಗಲೆಂದು ಬಗೆದು (ಶಾಂತಿಪು. ೯-೬೦) ; ಮುನಿಕುಂಜರಂ ತದೇಕಾಂತದಿನಿಂತಪವರ್ಗಮಾರ್ಗದೊಳ್ ನಡೆದು (ಸುಕುಮಾ. ೪-೩). [ಅಪವರ್ಗ + ಮಾರ್ಗ]

**ಅಪವರ್ಗಲಕ್ಷ್ಮಿ** (ನಾ). ಮೋಕ್ಷಶ್ರೀ ; ಮೋಕ್ಷ ಸಂಪತ್ತು : ಸಂಸಾರಮುಂ ದಾಂಟುವೂರ್ಜಿತಪುಣ್ಯಂಗಪವರ್ಗಲಕ್ಷ್ಮಿವರೆಗಂ ಸಂಸಾರಸಾರೋದಯೋದಿತ ಮಾಣಿಕ್ಯಜಿನಸ್ತವಾವಳಿ ಜಯಂ (ಆದಿಪು. ೧೬-೧೧). [ಅಪವರ್ಗ + ಲಕ್ಷ್ಮಿ]

**ಅಪವರ್ಗಸಂಪತ್ತು** (ನಾ). = ಅಪವರ್ಗಲಕ್ಷ್ಮಿ: ಅಪವರ್ಗಸಂಪದ್ವಿಳಾಸಿನೀ ಲಲಾಮನು . . . ಎನಿಸಿದೀ ತ್ರಿಭುವನೈಕಭೂಷಣವಿಳಾಸಂಗೆ (ಪುಷ್ಪಪು. ೧೧-೭೨೪). [ಅಪವರ್ಗ + ಸಂಪತ್ತು]

**ಅಪವರ್ಜನ** (ನಾ). ೧. ಬಿಡುವುದು ; ತೊರೆಯುವುದು ; ತ್ಯಾಗ. ೨. ದಾನ ; ಕೊಡುಗೆ ; ದತ್ತಿ. ೩. ಮೋಕ್ಷ. ೪. ವಾಗ್ದಾನವನ್ನು ನೆರವೇರಿಸುವುದು ; ಋಣ ತೀರಿಸುವುದು. [ಸಂ.]

**ಅಪವರ್ತನ** (ನಾ). ೧. ತೆಗೆಯುವುದು ; ಒಂದೆಡೆಯಿಂದ ಮತ್ತೊಂದೆಡೆಗೆ ಒಯ್ಯುವುದು. ೨. ಕಸಿದುಕೊಳ್ಳುವುದು. ೩. ಸಂಗ್ರಹ ಮಾಡುವುದು. ೪. [ಗಣಿತ] ಭಾಜ್ಯದಲ್ಲಿ ಸೇರಿರಬಹುದಾದ ಗುಣ್ಯ ಗುಣಕಗಳ ವಿಂಗಡಣೆ ; ಭಾಜ್ಯವನ್ನು ನಿಶ್ಶೇಷವಾಗಿ ಭಾಗಿಸತಕ್ಕ ಸಂಖ್ಯೆ. ಉದಾ— ಹದಿನೈದಕ್ಕೆ ಐದು ಮತ್ತು ಮೂರು ಅಪವರ್ತನಗಳು : ಎರಡು ಸಂಖ್ಯೆಗಳ ಮಹತ್ತಮ ಸಾಮಾನ್ಯ ಅಪವರ್ತನವನ್ನು ಕಂಡು ಹಿಡಿಯುವ ಕ್ರಮವು ಯೂಕ್ಲಿಡ್ನನಿಂದ ಬಂದಿತೆಂದು ನಂಬಲಾಗಿದೆ (ಗಣಿಚ. ೩೪). [ಸಂ.]

**ಅಪವರ್ತಿಸು** (ಕ್ರಿ). ೧. ಹೋಗಲಾಡಿಸು ; ದೂರಮಾಡು : ಗಂಡುಗೆಯ್ಯದಿಜೀವಿಟ್ಟಗೆ ಜಟ್ಟಿಗನಾಗಿ ಬಾಚ್ಬುದತ್ಯುತ್ತಮ ಪಕ್ಷಮಾಂತೊಡಪವರ್ತಿಸುಗುಂ ಕ್ಷಣದಿಂ ನಿಷೇಕಮಂ (ಪಂರಾಮಾ. ೮-೨೬). ೨ [ಗಣಿತ] ಅಪವರ್ತನಗಳಾಗಿ ವಿಂಗಡಿಸು. [ಅಪವರ್ತನ + -ಇಸು]

**ಅಪವರ್ತ್ಯ** (ನಾ). ೧. [ಗಣಿತ] ಅಪವರ್ತನಗಳನ್ನು ಹೊಂದಿರುವ ಸಂಖ್ಯೆ ; ಅಪವರ್ತನದಿಂದ ಭಾಗಿಸಬಹುದಾದ ಸಂಖ್ಯೆ ; ನಿಶ್ಶೇಷ ಭಾಜ್ಯ. ಉದಾ— ೧೩೩ ಎಂಬ ಸಂಖ್ಯೆಗೆ ೧೯ ಮತ್ತು ೭ ಅಪವರ್ತ್ಯಗಳಾಗಿವೆ : ಹತ್ತರ ಅಪವರ್ತ್ಯಗಳಾದ ಸಂಖ್ಯೆಯ ಪಟ್ಟಿಯು ಈ ರೀತಿ ಇದೆ (ಗಣಿಚ. ೬೨). ೨. [ಜೈನ] (ಬಾಹ್ಯಕಾರಣಗಳಿಂದ) ಕುಗ್ಗಿರುವುದು ; ಕ್ಷೀಣವಾಗಿರುವುದು. 'ಅಪವರ್ತ್ಯಾಯುಷ್ಯ' ಪರಾ. [ಸಂ.]

**ಅಪವರ್ತ್ಯಾಯುಷ್ಯ** (ನಾ). [ಜೈನ] ಅಪವರ್ತ್ಯದಿಂದ ಕುಗ್ಗಿದ ಆಯುಸ್ಸುಳ್ಳವನು: ಧೃತನಿರಯಜಾರ್ಯವರಚರಮತನು ದಿವೋದ್ಭೂತನನಪವರ್ತ್ಯಾಯುಷ್ಯಸ್ಥಿತರುಚಿೀದ ಸಕಲ ತತ್ತ್ವಪ್ರತತಿಗಳುಪಸಂಹೃತಾಪವರ್ತ್ಯಾಯುಷ್ಯರ್ (ಸುಕುಮಾ. ೮-೧೪) ; ಆಹಾರೋಚ್ಛ್ವಾಸನಿರೋಧವೇದನಾಭಯ ರಕ್ತಕ್ಷಯಸಂಕ್ಲೇಶ ವಿಷಶಸ್ತ್ರಾದ್ಯುಪಘಾತಹೇತುಭೂತ ಬಾಹ್ಯ ದ್ರವ್ಯ ಸನ್ನಿಧಾನಜನಿತ ಹ್ರಸ್ವತ್ವಂ ಅಪವರ್ತ್ಯಮೆಂಬುದು ; ತದ್ವಂತರ್ ಅಪವರ್ತ್ಯಾಯುಷ್ಯರ್ (ತತ್ತ್ವಪ್ರ. ೧೧೯). [ಅಪವರ್ತ್ಯ + ಆಯುಷ್ಯ]

**ಅಪವಾದ** (ನಾ). ೧. ನಿಂದೆ ; ಕೆಟ್ಟ ಹೆಸರು ; ಅಪಕೀರ್ತಿ : ಇದೇಕೆ ಮಾಡಿದಳೊ ಮುಗ್ಧೆ ಸಹೋದರರೊಳ್ ವಿಭೇದಮಂ ತನಗಪವಾದಮಂ ದಶರಥಂಗೆ ವಿಷಾದಮಂ (ಪಂರಾಮಾ. ೬-೧೧೪). ೨. ಅನ್ಯಾಯವಾದ ಆರೋಪಣೆ ; ದೂರು. ೩. ಹೇಳಿದ್ದನ್ನು ಅಲ್ಲವೆಂದು ವಾದಿಸುವುದು. ೪. ನಿಯಮಕ್ಕೆ ಹೊರತಾದುದು : ಪ್ರಪಂಚವೆಲ್ಲಂ ಮಿಥ್ಯೆ ಬ್ರಹ್ಮವೇ ಸತ್ಯವೆಂಬುದೇ ಅಪವಾದಮಕ್ಕುಂ (ವಿವೇಕ. ೨೧).

**ಅಪವಾದವಾಗು** = ನಿಯಮಕ್ಕೆ ಹೊರತಾಗು, —ಬೇರೆಯಾಗು: ಮಕ್ಕಳ ಜಗತ್ತಿಗೆ ತಾಯಿಯಾಗಿ, ಕುಟುಂಬದ ಕೇಂದ್ರವಾಗಿರುವ ಮಹಿಳೆಯೂ ಇವಕ್ಕೆ ಅಪವಾದವಾಗಿಲ್ಲ (ಕರ್ನಾಟ. ೧). [ಸಂ.]

**ಅಪವಾರಣ** (ನಾ). ೧. ಮುಚ್ಚುಕ ; ಮರೆ ; ಆವರಣ. ೨. ಮುಚ್ಚಿಡುವುದು ; ಮರೆಸಿಡುವುದು. ೩. ಅಂತರ್ಧಾನ ; ಮರೆಯಾಗುವುದು. ೪. ನೆವ : "ವ್ಯವಧಾನಮಪವಾರಣಂ ತಿರೋಧಾನಮೆನೆ ನೆವನಕ್ಕುಂ" (ಮಂಗರಾ. ೧೨೫-೧೩). [ಸಂ.]

**ಅಪವಾರಿತ** (ಗು). ೧. ಮುಚ್ಚಲ್ಪಟ್ಟ ; ಮರೆಮಾಡಿದ. (ನಾ). ೨. ಅಂತರ್ಧಾನವಾದ ವಸ್ತು. ೩. [ನಾಟ್ಯ] ರಹಸ್ಯವಾಗಿ ಮಾತನಾಡುವುದು : "ಅಪವಾರಿತಂ ಹಿಂದಕ್ಕೆ ತಿರುಗಿಕೊಂಡು ಗುಟ್ಟುಮಾತನಾಡುವುದು" (ಕೈಪಿಡಿ. ೨೦೬). [ಸಂ.]

**ಅಪವಾಹ** (ನಾ). ೧. ದೂರ ಒಯ್ಯುವುದು. ೨. ಕಳೆಯುವುದು ; ವ್ಯವಕಲನ. ೩. [ಛಂದ] ಒಂದು ಪಾದದಲ್ಲಿ ಇಪ್ಪತ್ತಾರು ಅಕ್ಷರಗಳುಳ್ಳ ಸಮವೃತ್ತದ ಹೆಸರು : "ಅಪವಾಹಂ – ಮನನನ ನನನ ಸಗಗಂ" (ಛಂದೋಂಬು. ೩. ೨-೨೨೫ ಅಡಿಟ). [ಸಂ.]

**ಅಪವಿತ್ರ** (ಗು). ಅಶುದ್ಧವಾದ ; ಮೈಲಿಗೆಯಾದ : ಅಪವಿತ್ರನುಡಿಯ ನುಡಿವ ಸೂತಕವೇ ಪಾತಕ (ಬಸವ. ೭೮೯) ; ವ್ಯಕ್ತಿಯಾಗಲೀ, ಮದುವೆಯ ಸಂಬಂಧವಾಗಲೀ ಒಮ್ಮೆ ಅಪವಿತ್ರವಾದರೆ ಆ ಜೀವನದಲ್ಲಿ ಮತ್ತೆ ಅದು ಪವಿತ್ರವಾಗಲಾರದು (ನಿಶಿಉ. ೨೩೪). [ಸಂ.]

**ಅಪವಿದ್ಧ** (ಗು). ೧. ನಿರಾಕರಿಸಲ್ಪಟ್ಟ ; ಕಡೆಗಣಿಸಿದ ; ಪರಿಹರಿಸಲ್ಪಟ್ಟ : ". . . ಅಪವಿದ್ಧಂ, ಪರಿಹೃತಂ – ಈ ೭ ಪರಿಹರಿಸಲ್ಪಟ್ಟುದು" (ಹಲಾಯು. ೧೧೭-೧೪). ೨. ಸರಿಯಾಗಿ ರಂಧ್ರವನ್ನು ಕೊರೆಯದ ; ಚೆನ್ನಾಗಿ ಚುಚ್ಚದ. (ನಾ). ೩. ನಾಟ್ಯದಲ್ಲಿ ಒಂದು ನಿಲವಿನಭಂಗಿ. [ಸಂ.]

**ಅಪವೃಜಿನ** (ಗು). ಪಾಪದಿಂದ ಬಿಡುಗಡೆಹೊಂದಿದ ; ಪಾಪವಿಲ್ಲದ : ಶಾಂತಿಜಿನನಪವೃಜಿನಂ (ಶಾಂತಿಪು. ೧೨-೨೩). [ಸಂ.]

**ಅಪವ್ಯಯ** (ನಾ). ೧. ಅನ್ಯಾಯದ ವೆಚ್ಚ ; ಅನವಶ್ಯವಿಲ್ಲದ ಖರ್ಚು ; ದುರ್ವ್ಯಯ : ಕಾಲಕಾಂಚನ ಕೆಲಸಗಳ ವ್ಯರ್ಥ ಅಪವ್ಯಯ ತಪ್ಪಿ ಲೋಕ ಕಲ್ಯಾಣವಾದೀತು (ಜೀವಾತ್ಮ. ೨೧೭). ೨. ಪೋಲುಮಾಡುವುದು ; ಹಾಳುಮಾಡುವುದು : ಅಡುಗೆಯ ಮನೆಯಲ್ಲಿ ಬೇಕಾದುದೆಲ್ಲವನ್ನೂ ಕ್ರಮವಾಗಿ ವ್ಯವಸ್ಥಿತವಾಗಿಡುವುದರಿಂದ ಸಮಯ ಮತ್ತು ಶಕ್ತಿಯ ಅಪವ್ಯಯವನ್ನು ಕಡಿಮೆಮಾಡಬಹುದು (ಅಡುಸಾ. ೧೨). [ಸಂ.]

**ಅಪಶಕುನ** (ನಾ). ಕೆಟ್ಟ ಶಕುನ ; ಅಶುಭ ಶಕುನ : ಗೂಬೆಯಪಶಕುನದ ವಿಕಾರದುಲಿಯನ್ನೇರ್ದು ಕವಿಯುತಿರೆ ಕಾಡುಗಳ್ತಲೆ (ಶ್ರೀರಾಮಾ. ೨೨-೫೮೩). [ಸಂ.]

**ಅಪಶಕ್ತಿ** (ನಾ). ಕೆಟ್ಟ ಶಕ್ತಿ ; ದುಷ್ಟ ಶಕ್ತಿ (?) : ಶಾಪವಲರ ಹಾಕುಯೆಂದು ಕೇಳಿದರು ಅಪಶಕ್ತಿ ತಾನೆ ಹೋಗಬೇಕೆಂದರು (ಎಕ. XVI, ಗುಬ್ಬಿ. ೭೦-೧೨ ; ?). [ಸಂ.]

**ಅಪಶದ**, ಅಪಸದ (ಗು). ೧. ಹೀನಕುಲದ ; ಕೀಳಾದ. (ನಾ). ೨. ದುಷ್ಟ ; ಖೂಳ. **ಅಪಸದ** : ೨. ಕಡು ಕುಪಿತನಾದನು ಹೆಂಗುಸಲ್ಲಿವನಪಸದನು ತೆಗೆ ಕರುಳನೆನುತೊಳಹೊಕ್ಕು ಹೆಣಗಿದನು (ಕುಮಾವ್ಯಾವಿ. ೩-೮೮). [ಸಂ.]

**ಅಪಶಬ್ದ** (ನಾ). ೧. ಅಶುದ್ಧವಾದ ಪದ ; ವ್ಯಾಕರಣ ನಿಯಮಕ್ಕೆ ವಿರೋಧವಾದ ಮಾತು : ಎಂದೂ ಅಪಶಬ್ದ ಮಾತಾಡುವುದಿಲ್ಲ (ಮುಂಬಯಿ. ೪-೭೪). ೨. (ಅಲಂ) ಕೆಟ್ಟ ಮಾತು : ಸರೋಜಳ ವಿಚಾರವಾಗಿ ಒಂದು ಅಪಶಬ್ದ ಯಾರ ಬಾಯಿಂದಲೂ ಬರುತ್ತಿರಲಿಲ್ಲ (ಮಹಾಗ. ೩೬೩). [ಸಂ.]

**ಅಪಸಂಸ್ಕಾರ** (ನಾ). ಅಯೋಗ್ಯವಾದ ಸಂಸ್ಕಾರ. [ಸಂ.]

**ಅಪಸದ** 'ಅಪಶದ' ನೋ.

**ಅಪಸನ್ಮುಗ್ಧ** (ಗು). ಮುಗ್ಧತೆಯಿಲ್ಲದ; ಪ್ರೌಢತನದಿಂದ ಕೂಡಿದ: ಲಳಿತ ಮಧುರಂ ಲಜ್ಜಾಳೋಳಂ ಸ್ಮರಾಕುಳಿತಂ ಮನಂ ದಳಿತಮಪಸನ್ಮುಗ್ಧಂ ಸ್ನಿಗ್ಧಂ ವಿಳೋಕನಮೋಪಳಾ (ಪಂಪಭಾ. ೪–೭೭). [ಸಂ.]

**ಅಪಸರ**$_1$ (ನಾ). ಅಪಸ್ವರ; ವಿಕಾರವಾದ ಧ್ವನಿ. [ಸಂ. ಅಪಸ್ವರ]

**ಅಪಸರ**$_2$ (ನಾ). ಕ್ಷಮೆಬೇಡುವುದು: ನನ್ನಿಯುಳ್ಳ ಮಹಂತನಪಸರವಂ ನುಡಿಯನೇ (ಬಸಪು. ೪೯–೧೧). [ಸಂ.]

**ಅಪಸರಣ,** ಅಪಸರಣೆ (ನಾ). ೧. ಹಿಮ್ಮೆಟ್ಟುವುದು; ಪಲಾಯನ; ಹೊರಟುಹೋಗುವುದು: "ಪಿಂಗಿತು ಪೆಡಮೆಟ್ಟತೆನ್ನಲಪಸರಣಂ" (ಕವಿಕಂ. ೨೫೩); ಶತ್ರುಗಳಂ ವಶಂಮಾಡಲಾಱದೆ ಅಪಸರಣಮೇ ಶರಣಮಾಗಿರ್ದುದುವಂ ಪ್ರಯೋಗಿಸದೆ (ಪಂಚತಂ. ೪೦–೪); ಅಳುಕಿದನೆ ರಥ ಮುಗ್ಗಿದರೆ ಕಳವಳಿಸಿದನೆ ಶಲ್ಯಾಪಸರಣಕೆ (ಕುವ್ಯಾಕ. ೨೬–೪೮). ೨. ಪಕ್ಕಕ್ಕೆ ಸರಿಸುವುದು. ೩. (ಕಾಲ) ಕಳೆಯುವುದು: ಕವಿತಾಭಿಮಾನದಿಂ ಮೇಣವಿರಳವೇಳಾಪಸರಣ ಲೀಲೆಯಿನಲ್ತೇ ಭವಹರಚರಿತಂ (ಚಂದ್ರಪು. ೧–೬೩). ೪. ಹಿಂದೆ ಬೀಳುವುದು; ದುರ್ದಶೆ: ಅರಿಗಳಭ್ಯುದಯವನು ನಮ್ಮಪಸರಣವನು ಕಿವಿಯಾರೆ ಕೇಳುವ ಪರಮಸುಕೃತಿಗಳಾವು (ಕುವ್ಯಾಕ.೧–೧೬). ೫. ದಾರಿ ತಪ್ಪುವುದು; ತಪ್ಪಿ ನಡೆಯುವುದು. **ಅಪಸರಣೆ:** ೪. ತರಣಿಕುಲ ಚಿತ್ತೈಸು ನುಡಿಗಪಸರಣೆಯುಂಟೇ ತನಗೆನಲು (ತೊರರಾ. ೩–೧೧–೫೧). [ಸಂ. ಅಪಸರಣ]

**ಅಪಸರಣಂಗೆಯ್** (ಕ್ರಿ). ಹಿಂದೆಗೆ; ಹೊರಟುಹೋಗು; ಹಿಮ್ಮೆಟ್ಟು: ಅಪಸರಣಂಗೆಯ್ದನತ್ತಲ್ ಷಡಾಸ್ಯಂ (ಜಗವಿ. ೧೮–೪೨).
[ಅಪಸರಣ + ಗೆಯ್ (< ಕೆಯ್$_1$)]

**ಅಪಸರಣೆ** 'ಅಪಸರಣ' ನೋ.

**ಅಪಸರಿ** (ನಾ). ತಪ್ಪಿ ನಡೆಯುವವಳು; ದಾರಿಬಿಟ್ಟು ನಡೆಯುವ ಹೆಂಗಸು; ದುರ್ಮಾರ್ಗೆ: ಅಪಸರಿಯರುಱೆ ಕುಲಗೆಡಿಕೆಯರು ಕೃಪಣೆಯರು . . . ಖೂಳೆಯರು (ಬಸಪು. ೪೦–೫೪).
[ಸಂ. ಅಪಸರೀ ?]

**ಅಪಸರ್ಪ** (ನಾ). ಬೇಹುಗಾರ; ಗೂಢಚಾರ: "ಅಪಸರ್ಪಃ, ಚರಃ, ಚಾರಃ – ಈ ೩ ಅರಸಾಳು" (ಹಲಾಯು. ೭೦–೨೭೧). [ಸಂ.]

**ಅಪಸರ್ಪಣ** (ನಾ). ಹಿಂದೆ ಹೋಗುವುದು; ಹಿಮ್ಮೆಟ್ಟುವುದು; ದೂರ ಹೋಗುವುದು. (ಕಿ). [ಸಂ.]

**ಅಪಸವ್ಯ** (ನಾ). ೧. ಎಡವಲ್ಲದ್ದು; ಬಲಗಡೆ: ಅಸುರವಡೆಯನ ನಿಲತನೂಜಂ ಸವ್ಯಾಪಸವ್ಯಮೆಚ್ಚು ರಣವ್ಯಸನಿಪಿಶಾಚವಡೆಗೆ ಬಾಣಸುಗೆಯ್ದಂ (ಪಂರಾಮಾ. ೧೩–೧೩೧); ಕೈಯಲ್ಲಿ ಮಾರ್ಗದರ್ಶನ ಪುಸ್ತಕ, ಕೊರಳಲ್ಲಿ ಅಪಸವ್ಯವಾಗಿ ಇಳಿಬಿದ್ದಿರುವ ಕ್ಯಾಮರಾ . . . ಇವನೊಬ್ಬ ಪ್ರವಾಸಿ (ನಂಟರು. ೧೧೫). ೨. ವೈಚಿತ್ರ್ಯ: ಈ ಅಪಸವ್ಯವನ್ನೆಲ್ಲ ಕಂಡು ಜುಗುಪ್ಸೆಪಟ್ಟುಕೊಂಡು (ಭಾಷಾಶಾ. ೯೪). ೩. (ಕಾಳಗದಲ್ಲಿ) ಒಂದು ಬಗೆಯ ಸಂಚಾರಕ್ರಮ: ಗುರುಮೋಹರವನಪಸವ್ಯದಲಿ ವಂಚಿಸಿ ಮುರುಹಿದನು (ಕುವ್ಯಾದ್ರೋ. ೧೦–೧); ವಿಲಸದಪಸವ್ಯದಲಿ ರಿಪು ಮಂಡಳಿಸಿ ಹೊಯ್ದನು (ಕುವ್ಯಾಗ. ೬–೩೧). ೪. ಅಶುಭವ್ಯಕ್ತಿ (ಉಕ): ಮದುವೆ ಗೊತ್ತುಮಾಡಲು ಹೊರಟಾಗ ದಾರಿಯಲ್ಲಿ ಈ ಅಪಸವ್ಯ ಬೇರೆ ಬಂತು (ರೂಢಿ). [ಸಂ.]

**ಅಪಸಹಾಯ** (ನಾ). ಪ್ರತಿಕೂಲ; ಅಡ್ಡಿ: ಅವರಿಂದ ಯಾವ ಅಪಸಹಾಯವೂ ಆಗುತ್ತಿಲ್ಲ – ಅಷ್ಟಕ್ಕೇ ಸಂತೋಷಪಟ್ಟುಕೊಳ್ಳಬೇಕು (ಅನಾಥೆ. ೨೧). [ಸಂ.]

**ಅಪಸಹ್ಯ** (ಗು). ೧. ಅಸಹ್ಯವಾದ; ಸಹಿಸಲಾಗದ. (ನಾ). ೨. ಅಸಹ್ಯವಾದುದು; ಸಹಿಸಲಾಗದುದು: ಭೀಕರಮರಣ್ಯಂ . . . ಮಳೆಗಾಲವೆಡೆಬಿಡದೆ ಹಿಡಿದು ಹೊಡೆಯುವ ಜಡಿಯ ಕರೆಕರೆಯ ಕಾಟದಿಂದಪಸಹ್ಯಮಲ್ತೆ (ಶ್ರೀರಾಮಾ. ೮೯–೨೯೮). [ಸಂ.]

**ಅಪಸಾಕ್ಷಿ**$_1$ (ನಾ). ಸುಳ್ಳು ಸಾಕ್ಷ್ಯ. [ಸಂ. ಅಪಸಾಕ್ಷ್ಯ]

**ಅಪಸಾಕ್ಷಿ**$_2$ (ನಾ). ಸುಳ್ಳು ಸಾಕ್ಷ್ಯವನ್ನು ಹೇಳುವವನು.
[ಸಂ. ಅಪಸಾಕ್ಷಿನ್]

**ಅಪಸಾತು** (ಅ). ತಮ್ಮತಮ್ಮೊಳಗೆ; ಪರಸ್ಪರವಾಗಿ: ಈ ಖಟ್ಲೆಯನ್ನು ಅಪಸಾತಿನಲ್ಲಿ ಬಗೆಹರಿಸುವ ಬಗ್ಗೆ ತಾಲೂಕಿನ ಪ್ರಮುಖವ್ಯಕ್ತಿಗಳು ಮಾಡಿದ ಪ್ರಯತ್ನಗಳಿಗೆ ಯಶ ಸಿಗುವ ಆಶೆ ದೂರಾಯಿತು (ಮಸೆಬೆ. ೩೩).
[← ಮರಾ. ಆಪ್‌ಸಾತ್]

**ಅಪಸಾಪ** (ನಾ). (?): ಧೂಪದೀಪದಿಂದ ನಿನ್ನ ಬೇಡಿಕೊಂಡವನಲ್ಲ ಅಪ್ಪ ಅಪ್ಪ ಎಂದು ನಿನ್ನ ಒಲಿಸಿಕೊಂಡವನಲ್ಲ ಪಾಪವೆಂಬೊರಳಿನಲ್ಲಿ ಅಪಸಾಪ ಬೀಳಥೀ ಶ್ರೀಪತಿಯೇ ನಿನ್ನ ನಾಮ ಲೇಪಿಸೆನ್ನ ನಾಲಿಗಿಯಲಿ (ಮೋಕ್ಷದೀ. ೬೫–೭). [?]

**ಅಪಸಾರ** (ನಾ). = ಅಪಸರಣ: ಹೆಚ್ಚಿನ ನ್ಯಾಯ – ಸತ್ಯಾರ್ಥದಲ್ಲಿ ನಾವು ಅದು ಐದುಪಟ್ಟು ಸತ್ಯದಿಂದ ಅಪಸಾರ ಹೊಂದಿದೆ, ದೂರೀಕೃತವಾಗಿದೆ ಎನ್ನಬಹುದು (ನವ್ಯಕಾ. ೧೨೫). [ಸಂ.]

**ಅಪಸಾರಿತ** (ಗು). ೧. ದೂರ ಸರಿಸಿದ; ಹಿಂದೆ ಸರಿಸಿದ: ಅಪಸಾರಿತ ಸಂಸಾರಿ ಜೀವಂಗಳ್ ಸಂಸಾರದೊಳ್ ತೊಱಲುತ್ತಿರ್ಪುದೆಂಬಪಾಯವಿಚಯಮುಮಂ (ಶಾಂತಿಪು. ೯–೧೧೮ ವ). ೨. ಕಳಚಿದ; ತೆಗೆದಿರಿಸಿದ: ತ್ರೈಲೋಕ್ಯಶೇಖರಂ ಸಿವಿಗೆಯಿಂದಮಿೞಿದಪಸಾರಿತ ವಸ್ತ್ರಾಭರಣನಾಗಿ (ಶಾಂತಿಪು. ೧೧–೧೦೨ ವ). [ಸಂ.]

**ಅಪಸಿದ್ಧಾಂತ** (ನಾ). ೧. ತಪ್ಪಾದ ನಿರ್ಣಯ; ಅಸಂಗತವಾದ ತೀರ್ಮಾನ: ಬಗೆಗೆಟ್ಟವಂದಿರಂ ಪನ್ನಗರಾಜಂ ಕೊಂದನೆಂಬುದಪಸಿದ್ಧಾಂತಂ (ಅಜಿಪು. ೧೨–೨೯). ೨. ವಿರುದ್ಧವಾದ ಮತ; ದುರ್ಮತ.

ಅಪಸಿದ್ಧಾಂತ ಭಾಷಿತ = ದುರ್ಮತದ ವಿಚಾರವನ್ನು ಕುರಿತು ಮಾಡುವ ಉಪನ್ಯಾಸ: ಭರತಸುತಂ ಮರೀಚಿ ಪರಿಗೃಹೀತ ಪರಿವ್ರಾಜಕನಪಸಿದ್ಧಾಂತ ಭಾಷಿತಂಗಳಿಂ ಮಿಥ್ಯಾತ್ವವೃದ್ಧಿಯಂ ಮಾಡಿ (ಆದಿಪು. ೯–೯೩ ವ). [ಸಂ.]

**ಅಪಸುಬಾಳು** (ನಾ). ನೀರಾವರಿ ಇರುವ ಭೂಮಿ, —ಗದ್ದೆ: ಭೀಮರಸನ ತಂತ್ರಪಾಳ ತೊಂಡೆಯನ ಭಾವಕೇತಯನ ಕುಱಿಮಱಿ ಅಪಸುಬಾಳ ಹೊಲಮೇರೆಯ ಸೀಮಕ್ಕೆ (ಸೌಇಇ. IX–i, ೨೮೪–೮; 1190).
[ಅಪಸು$_0$(< ಸಂ. ಅಪಸ್ = ನೀರಿರುವುದು) + ಬಾಳು$_2$ (< ಬಾೞ್$_2$)]

**ಅಪಸೌಖ್ಯ** (ನಾ). ಸುಖವನ್ನು ಕಳೆದುಕೊಂಡವನು: ಪ್ರಣಯದಿನಾದ ಹೋರಟಿಯೆ ಹೋರಟಿ ಮಾಣ್ದೊಡೆ . . . ಮತ್ತಮಿನ್ನವಪ್ಪಣಕಮೆ ಪುಟ್ಟುಗೆಂದೊಡಕಟೇನಪಸೌಖ್ಯರೊ ಕೂರ್ತ ಮಾನಸರ್ (ಚಂದ್ರಪು ೮–೫೪). [ಸಂ.]

**ಅಪಸ್ನಾನ** (ನಾ). ಸತ್ತವರಿಗಾಗಿ ಮಾಡುವ ಸ್ನಾನ: "ಅಪಸ್ನಾನಂ, ಮೃತಸ್ನಾನಂ – ಈ ೨ ನೀರಿಳಿಹ" (ಹಲಾಯು. ೧೦೫–೧೭). [ಸಂ.]

**ಅಪಸ್ಮಾರ** (ನಾ). ೧. ಮರೆವು: ಅಪಸ್ಮಾರ ಲಜ್ಜಾ ವಿಷಾದ ಸ್ಥಿತಿ ಚಿತ್ತಭ್ರಂಶ ಮೋಹಾಮಯ ಮೃತಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೫). ℙ ಸಂಚಾರಿಭಾವಗಳಲ್ಲಿ ಒಂದು. ೨. ಮಲರೋಗ; ಮೂರ್ಛಾರೋಗ: ಅತ್ತಿಮಬ್ಬೆ ಸೊರಗಿದಳು. ಅಪಸ್ಮಾರ ಬಂದವಳಂತೆ ಮಂಕಾದಳು (ದಾನಚಿಂ. ೧೫೯). [ಸಂ.]

**ಅಪಸ್ಮಾರಕೆ** (ನಾ). ಮಲರೋಗಕ್ಕೆ ಅಧಿದೈವ; ಮೂರ್ಛಾರೋಗಕ್ಕೆ ಅಧಿಪತಿಯಾದ ದೇವತೆ: ಬಲುಭುಜಗಳಾಱು ತಲೆ ಮೂಱುಕೆಂಗಣು ಗಳಲೊಲೆದಪಸ್ಮಾರಕಂ ಪುಟ್ಟೆ ಋಷಿಗಳ ಕೂಡೆ ಕಳುಹು ಬೆಸನೇನೆನುತ ಹೂಂಕರಿಸಲ್ (ಲಶಿಚಂ. ೨೦–೧೨). [ಸಂ.]

**ಅಪಸ್ಮಾರಗ್ರಹ** (ನಾ). ಅಪಸ್ಮಾರ ರೋಗಕ್ಕೆ ಕಾರಣವಾದ ಗ್ರಹ; ಮೂರ್ಛಾರೋಗಕ್ಕೆ ಕಾರಣವಾದ ಭೂತ: ಅಪಸ್ಮಾರಗ್ರಹಕ್ಕೆ ಮಂತ್ರಿ ಮುನಿಗುಮೆ ಮುನಿಯುಂ (ಶಾಂತಿಪು. ೪–೫೦); ಅವಂದಿರ್ . . . ಅಪಸ್ಮಾರಗ್ರಹಗೃಹೀತರಂತೆ ವಕ್ರಗ್ರೀವರಾಗಿಯುಂ (ಪಂಚತಂ. ೧೯–೧). [ಅಪಸ್ಮಾರ + ಗ್ರಹ]

**ಅಪಸ್ಮಾರಮುಖ** (ನಾ). ಅಪಸ್ಮಾರ ರೋಗವುಳ್ಳವನ ಮುಖ ದಂತಹ ಮುಖ; ವಿಕಾರಮುಖ: ಅವನ ಅಪಸ್ಮಾರಮುಖ ಕಂಡು ಜನ ಕಲ್ಲು ಹೊಡೆದಾರೆಂಬ ಭಯ (ನಟಸಾ. ೧೧೩). [ಅಪಸ್ಮಾರ + ಮುಖ]

**ಅಪಸ್ಮಾರಿ** (ನಾ). ಅಪಸ್ಮಾರ ರೋಗವುಳ್ಳವನು; ಮೂರ್ಛೆರೋಗ ವುಳ್ಳವನು. [ಸಂ. ಅಪಸ್ಮಾರಿನ್]

**ಅಪಸ್ವರ** (ನಾ). ೧. ಶ್ರುತಿಗೆ ಹೊಂದದ ಸ್ವರ; ವಿಕಾರವಾದ ಧ್ವನಿ: ಅಪಸ್ವರಗಳಿಲ್ಲದೆ ರಾಗಗಳ ಛಾಯೆ ಕೆಡಿಸದೆ ಸಾಹಿತ್ಯ ಭಾಗವನ್ನು ವಕ್ಷ ಮಾಡದೆ ಸಹಜರೀತಿಯಲ್ಲಿ ಅವಳು ಹಾಡಿದಳು (ಮಹಾಗ. ೩೨೮). ೨. (ಆಲಂ) ಕೆಟ್ಟಮಾತು; ಅಮಂಗಲವಾದ ಮಾತು: ಶುಭ ಕಾರ್ಯದಲ್ಲಿ ಅಪಸ್ವರ ಆಡಬೇಡ (ರೂಢಿ). [ಸಂ.]

**ಅಪಹತ** (ಗು). ಹೊಡೆಯಲ್ಪಟ್ಟ; ನಾಶಮಾಡಲ್ಪಟ್ಟ: ಕೃಪಾವ ಲೋಕನದಿಂದ ಆ ಪಾಪಗಳನೆಲ್ಲ ಅಪಹತವ ಮಾಡೊ ಅಪಾರಮಹಿಮನೆ (ಪುರಂದ. ೧–೬೩–೨). [ಸಂ.]

**ಅಪಹ[ಹೃ]ತಕದನ** (ನಾ). ಯುದ್ಧವನ್ನು ನಿಲ್ಲಿಸಿದವನು: ಸಾತ್ಯಕಿ ದ್ರುಪದ ವಿರಾಟಾದಿಗಳಪಹ[ಹೃ]ತ [ಪಾಠಾಂ. ರಿತ]ಕದನರ್ ಮುಂದಿ ಟ್ಟೊಡಗೊಂಡು ಬೀಡಿಂಗೆ ಪೋದರಾಗಳ್ (ಪಂಪಭಾ. ೧೧–೧೦೬ ವ). [ಅಪಹತ + ಕದನ]

**ಅಪಹತಪಾಪ್ಮ** (ನಾ). ನಾಶವಾದ ಪಾಪವುಳ್ಳವನು; ಪಾಪವಿಲ್ಲ ದವನು: ಭಗವಂತನಿಗೆ ಅಪಹತಪಾಪ್ಮ ಎಂಬುದು ಒಂದು ಪ್ರಸಿದ್ಧ ವಾದ ವಿಶೇಷಣ (ರೂಢಿ). [ಸಂ. ಅಪಹತಪಾಪ್ಮನ್]

**ಅಪಹರ** (ನಾ). = ಅಪಹರಣ: ರೂಪುಯೌವನಮೆ ಪರಾಂಗನಾಪಹ ರದಿಂ ಬೆಱಗಾದಪೆನಾತನಿಂದಂ (ಅರ್ಥಸೇ. ೭–೨೨). [ಸಂ.]

**ಅಪಹರಣ, ಅಪಹರಣೆ** (ನಾ). ೧. ಮತ್ತೊಬ್ಬರ ವಸ್ತುವನ್ನು ಎತ್ತಿಕೊಳ್ಳುವುದು; ಕದಿಯುವುದು: ಮುಳಿದು ಸರ್ವಸ್ವಾಪಹರ ಣಮುಂ ಮಾಳ್ಪ ಕಡುಗಲಿತನವಿವಾವ ಪುಣ್ಯವ ಪಡೆದ ಶಿಷ್ಯತನದೊಳಗು (ಹಚಕಾ. ೮–೬). ೨. ಹೋಗಲಾಡಿಸುವುದು; ನಿವಾರಿಸುವುದು. 'ಪಾಪಾಪಹರಣ', 'ಮಲಾಪಹರಣ' ಪರಾ. **ಅಪಹರಣೆ**: ೧. ಪರರುನ್ನತಿಯ ಕೃತಿಯಪಹರಣೆ ಪರರುಪಮಾನ ಪರರೊಡ್ಡವದ ಪರುಟವದ ಹರಹು ಹೊಗದಗ್ಗಳಿಕೆ (ತೊರರಾ. ೧–೧–೧೦). ೩. ದಂಡ; ಜುಲ್ಮಾನೆ: "ಗುಡದೊಳಂತಕನೊಳಂ . . . ಅಪಹರಣೆಯೊಳು . . . ದಂಡಮುಕ್ಕು" (ಮಂಗರಾ. ೧೫೩–೬೧). [ಸಂ. ಅಪಹರಣ]

**ಅಪಹರಣೆ** 'ಅಪಹರಣ' ನೋ.

**ಅಪಹರಿಸು** (ಕ್ರಿ). ೧. ಮರೆಯಾಗಿಸು; ಹೋಗಲಾಡಿಸು: ಉಪ ಸಂಹಾರಿಸಿ ಮಾನವವಪುವಂ ರವಿಗಡ್ಡಮಿರ್ದ ಮುಗಿಲ ನೆೞಲ್ ಬಂದ ಪಹರಿಸುವಂತೆ ಕಣ್ಣುಳ್ಳ ಪರಂಜ್ಯೋತಿ ಸ್ವರೂಪಮಂ ಕೆಯ್ಕೊಂಡಂ (ಶಾಂತಿಪು. ೮–೧೫೧). ೨. ನೀಗು; ಪರಿಹಾರವಾಗು: ವಿಪರೀತ ಮಾದ ಮೃಗುಕುಲದುಪದ್ರವಂ ನಿಮಗೆ ದಂಡಪಾಶಾದಿಗಳಿಂದಪಹರಿಸುಗು ಮೆಂದಾರ್ಯರ್ಗುಪದೇಶಂಗೆಯ್ದು (ಪಂರಾಮಾ. ೧–೭೨) ೩. ಹೋಗ ಲಾಡಿಸು; ನಿವಾರಿಸು: ತಪಶ್ರೀವನಿತಾಳಂಕಾರರೆಮ್ಮಿಂದಪಹರಿಸುಗೆ ದುರ್ಮೋಹಮಂ ಸಾಧುವರ್ಗಂ (ಧರ್ಮಾಮೃ. ೧–೫); ಸಂದ ಋಷಿಗಳು ಭೂಮಿಭಾರವನೊಂದುಪಾಯದಲಪಹರಿಸಲ್ಕೆತಂದ ಹದನನು ತಿಳುಹಿ ಬಂದನು (ಕುವ್ಯಾದ್ರೋ. ೧೯–೫೩). ೩. ಕದಿ; ಪರರ ವಸ್ತುವನ್ನು ಅವರ ಅನುಮತಿಯಿಲ್ಲದೆ ಕೊಂಡೊಯ್ಯು: ಅಪ್ತರೊಡವೆಯನ ಪಹರಿಸಿ ಸಾಹಸವ ಮೆಱೆವರು ನಿಪುಣೆಯರು (ನಳಚ. ३–२४). [ಅಪಹರಣ + –ಇಸು₃]

**ಅಪಹಸನ** (ನಾ). ಹಾಸ್ಯಮಾಡುವುದು; ತಿರಸ್ಕಾರದಿಂದ ನಗುವುದು. [ಸಂ.]

**ಅಪಹಸಿತ** (ಗು). ೧. ಹಾಸ್ಯಮಾಡಲ್ಪಟ್ಟ; ತಿರಸ್ಕಾರ ಹೊಂದಿದ: ಏಕಾವಳೀ ವಿಳಾಸಾಪಹಸಿತಾಮೃತ ಡಿಂಡೀರ ಪಿಂಡ ಪಾಂಡುರಂ (ಶಾಂತಿಪು. ೭–೧೩ ವ); ಅಭಿನೂತ ಕೇತಕೀ ಕಿಸಲಯಾಪಹಸಿತ ಕರತಲ ಪಲ್ಲವೆ (ಸುಕುಮಾ. ೯–೧೦೭ ವ). (ನಾ). ೨. ಹಾಸ್ಯಕ್ಕೆ ಗುರಿ ಯಾದದು; ತಿರಸ್ಕಾರ ಹೊಂದಿದದು. ೩. [ಕಾವ್ಯಮೀ] ತಿರಸ್ಕಾರ ಸೂಚಕವಾದ ನಗೆ: ಹಾಸ್ಯವು ಆರುವಿಧವೆಂದು ಈಚಿನ ಲಾಕ್ಷಣಿಕರು ಅಂಗೀಕರಿಸುತ್ತಾರೆ. ಉತ್ತಮ ಪ್ರಕೃತಿ (ಎಂದರೆ ಸ್ವಭಾವ) ಉಳ್ಳವರಲ್ಲಿ ಸ್ಮಿತಹಸಿತಗಳೂ, ಮಧ್ಯಮಪ್ರಕೃತಿಯವರಲ್ಲಿ ವಿಹಸಿತ ಉಪಹಸಿತಗಳೂ ಅಧಮಪ್ರಕೃತಿಯವರಲ್ಲಿ ಅಪಹಸಿತ ಅತಿಹಸಿತಗಳೂ ಗೋಚರಿಸುತ್ತವೆ (ಭಾರಮೀ. ४०६). [ಸಂ.]

**ಅಪಹಸ್ತ** (ನಾ). ೧. ತಳ್ಳುವುದು; ಬಿಸುಡುವುದು. ೨. (ಕುತ್ತಿಗೆ ಹಿಡಿದು) ತಳ್ಳುವುದಕ್ಕಾಗಿ ಉಪಯೋಗಿಸುವ ಕೈ. ೩. ಕುತ್ತಿಗೆ ಹಿಡಿದು ತಳ್ಳಿಸಿಕೊಂಡವನು. 'ಅಪಹಸ್ತಮಿಱು' ಪರಾ. [ಸಂ.]

**ಅಪಹಸ್ತಮಿಱು** (ಕ್ರಿ). ತಳ್ಳು; ನೂಕು: ಚಪಳಕಪಿ ವನಮದಾನೇಕ ಪಕ್ಕೆ ಪಕ್ಕಾಗೆ ಪೊಕ್ಕು ತಾಂ ಭಸ್ತ್ರಿಕಮೆಂದಪಹಸ್ತಮಿಱಿಯೆ ಕೈಪಿಡಿಗೆ ಪೊಕ್ಕ ಗುಬ್ಬಿವೊಲುರುಳ್ದು ನಗಿಪುದು ನಗದೊಳ್ (ಶಾಂತಿಪು. ೨–೧೧೧). [ಅಪಹಸ್ತ + ಇಱು₁]

**ಅಪಹಸ್ತಿತ** (ಗು). ತಳ್ಳಲ್ಪಟ್ಟ; ಅನಾದರಕ್ಕೆ ಗುರಿಯಾದ: "ಅನಾ ದೃತಂ, ಅವಜ್ಞಾತಂ, ಅಪಹಸ್ತಿತಂ – ಈ ३ ಉದಾಸೀನಂ ಮಾಡಲ್ಪ ಟ್ಟುದು" (ಹಲಾಯು. ೧೧೮–೩೯). [ಸಂ.]

**ಅಪಹಾತ** (ನಾ). (ಉಕ) ಕೈಯಲ್ಲಾಗದವನು; ಕೆಲಸಕ್ಕೆ ಬಾರ ದವನು: ಆಫೀಸಿನಲ್ಲಿ ಇವನೊಬ್ಬ ಅಪಹಾತ. ಏರಿಕೆಗೆ ಬೇಕಾಗುವ ಬಾಯಾರಿಕೆ ಇಲ್ಲ. ಬಾಗಿ ನಡೆವ ಬಂಡವಾಳವಿಲ್ಲ (ದಾಕೂಟ. ೧೯).

ಅಪಹಾತಳು = ಕೈಯಲ್ಲಾಗದವಳು; ಕೆಲಸಕ್ಕೆ ಬಾರದವಳು: ಭಿಕ್ಷುಕಳಂತಿರುವ ಈ ಅಪಹಾತಳಿಗೆ ಅಂದವಾದ ಮೈಕಟ್ಟಿನ ವಿಚಾರ ವೇಕೋ? ಇರಲಿ ಕೊಡೋ ತಿನ್ನಲಿ, ನಿನ್ನ ಕಿಸೆಯಲ್ಲಿ ಏನಾದರೂ ಇದ್ದರೆ (ಹಸ್ನೊಂದ. ೬೭). [< ಸಂ. ಅಪಹಸ್ತ?]

**ಅಪಹಾರ** (ನಾ). ೧. ಅನುಮತಿಯಿಲ್ಲದೆ ಬೇರೊಬ್ಬರ ವಸ್ತುವನ್ನು ಎತ್ತಿಕೊಂಡು ಹೋಗುವುದು; ಕದಿಯುವುದು; ಅಪಹರಿಸು ವುದು. ೨. ಬೇರೊಬ್ಬರು ಎತ್ತಿಕೊಂಡು ಹೋಗುವುದರಿಂದ ಉಂಟಾಗುವ ನಷ್ಟ; ಹಾನಿ. ೩. (ಯುದ್ಧವನ್ನು) ನಿಲ್ಲಿಸುವುದು; ತಡೆಗಟ್ಟುವುದು: ಗಗನಮನಾಗಳಾವರಿಸಿದತ್ತಪಹಾರಘನಾನಕಸ್ವನಂ (ಪಂರಾಮಾ. ४–೭೧). 'ಅಪಹಾರತೂರ್ಯ' ಪರಾ. [ಸಂ.]

**ಅಪಹಾರತೂರ್ಯ** (ನಾ). ಯುದ್ಧದ ನಿಲುಗಡೆಯನ್ನು ಸೂಚಿ ಸುವ ವಾದ್ಯ; ಸದ್ಯಕ್ಕೆ ಕದನ ನಿಂತಿದೆಯೆಂಬುದನ್ನು ಸೂಚಿಸುವ ವಾದ್ಯ: ಆಗಳೆರಡುಂಪಡೆಯ ನಾಯಕರಪಹಾರತೂರ್ಯಂಗಳಂ ಬಾಜಿಸಿ

(ಪಂಪಭಾ. ೧೦-೧೨೪ ವ) ; ಅಪಹಾರತೂರ್ಯಮಂ ಪೊಯಿಸಿ ಪಡೆಗಳೆರಡುಂ ರಣೋರ್ವಿಯಿಂದಂ ತಂತಮ್ಮ ಪುರಕ್ಕೆ ಪೋದುವು (ಪಂರಾಮಾ. ೧೩-೧೧೧). [ಅಪಹಾರ + ತೂರ್ಯ]

**ಅಪಹಾಸ** (ನಾ). = ಅಪಹಾಸ್ಯ.

**ಅಪಹಾಸಮಾಡು** = ಅಪಹಾಸ್ಯವನ್ನು ಮಾಡು : ಮಾಟಕ್ಕೀಸು ಘನವಲ್ಲೆಂದು ಕೆಲರಪಹಾಸಮಾಡಲು ನಾಚಿ ಲಂಕೆಯ ಹೊಕ್ಕ ರಾವಣನು (ಕೌಶಿರಾ. ೨-೫೫). [ಸಂ.]

**ಅಪಹಾಸಿ** (ಗು). ೧. ಹಾಸ್ಯಮಾಡುವ; ಮೀರಿಸುವ; ತಿರಸ್ಕರಿಸುವ: ಉದಾರ ಕಾಶ್ಮೀರಸಾರಾಪಹಾಸಿ ಕರ್ಪೂರಪಾಳಿ ಸಮ್ಮಿಶ್ರಿತ ತಾಂಬೂಲ ರಾಗ ಪರಿಚುಂಬಿತ ಬಿಂಬಾಧರರಾಗವದನಂ (ಸುಕುಮಾ. ೧೦-೧೨೩). (ನಾ). ೨. ಹಾಸ್ಯಮಾಡುವವನು. [ಸಂ. ಅಪಹಾಸಿನ್]

**ಅಪಹಾಸ್ಯ** (ನಾ). ಹಾಸ್ಯಮಾಡುವುದು ; ತಿರಸ್ಕರಿಸುವುದು : ನಿಮಗಿನಿಬರಿಗೆ ತಾನಪಹಾಸ್ಯವಾಗಿಹುದೆಮ್ಮಯಾಜ್ಞೆಯಿದು (ಬಸವು. ೩೯-೫೯).

**ಅಪಹಾಸ್ಯವಾಗು** = ಅಪಮಾನವಾಗು : ಇದು ಶಿಕ್ಷಕರ ವೃತ್ತಿಗೆ ಅಪಹಾಸ್ಯವಾಗಿದೆ. (ರಂಗರೋ. ೫೯). [ಸಂ.]

**ಅಪಹಾಸ್ಯಂಗೆಯ್** (ಕ್ರಿ). ಹಾಸ್ಯಮಾಡು ; ಅವಮಾನಿಸು : ದಿವಮುಂ ನಗುತ್ತುಮುಪಹಾಸ್ಯಂಗೆಯ್ಯುತ್ತುಂ ಸೊಗಯಿಪುವಯ್ವತ್ತಿತ್ತಜುವತ್ತತ್ತ ಖೇಚರೇಂದ್ರಪುರಂಗಳ್ (ಶಾಂತಿಪು. ೩-೨). [ಅಪಹಾಸ್ಯ + ಗೆಯ್ (< ಕೆಯ್$_1$)]

**ಅಪಹಿಂಸ** (ಗು). ಹಿಂಸೆಯಿಂದ ದೂರವಾದ; ಹಿಂಸೆಯಿಲ್ಲದ: ದೋಷೇತರನಾಪ್ತಂ ತದ್ಭಾಷಿತಮುಪಹಿಂಸಮಾಗಮಂ . . . ನಿನಗಕ್ಕೆ (ಶಾಂತಿಪು. ೭-೪). [ಸಂ.]

**ಅಪಹಿಂಸೆ** (ನಾ). ಹಿಂಸೆಯಿಂದ ದೂರವಾದುದು; ಹಿಂಸೆಯಿಲ್ಲದುದು : ಅಱಿಶೌಚಮುಂ ಮೆಱೆವ ಗುಂಡಿಗೆಯುಂ ವಿಕೃತಕ್ಕೆ ಸಂದ ನಾಗ್ನ್ಯಮುಮುಪಹಿಂಸೆಯೆಂಬ ಜನವಾದಮುಮಲ್ಲದೆ (ಶಾಂತಿಪು. ೮-೧೩೨). [ಸಂ. ಅಪಹಿಂಸಾ]

**ಅಪಹೃತ** (ಗು). ಅಪಹರಿಸಲ್ಪಟ್ಟ ; ಕದ್ದೊಯ್ದ. [ಸಂ.]

**ಅಪಹೃತಿ** (ನಾ). ಕದ್ದ ಒಡವೆ ; ಕದ್ದಮಾಲು : "ಆರ್ತಮುಪಹೃತಿಲೋಪ್ತಮೆನೆ ಕಳವಿನೊಡವೆ" (ಮಂಗರಾ. ೬೭-೫). [ಸಂ.]

**ಅಪಹ್ನವ** (ನಾ). ೧. ಗೊತ್ತಿರುವುದನ್ನು ಮರೆಮಾಜುವುದು; ಉಂಟಾದುದನ್ನು ಇಲ್ಲವೆನ್ನುವುದು ; ಅಪಲಾಪ. ೨. ಸಮಾಧಾನಪಡಿಸುವುದು ; ತೃಪ್ತಿಪಡಿಸುವುದು. ೩. ಸ್ನೇಹ. ೪. ಕಾವ್ಯಾಲಂಕಾರಗಳಲ್ಲಿ ಒಂದು ; ಅಪಹ್ನುತಿ. ℙ ವರ್ಣಿಸುವ ವಸ್ತುವಿನಲ್ಲಿ ಬೇರೊಂದು ಧರ್ಮವನ್ನು ಆರೋಪಿಸಿ ಹೇಳುವುದಕ್ಕಾಗಿ ಮೊದಲಿರುವ ಧರ್ಮವನ್ನು ಇಲ್ಲವೆನ್ನುವುದು, —ಅಪಲಪಿಸುವುದು. ಉದಾ:—ಇಂದು ಜಡನಿಧಿಯ ಬಸಿಱೊಳ್ ಬಂದುದು ಪುಸಿ ಕಾಣ ಪೂರ್ಣಚಂದ್ರನ ಬಸಿಱೊಳ್ ಬಂದುದು ಪೇೞಿಂಗಡಲೆಂಬಂದದಿನೇಂ ಪಸರಿಸಿತ್ತೊ ಪೊಸವೆಳ್ದಿಂಗಳ್ (ಲೀಲಾವ. ೨-೨೪). [ಸಂ.]

**ಅಪಹ್ನುತಿ** (ನಾ). [ಕಾವ್ಯಮೀ] = ಅಪಹ್ನವ ೪ : ಅತಿಶಯಿತ ವಸ್ತುವಿಷಯಪ್ರತೀತಿಯಂ ಮಱಸಿ ನಿಱಿಸಿ ಪೇೞ್ವುದು ಪೆಱತಂ ಸತತಮುಪಹ್ನುತಿ ಸದಳಂಕೃತಿ ಮತ್ತಿಂತಕ್ಕುಮದಱ ಲಕ್ಷ್ಯವಿಕಲ್ಪಂ (ಕವಿರಾ. ೩-೧೮೨) ; ಒಂದಂ ಪುಸಿದೊಂದಂ ಪೇೞ್ವಂದಮಪಹ್ನುತಿ (ಉದಯಾ. ೫೩). [ಸಂ.]

**ಅಪಾಂಗ** (ನಾ). ೧. ಯಾವುದಾದರೂ ಅವಯವವು ನ್ಯೂನವಾಗಿರುವ ವ್ಯಕ್ತಿ ಅಥವಾ ವಸ್ತು ; ಅಂಗಹೀನ ; ಹೀನಾಂಗ. ೨. ಕಡೆಗಣ್ಣು : ಕಾಮಿನೀತತಿ ವಿಲಾಸಾಪಾಂಗದಿಂದಂ ಪ್ರತಾರಿಸದಂತಾಗಿರಲ್ (ಕಾದಂಪೂ. ೫೭೪). ೩. ಹಣೆಗೆ ಹಚ್ಚಿಕೊಳ್ಳುವ ಲಾಂಛನ. [ಸಂ.]

**ಅಪಾಂಗದರ್ಶನ** (ನಾ). ಕಡೆಗಣ್ಣಿನ ನೋಟ ; ಕಟಾಕ್ಷ. [ಅಪಾಂಗ + ದರ್ಶನ]

**ಅಪಾಂಗದೇಶ** (ನಾ). ಕಡೆಗಣ್ಣಿನ ಪ್ರದೇಶ ; ಕಣ್ಣುಗಳ ಕೊನೆಯ ಭಾಗ, —ಮೂಲೆ. [ಅಪಾಂಗ + ದೇಶ]

**ಅಪಾಂಗದ್ಯುತಿ** (ನಾ). ಕಡೆಗಣ್ಣಿನ ಹೊಳಪು : ಶೃಂಗಾರಸಾರರಸಮನಪಾಂಗದ್ಯುತಿ ಬೀಱೆ (ರಾಜಶೇ. ೧೨-೯೪). [ಅಪಾಂಗ + ದ್ಯುತಿ]

**ಅಪಾಂಗದ್ಯೋತಿ** (ನಾ). = ಅಪಾಂಗದ್ಯುತಿ : ಪರಪುತ್ತುಂ ನವ ಪುಷ್ಪವೃಷ್ಟಿಯನಪಾಂಗದ್ಯೋತಿಯಿಂದೂರ್ವ ಸುಂದರಿ ಬಂದೀಕ್ಷಿಸಿ (ರಾಜಶೇ. ೭-೧೦). [ಅಪಾಂಗ + ದ್ಯೋತಿ]

**ಅಪಾಂಗಪ್ರಸನ್ನತೆ** (ನಾ). ಕಡೆಗಣ್ಣಿನ ನೋಟದಲ್ಲಿ ಕಂಡುಬರುವ ಪ್ರಸನ್ನಭಾವ : ಅಂತೆಸೆವಪೂರ್ವಗಂಧರ್ವಯುಗಮಂ ಕಾಣ್ಕೆನೀಡಿದನಂತರಮರಸನಪಾಂಗಪ್ರಸನ್ನತೆಯುಂ ಪಡೆದು ಮೆಯ್ಯುರ್ವಿ ಪೊಡಮಟ್ಟು ಸಿಂಧುರಾಜಂ ಸಿಂಧುರಾರೂಢನಾಗಿ ಸಿಂಧುರಾಜ್ಯಕ್ಕೆ ತಳರ್ದಂ (ರಾಜಶೇ. ೧೨-೧೦೩ ವ). [ಅಪಾಂಗ + ಪ್ರಸನ್ನತೆ]

**ಅಪಾಂಗಪ್ರೇರಣೆ** (ನಾ). ಕಡೆಗಣ್ಣಿನ ನೋಟದಿಂದ ಕೊಡುವ ಸೂಚನೆ: ಅವನಿಪನಪಾಂಗ ಪ್ರೇರಣೆಯಿಂ ಬರವೇಳೆಂಬುದುಮವಂ ಪೋಗಿ ತಳ್ವದಾ ಕ್ರವ್ಯಾದನಾಮವ್ಯಾಧನಂ ಪುಗಿಸಿದಾಗಳ್ (ರಾಜಶೇ. ೫-೨೩ ವ). [ಅಪಾಂಗ + ಪ್ರೇರಣೆ]

**ಅಪಾಂಗಮರೀಚಿ** (ನಾ). = ಅಪಾಂಗದ್ಯುತಿ : ಆ ಜಯಂತನುದ್ದಾನಿಯ ಚೆಲ್ವುಮೀ ಕಮಳನೇತ್ರನಪಾಂಗಮರೀಚಿಗಳ್ಪೊಡಂ ತಾನೆಣೆವಾರದು (ಜಗವಿ. ೧೧-೫) ; ಸುೞಿವ ಮರಾಳಯಾನೆಯರಪಾಂಗಮರೀಚಿಚಯಂ ತ್ರಿವರ್ಣಮಂ ಗೞಿಯಿಸೆ (ಚಂದ್ರಪು. ೭-೧೧೭). [ಅಪಾಂಗ + ಮರೀಚಿ]

**ಅಪಾಂಗರಂಗಿಣಿ** (ನಾ). ತನ್ನ ಕಡೆಗಣ್ಣ ನೋಟದಿಂದ ಸುಂದರಳಾಗಿರುವವಳು : ಕುರುಡಿಯಾದ್ದರಿಂದ ನನಗೆ ಮದುವೆಯಾಗಿಲ್ಲ; ಅದು ದೌರ್ಭಾಗ್ಯವೋ ಸೌಭಾಗ್ಯವೋ ಕಣ್ಣಿರುವವರು ಹೇಳಬೇಕು ; ಅಪಾಂಗರಂಗಿಣಿಯರಾದ ಹೆಂಗಸರು ಅನೇಕರು ನಾನು ಕುಮಾರಿಯಾಗಿ ಉಳಿದಿರುವುದನ್ನು ಕೇಳಿ ನಾವೂ ಕುರುಡಿಯರಾಗಿರಬಾರದಾಗಿತ್ತೆ ! ಎಂದಿದ್ದಾರೆ (ಬಂಕಿಮ. ೯೬). [ಸಂ. ಅಪಾಂಗರಂಗಿಣೀ]

**ಅಪಾಂಗರೋಚಿ** (ನಾ). = ಅಪಾಂಗದ್ಯುತಿ : ಅಪಾಂಗರೋಚಿಯಿಂ ಪಡೆದಳಿಕುಂತಳಕ್ಕಲರ ಬಾಸಿಗಮಂ (ಚಂದ್ರಪು. ೭-೭೭). [ಅಪಾಂಗ + ರೋಚಿ]

**ಅಪಾಂಗವಿಕ್ಷೇಪ** (ನಾ). ಕಡೆಗಣ್ಣಿನ ನೋಟವನ್ನು ಬೀರುವುದು : ಅಪಾಂಗವಿಕ್ಷೇಪಂಗಳಿಂ ಕುವಲಯವನವಿಕಾಸಮಾದಂತೆಯುಂ (ಕಾದಂಪೂ. ೧೦೦೦). [ಅಪಾಂಗ + ವಿಕ್ಷೇಪ]

**ಅಪಾಂಗವೀಕ್ಷಣ** (ನಾ). ಕಡೆಗಣ್ಣಿನ ನೋಟ : ಸೊಗಯಿಪ ಪೊಂಕು ಲಾಲಿಸುವ ಲಲ್ಲೆ . . . ಅರಲ್ಚುವಪಾಂಗವೀಕ್ಷಣಂ . . . ಈ ವಿಭಾವ ಚೇಷ್ಟೆಗಳಿನದೇನಲಂಪನೆರ್ದೆಗಿತ್ತರೊ ಸಗ್ಗದ ಪೆಂಡಿರಾತನಾ (ಚಂದ್ರಪು. ೪-೭೧). [ಅಪಾಂಗ + ವೀಕ್ಷಣ]

**ಅಪಾಂಗಾಂಶು** (ನಾ). = ಅಪಾಂಗದ್ಯುತಿ : ಚಪಳಾಪಾಂಗಾಂಶುವಿದ್ಯುಲ್ಲತೆಯನಡರೆ . . . ಎಸೆದುದು ಜಾರನಾರೀ ಕದಂಬಂ (ಜಗವಿ. ೪-೨೯). [ಅಪಾಂಗ + ಅಂಶು]

**ಅಪಾಂಗಾಲೋಕನ** (ನಾ). = ಅಪಾಂಗಾವಲೋಕನ : ಮದನೋತ್ತೇಜಿತ ಬಾಣವಿಭ್ರಮಮುಪಾಂಗಾಲೋಕನಂ ನಲ್ಲಳಾ (ಅಜಿಪು. ೯-೩೯). [ಅಪಾಂಗ + ಆಲೋಕನ]

**ಅಪಾಂಗಾವಲೋಕನ,** ಅಪಾಂಗಾವಳೋಕನ (ನಾ). ಕಡೆಗಣ್ಣಿನ ನೋಟ. **ಅಪಾಂಗಾವಳೋಕನ**: ಅವನವನತಾನನನಪಾಂಗಾವಳೋಕನದೊಳಾಕೆಯಂ ತಪ್ಪು ನೋಡುತ್ತುಂ ಪೋಗಿ (ಶಾಂತಿಪು. ೮–೮೩ ವ). [ಅಪಾಂಗ + ಅವಲೋಕನ]

**ಅಪಾಂಗಾವಳೋಕನ** 'ಅಪಾಂಗಾವಲೋಕನ' ನೋ.

**ಅಪಾಂಪತಿ** (ನಾ). ೧. ಜಲಾಧಿಪತಿ; ಸಮುದ್ರ. ೨. ವರುಣ. [ಸಂ.]

**ಅಪಾಂಸುಲೆ** (ನಾ). ದೋಷವಿಲ್ಲದವಳು; ಪರಿಶುದ್ಧೆ; ಪತಿವ್ರತೆ: ಜಗದೊಳಪಾಂಸುಲೆಯ ಚರಿತಕೆ ಸರಿಮಿಗಿಲಿಲ್ಲ (ಹದಿಬ. ೨–೨೦). [ಸಂ. ಅಪಾಂಸುಲಾ]

**ಅಪಾಕರಣ** (ನಾ). ಹೊರಗುಮಾಡುವುದು; ದೂರ ತಳ್ಳುವುದು; ನಿರಾಕರಿಸುವುದು. [ಸಂ.]

**ಅಪಾಕೃತ** (ಗು). ಹೊರದೂಡಿದ; ನಿರಾಕರಿಸಲ್ಪಟ್ಟ: ಪರಮುಕಾರ(ರು)ಣಿಕನಪ್ಪನಪಾಕೃತದೋಷಂ (ಕವಿರಾ. ೩–೨೨೧); ಅಪಾಕೃತನಿಷ್ಠುರಾಕ್ಷರಂ ಲಾಲಿತ ಲಲಿತಪದಪ್ರಕಾರಮದು ಸುಕುಮಾರಂ(ಕಾವ್ಯಾವ.೫೧೨). [ಸಂ.]

**ಅಪಾಚಿ** (ನಾ). ೧. ದಕ್ಷಿಣ ದಿಕ್ಕು; ತೆಂಕಲು. ೨. ಪಶ್ಚಿಮ ದಿಕ್ಕು; ಪಡುವಲು. 'ಅವಾಚಿ' ಪರಾ. [ಸಂ. ಅಪಾಚೀ]

**ಅಪಾಚೀನ** (ಗು). ೧. ದಕ್ಷಿಣ ದಿಕ್ಕಿನಲ್ಲಿ ಹುಟ್ಟಿದ; ದಕ್ಷಿಣದ ಕಡೆಯ; ತೆಂಕಣದ. ೨. ಪಶ್ಚಿಮದ. ೩. ಬೇರೆ ಕಡೆ ಮುಖ ತಿರುಗಿಸಿದ; ಹಿಮ್ಮೊಗವಾದ. (ನಾ). ೪. ಕೆಳಮೊಗವಾಗಿರುವುದು; ತಲೆಬಾಗಿರುವುದು: "ಅಪಾಚೀನಂ, ಅವಾಙ್ಮುಖಂ – ಈ ೨ ತಲೆವಾಗಿರ್ದುದು" (ಹಲಾಯು. ೧೨೫–೬೨); "ಅವಾಙ್ಮುಖಮಪಾಚೀನಮೆನೆ ತಲೆವಾಗುಹಂ" (ಮಂಗರಾ. ೧೩೪–೩೩). 'ಅವಾಚೀನ' ಪರಾ. [ಸಂ.]

**ಅಪಾಚ್ಯ** (ಗು). ೧. ದಕ್ಷಿಣದ. ೨. ಪಶ್ಚಿಮದ. (ನಾ). ೩. ಒಂದು ಕುಲದ ಹೆಸರು: ಆರ್ಯರು ಅವರಲ್ಲಿ ನಾಗ, ಯಕ್ಷ, ನಿಷಾದ . . . ನೀಚ್ಯ, ಅಪಾಚ್ಯ ಮುಂತಾದ ಕುಲಗಳನ್ನು ವಿಂಗಡಿಸಿಕೊಂಡಿದ್ದರು (ಭಾಇಪ್ರ. ೨೨). [ಸಂ.]

**ಅಪಾಟವ** (ನಾ). ೧. ಚಟುವಟಿಕೆಯಿಲ್ಲದಿರುವುದು; ಶಕ್ತಿಯಿಲ್ಲದಿರುವುದು. ೨. ರೋಗ; ಅಸ್ವಸ್ಥತೆ. [ಸಂ.]

**ಅಪಾತ್ರ** (ಗು). ೧. ದಾನ ಮುಂತಾದುವನ್ನು ತೆಗೆದುಕೊಳ್ಳಲು ತಕ್ಕವನಲ್ಲದ, —ಅನರ್ಹನಾದ: ಮಿಥ್ಯಾದೃಷ್ಟಿಯಪ್ಪಂ ತನ್ನನೆಂತು ಸಮಜಿಸಿನೆಗಟ್ಟೊಡಮಾತನಪಾತ್ರಮೆ (ಆದಿಪು. ೧೦–೯ ವ); ಪಾತ್ರ ಅಪಾತ್ರವೆಂದು ಕಂಡರೆ ಶಿವನೆಂತು ಮೆಚ್ಚುವನು (ಬಸವ. ೮೦೪). ೨. (ನಾ). ಅನರ್ಹನಾದವನು: ಕರೆದಪಾತ್ರಂಗಿತ್ತು ಪಾತ್ರನ ಪರಿಹರಿಸಲೀಯೆರಡಜಿಂ ಸಂಹರಣವೈದುವುದಾರ್ಜಿಸಿದ ಧನವರಸ (ಕುವ್ಯಾಉ. ೩–೨೩). [ಸಂ.]

**ಅಪಾತ್ರತೆ** (ನಾ). ಅನರ್ಹತೆ: ಯಾವನೊಬ್ಬ ನೌಕರನಿಗೆ ರಾಜ್ಯಾಧೀನ ನೌಕರಿಯ ಅಥವಾ ಹುದ್ದೆಯ ವಿಚಾರದಲ್ಲಿ ಅಪಾತ್ರತೆಯುಂಟಾಗತಕ್ಕುದಲ್ಲ (ಭಾಧಾನ. ೯). [ಸಂ. ಅಪಾತ್ರತಾ]

**ಅಪಾತ್ರದಾನ** (ನಾ). ಅರ್ಹರಲ್ಲದವರಿಗೆ ಕೊಡುವ ದಾನ: ಅಪಾತ್ರದಾನಂ ಭೋಗಭೂಮಿಗಳೊಳಂ . . . ಕುಮಾನುಷತ್ವಮಂ ಮಾಡುಗುಂ (ಆದಿಪು.೧೧–೧೦ ವ); "ಪ್ರೀತಿ ಯಾವಾಗಲೂ ಅಪಾತ್ರದಾನವಾಗಬಾರದು . . ." (ವಾತ್ಸಲ್ಯ. ೩೦೨). [ಅಪಾತ್ರ + ದಾನ]

**ಅಪಾತ್ರಪಾತ್ರ** (ನಾ). ೧. ಅರ್ಹವಲ್ಲದ ಪಾತ್ರ: ಗಾತ್ರದೊಳು ವಿಷಯಾತುರಂಗಳಪಾತ್ರಪಾತ್ರಂಗಳು ಲಘುಗಳಪವಿತ್ರಮಿತ್ರಂಗಳು ಗಣಿಕೆಯರ ಮಾತುಗಳು ಬಳಿಕ (ಬಸವು. ೪೦–೬೩). ೨. ಅಯೋಗ್ಯರಿಗೆ ಮಾತ್ರ ತಕ್ಕವನಾದ ವ್ಯಕ್ತಿ. [ಅಪಾತ್ರ + ಪಾತ್ರ]

**ಅಪಾದಾನ** (ನಾ). ದೂರಕ್ಕೆ ಒಯ್ಯುವುದು; ಒಂದೆಡೆಯಿಂದ ತೆಗೆಯುವುದು: "ಅಪಾದಾನಮೆಂದಾವುದಾನೊಂದಜಿಂ ತೊಲಗುವುದು" (ಶಮದ. ೧೩೧ ವೃತ್ತಿ). ಅದಂ ಪಂಚಮಿಯುಪ್ಪುದಪಾದಾನಸ್ಥಲದೊಳದೆದಲೊದವುಗುಮಾತಂಕಾದಾನೇಷ್ಟಾನಿಷ್ಟಾಪಾದಿತ ಹೇತುವಿನುದಯದೊಳ್ ಗೌರವದೊಳ್ (ಶಮದ. ೧೩೧). [ಸಂ.]

**ಅಪಾದಾನಕಾರಕ** (ನಾ). [ವ್ಯಾಕ]. ಒಂದು ವಸ್ತು ತನ್ನ ಸ್ಥಳವನ್ನು ಬಿಟ್ಟು ಹೋಗುತ್ತಿದೆ ಎಂಬುದನ್ನು ಸೂಚಿಸುವ ವಿಭಕ್ತಿ: ಅಪಾದಾನೇ=ಅಪಾದಾನಕಾರಕದಲ್ಲಿ, ಪಂಚಮೀ = ಪಂಚಮೀವಿಭಕ್ತಿಯಕ್ಕುಂ (ಭಾಷಾಭೂ. ೮೪ ಟೀ); ಊರತ್ತಣಿಂ ಬಂದಂ, ಬೆಟ್ಟದತ್ತಣಿಂದಿೞಿದಂ, ಕುದುರೆಯತ್ತಣಿಂದೋಡಿದಂ (ಭಾಷಾಭೂ. ೮೪ ಉದಾ). [ಅಪಾದಾನ + ಕಾರಕ]

**ಅಪಾದಾನವಾಚಕ** (ನಾ). ಅಪಾದಾನವನ್ನು ಸೂಚಿಸುವ ಶಬ್ದ. [ಅಪಾದಾನ + ವಾಚಕ]

**ಅಪಾನ** (ನಾ). ೧. ದೇಹಗತವಾದ ಐದು ಬಗೆಯ ವಾಯುಗಳಲ್ಲಿ ಒಂದು; ದೇಹದಲ್ಲಿ ಗುದಸ್ಥಾನದಲ್ಲಿದ್ದುಕೊಂಡು ಅಲ್ಲಿ ನಡೆಯಬೇಕಾದ ಕಾರ್ಯಗಳಿಗೆ ಸಹಾಯಕವಾದ ವಾಯು: "ಗುದದೊಳೆಡೆಯಾಡುವನಿಲಮಪಾನಮೆನಿಸಿಕ್ಕು" (ಮಂಗರಾ. ೧೫–೧೨). ೨. ಗುದಪ್ರದೇಶ: "ಗುದಃ, ಪಾಯುಃ, ಅಪಾನಂ – ಈ ೩ ಗುದಂ" (ಹಲಾಯು. ೮೫–೩೯). [ಸಂ.]

**ಅಪಾನವಾಯು** (ನಾ). ೧. = ಅಪಾನ. ೨. ಹೂಸು; ಗುದದ್ವಾರದಿಂದ ಹೊರಬೀಳುವ ಗಾಳಿ: ಗುಹ್ಯದಲ್ಲಿ ಅಪಾನವಾಯು ನಾಭಿಯಲ್ಲಿ ಸಮಾನವಾಯು (ಚನ್ನವ. ೮೯). [ಅಪಾನ + ವಾಯು]

**ಅಪಾನಾನಿಳ** (ನಾ). = ಅಪಾನವಾಯು ೨: ಬಳಸಿನೊಳೇಂ ತಿಂಬುದು ಮಾತುಳಂಗ ಪತ್ರಪ್ರಯುಕ್ತಮಧುವಂ ಬೇಗಂ ಕಳೆಗುಂ ಮುಸಗಿದಪಾನಾನಿಳನಂ (ಲೋಕೋಪ. ೯–೨೪೬). [ಅಪಾನ + ಅನಿಳ (= ಅನಿಲ)]

**ಅಪಾಪೋಲಿ** (ನಾ). ಪೋಕರಿ; ದಾರಿ ತಪ್ಪಿದವನು: ಅವನು ತೀರ ಅಪಾಪೋಲಿ (ಜಾರುದಾ. ೧೦೨); ಎಲ್ಲಾ ಅಂಥ ಅಪಾಪೋಲಿಗಳೇ (ಚಿಂಗೂಚಿ. ೫೪). [?]

**ಅಪಾಮಾರ್ಗ**$_1$ (ನಾ). ತಪ್ಪುದಾರಿ: ಹುಡುಗ ಯಾಕೋ ಅಪಾಮಾರ್ಗ ಹಿಡಿಯುತ್ತಿದ್ದಾನೆ (ರೂಢಿ). [ಸಂ. ಅಪಮಾರ್ಗ]

**ಅಪಾಮಾರ್ಗ**$_2$ (ನಾ). ಉತ್ತರಣೆ ಗಿಡ; ಉತ್ತರಾಣಿ ಗಿಡ: ನ್ಯಗ್ರೋಧಶಮ್ಯಪಾಮಾರ್ಗ ಖದಿರಾದಿ ಶುಷ್ಕ ಸಮಿತ್ತುಗಳುಮಂ (ಪಂಚತಂ. ೬೧–೧). [ಸಂ.]

**ಅಪಾಯ** (ನಾ). ೧. ಕೆಡುಕು; ಕೇಡು; ಹಾನಿ: ಚರಣಂಗಳ್ ನಾಲ್ಕಱೊಳಂ ಪರಿಕಿಸೆ ಕರ್ತಂಗೆ ಕವಿಗೆ ಲೇಖಕನಪ್ಪಂಗಿರದಕ್ಕುಮಪಾಯಂಗಳ್ (ಛಂದೋಂಬು. ಪರಿ. ೧–೨೪); ಏಸಪಾಯವನೊದೆದು ಕಳೆಯರು ಕೃಷ್ಣಭಕ್ತರು (ಕುವ್ಯಾದ್ರೋ. ೩–೬೦). ೨. ಕಳೆದುಹೋಗುವುದು; ತೀರಿಹೋಗುವುದು. 'ಮೇಘಾಪಾಯ', 'ಶಿಶಿರಾಪಾಯ' ಪರಾ. ೩. ವಿನಾಶ; ಸಾವು. [ಸಂ.]

**ಅಪಾಯಕರ** (ಗು). = ಅಪಾಯಕಾರಕ. [ಸಂ.]

**ಅಪಾಯಕಾರಕ** (ಗು). ಕೇಡನ್ನುಂಟುಮಾಡುವ: ನೀವು ಗುರುವನ್ನು ಓಲೇಕಾರನಂತೆ ನೋಡತೊಡಗಿದ್ದೀರಿ. ಇದು ಅಪಾಯಕಾರಕವಾಗಿದೆ (ರಂಗಜೋ. ೭೯). [ಅಪಾಯ + ಕಾರಕ]

**ಅಪಾಯಕಾರಿ** (ಗು). ಕೇಡನ್ನುಂಟುಮಾಡುವಂಥ; ಕೆಡುಕನ್ನು ತರುವ: ಇಲಿ, ಜಿರಳೆ, ನೊಣ ಮೊದಲಾದವುಗಳು ನಮ್ಮ ಆರೋಗ್ಯಕ್ಕೆ ಅಪಾಯಕಾರಿ ಜೀವಿಗಳಾಗಿವೆ (ಅಡುಸೌ. ೪೪). [ಸಂ. ಅಪಾಯಕಾರಿನ್]

**ಅಪಾಯವಿಚಯ** (ನಾ). [ಜೈನ] ನಾಲ್ಕು ಬಗೆಯ ಧರ್ಮಧ್ಯಾನಗಳಲ್ಲಿ ಎರಡನೆಯದು ; ಲೋಕದ ಅಜ್ಞಾನವನ್ನೂ ದುಃಖವನ್ನೂ ಹೇಗೆ ತೊಲಗಿಸಬೇಕೆಂಬುದರ ಚಿಂತನೆ: ಭಟಾರರಾಜ್ಞಾವಿಚಯಮಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬೀ ನಾಲ್ಕುಂ ತೆಱದ ಧರ್ಮಧ್ಯಾನಂಗಳಂ ಧ್ಯಾನಿಸುತ್ತುಂ (ವಡ್ಡಾರಾ. ೧೫೪-೯) ; ಮುನ್ನಮಾಜ್ಞಾವಿಚಯಮಪಾಯ [ಪಾಠಾಂ. ಕ] ವಿಚಯ ವಿ ಪಾ ಕ ವಿ ಚ ಯ ಸಂಸ್ಥಾನ ವಿಚಯಮೆಂಬ ನಾಲ್ಕುಂ ಧರ್ಮಧ್ಯಾನಮಂ ಧ್ಯಾನಿಸುತ್ತುಂ (ಆದಿಪು. ೧೦-೧೪ ವ). [ಅಪಾಯ + ವಿಚಯ]

**ಅಪಾಯಸಂಕೇತ** (ನಾ). ಅಪಾಯವೊದಗಿದೆಯೆಂದು ಸೂಚಿಸುವ ಸಂಕೇತ. [ಅಪಾಯ + ಸಂಕೇತ]

**ಅಪಾರ** (ಗು). ೧. ಪಾರವಿಲ್ಲದ; ಎಲ್ಲೆಯಿಲ್ಲದ; ಅತ್ಯಧಿಕವಾದ. ೨. ಕೊನೆಯಿಲ್ಲದ; ಮಹತ್ತರವಾದ: ಒಪ್ಪದಿಂ ಕಳಿದು ರಾಜಕುಮಾರನಪಾರ ಚಿಂತೆಯಿಂ (ನಂಬಿರ. ೭-೪) ; ನನಗೆ ಅಪಾರ ಆನಂದವಾಗುತ್ತಿತ್ತು (ಬಾಣಅ. ೬). (ನಾ). ೩. ನದಿಯ ಆಚೆಯ ದಡ: "[ಅಪಾರಮೆಂಬುದು ಅವಾರ್ಕ್ಕೂಲಂ]" (ಹಲಾಯು. ೧೧೦-೪೫) ; "ಅಪಾರಮವಾರ್ಕ್ಕೂಲಮೆಂದಿತ್ತಡಿಯಕ್ಕು" (ಮಂಗರಾ. ೧೨೩-೧೨). [ಸಂ.]

**ಅಪಾರದರ್ಶಕ** (ಗು). ಪಾರದರ್ಶಕವಲ್ಲದ; ತನ್ನ ಮೂಲಕ ನೋಡಿದರೆ ಆಚೆಯ ವಸ್ತುಗಳು ಕಾಣಲು ಅವಕಾಶ ಕೊಡದಿರುವ. [ಸಂ. (ಅ- + ಪಾರದರ್ಶಕ)]

**ಅಪಾರದರ್ಶಕತ್ವ** (ನಾ). ಪಾರದರ್ಶಕವಲ್ಲದಿರುವಿಕೆ: ಧಾತುಗಳಲ್ಲಿ ಅಪಾರದರ್ಶಕತ್ವ, ಜಡತ್ವ . . . ಎಂಬ ನಾಲ್ಕು ವಿಶೇಷ ಗುಣಗಳುಂಟು (ಮುಂಬಯಿ. ೪-೯೩). [ಸಂ.]

**ಅಪಾರದರ್ಶಿ** (ನಾ). ೧. = ಅಪಾರದರ್ಶಕ. ೨. ಪಾರವನ್ನು ಕಾಣದವನು. [ಸಂ. ಅಪಾರದರ್ಶಿನ್]

**ಅಪಾರಭುಜಾಯಮಾನ** (ನಾ). ಅಪಾರ ಭುಜದಂತೆಇರುವವನು ; ಅತೀವ ಪರಾಕ್ರಮಿ: ಖೇಚರರಾಜಂಗೆ ಕೃಭ್ರಾಸಾಧ್ಯಕ್ಕಮಿವರಿರ್ವರೆ ಅಪಾರ ಭುಜಾಯಮಾನರೆಂಬುದನೆ ನಂಬುವುದು (ಶಾಂತಿಪು. ೨-೭೭ ವ). [ಸಂ. (ಅಪಾರ + ಭುಜಾಯಮಾನ)]

**ಅಪಾರಮಹಿಮ** (ಗು). ಹೆಚ್ಚಾದ ಮಹಿಮೆಯುಳ್ಳ: ಆ ವಾರಿಧಿಯಿಂದಪಾರಮಹಿಮಂ . . . ಪುಟ್ಟುಗುಂ ನಂದನಂ (ಜಗವಿ. ೨-೮೩). [ಅಪಾರ + ಮಹಿಮ]

**ಅಪಾರವಿಸ್ತಾರಿ** (ಗು). ಪಾರವಿಲ್ಲದಷ್ಟು ವಿಸ್ತಾರವಾದ; ಅತಿ ವಿಸ್ತಾರವಾದ: ಆ ಮಹಾರ್ಣವಂ ಸಮುದ್ರಮಾಗಿಯುಂ ಅಪಾರವಿಸ್ತಾರಿಯುಂ . . . ಎನಿಸಿದುದು (ಜಗವಿ. ೧-೪೪ ವ). [ಸಂ. ಅಪಾರವಿಸ್ತಾರಿನ್]

**ಅಪಾರವೀರ್ಯ** (ಗು). ಅತಿಶಯ ಪರಾಕ್ರಮಶಾಲಿಯಾದ: ಅಪಾರವೀರ್ಯನುಂ ಪಂಚಶತಚಾಪೋತ್ಸೇಧನುಂ . . . ಆಗಿ (ಆದಿಪು. ೧೫-೩ ವ). [ಅಪಾರ + ವೀರ್ಯ]

**ಅಪಾರ್ಥ** (ಗು). ೧. ಅರ್ಥವಿಲ್ಲದ. ೨. ಪ್ರಯೋಜನವಿಲ್ಲದ; ವ್ಯರ್ಥವಾದ. (ನಾ). ೩. ತಪ್ಪು ಅರ್ಥ: ತತ್ವಾರ್ಥಮನಱಿಯದ ಮುನ್ನಮಪಾರ್ಥಂ ರಂಜಿಸಿದ ಪಳಿಕುಮಣಿಯವೊಲಿರದೇ (ಜಗವಿ. ೧-೧೪) ; ಅರ್ಥವಿಲ್ಲದ ರೂಢಿ ಮೂಢತೆ ಕೊಡವಿ ಮೇಲಕೆ ನೋಡಿದೆ: ವ್ಯರ್ಥವಾಗಿದೆ ವ್ಯಕ್ತಿಶಕ್ತಿಯಪಾರ್ಥಗೊಂಡಿದೆ ಗಂಡೆದೆ (ನೆಲಮು. ೫೩) ; ನನ್ನ ಮಾತಿಗೆ ಅಪಾರ್ಥ ಮಾಡಬೇಡ (ರೂಢಿ). [ಸಂ.]

**ಅಪಾರ್ಥಿವ** (ಗು). ಪೃಥಿವಿಗೆ ಸಂಬಂಧಪಡದ; ಅಲೌಕಿಕವಾದ: ಅವನ ಆ ಅಪಾರ್ಥಿವ ನಿಧಿಸ್ವರೂಪವಾದ ದೇವಕನ್ನಿಕೆಯನ್ನು ನಿಂದಿಸುವ ಹುಡುಗಿಯನ್ನು ಹುಡುಕುತ್ತಾ (ಕೋಹಿನೂ. ೨೩). [ಸಂ.]

**ಅಪಾಲಾಪ** (ನಾ). = ಅಪಲಾಪ: ಕರಿಯ ಅಪಾಲಾಪ ಮಾಡುವುದೂ ಉಂಟು (ಕುಡಿಕೂ. ೧೦೨). [ಸಂ. ?]

**ಅಪಾವಸ್ಥೆ** (ನಾ). ದುರವಸ್ಥೆ ; ಕೆಟ್ಟ ಪರಿಸ್ಥಿತಿ: ಸಾಮ್ರಾಜ್ಯಲಕ್ಷ್ಮಿಯ ಅಪಾವಸ್ಥೆಯನ್ನು ಏನೆಂದು ಹೇಳೋಣ (ಪಂಯಾತ್ರ. ೩೩). [ಸಂ.]

**ಅಪಾವೃತ** (ಗು). ೧. ಆವರಣವನ್ನು ತೆಗೆದ; ಮುಚ್ಚಳವನ್ನು ತೆರೆದ. (ನಾ). ೨. ಸಂಯಮವಿಲ್ಲದಿರುವುದು. [ಸಂ.]

**ಅಪಾಶ್ರಯ** (ಗು). ೧. ಆಸರೆ ತಪ್ಪಿದ ; ಸಹಾಯವಿಲ್ಲದ ; ನಿರಾಶ್ರಿತವಾದ. (ನಾ). ೨. ಆಸರೆ; ಆಶ್ರಯ; ಗತಿ. ೩. ಮನೆಯ ಮುಂದಿನ ಅಂಗಳದಲ್ಲಿ ಹಾಕಿರುವ ಆವರಣದ ಬೇಲಿ. ೪. ಅಂಗಳದಲ್ಲಿ ಬಿಸಿಲಿಗೆ ಮರೆಯಾಗಿ ಹಾಕಿರುವ ಮೇಲುಕಟ್ಟು ; ಚಪ್ಪರ. [ಸಂ.]

**ಅಪಾಸಂಗ** (ನಾ). ಬತ್ತಳಿಕೆ. [ಸಂ.]

**ಅಪಾಸನ** (ನಾ). ೧. ನೆಲೆಯನ್ನು ತಪ್ಪಿಸುವುದು; ದೂರಕ್ಕೆ ಎಸೆಯುವುದು. ೨. ಕೊಲೆ ; ಸಂಹಾರಮಾಡುವುದು. [ಸಂ.]

**ಅಪಾಸ್ತ** (ಗು). ಹೋಗಲಾಡಿಸಿದ; ದೂರಮಾಡಲ್ಪಟ್ಟ: ಅಪಾಸ್ತ ಭ್ರೂಲತಾ ವಿಲಾಸ ವಿಶೇಷಂ ಕಮಲಮದು ಪೋಲದೀ ನಿನ್ನ ಮುಖಮಂ (ಕವಿರಾ. ೩-೪೭) ; ಅಪಾಸ್ತೋಷ್ಠಸ್ಪಂದನಂ ಪ್ರಸನ್ನಂ ಮಧುರಂ ವಾಸ್ತವಯುತಮೊಗೆದುದು ಭವ್ಯಸ್ತೋಮಪ್ರಮದಕಾರಿ ದಿವ್ಯನಿನಾದಂ (ಚಂದ್ರಪು. ೭-೧೮). [ಸಂ.]

**ಅಪಿಂಡ** (ನಾ). [ಜೈನ] ನಾಮಕರ್ಮದಲ್ಲಿ ಎರಡನೆಯ ವಿಭಾಗ: ನಾಮಕರ್ಮಮುಂ ಪಿಂಡಾಪಿಂಡನಾಮದಿಂ ತೊಂಭತ್ತು ಮೂಱು ತೆಱನಕ್ಕುಂ (ಶಾಂತಿಪು. ೧೨-೧೧ ವ). [ಸಂ.]

**ಅಪಿಧಾನ** (ನಾ). ೧. ಮುಚ್ಚುವುದು; ಮರೆಮಾಡುವುದು. ೨. ಮುಚ್ಚಳ; ಮರೆ. [ಸಂ.]

**ಅಪಿನದ್ಧ** (ಗು). ೧. ಮುಚ್ಚಿದ ; ಮರೆಮಾಡಿದ. (ನಾ). ೨. ಕಟ್ಟಲ್ಪಟ್ಟುದು: "ಬದ್ಧಂ, ಪಿನದ್ಧಂ, ಆಮುಕ್ತಂ, ಅಪಿನದ್ಧಂ – ಈ ೪ ಕಟ್ಟಲ್ಪಟ್ಟುದು" (ಹಲಾಯು. ೧೨೩-೬೨). ೩. ಕಾಲಿಗೆ ಕೆರ, ಮೋಜಾ ಮುಂತಾದ ತೊಗಲ ರಕ್ಷೆ ಕಟ್ಟಿಕೊಂಡವನ ಪೆಸರುಗಳು (ಸಿದ್ಧಾಂತಿ. ೨೨೦). [ಸಂ.]

**ಅಪಿನಿ, ಅಪನಿ, ಅಫಿನಿ** (ನಾ). = ಅಪೀಮು: ಭಂಗಿಯ ಬಂಡಿಯಪಿನಿಯ ಕೊಟ್ಟಗೆಯುರಿಸಿಂಗಿಯ ಹೊಱೆ . . . ನಡೆದವಾ ಭಂಗನೇಮಿಯ ದಂಡಿನೊಡನೆ (ಕುರಾಸಾಂ. ೧೯-೧೦) ; ಕರಿಯ ಮದ್ದಿನ ತಿತ್ತಿ ಬಾಣದ ಹೇರುಗಳಿರದಪಿನಿಯ ಸಾಲಮೊಟ್ಟೆ ಬರುತಿರ್ದುವು (ಕಂನವಿ. ೧೧-೩೭). **ಅಪನಿ** (ಕ). **ಅಫಿನಿ** (ಕ). [< ಅಪೀಮು]

**ಅಪಿನಿಕೂಟ** (ನಾ). ಅಫೀಮಿನ ಉಂಡೆ: ಹುರಿದ ಹೊಸಭಂಗಿ ಹದಗೆಯ್ದಪಿನಿಕೂಟದೊಳ್ ಬೆರೆದಮಲ್ (ಚಬಪು. ೪೭-೪೫). [ಅಪಿನಿ + ಕೂಟ]

**ಅಪಿಪಾಸ** (ಗು). ಬಾಯಾರಿಕೆಯಿಲ್ಲದ: ಅಪಿಪಾಸಃ, ಸತ್ಯಕಾಮಃ, ಸತ್ಯಸಂಕಲ್ಪಃ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಾಭಾವಿಕ ಗುಣಾಷ್ಟಕಗಳು ಆವಿರ್ಭವಿಸುವುವು (ಹಿಂದಸಾ. ೨೬೪). [ಸಂ.]

**ಅಪೀಮು, ಅಫೀಮು** (ನಾ). ಗಸಗಸೆಯ ಕಾಯಿಂದ ಬರುವ ಒಂದು ಬಗೆಯ ಅಂಟು ಅಥವಾ ಮೇಣ. ℙ ಇದು ಒಂದುಮಾದಕ ದ್ರವ್ಯ: ಕಸಕಸಿಯ ಕಾಯಿಯಲ್ಲಿ ಹೊರಡುವ ಅಂಟಿಗೆ ಕೆಲವರು ಅಪೀಮುಎನ್ನುತ್ತಾರೆ (ಕೃಷಿಪ್ರ. ೧೯೭). **ಅಫೀಮು**: ಇದರಿಂದ ಗುಣ ತೋರದಿದ್ದರೆ ಕಾಲುತೊಲ ಅಫೀಮನ್ನಾಗಲಿ ಅಥವಾ ಅರ್ಧ ತೊಲ ಅಳಲೆಕಾಯ ಪುಡಿಯನ್ನಾಗಲಿ ಮೇಲೆ ಹೇಳಿದ ಔಷಧದ ಸಂಗಡ ಸೇರಿಸಿಕೊಡುವುದು (ಗ್ರಾಮಾಕ. ೧೩೯).

[← ಅರ. ಪಾರ. ಅಫೀವ್ಮ್, ಅಫ್‌ಯೂನ್; ಮರಾ. ಅಫೀಣ್, ಅಫೀವ್ಮ್; ಹಿಂದಿ. ಅಪೀವ್ಮ್, ಅಫೀವ್ಮ್. / ಸಂ. ಅಹಿಫೇನ]

**ಅಪೀಲ್,** ಅಪೀಲು (ನಾ). ಕೆಳಗಿನ ನ್ಯಾಯಾಸ್ಥಾನದಲ್ಲಿ ಆದ ತೀರ್ಪನ್ನು ಪುನರ್ವಿಮರ್ಶಿಸಲು ಮೇಲಿನ ನ್ಯಾಯಾಸ್ಥಾನಕ್ಕೆ ಮಾಡಿಕೊಳ್ಳುವ ಮನವಿ; ಮೇಲರಿಕೆ. **ಅಪೀಲು** : ಕೆಳಗಿನ ಕೋರ್ಟಿನವರು ಮಾಡಿದ ತೀರ್ಪಿನ ಮೇಲೆ ಇಲ್ಲಿ ಆಪೀಲು ನಡಿಯುತ್ತದೆ (ಮುಂಬಯಿ. ೬–೧೩೨).

**ಅಪೀಲ್‌ಮಾಡು, ಅಪೀಲುಮಾಡು** = ಕೆಳಗಿನ ನ್ಯಾಯಾಸ್ಥಾನದಲ್ಲಿ ಆದ ತೀರ್ಪನ್ನು ಪುನರ್ವಿಮರ್ಶಿಸಲು ಮೇಲಿನ ನ್ಯಾಯಾಸ್ಥಾನಕ್ಕೆ ಮನವಿ ಮಾಡಿಕೊ : ದೊರೆಗಳವರಲ್ಲಿ ಆಪೀಲು ಮಾಡುವುದಕ್ಕೆ ನಿಯಮವಿರಲಿಲ್ಲ (ಮಹಾವಂ. II, ೪೧). [< ಇಂ. Appeal]

**ಅಪೀಲು** 'ಅಪೀಲ್' ನೋ.

**ಅಫು,** ಅಪ್ಪು$_5$, ಅಫು, ಅಫೂ (ನಾ). = ಅಪೀಮು : ಗಿದ್ದನ ಅಕ್ಕ್ಯಾಗ ಮಳಿರಾಜ ಆವರು ಅಪುವನ್ನು ಕೂಡ್ಯಾರ ಮಳಿರಾಜಾ ಸಣ್ಣ ಕೂಸಿಗಿ ಮನ್ನಿಸಿ ಉಣಿಸ್ಯಾರ (ಮಲ್ಲಿಗ. ೨೭); ಮಕ್ಕಳಿಗೆ ಅಪು ತಿನಿಸೋದು ನೋಡು (ರಾಜಾದೇ. ೫). **ಅಪ್ಪು$_5$** : ಕೆಲಮಂದಿ ಅಪ್ಪುತಿಂದುದರಿಂದ ಆಯ್ತೆಂದು, ಹೇಳಿದರು ಅಲ್ಲವೆ, ಎಂದು ಕೇಳಿದರು (ನವರಾ. II, ೫೯); ಅಪ್ಪುವಿನ ಎಣ್ಣೆ (ಮುಂಬಯಿ. ೫–೭೨). **ಅಫು** : ಗಾಂಜ ಅಫು ಸರಾಯ ಮುಂತಾದ ಅಮಲೇರುವ ಪದಾರ್ಥಗಳನ್ನು (ಮುಂಬಯಿ. ೪–೨೫); ಭಂಗಿ ದತ್ತೂರಿ ಅಫು ಗಾಂಜಿ ಮೊದಲಾದ ಅಮಲಿನಲ್ಲಿ (ಕೃಷಿಪ್ರ. ೩೧೧); ಹಣಬರು – ಇವರು ಮಾಂಸ ತಿನ್ನುತ್ತಾರೆ. ಆದರೆ ಸಾರಾಯ, ಗಾಂಜಿ, ಭಂಗಿ, ಅಫು ಇವುಗಳನ್ನು ಮುಟ್ಟುವುದಿಲ್ಲ (ಕಭಾಗ. ೧೨೬). **ಅಫೂ** : ಭಾರತೀಯ ಗಾಂಜಾ ಅಫೂಗಳು ನಿಮ್ಮ ತಲೆಯಲ್ಲಿ ಸಾವಕಾಶವಾಗಿ "ಅಮಲು ಕೂಡಿಸುತ್ತವೆ" (ಕುರಿಹಿಂ. ೧೩೫); ರಾಮಕಮಲ ಭಟ್ಟಾಚಾರ್ಯರು ಅಫೂ ತಿಂದು ಕಣ್ಣುಮುಚ್ಚಿಕೊಂಡು ಗುಡಿಗುಡಿಯನ್ನು ಕುಡಿಯುತ್ತಿದ್ದರು (ಶ್ರೀಕಾಂತ. ೮). [← ಮರಾ. ಅಫು, ಅಫೂ]

**ಅಪುಟಗಿ** (ಗು). (?) : ಕಾನತ್ತೆರಿನ ಸಿಸ್ತಿನಿಂದ ಗ ೧ ಪ್ರಾಕು ನಿಲಿಸಿದ ನಷ್ಟದಿಂದ ತೋಟದ ಸ್ತಳ ಅಪುಟಗಿ ಸ್ತಳವಾದ ಸಂಮಂದ ಮಹಾಜನಂಗಳು ವರಾಡಿಸಿ ಕೊಡುತ್ತಿದ್ದ ಬಗೆಲು (ಮೈಆರಿ. ೧೯೪೩; ೪೪–೪೬; 1711). [?]

**ಅಪುತ್ರ** (ನಾ). ೧. ಮಗನಿಲ್ಲದವನು. ೨. ಮಗನಲ್ಲದವನು : ಸ್ತ್ರೀಪುರುಷ ಸಂಗ ವಿರೋಧ ನಮಗಿನ್ನರಸನಾಪುತ್ರಸ್ಯಗತಿಯೆಂದಿರದೆ ಶ್ರುತಿವಚನ (ಕುವ್ಯಾಆ. ೪–೨೭). [ಸಂ.]

**ಅಪುತ್ರಕ** (ನಾ). ಗಂಡುಮಕ್ಕಳಿಲ್ಲದವನು. 'ಅಪುತ್ರಕಪೊರುಳ್' ಪರಾ. [ಸಂ.]

**ಅಪುತ್ರಕಪೊರುಳ್** (ನಾ). ಗಂಡುಮಕ್ಕಳಿಲ್ಲದವನ ಆಸ್ತಿ : ಪೇರಿಯಾ ಒಸಗೆಯುಂ ಅಲವಣಮುಂ ಅಪುತ್ರಕಪೊರುಳುಮಾನ್ ವಿಟ್ಟಾರ್ (ಎಕ. VII, ಶಿಕಾರಿ. ೧೫೪–೬; 685). [ಅಪುತ್ರಕ + ಪೊರುಳ್]

**ಅಪುತ್ರಿಕ** (ನಾ). ಸಂತಾನವಿಲ್ಲದವನು; ಮಕ್ಕಳಿಲ್ಲದವನು. 'ಅಪುತ್ರಿಕದ[ಧ]ನ' ಪರಾ. [ಸಂ.]

**ಅಪುತ್ರಿಕದ[ಧ]ನ** (ನಾ). ಸಂತಾನವಿಲ್ಲದವನ ಧನ; ಮಕ್ಕಳಿಲ್ಲದವನ ಹಣ : ಅನ್ಯಾರು ಇಲ್ಲದಿದ್ದಡೆ ಅಪುತ್ರಿಕದ[ಧ]ನಕಜ ದೇವಾಲ್ಯಕ್ಕಿಕ್ಕುವದು ತಮ್ಮಡಿ ಎಂಬ ವಾರ್ತ್ತೆ (ಎಕ. IX, ಚನ್ನಪ. ೭೩–೩೫; 1318). [ಅಪುತ್ರಿಕ + ಧನ]

**ಅಪುತ್ರಿಕೆ** (ನಾ). ೧. ತನಗಾಗಲಿ ತನ್ನ ತಂದೆಗಾಗಲಿ ಗಂಡುಸಂತತಿ ಇಲ್ಲದವಳು. ೨. ಮಕ್ಕಳಿಲ್ಲದೆ ಸತ್ತವರ ಆಸ್ತಿ ಸೇರುವುದರಿಂದ ಉಂಟಾಗುವ ಆದಾಯ : ತಳವರಿಕೆ ಕೋರಾಯ ಗುತ್ತಿಗೆ ಅಪುತ್ರಿಕೆ ದಂಡವುಂಡಿಗೆಗಳು . . . ಅರ್ಥದ ಸುವ್ಯವಸ್ಥೆ ಜತು (ಸಿಂಗಿರಾ. ೨೨–೨೭); ಜನಕಲ್ಯಾಣ ಕಾರ್ಯಗಳಿಗೆ ಬೇಕಾಗುವ ಹಣಕ್ಕಾಗಿ ಇದ್ದ ತೆರಿಗೆಯ ವ್ಯವಸ್ಥೆಯ ಪುನರ್‌ಘಟನೆಮಾಡಿ ಬಂಕದೆರೆ . . . ಅಪುತ್ರಿಕೆ . . . ಗುತ್ತಿಗೆಗಳೆಂಬ ಹದಿಮೂರು ಹೊಸಕರಗಳನ್ನು ನಿಯೋಜಿಸಿದರು ಬಸವಣ್ಣನವರು (ಶರಚ. ೧೨೯). [ಸಂ. ಅಪುತ್ರಿಕಾ]

**ಅಪುದು** 'ಆಗು$_1$' ನೋ.

**ಅಪುನರಾವೃತ್ತಿ** (ನಾ). ಮತ್ತೆ ಹಿಂತಿರುಗಿ ಬಾರದಿರುವುದು; ಮೋಕ್ಷ : ಶ್ರವಣ ಮನನ ಜಿಜ್ಞಾಸಾಧ್ಯಾನಾದಿಗಳಿಂದ ಅಪುನರಾವೃತ್ತಿರೂಪ ಪರಮಾತ್ಮ ಪ್ರಾಪ್ತಿಯೆಂಬ ಮೋಕ್ಷಸ್ವರೂಪವನ್ನು . . . ನಿರೂಪಿಸಿರುವರು (ಹಿಂದಸಾ. ೧೫೪). [ಸಂ.]

**ಅಪುನರ್ಜಾತ** (ಗು). ಮತ್ತೆ ಹುಟ್ಟದ; ಪುನರ್ಜನ್ಮವಿಲ್ಲದ : ಅಷ್ಟಾದಶದೋಷವರ್ಜಿತನುಮಪುನರ್ಜಾತನುಂ . . . ಅಕ್ಕುಂ (ಸುಕುಮಾ. ೮–೧೪ ವ). [ಸಂ.]

**ಅಪುನರ್ಭವ** (ನಾ). ೧. ಮತ್ತೆ ಹುಟ್ಟದಿರುವುದು; ಪುನರ್ಜನ್ಮವಿಲ್ಲದಿರುವುದು; ಮೋಕ್ಷ : ಶಾನ್ತಿಸೇನ ಮುನೀಶನಾಕ್ಕಿಎ ವೆಳ್ಗೊಳ ಅದ್ರಿಮೇಲಶನಾದಿವಿಟ್ಟಪುನರ್ಭವಕ್ಕೆಜೆ ಆಗಿ (ಎಕ. II, ೩೧–೪; 6:0); ೨. ಪುನರ್ಜನ್ಮವಿಲ್ಲದವನು; ಮೋಕ್ಷವನ್ನು ಪಡೆಯುವವನು: ಅಪುನರ್ಭವನಾಪ್ತಂ ತಲ್ಲಪನೋದಿತಮಾಗಮಂ (ಸುಕುಮಾ. ೬–೨೬). [ಸಂ.]

**ಅಪುರಂಧ್ರಿ** (ನಾ). ೧. ಗಂಡನೂ ಮಕ್ಕಳೂ ಜೀವಿಸಿಲ್ಲದ ಸ್ತ್ರೀ. ೨. ಮರ್ಯಾದೆಗೆಟ್ಟ ಹೆಂಗಸು : ಕೊಳಕು ನಾಱುವ ದುರ್ವ್ರಣಂಗಳು ತೊಳಲುವರಿವರ್ಗಕೆ ತವರ್ಮನೆವೊಳಗೊಳಗುಳಿದಶೌಚಭಾಂಡಂಗಳ ಪುರಂಧ್ರಿಯರು (ಬಸಪು. ೪೦–೭೦). [ಸಂ.]

**ಅಪುರೂಪು** 'ಅಪರೂಪ$_1$' ನೋ.

**ಅಪುಷ್ಟಿ** (ನಾ). [ಕಾವ್ಯಮೀ] ಪುಷ್ಟಿಯಿಲ್ಲದಿರುವುದೆಂಬ ಒಂದು ಕಾವ್ಯದೋಷ : "ಅಪುಷ್ಟಿ – ಮುಖ್ಯವಾಗಿ ಹೇಳಬೇಕೆಂದಿರುವ ವಿಷಯಕ್ಕೆ ಯಾವ ಅಂಶದಲ್ಲಿಯೂ ಪುಷ್ಟಿ ಅಥವಾ ಅತಿಶಯವನ್ನು ತರದೇ ಇರುವ ಸಂಗತಿಯನ್ನು ಹೇಳಿರುವುದು" (ಕೈಪಿಡಿ. ೨೨೮). [ಸಂ.]

**ಅಪುಷ್ಪ** (ಗು). ೧. ಹೂವಲ್ಲದ. ೨. ಹೂವಿಲ್ಲದ (ನಾ). ೩. ಹೂವು ಬಿಡದ ಮರ. [ಸಂ.]

**ಅಪುಷ್ಪಿಕೆ** (ನಾ). = ಅಪುಷ್ಪಿಣಿ (†). [ಸಂ. ಅಪುಷ್ಪಿಕಾ]

**ಅಪುಷ್ಪಿಣಿ** (ನಾ). ಮೈನೆರೆಯದ ಹುಡುಗಿ; ಋತುಮತಿಯಾಗದವಳು. [ಸಂ. ಅಪುಷ್ಪಿಣೀ]

**ಅಪೂಟ** (ಅ). ಪೂರ್ಣವಾಗಿ; ಶುದ್ಧಾಂಗವಾಗಿ : "ಇಂಗ್ಲೀಷು ಕಲೀವವರು ಕನ್ನಡ ಅಪೂಟ ಮರಿತಾರ" (ರಕ್ತಧ್ವ. ೪೯). [← ಮರಾ. ಅಪೂಟ್ = ಮುಟ್ಟದಿರುವ]

**ಅಪೂಪ** (ನಾ). ೧. ದೋಸೆ, ಒಬ್ಬಟ್ಟು, ಇಡ್ಡಲಿ, ಅಪ್ಪ ಮುಂತಾದ ತಿಂಡಿ : ಬಳಿಕಿತ್ತ ತನ್ನಯ ಸುತಂ ಪೂಜಗಣಿಂದೊಂದಪೂಪಮಂ ತೆಗೆದು ಮೆಲಲು (ಅರಾಚ. ೨–೨೨); ನಾನಾವಿಧವಾದ ಅಪೂಪಗಳಿಂದಲೂ, ಸೂಪಶಾಕಾದಿಗಳಿಂದಲೂ . . . ಭೋಜನವನ್ನು ಮಾಡಿಸಲು (ವೇಂಮಾಹಾ. ೧೦೯). ೨. ಗೋಧಿ. ೩. ಜೇನುಗೂಡು. [ಸಂ.]

**ಅಪೂರಣಿ** (ನಾ). ಬೂರುಗದ ಮರ; ದೂದಿಯ ಮರ. [ಸಂ. ಅಪೂರಣೀ]

**ಅಪೂರುವ** (ನಾ). = ಅಪೂರ್ವ ೧ : ತೇರಾಯ ಕರದಾಧಿ ಯಡಸರ್ಪುದಿಟ್ಟಸಲಪೂರುವಮದೇನೆಂದೊಡದಕೆ ಠಾವೆನಿಸಿರ್ಪ ಕಾರಣಂ ನೀನಲ್ತೆ ನೃಪತಿಯ ಮನೋರಥವ ಪೂರಿಸಲ್ ನಿರುಜೆಯಹುದು (ವೆಂಕಾರಾ. ೨–೮–೯). [ಸಂ. ಅಪೂರ್ವ]

**ಅಪೂರ್ಣ** (ಗು). ಪೂರ್ಣವಾಗಿಲ್ಲದಿರುವ; ಅರಕೆಯಾದ; ಇನ್ನೂ ಮುಗಿಯದಿರುವ. [ಸಂ.]

**ಅಪೂರ್ಣಕ್ರಿಯಾಪದ** (ನಾ). [ವ್ಯಾಕ] ವಾಕ್ಯದ ಅರ್ಥವನ್ನು ಪೂರ್ಣಗೊಳಿಸದ ಕ್ರಿಯಾರೂಪ: ಧಾತುಗಳಿಗೆ ಕೆಲವು ಆಖ್ಯಾತ ಪ್ರತ್ಯಯಗಳು ಸೇರಿ ಪೂರ್ಣ ಕ್ರಿಯಾಪದಗಳಾಗುತ್ತವೆ . . . ಮತ್ತೆ ಕೆಲವು ಪ್ರತ್ಯಯಗಳು ಸೇರಿ ಅಪೂರ್ಣ ಕ್ರಿಯಾಪದಗಳಾಗುತ್ತವೆ (ಕೈಪಿಡಿ. ೪೯). [ಅಪೂರ್ಣ + ಕ್ರಿಯಾಪದ]

**ಅಪೂರ್ಣಭೂತಕಾಲ** (ನಾ). [ವ್ಯಾಕ] "ಕ್ರಿಯೆ ಪೂರ್ಣವಾಗಿ ನಡೆದಿರಲಿಲ್ಲ ಎಂಬುದನ್ನು ತೋರಿಸುತ್ತದೆ . . . ಆದ್ದರಿಂದ ಇದು ಅಪೂರ್ಣಭೂತ ಕಾಲದ ರೂಪವಾಯಿತು" (ಮಧ್ಯಮ ೧೧೧). [ಅಪೂರ್ಣ + ಭೂತ + ಕಾಲ]

**ಅಪೂರ್ಣಾಂಕ** (ನಾ). [ಗಣಿತ] ಭಿನ್ನರಾಶಿ; ಪೂರ್ಣವಲ್ಲದ ಸಂಖ್ಯೆ. [ಅಪೂರ್ಣ + ಅಂಕ]

**ಅಪೂರ್ಬ** (ಗು). = ಅಪೂರ್ವ೧ : ಭಕ್ತಿಯಿಂ ಬಸದಿಗೆ ವನ್ದು ನೋನ್ತಳ ಮಪೂರ್ಬ್ಬತರಂ ಗಡ ಜಕ್ಕಿಯಬ್ಬೆಯಾ (ಎಕ. VII, ಶಿಕಾರಿ. ೨೧೯–೨೯; 918). [ಸಂ. ಅಪೂರ್ವ]

**ಅಪೂರ್ಬಾಯ** (ನಾ). = ಅಪೂರ್ವಾಯ: ಪೂರ್ಬ್ಬಾಯ ಅಪೂರ್ಬ್ಬಾಯಯೆಲ್ಲವನೂ (ಎಕ. VI, ಕಡೂರು. ೪೯–೪೨; 1291); ಪೂರ್ಬ್ಬಾಯ ಅಪೂರ್ಬ್ಬಾಯವೊಳಗಾದ ಅಷ್ಟಭೋಗ ತೇಜಸ್ಸ್ವಾಮ್ಯವನು ಸರ್ವಮಾನ್ಯವಾಗಿ . . . ಎಱದು ಕೊಟ್ಟೆವು (ಎಕ. XI, ಚಿತ್ರದು. ೨–೨೩; 1355). [ಸಂ. ಅಪೂರ್ವಾಯ]

**ಅಪೂರ್ವ** (ಗು). ೧. ಹಿಂದೆಲ್ಲಿಯೂ ಎಂದೂ ಕಾಣದ; ಹೊಸ ಬಗೆಯ; ಅಪರೂಪವಾದ. ೨. ಆಶ್ಚರ್ಯಕರವಾದ. ೩. ಅಸಮಾನವಾದ. ೪. ಪೂರ್ವವಲ್ಲದ; ಮೊದಲಿಲ್ಲದ. (ನಾ). ೫. ಹಿಂದೆಲ್ಲಿಯೂ ಎಂದೂ ಕಾಣದುದು; ಅಪರೂಪವಾದುದು: ತನ್ನ ರತ್ನಪ್ರತತಿಗಳೊಳಪೂರ್ವಂಗಳಂ ಕೊಂಡು (ಆದಿಪು. ೧೩–೯೧); ಎಱವಿಕ್ಕಿದ ಬೆಲ್ಲದವೊಲಪೂರ್ವಮಾಗೆ ಪೇೞ್ದಂ ಕೃತಿಯ (ಛಂದೋಂಬು. ೧–೮). ೬. ಅಶುಭ: "ಅಕ್ಷಣಮಾದ ಕಾರ್ಯಮುಶುಭಂಗಳಪೂರ್ವಮೆನಿಕ್ಕು" (ನಾನಾರ. ೧೦೨). ೭. [ತತ್ತ್ವಶಾ] ಕರ್ಮಜನ್ಯವಾದ ಅದೃಷ್ಟಫಲ: ಅಪೂರ್ವವಿಲ್ಲದಿದ್ದರೆ ಸ್ವರ್ಗಕ್ಕೆ ಯಾಗವು ಸಾಧನವಾಗಲಾರದು (ಹಿಂದಸಾ. ೧೮೦). ೮. [ಜೈನ] ಸಂಸಾರಿ ಜೀವನು ಮೋಕ್ಷವನ್ನು ಹೊಂದಲು ಕ್ರಮವಾಗಿ ಏರಬೇಕಾದ ಹದಿನಾಲ್ಕು ಗುಣಸ್ಥಾನಗಳಲ್ಲಿ ಎಂಟನೆಯದು: ದಾಂಟಿದನಪ್ರಮತ್ತತೆಯನಪೂರ್ವವೆಂಬೆಂಟನೆಯೆಡೆಯೊಳು ನಿಂದಾ ನಾಂಟಿತಾ ಸ್ಥಳದಲ್ಲಿ ಪ್ರಥಮ ಶುಕ್ಲಧ್ಯಾನ ಹೆಂಟಿಯಂತಾದುವು ಕರ್ಮಾ (ಭರಚ. ೫೪–೬೩). [ಸಂ.]

**ಅಪೂರ್ವಕ** (ನಾ). ಅಪರೂಪ; ಅಪೂರ್ವ; ಅಸಾಧಾರಣ: ಸರ್ವರಕ್ಷಕ ಕೋವಿದತ್ವಮುದೇನಪೂರ್ವಕಮೇ (ಬಸವು. ೧೦–೫೪). [ಸಂ.]

**ಅಪೂರ್ವಕರಣ** (ನಾ). [ಜೈನ] ಮೂರು ಬಗೆಯ ಕರಣಲಬ್ಧಿಗಳಲ್ಲಿ ಒಂದು: ಅಧಃಪ್ರವೃತ್ತಕರಣ ಅಪೂರ್ವಕರಣ, ಅನಿವೃತ್ತಿಕರಣಾಭಿಧಾನ ತ್ರಿವಿಧಕರಣಲಬ್ಧಿ ಮಧ್ಯದಲ್ಲಿ (ತತ್ತ್ವಪ್ರ. ೮೧). [ಅಪೂರ್ವ + ಕರಣ]

**ಅಪೂರ್ವಚಂಪಕ** (ನಾ). ಒಂದು ಬಗೆಯ ಸಂಪಗೆಯ ಗಿಡ: (ವೈಔಗಿ. ೨೯೪). [ಅಪೂರ್ವ + ಚಂಪಕ]

**ಅಪೂರ್ವತೆ** (ನಾ). ಅಪರೂಪವಾಗಿರುವುದು; ಅಸಾಧಾರಣವಾಗಿರುವುದು; ಆಶ್ಚರ್ಯವುಂಟುಮಾಡುವಂಥದು. [ಸಂ. ಅಪೂರ್ವತಾ]

**ಅಪೂರ್ವತೆರ** (ನಾ). ಅಸಾಧಾರಣವಾದ ಕ್ರಮ; ಆಶ್ಚಯಕರವಾದ ಬಗೆ: ಇಂದಪೂರ್ವತೆರದಿ ಫಲಿತಮಾಯ್ತು (ಕೃಷ್ಣಾಕು. ೫–೧೮). [ಅಪೂರ್ವ + ತೆರ (< ತೆಱ)]

**ಅಪೂರ್ವಭಿತ್ತಿ** (ನಾ). ಅಪೂರ್ವವಾದ ಹಿನ್ನೆಲೆ, —ಗೋಡೆ, —ಪಟ (?): ರಾಣಿವಾಸದ ಬಳ್ಳಿಮಾಡದುಜ್ಜಳ ಮಣಿಭಿತ್ತಿ ಚಿಲ್ಪನೊಳಕೊಂಡೊಳಕೊಂಡುದಪೂರ್ವಭಿತ್ತಿಯಂ (ಪಂಶಾಮಾ. ೧–೧೨೮); (ಮಲ್ಲಿಪು. ೨–೬೩ ನೋ). [ಅಪೂರ್ವ + ಭಿತ್ತಿ]

**ಅಪೂರ್ವರೂಪ** (ನಾ). ಅಪರಿಚಿತವಾದ ರೂಪವುಳ್ಳವನು: ರಿಸಿಯರ್ ಪೋಪುದಂ ಸುಕೌಶಳಸ್ವಾಮಿ ಕಂಡೀ ಪೋಪರೇನೆಂಬರಬ್ಬಾ ಅಪೂರ್ವರೂಪರಿನ್ನರನೆಂದುಂ ಕಂಡಱಿಯೆನೆಂದು ತಾಯಂ ಬೆಸಗೊಂಡೊಡೆ (ವಡ್ಡಾರಾ. ೪೬–೫). [ಅಪೂರ್ವ + ರೂಪ]

**ಅಪೂರ್ವರೂಪೆ** (ನಾ). ಅಸಾಧಾರಣವಾದ ಸೌಂದರ್ಯವುಳ್ಳವಳು: ಬರೆಗುಂ ಬರೆಯಂ ದೊರೆವೆತ್ತ ಚೀರಘಟ್ಟಿಯುಮೆನೆ ಭಿತ್ತಿವೆತ್ತ ತೆಜನೊಪ್ಪಿದುದೊರ್ವಳಪೂರ್ವರೂಪೆಯಾ (ಶಾಂತಿಪು. ೮–೪೧). [ಸಂ. ಅಪೂರ್ವರೂಪಾ]

**ಅಪೂರ್ವಸಾಯಕ** (ನಾ). ಒಂದು ಬಗೆಯ ಬಾಣ (?): ಪಾಪೇಭ ಕಂಠೀರವನೆಚ್ಚೊಂದಪೂರ್ವಸಾಯಕಂ ಚಿತ್ರಾನೀಕನಂ ನೆಱಗೊಳ್ಪುದುಂ (ಶಾಂತಿಪು. ೪–೨೩ ವ). [ಅಪೂರ್ವ + ಸಾಯಕ]

**ಅಪೂರ್ವಾಯ** (ನಾ). ಒಂದು ಬಗೆಯ ತೆರಿಗೆಯಿಂದ ಬರುವ ಆದಾಯ: ರಾಮನಾಥ ದೇವರಿಗೆ ಆಗುವ ಚಿಕ್ಕಕೊಡಲಿಯ ಹನಸವಾಡಿಯ ಪೂರ್ವಾಯ ಅಪೂರ್ವಾಯ . . . ನ್ಯಾಯಯೇನೂ ಇಲ್ಲೆಂದು ಧಾರಾಪೂರ್ವಕ ಮಾಡಿದ ಧರ್ಮ (ಎಕ. VII, ಶಿವಮೊ. ೬೮–೩; 1313); ರಾಮೇದೇವರಂಗಭೋಗಕ್ಕೆ ಕೊಟ್ಟ ಧರ್ಮವಿವಕೆ ಪೂರ್ವಾಯವಪೂರ್ವಾಯವೊಂದಿಲ್ಲ (ಎಕ. VII, ಶಿವಮೊ. ೬೯–೨೬; 1320). [ಅಪೂರ್ವ + ಆಯ₇]

**ಅಪೂರ್ವಾರ್ಥಲಬ್ಧಿ** (ನಾ). ೧. ಅಪರೂಪವಾದ ಅರ್ಥದ ಲಾಭ; ಆಶ್ಚರ್ಯಕರವಾದ ಅರ್ಥದ ಸಂಪಾದನೆ. ೨. ಹಿಂದೆಂದೂ ಇಲ್ಲದಷ್ಟು ಅತಿಶಯವಾದ ದ್ರವ್ಯದ ಸಂಪಾದನೆ; ಬಹಳವಾದ ದ್ರವ್ಯಲಾಭ: ಒಂದು ದಿವಸಂ ಸುಕವಿಯಂತಪೂರ್ವಾರ್ಥಲಬ್ಧಿಗೆ ಚಿಂತೆಗೆಯ್ದು ತನ್ನೊಳಿಂತೆಂದು ಬಗೆದಂ (ಪಂಚತಂ. ೨೨–೯). [ಅಪೂರ್ವ + ಅರ್ಥ + ಲಬ್ಧಿ]

**ಅಪೂರ್ವಿಗ** (ಗು). ೧. ಅಪರಿಚಿತವಾದ. ೨. ಹೊಸದಾಗಿ ಬಂದ: ಅಪೂರ್ವಿಗ ಬ್ರಾಹ್ಮಣರು ಪನ್ನಿರ್ವ್ವರ್ಗ್ಗೆ (ಹೈಆರಿ. V, ೯–೫೨; 1088); ತರಳನಪೂರ್ವಿಗನತಿಥಿ ಸ್ವರೂಪನೀಷದ್ವಿಭೂತಿಲಸಿತಲಲಾಟಂ ವರವಿಪ್ರನೆನುತೆ ಬಂದಾದರಿಸಿದರ್ (ಗಿರಿಕ. ೯–೯೦). [ಅಪೂರ್ವ + –ಇಗ]

**ಅಪೇಕ್ಷತೆ** (ನಾ). = ಅಪೇಕ್ಷೆ: ತಾನಸಮಜಂಗಮುದರುಶನಾಪೇಕ್ಷತೆಯೊಳ್ಕೆತಂದು (ಬಸವು. ೨೧–೬). [ಸಂ. ಅಪೇಕ್ಷತಾ]

**ಅಪೇಕ್ಷಿ** (ನಾ). ಅಪೇಕ್ಷೆಯುಳ್ಳವನು; ಬಯಕೆಯುಳ್ಳವನು. 'ದರ್ಶನಾಪೇಕ್ಷಿ', 'ದ್ರವ್ಯಾಪೇಕ್ಷಿ' ಪರಾ. [ಸಂ. ಅಪೇಕ್ಷಿನ್]

**ಅಪೇಕ್ಷಿತ** (ಗು). ೧. ಬಯಸಲ್ಪಟ್ಟ; ಬಯಸಿದ; ಕೋರಿದ: ಕಾಮಭೋಗಾಪೇಕ್ಷಿತರ್ಗಂ ಕಾಮಿನೀರತ್ನಂಗಳಂ ಸತ್ಪ್ರೇಮದಿಂ ಪೂಜಿಸುತ (ಬಸವು. ೬–೨೯). (ನಾ). ೨. ಕೋರಿಕೆ; ಬಯಕೆ. ೩. ನಿರೀಕ್ಷೆ. [ಸಂ.]

**ಅಪೇಕ್ಷಿಸು** (ಕ್ರಿ). ಬಯಸು; ಕೋರು: ಮದನಸಂತಾಪಕ್ಕುಪಶಮನೋಪಾಯಮನಾಂ ಪ್ರಾಣಂಬೆರಸೆನಿತು ಬೇಗಮಿರ್ಪೆನನ್ನೆವರಮಪೇಕ್ಷಿಸಿದಪ್ಪೆನಲ್ಲದೆಯುಂ (ಕಾದಂಪೂ. ೮೫); ಅಗ್ನಿಪಕ್ವಮಲ್ಲದುವನಪೇಕ್ಷಿಸಿಕೊಳ್ಳದನಯ್ದನೆಯಂ (ಸುಕುಮಾ. ೬–೩೦); ಯಕ್ಷರಾಕ್ಷಸರೂಕ್ಷಭೀತಿಗಳು ಅಕ್ಷಣವಳಿದು ರಕ್ಷೆಯಾಗಿಯಪೇಕ್ಷಿಸುವ ಪದವೀ ಕ್ಷಿತಿಯೊಳಹುದು (ಬಸವು. ೬೧–೮೩); ಕೆಲಸವನ್ನು ಅಪೇಕ್ಷಿಸುವಾಗ ಮಾತ್ರ

ಅವನಿಗೆ ಬೇಸರವುಂಟಾಗುತ್ತಿತ್ತು (ಮಣಿಸ. ೫೨). ೨. ನಿರೀಕ್ಷಿಸು.
[ಅಪೇಕ್ಷಣ$_{2}$ + -ಇಸು$_{3}$]

**ಅಪೇಕ್ಷೆ** (ನಾ). ೧. ಬಯಕೆ; ಆಕಾಂಕ್ಷೆ. ೨. ಆವಶ್ಯಕತೆ. ೩. ಮರ್ಯಾದೆ; ಗೌರವ. ೪. ನಿರೀಕ್ಷೆ. [ಸಂ. ಅಪೇಕ್ಷಾ]

**ಅಪೇಕ್ಷೆಗೆಯ್** (ಕ್ರಿ). ಅಪೇಕ್ಷಿಸು; ಬಯಸು: ಪೌಲೋಮಿಯಂ ನಾಳೆ ಬಲ್ಲಿದರಾರಾನುಮಪೇಕ್ಷೆಗೆಯ್ಯಲವರ್ಗೀಯಲ್ವೇಲ್ಕುಮೆಂಬಂದಮೇ (ಜಗವಿ. ೧೩-೫೫). [ಅಪೇಕ್ಷೆ + ಗೆಯ್ (< ಕೆಯ್$_{1}$)]

**ಅಪೇತ** (ಗು). ಬಿಟ್ಟುಹೋದ; ಹೊರಟುಹೋದ; ಕಳೆದುಹೋದ; ಅಗಲಿದ: ಅನಲ್ಪಕಲ್ಪಾವನಿಜಂಗಳಪೇತರತವೀರ್ಯಪಾಕಂಗಳಾಗಿಯುಂ (ಆದಿಪು. ೮-೬೧ ವ). [ಸಂ.]

**ಅಪೇತದೋಷ** (ಗು). ದೋಷವಿಲ್ಲದ; ದೋಷಗಳು ಬಿಟ್ಟುಹೋದ: ಉಪಚಿತಗುಣನಾನುಚಿತನನಪೇತದೋಷನನುದಾರ ಚರಿತೋದಯನಂ (ಕವಿರಾ. ೨-೧೬). [ಅಪೇತ + ದೋಷ]

**ಅಪೇಯ** (ಗು). ೧. ಕುಡಿಯಬಾರದ. ೨. (ಅಲಂ) ಅಹಿತಕರವಾದ: ಉಚಿತಮುಂ ಬಗೆಯದೆ ನುಡಿದೊಡಮೆಮಗೆ ಲಂಘನೀಯಮಪೇಯಂ (ಶಾಂತಿಪು. ೧೦-೧೨೦). [ಸಂ.]

**ಅಪೋಗಂಡ** (ನಾ). ೧. ಶರೀರದ ಅವಯವಗಳಲ್ಲಿ ಹೆಚ್ಚು ಅಥವಾ ಕಡಮೆ ಇರುವವನು; ವಿಕೃತಾಂಗ; ವಿಕಲಾಂಗ; ಅಧಿಕಾಂಗ. ೨. ಅಂಜುಬುರುಕ. 'ಪೋಗಂಡ' ಪರಾ. [ಸಂ.]

**ಅಪೋಹ** (ನಾ). ೧. ದೂಡುವುದು; ನೂಕಿಬಿಡುವುದು; ಕಳೆದು ಬಿಡುವುದು. ೨. ಕಾರ್ಯಕಾರಣಭಾವಗಳ ವಿಮರ್ಶೆಯ ಮೂಲಕ ಸಂಶಯವನ್ನು ನಿವಾರಿಸುವುದು; ತರ್ಕ. ೩. ವಿತರ್ಕ. ೪. ತಪ್ಪು ಊಹೆ. ೫. ನ್ಯೂನತೆ; ಕೊರತೆ: ಕೋಟಿ ಪೊನ್ನನೊಂದು ಕವಡಿಕೆಯಂ ಕುಡುವಂತೇನುಮಪೋಹಮಿಲ್ಲದೆ ಕೊಟ್ಟು (ಸುಕುಮಾ. ೧೦-೧೧೮ ವ); ನಂಬುಗೆಗಪೋಹಂ ಬಾರದಂತಾಳೆ ತಾಂ ಬಲು ಭಾಗ್ಯಂ ದೊರೆಗಪ್ಪುದೈ (ಸೋಮೇಶ. ೫೬); ಒಂದು ಕಾಸೂ ಅಪೋಹವಿಲ್ಲ (ದೌಲತ್. ೨೫೦). [ಸಂ.]

**ಅಪೋಹನ** (ನಾ). = ಅಪೋಹ: ೧, ೨. ಅತೀತದೋಷ ನಿವರ್ತನ ಪ್ರತಿಕ್ರಮಣಮುಂ, ಅನತಗತ ದೋಷಾಪೋಹನಪ್ರತ್ಯಾಖ್ಯಾನಮುಂ (ತತ್ತ್ವಪ್ರ. ೨೬೬). [ಸಂ.]

**ಅಪೌರುಷೇಯ** (ಗು). ಪುರುಷಕೃತವಲ್ಲದ; ಮನುಷ್ಯನು ನಿರ್ಮಾಣಮಾಡದ: ಆಪ್ತನು ಹೇಳಿದ ವಾಕ್ಯವೂ ಅಪೌರುಷೇಯವಾದ ವೇದವಾಕ್ಯವೂ ಅನಾಪ್ತರಿಂದ ಹೇಳಲ್ಪಡದಿರುವುದರಿಂದ ಶಬ್ದಪ್ರಮಾಣವಾಗುವುದೆಂದು ಪರಿಷ್ಕರಿಸುವರು (ಹಿಂದಸಾ. ೧೪೪); ವೇದಗಳು ಅಪೌರುಷೇಯವೆಂದು ಹಿಂದೂಗಳ ನಂಬಿಕೆ (ರೂಢಿ). [ಸಂ.]

**ಅಪ್ಪ**$_{1}$, ಅಪ (ನಾ). ೧. ತಂದೆ: ಕೈತಪ್ಪ ಮಾಡದೆ ತಿರುಗಿದನು ನಿಮ್ಮಪ್ಪ ತೊರವೆಯ ರಾಯ ನರಹರಿಯೆಡೆಗೆ (ತೊರರಾ. ೪-೯-೩೪); ಅಪ್ಪ ನೀನೆ ನಗೆನಲಹುದು ನಿನ್ನನು ಬಿಗಿಯಪ್ಪಲೈತಂದವನೆಂದ (ಕಂಸವಿ. ೬-೧೭೪); ಅಪ್ಪನ್ನ ಅಪ್ಪಾ ಅನ್ನದವ ಚಿಕ್ಕಪ್ಪನ್ನ ಅಪ್ಪ ಅಂದಾನೇ (ಗಾದೆ); ಅಪ್ಪ ನೆಟ್ಟ ಆಲದಮರವಾದರೆ ನೇಣುಹಾಕಿಕೊಳ್ಳಬಹುದೆ (ಗಾದೆ). ೨. ಗಂಡಸಿನ ಹೆಸರಿನ ಕೊನೆಯಲ್ಲಿ (ಅಣ್ಣ, ಅಯ್ಯ ಎಂಬಂತೆ) ಸೇರುವ ಮಾತು ಉದಾ— ಗಿರಿಯಪ್ಪ, ಭೀಮಪ್ಪ, ರಾಮಪ್ಪ, ಲಿಂಗಪ್ಪ: ಶ್ರೀ ಕನ್ನಂಬಾಡಿಯ ಪೊನ್ನಗಾವುಂಡನು ಹಾರಪ್ಪಂಗಳ ಮಗಂ ಬಾಚಿಗಂ (ಎಕ. XIV, ಶ್ರೀರಂಗ. ೫೦-೨೩; 1100). ೩. ಗಂಡಸರನ್ನು ಸಂಬೋಧಿಸುವಾಗ ಸರ್ವಸಾಧಾರಣವಾಗಿ ಉಪಯೋಗಿಸುವ ಮಾತು: ಇರೆ ಪಿಳ್ಳೆಯರ ನಾಯಿನಾರೆಂದರೊಲವಿಂದೆ ಹರಭಕ್ತ ವಾಗೀಶ ದೇವರ್ಗೆ ಮುದದಿಂದ ಅಪ್ಪರೇ ನಿಮಗೆನಿತು ಹರೆಯವೆಂದೆನುತಮಿರೆ (ವಾಗೀರ. ೨೬೫-೫); ಅಪ್ಪ ದೇವರೆ ಹೇಳೆನುತ ಬಿಗಿಯಪ್ಪುವಂ (ಬಸಪು. ೧೪-೫೭). ೪. ಹಿರಿಯರು ಕಿರಿಯರನ್ನು ವಾತ್ಸಲ್ಯದಿಂದ ಸಂಬೋಧಿಸುವಾಗ ಬಳಸುವ ಮಾತು: ಬಾರಪ್ಪ ಇಲ್ಲಿ (ರೂಢಿ). ೫. ಒಂದು ವಸ್ತು ಇನ್ನೊಂದಕ್ಕಿಂತ ಅಧಿಕ ಎಂಬಲ್ಲಿ ಬಳಸುವ ಶಬ್ದ: ಇದು ಅದರ ಅಪ್ಪ (ರೂಢಿ). **ಅಪ**: ೨. ಕಾವಳಿಯರಣುಗಯ್ಯ ತನ್ನ ತಮ್ಮನೊಬವ್ಪರಸನ ಮಲ್ಲಪನ್ನಪ ಕಾದು ಮಣ್ಣಾಳಿ ಕೊನ್ದು (ಎಕ. IX, ಹೊಸಕೋ. ೪೮-೩; 980 ?); ನೃಪಶಾಸ್ತ್ರಜ್ಞತೆಗಿಲ್ಲಿ ಮಲ್ಲಪನೊಳಶ್ವೇಭಾಗಮಕ್ಕಿಲ್ಲಿ ಮಲ್ಲಪನೊಳ್ ಶೂರತೆಗಿಲ್ಲಿ ಮಲ್ಲಪನೊಳಾರ್ತೀವೊಳ್ಗುಣಕ್ಕಿಲ್ಲಿ ಮಲ್ಲಪನೊಳ್ ಭವ್ಯತೆಗಿಲ್ಲಿ ಮಲ್ಲಪನೊಳಾಚಾರಕ್ರಮಕ್ಕಿಲ್ಲಿ . . . ಕಾಣಲಾಗದು ಸಮಾನಂ (ಅಜಿಪು. ೧-೨೭).

[ದೇ. ‖ **ತಮಿ.** ಅಪ್ಪನ್, ಅಪ್ಪು, ಅಪ್ಪಚ್ಚಿ. **ಮಲ.** ಅಪ್ಪನ್. **ತುಳು.** ಅಪ್ಪ; ಅಪ್ಪೆ = ಗಂಡಸರ ಹೆಸರಿನ ಜೊತೆಗೆ ಗೌರವಸೂಚಕವಾಗಿ ಸೇರುವ ಮಾತು; ಅಪ್ಪೆ = ತಾಯಿ. **ತೆಲು.** ಅಪ್ಪ. **ಕೊಡ.** ಅಪ್ಪೆ. / **ಪ್ರಾ.** ಅಪ್ಪ]

**ಅಪ್ಪ**$_{2}$ (ನಾ). ೧. ಅಕ್ಕಿ ಹಿಟ್ಟಿಗೆ ತೆಂಗಿನಕಾಯಿ, ಬೆಲ್ಲ, ಏಲಕ್ಕಿ ಮುಂತಾದ ಸಾಮಗ್ರಿಗಳನ್ನು ಸೇರಿಸಿ ತುಪ್ಪ ಅಥವಾ ಎಣ್ಣೆಯಲ್ಲಿ ಕರಿದು ತಯಾರಿಸುವ ಒಂದು ಬಗೆಯ ತಿಂಡಿ: ಆರೋಗಣೆಗೆ ನೈವೇದ್ಯದ ಹರಿವಾಣ ೨ ಅಪ್ಪ ಪಡಿ ೧ ಕಂ ಅಪ್ಪ ೫೧ ಅತಿರಸ ಪಡಿ ೧ ಕಂ ಅತಿರಸ ೫೧ (ಸೌಇ. IX-ii, ೪೮೯-೪೦; 1513); ಅಪ್ಪದ ಹರಿವಾಣ (ಸೌಇ. IX-ii, ೫೫೧-೫; 1533); ಅಪ್ಪವು ಅತಿರಸ ಮೆದ್ದಾ ಸ್ವಾಮಿ ಅಸುರರ ಕಾಲಲ್ಲಿ ಒದ್ದಾ (ಪುರಂದ. ೧-೬೭-೫); ಅಪ್ಪಗಳಾದುವು; ಒಡೆಗಳಾದುವು; ಉಂಡೆಗಳಾದುವು (ಹಿಂಕಥೆ. ೨೪) 'ಊತಪ್ಪ', 'ಎಱೆಯಪ್ಪ' ಪರಾ. ೨. (ಅಲಂ) ಊತ; ಬಾವು: ತಂದೆಯ ಈ ಎರಡನೆಯ ಪೆಟ್ಟು ಅವನ ತೊಡೆಯಲ್ಲಿ ದಪ್ಪವಾದ ಅಪ್ಪವನ್ನೆಬ್ಬಿಸಿತ್ತು (ಮೊಮಗು. ೧೨೦).

[ದೇ. ‖ **ತಮಿ.** ಅಪ್ಪಂ = ಅಕ್ಕಿಹಿಟ್ಟು ಸಕ್ಕರೆ ಬೆರಸಿ ತುಪ್ಪದಲ್ಲಿ ಕರಿದ ಸಣ್ಣದೋಸೆ; ಕಜ್ಜಾಯ. **ಮಲ.** ಅಪ್ಪಂ = ಕರಿದ ದೋಸೆ; ಬೇಯಿಸಿದ ರೊಟ್ಟಿ. **ತುಳು.** ಅಪ್ಪ = ಕರಿದ ಅಥವಾ ಬೇಯಿಸಿದ ಒಂದು ಬಗೆಯ ದೋಸೆ. **ತೆಲು.** ಅಪ್ಪಮು = ಒಂದು ಬಗೆಯ ಸಿಹಿದೋಸೆ. / **ಸಂ.** ಅಪೂಪ]

**ಅಪ್ಪ**$_{3}$ (ಅ). ಆಶ್ಚರ್ಯವನ್ನೋ ಆಯಾಸವನ್ನೋ ನೋವನ್ನೋ ಸೂಚಿಸಲು ಬಳಸುವ ಅವ್ಯಯ: "ಏನು ಮಳೆಯಪ್ಪಾ ಇದು" (ಕಗದ್ಯ. ೨-೪೮); ಅಪ್ಪ ಇವನ ಸಾಹಸವೆ! (ರೂಢಿ).

**ಅಪಪ, ಅಪಪಾ, ಅಪ್ಪಪ್ಪ** (ದ್ವಿರುಕ್ತಿ): ಚಾಳುಕ್ಯನರೇಂದ್ರನ ಮುಂದೆ ಹಟ್ಟಿಗಾಳೆಗದೊಳ್ [ಪಂ]ಪನಪಪ ಪರಪಿದನೆಂದನೆ ಸುಭಟದ್ದೊರೆಯೆ ಬಗೆ ವಡಾಚುಗಿನೃಪನೊಳ್ (ಸೌಇ. XI-ii, ೧೫೫-೧೦; 1104); ಅಪಪ! ನಾಡಕಾವರೆಲ್ಲ, ಗಂಡರೆಲ್ಲ ಹೋದರೆ? (ಪಾರಸಿ. ೬೨೩); ಅಪಪಾ ವಿಧಿಯೇ ಅಯೊ ಅಯೊ ವಿಧಿಯೇ (ಪಾರಸಿ. ೮೩೦); ಅಡಿಸುವ ಕೆಳದಿಯರ ಸಂಜ್ಞೆಯಲಾಡಿ ಪರಿದಪ್ಪಪ್ಪೆ [ಪಾಠಾಂ. ಅಪಪ, ಅಬ್ಬಬ್ಬೆ] ನುತ್ತಲಿ ಕೂಡಿ ನಡೆದಂತಪ್ಪಿ (ಪ್ರಭುಲೀ. ೩-೨೯).

[ದೇ. ‖ **ತಮಿ.** ಅಪ್ಪಪ್ಪ, ಅಪ್ಪಪ್ಪಾ; **ತುಳು.** ಅಪ್ಪ]

**ಅಪ್ಪ**$_{4}$ 'ಅಗು$_{1}$' ನೋ.

**ಅಪ್ಪಂತ** (ಗು). ಯೋಗ್ಯವಾದ; ತಕ್ಕುದಾದ; ಉಚಿತವಾದ: ತಮಗೂ ಮತ್ತು ತಮ್ಮ ಸುಯೋಗ್ಯ ಶಿಷ್ಯ ರಾಘವೇಶ್ವರರಿಗೂ ಒಪ್ಪುವ ಅಪ್ಪಂತ ಉಪಮಾನ (ತುಂಗಭ. ೧೨೬). (ನಾ). ೨. ಯೋಗ್ಯನಾದ

ವ್ಯಕ್ತಿ; ಸಂಭಾವಿತ: ಆ ಏನೂ ಅರಿಯದ ಎಳೆಯ ಮಗುವಿನ ಬಗ್ಗೆ ಇಂತಹ ಹಲ್ಕಟ್ ಮಾತುಗಳನ್ನು ಆಡುವವರು ನೀವು ಎಷ್ಟು ಅಪ್ಪಂತರೆಂದು ಗೊತ್ತಿದೆ (ಮೂರುದಾ. ೩೫).

**ಅಪ್ಪಂತವರು, ಅಪ್ಪಂತೋರು** = ಹಿರಿಯರು; ಪೂಜ್ಯರು; ಯೋಗ್ಯರು: ಬೇಡಮ್ಮ ತಕ್ಕಹಾಗೆ ಅಪ್ಪಂತವರ ಮನೆಗೆ ಹೆಣ್ಣುಕೊಡಿ, ನಮ್ಮ ನೆಂಟತನ ನಿಮಗೆ ತಕ್ಕದ್ದಲ್ಲ (ಅದೂಟ. ೩೯); ಅಟ್ಟಡಿಗೆ ಮಿಗಲಿಲ್ಲ, ಅಪ್ಪಂತೋರು ಉಣಲಿಲ್ಲ (ಗಾದೆ).

[ಅಪ್ಪ$_4$ + ಅಂತಹ(< ಅಂತಪ್ಪ)]

**ಅಪ್ಪಂತತನ** (ನಾ). ಯೋಗ್ಯತೆ; ಸಂಭಾವಿತತನ: ಅವರು ತಮ್ಮ ಅಪ್ಪಂತತನದ ಬಗ್ಗೆ ಆಡಿದ ನಂಜಿನ ಮಾತುಗಳಿಂದ ಸಂತಪ್ತರಾದ ಜೋಶಿಯವರು ನಾಲ್ಕು ಕೇರಿಗಳನ್ನೂ ಒಂದುಮಾಡುವ ದನಿಯಲ್ಲಿ ಒದರಾಡಿದರು (ಮೂರುದಾ. ೩೫). [ಅಪ್ಪಂತ + –ತನ]

**ಅಪ್ಪಂತೆ** (ನಾ). ಯೋಗ್ಯಳು: ಆ ಹುಡುಗಿ ನೀ ತಿಳಕೊಂಡಷ್ಟು ಅಪ್ಪಂತೆಯಲ್ಲ ಬಿಡು . . . ಅವಳ ವಿಷಯ ನಾನು ಬಹಳಷ್ಟು ಕೇಳಿದ್ದೇನೆ (ಮೂರುದಾ. ೩೮). [ಅಪ್ಪಂತ + –ಎ$_3$]

**ಅಪ್ಪಕಬ್ಬೆ** (ನಾ). ಒಬ್ಬಾಕೆಯ ಹೆಸರು: ನೆಗರ್ತಿಯನಾಳ್ದ ಮಲ್ಲಪಯ್ಯನ ನೆಗಳ್ದಪ್ಪಕಬ್ಬೆಯ ಮಗಳ್ ಶಚಿಪೋತ್ತಮನಪ್ಪ ಧಲ್ಲಪಯ್ಯನ ಸೊಸೆ (ಸೌಇಇ. XI-i, ೫೨–೫೭; 1007). [ಅಪ್ಪ$_1$ + ಅಕ್ಕ$_1$ + ಅಬ್ಬೆ$_1$?]

**ಅಪ್ಪಚ್ಚಿ** (ನಾ). ೧. (ಮಕ್ಕಳ ಭಾಷೆಯಲ್ಲಿ) ರೊಟ್ಟಿ ಮುಂತಾದ ತಿಂಡಿ; ತಿನಿಸು: ಅಮ್ಮಾ ಅಪ್ಪಚ್ಚಿ ಕೊಡು (ರೂಢಿ). ೨. (ಆಲಂ) ನಿಸ್ಸತ್ವನಾಗು: ಎಂತಹ ಬಲಶಾಲಿಯಾದ ಮನುಷ್ಯನಾದರೂ ಅಪ್ಪಚ್ಚಿಯಾಗಿ ಹೋಗಬೇಕು (ದೇಶಾಂಕ. ೬೬).

**ಅಪ್ಪಚ್ಚಿ ಮಾಡು** = ತೆಳ್ಳಗೆ ಚಪ್ಪಟೆಯಾಗುವಂತೆ ಜಜ್ಜುಗುಟ್ಟು: "ಅವರನ್ನೆಲ್ಲ ಮಾತಿನಲ್ಲೆ ಸಿಲುಕಿಸಿ ಅಪ್ಪಚ್ಚಿ ಮಾಡಬಹುದಿತ್ತು" ಎನಿಸಿತು (ಏಕಾಂಗಿ. ೨೦೧). [ಅಪ್ಪ$_2$ + ಅಚ್ಚಿ$_1$. / ತೆಲು. ಅಪ್ಪಚಿ, ಅಪ್ಪಚ್ಚಿ]

**ಅಪ್ಪಟ, ಅಪ್ಪಟಿ** (ಗು). ಮಿಶ್ರವಿಲ್ಲದ; ಶುದ್ಧವಾದ; ಶ್ರೇಷ್ಠವಾದ: ಅಪ್ಪಟ ದೊಡ್ಡಮನುಷ್ಯನಾಗಿ ಉದಾತ್ತಧ್ಯೇಯದ ದೇಶಾಭಿಮಾನಿಯಾಗಿ ಬೆಳೆಯುವ ಈ ಮನುಷ್ಯನ ವಿಶಿಷ್ಟಲಕ್ಷಣಗಳನ್ನು ಉಪಾಧ್ಯಾಯರು ಅರಿಯದಿರಲಿಲ್ಲ (ದಾದಾನ. ೧೧); ಅಪ್ಪಟ ಹಸುವಿನ ಹಾಲು (ರೂಪಸಂ. ೧೧); ಅಪ್ಪಟವಾದ ಎಮ್ಮೆ ಹಾಲಿನಿಂದಲೇ ಕಾಫಿ ಮಾಡಿ ಲೋಟದಲ್ಲಿ ತುಂಬಿಸಿಕೊಟ್ಟ (ದೇವಹಂ. ೬೩); ಅಪ್ಪಟ ತುಪ್ಪ, ಅಪ್ಪಟ ಸೀಗೆಕಾಯಿಪುಡಿ (ರೂಢಿ). **ಅಪ್ಪಟೆ**: ಬಡತನದ ತತ್ತ್ವ ಅಪ್ಪಟೆಯ ಸುಳ್ಳು (ಅರಳು. ೪೬೪). 'ಅಪೂಟ' ಪರಾ

[**ದೇ.** ‖ **ತಮಿ.** ಅಪ್ಪಟ. **ತೆಲು.** ಅಪ್ಪಟ. / **ಮರಾ.** ಅಪೂಟ. **ಪ್ರಾ.** ಅಪುಟ್ಠ < **ಸಂ.** ಅಸ್ಪೃಷ್ಟ = ಅಸಂಯುಕ್ತ]

**ಅಪ್ಪಟೆ** 'ಅಪ್ಪಟ' ನೋ.

**ಅಪ್ಪಟೆಚಪ್ಪಟೆ** (ನಾ). ಪೂರ್ತಿ ಚಪ್ಪಟೆಯಾಗಿರುವುದು: ಮೋಟಾರಿಗೆ ಸಿಕ್ಕಿ ಅವನ ಕಾಲು ಅಪ್ಪಟೆಚಪ್ಪಟೆಯಾಯಿತು (ರೂಢಿ).

[ಅಪ್ಪಟೆ (< ಅಪ್ಪಟ) + ಚಪ್ಪಟೆ]

**ಅಪ್ಪಡಿ$_1$** (ನಾ). ಆ ರೀತಿ; ಹಾಗೆ (?): ಅಪ್ರೀತಿಯಿಲ್ಲದ ತಪ್ಪುಗಳಿಗೆ ಪೊಲಿದು ಕಪ್ಪು ಉಳಿಯದಂತೆ ಅಪಹರಿಸಿ ಇವನಾ ಅಪ್ಪಡಿಯಾಗಿ ಸಾಕಿ ಅಪವರ್ಗವ ಕೊಡುವ (ತೀರ್ಥಮ. ೮೬–೭). [← **ತಮಿ. ಮಲ.** ಅಪ್ಪಡಿ]

**ಅಪ್ಪಡಿ$_2$** (ನಾ). ಗೌರವ ಸೂಚಕವಾಗಿ ಹೆಸರಿನ ಕೊನೆಯ ಭಾಗದಲ್ಲಿ ಉಪಯೋಗಿಸುವ ಪದ: ಸ್ವಸ್ತಿಶ್ರೀ . . . ದರ ಅಪ್ಪಡಿಗಳ್ ಕೊಟದು ಪುವ್ವಶಾಲೆ (ಎಕ. VII, ಶಿಕಾರಿ. ೪೫–೩೪; 890).

[ಅಪ್ಪ$_1$ + ಅಡಿ ?]

**ಅಪ್ಪಡೆ** (ನಾ). ಒಂದು ಸ್ಥಳದ ಹೆಸರು (?): ಅಪ್ಪಡೆಯ ಬಸುರಿಯ ಕೊಳನ ಮೊದಲೇರಿಯಲು ಬಿಟ್ಟದು (ಎಕ. VII, ಚೆನ್ನಗಿ. ೩೨–೬೬; 1050). [?]

**ಅಪ್ಪಣೆ$_1$** (ನಾ). ೧. ಆಜ್ಞೆ; ಆದೇಶ: ಕಾವನೊಡನೆ ವಿಸ್ತರಿಸಿದ ಗುರು ವಾಸುದೇವ ನಾಲ್ಮೊಗರಪ್ಪಣೆಯ ಕೇವಲ ಗುಪ್ತವೆಂದಱಿದು (ಮೋಹತ. ೫–೪೫); ಪಾತ್ಸ್ಯಾವುವಿನಪ್ಪಣೆಯಿಂದ . . . ಬೆಂಗಳೂರ ಗಳಿಲನೆ ಸಹಜಿಗೆ ಕೊಟ್ಟು (ಕಂಠವಿ ೧೧–೬೬); ಇತ್ತಿರೇ ಅಪ್ಪಣೆಯನೆಂದಂ (ಜ್ಞಾನಸಿಂ. ೧೪–೧೪೦); ಅಬದ್ಧಕ್ಕೆ ಅಪ್ಪಣೆಯೇ ಎಂದರೆ ಬಾಯಿಗೆ ಬಂದಂತೆ ಹೇಳು (ಗಾದೆ). ೨. ಅನುಮತಿ; ಒಪ್ಪಿಗೆ.

**ಅಪ್ಪಣೆ ಕೇಳು** = ಅನುಮತಿಯನ್ನು ಅಪೇಕ್ಷಿಸು: ಅಪ್ಪಣೆ ಕೇಳಿಕೊಂಡು ಮಯಗೊಂಡಗಲುಡನು ಹೆಂಡೆಗೆ ಕೇಳಿಕೊಂಡನು (ಎಕ. VII, ಶಿವಮೊ. ೧೦೭–೧೩; 1576). **ಅಪ್ಪಣೆ ಕೊಡಿಸು** = (ಗೌರವಾರ್ಥದಲ್ಲಿ) ಹೇಳು: ಮಹಾಸ್ವಾಮಿಗಳು . . . ಅಪ್ಪಣೆ ಕೊಡಿಸಿದರು (ರೂಢಿ). **ಅಪ್ಪಣೆ ತೆಗೆದುಕೊ** = ೧. ಅನುಮತಿಯನ್ನು ಪಡೆ. ೨. (ಆಲಂ) ಮರಣಹೊಂದು; ಸಾಯು. **ಅಪ್ಪಣೆ ಮಾಡು** = ಆಜ್ಞೆಕೊಡು; ವಿಧಿಸು: ತನ್ನ ದಂಡಿನವರನ್ನೆಲ್ಲಾ ಮೊದಲು ದಾಟಸಬೇಕೆಂದು ಅಂಬಿಗರಿಗೆ ಅಪ್ಪಣೆ ಮಾಡಿದನು (ಮುಂಬಯಿ. ೪–೩೦). **ಅಪ್ಪಣೆ ಹೊಂದು** = ೧. ಆಜ್ಞೆಯನ್ನು ಪಡೆ. ೨. ಅನುಮತಿಯನ್ನು ಪಡೆ.

[ಸಂ. ಆಜ್ಞಾಪನ. / ಪ್ರಾ. ಆಣವಣ]

**ಅಪ್ಪಣೆ$_2$** (ನಾ). ಒಂದು ವಿಧವಾದ ಕಾಣಿಕೆ ಅಥವಾ ತೆರಿಗೆ: ಯೀ ಧರ್ಮ್ಮಸ್ಥಳದಲ್ಲಿ ಬಳ್ಳಾಳರಿಗೆ ಅನಾಯ ಸನಾಯ ಸಲ್ಲದು ಇಲ್ಲ ಆ ಸ್ಥಳ (ಗ) ದಲು ಇದ್ದ ವೊಕ್ಕಲಿಗೆ ಬಿಟ್ಟಿ ಬಿಡಾರ ಸಲ್ಲದು ಕಾಣಿಕೆ ದೆಸೆ ಅಪ್ಪಣೆ ಪಡದಲ್ಲಿ ಯೆತ್ತು ಸಲ್ಲದು (ಎಇ. XX, ೮–೫೪; 1456).

[< ಸಂ. ಅರ್ಪಣಾ ?]

**ಅಪ್ಪಣೆ$_3$** (ನಾ). ಹೊಂದುವ ರೀತಿ; ಹೊಂದಿಕೆ: ಎಲೆಹುರಿಯ ತನಿರಸಮಂ ತಪ್ಪದೆ ಮರ್ದಿಸಿ ತನುವಿಂಗಪ್ಪಣೆಯಾದಂತೆ ಕೊಳಲಱಿಳಕೃತ್ರಿಮ ಮಱಿಗುಂ (ಖಮುದ. ೧೪–೬೧). [< ಸಂ. ಆಪ್ಯಾಯನ ?]

**ಅಪ್ಪಣೆಕೊಡು** 'ಅಪ್ಪಣೆಕೊಡು' ನೋ.

**ಅಪ್ಪಣೆಗುಡು** 'ಅಪ್ಪಣೆಗೊಡು' ನೋ.

**ಅಪ್ಪಣೆಗೊಡು,** ಅಪ್ಪಣೆಕೊಡು, ಅಪ್ಪಣೆಗುಡು (ಕ್ರಿ). ೧. ಆಜ್ಞೆ ಮಾಡು: ಜೋಪಾನ ತಪ್ಪದೆ ರಾಜಮಂದಿರವ ಸರ್ಪ ನಿಧಾನವ ಕಾಯ್ವಂತೆ ಕಾದಿರೆಂದಪ್ಪಣೆಗೊಟ್ಟ ರಕ್ಕಸಗೆ (ಮೋಹತ. ೧೩–೧೦). ೨. ಅನುಮತಿಯನ್ನು ಕೊಡು. **ಅಪ್ಪಣೆಕೊಡು** ೧: ಸೇನಾಧಿಪತಿಯು ಸೈನ್ಯಕ್ಕೆ ಶತ್ರುವಿನ ಮೇಲೆ ಧಾಳಿ ನಡೆಸಲು ಅಪ್ಪಣೆ ಕೊಟ್ಟನು (ರೂಢಿ). ೨. ನನಗೆ ಹೋಗಿಬರಲು ಅಪ್ಪಣೆಯನ್ನು ಕೊಡುವಿರಾ ? (ರೂಢಿ).

**ಅಪ್ಪಣೆಗುಡು**: ೨. ಪೋಪುದಕೆ ಅಪ್ಪಣೆಗುಡು (ಮೋಹತ. ೩೩–೮).

[ಅಪ್ಪಣೆ$_1$ + ಕೊಡು]

**ಅಪ್ಪಣೆಚೀಟಿ** (ನಾ). ೧. ಅಪ್ಪಣೆಯನ್ನು ಸೂಚಿಸುವ ಚೀಟಿ. ೨. (ಆಲಂ) ಕೆಲಸದಿಂದ ತೆಗೆದು ಹಾಕುವುದನ್ನು ಸೂಚಿಸುವ ಆಜ್ಞೆ. ೩. (ಆಲಂ) ಸಾವು.

**ಅಪ್ಪಣೆಚೀಟಿ ತೆಗೆದುಕೊಳ್ಳು** = ಸಾಯು. [ಅಪ್ಪಣೆ$_1$ + ಚೀಟಿ]

**ಅಪ್ಪಣೆವಡೆ** (ಕ್ರಿ). ಅನುಮತಿಯನ್ನು ಪಡೆ; ಹೊಂದು: ಮಾಧವನ ಅಪ್ಪಣೆವಡೆದು ಬಿತ್ತರಿಸುವ ಕೃತಿ ಜೇನುತುಪ್ಪದ ತೊಱೆಯಾಗಲೆಱೆಯ (ಮೋಹತ. ೧೮–೧); ಅಪ್ಪಣೆವಡೆದು ಬಂದುಸಿರ್ದಳು ಬಾಗಿಲೊಳಿಪ್ಪ ಖೊಜ್ಜೆಯ ದೈತ್ಯಂಗೆ (ಮೋಹತ. ೨೩–೭); ತಲೆವಾಗಿ ನಿಂದಪ್ಪಣೆವಡೆದು (ಕೃಷ್ಣಗೋ. ೨೩–೭). [ಅಪ್ಪಣೆ$_1$ + ಪಡೆ$_1$]

**ಅಪ್ಪಣೆವೀಳೆಯ** (ನಾ). ೧. ಮದುವೆಯ ನಿಶ್ಚಿತಾರ್ಥವೇ ಮೊದಲಾದ ಶುಭ ಸಮಾರಂಭಗಳಲ್ಲಿ ನೆರೆದ ಹಿರಿಯರ ಅನುಮತಿ ಪಡೆಯಲು ಕೊಡುವ ತಾಂಬೂಲ. ೨. ಅಧಿಕಾರದಲ್ಲಿ ನಿಯಮಿಸಿ ಅದರ ಗುರುತಾಗಿ ಕೊಡುವ ವೀಳೆಯ : ಈ ರಾಯಗಜ್ಜದೊಳಾಂ ಪಡೆವಳನಪ್ಪೆಂ ಎನಗಪ್ಪಣೆವೀಳೆಯಮಂ ದಯೆಗೆಯ್ವುದು (ಚಿಕವಂ. ೧೫–೨೦). [ಅಪ್ಪಣೆ$_1$ + ವೀಳೆಯ]

**ಅಪ್ಪತನ** (ನಾ). ತಂದೆಯಾಗಿರುವಿಕೆ; ಪಿತೃತ್ವ : ಭಸ್ಮಾಸುರರ ಅವತಾರಗಳ ಅಪ್ಪತನ – ಅಮ್ಮತನ ವಹಿಸಿ ಮೆರೆವ ಪಾಂಡಿತ್ಯ ಪುರವಾಗುತಿದೆ (ನವ್ಯಧ್ವ. ೧೨). [ಅಪ್ಪ$_1$ + –ತನ]

**ಅಪ್ಪತಿ** (ನಾ). ೧. ನೀರಿಗೆ ಒಡೆಯ; ಸಾಗರ. ೨. ವರುಣ. [ಸಂ.]

**ಅಪ್ಪನ** (ನಾ). ೧. ತೆರಿಗೆ; ಕಂದಾಯ. ೨. ಕಪ್ಪ; ಕಾಣಿಕೆ (ಕ).
[← ತೆಲು. ಅಪ್ಪನ. / ಸಂ. ಅರ್ಪಣ ?]

**ಅಪ್ಪಪ್ಪ** (ನಾ). ಚಿಕ್ಕಪ್ಪ (ದಕ): ನಮ್ಮ ಅಪ್ಪಪ್ಪನ ಮನೆಗೆ ಹೋಗಿ ಬರುತ್ತೇನೆ (ರೂಢಿ). [ಅಪ್ಪ$_1$ + ಅಪ್ಪ ?]

**ಅಪ್ಪಯ** (ನಾ). ಪ್ರಳಯ; ನಾಶ: ನಿನ್ನಿಂದುದ್ಭವಸ್ಥಿತಿಯು ಹರಿ ನಿನ್ನಿಂದ ಜಗಕ್ಕಪ್ಪಯವು (ಪ್ರಸಭಾ. ೨೮–೨೬). [< ಸಂ. ಅಪ್ಯಯ]

**ಅಪ್ಪಯಗೆಡ್ಡೆ** (ನಾ). ಒಂದು ಔಷಧಿ ಬೇರು; ಕತ್ತರಿಯ ಬೇರು : ಗಣಜಿಲದ ಬೇರು, ಮಡುವಾಗಲದ ಗೆಡ್ಡೆ, ಕತ್ತರಿಯ ಬೇರು, ಅಪ್ಪಯಗೆಡ್ಡೆ ಇವಂ ಅಕ್ಕಿಗಚ್ಚಿನಲ್ಲಿ ಅರೆದು ಪೂಸೆ ಬಾವು ಮಾಣ್ಗುಂ (ವಿವೈವಿ. ೬೬). [ಅಪ್ಪಯ್ಯ$_0$ + ಗೆಡ್ಡೆ]

**ಅಪ್ಪಯಣ** (ನಾ). ಪ್ರಯಾಣವನ್ನು ನಿಲ್ಲಿಸುವುದು. 'ಅಪ್ಪಯಣವೀಡು' ಪರಾ. [< ಸಂ. ಅಪ್ರಯಾಣ]

**ಅಪ್ಪಯಣವೀಡು** (ನಾ). ಪ್ರಯಾಣವನ್ನು ನಿಲ್ಲಿಸಿ ತಂಗುವ ಸ್ಥಳ: ಮಣಿಯೂರ ಅಪ್ಪಯಣವೀಡಿನೊಳ್ ಪೊನ್ನವಾಡದೊಳ್ ಚೌಂಕಿಮಯ್ಯನ ಮಾಡಿಸಿದ ಶ್ರೀಶಾನ್ತಿನಾಥದೇವರ (ಇಆ. XIX, ೨೬೩–೩೪ ; 1054) ; ಸಿನ್ದವಾಡಿನಾಮು ಬಳಿಯ ಗ್ರಾಮಮಂ ಪೂಲಿಯಪ್ಪಯಣವೀಡಿನೊಳ್ (ಎಇ. XV, ೮೮–೨೮ ; 1060). [ಅಪ್ಪಯಣ + ಬೀಡು]

**ಅಪ್ಪಯಿಸು, ಅಪ್ಪಯ್ಸು, ಅಪ್ಪೈಸು** (ಕ್ರಿ). ೧. ಒಪ್ಪಿಸು ; ಅರ್ಪಿಸು ; ವಹಿಸು : ಅಂತಾತ್ಮೀಯ ಭಾಗಿನೇಯನನಾ ರಾಜ್ಯದೊಳ್ ಪದುಳಂ ಮಾಡಿ ಮಹಾಸಾಮಂತ ಮಂತ್ರಿಮಂಡಳಕ್ಕಪ್ಪಯಿಸಿ ನಿಜವಿಜಯ ರಾಜಧಾನಿಗುತ್ತಳಖೇಟಕ್ಕೆ ವಂದು (ಆದಿಪು. ೫–೨೧) ; ಕನ್ನೆಯನೆನ್ನ ತಮ್ಮಂ ಭದ್ರಂಗೆ ಕುಡಿಮೆಂದು ತನ್ನ ಮಾವನಪ್ಪ ಶೂರಸೇನಂಗಂ ಸುಮಿತ್ರೆಗಮಪ್ಪಯಿಸಿ ಪೋಪುದುಂ (ಸುಕುಮಾ. ೭–೩೦ ವ) ; ಕರುಣಿಸೆನೆಗೆಂದು ಕೈಮುಗಿದು ಮುನಿಗಪ್ಪಯಿಸಿ ಕೊಟ್ಟನು (ಹಚಕಾ. ೧–೧೪) ; ತನುಜನೊಳ್ ಧರೆಯ ಭಾರವನಪ್ಪಯಿಸಿ (ಶಾಂತೀಚ. ೨–೧೧೩). ೨. ಆಶ್ರಯಿಸು ; ಸೇರು : ಆಸೆಗಳನೆಲ್ಲಂ ತ್ಯಜಿಸಿ ಸಂನ್ಯಾಸಮಂ ಮಾಡಲ್ಕೆ ಪೋಗಿ ನಿವಾಸಮಂ ತಾನಪ್ಪಯಿಸುವವಿವೇಕಿಯಂದದಲಿ (ಬಸಪು. ೨೦–೨೦). **ಅಪ್ಪಯ್ಸು** : ೩. ಒಪ್ಪುವಂತೆ ಮಾಡು ; ನೇಮಿಸು : ಅವರನಮರರಾಜಂ ಸಿರಿಗನ್ನಡಿವಿಡಿಯಲಪ್ಪಯ್ಸಿದಂ (ಶಾಂತಿಪು. ೯–೧೬೬ ವ); ಬಿಡಿಮಿಂದೀವದ ರಾಜಹಂಸೆಗಳನಿನ್ನೀ ರಾಜಕೀರಂಗಳಂ . . . ಎಂದು ಪರಿಚಾರಕಗಣಕ್ಕಪ್ಪಯ್ಸಿ [ಪಾಠಾಂ. ಯಿಸಿ] (ಅಜಿಪು. ೬–೧೦೮ ವ) ; ಆಕೆಗೆ ಸೀತೆಯ ಸ್ವರೂಪವೆಲ್ಲವಂ ಪೇಳ್ದಪ್ಪಯ್ಸಿಯಿರುತಿರೆ (ಪುಣ್ಯಾಸ್ರ. ೭–೨೧ ವ). **ಅಪ್ಪೈಸು** : ೧. ಒಪ್ಪಿಸಿದೆಂ ಕೆಯ್ಯೊಡೆಯೆಂದಪ್ಪೈಸಿದ ನಿನ್ನ ಮಗನನೀಗಳೆ ನಿನಗೆಂದಪ್ಪೈಸಿ ಗಂಗೆ ಪೋಪುದುಂ (ಪಂಪಭಾ. ೯–೭೬) ; ಈಕೆಯ ಗರ್ಭದರ್ಭಕನೆ ನಿಮ್ಮಂ ರಕ್ಷಿಸಲ್ಸಾಲ್ಗುಮೆಂದು ಮಹಾದೇವಿಗೆ ಚಿತ್ರಮಾಲೆಗವರಂ ಭೂಪಾಲನಪ್ಪೈಸಿದಂ (ಪಂರಾಮಾ. ೨–೪೯) ; ಕೆಲರಂ ಜಾಣ್ನುಡಿಯೊಳ್ ಮಹತ್ತರಿಯರಂ ಮಾದೇವಿಯರ್ಪ್ಪೈ [ಪ್ಪೈ] ಸಿದಳ್ (ಬಾಧಪು. ೬–೬೫) ; ಆಳಿಯರ್ಗಾತ್ಮ ಧಾತ್ರಿಯರಿಂಗೆ ಬುದ್ಧಿಯ ಹೇಳಿ ಮಂದಿರವನಪ್ಪೈಸಿ ತಾಳಿದ ವಿರಹ ಸಂತಾಪದಿ ಪೊಜಮಟ್ಟಳು (ಮೋಹತ. ೯–೨೧). [ಅರ್ಪಣ + –ಇಸು$_1$]

**ಅಪ್ಪಯ್ಯ** (ನಾ). ೧. ತಂದೆ. ೨. ಚಿಕ್ಕಮಕ್ಕಳನ್ನೂ ವಯಸ್ಸಿನಲ್ಲಿ ಚಿಕ್ಕವರನ್ನೂ ಪ್ರೀತಿಯಿಂದ ಸಂಬೋಧಿಸುವಾಗ ಬಳಸುವ ಮಾತು : ಎತ್ತಲಾಗಿ ಹೋಗಿದ್ದೆ ಅಪ್ಪಯ್ಯಾ (ರೂಢಿ).
[ಅಪ್ಪ$_1$ + ಅಯ್ಯ$_1$ ?]

**ಅಪ್ಪಯ್ಸು** 'ಅಪ್ಪಯಿಸು' ನೋ.

**ಅಪ್ಪರಿಸು** (ಕ್ರಿ). ೧. ಅಪ್ಪಳಿಸು ; ಮೇಲಕ್ಕೆ ಎತ್ತಿ ಕೆಳಕ್ಕೆ ಕುಕ್ಕು. (ಉಕ. ಕ). ೨. ಉಬ್ಬು (?) : ಮನೆಗಾವಾಗ ಜಂಗಮವು ಬಪ್ಪರದ ನಜಿದಾಗಳಲ್ಲದೆಯ [ಪಾಠಾಂ. ಯಪ್ಪೊ]ಪ್ಪರಿಸಿ ಹೋಗನು ಸಹಾಯವನಪ್ಪನಿದು ಹಗಲಿರುಳೆದೆಂತೆಂದಂಜನೇನುವನು (ಬಸಪು. ೩೧–೨೫) ; ಅಪ್ಪಾಜಿ ತೆರಳಿದರೆನಾಯ್ತು ದೇವರನ್ನಪ್ಪಾಜಿಯರೆ ನೀವು ನಮಗೆ ಒಪ್ಪವಿಟ್ಟೊಂದು ಬಿನ್ನಹವುಂಟು ಲಾಲಿಸೆಂದಪ್ಪರಿಸಿದನೆದ್ದುನಿಂದ (ಭರಚ. ೭೯–೨೮). [< ಅಪ್ಪರ್$_0$ + –ಇಸು$_1$]

**ಅಪ್ಪವಂತ** (ನಾ). ಜೀವಂತವಾಗಿರುವ ತಂದೆಯುಳ್ಳವನು; ಜೀವತ್ಪಿತೃಕ : ಅಪ್ಪವಂತ ಮಗನಿಗೆ ನಾನು ಹೀಗೆ ಸಾಲಾ ಕೊಡ್ತಾ ಇದ್ರೆ, ಕೊಟ್ಟು ನಿಷ್ಠುರವಾಗೋ ಸಮಾಚಾರವಾಗುತ್ತೆ (ಅವತಂ. ೧೪೯).
[ಅಪ್ಪ$_1$ + –ವಂತ]

**ಅಪ್ಪಳಿ** (ನಾ). ತಟ್ಟುವುದು ; ಆಸ್ಫಾಲನ ಮಾಡುವುದು. 'ಅಪ್ಪಳಿಗೊಳ್' ಪರಾ. [< ಸಂ. ಆಸ್ಫಾಲ ?]

**ಅಪ್ಪಳಿಕೆ** (ನಾ). ತಟ್ಟುವುದು ; ಅಪ್ಪಳಿಸುವುದು : ಕಡಲನೊರ್ಕಯ್ಯ ಅಪ್ಪಳಿಕೆಯಿಂದಮಿರ್ಕಡೆಗೆ ಸರಿವಂತೆವೋಲ್ ಬಡಿವ ಬಲ್ಮೆಯ ಪಡೆವ ಗಾತ್ರಕೆ ವಿಜೃಂಭಿಸುವ ದೈತ್ಯಕಲಿಗಳ್ (ಶ್ರೀರಾಮಾ. ೫೪೬–೧೮೬).
[ಅಪ್ಪಳ್$_0$ + –ಇಕೆ ?]

**ಅಪ್ಪಳಿಗೊಳ್** (ಕ್ರಿ). ಅಪ್ಪಳಿಸು ; ತಟ್ಟು ; ಆಸ್ಫಾಲನ ಮಾಡು : ಇನ್ನೆನಗಸಾಧ್ಯಮಪ್ಪುದೊಂದುಮಿಲ್ಲೆಂದು ಒಡೆಯನಂ ನೋಡುತಂ ಬಾಹನಪ್ಪಳಿಗೊಂಡು ಕಡುಮೋಹವೆತ್ತಿಕ್ಕಿ ಅಡಲ್ಮನಂಗೊಂಡು (ಕಣ್ಣರ. ೧೩೮–೧೩). [ಅಪ್ಪಳಿ + ಕೊಳ್]

**ಅಪ್ಪಳಿಸು** (ಕ್ರಿ). ೧. ತಾಗು ; ತಟ್ಟು ; ಹೊಯ್ಯು : ಕಾಳಿಂದಿಯ ಪಾವನಪ್ಪಳಿಸಿದೆಂ ಪಿಡಿದೀ ಸಿಲೆಯಲ್ಲಿ (ಪಂಪಭಾ. ೫–೬೮) ; ಘನಮುಪ್ಪಾಸಜತಿ ಮೋಲೀ ಮುನಿಯಂ ಕೊಂಡೊಯ್ದು ನೆಟ್ಟನಪ್ಪಳಿಸುವೆನೋ (ಧರ್ಮಾಮೃ. ೮–೧೧೭) ; ಪೊನ್ನೋಲೆ ಕದಂಪನಪ್ಪಳಿಸೆ ಮಧ್ಯಂ ಬಳ್ಕೆ (ಜಗವಿ. ೧೧–೧೦೦) ; ಸೋರ್ಮುಡಿ ಬೆನ್ನನಪ್ಪಳಿಸೆ (ಕಬ್ಬಿಕಾ. ೩೩೮) ; ಕಲಿವಾಯು ಸುತನಪ್ಪಳಿಸಿ ಬಿದ್ದನು ಕಯ್ಯ ಗದೆ ಕಳಚಿ (ಕುವ್ಯಾಗ. ೭–೧೧) ; ತುರಗವ ತುರಗದಿಂದಪ್ಪಳಿಸಿ (ಪ್ರೊರರಾ. ೬–೧೩–೩೭) ; ನನ್ನ ನೌಕೆ ಬಂಡೆಗಲ್ಲಿಗೆ ಅಪ್ಪಳಿಸಿತು (ತೇಮೋಡ. ೩೮). ೨. ನಿಗ್ರಹಿಸು : ಅತನುವನೋವದಪ್ಪಳಿಸಿ ಮೋಹನ ಸಾಹಸಮಂ ಕಳಲ್ಚೆ (ವರ್ಧಪು. ೧–೨) ; ಧಾಳಿ ಹರಿದುದು ಪಂಚಗೌಳವರಾಳವೊಡ್ಡಿಯರಾಂಧ್ರಜಾಳಾಂದ್ರಾಳಿಗಳನಪ್ಪಳಿಸಿ ಹೂಡಿಸಿದನು ಮಹಾಧನುವ (ಕುವ್ಯಾಸ. ೪–೧೧). ೩. ಧ್ವಂಸಮಾಡು : ಅಳಿದು ಕಳೆವೆನು ಬಸದಿಗಳನಪ್ಪಳಿಸುವೆನು ಜಿನರೂಪುಗಳಂ (ಬಸಪು. ೫೨–೩೬).
[ಅಪ್ಪಳ್$_0$ + –ಇಸು$_1$ / ತೆಲು. ಅಪ್ಪಳಿಂಚು]

**ಅಪ್ಪಾಜಿ** (ನಾ). ೧. (ಗೌರವಾರ್ಥದಲ್ಲಿ) ತಂದೆ : ಅಪ್ಪಾಜಿ ತೆರಳಿದರೆನಾಯ್ತು ದೇವರನ್ನಪ್ಪಾಜಿಯರೆ ನೀವು ನಮಗೆ (ಭರಚ. ೭೯–೨೮); ಅಪ್ಪಾಜಿ ನೀವು ಪೃಥ್ವೀಪಾಲಗಾನೆಯನೊಪ್ಪಿಸಿದರೆ (ಚಂಪ್ರಸಾಂ. ೨೦–೧೦೫) ;

ಅಪ್ಪಾಜಿಯವರ ಶ್ರೀ ಚರಣಾರವಿಂದಂಗಳಿಗೆ ಬಾಲಕನಾದ ಸುಗಂಧರಾಯನು ಸಾಷ್ಟಾಂಗವಾಗಿ ನಮಸ್ಕರಿಸಿ (ಸೌಗಂಧಿ. ೬೭–೬). ೨. ಪ್ರೀತ್ಯಾದರಗಳಿಂದ ಚಿಕ್ಕ ವಯಸ್ಸಿನ ಗಂಡಸರನ್ನು ಸಂಬೋಧಿಸುವಾಗ ಬಳಸುವ ಮಾತು: ಸೌಮಿತ್ರಿ ರಥವಿಳಿದು ಬಹ ಮಹಿಳೇಂದ್ರಿಗೆರಗ ಲಪ್ಪಾಜಿ ಯೇಳೆಂದು ಯೇಳ್ದಹ ಮಾತೆಗಸ್ತಲಾಘವನೀಯೆ (ಜಿನಮು. ೩೯–೬೨); ಅಪ್ಪಾ ಕದಾ ತೆಗೆಯೊ, ಅಪ್ಪಾಜಿ ಕದ ತೆಗೆಯೊ, ನನ್ನಪ್ಪಾ, ನನಗೆ ಕದಾ ತೆಗೆಯೊ (ನಾಪದ. ೯೫). ೩. ಒಂದು ಹೆಸರು; ಒಬ್ಬನ ಹೆಸರು. [ಅಪ್ಪ$_1$ + –ಜಿ. / ತಮಿ. ಅಪ್ಪಚ್ಚಿ = ತಂದೆ]

**ಅಪ್ಪಾರ** (ಗು). = ಅಪಾರ: ಅಪ್ಪಾರ ಜನಕ್ಕೆ ಬೆಳಕು ಮಾಡಿದ ಚರಣ ಮುಪ್ಪು ಇಲ್ಲದ ಜೀವನ ಸಾಧನಗಳ ದರ್ಪಣದಂತೆ ತೋರಿ ಕೊಡುವುದೀ ಚರಣ (ವಿಸ್ತೋಸು. ೬೯–೪); ಇಪ್ಪದು ಈ ಪರಿ ತಪ್ಪದೆ ಒಂದೊಂದು ಅಪ್ಪಾರಯೋಜನೆ ಇಪ್ಪವು ಸಾವಿರ (ಮೋಕ್ಷದೀ. ೧೩೫); ಅಪ್ಪಾರ ಕಪಿ ಸೇನೆಯಡಿಗಡಿಗೆ ಪೊಗಳುತಲಿ (ವೆಂಕಾರಾ. ೪–೯–೧೬); ಅಪ್ಪಾರ ಹಂದಿಗಳು ಬಂದಿವೆಯೆಂದು ಊರೊಳಗೆಲ್ಲಾ ಗುಲ್ಲೆಬ್ಬಿಸುವರು (ಹುಟ್ಟಿಹ. ೨೪). [< ಸಂ. ಅಪಾರ]

**ಅಪ್ಪಾಲೆತಿಪ್ಪಾಲೆ, ಅಪ್ಪಾಳೆತಿಪ್ಪಾಳೆ** (ನಾ). (ಚಿಕ್ಕ ಮಕ್ಕಳು) ನಿಂತೆಡೆಯಲ್ಲಿ ಸುತ್ತಲೂ ತಿರುಗುವ ಒಂದು ಆಟ; ಸುತ್ತಲೂ ಗಿರ್ರನೆ ತಿರುಗುವುದು: ಅಪ್ಪಾಲೆ ತಿಪ್ಪಾಲೆ ತಿರುಗಿ ಬಿದ್ದವನೊಬ್ಬ ಸ್ವಪ್ನಲೋಕದಿ ತಿರೆಯ ಮರೆತಾತನೊಬ್ಬ ತಪ್ಪುಸರಿಗಳ ತೂಕವಳಿಯೆ ಕುಳಿತವನೊಬ್ಬ ಬೆಪ್ಪನಾರ್ ಮೂವರಲಿ (ಮಂಕುತ. ೩೦೩); ಅದೇನೋ ಅಪ್ಪಾಲೆ ತಿಪ್ಪಾಲೆ ಎಂದಹಾಗಿತ್ತು (ಕಲ್ಲಿಕಾ. ೧೩). **ಅಪ್ಪಾಳೆ ತಿಪ್ಪಾಳೆ**: ಈ ಸಂಗಡದ ನಕ್ಷತ್ರಗಳು, ಹೆಣ್ಣು ಮಕ್ಕಳು ಅಪ್ಪಾಳೆ ತಿಪ್ಪಾಳೆ ಆಟವಾಡುವಂತೆ ತಿರುಗುತ್ತ ಇರುತ್ತವೆ (ಆಕಾಶ. ೬೧).

**ಅಪ್ಪಾಲೆ ತಿಪ್ಪಾಲೆ ಆಡಿಸು** = ಮಕ್ಕಳನ್ನು ತೋಳು ಹಿಡಿದು ವಿನೋದಕ್ಕಾಗಿ ಸುತ್ತಲೂ ಗಿರ್ರನೆ ತಿರುಗಿಸು: ಚಕ್ರವರ್ತಿಯನ್ನೇ ಅಪ್ಪಾಲೆ ತಿಪ್ಪಾಲೆ ಆಡಿಸುವವರು ನಿಮಗೆ ಮಾತು ಆಡುವುದಕ್ಕೇನು (ಮಾಮಲ್ಲಿ. ೧೦). [ಅಪ್ಪಾಲೆ$_0$ + ತಿಪ್ಪಾಲೆ$_0$]

**ಅಪ್ಪಾಳೆತಿಪ್ಪಾಳೆ** 'ಅಪ್ಪಾಲೆತಿಪ್ಪಾಲೆ' ನೋ.

**ಅಪ್ಪಿ, ಅಪ್ಪು**$_3$ (ನಾ). ಪ್ರೀತ್ಯಾದರಗಳಿಂದ ಹುಡುಗರನ್ನು ಸಂಬೋಧಿಸುವಾಗ ಬಳಸುವ ಮಾತು. (ಕಿ). ಉದಾ— ಬಾರಪ್ಪಿ, ಹೋಗಪ್ಪಿ. **ಅಪ್ಪು**$_3$ (ಕಿ). ಉದಾ— ಬಾರಪ್ಪು, ಕುಳಿತುಕೊಳ್ಳಪ್ಪು, ಏನು ಬಂದೆ ಅಪ್ಪು. [< ಅಪ್ಪ$_1$]

**ಅಪ್ಪಿಕೊಳುಹ** (ನಾ). ಆಲಿಂಗಿಸಿಕೊಳ್ಳುವುದು; ತಬ್ಬಿಕೊಳ್ಳುವುದು; ಆಲಿಂಗನ: "ಆಲಿಂಗನಂ ಉಪಗೂಹನಂ . . . ಈ ೭ ಅಪ್ಪಿಕೊಳುಹ" (ಹಲಾಯು. ೯೩–೪೧೪). [ಅಪ್ಪು + ಕೊಳ್$_1$ + –ಹ (< –ಪ)]

**ಅಪ್ಪಿಗೆ** 'ಅಪ್ಪುಗೆ$_1$' ನೋ.

**ಅಪ್ಪಿತಪ್ಪಿ** (ಅ). ಆಕಸ್ಮಿಕವಾಗಿ; ನೇರವಾದ ಉದ್ದೇಶವಿಲ್ಲದೆ; ಪೂರ್ವಸೂಚನೆಯಿಲ್ಲದೆ: ಯಾವಾಗಲಾದರೂ ಅಪ್ಪಿತಪ್ಪಿ ನನ್ನ ಗೋರಿಯೆಡೆಗೆ ಬಂದರೆ ಒಂದೆರಡು ಪುಷ್ಪಗಳನ್ನು ಹಾಕಲು ಮರೆಯಬೇಡಿ (ಝಾನ್ಸಿರಾಣಿ. ೧೯೮); ಅಪ್ಪಿತಪ್ಪಿ ಅನ್ನವಾಗಲಿ ನೀರಾಗಲಿ ಶ್ವಾಸರಂಧ್ರದೊಳಗೆ ಸೇರಿದರೆ ಕೆಮ್ಮು ಬಂದು ಅದನ್ನು ಹೊರಗೆ ಹಾಕುತ್ತದೆ (ಮುಂಬಯಿ. ೬–೩೧೨); ಅವರು ಎಂದೂ ದಂಭ ಮಾನ ಅಹಂಕಾರಗಳಿಗೆ ಒಳಗಾಗದೆ ಅಪ್ಪಿತಪ್ಪಿಯೂ ಕುಮಾರ್ಗದಲ್ಲಿ ಹೆಜ್ಜೆಯನ್ನು ಇಡರು (ತುಳಸಿ. ೨೪೪). [ಅಪ್ಪು ? + ತಪ್ಪು]

**ಅಪ್ಪಿತ್ತ** (ನಾ). ಬೆಂಕಿ; ಅಗ್ನಿ. [ಸಂ.]

**ಅಪ್ಪಿಮಯ್ಯ** (ನಾ). ಒಬ್ಬನ ಹೆಸರು: ದೇವರ ದೇಗುಲವ ಅಳಿವಂಸೋದಿಸಿ ಸೊತೆಯನಿಕ್ಕಿಸಲ್ ಅಪ್ಪಿಮಯ್ಯನಪ್ಪ ರಾಜೇನ್ದ್ರಚೋಳ ಬ್ರಹ್ಮಮಾರಾಯರ್ (ಎಕ. X, ಚಿಂತಾಮ. ೩೦–೧೧; 1047). [ಅಪ್ಪಿಮ್ಮ$_0$ + ಅಯ್ಯ$_1$]

**ಅಪ್ಪಿಮಿಡಿ** (ನಾ). ಒಂದು ಜಾತಿಯ ಮಾವಿನ ಮಿಡಿ: ಗೌಡರೇ ನಿಮ್ಮ ಸೀಮೆಯಲ್ಲಿ ಒಳ್ಳೆಯ ಅಪ್ಪಿಮಿಡಿ ಸಿಗುತ್ತದೆ. ನಮ್ಮ ಊರಿನ ದರಿದ್ರ ಮಾವಿನ ಮಿಡಿಗೆ ಜನ್ಮಕ್ಕೂ ಆ ರುಚಿ ಬರಲಾರದು (ಸ್ವಪ್ನ ಹೊ. ೪೫). [ಅಪ್ಪಿ$_0$ + ಮಿಡಿ$_2$]

**ಅಪ್ಪಿಯಸೆಟ್ಟಿ** (ನಾ). ಒಬ್ಬನ ಹೆಸರು: ಅಪ್ಪಿಯಸೆಟ್ಟಿಯ ಮಕ ನಗಜವಮುಮನ ಪಲೆಗಬೀರ ನೊಲಂಬನ ರಾಜ್ಯದೊಳೆ ತುಱುಗೊಳೆ ಕಾದಿಸತ್ತ (ಎಕ. X, ಗೌರಿಬಿ. ಲ೫–೨; 920). [ಅಪ್ಪಿಯ್ಯ$_0$ (< ಅಪ್ಪಯ್ಯ) + ಸೆಟ್ಟಿ]

**ಅಪ್ಪಿಸು** (ಕ್ರಿ). ಅಪ್ಪುವಂತೆ ಮಾಡು; ತಬ್ಬಿಕೊಳ್ಳುವಂತೆ ಮಾಡು: ಪರವಧು ದುರ್ವ್ಯಸನಂ ನಿನಗೆಂದನುರ್ದಪ್ಪಿಸುವರ್ ಕೆಂಪೆಸೆಯೆ ಕಾಯ್ದಯಃಪುತ್ರಿಕೆಯಂ (ಆದಿಪು. ೫–೮೭); ಅಪ್ಪಿಸುವರ್ ಪರಿತಪ್ತ ಲೋಹಮಯ ಸುಂದರಿಯಂ (ಶಾಂತಿಪು. ೭–೯೮); ನಲಿದು ನೆರೆಯೆಂದು ಕಡುಗಾಯ್ದ ಲೋಹ ಪುತ್ರಿಕೆಯನಾಗ್ರಹದಿನಪ್ಪಿಸುವರ್ (ವರ್ಧಪು. ೧೧–೨೨). [ಅಪ್ಪು$_1$ + –ಇಸು$_3$]

**ಅಪ್ಪು**$_1$ (ಕ್ರಿ). ೧. ಆಲಿಂಗಿಸು; ತಬ್ಬಿಕೊಳ್ಳು; ತಕ್ಕೈಸು: "ಅಪ್ಪು – ಆಲಿಂಗನೇ, ಉದಕೇಚ" (ಶಮಧಾ); ಕಾಯ್ದ ಕರ್ಬೊನ್ನ ಪ್ರತಿಮೆಗಳ ನಪ್ಪವೇಟಿಮೆಂದು ತಳಾಜಂಗೆ ಬೆಸವೇಟ್ಟೊಡೆ (ವಡ್ಡಾರಾ. ೨೧–೨೨); ಮೇಲೆ ಪಾಯ್ದುವಳನಪ್ಪಿದನಾ ವಿಭು ತನ್ನ ಶಾಪಮುಂ ಬಗೆಯದೆ ಮಿಟ್ಟು ದೇವತೆಯನಟ್ಟಿ ಜಳುರ್ಕೆಯಿನಪ್ಪುವಂತೆವೋಲ್ (ಪಂಪಭಾ. ೨–೧೮); ಒಡಲನಪ್ಪಿದ ಮಡದಿಯೇ ಬಿಡದಡರಿ ಹಬ್ಬಿದ ಲತೆಯೆನಲ್ಕೆ (ಪ್ರಭುಲೀ. ೨–೧೪); ಓಕುಳಿಯ ನೆವದೊಳಪ್ಪಿದರೆಂಬ ನಾಣ್ಣುಡಿಯನಭಿನಯಿಸಿ ತೋಱುವಂತೆ (ಚಿಬಪು. ೩೭–೬೬). ೨. ಸಂಭವಿಸು; ಒದಗು: ಮಹಾದೇವನನ್ನುನಿಪುಙ್ಗವನ್ನದರ್ಶಿಕಳು ಪೆರ್ದ್ದಪಂ ಮಹಾತವನ್ನರಣಮುಪ್ಪೆ ತನಗಾ (ಎಕ. II, ೮೦–೨; 700). ೩. ಅಂಗೀಕರಿಸು; ಧರಿಸು; ಹೊಂದು: ಮಾದಿಗವರಿಜನಪ್ಪಿದನು (ಸಾಳ್ವಭಾ. ೧೯–೧೩).

**ಅಪ್ಪಿಕೊಳ್** = ಆಲಿಂಗಿಸಿಕೊಳ್ಳು; ತಬ್ಬಿಕೊಳ್ಳು: ಕಮಲಾಂತರ್ಗತ ಗಂಧಬಂಧು ನಯದಿಂ ಬಂದಪ್ಪಿಕೊಳ್ವಂತೆ ಗಾಳಿ ಮನಂಗೊಂಡಿರೆ ತೀಡೆ (ಪಂಪಭಾ. ೭–೭೭); ಪುಸಿಗೂರ್ಮೆಯಿಂದೋಪಳನಪ್ಪಿಕೊಂಡು (ಧರ್ಮಾಮೃ. ೩–೩೫); ಕಮಲದಳಾಯತಾಂಬಕನಪ್ಪಿಕೊಂಡನು ಧರ್ಮನಂದನನ (ಕುಮ್ಯಾಶ. ೧–೩೩); ಎಂದಪ್ಪಿಕೊಂಬೆ ರಂಗಯ್ಯನ ಎಂದಪ್ಪಿಕೊಂಬೆ (ಪುರಂದ. ೨–೬೬–೧). [ದೇ. ‖ ತುಳು. ಅಪ್ಪಿ]

**ಅಪ್ಪು**$_2$ (ನಾ). ಆಲಿಂಗನ; ತಬ್ಬಿಕೊಳ್ಳುವುದು; ಅಪ್ಪುವುದು; (ಬಹುವ). ಅಪ್ಪುಗಳ್: ಮೆಯ್ಯ ಸುಯ್ಯ ಪದವೆಂಕೆಗಳಿಂ ಬಿಗಿಯಪ್ಪಿದಪ್ಪುಗಳ್ (ಪಂಪಭಾ. ೫–೨೭); ಕೂಟದ ಕೇಡಿಂಗೆ ನಾಡೆ ನೊಂದು ಮನದಪ್ಪು ಸಡಿಲದೆ ತನುವಿನಪ್ಪು ಸಡಿಲ್ದು (ಗಿರಿಕ. ೨–೧೦೫ ವ); ಒಪ್ಪುವ ಪರವನಿತಾಜನದಪ್ಪು ಸಡಿಲ್ದೆಂದು ನಿಲ್ಲನಿವನೆಂದಱಿದಿಂತಪ್ಪು ಸಡಿಲದವೊಲಿರ್ಕೆಂದಪ್ಪಿಸುವರ್ ಕಾಯ್ದು ಕಾಯ್ದಯಃಪುತ್ರಿಕೆಯಂ (ಪಾರ್ಶ್ವಪು. ೬–೮೬); ಬೆಜಗು ಚುಂಬನವಪ್ಪು ಸೀತ್ಕೃತವೆಜಕ ಜಾಣ್ನುಡಿ ನೋಟ ಬೇಟವು (ಸಾಳ್ವಭಾ. ೭–೨೭). [< ಅಪ್ಪು$_1$]

**ಅಪ್ಪು**$_3$ 'ಅಪ್ಪಿ' ನೋ.

**ಅಪ್ಪು**$_4$ (ನಾ). ನೀರು; ಜಲ; ಪಂಚಭೂತಗಳಲ್ಲಿ ಒಂದು: ಕಾಸಾರದೊಳ್ ಪಂಕಜಂ ಅಪ್ಪಿನಿಂ ತಣ್ಪು ಮಲಯಾದ್ರಿಯಿಂ ಮಲಯಜಂ (ಬಸರ. ೧–೨೭); ಪಾಲೊಳಪ್ಪಿನ ವಿವರವಱಿವ ಮರಾಳವಂ ಕಂಡುಬ್ಬಿ ಲೋಕಂ ಲಾಲಿಸುವವೋಲು (ಬಸವು. ೧–೨೦). [ಸಂ. ಅಪ್]

**ಅಪ್ಪು$_5$** 'ಅಪು' ನೋ.

**ಅಪ್ಪುಕಣ** (ನಾ). ನೀರಿನ ಹನಿ; ಜಲಬಿಂದು : ಅಪ್ಪುಕಣದುಭಯಾಕ್ಷಿಗಳ ನಿಮ್ಮಪ್ಪನನುಜನು ಕರೆದು ಬಳಿಕ ಸಮರ್ಪಿಸಿದನೀ ವಾತನಾಲಂಕಾಧಿನಾಥಂಗೆ (ತೊರರಾ. ೬–೫೩–೮೬).
[ಅಪ್ಪು$_4$ + ಕಣ$_4$]

**ಅಪ್ಪುಕಣಿಸು** (ಕ್ರಿ). ನೀರನ್ನು ಸುರಿಸು : ಅಲರ್ದ ಮೊಗಂ ಕಿಱಿದಾದುದು ನೆಲಸಿದುದಱಲೆರ್ದೆಯೊಳಪ್ಪುಕಣಿಸಿರ್ದುವು ಚಾಪಲನಯನ ಕುವಲಯಂ ಸುಯ್ಯೆಲರಾದಂ ಬಿಸಿಯವಾದುವಾ ಸತಿಗಾಗಳ್ (ಕಾವ್ಯಾವ. ೯೧೯) ; ಅಪ್ಪುಕಣಿಸಿದುವು ಕಂಪಿನ ಕುಪ್ಪಿಗೆಗಳೆನಲ್ಕೆ ಕರವೆ ಕಣ್ಗೆಸೆದು ಬೆಳರ್ಪುಪ್ಪಳಮನಾಯ್ದುಕೊಂಡು ಬೆಳಪ್ಪ ಸರೋವರದಿನವನಿಪತಿ ವೊಜಮಟ್ಟಂ (ಲೀಲಾವ. ೮–೮೧). 'ಅಪ್ಪುಗಾಣಿಸು' ಪರಾ.
[ಅಪ್ಪು$_4$ + ಕಾಣ್ + –ಇಸು$_3$]

**ಅಪ್ಪುಕೆಯ್$_1$, ಅಪ್ಪುಕೈ, ಅಪ್ಪುಗೆಯ್** (ಕ್ರಿ). **೧.** ಅಂಗೀಕರಿಸು; ಒಪ್ಪು : "ಅಪ್ಪುಕೆಯರ್ – ಅಂಗೀಕರಣೇ" (ಶಮುಧಾ) ; "ಅಪ್ಪುಕೆಯ್ಯೆಂದು ಇಂಬು ಕೆಯ್ಯೆಂದುಂ ಅಂಗೀಕಾರಂ" (ಕಶಸಾ. ೨೫–೫೨೭) ; "ಅಪ್ಪುಕೆಯ್ದನುಮೆನುತ್ತುಂ . . . ಒಪ್ಪಿದನೆಂಬರ್ಥಂ" (ಕವಿಕಂ. ೨೧೧); ಮುರಾರಿಯ ತಂಗೆಯನಪ್ಪುಕೆಯ್ದು ಚಚ್ಚರಮೊಳಪೊಯ್ದು ನೀಂ ನಿನಗೆ ಮಾಡುವುದು (ಪಂಪಭಾ. ೪–೩೪) ; ಅಂತು ಬಾಳ ಕೇಳೀ ಲೀಲೆಯುಂ ಪ್ರಜಾಪಾಲನಮುನಪ್ಪುಕೆಯೆ (ಶಾಂತಿಪು. ೫–೨೫ ವ). **೨.** ತಾಳು ; ಹೊಂದು ; ಪಡೆ : ರಜತಾಚಳೇನ್ದ್ರಂ ಹರಹಾಸಾಕಾಶ ಗಂಗಾ ಸುಧಾಕರ ಸತ್ಕೀರ್ತಿಯಪ್ಪುಕೆಯ್ದನಧಿಕಂ ಶ್ರೀ ವೀರನಾರಾಯಣಂ (ಎಇ. XIII, ೩೨೯–೬; 929) ; ನರಕಾಂತಕನೀಕೆಗಂಡು ತೊಟ್ಟನೆ ನಿಜಲಕ್ಷ್ಮಿಯಂ ಮಱೆದನೆಂಬ ನೆಗೞ್ತೆಯನಪ್ಪುಕೆಯ್ದು (ಪಂಪಭಾ. ೪–೮೫) ; ಮನ್ಮನವಾಶಂಕೆಯನಪ್ಪುಕೆಯ್ದಪುದು (ಕಾದಂಉ. ೪೭೭) ; ಜಾನಕಿ ನೋಡ ನಿನ್ನ ನಗೆಗಣ್ ಪರಿತುಷ್ಟಿಯನಪ್ಪುಕೆಯ್ಯೆ (ಪಂರಾಮಾ. ೯–೧೭೪) ; ಅವನಿದೇವನ ವೇಷಮನಪ್ಪುಕೆಯ್ದು (ನೇಮಿಪು. ೧೦–೧೨೨). **೩.** ಉಂಟುಮಾಡು ; ಒದಗಿಸು : ಸುಪುಣ್ಯಕಾಮಿನಿಯ ಮಾೞ್ಕೆಯಿನ್ನೆದೆ ವಿದಗ್ಧಕೋಟಿಗಾನಂದಮಪ್ಪುಕೆಯ್ಯದೆನೆ ಪೇೞ್ ಕೃತಿ ಸತ್ಕೃತಿಯೇ (ನೇಮಿಪು. ೧–೨೪). **ಅಪ್ಪುಕೈ : ೨.** ಉಜ್ವಲತೆಯನಪ್ಪುಕೈದುದು ವಿಯೋಗಿಗಳಂಗದೊಳಂಗಜಾನಲಂ (ರಾಜಶೇ. ೮–೯೪). **ಅಪ್ಪುಗೆಯ್$_1$ : ೧.** ನಾಗವರ್ಮನಿಂತಪ್ಪುಗೆಯ್ದನದಱ ವಿವರಮೆಂತೆಂದೊಡೆ (ರಸರ. ೧–೧ ವ) ; ತಾನೆಂದುದನಪ್ಪುಗೆಯ್ಯದೆ ನುಡಿದ ನರೇಂದ್ರನಂದನಂಗೆ (ರಾಜಶೇ. ೧೩–೨೦ ವ). [ಅಪ್ಪು ? + ಕೆಯ್$_1$]

**ಅಪ್ಪುಕೆಯ್$_2$** (ಕ್ರಿ). ಆಲಿಂಗಿಸು ; ತಬ್ಬು : ಸೊನೆ ಸುರಿವನ್ನೆಗಂ ಪಱಿದು ನೋಯಿಸಿ ಕಾಡಿದೆವಿನ್ನದೊಂದುಮಂ ನೆನೆಯದೆ ನೀನುಮಾಮುಮೊಡನಿರ್ದಿರವಂ ನೆನೆ ಬಾಳ ಚೂತಮೇ ಎಂದು ಮಾಕಂದ ಮಹೀರುಹಮನಪ್ಪುಕೆಯ್ದು (ಆದಿಪು. ೧೧–೧೩೨ ವ) ; ಲಿಂಗಮನಪ್ಪುಕೆಯ್ದು ಪಿಂಗದೆ ನಿಲೆ ನೀರನೋಡಿ ಪುಗೆ ಪೆಣ್ಣುಡೆಯುಟ್ಟರೆ ಪುತ್ತನೇಱೆ ಕೊಲ್ಲದ ತುಱಿಲಾಳ್ತನಕ್ಕೆ ಸಮನಾವನೊ ಸಾಹಸಭೀಮಭೂಪನೊಳ್ (ಗದಾಯು. ೧–೨೨) ; ಇಂತು ತನುಮನಮಪ್ಪುಕೆಯ್ವ ದಿವ್ಯಸುಂದರ ವಿಗ್ರಹಂ ಕುಮಾರನೆನಗಪ್ಪನೆಂದಿಗೋ ಸಖಿ (ರಾಮಾಶ್ವ. ೧೯–೬). [ಅಪ್ಪು$_2$ + ಕೆಯ್$_1$]

**ಅಪ್ಪುಕೈ** 'ಅಪ್ಪುಕೆಯ್$_1$' ನೋ

**ಅಪ್ಪುಗಾಣಿಸು** (ಕ್ರಿ). ಅಭಿಷೇಕಮಾಡು : ಎಪ್ಪತ್ತೆರಡು ಬಸದಿಯೊಳಗೈನೂಱು ಮಾಱುಪ್ಪರದರ್ಹಬಿಂಬಗಳಾ ಅಪ್ಪುಗಾಣಿಸಿ ರಜತಾದ್ರಿಯೊಳಗೆ ಪೂಜೆಯೊಪ್ಪದೋಱುವಗಿದು ಘನವೆ (ಭರಚ. ೧೬–೧೨೦).
[ಅಪ್ಪು$_4$ + ಕಾಣಿಸು]

**ಅಪ್ಪುಗೆ$_1$, ಅಪ್ಪಿಗೆ** (ನಾ). ಆಲಿಂಗನ ; ತಬ್ಬಿಕೊಳ್ಳುವುದು : "ಪರಿಷ್ವಂಗಮಾಲಿಂಗನಮದಪ್ಪುಗೆ" (ಮಂಗರಾ. ೯೭–೧೬) ; ಅಲಸದ ನೋಟದಿಂ ಸಡಿಲದಪ್ಪುಗೆಯಿಂ (ದಶಕು. ೧೧–೭೫) ; ಹೃದಯ ರಾಮಧ್ಯಾನ ನಾಲಗೆದುದಿ ನಿಜೇಶಸ್ಮರಣೆ ಕಂಗಳ ಹೊದಿಸಿದೆವೆಯುಪ್ಪುಗೆಗಳಪ್ಪುಗೆ ರಾಘವೇಶ್ವರನ (ತೊರರಾ. ೫–೩–೪೦). **ಅಪ್ಪಿಗೆ :** ತ್ರಿಪುರ ಮುರಿದವನಪ್ಪಿಗೆಗೆ ಮುಳ್ಳಿಡುವ ಮುಮ್ಮುರಿ ಕೊರಳಿದೆ (ಮುಕ್ತಕಂ. ೧೮–೫).
[ಅಪ್ಪು$_2$ + –ಗೆ]

**ಅಪ್ಪುಗೆ$_2$** (ನಾ). ಒಪ್ಪಿಗೆ; ಸಮ್ಮತಿ : ಒಪ್ಪದಿಂ ನಿಂದೊಣಗಿ ತೋರುತಿರಲಂತವಂ ಬೇರ್ಪಡೆಯದೆ ಲಸದ್ರತ್ನನಿವಹಮೆಂದಪ್ಪುಗೆಯ ನುಡಿಗಳಂ ನುಡಿವುತಿಹರಕಟಕಟ ಪೇಳಲೇನದ್ಭುತವನು (ಘೋರಾಸು. ೭೫–೩೩).
[< ಒಪ್ಪಿಗೆ ?]

**ಅಪ್ಪುಗೆಯ್** 'ಅಪ್ಪುಕೆಯ್$_1$' ನೋ

**ಅಪ್ಪುಗೆವಿಡಿ** (ಕ್ರಿ). ಆಶ್ರಯಿಸು (?) : ಅರ್ಪಿತಾನರ್ಪಿತಗಳಪ್ಪ ಭೇದವು ದೇಹದಪ್ಪುಗೆವಿಡಿದು ಗ್ರಹಿಸುವಿಂದ್ರಿಯ ಮುಖದರ್ಪಗಳ ಕೆಡಿಸಿ ಶಿವಗರ್ಪಿತವಧಾನವಾಗಿಪ್ಪ ಮುಖವುಳ್ಳಡದು ಸಹಭೋಜನ (ಶಿವಗೀ. ೬೨–೨೯೬). [ಅಪ್ಪುಗೆ$_1$ + ಪಿಡಿ$_1$]

**ಅಪ್ಪುಗೈ** (ನಾ). ತಬ್ಬಿಕೊಳ್ಳುವ ಕೈ ; ಆಲಿಂಗಿಸುವ ಕೈ : ಕೃಷ್ಣ ಕೊಳಲ ನುಡಿಸುತ್ತಿದ್ದ ಒಬ್ಬ ಗೋಪಿಕೆ ಅವನ ಭುಜದ ಮೇಲೆ ಅಪ್ಪುಗೈ ಹಾಕಿದ್ದಳು (ವೈನಿ. ೩೦೩),

**ಅಪ್ಪುಗೈ ಹಚ್ಚಿ ಕೂಡು** = ನಿರಾಶೆಯಿಂದ ಕೈಕಟ್ಟಿಕೊಂಡು ಕುಳಿತುಕೊ (ಉಕ). **ಅಪ್ಪುಗೈ ಹಚ್ಚು**=ಕೈಕಟ್ಟು : ಚಳಿಗೆ ಅಪ್ಪುಗೈ ಹಚ್ಚಿಕೊಂಡು ಶಾಲೆಗೆ ಹೊರಟೆ (ವೈನಿ. ೬೭). **ಅಪ್ಪುಗೈ ಹಾಕು** = ಸ್ವಸ್ತಿಕದ ಆಕಾರದಲ್ಲಿ ಕೈಗಳನ್ನು ಕಟ್ಟಿಕೊ, —ಕೈ ಕಟ್ಟಿಕೊಳ್ಳು: ದಾಸಪ್ಪನು ಅಪ್ಪುಗೈಹಾಕಿಕೊಂಡು ಬೃಂದಾವನದ ಬಳಿಯಲ್ಲಿ ಕುಳಿತನು (ಕಭವಿ. II, ೪). 'ಅಪ್ಪುಗೈದೋಟಿ', 'ಅಪ್ಪುಗೈವೋಡಿ' ಪರಾ.
[ಅಪ್ಪು$_1$ + ಕೈ (< ಕೆಯ್$_2$)]

**ಅಪ್ಪುಗೈದೋಟಿ** (ನಾ). ಒಬ್ಬರನ್ನೊಬ್ಬರು ತೋಳುಗಳಿಂದ ಹಿಡಿದುಕೊಂಡು ಮಾಡುವ ಜಗಳ; ದ್ವಂದ್ವಯುದ್ಧ : ನೆತ್ತರದ ಓಕುಳಿಯೆ, ಅಪ್ಪುಗೈದೋಟಿಯೇ ಆಹ ಸ್ವರ್ಗವೇ ಎಂದೆ ನರಕ ತೆರೆಯೇ (ಹಾಡುಪಾ. ೨–೭). [ಅಪ್ಪುಗೈ + ತೋಟಿ$_1$]

**ಅಪ್ಪುಗೈವೋಡಿ** (ನಾ). ತಬ್ಬಿಕೊಂಡಿರುವ ಸ್ಥಿತಿ,—ರೀತಿ ; ಸ್ವಸ್ತಿಕಾಕೃತಿಯಲ್ಲಿ ಜೋಡಿಸಿದ ಕೈಯ ಬೆಡಗು : ತೋಳಿಂದ ತೋಳ್ವಿಡಿದಪ್ಪುಗೈವೋಡಿಯೊಳಾ ಲೋಕಮುಖವಡ್ಡವಿಕ್ಕಿ ಕಾಳಗಕನುವಾಗಿನಿಂದನ ಕಂಡನು (ಭರಚ. ೫೧–೫೬). [ಅಪ್ಪುಗೈ + ವೋಡಿ]

**ಅಪ್ಪುದು** 'ಆಗು$_1$' ನೋ.

**ಅಪ್ಪುನಿಧಿ** (ನಾ). ಸಮುದ್ರ ; ಕಡಲು : ನಿನ್ನ ಅಮೃತ ಮಹಿಮೆಗಳ ಅಪ್ಪುನಿಧಿಯಲ್ಲಿ ಪುಟ್ಟಿದವಳಱಿಯಳು (ಪುರಂದ. ೫–೫–೧೬).
[ಅಪ್ಪು$_4$ + ನಿಧಿ]

**ಅಪ್ಪುಮನ** (ನಾ). ಸಮ್ಮತಿಗೊಂಡ ಮನಸ್ಸು; ಒಪ್ಪಿಕೊಂಡ ಮನಸ್ಸು : ಒಪ್ಪವಿಡುತಾನಂದಿಸುತ ನಲಿವಪ್ಪುಮನವಾಕಾಂಕ್ಷೆಯಿಂದೆನ್ನಪ್ಪನೆನ್ನೊಡನನುದಿನಂ ಕೂಡಿಪ್ಪನಿಂದೀಗ (ಬಸಪು. ೪೭–೪೨).
[ಅಪ್ಪು ? + ಮನ]

**ಅಪ್ಪುರ** (ನಾ). ಆಪುರ (?) : ಸಮಸ್ತ ಪ್ರಜಯುಂ ಕೂಡಿ ಸಾಗರೇಶ್ವರದೇವರ್ಗ್ಗೆ ಸೋಮೇಶ್ವರದೇವರ್ಗ್ಗಂ ಅಪ್ಪುರದ ಹನ್ನದೆ ೧೦೦೦ ಯಿರ ಹೊರಗಿಗ ಹ ೮೧ ದುಗ್ಗಿ ಧಾರಾಪೂರ್ವ್ವಕಂ ಮಾಡಿ (ತೆಲಂಶಾ. ೨–೧೯ ; ೧೧೪೭ ?). [ಅದು + ಪುರ]

**ಅಪ್ಪುರಿತ** (ಗು). ಅತ್ತಿತ್ತ ಚಲಿಸದ: ಒಳಪುಗೆ ಪಶ್ಚಿಮಾಂಗಮುಗಲ ಕ್ಕೊಳಗಾಗಿರೆ ಪೂರ್ವದಂಷ್ಟ್ರಿಗಳ್ ಬಳಸಿರೆ ಹಸ್ತಮುಜ್ಜ್ವಲರದಂಗಳೊಳೀ ಕ್ಷಣಮಧ್ಯದಲ್ಲಿ ನಿಶ್ಚಲಮಿರೆ ಚಿತ್ತಮಪ್ಪುರಿತಮಾಗಿರೆ ಕರ್ಣಯುಗಲಂ ಬೆಡಂಗಿನಿಂದಿಟಿದುದು ಕುಂಭ ಕೂಟ ನಿಹಿತಾಂಕುಶಮಾ ದಿವಿಜೇಂದ್ರ ಸಿಂಧುರಂ (ಮಹಾಸೇ. ೮–೮೯). [< ಸಂ. ಅಸ್ಫುರಿತ ?]

**ಅಪ್ಪೆ** (ನಾ). ಒಂದು ಬಗೆಯ ಭಕ್ಷ್ಯ, —ತಿನಿಸು: ಗರುವಿಕೆಯ ಸೇವ ಗೆಯ ಕರಮೆಸೆವ ಸಜ್ಜಿಗೆಯ ತೆಳ್ಪಿನಪ್ಪೆಗಳ ದೊರೆವೆತ್ತ ಹೂರಣದ ಜೊಲ್ಲಿ ಕೆಯ ಕಂಪುಗಳ (ಲಿಂಗಪು. ೭–೪೬); ಹಪ್ಪಳಂ ಚಿಲಪಾಲು ಚಿಲ್ಲುಂಡೆ ಗಡುಬುಮಂ ಅಪ್ಪೆಯ ಸಣ್ಣ ಸೇವಗೆ ಸುಖಿಯನುಂಡೆಯಂ (ಲಿಂಗಪು. ೩೫–೨೭). [< ಅಪ್ಪ೨ ?]

**ಅಪ್ಪೆಯಸೊಪ್ಪು, ಅಪ್ಪೆಸೊಪ್ಪು** (ನಾ). ಒಂದು ಬಗೆಯ ಗಿಡದ ಸೊಪ್ಪು; ಸುಗಂಧಯುಕ್ತವಾದ ಎಲೆಗಳಿಂದ ಕೂಡಿದ ಒಂದು ಬಗೆಯ ಗಿಡ: ದೇವಗಂಧಾ – ಅಪ್ಪೆಯಸೊಪ್ಪು (ಓಷಧಿ. ೬೯). **ಅಪ್ಪೆ ಸೊಪ್ಪು**: ಅರಾಮಃ – ಅಪ್ಪೆಸೊಪ್ಪು (ಓಷಧಿ. ೧೧). [ಅಪ್ಪೆ + ಸೊಪ್ಪು]

**ಅಪ್ಪೆಸೊಪ್ಪು** 'ಅಪ್ಪೆಯಸೊಪ್ಪು' ನೋ.

**ಅಪ್ಪೈಸು** 'ಅಪ್ಪಯಿಸು' ನೋ.

**ಅಪ್ಪೊಗಾಲ್** (ನಾ). ಒಂದು ಊರಿನ ಹೆಸರು: ತೊಜಿ ಬಡಗರೆನಾಡು ವಿಷಯ ಅಪ್ಪೊಗಾಲ್ನಾಮಗ್ರಾಮ ಸರ್ವ್ವಬಾದು ಪರಿಹಾರಮೊಟ್ಟಜ್ಜು ಗೊಟ್ಟಂ (ಎಕ. III, ನಂಜನ. ೧೨೨–೧೬; 266 ?). [?]

**ಅಪ್ರಕಟ** (ಗು). ೧. ಪ್ರಕಟವಿಲ್ಲದ; ಇನ್ನೂ ಪ್ರಕಟವಾಗದಿರುವ. (ನಾ). ೨. ಗುಟ್ಟು; ರಹಸ್ಯ. [ಸಂ.]

**ಅಪ್ರಕಟಂ** (ಅ). ಗುಟ್ಟಾಗಿ: ಮಹಾಸ್ವಾಪದಪ್ರಕರಾಮಾತ್ಯರೊಳಂ ಗಜಾ ಧಿಪರೊಳಂ ನಂಟರ್ತನಂಗೊಂಡನಪ್ರಕಟಂ (ಪಂಚತಂ. ೯೭–೬). [ಸಂ.]

**ಅಪ್ರಕಟಿತ** (ಗು). = ಅಪ್ರಕಟ ೧: ಆತನು ಬರೆದ ಅನೇಕ ಕೃತಿಗಳು ಇನ್ನೂ ಅಪ್ರಕಟಿತವಾಗಿಯೇ ಉಳಿದಿವೆ (ರೂಢಿ). [ಸಂ.]

**ಅಪ್ರಕಾಂಡ** (ಗು). ೧. ಬುಡವಿಲ್ಲದ; ತಾಳಿಲ್ಲದ. ೨. ಆಧಾರವಿಲ್ಲದ. (ನಾ). ೩. ದಪ್ಪವಾದ ಬುಡವಿಲ್ಲದ ಪೊದರು; ಗುಲ್ಮ; ಪೊದೆ. [ಸಂ.]

**ಅಪ್ರಕಾಶ** (ನಾ). ೧. ಪ್ರಕಾಶವಿಲ್ಲದಿರುವುದು ಹೊಳಪಿಲ್ಲದಿರುವುದು; ೨. ಸ್ಪಷ್ಟವಾಗಿ ತಿಳಿಯದುದು; ಗುಟ್ಟು; ಗೂಢ; ರಹಸ್ಯ. ೩. ಪ್ರಕಾಶಕ್ಕೆ ತರದಿರುವುದು. [ಸಂ.]

**ಅಪ್ರಕಾಶಿತ** (ಗು). ಪ್ರಕಾಶಕ್ಕೆ ಬರದಿರುವ; ಪ್ರಕಟವಾಗದ; ಹೊರಬರದ. [ಸಂ.]

**ಅಪ್ರಕೃತ** (ಗು). ೧. ದಿಟ್ಟತನವಿಲ್ಲದ; ನಾಚಿಕೆಯುಳ್ಳ. ೨. ಪ್ರಕೃತ ವಲ್ಲದ; ಅಗತ್ಯವಿಲ್ಲದ: ಈ ವಿಷಯದ ಪ್ರಸ್ತಾಪ ಇಲ್ಲಿ ಅಪ್ರಕೃತ (ರೂಢಿ). [ಸಂ.]

**ಅಪ್ರಗಲ್ಭ** (ಗು). ಪ್ರೌಢನಲ್ಲದ; ಜಾಣತನವಿಲ್ಲದ. [ಸಂ.]

**ಅಪ್ರಗಲ್ಭತೆ** (ನಾ). ಜಾಣತನವಿಲ್ಲದಿರುವುದು; ಪ್ರೌಢಿಮೆಯಿಲ್ಲ ದಿರುವುದು: ಕುತ್ಸಿತತ್ವಮುಮುದ್ವೇಗಮುಮಪ್ರಗಲ್ಭತೆಯುಂ . . . ಸವನಿಕುಂ ಸಂಸಾರಿಗವ್ಯಾಕುಲಂ (ಸುಕುಮಾ. ೫–೩೫). [ಸಂ. ಅಪ್ರಗಲ್ಭತಾ]

**ಅಪ್ರಗಲ್ಭವಚನ** (ನಾ). ಜಾಣತನವಿಲ್ಲದ ಮಾತು; ಪ್ರೌಢಿಮೆ ಯಿಲ್ಲದ ನುಡಿ: ನರರೊಳಮಪ್ರಗಲ್ಭವಚನಪ್ರವೃತ್ತಿ ನೆಗಟ್ಟುಂ ಸಹಜಂ (ಕವಿರಾ. ೧–೭). [ಅಪ್ರಗಲ್ಭ + ವಚನ]

**ಅಪ್ರಗಲ್ಭೆ** (ನಾ). ಪ್ರೌಢೆಯಲ್ಲದವಳು. [ಸಂ. ಅಪ್ರಗಲ್ಭಾ]

**ಅಪ್ರಗುಣ** (ಗು). ಕಳವಳಗೊಂಡ; ಭ್ರಮೆಹೊಂದಿದ. [ಸಂ.]

**ಅಪ್ರಚಿಂತ್ಯ** (ಗು). ಚಿಂತಿಸಲಾಗದ; ಊಹಿಸಲು ಶಕ್ಯವಿಲ್ಲದ: ಅಪ್ರ ಚಿಂತ್ಯಂ . . . ಅನಂತಮೆನಲೊಪ್ಪುವುದು ಶಿವತತ್ತ್ವ (ಬಸವು. ೩೯–೯). [ಸಂ.]

**ಅಪ್ರಚುರ** (ಗು). ಪ್ರಚುರವಲ್ಲದ; ಪ್ರಸಿದ್ಧವಲ್ಲದ; ಬಳಕೆಯಿಲ್ಲದ. [ಸಂ.]

**ಅಪ್ರಣಾಶ** (ಗು). ನಾಶವಿಲ್ಲದಿರುವ; ನಷ್ಟವಾಗದಿರುವ: ಉಪಾ ಧ್ಯಾಯರಜೀಯರೀಗೆಮಗೆ ಮುಕ್ತಿನಿವೇಶಮನಪ್ರಣಾಶಮಂ (ಶಾಂತಿಪು. ೧–೪). [ಸಂ.]

**ಅಪ್ರತರ್ಕ್ಯ** (ಗು). ೧. ಊಹಿಸಿ ತಿಳಿಯಲು ಸಾಧ್ಯವಿಲ್ಲದ; ಚರ್ಚಿಸ ಲಾಗದ; ತರ್ಕಕ್ಕೆ ಮೀರಿದ: ವಾಗ್ವಿಭವಮದಪ್ರತರ್ಕ್ಯಮೆನೆ ಸಂದೆಸ ಕಂ ದೆಸೆಯಂತನೆಯ್ದೆ (ಕಾವ್ಯಾವ. ೪೨೩); ಪಿರಿದಪ್ರತರ್ಕ್ಯನನುಪಮನಪ್ರ ಮೇಯಂ (ಆರಾಜ. ೪–೮). ೨. ತರ್ಕ ಮಾಡಬಾರದ; ಚರ್ಚಿಸ ಬಾರದ. [ಸಂ.]

**ಅಪ್ರತಾಪ** (ಗು). ಪರಾಕ್ರಮವಿಲ್ಲದ; ಸಾಹಸವಿಲ್ಲದ. [ಸಂ.]

**ಅಪ್ರತಿ** (ಗು). ಪ್ರತಿಯಿಲ್ಲದ; ಇದಿರಿಲ್ಲದ; ಅಸಮಾನವಾದ: ಅಪ್ರತಿ ಸ್ಥಿರಮತಿಯೊಳಭವಗಣಪ್ರಸಾದಮನೆಯ್ದೆವೊದಗಿಸಿ (ಬಸವು. ೫೬–೧೦); ಅಪ್ರತಿ ಪರಾಕ್ರಮಿ ವೃಕೋದರಂ (ಜೈಮಿಭಾ. ೨–೪೦). [ಸಂ.]

**ಅಪ್ರತಿಕರ** (ಗು). ೧. ನಂಬಿಕೆಗೆ ಅರ್ಹವಾದ. ೨. ಗೋಪ್ಯವಾದ. [ಸಂ.]

**ಅಪ್ರತಿಘಾತ** (ನಾ). ತಡೆಯಿಲ್ಲದಿರುವುದು; ಪ್ರತಿಭಟನೆಯಿಲ್ಲದಿರು ವುದು: ಬೆಟ್ಟದೊಳಗೆ ಆಕಾಶದೊಳು ಪೋಪಂತೆ ಪೋಪುದು ಅಪ್ರತಿ ಘಾತಮೆಂಬುದು (ಶ್ರಾವಕಾ. ೯೪–೮). [ಸಂ.]

**ಅಪ್ರತಿಘಾತಗಾಮಿನಿ** (ನಾ). ೧. ತಡೆಯಿಲ್ಲದೆ ಎಲ್ಲಿಗೆ ಬೇಕಾದರೂ ಹೋಗುವ ಸಾಮರ್ಥ್ಯವನ್ನು ಕೊಡುವ ಒಂದು ವಿದ್ಯೆ: (ಚಾವುಂಊ. ೨೧೦). ೨. ತಡೆಯಿಲ್ಲದೆ ಎಲ್ಲಿಗೆ ಬೇಕಾದರೂ ಸಂಚರಿಸ ಬಲ್ಲವಳು. [ಅಪ್ರತಿಘಾತ + ಗಾಮಿನಿ]

**ಅಪ್ರತಿಬದ್ಧ** (ಗು). ತಡೆಯಿಲ್ಲದ; ವಿಘ್ನವಿಲ್ಲದ: ಧರೆ ಶಾಶ್ವತ ಮಲ್ತಪ್ಪ ಮಧರೆ ಶಾಶ್ವತಮುವನಿಚಕ್ರವಿಕ್ರಮಚಕ್ರಂ ದೊರೆಯಲ್ತು ಧರ್ಮಚಕ್ರಂ ದೊರೆಯಕ್ಕುಂ ಭವ್ಯವಿನಮದಪ್ರತಿಬದ್ಧಂ (ಶಾಂತಿಪು. ೧೧–೮೮). [ಸಂ.]

**ಅಪ್ರತಿಭ** (ಗು). ೧. ಸಮಯೋಚಿತವಾದ ಬುದ್ಧಿಯಿಲ್ಲದ; ದಿಕ್ಕು ತೋಚದ: ಮಹಮ್ಮದನ ಈ ಸ್ಥಿತಿಯನ್ನು ಕಂಡು ಖದೀಜಳು ಅಪ್ರತಿಭ ಳಾಗಿ ಅವನಿಗೆ ಶೈತ್ಯೋಪಚಾರ ಮಾಡಲು ಮಹಮ್ಮದನು ಮೂರ್ಛೆಯಿಂ ದೆಚ್ಚತ್ತು (ಪೈಗಂಬ. ೧೬). ೨. ನಾಚಿಕೆಸ್ವಭಾವದ; ಸಂಕೋಚ ಪ್ರಕೃತಿಯ. [ಸಂ.]

**ಅಪ್ರತಿಮ** (ಗು). ಎಣೆಯಿಲ್ಲದ; ಅಸಮಾನವಾದ: ಅಪ್ರತಿಮಂ ನೃಪೇಂದ್ರನುಪವಾಸವಿಧಾನದಿನಿರ್ದನಲ್ತೆ (ಶಾಂತಿಪು. ೯–೯೭); ಅಪ್ರತಿಮ ಮಹಿಮಂಗೆ ಪ್ರತಿಯುಂಟೆ (ಬಸವ. ೫೨೭). [ಸಂ.]

**ಅಪ್ರತಿಮಲ್ಲ** (ಗು). ತನಗೆ ಇದಿರಾಗಿ ನಿಲ್ಲಬಲ್ಲ ಜಟ್ಟಿಯೇ ಇಲ್ಲದ; ತನಗೆ ಎಣೆಯಿಲ್ಲದ: ಆತನನುಜರಘುಕುಳವನದಹನರ್ ಪಲರುಮಪ್ಪರ ಪ್ರತಿಮಲ್ಲರ್ (ಆದಿಪು. ೮–೨೮). [ಸಂ.]

**ಅಪ್ರತಿಮವೀರ** (ನಾ). ೧. ಎಣೆಯಿಲ್ಲದ ಶೌರ್ಯವುಳ್ಳವನು; ಅಸಮಾನ ಪರಾಕ್ರಮಿ. ೨. ಚಿಕ್ಕದೇವರಾಜ ಒಡೆಯರ ಒಂದು ಬಿರುದು: ಶ್ರೀ ಮನ್ಮಹಾರಾಜಾಧಿರಾಜಪರಮೇಶ್ವರ ಪ್ರೌಢಪ್ರತಾಪನ ಪ್ರತಿಮವೀರ ನರಪತಿ ಶ್ರೀಚಿಕದೇವ ಮಹಾರಾಜ (ಅಪ್ರತಿ. ೪–೨೩ ವ). [ಅಪ್ರತಿಮ + ವೀರ]

**ಅಪ್ರತಿಮಾನ** (ಗು). = ಅಪ್ರತಿಮ : ಬೆಡಗಿನಪ್ರತಿಮಾನರೂಪಂ ಬಿಡದೆ ನಡೆಯುಂಟಾಗಿ (ಬಸವು. ೮-೧೧). [ಸಂ.]

**ಅಪ್ರತಿರಥ** (ಗು). ೧. ತನಗೆ ಇದಿರಾಗಿ ನಿಲ್ಲುವ ರಥಿಕನಿಲ್ಲದ. (ನಾ). ೨. ಅಸಮಾನನಾದ ರಥಿಕ : ಖಚರೇಶ್ವರನೆಯ್ದಿದಂ ನಿರಾಕುಳಗತಿ ಲೀಲನಪ್ರತಿರಥಂ ರಥನೂಪುರಚಕ್ರವಾಳಮಂ (ಶಾಂತಿಪು. ೬-೨೨). [ಅಪ್ರತಿ + ರಥ]

**ಅಪ್ರತಿವಾದ** (ಗು). ಪ್ರತಿವಾದವಿಲ್ಲದ; ನಿರ್ವಿವಾದವಾದ : ಖುತ ದರ್ಶಿ ತಾಂ ನುಡಿದನಪ್ರತಿವಾದ ವೇದಮಂ (ಶ್ರೀರಾಮಾ. ೧೬೦-೫೦೦). [ಸಂ.]

**ಅಪ್ರತಿಷ್ಠ** (ಗು). ೧. ಸ್ಥಿರವಾಗಿ ಸ್ಥಾಪಿಸಲ್ಪಡದ; ಭದ್ರವಿಲ್ಲದ; ಅಸ್ಥಿರ ವಾದ; ನೆಲೆಯಿಲ್ಲದ : ಅವಿನೀತನುಂ ಅಪ್ರತಿಷ್ಠನುಂ ಸ್ವಪರಾಂತಸ್ಥ ವಿದನುಮಲ್ಲದರಸನನಜೀದಿಂಬಟಿಕ್ಕೆ ಸಮಾಪಕ್ಕೆ ಪೋಗಿ ದುರಭಿ ಮಾನದಿಂ ನುಡಿವುದು ತಕ್ಕುದಲ್ಲ (ಪಂಚತಂ. ೩೨-೧೨). ೨. ಪ್ರಯೋ ಜನವಿಲ್ಲದ; ಲಾಭವಿಲ್ಲದ. ೩. ಆಧಾರವಿಲ್ಲದ; ಹೊಂದಿಕೆಯಿಲ್ಲದ. ೪. ಪ್ರತಿಷ್ಠೆಯಿಲ್ಲದ. ೫. ಗೌರವವಿಲ್ಲದ. (ನಾ). [ಜೈನ] ಒಂದು ನರಕದ ಹೆಸರು : ಮಹಾತಮಃಪ್ರಭೆಯೊಳ್ ಅಪ್ರತಿಷ್ಠಾಭಿಧಾನ್ಯೆ ಕೇಂದ್ರಕ ತತ್ಸಂಬಂಧಿ ಶ್ರೇಢೀಬದ್ಧ ವಿಕಲ್ಪದಿಂ ಐದೇಬಿಲಂಗಳಪ್ಪುವು (ತತ್ತ್ವಪ್ರ. ೧೨೦). [ಸಂ.]

**ಅಪ್ರತಿಷ್ಠಿತ** (ಗು). ೧. ಸ್ಥಿರವಿಲ್ಲದ; ನೆಲೆಯಿಲ್ಲದ; ಅಪ್ರಸಿದ್ಧವಾದ. ೨. ಪ್ರತಿಷ್ಠೆಮಾಡದ; ಅಪವಿತ್ರವಾದ. ೩. ಮೇರೆಯಿಲ್ಲದ; ಅಪಾರವಾದ. ೪. ನೀರಿನಲ್ಲಿ ನೆಲಸಿರುವ : ೧,೪ : ಆ ಮಹಾರ್ಣವಂ . . . ಅಪ್ರತಿಷ್ಠಿತಮಾಗಿಯುಂ ಲಕ್ಷ್ಮೀಜನ್ಮಭವನಮುಂ . . . ಎನಿಸಿದುದು (ಜಗವಿ. ೧-೪೪ ವ). [ಸಂ. (ಅ- + ಪ್ರತಿಷ್ಠಿತ, ಅಪ್ + ಪ್ರತಿಷ್ಠಿತ)]

**ಅಪ್ರತಿಷ್ಠೆ** (ನಾ). ೧. ಭದ್ರವಿಲ್ಲದಿರುವುದು; ಅಸ್ಥಿರತೆ; ನೆಲೆಯಿಲ್ಲ ದಿರುವುದು. ೨. ಪ್ರಸಿದ್ಧಿಯಿಲ್ಲದಿರುವುದು; ಅಪಕೀರ್ತಿ; ಅಗೌರವ. [ಸಂ. ಅಪ್ರತಿಷ್ಠಾ]

**ಅಪ್ರತಿಹತ** (ಗು). ತಡೆಯಿಲ್ಲದ; ನಿರ್ವಿಘ್ನವಾದ; ಸೋಲಿಲ್ಲದ : ಸತತೋದಯನಪ್ರತಿಹತಗತಿ ತೀವ್ರಂ ತದ್ವಿನಾಥಿನಾಥನುಮಸ್ತಂಗತ ನಾದಂ (ಕವಿರಾ. ೩-೩೦). [ಸಂ.]

**ಅಪ್ರತಿಹಸ್ತ** (ಗು). ಸಮಾನವಾದ ಕೈಯಿಲ್ಲದ; ಸಾಟಿಯಿಲ್ಲದ ಕೈ ಯಿಲ್ಲದ : ಪಿರಿದುಂ ಚಿತ್ರಾನ್ವಿತಮಂಬರಸಂಗತಮುತ್ತರೋತ್ತರಂ ತಾನೆ ನಲುವ್ವರೆ ತಣಿಯಲ್ಪೊಂಗಜೆವುದು ಚಟ್ಟಯನ ಹಸ್ತವಪ್ರತಿಹಸ್ತಂ (ಎಕ. V ಬೇಲೂರು. ೧೯೩-೪೪ ; 1160). [ಸಂ. (ಅ- + ಪ್ರತಿಹಸ್ತ)]

**ಅಪ್ರತೀತ** (ಗು). ೧. ಸಾಮಾನ್ಯವಾಗಿ ಅರ್ಥ ತಿಳಿದಿಲ್ಲದ; ಅಪ್ರಚುರ ವಾದ; ಗೂಢವಾದ : ೨. ಸಮೀಪಿಸಲು ಶಕ್ಯವಿಲ್ಲದ; ತಾಗಲಾ ಗದ. ೩. ಅವಿರೋಧವಾದ; ತಡೆಯಿಲ್ಲದ. (ನಾ). ೪. [ಕಾವ್ಯಮೀ] ಶಬ್ದದೋಷದಿಂದ ಕೂಡಿದ ಪದ; ಕಾವ್ಯದೋಷಗಳಲ್ಲಿ ಒಂದು : "ಅಪ್ರತೀತ - ಕೇವಲ ಶಾಸ್ತ್ರಗಳಲ್ಲಿ ಮಾತ್ರವೇ ಬರುವುದು (ಕೈಪಿಡಿ. ೨೨೬) ; ಅಸಮರ್ಥಮಪ್ರತೀತಂ ವಿಸಂಧಿ ವಿಪರೀತ ಕಲ್ಪನಂ ಕಷ್ಟಂ ನೀರಸನೆಂದು ದೋಷಮಿವು ಸಮನಿಸುಗುಂ ಪದದೊಳ್ ಪದಾಗಮಜ್ಞರ ಮತದಿಂ (ಕಾವ್ಯಾವ. ೪೩೫) ; ಬಗೆಗೇತಚಿೊಳಂ ತೋಱುದುದದಪ್ರತೀತಂ ಗೂಢಂ (ಕಾವ್ಯಾವ. ೪೩೬). [ಸಂ.]

**ಅಪ್ರತೀತಿ** (ನಾ). ೧. ತಿಳಿಯದಿರುವುದು; ಅಪ್ರಸಿದ್ಧವಾಗಿರುವುದು. ೨. ಕೆಟ್ಟ ಹೆಸರು; ಅಪಕೀರ್ತಿ (ದಕ. ೬). ೩. ಅಪನಂಬಿಕೆ. 'ಅಪ್ರತೀತಿವಚನ' ಪರಾ. [ಸಂ.]

**ಅಪ್ರತೀತಿವಚನ** (ನಾ). [ಕಾವ್ಯಮೀ] ಅರ್ಥ ತಿಳಿಯಲಾಗದ ಶಬ್ದಗಳನ್ನು ಬಳಸುವುದು; ಸ್ಪಷ್ಟವಾಗಿ ಅರ್ಥವಾಗದ ಮಾತು ಗಳನ್ನು ಉಪಯೋಗಿಸುವ ಒಂದು ಕಾವ್ಯದೋಷ : ಅಸದರ್ಥಂ ವಿಪರೀತಕಲ್ಪನೆಯಭವ್ಯಂ. . . ನೀರಸಮಪ್ರೌಢತೆಯಪ್ರತೀತಿವಚನಂ . . . ಎಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೧-೪೬ ಅಡಿಟ). [ಅಪ್ರತೀತಿ + ವಚನ]

**ಅಪ್ರತ್ಯಕ್ಷ** (ಗು). ೧. ಪ್ರತ್ಯಕ್ಷವಲ್ಲದ; ಇಂದ್ರಿಯಗಳಿಗೆ ಗೋಚರವಾ ಗದ; ಪರೋಕ್ಷವಾದ. ೨. ಅಸ್ಪಷ್ಟವಾದ. [ಸಂ.]

**ಅಪ್ರತ್ಯಾಖ್ಯಾನ** (ನಾ). [ಜೈನ] ಅಹಿಂಸೆಯೇ ಮುಂತಾದ ಹನ್ನೆರಡು ವ್ರತಗಳ ಆಚರಣೆಯಲ್ಲಿ ಅಡ್ಡಿಯಾಗುವ ಒಂದು ಬಗೆಯ ಕರ್ಮಾ ವರಣ; ಇಪ್ಪತ್ತೆಂಟು ಬಗೆಯ ಮೋಹನೀಯ ಕರ್ಮಗಳಲ್ಲಿ ಒಂದು : ಚಾರಿತ್ರಮೋಹದೊಳಂ ಯಥಾಕ್ರಮದಿಂ ಸಮ್ಯಕ್ತ್ವಮಿಥ್ಯಾತ್ವ . . . ಅಪ್ರತ್ಯಾಖ್ಯಾನ ಪ್ರತ್ಯಾಖ್ಯಾನ ಸಂಜ್ವಲನ. . .ಕಷಾಯವೇದನೀಯ ಮೆನಿಸಿಯುಮಿರ್ಪತ್ತೆಂಟು ತೆಱನಪ್ಪ ಮೋಹನೀಯಮುಮಂ (ಸುಕುಮಾ. ೩-೩೯ ವ). [ಸಂ.]

**ಅಪ್ರತ್ಯೂಹ** (ಗು). ತಡೆಯಿಲ್ಲದ; ನಿರ್ವಿಘ್ನವಾದ. 'ಅಪ್ರತ್ಯೂಹ ಮೈತ್ರಿ' ಪರಾ. [ಸಂ.]

**ಅಪ್ರತ್ಯೂಹಮೈತ್ರಿ** (ನಾ). ಅಡ್ಡಿ ತಡೆಗಳಿಲ್ಲದ ಸ್ನೇಹ; ಅವಿಚ್ಛಿನ್ನ ವಾದ ಗೆಳೆತನ : ಆ ಪಾರ್ಥನೊಳಪ್ರತ್ಯೂಹ ಮೈತ್ರಿಯಿಂ ವರ್ತಿಸುವುದು (ಜಗವಿ. ೪-೧೦೮ ವ). [ಸಂ.]

**ಅಪ್ರದಕ್ಷಿಣ, ಅಪ್ರದಕ್ಷಿಣೆ** (ನಾ). ಬಲದಿಂದ ಎಡಕ್ಕೆ ಸುತ್ತುವುದು. **ಅಪ್ರದಕ್ಷಿಣೆ** : ಇಲಿಯೊಂದು ಬಂದು ಅಪ್ರದಕ್ಷಿಣೆ ಸುತ್ತಿ ಅಂಗಾತ್ತನೆ ಬಿದ್ದು ನಿಶ್ಚೇಷ್ಟಿತವಾದ್ದನ್ನು ಕಂಡು, ಹೇಸಿ, ಬಾಲದಿಂದೆತ್ತಿ ಹದ್ದಿಗೆ ಹಾಕಿ ಬಂದರು (ಸಂಸ್ಕಾರ. ೮೫). [ಸಂ. ಅಪ್ರದಕ್ಷಿಣ]

**ಅಪ್ರದಕ್ಷಿಣೆ** 'ಅಪ್ರದಕ್ಷಿಣ' ನೋ.

**ಅಪ್ರಧಾನ** (ಗು). ಪ್ರಧಾನವಲ್ಲದ; ಅಧೀನವಾದ. [ಸಂ.]

**ಅಪ್ರಪಂಚ** (ಗು). ೧. ವಿಸ್ತಾರವಲ್ಲದ. ೨. ವಿಸ್ತಾರವಿಲ್ಲದ. ೩. ಪ್ರಪಂ ಚಕ್ಕೆ ಅತೀತವಾದ; ಪ್ರಪಂಚಕ್ಕೆ ಮೀರಿದ : ಅಪ್ರಪಂಚಮಸಾಧ್ಯ ಮಚಳಿತಮಪ್ರನಾಶಮನಂತವೆನಲೊಪ್ಪುವುದು ಶಿವತತ್ತ್ವ (ಬಸವು. ೩೯-೯). [ಸಂ.]

**ಅಪ್ರಬುದ್ಧ** (ಗು). ೧. ಎಚ್ಚತ್ತಿಲ್ಲದ. ೨. ತಿಳಿವಳಿಕೆಯಿಲ್ಲದ : ಇದೇ ಕೆಮ್ಮೊಡನೆ ಯುದ್ಧವನಪೇಕ್ಷಿಸುವೆ ಶಿವ ಶಿವಾ ನೀನಪ್ರಬುದ್ಧನಲ್ಲವೆ (ಜೈಮಿಭಾ. ೧೩-೪). ೩. ಬಲಿಯದ; ವಯಸ್ಸಾಗದ : ಡಾರ್ವಿನ್ ಸಿದ್ಧಾಂತ ಅವನಿಗೆ ಅಪ್ರಬುದ್ಧಮನಸ್ಸಿನ ಕ್ರೀಡಾವಸ್ತುವಿನಂತೆ ತೋರಿತು (ಪುನರು. ೫೨೬). [ಸಂ.]

**ಅಪ್ರಬುದ್ಧತೆ** (ನಾ). ತಿಳಿವಳಿಕೆಯಿಲ್ಲದಿರುವುದು; ಮೌಢ್ಯ : ಅವ ಳಿಂದ ದಶರಥಂಗೆ ಸಂಧಿಸುವೊಲಪ್ರಬುದ್ಧತೆ ಪೂರ್ವವರ ಮತ್ತ್ರಬಂಧಂ ಗಳಂ ಒಲಿದು ಸವಿನುಡಿಯ ಮೋಹಕಾಮಾಂಧತೆಯ ಕವಿಸಿ (ವೆಂಕಾರಾ. ೨-೩-೨೯). [ಸಂ. ಅಪ್ರಬುದ್ಧತಾ]

**ಅಪ್ರಬುದ್ಧಿಕೆ** (ನಾ). ತಿಳಿವಳಿಕೆಯಿಲ್ಲದಿರುವುದು; ಮೌಢ್ಯ : ಜನಕ ಜಾಪತಿ ಜನಪನೆಂದೇ ನೋಡಿ ಮಾಡಿದೆನಪ್ರಬುದ್ಧಿಕೆಯ (ತೊರರಾ. ೬-೨೬-೯). [ಅಪ್ರಬುದ್ಧ + -ಇಕೆ]

**ಅಪ್ರಮತ್ತ** (ಗು). ೧. (ವಿಷಯ ಸುಖಗಳಲ್ಲಿ ಮಗ್ನನಾಗಿ) ಮೈಮರೆ ಯದ; ಎಚ್ಚರತಪ್ಪದ : ಬಹುಶ್ರುತ ಪಾರಗನಪ್ರಮತ್ತಂ (ಸುಕುಮಾ. ೪-೫೫). (ನಾ). ೨. [ಜೈನ] ಹದಿನಾಲ್ಕು ಗುಣಸ್ಥಾನಗಳಲ್ಲಿ ಏಳ ನೆಯದರಿಂದ ಮೇಲಿನವುಗಳಲ್ಲಿರುವ ಆತ್ಮ : "ಮೊದಲಿನ ಕೆಳತರಗ ತಿಯ ಆರು ಗುಣಸ್ಥಾನಗಳಲ್ಲಿ ಇರುವ ಆತ್ಮನು ಪ್ರಮತ್ತನೆನಿಸಿಸುವನು

ಮುಂದಿನ ಗುಣಸ್ಥಾನಗಳಲ್ಲಿ ಗಣನೀಯವಾದ ಆತ್ಮನು ಅಪ್ರಮತ್ತನೆನಿಸುವನು" (ಜೈನಪ. ೨೮೬). [ಸಂ.]

**ಅಪ್ರಮತ್ತಗುಣಸ್ಥಾನ** (ನಾ). [ಜೈನ] ಜೀವಾತ್ಮನ ಆಧ್ಯಾತ್ಮಿಕ ಉನ್ನತಿಯನ್ನು ಸೂಚಿಸುವ ಹದಿನಾಲ್ಕು ಗುಣಸ್ಥಾನಗಳಲ್ಲಿ ಏಳನೆಯದು; ಇದರಲ್ಲಿ ಕಷಾಯಗಳ ತೀವ್ರತೆಯು ಕಡಮೆಯಾಗಿ ಪ್ರಮಾದವು ದೂರವಾಗುತ್ತದೆ ಮತ್ತು ಧರ್ಮಧ್ಯಾನವು ಪ್ರಾಪ್ತವಾಗುತ್ತದೆ: ಅಪ್ರಮತ್ತಗುಣಸ್ಥಾನಂಗಳೊಳಧಃಪ್ರವೃತ್ತಿಕರಣ ಪರಿಣಾಮಂಗಳಿಂದಮನಂತಾನುಬಂಧಿ ಕ್ರೋಧಮಾನಮಾಯಾಲೋಭಂಗಳಂ ವಿಸಂಯೋಜಿಸಿ (ಆದಿಪು. ೧೦-೧೪ ವ). 'ಗುಣಸ್ಥಾನ' ಪರಾ. [ಅಪ್ರಮತ್ತ + ಗುಣಸ್ಥಾನ]

**ಅಪ್ರಮತ್ತತೆ** (ನಾ). ಮೈಮರೆವಿಲ್ಲದಿರುವಿಕೆ: ಅಪ್ರಮತ್ತತೆಯೊಳನ್ಯಸ್ತ್ರೀ ತಿ ಶೀಲಕ್ಕೆ ಕೇಡೊಗೆದತ್ತೆಂಬವಿರುದ್ಧವೃತ್ತರೆಮಗೊಳ್ಪಂ ಮಾಚಿ (ಪುಷ್ಪಪು. ೧-೬). [ಸಂ. ಅಪ್ರಮತ್ತತಾ]

**ಅಪ್ರಮತ್ತವೃತ್ತಿ** (ನಾ). ಮೈಮರೆಯದ ನಡವಳಿಕೆ; ಎಚ್ಚರದಿಂದ ಕೂಡಿದ ಸ್ಥಿತಿ: ಇಲ್ಲಿಗೆ ತಕ್ಕುದಂ ಪ್ರತೀಕಾರಮನಪ್ರಮತ್ತವೃತ್ತಿಯಿಂ ನೆಗಳ್ದಪ್ಪೆನೆಂದು (ಚಂದ್ರಪು. ೬-೧೩ ವ). [ಅಪ್ರಮತ್ತ + ವೃತ್ತಿ]

**ಅಪ್ರಮಾಣ** (ಗು). ೧. ಅಳತೆಗೆ ಮೀರಿದ: ಅಪ್ರಮಾಣಮಗಮ್ಯಮನುಪಮಂ ... ಎನಲೊಪ್ಪುವುದು ಶಿವತತ್ತ್ವ (ಬಸಪು. ೩೯-೯). ೨. ತುಂಬ ದೊಡ್ಡದಾದ: ಸಣ್ಣ ಸಣ್ಣ ಬರ್ಫದ ರಾಶಿಗಳು ಒಟ್ಟುಗೂಡಿ ಅಪ್ರಮಾಣವಾದ ಬಂಡೆಗಳಾಗಿ ಒಂದುಇಳಕಲಿನಿಂದ ಮತ್ತೊಂದಕ್ಕೆ ಜಾರುತ್ತ ಸಾಗುತ್ತವೆ (ಮುಂಬಯಿ. ೬-೧೯೧). (ನಾ). ೩. ಪ್ರಮಾಣವಲ್ಲದಿರುವುದು. ೪. ಪ್ರಮಾಣವಿಲ್ಲದಿರುವುದು; ನಿರಾಧಾರ; ರುಜುವಾತಿಲ್ಲದುದು. ೫. ಪ್ರತ್ಯಕ್ಷಾದಿ ಪ್ರಮಾಣಗಳನ್ನು ನಂಬದಿರುವವನು: ಜಪವೇಕೋ ಅಪ್ರಮಾಣಂಗೆ ತಪವೇಕೋ ಚತುರ್ವಿಧ ಪಥಕ್ಕೆ ಹೊಱಗಾದವಂಗೆ (ಮೋಳಿಮಾ. ೯೬-೩೭೮). [ಸಂ.]

**ಅಪ್ರಮಾಣಿಕ** (ನಾ). ಪ್ರಾಮಾಣಿಕನಲ್ಲದವನು: ಪ್ರಣವವನುಚ್ಚರಿಸುವ ಅಪ್ರಮಾಣಿಕರೆ[ಪಾಠಾಂ. ಗಳೆ]ಲ್ಲರೂ ಪ್ರಣವಮಂತ್ರಾರ್ಥವನೋದಿ ಮಂತ್ರಾರ್ಥವನಱಿಯರು (ಬಸವ. ೫೯೯). [ಸಂ.]

**ಅಪ್ರಮಾಣಿಕತೆ** (ನಾ). = ಅಪ್ರಾಮಾಣಿಕತೆ (ಃ). [ಸಂ. ಅಪ್ರಮಾಣಿಕತಾ]

**ಅಪ್ರಮಿತ** (ಗು). ಅಳತೆಗೆ ಮೀರಿದ; ಅಪರಿಮಿತವಾದ; ಸಮೃದ್ಧವಾದ: ಈ ನಮ್ಮ ಗೋಸಮುದಾಯಕ್ಕೆ ಬಹುಪ್ರಕಾರ ತೃಣಮುಂ ಸುಚ್ಛಾಯೆಯುಂ ತಮ್ಮೊಳಪ್ರಮಿತಂ (ಜಗವಿ. ೩-೬೫). [ಸಂ.]

**ಅಪ್ರಮುಖ** (ಗು). ಮುಖ್ಯವಲ್ಲದ; ಪ್ರಧಾನವಾದ: ಅಪ್ರಮುಖವಸ್ತುಗಳ್ಗಲ್ಪತ್ವಮುಳಿದುದಯ್ ಅನುಭವದ ಘನಮಹಿಮೆಯಿಂ (ಶ್ರೀರಾಮಾ. ೧೪೫-೮೯). [ಸಂ.]

**ಅಪ್ರಮೇಯ** (ಗು). ೧. ಅಳತೆಗೆ ಸಿಕ್ಕದ; ಅಳತೆಗೆ ಮೀರಿದ: ಪಿರಿದಪ್ರತರ್ಕ್ಯನನುಪಮನಪ್ರಮೇಯಂ (ಆರಾಚ. ೪-೮). (ನಾ). ೨. ಪ್ರಮಾಣಗಳಿಗೆ ನಿಲುಕದವನು; ಭಗವಂತ. [ಸಂ.]

**ಅಪ್ರಮೇಯಕ** (ಗು). = ಅಪ್ರಮೇಯ ೧: ಆತ್ಯಾಯತಮಪ್ರಮೇಯಕಮಧೋಮಧ್ಯೋರ್ಧ್ವಭೇದಂ ಜಗತ್ತ್ರಿತಯಂ ನಿಂದುದು (ಸುಕುಮಾ. ೧೧-೪೧). [ಸಂ.]

**ಅಪ್ರಮೇಯಬಲ** (ಗು). ೧. ಅಳತೆಗೆ ಮೀರಿದ ಬಲವುಳ್ಳ. ೨. ಅತ್ಯಧಿಕ ಸೈನ್ಯವುಳ್ಳ. ೧, ೨: ಉಗ್ರಯುದ್ಧಕೇಳೀಪ್ರಿಯನಪ್ರಮೇಯಬಲಂ ... ವಿಮಾನಮನಗುರ್ವಿಸಿದಂ (ಪಂಠರಾಮಾ. ೧೩-೩೧); ಪಾಶಹಸ್ತನಂತೆ ಘನ ಸಿಂಧುರಾಜಿತಾಪ್ರಮೇಯಬಲನುಂ (ರಾಜಶೇ. ೩-೯ ವ). [ಅಪ್ರಮೇಯ + ಬಲ]

**ಅಪ್ರಯಾಸ** (ನಾ). ಪ್ರಯಾಸವಿಲ್ಲದ ಸ್ಥಿತಿ; ಸುಲಭವಾಗಿರುವುದು: ಇಂಥ ಕಡೆ ಆದಿಪ್ರಾಸವೂ ಮನೋಹರವಾಗಿ ಅಪ್ರಯಾಸವಾಗಿ ಬರುತ್ತವೆ (ಸಮಾಲೋ. ೨೪). [ಸಂ.]

**ಅಪ್ರಯುಕ್ತ** (ನಾ). "ಅಪ್ರಯುಕ್ತ ಕೋಶ ವ್ಯಾಕರಣಗಳಿಗೆ ಒಪ್ಪಿಗೆಯಾಗಿದ್ದರೂ, ಪ್ರಯೋಗದಲ್ಲಿ ಇಲ್ಲದೇ ಇರುವುದು" (ಕೈಪಿಡಿ. ೨೨೬); ದೋಷವುಳ್ಳ ಪದಗಳನ್ನು ೧ ಶ್ರುತಿಕಟು, ೨ ಚ್ಯುತ ಸಂಸ್ಕಾರ, ೩ ಅಪ್ರಯುಕ್ತ ೪ ನಿಹತಾರ್ಥ, ೫ ಅನುಚಿತಾರ್ಥ, ೬ ನಿರರ್ಥಕ ... ಎಂದು ವಿಭಾಗಿಸಬಹುದು (ಕೈಪಿಡಿ. ೨೨೬). [ಸಂ.]

**ಅಪ್ರಯೋಜಕ** (ಗು). ಕೆಲಸಕ್ಕೆ ಬಾರದ; ಉಪಯೋಗವಿಲ್ಲದ: ಭೀತಕನು ದೂಷಕನು ದುರ್ಜನನಪ್ರಯೋಜಕನು ನೀತಿಹೀನನು (ಕುವ್ಯಾಉ. ೪-೪೧); ಆ ಮನುಷ್ಯ ಬಹಳ ಅಪ್ರಯೋಜಕ (ರೂಢಿ). [ಸಂ.]

**ಅಪ್ರಲಂಬ** (ಗು). ೧. ಕೆಳಕ್ಕೆ ಜೋಲದಂತೆ ಏರಿಸಿ ಕಟ್ಟಿದ: "ಉಚ್ಚಂಡಂ ಅಪ್ರಲಂಬಂ – ಈ ೨ ಏಱಕಟ್ಟಿದುದು" (ಹಲಾಯು. ೧೭೫-೯೮). ೨. ತಡಮಾಡದ; ವಿಳಂಬವಿಲ್ಲದ. [ಸಂ.]

**ಅಪ್ರವಿಲಕ್ಷ್ಯ** (ಗು). ಗೋಚರಿಸದೆ ಇರುವ; ಅಗೋಚರವಾದ: ದಿವಮೆಂತಂತೆ ಶತಾರಮುಗ್ರಿಮುಸಹಸ್ರಾರಂ ಸಹಸ್ರಾರಮಪ್ರವಿಲಕ್ಷ್ಯಂ ... ಮಹಾಚಕ್ರಂ (ಶಾಂತಿಪು. ೧೦-೧೧೫). [ಸಂ.]

**ಅಪ್ರವೃತ್ತಿ** (ನಾ). ೧. ಪ್ರವೃತ್ತಿಯಿಲ್ಲದಿರುವುದು: ಶ್ರುತಾವಧಿಗಳೊಳ್ ಅಪ್ರವೃತ್ತಿಯಪ್ಪುದಱಿಂ ಮತಿಜ್ಞಾನಾವರಣೀಯಕ್ಷಯೋಪಶಮಾಂತರಂಗನಿಮಿತ್ತಜನಿತೋಪಯೋಗವಿಷಯವಪ್ಪುದಱಿಂ ಇವೆಲ್ಲಂಮತಿಜ್ಞಾನಪರ್ಯಾಯ ಶಬ್ದಂಗಳೆಂದಱಿವುದು (ತತ್ತ್ವಪ್ರ. ೫೪). [ಸಂ.]

**ಅಪ್ರಶಸ್ತ** (ಗು). ೧. ಪ್ರಶಸ್ತವಲ್ಲದ; ಒಳ್ಳೆಯದಲ್ಲದ; ಅಶುಭವಾದ: ಸುಪವಿತ್ರೆಯರೇಕೆ ಮೆಟ್ಟುವರ್ ಕಮಳಮನೀ ರಜೋಧಿಕಮನಾಜಡಿದಾಣಮನಪ್ರಶಸ್ತಜನ್ಮಮಂ (ಪುಷ್ಪಪು. ೧೦-೪೮). ೨. (ಉಕ) ಅನುಚಿತವಾದ: ಸತ್ವಶಾಲಿಗಳಾದ ಸಾರ್ವಭೌಮರು ರಾಜ್ಯವಿಸ್ತಾರ ಮಾಡದೆ ನೊಣ ಬಡಿಯುತ್ತ ಕುಳಿತುಕೊಳ್ಳುವುದೆಂದರೆ, ತೀರ ಅಪ್ರಶಸ್ತಾದ ಮಾತಾಗಿರುವುದು (ಈಶಸಂ. ೩೪). (ನಾ). ೩. ಕೆಟ್ಟವನು; ಕೀಳಾದವನು: ಇವರನೇಕಿಲ್ಲಿ ಪುಗಲಿತ್ತೆಯೆಂದು ... ಅಪ್ರಶಸ್ತಂ ಕೆಡೆನುಡಿಯೆ (ಪಂಠರಾಮಾ. ೬-೧೨೫ ವ). [ಸಂ.]

**ಅಪ್ರಸನ್ನ** (ಗು). ೧. ಪ್ರಸನ್ನವಲ್ಲದ; ಶುಭ್ರವಲ್ಲದ; ತಿಳಿಯಲ್ಲದ: ಅವಿಶಾಲಾಂಬರವಪ್ರಸನ್ನದಿವವಸ್ಪಷ್ಟಾಧ್ವಂ (ಜಗವಿ. ೪-೨೬). ೨. ಅಸಮಾಧಾನಗೊಂಡ: ಏಕೋ ಅವನು ನನ್ನ ವಿಷಯದಲ್ಲಿ ಅಪ್ರಸನ್ನನಾಗಿದ್ದಾನೆ (ರೂಢಿ). [ಸಂ.]

**ಅಪ್ರಸಾದಿ** (ನಾ). ೧. ಪ್ರಸನ್ನತೆಯಿಲ್ಲದವನು; ಪ್ರೀತಿ ತೋರದವನು. ೨. [ವೀಶೈ] ಪ್ರಸಾದಿಯಲ್ಲದವನು: ಅರಸನುಮರಸಿಯುಂ ನೆತ್ತವನೊಡರ್ಚಿಸಿ ಸುರುಚಿರಾಕ್ರಾಂತಾಪ್ರಸಾದಿಗಳನುನಯೋಕ್ತಿಯಲಿ ಬೆರಸಿ (ಬಸಪು. ೪೩-೨). [ಸಂ.]

**ಅಪ್ರಸಿದ್ಧ** (ಗು). ಪ್ರಸಿದ್ಧವಲ್ಲದ; ಬಳಕೆಯಲ್ಲಿಲ್ಲದ: ಅಪ್ರತರ್ಕ್ಯನು ರಾಮನಾಥನು ಸುಪ್ರಸನ್ನನು ಸರ್ವವಾಗಿಹುದಪ್ರಸಿದ್ಧದ ನುಡಿಗಳೆಂದೆನೆ ವೇಡ (ಬಸಪು. ೫೧-೫೧). [ಸಂ.]

**ಅಪ್ರಸಿದ್ಧಿ** (ನಾ). ಪ್ರಖ್ಯಾತಿಯಿಲ್ಲದಿರುವುದು; ಅಪರೂಪವಾಗಿರುವುದು. [ಸಂ.]

**ಅಪ್ರಸ್ತುತ** (ಗು). ೧. ಹೊಗಳಲ್ಪಡದ. ೨. ಪ್ರಸ್ತುತವಲ್ಲದ; ಪ್ರಕೃತಕ್ಕೆ ಸಂಬಂಧಪಡದ; ಸಂದರ್ಭಕ್ಕೆ ಸರಿಯಲ್ಲದ;

ಅಸಂಬದ್ಧವಾದ: ಅಧ್ಯಕ್ಷ ನಡುವೆ ಬಾಯಿಹಾಕಿ ಅದೆಲ್ಲ ಅಪ್ರಸ್ತುತವೆಂದು ಆಜ್ಞಾಪಿಸಿದನು (ಪುನರು. ೨೦೩). (ನಾ). ೨. [ಕಾವ್ಯಮೀ] ಒಂದು ಕಾವ್ಯಾಲಂಕಾರ; ಅಪ್ರಸ್ತುತ ಪ್ರಶಂಸೆ: ಪ್ರಸ್ತುತಮಲ್ಲದುದನೆಮಿಗೆ ವಿಸ್ತಾರಿಸಿ ನೆಗಟ್ ಪೇೞ್ದೊಡಕ್ಕುಂ ಮತ್ತಮಪ್ರಸ್ತುತಮೆಂಬುದಳಂಕೃತಿ (ಕವಿರಾ. ೩–೧೩೮). [ಸಂ.]

**ಅಪ್ರಸ್ತುತಪ್ರಶಂಸೆ** (ನಾ). [ಕಾವ್ಯಮೀ] ಒಂದು ಅರ್ಥಾಲಂಕಾರ: "ಅಪ್ರಸ್ತುತವೃತ್ತಾಂತವರ್ಣನೆ ಪ್ರಸ್ತುತವೃತ್ತಾಂತವನ್ನು ತಿಳಿಯಪಡಿಸುವುದರಲ್ಲಿ ವಿಶ್ರಾಂತವಾದರೆ ಅಪ್ರಸ್ತುತಪ್ರಶಂಸಾಲಂಕಾರವೆನ್ನಿಸಿಕೊಳ್ಳುವುದು" (ಕೈಪಿಡಿ. ೨೭೩). [ಅಪ್ರಸ್ತುತ + ಪ್ರಶಂಸೆ]

**ಅಪ್ರಹತ** (ಗು). ೧. ಏಟಿಗೆ ಸಿಕ್ಕದ; ಹೊಡೆಯಲ್ಪಡದ. ೨. ಕೃಷಿ ಮಾಡದ; ಬೀಳಾದ. (ನಾ). ೩. ಒಂದು ಬಾರಿಯೂ ಒಗೆಯದ ವಸ್ತ್ರ. [ಸಂ.]

**ಅಪ್ರಾಕಟಿ** (ಗು). ರಹಸ್ಯವಾದ; ಗುಟ್ಟಾದ; ಪ್ರಕಾಶಕ್ಕೆ ಬಾರದ: ಏಕಾಂತದೊಳೀ ಲೇಖಮನಾ ಕನ್ನೆಗೆ ಪೋಗಿ ಕುಡುವುದೆಂದಟ್ಟಿದನೆಂದಾಕೆ ನುಡಿವುತ್ತುಮಂದಪ್ರಾಕಟವದನಡಪದೊಳಗಣಿಂ ತೆಗೆದಾಗಳ್ (ಕಾದಂಪೂ. ೬೯೮). [ಸಂ.]

**ಅಪ್ರಾಕೃತ** (ಗು). ೧. ಪಾಮರನಲ್ಲದ; ತಿಳಿದ. ೨. ಅಸಾಧಾರಣವಾದ; ವಿಶೇಷವಾದ: ಆ ಕನ್ನೆಯ ಕೈವಿಡಿದಂ ಸ್ವೀಕೃತಗಂಧರ್ವರಾಜ್ಯ ಮಹಿಮೋದಯನಪ್ರಾಕೃತ ನಿಜವಿಭವಕೃತಾರ್ಥೀಕೃತ ಬುಧಜನ ಮನೋರಥಂ ಚಿತ್ರರಥಂ (ಕಾದಂಪೂ. ೯೭೩). ೩. ಪ್ರಕೃತಿಯನ್ನು ಮೀರಿದ. ೪. ಪ್ರಾಕೃತಭಾಷೆಗೆ ಸೇರದ. (ನಾ). ೫. ಪ್ರಕೃತಿಯನ್ನು ಮೀರಿದವನು; ದೇವರು. [ಸಂ.]

**ಅಪ್ರಾಕೃತಿಕ** (ಗು). ಪ್ರಕೃತಿಗೆ ಸಂಬಂಧಪಡದ; ಅಸಾಧಾರಣವಾದ. [ಸಂ.]

**ಅಪ್ರಾಪ್ತ** (ಗು). ೧. ಪ್ರಾಪ್ತವಾಗದಿರುವ; ಇನ್ನೂ ದೊರೆಯದ. ೨. ಇನ್ನೂ ಬಾರದ. ೩. ನಿಯಮದಿಂದ ಸಿದ್ಧವಲ್ಲದ. [ಸಂ.]

**ಅಪ್ರಾಪ್ತಪೂರ್ವ** (ಗು). ಮುಂಚೆ ದೊರೆತಿಲ್ಲದ; ಆ ಮೊದಲು ಪ್ರಾಪ್ತವಾಗದ: ಆತನಪ್ರಾಪ್ತಪೂರ್ವಸುಖವಿಸ್ಮಯಸ್ಮೇರ ಮುಖಕಮಳಂ (ಶಾಂತಿಪು. ೭–೧೫ ವ). [ಸಂ.]

**ಅಪ್ರಾಪ್ತರ್ಧಿ** (ನಾ). ೧. ಋದ್ಧಿಯನ್ನು ಪಡೆಯದವನು; ಸಂಪತ್ತನ್ನು ಹೊಂದದವನು. ೨. [ಜೈನ] ಅನಾರ್ಯರಲ್ಲಿ ಒಂದು ಭೇದ: ಗುಣಗಳಿಂ ಗುಣವಂತರಿಂ ಮೇಣುಪಾರ್ಜಿಸಪಡುವರ್ ಅನಾರ್ಯರೆಂಬುದು. ಅವರ್ ಪ್ರಾಪ್ತರ್ಧಿಗಳುಂ ಅಪ್ರಾಪ್ತರ್ಧಿಗಳುಂ ಎಂದು ಇತ್ತೆಱಂ (ತತ್ತ್ವಪ್ರ. ೧೭೨). [ಅಪ್ರಾಪ್ತ + ಋದ್ಧಿ]

**ಅಪ್ರಾಪ್ತವಯಸ್ಕ** (ನಾ). ವಯಸ್ಸಿಗೆ ಬಾರದವನು; ಹುಡುಗ. [ಅಪ್ರಾಪ್ತ + ವಯಸ್ಕ]

**ಅಪ್ರಾಪ್ತವಯಸ್ಸು** (ನಾ). ಚಿಕ್ಕವಯಸ್ಸು; ಎಳೆತನ. [ಅಪ್ರಾಪ್ತ + ವಯಸ್ಸು]

**ಅಪ್ರಾಪ್ತಿ** (ನಾ). ದೊರೆಯದಿರುವುದು: ಅಪ್ರಾಪ್ತಿ ರಸಂಬಡೆಗುಂ ವೈಷಯಿಕ ಸುಖದೊಳಿದು ವಿಸ್ಮಯಮೇ (ಪಂರಾಮಾ. ೯–೧೮೭). [ಸಂ.]

**ಅಪ್ರಾಪ್ಯ** (ಗು). ಹೊಂದಲಾಗದ; ಪಡೆಯಲು ಸಾಧ್ಯವಿಲ್ಲದ. [ಸಂ.]

**ಅಪ್ರಾಮಾಣಿಕ** (ಗು). ೧. ಪ್ರಮಾಣಕ್ಕೆ ಅನುಸಾರವಲ್ಲದ; ನಿರಾಧಾರವಾದ. ೨. ನಂಬಲು ಅನರ್ಹವಾದ. [ಸಂ.]

**ಅಪ್ರಾಮಾಣಿಕತನ** (ನಾ). = ಅಪ್ರಾಮಾಣಿಕತೆ: ಆತನನ್ನು ನೌಕರಿಯಿಂದ ರದ್ದುಮಾಡಿದುದರ ಕಾರಣವೇನೆಂದರೆ ಅವನ ಅಪ್ರಾಮಾಣಿಕತನದ ವರ್ತನೆಯೆಂದೇ ಚೌಡಪ್ಪ ಹೇಳುತ್ತಿದ್ದರು (ಹಳ್ಳಿಹಾ. ೯೧). [ಅಪ್ರಾಮಾಣಿಕ + -ತನ]

**ಅಪ್ರಾಮಾಣಿಕತೆ** (ನಾ). ಪ್ರಾಮಾಣಿಕತನವಿಲ್ಲದಿರುವುದು; ವಂಚನೆ; ಮೋಸ. [ಸಂ. ಅಪ್ರಾಮಾಣಿಕತಾ]

**ಅಪ್ರಾಮಾಣ್ಯ** (ನಾ). ೧. [ತರ್ಕಶಾ] ಪ್ರತ್ಯಕ್ಷಾದಿ ಪ್ರಮಾಣವಿಲ್ಲದಿರುವಿಕೆ; ಸರಿಯಾದ ಆಧಾರವಲ್ಲದಿರುವಿಕೆ: ವ್ಯವಹಾರಕ್ಕೆಲ್ಲಾ ಅಪ್ರಾಮಾಣ್ಯವನ್ನು ಹೇಳಿ (ಹಿಂದಸಾ. ೧೩೪). ೨. ನಂಬಿಕೆಯಿಲ್ಲದಿರುವುದು: ಅವನ ಮಾತಿನಲ್ಲಿ ಅಪ್ರಾಮಾಣ್ಯ ತುಂಬಿದೆ (ರೂಢಿ). [ಸಂ.]

**ಅಪ್ರಾಸಂಗಿಕ** (ಗು). ಪ್ರಸಂಗಕ್ಕೆ ಸಂಬಂಧಪಡದ; ಅಪ್ರಕೃತವಾದ: ವಸ್ತುಗಳ ಪ್ರತ್ಯಕ್ಷಜ್ಞಾನದಿಂದಲೂ ಕಾವ್ಯಾತ್ಮ ಸಿದ್ಧಿಸಬಹುದಲ್ಲವೆ? ಎಂಬುವ ಪ್ರಶ್ನೆಯೇ ಅಪ್ರಾಸಂಗಿಕ (ಧ್ವನ್ಯಾಲೋ. ೨೬). [ಸಂ.]

**ಅಪ್ರಾಸುಕ** (ಗು). [ಜೈನ] ಜೀವಂತ ವಸ್ತುಗಳಿಂದ ಕೂಡಿರುವ: ಅನ್ನೆಗಮಿರುಳ್ ನಾಲ್ಕು ಜಾವಮುಂ ಭೋರೆಂದು ಪೆರ್ಮೞೆ ಕೊಂಡು ಕೆಸಱಾದೊಡೆ ನೇಸಮ್ಮೂಡಿದೊಡಪ್ರಾಸುಕಂ ಬಟ್ಟೆಯೆಂದು ಕೈಯನೆತ್ತಿಕೊಳ್ಳದೆ ಮತ್ತಂತೆ ಸೂರ್ಯಪ್ರತಿಮೆನಿಂದೊರನ್ನೆಗಂ (ವಡ್ಡಾರಾ.೧೫೨–೧೪); ತಳಿಯೆ ಕೆಸಱಾದ ಧರೆ ಪೂಗಳ ತುಱುಗಲೊಳೆಸೆಯೆ ಪೊಟಲಿದಪ್ರಾಸುಕಮೆಂದೊಳಪುಗದೆ ನಿಯಮದಿಂ ನಿರ್ಮಲಚರಿತಂ ಚರಿಗೆವೊಕ್ಕನರಸನ ಬೀಡಂ (ಆದಿಪು. ೫–೧೦); ಚತುರಂಗ ಚಾರಣ ಪಿಹಿತಾಸ್ರವ ಮುನಿ ಮಾಸೋಪವಾಸಂಗೆಯ್ದು ಅಪ್ರಾಸುಕಮೆಂದು ಪೊಟಲಂ ಪುಗದೆ ಬೀಡಂ ಪುಗೆ (ಚಾವುಂಪು. ೨೩). 'ಪ್ರಾಸುಕ' ಪರಾ. [ಸಂ.]

**ಅಪ್ರಿಣಾಕ** (ಗು). (?): ಮೃದುಸ್ನಿಗ್ಧ ಪ್ರಭೂತಸೂಕ್ಷ್ಮೈಕಜಾತರೋಮನುಂ ಅಪ್ರಿಣಾಕ ಭಾವಿಳಶ್ಲಿಷ್ಟತಚಳನುಂ (ಆದಿಪು. ೧೨–೫೬ ವ). [ಸಂ.]

**ಅಪ್ರಿಯ** (ಗು). ೧. ಪ್ರಿಯವಲ್ಲದ; ಇಷ್ಟಕ್ಕೆ ವಿರೋಧವಾದ: ತಾಯಿಗೆ ಅಪ್ರಿಯವಾದ ವಿಷಯದತ್ತವೇ ಹೊರಳುತ್ತಿದ್ದುದನ್ನು ಕಂಡು (ಮೂರುದಾ. ೧೨೭). (ನಾ). ೨. ಹಗೆ; ಶತ್ರು: ಅನಂತವೀರ್ಯಂ ಪ್ರಿಯನಾದೊಂ ಖೇಚರೇಂದ್ರನಪ್ರಿಯನಾದೊಂ (ಶಾಂತಿಪು. ೮–೪೭). [ಸಂ.]

**ಅಪ್ರೀಯ** (ಗು). = ಅಪ್ರಿಯ ೧: ನೃಪನಶ್ವಮೇಧಮಂ ಮಾಡಿ ಬಹು ಕನಕಮಂ ಭೂಸುರರ್ಗೆ ಈಯಲವರೊಯ್ಯುತೆಡೆಯೊಳಗಲಸಿಬಿಟ್ಟರಪ್ರೀಯದಿಂದಾ ವಸ್ತುವದೆ ಹಿಮಾಲಯದೊಳ್ (ಜೈಮಿಭಾ. ೨–೩೨). 'ಪ್ರೀಯ' ಪರಾ. [ಸಂ. ಅಪ್ರಿಯ]

**ಅಪ್ರೇಮ** (ಗು). ೧. ಪ್ರೀತಿಯಿಲ್ಲದ. ೨. ಕನಿಕರವಿಲ್ಲದ. (ನಾ). ೩. ಪ್ರೇಮವಿಲ್ಲದವನು; ಅನಾಸಕ್ತ. [ಸಂ.]

**ಅಪ್ರೌಢ** (ಗು). ೧. ಪ್ರಾಯಕ್ಕೆ ಬಾರದ; ಎಳೆಯ; ಕಿರಿಯ. (ನಾ). ೨. ತಿಳಿವಳಿಕೆ ಸಾಲದವನು; ಪಾಂಡಿತ್ಯವಿಲ್ಲದವನು: ಎಲೆ ಭೂಪ ನಿಗಮಾಗಮ ಪುರಾಣ ಶಾಸ್ತ್ರಂಗಳ ವಿಚಾರಮಂ ನೀನಱಿಯದಪ್ರೌಢನೇ (ಜೈಮಿಭಾ. ೨–೨೦). ೩. ಗರ್ವವಿಲ್ಲದವನು; ಮೃದುಸ್ವಭಾವದವನು; ಹೆದರುವ ಸ್ವಭಾವದವನು. [ಸಂ.]

**ಅಪ್ರೌಢತೆ** (ನಾ). ೧. ಜಾಣತನವಿಲ್ಲದಿರುವುದು; ಪಾಂಡಿತ್ಯ ಸಾಲದಿರುವುದು. ೨. [ಕಾವ್ಯಮೀ] ಹದಿನೆಂಟು ಬಗೆಯ ಕಾವ್ಯದೋಷಗಳಲ್ಲಿ ಒಂದು: ಅಸದರ್ಥಂ ವಿಪರೀತಕಲ್ಪನೆಯಭವ್ಯಂ ದುಷ್ಕರಂ ಗ್ರಾಮ್ಯನೀರಸಮಪ್ರೌಢತೆಯಪ್ರತೀತಿವಚನಂ . . . ಇವಿನಿತುಂ ದೋಷಂಗಳಪ್ಪಾದಶಂ (ಛಂದೋಂಬು. ೧–೪೭ ಅಡಿಟ). [ಸಂ. ಅಪ್ರೌಢತಾ]

**ಅಪ್ಸರ** (ನಾ). ದೇವತಾಸ್ತ್ರೀಯರಲ್ಲಿ ಒಂದು ಪಂಗಡ: "ಕಿನ್ನರರು ಗಂಧರ್ವರಪ್ಸರರು . . . ದೇವಯೋನಿಗಳು" (ಮಂಗರಾ. ೧೭–೧೭). [ಸಂ. ಅಪ್ಸರಸ್]

**ಅಪ್ಸರಃಪ್ರತಾನ** (ನಾ). ೧. ಅಪ್ಸರರ ಸಮೂಹ; ಸುರವೇಶ್ಯೆಯರ ಗುಂಪು. ೨. ಸರೋವರಗಳ ಸಮೂಹ ೧, ೨: ಬೇಜಿಸೊಂದಮರಾವತಿ ಪೋಲ್ ತೋಱುವುದತುಳಾಪ್ಸರಃಪ್ರತಾನದಿನೊಲವಂ ಬೀಱುವ ನಂದನದಿಂ (ಚಂದ್ರಪ್ರ. ೩-೧೬). [ಸಂ.]

**ಅಪ್ಸರಗಣಿಕೆ** (ನಾ). ದೇವಲೋಕದ ವೇಶ್ಯೆ; ರಂಭೆ, ಊರ್ವಶಿ ಮುಂತಾದ ಸ್ವರ್ಗದ ಸೂಳೆಯರು: ಭೀಮನ ಕೆಣಕಿ ಬದುಕಿದೆಯೆನುತ ಲಪ್ಸರಗಣಿಕೆಯರು ನಗುತವನ ಕೊಂಡೊಯ್ದರು ವಿಮಾನದಲಿ (ಕುವ್ಯಾಕ. ೨-೨೧). [ಅಪ್ಸರ + ಗಣಿಕೆ]

**ಅಪ್ಸರಸಿ** (ನಾ). = ಅಪ್ಸರ. [ಸಂ. ಅಪ್ಸರಸ್]

**ಅಪ್ಸರಸೆ** (ನಾ). = ಅಪ್ಸರ. [ಸಂ. ಅಪ್ಸರಸ್]

**ಅಪ್ಸರೆ** (ನಾ). = ಅಪ್ಸರ: ನರ್ತಿಸಿದ ರಪ್ಸರೆಯರೆರಚಿ ಪೂವಲಿಗಳಂ (ಶ್ರೀರಾಮಾ. ೧೬-೪೨೬). [ಸಂ. ಅಪ್ಸರಾ]

**ಅಪ್ಸರೋಗಣ** (ನಾ). = ಅಪ್ಸರಃಪ್ರತಾನ ೧, ೨: ಅಪ್ಸರೋಗಣಂ ದಿವದಿಂ ಬಂದಾ ಗೋಕುಲದೊಳ್ ಗೋಪಸ್ತ್ರೀಗಣವಾಗಿರ್ದುದು (ಜಗನ್ನಿ. ೧-೭೭); ನಾಕಿನಿಳಯದಂತನೂನಾಪ್ಸರೋಗಣಪ್ರಣೂತಮುಂ (ಚಂದ್ರಪ್ರ. ೫-೫೨ ವ). [ಸಂ. (ಅಪ್ಸರಸ್ + ಗಣ, ಅಪ್ + ಸರೋಗಣ)]

**ಅಪ್ಸೆಣಬು** (ನಾ). (ಗೊಬ್ಬರಕ್ಕಾಗಿ ಗದ್ದೆಗಳಲ್ಲಿ ಬೆಳೆಯುವ) ಒಂದು ಬಗೆಯ ಸೆಣಬಿನ ಗಿಡ: ಅಪ್ಸೆಣಬು (ಮೈಪಿಗಿ. ೨೫-೪೭೪). [?]

**ಅಫರಾತಫರಾ, ಅಫರಾತಫರು** (ನಾ). (ಉಕ) ದುರುಪಯೋಗ: ಇದರೊಳಗ ಸಿಮೆಂಟಿನ ಅಫರಾತಫರಾ . . . ನಳದ ಪಾಯಿಪಿನ ಅಫರಾತಫರಾ ಆಗೋವೇ (ಅಪನಾ. ೨೦೭). **ಅಫರಾತಫರು**: ಇಪ್ಪತ್ತೈದು ಸಹಸ್ರರೂಪಾಯಿ ಅಫರಾತಫರು ಆಗಿದೆ (ಜರತಾ. ೨೭೯).
[← ಮರಾ. ಅಫರಾತಫರ; ಪಾರ. ಇಫರಾತಿಫರಾ]

**ಅಫರಾತಫರು** 'ಅಫರಾತಫರಾ' ನೋ.

**ಅಫಲ, ಅಫಳ** (ಗು). ೧. ಫಲವಿಲ್ಲದ; ನಿಷ್ಪ್ರಯೋಜನವಾದ: ಹರಿನೀನಿಲ್ಲದ ಮದೀಯಗೋಕುಲಮಫಲಂ (ಜಗನ್ನಿ. ೩-೯೪). ೨. ಕಸಿ ಮಾಡಿದ. ೩. ಹಿಡಮಾಡಿದ. (ನಾ). ೪. ಹೂವು ಕಾಯಿ ಬಿಡದ ಗಿಡ; ಬಂಜೆಯಾದ ಗಿಡ. **ಅಫಳ**: 'ಅಫಳಾಧ್ಯವಸಾಯ' ಪರಾ. [ಸಂ.]

**ಅಫಳ** 'ಅಫಲ' ನೋ.

**ಅಫಳಾಧ್ಯವಸಾಯ** (ನಾ). ವ್ಯರ್ಥವಾದ ಪ್ರಯತ್ನವುಳ್ಳವನು: ಅಂತಫಳಾಧ್ಯವಸಾಯನಾದುದರ್ಕೇವಯ್ಸಿ . . . ಮಸಕದಿಂದಸಿಧೇನುವಂ ಕಿಟ್ಟು (ಚಂದ್ರಪ್ರ. ೬-೩೯ ವ). [ಅಫಳ (= ಅಫಲ) + ಅಧ್ಯವಸಾಯ]

**ಅಫಳಿಯ** (ನಾ). ೧. ವೃದ್ಧಿಪ್ರಾಪ್ತವಾದುದು; ಉನ್ನತವಾದುದು. ೨. ಹೊಡೆಯಲ್ಪಟ್ಟದ್ದು; ತಾಡಿತವಾದದ್ದು: ಒಪ್ಪುವ ಕನ್ನಡದೊಳೆ ಸ್ವಭಾವದಿಂ ಕೆಲವು ಮಹಾಪ್ರಾಣಂಗಳೊಳವು; ಅವಾವುವೆಂದೊಡೆ ಫೆಳಾವುಗಂ, ಫೇಳಿ, ಅಫಳಿಯಂ (ಅಪ್ಫಳಿಯಂ) (ಶಮದ. ೧೫ ವೃತ್ತಿ).
[← ಪ್ರಾ. ಅಪ್ಫಾಲಿಯ. / ಸಂ. ಅಸ್ಫಾಲಿತ]

**ಅಫಿನಿ** 'ಅಪಿನಿ' ನೋ.

**ಅಫೀಮು** 'ಅಪೀಮು' ನೋ.

**ಅಫೀಮುಖೋರ** (ನಾ). ಅಫೀಮನ್ನು ತಿನ್ನುವ ಚಟವುಳ್ಳವನು.
[ಅಫೀಮು (< ಅಪೀಮು) + ಖೋರ]

**ಅಫೀಮುಬತ್ತಿ** (ನಾ). ಸ್ವಲ್ಪಮಟ್ಟಿಗೆ ಅಫೀಮನ್ನು ಉಪಯೋಗಿಸಿ ತಯಾರಿಸಿದ ಹೊಗೆಯಬತ್ತಿ, ಸಿಗರೇಟು, ಚುಟ್ಟಾ ಮುಂತಾದುವು. [ಅಫೀಮು (< ಅಪೀಮು) + ಬತ್ತಿ]

**ಅಫು** 'ಅಪು' ನೋ.

**ಅಫೂ** 'ಅಪು' ನೋ.

**ಅಬಂಡ, ಅಬಂಡು** (ನಾ). ೧. ವಿಕಾರ; ಕುರೂಪ. ೨. ವಿಶೇಷ ಭಾರ (ಕರಾ). **ಅಬಂಡು** ೧. (*). [← ಮರಾ. ಅಭಂಡ]

**ಅಬಂಡು** 'ಅಬಂಡ' ನೋ.

**ಅಬಂದರ, ಅಬಂದರೆ** (ನಾ). ೧. ಭದ್ರವಿಲ್ಲದುದು; ಬಿಗಿಯಿಲ್ಲದುದು; ಸಡಿಲವಾದುದು; ಶಿಥಿಲವಾದುದು. ೨. ಅಕ್ರಮ; ಅಸ್ತವ್ಯಸ್ತ; ಅಪ್ರಯೋಜಕ (*). **ಅಬಂದರೆ. ೧**: ಈ ಕಟ್ಟಡವೆಲ್ಲಾ ತುಂಬ ಅಬಂದರೆಯಾಗಿದೆ (ರೂಢಿ).
[ದೇ ॥ ತಮಿ. ಅವಂದರ್ಯ. ತೆಲು. ಅಬಂದರ. / ಸಂ. ಅಬಂಧ]

**ಅಬಂದರೆ** 'ಅಬಂದರ' ನೋ.

**ಅಬಂಧುರ** (ಗು). ೧. ಬಂಧುರವಲ್ಲದ. (ನಾ). ೨. ಚೆನ್ನಲ್ಲದ್ದು; ಮನೋಹರವಲ್ಲದ್ದು; ಉಚಿತವಲ್ಲದ್ದು: ಬಂಧುಗಳ ಬಂಧುರಮೆನೆ ವಂದಿಗಳ್ ನಿಂದ್ಯಮೆನೆ (ಜಗನ್ನಿ. ೨-೫೩ ವ). [ಸಂ.]

**ಅಬಕಾರಿ** 'ಅಬ್ಕಾರಿ' ನೋ.

**ಅಬಚಿ** (ನಾ). ೧. (ಉಕ) ತಾಯಿಯ ಒಡಹುಟ್ಟಿದವಳು; ಚಿಕ್ಕಮ್ಮ ಅಥವಾ ದೊಡ್ಡಮ್ಮ: ಅಬಚಿಯು ಅಡಿಗೆಯ ಮನೆಗೆ ಬಂದಳು (ರಕ್ತಧ್ವ. ೧೭೦); ಎಲ್ಲಿಯೋ ಅಬಚಿಯ ಮನೆಗೆ ಹೋದ ಸುದ್ದಿ ಹಬ್ಬಿಸಿ ಇಲ್ಲಿ ಕಳಿಸಿದ್ದಾಯಿತು (ದಾಸಹು. ೧೪೭). ೨. ವಿಧವೆ: ಹವಿಕರು ವಿಧವೆಗಳಿಗೆ ಅಬಚಿ ಎನ್ನುವರು (ಕಭಾಗಿ. ೮೫). [ಅಬ್ಬೆ1 + ಅಚ್ಚಿ2 ?]

**ಅಬಟು** (ನಾ). (?): ಅಬಟು ಹೋಗಿ ಜಿಬಟಾಗುವ ಪ್ರಸಂಗ ಬಂದಿದೆ ಬೆಳಗಾಗುವದರೊಳಗಾಗಿ ನಾವು ಈ ಸ್ಥಾನವನ್ನು ಬಿಡಲೇಬೇಕು (ಪವಶೀ. ೬೬). [?]

**ಅಬಡಜಬಡ, ಅಬಳುಜಬಳು** (ನಾ). ೧. ಸರಿಯಾಗಿ ನುರಿಸದೆ ತಿನ್ನುವುದು (ಉಕ). ೨. ಅಸ್ತವ್ಯಸ್ತ; ಶಿಥಿಲ; ಗೋಜಲು. **ಅಬಳುಜಬಳು. ೨**: ಬಯಕೆಗಳ ನೆರವೇರಿಕೆಯಲ್ಲಿ ಹೊರಳಿ, ಬಳಲಿ, ಅಬಳುಜಬಳಾಗುತ್ತಿದ್ದ ದೇಹ, ಜೀವ (ರಂಗನಾ. ೧೪೫).
[← ಮರಾ. ಅವಡಚಿವಡ, ಅವಡಾಚಿವಡಾ]

**ಅಬಡತಬಡ** (ನಾ). = ಅಬಡಜಬಡ. ೨: ಆ ಮಂತ್ರದ ಅಕ್ಷರಗಳು ಸ್ಪಷ್ಟವಾಗಿ ಹೊರಡದಾದವು. ಅಬಡತಬಡವಾಗಿ ಮಂತ್ರವು ಭಂಗವಾಗಲಾರಂಭವಾಯಿತು (ಅಂಬಿಕೆ. ೬). [ಅಬಡ + ತಬಡ ?]

**ಅಬದ್ಧ** (ಗು). ೧. ಕಟ್ಟು ಇಲ್ಲದ; ಸ್ವೇಚ್ಛೆಯ; ನಿಯಮವನ್ನು ಮೀರಿದ. ೨. ಅಸಂಬದ್ಧವಾದ (ಉಕ). ೩. ಅರ್ಥವಿಲ್ಲದ. (ನಾ). ೪. ತಪ್ಪು: ಆರೋಹಕಕತನವೆಂಬುದಬದ್ಧಂ (ಶಮದ. ೨೧೧ ಪ್ರಯೋ). ೫. ಸುಳ್ಳು; ಅಸತ್ಯ: ಅವನೀಶನೆಂಬುದಬದ್ಧವೋ ನಿಜವೋ (ಬಸವು. ೫೧-೧೭); ಮಲಮಾಯಾಕರ್ಮಂಗಳು ಎಂದೂ ತೊಲಗುವುದಿಲ್ಲ ಎಂದಾಗಲೇ ಮುಕ್ತಿಯಿಲ್ಲ ಎನ್ನು. ಮುಕ್ತಿ ಉಂಟಾದರೆ ಮಲಮಾಯಾಕರ್ಮಂಗಳು ನಿತ್ಯವೆಂಬುದು ಅಬದ್ಧ (ಸಿದ್ಧೇವ. ೭೨); ಅಬದ್ಧಕ್ಕೆ ಅಪ್ಪಣೆಯೇ ಎಂದರೆ ಬಾಯಿಗೆ ಬಂದ ಹಾಗೆ (ಗಾದೆ). ಅಪದ್ಧ ಹೋ. [ಸಂ. / ತೆಲು. ಅಬದ್ಧ = ಸುಳ್ಳು]

**ಅಬದ್ಧಖೋರ** (ನಾ). ೧. ಸುಳ್ಳುಗಾರ. ೨. ಅಸಂಬದ್ಧ ಪ್ರಲಾಪಿ.
[ಅಬದ್ಧ + ಖೋರ]

**ಅಬದ್ಧಗಾರ** (ನಾ). ಸುಳ್ಳು ಹೇಳುವುದೇ ಅಭ್ಯಾಸವಾದವನು (*).
[ಅಬದ್ಧ + -ಗಾರ (< -ಕಾಱ)]

**ಅಬದ್ಧಚರಿತ** (ನಾ). ೧. ತಪ್ಪು ನಡವಳಿಕೆ; ಅನಾಚಾರ: ಬೌದ್ಧರಿರ ಕೇಳ್ ನಿಮ್ಮ ಬೌದ್ಧವಬದ್ಧಚರಿತಂ ಸಕಲವೇದವಿರುದ್ಧಮಾರ್ಗಂ (ಬಸವು. ೫೧-೫೫). ೨. ತಪ್ಪು ನಡವಳಿಕೆಯವನು; ನಿಯಮವನ್ನು

ಮೀರಿ ನಡೆಯುವವನು; ಸ್ವೇಚ್ಛಾಚಾರಿ: ಶ್ರುತಿಬಾಹ್ಯರಾಗಿಯೆ ಚರಿಸುತಿಪ್ಪ ಕುಬುದ್ಧಿಗಳಿರ ಅಬದ್ಧಚರಿತರಿರ (ಬಸವು. ೫೦–೪೭).
[ಅಬದ್ಧ + ಚರಿತ]

**ಅಬದ್ಧಭಾಷಣ** (ನಾ). ಅಸಂಬದ್ಧವಾದ ಭಾಷಣ; ತಪ್ಪು ಹೇಳಿಕೆ (೩). [ಅಬದ್ಧ + ಭಾಷಣ]

**ಅಬದ್ಧಮುಖ** (ಗು). ೧. ಬಾಯಿಗೆ ಬಂದಂತೆ ಮಾತಾಡುವ; ಹಿಡಿತವಿಲ್ಲದೆ ಮಾತಾಡುವ. (ನಾ). ೨. ಸುಳ್ಳುಗಾರ.
[ಅಬದ್ಧ + ಮುಖ]

**ಅಬದ್ಧಸಾಕ್ಷಿ** (ನಾ). ೧. ಸುಳ್ಳು ಸಾಕ್ಷಿ. ೨. ಸುಳ್ಳುಸಾಕ್ಷಿ ಹೇಳುವವನು (೩.) [ಅಬದ್ಧ + ಸಾಕ್ಷಿ]

**ಅಬನಸ**, ಅಬನಾಸಿ (ನಾ). ಒಂದು ಜಾತಿಯ ಮರ. ℙ ಕಪ್ಪಗೆ ಗಟ್ಟಿಯಾಗಿ ಇರುವ ಎಬೊನಿ ಎಂಬ ಮರ: ಬಾಳಾಯಿ (ತುಮ್ರಿ)–ಹಳೆಯ ಮರದ ಕಟ್ಟಿಗೆಯೊಳಗಿನ ಗಂಡು ಕರೆದಾಗಿ ಅಬನಸದ ಹಾಗೆ ಇರುತ್ತದೆ (ಕಭಾಗೆ. ೪೪). **ಅಬನಾಸಿ** (ಮೈಔಗಿ. ೩೧–೬೦೧). [< ಇಂ. Ebony]

**ಅಬನಾಸಿ** 'ಅಬನಸ' ನೋ.

**ಅಬಬ** 'ಅಬ್ಬ$_3$' ನೋ.

**ಅಬಬಾ** 'ಅಬ್ಬ$_3$' ನೋ.

**ಅಬರಂಗ** (ನಾ). ೧. (ಉಕ). ಕಾಗೆ ಬಂಗಾರ; ಅಭ್ರಕ: ಅಬರಂಗದಂಗ ಐತಿ ಅನುಭಾವ ಅದಕೆ ಬೇಕು ಪದರ ಎಬ್ಬಾವ (ಲಾವಣಿ). ೨. ತುಂಗೆ (ಭದ್ರಮುಸ್ತೆ) ಗೆಡ್ಡೆಯಿಂದ ಮಾಡಿದ ಒಂದು ಬಗೆಯ ಸುವಾಸನೆಯುಳ್ಳ ಪುಡಿ: ಮುತ್ತೇನು ಮೆಣಸೇನು, ಲಾವಂಗವೋ ಕುದುರೇನು ಹವಳೇನು ಅಬರಂಗವೊ (ಗಂಗಾತ. ೫೫–೧೭).
[< ಸಂ. ಅಭ್ರಕ]

**ಅಬರು** 'ಆಬರು' ನೋ.

**ಅಬರೂ** 'ಆಬರು' ನೋ.

**ಅಬರೂಗೇಡಿ** 'ಆಬರುಗೇಡಿ' ನೋ.

**ಅಬರೆ** (ನಾ). ಒಂದು ಬಗೆಯ ಹುರುಳಿ (?): ಅಬರೆಯಂ ಅವುಡಲದ ಎಣ್ಣೆಯಲ್ಲಿ ಒಂದು ದಿನ ನೆನೆಯಿಸಿ ದೀವಿಗೆಯನ್ನು ಹೊತ್ತಿಸಿ ತಣಿಗೆಯಲ್ಲಿ ಹಿಡಿಯಲು ತೈಲವು ಬರುವುದು, ಆ ತೈಲದ ... ರಸವನ್ನಿಕ್ಕಿ ಮರ್ದಿಸುವುದು (ವಿನ್ವೈವಿ. ೧೪೪).
[?. / ತುಳು. ಅಬರೆ = ಒಂದು ಬಗೆಯ ಹುರುಳಿ]

**ಅಬಲ**, ಅಬಳ (ಗು). ೧. ಬಲವಿಲ್ಲದ; ದುರ್ಬಲವಾದ: ಕ್ಷೀರವಾರಿಧಿಯೆಲ್ಲಮನೊರ್ಮೊದಲೊಳೆ ಪೊಯ್ವಂತೆ ಪೊಯ್ದು ಪಯಃಪ್ರವಾಹಮಂ ಬಾಲಕನಬಲಂ ಸೈರಿಸನೆಂಬ (ಶಾಂತಿಪು. ೧೦–೪೨ ವ). (ನಾ). ೨. ಬಲಹೀನತೆ. **ಅಬಳೆ**: ೧. ನಾವು ಸಾಕ್ಷಿಗಳಬಳರೆಂದೇ ನೀವು ನೃಪತಿಯ ತೊಡೆಯನುಡಿದಿರಿ (ಕುವ್ಯಾಗ. ೮–೨೪). [ಸಂ.]

**ಅಬಲು** 'ಅವಲ್' ನೋ.

**ಅಬಲೆ** (ನಾ). ೧. ಬಲಹೀನೆ. ೨. ಹೆಂಗಸು: ಅಂಭೋಜಾಸ್ಯೆ ಕೇಳೆಂದ ಬಲೆಗೆ ನುಡಿದಂ (ಮುದತಿ. ೧೦–೭೮); ಅಂಜರು ಅಳುಕರು ರಮಣಾಭಿಮುಖಿಯರು ಅಬಲೆಯರಭಿಸಾರಿಕೆಯರು (ಇಂಚಾಪ. ೧೨೧–೯೩).
[ಸಂ. ಅಬಲಾ]

**ಅಬಳ** 'ಅಬಲ' ನೋ.

**ಅಬಳುಜಬಳು** 'ಅಬಡಜಬಡ' ನೋ.

**ಅಬಜಿ** (ನಾ). ಒಂದು ಊರಿನ ಹೆಸರು (?): ಬಿರುದ ಹೊಗಳಿಸಿಕೊಂಬ ಅಬಜಿಯ ಭಯಿರಣನಾಯಕರು ಪರದಳಕೆ ಯೆದಿರಾಗಿ (ಕಇ. I, ೬೭–೧೩; 1494). [?]

**ಅಬಾ** 'ಅಬ್ಬ$_3$' ನೋ.

**ಅಬಾಗೇಡಿ** (ನಾ). ತಿಳಿವಳಿಕೆ ಸಾಲದವನು; ದಡ್ಡ (ಸ್ಯಾಂಡರ್). [?]

**ಅಬಾಡ**, ಅಬಾಡು$_1$ (ನಾ). = ಅಬಂಡ (೩). **ಅಬಾಡು$_1$** (೩).

**ಅಬಾಡು$_1$** 'ಅಬಾಡ' ನೋ.

**ಅಬಾಡು$_2$**, ಅಬಾಡೆ (ಗು). ೧. ಕೆಲಸಕ್ಕೆ ಬಾರದ; ವ್ಯರ್ಥವಾದ. (ನಾ). ೨. ವರ್ತಕರು ಎಣ್ಣೆ ಮುಂತಾದ ಪದಾರ್ಥಗಳನ್ನು ತೂಗಿ ಕೊಡುವಾಗ ತಂದಿರುವ ಪಾತ್ರೆಗಳ ತೂಕಕ್ಕೆ ಸಮನಾಗಿ ಹಾಕಿ ಕಟ್ಟುವ ದಡ; ಭಾರದಾಣಿ; ಕಾಣಿ (ಉಕ. ೩). **ಅಬಾಡೆ೧**: (ಸ್ಯಾಂಡರ್).

ಅಬಾಡು ಅಂಗಿ = ಅಳತೆ ಮೀರಿದ ಅಂಗಿ; ಬೇಕಾದ ಅಳತೆಗಿಂತಲೂ ಹೆಚ್ಚು ದೊಡ್ಡದಾದ ಅಂಗಿ; ಸಡಿಲವಾದ ಅಂಗಿ (೩). **ಅಬಾಡುಕಟ್ಟು** = ತಕ್ಕಡಿಯಲ್ಲಿ ಎಣ್ಣೆ ಮುಂತಾದವುಗಳನ್ನು ತೂಗುವಾಗ ಗಿರಾಕಿ ತಂದಿರುವ ಪಾತ್ರೆಯ ಸಮಕ್ಕೆ ದಡ ಕಟ್ಟು; ಕಾಣಿಹಾಕು. **ಅಬಾಡುತೂಕಮಾಡು** = ಅಬಾಡುಕಟ್ಟು.
[?. / ಮರಾ. ಅಭಂಡ]

**ಅಬಾಡುವಜ್ಜೆ** (ನಾ). ದೊಡ್ಡ ಹೊರೆ, —ಮೂಟೆ (೩).
[ಅಬಾಡು$_1$ + ವಜ್ಜೆ$_0$]

**ಅಬಾಡೆ** 'ಅಬಾಡು$_2$' ನೋ.

**ಅಬಾಧ** (ಗು). ತೊಂದರೆಯಿಲ್ಲದ; ನಿರ್ವಿಘ್ನವಾದ; ಬಾಧಕವಿಲ್ಲದ; ಸ್ವತಂತ್ರವಾದ. [ಸಂ.]

**ಅಬಾಧಿತ** (ಗು). ಬಾಧಿತವಲ್ಲದ; ಅಡೆತಡೆಯಿಲ್ಲದ: ಒಂದು ಅಕೃತ್ರಿಮವಾದ ಅನುವಾದ ಅನಾಯಾಸವಾಗಿ ಒದಗಿ ಬರುವುದಕ್ಕೆ ವಸ್ತುವಿನ ಅಬಾಧಿತವಾದ ವ್ಯಾಪಕತೆ ಎಷ್ಟುಮಟ್ಟಿಗೆ ಕಾರಣವೋ (ವೀರಯೋ. VI).
[ಸಂ.]

**ಅಬಾಧಿತ್ವ** (ನಾ). ಹಿಂಸೆಗೆ ಒಳಗಾಗದೆ ಇರುವುದು; ತೊಂದರೆಯಿಲ್ಲದಿರುವುದು: ಜರಾಮುಯವ್ಯಾಬಾಧಾಬಾಧಿತ್ವಮುಂ... ತನಗನುಸಂಗತಮಾಗೆ (ಶಾಂತಿಪು. ೧೦–೯೪). [ಸಂ.]

**ಅಬಾಲ** (ಗು). ೧. ಬಾಲಕನಲ್ಲದ; ವಯಸ್ಸಾದ. ೨. ಎಳೆಯದಲ್ಲದ; ಬಲಿತ: ಮೂಲಕಂ ಬಾಲಂ ದೋಷಹರಮಬಾಲಂ ದೋಷಕರಂ (ಶಾಂತಿಪು. ೮–೧೨೪ ವ). [ಸಂ.]

**ಅಬಾಲ್ಯಗ್ರಹ** (ನಾ). "ದುರ್ಬಲಗ್ರಹ" (ಜಾತತಿ. ಪರಿ. ೩). [ಸಂ.]

**ಅಬಾಸ** (ಗು). ಕೀಳಾದ; ಹೀನವಾದ; ಅಸಹ್ಯವಾದ.

ಅಬಾಸದ **ಅರ್ಥ** = ವಿಪರೀತವಾದ ಅರ್ಥ (ಉಕ. ೩). **ಅಬಾಸದ ಮಾತು** = ಹೊಂದದಂತಹ ಮಾತು.
[← ತೆಲು. ಆಭಾಸ < ಸಂ. ಆಭಾಸ ?]

**ಅಬಾಸಿಗ** (ನಾ). ಕೀಳು ಸ್ವಭಾವದ ಮನುಷ್ಯ; ಒರಟ; ನಯವಿನಯಗಳಿಲ್ಲದವನು (ಸ್ಯಾಂಡರ್). [ಅಬಾಸ + -ಇಗ]

**ಅಬಾಸು** (ನಾ). ಕೆಟ್ಟನಾತ; ದುರ್ವಾಸನೆ; ಅಸಹ್ಯವಾದ ವಾಸನೆ (ಉಕ. ೩). [← ತೆಲು. ಆಭಾಸು < ಸಂ. ಆಭಾಸ ?]

**ಅಬಿಂದು** (ನಾ). ಸೊನ್ನೆಯಿಲ್ಲದಿರುವ ಶಬ್ದರೂಪ: ಅರೆಬರ್ ತಡಗಾಡೆಂಬಂತಬಿಂದುವುಮನಾಚರಿಪರ್ (ಶಮದ. ೧೬೩). [ಸಂ.]

**ಅಬಿಂದುಕ** (ನಾ). = ಅಬಿಂದು: ಕೆಲವು ಪದಂಗಳ್ ಸ್ವಭಾವದಿಂ ನಿತ್ಯಬಿಂದುಗಳ್ ಕೆಲವು ಪದಂಗಳ್ ವಿಕಲ್ಪದಿಂ ಸಬಿಂದುಕಮಬಿಂದುಕಮಾಗಿರ್ಪುವು (ಶಮದ. ೩೬ ವೃತ್ತಿ). 'ಸಬಿಂದುಕ' ಪರಾ. [ಸಂ.]

**ಅಬಿಲಾಸೆ** (ನಾ). ಅಪೇಕ್ಷೆ; ಆಸೆ; ಬಯಕೆ (೩).
[ಸಂ. ಅಭಿಲಾಷಾ]

**ಅಬಿಳೆವಾಳೆಲು** (ನಾ). ಒಂದು ಗಿಡದ ಹೆಸರು: ಅಕ್ಷಿಕಾ – ಹತ್ತಿಗೆ, ಅಬಿಳೆವಾಳೆಲು, ನುಲಿಗನ ಕಾಯಿ (ಓಷಧಿ. ೪). [?]

**ಅಬುಕಾರ** (ನಾ). ದನಕರುಗಳ ಮೈಗೆ ಹತ್ತಿಕೊಳ್ಳುವ ಧೂಳಿನಲ್ಲಿರುವ ಒಂದು ಬಗೆಯ ಕೀಟ (ಕ). [?]

**ಅಬುಕಾರಿ** 'ಅಬ್ಕಾರಿ' ನೋ.

**ಅಬುಕಾರಿಗುತ್ತೆ** (ನಾ). ಮಾದಕದ್ರವ್ಯಗಳನ್ನು ತಯಾರಿಸಿ ಮಾರುವವರಿಂದ ತೆರಿಗೆ ವಸೂಲು ಮಾಡುವ ಏಕಾಧಿಕಾರ; ಹಕ್ಕಿನ ಗುತ್ತಿಗೆ (ಕ). [ಅಬುಕಾರಿ (< ಅಬ್ಕಾರಿ) + ಗುತ್ತೆ]

**ಅಬುಗು**, ಅವುಗು (ಕ್ರಿ). ಅಮುಕಿದರೆ ಒಳಕ್ಕೆ ಇಳಿಯುವಷ್ಟು ಮೆತ್ತಗಿರು; ತೆಳ್ಳಗೆ ತೋರು (ದಕ). **ಅವುಗು** (ಕ). [< ಅಮುಂಕು]

**ಅಬುಜ** (ನಾ). ೧. ತಾವರೆ; ಕಮಲ: ಅರಳಿದಬುಜದ ಸತ್ತಿಗೆಯ (ಕುವ್ಯಾಅ. ೫–೭); ಕರಕಂಜಾತಕ್ಕೆ ಪುಟ್ಟಿರ್ದಬುಜಮೆನಿಸೆ ಲೀಲಾಂಬುಜಂ (ರಾಜಶೇ. ೮–೫೨). ೨. ಶಂಖ. ೩. ಚಂದ್ರ. [ಸಂ. ಅಬ್ಜ]

**ಅಬುಜದೊಡರು** (ನಾ). ತಾವರೆ ಹೂವಿನ ಅಲಂಕಾರ, —ಒಡವೆ: ಕರಶೂಲಮಬುಜದೊಡರುಂ ನೇವುರಂ ಮೆಱೆವ ದೇವನೆಮ್ಮಂ ಸಲಹಲಿ (ಹಚಕಾ. ೧–೬). [ಅಬುಜ + ತೊಡರ್ಚು]

**ಅಬುಜಪಂಕ್ತಿ** (ನಾ). ತಾವರೆಯ ಸಾಲು; ಕಮಲಗಳ ಸಾಲು: ಉಡಿದ ಬೆಳುಗೊಡೆಯಬುಜಪಂಕ್ತಿಯ ಸಿಡಿದ ಚಮರಿಯ ಹಾವಸೆಯ (ಕುವ್ಯಾದ್ರೋ. ೧೩–೪). [ಅಬುಜ + ಪಂಕ್ತಿ]

**ಅಬುಜಭವ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಆ ರಜೋಗುಣಕಬುಜಭವನಧಿಕಾರಿ [ಪಾಠಾಂ. ನವಿಕಾರಿ] (ಕುವ್ಯಾಆ. ೧೪–೩೪). [ಅಬುಜ + ಭವ]

**ಅಬುಜಭವಾಂಡ** (ನಾ). ಬ್ರಹ್ಮಾಂಡ: ಸಿಡಿಲ ಕುಡುಹುಗಳಿಂದ ಕಮಲಜ ಹೊಡೆಯಲಬುಜಭವಾಂಡಭೇರಿಯ ಕಡುದನಿಗಳೆನಲೊದಱಿದವು ನಿಸ್ಸಾಳಕೋಟಿಗಳು (ಕುವ್ಯಾದ್ರೋ. ೧–೪೭). [ಅಬುಜಭವ + ಅಂಡ್ಯ]

**ಅಬುಜವ್ಯೂಹ** (ನಾ). ತಾವರೆ ಹೂವಿನ ಆಕಾರಕ್ಕೆ ನಿಲ್ಲಿಸಿದ ಸೈನ್ಯದ ರಚನೆ; ಪದ್ಮವ್ಯೂಹ: ಭೀಮಂಗೆ ಹರಣದ ಸಾಲಿಗರು ಸಂದಣಿಸಿತಬುಜವ್ಯೂಹದಗ್ರದಲಿ (ಕುವ್ಯಾದ್ರೋ. ೧೨–೨೭). [ಅಬುಜ + ವ್ಯೂಹ]

**ಅಬುಜಸಂಭವ** (ನಾ). = ಅಬುಜಭವ: ಅಬುಜಸಂಭವ ಶ್ರೀಪತಿಯ ಬೀಳ್ಕೊಂಡನುತ್ಸವದಿ (ಮೋಹತ. ೫–೧೯). [ಅಬುಜ + ಸಂಭವ]

**ಅಬುಜಾಂಡ** (ನಾ). ಬ್ರಹ್ಮಾಂಡ: ಶಾಂತನಂಜೇಶ ದಂಡಪ್ರಕಾಶನೆಂಬುತ್ತಮದ ಶಕ್ತಿಯಬುಜಾಂಡದೊಳು ಪೂರ್ಣಮಾಯ್ತು (ವೀಶೈಪು. ೨–೬–೨). [< ಸಂ. ಅಬ್ಜಜಾಂಡ]

**ಅಬುಜಾನನೆ** (ನಾ). ಕಮಲದಂತೆ ಮುಖವುಳ್ಳವಳು: ಅನುಗುಣಕೆ ಪಡಿಯೆನಿಸಿ ತನ್ನಂ ತನಯನಾಗಲ್ಕೊಂತಳಬುಜಾನನೆಯ ಸುಕೃತವನೇನನೆಂಬೆನು (ಬಸಪು. ೫–೫೭). [< ಸಂ. ಅಬ್ಜಾನನಾ]

**ಅಬುಜಾಸನ** (ನಾ). ತಾವರೆಯನ್ನು ಪೀಠವಾಗಿ ಉಳ್ಳವನು; ಬ್ರಹ್ಮ: ಅಬುಜಾಸನನ ಪೂರ್ವದ ಸೃಷ್ಟಿಯಲಿ (ತೊರರಾ. ೧–೩–೧೨). [< ಸಂ. ಅಬ್ಜಾಸನ]

**ಅಬುಜಿನಿ** (ನಾ). = ಅಬ್ಜಿನಿ: ಸುಳಿವಯಲರೆಳೆತಳಿರನಲುಗಿಸಿ ಕೊಳದುದಕವಲುಗಬುಜಿನಿಯ ಮುಸುಕೆಳೆದು ಸುರಭಿಯ ಸೆಳೆದು ನಿರಸದ ಕೋಶಗಳನೀಗ (ಬಿಜ್ಜಪು. ೧೯–೧೫). [< ಸಂ. ಅಬ್ಜಿನೀ]

**ಅಬುಜೋದರ** (ನಾ). ಹೊಕ್ಕುಳಲ್ಲಿ ತಾವರೆಯುಳ್ಳವನು; ವಿಷ್ಣು. [< ಸಂ. ಅಬ್ಜೋದರ]

**ಅಬುದ** (ನಾ). = ಅಬ್ದ: ಇರವು ಹನ್ನೆರಡಬುದ ವನದೊಳು (ಕುವ್ಯಾಸ. ೧೭–೮೩); ಅದವೆಂಟಬುದಂಗಳಿಬ್ಬರಿಗಾ ದಿನಕೆ (ತೊರರಾ. ೧–೩–೧೦); ಅದೊ ಆಬುದಶಬುದ ಬುದ್ಬುದವು ಒಡೆದು ಹುಸಿಸದ್ದು ಹೊರಡಬಹುದು (ಅರಳು. ೧೦೦). [< ಸಂ. ಅಬ್ದ]

**ಅಬುದಿ** 'ಅಬುಧಿ' ನೋ.

**ಅಬುಧಿ**, ಅಬುದಿ, ಅಬ್ಬುಧಿ (ನಾ). ಸಮುದ್ರ; ಕಡಲು: ಗಗನವಬುಧಿಗೆ ಸರಿ ಸರೋವರ (ಕುವ್ಯಾಅ. ೨೯–೩೯); ಬಳಿಯಲಬುಧಿಯ ನೆಗಳುಗಳು ಮೀನುಗಳು ಕೆದಱಿದುದಖಿಳ ದೆಸೆದೆಸೆಗೆ (ತೊರರಾ. ೪–೧೨–೩೫).

**ಅಬುದಿ**: ಕ್ಷೋಣಿಯೊಳೀ ಬಲ್ಪಿಸಿಲೆಂದೆ ಕಡುಗಾದ ಬಾಣಲಿಯೆಣ್ಣೆಯೊಳಬುದಿ ಹೂಣಿಸಿ ಕುದಿಗೊಂಡು ಮರಳ್ದುದು ವನಚರಶ್ರೇಣಿ ಬೆಂಡೆದ್ದು ತೇಲಿದುವು(ಮೋಹತ.೧೯–೪೫). **ಅಬ್ಬುಧಿ**: ವಿಜಯವಿಠ್ಠಲರೇಯ ಅಬ್ಬುಧಿವಾಸ ವಾದಾ ಹೆಬ್ಬಾಗೆ ಮಹಿಮೆ (ತೀರ್ಥಮ. ೨೨೯). [< ಸಂ. ಅಬ್ಧಿ]

**ಅಬುಬು** (ನಾ). ಆಕಾರ; ರೂಪ; ಅದ್ಭುತ(?): ತ್ರಿಭುವನಕೆಪೊಸತಾದ ನರಮೃಗದಬುಬು ತೋರ್ದನ ಕುಬ್ಜಕಾಯನ (ಅರ್ಜಾವಿ. ೧೮–೨೪). [?]

**ಅಬೆ** 'ಅಬ್ಬೆ' ನೋ.

**ಅಬೇಸ್**[1] (ನಾ). ಕದಿಯುವುದು; ಅಪಹರಣಮಾಡುವುದು.

ಅಬೇಸುಮಾಡು = ಕದಿ; ಎತ್ತಿಕೊಂಡು ಹೋಗು: ಅವರ ತಲೆ ಗೋಲನ್ ಮಾಡಿ, ಪತ್ರ ಅಬೇಸ್‌ಮಾಡಿ ಸುಳ್ಳು ರುಜು ಮಾಡಿಸಿಕೊಂಡು (ಮಾಂಗಲ್ಯ. ೫೪). [?]

**ಅಬೇಸ್**[2] (ಅ). ಭಾರವನ್ನು ಎತ್ತುವಾಗ ಉಚ್ಚರಿಸುವ ಶಬ್ದ. [?. / ತುಳು. ಅಬೇಸ್]

**ಅಬೊ** 'ಅಭೋ' ನೋ.

**ಅಬ್ಕಾರಿ** 'ಆಬ್ಕಾರಿ' ನೋ.

**ಅಬ್ಜ** (ನಾ). ೧. ನೀರಿನಲ್ಲಿ ಹುಟ್ಟಿದ್ದು; ತಾವರೆ; ಕಮಲ: ಅಬ್ಜಮುಂ ಬಿಸುಟತ್ಕೃತ್ತಮಮಿಂತುಟೆಂದು ಪಿರಿದುಂ ಸಂತೋಷದಿಂ ವಾಣಿ ಬಂದು ಸಮಂತಿರ್ಕೆ (ಜಗವಿ. ೧–೬). ೨. ಶಂಖ. ೩. ಚಂದ್ರ: ದಿನಪಾಬ್ಜಾರ ಬುಧಾಮರೇಜ್ಯ ಸಿತಮಂದಾಹೀಂದ್ರಕೇತುವ್ರಜಂ (ಪುಷ್ಪಪು. ೮–೬೪). ೪. ರತ್ನ; ಮುತ್ತು. ೫. ಐರಾವತ. ೬. ಧನ್ವಂತರಿ. ೭. ಲಕ್ಷ್ಮಿ. ೮. ನೀರಂಜಿ ಮರ; ನಿಚುಲ ವೃಕ್ಷ. ೯. ನೂರು ಕೋಟಿ (ಸಂಖ್ಯೆ): ಸದ್ಯಕ್ಕೆ ಈ ಹಣವು ಆರು ಅಬ್ಜದವರೆಗೆ ಏರಿರುತ್ತದೆ (ಇಂಗ್ಲಂಡ. ೧೮೫). ೧೦. ಪಚ್ಚಕರ್ಪೂರ: "ಸುಧಾಕರ ಕಂಜಂ ಮಣಿ ಪಾಂಚಜನ್ಯ ಸಿರಿ ಶಕ್ರೇಭಂಗಳಬ್ಜಾಹ್ವಯಂ" (ನಾನಾರ. ೧೨೫); "ಶಶಿ ಶಂಖ ರತ್ನ ಸಿರಿ ಸತಿ ಬಿಸಜಂ ಸುರದಂತಿಯಾರುಮಬ್ಜವೆಸರ್ಗಳ್" (ನಾನಾಕಂ. ೧೪೮). [ಸಂ.]

**ಅಬ್ಜಕರ** (ನಾ). ೧. ತಾವರೆಯನ್ನು ಕೈಯಲ್ಲಿ ಹಿಡಿದವನು; ಸೂರ್ಯ. ೨. ಶಂಖವನ್ನು ಕೈಯಲ್ಲಿ ಉಳ್ಳವನು; ವಿಷ್ಣು. [ಅಬ್ಜ + ಕರ್ನ]

**ಅಬ್ಜಕರ್ಣಿಕೆ** (ನಾ). ಕಮಲದ ಹೂವಿನ ನಡುವೆ ಇರುವ ಬೀಜಕೋಶ. [ಅಬ್ಜ + ಕರ್ಣಿಕೆ]

**ಅಬ್ಜಗಂಧಿ** (ನಾ). ಕಮಲದ ಹೂವಿನಂತೆ ಸುಗಂಧವುಳ್ಳವಳು; ಪದ್ಮಿನಿ ಜಾತಿಯ ಹೆಂಗಸು. [ಸಂ.]

**ಅಬ್ಜಗರ್ಭ** (ನಾ). ತಾವರೆಯ ಗರ್ಭದಲ್ಲಿ ಹುಟ್ಟಿದವನು; ಬ್ರಹ್ಮ: ನಿನಗಕ್ಕೆಮ ಅಬ್ಜಗರ್ಭನಾಯುಂ ಶ್ರೀಯುಂ (ಶಮುದ. ೫೭ ಪ್ರಯೋ). [ಅಬ್ಜ + ಗರ್ಭ]

**ಅಬ್ಜಜ** (ನಾ). = ಅಬ್ಜಭವ: ಬಣ್ಣಿಸಲರಿದಬ್ಜಜಂಗಮಾಕೆಯ ರೂಪಂ (ಕಾವ್ಯಸಾ. ೨೪೧; ಶೂದ್ರಕ). [ಸಂ.]

**ಅಬ್ಜಜಠರ** (ನಾ). = ಅಬ್ಜೋದರ : ಧರಣಿಯನವಯವದಿಂದಮೆ ಪರಿಪಾಲಿಸಲೆನ್ನ ಭುಜಮೆ ಸಾಲ್ವುದು ಹಸ್ತ್ಯಶ್ವರಥಪದಾತಿಬಲಂ ನೃಪಪರಿಕರಮೆಂಬಬ್ಜಜಠರನೇಂ ಮೆಯ್ಗಲಿಯೋ (ಶಾಂತಿಪು. ೨-೧೩).
[ಅಬ್ಜ + ಜಠರ]

**ಅಬ್ಜದಲ, ಅಬ್ಜದಳ**(ನಾ). ಕಮಲದ ಎಸಳು; ತಾವರೆಹೂವಿನದಳ. **ಅಬ್ಜದಳೆ** : 'ಅಬ್ಜದಳನೇತ್ರೆ' ಪರಾ. [ಅಬ್ಜ + ದಲ]

**ಅಬ್ಜದಲನೇತ್ರೆ, ಅಬ್ಜದಳನೇತ್ರೆ** (ನಾ). ಕಮಲದ ಎಸಳನ್ನು ಹೋಲುವ ಕಣ್ಣುಳ್ಳವಳು. **ಅಬ್ಜದಳನೇತ್ರೆ** : ನಿನ್ನತಿಸಾಂಗ ಭಕ್ತಿಗೆ ಮೆಚ್ಚಿದೆವು ನಾವಬ್ಜದಳನೇತ್ರೆ (ಬಸವು. ೫೭-೬೧).
[ಸಂ. ಅಬ್ಜದಲನೇತ್ರಾ]

**ಅಬ್ಜದಳೆ** 'ಅಬ್ಜದಲ' ನೋ.

**ಅಬ್ಜದಳನೇತ್ರೆ** 'ಅಬ್ಜದಲನೇತ್ರೆ' ನೋ.

**ಅಬ್ಜಪತ್ರಮಣಿ** (ನಾ). ಕಮಲದಬೀಜ : ಅಬ್ಜಪತ್ರಮಣಿ ಚೂಡಾರತ್ನಮೆಂಬೀ ವನಾಂತರಸಂಜಾತಮನಾತನೋಲಗಿಸಿದಂ (ಪುಷ್ಪಪು. ೫-೧೦೨). [ಅಬ್ಜ + ಪತ್ರ + ಮಣಿ]

**ಅಬ್ಜಪ್ರಸರ** (ನಾ). ಕಮಲಗಳ ಗುಂಪು; ತಾವರೆಗಳ ಸಮೂಹ: ದಳಿತಾಬ್ಜಪ್ರಸರಂ ಸರಂ (ಜಗವಿ. ೨-೨). [ಅಬ್ಜ + ಪ್ರಸರ]

**ಅಬ್ಜಬಂಧು** (ನಾ).= ಅಬ್ಜಬಾಂಧವ: ತ್ರಿದಶಮಹೀಶ್ವರ ಖೇಚರಸದಸ್ಸರೋಜಾಕರಾಬ್ಜಬಂಧುಗೆ ಮುದದಿಂ ಪದೆದೆಱಗಿ (ಶಾಂತಿಪು. ೧-೯೨).
[ಅಬ್ಜ + ಬಂಧು]

**ಅಬ್ಜಬಾಂಧವ** (ನಾ). ತಾವರೆಯ ನಂಟ; ಸೂರ್ಯ: ಜನ್ಮದಲಿ ಸಪ್ತಾಧಿಕದೊಳಿದ್ದರು ಸೌರಿಗುರು ಭೌಮಾಬ್ಜಬಾಂಧವರು (ಕುವ್ಯಾಸ. ೧೩-೩). [ಅಬ್ಜ + ಬಾಂಧವ]

**ಅಬ್ಜಭವ** (ನಾ). ತಾವರೆಯಲ್ಲಿ ಹುಟ್ಟಿದವನು; ಬ್ರಹ್ಮ.
[ಅಬ್ಜ + ಭವ]

**ಅಬ್ಜಭವಾಂಡ** (ನಾ). ಬ್ರಹ್ಮಾಂಡ. [ಅಬ್ಜಭವ + ಅಂಡ]

**ಅಬ್ಜಮಿತ್ರ** (ನಾ). ಕಮಲದ ಗೆಳೆಯ ; ಸೂರ್ಯ: ಪರಮಾರ್ಥಂ ಪರಿಪಾಲನಕರದಿಂದಪರಾಜಿತಾಬ್ಜಮಿತ್ರಂ ಕಳೆದಂ . . . ಶೋಕ ಹಿಮಜಲಲವಮಂ (ಶಾಂತಿಪು. ೧-೯೫). [ಅಬ್ಜ + ಮಿತ್ರ]

**ಅಬ್ಜಮುಖಿ** (ನಾ). ತಾವರೆಯಂತೆ ಮುಖವುಳ್ಳವಳು.
[ಸಂ. ಅಬ್ಜಮುಖೀ]

**ಅಬ್ಜಯೋನಿ** (ನಾ). ತಾವರೆಯಲ್ಲಿ ಹುಟ್ಟಿದವನು; ಬ್ರಹ್ಮ: ಒರ್ಬನಂ ಸುರಗುರು ಕಾಂತೆಯೊಳ್ನೆಱೆದನೆಂದೆನುತೋರ್ವನನಬ್ಜಯೋನಿ ನಿರ್ಜರ ಸಭೆಗೆ ಬಹಿಷ್ಕೃತರುಮೆಂದೆನುತಂ (ತ್ರಿಪುವಿ. ೮-೨೩).
[ಅಬ್ಜ + ಯೋನಿ]

**ಅಬ್ಜರಜ** (ನಾ). ಕಮಲದ ಪರಾಗ: ಪರಿಸ್ಫುರಿತಭುಜಮಜಿತಮಿಳಿಪಿದುದರುಣಾಬ್ಜರಜಃಪಿಶಂಗಿತೋರ್ಮಿಯ ಚೆಲ್ವಂ (ರಾಜಶೇ. ೧೪-೧೩೦).
[ಅಬ್ಜ + ರಜ]

**ಅಬ್ಜವದನೆ** (ನಾ). = ಅಬ್ಜಮುಖಿ : ನವಮಾಸವಿರಾಮದೊಳಬ್ಜವದನೆ ಶುಭದಿನಮುಹೂರ್ತದೊಳ್ (ಸುಕುಮಾ. ೫-೪೪). [ಸಂ. ಅಬ್ಜವದನಾ]

**ಅಬ್ಜವನ** (ನಾ). ತಾವರೆಯ ವನ; ಕಮಲ ಸಮೂಹ.
[ಅಬ್ಜ + ವನ]

**ಅಬ್ಜವಾಸಿನಿ** (ನಾ). ಕಮಲದಲ್ಲಿ ವಾಸಿಸುವಳು; ಲಕ್ಷ್ಮಿ.
[ಸಂ. ಅಬ್ಜವಾಸಿನೀ]

**ಅಬ್ಜವಾಹನ** (ನಾ). ಚಂದ್ರನನ್ನು ಧರಿಸಿರುವವನು; ಶಿವ.
[ಅಬ್ಜ + ವಾಹನ]

**ಅಬ್ಜವಿರೋಧಿ** (ನಾ). ಅಬ್ಜಾರಿ : ವದನಾಬ್ಜವಿರೋಧಿಯನಾ ಬಿದುವಂ ಕೆಳೆಗೊಂಡು (ರಾಜಶೇ. ೫-೮೮).
[ಅಬ್ಜ + ವಿರೋಧಿ]

**ಅಬ್ಜವಿಷ್ಟರ** (ನಾ). ತಾವರೆಯನ್ನು ಪೀಠವಾಗಿ ಉಳ್ಳವನು; ಕಮಲಾಸನ; ಬ್ರಹ್ಮ: ಸುಕವಿಕಾವ್ಯಮನಾಲಿಸಿ ಕಾಯ್ವ ದುರ್ಜನಪ್ರಕರದ ಕರ್ಣಕೋಟರಮನೇಕೆಯೊ ಮಾಡಿದನಬ್ಜವಿಷ್ಟರಂ (ಪಂರಾಮಾ. ೧-೩೧). [ಅಬ್ಜ + ವಿಷ್ಟರ]

**ಅಬ್ಜವೈರಿ** (ನಾ). = ಅಬ್ಜವಿರೋಧಿ. [ಅಬ್ಜ + ವೈರಿ]

**ಅಬ್ಜಶರ** (ನಾ). ಕಮಲದ ಹೂವನ್ನು ಬಾಣವಾಗಿ ಉಳ್ಳವನು; ಮನ್ಮಥ. [ಅಬ್ಜ + ಶರ]

**ಅಬ್ಜಷಂಡ** (ನಾ). ೧. ತಾವರೆಗಳ ಗುಂಪು. ೨. ತಾವರೆಯ ಗುಂಪನ್ನುಳ್ಳದ್ದು; ಸರೋವರ: ತ್ರೈಲೋಕ್ಯಲಕ್ಷ್ಮೀಮಣಿಮುಕುರಮೆನಲ್ ಚೆಲ್ವದಾಯ್ತಬ್ಜಷಂಡಂ (ಕಾದಂಪೂ. ೬೩೪).
[ಅಬ್ಜ + ಷಂಡ]

**ಅಬ್ಜಸಂಭವ** (ನಾ). = ಅಬ್ಜಭವ : ಕವಿತಾಪ್ರೌಢಿಯೊಳಬ್ಜಸಂಭವನೆ ಕರ್ತಾರಂ ಕ್ರಿಯಾಕೌಶಲಂ (ಶಮುದ. ಪು. ೨೧೭). [ಅಬ್ಜ + ಸಂಭವ]

**ಅಬ್ಜಸಖ** (ನಾ). = ಅಬ್ಜಮಿತ್ರ. [ಅಬ್ಜ + ಸಖ]

**ಅಬ್ಜಹಿತ** (ನಾ). = ಅಬ್ಜಮಿತ್ರ. [ಅಬ್ಜ + ಹಿತ]

**ಅಬ್ಜಾಕರ** (ನಾ). ತಾವರೆಯ ನೆಲೆ, —ಕೊಳ : ಅಳಿಸಂಕುಲನಿನದಮೊಗೆದುದಬ್ಜಾಕರದೊಳ್ (ಕಾದಂಪೂ. ೧೪೬). [ಅಬ್ಜ + ಆಕರ]

**ಅಬ್ಜಾಕ್ಷ** (ನಾ). ೧. ಕಮಲವನ್ನು ಹೋಲುವ ಕಣ್ಣುಳ್ಳವನು. ೨. ವಿಷ್ಣು : ನೀನಳವಡಿಸಿದ ಕಾರ್ಯವಿಧಾನಂಗಳಿವೆಮಗೆ ಪೊಸತೆ ಪೇಟಬ್ಜಾಕ್ಷ(ಜಗವಿ. ೧-೬೫). [ಸಂ. (ಅಬ್ಜ + ಅಕ್ಷಿ + –)]

**ಅಬ್ಜಾತ** (ನಾ). = ಅಬ್ಜ : ಶಿಷ್ಯನ ಕರಾಬ್ಜಾತ ಮಧ್ಯದೊಳಿರಿಸಿ ಗುರು ತತ್ಪ್ರಾಣದೊಳಮರ್ಚಿ (ಬಸವು. ೩೯-೧೪). [ಸಂ.]

**ಅಬ್ಜಾನನೆ** (ನಾ). ಕಮಲದಂತೆ ಮುಖವುಳ್ಳವಳು.
[ಸಂ. ಅಬ್ಜಾನನಾ]

**ಅಬ್ಜಾಯತನೇತ್ರ** (ನಾ). ತಾವರೆಯಂತೆ ವಿಸ್ತಾರವಾದ ಕಣ್ಣುಳ್ಳವನು: ಪ್ರತಿಪಾಲಿತ ಧರ್ಮಚಕ್ರನಬ್ಜಾಯತ ನೇತ್ರನಾದಿಪುರುಷಂ (ಗದಾಯು. ೧-೧). [ಅಬ್ಜ + ಆಯತ + ನೇತ್ರ]

**ಅಬ್ಜಾರಿ** (ನಾ). ತಾವರೆಯ ಶತ್ರು; ಚಂದ್ರ : ಹೈಮತ್ಕಾಶ್ಯಾಬ್ಜ ಪಟ್ಟರಣ ನಿರ್ಮರಣ ಧೂಮಧ್ವಜಾಬ್ಜಾರಿ ಸಪ್ತಾಶ್ವನೇತ್ರ (ಪ್ರೌಢರಾ. ೧೧-೧).
[ಅಬ್ಜ + ಅರಿ]

**ಅಬ್ಜಾಸನ** (ನಾ). = ಅಬ್ಜವಿಷ್ಟರ: ಪೂಣ್ದಬ್ಜಾಸನಂ ಪ್ರೀತಿ ಕೈಮಿಗೆ ದೈತ್ಯಾಂತಕನಾಮದಿಂದೆಸೆವ ಲಕ್ಷ್ಮೀವಲ್ಲಭಂಗೆತ್ತಿದಾ ಗಗನಚ್ಛತ್ರದ ಹೇಮದಂಡಮೆನಿಸಲ್ ಸಾಲ್ದತ್ತು ಹೇಮಾಚಲಂ (ಜಗವಿ. ೧-೨೫).
[ಅಬ್ಜ + ಆಸನ]

**ಅಬ್ಜಾಸನೆ** (ನಾ). ಕಮಲವನ್ನು ಪೀಠವಾಗಿ ಉಳ್ಳವಳು; ಲಕ್ಷ್ಮಿ: ಅಬ್ಜಾಸನೆಯಂ ನ್ಯಗಾಕ್ಷಿ ಬೆಳಗಪ್ಪ ಜಾವದಾಗಳ್ ಕಂಡಳ್ (ಶಾಂತಿಪು. ೯-೨೦೨). [ಸಂ. ಅಬ್ಜಾಸನಾ]

**ಅಬ್ಜಾಹಿತ** (ನಾ). = ಅಬ್ಜಾರಿ : ಅಬ್ಜಾಹಿತನಿಂ ಕಳಾನಿಧಿಕುಮಾರಂ ಪುಟ್ಟುವಂ ನಿಶ್ಚಯಂ (ರಾಜಶೇ. ೪-೨೯). [ಅಬ್ಜ + ಅಹಿತ]

**ಅಬ್ಜಿನಿ** (ನಾ). ೧. ತಾವರೆಯ ಬಳ್ಳಿ : ನಂಜುರುಳಿಯಂ ಪೋ ನುಂಗಿದಳ್ ಪೇಟಿದಬ್ಜಿನಿಯೆಂಬಂತೆ ಪೊಲಾಯ್ತು ಕುಟ್ಮಳಿತ ಕಂಜಾತೋದರೇಂದಿಂದಿರಂ (ಚಂದ್ರಪು. ೮-೧೫). ೨. ತಾವರೆಯ ವನ; ಕಮಲದ ಗುಂಪು. [ಸಂ. ಅಬ್ಜಿನೀ]

**ಅಬ್ಜಿನೀಕಾಂತ** (ನಾ). = ಅಬ್ಜಿನೀಪತಿ: ಚಂದ್ರಧರಾರ್ಧದೇಹಯುತೆಯಂ ಬಾಲಾಬ್ಜಿನೀಕಾಂತಸದ್ಯುತಿಯಂ (ರಾಜಶೇ. ೧-೪).
[ಸಂ. (ಅಬ್ಜಿನೀ + ಕಾಂತ)]

**ಅಬ್ಜಿನೀಪತಿ** (ನಾ). ತಾವರೆಯ ಒಡೆಯ; ಸೂರ್ಯ.
[ಸಂ. (ಅಬ್ಜಿನೀ + ಪತಿ)]

**ಅಬ್ಜಿನೀವರ** (ನಾ). = ಅಬ್ಜಿನೀಪತಿ: ಅಬ್ಜಿನೀವರನಭಿಧಾನಮಂ ತಳೆದ ಭೂರುಹವೊಪ್ಪುಗುಮಾ ವನಾಂತದೊಳ್ (ರಾಜಶೇ. ೫-೫೭).
[ಸಂ. (ಅಬ್ಜಿನೀ + ವರ)]

**ಅಬ್ಜೆ** (ನಾ). ನೀರಿನಲ್ಲಿ ಹುಟ್ಟಿದವಳು; ಮಹಾಲಕ್ಷ್ಮಿ.
[ಸಂ. ಅಬ್ಜಾ]

**ಅಬ್ಜೋದರ** (ನಾ). ೧. ಉದರದಲ್ಲಿ ಕಮಲವನ್ನುಳ್ಳವನು; ವಿಷ್ಣು; ಪದ್ಮನಾಭ. ೨. ಆಕಾಶ: ೧, ೨ ದಂತವಕ್ತ್ರಂ ನಿಸರ್ಗವೈರದಿಂದಸುರವೈರಿಯ ಪೆಸರ್ಗಳೆ ತನಗಸಹ್ಯಂಗಳಾಗೆ ಹರಿನಾಮಯುಕ್ತನೆಂದು ಶಕ್ರನನಾಕ್ರಮಿಸಿಯುಂ . . . ಅಬ್ಜೋದರಮೆಂದು ಗಗನಮಂ ಗರವಟಿಸಿಯುಂ ಮಾಣದೆ (ಜಗವಿ. ೯-೫೩). [ಅಬ್ಜ + ಉದರ]

**ಅಬ್ಜೋದ್ಭವ** (ನಾ). = ಅಬ್ಜಭವ: ಕಡಲಂ ಪೀರ್ದನಗಸ್ತ್ಯನೆಂಬ ಪುರುಡಿಂ ಮತ್ತೊಂದನಬ್ಜೋದ್ಭವಂ ಪಡೆದಂ ಪೆರ್ಗಡಲಂ (ಕಾದಂಪೂ. ೧೧೬). [ಅಬ್ಜ + ಉದ್ಭವ]

**ಅಬ್ದ₁** (ನಾ). "ಸಂಶಯ": (ವಿಸ್ತೋಸು. ಕೋಶ); ದಯಪೂರ್ಣನಮಗೆ ವಿಜಯವಿಠ್ಠಲದತ್ತ ಜಯ ಕೊಡುವುದು ಪೊಲಿದು ಬಿಡಬ್ದ ಅಬ್ಧಾ (ವಿಸ್ತೋಸು. ೧೩-೫).
[← ಪಾರ. ಅಬ್ದ = ಅಸಂಬದ್ಧವಾದ ಮಾತು; ತಿಳಿಗೇಡಿತನದ ಮಾತು; ಸುಳ್ಳು.]

**ಅಬ್ದ₂** (ನಾ). ೧. ನೀರನ್ನು ಕೊಡುವಂಥದು; ಮೋಡ: ಕಡುಗರ್ಪಿಡಿದೆರಡಬ್ದದ ನಡುವೆ ಬೆಡಂಗಿಡಿದು ತೊಳಗಿ ಪೊಳೆವೆಳಮಿಂಚೊಂದೆಡೆವುಗುವ ತೆಱದಿನೆರಡಿಭದೆಡೆವುಗೆ ಮಣಿಕುಂಡಲಾಭಿಧಾನಂ ಖಚರಂ (ಶಾಂತಿಪು. ೬-೮೩). ೨. ವರ್ಷ; ಸಂವತ್ಸರ: ವಿಜಯಾಬ್ದಂ ನೆಗೞ್ದಂದು ಮಾರ್ಗಶಿರ ಶುದ್ಧೈಕಾದಶೀವಾಸರಂ (ಅಜಿಪು. ೧೨-೫೨). ೩. ಕೊನ್ನಾರಿಗೆಡ್ಡೆ; ಗೇಕಿನ ಗೆಡ್ಡೆ. [ಸಂ.]

**ಅಬ್ದಕಾಲ** (ನಾ). ಮಳೆಗಾಲ: ಒಂದು ದೆವಸಮಂತರಿಸದೆ ಮಾಗಿಯೊಳಬ್ದಕಾಲದೊಳ್ ಭೂಮಿಯೊಳಂ ಪದನಱಿತು ನೀರನೆತ್ತುಗೆ ಬಲ್ಲರ್ (ಲೋಕೋಪ. ೬-೮). [ಅಬ್ದ₂ + ಕಾಲ]

**ಅಬ್ದರವ** (ನಾ). ಮೇಘಧ್ವನಿ; ಗುಡುಗು: ಮಂಗಳವಾದ್ಯಮಬ್ದರವಮುಣ್ಮುವ ಮಿಂಚಹದು ದೀಪಮಾಲೆ (ರಾಜಶೇ. ೮-೧೧೮).
[ಅಬ್ದ₂ + ರವ]

**ಅಬ್ದಾಗಿರಿ** (ನಾ). ದೇವತೆಯ ಉತ್ಸವಕಾಲದಲ್ಲಿ ಹಿಡಿಯುವ ಒಂದು ಬಗೆಯ ಛತ್ರಿ: ನಂದಿಧ್ವಜ, ಚೌರಿ, ಚಾಮರ, ಖಿರಾಬು, ಅಬ್ದಾಗಿರಿಗಳನ್ನು ಉಗ್ರಾಣದಿಂದ ಹೊರಕ್ಕೆ ತಂದು ಧೂಳು ಕೊಡಹಬೇಕು (ಬೆಳುಮ. ೩). 'ಅಪ್ತಾಗಿರಿ' ಪರಾ.
[← ಮರಾ. ಅಬದಾಗೀರ್; ಪಾರ. ಆಫ್ತಾಬ್‌ಗಿರಫ್ತನ್]

**ಅಬ್ದೌಘ** (ನಾ). ೧. ಮೋಡಗಳ ಸಮೂಹ; ಮೇಘಪಂಕ್ತಿ. ೨. ಗೇಕಿನ ಗೆಡ್ಡೆಯ ಗುಂಪು: ಎಸೆದತ್ತೆತ್ತಂ ದವೋಗ್ರಾಗ್ನಿದಗ್ಧಳತಾವ್ರಾತಮುಪಾಸ್ತಮೇಘಮುದಿತಾಬ್ದೌಘಂ (ಪಂಚತಂ. ೧೨೮-೨೩).
[ಅಬ್ದ + ಓಘ]

**ಅಬ್ದ್ರವ್ಯ** (ನಾ). ನೀರಿನಲ್ಲಿ ಹುಟ್ಟಿದ ಮುತ್ತು ಮೊದಲಾದ ರತ್ನದ್ರವ್ಯ. 'ಅಬ್ದ್ರವ್ಯಪಣ್ಯ' ಪರಾ. [ಸಂ.]

**ಅಬ್ದ್ರವ್ಯಪಣ್ಯ** (ನಾ). ನೀರಿನಲ್ಲಿ ಹುಟ್ಟಿದ ವಸ್ತುಗಳ ವ್ಯಾಪಾರಿ: ರವಿ . . . ಝುಷದೊಳಿರೆ ಪುಟ್ಟಿದವನಬ್ದ್ರವ್ಯಪಣ್ಯನಕ್ಕುಂ (ಜಾತತಿ. ೧೭-೧೭). [ಅಬ್ದ್ರವ್ಯ + ಪಣ್ಯ]

**ಅಬ್ಧ** (ನಾ). "ಮಂದಮತಿ" (ವಿಸ್ತೋಸು, ಕೋಶ); ಸುಯತಿಗಳು ನುಡಿದ ಶಬ್ದಾಪಯಳಾಯಂ ತಿದೆ ನೋಡಬ್ಧಾ (ವಿಸ್ತೋಸು. ೧೩-೫). [?]

**ಅಬ್ಧಿ** (ನಾ). ೧. ನೀರು ನೆಲೆಯಾಗಿ ನಿಲ್ಲುವ ಸ್ಥಳ; ಸಮುದ್ರ; ಸಾಗರ. ೨. ನಾಲ್ಕು ಎಂಬ ಸಂಖ್ಯೆಗೆ ಕೊಡುವ ಒಂದು ಸಂಕೇತ. ☞ ಕೆಲವು ವೇಳೆ ಏಳು ಎಂಬ ಸಂಖ್ಯೆಗೂ ಈ ಸಂಕೇತವುಂಟು. ನಾನಾರ್ಥರತ್ನಾಕರ, ನಾನಾರ್ಥಕಂದ ಇವುಗಳಲ್ಲಿ ಸಂಸ್ಕೃತದಲ್ಲಿ ಪ್ರಸಿದ್ಧವಲ್ಲದ ಇನ್ನೂ ಕೆಲವು ಅರ್ಥಗಳಿವೆ: "ಬಯಕೆಯೊಳದ್ವೈತದೊಳ್ ವಾರ್ಧಿಯೊಳ್ ಶ್ರೀ ಸತಿಯೊಳ್ ತಾನಬ್ಧಿಯಕ್ಕುಂ" (ನಾನಾರ. ೯೦); "ಸಿರಿಬಯಕೆ ನಿಯತತತ್ತ್ವಂ ಶರಧಿಯೊಳೈದಬ್ಧಿಶಬ್ದ" (ನಾನಾಕಂ. ೧೧೬). [ಸಂ.]

**ಅಬ್ಧಿಕಫ** (ನಾ). ಸಮುದ್ರದ ನೊರೆ. [ಅಬ್ಧಿ + ಕಫ]

**ಅಬ್ಧಿಜ** (ಗು). ಸಮುದ್ರದಲ್ಲಿ ಹುಟ್ಟಿದ. (ನಾ). ೨. ಚಂದ್ರ. [ಸಂ.]

**ಅಬ್ಧಿಜೆ** (ನಾ). ಸಮುದ್ರದಲ್ಲಿ ಹುಟ್ಟಿದವಳು; ಲಕ್ಷ್ಮಿ. [ಸಂ. ಅಬ್ಧಿಜಾ]

**ಅಬ್ಧಿನಂದನ** (ನಾ). ಸಮುದ್ರಪುತ್ರ; ಚಂದ್ರ: "ಅಬ್ಧಿನಂದನಂ ದ್ವಿಜರಾಜನೆನೆ ಸುಧಾಂಶುವೆನಿಕ್ಕು" (ಮಂಗರಾ. ೧೧-೪). [ಅಬ್ಧಿ + ನಂದನ]

**ಅಬ್ಧಿನವನೀತಕ** (ನಾ). ಸಮುದ್ರದ ಬೆಣ್ಣೆಯಂಥವನು; ಚಂದ್ರ.
[ಅಬ್ಧಿ + ನವನೀತಕ]

**ಅಬ್ಧಿಪ** (ನಾ). ಜಲರಾಶಿಗೆ ಒಡೆಯ; ವರುಣ; ಸಮುದ್ರರಾಜ: ನೃವಾಹಮಂ ನೈರುತಿಯಬ್ಧಿಪಂ ಮಕರಮಂ ಮೃಗಮಂ ಪವನಂ ವಿಮಾನಮಂ ಮಾರಹರಪ್ರಿಯಂ ವೃಷಭನಂ ಹರನೇಱಿ ನಭಕ್ಕೆ ಸಲ್ಗುಗುಂ (ಜಗವಿ. ೧-೩೬). [ಸಂ.]

**ಅಬ್ಧಿಪರೀತ** (ಗು). ಸಮುದ್ರದಿಂದ ಸುತ್ತುವರಿಯಲ್ಪಟ್ಟ; ಕಡಲು ಸುತ್ತಿದ: ವಿಷ್ಣುಗೆ ಭಕ್ತಿಯಿಂದಗ್ರಪೂಜೆಯನೀವುದಬ್ಧಿಪರೀತಭೂತಳವಲ್ಲಭಾ (ಪಂಚತಂ. ೨೩೬-೧೧). [ಅಬ್ಧಿ + ಪರೀತ]

**ಅಬ್ಧಿಶಯನ** (ನಾ). ಸಮುದ್ರದಲ್ಲಿ ಮಲಗಿದವನು; ವಿಷ್ಣು.
[ಅಬ್ಧಿ + ಶಯನ]

**ಅಬ್ಧಿಶಾಯಿ** (ನಾ). = ಅಬ್ಧಿಶಯನ. [ಸಂ. ಅಬ್ಧಿಶಾಯಿನ್]

**ಅಬ್ಬ₁** 'ಅಬ್ಬೆ' ನೋ.

**ಅಬ್ಬ₂** (ನಾ). ತಂದೆ: "ಜನಕನಲ್ಲಬ್ಬಂ" (ಕರ್ಣಾನಿ. ೮೮); ಇನಿತಟಲುಮಿನಿತು ಮಱುಕಮುಮಿನಿತು ಮನಃಕ್ಷತಮುಮಾವನಿಂದಾದುದವಂಗಿನಿತಟಲನಿನಿತು ಮಱುಕಮನಿನಿತು ಮನಃಕ್ಷತಮನಬ್ಬ [ಪಾಠಾಂ. ಬ್ಬೆ] ಮಾಡದೆ ಮಾಣೆಂ (ಕಾವ್ಯಾವ. ೩೫೬); ಚಾರ್ವಾಕ ನೀನು ಕಾರ್ಮಿಕರ ಗಂಡ, ಧಾರ್ಮಿಕರ ಮಿಂಡ ಅಬ್ಬಾ (ಅರಳು. ೪೨೯).
[?. / ತೆಲು. ಅಬ್ಬ = ತಂದೆ]

**ಅಬ್ಬ₃**, ಅಬಬ, ಅಬಬಾ, ಅಬಾ, ಅಬ್ಬಬ್ಬಾ, ಅಬ್ಬಾ₂ (ಅ). ಆಶ್ಚರ್ಯ ಮೆಚ್ಚಿಕೆಗಳನ್ನು ಸೂಚಿಸುವ ಅವ್ಯಯ: ಅಬ್ಬ ಎಷ್ಟು ದೊಡ್ಡ ಹಣ್ಣು ಇದು (ರೂಢಿ). **ಅಬಬ** (೬). **ಅಬಬಾ** (ಜಾನಕೋ. ೧೨). **ಅಬಾ** (ಸ್ಯಾಂಡರ್). **ಅಬ್ಬಬ್ಬಾ**: ಅಬ್ಬಬ್ಬಾ ಏನು ಬಿಸಿಯಪ್ಪ ಇದು (ರೂಢಿ). **ಅಬ್ಬಾ₂**: ಅಬ್ಬಾ ಏನು ಶಬ್ದ (ರೂಢಿ). [?. / ತುಳು. ಅಬಾ, ಅಪಾ]

**ಅಬ್ಬಗೆ** (ನಾ). ಆರೀತಿ; ಅಬಗೆ: ಎಲೊ ಸ್ವಾಮಿ ಕುರಿವಂದು ಕೊಬ್ಬಲು ಕುರುಬಂಗೆ ಲಾಭವೆಂಬ ಅಬ್ಬಗೆ ಹ್ಯಾಗೊ ಏನೊ ನಿರ್ಧರ ಮಾಡಲರಿಯೆ (ಮೋಕ್ಷದೀ. ೧೯೯). [ಅದು + ಬಗೆ]

**ಅಬ್ಬಬ್ಬಾ** 'ಅಬ್ಬ'₃ ನೋ.

**ಅಬ್ಬರ$_1$**, ಅಬ್ಬರು (ನಾ). ೧. ಆರ್ಭಟ; ಗಟ್ಟಿಯಾದ ಕೂಗು; ರಭಸವುಳ್ಳ ಧ್ವನಿ: ಘುರುಘುರಿಸಲ್ ಘೋರಘೋಣವಿವರಂ ಕಿಳಿರಬ್ಬರದಿಂ ತೀವಿದುದಾಶಾಂತರಮಂ ಜವದಿಂದೆ ಗರುಡನಂತರ್ಜಿಪವೋಲ್ (ಕಾದಂಪೂ. ೪೫೨); ಘುಳುಘುಳಿಸುವ ವೀರವೃಂದದ ಘುಡುಘುಡಿಸುವ ಡೌಡೆಯ ಕೋಳಾಹಳದಬ್ಬರಮುಬ್ಬರಮಾಗೆ (ಗಿರಿಕ. ೬–೫೫ ವ); ತುದಿಬೆರಳ ತುಟಿಯಬ್ಬರಕೆ ಗಜ ಬೆದರಿ . . . ಹೊಕ್ಕನಿವರೊಡ್ಡಿನಲಿ ಕಲಿಭೀಮ (ಕುವ್ಯಾಕ. ೨–೧೪); ಜೀಯ ನೀ ಬೆಸಸೆಂಬ ಜೋದರಬ್ಬರಗಳೊಪ್ಪಿದುವು (ಕಂನವಿ. ೮–೪೧); ಅವನ ಅಬ್ಬರ ಹೇಳತೀರದು (ರೂಢಿ). ೨. ಅತಿಶಯ; ಹೆಚ್ಚಿಗೆ: "ಇರದುಬಟ್ಟೆಯಬ್ಬರಮಣಿಯರ ನೆರೆಮಿಾಂಟೆನ್ನಲತಿಶಯಾರ್ಥಂ" (ಕವಿಕಂ. ೧೨೦); ಬಗೆಯೆ ನಿಮ್ಮಡಿಗಳ್ಗೆ ದೂರವಪ್ಪಂ ದೇವ ಕಾಮದ [ಪಾಠಾಂ. ದು]ಬ್ಬರವಲ್ಲಿ ಕೋಪದಬ್ಬರ [ಪಾಠಾಂ. ದುಬ್ಬಟ್ಟೆ] ವಲ್ಲಿ (ನಂಬಿರ. ೧–೬೧); ಲೇಸು ಲೇಸಬ್ಬರದ ಬಿರುದಿನ ಧರ್ಮನಿಷ್ಠರು ಪಾಂಡುಸುತರೆಂದ (ಕುವ್ಯಾದ್ರೋ. ೧೪–೧೪); ಒತ್ತಬರದಾಹವದ ಸೈನಿಕದತ್ತಣಿತ್ತಣ ಬೊಬ್ಬೆಯಬ್ಬರವೆತ್ತುತಿರ್ದುದು ಕಮಲಜಾಂಡ ಕಟಾಹ ಖರ್ಪರವ (ತೊರರಾ. ೬–೧೮–೧೧). ೩. ಪರಾಕ್ರಮ: "ಅದಟಬ್ಬರ ಪರಾಕ್ರಮಕ್ಕೆ" (ಕಶರ. ೮). ೪. ಅಧಿಕಾರದ ದರ್ಪ. (ಉಕ). **ಅಬ್ಬರು**: ೧. ಗೊಂಬೆಗಿಟ್ಟ ಬೆಲ್ಲ ತಂದುಕೊಡಲು ಪುಟ್ಟ ವಾಸು ಎಂಥ ಅಬ್ಬರು; ಒಳಗೆ ಎಂಥ ಅಬ್ಬರು (ತುಂಟಪ. ೩೩).

**ಅಬ್ಬರಂಬರಿ** = ಆರ್ಭಟವಾಗು; ಗದ್ದಲವಾಗು: ಪುರದೊಳಗಬ್ಬರಂಬರಿಯೆ ತಾನದನಾಲಿಸಿ ಸತ್ಯಭಾಮೆಯೀ ಸರಭಸಮೇನೆನಲ್ಕೆ (ಮಹಾನೇ. ೬–೩೩). **ಅಬ್ಬರಗೂಡು** = ಆರ್ಭಟದಿಂದ ಕೂಡು: ಕೊಂಬು ಕಾಹಳೆ ರಾಯಭೇರಿ ಬುರುಗು ಬಲುದೊಂಬುಳಿಯಬ್ಬರಗೂಡಿ (ಕಂನವಿ. ೧೫–೨೩). **ಅಬ್ಬರಮಾಡು** = ಆರ್ಭಟಮಾಡು: ಎಲ್ಲರ ಇದಿರಿನಲ್ಲೂ ಅಬ್ಬರಮಾಡಿ ಅಳುತ್ತಾಳೆ (ಹೊಸಕ್ಷಿ. ೧೯೬).

[< ಸಂ. ಆರ್ಭಟ? / ತುಳು. ಅಬ್ಬರ = ಜಂಭ, ದರ್ಪ; ತೆಲು. ಅಬ್ಬರ = ಅಪಾರ, ಅಮಿತ]

**ಅಬ್ಬರ$_2$** (ನಾ). ಆಕಾಶ: ಮತ್ತಿಬ್ಬರವನಿಗಂಜಿ ಅಬ್ಬರದಲಾವಾಗ ಸುಳಿವರು (ಲಕ್ಷ್ಮೀಶೋ. ೨೬). [< ಸಂ. ಅಭ್ರ]

**ಅಬ್ಬರಂಗೆಯ್** (ಕ್ರಿ). ಅಬ್ಬರಿಸು; ಆರ್ಭಟಮಾಡು: ಆಗಳಾ ಕೊಳನಂ ಬಳಸಿ ಬಂದು ನಿರ್ಭರಮಾಗಿ ಬೊಬ್ಬಿರಿದಬ್ಬರಂ [ಪಾಠಾಂ. ದಾರ್ದುಭರಂ]ಗೆಯ್ದು (ಗದಾಯು. ೬–೧ ವ).

[ಅಬ್ಬರ$_1$ + ಗೆಯ್ (< ಕೆಯ್$_1$)]

**ಅಬ್ಬರಣೆ** (ನಾ). ಗಟ್ಟಿಯಾದ ಕೂಗು; ಗದ್ದಲ; ಆರ್ಭಟ: ತೊಟಿಲ್ವ ಭಟರ್ಕಳಬ್ಬರಣೆ ಕುಂಜರ ಬೃಂಹಿತಮಶ್ವಹೇಷಿತಂ . . . ಕಿವಿಗೆಯ್ತರಲ್ (ದಶಕು. ೫–೧೯); ಓಲಗದೊಳಬ್ಬರಣೆ ಮಸಗಿತು ಕದಡಿತಾಸ್ಥಾನ (ಕುವ್ಯಾಉ. ೪–೪೦); ನಿಜನಿಳಿಲು ನಿಟಿಲೆಂಬಬ್ಬರಣೆ ಗಬ್ಬರಿಸೆ ದಿಗುತಟವ (ತೊರರಾ. ೧–೧೫–೪೧); "ಸ್ವತಂತ್ರರು, ನಾವು ಸ್ವತಂತ್ರರು" ಎಂಬ ಅಬ್ಬರಣೆಯು ದುರ್ಗದಲ್ಲೆಲ್ಲ ಮೊಳಗಿತು (ಘಾಟಿಮು. ೪೧). ಅಬ್ಬರ ಹೋ.

[ಅಬ್ಬರ$_1$? + –ಅಣೆ$_3$]

**ಅಬ್ಬರತಾಳ** (ನಾ). ರಭಸ; ಬಿರುಸು: ಅವನ ಸುದ್ದೈವಕ್ಕೆ ಆದೇ ನಾಲ್ಕು ದಿನಗಳಲ್ಲಿ ಮಳೆಯ ಅಬ್ಬರತಾಳ ತಗ್ಗಿತು (ಸ್ವಪ್ನಹೊ. ೯೪).

[ಅಬ್ಬರ$_1$ + ತಾಳ (= ತಾಲ)]

**ಅಬ್ಬರತುಬ್ಬರ** (ನಾ). "ಕ್ಷುಬ್ಧ, ಮೇಲೆ ಕೆಳಗೆ" (ಜೀವಲ. ಕೋಶ); ಒಬ್ಬರನ ಕಂಡರ ಒಬ್ಬರ ಮನಸು ಅಬ್ಬರತುಬ್ಬರ ಆಗತೈತಿ. ಇಬ್ಬರ ಕೂಡಿ ಬದುಕಿನ ಹಬ್ಬ ಮಾಡಿಲ್ಲ ಭರಪೂರಾ (ಜೀವಲ. ೪೩).

[ಅಬ್ಬರ$_0$ + ತುಬ್ಬರ$_0$]

**ಅಬ್ಬರದೋಱಿಸು** (ಕ್ರಿ). ಗಟ್ಟಿಯಾಗಿ ಧ್ವನಿಮಾಡು; ಆರ್ಭಟಮಾಡು: ಬಿಲುಗಳನೇಱಿಸಿದರೆಡಬಲದಲಬ್ಬರದೋಱಿಸುತ ನಡೆತಂದರ ಡವಿಯಲೊಂದು ಯೋಜನವ (ತೊರರಾ. ೩–೧೨–೧೪).

[ಅಬ್ಬರ$_1$ + ತೋಱಿಸು]

**ಅಬ್ಬರಬಡಕ** (ನಾ). ಯಾವಾಗಲೂ ಅಬ್ಬರಮಾಡುವ ಸ್ವಭಾವದವನು: 'ಕೆಲವರು ಪ್ರಕೃತಿಯ ಗುಣ' ಎನ್ನುತ್ತಿದ್ದರು, ಪಿತ್ತದ ಪರಿಣಾಮವೆಂದರು, ಅಬ್ಬರಬಡಕನೆಂದರು (ಸಶೂರ. ೮೩).

[ಅಬ್ಬರ$_1$ + ಬಡಕ (< ಬಡಿಕ)]

**ಅಬ್ಬರಿಗ** (ನಾ). ಆರ್ಭಟ ಮಾಡುವವನು; ಆಡಂಬರಕಾರ: ದೊರೆಯೊಡನೆ ತಲೆಯೊತ್ತಿ ಮುರಿದಬ್ಬರಿಗನುಬ್ಬಿದ ಸಮರದಲಿ ನಿಬ್ಬರದ ಬೆಱಗಿನೊಳಿದ್ದರೈ (ಕುವ್ಯಾಕ. ೨೦–೩). [ಅಬ್ಬರ$_1$ + –ಇಗ]

**ಅಬ್ಬರಿಸು$_1$** (ಕ್ರಿ). ೧. ಗಟ್ಟಿಯಾಗಿ ಧ್ವನಿಮಾಡು; ಆರ್ಭಟಿಸು; ಗರ್ಜಿಸು: ಕೊಂದನಿವನೆನ್ನ ತಂದೆಯನೆಂದಬ್ಬರಿಸಲ್ಕೆ ಕೇಳ್ದು ನರಪತಿಯವನಂ ಬಂಧಿಸಿ (ಧರ್ಮಪ. ೩–೧೨); ವಾಯುಸುತನಬ್ಬರಿಸೆ ಗಾಳಿಯ ಘಾಯ ಮೇಘದ ಮೇಲೆ ಬಿದ್ದವೊಲಾಯಿತು (ಕುವ್ಯಾದ್ರೋ. ೧೩–೨೯); ಮೇಲೆ ಮೇಲಬ್ಬರಿಸಿದವು ನಿಸ್ಸಾಳತತಿ (ತೊರರಾ. ೬–೫–೮೫); ಬದ್ಧ ಭ್ರುಕುಟಿತರಾಗಿ ಮಾಸ್ತರರು ಅಬ್ಬರಿಸಿ ಹೇಳಿದರು (ರಂಗರೋ. ೪).

[ಅಬ್ಬರ$_1$ + –ಇಸು$_3$]

**ಅಬ್ಬರಿಸು$_2$** (ಕ್ರಿ). ಆವರಿಸು; ಹರಡು; ವ್ಯಾಪಿಸು: ನೆಲನನಬ್ಬರಿಸುವ ಸಭಾಕಳಕಳದ ಮೊರೆಯನು ತಿಳಿವ ಪರಿವೆಗ್ಗಳದ ಪಾಯವಧಾರು ಮಸಗಿದುದೊಂದು ಥಟ್ಟನಲಿ (ಕುವ್ಯಾಆ. ೬–೨೫); ಅಬ್ಬರಿಸಿತವರಿಗಂ ಮೇಲೆ ಕೃಷ್ಣನ ಮಾಯೆ (ತುರಂಗ. ೮೮–೫). [ಅಬ್ಬರ$_0$ + –ಇಸು$_3$]

**ಅಬ್ಬರು** 'ಅಬ್ಬರ$_1$' ನೋ.

**ಅಬ್ಬಲಿಗ** 'ಅಬ್ಬೊಲಿಗೆ' ನೋ.

**ಅಬ್ಬಲಿಗೆ** 'ಅಬ್ಬೊಲಿಗೆ' ನೋ.

**ಅಬ್ಬಲೂರು** (ನಾ). ಒಂದು ಊರಿನ ಹೆಸರು: ಸೋಮನಾಥದೇವರ್ಬೆಸಸಿದಂದೇಕಾಂತದ ರಾಮಯ್ಯನಬ್ಬಲೂರ ಬ್ರಹ್ಮೇಶ್ವರ ಸ್ಥಾನದೊಳು ನಿಸ್ಪೃಹವೃತ್ತಿಯಿಂದಯಿರೆ (ಎಇ. V, ೨೪೭–೩೩; ಸು. 1200).

[ಅಬ್ಬಲ್? + ಊರು]

**ಅಬ್ಬವ್ವೆ** (ನಾ). ಒಬ್ಬಾಕೆಯ ಹೆಸರು: ಮಾಧವಯ್ಯ ದಣ್ಣಾಯಕರು ಶ್ವಶುರೇಶ್ರೀ ಅಬ್ಬವ್ವೆಯರು (ಎಕ. V, ಹಾಸನ. ೬೧–೩೪; 1218).

[ಅಬ್ಬ$_1$ (< ಅಬ್ಬೆ$_1$) + ಅವ್ವೆ]

**ಅಬ್ಬಸವ** (ನಾ). (?): ಬಣ್ಣರಸರಾ ಕೊಟ್ಟುದು ಅಣ್ಣಾರ್ಥಿಗಳ ಅಬ್ಬಸವ ಧರ್ಮ್ಮಭಟಾರಗ್ಗೆ ಮಹಾಜನ ಪ್ರಜೆಯಾ ಸನ್ಮತದೆ ಕೊಟ್ಟದು (ಸೌಇಇ. IX-i, ೪೮–೫; 900). [?]

**ಅಬ್ಬಳಕೆ** (ನಾ). ಅಭ್ಯಾಸ; ಚಟ: ಅಭ್ರಮಿ ಶಿವೈಕ್ಯನೊರ್ವ ಅಬ್ಬಳಕೆಯಿಂದ ಜೂಜಾಡಿ ಸೋಲುತ ಗೆಲುತ ದುರ್ಬೆಸನವ್ಯಾಪ್ತಿಯೊಳು ಪಕ್ಕಾಗಿ (ಸಿಂಗಿರಾ. ೯–೨೦, ೨೧). [ಅದು + ಬಳಕೆ?]

**ಅಬ್ಬಳಿಕೆ** (ನಾ). ಓಕರಿಕೆ; ವಾಂತಿ (ದಕ. ಕ). [< ಉಬ್ಬಳಿಕೆ]

**ಅಬ್ಬಳಿಗ** (ನಾ). ಒಂದು ನಾಡಿನ ಹೆಸರು: ಅಬ್ಬಳಿಗನಾಡೊಳಗಣ ವಾಸುದೇವನಹಳ್ಳಿ (ಎಕ. V, ಹಾಸನ. ೪೦–೧೧; 1663). [?]

**ಅಬ್ಬಾ$_1$** 'ಅಬ್ಬೆ$_1$' ನೋ.

**ಅಬ್ಬಾ$_2$** 'ಅಬ್ಬ$_3$' ನೋ.

**ಅಬ್ಬಾಗಿಲು** (ನಾ). ಒಂದು ಊರಿನ ಹೆಸರು (?): ಮಾವಿನಹಳ್ಳಿಯ ಹಾರು ಅಬ್ಬಾಗಿಲ ತ್ರಿಸಂಧಿಯ ಲೊಕ್ಕಿಯ ಪಡುವ ನೆಟ್ಟ ಕರಿಯ ಕಲ್ಲು (ಎಕ. III, ತಿರುಮ. ೬೪–೮೭; 1397). [? + ಬಾಗಿಲು (< ಬಾಗಿಲ್)]

**ಅಬ್ಬಿ₁** 'ಅರ್ಬಿ' ನೋ.

**ಅಬ್ಬಿ₂** (ನಾ). = ಅಬ್ಬೆ₁ : ದೇವರ ದಾಸಯ್ಯನ ಅಬ್ಬಿಗಳ್ ಚಾತುರ್ವ್ವರ್ಣ್ಣ ಶ್ರವಣ ಸಂಘಕಾಧಾರರಪ್ಪ ಚಾಮುಕಬ್ಬೆಗಳ ನಿಸಿಧಿಗೆ (ಎಕ. XV, ಹೊಳೆನ. ೬೭-೬ ; 850). [?]

**ಅಬ್ಬಿದೊಱೆ** (ನಾ). ಒಂದು ಊರಿನ ಹೆಸರು : ನಿಡುಗುಂದ ಹಳ್ಳಿಗಳು ಸಹಿತ ಅಬ್ಬಿದೊಱೆ ತಗರೆ ನಾಡೆರಡು ಹಸುಡೆಗಳು ಹಳ್ಳಿಸಹಿತ (ಎಕ. V, ಬೇಲೂರು. ೭೧-೨೩೩ ; 1117).

[ಅಬ್ಬಿ₁ (< ಅರ್ಬಿ) + ತೊಱೆ₂]

**ಅಬ್ಬು₁** (ಕ್ರಿ). ೧. ಶಕ್ಯವಾಗು ; ಸಾಧ್ಯವಾಗು ; ನಿಲುಕು : ಕರಣದವರುಸುರಲಮ್ಮರು ದೇವಲಿಪಿ ನರರ್ಗಬ್ಬ [ಪಾಠಾಂ. ವ, ರ್ವ]ದೆಂತೆಸಗುವ್ವೆ ನೀನಿದಕ್ಕನುಮಾನವೇನು (ಸಿಂಗಿರಾ. ೭-೧೫) ; ಉಸುರಬಾರದ ಮಂತ್ರ ಊಹೆಗಬ್ಬದ ತಂತ್ರ ಮಿಸುಕಬಾರದ ಜಸಂ ಮಿಸುಗಲಾರದ ಹಸಂ (ವೆಂಕಾರಾ. ೪-೯-೨೫) ; ಈರ್ಬಗೆ ಕಾರ್ಯದಲ್ಲಿ ನಿನ್ನ ನಿನ್ನವರ ಯತ್ನ ಅಬ್ಬಿತೇನೊ ನೋಡು ಗುಣಿಸಿ ಎಣಿಸಿ (ವಿಸಾಸು. ೮೮-೧). ೨. ಸಿಕ್ಕು ; ದಕ್ಕು ; ಒಳಪಡು : ಕೃತಸುಕೃತಪರಿಪಾಕಫಲರೂಪ ರಾಮುಮೂರುತಿಯು ನಮಗಬ್ಬಿದುದು (ವೆಂಕಾರಾ. ೪-೧೩-೨೭) ; ಕೈಗಬ್ಬಿದಾ ಕುಸುಮಗಳ ಬಾಣವೆಂದೊಡವಾನೂ (ಶ್ರೀಕೃಪಾ. ೫೮) ; ಮನಸು ಹಬ್ಬಿಸಿ ನಿನ್ನ ಪಾದದಲಿ ರತಿಯಿಡಿಸಿ ಅಬ್ಬಿದ ಜ್ಞಾನದಲ್ಲಿ ಪೊರೆಯೆಂದೆನೊ (ಮೋಕ್ಷದೀ. ೧೯೯) ; ಬೇಡವೆಂಬೆವು ? ಏನು ಫಲ ? ಜನ ನಮ್ಮ ಅಂಕೆಗೆ ಅಬ್ಬರು (ಮೂಕವು. ೮). ೩. ಆಶ್ರಯಿಸು ; ಅವಲಂಬಿಸು : ಅಬ್ಬಪಾಣಿ ನಮ್ಮ ವಿಜಯ ವಿಠ್ಠಲರೇಯ ಅಬ್ಬಿದವರಿಗೆ ಪ್ರಾರಬ್ಧ ತೀರಿಸಿಬಿಡುವೆ (ಮೋಕ್ಷದೀ. ೫೭) ; ನೀರಬೊಬ್ಬುಳಿ ತೆರನಂತೆ ದೇಹಸಿದ್ಧ ಅಬ್ಬಿದನತಿಸ್ಮರಣೆ ಮಾಡಿ ಮುಕುತಿಗೈವ ನಿಬ್ಬಣದವರೊಡನೆ ಇಪ್ಪನು (ಮೋಕ್ಷದೀ. ೬೮). ೪. ತಿನ್ನು ; ಭಕ್ಷಿಸು(?): ಮಬ್ಬುಮೋಹಿಸಿತೆಲ್ಲರಂ ಮನಕೆ ಬಂದ ಪರಿ ಅಬ್ಬಿದರು ಭಕ್ಷ್ಯ ಭೋಜ್ಯಂಗಳಂ ವ್ಯಷ್ಟಾನ್ನಶಾಖಂಗಳಂ ಸವಿದರು (ತುರಂಗ. ೮೮-೫). ೫. ನೀಗು ; ಹೋಗಲಾಡಿಸು : ನಮಗ್ಯೆತಂದ ಕಷ್ಟಗಳಾ ಅಬ್ಬಿದವರಾರಿಲ್ಲ ಮನೆಯೊಳು ಹಬ್ಬಗ್ಯೆವಾಗಿರುವ ಸತ್ವಗಳುಬ್ಬಿತೋರುವರವನಿಪತಿ ಕೇಳೆಂದಳಿಂದುಮುಖಿ (ಜಿನಭಾ. ೪೯-೨೦). [← ತೆಲು. ಅಬ್ಬು]

**ಅಬ್ಬುಧಿ** 'ಅಬುಧಿ' ನೋ.

**ಅಬ್ಬೂಜಿ₁** (ನಾ). ೧. ಮಸಿ ; ಕಾಡಿಗೆ. ೨. ಬೂಜು ; ಬೂಷ್ಟು. [?]

**ಅಬ್ಬೂಜಿ₂** (ನಾ). ಜೇಡರಹುಳು (ಸ್ಯಾಂಡರ್).

ಅಬ್ಬೂಜಿಗೂಡು = ಜೇಡರಹುಳುವಿನ ಗೂಡು (ಸ್ಯಾಂಡರ್). [?]

**ಅಬ್ಬೆ₁**, ಅಬೆ, ಅಬ್ಬ₁, ಅಬ್ಬಾ₁ (ನಾ). ೧. ತಾಯಿ; ಅಮ್ಮ : ಬೈಯ್ಯೊರಬ್ಬೆಯ ಅಣ್ಮನ್ (ಎಕ. XII, ತುಮುಕೂ. ೯೩-೧೯; 780) ; [ಕೊನ್ದೋನವ]ನ್ತಮ್ಮಬ್ಬೆಯುನ್ತಂಗೆಯುಮ × × × ಮಾಡಿಕೊಣ್ಡೋ[೦] (ಸೌಇಇ. XI-i, ೭-೨೮ ; 837) ; ಪುರಂದರನರಸಿಯಯಂದುದಲೆನಗಬ್ಬೆಯೇ ತೊದಳ್ ನುಡಿಯದೆ ಪೋಗು (ಪಂಪಭಾ. ೮-೨೯) ; ಗಂಗನಬ್ಬೆಯು ನಂದಯಶಿಯಿವಸಾರೆನುತ ಕಾಯ್ದುಪಿಂಗದೊದೆದೊಡೆ (ಸಾಳ್ವಭಾ. ೧೧-೬೩) ; ಅಬ್ಬೆಗೆ ಮಗ ಬೇಡವೆಂದರೆ ಅಜ್ಜಿಗೆ ಮೊಮ್ಮಗನೇಕೆ (ನಾಡೋಜ. ೨೯೧). ೨. ಹೆಂಗಸರ ಹೆಸರಿನ ಕೊನೆಯಲ್ಲಿ (ಅಕ್ಕ, ಅವ್ವ, ಎಂಬಂತೆ) ಸೇರುವ ಮಾತು : ಮಗಳ್ ತೊಣ್ಡಬ್ಬೆಯು (ಎಕ. IX, ಬೆಂಗಳೂ. ೮೮-೩ ; 900) ; ಕುಮುದಬ್ಬೆಯ ದೇಗುಲದಿಂ ಬಡಗ ಪೋಗಿ (ಇಆ. XVIII, ೩೧೧-೧೮೩ ; 1100 ?) ; ಗುಣ್ಯೆಕಾಸ್ಪದೆ ಸುಗ್ಗಿಯಬ್ಬೆ (ಕಾವ್ಯಾವ. ೧೬೧). ಅಬ್ಬೆಗಳ್ (ಬಹುವ) ; ಅಯ್ಯಂಗಳ್ ಅಬ್ಬೆಗಳ್ (ಭಾಷಾಭೂ. ೩೪೨ ಉದಾ). **ಅಬೆ :** ೨. ಎಲೆಗೆ ಕುಂದಬೆ ಪಲದಿವಸದಿಂದಂ ನಿನ್ನಂ ಕಂಡೆನಿಲ್ಲ (ವಡ್ಡಾರಾ. ೪೪-೮) ; ಬಿದ್ದಿಯಬೆ ಮುದಕಿ ನೀ ದಿನ ಹೋದಾಕಿ ಬಲು ಜೋಕಿ (ಶರೀಫ. ೩೩). **ಅಬ್ಬ₁ :** ಪೆಂಡಿರಕಯ್ಯೊಳ್ ನಿಲಲಱಿವರೆ ಪೇೞಿಮಬ್ಬ [ಪಾಠಾಂ. ಬ್ಬೆ] ಗಂಡವಿಮುಕ್ತರ್ (ಅರ್ಧನೇ. ೧-೯೨) ; ನಗುತ ನಲವಿಂದ ಕೆಲಕೆ ಹಾರವ ನೂಂಕಿ ಮೊಗನೋಡುತಬ್ಬಬ್ಬ [ಪಾಠಾಂ. ತಿವ್ವವ್ವ] ಯೆನುತ ತೆಗೆದು ಮೇಲುದ ಮೊಲೆಯುಂಬೆಳೆವರೆಯದ ಮಗನ ನಾನೆಂದು ನೋಡುವೆನು (ಕುರಾಸಾಂ. ೭-೬೬). **ಅಬ್ಬಾ₁ :** ಅಬ್ಬಾ ನೀನೊರ್ವಳೆಯೆ ಪೆಱರಾರುಮಿಲ್ಲಿಂತುರಿಸಿಯರ್ಕಳ್ಗೆ ನಿಲಲಾಗದೆಂದು ಪೇೞ್ದು (ವಡ್ಡಾರಾ. ೮೯-೧೪) ; ಅಬ್ಬಾ ಪೇೞೀಪುರಕ್ಕೆ ಪೆಸರಾವುದಿದರ್ಕಧಿಪತಿ ಯಾರೆಂಬುದುಂ (ಪಂರಾಮಾ. ೭-೧೩೫ವ). [ಸಂ. ಅಂಬಾ ?. / ತುಳು. ಅಪ್ಪೆ]

**ಅಬ್ಬೆ₂** (ನಾ). ಸದರ ; ಹಗುರ : ಸರಕಾರದ ಉದ್ಯೋಗಸ್ಥರ ಅವಿವೇಕದಿಂದಲೂ ಅವರ ದುರಾಸೆಯಿಂದಲೂ ಇಂಥ ಅನಾಹುತ ನಡೆಯಿತೆಂದು ಎದುರೆದುರಿಗೆ ಜನರೆಲ್ಲ ಆಡಿಕೊಳ್ಳುವ ಮಟ್ಟಿಗೆ ಅಧಿಕಾರಿಗಳ ಬಾಳು ಅಬ್ಬೆಯಾಯಿತು (ಮಾಮುರಾ. ೨೭) ; ಅಪರಾಧ ಮಾಡಿದವನೆಂದು ತಿಳಿಯ ಬಂದಮೇಲೆ ವಿಚಾರಣೆ ಮಾಡದೆ ಬಿಡುವುದು ರಾಜಧರ್ಮವಲ್ಲ ಮತ್ತು ಪ್ರಜೆಗಳಲ್ಲಿ ಅಬ್ಬೆಯಾಗುವುದು (ಅದೂಟ. ೧೭೮). [?]

**ಅಬ್ಬೆ₃** (ನಾ). ಒಂದು ಜಾತಿಯ ಹುಳು : ಅಬ್ಬೆ ಕಡಿದರೆ ಹೆಬ್ಬಾಗಿಲ ತನಕ ಸುದ್ದಿ ಹೋಗದು (ಕನ್ನಗಾ. ೭). [?]

**ಅಬ್ಬೆ₄** (ನಾ). ಒಂದು ಜಾತಿಯ ಗಿಡ; ಪಾಚಿಯ ಗಿಡ; ಗಲಗು : "ವೇತಸಃ ರತಃ ಅಭ್ರಪುಷ್ಪಃ ವಿದುಳಃ ಶೀತಃ ವಾನೀರಃ ವಂಜುಲಃ-ಈ ೭ ಅಬ್ಬೆಯಮರ" (ನಾಚಿರಾ. ೧೦೬) ; ಅಬ್ಬೆಬೇರು ; ಹಿಪ್ಪಲಿ ಇವರ ಕಷಾಯವ ತುಪ್ಪವೆರಸಿ ಕೊಡಿಸಲು ತಾಪ . . . ಶೋಫೆ . . . ಪರಿಹರ (ವೈದ್ಯಸಾ. ೩೫೨). 'ಹಬ್ಬೆ' ಪರಾ. [ದೇ. ?]

**ಅಬ್ಬೆಸ** (ನಾ). ಅಭ್ಯಾಸ (ಕ).

[← / ತೆಲು. ತುಳು. ಅಬ್ಬೇಸ; ಅಬ್ಬೆಸ. < ಸಂ. ಅಭ್ಯಾಸ.]

**ಅಬ್ಬೇಪಾರಿ** (ನಾ). ೧. ಕೆಲಸವಿಲ್ಲದವನು. ೨. ದಿಕ್ಕಿಲ್ಲದವನು ; ಗತಿಗೆಟ್ಟವನು : ಶುದ್ಧ ವೈದಿಕಮನೆತನದವರು, ಸಭ್ಯರು, ಸದ್ಗೃಹಸ್ಥರು – ಇವರಿಗೆ ಈ ಆಟ ಏಕೆ ? ತನ್ನಂಥ ಅಬ್ಬೇಪಾರಿಯಾದರೆ ಆ ಮಾತು ಬೇರೆ (ಅನಾಥೆ. ೧೫೦) ; ಬೇಕಾದ ಅಬ್ಬೇಪಾರಿ ಬರಲಿ ; ಗಾದಿ ಮೇಲೆ ಕೂಡಲಿ ರಾಜ ಅಂತ ನಡಸಲಿ (ಚಿಕರಾ. ೪೮೬).

[< ಸಂ. ಅವ್ಯಾಪಾರಿನ್]

**ಅಬ್ಬೋಲಿಗೆ**, ಅಬ್ಬಲಿಗ, ಅಬ್ಬಲಿಗೆ (ನಾ). ಒಂದು ಗಿಡದ ಹೆಸರು ; ಕನಕಾಂಬರದ ಗಿಡ (ಮೈಡಿಗಿ. ೨೫-೪೭೧). **ಅಬ್ಬಲಿಗ :** (ಕರಾ). ಅಬ್ಬಲಿಗನ ಹೂವು ನಾಲ್ಕಾರು ದಿನ ಬಾಡಿಹೋಗೋದಿಲ್ಲ (ರೂಢಿ). **ಅಬ್ಬಲಿಗೆ :** ಅಬ್ಬಲಿಗೆ ನನ್ನ ಮೆಚ್ಚಿಗೆಯ ಹೂವು (ಅಬೋಲೀ. ೧).

[?. / ಮರಾ. ಅಬೋಲಿ]

**ಅಬ್ರಹ್ಮಣ್ಯ** (ನಾ). ೧. ಬ್ರಾಹ್ಮಣನ ವಿಷಯದಲ್ಲಿ ಉಚಿತವಲ್ಲದ್ದು ; ಬ್ರಾಹ್ಮಣನ ವಿಷಯದಲ್ಲಿ ನಡೆಯುವ ಅನ್ಯಾಯ, —ಕೇಡು : "ಅಬ್ರಹ್ಮಣ್ಯಂ, ಅವಧ್ಯಂ – ಈ ೨ ಬ್ರಾಹ್ಮಣಿಕೆ(ಗೆ) ಹೊಲ್ಲಕೆಯ್ವುದು" (ಹಲಾಯು. ೬೭-೨೫೨) ; ಸೋಮಶರ್ಮಭಟ್ಟಂ ಪಿರಿದೊಂದು ತೊವಲಂ ಪಿಡಿದಬ್ರಹ್ಮಣ್ಯಂ ಭೋ ಅಬ್ರಹ್ಮಣ್ಯಂ ಭೋ ಎಂದಱುತ್ತಂ . . . ಅರಮನೆಗೆ ಪೋಗಿ (ವಡ್ಡಾರಾ. ೨೩-೨). ೨. ಕೊಲ್ಲಕೂಡದು ಎಂಬ ಮಾತು ; ಹಿಂಸೆ ಕೊಡಕೂಡದು ಎಂಬ ಮಾತು : ಈಯಲಿಱಿಯಲ್ ಶರಣ್ಬುಗೆ ಕಾಯಲ್ ಕ್ಷತ್ರಿಯರೆ ಬಲ್ಲರಬ್ರಹ್ಮಣ್ಯಂ [ಪಾಠಾಂ. ರಲ್ಲದೆ ಬ್ರಹ್ಮರ್ ; ರಾಬ್ರಹ್ಮಣ್ಯಂ] ಭೋಯೆನಲುಂ ಬ್ರಾಹ್ಮಣರವಿ[ಧಾ]ಯೆನಲುಂ ಬಲ್ಲರಿಱಿಯಲವರೆತ್ತಱಿವರ್ (ಗದಾಸಂ. ೩-೩) ; ಈಯೆಡೆಯಿಂ ಪೋಗೆಲೆ ಪಾರ್ವಾಯೆನೆ ತಲ್ಲಣಿಸಿ ಪಾರ್ವನಬ್ರಾ[ಬ್ರ]ಹ್ಮಣ್ಯಂ

ಭೋಯೆಂದು ಪುಯ್ಯಲಿಡುತುಂ ಬಾಯಂ ಬಿಡುತಂ ನೃಪೇಂದ್ರಸಭೆಯಂ ಪೊಕ್ಕಂ (ಸುಕುಮಾ. ೭–೪೧) ; ಅಪ್ರತಿಕಂಗೆಜಗದ ವೀರವ್ರತಮಂ ಕೇಳ್ದು ಹರ್ಷಮಂ ತಾಳ್ದದ ನಿನ್ನಬ್ರಹ್ಮಣ್ಯಂ ಬರಿಯ ಜನವ್ರೀಡಾಕರಮದಂ ವಿಚಾರಿಸವೇಡಾ (ಪಂರಾಮಾ.೭–೫೧). ೩. (ಬ್ರಾಹ್ಮಣನಿಗೆ) ಅನ್ಯಾಯ ನಡೆದಿದೆ ಅನ್ಯಾಯ ನಡೆದಿದೆ ಕಾಪಾಡಿ ಕಾಪಾಡಿ ಎಂಬರ್ಥದಲ್ಲಿ ಉದ್ವೇಗಪೂರ್ಣವಾದ ಉದ್ಗಾರ : ಘಟ್ಟಲನೆ ಬರ್ಪನ್ನಂ ಕಂಡಟ್ಟಿ ಲಿರ್ಮಡಿಯಾಗೆ ಪತ್ತಿ ಕೆಳೆಯನ ಕೊರಲಂ ಪಳವಿಸಿ ಕಪಿಂಜಲಂ ಬಾಯಟ್ಟಿ ದಬ್ರಹ್ಮಣ್ಯಮೆಂದು ಬಿಡೆ ಪುಯ್ಯಲ್ಚಲ್ (ಕಾದಂಪೂ. ೯೧೮). [ಸಂ.]

**ಅಬ್ರು** 'ಆಬರು' ನೋ.

**ಅಬ್ರುದಾರ** (ನಾ). ಮರ್ಯಾದಸ್ಥ ; ಗೌರವಕ್ಕೆ ಪಾತ್ರ : ಪ್ರೇಮಚಂದ ದೊಡಮನುಷ್ಯ ಆದಾವ್ ಬಹಳ ಅಬ್ರುದಾರ ಆದಾವ್ (ಮೋಹಿನೀ. ೫೯). [ಅಬ್ರು (< ಆಬರು) + –ದಾರ$_{2}$]

**ಅಬ್ರೂಗೇಡಿ** 'ಆಬರುಗೇಡಿ' ನೋ.

**ಅಬ್ರೋನಿ** (ನಾ). ಒಂದು ಜಾತಿಯ ಮೀನು : ನಿಮಗೆ ಬೇಕಾದ ಹೊಳೆಯ ಮೀನು, ಮುಡಾವು, ಅಬ್ರೋನಿ, ಕೂಸೆ, ಕಲ್ಲೂರು, ಕೊಂತಿ ಯಾವುದೂ ಇಲ್ಲ (ಹೊಸಕ್ಷಿ. ೫೪). [?]

**ಅಬ್ಲು** (ನಾ). ಒಂದು ಬಗೆಯ ಗಿಡ (ವೈಔಗಿ. ೩೭–೭೩೭). [?]

**ಅಭಂಗ** (ಗು). ೧. ಭಂಗವಿಲ್ಲದ ; ಒಡೆಯದ ; ಮುರಿಯದ : ತುಂಗ ನಾಗಾರೂಢನಾಗಿಯಭಂಗ ಘನತೇಜಪ್ರಭಾಯತ ಸಂಗದಿಂದೈತಪ್ಪ ಮಾಹೇಶ್ವರರ ಮಧ್ಯದಲಿ (ಬಸಪು. ೫–೪೪). (ನಾ). ೨. ಭಂಗವಿಲ್ಲದ ಸ್ಥಿತಿ ; ನಿರಂತರವಾದ ಸ್ಥಿತಿ : ಮನದಲಂಪಿನೊಳಾ ಮದನೋಪ ಮಾನನೊಳ್ ನೆರೆವೆನಭಂಗದೆ (ಕವಿರಾ. ೨–೧೦೩). ೩. ಸೋಲಿಲ್ಲ ದವನು ; ನಾಶರಹಿತ : ಅಭಂಗನ ನಿಲವ ಭಂಗಿತರೆತ್ತಬಲ್ಲರು ಗುಹೇ ಶ್ವರಾ (ಅವಚಂ. ೧೨೨–೫೫೪) ; ರಂಗುವಡೆದ ಮಾಣಿಕದ ಉಂಗುರದಿಂ ದೆಸವಂಗನೆಗೊಲಿಯದಭಂಗನ ಕಥೆಯನೊರೆವೆನು (ಕುರಾಸಾಂ. ೧–೧೦೭). ೪. ಮರಾಠಿಯಲ್ಲಿ ಒಂದು ಪದ್ಯಜಾತಿ : ತುಕಾರಾಮ, ನಾಮದೇವ, ಏಕನಾಥರ ಅಭಂಗಗಳ ಅಮೃತವಾಣಿಯ ಪ್ರವಾಹವು ಅಂತರಂಗದಲ್ಲಿ ಪ್ರವಹಿಸಿತು (ಸಶೂರ. ೨೦೫). ೫. ಸೊಂಟದ ಎಡಬಲಗಳ ಮೇಲೆ ಅಂಗೈಗಳನ್ನೂರಿ ಮೊಣಕೈಗಳನ್ನು ಪಕ್ಕಕ್ಕೆ ಚಾಚಿ ನಿಲ್ಲುವ ಒಂದು ಭಂಗಿ. 'ಅಭಂಗವಿಠ್ಠಲ' ಪರಾ. [ಸಂ.]

**ಅಭಂಗವಿಠ್ಠಲ** (ನಾ). ಅಭಂಗದ ನಿಲವಿನಲ್ಲಿರುವ ವಿಠಲಮೂರ್ತಿ : ಇಂದಿರಾಪತಿ ಭವದೀಯ ಭಕ್ತಿಯನೀವುದಭಂಗವಿಠ್ಠಲಾ (ದಶಕು. ೧೪–೬). [ಅಭಂಗ + ವಿಟ್ಠಲ]

**ಅಭಂಗಾನುಷಂಗ** (ನಾ). ೧. ಭಂಗದ ಸಂಬಂಧವಿಲ್ಲದವನು ; ಸೋಲನ್ನು ಕಾಣದವನು. ೨. ತೆರೆಗಳ ಸಂಬಂಧವಿಲ್ಲದವನು ೧, ೨ : ಅನೂನವಾಹಿನೀಪತಿಯಾಗಿಯುಂ ಅಭಂಗಾನುಷಂಗನುಂ (ಚಂದ್ರಪು. ೨–೮ ವ). [ಅಭಂಗ + ಅನುಷಂಗ]

**ಅಭಂಗುರ** (ಗು). ಭಂಗವಿಲ್ಲದ ; ಒಡೆಯದ ; ಶಾಶ್ವತವಾದ : ಹರಿ ನ್ಮಣಿಭಿತ್ತಿಭಾಗದೊಳ್ ಪುರವನಿತಾಜನಂ ಬರೆಯುತಿರ್ಪುದಭಂಗುರಪತ್ರ ಭಂಗಮಂ (ಪಂರಾಮಾ. ೧–೧೧೭). [ಸಂ.]

**ಅಭಂಡ** (ಗು). ಮರ್ಯಾದೆಯಿಲ್ಲದ; ಮೇರೆಯಿಲ್ಲದ: ಬಟಾಬಯಲು ಇದು, ಹೋ ಅಭಂಡ ತಾನರ್ಥಹೀನ ಹಳವು ಅಕಸ್ಮಾತ್ತೊ ಎನುವಂತೆ ಬಂತು ಭೂಮಿಯಲಿ ನರನ ಫಲವು (ಅರಳು.೧೯೫). [← ಮರಾ. ಅಭಂಡ]

**ಅಭಕ್ತ$_{1}$** (ನಾ). ಭಕ್ತನಲ್ಲದವನು : ಭಕ್ತರಿಗೆ ಪರಮಾಮೃತಂ ಶಿವಭಕ್ತಿ ಹೀನರಿಗಿದು ಲಯಾಗ್ನಿಯಭಕ್ತರುಗಳಿರ ಬೇಗೆಯೊಳಗಣ ಮಿಡಿಚೆಗಳ ತೆಱದಿ (ಬಸಪು. ೫೬–೨೪). [ಸಂ.]

**ಅಭಕ್ತ$_{2}$** (ನಾ). ಅನ್ನವಿಲ್ಲದ ಸ್ಥಿತಿ : ಅನೀಶವೆಂಬುದು ರಾಜ್ಯವೆ ಅಲ್ಲ. ಅಭಕ್ತವಾದರೆ ಇರಸಲ್ಲ (ಸೂರ್ಯಪಾ. ೧೧೫–೧೬). [ಸಂ.]

**ಅಭದ್ರ** (ಗು). ೧. ಅಮಂಗಳವಾದ ; ಅಶುಭವಾದ : ನಾಡೊಳಾ ವನೊ ಮಡಿವಳನೊರ್ವನಭದ್ರಮಾಗೆ ದೇವಿಯರೊಳ್ ಕುಂದಿಟ್ಟು ದೇವರಂ ಚುನ್ನವಾಡಿದಂ ಗಡ (ರಾಮಾಶ್ವ. ೩೮–೨೧). ೨. ಭದ್ರವಿಲ್ಲದ ; ಸುರಕ್ಷಿತವಲ್ಲದ. [ಸಂ.]

**ಅಭಯ** (ಗು). ೧. ಭಯವಿಲ್ಲದ ; ಅಂಜದ : ಬಂಧುರ ಸಿಂಧುರ ನೀಲ ನೀರದ ಪ್ರಭನಭಯಂ (ಶಾಂತಿಪು. ೫–೨೮). (ನಾ). ೨. "ಲಾಮಂಚದ ಬೇರು" (ಅಮರ. ಟೀ). [ಸಂ.]

**ಅಭಯಂಗುಡು** (ಕ್ರಿ). ನಿರ್ಭಯತೆಯನ್ನುಂಟುಮಾಡು : ಅತಿ ಪ್ರಸನ್ನ ಮಧುರ ದೃಷ್ಟಿಯಿಂ ನೋಟ್ಟಾಗಳಾ ಕಟಾಕ್ಷಮಭಯಂಗುಡೆ ಕೈಂಕರ್ಯಮನಪ್ಪುಕೈದವಂ ನಿಜಾಗಮನವಿಜ್ಞಾಪನೋತ್ಕಂಠತೆಯಿಂದಿಂ ತೆಂದಂ (ರಾಜಶೇ. ೫–೨೭ ವ) ; ಅಭಯಂಗುಡು ಕುಡೆಲೆ ಭಯಪ್ರಭವ ಭಯಭ್ರಾಂತಿವಿಲಯಸಂಭವ ಸುಮಹಾವಿಭವ (ವಸ್ತವಂ. ೧೦೧). [ಅಭಯ + ಕುಡು (< ಕೊಡು)]

**ಅಭಯಘೋಷಣೆ** (ನಾ). ಭಯಕ್ಕೆ ಕಾರಣವಿಲ್ಲವೆಂದು ಸಾರುವುದು ; ಅಭಯವನ್ನು ಕೊಟ್ಟಿದ್ದೇವೆಂದು ಸಾರಿ ಹೇಳುವುದು : ಲಕ್ಷ್ಮಣಂ . . . ವಿಜಯಶಂಖಮಂ ಪೂರಿಸಿ ತದನಂತರಮಭಯಘೋಷಣೆಯಂ ಮಾಡಿದಾಗಳ್ (ಚಾವುಂಉ. ೩೩೧–೧೨). [ಅಭಯ + ಘೋಷಣೆ]

**ಅಭಯದಾತ** (ನಾ). ಭಯವಿಲ್ಲ ಎಂಬ ಆಶ್ವಾಸನವನ್ನು ಕೊಡುವವನು ; ಭಯವನ್ನು ಕಳೆಯುವವನು ; ಧೈರ್ಯಕೊಟ್ಟು ಕಾಪಾಡುವವನು. [ಸಂ. ಅಭಯದಾತೃ]

**ಅಭಯದಾನ** (ನಾ). ಅಭಯವನ್ನು ಕೊಡುವುದು ; ಹೆದರಬೇಡ ರಕ್ಷಿಸುತ್ತೇನೆಂದು ಧೈರ್ಯಕೊಡುವುದು : ಕುಡುವುದುಮಾಹಾರಾಭಯಭೈಷಜ್ಯಶಾಸ್ತ್ರದಾನದಿಂ ಚತುರ್ವಿಧಮಕ್ಕುಂ (ಆದಿಪು. ೧೦–೯ ವ). [ಅಭಯ + ದಾನ]

**ಅಭಯದೀಪ** (ನಾ). ಭಯವಿಲ್ಲವೆಂದು ಸೂಚಿಸುವ ದೀಪ; ಹಸಿರು ದೀಪ : ಅಭಯದೀಪ ಹಿಡಿದು ದಾರಿ ತೋರಿ ರಕ್ಷಿಸಿದೆ (ಅಗ್ನಿಹಂ. ೨). [ಅಭಯ + ದೀಪ]

**ಅಭಯಪ್ರದ** (ಗು). ೧. ಅಭಯದ ಆಶ್ವಾಸನೆಯನ್ನು ಕೊಡುವ. (ನಾ). ೨. ಅಭಯದ ಆಶ್ವಾಸನವನ್ನು ಕೊಡುವವನು. [ಸಂ.]

**ಅಭಯಪ್ರದಾನ** (ನಾ). = ಅಭಯದಾನ. [ಅಭಯ + ಪ್ರದಾನ]

**ಅಭಯಮನ** (ನಾ). ಭಯವಿಲ್ಲದ ಮನಸ್ಸುಳ್ಳವನು : ಅಭಿನಂದನ ಮುನಿರವಿವಾಕ್ಪ್ರಭೆ ತಮಮಂ ಕಳೆಯೆ ಮಯ್ದುನಿರ್ವರುಮುಱಿ ನೋಂತ ಭಯಮನರಾಗಿಯುಂ ದುರಿತಭೀತಿಯಿಂ ನಡುಗಿ ಬಡಬಡಾದಂತಾದರ್ (ಶಾಂತಿಪು. ೭–೭೧). [ಅಭಯ + ಮನ]

**ಅಭಯಮೀ** (ಕ್ರಿ). ಅಭಯವನ್ನು ಕೊಡು : ನರನೆನಲ್ದಹಿಪುದಂ ಮಾಣ್ದೆನೆಂದಭಯಮಿತ್ತಗ್ನಿ ನೀಲಧ್ವಜಂಗಿಂತೆಂದನು (ಜೈಮಿಭಾ. ೮–೪೪). [ಅಭಯ + ಈ$_{2}$]

**ಅಭಯಮುದ್ರೆ** (ನಾ). ಅಭಯವನ್ನು ಸೂಚಿಸುವ ಹಸ್ತಭಂಗಿ ; ಸಾಮಾನ್ಯವಾಗಿ ದೇವತಾವಿಗ್ರಹಗಳಲ್ಲಿ ಕಂಡುಬರುವ ಅಭಯ ಪ್ರದಾನದ ಹಸ್ತಮುದ್ರೆ. 'ಅಭಯಹಸ್ತ' ಪರಾ. [ಅಭಯ + ಮುದ್ರೆ]

**ಅಭಯಸ್ತ** (ನಾ). = ೨. ಅಭಯಹಸ್ತ. 'ಅಭಯಹಸ್ತ' ಶಬ್ದದ ಪ್ರಯೋಗವನ್ನು ನೋಡಿ. [ಸಂ. ಅಭಯಹಸ್ತ. / ತಮಿ. ಅಭಯಸ್ತಂ]

**ಅಭಯಹಸ್ತ** (ನಾ). ೧. ಅಭಯವನ್ನು ಸೂಚಿಸುವ ಹಸ್ತ; ಸಾಮಾನ್ಯವಾಗಿ ದೇವತಾವಿಗ್ರಹಗಳಲ್ಲಿ ಕಂಡುಬರುವ ಅಭಯ ಪ್ರದಾನದ ಹಸ್ತ: ಜಾಜದಿರಿಯೆನುತಭಯಹಸ್ತವ ತೋಱಿ ತುಳುಕಿದನು ಗ್ರಥಾರಿಯ ತೂಱುಗಿಡಿಗಳ ತುಱುಗಿದುರಿಯ ಮಹಾಸ್ತ್ರವನು ಕರ್ಣ (ಕುವ್ಯಾದ್ರೋ. ೧೬–೫೦). ೨. ದೇವತಾವಿಗ್ರಹಗಳ ಅಭಯಮುದ್ರೆಯಿಂದ ಕೂಡಿದ ಕೈಗೆ ಅಲಂಕಾರಕ್ಕಾಗಿ ತೊಡಿಸುವ ಚಿನ್ನ ಬೆಳ್ಳಿ ಮುಂತಾದ ಲೋಹಗಳಿಂದಲೂ ರತ್ನಗಳಿಂದಲೂ ಮಾಡಿಸಿದ ಹಸ್ತಾಕಾರದ ಒಡವೆ: ಕಂಚಿ ವರದರಾಜದೇವರಿಗೆ ಸಮರ್ಪಿಸ್ತ ರತ್ನ ಘಟಿತ ಶಂಖು ೧ ಚಕ್ರಂ ೧ ಅಭಯಸ್ತ ೧ [ಅಭಯಹಸ್ತ] ತಿರುನಾಮ ೧ (ಸೌಇಇ. IX–ii, ೫೪೭–೬; 1532). [ಅಭಯ + ಹಸ್ತ]

**ಅಭಯೆ** (ನಾ). ೧. ಭಯವಿಲ್ಲದವಳು. ೨. ಅಣಿಲೆಕಾಯಿ; ಅಳಲೆ ಕಾಯಿ. [ಸಂ. ಅಭಯಾ]

**ಅಭರ** (ನಾ). ಒಂದು ಬಗೆಯ ತೆರಿಗೆ (?): ಇಂನ್ತುಜ್ಯೋರುಂ ಉಣಿಯೆ ಕೊಡುವೋನುಮ್ ದೇವೆಡಿತ್ತಿಯೆರಿನ್ದುಂ ಸಾಎರಿನ್ದುವನ್ ಅಭರಮೆತ್ತಿ ಅಯೆತಿಎ ಕೊಳ್ವೋರುವನ್ . . . ಪಞ್ಚಮಹಾಪಾತಕಸಂಯುಕ್ತನಾಗಿ ಪೂತಿಎನ್ಬ ನರಕಕ್ಕೆ ಸಲ್ಗೆ (ಎಕ. VI, ಕೊಪ್ಪ, ೩೭–೭; 675). [ಸಂ. ?]

**ಅಭವ** (ಗು). ೧. ಭವವಿಲ್ಲದ; ಭವರಹಿತ; ಹುಟ್ಟಿಲ್ಲದ. (ನಾ). ೨. ಶಿವ: ಧ್ಯಾನದೊಳಭವಂ (ಪಂಪಭಾ. ೮–೧೩); ನಡೆನುಡಿಯೊಳಭವ ನೆಂದೆನಿಸಿರ್ಪನಾ ಪುರಕೆ (ತಿರುರ. ೪). ೩. ಜಿನ; ಅರ್ಹಂತೆ: ಧರಣೇಂದ್ರನೆನಭವನ ಕಿಂಕರನೆಂ ನಿಮಗಪ್ಪ ಭಾಗಮಂ ಕುಡಲೆನ್ನಂ ಗುರು ಮುನ್ನಂ ಬೆಸಸಿದಂ (ಆದಿಪು. ೯–೧೧೧). ೪. ಇಲ್ಲದಿರುವಿಕೆ; ನಾಶ. [ಸಂ.]

**ಅಭವಭವನ** (ನಾ). ಶಿವದೇವಾಲಯ; ಈಶ್ವರನ ಗುಡಿ: ರೋದೋಂತದೊಳೆತ್ತಂ ಸುತ್ತುತಿರ್ದತ್ತಭವಭವನ ಸಂಪೂರಿತಂ ಶಂಖನಾದಂ (ರಾಜಶೇ. ೧೨–೩). [ಅಭವ + ಭವನ]

**ಅಭವಾಗಮ** (ನಾ). ಶೈವಾಗಮ; ಶೈವಶಾಸ್ತ್ರ: ಸದಮಳಧರ್ಮರೂಪನಭವಾಗಮ ಸಾರಕಳಾಕಳಾಪಂ (ರಾಜಶೇ. ೧–೧೧). [ಅಭವ + ಆಗಮ]

**ಅಭವ್ಯ** (ಗು). ೧. ಭವ್ಯವಲ್ಲದ; ಮಹೋನ್ನತವಲ್ಲದ. (ನಾ). ೨. [ಜೈನ] ಮುಕ್ತಿಯನ್ನು ಹೊಂದಲಾರದ ಜೀವ: ಅತ್ಯುನ್ನತ ಬೋಧ ನೀಬೆಸಸಭವ್ಯನೊ ಭವ್ಯನೊ ದೂರಭವ್ಯನೋ (ಆದಿಪು. ೬–೩೪); ವಾಯುಭೂತಿಚರನಪ್ಪಾ ಜೀವನೀಗಳಭವ್ಯನೋ ಭವ್ಯನೊ (ಸುಕುಮಾ. ೫–೨೨). ೩. [ಕಾವ್ಯಮೀ] ಕಾವ್ಯದ ಹದಿನೆಂಟು ದೋಷಗಳಲ್ಲಿ ಒಂದು: ಅಸದರ್ಥಂ ವಿಪರೀತಕಲ್ಪನೆಯಭವ್ಯಂ . . . ಎಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೧–೪೦). [ಸಂ.]

**ಅಭಾಗಿ** (ನಾ). ನಿರ್ಭಾಗ್ಯ; ದುರದೃಷ್ಟಶಾಲಿ: 'ಭಗವಾನ್ ನಾರಾಯಣ' ಮಾತೆಯ ಅಂತ್ಯಕ್ರಿಯೆಗಳನ್ನು ಮಾಡದೆ ಇರುವ ಈ ಅಭಾಗಿಗೆ, ನಿನಗೆ ಅರ್ಘ್ಯವನ್ನರ್ಪಿಸುವ ಹಕ್ಕು ಇದೆಯೊ? ಇಲ್ಲವೊ? ಎಂತೂ ಅರ್ಪಿಸುತ್ತಿದ್ದೇನೆ (ಶಾಂತಲಾ. ೧೭೩). [ಸಂ. ಅಭಾಗಿನ್]

**ಅಭಾಗಿನಿ** (ನಾ). ನಿರ್ಭಾಗ್ಯಳಾದ ಹೆಂಗಸು; ದುರದೃಷ್ಟಶಾಲಿನಿ: ನಾನು ಈ ವೇಳೆ ಅಭಾಗಿನಿಯಾಗಿದ್ದೇನೆ, ಹರಸಲು ಯೋಗ್ಯತೆಯಿಲ್ಲದವಳಾಗಿದ್ದೇನೆ (ಶಾಂತಲಾ. ೧೮೨). [ಸಂ. ಅಭಾಗಿನೀ]

**ಅಭಾಗ್ಯ** (ನಾ). ಭಾಗ್ಯವಿಲ್ಲದವನು; ಬಡವ: ದುರಹಂಕೃತನನಭಿಮಾನಶೂನ್ಯನನಕರುಣಾವರಣನನಭಾಗ್ಯನನು (ಬಸವು. ೬೦–೫೬). [ಸಂ.]

**ಅಭಾಜನ** (ನಾ). ಭಾಜನವಲ್ಲದವನು; ಅಪಾತ್ರ (ಶ). [ಸಂ.]

**ಅಭಾವ** (ನಾ). ೧. ಇಲ್ಲದಿರುವುದು. ೨. ಲೋಪ. [ಸಂ.]

**ಅಭಾವಕ್ರಿಯೆ** (ನಾ). ನಿಷೇಧರೂಪಕ್ರಿಯೆ; ಪ್ರತಿಷೇಧಕ್ರಿಯೆ: ಕ್ರಿಯೆಯರ್ಥದ ಮೂಲಂ ಪ್ರತ್ಯಯರಹಿತಂ ಧಾತುವದನಭಾವಕ್ರಿಯೆಯೊಳ್ ನಿಯತಂ ನಿಶ್ಚಯಿಪುದು (ಶಮದ. ೨೧೬). [ಅಭಾವ + ಕ್ರಿಯೆ]

**ಅಭಾವವೈರಾಗ್ಯ** (ನಾ). ಅಭಾವದಿಂದ ಉಂಟಾಗುವ ವೈರಾಗ್ಯ; ಇಲ್ಲದಿರುವುದರಿಂದ ಉಂಟಾಗುವ ವಿರಕ್ತಿ: ನಿನ್ನದೆಲ್ಲಾ ಅಭಾವ ವೈರಾಗ್ಯ, ಸಿಕ್ಕದಿದ್ದ ದ್ರಾಕ್ಷಿಹಣ್ಣು ಹುಳಿ ಎನ್ನುವ ರೀತಿ (ರೂಢಿ). [ಅಭಾವ + ವೈರಾಗ್ಯ]

**ಅಭಾಷಣ** (ನಾ). ಮಾತನಾಡದಿರುವುದು; ಮೌನ. [ಸಂ.]

**ಅಭಿಕ** (ನಾ). ಪ್ರಿಯ; ಪ್ರಣಯಿ; ಕಾಮುಕ. [ಸಂ.]

**ಅಭಿಕಾಂಕ್ಷಿಸು** (ಕ್ರಿ). ಬಯಸು; ಆಶಿಸು: ಸುರರಮಣೀ ಜನಂಗಳಭಿಕಾಂಕ್ಷಿಸುವರ್ ಜಯಮಂ ರಣಂಗಳೊಳ್ (ಶಾಕುಂತ. ೨೭–೫೦). [ಅಭಿಕಾಂಕ್ಷೆ + –ಇಸು]

**ಅಭಿಕಾಂಕ್ಷೆ** (ನಾ). ಆಕಾಂಕ್ಷೆ; ಬಯಕೆ. [ಸಂ.]

**ಅಭಿಕೃತಿ** (ನಾ). [ಛಂದ] ಇಪ್ಪತ್ತೈದನೆಯ ಛಂದಸ್ಸು; ಪಾದ ಒಂದಕ್ಕೆ ಇಪ್ಪತ್ತೈದು ಅಕ್ಷರಗಳಿರುವ ಅಕ್ಷರ ವೃತ್ತಗಳ ವರ್ಗ: ಅಭಿಕೃತಿಯೆಂಬ ಛಂದದೊಳ್ ಇಪ್ಪತ್ತೈದಕ್ಕರಂ ಪಾದಮಾಗಿ ಪುಟ್ಟುವ . . . ವೃತ್ತಂಗಳೊಳಗೆ (ಛಂದೋಂಬು. ೨–೧೪೩). [ಸಂ.]

**ಅಭಿಕೆ** (ನಾ). ಉತ್ಕಟವಾದ ಕಾಮದಿಂದ ಕೂಡಿದವಳು; ಕಾಮಿನಿ: ಅಸಿಯಳಶ್ಚಿಯಭಿಕೆಯೆಂಬ ಪೆಸರಗುಣದೊಳಾ (ಜನವ. ೬–೫). [ಸಂ. ಅಭಿಕಾ]

**ಅಭಿಕ್ರಮ** (ನಾ). ೧. ಹತ್ತುವುದು; ಆರೋಹಣ. ೨. ಆಕ್ರಮಣ; ಮೇಲೆ ಬೀಳುವುದು. ೩. ಉದ್ಯೋಗ; ಪ್ರಯತ್ನ; ಕಾರ್ಯಾರಂಭ. [ಸಂ.]

**ಅಭಿಖ್ಯಾನ** (ನಾ). ೧. ಹೆಸರು: "ವಸ್ತುನಿಕಾಯ ನಾಮವಚನಿರ್ದಿಷ್ಟಂಗಳುಂ ಲಿಂಗಭಿಖ್ಯಾನಂ" (ನಾನಾರ. ೧೧೪). ೨. ಕೀರ್ತಿ; ಪ್ರಖ್ಯಾತಿ. [ಸಂ.]

**ಅಭಿಖ್ಯೆ** (ನಾ). ೧. ಹೆಸರು; ಸಂಕೇತ. ೨. ಪ್ರಭಾವ; ಮಹಿಮೆ. ೩. ಕೀರ್ತಿ; ಪ್ರಸಿದ್ಧಿ. ೪. ಸೌಂದರ್ಯ; ಚೆಲುವು; ಶೋಭೆ. [ಸಂ. ಅಭಿಖ್ಯಾ]

**ಅಭಿಗಮನ** (ನಾ). ಅಭಿಮುಖವಾಗಿ ಹೋಗುವುದು; ಇದಿರುಗೊಳ್ಳುವುದು; ಹತ್ತಿರಕ್ಕೆ ಹೋಗುವುದು: ಅಭಿಗಮನಾಂಘ್ರಿಕ್ಷಾಳನ ಶುಭಾಸನಾರ್ಚಾಪ್ರಣಾಮಕರಣಾಹಾರ ವ್ಯಭಿಚಾರಶುದ್ಧಿ ನವಭೇದ ಭೂತ ಪುಣ್ಯೈಕ ಪಣ್ಯಸಿಧಿ ನಿಜಿಸುವುದುಂ (ಶಾಂತಿಪು. ೬–೭೧). [ಸಂ.]

**ಅಭಿಗಮವಾರ್ತೆ** (ನಾ). ಬರುವ ಸಮಾಚಾರ; ಸಮೀಪಿಸುವ ಸುದ್ದಿ: ರಾಮಾಭಿಗಮವಾರ್ತೆಯಂ ದೂತಿಯನುಸರಿಸುತೆಚ್ಚರಿಸೆ ಜನನಿ ಜನಿತಾನಂದಮನಸಿನಿಂದೀಕ್ಷಿಸುತಲಿಪ್ಪನ್ನ ಮಹಿತೋನ್ನತಾರ್ಣವಂ ಬರೆ (ವೆಂಕಾರಾ. ೨–೮–೩೩). [ಅಭಿಗಮ + ವಾರ್ತೆ]

**ಅಭಿಗಮಿಸು** (ಕ್ರಿ). ಇದಿರಾಗಿ ಹೋಗು; ಸಮೀಪಿಸು: ಅಭಿಷೇಕವಾದ ಮೇಲಾ ಚತುರ್ಮುಖವಾದಭವಗೆ ಕೈಗಳ ಮುಗಿದು ಅಭಿಮತಸಿದ್ಧಿಯಧ್ಯಯನಮಂಟಪಕೆ ಮತ್ತಭಿಗಮಿಸಿದನಾ ಚಕ್ರಿ (ಭರತ. ೧೭–೨). [ಅಭಿಗಮನ + –ಇಸು]

**ಅಭಿಗರಿಸು** (ಕ್ರಿ). (ದೇವರಿಗೆ ನೈವೇದ್ಯವಿಡುವಾಗಲೂ ಊಟಕ್ಕೆ ಬಡಿಸುವಾಗಲೂ ಮೊದಲು ಅನ್ನದ ಮೇಲೆ) ತುಪ್ಪವನ್ನು ಬಡಿಸು; ತುಪ್ಪವನ್ನು ಹಾಕು: ಬೇಡಗಿತ್ತಿಯರು . . . ಸದ್ಯೋಘೃತವನಭಿಗರಿಸುತಿರ್ದರು ಕರದ ಕಂಕಣದುಲುಹು ರಂಜಿಸಲು (ಸನತ್ಕು. ೧೪–೬). [ಅಭಿಗಾರ + –ಇಸು]

**ಅಭಿಗಾರ** (ನಾ). = ಅಭಿಘಾರ : ವಿಭುವೆ ವ್ಯಾಪ್ತಮೂರ್ತಿ ವಿಜಯವಿಟ್ಠಲ ರೇಯ ಅಭಿಗಾರದಿಂದ ಶುದ್ಧ ಸರ್ವ ಪದಾರ್ಥ (ವಿದಾಕೃ. ೧೩೦–೧); ಪಾತ್ರಾಭಿಗಾರವಂ ಮಾಡಿಸಿ ಪದಾರ್ಥಂಗಳಂ ಬಡಿಸೆಂದು (ಕುಚೇಲೋ. ೧೧೫); ನೈವೇದ್ಯದ ಅಭಿಗಾರ ಅಡಿಗ್ಗೆ ಮಾಡೋದು ಬಿಟ್ಟು ದೇವರಿಗೆ ಮಾಡ್ಯಾನ ನಮ್ಮ ಮಗರಾಜ (ವೈನಿ. ೨೨೪).
[ಸಂ. ಅಭಿಘಾರ]

**ಅಭಿಗೀತ** (ಗು). ಹಾಡಲ್ಪಟ್ಟ; ಕೊಂಡಾಡಲ್ಪಟ್ಟ. 'ಅಭಿಗೀತಾರ್ಥ' ಪರಾ. [ಸಂ.]

**ಅಭಿಗೀತಾರ್ಥ** (ನಾ). ಕೊಂಡಾಟಕ್ಕೆ ಪಾತ್ರವಾದ ಅರ್ಥವುಳ್ಳುದು: ಸದಭಿಕಮನೀಯ ಗುಣಮಪ್ಪುದು ನಿಯತಂ ಕಾಂತಮೆಂಬುದಭಿಗೀತಾರ್ಥಂ (ಕವಿರಾ. ೨–೬೪). [ಅಭಿಗೀತ + ಅರ್ಥ]

**ಅಭಿಗ್ರಸ್ತ** (ಗು). ಆಕ್ರಮಣಕ್ಕೆ ಸಿಕ್ಕಿದ; ಹಿಡಿಯಲ್ಪಟ್ಟ; ದರೋಡೆಗೆ ಒಳಗಾದ. [ಸಂ.]

**ಅಭಿಗ್ರಹ** (ನಾ). ೧. ದರೋಡೆ; ಲೂಟಿ. ೨. ಆಕ್ರಮಣ; ಮುತ್ತಿಗೆ. ೩. ಇದಿರುಬೀಳುವುದು; ಪ್ರತಿಭಟನೆ: "ಯುದ್ಧಾದಿಗಳಲ್ಲಿ ಹಗೆಯವರಿಗೆ ಎದುರಾಗಿ ಕಲಹಕ್ಕೆ ಅಣಿಮಾಡಿಕ್ಕೊಂಡು ಧೈರ್ಯದಿಂದ ಉಪಾಯ ಪ್ರಯತ್ನಗಳನ್ನು ಮಾಡುವಿಕೆ" (ಸಿದ್ಧಾಂತಿ. ೩೧೦). ೪. ದೂರು; ಫಿರ್ಯಾದು. ೫. ಅಧಿಕಾರ; ಗೌರವ; ತೂಕ. [ಸಂ.]

**ಅಭಿಗ್ರಹಣ** (ನಾ). ದರೋಡೆ; ಕಣ್ಣೆದುರಿಗೇ ಇತರರ ವಸ್ತುವನ್ನು ಅಪಹರಿಸುವುದು. [ಸಂ.]

**ಅಭಿಘಾತ** (ನಾ). ಪೆಟ್ಟು; ಹೊಡೆತ: ಕುಲಿಶಾಭಿಘಾತದಿಂ ನೀಲಾಚಲಮೆ ಕೆಡೆವಂತೆ (ಗದಾಯು. ೮–೨೬ ವ). ೨. ಗಾಯ; ಗಾಸಿ. ೩. ನಷ್ಟ; ನಾಶ; ನಷ್ಟಕ್ಕೆ ಕಾರಣ: ಗುರುಗೆ ನಿದ್ರಾಭಿಘಾತಮಕ್ಕುಮೆಂದು ತಲೆಯನುಗುರಿಸುತ್ತುಮಿರೆಯಿರೆ (ಪಂಪಭಾ. ೧–೧೦೪ ವ); ಸಿರಿಗೆ ದರಿದ್ರತೆ ಬಾಳ್ಕೆಗೆ ಮರಣಂ ಜರೆ ಯೌವನಕ್ಕಮಭಿಘಾತಮೆನುತ್ತಿರೆ ಕಂಡುಂ ಕೇಳ್ದುಂ ಗಡ ಪರಿವರ್ತಿಸರಾತ್ಮಹಿತದೊಳತಿದುರ್ಮತಿಗಳ್ (ಚಂದ್ರಪು. ೨–೩೭). [ಸಂ.].

**ಅಭಿಘಾತಜ್ವರ** (ನಾ). ಗಾಸಿಯಿಂದುಂಟಾದ ಜ್ವರ: ಪೆಟ್ಟು ತಗಲಿದುದರಿಂದಾಗಲಿ ಆಕಸ್ಮಿಕವಾದ ಭಯ ಮುಂತಾದ ಆಘಾತದಿಂದಾಗಲಿ ಹುಟ್ಟಿಕೊಂಡ ಜ್ವರ: ಅಭಿಘಾತಜ್ವರವಮೌಷಧ ವಿಭಿನ್ನಮುಪಶಮಿಸುವಂತಿರುಪಶಮಿಸಿದುದುತ್ತಭದಂಡನಿಹತ ಸಂಭೂತ ಭೂರಿ ಪರಿತಾಪಮಾಜುತಿಂಗಳೊಳಗದಾ (ಶಾಂತಿಪು. ೧೧–೪೫)
[ಅಭಿಘಾತ + ಜ್ವರ]

**ಅಭಿಘಾತಿ** (ನಾ). ೧. ಪೆಟ್ಟು; ಗಾಸಿ. ೨. ನಷ್ಟ; ನಾಶ. ೩. ಶತ್ರು; ಹಗೆ; ಮೇಲೆ ಬೀಳುವವನು; ಹೊಡೆಯುವವನು.
[ಸಂ. ಅಭಿಘಾತಿನ್]

**ಅಭಿಘಾರ** (ನಾ). ೧. ದೇವರಿಗೆ ನೈವೇದ್ಯವಿಡುವಾಗಲೂ, ಊಟಕ್ಕೆ ಬಡಿಸುವಾಗಲೂ ಅನ್ನದ ಮೇಲೆ ಮೊದಲು ಬಡಿಸುವ ತುಪ್ಪ: ದಯಾಮೃತವೆಂಬ ಹಾಲಿನಲ್ಲಿ ಬೋನಮಂ ಮಾಡಿ ಸಮರಸರುಚಿಕರವೆಂಬ ಶಾಕಪಾಕಂಗಳಂ ಮಾಡಿ ನೆನಹಿನ ಅವಲಂಬನವೇ ಅಭಿಘಾರವಾಗಿ ನಿರ್ಮಲವೆಂಬ ಶಿವದಾನವನಳವಡಿಸಿ ಕಾದಿದ್ದರಯ್ಯ ಪಂಚೇಂದ್ರಿಯವೆಂಬ ಶುನಕ ಮುಟ್ಟದಂತೆ (ಅವಚಂ. ೨೭೭–೧೨೭೦). ೨. ನೈವೇದ್ಯಕ್ಕೆ ತುಪ್ಪವನ್ನು ಹಾಕುವ ಕ್ರಿಯೆ. [ಸಂ.]

**ಅಭಿಘಾರತುಪ್ಪ** (ನಾ). ಅಭಿಘಾರವಾಗಿ ಬಳಸುವ ತುಪ್ಪ: ಅಭಿಘಾರತುಪ್ಪಕ್ಕೆಲ್ ೨ ಪಂಚಪರ್ವಲ್ (ಎಕ. VI, ಶೃಂಗೇರಿ. ಪು. ೩೭೨–೨೦; 1652). [ಅಭಿಘಾರ + ತುಪ್ಪ]

**ಅಭಿಚರ** (ನಾ). ಸೇವಕ; ಆಳು. [ಸಂ.]

**ಅಭಿಚಾರ** (ನಾ). ೧. ವಿರುದ್ಧವಾದ ಆಚರಣೆ; ವಿಶ್ವಾಸಘಾತ (?). ೨. ಮಂತ್ರ ತಂತ್ರಗಳಿಂದ ಇತರರಿಗೆ ಕೇಡನ್ನು ಬಯಸಿ ಮಾಡುವ ಹಿಂಸಾಕರ್ಮ; ಹೋಮ; ಮಾಟ; ಶೂನ್ಯ: ಬಿರಯಿಗಭಿಚಾರಮಪ್ಪಂತಿರೆ ಮುಳಿಸಿಂ ಕಂತುಮಾಂತ್ರಿಕಂ ಬೇಳಲ್ಕೆಂದುರುಪಿದ ಹೋಮಾಗ್ನಿಯ ಕೇಸುರಿಯೆನಿಸಿದುವಸುಗೆಯೆಸೆವ ಪೊಸ ಪೂಗುಡಿಗಳ್ (ಚಂದ್ರಪು. ೭–೫೨); ಅವನ ಕೊಲ್ವೆವೆಂದು ಮುನಿಗಳ್ ನೆನೆದು ಮುನಿಯುತುಂ ಸರ್ವಕ್ರಿಯಾಕ್ರಮಾನಳ ಮಂತ್ರತತಿಗಳಿಂದಭಿಚಾರಮಂ ವಿನಯದಿಂ ಬೇಳೆ (ಆರಾಜ. ೧೪–೮). [ಸಂ.]

**ಅಭಿಚಾರಕ್ರಿಯೆ** (ನಾ). ಇತರರಿಗೆ ಕೇಡನ್ನು ಬಯಸಿ ಮಾಡುವ ಮಂತ್ರ ತಂತ್ರಗಳಿಂದ ಕೂಡಿದ ಹೋಮ ಮುಂತಾದ ಕೆಲಸ; ಮಾಟಮಾಡುವುದು; ಶೂನ್ಯ ನಡಸುವುದು: ಮಲೆಪರ್ಗಭಿಚಾರಕ್ರಿಯೆ ವಲಮೆನಿಸಲ್ ಚಕ್ರಿಪೂಜ್ಯನುಂ(ಆದಿಪು.೧೧–೫). 'ವಾಮಕ್ರಿಯೆ' ಪರಾ. [ಅಭಿಚಾರ + ಕ್ರಿಯೆ]

**ಅಭಿಚಾರಿ$_1$** (ನಾ). ಮಾಟ, ಶೂನ್ಯ ಮುಂತಾದ ಅಥರ್ವಣ ಕ್ರಿಯೆಗಳನ್ನು ನಡಸುವವನು; ಮಾಟಗಾರ. [ಸಂ. ಅಭಿಚಾರಿನ್]

**ಅಭಿಚಾರಿ$_2$** (ನಾ). = ಅಭಿಸಾರಿ: ಅಭಿಚಾರಿಯ ಕೈಯಲ್ಲಾದರೂ ಉಂಡೇನು ಅವಿಚಾರಿಯ ನೆರೆ ಬೇಡ (ಗಾದೆ). [< ಸಂ. ಅಭಿಸಾರಿಣೀ]

**ಅಭಿಜನ** (ನಾ). ೧. ವಂಶ; ಕುಲ; ಗೋತ್ರ. ೨. ತಾಯ್ನಾಡು; ಸ್ವದೇಶ. ೩. ಕೀರ್ತಿ; ಪ್ರಸಿದ್ಧಿ. ೪. ಬಿರುದು. ೫. ಉತ್ತಮ ಕುಲದಲ್ಲಿ ಹುಟ್ಟಿದವನು; ಸಜ್ಜನ: ಸುರಭೂರುಹದಗೆಯನಿಡಲ್ ಪರಿಜನದಭಿಜನದ ಗೇಹದೊಳ್ ಬಯಸಿದಳಾ ಸರಸಿಜಮುಖಿ (ಮಲ್ಲಿಪು. ೪–೧೦೧). ೬. ಸುತ್ತುಮುತ್ತಿನವರು; ಪರಿಜನರು. ೭. ವಂಶದ ಹಿರಿಯರು,—ಹಿಂದಿನವರು. [ಸಂ.]

**ಅಭಿಜನವತ್ಸಳ** (ನಾ). ೧. ಸತ್ಕುಲಜರಲ್ಲಿ, ಸಜ್ಜನರಲ್ಲಿ ಪ್ರೀತಿಯುಳ್ಳವನು. ೨. ತಾಯ್ನಾಡಿನಲ್ಲಿ ಪ್ರೇಮವುಳ್ಳವನು; ಸ್ವದೇಶಾಭಿಮಾನಿ: ವತ್ಸಕುಲತಿಲಕನಭಿಜನವತ್ಸಳನಭಿಮಾನಮೂರ್ತಿ(ಆದಿಪು. ೧–೩೦). [ಅಭಿಜನ + ವತ್ಸಳ (= ವತ್ಸಲ)]

**ಅಭಿಜಾತ** (ನಾ). ೧. ಉತ್ತಮ ಕುಲದಲ್ಲಿ ಹುಟ್ಟಿದವನು; ಶ್ರೇಷ್ಠ; ಸಂಭಾವಿತ; ಮರ್ಯಾದಸ್ಥ; ಯೋಗ್ಯ: ಅತಿಧವಳರಥನಭಿಜಾತಂ ಕ್ಷತ್ರಿಯರನುಜದ ಕಲಿ ನೃಪನಾತಂ (ಪಂಪಭಾ. ೧೦–೫೫). ೨. ಪ್ರಿಯ. ೩. ಸುಂದರ. ೪. ವಿದ್ಯಾವಂತ; ವಿವೇಕಿ. [ಸಂ.]

**ಅಭಿಜಾತಕಲೆ** (ನಾ). ಹೊಸದಾಗಿ ಹುಟ್ಟಿದ ಕಲೆ: ಮಾನವನೊಳಗಿನ ಅಭಿಜಾತಕಲೆ ಹಾಗೂ ಇತರ ಪ್ರಾಣಿಗಳೊಳಗಿನ ಸಹಜಾತಕಲೆ ಇವುಗಳೊಳಗಿನ ಮುಖ್ಯಗುಣವೇನೆಂದರೆ . . . ಅವುಗಳ ಕೃತಿಯು ಜಾತೀಯ ವೈಲಕ್ಷಣ್ಯಗಳ ಸಾಮಾನ್ಯಲಕ್ಷಣವಾಗಿರುವುದು (ಪ್ರಬಂಧ. ೧೨).
[ಅಭಿಜಾತ + ಕಲೆ]

**ಅಭಿಜಾತರೂಪ** (ನಾ). ಉತ್ತಮವಾದ ರೂಪ; ಸುಂದರವಾದ ಆಕಾರ: ಅಂತು ಜಾತರೂಪಧರನುಮಭಿಜಾತರೂಪಮನೋಹರನುಮಾಗಿ (ಶಾಂತಿಪು. ೫–೫೭ ವ). [ಅಭಿಜಾತ + ರೂಪ]

**ಅಭಿಜಾತಶೌರ್ಯ** (ನಾ). ಶ್ರೇಷ್ಠವಾದ ಪರಾಕ್ರಮ: ಪೂತು ಫಲುಗುಣ ನಿನ್ನ ಕುಲಕಭಿಜಾತಶೌರ್ಯಕೆ ಗರುವಿಕೆಗೆ ಸರಿಮಾತನಾಡಿದೆ (ಕುವ್ಯಾಸ. ೩–೧೨). [ಅಭಿಜಾತ + ಶೌರ್ಯ]

**ಅಭಿಜಾತಸಾಹಿತ್ಯ** (ನಾ). ಶ್ರೇಷ್ಠವಾದ ಸಾಹಿತ್ಯ: ಅಭಿಜಾತ ಸಾಹಿತ್ಯಕ್ಕೆ ಮಹಿಳೆಯರೂ ಕಾಣಿಕೆಯನ್ನು ಸಲ್ಲಿಸಿದಂತೆ ಜಾನಪದ ಸಾಹಿತ್ಯಕ್ಕೂ ಸಲ್ಲಿಸಿದ್ದಾರೆ (ಕರ್ನಾಕ. ೩೫೪). [ಅಭಿಜಾತ + ಸಾಹಿತ್ಯ]

**ಅಭಿಜಿ** (ನಾ). ಅನ್ಯವರ್ಣಾಂಗನೆಯನ್ನು ಕೂಡಿದವನು : ಕ್ಲೀಬನಾದಾತಂ ಸ್ವಗೋತ್ರಜಾತರ್ಮಹಿಯೊಳಂ ಸವರ್ಣಾಂಗನೆಯರಂ ನೆರೆದವರ ಬಳಿಕ ಲಭಿಜಿಯಾದಾ ಕರ್ವಿುಯಾ ಪಿತೃವನಿತೆ ಪಿತೃಭಗಿನಿಗಳುಪಿದಂ (ವೀಶೈವು. ೪–೨೨–೩೮). [?]

**ಅಭಿಜಿತಯೋಗ** (ನಾ). = ಅಭಿಜಿತ್ತು ೨ : ನವಮಿ ತಿಥಿಯ, ಪಾವನ ಚೈತ್ರಮಾಸವು, ಶುಕ್ಲಪಕ್ಷವು ಹರಿಪ್ರಿಯ ಅಭಿಜಿತಯೋಗವು ಮಧ್ಯಾಹ್ನದ ಸಮಶೀತೋಷ್ಣ ಕಾಲವು ಹೀಗೆ . . . ಪುಣ್ಯಕಾಲವು ಪ್ರಾಪ್ತವಾಯಿತು (ತುಳಸಿ. ೫೫). [ಸಂ. ಅಭಿಜಿದ್ಯೋಗ]

**ಅಭಿಜಿತು** (ನಾ). = ಅಭಿಜಿತ್ತು ೩ : ಶ್ರವಣಂ, ಧನಿಷ್ಠೆ, ರೋಹಿಣಿ, ಜ್ಯೇಷ್ಠೆ, ಅಭಿಜಿತು, ಉತ್ತರಾಷಾಢೆ, ಅನುರಾಧೆ ಈ ಯೇೞುಂ ನಕ್ಷತ್ರಂಗಳ್ (ಲೋಕೋಪ. ೪–೮೩ ಟೀಕೆ). [ಸಂ. ಅಭಿಜಿತ್]

**ಅಭಿಜಿತ್ತು** (ನಾ). ೧. ಜಯಶಾಲಿ ; ವಿಜಯಶೀಲ. ೨. ದಿವಸದ ಎಂಟನೆಯ ಮುಹೂರ್ತ ; ಹೊತ್ತು ಮೂಡಿದಮೇಲೆ ಹದಿನೈದನೆಯ ಗಳಿಗೆಯಿಂದ ಹಿಡಿದು ಹದಿನೇಳನೆಯ ಗಳಿಗೆಯ ವರೆಗಿನ ಕಾಲ ; ಕುತುಪಕಾಲ. ೩. ಉತ್ತರಾಷಾಢ ಮತ್ತು ಶ್ರವಣ ಈ ಎರಡು ನಕ್ಷತ್ರಗಳ ನಡುವಣ ಒಂದು ವಿಶಿಷ್ಟ ನಕ್ಷತ್ರ : ಅಧಿದೇವತೆಗಳ . . . ಇರ್ಪತ್ತೆಂಟು ನಕ್ಷತ್ರಂಗಳ್ಗೆ . . . ಅಭಿಜಿತ್ತುಗೆ ಅಜಂ, ಶ್ರವಣಕ್ಕೆ ವಿಷ್ಣು (ಲೋಕೋಪ. ೧–೬ ಟೀ). [ಸಂ. ಅಭಿಜಿತ್]

**ಅಭಿಜಿನ್ಮುಹೂರ್ತ** (ನಾ). = ಅಭಿಜಿತ್ತು ೨ : ತತ್ಪುರುದೇವಂ ಮುಕ್ತಿವಧೂವರತೆಯನಭಿಜಿನ್ಮುಹೂರ್ತದೊಳ್ ಕೈಕೊಂಡಂ (ಆದಿಪು. ೧೬–೫೧). [ಸಂ. (ಅಭಿಜಿತ್ + ಮುಹೂರ್ತ)]

**ಅಭಿಜೆ** (ನಾ). = ಅಭಿಜಿತ್ತು ೩ : ಶ್ರವಣಂ ಧನಿಷ್ಠೆ ರೋಹಿಣಿ ದಿವಿಜಾಧಿಪನಭಿಜೆಯುತ್ತರಾಷಾಢಂ ವೈತ್ರವೆನಿಪ್ಪ ತಾರೆಗಳ್ ವಾಸವಮಂಡಳಮೆಂಬ ನಾಮವಚಳಿತ ವಚನಾ (ಲೋಕೋಪ. ೪–೮೩) ; ಅಭಿಜೆಯರ ಮೂಲಮುಂ . . . ಕೃತ್ತಿಕೆಯುಮೆಂಬೀ ತಾರಾನಿಚಯಂ ಚರಿಯಿಸುಗುಂ (ತತ್ತ್ವಪ್ರ. ೧೯೬). [ಸಂ. ಅಭಿಜಾ]

**ಅಭಿಜ್ಞ** (ನಾ). ಚೆನ್ನಾಗಿ ತಿಳಿದವನು ; ಬಲ್ಲವನು : ಬಹುವಿಧ ಕಳಾಕಳಾಪಾಭಿಜ್ಞಂ (ಕಾದಂಪೂ. ೫೫) ; ಸಮಸ್ತ ಕಳೆಯಲಭಿಜ್ಞನೆಂದೆನಿಸಿ (ಕುವ್ಯಾಉ. ೩–೮೨). [ಸಂ.]

**ಅಭಿಜ್ಞತೆ** (ನಾ). ಉತ್ತಮವಾದ ತಿಳಿವಳಿಕೆ : ಪರೇಂಗಿತಪ್ರಜ್ಞನಾದ ನರೇಂದ್ರಂ ತಿಳಿದವನಭಿಜ್ಞತೆಗೆ ಮನದೊಳ್ಮೆಚ್ಚಿ ತಾನುಮುಸಿರದೆಯುಂ (ರಾಜಶೇ. ೧೪–೪ ವ). [ಸಂ. ಅಭಿಜ್ಞತಾ]

**ಅಭಿಜ್ಞಮತ** (ನಾ). ತಿಳಿದವರ ಅಭಿಪ್ರಾಯ : ಅಭಿಜ್ಞಮತವಿದು ತಪ್ಪದೆಂದನು ಮುನಿ ನೃಪಾಲಂಗೆ (ಕುವ್ಯಾಸ. ೧೧–೩೬). [ಅಭಿಜ್ಞ + ಮತ]

**ಅಭಿಜ್ಞಾನ** (ನಾ). ೧. ತಿಳಿವು ; ಜ್ಞಾನ : ಅಭಿಜ್ಞಾನಮಂ ನೀಂ ಕೃಪೆಯಿಂ ಮಾಡುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೮೪). ೨. ನೆನಪು ; ಜ್ಞಾಪಕ. ೩. ಜ್ಞಾಪಕಕ್ಕೆ ತರುವ ಮಾತು, ಕತೆ, ವಸ್ತು ಮುಂತಾದ ಕುರುಹು. ೪. ಸಾಕ್ಷಿ ; ರುಜುವಾತು. [ಸಂ.]

**ಅಭಿಜ್ಞಾರೇಖೆ** (ನಾ). ಗುರುತಿನ ಗೆರೆ ; ಸಂಕೇತದ ರೇಖೆ : ರಾಜ್ಞೀಗರ್ಭದೊಳಿರ್ದುಂ ತ್ರಿಜ್ಞಾನಸಮೇತನೆಂದು ಪೇೞ್ವೆಡೆಗಿವೆ ದಲಭಿಜ್ಞಾರೇಖೆಗಳೆನಿಸಿ ಮನೋಜ್ಞತೆಯಂ ತ್ರಿವಳಿರೇಖೆ ತಳೆದೆಸೆದಿರ್ಕುಂ (ಚಂದ್ರಪು. ೧೨–೨೫). [ಅಭಿಜ್ಞಾ + ರೇಖೆ]

**ಅಭಿಜ್ಞೆ** (ನಾ). ೧. ನೆನಹು ; ಜ್ಞಾಪಕ. ೨. ಗುರುತು ಹಿಡಿಯುವುದು ; ಗುರುತು. ೩. ತಿಳಿದವಳು ; ಬಲ್ಲವಳು. [ಸಂ. ಅಭಿಜ್ಞಾ]

**ಅಭಿತಂದ್ರಿಸು** (ಕ್ರಿ). ೧. ಆಲಸ್ಯವನ್ನುಂಟುಮಾಡು. ೨. ಕೀಳುಮಾಡು ; ಸೋಲಿಸು : ಇಂದ್ರನ ವಧು ಚಕ್ರಧರನ ಸ್ತ್ರೀರತ್ನ ನಾಗೇಂದ್ರನ ಸತಿಯರೊಳಾದ ಇಂದ್ರಿಯಸುಖವನಾಕೆಯ ಪಡೆದೊತ್ತಿಭಿತಂದ್ರಿಪಳವಳಾಟಕೆಣೆಯೆ (ಭರಚ. ೭೮–೧೫೨). [ಅಭಿತಂದ್ರಾ$_{0}$ + –ಇಸು$_{3}$]

**ಅಭಿತಾಪ** (ನಾ). ೧. ಬೇಗೆ ; ಸೆಕೆ. ೨. ಸಂಕಟ ; ಕ್ಲೇಶ : ಅಭಿತಾಪಮಾನಪ್ರಭೃತಿ ಭೃತ್ಯರನಭಯ ಸನ್ಮಾನಾದಿಗಳಿಂ ಸ್ವೀಕರಿಸಿಯುಂ (ಚಂದ್ರಪು. ೨–೭೦ ವ). [ಸಂ.]

**ಅಭಿಧಮನಿ** (ನಾ). ಹೃದಯಕ್ಕೆ ಅಭಿಮುಖವಾಗಿ ಹೋಗುವ ರಕ್ತನಾಳ. (Varix. ೨೦೮೫). [ಅಭಿ$_{0}$ + ಧಮನಿ]

**ಅಭಿಧರ್ಮಪಿಟಕ** (ನಾ). ೧. [ಬೌದ್ಧ] ತತ್ತ್ವವಿಚಾರ ಗ್ರಂಥಗಳ ರಾಶಿ. ೨. ತ್ರಿಪಿಟಕಗಳಲ್ಲಿ ಒಂದು. [ಸಂ. (ಅಭಿಧರ್ಮ + ಪಿಟಕ)]

**ಅಭಿಧಾ** (ನಾ). ಹೆಸರು : ಆವರಿಗೆ ಪಾಳಯಗಾರರೆಂದು ಅಭಿದಾ[ಧಾ]ವಾಯಿತೋ, ಖಂಡಿತವಾಗಿ ಯಾವ ಮೂಲವೂ ಗೊತ್ತಾಗಿಲ್ಲ (ಪಾಳಗಾ. ೪). [ಸಂ.]

**ಅಭಿಧಾತೃ** (ನಾ). ಹೆಸರಿಡುವವನು ; ಶಬ್ದವನ್ನು ಪ್ರಯೋಗಮಾಡುವವನು : ಅಭಿಧಾನ, ಅಭಿಧೇಯ, ಅಭಿಧಾತೃ – ಎಂಬ ವ್ಯವಹಾರವು ಕಡಿವಡೆಯದೆ ಇರುವುದರಿಂದ (ಬ್ರಹ್ಮಭಾ. ೪೮೦). [ಸಂ.]

**ಅಭಿಧಾನ** (ನಾ). ೧. ಹೆಸರಿಸುವುದು ; ಹೇಳುವುದು. ೨. ಹೆಸರು ; ಅಂಕಿತ : ಛತ್ರವತಿಯೆಂಬಭಿಧಾನಮನಾಳ್ದುದಾ ಪೊೞಲ್ (ಪಂಪಭಾ. ೩–೩೯). ೩. ಮಾತು ; ಶಬ್ದ. ೪. ಸಂಭಾಷಣೆ ; ಮಾತುಕತೆ. ೫. ನಿಘಂಟು ; ಶಬ್ದಾರ್ಥಕೋಶ : ಅಭಿಧಾನ ಸಾಮುದ್ರಿಕಂ . . . ಎಂಬಿವು ಮೊದಲಾದ ನರವೈದ್ಯಮುಮಂ ಓದಿಸಿದಂ (ವಡ್ಡಾರಾ. ೨೩–೧೫). ೬. "ಕೀರ್ತಿ" (ಗಂಗಾಮು. ೧೧). [ಸಂ.]

**ಅಭಿಧಾನದೋಱು** (ನಾ). ಹೇಳು ; ನಿರೂಪಿಸು : ದಾನಕೆ ಪಾತ್ರ ದೀಕ್ಷೆಗೆ ಯೋಗ್ಯರೆಂದು ವಿಧಾನದೋಱಿದನಯ್ಯನಂದು ಜ್ಞಾನಕೆ ಧ್ಯಾನಕೆ ದಕ್ಷರೆಂದಾನಭಿಧಾನದೋಱಿದೆನೊಪ್ಪಿರೆಂದ (ಭರಚ. ೬೦–೮೩). [ಅಭಿಧಾನ + ತೋಱು$_{1}$]

**ಅಭಿಧಾನಪದ** (ನಾ). ನಾಮಪದ : ನಾಮಪದ ಅಭಿಧಾನಪದಂಗಳಾದ (ಶಮದ. ೮೦ ಟೀಕೆ). [ಅಭಿಧಾನ + ಪದ]

**ಅಭಿಧಾನಪರಂಪರೆ** (ನಾ). ಶಬ್ದಾರ್ಥಗಳ ಕೋಶ ; ನಿಘಂಟು : ಲಿಪಿಶಬ್ದಶಾಸ್ತ್ರಮಭಿಧಾನಪರಂಪರೆ ನಾಟಕ ಪ್ರಯೋಗಂ ಕಾವ್ಯಂ ನೃಪನೀತಿಜೋಯಿಸಂ ರತ್ನಪರೀಕ್ಷೆ ವಿಷಾಪಹರಣಮಾಯುರ್ವೇದಂ (ಪುಷ್ಪವು. ೪–೫೮). [ಅಭಿಧಾನ + ಪರಂಪರೆ]

**ಅಭಿಧಾನಪ್ರವೀಣ** (ನಾ). ನಿಘಂಟುಗಳನ್ನು ಚೆನ್ನಾಗಿ ಬಲ್ಲವನು : ವ್ಯಾಕರಣಪರಿಣತನಲಂಕಾರಪರಿಚಿತನನೇಕ ರಸನಿಪುಣನಭಿಧಾನ ಪ್ರವೀಣಂ (ಹಚಕಾ. ೧–೪). [ಅಭಿಧಾನ + ಪ್ರವೀಣ]

**ಅಭಿಧಾವೃತ್ತಿ** (ನಾ). ವಾಚ್ಯಾರ್ಥಗಳನ್ನು ತಿಳಿಸುವ ಶಬ್ದಶಕ್ತಿ : ಸಂಕೇತಿತವಾದ ಅರ್ಥವನ್ನು ಸಾಕ್ಷಾತ್ತಾಗಿ ತಿಳಿಸುವ ಶಬ್ದಶಕ್ತಿಗೆ ಅಭಿಧಾವೃತ್ತಿಯೆಂದೂ . . . ಹೆಸರು (ಭಾರವಿಾ. ೨೨೩). [ಅಭಿಧಾ + ವೃತ್ತಿ]

**ಅಭಿಧಾವ್ಯಾಪಾರ** (ನಾ). = ಅಭಿಧಾವೃತ್ತಿ : ಶಬ್ದವು ಮುಖ್ಯವಾದ ವೃತ್ತಿಯನ್ನು (= ಅಭಿಧಾವ್ಯಾಪಾರವನ್ನು) ಬಿಟ್ಟು ಗುಣವೃತ್ತಿಯಿಂದ (= ಲಕ್ಷಣಾವ್ಯಾಪಾರದಿಂದ) ಅರ್ಥವನ್ನು ಬೋಧಿಸುವುದಕ್ಕೆ ಒಂದು ಪ್ರಯೋಜನವೇ ಕಾರಣವಾಗಿರುವುದಷ್ಟೆ (ಧ್ವನ್ಯಾಲೋ. ೪೬). [ಅಭಿಧಾ + ವ್ಯಾಪಾರ]

**ಅಭಿಧೀಯಮಾನ** (ನಾ). ವಾಕ್ಯದ ವಾಚ್ಯಾರ್ಥ; ಅಭಿಧಾವೃತ್ತಿಯಿಂದ ತೋರುವ ಅರ್ಥ: ವಾಕ್ಯದಿಂದ ತಿಳಿದುಬರುವ ವಕ್ತೃವಿನ ಒಟ್ಟು ಅಭಿಪ್ರಾಯಕ್ಕೇ ಇಲ್ಲಿ ತಾತ್ಪರ್ಯವೆಂದು ಹೆಸರು; ಇದು ಅಭಿಧೀಯಮಾನ, ಪ್ರತೀಯಮಾನ, ಧ್ವನಿರೂಪ ಎಂದು ಮೂರು ಬಗೆ (ಭಾರಮಿಾ. ೯೧). [ಸಂ.]

**ಅಭಿಧೆ** (ನಾ). ೧. ಹೆಸರು; ನಾಮಧೇಯ. ೨. ಮುಖ್ಯವೆನಿಸಿದ ವಾಚ್ಯಾರ್ಥವನ್ನು ಕೊಡುವ ಶಬ್ದಶಕ್ತಿ. ೩. ಮಾತು; ಶಬ್ದ. [ಸಂ. ಅಭಿಧಾ]

**ಅಭಿಧೇಯ** (ನಾ). ಹೆಸರುಳ್ಳ ವಸ್ತು; ಅಂಕಿತವುಳ್ಳದ್ದು: ಇವು ಕಾಳಿಂಗಾಭಿಧೇಯಪ್ರವಿದಿತಮಿವು ಕಾಂಭೋಜ ಬಾಹ್ಲೀಕ ದೇಶೋದ್ಭವಮಶ್ವಂ (ಕಾದಂಉ. ೮೨೫). ೨. ಶಬ್ದದ ಅರ್ಥ: "ಅಭಿಧೇಯಮೆಂದು ಅರ್ಥಂ" (ಶಮದ. ೭ ವೃತ್ತಿ). [ಸಂ.]

**ಅಭಿಧೇಯಾರ್ಥ** (ನಾ). ಶಬ್ದದ ಅಥವಾ ವಾಕ್ಯದ ಮುಖ್ಯಾರ್ಥ; ವಾಚ್ಯಾರ್ಥ: ಸಂಕೇತಿತವಾದ ಅರ್ಥವನ್ನು ಸಾಕ್ಷಾತ್ತಾಗಿ ತಿಳಿಸುವ ಶಬ್ದಶಕ್ತಿಗೆ ಅಭಿಧಾವೃತ್ತಿಯೆಂದೂ, ಇದರಿಂದ ತಿಳಿದುಬರುವ ಅರ್ಥಕ್ಕೆ ಅಭಿಧೇಯಾರ್ಥ, ವಾಚ್ಯಾರ್ಥ ಅಥವಾ ಮುಖ್ಯಾರ್ಥ ಎಂದೂ ಹೆಸರು (ಭಾರಮಿಾ. ೨೨೩). [ಅಭಿಧೇಯ + ಅರ್ಥ]

**ಅಭಿಧ್ಯೆ** (ನಾ). ೧. ಏನನ್ನಾದರೂ ಕುರಿತು ಚಿಂತಿಸುವುದು; ಚಿಂತನೆ. ೨. ಬಯಕೆ; ಆಸೆ: "ಭಿಕ್ಷುವು, ಮಹಾರಾಜ, ಲೋಕದ ಮೇಲಿನ ಅಭಿಧ್ಯೆಯನ್ನು ಬಿಟ್ಟು, ಅಭಿಧ್ಯೆ ಹೋದ ಚಿತ್ತದಿಂದ ವಿಹರಿಸುವನು . . ." (ಬುದ್ಧಪ. ೧೯೧). ೩. ಹೆರವರ ವಸ್ತುಗಳನ್ನು ತನಗಾಗಿ ಬಯಸುವ ದುರಾಶೆ. [ಸಂ. ಅಭಿಧ್ಯಾ]

**ಅಭಿನಂದನ** (ನಾ). ೧. ಸಂತೋಷವನ್ನುಂಟುಮಾಡುವವನು: ಸಮಸ್ತ ವಿದ್ಯಾಪತಿ ನಾಭಿನಂದನನುಪಾಶ್ರಿತ ಭವ್ಯ ಜನಾಭಿನಂದನಂ (ಆದಿಪು. ೧–೪೦). ೨. ಕೊಂಡಾಟ; ಪ್ರಶಂಸೆ; ಗೌರವ ತೋರಿಸುವುದು. ೩. ಅಪೇಕ್ಷೆ; ಆಶೆ. ೪. ಸಂತೋಷ ಸೂಚನೆ. [ಸಂ.]

**ಅಭಿನಂದನೀಯ** (ಗು). ಅಭಿನಂದನೆಗೆ ಅರ್ಹವಾದ. [ಸಂ.]

**ಅಭಿನಂದನೆ** (ನಾ). ೧. = ಅಭಿನಂದನ ೨: ಅಭ್ಯಾಸ, ಅನುಭವ, ಮನೋಭಾವ, ಅಭಿನಂದನೆ – ಇತ್ಯಾದಿಯನ್ನೆಲ್ಲಾ ಒಳಗೊಂಡು ಸಮಾಜ ಜೀವನದ ವಿವಿಧ ಅನುಭವ ಕ್ಷೇತ್ರಗಳನ್ನು ಪ್ರತಿಬಿಂಬಿಸುತ್ತದೆ (ಶಿಕ್ಷದ. ೧೬೩). ೨. = ಅಭಿನಂದನ ೪: ಅದಕ್ಕಾಗಿ ನಿಮಗೆ ನಾನು ತುಂಬಾ ಅಭಿನಂದನೆಗಳನ್ನು ಸಲ್ಲಿಸುತ್ತೇನೆ (ಕಾವೇರಿ. ೧೯). [ಸಂ. ಅಭಿನಂದನಾ]

**ಅಭಿನಂದಿಸು** (ಕ್ರಿ). ೧. ಹೊಗಳು; ಕೊಂಡಾಡು; ಪ್ರಶಂಸಿಸು: ಇಂದಿನ ಕಾರ್ಯಕ್ರಮವನ್ನು ಸಾಂಗಗೊಳಿಸಿದ್ದಕ್ಕೆ ಅವರನ್ನು . . . ಅಭಿನಂದಿಸುತ್ತೇನೆ (ಆಚೋಲಿ. ೧೬೯). ೨. ಸಂತೋಷವನ್ನು ಸೂಚಿಸು. [ಅಭಿನಂದನ + –ಇಸು$_3$]

**ಅಭಿನಮಿಸು** (ಕ್ರಿ). ನಮಸ್ಕರಿಸು; ವಂದಿಸು: ನಳಿನನಾಭನ ಪಾದಪದ್ಮವನೊಲವಿನಿಂದಭಿನಮಿಸಿ ಭಟಾವಳಿಗೆ ನೇಮವ ಕೊಟ್ಟನಂತಕಸೂನುಸಂಗರಕೆ (ಕುವ್ಯಾದ್ರೋ. ೯–೧೧). [ಅಭಿನಮನ್$_0$ + –ಇಸು$_3$]

**ಅಭಿನಯ** (ನಾ). ೧. (ನಾಟಕ ಅಥವಾ ನೃತ್ಯದಲ್ಲಿ) ಅಂತರಂಗದ ಭಾವಗಳನ್ನು ಅಂಗಚಲನಾದಿಗಳಿಂದ ತೋರಿಸುವುದು: ಪ್ರಕರಣದಿಂ ಶಬ್ದಾಂತರದ ಕೂಟದಿಂದಭಿನಯಂಗಳಿಂದಿಷ್ಟಾರ್ಥ ಪ್ರಕಟನಮಕ್ಕುಂ (ಕಾವ್ಯಾವ. ೪೩೧); ಪಿಡಿದಭಿನಯಿಸಿದರೆಸೆವಭಿನಯಮಂ (ಚಂದ್ರಪು. ೪–೬೩ ವ). ೨. ಅಂಗವಿನ್ಯಾಸಾದಿಗಳಿಂದ ರಸಭಾವಗಳನ್ನು ಪ್ರಕಟಿಸುವುದು: ಪ್ರಕಟಾಂಗಿಕ ವಾಚಿಕ ಸಾತ್ವಿಕಮಾಹಾರ್ಯಂಗಳೆಂಬ ನಾಲ್ಕಭಿನಯಮಂ (ಅಜಿಪು. ೫–೯). ೩. ನೈಜವಲ್ಲದ ತೋರಿಕೆ; ನಟನೆ; ಕಪಟ. [ಸಂ.]

**ಅಭಿನಯಗೊಡು** (ಕ್ರಿ). ಅಭಿನಯ ಸಮೇತವಾಗು: ಪಿರಿದು ಸುಳಾದಿ ತಾಳದಲಿ ಕರದಭಿನಯಗೂಡಿ ಕಡು ಕುಶಲದೆ ನಾಟ್ಯದಿರವ ಮೆಱೆದ ರಂಗನೆಯರು (ಕಂನವಿ. ೮–೬೧). [ಅಭಿನಯ + ಕೊಡು$_1$]

**ಅಭಿನಯಚತುಷ್ಟಯ** (ನಾ). ಆಂಗಿಕ, ವಾಚಿಕ, ಸಾತ್ವಿಕ, ಆಹಾರ್ಯ ಎಂಬ ನಾಲ್ಕು ಬಗೆಯ ಅಭಿನಯ: ಅಂಗ ಪ್ರತ್ಯಂಗ ಸಂಭವಾಂಗಿ ಕಾದ್ಯಭಿನಯ ಚತುಷ್ಟಯ ಪ್ರಯುಕ್ತ ಶ್ರುತಕಳಾಪರಿಣತನುಂ (ಚಂದ್ರಪು. ೪–೮೦ ವ). [ಅಭಿನಯ + ಚತುಷ್ಟಯ]

**ಅಭಿನಯಶಾಸ್ತ್ರ** (ನಾ). ಅಭಿನಯಕ್ರಮವನ್ನು ತಿಳಿಸುವ ಶಾಸ್ತ್ರ; ನಾಟ್ಯಶಾಸ್ತ್ರ: ಮಾನವನು ನೃತ್ಯ ಮೊದಲಾಗಿ ಅಭಿನಯಶಾಸ್ತ್ರವನ್ನು ಮಾಡಿಕೊಂಡನು (ಸಾಹಿವಿ. ೧೨೮). [ಅಭಿನಯ + ಶಾಸ್ತ್ರ]

**ಅಭಿನಯಿಸು** (ಕ್ರಿ). ಅನುಕರಿಸಿ ತೋರು; ನಟನೆಯಿಂದ ತೋರಿಸು: "ಅಭಿನಯಿಸು – ಅನುಕರಣೇ" (ಶಮದಾ); ಆಗಳ್ ಕರ್ಣನ ಬೞಿವೞಿಯನೆ ಪೋಪುದನಭಿನಯಿಸುವಂತೆ . . . ಮೂರ್ಛೆವೋದ ದುರ್ಯೋಧನನಂ (ಪಂಪಭಾ. ೧೨–೨೦ ವ); ಅಱ್ತಿಯಿಂದಾಂ ರಾಮಚಂದ್ರನಾಗಿಯುಂ ಮಹಾದೇವಿ ಸೀತಾದೇವಿಯಾಗಿಯುಂ ನಾಟಕಮನಭಿಯಿಸಿ (ಪಂಚತಂ. ೧೯೬–೧೨); ದಿವಿಜರಂ ಜಱಿಜಱಿವುತಭಿನಯಿಸಿ ಹಾಸ್ಯರಸಮಂ ಸಭೆಗೆ ಕರೆಕರೆವುತುಂ ಭೃಂಗಿ . . . ಶಿವನಿದಿರೊಳೆಸೆದಿರ್ದನು (ಚಿಬಪು. ೨–೨೭); ಕಾವ್ಯದ ಒಂದು ದೃಶ್ಯವನ್ನು ಅಭಿನಯಿಸುವುದಾಗಿ ಹೇಳಿದರು (ಶಾಲೆಮ. ೭೪). [ಅಭಿನಯ + –ಇಸು$_3$]

**ಅಭಿನಲಿಸು** (ಕ್ರಿ). ಅಭಿನಯಿಸು; ಕುಣಿಸು: ಮುದ್ರಿಗಳಿಂದಲಿ ಬಲು ರಮ್ಯವಾದ ಹಸ್ತ ಅದ್ರಿಯ ನೆಗಹಿದ ಅಗೋಚರವಾದ ಹಸ್ತ (ಕಾ)ಕದ್ರುವೆ ತುಳಿವಾಗ ಅಭಿನಲಿಸುವ ಹಸ್ತ ಆದ್ರುತ (ಅದ್ವೈತ) ವಿಜಯವಿಠಲ ತಿರುವೆಂಗಳ,ಭದ್ರ ಗಜರಾಜ ವರದನ್ನ ಹಸ್ತ (ತೀರ್ಥಮ. ೧೫೬–೬). [ಅಭಿ$_0$ + ನಲಿಸು]

**ಅಭಿನವ** (ಗು). ಹೊಸದಾದ; ನೂತನವಾದ: ಉಭಯಕವಿಚಕ್ರವರ್ತಿಗಮಭಿನವಚಕ್ರವರ್ತಿಗಂ ದೊರೆಯೊಳರೆ (ಅಜಿಪು. ೧೨–೩೯). [ಸಂ.]

**ಅಭಿನವಾಗತ** (ನಾ). ಹೊಸದಾಗಿ ಬಂದವನು: ಭುವನಾಧೀಶ್ವರಸುತನಭಿನವಾಗತಂ ಮಾನ್ಯನಪ್ಪನಾರಾಧ್ಯನೆ ದಲ್ (ಕಾದಂಉ. ೫೪). [ಸಂ.]

**ಅಭಿನವಿಸು** (ಕ್ರಿ). ಹೊಸದು ಮಾಡು; ಹೊಸದಾಗಿ ಮಾಡು; ಅತ್ಯುತ್ತಮ ರೀತಿಯಲ್ಲಿ ನಡಸು, —ನೆರವೇರಿಸು: ಚೆಲುವು ಮಿಗೆ ಪೂಜಾಪ್ರಬಂಧಗಳನಭಿನವಿಸುವಂ [ಪಾಠಾಂ. ನಯಿ] ದಶಾಂಗಾಮಿಳಿತ ಧೂಪವನಿತ್ತು ದೀಪಾರತಿಯನೆತ್ತುವನು (ಬಸಪು. ೪೧–೨೨); ಮಲುಹಣಸ್ತವವೆನಲು ತತ್ಕ್ಷಣದೊಳಗೆ ಮೂವತ್ತಾಱು ಶ್ಲೋಕಂಗಳನಭಿನವಿಸಿ [ಪಾಠಾಂ. ಮಿಸಿ] ರಚಿಸಿದಾಗಳ್ ಮೆಚ್ಚಿ ಶಂಕರನು (ಬಸಪು. ೪೨–೩೯); ಚೆಲುವು ಮಿಗೆ ರುದ್ರಾಕ್ಷಿವಲಯಾವಳಿಗಳಂ ಸೌವರ್ಣಪಟ್ಟಂಗಳನಭಿನವಿಸಿ ಬಾಸಿಗಂಗಳನಿಕ್ಕಿ ಹಣೆಗಳಲಿ (ಬಸಪು. ೫೬–೬). ೨. ಹೊಸದಾಗು; ಸೊಗಸಾಗು: ಗಂಗಾದೇವಿಯುರದಲಿ ಮೊಳೆವುತಿರ್ದವು ಮೊಲೆಗಳನಭಿನವಿಸಿ (ಬಸಪು. ೪–೨೧). [ಅಭಿನವ + –ಇಸು$_3$]

**ಅಭಿನಾಳಿ** (ನಾ). ಅಭಿನಯಗಳ ಸಮೂಹ (?): ಪೇಳೆನಗೆ ತಾಳಮರ್ದಳೆ ಗೀತ ಸಮ್ಮೇಳಗಳ ಗತಿಗೆಯಡಿಯಂ ನಟಿಸಿಯಖಿಳಯಭಿನಾಳಿಗಳ ಕರನೇತ್ರಯುಗಂಗಳಿಂದೆ ತೋರುವ ಪ್ರೌಢನಾಯಕಿಯಳಾ ಲೀಲೆ (ನವಮೋ. ೫–೪). [ಸಂ. ಅಭಿನಯಾಳಿ ?]

**ಅಭಿನಿರೂಪಣ** (ನಾ). ಚೆನ್ನಾಗಿ ನಿರೂಪಿಸುವುದು ; ಉತ್ತಮವಾದ ವಿವರಣೆ. 'ಅಭಿನಿರೂಪಣಂಗೆಯ್' ಪರಾ. [ಸಂ.]

**ಅಭಿನಿರೂಪಣಂಗೆಯ್** (ಕ್ರಿ). ಚೆನ್ನಾಗಿ ನಿರೂಪಿಸು, —ವಿವರಿಸು : ಸುರಭಿ ಸುಗಂಧದ್ರವ್ಯಂ ಸುರಭಿ [ಗ್ರೀಷ್ಮರ್ತು] ಸುರಭಿ ಸರ್ವ ಮನೋಜ್ಞಂ ಸುರಭಿ ಸುರಧೇನುವೆಂದಭಿನಿರೂಪಣಂಗೆಯ್ವರರಮೆ ಶಬ್ದಾಗ ಮಿಕರ್ (ವಸ್ತುಕೋ. ೧೩೫–೧೦೧).
[ಅಭಿನಿರೂಪಣ + ಗೆಯ್ (< ಕೆಯ್₁)]

**ಅಭಿನಿರ್ಮುಕ್ತ** (ಗು). ೧. ಬಿಡಲ್ಪಟ್ಟ ; ಬಿಟ್ಟ. (ನಾ). ೨. ಹೊತ್ತು ಮುಳುಗುವ ವೇಳೆಯಲ್ಲಿ ನಿದ್ರಿಸುವವನು. [ಸಂ.]

**ಅಭಿನಿರ್ಯಾಣ** (ನಾ). ದಂಡಯಾತ್ರೆ ; ಧಾಳಿ ನಡಸುವುದು. [ಸಂ.]

**ಅಭಿನಿವೇಶ** (ನಾ). ೧. ಆದರ ; ಆಸಕ್ತಿ : ಪುರುಷನಾತ್ಮಸಮಯಗುಣ ಪರಸಮಯದೋಷ ವಿಶೇಷ ಪರಿಚ್ಛೇದದಿನಾವುದೊಂದು ಗುಣ ಬಹುಳ ಮವಱಿೞೊಳಭಿನಿವೇಶಂ ಶ್ರೇಯಂ (ಅಜಿಪು. ೮–೨೪ ವ). ೨. ಮನಸ್ಸಿನಲ್ಲಿ ಬಹಳ ಕಾಲದಿಂದ ಬಲವಾಗಿ ಹುದುಗಿರುವ ಅಭಿಪ್ರಾಯ ವಿಶೇಷ ; ನಂಬಿಕೆ : ಆದಱಿಂ ಪರಲೋಕ ಸುಖಾರ್ಥಮಾತ್ಮಾಸ್ತಿತ್ವಾಭಿನಿವೇಶದಿಂ ತನುಧನ ನಿಧನಂಮಾಡಿ ಸೇದೆಗಿಡಲ್ವೇಡ (ಆದಿಪು. ೨–೯ ವ) ; ಅರಿಸ್ಟಾಟಲನ . . . ಮತಗಳ ಮೇಲಿನ ಅಭಿನಿವೇಶವು ಸುಲಭವಾಗಿ ಹೋಗುವುದೇ (ವಿಜ್ಞಾ.ಕ. ೩೪). ೩. ಹಿಡಿದ ಕೆಲಸವನ್ನು ಸಾಧಿಸುತ್ತೇನೆಂಬ ದೃಢ ನಿಶ್ಚಯ, —ಹಟ. [ಸಂ.]

**ಅಭಿನಿಷಾದಿ** (ನಾ). ಎದುರಿಗಿರುವ ಮಾವಟಿಗ ; ಸಮ್ಮುಖದಲ್ಲಿರುವ ಜೋದ, —ಮಾವುತ : ವಿಪಕ್ಷವಿಶಿಖಮೋಕ್ಷ ಟಂಕಾರಮನೆ ಜಗಡು ದಗ್ರನಿಜವೀರಗ್ರಹಸ್ತೋಭನಾಕ್ಷರಮೆಂದುಂ ಬಗೆದಭಿನಿಷಾದಿಯುಮಂ . . . ನಿಜವಿಜಯ ಸಿಂಧುರಮುಮಂ ತಿಣ್ಣಂ ನೂಂಕಲುಮವುಂಕಲುಂ ಬೆಸಸಿ (ಆದಿಪು. ೧೪–೯೮ ವ). [ಸಂ.]

**ಅಭಿನೀತ** (ಗು). ೧. ಹತ್ತಿರಕ್ಕೆ ಒಯ್ಯಲ್ಪಟ್ಟ. ೨. ಅಭಿನಯಿಸಲ್ಪಟ್ಟ; ಅಭಿನಯಿಸಿದ. ೩. ಉತ್ತಮವಾಗಿ ಕಳೆಗೊಳಿಸಿದ, —ಸಂಸ್ಕರಿಸಿದ; ಅತ್ಯಂತ ಶ್ರೇಷ್ಠವಾದ. ೪. ಉಚಿತವಾದ; ಯುಕ್ತವಾದ; ಯೋಗ್ಯವಾದ; ಒಪ್ಪತಕ್ಕ. (ನಾ). ೫. ಸಮಚಿತ್ತ ; ದಯಾಳು ; ಕ್ಷಮಾಶೀಲ ; ಸ್ನೇಹಪರ. [ಸಂ.]

**ಅಭಿನುತ** (ಗು). ಸ್ತೋತ್ರಮಾಡಲ್ಪಟ್ಟ ; ಹೊಗಳಲ್ಪಟ್ಟ ; ಶ್ರೇಷ್ಠವಾದ : ಅಭಿನುತಕಲ್ಪಮಹೀಜಂಗಳಿಂ (ಶಾಂತಿಪು. ೬–೧೦೦). [ಸಂ.]

**ಅಭಿನುತಿ** (ನಾ). ಹೊಗಳಿಕೆ ; ಕೊಂಡಾಟ ; ಸ್ತೋತ್ರ : ನಿರ್ಮಳತರ ತನುವನೀಯನೆ ಮಯೂರಂಗಭಿನುತಿಗೆ ಮೆಚ್ಚಿ (ಬಸಪು.೫೪–೬೯). [ಸಂ.]

**ಅಭಿನುತಿಸು** (ಕ್ರಿ). ಕೊಂಡಾಡು ; ಸ್ತೋತ್ರಮಾಡು ; ಹೊಗಳು : ಇಳೆಯುಂ ಶಿವಶರಣರುಂ ಅಭಿನುತಿಸೆ (ಉದ್ಭದೇ. ೩–೧೪).
[ಅಭಿನುತಿ + –ಇಸು₃]

**ಅಭಿನೂತ** (ಗು). = ಅಭಿನುತ : ಅಭಿನೂತಕೇತಕೀಕಿಸಲಯಾಪಹಸಿತ ಕರತಲಪಲ್ಲವೆ (ಸುಕುಮಾ. ೯–೧೦೭ ವ). [ಸಂ.]

**ಅಭಿನೂತೆ** (ನಾ). ಹೊಗಳಲ್ಪಟ್ಟವಳು ; ಶ್ರೇಷ್ಠಳಾದವಳು : ನೃಪೇಂದ್ರನಾ ವನಾಂತದಿನಭಿನೂತೆಯಪ್ಪ ಪರಿಚಾರಿಕೆ ಚಂಪಕಮಾಲೆಯೆಂಬೊಳ್ (ನೇಮಿಪು. ೩–೧೪೮). [ಸಂ. ಅಭಿನೂತಾ]

**ಅಭಿನೇತೃ** (ನಾ). ನಟ; ಅಭಿನಯಿಸುವವನು : ಕಾಲಕ್ರಮದಲ್ಲಿ ಅವರು ಪಾಕಿಸ್ತಾನದ ಅಭಿಪ್ರಾಯದ ಅಭಿನೇತೃವಾದರು (ಬೆಸಂಕ. ೧೧–೨–೬೫ ; ೮–೩). [ಸಂ.]

**ಅಭಿನೇತ್ರಿ** (ನಾ). ನಟಿ : ಅಭಿನೇತ್ರಿಯ ರಾಣಿಗೆ ಅಭಿವಂದನೆ (ಆಶ್ರಮು. ೮೬). [ಸಂ. ಅಭಿನೇತ್ರೀ]

**ಅಭಿನೇಯ** (ಗು). ೧. ಅಭಿನಯಿಸಿ ತೋರತಕ್ಕ. (ನಾ). ೨. ದೃಶ್ಯ ಕಾವ್ಯ : ಕಾವ್ಯಗಳನ್ನು ದೃಶ್ಯವೆಂದೂ, ಶ್ರವ್ಯವೆಂದೂ ಭಾಗಮಾಡುವುದು ಎರಡನೆಯ ಕ್ರಮ, ದೃಶ್ಯಕ್ಕೆ ಅಭಿನೇಯವೆಂದೂ ಹೆಸರು (ಕೃಪಿಡಿ. ೧೪೧). ೩. [ಕಾವ್ಯಮೀ] ವ್ಯಂಗ್ಯಧ್ವನಿ : ಅಭಿನವಗುಪ್ತರು ಅಭಿನೇಯಾರ್ಥ ಎಂಬ ಮೂಲದ ಶಬ್ದಕ್ಕೆ ಅಭಿನೇಯ =ವ್ಯಂಗ್ಯಧ್ವನಿ ; ಆದರ ವ್ಯಂಜಕ = ವಾಚ್ಯಾರ್ಥ = ಕಾವ್ಯಾರ್ಥ ಎಂದು ನಯನ ಮಾಡಿದ್ದಾರೆ (ಧ್ವನ್ಯಾಲೋ. ೧೪೯). [ಸಂ.]

**ಅಭಿನೇಯಾರ್ಥ** (ನಾ). ನಾಟಕವೇ ಮೊದಲಾದ ರೂಪಕ ಪ್ರಭೇದಗಳು : ಕಾವ್ಯದಲ್ಲಿ ಅನೇಕ ಪ್ರಭೇದಗಳುಂಟು . . . 'ಅಭಿನೇಯಾರ್ಥ', 'ಆಖ್ಯಾಯಿಕಾ', 'ಕಥಾ' ಇತ್ಯಾದಿಗಳು (ಧ್ವನ್ಯಾಲೋ. ೧೪೧).
[ಅಭಿನೇಯ + ಅರ್ಥ]

**ಅಭಿನ್ನ** (ಗು). ೧. ಬೇರೆಯಲ್ಲದ ; ಒಂದೇ ಆದ : ಭಿನ್ನನಂತಿರೆ ತೋಱಿ ಭಿನ್ನಾಭಿನ್ನನೆನಿಸಿಯೆ ಮೆಱೆವ ತಿಳಿಯಲಭಿನ್ನನೈ (ಕುವ್ಯಾಉ. ೯–೭೧). ೨. ಒಡೆಯದ ; ಮುರಿಯದ : ಅಭಿನ್ನಸುವ್ರತಲೋಲ ಗುಣಸಂಪನ್ನ ನಂಗವಿಕಾರದೂರೈಕಪ್ರವರ್ತನನು (ಬಸವು. ೩೦–೨). ೩. ವ್ಯತ್ಯಾಸ ಹೊಂದದ. [ಸಂ.]

**ಅಭಿನ್ನಾಂಗಿ** (ನಾ). ಏಕರೂಪಳು ; ಒಂದೇ ರೂಪವುಳ್ಳವಳು : ಹಿಮಶೈಳದೊಳಂ ಜಳಧಿಯೊಳಮೆಂತಭಿನ್ನಾಂಗಿ ಗಂಗೆ ಸಂಗತೆ (ಆದಿಪು. ೧–೭೭). [ಸಂ. ಅಭಿನ್ನಾಂಗೀ]

**ಅಭಿಪನ್ನ** (ನಾ). ೧. ಆಶ್ರಯಿಸಿದವನು ; ಮರೆಹೊಕ್ಕವನು : ಜೈವಾತೃಕರ್ ದೋಷಾಕರರಲ್ತು ; ಪುರಸ್ಕೃತರಭಿಪನ್ನರಲ್ತು (ರಾಮಾಶ್ವ. ೭–೨೩). ೨. ಕಷ್ಟಕ್ಕೆ ಸಿಕ್ಕಿದವನು. ೩. ಶತ್ರುವಿನ ಆಕ್ರಮಣಕ್ಕೆ ಗುರಿಯಾದವನು. ೪. ತಪ್ಪುಕೆಲಸ ಮಾಡಿದವನು. [ಸಂ.]

**ಅಭಿಪಾತ** (ಗು). ಪ್ರಗತಿಹೊಂದುತ್ತಿರುವ ; ಮುನ್ನಡೆಯುತ್ತಿರುವ : ನಾವೀಗ ಕಾಣುತ್ತಿರುವುದು ತೀರ ಬೇರೆಯಾಗಿರುವಂಥ ವಿಶಾಲವೂ ಅಭಿಪಾತವೂ ಹಾಗೂ ಕಲಾನಿರೂಪಣಾತ್ಮಕವಾಗಿ ಅರ್ಥವಿವರಣೋಪೇತವೂ ಆದ ಆಂದೋಲನದ ಮೊದಲನೆಯ ಮೆಟ್ಟಲು (ಪ್ರಬಂಧ. ೧೩೩). [ಸಂ.]

**ಅಭಿಪ್ರಾಣಿ** (ನಾ). ಸಾಧು ; ಬಡಜೀವಿ : ನಮ್ಮ ತರಲ ಎಂಥ ಒಳ್ಳೇ ಹುಡುಗ ! ಈ ದಿಕ್ಕೇಡಿ ಹಿಮಿ ಅವನ ಮೇಲೆ ವಿಧವಾವಿವಾಹದ ಆರೋಪ ಹೊರಿಸಿದ್ದಳು. ಅವನು ಅಭಿಪ್ರಾಣಿ, ಲೋಕಲಜ್ಜೆಗೆ ಅಂಜಿ ಊರುಬಿಟ್ಟೇ ಓಡಿಹೋದ (ಎರಸ. ೫೯) ; ನಾನೊಂದು ಅಣುಜೀವ, ಅಭಿಪ್ರಾಣಿ (ಅಂತರಾ. ೭). [ಸಂ.]

**ಅಭಿಪ್ರಾಯ** (ನಾ). ೧. ಮನಸ್ಸಿನ ಭಾವ ; ಇಷ್ಟ ; ಆಶಯ : ಆ ಯುವತಿರತ್ನಮುಂ ಭವದೀಯಾತ್ಮಜ ಪುರುಷರತ್ನದೊಳ್ ಕೂಡುವಭಿಪ್ರಾಯಂ ಪ್ರೀತಿಲತಾಶಾಖಾಯಮುನದರ್ಪಣೆನೆ (ಶಾಂತಿಪು. ೫–೩೪) ; ಪ್ರಾಯಂ ಕೂಸಾದೊಡಭಿಪ್ರಾಯಂ ಕೂಸಕ್ಕುಮೆ(ಶಮುದ. ೨೪೩ ಪ್ರಯೋ). ೨. ಗುರಿ ; ಉದ್ದೇಶ : ನಿನ್ನ ಅಭಿಪ್ರಾಯ ನನಗೆ ತಿಳಿಯಲಿಲ್ಲ (ರೂಢಿ). ೩. ತಾತ್ಪರ್ಯ. [ಸಂ.]

**ಅಭಿಪ್ರೇತ** (ಗು). ಅಭಿಪ್ರಾಯಪಟ್ಟ ; ಉದ್ದೇಶಪಟ್ಟ : ತೈಜಸಕರ್ಮಣದ್ವಯಂ ಸಂಸಾರಿಜೀವಕ್ಕೆ ಅಭಿಪ್ರೇತಗತಿ ನಿರೋಧ ಹೇತುವಕ್ಕುಂ (ತತ್ತ್ವಪ್ರ. ೧೦೭). (ನಾ). ೨. ಅಭಿಪ್ರಾಯ ; ಉದ್ದೇಶ : ಈ ತರದುದ್ಧತಾಘನಿಕರಂ ಕಿಡುಗುಂ ದಲಮೋಘಮೆಂಬಭಿಪ್ರೇತದಳುರ್ಕೆಯುಂ ರುಚಿಯುಮಿಲ್ಲದೊಡೇವುವೊ ಪೇೞ್ ವ್ರತಾದಿಗಳ್ (ಜೀವಸಂ. ೧೧–೪) ; ತಾತ್ವಿಕವಾಗಿ ಕಾಮತತ್ವದ ವಿಜಯ, ಕಾವನಗೆಲ್ಲ ಇದರಲ್ಲಿ ಅಭಿಪ್ರೇತವಾಗಿದೆ (ಕಸಾಚ. ೨೧೦) ; ಅಭಿಪ್ರೇತವಾದ ರಸವು ಧ್ವನಿತವಾಗುವುದೆಂದು ಒಪ್ಪಲೇ ಬೇಕು (ಧ್ವನ್ಯಾಲೋ. ೧೪೦). [ಸಂ.]

**ಅಭಿಭವ** (ನಾ). ೧. ಸೋಲು. ೨. ದೈನ್ಯ; ಕಷ್ಟ; ಪಾಡು : ಪ್ರಭುವಾಕ್ಯದಿಂದಂಜದಾತ್ಮಾಮೃತವನುಂಡು ಅಭಿಭವವಳಿದೀಶರಹರು (ಭರಚ. ೬೬-೧೩೫). ೩. ತಿರಸ್ಕಾರಕ್ಕೆ ಗುರಿಯಾಗುವುದು ; ಅವಮಾನ : ಪ್ರಭು ಕಿಜಿಯಾತನಂ ನಿಜಿಸಿ ರಾಜ್ಯದೊಳಿನ್ನನವಸ್ತುಮಾಡಿ ಪೂರ್ಣ್ಣಾಭಿಭವಮಾಗಳೀ ಭವದೊಳಿಂತಿದು ನೀಗದು (ಆದಿಪು. ೨-೩೯). [ಸಂ.]

**ಅಭಿಭವದಾಯಿ** (ನಾ). ಕಷ್ಟವನ್ನು ತರತಕ್ಕವನು ; ಸೋಲುಂಟು ಮಾಡುವವನು : ಜೀಯ ಭಾಸ್ಕರಭೌಮರಶುಭಸ್ಥಾಯಿಗಳು ಗುರು ಮಂದರಭಿಭವದಾಯಿಗಳು (ಕುವ್ಯಾಅ. ೨೨-೪).
[ಸಂ. ಅಭಿಭವದಾಯಿನ್]

**ಅಭಿಭವಮೆಯ್ದು** (ಕ್ರಿ). ಸೋಲನ್ನು ಹೊಂದು ; ಅವಮಾನವನ್ನು ಪಡೆ : ಅಭಿಭವಮೆಯ್ದಿದ ತನಗಿಂ ಸ್ವಭಾವ ಸೌಭಾಗ್ಯವಟಿಯೆ ಬೇಡಿದೊಡಂ ದುರ್ಲಭಮಕ್ಕು (ಜಗವಿ. ೧೨-೬೩). [ಅಭಿಭವ + ಎಯ್ದು]

**ಅಭಿಭವಿಸು** (ಕ್ರಿ). ೧. ಸೋಲಿಸು : ಅಭಿಭವಿಸಿ ಕಪಿಧ್ವಜಿನಿಯುನ ಭಯರ್ ಪರಿತಂದು ರಾಮಲಕ್ಷ್ಮಣರಂ ಕಂಡು (ಪಂರಾಮಾ. ೧೪-೯೨). ೨. ತಿರಸ್ಕಾರಕ್ಕೆ ಗುರಿಮಾಡು; ಅವಮಾನಗೊಳಿಸು: ನಾನಾ ನಿಶಿತ ಸ್ಫುರಿತ ಹೇತಿಪ್ರಭೆಯನುಳ್ಕಾಪಾತ ಪ್ರಭೆಗಳಭಿಭವಿಸೆಯುಂ (ಜಗವಿ. ೧೨-೨೮ ವ). ೩. ಆಯಾಸಗೊಳಿಸು ; ಸಂಕಟಪಡಿಸು ; ಶಕ್ತಿಗುಂದಿಸು : ಅಭಿಮನ್ಯು ಮರಣವಾರ್ತಾ ಪ್ರಭೂತಶೋಕಾಗ್ನಿ ಧರ್ಮತನಯನನಿರದಂದಭಿಭ [ಪಾಠಾಂ. ನ] ವಿಸಿ ತನ್ನನಳುರ್ದಂತೆ ಭಾಸ್ಕರಂ ಕೆಂಕಮಾದನಸ್ತಾಚಲದೊಳ್ (ಪಂಪಭಾ. ೧೧-೧೦೬) ; ಅಭಿಭವಿಸುವ ಶುಭಕರ್ಮ ಪ್ರಭಾವದಿಂದೀತನಿನ್ನೆಗಂ ಮಿಥ್ಯಾತ್ವಾನುಭವಿಯೆನಿಸಿರ್ದಂ (ಸುಕುಮಾ. ೩-೧೧) ; ಅಭಯಾಮಲಕಾಕ್ಷಂಗಳ್ ಸುಭಾಂಡದಿಂ ಕ್ವಥಿತಮಾದ ಜಲಮಂ ಕುಡಿಸಲ್ಕಭಿಭವಿಪ ವತ್ಸನಾಭಪ್ರಭವಭಯಂ ಪಿಂಗುಗುಂ (ಖಮದ. ೨-೨೯). [ಅಭಿಭವ + -ಇಸು₃]

**ಅಭಿಭಾಷಣ** (ನಾ). ಎದುರಿಗೆ ಮಾತನಾಡುವುದು ; ಕುರಿತು ಹೇಳುವುದು : ಸಭಾಪತಿಯ ಅಭಿಭಾಷಣ (ನಿಬಂಧ. II, ೩೦೧). [ಸಂ.]

**ಅಭಿಭೂತ** (ಗು). ೧. ಸೋತುಹೋದ. (ನಾ). ೨. ತೊಂದರೆಗೆ ಸಿಕ್ಕಿದವನು. ೩. ಅವಮಾನ ಹೊಂದಿದವನು ; ಸೋಲಿಸಲ್ಪಟ್ಟವನು : ವ್ಯಸನಾಭಿಭೂತನಾವನುಮನುರಾಗವೇಗದೆ ಹಿತಾಹಿತಚಿಂತೆಯನೇಕೆ ಮಾಡುಗುಂ (ಪಂರಾಮಾ. ೧೪-೧೧೬). [ಸಂ.]

**ಅಭಿಭೂತಿ** (ನಾ). ೧. ಮಹತ್ತರವಾದ ಶಕ್ತಿ. ೨. ಸೋಲು ; ಪರಾಜಯ. ೩. ಅವಮಾನ. ೪. ಕಷ್ಟ ; ಕ್ಲೇಶ. [ಸಂ.]

**ಅಭಿಮಂತ್ರಣ** (ನಾ). ೧. ಶಾಸ್ತ್ರದಲ್ಲಿ ಸೂಚಿಸಿರುವಂತೆ ಸಂದರ್ಭೋಚಿತವಾದ ಮಂತ್ರಗಳನ್ನು ಜಪಿಸಿ ವಸ್ತುಗಳಿಗೆ ಪವಿತ್ರತೆಯುಂಟು ಮಾಡುವುದು. ೨. ಆಹ್ವಾನ ; ಕರೆ : "(ಅ)ಕಾರಣಂ, ಆಹ್ವಾನಂ, ಅಭಿಮಂತ್ರಣಂ – ಈ ೩ ಕರೆಹ" (ಹಲಾಯು. ೨೫-೧೫೩). [ಸಂ.]

**ಅಭಿಮಂತ್ರಿತ** (ಗು). ೧. ಮಂತ್ರಗಳ ಮೂಲಕ ಸಂಸ್ಕರಿಸಲ್ಪಟ್ಟ : ಪೂತ ಶಿವಮಂತ್ರಾಭಿಮಂತ್ರಿತಭೂತಿ ರುದ್ರಾಕ್ಷಾದಿ ಭೂಷಿತಜಾತನಿರ್ಮಳ ಪಂಚಮುದ್ರಾಧಾರರಂ ಮಾಡಿ (ಬಸಪು. ೪೯-೪೧). ೨. ರಹಸ್ಯವಾಗಿ ಆಲೋಚಿಸಲ್ಪಟ್ಟ. ೩. ಕರೆದ ; ಆಹ್ವಾನಿಸಲ್ಪಟ್ಟ. [ಸಂ.]

**ಅಭಿಮಂತ್ರಿಸು** (ಕ್ರಿ). ೧. ಮಂತ್ರವನ್ನು ಜಪಿಸಿ ಪವಿತ್ರಗೊಳಿಸು,— ಶಕ್ತಿಯುಕ್ತವಾಗಿ ಮಾಡು : ಕಸೆಯಂ ಬಿಟ್ಟುಜದಭಿಮಂತ್ರಿಸಿ ಚಕ್ರಮನಸುರವೈರಿಯಿಡುವಾಗಳ್ (ಪಂಪಭಾ. ೧೨-೨೧೧) ; ಮಂತ್ರದಿನಭಿಮಂತ್ರಿಸಿ ಜಲಮಂ ಮೊಗದೊಳ್ ತಳಿಯೆ (ಲೋಕೋಪ. ೧೦-೧೪) ; ಸಾಯಕಮನಭಿಮಂತ್ರಿಸುತ ವೈನಾಯಕಾಸ್ತ್ರವ ಹೂಡಿದನು (ಕುವ್ಯಾಕ. ೨೦-೩೫). ೨. ಆಹ್ವಾನಿಸು ; ಆಮಂತ್ರಿಸು : ಮಂತ್ರಾಕ್ಷರ ನಿಯಮದಿನಭಿಮಂತ್ರಿಸಿ ಬರಿಸಿದೊಡೆ ವಾಯುದೇವಂ ಬಂದು (ಪಂಪಭಾ. ೧-೧೨೪).
[ಅಭಿಮಂತ್ರಣ + -ಇಸು₃]

**ಅಭಿಮತ** (ಗು). ೧. ಇಷ್ಟವಾದ ; ಒಪ್ಪಲ್ಪಟ್ಟ. (ನಾ). ೨. ಅಭಿಪ್ರಾಯ ; ಮನಸ್ಸಿನ ಭಾವ : ಖಾತಿ ಕಂದದು ಮನದ ಧೈರ್ಯದ ಧಾತು ಕುಂದದು ಲಜ್ಜೆಯಭಿಮತ ಜಾತಿಗೆಡದು ವಿರೋಧ ಬಿಡದು ಯುಧಿಷ್ಠಿರಾದ್ಯರಲಿ (ಕುವ್ಯಾಗ. ೩-೩೩). ೩. ಇಷ್ಟವಾದುದು ; ಪ್ರಿಯವೆನಿಸಿದುದು : ಏನೇನಭಿಮತಮಂ ಪೇೞ್ನೀನಾಸ್ವಾದಿಸಿದೆ ದೇವಿಯರಮನೆಯೊಳೆನಲ್ಕೇನೇನಭಿಮತಮಂ ಕೇಳಾನಾಸ್ವಾದಿಸಿದೆನಿಲ್ಲ ನೃಪಕುಲತಿಲಕಾ (ಕಾದಂಪೂ. ೮೫) ; ಜನಕನೆ ನಾಂ ನಿನಗೆನಗಾ ದನುಜಹರಂ ಜನಕನದಱಿನಾನಭಿಮತಮಂ ನಿನಗೆನಗಭಿಮತಮಂ ವಿಷ್ಣು ನೆಗೞ್ದೊಡೆ ಮಗದಾರ ಚರಣಂ ಶರಣಂ (ಜಗವಿ. ೧-೩೪). ೪. ಆದರಕ್ಕೆ ಪಾತ್ರನಾದವನು ; ಗೌರವಾರ್ಹ. [ಸಂ.]

**ಅಭಿಮತಫಲಚಕ್ರ** (ನಾ). ಇಷ್ಟವಾದ ಫಲವನ್ನು ಕೊಡುವ ಚಕ್ರ, —ಯಂತ್ರ : ಭವರಹಿತಮಪ್ಪ ಜಿನೇಂದ್ರನ ಯಂತ್ರಮಿದು ಅಭಿಮತಫಲಚಕ್ರಮೆಂಬುದು ಈ ಯಂತ್ರದ ಪೆಸರು (ಪ್ರತಿಷ್ಠಾ. ೧೦-೪೦).
[ಅಭಿಮತ + ಫಲ + ಚಕ್ರ]

**ಅಭಿಮತಾರ್ಥ** (ನಾ). ಪ್ರಿಯವಾದ ಪ್ರಯೋಜನ ; ಬಯಸಿದ್ದು ; ಇಷ್ಟಾರ್ಥ : ನೀಂ ಪರದೈವತಕಳಾಸ್ವರೂಪನಾಗಿ ತೋರ್ಪೆ ನಿನ್ನಭಿಮತಾರ್ಥಮನೆ ಮಾಡಿ ಕೃತಾರ್ಥರಪ್ಪೆವು (ಜಗವಿ. ೪-೬೯ ವ).
[ಅಭಿಮತ + ಅರ್ಥ]

**ಅಭಿಮತಿ** (ನಾ). ೧. ಬಯಕೆ; ಇಷ್ಟ. ೨. ಗರ್ವ. ೩. ಗೌರವ; ಮರ್ಯಾದೆ. [ಸಂ.]

**ಅಭಿಮತಿಸು** (ಕ್ರಿ). ಒಪ್ಪಿಗೆ ಕೊಡು ; ಸಮ್ಮತಿಸು : ನನ್ನ ಹಾಗೆಯೇ ಅಭಿಮತಿಸುವರೆಂದು ತಿಳಿಯುವೆನು (ಶಾಕುಂತ. ೪೫-೧೨).
[ಅಭಿಮತ + -ಇಸು₃]

**ಅಭಿಮರ** (ನಾ). ೧. ಕೊಲೆ; ನಾಶ. ೨. ಯುದ್ಧ; ಕಾಳಗ. ೩. ಸ್ವಪಕ್ಷದವರಿಂದ ಉಂಟಾಗುವ ದ್ರೋಹ ; ವಿಶ್ವಾಸಘಾತ. ೪. ಬಂಧನ ; ಸೆರೆ. ೫. ಪ್ರಾಣದ ಮೇಲಿನ ಭೀತಿಯನ್ನು ತೊರೆದು ಹುಲಿ, ಆನೆ ಮುಂತಾದುವುಗಳ ಮೇಲೆ ಕಾದಲು ನುಗ್ಗುವವನು. [ಸಂ.]

**ಅಭಿಮಾನ** (ನಾ). ೧. ಆತ್ಮಗೌರವ; ಹೆಮ್ಮೆ : ಅಭಿಮಾನಮೊಂದೆ ಕುಲ [ಮಣ್ಮ ಕುಲಂ] ಬಗೆವಾಗಳೀ[ಗಳೀ] ಕಲಹದೊಳಣ್ಣ ನಿಮ್ಮ ಕುಲವಾಕುಲಮಂ ನಿಮಗುಂಟುಮಾಡುಗುಂ (ಪಂಪಭಾ. ೧೦-೨೧) ; ಅರ್ಥ ಪ್ರಾಣಾಭಿಮಾನಕ್ಕೆ ಒಡೆಯರು ಸದ್‌ಭಕ್ತರಲ್ಲದೆ ಎನಗಾರೂ ಇಲ್ಲವಯ್ಯಾ (ಬಸವ. ೩೪೦). ೨. ಅಹಂಕಾರ; ಸ್ವಪ್ರತಿಷ್ಠೆ. ೩. ಹಿಂಸೆ; ನೋಯಿಸುವುದು ; ಕೇಡುಂಟುಮಾಡುವುದು : ಒಬ್ಬ ಜಂಗಮನ ಅಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು (ಬಸವ. ೬೨೬) ; ಚಾಳುಕ್ಯರಾಯನು ಒಬ್ಬ ಜಂಗಮನಿಗೆ ಮಾಡಿದ ಅಭಿಮಾನ ಅಂದರೆ ಹಿಂಸೆಯ ಕಾರಣದಿಂದ ಅವನ ಆಳಿಕೆ ತೆಗೆಯಿತ್ತು (ಮೂರುಉ. ೯೦). ೨. ಪ್ರೀತಿ; ಆದರ : ನಿಮ್ಮ ವಿಷಯದಲ್ಲಿ ನನಗೆ ತುಂಬಾ ಅಭಿಮಾನವಿದೆ (ರೂಢಿ). [ಸಂ.]

**ಅಭಿಮಾನಂಗಿಡು**, ಅಭಿಮಾನಗೆಡು (ಕ್ರಿ). ೧. ಆತ್ಮಗೌರವಕ್ಕೆ ಕುಂದಾಗು; ಮಾನಹೋಗು : ಆನಿರ್ಪೆಡೆಯೊಳ್ದೂರ್ತಿಂ ನೀನೆನ್ನಂ ಬಗೆಯದುದ್ಧತಿಕ್ಕೆಯೊಳಿರ್ದೈ ನೀನೇೞಿಂದಲ್ಲಿಂದಭಿಮಾನಂಗಿಡೆ ಜಡಿದು ಬಡಿದು ಕೆಡೆನೂಂಕುವುದುಂ (ಧರ್ಮಾಮೃ. ೫-೨೦೨). **ಅಭಿಮಾನಗೆಡು**: ೨. ಆತ್ಮಗೌರವವಿಲ್ಲದಂತಾಗು : ಅಭಿಮಾನಗೆಟ್ಟವರಿಗೆ ಎಲ್ಲಿಯೂ ಪುರಸ್ಕಾರವಿಲ್ಲ (ರೂಢಿ). [ಅಭಿಮಾನ + ಕಿಡು (< ಕೆಡು)]

**ಅಭಿಮಾನಕ್ಷತಿ** (ನಾ). ಅಭಿಮಾನಕ್ಕೆ ಕುಂದು, —ಹಾನಿ: ಮಾನಧನನೆನಿಸಿ ನಿನ್ನಭಿಮಾನಕ್ಷತಿಮಾಡಿದ್ಯೆ ಸುಯೋಧನ (ಗದಾಯು. ೭-೬). [ಅಭಿಮಾನ + ಕ್ಷತಿ]

**ಅಭಿಮಾನಗಳ್ಳ** (ನಾ). ೧. ದರ್ಪಿಷ್ಠರ ದರ್ಪವನ್ನು ಅಪಹರಿಸುವವನು. ೨. ಹೆರವರ ಪ್ರೀತಿವಿಶ್ವಾಸಗಳನ್ನು ಸೂರೆಗೊಳ್ಳುವವನು; ಒಂದು ಬಿರುದು (?): ಧರಣೀ ಲೋಕಾಶ್ರಯನಭಿಮಾನಗಳ್ಳನಹಿತರ ಗಣ್ಡಂ ಮಾವನ ಗಂಧವಾರಣಂ (ಮೈಆರಿ. ೧೯೩೫, ४೦-४೦; 951). ಗುಣಗಳ್ಳ, ಪ್ರಿಯಗಳ್ಳ ಹೋ. [ಅಭಿಮಾನ + ಕಳ್ಳ]

**ಅಭಿಮಾನಗಿತ್ತಿ** (ನಾ). ೧. ಆತ್ಮಗೌರವವುಳ್ಳವಳು. ೨. ಪ್ರೀತಿಯುಳ್ಳವಳು (?): ಗಹಗಹಿಸಿ ನಗೆ ನಗುವ ನಗೆಗಳ ಗಹಣಿಗಳಿಗೊಳಗಾದೆನಲ್ಲಾ ಮಹಿಳೆಯರೊಳಭಿಮಾನಗಿತ್ತಿಯನೆನ್ನ ನೀನಜಿಯ (ಬಸವು. ೨೮-೨೦). [ಅಭಿಮಾನ + -ಗಿತ್ತಿ]

**ಅಭಿಮಾನಗೆಡು** 'ಅಭಿಮಾನಂಗಿಡು' ನೋ.

**ಅಭಿಮಾನಗೇಡಿ** (ನಾ). ಮಾನಗೆಟ್ಟ ವ್ಯಕ್ತಿ; ಆತ್ಮಗೌರವವಿಲ್ಲದ ವ್ಯಕ್ತಿ: ಪೆಂಡಿರನು ನೆಜೆ ನಂಬಿದಾತನೆ ಭಂಡನವನಭಿಮಾನಗೇಡಿಯು ಪೆಂಡಿರಲೆ ಸತ್ಪಥದ ಬಾಗಿಲ ಪಡಿಗೆ ಬೀಯಗವು (ಸಾಳ್ವಭಾ. ೧೦-೪೯). [ಅಭಿಮಾನಗೇಡು + -ಇ]

**ಅಭಿಮಾನಗೇಡು** (ನಾ). ಆತ್ಮಗೌರವಕ್ಕೆ ಹಾನಿ; ಗರ್ವಭಂಗ. 'ಅಭಿಮಾನಗೇಡಿ,' 'ಅಭಿಮಾನಗೇಡುಗ' ಪಠಾ. [ಅಭಿಮಾನ + ಕೇಡು]

**ಅಭಿಮಾನಗೇಡುಗ** (ನಾ). ಆತ್ಮಗೌರವವನ್ನು ಕೆಡಿಸುವವನು: ಓಡಿ ಕೊಂದನು ಕಾಲಯವನನು ಬೇಡಿ ಕೊಂದನು ಕೈಟಭನ ಕೈಮಾಡಿ ಕೊಲಿಸಿದ ಮಾಗಧನನಭಿಮಾನಗೇಡುಗನ (ಕುವ್ಯಾದ್ರೋ. ೧೪-೧೭). [ಅಭಿಮಾನಗೇಡು + -ಗ]

**ಅಭಿಮಾನಚ್ಯುತಿ** (ನಾ). ೧. ಆತ್ಮಗೌರವದ ನಾಶ. ೨. [ಕಾವ್ಯಮೀ] ವಿರಹದ ಹತ್ತು ಅವಸ್ಥೆಗಳಲ್ಲಿ ಒಂದು; ಮಾನದ ಮೇಲೆ ದೃಷ್ಟಿಯಿಲ್ಲದಿರುವುದು: ಅಭಿಲಾಷೆ ಚಿಂತೆ ಸಂಸ್ಮೃತಿ ವಿಭುಗುಣನುತಿ ತಾಪನಂ ಕ್ರಿಯಾದ್ವೇಷಂ ಸಂದಭಿಮಾನಚ್ಯುತಿ ಗಮನಂ ಕ್ಷುಭಿತಾತ್ಮಾವಸ್ಥೆ ಮರಣಮಿವು ದಶಭೇದಂ (ಶೃಂಗಾರ. ೪-೬೯). [ಅಭಿಮಾನ + ಚ್ಯುತಿ]

**ಅಭಿಮಾನತೆ** (ನಾ). ಆತ್ಮಗೌರವ: ಕನ್ನನ ಕೀರ್ತಿ ಕನ್ನನಭಿಮಾನತೆ ಕನ್ನನ ಸಚ್ಚರಿತ್ರಂ (ಎಕ. VIII, ಸಾಗರ. ೧೦೩-೩೨; 1089); ನೀನಾತಂಗೆಟಿಗದೆಯಭಿಮಾನತೆಯಿಂದಿರ್ದೆಯಾದಡಂ ನಿನಗಕ್ಕುಂ ಸ್ಥಾನಭ್ರಷ್ಟತೆ (ಕಗವಿ. ೭೩; ಪುಣ್ಯಾಸ್ರ). [ಸಂ. ಅಭಿಮಾನಿತಾ ?]

**ಅಭಿಮಾನದೇವತೆ** (ನಾ). ಯಾವುದಾದರೊಂದು ವಸ್ತು ಅಥವಾ ವಿಷಯಕ್ಕೆ ಅಧಿಕಾರಿಯಾಗಿರುವ ದೈವ ಅಥವಾ ಅಧಿದೇವತೆ: ಅಭಿಮಾನದೇವತೆಗಳೊಲಿದು ದಯಪಾಲಿಸಿದರಾಕೆಗೀ ಶಾಸನವ ಹರಸಿ (ಇಂಗೀತೆ. ೨೮-೩). [ಅಭಿಮಾನ + ದೇವತೆ]

**ಅಭಿಮಾನಧನ** (ನಾ). ಆತ್ಮಗೌರವವನ್ನೇ ಸಂಪತ್ತಾಗಿ ಉಳ್ಳವನು; ಪ್ರತಿಷ್ಠಾವಂತ: ನೃಪನನಭಿಮಾನಧನನನನುಪಮನಂ (ಕವಿರಾ. ೨-೧೬); ಅಭಿಮಾನಧನಂ ಸುಯೋಧನಂ (ಪಂಪಭಾ. ೧೩-೯೭). [ಅಭಿಮಾನ + ಧನ]

**ಅಭಿಮಾನಭಂಗ** (ನಾ). ಮಾನದ ಹಾನಿ; ಗೌರವದ ಕೇಡು: ಅಲ್ಪರ ಸಂಗ ಅಭಿಮಾನ ಭಂಗ (ಗಾದೆ). [ಅಭಿಮಾನ + ಭಂಗ]

**ಅಭಿಮಾನಭಂಜನ** (ನಾ).=ಅಭಿಮಾನಭಂಗ: ಮಾನಧನರಿಗೆ ವಧೆಯೆನಿಪುದಭಿಮಾನಭಂಜನಂ (ಕುವ್ಯಾಅ. ೨೨-४೦). [ಅಭಿಮಾನ + ಭಂಜನ]

**ಅಭಿಮಾನಮೂರ್ತಿ** (ನಾ). ಆತ್ಮಗೌರವವೇ ರೂಪವನ್ನು ತಾಳಿದಂತೆ ಇರುವವನು: ವತ್ಸಕುಲತಿಲಕನಭಿಜನವತ್ಸಲನಭಿಮಾನಮೂರ್ತಿ ಸುಕವಿಯಶೋನಿರ್ಮತ್ಸರಂ (ಆದಿಪು. ೧-೩೦). [ಅಭಿಮಾನ + ಮೂರ್ತಿ]

**ಅಭಿಮಾನಮೇರು** (ನಾ). ಮೇರು ಪರ್ವತದಂತೆ ನಿಶ್ಚಲವೂ ಉತ್ತಮವೂ ಆದ ಆತ್ಮಗೌರವವುಳ್ಳವನು; ಒಂದು ಬಿರುದು: ಸಂಗ್ರಾಮರಾಮನಭಿಮಾನಮೇರು (ಎಕ. VII, ಶಿಕಾರಿ. ೩೩-೧೦; 1027). [ಅಭಿಮಾನ + ಮೇರು]

**ಅಭಿಮಾನಸಳ್ಳ** (ನಾ). ವಿರೋಧಿಗಳ ಅಭಿಮಾನಕ್ಕೆ ಶಲ್ಯಪ್ರಾಯನಾದವನು; ಗರ್ವಿಷ್ಠರ ಗರ್ವವನ್ನು ಮುರಿಯತಕ್ಕವನು; ಒಂದು ಬಿರುದು: ಪರಬಳಕೇಸರಿಕೂಟನ್ ಕೊಟ್ಟುಣ್ಣನಭಿಮಾನಸಳ್ಳಂ (ಎಕ. XI, ಹೊಳಲ್ಕೆ. ३३-೮; 965). [ಅಭಿಮಾನ + ಸಳ್ಳ]

**ಅಭಿಮಾನಹಾನಿ** (ನಾ). ೧. = ಅಭಿಮಾನಭಂಗ. ೨. ಆತ್ಮಗೌರವದ ನಾಶ ೧, ೨: ಅಭಿಮಾನಹಾನಿ ವಿರಹಿಗಳೊಳ್ . . . ಅಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ). [ಅಭಿಮಾನ + ಹಾನಿ]

**ಅಭಿಮಾನಹೀನ** (ನಾ). ಆತ್ಮಗೌರವವಿಲ್ಲದವನು: ಮರುಳಂಗನೆಯರಲಿ ವಿಶ್ವಾಸಪರನೇ ಜನವಜಿಯಲಭಿಮಾನಹೀನನು (ಕುವ್ಯಾ ಅ. ೨೩-४೫). [ಅಭಿಮಾನ + ಹೀನ]

**ಅಭಿಮಾನಿ** (ನಾ). ೧. ಆತ್ಮಗೌರವವುಳ್ಳ ವ್ಯಕ್ತಿ: ಪರಮಾನುಭಾವನಭಿಮಾನಿ ವಿನೋದಶೀಲಂ (ಕವಿರಾ. ೩-೨೨೮); ಸಂಗಮದೇವನ ಭಕ್ತಿಯಭಿಮಾನಿಯ ಜೀವನದಂತೆ (ಬಸವ. ೮೬೬); ಎನ್ನ ಮಗಳಿಗೆಣೆಯಿಲ್ಲ ಸುಮ್ಮಾನಿ ಸನ್ಮಾನಿಯಭಿಮಾನಿ ಕಡುನೀಜೆ (ಹಚಕಾ. ४-೨೦). ೨. ಪ್ರೀತಿಯುಳ್ಳವನು. 'ಕಲಾಭಿಮಾನಿ' ಪಠಾ. [ಸಂ.]

**ಅಭಿಮಾನಿಸು** (ಕ್ರಿ). ಗೌರವಿಸು; ಪ್ರೀತಿಸು: ಬಳಸಿಯುಮುಂಡುಮುಟ್ಟುಮಭಿಮಾನಿಸಿಯುಂ ವಿಷಯಂಗಳೊಳ್ ಸಮುಜ್ಜ್ವಳಿತ . . . ಚೇಷ್ಟನೊಪ್ಪುವಂ (ಶತಕ. ೧೬೮-೩೯); ವಿಭುಗಳು ಪೇಳೆನಲೀ ಪದಕವಿತೆಯನಭಿಮಾನಿಸಿ ಪೇಳಿದೆನು (ಕುರಾಸಾಂ. ೧-೭೫). [ಅಭಿಮಾನ + -ಇಸು]

**ಅಭಿಮುಖ** (ಗು). ೧. ಎದುರಿಗಿರುವ. ೨. ಅನುಕೂಲವಾದ. (ನಾ). ೩. ಸಮ್ಮುಖ; ಎದುರು: ಆತಂಗೆ ನೀನಜಿಪಿದೊಡೆ ಧರ್ಮಕ್ಕಭಿಮುಖನಕ್ಕುಂ (ಚಾವುಂಉ. ೧೭೫); ತಿರುನಾವಲೂರತ್ತಲಭಿಮುಖನಾಗಿ . . . ನಡೆತಪ್ಪಾಗಳ್ (ನಂಬಿರ. ೮-೨೧ ವ). [ಸಂ.]

**ಅಭಿಮುಖಕೋಣ** (ನಾ). ೧. ಎದುರುಮೂಲೆ. ೨. [ರೇಖಾಗ] ಎದುರಿನ ಕೋಣ. [ಅಭಿಮುಖ + ಕೋಣ]

**ಅಭಿಮುಖತೆ** (ನಾ). ಎದುರಾಗಿರುವುದು: ಅಭಿಮುಖತೆಯೊಂದೆ ನಮ್ಮೀ ವಿಭುವತ್ತಲ್ ಸಾಲ್ಗುಮುಖಿಳಹಿತಸಾಧನೆಗೆಂಬ (ವಸ್ತವಂ. ೫೩). [ಸಂ. ಅಭಿಮುಖತಾ]

**ಅಭಿಮುಖಿ** (ನಾ). ತನ್ನ ಕಡೆಗೆ ಮುಖ ಮಾಡಿಕೊಂಡಿರುವವನು; ಎದುರಾಗಿರುವವನು: ಜಟಾಯು ನೋಡಿದನ್ . . . ಮೂವರಂ ಮನುಜರಂ, ಪಂಚವಟ್ಯಭಿಮುಖಿಗಳಂ (ಶ್ರೀರಾಮಾ. ೧೯४-೫). [ಸಂ. ಅಭಿಮುಖಿನ್]

**ಅಭಿಮುಖೀಕರಣ** (ನಾ). ತನಗೆ ಎದುರಾಗಿರುವಂತೆ ಮಾಡಿಕೊಳ್ಳುವುದು; ಸಂಬೋಧನೆ: ಸಂಬೋಧನೆಯೆಂಬುದು ಅಭಿಮುಖೀಕರಣಮಂ ಪೇಟ್ದುದು ಜಡವಸ್ತುಗಳೊಳಂ . . . ಅಭಿಮುಖೀಕರಣಮುಪಚಾರಂ (ಶಮದ. ೧೨೬ ವೃತ್ತಿ). [ಸಂ.]

**ಅಭಿಮುಖೀಕೃತ** (ಗು). ಅಭಿಮುಖವಾಗಿರುವಂತೆ ಮಾಡಿದ; ಎದುರಾಗಿ ಮಾಡಿಕೊಂಡ: ಅಂತು ವಿಜಯಾರ್ಧಾಚಳ ಕಟಕಾಭಿಮುಖೀಕೃತ ನಿಜವಿಜಯ ಕಟಕನಾಗಿ (ಆದಿಪು. ೧೩-४೬ ವ). [ಸಂ.]

**ಅಭಿಯಾತಿ** (ನಾ). ಹಗೆ; ಶತ್ರು: ಖ್ಯಾತಿಯೆಸೆಯಲು ಶಾಂತಿಯೆಂಬ ನಿಶಾತಖಡ್ಗದಿ ಕೋಪವೆಂಬಭಿಯಾತಿಯಂ ಖಂಡಿಸುವವಂ ತಾನಾವನವನಿಯೊಳು ಆತನೇ ಶೂರತ್ವವುಳ್ಳವಂ (ಬಸಪು. ೩೮–೬೪); ಸುಕರ ಗುರುಭಕ್ತಕಾಮಣ್ಣನಭಿಯಾತಿತಿಮಿರಕುಲಸಪ್ತಾಶ್ವ ವಿಶ್ವಣ್ಣ (ಪದ್ಮರಾ. ೯–೨೬). [ಸಂ.]

**ಅಭಿಯುಕ್ತ** (ಗು). ೧. ತತ್ಪರನಾದ; ಆಸಕ್ತನಾದ; ಮಗ್ನನಾದ. (ನಾ). ೨. ತಿಳಿದವನು; ಬಲ್ಲವನು: ಅಭಿಯುಕ್ತರಱಿದು ಪೇೞ್ವುದು ಕೃತಿಯೊಳ್ (ಕಾವ್ಯಾವ. ೮೯೧). ೩. ಆಕ್ರಮಣಕ್ಕೆ ಗುರಿಯಾದವನು; ಮುತ್ತಿಗೆಗೆ ಒಳಗಾದವನು. [ಸಂ.]

**ಅಭಿಯೋಗ** (ನಾ). ೧. ಆಸಕ್ತಿ: ಮೆಚ್ಚಿ ಬಣ್ಣಿಸಲಭಿಯೋಗಮಾಯ್ತೆನಗೆ ಸಾಹಸ ಭೀಮನ ಸಾಹಸಂಗಳಂ (ಗದಾಯು. ೧–೫೩). ೨. ವಿಶೇಷ ಪ್ರಯತ್ನ; ಒತ್ತಾಯ: ಮಾಣದೆ ತಮ್ಮ ತಮ್ಮ ಪುತ್ರರನಭಿಯೋಗದಿಂದತಿಬಳಂಗೆ ನಿಯೋಜಿಸಿ ಪೂಣ್ದರ್ . . . ಜೈನದೀಕ್ಷೆಯಂ (ಆದಿಪು. ೨–೫೧). ೩. ಆಕ್ರಮಣ; ಯುದ್ಧ. 'ಅಭಿಯೋಗವಾರ್ತೆ' ಪರಾ. ೪. ಅಕಾರ್ಯ: ಕಂಸಂ ತದೀಯ ಬಾಲಹಿಂಸಾಪರನಾಗಿ ಸೂತಿಕಾಗೃಹಮಂ ಪೊಕ್ಕು ವಿಕ್ರಾಂತಮಂತರಿಸೆ ಪೆಂಪು ಸೊಂಪೞಿಯೆ ಭುಜಬಳವೊಳಸರಿಯೇ ಮಾನಂ ಮ್ಲಾನತೆಯನೆಯ್ದೆ . . . ಯೋಗಿಗಳಭಿಯೋಗಮೆನೆ . . . ಪಾಸಱೆಯೊಳ್ ಕೂಸನಪ್ಪಳಿಸಿ (ಜಗವಿ. ೨–೫೩ ವ, ೫೪ ವ). ೫. ದೂರು; ಆಪಾದನೆ; ಅಪವಾದ: ಆಬ್ಬಾ ನಿಮ್ಮ ಮೇಲೆ ಲೋಕಮೆಲ್ಲಮಭಿಯೋಗಮನಿಟ್ಟೊಡರಸಂ ನಿಮ್ಮನಡವಿಯೊಳ್ ಬಿಸುಟ್ಟು ಬರವೇೞ್ದೊಡಿಲ್ಲಿಗೆ ತಂದೆನೆನೆ (ಪಂರಾಮಾ. ೧೫–೭೫ ವ). [ಸಂ.]

**ಅಭಿಯೋಗವಾರ್ತೆ** (ನಾ). ಆಕ್ರಮಣದ ಸುದ್ದಿ: ಈಗಲೀ ವಿಪ್ರರಲಿ ಖಳರಭಿಯೋಗವಾರ್ತಾಶ್ರವಣ ಬಹುದುರಿತಾಗಮವು ತನಗಾವುದೋ (ಕುವ್ಯಾಅ. ೧೯–೫). [ಅಭಿಯೋಗ + ವಾರ್ತೆ]

**ಅಭಿಯೋಗ್ಯ** (ನಾ). [ಜೈನ] ಇಂದ್ರ ಮುಂತಾದ ಸ್ವರ್ಗವಾಸಿಗಳಿಗೆ ವಾಹನಕರ್ಮದ ಸೇವೆಗಳನ್ನು ಮಾಡುವ ದಾಸರು: ನಿರಂತರಕಾಂತ ಸೋಮ ಯಮ ವರುಣ ಕುಬೇರ ಪ್ರಮುಖ ಲೋಕಪಾಲಾಭಿಯೋಗ್ಯ ದಿಗ್ಗಜೇಂದ್ರ ದೇವವಿಹಾರಪ್ರಾಸಾದಾಭಿರಾಮಮುಂ . . . ಅಗಿ (ಆದಿಪು. ೧–೪೯ ವ); ಅನಂತರಮಾದೇವಂ ತದ್ವಿಮಾನದಿಂ ಪೊಱಮಟ್ಟು ಆತ್ಮರಕ್ಷಕಾಭಿಯೋಗ್ಯಪ್ರಕೀರ್ಣಸಂಮಾನಿತಾಮರಾದಿ ಪರಿಜನ ಪರೀತನುಂ (ಚಂದ್ರಪು. ೪–೬೮ ವ); ಅಭಿಯೋಗ್ಯ – ವಾಹನಾದಿಕರ್ಮಪ್ರವೃತ್ತದಾಸ ಸಮಾನಾಭಿಯೋಗ್ಯರುಂ (ತತ್ತ್ವಪ್ರ. ೧೮೦). [ಸಂ.]

**ಅಭಿಯೋಜನೆ** (ನಾ). ಆಪಾದನೆ; ತಪ್ಪು ಹೊರಿಸುವುದು: ಯಾವನೊಬ್ಬನನ್ನೂ ಒಂದೇ ಅಪರಾಧಕ್ಕಾಗಿ ಒಂದು ಸಲಕ್ಕಿಂತಲೂ ಅಧಿಕವಾಗಿ ಅಭಿಯೋಜನೆಗೆ ಗುರಿಮಾಡಿ ದಂಡಿಸತಕ್ಕುದಲ್ಲ (ಭಾಧಾನ. ೧೨). [ಸಂ. ಅಭಿಯೋಜನಾ]

**ಅಭಿರಂಜಕ** (ಗು). ೧. ಮನೋರಂಜಕವಾದ. (ನಾ). ೨. ಪ್ರಕಾಶಗೊಳಿಸುವಂತಹುದು; ಪ್ರಸಿದ್ಧಿಗೆ ತರುವಂತಹುದು: ಆ ಕುಮಾರರಿಗೊಲವಿನಲಿ ವಾಲ್ಮೀಕಿ ವಿಸ್ತರಿಸಿದನು ವೈದಿಕ ಲೌಕಿಕೋಕ್ತಿಗಳಿಂದ ನಿಜನಾಮಾಭಿರಂಜಕವ (ತೊರರಾ. ೧–೩–೯). [ಸಂ.]

**ಅಭಿರಂಜನೆ** (ನಾ). ೧. ಪ್ರಕಾಶಗೊಳಿಸುವುದು; ಪ್ರಸಿದ್ಧಿಗೆ ತರುವುದು. ೨. ಸಂತೋಷಪಡಿಸುವುದು; ಉಪಚಾರ: ತೋಱಿಕೆಡುವೀ ತನುವಿನಭಿರಂಜನೆಯ ಸೌಖ್ಯಕೆ ಮಾಱದಿರು ಮನವ (ಕುವ್ಯಾದ್ರೋ. ೭–೨೫); ಬಳಿಕ ಮಧುಪರ್ಕಾದಿ ವೈದಿಕ ವಿಳಸದಭಿರಂಜನೆಯಲಾ ಕಳಕಳವ ಮಾಣಿಸುತಿತ್ತರುತ್ತಮ ಗುಡವ ಜೀರಿಗೆಯ (ತೊರರಾ. ೧–೧೫–೪೬). [ಸಂ. ಅಭಿರಂಜನ]

**ಅಭಿರಕ್ಷಣ** (ನಾ). ಎಲ್ಲ ಬಗೆಯಿಂದಲೂ ಕಾಪಾಡುವುದು, — ರಕ್ಷಿಸುವುದು. [ಸಂ.]

**ಅಭಿರಕ್ಷಿಸು** (ಕ್ರಿ). ಚೆನ್ನಾಗಿ ಕಾಪಾಡು: ಸುತ್ತಿ ಸುಳಿದಭಿರಕ್ಷಿಸುವುದನು ವೃತ್ತರಹ ರವಿಶಶಿಗಳನು (ನಿಭಾಗ. ೫–೧೦–೧೯). [ಅಭಿರಕ್ಷಣ + –ಇಸು$_3$]

**ಅಭಿರಕ್ಷೆ** (ನಾ). = ಅಭಿರಕ್ಷಣ: ಪ್ರಾಣ್ಯಭಿರಕ್ಷೆ ಷಡ್ವಿಧಂ (ಶಾಂತಿಪು. ೧೧–೧೧೪). [ಸಂ. ಅಭಿರಕ್ಷಾ]

**ಅಭಿರತ** (ಗು). ಆಸಕ್ತಿಯುಳ್ಳವನು; ಪ್ರೀತಿಯುಳ್ಳವನು: ಚತುರ್ವಿಧತರ್ಕಾಭಿರತನುಂ (ಚಾವುಂಪು. ೫). [ಸಂ.]

**ಅಭಿರತಿ** (ನಾ). ೧. ಸಂತೋಷ; ತೃಪ್ತಿ. ೨. ಆಸಕ್ತಿ; ಅನುರಾಗ; ಪ್ರೀತಿ: ಭಾವಪೂರ್ವಕ ಭಕ್ತಿ ನಂಬಿಗೆ ತೀವಿದಭಿರತಿಯದರ ತೆರದಿಂ ನೀವಿದರೊಳು ಸಕ್ತರಾದರೆ ನಿಜಸುಖವು ಬಹುದು (ವಿವೇಭ. ೨–೩೩); ಪುರ್ವಿಂ ಮೆರೆವೀ ವದನಂ ಪುಲಕಂಗೂಡಿದ ಕದಪಿಂ ಕನ್ನಡಿಪುದೆನ್ನೊಳಿರ್ಪಭಿರತಿಯಂ (ಶಾಕುಂತ. ೩೮–೬೬). [ಸಂ.]

**ಅಭಿರಮಿಸು** (ಕ್ರಿ). ೧. ಸಂತೋಷಿಸು; ತೃಪ್ತಿಪಡು: ಸರ್ವಕಾಮಗಳನ್ನೂ ಬುಡಸಹಿತ ಕಿತ್ತು, ಕತ್ತರಿಸಿ, ಸುಟ್ಟು ಕೆದಡಿ, ನಿರ್ವಾಣವೊಂದರಲ್ಲಿಯೇ ಅಭಿರಮಿಸಿ ವಿಮುಕ್ತಿಯನ್ನು ಸಾಧಿಸಿದವರು (ರಾಮರಾ. ೨೩). ೨. ಆಸಕ್ತನಾಗು. [ಅಭಿರಮಣ$_0$ + –ಇಸು$_3$]

**ಅಭಿರಾಜಿಸು** (ಕ್ರಿ). ಪ್ರಕಾಶಿಸು; ಸೊಗಸಾಗಿರು: ಭೋಜನಶಾಲೆಯೊಳುಯ್ಯಲಮೇಲಭಿರಾಜಿಪ ಗದ್ದುಗೆಯಲ್ಲಿ ಆ ಜಗನ್ಮಾತೆಯಿದ್ದಳು (ಭರಚ. ೪೬–೧೦೫); ಅಭಯಾನ್ನ ವೈದ್ಯ ಸಿದ್ಧಾಂತ ದಾನಗಳಲ್ಲಿ ಅಭಿರಾಜಿಸಿದುವದಱಿಂದ (ಭರಚ. ೬೬–೧೩೫). [ಅಭಿರಾಜನ$_0$ + –ಇಸು$_3$]

**ಅಭಿರಾಮ** (ಗು). ಸುಂದರವಾದ; ಮನೋಹರವಾದ: ಸಕಲಕಲಾಭಿರಾಮನುಂ ವಿಬುಧಜನಸೇವ್ಯನುಂ (ಕಾದಂಉ. ೬೧೮); ರಾಮನಂ ಭುವನಾಭಿರಾಮನಂ ಗುಣರತ್ನಧಾಮನಂ (ಜೈಮಿಭಾ. ೧೯–೨೨). [ಸಂ.]

**ಅಭಿರಾಮತೆ** (ನಾ). ಚೆಲುವು; ಸೌಂದರ್ಯ: ಅಧಿರಾಜಪೂಜ್ಯನಭಿರಾಮತೆಯಂ ತಳೆದಂ (ಪಂರಾಮಾ. ೧೨–೯೯). [ಸಂ. ಅಭಿರಾಮತಾ]

**ಅಭಿರುಚಿ** (ನಾ). ೧. ಆಸಕ್ತಿ; ಒಲವು: ಒಬ್ಬೊಬ್ಬರ ಅಭಿರುಚಿ ಒಂದೊಂದು ಬಗೆಯಾಗಿರುತ್ತದೆ (ಭಾರಮಿ. ೨೦೧). ೨. ರಸಾಸ್ವಾದನ ಶಕ್ತಿ; ಸವಿಯುವ ಶಕ್ತಿ: ಊಟದಲ್ಲಿ ಅಭಿರುಚಿಬೇಕು (ರೂಢಿ). ೩. "ಪ್ರಕಾಶ" (ಗುವಿಮೋ. ೬). [ಸಂ.]

**ಅಭಿರೂಪ** (ಗು). ೧. ತಕ್ಕ; ಅನುರೂಪವಾದ. ೨. ಸುಂದರವಾದ; ಮನೋಹರವಾದ. (ನಾ). ೩. ವಿದ್ವಾಂಸ: "ಧೀರಃ, ಧೀಮಾನ್ . . . ವಿಪಶ್ಚಿತ್, ಅಭಿರೂಪಃ — ಈ ೨೮ ವಿದ್ವಾಂಸರ್" (ಹಲಾಯು. ೫೫–೧೭೭). ೪. ಸ್ಪಷ್ಟವಾದ ರೂಪ: "ಅಭಿರೂಪದಿಂ – ಅಭಿವ್ಯಕ್ತಮಾದ ರೂಪಿನಿಂದೆ" (ಶಮದ. ೧೨೬ ಟೀಕೆ). [ಸಂ.]

**ಅಭಿಲಷಿತ** (ಗು). ೧. ಬಯಸಿದ; ಬೇಕಾದ: ಧಿಷಣರ ಕೃತಿಗಳೊಳೆಸೆವಭಿಲಷಿತಗುಣಂಗಳನೆ ಬಿಸುಟು ಮಾತ್ಸರ್ಯಮಹಾವಿಷಮುಮತಿಯಿಂದೆ ದೋಷಾಮಿಷಮನೆ ಪೊರ್ದಿರ್ಪುವಲ್ತೆ ಕುಕವಿ ಬಕಂಗಳ್ (ಆದಿಪು. ೧–೨೨); ಅಭಿಲಷಿತಫಲಂ ವಿಶ್ವಧಾತ್ರೀತಳಕಾದುದು (ಮಲ್ಲಿಪು. ೩–೧೦೮). (ನಾ). ೨. ಆಸೆ; ಬಯಕೆ; ಅಭಿಲಾಷೆ. [ಸಂ.]

**ಅಭಿಲಾಪ** (ನಾ). ೧. ಮಾತು. ೨. ವಿಶೇಷ ವಿವರಣೆ. ೩. ಘೋಷಣೆ [ಸಂ.]

**ಅಭಿಲಾವ** (ನಾ). ಕತ್ತರಿಸುವುದು; ಕೊಯ್ಲು; ಕಟಾವು. [ಸಂ.]

**ಅಭಿಲಾಷಿತ** (ನಾ). = ಅಭಿಲಷಿತ ೨: ಕಬಂಧನ ಮೊರೆಯೊ ಶಬರಿಯ ಕರೆಯೊ ರಾಮನಾತ್ಮಾಭಿಲಾಷಿತಮೊ (ಶ್ರೀರಾಮಾ. ೭೨–೪೮೨). [ಸಂ. ಅಭಿಲಷಿತ]

**ಅಭಿಲಾಷಿಸು** (ಕ್ರಿ). ಬಯಸು ; ಆಸೆಪಡು (ಕ). [ಅಭಿಲಾಷ$_1$+ –ಇಸು$_3$]

**ಅಭಿಲಾಷುಕ** (ನಾ). ಆಸೆಬುರುಕ: "ಅಶಾಯುತಂ ತೃಷ್ಣಿತನಾಲಿಪ್ಸು ವಭಿಲಾಷುಕನೆನಲಾರ್ತನಕ್ಕು" (ಮಂಗರಾ. ೬೯–೧೧). [ಸಂ.]

**ಅಭಿಲಾಷೆ** (ನಾ). [ಕಾವ್ಯಮೀ] ಆಸೆ; ಬಯಕೆ. ℙ ಹತ್ತು ಬಗೆಯ ವಿರಹಾವಸ್ಥೆಗಳಲ್ಲಿ ಮೊದಲನೆಯದು: ಅಭಿಲಾಷೆ ಚಿಂತೆ ಸಂಸ್ಮೃತಿ ವಿಭುಗುಣನುತಿ ತಾಪನಂ ಕ್ರಿಯಾದ್ವೇಷಂ ಸಂದಭಿಮಾನಚ್ಯುತಿ ಗಮನಂ ಕ್ಷುಭಿತಾತ್ಮಾವಸ್ಥೆ ಮರಣಮಿವು ದಶಭೇದಂ (ಶೃಂಗಾರ. ೪–೬೯). [ಸಂ. ಅಭಿಲಾಷ]

**ಅಭಿವಂಚಿಸು** (ಕ್ರಿ). ಮೋಸಗೊಳಿಸು (ಕ). [ಅಭಿವಂಚನ$_1$ + –ಇಸು$_3$]

**ಅಭಿವಂದನ**, ಅಭಿವಂದನೆ (ನಾ). ಗೌರವದಿಂದ ಮಾಡುವ ನಮಸ್ಕಾರ; ವಿನಮ್ರವಾದ ವಂದನೆ: ಈ ದಯೆಗೆ ಮಹಾಪ್ರಸಾದ ಮೆಂದು ಅಭಿವಂದನಂಗೆಯ್ದು (ಸುಕುಮಾ. ೪–೨ ವ). **ಅಭಿವಂದನೆ** (ಕ). [ಸಂ. ಅಭಿವಂದನ]

**ಅಭಿವಂದನಂಗೆಯ್** (ಕ್ರಿ). ಪೂಜ್ಯಭಾವದಿಂದ ನಮಸ್ಕರಿಸು; ಗೌರವದಿಂದ ವಂದಿಸು: ನೀ ಮಲಹರಂಗಭಿವಂದನಂಗೆಯ್ದುಳು ಹಿಕೋ ನಿನ್ನೊಡಲನಂತಲ್ಲದೊಡೆ ಬಳಿಕಿನ್ನು (ಬಸವು. ೪೯–೯). [ಅಭಿವಂದನ + ಗೆಯ್ (< ಕೆಯ್$_1$)]

**ಅಭಿವಂದನೆ** 'ಅಭಿವಂದನ' ನೋ.

**ಅಭಿವಂದಿತ** (ಗು). ನಮಸ್ಕರಿಸಲ್ಪಟ್ಟ: ಜಗತ್ತ್ರಯಾಭಿವನ್ದಿತ ಸುರಾಸುರಾ ಧೀಶಮಹಾಬಲಿಕುಲೋದ್ಭವ ಪಱುಮುಪುರಪರಮೇಶ್ವರಂ (ಎಕ. X, ಮುಳಬಾ. ೧೨೬–೯ ; 961). [ಸಂ.]

**ಅಭಿವಂದಿತಾರ್ಥ** (ನಾ). ಪೂಜಾರ್ಹವಾದ ಭಾವವುಳ್ಳವನು; ಮನ್ನ ಣೆಗೆ ಯೋಗ್ಯವಾದ ಅಭಿಪ್ರಾಯವುಳ್ಳವನು ; ಮಾನ್ಯ; ಪೂಜ್ಯ: ಎನಗಭಿವಂದಿತಾರ್ಥರವಧಾರಿಸು ಚಿತ್ತದೊಳಗ್ರಜಾತ ನೀಂ ಮುನಿಯದೆ (ಗದಾಯು. ೭–೫೮). [ಅಭಿವಂದಿತ + ಅರ್ಥ]

**ಅಭಿವಂದಿಸು** (ಕ್ರಿ). ಭಕ್ತಿಯಿಂದ ನಮಸ್ಕರಿಸು: ಸವತ್ಸಸುರಭಿಯನಭಿ ವಂದಿಸಿ (ಪಂಪಭಾ. ೧೨–೧೦೮ ವ) ; ಮಿತ್ರಭಾವದಲವರನಭಿವಂದಿಸಿದ ನಾಚಾರ್ಯ (ಕುವ್ಯಾಕ. ೧೮–೫೩) ; ನೀವು ವಿಪ್ರರು ವೀರ ಪಾರ್ಥಿವರಾವು ನಮಗಭಿವಂದಿಸುವುದಿದು ಭಾವಿಸಲು ಮಾಯಾವಿಲಾಸಕವೆಂಬ ಬಗೆ (ತೊರರಾ. ೪–೧–೯). [ಅಭಿವಂದನ + –ಇಸು$_3$]

**ಅಭಿವಂದ್ಯ** (ನಾ). ವಂದನಾರ್ಹ: ವ್ಯಾಸರ್ ವಾಲ್ಮೀಕಿಗಳ್ . . . ನೆಗಟ್ದುಭಯಕವಿಗಳಿಮಗಭಿವಂದ್ಯರ್ (ಗದಾಯು. ೧–೮) ; ನಿಂದ್ಯನಾ ವನು ಲೋಕದೊಳಗಭಿವಂದ್ಯನಾವನು (ಕುವ್ಯಾಅ. ೨೩–೪೨). [ಸಂ.]

**ಅಭಿವಚನ** (ನಾ). ೧. ಕೂಗಿ ಹೇಳುವುದು: ಅಭಿನಯಗಳಭಿವಚನದಲಿ ದುಂದುಭಿಗಳಬ್ಬರಣೆಯಲಿ ಬೊಬ್ಬೆಯ ರಭಸದಲಿ ಲಳಿಯೇಱಿ ಕಲಿಗಳ ಕದನ ಕೇಳಿಯಲಿ (ತೊರರಾ. ೪–೪–೧೪). ೨. ವಾಗ್ದಾನ ; ಭಾಷೆ: ನನಗೆ ನೆರವಾಗುತ್ತೇವೆಂದು ಅಭಿವಚನ ಕೊಟ್ಟರೆ ಮಾತ್ರ ನಾನು ನಿಮಗೆ ಆ ಸಂಗತಿಯನ್ನು ತಿಳಿಸುವೆನು (ಅಂಬಿಕೆ. ೧೬೫) ; ಲಲಿತೆಗೆ ರಾಜನು ಕಾಲೇಜು ಸೇರುವ ಮೊದಲು ಅಭಿವಚನವನ್ನು ಈಯಲು ಮರೆತಿರಲಿಲ್ಲ (ಭೂಮಿತಾ. ೫೨). [ಸಂ.]

**ಅಭಿವರ್ಣನ** (ನಾ). ಸೊಗಸಾದ ವರ್ಣನೆ, —ನಿರೂಪಣೆ: ಸರಸ ಕವೀಂದ್ರಜಿಹ್ವೆಗಭಿವರ್ಣನಕಾಂಕ್ಷೆಯನಿತ್ತನೆಂದು ಬಿತ್ತರಿಸೆ (ಪುಷ್ಪಪು. ೪–೭೦). [ಸಂ.]

**ಅಭಿವರ್ಣಿಸು** (ಕ್ರಿ). ೧. ವರ್ಣನೆ ಮಾಡು ; ವಿವರಿಸು: ಚೆಲ್ವಪ್ಪಿನಂ ಬಂಧುರೋಕ್ತಿಗಳಿಂ ನೀನಭಿವರ್ಣಿಸಿಂತಿದಂ (ಸುಕುಮಾ. ೧–೫೭) ; ಆಱಿ ನಭಿವರ್ಣಿಸಲು ಕರ್ಣಘಟೋತ್ಕಚಾಹವವ (ಕುವ್ಯಾದ್ರೋ. ೧೬–೩೬) ; ಯೋಗಿಗಳ ದಾತಾರನಭಿವರ್ನಿ[ರ್ಣಿ]ಸಿದನವನಿಪಗೆ (ನಿಭಾಗ.೨–೧–ಸೂ) ; ೨. ವರ್ಣಿಸಲ್ಪಡು: ಹಸಿತಯಶಃಪ್ರಭೃತಿಯೊಳುಲ್ಲಸಿತಂ ಸಿತಭಾವ ಮಯಶದೊಳ್ ಪಾಪದೊಳಂತಸಿತ ರುಚಿ ಕೋಪ ರಾಗಪ್ರಸರದೊಳಾರಕ್ತ ವರ್ಣಮಭಿವರ್ಣಿಸುಗುಂ [ಪಾಠಾಂ. ಮದುವರ್ಣಿಯುತಂ, ಮದುವರ್ಣೀ ಯಂ, ಮದುವರ್ಣೀತಂ] (ಕಾವ್ಯಾವ. ೮೬೧). [ಅಭಿವರ್ಣನ + –ಇಸು$_3$]

**ಅಭಿವರ್ಧನ** (ನಾ). ೧. ಏಳಿಗೆ ; ಅಭಿವೃದ್ಧಿ: ವಿನುತಾನಂತಸುಖಾಭಿ ವರ್ಧನಮನವ್ಯಾಬಾಧಸೌಖ್ಯಾಭಿವರ್ಧನಮಂ (ಸುಕುಮಾ. ೯–೧೪). ೨. ಬೆಳೆಸುವುದು. [ಸಂ.]

**ಅಭಿವರ್ಧಿಸು** (ಕ್ರಿ). ಬೆಳೆ; ಏಳಿಗೆಯನ್ನು ಪಡೆ; ಅಭಿವೃದ್ಧಿ ಹೊಂದು: ಬಾಲಕಂ ಕ್ರಮದೊಳಿಂತಭಿವರ್ಧಿಸುತ್ತಿರಲ್ (ಜಿಬಪು. ೫–೪೩). [ಅಭಿವರ್ಧನ + –ಇಸು$_3$]

**ಅಭಿವಾಂಛನ** (ನಾ). = ಅಭಿವಾಂಛೆ. [ಸಂ.]

**ಅಭಿವಾಂಛಿತ** (ಗು). ೧. ಅಪೇಕ್ಷಿಸಿದ ; ಬಯಸಿದ: ಮುದಂಬಡೆಯ ರಾರಭಿವಾಂಛಿತ ಕಾರ್ಯಸಿದ್ಧಿಯಿಂ (ಪಂರಾಮಾ. ೧೧–೧೬೨). (ನಾ). ೨. ಬಯಸಿದ್ದು ; ಅಪೇಕ್ಷೆ: ಭರತನನೋಲಗಿಸಿ ಪಡೆಯಿಮಭಿವಾಂ ಛಿತಮಂ (ಆದಿಪು. ೯–೧೦೪). [ಸಂ.]

**ಅಭಿವಾಂಛಿಸು** (ಕ್ರಿ). ಬಯಸು ; ಅಪೇಕ್ಷಿಸು: ಪೆಱರನಭಿವಾಂಛಿಸುವ [ಪಾಠಾಂ. ವಂಚಿಸುವ] ಮಱೆಯ ಶಬ್ದ ಪೊರ್ದಿರಲದಂ ಮತಿಹೀನ ರೇಗೆಯ್ಯರು (ಮಂಗರಾ. ೨–೫). [ಅಭಿವಾಂಛನ + –ಇಸು$_3$]

**ಅಭಿವಾಂಛೆ** (ನಾ). ಉತ್ಕಟವಾದ ಅಪೇಕ್ಷೆ; ಆಸೆ; ಬಯಕೆ: ಪುತ್ರಾಭಿ ವಾಂಛೆಯತಿ ಚಿಂತೆಯಿಂ (ಶ್ರೀರಾಮಾ. ೮–೨೦೭). [ಸಂ. ಅಭಿವಾಂಛಾ]

**ಅಭಿವಾದ** (ನಾ). ನಮಸ್ಕಾರ ; ವಂದನೆ: ತನ್ನ ದೊಣೆಯಂಬುಗಳ್ ತವುವನ್ನೆಗಮೆಚ್ಚಂಬು ತಪ್ಪೊಡಭಿವಾದಯೆನಲ್ಕಿನ್ನೆನಗೆ ಪದನಿದೆಂದು ಕರಂ ನಗೆ ಸುರರರಿಗನಿದಿರ್ಗೆ ತೊಲಗಿದನಾಗಳ್ (ಪಂಪಭಾ. ೧೩–೪೦). [ಸಂ.]

**ಅಭಿವಾದಕ** (ನಾ). ೧. ನಮಸ್ಕಾರ ಮಾಡುವವನು. ೨. ವಿನಯ ಶಾಲಿ ; ಗೌರವದಿಂದ ನಡೆದುಕೊಳ್ಳುವವನು. [ಸಂ.]

**ಅಭಿವಾದನ** (ನಾ). ನಮಸ್ಕಾರ; ತನ್ನ ಪ್ರವರ, ಸೂತ್ರ, ಗೋತ್ರ, ಶಾಖೆಯ ಹೆಸರುಗಳನ್ನು ಹೇಳಿ ಮಾಡುವ ನಮಸ್ಕಾರ: 'ನಾನು ಕುವರ ವಿಷ್ಣು, ಅಭಿವಾದನ ಮಾಡುತ್ತಿದ್ದೇನೆ' ಎಂದು ಕುವರ ಯತಿ ವರ್ಯರ ಪಾದಪದ್ಮಗಳಿಗೆ ತನುವಿಟ್ಟ (ಶಾಂತಲಾ. ೨೧೩). [ಸಂ.]

**ಅಭಿವಾದನಂಗೊಳ್** (ಕ್ರಿ). ಪ್ರಣಾಮವನ್ನು ಸ್ವೀಕರಿಸು: ಮಿಾಱಿ ಶಾಸ್ತ್ರಕ್ರಮದೊಳಭಿವಾದನಂಗೊಳ್ವ ಪೂರುಷನು ಪಗ್ರಾಹ್ಯನಕ್ಕು (ಮಂಗರಾ. ೭೪–೩). [ಅಭಿವಾದನ + ಕೊಳ್$_1$]

**ಅಭಿವಾದನೆ** (ನಾ). = ಅಭಿವಾದನ. [ಸಂ. ಅಭಿವಾದನಾ]

**ಅಭಿವಾದಿಸು** (ಕ್ರಿ). ನಮಸ್ಕರಿಸು: ವಾದಿಸದೆ ವಿಪ್ರೋತ್ತಮರನಭಿವಾದಿ ಸುವುದುತ್ತಮವಲೇ (ಕುವ್ಯಾಉ. ೪–೬೪). [ಅಭಿವಾದನ + –ಇಸು$_3$]

**ಅಭಿವಾದ್ಯ** (ನಾ). ನಮಸ್ಕಾರಕ್ಕೆ ಅರ್ಹ. [ಸಂ.]

**ಅಭಿವಾರ್ತ** (ನಾ). "ಪ್ರತ್ಯಕ್ಷ ದೃಷ್ಟಿ" (ಮೋಳಿಮಾ. ಕೋಶ) ; ಇಷ್ಟದ ಮೇಗಳ ಚಿತ್ತ ಅಭಿವಾರ್ತವೆಂಬ ಗುಟ್ಟ ಬಿಟ್ಟಲ್ಲಿಯೇ ನಿಜ ನಿಶ್ಚಯ (ಮೋಳಿಮಾ. ೭೨–೨೮೨). [?]

**ಅಭಿವಿನುತ** (ಗು). ಹೊಗಳಲ್ಪಟ್ಟ ; ಸ್ತೋತ್ರಕ್ಕೆ ಪಾತ್ರವಾದ: ಶ್ರೀಮದಭಿವಿನುತ ಭವ್ಯಸ್ವಾಮಿಯೆ ನೀಂ ಬಗೆದು ನೋಡೆ (ಸುಕುಮಾ. ೮–೫೧). [ಸಂ.]

**ಅಭಿವಿಬ್ಡಿ** (ನಾ). ಏಳಿಗೆ ; ಶ್ರೇಯಸ್ಸು: ಇದ ಸಲ್ಲಿಸಿದೊಣ್ಗಭಿವಿಬ್ಡಿ ಯಕ್ಕು (ಎಕ. IX, ಹೊಸಕೋ. ೩೭–೨೨ ; 950). [< ಸಂ. ಅಭಿವೃದ್ಧಿ]

**ಅಭಿವೀಕ್ಷಣ** (ನಾ). ಆಸಕ್ತಿಯಿಂದ ನೋಡುವುದು. [ಸಂ.]

**ಅಭಿವೀಕ್ಷಿಸು** (ಕ್ರಿ). ಚೆನ್ನಾಗಿ ನೋಡು : ವಸುಧೆಯೊಳೆಸೆದಿರ್ದಭಿವೀಕ್ಷಿಸುವ ಜನಕ್ಕೆಯ್ದೆ ಜಿನನ ಜನ್ಮೋತ್ಸವಮಂ (ಶಾಂತಿಪು. ೧೦–೨೩) ; ದಂಡಧರಂಬೊಲಿರ್ದನಭಿವೀಕ್ಷಿಸುತುಂ ಶತಖಂಡಮಪ್ಪಿನಂ ಖಂಡಿಸುವೆಂ ವಿಯಚ್ಚರನ ನಚ್ಚಿನ ಚಕ್ರಮನೆಂದು . . . ಪ್ರಭಾಮಂಡಲಂ (ಪಂರಾಮಾ. ೧೪–೧೭೭). [ಅಭಿವೀಕ್ಷಣ + –ಇಸು₃]

**ಅಭಿವೃದ್ಧಿ** (ನಾ). ಏಳಿಗೆ; ಶ್ರೇಯಸ್ಸು : ಸದಮಳಜ್ಞಾನಾಭಿವೃದ್ಧಿಯುಒದಗಿ ಬಾಳುತ್ತಿಪ್ಪರವಿರತವೀಧರಾಗ್ರದೊಳು (ಬಸಪು. ೪೮–೩೨). [ಸಂ.]

**ಅಭಿವೃದ್ಧಿಕರ** (ಗು). ಏಳಿಗೆಯನ್ನುಂಟುಮಾಡುವ : ಕರುಣಾಲೋಕನದಿ ನೀ ನೋಡಲೊಡನಭಿವೃದ್ಧಿಕರವಾಯ್ತು (ಬಸಪು. ೨೮–೬೪). [ಸಂ.]

**ಅಭಿವೇಷ್ಟಿತ** (ಗು). ಸುತ್ತುವರಿಯಲ್ಪಟ್ಟ ; ಆವೃತವಾದ: ಮೃದುಮೃದಂಗಾಭಂ ತ್ರಿವಾತಾಭಿವೇಷ್ಟಿತಮುತ್ಪತ್ತಿಲಯೇತರಂ . . . ಜಗತ್ತ್ರಿತಯಂ ನಿಂದುದು (ಸುಕುಮಾ. ೧೧–೪೧). [ಸಂ.]

**ಅಭಿವ್ಯಂಜಕ** (ಗು). ಸ್ಪಷ್ಟವಾಗಿ ತೋರಿಸುವ, —ಸೂಚಿಸುವ : ವರ್ಣಾತಿರಿಕ್ತ ಸ್ಫೋಟಕ್ಕೆ ಅಭಿವ್ಯಂಜಕಗಳಾದ ನಾದ ಅಥವಾ ವರ್ಣಗಳು ಧ್ವನಿಯೆನಿಸುತ್ತವೆ (ಧ್ವನ್ಯಾಲೋ. ೩೯). [ಸಂ.]

**ಅಭಿವ್ಯಂಜನ** (ನಾ). **೧.** ಸ್ಪಷ್ಟವಾಗಿ ತೋರುವುದು ; ಸ್ಫುಟವಾಗಿ ಕಾಣಿಸಿಕೊಳ್ಳುವುದು. **೨.** ಸ್ಪಷ್ಟಪಡಿಸುವುದು. **೩.** ಅಭಿವ್ಯಕ್ತಿಗೊಳಿಸುವುದು. [ಸಂ.]

**ಅಭಿವ್ಯಂಜಿಸು** (ಕ್ರಿ). ಸ್ಪಷ್ಟವಾಗು ; ಸ್ಪಷ್ಟವಾಗಿ ತೋರು : ಕ್ರೂರಾಸ್ತ್ರಪಾತ ಚಿತ್ರಮುಹಾರಣ . . . ರಸಂ . . . ಬಂಧದೊಳಾರಭಟೀವೃತ್ತಿಯಿಂದಭಿವ್ಯಂಜಿಸುಗುಂ (ಕಾವ್ಯಾವ. ೮೧). [ಅಭಿವ್ಯಂಜನ + –ಇಸು₃]

**ಅಭಿವ್ಯಕ್ತ** (ಗು). ಕಾಣಿಸಿಕೊಂಡ ; ಸ್ಪಷ್ಟವಾಗಿ ಹೇಳಲ್ಪಟ್ಟ : ಸದಾಚಾರಚಕ್ಷುರಭಿವ್ಯಕ್ತಪರ ಕ್ಷಿತೀಶಗೃಹವೃತ್ತಂ . . . ನಂದನಂ ಪುಟ್ಟಿದಂ (ಪುಷ್ಪಪು. ೧೩–೧೦).

**ಅಭಿವ್ಯಕ್ತಮಾಗಿ** = ಸ್ಪಷ್ಟವಾಗಿ : ಉದ್ಭಾವಿಪ– ಅಭಿವ್ಯಕ್ತಮಾಗಿ ಆಜಿುಯಿಸುವ(ಶಮುದ. ೧ ಟೀಕೆ). **ಅಭಿವ್ಯಕ್ತವಾಗು**=ಸ್ಪಷ್ಟವಾಗಿಕಾಣು : ಬರೆದವನ ಚಿತ್ರಕೌಶಲ್ಯ ಅಲ್ಲಿ ಚೆನ್ನಾಗಿ ಅಭಿವ್ಯಕ್ತವಾಗಿತ್ತು (ರಂಗರೋ. ೯೨). **ಅಭಿವ್ಯಕ್ತಪಡಿಸು** = ಸ್ಪಷ್ಟಪಡಿಸು : ಶಾಸ್ತ್ರೀಯವಾದ ಎಂತಹ ಗಹನ ಅಥವಾ ಸೂಕ್ಷ್ಮ ವಿಚಾರವನ್ನೇ ಆಗಲಿ ಅಭಿವ್ಯಕ್ತಪಡಿಸಲು ನಮ್ಮ ಭಾಷೆ ಸಂಪೂರ್ಣ ಸಮರ್ಥವಾಗಿದೆ (ಗೃಹವಿ. IV, ಮು). [ಸಂ.]

**ಅಭಿವ್ಯಕ್ತಿ** (ನಾ). **೧.** ಪ್ರಕಟವಾಗುವುದು ; ಕಾಣಿಸಿಕೊಳ್ಳುವುದು ; ತೋರಿಕೆ : ಶಬ್ದ ಸ್ಪರ್ಶ ರೂಪ ರಸ ಗಂಧಂಗಳೊಳ್ಪಂ ಶ್ರೋತ್ರೇಂದ್ರಿಯಮೊಂದಜಲ್ಲಿಯೆ ಶಬ್ದಮುಖದಿನಭಿವ್ಯಕ್ತಿಯಂ ಮಾಳ್ಪ ವಿಮಲಸ್ವರೂಪೆಗೆ . . . ನಮಸ್ಕರಿಸುವಾತನಪ್ಪಂ (ಶಮುದ. ೧ ವೃತ್ತಿ). **೨.** ಉಕ್ತಿ ; ಹೇಳಿಕೆ. [ಸಂ.]

**ಅಭಿವ್ಯಕ್ತಿಗೊಳ್** (ಕ್ರಿ). ಕಾಣಿಸಿಕೊಳ್ಳು ; ಪ್ರಕಟವಾಗು. ‘ಅಭಿವ್ಯಕ್ತಿಗೊಳಿಸು’ ಪರಾ. [ಅಭಿವ್ಯಕ್ತಿ + ಕೊಳ್₁]

**ಅಭಿವ್ಯಕ್ತಿಗೊಳಿಸು** (ಕ್ರಿ). ಪ್ರಕಟಪಡಿಸು ; ಸ್ಪಷ್ಟವಾಗಿ ಹೇಳು : ಉಳಿದ ಅಷ್ಟಾಂಗಗಳು ಅದನ್ನು ಹೊಂದಿ ಅದನ್ನು ಅಭಿವ್ಯಕ್ತಿಗೊಳಿಸಲು ಹವಣಿಸುವ ಪರಿಗಳಾಗಿವೆ (ಸಮುಜೀ. ೧). [ಅಭಿವ್ಯಕ್ತಿಗೊಳ್ + –ಇಸು₃]

**ಅಭಿವ್ಯಾಪಕ** (ಗು). **೧.** ಪೂರ್ತಿ ವ್ಯಾಪಿಸುವ. (ನಾ). **೨.** [ವ್ಯಾಕ] ಅಧಿಕರಣದಲ್ಲಿ ಒಂದು ವಿಧ : ಆಧಾರಾಧೇಯಗಳಿಗೆ ಸರ್ವಾವಯವ ವ್ಯಾಪ್ತಿಇದ್ದರೆ, ಅದು ಅಭಿವ್ಯಾಪಕವು (ಹೊಸುಗ. ೧೫೪–೨೫). [ಸಂ.]

**ಅಭಿವ್ಯಾಪ್ತಿ** (ನಾ). ಪೂರ್ತಿ ಹರಡುವುದು ; ಎಲ್ಲ ಕಡೆಗೂ ವ್ಯಾಪಿಸುವುದು : “ಅಭಿವ್ಯಾಪ್ತಿಃ – ಸರ್ವತ್ರ ವ್ಯಾಪಿಸುವಿಕೆ” (ಸಿದ್ಧಾಂತಿ. ೩೦೭). [ಸಂ.]

**ಅಭಿಶಂಕೆ** (ನಾ). ಪ್ರಬಲವಾದ ಸಂದೇಹ ; ಸಂಶಯ : ತದ್ವನಾಟ್ಯವಿಳಾಸವಾಸದೊಳ್ ತಳರದೆ ನಿಂದ ವಾಗ್ವನಿತೆಯೆಂಬಭಿಶಂಕೆಯನುಂಟುಮಾಡಿದಳ್ (ಆದಿಪು. ೨–೨೭). [ಸಂ. ಅಭಿಶಂಕಾ]

**ಅಭಿಶಂಸನ** (ನಾ). ತಪ್ಪು ಹೊರಿಸುವುದು ; ಆರೋಪಣೆ. [ಸಂ.]

**ಅಭಿಶಪನ** (ನಾ). **೧.** ಶಾಪಕೊಡುವುದು. **೨.** ಸುಳ್ಳು ಆಪಾದನೆ. [ಸಂ.]

**ಅಭಿಶಸ್ತ** (ನಾ). ಅಪವಾದಕ್ಕೆ ಗುರಿಯಾದವನು ; ತಪ್ಪು ಹೊರಿಸಲ್ಪಟ್ಟವನು : “ಪರಸ್ತ್ರೀಗಮನ ಬ್ರಹ್ಮಹತ್ಯಾದಿ ದೋಷಗಳಿಂದ ದೂರಲ್ಪಟ್ಟವನು” (ಅಮರ. ಟೀಕು). [ಸಂ.]

**ಅಭಿಶಸ್ತಿ** (ನಾ). **೧.** ಅಪವಾದ ; ಆರೋಪಣೆ. **೨.** ಬೇಡುವುದು ; ಯಾಚನೆ. **೩.** ಶಾಪ. [ಸಂ.]

**ಅಭಿಶಾಪ** (ನಾ). **೧.** ಉಗ್ರಶಾಪ : ಸ್ವಾಭಾವಿಕವ ಮರೆತು ನಭಕೇಣಿ ಹೂಡುವುದುಂ . . . ಅಭಿಶಾಪ ನರಕುಲಕೆ (ಮಂಕುಕ. ೩೧೦). **೨.** ಅನ್ಯಾಯವಾದ ಆರೋಪಣೆ. [ಸಂ.]

**ಅಭಿಶೀಲನ** (ನಾ). ಚೆನ್ನಾಗಿ ವಿಮರ್ಶಿಸುವುದು, —ಪರಿಶೀಲಿಸುವುದು. [ಸಂ.]

**ಅಭಿಶೀಲಿಸು** (ಕ್ರಿ). ಚೆನ್ನಾಗಿ ಪರಿಶೀಲನೆ ಮಾಡು ; ವಿಮರ್ಶಿಸು : ಯಿಾಸು ದಿನ ನಾವರಿಯೆವ್ವೆ ನಿನ್ನ ಮನದೊಳಭಿಸೀ[ಶೀ]ಲಿಸಿದ ಸುಜ್ಞಾನಿಯೆಂಬುದಂ (ತುರಂಗ. ೪೮–೧೮). [ಅಭಿಶೀಲನ + –ಇಸು₃]

**ಅಭಿಷಂಗ** (ನಾ). **೧.** ಕೂಟ ; ಸಹವಾಸ. **೨.** ಸೋಲು ; ಅಪಜಯ. **೩.** ಅನಿರೀಕ್ಷಿತವಾದ ದುಃಖ. **೪.** ಉದ್ವೇಗ ; ಆಕ್ರೋಶ. **೫.** ಭೂತಪಿಶಾಚಾದಿಗಳು ಮೈಯಲ್ಲಿ ಸೇರಿಕೊಳ್ಳುವುದು ; ಭೂತಾವೇಶ. **೬.** ಋಣ ; ಸಾಲ. **೭.** ಆರೋಪಣೆ ; ಅಪವಾದ. **೮.** ಶಪಥ. **೯.** ಶಾಪ ; ಬಯ್ಗುಳು. **೧೦.** ತಿರಸ್ಕಾರ ; ಅಪಮಾನ : “ಋಣ ಕೂಟಂ ಬಯ್ಗುಳುಂ ಸೋಲ್ಮೆಗಳಿವಕಭಿಷಂಗಾಹ್ವಯಂ” (ನಾನಾರ. ೧೨೩). [ಸಂ.]

**ಅಭಿಷವ** (ನಾ). **೧.** ಸೋಮರಸವನ್ನು ಹಿಂಡಿ ಸಿದ್ಧಗೊಳಿಸುವುದು ; ಮದ್ಯವೇ ಮುಂತಾದ ದ್ರವ್ಯವನ್ನು ಬಟ್ಟಿಯಿಳಿಸುವುದು. **೨.** ಅಕ್ಕಿ ತೊಳೆದ ನೀರು ; ಅಕ್ಕಿಗಚ್ಚು ; ಕಲಗಚ್ಚು. **೩.** ಗಂಜಿ ; ಹುಳಿ ಗಂಜಿ. **೪.** ಕರ್ಮಾಂಗವಾದ ಮಂಗಳಸ್ನಾನ ; ಸ್ನಾನ ; ಅಭಿಷೇಕ ; ಪಟ್ಟಾಭಿಷೇಕ. **೫.** ಯಜ್ಞ. **೬.** ಸೋಮಪಾನ.

**ಅಭಿಷವಂ ಮಾಡು** = ಅಭಿಷೇಕ ಮಾಡು ; ಸ್ನಾನ ಮಾಡಿಸು : ಅಚ್ಛತೀರ್ಥ ಸಮೂಹಾಂಬುಗಳಿಂದವಂದಭಿಷವಂ ಮಾಳ್ಪಂತೆ (ಕಾದಂಪೂ. ೬೮೮). [ಸಂ.]

**ಅಭಿಷವಣ** (ನಾ). ಅಭಿಷೇಕ ; ಮಂಗಳಸ್ನಾನ : ನಿನ್ನೀ ಕಳಭಾಷಿತಮೆಂಬ ಸುಧಾಜಳದಿಂ ಶ್ರವಣಾಭಿಷವಣಮಂ ಮಾಡದುದೇಂ (ಮಲ್ಲಿಪು. ೪–೧೮). [ಸಂ.]

**ಅಭಿಷವಣವಿಧಿ** (ನಾ). = ಅಭಿಷವವಿಧಿ : ಸುರರಾಜಂ ತಾನೆ ರಾಜ್ಯಾಭಿಷವಣ ವಿಧಿಯಂ ಮಾಡಿದಂ (ಆದಿಪು. ೬–೧೦೮). [ಅಭಿಷವಣ + ವಿಧಿ]

**ಅಭಿಷವವಿಧಿ** (ನಾ). ಅಭಿಷೇಕದ ಕ್ರಮ ; ಶಾಸ್ತ್ರೋಕ್ತವಾಗಿ ಮಾಡುವ ಮಂಗಳಸ್ನಾನ : ತುಂಗಹರಿನೀಳಕಳಶಮುಖಂಗಳ ಜಳಧಾರೆ ಧಾರ್ತರಾಷ್ಟ್ರಮರಾಳಂ ನುಂಗಿ ಮಗುಚ್ಚುಗುಚ್ಚಿ ಬಿಸದಂಡಂಗಳನಭಿನಯಿಸಿತಭವನಭಿಷವವಿಧಿಯೊಳ್ (ಪುಷ್ಪಪು. ೧೧–೨೮). [ಅಭಿಷವ + ವಿಧಿ]

**ಅಭಿಷವಾಂಬು** (ನಾ). ಅಭಿಷೇಕದ ನೀರು : ಮೊದಲಂ ಬಳಸಿರೆ ಗುಂಟಿಸಿದುದಕದವೋಲಭಿಷವಾಂಬು ಮೇರುನಗಂ ಸ್ಕಂಧದವೊಲಿರೆ (ಚಂದ್ರಪು. ೧೨–೧೪೦). [ಅಭಿಷವ + ಅಂಬು₃]

**ಅಭಿಷವೋತ್ಸವ** (ನಾ). ಅಭಿಷೇಕ ಸಮಾರಂಭ: ಒಗೆದು ವಾಮಂದರಂ ತ್ರಿಲೋಕನಾಥನಭಿಷವೋತ್ಸವಕ್ಕೆ ಪೂರ್ಣೇಂದುಮಂಡಲಂಗಳಿಂದಮಿಂಡೆಯಾಡಿತೆಂಬಿನಂ (ಅನಂಪು. ೫-೭೦). [ಅಭಿಷವ + ಉತ್ಸವ]

**ಅಭಿಷಿಕ್ತ** (ಗು). ಮಂಗಳಸ್ನಾನ ಮಾಡಿದ; ಪಟ್ಟಾಭಿಷೇಕ ಹೊಂದಿದ: ಮಾರಪ್ರಭು ಸರಸಕರುಣಾಂಬುಧಿಯೊಳಭಿಷಿಕ್ತನಂ ಮಾಡಿ (ಬಸಪು. ೩೦-೩೦). [ಸಂ.]

**ಅಭಿಷೇಕ** (ನಾ). ೧. ಮಂಗಳಕರವಾದ ಜಲ, ಹಾಲು ಮುಂತಾದ ದ್ರವವನ್ನು ದೇವರಿಗೆ ಎರೆಯುವುದು: ಆಗಸದ ಗಂಗಾಂಬುವನೆಜೆವನಭಿಷೇಕ ಮಜ್ಜನಕೆ (ಬಸಪು. ೪೧-೨೧). ೨. ರಾಜನೇ ಮುಂತಾದವರಿಗೆ ಪಟ್ಟಕ್ಕೆ ಬರುವ ಸಂದರ್ಭದಲ್ಲಿ ಮಾಡಿಸುವ ಮಂಗಳಸ್ನಾನ: ನಗುತೆಂದನು ಮಹೀಪತಿ ವಿನಯ ಮಧುರರಸಾಭಿಷೇಕವನೆನಗೆ ಮಾಡಿದೆ ಸಾಕು ಪುನರುಕ್ತಾಭಿಷೇಕವದು (ಕುವ್ಯಾವಿ. ೧೦-೨೩). ೩. ಪಟ್ಟಾಭಿಷೇಕ. ೪. ಅಭಿಷೇಕಕ್ಕೆ ಸಿದ್ಧಗೊಳಿಸುವ ನೀರು, —ವಸ್ತು. ೫. [ಜೈನ] ಪರಿವ್ರಾಜ್ಯಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು: ಅಭಿಷೇಕಮೆಂಬುದು ಪರಮಜನ್ಮಾಭಿಷೇಕ ಪವಿತ್ರನಪ್ಪ ಜಿನೇಂದ್ರನಂ ಪೊರ್ದಿ ಸ್ನಾನಾದಿ ನಿಜಸಂಸ್ಕಾರಮಂ ಪತ್ತುವಿಟ್ಟು ತಪಶ್ಚರಣಂಗೆಯ್ದೊಡೆ ದಿವ್ಯವಿಜಯ ಪರಮಾಭಿಷೇಕಪ್ರಾಪ್ತಿಯಕ್ಕುಂ (ಚಾವುಂಉ. ೨೪೯). [ಸಂ.]

**ಅಭಿಷೇಕಂಗೆಯ್** (ಕ್ರಿ). ಅಭಿಷೇಕಮಾಡು: ನಾಭಿರಾಜಂಗೆ ರಾಜ್ಯಾಭಿಷೇಕಂಗೆಯ್ದು ಮರುದೇವಿ ಮಹಾದೇವಿವೆರಸು (ಆದಿಪು. ೬-೧೦೭ ವ); ಲಾವಣ್ಯಾಮೃತಮಂ ಹರಿಸವೊದವೆಯಭಿಷೇಕಂಗೆಯ್ಯಲ್ (ಜಯಕಾ. ೩-೩೭). [ಅಭಿಷೇಕ + ಗೆಯ್ (< ಕೆಯ್$_1$)]

**ಅಭಿಷೇಕಿಸು** (ಕ್ರಿ). = ಅಭಿಷೇಕಂಗೆಯ್: ಆದಿನಂದಿಗೆ ಮಜ್ಜನವನಮಳೋದಕದಿನಭಿಷೇಕಿಸುತ್ತಾಮೋದಮೃದು ಚಂದನ ಕುಸುಮ ನವಮಾಲೆಗಳನಿತ್ತು (ಬಸಪು. ೨-೫೧); ನಿಜಧಾರೆಗಳಿನಾ ಶಿವನನಭಿಷೇಕಿಸಿ (ಪದ್ಮರಾ. ೧೦-೨೦೫). [ಅಭಿಷೇಕ + –ಇಸು$_3$]

**ಅಭಿಷೇಚನ** (ನಾ). ೧. ಅಭಿಷೇಕ ಮಾಡುವುದು. ೨. ಕಿರೀಟಧಾರಣೆ ಮಾಡುವುದು. [ಸಂ.]

**ಅಭಿಷ್ಟುತ** (ಗು). ೧. ಕೊಂಡಾಡಲ್ಪಟ್ಟ; ಶ್ರೇಷ್ಠವಾದ. (ನಾ). ೨. ಕೊಂಡಾಡಲ್ಪಟ್ಟವನು: ತ್ರಿಜಗದಭಿಷ್ಟುತಂಗೆ ಜಿನಚಂದ್ರಮಹಾಮಹಿಪಾಳಕಂಗೆ (ಶಾಂತಿಪು. ೧೧-೬೭). [ಸಂ.]

**ಅಭಿಷ್ಟುತಿ** (ನಾ). ಸ್ತೋತ್ರ; ಕೊಂಡಾಟ. 'ಅಭಿಷ್ಟುತಿಗೆಯ್' ಪರಾ. [ಸಂ.]

**ಅಭಿಷ್ಟುತಿಗೆಯ್** (ಕ್ರಿ). ಕೊಂಡಾಡು; ಸ್ತೋತ್ರಮಾಡು: ದುಗ್ಧೋದಧಿತಲ್ಪನಂ ನರನಭಿಷ್ಟುತಿಗೆಯ್ವುದು ಧಾರ್ಷ್ಟ್ಯಮಲ್ಲವೇ (ಜಗವಿ. ೧-೨೦). [ಅಭಿಷ್ಟುತಿ + ಗೆಯ್ (< ಕೆಯ್$_1$)]

**ಅಭಿಷ್ವಂಗ** (ನಾ). ೧. ಕೂಟ; ಸಹವಾಸ; ಆಲಿಂಗನ. ೨. ಅತ್ಯಾಸಕ್ತಿ. [ಸಂ.]

**ಅಭಿಸಂಧಿ** (ನಾ). ೧. ಗುರಿ; ಉದ್ದೇಶ; ಸಂಕಲ್ಪ: ಪ್ರತಿಬಂಧಕರು ಬೇಡೆನಲು ನಯದಭಿಸಂಧಿಯಲಿ ಸೀವರಿಸಿ ಸಂವರಿಸಿದನು ಸೈನಿಕವ (ಕುವ್ಯಾಅ. ೨೨-೨); ರಣದಭಿಸಂಧಿ ಸಾಕಿನ್ನೆನುತ ಫಲುಗುಣ ಶಿರವಬಾಗಿದನು (ಕುವ್ಯಾಭೀ. ೩-೩೭). ೨. ಸಂಚು; ಮೋಸ: ಇನ್ನೇನಾದರೂ ಅಭಿಸಂಧಿ ಇತ್ತೋ ಏನೋ? ಹೆಣ್ಣು ಇರುವ ಪ್ರತಿಯೊಬ್ಬನೂ ನಡಸುವ ಕಾರಸ್ಥಾನ ತಾನೆ ಅದು (ದುಂಬಿಕ. ೮). [ಸಂ.]

**ಅಭಿಸಂಧಿಕೆ** (ನಾ). ಎಂಟು ವಿಧವಾದ ಕಥಾನಾಯಿಕೆಯರಲ್ಲಿ ಒಬ್ಬಳು: ವಿನಯದಿನಡಿಗೆಜಗಿದ ನಲ್ಲನನೊಲ್ಲದೆ ಜಡಿದು ಕಳೆದು ಪಶ್ಚಾತ್ತಾಪಂ ಮನದೊಳ್ಸಂಧಿಸೆ ನೋವಂಗನೆಯಭಿಸಂಧಿಕೆಯಪ್ಪ ಪೆಸರಂ ಪಡೆಗುಂ (ಶೃಂಗಾರ. ೩-೬೮). [ಸಂ. ಅಭಿಸಂಧಿಕಾ]

**ಅಭಿಸಂಪಾತ** (ನಾ). ೧. ಕೂಟ; ಗುಂಪು. ೨. ಎದುರಾಗಿ ನುಗ್ಗುವುದು; ಮೇಲೆ ಬೀಳುವುದು: ಹುಸಿಗನಸಿನಿಂದ ಕೂಡಿದ ಮಾಯಾವಿಮೂಢ ರಾತ್ರಿಯ ಅಭಿಸಂಪಾತದ ಸಲುವಾಗಿ ದಾರಿಕಾಯುತ್ತಿದ್ದೆನು (ಇಪ್ಪಕ. ೧೫೦). [ಸಂ.]

**ಅಭಿಸರಣ** (ನಾ). ೧. ಅಭಿಮುಖವಾಗಿ ಹೋಗುವುದು. ೨. ಪ್ರಿಯರಾದವರು ಭೇಟಿಗಾಗಿ ಸಂಕೇತಸ್ಥಾನಕ್ಕೆ ಹೋಗುವುದು. ೩. ಪರಸ್ಪರ ಭೇಟಿಗಾಗಿ ಮಾಡಿಕೊಂಡ ಸಂಕೇತ. ೪. ಹಗೆಯ ಮೇಲೆ ಯುದ್ಧಕ್ಕಾಗಿ ಹೋಗುವುದು. ೫. ಸುತ್ತಲೂ ಹರಡುವುದು; ವ್ಯಾಪಿಸುವುದು. ೬. ಚಲಾವಣೆ: ಸರಕಿಗೆ ಸರಕು ವಿನಿಮಯವಾಗಿ ಸರಕುಗಳೇ ಸಮಾಜದಲ್ಲಿ ಅಭಿಸರಣವನ್ನು ಹೊಂದುತ್ತಿರುವಾಗ ಅತಿರಿಕ್ತ ಮೌಲ್ಯವು ಉದ್ಭವಿಸುವುದಿಲ್ಲ (ಮಾವಾದ. ೧೧೯). ೭. ಅನುಸರಿಸಿ ಹೋಗುವುದು; ಹಿಂಬಾಲಿಸಿ ನಡೆಯುವುದು. [ಸಂ.]

**ಅಭಿಸಾರ** (ನಾ). ೧. = ಅಭಿಸರಣ ೨: ಈ ಕೊಳಲು ಕಿವಿಗೊಳಲು ಬಂದೆನೀ ಅಭಿಸಾರವೆನಿತು ಲೇಸಾಯ್ತು (ಗೋಕುನಿ. ೯-೨೨). ೨. ಒಂದು ಬಗೆಯ ಸಂಸ್ಕಾರ ವಿಧಾನ. 'ಲೋಹಾಭಿಸಾರ' ಪರಾ. [ಸಂ.]

**ಅಭಿಸಾರಣ** (ನಾ). = ಅಭಿಸರಣ ೨: ಸುಂದರಿ ಪಗಲೊಳುಂ ಚಂದ್ರಾಪೀಡಾಭಿಸಾರಣವೇಷಮಂ ಪಿರಿದುಮೊಲವಿಂದಭ್ಯಾಸಂಗೆಯ್ವುತಿರ್ಪವೊಲೊಪ್ಪಿದಳ್ (ಕಾದಂಉ. ೯೭). [ಸಂ.]

**ಅಭಿಸಾರಿ** (ನಾ). ೧. = ಅಭಿಸಾರಿಕೆ: "ಸ್ವೈರಿಣಿ ವಿದರ್ಶಿನಿಯನೀತೆ ಚಲಿ ಕುಲಟೆಯಭಿಸಾರಿ ಪಾಂಸುಲೆ ಬಂಧಕಿಯೆನಲ್ಕೆ ಹಾದರದ ನಾರಿಯೆನಿಸಿಕ್ಕು" (ಮಂಗರಾ. ೯೦-೪). ೨. ಶತ್ರುವಿನ ಮೇಲೆ ದಂಡೆತ್ತಿ ಹೋಗುವವನು. [ಸಂ. ಅಭಿಸಾರಿನ್]

**ಅಭಿಸಾರಿಕೆ** (ನಾ). ಪ್ರಿಯನನ್ನು ಕೂಡಲು ಸಂಕೇತಸ್ಥಾನಕ್ಕೆ ಹೋಗುವ ಹೆಂಗಸು: "ಇರುಳೆನ್ನದೆ ಕಟ್ತಲೆ ಕಡುವಿರಿದೆನ್ನದೆ ದುರ್ಗಮೆನ್ನದೋಪನೊಳೆತ್ತಂ ನೆರೆಯಲ್ಪರಿದೆಯ್ದುವ ಸುಂದರಿಯಭಿಸಾರಿಕೆಯೆನಿಪ್ಪ ಪೆಸರಂ ಪಡೆಗುಂ" (ಶೃಂಗಾರ. ೩-೫೯); ಇರವದು ನಗಿಸಿತ್ತು ಪೀನಮಭಿಸಾರಿಕೆಯಾ (ಕವಿರಾ. ೩-೧೯೬); ಪಿರಿದುಂ ಗಟಿಪುತ್ತುಮಿರ್ಪಳಂಸಾರಿಕೆಯೆಂಬರಲ್ಲದಭಿಸಾರಿಕೆಯೆಂಬರೆ ಬುದ್ಧಿಯುಳ್ಳವರ್ (ಪಂಪಭಾ. ೪-೮೩). [ಸಂ. ಅಭಿಸಾರಿಕಾ]

**ಅಭಿಸಾರಿಣಿ** (ನಾ). = ಅಭಿಸಾರಿಕೆ. [ಸಂ. ಅಭಿಸಾರಿಣೀ]

**ಅಭಿಸ್ತುತ** (ಗು). ಹೊಗಳಲ್ಪಟ್ಟ; ಕೊಂಡಾಡಲ್ಪಟ್ಟ: ಸದಭಿಸ್ತುತಮಪ್ಪೊಂಕುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೧-೩೭). [ಸಂ.]

**ಅಭಿಹತ** (ಗು). ಹೊಡೆಯಲ್ಪಟ್ಟ; ಬಡಿದ. 'ಅಭಿಹತಮರ್ಮ' ಪರಾ. [ಸಂ.]

**ಅಭಿಹತಮರ್ಮ** (ನಾ). ಮರ್ಮಪ್ರದೇಶಕ್ಕೆ ಪೆಟ್ಟು ತಾಗಿದವನು: ಬಿಟ್ಟಂ ವಸುಧೆಗೆ ರಥದಿಂ ಮೂರ್ಛಾವಸಕ್ತಮತಿ ಧರ್ಮಪಾಲನಭಿಹತಮರ್ಮಂ (ಚಂದ್ರಪು. ೧೦-೯೨). [ಅಭಿಹತ + ಮರ್ಮ]

**ಅಭಿಹತಿ** (ನಾ). ೧. ಪೆಟ್ಟು; ಏಟು: ಕರಾಳಲೋಹಗದಾಭಿಹತಿಗೆ ನೃಪಾಲ ಬಿದ್ದನು (ಕುವ್ಯಾಗ. ೮-೧). ೨. [ಗಣಿತ] ಗುಣಾಕಾರ. [ಸಂ.]

**ಅಭಿಹಾರ** (ನಾ). ೧. ಹೆರವರ ವಸ್ತುವನ್ನು ಕಣ್ಣೆದಿರಿನಲ್ಲಿಯೇ ಎತ್ತಿಕೊಂಡು ಹೋಗುವುದು; ದರೋಡೆ. ೨. ಆಕ್ರಮಣ; ಮುತ್ತಿಗೆ. ೩. ಯುದ್ಧಕ್ಕಾಗಿ ಸನ್ನಾಹ ಮಾಡಿಕೊಳ್ಳುವುದು. ೪. ತಳ್ಳುವುದು. ೫. ಒಂದರೊಡನೊಂದನ್ನು ಕೂಡಿ ಬೆರಸುವುದು; ಬೆರಕೆ.

೬. ಪ್ರಯತ್ನ. ೭. ದಯೆಯಿಲ್ಲದಿರುವುದು; ನಿಷ್ಕರುಣೆ. ೮. ಕುಡುಕ. ೯. ಹತ್ತಿರ ತರುವುದು: "ವಿಪರೀತಂ ಸಮರಪ್ರವೇಶ ಪರವಸ್ತುಸ್ವಾಪಹಂ ನೂಂಕುಹಂ ಕೃಪೆಹೀನಂ ಅಭಿಹಾರಮಕ್ಕುಂ" (ನಾನಾರ. ೧೫೨). [ಸಂ.]

**ಅಭಿಹಿತ** (ಗು). ಹೇಳಿದ; ಹೆಸರಿಸಿದ. 'ಅಭಿಹಿತಾನ್ವಯವಾದಿ' ಪರಾ. [ಸಂ.]

**ಅಭಿಹಿತಾನ್ವಯ** (ನಾ). [ಕಾವ್ಯಮೀ] ವಾಕ್ಯದ ಆನುಪೂರ್ವಿಕ ಮಹಿಮೆಯಿಂದ ಪದಗಳ ಪರಸ್ಪರ ಸಂಬಂಧವು ತೋರುವುದು. 'ಅಭಿಹಿತಾನ್ವಯವಾದಿ' ಪರಾ. [ಅಭಿಹಿತ + ಅನ್ವಯ]

**ಅಭಿಹಿತಾನ್ವಯವಾದಿ** (ನಾ). ವಾಕ್ಯದ ಪದಗಳಿಂದ ಮೊದಲು ವಾಚ್ಯಾರ್ಥ, ಬಳಿಕ ತಾತ್ಪರ್ಯಾರ್ಥ ಎಂದು ವಾದಿಸುವವನು: ಹೀಗೆನ್ನುವುದು ಈ ಸಂಪ್ರದಾಯದವರ ಮತ; ಇವರಿಗೆ ಅಭಿಹಿತಾನ್ವಯ ವಾದಿಗಳೆಂದು ಹೆಸರು (ಭಾರಮೀ. ೨೪೮). [ಸಂ. ಅಭಿಹಿತಾನ್ವಯವಾದಿನ್]

**ಅಭೀಕ** (ನಾ). ೧. ಕಾಮುಕ. ೨. ನಲ್ಲ; ಗಂಡ. ೩. ಭಯವಿಲ್ಲದವನು; ಹೆದರದವನು. [ಸಂ.]

**ಅಭೀಕ್ಷಣ** (ನಾ). ಅಭಿಮುಖವಾಗಿ ನೋಡುವುದು: ದೂರಾಭೀಕ್ಷಣ ವೀಪ್ಸೋದಾರಾನುಕೃತಿಕ್ರಿಯಾ ಸಮಭಿಹಾರ ಸಮಿಪೋರುತರ ಚಾಪಲಾದಿಗೆ ಸಾರಂ (ಶಮದ. ಸ. ೨೦೬). [ಸಂ.]

**ಅಭೀಕ್ಷಿಸು** (ಕ್ರಿ). ಅಭಿಮುಖವಾಗಿ ನೋಡು; ಚೆನ್ನಾಗಿ ನೋಡು: ಒದವಿದ ರಾಗದಿಂದವನಭೀಕ್ಷಿಸುತಾಂ ಚರಿಸುತ್ತಮಿರ್ಪಿನಂ (ಕಾದಂಪೂ. ೬೨೨). [ಅಭೀಕ್ಷಣ + -ಇಸು]

**ಅಭೀಕ್ಷ್ಣ** (ಗು). ಮತ್ತೆ ಮತ್ತೆ ತೋರಿ ಬರುವ; ಪುನರುಕ್ತವಾದ; ಅತಿಶಯವಾದ; ಸಂತತವಾದ; ನಿತ್ಯವಾದ; ಬಿಡುವಿಲ್ಲದ: "ಅಭೀಕ್ಷ್ಣ – ಎಡೆವಱಿಯದ" (ತತ್ತ್ವಪ್ರ. ೨೬೫). [ಸಂ.]

**ಅಭೀಕ್ಷ್ಣಂ** (ಅ). ಮತ್ತೆ ಮತ್ತೆ; ಹೆಚ್ಚಾಗಿ; ಸಂತತವಾಗಿ; ಬಿಡುವಿಲ್ಲದೆ. [ಸಂ.]

**ಅಭೀತ** (ಗು). ೧. ಹೆದರದ; ಭಯಪಡದ. (ನಾ). ೨. ಹೆದರದವನು: ಅಭೀತಂ ನಿಜಾರಿಸಮಿತಿಗಳಿಂದಂ (ಕವಿರಾ. ೩-೧೫೯). [ಸಂ.]

**ಅಭೀತಚೇತ** (ನಾ). ಹೆದರದ ಮನಸ್ಸಿನವನು: ಸ್ವೇಚ್ಛೆಯಿಂ ಸಮ್ಮುಗ ವ್ರಾತನಭೀತಚೇತನತುಳಂ ಪೀರ್ದಂ (ಪಂಚತಂ. ೫೮-೧೧). [ಅಭೀತ + ಚೇತ]

**ಅಭೀತಮನ** (ನಾ). = ಅಭೀತಚೇತ: ಎನೆ ಬಗೆಗೊಂಡಭೀತಮನನರ್ಚಿಸಿ ಬಂದಿಸಿ ಚೈತ್ಯಗೇಹಮುಳ್ಳನಿತುಮಂ (ಆದಿಪು. ೩-೮). [ಅಭೀತ + ಮನ]

**ಅಭೀತಾತ್ಮ** (ನಾ). = ಅಭೀತಚೇತ. [ಅಭೀತ + ಆತ್ಮ]

**ಅಭೀತಾತ್ಮಕ** (ಗು). ಹೆದರದ ಮನಸ್ಸುಳ್ಳ: ಹೈಮಾಚಳಮಿರ್ಪಂತಾಗಳಿರ್ದ[ಂ] ಮರಮೊದಲೊಳಭೀತಾತ್ಮಕಂ ಯೋಗಿನಾಥಂ (ಸುಕುಮಾ. ೪-೯). [ಅಭೀತ + ಆತ್ಮಕ]

**ಅಭೀತಿ** (ನಾ). ಅಭಯ; ನಿರ್ಭಯತೆ. [ಸಂ.]

**ಅಭೀತೆ** (ನಾ). ಭಯವಿಲ್ಲದವಳು; ನಿರ್ಭಯಳು: ಅಭಯರುಚಿ ತಂಗೆ ಗೆಂದಪನಭೀತೆಯಾಗೆಲಗೆ ತಾಯೆ ಮರಣದ ದೆಸೆಯೊಳ್ (ಯಶೋಚ. ೧-೪೮). [ಸಂ. ಅಭೀತಾ]

**ಅಭೀತ್ಯುಕ್ತಿ** (ನಾ). ಹೆದರಬೇಡವೆಂಬ ಮಾತು; ಅಭಯವಾಕ್ಯ: ಅಭೀತ್ಯುಕ್ತಿಯುಸಲಿತಂ ತಾನೆನೆ ಸಾಕ್ಷ್ಯಯಕ್ಕೆನಗಮಿ ಹಸ್ತಂ ಸರೋಜಾಂಬಕಾ (ವಸ್ತುವಂ. ೧೧೫). [ಅಭೀತಿ + ಉಕ್ತಿ]

**ಅಭೀಪ್ಸಿತ** (ಗು). ೧. ಬಯಸಿದ. (ನಾ). ೨. ಬಯಸಿದ್ದು; ಇಷ್ಟಾರ್ಥ; ಮನೋರಥ. [ಸಂ.]

**ಅಭೀಪ್ಸೆ** (ನಾ). ಬಯಕೆ; ಅಭಿಲಾಷೆ: ಚಂದ್ರವರ್ಧನನಭೀಪ್ಸಾವಲ್ಲರೀ ವರ್ಧನಂ (ಪಂರಾಮಾ. ೫-೨೯); ಜನಮನದ ಶಕ್ತಿ ಮೇಣವರಭೀಪ್ಸೆಯೆ ಮಹಾತ್ಮರಂ ನಮ್ಮೆಳಿಗೆ ತಪ್ಪದೆಳೆತರ್ಪುದು ಕಣಾ! (ಶ್ರೀರಾಮಾ. ೧೦-೨೬೨). [ಸಂ. ಅಭೀಪ್ಸಾ]

**ಅಭೀರ** (ನಾ). = ಆಭೀರ. [ಸಂ.]

**ಅಭೀರು** (ನಾ). ೧. ಭಯವಿಲ್ಲದ ವ್ಯಕ್ತಿ; ೨. ಮಜ್ಜಿಗೆ ಗೆಡ್ಡೆ; ಆಷಾಢಿ ಗಿಡ; ಶತಾವರಿ ಗಿಡ. [ಸಂ.]

**ಅಭೀಷ್ಟ, ಅಭೀಷ್ಟೆ** (ನಾ). ಪ್ರಿಯವಾದುದು; ಬಯಸಿದುದು: ತುಹಿನಕರಂನಿಲೆಸೌಮ್ಯ ಗ್ರಹರಾಶಿಯೊಳುದಯಪತಿ ನಿರೀಕ್ಷಿಪೊಡನ್ಯಗ್ರಹಮಿಕ್ಷಿಸದೊಡೆ ಶಶಿರಿಷ್ಟ ಹರನಭೀಷ್ಟಪ್ರವರ್ಧನಂ ಬುಧಮಿತ್ರಾ (ಜಾತತಿ. ೭-೪). **ಅಭೀಷ್ಟೆ**: ಭಾವದಲ್ಲಿಯೆ ಷೋಡಶೋಪಚಾರ ಅಷ್ಟವಿಧಾರ್ಚನೆಗಳಿಂದ ಪೂಜೆಯಂ ಮಾಡಿ ತನ್ನ ಮನದಭೀಷ್ಟೆಯಂ ನೆನೆದಂತೆ ಮನದಲ್ಲೆ ಬೇಡಿ (ಘನವ. ೪೯). [ಸಂ. ಅಭೀಷ್ಟ]

**ಅಭೀಷ್ಟಫಲ** (ನಾ). ಬಯಸಿದ ಫಲ: ಕೋಮಲಮುಖೀ ಗೌರೀಲತಾಶ್ಲಿಷ್ಟಶಂಕರ ಕಲ್ಪದ್ರುಮನೀಗಭೀಷ್ಟಫಲಮಂ ಚಾಳುಕ್ಯನಾರಾಯಣಂ (ಗದಾಯು. ೧-೨). [ಅಭೀಷ್ಟ + ಫಲ]

**ಅಭೀಷ್ಟರಸ** (ನಾ). ಬೇಕಾದ ರಸ; ಅಪೇಕ್ಷಿತವಾದ ರಸ: ಅಭೀಷ್ಟರಸಕ್ಕೆ ಪೋಷಕಗಳಾಗುವಂತಹ ವಸ್ತುವನ್ನೇ ಕಲ್ಪಿಸಿಕೊಂಡಾದರೂ ಕಥೆಯನ್ನು ಬೆಳೆಸುವುದು (ಧ್ವನ್ಯಾಲೋ. ೧೪೫). [ಅಭೀಷ್ಟ + ರಸ]

**ಅಭೀಷ್ಟಶ್ರೀ** (ನಾ). ಶುಭಫಲದ ಸಂಪತ್ತು; ಬೇಕಾದ ಐಶ್ವರ್ಯ; ಬಯಸಿದ ಮೇಲ್ಮೆ: ಈಗಳೀವುದು ನಮ್ಮಭೀಷ್ಟಶ್ರೀಗೆ ಮಂಗಳವೆಂದು ಹರಸಿದೊಡೆ (ಕುವ್ಯಾಕ. ೨೬-೧೫). [ಅಭೀಷ್ಟ + ಶ್ರೀ]

**ಅಭೀಷ್ಟಸಿದ್ಧಿ** (ನಾ). ಬಯಸಿದ್ದರ ನೆರವೇರಿಕೆ; ಇಷ್ಟಾರ್ಥವು ಕೈಗೂಡುವುದು; ಉದ್ದೇಶ ಪ್ರಾಪ್ತಿ. [ಅಭೀಷ್ಟ + ಸಿದ್ಧಿ]

**ಅಭೀಷ್ಟಿತ** (ಗು). = ಅಭೀಪ್ಸಿತ: ಎಲೆ ನಿನಗೆ ಮೆಚ್ಚಿದೆನಭೀಷ್ಟಿತಫಲವನೀವೆನು ಬೇಡು ನೀನೆನೆ ಎಳೆನಗೆಯ ಮೊಗವೆಸೆಯೆ (ಬಸವು. ೧೬-೨೬). [ಸಂ. ಅಭೀಷ್ಟ]

**ಅಭೀಷ್ಟೆ** 'ಅಭೀಷ್ಟ' ನೋ.

**ಅಭುಕ್ತಮೂಲೆ** (ನಾ). (ಯಾರಿಗೂ) ತಿಳಿಯದ ಪ್ರದೇಶ, ಗ್ರಾಮ, ಊರು, ಮೊದಲಾದುವು; ಮೂಲೆಕೊಂಪೆ: 'ತಾನು' ಎಲ್ಲಿ ಯಾವ ಅಭುಕ್ತಮೂಲೆಯಲ್ಲಿ ಅಡಗಿಕೊಂಡಿದೆಯೋ ಪತ್ತೆ ಇಲ್ಲವಲ್ಲ (ನಿಬಂಧ II, ೧೨೬). [ಅಭುಕ್ತ₀ + ಮೂಲೆ]

**ಅಭೂತಪೂರ್ವ** (ಗು). ಹಿಂದೆ ಎಂದೂ ನಡೆಯದಿರುವ: ಅಭೂತಪೂರ್ವಮುಪ್ಪುತ್ಪಾತಂಗಳನೇನುಮಂ ಬಗೆಯದೆ ಕೋಪಮನೆ ಬಗೆದು (ಪಂರಾಮಾ. ೧೪-೧೨೮ ವ). [ಸಂ.]

**ಅಭೂತಭಯ** (ನಾ). ಭಯವುಂಟಾಗದವನು; ಭಯವಿಲ್ಲದವನು: ಅಭೂತಭಯಂ ಕಂಡಂ ಭೂತರಮಣನಾಮಾಟವಿಯಂ (ಶಾಂತಿಪು. ೪-೬೨). [ಸಂ.]

**ಅಭೂತೋಪಮೆ** (ನಾ). [ಕಾವ್ಯಮೀ] ಹಿಂದೆ ಯಾರೂ ವರ್ಣಿಸದ ರೀತಿಯಲ್ಲಿ ಉಪಮಾನವನ್ನು ಒಂದು ವಿಶೇಷಕ್ರಮದಲ್ಲಿ ಯೋಜಿಸಿ ವಿಷಯವನ್ನು ವರ್ಣಿಸುವುದು: ನುತಶಿಶಿರ ಕಿರಣಕಾಂತಿ ಪ್ರತತಿಯನೊಡಗೂಡಿ ಮಾಡಿದವೊಲಾಯಿತ್ತಿಂತತಿಶಯಮಿ ನಿನ್ನ ಮುಖಂ ನಿತಾಂತಮೆಂಬಾಗಳಱಿಗಭೂತೋಪಮೆಯಂ (ಕವಿರಾ. ೩-೭೮). [ಅಭೂತ + ಉಪಮೆ]

**ಅಭೂರಿ** (ಗು). ಭೂರಿಯಲ್ಲದ; ಸ್ವಲ್ಪ: "ಅಲ್ಪಂ ಲವಂ ಲೇಶಮಣಂ ಕಣಮಭೂರಿ [ಪಾಠಾಂ.. ತಿ] ಪ್ರಮುಷ್ಟಂ ಹ್ರಸ್ವಮವರಿಷ್ಟಮತಿ ಸೂಕ್ಷ್ಮಮಾಕ್ಷುದ್ರಮುಂ . . . ಕಿಱಿದೆನಿಕ್ಕು" (ಮಂಗರಾ ೧೨೭-೫). [ಸಂ.]

**ಅಭೇದ** (ನಾ). ೧. ಭೇದವಿಲ್ಲದಿರುವುದು; ಒಂದೇ ಆಗಿರುವುದು. ೨. ಐಕಮತ್ಯ. [ಸಂ.]

**ಅಭೇದಭಕ್ತಿ** (ನಾ). ಭೇದವಿಲ್ಲದಿರುವ ಭಕ್ತಿ (?): ಭೇದಾಭೇದ ರತ್ನತ್ರಯವೆಂದರೆ ಭೇದಾಭೇದಭಕ್ತಿಗಳಿಂದ ಕರ್ಮವ ಭೇದಿಸಿದರೆ ಮುಕ್ತಿಯರಿದೆ (ಭರಚ. ೬೪-೯೫). [ಅಭೇದ + ಭಕ್ತಿ]

**ಅಭೇದರೂಪಕ** (ನಾ). [ಕಾವ್ಯಮೀ] ರೂಪಕಾಲಂಕಾರದಲ್ಲಿ ಒಂದು ಬಗೆ: ಉದಾ:—ಅರಸಾಗಲೊಡಂ ಮೆಯ್ಮಱೆದು ರಾಜ್ಯಸುಖಸನ್ನಿಪಾತನಿದ್ರೆಯ ಕೈಕೊಂಡಿರುಳುಂ ಪಗಲುಂ ಜಾಡ್ಯದೆ ಮರವಟ್ಟಿಱುವರಲ್ಲಮೆಂತುಂ ಭೂಪರ್ ‖ ಇಲ್ಲಿ 'ರಾಜ್ಯಸುಖವೆಂಬ ಸನ್ನಿಪಾತನಿದ್ರೆ' ಎಂಬುದಾಗಿ ರಾಜ್ಯಸುಖವನ್ನು ಸನ್ನಿಪಾತನಿದ್ರಾಭಿನ್ನವನ್ನಾಗಿ ಹೇಳಿದೆ. ಆದ್ದರಿಂದ ಇಲ್ಲಿ ಅಭೇದರೂಪಕಾಲಂಕಾರ (ಕೈಪಿಡಿ. ೨೬೩). [ಅಭೇದ + ರೂಪಕ]

**ಅಭೇದವಾದಿ** (ನಾ). ಜೀವಾತ್ಮ ಪರಮಾತ್ಮರಿಗೆ ಭೇದವಿಲ್ಲವೆಂದು ವಾದಿಸುವವನು: ವೇದಾಂತಿಯೋರ್ವನೇ ಅಭೇದವಾದಿಯಪ್ಪಂ (ವಿವೇಕ. ೧೨). [ಸಂ. ಅಭೇದವಾದಿನ್]

**ಅಭೇದಶ್ರುತಿ** (ನಾ). ಜೀವಾತ್ಮ ಪರಮಾತ್ಮರಿಗೆ ಭೇದವಿಲ್ಲವೆಂದು ಹೇಳುವ ಶ್ರುತಿ: ಅಭೇದಶ್ರುತಿಗಳು ಭೇದವನ್ನು ನಿಷೇಧಿಸುತ್ತವೆ (ಹಿಂದಸಾ. ೨೨೩). [ಅಭೇದ + ಶ್ರುತಿ]

**ಅಭೇದಾತ್ಮತೆ** (ನಾ). ಭೇದವಿಲ್ಲದ ಸ್ವರೂಪವುಳ್ಳದಾಗಿರುವುದು; ಅಭಿನ್ನವಾಗಿರುವುದು: ಪ್ರತಿವಸ್ತೂಪಮೆ ಸಾಮ್ಯಪ್ರತೀತಿಯಿಂದಂ ಸಮಾನವಸ್ತುನ್ಯಸನಂ ಪ್ರತಿಪಾದಿಸುವುದಭೇದಾತ್ಮತೆಯಿಂದುಪಮೆಯನದಲ್ತೆ ರೂಪಕಮುಕ್ಕುಂ (ಕಾವ್ಯಾವ. ೬೮೫). [ಸಂ. ಅಭೇದಾತ್ಮತಾ]

**ಅಭೇದ್ಯ** (ಗು). ೧. ಭೇದಿಸಲಾಗದ; ಒಡೆಯಲಾರದ: ತಮದೊಡ್ಡು ಮುಷ್ಟಿಗ್ರಾಹ್ಯಮಭೇದ್ಯಂ ಸೂಚಿಗಪ್ಪೊಡಂ (ಕಾವ್ಯಾವ. ೫೫೩). (ನಾ). ೨. ಭೇದಿಸಲಾಗದುದು; ಒಡೆಯಲು ಅಥವಾ ಚುಚ್ಚಲು ಶಕ್ಯವಿಲ್ಲದುದು: ವಿಷಮೋಚಿಕಗಳೆಂಬ ಪಾವುಗೆಗಳುಂ ಅಭೇದ್ಯಮೆಂಬ ಕವಚಮುಂ (ಆದಿಪು. ೧೫-೩ ವ). ೩. ಭೇದೋಪಾಯದಿಂದ ಒಡೆದು ಅಗಲಿಸಲು ಶಕ್ಯವಿಲ್ಲದವನು. ೪. ಭೇದಿಸಿ ತಿಳಿಯಲು ಸಾಧ್ಯವಾಗದುದು: ಭೇದದ ಅಭೇದ್ಯದಿಂದ ಭೇದಿಸಲಾಗಿ ನಿಃಕಳಂಕ ಮಲ್ಲಿಕಾರ್ಜುನನ ಲಿಂಗದಲ್ಲಿ ಅಯ್ಕ್ಯಿತ್ತು (ಮೋಳಿಮಾ. ೫-೧೭). [ಸಂ.]

**ಅಭೇದ್ಯಕವಚ** (ನಾ). ಭೇದಿಸಲು ಆಗದ ಕವಚ: ಅರ್ಜುನನು . . . ಗಾಂಡೀವವನ್ನು ಹಿಡಿದು ಅಭೇದ್ಯಕವಚ ತೊಟ್ಟು ವ್ಯೂಹದೊಳಕ್ಕೆ ನುಗ್ಗಿದರೆ ಅದು ಅವನಿಗೆ ತಕ್ಕದ್ದೇ (ವಚಭಾ. ೨೮೮). [ಅಭೇದ್ಯ + ಕವಚ]

**ಅಭೇದ್ಯಲಿಂಗ** (ನಾ). ಭೇದಿಸಿ ತಿಳಿಯಲಸಾಧ್ಯವಾದ ಸ್ವರೂಪವುಳ್ಳದ್ದು: ವೇದ ವೇಧಿಸಲಱಿಯದೆ ಅಭೇದ್ಯಲಿಂಗವೆಂದು ನಡುನಡುಗಿತ್ತು (ಬಸವ. ೯೫೨). [ಅಭೇದ್ಯ + ಲಿಂಗ]

**ಅಭೇದ್ಯಸ್ಥಲ** (ನಾ). [ವೀಶೈ] ಐಕ್ಯವಾಗಿ ಪರಸ್ಪರ ಭೇದವಿಲ್ಲದ ಸ್ಥಲ: ಐಕ್ಯಸ್ಥಲದಂಗ ಅಭೇದ್ಯಸ್ಥಲ ಇಂತೀ ಉಭಯವ ತಿಳಿದ ನಿರಂಗಂಗೆ ಸ್ಥಲ ಕುಳಲೇಪವಾಯಿತ್ತು ನಿಃಕಳಂಕ ಮಲ್ಲಿಕಾರ್ಜುನನಲ್ಲಿ (ಮೋಳಿಮಾ. ೪೪೨). [ಅಭೇದ್ಯ + ಸ್ಥಲ]

**ಅಭೋ, ಅಬೊ** (ಅ). ಬಿಮ್ಮು; ಬಿಕೋ; ಶೂನ್ಯಪ್ರಾಯ: ತುಂಬಿದ ಬಸುರಿಯನ್ನು ಅಭೋ ಎನ್ನುವ ಕಾಡಿಗಟ್ಟಿ ಸುಖವಾಗಿರುವನಂತೆ (ಹೊನ್ನಶೂ. ೮). **ಅಬೊ**: ಮನೆ 'ಅಬೊ' ಎನ್ನುತ್ತಿದೆ . . . ಪಾರ್ವತಮ್ಮನ ಮನಸ್ಸೂ ಅಬೊ ಎನ್ನುತ್ತಿದೆ (ಬೆಳುವ. ೧೫೪). 'ಬಿಕೋ' ಪರಾ. [?]

**ಅಭೋಗಿ** (ನಾ). ೧. ಭೋಗಿಯಲ್ಲದವನು. ೨. [ಜೈನ] ಒಂದು ವಿದ್ಯೆ: ಮತ್ತೊಂದು ದಿವಸಂ ಪ್ರಜ್ಞಪ್ತಿ ಕಾಮರೂಪಿಣಿ ಭ್ರಾಮರಿ ಅಭೋಗಿಯೆಂಬಿವು ಮೊದಲಾಗಿ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ (ಚಾವುಂಪು. ೨೧೦). [ಸಂ.]

**ಅಭೋಜ್ಯ** (ಗು). ೧. ತಿನ್ನಬಾರದ: ಔದುಂಬರತರುವಾರ್ಗಮಭೋಜ್ಯಂ ಕ್ಷುದ್ರಜಂತು ಜನ್ಮಾವಾಸಂ (ಮಲ್ಲಿಪು. ೧೦-೬೧). (ನಾ). ೨. ತಿನ್ನಬಾರದ್ದು: ತಂದರಾರೀಯಭೋಜ್ಯವನೆನುತ್ತುಳ್ಳಿಯಂ ನಿಂದಿಸುತೆ (ಬಸರ.೧೧-೪೫); ಭೋಜ್ಯಾಭೋಜ್ಯವನು ತಿಳಿದು (ಕುವ್ಯಾಉ. ೩-೬೨). [ಸಂ.]

**ಅಭೌತ** (ನಾ). ೧. ಪಂಚಭೂತಗಳಿಗೆ ಸಂಬಂಧವಿಲ್ಲದ್ದು. ೨. ಲೋಕೋತ್ತರವಾದುದು: ಗಗನವನಳೆಯೆ ವಿಶ್ವಶಿಲ್ಪಿ ತಾಂ ಬಿಚ್ಚಿ ಬೀಸಿದ ಮಾನಸೂತ್ರವೆಂಬಂತೆವೋಲ್ ಮುಂ ಪೇಳ್ವೆನೇನಾ ಅಭೌತಮಂ (ಶ್ರೀರಾಮಾ. ೪೦೬-೧೧೧). [ಸಂ.]

**ಅಭ್ಯಂಗ** (ನಾ). ೧. ಮೈಗೆ ಎಣ್ಣೆ, ಸುಗಂಧ ತೈಲ ಮುಂತಾದ ಲೇಪನ ದ್ರವ್ಯಗಳನ್ನು ಹಚ್ಚಿಕೊಳ್ಳುವುದು; ಎಣ್ಣೆಮಜ್ಜನ: ಬ್ರಾಹ್ಮರ ಅಭ್ಯಂಗಕ್ಕೆ ಶನಿವಾರ ೧ಕ್ಕೆ ಎಣ್ಣೆ ಸೇರು ೪ (ಎಕ. VIII, ತೀರ್ಥಹ. ೧೯-೧೧೨; 1573). ೨. ಎಣ್ಣೆ ಮುಂತಾದ ಲೇಪನದ್ರವ್ಯ. [ಸಂ.]

**ಅಭ್ಯಂಗನ** (ನಾ). = ಅಭ್ಯಂಗ ೧: ಅಂಗನೆಗೆ ಸೌರಭ್ಯ ತೈಲಾಭ್ಯಂಗನವನಾಚರಿಸಿ . . . ಉಡಿಸಿದರು ನವದುಕೂಲವನು (ಬಸವು. ೪-೩೪). [ಸಂ. ಅಭ್ಯಂಗ]

**ಅಭ್ಯಂಗನಸ್ನಾನ** (ನಾ). = ಅಭ್ಯಂಗ ೧: ಆ ದಿನ ಶುಕ್ರವಾರವಾದುದರಿಂದ ಲಕ್ಷ್ಮೀಪೂಜೆಯನ್ನು ಮಾಡಲಿಕ್ಕಾಗಿ ಅಭ್ಯಂಗನಸ್ನಾನವನ್ನು ಮಾಡಿದವಳು (ಲಕ್ಷ್ಮೀಪ್ರ. ೧೭). [ಅಭ್ಯಂಗನ + ಸ್ನಾನ]

**ಅಭ್ಯಂಗಿಸು** (ಕ್ರಿ). ೧. ಲೇಪಿಸು; ಸವರು; ಹಚ್ಚು: ಘೃತಮೊಂದೆ ಪಾಲ್ಮರಂಗಳ ಪಾಲ್ ಪಿಂಗಿಸುಗುಂ ತಡೆದಿರದಭ್ಯಂಗಿಸಿದೊಡೆ ಪುಱು ತಿಂದ ಬೇನೆಯುಂ ಗಂದೆಯುಮಂ (ಲೋಕೋಪ. ೧೦-೪೦). ೨. ತೈಲವೇ ಮುಂತಾದುವನ್ನು ಹಚ್ಚಿಕೊಂಡು ಸ್ನಾನಮಾಡು. [ಅಭ್ಯಂಗ + -ಇಸು]

**ಅಭ್ಯಂಜನ** (ನಾ). = ಅಭ್ಯಂಗ ೧: ಭಾನುವಾರ ಅಭ್ಯಂಜನ ಎಂದರೆ ಅರ್ಧ ಡಬ್ಬ ಹರಳೆಣ್ಣೆ, ಎರಡು ಬುತ್ತಿ ಸೀಗೆಪುಡಿ ಮನೆ ಲೆಕ್ಕಕ್ಕೆ ಖರ್ಚು (ಮಲೆಚ. ೨೯). [ಸಂ.]

**ಅಭ್ಯಂತರ** (ನಾ). ೧. ಒಳಗು; ನಡುವೆ; ಅಂತರಾಳ: ಚಿತ್ರಶಾಲಾಭ್ಯಂತರ [ವ್ಯ]ವಸ್ಥಿತ ಮೃಗೇಂದ್ರಾಸನದೊಳಿರೆ (ಶಾಂತಿಪು. ೯-೨ ವ). ೨. ಅಂತರಂಗ: ಕುಮಾರನ ಸುಲಲಿತಾಭ್ಯಂತರವನಱಿದವಗೊಳಿದು ತಿಳುಹುವೆನು (ಜೀವಂಚ. ೫-೫೬). ೩. ಅಂತರಂಗಕ್ಕೆ ಸೇರಿದವನು. ೪. ಕಾಲದ ಅವಧಿ. ೫. ನಡುವೆ ಇರುವ ಸ್ಥಳಾವಕಾಶ: ನರನೊಡನೆ ಸಮದಂಡಿಯೇ ಜಗವಱಿಯದೇ ನಿನ್ನಾತನಭ್ಯಂತರವನಕಟಾ (ಕುವ್ಯಾಕ. ೯-೭). ೬. ಅಡ್ಡಿ; ತಡೆ; ಆಕ್ಷೇಪಣೆ: ನೀನು ಅಲ್ಲಿಗೆ ಹೋಗಿಬರುವ ವಿಷಯದಲ್ಲಿ ನನ್ನದೇನೂ ಅಭ್ಯಂತರವಿಲ್ಲ (ರೂಢಿ). [ಸಂ.]

**ಅಭ್ಯಂತರತಪಸ್ಸು** (ನಾ). [ಜೈನ] ಅಂತರಂಗದ ತಪಸ್ಸು; ಪ್ರಾಯಶ್ಚಿತ್ತ, ವಿನಯ, ವೈಯಾಪೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನ ಎಂಬ ಆರು ತಪಸ್ಸುಗಳು: ಮತ್ತಮಭ್ಯಂತರತಪಷ್ಷಟ್ಕದೊಳಂ ಪ್ರಾಯಶ್ಚಿತ್ತ ವಿನಯ ವೈಯಾಪೃತ್ಯ ಸ್ವಾಧ್ಯಾಯ ಧ್ಯಾನವ್ಯುತ್ಸರ್ಗಂಗಳಂ ಕೈಕೊಂಡು (ಆದಿಪು. ೬-೩೩ ವ). [ಅಭ್ಯಂತರ + ತಪಸ್ಸು]

**ಅಭ್ಯಂತರಮಂಟಪ** (ನಾ). ಒಳಗಿನ ಮಂಟಪ; ನಡುವಣ ಮಂಟಪ: ಆರ್ಯರ್ ಶುಕನಾಸನರಮನೆಗೆ ಬಿಜಯಂಗೈದನೆಂಬುದಂ ಕೇಳ್ದು ತಾನುಮಲ್ಲಿಗೆ ಪೋಪಾಗಳಭ್ಯಂತರಮಂಟಪದಲ್ಲಿ (ಕಾದಂಉ. ೪೬೭). [ಅಭ್ಯಂತರ + ಮಂಟಪ]

**ಅಭ್ಯಂತರಿಸು** (ಕ್ರಿ). ೧. ಅಡ್ಡಿಪಡಿಸು; ತಡೆ. ೨. ಮನಸ್ಸಿಗೆ ತಂದುಕೊ; ಮೆಚ್ಚು: [ಇ]ಱಿದು ಸತ್ತ ಕಾದುವಟ್ಟ ಬೀರಯ್ಯರ ವೀರವನಭ್ಯಂತರಿಸಿ ಶ್ರೀಕಲ್ನಾಟುಗೊಟ್ಟರ್ (ಎಕ. IX, ದೇವನ. ೧೧–೧೨; 948). [ಅಭ್ಯಂತರ + -ಇಸು₃]

**ಅಭ್ಯಗ್ರ** (ಗು). ೧. ಅತಿಶಯವಾದ. (ನಾ). ೨. ಹತ್ತಿರ; ಸಮೀಪ; ಸಾಮೀಪ್ಯ: ಮದುವೆ ಅಭ್ಯಗ್ರವಾಗುತ್ತಿದೆ (ರೂಢಿ). ೩. ಹೊಸದು. [ಸಂ.]

**ಅಭ್ಯಧಿಕ** (ಗು). ಅಧಿಕವಾದ; ಅತಿಶಯವಾದ. [ಸಂ.]

**ಅಭ್ಯಧಿಕೇಕ್ಷಣ** (ನಾ). ಮುಕ್ಕಣ್ಣ; ಶಿವ: ಶ್ರೀಪತಿ ಚಕ್ರಧಾರಿ . . . ವೃಷಭಾಸನನಭ್ಯಧಿಕೇಕ್ಷಣಂ (ಎಕ. VII, ಶಿಕಾರಿ. ೧೨೫–೧; 1019). [ಅಭ್ಯಧಿಕ + ಈಕ್ಷಣ]

**ಅಭ್ಯನುಜ್ಞೆ** (ನಾ). ೧. ಅಪ್ಪಣೆ. ೨. ಅನುಮತಿ; ಸಮ್ಮತಿ. [ಸಂ. ಅಭ್ಯನುಜ್ಞಾ]

**ಅಭ್ಯಮಿತ್ರೀಣ** (ಗು). ಶತ್ರುಗಳನ್ನು ದಿಟ್ಟತನದಿಂದ ಎದುರಿಸುವ: ಕರ್ಕಸಂಗಳಂ ನುಡಿದು ಮಾಣದೆ ಅಭ್ಯಮಿತ್ರೀಣವೃತ್ತಿಯನೆ ಪೂಣ್ದು ಪೊಱಮಡುವಾಗಳ್ (ಚಂದ್ರಪು. ೧೦–೫೫ ವ). [ಸಂ.]

**ಅಭ್ಯರ್ಚನ, ಅಭ್ಯರ್ಚನೆ** (ನಾ). ಪೂಜೆ; ಸತ್ಕಾರ: ಜಿನೇಂದ್ರಪಾದಾಭ್ಯರ್ಚನದೊಳ್ ನಿರ್ಗ್ರಂಥರೂಪಧಾರಿಯಾಗಿ (ಶಾಂತಿಪು. ೬–೮೨ ವ). **ಅಭ್ಯರ್ಚನೆ** (ಗಂಗಾಮು. ೧೨). [ಸಂ. ಅಭ್ಯರ್ಚನ]

**ಅಭ್ಯರ್ಚನೆ** 'ಅಭ್ಯರ್ಚನ' ನೋ.

**ಅಭ್ಯರ್ಚಿಸು** (ಕ್ರಿ). ಪೂಜಿಸು; ಆರಾಧಿಸು: ಸುರರೆಲ್ಲಂ ಚೂಡಾಮಣಿಕಿರಣದಿನವನತಕಿರೀಟರಭ್ಯರ್ಚಿಸಿದರ್ (ಅಜಿಪು. ೫–೪). [ಅಭ್ಯರ್ಚನ + -ಇಸು₃]

**ಅಭ್ಯರ್ಚ್ಯ** (ಗು). ಪೂಜೆಗೆ ಅರ್ಹವಾದ: ಅಮರಾಭ್ಯರ್ಚ್ಯಂಗಳ್ ಸುರವಿಮಾನಪರಿವೇಷ್ಟನಾಭಿರಾಮಂಗಳನುಕ್ರಮದಿಂದೆಸೆದಿರ್ದುವಕೃತ್ರಿಮಂಗಳೀ ಗಿರಿಯ ಜೈನ ಚೈತ್ಯಾವಳಿಗಳ್ (ಶಾಂತಿಪು. ೨–೧೧೪). [ಸಂ.]

**ಅಭ್ಯರ್ಣ** (ನಾ). ಸಮೀಪ; ನೆರೆ: ನಿಜಾಂಬಿಕೆಯಭ್ಯರ್ಣದೊಳ್ ಜಿನಾರ್ಭಕನೆಸೆದಂ (ಅಜಿಪು. ೪–೪). [ಸಂ.]

**ಅಭ್ಯರ್ಥನ, ಅಭ್ಯರ್ಥನೆ** (ನಾ). ಕೋರಿಕೆ; ಪ್ರಾರ್ಥನೆ: ಪ್ರಿಯದಿಂದೊಂದೆಡೆಯಿರವಂ ಬಯಸಿದ ಶೌರ್ಯಾದಿ ಸಕಲ ಪಾರ್ಥಿವಗುಣಸಂಚಯದಭ್ಯರ್ಥನದಿಂದಾಶ್ರಯರೂಪನನಾ ಮಹೀಶನಂ ಬಿದಿ ಪಡೆದಂ (ಚಂದ್ರಪು. ೩–೨೪). **ಅಭ್ಯರ್ಥನೆ**: ಅಹಿತರೊಡನೆ ಪುದುವಾೞ್ತಿನೆನೊಂದೆಂ ಸುಜನಗುರುಜನಾಭ್ಯರ್ಥನೆಯಿಂ (ಗದಾಯು. ೬–೭). [ಸಂ. ಅಭ್ಯರ್ಥನ]

**ಅಭ್ಯರ್ಥನೆ** 'ಅಭ್ಯರ್ಥನ' ನೋ.

**ಅಭ್ಯರ್ಥಿ** (ನಾ). ಉಮೇದುವಾರ; ಅರ್ಜಿದಾರ: ಉಪಾಧ್ಯಾಯರ ಆರ್ಥಿಕ ಮತ್ತು ಸಾಮಾಜಿಕ ಅಂತಸ್ತನ್ನು ಹೆಚ್ಚಿಸುವುದರಿಂದ ತಕ್ಕಷ್ಟು ಮಂದಿ ದಕ್ಷ ಅಭ್ಯರ್ಥಿಗಳು ಈ ವೃತ್ತಿಯನ್ನು ಅವಲಂಬಿಸುವಂತೆ ಮಾಡಬಹುದು (ಶಿಕ್ಷದ. ೭೩೫); ಅಭ್ಯರ್ಥಿಗಳು ಸ್ವಂತ ಖರ್ಚಿನಲ್ಲೇ ಸಂದರ್ಶನಕ್ಕೆ ಬರಬೇಕು (ರೂಢಿ). [ಸಂ. ಅಭ್ಯರ್ಥಿನ್]

**ಅಭ್ಯರ್ಹಿತ** (ಗು). ಮಾನ್ಯವಾದ; ಯೋಗ್ಯವಾದ: ಅಂತಃಪುರಾಭ್ಯರ್ಹಿತರೊಳಾದರಂಬೆರಸು ಸಂಭಾಷಿಸುತ್ತುಂ (ಕಾದಂಉ. ೧೬೪). [ಸಂ.]

**ಅಭ್ಯರ್ಹಿತತ್ವ** (ನಾ). ಮಾನ್ಯತೆ; ಗೌರವ: ಅಭ್ಯರ್ಹಿತಕ್ಕೆ ಪೂರ್ವನಿಪಾತಮುಪ್ಪುದಱಿಂ ಜ್ಞಾನದ ಸಮ್ಯಗ್ವ್ಯಪದೇಶಕ್ಕೆ ಕಾರಣಮುಪ್ಪುದಱಿಂ ದರ್ಶನಕ್ಕೆ ಅಭ್ಯರ್ಹಿತತ್ವಮಕ್ಕುಂ (ತತ್ತ್ವಪ್ರ. ೬). [ಸಂ.]

**ಅಭ್ಯರ್ಹಿತವೃತ್ತಿ** (ನಾ). ಪೂಜ್ಯವಾದ ವೃತ್ತಿ; ಶ್ರೇಷ್ಠವಾದ ನಡವಳಿಕೆ(?): ಅರ್ಹದ್ಬಲಿ ಮುನಿಪತಿಯಭ್ಯರ್ಹಿತವೃತ್ತಿಯನದೇವೊಗಟ್ಟುದೊ ನೆಗೞ್ದೊಂದರ್ಹನ ಮತಮಲ್ಲದುದತಿಗರ್ಹಿತಮೆಂದೆನಿಸಿದಂ ಮಹೀಮಂಡಲದೊಳ್ (ಪುಷ್ಪಪು. ೧–೨೦). [ಅಭ್ಯರ್ಹಿತ + ವೃತ್ತಿ]

**ಅಭ್ಯವಕರ್ಷಣ** (ನಾ). ಹೊರಕ್ಕೆ ಎಳೆಯುವುದು; ಈಚೆಗೆ ತೆಗೆದು ಹಾಕುವಿಕೆ. [ಸಂ.]

**ಅಭ್ಯವಸ್ಕಂದನ** (ನಾ). ೧. ಶತ್ರುವನ್ನು ದಿಟ್ಟತನದಿಂದ ಎದುರಿಸುವುದು; ಹಗೆಯ ಮೇಲೆ ರಭಸದಿಂದ ಧಾಳಿ ನಡೆಸುವುದು. ೨. ಮುತ್ತಿಗೆ. [ಸಂ.]

**ಅಭ್ಯವಹರಣ** (ನಾ). ಊಟಮಾಡುವುದು; ಊಟ: "ಉಣಿಸಭ್ಯವಹರಣಂ" (ವಸ್ತುಕೋ. ೩–೭). [ಸಂ.]

**ಅಭ್ಯವಹಾರ** (ನಾ). ೧. ಊಟಮಾಡುವುದು. ೨. ಆಹಾರ: ವೃಷ್ಯರಸಾಭ್ಯವಹಾರ ತ್ಯಜನಂ . . . ಬ್ರಹ್ಮವ್ರತಂ ಜಿನೇಶ್ವರ ಮತದೊಳ್ (ಶಾಂತಿಪು. ೬–೫೪). ೩. ತಿನ್ನಲು ಯೋಗ್ಯವಾದುದು. [ಸಂ.]

**ಅಭ್ಯವಹಾರಿ** (ನಾ). ತಿನ್ನುವವನು. 'ಸತೃಣಾಭ್ಯವಹಾರಿ' ಪರಾ. [ಸಂ. ಅಭ್ಯವಹಾರಿನ್]

**ಅಭ್ಯವಹೃತ** (ಗು). ತಿನ್ನಲ್ಪಟ್ಟ. [ಸಂ.]

**ಅಭ್ಯವಹೃತಿ** (ನಾ). ಭೋಜನ; ಊಟ: ಅರ್ಘ್ಯಪಾದ್ಯಮಂ ಕೊಟ್ಟಭ್ಯಾಗತ ಪ್ರತಿಪತ್ತಿಗೆಯ್ವುದುಮವರಭ್ಯವಹೃತಿಯಂ ನಿವರ್ತಿಸಿ ಕೈಘಟ್ಟಯುಮಂ ತಾಂಬೂಲಮಂ ಕೊಂಡು (ಪಂಪಾಭಾ. ೭–೪೭ ವ). [ಸಂ.]

**ಅಭ್ಯಸನ** (ನಾ). ಅಭ್ಯಾಸ ಮಾಡುವುದು; ಪರಿಚಯ: ಭೂಷಾಭ್ಯಸನ ಚತುರ ಭಾಷಾವಿಶೇಷ ಕುಶಲೆಯರಪ್ಪ (ಆದಿಪು. ೨–೬೫ ವ). [ಸಂ.]

**ಅಭ್ಯಸನೀಯ** (ಗು). ಅಭ್ಯಾಸಕ್ಕೆ ಯೋಗ್ಯವಾದ: ಸಂಸ್ಕೃತ ಕೃಕರ್ ಪದಗಳಿಂದ ನೇರ್ಪಟ್ಟ ವಿವಿಧ ಮಾತುಗಳು ಅಭ್ಯಸನೀಯವಾಗಿವೆ (ಕರ್ಣಾಟ. ೧೫). [ಸಂ.]

**ಅಭ್ಯಸಿಸು** (ಕ್ರಿ). ಅಭ್ಯಾಸಮಾಡು; ಕಲಿ: ಸಾಮಾನ್ಯವಾಗಿ ಜನರು ಓದದಿರುವ ವಿಷಯಗಳನ್ನು ಲಕ್ಷ್ಯಪೂರ್ವಕವಾಗಿ ಅಭ್ಯಸಿಸುವರು (ರತ್ನಗೋ. ೫); ಒಂದೊಂದು ಯಕ್ಷಗಾನಪ್ರಸಂಗವನ್ನೂ ಅಭ್ಯಸಿಸಿದೆ (ಯಕ್ಷಬ. II ಮು). [ಅಭ್ಯಸನ + -ಇಸು₃]

**ಅಭ್ಯಸ್ತ** (ಗು). ೧. ಅಭ್ಯಾಸಮಾಡಿದ; ಕಲಿಯಲ್ಪಟ್ಟ: ಆ ಮಹಾಬಳಂ . . . ಅಭ್ಯಸ್ತ ಸಮಸ್ತವಿದ್ಯಾಧರ ವಿದ್ಯಾಪಾರಗನುಂ (ಆದಿಪು. ೧–೬೩ ವ). (ನಾ). ೨. ಬಳಕೆಯಾದದ್ದು; ರೂಢಿಯಾದದ್ದು. [ಸಂ.]

**ಅಭ್ಯಾಂತ** (ನಾ). ೧. ಆಕ್ರಮಿಸಲ್ಪಟ್ಟವನು. ೨. ರೋಗವುಳ್ಳವನು. [ಸಂ.]

**ಅಭ್ಯಾಕುಲ** (ಗು). ಚಿಂತೆಗೊಂಡ; ಆಸಕ್ತವಾದ: ಪಲವು ದೇವಾರ್ಚನಾಭ್ಯಾಕುಲ ಮಹೀಸುರ ಕುಲವನೆಣಿಸಲು (ಬಸವು. ೩–೭೫). [ಸಂ.]

**ಅಭ್ಯಾಖ್ಯಾನ** (ನಾ). ಇಲ್ಲದ್ದನ್ನು ಕಲ್ಪಿಸಿ ಆಕ್ಷೇಪಿಸುವುದು. [ಸಂ.]

**ಅಭ್ಯಾಗತ, ಅಭ್ಯಾಗತೆ** (ಗು). ೧. ಹೊರಗಿನಿಂದ ಬಂದ: ಆ ಸ್ಥಳದ ಖಾಣ ಪ ೩ ಜಜ ಕಿಜುಕುಳ ತೂಕ ನೋಟವಣ ಅಭ್ಯಾಗತ ಪಳ ಮಿಳಿ ತುಪ್ಪ ನೂಲು ಧವಳಾರದ ಬಂಡಿ (ಎಕ. VI, ಕಡೂರು. ೪೯–೪೧; 1291). (ನಾ). ೨. ಬಂದವನು; ತಲಪಿದವನು. ೩. ಅನಿರೀಕ್ಷಿತವಾಗಿ ಮನೆಗೆ ಬಂದ ಅತಿಥಿ: ಸ್ವಾಗತಮೇ ನಿನಗೆ ಮಹಾಭಾಗನೆ ಮದ್ಭೂಮಿಗೆಂತು ಬಂದಯ್ ನೀನಭ್ಯಾಗತನಾಗಲ್ವೇಟ್ಕುಂ (ಕಾದಂಪೂ. ೬೪೯);

ನೀಮೆನಗಿಂದಭ್ಯಾಗತರಾಗಿಂ ಎಂದು ಭರಂಗೆಯ್ದು ನುಡಿದು (ಜೀವಸಂ. ೧೧-೪೬ ವ). ೪. ಅತಿಥಿಸತ್ಕಾರ; ಆತಿಥ್ಯ: ದುರ್ವಾಸಮುನಿ ಪರಿವಾರ ಸಹಿತೈತಂದೊಡಭ್ಯಾಗತವ [ಪಾಠಾಂ. ಗತೆಯ]ನ್ನೃಪನಿತ್ತ (ಕು ವ್ಯಾ ಅ. ೧೬-೩೬). **ಅಭ್ಯಾಗತೆ: ೫.** ಹೊರಗಿನಿಂದ ಬರುವ ವಸ್ತುಗಳ ಮೇಲಿನ ಸುಂಕ: ಈ ಸ್ಥಳದ ಪೂರ್ವದಲುಳ್ಳ ಖಾಣಾ ಅಸಂಬಳ ಅಭ್ಯಾಗತೆ ಧವಳಾರದ ಭಂಡಿ (ಎಕ. XVI, ಚಿಕ್ಕನಾ. ೭೧-೨೫; ?). [ಸಂ. ಅಭ್ಯಾಗತ]

**ಅಭ್ಯಾಗತಕ್ರಿಯೆ** (ನಾ). ಮನೆಗೆ ಬಂದವರಿಗೆ (ಅತಿಥಿಗಳಿಗೆ) ಮಾಡಬೇಕಾದ ಉಪಚಾರ: ಶಿವಭೂತಿಗಭ್ಯಾಗತಕ್ರಿಯೆಯಂ ಮಾಡಲುಪಾಯಮಿಲ್ಲದುಸಿರದಿರ್ಪನಂ ಕಂಡು (ಪಂಚತಂ. ೧೧೨-೨). [ಅಭ್ಯಾಗತ + ಕ್ರಿಯೆ]

**ಅಭ್ಯಾಗತೆ** 'ಅಭ್ಯಾಗತ' ನೋ.

**ಅಭ್ಯಾಗಮ** (ನಾ). ೧. ಬರುವಿಕೆ; ಬರವು. ೨. ನೆರೆಹೊರೆ; ಸಮೀಪ. ೩. ಯುದ್ಧ; ಕಾಳಗ: "ಸಂಗ್ರಾಮಃ . . . ಅಭ್ಯಾಗಮಃ . . . -ಈ ೩೫ ಕಾಳಗಂ" (ಹಲಾಯು. ೭೫-೨೯೯). ೪. ಹಗೆತನ; ದ್ವೇಷ. [ಸಂ.]

**ಅಭ್ಯಾರೂಢ** (ನಾ). ಏರಿದವನು; ಹತ್ತಿದವನು: ಕಾಂಚನಮಯ ವಿಮಾನಾಭ್ಯಾರೂಢಂ ಸುತಾರೆಯೊಳೋಪಳೊಳ್ ಮನದೆ ಱಕದಿಂ ಪೋದಂ (ಶಾಂತಿಪು. ೬-೩೦). [ಸಂ.]

**ಅಭ್ಯಾಶ** (ನಾ). ೧. ಹತ್ತಿರ; ಸಮೀಪ: "ಸಮೀಪಂ . . . ಅಭ್ಯಾಶಂ, ಸನ್ನಿಧಾನಂ . . . -ಈ ೧೮ ಸಮೀಪಂ" (ಹಲಾಯು. ೧೧೫-೬). ೨. ನಿಲುಕುವುದು; ವ್ಯಾಪಿಸುವುದು. [ಸಂ.]

**ಅಭ್ಯಾಸ** (ನಾ). ೧. ರೂಢಿ; ಬಳಕೆ; ಪರಿಶ್ರಮ. ೨. ಕಲಿಯುವುದು; ವ್ಯಾಸಂಗ: ಸಕಲ ಶಾಸ್ತ್ರಾಭ್ಯಾಸವಂಗೆಯ್ದುಮೆಂದಿರ್ಪಮಿವರ್ (ಸುಕುಮಾ. ೨-೫೫ ವ). ೩. ಪುನರುಚ್ಚಾರಣೆ; ಆವೃತ್ತಿ. ೪. ಸಮೀಪ. ೫. ಹೊಸದಾಗಿ ಕಲಿತ ವಿಷಯವನ್ನು ರೂಢಿಸಿಕೊಳ್ಳುವುದಕ್ಕಾಗಿ ಏರ್ಪಟ್ಟ ಅಥವಾ ಕೊಟ್ಟ ಸಾಧನಪಾಠ; ಪರಿಶ್ರಮಾರ್ಥಪಾಠ; ಪಾಠ.

**ಅಭ್ಯಾಸವಾಗು**=ರೂಢಿಯಾಗು; ಬಳಕೆಯಾಗು: ಕಂಬದ ಹತ್ತಿರ ಕುಳಿತು ಎದ್ದು ಹೋಗುವುದು ಅಭ್ಯಾಸವಾಗಿತ್ತು (ಕಂಬಹು. ೧). [ಸಂ.]

**ಅಭ್ಯಾಸಂಗ** (ನಾ). ಸಂಬಂಧ; ಮೋಹ: ಹಿಂಗಿಯುಂ ನೆಱೆ ಹಿಂಗದಭ್ಯಾಸಂಗವಯ್ಯೋ ಎನುತ ಶಿವನಂ ಹಂಗಿಸುವನು (ಬಸವು. ೧೮-೫೮). [ಸಂ.]

**ಅಭ್ಯಾಸಿ** (ನಾ). ೧. ಕಲಿಯುವವನು; ವಿದ್ಯಾರ್ಥಿ: ವೀರಶೈವ ಸಾಹಿತ್ಯದ ಅಭ್ಯಾಸಿಗಳಿಗೆ ಈ ವಿಷಯದಲ್ಲಿ ಒಂದೆರಡು ಸಂದೇಹಗಳು ಸುಳಿಯಬಹುದು (ಶೂನ್ಯಕು. ೧೪೦). ೨. [ವೀಶೈ] ಮುಕ್ತನಾಗಲು ಬಯಸುವವನು: ಸ್ವಪ್ನದಂತೆ ಪ್ರಪಂಚವೆಲ್ಲಂ ಮಿಥ್ಯೆಯೆಂದಭ್ಯಂತರದಲ್ಲಿ ಧ್ಯಾನಾದಿ ಕರ್ಮಯುಕ್ತನಾಗಿ ಜನ್ಮದ್ವಯದಿಂ . . . ಅಭ್ಯಾಸಿಯೆನಿಸುವನು (ವಿವೇಕ. ೧೬). ೩. ಕಲಿಯಬೇಕಾದ ವಿಷಯದಲ್ಲಿ ಇನ್ನೂ ತಕ್ಕಷ್ಟು ಸಾಮರ್ಥ್ಯವನ್ನು ಪಡೆಯದಿರುವವನು. [ಸಂ. ಅಭ್ಯಾಸಿನ್]

**ಅಭ್ಯಾಸಿತ** (ನಾ). ೧. ಕಲಿತದ್ದು. ೨. ಕಲಿತವನು: ಶಮ ದಮ ಯಮ ನಿಯಮುಸದಯಾಸಮಗ್ರಾಭ್ಯಾಸಿತಸದಾಂತರ್ನಿವಿಷ್ಟಪರ (ಬಸವು. ೩೮-೫೧). [< ಸಂ. ಅಭ್ಯಸ್ತ]

**ಅಭ್ಯಾಸಿಸು** (ಕ್ರಿ). ೧. ಅಭ್ಯಾಸಮಾಡು: ಮನಸೋತು ನಡೆಯನಭ್ಯಾಸಿಸಲ್ ಬಂದ ಮೋಹನರಾಜಹಂಸಿಗಳ (ಚಿಬಪು. ೭-೧೪). ೨. ಅಭ್ಯಾಸ ಮಾಡಿಸು: ಸೋದರಳಿಯಂದಿರನು ನಿಜಪುರಿಗೊಯ್ದನಭ್ಯಾಸಿಸಲು (ತೊರರಾ. ೨-೧-೩). [ಅಭ್ಯಾಸ + -ಇಸು]

**ಅಭ್ಯಾಹಾರ** (ನಾ). ೧. ಹತ್ತಿರಕ್ಕೆ ತರುವುದು. ೨. ದರೋಡೆ; ಕಳ್ಳತನ. ೩. ಭೋಜನ; ಆಹಾರ. [ಸಂ.]

**ಅಭ್ಯುಕ್ಷಣ** (ನಾ). ಪ್ರೋಕ್ಷಣೆ ಮಾಡುವುದು; ಮೇಲೆ ಚಿಮುಕಿಸುವುದು: ಜಿನಯಾತ್ರಾಯೋಗ್ಯಮಾಗಧ್ವಶುದ್ಧಿಗೆ ಗಂಗಾಂಬು ಪವಿತ್ರ ಪಾಣಿತಳದಿಂದಭ್ಯುಕ್ಷಣಂ ಮಾಡುವಂತೊಗೆದಿಂಬಾದುದು (ಪುಷ್ಪಪು. ೧೦-೨೯). [ಸಂ.]

**ಅಭ್ಯುಕ್ಷಿತ** (ಗು). ೧. ಚಿಮುಕಿಸಲ್ಪಟ್ಟ; ಚಿಮುಕಿಸಿದ. (ನಾ). ೨. ಚಿಮುಕಿಸಲ್ಪಟ್ಟದ್ದು; ಪ್ರೋಕ್ಷಿಸಿದ್ದು: ಬಾಷ್ಪಜಲಕಣಾಭ್ಯುಕ್ಷಿತಮಂ ಲಲನಾಂಗಾಹುತಿಯಂ ಕೋಕಿಲರವಮಂತ್ರಸ್ವರಂ ಸ್ಮರಂ ನಿರವಿಸಿದಂ (ಚಂದ್ರಪು. ೮-೮೪). [ಸಂ.]

**ಅಭ್ಯುಕ್ಷಿಸು** (ಕ್ರಿ). ಚಿಮುಕಿಸು; ಪ್ರೋಕ್ಷಿಸು: ಬಿಸುನೀರೊಳ್ ಮುನ್ನಂ ಕರ್ಚಿ ಸಾಸಿವೆಯ ತೈಲದಿಂದಮಾಸ್ಯಮನಭ್ಯು[ಭ್ಯಂ]ಕ್ಷಿಸಿ ಪೂಸುಗೆಕ್ಕೆಯೆಲೆಯಂ ಪಸುವಿನ ಮುಖರೋಗಮಿವಱನಾಗಳೆ ಕಿಡುಗುಂ (ಲೋಕೋಪ. ೯-೧೯೮). [ಅಭ್ಯುಕ್ಷಣ + -ಇಸು]

**ಅಭ್ಯುಗ್ರ** (ಗು). ಅತಿ ತೀಕ್ಷ್ಣವಾದ; ಬಹಳ ಉಗ್ರವಾದ: ಉಗ್ರಸೇನನೆನಿಪ್ಪ ನೃಪನಭ್ಯುಗ್ರತೇಜೋವನಧಿ ವಿಪುಳೋದಗ್ರಭುಜಬಲನಹಿತ ಕಾನನ ದಹನದಾವಾಗ್ನಿ (ನಿಭಾಗ. ೧೦-೧-೪೦). [ಸಂ.]

**ಅಭ್ಯುತ್ಥಾನ** (ನಾ). ೧. ಏಳಿಗೆ; ವೃದ್ಧಿ. ೨. ಗೌರವಕ್ಕಾಗಿ ಎದ್ದು ನಿಲ್ಲುವುದು: "ಅಭ್ಯುತ್ಥಾನಂ, ಗೌರವಂ - ಈ ೨ ಇದಿರೇಳ್ವುದು" (ಹಲಾಯು. ೧೨೮-೯೩). [ಸಂ.]

**ಅಭ್ಯುದಯ** (ನಾ). ೧. ಉದಯಿಸುವುದು. ೨. ಏಳಿಗೆ; ಅಭಿವೃದ್ಧಿ: ಜೀವಕ್ಕಭ್ಯುದಯಮುಮನಭ್ಯುದಯಮೆಂಬಿದಂ ಧರ್ಮಾಧರ್ಮದ ಮತಿಯೆ ಮಾಟ್ಕುಂ (ಶಾಂತಿಪು. ೬-೨೭); ಎಮ್ಮಭ್ಯುದಯ ನಿಮ್ಮಾಧೀನವೆಂದನು ಧರ್ಮನಂದನನು (ಕುವ್ಯಾಉ. ೭-೩). ೩. ದೊಡ್ಡಸ್ತಿಕೆ; ಗೌರವ. ೪. [ಛಂದ] ಒಂದು ವೃತ್ತದ ಹೆಸರು: ಮೃಗನಿಭೇಕ್ಷಣೇ ನಾಮದೊಳಭ್ಯುದಯಂ[ಪಾಠಾಂ. ಅಚ್ಯುತಮುಂ, ಅಭ್ಯುದಿತಂ] (ಛಂದೋಂಬು. ೨-೯೦). [ಸಂ.]

**ಅಭ್ಯುದಯಿಕ** (ನಾ). ಅಭ್ಯುದಯಕ್ಕೆ ಸಂಬಂಧಪಟ್ಟ ಕರ್ಮ; ಐಹಿಕ ಸುಖಸಾಧಕವಾದ ಕರ್ಮ: ಕರಮೆಸೆದು ಬಸವರಸನಿಂತ ವಸರಿಸಬಾರದ ಮುನ್ನ ತಾನಾಚರಿಸಿದಪೆನೀಯಭ್ಯುದಯಿಕ [ಪಾಠಾಂ. ದೈಕ] ವನೆನುತ ಸಂಭ್ರಮಿಸಿ (ಬಸಪು. ೬೦-೪). [ಸಂ.]

**ಅಭ್ಯುದಿತ** (ಗು). ೧. ಉದಯಿಸಿದ; ಹುಟ್ಟಿದ. (ನಾ). ೨. ಏಳಿಗೆ ಹೊಂದಿದ್ದು. ೩. ಸೂರ್ಯೋದಯ ಕಾಲದಲ್ಲಿ ನಿದ್ರಿಸುವುದು: ಅರಸ ಕೇಳಭ್ಯುದಿತವಾದುದು ಸರಸ ಕೈರವರಾಜಿ (ಕುವ್ಯಾಕ. ೮-೧೫). ೪. [ಛಂದ] ಒಂದು ವೃತ್ತದ ಹೆಸರು. ೫. "ಚೆನ್ನಾಗಿ ಹೇಳಿದ್ದು" (ಗಂಗಾಮು. ೧೨). [ಸಂ.]

**ಅಭ್ಯುದ್ಗಮನ** (ನಾ). ಇದಿರಾಗಿ ನಡೆಯುವುದು: ವೀರಶೈವ ಮಹೇಶ್ವರರಂ ಕಾಣುತ್ತಲೇ ಪ್ರತ್ಯುತ್ಥಾನವೆಂಬ ಯೇಳುವುದು ಅಭ್ಯುದ್ಗಮನವೆಂಬ ಯೆದುರಾಗಿ ನಡೆಯುವುದು (ವಿವೇಕ. ೧೧೦). [ಸಂ.]

**ಅಭ್ಯುಪಗಮ** (ನಾ). ೧. ಹತ್ತಿರ ಹೋಗುವುದು. ೨. ಒಪ್ಪಿಗೆ ಕೊಡುವುದು; ಅಂಗೀಕಾರ; ಒಪ್ಪಿಕೊಳ್ಳುವುದು: ಅಭ್ಯುಪಗಮಾರ್ಥದೆಮ ಶಬ್ದಂ (ಶಮುದ. ೫೭). ೩. ನಿರ್ಣಯ; ನಿಶ್ಚಯ. [ಸಂ.]

**ಅಭ್ಯುಪಗಮೋಕ್ತಿ** (ನಾ). ತಿಳಿದವರು ಒಪ್ಪುವ ಮಾತು; ಬಲ್ಲವರಿಗೆ ಸಮ್ಮತವಾದ ನುಡಿ: ಅಪರಿಮೇಯಮೆ ದೋಷಗುಣೌಘಮಿಂತು . . . ಪೇೞ್ವೆನಭ್ಯುಪಗಮೋಕ್ತಿ ಗುಣಾವಗುಣಂಗಳಂ (ಕವಿರಾ. ೧-೧೪೨). [ಅಭ್ಯುಪಗಮ + ಉಕ್ತಿ]

**ಅಭ್ಯುಪಪತ್ತಿ** (ನಾ). ೧. ಹಿತವನ್ನು ಮಾಡುವುದು. ೨. ಕಾಪಾಡುವುದು; ರಕ್ಷಣೆ. ೩. "ಒಡಂಬಡಿಕೆ" (ಗಂಗಾವು. ೧೨). [ಸಂ.]

**ಅಭ್ಯುಷ, ಅಭ್ಯೂಷ** (ನಾ). ೧. ಅರ್ಧ ಬೆಂದ ಆಹಾರ ಪದಾರ್ಥ. ೨. ರೊಟ್ಟಿ, ದೋಸೆ ಮುಂತಾದುದು. **ಅಭ್ಯೂಷ**: ೧. "ದರಪಕ್ವಮದಭ್ಯೂಷಂ" (ವಸ್ತುಕೋ. ೯೩-೧೧). [ಸಂ.]

**ಅಭ್ಯೂಷ** 'ಅಭ್ಯುಷ' ನೋ.

**ಅಭ್ರ** (ನಾ). ೧. ಮೋಡ; ಮುಗಿಲು: ಉಗ್ರಸೇನಂಗೆ ಪುಟ್ಟಿದನಭ್ರಕ್ಕೆ ಸಿಡಿಲ್ ಪುಟ್ಟಿದವೋಲ್ (ಜಗವಿ. ೨-೩೮). ೨. ಆಕಾಶ. ೩. ಕಾಗೆ ಬಂಗಾರ; ಬಿಂಗ; ಅಭ್ರಕ (ಒಷಧಿ. ೧). ೪. ತುರುಬು. ೫. ಕಣ್ಣು. ೬. ಕೊಡನಾರಿ ಗೆಡ್ಡೆ; ಮುಸ್ತೆ. ೭. ಸೊನ್ನೆಗೆ ಒಂದು ಸಂಕೇತ. ೮. ಕರ್ಪೂರ. [ಸಂ.]

**ಅಭ್ರಂಕಷ** (ಗು). ೧. ಮೋಡಗಳನ್ನು ಉಜ್ಜುವಂತೆ ಇರುವ; ತುಂಬ ಎತ್ತರವಾದ: ಅಭ್ರಂಕಷ ಶಿಖರಿ ದುರ್ಲಂಘ್ಯಮಪ್ಪ ಗಿರಿದುರ್ಗದ ಪೆಂಪುಮಂ (ಆದಿಪು. ೧೩-೫೭ ವ). (ನಾ). ೨. ವಾಯು. ೩. ಬೆಟ್ಟ. [ಸಂ.]

**ಅಭ್ರಂಲಿಹ** (ಗು). = ಅಭ್ರಂಕಷ: ವಿಲಸದಭ್ರಂಲಿಹ [ಪಾಠಾಂ. ದಲಿಹ] ಮಹಾತರುಕುಲದಿನಮರನದೀಸ್ತನಂಧಯಫಲರಸದ ನದಿಗಳಲಿ (ಕುವ್ಯಾಅ. ೪-೩೯). [ಸಂ.]

**ಅಭ್ರಕ** (ನಾ). ೧. ಕಾಗೆ ಬಂಗಾರ; ಬಿಂಗ; ಅಬರಂಗ: ಪೊಳೆವ ರಜತಾಭ್ರಕ ದ್ಯುತಿಗಳಿನಮೃತರಸಪ್ರವಾಹದಿಂದಭಿಷವಮುಗ್ಗಳಿಸೆ (ಕಾದಂಪೂ. ೬೬೮). ೨. ಕೊಡನಾರಿ ಗೆಡ್ಡೆ (ಕಿ). [ಸಂ.]

**ಅಭ್ರಕಾಯ** (ಗು). ಮುಗಿಲಿನಂತೆ ಕಪ್ಪಾದ ಮೈಯುಳ್ಳ: ಕಾಡೊಳೊಪ್ಪಂದಳೆದಿರ್ದತ್ತಭ್ರಕಾಯಂ ಪೃಥುಮಹಿಷನಿಕಾಯಂ (ರಾಜಶೇ. ೫-೭೮). [ಅಭ್ರ + ಕಾಯ]

**ಅಭ್ರಕುಳ** (ನಾ). ಮೋಡಗಳ ಮೊತ್ತ; ಮೇಘ ಸಮೂಹ: ತೀವ್ರವಾಯುವಿಂ . . . ಅಭ್ರಕುಳಂ ತೆರಳ್ವ ತೆಜದಿಂ (ಸುಕುಮಾ. ೧-೩೭). [ಅಭ್ರ + ಕುಳ$_3$ (= ಕುಲ)]

**ಅಭ್ರಕೇಶ** (ನಾ). ಶಿವ. [ಅಭ್ರ + ಕೇಶ]

**ಅಭ್ರಗ** (ಗು). ೧. ಆಕಾಶದಲ್ಲಿ ಸಂಚಾರ ಮಾಡುವ. (ನಾ). ೨. ಪಕ್ಷಿ. ೩. ಖೇಚರ. [ಸಂ.]

**ಅಭ್ರಗಂಗೆ** (ನಾ). ಆಕಾಶಗಂಗೆ; ದೇವಗಂಗೆ. [ಅಭ್ರ + ಗಂಗೆ]

**ಅಭ್ರಗಜ** (ನಾ). ಗಗನದಲ್ಲಿಯ ಆನೆ; ಐರಾವತ: ಅಮೃತಮತಿ ಸಹಿತಮಾ ಚಂದ್ರಮತಿಯ ಸುತನೆಯ್ದೆ ಮೆಱೆವ ಧವಳಾರದೊಳಭ್ರಮುವೆರಸಭ್ರಗಜಂ ವಿಭ್ರಮದಿಂದಂ ಸೆಜ್ಜರಕ್ಕೆ ಬಂದವೊಲೆಸೆಗುಂ (ಯಶೋಚ. ೨-೨೧). [ಅಭ್ರ + ಗಜ]

**ಅಭ್ರಗಪತಿ** (ನಾ). ಪಕ್ಷಿರಾಜ; ಗರುಡ. [ಅಭ್ರಗ + ಪತಿ]

**ಅಭ್ರಗಮನೆ** (ನಾ). ಆಕಾಶದಲ್ಲಿ ಸಂಚರಿಸುವವಳು; ವಿದ್ಯಾಧರಿ: ಅಭ್ರಗಮನೆ ಭಾಮಿನಿ ಬೆಂಕೊಳೆ ಪುಗುತಂದಂ . . . ಸಭೆಯಂ (ಶಾಂತಿಪು. ೯-೩). [ಸಂ. ಅಭ್ರಗಮನಾ]

**ಅಭ್ರಗರ್ಜನೆ** (ನಾ). ಮೋಡಗಳ ಗರ್ಜನೆ; ಗುಡುಗು: "ಅಭ್ರಗರ್ಜನೆಯು ಪರ್ಜನ್ಯನೆಂದೆಂಬುದು" (ಮಂಗರಾ. ೧೪೧-೧೬). [ಅಭ್ರ + ಗರ್ಜನೆ]

**ಅಭ್ರಗರ್ಜಿತ** (ನಾ). = ಅಭ್ರಗರ್ಜನೆ: ಅಭ್ರಗರ್ಜಿತಂ ಎಂಬಂತಿರೆ ಗರ್ಜಿಸುತ್ತುಂ (ಪಂರಾಮಾ. ೮-೩೧). [ಅಭ್ರ + ಗರ್ಜಿತ]

**ಅಭ್ರಗಾಮಿ** (ನಾ). ಆಕಾಶದಲ್ಲಿ ಸಂಚರಿಸುವವನು; ಖೇಚರ: ಜಿನವಚಸ್ತಂಭಂ ನಂಬಭ್ರಗಾಮಿಶಿಖಾಮಣೀ (ಶಾಂತಿಪು. ೬-೫೨). [ಸಂ. ಅಭ್ರಗಾಮಿನ್]

**ಅಭ್ರಘಟೆ** (ನಾ). ಮೋಡಗಳ ಸಮೂಹ: ನೀಲಾಭ್ರಘಟೆಯೆ . . . ಗಗನಮನೆಡೆಗೊಂಡವೊಲಾಯ್ತು (ಜಗವಿ. ೪-೫೪). [ಸಂ. ಅಭ್ರಘಟಾ]

**ಅಭ್ರಚರ** (ಗು). ೧. ಆಕಾಶದಲ್ಲಿ ಸಂಚರಿಸುವ. (ನಾ). ೨. ಖೇಚರ. ೩. ಪಕ್ಷಿ: ಕರಮೆಸೆದಿರ್ದುದಭ್ರಚರದಿಂಚರದಿಂ . . . ಸಭಾಸ್ಥಳಿ (ರಾಜಶೇ. ೧೪-೧೬೦). [ಸಂ.]

**ಅಭ್ರಚ್ಛವಿ** (ನಾ). ಮೋಡದಂತೆ ಮೈಬಣ್ಣವುಳ್ಳವನು: ಅಚ್ಛ ನವಪೀತಪಟನಭ್ರಚ್ಛವಿ . . . ಕಮಳಾಕ್ಷಂ (ಜಗವಿ. ೩-೭೯). [ಅಭ್ರ + ಛವಿ]

**ಅಭ್ರಜ** (ಗು). ೧. ಮುಗಿಲಿನಲ್ಲಿ ಮೂಡಿದ. (ನಾ). ೨. ಗುಡುಗು. ೩. ಸಿಡಿಲು: ಗಜಱಿ ಗರ್ಜಿಪ ರುಂಡಕದಂಬಘೋಷಮಭ್ರಜಪಟುಘೋಷಂ . . . ಆಗೆ (ರಾಜಶೇ. ೮-೧೦೭). [ಸಂ.]

**ಅಭ್ರತಿಮಿರ** (ನಾ). ಮೋಡ: "ದುರ್ದಿನಮಭ್ರತಿಮಿರಮೆನೆ ಮೋಡಮೆಂದೆನಿಸಿಕ್ಕು" (ಮಂಗರಾ. ೧೩-೪). [ಅಭ್ರ + ತಿಮಿರ]

**ಅಭ್ರನಾದಿ** (ನಾ). ಒಂದು ಮೂಲಿಕೆ; ಚಿಲಕೀರೆ ಗಿಡ: ಕಱಿಯೆಳ್ಳಂ ಗೋಕ್ಷೀರದೊಳರೆದೆಮ್ಮೆಯ ಬೆಣ್ಣೆವೆರಸು ಮೇಣ್ ಬೆಂಕೆಯೊಳಂದರಿಸಿನಮನಭ್ರನಾದಿಯೊಳರೆದಿಕ್ಕಲ್ ಕೇರಪುಣ್ಗಳಿರವವಮೋಘಂ (ಖಮದ. ೨-೧೧೨). 'ಮೇಘನಾದಿ' ಪರಾ. [ಸಂ. ಅಭ್ರನಾದಿನ್]

**ಅಭ್ರನಿಭಾಂಗ** (ಗು). ಮೋಡದ ಬಣ್ಣವನ್ನು ಹೋಲುವ ಮೈಬಣ್ಣವುಳ್ಳ: ಶುಭ್ರಾಭ್ರನಿಭಾಂಗಂ ತುಂಗವೃಷಭಂ (ಅಟ್ಟಮ. ೪-೬). [ಅಭ್ರ + ನಿಭ + ಅಂಗ$_2$]

**ಅಭ್ರಪಟಲ** (ನಾ). ಮೋಡದ ಪದರ: ಜ್ಞೇಯದ ದ್ವೀಪಕಜ್ಞೇಯಾಬ್ಧಿಯಾವರಣ ಕಾಯಕದ ಗಿರಿಗೆ ಮಾನಸದಭ್ರಪಟಲ ಮೇಯವನು ಬಗೆದೇನಮೇಯ ಸುತ್ತಲುಮಿರಲು ಮಾಯೆಯೀ ಮಿಶ್ರಣವೊ (ಮಂಕುಕ. ೧೦೩). [ಅಭ್ರ + ಪಟಲ]

**ಅಭ್ರಪತಿ** (ನಾ). ಮೋಡಗಳಿಗೆ ಒಡೆಯ; ಇಂದ್ರ. [ಅಭ್ರ + ಪತಿ]

**ಅಭ್ರಪಥ** (ನಾ). ಆಕಾಶಮಾರ್ಗ; ಮೇಘಮಾರ್ಗ: ಅಭ್ರಪಥದತ್ತ ಲಂಘಿಸಲ್ಕೆ (ಆದಿಪು. ೧೬-೪೫). [ಅಭ್ರ + ಪಥ]

**ಅಭ್ರಪುಷ್ಪ** (ನಾ). ೧. ನೀರು. ೨. ಗಗನಕುಸುಮ; ಇಲ್ಲವಾದ ವಸ್ತು; ಅಸಂಭವವಾದ ವಿಷಯ. ೩. ಒಂದು ಬಗೆಯ ಬೆತ್ತದ ಗಿಡ ಅಥವಾ ಬಳ್ಳಿ. ೪. "ಹಬ್ಬೇಗಿಡ" (ಸಿದ್ಧಾಂತಿ. ೧೦೪). [ಅಭ್ರ + ಪುಷ್ಪ]

**ಅಭ್ರಭೇದಿ** (ಗು). ಆಕಾಶವನ್ನು ಭೇದಿಸುವ: ಆ ಅಭ್ರಭೇದಿಯೂ ಉದಯರವಿರಶ್ಮಿ ಸಮುಜ್ವಲವಾದ ತುಷಾರಕಿರೀಟವನ್ನು ಧರಿಸಿಯೂ ಇರುವ ಶೈಲಚಕ್ರವರ್ತಿ (ಬಂಕಿಮ. ೨೧ ಮು). [ಸಂ. ಅಭ್ರಭೇದಿನ್]

**ಅಭ್ರಮ** (ನಾ). ಭ್ರಾಂತಿಯಿಲ್ಲದವನು; ಭ್ರಮೆಗೆ ಒಳಗಾಗದವನು: ಏಕನಾತ್ಮನನಂತನಚಲನು . . . ಅಕ್ರಿಯನಹತನಭ್ರಮನು (ಕುವ್ಯಾಭೀ. ೩-೫೯). [ಸಂ.]

**ಅಭ್ರಮಂಡಲ** (ನಾ). ಗಗನಪ್ರದೇಶ; ಆಕಾಶ: ತೂಳಿದುದು ಬಲು ಬೊಬ್ಬೆಯಬ್ಬರವಭ್ರಮಂಡಲವ (ಕುವ್ಯಾಗ. ೫-೧). [ಅಭ್ರ + ಮಂಡಲ]

**ಅಭ್ರಮಣಿ** (ನಾ). ಆಕಾಶಕ್ಕೆ ರತ್ನದಂತಿರುವವನು; ಗಗನಮಣಿ; ಸೂರ್ಯ. ೨. ಚಂದ್ರ (ದಕ. ಕಿ). [ಅಭ್ರ + ಮಣಿ]

**ಅಭ್ರಮಾತಂಗ** (ನಾ). ಇಂದ್ರನ ಆನೆ; ಐರಾವತ. [ಅಭ್ರ + ಮಾತಂಗ]

**ಅಭ್ರಮಾರ್ಗ** (ನಾ). = ಅಭ್ರಪಥ: ಮುಂದೈಸಿ ಪಾಯ್ದ ಸಾಯಕಸಂದೋಹದಿನಭ್ರಮಾರ್ಗಂ ಕಾಣಲ್ ಬಂದುದು (ಶಾಂತಿಪು. ೪-೧೪). [ಅಭ್ರ + ಮಾರ್ಗ]

**ಅಭ್ರಮು** (ನಾ). ಐರಾವತದ ಹೆಂಡತಿಯ ಹೆಸರು: ಸುರದೀರ್ಘಿಕೆಯೊಳೆ ಕರಪುಷ್ಕರದಿಂದಭ್ರಮುವನಭ್ರಮೂಪತಿ ತಳೆವಂತಿರೆ (ಚಂದ್ರಪು. ೬-೧೨೯). [ಸಂ. ಅಭ್ರಮೂ]

**ಅಭ್ರಮುವಲ್ಲಭ** (ನಾ). = ಅಭ್ರಮೂವಲ್ಲಭ: ಅಭ್ರಮುವಲ್ಲಭ ಕುಂಭದ ವಿಭ್ರಮಮಂ ಸೆಳೆದು ತಳೆದು ಮೆಱೆದುದು (ರಾಜಶೇ. ೧೪-೧೩೫). [ಅಭ್ರಮು + ವಲ್ಲಭ]

**ಅಭ್ರಮೂರಮಣ** (ನಾ). = ಅಭ್ರಮೂವಲ್ಲಭ: ಬೆದಱಿದುದಭ್ರಮೂರಮಣನೊಟ್ಟಜೆಗೆಟ್ಟುದು ಪುಂಡರೀಕಮೞ್ದುದು ಕುಮುದಂ (ಪುಷ್ಪಪು. ೫-೮). [ಸಂ. (ಅಭ್ರಮೂ + ರಮಣ)]

**ಅಭ್ರಮೂವಲ್ಲಭ** (ನಾ). ಅಭ್ರಮುವಿನ ಗಂಡ; ಐರಾವತವೆಂಬ ಆನೆ: ಕೋಟ್ಟಿಗಳ್ ಜಯಶ್ರೀವಿಳಾಸಗೃಹಸ್ತಂಭಶತಂಗಳಂತೊದವೆ ಬಂದತ್ತಭ್ರಮೂವಲ್ಲಭಂ (ಮಲ್ಲಿಪು. ೧೨-೨೦). [ಸಂ. (ಅಭ್ರಮೂ + ವಲ್ಲಭ)]

**ಅಭ್ರವಿಭ್ರಮಿ** (ನಾ). ಮುರುಕಿಲು ಗಿಡ; ಮೊರಡಿಗಿಡ: "ಅಭ್ರವಿಭ್ರಮಿಯೆನಲು ಮುಱಿ [ಪಾಠಾ. ಱು]ಕಿಲ್" (ಮಂಗರಾ. ೩೫-೧೪). [ಸಂ. ಅಭ್ರವಿಭ್ರಮಿನ್]

**ಅಭ್ರಾಪಗೆ** (ನಾ). ಆಕಾಶದ ಹೊಳೆ; ಗಂಗಾನದಿ. [ಅಭ್ರ + ಆಪಗೆ]

**ಅಭ್ರಿ** (ನಾ). ೧. ಮರದ ಗುದ್ದಲಿ: "ಹಡಗದೊಳಗಿನ ಹೊಲಸು ತೆಗೆಯುವುದಕ್ಕೆ ಮಾಡಿದ ಕಟ್ಟಿಗೆಯ ಗೋರೆ" (ಗಂಗಾಮು. ೧೩). ೨. ಸಾಧಾರಣವಾದ ಮಮಟಿ; ಎಲೆಗುದ್ದಲಿ; ಪಿಕಾಸಿ. [ಸಂ.]

**ಅಭ್ರಿಯ** (ನಾ). ೧. ಮೋಡದಲ್ಲಿ ಹುಟ್ಟಿದ್ದು. ೨. ಗುಡುಗು. ೩. ಮಿಂಚು. ೪. ಸಿಡಿಲು. [ಸಂ.]

**ಅಭ್ರೇಷ** (ನಾ). ನ್ಯಾಯವನ್ನು ಬಿಟ್ಟು ನಡೆಯದಿರುವುದು. "ನೀತಿ" (ಗಂಗಾಮು. ೧೩). [ಸಂ.]

**-ಅಮ್**, -ಅಂ (ಪ್ರ). ಸಮುಚ್ಚಯಾರ್ಥಕ ಪ್ರತ್ಯಯ; ಹೊಸಗನ್ನಡದ ಊ ಎಂಬಂತೆ ಪದಾಂತ್ಯದಲ್ಲಿ ಸೇರಿ ಬರುವ ಪ್ರತ್ಯಯ: ಪಶ್ಚಿಮಾದೆಸೆಗೆಲ್ಲಂ ಮತ್ತಂ ತೊಱೆ ಎ (ಮೈಆರಿ. ೧೯೩೭, ೫೩-೨೨; 550); ಧನ ವಿಭವ ಮಹಾರಾಶಿಗಳ್ ನಿಲ್ಲವಾರ್ಗ್ಗಂ (ಎಕ. II, ೮೮-೨; 700); ಆತಂಗಮಾಕೆಗಂ ವಿಖ್ಯಾತಯಶಂ ಪುಟ್ಟಿದಂ ಕುಲಕ್ಕಂ ಚಲಕಂ ಭೂತಳದೊಳಾರ್ಗಮಧಿಕಂ (ಕಾವ್ಯಾವ. ೧೧೬). -ಅಂ: ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ (ಪಂಪಭಾ. ೪-೩೦).

**ಅಮು** 'ಅಮ್ಮ$_1$' ನೋ.

**ಅಮಂಗಲ**, ಅಮಂಗಳ (ನಾ). ಅಶುಭ; ಅನಿಷ್ಟ. **ಅಮಂಗಳ**: ತಟ್ಟೆಯನ್ನು ಎತ್ತಿ ಹಾಕಿ ಅಮಂಗಳವನ್ನು ಮಾಡಿದೆಯಾ? (ಕವಿಕ. ೫೦); ಕೆಂಡುದೆ ತಡಂ ಅಮಂಗಳವನೀಕ್ಷಿಸಿದಂತೆ ಮೊಗಂ ಮುರಿದು ಮಾತು ನಿಲ್ಲಿಸಿದರ್ (ಶ್ರೀರಾಮಾ. ೨೦-೫೪೧). [ಸಂ.]

**ಅಮಂಗಲಕರ**, ಅಮಂಗಳಕರ (ಗು). ಅನಿಷ್ಟವನ್ನುಂಟುಮಾಡುವ (ಹ). **ಅಮಂಗಳಕರ**: ಅಪಶಕುನಗಳು ಅಮಂಗಳಕರವಾದುವು (ರೂಢಿ). [ಸಂ.]

**ಅಮಂಗಲಕಾರಿ**, ಅಮಂಗಳಕಾರಿ (ಗು). ಕೆಟ್ಟದ್ದನ್ನು ಉಂಟುಮಾಡುವ; ಕೇಡನ್ನು ತರುವ (ಹ). **ಅಮಂಗಳಕಾರಿ** (ಹ). [ಸಂ. ಅಮಂಗಲಕಾರಿನ್]

**ಅಮಂಗಲಹಾರಿ**, ಅಮಂಗಳಹಾರಿ (ಗು). ಅನಿಷ್ಟವನ್ನು ಪರಿಹಾರಮಾಡುವ. **ಅಮಂಗಳಹಾರಿ** (ಹ). [ಸಂ. ಅಮಂಗಲಹಾರಿನ್]

**ಅಮಂಗಲೆ**, ಅಮಂಗಳೆ (ನಾ). ಅಶುಭಕ್ಕೆ ಒಳಗಾದವಳು; ಅದೃಷ್ಟಹೀನೆ; ವಿಧವೆ. **ಅಮಂಗಳೆ** (ಹ). [ಸಂ. ಅಮಂಗಲಾ]

**ಅಮಂಗಳ** 'ಅಮಂಗಲ' ನೋ.

**ಅಮಂಗಳಕರ** 'ಅಮಂಗಲಕರ' ನೋ.

**ಅಮಂಗಳಕಾರಿ** 'ಅಮಂಗಲಕಾರಿ' ನೋ.

**ಅಮಂಗಳಹಾರಿ** 'ಅಮಂಗಲಹಾರಿ' ನೋ.

**ಅಮಂಗಳೆ** 'ಅಮಂಗಲೆ' ನೋ.

**ಅಮಂಡ** (ಗು). ೧. ಒಡವೆಯಿಲ್ಲದ. (ನಾ). ೨. ಹರಳು ಗಿಡ; ಔಡಲದ ಗಿಡ. [ಸಂ.]

**ಅಮಂದ** (ಗು). ೧. ಜಡವಲ್ಲದ; ಚುರುಕಾದ. 'ಅಮಂದ ಸೌಂದರ್ಯ' ಪರಾ. ೨. ಬಲವಾದ; ಗಟ್ಟಿಯಾದ; ಅತಿಶಯವಾದ: ಮುಂದೆ ಬಿಜ್ಜಳನಖಿಳರಾಜ್ಯವನಂದದಿಂ ಪ್ರತಿಪಾಲಿಸುತ್ತಮಮಂದ ಕೀರ್ತಿಯೊಳೆಸೆವ ಬಸವನ ಭಾಷೆಯೆಂತೆನಲು (ಬಸಪು. ೫-೬೧). (ನಾ). ೩. ಚಟುವಟಿಕೆಯುಳ್ಳವನು; ಬುದ್ಧಿವಂತ. [ಸಂ.]

**ಅಮಂದಧ್ವನಿ** (ನಾ). ಗಟ್ಟಿಯಾದ ಕೂಗು; ಗರ್ಜನೆ: ಅರಾತಿಗಜಘಟೆಗಳನಿತು ಬಂದೊಡ್ಡಿಯುಂ ತನ್ನೊಂದಮಂದಧ್ವನಿಗೊಡ್ಡೊಡೆದೋಡುವುದಱಿಂ ವೈರಿಗಜಘಟಾವಿಘಟನನುಂ (ಪಂಪಭಾ. ೧೪-೩೭ ವ). [ಅಮಂದ + ಧ್ವನಿ]

**ಅಮಂದರುಚಿ** (ನಾ). ಅತಿಶಯವಾದ ಕಾಂತಿ: ನಿಂದಿಸಿದುದಿಂದುಬಿಂಬಮನಿಂದುಧರಾನನಮಮಂದರುಚಿಯುತಮನಿಶಂ (ರಾಜಶೇ. ೧೪-೧೨೨). [ಅಮಂದ + ರುಚಿ]

**ಅಮಂದಸೌಂದರ್ಯ** (ನಾ). ಅತಿಶಯವಾದ ಚೆಲುವು: ಅಮಂದಸೌಂದರ್ಯ ಸಂದೋಹಮಂದೀಕೃತ ಕಂದರ್ಪದರ್ಪನುಂ (ರಾಜಶೇ. ೫-೧೮ ವ). [ಅಮಂದ + ಸೌಂದರ್ಯ]

**ಅಮಂದಸ್ನೇಹ** (ನಾ). ಗಾಢವಾದ ಪ್ರೀತಿ: ನಿಜತನೂಜೆಯ ಮೊಗದಾವರೆಯನಮಂದಸ್ನೇಹರಸತರಂಗಿತ ಕಟಾಕ್ಷದಿನಭೀಕ್ಷಿಸಿ (ರಾಜಶೇ. ೯-೩೭ ವ). [ಅಮಂದ + ಸ್ನೇಹ]

**ಅಮಂದಾನಂದ** (ನಾ). ಅತಿಶಯವಾದ ಆನಂದ: ಅಮಂದಾನಂದಂಬೆತ್ತು (ರಾಜಶೇ. ೫-೧೩೩). [ಅಮಂದ + ಆನಂದ]

**ಅಮಕಿರೆ** 'ಅಮಕೀರೆ' ನೋ.

**ಅಮಕೀರೆ**, ಅಮಕಿರೆ (ನಾ). ಹಿರೇಮದ್ದಿನ ಗಿಡ; ಅಶ್ವಗಂಧಿ ಗಿಡ (ಹ). **ಅಮಕಿರೆ** (ಹ).
[ದೇ. ‖ ತಮಿ. ಅಮುಕ್ಕಿರಾ, ಅಮುಕ್ಕಿರೈ; ಮಲ. ಅಮುಕ್ಕಿರ]

**ಅಮಕು** 'ಅಮುಂಕು' ನೋ.

**ಅಮಕ್ಕಳ** (ನಾ). ಸಂಭ್ರಮ; ಆಡಂಬರ; ಗದ್ದಲ; ಗಲಾಟೆ: ಮದುವೆ ಉತ್ಸವ ಅಮಕ್ಕಳವಾಯಿತು (ಸ್ಯಾಂಡರ್). ಮಕ್ಕಳ ಹೋ.
[? . ← ತಮಿ. ಅಮುಕ್ಕಳ]

**ಅಮಗ** (ನಾ). ೧. ಸೌಕರ್ಯದ ಕಾಲ; ಉತ್ಸವ ಸಮಯ; ಹಬ್ಬದ ಸನ್ನಿವೇಶ: ಅಮಗದಲ್ಲಿ ಪಾತ್ರವಾಡುವಾಗ ಮದ್ದಳೆ ಎರವು ಬೇಡಿದರಂತೆ (ಗಾದೆ). ೨. ಬೇಡಿನ ಸಮಯ; ಹಣ್ಣು ಹೂವು ಉಂಟಾಗುವ ಕಾಲ: ಮಾವಿನ ಅಮಗ ಪೇರ್ಲೆಹಣ್ಣಿನ ಅಮಗ (ಉಕ. ಹ).
[← ? ತಮಿ. ಅಮೈದಿ = ಅವಕಾಶ, ಸಮಯ]

**ಅಮಚು** 'ಅಮುರ್ಚು' ನೋ.

**ಅಮಟೆ** (ನಾ). (ಹಬ್ಬಗಳಲ್ಲಿ) ತೊಗರಿಬೇಳೆ, ಕಡಲೆಬೇಳೆ ಮುಂತಾದುವನ್ನು ಬೇಯಿಸಿ ಕಟ್ಟನ್ನು ಮಾತ್ರ ಬಸಿದುಕೊಂಡು ಮಾಡುವ ಸಾರು: ಹಬ್ಬದ ದಿವಸಗಳಲ್ಲಿಯೂ ಲಗ್ನದ ಮುಹೂರ್ತಗಳಲ್ಲಿಯೂ...

ಸಾರು, ಆಮಟೆ ಇಷ್ಟು ಪದಾರ್ಥ ಮಾಡುವರು (ಕಭಾಗ. ೨೯೩); ಇದು ಇಬ್ರಾಹಿಮನ ತಾಯಿಗೆ ಸೇರಿದ್ದರಿಂದ ಆಕೆಯು ಸಂಚುಮಾಡಿ ಅಮಟೆಯಲ್ಲಿ ವಿಷಹಾಕಿಸಿದಳು (ಮೊಬಾದ. ೨೬).
[← ಮರಾ. ಅಂಬಟೀ, ಅಮಟೀ]

**ಅಮಟೆ₁** 'ಅಂಬಟೆ' ನೋ.

**ಅಮಟೆ₂** (ನಾ). (ಕರಾ). ಒಂದು ಜಾತಿಯ ಭತ್ತ ಅಥವಾ ಅಕ್ಕಿ: ಅಮಟೆ, ಅಜ್ಜಸಾಲೆ, ಕಳಮೆ (ಕಿಸಂಗ್ಲಾ. ೭). [?]

**ಅಮತ₁** (ಗು). ೧. ಮನಸ್ಸಿಗೆ ಗೋಚರವಾಗದ; ಅನುಭವಕ್ಕೆ ಸಿಕ್ಕದ. ೨. ಸಮ್ಮತವಲ್ಲದ (ಕಿ). [ಸಂ.]

**ಅಮತ₂** (ನಾ). ೧. ರೋಗ. ೨. ಸಾವು. ೩. ಕಾಲ (ಕಿ). [ಸಂ.]

**ಅಮತಿ** (ನಾ). ೧. ಬುದ್ಧಿಯಿಲ್ಲದಿರುವುದು; ಅಜ್ಞಾನ. ೨. ಬುದ್ಧಿಯಿಲ್ಲದವನು; ಅಜ್ಞಾನಿ. ೩. ದುಷ್ಟ. ೪. ಚಂದ್ರ. ೫. ಕಾಲ. [ಸಂ.]

**ಅಮತ್ರ** (ನಾ). ತಟ್ಟೆ, ಹರಿವಾಣ, ಮಡಕೆ ಮುಂತಾದ ಪಾತ್ರೆ: ಸರೋಜಾಂಬಕನಿಡೆ ಶಿಶುಪಾಲ ಶಿರಂಬೆರಸಂಬರತಳಕ್ಕೆ ನೆಗೆದುದಮತ್ರಂ (ಜಗವಿ. ೧೭–೫೩). [ಸಂ.]

**ಅಮತ್ಸರ** (ಗು). ೧. ಮತ್ಸರವಿಲ್ಲದ; ಹೊಟ್ಟೆಕಿಚ್ಚಿಲ್ಲದ: ಉದಾರಂ ಶ್ರೀಯುತನಮತ್ಸರಂ ವಾಕ್ಶ್ರೀಯುತನಾದೊಡೆ ಕೃತಾರ್ಥರಾಗರೆ ಕವಿಗಳ್ (ಗದಾಯು. ೧–೪೯). (ನಾ). ೨. ಮತ್ಸರವಿಲ್ಲದಿರುವಿಕೆ. [ಸಂ.]

**ಅಮತ್ಸರತ್ವ** (ನಾ). ಮತ್ಸರವಿಲ್ಲದಿರುವುದು: ಶ್ರೀಯುತನೊಳುದಾರತೆ ವಾಕ್ಶ್ರೀಯುತನೊಳಮತ್ಸರತ್ವಮಾಗದು (ಗದಾಯು. ೧–೪೯). [ಸಂ.]

**ಅಮತ್ಸರಮತಿ** (ನಾ). ೧. ಮತ್ಸರವಿಲ್ಲದ ಬುದ್ಧಿ: ಸಿರಿಯೊಳ್ ಪರಹಿತಮನಮತ್ಸರಮತಿಯಂ ವಿದ್ಯೆಯೊಳ್ . . . ಅಳ್ದು ಬಾಳ್ದವಂಗೆಣೆಯುಂಟೆ (ರಾಜಶೇ. ೧೩–೧೦). ೨. ದ್ವೇಷಬುದ್ಧಿಯಿಲ್ಲದವನು; ಸಾಧು. [ಅಮತ್ಸರ + ಮತಿ]

**ಅಮದ** (ಗು). ಮದವಿಲ್ಲದ; ಗರ್ವವಿಲ್ಲದ. [ಸಂ.]

**ಅಮದರಾಶಿ** (ನಾ). (?): ಕ್ರೋಧಿ ಸಂವತ್ಸರಕ್ಕೆ ಮುಂದು ಹಿಂದಾದೀತು . . . ಬಿದುರೆಯಲ್ಲಿ ಮಹಾಮಧುತ್ರಿಯಂಕಟರು ಅಮದರಾಶಿಗೆ ಹಿಮಸೇತು ಮಧ್ಯದ ಶಿಲೆಗಳು ಬಂದಾವು. ಲೋಹದ ಕೀಲು ಕೊಟ್ಟಾವು. (ಕಾಲಸಂ. ೪). [ಅಮದ ? + ರಾಶಿ]

**ಅಮದವೃತ್ತಿ** (ಗು). ಮದವಿಲ್ಲದ ಸ್ವಭಾವ; ಗರ್ವವಿಲ್ಲದ ನಡತೆ: ಆ ಮೂರ್ಧಾಭಿಷಿಕ್ತಮುಖ್ಯಂ ವಿಖ್ಯಾತದಾನನಾಗಿಯುಮಮದವೃತ್ತಿವರ್ತನನುಂ (ಚಂದ್ರಪು. ೨–೮). [ಸಂ. (ಅ– + ಮದವೃತ್ತಿ)]

**ಅಮದಾಲಸ** (ಗು). ಮದದಿಂದ ಜಡವಾಗದ; ಆಲಸ್ಯಹೊಂದದ: ಅಮದಾಲಸಲೋಚನಲೀಲಂ . . . ನಿನ್ನ ಮುಖಂ (ಕವಿರಾ. ೩–೪೭). [ಸಂ. (ಅ– + ಮದಾಲಸ)]

**ಅಮದು** 'ಅಮರ್ದು' ನೋ.

**ಅಮನಸ್ಕ** (ಗು). ೧. ಮನಸ್ಸಿಲ್ಲದಿರುವ. (ನಾ). ೨. [ಜೈನ] ಮನರಹಿತ ಜೀವ: "ಸಮನಸ್ಕಾಃ – ಮನಮುಳ್ಳರುಂ, ಅಮನಸ್ಕಾಃ – ಮನಮಿಲ್ಲದರುಮೆಂದು ಸಂಸಾರಿಗಳಿತ್ತೆಱಂ" (ತತ್ತ್ವಪ್ರ. ೯೨). ೩. ಒಂದು ಬಗೆಯ ಯೋಗ: ಹಟ ಮೊದಲಾದ ಯೋಗಗಳಂತೆ ಬಹಳ ಸಂಕಟವಾದ ಯೋಗಮಿದಲ್ಲವು ಸಟೆಯೆಲ್ಲಮತಿಸುಲಭವು ಸೂಕ್ಷ್ಮಮಹಸೌಖ್ಯ ದಿಟಮಿದಂಗನೆಯಮನಸ್ಕವು (ವೇದಾಂಪ. ೫–೪–೫); (ಮಂತ್ರಯೋಗ, ಲಯಯೋಗ, ಹಠಯೋಗ, ಅಮನಸ್ಕಯೋಗ, ರಾಜಯೋಗ ಮೊದಲಾದುವುಗಳಲ್ಲಿ) (ಅಮೃತ. ೧೦–೧೧೮ ಟೀಕು). [ಸಂ.]

**ಅಮನ್ನಣೆ** (ನಾ). ಮನ್ನಣೆಯಿಲ್ಲದಿರುವುದು; ಮರ್ಯಾದೆ ಮಾಡದಿರುವುದು: ಮನ್ನಣೆ ಅಮನ್ನಣೆ ನಿನ್ನದೊ ಸರ್ವೇಶ (ಜಗದಾ. ೧೪೧). [< ಸಂ. ಅಮಾನನಾ]

**ಅಮಮ** (ಅ). ಮೆಚ್ಚಿಗೆ, ಆಶ್ಚರ್ಯ, ಸಮಾಧಾನ ಮುಂತಾದ ಭಾವಗಳನ್ನು ಸೂಚಿಸುವ ಅವ್ಯಯ. (i) ಮೆಚ್ಚಿಗೆಗೆ: ಇಭಕೇತು . . . ಭೀಮಾರ್ಣವವಂ ದಾಂಟಪ್ಪುಪಾಯೋದ್ಯಮನಮಮ ಭಾಪ್ಪೆಂದು ತಲ್ಲೋಕಮತ್ಯುತ್ಸವಮಂ ತಾಳ್ದಿರ್ಪಿನಂ (ನೇಮಿಪು. ೧–೯೬); ಅಮಮ ಪಯೋವಾರ್ಧಿಗೆ ಚಂದ್ರಮನಂ ಪುಣ್ಯಕ್ಕೆ ಮುಕ್ತಿಯಂ ತೋಱರ್ಪಂತೆ (ಗಿರಿಕ. ೩–೫೩); ಅಮಮ ಚಂದ್ರ ಸಲಕ್ಷಣ ಚಾರುಮೂರ್ತಿ (ಎಕ. VII, ಶಿವಮೊ. ೫–೨೮; 1218); ವೀರ ಸೇನಾಪತಿಯ ಸನ್ನೆಗೆ ಭೂರಿಬಲ ಹಬ್ಬಿದುದು ದಿಕ್ಕುಗಳೋರೆ ಹಿಗ್ಗಿದವಮಮ ತಗ್ಗಿದರಹಿಪಕೂರುಮರು (ಕುವ್ಯಾಭೀ. ೮–೧೧). (ii) ಆಶ್ಚರ್ಯಕ್ಕೆ: ಏನನೆಂಬೆನು ಜನಕನೃಪನ ನವೀನಭಾಗ್ಯವನಮಮ ಜಗದಭಿಮಾನದೈವದ ಲಲಿತಪದ ಕಮಲಾಭಿಷೇಚನವ (ತೊರರಾ. ೧–೧೬–೪೫). (iii) ಸಮಾಧಾನಕ್ಕೆ: ಇನ್ನು ಬದುಕಿದೆವಮಮ ರಕ್ಕಸಕುನ್ನಿಯೂಳಿಗವಡಗಿತೆಂದೇ ನಿನ್ನವರ ಸುಮ್ಮಾನ ವುಕ್ಕಿತು (ಕುವ್ಯಾದ್ರೋ. ೧೭–೨).
[ದೇ || ತಮಿ. ಅಮ್ಮಮ್ಮ; ಮಲ. ಅಮ್ಮವ್ವಾ]

**ಅಮರ್**, ಅಮರು, ಅಮಱ್ (ಕ್ರಿ). ೧. ಗಾಢವಾಗಿ ಕೂಡು; ಭದ್ರವಾಗಿ ಸೇರು: ಸಮಸಂಸ್ಕೃತಂಗಳೊಳ್ ಸ್ಸೈತಮರ್ದಿರೆ ಕನ್ನಡಮನಱಿದು ಪೇೞ್ಗೆ (ಕವಿರಾ. ೧–೫೧); ಬಿಗಿದಮರ್ದಿರ್ದ ತೋಳ್ ಸಡಿಲೆ (ಪಂಪಭಾ. ೨–೧೯); ನವಿಲಿಂಗೆ ಕಳಾಪವರ್ಣಮಂತಮರ್ದ ಮುಗಿಲ್ಗೆ ಶಕ್ರಧನುವೋಲ್ . . . ರಾಜಸೂನುಗೆಸೆದತ್ತೆನಸುಂ ನವಯೌವನೋದಯಂ (ಕಾದಂಪೂ. ೪೪೨); ಬಿಸುಪಮರ್ದ ನೊಸಲ ಕಣ್ಣುಂ (ಕಬ್ಬಿಕಾ. ೨೫೫). ೨. ಉಚಿತವಾಗು; ಸರಿಹೋಗು; ಹೊಂದು: ಸಮಕಟ್ಟೆಱಿಯದೆ ಹರಿಗರ್ಘ್ಯಮೆತ್ತಿ ನಿಂದಿರ್ದ ಯಜ್ಞಮದು ಮೊದಲೊಳ್ ತಾನಮರ್ದುಮಮರ್ದಿರದೆ ತಣಿಯುಂಡಮರ್ದಂ ಗೋಮೂತ್ರದಿಂದ ಬಾಯ್ಪೂಸಿದವೋಲ್ (ಪಂಪಭಾ. ೬–೪೮); ಸರ್ವಜ್ಞನೆಂಬೀ ಪೆಸರ್ ದೇವರ ದೇವಂ ಶ್ರೀಜಿನೇಂದ್ರಂಗಮರ್ಗುಂ (ಸಮಪ. ೮–೧೦೪); ಕರಡೆಯ ಗಿರ್ಗಟದ ದನಿಯವೊಲಮರವವೆಂದುಂ (ಶಮದ. ೬೩). ೩. ವ್ಯಾಪಿಸು; ಆಕ್ರಮಿಸು; ಮೇಲೆ ಬೀಳು: ತಮಾಲವೀಥಿಯನಮರ್ದ ಕತ್ತಲೆಯೊಳ್ ಮಾಣಿಕದ ಸೊಡರ್ಗಳಂ ಬೆಳಗಲುಂ (ಕಾದಂಪೂ. 1006); ಪಾಯುತ್ತಮರುತ್ತಾರುತ್ತೆ ಕೀೞುತ್ತಡಸಿ ಕೆಡಪಿತೊಂದೇಣನಂ ಚಿತ್ರಕಾಯಂ (ಗಿರಿಕ. ೧–೯೫); ತಾನೀವ ಸಮಯದೊಳಗಲ್ಲಿ ಕೆಲಬರ್ ಡಂಬಕರ್ ಬಂದು ಅಮರ್ದು ಬಸವಣ್ಣನಂ ಬಂದಿವಿಡಿಯಲ್ಕೆಂದು . . . ಸಂಚಳಿಸುತಿರೆ (ಬಸರ. ೯–೪೨). ೪. ಉಂಟಾಗು; ಒದಗಿಬರು: ಕಷಾಯಯೋಗಂಗಳತಿಕ್ರಮಹೇತುವಾಗಿ ಜೀವನೊಳಮರ್ಗುಂ ಬಂಧಂ (ಸುಕುಮಾ. ೮–೨೭); ಈ ಕೃತಿಗಮರ್ದುದು ಸೌಭಾಗ್ಯಮೊಂದಿದಾಯುಂ ಶ್ರೀಯುಂ (ಕಲ್ಯಾಕ. ೧–೧೨); ಸಮುಪಾತ್ತ ಕ್ರಿಯೆಯುಂ ವಾಕ್ಯಮಾಲೆಯುಂ ಸುಕವಿ ರಚಿತನಾಮಮದಾದಂದಮರ್ಗುಂ ಲಿಂಗಂ (ಶಮದ. ೭೫). ೫. ಕೂಡಿಸು; ಜೋಡಿಸು: ಬಯಸುವ ನಾಣಜಾಣನುೞಿದಂತೆ ದುಕೂಲದ ನಾಂದ ವಸ್ತ್ರಶೋಭೆಯೊಳಮರ್ದಟ್ಟಲೋ ನಿರುತಮೇನು ಡಲೋ ಬಗೆ ಪೋಗದೆಂಬ ಸಂದೆಯದೆ ಜನಕ್ಕೆ ಪೋಲೆ ಬರೆಗುಂ (ಶಾಂತಿಪು. ೮–೪೧); ಅಮರ್ದಪ್ಪಿಕೊಂಡಸಮ ಲಕ್ಷ್ಮಿಯ ಮೆಯ್ಯ ಮೃಗೋದ್ಭವಂ . . . ಎನಿಸಿತ್ತು ಮಲಂ ಮಲಧಾರಿ ದೇವನಾ (ಅರ್ಧನೇ. ೧–೮೭); ಚುಂಬಿಸುವಲಂಪಮರ್ದಪ್ಪುವ . . . ಪೊಡರ್ಪು ಮೇರೆದಪ್ಪಿದು ದೆನೆ ಕೂಡಿದರ್ (ಸೂಕ್ತಿಸು. ೧೪–೪೩); ಮಿಸುಪ ಕೆಂದಳಿರೆ ಪಣೆಗಮರ್ದ

ಸಿಂಧೂರಂ (ಚಿಬಪು. ೩೫-೮). **೬.** ಹಿಡಿತಕ್ಕೆ ಸಿಕ್ಕು : ಆ ಹಣ್ಣು ನನ್ನ ಕೈಗೆ ಅಮರೋದಿಲ್ಲ (ರೂಢಿ). **ಅಮರು : ೧.** ನಿನ್ನಯ ಕರ್ಣಂಗಳಿಗೆ ಅಮರಿದ ಮಣಿತಾಟಂಕವೆನಲು ಪೇಳ್ವೆ ರಮಣೀಯಮಾದ ಮೇಲ್ಗತೆಯ (ಮೋಹತ. ೨-೨); ಮುದ್ದು ತಡೆವುದೆ ಮುಪ್ಪು ಕಳ್ಳನವೊಲಮರೆ(ಮಂಕುಕ. ೬೨೫). **೪.** ಕ್ರಮದಿಂ ಧರ್ಮಾರ್ಥಧರ್ಮವೆಲ್ಲವ ಕೇಳಲಮರಿತು ನಿರ್ವೇಗ ಮವಗೆ (ನೇಮಿಸಂ. ೨-೭); ಅಮರುತಿಹುದು ಚಿತ್ತ ಗ್ಲಾನಿ (ಭಾರಂಗ. ೧೮). **೫.** ಮುಗುಳಂಬನ ಮುಡಿಗಮರಿದ ಪರಿಮಳವೊಗುವ ಪೂದೊಂಬೆ ಯಂತಿಹರು (ಕಂನವಿ. ೬-೯೯). **೬.** ಕೈಯ ಮುಷ್ಟಿಗೆ ತುರಾಯಿಗಳು ಅಮರಲಿಲ್ಲ (ರತ್ನಧ್ವ. ೨೫೫). **೭.** ಅಂಟು ; ಹತ್ತಿ ಕೊಳ್ಳು : ಇಲ್ಲಿ ಮಿಂದರೆ ಕೆಸರು ಮೈಗೆಲ್ಲ ಅಮರಬಹುದೆಂದು ಬೆದರಿಸಿ ನಮ್ಮ ರಾಮೈಯ ಈ ಕಥೆಗೆ ತಿರುಗಿದರು (ದೀಪಮು. ೫೧). **೮.** ಆಕ್ಷೇಪಿಸು ; ಗದರಿಸು. **ಅಮುಱ್ : ೩.** ಅಮುಱ್ದತ್ತತ್ಯುಗ್ರತೇಜಪ್ರಸರಮುರಿಬಳಧ್ವಾಂತ ಪಿಣ್ಡ ಪ್ರಕಾಣ್ಣಂ (ಸೌಇಇ. XI-i, ೭೮-೨೦ ; 1045). ℙ ಇಲ್ಲಿ ಶಕಟರೇಫ ವನ್ನು ತಪ್ಪಾಗಿ ಬಳಸಿದೆ.

**ಅಮರ್ದಪ್ಪು** = ಗಾಢವಾಗಿ ಆಲಿಂಗಿಸು ; ಬಿಗಿಯಾಗಿ ಅಪ್ಪು : ಅಟ್ಟಜಿಂದಮರ್ದಪ್ಪಿ ಪೋಗಾವುಪಾಯದೊಳಾದೊಡಂ ನೆರೆದಲ್ಲದಿನ್ನಿರೆ ನೀಕೆಯೊಳ್ (ಪಂಪಭಾ. ೮-೬೩). **ಅಮರ್ದಾಡು** = ಅಮರ್ದಪ್ಪು : ನೋಡುವ ಪಾರ್ವತಿ ಮುದಮಂ ಕೂಡುತ್ತಿರೆ ತುಂಬಿವಿಂಡು ಪಾಡುತ್ತಿರೆ ತುಳ್ಕಾಡಿದರಿಟ್ಟಾಡಿದರೀಸಾಡಿದರಮರ್ದಾಡಿದರ್ ಸರೋಜಾನನೆಯರ್ (ಗಿರಿಕ. ೪-೩೨).

[**ದೇ.॥ ತಮಿ.** ಅಮರ್, ಅಮುಳ್ ; **ತುಳು.** ಅಮರಿ, ಅಮಯ್ರು, ಅಮರು, ಅಮಾರು ; **ತೆಲು.** ಅಮರು]

**ಅಮರ₁**, ಅಮರೆ (ನಾ). **೧.** ರಾಜನು ತನಗೆ ಬೇಕಾದ ಯೋಧ ರನ್ನೂ, ಸೈನ್ಯಸಾಮಗ್ರಿಗಳನ್ನೂ ಒದಗಿಸಿಕೊಡುವುದಕ್ಕಾಗಿ ತನ್ನ ಪ್ರಾದೇಶಿಕ ನಾಯಕರಿಗೆ ಇನಾಮಾಗಿ ಕೊಟ್ಟ ಗ್ರಾಮ ಅಥವಾ ಗ್ರಾಮ ಸಮೂಹ : ××× ಯರಿಗೆ ಚಂದ್ರಗುತ್ತಿಗೆ ಗ್ರಾಮನೂ ಅಮರಕ್ಕೆ ಪಾಲಿಸಿದ ಸಂಮಂಧ (ಎಕ. VII, ಶಿಕಾರಿ. ೨೩೪-೭ ; 1510) ; ಕೃಷ್ಣದೇವ ಮಹಾರಾಯರು ನಮಗೆ ಅಮರಕೆ ಪಾಲಿಸಿದ ಅದವಾನಿಯ ದುರ್ಗದೊಳಗಣ (ಸೌಇಇ. IX-ii, ೫೨೧-೧ ; 1527). **೨.** ಒಂದು ಸಾವಿರ ಕಾಲಾಳುಗಳ ಮೇಲಿನ ಆಳಿಕೆ. **ಅಮರೆ : ೧.** 'ಅಮರೆಯ ನಾಯಕ' ಪರಾ.

[**ದೇ. ॥ ತಮಿ. ತೆಲು.** ಅಮರ. < **ಸಂ.** ಸಮರ]

**ಅಮರ₂** (ನಾ). ಹಾಲು, ಬೆಣ್ಣೆ, ಮೊಸರು ಮುಂತಾದ ವಸ್ತುಗಳು : ದೊಡ್ಡವೀರಪ್ಪ ವಡೆಯರವರಿಗೆ ಹಾಲು ಬೆಂಣೆಗೆ ಯೆಂಬದಾಗಿ ಅದಕ್ಕೆ ಅಮೃತ ಉದ್ದಿಶ್ಯವಾಗಿ ಕೊಟ್ಟಂಥಾದ್ದು. ಇದರ ಹೆಸರು ಅಮರ ಯೆಂಬ ದಾಗಿ (ರಾಜೇಂದ್ರ. ೭). [< ಅಮರದ]

**ಅಮರ₃** (ಗು). **೧.** ಸಾವಿಲ್ಲದ ; ಮರಣವಿಲ್ಲದ ; ಶಾಶ್ವತವಾದ : ಈ ಕೊಂಬೆ ಕರಗಿದೊಡೆ ಆ ಕೊಂಬೆ ಬಿಳಿಲಿಳಿದು ಬೇರೂರಿ ತಾಗಿ ಒಂದೆ ಮರಮಮರವಾಗಿರ್ಪಂತೆ (ಹೂಂಗಳು. ೨೦-೩). ಮಾನವನು ಅಮರ ನಲ್ಲದಿದ್ದರೂ ಅವನ ಅನುಭವಗಳು ಮಾತ್ರ . . . ಹರಿದುಬರುತ್ತಿವೆ (ಶಿಕ್ಷದ. ೩). (ನಾ). **೨.** ದೇವತೆ : ಅಮರರೊಸಗೆವಱೆ ವಾಜಿಪಿನಂ (ಜಗನಿ. ೩-೬೮). **೩.** ಪಾದರಸ. **೪.** ಚಿನ್ನ. **೫.** ದೇವದಾರು ವೃಕ್ಷ. **೬.** ಕಳ್ಳಿಗಿಡ. **೭.** ಅಮರಕೋಶ : ಅ ಆ ಬಾರದಿದ್ದರೆ ಅಮರವಾದರೂ ಹೇಳು ಎಂಬಂತೆ (ಗಾದೆ). **೮.** [ಛಂದ] ಮೂರು ಲಘುಗಳಿಂದ ಕೂಡಿದ(ᑌᑌᑌ) ನಗಣ ಎಂಬ ಅಕ್ಷರಗಣ : ಅಮರಗಣಯುಗ್ಮದಿಂ ಮುಂದಮರ್ದೀಱುಂ ಶಿಖಿಗಣಂ ಬರಲ್ (ಛಂದೋಂಬು. ೩-೨೪). [**ಸಂ.**]

**ಅಮರಕಂಟಕ** (ನಾ). **೧.** ದೇವತೆಗಳಿಗೆ ಕಂಟಕಪ್ರಾಯನಾದವನು; ರಾಕ್ಷಸ : ಸುರಿವ ರಕ್ತದ ಗಂಧವಾಸಣದರಳಮಾಡಿದ ಕಳಿದ ಕಂಗಳ ನಮರಕಂಟಕನು (ಕೌಶಿರಾ. ೩೮-೨೫). **೨.** ವಿಂಧ್ಯಪರ್ವತದ ಒಂದು ಭಾಗ. [ಅಮರ₃ + ಕಂಟಕ]

**ಅಮರಕರಿ** (ನಾ). ದೇವತೆಗಳ ಆನೆ ; ಐರಾವತ : ದಿಗಿಭದೊಳಗಮರ ಕರಿ ದಾನಿಗಳೊಳಗಗ್ಗಳದ ದಾನಚಿಂತಾಮಣಿ (ಅಜಿಪು. ೧-೨೦).

[ಅಮರ₃ + ಕರಿ₃]

**ಅಮರಕಾಮಿನಿ** (ನಾ). ದೇವತಾಸ್ತ್ರೀ : ಇತ್ತಲಮರಕಾಮಿನೀಕರ ಸರೋಜವನ ರಾಜಹಂಸನೆನಿಪ ಬಾಳಕಂ (ಮಲ್ಲಿಪು. ೧೩-೫೩).

[ಅಮರ₃ + ಕಾಮಿನಿ]

**ಅಮರಕುಜ** (ನಾ). ಸ್ವರ್ಗದ ಮರ ; ಕಲ್ಪವೃಕ್ಷ : ಏನೆಂಬ ಪೆಂಪೊ ಮನುವುಂ ತಾನುಂ ಸಚ್ಚರಿತರಮರಕುಜಮುಂ ತಾನುಂ ದಾನಿಗಳ್ (ಶಮದ. ೧೪೪ ಪ್ರಯೋ). [ಅಮರ₃ + ಕುಜ]

**ಅಮರಗಂಗೆ** (ನಾ). ದೇವನದಿ ; ಆಕಾಶಗಂಗಾನದಿ (ಕಿ).

[ಅಮರ₃ + ಗಂಗೆ]

**ಅಮರಗಣ** (ನಾ). **೧.** ದೇವತೆಗಳ ಗುಂಪು : ಸುಡಲಾವ ವೀರರು ಕೌರವಾದಿಗಳೆಂದುದಮರಗಣ (ಕುವ್ಯಾದ್ರೋ. ೬-೬೩). **೨.** [ವೀಶೈ] ನೂತನ ಶಿವಶರಣರನ್ನು ಒಳಕೊಂಡ ಗಣ : ಏಳುನೂಱ ಎಪ್ಪತ್ತು ಅಮರಗಣಂಗಳೆಲ್ಲಕ್ಕು ತಮತಮ್ಮ ಭಾವದ ಶೀಲ (ಏಲೇಶ್ವ. ೪೬) ; ಪ್ರಮಥಗಣ ೪೩೦, ರುದ್ರಗಣ ೧೪೯, ವೃಷಭಗಣ ಯೋಗಾಚಾರ್ಯರು ೨೨, ಅರುವತ್ತುಮೂವರು ೬೩, ಷೋಡಶರು ೧೬, ತೇರಸರು ೧೩, ದಶ ಗಣಂಗಳು ೧೦, ಅಮರಗಣ ೩೫೫, ಈ ಅಮರಗಣದಲ್ಲಿ ಬಸವ, ಚೆನ್ನ ಬಸವ ಮುಂತಾದವರ ಹೆಸರುಗಳಲ್ಲದೆ ಈ ಹೆಸರುಗಳೂ ಹೇಳಿವೆ (ಕವಿಚ. I, ೩೪೩). [ಅಮರ₃ + ಗಣ]

**ಅಮರಗಾರ**, ಅಮರುಗಾರ (ನಾ). ಅಮರ₁ಕ್ಕೆ ಕೊಟ್ಟ ಇನಾಮು ಗ್ರಾಮದ ಒಡೆಯ : ಟೀಪೂಸುಲ್ತಾನರು ಅನೇಕ ಮಂದಿ ಪಟೇಲರು, ಉಂಬಳಿದಾರರು, ಅಮರಗಾರರನ್ನು ಕಡಿಮೆ ಮಾಡಿ ಈ ಬಾಬತು ಇನಾಮು ಗಳಿಗೆ ಕಂದಾಯ ಹಾಕಿದರು (ಮಹಾವಂ II, ೨೫). **ಅಮರುಗಾರ :** ಹಿಂದಿನ ಮಹಾರಾಜರುಗಳ ಆಳಿಕೆಯಲ್ಲಿ ಈಗ ಪೋಲೀಸಿನವರಿಗೆ ನೇಮಕ ವಾಗಿರುವ ಕೆಲಸಗಳನ್ನು ಗ್ರಾಮನೌಕರರಾದ ಪಟೇಲರು, ಶ್ಯಾನು ಭೋಗರು, ತಳವಾರ, ತೋಟಿ, ನೀರಗಂಟಿ, ಕಾವಲ್‌ಗಾರ, ಕಟ್ಟೇಬಂದಿ, ಹಳೇಪೈಕಿ, ಉಂಬಳಿದಾರ್ ಅಮರುಗಾರರು ಎಂಬ ಹೆಸರಿನವರು ನಡೆಸು ತ್ತಿದ್ದರು (ಮಹಾವಂ. II, ೨೪).

[ಅಮರ₁ + -ಗಾರ (< -ಗಾಱ). / **ತಮಿ.** ಅಮರಕ್ಕಾರನ್ = ಸೈನ್ಯದ ಮುಖ್ಯಾಧಿಕಾರಿ, ಒಂದುಸಾವಿರ ಕಾಲಾಳುಗಳ ಮುಖ್ಯಾಧಿಕಾರಿ; **ತೆಲು.** ಅಮರಗಾರುಡು = ಅಮರವನ್ನು ಅನುಭವಿಸಿ ರಾಜಸೇವೆ ಮಾಡುವ ಭಟ, ಯುದ್ಧಭಟ]

**ಅಮರಗಿರಿ** (ನಾ). ಮೇರುಪರ್ವತ : ಪವಿತ್ರಮಾದಮರಗಿರೀಂದ್ರಕ್ಕೆ ನಡೆಯಿಮೆಂದು (ಶಾಂತಿಪು. ೧೦-೨೩ ವ). [ಅಮರ₃ + ಗಿರಿ]

**ಅಮರಗುಂಡ** (ನಾ). ಒಂದು ಊರಿನ ಹೆಸರು ; ಒಂದು ದೇವತೆಯ ಹೆಸರು : ಅಮರಗುಂಡ ದೇವರ ದಿಬ್ಯಶ್ರೀ ಪಾದಪದ್ಮಾರಾಧಕರುಮಪ್ಪ ಆಳಿಯ ಸಾಣನಾಯಿಕನ ಕುಮಾರ ಮಲ್ಲಿನಾಥ ವೊಡೆಯರು (ಎಕ. XI, ಚಿತ್ರದು. ೩-೧೪ ; 1355) ; ಸ್ವಸ್ತಿ ಶ್ರೀಮನ್ಮಹಾಮಂಡಳೇಶ್ವರಂ ಮಂಡ ಳಿಕ ಖಂಡೆಯರಾಯ ಅಮರಗುಂಡದ ದೇವರ ದಿಬ್ಯಶ್ರೀ ಪಾದಪದ್ಮಾ ರಾಧಕ (ಎಕ. XI, ಚಿತ್ರದು. ೩-೧೬ ; 1356); ಪಂಡಿತೋತ್ತಮ ನೆನಲೆಸೆದ ಮರಗುಂಡ ಮಲ್ಲೇಶ್ವರನು (ಬಸವು. ೩೫-೫೬) ; ತನ್ನ ಗುರು ಸಚ್ಚಿದ

ಮಳನು ಅಮರಗುಂಡಪಂಡಿತನಿದಜ ವೃತ್ತಾಂತವನಜಿದು (ಬಸಪು. ೯–೩೪); ಶ್ರೀ ಮಲ್ಲಿನಾಥವೊಡೆಯರ ಸ್ವಹಸ್ತದವೊಪ್ಪ ಶ್ರೀ ಸಮರ ಗುಂಡ (ಎಕ. XI, ಚಿತ್ರದು. ೨–೨೫; 1355). ℙ. 'ಸಮರಗುಂಡ' ದಿಂದ 'ಅಮರಗುಂಡ' ಬಂದಿರಬಹುದು. ಈಗಿನ ಗುಬ್ಬಿ ಎಂಬ ಊರಿಗೆ ಹಿಂದೆ ಇದ್ದ ಹೆಸರು. [<ಸಮರಗುಂಡ]

**ಅಮರಗುರು** (ನಾ). ದೇವತೆಗಳ ಆಚಾರ್ಯ; ಬೃಹಸ್ಪತಿ: ಅಮರ ಗುರು ಸದೃಶನುಮಖಿಲಮಂತ್ರಿಮಂಡಳಿಕಪ್ರಧಾನನುಂ (ಕಾದಂಪೂ. ೬೨). [ಅಮರ್$_3$ + ಗುರು]

**ಅಮರಗ್ರಾಮ** (ನಾ). ರಾಜನು ತನಗೆ ಬೇಕಾದಾಗ ಯೋಧರನ್ನೂ ಸೈನ್ಯಸಾಮಗ್ರಿಗಳನ್ನೂ ಒದಗಿಸಿಕೊಡುವುದಕ್ಕಾಗಿ ತನ್ನ ಪ್ರಾದೇಶಿಕ ನಾಯಕರಿಗೆ ಇನಾಮಾಗಿ ಕೊಟ್ಟ ಗ್ರಾಮ: ಹುಲಿಗೆಜೆಯ ನಾಡ ಅಗ್ರಹಾರ ದೇವಸ್ಥಾನ ಪುರವರ್ಗ ಅಮರಗ್ರಾಮ ಭಂಡಾರ ಗ್ರಾಮಗಳ ಹೆಣ್ಣುಗಂಡಿನ ಮದುವೆಯ ಸುಂಕವನು (ಸೌಇಇ. XX, ೨೩೮–೧೮; 1547). [ಅಮರ್$_1$ + ಗ್ರಾಮ]

**ಅಮರಜನನಿ** (ನಾ). ದೇವತೆಗಳ ತಾಯಿ; ಅದಿತಿ ದೇವಿ: ವೀರ ಭದ್ರನು . . . ಅಮರಜನನಿಯ ಗೋಣಮಂ ಕೊಯ್ದು (ಬಸಪು. ೫೪–೫೨). [ಅಮರ್$_3$ + ಜನನಿ]

**ಅಮರಣತ್ವ** (ನಾ). ಸಾವಿಲ್ಲದಿರುವುದು: ಶಿವನ ಘನಮಹಿಮೋನ್ನತಿಯನೆಣಿಸುವೊಡಗೋಚರವಿನ್ನು ಪಲವಂ ವಿವರಿಸುವೊಡಳವಲ್ಲ ಪರವೈಶ್ವರ್ಯದನುಪಮನ ಅವಿರಳನನಜರನನಮರಣತ್ವವನನಭವನನಪ್ರತರ್ಕ್ಯನ (ಬಸಪು. ೫೪–೫೮). [ಸಂ.]

**ಅಮರತರು** (ನಾ). = ಅಮರಕುಜ. [ಅಮರ್$_3$ + ತರು]

**ಅಮರತೂರ್ಯ** (ನಾ). ದೇವತೆಗಳ ವಾದ್ಯ; ದೇವದುಂದುಭಿ: ಸಿಂಹವಿಷ್ಟರಂ ಚಮರಮಮರತೂರ್ಯಮಶೋಕಂ (ಜಿನಾಲೆ. ೬–೬). [ಅಮರ್$_3$ + ತೂರ್ಯ]

**ಅಮರತೆ** (ನಾ). ಸಾವಿಲ್ಲದಿರುವುದು; ದೇವತ್ವ: ಇಲ್ಲಿಯಧ್ರುವ ವಿಭವಮಮರತೆಯಲ್ಲಿ ಕಿಲ್ಬಿಷವಿಲ್ಲಿ ಶಿವಮಯವಲ್ಲಿ (ಕುವ್ಯಾಗ. ೧–೨೧). [ಸಂ. ಅಮರತಾ]

**ಅಮರದ** (ನಾ). ಅಮೃತ; ಹಾಲು, ಬೆಣ್ಣೆ ಮುಂತಾದ ಕ್ಷೀರವಸ್ತುಗಳು. 'ಅಮರದ ಮಾಗಣೆ' ಪರಾ. [< ಸಂ. ಅಮೃತ]

**ಅಮರದಬಳ್ಳಿ** 'ಅಮರ್ದುವಳ್ಳಿ' ನೋ.

**ಅಮರದಮಾಗಣೆ** (ನಾ). ಹಾಲು, ಬೆಣ್ಣೆ, ತುಪ್ಪ ಮುಂತಾದ ಕ್ಷೀರ ವಸ್ತುಗಳನ್ನು ಒದಗಿಸುವುದಕ್ಕಾಗಿ ಮಾನ್ಯವಾಗಿ ಬಿಟ್ಟ ಗ್ರಾಮ ಸಮೂಹ ಅಥವಾ ಹೋಬಳಿ: ಮಂಗಳೂರು ತಾಲೂಕು ಮಾಡ ವೊಂಭತ್ತು ಮಾಗಣೆಯಿಂದ ಅಮರದಮಾಗಣೆ ಒಂದು, ಸುಳ್ಯದ ಮಾಗಣೆ ಒಂದು, ಅಂತೂ ಎರಡೂ ಸಹ (ರಾಜೇಂದ್ರ. ೧೭); ಹಾಲು ಬೆಣ್ಣೆ ಬಗ್ಯೆಯಂತಾ ಆ ಗ್ರಾಮಗಳಿಗೆ ಅಮರದ ಮಾಗಣೆಯಂತಾ ಹೆಸರು (ರಾಜೇಂದ್ರ. ೬೩). [ಅಮರದ + ಮಾಗಣೆ]

**ಅಮರದಲ್ಲಣ** (ನಾ). ದೇವತೆಗಳನ್ನು ತಲ್ಲಣಗೊಳ್ಳುವಂತೆ ಮಾಡುವವನು: ಬಲವ ನೋಡುವೊಡಮರದಲ್ಲಣ ಛಲವ ನೋಡುವಡೀಯ ಸೀತೆಯ ಜಗದ ಗಂಡನಲ (ಕೌಶಿರಾ. ೨೧–೧೯). [ಅಮರ್$_3$ + ತಲ್ಲಣ]

**ಅಮರದವಲ್ಲಿ** 'ಅಮರ್ದುವಳ್ಳಿ' ನೋ.

**ಅಮರದವಳ್ಳಿ** 'ಅಮರ್ದುವಳ್ಳಿ' ನೋ.

**ಅಮರದುಬಳ್ಳಿ** 'ಅಮರ್ದುವಳ್ಳಿ' ನೋ.

**ಅಮರದುವಳ್ಳಿ** 'ಅಮರ್ದುವಳ್ಳಿ' ನೋ.

**ಅಮರಧನು** (ನಾ). ಇಂದ್ರಚಾಪ; ಮಳೆಯ ಬಿಲ್ಲು: ಅಮರಧನುರ್ದ್ಯೋತಿಯಂ ಪಂಚರತ್ನಚ್ಛವಿಯಂ ಕೀಟುಮ್ಮಿಟ್ಟು . . . ತುರಂಗಂ (ಪುಷ್ಪಪು. ೫–೧೦). [ಅಮರ್$_3$ + ಧನು]

**ಅಮರಧುನಿ** (ನಾ). = ಅಮರಗಂಗೆ: ಅಮರಧುನಿಯೊಳಗೆ ಸಾಯಾಹ್ನಿಕೀ ಕ್ರಿಯೆಗಳಂ ಕ್ರಮದಿಂದ ರಚಿಸಿ (ವೆಂಕಾರಾ. ೨–೧೭–೧). [ಅಮರ್$_3$ + ಧುನಿ]

**ಅಮರಧೇನು** (ನಾ). ದೇವತೆಗಳ ಹಸು; ಕಾಮಧೇನು: ರಾಘವ ದೇವನಟ್ಟುಜಿಂ ಋಷಿನಿವೇದಕಂಗಮರಧೇನುವೀವಂತಿತ್ತಂ (ಪಂರಾಮಾ. ೧೫–೩೩); ಅಮರಧೇನುವ ಪರರ ಮನೆಯಲಿ ಮಾಜಿ . . . ಪಾಪಿಗೆ ಪರಮಗುರುವಾದೆನ್ನೆ (ಕುವ್ಯಾಭೀ. ೩–೬೯). [ಅಮರ್$_3$ + ಧೇನು]

**ಅಮರನಗ** (ನಾ). = ಅಮರಗಿರಿ: ನೆಗಬ್ದಮರನಗೇಂದ್ರಮನಾದಿಗಿಭೇಂದ್ರಂ ಪೊರ್ದಿದಲ್ಲಿ (ಅಜಿಪು. ೪–೨೬). [ಅಮರ್$_3$ + ನಗ]

**ಅಮರನಗರಿ** (ನಾ). ದೇವತೆಗಳ ಪಟ್ಟಣ; ಅಮರಾವತಿ; ಸ್ವರ್ಗ: ಅಂತು ಚತುರ್ನಿಕಾಯಾಮರಜನಂಬೆರಸುಮಮರರಾಜನಮರನಗರಿಗೆ ಪೋದಂ (ಅಜಿಪು. ೫–೬೦ ವ). [ಅಮರ್$_3$ + ನಗರಿ]

**ಅಮರನದಿ** (ನಾ). = ಅಮರಗಂಗೆ: ಅಮರನದಿಯೊಳಾರಕ್ತ ನೀರೇಜ ಪತ್ರಾವಳಿಯೆಂತಂತು . . . ಪರ್ವಿತ್ತು (ಪಂರಾಮಾ. ೩–೧೩). [ಅಮರ್$_3$ + ನದಿ]

**ಅಮರನದೀಜೂಟ** (ನಾ). ಗಂಗೆಯನ್ನು ಮುಡಿಯಲ್ಲಿ ಧರಿಸಿದವನು; ಶಿವ: ಅಮರನದೀಜೂಟನ ರೂಪಂ ತನ್ನೆರ್ದೆಗೇರೊಳಗೊಚ್ಚತ ಬರ್ಚಿಸಿದಂದದೊಳು ಏಪೊಳ್ತುಂ ತಾಳ್ದಿರ್ಪಂ (ಉದ್ಭದೇ. ೨–೩೮). [ಸಂ. (ಅಮರನದೀ + ಜೂಟ)]

**ಅಮರನಾಗೇಂದ್ರ** (ನಾ). = ಅಮರಕರಿ: ನಾಗೇಂದ್ರನಂ ಬಿಡದೆ ತಲೆವಾಗಿಸಿತ್ತಮರನಾಗೇಂದ್ರನಂ ಬುದ್ಧಿದೋಜಿಸಿತ್ತು ಪುರಮರ್ದನಾಗೇಂದ್ರನಂ ನಿಂದು ಬೆಜಗಾಗಿಸಿತ್ತು (ಜೈಮಿಭಾ. ೨–೧೨). [ಅಮರ್$_2$+ ನಾಗ + ಇಂದ್ರ]

**ಅಮರನಾಯಕ$_1$**, ಅಮರೆಯ ನಾಯಕ (ನಾ). ಅಮರಗ್ರಾಮಕ್ಕೆ ಅಥವಾ ಗ್ರಾಮಗಳಿಗೆ ಅಧಿಕಾರಿಯಾದವನು: ಶ್ರೀಮಂನ್ಮಹಾಮೂವರು ರಾಯರ ಗಂಡ ಹಿರಿಯ ಕಟ್ಟೆಗೆಯ ಅಮರನಾಯಕರ ಮಕ್ಕಳು ಕಟ್ಟೆಗೆಯ ಗುಂಡಪ್ಪ ನಾಯಕರು ಅಮರೆಯ ನಾಯಕರೂ ಶ್ರೀ ವಿಜಯ ಸೋಮನಾಥಪುರವಾದ ನುಗ್ಗಿಯ ಹಳ್ಳಿಯ ನಾಡನಾಳುವಲ್ಲಿ (ಎಕ. V, ಚನ್ನರಾ. ೨೪೧–೮; 1432); ಶ್ರೀಮರ್ತ ಮಹಾರಾಜಾಧಿರಾಜ ಪರಮೇಶ್ವರ ಶ್ರೀವೀರಪ್ರತಾಪ ದೇವರಾಯ ×× ಯರಕಜಗೀಯ ಅಮರನಾಯಕರು ಜಾಲದ ಭೀಮಸೆಟ್ಟಿಯರಿಗೆ ಕೊಟ್ಟ ಕೊಡಗಿ (ಎಕ. IX, ದೇವನ. ೫೬–೬; 1467); ನಮ್ಮ ಪೂರ್ವಿಕರು ಓರಂಗಲ್ಲಿನ ಕಾಕತೀಯ ಅರಸರ ಸೈನ್ಯದಲ್ಲಿ ರಾಹುತರೂ ಅಮರನಾಯಕರೂ ಆಗಿದ್ದರು (ರೂಲೇಖಾ. ೧೭೯). **ಅಮರೆಯನಾಯಕ**: ಹುಜಿಗಿಲವಾಡಿಯ ಅಮರೆಯನಾಯಕನ ಮಾಚಯ ಪ೧ (ಎಕ. V, ಅರಸಿ. ೧೫೨–೫೭; 1227 ?). ℙ ಅಮರೆ ಎಂಬ ಶಬ್ದ ಅಮೃತೇಶ್ವರ ಎಂಬ ದೇವರ ಹೆಸರಿನ ಅಮೃತ ಶಬ್ದ ದಿಂದ ಬಂದಿರಬಹುದು. [ಅಮರ್$_1$ + ನಾಯಕ. / ತೆಲು. ಅಮರನಾಯಕುಡು]

**ಅಮರನಾಯಕ$_2$** (ನಾ). **೧.** ದೇವತೆಗಳಲ್ಲಿ ಮುಖ್ಯನಾದವನು: ಸುರರಾಜನ ಬೆಸದೊಳಮರನಾಯಕರೆಲ್ಲಂ ನೆರೆದು (ಆದಿಪು. ೬–೮೬). ೨. ಇಂದ್ರ. [ಅಮರ್$_3$ + ನಾಯಕ]

**ಅಮರನಾಯಕತನ**, ಅಮರನಾಯಿಕತನ (ನಾ). ಅಮರವಾಗಿ ಕೊಟ್ಟ ಗ್ರಾಮ ಅಥವಾ ಗ್ರಾಮಗಳಿಗೆ ಒಡೆಯನಾಗಿರುವಿಕೆ, —

ಒಡೆತನ: ನ(ಂ)ಮ ಅಮರನಾಯಕತನ ವಳಿದಿಲಂಬಟನ ಚಾವಡಿಯ ನಡುವಿ ಮಂಡಲದ ವೇಂಟಿಯದ (ಸೌಇಇ. IX–ii, ४೬೩–೫ ; 1470); ಸ್ವಾಮಿ ನಮಗೆ ಅಮರನಾಯಕತನಕೆ ಪಾಲಿಸಿದ ಕೊಟ್ಟೂರ ಚಾವಡಿಗೆ ಸಲುವ (ಎಕ. XI, ದಾವಣ. ७೮–೬ ; 1530); ಸ್ವಾಮಿ ನಮಗೆ ಅಮರ ನಾಯಕತನಕ್ಕೆ ಪಾಲಿಸಿದ ಪಾಂಡ್ಯನಾಡೊಳಗಣ ಉಚ್ಚಂಗಿ ವೇಂಠೆಯಕೆ (ಎಕ. XI, ದಾವಣ. ೩೧–೬ ; 1531); ಸಾಗುವಳಿಯ ಶಾಷಣದ ಕ್ರಮ ವೆಂತೆಂದರೆ ಸದಾಶಿವ ಮಹಾರಾಯರು ನಮಗೆ ಅಮರನಾಯಕತನಕೆ ಪಾಲಿಸಿದ ಉರ್ವಕೊಂಡೆಯ ಸೀಮೆಗೆ ಸಲುವ ವೆಲುಪಡಿಗೆಯ ಗ್ರಾಮದ ಹೊಲನು ಪಾಂಡುವ ಬೀಳುಬಿದು ಇರಲಾಗಿ (ಸೌಇಇ. IX–ii, ೬೩೩–೩ ; 1548); ಶ್ರೀಪತಿ ರಂಗದೇವ ಮಹಾ ಅರಸುಗಳಿಗೆ ಅಮರನಾಯಕ ತನಕೆ ಪಾಲಿಸಿದ ಬೂದಿಹಾಳ ಸೀಮೆಯನು ಆ ರಂಗರಾಜ ಅಮ್ಮನವರೂ ಪಾಲಿಸು ತಿರಲು (ಎಕ. XII, ಚಿಕ್ಕನಾ. ೭–೧೧ ; 1554); ಶ್ರೀಪತಿ ರಾಜ ರಂಗಯ ದೇವ ಮಹಾ ಅರಸುಗಳಿಗೆ ಅಮರನಾಯಕತನಕೆ ಪಾಲಿಸಿದ ಮಗರನಾಡ ವೇಂಠೆಯ (ಎಕ. XII, ಚಿಕ್ಕನಾ. ೬–೯; 1555); ಸದಾಶಿವ ಮಹಾರಾಯರು ನಮಗೆ ಅಮರನಾಯಕತನಕೆ ಪಾಲಿಸ್ತ ಕಂದಿಯ ಸೀಮೆ ವಳಗಣ (ಎಕ. XVI, ತಿಪಟೂ. ೫೩–೧೪ ; 1561); ನಮ್ಮ ಅಮರ ನಾಯಕತನಕೆ ಸಲುವ ಬೂದಿಹಾಳ ಸೀಮೆಯೊಳಗೆ ನೀಉ ತೆಜುವಂತು ಅಡೆವಣವನೂ ನಂಮ ತಂದೆಗಳು ರಂಗರಾಜಯ್ಯನವರಿಗೆ ಪುಂಣ್ಯವಾಗಬೇಕೆಂದು ಬಿಟ್ಟೆಉ (ಎಕ. XII, ಚಿಕ್ಕನಾ. ೮–೧೫ ; 1573); ಮುಂಮಡಿ ತಂಮಯಗೌಡರು ತಂಮ ಅಮರನಾಯಕತನಕೆ ಸಲುವ ಕೋಳಾಲಸೀಮೆ ವೊಳಗಣ ಕೊಟೂರ ಹೊಸಹಳ್ಳಿಯ ಗ್ರಾಮವಂನು (ಎಕ. X, ಕೋಲಾರ. ७४೧–೯ ; 1608); ವೆಂಕಟಪತಿದೇವ ಮಹಾ × × ರೂ ಅಮರನಾಯಕತನಕೆಪಾಲಿಸಿದ ಮಗರ ನಾಡ ವೇಂಠೆಯಕ್ಕೆ (ಎಕ. XII, ಚಿಕ್ಕನಾ. ೧೯–೧೦ ; 1636); ಶ್ರೀ ವೆಂಕಟಪತಿದೇವ ಮಹಾರಾಯರು . . . ಅಮರನಾಯಕತನಕೆ ಪ್ರತಿ ಪಾಲಿಸಿಕೊಟ್ಟ (ಎಕ. XVI, ಚಿಕ್ಕನಾ. ೫೩–೯ ; 1639); ಅಮರನಾಯಕ ತನಕೆ ಪ್ರತಿಪಾಲಿಸಿ ಕೊಟ್ಟಂಥ ಹೊಸಳದೇಶದ ಯರೆಯ ಕಟ್ಟೆಯ (ಎಕ. XII, ಚಿಕ್ಕನಾ. ೩೪–೧೦ ; 1669 ?). **ಅಮರನಾಯಿಕೆತನ** : ರಾಜ್ಯಾಧಿ ಪತಿ ಸದಾಶಿವದೇವ ಮಹಾರಾಯರು ನಮಗೆ ಅಮರನಾಯಿಕತನಕೆ × × ಕಂದಿ × × ಮವೊಳಗಣ ಬಜಗೂರಸ್ಥಳ (ಎಕ. XII, ತಿಪಟೂ. ೫೩–೧೪ ; 1561 ?).

**ಅಮರದ ನಾಯಕತನ** = ಅಮರನಾಯಿಕತನ : ನಮ್ಮ ದೇವ ರಾಯ ಮಹಾರಾಯರು ಅಮರದನಾಯಕತನಕ್ಕೆ ಪಾಲಿಸಿದ ಸಾತಿಗ್ರಾಮದ ಸ್ಥಳಕ್ಕೆ ಸಲುವ ತೆರಣೆಯದ ಸ್ತಳದ ಸೊವನಹಳಿ ಗ್ರಾಮ ೧ (ಮೈಆರಿ. ೧೯೧೨, ಪು. ೫೦ ; 1474).

[ಅಮರನಾಯಕ$_1$ + –ತನ. / **ತೆಲು.** ಅಮರನಾಯಕರ]

**ಅಮರನಾಯಿಕೆತನ** 'ಅಮರನಾಯಕತನ' ನೋ.

**ಅಮರಪಟಹ** (ನಾ). ದೇವಲೋಕದ ಭೇರಿ; ದೇವದುಂದುಭಿ: ಸುರಿದುದು ನಮೇರು ಕುಸುಮದ ಸರಿ ಮೊಟಗಿದುದಮರಪಟಹಂ (ಪುಷ್ಪಪು. ೧४–४೧). [ಅಮರ$_3$ + ಪಟಹ]

**ಅಮರಪತಿ** (ನಾ). ದೇವೇಂದ್ರ. [ಅಮರ$_3$ + ಪತಿ]

**ಅಮರಪದವಿ** (ನಾ). ದೇವತೆಗಳ ಸ್ಥಿತಿ; ದೇವತ್ವ: ಮದೇಭವ ಕಡಿದು ಹರಹಿದನೌಕಿ ಚೂರಿಸಿ ಗಡಣಿಸುವ ಭೂಪರಿಗೆ ಮಾಡಿದನಮರ ಪದವಿಯನು (ಕುಮಾರವ್ಯಾಸ ದ್ರೋ. ೧೧–೧೩). [ಅಮರ$_3$ + ಪದವಿ]

**ಅಮರಪ್ರಸ್ಪರ್ಧಿ** (ಗು). ದೇವತೆಗಳ ಜತೆಯಲ್ಲಿ ಸ್ಪರ್ಧಿಸುವ: ಭಾವಿ ಭವದ್ಭೂತ ನೃಪಾಗ್ರಗಣ್ಯನಮರಪ್ರಸ್ಪರ್ಧಿಪುಣ್ಯಂ (ಶಾಂತಿಪು. ೨–೨೦). [ಅಮರ$_3$ + ಪ್ರಸ್ಪರ್ಧಿ]

**ಅಮರಭೂಜ** (ನಾ). = ಅಮರಕುಜ : ಅಮರಭೂಜಂ ಬಂದಂತಿ ರೊಸಗೆಯಾಯ್ತುರಮನೆಯೊಳ್ (ಪುಷ್ಪಪು. ೧೩–೧೨೨).

[ಅಮರ$_3$ + ಭೂಜ]

**ಅಮರಮಣಿ** (ನಾ). ದೇವಲೋಕದ ರತ್ನ; ಚಿಂತಾಮಣಿ: ಸುರ ಧೇನು ಪಯೋಧರಮಂ ಸುರಕುಜದೆಳದಳಿರನಮರಮಣಿಯಂ ಬೆರಲುಂ ಕರಮುಂ ನಖಮುಂ ಪರಿಜಿಂ ವರವಿತರಣದಿಂದೆ ಪಳಿಗುಮಾ ನೃಪಸುತನಾ (ರಾಜಶೇ. ೫–೧೫). [ಅಮರ$_3$ + ಮಣಿ]

**ಅಮರಮಹತ್ತರಿಕೆ** (ನಾ). ದೇವ ಸೇವಕಿ; ಆಸ್ಥಾನಸೇವಕಿಯರಲ್ಲಿ ಮುಖ್ಯಳೆನಿಸಿದ ದೇವತಾಸ್ತ್ರೀ: ಅಂತು ಕುಮಾರಂ ಕುಮಾರಕಾಲ ದೊಳಮರಮಹತ್ತರಿಕಾ ವಿರಚಿತ ಮಜ್ಜನ ಭೋಜನಾದಿ ಭೋಗೋಪ ಭೋಗಮನಪ್ಪುಕೆಯ್ದು (ಮಲ್ಲಿಪು. ೧೩–೭೯). [ಅಮರ$_3$ + ಮಹತ್ತರಿಕೆ]

**ಅಮರಮಹಲೆ** (ನಾ). = ಅಮರಮಾಗಣಿ: ಅಚ್ಯುತರಾಯ ಮಹಾ ರಾಯರು ತಮಗೆ ಅಮರಮಹಲೆಯಾಗಿ ಪಾಲಿಸಿದ ಚಂದ್ರಗುತ್ತಿ (ಎಕ. VIII, ಸೊರಬ. ३೭೯–೯ ; 1533). [ಅಮರ$_2$ + ಮಹಲೆ ?]

**ಅಮರಮಾಗಣಿ, ಅಮರಮಾಗಳೆ** (ನಾ). ಅರಸರು ತಮ್ಮ ಪಾಳೆಯ ಗಾರರಿಗೆ ಸೈನ್ಯದ ಸಾಮಗ್ರಿಗಳನ್ನು ಒದಗಿಸುವುದಕ್ಕಾಗಲಿ ಹಾಲು, ಬೆಣ್ಣೆಗಳನ್ನು ಒದಗಿಸುವುದಕ್ಕಾಗಲಿ ಕೊಟ್ಟ ಇನಾಮು ಗ್ರಾಮ ಸಮೂಹ ಅಥವಾ ಹೋಬಳಿ : ರಾಮಾಭಟ್ಟಯ್ಯನವರು ಅವ[ಮ]ರ ಮಾಗಣಿಗೆ ಪಾಲಿಸಿದ ಶ್ರೀರಂಗಪಟ್ಟಣದ ಸೀಮೆ (ಎಕ. III, ಶ್ರೀರಂಗ. ೬–೯ ; 1542); ಪೊನಪ್ಪನಾಯಕರ ಮಕ್ಕಳು ಕೃಷ್ಣಪ್ಪನಾಯಕರು ತಂಮ ಮರಮಾಗಣಿಗೆ ಸಲುವ ಬಾಗುರ ಸೀಮೆ (ಮೈಆರಿ. ೧೯४೧, ೩–೧೦ ; 1544); ಕೃಷ್ಣಪ್ಪನಾಯಕರಿಗೆ ಅಮರಮಾಗಣಿಯಾಗಿ ಪಾಲಿಸಿದ ಕೋಗಳಿಗೆ ಸಲ್ಲುವ ಕೊಟ್ಟೂರುಮಂ (ಸೌಇಇ. IX–ii, ೬४೦–೬ ; 1550); ತಿರುಮಲ ರಾಜ್ಯ ದೇವ ಮಹಾ ಅರಸುಗಳು ನಮಗೆ ಅಮರಮಾಗಣಿಗೆ ಪಾಲಿಸಿದ ರಾಯ ದುರ್ಗ ರಾಜ್ಯದ ಕೋಟೆ (ಎಕ. XI, ಚಳ್ಳಕೆ. ೫४–೨೧ ; 1560); ಕೃಷ್ಣ ಪನಾಯ್ಕರಿಗೆ ಅಮರಮಾಗಣಿಯಾಗಿ ಪಾಲಿಸಿದ ಹಾಸನದ ಸೀಮೆಯೊಳಗೆ ಸಲುವ (ಮೈಆರಿ. ೧೯೩೫, ೮–೮ ; 1562). **ಅಮರಮಾಗಳೆ**: ನಂಮ ಕೃಷ್ಣಪ್ಪನಾಯಕರ ಅಮರಮಾಗಳಿಗೆ ಸಲ್ಲುವ ಮೊರಬದ ಸೀಮೆ (ಸೌಇಇ. IX–ii, ೬४೭–೧೨ ; 1552). [ಅಮರ$_1$ + ಮಾಗಣಿ]

**ಅಮರಮಾಗಳೆ** 'ಅಮರಮಾಗಣಿ' ನೋ.

**ಅಮರಮುನಿ** (ನಾ). ದೇವಋಷಿ; ನಾರದ. [ಅಮರ$_3$ + ಮುನಿ]

**ಅಮರಮೊಖಾಸಿ** (ನಾ). ಯುದ್ಧಬಂದಾಗ ರಾಜನಿಗೆ ಕುದುರೆ ಗಳನ್ನು ಒದಗಿಸಿಕೊಡಲು ಪ್ರಾದೇಶಿಕ ನಾಯಕರಿಗೆ ಬಿಟ್ಟ ಇನಾಮುಗ್ರಾಮ. 'ಅಮರಮೊಖಾಸಿನಾಯಕತನ' ಪರಾ.

[ಅಮರ$_1$ + ಮೊಖಾಸಿ]

**ಅಮರಮೊಖಾಸಿನಾಯಕ** (ನಾ). ಅಮರಮೊಖಾಸಿ ಗ್ರಾಮಕ್ಕೆ ಒಡೆಯನಾದವನು. 'ಅಮರಮೊಖಾಸಿನಾಯಕತನ' ಪರಾ.

[ಅಮರಮೊಖಾಸಿ + ನಾಯಕ]

**ಅಮರಮೊಖಾಸಿನಾಯಕತನ** (ನಾ). ಅಮರಮೊಖಾಸಿಗ್ರಾಮಕ್ಕೆ ಒಡೆಯನಾಗಿರುವಿಕೆ,— ಒಡೆತನ : ಅಲ್ಲಿ ಏದ್ಲಿಖಾನ ಪಾತಶಾಹಿ ನಮಗೆ ಅಮರಮೊಖಾಸಿನಾಯಕತನಕೆ ಪಾಲಿಸಿಯಿದ ಹುಲಿಗೆಜೆಯ ನಾಡ ಲಕ್ಷ್ಮಣೇಶ್ವರದ ಸೀಮೆವೊಳಗಣ ಗೌಡಗೆಜೆಯ ಗ್ರಾಮವನು (ಸೌಇಇ. XX, ७೫೭–೮ ; 1576). [ಅಮರಮೊಖಾಸಿನಾಯಕ + –ತನ]

**ಅಮರಲೋಕ** (ನಾ). ದೇವಲೋಕ; ಸ್ವರ್ಗ: ಸಂಭ್ರಮಂ ತುಂಬಿ ರ್ದುದಮರಲೋಕಂಗಳೊಳ್ (ಶ್ರೀರಾಮಾ. ೧೮–४೭೨).

[ಅಮರ$_3$ + ಲೋಕ]

**ಅಮರವಡಿ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಸಿಯಗೆಲ್ಲರಾಳು ಕುಱಕಾಲರ ಮನಾಳಿಯರ್ ರಣಾಲಿ ಅರಸರಲ್ಲಿನ್ಮಳಿದು ಬನ್ದು ಅಮರವಡಿ ಆಳುವಿಟ್ಟು (ಎಕ. XVI, ತುಮಕೂ. ೯೪–೭ ; 780). [?]

**ಅಮರವಧು** (ನಾ). ದೇವಕನ್ನಿಕೆ; ದೇವತಾಸ್ತ್ರೀ: ಯಾವಕದ್ರವದಿಂದಂ ಪ್ರತಿದಿನಮಾದೇವಿವಿಳೇಪಿತಕರ್ಮಮನೊರ್ವಳಮರವಧು ಕೆಯ್ಕೊಂಡಳ್ (ಶಾಂತಿಪು. ೯–೧೮೪). [ಅಮರ್ತ್ಯ + ವಧು]

**ಅಮರವಧೂಟಿ** (ನಾ). = ಅಮರವಧು: ನಮದಮರವಧೂಟೀಕುಂತಳಸ್ರಸ್ತಮಾಲಾ ಸಮುದಿತ (ರಾಜಶೇ. ೧–೧೩೬). [ಅಮರ್ತ್ಯ + ವಧೂಟಿ]

**ಅಮರವಳ್ಳಿ** (ನಾ). = ಅಮರ್ದುವಳ್ಳಿ: "ಅಮೃತಂ ಗುಡೂಚಿ ಜೀವಂತಿ ಸೋಮಮಮರವಳ್ಳಿ [ಪಾಠಾಂ. ಅಮರ್ದುವಳ್ಳಿ, ಅಮದರವಲ್ಲಿ, ಅಮರಂವಳಿ, ಅವಕುರವಲ್ಲಿ]ಯಕ್ಕುಂ" (ಮಂಗರಾ. ೪೩–೪೩).
[< ಸಂ. ಅಮೃತವಲ್ಲೀ]

**ಅಮರವಾಹಿನಿ** (ನಾ). ೧. ದೇವನದಿ; ಗಂಗಾನದಿ: ಅಚ್ಛಾಮರವಾಹಿನಿಯ ಜಟಾಳಿಯ ಗುಚ್ಛಾಭೋಗದೊಳಗೆ ತಾಳ್ದನ . . . ನುತಿಪೆಂ(ಉದ್ಭಟ. ೬–೧). ೨. ದೇವತೆಗಳ ಸೈನ್ಯ: ಅಂತು ನಭೋಯಾನದಿಂದಮರವಾಹಿನಿ ಬರೆ (ಶಾಂತಿಪು. ೧೦–೨೧ ವ). [ಅಮರ್ತ್ಯ + ವಾಹಿನಿ]

**ಅಮರವೈರಿ** (ನಾ). ದೇವತೆಗಳ ಶತ್ರು; ರಾಕ್ಷಸ: ಬೇಗಮಾಡಿನ್ನಮರವೈರಿಯ ತಱಿದು ಬಿಸುಡೆಂದ(ಕುವ್ಯಾದ್ರೋ.೧೬–೨೭). [ಅಮರ್ತ್ಯ+ ವೈರಿ]

**ಅಮರಸಂಹತಿ** (ನಾ). ದೇವತೆಗಳ ಸಮೂಹ: ಪೋಪ ಬರ್ಪಮರಸಂಹತಿ ಪೋಲ್ತುದು . . . ಸೇತುಬಂಧಮಂ (ಶಾಂತಿಪು. ೧೦–೪೫).
[ಅಮರ್ತ್ಯ + ಸಂಹತಿ]

**ಅಮರಸಮಾಜ** (ನಾ). = ಅಮರಸಂಹತಿ: ಪುಷ್ಪವರ್ಷಮೊರ್ಮೆಯೆ ಸಕಲೋರ್ವಿಯನೆಯ್ದೆ ಪರ್ವುತಿರೆ ಚಿತ್ತೆಯ ಸರಿಯಂತೆಱಗಿ ಪೋದುದಮರಸಮಾಜಂ (ಆದಿಪು. ೧೪–೧೪೭). [ಅಮರ್ತ್ಯ + ಸಮಾಜ]

**ಅಮರಸಮಿತಿ** (ನಾ). = ಅಮರಸಂಹತಿ: ಅಮರಸಮಿತಿ ಸುರಕರಿಯಂ ಬಳಸಿ ಬರುತ್ತುಂ (ಶಾಂತಿಪು. ೧೦–೧೯). [ಅಮರ್ತ್ಯ + ಸಮಿತಿ]

**ಅಮರಸಿಂಧು** (ನಾ). ದೇವನದಿ; ಗಂಗಾನದಿ. 'ಅಮರಸಿಂಧೂದ್ಭವ' ಪರಾ. [ಅಮರ್ತ್ಯ + ಸಿಂಧು]

**ಅಮರಸಿಂಧೂದ್ಭವ** (ನಾ). ಗಂಗಾನದಿಯಲ್ಲಿ ಹುಟ್ಟಿದವನು; ಭೀಷ್ಮ: ಅತ್ಯುನ್ನತಿಯೊಳಮರಸಿಂಧೂದ್ಭವಂ (ಪಂಪಭಾ. ೧೪–೬೪).
[ಅಮರ್ತ್ಯ + ಸಿಂಧು + ಉದ್ಭವ]

**ಅಮರಸೀಮೆ** (ನಾ). ಅಮರ್ತ್ಯರ ಉದ್ದೇಶವಾಗಿ ಕೊಟ್ಟಂಥ ಒಂದು ಪ್ರದೇಶ: ಸುಳ್ಯ ಅಮರಸೀಮೆಯು ಕೊಡಗಿನ ದೊರೆಗಳದಾಗಿ ಕಾಣುತ್ತದೆ (ರಾಜೇಂದ್ರ. ೧೧೩). [ಅಮರ್ತ್ಯ + ಸೀಮೆ]

**ಅಮರಸುಳ್ಯ** (ನಾ). ಅಮರ್ತ್ಯರ ಉದ್ದೇಶವಾಗಿ ಕೊಟ್ಟಂಥ ಒಂದು ಗ್ರಾಮದ ಹೆಸರು: ಈ ಕೊಡಗಿನ ಘಟ್ಟದ ಸರಹದ್ದಿಗೆ ಮುಟ್ಟಿ ಇರುವಂತಹ ಕೆಲವು ಮಾಗಣೆಗಳಿಂದ ಕೆಲವು ಗ್ರಾಮುಗಳನ್ನು ವಿಂಗಡಿಸಿ, ದೊಡ್ಡ ವೀರಪ್ಪ ಒಡೆಯರಿಗೆ ಹಾಲು ಬೆಣ್ಣೆಗೆ ಎಂಬುದಾಗಿ ಅದಕ್ಕೆ – ಅಮೃತ ಉದ್ದಿಶ್ಯವಾಗಿ ಕೊಟ್ಟಂಥಾದ್ದು, ಇದರ ಹೆಸರು ಅಮರಸುಳ್ಯ ಎಂಬುದಾಗಿ ಸೋಮಶೇಖರನಾಯಕರು ನೂತನವಾಗಿ ಹೆಸರುಯಿಟ್ಟರು (ರಾಜೇಂದ್ರ. ೧೩). [ಅಮರ್ತ್ಯ + ಸುಳ್ಯ]

**ಅಮರಸ್ತ್ರೀ** (ನಾ). ದೇವರರಮಣಿ; ಅಪ್ಸರೆ: ಅಮರಸ್ತ್ರೀ ನಿಚಯಂ ವಿಚಿತ್ರಲತೆಯಂ ಭತ್ರಾಳಿ ಭೂಜಂಗಳಂ . . . ಪೋಲೆ (ಪುಷ್ಪಪು. ೧೪–೪೫).
[ಅಮರ್ತ್ಯ + ಸ್ತ್ರೀ]

**ಅಮರಾಚಲ** (ನಾ). = ಅಮರಗಿರಿ: ಹಸುಳೆಗಮರಾಚಲದ ಹೊಱಿಸೈರಿಸುವುದೇ (ಕುವ್ಯಾಭೀ. ೩–೬೪). [ಅಮರ್ತ್ಯ + ಅಚಲ]

**ಅಮರಾಧ್ವ** (ನಾ). ದೇವತೆಗಳ ಮಾರ್ಗ; ಆಕಾಶ: ರಮಣೀಯವಾದುವಮರಾಧ್ವದೊಳೆಲ್ಲೆಡೆಯಲ್ಲಿ ತಾರೆಗಳ್ (ರಾಜಶೇ. ೧೧–೪೧).
[ಅಮರ್ತ್ಯ + ಅಧ್ವ]

**ಅಮರಾಪಗೆ** (ನಾ). = ಅಮರಗಂಗೆ: ಮುಡಿಯೊಳಗನುರಾಪಗೆಯ ತೆಳೆದು ತೊಡೆಯೆಡೆಯೊಳಗಚಲಸುತೆಯನಾಂತು (ತ್ರಿಭುತಿ. ೧–೩).
[ಅಮರ್ತ್ಯ + ಆಪಗೆ]

**ಅಮರಾಯಿ** (ನಾ). ೧. ಸರ್ಕಾರದ ಜಮೀನಿನಲ್ಲಿರುವ ಮಾವಿನ ಫಸಲಿನಿಂದ ಸರ್ಕಾರಕ್ಕೆ ಬರುವ ಆದಾಯ. ೨. ಸರ್ಕಾರದ ಜಮೀನಿನಲ್ಲಿ ಬೆಳೆದ ಹುಣಿಸೆ, ಹೊಂಗೆ, ಸೀಗೆ ಮುಂತಾದ ಫಸಲುಗಳಿಂದ ಸರ್ಕಾರಕ್ಕೆ ಬರುವ ಆದಾಯ (ಮೈಗೆಜೆ. IV, ೭೬೨). ೩. ಮಾವಿನ ತೋಪು.
[← ಹಿಂ. ಮರಾ. ಅಮುರಾಈ, ಅಮರಾಈ. / ಸಂ. ಆಮ್ರರಾಜೀ]

**ಅಮರಾರಿ** (ನಾ). = ಅಮರವೈರಿ: ಒದಱಿದವಮರಾರಿಯ ಬಲು ಬಲದೊಳಗದುಭುತವೆನೆ ಕಹಳೆಗಳು (ತ್ರಿಪುಸಾಂ. ೧೪೧). [ಅಮರ್ತ್ಯ + ಅರಿ$_6$]

**ಅಮರಾಲಯ** (ನಾ). ೧. ಸ್ವರ್ಗ. ೨. ದೇವಾಲಯ; ದೇವಸ್ಥಾನ: ತುಱುಗಿದ ನಂದನಂ ಪರಿವ ಕಾಲ್ವೆ . . . ಸಂದಣಿವೆತ್ತ ಜನಂ ವಿಳಾಸದಿಂ ಮೆಱೆವಮರಾಲಯಂ (ಎಕ. V, ಅರಸೀ. ೩೪–೨೨ ; 1171); ವಿಷ್ಣುಭೂಕಾಂತಂ ಸ್ಫುರತ್ಕಾಂತಿ ಪ್ರೋಜ್ವಳಿತಾಮರಾಲಯತಟಾಕ ಶ್ರೇಣಿಯಂ ಮಾಡಿದಂ (ಎಕ. V, ಅರಸೀ. ೧೨೭–೧೨ ; 1185). [ಅಮರ್ತ್ಯ + ಆಲಯ]

**ಅಮರಾವತಿ** (ನಾ). ಇಂದ್ರನ ನಗರ: "ಇಂದ್ರನ ಪಟ್ಟಣಮಂ ಅಮರಾವತಿ (ನಗರೀ) ಯೆಂಬುದು" (ಹಲಾಯು. ೧೦–೫೫).
[ಸಂ. ಅಮರಾವತೀ]

**ಅಮರಿ$_1$** (ನಾ). ನೆಲಾವರಿಕೆ ಗಿಡ; ನೆಲತಂಗಡಿ ಗಿಡ: ಏಪಡೆವಾತಮರಿಯುತಂ ಜೀಪಾಳಮನಿತ್ತೊಡಲ್ತೆ ನಸ್ಯಾಂಜನದೊಳ್ . . . ಕೋಟೆವಾವಾಪತ್ಕರಮೆನಿಸಿದುಗ್ರ ವಿಷಮುದು ಕಿಡುಗುಂ (ಖಮದ. ೧೦–೬೧). [?]

**ಅಮರಿ$_2$** (ನಾ). = ಅಮರಸ್ತ್ರೀ: ಬಗೆಯೊಳ್ ನಾಟುವಿನಮಮರಿ ಸಂಸ್ಕೃತಿ ನಾಟಕಮುಮನೆನಗೆ ನೆಱೆಯೆ ತೋಱಿದಳೀಗಳ್ (ಆದಿಪು. ೯–೪೫); ಪಲರುಂ ವಿದ್ಯಾಧರಸ್ತ್ರೀಯರುಮಮರಿಯರುಂ ಮಾನವಸ್ತ್ರೀಯರುಂ ತಮ್ಮೊಲವಿಂ ಮೇಲ್ವಾಯ್ದೊಡಂ (ಪಂರಾಮಾ. ೯–೮೩). [ಸಂ. ಅಮರೀ]

**ಅಮರಿಕೆ** 'ಅಮರ್ಕೆ' ನೋ.

**ಅಮರಿಚು** 'ಅಮರ್ಚು' ನೋ.

**ಅಮರಿಸು** (ಕ್ರಿ). ೧. ಇರಿಸು; ಕೂಡಿಸು; ಸೇರಿಸು; ತುಂಬು: ಶಶಿಕಾಂತದೊರಲೊಳಕ್ಕಿಯನೊಸೆದಮರಿಸಿ ನೋಡಿ (ಉದ್ಭಟ. ೨–೯೨); ವೀಣೆಯ ಮೊಲೆಯ ಮೇಲಮರಿಸಿ ಪಿಡಿದು ಪ್ರವೀಣೆಯೊರ್ವಳು ಸರವೆತ್ತಿ (ಚಂಪ್ರಸಾಂ. ೯–೨೪); ಶಿರವನಮರಿಸುತ್ತ . . . ಅಸುವಂ ಪಡೆದು ಮೆರೆದನು (ಗುರುಚಾ. ೧೦–೪೪). ೨. ಉಂಟುಮಾಡು; ಒದಗಿಸು: ಭಕ್ತರ ಹೊರೆಯಲ್ಕೆತಂದ ನಮಗೆ ತಾ ಲೇಸನಮರಿಸಬಂದನೆ (ಲಕ್ಷ್ಮಭಾ. ಉದ್ಯೋಗ. ೩–೧೭); ಪಾಂಡ್ಯಭೂವರನಾತ್ಮರಾಜ್ಯಮಂ ಚೊಕ್ಕನಾಥೇಶ್ವರನ ಪರಮ ವಿನಿಯೋಗಕಮರಿಸಿ ಕೊಟ್ಟು ವಿಭವದಿಂ ಕೈಲಾಸಮಂ ಪೊಕ್ಕನು (ಚಬಪು. ೫೫–೨೩). ೩. ಜೋಡಿಸು; ಸಿಕ್ಕಿಸು: ಹರಿವ ಹಾವನು ಕೊರಲಿಗಮರಿಸಿ ಕುಣಿಯಬಹುದು ಉರಿವ ಕಿಚ್ಚನು ಪೊಕ್ಕು ಉಳಿಯಬಹುದು(ಲಕ್ಷ್ಮಭಾ. ಉದ್ಯೋಗ. ೩–೧೭). ೪. ಭದ್ರವಾಗಿ ಹಿಡಿ: ಎಡಗೈಯೊಳಮರಿಸಿ ವೀಣೆಯನಾಂತು ಮೇಗಡೆ ಮೆಟ್ಟಿನೊಳು ಬೆರಳಾಡೆ (ಭರಚ. ೧೧–೩); ಚಮ್ಮಟಿಗೆಯಲಿ ಮುಳ್ಳನುವೊತ್ತಿ ಅಮರಿಸಿದಂತೆ ಮೊನೆಗಾವಿಂದ ವಸ್ತುವನು ಮತ್ತೆ ಹಿಡಿದಂದದಲಿ (ಜ್ಞಾನಸಿಂ. ೧೮–೮೩). ೫. ಹತ್ತಿಸು; ಆರೋಪಿಸು: ಒಂದಜ ಬಗೆಯನೊಂದರ್ಕ್ಕಮರಿಸಿ

ಪೇೞೆ ಸಮಾಧಿಯೆನಿಪುದು (ಅಪ್ರತಿ. ೧೬–೬). ೬. ಸಿದ್ಧಪಡಿಸು; ಸಜ್ಜುಗೊಳಿಸು: ಭೀಷ್ಮನು ಸರ್ವತೋಭದ್ರವ್ಯೂಹವನ್ನು ಅಮರಿಸಿದನು (ಕೃವಾಭೀ. ೧೫೫); ಸೈನ್ಯದ ಉಗ್ರಾಣವನ್ನು ಅಮರಿಸಿ ತುಂಬಿಕೊಳ್ಳುತ್ತ (ಮಂತ್ರಶ. ೬೯–೭). ೭. ಆಕ್ಷೇಪಿಸು; ಗದರಿಸಿ ಮಾತನಾಡು; ಬೈಯು: ಆತನ ನಡತೆ ಸರಿಯಾಗಿಲ್ಲದ್ದರಿಂದ ಚೆನ್ನಾಗಿ ಅಮರಿಸಿ ಬುದ್ಧಿ ಹೇಳಿದೆ (ರೂಢಿ). ೮. ಹೊಡೆ; ಪ್ರಹರಿಸು: ಬೆನ್ನ ಮೇಲೆ ನಾಲ್ಕು ಅಮರಿಸು (ರೂಢಿ). ೯. ಅನಿರೀಕ್ಷಿತವಾಗಿ ಕೊಡು: ನಿನ್ನೆ ಯಾವನೋ ಒಬ್ಬ ಹಸ್ತಕುಶಲಿ ನನಗೆ ಮತ್ತೊಂದು ಖೊಟ್ಟಿನಾಣ್ಯ ಅಮರಿಸಿ ಹೋದ (ಗಾಳಿಪ. ೧೪೮). [ಅಮರು (< ಅಮರ್) + -ಇಸು$_3$]

**ಅಮರು** 'ಅಮರ್' ನೋ.

**ಅಮರುಗಾರ** 'ಅಮರಗಾರ' ನೋ.

**ಅಮರೆ** 'ಅವರೆ$_1$' ನೋ.

**ಅಮರೆಯನಾಯಕ** 'ಅಮರನಾಯಕ$_1$' ನೋ.

**ಅಮರೇಂದ್ರ** (ನಾ). ೧. ದೇವೇಂದ್ರ; ಇಂದ್ರ: ತನ್ನಿಂದ್ರಲೋಕಕ್ಕಮರೇಂದ್ರಂ ಪೋದನಾಗಳ್ (ಆದಿಪು. ೭–೧೨೬). ೨. ದೇವತೆಗಳಲ್ಲಿ ಪ್ರಮುಖ: ಚತುರ್ವಿಧಾಮರೇಂದ್ರಾಂಬುಧಿ ಕಣ್ಗೊಳಿಸಿದುದು (ಶಾಂತಿಪು. ೧೦–೩). [ಅಮರ$_3$ + ಇಂದ್ರ]

**ಅಮರೇಂದ್ರತನಯ** (ನಾ). ೧. ದೇವೇಂದ್ರನ ಮಗ. ೨. ಜಯಂತ. ೩. ಅರ್ಜುನ: ಇಟ್ಟಣಿಸಿತಮರೇಂದ್ರತನಯನನಿದಿರ್ಗೊಂಬ ಬಟ್ಟೆಯೊಳ್ ನಾರೀಸಮೂಹಂ (ಜೈಮಿಭಾ. ೩೩–೨೨). ೪. ವಾಲಿ. [ಅಮರೇಂದ್ರ + ತನಯ]

**ಅಮರೇಜ್ಯ** (ನಾ). = ಅಮರಗುರು: ಅಮರೇಜ್ಯಂ . . . ಪೂಜ್ಯನಕ್ಕುಂ (ಜಾತತಿ. ೧೦–೧೦). [ಅಮರ$_3$ + ಇಜ್ಯ]

**ಅಮರೇಶ** (ನಾ). ೧. ದೇವೇಂದ್ರ: ಪ್ರಥಮಲೋಕಾಮರೇಶನುಮೀಶಾನೇಶನುಂ ಚಂಚತ್ಪಂಚರತ್ನಗೋಶೀರ್ಷಚಂದನ ನಿರ್ಮಲಾಕ್ಷತಾರ್ಘ್ಯಮನೆತ್ತಿದಿಂ ಬೞಿಯಿಂ (ಶಾಂತಿಪು. ೧೦–೩೬ ವ). ೨. ಶಿವ. ೩. ವಿಷ್ಣು. [ಅಮರ$_3$ + ಈಶ]

**ಅಮರೋರ್ವೀಜ** (ನಾ). = ಅಮರಕುಜ: ಮಧುರೋಕ್ತಿಯೊಳಕ್ಷೂಣನ ಬಾಣನ ಬುಧತತಿಗಮರೋರ್ವೀಜನ ಭೋಜನ (ಉದ್ಭದೇ. ೧–೧೬). [ಅಮರ$_3$ + ಉರ್ವೀಜ]

**ಅಮರ್ಕೆ, ಅಮರಿಕೆ** (ನಾ). ೧. ಭದ್ರವಾಗಿ ಸೇರಿರುವುದು; ಬೆಸುಗೆ; ಸೇರುವೆ; ಕೂಟ: ಬಿಗಿದಮರ್ದಪ್ಪುವಪ್ಪುಗಳಮರ್ಕೆಗಳ್ (ಆದಿಪು. ೧೨–೩೮); ಚಾಗದ ತೋರ್ಕೆಗಂ ನೆಗೞ್ದ ಬೀರದಳುರ್ಕೆಗಮೊಳ್ಪನಪ್ಪುದುದ್ಯೋಗದಮರ್ಕೆಗಂ ಸಿರಿಯ ಸಾರ್ಕೆಗಂ (ಶಾಂತಿಪು. ೧–೬೮); ರಸದೊಳಮರ್ಕೆ ಬಿನ್ನಣದೊಳೊಟ್ಟಜೆ ಮಾತಿನ ರೀತಿಯೊಳ್ ಚಲಂ . . . ಎಸೆದಿರೆ (ಸುಕುಮಾ. ೧–೪೪); ಸಾಹಸದ ನಿಮಿರ್ಕೆ ವರ್ಧಿಸುವ ರಾಜ್ಯದಮರ್ಕೆ ಸುಖಪ್ರಪಂಚಮುಂ ಪಸರಿಪ ತೋರ್ಕೆ . . . ಇಳಾಸ್ತುತಿವೆತ್ತುದು ವೀರಪಾಂಡ್ಯನ (ಎಕ. XI, ದಾವಣ. ೮೫–೨೧; 1143). ೨. ಹೊಂದಿಕೆ; ಜೋಡಣೆ: ವಸುಂಧರೆಯೊಳೊಪ್ಪುವ ನೆಲ್ಲ ಪುಲ್ಲನಮರ್ಕೆಯಿಂ ಕಿಱುವ [ವು]ಳ್ಳಿಯಂ ತರಿಸಿ ಮೆಲ್ಲನೆ ತೀವಿದರ್ ಗುಹೆಯಲ್ಲಿ (ಧರ್ಮಾಮೃ. ೯–೧೭೧); ಸುರನದೀತನಯನೆಂದಂ ಅಮ್ಮ ಚಲದಮರ್ಕೆಯುಂ ದೋರ್ವಲದಳುರ್ಕೆಯುಂ ಅಂತುಟೆ ವಲಂ (ನೇಮಿಪು. ೧೦–೬ ವ). **ಅಮರಿಕೆ**: ೩. ಅನುಕೂಲವಾಗಿರುವುದು; ಹೊಂದುವಂತಹುದು: ಇದೆಕೊ ಗದೆ ಬಿಲ್ಲಿದೆಕೊ ತರುಮರನದೆ ಸಮೀಪದೊಳಾವುದಮರಿಕೆ ಮದನಪಿತ ನಿನಗೆಂದು ಗದೆಯನು ಬೀಸಿದನು ಭೀಮ (ಕೋಗಯು. ೨೫–೭). [ಅಮರ್ + -ಕೆ]

**ಅಮರ್ಕೆಗಿಡು** (ಕ್ರಿ). ಹೊಂದಿಕೆ ಬಿಟ್ಟುಹೋಗು; ಸೇರುವೆ ತಪ್ಪಿಹೋಗು: ಬಿಗಿದಮರ್ದಪ್ಪುವಪ್ಪುಗಳಮರ್ಕೆಗಳೊಯ್ಯನೆ ಸುಯ್ವುಸುಯ್ಯುಗಾಳಿಗಳೊಳಮರ್ಕೆಗೆಟ್ಟೊಡಲವೋಡಿದುದೆಂದಗಿವೆಂ (ಆದಿಪು. ೧೨–೩೮). [ಅಮರ್ಕೆ + ಕಿಡು (< ಕೆಡು)]

**ಅಮರ್ಕೆವಡೆ** (ಕ್ರಿ). ಹೊಂದಿಕೆಯಾಗು; ಸರಿಯಾಗಿ ಸೇರು: ಎಳದೆಂಗಿನೆಳೆಯೆಲೆಯನಮರ್ಕೆವಡೆಯೆ ಪೆಣೆದು . . . ಜವಳಿವಡಿಗಳೊಳಂ (ಚಂದ್ರಪು. ೭–೯೫ ವ); ಬಳಸಿ ಪೊಳೆವ ಮಣಿವಳಯಮಾಳೆಯಿಂ ಸುತ್ತುವೆತ್ತು ಹಸ್ತನ್ಯಸ್ತಮಂಗಳಮಾತುಳುಂಗದೊಳಮರ್ಕೆವಡೆದು (ವರ್ಧಪು. ೭–೯ ವ). [ಅಮರ್ಕೆ + ಪಡೆ$_1$]

**ಅಮರ್ಕೆವೆಱು** (ಕ್ರಿ). ೧. ಸೇರುವೆಯನ್ನು ಹೊಂದು; ಕೂಡು; ಎಣೆಯಾಗು: ತಂದೆಯ ರೂಪೆ ತಂದೆಯ ವಿಳಾಸಮೆ ತಂದೆಯ ಚೆಲ್ವೆ . . . ತನ್ನೊಳಮರ್ಕೆವೆತ್ತುದು (ಆದಿಪು. ೮–೪೩). ೨. ಹೊಂದಿಕೆಯಾಗು: ನೊಸಲಲ್ಲಿ ಶೋಭನಂಬೆತ್ತಿರೆ ಚಾರುಚಂದನದ ಬೊಟ್ಟು ದುಕೂಲಮುಮರ್ಕೆವೆತ್ತು ಚೆಲ್ವೆತ್ತಿರೆ (ಧರ್ಮಾಮೃ. ೪–೧೩೭). [ಅಮರ್ಕೆ + ಪೆಱು]

**ಅಮರ್ಚಿಸು** (ಕ್ರಿ). ೧. ಅಳವಡುವಂತೆ ಮಾಡು; ಸೇರಿಸು: ಕಳಶಕನ್ನಡಿಯ ತೋರಣಂಗಳನಲ್ಲಿಗಲ್ಲಿಗಪಾರರಚನೆಗಳಿಂದೆ ತತ್ತದ್ವಾರಶಿಖರಂಗಳೊಳಮರ್ಚಿಸಿ ನಗರಿಯಗಲದಲಿ (ಬಸಪು. ೫–೧೨); ಜವಳಿಗದವಂ ದ್ವಾರವಟ್ಟದ ಹವಣಿಗಾ ಬಾಗಿಲೊಳಮರ್ಚಿಸಿ (ಬಸಪು. ೧೬–೯). ೨. ಜೋಡಿಸು; ಅಳವಡಿಸು: ಪೊಸದಂತದೋಲೆಗಳ ಕಿವಿಗಳೊಳಮರ್ಚಿಸಿ (ಚೆಬಪು. ೫೩–೨೩). [ಅಮರ್ಚು + -ಇಸು$_3$]

**ಅಮರ್ಚು, ಅಮಚು, ಅಮರಿಚು, ಅಮುಚು, ಅವಚು$_1$, ಅವುಚು** (ಕ್ರಿ). ೧. ಇರಿಸು; ಕೂಡಿಸು; ಸೇರಿಸು: "ಅಮರ್ಚು – ಸಂಘಟೀಕರಣೇ" (ಶಮಧಾ); ಅಂತತ್ತಪಱಿದ ತಲೆಯನದಂ ತಂದಟ್ಟೆಯೊಳಮರ್ಚಿ ಸುರಗಣಿಕೆಯುರಭ್ರಾಂತರದೊಳೆ ತಮ್ಮ ವಿಮಾನಾಂತರದೊಳಗಿಟ್ಟು ಕರ್ಣತನಯನನುಯ್ದರ್ (ಪಂಪಭಾ. ೧೨–೧೬೯); ನಡೆಸಲ್ನಿಲ್ವಿಡು ಸಾರ್ಚಮರ್ಚು ಮರನಂ ಬಂದೇಱಿ ಬಿಲ್ವೀಸುತಂ ಜಡಿ (ಕಾದಂಪೂ. ೧೫೯); ಶರ್ವನೊಡನಕ್ಷಮನಾಡಿ ಭವಂಗಮರ್ಚಿ ಚಕ್ಷುವನಭವಂಗೆ ಪಾಲೆಱಿದು (ರಾಜಶೇ. ೧–೧೫); ಒರ್ಮೆ ಅಮರ್ಚುಗುಂ ಮತ್ತಮೊರ್ಮೆ ಅಗಲ್ಚುಗುಂ ಮೈಸೆ (ರಾಮಾಶ್ವ. ೧೧–೨೫). ೨. ಉಂಟುಮಾಡು; ಒದಗಿಸು: ಕ್ರಮವೃದ್ಧಿಕ(ವರ್ಧಿತ)ತಗರಾಗುರು ತಮಾಳ ಪತ್ರತ್ವಚಂಗಳಿಂ ಧೂಪಿಸೆ ಪುಷ್ಪಮನಿಂತು ಜಾತಿಗಂಧಮುಮಮರ್ಚುಗುಂ ಕ್ರಮದೆ ಮಲ್ಲಿಕಾಸೌರಭಮಂ (ಲೋಕೋಪ. ೭–೪೫); ಶೂಲಧರ . . . ಚೋಳರಾಯಂ ನಿಮಗೆ ಪರಿಯಾಣಮನಮರ್ಚುವನು (ಬಸಪು. ೯–೪೦); ಅಮರ್ಚುತ್ತಂಬುರುಟ್ಟೇಱಮಂ . . . ಶರದಂಭೋಜಿನಿ ಮಾಡಿದಳ್ ದ್ವಿಜವರಂಗಾತಿಥ್ಯಸತ್ಕಾರಮಂ (ರಾಜಶೇ. ೬–೧೦). ೩. ತೊಡಿಸು; ಮುಡಿಸು: ಮುಯ್ವಿನೊಳಮರ್ಚುವ ಮೃಣಾಳದ ತೋಳ್ವಲಯಂಗಳೊಳಂ (ಕಾದಂಉ. ೭೭೫); ಮಂಜುಕುಸುಮವನಮರ್ಚಿದ ಮುಡಿಯಿಂ ನಱುಗಂಪಂ ತಣಿದುಂಡು ಕೊನೆಯುತುಂ ಪಱಮೆವಱಿಗಳಾಡುತಿರೆ (ಉದ್ಭಟ. ೧–೫೧); ಇಟ್ಟಳವಾದ ಪಾಯವಟ್ಟಂಗಳನಮರ್ಚಿಯುಂ (ಶಾಂತೀಶ್ವ. ೫–೧೨೬ ವ); ಮುಖಕಮಳಕ್ಕೆಳೆವೆಣ್ಗಳ ದಿಟ್ಟಿ ತಾಗದಂತೆ ರಕ್ಕೆಗಿಡುವವೋಲ್ ವಜ್ರಮಯಮಕುಟಮನಮರ್ಚಿಯುಂ (ರಾಜಶೇ. ೧೩–೫೯ ವ). ೪. ಲೇಪಿಸು; ಸವರು; ಅಂಟಿಸು: ಓರೊರ್ಮೆ ಕುಳಿರ್ವ ಕಪ್ಪುರದ ಪಚ್ಚಮನಮರ್ಚಿ ಮನ್ಮಥಜ್ವಲನ ತಾಪದಿಂ ಮೆಯ್ಮಿಗೆ ಪುಗುಳ್ದುದೆಂಬ ಸಂಕೆಯಂ ಕೆಳದಿಯರ್ಗೆ ಬಳೆಯಿಸುವಳ್ (ವರ್ಧಪು. ೪–೫೮ ವ); ಅಲರಿನುದಿರ್ದ ದೂಳಿಗಳನಮರ್ಚಿಯುಂ (ಕಬ್ಬಿಕಾ. ೫೪). ೫. ಅಪ್ಪು; ಆಲಿಂಗಿಸು

ತಬ್ಬಿಕೊಳ್ಳು : ತೆಗೆದುರದೊಳಮರ್ಚಿ ಮುಖೇಂದುಗಾಕೆ ಮಱಿಮಾಡಿ ಪಿಡಿದ ಲೀಲಾಬ್ಜಮನೊಯ್ಯನೆ ಕೆಲಕೆ ನೂಂಕಿದಂ (ವರ್ಧಪು. ೫–೪೬). **೬.** ಕೂಡು ; ಸೇರು : ಮನೋಜಸುಖಾರ್ಣವಮಧ್ಯದೊಳ್ ಮನಂ ಗುಡುತುಮಮರ್ಚುತೀಸುತೆ ಧುಡುಮ್ಮಿಱಿಯುತ್ತುಮೆ ಪಾಂಥನೊಪ್ಪಿದಂ (ಗಿರಿಕ. ೨–೧೯). **೭.** ಮಾಡು ; ನಡೆಸು ; ಏರ್ಪಡಿಸು : ಬಲಮೆರಡಾಗಿ ಪೆರ್ಮೆವಡೆದೊಡ್ಡಿ ವಿಳಾಸದೆ ನಿಂದು ಬೊಬ್ಬೆಗೊಟ್ಟುಲಿದು ವಿನೋದಯುದ್ಧಮನಮರ್ಚಲೊಡರ್ಚಿ (ರಾಜಶೇ. ೧೩–೮೩). **೮.** ಹೊಂದು ; ಪಡೆ : ನೆಗಳೆ ಜೊನ್ನದವೋಲ್ ಪೊಸಮುಂಜು ವಾರ್ಧಿ ಪೆರ್ಚುಗೆಯನಮರ್ಚೆ ತಾಳ್ದನುದಿತೋದಯಮಂ ಹಿಮಕಾಲಚಂದ್ರಮಂ (ರಾಜಶೇ. ೯–೪). **೯.** ಜೋಡಿಸು; ಸಿಕ್ಕಿಸು : ಸೋಮವಂಶಸಂಭವನೆಂಬಕ್ಕರಮಂ ಬರೆದು ಮಂದಸಿನ ಮರದೊಳಮರ್ಚಿ ಜಗುನೆಯೊಳ್ ಬಿಟ್ಟು ಬರೆ (ನೇಮಿಪು. ೩–೪೦ ವ) ; ನವೋತ್ಪಲ ಕರ್ಣಪೂರಮಂಜರಿ ನಮಿತಾಸ್ಯದೊಳ್ ಜಗುೞೆ ಮೆಲ್ಲನಮರ್ಚಿ (ಅನಂಪು. ೩–೮೩). **೧೦.** ಭದ್ರವಾಗಿ ಹಿಡಿ : ಅಲಗನುರ್ಚಿ ಕರದೊಳಮರ್ಚಿ ತೊಲಂಗಿ ನಿಂದಿರಲು (ಬಸಪು. ೩೩–೧೪). **ಅಮುಚು : ೧೧.** ಒತ್ತು ; ಹಿಸುಕು (ಕ್ರಿ). **ಅಮರಿಚು : ೨.** ಕರುಮಾಡ ಗಡಣದಗ್ರದ ರತ್ನಕಲಶಗಳ ಕಿರಣದಿಂದಿಂದ್ರಧನುವಂ ನಭದೊಳಮರಿಚುವ ತಿರುವತ್ತಿಯೂರು ಶಿವಧರ್ಮ ಚಿತ್ರದ ತೇರು (ಸೌಂದಪು. ೧೨–೨೮) ; ಮುದಿವೋತನ ತಲೆಯೇ ವಿಶೇಷದ ತಲೆಯದಾಗಲಮರಿಚಿ ದಕ್ಷಗಸುವಿತ್ತನಾದೇವನು (ವೀಶೈಪು. ೩–೪–೫೭). **ಅಮುಚು: ೧.** (ಕ್ರಿ). **ಅವಚು$_1$ : ೫.** ಮಾಧವನ ಮೆಲ್ಲಡಿಗಳನು ಹೃದಯದೊಳವಚಿ ಕಂಗಳು ತುಂಬಿ ದೇವನ ಮೂರ್ತಿಯನು ಹಿಡಿದು (ಕುವ್ಯಾಭೀ. ೧೦–೪೦). **೧೦.** ಕಿಡಿಗಳನುಗುಳ್ವ ಪಂಚಲೋಹದ ಗುಂಡನೆಲೆಲೆ ಕಕ್ಕಸದ ಕಮ್ಮಱರು ನಿಡಿದಿಕ್ಕುಳುಗಳಿಂದವಚಿ ಪಿಡಿದು ತಂದು (ಸಿದ್ಧರಾ. ೭–೧೯) ; ಸಕಲ ಸಿದ್ಧಿಗಳನೀಕಕ್ಷದೊಳಗವಚುವಂತಕುಟಿಲಾತ್ಮಕ ನಂಬಿಯಣ್ಣಂ(ಸೌಂದಪು. ೫–೮೧). **೧೧.** ಕೊಂದು ತನ್ನುಂಗುಷ್ಠದಿಂದವಚಿ ಬಿಸುಡಲಾಗಿ (ಚಬಪು. ೫೫–೨೦). **೧೨.** ಆವರಿಸು ; ಮುತ್ತು : ಅವಚಿದುದು ಬಹುವಿಧದ ವಾದ್ಯಧ್ವನಿ ದಿಶಾಮುಖವ (ಕುವ್ಯಾಅ. ೨೦–೪೫) ; ಅವನಿಪನ ಮುಪ್ಪಿನಲಿ ಮುದುಗರವವಚಿತೀಬೆಯ ತಲೆಯ ಪಿತ್ತದ ಬವಣೆ ಬಲಿದುದು (ತೊರರಾ. ೨–೩–೧೨) ; ಅವಚಿದುದು ಕತ್ತಲೆ ದಿಗಂತದ ವಿವರವನು (ನಿಭಾಗ. ೧೦–೯೬–೧೪). **ಅವುಚು : ೧.** ಅವನಿಪತಿ ದುಗುಡದಲಿ ಮೋಱೆಯಲವುಚಿದನು ಕರತಳವ (ಕುವ್ಯಾದ್ರೋ. ೧–೪). **೧೦.** ಕಂಕುಳಲಿ ಅವುಚಿದನು ಕಪಿಯ (ತೊರರಾ. ೬–೨೭–೫೮) ; ಕಂಕುಳೊಳವುಚಿದ ಖಂಡೆಯ ಪುಸ್ತಕ ಸಂಕುಳವೆರಸಿ ಸೇವಕರು (ಭರಚ. ೭೧–೭).

**ಅಮರ್ಚಿಕೊಳ್, ಅವಚಿಕೊಳ್, ಅವುಚಿಕೊಳ್ = ೧.** ಹೊಂದಿಸಿಕೊಳ್ಳು ; ಸೇರಿಸಿಕೊಳ್ಳು; ಇಟ್ಟುಕೊಳ್ಳು : ಪಂಚಬಾಣನುಂ ಕೃಪಾಣಖೇಟಕಮುಮನಮರ್ಚಿಕೊಂಡು ಚಂಡವೇಗದಿ ನಿದಿರ್ಚೆ (ನೇಮಿಪು. ೭–೧೫೪ ವ) ; ವಜ್ರದಂಡಮನುರದೊಳಮರ್ಚಿಕೊಂಡು ಕಿಱ್ತು ಬಾಳ್ವೆರಸು ಬರ್ಪಾಕೆಯಂ ದೂರದೊಳೆ ಕಂಡು ಬೆಗಡುಗೊಂಡು (ಧರ್ಮಾಮೃ. ೩–೪೯ ವ) ; ಕೆಡೆದ ರವಿಜನ ಕುಂಭಕರ್ಣನು ಹಿಡಿದು ಕಂಕುಳೊಳವುಚಿಕೊಂಡನು (ಕೌಶಿರಾ. ೨೫–೨೫). **೨.** ಅಡಗಿಸಿಕೊಳ್ಳು : ಈ ಹುಡುಗನು ಯಾರೂ ಕಾಣದಂತೆ ಮೇಲುಗಡೆಯಿಂದಲೇ ಒಂದುಚಿಪ್ಪು ಹಣ್ಣನ್ನು ತೆಗೆದು ಅವುಚಿಕೊಂಡನು (ನೀತಿಚಿಂ. X–೨೫) ; ಅವಳು ಬಲದೋಳಿನಿಂದ ತನ್ನ ಹೊಟ್ಟೆಗೊಂದು ಕೋಳಿಯನ್ನು ಬಲವಾಗಿ ಅವಚಿಕೊಂಡಿದ್ದಳು (ಪುನರು. ೨೭೫).

[ದೇ॥ **ತಮಿ.** ಅಮುತ್ತು; **ತುಳು.** ಅಮುರ್ ; **ತೆಲು.** ಅಮರಿಚು, ಅಮರಿಂಚು, ಅಮರ್ಚು]

**ಅಮರ್ತ್ಯ** (ನಾ). ದೇವತೆ: ನಾಗಾರಿಕೇತು ಕಾಳಿಯನಾಗಂಗೆಱಗಿದನಮರ್ತ್ಯರೀಕ್ಷಿಸೆ ನಭದೊಳ್ (ಜಗವಿ. ೩–೮೬). [**ಸಂ.**]

**ಅಮರ್ತ್ಯಚಿತ್ರಕ** (ನಾ). ದೇವತೆಗಳ ಚಿತ್ರಕಾರ; ದೇವಶಿಲ್ಪಿ : ಮಯ ಮಾಂಡವ್ಯ ವಿಶ್ವಕರ್ಮರೆಂಬಮರ್ತ್ಯಚಿತ್ರಕರ್ ಬರೆದ ಚಿತ್ರಂಗಳೊಳಂ (ಚಂದ್ರಪು. ೧೫–೭೦ ವ). [ಅಮರ್ತ್ಯ + ಚಿತ್ರಕ]

**ಅಮರ್ತ್ಯದೀಪ್ತಿ** (ನಾ). ದೈವೀತೇಜಸ್ಸು : ನಿಕುಂಭಿಲಾಯಾಗಮಂ ರಚಿಸಿದನತೀಂದ್ರಿಯಪಥದೊಳನ್ನತತ್ವಕೆ ಅತೀತಮಿರ್ಪುನ್ನತಾಮರ್ತ[ರ್ತ್ಯ] ದೀಪ್ತಿಯ ಭುವರ್ಲೋಕದಲಿ (ಶ್ರೀರಾಮಾ. ೭೧೮–೨೫೫). [ಅಮರ್ತ್ಯ + ದೀಪ್ತಿ]

**ಅಮರ್ತ್ಯನಾಯಕ** (ನಾ). ದೇವತೆಗಳ ಒಡೆಯ ; ಇಂದ್ರ : ಅಮರ್ತ್ಯನಾಯಕಕೃತ ಸ್ವರ್ಗಾವತಾರೋತ್ಸವಂ (ಪುಷ್ಪಪು. ೯–೧೧೩). [ಅಮರ್ತ್ಯ + ನಾಯಕ]

**ಅಮರ್ತ್ಯಭುವನ** (ನಾ). ದೇವಲೋಕ; ಸ್ವರ್ಗ : "ಸ್ವರ್, ಸ್ವರ್ಗ . . . ಅಮರ್ತ್ಯಭುವನಂ . . .—ಈ ೧೧ ದೇವಲೋಕದ ಪೆಸರ್" (ಹಲಾಯು. ೨–೩). [ಅಮರ್ತ್ಯ + ಭುವನ]

**ಅಮರ್ತ್ಯಮಾರ್ಗ** (ನಾ). ದೇವತೆಗಳ ಮಾರ್ಗ; ಆಕಾಶ : ಒರ್ಮೆಯೆ ಚಂದ್ರಮಂಡಲಾಂತರದೊಳೊರ್ವನಂದು ಪೊಱಮಟ್ಟಱಿತಂದನಮರ್ತ್ಯಮಾರ್ಗದಿಂ (ಕಾದಂಪೂ. ೯೩೬). [ಅಮರ್ತ್ಯ + ಮಾರ್ಗ]

**ಅಮರ್ತ್ಯಾಧ್ವ** (ನಾ). = ಅಮರ್ತ್ಯಮಾರ್ಗ : ಬಿಳ್ದತ್ತಮರ್ತ್ಯಾಧ್ವದಿಂ ಘನದಿವ್ಯಾಸ್ತ್ರನಿಕಾಯಂ (ವಿಷ್ಣುಪು. ೩–೧೭೯). [ಅಮರ್ತ್ಯ + ಅಧ್ವ]

**ಅಮರ್ದು,** ಅಮೃದು, ಅಮುರ್ದು, ಅಮುದು (ನಾ). **೧.** ಅಮೃತ ; ಸುಧೆ; ಪೀಯೂಷ : ಅಮರ್ದಿನ ದೋರೆಯಂತೆ ನುಡಿಯಿಂಪಮರ್ದಂತಳಿದಂತೆ ಸೋಂಕಿನಿಂಪಮರ್ದಿನ ಪೂರದಂತೆ ಪದೆದಿಂಪು (ಆದಿಪು. ೧೨–೨೮) ; ತಿರುಳ ಮಿಂಚಿಂದೊಪ್ಪಮಿಟ್ಟಂತಿರುಜ್ವಲಿಪಾಸ್ಯಂ ಪೊಸಮುತ್ತನಾಯ್ದಮರ್ದಿನೊಳ್ತೊಯ್ದಂತೆ ನೇರ್ಪಟ್ಟ ನಿರ್ಮಲ ದಂತಚ್ಛವಿ (ಅನಂಪು. ೨–೧೪) ; ಬಳಸಿದೋಲಗದೊಳಗೆ ಅಮರ್ದಿನ ಸರಿ ಸುರಿದುದೆನೆ ರಾಗರಸ ಪೊಂಪುಳಿವಡೆದುದು (ಸಾಳ್ವಭಾ. ೨೦–೨೮) ; ಕಿವಿಗಮರ್ದಾಗೆ ನಲ್ನುಡಿಯೊಡಂಬಡೆ . . . ಕೃತಿವೇೞ್ವುದು (ಶಬಶಂ. ೧–೧೦). **೨.** ಕ್ಷೀರ ; ಹಾಲು. 'ಅಮರ್ದುಗಡಲು' ಪರಾ. **ಅಮುದು : ೧.** ತನಗಮುರ್ದ್ದ ವಿರಲಮದೇಕೆ (ನಿಭಾಗ. ೮–೨೧–೧೮). **ಅಮುೞ್ದು : ೧.** ಅಮುೞ್ದಂ ಚನ್ದನಮಂ ಚಂದ್ರಮಯೂಖಮನೊಂದು ಮಾಡಿ ಮಾಡಿದನವನಂ ಕಮಲಭವಂ (ಎಇ. XII, ೨೮೧–೧೭೬ ; 1077). **ಅಮುದು : ೧.** ಆರತಿಯ ಕರ್ಪೂರ ಅಡಕೆ ಅಮುದು ಮುಂತಾದ ಉಪಚಾರಗಳು ನಂಮ ಸೇವೆಯಾಗಿ (ಸೌಇಇ. IX–ii, ೪೬೨–೫ ; 1467). **೩.** ದೇವರಿಗಿಡುವ ನೈವೇದ್ಯ : ಅರ್ಥಪರಪಮುದು ಕಱಿಯಮುದು ಚುರುಳಮುದು ಸಹ ವರ್ಷ ೧ಕೆ ಸಲುವುದು ಗ ೭೬ ವರಹ (ಎಕ. XIV, ಶ್ರೀರಂಗ. ೯೫–೨ ; 1535). [< ಸಂ. ಅಮೃತ]

**ಅಮರ್ದುಂಡ** (ನಾ). ಅಮೃತವನ್ನು ಊಟ ಮಾಡಿದವನು ; ದೇವತೆ.

**ಅಮರ್ದುಂಡರೊಡೆಯ** = ಇಂದ್ರ : ಅಮರ್ದುಂಡರೊಡೆಯ ನಿನ್ನಂ ಕುಱಿತಾಂ ತಪಮಾಚರಿಸಿದುದುಮಿಲ್ಲಂ (ಅದ್ಭುತ. ೬–೮). [ಅಮರ್ದು + ಉಣ್ + –ಅ$_7$]

**ಅಮರ್ದುಂಬ** (ನಾ). = ಅಮರ್ದುಂಡ : ಬಿದಿಯಮರ್ದುಂಬರೆಱಿಯ ದೆಸೆಯಾಣ್ಮರೆಲರ್ವಟ್ಟೆಗರು (ಭಾವಚಿಂ. ೯–೪೬). [ಅಮರ್ದು + ಉಣ್ + –ಅ$_7$]

**ಅಮರ್ದುಕಳೆ** (ನಾ). = ಅಮೃತಾಂಶು **೧.** 'ಅಮರ್ದುಕಳೆವೆಳಗ' ಪರಾ. [ಅಮರ್ದು + ಕಳೆ$_3$]

**ಅಮರ್ದುಕಳೆವೆಳಗ** (ನಾ). ಅಮೃತಕಿರಣ; ಚಂದ್ರ: "ಅಮರ್ದುಕಳೆವೆಳಗನೆನೆ ಚಾರುಚಂದ್ರಂ" (ಕಶರ. ೧೦).
[ಅಮರ್ದುಕಳೆ + ಬೆಳಗು$_2$ + –ಅ$_7$]

**ಅಮರ್ದುಕೆಯ್** (ನಾ). ಅಮೃತದ ಕಿರಣ: ಪೆಣ್ಣೊಸೊರ್ಗುಮಮರ್ದುಕೆಯ್ ಸೋಂಕಿದಿಂದೂಪಲಂಬೋಲ್ (ಮನ್ಮವಿ. ೩–೩).
[ಅಮರ್ದು + ಕೆಯ್$_3$]

**ಅಮರ್ದುಗ** (ನಾ). ಅಮೃತವನ್ನು ಕೊಡುವವನು: ಗುರುತರ ಶಿವಧ್ಯಾನಿ ಮುದ್ದುನಗೆಗಳ ದಾನಿ ಅಲರ್ಗಣ್ಗಳಮರ್ದುಗಂ ತೊದಳ್ನುಡಿಯ ತವಕಿಗಂ (ಬಸರ. ೧–೧೪೯). [ಅಮರ್ದು + –ಗ$_2$]

**ಅಮರ್ದುಗಡಲು** (ನಾ). ಕ್ಷೀರಸಮುದ್ರ; ಹಾಲ್ಗಡಲು: ನಿಗಮವೆಂಬಮರ್ದುಗಡಲಿಗೆ ತಾವರೆಯ ಪಗೆಯ . . . ತಾಳ್ದಿದನೊಸಗೆಯ (ಉದ್ಭದೇ. ೬–೪). [ಅಮರ್ದು + ಕಡಲು (< ಕಡಲ್)]

**ಅಮರ್ದುಗದಿರ** (ನಾ). = ಅಮೃತಕಿರಣ: "ಇಂಗದಿರನಮರ್ದುಗದಿರಂ ತಿಂಗಳ್" (ಚತುನಿ. ೧೮). [ಅಮರ್ದು + ಕದಿರ್ + –ಅ$_7$]

**ಅಮರ್ದುಗಯ್ಯ** 'ಅಮರ್ದುಗೆಯ್ಯ' ನೋ.

**ಅಮರ್ದುಗಳಸ** (ನಾ). ಅಮೃತಕಲಶ; ಅಮೃತದ ಪಾತ್ರೆ: ಒರ್ಮೆ ಪರಿಕಿಸುವುದೆಂದಮರ್ದುಗಳಸಗಳ ಪಲಗಯ್ಯೊಳಾಂತುದ್ದಕೆತ್ತಿ ಭೂಮೀಸುರರ್ಗೀವನುವೊ (ಪದ್ಮರಾ. ೮–೩೩). [ಅಮರ್ದು + ಕಳಸ]

**ಅಮರ್ದುಗಱೆ** (ಕ್ರಿ). ಅಮೃತವನ್ನು ಸುರಿಸು: ವಳಯದ ನೂಪುರದುಲಿ ಭೂವಳಯದ ಕಿವಿಗಮರ್ದುಗಱೆಯುಲಿ (ಜಗವಿ. ೧೦–೪೮); ಮೂಱು ಲೋಕಕ್ಕಮರ್ದುಗಱೆವ ಚಂದಿರಮೊಗದಿನೊಪ್ಪಿರ್ದಳು (ಭಾವಚಿಂ. ೩–೩೮). [ಅಮರ್ದು + ಕಱೆ$_1$]

**ಅಮರ್ದುಗಾಲುವೆ** (ನಾ). ಅಮೃತದ ಕಾಲುವೆ: ಅಮರ್ದುಗಾಲುವೆಯಂತೆ ರಸವಾಳಿ ರಸದ ಪೆರ್ಬೊನಲಂತೆ (ರೇವಣ. ೧೩–೩೯).
[ಅಮರ್ದು + ಕಾಲುವೆ]

**ಅಮರ್ದುಗೂೞ್** (ನಾ). ಅಮೃತಾನ್ನ; ಅಮೃತದ ಆಹಾರ: ಕಂತುಹರಂ ಸುರರ್ಗಧಿಕನೆಂದೆರ್ದೆಯೊಳ್ ಸಲೆ ತಾಳ್ದರುಣ್ಬುದೇ ಸಂತತ ಸಾರಮಪ್ಪಮರ್ದುಗೂೞ್ (ವೃಷವಿ. ೩೭–೮೮).
[ಅಮರ್ದು + ಕೂೞ್ (< ಕೂೞ್)]

**ಅಮರ್ದುಗೆಯ್ಯ, ಅಮರ್ದುಗಯ್ಯ, ಅಮರ್ದುಗೈಯ** (ನಾ). ಅಮೃತಕಿರಣ; ಚಂದ್ರ: ಮೊಗಮಿಟ್ಟೊದಲ್ಕೆಳಸುಗುಮುಗದಗ್ರದ ಕರಡಿಯುಮರ್ದುಗೆಯ್ಯನ ಪುತ್ತಂ (ಶಬಶಂ. ೨–೩೪); ಕಾವಂಗೆ ಅಮರ್ದುಗೆಯ್ಯಂಗೆ ಸುಗಿದು ಗಱಿಗೆಗಱಿಗೆಯುಂ ಯುಗಮೆನೆ (ರಾಮಾಶ್ವ. ೪೯–೧೧). **ಅಮರ್ದುಗಯ್ಯ**: ಅಮರ್ದುಗಯ್ಯ ನೇಸರ್ಗಾಲಿಗಳು ನಡುಗಿ ಬೀಳೆ ತೇರ್ ಕೆಡೆವುದೆಂದು (ಭಾವಚಿಂ. ೩–೧೦); ಅಮರ್ದುಗಯ್ಯನಂ . . . ಏಳಿಸಿತು ಸುದತಿಯಾ ಮಿಱುಮಿನುಪ ವದನ (ಉದ್ಭದೇ. ೨–೫೫). **ಅಮರ್ದುಗೈಯ**: "ತಂಗದಿರನಮರ್ದುಗೈಯಂ . . . ಚಂದಿರಂ" (ಕಬ್ಬಿಕೈ. ೧೧); "ಅಮರ್ದುಗೈಯಂ ಚಂದ್ರನ ಪೆಸರ್" (ಕಶಸಾ. ೨–೨೩). 'ಅಮರ್ದುಗದಿರ' ಪರಾ.
[ಅಮರ್ದು + ಕೆಯ್$_3$ + –ಅ$_7$]

**ಅಮರ್ದುಗೈಯ** 'ಅಮರ್ದುಗೆಯ್ಯ' ನೋ.

**ಅಮರ್ದುಗೊರಲ್** (ನಾ). ಅಮೃತವನ್ನುಳ್ಳ ಕೊರಳು: ಅಮರ್ದುಗೊರಲೀಸರಂ ಮೆಯ್ಯಮರ್ದ ಮರಲ್ವಿಲ್ಲನಿಱಿತವಿಲಿ ತಣ್ಗದಿರಂ . . . ಚಿಕದೇವೇಂದ್ರಂ (ಅಪ್ರತಿ. ೪೩–೧೯). [ಅಮರ್ದು + ಕೊರಲ್]

**ಅಮರ್ದುಣಿ** (ನಾ). = ಅಮರ್ದುಂಡ: ಉಣಿಪ್ರತ್ಯಯಕ್ಕೆ – ಅಮರ್ದುಣಿ, ಕಳ್ನುಣಿ (ಶಮದ. ೨೦೨ ಪ್ರಯೋ); ಒಳ್ಗಬ್ಬಿಗರೀ ವಿವಿಧ ರಸಾಮೃತಮಂ ಸಲೆ ಸವಿದಮರ್ದುಣಿಯಂತೆ ಸುಖಿಸುತಿರ್ಕೆ (ರಸರ. ೧–೭). [ಅಮರ್ದು + –ಉಣಿ]

**ಅಮರ್ದುಣಿಯೆಱೆಯ** (ನಾ). ದೇವತೆಗಳ ಒಡೆಯ; ಇಂದ್ರ: ಸೊಲ್ವೆಣ್ಣಿನಾಣ್ಮನಮರ್ದುಣಿಯೆಱೆಯನುಂ . . . ಮೊದಲಾದ ಸಗ್ಗಿಗರ್ವೆದೆಸಾಲ್ವಿಡಿದು ನಿಂದು (ಭಾವಚಿಂ. ೧–೩೦). [ಅಮರ್ದುಣಿ + ಎಱೆಯ]

**ಅಮರ್ದುಣಿವಗೆಯ** (ನಾ). ದೇವತೆಗಳ ಶತ್ರು; ರಾಕ್ಷಸ: "ಅಮರ್ದುಣಿವಗೆಯರೆಂದು ರಕ್ಕಸರು" (ಕಬ್ಬಿಕೈ. ೫೫).
[ಅಮರ್ದುಣಿ + ಪಗೆ + –ಅ$_7$]

**ಅಮರ್ದುಣಿಸ** (ನಾ). ಅಮೃತವನ್ನು ಆಹಾರವಾಗಿ ಉಳ್ಳವನು; ದೇವತೆ: ಅಮರ್ದುಣಿಸರೆಱೆದೊಡವರ ಪಸನುಸುಳೆ ಕರುಣಿಸುವ ಮಱಿಸಸಿದಲೆಯ ಕುಡುಗೆ ಮತಿಯಿಸುವುಸಿರನಸವಸದೊಳು (ಉದ್ಭದೇ. ೬–೨). [ಅಮರ್ದು + ಉಣಿಸು$_2$ + –ಅ$_7$]

**ಅಮರ್ದುಣಿಸಿ** (ನಾ). = ಅಮರ್ದುಣಿಸ: "ಅಮರ್ದುಣಿಸಿಗಳುಣ್ಣದರೆನೆ ದೇವವ್ರಾತಕಮರ್ದುನಾಮಮಿವಕ್ಕುಂ" (ಕವಿಕಂ. ೩೨).
[ಅಮರ್ದುಣಿಸು + –ಇ$_2$]

**ಅಮರ್ದುಣಿಸಿಗ** (ನಾ). = ಅಮರ್ದುಣಿಸ (ಕ).
[ಅಮರ್ದುಣಿಸು + – ಇಗ]

**ಅಮರ್ದುಣಿಸು** (ನಾ). = ಅಮರ್ದುಗೂೞ್: ರತಿಯೂದುವ ಕಂಬುಗಳೋ ಎಂಬಂದದಿ ಕೇಳ್ವರ ಕಿವಿಗಮರ್ದುಣಿಸಾಗಿ ಇಂಬುವಡೆದ ಶೋಭನಮಂ ಪಾಡುವ ಬಿಂಬಾಧರೆಯರ (ಜಯಕಾ. ೮–೨೮).
[ಅಮರ್ದು + ಉಣಿಸು$_2$]

**ಅಮರ್ದುನುಡಿ** (ನಾ). ಅಮೃತದಂತಹ ಮಾತು; ಅಮೃತವಾಣಿ: ನೀನೀಗಳ್ ತುಂಬುರಂಗೆ ಸರಿಪಾಟಿಯಾದೈ ಎಂದಮರ್ದುನುಡಿಯಿಂ ಪರಸಿದಂ (ಅದ್ಭುತ. ೨೮–೯). [ಅಮರ್ದು + ನುಡಿ$_2$]

**ಅಮರ್ದುಮರ್ದು** (ನಾ). ಅಮೃತದಂತಹ ಔಷಧ: ಅಳಲ್ಗೆ ಸಂತೈಕೆಯಂ ತರಲೆಳಸಿದನು ತನ್ನ ಇರ್ಮಡಿಸಿದಳ್ಕರೆಯ ಅಮರ್ದುಮದ್ದಿಂದೆ (ಶ್ರೀರಾಮಾ. ೭೧೧–೬೦). [ಅಮರ್ದು + ಮರ್ದು]

**ಅಮರ್ದುವಳೆ** (ನಾ). ಅಮೃತದ ಮಳೆ; ಅಮೃತವರ್ಷ: ಶಶಿಧರೆಗಮರ್ದುವಳೆಗಱೆವನೋ (ಚಿಬಪು. ೯–೨೦).
[ಅಮರ್ದು + ಮಳೆ (< ಮೞೆ)]

**ಅಮರ್ದುವಳ್ಳಿ, ಅಮರದಬಳ್ಳಿ, ಅಮರದವಲ್ಲಿ, ಅಮರದವಳ್ಳಿ, ಅಮರದುಬಳ್ಳಿ, ಅಮರದುವಳ್ಳಿ** (ನಾ). ಅಮೃತವಳ್ಳಿ; ಕೋಡಬಸಳೆ ಹಂಬು: ಅಮೃತಲತಾ ಅಮರ್ದುವಳ್ಳಿ (ಔಷಧಿ. ೪); ಅಮರ್ದುವಳ್ಳಿಗೆ ಬಾಱ(ಗೆ)ಯ ಸೊಪ್ಪು . . . ವಿಷಾಪಹಾರಕಂ (ಲೋಕೋಪ. ೮–೨೭); ಸುಂಟಿಯುಮಮರ್ದುವಳ್ಳಿಯುಂ ಪುಷ್ಕರ ಮೂಲಮುಂ ಬರಿವದನೆಯುಂ ಜ್ವರದ ಕೇಡು (ಧರ್ಮಾಮೃ. ೯–೧೦೮); ಬೆರಸಮರ್ದುವಳ್ಳಿಯೊಳಗೀಶ್ವರಿಯಂ ಕಾಳ್ಪಿಸಜನೀ ಕಷಾಯಂ ಕೆಡಿಕುಂ ಜ್ವರಮಂ (ಕಲ್ಯಾಕ. ೩–೨೮). **ಅಮರದಬಳ್ಳಿ**: "ವತ್ಸಾದನಿ ಛಿನರುಹಗುಳೂಚಿ ತಂದ್ರಿಕಾ ಅಮೃತ ಜೀವಂತಿಕಾ ಸೋಮವಲ್ಲಿ ವಿಶಲ್ಯ ಮಧುಪರ್ಣಿ –ಈ ೯ ಅಮರದ ಬಳ್ಳಿ" (ನಾಚಿರಾ. ೧೯೯). **ಅಮರದವಲ್ಲಿ** (ಔಷಧಿ. ೧೯೬). **ಅಮರದವಳ್ಳಿ**: ವತ್ಸಾದನಿ – ಅಮರದವಳ್ಳಿ (ಬಾಹಟೀ. ೨೨–೬೦). **ಅಮರದುಬಳ್ಳಿ** (ಔಷಧಿ. ೧೯). **ಅಮರದುವಳ್ಳಿ**: "ಗುಳೂಚೀ, ಅಮರದುವಳ್ಳಿ" (ಔಷಧಿ. ೫೯).
[ಸಂ. ಅಮೃತವಲ್ಲೀ]

**ಅಮರ್ದುವೇಣ್** (ನಾ). ಮೋಕ್ಷಸ್ತ್ರೀ; ಮುಕ್ತ್ಯಂಗನೆ: "ನೆರೆ ಮೋಕ್ಷಸ್ತ್ರೀಯಮರ್ದುವೆಣ್ಣೆಂದಕ್ಕುಂ" (ಕವಿಕಂ. ೧೯೧); "ಅಮರ್ದುವೆಣ್ಣೆಂದು ಮೋಕ್ಷಾಂಗನೆಗೆ ಪೆಸರ್" (ಕಬ್ಬಿಕೈ. ೬೯).
[ಅಮರ್ದು + ಪೆಣ್]

**ಅಮರ್ದುವೆಣ್ಣನಿಯ** (ನಾ). ಮೋಕ್ಷಸ್ತ್ರೀಯ ಪತಿ; ಈಶ್ವರ: "ಅಮರ್ದುವೆಣ್ಣನಿಯನೀಶ್ವರಂಗೆ ಪೆಸರ್" (ಕಶರ. ೪–೧).
[ಅಮರ್ದುವೇಣ್ + ಇನಿಯ]

**ಅಮರ್ದುವೆಣ್ಣೋಪ** (ನಾ). = ಅಮರ್ದುವೆಣ್ಣನಿಯ: "ಎಣ್ಮಯ್ಯಂ . . . ಅಮರ್ದುವೆಣ್ಣೋಪಂ . . . ಐಮೊಗಂ– ಈ ೩೩ ಈಶ್ವರಂಗೆ ಪೆಸರ್" (ಕಶಸಾ. ೧–೧). [ಅಮರ್ದುವೇಣ್ + ಓಪ]

**ಅಮರ್ದುಸೋನೆ** (ನಾ). = ಅಮರ್ದುವಳೆ: ನೀನುಸುರುವ ಸತ್ತ್ವ ಸಂಗಮಮರ್ದಿನ ಸೋನೆಯೊಲಿದೆ ಕೇಳ್ವರಿಗೆ (ಜೀವಂಸಾಂ. ೨–೨).
[ಅಮರ್ದು + ಸೋನೆ]

**ಅಮರ್ಯ** (ನಾ). [ಜೈನ] = ಅವಮೋದರ್ಯ: ಚಾಂದ್ರಾಯಣದೊಳತಂದ್ರಮಮರ್ಯದೊಳೊಂದಿಯಾಚಾಮ್ಲವರ್ಧನದಿ (ಅನಂಚ. ೧೯–೯೮). [< ಸಂ. ಅವಮೋದರ್ಯ]

**ಅಮರ್ಯಾದೆ** (ನಾ). ೧. ಮೇರೆ ಇಲ್ಲದಿರುವುದು. ೨. ಮರ್ಯಾದೆ ಇಲ್ಲದಿರುವುದು. [< ಸಂ. ಅಮರ್ಯಾದಾ]

**ಅಮರ್ಷ** (ನಾ). ೧. ಸಹನೆಯಿಲ್ಲದಿರುವುದು: ಎನಗೆ ನಿಗ್ರಹವ ಸಿಡಿಲಿಂಗೇಜನೀಶ್ವರನ ಮನಕಮರ್ಷ [ಪಾಠಾಂ. ಕೆ ಶಿಶಿಲ, ಕೆಶೀಲ] ವನಿತ್ತು (ಸಿದ್ಧರಾ. ೬–೪೩). ೨. ಕೋಪ; ರೋಷ. ೩. ಹೊಟ್ಟೆಕಿಚ್ಚು; ಅಸೂಯೆ. ೪. [ಕಾವ್ಯಮೀ] ಮೂವತ್ತುಮೂರು ಸಂಚಾರಿ ಭಾವಗಳಲ್ಲಿ ಒಂದು: ಪ್ರತೀಕಾರವನ್ನು ಮಾಡಬೇಕೆಂಬ ಇಚ್ಛೆ ಅಮರ್ಷ (ಭಾರಮೀ. ೩೪೬). ೫. ನಿಶ್ಚಯ. [ಸಂ.]

**ಅಮರ್ಷಣ** (ನಾ). ೧. ಸೈರಣೆಯಿಲ್ಲದವನು; ಕೋಪಿಷ್ಠ. ೨. ಕೋಪ; ಸಿಟ್ಟು; ಮುನಿಸು: ಮಹಾಶ್ವೇತೆ[ಯಿಂ ಸ್ವಯಂವೃತ]ನಾದನಪ್ಪುದಱಿನಪಗತಾಮರ್ಷಣನಾಗಿ ಪುಂಡರೀಕನ ಶರೀರಮಂ ಕಿಡದಂತು ತಂದು (ಕಾದಂಊ. ೬೧೪). [ಸಂ.]

**ಅಮರ್ಷಿ** (ನಾ). ಅಮರ್ಷವನ್ನುಳ್ಳವನು: ಅಮರ್ಷಿ ತಾಂ ಕ್ಷಾತ್ರತೇಜಕೆ ಭಂಗಬಪ್ಪೆಂದದಿಂದೆಂದುಂ ನಡೆವನಲ್ಲು (ಶ್ರೀರಾಮಾ. ೭೦೭–೨೨೭); [ಸಂ. ಅಮರ್ಷಿನ್]

**ಅಮಲ್**$_1$, ಅಮಲು$_1$, ಅಮಲೆ (ನಾ). ೧. ಮದ್ಯಪಾನದಿಂದುಂಟಾಗುವ ಬುದ್ಧಿವಿಕಾರ; ಮತ್ತು. ೨. ಒಂದು ಬಗೆಯ ಮಾದಕ ಪದಾರ್ಥ: ಹುರಿದ ಹೊಸ ಭಂಗಿ ಹದಗೆಯ್ದು ಪಿನಿಕೂಟದೊಳ್ ಬೆರೆದಮಲ್ ಜಾಯಿಕಾಯ್ ಪತ್ರೆ ಕಸಕಸೆಯೆಂಬ ತರತರದೊಳೆಸೆವ ಲಹರಿಗಳುಂ (ಚಿಬಪು. ೪೭–೪೫). **ಅಮಲು**$_1$: ೧. ಅದನ್ನು ತಿಂದರೆ ಸರ್ಪಿನ ವಿಷದಂತೆ ಅಮಲಾಗುತ್ತದೆ ನಿದ್ರೆ ಹತ್ತುತ್ತದೆ (ಕೃಷಿಪ್ರ. ೧೯೭); ಮದ್ಯದ ಅಮಲಿನಲ್ಲಿ ಅವನು ಅಸಂಬದ್ಧವಾಗಿ ಮಾತನಾಡುತ್ತಿದ್ದನು (ರೂಢಿ). ೨. ಅಮಲು ಭಂಗಿ ಮದ್ದು ಉಮ್ಮತ್ತ ಮೊದಲಾದ ಭ್ರಮುಗೊಳಿಪ ವಸ್ತುಪನಿತ್ತು (ಬಿಜ್ಜರಾ. ೨–೫೭). **ಅಮಲು**$_1$: ೧. (ಸ್ಯಾಂಡರ್). **ಅಮಲೆ**: ೧. "ಸೊಕ್ಕು" (ಜಾನಕೋ. ೧೬).
[← ಹಿಂ. ಅರ. ಪಾರ. ಮರಾ. ಅಮಲ್. / ತುಳು. ಅಮಲ್]

**ಅಮಲ್**$_2$, ಅಮಲ್ಲ, ಅಮಲು$_2$, ಅಮಿಲ್, ಅಮಿಾಲ (ನಾ). ೧. ಕೆಲಸ; ವ್ಯವಹಾರ. ೨. ಆಳ್ವಿಕೆ; ಆಡಳಿತ; ಮೇಲ್ವಿಚಾರಣೆ: ಒಬ್ಬ ಗ್ರಾಮನೌಕರನ ಮೇಲೆ ಅಮಲ್ ನಡೆಸುವ ಆಫೀಸರಾಗಲಿ . . . ವಿಚಾರಣೆ ನಡೆಸಿ (ಗ್ರಾಮಾಕ. ೮೯). ೩. ಹುದ್ದೆ; ಪದವಿ; ಅಧಿಕಾರ. 'ಅಮಲ್ದಾರ' ಪರಾ. ೪. ಗ್ರಾಮದ ಆದಾಯದಲ್ಲಿ ಪಾಲುಗಾರಿಕೆಯ ಹಕ್ಕು (ಕಿ). ೫. ಭೂಕಂದಾಯದ ಶೇಖರಣೆ; ವಸೂಲಿ (ಕಿ). **ಅಮಲ್ಲ**: ೨. (ಕಿ). **ಅಮಲು**$_2$: ೨. ಹೈದರನು ರಾಜ್ಯಕ್ಕೆ ಒಡೆಯನಾದ ಬಳಿಕ ಸುತ್ತುಮುತ್ತಲಿನ ನಾಯಕರ ಮೇಲೆ ಅಮಲು ಕೂಡ್ರಿಸಿ ಪೇಶವನ ಸಿರಾ ಸೀಮೆಯನ್ನು ತಕ್ಕೊಂಡು (ಕಭಾಗೆ. ೩೫೮); ಮೊದಲು ಈ ಕೊಡಗಿನ ಸಂಸ್ಥಾನದ ಕರಣೀಕನಾಗಿ ಇದ್ದ ಸುಬ್ಬರಸಯ್ಯಗೆ ಕೊಡಗಿನ ಶೀಮೆ ಅಮಲು ಕೊಟ್ಟು (ರಾಜೇಂದ್ರ. ೧೬). **ಅಮಿಲ್**: ೩. 'ಅಮಿಲ್ದಾರ' ಪರಾ. **ಅಮಿಾಲ**: ೬. ಅಧಿಕಾರಿ: ಅಮಿಾಲನ ರಜಾ ತಲಬಿನಲ್ಲಿಯಿದ್ದುಕೊಂಡು ಸರಕಾರದ ಅಹಂಮದಿ ದವಲತ್ತಿಗೆ (ಎಕ. IX, ದೊಡ್ಡಬ. ೧೨–೨; 1785); ಆ ತಾಲ್ಕು ಅಮಿಾಲಗೆ ಚಿರಂಜೀವಿ ಸಹಸ್ರಾಯುಷ್ಯರಾದ ಅಯ್ಯಾಜಿಯವರು ಸನ್ನದು ಬರೆದುಕೊಟ್ಟು (ಹುಟ್ಟಿಹ. ೩); ಅಮಿಾಲನು ವರಾತುಮಾಡಿದಾಗ ಹಣವನ್ನು ಕಟ್ಟಬೇಕು (ಕಭವಿ. ೨–೩೦೨). [← ಅರ. ಹಿಂ. ಮರಾ. ಅಮಲ್]

**ಅಮಲ್‌ದೇವತೆ** (ನಾ). ಒಂದು ದೇವತೆ: ಈಗ್ಗೂ ನವರಾತ್ರ್ಯುತ್ಸವ ಕಾಲದಲ್ಲಿ ಆ ವಿಗ್ರಹಕ್ಕೆ ಪೂಜೆ ನಡೆಯುತ್ತದೆ. ಅದನ್ನು ಈಗ ಅಮಲ್ ದೇವತೆಯ ಪೂಜೆಯೆಂದು ಕರೆಯುತ್ತಾರೆ (ಒಡೆಕ. ೩೦).
[ಅಮಲ್ ? + ದೇವತೆ]

**ಅಮಲ**$_1$, ಅಮಳ$_2$ (ಗು). ೧. ಕೊಳೆಯಿಲ್ಲದ; ನಿರ್ಮಲವಾದ: ಪುಂಡರೀಕಾಕ್ಷ್ಯಯನಮಲತರಪ್ರೇಮದಿಂ (ಕಾದಂಊ. ೬೨೨); ಶ್ರೀಮದಮಲ ಗುಣನಿಧಿಗೆ ನಿತ್ಯನಿಗೆ . . . ಅನೆರಗುವೆನು (ಹದಿಬ. ೧–೧). (ನಾ). ೨. ಅಭ್ರಕ; ಕಾಗೆ ಬಂಗಾರ: "ಅಬರಂಗ" (ಗಂಗಾಮ. ೧೩). ೩. [ಛಂದ] ಒಂದು ವೃತ್ತದ ಹೆಸರು: ಇಂದುಯುಗಂಗಳ ಮುಂದಿಂದುಧರಂ ಬರೆ ತಾನೆಂದು ಮಿದರ್ಕೆ ಪೆಸರ್ ಸೌಂದರಿ ಕೇಳಮಲಂ [ಪಾಠಾಂ. ೪೦] (ಛಂದೋಂಬು. ೨–೩೩). **ಅಮಳ**$_2$: ೧. ಈ ಕೃತಿಗೊಡೆಯನಮಳ ವಿರೂಪಾಕ್ಷನು (ಹಚಕಾ. ೧–೧೫). [ಸಂ.]

**ಅಮಲ**$_2$ 'ಅಮಲ್$_2$' ನೋ.

**ಅಮಲತೆ** (ನಾ). ಶುದ್ಧವಾಗಿರುವುದು; ಚೊಕ್ಕವಾದ ಸ್ಥಿತಿ: ಮುಕುರಂಗಳಮಲತೆಯ ಹಂಗಿಸುವ ವದನಂಗಳು (ಬಸವು. ೧೨–೩೯).
[< ಸಂ. ಅಮಲತಾ]

**ಅಮಲದಾರ** 'ಅಮಲ್ದಾರ' ನೋ.

**ಅಮಲಬಜಾವಣೆ**, ಅಮಲುಬಜಾವಣೆ, ಅಮ್ಮಲಬಜಾವಣೆ (ನಾ). ತೀರ್ಪನ್ನೂ ಆಜ್ಞೆಯನ್ನೂ ಕಾರ್ಯಗತಮಾಡುವುದು, —ಜಾರಿಗೆ ತರುವುದು: ಹುಕುಂ ಅಮಲಬಜಾವಣೆ ಮಾಡೋದು ನನಗೆ ಹತ್ತು (ಹೊಸಂಸಾ. ೧೬೮). **ಅಮಲುಬಜಾವಣೆ**: ನಿರ್ಮಲೆ ಬಂದಂದಿನಿಂದ ಈ ಅಮಲುಬಜಾವಣೆ ಭರ್ತಿ ಬಂದಹಾಗೆ ಆಗಿದೆ (ಮೂರುದಾ. ೭೧). **ಅಮ್ಮಲಬಜಾವಣೆ**: ೧. ಕಾಯಿದೆ ಮಾಡುವುದು (Legislative). ೨. ಅಮ್ಮಲಬಜಾವಣೆ (Executive). ೩. ನ್ಯಾಯ ತೀರಿಸುವುದು (Judicial). ಈ ಮೂರು ಕಾರ್ಯಗಳ ಅಧಿಕಾರವು ಈ ಮಂತ್ರಿಮಂಡಲದವರಿಗೆ ಇತ್ತು (ಇಂಗ್ಲಇ. ೧೮೪).
[ಅಮಲ$_2$ (< ಅಮಲ್$_2$) + ಬಜಾವಣೆ]

**ಅಮಲಾಂಶು** (ನಾ). ೧. ನಿರ್ಮಲವಾದ ಕಿರಣ; ಬಿಳಿಯ ಕಿರಣ. 'ಅಮಲಾಂಶುಗಱಿ' ಪರಾ. ೨. ಚಂದ್ರ. [ಅಮಲ$_1$ + ಅಂಶು]

**ಅಮಲಾಂಶುಗಱಿ**, ಅಮಳಾಂಶುಗಱಿ (ಕ್ರಿ). ಬಿಳಿಯ ಕಿರಣವನ್ನು ಸೂಸು. **ಅಮಳಾಂಶುಗಱಿ**: ಅಳಿಯೆ ತಮಮಿಂದು ಚೆಂಗದಿರ್ಗಳ ನುಳಿದಮಳಾಂಶುಗಱೆವವೊಲ್ (ರಾಜಶೇ. ೬–೧೩೩).
[ಅಮಲಾಂಶು + ಕಱಿ$_1$]

**ಅಮುಲಾತ** (ನಾ). ಬಣ್ಣದ ಹೂ: "ಅಮುಲಾತಮಾವರ್ಣ ಪಲಾರಂಗಳೆನೆ ಬಣ್ಣವಾಗಿರ್ಪ ಪೂಗಳ್ಗೆ ನಾಮಂ" (ಮಂಗರಾ. ೩೭–೨೨). 'ಅಮುಲಾತಕ' ಪಠಾ. [ಸಂ.]

**ಅಮುಲಾತಕ** (ನಾ). = ಅಮುಲಾತ: "ವರ್ಣಪುಷ್ಪಂ, ಅಮುಲಾತಕಂ [ಪಾಠಾಂ. ಅಮುಲಾನಕಂ, ಅಮಿಲಾತಕಂ, ಅಮಿಲಾನಕಂ] – ಈ ೨ ಬಣ್ಣದ ಹೂ" (ಹಲಾಯು. ೩೫–೫೪). [ಸಂ.]

**ಅಮುಲಿ** (ನಾ). ಒಂದು ಊರಿನ ಅಥವಾ ಮನೆತನದ ಹೆಸರು (?): ವಳ್ಳಿಗ್ರಾಮೆಯರ ದಾಸಡಿಯುಂ ಅಮುಲಿಯರ ದೇವಡಿಯುಂ (ಎಕ. VII, ಶಿಕಾರಿ. ೧೫೪–೭; 685). [?]

**ಅಮುಲಿತ**, ಅಮುಳಿತ (ಗು). ೧. ಶುಚಿಮಾಡಿದ; ಚೊಕ್ಕಟಗೊಳಿಸಿದ; ನಿರ್ಮಲವಾಗಿಸಿದ. ೨. ನಿರ್ಮಲವಾದ; ಶುದ್ಧವಾದ. **ಅಮುಳಿತ**: ೨. ಸಾಕ್ಷಾತ್ಪರಾತ್ಪರ ಸದಮುಳಿತ ಶಿವಲಿಂಗಮಂ ತೋಱಿದಪೆನಿದೆ ಬನ್ನಿ (ಬಸವು. ೫೧–೮೦). [ಸಂ.]

**ಅಮುಲಿನ**, ಅಮುಳಿನ (ಗು). ೧. ಮಲಿನವಲ್ಲದ; ಕೊಳೆಯಾಗದ. ೨. ದೋಷವಿಲ್ಲದ. **ಅಮುಳಿನ**: ೧. ಅಮುಳಿನ ಗುಣವೃತ್ತಿಗಳಿಂ ಸಮುಪಸ್ಥಿತ ಸಕಳ ಜನಗತೋಚಿತಗುಣಮಂ ಸಮನಾಗಿಸುವರ್ (ಕವಿರಾ. ೩–೧೪೨). [ಸಂ.]

**ಅಮುಲು₁** 'ಅಮುಲ್₁' ನೋ.

**ಅಮುಲು₂** 'ಅಮುಲ್₂' ನೋ.

**ಅಮುಲು₃** (ನಾ). ೧. ತೀರ್ಪು ಅಥವಾ ಆಜ್ಞೆಯನ್ನು ಜಾರಿಮಾಡುವುದು; ಕಾರ್ಯರೂಪಕ್ಕೆ ತರುವುದು: ಅವಕ್ಕೆ ಕಾಯದೆ ಗವರ್ನರ್ ಜನರಲ್ ಆಫ್ ಇಂಡಿಯಾ ಇವನ ಸಮ್ಮತಿ ಶಿಕ್ಕ ತರುವಾಯ ಅವುಗಳ ಅಮುಲು ನಡೆಯುತ್ತದೆ (ಮುಂಬಯಿ. ೬–೧೯೯); ಉಗ್ರಕಾಯಿದೆಗಳು ಅಮುಲಿನಲ್ಲಿ ಬಂದವು (ಇಂಗ್ಲಇ. ೧–೭೭); ಪಾರ್ವತಿಯ ನೆನಪಿಗಾಗಿ ಹಳ್ಳಿಯವರೇ ಈ ಪದ್ಧತಿಯನ್ನು ಅಮುಲಿನಲ್ಲಿ ತಂದುದಾಗಿತ್ತು (ಹಬ್ಬಬ. ೭೯). ೨. ಜಾವ (?): ರಾತ್ರಿ ಆರು ತುಂಬಿ ಏಳನೆಯ ಅಮುಲಾದದ್ದರಿಂದ ಸುತ್ತು ಮುತ್ತು ಶಾಂತತೆಯ ಸಾಮ್ರಾಜ್ಯವು ನೆಲೆಗೊಳ್ಳಬಹುದಾಗಿತ್ತು (ಕುಮುದಿ. ೬೫). [< ಅಮುಲ್₂ ?]

**ಅಮುಲುಗಾರ** (ನಾ). ಮಾದಕ ಪದಾರ್ಥಗಳನ್ನು ಸೇವಿಸುವವನು. [ಅಮುಲು₁ (< ಅಮುಲ್₁) + –ಗಾರ (< – ಗಾಱ)]

**ಅಮುಲುದಾರ** 'ಅಮುಲ್ದಾರ' ನೋ.

**ಅಮುಲುಬಂದೋಬಸ್ತು** (ನಾ). ಆಡಳಿತದ ಬಿಗಿ; ಅಧಿಕಾರದ ಭದ್ರತೆ: ಯಾವತ್ತು ಕರ್ನಾಟಕ ದೇಶದಲ್ಲೆಲ್ಲಾ ಠಾಣ್ಯ ಹಾಕಿ ಅಮುಲು ಬಂದೋಬಸ್ತು ಮಾಡಿದರೆ ಮಾನ ಉಳಿದೀತು (ಬಖೈರು. ೪). [ಅಮುಲು₂ (< ಅಮುಲ್₂) + ಬಂದೋಬಸ್ತು]

**ಅಮುಲುಬಜಾವಣೆ** 'ಅಮುಲಬಜಾವಣೆ' ನೋ.

**ಅಮುಲೆ**, ಅಮುಳೆ (ನಾ). ೧. ಪರಿಶುದ್ಧಳು; ನಿರ್ಮಲಳು; ದೋಷವಿಲ್ಲದವಳು. ೨. ಕಿರುನೆಲ್ಲಿ ಗಿಡ; "ನೆಲನೆಲ್ಲಿ ಗಿಡ" (ಅಮರ. ಟೀಕೆ). ೩. ಲಕ್ಷ್ಮಿ. **ಅಮುಳೆ**: ೩. "ಶ್ರೀಕಮುಳೆಯಮುಳೆ ರಮೆ ಸರಸಿಜಾಲಯೆ ಲೋಕಮಾತೆಯೆನಲು ಸಿರಿಗಕ್ಕು ನಾಮಂ" (ಮಂಗರಾ. ೬–೧೮). [< ಸಂ. ಅಮುಲಾ]

**ಅಮುಲೇರು** (ಕ್ರಿ). ಮಾದಕತೆ ಉಂಟಾಗು; ಬುದ್ಧಿವಿಕಾರವಾಗು: ಒಬ್ಬ ಬೇಡಿತಿಯೂ ಅವಳ ಐದು ಜನ ಮಕ್ಕಳೂ ಕಾಲಪ್ರೇರಣೆಯಿಂದ . . . ಕುಡಿದು, ಅಮುಲೇರಿ, ಮೈಮೇಲೆ ಪ್ರಜ್ಞೆಯಿಲ್ಲದೆ ಅದೇ ಮನೆಯಲ್ಲಿಯೇ ಬಿದ್ದುಕೊಂಡಿದ್ದರು (ವಚಭಾ. ೩೪). [ಅಮುಲ್₁ + ಏರು₁ (< ಏಱು₁)]

**ಅಮುಲ್ಜಾರಿ** (ನಾ). ಅಧಿಕಾರದ ಚಲಾವಣೆ; ನ್ಯಾಯಸ್ಥಾನದಲ್ಲಿ ಆದ ತೀರ್ಮಾನವು ಕಾರ್ಯರೂಪಕ್ಕೆ ಬರುವಂತೆ ವ್ಯವಹರಿಸುವುದು: "ಅಂಥಾ ಡಿಕ್ರಿಗಳು ಆಯಾ ಕೋರ್ಟಿನವರಿಂದಲೇ ಅಮುಲ್ ಜಾರಿ ಮಾಡಲ್ಪಡತಕ್ಕದ್ದು" (ಗ್ರಾಮಾಕ. ೨೧).

**ಅಮುಲ್ಜಾರಿ ತೆಗೆಯಿಸು** = ನ್ಯಾಯಸ್ಥಾನದ ತೀರ್ಮಾನವನ್ನು ಕಾರ್ಯರೂಪಕ್ಕೆ ತರಲು ಲಿಖಿತಮೂಲಕವಾಗಿ ಅಪ್ಪಣೆಯನ್ನು ಪಡೆ: ಅವನಿಂದ ಸ್ಥಳ ಸ್ವಾಧೀನತೆಗೆ ಅಮುಲ್ಜಾರಿ ತೆಗೆಯಿಸಿದರು (ಕರುಕ. ೬೦). [ಅಮುಲ್₂ + ಜಾರಿ]

**ಅಮುಲ್ದಾರ**, ಅಮುಲದಾರ, ಅಮುಲುದಾರ, ಅಮಿಲ್ದಾರ (ನಾ). ತಾಲ್ಲೂಕಿನಲ್ಲಿ ಭೂಕಂದಾಯವೇ ಮುಂತಾದ ತೆರಿಗೆಗಳನ್ನು ವಸೂಲು ಮಾಡಲು ನಿಯುಕ್ತನಾದ ಮುಖ್ಯಾಧಿಕಾರಿ; ಮಾಮಲೆದಾರ: ಗ್ರಾಮದ ಆಫೀಸರುಗಳು (ಪಟೇಲ್, ಶಾನುಭೋಗರು, ವಗೈರೇರು) ಅಮುಲ್ದಾರರ . . . ಹುಕುಂನಲ್ಲಿರತಕ್ಕದ್ದು (ಗ್ರಾಮಾಕ. ೪); ಅವನಿಗೆ ಅಮುಲ್ದಾರನ ಮಾತಿನಿಂದ ಬಹಳೇ ಹರ್ಷವಾಗಿತ್ತು (ಬಂಗಾಹೆ. ೪೮). **ಅಮುಲದಾರ**: ಸೋಸಲೆ ಅಮುಲದಾರ ವೆಂಕಟರಮಣೈಯಗೆ (ಮೈಆರಿ. ೧೯೩೪, ೫೩–೧; 1805); ಮೈಸೂರು ತಾಲೋಕು ಅಮುಲದಾರನಿಗೆ ಸಹಾ ನಂಮ ಆಳಿದ ಮಹಾಸ್ವಾಮಿಯವರ (ಎಕ. III, ಮೈಸೂರು. ೧–೨೧; 1833); ಆ ಹುಕುಮು ಮುಟ್ಟಿದ ತಕ್ಷಣವೇ ಅಮುಲದಾರರು ಅದರಂತೆ ಅಮುಲು ನಡಿಸುತ್ತಾರೆ (ಮುಂಬಯಿ. ೬–೨೨೦). **ಅಮುಲುದಾರ**: ಮಲ್ಲಿಪಟ್ಟಣಯಂಬಲ್ಲಿ ಒಂದು ಕೋಟೆ ಕಟ್ಟಿ ಅಮುಲುದಾರನ ಇರಿಸಿ (ರಾಜೇಂದ್ರ. ೧೧೦). **ಅಮಿಲ್ದಾರ** (ರೈಸ್‌ಗ. II, ೫೭೪). [ಅಮುಲ್₂ + –ದಾರ್₃]

**ಅಮುಲ್ದಾರಗಿರಿ** (ನಾ). ಅಮುಲ್ದಾರರ ಹುದ್ದೆ; ಮಾಮಲೆದಾರರ ಹುದ್ದೆ: ಕೃಷ್ಣರಾಯರಾದರೋ ಬೇಗ ಅಮುಲ್ದಾರಗಿರಿಗೆ ಏರಿ ಅನಂತರ ಅಸಿಸ್ಟೆಂಟ್ ಕಮಿಷನರ್ ಸಹ ಆದರು (ಮಹಾಗ. ೩). [ಅಮುಲ್ದಾರ + –ಗಿರಿ₂]

**ಅಮುವಾಲ್**, ಅಮುವಾಲು (ನಾ). ಉತ್ತರಾಧಿಕಾರಿಗಳು (ವಾರಸದಾರರು) ಯಾರೂ ಇಲ್ಲದ ವ್ಯಕ್ತಿಯು ಸಾಯುವುದರಿಂದ ಸರ್ಕಾರಕ್ಕೆ ಸೇರುವ ಆಸ್ತಿ; ಶಿವಾಜಮೆ; ಬೇವಾರಸು ಎಸ್ಟೇಟು. **ಅಮುವಾಲು**. 'ಅಮುವಾಲುಜಿಂದಿಗೆ', 'ಅಮುವಾಲುದನ' ಪಠಾ. [< ಅರ. ಮಾಲ್ ?]

**ಅಮುವಾಲು** 'ಅಮುವಾಲ್' ನೋ.

**ಅಮುವಾಲುಜಿಂದಿಗೆ** (ನಾ). ಉತ್ತರಾಧಿಕಾರಿಗಳಿಲ್ಲದೆ (ವಾರಸುದಾರರಿಲ್ಲದೆ) ಸಾಯುವವನಿಂದ ಸರ್ಕಾರಕ್ಕೆ ಸೇರುವ ಆಸ್ತಿ, — ಸ್ವತ್ತು (ಕ). [ಅಮುವಾಲು (< ಅಮುವಾಲ್) + ಜಿಂದಿಗೆ]

**ಅಮುವಾಲುದನ** (ನಾ). ವಾರಸುದಾರನಿಲ್ಲದೆ ಸರಕಾರಕ್ಕೆ ಸೇರುವ ದನಕರು. [ಅಮುವಾಲು (< ಅಮುವಾಲ್) + ದನ]

**ಅಮುವಾಸಿ** 'ಅಮುವಾಸೆ' ನೋ.

**ಅಮುವಾಸೆ**, ಅಮುವಾಸಿ, ಅಮುಸೆ, ಅಮೂವಸೆ, ಅಮೂವಾಸಿ, ಅಮೂವಾಸೆ, ಅಮೂಸಿ, ಅಮೂಸೆ, ಅವಸಿ, ಅವಸೆ (ನಾ). = ಅಮಾವಾಸ್ಯೆ: ಅಷ್ವ[ಶ್ವ]ಯುಜದಮುವಾಸೆ ಆದಿತ್ಯವಾರ ಸೂರ್ಯಗ್ರಹಣ (ಇಆ. XII, ೨೫೬–೧೦; 971); ಅಮುವಾಸೆಯಂದು ಲೋಕಂ ಹಿಮಕರನಂ ಕಾಣದನಿತಱಿಂ ಸಸಿಯಿಲ್ಲಾ (ಧರ್ಮಾಮೃ. ೫–೧೯೩); ಅಮುವಾಸೆ ಕಳೆದು ಚಿತ್ಕಲೆಯ ತಳೆದು ಪೌರ್ಣಿಮೆಯ ಹಾದಿ ಹಿಡಿದೆ (ಹೃದಸ. ೧೧–೮). **ಅಮುವಾಸಿ**: ಮೈನೆರೆದೊಡೆ. . .ಧನರಹಿತೆ ದಾರಿದ್ರ್ಯೆಯಮುವಾಸಿಯಲ್ಲಿ ಕೇಳ್ತನಯ ವಾರದಲಕ್ಷಣಂಗಳಂ ಬಿತ್ತರಿಪೆ (ವೀಶೈವು. ೪–೨೧–೧೪).

**ಅಮಸೆ** : ಜೇ[ಜ್ಯೇ]ಷ್ಠಮಾಸದಮ[ವಾ]ಸೆಯು ಮಾದಿತ್ಯವಾರ[ಮು]ಮಾಗೆ ಸೂರ್ಯಗ್ರಹಣ (ಇಆ. XII, ೨೧೯–೧೯ ; 814). **ಅಮಾವಸೆ** : ತಾರಗೆ ಭರಣಿಯೊಳಾ ಮೂಲದ ಕಡೆಯಮಾವಸೆಯ ದಿವಸದೊಳಂ ನಿರ್ಮೂಲಮಾಯ್ತು ಕೌರವವಂಶಂ (ಗದಾಯು.೯–೩೭). **ಅಮಾವಾಸಿ**: ಅಕ್ಕ ಸತ್ತರೆ ಅಮಾವಾಸಿ ನಿಲ್ಲೋದಿಲ್ಲ, ಅಣ್ಣ ಸತ್ತರೆ ಹುಣ್ಣಿಮೆ ನಿಲ್ಲೋದಿಲ್ಲ (ಗಾದೆ). **ಅಮಾವಾಸೆ** : "ಸ್ಪಷ್ಟಂ ಸೂರ್ಯೇಂದು ಸಮಾಶ್ಲಿಷ್ಟವಮಾವಾಸೆಯೆಂಬುದಕ್ಕುಂ" (ವಸ್ತುಕೋ. ೧೬–೮) ; ಶ್ರಾವಣದಮಾವಾಸೆ ಸೋಮವಾರದಂದು (ಮೈಆರಿ. ೧೯೩೪, ೮೫–೩ ; 1085). **ಅಮಾಸಿ** : ಅಮಾಸಿಯಲ್ಲಿ ಕಳೆಗುಂದಿದ ಚಂದ್ರನು ಹುಣ್ಣಿಮೆಗೆ ಪೂರ್ಣನಾಗುವುದಿಲ್ಲವೋ ? (ಮುಂಬಯಿ. ೨–೨೪) ; ಸ್ವತಂತ್ರ ವಿಚಾರವಂತನು ಬುದ್ಧಿಗೆ ಮುಸುಕಿದ ಅಮಾಸಿಯನ್ನು ತನ್ನ ಬುದ್ಧಿ ಮಂತ್ರದಿಂದ ಹುಣ್ಣಿಮೆಯಾಗಿ ಮಾಡುವನು (ವಿಚಾಮಂ. ೫೯). **ಅಮಾಸೆ** : "ಅಮಾವಾಸ್ಯಾ– ಅಮಾಸೆ, ಅವಸೆ" (ಶಮದ. ೨೮೧ ಪ್ರಯೋ) ; ಚೈತ್ರ ಬಹುಳ ಅಮಾಸೆ ಸೋಮವಾರ (ಎಇ. XXI, ೬–೪೨ ; 1260) ; ತೋಱುತಿರೆ ಬಿದಿಗೆಯಲಮಾಸೆಗೆ ಹಾಱುತಿರೆ ಕುಂದುತ್ತ ಪೆಚ್ಚುತ (ನಿಭಾಗ. ೧೧–೧೩–೪೪). **ಅವಸಿ** : "ಅವಸಿಯಮಾವಾಸ್ಯೆ" (ಶಬ್ದಮಂ. ೨೦). **ಅವಸೆ** : "ಅಮಾವಾಸ್ಯಾ– ಅಮಾಸೆ, ಅವಸೆ" (ಶಮದ. ೨೮೧ ಪ್ರಯೋ) ; "ಅವಸೆಯುಮೆಂದುಮದಕ್ಕುಮಮಾವಾಸ್ಯಂ" (ಕವಿಕಂ. ೧೧೮).

[< ಸಂ. ಅಮಾವಸ್ಯಾ, ಅಮಾವಾಸ್ಯಾ. / **ತುಳು.** ಅಮಾಸೆ]

**ಅಮಸ** (ನಾ). ಭಾಗ ; ಅಂಶ : ನಂದಿಯಾಲರಾವಿಟ್ಟದುಪಡೆವೈಲಾಮು ಅಮಸ ಪಾಲುಂ ಇದಾನಟಿದೊನ್ನಾಳನ[ಳ]ಪುದೊ (ಎಕ. VI, ಚಿಕ್ಕಮ. ೫೦–೪ ; 480). [< ಸಂ. ಅಂಶ]

**ಅಮಸಣೆ** (ನಾ). ೧. ಅಸಹನೆ ; ಅಸಮಾಧಾನ. ೨. (ಕರಾ) ಗರ್ವ, ಜಂಬ : "ನನ್ನ ಪೂಜೆಗೆ ಬರುವುದಕ್ಕೆ ಇವರಿಗೆ ಅಮಸಣೆ" ಎಂದು ಕೂಗಾಡುತ್ತಾನೆ (ದೇವಹಂ. ೧೪೨).

[← **ತುಳು.** ಅಮಸಣೆ, ಅಮುಸಣೆ = ಸೊಕ್ಕು, ಉದ್ಧಟತನ < ಸಂ. ಅಮರ್ಷಣಾ]

**ಅಮಸುಯ** (ನಾ). (?) : ಸ್ವಸ್ತಿಶ್ರೀ ಶ್ರೀಪುರುಷರಾಜರ್ ಪ್ರಿಥಿವೀ ರಾಜ್ಯಂಕೆಯೆ . . . ಮಱವೆಳ್ಳೂರಾಳಿಕೆಣಿ ಮನೆ ಒಡೆಯರ್ ಅಮಸುಯ ನಾಲ್ವದಿನ್ನಕ್ಕುರ್ಗಂ (ಎಕ. XIV, ಯಳಂದೂ. ೧೪೯–೫ ; 750). [?]

**ಅಮಸೆ** 'ಅಮವಾಸೆ' ನೋ.

**ಅಮಸೋಲು** 'ಅಮಸೋಲು' ನೋ.

**ಅಮಳ್**, ಅಮಳ₁, ಅಮಳು, ಅವಳ್₂, ಅವಳ, ಅವಳಿ (ನಾ). ೧. ಅವಳಿಜವಳಿ ; ಜೋಡಿ : "ಅಮಳ್ ಯಮಳಾಹ್ವಯಂ" (ಕರ್ಣಾನಿ. ೭೨) ; "ಜವಳಿ ಪೊಣರಮಳಿನ್ನಲ್ . . . ಯುಗಳ ಸಂಖ್ಯೆಯು" (ಕವಿಕಂ. ೩೭) ; ಬಳೆದುವು ತೋಳ್ಗಳಕ್ಕೆಯಿನಮಳ್ ಬಳೆವಂತಿರೆ (ಪಂಪಭಾ. ೨–೩೭) ; ವಾಸವನಿಭರಂ ಶ್ರಾವಣಮಾಸದ ಪುಣ್ಣಮೆಯ ಪಗಲೊಳಮಳಂ ಪೆತ್ತಳ್ (ಪಂರಾಮಾ. ೧೬–೨). **ಅಮಳ್ಗಳ್** (ಬಹುವ) : ಅಮಳ್ಗಳ್ ವಿನಯದೆ ವಿಕ್ರಮದಮಳ್ಗಳವರ್ ಮುಳಿಯೆ ಗಂಡರಿಲ್ಲ (ಗದಾಯು. ೩–೨೦). ೨. ಜತೆಗಾರ ; ಒಡನಾಡಿ : ವಜ್ರಾಂಕಿತಂ ಪುಟ್ಟಿ ತಾಯ ತಂದೆಯ ಪರಮಾನಂದಮೆ ತನಗಮಳಾಗೆ ಬಳೆಯುತ್ತುಂ (ಶಾಂತಿಪು. ೬–೧೧೫ ವ). **ಅಮಳ₁** : ೧. ಅನುನಯದಿಂ ದೆಱಗಿದಮಳರು ಮನಟ್ಟಿಱಿಸೊಱಲ್ದು ತೆಗೆದಪ್ಪಿ ಪರ[ಸೆ] (ಪಂಪಭಾ. ೯–೩) ; ಒಂದು ಮುಹೂರ್ತದೊಳಮಳರನಮಳರಂ . . . ಪೆತ್ತು (ರಾಮಾಶ್ವ. ೧೫೦–೧೮). **ಅಮಳು** : ೧. 'ಅಮಳುಮಕ್ಕಳು' ಪರಾ. **ಅವಳ್₂** : ೧. ಕೊಱಿ ಮೊದಲಾದುವರ್ಕೆ ಗಣೆವೊಂದು ತೆನೆಗಳೆರಡಾದಂದುಂ ಕುವಳಯ ಸರಸಿರುಹಂಗಳೊಳವಳ್ಗಳಾದಂದುಮುಱಿಗೆ ತತ್ಪ್ರತಿಯಱಿವಂ (ಲೋಕೋಪ. ೪–೫೬) ; ಗೋದಾಮಹಿಷೀಕರೇಣುತುರಗೋಷ್ಟ್ರಕುಲಕ್ಕವಳಾಗೆ ಪೊಂದುಗುಂತಾಮುಱುದಿಂಗಳಿಂಗೆ (ಲೋಕೋಪ. ೪–೬೭). **ಅವಳ** : ೧. 'ಅವಳಜವಳ' ಪರಾ. **ಅವಳಿ** : ೧. ಬೇಕು ತನಗೊಂದವಳಿಯೆಂದಳು ನೋಡಿ ಸುರಗಣವ (ಕುವ್ಯಾಆ. ೬ರಿ೩. ೧೫–೮೮). 'ಅವಳಿಗಟ್ಟಿಗೆ', 'ಅವಳಿಗಿರಿ' ಪರಾ.

**ಅಮಳ್ದೇವರ್** = ಅವಳಿ ಜವಳಿ ದೇವತೆಗಳು ; ಅಶ್ವಿನೀ ದೇವತೆಗಳು : ಮುನ್ನಂ ಮುನ್ನಮಿದು ಬೋಱಿಯರ ಬೆಜ್ಜರ್ಗೆ ಇಂತಿದಮಳ್ದೇವರ್ಗೆ ಮೇಣದಶ್ವಿನೀಸುತರ್ಗೆಂದು ಕರೆಕರೆದೆಡೆಗೊಟ್ಟ ಬಱಿಯಂ (ರಾಮಾಶ್ವ. ೭೦–೧೨). **ಅಮಳು ಮಕ್ಕಳು** = ಅವಳಿ ಮಕ್ಕಳು : ಅರರ [ರೆ] ಭೇದಿಸ ಬಾರದಿವರೊಳು ಪಿರಿಯಳಾರೆಂದಮಳುಮಕ್ಕಳು ನಿರುತ ಮೆನಗಿವರಮರ ಕನ್ಯಾರೂಪ ಸನ್ನಿಭರು (ಫಣಿಚ. ೨–೨).

[< ಸಂ. ಯಮಲ]

**ಅಮಳ₁** 'ಅಮಳ್' ನೋ.

**ಅಮಳ₂** 'ಅಮಲ₁' ನೋ.

**ಅಮಳಗುಱಿ** (ನಾ). ಒಂದು ಜತೆ ಅಗುಳಿ : ಅಮಳಗುಱಿಯ ನಂದ್ಯಾವರ್ತದ ತೋರಣದೋರಣದ . . . ದೇಗುಲಂ ಕಣ್ಗೆಡ್ಡಮಾಗಿ ರಂಜಿಕುಂ (ರಾಮಾಶ್ವ. ೫೪–೨೫). [ಅಮಳ್ + ಅಗುಱಿ (< ಅಗ್ಗಱಿ)]

**ಅಮಳಮಿಂಚು** 'ಅಮಳ್ಮಿಂಚು' ನೋ.

**ಅಮಳಸ್ವಾಂತ** (ನಾ). ಪರಿಶುದ್ಧವಾದ ಮನಸ್ಸುಳ್ಳವನು ; ನಿರ್ಮಲಚಿತ್ತ : ರಾಜನೀತಿವಿದಂ ವಿದ್ವದಮರ್ತ್ಯರತ್ನನಮಳಸ್ವಾಂತಂ . . . ಸಮದರ್ಶಿ (ರಾಜಶೇ. ೩–೨೨). [ಅಮಳ₂ (= ಅಮಲ₁) + ಸ್ವಾಂತ]

**ಅಮಳಾಂಶುಗಱಿ** 'ಅಮಲಾಂಶುಗಱಿ' ನೋ.

**ಅಮಳಾರ** (ನಾ). ಕುದುರೆಯ ಜೀನಿಗೆ ಸೇರಿದ ಮರದ ಪಟ್ಟಿ (ಸ್ಯಾಂಡರ್) [?]

**ಅಮಳಾವರ್ತವಿಮಾನ** (ನಾ). [ಜೈನ] ಸ್ವರ್ಗದ ಒಂದು ವಿಮಾನದ ಹೆಸರು : ಅಮಳಾವರ್ತವಿಮಾನದೊಳು ದೇವನಾಗಿ ಪುಟ್ಟಿ (ಚಾವುಂಪು. ೧೬೫). [ಸಂ. (ಅಮಳಾವರ್ತ + ವಿಮಾನ)]

**ಅಮಳಾಲೋಕ** (ನಾ). ಚೊಕ್ಕವಾದ ನೋಟ ; ಪರಿಶುದ್ಧವೂ ಪಾವನವೂ ಆದ ದೃಷ್ಟಿ, —ಕಟಾಕ್ಷ : ವಿಶ್ವೋರ್ಜಿತ ಶಾಸ್ತ್ರಗರ್ಭಮಮಳಾಲೋಕಂ ದಯಾಗರ್ಭಮೆಂಬೀ ವಿಖ್ಯಾತಿ (ಚಂದ್ರಪು. ೧–೨೪).

[ಅಮಳ₂ (= ಅಮಲ₁) + ಆಲೋಕ]

**ಅಮಳಿತ** 'ಅಮಲಿತ' ನೋ.

**ಅಮಳಿಧುಮಳಿ** (ನಾ). ಗಡಿಬಿಡಿ ; ಗಲಾಟೆ (?) : ಒಟ್ಟಿನಲ್ಲಿ ಆ ಸ್ಟೇಷನ್ ಅಮಳಿಧುಮಳಿ ಎದ್ದಿತ್ತು, ರಾಘು ಪೆಂಗನಂತೆ ನಾಲ್ಕಾರು ಕಡೆಗಳಿಗೂ ಕಣ್ಣು ಹೊರಳಿಸುತ್ತ ಹೊರಬಂದನು (ಮೂಲಾನ. ೨೧೧). [?]

**ಅಮಳಿನ** 'ಅಮಲಿನ' ನೋ.

**ಅಮಳಿನಚರಿತ** (ನಾ). ಪರಿಶುದ್ಧವಾದ ನಡೆಯುಳ್ಳವನು : ಕಾನೂರ್ಗಣ ಮುನಿಪತಿ . . . ತಪೋಂಬುನಿಧಿ ಭುವನಾನತಪದ ಕನಕಕಮಳನಮಳಿನಚರಿತಂ (ಶಾಂತಿಪು. ೧–೧೭).

[ಅಮಳಿನ (= ಅಮಲಿನ) + ಚರಿತ]

**ಅಮಳು** 'ಅಮಳ್' ನೋ.

**ಅಮಳುದೊಗಲು** (ನಾ). ೧. ಸುಕ್ಕುಬಿದ್ದ ಚರ್ಮ. ೨. ಹದಮಾಡಿದ ಚರ್ಮ (ಸ್ಯಾಂಡರ್).

[ಅಮಳು (< ಅಮಳ್) + ತೊಗಲು (< ತೊಗಲ್)]

**ಅಮಳೆ** 'ಅಮಲೆ' ನೋ.

**ಅಮಳೇಶ್ವರ** (ನಾ). ಒಂದು ದೇವತಾಮೂರ್ತಿಯ ಹೆಸರು: ಕಲಿಯ್ಯಣ್ಣ [ತು]ಱುಗೊಳ್ವಾನು ಕಾದಿತ್ತಮಳೇಶ್ವರ ಭಕ್ತಂ ಅಣ್ಣನ ದಣ್ಣ ಕೆಳಗೆಯ್ದ ಕುಪ್ಪಂ ಮಣಲಿಯುಳ್ ಅಯ್ಗಳ ಬೆದೆಮಣ್ಣು (ಮೈಆರಿ. ೧೯೪೬, ೧೫–೧೮ ; 897). [ಸಂ. (ಅಮಲಾ + ಈಶ್ವರ)]

**ಅಮಳೈಕ್ಯ** (ನಾ). [ವೀಶೈ] = ಅಮಳೋಕ್ಯ ೧: ಕಕ್ಷದಲಿ ವಿಧಿಯು ಧರಿಸಿಹನು ಕರಪೀಠದೊಳು ಪಕ್ಷಿವಾಹನನು ಪಿಡಿದಿಹನು . . . ಸದಾಶಿವಂ ಧರಿಸಿಕೊಂಡಿಪ್ಪನಮಳೈಕ್ಯದಲ್ಲಿ (ಪ್ರೌಢರಾ. ೮–೩). **೨.** ಬಾಯಲ್ಲಿ (ದವಡೆಯಲ್ಲಿ) ಲಿಂಗವನ್ನು ಧರಿಸಿದವನು: ಲಿಂಗದಮಳೈಕ್ಯರುಂ ಲಿಂಗಜೀವಾಹಿತರು ನೆನೆದು ಲಿಂಗವ ಬರಿಸಿಯೆ ಲಿಂಗಪೂಜೆಯ ಮಾಡಿ (ಲಶಿಚಿಂ. ೩೧–೨೪). [ಸಂ. ?]

**ಅಮಳೋಕ್ಯ** (ನಾ). ೧. [ವೀಶೈ] ಲಿಂಗವನ್ನು ಧರಿಸುವ ಆರು ಸ್ಥಳಗಳಲ್ಲಿ ಒಂದಾದ ಬಾಯಿ: ಕಂಕುಳೆಂಬುದು ಕವುಚಿನ ತವರು ಮನೆ . . . ಅಮಳೋಕ್ಯವೆಂಬುದು ಬಾಯ ಬಗದಳ (ಅವಚಂ. ೪೭೪); ಅಮಳೋಕ್ಯದಲ್ಲಿ ಲಿಂಗವ ಧರಿಸಿದ ಮತ್ತೆ ತುತ್ತಿನ ನಿಶ್ಚಯವ ಬಿಟ್ಟಿರಬೇಕು (ಮೋಳಿಮಾ. ೫೨೨). **೨.** ಬಾಯಲ್ಲಿ ಲಿಂಗವನ್ನಿಟ್ಟುಕೊಂಡ ಸ್ಥಿತಿ: ಸುರುಚಿರದ ಶೀಲವಂತಯ್ಯಗಳ ಅರಮನೆಗೆ ಚರಮೂರ್ತಿಯಮಳೋಕ್ಯದಿಂ ಬಂದು ಲಿಂಗಮಂ ಕರಕೆ ತಾರೆನೆ (ಗುರುಚಾ. ೮–೯೨).

**ಅಮಳೋಕ್ಯಮಾಡು** = ಲಿಂಗವನ್ನು ಬಾಯಲ್ಲಿರಿಸಿಕೊಳ್ಳು; ಆಸ್ವಾದಿಸು: ಮರಣವಹ ಕಾಲದೊಳಗಮಳೋಕ್ಯಮಾಡಿದಡೆ ಪರಮನಿಧಿಯೆನ್ನ ಹೃದಯಾಂತರದಿ ಲಿಂಗವಹ (ಲಶಿಚಿಂ. ೪೨–೧೬). [ಸಂ. ?]

**ಅಮಳ್ಗಂಬ** (ನಾ). ಕಂಬಗಳ ಜತೆ; ಜೋಡಿಕಂಬ: ಭೂಭುವನಮಂದಿರಮಂ ಧರಿಸಿರ್ದ ಪೊನ್ನಮಳ್ಗಂಬಮಿದೆಂಬಿನಂ ಸೊಗಯಿಕುಂ ನೆಗೞ್ದಲ್ಲಿಯ ಮಂದರದ್ವಯಂ (ಧರ್ಮನಾ. ೫–೧೦). [ಅಮಳ್ + ಕಂಬ]

**ಅಮಳ್ಗದ** (ನಾ). ಎರಡು ರೆಕ್ಕೆಗಳುಳ್ಳ ಕದ; ಜೋಡಿಕದ; ತಾರುಗದ: ಕುಂಕುಮರಸದೊಳಳ್ದಿದ ಕುಮುದಮುಕುಳದ ಮೊಳೆಗಳಂ ತೊಡರ್ಚಿ ಮಾಡಿದ ಮೃಣಾಳನಾಳದಮಳ್ಗ [ಪಾಠಾಂ. ಒಳ್ಗ]ದಂಗಳಿಂ ರಂಜಿಸಿ (ರಾಜಶೇ. ೧೦–೩೧ ವ). [ಅಮಳ್ + ಕದ]

**ಅಮಳ್ಗೊಡೆ** (ನಾ). ಕೊಡೆಗಳ ಜತೆ; ಜೋಡಿ ಕೊಡೆ: ಉದರಾರ್ಭಕಂಗೆ ಮೇಲೆತ್ತಿದ ಕುಚಯುಗಮೆಂಬ ಪೊನ್ನಮಳ್ಗೊಡೆಯಂ ತಾಳ್ದಿದ ನೀಲದಂಡಮೆಂಬಂದದೆ ಸೊಗಯಿಪ ಬಾಸೆಗೆ (ಕಾದಂಪೂ. ೪೦೪). [ಅಮಳ್ + ಕೊಡೆ$_3$]

**ಅಮಳ್ಜಂತ್ರ** (ನಾ). ಯಂತ್ರಗಳ ಜತೆ; ಜೋಡಿಯಂತ್ರ: ಬೆಮರ್ ಪೊಣ್ಮೆ ನಾಣ್ಪೂಸೆ ಕಾಮಂ ಚಲದಿಂ ಕೆಯ್ಮಿಕ್ಕಮಳ್ಜಂತ್ರಮೆನೆ ಕೆಡಪಿ ದಂತಿರ್ವರುಂ ಮೂರ್ಛೆವೋದರ್ (ಸೂಕ್ತಿಸು. ೧೪–೭೬); ಳಾಂತಕ್ಕೆ – . . . ಅಮಳ್ಜಂತ್ರ (ಶಮುದ. ೪೩. ಪ್ರಯೋ). [ಅಮಳ್ + ಜಂತ್ರ]

**ಅಮಳ್ದಲೆ** (ನಾ). ತಲೆಗಳ ಜತೆ; ಜೋಡಿತಲೆ: ಗಱಿ ಕೆನ್ನೆಯುರಿವ ಕೇಸುರಿಮೆಯ್ಯ ಕೆಂಬಣ್ಣ ಕಱಿಗೆಂಡಮೊಗಮಮಳ್ದಲೆಯ ತೆಱನಾಗಲಾ ಭೇರುಂಡನೆಂಟಡಿಗನುಱಿ ಸುಡುವಗ್ನಿಯಂತಾಯ್ತು (ಶ್ರೀಪಾಲ. ೬–೩೧). [ಅಮಳ್ + ತಲೆ]

**ಅಮಳ್ದಲೆಯ** (ನಾ). ೧. ಎರಡು ತಲೆಯುಳ್ಳವನು; ಅಗ್ನಿ: "ಅಮಳ್ದಲೆಯನಗ್ಗಿಯು . . . ಹಗ್ಗಿ ಕಿರ್ಚೆಲರ್ಗಳೆಯಂ" (ಕವಿಕಂ. ೩೪); "ಮರಗೂಳಂ . . . ಅಮಳ್ದಲೆಯಂ ಅಗ್ಗಿ ಮಿಸುನಿಮೊಗಂ . . . –ಈ ೧೩ ಅಗ್ನಿ" (ಶಬ್ದಸಾ. ೩–೩೩). **೨.** ಗಂಡಭೇರುಂಡ. 'ಅಮಳ್ದಲೆವಕ್ಕಿ' ಪರಾ. [ಅಮಳ್ದಲೆ + –ಅ$_7$]

**ಅಮಳ್ದಲೆವಕ್ಕಿ** (ನಾ). ಎರಡು ತಲೆಯ ಹಕ್ಕಿ; ಗಂಡಭೇರುಂಡ: "ಅಮಳ್ದಲೆವಕ್ಕಿಯೆಂದು ಭೇರುಂಡಂ" (ಕಶಸಾ. ೬–೮೮); "ಬಿಡದಮಳ್ದಲೆವಕ್ಕಿಯುಮೆಂದೊಡೆ ಭೇರುಂಡಕ್ಕೆ" (ಕವಿಕಂ. ೬೦); ರವಿಯುದಯದೊಳಮಳ್ದಲೆವಕ್ಕಿಯೆಯ್ತಂದು . . . ನಡೆದುದಾಗಸಕೆ (ಶ್ರೀಪಾಲ. ೭–೭೦). [ಅಮಳ್ದಲೆ + ಪಕ್ಕಿ]

**ಅಮಳ್ದಾವರೆ** (ನಾ). ತಾವರೆ ಹೂಗಳ ಜತೆ: ಅಮಳ್ದಾವರೆಯಂತೆ ತೋರ್ಕೆಯುರ್ಬಱಿಯದೆ ತಳ್ತ ಪೆರ್ಮೊಲೆಗಳೊಳ್ (ಕಾವ್ಯಸಾ. ೬೧೧ ಶೂದ್ರಕ). [ಅಮಳ್ + ತಾವರೆ]

**ಅಮಳ್ದೆರೆ** (ನಾ). ಅಲೆಗಳ ಜತೆ; ಜೋಡಿಯಾಗಿ ಬರುವ ತೆರೆ: ಅಲರ್ಗೊಳದಮಳ್ದೆರೆಯೆಡೆಯೊಳಗರಸಂಚೆಯ ಮಱಿ . . . ರಾಜಿಸುವಂದದಿಂ (ಜಯಕಾ. ೨–೬೨). [ಅಮಳ್ + ತೆರೆ$_3$]

**ಅಮಳ್ದೊಂಗಲ್** (ನಾ). ಗೊಂಚಲುಗಳ ಜತೆ; ಜೋಡಿ ಗೊಂಚಲು: ಅಮಳ್ದೊಂಗಲ್ (ಶಮುದ. ೪೩ ಪ್ರಯೋ). [ಅಮಳ್ + ತೊಂಗಲ್]

**ಅಮಳ್ದೋಳ್** (ನಾ). ಎರಡು ತೋಳುಗಳು; ತೋಳುಗಳ ಜೋಡಿ: ತನ್ನ ತನೂಜೆ ಸುಲೋಚನೆಯಾ ಅನುರಾಗದಿನಮಳ್ದೋಳಿಂದೆತ್ತಲು (ಜಯಕಾ. ೩–೨೧). [ಅಮಳ್ + ತೋಳ್]

**ಅಮಳ್ಪುಟ್ಟು** (ನಾ). ಅವಳಿಮಕ್ಕಳ ಜನನ; ಅವಳಿಯಾಗಿ ಹುಟ್ಟುವ ಮಕ್ಕಳು: ಕನಕಾದಿಗಳೀಕ್ಷಿಸೆ ಚಂದ್ರನನಳಿಯೊಳ್ ನಿಂದನಂ ಧರಾಧಿಪನಮಳ್ಪುಟ್ಟಿನ [ಪಾಠಾಂ. ಟ್ಟುನರಂ] ತಂದೆ ವಿನಯನಿಧಿ . . . ಅಕ್ಕುಂ (ಜಾತತಿ. ೨೦–೮). [ಅಮಳ್ + ಪುಟ್ಟು$_2$]

**ಅಮಳ್ಬೆರಳು** (ನಾ). ಒಂದು ಬೆರಳಲ್ಲಿ ಕವಲಾಗಿ ಒಡೆದಿರುವ ಇನ್ನೊಂದು ಬೆರಳು: ಆ ಮಗು ಹುಟ್ಟಿದಾಗಲೇ ಅದರ ಹೆಬ್ಬೆರಳು ಅಮಳ್ಬೆರಳಾಗಿತ್ತು (ರೂಢಿ). [ಅಮಳ್ + ಬೆರಳು (< ಬೆರಲ್)]

**ಅಮಳ್ಮಿಂಚು, ಅಮಳಮಿಂಚು** (ನಾ). ಮಿಂಚುಗಳ ಜೋಡಿ: ಇದು ಬಾನಿಂ ಬರ್ಪ ಪೊಮ್ಮಿಂಬೊಣರ ತೆಱನಿದಲ್ತೊಂ[ದಮಳ್ಮಿಂ]ಚು[ಪಾಠಾಂ. ಲ್ತೊಂದು ಮೇಣ್ಮಿಂಚು] ಮಿಂಚಲ್ಲದಿವರ್ಚಂದ್ರಾರ್ಕರೇನೀ ಯುಗಳ ಮಿಱಿವ ಚಂದ್ರಾರ್ಕರೇ (ಅರ್ಧನೇ. ೨–೫೮). **ಅಮಳಮಿಂಚು**: ಮುಗಿಲಿಂದಿಳಿವ ತಾರೆಗಳೆರಡೊ ತಳ್ತಮಳಮಿಂಚುಗಳೊ ಚಂದ್ರಸೂರ್ಯರೊ ಜವಳಿಖಚರರೊ (ಸಾಳ್ವಭಾ. ೪–೪೭). [ಅಮಳ್ + ಮಿಂಚು$_2$]

**ಅಮಳ್ವಕ್ಕಿ** (ನಾ). ಗಂಡು ಹೆಣ್ಣು ಅಗಲದೆ ಹಗಲೆಲ್ಲಾ ಜತೆಯಾಗಿಯೇ ಇರುವ ಹಕ್ಕಿ; ಚಕ್ರವಾಕ ಪಕ್ಷಿ: "ಅಮಳ್ವಕ್ಕಿಯೆನಲ್ ಕೋಕದೊಳಂ" (ಕರ್ಣಾನಿ. ೧೫); "ಅಮಳ್ವಕ್ಕಿಯುಮೆನುತಿರದೆಣಿಸಲ್ ಬಿಸಿಲ್ವಕ್ಕಿ ಚಕ್ರವಾಕಮೆನಿಕ್ಕುಂ" (ಕವಿಕಂ. ೬೫); ಕಮಳಾಕರದಮಳ್ವಕ್ಕಿಗಳ ಮನೋರಥಮಲರೆ (ಗಿರಿಕ. ೫–೯); ಸರೋವರದೊಳೊಲ್ದಮರ್ದಿರ್ಪಮಳ್ವಕ್ಕಿಗಳೆಂದೆನೆ (ಉದ್ಭಟ. ೬–೯೬). [ಅಮಳ್ + ಪಕ್ಕಿ]

**ಅಮಳ್ವಟ್ಟೆಯ** (ನಾ). ಜೋಡಿ ಕಲಾಬತ್ತು ಪಟ್ಟೆಗಳು (?): ಭೂಕಾಂತೆಯುಟ್ಟಿರ್ದಮಳ್ವಟ್ಟೆಯದ ಪಟ್ಟೆ ಸೀರೆಯ ಪಾಂಗಿನಿಂ ಸಂತತಂ ಪರಿವೇಷ್ಟಿಸಿರ್ದ ಸಪ್ತಾಬ್ಧಿಗಳ್ (ನಂದಿಮಾ. ೨–೩). [ಅಮಳ್ + ಪಟ್ಟೆಯ]

**ಅಮಳ್ವಡಿ** (ನಾ). = ಅಮಳ್ಗದ: ಬಿಗಿದ ಬಜ್ಜರಮುಂಡಿಗೆ ದಾಡೆಯಮಳ್ವಡಿ ನೆಗೆದುದುಯೆನೆ (ಶ್ರೀಪಾಲ. ೧–೭೦). [ಅಮಳ್ + ಪಡಿ$_2$]

**ಅಮಳ್ವಡಿಗೀಱು** (ಕ್ರಿ). ಜೋಡಿ ಕದಗಳನ್ನು ಮುಚ್ಚು: ಸುರಗಿಗಟ್ಟುವರಂತೆ ಅಮಳ್ವಡಿಗೀಱುವರಂತೆ ಕಾವಡಿಗಾಱನಂತೆ ಪಲ್ಲಂ ಸುಲಿವರಂತೆ ಮುನ್ನಿನ ದರ್ಶನಮುಂ ನಿಶ್ಶಂಕೆಯುಮೆಂಬೆರಡುಮಂ ಲೇಸಂ ಮಾಡುವುದು (ಧರ್ಮಾಮೃ. ೨–೪). [ಅಮಳ್ವಡಿ + ಕೀಱು$_1$]

**ಅಮುಳ್ವಾಸು** (ನಾ). ಹಾಸಿಗೆಗಳ ಜತೆ; ಜೋಡಿ ಹಾಸಿಗೆ: ಶ್ರೀಪ್ರಭ ವಿಮಾನದೊಳಮುಳ್ವಾಸಿನ ಪೊರೆಯೊಳ್ ಪುಟ್ಟಿ (ಪೂರ್ವಪು. ೧೮); ಅಲ್ಲಿಯುಪಪಾದ ಭವನದಮುಳ್ವಾಸಿನೆಡೆಯೊಳ್ ಸಹಜಯೌವನರುಂ . . . ಆಗಿ ಪುಟ್ಟುವಮರರ್ಗೆ (ಚಂದ್ರಪು. ೩-೩೨ ವ). [ಅಮುಳ್ + ಪಾಸು$_2$]

**ಅಮುಳ್ವೆದೆ** (ನಾ). ಒಂದು ಜತೆ ಹೆದೆ, —ಬಿಲ್ಲಿನ ಹಗ್ಗ: ಸುರಿವ ಕಣ್ಣೀರ ಧಾರೆಗಳು ಕರಮೆಸೆದುವು ಕಾಮನೇಱಿಸಿ ಪಿಡಿದಿರ್ದ ಪರಲ್ವಿಲ್ಲ ಅಮುಳ್ವೆದೆಯಂತೆ (ಶ್ರೀಪಾಲ. ೯-೩೧). [ಅಮುಳ್ + ಪೆದ್ದೆ$_2$]

**ಅಮುಳ್ವೆಸರ್** (ನಾ). ಅವಳಿ ಹೆಸರು; ಯಾವಾಗಲೂ ಜತೆಯಾಗಿಯೇ ಹೇಳುವ ಎರಡು ಹೆಸರು: ಆಗಳಾ ಪಾಂಡುರಾಜನಾ ಕೂಸುಗಳ್ಗೆ ಜಾತಕರ್ಮಮಂ ಮುನಿಗಳಿಂ ಬಳೆಯಿಸಿ ನಕುಲ ಸಹದೇವರೆಂದವರ್ಗಮುಳ್ವೆಸರನಿಟ್ಟು (ಪಂಪಭಾ. ೨-೩ ವ); ಅಮುಳ್ಗಳಿವರೆಂಬಿನಂ ತಮಗಮುಳ್ವೆಸರಮರ್ದೆಸೆಯೆ (ಪಂರಾಮಾ. ೩-೧೪೪).
[ಅಮುಳ್ + ಪೆಸರ್]

**ಅಮುಳ್ವೆಱು** (ಕ್ರಿ). ಅವಳಿ ಮಕ್ಕಳನ್ನು ಪಡೆ, —ಹಡೆ.
**ಅಮುಳ್ವೆತ್ತರ್** = ಅವಳಿ ಮಕ್ಕಳನ್ನು ಹೆತ್ತವರು, —ಪಡೆದವರು: ಸಕ್ಕದಂ ಕನ್ನಡಮೆಂಬೆರಡುಂ ಕವಿತೆಯನಮುಳ್ವೆತ್ತರಂತಿರೊಡನಡಪಿದಂ ಕುರುಳ್ಗಳ ಸವಣಂ (ಶಾಂತಿಪು ೧-೧೦); ವರಬಾಹ್ಯಾಂತರಮೆಂಬೆರಡುಂ ತೆಜನಪ್ಪ ತಪಮನಟ್ಟಜೊಳಮುಳ್ವೆತ್ತರ ವೋಲೊಡನೆ ನಡಪಿದಳ್ (ಸುಕುಮಾ. ೯-೫); ಅಮುಳ್ವೆತ್ತರಂತೆ ಕಾಡಿಗೆಯೆಚ್ಚುವರಂತೆ ಅಂದುಗೆಯಿಡುವರಂತೆ . . . ಎರಡುಮಂ ಲೇಸು ಮಾಡುವುದು (ಧರ್ಮಾಮೃ. ೨-೪). [ಅಮುಳ್ + ಪೆಱು]

**ಅಮುಱ್** 'ಅಮುರ್' ನೋ.

**ಅಮುಱ್ದು** 'ಅಮುರ್ದು' ನೋ.

**ಅಮಾಂಗ** (ಗು). = ಅಮಾಂಸ. [ಸಂ.]

**ಅಮಾಂತ** (ನಾ). ಅಮಾವಾಸ್ಯೆಯ ದಿನದ ಕಡೆಯ ಭಾಗ (೬). 'ಪೂರ್ಣಿಮಾಂತ' ಪರಾ. [ಸಂ.]

**ಅಮಾಂತಮಾಸ** (ನಾ). ಶುಕ್ಲ ಪಾಡ್ಯಮಿಯಿಂದ ಮೊದಲಾಗಿ ಅಮಾವಾಸ್ಯೆಯೇ ಕೊನೆಯ ದಿನವಾಗಿ ಉಳ್ಳ (ವಿಂಧ್ಯದ ದಕ್ಷಿಣದಲ್ಲಿ ರೂಢಿಯಲ್ಲಿರುವ) ತಿಂಗಳು: ಈ ತಿಂಗಳುಗಳು . . . ಎರಡು ಮತಗಳುಂಟು ಮೊದಲನೇದು, ಶುಕ್ಲಪ್ರತಿಪದೆಯಿಂದ ಅಮಾವಾಸ್ಯೆಯ ತನಕ, ಇದಕ್ಕೆ ಅಮಾಂತಮಾಸವೆಂಬ ಹೆಸರು (ಮುಂಬಯಿ. ೬-೬೮). 'ಪೂರ್ಣಿಮಾಂತಮಾಸ' ಪರಾ. [ಅಮಾಂತ + ಮಾಸ]

**ಅಮಾಂಸ** (ಗು). ೧. ಮಾಂಸವಿಲ್ಲದ; ಪುಷ್ಟಿಯಿಲ್ಲದ; ಕೃಶ. (ನಾ). ೨. ಮಾಂಸವಲ್ಲದ್ದು. [ಸಂ.]

**ಅಮಾತ** (ಅ). (ಉಕ) ಸರಳವಾಗಿ; ಅನಾಮತ್ತಾಗಿ: ಕಡೆಗೆ ಅವರೆಲ್ಲರೂ ಕೂಡಿ ನಾನಿದ್ದ ಕಟ್ಟಡವನ್ನು ಅಮಾತವಾಗಿ ಎತ್ತಿ ಅದನ್ನು ಬಂಡಿಯಲ್ಲಿ ಇಟ್ಟರು (ಪ್ರೇಮವಿ. ೫೬); ಅಮಾತ ನೆಗವಲಿಕ್ಕೆ ಬರದಂಥಾ ಒಂದು ದೊಡ್ಡ ಟ್ರಂಕು (ಹೊಸಂಸಾ. ೧೧೫); ಅವಳನ್ನು ತನ್ನ ಎರಡೂ ಕೈಗಳಿಂದ ಅಮಾತ ಹೊತ್ತುಕೊಂಡು ಮೆಟ್ಟಲುಗಳನ್ನು ಒಂದೊಂದೇ ಇಳಿಯಹತ್ತಿದನು (ರಕ್ತಧ್ವ. ೯೪). [ಅನಾಮತ್ ?]

**ಅಮಾತ್ಯ** (ನಾ). ಮಂತ್ರಿ; ಸಚಿವ: ಆಸ್ಥಾನಮಂಟಪದೊಳ್ ಸಮುಚಿತಾಮಾತ್ಯ ರಾಜಪುತ್ರಸಮನ್ವಿತಂ ಬಂದು ಪುಗುವಲ್ಲಿ (ಕಾದಂಪೂ. ೬೯); ಅಮಾತ್ಯರು ತಮಗೆ ಒಪ್ಪಿಸಿ ಬಾ ಎಂದು ಹೇಳಿದ್ದಾರೆ (ಶಾಂತಲಾ. ೪).
[ಸಂ.]

**ಅಮಾನ** (ಗು). ೧. ಮಾನವಿಲ್ಲದ; ಗೌರವದ ಮೇಲೆ ದೃಷ್ಟಿಯಿಲ್ಲದ. (ನಾ). ೨. ಮಾನವಿಲ್ಲದವನು; ಗೌರವದ ಮೇಲೆ ದೃಷ್ಟಿಯಿಲ್ಲದವನು: ನಮ್ಮೊಳಾದುದು ನಯೋಪಾಯಂ ವ್ಯವಹಾರಸಮಾನನುಮಮಾನನುಮಲ್ಲದಿರ್ಪನೀಗಳಿಲ್ಲಿಗೇ ವಿಧೇಯಂ ಮಾೞ್ಪುದೆಂದು (ಶಾಂತಿಪು. ೨-೩೫ ವ). [ಸಂ.]

**ಅಮಾನತು** 'ಅಮಾನತ್ತು' ನೋ.

**ಅಮಾನತ್ತು, ಅಮಾನತು** (ನಾ). ೧. ಜಮಾಖರ್ಚುಗಳ ಲೆಕ್ಕಕ್ಕೆ ಸೇರಿಸದೆ ಹಾಗೆಯೇ ಇಟ್ಟಿರುವ ವಸ್ತು; ಬಳಸದೆ ಭದ್ರವಾಗಿಡುವ ವಸ್ತು; ನ್ಯಾಸ: ಅಯ್ಯಾ ಶೆಟ್ಟಿ ಈ ಗಂಟು ಅಮಾನತ್ತಾಗಿ ನಿನ್ನಲ್ಲಿಟ್ಟುಕೊಂಡಿರು (ಕಥಾಮಂ. ೬೧). ೨. (ಕೆಲಸಕ್ಕೆ ಸೇರಿಸಿಕೊಳ್ಳದೆ, ಸಂಪೂರ್ಣವಾಗಿ ತೆಗೆದುಹಾಕದೆ) ಅನಿಶ್ಚಯ ಸ್ಥಿತಿಯಲ್ಲಿ ತಾತ್ಕಾಲಿಕವಾಗಿ ತಡೆಹಿಡಿದಿರುವುದು: ಮೊದಲು ಅವನನ್ನು ಕೆಲಸದಿಂದ ಅಮಾನತ್ತು ಮಾಡಿ, ಆಸ್ತಿಪಾಸ್ತಿಗಳ ರುಜುವಾತು ಹೊರಡಿಸಬೇಕು (ಗೊಂಡಾರ. ೧೫೪); ಆಯಾ ಅಧಿಕಾರಿಗಳನ್ನು ಅಮಾನತ್ತು ಮಾಡಿ . . . ಕರೆದುಕೊಂಡು ಹೋದರು (ಮಾಮುರಾ. ೧೯೩). ೩. ಅನಿಶ್ಚಯಸ್ಥಿತಿ: ಮಾತೆಲ್ಲಾ ಅಮಾನತ್ತಿನಲ್ಲಿರುವುದು ಅಪಾರ್ಥಕ್ಕೆ ಕಾರಣ (ಚಂದತೋ. ೧೨೨). ೪. ನಂಬಿಕೆ (?). **ಅಮಾನತು** : ೫. ಪರೀಕ್ಷೆ; ತನಿಖೆ: ನಮ್ಮ ಕಷ್ಟ ಹೇಳತೀರದು ಸ್ವಾಮೀ, ಒಂದೊಂದು ವೇಳೆ ಅಧಿಕಾರಿಗಳು ಬಂದು ಅಮಾನತು ಮಾಡಿದರೆ ಅಸಲೇ ಇಲ್ಲ (ದೇಶಧು. ೮೩).
[← ಹಿಂ. ಪಾರ. ಅಮಾನತ್, ಅನಾಮತ್; **ಮರಾ.** ಅಮಾನತ್]

**ಅಮಾನತ್ತುದಾರ** (ನಾ). ಅಮಾನತ್ತಿನಲ್ಲಿ ವ್ಯವಹರಿಸುವವನು.
[ಅಮಾನತ್ತು + -ದಾರ್$_3$]

**ಅಮಾನತ್ತುದಾರಿ** (ನಾ). ನಂಬಿಕೆ: ಈ ಕೆಲಸವು ಅವರಿಂದ ಬಹಳ ಎಚ್ಚರಿಕೆಯಿಂದಲೂ ಅಮಾನತ್ತುದಾರಿಯಿಂದಲೂ ನಡೆದಿರುವದೆಂದು ನೋಡಬೇಕು (ಗ್ರಾಮಾಕ. ೫೩). [ಅಮಾನತ್ತು + -ದಾರಿ$_2$]

**ಅಮಾನಸಭೆ** (ನಾ). ಶಾಂತಿಸಭೆ: ಅಂತೆಯೇ ಮುಂದೆ 'ಅಮಾನಸಭೆ' ಎಂದು ಪ್ರಸಿದ್ಧವಾದ ರಾಜನಿಷ್ಠರ ಪ್ರಥಮ ಸಭೆಯನ್ನು ಶಿರಸಿಯಲ್ಲಿ ಸೇರಿಸಲಾಯಿತು (ಕರವೀ. ೨೨೮).
[ಅಮಾನ್$_0$ ℙ < ಅರ. ಅಮನ್ = ಶಾಂತಿ + ಸಭೆ]

**ಅಮಾನಸ್ಯ** (ನಾ). ದುಃಖ; ವ್ಯಥೆ; ಬಾಧೆ. [ಸಂ.]

**ಅಮಾನಿ** (ನಾ). ಗುತ್ತಿಗೆದಾರ ಮುಂತಾದವರಿಗೆ ವಹಿಸದೆ ಸರಕಾರವು ತನ್ನ ಮೇಲ್ವಿಚಾರಣೆಯಲ್ಲಿಯೇ ನಡೆಸುವ ವ್ಯವಹಾರ. 'ಅಮಾನಿವಿಚಾರಣೆ' ಪರಾ.
**ಅಮಾನಿಯಾಗು** = ನೇರವಾಗಿ ಸರಕಾರದ ಅಧೀನವಾಗು.
[← ಹಿಂ. ಅಮಾನೀ]

**ಅಮಾನಿಕಾಲುವೆ** (ನಾ). ಸರಕಾರದ ವಶದಲ್ಲಿರುವ ಕಾಲುವೆ (ಸ್ಯಾಂಡರ್). [ಅಮಾನಿ + ಕಾಲುವೆ]

**ಅಮಾನಿಕೆರೆ** (ನಾ). (ಯಾವ ಗ್ರಾಮದ ದಾಖಲೆಗೂ ಸೇರದೆ ಇರುವ) ಸರಕಾರದ ವಶದಲ್ಲಿರುವ ಕೆರೆ: ಗುಬ್ಬಿ ಅಮಾನಿಕೆರೆ (ರೂಢಿ).
[ಅಮಾನಿ + ಕೆರೆ$_2$ (< ಕೆಱೆ$_2$)]

**ಅಮಾನಿಗ್ರಾಮ** (ನಾ). ಸರಕಾರದ ಸ್ವಂತ ಮೇಲ್ವಿಚಾರಣೆಯಲ್ಲಿರುವ ಗ್ರಾಮ: ಅಮಾನಿ ಗ್ರಾಮಗಳಲ್ಲಿ ಅದಕ್ಕೆ ಅರ್ಜ ಬಾಜಾರಿ ನಿರಖಿನ ಪ್ರಕಾರ ಜಮಾಬಂದಿಗೆ ದಾಖಲು ಮಾಡಬೇಕು (ಮಹಾವಂ. II, ೬೨).
[ಅಮಾನಿ + ಗ್ರಾಮ]

**ಅಮಾನಿತ** (ಗು). ೧. ಗೌರವವಿಲ್ಲದ. ೨. ಮರೆಯಾದ; ಹೊರಟು ಹೋದ: ಪತಿವಿಯೋಗದಿಂ ನಿಜಜನನಿಯರನೆ ಪೋಲ್ತು . . . ನಿರಾನಂದ ಜನೋಪೇತೆಯುಂ ಅಮಾನಿತ ಹರ್ಷೋತ್ಕರ್ಷೆಯುಮಾಗಿರ್ದ ತನ್ನನ್ವಯ ರಾಜಧಾನಿಯಂ . . . ಎಯ್ದೆವಂದು (ಶಾಂತಿಪು. ೧-೯೩ ವ). [ಸಂ.]

**ಅಮಾನಿದವಸ** (ನಾ). ಸರಕಾರದ ಸ್ವಂತ ಹಿಡುವಳಿಯಲ್ಲಿರುವ ಭೂಮಿಯಿಂದ ಬಂದ ಧಾನ್ಯ: ಅಮಾನಿದವಸವನ್ನು ಜತನಮಾಡಿ ಲಾಭಬರುವಂತೆ ವಿಕ್ರಯಿಸುವುದು (ಮಹಾವಂ. II, ೫೮). [ಅಮಾನಿ + ದವಸ]

**ಅಮಾನಿದಾರ** (ನಾ). ಅಮಾನಿ ವಿಷಯಗಳ ಮೇಲ್ವಿಚಾರಕ (೩). [ಅಮಾನಿ + –ದಾರ್‌]

**ಅಮಾನಿವಿಚಾರಣೆ** (ನಾ). ಸರ್ಕಾರವೇ ನಡೆಸುವ ಮೇಲ್ವಿಚಾರಣೆ, —ಆಡಳಿತ: ರೆವಿನ್ಯೂ ಬಾಬೆಲ್ಲಾ ಅಮಾನಿ ವಿಚಾರಣೆಯಲ್ಲಿತ್ತು (ಮಹಾವಂ. II, ३೦). [ಅಮಾನಿ + ವಿಚಾರಣೆ]

**ಅಮಾನಿಸು** (ಕ್ರಿ). ತೆಗೆದುಹಾಕು; ಅಲಕ್ಷ್ಯಮಾಡು: "ರಾವಸಾಹೇಬರೆ, ನಾನು ನಿಮ್ಮ ಹುಕುಮನ್ನು ಎಂದೂ ಅಮಾನಿಸಿಲ್ಲ" (ಸ್ಕೂಲವಿ. ೪೫). [ಅಮಾನ + –ಇಸು₃]

**ಅಮಾನುಷ** (ಗು). ೧. ಮಾನುಷವಲ್ಲದ; ಮನುಷ್ಯರಿಗೆ ಸಂಬಂಧಪಡದ; ಭಯಂಕರವಾದ: ದುಃಖಮನನಂತಗುಣಂ ಕೇಳಲ್ಕಮಾನುಷಂ ನೆಜೆಯೆ ಪೇೞಲದನಾನಜೆಯೆಂ (ಸುಕುಮಾ. ೧೧–೪೮). ೨. ಮನುಷ್ಯರಿಗೆ ಮಾರಿದ; ಲೋಕೋತ್ತರವಾದ: ಪುರಶ್ರೀಯನಾತನಮಾನುಷಮುಮವಾಗ್ವಿಷಯಮುಮವರ್ಣನಾಗೋಚರಮುಮಾಗೆ ಬಣ್ಣಿಸುತ್ತುಂ (ಶಾಂತಿಪು. ३–೧೧ ವ). [ಸಂ.]

**ಅಮಾನುಷಕಾರ್ಯ** (ನಾ). = ಅಮಾನುಷ ಕೃತ್ಯ: ಅವಳು ತನ್ನ ತಪಶ್ಶಕ್ತಿಯಿಂದ ಅನೇಕ ಅಮಾನುಷಕಾರ್ಯಗಳನ್ನು ಮಾಡಬಲ್ಲಳು (ಕಲಾಧ. ೧೧೮). [ಅಮಾನುಷ + ಕಾರ್ಯ]

**ಅಮಾನುಷಕೃತ್ಯ** (ನಾ). ಕ್ರೂರವಾದ ಕೆಲಸ; ಮನುಷ್ಯರಿಗೆ ಯೋಗ್ಯವಲ್ಲದ ಕೆಲಸ. [ಅಮಾನುಷ + ಕೃತ್ಯ]

**ಅಮಾನುಷಖೇಳ** (ನಾ). ಮನುಷ್ಯರಿಗೆ ಯೋಗ್ಯವಿಲ್ಲದ, ಶಕ್ಯವಿಲ್ಲದ ಲೀಲೆಯುಳ್ಳವನು: ದಾರಕಮಲ್ಲನೆಲ್ಲಿದನಮಾನುಷಖೇಳನದೆಲ್ಲಿದಂ . . . ಅಬ್ಜಲೋಚನಂ (ಜಗವಿ. ३–೯೦). [ಅಮಾನುಷ + ಖೇಳ (= ಖೇಲ)]

**ಅಮಾನುಷಚರಿತ್ರ** (ನಾ). ಮನುಷ್ಯರಿಗೆ ಅಶಕ್ಯವಾದ ನಡವಳಿಕೆ: ಕೃಷ್ಣನಟ್ಟಿಯ ಕೂಸಾಟದೆ ಕಿಟ್ಟಮಾನುಷಚರಿತ್ರಂ ನೋೞ್ಪಗೋಪಾಲರೊಳ್ ಭಯಮುಮಂ ಮಾಡದೆ (ಜಗವಿ. ३–३೮). [ಅಮಾನುಷ + ಚರಿತ್ರ]

**ಅಮಾನುಷಿ** (ನಾ). ಮನುಷ್ಯ ಜಾತಿಗೆ ಸೇರದ ಹೆಣ್ಣುಜೀವ: ಕಲಿಸದೆ ಬರ್ಪುದು ಕೌಶಲಮಿಳೆಯೊಳಮಾನುಷಿಗಮರಿದ ಪೆಣ್ಗಳ ಮಾತೇಂ (ಶಾಕುಂತ. ೭೦–೧೨೨). [< ಸಂ. ಅಮಾನುಷೀ]

**ಅಮಾನ್ಯ** (ನಾ). ೧. ಗೌರವಕ್ಕೆ ಅರ್ಹನಲ್ಲದವನು; ಮರ್ಯಾದೆಗೆ ಪಾತ್ರವಲ್ಲದವನು: ಉತ್ತಮದ ಕವಿತೆಯನಮಾನ್ಯರ್ಗಿತ್ತು ಪೆಂಪಂ ಗುಂಪನುಜೆ ನೀಗುತ್ತ ಭವನಂ ಹೊಗಳದಳಿವರನೇನನೆಣಿಸುವೆನು (ಬಸವು. ೧–३೬) ೨. ಒಪ್ಪಿಗೆಯಾಗದಿರುವುದು; ಅಗೌರವ: ಅರಿಗಳತಿ ಹೆಚ್ಚಿದರು ಮೈಮಜೆದಿರಲು ಧರಣಿಗಮಾನ್ಯವಹುದಿನ್ನುರವಣಿಸಬೇಕೆಂದು ದುರ್ಯೋಧನನು ಚಿಂತಿಸಿದ (ಕುವ್ಯಾಉ. ೧–೧೬). [ಸಂ.]

**ಅಮಾಯಕ** (ನಾ). ಮಾಯೆಗೆ ಒಳಗಾಗದವನು: ವಿದ್ಯಾಧಿನಾಯಕಂ ತತಮತಿಸಹಾಯಕಂ ಸತತಾನಪಾಯಕಂ ಅಮಾಯಕಂ ಸಲಹುಗೆಮ್ಮಂ (ಉದ್ಭದೇ. ೧–೯). [ಸಂ.]

**ಅಮಾರ್ಗ** (ನಾ). ೧. ಮಾರ್ಗವಿಲ್ಲದಿರುವುದು. ೨. ಮಾರ್ಗವಲ್ಲದಿರುವುದು; ತಪ್ಪುದಾರಿ: ಆದರ್ಶದ ಮುಂದೆ ಅಮಾರ್ಗವನ್ನು ಕಂಡರೆ ಅವನಿಗೆ ಮೈ ಉರಿಯೇಳುವಂತೆ ತೋರುತ್ತದೆ (ಬಂಕಿಮ. ೧೫೪). ३. ತಪ್ಪುದಾರಿಯಲ್ಲಿ ನಡೆಯುವವನು (ದಕ. ೩). [ಸಂ.]

**ಅಮಾರ್ಜನೀಯ** (ಗು). ತೊಳೆಯಲಾಗದ; ಒರಸಲಾಗದ: ನಿಮ್ಮ ದೇಶಕ್ಕೆ ಇದೊಂದು ಅಮಾರ್ಜನೀಯವೆನಿಸಿದ ಲಜ್ಜಾಕರವಾದ ಕಳಂಕವೇ ಸರಿ (ಪಿಶಾಪ. ೧೫೫). [ಸಂ.]

**ಅಮಾವಸೆ** 'ಅಮವಾಸೆ' ನೋ.

**ಅಮಾವಸ್ಯೆ** (ನಾ). = ಅಮಾವಾಸ್ಯೆ: ನವಮಿ ಪಾಡ್ಯ ಚತುರ್ಥಿ ಪೌರ್ನಮಿಯು ಅಮಾವಾಸ್ಯೆ (ಗಗತಾ. ೪–೬೭). [< ಸಂ. ಅಮಾವಸ್ಯಾ]

**ಅಮಾವಾಸಿ** 'ಅಮವಾಸೆ' ನೋ.

**ಅಮಾವಾಸೆ** 'ಅಮವಾಸೆ' ನೋ.

**ಅಮಾವಾಸ್ಯೆ** (ನಾ). ಚಾಂದ್ರಮಾನ ತಿಂಗಳ ಕಡೆಯ ದಿನ; ಸೂರ್ಯನಿಗೂ ಚಂದ್ರನಿಗೂ ಅಡ್ಡಲಾಗಿ ನಡುವೆ ಭೂಮಿ ಬಂದು ರಾತ್ರಿಯಲ್ಲಿ ಚಂದ್ರನು ಕಾಣದ ದಿನ: ಅಮಾವಾಸ್ಯೆಯ ದಿನ ಚಂದ್ರನಿರುವುದೇ ಇಲ್ಲ (ಕಿಂಕಥೆ. ೧೧). [< ಸಂ. ಅಮಾವಾಸ್ಯಾ]

**ಅಮಾಸಿ** 'ಅಮವಾಸೆ' ನೋ.

**ಅಮಾಸೆ** 'ಅಮವಾಸೆ' ನೋ.

**ಅಮಿಕು** 'ಅಮುಂಕು' ನೋ.

**ಅಮಿತ** (ಗು). ೧. ಮಿತವಲ್ಲದ; ಅಳತೆಗೆ ಮಾರಿದ; ಬಹಳ: ಸುಲಲಿತ ಮಹಾಕಾಶವೆಂಬ ಬಯಲೊಳಮಿತ ತತ್ತ್ವಂಗಳೆಂಬ . . . ಚಪ್ಪರಂಗಳ ನಳವಡಿಸಿ (ಬಸಪು. ೮–३೭). (ನಾ). ೨. ಅಳತೆಗೆ ಸಿಕ್ಕದವನು: ಅಮಿತನಕ್ರಿಯನಹತನಭ್ರಮನು (ಕುವ್ಯಾಭೀ. ३–೫೯). [ಸಂ.]

**ಅಮಿತಭಗ** (ನಾ). ತುಂಬ ಭಾಗ್ಯಶಾಲಿ: ಆರ್ಯದರ್ಯವೃಷನ ಮಗನ್, ಶ್ರೀ ಕ್ಷಯಾರ್ಷನಮಿತಭಗನ್ (ಪಾರಶಿ. ೧–೧೨). [ಅಮಿತ + ಭಗ]

**ಅಮಿತಾಭ** (ಗು). ೧. (ಅತಿಯಾದ) ಕಾಂತಿಯಿಂದ ಕೂಡಿದ. (ನಾ). ೨. [ಬೌದ್ಧ] ಒಂದು ದೇವತೆ: ವೈರೋಚನ, ರತ್ನಸಂಭವ, ಅಮಿತಾಭ . . . ಈ ಐವರಿಗೂ . . . ಐವರು ಶಕ್ತಿ ದೇವತೆಗಳುಂಟು (ಕಶಾಅ. ೧೨೦). [ಸಂ.]

**ಅಮಿತಾಯುಷ್ಯ** (ನಾ). ದೀರ್ಘಾಯುಸ್ಸು: ಅಮಿತಾಯುಷ್ಯಂ ದೊರೆಕೊಂಡ ಮನುಜಂಗಖಿಳಮಂತ್ರ ದಿವ್ಯೌಷಧಿ ಸಿದ್ಧಿ (ಜಾತಕತಿ. ೮–೧೬). [ಅಮಿತ + ಆಯುಷ್ಯ]

**ಅಮಿತಾಯುಸ್ಸು** (ನಾ). = ಅಮಿತಾಯುಷ್ಯ. [ಅಮಿತ + ಆಯುಸ್ಸು]

**ಅಮಿತಾಳಾಪ** (ನಾ). ಮಿತವಲ್ಲದ ಮಾತು; ಅಧಿಕಪ್ರಸಂಗ: ಅಮಿತಾಳಾಪಂಗಳಿಂ ದೊಮ್ಮಳಿಸಿ ಕಿನಿಸಿ ಕೊಟ್ಟೊಳ್ಪ ತಾತ್ಪರ್ಯಮೇನ್ (ಸುಕುಮಾ. ೭–೯೦). [ಅಮಿತ + ಆಳಾಪ (= ಆಲಾಪ)]

**ಅಮಿತ್ರ** (ನಾ). ಮಿತ್ರನಲ್ಲದವನು; ಹಗೆ; ಶತ್ರು: "ಅಭಿಯಾತಿಃ, ಅರಾತಿಃ, ಅಮಿತ್ರಃ . . . –ಈ ೨೪ ಹಗೆ" (ಹಲಾಯು. ೭೫–३೦). [ಸಂ.]

**ಅಮಿದಿಡು** (ಕ್ರಿ). ಅಮೃತವನ್ನು ಬಡಿಸು, —ಹಾಕು (?): ಅಷ್ಟವಿಂಶತಿನಿರಯಕೋಟಿ ನಿಕೃಷ್ಟಯಾತನೆಗಳಿಗೆ ಭೃತ್ಯನನಟ್ಟಿ ನೋಡುವುದಳುಕಿದರೆ ನಿಮ್ಮಡಿಯ ಶಿಶುವಹೆನೆ ಒಟ್ಟವಿಸಿ ಕಿಱುಕುಳಕೆ ರಾಜ್ಯದ ಪಟ್ಟವನು ಕಟ್ಟಿದಡೆ ಮುರುಳಮಿದಿಟ್ಟ ಕಥೆಯಂತಿರಲಿ ನಿಮ್ಮಭಿಮತವೆ ಮತವೆಂದ (ನಿಭಾಗ. ೮–२೦–೪). [ಅಮಿದು₀ (< ಅಮುದು) + ಇಡು₁]

**ಅಮಿಲ್** 'ಅಮಲ್₂' ನೋ.

**ಅಮಿಲ್ದಾರ** 'ಅಮಲ್ದಾರ' ನೋ.

**ಅಮಿಷ** (ನಾ). ೧. ಮಾಂಸ. ೨. ಲೌಕಿಕಸುಖ; ವೈಭವ. ३. ಚಲನವಿಲ್ಲದಿರುವುದು. ೪. ನಿಷ್ಕಪಟ; ಪ್ರಾಮಾಣಿಕತೆ. [ಸಂ.]

**ಅಮಿಾಕ್ಷೆ** (ನಾ). = ಆಮೀಕ್ಷೆ: "ಆಜ್ಯಮುದಮೀಕ್ಷೆ [ಪಾಠಾಂ. ದಾಮೀಕ್ಷೆ] ಯಕ್ಕುಂ" (ಮಂಗರಾ. ೭೭–೧३). [< ಸಂ. ಅಮಿಕ್ಷಾ, ಆಮಿಕ್ಷಾ]

**ಅಮೀನ**(ನಾ). ೧. ಕಂದಾಯ ವಸೂಲಿಮಾಡುವ ಸಣ್ಣ ಅಧಿಕಾರಿ: (Bailiff. ಇಂಕನಿ). ೨. ನ್ಯಾಯಸ್ಥಾನದ ಆಜ್ಞೆಗಳನ್ನು ಜಾರಿ ಮಾಡುವ, ಸ್ವತ್ತನ್ನು ಜಫ್ತಿಮಾಡುವ, ತಕ್ಸೀರುದಾರನನ್ನು ಹಿಡಿಯುವ ಅಧಿಕಾರವುಳ್ಳವನು: ತಗಾದೆ ನೋಟೀಸನ್ನು ಜಫ್ತಿ ನೋಟೀಸನ್ನು, ಅಮಲ್‌ಜಾರಿ ನಡಸಲು ಭತ್ಯದ ಜವಾನನಿಗಾಗಲಿ, ಅಮೀನನಿಗಾಗಲಿ ವಹಿಸಿದಾಗ (ಗ್ರಾಮಾಕ. ೭೩); ಗುಮಾಸ್ತರು . . . ಅಮೀನರು, ಪೋಲೀಸಿನವರು— ಕೋರ್ಟು ಸುಸೂತ್ರವಾಗಿ ನಡೆಯಲು ಅಗತ್ಯವಾದ ಜನವೆಲ್ಲ ಅಲ್ಲಿದ್ದಿತು (ಇಣಿನೋ. ೧).
[← ಹಿಂ. ಅರ. ಮರಾ. ಅಮೀನ್]

**ಅಮೀರ** (ನಾ). ೧. ಹಣವಂತ; ಶ್ರೀಮಂತ: ಬದುಕಿದರೆ ಅಮೀರ ಕೆಟ್ಟರೆ ಫಕೀರ (ರೂಢಿ). ೨. ಸೇನಾಪತಿ; ಸರದಾರ.
[← ಹಿಂ. ಅರ. ಮರಾ. ಅಮೀರ್]

**ಅಮೀಲ** 'ಅಮಲ್₂' ನೋ.

**ಅಮುಂಕು**, ಅಮಿಕು, ಅಮುಕು, ಅಮುಗು, ಅವುಂಕು, ಅವುಕು, ಔಂಕು, ಔಕು (ಕ್ರಿ). ೧. ಅದುಮು; ಒತ್ತು; ಮೆಟ್ಟು; ಹಿಸುಕು: ಯಮುನಾನದೀ ತರಂಗಮನಮುಂಕಿ ವನಲತೆಯ ಮನೆಗಳಂ ಸೋಂಕಿ (ಪಂಪಭಾ. ೫–೫೩). **ಅಮಿಕು**: ೧. (೬). **ಅಮುಕು**: ೧. "ಹಿಚುಕು, ಒತ್ತು" (ಜಾನಕೋ. ೧೩); ಕೈಗಳನ್ನು ಹಿಡಿದು ಅಮುಕುತ್ತಾನೆ (ರಾಮಾನೆ. ೬೬). **ಅಮುಗು**: ೧. "ಹಿಚುಕು, ಒತ್ತು" (ಜಾನಕೋ. ೧೩). **ಅವುಂಕು**: ೧. ಆನೆ ರಿಪುಸೇನೆಗೆ ಸಾಲ್ವೆನವುಂಕಿ ಪೇಡಿ ಪಾಡಿ ಗಟ್ಟಿಱಿವೆಡೆಗೈಯ ಕೈಯುಗುರೆ ಸಾಲದೆ (ಕಾವ್ಯಸಾ. ೪೧೧; ಶೂದ್ರಕ). ಕಂಪನವುಂಕುತಿರ್ಪ ತೆಂಬೆಲರುಂ (ಪಂಪಭಾ. ೨–೧೨); ಕಾಲನವುಂಕಿ ಪತ್ತಿ ಪಿಡಿದೋವದೆ (ಧರ್ಮಾಮೃ. ೯–೧೮೧); ಅವುಂಕುವಂಗೆ ಜವನಂಕಿಸುವಂಗೆ ಸಿಡಿಲ್ (ಎಕ. XI, ದಾವಣ. ೪೩–೪೮; 1164); ನಿತ್ಯಬಿಂದುಗಳ್— ಅವುಂಕಿದಂ, ಕವುಂಕುಱ್ (ಶಮದ. ೩೬ ಪ್ರಯೋ); ದುಶ್ಚರಿತಂಗಳೊಳಾದ ಪಾಪದಿಂದೆನ್ನನವುಂಕಿ ಬಂದಲೆವ ದುಃಖಮುಂ (ಜೀವಸಂ. ೩–೬); ಕೊನೆವೆರಳಿಂ ಬಲದ ಮೊಲೆದುದಿಯವುಂಕಿ (ಸಾಳ್ವಭಾ. ೩–೧೩). ೨. [ಗಣಿತ] ಗುಣಿಸು: ಗುಣಿಸುವ ಭಾಷೆಗಳು ನೂಂಕು, ಅವುಂಕು, ಅಣೆ (ವ್ಯವಹಾ. ೧೧). **ಅವುಕು**: ೧. ಹಿಳುಕನವುಕಿದ ತುದಿವೆರಳ ನಡುಗಳದ ಕಪ್ಪಿನ ನೊಸಲ ನಯನದ ಬಲುಭುಜನ ನೋಡಾತನಶ್ವತ್ಥಾಮ (ಕುವ್ಯಾಭೀ. ೩–೧೧); ರಕ್ಕಸರಾಯನೆತ್ತಿದನೊಡನೆ ಬೊಬ್ಬಿಱಿದವುಕಿದನು ಮೊಳಕಾಲಲಾ ಧನುವ (ತೊರರಾ. ೧–೧೫–೨೧); ಇಟ್ಟ ಬಾಕಿನೊಳಾಗ ತರಿದಿರಿದವುಕುತಟ್ಟಿದರು (ಕಂನವಿ. ೧೭–೩೪). ೩. ಆಲಿಂಗಿಸು; ತಬ್ಬು: ಸವಿ ಮಾತು ಸೊಬಗು ಸುರಿಯುವ ಯುವತಿಯನು ಅವುಕದವರಾರು (ಸರ್ವಜ್ಞ. ೧೬೫೨). **ಔಂಕು**: ೧. ಕಳಿಂಗರಾಜ ಗಜಘಟೆಗಳನೌಂಕಿ ಸೊರ್ಕುತ್ತುಂ ಬರೆ (ಪಂಪಭಾ. ೧೧–೧೪೧ ವ); ಕುದುರೆಗಳುಂ ಆನೆಗಳುಂ ನೂಂಕಲೌಂಕಲುಂ ನಡೆವುವು (ಪಂಚತಂ. ೩೧–೧೧); ನಾಚಿದಳುಂಗುಟದಲೌಂಕುತ ಮಹೀತಳವ (ಕುವ್ಯಾಆ. ೩೧–೨೧); ಮಿಾನ್ಪುಲಿಗನೌಂಕಿದಡಳುಕುವುದೆ ಮಕರೇಶ (ತೊರರಾ. ೩–೭–೪೧). **ಔಕು**: ೧. ಔಕುವುದು ಬಲುನಿದ್ರೆ ನಿದ್ರೆಯ ನೂಕುವನು ಕಣ್ಣೆವೆಗಳಲಿ (ಕುವ್ಯಾಆ. ೨೨–೧೦); ಸವರಿದರು ಸವ್ಯಾಪಸವ್ಯದಲೌಕುವತಿಬಲರ (ತೊರರಾ. ೧–೧೧–೧೩).
[ದೇ ‖ ತಮಿ. ಅಮುಜ್ಕು, ಅಮುಕ್ಕು; ಮಲ. ಅಮುಕ್ಕು; ತುಳು. ಅಮುಪು, ಅವುಂಕು, ಅವುಂಪು]

**ಅಮುಕು** 'ಅಮುಂಕು' ನೋ.

**ಅಮುಕ್ತ** (ಗು). ೧. ಮುಕ್ತನಲ್ಲದ; ಬಿಡುಗಡೆಹೊಂದದ. (ನಾ). ೨. ಕಯ್ಯಲ್ಲಿ ಹಿಡಿದೇ ಬಳಸಬೇಕಾದ ಕತ್ತಿ, ಬಾಕು ಮುಂತಾದ ಆಯುಧ: "ಸುರಿಗೆ ಮೊದಲಾದುದು ಕೆಯ್ಯಿಂ ಬಿಡಲ್ಬಾರದು ಅಮುಕ್ತಮೆಂಬುದು" (ಹಲಾಯು. ೭೬–೩೦೮). [ಸಂ.]

**ಅಮುಖ್ಯ** (ಗು). ಮುಖ್ಯವಲ್ಲದ; ಸಾಮಾನ್ಯವಾದ. [ಸಂ.]

**ಅಮುಖ್ಯಕರ್ಮ** (ನಾ). [ವ್ಯಾಕ] ಕ್ರಿಯೆಗೆ ಇರಬಹುದಾದ ಎರಡು ಕರ್ಮಗಳಲ್ಲಿ ಮುಖ್ಯತೆ ಕಡಿಮೆಯಾದ ಎರಡನೆಯ ಕರ್ಮ. ℙ ಕರ್ಮಣೀ ಪ್ರಯೋಗದಲ್ಲಿ ಈ ಕರ್ಮಪದವು ತಾನಿದ್ದಂತೆಯೇ ಉಳಿದು ಮುಖ್ಯ ಕರ್ಮಪದವು ಮಾತ್ರ ಪ್ರಥಮಾವಿಭಕ್ತ್ಯಂತವಾಗುತ್ತದೆ. [ಅಮುಖ್ಯ + ಕರ್ಮ]

**ಅಮುಖ್ಯತೆ** (ನಾ). ಮುಖ್ಯವಲ್ಲದಿರುವುದು; ಸಾಮಾನ್ಯವಾಗಿರುವುದು: ಲಿಂಗತ್ರಯಕ್ಕೆ ತಮ್ಮೊಳ್ ಮುಖ್ಯತೆಯಮುಖ್ಯತೆಯುಮಿಲ್ಲ; ವಾಕ್ಯದ ಕಡೆಯೊಳಾವ ಲಿಂಗಮಿರ್ದೊಡದುವೆ ಮುಖ್ಯಮಕ್ಕುಂ (ಶಮದ. ೧೪೧ ವೃತ್ತಿ). [< ಸಂ. ಅಮುಖ್ಯತಾ]

**ಅಮುಗು** 'ಅಮುಂಕು' ನೋ.

**ಅಮುಚು** 'ಅಮರ್ಚು' ನೋ.

**ಅಮುದ** (ನಾ). ಅಸಂತೋಷ: ಈಶಭಕ್ತರ ವಿದಿತ ಕರುಣಾಕರುಣದಿಂದ ಜಹರಿಮುಖಾಮರರು ಮುದದೊಳಮುದದೊಳಿರ್ಪರೆಂದೊಡೆ (ಬಸವು. ೪–೪೫). [ಸಂ.]

**ಅಮುದು** 'ಅಮರ್ದು' ನೋ.

**ಅಮುಷ್ಯಾಯಣ** (ನಾ). ಆಚಾರಕ್ಕೆ ಪ್ರಸಿದ್ಧವಾದ ಉತ್ತಮ ವಂಶದಲ್ಲಿ ಹುಟ್ಟಿದವನು; ಕುಲೀನ: "ಆಚಾರಪ್ರಸಿದ್ಧನಪ್ಪಂಗೆ ಪುಟ್ಟಿದ ಮಗನಮುಷ್ಯಾಯಣಾಖ್ಯನಕ್ಕು" (ಮಂಗರಾ. ೭೪–೩).
[< ಸಂ. ಅಮುಷ್ಯಾಯಣ]

**ಅಮೂಢ**(ಗು). ಮೂಢನಲ್ಲದ. 'ಅಮೂಢದೃಷ್ಟಿತ್ವ' ಪರಾ. [ಸಂ.]

**ಅಮೂಢದೃಷ್ಟಿ** (ನಾ). [ಜೈನ] ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಒಂದು; ಜೈನಧರ್ಮವಲ್ಲದ ಇತರ ಧರ್ಮಗಳಲ್ಲಿ ಸ್ವಲ್ಪವೂ ಆಸಕ್ತಿಯಿಲ್ಲದಿರುವ ದೃಷ್ಟಿ. 'ಅಮೂಢದೃಷ್ಟಿತ್ವ' ಪರಾ.
[ಅಮೂಢ + ದೃಷ್ಟಿ]

**ಅಮೂಢದೃಷ್ಟಿತ್ವ** (ನಾ). [ಜೈನ] 'ಅಮೂಢದೃಷ್ಟಿ'ಯಿಂದ ಕೂಡಿರುವುದು: ಕುಹೇತು ದೃಷ್ಟಾಂತರಂಗಳಿಂ ದುರ್ಣಯಂಗಳು ತತ್ವಭಾಸಂಗಳಾಗಿರ್ದಡಂ ಮೋಹಿಸದಿರ್ಪುದು ಅಮೂಢದೃಷ್ಟಿತ್ವಂ (ಚಾವುಂಉ. ೨೬೧). [ಸಂ.]

**ಅಮೂರ್ತ** (ಗು). ೧. ರೂಪವಿಲ್ಲದ; ಆಕಾರರಹಿತನಾದ: ಲೋಕೈಕಪೂಜ್ಯರ್ ಪ್ರಸಿದ್ಧರಮೂರ್ತರ್ . . . ಸಿದ್ಧರನಂತರ್ ದಯೆಗೆಯ್ವರಕ್ಕೆಮಗೆ (ಸುಕುಮಾ. ೧–೨). (ನಾ). ೨. ನಿರಾಕಾರ. [ಸಂ.]

**ಅಮೂರ್ತರೂಪ** (ನಾ). ಆಕಾರವಿಲ್ಲದ ಸ್ಥಿತಿ; ನಿರಾಕಾರವಾದ ಸ್ವರೂಪ: ಬೃಹದಾರಣ್ಯಕಶ್ರುತಿಯು ಪರಮಶಿವನ ಮೂರ್ತ, ಅಮೂರ್ತ ರೂಪಗಳೆರಡನ್ನೂ ಪ್ರತಿಪಾದಿಸುತ್ತದೆ (ಶಕ್ತಿವಿ. ೨೩).
[ಅಮೂರ್ತ + ರೂಪ]

**ಅಮೂಲ** (ನಾ). ೧. ಮೂಲವಿಲ್ಲದುದು. ೨. ಆಧಾರವಿಲ್ಲದುದು.
[ಸಂ.]

**ಅಮೂಲ್ಯ** (ಗು). ಬೆಲೆಯಿಲ್ಲದ; ಬೆಲೆಯಿಷ್ಟೆಂದು ಹೇಳಲಾಗದ: ಕುಟುಂಬ ಜೀವನ ಮಕ್ಕಳಿಗೆ ಅಮೂಲ್ಯವೂ ಉಚಿತವೂ ಆದ ಶಿಕ್ಷಣ (ಶಿಕ್ಷದ. ೬೦). [ಸಂ.]

**ಅಮೂಲ್ಯತ್ವ** (ನಾ). ಬೆಲೆಯಿಲ್ಲದಿರುವಿಕೆ; ಬೆಲೆಯಿಷ್ಟೆಂದು ಹೇಳಲಾಗದ ಸ್ಥಿತಿ: ಅಂಪೇಟ್ದ ಚಂದ್ರಪ್ರಭೋದಯ ವಿಸ್ತಾರಿಯೆನಿಪ್ಪ ಕಾವ್ಯಮಿದಮೂಲ್ಯತ್ವಕ್ಕೆ ಪಕ್ಕಾಗದೇ (ಚಂದ್ರಪು. ೧–೬೫). [ಸಂ.]

**ಅಮೃಣಾಲ,** ಅಮೃಣಾಳ (ನಾ). "ಲಾಮಂಚದ ಬೇರು" (ಅಮರ. ಟೀಕೆ). **ಅಮೃಣಾಳ** (ಅಮರ). [ಸಂ.]

**ಅಮೃಣಾಳ** 'ಅಮೃಣಾಲ' ನೋ.

**ಅಮೃತ** (ಗು). **೧.** ಸತ್ತಿಲ್ಲದ. **೨.** ಸಾವಿಲ್ಲದ; ಶಾಶ್ವತವಾದ: ಜೀವನುಂ ಮೃತ ದುಃಖಿ ಅಮೃತಂ ದೇವನಾ ಜೀವನುಮುಶುದ್ಧನು ದೇವ ನತಿಶುದ್ಧನು (ಬಸವು. ೫೧–೨೯). (ನಾ). **೩.** ದೇವತೆ. **೪.** ಮೋಕ್ಷ. **೫.** ದೇವತೆಗಳ ಆಹಾರ; ಸುಧೆ: ಪರಮಾಣು ಮಾತ್ರಮಮೃತದ ಪರಿಸೇವನೆ ಘಟಿಸಲಮರದೇನಮರತ್ವಂ (ಪುಷ್ಪಪು.೧–೬೪); ಪರಮಾತ್ಮನು ಕೃಪೆಮಾಡಿದರೆ ವಿಷವು ಅಮೃತವಾಗುತ್ತದೆ (ಕಂಬಹು. ೨೧). **೬.** ವಿಷ ನಿವಾರಕವಾದ ಔಷಧ. **೭.** ಅನ್ನ; ಆಹಾರ. **೮.** ನೀರು. **೯.** ಹಾಲು. **೧೦.** ತುಪ್ಪ. **೧೧.** ಸಮುದ್ರ. **೧೨.** ಚಿನ್ನ. **೧೩.** ಪಾದರಸ. **೧೪.** ಒಳ್ಳೆಯ ಗುಣ. **೧೫.** ಬೇಡದಿರುವ ಭಿಕ್ಷೆ: "ಬೇಡುವುದು ಮೃತಜೀವನ, ಬೇಡದಿರುವುದು ಅಮೃತವು" (ಅಮರ. ಟೀಕೆ). **೧೬.** "ಯಜ್ಞಶೇಷ" (ಅಮರ. ಟೀಕೆ). **೧೭.** ಸೂರ್ಯ ಕಿರಣಗಳಲ್ಲಿ ಒಂದರ ಹೆಸರು. **೧೮.** ಚಂದ್ರ. **೧೯.** ವಾರಾಹಿಕಂದ. **೨೦.** ಅಮೃತಬಳ್ಳಿ. **೨೧.** ನೆಲ್ಲಿಗಿಡ: ಅರಿಷ್ಟಾಮೃತಾಗ್ನಿಮುಖಿ ಗಳ್ಮೆಱೆಗುಂ (ಹಮ್ಮಿರ. ೪–೭೦). **೨೨.** ಅಳಲೆಕಾಯಿ. **೨೩.** ತಲೆ ಕೂದಲು. **೨೪.** ಬಿಳಿಯ ಬಣ್ಣ. **೨೫.** ಧನ್ವಂತರಿ. **೨೬.** ಕಾಡ ಹೆಸರು ಗಿಡ. **೨೭.** ವಿಷ್ಣು. **೨೮.** ಶಿವ. **೨೯.** ಇಂದ್ರ. **೩೦.** ಆತ್ಮ. **೩೧.** ಪ್ರಜಾಪತಿ. **೩೨.** ವಿಷ; ವತ್ಸನಾಭ. **೩೩.** ಪರಬ್ರಹ್ಮ. **೩೪.** ನಾಲ್ಕು ಎಂಬ ಸಂಖ್ಯೆ. **೩೫.** ಯೋಗ್ಯ. **೩೬.** ಕುಮುದ. **೩೭.** ಆನೆ. **೩೮.** ಕುಚ. **೩೯.** ಮುನಿ. **೪೦.** ಒಂದು ಬಗೆಯ ಪಾನಕ: "ಅಪವರ್ಗಂ ನಿಶ್ರೇಯಸಮಪುನರ್ಭವಮಮೃತಮಕ್ಷರಂ ಮೋಕ್ಷಂ" (ವಸ್ತುಕೋ. ೨೧–೧೯); "ಜಲರೋಮ ಸಮುದ್ರಾಧ್ವರ ಬಿಳಿ ಯೋಗ್ಯಮಶೇಷ ಗುಣಗಳಮೃತಂ ಕಿರಣಂ ಸಲೆ ಮುಕ್ತಿಗಳೆಂಬಿವು ಜಗ ದೊಳು ದಶನಾಮಂಗಳಮೃತಶಬ್ದಮೆನಿಕ್ಕುಂ" (ನಾನಾಕಂ. ೩೩); "ವಾರಿ ಶಿರೋರುಹಾಂಬುನಿಧಿ ಯೋಗ್ಯಮಶೇಷ ಗುಣಾಧ್ವರಂ ಸುರಾಹಾರಮರೀಚಿ ಮುಕ್ತಿ ಸಿತಮಿಂದುವಿನಲ್ಲಮೃತಾಭಿಧಾನಂ" (ನಾನಾರ. ೫). [ಸಂ.]

**ಅಮೃತಂಬಡೆ** (ಕ್ರಿ). ಅಮೃತವನ್ನು ಹೊಂದು, —ಪಡೆ: ತಡೆಯದೆ ಮುದದಿಂದಮೃತಂಬಡೆದುಮುಣಲ್ಪಡೆಯರೆಂಬ ನಾಣ್ಣುಡಿಯೆನ್ನೊಳ್ ದೃಢಮಾದುದು (ಧರ್ಮಾಮೃ. ೨–೧೫೪). [ಅಮೃತ + ಪಡೆ$_1$]

**ಅಮೃತಕರ** (ನಾ). **೧.** ಅಮೃತಮಯವಾದ ಕಿರಣಗಳುಳ್ಳವನು; ಚಂದ್ರ: ಪೊಳೆವಮೃತಕರನ ಕಿರಣದ ಬೆಳವಿಗೆ (ಪುಷ್ಪಪು. ೮–೬೯). **೨.** ವೈದ್ಯ. **೩.** ವಾಸುಕಿ. **೪.** ಅಸುರ. **೫.** ದೇವತೆ. **೬.** ಶಿವ. **೭.** ಸಮುದ್ರ: "ಪಾವಸುರಂ ಶಶಿವೈದ್ಯನು ದೇವತೆಗಳು ಶಿವ ಸಮುದ್ರ ವೇಳಮೃತಕರಂ" (ನಾನಾಕಂ. ೭೭); "ಹಿಮಕರ ವೈದ್ಯ ವಾಸುಕಿ ಸುರಾ ಸುರರಂಬುಧಿ ಕೃತ್ತಿವಾಸನುಂ ಅಮೃತಕರಾಭಿಧಾನ" (ನಾನಾರ. ೩೬). [ಅಮೃತ + ಕರ$_4$]

**ಅಮೃತಕರ ಶಿಲೆ** (ನಾ). ಚಂದ್ರಕಾಂತ ಶಿಲೆ; ಅಮೃತ ಶಿಲೆ: ಕರುಮಾಡಂ ಕಣ್ಗೆವಂದತ್ತಮೃತಕರ ಶಿಲಾನಿರ್ಮಿತಂ (ರಾಜಶೇ. ೨–೧೩೮). [ಅಮೃತಕರ + ಶಿಲೆ]

**ಅಮೃತಕಲಶ,** ಅಮೃತಕಳಶ (ನಾ). ಅಮೃತದ ಪಾತ್ರೆ: ಗರುಡನು ಅಮೃತಕಲಶವನ್ನು ಒಯ್ಯುತ್ತಿರುವಾಗ ಒಂದು ಬಿಂದುವು ಕೆಳಕ್ಕೆ ಬಿದ್ದು ವಿಷ್ಣುಸಾಗರವಾಯಿತು (ಹೊಯ್ಸವಾ. ೨೦). **ಅಮೃತಕಳಶ:** ಮೇಲಿರುವ ಛತ್ರಾಕಾರದ ಕಲ್ಲಿನ ಮೇಲೆ ಅಮೃತಕಳಶ ಮತ್ತು ಶಲಾಕೆ ... ಇರುತ್ತವೆ (ಹೊಯ್ಸವಾ. ೧೬). [ಅಮೃತ + ಕಲಶ]

**ಅಮೃತಕಲ್ಪ** (ನಾ). **೧.** ಅಮೃತಕ್ಕೆ ಸಮಾನವಾದುದು; ಅಮೃತ ಸದೃಶವಾದುದು. **೨.** ಒಂದು ಬಗೆಯ ಲೇಹ್ಯ: ಚಕ್ರೇಶ್ವರಂ... ಅಮೃತವೆಂಬ ಪಾನದಿಂದಂ ಅಮೃತಕಲ್ಪಮೆಂಬ ಲೇಹ್ಯದಿಂದಂ... ನೆಱೆದು (ಶಾಂತಿಪು. ೧೧–೬೪ ವ). [ಅಮೃತ + ಕಲ್ಪ]

**ಅಮೃತ ಕಳಶ** 'ಅಮೃತಕಲಶ' ನೋ.

**ಅಮೃತ ಕಿರಣ** (ನಾ). ಚಂದ್ರ: ಶ್ರೀಮಚ್ಚಳುಕ್ಯವಂಶವ್ಯೋಮಾಮೃತ ಕಿರಣನೆನಿಪ ಕಾಂತಿಯನೊಳಕೊಂಡೀ... ಯುದ್ಧಮಲ್ಲಂ ನೆಗೞ್ದಂ (ಪಂಪಭಾ. ೧–೧೫). [ಅಮೃತ + ಕಿರಣ]

**ಅಮೃತಕುಂಭ** (ನಾ). = ಅಮೃತಕಲಶ. [ಅಮೃತ + ಕುಂಭ]

**ಅಮೃತಗಣ** (ನಾ). [ಛಂದ] ಜಗಣ ಹೊರತಾಗಿ ಉಳಿದ ನಾಲ್ಕು ಮಾತ್ರೆಯ ಗಣಗಳು: ತಾಳಮಾನ ಸರಿಸವನಱಿಯೆ ಓಜೆ ಬಜಾವ ಣೆಯ ಲೆಕ್ಕವನಱಿಯೆ ಅಮೃತಗಣ ದೇವಗಣವನಱಿಯೆ (ಬಸವ. ೯೯೪). [ಅಮೃತ + ಗಣ]

**ಅಮೃತಗರ್ಭ** (ನಾ). **೧.** ಅಮೃತವನ್ನುಳ್ಳುದು. **೨.** ಒಂದು ಬಗೆಯ ತುಪ್ಪ: ಅಮೃತಗರ್ಭಂಗಳೆಂಬ ಸದ್ಯೋಘೃತಮುಂ (ಆದಿಪು. ೧೫–೩ ವ). [ಅಮೃತ + ಗರ್ಭ]

**ಅಮೃತಗಳಿಗೆ** (ನಾ). ಪ್ರಶಸ್ತವಾದ ವೇಳೆ; ಒಳ್ಳೆಯ ಗಳಿಗೆ: ಅದು ಪ್ರಕಟವಾದ ಗಳಿಗೆ ಅಮೃತಗಳಿಗೆ; ಅದನ್ನು ರಚಿಸಿದ ಹಸ್ತ ಅಮೃತಹಸ್ತ (ಹೊಂಗಳು. V, ಮು). [ಅಮೃತ + ಗಳಿಗೆ (< ಗಟಿಗೆ)]

**ಅಮೃತಗಿರಿ** (ನಾ). ದೇವತೆಗಳ ಬೆಟ್ಟ; ಮೇರುಪರ್ವತ: ಅಮೃತ ಗಿರಿಯ ಮೇಲೆ ಅಮರ ಸಮೂಹವು ಸಮ[ನೋ] ಗಮನದ ಸಕಲ ಸನ್ನಿಹಿತನು (ಶಿವಗೀ. ೫೩–೨೫೩). [ಅಮೃತ + ಗಿರಿ$_1$]

**ಅಮೃತಗೋಪುರ** (ನಾ). ಪ್ರಶಸ್ತವಾದ ಗೋಪುರ: ನಿಮ್ಮ ದೀಪ್ಯ ದೈವೀ ಪ್ರಜ್ಞೆಯಮೃತಗೋಪುರಕೇರ್ವವೋಲ್! (ಶ್ರೀರಾಮಾ. IV). [ಅಮೃತ + ಗೋಪುರ]

**ಅಮೃತಜಲಧಿ** (ನಾ). ಅಮೃತ ಸಮುದ್ರ; ಕ್ಷೀರಸಮುದ್ರ; ಹಾಲಿನ ಕಡಲು: ಅನ್ನೆಗಮುತ್ತಲಮೃತಜಲಧಿ ವೇಳೆಯಿಂ ಪೊಱಮಡುವ ಶೇಷ ನಂತೆ ಚಂದ್ರಕಾಂತದಮಂದುರದಿಂ ಪೊಱಮಟ್ಟು (ಮಲ್ಲಿಪು. ೮–೧೪೮). [ಅಮೃತ + ಜಲಧಿ]

**ಅಮೃತತತ್ತ್ವ** (ನಾ). ಪ್ರಶಸ್ತವಾದ ತತ್ತ್ವ; ಶ್ರೇಷ್ಠವಾದ ಸತ್ಯ: ಈ ಅಮೃತ ತತ್ತ್ವವೇ ಈಗ ನರಹರಿಯು ಕಂಡ ಚಿರಂತನ ಸತ್ಯವಾಯಿತು (ಸಮಜೀ. ೯೩೦). [ಅಮೃತ + ತತ್ತ್ವ]

**ಅಮೃತತೀರ್ಥ** (ನಾ). ಪ್ರಶಸ್ತವಾದ ತೀರ್ಥ; ಶ್ರೇಷ್ಠವಾದ ಪುಣ್ಯತೀರ್ಥ: ಎಲೆ ಕುರುಕ್ಷೇತ್ರಮೇ ಅಮೃತತೀರ್ಥಂಗಳೇ ಆರ್ಯ ನಗರಂಗಳೇ, ಸ್ವರ್ಗಂಗಳೇ, ದಿವ್ಯಜನಮೇ ಮನಮೆ... ಪುಡಿ ಯೊಳಗೆ ಪುಡಿಯ ಪುಡಿಯಾದೆನ್ (ಅಶ್ವತ್ಥಾ. ೧೯–೪). [ಅಮೃತ + ತೀರ್ಥ]

**ಅಮೃತತ್ವ** (ನಾ). ನಾಶವಿಲ್ಲದಿರುವುದು; ಸಾವಿಲ್ಲದಿರುವುದು: ಮನುಜನಸುವಮೃತತ್ವವಂ ಪಡೆದನುವಹುದು (ಬಸವು. ೪೨–೬೩). [ಸಂ.]

**ಅಮೃತದೃಷ್ಟಿ** (ನಾ). ಶಾಶ್ವತವಾದ ಸತ್ಯವನ್ನು ಕಾಣುವ ದೃಷ್ಟಿ: ಆ ಅಮೃತದೃಷ್ಟಿಯಲಿ ದಿವ್ಯ – ಸೃಷ್ಟಿಯಲಿ ನೆರೆದು ತೆರೆದು ನೋಡು (ಹೃದಸ. ೩–೧೨). [ಅಮೃತ + ದೃಷ್ಟಿ]

**ಅಮೃತದ್ಯುತಿ** (ನಾ). = ಅಮೃತ ಕಿರಣ: ಅಮೃತದ್ಯುತಿಬಿಂಬಮೋ ಪೇಟಿನೆ ಮೆಱೆದುದು... ಮುಖಂ ನರೇಂದ್ರಾತ್ಮಜನಾ (ರಾಜಶೇ. ೧೪–೬೨). [ಅಮೃತ + ದ್ಯುತಿ]

**ಅಮೃತದ್ರವ** (ನಾ). ಅಮೃತದ ದ್ರವ: ನವ ಶಶಿಕಳೆಗಳನಮೃತದ್ರವಂಗಳೊಳ್ ತೀವಿ ತೀವಿ ನಿಜಿಸಿದರೆನೆ (ಶಾಂತಿಪು. ೧-೬೨). [ಅಮೃತ + ದ್ರವ]

**ಅಮೃತಪಡಿ** (ನಾ). ದೇವರಿಗೆ ಇಡುವ ನೈವೇದ್ಯ: ಈ ಕ್ಷೇತ್ರದೊಳಗೆ ಶ್ರೀಹಿಡಿಂಬೇಶ್ವರ ದೇವರ ಅಮೃತಪಡಿಗೆ ಗದ್ದೆ ಕೊಳಗ ಹತ್ತು (ಎಕ. XI, ಚಿತ್ರದು. ೧೨-೨೬; 1286); ಮಠಕೆ ಶಾಂತಿಗೆ ನಡವ ಅಕ್ಕಿಗದೆ ಅಮ್ರು[ಮೃ]ತಪಡಿಗೆ ನಡವ ಅಕ್ಕಿಯ ನಳಿದವರು (ಸೌಇಇ. IX-ii, ೪೬೦-೬೦; 1482); ಶ್ರೀ ವಿಠಲದೇವರ ಅಮ್ರು[ಮೃ]ತಪಡಿ (ಸೌಇಇ. IV, ೨೬೫-೨; 1561); ದೇವಸ್ಥಾನ ಕ್ಕಿಕ್ಕೆ ಅಮೃತಪಡಿ ನಂದಾದೀಪ್ತಿ ಮುಂತಾದ ದೇವತಾವೆಚ್ಚಕ್ಕೆ (ಎಕ. VII, ಶಿವಮೊ. ೨-೮೨; 1641). [ಅಮೃತ + ಪಡಿ$_1$]

**ಅಮೃತಪದ** (ನಾ). ಮೋಕ್ಷಪದವಿ; ಶಾಶ್ವತವಾದ ಸ್ಥಾನ: ಬೇಗಮೆಂದರ್ ನಾಗಶ್ರೀಕನ್ನೆಯಂ ಚೆನ್ನೆಯನಮೃತಪದಾಸನ್ನೆಯಂ ವರ್ಣ್ಣಿನಾಥರ್ (ಸುಕುಮಾ. ೬-೪೮). [ಅಮೃತ + ಪದ$_2$]

**ಅಮೃತಪಯೋಧಿ** (ನಾ). = ಅಮೃತಜಳಧಿ: ಅಮೃತಪಯೋಧಿ ಮಂಥನದೆ ಪುಟ್ಟಿದೆಂ . . . ಅಂ ಕಮಲೆಯೆಂ (ಗದಾಯು. ೯-೪). [ಅಮೃತ + ಪಯೋಧಿ]

**ಅಮೃತಪಿಂಡ** (ನಾ). ಅಮೃತದ ಉಂಡೆ: ಪರಮ ಸುಖಾಮೃತಪಿಂಡದ ದೊರೆ ಮೂಱು ಮೊಬಂ ಶರೀರಮಾಗಿಪ್ಪ (ಶಾಂತಿಪು. ೪-೧೧೫). [ಅಮೃತ + ಪಿಂಡ]

**ಅಮೃತಫಲ, ಅಮೃತಫಳ** (ನಾ). **೧.** ಅತ್ಯಂತ ಶ್ರೇಷ್ಠವಾದ ಫಲ; ತುಂಬ ರುಚಿಕರವಾದ ಹಣ್ಣು. **೨.** ಮೋಕ್ಷದ ಹಣ್ಣು: ಮರಣವೃಕ್ಷದೊಳಮೃತಫಲದಂತೆ ತೂಗುತಿರೆ (ಗೂಲ್ಗೊಥಾ. ೧೨-೧). **೩.** ರಾಮಫಲ (ಮೈಔಗಿ. ೬-೧೬೩). **ಅಮೃತಫಳ: ೨.** ಕಂಡವರ ಕಣ್ಣಮಣಿ ಎತ್ತಿದರ ಹಸ್ತದಮೃತಫಳಂ ಮುಟ್ಟಿದರ ಮೆಯ್ಯ ಪುಳಕಂ (ನಂಬಿರ. ೨-೨). [ಅಮೃತ + ಫಲ]

**ಅಮೃತಫಳ** 'ಅಮೃತಫಲ' ನೋ.

**ಅಮೃತಬಳ್ಳಿ** (ನಾ). ಅಮರದ ಬಳ್ಳಿ; ಕೋಡಬಸಳೆ. [ಸಂ. ಅಮೃತವಲ್ಲೀ]

**ಅಮೃತಭಕ್ಷ್ಯ** (ನಾ). **೧.** ಅಮೃತಸಮಾನವಾದ ಭಕ್ಷ್ಯ. **೨.** ಒಂದು ಬಗೆಯ ಭಕ್ಷ್ಯ: ಅಮೃತಭಕ್ಷ್ಯಂಗಳೆಂಬ ರುಚಿಭಕ್ಷ್ಯಂಗಳಿಂದಂ (ಶಾಂತಿಪು. ೧೧-೮೪ ವ). [ಅಮೃತ + ಭಕ್ಷ್ಯ]

**ಅಮೃತಭವ** (ಗು). **೧.** ಅಮೃತ ಸಮುದ್ರದಲ್ಲಿ ಹುಟ್ಟಿದ; ಹಾಲಿನ ಕಡಲಿನಲ್ಲಿ ಹುಟ್ಟಿದ. (ನಾ). **೨.** ಅಮೃತ ಸಮುದ್ರದಲ್ಲಿ ಹುಟ್ಟಿದವನು; ಚಂದ್ರ: ಅಮೃತಭವಂ ಶಿಶಿರಕರಂ ಕಮಳಂ ಜಗದೇಕಪಾವನೀಯಶ್ರೀಕಂ ಸಮನವಜೊಳ್ ನಿನ್ನ ಮೊಗಂ (ಕವಿರಾ. ೩-೭೪). [ಸಂ.]

**ಅಮೃತಮಥನ** (ನಾ). ಅಮೃತಕ್ಕಾಗಿ ಸಮುದ್ರವನ್ನು ಕಡೆಯುವುದು; ಹಾಲಿನ ಕಡಲನ್ನು ಕಡೆಯುವುದು: ಸುರರುಂ ದೈತ್ಯಾಳಿಯುಂ ಮಾಳ್ಪಮೃತಮಥನದೊಳ್ (ನಂಬಿರ. ೧-೧). [ಅಮೃತ + ಮಥನ]

**ಅಮೃತಮಯೂಖ** (ನಾ). = ಅಮೃತಕಿರಣ: ರೋಗಂ ಸಮನಿಸುಗುಂ ಮನುಜಂಗಮೃತಮಯೂಖಾಪತ್ಯ ದಶೆಯೊಳ್ (ಜಾತತಿ. ೯-೨೪). [ಅಮೃತ + ಮಯೂಖ]

**ಅಮೃತಮರೀಚಿ** (ನಾ). = ಅಮೃತ ಕಿರಣ: ಅಮೃತಮರೀಚಿಯಿಲ್ಲದಂಬರಚಕ್ರಂ. . . ರಂಜಿಕುಮೇ (ಜಗನಿ. ೨-೬೬). [ಅಮೃತ + ಮರೀಚಿ]

**ಅಮೃತಮಹಲ್** (ನಾ). **೧.** ಉತ್ತಮವಾದ ಒಂದು ತಳಿಯ ಹಸುಗಳ ಜಾತಿ. **೨.** ಸರ್ಕಾರಕ್ಕೆ ಸೇರಿದ ಅರಣ್ಯಪಶುಗಳ ಮಂದೆ; ಸರ್ಕಾರವು ಪೋಷಿಸುತ್ತಿರುವ ಕಾಡಹಸುಗಳ ಗುಂಪು. **೩.** ಮೈಸೂರು ಅರಮನೆಯಲ್ಲಿ ಒಂದು ಶಾಖೆ.

**ಅಮೃತಮಹಲ್‌ಕಚೇರಿ** = ಅಮೃತಮಹಲ್ ವಿಭಾಗದ ಕಚೇರಿ; ಅರಣ್ಯ ಪಶುಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವ ಅಧಿಕಾರಸ್ಥಾನ: ಅಂಚೆ ಅಮೃತಮಹಲ್ ಕಚೇರಿಬಕ್ಷಿ ತಿಪ್ಪಯ್ಯ (ಎಕ. XIV, ಚಾಮರಾ. ೨೪೦-೧; 1868). [ಅಮೃತ + ಮಹಲ್]

**ಅಮೃತರಸಾಯನ** (ನಾ). ಒಂದು ಬಗೆಯ ಪಾನಕ: ಅಮೃತರಸಾಯನಮೆಂಬ ಪಾನಮಂ (ಆದಿಪು. ೧೫-೩ವ). [ಅಮೃತ + ರಸಾಯನ]

**ಅಮೃತರೇಖೆ** (ನಾ). [ಜ್ಯೋತಿ] ಹಸ್ತದಲ್ಲಿರುವ ಒಂದು ಗೆರೆ. [ಅಮೃತ + ರೇಖೆ]

**ಅಮೃತಲೋಕ** (ನಾ). ಶಾಶ್ವತವಾದ ಲೋಕ: ತ್ರಿಶರೀರಂಗಳೆಂಬ ಸೆಱೆಮನೆಗಳ ಸುಟ್ಟು ವಶಮಾಡಿಕೊಂಡೆಂಟು ಗುಣವಾ ವಶವಲ್ಲದಮೃತಲೋಕವನೊಂದೆ ಸಮಯದೊಳಶರೀರಾತ್ಮನೆಯ್ದುವನು (ಭರಚ. ೬೮-೮೯). [ಅಮೃತ + ಲೋಕ]

**ಅಮೃತವರ್ಷ** (ನಾ). ಅಮೃತದ ಮಳೆ: ಶ್ರೀ ಧರ್ಮಾಮೃತವರ್ಷ ಮನೀ ಧಾತ್ರೀತಳದ ಭವ್ಯ ಸಸ್ಯಕಮುಮ್ಮಾಬಾಧಂ ಕಳೆದಂ (ಸುಕುಮಾ. ೯-೧). [ಅಮೃತ + ವರ್ಷ]

**ಅಮೃತವಲ್ಲಿ, ಅಮೃತವಳ್ಳಿ** (ನಾ). ಅಮರದ ಬಳ್ಳಿ ಗಿಡ; ಕೋಡಬಸಳೆಹಂಬು. **ಅಮೃತವಳ್ಳಿ**: ಮಂಜಿಷ್ಠೆಯಳ್ಳು ಅಮೃತವಳ್ಳಿಯಲೆಗಳು . . . ಇವುಗಳಂ ಅರದು (ಸೌಗಂಧಿ. ೪೩೬-೧). [ಸಂ. ಅಮೃತವಲ್ಲೀ]

**ಅಮೃತವಳ್ಳಿ** 'ಅಮೃತವಲ್ಲಿ' ನೋ.

**ಅಮೃತವಾಕ್ಯ** (ನಾ). ಅಮೃತದಂತೆ ಇಂಪಾದ ಮಾತು; ಪ್ರಶಸ್ತವಾದ ವಾಕ್ಯ: ಅಮೃತವಾಕ್ಯದಿಂದಂ ನುಡಿದನಾಚಾರ್ಯನು (ವೀಶೈಪು. ೨-೮-೧೧). [ಅಮೃತ + ವಾಕ್ಯ]

**ಅಮೃತವಾಣಿ** (ನಾ). ರಸಮಯವಾದ ಮಾತು; ಶಾಶ್ವತವಾಗಿ ನಿಲ್ಲುವ ಮಾತು: ವಚನಕಾರ್ತಿಯರು ತಮ್ಮ ಅನುಭವದ ಅಮೃತವಾಣಿಯನ್ನು ಬಿತ್ತರಿಸಿದರು (ಕರ್ಣಾಕ. ೧೧೫). [ಅಮೃತ + ವಾಣಿ]

**ಅಮೃತವಾರ್ಧಿ** (ನಾ). = ಅಮೃತಜಳಧಿ: ಮೇರೆದಪ್ಪಿದ ರತಾಮೃತವಾರ್ಧಿಯನೀಸಿ ಮೂಡುತುಂ ಮುಱುಗುತುಮಿರ್ಪರ್ (ಶಾಂತಿಪು. ೬-೧೨೦). [ಅಮೃತ + ವಾರ್ಧಿ]

**ಅಮೃತವಿಗ್ರಹ** (ನಾ). ಸ್ಥಿರವಾದ ಶರೀರವುಳ್ಳವನು; ಸುಂದರವಾದ ಶರೀರವುಳ್ಳವನು: ಹಿಮಕಿರಣಶಕಲಾಭರಣನಜನಮ್ರು[ಪಾಠಾಂ. ಮ್ರಿ]ತ ವಿಗ್ರಹನು (ಬಸಪು. ೨೬-೪೫). [ಅಮೃತ + ವಿಗ್ರಹ]

**ಅಮೃತವೃಷ್ಟಿ** (ನಾ). = ಅಮೃತವರ್ಷ: ಕುಸುಮಾನಿಗೆ ಅಮೃತವೃಷ್ಟಿಯಾದಷ್ಟು ಆನಂದವಾಗುತ್ತಿತ್ತು (ಸಮುಜೀ. ೧೧೧೯). [ಅಮೃತ + ವೃಷ್ಟಿ]

**ಅಮೃತಶಿಲೆ** (ನಾ). ಸ್ವಚ್ಛವಾದ ಒಂದು ಬಗೆಯ ಕಲ್ಲು; ಚಂದ್ರಕಾಂತಶಿಲೆ; (ಉಕ) ಸಂಗಮವರಿ ಕಲ್ಲು: ಮನೆಗಳಲ್ಲಿ. . .ಸಿಮೆಂಟ್ ನೆಲ, ಮಣ್ಣಿನನೆಲ, ಐಶ್ವರ್ಯವಂತರು ನೆಲಕ್ಕೆ ಅಮೃತ ಶಿಲೆಯನ್ನು ಹಾಕಿಸಿಕೊಳ್ಳುವರು (ಗೃಹವಿ. ೧೬೧). [ಅಮೃತ + ಶಿಲೆ]

**ಅಮೃತಸಂಧಿ** (ನಾ). ಅತ್ಯುತ್ತಮವಾದ ಮತ್ತು ಪ್ರಶಸ್ತವಾದ ಅವಕಾಶ; ಮಂಗಳಕರವಾದ ಸಮಯ: ಎಂಥ ವಿಷವೇಳೆಯಲ್ಲಿ ಈ ಅಮೃತಸಂಧಿಯನ್ನು ಹುಡುಕಿರುವೆನೆಂಬುದು ನರಹರಿಗೆ ಗೊತ್ತಿತ್ತು (ಸಮುಜೀ. ೨೫೫). [ಅಮೃತ + ಸಂಧಿ]

**ಅಮೃತಸಾನ್ನಾಯ್ಯ** (ನಾ). ರುಚಿಕರವೂ ಶ್ರೇಷ್ಠವೂ ಆದ ಹವಿಸ್ಸು; ಪ್ರಶಸ್ತವಾದ ಹವಿಸ್ಸು : ಅಮೃತಸಾನ್ನಾಯ್ಯಾಜ್ಯದಿಂ ಗಂಧತೋಯದಿ ನಾಪ್ತಾಂಘ್ರಿಯನಾದಮರ್ಚಿಸಿದರಾ ಶ್ರೀ ದೇ ವ ನ ುಂ ದೇ ವಿ ಯು ಂ (ಶಾಂತಿಪು. ೭–೩೬). [ಅಮೃತ + ಸಾನ್ನಾಯ್ಯ]

**ಅಮೃತಸಾರಜ** (ನಾ). ಕಾಕಂಬಿ; ಸಕ್ಕರೆ ಪಾಕ. [ಸಂ.]

**ಅಮೃತಸೇಚನೆ** (ನಾ). ಅಮೃತವನ್ನು ಚಿಮುಕಿಸುವುದು : ಮಂಥರೆಯ ಮೃತ್ಯುವಿಗೆ ತಾನಮೃತಸೇಚನೆಯಾಯ್ತು (ಶ್ರೀರಾಮಾ. ೨೩–೬೧೦). [ಸಂ. (ಅಮೃತ + ಸೇಚನ)]

**ಅಮೃತಸೋದರ** (ನಾ). ೧. ಅಮೃತದ ಜತೆಯಲ್ಲಿ ಹುಟ್ಟಿದವನು. ೨. ಉಚ್ಚೈಃಶ್ರವ. ೩. ಕುದುರೆ. ೪. ಮೊಲ (?). [ಅಮೃತ + ಸೋದರ]

**ಅಮೃತಸ್ಯಂದಿ** (ನಾ). ಅಮೃತವನ್ನು ಚೆಲ್ಲುವುದು, —ಹೊರಚೆಲ್ಲುವುದು : ಕರ್ಣಾಮೃತಸ್ಯಂದಿಗಳಪ್ಪ ನುಡಿಗಳಂ ನರೇಂದ್ರಂ ನುಡಿಯಲೊಡಂ (ಚಂದ್ರಪ್ರ. ೭–೬೬ ವ). [< ಸಂ. ಅಮೃತಸ್ಯಂದಿನ್]

**ಅಮೃತಸ್ವರ** (ನಾ). ಇಂಪಾದ ದನಿ; ಮಧುರಧ್ವನಿ : ನಂಬಿಯಣ್ಣನ ಕೈವಿಡಿದು ಪರವೆಯರ ಪ್ರಾಣಮಂ ಪಿಡಿತಪ್ಪಂತೆ ನಡೆತಂದಮೃತಸ್ವರದಿಂ ತೆಗೆ ಕದವನೆನಲ್ (ನಂಬಿರ. ೧೬–೪೨). [ಅಮೃತ + ಸ್ವರ]

**ಅಮೃತಹಸ್ತ** (ನಾ). ೧. ಅಮೃತವುಳ್ಳ ಕೈ. ೨. ಅಮೃತದಂತೆ ಹಿತವನ್ನುಂಟುಮಾಡುವ ಕೈ : "ಇಂಗ್ಲಿಷ್ ಗೀತೆಗಳು"... ಪ್ರಕಟವಾದಗಳಿಗೆ ಅಮೃತಗಳಿಗೆ; ಅದನ್ನು ರಚಿಸಿದ ಹಸ್ತ ಅಮೃತಹಸ್ತ (ಹೊಂಗಳು. v, ಮು). ೩. ಹಸ್ತ ಸಿದ್ಧಿಯುಳ್ಳವನು. ೪. ವೈದ್ಯ. [ಅಮೃತ + ಹಸ್ತ]

**ಅಮೃತಾಂಜನ** (ನಾ). ೧. ಅಮೃತದಂತೆ ಹಿತವನ್ನುಂಟುಮಾಡುವ ಅಂಜನ, —ಕಾಡಿಗೆ : ಸತಿಯರ ಕಣ್ಣಮೃತಾಂಜನದೊಲು ಪಿತ್ಯ[ತರ]ಗ೯ತಿ ಮುದಮೆಯ್ದಿಪನೊಡನೆ (ಅನಂಜ. ೭–೪೨). ೨. ಒಂದು ಲೇಪನ ದ್ರವ್ಯ : ಅಮೃತಾಂಜನದಿಂದ ತಲೆನೋವು ಹೋಗುತ್ತದೆ (ರೂಢಿ). [ಅಮೃತ + ಅಂಜನ]

**ಅಮೃತಾಂಧಸ** (ನಾ). ದೇವತೆ : ಅಸಮಮಿತ್ರಾನ್ವಿತ ಸತ್ಯಜಿತು ವಸುಧೆಯೊಳು ಚಿತ್ರಸೇನನಮೃತಾಂಧಸರು ಗಾಯಕರೆಂದು ಕರೆಸುವರಾವಕಾಲದಲಿ (ಹಸಾರ. ೨೧–೪೨). [< ಸಂ. ಅಮೃತಾಂಧಸ್]

**ಅಮೃತಾಂಶು** (ನಾ). ೧. ಅಮೃತಕಿರಣ. ೨. ಚಂದ್ರ : ಕುರುಳ್ ಮದೀಯಕೋಮಳೆಯ ಮುಖೇಂದುವಂ ಮಱಸಿದಂದಿನದೊಂದೊಳಲಿಂದಮಿಾಗಳಿಂತೆಳಸಿತಳಲ್ ಮು ಗಿ ಲ್ ಮ ಱ ಸಿ ಭೋಂಕೆನೆ ಕಂಡಮೃತಾಂಶುಬಿಂಬಮಂ (ಆದಿಪು. ೧೨–೩೧). [ಅಮೃತ + ಅಂಶು]

**ಅಮೃತಾಂಶುರಶ್ಮಿ** (ನಾ). ಚಂದ್ರಕಿರಣ : ಅಮೃತಾಂಶುರಶ್ಮಿಗಳ ಕುಂಚಿಗೆಯಿಂ (ಕಾದಂಪೂ. ೬೬೭). [ಅಮೃತಾಂಶು + ರಶ್ಮಿ]

**ಅಮೃತಾಕರ** (ನಾ). ೧. ಅಮೃತಕ್ಕೆ ಆಕರವಾದುದು; ಅಮೃತದ ನೆಲೆ, —ಮೂಲ. ೨. ಕ್ಷೀರಸಮುದ್ರ.

**ಅಮೃತಾಕರಾವನಿ** = ಅಮೃತಕ್ಕೆ ನೆಲೆಯಾದ ಭೂಮಿ : ಭೋರೆನೆ ಪಾಯ್ತರ್ಪ ರಸಪ್ರವಾಹಚಯಮಾವಾಳಂಗಳಂ ತೀವುತಿರ್ಪಿನಮಿರ್ದತ್ತಮೃತಾಕರಾವನಿಯವೊಲ್ ಪುಂಡ್ರೇಕ್ಷುವಾಟೀಕುಲಂ (ಜಗವಿ. ೨–೯). [ಸಂ.]

**ಅಮೃತಾಕ್ಷರ** (ನಾ). ಅಮೃತದಂತೆ ಇಂಪಾದ ಅಕ್ಷರ : ಪಂಡಿತನೊಡನಮೃತಾಕ್ಷರಗಂಡೂಷಮನುಗುಳ್ವ ತೆಱದನುಗ್ರಾಹಿಸೆ... ಎರ್ದೆಗೊಂಡುದುಪನ್ಯಾಸಂ (ಶಾಂತಿಪು. ೮–೧೪೯). [ಅಮೃತ + ಅಕ್ಷರ]

**ಅಮೃತಾಕ್ಷಿ** (ನಾ). ಮಂಗಳಕರವಾದ ವೃಷ್ಟಿ : ಸದಮಲ ಭವಾನಿ ಸಹಿತೀಕ್ಷಿಸೆ... ಅಮೃತಾಕ್ಷಿಯಿಂ ಬಳಿಕ ಪೊಗಳಿದನೆದ್ದು ಚತುರ್ಮುಖಂ (ವೀಶೈಪು. ೨–೨–೩೧). [ಅಮೃತ + ಅಕ್ಷಿ]

**ಅಮೃತಾಧರೆ** (ನಾ). ಅ ಮೃ ತ ದ ಂ ತೆ ಮಧುರವಾದ ತುಟಿಯುಳ್ಳವಳು : ಅಮೃತಮಯವಾಣಿ ಪರಿಲಸದಮೃತಾಧರೆ... ಅಮೃತಮತಿ (ರಾಜಶೇ. ೩–೧೨). [< ಸಂ. ಅಮೃತಾಧರಾ]

**ಅಮೃತಾನುಭವ** (ನಾ). ಬ್ರಹ್ಮಾನಂದದ ಅನುಭವ : ಅಮೃತಾನುಭವದಿ ಶ್ರೀಮಂತರಾಗಿ ಶ್ರೀಜ್ಞಾನದೇವನೆನುವ ಮನದಿಂದ ಮುಕ್ತ ಭಗವಂತಯುಕ್ತ ಸಂಪ್ರಾಪ್ತ ಅಮೃತ ತನುವ (ಮುಕ್ತಕಂ. ೧೫–೧೧). [ಅಮೃತ + ಅನುಭವ]

**ಅಮೃತಾನ್ನ** (ನಾ). ಅಮೃತದ ಆಹಾರ, —ಅನ್ನ : ಕಾಳಕೂಟಂ ಬೆರಸಿದಮೃತಾನ್ನ ಭೋಜನವೊ ಪೇಳಲರಿದೆನೆ (ಜೈಮಿಭಾ. ೨೯–೩೫). [ಅಮೃತ + ಅನ್ನ]

**ಅಮೃತಾಬ್ಜ** (ನಾ). ಕೆಂದಾವರೆ : ಜಿನಾಂಘ್ರಿಶ್ವಸದಮೃತಾಬ್ಜಮನಾಘ್ರಾಯಿಸಿದಂ ಜಿನಚಂದ್ರಂ (ಶಾಂತಿಪು. ೭–೪೧). [ಅಮೃತ + ಅಬ್ಜ]

**ಅಮೃತಾಬ್ಧಿ** (ನಾ). = ಅಮೃತಜಳಧಿ : ಸುಖಾಮೃತಾಬ್ಧಿ ತಾನಾರ್ಗೆ (ಶಾಂತಿಪು. ೭–೧೫). [ಅಮೃತ + ಅಬ್ಧಿ]

**ಅಮೃತಾಯತ** (ಗು). ಅಮೃತದಂತಿರುವ; ಅಮೃತಕ್ಕೆ ಸಮಾನವಾದ : ಪಂಚಮ ಕಲ್ಪಪ್ರಧಾನರಮೃತಾಯತಮಾದಿಂಚರದಿಂ ಬಿನ್ನವಿಸಿದರ್ (ಶಾಂತಿಪು. ೧೧–೯೩). [< ಸಂ. ಅಮೃತಾಯಿತ]

**ಅಮೃತಾರ್ಚಿ** (ನಾ). = ಅಮೃತಾಂಶು : ಅಮೃತಾರ್ಚಿಯಂತೆ ವಿಸ್ತರಿತ ಕುವಲಯನೆಂದು ಧರ್ಮಜನ ಧರೆ ಪೊಗಳುತಿರೆ (ಜೈಮಿಭಾ. ೨–೧೩). [< ಸಂ. ಅಮೃತಾರ್ಚಿಸ್]

**ಅಮೃತಾವಹ** (ಗು). ೧. ಮುಕ್ತಿಯನ್ನುಂಟುಮಾಡುವ. (ನಾ). ೨. ಮೋಕ್ಷ : "ಕೈವಲ್ಯಮಪುನರ್ಭವಂ . . . ಅಮೃತಾವಹಂ . . . ಮೋಕ್ಷಕ್ಕೆ ಪೆಸರೆನಿಕ್ಕುಂ" (ಮಂಗರಾ. ೮–೨೬). [ಸಂ.]

**ಅಮೃತಾವಾಸ** (ನಾ). ಶಾಶ್ವತವಾದ ನೆಲೆ; ಮೋಕ್ಷಸ್ಥಾನ : ತ್ರೈಲೋಕ್ಯನಾಥಂ ಕುದುಗೆಮಗಮೃತಾವಾಸಮಂ ವೀ ರ ನಾ ಥ ಂ (ಸುಕುಮಾ. ೧–೧). [ಅಮೃತ + ಆವಾಸ]

**ಅಮೃತಾಶನ** (ನಾ). ೧. ಅಮೃತವನ್ನು ಆಹಾರವಾಗಿ ಉಳ್ಳವನು; ದೇವತೆ. ೨. ಅಮೃತದ ಆಹಾರ : ದ್ವಿಸಹಸ್ರಹಾಯನಾಂತರಕೃತಾಮೃತಾಶನನುಂ (ಚಂದ್ರಪ್ರ. ೪–೬೯ ವ). [ಅಮೃತ + ಅಶನ]

**ಅಮೃತಾಸಾರ** (ನಾ). ಅಮೃತ ವರ್ಷ : ಬಱಲ್ಕೆಯಂ ಬಾರಿಸಲೆಂದು ಬಂದ ಪಥಿಕರ್ ಪಥಿಕಾನಯನ ಪ್ರಭಾಮೃತಾಸಾರದೆ ತೀವಿ ಬರ್ಪ ಪರಿಕಾಲ್ (ಜಗವಿ. ೨–೪); ಏಂ ಕಱೆದುದೋ ಕರ್ಣಾಮೃತಾಸಾರಮಂ (ಪಂರಾಮಾ. ೧೬–೯೬). [ಅಮೃತ + ಆಸಾರ]

**ಅಮೃತಾಹರಣ** (ನಾ). ೧. ಅಮೃತವನ್ನು ಎತ್ತಿಕೊಂಡು ಬರುವುದು; ಅಮೃತದ ಅಪಹಾರ. ೨. ಅಮೃತವನ್ನು ಸ್ವರ್ಗಲೋಕದಿಂದ ತಂದವನು; ಗರುಡ (ದಕ. ?). [ಸಂ.]

**ಅಮೃತಾಹಾರ** (ನಾ). = ಅಮೃತಾಶನ ೨ : ಪಾರಣಾವಿಧಿಯೊಳಮೃತಾಹಾರಮನಾರೋಗಿಸಿ (ಶಾಂತಿಪು. ೯–೯೯ ವ). [ಅಮೃತ + ಆಹಾರ]

**ಅಮೃತೆ** (ನಾ). ೧. ಅಮರದ ಬಳ್ಳಿ : "ಅಮೃತಾ, ವ ತ್ಸಾ ದ ನೀ, ಗು ಳೂ ಚೀ — ಈ ೩ ಅಮರ್ದುವಳ್ಳಿ" (ಹ ಲಾ ಯು. ೧೧೧–೧೬೧). ೨. ಕಿರುನೆಲ್ಲಿ ಗಿಡ. ೩. ಅಳಲೆಕಾಯಿ ಗಿಡ. [< ಸಂ. ಅಮೃತಾ]

**ಅಮೃತೋದ** (ನಾ). ಕ್ಷೀರಸಮುದ್ರ. [ಅಮೃತ + ಉದ]

**ಅಮೃತೋದ್ಭವ** (ನಾ). ೧. ಅಮೃತವು ಹುಟ್ಟುವುದು. ೨. ಅಮೃತವು ಹುಟ್ಟಿದ ಸ್ಥಳ; ಸಮುದ್ರ. [ಅಮೃತ + ಉದ್ಭವ]

**ಅಮೆ**₁ (ನಾ). ೧. ಅಮಾವಾಸ್ಯೆ : ಅಮೆಯಲಿನಸೊಡನಿರ್ದು ತೊಲಗಿದ ಹಿಮಕರನವೊಲು (ತೊರರಾ. ೨-೪-೭). ೨. ಚಂದ್ರನ ಹದಿನಾರು ಕಲೆಗಳಲ್ಲಿ ಕೊನೆಯದು : ಅಮೆವಾಮೆ ಸಂಪೂರಣಚ್ಛಾಯೆ ಹೈಮವತಿಸುಮನತಾಜ್ಯೋತ್ಸ್ನೆ ಸ್ವಧಾಕಾಂತಿ . . . ಹದಿನಾಱು ವರ್ಷದೊಳೆ (ಭಾವಚಿಂ. ೪-೧೪). [< ಸಂ. ಅಮಾ]

**-ಅಮೆ**₂ (ಪ್ರ). ನಿಷೇಧಾರ್ಥಕ ಭಾವನಾಮ ಪ್ರತ್ಯಯ : ನಿನ್ನಱಿಯಮೆಯೆ ನಿನ್ನನಿನಿತಂ ಮಱುಗಿಸಿದುದು (ಆದಿಪು. ೫-೯೫) ; ಅಟ್ಟಿಮೆವಡುವುವು ಕುಡಿದೊಂದು ಪಣ್ಣರಸದೊಳೆ ಗಿಳಿಗಳ್ (ಪಂಪಭಾ. ೧-೫೭) ; ನೀರನಂಜಮೆಯಂತೆ ತೆಂಗಿನಕಾಯಂತೆ ಕೇದಗೆಯ ಪುಷ್ಪದಂತೆ (ಧರ್ಮಾಮೃ. ೮-೯೪) ; ಅಮೆಗೆ-ತೀರಮೆ, ಅಟ್ಟಿಮೆ, (ಶಮದ. ೨೧೧ ಪ್ರಯೋ).

**ಅಮೇಧ್ಯ** (ಗು). ೧. ಯಜ್ಞಕ್ಕೆ ಯೋಗ್ಯವಲ್ಲದ. ೨. ಅಶುದ್ಧವಾದ; ಕೊಳಕಾದ; ಅಪವಿತ್ರವಾದ : ಅಗಲೊಳಗಿಕ್ಕಿದೊಳ್ಳುಣಿಸಮೇಧ್ಯಮುಮಂಜಲುಮುಪ್ಪುದು (ಅಜಿಪು. ೨-೫೧). (ನಾ). ೩. ಹೇಲು ; ಮಲ : ಮಲದೊಳಗೆ ಪುಳುವಾಗಿರುತೆ ಕೂದಲಿನ ಮಾತ್ರದೊಳಷ್ಟಮೇಧ್ಯವ ಮೆಲುವನು (ಶಂಕದಾ. ೧೦-೩೭). [ಸಂ.]

**ಅಮೇಯ** (ಗು). ಅಳೆಯಲಾಗದ; ಎಣಿಕೆಗೆ ಮೀರಿದ : ಸ್ವಚ್ಛಕರ್ಣಾಟಕರ ತೆಂಕಣರಚ್ಚ ಬಾಹ್ಲೀಕರನಮೇಯ ಪರಾಕ್ರಮಾನ್ವಿತರಾ (ಕರ್ಣಾಕ. ೩೧೫); ಅನುಪಮಚಾರಿತ್ರರದ್ವಿತೀಯರಮೇಯರ್ (ಶಾಂತಿಪು. ೧-೨೩). [ಸಂ.]

**ಅಮೋಘ** (ಗು). ೧. ವ್ಯರ್ಥವಾಗದ ; ಸಾರ್ಥಕವಾದ. ೨. ಗುರಿಯನ್ನು ಮುಟ್ಟುವ ; ಸಿದ್ಧಿಹೊಂದುವ. ೩. ತುಂಬ ಬೆಲೆಯುಳ್ಳ : ಹಿಂಸನಮಮೋಘ ಶರಮಾಯ್ತು ಕೆಡೆದುದಾತ್ಮಕುರಂಗಂ (ಯಶೋಚ. ೩-೨೮). ೨. [ಜೈನ] ಒಂದು ಪರ್ವತಶಿಖರದ ಹೆಸರು : ತತ್ಕುಳದರಿಪ್ಪ ಪ್ರಾಗ್ದಿಗ್ದೇಶದಮೋಘ ಸುಪ್ರಬುದ್ಧ ರುಂದ್ರ . . . ಕೂಟಾಷ್ಟಕಂಗಳೊಳ್ ರಮಿಯಿಸುವ (ಆದಿಪು. ೭-೩ ವ). ೩. [ಜೈನ] ವ್ಯರ್ಥವಾಗದ ಒಂದು ಬಗೆಯ ಬಾಣ : ವಜ್ರಕಾಂಡಮೆಂಬ ಬಿಲ್ಲುಂ ಅಮೋಘಮೆಂಬ ಶರನಿಕರಮುಂ (ಆದಿಪು. ೧೫-೩ ವ). [ಸಂ.]

**ಅಮೋಘಂ** (ಅ). ವ್ಯರ್ಥವಾಗದಂತೆ ; ಸಾರ್ಥಕವಾಗಿ ; ತಪ್ಪದೆ ; ಅತಿಶಯವಾಗಿ ; ಶ್ರೇಷ್ಠವಾಗಿ : ವರವನಮೋಘಮೀಗೆಮಗೆ ದೇವತೆಗಳ್ (ಕವಿರಾ. ೧-೧೧೫) ; ಬಹುಕಳಾಳಾಪಂಗಳಂ ಕಲ್ತು ಬರ್ಪವಮೋಘಂ ಬಿಡಿಂ (ಸುಕುಮಾ. ೨-೩೫) ; ಭೂಮಿಭಾರವನಮೋಘಂ ಪಿಂಗಿಸಲ್ವೇಟ್ಟುದು (ಜಗವಿ. ೧-೭೪). [ಸಂ.]

**ಅಮೋಘವಚನ** (ನಾ). ೧. ವ್ಯರ್ಥವೆನಿಸದ ಮಾತು ; ಎಂದೂ ತಪ್ಪದ ಮಾತು. ೨. ಆಡಿದ ಮಾತು ತಪ್ಪದವನು ; ಸತ್ಯವಾಕ್ಯ. [ಅಮೋಘ + ವಚನ]

**ಅಮೋಘವರಿಷ** (ನಾ). = ಅಮೋಘವರ್ಷ : ಸ್ವಸ್ತಿಶ್ರೀ ಅಮೋಘವರಿಷಂ ಪೃಥುವೀರಾಜ್ಯಂಗೆ[ಯ್ಯೆ] (ಬೊಂಕಶಾ. ೧೯೩೩, ಹಾವೇರಿ. ೨೪-೧ ; ?). [< ಸಂ. ಅಮೋಘವರ್ಷ]

**ಅಮೋಘವರ್ಷ** (ನಾ). ನೃಪತುಂಗನೆಂಬ ರಾಷ್ಟ್ರಕೂಟ ರಾಜನ ಒಂದು ಬಿರುದು: ಭಾವಿಸಿ ಬೆಸಸಿದನಖಿಳಧರಾವಲ್ಲಭನಿಂತಮೋಘವರ್ಷನೃಪೇಂದ್ರಂ (ಕವಿರಾ. ೩-೧). [ಅಮೋಘ + ವರ್ಷ]

**ಅಮೋಘೆ** (ನಾ). ೧. ತುತೂರಿ ಹೂವಿನ ಗಿಡ ; ಪಾದರಿಗಿಡ. ೨. ವಾಯುವಡಂಗದ ಗಿಡ. ೩. ಅಳಲೆಕಾಯಿ. [< ಸಂ. ಅಮೋಘಾ]

**ಅಮೌಢ್ಯ** (ನಾ). ೧. ದಡ್ಡತನವಿಲ್ಲದಿರುವುದು ; ಜಾಣತನ. ೨. ಜಾಣ ; ಮೌಢ್ಯವಿಲ್ಲದವನು : ಮಹಾನಿರುಪಮಿತ ಮಹಿಮಾರ್ಥ್ಯನಂ ಪ್ರಾರ್ಥನನಮೌಢ್ಯನನು (ಬಸಪು. ೪೬-೭೧). [ಸಂ.]

**ಅಮೌಲ್ಯ** (ಗು). ಬೆಲೆಕಟ್ಟಲಾಗದ ; ಬಹಳ ಬೆಲೆಯುಳ್ಳ ; ತುಂಬ ಶ್ರೇಷ್ಠವಾದ : ಕಲ್ಯಾಣಯುಕ್ತವನಮೌಲ್ಯವರಿಹೃತಶಲ್ಯವು (ಬಸಪು. ೪೩-೬೬) ; ಈ ಅಮೌಲ್ಯ ಜಾನಪದ ಸಾಹಿತ್ಯದತ್ತ ವಿಶೇಷ ಲಕ್ಷ್ಯವನ್ನು ಸಾಹಿತಿಗಳು ಪೂರೈಸಿಲ್ಲ (ಕರ್ಣಾಕ. ೩೬೨). [ಸಂ.]

**ಅಮ್ಮ**₁, ಅಮ್ಮು₁, (ನಾ). ಅಪ್ಪ ; ತಂದೆ. ಅಮ್ಮಂಗಳ್, ಅಮ್ಮಂದಿರ್ (ಬಹುವ): ಬಣರರ್ ದಡ್ಡನರಾಧಿಪತ್ಯರವರಮ್ಮಂಗಳ್ವಣವಿಧ್ಯದರಾಜರಾ ಇಷ್ಟ ಸುದೇವಿ ರತ್ನಾವಲಿ ಮಾಡಿಸಿ ಸನ್ನಿಯೊಳೊಳ್ ಶಿವಾಲಯಂ (ಎಕ. X (S), ಚಿಕ್ಕಬ. ೬೬-೧೪ ; ೯ನೆಯ ಶತ) ; ಬ್ರತಂಗಳಂ ನಿಮ್ಮಮ್ಮಂ ಬಿಸುಡಲ್ವೇಟ್ಟನಪ್ಪೊಡೆ ಪೆಱವುಳಿವಿಸುಡದಿರ್ (ವಡ್ಡಾರಾ. ೧೧-೧೦) ; ನಿಮ್ಮಮ್ಮಂ ಕರ್ಣನೆಲ್ಲಿದನ್ (ಪಂಪಭಾ. ೧೩-೫೭ ವ) ; ನೀತಿಯನಱಿದಮ್ಮಂದಿರ ಮಾತಂ ಮನ್ನಿಸಿ ನಿಜೋಚಿತ ವ್ರತಗತಿಯಿಂ ಜಾತಿಕುಲೌನ್ನತ್ಯಮನಭಿಜಾತರ್ ಮಾಱ್ಪಂತೆ ಮೂರ್ಖರೇಂ ಮಾಡುಗುಮೇ (ಶಬ್ದಾನು. ೩೧೯ ವ್ಯಾಖ್ಯಾ). ೨. ಗಂಡಸರ ಹೆಸರಿನ ಕೊನೆಯಲ್ಲಿ (ಅಣ್ಣ, ಅಪ್ಪ ಎಂಬಂತೆ) ಸೇರುವ ಮಾತು : ಚನ್ದಿಯಮ್ಮರಸರ್ ದೇವಗ್ಗ್ರೆ ಮಣ್ಣಂ ಕೊಟ್ಟರ್ (ಎಕ. XI, ಚಿತ್ರದು. ೨೪-೧ ; 500) ; ಕೊತ್ತಮ್ಮಶರ್ಮಣೀ ಎಡೆತೊಱೆನಾಡು ವಿಷಯೇ (ಮೈಆರಿ. ೧೯೩೭, ೫೩-೨೨ ; 550) ; ಗೊಯ್ಯಿನ್ದಮ್ಮಾಗಳಱುಗಣ್ಣುಗ ಬೆದೆನ್ನೆಲ್ಮಕ್ಕೊಟ್ಟರ್ (ಮೈಆರಿ. ೧೯೩೨, ೫೮-೪ ; 825). ೩. ಪೂರ್ವ ಚಾಲುಕ್ಯರಾಜರಲ್ಲಿ ಒಬ್ಬಾತನ ಹೆಸರು. ೪. ಪ್ರೀತಿಯಿಂದ ಸಂಬೋಧಿಸುವಾಗ (ಅಪ್ಪ, ಅಯ್ಯ ಎಂಬಂತೆ) ಬಳಸುವ ಮಾತು : ಅವರ್ಗಳೆಲ್ಲಂ ನೆರೆದಿಂತೆಂದರಮ್ಮಾ ಪೂರ್ವದಿಂದಂ ಬಂದ ಕುಲಸಂತತಿಯಂ ಕಾವೊರಾರುಮಿಲ್ಲ (ವಡ್ಡಾರಾ. ೩೮-೧೪) ; ಅಮ್ಮ ನಿನ್ನನೊಡಗೊಂಡು ಮುಱುಂಗುವ ಕಾಲ ಮಾದುದೋ (ಕಾದಂಪೂ. ೧೮೨) ; ಅಮ್ಮ ಪಾಪಮುಂಟೆಂದಱಿ ನೀಂ (ಧರ್ಮಾಮೃ. ೯-೫೫). ೫. ತಿರಸ್ಕಾರವನ್ನು ಸೂಚಿಸುವಾಗ ಬಳಸುವ ಮಾತು : ಎಮ್ಮಂ ಪಿಡಿದೆಱೆವಂದಿನ ನಿಮ್ಮದಟುಗಳೀಗಳೆತ್ತ ವೋದುವೊ ಪಿಡಿವಟ್ಟಮ್ಮ ಬಟಲ್ದಿರೆ ಕಂಡಿರೆ ನಿಮ್ಮಳವಂ ನಿಮಗಮಾಗಳೀಯೆಡೆ ಜೂಯ್ತೇ (ಪಂಪಭಾ. ೭-೩೯). **ಅಮ್ಮು**₁ : ೨. ಸಿರಿಯಮಗೌಂಡನ ಹೆಂಡತಿ (ಇಆ. XII ; ೧೧೧-೪ ; 1279).

**ಅಮ್ಮಮ್ಮ** (ದ್ವಿರುಕ್ತಿ) : ಎಲೆಯಮ್ಮಮ್ಮಹಾವಿದೆಯತ್ತ ಹೋಗದಿರು (ಬಸಪು. ೪೮-೪). **ಅಮ್ಮನಗಂಧವಾರಣ** = ಒಂದು ಬಿರುದು : ಅಮ್ಮನ ಗಂಧವಾರಣಂ ಪಡೆಮೆಚ್ಚೆ ಗಂಡಂ ಗುಣಾರ್ಣವಂ (ಪಂಪಭಾ.೧-೧೪೮ವ); ಅಂಕದ ಗಣನಾಯಕಂ ವರದನಕ್ಕೆಮಗಮ್ಮನಗಂಧವಾರಣಂ (ಗದಾಯು. ೧-೧೦). [< ಅಮ್ಮ₂]

**ಅಮ್ಮ**₂ (ನಾ). ೧. ತಾಯಿ ; ಮಾತೆ : ಅವ್ವಾ ಬಾರೆಯೆನುತಂ ಕಂದ ನಮ್ಮನ ಕಚ್ಚೆಯಂ ಪಿಡಿವಾಗ ತಗೆವುತಿರೆ (ಬಸಪು. ೪೭-೨೦) ; ನಮ್ಮ ಪತಿಗಂದಧಿಕದೇವರ ನಮ್ಮಕಾಣಿಸು ತಾಯೆ ಮುಖ್ಯಪ್ರಾಣನಂಗನೆಯೆ (ಕುವ್ಯಾಆ. ೬೧೪. ೩೩-೧೧) ; ಅಮ್ಮ ನೀನು ಸಾಯಲೇಕೆ ನಮ್ಮ ತಬ್ಬಲಿ ಮಾಡಲೇಕೆ ಸುಮ್ಮನಿಲ್ಲಿಯೆ ನಿಲ್ಲೆನುತ್ತ ಅಮ್ಮನಿಗೆ ಕರು ಹೇಳಲು (ಗೋಹಾಡು. ೭೪) ; ಅಮ್ಮನ ಮನಸ್ಸು ಬೆಲ್ಲದ ಹಾಗೆ ಮಗಳ ಮನಸ್ಸು ಕಲ್ಲಿನ ಹಾಗೆ (ಗಾದೆ). ೨. ಹೆಂಗಸರ ಹೆಸರಿನ ಕೊನೆಯಲ್ಲಿ (ಅಕ್ಕ, ಅವ್ವ ಎಂಬಂತೆ) ಸೇರುವ ಮಾತು. ಉದಾ— ಗಿರಿಯಮ್ಮ, ಚನ್ನಮ್ಮ, ಲಕ್ಷ್ಮಮ್ಮ, ಹೊನ್ನಮ್ಮ. ೩. ಗೌರವ ಸೂಚಕವಾಗಿ ಸ್ತ್ರೀವಾಚಕ ಶಬ್ದಗಳ ಕೊನೆಯಲ್ಲಿ ಸೇರುವ ಮಾತು. ಉದಾ—

ಅಜ್ಜಮ್ಮ, ಅತ್ತೆಮ್ಮ. ೪. ಸ್ತ್ರೀದೇವತೆ: ಅಮ್ಮನವರ ಉತ್ಸವ ಹೊರಟಿದೆ (ರೂಢಿ). ೫. (ಕರಾ) ಅಂಬಿಗರ ಒಂದು ದೇವತೆ: ಜಟಕಾ, ಅಮ್ಮ, ಬೊಬ್ರ ಯೆಂಬ ದೇವತೆಗಳಿಗೆ ಈ ಅಂಬಿಗರು ನಡ ಕೊಳ್ಳುವರು (ಕಭಾಗೆ. ೧೮೩). ೬. ಸಿಡುಬು: ಆ ಹುಡುಗಿಗೆ ಅಮ್ಮ ಎದ್ದಿದೆ (ರೂಢಿ). ೭. (ದಕ. ಪ್ರಾದೇ.) ಅಜ್ಜಿ: ನಮ್ಮ ತಾಯಿ ಮನೆ ಯಲ್ಲಿರಲಿಲ್ಲ, ಅಮ್ಮ ಮಾತ್ರ ಇದ್ದರು (ರೂಢಿ). ೮. ಹೆಂಗಸು: ಆ ಅಮ್ಮ ಏನೋ ಹೇಳುತ್ತಿದ್ದಾಳೆ (ರೂಢಿ). ೯. ಗಂಡ ಸತ್ತವಳು; ರಂಡೆ; ಮುಂಡೆ.

ಅಮ್ಮನ ಬೇನೆ = ವಾಂತಿ ಭೇದಿ ರೋಗ; ಕಾಲರಾ (ಕ). ಅಮ್ಮ ನಾಟ = "ಮೈಲಿಬೇನೆ ಅಮ್ಮನ ಹಾವಳಿ" (ಜಾನಕೋ. ೧೩).

[ದೇ ‖ ತಮಿ. ಅಮ್ಮಾ, ಅಮ್ಮಾಳ್ = ತಾಯಿ, ದಾದಿ, ಹೆಂಗಸು, ಅಮ್ಮೈ = ತಾಯಿ, ಅನೇಕ ದೇವತೆಗಳ ಹೆಸರು, ಅಜ್ಜಿ; **ಮಲ.** ಅಮ್ಮ = ತಾಯಿ, ದೇವತೆ (ಮುಖ್ಯವಾಗಿ ಕಾಳಿ); **ಕೊಡ.** ಅಮ್ಮೆ = ಬ್ರಾಹ್ಮಣ ರಾಗಿ ಮತಾಂತರಹೊಂದಿದ ಕೊಡಗರ ಒಂದು ಒಳಪಂಗಡ, ಅಮ್ಮತಿ (ಸ್ತ್ರೀ); **ತುಳು.** ಅಮ್ಮ = ತಾಯಿ, ಹೆಂಗಸು; **ತೆಲು.** ಅಮ್ಮ, ಅಮ = ತಾಯಿ, ಪರಿಚಾರಕಿ, ಹೆಂಗಸರನ್ನು ಸಂಬೋಧಿಸುವ ಗೌರವ ಸೂಚಕ ಶಬ್ದ; **ಕೊಲಾ.** ಅಮ್ಮ, ಅಮ್ಮನೆವ್ (ಬಹುವ) = ತಾಯಿ; **ಕುಇ.** ಅಮ = ತಂದೆಯ ತಂಗಿ, ಸೋದರಮಾವನ ಹೆಂಡತಿ, ಹೆಂಗಸು; **ಕುವಿ.** ಅಮ್ಮ = ತಂದೆಯ ತಂಗಿ, ಚಿಕ್ಕಮ್ಮ. / **ಸಂ.** ಅಂಬಾ, ಅಂಬಾಡಾ, ಅಂಬಾಲಾ, ಅಂಬಾಲಿಕಾ, ಅಂಬಿ, ಅಂಬಿಕಾ, ಅಂಬಯಾ = ತಾಯಿ]

**ಅಮ್ಮ$_3$** (ಅ). ೧. ಆಶ್ಚರ್ಯ, ಆಯಾಸ, ದುಃಖ ಮುಂತಾದುವು ಗಳನ್ನು ಸೂಚಿಸುವ ಅವ್ಯಯ: ಅಯ್ಯೊ, ಅಮ್ಮಾ ಈ ನೋವನ್ನು ತಾಳಲಾರೆ (ರೂಢಿ). ೨. ಅಣಕ, ಆಕ್ಷೇಪಣೆಗಳನ್ನು ಸೂಚಿಸುವ ಅವ್ಯಯ: ಅಮ್ಮಾ ಏನು ಹೇಳಲೋ ನಿನ್ನ ಸಾಹಸವನ್ನು (ರೂಢಿ).

**ಅಮ್ಮಮ್ಮ** (ದ್ವಿರುಕ್ತಿ): ಆಹಹಾ ಬಾಹಾಬಳದಿಂದಮ್ಮಮ್ಮ ದಿಕ್ಪಾಳ ರನಳುಕಿಸಲದ್ರೀಂದ್ರಮುಂ ಚಾಳಿಸಲ್ (ಎಇ. XVI, ೭೧–೨೬; 1074); ಭಾಪಮ್ಮಮ್ಮ ಬಣ್ಣಿಪರಾರೆಲೆ ಭಾವಿಪ್ಪೊಡೆ ಪಾಂಡ್ಯದೇಶಜರೆ ಧನ್ಯರ್ ನೋಡೆ ಭೂ ಚಕ್ರದೊಳ್ (ಧರ್ಮಾಮೃ. ೫–೭೨); ಅಮ್ಮಮ್ಮ ಹರಿನಿಕರ ಹರಹಿನಿಂದೊಪ್ಪಿರಲು (ಬಸರ. ೧–೧೮); ಕಂಸನಾ ಚಾಳಾನೆಯಂ ಕೆಡಹಿ ದೊಡೆ ಮಹಾದ್ಭುತವಾಯ್ತೆ ಹೇಳಲರಿದಮ್ಮಮ್ಮ ನೀಂ ಮಹಾಂ ವೀರನೈ (ಸಾಳ್ವಭಾ. ೧೫–೩೧); ಹ್ಯಾಗೆಹ್ಯಾಗೈಯ್ಯೆಯೊ ಅಮ್ಮಮ್ಮ ನೀಗಿ ಅಕಟ ಕಟ ಸಾಗದ ಪ್ರಾಣ (ಜಿನಮು. ೩೬–೪೩).

[**ದೇ.** ‖ **ತಮಿ.** ಅಮ್ಮ, ಅಮ್ಮಮ್ಮ = ದಯೆ, ಆಶ್ಚರ್ಯ, ಸಂತೋಷ ಸೂಚಕ ಅವ್ಯಯ; **ಮಲ.** ಅಮ್ಮ ಅಮ್ಮಾಹೆ = ದುಃಖ, ಸಂದೇಹ, ಕಳವಳ ಆಶ್ಚರ್ಯ ಮುಂತಾದುವುಗಳನ್ನು ಸೂಚಿಸುವ ಅವ್ಯಯ. / **ಪ್ರಾ.** ಅಮ್ಮೊ]

**ಅಮ್ಮಂಗೊಡಲಿ** (ನಾ). ಕಟ್ಟವತ್ತಿಗೆ ಎಂಬ ಗಿಡ; ಶಂಖಪುಷ್ಪಿ: "ಅಮ್ಮಂಗೊಡಲಿಯೆಂದು ಹೆಗ್ಗಟ್ಟವತ್ತಿಗೆ" (ಶಮದ. ಪರಿ. ೨); "ಬಿಡದಮ್ಮಂಗೊಡಲಿ ಕಟ್ಟವತ್ತಿಗೆ" (ಕವಿಕಂ. ೨೧೭); ಶ್ರೀರಾಜಾವರ್ತ ದಿಂ ಕಂಡರಿಸಿದ ಸತಿವೋಲ್ ಕೌಸ್ತುಭಂ ಮೇಘಮಾಲಾಕಾರಂಬೊಲ್ ಶಂಖಮಮ್ಮಂಗೊಡಲಿಯ ಮುಗುಳ್ವೊಲ್ . . . ಇರೆ ತನುಚ್ಛಾಯೆಯಂ ಮಿಕ್ಕ ಲೋಕಾಧಾರಂ ರಕ್ಷಿಪ್ಪನಕ್ಕೀ ಭುವನ ಭವನಮಂ (ಭಾಷಾಭೂ. ಕ. ೧೭೬). [?]

**ಅಮ್ಮಂಡಲ** (ನಾ). ಜಲರಾಶಿ: ಪೃಥ್ವೀಮಂಡಲಮುಮಂ ಅಮ್ಮಂಡಲ ಮುಮಂ ಬಳಸಿ ಬರೆದಂತೆ ಅಸಂಖ್ಯಾತ ದ್ವೀಪ ಸಮುದ್ರಂಗಳುಂ ಬಳಸಿ ಯುಮಿರ್ದುವು (ಜೀವಸಂ. ೨–೧೦ ವ). [**ಸಂ.** (ಅಪ್ + ಮಂಡಲ)]

**ಅಮ್ಮಕುಂದೆ** (ನಾ). ಒಂದು ಊರಿನ ಹೆಸರು: ಅಮ್ಮಕುನ್ದೆಯಲಾ ಚನ್ದ್ರಾರ್ಕತಾರಂ ಸಲುತ್ತುಮಿರೆ (ಎಇ. IX, ೨೬೪–೭೫; 1117). 'ಅನ್ಮ ಕುಂದೆ' ಪರಾ. [?]

**ಅಮ್ಮಗೆ** (ನಾ). ಹಾವುಗೆ; ಮೆಟ್ಟು (?): ಹೇಮದಮ್ಮಗೆಯಿಂದ ಪೊಳೆ ವಂತ ಪಾದಮಂ ಕಾಮಜನಕನ ರೂಪುಲಾವಣ್ಯಮಂ ಬಿಡದೆ ಭಾವಿಪುದು ಮನ್ಮನದೊಳು (ತುರಂಗ. ೮೭–೨೧). [?]

**ಅಮ್ಮಚವಾಡಿ** (ನಾ). ಒಂದು ಊರಿನ ಹೆಸರು: ಅಮ್ಮಚವಾಡಿಯಂ ಮಟ್ಟಮುಟ್ಟುವುಗಿಸಿ (ಚಿಕವಿ. ೨–೨೯). [ಅಮ್ಮಚ$_0$ + ವಾಡಿ]

**ಅಮ್ಮಡಿಗಾವುಂಡ** (ನಾ). ಒಬ್ಬಾತನ ಹೆಸರು: ಕಿಱುವುಸೂರ ಪೆರ್ಗಲಿ ಯರ ಬಿಜಯಿತ ಗಾವುಣ್ಡನ ಮಗಂ ಅಮ್ಮಡಿಗಾವುಣ್ಡಂ (ಮೈಆರಿ. ೧೯೩೧; ೪೩–೬; 993). [ಅಮ್ಮಡಿ$_0$ + ಗಾವುಂಡ]

**ಅಮ್ಮಣ** (ನಾ). ನಾಲ್ಕು ಕೊಳಗದಷ್ಟು ಪ್ರಮಾಣ; ಒಂದು ದ್ರೋಣ ದಷ್ಟು ಅಳತೆ; ೭೬೮ ತೊಲದಷ್ಟು ತೂಕ: ಒಂದು ಅಮ್ಮಣ ಅಕ್ಕಿ ಯನ್ನು ಬೇಯಿಸಿದನು (ಬುದ್ಧಪ. ೧೬). [< **ಸಂ.** ಅರ್ಮಣ]

**ಅಮ್ಮಣಗಾವುಂಡ** (ನಾ). ಒಬ್ಬಾತನ ಹೆಸರು: ನೆಲ್ಲೂರ ಮಲೆಯರ ಕೆಱೆಯ ಮನ ಮಗ ಅಮ್ಮಣಗಾವುಣ್ಡನುಂ (ಎಕ. VIII, ಸೊರಬ. ೪೭೧–೯; 1012). [ಅಮ್ಮ$_1$ + ಅಣ್ಣ$_1$ + ಗಾವುಂಡ]

**ಅಮ್ಮಣಿ** 'ಅಮ್ಮಣ್ಣಿ$_1$' ನೋ.

**ಅಮ್ಮಣ್ಣ, ಅಮ್ಮಣ್ನ** (ನಾ). ಒಬ್ಬಾತನ ಹೆಸರು. 'ಅಮ್ಮಣ್ಣಗವುಂಡ' ಪರಾ. **ಅಮ್ಮಣ್ನ**: ಆತನ ಮಗಂ ಕರುವಯ್ಯನು ಅಮ್ಮಣ್ನನು ಕಲ್ಲಂ ಮಾಡಿಸಿ ನಿಱಿಸಿದ (ಎಕ. VIII, ಸೊರಬ. ೨೪೦–೯; 954).

[ಅಮ್ಮ$_1$ + ಅಣ್ಣ$_1$]

**ಅಮ್ಮಣ್ಣಗವುಂಡ** (ನಾ). ಒಬ್ಬಾತನ ಹೆಸರು: ತವುದಟ್ಟಗೆ ನಱುಬ್ಬೆ ಗವುಣ್ಡೆಯ ಮಗ ಅಮ್ಮಣ್ಣಗವುಣ್ಡ ತನ್ನೂರಱಿವ ಕಣ್ಣು (ಎಕ. VIII; ಸೊರಬ. ೨೩೪–೧೦; 994). [ಅಮ್ಮಣ್ಣ + ಗವುಂಡ]

**ಅಮ್ಮಣ್ಣಿ$_1$, ಅಮ್ಮಣಿ** (ನಾ). ಮೊಲೆಯ ತೊಟ್ಟು; ಮೊಲೆ: (ಕ). **ಅಮ್ಮಣಿ**: ಅಮ್ಮಣಿ ಕೊಡು ಎನಗೆ ಗೋಪಿ ಬೆಣ್ಣೆಯ ತೋರೆ ಮೇಲೆ ಗಮ್ಮನೆ ತಟಕನೆ ಮೊಸರನೆ ಸವಿದು ಸುಮ್ಮನೆ ತೊಟ್ಟಲೊಳು ಲೋಲಾಡು ವೆನು (ಪುರಂದ. ೩–೧೫೩–೨). 'ಅಚ್ಚಿ$_3$' ಪರಾ.

[**ದೇ.** ‖ **ತಮಿ.** ಅಮ್ಮಂ; **ಮಲ.** ಅಮ್ಮಞ್ಞಿ; **ತುಳು.** ಅಮಣಿ, ಅಮನಿ, ಅಮ್ಮಣಿ, ಅಮ್ಮನಿ, ಎಮನಿ]

**ಅಮ್ಮಣ್ಣಿ$_2$** (ನಾ). ೧. ಹೆಂಗಸರನ್ನು ಪ್ರೀತಿ ಗೌರವಗಳಿಂದ ಸಂಬೋ ಧಿಸುವಾಗ ಬಳಸುವ ಶಬ್ದ: ಬಾರಮ್ಮಣ್ಣಿ ಕುಳಿತುಕೊ (ರೂಢಿ); ಏಕ ಮ್ಮಣ್ಣಿ, ಇಷ್ಟು ಆಯಾಸ ಪಡುತ್ತೀರಿ (ರೂಢಿ). ೨. ಅರಸು ಮನೆತನ ದವರಲ್ಲಿ ಹೆಂಗಸರ ಹೆಸರಿನ ಕೊನೆಯಲ್ಲಿ (ಅಕ್ಕ, ಅಮ್ಮ ಎಂಬಂತೆ) ಬಳಸುವ ಮಾತು. ಉದಾ— ದೇವರಾಜಮ್ಮಣ್ಣಿ, ನಂಜಮ್ಮಣ್ಣಿ. ೩. ಗಂಡಸರನ್ನು ಅಪಹಾಸ್ಯವಾಗಿ ಸಂಬೋಧಿಸುವಾಗ ಬಳಸುವ ಮಾತು; ಹೆಣ್ಣಿಗ: ತುರುಗಳಿಗಾಗಿ ಜೀವನವ ಕಳೆಯದಿರು ಜೀವನಕೆ ಬೇಕೆಂದುಳಿದರಿನ್ನೆಂತತ್ತು ದನಗಳ ಮೊಲಿದುಕೊಡುವೆವು ಬೇಡ ಹೋಗ ಮ್ಮಣ್ಣಿಯೆನೆ ಚರರು (ಜಿನಭಾ. ೧೧–೩೪). [ಅಮ್ಮ$_2$ + ಅಣ್ಣಿ$_1$]

**ಅಮ್ಮಣ್ಣಿ$_3$** (ಅ). = ಅಮ್ಮ$_3$ (ಸ್ಯಾಂಡರ್). [?]

**ಅಮ್ಮಣ್ಣಿಗ** (ನಾ). ಹೆಣ್ಣಿಗ; ಹೇಡಿ (ಸ್ಯಾಂಡರ್).

[ಅಮ್ಮಣ್ಣಿ$_2$ + –ಇಗ]

**ಅಮ್ಮಣ್ನ** 'ಅಮ್ಮಣ್ಣ' ನೋ.

**ಅಮ್ಮಯ** (ಗು). ನೀರಿನಿಂದಾದ; ನೀರು ತುಂಬಿದ.

[**ಸಂ.** (ಅಪ್ + ಮಯ)]

**ಅಮ್ಮಯ್ಯ$_1$** (ನಾ). ಒಬ್ಬಾತನ ಹೆಸರು : ಅವರ ತಮ್ಮೊ ಅಮ್ಮಯ್ಯಂ ದೇಗುಲಮಂ ಮಾಡಿಸಿ (ಎಕ. VIII, ಶೀರ್ಥಹ. ೨೭–೧೧ ; 929) ; ಬಿಲ್ಲಯ್ಯ ಅಮ್ಮಯ್ಯ ರಾಚಯ್ಯ ಕೇಸವ ಸಾಹಣಿಯ ಸಿರಿಯಣ್ಣ (ಎಕ. VII, ಚನ್ನಗಿ. ೩೨–೫೫ ; 1050). [ಅಮ್ಮ$_1$ + ಅಯ್ಯ$_1$]

**ಅಮ್ಮಯ್ಯ$_2$** (ನಾ). ಹೆಂಗಸರನ್ನು ವಾತ್ಸಲ್ಯದಿಂದ ಸಂಬೋಧಿಸುವಾಗ ಬಳಸುವ ಮಾತು: ಬಾರಮ್ಮಯ್ಯ ಹೋಗೋಣ (ರೂಢಿ).
[ಅಮ್ಮ$_2$ + ಅಯ್ಯ$_1$. / **ತೆಲು.** ಅಮ್ಮಾಯಿ]

**ಅಮ್ಮಯ್ಯ$_3$** (ಅ). ನೋವು, ಆಶ್ಚರ್ಯ ಮುಂತಾದುವುಗಳನ್ನು ಸೂಚಿಸುವ ಮಾತು. [ಅಮ್ಮ$_3$ + ಅಯ್ಯ$_2$]

**ಅಮ್ಮರುತ** (ನಾ). = ಅಮೃತ: ತವಾಧರದಮ್ಮರುತವನ್ನು ಸೇಚಿಸು ಮಂದಸ್ಮಿತೇಕ್ಷಣ ಲಕ್ಷಣನಾಗಿ (ಪ್ರಸಭಾ. ೩೮–೧೫). [< **ಸಂ.** ಅಮೃತ]

**ಅಮ್ಮಲಬಜಾವಣೆ** 'ಅಮಲಬಜಾವಣೆ' ನೋ.

**ಅಮ್ಮವಳ್ಳಿ** (ನಾ). ಒಂದು ಊರಿನ ಹೆಸರು : ಅಮ್ಮವಳ್ಳಿ ಪನ್ನೆರಡು ಕೊಋಪ್ಪರ್ಣನ್ನೆರಡು ಗಜ್ಗವೂರ ಮುವತ್ತುಮನಾಳೆ (ಎಕ. XI, ಚಳ್ಳಕೆ. ೩೪–೧೭ ; 815). [ಅಮ್ಮ$_1$ + ಪಳ್ಳಿ]

**ಅಮ್ಮಹ** (ಗು). ಆ ಮಹತ್ವವುಳ್ಳ: ಒಮ್ಮನದಲಿ ನಿನ್ನ ಪೂಜಿಪೆನೆಂದೊಡೆ ಅಮ್ಮಹ ಭಕುತಿ ಪುಟ್ಟದು (ಶೀರ್ಥಮ. ೮೧).
[ಅದು + ಮಹಾ]

**ಅಮ್ಮಾಂಡಿಸೆಟ್ಟಿ** (ನಾ). ಒಬ್ಬಾತನ ಹೆಸರು : ಮಣಿಸೆಟ್ಟಿ ಮಾಚಿಸೆಟ್ಟಿ ಅಮ್ಮಾಂಡಿಸೆಟ್ಟಿ ಅಳಿಯ ಮಾರಿಸೆಟ್ಟಿ (ಎಕ. II, ೨೩೬–೧೨ ; 1185).
[ಅಮ್ಮಾಂಡಿ$_0$ + ಸೆಟ್ಟಿ]

**ಅಮ್ಮಾಜಿ** (ನಾ). ತಾಯಿಯನ್ನೂ ಇತರ ಹೆಂಗಸರನ್ನೂ ಗೌರವದಿಂದ ಸಂಬೋಧಿಸುವಾಗ ಬಳಸುವ ಮಾತು : ಓಜೆಯುಲ್ಲದುದ ಪೇಳ್ದವ ನಾನೆ ಪೋಪೆನಮ್ಮಾಜಿ ತೆಪ್ಪಗಿರಿ ನೀವೆಂದ (ಭರಚ. ೩೭–೫೫) ; ಪೆಱತೊರ್ವಳಲ್ಲವಮ್ಮಾಜಿ ನಿಮ್ಮಯ ಪ್ರಾಣದೆಱೆಯನ ಚಿತ್ತವನಿರದೆ ನೆಱೆ ಸೂಱೆಗೊಂಡವಳಿವಳು (ನಾಗಕು. ೪–೨೬) ; ಉಲಿಯಲೇನಮ್ಮಾಜಿ ಅತ್ತ ಬಹಿರುದ್ಯಾನ ದೇಗುಲನಘಟಿತ ಪಡಿಯೆಡೆಯೊಳಾಡಿಸುತಿರ್ದೆವು(ಜಿನಮು. ೪–೧೪). [ಅಮ್ಮ$_1$ + –ಜಿ (< ಜೀಯ)]

**ಅಮ್ಮಾಲ** (ನಾ). ನಿರ್ಮಲ; ಶುದ್ಧ: ಹೆಮ್ಮೆಯಿಂದಲಿ ನಿನ್ನ ನೆಮ್ಮಿದೆ ನೇಮದಲಿ ಅಮ್ಮಾಲಾ ವನಮಾಲಾ ವಿಜಯ ವಿಠ್ಠಲ (ಶೀರ್ಥಮ. ೧೦೭).
[< **ಸಂ.** ಅಮಲ]

**ಅಮ್ಮಾಲೆ** (ನಾ). ಚೆಂಡು ಅಥವಾ ಕಲ್ಲುಗಳನ್ನು ಮೇಲಕ್ಕೆ ಎಸೆದು ಕೈಯಲ್ಲಿ ಹಿಡಿಯುವ ಒಂದು ಬಗೆಯ ಆಟ; ಪುಟ ಚೆಂಡಾಟ: "ಅಮ್ಮಾಲೆಯೆಂದು ಪೊಡೆಸೆಂಡುಂ ತಾಂ"(ಕವಿಕಂ. ೨೨೫); ಆಳಮೇಲಾಳ ಕಟ್ಟಿಡಲು ರಾಮನ ವಾಜಿ ಬೀಳುವ ಸುಭಟರೊಪ್ಪಿದರು ಲೀಲೆಯಿಂ ರಣದೇವತೆಯೊಲಿದಾಡುವಮ್ಮಾಲೆಯಂತೇನ ಬಣ್ಣಿಪೆನು (ಕುರಾಸಾಂ. ೨೦–೫೮).

**ಅಮ್ಮಾಲೆಯಾಡು** = ಚೆಂಡು ಅಥವಾ ಕಲ್ಲುಗಳನ್ನು ಮೇಲಕ್ಕೆ ಎಸೆದು ಕೈಯಲ್ಲಿ ಹಿಡಿಯುತ್ತಾ ಆಟವಾಡು : ಕೈಯೆರಡಱಿಂ ನೆಟ್ಟನಮ್ಮಾಲೆಯಾಡುತ ವಿಷ್ಣುವಂ ಗಗನಕಿಟ್ಟಂ (ವೀಶೈಪು. ೨–೧೨–೪೩) ; ಅಮ್ಮಾಲೆಯಾಡೋಳು ಒಮ್ಮೊಮ್ಮೆ ನೋಡೋಳು (ವಾದಕೀ. ೧–೪೭).
[**ದೇ.** ‖ **ತಮಿ.** ಅಮ್ಮಣೈ, ಅಮ್ಮಾಣೈ ; **ಮಲ.** ಅಮ್ಮಾನ, ಅಮ್ಮಾನಮ್ ; **ತೆಲು.** ಅಮ್ಮನಲು, ಅಮ್ಮನಮುಲು]

**ಅಮ್ಮಾಲೆಬೀಸು** (ನಾ). ಕತ್ತಿವರಿಸೆಯಲ್ಲಿ ಒಂದು ಬಗೆ: ಆಸ್ಥಾನದಲ್ಲಿ ಪಾರ್ಶ್ವಗಳಲ್ಲಿ ದೃಷ್ಟಿಯು ಮಂದವಾಗಿ ಯಿದ್ದಂಥಾ ಪಾದಗಮನಉ ಬಂಡಿಗೋಲಿನ ಭ್ರಮಣಉ ಆವದು ಅದು ಅಮ್ಮಾಲೆ ಬೀಸುವದು [ಯೆಂದು]ತಿಳಿಯಲ್ಪಡುವದು (ಖಡ್ಗಟೀ. ೫–೨೮).
[ಅಮ್ಮಾಲೆ + ಬೀಸು$_2$]

**ಅಮ್ಮಾವು** (ನಾ). **೧.** ಕಾಡ ಹಸು : "ಕಾಟ್ಟುಱು (ಗವಯ) ಎಂದು ಅರ್ಥವು" (ಖಮದ. ೧೩–೬೩ ಅಡಿಟ) ; ಹುಲಿಯುಂಟು ಕರಡಿಯುಂಟಮ್ಮಾವು ಉಂಟಲ್ಲಿ ಖಳಮೂರ್ಖಚೋರರುಂಟು (ಸಿದ್ಧರಾ. ೨–೩೧) ; ನಲಿವರಿವ ಪುಲಿಗಳಿಂ . . . ಮಸಗುವಮ್ಮಾವುಗಳಿಂ (ಮಹಾನೇ. ೪–೭೬) ; ಮಾವುಗಳವ್ವ ಮಲೆವರನ [ಪಾಠಾಂ. ನೆ]ಮ್ಮಾವುಗಳವೊಲುಱದೆ ಮುಱಿವವೆಂದೊಡೆ (ಕಬ್ಬಿಕಾ. ೧೭೩) ; ಕರ್ಕಾಟಕಿಯುವರೋಧಂ ಶರ್ಕರೆಯುಂ ಪುತ್ರಜೀವಿ ತಾವರೆ ಬೇವು[ರಂ] ನೀರ್ಕಲಸಿರದೀಂಟಲ್ಕಿರಲಾರ್ಕುಮೆಯಮ್ಮಾವಿನನುಪಮಾನವಿಷಂಗಳ್ (ಖಮದ. ೧೩–೬೩) ; ಕಾವನೆ ಕಡುಪಿಂ ತಮ್ಮಂ ಕಾವನೆನಲ್ ಕೊರ್ವಿ ಕೊಂಬುಗೊಂಡು ಮಡಲ್ತಿಮ್ಮಾವುಗಳಂ ವಿರಹಿಗಳಮ್ಮಾವುಗಳೆಂದಲ್ಲಿ ಬೆರ್ಚುವರ್ ಮೃಗನಯನೇ (ಧರ್ಮನಾ. ೪–೬೧) ; ಹೊಗಿಸಿದರು ಕಾಡೆಮ್ಮೆಗಳ ಕಾಡ್ಕೋಣ ಹುಲಿ ಕರಡಿಗಳನಮ್ಮಾವುಗಳ ತೋಳನ ಹಿಂಡುಗಳ (ತೊರರಾ. ೬–೨೬–೩೬) ; ಕುಂಕುಮಚ್ಛಾಯೆವಡೆದಮ್ಮಾವು (ರೇವಣ. ೧೨–೧೮). **೨.** ಖಡ್ಗಮೃಗ (?) : ಜಿಹ್ವಯಾಪಿ ಲಿಹನ್ ಖಲೋ [ಪಾಠಾಂ. ಡ್ಗೋ] ಮಾರಯತ್ಯೇವ "ಖಲಃ = ಅಮ್ಮಾವು" (ನೀತಿವಾ. ೨೯–೪೪). [ಅಮ್ಮ? + ಆವು$_1$]

**ಅಮ್ಮಾಳೆ** (ನಾ). ಒಂದು ಊರಿನ ಹೆಸರು(?): ಇದಕ್ಕೆ ಸಾಕ್ಷಿ ಮುಗುಳಿ ಚನ್ನಯಾರು ಪಲ್ಮಾಡಿ ಅಮ್ಮಾಳೆ ಕಿಱಿಯ ಮುಗುಳಿ ಮಱವಳ್ಳಿ ನಲ್ಲೂರು ಮಾಗುಣ್ಡತೆ ಗುರು ಆರಮಣ್ಣಂ ಬಿಟ್ಟ (ಎಕ. VI, ಚಿಕ್ಕಮ. ೪೨–೨೦ ; 959). [?]

**ಅಮ್ಮಿ$_1$** 'ಅಮ್ಮೆ' ನೋ.

**ಅಮ್ಮಿ$_2$** (ನಾ). ಅರೆಯುವ ಹಾಸುಗಲ್ಲು ; ಅಸಿಕಲ್ಲು. 'ಅಮ್ಮಿಕಲ್ಲು' ಪರಾ. [**ದೇ.** ‖ **ತಮಿ. ಮಲ.** ಅಮ್ಮಿ]

**ಅಮ್ಮಿಕಲ್ಲು** (ನಾ). ಸಂಬಾರ ಪದಾರ್ಥಗಳನ್ನು ಅರೆಯುವ ಕಲ್ಲು : ಅಮ್ಮಿಕಲ್ಲಿನಲ್ಲಿ ಅಮಲವ ಅರೆದಡೆ ಹತ್ತುವುದೆ ಬನ್ಧ (ಮನುಗುಂ. ೩೮) ; ಸುಗಮವಹ ಸಕಲ ಸಂಭಾರಂಗಳ ಅಮ್ಮಿಕಲ್ಲೊಳಗರೆದು ನುಱುಗುವಂದದಿ ಕಾಸಿ ಕಮ್ಮನೆಯ ತುಪ್ಪದೊಳು (ಸೂಪಶಾ. ೨–೪೮).
[ಅಮ್ಮಿ$_2$ + ಕಲ್ಲು (< ಕಲ್$_2$)]

**ಅಮ್ಮಿಸೆಟ್ಟಿ** (ನಾ). ಒಬ್ಬಾತನ ಹೆಸರು : ಇಪ್ಪತ್ತನಾಲ್ವರಲ್ಲಿ ಮುಖ್ಯರಪ್ಪ ಅಮ್ಮಿಸೆಟ್ಟಿ, ಭಾಣಿಸೆಟ್ಟಿಯರ ಪ್ರಿಯಪುತ್ರರಪ್ಪ ಚಿಂಚಯ್ಯ (ಎಕ. VII, ಚನ್ನಗಿ. ೩೨–೨೯ ; 1050). [ಅಮ್ಮಿ$_1$ (< ಅಮ್ಮೆ) + ಸೆಟ್ಟಿ]

**ಅಮ್ಮು$_1$** 'ಅಣ್ಮು$_1$' ನೋ.

**ಅಮ್ಮು$_2$** 'ಅಣ್ಮು$_2$' ನೋ.

**ಅಮ್ಮುಗೆ** 'ಅಣ್ಮುಗೆ' ನೋ.

**ಅಮ್ಮೆ, ಅಮ್ಮಿ$_1$** (ನಾ). **೧.** ತಾಯಿಯ ಮೊಲೆ; ಸ್ತನ: ಯಶೋದೆ ದೇವಿಯ ಅಮ್ಮೆ ಉಂಡ ವದನ, ಅಸುರ ಪೂತನಿಯ ವಿಷವ ಹೀರಿದ ವದನ (ಶೀಥಮ. ೧೫೯) ; ಅಮ್ಮಯ ನಾ ಪಸಿದೆನಮ್ಮೆಯನೀವುದೆನಲು (ಕೃಷ್ಣಗೋ. ೧–೧೦೮). **೨.** ಅಮ್ಮ ಎಂಬುದಕ್ಕೆ ಪರ್ಯಾಯವಾಗಿ ಬಳಸುವ ಶಬ್ದ : ತಮ್ಮಿಂದೆ ಮುಂದಿರ್ದ ಕಾರಿಕಾಲಮ್ಮೆಯುಂ ತಮ್ಮಿರ್ವರುಂ ಕಂಡು ಬೆಸಗೊಳಲ್ಕಮ್ಮೆಯಂ (ನಂಬಿರ. ೧೯–೧೧೮). **೩.** ತಂದೆ; ಅಪ್ಪ (ಕರಾ) : ಹರಿಜನರ ತುಳು . . . ಅಮ್ಮೆ ಎಂದರೆ ತಂದೆ ಎಂಬ ಅರ್ಥವಿದೆ (ಸಂಶೋತ. ೧೨೫). **ಅಮ್ಮಿ$_1$**: **೧.** ಸುಮ್ಮನೆ ಇದ್ದೇನು ಅಮ್ಮಿಯ ಬೇಡೆನು ಮಮ್ಮ ಉಣ್ಣುತ್ತೇನೆ ಅಮ್ಮ ಅಳುವುದಿಲ್ಲ (ಪುರಂದ. ೧–೧೭೧–೨) ; ಅಮ್ಮಿಯನುಣಿಸಿದ ಯಶೋದೆಯಾಗಿದ್ದಳೆ ಅಮ್ಮೆ ಇವನಿಗೆ (ಲಕ್ಷ್ಮೀಶೋ. ೩೩) ; ಅಬ್ಬೆಯು ಅಮ್ಮಿಯ ಕುಡಿಸುವ

ಹಾಗೆ (ತುಪದ. ೪೬). ೨. ಚಿಂತೆ ಬೇಡಮ್ಮಿ [ಪಾಠಾಂ. ಮ್ಮ]ನಿನಗೆ ಮನದೊಳಗೆ (ಕುರಾಸಾಂ. ೧೭–೧೦೪) ; ಗಂಗಮ್ಮಿ ಬಾ ಸಿಂಧುದೇವಿ ಬಾ (ಭರಚ. ೪೪–೨೪) ; ಇನ್ನೇನು ಬೇಕಮ್ಮಿ ಬಿನ್ನಾಣಿ ಕೊರವಿ (ಜಗೀತೆ ೬೫) ; ಆತ "ಅಮ್ಮಿ" ಎಂದು ಕರೆದಿದ್ದ, ಅದು ತಾಯಿಯೊಡನೆ ತೀರ ಆತ್ಮೀಯವಾಗಿ ಮಾತನಾಡಿದಾಗ ಆತ ಉಪಯೋಗಿಸುತ್ತಿದ್ದ ಪದ (ತಾಯಿ. ೮೦).

**ಅಮ್ಮಿಯುಣ್ಣು** = ತಾಯಿಯ ಮೊಲೆಯನ್ನು ಉಣ್ಣು ; ಸ್ತನ್ಯಪಾನ ಮಾಡು : ಒಮ್ಮೊಮ್ಮೆ ಅಮ್ಮಿಯುಣುತಾಕಳಿಸಿದ (ಪ್ರಸಭಾ. ೧೧ ಪ).

[**ದೇ.** ‖ ತಮಿ. ಅಮ್ಮಮ್ ; **ಮಲ.** ಅಮ್ಮಿಣ್ಣಿ ; **ತುಳು.** ಅಮಣಿ, ಅಮನಿ, ಉಮನಿ. / **ಮರಾ.** ಅಮ್ಮ]

**ಅಮ್ಮೆಳಿ** 'ಅರ್ಮೆಳೆ' ನೋ.

**ಅಮ್ಮೆಳೆ** 'ಅರ್ಮೆಳೆ' ನೋ.

**ಅಮ್ಲ** (ನಾ). ೧. ಹುಳಿ ; ಷಡ್ರಸಗಳಲ್ಲಿ ಒಂದು. ೨. ಹುಳಿಮಜ್ಜಿಗೆ ; ಹುಳಿಮೊಸರು. ೩. ಗಂಜಿ ; ಅಂಬಲಿ. [ಸಂ.]

**ಅಮ್ಲಪಿತ್ತ** (ನಾ). ಒಂದು ರೋಗ : ಮೈಯಮೇಲೆ ಗಂಡೆಗಳು ಏಳುವವು. ಇದನ್ನು ಶೀತಪಿತ್ತವೆಂದು ಹೇಳುವರು, ಅದಲ್ಲದೆ ಅಮ್ಲಪಿತ್ತವೆಂದೂ ಹೇಳುವರು (ವೈದ್ಯಸಾ. II, ೩೮೦). [ಅಮ್ಲ + ಪಿತ್ತ]

**ಅಮ್ಲಲೋಣಿಕೆ** (ನಾ). ಹುಲ್ಲುಹುಳಿಗನ ಗಿಡ ; ಪುಳ್ಳಂಪುರಿಚೆ (ಕ).
[< ಸಂ. ಅಮ್ಲಲೋಣಿಕಾ]

**ಅಮ್ಲವೇತಸ** (ನಾ). ಓಟೆಹುಳಿ ಮರ (ಕ). [ಸಂ.]

**ಅಮ್ಲಹರಿದ್ರೆ** (ನಾ). ಅಂಬೆ ಹಳದಿ (ಕ). [< ಸಂ. ಅಮ್ಲಹರಿದ್ರಾ]

**ಅಮ್ಲಾನ** (ಗು). ೧. ಬಾಡದಿರುವ ; ಕಂದದಿರುವ : ಅವರ ಅಪಾರ ಬಹುಶ್ರುತತ್ವ . . . ಪದಪದ್ಧತಿ ಅಮ್ಲಾನಪ್ರತಿಭೆ (ಧ್ವನ್ಯಾಲೋ. ೨೯ ಪೀ.). ೨. ನಿರ್ಮಲವಾದ ; ಶುದ್ಧವಾದ. (ನಾ). ೩. "ದೊಡ್ಡ ಗೋರಂಟಿ ಗಿಡ" (ಅಮರ. ಟೀಕೆ). [ಸಂ.]

**ಅಮ್ಲಿ** (ನಾ). ೧. ಹುಣಿಸೆಯ ಮರ, —ಹುಳಿ. ೨. ಓಟೆ ಹುಳಿ.
[< ಸಂ. ಅಮ್ಲಿನ್]

**ಅಮ್ಲಿಕೆ** (ನಾ). ಹುಣಿಸೆಯ ಗಿಡ. [< ಸಂ. ಅಮ್ಲಿಕಾ]

**ಅಮ್ಸಾಣಿ** (ನಾ). ೧. ಗಂಡುಬೀರಿಯಾದ ಹೆಣ್ಣು (ಉಕ). ೨. ದುರಹಂಕಾರ ; ಹಮ್ಮುಬಿಮ್ಮು (ಕರಾ).
[← ಇಂ. Amazon. / **ತುಳು.** ಅಮಸಣಿ= ಗರ್ವ ?]

**ಅಯ್**–$_1$, ಐ–$_2$ (ನಾ). ಸಂಖ್ಯಾವಾಚಿಯಾದ ಅಯ್ದು ಎಂಬುದು ಸಮಾಸದ ಪೂರ್ವಪದವಾದಾಗ ಅಥವಾ ಭಾವನಾಮವಾದಾಗ ಅದಕ್ಕೆ ಪ್ರತ್ಯಯಪರವಾದಾಗ ಆದೇಶವಾಗಿ ಬರುವ ರೂಪ : ತೊಂಬತ್ತಱುಸಾಸಿರ್ಬರುಮಯ್ಸಾಸುಮನ್ತರುಂ (ಇಅ. VI, ೧೦೨–೧೩ ; 777). ಐ–$_2$ : 'ಐಗಂಡುಗ', 'ಐದು' ಪರಾ. [< ಅಯ್ದು$_2$]

**ಅಯ**$_1$ 'ಅಯ್ಯ$_1$' ನೋ.

**ಅಯ**$_2$ (ನಾ). ೧. ಹೋಗುವುದು ; ಚಲಿಸುವುದು. ೨. ಶುಭಕರವಾದ ವಿಧಿ ; ಒಳ್ಳೆಯ ಅದೃಷ್ಟ : ಅಯನಯಪರಾಕ್ರಮೋಪಾಶ್ರಯಂಗಳಂ ಶ್ರೀಗಡರ್ಪುಮಾಡಿದ ನಿನ್ನಿಂದ್ರಿಯಜಯಮೆ ಕೂಡೆ ಲೋಕತ್ರಯದಿಂ ಪೊಗೞಿಸಿದುದು (ಪಂಪಭಾ. ೯–೩೫) ; ಅಯನಯಮಯನತಿವೇಗದೆ ಮಯನಿಸೆ (ಪಂರಾಮಾ. ೧೪–೧೩೪). [ಸಂ.]

**ಅಯಂತ್ರಿತ** (ಗು). ತಡೆಯಿಲ್ಲದ ; ನಿರ್ಬಂಧವಿಲ್ಲದ ; ಸ್ವೇಚ್ಛೆಯಾದ. [ಸಂ.]

**ಅಯಃಕಾಂತ** (ನಾ). = ಅಯಸ್ಕಾಂತ : ಅಯಃಕಾಂತದಾ ಸನ್ನುತ ಮಹೀಧ್ರಂಗಳಿಂ (ಅರಾಜ. ೧–೫). [< ಸಂ. ಅಯಸ್ಕಾಂತ]

**ಅಯಃಪಿಂಡ** (ನಾ). ಕಬ್ಬಿಣದ ಗಟ್ಟಿ : ಸೂಕ್ಷ್ಮಪರಿಣಾಮದಿಂ ಅಯಃಪಿಂಡದೊಳ್ ತೇಜೋನುಪ್ರವೇಶದಂತೆ (ತತ್ತ್ವಪ್ರ. ೧೦೬). [ಸಂ.]

**ಅಯಃಪುತ್ರಿಕೆ** (ನಾ). ಕಬ್ಬಿಣದಿಂದ ಮಾಡಿದ ಸ್ತ್ರೀಪ್ರತಿಮೆ : ಪರವಧು ದುರ್ವ್ಯಸನಂ ನಿನಗೆಂದಮರ್ದಪ್ಪಿಸುವರ್ ಕೆಂಪೆಸೆಯೆ ಕಾಯ್ದಯಃಪುತ್ರಿಕೆಯಂ (ಆದಿಪು. ೫–೭೬). [< ಸಂ. ಅಯಃಪುತ್ರಿಕಾ]

**ಅಯಕರಣ** (ನಾ). ಶುಭವಿಧಿ : ಭಯಭಕ್ತಿವೆರಸು ನುತಿಸಿದರಯಕರಣಕೆರರ್ ಕುಮಾರರ್ (ರಾಜಶೇ. ೪–೯೯). [ಸಂ.]

**ಅಯಜೆ** (ನಾ). ಒಂದು ಪ್ರದೇಶದ ಹೆಸರು : ದುಷ್ಟನಿಗ್ರಹ ಶಿಷ್ಟಪ್ರತಿಪಾಳನಧಿದಾಳುತ್ತಮಿರೆ ಅಯಜೆ ಮುನ್ನೂಱರ ಸೌಥೊರೆ ಕೊಸನಯಪೆರ್ಗ್ಗಡೆಯುಂ (ಕಇಅ. ೧೦೫, ೧೧–೧೫ ; 1067). [?]

**ಅಯತ್ನ** (ಗು). ಪ್ರಯತ್ನವಿಲ್ಲದ. 'ಅಯತ್ನಕೃತ' ಪರಾ. [ಸಂ.]

**ಅಯತ್ನಕೃತ** (ಗು). ಪ್ರಯತ್ನದಿಂದ ಮಾಡಿದುದಲ್ಲದ ; ತನ್ನಷ್ಟಕ್ಕೆ ತಾನೇ ಆದ : ಸವನಿಪುದಯತ್ನಕೃತ ಗೌರವಮುಖದೊಳ್ . . . ಬಹುತ್ವಮೇಕತ್ವದೊಳಂ (ಶಮುದ. ೧೦೨). [ಸಂ. (ಅ– + ಯತ್ನಕೃತ)]

**ಅಯತ್ನಸುಖ** (ನಾ). ಪ್ರಯತ್ನವಿಲ್ಲದೇ ಲಭಿಸುವ ಸುಖ ; ತನ್ನಷ್ಟಕ್ಕೆ ತಾನೇ ಒದಗಿದ ಸೌಖ್ಯ : ಪೌರನಂದನದೊಳಗಿಂತಯತ್ನಸುಖಮಂ ಪಥಿಕರ್ ಪಡೆವರ್ ನಿರಂತರಂ (ಚಂದ್ರಪು. ೩–೧೫).
[ಅಯತ್ನ + ಸುಖ]

**ಅಯಥಾರ್ಥ** (ನಾ). ಯಥಾರ್ಥವಲ್ಲದ್ದು ; ನಿಜವಲ್ಲದ್ದು ; ಅಸತ್ಯ : ಸಾಂಖ್ಯರು ಸರ್ವಜ್ಞಾನವನ್ನು ಸತ್ಯ, ಯಥಾರ್ಥ ಎನ್ನುತ್ತಾರೆ. ಬೌದ್ಧರು ಅಸತ್ಯ, ಅಯಥಾರ್ಥ ಎನ್ನುತ್ತಾರೆ (ಹಿಂದಸಾ. ೫೦). [ಸಂ.]

**ಅಯನ** (ನಾ). ೧. ಹೋಗುವುದು ; ಚಲಿಸುವುದು. ೨. ದಾರಿ ; ಮಾರ್ಗ : "ಅಧ್ವಾ ಪಂಥಾಃ . . . ಅಯನಂ . . . ಈ–೧೨ ಬಟ್ಟೆ" (ಹಲಾಯು. ೪೩–೧೦೫). ೩. ಪ್ರದೇಶ ; ವಾಸಸ್ಥಳ. ೪. ಭೂಮಧ್ಯರೇಖೆಯ ಉತ್ತರಕ್ಕೆ ಅಥವಾ ದಕ್ಷಿಣಕ್ಕೆ ಸೂರ್ಯನು ಪ್ರಯಾಣ ಮಾಡುವ ಮಾರ್ಗ. ೫. ಭೂಗೋಳದ ಮೇಲಿನ ವಿಷುವದ್ಬಿಂದು ; ಸಂಕ್ರಾಂತಿ ಬಿಂದು. ೬. ಮೂರು ಋತುಗಳು : ಮಾಸಂ ಪಕ್ಷದ್ವಿತಯಂ ಮಾಸದ್ವಯಮೊಂದೆ ಋತು ಋತುತ್ರಯಮಯನನ್ಯಾಸಂ (ಪಂರಾಮಾ. ೧–೫೨) ; ಮಾರ್ಗಶಿರಂ ಮೊದಲಾದೆರಡೆರಡುತಿಂಗಳಿಗೊಂದೊಂದು ವರ್ತಿಪವಾ ಋತು ಮೂಱಾಗಲೊಂದಯನವೆನಿಸುವುದು (ವಿವೇಕ. ೩೨೧). ೭. ಜಾತ್ರೆ : ಅಯನ ನೋಡಿದ್ದೂ ಇಲ್ಲ, ಶಯನ ಮಾಡಿದ್ದೂ ಇಲ್ಲ (ಗಾದೆ). [ಸಂ.]

**ಅಯನದೀವಿಗೆ** (ನಾ). ಒಂದು ಅಯನ ಮುಗಿಯುವವರೆಗೂ ಉರಿಯುವ ದೀಪ ; ಆರು ತಿಂಗಳವರೆಗೂ ಉರಿಯುವ ದೀಪ : ಉದಯ ಪರಿಯಾರರ ಅಯನದೀವಿಗೆಗೂ ದೇವರಿಗೆ ಮಾಲೆಗೂ ಕೂಡಿ ಹನ್ನೆರಡು ಹೊನ್ನನೂ ದನಿಯರ ಕಯ್ಯಲು ತಂದು ಕೊಡುವರು (ಸೌಇಇ. IX–ii, ೪೦೭–೧೭ ; 1364). [ಅಯನ + ದೀವಿಗೆ]

**ಅಯನಯ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಅಯನಯ ನಾಡಾಳಿ ದುಗರಂ ಇಯೂರಾಳೆ (ಎಕ. VIII, ಸೊರಬ. ೩೮೦–೧ ; 1015).
[< ಅಯ್ಯಣಯ್ಯ ?]

**ಅಯನವೃತ್ತ** (ನಾ). ಭೂಮಧ್ಯರೇಖೆಯ ಉತ್ತರಕ್ಕೆ ಅಥವಾ ದಕ್ಷಿಣಕ್ಕೆ ಸೂರ್ಯನು ಸಂಚರಿಸುವುದನ್ನು ಸೂಚಿಸುವಂತೆ ಭೂಪಟದ ಅಥವಾ ಗೋಳದ ಮೇಲೆ ಎಳೆದಿರುವ ಗೆರೆ ; ಅಯನಾಂಶ ವೃತ್ತ : ಅಯನಗಳ ಸಂಬಂಧದಿಂದ ಮಕರ ಕರ್ಕವೃತ್ತಗಳಿಗೆ ಕೂಡಿ ಸಾಮಾನ್ಯವಾಗಿ ಅಯನವೃತ್ತಗಳೆಂದೆನ್ನುವರು (ಮುಂಬಯಿ. ೪–೬೪). [ಅಯನ + ವೃತ್ತ]

**ಅಯನಸಂಕ್ರಾಂತಿ** (ನಾ). "ಸೂರ್ಯನು ವಿಷುವದ್ವೃತ್ತದಿಂದ ಅತ್ಯಂತ ದೂರವಾಗಿದ್ದು, ಪಥದಲ್ಲಿ ಬಾಗಿ ತಿರುಗುವುದಕ್ಕೆ ಮೊದಲು ಕೊಂಚ ಚಲಿಸದೆ ನಿಂತುಕೊಳ್ಳುವಂತೆ ಭಾಸವಾಗುವ ಎರಡು ಕಾಲಗಳಲ್ಲೊಂದು" (Solstice. ಇಂಕನಿ). [ಅಯನ + ಸಂಕ್ರಾಂತಿ]

**ಅಯನಾಂಶ** (ನಾ). "ಸೂರ್ಯಚಂದ್ರರ ಪ್ರಭಾವದಿಂದ ಕ್ರಾಂತಿವೃತ್ತದಲ್ಲಿ ವಿಷುವದ್ಬಿಂದುಗಳ ಪಶ್ಚಿಮಮುಖದ ಮಂದಚಲನೆ" (Precession. ಇಂಕನಿ). [ಸಂ.]

**ಅಯನಿಸು** (ಕ್ರಿ). ಮುಂದಕ್ಕೆ ಹೋಗು; ಚಲಿಸು: ಸೂರ್ಯನು ೬ ತಿಂಗಳು ಬಡಗಲಿಗೂ ೬ ತಿಂಗಳು ತೆಂಕಲಿಗೂ ಅಯನಿಸುವನಾಗಿ ಈ ೧೨ ತಿಂಗಳಿಗೊಂದು ವರುಷವಾಗುವುದು (ಸಿದ್ಧಾಂತಿ. ೩೬).
[ಅಯನ + -ಇಸು$_3$]

**ಅಯಮಾರ್ಗ** (ನಾ). ಶುಭಮಾರ್ಗ; ಒಳ್ಳೆಯ ದಾರಿ: ಅಯಮಾರ್ಗಾಶ್ರಯನಂ ಪ್ರಭೂತದಯನಂ ದೂರೀಕೃತಸ್ವಾಂತಭೂಭಯನಂ (ಚಂದ್ರಪು. ೧-೨೧). [ಅಯ್$_2$ + ಮಾರ್ಗ]

**ಅಯಲು** (ನಾ). ಕೊಳ; ಕೆರೆ (?): ಧರ್ಮಶಾಸನದ ಕ್ರಮವ್ಯೆಂತೆಂದರೆ . . . ಗದ್ದೆ ಬೆದ್ದಲು ತೋಟ ತುಡಿಕೆ ವಿತಲು ಅಯಲು ಗುಯಲು ಅಕ್ಷೀಣ ಆಗಾಮಿ ನಿಧಿ ನಿಕ್ಷೇಪ ಜಲ ಪಾಷಾಣ ವ್ರಿಕ್ಷ ಬಾವಿಗಳು ಸಹಿತ (ಎಕ. X, ಕೋಲಾರ. ೮೩-೪; 1417). ℙ ತುಳು. ಗುವೆಲ್, ಗುವೆಲ = ಬಾವಿ. 'ಅಯಲು ಗುಯಲು' ಜೋಡಿನುಡಿ ಇರಬಹುದೇ. [?]

**ಅಯಶ** (ನಾ). ಅಪಕೀರ್ತಿ; ಕೆಟ್ಟ ಹೆಸರು: ಆಯಶಕ್ಕಂಜದೆ ನೀಂ ತಂದೆಯ ರಾಜ್ಯಕ್ಕಳಿಪಿ (ಪಂರಾಮಾ. ೧೨-೬೬); ಹಸಿತಯಶಃಪ್ರಭೃತಿಯೊಳುಲ್ಲಸಿತಂ ಸಿತಭಾವಮಯಶದೊಳ್ ಪಾಪದೊಳಂತಸಿತರುಚಿ (ಕಾವ್ಯಾವ. ೮೬೧). [< ಸಂ. ಅಯಶಸ್]

**ಅಯಶಸ್ಕೀರ್ತಿ** (ನಾ). [ಜೈನ] ಎಪ್ಪತ್ತೆರಡು ಪ್ರಕೃತಿಗಳಲ್ಲಿ ಅಪಕೀರ್ತಿ ಎಂಬ ಪ್ರಕೃತಿ ಅಥವಾ ಕರ್ಮ: ಶುಭಾಶುಭ ಸುಸ್ವರ ದುಸ್ವರ ಸುಭಗ ದುರ್ಭಗ ಪ್ರತ್ಯೇಕ ಶರೀರಾಯಶಸ್ಕೀರ್ತಿರನಾದೇಯ . . . ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೯ ವ); ಆಯಶಸ್ಕೀರ್ತಿನಾಮಕರ್ಮೋದಯಂ ಪಳಿಯಂ ಮಾಡುಗುಂ (ತತ್ತ್ವಪ್ರ. ೨೪೮). [ಸಂ. (ಅಯಶಸ್ + ಕೀರ್ತಿ)]

**ಅಯಶ್ಶಲಾಕೆ** (ನಾ). ಕಬ್ಬಿಣದ ಸರಳು, —ಸಲಾಕೆ: ಕಾಸಿದಯಶ್ಶಲಾಕೆಯಂತೊಡನೆ ಕುಮಾರನಚಿಕ್ಕಿಯ ಸರಂ ಕಿವಿಯಂ ಪುಗೆ (ಮಲ್ಲಿಪು. ೧೦-೨೮). [ಸಂ. (ಅಯಸ್ + ಶಲಾಕಾ)]

**ಅಯಶ್ಶೂಲ** (ನಾ). ೧. ಕಬ್ಬಿಣದ ಭರ್ಜಿ, —ಈಟಿ. ೨. ತೀಕ್ಷ್ಣ ಉಪಾಯ; ಕುತಂತ್ರ. [ಸಂ. (ಅಯಸ್ + ಶೂಲ)]

**ಅಯಶ್ಶೂಲಿಕ** (ನಾ). ಆತ್ಮಹತ್ಯೆ ಮಾಡಿಕೊಳ್ಳುವವನು: "ತನ್ನ ತಾ ಸಾವವನಯಶ್ಶೂಲಿಕನೆನಿಕ್ಕು" (ಮಂಗರಾ. ೭೦-೧೬).
[< ಸಂ. ಅಯಃಶೂಲಿಕ]

**ಅಯಸ$_1$** (ನಾ). ದಣಿವು; ಬಳಲಿಕೆ: ಚಕ್ರವರ್ತಿಯೊಳಯ[ಸಂ]ನಮಗುಜದು ಬೇಗಮೆಱಗದೊಡುಱುಗುಂ (ಆದಿಪು. ೧೨-೧೦೮). 'ಅಯಸಂಗೊಳಿಸು' ಪರಾ. [< ಸಂ. ಆಯಾಸ]

**ಅಯಸ$_2$** (ನಾ). = ಅಯಶ: ಅಯಸದೊಳಾದೀ ಕಜಿಕೆ ಕರ್ಚೆ ಪೋಗದೀ ಕೆಯ್ನೀರೊಳ್ (ಶಾಂತಿಪು. ೪-೭೮); ಕವಿಲೆಯಂ ವೇದಾಢ್ಯರಂ ಕೊಂದು ದೊಂದಯಸಂ ಪೊರ್ದುಗುಮೆಂದು ಸಾಱಿದಪುದೀ ಶೈಲಾಕ್ಷರಂ (ಎಕ. V, ಹಾಸನ. ೫೩-೬೯; 1170). [< ಸಂ. ಅಯಶಸ್]

**ಅಯಸಂಗೊಳಿಸು** (ಕ್ರಿ). ಆಯಾಸಪಡಿಸು; ದಣಿಸು: ಅಂಗಣಕಿದೆ ತೃಣಂ ಪೊಸಸಿಂಗದ ಮುಱಿ ಬಂದುದೆಂದು ಮುದ್ದಾಡಿಸುತಾಲಿಂಗಿಪೆನೆನೆ ಪರಿಪರಿದಯಸಂಗೊಳಿಸುವ ಮಗನನೆಂದು ನಡೆನೋಡುವೆನೋ (ಧರ್ಮನಾ. ೩-೧೨೧). [ಅಯಸ$_1$ + ಕೊಳ್$_1$ + -ಇಸು$_3$]

**ಅಯಸ್ಕಾಂತ** (ನಾ). ಕಬ್ಬಿಣವನ್ನು ತನ್ನ ಕಡೆಗೆ ಆಕರ್ಷಿಸುವ ಒಂದು ಲೋಹ; ಸೂಜಿಗಲ್ಲು; ಲೋಹ ಚುಂಬಕ: "ಚುಂಬಕಃ, ಭ್ರಾಮಕಃ ಮೊದಲಾದವು ಅಯಸ್ಕಾಂತದ ಭೇದಂಗಳ್" (ಹ ಲಾ ಯು. ೨೮-೧೪); ನಟ್ಟುಡಿದ ಬಾಳ ಕಕ್ಕಡೆಯುಡಿಗಳುಮನಯಸ್ಕಾಂತಮಂ ತೋಱಿ ತೆಗೆಯಿಸುತ್ತುಂ (ಪಂಪಭಾ. ೧೧-೨).
[ಸಂ. (ಅಯಸ್ + ಕಾಂತ)]

**ಅಯಸ್ಕಾಂತಶಿಲೆ** (ನಾ). ಸೂಜಿಗಲ್ಲು. [ಅಯಸ್ಕಾಂತ + ಶಿಲೆ]

**ಅಯಸ್ಕಾರ** (ನಾ). ಕಮ್ಮಾರ (ಸ್ಯಾಂಡರ್). [ಸಂ.]

**ಅಯಾಚಿತ** (ಗು). ೧. ಯಾಚಿಸಲ್ಪಡದ; ಅನಾಯಾಸವಾಗಿ ದೊರೆತ: ಪೂರ್ವಜನ್ಮದ ಪುಣ್ಯಫಲದಿಂದ ಅಯಾಚಿತವಾಗಿಯೆ ಅನುಪಮವಾದ ಈ ಶಿಶುನಿಧಾನವು ತಮಗೆ ದೊರೆಯಿತು (ಬಿದುರೆ. ೧೬೧). (ನಾ). ೨. ಪಂಚವಿಧ ಭಿಕ್ಷೆಗಳಲ್ಲಿ ಒಂದು: ಮಾಧೂ[ಧು]ಕರ, ಅಸಂಕ್ಲುಪ್ತ, ಪ್ರಾಕ್ಪ್ರಣೀತ, ಅಯಾಚಿತ, ತಾತ್ಕಾಲಿಕವೆಂಬ ಪಂಚವಿಧ ಭಿಕ್ಷಂಗಳ್ (ವಿವೇಕ. ೧೪೬). [ಸಂ.]

**ಅಯಾನ** (ಗು). ೧. ಚಲಿಸದ; ನಿಂತ. ೨. ವಾಹನವಿಲ್ಲದ. [ಸಂ.]

**ಅಯಾಲು**, ಆಯಾಲ (ನಾ). ಕುದುರೆಯ ಅಥವಾ ಸಿಂಹದ ಕುತ್ತಿಗೆಯ ಮೇಲಿನ ಕೂದಲು: ಕುದುರೆಗಳ ಮೈಕೂದಲನ್ನೂ ಆಯಾಲನ್ನೂ ಕತ್ತರಿಸಬೇಕು (ಪಾಳಗಾ. ೫೨). **ಅಯಾಲ**: ಚಿಗರಿಗಳು ಸಿಂಹದ ಅಯಾಲವನ್ನು ಕಟ್ಟ್ಯಾಡಿಸುತ್ತವೆ (ಭಾರಸಂ. ೫); ನೀಲನು ಕುದುರೆಯನ್ನೇ ನೋಡುತ್ತಿದ್ದನು . . . ಅದರ ಕುತ್ತಿಗೆಯ ಮೇಲೆ ತುಂಬ ಬೆಳೆದ ಅಯಾಲವನ್ನು ನೋಡಿ ಆನಂದದಿಂದ ಪುಲಕಿತನಾದನು (ಬಂಗಾಹಿ. ೨೨).
[← ಪಾರ. ಹಿಂ. ಅಯಾಲ್; ಮರಾ. ಅಯಾಲ, ಆಯಾಳ]

**ಅಯಿಗಂಡುಗ** 'ಅಯ್ಗಂಡುಗ' ನೋ.

**ಅಯಿಗಡಲ**, ಐಗಡಲ (ನಾ). ಐದು ಸಮುದ್ರದವನು (?). **ಐಗಡಲ**: ತಿಳಿದು ನೋಡೆ ಐಗಡಲನಂಗ ಮೂಱು ಮುಡಿಯುವನ ಸಂಗ ಬೇಱಿಕೊಂದು ಹಿಡಿದು ನೋಡುವ ನಿಸ್ಸಂಗ ತನ್ನತಾನಱಿದಲ್ಲಿಯೆ ಕಾಣಬಂದಿತ್ತು (ಕೋಲಶಾಂ. ೨೩).
[< ಅಯ್ದು$_2$ + ಕಡಲ್ + -ಅ$_7$]

**ಅಯಿಗಯಿ** (ನಾ). ಐದು ಕೈಗಳಷ್ಟು ಉದ್ದ; ಐದು ಮೊಳ (?): ಹಿತ್ತಿಲವು ಮೂಡಲುಂ ಪಡವಲುಂ ಅಯಿಗಯಿಯಗಲ್ಲುಂ ತೆಂಕಲುಂ ಬಡಗಲುಂ ಆ ಮನೆಯ . . . ನಿಳ ಹೊಱಗಾಗಿ (ಕಕುಲ. ೫-೬೬; 1218).
[< ಅಯ್ದು$_2$ + ಕೆಯ್$_2$ (< ಕಯ್ಯಿ)]

**ಅಯಿಗುಳ** 'ಅಯ್ಗುಳ' ನೋ.

**ಅಯಿಗುಳಿ** (ನಾ). ಐದು ಕೊಳಗ ಬೀಜವನ್ನು ಬಿತ್ತುವ ಕ್ಷೇತ್ರ: ಕೊಟ್ಟುದು ವರದಪಯನ . . . ಅಯಿಗುಳಿ ದೇವನಾಯ್ಕರ ಸಲಿಕೆ ಮಾಡಿ (ಎಕ. X (S), ಮುಳಬಾ. ೨೧೯-೬; 1530).
[ಅಯಿಗುಳ (< ಅಯ್ಗುಳ) + -ಇ$_2$]

**ಅಯಿಜನ್** (ಗು). ಹೇಳಿದ; ಮೇಲೆ ಕಾಣಿಸಿದ (ಕಿಸಂಗ್ಲಾ. ೧೧೮).
[← ಅರ. ಅಇಜನ್]

**ಅಯಿದಾರೆ** (ನಾ). ಒಂದು ಬಗೆಯ ಸಕ್ಕರೆ; ಪಂಚದಾರ; ತವರಾಜ: ಪಾಲೊಳಗಯಿದಾರೆಯ ಸಕ್ಕರೆಯಂ ಒತೊಡವೆರಸುವ ತೆಱದಿಂ . . . ಜಯನೃಪಚಾರಿತ್ರಮನೋತುಸಿರ್ದಂ (ಜಯಕಾ. ೧-೨೩).
[← ತೆಲು. ಪಂಚದಾರ = ಸಕ್ಕರೆ; ಮಲ. ಪಂಚತಾರ, ಪಂಚಸಾರ = ಸಕ್ಕರೆ]

**ಅಯಿದಾಳು** (ನಾ). ಒಂದು ಪ್ರದೇಶ; ಐದು ತಾಳೆಮರವಿರುವ ಪ್ರದೇಶ (?) : ಬಾಳುನೆಲ್ಲಿಯ ಅಯಿದಾಳ ಗದೆಕೆ[ಶ್ವ]ಉಪಾಧ್ಯನ (ಸೌಇಎ. ೧೯೨೯, ಉಡುಪಿ. ೪೯೪–೨೪ ; 1451). [< ಅಯ್ದು₂ + ತಾಳೆ ?]

**ಅಯಿದು** 'ಅಯ್ದು₂' ನೋ.

**ಅಯಿದೆ** 'ಅಯ್ದೆ₂' ನೋ.

**ಅಯಿನ** 'ಐನ' ನೋ.

**ಅಯಿನವಳಿ** (ನಾ). ಒಂದು ಊರು : ಪರಿಹಾರವ ತೆಱುವ ಅಡಕು ಮುಂದಕೆ ಅಯಿನವಳಿ ಊರೊಳಗೆ ಅರ್ಸು (ಸೌಇಎ. ೧೯೩೧, ಮಂಗಳೂ. ೩೩೫–೧೦ ; 1335). [ಅಯಿನ + ಪಳ್ಳಿ ?]

**ಅಯಿನಾತಿ** 'ಐನಾತಿ' ನೋ.

**ಅಯಿನು** 'ಐನ್' ನೋ.

**ಅಯಿನೂಱು** 'ಅಯ್ನೂಱು' ನೋ.

**ಅಯಿಬಿಸೆಟ್ಟಿ** (ನಾ). ಒಬ್ಬಾತನ ಹೆಸರು : ಮಲ್ಲಿಸೆಟ್ಟಿ ಅಯಿಬಿಸೆಟ್ಟಿ ಕಾಳಿಸೆಟ್ಟಿ ಪ ೨ ಮಣಿಗಾಱ ಮಾಚಿಸೆಟ್ಟಿ (ಎಕ. II, ೨೩೬–೧೬ ; 1185). [ಅಯಿಬಿ₀ + ಸೆಟ್ಟಿ]

**ಅಯಿಬು** 'ಐಬು' ನೋ.

**ಅಯಿಬೆ** (ನಾ). ಒಂದು ಊರು (?) : ಬಲ್ಲಾಳದೇವನ ಪಟ್ಟ ಸಾಹಣಿ ಕಳುಂ . . . ಅಯಿಬೆಯ ಸಾಹಣಿ ಶ್ರೀ ಮಲ್ಲಿಕಾರ್ಜುನದೇವರ ಜೀರ್ಣೋದ್ಧಾರವನು . . . ಅಯಿಬೆಯ ಶ್ರೀ ಮಲ್ಲಿಕಾರ್ಜುನ (ಎಕ. VII, ಶಿವಮೊ. ೧೦೨–೩೩ ; 1215). [?]

**ಅಯಿಮೂಲೆ** 'ಅಯ್ಮೂಲೆ' ನೋ.

**ಅಯಿರಡಿ** (ನಾ). ಒಂದು ಊರಿನ ಹೆಸರು : ಬಾಣರಾಜರಾ ಕಿರಿ[ಱಿ]ಯಮ್ಮಂಗಳಯಿರಡಿ ಆಳ್ವ ವಿಕ್ರಮಾದಿತ್ಯಕ್ಕೊರ್ಟ್ಟುದು (ಸೌಇಇ. IX–i, ೪೭–೫೧ ; ೯ನೆಯ ಶತ). [?]

**ಅಯಿರಣಕೀಱವರು** (ನಾ). ಒಂದು ಪಂಗಡ (?) : ಇದಕ್ಕೆ ಸಾಕ್ಷಿ ಮಿಾಕಣೂರರು ಅಯಿರಣಕೀಱವರು ಅಣಗರು ಕಟಿತ್ತಿಯರು ಚಿಂಗರಸನು ತಲೆ ಪರಿಯಾ ಕೆಯ್ಯಾಳ್ದೋರ್ (ಸೌಇಇ. IX–i, ೪೭–೧೧ ; ೯ನೆಯ ಶತ). [?]

**ಅಯಿರಣೆ₁** (ನಾ). ಒಂದು ಊರಿನ ಹೆಸರು : ಪಾಂಡ್ಯರಾಜ್ಯದ ಬಳಿಚಿಟ್ಟೂರು ಮಂಗುತೊಳಲ ಕಂಪಣದೊಳು ಅಯಿರಣೆಯುಮಂ ಕಾಲಡಿತೊಂಬತ್ತಱೊಳು ಕೋಣಿಯ ನೇಱಿಲೆಗೆಯುಮಂ (ಎಕ. VII, ಶಿಕಾರಿ. ೧೦೨–೫೩ ; 1162). [?]

**ಅಯಿರಣೆ₂** 'ಅಯ್ರಣೆ' ನೋ.

**ಅಯಿರಾವತ** (ನಾ.) = ಐರಾವತ : "ಸುರೇಭ – ಅಯಿ[ಪಾಠಾಂ. ಐ]ರಾವತ" (ನಾನಾರ. ೧೫). [< ಸಂ. ಐರಾವತ]

-**ಅಯಿಲ** '-ಆಯಿಲ್ಯ' ನೋ.

**ಅಯಿವಱು** 'ಐವಱು' ನೋ.

**ಅಯಿವತು** 'ಅಯ್ವತ್ತು' ನೋ.

**ಅಯಿವತ್ತು** 'ಅಯ್ವತ್ತು' ನೋ.

**ಅಯಿವಳ್ಳಿ** (ನಾ). ಐದು ಬಳ್ಳದ ಒಂದು ಅಳತೆ : ಇರ್ಪ್ಪತ್ತಾ ಅಯಿವಳ್ಳ (ಎಇ. XIV, ೧೯೧–೩೪ ; 725). [< ಅಯ್ದು₂ + ಬಳ್ಳ]

**ಅಯುಕ್ತ** (ಗು). ೧. ನೊಗವನ್ನು ಕಟ್ಟದ; ನೊಗಕ್ಕೆ ಹೂಡದ. ೨. ಹೊಂದಿಕೊಳ್ಳದ; ಯೋಗ್ಯವಲ್ಲದ; ತರ್ಕಬದ್ಧವಲ್ಲದ : ಹಿಂದೆ ಪೂರ್ವಪಕ್ಷದವರು ಹೇಳಿರುವುದು ಅಯುಕ್ತ (ಧ್ವನ್ಯಾಲೋ. ೨೬). (ನಾ). ೩. ವಿರಹಿ : ಬೆಡಂಗಾಯ್ತಯುಕ್ತ ಪ್ರಜಗರ್ವೋರ್ವೀಧ್ರಶಂಬಂ ನಯನ ಸುಖಲತಾಸ್ತಂಬಮಾತ್ರೇಯಬಿಂಬಂ (ಚಂದ್ರಪು. ೮–೩೪). [ಸಂ.]

**ಅಯುಕ್ತಿಕ** (ಗು). ೧. = ಅಯುಕ್ತ. ೨. ಯುಕ್ತಿಯಿಂದ ಕೂಡಿಲ್ಲದ. ೩. ಹೊಂದಿಕೆಯಿಲ್ಲದ. [ಸಂ.]

**ಅಯುತ** (ಗು). ೧. ಸೇರದಿರುವ; ಎಣಿಕೆಗೆ ಒಳಪಡದ. (ನಾ). ೨. ಹತ್ತುಸಾವಿರ : ಕೆಡೆದವಯುತ ಘಟಾಳಿ ತೇರುಗಳುಡಿದು ಬಿದ್ದುವು ಮೂರುಸಾವಿರ (ಕೌಶಿರಾ. ೨೦–೪೩).

**ಅಯುತನಿಯುತ** = ಹತ್ತುಸಾವಿರ ಮತ್ತು ಇಪ್ಪತ್ತು ಸಾವಿರ : ನರನಾರ್ದು ತೆಗೆದಿಸಲ್ಪೆತ್ತುವು ಸರಳ್ಗಳೊಂದೊಂದಯುತನಿಯುತಮಂ ಪೊತ್ತುವು (ಜೈಮಿಭಾ. ೨೩–೩೫). **ಅಯುತಪ್ರಯುತ** = ಹತ್ತುಸಾವಿರ ಮತ್ತು ಲಕ್ಷ : ಕ್ಷಯಸಾಂಡು ಮುಖ್ಯವಾಗಿರ್ದಖಿಲರೋಗ ಸಂಚಯವಲ್ಲಿ ರೂಪಾಗಿ ನಿಂದು ಯಮರಾಜ ನಿನ್ನಯ ಬೆಸನದೇನಾರ ಹಿಡಿವೆವಾರಂ ಬಾಧೆಯಂ ಮಾಳ್ಪೆವಾರ ಕೊಂದೊ[ದು]ರಯದಿಂದ ನಿನ್ನೆಡೆಗೆ ತಹೆವೆಂದು ನುಡಿವುತ್ತಲಯುತಪ್ರಯುತವಿರಲು (ವೀಶೈಪು. ೪–೧೮–೪೬). **ಅಯುತವರುಷ** = ಹತ್ತುಸಾವಿರ ವರುಷ; ಅನೇಕ ವರ್ಷ : ಹೆಂಗೊಲೆಗೆ ಹೇಸದೆ ಮಹಾಸ್ತ್ರವನ್ನು ತೊಡುತ್ತಿದ್ದೀಯಲ್ಲ ನೀನು ! ಸಿಟ್ಟಿನಿಂದ ಇವಳ ಕೂಡೆ ಅಯುತವರುಷ ನೀನು ಬೇಸರಿಲ್ಲದೆ ಕಾದಿದರೂ ತೀರಲರಿಯದು (ಬಿದುರಿ. ೭೫). [ಸಂ.]

**ಅಯುಪುದ** (ನಾ). ಒಬ್ಬಾತನ ಹೆಸರು (?) : ಈ ಧರ್ಮ್ಮಮಾನ್ನಿರಕ್ಷಿಚ್ಚಿದೋನ್ನಡಿ ಎನ್ನಲೆ ಮೇಲೊ ಈ ಧರ್ಮ್ಮಮಾನ್ನಱಿವೋನ್ಪಞ್ಚ ಮಹಾಪಾತಕನಕ್ಕು ಅರ್ದ್ದಕ್ಕಣ್ಣುಗ ಅ[ಪಾಠಾಂ. ಅ]ಯುಪುದ ಪೋಯ್ತೋದು (ಎಕ. X, ಕೋಲಾರ. ೬–೧೨ ; 753). [?]

**ಅಯೊಗ** 'ಅಯೋಗ₁' ನೋ.

**ಅಯೋಗ₁**, ಅಯೊಗ (ನಾ). ಒನಕೆ : ಅಯೋಗ್ರ – ಅಯೋಗ (ಶಬ್ದಾನು. ೧೮೦). **ಅಯೊಗ** : ದೀರ್ಘಕ್ಕೆ ಹ್ರಸ್ವಂ – ಅಯೋಗ್ರ – ಅಯೊಗ (ಶಮದ. ೨೭೩ ಪ್ರಯೋ). [< ಸಂ. ಅಯೋಗ್ರ]

**ಅಯೋಗ₂** (ನಾ). ೧. ಯೋಗವಿಲ್ಲದಿರುವುದು ; ಸಂಬಂಧವಿಲ್ಲದಿರುವುದು. ೨. [ಜೈನ] ಮನೋವಾಕ್ಕಾಯಗಳ ಚಂಚಲತೆಯನ್ನು ಬಿಟ್ಟಿರುವುದು. 'ಅಯೋಗಕೇವಲಿ' ಪರಾ. [ಸಂ.]

**ಅಯೋಗಕೇವಲಿ** (ನಾ). [ಜೈನ] ಮನೋವಾಕ್ಕಾಯಗಳ ಚಂಚಲತೆಯಿಲ್ಲದವನು ; ಹದಿನಾಲ್ಕನೆಯ ಗುಣಸ್ಥಾನವನ್ನು ಸೇರಿದವನು : ಸಯೋಗಕೇವಲಿಗಳ್ಗೆ . . . ಏಕಜೀವಾಪೇಕ್ಷೆಯಿಂ ಜಘನ್ಯಮುಂ ಉತ್ಕೃಷ್ಟಮುಂ ತ್ರಿಸಮಯ ಪ್ರಮಾಣಂ; ಅಯೋಗಕೇವಲಿಗಳ್ಗೆ ಸಾಮಾನ್ಯೋಕ್ತಕಾಲಂ (ತತ್ತ್ವಪ್ರ. ೩೬). [< ಸಂ. ಅಯೋಗಕೇವಲಿನ್]

**ಅಯೋಗಗುಣಸ್ಥಾನ** (ನಾ). [ಜೈನ] ಹದಿನಾಲ್ಕನೆಯ ಗುಣಸ್ಥಾನ : ಪಂಚಹ್ರಸ್ವಾಕ್ಷರೋಚ್ಚಾರಣ ಮಾತ್ರ ಕಾಲಪ್ರಮಿತಾಯೋಗ ಗುಣಸ್ಥಾನಸ್ಥಿತಂ (ಆದಿಪು. ೧೬–೪೯ ವ). [ಅಯೋಗ₂ + ಗುಣ + ಸ್ಥಾನ]

**ಅಯೋಗಿ** (ನಾ). [ಜೈನ] = ಅಯೋಗಕೇವಲಿ. 'ಅಯೋಗಿಕೇವಲಿ' ಪರಾ. [< ಸಂ. ಅಯೋಗಿನ್]

**ಅಯೋಗಿಕೇವಲಿ** (ನಾ). [ಜೈನ] = ಅಯೋಗಕೇವಲಿ : ವಾಙ್ಮನಃ ಕಾಯಯೋಗವನಡಂಗಿಸಿ ಸಕಲಬದ್ಧಾಶ್ರವ ನಿರೋಧದಿನಯೋಗಿ ಕೇವಲಿ ಗುಣಸ್ಥಾನಮಂ ಪೊರ್ದಿ (ಪಂರಾಮಾ. ೧೬–೭೯ ವ) ; ಯೋಗದಿಂದಗಲ್ದು ಸಮಸ್ತ ಶೀಲಗುಣಂಗಳ ಪರಮೋತ್ಕೃಷ್ಟಮನೆಯ್ದಿದ ಪರಮಾತ್ಮಂ ಪದಿನಾಲ್ಕನೆಯ ಸ್ಥಾನಗುಣವರ್ತಿ ಅಯೋಗಿಕೇವಲಿಯಕ್ಕುಂ (ಶ್ರಾವಕಾ. ೭೦–೯). [< ಸಂ. ಅಯೋಗಿಕೇವಲಿನ್]

**ಅಯೋಗ್ಯ** (ಗು). ಯೋಗ್ಯವಲ್ಲದ; ಉಚಿತವಲ್ಲದ : ಸಭ್ಯರ ಜೊತೆ ನೀನು ಸೇರಲಯೋಗ್ಯನು (ಇಂಚಾಪ. ೧೨೧–೯೨). [ಸಂ.]

**ಅಯೋಗ್ರ** (ನಾ). ೧. ತುದಿಯಲ್ಲಿ ಕಬ್ಬಿಣದ ಅಣಸುಳ್ಳದ್ದು; ಒನಕೆ. ೨. ಆಯುಧ: "ಶಸ್ತ್ರಮಾಯುಧಮಯೋಗ್ರಂ" (ಮಂಗರಾ. ೮೬–೩೨). [ಸಂ. (ಆಯಸ್ + ಅಗ್ರ)]

**ಅಯೋಗ್ರಾಹ್ಯತೆ** (ನಾ). ಕಬ್ಬಿಣವನ್ನು ಆಕರ್ಷಿಸುವ ಗುಣ: ಇಂತಿಂತು ಮೆಱೆಯುತಿರ್ಪುವನಂತಂ ಘನ ತೇಜದಿಂದಯೋಗ್ರಾಹ್ಯತೆಯಿಂದಂ ತಣ್ಪಿಂದಾಹಾ ರವಿಕಾಂತಮಯಸ್ಕಾಂತಮಿಂದುಕಾಂತಂ ನಗದೊಳ್ (ಗಿರಿಕ. ೧–೫೮). [ಸಂ. ಆಯೋಗ್ರಾಹ್ಯತಾ]

**ಅಯೋಘನ** (ನಾ). ಕಬ್ಬಿಣದ ಗಟ್ಟಿ, —ಸುತ್ತಿಗೆ. [ಸಂ. (ಆಯಸ್ + ಘನ)]

**ಅಯೋಧ** (ನಾ). ಯೋಧನಲ್ಲದವನು. [ಸಂ.]

**ಅಯೋಧ್ಯ** (ಗು). ೧. ಯುದ್ಧ ಮಾಡಬಾರದ; ಪ್ರತಿಭಟಿಸಲಾಗದ. (ನಾ). ೨. [ಜೈನ] ಚಕ್ರೇಶ್ವರನ ಏಳು ಜೀವರತ್ನಗಳಲ್ಲಿ ಒಬ್ಬನಾದ ಸೇನಾಪತಿಯ ಹೆಸರು: ಅಯೋಧ್ಯನೆಂಬ ದಂಡನಾಯಕನುಂ (ಆದಿಪು. ೧೫–೩ ವ); ಅಯೋಧ್ಯನೆಂಬ ಸೇನಾನಿಯಿಂದಂ (ಶಾಂತಿಪು. ೧೧–೮೪). ೩. ಏಳು ಜೀವರತ್ನಗಳಲ್ಲಿ ಒಂದು: ಅಯೋಧ್ಯ ಭದ್ರಮುಖ ಕಾಮವೃಷ್ಟಿ ಬುದ್ಧಿಸಾಗರ ವಿಜಯಪರ್ವತ ಪರಂಜಯ . . . ಸ್ತ್ರೀರತ್ನಂಗಳೆಂಬೇೞುಂ ಜೀವರತ್ನಂಗಳುಮಂ (ಚಂದ್ರಪು. ೬–೧೦೧ ವ). [ಸಂ.]

**ಅಯೋಧ್ಯೆ** (ಗು) ೧. ಜಯಿಸಲು ಅಸಾಧ್ಯವಾದ. (ನಾ). ೨. ಜಯಿಸಲಸಾಧ್ಯವಾದುದು. ೧, ೨: ಅಂತು ಸಮೆದ ಪುರವರಕ್ಕಾರಾತಿನಿಕರಕ್ಕಯೋಧ್ಯೆಯಪ್ಪುದಱಿಂದಯೋಧ್ಯೆಯುಮಂ (ಆದಿಪು. ೬–೧೦೭ ವ). ೩. ಒಂದು ಊರಿನ ಹೆಸರು: ದೇಶಕೋಸಲವಿಹುದು ಧನಧಾನ್ಯಜನ ತುಂಬಿ ಸರಯೂನದಿಯ ಮೇಲೆ ಮೆರೆದುದು ವಿಷಯಮಧ್ಯೆ ರಾಜಧಾನಿ ಆಯೋಧ್ಯೆ (ಶ್ರೀರಾಮಾ. ೬–೫೮). [ಸಂ. ಅಯೋಧ್ಯಾ]

**ಅಯೋನಿ** (ಗು). ೧. ಯೋನಿಯಿಲ್ಲದ; ಗರ್ಭವಿಲ್ಲದ (ನಾ). ೨. ಯೋನಿಯಿಲ್ಲದುದು; ಗರ್ಭವಿಲ್ಲದುದು. ೩. ಗರ್ಭದಲ್ಲಿ ಹುಟ್ಟದವನು. 'ಅಯೋನಿಜ' ಪರಾ. [ಸಂ.]

**ಅಯೋನಿಜ** (ನಾ). ಗರ್ಭದಲ್ಲಿ ಹುಟ್ಟದವನು: ಹರಿಕಮಲಜ ಸುರಾಸುರಾವಳಿ ಸರಿಯೆ ಜನಿಸದಯೋನಿಜಂಗಳ ಪಿರಿದು ಜನನಂಗಳಲಿ ಜನಿಸುವ ಯೋನಿಜರು ಸರಿಯೆ (ಬಸವು. ೫೪–೨೬). [ಸಂ.]

**ಅಯೋನಿಜನಿತ** (ನಾ). = ಅಯೋನಿಜ: ಆ ಜ್ಯೋತಿರ್ಲೋಕಜನಿತರೆಲ್ಲರುಮಯೋನಿಜನಿತರುಂ ಸಪ್ತಚಾಪೋತ್ಸೇಧರುಂ (ಸುಕುಮಾ. ೧೧–೫೯ ವ). [ಸಂ.]

**ಅಯೋನಿಜೆ** (ನಾ). ೧. ಯೋನಿಯಲ್ಲಿ ಹುಟ್ಟದವಳು: ಇವಳಯೋನಿಜೆ ರೂಪಗುಣಶೀಲಸಂಪನ್ನೆ ಭುವನಪಾವನೆ ಪುಣ್ಯಚರಿತೆ ಮಂಗಳಮಹೋತ್ಸವೆ ಪತಿವ್ರತೆಯೆಂಬುದಂ ಬಲ್ಲೆಂ (ಜೈಮಿಭಾ. ೧೮–೫೦). ೨. ಸೀತೆ. [ಸಂ. ಅಯೋನಿಜಾ]

**ಅಯೋನಿಸಂಭವ** (ನಾ). ೧. = ಅಯೋನಿಜ. ೨. ದ್ರೋಣ: ಅಭೇದ್ಯರುಮಸಾಧ್ಯರುಮಪ್ಪಯೋನಿಸಂಭವರೆ ಹೇಳಾಸಾಧ್ಯರಾದರ್ (ಪಂಪಭಾ. ೧೩–೨೧ ವ). [ಅಯೋನಿ + ಸಂಭವ]

**ಅಯೋಮಯ** (ಗು). ೧. ಕಬ್ಬಿಣ ಅಥವಾ ಉಕ್ಕಿನಿಂದ ಮಾಡಿದ. ೨. ಗಹನವಾದ; ಕ್ಲಿಷ್ಟವಾದ. ೩. ಸುಲಭವಾಗಿ ಭೇದಿಸಲಾಗದ (ಸ್ಯಾಂಡರ್). [ಸಂ.]

**ಅಯೋಮಲ** (ನಾ). ಕಬ್ಬಿಣದ ಕಶ್ಮಲ, —ಕಿಟ್ಟ: ಶ್ರೀಮಲಂ – ಅಯೋಮಲ (ಓಷಧಿ. ೧೬೭). [ಸಂ.]

**ಅಯೋಮುಖ** (ಗು). ೧. ಕಬ್ಬಿಣದ ಬಾಯಿ ಅಥವಾ ಮೂತಿಯುಳ್ಳ; ಕಬ್ಬಿಣದ ತುದಿಯುಳ್ಳ. (ನಾ). ೨. ಬಾಣ. ೩. ಹಾರೆ: "ಒತ್ತುವ ಹಾರೆಗಟ್ಟಿಗೆ ಅಯೋಮುಖಂ ಶೂಲಿಕೆಯೆನಿಕ್ಕು" (ಮಂಗರಾ. ೪೭–೬). ೪. ಅಂಕುಶ. [ಸಂ.]

**ಅಯೋಲಲನೆ** (ನಾ). = ಅಯಃಪುತ್ರಿಕೆ: ನೆಱೆಗಾಯ್ದಯೋಲಲನೆಯನಪ್ಪಿಪರ್ (ಮಲ್ಲಿಪು. ೧೩–೧೪೫). [ಸಂ.]

**ಅಯ್ಕನಕಟ್ಟೆ** (ನಾ). ಒಂದು ಊರಿನ ಹೆಸರು: ಅಯ್ಕನಕಟ್ಟದ ತಾಣವಳ್ಳದಿಂದಂ ತೆಂಕಲಾದುದೆಲ್ಲವಿನಿತುಂ ಪರಮಂಗೆ ಸೀಮೆಯಾಗಿ ಬಿಟ್ಟ ದತ್ತಿ (ಎಕ. II, ೭೩–೪೬; 1118). [ಅಯ್ಕ ? + ಕಟ್ಟೆ]

**ಅಯ್ಕಿಲ್, ಐಕಿಲ್** (ನಾ). ೧. ಚಳಿ; ಶೀತ. ೨. ಹಿಮ; ಮಂಜು: ಬೆಳಗಪ್ಪ ಜಾವದಯ್ಕಿಲ್ ಕೊಳೆ ಶೀತಕ್ಕಾಱದಕ್ಕಿ (ಕಾವ್ಯಸಾ. ೬೯೪. ಶೂದ್ರಕ); ಸೀದೇಣ – ಅಯ್ಕಿಲಿಂದಂ (ವಡ್ಡಾರಾ. ೧೦೬–೫); ಕೈಕಾಲ್ ಸುರುಳ್ದು ನಡುಗದೆ ಸ್ಯೈಕಾಗ್ರಮನಸ್ಕನಾಗಿ ಭರವಸದಿಂ ಬಪ್ಪಯ್ಕಿಲ್ಗಳ್ಕದೆ ಪಲ್ಯಂಕೈಕಾಸನದಿರ್ಪ ಸಾಹಸಂ ಪೆಱರ್ಗುಂಟೇ (ಸುಕುಮಾ. ೪–೧೨); ಬಯ್ತಲೆ, ಅಯ್ಕಿಲ್ (ಶಬ್ದಾನು. ೬೭ ಪ್ರಯೋ). **ಐಕಿಲ್**: ೧. "ಕುಳಿರು ಹಿಮಂ ಚಳಿಯೈಕಿಲೆಂದು ಹಿಮನಾಮಂ" (ಶಬ್ದಮಂ. ೧೭); ಬಿಸಿಲೈಕಿಲ್ ಪಸಿವುಗ್ರದಂಶಮಶಕವ್ಯಾಬಾಧೆ ನೀರಟ್ಕೆ (ಆದಿಪು. ೬–೩೪); ವಹ್ನಿಸಖನೊಂಬೊಂದಹಂಕಾರಮಂ ತಳೆದಾ ಮಾರುತನಂ ಕರಂ ಪಿಡಿದು ತನ್ನೈಕಿಲ್ಗಳಿಂ ನಾಂದಿ ಸಂಚಳನಂ ಮಾಡಿ (ರಾಜಶೇ. ೯–೭). ೩. ಹೇಮಂತ ಋತು; ಚಳಿಗಾಲ: "ಐಕಿಲೆ ಹೈಮಂತಂ ಮಂಜುಗಾಲಂ" (ಚತುನಿ. ೮೮).

[?. / ತಮಿ. ಅಱ್‌ಚಿರಮ್, ಅಚ್ಚಿರಮ್ = ಹೇಮಂತ ಋತುವಿನ ಆರಂಭದ ಕಾಲ, ಹೇಮಂತ ಋತುವಿನ ಮೊದಲ ಅರ್ಧ]

**ಅಯ್ಕಿಲೆಲರ್, ಐಕಿಲೆಲರ್** (ನಾ). ಶೀತದ ಗಾಳಿ; ತಂಗಾಳಿ. **ಐಕಿಲೆಲರ್**: ಕರಗಿದರಗಿಂ ಪಗಿಲ್ತಂತಿರೆ ತಳ್ತೆಮೆಯ್ಯೈಕಿಲೆಲರಿನೆಚ್ಚತ್ತಾಪೊಟ್ಟಱೆಯೊಳ್ ಕಣ್ದೆಱೆದತ್ತೂಷರಶಯ್ಯಾಧೂಮ್ರರೋಮಹರಿಣಸಮೂಹಂ (ಕಾದಂಪೂ. ೧೪೮). [ಅಯ್ಕಿಲ್ + ಎಲರ್]

**ಅಯ್ಕಿಲ್ಗದಿರ, ಐಕಿಲ್ಗದಿರ** (ನಾ). ತಂಪಾದ ಕಿರಣಗಳುಳ್ಳವನು; ಚಂದ್ರ. **ಐಕಿಲ್ಗದಿರ**: "ಚಂದ್ರನು" (ಕಲ್ಪದ್ರು). [ಅಯ್ಕಿಲ್ + ಕದಿರ್ + –ಅ$_{7}$]

**ಅಯ್ಕಿಲ್ವೆಟ್ಟಣುಗಿ, ಐಕಿಲ್ವೆಟ್ಟಣುಗಿ** (ನಾ). ಹಿಮವಂತನ ಮಗಳು; ಪಾರ್ವತಿ. **ಐಕಿಲ್ವೆಟ್ಟಣುಗಿ**: "ಐಕಿಲ್ವೆಟ್ಟಣುಗಿ ಸಿಂಗದೇರವಳ್ಸಬ್ಬಾಣಿಯೆಂದು ಶಿವೆ" (ಕಬ್ಬಿಕೈ. ೫). [ಅಯ್ಕಿಲ್ + ಬೆಟ್ಟು$_{2}$ + ಅಣುಗಿ]

**ಅಯ್ಕಿಲ್ವೆಟ್ಟಳಿಯ, ಐಕಿಲ್ವೆಟ್ಟಳಿಯ** (ನಾ). ಹಿಮವಂತನ ಅಳಿಯ; ಶಿವ. **ಐಕಿಲ್ವೆಟ್ಟಳಿಯ**: "ಗೊರವನ್ಯೆಕಿಲ್ವೆಟ್ಟಳಿಯನ್ಯೆಮೊಗಂ ಕಂಡುಗೊರಲನ್" (ಕಬ್ಬಿಕೈ. ೪). [ಅಯ್ಕಿಲ್ + ಬೆಟ್ಟು$_{2}$ + ಅಳಿಯ]

**ಅಯ್ಕಿಲ್ವೆಟ್ಟು, ಐಕಿಲ್ವೆಟ್ಟು** (ನಾ). ಮಂಜಿನ ಬೆಟ್ಟ; ಹಿಮಾಲಯ. **ಐಕಿಲ್ವೆಟ್ಟು**: "ಕುಳಿರ್ವೆಟ್ಟೈಕಿಲ್ವೆಟ್ಟುಂ ಚಳಿವೆಟ್ಟು ಹಿಮಾದ್ರಿ" (ಚತುನಿ. ೧೦); ಮೂಱುಱಾಱು ರನ್ನಂಗಳೈಕಿಲ್ವೆಟ್ಟನಣುಗಿಗೆಡದೊಡಲನಿತ್ತಲ್ಲಿ ಮುಂಡಿಸಿದ ಶಂಕರನಳ್ತಿಯಿಂ (ಭಾವಚಿಂ. ೧–೩೦); ಐಕಿಲ್ವೆಟ್ಟನ ಮಂಜುಗಲ್ಲಗವಿಯೊಳ್ ತಳ್ತಿರ್ದ ಚಂದ್ರಾಶ್ಮದೊಳ್ (ಚಿಕವಿ. ೪–೨೮). [ಅಯ್ಕಿಲ್ + ಬೆಟ್ಟು$_{2}$]

**ಅಯ್ಕಿಲ್ವೆಳಗ, ಐಕಿಲ್ವೆಳಗ** (ನಾ). = ಅಯ್ಕಿಲ್ಗದಿರ. **ಐಕಿಲ್ವೆಳಗ**: "ಬೆಳ್ಗದಿರನ್ಯೆಕಿಲ್ವೆಳಗನಾಲಿವೆಳಗ ಚಂದಿರನು" (ಕಬ್ಬಿಕೈ. ೪೩); "ಐಕಿಲ್ವೆಳಗಂ ತಣ್ಗದಿರ ಮಂಜುಗೈಯಂ ಚಂದ್ರಂ" (ಕವಿಕಂ. ೪೩). [ಅಯ್ಕಿಲ್ + ಬೆಳಗು$_{2}$ + –ಅ$_{7}$]

**ಅಯ್ಗಂಡುಗ,** ಅಯಿಗಂಡುಗ, ಐಗಂಡುಗ (ನಾ). ಐದು ಖಂಡುಗ: ನಾಲ್ದೆಸೆ, ಅ ಯ್ಗಂ ಡು ಗ ೦, ಅಯ್ಸರಂ (ಭಾಷಾಭೂ. ೧೫೨ ಉದಾ). **ಅಯಿಗಂಡುಗ:** ಅಯಿಗಂಡುಗ ಗದ್ದೆಯಲು ಮಾಡಿಕೊಂಡು (ಎಕ. IX, ಬೆಂಗಳೂ. ೧೨೬–೩೧; 1431). **ಐಗಂಡುಗ:** ಐವಡಿ, ಐಗಂಡುಗಂ [ಪಾಠಾಂ. ಅಯ್ಗಂಡುಗಂ] (ಶಮದ. ೧೪೯ ಪ್ರಯೋ).
[< ಅಯ್ದು₂ + ಕಂಡುಗ]

**ಅಯ್ಗಣೆ,** ಐಗಣೆ (ನಾ). ಐದು ಬಾಣ. 'ಅಯ್ಗಣೆಯ' ಪರಾ. **ಐಗಣೆ:** ನಿಂದಿರ್ದರಯ್ಗಣೆಯನಿಂದು ಪೂಜಿಸಲ್ (ಚಬಪು. ೧೧–೪೧).
[< ಅಯ್ದು₂ + ಕಣೆ. / ತಮಿ. ಅಜ್ಕಣೆ]

**ಅಯ್ಗಣೆಯ,** ಐಗಣೆಯ (ನಾ). ಐದು ಬಾಣಗಳುಳ್ಳವನು; ಪಂಚಬಾಣ; ಕಾಮ: ಅಯ್ಗಣೆಯನ ಜಯಲಕ್ಷ್ಮಿಯ ತಾಯ್ಗರುವೆನೆ ಮಿಸುಪ ಸತಿಯ (ಲೀಲಾವ. ೭–೫೨); ಅಯ್ಗಣೆಯನೆನಿಸುವನೆಯಾಣ್ಮನುಜದಾರ್ಪಿನಿಂ ... ಬಣ್ಣಿಸುತೆ (ಉದ್ಭಟಿ. ೫–೨೩). **ಐಗಣೆಯ:** ಚೆಂದಂಗೆಡದೈಗಣೆಯಂ ನಾಲ್ದಲೆಯಾನದ ವಾಣೀಶಂ (ಜಯಕಾ. ೨–೬೯).
[< ಅಯ್ದು₂ + ಕಣೆ + –ಅ₇. / ತಮಿ. ಅಯ್ಕಣೆಯ]

**ಅಯ್ಗಳ್₁** 'ಅಯ್ಗುಳ' ನೋ.

**ಅಯ್ಗಳ್₂,** ಐಗಳ್₂ (ನಾ). ಐದು ಕುತ್ತಿಗೆಯುಳ್ಳವನು; ಪಂಚಮುಖ; ಶಿವ. **ಐಗಳ:** ಐಗಳಂಗೆ ಕೆಳೆಯನಪ್ಪ ಪೊನ್ನೊಡೆಯನ ಆಳ್ವ ಪೊಲಪ್ಪ ಲಂಕೆಯಂ ಪೊಕ್ಕು (ಅದ್ಭುತ. ೪೦–೭).
[< ಅಯ್ದು₂ + ಗಳ (= ಗಲ)]

**ಅಯ್ಗಾವುದ,** ಐಗಾವುದ (ನಾ). ಐದು ಗಾವುದ: ಅಯ್ಗಾವುದಂ, ಎಣ್ದೆಸೆ (ಶಬ್ದಾನು. ೩೦೭ ಪ್ರಯೋ). **ಐಗಾವುದ:** ಇದಱ ಹಿಂದಣ ಮೈಯೊಳೈಗಾವುದದ ನೀಳದೊಳೆರಡುವರೆಗಾವುದದ ವಿಸ್ತಾರದಲಿ (ಕುವ್ಯಾಡ್ರೋ. ೯–೧೮); ಮಣಿಮಯದಾಲಯಂಗಳು ಸವೆದವೈಗಾವುದ ವಳತೆಯಲಿ (ತೊರರಾ. ೧–೧೩–೧). [< ಅಯ್ದು₂ + ಗಾವುದ]

**ಅಯ್ಗುಳ,** ಅಯಿಗುಳ, ಅಯ್ಗಳ್₁, ಅಯ್ಗೊಳ, ಐಗಳ್₁, ಐಗುಳ, ಐಗೊಳ (ನಾ). ಐದುಕೊಳಗ: ಅರಸುಂ ಊರುಂ ಇಟ್ಟು ಅಯ್ಗುಳ ಕಟಣಿಯುಂ ಕೊಟ್ಟೊದು (ಎಕ. X, ಕೋಲಾರ. ೨೩೩–೭; 815); ನಾಯಕಗಯ್ಗುಳ ಮಣ್ಣು (ಎಕ. IX, ಬೆಂಗಳೂ. ೪೦–೧; 830); ಬಸವಸೆಟ್ಟಿ ಪದಿನಯ್ಗುಳ ನೀರ್ಮಣ್ಣು ಅಯ್ಗುಳ ಪೊಂಬೊಲನುಂ ಪೊನ್ನಱ ಕೊಟ್ಟ ಮಣ್ಣಱಂ ಕೊಣ್ಡವರ್ (ಎಕ. IV, ಹೆಗ್ಗಡ. ೧೬–೯; 1021). **ಅಯಿಗುಳ:** ಶ್ರೀಮತ್ ಕಲಿನೊಟಮ್ಬಾದಿ ಅರಸರ್ ಅಮರಾಲಯಾ ಅವೊಗೆ ಅಯಿಗುಳವೆದೆ ಮಣ್ಣು (ಎಕ. XI, ಚಳ್ಳಕೆ. ೭–೪; 810); ದೇವರಿಂದ ಅಯಿಗುಳ ಬ್ರಾಹ್ಮರಿಂದ ಅಯಿಗುಳ ಅನ್ತು ಹತ್ತು ಕೊಳಗ ಗದ್ದೆ (ಎಕ. XI, ದಾವಣ. ೨೩–೭೮; 1410); ಯೆರೆಯಲು ಗದ್ದೆ ಹತ್ತು ಕೊಳಗ ವುಸಬಿನಲು ಗದ್ದೆ ಬೀಜವರಿ ಅಯಿಗುಳ (ಸೌಇಇ. IX–ii, ೪೪೦–೫೩; 1419). **ಅಯ್ಗಳ್₁:** ಹೊಲದಲ್ಲಿ ಈ ವರ್ಷ ಅಯ್ಗಳರಾಗಿ ಬಂತು (ರೂಢಿ). **ಅಯ್ಗೊಳ:** ಮಾಹಜ್ಜನಮೊಸೆದು ಕೊಟ್ಟ ಕಟಣಿ ಅಯ್ಗೊಳ (ಎಕ. X (S), ಮುಳಬಾ. ೧೫೬–೮; ಅನೆಯ ಶತ); ಅಯ್ಗೊಳಂ ಕಟಣಿಯುಂ ಅಯ್ಗೊಳಂ ಪಾಟು (ಎಕ. X, ಶಿಡ್ಲಘ. ೩೨–೯; 870); ಮೊಳೆವೆಡೆ ಇಕ್ಕರ್ಣಣ್ಡುಗದ ಅಯ್ಗೊಳಂ ಕಲಿಯಜ್ಜನಿಂ ಪಡುವಣ ಮಣ್ಣುಂ (ಎಕ. IV, ಎಳಂದೂ. ೨೫–೫; 925). **ಐಗಳ್₁:** ಉಭಯಂ ಖಂಡುಗದ ಐಗಳ ಭೂಮಿಯಂನು ... ಕೊಟ್ಟೆವು (ಎಕ. XVI, ಚಿಕ್ಕನಾ. ೫೩–೧೯; 1637); ಆ ಕರು ಯಾರಿಗೆ ಸೇರಿದೆಯೊ ಅವರಿಗೆ ಅದಕ್ಕಾಗಿ ಪೂರಿಯ ಅಸ್ತಿಯಿಂದ ಆಗಲೇ ಐಗಳ ರಾಗಿ ಕೊಟ್ಟುಬಿಡುವುದು (ಸಣ್ಣಕ. VI, ೭೦). **ಐಗುಳ:** ಇಧಮ್ಮಾದಿ ದಾವಣಪೇರುನ್ಡವಱ್ಗೆ ಕೊಟ್ಟೊದು ಐಗುಳ ಕಟಣಿ ಪರಿಹಾರ (ಎಕ. X, ಶ್ರೀನಿವಾ. ೬–೧೩; 780); ಅಂಗಡಿಯೊಳಾ ಬಿಜ್ಜಳ ಕ್ಷಿತಿಪ ಬರುತಿರಲು ಜಂಗಮಂ ರತ್ನವೈಗುಳವ ಜೂಜಿಂ ಸೋಲೆ (ಲಶಿಚಂ. ೩೨–೪೩). **ಐಗೊಳ:** ರಾಜಮಾನ ಐಯ್ಗೊ[ಗೊ]ಳಂ ಕಟಣಿ ಕೊಟ್ಟ (ಸೌಇಎ. ೧೯೩೨, ಪುಂಗನೂ. ೧೮೦–೧೫; 964); ಐಗೊಳ ರಾಗಿ (ಕಲ್ಪದ್ರು). [< ಅಯ್ದು₂ + ಕೊಳ್₃]

**ಅಯ್ಗೌಡ** (ನಾ). ಒಬ್ಬಾತನ ಹೆಸರು: ಚಲದಗಾನಹಳ್ಳಿ ಅಯ್ಗೌಡ ಕ್ರಿಷಪ್ಪಗೆ ಭೋಮಾಂನ್ಯಹಾಕಿ ಕೊಟ್ಟ ಮಾಂನ್ಯ ಹೊಲ (ಎಕ. X, ಶ್ರೀನಿವಾ. ೧೫–೧೧; 1689). [ಅಯ್ಯೆ ? + ಗೌಡ]

**ಅಯ್ಗೇಣು,** ಐಗೇಣು (ನಾ). ಐದುಗೇಣು (ಕ). **ಐಗೇಣು:** ಕುದುರೆಗಳು ಐಗೇಣಿನಿಂದ ಎಂಟುಗೇಣಿನ ತನಕ ಎತ್ತರವಿರುತ್ತವೆ (ಮುಂಬಯಿ. ೩–೫೪). [< ಅಯ್ದು₂ + ಗೇಣು]

**ಅಯ್ಗೊರಲ** (ನಾ). ಶಿವ. [< ಅಯ್ದು₂ + ಕೊರಲ್ + –ಅ₇]

**ಅಯ್ಗೊಳ** 'ಅಯ್ಗುಳ' ನೋ.

**ಅಯ್ಗೊಳಗ,** ಐಯ್ಗೊಳಗ (ನಾ). ಐದು ಕೊಳಗ. **ಐಗೊಳಗ:** ಬಡಗಣ ಪೊಂಪಲ್ಲಕಟ್ಟೆನ್ದು ಕೆಱೆಯಂ ಕಟ್ಟಿ ತೂಂಬನಿಕ್ಕಿಸಿ ಆ ಕೆಱೆಯಲ್ ಐಗೊಳಗಂ ಗಟ್ಟಿದ್ದಿಯು ನನ್ದಾದೀವಿಗೆಗೆ ಈಯೂರು ಗಾಣಂ (ಎಕ. X, ಚಿಂತಾಮ. ೩೦–೧೪; 1047). [< ಅಯ್ದು₂ + ಕೊಳಗ]

**ಅಯ್ಗೋಲ್,** ಐಗೋಲ್ (ನಾ). ಐದುಬಾಣ. **ಐಗೋಲ್:** ಒಪ್ಪುವೈಗೋಲ್ಗಳಿಂ ರಂಜಿಸುತಿರ್ಪನನಂಗಂ (ಪಾಪ್ರಾಶ. ೭೫).
[< ಅಯ್ದು₂ + ಕೋಲ್₁]

**ಅಯ್ಗೋಲ,** ಐಗೋಲ (ನಾ). = ಅಯ್ಗಣೆಯ. **ಐಗೋಲ:** ಕಾಳದಂಡಮೆಂಬ ಗದೆಯ ಲೀಲೆಯಿಂದೀಯಲಂತದ ಕೈಕೊಂಡೈಗೋಲನು ಮುಂದಕೆ ಬಂದು (ನೇಮಿಸಂ. ೧೯–೧೩೭); ಒಪ್ಪಿರ್ದಳೈಗೋಲನಧಿದೇವತೆಯೊ ಪೇಳೆಂಬಿನಂ (ಚಬಪು. ೧೯–೨೩). [< ಅಯ್ದು₂ + ಕೋಲ್ + –ಅ₇]

**ಅಯ್ಚ** (ನಾ). ಆದಿತ್ಯ. 'ಅಯ್ಚಣ್ಣ,' 'ಅಯ್ಚಯ್ಯ' ಪರಾ.
[< ಸಂ. ಆದಿತ್ಯ]

**ಅಯ್ಚಣ್ಣ** (ನಾ). ಒಬ್ಬಾತನ ಹೆಸರು: ಅಯ್ಚಣ್ಣ ಪೆರ್ಗಡೆತನಜ್ಜಿಯ್ಯ (ಎಕ. VIII, ಸೊರಬ. ೫೭೦–೮; 951). [ಅಯ್ಚ + ಅಣ್ಣ₁]

**ಅಯ್ಚಯ್ಯ** (ನಾ). ಒಬ್ಬಾತನ ಹೆಸರು: ಕಂಚಿಯರಸಾಳು ಅಯ್ಚಯ್ಯ (ಎಕ. XII, ಮದ್ದಗಿ. ೪೦–೫; 950); ಅಯ್ಚಯ್ಯ ತಾಣಗುನ್ದೂರ ಮಹ ... ಗೋಸಾಸಮಿಟ್ಟಂ (ಮೈಆರಿ. ೧೯೪೨, ೭೧–೭; 1007).
[ಅಯ್ಚ + ಅಯ್ಯ₁]

**ಅಯ್ಚರು,** ಐಚರು (ನಾ). ದೇವರಿಗೆ ಐದು ಹೊತ್ತು ಮಾಡುವ ನೈವೇದ್ಯದ ಅನ್ನ. **ಐಚರು:** ಬ್ರಹ್ಮಪದ್ಮಾವತಿಯ ಐಚರುವಿಗೆ ಅಕ್ಕಿ ಮೂಡೆ ೪ (ಎಇ. VII, ೧೩೩–೪೦; 1586). [< ಅಯ್ದು₂ + ಚರು]

**ಅಯ್ಜಡೆ,** ಐಜಡೆ (ನಾ). ಐದು ಜಡೆ: ಹರಿಯ ಪಾದಜಲ ತಾನು ಶಿವನ ತಲೆಯ ಅಯ್ಜಡೆಗೆ ಎರೆದ ಜೀವನ ತಾನು (ಬಿಡುರಿ. ೪೧). **ಐಜಡೆ:** 'ಐಜಡೆವೆಳಸು' ಪರಾ. [< ಅಯ್ದು₂ + ಜಡೆ]

**ಅಯ್ಜಡೆವೆಳಸು,** ಐಜಡೆವೆಳಸು (ನಾ). ಐದುಜಡೆಗಳ ಬೆಳಸು. **ಐಜಡೆವೆಳಸು:** ವೈಜಯಂತೀಧರನ ಪಾದಾಂಬು ಶಿವನ ತಲೆಯೈಜಡೆವೆಳಸಿಗೆರೆದ ಜೀವನಂ (ಜೈಮಿಭಾ. ೯–೨೭). [< ಅಯ್ದು₂ + ಜಡೆ + ಬೆಳಸು₂]

**ಅಯ್ತಂಡ,** ಐತಂಡ (ನಾ). ೧. ಐದು ಭಾಗಗಳು. ೨. ಐದು ಸೈನ್ಯಗಳು. **ಐತಂಡ ೧.** (ಸ್ಯಾಂಡರ್). [< ಅಯ್ದು₂ + ತಂಡ]

**ಅಯ್ತನ** 'ಅಯ್ಯತನ' ನೋ.

**ಅಯ್ತುರ್** 'ಎಯ್ತುರ್' ನೋ.

**ಅಯ್ತುರವು** 'ಎಯ್ತುರವು' ನೋ.

**ಅಯ್ತು** (ನಾ). (?) : ಪಾೞು ಆಯ್ತು ಮಾಸೇ ಮೊನ್ನಿತ್ತಿಳಿ ಅಱಿದನ್ತವೊ ಕಣ್ವೇಶ್ವರುಂ (ಎಕ. X, ಕೋಲಾರ. ೬–೫ ; 753). [< ಅಯ್ದು ?]

**ಅಯ್ತೆ**, ಐತೆ (ಕ್ರಿ). ಇದೆ. **ಐತೆ** : ಜವನಿಕೆಯ ಮರೆಯಲ್ಲಿ ನೆಳಲು ಕುಣಿವುತ್ತೈತೆ ನೆಳಲ ಸ್ವೀಕರಿಸುವರೊಬ್ಬರಿಲ್ಲ (ಅಷ್ಟಾಸ್ತೋ. ೩೯) ; ನೋಡಿ ಇಲ್ಲೈತೆ ನಿಜನಿಜವು (ಶರಲೀ. ೩೩೫–೪) ; ನಿನ್ನಲಿ ಮುತ್ತಿನ ಹಾರ ಐತೆ ಯಂತೆ ಕೊಡು ಸಾವಕಾರ್ಗೆ (ಶನಿಮಾ. ೧೫). [< ಇರ್]

**ಅಯ್ತೆರ**, ಐತೆರ (ನಾ). ಐದು ಬಗೆ, —ವಿಧ. **ಐತೆರ** : ಆತನ ಶ್ಲೋಕ ಗಳಲ್ಲಿರುವ ಐತೆರದ ದೋಷಗಳನ್ನು ಮುಂದಿಸಿ ಅವುಗಳ ವಿವರಣೆ ನಡೆಸಿ ದನು (ಗ್ರಾರಾಂಗ. ೩೪). [< ಅಯ್ದು$_2$ + ತೆರ$_1$ (< ತೆಱ$_1$)]

**ಅಯ್ದಂಬ**, ಐದಂಬ (ನಾ). = ಅಯ್ಗೋಲ. **ಐದಂಬ** : ದುಗುಲದೊ ಳ್ಳೈದಿದ ನಿಜಿಗಾಸೆಯಿಂದ ಐದಂಬನ ಮದದಾನೆಗಳಂದದೊಳ್ಳೈದಿದರ್ಜಲ ಕೇಳಿಗಾಗ (ಕಂಸವಿ. ೨೫–೧೧೮). [< ಅಯ್ದು$_2$ + ಅಂಬು$_2$ + –ಅ$_7$]

**ಅಯ್ದಂಬು**, ಐದಂಬು (ನಾ). ಐದುಬಾಣಗಳು. 'ಅಯ್ದಂಬ' ಪರಾ. **ಐದಂಬು** : ಪೆಣ್ಗೊಲೆಗೆ ತೊಟ್ಟನೈದಂಬನೈದಂಬನು (ಉದ್ಭದೇ. ೪–೩೭). [< ಅಯ್ದು$_2$ + ಅಂಬು$_2$]

**ಅಯ್ದಲೆಯ**, ಐದಲೆಯ (ನಾ). ಐದು ತಲೆಗಳುಳ್ಳವನು ; ಶಿವ. **ಐದಲೆಯ**: ಅಲರ್ವೊಡೆಯನೊಳಂಬುಜಪುತ್ರನೊಳ್ಳೈದಲೆಯಂ ಪಿರಿದನು ರಾಗಂ ಮಾಳ್ಪಂತೆ (ಜಯಕಾ. ೨–೭೨). [< ಅಯ್ದು$_2$+ ತಲೆ + –ಅ$_7$]

**ಅಯ್ದಳ**, ಐದಳ (ನಾ). ಐದುದಳ. **ಐದಳ** : ಐದಳ ಹತ್ತು ಮುಖದ ರುದ್ರಾಕ್ಷಿ (ಆದವ. ೪೫). [< ಅಯ್ದು$_2$ + ದಳ (= ದಲ)]

**ಅಯ್ದಾಮರಿಗ** (ನಾ). ಅಯ್ದು ಜನ ಯೋಧರು, —ಯುದ್ಧ ಭಟರು : ಮಲೆಪರಯ್ನೂರ್ಬರುಮಯ್ದಾಮರಿಗರುಂ (ಇಆ. VI, ೧೦೨–೨೦ ; 887). [< ಅಯ್ದು$_2$ + ದಾಮರಿಗ]

**ಅಯ್ದಾಳಿ** 'ಇರ್' ನೋ.

**ಅಯ್ದಿಕೆ** 'ಎಯ್ದಿಕೆ' ನೋ.

**ಅಯ್ದಿಸು** 'ಎಯ್ದಿಸು' ನೋ.

**ಅಯ್ದು$_1$** 'ಎಯ್ದು' ನೋ.

**ಅಯ್ದು$_2$**, ಅಯಿದು, ಐದು$_2$ (ನಾ). ಐದು ಎಂಬ ಸಂಖ್ಯೆ : ಮೆಟ್ಟಿ ಗಂಧೇಭಮಯ್ದಾನ್ (ಎಕ. II, ೧೨–೨ ; 700) ; ಶ್ರೀಮತ್ ಪೆರ್ಮನಡಿ ಗಳ್ಪಟ್ಟಂಗಟ್ಟಿದ ಅಯ್ದನೆಯ ವರಿಷ (ಎಕ. III, ನಂಜನ. ೯೭–೩ ; 898) ; ತಪಂಬಟ್ಟ ದಿವಸದಿಂ ತಗುಳ್ದಿಂದಿಂಗಮಯ್ದು ದಿವಸಮುಣ್ಬುದಿಲ್ಲ (ವಡ್ಡಾರಾ. ೭೭–೫) ; ಸಂಧಿಗೆಯಲ್ಕೆ ಬೇಡಿದರೆ ಪಾಂಡುತನೂಭವರಯ್ದು ಬಾಡಮಂ (ಗದಾಯು. ೩–೨೧). **ಅಯಿದು** : ಮೂಜನಱಿದು ಮೂಱು ಮಱಿದು ಮೂಱ ವೇದಿಸಿ ಆಯಿದ ಕಾಣಿಸಿಕೊಂಡು (ತುಱುಗಾ. ೬) ; ಎರಡಯಿದು ಶಿರದಸುರಪತಿಗೋಸರಿಸಿ ಅಲ್ಲಿಯೆ ನಿಂದನಲ್ಲಾ (ಬಸವು. ೫೩–೧೯). **ಐದು$_2$** : ಆತನಿಂ ಬೞಿಯಂ ಸೀಮಂಕರನೆಂಬಂ ಐದನೆಯ ಕುಲಧರಂ (ಚಾವುಂಪು. ೧೪–೨) ; ಆ ಕಥಾಸಮುದ್ರದೊಳ್ ಪಂಚರತ್ನ ಮಪ್ಪೈದು ಕಥೆಗಳನಾಯ್ದುಕೊಂಡು (ಪಂಚತಂ. ೧೩–೨) ; ಕಕಾರಂ ಮೊದಲಾಗಿ ಮಕಾರದ ಪರ್ಯಂತಮೈದೈದು ವರ್ಣಂಗಳೊಂದು ವರ್ಗಮಾಗಿ, ವರ್ಗಮೈದಕ್ಕುಂ (ಶಮದ. ೧೩ ವೃತ್ತಿ) ; ಪರಮತತ್ತ್ವದ ಭಿತ್ತಿನೊಳಗಂಕುರಗಳೈದಾದಂತೆ (ತೊರರಾ. ೧–೨–೨). ℙ ಅಯ್ವರ್ (ಬಹುವ) : ತಮ್ಮ ಕಲಹಕೆ ತಾವು ಅಯ್ವರು, ಪರರ ಕಲಹಕೆ ನೂರಯ್ವರು (ಗಾದೆ. ೬).

[ದೇ. ‖ ತಮಿ. ಅಯ್‌ನ್ದು, ಅಞ್ಜು ; ಮಲ. ಅಞ್ಚು, ಅಞ್ಜು, ಅಯ್ದು ; ತುಳು. ಅಯ್ನ್ ; ಕೊಡ. ಅಞ್ಜಿ ; ತೆಲು. ಅಯಿದು ; ಕೊಲಾ. ಅಯ್ದ್, ಅಯಿದ್]

**ಅಯ್ದುಂಬು** 'ಅಯ್ದೂಂಬು' ನೋ.

**ಅಯ್ದುಗುಂದು**, ಐದುಗುಂದು (ಕ್ರಿ). ಐದು ಕಡಿಮೆಯಾಗು ; ಐದು ಸಾಲದೆ ಹೋಗು : ಆ ನರಕಬಿಲಂಗಳೆಲ್ಲಂ ಅಯ್ದುಗುಂದೆ ಲಕ್ಕಮುಕ್ಕುಂ (ಅಜಿಪು. ೧೧–೬ ವ). **ಐದುಗುಂದು** : ಪಂಚೋನ್ನೈಕ ನರಕ ಶತಸಹಸ್ರಾಣಿ ಐದುಗುಂದಿದೊಂದುಂ ನರಕ ಲಕ್ಕೆಗಳುಂ (ತತ್ತ್ವಪ್ರ. ೧೧೬). [< ಅಯ್ದು$_2$ + ಕುಂದು$_1$]

**ಅಯ್ದುಪ್ಪು** (ನಾ). ಕಾಚ, ಸೈಂಧವ, ಬಿಡು, ಸೌವರ್ಚ, ಸಾಮುದ್ರ ಎಂಬ ಐದು ಬಗೆಯ ಉಪ್ಪು : ಅರಿದಾಳಂ ಪೊಸಸುಣ್ಣ ಮಿಂದ್ರಯವೆ ಕೇರ್ಗಂಥೋಜ್ವಳಂ(ಳಿಂ)ದಾರು ಸಿಂಧುರಮಯ್ದುಪ್ಪು ಕಟುತ್ರಯಂ ರಜನಿ (ಲೋಕೋಪ. ೯–೨೪೩) ; ಸೈಂಧವಂ ಕಾಚ ಬಿಡು ಸಂವರ್ಚಲವಣಂಗಳ್ ಉಪ್ಪು (ಲೋಕೋಪ. ೯–೨೨೩ ಟೀಕೆ).
[< ಅಯ್ದು$_2$ + ಉಪ್ಪು]

**ಅಯ್ದೂಂಬು**, ಅಯ್ದುಂಬು, ಅಯ್ದೂಬು (ನಾ). ೧. ಧಾನ್ಯದ ಒಂದು ಅಳತೆ; ಐದು ಕೊಳಗ. ೨. ಐದುಕೊಳಗ ಬಿತ್ತುವಷ್ಟು ಜಾಗ : ಪುತ್ತೂರಾಜೆಟ್ಟ ಮುಗುಳೊತ್ತಿದ್ದ ಪುತ್ತೂರತ್ತಾಣಿಗೆ ಅಯ್ದೂಂಬು ಕಟಿಸ್ನಿಯುಂ ಅಯ್ದೂಂಬು ತೊಟ್ಟಪ್ಪಟ್ಟುಂ ಕೊಟ್ಟರ್ (ಎಕ. X, ಕೋಲಾರ. ೨೨೯–೫ ; 750) ; ಗೊಟ್ಟಿಜಿಯರಂಬಲಕೆ ಕೊಟ್ಟುದು ಅಯ್ದೂಂಬು (ಮೈಆರಿ. ೧೯೨೬, ೧೦೦–೮; ೯ನೆಯ ಶತ). **ಅಯ್ದುಂಬು**: ತುಱುಗೊಳಿಯ್ದು ಸತ್ತರ್ ಇದರ್ಕೆ ಅಯ್ದುಮ್ಬು ಕಳನಿ ಕಲ್ನಾಟು ಕೊಟ್ಟುದು (ಎಕ. X, ಶ್ರೀನಿವಾ. ೧೪೨–೪ ; ?). **ಅಯ್ದೂಬು** : ಮೂಱ ಶಲೂರಮಟ್ಟಿಯುಳ್ಳಯ್ದೂಬು ಇನ್ತು ತಾಗೆ ಮೂಜಡಿ ತೂಮ್ಬುಮ್ ದೇವಭೋಗಂ (ಎಕ. X, ಕೋಲಾರ. ೧೧–೮ ; 753).
[< ಅಯ್ದು$_2$ + ತೂಂಬು$_2$]

**ಅಯ್ದೂಬು** 'ಅಯ್ದೂಂಬು' ನೋ.

**ಅಯ್ದೆ$_1$** 'ಎಯ್ದೆ$_1$' ನೋ.

**ಅಯ್ದೆ$_2$**, ಅಯಿದೆ, ಎಯ್ದೆ$_2$, ಐದೆ (ನಾ). ೧. ಸುವಾಸಿನಿ; ಸುಮಂಗಲಿ : "ಅಯ್ದೆಯೆಂದು ಸುವಾಸಿನಿ" (ಶಬ್ದಸಾ. ೩೬೯). **ಅಯಿದೆ** : ೨. ಮುತ್ತೈದೆತನ ; ಸೌಮಂಗಲ್ಯ : ಅಯಿದೆ – ಅಣಚಿಯಿಲ್ಲದವಳಿಗೆ ಸೌಭಾಗ್ಯದ ಹೂವಿನ ಬೊಟ್ಟೇಕೆ (ಬಸವ. ೬೩೦). **ಎಯ್ದೆ$_2$** : ೧. ಪಸು ರ್ವಂದಲೊಳೊಲ್ದೆಡೆಯಾಡುವೆಯ್ದೆಯರ್ ಬಳಸಿದ ವೇದ ಪಾರಗರ ಸಂದಣಿಯೆಂಬವಱಿಂ ವಿವಾಹ ಮಂಗಳಂ (ಪಂಪಭಾ. ೧–೧೦೭) ; ನಿಟ್ಟೆಯ್ದೆಯಾಗು ಪತಿಯೊಳ್ ತೊಟ್ಟನುವಶೆಯಾಗು ಶೀಲವತಿಯಾಗು (ಕಾವ್ಯಾವ. ೨೨೩) ; ಎಡೆಯಾಡುವೆಯ್ದೆಯರ ಪಾವನ ಮಂಗಳದೊಪ್ಪು ಗೂಡಿ ನೇರ್ಪಟ್ಟುದು . . . ವಿವಾಹದೊಳ್ (ಸೂಕ್ತಿಸು. ೬–೨೨). **ಐದೆ** : ೧. "ಐದೆಯೆನೆ ಸುವಾಸಿನಿಯಕ್ಕುಂ" (ಕವಿಕಂ. ೧೬೫) ; ಗುರುಜನ ಮೀಯದೆಯುಂ ಮುನ್ನೆರೆವಾತನನೆಯ್ದುಯ್ದೆದೆಯ[ಪಾಠಾಂ. ಯ್ದೆನೆಯೆನ] ಪ್ಪೊಡೆ ದೋಷಂ (ಕಾದಂಪೂ. ೮೭೫). ಅತ್ತಿತ್ತೆಡೆಯಾಡುವೈದೆಯರದಂ ಕೊಂಡಾಡಿ (ಪುಷ್ಪಪು. ೧೨–೧೯) ; ಮುನಿಪಂಗಂಬುಜಾನನೆ ನಮಿಸೆ ಹರಸಿದನೈದೆಯಾಗೆನುತ (ಕುವ್ಯಾಅ. ೧೬–೪೫) ; ಸೋಬನಮನೈದೆಯ ರಾದರದಿಂದೆ ಪಾಡುಗೆ (ಚಿಕವಿ. ೪–೩೪). ೨. ಸವೆದುದೇ ನಿನ್ನೈದೆ ಶುಭಕರ ಕವಿದುದೇ ವೈಧವ್ಯ ಮೇಘವು ತವಮುಖೇಂದುವಿಗೆಂದು ತಂದನು ಕುಳಿತು ಕಂಬನಿಯ (ಅಂಬಿಕಾ. ೪೪–೧). [< ಸಂ. ಅವಿಧವಾ ?]

**ಅಯ್ದೆತನ**, ಎಯ್ದೆತನ, ಐದೆತನ (ನಾ). ಸುಮಂಗಲಿಯಾಗಿರುವಿಕೆ : ಮೆಯ್ಗುರೆಪುದೆ ವೀರಲಕ್ಷ್ಮಿ ನಿನತ[ಪಾಠಾಂ. ತೆ]ಯ್ದೆತನಂ (ವರ್ಧಪು. ೯–೭೦). **ಎಯ್ದೆತನ** : ಕಾಂತೆಗೆ . . . ಸಿರಿಯುಂ ಸಂತಾನಮುಮೆಯ್ದೆ ತನಮುಮುಭ್ಯುದಯಮುಮೋರಂತು ನೆಲೆವೆರ್ಚೆ (ಅನಂಪು. ೧೦–೮೬).

**ಐದೆತನ** : ಜಯಸಿರಿಯ್ಯೈದೆತನ ನಿನ್ನಿಂದಮೆಱೆವುದು ಕಂದ( ಕುವ್ಯಾದ್ರೋ. ೪-೪೪) ; ಅವನಿಪನ ಸತಿಯಳಿಗೈದೆತನ ಮಿಗಿಲೆಂದು ಹರಸಿತು ಮುನಿ ವಧೂನಿಕರ (ನಳಚ. ೯-೧೨) ; ತಳೆವೆನೈದೆತನದಿಂದೆ ಸದ್ಗತಿಯನೆಂದಾ ಕುಮುದ್ವತಿ ನುಡಿದಳು (ಜೈಮಿಭಾ. ೨೬-೫೬). [ಅಯ್ದೆ₂ + -ತನ]

**ಅಯ್ದೆದಾಳಿ,** ಐದೆದಾಳಿ (ನಾ). ಮುತ್ತೈದೆತನದ ಸೂಚಕವಾದ ಚಿಹ್ನೆ ; ತಾಳಿ ; ಮಾಂಗಲ್ಯ : ಅಮವು ಶಿವಪದಕದೊಳು ಮುಖ್ಯವೀ ರುದ್ರಾಕ್ಷಿ ಉಮೆಯಯ್ದೆದಾಳಿಯೊಳು ನಾಯಕಂ ರುದ್ರಾಕ್ಷಿ (ರುದ್ರಾರ. ೫-೧) ; ಹೆಂಡತಿಯ ಕೊರಲಯ್ದೆ[ಪಾಠಾಂ. ಐರ]ದಾಳಿಯೊಂದುಳಿಯಲ್ಕೆ . . . ಇನ್ನಿದೇ ವರತಾಳಿ ನೇಮವಿಂತಾಗುತಿರೆ ಇನ್ನಿದೇತಱ ಬಾಳ್ಕೆ (ಒಲರ. ೧೯೦) ; ಪಳಚ್ಚನೆ ಮೂಡುವಿಂದುವಿಟ್ಟಪಳೆನೆ ಕಟ್ಟಿದಳ್ವಿದೆ [ಪಾಠಾಂ. ರ] ದಾಳಿಯಂ ಪೆಱಲೊರ್ವಳ್ (ರಾಜಶೇ. ೮-೨೬). **ಐದೆದಾಳಿ** : ಎನ್ನ ಗುಪ್ತಮಂಗಳಸೂತ್ರದೆಡೆಯ ಹೊಳೆಹೊಳೆವೈದೆದಾಳಿಯನಿದಂ ಶ್ವಪಚ ನೆಂತು ಕಂಡಪಂ (ಹಚಕಾ. ೧೨-೩೮) ; ತನ್ನೈದೆದಾಳಿಯಂ ತನ್ನ ಕಯ್ ಕಿತ್ತೆಸೆದುದಯ್ಯಯ್ಯೋ (ಶ್ರೀರಾಮಾ. ೨೪೧-೩೬೦). 'ಅಯ್ರದಾಳಿ' ಪಠಾ. [ಅಯ್ದೆ₂ + ತಾಳಿ]

**ಅಯ್ದೆಮಿನುಗು** (ನಾ). = ಅಯ್ದೆದಾಳಿ : ವರುಣನ ಮಕರಮುಂ ವ ರು ಣಾ ನಿ ಯ ಕೊರಲೊಳಯ್ದೆ[ಪಾಠಾಂ. ಯ್ದು]ಮಿನುಗುಮುಱಿಯೆ ಯುಱಿದ ವಸ್ತುಗಳೆಲ್ಲಮಂ ತಂದು ಮುಂದಿಟ್ಟಂ (ಪಂಪಭಾ. ೬-೩೨ ವ). [ಅಯ್ದೆ₂ + ಮಿನುಗು₂]

**ಅಯ್ದೆಲೆನಾಗ** (ನಾ). ಐದೆಲೆಯುಳ್ಳ ಒಂದು ಸಸ್ಯ : ಕನಕದ ರಸಮುಂ ಗರ್ದುಗುಂ ಜನಹಿತಕರಮೆನಿಸಿ ಪರ್ವಿದಯ್ದೆಲೆನಾಗಂ ಸುನಯದಿನರೆದು ವಿಲೇಪಿಸಲನುಪಮಮೆನಿಪುದುಗಳುಗ್ರವಿಷಮದು ಕಿ ಡು ಗು ಂ (ಖಮುದ. ೧೩-೮೫). [ಅಯ್ದು₂ + ಎಲೆ₂ + ನಾಗ]

**ಅಯ್ದೆವಸ,** ಐದೆವಸ (ನಾ). ಐದು ದಿವಸ. **ಐದೆವಸ** : ಕರೆಯಲ್ಕೆ ಕಣ್ಗಳಾಗವು ಮಱೆದಪ್ಪೊಡಂ ತೆರೆಯಲ್ಕೈದೆವಸಂ ಹಡಹಿಂಗೆ ಮೆಯ್ಗಳಾಗವು (ಲೀಲಾವ. ೨-೬೯). [ಅಯ್ದು₂ + ದೆವಸ]

**ಅಯ್ದೊಂದಿ** (ನಾ). ಐದರಲ್ಲಿ ಒಂದು ಭಾಗ : "ಅಯ್ದೊನ್ದಿ ಎನ್ನುವುದು ಐದರಲ್ಲೊಂದು ಭಾಗವನ್ನೂ ಪತ್ತೊಂದಿ ಎನ್ನುವುದು ಹತ್ತರಲ್ಲೊಂದು ಭಾಗವನ್ನೂ ತೋರಿಸುವುದು" (ಸಂಭಾಣಿ. ೨೧೯) ; ಕಾಯ ಬಿಟ್ಟಣ್ಣಂ ಅರಸಣ್ಣಂ ಅಯ್ದೊನ್ದಿ ಒತ್ತೆ ಮಣ್ಣಿತ್ತು ಪಾದಂ ತೆತ್ತುನ್ಮೊರಬಿಟ್ಟಂ (ಎಕ. III, ತಿರುಮ. ೨೫೩-೭ ; 800) ; ಪಾಳುಕೋಡ ಕೆಱೆಯು ಅಯ್ದೊಂದಿ ಕಾದು ಪತ್ತೊಂದಿ ಪ್ರಸಾದಂಗೆಯ್ದೊರ್ (ಮೈಆರಿ. ೧೯೨೬, ೧೦೦-೭ ; ೯ನೆಯ ಶತ). [ಅಯ್ದು₂ + ಒಂದು₂ + -ಇ₂]

**ಅಯ್ನೀರು** (ನಾ). ಮುಟ್ಟಾದವಳು ಐದನೆಯ ದಿನ ಎರೆದು ಕೊಳ್ಳುವ ನೀರು, —ಮಾಡುವ ಸ್ನಾನ.

[< ಅಯ್ದು₂ + ನೀರು (< ನೀರ್)]

**ಅಯ್ನೂರ್ವಾರ್ಚಾರಿ,** ಐನೂರ್ವಾರ್ಚಾರಿ (ನಾ). ಒಬ್ಬಾತನ ಹೆಸರು. **ಐನೂರ್ವಾರ್ಚಾರಿ** : ಐನೂರ್ವಾರ್ಚಾರಿಯ ಮಗ ಪಳಿಯಣ್ಣ (ಎಕ. X, ಚಿಕ್ಕಬ. ೨೬-೮ ; 880). [?]

**ಅಯ್ನೂಲ್** (ನಾ). ಐದು ನೂಲಿನ ಅಳತೆ; ಅಗಲದ ಒಂದೂ ಕಾಲಷ್ಟು ಇರುವ ಅಳತೆ : ಮನೆಯಗಲದೊಳಗಲದ ನಾಲ್ಕನೆಯಂಶ ಮನೊಂದುಮಾಡಿ ನಿಲಿಸಿದೊಡಯ್ನೂಲೆನಿಸುಗುಂ (ಲೋಕೋಪ. ೩-೨೯) ; ಮನೆಯಗಲಮನಳೆದು ಸೂತ್ರಮಂ ನಾಲ್ಕುಭಾಗಂ ಮಾಡಿ ಆ ಪ್ರಮಾಣಿ ನಲ್ಲಿ ಮತ್ತೊಂದು ಭಾಗಮಂ ಕೂಡಿಕೊಂಡು ಮನೆಯುದ್ದಮಂ ಕೊಳಲ್ ಅದು ಅಯ್ನೂಲೆನಿಸಿಕೊಳ್ವುದು (ಲೋಕೋಪ. ೩-೨೯ ಟೀಕೆ).

[< ಅಯ್ದು₂ + ನೂಲ್₂]

**ಅಯ್ನೂಱು,** ಅಯಿನೂಱು, ಐನೂರು, ಐನೂಱು (ನಾ). ಐದು ನೂರರ ಮೊತ್ತ; ಐದುನೂರು: ಇರ್ಪಣ್ಣಿಗ ವೆದೆ ಗಟ್ಟಿ ಪನ್ನಿರ್ಮ್ಮತ್ತ ಲೆರೆ ಅಯ್ನೂಱು ಬಳ್ಳಿಯ ತೋಣ್ಟ (ಎಕ. XI, ದಾವಣ. ೧೬-೧೪ ; 889) ; ಗಿಳಿಯ ಬಣ್ಣದ ಕುದುರೆಯನಯ್ನೂಱನಿತ್ತನಂಗದಪರ್ಣಂ (ಪಂಪಭಾ. ೩-೩೫); ಇಪ್ಪತ್ತು ಕುದುರೆಗವಯ್ನೂರಾ[ಱಾ]ಳ್ಗಳನಿತ್ತೂಗ್ಗ್ರಳಸಿದ್ಧಾಯವನಿತ್ತು (ಎಕ. VII, ಶಿವಮೊ. ೧೦-೫೧ ; 1085). **ಅಯಿನೂಱು** : ತೊಱೆನಾಡು ಅಯಿನೂಱು[೦] . . . ಆಳೆ (ಇಆ. XIV, ೨೩೨-೪೯ ; ೯ನೆಯ ಶತ). **ಐನೂರು** : ಐನೂರು ರೂಪಾಯಿಗಳನ್ನು ಸಂಪಾದಿಸಿದ್ದೇನೆ (ರೂಢಿ). **ಐನೂಱು**: ಗ್ರಾಮಂಗಳ್ತಾಮವೈನೂಱಱ ತಲೆಯೆನೆ ಸಂದಿರ್ದು ದಕ್ಕುಂ ಮಡಂಬಂ (ವಸ್ತುಕೋ. ೪೬-೪) ; ಕರ್ಣನ ತೆರಳಿಚಿದನೈನೂಱು ಹೆಜ್ಜೆಯಲಿಂದ್ರಸುತಸೂನು (ಕುವ್ಯಾದ್ರೋ. ೬-೫೧) ; ಬಲ್ಲವಿಕೆಯ ಮಾತು ಬೇಡವೆಂದೈನೂಱು ಬಿಲ್ಲನಾರಿಯ ಭೋರ್ಗರಿಸೆ (ನೋಹತ. ೮೦-೩೨).

**ಅಯ್ನೂರ್ಬರ್,** **ಅಯ್ನೂರ್ವರ್,** **ಐನೂರ್ವರ್** = ಐದುನೂರು ಜನರು : ಅಂತೆಲ್ಲಮಯ್ನೂರ್ವರುಂ (ವಡ್ಡಾರಾ. ೮೯-೧೬) ; ಆದಿತ್ಯ ವಾರದನ್ದು ಶ್ರೀಮದಯ್ನೂರ್ವ್ವರುಂ ತಮಗೆ ನಡೆವ ಸುಂಕಮಂ(ಇಆ.VI, ೧೩೮-೩ ; 1096) ; ಕುಣುಂಗಿಲಯ್ನೂರ್ಬರುಂ ಸಾಕ್ಷಿಯಾಗೆ ಕೊಟ್ಟತ್ತು (ಎಕ. XII, ಗುಬ್ಬಿ. ೬೧-೯೮ ; 812) ; ಶ್ರೀ ಓಲೆಯ ಚನ್ದಿಗನುಂ ಗಾಳಿಗನುಂ ಮೊದಲಾಗೆ ಅಯ್ನೂರ್ಬರುಂ ತುಪ್ಪವನುಱಿದೋರ್ (ಸೌಇಇ. IX-i, ೧೨-೧೪ ; 812). ಶ್ರೀಮಹಾಚಾತುರ್ವ್ವಿದ್ಯ ಸಮುದಯಮೈನೂರ್ವ್ವರ್ಕ್ಕಂ ಬೆಣ್ಣಮ್ಮಸೋಮಯಾಜಿಗಳ ಕೊಟ್ಟ ದಾನಂ (ಇಆ. VIII, ೨೪೬-೨ ; ೯ನೆಯ ಶತ) ; ಅ ರ ಸು ಮ ಕ್ಕ ಳ ಕೊಂದನೈನೂರ್ವರನು (ಕುವ್ಯಾದ್ರೋ. ೯-೨೮).

[< ಅಯ್ದು₂+ ನೂಱು. / ತಮಿ. ಅಯ್‍ಇಞ್ಞೂಱು ಅಯ್‍ನ್ನೂಱು; ಮಲ. ಅಞ್ಞೂಱು ; ಕೊಡ. ಅಞ್ಞುಬಾರಿ ; ತುಳು. ಅಯ್‍ನೂರು ; ತೆಲು. ಐನೂಱು]

**ಅಯ್ಬೆರಳು,** ಐಬೆರಳು (ನಾ). ಐದು ಬೆರಳು. **ಐಬೆರಳು** : ಒಂದೇ ಅದು ಐದಾಗಿದೆ ಐಬೆರಳಿನ ಕೈದಾಗಿದೆ (ಮುಕ್ತಕಂ. ೩೬-೫).

[< ಅಯ್ದು₂ + ಬೆರಳು (< ಬೆರಲ್)]

**ಅಯ್ಮಡಿ** 'ಅಯ್ವಡಿ' ನೋ.

**ಅಯ್ಮಣ್ಣಿಗ,** ಐಮಣಿಗ, ಐಮಣ್ಣಿಗ (ನಾ). ಐದು ಜನ ಜಮೀನು ದಾರರು : ಚಾವಣ್ಣಯ್ಯಂಗೆ ಇವರ್ಪೇಱೆ ನಾಡು ಸಾಸನಂಗೊಟ್ಟರ್ ಇದರ್ಕ್ಕಯಣ್ಣಿ[ಣ್ಣಿ]ಗರ್ಸಾಕ್ಷಿ (ಎಕ. IX, ಹೊಸಕೋ. ೧೧೧-೮ ; 997) ; ಧಾರಾಪೂರ್ವಕದಿನ್ದಂ ಊರುಂ ಅಯ್ಮಣ್ಣಿಗರುಮಱಿಯೆ ಇ ದೇಗುಲಕ್ಕೆ ಬಿಟ್ಟಂ (ಎಕ. IV, ಹೆಗ್ಗಡ. ೧೬-೧೧ ; 1021). **ಐಮಣಿಗ** : ಪನ್ನೆರಡು ಪಳ್ಳಿಯ ಪಳ್ಳಿಕಾಱರುಂ ಐಮಣಿಗರುಂ ತಂಡೆಯದ ನೇಮಗೌಣ್ಡನುಂ (ಎಕ. III, ನಂಜನ. ೪೪-೮ ; 1113). **ಐಮಣ್ಣಿಗ** : ಅಱುವತೊಕ್ಕಲುಂ ಐಮಣ್ಣಿಗರುಂ ಬಿಟ್ಟುಂಬಳಿಗದ್ದೆ (ಎಕ. VIII, ಸೊರಬ. ೧೯೩-೧೬ ; 1163).

[< ಅಯ್ದು₂ + ಮಣ್ಣಿಗ]

**ಅಯ್ಮತ್ತರ್** (ನಾ). ಐದು ಮತ್ತರು : ಕುಪ್ಪಣ್ಣನ ದೇಗುಲದ ಮಹಾ ದೇ ವ ರ್ಗ್ಗೆ ಒಮ್ಮತ್ತರ್ತ್ತೋಣ್ಟಮುಂ ಅಯ್ಮತ್ತಕ್ಕೆಯ್ಯು ಕೊಟ್ಟವರ್ ಮಜ್ಜಂ ತನ್ನ ಭಾಗಮುಂ ಕುಡೆ (ಕಇ. I, ೧೫-೧೩ ; 1055).

[< ಅಯ್ದು₂ + ಮತ್ತರ್]

**ಅಯ್ಮಾನ,** ಐಮಾನ (ನಾ). ಒಂದು ಅಳತೆ; ಐ ದು ಮಾ ನ. **ಐಮಾನ** : ಬೆಟ್ಟದಾವರೆಯ ಹೂವಂ ತಂ ದು ನೆಳಲೊಳೊಣಗಿಟ್ಟು ಚೂರ್ಣಂಮಾಡಿಕೊಂಡು ಬಳಿಕೈಮಾನಬಟ್ಟವಾಲೊಳಗದಂ ವರ್ಣಬಪ್ಪಂ ದದೊಳು ಕದಡಿ (ಸೂಪಶಾ. ೨-೨೧). [< ಅಯ್ದು₂ + ಮಾನ]

**ಅಯ್ಮುಸುಡ,** ಐಮುಸುಡ (ನಾ). = ಅಯ್ಮೊಗ : **೨.** ಅಯ್ಮುಸುಡಂ ಅಯ್ದುಮುಸುಡಂ (ಶಬ್ದಾನು. ೩೫೧ ಪ್ರಯೋ). **ಐಮುಸುಡ :** **೨.** "ಶಿವ" (ಪ್ರಭಣ್ಣ). [< ಅಯ್ದು$_{2}$ + ಮುಸುಡು + -ಅ$_{7}$]

**ಅಯ್ಮೂಲೆ,** ಅಯಿಮೂಲೆ, ಐಮೂಲೆ (ನಾ). **೧.** ಐದು ಮೂಲೆ: ಅಯ್ಮೂಲೆ, ಅಯ್ದುಮೂಲೆ (ಶಬ್ದಾನು. ೩೫೧ ಪ್ರಯೋ). **೨.** ದಾರಿಯಿಂದ ದೂರವಿರುವ ಸ್ಥಳ; ಯಾವುದೋ ಒಂದು ಮೂಲೆ; ಅಪ್ರಶಸ್ತವಾದ ಜಾಗ: ಆವನ ಮನೆ ಒಂದು ಅಯ್ಮೂಲೆಯಲ್ಲಿದೆ (ರೂಢಿ). **೩.** ಐದು ಮೂಲೆಗಳುಳ್ಳದ್ದು. **ಅಯಿಮೂಲೆ : ೧.** ಜಲದ ಮಧ್ಯದಲ್ಲಿ ಅಯಿ [ಪಾಠಾಂ. ಐ] ಮೂಲೆಯ ಕೆಲದಲ್ಲಿ ಒಂದು ಹೊಲ ಬೆಳೆಯಿತ್ತು (ಕೋಲಶಾಂ. ೨೫). **ಐಮೂಲೆ : ೨.** ಇವನ ಮನೆಯು ಐಮೂಲೆಯಾಗಿತ್ತು (ನೀತಿಚಿಂ. ೬೩).

[< ಅಯ್ದು$_{2}$ + ಮೂಲೆ. / ತುಳು. ಐಮೂಲೆ]

**ಅಯ್ಮೆ** (ನಾ). ಐದುಸಲ, —ಬಾರಿ: ಅಯ್ಮೆ, ಅಯ್ವರ್ (ಶಬ್ದಾನು. ೩೫೧ ಪ್ರಯೋ). [< ಅಯ್ದು$_{2}$ + -ಮೆ$_{2}$]

**ಅಯ್ಮೊಗ,** ಐಮೊಗ (ನಾ). **೧.** ಐದು ಮುಖ : ಗಿರಿಯ ಸರಿಯಿಱುಹೆಯನನಂತ ಹೆಡೆಗಳ ಹಾವನೆರಡು ಮೊಗದಾವನ್ಯೆಮೊಗದೊಟ್ಟೆಯಂ ಜಗದ ಗುರು ಸಿದ್ಧರಾಮಂಗೆ ತೋಱುತ್ತ ನಡೆತಂದನ್ (ಸಿದ್ಧರಾ. ೩-೩). **೨.** ಐದು ಮುಖಗಳುಳ್ಳವನು; ಶಿವ: ನಾಲ್ವಟ್ಟೆ, ಅಯ್ಮೊಗಂ (ಶಬ್ದಾನು. ೨೯೪ ವ್ಯಾಖ್ಯಾ). **ಐಮೊಗ : ೨.** "ಗೊರವನ್ಯೆಕಿಲ್ವೆಟ್ಟಳಿಯನ್ಯೆಮೊಗಂ" (ಕಬ್ಬಕ್ಕೆ. ೪); "ಕಱಿಗೊರಲಂ ತಿಸುಳಿಯ್ಯೆಮೊಗಂ ಸಾಂತಂ ಬಾಂದೊಱೆದಲೆಯಂ ಪಣೆಗಣ್ಣಂ ತಱಿಸಂದುಮೆಯಾಣ್ಮನೆಂದು ತಿಳಿ" (ಚತುನಿ. ೬); ಐಮೊಗನ ಮೊಗಸಿರಿಯಂ ಕಂಡೊಂದಲಂಪಿಂ ತಾನೆ ಮುದ್ದಿಟ್ಟು (ರಾಮಾಶ್ವ. ೧೩೧-೧೫). **೩.** ಸಿಂಹ : "ಎಂಟಡಿಯೆಂದೆನೆ ಶರಭ ಸಿಂಗವ್ಯೆಮೊಗ ಸಿಂಹಂ" (ಕವಿಕ. ೬೦).

**ಐಮೊಗನ ಕೆಳೆಯ** = ಶಿವನ ಸ್ನೇಹಿತ; ಕುಬೇರ: "ಬಡಗಣ ದಿಕ್ಕಿನರಸನ್ಯೆಮೊಗನ ಕೆಳೆಯನುಮೆಂದು ಸಲ್ಗುಂ ಕಿನ್ನರಪತಿಗೆ" (ಶಬ್ದಮಂ. ೧೪). [< ಅಯ್ದು$_{2}$ + ಮೊಗ]

**ಅಯ್ಯ$_{1}$,** ಅಯ$_{1}$, ಐಯ, ಐಯ್ಯ$_{1}$ (ನಾ). **೧.** ತಂದೆ; ಅಪ್ಪ: ಕಳಿಂಗಬ್ಬೆಗಳಯ್ಯ ಪಲ್ಲಹಾರಕಿ (ಎಕ. XI, ದಾವಣ. ೧೭-೮ ; 889); ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ (ಪಂಪಭಾ. ೧-೭೦); ಅಯ್ಯನಾರೆನಗವ್ವೆಯಾರ್ ಪಿರಿಯಯ್ಯನಾರ್ ನೀನೆಲ್ಲಿಯವ ನಿನ್ನಯ್ಯತನವೇತಕ್ಕೆ (ಬಸಪು. ೩-೮೨); ಕಂಜಜನಯ್ಯ ರಕ್ಷಿಸು ನಮ್ಮನನವರತ (ಹಭಸಾ. ೪). **೨.** ತಾತ; ಅಜ್ಜ : ನಿಮ್ಮಯ್ಯ ಮನೆಯಲ್ಲಿದ್ದಾನೆಯೇ (ರೂಢಿ). **೩.** ಜಂಗಮ ; ಲಿಂಗಾಯತ ಪುರೋಹಿತ ಅಥವಾ ಗುರು: ಮಂದಿರದೊಳೊಬ್ಬಯ್ಯನಿರ್ದೊಲವಿಂದ ದಾಸಿಯನೊಬ್ಬಳಂ ಕರೆದು (ಬಸಪು. ೧೧-೨೦). **೪.** ಉಪಾಧ್ಯಾಯ : ಕೊಲುತಿರ್ಪಯ್ಯಗಳೋದು ಬೇನೆಯಳಿವಾ ತೀಕ್ಷ್ಣೌಷಧಂ . . . ಮುಂ ಫಲಕಷ್ಟಂ ಕಡೆಗೊಳ್ಳಿತ್ತೆ (ಸೋಮೇಶ. ೯೬); ಸಾಲೆಯಲ್ಲಿ ಅಯ್ಯನವರ ಅಪ್ಪಣೆಯಂತೆ ನಡೆಕೊಳ್ಳಬೇಕು (ಮುಂಬಯಿ. ೧-೨೧). **೫.** ಒಡೆಯ; ಯಜಮಾನ : ಅಯ್ಯಗಳ ಅಯ್ಯನು ನಮ್ಮ ಮಾದಾರ ಚೆನ್ನಯ್ಯನು (ಬಸವ. ೩೫೦); ಅಮ್ಮನವರು ಪಟ್ಟಕ್ಕೆ ಅಯ್ಯನವರು ಚಟ್ಟಕ್ಕೆ (ಗಾದೆ); ಅಯ್ಯನವರ ಪೂಜೆಗೂ ಅಮ್ಮನವರ ಅಡಿಗೆಗೂ ಸಮ (ಗಾದೆ). **೬.** ಗಂಡಸಿನ ಹೆಸರಿನ ಕೊನೆಯಲ್ಲಿ (ಅಣ್ಣ, ಅಪ್ಪ ಎಂಬಂತೆ) ಸೇರುವ ಮಾತು : ಶ್ರೀಮತ್ ಅನಂತವೀರ್ಯಯ್ಯಂಗಳ್ (ಇಅ. VI, ೧೦೨-೧೫ ; 887); ಕನ್ನಯ್ಯಮಯ್ಯನುಮಿಟ್ಟು (ಎಕ. XI, ಚಿತ್ರದು. ೨೬-೧೫ ; 946); ಹಿರಿಯಯ್ಯ ಶ್ವಪಚಯ್ಯ ಕಿಱಿಯಯ್ಯ ಡೋಹಾರಕಕ್ಕಯ್ಯ (ಬಸವ. ೩೫೦). **೭.** ಗಂಡಸರನ್ನು ಸಂಬೋಧಿಸುವಾಗ ಸರ್ವಸಾಧಾರಣವಾಗಿ ಉಪಯೋಗಿಸುವ ಮಾತು (ಅಣ್ಣ, ಅಪ್ಪ ಎಂಬಂತೆ) : ಎಂತು ಸೈರಿಸುವೆವಯ್ಯ ವಿಯೋಗಮಂ (ಆದಿಪು. ೯-೭೬); ಈಳೆ ನಿಂಬೆ ಮಾವು ಮಾದಲಕೆ ಹುಳಿನೀರನೆಱೆದವರಾರಯ್ಯ (ಮಹದೇ. ೧-೧); ಕಡು ಮೂರ್ಖರಿಗೆ ಕಾಲವಯ್ಯ ಎನ್ನೊಡೆಯ ಪುರಂದರ ವಿಠಲ ಕೇಳಯ್ಯ (ಪುರಂದ. ೧-೧೪೯-೫). **ಅಯ$_{1}$ : ೬.** 'ಮಾರಯ' ಪರಾ. **ಐಯ : ೫.** ಇಱಿವೆಡೆಗೈಯ ಕೈಯುಗುರೆ ಸಾಲದೆ ನಚ್ಚಿನ ಕೈದುವೇಟ್ಟುದೇ (ಕಾವ್ಯಸಾ. ೪೧೧ ಶೂದ್ರಕ). **೬.** ಸಲಹುವೈಯನು ಮುಳಿದು ಲೋಕದ ಕೊಲೆಗೆಲಸಕಂಗೈಸಿದನೆ (ಕುವ್ಯಾಭೀ. ೬-೨೯). **೪.** ಐಯಗಳು ನಡೆತಂದು ನೋಡಿದರೀಯವಸ್ಥೆಯನೀ ಕುಮಾರಕರ್ಸೈಯಗಳಿಗೈಯಗಳು ತಾವಾದರು ಕಣಾಯೆನುತ (ಅನಂರಾ. ೧-೫-೪೬); ನರಸಿಂಹಭಾರತಿ ಸ್ವಾಮಿಗಳೈಯನವರ ಕರಕಮಲಸಂಜಾತರಾದ (ಎಕ. VII, ಶಿವಮೊ. ೮೨-೯ ; 1683). **ಐಯ್ಯ$_{1}$ : ೬.** ಆ ದೇವಣ್ಣ ಐಯ್ಯನವರಿಗೆ (ಎಕ. VIII, ತೀರ್ಥಹ. ೧೪೮-೪೧ ; 1417); ಬೈಚೇಗೌವುಡರ್ಯೈಯ್ಯನವರ ಪಉತ್ರ (ಎಕ. XII, ಮದ್ದಗಿ. ೩೧-೬ ; 1656). **೩.** ಉಡಿಗೆಜ್ಜೆಯನಂಡಿ ಸವಾನಂದಾಜ್ಞಾಪಿಸಲೈಗಳಂ ಬೀಳ್ಕೊಟ್ಟು (ಮದೇಪು. ೨೭-೧೪); ಐಗಳೆಲ್ಲಿಂದ ಬಂದಿರಿ ನಿಮ್ಮ ಹೆಸರೇನು (ಬಿಜ್ಜರಾ. ೬-೩೭); ಬಸ ಅಗ್ಗಣಿ ಚೆಂನಬಸವ ಸ್ವಮಿಗಳವರಿಗೆ ಅವರಗೊಳದ ಐಗಳು ಸಮಸ್ತರು ತಂಮ ಸಂನ್ಮತದಿಂದ (ಎಕ. XI, ದಾವಣ. ೯೬-೩ ; ?). **೪.** ಪ್ರಿನ್ಸಿಪಾಲರಾದ ನಮ್ಮ ಐಗಳು ಕಿರಿಯರಿಗೆ ಎಣ್ಣೆ ಹಚ್ಚಿ ಹಚ್ಚಿ ಬಿಡುತ್ತಿರುವರು (ಮಲಿಚಿ. ೩೦); ಐಗಳೇ, ಐಗಳೇ, ಐದರ ಅಂಕೆ ನೀವೆ ಬರೆದರೆ ಚಂದ (ಗಾದೆ); ಅವರನ್ನು . . . "ಓದಿಸೋ ಅಯ್ನೋರು" "ದಾಗ್ದಾರು" 'ಗೋಸಾಯಿಗಳು' – ಏನೆಂದಾದರೂ ಕರೆದುಕೊಳ್ಳಿ (ಸುವಸಂ. ೧). **೮.** ಗುಡಿ ಪರಿಚಾರಕರಲ್ಲಿ ಒಂದು ಜಾತಿ : ಐಗಳು – ಗುಡಿಯಲ್ಲಿ ಇವರು ಹೂಗಳನ್ನು ತಂದು ಬೇರೆ ಹಲವು ಕೆಲಸಗಳನ್ನು ಮಾಡುವರು (ಕಭಾಗೆ. ೧೨೦). ℙ ಅಯ್ಗಳು, ಅಯ್ನೋರು, ಐಗಳು (ಬಹುವ).

**ಅಯ್ಯನ ಚಕ್ರಿ** = ಒಂದು ಬಿರುದು : ಅದಟಜ್ಜಗಳ್ಳನ್ ಅಯ್ಯನ ಚಕ್ರಿ ಪುಸಿಗೆ ಪೇಸುವನ್ (ಮೈಆರಿ. ೧೯೧೬, ೧೩-೮ ; 900). **ಅಯ್ಯನಯ್ಯ** = ತಂದೆಯ ತಂದೆ; ತಾತ; ಅಜ್ಜ : ಅಯ್ಯನಯ್ಯನು ಚೆನ್ನಯ್ಯಂ ಚಿಕ್ಕಯ್ಯ ಕಕ್ಕಯ್ಯನು ತೆಲುಗ ಬೊಮ್ಮಯ್ಯನಯ್ಯನು ನಂಬಿ ತಾಯ್ಮೋರ ಮನ ಮಗ ನಾನು (ಬಸಪು. ೩-೮೨).

[ದೇ. ‖ **ತಮಿ.** ಅಯ್ಯನ್, ಐಯ್ಯನ್, ಅಯ್ಯಾ ; **ಮಲ.** ಅಯ್ಯನ್ ; **ಕೊಡ.** ಅಯ್ಯೆ ; **ತುಳು.** ಅಯ್ಯೆ ; **ತೆಲು.** ಅಯ, ಅಯ್ಯ ; **ಕೊಲಾ.** ಆಯ್ಯಾ = ತಾಯಿಯ ತಂದೆ, ಆಯ್ಯಾಕ್ = ದೇವರು. / **ಸಂ.** ಆರ್ಯ = ಗೌರವಾರ್ಹ ವ್ಯಕ್ತಿ ; **ಪಾಲಿ.** ಅಯ್ಯ = ಶ್ರೇಷ್ಠ ವ್ಯಕ್ತಿ]

**ಅಯ್ಯ$_{2}$** 'ಅಯ್ಯೋ' ನೋ.

**ಅಯ್ಯಂಗಾರ್,** ಐಯಂಗಾರ್ (ನಾ). **೧.** ಶ್ರೀವೈಷ್ಣವ ಬ್ರಾಹ್ಮಣ. **೨.** ಶ್ರೀವೈಷ್ಣವರ ಹೆಸರುಗಳ ಮುಂದೆ ಸರ್ವಸಾಧಾರಣವಾಗಿ ಸೇರುವ ಮಾತು. **ಐಯಂಗಾರ್ ೧ :** ತಿರುಮಲೈಯಂಗಾರ್ಯರು ಸುಮಾರು ಕ್ರಿ. ಶ. ೧೭೦೦ ರಲ್ಲಿ ಬರೆದಂತೆ ತೋರುತ್ತದೆ (ಚಿಕವಂ. ೧ ಪೀ).

[ಅಯ್ಯ$_{1}$ + -ಗಾರು. ℙ < **ತೆಲು.** ಗಾರು. / **ತಮಿ.** ಅಯ್ಯಙ್ಗಾರ್ ; **ತೆಲು.** ಅಯ್ಯಂಗಾರು]

**ಅಯ್ಯಂಬ,** ಐಯಂಬ (ನಾ). = ಅಯ್ಗಣೆಯ. **ಐಯಂಬ :** "ಐಯಂಬಂ ಪಂಚಶರಂ" (ಚತುನಿ. ೫೧).

[< ಅಯ್ದು$_{2}$ + ಅಂಬು$_{3}$ + -ಅ$_{7}$]

**ಅಯ್ಯಗಲಿ** (ನಾ). ಅಂಜುಬುರುಕ; ಹೇಡಿ: ಅಯ್ಯಗಲಿ ದಲ್ ಭೀರು ಕರಂ ಕಾತರಂ ಭಯಸ್ಥಂ ತ್ರಸ್ತಂ" (ವಸ್ತುಕೋ. ೧೦೦–೧೨); ಅಂತು ತನ್ನಂ ಮುನ್ನಂ ಬೀರನೆಂದವರ್ ಭೀರುವೆನೆ, ಕಲಿಯೆಂದವರಯ್ಯಗಲಿ ಯೆನೆ ಪ್ರಾಣವನೆ ಕಾವ ಬಗೆ ಮಿಗೆ (ಶಾಂತಿಪು. ೬–೩೯ ವ). [?]

**ಅಯ್ಯಗೊಡೆ** (ನಾ). ಎರಡು ಕೊಡೆಗಳು, —ಛತ್ರಿಗಳು: ವಜ್ರಾಯುಧಂ ಕ್ಷೇಮಂಕರ ಮಹೀಪಾಲನ ಕಟ್ಟಿದ ಕಂಠಿಗಮೆತ್ತಿದಯ್ಯಗೊಡೆಗಂ ದಯೆಗೆಯ್ದು ಯುವರಾಜಲಕ್ಷ್ಮಿಗಂ (ಶಾಂತಿಪು. ೮–೨೩ ವ). 'ಸವಡಿ ಗೊಡೆ' ಪರಾ. [ಅಯ್ಯ ? + ಕೊಡೆ$_3$]

**ಅಯ್ಯಣ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಚೋಳಮಹಾರಾಜನಯ್ಯ ಅಯ್ಯಣ (ಎಕ. X, ಗೋರೀಬಿ. ೭೨–೫; 900); ಮಾರ್ಬಲಮಲ್ಲ ಮಜುವಂಕಭೈರವ ಅಯ್ಯಣಪುತ್ರ ನಾಗರಖಂಡ ಎಪ್ಪತ್ತು ಆಳುತಿಱ್ತು (ಎಕ. VIII, ಸೊರಬ. ೪೧೩–೧೩; 986); **ಸನ್ದಯ್ಯಣಂ** ಸಾಹಸ ನಿಧಿ (ಇಆ. IV, ೨೦೮–೪; 1075). [ಅಯ್ಯ$_1$ + ಅಣ$_0$ (< ಅಣ್ಣ$_1$)]

**ಅಯ್ಯಣದೇವ** (ನಾ). ಒಬ್ಬಾತನ ಹೆಸರು: ರಣರಂಗಮಲ್ಲ ನೆನಿಪ್ಪಯ್ಯಣದೇವನಿಂ (ಗದಾಯು. ೨–೭ ವ). [ಅಯ್ಯಣ + ದೇವ]

**ಅಯ್ಯಣಯ್ಯ** (ನಾ). ಒಬ್ಬಾತನ ಹೆಸರು: ಅಗ್ನಕುನ್ದಿಯ ಭೀಮಂ ಅಯ್ಯಣಯ್ಯ ಉತ್ತುಂಗಮಲ್ಲನೆನಿಸಿದ ವಿಕ್ರಮಾದಿತ್ಯ (ಸೌಇಇ. XX, ೧೯–೧೮; 1015). [ಅಯ್ಯಣ + ಅಯ್ಯ$_1$]

**ಅಯ್ಯಣಿಗ** (ನಾ). ದೇವಾಲಯದ ಸೇವಕವರ್ಗದಲ್ಲಿ ಒಬ್ಬ (?): ದೇವರಿಗೆ ತಂತಮ್ಮ ಕರ್ಮಾಂತರದ ಬೆಸಂಗಳಂ ಮಾಡಿ ಮೂನೂರ್ವರು ಸಾನಿಗರುಂ ಮೂನೂರ್ವರಯ್ಯಣಿಗರುಂ ನಿಬನ್ಧಕಾಱರುಂ ಸುಖಮಿರ್ಪರು (ಸೌಇಇ. VI, ೧೧೩–೪; 1700). [ಅಯ್ಯಣ + –ಇಗ]

**ಅಯ್ಯತನ**, ಅಯ್ತನ, ಐತನ (ನಾ). ಅಯ್ಯನಾಗಿರುವಿಕೆ: ಅವರಿವರೆನ್ನದೆ ಚರಣಕ್ಕೆಱಗಲು ಅಯ್ಯತನವೇಱಿ ಬೆಬ್ಬನೆ ಬೆಱೆವೆ ನಾನು (ಬಸವ. ೨೫೩); ನೀನೆಲ್ಲಿಯವ ನಿನ್ನಯ್ಯತನವೇತಕ್ಕೆ ಸುಡು ಶಿವಭಕ್ತಿಹೀನರಿರ (ಬಸವು. ೩–೮೨). **ಅಯ್ತನ** (೬). **ಐತನ** (ಸ್ಯಾಂಡರ್).
[ಅಯ್ಯ$_1$ + –ತನ]

**ಅಯ್ಯಪ** (ನಾ). ಒಬ್ಬಾತನ ಹೆಸರು: ನಾರಾಯಣಂ ಗಾಣದಂಕಕಾಱ ... ಶ್ರೀಮದಯ್ಯಪ (ಎಕ. IX, ದೇವನ. ೧೦–೫; 948).
[ಅಯ್ಯ$_1$ + ಅಪ್ಪ$_1$ (< ಅಪ್ಪ$_1$)]

**ಅಯ್ಯಪಗಾವುಂಡ** (ನಾ). ಒಬ್ಬಾತನ ಹೆಸರು: ಶಿವನೂರ ಗಾವುಣ್ಡರ ಮಗಂ ಅಯ್ಯಪಗಾವುಣ್ಡನು ವಿಱ್ದು (ಎಕ. III, ನಂಜನ. ೧೮೩–೫; 977).
[ಅಯ್ಯಪ + ಗಾವುಂಡ]

**ಅಯ್ಯಪದೇವ** (ನಾ). ಒಬ್ಬಾತನ ಹೆಸರು: ಬೀರ ಮಹೇಂದ್ರನೊಳ್ಕಾದಲೆಂದು ಅಯ್ಯಪದೇವನಿಱ್ಗಿ ಸಾಮಂತ ಸಹಿತಂ ನಾಗತ್ತರನಂ ದಂಡುವೇಱಿಸ್ವೊಡೆ (ಎಕ. IX, ಬೆಂಗಳೂ. ೮೩–೪; 890); ಪಲ್ಲವಾತ್ಮಯಂ ನನ್ನಿಗಾಶ್ರಯಂ ಶ್ರೀಮುತು ಅಯ್ಯಪದೇವ ರಾಜ್ಯಂಗೆಯ್ಯೆ (ಎಕ. XI, ಚಿತ್ರದು. ೬೨–೫; 918). [ಅಯ್ಯಪ + ದೇವ]

**ಅಯ್ಯಪಮಂಗಲ** (ನಾ). ಒಂದು ಊರಿನ ಹೆಸರು (?): ಬ್ರಹ್ಮಾದೇಯಂ ಅಯ್ಯಪಮಂಗಲ ಸಿಪ್ಪಸಿನ್ತೆಯರ್ದ್ದ ಬಳದೊಳ್ ಬಾಳುತ್ತಿರೆ (ಎಕ. XI, ಹಿರಿಯೂ. ೧–೩; 975). [ಅಯ್ಯಪ + ಮಂಗಲ]

**ಅಯ್ಯಮ** (ನಾ). "ಸೂರ್ಯ" (ತದ್ಭಕೋ. ೨).
[< ಸಂ. ಆರ್ಯಮನ್]

**ಅಯ್ಯರೆಗ** (ನಾ). ಒಂದು ಜಾತಿಯ ಮೀನು: ಗಜಿಮೆಜಿವ ಕಾಗೆಂಡೆಯಯ್ಯರೆಗ ದೊಂಡಿ ... ಪರಿಪರಿಯ ಮೀನ್ಗಳಂ ಗುದಿಗೆಯ್ದರು (ಹಚಕಾ. ೫–೪೫). [?]

**ಅಯ್ಯಲ್**, ಅಯ್ಯಲಾ (ಅ). ದುಃಖ, ಆಶ್ಚರ್ಯ ಸೂಚಕವಾದ ಮಾತು: ಅಯ್ಯಲಡಿಯಿಡೆ ಸುಡುವ ಹುಳಿವ ಬೆಳ್ಮಣಲಣ್ಣ (ಸಾನಂಚ. ೪–೧೯೯ ವ). **ಅಯ್ಯಲಾ**: ಅಯ್ಯಲಾನಿಂತು ನಾಯುಣ್ಣದ ವಿಧಿಯ ನುಂಡೆ ಏನೆಂಬೆನೀಶ್ವರಾ ಕಾವುದೆನ್ನಂ (ವಾಗೀರ. ೨೬೧–೬).
[ಅಯ್ಯ$_2$ + – ಅಲ್ ?. / ಪ್ರಾ. ಅಯಲ್ಲಯಾ = ದುಃಖ]

**ಅಯ್ಯಲಾ** 'ಅಯ್ಯಲ್' ನೋ.

**ಅಯ್ಯಹರಸ** (ನಾ). ಒಬ್ಬಾತನ ಹೆಸರು: ನೆರಟೂರ ಅಯ್ಯಹರಸರ ಮಗವರ್ (ಮೈಆರಿ. ೧೯೨೪, ೯೫–೪; 1021).
[ಅಯ್ಯಹ$_0$ (< ಅಯ್ಯಪ) + ಅರಸ$_1$]

**ಅಯ್ಯಾಚಾರ** (ನಾ). [ವೀಶೈ] ವೀರಶೈವ ದೀಕ್ಷೆ: ಉಮೇಶ, ನೀನೂ ಅಯ್ಯಾಚಾರ ಮಾಡಿಸಿಕೊಂಡು ಬಿಡು ಎಂದು ನಗೆಯಾಡಿ ಕೆಣಕಿದ್ದರು (ದಾಕೂಟ. ೧೩೫). [ಅಯ್ಯ$_1$ + ಆಚಾರ]

**ಅಯ್ಯಾಜಿ** (ನಾ). ಅಯ್ಯನನ್ನು ಗೌರವ ಅಥವಾ ಪ್ರೀತಿಯಿಂದ ಕರೆಯುವಾಗ ಉಪಯೋಗಿಸುವ ಮಾತು: ಚಿರಂಜೀವಿ ಸಹಸ್ರಾಯುಷ್ಯರಾದ ನಮ್ಮ ಅಯ್ಯಾಜಿಯವರ ಪ್ರೇರಣೆಯಿಂದ ಭೂದಾನವಂ ಮಾಡಿ (ಹುಟ್ಟಿಹ. ೨). [ಅಯ್ಯ$_1$ + –ಜಿ (< ಜೀಯ)]

**ಅಯ್ಯಾವೊಳಿ** 'ಅಯ್ಯಾವೊಳೆ' ನೋ.

**ಅಯ್ಯಾವೊಳೆ**, ಅಯ್ಯಾವೊಳಿ, ಅಯ್ವೊಳೆ, ಐಯವೊಳೆ, ಐಹೊಳೆ (ನಾ). ಒಂದು ಊರಿನ ಹೆಸರು: ಶ್ರೀವಿಕ್ರಮಾದಿತ್ಯಭ[ಟಾರರ್] ಪ್ರಿಥುವಿರಾಜ್ಯ[ಙ್ಗೆ]ಯೆ ಅಯ್ಯಾವೊ[ಳೆ]ಯು[ಳ್] (ಸೌಇಇ. XI–ii, ೪–೨; ?); ಅಱುವತ್ತನಾಲ್ಕು ಘಟಿಕ(ಕಾ)ಸ್ಥಾನಮುಮಯ್ಯಾವೊಳೆ ಪುರಪರಮೇಶ್ವರರು(ರುಂ) (ಇಆ. V, ೩೪೨–೧೦; 1093); ಅಯ್ಯಾವೊಳೆಯ ತಳದಿನಿದುವೆ ನೆಗ್ಗಿರ್ಜಿದೆನಿಪರಯ್ಯನೂ ದ್ವಾರಾವತೀ ಪುರಕೆ ಕುಱುವೆನಿಪ ಕುಱುಗೋಡ (ಸೌಇಇ. IX–i, ೨೯೬–೨೪; 1097); ಶ್ರೀಮತ್ತ್ರಿಭುವನಮಲ್ಲ ಚಲದಂಕರಾವ ಹೊಯ್ಸಳ ಸೆಟ್ಟಿಯರು ಅಯ್ಯಾವೊಳೆಯ ಯುಂಡಿಗೆಯ ದಮ್ಮಿಸೆಟ್ಟಿಯ ಮಗಂ (ಎಕ. II, ೧೪೫–೧೦; 1130). **ಅಯ್ಯಾವೊಳಿ**: ಭಗವತೀದೇವೀಲಬ್ಧವರ ಪ್ರಸಾದರುಮಪ್ಪ ಶ್ರೀಮದಯ್ಯಾವೊಳಿಯಯ್ಯೂರ್ಬಸ್ವಾಮಿಗಳುಮುಂ (ಕಇ. II, ೨೫–೮೪; 1185). **ಅಯ್ವೊಳೆ**: ಅಯ್ವೊಳೆಪುರವರೇಶ್ವರರಪ್ಪ (ಇಆ. X, ೧೮೭–೩೨; 1095). **ಐಯವೊಳೆ**: ವಾಕುಸಿದ್ಧರುಂ ಭಲ್ಲುಂ ಕದಣ್ಣ ಹಸ್ತರ್ ಐಯವೊಳೆಯ ಪುರಪರಮೇಶ್ವರರ್ (ಕಇ. VI, ೫೫–೮; 1000 ?). **ಐಹೊಳೆ**: ಕನ್ನಡದ ಕವಿ ರವಿಕೀರ್ತಿ ತಾನು ಕಾಳಿದಾಸ ಭಾರವಿಯರಿಗಿಂತ ಕಡಿಮೆಯಿಲ್ಲ—ಎಂದ ಮಾತು ಐಹೊಳೆಯ ಶಿಲಾಶಾಸನದಲ್ಲಿದೆ (ಯಕ್ಷಬ. ೯). ℙ ಈಗಿನ ಐಹೊಳೆ. [< ಅಯ್ಯ$_1$ + ಪೊಳೆ ? (< ಪೊಟಲ್)]

**ಅಯ್ಯೊ** 'ಅಯ್ಯೋ' ನೋ.

**ಅಯ್ಯೋ**, ಅಯ್ಯ$_2$, ಅಯ್ಯೊ (ಅ). ದುಃಖ, ಅನುಕಂಪೆ, ವಿಡಂಬನೆ, ಅಪಹಾಸ್ಯ, ಆಶ್ಚರ್ಯ ಮುಂತಾದುವುಗಳನ್ನು ಸೂಚಿಸುವ ಮಾತು: "ಅಯ್ಯೋ ವಿಷಾದಾನುಕಂಪಾಪಹಾಸೇಷು" (ಭಾಷಾಭೂ. ೨೬೬); "ಅಯ್ಯೋ ಎಂಬವ್ಯಯಮಂ ದುಃಖದ ವಿಡಂಬನದ ಕರುಣದ ಧ್ವನಿಯಲ್ಲಿ ಪೇೞಲಕ್ಕುಂ" (ಶಮದ. ೩೦೮ ವೃತ್ತಿ); "ಅಯ್ಯೊ, ಅಯ್ಯೋ – ಖೇದ ವಿಡಂಬನಯೋಃ" (ಶಬ್ದಾನು. ೨೧ ವ್ಯಾಖ್ಯಾ); ಅಹಹ (ನೋವು), ಅಕ್ಕಟಾ, ಅಯ್ಯೋ (ದುಃಖ), (ಕೈಪಿಡಿ. ೫೨). (i) ದುಃಖಕ್ಕೆ: ಬೆಳರ್ವಾಯ್ ಬತ್ತಿತ್ತಯ್ಯೋ (ಗಿರಿಕ. ೨–೧೮); ಇನ್ನೇವೆನಯ್ಯೋ ಮಹಾದೇವ (ತಿರುರ. ೨೧); ನಾನಾ ಭೋಜ್ಯಕ್ಕೆ ಪಕ್ಕಾಗುತೆ ಚರಿಸಿದೆನಿನ್ನಾಱಿ ನಿನ್ನಾಱಿನಯ್ಯೋ ಅನಂದಾಂಬೋಧಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೪); ಅಯ್ಯೋ ಅನ್ಯಾಯಂ (ಭಾಷಾಭೂ. ೨೬೬).

(ii) ಅನುಕಂಪೆಗೆ: ದಯೆಯಿಂದಕ್ಕಟ ಅಯ್ಯೋ ಎಂದು ಕಾರುಣ್ಯಮುಪ್ಪ ಮನದೋಳ್ಕೂಡಿ (ವಡ್ಡಾರಾ. ೧೫೭-೪); ಮಂತ್ರಿ ಮುಖ್ಯರುಮಯ್ಯೋ ವಿನಿವಾರಿಸಲ್ಕಱಿದರಿಲ್ಲೆಂತಕ್ಕುಮೋ (ವರ್ಧಪು. ೩-೪೧); ಅಯ್ಯೋ ಪ್ರಾಣಿ ಬಿಟ್ಟಂ (ಭಾಷಾಭೂ. ೨೬೬). (iii) ಆಶ್ಚರ್ಯಕ್ಕೆ: ಅಯ್ಯೋ ಇದೇಕಿಂತಾದುದು (ಶಬ್ದಾನು. ಲ೨ ಪ್ರಯೋ). (iv) ಅಪಹಾಸ್ಯಕ್ಕೆ: ಅಯ್ಯೋ ಏಂ ಸೈಪೊ (ಭಾಷಾಭೂ. ೨೬೬); ಅಯ್ಯೋ ನಿನ್ನ ಮೋರೆ ನೋಡು (ರೂಢಿ). **ಅಯ್ಯ**$_2$: (i) "ರಮಾ, ಏನು? ಅಯ್ಯ, ಒಳಗ ಬಾರವಾ (ಬೀಳತೆ. ೩೯). **ಅಯ್ಯೊ**: (i) ಅರಗಿನ ಮನೆಯೊಳ್ ಪಾಂಡವರುರಿದಱ್ಗಿದರಕ್ಕಟಯ್ಯೊ ದುರ್ಯೋಧನನೆಂಬೆರಲೆಯಿಂ (ಪಂಪಭಾ. ೩-೭); ಅಯ್ಯೊ ಫಳಾಮೃತರಸಮಂ ಕಯ್ಯಿಂದಂ ಪಿಡಿಯೆ ವಿಷಮದಾಯ್ತೋ (ಅರ್ಧನೇ. ೩-೮೨).

**ಅಯ್ಯಯ್ಯ, ಅಯ್ಯಯ್ಯೊ, ಅಯ್ಯಯ್ಯೋ** (ದ್ವಿರುಕ್ತಿ): ಅಮಮ ಪ್ರದ್ಯೋತಮಯ್ಯಯ್ಯ ಭೀಕರವಾಹಾ (ಗಿರಿಕ. ೮-೫೧); ತನ್ನರಸಿಯಂ ಹೊಯ್ಯೆಂದು ಪೇಳದಡವಿಗೆ ಕಳುಹಿ ಬಾರೆಂದನಯ್ಯಯ್ಯೊ ರಾಘವಂ ಕಾರುಣ್ಯನಿಧಿಯೆಂದಳಲ್ದಳಂಬುಜಾಕ್ಷಿ (ಜೈಮಿಭಾ. ೧೯-೧೭); ಹ್ಯಾಗೆ ಸೈರಿಸಲಮ್ಮ ಅಯ್ಯಯ್ಯೊ ಪ್ರಿಯನು ವೀರಾಗನಾದಕಟಕಟ (ಜಿನಮು. ೪೬-೩೮); ದುಃಖದಿಂದ ಅಯ್ಯಯ್ಯೋ ಎಂದು ಕೂಗಿಕೊಂಡರು (ರೂಢಿ). **ಅಯ್ಯೋಪಾಪ**= ಕರುಣೆಯ ನುಡಿ, ದಯೆಯ ಉದ್ಗಾರ: ಕರಡಿ ಕಂಡು ದಿಗಿಲಾಗಿದ್ದರೂ ಅದು ಕೇಳಿಕೊಂಡದ್ದು ನೋಡಿ ಅಯ್ಯೋಪಾಪ! ಎನಿಸಿತು (ಪಂಚಾಮೃ. ೨); ಅಯ್ಯೋಪಾಪ ಎಂದು ಮರುಗಿತು (ಕಿಂಕಥೆ. ೯).

[**ದೇ.** ‖ **ತಮಿ.** ಐಯ; **ಮಲ.** ಅಯ್ಯಾ, ಅಯ್ಯೋ; **ತುಳು.** ಅಯ್ಯೋ; **ತೆಲು.** ಅಯ್ಯೊ, ಅಯ್ಯೋ; **ಕುಯಿ.** ಐಗೆ, ಐಗೋ; **ಮಲ್ತೊ.** ಅಯ, ಅಯ್ಯಿ, ಅಯ್ಯು. / **ಸಂ.** ಅಯೆ]

**ಅಯ್ರ** (ನಾ). ಮುತ್ತೈದೆ. 'ಅಯ್ರದಾಳಿ' ಪರಾ. [?]

**ಅಯ್ರಗಡಗ, ಐರಗಡಗ** (ನಾ). ಸೌಮಂಗಲ್ಯ ಸೂಚಕವಾದ ಕಡಗ. **ಐರಗಡಗ**: ಥಳಥಳಿಸುವ ರತ್ನದೈರಗಡಗ ದಿವ್ಯನುಲಿಗಡಗಗಳಾಮಲಕದ ತೊಳಪ ಕಡಗ ಹಲಸಿನಕಾಯಿಗಡಗಗಳೆಳೆವೆಣ್ಗಳೆಸೆದರತಿಯಲಿ (ಕಂನವಿ. ೨೪-೩೮). [ಅಯ್ರ + ಕಡಗ]

**ಅಯ್ರಣೆ, ಅಯಿರಣೆ**$_2$**, ಅಯ್ರಾಣಿ, ಅರಣೆ**$_2$**, ಅರಿಣೆ, ಅರಿವೇಣಿ, ಐರಣಿ, ಐರಣೆ, ಐರಾಣಿ** (ನಾ). (ಸೌಭಾಗ್ಯ ಸೂಚಕವಾಗಿ) ಮದುವೆಯಲ್ಲಿ ಚಿತ್ರ ಬರೆದಿಡುವ ಗಡಿಗೆ ಮತ್ತು ಅದನ್ನು ಪೂಜಿಸುವ ವ್ರತ. **ಅಯಿರಣೆ**$_2$: ಅದರ ಮೇಲೆತ್ತಿದ ಮುತ್ತಿನ ಛತ್ರವು ಪದರ ಅಯಿರಣೆಯೆಂಬ ಥರದ (ದೇವಾಂಪು. ೩-೯೨). **ಅಯ್ರಾಣಿ**: 'ಅಯ್ರಾಣಿ ಕುಂಭ' ಪರಾ. **ಅರಣೆ**$_2$: ನಾಗೋಲೆಯ ದಿನ ಹೆಣ್ಣು ಗಂಡನ್ನು ದೇವರ ಮನೆಯಲ್ಲಿ 'ಅರಣೆ'ಯ (ಅಂದರೆ ಮದುವೆಯಲ್ಲಿ ಕಳಶದಲ್ಲಿ ತರುವ ನೀರು) ಮುಂದೆ ಕುಳ್ಳಿರಿಸಿ 'ಕಂಚು ಹತ್ತಿಸಿ'ದರು (ಸರ್ವಮಂ. ೨೧೯). **ಅರಿಣೆ**: 'ಅರಿಣೆಮನೆ', 'ಅರಿಣೆಶಾಸ್ತ್ರ' ಪರಾ. **ಅರಿವೇಣಿ**: 'ಅರಿವೇಣಿ ಪೂಜೆ' ಪರಾ. **ಐರಣಿ**: ಓಷ್ಟಮರು – ಲಗ್ನದಲ್ಲಿ ಐರಣೀ ಪೂಜೆ ಮಾಡುವರು (ಕಭಾಗೆ. ೧೩೨). **ಐರಣೆ**: ಅರ್ಚಿಸಿದ್ರೈರಣೆಯೊಳಂ (ವರ್ಧಪು. ೭-೩ ವ); ಪೂಜಿಸಿದ ಕಾಂಚನದೈರಣೆಯ ಶೋಭೋಪಕರಣದಲಿ (ತೊರರಾ. ೧-೧೬-೩೬); ರತಿಯಭಿಷೇಕದ ಕೊಡನೆನಲೆಸೆವೈರಣೆಯಿಂ (ಜಯುಕಾ. ೮-೧೧); ಹಸನಾಗಿ ಬೈತ್ರೈರಣೆಗಳಂತೆ ನಾಡೆ ರಂಜಿಸಿದವಾಕೆಯ ಮೊಲೆಗಳ್ (ಚೇರಮ. ೫-೩೪). **ಐರಾಣಿ**: 'ಐರಾಣಿಗಡಿಗೆ' ಪರಾ.

[? . **ತೆಲು.** ಆಯಿರೇನಿ, ಐರೇನಿ. / **ಮರಾ.** ಆಹಿರೀ; **ಪ್ರಾ.** ಅಇರಾಣಿ, ಏರಾಣಿ = ಸೌಭಾಗ್ಯಕ್ಕಾಗಿ ಇಂದ್ರಾಣೀವ್ರತವನ್ನು ಮಾಡುವವಳು]

**ಅಯ್ರಣೆಗೊಡ** (ನಾ). ಮದುವೆಯಲ್ಲಿ ಪೂಜಿಸುವ ಚಿತ್ರ ಬರೆದ ಗಡಿಗೆ. [ಅಯ್ರಣೆ + ಕೊಡ]

**ಅಯ್ರದಾಳಿ, ಐರದಾಲಿ, ಐರದಾಳಿ, ಐರೆದಾಲಿ, ಐರೆದಾಳಿ** (ನಾ). = ಅಯ್ದೆದಾಳಿ. **ಐರದಾಲಿ**: ಕರವೊಪ್ಪುತಿಂತಿರ್ದ ಚೋಳಮಂಡಲದೊಳಗೆ ಧರೆವೆಣ್ಣಿನೈರದಾಲಿಯ ಪಾಂಗುವಡೆದು ಬಂಧುರತರಮೆನೆ ವಿರಾಜಿಸುತ್ತಿಹುದು (ಸೌಂದಪು. ೨-೮). **ಐರದಾಳಿ**: "ಗುಳದಾಳಿ" (ಗಂಗಾಮ. ೫೫); ಜಡಿವ ಕುಂಡಲದ ಪೊಳೆವೈರದಾಳಿಯ ಕೊರಲ (ಭಿಕ್ಷಾಜ. ೩-೧); ಗರಳವನು ನಲಿದುಂಡು ಹರನಳುಕದುಳಿದ ಭಾಸುರತೆ ನಿನ್ನೈರದಾಳಿಯ ಮಹಿಮೆ ಗಿರಿಜೆ (ಕೈವಲ್ಯ. ೧-೯-೧); ಸುರನಾರೀಜನದೈರದಾಳಿಗೆ[ಚಿ]ರಸ್ಥಾಯಿತ್ವಮಂ ಮಾಳ್ಪ (ವೃಷವಿ. ೩೭-೧೧೫); ಐರದಾಳಿಯ ಬಿಚ್ಚೋಲೆಯ ಚಂದನದ ಕುಂಕುಮದ . . . ಕರಂಡಮಂ ಕೈಯೊಳ್ಕೊಂಡು (ರಾಮಾಶ್ವ. ೨೯-೧೭). **ಐರೆದಾಲಿ**: ಮಿಱುಗುತಿರ್ದುದು ಚೆಲ್ವಿನಿಂದೆ ವಾಣಿಜ್ಯಪುರಿ ಭೂಲಲನೆಗಿಟ್ಟೈರೆದಾಲಿಯಂತೆ (ಸಿದ್ಧೇಪು. ೨-೨೦). **ಐರೆದಾಳಿ** (ಕ). [ಅಯ್ರ + ತಾಳಿ]

**ಅಯ್ರನ್ನ, ಐರನ್ನ** (ನಾ). ಐದುರತ್ನಗಳು; ಪಂಚರತ್ನ. **ಐರನ್ನ**: ಐರನ್ನದುಂಗುರದ ಸಿಂಗರದ ನಾನಾ ವಿಲಾಸಿನಿಯರು (ರೇವಣ. ೬-೨೨).

[< ಅಯ್ದು$_2$ + ರನ್ನ]

**ಅಯ್ರಾಣಿ** 'ಅಯ್ರಣೆ' ನೋ.

**ಅಯ್ರಾಣಿಕುಂಭ** (ನಾ). = ಅಯ್ರಣೆಗೊಡ.

[ಅಯ್ರಾಣಿ (< ಅಯ್ರಣೆ) + ಕುಂಭ]

**ಅಯ್ರಾಣಿಗಡಿಗೆ** (ನಾ). = ಅಯ್ರಣಿಗೊಡ (ಕ).

[ಅಯ್ರಾಣಿ (< ಅಯ್ರಣೆ) + ಗಡಿಗೆ]

**ಅಯ್ರಾಣಿಹಾಡು, ಐರಾಣಿಹಾಡು** (ನಾ). ಅಯ್ರಾಣಿಯನ್ನು ಪೂಜಿಸುವಾಗ ಹಾಡುವ ಹಾಡು. **ಐರಾಣಿಹಾಡು**: ಐರಾಣಿಹಾಡು (ರೂಢಿ). [ಅಯ್ರಾಣಿ (< ಅಯ್ರಣೆ) + ಹಾಡು$_2$ (< ಪಾಡು$_2$)]

**ಅಯ್ರಿ, ಐರಿ** (ನಾ). ಕಣ್ಣಿನ ಒಂದು ರೋಗ. **ಐರಿ** (ಸ್ಯಾಂಡರ್).

[? . / **ತೆಲು.** ಆವಿರಿ, ಅಯಿರೆ, ಐರ; **ಮರಾ.** ಅಹಿರಾ. ಅಹೀರಾ]

**ಅಯ್ರು** (ನಾ). ಕಾಲಿನಲ್ಲಿ ಬೆಳೆಯುವ ಆಣಿ. 'ಅಯ್ರುಗಾಲು' ಪರಾ. [?]

**ಅಯ್ರುಗಾಲು** (ನಾ). ಆಣಿ ಬೆಳೆದಿರುವ ಕಾಲು: ಅಯ್ರುಗಾಲಿನಿಂದ ನಡೆಯುವುದಕ್ಕೆ ತುಂಬಾ ಕಷ್ಟವಾಗುವುದು (ರೂಢಿ).

[ಅಯ್ರು + ಕಾಲು$_1$ (< ಕಾಲ್$_1$)]

**ಅಯ್ವಗಲ್, ಐವಗಲ್** (ನಾ). ಐದುದಿನ; ಐದುಹಗಲು. **ಐವಗಲ್**: ಆ ರಾಜಪ್ರಭದೇವಂ ತನ್ನ ಕುಮಾರಂ ದ್ವಿಟ್ಕುಲಮಂ ಜಯಿಸುವನೆಂದಾರಯ್ಯುತ ಲಗ್ಗಿಗರುಸಿರಲು ಕೇಳುತ್ತೈವಗಲಾಗೆ . . . ತೊಟ್ಟಲ್ದುಂಬಿಸಿದಂ (ಜಯುಕಾ. ೨-೬೧). [< ಅಯ್ದು$_3$ + ಪಗಲ್]

**ಅಯ್ವಡಿ, ಅಯ್ಮಡಿ, ಐಮಡಿ, ಐವಡಿ** (ನಾ). ಐದರಷ್ಟು ಪ್ರಮಾಣ; ಐದು ಪಟ್ಟು: ನಾಲ್ಕು ತಿಂಗಳೊಳಗಯ್ವಡಿ [ಪಾಠಾಂ. ನಾಲ್ವಡಿ] ಲಾಭಮನುಂಟುಮಾಡುಗುಂ (ಜಟ್ಟಮ. ೬-೩೭); ಕಡುಸವಿ ಮಡದಿಯರೊಳ್ನುಡಿಯದಱಿಂದಯ್ವಡಿ ಸವಿ ಹಸುಳೆಗಳಿರದೆ ನುಡಿವ ನುಣ್ನುಡಿ (ಕುರಾಸಾಂ. ೧-೬೧); ಮಱಿಯಂ ತಾಯ್ವಿಡಿ ನಡೆನೋಡಿ ಬಾಡಿ ತಾಪಂ ಮೊದಲಿಂದಯ್ವಡಿ ನೆಗಳ್ದಿರೆ (ರಾಜಶೇ. ೫-೪೦). **ಅಯ್ಮಡಿ**: ಸಾಸಿರಗಣ್ಣಗೆ ಸೊಬಗಿನೊಳಿಮ್ಮಡಿ ಸಾಸಿರಗದಿರಗೆ ತೇಜದೊಳಯ್ಮಡಿ (ಜಯುಕಾ. ೧೫-೧). **ಐಮಡಿ**: ತ್ರಿಪುರದಹನದ ಭಾಳಲೋಚನನನುಪಮೆಗೈಮಡಿ[ಪಾಠಾಂ. ವಡಿ]ಯೆನಲು (ತೊರರಾ. ೫-೮-ಸೂ); ವಿಶ್ವಮೆಲ್ಲಂ ಪಿಂತೆ ರಾವಣವಧೆಯೊಳೆಂತು ತಲ್ಲಣಂಗೊಂಡಿತ್ತು, ಅಂತೆಯೆ ಐಮಡಿಯಾಗಿ ಬೆದರ್ದುದು

(ಅದ್ಭುತ. ೫೭–೫). **ಐವಡಿ** : ನಿಮುಗ್ಗೈವಡಿಯ ಸಹಸಿಗಳವರು ದುರ್ಬಲರು ನೀವೆಂದ (ಕುವ್ಯಾಭೀ. ೧–೨೩) ; ಇರ್ಮಡಿ ಮೂವಡಿ ನಾಲ್ವಡಿಯೈವಡಿ ಸಂತಸದಿಂದೆ ತಂದೆ ಮಗಳಂ ಕರೆದಂ (ಗಿರಿಕ. ೩–೧೦೪) ; ಭಾನುಸುತ ನಿಂದೈವಡಿ ಇಂತೀ ಧರೆಯೊಳು ಕಲ್ಯಾಣಿಸಕ್ತಿಪಂಡಿತರು (ಎಕ. VI, ಕಡೂರು. ೨೯–೩೩ ; 1197). [< ಅಯ್ದು₂ + ಮಡ್ಡಿ]

**ಅಯ್ವಡಿಗಣೆಯ**, ಐವಡಿಗಣೆಯ (ನಾ). ಐದು ಬಾಣಗಳುಳ್ಳವನು ; ಕಾಮ. **ಐವಡಿಗಣೆಯ** : "ಕಾಮ" (ಪ್ರಭಣ್ಣ). [ಅಯ್ವಡಿ + ಕಣೆ + –ಅ₇]

**ಅಯ್ವಡಿಸು**, ಐವಡಿಸು (ಕ್ರಿ). ಐದು ಮಡಿಯಾಗುವಂತೆ ಮಾಡು ; ಐದರಷ್ಟು ಮಾಡು. **ಐವಡಿಸು** : ಮುನ್ನಿನ ಗುಣಂ ಪೋಗಿ ಹರೆಯದ ಚೆಲುವನ್ನೈವಡಿಸಿದಂತೆ ಚೆಲುವಾಗಿ ತೊಳತೊಳಗಲಾ ವನಿತೆ (ಸಿದ್ಧರಾ. ೧–೪೪) ; ಎರಡು ಮುಂಗೈಯೊಳಾಗ್ನೇಯತತಿಯೈವಡಿಸಿಯುರದಲ್ಲಿಯು ಪನಿಷದ್ಗಳದಲ್ಲಿ ಷಟ್ಸ್ಥಲವದಿರದೆ ಪದಿನೆಂಟು ಮಡಿ (ಭಾವಚಿಂ. ೪–೩೨) ; ಪದುಮಮಿತ್ರನನ್ನೈವಡಿಸಿದಂತದಟಿಳೊಂದೇ ಕೊಬತೆ ಕರುಣಾಸ್ಪದ ಮುರಾರಿಯ (ನಿಭಾಗ. ೮–೧೯–೬೦). [ಅಯ್ವಡಿ + –ಇಸ್ಸು]

**ಅಯ್ವಣ್ಣ**, ಐವಣ್ಣ (ನಾ). ಐದುಬಣ್ಣ ; ಪಂಚವರ್ಣ. **ಐವಣ್ಣ** (ಸ್ಯಾಂಡರ್). [< ಅಯ್ದು₂ + ಬಣ್ಣ]

**ಅಯ್ವತ್ತು**, ಅಯಿವತು, ಅಯಿವತ್ತು, ಐವತ್ತು (ನಾ). ಐದನ್ನು ಹತ್ತರಿಂದ ಗುಣಿಸಿದರೆ ಬರುವ ಮೊತ್ತ : ಬಣ್ಣವೇಱಿಗೆ ಅಯ್ದು ವಿಸವಂ ಎಲೆವೇಱಿಗೆ ಅಯ್ವತ್ತು (ಇಆ. VIII, ೨೮೬ ; ೫೮–೪ ; 732) ; ಸೊಗಯಿಪುವಯ್ವತ್ತಿತ್ತಱುವತ್ತತ್ತ ಖೇಚರೇಂದ್ರಪುರಂಗಳ್ (ಶಾಂತಿಪು. ೩–೨) ; ಅಯ್ವತ್ತು ವರುಷಂಗಳ್ (ಬಸಪು. ೨೦–೩೦). **ಅಯಿವತು** : ವೇದಮಾರ್ಗ ಪ್ರತಿಷ್ಠಾಚಾರ್ಯರು ಆಯಿವತಿಬ್ಬರು ಶ್ರೀವಯಿಷ್ಣವರು ಕೂಡಿ (ಎಕ. III, ಶ್ರೀರಂಗ. ೮೬–೧೯ ; 1471). **ಅಯಿವತ್ತು** : ಅಯಿ[ಪಾಠಾಂ. ಐ]ವತ್ತುಸರಮುತ್ತು ಮಾಣವಕಮಕ್ಕುಂ (ಮಂಗರಾ. ೧೦೦–೨೪). **ಐವತ್ತು** : ಐವತ್ತು ಶರದಲ್ಲಿ ಸಕಲ ರಥಿಕರನೆಚ್ಚು ಬೊಬ್ಬಿಱಿದ (ಕುವ್ಯಾದ್ರೋ. ೩–೩೨) ; ಹತ್ತು ಸಾವಿರದ ಕಾಲಾಳು ಗಜಗಳೈವತ್ತು ತುರಗ ಸಾವಿರದ ಮೊತ್ತ (ಕಂನವಿ. ೩–೨೩).

**ಅಯ್ವತ್ತಱುವರ್** = ಐವತ್ತಾರುಜನ : ತದ್ವರಿಷಾಭ್ಯಾನ್ತರದೊಳ್ [ಶ್ರೀ]ಚಿಂಚಿಲ[ದ] ಅಯ್ವತ್ತಱುವರುಂ ಮಹಾಜನಂ ನೆರದಿರಲು (ಸೌಇಇ. XI–i, ೨೪–೧೨; 897). **ಐವತ್ತಿಬ್ಬರು** = ಐವತ್ತೆರಡುಮಂದಿ : ಯಜಮಾನ ವೃತ್ತಿ ಐವತ್ತಿಬ್ಬರ ಐಯ್ಯಗೆ (ಎಕ. III, ಶ್ರೀರಂಗ. ೮೬–೪೫ ; 1471). **ಅಯ್ವತೊಕ್ಕಲ್**, **ಅಯ್ವತ್ತೊಕ್ಕಲ್** = ಊರಿನ ಪ್ರತಿನಿಧಿಗಳಾಗಿ ಆರಿಸಿದ ಐವತ್ತು ಜನ ನಿವಾಸಿಗಳು (?) : ಪಟ್ಟಱಿನಾಲಯ ಕಿಟ್ಟಳವಾದಯ್ವತೊಕ್ಕಲನುಮತದಿಂದ (ಸೌಇಇ. XX, ೧೪–೨ ; 980) ; ಆ ಪಟ್ಟಣದಯ್ವತ್ತೊಕ್ಕಲು (ಸೌಇಇ. XX, ೭೪–೩೨ ; 1118). **ಅಯ್ವದಿಂಬರ್**, **ಐವದಿಂಬರ್** = ಐವತ್ತು ಜನ : ಅ ಎಱಮ್ಮನುಂ ಅಯ್ವದಿಂಬರುಂ ನಕರಮುಂ ಸೇಣಿಯುಂ (ಎಕ. VI, ಕಡೂರು. ೧೪೫–೫ ; 750) ; ಸ್ವಸ್ತಿಶ್ರೀ ಅಯ್ವದಿಮ್ಬರುಂ ಗಾವುಣ್ದುಗಳುಂ ಪ್ರಜೆಯುಂ (ಸೌಇಇ. XI–i, ೧೨–೧೯ ; 968) ; ನಾಲ್ಸಾಸಿರದೇಟ್ಟೂಅಯ್ವದಿಂಬರ್ ಸಕಳಪೂರ್ವಧರರುಂ (ಆದಿಪು. ೧೬–೪೦ ವ) ; ನೀನಾಗಲೀ ನಿನ್ನ ಆ ಅಯ್ದುದಿಂಬರಾಗಲಿ (ಬೆಟ್ಟಅ. ೧೩೦–೧೪) ; ನಾಲ್ಸಾಸಿರದ ನೂಱೈವದಿಂಬದಿರ್ ಪೂರ್ವಧರರುಂ (ಚಾವುಂಪು. ೧೧೪–೧೬).

[< ಅಯ್ದು₂ + ಪತ್ತು₂. / **ತಮಿ.** ಅಮ್ಪತು, ಐಮ್ಪತು ; **ಮಲ.** ಅಮ್ಪತ್ತು ; **ಕೊಡ.** ಆಯಿಂಬದಿ ; **ತುಳು.** ಐವ ; **ತೆಲು.** ಎಣ್ಬದಿ, ಯಾಭಯ್, ಯಾಭೈ]

**ಅಯ್ವಲ** (ನಾ). ಒಂದು ತೂಕ ; ಐದು ಪಲಗಳ ತೂಕ : ಬಿಟ್ಟ ಜವಳಕ್ಕೆ ಅಯ್ವಲ ಹತ್ತಿಯ ಮಳವೆಗಯ್ವಲಂ (ಸೌಇಎ. ೧೯೩೭, ಸಿಂದಗಿ. ೩೯–೮ ; ?). [< ಅಯ್ದು₂ + ಪಲ]

**ಅಯ್ವಾಗಿಲು**, ಐವಾಗಿಲು (ನಾ). ಐದು ಬಾಗಿಲು. **ಐವಾಗಿಲು** : ಬಟ್ಟಬಯಲೊಳಗೊಂದು ಐವಾಗಿಲ ಪಟ್ಟಣ (ಶೂನ್ಯಸಂ. ೩೫೫–೩). [< ಅಯ್ದು₂ + ಬಾಗಿಲು (< ಬಾಗಿಲ್)]

**ಅಯ್ವಾಯ್**, ಐವಾಯ್ (ನಾ). ವಿಸ್ತಾರವಾದ ಬಾಯಿ : ಅಯ್ವಾಯ ಶಂಖಮುಂ ಪೂರಿಸಿದಂ(ಶಮದ. ೧೪೯ ಪ್ರಯೋ). **ಐವಾಯ್** : ಸಿಂಗಂ ಮುಸಕದಿನೈವಾಯಿಂ ಗರ್ಜಿಸುವವೊಲಯ್ವಾಯ ಶಂಖಮೇಂ ಗರ್ಜಿಸಿತೋ (ಅರ್ಧನೇ. ೮–೨೯). 'ಐವಾಯ್ಪುಲಿ' ಪರಾ. [< ಅಯ್ದು₂ + ಬಾಯ್]

**ಅಯ್ವಾಯ**, ಐವಾಯ (ನಾ). ವಿಶಾಲವಾದ ಮುಖವನ್ನುಳ್ಳದು ; ಸಿಂಹ. **ಐವಾಯ** : 'ಐವಾಯಹುಲಿ' ಪರಾ. ℙ 'ಪಂಚಾಸ್ಯ'ದ ಭಾಷಾಂತರ ಸಮಾಸ. [ಅಯ್ವಾಯ್ + –ಅ₇]

**ಅಯ್ವಾಯ್ಪುಲಿ**, ಐವಾಯ್ಪುಲಿ, ಐವಾಯಹುಲಿ (ನಾ). ಅಗಲವಾದ ಮುಖವುಳ್ಳ ಹುಲಿ ; ಪಂಚಾಸ್ಯ. **ಐವಾಯ್ಪುಲಿ** : ಐವಾಯ್ಪುಲಿಯೆನೆ ನಗರ ರಕ್ಷಕನಿರ್ಕುಂ (ರಾಮಾಶ್ವ. ೧೨–೧೦). **ಐವಾಯಹುಲಿ** : ಐವಾಯ [ಪಾಠಾಂ. ಐದು ಬಾಯ] ಹುಲಿ ಆಗುಳಿಸುತ್ತಿಪ್ಪುದು (ಅವಚಂ. ೧೦೫–೪೭೯). [ಅಯ್ವಾಯ್ + ಪುಲಿ]

**ಅಯ್ವೆಡೆ**, ಐವೆಡೆ (ನಾ). ಐದು ಹೆಡೆ. **ಐವೆಡೆ** (ಕ). [< ಅಯ್ದು₂ + ಪೆಡೆ]

**ಅಯ್ವೊಳೆ** 'ಅಯ್ಯಾವೊಳೆ' ನೋ.

**ಅಯ್ವೋಜ** (ನಾ). ಒಬ್ಬಾತನ ಹೆಸರು : ಚಿತ್ತಾರಿ ಕೇತೋಜನ ಮಗಂ ಬಡ್ಡಗಿ ಆಯ್ವೋಜಂ ಈ ಶಾಸನದ ಕಲ್ಲಂ ಗೆಯ್ದಂ (ಮೈಆರಿ. ೧೯೩೧, ೭೪–೭೪ ; 1053). [? + ಓಜ]

**ಅಯ್ಸಂಬರ**, ಅಸಂಬಳ, ಐಸಂಬರ (ನಾ). ಮೆಣಸು, ಕೊತ್ತುಂಬರಿ, ಜೀರಿಗೆ, ಸಾಸಿವೆ, ಮೆಂತ್ಯ ಮೊದಲಾದ ಐದು ಸಂಬಾರದ ಪದಾರ್ಥಗಳು : ನಖರಂಗಳು ಹೊಂಗಳದಲ್ಲಿ ಕೊಟ್ಟಲ್ಲಿ ಭತ್ತ ಸೊಳಸ ೨ ಕೊಂಡಲ್ಲಿ ಸೊಳಸ ೨ ಮುಂ ಮುರಿದಂಡಗಳಯ್ಸಂಬರದಲ್ಲಿ ದೇವರ್ಗೆ ಹೊಂಗೆ ಕೊಟ್ಟಲ್ಲಿ ಕಾಣಿ ೧ ಕೊಂಡಲ್ಲಿ ಕಾಣಿ ೧ (ಸೌಇಇ. IX–i, ೨೯೬–೬೦ ; 1176) ; ಪರದೇಶಿಗಳು ಅಳವ ತೂಗುವಯ್ಸಂಬರಂಗಳಲುಂ ಎಣಿಸುವ ದವಸಂ ಮಾಱುವಲ್ಲಿ ಕೊಟ್ಟ ಹೊಂಗೆ ಹಾಗ ೧ (ಸೌಇಇ. IX–i, ೨೯೭–೪೪ ; 1177). **ಅಸಂಬಳ** : ಈ ಸ್ಥಳದ ಪೂರ್ಬದಲುಳ್ಳ ಖಾಣ ಅಸಂಬಳ ಅಭಾಗ್ಯತೆ ಧವಳಾರದ ಭಂಡಿ ಅಡುಗುಬ್ಬಿನ ಭಂಡಿ (ಎಕ. XVI, ಚಿಕ್ಕನಾ. ೭೧–೨೫ ; ?). **ಐಸಂಬರ** : ಐಸಂಬರ ಅವಗೌಲ್ಯ ವಸ್ತುಗಳಾಗಿಯುಂ (ಕಇ. IV, ೫೫–೧೪ ; 1000). [< ಅಯ್ದು₂ + ಸಂಬರ]

**ಅಯ್ಸರ₁**, ಐಸರ₁ (ನಾ). ಐದು ಎಳೆಯ ಸರ : ನಾಲ್ಕಾವುದಂ, ಅಯ್ಸರಂ, ಅಯ್ವೆಂಡಿರ್ (ಭಾಷಾಭೂ. ೧೨೪ ಉದಾ) ; ಮುಪ್ಪುರಿ ನೂಲ್ಪುಡಿಯೇಱಿ ಮುತ್ತಿನಯ್ಸರಂ (ಚಿಕವಿ. ೬–೨೧೧). **ಐಸರ₁** : ಕಟ್ಟದೈಸರ ಮದೊಂದು ಬೆಡಂಗಿನ ಸೇತುಮಾಲೆ (ಆದಿಪು. ೧೨–೧೨) ; ತೋರ ಮುತ್ತಿನೈಸರದ ಮರೀಚಿಯಿಂ ಸಿರಿಯ ತಾಯ್ಪನೆ ರಾಮನ ಪೇರುರಂ ಮನೋಹರಮೆನಿಸಿತ್ತು (ಪಂರಾಮಾ. ೩–೧೫೪) ; ಮುತ್ತಿನೈಸರಂ ಮೆಯ್ಯೊಳೆಪಕ್ಕೆರಯ್ಯಮೆನೆ ತೂಗೆ ವಿಲಾಸದಿನುಯ್ಯಲಾಡಿದಳ್ (ಸೂಕ್ತಿಸು. ೮–೩೨೧). [< ಅಯ್ದು₂ + ಸರ₃]

**ಅಯ್ಸರ₂** (ನಾ). = ಅಯ್ಗೋಲ. [< ಅಯ್ದು₂ + ಸರ₂]

**ಅಯ್ಸರಲ**, ಐಸರಲ, ಐಸರಳ (ನಾ). = ಅಯ್ಗೋಲ: ದರ್ಪಕೋಪಾಸಕರಿಗೆ ಅಯ್ಸರಲನ ಐಶ್ವರ್ಯವನ್ನು . . . ಸಾಧಕ ಮಾಡಿಸುವ ಲವಲವಿಕೆಯ ಗುರುವರೇಣ್ಯ (ಮಂತ್ರಶ. ೬೦). **ಐಸರಲ**: "ಐಸರಲ ಕುಡುವಿಲ್ಲ ಜತಿವಗೆ ಪಿರಿದಿಂಗೋಲ್ವಿಲ್ಲ ಕಾವ" (ಕವಿಕಂ. ೨೭); ಪಿರಿದುಂ ಮಾತಿನೊಳೇನೈಸರಲಂಗೆ ಪೊಡರ್ಪಿನೇಟಿಗ್ಗಿಯುಂಟಾದೊಡೆ (ಕಬ್ಬಿಕಾ. ೧೮೪); ಸೌಂದರ್ಯದಿಂದಿರದೈಸರಲ ಮಾರನಂ ಗಾಱುಮಾಡುವ ಲತಾಂಗಿಯರ್ ನಡೆತಂದರು (ನಂದಿಮಾ. ೬-೧೬). **ಐಸರಳ**: "ಬಂಡುಣಿವೆದೆಯನೈಸರಳನೂ . . . ಕಾಮ" (ಶಬ್ದಮಂ. ೬).

[< ಅಯ್ದು$_2$ + ಸರಲ್ + -ಅ$_7$]

**ಅಯ್ಸಾಮಂತ** (ನಾ). ಐದು ಜನ ಸಾಮಂತರು: ತೊಂಬತ್ತಾಱು ಸಾಸಿರ್ಬರುಮಯ್ಸಾಮನ್ತರುಂ (ಇಅ. VI, ೧೦೨-೧೩ ; 777); ತೊಮ್ಬತ್ತಾಱು ಸಾಸಿರ್ಬ್ಬರುಂ ಅಯ್ಸಾಮಂತರುಂ (ಇಅ. XIV, ೭೬-೧೩ ; 899); ಪೆರ್ಮಾಡಿಯುಂ ಮಹಾದೇವಿಯುಂ ಎಱಯಪನು ಅಯ್ಸಾಮನ್ತರು ಮಿಟ್ಟು ಆದಿರಾಜಿ ಪನ್ನೆರಡು ಕಲ್ನಾಡಿತ್ತರ್ (ಎಕ. III, ನಂಜನ. ೧೩೦-೮ ; 900); ಅಯ್ಸಾಮನ್ತರುಂ ಪೆರ್ಗ್ಗಡೆಗಳು (ಎಕ. IV, ಹೆಗ್ಗಡ. ೧೧೬-೫ ; 930). [< ಅಯ್ದು$_2$ + ಸಾಮಂತ]

**ಅಯ್ಸಾಸಿರ**, ಐಸಾವಿರ, ಐಸಾಸಿರ (ನಾ). ಐದು ಸಾವಿರ: ಸಾಸಿರ್ವರ್ ವನಿತೆಯರಯ್ಸಾಸಿರ್ವರ್ ಪ್ರಿಯ ತನೂಜರ್ (ಆದಿಪು. ೬-೫); ನಾಲ್ಸಾಸಿರಂ, ಅಯ್ಸಾಸಿರಂ (ಭಾಷಾಭೂ. ೨-೩೩ ಉದಾ). **ಐಸಾವಿರ**: ಕರಿಗಳೈಸಾವಿರ ತುರಂಗಮವೆರಡುಸಾವಿರ (ಕುವ್ಯಾದ್ರೋ. ೧೮-೨೦); ತುರುಕಬರ್ಬರಪಾರಸೀಕರ ತುರಗವೈಸಾವಿರ ಸಹಿತ ಮೋಹರಿಸಿ ನಿಂದನು (ಕುವ್ಯಾಗ. ೧-೪). **ಐಸಾಸಿರ**: ಧನದಂ ಮಾಡಿದ ನೆಲದ ಮೇಗೈಸಾಸಿರ ಬಿಲ್ಲುತ್ಸೇಧದೊಳ್ (ವಡ್ಡಾರಾ. ೧೫೪-೨೭); ಗಗನಕ್ಕೈಸಾಸಿರ ಬಿಲ್ಲಂತರದಿ ನೊಗೆದು (ವರ್ಧಪು. ೧೫-೭೨); ಇನ್ನೂರು ಗಜವೈನೂಱು ಹಯುವೈ ಸಾಸಿರದ ಮೂನೂಱು ಸುಭಟರು ಸಹಿತ (ಕುವ್ಯಾಗ. ೧-೫).

**ಅಯ್ಸಾಸಿರ್ವರ್** = ಐದುಸಾವಿರ ಜನರು: ಅಯ್ಸಾಸಿರ್ವರ್ ಪ್ರಿಯ ತನೂಭವರ್ (ಶಮುದ. ೧೯೧ ಪ್ರಯೋ).

[< ಅಯ್ದು$_2$ + ಸಾಸಿರ. / **ತಮಿ. ಮಲ.** ಆಯ್‌ಆಯಿರವ್]

**ಅಯ್ಸು**, ಅಯಿಸು, ಐಸು (ಗು). ಪರಿಮಾಣವನ್ನು ಸೂಚಿಸುವ ಶಬ್ದ; ಅಷ್ಟು; ಅನಿತು: ಆಯ್ಸು ದಾನವ ಮಾನವರ್ಕದನ ಕರ್ಕಶದ ಮೆಯ್ಸಿರಿಯ (ಚೆಬಪು. ೪೭-೩೨). **ಅಯಿಸು**: ಯಿದನಾ[ವ]ನೋರ್ವ್ವ ಅಳಿಪಿಹನು ವಾರಣಾಸಿ ಕುರುಕ್ಷೇತ್ರದಲ್ಲಿ ಬ್ರಾಂಹ್ಮಳರನು ಕಪಿಲೆಯಂ ಕೊಂದಯಿಸು ದೋಸ (ಎಕ. VII (S), ಶಿಕಾರಿ. ೩೭೦-೧೪ ; 1300); ಹೆತ್ತತಾಯ್ಬಂದಯಿಸಜಲಿ ಕಾಣುತ್ತ ಚಿಃ ಚಿಃ ಕೆಟ್ಟನಾಯಿಯೆನುತ್ತ ಮನದೊಳು ಹೇಸಿ (ಬಸಪು. ೨೩-೫೫). **ಐಸು**: ನಿಮಿಷದ ನಿಮಿಷಂ ಬೋ, ಕ್ಷಣದೊಳಗರ್ಧಂ ಬೋ ಕಣ್ಣುಮುಚ್ಚಿ ಬಿಚ್ಚುವೈಸು ಬೇಗಂ ಬೋ (ಬಸವ. ೧೬೮); ಈಶ ಲಾಂಛನವ ಕಂಡಾಸನವಿಳಿಯಬೇಕು ಐಸಿಲ್ಲದೊಡೆ ಕಡೆವೋಸರಿಸಿ ಕೂಡಲು ಬೇಕು (ದೀಕ್ಷಾಬೋ. ೯೩-೨೧); ಐಸು ಕೈದುಗಳೊಳೊದಗಿದರೈಸು ಕೈದುಗಳನೆಲ್ಲಮುಂ ತಡೆಗಡಿದನು (ಜೈಮಿಭಾ. ೨೦-೪೬).

**ಅಯ್ಸೆ**, **ಐಸೆ** = ಅಷ್ಟೇ; ಅಷ್ಟೇ ಅಲ್ಲವೆ: ಅಳಿಮನವ ಮಾಡಿದೊಡೆ ಮನದೊಡೆಯ ಬಲ್ಲನೈಸೆ (ಮಹದೇ. ೨೪-೧); ವ್ಯಕ್ತಲಿಂಗದ ಭಕ್ತಿಯಿಲ್ಲದಿರೆ ಸಂಸಾರ ಮುಕ್ತವಹುದೆ ವ್ಯರ್ಥವೈಸೆ ಉಳಿದ ವಿಚಾರ (ದೀಕ್ಷಾಬೋ. ೮೬-೧); ಐಸೆ ಮತ್ತೇನೆನುತ ಸೇನಾಧೀಶನಂಗೀಕರಿಸಿದನು (ತೊರರಾ. ೨-೩-೨೫); ಕಲಿತ ಬಿಜ್ಜೆಯ ಬಲ್ಲರಿಗೆ ಕೇಳಿಪುದೈಸೆ ಫಲ (ಹದಿಬ. ೧-೨೯). [?]

**ಅರ**$_1$ (ನಾ). ವಸ್ತುಗಳ ಮೇಲ್ಭಾಗವನ್ನು ನಯಮಾಡುವುದಕ್ಕಾಗಲೀ ಆಯುಧಗಳನ್ನು ಹರಿತಮಾಡುವುದಕ್ಕಾಗಲೀ ಉಜ್ಜಲು ಉಪಯೋಗಿಸುವ ಉಕ್ಕಿನ ಒಂದು ಉಪಕರಣ: ಮೂಗನರಿದು ಕೆತ್ತಿ ಕೀಸಿಯರದೊಳುಜ್ಜುತಿರ್ಪರ್ (ಸಾನಂಚ. ೬-೩೨ ರ).

[**ದೇ.** ‖ **ತಮಿ. ಮಲ. ತುಳು.** ಅರ; **ಕೋತ.** ಅರ್‍; **ತೆಲು.** ಆಕುರಾಯಿ]

**ಅರ**$_2$ 'ಅಱ$_2$' ನೋ.

**ಅರ**$_3$ 'ಅಱ$_1$' ನೋ.

**ಅರ**$_4$ (ನಾ). ಅರಸು ಎಂಬುದು ಸಮಾಸದಲ್ಲಿ ಪೂರ್ವ ಅಥವಾ ಉತ್ತರ ಪದವಾಗಿದ್ದಾಗ ಅದಕ್ಕೆ ಬರುವ ಆದೇಶ ರೂಪ. 'ಅರಗಿಣಿ,' 'ಅರಗುವರ,' 'ಅರಮನೆ,' 'ಕನ್ನರ,' 'ಗೋವಿಂದರ' ಪರಾ. [< ಅರಸು$_2$ (< ಅರಸ$_1$)]

**ಅರ**$_5$ 'ಅರೆ$_3$' ನೋ.

**ಅರ**$_6$ 'ಅಱೆ$_1$' ನೋ.

**ಅರ**$_7$ 'ಅಱೆ$_4$' ನೋ.

**ಅರ**$_8$ (ನಾ). ಅರಳೆ (?).

ಅರನಭಂಡಿ = ಹತ್ತಿಯ ಬಟ್ಟೆಗಳ ಬಂಡಿ (?): ವಿಚಾರಂಗೆಯ್ದುವರಲ್ಲಿ ಮುದ್ರಾಪಣಂ ಹೊಂಗೆ ಹಾಗಂ ಅರನ[ನೆ] ಭಂಡಿ ಮಾಱಿಂ[ಱಿ]ದಲ್ಲಿ ಮೆ[ೕ]ಲುದಕ್ಕೊಂದು ಭಂಡಿಯಲು ಮಾಱಿದ ಧಾನ್ಯವರ್ಗಕ್ಕೆ ಕೊಳಗ ವಂದು (ಎಇ. XIX, ೩೮-೩೧ ; 1144). [?]

**ಅರ**$_9$ (ನಾ). ೧. ಚಲಿಸುವುದು; ಹೋಗುವುದು. ೨. ವೇಗಶಾಲಿ; ಚುರುಕು; ವೇಗ. ೩. ಚಕ್ರದ ಅರೆಕಾಲು. ೪. ಚಕ್ರಾಯುಧದ ಅಲಗಿನ ಧಾರೆ. ೫. [ರೇಖಾಗ] ಕೋಣ; ಮೂಲೆ. ೬. [ಜೈನ] ಕಾಲದ ಒಂದು ಪರಿಮಿತಿ. ೭. [ಜೈನ] ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಹದಿನೆಂಟನೆಯವನು: ಅರ, ಮಲ್ಲಿಗೆ, ಮುನಿಸುವ್ರತ . . . ತೀರ್ಥಂಕರರ ವಿಗ್ರಹಗಳನ್ನು ಮಾಡಿಸಿದನು (ಹೊಯ್ಸವಾ. ೨೦೬). [**ಸಂ.**]

**ಅರಂಚು** 'ಅಱಚು' ನೋ.

**ಅರಂಚೆ** (ನಾ). ಜೀರ್ಣವಾದ ಬಟ್ಟೆ; ಸವೆದುಹೋದ ವಸ್ತ್ರ (ಸ್ಯಾಂಡರ್). [ಅರ$_0$ (< ಅಱೆ$_3$) + ಅಂಚೆ$_4$]

**ಅರಂಜಿ** 'ಅರಂಜೆ' ನೋ.

**ಅರಂಜೆ**, ಅರಂಜಿ (ನಾ). ಒಂದು ಜಾತಿಯ ಮರ; ವಲ್ಕಲ ವೃಕ್ಷ (ಮೈಔಗಿ. ೨-೧೨೫). **ಅರಂಜಿ** (ಪಂಡಿತ). [?]

**ಅರಂಟು** (ಕ್ರಿ). ಅಲೆಯುತ್ತಾ ಹುಡುಕು; ಸುತ್ತು: ಸೇರು ಅಕ್ಕಿಯ . . . ಅಷ್ಟೂ ಅನ್ನವನ್ನು ಒಮ್ಮೆಲೇ ತಿನ್ನುವಷ್ಟು ಆಸೆ ಅವಳಿಗಾಗಿತ್ತು. ಇಷ್ಟಿದ್ದರೂ ಹಸಿವೆಯಿಂದ ರಾವು ಬಡೆದವರಂತೆ ಅತ್ತಿತ್ತ ಅರಂಟುತ್ತಿರಲಿಲ್ಲ ಆ ಬಡಮಕ್ಕಳು (ಕೈಮಾಂಸ. ೪೭).

[← **ತುಳು.** ಅರಂಟು = ತಡಕಾಡು, ನಿರೀಕ್ಷಿಸು, ಆಸೆಮಾಡು, ಬಯಸು]

**ಅರಂಬ** (ನಾ). ಒಂದು ಬಗೆಯ ಮರ (ಮೈಔಗಿ. ೧೧೭೯). [?]

**ಅರಂಬಲ್ಲವ** (ನಾ). ಒಬ್ಬಾತನ ಹೆಸರು: ಶ್ರೀಮತ್ ಪ್ಪೆರ್ಮಾನಡಿಗಳ್ ರಾಜ್ಯಗೆಯುತ್ತಿರೆ ಅರಮ್ಬಲ್ಲವನ್ ಇದುಳೆಯ ಬಱಿವೃತ್ತಿ ಆಳುತಿರೆ (ಮೈಆರಿ. ೧೯೧೫, ೨೦-೬ ; 900). [?]

**ಅರಂಬಳಿ** (ನಾ). ಗಾಬರಿ; ಕಳವಳ: ನಾನಾಸಾಹೇಬನು ಮೈಸೂರು ರಾಜಧಾನಿಯಮೇಲೆ ದಂಡೆತ್ತಿ ಬಂದನು; ಆಗಲಂತೂ ಮೈಸೂರು ರಾಜ್ಯದ ಅರಂಬಳಿಯನ್ನು ಬಣ್ಣಿಸಲಳವಲ್ಲ (ಚರಿಸಂ. ೧೨೫).

[← **ಮರಾ.** ಅರಂಬಳ]

**ಅರಕೆ**$_1$, ಅರಕು$_1$, ಅರಖ, ಅರಾಕು, ಅರ್ಕ$_1$ (ನಾ). ೧. ಭಟ್ಟಿಯಿಳಿಸುವುದು. ೨. ಭಟ್ಟಿಯಿಳಿಸುವ ಕ್ರಮದಿಂದ ಶುದ್ಧಗೊಳಿಸಿದ ವಸ್ತು (ಉಕ. ೩). **ಅರಕು**$_1$ : ೨. "ಮೂಲರಸ" (ಜಾನಕೋ. ೧೩). **ಅರಖ ೨.** (ಸ್ಯಾಂಡರ್). **ಅರಾಕು ೨.** (೩). **ಅರ್ಕ**$_1$ **: ೧.** ಇರಾಣ ದೇಶದ ಅತ್ತರನ್ನು ಒಯ್ದು ಇಸ್ತಂಬೂಲಿನಲ್ಲಿ ಅದರ ಅರ್ಕ ತೆಗೆದು ಈ ನಸ್ಯವನ್ನು ಮಾಡಿದ್ದಾರೆಂದು ಕೇಳುತ್ತೇವೆ (ಬೀರಬ. ೯೨).

[← **ಅರ.** **ಹಿಂ.** **ಫಾರ.** ಅರ್ಕ್ ; **ಮರಾ.** ಅರ್ಕ ; **ತಮಿ.** ಅರಕ್ಕು ; **ತುಳು.** ಅರಾಕ. / **ಸಂ.** ಅರ್ಕ ; **ಇಂ.** Arrack]

**ಅರಕೆ**$_2$ (ನಾ). ಅರಗುವುದು ; ಜೀರ್ಣವಾಗುವುದು.

**ಅರಕವಾಗು** = ಜೀರ್ಣವಾಗು. [< ಅರಗು$_1$]

**ಅರಕಂಚಟ್ಟಿ**, ಅರಕನಚಟ್ಟಿ (ನಾ). (ಅಕ್ಕಿಯನ್ನು ಜಾಲಿಸುವುದಕ್ಕೆ ಉಪಯೋಗಿಸುವ) ಅಗಲವಾದ ಬಾಯುಳ್ಳ ಪಾತ್ರೆ ; "ಬೋಗುಣಿ" (wash bowl ಇಂಕನ). **ಅರಕನಚಟ್ಟಿ** : ಅನ್ನವನ್ನು ಅರಕನಚಟ್ಟಿಯಲ್ಲಿ ಆರುವುದಕ್ಕಾಗಿ ತೋಡಿದ್ದರು (ರೂಢಿ).

[← **ತಮಿ.** ಅರಿಕ್ಕಞ್ಚಟ್ಟಿ, ಅರಿಕ್ಕುಞ್ಚಟ್ಟಿ]

**ಅರಕಟ್ಟಿ** (ನಾ). ಒಂದು ಊರಿನ ಹೆಸರು : ತತಃಪ್ರಾಗ್ಗತ್ವಾನೇಱಲ್ಗೆಱೆ ತತಃ ಕುರುಪಗೆಱೆ ತತಃ ದಕ್ಷಿಣದಿಶಮಾವೃತ್ಯ ಅರಕಟ್ಟಂ (ಎಕ. XI, ದಾವಣ. ೬೬–೩೪ ; 694). [?]

**ಅರಕನಚಟ್ಟಿ** 'ಅರಕಂಚಟ್ಟಿ' ನೋ.

**ಅರಕಲವಾಡಿ** (ನಾ). ಒಂದು ಊರಿನ ಹೆಸರು : ಅರಕಲವಾಡೀಕೆಱೆಯ ಕೆಳಗಣ ಗದ್ದೆ (ಎಕ. XIV, ಗುಂಡ್ಲುಪೇ. ೧೨೮–೮೫ ; 1510).

[ಅರ್$_7$ (< ಅಱ್$_4$) + ಕಲ್$_0$ (< ಕಲ್$_2$) + ವಾಡಿ]

**ಅರಕಳಿ** (ಗು). (ಉಕ). ೧. ಅಪೂರ್ಣ : ಆನಂದವಿಲ್ಲದ ಶಾಂತಿಯು ಅರಕಳಿ (ಸಾಹಿವಿ. ೧೪೯) ; ಆದರೆ ನಡುವೆಯೆ ಆಲಸಿಕೆಯೋ ಏನೋ ಬಂದು ಆ ಕೆಲಸ ಅರಕಳಿಯಾಗಿಯೇ ಉಳಿದುಬಿಡುವುದು (ಅಕ್ಕಾಜಿ. ೩) ; ಇದ್ದ ಶಾಸ್ತ್ರವನ್ನು ಅರಕಳಿಯಾಗಿ ತಿಳಿದು (ತವನಿ. ೪). (ನಾ). ೨. ಅರಕೆ ; ಅಪೂರ್ಣತೆ. [ಅರ್$_5$ (< ಅರ್ಧ$_3$) + -ಕಳಿ ?]

**ಅರಕಾಣಿ** 'ಅರೆಕಾಣಿ' ನೋ.

**ಅರಕಾಣಿಕೆ** (ನಾ). ರಾಜನಿಗೆ ಸಲ್ಲಿಸಬೇಕಾದ ಕಾಣಿಕೆ : ಭಂಡಿಯ ಭತ್ತದ ಸುಂಕ ಉಪ್ಪರ ನೆಲವಳಿ ಅನುಪು ಆಳು ಅರ[ಕಾ]ಣಿಕೆಯ ವಡಾಯಲು ಕೊಟೆಉ (ಸೌಇಇ. IX–ii, ೪೩೮–೧೬ ; 1418).

[< ಅರಸ$_1$ + ಕಾಣಿಕೆ]

**ಅರಕಿಲ್ಲೆ** (ನಾ). ಅರಮನೆಯ ಸುತ್ತಿನ ಕೋಟೆ ; ರಾಜಕೋಟೆ : ಯೂಸಫ್ ಆದಿಲ್ ಶಹನು ಸ್ವತಂತ್ರನಾದ ಕೂಡಲೇ ಬಿಜಾಪುರದ ಅರಕಿಲ್ಲೆಯನ್ನು ಕಟ್ಟಿಸಿದನು (ಕಭಾಗೆ. ೩೪೭). [< ಅರಸ$_1$ + ಕಿಲ್ಲೆ]

**ಅರಕು**$_1$ 'ಅರಕ$_1$' ನೋ.

**ಅರಕು**$_2$, ಅರಖು (ನಾ). ವರಕು ; ಗಿಲೀಟು ; ಚಿನ್ನ ಬೆಳ್ಳಿಗಳ ಹೊರಲೇಪ ; ಮುಲಾಮು ಹಚ್ಚುವುದು. (ಉಕ. ೩). **ಅರಖು** (ಸ್ಯಾಂಡರ್). [← **ಮರಾ.** ವರಖ್ ; **ಅರ.** ವರಕ್]

**ಅರಕುಡಿ** (ನಾ). "ಅರಸುಕುಲ, ರಾಜವಂಶ" (ರಮಾಕಾಂ).

[< ಅರಸ$_1$ + ಕುಡಿ$_2$]

**ಅರಕುಮಾರಕ** (ನಾ). = ಅರಗುವರ : ಮುನ್ನರಕುಮಾರಕನಿಟ್ಟ ಕರಿಯು ತೊರೆದಾಹಾರವ ಕೊರಗಿರೆ ಮಾವಂತರರುಹಿದರಾ ಕಾಷ್ಟಕಗೆ (ಜೀವಂಸಾಂ. ೧೩–೨). [< ಅರಸ$_1$ + ಕುಮಾರಕ]

**ಅರಕುಲ**$_1$ (ನಾ). ಮಿಶ್ರಕುಲ ; ಬೆರಕೆಯಾದ ಕುಲ (೩).

[ಅರ್$_5$ (< ಅರ್ಧ$_3$) + ಕುಲ]

**ಅರಕುಲ**$_2$ (ನಾ). ರಾಜವಂಶ. [< ಅರಸ$_1$ + ಕುಲ]

**ಅರಕುಳಿಯ** (ನಾ). ಒಬ್ಬಾತನ ಹೆಸರು (?) : ಪುರಿಗೆಱೆಯಿಂ ಬನ್ದ ಪೊಲೆಯಣ್ಣನ ಶಿಲಾಕರ್ಮ್ಮ ಅರ[ಕು]ಳಿಯನ ಕಲ್ಲು ಮಾಕಲ್ಲು (ಸೌಇಇ. XI–i, ೧೧–೨೬ ; 865). [< ಅರಸ$_1$ + ಕುಳಿಯ ?]

**ಅರಕೆ** (ನಾ). ಕೊರತೆ ; ಕಡಮೆ : ನನಗೆ ಇವರ ಬಾಳುವೆಯಲ್ಲಿ ಏನೋ ಅರಕೆಯಾಗಿರಬೇಕು ಎನ್ನಿಸಿತು (ಸುವಸಂ. ೩). [< ಅಜಕೆ ?]

**ಅರಕೆರೆ** 'ಅರಕೆಱೆ' ನೋ.

**ಅರಕೆಲ್ಲ** (ನಾ). ಒಬ್ಬಾತನ ಹೆಸರು : ಅರಕೆಲ್ಲರಾನಾಟು ಮುದುಮೆಯುಳ್ (ಎಇ. IX, ೨೫–೫ ; 800) ; ಸತ್ತ ಅರಕೆಲ್ಲನ ಮಗ ಅವನ ಮಗ ಮಮಪೊಯ್ಸಳ (ಮೈಆರಿ. ೧೯೩೭, ೩೨–೨೭ ; ?). [?]

**ಅರಕೆಱೆ**, ಅರಕೆರೆ (ನಾ). ಒಂದು ಊರಿನ ಹೆಸರು : ಪೇರೊಟ್ಟೆ ಅರಕೆಱೆಯೆ ಪಿಟ್ಟಿಕುಱಿಕ್ಕಿಯೆ (ಮೈಆರಿ. ೧೯೧೪, ೧೩–೬೪ ; 806) ; ಮಹಾಸಾಮಂತ ಅರಕೆಱೆ ಕಾಟುಗುಂಡ ಬೆಱುವಱಿ (ಎಕ. XII, ತಿಪಟೂ. ೧೦೪–೨೫ ; 1130). **ಅರಕೆರೆ** : ಅರಕೆರೆಯೊಳು ಬೀಡ ಬಿಟ್ಟಿರ್ದ ತುರುಕರ ನಿರುಳು ಕಗ್ಗೊಲೆಯೊಳು ಬಿದ್ದು (ಕಂನವಿ. ೧೩–೫೪).

[< ಅರಸ$_1$ + ಕೆಱೆ]

**ಅರಕೇಸಿ** (ನಾ). ಒಬ್ಬಾತನ ಹೆಸರು : ಸಿನ್ದರಸರುಂ ದೇವಸತ್ತಿ ಅರಸರುಂ ಮನಸಿಜರು ವಿನ್ನಪ್ಪಂಕೆಯೆ ಪರಮ ಕೊಳರ್ ಮಗನ್ದಿರರಕೇಸಿಗಳಾಣತ್ತಿ ಅಗಪಳ್ಳಿಟ್ಟುವ ಪ್ರಸಾದಂ ಗೆಯ್ದಾರ್ (ಎಕ. III, ತಿರುಮ. ೧–೭ ; 726).

[< ಅರಸ$_1$ + ಕೇಸಿ]

**ಅರಕೋರು**, ಅರಗೋರು (ನಾ). ಜಮೀನಿನ ಉತ್ಪತ್ತಿಯಲ್ಲಿ ಅರ್ಧ ಭಾಗ. **ಅರಗೋರು** (ಸ್ಯಾಂಡರ್).

**ಅರಕೋರಾಗಿ ಹಂಚಿಬಿಡು** = ಬೆಳೆಯನ್ನು ಎರಡು ಸಮಭಾಗಗಳಾಗಿ ಮಾಡಿ ಹಂಚಿಕೊಡು. **ಅರಕೋರು ಹಾಕು** = ಅರ್ಧಬೆಳೆಯನ್ನು ಕೊಡು (ಸ್ಯಾಂಡರ್). [ಅರ್$_5$ (< ಅರ್ಧ$_3$) + ಕೋರು]

**ಅರಕ್ತ** (ನಾ). ವಿರಕ್ತ ; ಆಸಕ್ತಿಯಿಲ್ಲದವನು : ಅರಕ್ತನಾದ ಆತ ದಿನವೂ ಜಗಲಿಯ ಮೇಲೆ ಕುಳಿತು ಕಾಲ ಕಳೆಯುತ್ತಾನೆ (ಜೀವನ. ೧). [**ಸಂ.**]

**ಅರಕ್ಷಣ** (ನಾ). ರಕ್ಷಣೆಯಿಲ್ಲದಿರುವುದು (ಮುಂಬಯಿ. ೩. ೪–೧೬). [**ಸಂ.**]

**ಅರಕ್ಷೆ** (ನಾ). ರಕ್ಷೆಯಿಲ್ಲದಿರುವುದು. 'ಅದ್ದರಕ್ಷೆ' ಪರಾ.

[< **ಸಂ.** ಅರಕ್ಷಾ]

**ಅರಖ** 'ಅರಕ$_1$' ನೋ.

**ಅರಖು** 'ಅರಕು$_2$' ನೋ.

**ಅರಗಂಡುಗ** (ನಾ). ಅರ್ಧಖಂಡುಗ : ಅರ್ದ್ಧವಾದಿಯೊಳಪಿನ್ದರಗಣ್ಡುಗ ಮೂಗಣ್ಡುಗಮಿತ್ತಂ (ಎಕ. VI, ಚಿಕ್ಕಮ. ೭೫–೧೦ ; 1060).

[ಅರ್$_5$ (< ಅರ್ಧ$_3$) + ಖಂಡುಗ]

**ಅರಗಚ್ಚು**, ಅರಗಚ್ಚಿ (ನಾ). ಅರ್ಧ ಇರುವ ಸ್ಥಿತಿ ; ಪೂರ್ಣ ಪ್ರಯತ್ನವಿಲ್ಲದಿರುವುದು ; ಅವಧಾನ ತಕ್ಕಷ್ಟಿಲ್ಲದಿರುವುದು ; ಅರ್ಧಪಕ್ವ : ಅವನ ಕೆಲಸಕ್ಕೆ ಅವನ ಲಕ್ಷ್ಯ ಸಾಲದು. ಎಲ್ಲವೂ ಅರಗಚ್ಚು. ಯಾವ ಕೆಲಸದಲ್ಲಿದ್ದರೂ ಮನಸು ಎರಡು ಕಡೆ (ಚೀನಾಬಾ. ೨೯೬). **ಅರಗಚ್ಚಿ** : ಅರಗಚ್ಚಿಯಾದ ಸುಳ್ಳು ಹೇಳುವುದಕ್ಕಿಂತಲೂ ನೆಟ್ಟಗೆ . . . ಯಾಕೆ ಹೇಳಲೊಲ್ಲೆ (ಪವಶೀ. ೭೮). [ಅರ್$_5$ (< ಅರ್ಧ$_3$) + ಕಚ್ಚು$_2$]

**ಅರಗಚ್ಚಿ** 'ಅರಗಚ್ಚು' ನೋ.

**ಅರಗಜ** (ನಾ). ಒಂದು ಬಗೆಯ ಸುಗಂಧ ದ್ರವ್ಯ : ಹರಿಣನೋಟದ ನಯನಕೆಚ್ಚಿದಳು ಕಾಡಿಗೆಯೊ . . . ಅರಗಜ ಅತ್ತರು ಬಾಹುಮೂಲಕೆ (ಶ್ರೀಕೃಪಾ. ೧೨) ; ಅರಶೀಣ ಕುಂಕುಮ ಅರಗಜ ಸುಗಂಧ ಉರಗ ಕಂಕಣನಿಗೆ ತೀಡುತ (ಸಿದ್ಧಪು. ೧೯–೨೨) ; ಎದೆಗೆ ತೊಡೆದಂಥ ಅರಗಜ

ಶ್ರೀಗಂಧ ಕೇಸರಗಳ ಸುವಾಸವು ಚಿಮ್ಮುತ್ತಿರುವುದು (ಮುಂಬಯಿ. ೫–೨೯೯). [< ಸಂ. ಅಗರು, ಅಗುರು ?]

**ಅರಗಟ್ಟೆ** (ನಾ). ನೀರನ್ನು ಎತ್ತುವ ರಾಟೆ: ಚಾಗಿ ಅರಗಟ್ಟಂ ಕಟ್ಟಿಸಿದನ್ದು ಕಣ್ಣವಂಗಲದ ರಾಮೇಸ್ವರ ದೇವಗೆ ಈವ್ಮೂರ್ತ್ತರ್ ಮಣ್ಣ ಬಿಟ್ಟಂ (ಎಕ. VI, ತರೀಕೆ. ೬೭–೪; 888). [< ಸಂ. ಅರಘಟ್ಟ]

**ಅರಗಣ್ಣು** 'ಅರೆಗಣ್' ನೋ.

**ಅರಗಲ್ಲು** (ನಾ). ರತ್ನ: ನಾಗೀಂದ್ರನರಗಲ್ಲವು ಬಾ ಅರಗಲ್ಲದ ರೂಪವು ಬಾ ಹೋಯಿತು ಸರ್ಪಾ (ಮಲ್ಲಿಗ. ೭೪).
[< ಅರಸ$_1$ + ಕಲ್ಲು (< ಕಲ್$_2$)]

**ಅರಗಳಕೆ** (ನಾ). ಸಣ್ಣ ಉಂಡೆ; ಬಿಲ್ಲೆ: ಹಸಿಯಕ್ಕಿಹಿಟ್ಟ ಬೆರಸಿ ಪೊತ್ತಿಕುಟ್ಟ ಬಳಿಕೊಮ್ಮೆ ಗುಡಪಾಕವಿಕ್ಕಿ ... ತನಿವಾಲುಗಳ ಬೆರಸಿಯುದಯದೊಳಗರಗಳಕಮಾಡಿ ತುಪ್ಪದೊಳು ಗಾರಿಕೆಯಡುವುದು (ಸೂಪಶಾ. ೧–೨೪). [ಅರ್$_5$ (< ಅರ್$_3$) + ಗಳಕ$_0$]

**ಅರಗಳಿಗೆ** 'ಅರೆಗಳಿ[ಱಿ]ಗೆ' ನೋ.

**ಅರಗಿಣಿ** 'ಅರಗಿಳಿ' ನೋ.

**ಅರಗಿಲ್ವಾಳ್** (ನಾ). ಒಂದು ಊರಿನ ಹೆಸರು: ತುಂಗಭದ್ರೆಯ ತಟಯರಗಿಲ್ವಾಳ ನಾಗಮಗಾವುಣ್ಡನುಮರಸುವಿಟ್ಟು (ಸೌಇಇ. XI–i, ೫೮–೨; 1022); ಅರಗಿಲ್ವಾಳ ಹೊಲದ ಮೇರೆಯ ಮೂಡ ಹರಳ ಕೆಯಿ (ಸೌಇಇ. XI–ii, ೧೬೫–೨೪; 1113). [ಅರಗಿಲ್$_0$ + ಪಾಳ್ (< ಪಾೞ್)]

**ಅರಗಿಸು** (ಕ್ರಿ). ಜೀರ್ಣವಾಗಿಸು; ಪಚನವಾಗುವಹಾಗೆ ಮಾಡು: ಅನುಮಾನಿಸದೆ ಕೊಂಡರಗಿಸಿದನಾ ವಿಷವ ಪ್ರಹ್ಲಾದ (ಪ್ರಹ್ಲಾಚ. ೭–೯೦); ಇದನ್ನೆಲ್ಲಾ ಸೇವಿಸಿ ಅರಗಿಸಿ ಅಮೃತನಾಗುವೆ ನಾನು (ಅಂತರಾ. ೪೯).

**ಅರಗಿಸಿಕೊಳ್** = ೧. ಜೀರ್ಣವಾಗಿಸಿಕೊ: ಕಾಯಿಲೆಯವರಿಗೆ ಅವಿಯಲ್ಲಿ ಬೇಯಿಸಿದ ಆಹಾರ ಒಳ್ಳೆಯದು. ಯಾಕೆಂದರೆ ಅವುಗಳನ್ನು ಅರಗಿಸಿಕೊಳ್ಳುವುದು ಸುಲಭ (ಅಡುಸೌ. ೯೧). ೨. ಚೆನ್ನಾಗಿ ತಿಳಿದುಕೊ: ವಿಶಾಲಜಗತ್ತಿನ ಸಂಗತಿಗಳನ್ನು ಎಲ್ಲರಂತೆಯೇ ಗ್ರಹಿಸಬೇಕು. ಗಂಡಸಿನಂತೆಯೇ ಅದನ್ನು ಅರಗಿಸಿಕೊಂಡು ಕೃತಿಗಿಳಿಯಬೇಕು (ಅಪನಾ. ೧೯). ೩. ದಕ್ಕಿಸಿಕೊಳ್ಳು: ಕದ್ದ ಮಾಲನ್ನು ಅವನು ಅರಗಿಸಿಕೊಳ್ಳಲಿಲ್ಲ (ರೂಢಿ). [ಅರಗು$_1$ + -ಇಸು$_3$]

**ಅರಗಿಳಿ, ಅರಗಿಣಿ** (ನಾ). ೧. ಗಿಳಿಗಳಲ್ಲಿ ಶ್ರೇಷ್ಠವಾದುದು; ಉತ್ತಮವಾದ ಗಿಣಿ: ಕೋಗಿಲೆಯಕ್ಕೆಲರಕ್ಕೆ ತುಂಬಿಯಕ್ಕರಗಿಳಿಯಕ್ಕೆ ಬಂದೊಡ ಮೊಱಲ್ದೆರ್ದೆಯಾಱುವರ್ (ಆದಿಪು. ೩–೮೬); ಓದಿದೊಡೇನರಗಿಳಿ ಕಲ್ತೋದುವ ಪೋಲ್ ಧರ್ಮಶಾಸ್ತ್ರಮಂ (ಪಂರಾಮಾ. ೩–೭); ಅರಗಿಳಿ ಕದರ್ುಂಕದಿಮ್ಮಾವಿನೊಳ್ಪಣ್ಣೊ (ಪದ್ಮರಾ. ೩–೩೨). ೨. (ಪ್ರೀತಿಯ ವ್ಯಕ್ತಿಯನ್ನು ಕುರಿತು ಆಡುವ) ಮುದ್ದಿನ ಮಾತು: ನನ್ನ ಅರಗಿಳಿಯು ಮತ್ತೆ ಮಾತಾಡದಹತ್ತಿತೇನು? (ಉದಸ್ಯೆ. ೩). **ಅರಗಿಣಿ**: ೧. ತರುಣಿಯೊರ್ವಳ ತುಟಿಯ ತೊಂಡೆಯ ಪಣ್ಣೆಂದರಗಿಣಿಯೆರಗಲು (ಕಂನವಿ. ೫–೧೦೬); ಗಿಣಿಯ ಮೈಬಣ್ಣ ಈ 'ಅರಗಿಣಿ'ಗೆ (ಸುವಸಂ. ೨೬). ೨. ಓಹೋ ಅರಗಿಣಿ ಬಾಯಿಬಿಡ್ತು! (ಕಂಕಕೂ. ೨೨).
[< ಅರಸ$_1$ + ಗಿಳಿ (< ಗಿೞಿ)]

**ಅರಗಿಳಿನುಡಿ** (ನಾ). ೧. ಅರಗಿಳಿಯ ಮಾತು. ೨. ಅರಗಿಳಿ ಮಾತಾಡುವಂತೆ ಆಡುವ ಮಾತು: ದುಂಬಿಗುರುಳ್ ... ಅರಗಿಳಿನುಡಿ ನಳಿತೋಳು (ಶ್ರೀಪಾಲ. ೩–೨೫). [ಅರಗಿಳಿ + ನುಡಿ$_2$]

**ಅರಗಿಳಿವಿಂಡು** (ನಾ). ಅರಗಿಳಿಗಳ ಗುಂಪು: ಅರಗಿಳಿವಿಂಡು ವಾರುವದ ಮೋಹರಂ (ಕಬ್ಬಿಕಾ. ೨೦೧); ನಲಿವ ಕಿನ್ನರ ಮಿಥುನದಲಿ ಮಿಗೆ ಗಳಹುವರಗಿಳಿವಿಂಡಿನಲಿ (ತೊರರಾ. ೧–೯–೧೧). [ಅರಗಿಳಿ + ಪಿಂಡು$_2$]

**ಅರಗೀಲ್, ಅರಗೀಲು** (ನಾ). ಚಕ್ರದ ಅರೆಕಾಲು: ಕದನದೊಳ್ ... ಅರಗೀಲ್ ಕಟಲ್ದುದು (ಪಂರಾಮಾ. ೧೩–೬೯); ಮಿನುಗುವ ಕೊಂಬಿನಚ್ಚು ಕಿಱುಗೊಂಬಿನ ತಳ್ತರಗೀಲ್ ... ನೆಗೞ್ತೆಯ ತೇರ್ಗಳೆತ್ತಲುಂ (ಕಬ್ಬಿಕಾ. ೨೧೩); ತೇರಿನರಗೀಲ್ ಕಟಲ್ದು ಪಟಯಿಗೆಯುಡಿದತ್ತು (ರಾಮಾಶ್ವ. ೯೧). **ಅರಗೀಲು**: ಒಂದೊಂದೂ ರಥದ ಅಣಿ, ಅರಗೀಲು, ಕಡಾಣಿಯಿಂದ ಹಿಡಿದು ಮುಂಕಣಿಯವರೆಗೆ ... ನೋಡುವನು (ಸವತಿ. ೪೮). [ಅರ್$_9$ + ಕೀಲ್]

**ಅರಗೀಲು** 'ಅರಗೀಲ್' ನೋ.

**ಅರಗು$_1$** (ಕ್ರಿ). ೧. ಜೀರ್ಣವಾಗು; ಪಚನವಾಗು; ಕರಗು: ಬಱುಬಂಗೆ ಅರಗದು (ಕೋಲಶಾಂ. ೩೭); ತೇಜದಲ್ಲಿ ತಮ ಶಮಿಸಿ ಸೋಮರಸಿಕತೆಯೊಳರಗುತಿಹುದು (ಅರಳು. ೯); ಅವೇಳೆಯಲ್ಲಿ ಊಟಮಾಡಿದರೆ ಅರಗುವುದಿಲ್ಲ (ರೂಢಿ). ೨. ವಶವಾಗು: ಅವನು ನನಗೆ ಅರಗುವುದಿಲ್ಲ (ರೂಢಿ). ೩. ನಾಶವಾಗು; ಕ್ಷೀಣಿಸು (ಕಿ).
[ದೇ. ‖ ತಮಿ. ಅರತ್ತು; ತೆಲು. ಅರುಗು, ಅಱುಗು]

**ಅರಗು$_2$** 'ಅರುಗು$_2$' ನೋ.

**ಅರಗು$_3$** (ನಾ). ಒಂದು ಜಾತಿಯ ಕ್ರಿಮಿಗಳು ಮರಗಳ ಮೇಲೆ ಕಟ್ಟುವ ಮೇಣ: "ಜತು, ಯಾವಕಃ, ಲಾಕ್ಷಾ- ಈ ೩ ಅರಗು" (ಹಲಾಯು. ೯೧–೪೦೧); ಅರಗು ಮೊದಲಾಗೆ ಘೃತ ಸಜ್ಜರಸಂ ಬೆಲ್ಲಂ ಸಣಂಬಿವೆಂಬಿವಱಿಂ ವಿಸ್ತರಿಸಿ (ಪಂಪಭಾ. ೩–೩); ಅರಗಿನರಸನ ಬಾಗಿಲಲಿ ದಳ್ಳುರಿಗೆ ತಡವೇ (ಕುವ್ಯಾದ್ರೋ. ೫–೪೧). 'ಅವಲರಗು' ಪರಾ.
[ದೇ ‖ ತಮಿ. ಮಲ. ಅರಕ್ಕು; ತುಳು. ಅರಕ್. / ಸಂ. ಅಲಕ್ತ, ಅಲಕ್ತಕ]

**ಅರಗು$_4$** 'ಅರುಗು$_3$' ನೋ.

**ಅರಗುಗಲ್ಲು** (ನಾ). ಬಾಗಿಲ ಮುಂದಿನ ಮೆಟ್ಟಿಲು (ಕಿಸಂಗ್ಲಾ. ೮೦).
[ಅರಗು$_4$ (< ಅರುಗು$_2$) + ಕಲ್ಲು (< ಕಲ್$_2$)]

**ಅರಗುಗೆಸಱ್** (ನಾ). ಅರಗಿನ ಕೆಸರು; ಅರಗು ಕರಗಿ ಆದ ಕೆಸರು, —ರಾಡಿ: ಕೆಂಡದಂತಿರುವ ಮಣಲನಿಡಿವರವಯವದೊಳಕಟ ಅಱಿಚಲಱಿಚಲೊಯ್ದು ಕರಗಿದರಗುಗೆಸಱೊಳಿಡುವರಕಟ (ಸಾನಂಚ. ೬–೮೪ ರ). [ಅರಗು$_3$ + ಕೆಸಱ್]

**ಅರಗುಮುಸಿ** (ನಾ). ಅರಗಿನಿಂದ ಮಾಡಿದ ಮಸಿ; ಶಾಯಿ (ಕಿ).
[ಅರಗು$_3$ + ಮುಸಿ]

**ಅರಗುರಿ** 'ಅಱಗುಲಿ' ನೋ.

**ಅರಗುಲಿ** 'ಅಱಗುಲಿ' ನೋ.

**ಅರಗುಲಿತನ** 'ಅಱಗುಲಿತನ' ನೋ.

**ಅರಗುವರ** (ನಾ). ಅರಸನ ಮಗ; ರಾಜಕುಮಾರ: ಅರಗುವರ ಮಾದಣ್ಣನಿಗೆ ತಾಯಿಯ ಸಾನ್ನಿಧ್ಯ ತಪ್ಪಿಹೋಯಿತು (ಹಾಹುತ್ತ. ೩೨).
[< ಅರಸ$_1$ + ಕುವರ]

**ಅರಗುಹುಣ್ಣು** (ನಾ). ಒಂದು ಬಗೆಯ ಹುಣ್ಣು: ಕೆಂಪಿನ ಹರುವೆಯನೂ ಸುಟ್ಟು ಕರುಕುಮಾಡಿ ಸುಣ್ಣಮಂ ಬೆರಸಿಕೊಂಡು ಹುಣ್ಣಿನ ಮೇಲೆ ಬೊಟ್ಟನಿಡುವುದು ಅರಗುಹುಣ್ಣು ಮಾಣ್ಗುಂ (ವಿವೈವಿ. ೧೯೪).
[ಅರಗು ? + ಹುಣ್ಣು (< ಪುಣ್)]

**ಅರಗೆಲಸಿ** 'ಅರೆಗೆಲಸಿ' ನೋ.

**ಅರಗೆಱೆ** (ನಾ). ಅರಸನಿಗಾಗಿ ನಿರ್ಮಿಸಿದ ಕೆರೆ; ರಾಜತಟಾಕ: ತೀವಿದರಗೆಱೆವೊಕ್ಕು ಕಲಿ ವಸುದೇವ ಮಿಂದೀಸಾಡಿ (ಸಾಳ್ವಭಾ. ೬–೧೦); ಅರಗೆಱೆಯೊಳೀ ಸಾಡುತಿರ್ದ ಅಚ್ಚರಸಿಯರೊಯೆನೆ (ಸಾಳ್ವಭಾ. ೬–೩೮).
[< ಅರಸ$_1$ + ಕೆಱೆ]

**ಅರಗೇಡಿ** (ನಾ). ನೀತಿಗೆಟ್ಟವನು: ಹೋದರಗೇಡಿಗೆ ಹಿಂದೆಯೆ ಬಂದೆಯಾಮುರು ಕಂಡ ಎಮ್ಮೆಯ ಹಾಗೆ (ಚಂದ್ರವೀ. ೨೩–೯೧).
[ಅರ್ಧ₃ (< ಅಜ್₁) + ಕೇಡಿ]

**ಅರಗೇಡು** (ನಾ). ಅರ್ಧ ಹಾಳಾಗಿರುವುದು; ಅರ್ಧ ಕೆಟ್ಟು ಹೋಗಿರುವುದು (ಸ್ಯಾಂಡರ್). [ಅರ್ಧ₅ (< ಅರ್ಧ₃) + ಕೇಡು]

**ಅರಗೊರತೆ** 'ಅರೆಗೊರತೆ' ನೋ.

**ಅರಗೋರು** 'ಅರಕೋರು' ನೋ.

**ಅರಘಟಿಕ** (ನಾ). = ಅರಘಟ್ಟಕ: "ಅರಘಟಿಕ [ಪಾಠಾಂ. ಟ್ಟ] ಮುದ್ಘಾಟಕಂ ಘಟೀಯಂತ್ರಮೆನೆ ತಿರುಗಿಬಹ ರಾಟಾಳಮೆನಿಕು" (ಮಂಗರಾ. ೧೨೫–೧೯). [ಸಂ.]

**ಅರಘಟ್ಟ** (ನಾ). = ಅರಘಟಿಕ: ಇದು ಸಮಸ್ತ ಕಮಲಭವಾಂಡಮಾಲಾಘಟೀಘಟಿತಾರಘಟ್ಟಘಟನಾಸ್ವತಂತ್ರ (ಜಗವಿ. ೧–೮೦ ವ). [ಸಂ.]

**ಅರಘಟ್ಟಕ** (ನಾ). ಬಾವಿಯಿಂದ ನೀರನ್ನು ಮೇಲಕ್ಕೆತ್ತುವ ಯಂತ್ರ; ರಾಟೆ; ರಾಟಣಿಗೆ: "ಉದ್ಘಾಟಕಂ, ಘಟೀಯಂತ್ರಂ, ಪಾದಾವರ್ತಃ, ಅರಘಟ್ಟಕಃ – ಈ ೪ ರಾಟಣಂ" (ಹಲಾಯು. ೧೧೩–೬೩). [ಸಂ.]

**ಅರಘುವಾಳ** (ನಾ). ಒಂದು ಜಾತಿಯ ಮರ: ಅರಳಿ, ಅರಘುವಾಳ, ಕಡಬೆ . . . ಮೊದಲಾದ ವೃಕ್ಷಗಳಿಂದಲೂ (ಕೃವಾಸ. ೫೧). [?]

**ಅರಘುಳಿಗೆ** 'ಅರೆಗಳ[ಟಿ]ಗೆ' ನೋ.

**ಅರಚಣ್ಣ** 'ಅರಚಲ್ಲಣ' ನೋ.

**ಅರಚನೆ** (ನಾ). ಸರಿಯಾದ ರಚನೆಯಿಲ್ಲದಿರುವುದು; ಕ್ರಮವಿಲ್ಲದಿರುವುದು (೬). [ಸಂ. ಅರಚನಾ]

**ಅರಚರೆ** (ನಾ). ಒಂದು ಗಿಡ (ಮೈಔಗಿ. ೫೩–೧೦೬೮). [?]

**ಅರಚಲ** 'ಅರಚಲು' ನೋ.

**ಅರಚಲು,** ಅರಚಲ (ನಾ). ಕೂಗು. **ಅರಚಲ:** ಗರುಡನು ಇವನ ಅರಚಲವನ್ನು ಕೇಳಲಾರದೆ . . . ಇಳಿದನು (ನೀತಿಚಿಂ. vi, ೧೯).
[ಅರಚು (< ಅಜಿಚು) + –ಅಲು]

**ಅರಚಲ್ಲಣ,** ಅರಚಣ್ಣ (ನಾ). ಅರ್ಧಚಲ್ಲಣ; ತೊಡೆಯನ್ನು ಅರ್ಧ ಮಟ್ಟಿಗೆ ಮಾತ್ರ ಮುಚ್ಚುವ ಚಲ್ಲಣ; ಚಡ್ಡಿ; ಕಾಚ (೬). **ಅರಚಣ್ಣ** (೬). [ಅರ್ಧ₅ (< ಅರ್ಧ₃) + ಚಲ್ಲಣ]

**ಅರಚಾಟು** (ನಾ). ೧. ಮರೆ; ಸ್ವಲ್ಪಮಟ್ಟಿನ ರಕ್ಷಣೆ. ೨. ಅಪರಾಧ (ಸ್ಯಾಂಡರ್). [?]

**ಅರಚು** 'ಅಜಿಚು' ನೋ.

**ಅರಜಲ** (ನಾ). ಬಾವಿಯಲ್ಲಿ ಕೆಲವು ಕಾಲ ಮಾತ್ರ ನೀರನ್ನು ಊರಿಸುವ ನೆಲೆ; ಸರುವು (ಉಕ. ೬). [ಅರ್ಧ₅ (< ಅರ್ಧ₃) + ಜಲ]

**ಅರಟಾಳ** 'ಅರುಟಾಳ' ನೋ.

**ಅರಟಿಕಂಡ** (ನಾ). ಬಾಳೆಯ ಗದ್ದೆ (?): ಶಂಕರಭಟ್ಟಾಹಿತಾಗ್ನಿಗಳ ಮಕ್ಕಳು ಮಹೇಶ್ವರ ಭಟ್ಟಾಹಿತಾಗ್ನಿಗಳಿಂಗೆ ಮುಡಿತಿನಿ ಹಲಸಿನ ಗದ್ದೆ ಗೋರಂಟಿ ಅರಟಿಕಂಡ ಸಹಿತ ಗದ್ದೆ ಮೂಡೆ ೧೦ (ಎಇ. XXVII, ೨೮–೩೪; 1256); ಸೂಗಾನಿಯ ಮಣಲಿಯ ಭಾರ್ಗವಗೋತ್ರದ ಕೇಶವ ಭಟ್ಟೋಪಾಧ್ಯಾಯರಿಗೆ ಹೊಂನೆಯ ಮೂಲು ಅರಟಕಂಡ ಎಕ್ಕಲಗದ್ದೆ ಬಟ್ಟ ಗದ್ದೆ ಕಾಳುವ ಗದ್ದೆ ಸಹಿತವಾಗಿ (ಎಇ. XXVII, ೨೮–೪೦; 1256).
[ಅರಟ + ಕಂಡ ?. P ತೆಲು. ಅರಟ = ಬಾಳೆ]

**ಅರಟು₁** (ನಾ). ಒಂದು ಜಾತಿಯ ಮರ; "ದಿಂಡಲ ಮರ" (ಗಂಗಾಮು. ೧೩). [< ಸಂ. ಅರಟು, ಅರಡು]

**ಅರಟು₂** (ನಾ). ಒಳನೋವು; (ಹಸಿವಿನ) ಕೋಟಲೆ: ಹೊಟ್ಟೆಯಲ್ಲಿ ಏನೋ ಅರಟು (ರೂಢಿ). [?]

**ಅರಟು₃** (ನಾ). ಗರ್ಜನೆ (?): ಸಿಂಗದರಟಂ ಕಂಡ ಮದಮಾತಂಗ ವ್ರಜದೊಲ್ (ಮದೇಪು. ೩–೪೯). [< ಸಂ. ರಟ್ ?]

**ಅರಟೆ** 'ರಾಟೆ' ನೋ.

**ಅರಟ್ಟ** (ನಾ). ಒಂದು ರಾಜವಂಶ; ರಟ್ಟವಂಶ (?): ಸ್ವಸ್ತಿಶ್ರೀ ಕೊಂಗಣಿ ಮಹಾರಾಜರ್ ಸಿರಿಪುರುಷರ್ ಪೃಥುವೀ ರಾಜ್ಯಂಕೆಯೆ ಅರಟ್ಟಗಳರಸರ್ ಚೊತ್ತಮ್ಮನ್ ಎಡತ್ತೊಱೆನಾಡು ಸಾಸಿರವುಂಮಾಳುತ್ತಿದು ವಿಟ್ಟದು (ಎಕ. III, ಮೈಸೂರು. ೫೫–೪; 740).
**ಅರಟ್ಟಗಂಡ** = ರಟ್ಟರಾಜರನ್ನು ಗೆದ್ದವನು; ರಟ್ಟರಾಜರ ಗಂಡ (?); ಒಂದು ಬಿರುದು: ಚಾಳುಕ್ಯಾರ್ಜುನಂ ಚಲಕೆ ಮೊದಲಿಗ ಮರಟ್ಟಗಣ್ಡನ್ (ಎಕ. III, ಮೈಸೂರು. ೧೨೭–೫; 900).
[< ಜಟ್ಟ ?]

**ಅರಟ್ಟತೀರ** (ನಾ). ಒಂದು ಹೆಸರು (?): ಸ್ವಸ್ತಿ ಶ್ರೀಪುರುಷ ಮಹಾಪೃಥುವೀರಾಜ್ಯಕೆಯ ಅರಟ್ಟ × × ರಮ್ಮಗಣ್ದಿರ್ ಸಿಜ್ಗಂ ದೀಕ್ಷೆಬೀಳಾದು ಅರಟ್ಟತೀರರ್ ಕುಡಲೂರದೆ ಗೊಟ್ಟಮಡಿ ಒಡೆಯಂಬರಾಳ್ವಿಕೆಯ (ಎಕ. III, ಮೈಸೂರು. ೨೫–೪; 750). [ಅರಟ್ಟ + ತೀರ]

**ಅರಡಾಳ** 'ಅರುಟಾಳ' ನೋ.

**ಅರಣ₁** (ನಾ). ಮದುವೆಯಲ್ಲಿ ಕೊಡುವ ಉಡುಗೊರೆ, —ಪಾರಿತೋಷಿಕ.
[← ತೆಲು. ಅರಣ; ತಮಿ. ಅರುಳ್ = ಉದಾರವಾಗಿ ಕೊಡು. / ಮರಾ. ಅಹೇರ]

**ಅರಣ₂** (ನಾ). ಸಗಣಿ; ಕರುವಿನ ಸಗಣಿ: "ಅರಣವೆಸರದು ನೋಡೆ ಕರುವಿನ ಸಗಣಮಕ್ಕುಂ" (ಶಬ್ದಮಂ. ೩೪); ಚೊಚ್ಚಲೆಳಹೋರಿಯರ[ರೆ]ಣಂ ಬೆಚ್ಚರದಿಂ ತಗರಮಂತದಂ ಸಂಯೋಗಿಸಿ ಒಚ್ಚತದಿಂ ವಿಷಮ ಕ್ಕೊಂದಚ್ಚರಿಯೇ (ಖಮುದ. ೧೬–೧೮); ಹೋರಿಯರ[ರೆ]ಣಮಂ ಪಾಲಿಂದಾಸ್ವಾದಿಸಿ ಕುಡಿಯಲ್ಕೆಲ್ಲಾ [ಭೇದದ] ವಿಷಂಗಳಾಕ್ಷಣಮಿಱಿಗುಂ (ಖಮುದ. ೧೬–೧೯). ಏರಣ ನೋ. [?]

**ಅರಣಿ₁** (ನಾ). ಹೂವು. 'ಅರಣಿಗುತ್ತಿಗ' ಪರಾ.
[← ತಮಿ. ಮಲ. ಅಲರ್]

**ಅರಣಿ₂** (ನಾ). ೧. ಯಾಗದ ಅಗ್ನಿಯನ್ನು ಹುಟ್ಟಿಸಲು ಉಪಯೋಗಿಸುವ ಬನ್ನಿಯ ಮರದ ಕೊರಡು: "ಯಾಗಾಗ್ನಿಯ ಹೊಸೆವ ಮರದಲ್ಲಿ ಅರಣಿಯೆನಿಸುಗು" (ನಾಚಿರಾ. ೧೨೭); ತಾಪಸರಂ ಬೆರ್ಚಿಸಿ ತೂಳ್ದು ಬೇಟ್ಪರಣಿಯಂ ಕೊಂಡಾಶ್ರಮಕ್ಕಿಂತು ಬೇವಸಮಂ ಮಾಡುವುದಾಯ್ತು (ಪಂಪಭಾ. ೮–೩೭). ೨. ಯಾಗಾಗ್ನಿಯನ್ನು ಹುಟ್ಟಿಸಲು ಉಪಯೋಗಿಸುವ ಅಶ್ವತ್ಥದ ಕೊರಡು: ಆಗ ಅವನು ಆ ಅಶ್ವತ್ಥವೃಕ್ಷದ ಎರಡು ಅರಣಿಗಳನ್ನು ಮಾಡಿ . . . ಅವುಗಳನ್ನು ಮಥಿಸಿ ಅಗ್ನಿಯನ್ನು ಉತ್ಪನ್ನಮಾಡಿದನು (ಭಾಮೃತ. ೨೮೧).
**ಅರಣಿಯತನುಜ** = ೧. ಅರಣಿಯಲ್ಲಿ ಹುಟ್ಟಿದವನು. ೨. ಅಗ್ನಿ. ೩. ಶುಕಮಹರ್ಷಿ: ವರಯೋಗಿ ಧರ್ಮರಹಸ್ಯಗಳ ನೀ ಬೇಗ ಹೇಳುವುದೆನುತಲರಣಿಯ ತನುಜ ಬೆಸಗೊಂಡ (ತಿಮ್ಮಶಾಂ. ೧೦–೩೨). [ಸಂ.]

**ಅರಣಿಗುತ್ತಿಗ** (ನಾ). ದೇವರ ಹೂತೋಟದಿಂದ ಬಿಡಿಸಿ ತಂದ ಹೊಸ ಹೂಗಳನ್ನು ಬಗೆ ಬಗೆಯ ಮಾಲೆಗಳಾಗಿ ಕಟ್ಟಿ ಪ್ರತಿದಿವಸವೂ ದೇವರಿಗೆ ಸಲ್ಲಿಸುವ ಕೆಲಸದವನು: ಈ ದೇವರ ತೋಟದ ಅರಣಿಗುತ್ತಿಗ ಬೀಚಣನು ತನ್ನ ಮಕ್ಕಳು ತಪ್ಪದೆ ದೇವರ್ಗೆ ದಿವಸವಳವಿಕ್ಕುವ ಹೂವಿನ ಸರ [೧೨] (ಸೌಇಇ. XV, ೯೯–೭; 1159); ಅರಣಿಗುತ್ತಿಗನಲ್ಲಿ ಒತ್ತಧಾರೆಯಂ ಕುಡಸಲ್ಲ (ಸೌಇಇ. XV, ೫೪೫–೨; 1165).
[ಅರಣಿ₁ (< ಅರಲ್₁ ?) + ಗುತ್ತಿಗ]

**ಅರಣಿಗುತ್ತಿಗತನ,** ಅರಣಿಗುತ್ತಿಗೆತನ (ನಾ). ದೇವರಿಗೆ ದಿನಂಪ್ರತಿ ಹೊಸಹೂಮಾಲೆ ಸಲ್ಲಿಸುವ ಕೆಲಸ: ಈ ತೋಂಟದರಣಿಗುತ್ತಿಗತನವಂ ಕೈಹಣಸಿಟ್ಟಯರ ಕೈಯ್ಯಲಾ ಕನಕಿಕಟೆಯಳಿಯ ನಾಚಿಸೆಟ್ಟಿ ಪಡೆದು ದೇವರ್ಗ್ಗೆ ನಿಚ್ಚವಿಕ್ಕುವ ಹೊಸಹೂವಿನ [ಹಿರಿಯ] ಮಾಲೆಯಸರ ಇಪ್ಪತ್ತನಾಲ್ಕು (ಸೌಇಇ. XV, ೧೧೧–೪೦; 1165). **ಅರಣಿಗುತ್ತಿಗೆತನ:** ಈ ತೋಟದರಣಿಗುತ್ತ[ತ್ತಿ]ಗೆತನವನಾ ದೇವರ ಬ್ರಹ್ಮಪುರಿಯ ಮಹಾಜನಂಗಳ ಕಯ್ಯಲು ಹೊಟ್ಟಿಯ ಬಮ್ಮಣ ಪಡೆದು (ಸೌಇಇ. XV, ೫೪೫–೩; 1165). [ಅರಣಿಗುತ್ತಿಗ + –ತನ]

**ಅರಣಿಗುತ್ತಿಗೆತನ** 'ಅರಣಿಗುತ್ತಿಗತನ' ನೋ.

**ಅರಣಿಪುತ್ರ** (ನಾ). ೧. ಶುಕಮಹರ್ಷಿ. ೨. ಬೆಂಕಿ; ಅಗ್ನಿ. [ಅರಣಿ + ಪುತ್ರ]

**ಅರಣಿಪೋತಕ** (ನಾ). ಚಿಕ್ಕ ಅರಣಿ: "ಮಹಾರಾಜ, ಅರಣಿಯಿಲ್ಲದಿದ್ದರೆ, ಅರಣಿಪೋತಕವಿಲ್ಲದಿದ್ದರೆ . . . ಅಗ್ನಿ ಹುಟ್ಟುವುದೆ?" (ಬುದ್ಧಪ. ಮಿಲಿಂದ. ೭೪). [ಅರಣಿ + ಪೋತಕ]

**ಅರಣಿಯತ್ನಕ** (ನಾ). ಅರಣಿಯನ್ನು ಕಡೆಯುವ ಹಗ್ಗ; ಬೆಂಕಿಯನ್ನು ಹುಟ್ಟಿಸುವುದಕ್ಕೋಸ್ಕರ ಕಡೆಯುವ ಕೊರಡಿಗೆ ಸುತ್ತುವ ಹಗ್ಗ: ". . . ಅರಣಿಪೋತಕವಿಲ್ಲದಿದ್ದರೆ, ಅರಣಿಯತ್ನಕವಿಲ್ಲದಿದ್ದರೆ . . . ಅಗ್ನಿ ಹುಟ್ಟುವುದೆ?" (ಬುದ್ಧಪ. ಮಿಲಿಂದ. ೭೪). [ಅರಣಿ + ಯತ್ನಕ]

**ಅರಣೆ** (ನಾ). ಹಾವುರಾಣಿ: ಅರಣೆ ಕಡಿದರೆ ಬರಣಿ ಮದ್ದು ಸಾಲದು (ಗಾದೆ); ಅರಣೆ ಮೆಟ್ಟಿದರೆ ಧರಣಿ ನಾಶ (ಗಾದೆ). 'ಹಾವರಣೆ' ಪರಾ. [**ದೇ.** ‖ **ತಮಿ.** ಅರಣೈ; **ಮಲ.** ಅರಣ; **ತುಳು.** ಅರಣೆ]

**ಅರಣ್ಯ** (ನಾ). ಅಡವಿ; ಕಾಡು: "ಪಟುವೆನ್ನುತ್ತುಂ ಕವಿವರರು ಪೇಟಲಕ್ಕುಮರಣ್ಯಂ" (ಕವಿಕಂ. ೫೭); ಪಶುಗಳು ಎಲ್ಲ ಬೆಟ್ಟದ ಮೇಲೆ ಮೇಯುತ ಒಳ್ಳೆ ಹುಲ್ಲು ನೀರ್ಗಳಿಂದಲಿ ಅಲ್ಲಿ ಮೆರೆದವರಣ್ಯದಿ (ಗೋಹಾಡು. ೨೧). [**ಸಂ.**]

**ಅರಣ್ಯಕಮಲಿನಿ** (ನಾ). ೧. ಕಾಡಿನಲ್ಲಿರುವ ತಾವರೆಯ ಬಳ್ಳಿ. ೨. ಕಾಡಿನಲ್ಲಿರುವ ತಾವರೆಯ ಕೊಳ: ಅರಣ್ಯಭೂಮಿಯಂತೆ ಅಕ್ಷತರೂಪಸಂಪನ್ನೆಯುಂ ಅರಣ್ಯಕಮಲಿನಿಯಂತೆ ಮಾತಂಗಕುಲದೂಷಿತೆಯುಂ (ಕಾದಂಪೂ. ೪೯). ೩. ಕಾಡಿನ ತಾವರೆ. [ಅರಣ್ಯ + ಕಮಲಿನಿ]

**ಅರಣ್ಯಪಂಡಿತ** (ನಾ). ಪಾಂಡಿತ್ಯವಿರುವವನಂತೆ ನಟಿಸುವವನು; ಅಲ್ಪಪಾಂಡಿತ್ಯವುಳ್ಳವನು: ಯಾವ ಬಾದರಾಯಣಸಂಬಂಧವನ್ನು ಜೋಡಿಸುವನೋ ಈ ಅರಣ್ಯಪಂಡಿತ (ಹುಚ್ಚಾಟ. ೫೫). [ಅರಣ್ಯ + ಪಂಡಿತ]

**ಅರಣ್ಯಪ್ರಕರ** (ನಾ). ಕಾಡುಗಳ ಗುಂಪು; ಅರಣ್ಯಗಳ ಸಮೂಹ: ಪರ್ಬಿರ್ದರಣ್ಯಪ್ರಕರಮಂ (ಸುಕುಮಾ. ೭–೪). [ಅರಣ್ಯ + ಪ್ರಕರ]

**ಅರಣ್ಯರುದಿತ** (ನಾ). ೧. ಕಾಡಿನಲ್ಲಿ ಅಳುವುದು, —ರೋದನ. ೨. (ಆಲಂ) ಯಾರಿಗೂ ಕೇಳದ ಆಲಾಪ; ವ್ಯರ್ಥಾಲಾಪ: ಮೂರ್ಖಜಡಜನಾರಣ್ಯದೊಳಿಂಪೋಗಡಿಸಿದ ಕವಿಶಬ್ದಮದೇಗೆಯ್ವುದರಣ್ಯರುದಿತಮದು ಬಗೆವಾಗಳ್ (ಆದಿಪು. ೧–೨೩). [ಅರಣ್ಯ + ರುದಿತ]

**ಅರಣ್ಯರೋದನ** (ನಾ). = ಅರಣ್ಯರುದಿತ ೨: ನನ್ನದು ಅರಣ್ಯರೋದನವಾಗಿರುವಂತಿದೆ (ವಚಭಾ. ೩೯೭). [ಅರಣ್ಯ + ರೋದನ]

**ಅರಣ್ಯಾಂತರ** (ನಾ). ೧. ಕಾಡಿನ ಮಧ್ಯಭಾಗ; ನಡುಗಾಡು: ಕರಿಕಳಭಂಗಳ್ . . . ಕರಪುಷ್ಕರದಿಂ ಬರೆ ತೆಗೆದುವಂದರಣ್ಯಾಂತರದೊಳ್ (ಜಗವಿ. ೪–೨೪). ೨. ಬೇರೊಂದು ಕಾಡು. [ಅರಣ್ಯ + ಅಂತರ]

**ಅರಣ್ಯಾಧಿಕಾರಿ** (ನಾ). ಅರಣ್ಯದ ಮೇಲ್ವಿಚಾರಕ: ಅನಂತರ ಅವಳು ಅರಣ್ಯಾಧಿಕಾರಿ ಬಳಿ ಹೋದಳು (ಪುನರು. ೨೮೪). [ಅರಣ್ಯ + ಅಧಿಕಾರಿ]

**ಅರಣ್ಯಾನಿ** (ನಾ). ೧. ದೊಡ್ಡಕಾಡು; ಮಹಾರಣ್ಯ: "ತರುಲತೆಗಿಡುಗಳಿಡುಕುಱಿಂದ ಘನಮಾದ ವನಮರಣ್ಯಾನಿಯೆಂದೆನಿಸಿಕ್ಕು" (ಮಂಗರಾ. ೪೫–೪೯). ೨. ವನದೇವತೆ. [ಸಂ. ಅರಣ್ಯಾನಿ, ಅರಣ್ಯಾನೀ]

**ಅರಣ್ಯಾನೀಚರ** (ನಾ). ಮಹಾರಣ್ಯದಲ್ಲಿ ಸಂಚರಿಸುವವನು; ಬೇಡರವನು: ಇತ್ತ ಸಹಸ್ರಾಯುಧಂಗೆ ವಜ್ರಾಯುಧಮುನೀಂದ್ರತಪಃಪ್ರಭಾವಮುನರಣ್ಯಾನೀಚರರಱಿಪೆ (ಶಾಂತಿಪು. ೯–೨೮ ವ). [**ಸಂ.** (ಅರಣ್ಯಾನೀ + ಚರ)]

**ಅರತ**$_1$ 'ಅಱು$_2$' ನೋ.

**ಅರತ**$_2$ (ಗು). ದುಃಖಿತನಾದ; ನೊಂದ; ಉತ್ಕಟ: ಉದಯಕಾಲದ ಲೆದ್ದು ಮುದದಿಂದಲಿ ಹರಿಯನಾಮ ಒದಗಿ ಅರತನಾಗಿ ವದನದಿ ಕೊಂಡಾಡಿ ವಿಧಿಪೂರ್ವಕದಿಂದ ಸ್ನಾನಾದಿ ಕರ್ಮ ಮುಗಿಸಿ (ವಿಸಾಸು. ೨–೧೮೬–೨). [< **ಸಂ.** ಆರ್ತ]

**ಅರತ**$_3$ (ನಾ). ಆಸಕ್ತಿಯಿಲ್ಲದವನು; ಪ್ರೀತಿಯಿಲ್ಲದಿರುವವನು: ಚಾರು ಮಾನಸ ಮಾನಸಂ ದಾನಾರತ ಶ್ರುತಕರ್ತನುಂ (ಬಸವು. ೮–೨). [**ಸಂ.**]

**ಅರತಳಾಱ** (ನಾ). ರಾಜರ ರಕ್ಷಣೆಗಾಗಿರುವ (ಪೋಲೀಸ್) ಅಧಿಕಾರಿ: ಪೊಳಲೊಳಗೆ ಅರತಳಾಱಂ ಕೊಟ್ಟುದರ್ಕೆ ಕೊಟ್ಟು ಕಾವಂ (ಎಇ. XV, ೬೯–೨೪; 1050); ಆ ಸ್ಥಳದ ಅರತಳಾಱ ಸಾಯಿದೇವ ತಮ್ಮ ನಡವತಿಪ್ಪೆಸುಂಕದಲು ಮತ್ತ ಒಕಲಲು ಒಂದು ಹೇಱ ಬಿಟ್ಟರು. (ಎಕ. VII (S), ಶಿಕಾರಿ. ೩೩೪–೨೫; 1100). [< ಅರಸ$_1$ + ತಳಾಱ (< ತಳವಾಱ)]

**ಅರತಾವು** (ನಾ). (ಕಾಗದದ) ಅರ್ಧಹಾಳೆ (ಕಿ). [ಅರ್$_5$ (< ಅರ್$_3$) + ತಾವು$_3$]

**ಅರತಿ** (ನಾ). ೧. ಆಸಕ್ತಿಯಿಲ್ಲದಿರುವುದು; ಪ್ರೀತಿಯಿಲ್ಲದಿರುವಿಕೆ; ಮನಸ್ಸಿಗೆ ಬೇಡದಿರುವಿಕೆ: "ಅರತಿ – ಮೆಚ್ಚದುದು" (ತತ್ತ್ವಪ್ರ. ೩೩೩); ಪುರಾತನ ಕರ್ಮದೊಡನೆ ಹಾಸ್ಯರತ್ಯರತಿಶೋಕಭಯಜುಗುಪ್ಸಾಭಿಧಾನನವನೋಕಷಾಯಷಟ್ಕರ್ಮಮಂ ಘಾತಿಸಿ (ಆದಿಪು. ೧೦–೧೪ ವ). ೨. ಸಿಟ್ಟು; ಕೋಪೋದ್ರೇಕ. ೩. ದಶಾವಸ್ಥೆಗಳಲ್ಲಿ ಒಂದು: ಜಲದಭುಜಗಜ ವಿಷವು ವಿರಹಿಣಿಗೆ ತಲೆಸುತ್ತ ಹೃದಯದಲಿ ಅರತಿ ಆಲಸ್ಯಗಳನು . . . ಮರಣವನು ತಾ ಕಡೆಗೆ ಬಿಡದೆ ತಹುದು (ಧ್ವನ್ಯಾಲೋ. ೯೧). [**ಸಂ.**]

**ಅರತೆರಣಿ** (ನಾ). ಗೋಡೆಯ ಅಥವಾ ಮೇಲ್ಛಾವಣಿಯ ತುದಿ (ಸ್ಯಾಂಡರ್). [?]

**ಅರತೆಱೆ** (ನಾ). ರಾಜನ ಪೋಷಣೆಗಾಗಿ (ಸ್ವಂತ ವೆಚ್ಚಕ್ಕಾಗಿ) ಕೊಡುವ ತೆರಿಗೆ: ಗನವೂರಲೊಂದು ಹಳ್ಳಿಗೆ ಹಣವೊಂದು ಅರತೆಱೆ ಹಂದಲ ಹಣ ಪರಿಹಾರ ಗಗ (ಎಕ. IX; ಕೊಡಗು. ೩೩–೧೨; 1115). [ಅರಸು$_2$ (< ಅರಸ$_1$) + ತೆಱೆ$_3$]

**ಅರತ್ನಿ** (ನಾ). ೧. ಮೊಳಕೈ. ೨. ಮೊಳಕೈಯಿಂದ ಕಿರುಬೆರಳಿನವರೆಗಿನ ಉದ್ದ; ಮೊಳ: "ಕಿಱುಕುಣಿಕೆಯಿಂದಳೆದ ಮೊಣನಂ ಅರತ್ನಿಯೆಂಬುದು" (ಹಲಾಯು. ೮೮–೩೮೨); ಮೊಳಕೈಯಿಂದ ಕಿರಿಬೆಟ್ಟಿನ ಕೊನೆಯವರೆಗೆ ಅಳೆದ ಪ್ರಮಾಣವು ವಂದು ಅರತ್ನಿಯೆನಿಸಿಕೊಳ್ಳುವುದು (ಸೌಗಂಧಿ. ೨೭೭–೬). [**ಸಂ.**]

**ಅರದ**$_1$ (ನಾ). ರಥ; ತೇರು: ಮಾಣದೆ ಚೋದಿಸು ಬೇಗಮುತ್ತಲತ್ತ ರಥ[ದ] ಮನೆಂದು ಘೋರ್ಗರೆಯೆ ಬಂದನರಾತಿಗೆ ಮಿಱು ಬರ್ಪವೋಲ್ (ಪಂಪಭಾ. ೧೧–೧೨); ಅರದದ ಪೊಂಗಾಲಿಯ ಜೀರ್ಗರೆವಂದಮನಂತವೀರ್ಯನೇಱಿದ ನಿನಗಂ ಪರಿವೆನಗಮೊಡನೆ ಕೇಡಂ ತರೆ ನಿನ್ನುಮನೆನ್ನುಮಂ ಪೆಱಂ ಕಾದಪನೇ (ಶಾಂತಿಪು. ೩–೧೧೦); ಅರದಂಗಳ್ ವಿವಿಧಾಯುಧಭರಭರಿತಂಗಳ್ (ನೇಮಿಪು. ೧೨–೨೨೧). [← **ತಮಿ.** ಇರದ; **ತೆಲು.** ಅರದ. / **ಸಂ.** ರಥ]

**ಅರದ್ವ** (ನಾ). "ಹಲ್ಲು ಇಲ್ಲದವ ; ಬೋಡ" (ಗಂಗಾಮ. ೧೪). [**ಸಂ.**]

**ಅರದಳ** 'ಅರದಾಳ' ನೋ.

**ಅರದಾಪರದಾ** (ನಾ). ಅರ್ಥಂಬರ್ಥ ; "ಹರಕಮುರಕ" (ಜಾನಕೋ. ೧೩). [?]

**ಅರದಾಲಿ** (ನಾ). ಹೇಳಿದ ಕೆಲಸವನ್ನು ನೆರವೇರಿಸಲು ಸಿದ್ಧನಾಗಿ ನಿಂತ ಸೇವಕ ; ಆಜ್ಞಾವಾಹಕ : ಹರಿವಲ್ಲಭನು ದೇವಿಯ ಹಡಗನ್ನೇರಿ ಅಲ್ಲಿದ್ದ ಅರದಾಲಿಸಿಪಾಯಿಯನ್ನು ಕುರಿತು ಹೇಳಿದನು (ದೇವೀಚೌ. ೧೪೮). [← **ಹಿಂ.** ಅರದಲೀ ; **ಮರಾ.** ಅಡಲೀ = ಆಳು, ಸೇವಕ. < **ಇಂ.** Orderly]

**ಅರದಾಳ,** ಅರದಳ (ನಾ). ಒಂದು ಜಾತಿಯ ಮರ: ಅರದಾಳ :– ಮೇಲಿನ (ಅರಟಾಳ) ಜಾತಿಯ ವೃಕ್ಷ (ಕಭಾಗ. ೩೫). **ಅರದಳ** (ವೈಶಿಗ. ೩೮–೭೫೪). [?]

**ಅರದೇಗು** (ನಾ). ತೇಗಿನ ಮರದಲ್ಲಿ ಒಂದು ಜಾತಿ : ಕಕ್ಕೆ ಕಮ್ಮರ ನರ[ರ]ದೇಗು ಕೆರ್ಕಡವುಮಂಬಟೆ . . . ಪೆರ್ಮರಗಳ ಕಾಡೊಳ್ಳೆತರುತ (ಪುಣ್ಯಾಸ್ರ. ೩–೭೪). [ಅರಸು₂ (< ಅರಸ₁) + ತೇಗು₃]

**ಅರದೇಶಿ,** ಅರದೇಸಿ (ನಾ). ಯಾತ್ರಿಕ; ಸಂನ್ಯಾಸಿ. 'ಅರದೇಶಿ ಪರದೇಶಿ' ಪರಾ. **ಅರದೇಸಿ** : 'ಅರದೇಸಿಪರದೇಸಿ' ಪರಾ. [?. / **ತೆಲು.** ಅರದೇಸಿ = ಯಾತ್ರಿಕ]

**ಅರದೇಶಿಪರದೇಶಿ,** ಅರದೇಸಿಪರದೇಸಿ (ನಾ). ಭಿಕ್ಷುಕ; ಫಕೀರ; ಯಾತ್ರಿಕ; "ಸನ್ಯಾಸಿ" (ಜಾನಕೋ. ೧೩). **ಅರದೇಸಿಪರದೇಸಿ** : ಆ ಬಳಿಕ ಕೆಳಗಾರಾದರೂ ಅರದೇಸಿಪರದೇಸಿಗಳಿದ್ದರೆ ಕರೆದು ಫಲವನ್ನು ಕೊಡಹೇಳಿ ತಂದೆತಾಯಿಗಳಾದ ಗಿಣಿಗಳು ಹೇಳಿದುದರಿಂದ (ಬತ್ತೀಸ. ೩೭). [ಅರದೇಶಿ + ಪರದೇಶಿ. / **ತಮಿ. ತೆಲು.** ಅರದೇಶಿಪರದೇಶಿ]

**ಅರದೇಸಿ** 'ಅರದೇಶಿ' ನೋ.

**ಅರದೇಸಿಪರದೇಸಿ** 'ಅರದೇಶಿಪರದೇಶಿ' ನೋ.

**ಅರನ,** ಅರ್ನ (ನಾ). (ಉಕ) = ಅರ₁ : ಅರನದಿಂದ ತಿಕ್ಕಿ ಚಾಕುವನ್ನು ಹರಿತಗೊಳಿಸಬೇಕು (ರೂಢಿ). **ಅರ್ನ** : ತುದಿಯನ್ನು ಅರ್ನದಿಂದ ತಿಕ್ಕಿ ಮೊನೆಮಾಡುವನು (ಮುಂಬಯಿ. ೪–೧೫೪) ; ಅವರ ಮೈಯೆಲ್ಲ ಕಾದ ಅರ್ನದಿಂದ ತಿಕ್ಕಿದಂತೆ (ಮುಂಬಯಿ. ೫–೭). [< ಅರ₁]

**ಅರನಟ್ಟು** (ನಾ). ಒಂದು ಜಾತಿಯ ಮರ: ಅರನಟ್ಟು–ತೋಟಗಳಲ್ಲಿ ಸಾಧಾರಣವಾದದ್ದು (ಮರ) ಇದು ಮೇಲಾದ ಅಂಜೀರಿ ಬಣ್ಣ ಹುಟ್ಟಿಸುತ್ತದೆ (ಕಭಾಗ. ೩೫). [?]

**ಅರನಡೆ** (ನಾ). ಧರ್ಮದ ನಡವಳಿಕೆ : ಬಲಿದನೌದಾರ್ಯಕ್ಕೆ ಕನಲ್ವ ಕ್ಷಾತ್ರ ಅರನಡೆಗೆ ಆತಂಕವೊಡ್ಡುವೆಡೆಯಲ್ಲೆಲ್ಲ ಎಂದಿಗೂ ಮುನ್ನಡೆವ ಸತ್ವದುರ್ಕು (ಅಮತಂ. ೨೨). [ಅರ₂ (< ಅಱ₂) + ನಡೆ₂]

**ಅರನಾಭಿದೃಷ್ಟಾಂತ** (ನಾ). [ತತ್ತ್ವಶಾ] ಬಂಡಿಯ ಚಕ್ರದ ಅರೆ ಕಾಲುಗಳು ಗುಂಬದಲ್ಲಿ ಸೇರಿಕೊಂಡಿರುವ ದೃಷ್ಟಾಂತ : ಹೇಗೆ ಹಾರೆ [ಅರೆ] ಕೋಲುಗಳು ಗುಂಬದಲ್ಲಿ ಸೇರಿಕೊಂಡಿರುತ್ತವೆಯೋ ಹಾಗೆ ಎಲ್ಲವೂ ಈ ಪ್ರಾಣನಲ್ಲಿ ಸೇರಿಕೊಂಡಿರುತ್ತದೆ . . . ಎಂದು . . . ಅರನಾಭಿ ದೃಷ್ಟಾಂತವನ್ನು ಕೊಟ್ಟಿರುವುದರಿಂದ (ಬ್ರಹ್ಮಭಾ. ೩೮೨). [ಅರ₉ + ನಾಭಿ + ದೃಷ್ಟಾಂತ]

**ಅರನಾರಿ** (ನಾ). ೧. ದೇಹದ ಒಂದು ಪಾರ್ಶ್ವದ ಚಲನಗಳು ನಿಂತು ಹೋಗುವುದು ; ಪಾರ್ಶ್ವವಾಯು ; ಲಕ್ವ : ಅರಸನಿಲ್ಲದ ನಾಡು ವರುಷವಿಲ್ಲದ ಬೆಳೆಯು ಹರುಷವಿಲ್ಲದವಳ ಮನೆವಾರ್ತೆ ಅರನಾರಿಪುರುಷ ನಂತಕ್ಕು (ಸರ್ವಜ್ಞ. ೧೭೧೭) ; ಒಬ್ಬ ಕುಷ್ಠಿಯನ್ನೂ ಅರನಾರಿಯಿಂದ ನರಳುತ್ತಿದ್ದ ಶತಾಧಿಪತಿಯ ಆಳನ್ನೂ ಗುಣಪಡಿಸಿ (ಗೂಲ್ಡೊಥಾ. IV ಮು). ೨. ಒಂದೇ ಮಗ್ಗುಲಲ್ಲಿರುವುದು ; ಒಂದೇ ಕಡೆಗಿರುವುದು. [ಅರ₅ (< ಅರ₃) + ನಾರಿ₁. / **ಸಂ.** ಅರ್ಧನಾಡೀ ?]

**ಅರನಾರಿಅಂಚು** (ನಾ). ಬಟ್ಟೆಯ ಒಂದು ಅಂಚು ಒಂದು ಬಣ್ಣದಿಂದಲೂ ಮತ್ತೊಂದು ಅಂಚು ಬೇರೊಂದು ಬಣ್ಣದಿಂದಲೂ ಕೂಡಿರುವುದು (ಮುಂಬಯಿ. ಕಿ. ೩–೧೦೩). [ಅರನಾರಿ + ಅಂಚು₂]

**ಅರನಿದ್ದೆ** 'ಅರೆನಿದ್ದೆ' ನೋ.

**ಅರನಿರಿ₁** (ನಾ). ಧರ್ಮದ ಕ್ರಮ ; ಧರ್ಮನಿಯಮ : ಅರಿವಾಗಿ, ಅರುಳಾಗಿ, ಅರನಿರಿಯ ತಿರುಳಾಗಿ, ಬೆಳ್ಗೊಡೆಯ ನೆರಳಾಗಿ (ಹೊಂಗಳು. ೩೩–೨೩). [ಅರ₂ (< ಅಱ₂) + ನಿರಿ₁ (< ನಿಱಿ₂)]

**ಅರನಿರಿ₂** (ನಾ). (ಸೀರೆಯ) ಅರ್ಧನೆರಿಗೆ : ಅರನಿರಿ ಸೀರೆ (ರೂಢಿ). [ಅರ₅ (< ಅರ₃) + ನಿರಿ₁ (< ನಿಱಿ₂)]

**ಅರನೆಲೆ** 'ಅರೆನೆಲೆ' ನೋ.

**ಅರನೆಲ್ಲಿ** (ನಾ). ಒಂದು ಜಾತಿಯ ನೆಲ್ಲಿಯ ಮರ; ಶ್ರೇಷ್ಠವಾದ ನೆಲ್ಲಿಯ ಮರ ; ರಾಜನೆಲ್ಲಿ : ಎಲವ ಮುತ್ತುಗ ಹಾಲೆಯರ ನೇಱಿಲ ಕಡವೆ ಪೆರ್ಗೋಳಿಯಾಲವ ಬೆಳಲು ಮೊರಟ ಪೆರ್ವಿದಿರಶೋಕೆಯರನೆಲ್ಲಿ ಬೆಳುನೆಲ್ಲಿ (ಸಾಳ್ವಭಾ. ೫–೩) ; ಅರಳಿ ಕಡಪೊಡವು ಕಂಡಸಿಯರನೆಲ್ಲಿ ಬಿದಿರ್ಪತಂಗಮುರುಟಾಳಂ ಪಾದರಿ ಬಾಗೆ ತೇಗು (ರಾಜಶೇ. ೫–೫೮) ; ಅಂಬಟೆಯರೆ[ರ]ನೆಲ್ಲಿ ಚಳ್ಳೆ ಬಿಲ್ವದ ಮರ (ಕಂಸವಿ. ೫–೮೯). [ಅರಸು₂ (< ಅರಸ₁) + ನೆಲ್ಲಿ]

**ಅರನೇಱೊಡ** (ನಾ). ನೇರಿಳೆಮರದ ತೋಪು (?) : ಉದಿಚಿದೆಸೆ ಕೆಱೆಯಿನ್ನೀಗ್ಗೋರೆಮಟ್ಟ ಈಶಾನ ದೆಸೆ ಅರನೇಱೊಡಂ ತಸ್ಯದಾನಸ್ಯ ಸಾಕ್ಷಿಣ (ಎಕ. X (S), ಮುಳಬಾ. ೩೨೮–೫೩ ; 650 ?). ☞ 'ಅರನೇಱೊಡ್ಡು' ಎಂಬುದರ ಅಪಲಿಖಿತವಿರಬಹುದು. [ಅರನೆಱ₀ (< ಅರನೇಱಿಲ್) + ಒಡ₀ (< ಒಡ್ಡು₂)]

**ಅರನೇಱಿಲ್** (ನಾ). ೧. ಶ್ರೇಷ್ಠವಾದ ನೇರಿಳೆ; ಜಂಬುನೇರಿಳೆ ; ರಾಜನೇರಳೆ : ಪೆಜತೊಂದೆಡೆಯೊಳ್ ಸಹಕಾರ ರಸದಿಂ ತೊಯ್ದುರನೇಱಿಲ ತಳಿರ್ಗಳಿಂ ಪೊದಯಿಸಿದ ಕುಳಿರ್ವ ಕಾವಣಂಗಳುಮಂ (ಕಾದಂಬ. ೨೧೪) ; ಬಾಟಿಯ ಖರ್ಜೂರದ ಕಿತ್ತೀಱೆಯ ಕರ್ಪೂರದ ಮಾವಿನರನೇಱಿಲ (ಕಾವ್ಯಾವ. ೨೩೦) ; ಎಲವ ಮುತ್ತುಗ ಹಾಲೆಯರನೇಱಿಲ ಕಡವೆ (ಸಾಳ್ವಭಾ. ೫–೩). ೨. ನಾಯಿನೇರಳೆ : ಸಮನಪ್ಪಂತಿರೆ ಕೂಡಿ ಲುಂಗ ಮರನೇಱಿಲ್ ಬಿಲ್ವಮಾಮ್ರಂ ಕಪಿತ್ಥಮೆನಿಪ್ಪಯ್ದುಜ ಪಲ್ಲವತ್ವಚಮನೆಂಟೊಂದಪ್ಪಿನಂ ಕಾಸಿ (ಲೋಕೋಪ. ೭–೧೧) ; "ನಾಯ್‌ನೇಱಿಲ್" (ಲೋಕೋಪ. ಟೀಕೆ). [ಅರಸು₂ (< ಅರಸ₁) + ನೇಱಿಲ್]

**ಅರಪಕ್ಷಿ** (ನಾ). ಶ್ರೇಷ್ಠವಾದ ಪಕ್ಷಿ : ರಾಕ್ಷಸನೊಡನೆ ಸಮರಕೆ ನಿಂದು ಖಾಡಾಖಾಡಿಯಲಿ ಕಡಿದಾಡಿ ಮೂರ್ಛೆಯಲಿ ನೊಂದೆನೀನರಪಕ್ಷಿಯೆಂಬುದನಿಂದು ತೋಱಿದೆ (ಅನಂರಾ. ೩–೫–೨೩). [ಅರಸು₂ (< ಅರಸ₁) + ಪಕ್ಷಿ]

**ಅರಪಟ್ಟ** (ನಾ). ರಾಜಪಟ್ಟ ; ರಾಜಪದವಿ. 'ಅರಪಟ್ಟಂಗಟ್ಟು' ಪರಾ. [ಅರಸು₂ (< ಅರಸ₁) + ಪಟ್ಟ]

**ಅರಪಟ್ಟಂಗಟ್ಟು** (ಕ್ರಿ). ರಾಜಪಟ್ಟವನ್ನು ಕಟ್ಟು : ಪುತ್ತೂರ ತೊಱು ಕೊಳೊಳ್ಪಿತ್ತೋಮ ಬಲಿಮಿಣ್ಣನ ಆ ಸೆಟ್ಟಿಯರಮಗನರಪಟ್ಟಙ್ಗಟ್ಟ (ಎಕ. X, ಕೋಲಾರ. ೨೩೩–೫ ; 815). [ಅರಪಟ್ಟ + ಕಟ್ಟು₁]

**ಅರಪಟ್ಟಿಗ** (ನಾ). (?) : ನರಯಣನ ದಾನಗೊಟ್ಟ ಪಱ್ದಿಲ ದೇವಯಾನ ದೇಗುಲಕ್ಕೆ ಕೊಟ್ಟ ನನ್ದಿಮಕರ ಪ್ರತಿಮೆಗಳನರಪಟ್ಟಿಗ ಪೊನ್ಸದಿತ್ಯನ(ಂ) ಸ್ನಾನಂಗೊಟ್ಟ (ಸೌಇಇ. XI–i, ೩೫–೧೦ ; 933). ☞ ಈ ಶಬ್ದವನ್ನು 'ನರಪಟ್ಟಿಗ' ಎಂದೂ ಬಿಡಿಸಬಹುದು. [?]

**ಅರಪಣ** (ನಾ). ಆಸ್ತಿ ಇಲ್ಲದವನು; ಏನೂ ಇಲ್ಲದವನು; ನಿರ್ಗತಿಕ: ಅರಪಣಕ್ಕೆ ಐಶ್ವರ್ಯ ಬಂದರೆ ಅರ್ಧರಾತ್ರಿಯಲ್ಲಿ ಕೊಡೆ ಹಿಡಿಸಿಕೊಂಡ (ಗಾದೆ). [ಸಂ. ?]

**ಅರಪಿಚ್ಚಗೆ** (ನಾ). ಜಾಜಿಗಿಡ: ಗುರುಗುಂಜಿಯೆಲೆಯೊಳಲ್ಲದೊಡರ ಪಿಚ್ಚಗೆಯರಲೊಳೆಳ್ಳುಮಂ ಬೆಲ್ಲಮುಮಂ ಬೆರಸಿ ತುಱುದಿಟ್ಟದಂ ತಿನೆ ವರಾಂಗಿ ಲತೆಯಂತೆ ಪುಷ್ಪವತಿಯಾಗಿರ್ಕುಂ (ಲೋಕೋಪ. ೯–೧೭೪); "ಜಾಜಿಯ ಮೊಗ್ಗೆ" (ಲೋಕೋಪ. ಟೀಕೆ). [?]

**ಅರಪು** 'ಅಱಬ್ಬು' ನೋ.

**ಅರಪುಕತ್ತೆ** (ನಾ). ಬಹಳ ಕಾಲ ಹೊಟ್ಟೆಗಿಲ್ಲದ ಕತ್ತೆ: ಅರಪುಕತ್ತೆ ಹೊಲಕ್ಕೆ ನುಗ್ಗಿದ ಹಾಗೆ (ಗಾದೆ).
[ಅರಪು (< ಅಱಬ್ಬು₂) + ಕತ್ತೆ + (< ಕೞ್ತೆ)]

**ಅರಪುಡಿ** 'ಅರವುಡಿ' ನೋ.

**ಅರಪುಣುಸೆ** (ನಾ). ಒಂದು ಊರು: ಅರಪುಣುಸೆ ನಾಮ ಗ್ರಾಮಸ್ಯ (ಎಇ. II, ೫–೨೦ ; 754). [ಅರ್₄ + ಪುಣುಸೆ (< ಪುಣಿಸೆ)]

**ಅರಬ**₁ (ನಾ). ಅರಬ್ಬೀದೇಶದವನು: ಅರಬರ ದೇಶದ ಮರುಭೂಮಿಯೊಳಾಯಾಸದಿ ತಿರುಗುವ ವಾರಿಗರ (ಭಾವಗೀ. ೯೨). [← ಅರ. ಅರಬ್]

**ಅರಬ**₂ (ನಾ). ಒಂದು ಬಗೆಯ ದೊಡ್ಡ ಬಂಡಿ: ಅರಬ ಅಲ್ಲಿ ಹೋಗುವಾಗ ಎರಡು ಕಡೆಯ ಮನೆಗಳ ಮಣ್ಣುಗೋಡೆಗಳಿಗೂ ತಾಕಿ ಕೆರೆಯುವಂತೆ ಬಹು ಇಕ್ಕಟ್ಟಾದ ಆ ಬೀದಿಗಳು (ನಗೆಹೊ. ೯); "ಅರಬ = ಸ್ಥಳೀಯವಾದ ಒಂದು ಬಗೆಯ ಬಂಡಿ" (ನಗೆಹೊ. ೯ ಅಡಿಟ).
[← ಪಾರ. ಅರಾಬ; ಹಿಂ. ಮರಾ. ಅರಾಬಾ. / ತೆಲು. ಅರಾಬಾ = ಫಿರಂಗಿ ಬಂಡಿ]

**ಅರಬಕ್ಷಿಪರಬಕ್ಷಿ** (ಗು). (ಉಕ) ಬುದ್ಧಿ ಬಲಿಯದ; ಬುದ್ಧಿ ತಿಳಿಯದ: ನನ್ನ ಕೋಮಾರ ಅರಬಕ್ಷಿಪರಬಕ್ಷಿ ಒಬ್ಬರೊಂದೀನ ಮಲಿಗೊಳ್ಳ (ಮಲ್ಲಿಗೆ. ೩೩). [?]

**ಅರಬಡ್ಡಗಿ, ಅರವಡ್ಡಗಿ** (ನಾ). ಅರಮನೆಯ ಬಡಗಿ; ರಾಜಶಿಲ್ಪಿ: ಅರಬಡ್ಡಗಿಯರವಾದ ಪುಲಿ ಮಾಡಿದಾನ್ (ಎಕ. VIII, ಸೊರಬ. ೧೧೦–೯ ; 800). **ಅರವಡ್ಡಗಿ**: ಅರವಡ್ಡಗಿಯರವದಪೂಲಿಯರ್ಮಾಡಿದ ಸಿಲಾಕರ್ಮ (ಎಕ. VIII, ಸೊರಬ. ೨೨–೧೦ ; 800).
[ಅರಸು₂ (< ಅರಸ₁) + ಬಡ್ಡಗಿ]

**ಅರಬಲವ** (ನಾ). ಒಬ್ಬಾತನ ಹೆಸರು: ಅಹಿತಜ ಪಾರ್ತ್ಥ ಅರಬಲವನ ಅಳ್ದೊಡೆ ಚೋೞರಂ ಪಿಟ್ದು... ಸ್ವರ್ಗ್ಗಸ್ಥನಾದಂ (ಎಕ. XI. ಹೊಳಲ್ಕೆ. ೮೫–೫ ; 977). [ಅರಸು₂ (< ಅರಸ₁) ? + ಬಲವ₀]

**ಅರಬಸ್ಥಾನ** (ನಾ). ಅರಬ್ಬಿದೇಶ. [ಅರಬ₁ + ಸ್ಥಾನ]

**ಅರಬಿ** 'ಅರಬ್ಬಿ' ನೋ.

**ಅರಬಿದೇಶ** (ನಾ). = ಅರಬಸ್ಥಾನ. [ಅರಬಿ + ದೇಶ]

**ಅರಬೀದಿ** (ನಾ). ರಾಜಬೀದಿ; ರಾಜಮಾರ್ಗ: ವಾಜಿಯ ಕನಕ ಖಲೀನದ ಪೇರುಲಿಯೆಸೆಗಾಹುರದೆಲ್ಲೆಡೆಯರಬೀದಿಯೊಳು (ಉದ್ಭದೇ. ೨–೩೭). [ಅರಸು₂ (< ಅರಸ₁) + ಬೀದಿ]

**ಅರಬು** 'ಅಱಬ್ಬು' ನೋ.

**ಅರಬುಗಾಡು** (ನಾ). ಕ್ಷಾಮದ ಸೀಮೆ; ಬೆಂಗಾಡು: ಮಳೆ ಬೆಳೆ ಇಲ್ಲದೆ ದೇಶವರಬುಗಾಡೆದ್ದಿತು (ಸ್ಯಾಂಡರ್).
[ಅರಬು (< ಅಱಬ್ಬು₂) + ಕಾಡು₂]

**ಅರಬೂತ** (ನಾ). ದೊಡ್ಡಭೂತ; ದೆವ್ವ: "ಅರಿಷ್ಟಮನ್ಯಾಗ ಅರಬೂತಿಟ್ಟೈತಿ" (ಜಾನಕೋ. ೧೩).
[?. ಮರಾ. ಅರಭುಜ, ಅರಬುದ = ಅಸಭ್ಯ. / ಸಂ. ಅರ್ಬುದ]

**ಅರಬೇವು** (ನಾ). ಒಂದು ಜಾತಿಯ ಬೇವಿನ ಮರ: ಹೆಬ್ಬೇವಿನ ಬೀಲು ಬಾದಲೂ ದೊರೆಯದೆ ಇದ್ದರೆ ಅರಬೇವಿನ ಬೀಜವನ್ನಾದರೂ ಹಾಕುವದು (ಕೃಷಿಪ್ರ. ೧೩೩). [ಅರಸು₂ (< ಅರಸ₁) + ಬೇವು]

**ಅರಬೊಜಂಗ** (ನಾ). ಶ್ರೇಷ್ಠನಾದ ವಿಟ; ರಾಜವಿಟ: ಬರ್ಪಪಾಂಗಗುರ್ವಾಗಿರೆ ಚೆಲ್ವನಾಯ್ತರಬೊಜಂಗರ ಲೀಲೆ ಸುರೇಂದ್ರಲೀಲೆಯಿಂ (ಪಂಪಭಾ. ೪–೮೭). [ಅರಸು₂ (< ಅರಸ₁) + ಬೊಜಂಗ]

**ಅರಬ್ಬಿ, ಅರಬಿ, ಅರಬ್ಬೆ** (ನಾ). ಅರಬ್ಬಿಯೆಂಬ ದೇಶ, —ಭಾಷೆ, —ಜನ: ಒರೆದು ನೋಡೀ ಲಿಪಿಯ ಒಡಲ ಬಲ್ಲವರು ಆರೆ ಪಾರಸಿಯಲ್ಲ ಅರಬ್ಬಿಯಲ್ಲ, ಗೀರ್ವಾಣ ತಾನಲ್ಲ ಗಿರಿಜೆಪತಿ ಬಲ್ಲ (ಶರಲೀ. ೧೫೯–೬). **ಅರಬಿ**: ಅರಬಿದೇಶ (ರೂಢಿ). **ಅರಬ್ಬೆ**: ಹಬ್ಬಿತು ಗಗನ ಕೆಂಧೂಳು ಮುಸುಕಿ ಬಹ ಹಬ್ಬಿಸಿಗಳು ಪರಂಗಿಗಳು ರಬ್ಬುದೋರುತ ಅರಬ್ಬೆಗಳು ಭೂತಗಳಂತೆ ಗರ್ಭನಿರ್ಭೇದ ನೋಡುವರೆ (ಸೌಂದಕಾ. ೫–೧೧).
[← ಅರ. ಅರಬ್]

**ಅರಬ್ಬಿಸ್ತಾನ್** (ನಾ). = ಅರಬಸ್ಥಾನ: ಅರಬ್ಬಿಸ್ತಾನ್ ಎಂಬುವ ತುರುಕರ ಸೀಮೆಯಲ್ಲಿ ಹುಟ್ಟುವ ತದುಕಿನ ಮಡ್ಡಿ (ಸಿದ್ಧಾಂತಿ. ೧೮೦). [?]

**ಅರಬ್ಬೆ** 'ಅರಬ್ಬಿ' ನೋ.

**ಅರಮ** (ನಾ). ಒಂದು ರೀತಿಯ ಕಣ್ಣಿನ ರೋಗ: "ಕಣ್ಣುಬೇನೆ" (ಗಂಗಾಮು. ೧೪); "ಅರಮ – ಅರ್ಮ = ಬೇನೆ" (ತದ್ಭಕೋ. ೭).
[< ಸಂ. ಅರ್ಮನ್]

**ಅರಮಗ** (ನಾ). ದೊರೆಯ ಮಗ; ರಾಜಕುಮಾರ: "ಅರಮಗನೆಂದರಸುಮಗಂ" (ಕಶಸಾ. ೩೩೪); "ಅರಮಗನರಸುಮಗಂ" (ಕವಿಕಂ. ೧೫೩); ಮಱಿಗೆವಂದರಂ ಕಾಯದೆ ಬಾಬ್ಬರಮಗನ ಬಾಹುದಂಡಂ ನಿರರ್ಥಕಂ (ಪಂರಾಮಾ. ೧೨–೭೯); ಅರಮಗನಿರ್ಪನೋಲಗದೊಳ್ (ಅರ್ಧನೇ. ೨–೩೭); ಅರಮಗನಂ ಕೆಲ್ಲಯಿಸುತ ನೋಡುವ ತರುಣಿಯ ಕೇಕರರುಚಿ ಕರ್ಣಾಂತಂ ಪರಿದು ಕರಂ ವಿಭ್ರಾಜಿಸಿದುದು (ಜಯಕಾ. ೪–೧೨). ℙ ಅರಮಕ್ಕಳ್ (ಬಹುವ): ಸೊರ್ಕಿನರಮಕ್ಕಳ ಮೊಕ್ಕಳ (ಗೀತಗೋ. ೧೪).
**ಅರಮಗಳ್** = ರಾಜಕುಮಾರಿ: ಅರಮಗಳಾಲಾಪಕೆ ತಮ್ಮಯ ದನಿ ಸರಿಯೆಂದಾಡಿದ ಪಾಪದ ಫಲದಿಂ... ಅನವರತಂ ನುಡಿವಡೆಯದೆ ಪಿಕವಿರ್ದುವು (ಜಯಕಾ. ೩–೫೪). [ಅರಸು₂ (< ಅರಸ₁) + ಮಗ]

**ಅರಮುಣ್** (ನಾ). ಒಂದು ಬಗೆಯ ತೆರಿಗೆ: ಗಾವುಣ್ಣಗಳು ಪನ್ನಸಿಗರು ಅಯ್ಯಪದೇವನಲ್ಲಿ ಕೆಱಿಗೆ ಬಿತ್ತುವಾಟವ ಪಡೆದ ಅರಮುಣ್ಣೊದಲಾಗಿ ಎಲ್ಲನ್ತಿಱುಗುಂ (ಸೌಇಇ. IX –i ; ೨೧–೭ ; ೯ನೆಯ ಶತ).
[ಅರ ? + ಮುಣ್ ?]

**ಅರಮಣೆ** (ನಾ). ಅರಸನ ಪೀಠ; ಸಿಂಹಾಸನ: ಅರಮಣೆಯನೇಱಿ ತಳೆವೆನಾನ್ ಸರ್ವಾಧಿಕಾರಮನ್ (ಅಂತಿಗೂ. ೧೭೦); ನೀನೆಲಗೆ ಚೆನ್ನಿಗಳ್ ಅರಮಣೆಯ ನೇರಿರ್ಪ ಸ್ತ್ಯಾಸನೋ (ಬದ್ಧಪ್ರ. ೩೪–೭೩೮).
[ಅರಸು₂ (< ಅರಸ₁) + ಮಣೆ]

**ಅರಮನೆ, ಅರಮ್ಮನೆ** (ನಾ). ೧. ರಾಜನ ಮನೆ; ಅರಸನ ನಿವಾಸಸ್ಥಾನ: ಅರಮನೆ ತಾಣ (ಎಕ. VI, ಕೊಪ್ಪ. ೩೭–೯ ; 675); ಚರಿಗೆವುಗುತ್ತಂ ಬರ್ಪೊರರಮನೆಯಂ ಪೊಕ್ಕಾಗಳ್ (ವಡ್ಡಾರಾ. ೭೮–೬); ಹಸನವಾಡಿಯೆಂಬ ಗ್ರಾಮದಲು ಅರಮನೆಯ ಭಂಡಾರಕ್ಕೆ (ಎಕ. VII, ಶಿವಮೊ. ೭೦–೧೯ ; 1409); ರಾಜಾಲಯ ಶ್ರೀ ಶಿರಸರೋರುಹವೆನಿಸಿತರಮನೆ ಕಾಂತಿಜಲದೊಳಗೆ (ಸಾಳ್ವಭಾ. ೨–೧೭). **ಅರಮ್ಮನೆ**: ೧. ವಾರಣಸಿಯ... ಕೆಡುಗೆ ಅರಮ್ಮನೆಯ ಭಟಮಾನ್ (ಮೈಆರಿ. ೧೯೩೩, ೫೯–೬ ; 800).
೨. ಕಾರ್ಯಾಲಯ; ಕಚೇರಿ. ೩. ಸರ್ಕಾರ,

ಅರಮನೆಗೊಂಡೆಯಗಂಡ = ಅರಮನೆಯ ಚಾಡಿಕೋರರನ್ನು ದಂಡಿಸುವವನು ; ಒಂದು ಬಿರುದು : ಸಾನತಗಸಣಿ ಅರಮನೆಗೊಂಡೆಯರ ಗಂಡ ತಂಮಯನ ಪೆಸರಲಿ (ಎಕ. VI, ತರೀಕೆ. ೩೭–೨೨ ; 1178).
[< ಅರಸ$_1$+ ಮನೆ. / **ತಮಿ.** ಅರಮನ್ನೈ ; **ಮಲ.** ಅರಮನ ; **ಕೊಡ. ತುಳು.** ಅರಮನೆ]

**ಅರಮನೆಕಾಱ** (ನಾ). ಅರಮನೆಯ ಸೇವೆಯಲ್ಲಿರುವವನು : ಆಟಗಾಱಂ ಮುಂಡುಕಾಱಂ ಅರಮನೆಕಾಱಂ (ಭಾಷಾಭೂ. ೧೭೭ ಉದಾ).
[ಅರಮನೆ + –ಕಾಱ]

**ಅರಮನೆಗಲ್** (ಕ್ರಿ). ಅರಮನೆಯಿಂದ ಕಲಿತುಕೊಳ್ಳು ; ಅರಮನೆಯಲ್ಲಿ ಕಲಿತುಕೊಳ್ಳು : ಅರಮನೆಗಲ್ತು ಸೂಳೆಮನೆಗಲ್ತು ಸವಣ್ಮನೆಗಲ್ತು ಕೂಡೆಬಲ್ಲರ ಬಗೆಗಲ್ತು ವಸ್ತುಕೃತಿಯಂ ಸಲೆ ಪೇೞ್ವುದು (ಕಾವ್ಯಾವ. ೨೦೫). [ಅರಮನೆ + ಕಲ್$_1$]

**ಅರಮನೆವುಗು** 'ಅರಮನೆವೊಗು' ನೋ.

**ಅರಮನೆವೊಗು,** ಅರಮನೆವುಗು (ಕ್ರಿ). ಅರಮನೆಯನ್ನು ಪ್ರವೇಶಿಸು ; ರಾಜಗೃಹಕ್ಕೆ ಹೋಗು : ಅಡಲೇನಾತನರಮನೆವೊಗಲ್ ಬಸವನುಸಿರಾಡಿದುದು ಮೂಗಿನೊಳ್ (ಚಬಪು. ೬–೨೭). **ಅರಮನೆವುಗು :** ಮುರಹರ ನಿಖಿಲ ಯಾದವರ ಬೀಳ್ಕೊಟ್ಟು ತನ್ನರಮನೆವುಗಲ್ (ಮೋಹತ. ೧೬–೩). [ಅರಮನೆ + ಪೊಗು]

**ಅರಮರಲು,** ಅರಮರಳು (ನಾ). ಒಂದು ಗಿಡ, —ಮರ : ದೂರದಲ್ಲಿ ಹುಳಿಚೊಪ್ಪಿನ ಪೊದೆಗಳೂ ಬೊಮ್ಮರಲ ಮಟ್ಟುಗಳೂ ಅರಮರಲ ಗಿಜರುಗಳೂ ಇದ್ದುವು (ಮಲೆಮ. ೧೪೦). **ಅರಮರಳು :** ಪೆಟ್ಲಗೆಂದು ಒಂದಷ್ಟು ಅರಮರಳುಕಾಯನ್ನು ಕೊಯ್ದು (ಪ್ರಕ್ಷಿ. ೯೪). [?]

**ಅರಮರಳು** 'ಅರಮರಲು' ನೋ.

**ಅರಮರಿಕೆ** (ನಾ). ೧. ಅನುಮಾನ ; ಸಂಶಯ ; ಶಂಕೆ : ಕಾವೆದೆಯೊಳರಮರಿಕೆ ತೂರಿ ಬೆಕ್ಕಿನೊಲು ಹಂಬಲದ ದಾರಿಯಡ್ಡನುಗ್ಗುತಿದೇಕೆಯೊ (ಗೀವಿಂ. ೬೭–೧೧೦). ೨. ಅಸಮ್ಮತಿ ; ವೈಮನಸ್ಯ : ನನಗೆ ನಿನಗೇನಾದರೂ ಅರಮರಿಕೆ ಉಂಟೋ (ಸ್ಯಾಂಡರ್). ೩. ಅರ್ಧಮರೆ; ತೆರೆ.
[ಅರಮರೆ (< ಅರೆಮರೆ) + –ಇಕೆ. / **ತೆಲು.** ಅರಮರಿಕ = ಭೇದ, ಶಂಕೆ]

**ಅರಮರೆ** 'ಅರೆಮರೆ' ನೋ.

**ಅರಮರೆಮಾಡು** (ಕ್ರಿ) ಅರ್ಧಮರೆಮಾಡು; ಮುಚ್ಚುಮರೆಮಾಡು : ಹರಿ ನಿನ್ನ ದಾಸರ ಚರಣಯುಗಳವನ್ನು ನೆರೆ ನಂಬಿದವ್ಯಾಲೆ ನರರೊಳು ಗಣಣೆ ಅರಮರೆಮಾಡದೆ ಎನ್ನ ಕಡೆಗೆ ಮೊಗತಿರುಹು (ತೀರ್ಥಮ. ೧೦೪). [ಅರಮರೆ (< ಅರೆಮರೆ) + ಮಾಡು$_1$]

**ಅರಮರ್ದ** (ನಾ). (ಉಕ) ಅರ್ಧಂಬರ್ಧ : ಕೆಲಸ ಅರಮರ್ದಮಾಡಬಾರದು (ರೂಢಿ). [< ಅರ್ಧಂಬರ್ಧ]

**ಅರಮಾದಲ,** ಅರಮಾದಳ (ನಾ). ರಾಜಮಾದಲಗಿಡ, —ಹಣ್ಣು : "ಮಧುವಲ್ಲಿಯರೆ[ರ]ಮಾದಲಂ" (ಮಂಗರಾ. ೪೧–೩೩). **ಅರಮಾದಳ** (ಮೈಔಗಿ. ೭೯–೧೬೨೧). [ಅರಸು$_2$ (< ಅರಸ$_1$) + ಮಾದಲ]

**ಅರಮಾದಳ** 'ಅರಮಾದಲ' ನೋ.

**ಅರಮಾಯಿಷಿಪರಮಾಯಿಷಿ,** ಅರಮಾಸಿಪರಮಾಸಿ (ನಾ). ಬಹಳ ಬೆಲೆಬಾಳುವ ಶ್ರೇಷ್ಠವಾದ ವಸ್ತು (ಉಕ). **ಅರಮಾಸಿಪರಮಾಸಿ** (ಕಿ). [← **ಪಾರ.** ಅರಮಾಯಿಷ್ ಫರಮಾಯಿಷ್ ?]

**ಅರಮಾವು** (ನಾ). ಕಲ್ಲುಳಿ : "ಟಂಕ = ಅರಮಾವು" (ಅಕಾನಿ. ೧೧–೭).
[?]

**ಅರಮಾಸಿಪರಮಾಸಿ** 'ಅರಮಾಯಿಷಿಪರಮಾಯಿಷಿ' ನೋ.

**ಅರಮುಡಿ** (ನಾ). ಅರಸನ ಮುಡಿ ; ರಾಜನ ತಲೆಕೂದಲು : ಸಿರಿಯನಿತುಮಿರ್ದೊಡಂ, ಅರಮುಡಿಗೆ ನರೆನವಿರ ಬೆಳ್ಪಿಗೆರೆಯೇರ್ದೊಡಂ. . . ಸಂತಾನಮಂ ಕಾಣದೆ (ಶ್ರೀರಾಮಾ. ೭–೧೪೯).
[ಅರಸು$_2$ (< ಅರಸ$_1$) + ಮುಡಿ$_2$]

**ಅರಮೆ**$_1$ (ಅ). ೧. ಕೆಲಮಟ್ಟಿಗೆ; ಸ್ವಲ್ಪಮಟ್ಟಿಗೆ; ಸ್ವಲ್ಪಮಾತ್ರ : ಅರಮೆಮುಱಿ ಪತಂಗಂಗಾಗೆ ತಚ್ಛೈಲಶೃಂಗಂ ವಿರಹಪರವಶಾಂಗಂ ತ್ಯಕ್ತಜಾಯಾನುಷಂಗಂ (ಚಂದ್ರಪು. ೮–೫) ; ಅರಮೆ ತಿದ್ದಿದ ತಿಲಕಮೇಕನಯನಾಂಜನಂ ಕರದ ಕನ್ನಡಿ ಕಟ್ಟದೊಳ್ಮುಡಿ (ಚಬಪು. ೧೯–೨೪) ; ಅರಮೆ ಅರಲ್ದ ಬಯಲ್ತಾವರೆಗಳ ಪುದುವುಗಳೊಳರಮೆ ಎಳದಳಿರ ಲತಾಂತರದೊಳುಳಿದುಳಿದು ಕಾಡುಗುಮಿರುಳಪ್ಪಿನಮುಱುವಿನಿಯಳಂ ಚಕ್ರಾಹ್ವಂ (ಕಾವ್ಯಾವ. ೪೭). ೨. ಕೆಲವೆಡೆಗಳಲ್ಲಿ ; ಕೆಲವು ಸಂದರ್ಭಗಳಲ್ಲಿ : "ಅರಮೆಯೆಂದು ಕೆಲವು" (ಕಶಸಾ. ೬೦೯) ; "ಅರಮೆಯೆನಲ್ ಕೆಲವಹುದು" (ಕವಿಕಂ. ೨೫೫) ; "ಅರೆ ಅರಮೆ ಕ್ವಚಿತ್ಕದಾಚಿದರ್ಥಯೋಃ" (ಭಾಷಾಭೂ. ೨೬೪) ; ಎತ್ತಾನುಮುದಲ್ಲಿಯೂನುಮೆಂಬರ್ಥದೊಳಾಯತ್ತಂಗಳರಮೆ ಅರೆಗಳ್ (ಶಮದ. ೩೧೨) ; ಸುರಭಿಸುರಧೇನುವೆಂದಭಿನಿರೂಪಣಂಗೆಯ್ವರರಮೆ ಶಬ್ದಾಗಮಿಕರ್ (ವಸ್ತುಕೋ. ೧೩೫–೧೧೧). ೩. ಬಹಳವಾಗಿ ; "ಅತ್ಯಂತವಾಗಿ" (ಕಾದಂಉ. ೪೮೦ ಅಡಿಟಿ) ; ಅರಾನುಂ ದೋಷಮನಧ್ಯಾರೋಪಿಸಿ ಗುಣಿಗಳರಮೆ ನೋವರ್ (ಕಾದಂಉ. ೪೮೦). [?]

**ಅರಮೆ**$_2$ 'ಅರವೆ' ನೋ.

**ಅರಮೆ**$_3$ 'ಅರುಮೆ' ನೋ.

**ಅರಮ್ಮನೆ** 'ಅರಮನೆ' ನೋ.

**ಅರರ**$_1$ (ನಾ). ೧. ಹೊದಿಕೆ ; ಮುಸುಕು. ೨. ಬಾಗಿಲ ರೆಕ್ಕೆ; ಕದ; ಬಾಗಿಲು : "ಬಾಗಲು ಮುಚ್ಚಿ ತೆಗೆಯುವ ಕದದ ಹೆಸರು" (ಸಿದ್ಧಾಂತಿ. ೯೨). [**ಸಂ.**]

**ಅರರ**$_2$ (ಅ). ದುಃಖ, ಸಂತಾಪ ಸೂಚಕವಾದ ಅವ್ಯಯ : ಕಿಱಿಯ ಬಱಿಯ ದೈವತತಿಗೆ ಅಗಮಂಗಳೊರೆದನರರ ರಸನೆಗಳವ ಕೂರ್ಪುವೆತ್ತ ನೇಗಿಲಲ್ಲಿಯುಳುವರರರ (ಸಾನಂಚ. ೬–೩೪ ರ). [?]

**ಅರರಿ** (ನಾ). ಕದ; ಬಾಗಿಲು : "ಸಾಲಮನೆ ಕೋಟೆಯಕ್ಕು ಕವಾಟ ಮರರಿಯೆನೆ ಕದವಕ್ಕು" (ಮಂಗರಾ. ೫೭–೪). [**ಸಂ.** ಅರರೀ]

**ಅರರೀಪುಟ** (ನಾ). ಕದದ ರೆಕ್ಕೆ ; ಕವಾಟಪುಟ ; ಬಾಗಿಲ ಹಲಗೆ : ಅರರೀಪುಟಮೆರಡುಂ ಜೀರ್ಗರೆದು ಮುರಲ್ದಂದಮೆಂತುಟಾಯ್ತು (ಆದಿಪು. ೧೩–೩೭) ; ಚೆಚ್ಚರದಿಂದರರೀಪುಟಂಗಳಂ ಕೀಲಿಸಿ (ಪಂರಾಮಾ. ೪–೧೧೨).
[**ಸಂ.** (ಅರರೀ + ಪುಟ) ]

**ಅರರೆ** (ಅ). ಮೆಚ್ಚುಗೆ, ಆಶ್ಚರ್ಯಗಳನ್ನು ಸೂಚಿಸುವ ಅವ್ಯಯ : "ಅರರೆ ಧಣಿ ಭಾಪು . . . ಎನೆ ಕೊಂಡಾಟದ ನುಡಿ" (ಭಾರನಿ. ೪೭) ; ಅರರೆ ಅಕಲಂಕ[ಪಾಠಾಂ. ಅಱಿಯಯಲಂಕ] ಚರಿತಂ ದೊರೆಯಾದುದೊ ಸಕಲ ಸತ್ಯಚಕ್ರೇಶ್ವರನಾ (ಗದಾಯು. ೧–೧೩) ; ಅರರೆ ಸತ್ವರಜಸ್ತಮಂಗಳೊಳೆರಡು ಗುಣವಡಗಿತು (ಕುವ್ಯಾದ್ರೋ. ೪–೫೪) ; ಅರರೆ ವಿಸ್ಮಯ ಮುತ್ತೆ ದೊರೆಯು ಮನೆಯ ಮೇಲೆ ಸುರರು ನಿಂದಾಕಾಶದಲ್ಲಿ . . . ಸರಿಯುಂಟೆ ನಿನಗೆನುತಿಹರೆ (ಭರಚ. ೩–೧೧೧). [**ಸಂ.** ಅರರೇ]

**ಅರರೇ** (ಅ). = ಅರರೆ : ಅರರೇ ಭುರ್ಭುಗು ಭಾಪುರೇ ಭುಗುಭುಗು ಪ್ರಜ್ವಾಲೆ . . . ಬೆಜಗಾಗೆ ಸುಟ್ಟುದು ವಿರೂಪಾಕ್ಷಾಕ್ಷಿ ಕಂದರ್ಪನಂ (ಗಿರಿಕ. ೮–೫೧). [**ಸಂ.**]

**ಅರಲ್**$_1$ 'ಅಲರ್$_1$' ನೋ.

**ಅರಲ್**$_2$ 'ಅಲರ್$_2$' ನೋ.

**ಅರಲಂಬ** 'ಅಲರಂಬ' ನೋ.

**ಅರಲಂಬು** 'ಅಲರಂಬು' ನೋ.

**ಅರಲಸರಲ,** ಅರಳಸರಳ (ನಾ). ಹೂವನ್ನೇ ಬಾಣವಾಗಿ ಉಳ್ಳವನು; ಪುಷ್ಪಬಾಣ; ಮನ್ಮಥ: ಗಱಿಯೊಂದದರಲಸರಲನ ಮಸೆದ ಮುಮ್ಮೊನೆಯ ಬೋಳೆಯೋ.... ಎನಿಸಿ (ಪದ್ಮರಾ. ೩-೩೨). **ಅರಳೆಸರಳೆ**: ಗರಳಗೊರಳವನರಳಸರಳಂಗೆ ಮುನಿವಂತೆ (ಹಚಕಾ. ೬-೩೦).
[ಅರಲ್$_2$ (< ಅಲರ್$_2$) + ಸರಲ್ + -ಅ$_7$]

**ಅರಲಾನ್** (ಕ್ರಿ). ಹೂಬಿಡು; ಪುಷ್ಪವನ್ನು ತಳೆ: ಅರಲಾಂತು ಕಙ್ಗೊಳಿಸುತಿಹ ಬಳ್ಳಿವನೆಗಳಿಂ (ಶೇಪರಾ. ೮-೩೬).
[ಅರಲ್$_2$ (< ಅಲರ್$_2$) + ಆನ್$_1$]

**ಅರಲಾಪುರ** (ನಾ). ಒಂದು ಊರು: ಮುಕ್ತಿ ಹರಿಹರಪುರದ ಮಾವುಕೋಡಲ್ಲಿ ಬೀಜವರಿ ಖಂ ೪ಂಕ್ಕೆ ಗಡಿ ಖಂ ೨೨೦ ಅರಲಾಪುರದ ಹುಣಿಸೆಯ ಬಯಲ್ಲಿ ಬೀಜವರಿ (ಎಕ. VIII, ತೀರ್ಥಹ. ೧೯-೩೨ ; 1573).
[ಅರಲ್$_0$ + ಪುರ]

**ಅರಲಿಚ** 'ಅಲರಿಚ' ನೋ.

**ಅರಲಿಸು** 'ಅಲರಿಸು' ನೋ.

**ಅರಲು$_1$** 'ಅಲರ್$_1$' ನೋ.

**ಅರಲು$_2$** 'ಅಲರ್$_2$' ನೋ.

**ಅರಲು$_3$** 'ಅಱಲ್' ನೋ.

**ಅರಲು$_4$** (ನಾ). ೧. ಒಂದು ಜಾತಿಯ ಮರ: "ದಿಂಡಲ ಮರ" (ಗಂಗಾಮು. ೧೪). ೨. ಹೆಮ್ಮರ; ಒಂದು ಜಾತಿಯ ದೊಡ್ಡ ಮರ; ಸ್ಯೋನಾಕ ವೃಕ್ಷ. [?]

**ಅರಲುಕುಪ್ಪೆ** (ನಾ). ಒಂದು ಊರಿನ ಹೆಸರು: ಅರಲುಕುಪ್ಪೆಯ ಸೀಮೆಯಿಂದ ಪಡುವಲು ಕಟ್ಟೆರಿಯ ಸೀಮೆಯಿಂದ (ಎಕ. III, ಶ್ರೀರಂಗ. ೧೧-೫೪ ; 1448). ℙ ಈಗಿನ ಅರಳುಗುಪ್ಪೆ.
[ಅರಲು$_2$ (< ಅಲರ್$_2$) + ಕುಪ್ಪೆ$_1$]

**ಅರಲುಗುಂದು** (ಕ್ರಿ). ಹೂವು ಕಡಮೆಯಾಗು, —ಕಡಮೆಬೀಳು: ವರಲಿಂಗ ಶಿಖಿಯೊಳೊಂದರಲುಗುಂದಲು ರಾಜ್ಯವಿರದರ್ಥವಸ್ತುವಾಹನ ಸಮೇತಂ (ಸಾನಂಚ. ೩-೯೮). [ಅರಲು$_2$ (< ಅಲರ್$_2$) + ಕುಂದು$_1$]

**ಅರಲುಗೆಂಡ** (ನಾ). ಚೆನ್ನಾಗಿ ಅರಳಿದ ಕೆಂಡ; ನಿಗಿನಿಗಿ ಕೆಂಡ: ಮತ್ತಾ ಬೆಂದ ಕಾಯ ಮೇಲೆ ಹೊರಸಿ ತುಪ್ಪವನೆಱೆದು ಸಲಗೆಯಿಂದವೆ ಚುಚ್ಚಿ ಅರಲುಗೆಂಡದೊಳು ಹಿಡಿ ಹಿಡಿದು ಗೌರಂಮಾಡಿ (ಸೂ ಪ ಶಾ. ೫-೪೭). [ಅರಲು$_1$ (< ಅಲರ್$_1$) + ಕೆಂಡ]

**ಅರಲುಣಿ** 'ಅಲರುಣಿ' ನೋ.

**ಅರಲೆ** 'ಅರಳೆ$_1$' ನೋ.

**ಅರಲೆಲೆ** 'ಅರಳೆಲೆ' ನೋ.

**ಅರಲೇಱು** 'ಅಲರೇಱು' ನೋ.

**ಅರಲ್ಕೆ** 'ಅಲರ್ಕೆ' ನೋ.

**ಅರಲ್ಗುಂದಿಸು** (ಕ್ರಿ). ಹೂವನ್ನು ಕಡಮೆಮಾಡು: ತದ್ಭಕ್ತಿಯನಱಿಯಲೊಂದರಲ್ಗುಂದಿಸೆ ಮಲಹರನ ಮಾಯೆಯಿದೆನುತ ಹರಿ ನಿಜಾಂಬಕ ಕಮಲಮಂ ತೆಗೆದು ಸಮರ್ಪಿಸೆ (ಪದ್ಮರಾ. ೧೧-೭೬).
[ಅರಲ್$_2$ (< ಅಲರ್$_2$) + ಕುಂದಿಸು]

**ಅರಲ್ಗೊಳ** 'ಅಲರ್ಗೊಳ' ನೋ.

**ಅರಲ್ಚು$_1$** 'ಅಲರ್ಚು' ನೋ.

**ಅರಲ್ಚು$_2$** (ನಾ). ವಿಕಾಸ; ಅರಳುವುದು: ಕೈರವಾಭ್ಯುದಯದರಲ್ಚು ... ಪೂರ್ಣಶಶಾಂಕಮಂಡಲಂ (ಸೂಕ್ತಿಸು. ೮-೨೨೪).
[ಅರಲ್$_1$ (< ಅಲರ್$_1$) + -ಚು]

**ಅರಲ್ತರ್** (ಕ್ರಿ). ಹೂಬಿಡು: ಮುಗುಳಂ ಪೇಱಿದ ಕುಂದವಲ್ಲಿಗಮರಲ್ತಂದಾ ಕದಂಬೋದ್ಭಶಾಖೆಗಂ (ಚಂದ್ರಪು. ೬-೭೧).
[ಅರಲ್$_2$ (< ಅಲರ್$_2$) + ತರ್]

**ಅರಲ್ತೊಡಂಬೆ** (ನಾ). ಹೂವಿನ ಗೊಂಚಲು, —ಕುಚ್ಚು: ಕೊಪ್ಪಿನರಲ್ತೊಡಂಬೆಗೆ ಕಡಂಗುವ ತುಂಬಿಯ ಬಂಬಲೊಳ್ಸರಂ (ಅಪ್ರತಿ. ೧೫-೧೨). [ಅರಲ್$_2$ (< ಅಲರ್$_2$) + ತೊಡಂಬೆ]

**ಅರಲ್ದಂಡೆ** (ನಾ). ಹೂವಿನ ದಂಡೆ; ಪುಷ್ಪಮಾಲಿಕೆ: ಕಂದದ ಕುಂದದರಲ್ದಂಡೆಗಳಿಂ ನಱುಗಂಪಡರಿದ ... ಸಂಪಗೆಯಿಂದುದ್ಘಟನರ್ಚಿಸಿದಂ (ಉದ್ಭಟದೇ. ೬-೧೪). [ಅರಲ್$_2$ (< ಅಲರ್$_2$) + ದಂಡೆ]

**ಅರಲ್ದುಱುಗಲ್** 'ಅಲರ್ದುಱುಗಲ್' ನೋ.

**ಅರಲ್ದೊಂಗಲ್** 'ಅಲರ್ದೊಂಗಲ್' ನೋ.

**ಅರಲ್ದೋಂಟಿ** 'ಅಲರ್ದೋಂಟ' ನೋ.

**ಅರಲ್ನನೆ** (ನಾ). ಹೂವಿನ ಮೊಗ್ಗು: ಅರಲ್ನನೆ (ಶಬ್ದಾನು. ೯೫ ಪ್ರಯೋ).
[ಅರಲ್$_2$ (< ಅಲರ್$_2$) + ನನೆ$_2$]

**ಅರಲ್ಪೊಡೆಯ** 'ಅಲರ್ವೊಡೆಯ' ನೋ.

**ಅರಲ್ಮಳೆ** 'ಅಲರ್ಮಱಿ' ನೋ.

**ಅರಲ್ಮೊಲೆ** (ನಾ). ೧. ವಿಕಾಸಗೊಳ್ಳುತ್ತಿರುವ ಮೊಲೆ. ೨. ಹೂವಿನ ಮೊಗ್ಗಿನಂತಿರುವ ಮೊಲೆ: ೧, ೨. ಅರಲ್ಮೊಲೆಯು ಬರುತಿರ್ಪ ತರಲ್ಮೊಲೆಯು ಬಿಗಿಯಾದ ಕುರುಳ್ಮೊಲೆಯು ಜಗಿಯುತಿಹ ... ತರುಣಿಯರು (ಹಮಚ. ೭೯). [ಅರಲ್$_2$ (< ಅಲರ್$_2$) + ಮೊಲೆ]

**ಅರಲ್ವಕ್ಕಿ** 'ಅಲರ್ವಕ್ಕಿ' ನೋ.

**ಅರಲ್ವಡಿಗ** 'ಅಲರ್ವಡಿಗ' ನೋ.

**ಅರಲ್ವಸೆ** 'ಅಲರ್ವಸೆ' ನೋ.

**ಅರಲ್ವಳೆ** 'ಅಲರ್ಮಱಿ' ನೋ.

**ಅರಲ್ವಳೆಗಱೆ** (ಕ್ರಿ). ಹೂವಿನ ಮಳೆಯನ್ನು ಸುರಿಸು; ಪುಷ್ಪವೃಷ್ಟಿಮಾಡು: ತ್ರಿದಶರರಲ್ವಳೆಗಱೆದು ನೋಡಿದರ್ ಪಾಡಿದರ್ (ಚಬಪು. ೪೦-೩೨). [ಅರಲ್ವಳೆ (< ಅಲರ್ಮಱಿ) + ಕಱೆ$_1$]

**ಅರಲ್ವಱಿ** 'ಅಲರ್ಮಱಿ' ನೋ.

**ಅರಲ್ವಾಸು** 'ಅಲರ್ವಾಸು' ನೋ.

**ಅರಲ್ವೊಡೆಯ** 'ಅಲರ್ವೊಡೆಯ' ನೋ.

**ಅರಲ್ವೋಗು** (ಕ್ರಿ). ಹುರಿದು ಅರಳಾಗು; ಬಿರಿ: ರವಿಕಾಂತೋಪಲ ವಹ್ನಿಯಿಂದಡವಿಗಳ್ ಭಸ್ಮಾವಶೇಷಂಗಳಾದುವರಲ್ವೋದುವು ಬೆಟ್ಟುಗಳ್ (ಪಂಪಾಮಾ. ೭-೯೭); ಕುಂಭಸ್ಥಲಂ ಶೀವಿದ ಮುಕ್ತಾಜಾಲಕಂ ಬಿಬ್ಬರನೆ ಬಿರಿದರಲ್ವೋಗೆ (ಸೂಕ್ತಿಸು. ೧೦-೧೦೫).
[ಅರಲ್$_1$ (< ಅಲರ್$_1$) + ಪೋಗು$_1$]

**ಅರವ$_1$,** ಅರವು (ನಾ). ೧. ತಮಿಳು ಭಾಷೆ: ಅರವ ಅರಸು ಕನ್ನಡ ಬಿರಸು (ಸಾಲಂಸಾ. ೧೩೧). ೨. ತಮಿಳ: ಒಂದು ದಿವಸ ... ಅರವರ ಸೀರೆ, ಇನ್ನೊಂದು ಸಮಯ ಮಲೆಯಾಳಿ ಹೆಂಗಸರ ಉಡುವು (ಅದೂಟ. ೭೮). **ಅರವು**: ಕನ್ನಡ ಕಸ್ತೂರಿ ಅರವು ಅಧ್ವಾನ (ಹುಟ್ಟಪ. ೧೧೦).
**ಅರವದೇಶ** = ತಮಿಳುನಾಡು; ತಮಿಳರು ವಾಸಮಾಡುವ ಸೀಮೆ (ಕ). **ಅರವಭಾಷೆ** = ತಮಿಳುಭಾಷೆ (ಕ).
[ದೇ. ‖ ತಮಿ. ಅರವರ್, ಅರುವರ್; ತುಳು. ತೆಲು. ಅರವ]

**ಅರವ$_2$** (ನಾ). ತೊದವ ಜನಾಂಗದ ಗ್ರಾಮಪುರೋಹಿತ: "... ನಮ್ಮ ಊರ ಅರವನೊಡನೆ ನಿನ್ನ ಅಪ್ಪನ ಮನೆಗೆ ಹೆಣ್ಣು ಕೇಳಲೆಂದು ಕಳುಹಿಸಿದೆ" (ನಡೆದಾ. II, 1131). [?]

**ಅರವಂಟಿಗೆ** 'ಅಱವಟ್ಟಿಗೆ' ನೋ.

**ಅರವಗಿತ್ತಿ** (ನಾ). ತಮಿಳರ ಹೆಂಗಸು (ದಕ. ೩). [ಅರವ$_1$ + -ಗಿತ್ತಿ]

**ಅರವಟಿಗೆ** 'ಅಱವಟ್ಟಿಗೆ' ನೋ.

**ಅರವಟಿ** (ನಾ). ಒಂದು ಬಗೆಯ ಹೃದಯರೋಗ: ರಾಜಪತ್ನಿ, ಗುರುಪತ್ನಿ, ಪರಸ್ತ್ರೀಗಮನದಿಂ ಅರವಟಿಯೆಂಬ ಹೃದ್ರೋಗವನೈದುವನು (ಶುಕಸ. ೧೪೮). [?]

**ಅರವಟ್ಟ** (ನಾ). ಅರ್ಧವಟ್ಟ: ಮೇಲು[ವ]ಟ್ಟಿಯ ಎಲೆಯ ಹೇಱಿಂಗೆ ವಿ ೧ ಹೇಱಿಗೆ ಕ॥ ವೂ ಳ್ಳ ಲೆ ೧೦೦ ಯಿನ್ತರವಟ್ಟದ ಹೇಱಿಗೆ ಕ॥ ಕೊಟ್ಟರು ಪ್ರಭುಗಳು (ಸೌಇಇ. XV, ೧೬೪–೩೫; 1220).

[ಅರ್ಧ$_5$ (< ಅರ್ಧ$_3$) + ವಟ್ಟ]

**ಅರವಟ್ಟಿಗೆ** 'ಅಱವಟ್ಟಿಗೆ' ನೋ.

**ಅರವಟ್ಟು** (ನಾ). = ಅರವಟ್ಟಿಗೆ (?): ಕಟ್ಟಿಸಿದ ತಟಾಕಮುಮರವಟ್ಟಸೆ ದೆತ್ತಿಸಿದ ದೇವತಾಯತನಂ ಸಾಲಿಟ್ಟ ಟ್ಟಾರವೆ ಪೇಳವೆ ನೆಟ್ಟನೆ ತಾವೆಯ್ದೆ ಮೋಟಗೌಂಡನ ಪೆಂಪಂ (ಎಕ. XII, ಚಿಕ್ಕನಾ. ೩೧–೬೮; 1233). [?]

**ಅರವಡ್ಡಗಿ** 'ಅರಬಡ್ಡಗಿ' ನೋ.

**ಅರವತ್ತು** 'ಅಱುವತ್ತು' ನೋ.

**ಅರವರಿಸು,** ಅರಿಮುರಿಸು, ಅರೆವರಿಸು (ಕ್ರಿ). ೧. ವಿಚಾರಿಸು; ವಿಚಾರ ಮಾಡು: ತಿರಿದುಂಬ ತಿರಿಕರಂ ನಿಷ್ಕರುಣದಿನಱೆಯುಟ್ಟ ಪಿಡಿದು ಸುಂಕ ಮನಿಕ್ಕೆಂದರವರಿಸದೆ ಕಾಡುವಂ (ಧರ್ಮಾಮೃ. ೨–೨೦); ಅರವರಿಸದೀ ಸಭೆಯೊಳಿನ್ನಯ ಸಮಕ್ಷದೊಳು ಹುಸಿ ನುಡಿವರೆ (ಬಸರ. ೧–೫೮); ಉತ್ತುಂಗ ಹಯಮೊಂದು ಹರಿಯೆ ತಿಳಿ ಹಲ್ಲಣಿಸಿ ಬಹುದದನರವರಿಸದೇ ಱಿಂದು ಕನಸಿನ ಪರಿಯಲಱಿಪಲು ದರ್ಭಶಯ್ಯೆಯಿನೆದ್ದನಾ ಕೃಷ್ಣ (ಸಾಳ್ವಭಾ. ೧೩–೫೦). ೨. ಉಪೇಕ್ಷಿಸು; ಕಡೆಗಣಿಸು: ಪಾಂಡ್ಯನಂ ಪರಿಹರಿಸಿ ಪಾಂಡವರನರವರಿಸಿ ಕುರುಕುಳರನತಿಗಳೆದು ಮರುಪತಿಯನಸ ಕಟಱಿದು (ಜಗವಿ. ೧೭–೧೧೮ ರ); ದೇವಬ್ರಾಹ್ಮಣ ಗುರು ಸದಾ ರಾಧ್ಯ ಪ್ರಸಿದ್ಧರ ಸುವ್ರತಾಂಗನೆಯ ಅರವರಿಸದಿರು (ಅಂಬಿಕಾ. ೬–೫೦). **ಅರಿಮುರಿಸು:** ೧. ಅರಿಕರಿ ಶಿರಸ್ಸಮೂಹಮನರಿಮುರಿಸದೆ ಬಾಧಿಪಲ್ಲಿ ಕಾರ್ಮುಗಿಲಿಡೆಯೊಳ್ಪಿರಿ (ಕೊಲ್ಹಾಶಾ. ೩೧–೨; ?). **ಅರೆವರಿಸು:** ೨. ಪರಮ ಬಾಂಧವರ ಲೆಕ್ಕಿಸದೆ ಕೈವಿಡಿದವಳನರೆವರಿಸಿ ಸೂಳೆವೆಂಡಿರ ಸಂಗದೊಳಗಿರ್ಪ ಧರಣಿಪತಿಯಂ (ಚಿಬಪು. ೮–೧೪).

[ಅರವರ್ಧ$_0$ + -ಇಸು$_3$]

**ಅರವಲ** (ನಾ). ಒಂದು ಅಳತೆ; ಎರಡು ಸೊಲಿಗೆ (?): ಹೊನ್ನಾವರ ಕುಮುಟಾ ತಾಲೋಕುಗಳಲ್ಲಿ ೨ ಸೊಲಿಗೆಗೆ ೧ ಅರವಲ, ೨ ಅರವಲಕ್ಕೆ ಒಂದು ಸಿದ್ದೆ, ೨ ಸಿದ್ದೆಗೆ ಒಂದು ಸೇರು (ಕಭಾಗೆ. ೨೯೦).

[ಅರ್ಧ$_5$ (< ಅರ್ಧ$_3$) + ಪಲ ?]

**ಅರವಸಿರು** (ನಾ). ಅರಸಿನ ಬಸಿರು; ರಾಜಗರ್ಭ: ಅರವಸಿರಿನಲಿ ಬಂದೂ ಹೆರರ ಬಿಕ್ಕೆಗೆ ನೀನು ಕೈನೀಡುವಂತಾಯ್ತು (ಚಂದ್ರಸ. ೭೦).

[ಅರಸು$_2$ (< ಅರಸ$_1$) + ಬಸಿರು (< ಬಸಿಱ್)]

**ಅರವೞಿ** (ನಾ). ರಾಜವಂಶ: ಅವಳಿಂದೆ ಅರವೞಿಯೊಂದು ತಲೆ ಯೆತ್ತುವುದು (ಬದ್ಧಪ್ರ. ೪೬–೯೯೭). [ಅರಸು$_2$ (< ಅರಸ$_1$) + ಬೞಿ$_1$]

**ಅರವಾವು** (ನಾ). ರಾಜಸರ್ಪ; ಸಣ್ಣ ಹಾವುಗಳನ್ನು ತಿಂದು ಜೀವಿಸುವ ಒಂದು ಬಗೆಯ ದೊಡ್ಡ ಹಾವು: "ರಾಜಸರ್ಪಃ, ಸರ್ಪಭುಕ್ –ಈ ೨ ಅರವಾ[ಪಾಠಾಂ. ಹಾ]ವು" (ಹಲಾಯು. ೧೦೭–೨೧); "ಫಣಿಭುಗ್ರಾಜಫಣಿಯೆನಲ್ಕರ [ಪಾಠಾಂ. ರೆ]ವಾವು" (ಮಂಗರಾ. ೧೧೮–೩); ಬಿಸಿಲ್ಕೆ ಕಿಲ್ ಪಸಿವು . . . ತಿಂಬರೆ[ರ]ವಾವು ಪಾಯ್ವ ಪುಲಿಯೆಂಬೀ ಬಾಧೆಯೊಳ್ ಮೆಯ್ಯನೊಡ್ಡಿಸಿ (ಆದಿಪು. ೬–೩೪); ಜವನರವಾವು ಕೊಂಡುವೆನೆ ಕರ್ಕಡೆ ಕೊಂಡುವು ಚಕ್ರಮೆನೆ (ಪಂರಾಮಾ. ೧೩–೩೧); ಪುಲಿಗಂಜಿ ಪುತ್ತನೇಱಿದೊಡಲ್ಲಿಯುಮರವಾವು ಕೊಂಡುದು ಎಂಬಂತೆ (ಜೀವಸಂ. ೨–೩೧ ವ); ಪರೆಯುಚ್ಚಿದ[ರ]ವಾವೊ (ವರ್ಧಸಾಂ. ೭–೬).

[ಅರಸು$_2$ (< ಅರಸ$_1$) + ಪಾವು$_1$]

**ಅರವಿಂದ** (ನಾ). ೧. ತಾವರೆ; ಕಮಲ: ನೃಪತಿ ಮಕುಟತಟಘಟಿತ ಮಣಿಗಣಕಿರಣಜಳಧಾರಾಧೌತಾವದಾತಪೂತಚರಣಾರವಿನ್ದರುಂ (ಸೌಇಇ. XX, ೪೭–೨೬; 1075); ಸರಯೂನದ್ಯರವಿಂದಮಂದಮಕರಂದಸ್ಯಂದಿ (ಕಾವ್ಯಾವ. ೮೪೮); ಖರಕಿರಣ ತಾಪಮನಿತುಬ್ಬರಿಸಿದೊಡಂ ಕೊಂದಿಕುಂದ ದರವಿಂದದವೋಲ್ (ಪುಷ್ಪಪು. ೧೪–೨೮). ೨. [ಛಂದ] ಒಂದು ವೃತ್ತದ ಹೆಸರು: ಸುರಪುರಯುಗಪವನ ದ್ವಿತಯಾಕಾಶಾಂಬುಗಣಂಗಳ್ ನೆರೆದಿರೆ . . . ತಾನ್ ಅರವಿಂದಂ (ಛಂದೋಂಬು. ೨–೧೨೦). [ಸಂ.]

**ಅರವಿಂದಗಂಧಿ** (ನಾ). ತಾವರೆ ಹೂವಿನ ವಾಸನೆಯುಳ್ಳ ಹೆಂಗಸು; ಪದ್ಮಿನೀ ಜಾತಿಯ ಹೆಂಗಸು; ಪದ್ಮಗಂಧಿ: ಅರವಿಂದಗಂಧಿಯ ದಾಸಿ ತಾನೆಯಿತಂದು (ಬಸವು. ೪೧–೨೪).

[ಸಂ. (ಅರವಿಂದ + ಗಂಧ + –)]

**ಅರವಿಂದಗರ್ಭ** (ನಾ). (ವಿಷ್ಣುವಿನ ನಾಭಿ) ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಅರವಿಂದಗರ್ಭನ ಮಸ್ತಕವನುದ್ದಂಡಚಾಪದಲಿ ಸಂದಿಸಿದ ಸರಳಿಂ ಪರಿಯಲೆಸಬಂದ ಶಬರೇಶ್ವರನೊ (ಬಸವು. ೪೪–೩).

[ಅರವಿಂದ + ಗರ್ಭ]

**ಅರವಿಂದಗೋನಮಿತ** (ನಾ). ಕಮಲನೇತ್ರನಾದ ವಿಷ್ಣುವಿನಿಂದ ನಮಿಸಲ್ಪಟ್ಟವನು: ಅರವಿಂದಹಿತನೇತ್ರ, ಅರವಿಂದಗೋನಮಿತ, ಅರವಿಂದಸುತಜಿತಾನಂದಯುತ (ಪ್ರೌಢರಾ. ೯–೫೮).

[ಅರವಿಂದ + ಗೋ + – + ನಮಿತ]

**ಅರವಿಂದನಾಭ** (ನಾ). ಹೊಕ್ಕುಳಲ್ಲಿ ತಾವರೆಯುಳ್ಳವನು; ಪದ್ಮನಾಭ; ವಿಷ್ಣು: ಅರವಿಂದನಾಭನು ಬಂದನಾ ಧೃತರಾಷ್ಟ್ರನರಮನೆಗೆ (ಕುವ್ಯಾಉ. ೭–೩೦). [ಸಂ. (ಅರವಿಂದ + ನಾಭಿ + –)]

**ಅರವಿಂದನೇತ್ರ** (ನಾ). ಕಮಲದಂತೆ ಕಣ್ಣುಳ್ಳವನು; ವಿಷ್ಣು.

[ಅರವಿಂದ + ನೇತ್ರ]

**ಅರವಿಂದನೇತ್ರೆ** (ನಾ). ಕಮಲದಂತೆ ಕಣ್ಣುಳ್ಳವಳು.

[ಸಂ. ಅರವಿಂದನೇತ್ರಾ]

**ಅರವಿಂದಪ್ರಿಯ** (ನಾ). ಕಮಲಕ್ಕೆ ಪ್ರೀತಿಪಾತ್ರನಾದವನು; ಸೂರ್ಯ: ಅರವಿಂದಪ್ರಿಯನಿಂದೆ ಕೆಚ್ಚು (ಜಾತತಿ. ೫–೧೧).

[ಅರವಿಂದ + ಪ್ರಿಯ]

**ಅರವಿಂದಬಂಧು** (ನಾ). = ಅರವಿಂದಪ್ರಿಯ: "ಅರವಿಂದಬಂಧು ಬ್ರಧ್ನಂ ಹಂಸನಂಶು ತಿಗ್ಮಾಂಶು ಮಾರ್ತಾಂಡನಕ್ಕುಂ" (ಮಂಗರಾ. ೧೦–೧). [ಅರವಿಂದ + ಬಂಧು]

**ಅರವಿಂದಭವ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: "ನುಡಿವೆಣ್ಣು ಸರಸತಿಯು ಸಾರದೆಯೆಂಬವರವಿಂದಭವನರಸಿಗಕ್ಕು" (ಶಬ್ದಮಂ. ೯). [ಅರವಿಂದ + ಭವ]

**ಅರವಿಂದಮಿತ್ರ** (ನಾ). = ಅರವಿಂದಪ್ರಿಯ: ನಡೆಗೊಂಡನುದಯದರವಿಂದಮಿತ್ರನ ತೆಱದಿ ರತ್ನಭೂಷಣದ ಕಾಂತಿಗಳೆಸೆಯಲು (ಹಚಕಾ. ೪–೧). [ಅರವಿಂದ + ಮಿತ್ರ]

**ಅರವಿಂದಮುಖಿ** (ನಾ). ತಾವರೆಯಂತೆ ಮುಖವುಳ್ಳವಳು: ಅರವಿಂದಮುಖಿ ಕೇಳ್ (ಬಸವು. ೨–೨). [ಸಂ. ಅರವಿಂದಮುಖೀ]

**ಅರವಿಂದವನ** (ನಾ). ತಾವರೆಯ ಸಮೂಹ; ಕಮಲವನ: ವಿನಿಮೀಳಿತಕುಮುದವನಂ ಜನಿತೋನ್ಮೀಲಾರವಿಂದವನಲಕ್ಷ್ಮೀಶಂ ದಿನಕರನುದಯಂಗೆಯ್ದಂ (ಕವಿರಾ. ೨–೭೨). [ಅರವಿಂದ + ವನ]

**ಅರವಿಂದಸಖ** (ನಾ). = ಅರವಿಂದಪ್ರಿಯ : ಮಂದೇಹರ ಭಯದಿಂದರ ವಿಂದಸಖಂ ನಿಜಮಯೂಖಮುಮಂ ಪಸರಿಸನೇ (ರಾಜಶೇ. ೧-೩೧). [ಅರವಿಂದ + ಸಖ]

**ಅರವಿಂದಸಖಸುತೆ** (ನಾ). ಸೂರ್ಯನ ಮಗಳು ; ಯುಮುನಾ ನದಿ : ಅರವಿಂದಸಖಸುತೆ ತೆಗೆದುಬಿಟ್ಟಳು ಯದುವರಗೆ ಪಥವ (ನಿಭಾಗ. ೧೦-೪-೧೬). [ಅರವಿಂದಸಖ + ಸುತೆ]

**ಅರವಿಂದಾಕರ** (ನಾ). ತಾವರೆಯ ನೆಲೆ ; ಕೊಳ ; ಸರೋವರ : ಅರ ವಿಂದಾಕರಸಾಂದ್ರಪದ್ಮವನಮಧ್ಯೋದ್ದೇಶದೊಳ್ (ಕಾದಂಪೂ. ೭೬೩). [ಅರವಿಂದ + ಆಕರ]

**ಅರವಿಂದಾಕ್ಷ** (ನಾ). ಕಮಲನೇತ್ರ ; ವಿಷ್ಣು ; ಕೃಷ್ಣ : "ಅರವಿಂದಾಕ್ಷ ಬಿಡೌಜ ಮುಕ್ತಿಪದವೀ ವೈಕುಂಠನಾಮಾಂಕಿತಂ" (ನಾನಾರ. ೫೪). [ಸಂ. (ಅರವಿಂದ + ಅಕ್ಷಿ + -)]

**ಅರವಿಂದಾಸ್ಯೆ** (ನಾ). = ಅರವಿಂದಮುಖಿ : ಅರವಿಂದಾಸ್ಯೆಯ ನೊಸಲ ಸಮಾನಂ (ಸುಕುಮಾ. ೫-೫೧). [ಸಂ. (ಅರವಿಂದ + ಆಸ್ಯ + -)]

**ಅರವಿಂದಿನಿ** (ನಾ). ತಾವರೆಯ ಬಳ್ಳಿ : ಬಂದ ಬಸಂತಂಗಂದರವಿಂದಿನಿ ಸೇಸಿಕ್ಕಲೆಂದು ನೆಗಪಿದ ಹಸ್ತಕ್ಕೇಂ ದೊರೆವಂದುವೊ . . . ಕೋಕನ ದಂಗಳ್ (ಚಂದ್ರಪ್ರ. ೭-೪೯). [ಸಂ. ಅರವಿಂದಿನೀ]

**ಅರವಿವರ** (ನಾ). ರಥದ ಚಕ್ರಗಳ ಆರೆಕಾಲುಗಳ ಮಧ್ಯದ ಜಾಗ, —ರಂಧ್ರ : ಅರವಿವರಂಗಳೊಳ್ ನುಸುಳ್ವ ಚಾತಕ ಸಂಕುಲದಿಂ . . . ಭವದ್ರಥಮಿಲ್ಲಿ ಸೂಚಿಕುಂ (ಶಾಕುಂತ. ೧೧೧-೧೨೦). [ಅರ್ರ + ವಿವರ]

**ಅರವೀಸ** 'ಅರೆವೀಸ' ನೋ.

**ಅರವು** 'ಅರವ$_1$' ನೋ.

**ಅರವುಡಿ,** ಅರಪುಡಿ, ಅರಹುಡಿ (ನಾ). ಉಕ್ಕಿನ ಅರದಿಂದ ಉಜ್ಜಿ ದಾಗ ಉದುರುವ ಪುಡಿ : ಬೆಳ್ಳಿಯರವುಡಿಯಂತಿರೆಸೆವ ಸೊಜ್ಜಿಗೆಗುಟ್ಟಿ ಬಳ್ಳಿಯಲಿ ತಿಱಿ ಸೇವಗೆಯ ರಾಸಿಗಳ ಮಾಡಿ (ಸಿದ್ಧರಾ. ೮-೫೧). **ಅರಪುಡಿ** : ಕಬ್ಬಿಣದ ಅರಪುಡಿ (ರೂಢಿ). **ಅರಹುಡಿ:** ಗೋಮೂತ್ರದಲ್ಲಿ ಕಬ್ಬಿಣದ ಅರಹುಡಿ ಏಳುರಾತ್ರಿ ನೆನೆಯಿಕ್ಕಿ ತೆಗೆದುಕೊಂಡು ಒಣಗಿಸಿ ಚೂರ್ಣವಂ ಮಾಡಿ ಎರಡುವರಹ ತೂಕವ ಹಾಲಿಂದ ಕೊಡಿಸಲು ಪಾಂಡು ರೋಗ ಪರಿಹರ (ವೈದ್ಯಸಾ. I, ೩೩೭ ಟೀಕೆ). [ಅರ$_1$ + ಪುಡಿ]

**ಅರವುಮರವು** 'ಅಱಿವುಮಱವು' ನೋ.

**ಅರವುರನೆ** (ಅ). ಬೇಗನೆ (?) : ಪರಿಜನಮನಿತುಂ ತುರಿಪದೆ ಪರಿತಂ ದಿನ್ನೇವೆವೆಂದು ಕಪ್ಪುರದ ರಜಂಬೊರೆದ ಕರಕಾಂಬುವಂ ತಳಿದರವುರ ನೆಟ್ಟಿಱಿಸೆ ಮೂರ್ಛೆ ತಿಳಿದು ಕುಮಾರಂ (ಆದಿಪು. ೪-೧೭). [?]

**ಅರವೆಣ್** (ನಾ). ಅರಸಿ ; ರಾಜಸ್ತ್ರೀ. ℙ ಅರವೆಂಡಿರ್ (ಬಹುವ) : ಜಾಣ್ಗಿಂಬಾದರವೆಂಡಿರಿಂ (ಕಬ್ಬಿಕಾ. ೩೫); ತನ್ನ ಭಾವದ ನಲ್ಮೆಯೊಲ್ಮೆಯ ನುಡಿಯೊಳರವೆಂಡಿರ ಪೆರ್ಮೆಯ ಸೊರ್ಕಿನ ಕೊರ್ವಿನ ಬಿಂಕಮುಂಟೇ (ರಾಮಾಶ್ವ. ೪೫-೨೪). [ಅರಸು$_2$ (< ಅರಸ$_1$) + ಪೆಣ್]

**ಅರವೆಱಿ** 'ಅರೆವೆಱಿ' ನೋ.

**ಅರವೊಱಸು,** ಅರಹೊಱಸು (ನಾ). ಪಾರಿವಾಳಗಳಲ್ಲಿ ಒಂದು ಜಾತಿ ; ರಾಜಕಪೋತ : ಮಾಣಿಸರ ನುಡಿವ ತೆಜದಿಂ ಶ್ಯೇನನುಮರವೊ ಱಸ[ಸು]ಮಿಂತು ಗಬಿಪಿದಪುದು (ಶಾಂತಿಪು. ೯-೯೧) ; ಅರವೊಱಸಿನ ಬಣ್ಣದೆ ಡಾವರಮಂ ಬಿಳಿದಾಗೆ ನಾಡು ಕಿಡುಗುಂ (ಱಟ್ಟಮ. ೫-೮) ; ನವಿಲಱ[ರ]ವೊಱಸಿನ ಕುಕ್ಕುಟದ ವಿಷ್ಮೆಯಂ ಭರದೊಳೇಱಿ ಪೂಸ ಲೊಡಂ . . . ಇಱಿಗುಮುಗ್ರವೃಶ್ಚಿಕದ ವಿಷಂ (ಖಮುದ. ೧೧-೩೪).

**ಅರಹೊಱಸು** : ಅರ್[ರ]ಹೊಱಸು ಟಟ್ಟವನು ಮಣಿಗನು ಗರುಡ ಕೊಣಕನು (ಸಾಳ್ವಭಾ. ೫-೨೩). [ಅರಸು$_2$ (< ಅರಸ$_1$) + ಪೊಱಸು]

**ಅರಶ** 'ಅರಸ$_1$' ನೋ.

**ಅರಸ$_1$,** ಅರಶ, ಅರಸು$_2$, ಅರಾಸ$_1$ (ನಾ). ೧. ರಾಜ ; ದೊರೆ ; ಆಳು ವವನು ; ಒಡೆಯ : ಶ್ರೀಚನ್ದಿಯಮ್ಮರಸರ್ (ಎಕ. XI, ಚಿತ್ರದು. ೨೪-೧ ; 500); ಪರದಗ್ರಾ ಪಾವಗ್ರಾ್ಗಯ್ತರಸಗ್ರಾ್ಗ ಕುಡಿಯರಪ್ಪ ನಾಲ್ವ ಗ್ರಾ್ಗಗಳ್ (ಕವಿರಾ. ೧-೬೫) ; ಶ್ರೀವನಿತೆಯರಸನೆ (ಕುವ್ಯಾಅ. ೧-೧). **೨.** ಹಿರಿಯ ; ಶ್ರೇಷ್ಠ : ಲೆಕ್ಕಿಗರರಸನೊಗೆದನೆಸೆವಾಂಡಯ್ಯಂ (ಕಬ್ಬಿಕಾ. ೧೧). **ಅರಶ** : **೧.** ಸಾಸಿರ್ವರು ಅರಶರಾ ಶ್ರೀಕರಣಮುಂ ಇಟ್ಟುಕೊಟ್ಟ ಮಣ್ಣು (ಮೈಆರಿ. ೧೯೨೯, ೩೮-೬ ; 700). **ಅರಸು$_2$ : ೧.** ಅರಸು ಕುಮಾರನಂ (ಕವಿರಾ. ೧-೪೯); ಆಳರಸೆಂಬುದೊಂದು ದಂದುಗಂ (ಆದಿಪು. ೫-೩೦). **೨.** ಅರಸುಗಳ ಜಾತಿ ; ಕ್ಷತ್ರಿಯ : ಅರಸುಗಳಿಗಿದು ವೀರ ದ್ವಿಜರಿಗೆ ಪರಮವೇದದ ಸಾರ (ಕುವ್ಯಾಅ. ೧-೧೭). **ಅರಾಸ$_1$ : ೧.** ಇದಕ್ಕೆ ಸಾಕ್ಷಿ ಅಮಚ್ಚರ್ ತೆಲಮ್ಬುಯರ್ ಕರಾಸರ್ ರಗ್ಗ × ಸರ್ (ಎಕ. IV, ಗುಂಡ್ಲುಪೇ. ೮೬-೬ ; 750) ; ಬನವಾಸಿಮಣ್ಣಲಮಾನಾ ಸಮುದ್ರಾನ್ತ ರಾಜಾದಿತ್ಯರಾಸರ್ ಆಳೆ . . . ಆ ಕಾಕರಾಸರುಮೆಟ್ಟು ಪೆರ್ಗುಂಜಿಯ ಕೋಟಿಯಾನ್ ರೋಹಿಸಿಬಿಟ್ಟು (ಎಕ. VIII, ಸೊರಬ. ೧೧-೨೪ ; 800).

**ಅರಸರ ಕರಗಸ**= ಇದಿರುಬೀಳುವ ರಾಜರಿಗೆ ಗರಗಸದಂಥವನು ; ಒಂದು ಬಿರುದು : ಸ್ವಸ್ತಿಶ್ರೀಮನ್ಮಹಾಮಂಡಳೇಶ್ವರ ಅರಸರಕರಗಸ ಬಿರುದರ್ಥಂಕುಸ (ಎಕ. VII, ಸಾಗರ. ೧೨-೧ ; ?). **ಅರಸರ ಕಾಣಿಕೆ** = ಒಂದು ತೆರಿಗೆ : ಪರಿಕಿಸದೀ ಧರ್ಮದೊಳರಸರ ಕಾಣಿಕೆ . . . ಕೊಂಡವಂ ಚಣ್ಡಾಳಂ (ಎಇ. XXVII, ೧೫-೪೯ ; 1114). **ಅರಸುಗಂಡ** = ಅರಸ ರೆಂದು ಹೇಳಿಕೊಳ್ಳುವವರಿಗೆ ಗಂಡ ; ಒಂದು ಬಿರುದು : ವೈರಿ ಮಂಡಳಿಕ ಸಂಗ್ರಾಮರಾಮಂ ಅರಸುಗಂಡ ರಾಮನ ಬೆಂಕೊಂಡಗಂಡ (ಎಕ. XIV, ಗುಂಡ್ಲುಪೇ. ೧೩೧-೫ ; 1310).

[ದೇ. ‖ ತಮಿ. ಅರಶನ್, ಅರ್ಶನ್, ಅರ್ಯನ್ ; ಮಲ. ಅರಶನ್, ಅರಸನ್, ಅರಯನ್ ; ತುಳು. ಅರಸು, ಅರಸೆ ; ತೆಲು. ಅರಸು. / ಸಂ. ರಾಜನ್]

**ಅರಸ$_2$** (ನಾ). ರಸಿಕನಲ್ಲದವನು ; ರಸವಿಲ್ಲದವನು : ಅರಸರೊಳಿಲೆ ನೀಂ ಸರಸಮನರಸಿಯವೊಲಾಡುತಿರ್ಪೆ ನಿನಗಿದು ಗುಣಮೇ ಅರಸರ್ ಸರ ಸಮನಱಿವರೆ ಸರಸಮನಾಡರಸರಲ್ಲದವರೊಳ್ ಮಗಳೇ (ಕವಿರಾ. ೩-೨೩೨). [ಸಂ.]

**ಅರಸಂಕೆ** (ನಾ). ೧. ಅರಸು ಎಂಬ ಹೆಸರುಳ್ಳವನು. ೨. ರಾಜ ಮಲ್ಲ, —ಜಟ್ಟಿ.

**ಅರಸಂಕಕರಗಸ** = ಅರಸು ಎಂಬ ಹೆಸರುಳ್ಳವನಿಗೆ ಅಥವಾ ರಾಜ ಜಟ್ಟಿಗೆ ಗರಗಸದಂಥವನು ; ಒಂದು ಬಿರುದು : ಅರಸಂಕ ಕರಗಸಂ . . . ಬೀರದೇವರಸರು (ಮೈಆರಿ. ೧೯೨೯, ೭೨-೪ ; 1253). **ಅರಸಂಕಗಾಳ** = ಅರಸು ಎಂಬ ಹೆಸರುಳ್ಳವನಿಗೆ ಅಥವಾ ರಾಜ ಮಲ್ಲನಿಗೆ ಗಾಳದಂತಿರುವವನು ; ಒಂದು ಬಿರುದು : ಅರಸಂಕಗಾಳ ನೆಂಬುದು ಪರಬಳಕೆ ಗಜೇಂದ್ರವೈರಿಯೆಂಬುದು (ಎಕ. XI, ದಾವಣ. ೪೩-೮೮ ; 1164). **ಅರಸಂಕಭೀಮ** = ರಾಜನ ಜಟ್ಟಿಗಳಿಗೆ ಭೀಮ ನಂತಿರುವವನು ; ಒಂದು ಬಿರುದು : ಪರಬಳಸೂಱೆಕಾಱ ವೈರಿ ಬಂಗಾಱಂ ನ[ಅ]ರಸಂಕಭೀಮಂ ಚಲದಂಕರಾಮಂ (ಸೌಇಇ. XX, ೧೮-೯ ; 980). **ಅರಸಂಕಮೊನೆಗಾಱ** = ರಾಜ ಎಂಬ ಹೆಸರುಳ್ಳವನಿಗೆ ಯುದ್ಧದಲ್ಲಿ ಎದುರಾಗುವ ಶೂರ ; ರಾಜಜಟ್ಟಿಯೊಡನೆ ಮಲ್ಲ ಯುದ್ಧದಲ್ಲಿ ಸೆಣಸುವವನು ; ಒಂದು ಬಿರುದು : ಶ್ರೀಮನ್ಮಹಾ ಮಂಡಳೇಶ್ವರ ಜವಾದಿ ಕೋಳಾಹಳ ಪೆಸಾಳಿ ಹನುಮ ಅರಸಂಕಮೊನೆಗಾಱ

ಗೇಣಾಂಕ ಚಕ್ರೇಸ್ವರ (ಪ್ರೈಆರಿ. ೧೯೪೬ ; ೨೫-೨ ; 1495). **ಅರಸಂಕ ಸೂನೆಗಾಱ** = ರಾಜ ಎಂಬ ಹೆಸರಿನವನಿಗೆ ಅಥವಾ ರಾಜಮಲ್ಲನಿಗೆ ಕಟುಕನಾದವನು ; ಒಂದು ಬಿರುದು (?) : ಘೇಣಂಕ ಚಕ್ರೇಶ್ವರ ಅರಸಂಕ ಸೂನೆಗಾಱ (ಸೌಇಇ. IX-ii, ೭೦೧-೩ ; 1512).

[ಅರಸು$_2$ (< ಅರಸ$_1$) + ಅಂಕ$_2$]

**ಅರಸಂಚೆ** (ನಾ). ರಾಜಹಂಸ : ಮೃದುಪದವ್ಯಸನದಿಂದರಸಂಚೆಗಳ್ಗೆ ನಡೆಗಲಿಪ (ಉದ್ಭಟ. ೧-೭೮ ವ) ; ಇಂಗಡಲೊಳರಸಂಚೆ (ಪದ್ಮರಾ. ೭-೩೧).

[ಅರಸು$_2$ (< ಅರಸ$_1$) + ಅಂಚೆ$_3$]

**ಅರಸಂಚೆಗಮನೆ** (ನಾ). ರಾಜಹಂಸದಂತೆ ನಡೆಯುವವಳು : ರಮ್ಯವಡೆದ ಹರ್ಮ್ಯಾವ ನೋಡಿ ಹತ್ತಿದಳರಸಂಚೆಗಮನೆ (ಮೋಹತ. ೨೭-೨೯).

[ಅರಸಂಚೆ + ಗಮನೆ]

**ಅರಸಗಿಳಿ**, ಅರಸುಗಿಳಿ (ನಾ). = ಅರಗಿಳಿ : ಮೃದುವಾಣಿಯೆಂದೆನಿಪ ಪೆಣ್ಗಿಳಿ ತನ್ನ ಮನದನ್ನ ಮಧುಮಿತ್ರನೆಂಬರಸಗಿಳಿಯಿರುಳ್ ತಡೆಯೆ ಶೋಕಿಸುತಿರ್ದುದು (ಚಿಬಪು. ೪೬-೪). **ಅರಸುಗಿಳಿ** : "ರಾಜಶುಕಃ – ಅರಸುಗಿಳಿ" (ಓಷಧಿ. ೧೩೮).

[ಅರಸು$_2$ (< ಅರಸ$_1$) + ಗಿಳಿ (< ಗಿಱಿ)]

**ಅರಸಣ್ಣ**[ಣ್ಣ] (ನಾ). ಒಬ್ಬಾತನ ಹೆಸರು: ಅರಸಣ್ಣ[ಣ್ಣ]ಂ ಅಯ್ದೊನ್ದಿ ಒತ್ತೆ ಮಣ್ಣೆತ್ತು . . . ಬಿಟ್ಟಂ (ಎಕ. XIV, ತಿರುಮ. ೨೫೩-೭ ; 800).

[ಅರಸು$_2$ (< ಅರಸ$_1$) + ಅಣ್ಣ$_1$]

**ಅರಸತೂಕ** 'ಅರಸುತೂಕ' ನೋ.

**ಅರಸಬ್ಬೆ** (ನಾ). ಒಬ್ಬಾಕೆಯ ಹೆಸರು : ಕೋತರನ ತಾಯರಸಬ್ಬೆಯು ಮಾತನ ಮಯ್ದುನಂ (ಎಕ. VIII, ಸೊರಬ. ೫೩೦-೯ ; 979).

[ಅರಸು$_2$ (< ಅರಸ$_1$) + ಅಬ್ಬೆ$_1$]

**ಅರಸರಿಕೆ** (ನಾ). ರಾಜಾಸ್ಥಾನದಲ್ಲಿ ಪ್ರಸಿದ್ಧಿ ಹೊಂದಿರುವುದು. "**ಅರಸರಿಕೆಯ ಬಿಜ್ಜೆವಳಂ** = ಆಸ್ಥಾನ ಪಂಡಿತ, ರಾಜರವರೆಗೂ ಪ್ರಸಿದ್ಧಗೊಂಡ ಪಂಡಿತ" (ಪ್ರಭಣ್ಣ).

[ಅರಸ$_1$ + ಅರಿಕೆ (< ಅಱಿಕೆ)]

**ಅರಸಾಂಗ** (ನಾ). (ರಾಜನು ಏರ್ಪಡಿಸಿದ) ಆಡಳಿತ ವಿಭಾಗ : ಅರಸಾಂಗದವರು ಕೆಲವು ಪರೀಕ್ಷೆಗಳೊಂದಿಗೆ ತಾಯಿಭಾಷೆಗಳನ್ನೂ ಒತ್ತಾಯವಾಗಿಡಿಸಿರುವುದರಿಂದ ಅವು ಇನ್ನೂ ಜೀವಂತವಾಗಿವೆ (ಪ್ರತಾಪ. ೯೬).

[ಅರಸು$_3$ + ಅಂಗ$_2$]

**ಅರಸಾಣೆ** (ನಾ). ರಾಜಾಜ್ಞೆ ; ಅರಸನ ಅಪ್ಪಣೆ : "ಉಪರೋಧ = ಅರಸಾಣೆಯುಂ" (ನೀತಿವಾ. ೧೭-೪೭). [ಅರಸ$_1$ + ಆಣೆ$_1$]

**ಅರಸಾನಿ** (ನಾ). ದೊರೆಸಾನಿ ; ರಾಣಿ : ಅಮ್ಮಾ, ಈಗ ನಿನ್ನ ಹೆಸರನ್ನು ಹೇಳುತ್ತಿದ್ದಾಳೆ. ಅದೂ ಕೂಡ ಅಲ್ಲಿಯರಸಾನಿಯ ಮಾಲೆಯಲ್ಲಿ ಬರೆದಿದೆಯೇ ? (ಕೊನಪ್ಪ್ಯ. ೬೩). [ಅರಸು$_2$ (< ಅರಸ$_1$) + ಸಾನಿ ?]

**ಅರಸಾಸವಾರಿ** (ನಾ). ರಾಜನ ಮೇಲೆ ಆಪಾದಿತವಾಗುವ ಐದು ಬಗೆಯ ಸಾಹಸಗಳನ್ನು ನಿವಾರಿಸುವವನು (?) ; ಒಂದು ಬಿರುದು : ನೆಗಳ್ದರಸಾಸಚಾ[ವಾ]ರಿ ಮದನೋಗ್ರ ಮಹೇಶ್ವರನಾದ ಬಿನ್ನಣಂ ಬಗಸಿಲದಾನಿಯಾದ ಕಡುಚಾಗಿ (ಕೊಲ್ಹಾಶಾ. ೧೫-೫೩ ; 1186); ಮಂಡಳಿಕ ಮುಖದರ್ಪಣನ್ ಅರಸಾಸವಾರಿ ಮದನಮಹೇಶ್ವರನುಮೆಂಬ ಬಿರುದುಗಳನ್ವರ್ಥವಾಗೆ (ಇಆ. XII, ೯೬-೯ ; 1187) ; ರೂಪಕಂದರ್ಪಂ ತೊಣ್ಡಮಣ್ಡಳಿಕ ಘಟಸರ್ಪ್ಪ ಅರಸಾಸವಾರಿ ಕ್ಷೇತ್ರಪಾಳಂ (ಸೌ ಇ ಇ. IX-i, ೨೮೭-೯ ; 1200) ; ಮಣ್ಡಳೇಶ್ವರಂ ಅರಸಾಸವಾರಿ ಮದನ ಮಹೇಶ್ವರಂ ತೊಂಡ ಮಂಡಳಿಕ ಪುಂಡರೀಕ (ಸೌಇಇ. XX, ೩೨೨-೧ ; ೧೩ ನೆಯ ಶತ). [ಅರಸ$_1$ + ಸಾಸ + ವಾರಿ$_2$]

**ಅರಸಾಳ್**, ಅರಸಾಳು (ನಾ). ದೊರೆಯ ಆಳು ; ರಾಜಭೃತ್ಯ ; "ಚರನೆಂದೊಡರಸಾಳಕ್ಕು" (ಮಂಗರಾ. ೭೮-೧) ; ಅರಸಾಳಂತೆ ಕಣ್ಣಱಿದು (ಪಂಪಭಾ. ೬-೭೧ ವ) ; ಸಾರೆಂಬರಸಾಳ್ಗಳ ತೊಲಗೆಂಬ ಪಡಿಯಱರ (ಬಸರ. ೬-೮). **ಅರಸಾಳು** : ಮುಕ್ಕಳಂತೆ ಕಾಡಿಯುಣ್ಣದೆ ಅರಸಾಳಿನಂತೆ ನೋಯಿಸಿಯುಣ್ಣದೆ (ಧರ್ಮಾಮೃ. ೫-೯೯) ; ಅರಸಾಳು ತನ್ನಂ ಹೊಯ್ದು ಹೊಯ್ದು ನೃಪಾಳ ನಿಖಿಳನಿಯೋಗದವರಂ ತಾಗುವಂದದಲಿ (ಬಸಪು. ೫೨-೧೦) ; ಹರಿದರರಸಾಳುಗಳು ರಾಯನ ಬರವನೀ ತಂಗಱುಹಿದರು ಕಡುಹರುಷದಲಿ ಕಲಿಶಲ್ಯ ಹೊಱವಂಟನು ನಿಜಾಲಯವ (ಕುವ್ಯಾಕ. ೫-೧೨). [ಅರಸ$_1$ + ಆಳ್$_2$]

**ಅರಸಾಳಿಕೆ** 'ಅರಸಾಳ್ಕೆ' ನೋ.

**ಅರಸಾಳು** 'ಅರಸಾಳ್' ನೋ.

**ಅರಸಾಳ್ಕೆ**, ಅರಸಾಳಿಕೆ (ನಾ). ದೊರೆಯ ಆಡಳಿತ ; ರಾಜನ ಆಡಳಿತ : ಹಿರಿತಂದೆಗರಸಾಳ್ಕೆ ನೆಚ್ಚ ತಣಿಸಿ, ತಂಗಿಯರ ಮೆರಸಿ ಕುಣಿಸಿ (ಹೊಂಗಳು. ೩೪-೩). **ಅರಸಾಳಿಕೆ** : ಅರಸಾಳಿಕೆಯಿಂದಾಗಿಯೇ ಪ್ರಪಂಚದಲ್ಲಿ ಈಗಿನ ಇಷ್ಟೆಲ್ಲ ಅನರ್ಥಪರಂಪರೆಗೆ ಕಾರಣ (ವೀರಬಂ. ೧೬) ; ನಡುವೆ ಅರಸಾಳಿಕೆಯು ಹೆಮ್ಮೆಸೊಮ್ಮುಗಳೊಡನೆ ಮೇಲೇರಿದ ಒಡ್ಡೋಲಗದ ವೇದಿಕೆ (ನಾಡೋಜ. ೩೫೯).

[ಅರಸ$_1$ + ಆಳ್ಕೆ]

**ಅರಸಾಳ್ತನ** (ನಾ). ೧. ರಾಜಸೇವಾಧರ್ಮ. ೨. ರಾಜಸೇವಕನ ಅಧಿಕಾರ : ನಿನಗರಸಾಳ್ತನಂ ನುಡಿವ ಬೀರರ ಬೀರದಳುರ್ಕೆ ವಿಕ್ರಮಾರ್ಜುನನೊಳದೇಕೆ ಸಲ್ಲದು (ಪಂಪಭಾ. ೧೧-೧೩೮) ; ಬೆಸಕೆಯ್ಯದೆ ಕೆಮ್ಮನೆ ತೊನೆದು ಮಾಣದರಸಾಳ್ತನದಿಂ ಪುಗುವಂತು ದೇವಗತಿ ಪಾಟ್ಮನೆಯೇ (ಧರ್ಮಾಮೃ. ೬-೧೭೨) ; ಅರಸಾಳ್ತನಮೆನ್ನದೆ ಕೇಳ್ ಪರಮಾರ್ಥಮನೀಗಳೆನಗೆ ಸಾಮ್ರಾಜ್ಯಪದಂ ದೊರಕೊಂಡಂತಾದುದು (ಕಾವ್ಯಾವ. ೫೧೧).

[ಅರಸಾಳ್ + -ತನ]

**ಅರಸಿ** (ನಾ). ೧. ರಾಣಿ ; ಒಡತಿ : ಅರಸರೊಳೆ ನೀಂ ಸರಸಮನರಸಿಯವೋಲಾಡುತಿರ್ಪೆ ನಿನಗಿದು ಗುಣಮೇ ಅರಸರ್ ಸರಸಮನಱಿವರೆ ಸರಸಮನಾಡರಸರಲ್ಲದವರೊಳ್ ಮಗಳೇ (ಕವಿರಾ. ೩-೨೩೩) ; ಪತ್ರಲೇಖೆಯೆಂಬುದು ಪೆಸರೆಂದಾ ಸತಿಯನರಸಿಯುಂ ಕಾಣಿಸಿದಂ (ಕಾದಂಉ. ೨೩೮) ; ಅರಿಪಿ ಕೇಳೀ ಹೊನ್ನಿ ಸರಸಸಾಹಿತ್ಯದ ವರದೇವತೆ (ಹದಿಬ. ೧-೨೩). ೨. ಹೆಂಡತಿ : ಎಮ್ಮರಸಿಯರೆಮ್ಮ ಮುಕ್ಕಳಿವರ್ (ಆದಿಪು. ೨-೧೦೨) ; ಬಸವಣ್ಣನಲ್ಲಿ ತಮ್ಮರಸಿಯರ ನೋಡುತಂ (ಬಸರ. ೭-೪) ; ಮುಕ್ಕಣ್ಣನರಸಿಯ ಬೀಳ್ಕೊಂಡು ರತಿದೇವಿ (ಮೋಹತ. ೭-೪೯).

[ಅರಸ$_1$ + -ಇ$_2$. / ತಮಿ. ಅರಿಸಿ]

**ಅರಸಿಂಗ** (ನಾ). ರಾಜಸಿಂಹ : ಅರಸಿಂಗನ ಬಲ್ಲೆರ್ದೆಗೆ ಪಾಸಟಿಯೆನಿಪ್ಪ ಪೇರಗಲದೆರ್ದೆ ಮನಂಗೊಳೆ (ರಾಮಾಶ್ವ. ೬೯-೨೧).

[ಅರಸು$_2$ (< ಅರಸ$_1$) + ಸಿಂಗ]

**ಅರಸಿಕ** (ನಾ). ರಸಿಕನಲ್ಲದವನು : ಅರಸಿಕರ ಮುಂದೆ ಕವಿತೆಯನೊಪ್ಪಿಸುವುದೊಂದ ಬರೆಯದಿರು . . . ಶಿರದಿ (ಭಾರವಿಮಾ. ೨೨೨). [ಸಂ.]

**ಅರಸಿಕತನ** (ನಾ). ರಸಿಕತೆಯಿಲ್ಲದಿರುವುದು : ಅವರ ಅಲಂಕಾರ, ಆಭರಣ, ಅರಿವೆ – ಎಲ್ಲದರಲ್ಲೂ ಅರಸಿಕತನ ಕಂಡುಬಂದುದರಿಂದ (ಯಕ್ಷಬ. ii). [ಅರಸಿಕ + -ತನ]

**ಅರಸಿಕೆ** (ನಾ). ದೊರೆತನ ; ರಾಜತ್ವ : ನೀಮಿಂತಿರೆಯುಂ ನೋಡಿದೆ ವೇನೆಮುಗರ[ಸಿಕೆ] [ಪಾಠಾಂ. ವೇನೆಮುಗರಗತಿ, ಮೆನೆಮುರಸಗರಿ, ಮೆನೆಮುಗರಸತಿ, ಮೆಮುಗೆನೆಂತಳ್ತಿಸತಿ]ಯೋ ಪೇೞೆಮೆಂದು ಶೋಕಂಗೆಯ್ದರ್ (ಪಂಪಭಾ. ೧೧-೪೮). [ಅರಸ$_1$ + -ಇಕೆ]

**ಅರಸಿಗ** (ನಾ). ಹುಡುಕುವವನು ; ಅನ್ವೇಷಕ : ನಾನೊಬ್ಬ ಅರಸಿಗನು, ಕಲ್ಯಾಣನೆನ್ನುವರು ದಿವ್ಯವಹ್ನಿಯನರಸುತಿಲ್ಲಿಗೀಗಳೆ ಬಂದೆ (ಪಾ ಪಾ ಕ. ೧೧) ; ಓದುವ ಅರಸಿಗರಿಗೆ ಕಾವ್ಯಾನಂದವೂ ತತ್ತ್ವಜ್ಞಾನವಿಶಾಲತೆಯೂ . . . ಸಹಜವಾಗಿ ಲಭಿಸುವವು (ನವ್ಯಕಾ. ೧೦೦).
[ಅರಸು$_1$ (< ಅಱಸು$_1$) + –ಇಗ]

**ಅರಸಿಗಯ** (ನಾ). ಒಬ್ಬಾತನ ಹೆಸರು: ಬೆಳಗಟ್ಟೂರ ಕೊಣ್ಡ ಅರಸಿಗಯ ಗಾವುಣ್ಡ (ಎಕ. X, ಶ್ರೀನಿವಾ. ೧೪–೪ ; 1015).
[ಅರಸಿಗ + ಅಯ (< ಅಯ್ಯ$_1$)]

**ಅರಸಿಣ** 'ಅರಿಸಿನ' ನೋ.

**ಅರಸಿತಿ** (ನಾ). ಅರಸನ ಹೆಂಡತಿ ; ರಾಣಿ : ಅರಸನ ಪೆಂಡತಿ, ಅರಸಿತಿ (ಶಬ್ದಾನು. ೧೯೧ ಪ್ರಯೋ). [ಅರಸ$_1$ + –ಇತಿ]

**ಅರಸಿನ** 'ಅರಿಸಿನ' ನೋ.

**ಅರಸಿನಕೆಂಬಟ್ಟೆ** (ನಾ). ಒಂದು ಜಾತಿಯ ಹಕ್ಕಿ (ಕಿಸಂಗ್ಲಾ. ೭). [?]

**ಅರಸಿನಗುರ್ಚಿ** (ನಾ). ಒಂದು ಜಾತಿಯ ಮರ: ಅರಸಿನಗುರ್ಚಿ (ಮರ) ಮಧ್ಯಮ ಆಕಾರದ್ದು. ಕಟ್ಟಿಗೆ ಬಹಳವಾಗಿ ಉಪಯೋಗಿಸುವುದಿಲ್ಲ (ಕಭಾಗ. ೩೫). [ಅರಸಿನ + ಗುರ್ಚಿ ?]

**ಅರಸಿಮಕೊತ್ತಿ** (ನಾ). ಒಬ್ಬಾತನ ಹೆಸರು : ಅರಸಿಮಕೊತ್ತಿಗಳ್ ಗೌತುಮಸ್ಥಾನಕ್ಕೆ ಕೊಟ್ಟುದು (ಎಕ. VII, ಶಿಕಾರಿ. ೪೫–೪೪ ; 890).
[ಅರಸಿ + ಅಮ (< ಅಮ್ಮ$_1$) + ಕೊತ್ತಿ]

**ಅರಸಿಮಯ್ಯ** (ನಾ). ಒಬ್ಬಾತನ ಹೆಸರು : ತಾಗರಜಿಯ ಪೂರೊಡೆಯ ಅರಸಿಮಯ್ಯನ ಮಗಂ (ಎಕ. VII, ಶಿಕಾರಿ. ೫೩–೨೨ ; 1027).
[ಅರಸಿ + ಅಮ (< ಅಮ್ಮ$_1$) + ಅಯ್ಯ$_1$]

**ಅರಸಿವಟ್ಟ** (ನಾ). **೧.** ರಾಣಿಯ ಪದವಿ, —ಅಧಿಕಾರ. **೨.** ಪಟ್ಟದ ರಾಣಿ ಧರಿಸುವ ಕಿರೀಟ : ಲಂಕೆಯನಾಳ್ದು ತಾಳ್ದರಸಿವಟ್ಟಮುಸಾತ್ಮ ಲಲಾಟ ಪಟ್ಟದೊಳ್ (ಪಂರಾಮಾ. ೯–೧೬೪). [ಅರಸಿ + ಪಟ್ಟ]

**ಅರಸು$_1$** 'ಅಱಸು$_1$' ನೋ.

**ಅರಸು$_2$** 'ಅರಸ$_1$' ನೋ.

**ಅರಸು$_3$** (ನಾ). **೧.** ಅರಸುತನ ; ದೊರೆತನ : ಅಱಿಯಂ ಸೋದರನೆಂದು ಧರ್ಮತನಯಂ ನಿರ್ವ್ಯಾಜದಿಂ ನಿನ್ನನಾನಱಿವೆಂ ಮುನ್ನಱಿದಿರ್ದುಮೆನ್ನರಸನಾನೇಕಿತ್ತೆನಿಲ್ಲ (ಪಂಪಭಾ. ೧೩–೫) ; ಕ್ರೂರರ ಕೆಳೆಯುಂ ವಿವೇಕಿಯಲ್ಲದವನರಸುಂ ಸಾರಗುಣಮಿಲ್ಲದಾತನ ಚಾರಿತ್ರಮುಮೊಪ್ಪಲಾಜವೆಂತುಂ ಕಡೆಯೊಳ್ (ಧರ್ಮಾಮೃ. ೭–೪೮). **೨.** ರಾಜಗುಣ ; ರಾಜತ್ವ : ಪುಲ್ಲೆಗಾಟಿಸಿ ಮಲೆತರ್ಪರಲೆಯ ಸೋಲಮನಟ್ಟಿಯೊಳರಿಕೇಸರಿ ನಿಂದು ನೋಟ್ಟುದೊಂದರಸಲ್ತೇ (ಪಂಪಭಾ. ೫–೪೪).
[ಅರಸ$_1$ + –ಉ$_4$]

**ಅರಸುಕುಮಾರ** (ನಾ). ರಾಜಪುತ್ರ ; ದೊರೆಯ ಮಗ : ಅರಸುಕುಮಾರನನಾಯತತರ ಕಡೆಗಣ್ಣಿಂದೆ ನೋಡಿ (ಕವಿರಾ. ೧–೫೯) ; ಅರಿಸಮಾಸಕ್ಕೆ . . . ಅರಸುಕುಮಾರಂ (ಶಮದ. ೧೭೪ ಪ್ರಯೋ).
[ಅರಸು$_2$ (< ಅರಸ$_1$) + ಕುಮಾರ]

**ಅರಸುಕುಮಾರಕ** (ನಾ). = ಅರಸುಕುಮಾರ : ಸಿರಿವಂತರರಸುಕುಮಾರಕರು ನಿನ್ನವರು (ಕುವ್ಯಾದ್ರೋ. ೩–೪೭).
[ಅರಸು$_2$ (< ಅರಸ$_1$) + ಕುಮಾರಕ]

**ಅರಸುಕುಮಾರಿ** (ನಾ). ದೊರೆಯ ಮಗಳು ; ರಾಜಪುತ್ರಿ : ಅರಮನೆಯ ಅರಸುಕುಮಾರಿಯರಲ್ಲಿಯೂ ಆ ಸಂಪದ ತೋರದು (ಹಾಹುತ್ತ. ೯೭). [ಅರಸು$_2$ (< ಅರಸ$_1$) + ಕುಮಾರಿ]

**ಅರಸುಕುವರ** 'ಅರಸುಗುವರ' ನೋ.

**ಅರಸುಕುವರಿ** (ನಾ). = ಅರಸುಕುಮಾರಿ : ಅರಸುಕುವರಿಯನೆನ್ನ ಮದನಂಗೆ ಕೈವಿಡಿಸಿ (ಚಂದ್ರಸ. ೧೦).
[ಅರಸು$_2$ (< ಅರಸ$_1$) + ಕುವರಿ]

**ಅರಸುಗಾಣ್** (ಕ್ರಿ). ಅರಸುತನವನ್ನು ಕಾಣು ; ರಾಜಪದವಿಯನ್ನು ಹೊಂದು: ಆ ನಾರೀಲೋಕಮಾವುದೀ ಕೇಳಿಸುತಿರ್ದ ಪರಿಜನಮಾರೆಂದು ಕುಱುಂಬನರಸುಗಂಡಂತೆ ನೋಡುತ್ತುಮಿರ್ಪನ್ನೆಗಂ (ಧರ್ಮಾಮೃ. ೧–೨೧೨). [ಅರಸು$_3$ + ಕಾಣ್]

**ಅರಸುಗಾದೆ** (ನಾ). ರಾಜನೀತಿ : ತನಗೆ ಸವನಪ್ಪನಂ ಪೊಣರ್ದನೆ ಕಾದುವುದಜ್ಞನಪ್ಪವಂಗೆಱಗುವುದೆಂಬಿನಿತೆ ವಲಮರಸುಗಾದೆಗಳನುವಂ ನೀನಱಿದು ಬಿಲ್ಗೆ ಕೈನೀಡುವರೇ (ಕಬ್ಬಿಕಾ. ೨೨೯).
[ಅರಸು$_2$ (< ಅರಸ$_1$) + ಗಾದೆ]

**ಅರಸುಗಾವಲು** (ನಾ). ದೊರೆಯನ್ನು ಕಾಪಾಡುವ ಕೆಲಸ ; ರಾಜನ ಮೈಗಾವಲು ; ಅಂಗರಕ್ಷಣೆ : ಪವನಜಂ . . . ಅರಸುಗಾವಲಂ ಫಲುಗುಣನೊಳಿರಿಸಿ (ಜೈಮಿಭಾ. ೨–೬೭).
[ಅರಸು$_2$ (< ಅರಸ$_1$) + ಕಾವಲು (< ಕಾವಲ್)]

**ಅರಸುಗಿಡು** (ಕ್ರಿ). ದೊರೆತನವು ತಪ್ಪು ; ರಾಜತ್ವವನ್ನು ಕಳೆದುಕೊಳ್ಳು : ಜೂದಿನೊಳ್ ಪೋಜಸಱವಂತೆ ತಮ್ಮರಸುಗೆಟ್ಟು ಕಟಲ್ದೆರ್ದೆಗೆಟ್ಟರಣ್ಯದೊಳ್ ತಿರಿತರುತಿರ್ದ ಕಣ್ಬಿಡಿಗರಿಂ (ಪಂಪಭಾ. ೮–೮೫).
[ಅರಸು$_3$ + ಕಿಡು (< ಕೆಡು)]

**ಅರಸುಗಿಳಿ** 'ಅರಸಗಿಳಿ' ನೋ.

**ಅರಸುಗುಣ** (ನಾ). **೧.** ಅರಸನಲ್ಲಿರುವ ಗುಣ ; ರಾಜಗುಣ : ಅರಸುಗುಣಂ ಪಱಿಯನಣಂ ಬರಲಿತ್ತುದೆ ಶೌಚದಳವು ಪರವೆಣ್ಣಳಿಪಂ ತರಲಿತ್ತುದೆ . . . ಮಹಾನುಭಾವಂ ನೃಪನಾ (ಕಾವ್ಯಾವ. ೨೮೩) ; ಅರಿಯೆನೆಂಬುದು ಅರಸುಗುಣ (ಗಾದೆ). **೨.** ಪ್ರಶಸ್ತವಾದ ಗುಣ : "ಅರಸುಗುಣಂ, ಪ್ರಶಸ್ತಗುಣಃ" (ಶಬ್ದಾನು. ೨೯೭ ಪ್ರಯೋ).
[ಅರಸು$_2$ (< ಅರಸ$_1$) + ಗುಣ]

**ಅರಸುಗುಲ** (ನಾ). ರಾಜವಂಶ ; ದೊರೆಯ ಮನೆತನ : ನರಕನಹುದು ಪೈಶೂ[ಶು]ನ್ಯವೊದಗುವುದೆಮ್ಮರಸುಗುಲಕೆ ಹಾನಿಯಹುದು (ಪ್ರಭಂಜ. ೩–೭೩). [ಅರಸು$_2$ (< ಅರಸ$_1$) + ಕುಲ]

**ಅರಸುಗುವರ**, ಅರಸುಕುವರ (ನಾ). = ಅರಸುಕುಮಾರ : "ನೃಪಕುಮಾರನೊಳರಸುಗುವರನೆಂಬಭಿಧಾನವು" (ಕಶರ. ೭) ; "ಅರಸುಮಗನೊಳೆಯರಸುಗುವರನೆಂದಕ್ಕು" (ಶಬ್ದಮಂ. ೩೮). **ಅರಸುಕುವರ :** ನಿಮ್ಮರಸುಕುವರಂಗೆ ಚಂದ್ರಹಾಸಂಗೆ ಈಗೆನಿತು ವಯಸ್ಸು ? (ಚಂದ್ರಸ. ೫೯). [ಅರಸು$_2$ (< ಅರಸ$_1$) + ಕುವರ]

**ಅರಸುಗೆಯ್** (ಕ್ರಿ). ರಾಜ್ಯಭಾರವನ್ನು ಮಾಡು ; ದೊರೆತನವನ್ನು ನಡೆಸು : ಶ್ರೀಪುರುಷ ಮಹಾರಾಜರ್ ಅರಸುಗೆಯೆ (ಎಕ. IX, ಬೆಂಗಳೂ. ೫೫–೧ ; 750) ; ನಂದನೆಂಬರಸಂ ಪಲಕಾಲಮರಸುಗೆಯ್ಯುತ್ತಿರೆ (ವಡ್ಡಾರಾ. ೬೯–೪) ; ಶ್ರಾವಕ ವ್ರತಶೀಲತತ್ಪರನಾಗಿಯರಸುಗೆಯ್ಯುತಿರ್ದು (ಶಾಂತೀಚ. ೫–೮೪). [ಅರಸು$_3$ + ಕೆಯ್$_1$]

**ಅರಸುಗೆಯ್ತ** (ನಾ). = ಅರಸುಗೆಯ್ಮೆ : ಅರಸುಗೆಯ್ತದಿಂ ಪೊರೆದು . . . ಚಿಕದೇವೇಂದ್ರಂ (ಗೀತಗೋ. ೨–೮) ; ಇವನ ಅರಸುಗೆಯ್ತದೊಳ್ ಮುಂದಂಗೆ ಮಂದಾಧಿಕಾರಮಿಲ್ಲ (ಚಿಕವಂ. ೧೫೦–೭).
[ಅರಸು$_3$ + ಗೆಯ್ತ]

**ಅರಸುಗೆಯ್ಮೆ** (ನಾ). ರಾಜಕಾರ್ಯ ; ರಾಜ್ಯಭಾರ : ಅತ್ತಲರಸುಗೆಯ್ಮೆಯ ಕಜ್ಜದುಜ್ಜುಗಂಬಿಡಿದು ನಾಡಿಗರಿರವನಾರಯ್ವೊಡೆಂದು ರಾಯನಟ್ಟಿದ ಬೇಹಿನವರ್ (ರಾಮಾಶ್ವ. ೨೩–೩). [ಅರಸು$_3$ + ಗೆಯ್ಮೆ]

**ಅರಸುಚಾವಡಿ** (ನಾ). ರಾಜನ ಒಡ್ಡೋಲಗ, —ಸಭೆ: ಶೀವಿದೂರೂರ್ಗಳೊಳು ನಗರನಗರಿಯೊಳರಸುಚಾವಡಿಯೊಳಗ್ರಹಾರಂಗಳೊಳು ಮನ್ನೆಯರ ಠಾವಿನೊಳು (ಸೋಮಚ. ೧–೧೦೨).
[ಅರಸು$_2$ (< ಅರಸ$_1$) + ಚಾವಡಿ]

**ಅರಸುಶೀವಿ** (ನಾ). ರಾಜಗಾಂಭೀರ್ಯ; ದೊರೆತನದ ಗೌರವ: ಭಾವಿಸಲರಸುಶೀವಿಗುಳ್ಳನಿತು ಶಾಲೆಗಳೊಪ್ಪಿದುವು ರತ್ನರಂಜನದೊಳು (ಚಿಬಪು. ೫–೪೯). [ಅರಸು$_2$ (< ಅರಸ$_1$) + ಶೀವಿ]

**ಅರಸುತನ** (ನಾ). ದೊರೆತನ; ರಾಜತ್ವ: ಪುಸಿಯರಸುತನದ ಬೆಸನದೊಳ್ ತೊಡರ್ದುಸಿರದಿರ್ದನಪ್ಪೊಡೆ (ಪಂಚತಂ. ೧೨೭–೩); ನಿನಗಿನಿತರಸುತನದ ಮೇಲೆ ಪ್ರೇಮವುಳ್ಳೊಡೆ (ಹಚಕಾ. ೮–೩೭); ಎನ್ನರಸುತನವಿಂದಳಿದುದು (ಕುವ್ಯಾಕ. ೫–೩೨); ಆಳು ಇಲ್ಲದವನಿಗೆ ಅರಸುತನ ತಾನೇಕೆ (ಪುರಂದ. ೨–೭೪–೧೨). [ಅರಸು$_3$ + –ತನ]

**ಅರಸುತನಂಗೆಯ್** (ಕ್ರಿ). = ಅರಸುಗೆಯ್: ಅರಸುತನಂಗೆಯ್ವುಟಿಪಿಂ ಧುರದೊಳ್ ಮಾಜಾಂತರೆಲ್ಲರಂ ಮಟ್ಟಿಪುದುಂ ದೊರೆಕೊಳ್ಳುಂ ಪಾತಕಂ (ಪಂರಾಮಾ. ೧೦–೧೭೩). [ಅರಸುತನ + ಗೆಯ್ (< ಕೆಯ್$_1$)]

**ಅರಸುತೂಕ, ಅರಸತೂಕ** (ನಾ). ಶ್ರೇಷ್ಠವಾದ ತೂಕ; ಅತಿಶಯವಾದ ಮಹತ್ವ: ಅರಸುತೂಕದ ನಲ್ಲ ಗಳಿಸೂವ ಮೈದೂನ ನಡಸಿಕೊಳುವತ್ತಿ ಸಿರಿಗಂಗಿ (ಗರತಿ. ೭೨). **ಅರಸತೂಕ**: ಅರಸತೂಕದ ಹೆಣ್ಣ ಸರಸವ್ಯಾತಕಿನ್ನ ವಿರಸವಾದೀತ ನನ ಮನಸು (ನಾದಲೀ. ೫೪–೫).
[ಅರಸು$_2$ (< ಅರಸ$_1$) + ತೂಕ]

**ಅರಸುತೋಟ** (ನಾ). **೧.** ಅತ್ಯುತ್ತಮವಾದ ತೋಟ: ಅವರ ನಲವಿನೊಲುಮೆ ಬನದ ಪಿಕದ ಕುಕಿಲು ದಿಸೆಯ ಮುಟ್ಟ . . . ನೆಲವೆ ಅರಸುತೋಟವಾಗಿ ಮೆರೆಯಬೇಕು (ಮೂರ್ತಿಕಾ. ೧೫–೭). **೨.** ದೊರೆಯ ಉದ್ಯಾನವನ. [ಅರಸು$_2$ (< ಅರಸ$_1$) + ತೋಟ (< ತೋಂಟ)]

**ಅರಸುನರಕ** (ನಾ). ದೊಡ್ಡನರಕ; ಭಯಂಕರವಾದ ನರಕ: ಘೋರವೆಂಬ ಅರಸುನರಕವಿಹುದು (ವಿವೇಕ. ೧೭೯).
[ಅರಸು$_2$ (< ಅರಸ$_1$) + ನರಕ]

**ಅರಸುನೇಜಿಲ್** (ನಾ). = ಅರನೇಜಿಲ್: ಕರ್ಮಧಾರಯಕ್ಕೆ— ಬಡವುನಡು, ಬಡನಡು; ಅರಸುನೇಜಿಲ್, ಅರನೇಜಿಲ್ (ಶಮದ. ೧೭೭ ಪ್ರಯೋ). [ಅರಸು$_2$ (< ಅರಸ$_1$) + ನೇಜಿಲ್]

**ಅರಸುಪದವಿ** (ನಾ). ದೊರೆತನ; ರಾಜತ್ವ: ಈತಂಗರಸುಪದವಿಯನಂಗದೇಶದ ಸಿರಿಯನಿತ್ತನು (ಕುವ್ಯಾಆ. ೭–೫೫).
[ಅರಸು$_2$ (< ಅರಸ$_1$) + ಪದವಿ]

**ಅರಸುಪೆಂಡಿ** (ನಾ). ರಾಜವಂಶದಲ್ಲಿ ಹುಟ್ಟಿದವನು: "ರಾಜಬೀಜೀ ರಾಜವಂಶ್ಯ . . . ರಾಜಪೆಂಡಿ, ಅರಸುಪೆಂಡಿ" (ಸಿದ್ಧಾಂತಿ. ೧೮೩). 'ರಾಜಪೆಂಡಿ' ಪರಾ. [ಅರಸು$_2$ (<ಅರಸ$_1$) + ಪೆಂಡಿ ?]

**ಅರಸುಬ್ಬು** (ಕ್ರಿ). ಬಹಳವಾಗಿ ಹಿಗ್ಗು; ತುಂಬ ಸಂತೋಷಿಸು: ಅರಸುಬ್ಬಿ ನಗುವಾ (ಕನ್ನನು. II, ೪೩೨).
[ಅರಸು$_2$ (< ಅರಸ$_1$) + ಉಬ್ಬು$_1$ (< ಉರ್ವು$_1$)]

**ಅರಸುಮಗ** (ನಾ). = ಅರಸುಕುಮಾರ: ಪಟ್ಟಾವಳಿಯನುಟ್ಟುಕೊಂಡರಸುಮಗನಂ ಪೋಲ್ತು (ಪಂಚತಂ. ೧೮೬–೧೫); ಅರಸುಮಗಂ ಗಡ ಕವಿ ಗಡ (ಸಮಪು. ೧–೪೭); ತೊಟ್ಟಿಲೊಳರಸುಮಗಂ ಬೆಳೆದಂ (ಜಯಕಾ. ೨–೬೯). ℙ ಅರಸುಮಕ್ಕಳ್ (ಬಹುವ): ಒಡನೆ ನೆರೆದರಸುಮಕ್ಕಳ ನಿಡುಗಣ್ಗಳ ಬಳಗಮೆಜಗೆ ತನ್ನಯ ಮೆಯ್ಯೊಳ್ (ಪಂಪಭಾ. ೩–೫೧); ಬೀಯಂಗೆಯ್ವರಸುಮಕ್ಕಳ ಮುಂದೆ (ಕಬ್ಬಿಕಾ. ೪೪); ಅರಸುಮಕ್ಕಳ ಕೊಂದನೈನೂರ್ವರನು (ಕುವ್ಯಾದ್ರೋ. ೮–೨೮).

**ಅರಸುಮಗಳ್** = ಅರಸುಕುಮಾರಿ: ಅರಸುಮಗಳ್ ರಾರಾಜಿಪ ನವಮೃದುತರ ಗಮನದ ಗಾಡಿಯ ಗರುವಿಕೆಯಂ (ಜಯಕಾ. ೩–೫೫).
[ಅರಸು$_2$ (< ಅರಸ$_1$) + ಮಗ]

**ಅರಸುಮನೆತನ** (ನಾ). ರಾಜವಂಶ; ಕ್ಷತ್ರಿಯಕುಲ: ಅರಸುಮನೆತನದ ಅಲ್ಪರ್ತನೆಂಬ ರಾಜಪುತ್ರನನ್ನು ಮದುವೆಯಾದರು (ಮುಂಬಯಿ. ೪–೩). [ಅರಸು$_3$ (< ಅರಸ$_1$) + ಮನೆತನ]

**ಅರಸುಮರ್ಜಿ** (ನಾ). ಹೆಮ್ಮೆ; ಅಹಂಕಾರ: ಊಟಕ್ಕೆ ಬನ್ನಿ ಅಂದರೆ ಇವರಿಗೆಲ್ಲ ಅರಸುಮರ್ಜಿ ಬಂದಿದೆಯೇ (ಪದ್ಮಸ. ೧೧೭).
[ಅರಸು$_2$ (<ಅರಸ$_1$) + ಮರ್ಜಿ]

**ಅರಸುಮಿಗ** (ನಾ). ಶ್ರೇಷ್ಠವಾದ ಮೃಗ, —ಜಿಂಕೆ: ತಂತಮ್ಮಯ ವೈರಂದೊಜಿದಿರದೆ ನಿಂದು ನಿರೀಕ್ಷಿಪ ಪಶು ಪುಲಿ ಕರಿ ಹರಿ ಫಣಿ ಪರ್ದು ರದನಿಯರಸುಮಿಗಗಳ್ . . . ಕರಂ ಹರಿಸಂಬಡೆದುದು (ಜಯಕಾ. ೧೦–೨೭); ಕಾಟಯ ಕೊಟ್ಟಂ ಖಿಟ್ಟಿಯ ಪಳ್ಳಿ ಅರಸುಮಿಗದ ಪಟ್ಟಣ ಮಾನೆಯ ಮುಟಂ . . . ಭೀಮಾರಣ್ಯಂ (ಜಯಕಾ. ೧೫–೨೩).
[ಅರಸು$_2$ (< ಅರಸ$_1$) + ಮಿಗ]

**ಅರಸುಮೋಹರ** (ನಾ). **೧.** ರಾಜರ ಸಮೂಹ. **೨.** ಸೈನ್ಯ: ಕೋಲಲಳವಿಗೊಡ್ಡಿದ ನಿಚ್ಚಟರ ನೀಗಿದನು ತಾಗಿದನರಸು ಮೋಹರವ (ಕುವ್ಯಾಕ. ೧೫–೨೨). [ಅರಸು$_2$ (< ಅರಸ$_1$) + ಮೋಹರ]

**ಅರಸುವಂಶ** (ನಾ). = ಅರಸುಮನೆತನ: ಅಲ್ಲಿಯ ಪೂರ್ವಿಕ ಅರಸುವಂಶಕ್ಕೂ ನಾವು ನಿರಂತರವಾಗಿ ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತಿದ್ದೆವು (ಪ್ರತಾಪ. ೧೭). [ಅರಸು$_3$ (< ಅರಸ$_1$) + ವಂಶ]

**ಅರಸುವಡೆ** (ಕ್ರಿ). ದೊರೆಯನ್ನು ಪಡೆ; ರಾಜನ್ವತಿಯಾಗು: ಪುರುಪರಮೇಶ್ವರನಿಳೆಗವತರಿಸಿದನಿಂದರಸುವಡೆದೆವೆಂಬಂತೆ (ಆದಿಪು. ೭–೩೬).
[ಅರಸು$_3$ (< ಅರಸ$_1$) + ಪಡೆ$_1$]

**ಅರಸುವಣ್ಣು** (ನಾ). ಶ್ರೇಷ್ಠವಾದ ಹಣ್ಣು: ಕುಸುಮಹಾರಗಳನ್ನೂ ಅರಸುವಣ್ಣನ್ನೂ ರಣಧೀರನಿಗೆ ತಂದೊಪ್ಪಿಸಿ (ಮಂತ್ರಿಶ. ೧೨೨–೧೦).
[ಅರಸು$_2$ (< ಅರಸ$_1$) + ಪಣ್ಣು$_2$ (< ಪಣ್$_2$)]

**ಅರಸುವೇಜು** (ನಾ). ದೊಡ್ಡ ಹೇಜು; ಭಾರಿಯ ಹೊರೆ (?): ಅರಸುವೇಜಿಂಗೆ ಮುನ್ನನ್ನಡವ ಪಾಗಮಲ್ಲದೆ ಮತ್ತೊಂದು ಪಾಗಮುಂ ಲಾವಣಿಗೆಯ ಪಣಮುಂ (ಸೌಇಇ. IX–i, ೧೯೨–೨೮; 1115).
[ಅರಸು$_2$ (< ಅರಸ$_1$) + ಪೇಜು$_2$]

**ಅರಸುಹಂತಿ** (ನಾ). ರಾಜರ ಸಾಲು, —ಪಂಕ್ತಿ: ಸುನರ್ತನ ವಾದ್ಯ ಗೀತಾಮೃತಲಹರಿ ಸುಳಿಸುಳಿದುದಾಚೆಯಲರಸುಹಂತಿಯಲಿ (ತೊರರಾ. ೧–೭–೫೨); ಅರಸನುಗ್ಗಡಣೆಯ ನಿನಾದದಲರಸುಹಂತಿಯ ನೋಡುತ . . . ಭದ್ರಪೀಠಕೆ ಬಂದನೊಲವಿನಲಿ (ತೊರರಾ. ೧–೧೪–೭).
[ಅರಸು$_2$ (< ಅರಸ$_1$) + ಹಂತಿ (< ಪಂತಿ)]

**ಅರಸುಹುಣ್ಣು** (ನಾ). ದೊಡ್ಡ ಹುಣ್ಣು; ಬೆನ್ನುಫಣಿ: ಹೈದರನು ಅರಸುಹುಣ್ಣಿನ ಬೇನೆಯಿಂದ ಚಿತ್ತೂರ ಬಳಿಯಲ್ಲಿದ್ದ ನರಸಿಂಗರಾಯನ ಪೇಟೆಯಲ್ಲಿ ಸತ್ತನು (ಚರಿಸಂ. ೧೫೭).
[ಅರಸು$_2$ (< ಅರಸ$_1$) + ಹುಣ್ಣು (< ಪುಣ್)]

**ಅರಸೂಳಿಗ** (ನಾ). ರಾಜಸೇವೆ; ದೊರೆಯ ಚಾಕರಿ: ಮುಂತೆ ಅರಸೂಳಿಗವು ಭಕ್ತಿಯುಮಿಂತೆರಡುಮಂ ಕೂಡಿ ನಡೆಸುವೊಡೆಂತಹುದು (ಬಸವಪು. ೫೩–೧೩). [ಅರಸು$_2$ (< ಅರಸ$_1$) + ಊಳಿಗ$_1$ (< ಊಟಿ:)]

**ಅರಸೆಕ್ಕೆ** (ನಾ). ಶ್ರೇಷ್ಠವಾದ ಎಕ್ಕದಗಿಡ; ಬಿಳಿಯ ಎಕ್ಕೆ: "ವಸುಕಃ = ಅರಸೆಕ್ಕೆ, ರಾಜಾರ್ಕಃ = ಅರಸೆಕ್ಕೆ" (ಒಷಧಿ. ೧೩೭, ೧೪೬).
[ಅರಸು$_2$ (< ಅರಸ$_1$) + ಎಕ್ಕೆ]

**ಅರಸೇರು** (ನಾ). ಅರ್ಧಸೇರು ; ಒಂದು ಸೇರಿನಲ್ಲಿ ಅರ್ಧ : ಎರಡರ ಸೇರು ಒಂದು ಸೇರು (ರೂಢಿ). [ಅರ$_5$ (< ಅರೆ$_3$) + ಸೇರು$_2$]

**ಅರಸೊಡವೆ** (ನಾ). ರಾಜನ ಒಡವೆ ; ದೊರೆಯ ಆಭರಣ : ಎಲ್ಲಿ ಸಿಕ್ಕಿತು, ಕಂದ, ಈ ಅರಸೊಡವೆ ? (ಚಂದ್ರಸ. ೧೯).
[ಅರಸು$_2$ (< ಅರಸ$_1$) + ಒಡವೆ]

**ಅರಸೊತ್ತಿಗೆ** (ನಾ). ದೊರೆತನ ; ರಾಜಪದವಿ : ಮರಣ ಛಾಯೆಯು ಮುಸುಕಿರಲು ಇಳೆ, ಜೀವರಿಗಿಲ್ಲರಸೊತ್ತಿಗೆ (ಹಾಡುಪಾ. ೫೨–೧೯) ; ಹೊಯ್ಸಳರ ರಾಜಶಕ್ತಿ ಕುಂದಿತು, ಅರಸೊತ್ತಿಗೆ ಕಳಚಿ ಬಿತ್ತು (ಶ್ರೀವಿದ್ಯಾ. ೧೬೧). [ಅರಸು$_2$ (< ಅರಸ$_1$) + ಒತ್ತಿಗೆ$_0$]

**ಅರಸೊಲ್ಲಗೆ** (ನಾ). ಅರ್ಧಸೊಲಿಗೆ : [ನಂದಾದೀ]ವಿಗೆ ನಡೆವಂತಾಗಿ ಗಾಣದಲಿ ಅರಸೊಲ್ಲಗೆಯ ಸೂ[ಟಗೆ]ಯಂಣೆ[ಯಂ] ಬಿಟ್ಟರು (ಸೌಇಇ. XV, ೨೧೦–೧೬ ; 1196). [ಅರ$_5$ (< ಅರೆ$_3$) + ಸೊಲ್ಲಗೆ]

**ಅರಸ್ಥಾನ** (ನಾ). **೧.** ಅರಮನೆ. **೨.** ರಾಜನ ಆಸ್ಥಾನ : ಮಂತ್ರಿ ಅರಸ್ಥಾನಕ್ಕೆ ತಂತ್ರಿ ದೇವಸ್ಥಾನಕ್ಕೆ (ಗಾದೆ).
[< ಅರಸ$_1$ + ಸ್ಥಾನ]

**ಅರಹಂತ** 'ಅರುಹಂತ' ನೋ.

**ಅರಹಟ** (ನಾ). ಒಂದು ಊರಿನ ಹೆಸರು : ಚಿಪ್ಪಿನ ಕಟ್ಟದಲು ಅರಹಟದ ಬಂಮಿಸೆಟ್ಟಿಯಿಂ ಬಡಗಲುಗದ್ದೆ ಕಂಮುವಱುನೂಱು (ಸೌಇಇ. IX–i, ೨೯೧–೨೯ ; 1100) ; ಅರಹಟದ ಬಟ್ಟಿಯಿಂ ಬಡಗ (ಸೌಇಇ. XI–ii, ೧೬೫–೨೩ ; 1113). [?]

**ಅರಹುಚ್ಚ** 'ಅರೆಹುಚ್ಚ' ನೋ.

**ಅರಹುಡಿ** 'ಅರವುಡಿ' ನೋ.

**ಅರಹೊಟ್ಟೆ** 'ಅರೆಹೊಟ್ಟೆ' ನೋ.

**ಅರಹೊಱಸು** 'ಅರವೊಱಸು' ನೋ.

**ಅರಳ್$_1$** 'ಅಲರ್$_1$' ನೋ.

**ಅರಳ್$_2$** 'ಅಲರ್$_2$' ನೋ.

**ಅರಳ್$_3$**, ಅರಳು$_3$ (ನಾ). ನೆಲ್ಲು, ಜೋಳ ಮುಂತಾದ ಧಾನ್ಯಗಳನ್ನು ಹುರಿದ ಮೇಲೆ ಆಗುವ ರೂಪ ; ಲಾಜೆ : "ಅರಳಾಗಿ ಪುರಿದ ಧಾನ್ಯೋತ್ಕರಮಂತವೆ ಲಾಜೆ" (ವಸ್ತುಕೋ. ೧–೧೬–೧೧) ; ಮೆದೆಯಂ ಸುಟ್ಟರಳಂ ಕುಱುಕುವ (ಧರ್ಮಾಮೃ. ೩–೨೧). **ಅರಳು$_3$** : "ಅರಳು ಲಾಜಾಖ್ಯೆಯಕ್ಕು" (ಮಂಗರಾ. ೧೧೦–೬) ; ಹೂವಿನ ಸರ ೧೨ ಒಪ್ಪಿಡಿಯರಳು (ಸೌಇಎ. ೧೯೩೦, ಬಾಗೆವಾ. ೧೦೭–೮ ; 1159) ; ಪಾಕದೋಡಿನೊಳುರಿದರಳಿನವೊಲಾಕಸದೊಳಿಡಿದಿರ್ದ ತಾರಾನೀಕವೊಡನೊಡನೆಯ್ದೆ (ಬಸವು. ೫೮–೬೦) ; ಮರಳಲ್ಲಿ ಹರಳು ಹುರಿದರೆ ಅರಳು ಆದೀತೇ (ಗಾದೆ).

**ಅರಳಿಟ್ಟು** = ಅರಳಿನಿಂದ ಮಾಡಿದ ಹಿಟ್ಟು : ಅರಳಿಟ್ಟು ಮೊಸರು ತಿನ್ನುವುದಕ್ಕೆ ರುಚಿ (ರೂಢಿ). [< ಅರಳ್$_1$]

**ಅರಳಂಬು** 'ಅಲರಂಬು' ನೋ.

**ಅರಳಲರ್** (ನಾ). ಅರಳಿದ ಹೂ ; ವಿಕಾಸಗೊಂಡ ಪುಷ್ಪ : ಪಣ್ಮರಗಳೆ ಪೂಮರಗಳೆ ತಣ್ಮಲೆದಲೆವೆಲರೆ ಮಿಱುಗಿಪರಳಲರೆ ಪೊದಳ್ದಣ್ಮುವ ಕೆಂಪೆ ಕರಂ ಕೈಗಣ್ಮುವ ದಂಪತಿಯುಲಂಪೆ ನಂದನವನದೊಳ್ (ಬಂಹರಿ. ೧–೨೧). [ಅರಳ್$_1$ (< ಅಲರ್$_1$) + ಅಲರ್$_2$]

**ಅರಳಸರಳ** 'ಅರಲಸರಲ' ನೋ.

**ಅರಳಿ$_1$**, ಅರಱಿ ?, ಅಳರಿ (ನಾ). ಅಶ್ವತ್ಥವೃಕ್ಷ ; ಬೋಧಿವೃಕ್ಷ : ಅತ್ತಿಯ ಬಸರಿಯ ಗೋಳಿಯ ಮತ್ತರಳಿಯ ವಟದ ಪಣ್ಣಂ (ಧರ್ಮಾಮೃ. ೫–೧೩೨) ; ಅರಳಿಯ ಪಣ್ಣಂ . . . ಗೊರವರ ಶಾಪದೊಳೆ ಪುಱುತುವೋ ಪೇೞಿಮಿದಂ (ಸಮುಪ. ೧೦–೧೧೮) ; ಅಲ, ಅರಳಿ ಬೀಜಗಳನ್ನು ಹೋಲಿಸಿ ನೋಡಿ (ಜೀವಾತ್ಮ. ೧೬೪). **ಅರಱಿ ?** : ಇನ್ತಿದನಱಿದುಱಿದ್ದನ್ ಗರಿ[ರ]ಱಿಯನರಮೊಯಂದರನಲಯಂ ಕವಿಲೆಯಂನಱಿದ ಪಞ್ಚಮಹಾಪಾತಕನಕುಂ (ಎಕ. III, ನಂಜನ. ೧೪೯–೯ ; 1017). **ಅಳರಿ** : ಪಳ್ಳದೊಳಗಣ ಉಳಿಯಳರಿಯೋ (ಇಆ. XII, ೧೬–೪೮ ; 735) ; ಅಳರಿ ಅತ್ತಿನೆಲ್ವಾಗಿಲ್ಕೆಱೆ (ಇಆ. XIV, ೨೩೩–೬೦ ; ೯ನೆಯ ಶತ) ; ಅಲೆಪೊಮ್ಬುಣಶೆ ಅನ್ತೆ ಬಳಿ ಪುಣುಶೆಯೆ ಅಳರಿಯ ಕಿಱುಕೆಱೆಯೆ (ಎಕ. XVI, ತಿಪಟೂ. ೧೪೦–೬೯ ; 900) ; ಅಳರಿ(ರಳಿ)ಯ ಶೋಭೆ (ಜಟ್ಟಮ. ೪–೧೧).

**ಅರಳಿಯ ಅಣೆ** = ಒಂದು ಪ್ರದೇಶದ ಹೆಸರು : ಪಾಲಾಜ ಹಳದಲಿ ಅರಳಿಯ ಅಣೆಯೆಂಬುದು ಅನಾದಿಕಾಲತೊಡಗಿ ಒಡದು ನೆಲ ಸರಿತವಾಗಿ ಹಾಳಾಗಿಯಿ[ದ] (ಎಕ. X, ಮುಳಬಾ. ೭–೫ ; 1416). **ಅರಳಿಯ ಕೆಯಿ** = ಒಂದು ಪ್ರದೇಶದ ಜಮೀನಿನ ಹೆಸರು : ದೇವಾಲಯದಿಂ ಪಡುವಲು ಅರಳಿಯ ಕೆಯಿ (ಎಕ. XII, ಚಿಕ್ಕನಾ. ೨೦–೪೩ ; 118?). **ಅರಳಿಯ ಬೆಂಚೆ** = ಒಂದು ಕೊಳದ ಹೆಸರು : ಮೂಡಲು ಹರಿಗೆಯ ಹೊಲವೇರಿಯ ಸಸಿ ಅರಳಿಯ ಬೆಂಚೆ ಮತ್ತಂ ವಿದಿಕ್ಕಾಗಿ (ಎಕ. VII, ಶಿವಮೊ. ೨೬–೨೫೨ ; 1524).

[**ದೇ.** ‖ **ತಮಿ.** ಅರಚು, ಅರೈ ; **ಮಲ.** ಅರಯಾಲ್, ಅರಚು ; **ಕೊಡ.** ಅರಳಿ ; **ತೆಲು.** ರಾಗಿ, ರಾವಿ ; **ಕೊಲಾ.** ರವಿ]

**ಅರಳಿ$_2$** (ನಾ). = ಅರಣೆ : ಕೂರಿಗೆ ಎರಡು ಕೂರಿಗೆ ಭೂಮಿಯನ್ನು ತೋಯಿಸಿ ಬಿತ್ತಿಕೊಂಡರೆ ಅದನ್ನು ಎದುರು ನೋಡಿಕೊಳ್ಳುತ್ತ ಅರಳಿಯ ಕಂಡ ಬೆಕ್ಕಿನಂತೆ ಪ್ರಾಣವನ್ನು ಹಿಡಿದುಕೊಂಡಿರುವುದಕ್ಕೆ ಆಸ್ಪದವಾಗುವುದು (ಕೃಷಿಪ್ರ. ೧೭೦). [?]

**ಅರಳಿಕೆರೆ** (ನಾ). ಊರಿನ ಹೆಸರು : ಮೂಡಲು ಹಳ್ಳ ಆಗ್ನೇಯ ಚಿಕೊಂಡಿ ಹಳ್ಳ × × × ಮೊರಡಿ ತೆಂಕ ಅರಳಿಕೆರೆ ಆ ಮಧ್ಯದಲ್ಲಿ ಹಳ್ಳ (ಎಕ. XII, ತಿಪಟೂ. ೯–೭೦ ; 1388). [ಅರಳಿ$_1$ + ಕೆರೆ$_2$ (< ಕೆಱೆ$_2$)]

**ಅರಳಿಗ$_1$** 'ಪರಳಿಗ' ನೋ.

**ಅರಳಿಗ$_2$** (ನಾ). ಒಂದು ಬಗೆಯ ಹಕ್ಕಿ : ಪಿಂಗಳಿಕ ಸಾಳ್ವನರಳಿಗನಸಗವಕ್ಕಿಗಳ (ರುಕ್ಮಾಂಗ. ೧೦–೫). [?]

**ಅರಳಿಚು** 'ಅಲರ್ಚು' ನೋ.

**ಅರಳಿಸು** 'ಅಲರಿಸು' ನೋ.

**ಅರಳು$_1$** 'ಅಲರ್$_1$' ನೋ.

**ಅರಳು$_2$** 'ಅಲರ್$_2$' ನೋ.

**ಅರಳು$_3$** 'ಅರಳ್$_3$' ನೋ.

**ಅರಳುಂಡೆ** (ನಾ). (ಜೋಳದ ಅಥವಾ ಬತ್ತದ) ಅರಳುಗಳಿಂದ ಮಾಡಿದ ಉಂಡೆ ; ಅವಲುಂಡೆ : ಅಂಗಡಿಯಲ್ಲಿ ಕುಳಿತು ಅರಳುಂಡೆ ಪುರಿ ಮೊದಲಾದುವನ್ನು ಮಾರುತ್ತಿದ್ದಳು (ನಿಬಂಧ. I, ೩೫).
[ಅರಳು$_3$ (< ಅರಳ್$_3$) + ಉಂಡೆ]

**ಅರಳುಗಣ್** 'ಅರಳ್ಗಣ್' ನೋ.

**ಅರಳುಗಣ್ಣು** 'ಅರಳ್ಗಣ್' ನೋ.

**ಅರಳುಣ್ಣು** (ಕ್ರಿ). ಹೂವನ್ನು ಸೇವಿಸು ; ಹೂವಿನ ರಸವನ್ನು ಕುಡಿ : ಸಂಪಗೆಯ ಅರಳುಂಡ ಪೆಣ್ದುಂಬಿಯಂದದಿನಿಯ ಪೂಸರಲನ ತಂದು ತೋಱಿವಳು (ಮೋಹತ. ೧೨–೨೩).
[ಅರಳು$_2$ (< ಅಲರ್$_2$) + ಉಣ್ಣು (< ಉಣ್)]

**ಅರಳುಮಲ್ಲಿಗೆ** (ನಾ). ವಿಕಸಿತವಾದ ಮಲ್ಲಿಗೆ ; ಅರಳಿದ ಮಲ್ಲಿಗೆ ಹೂ : ಕರಿಕಪೋಲದ ಮದ ಸೊಗಡೆಂದು ತುಂಬಿಯ ನೆರವಿಗೆ ಪರಿಮಳವೀವ ಅರಳು ಮಲ್ಲಿಗೆ ಗೊಂಚಲೆನೆ ಗಜಕರ್ಣದೆ ಮೆಱೆದುವು ಮುತ್ತಿನ ಕುಚ್ಚು (ಕಂನವಿ. ೨೩–೯೯). [ಅರಳು$_1$ (< ಅಲರ್$_1$) + ಮಲ್ಲಿಗೆ]

**ಅರಳುವಾಸು** 'ಅಲರ್ವಾಸು' ನೋ.

**ಅರಳ್$_1$**, ಅರಲೆ (ನಾ). ಕಾಳು ತೆಗೆದ ಹತ್ತಿ : ಒಂದೆಡೆಯೊಳಗೊಟ್ಟಿರ್ದರಳೆಯನೊಡನಳುರ್ವಂತಳುರ್ದನನಲನರಗಿನ ಮನೆಯಂ (ಪಂಪಭಾ. ೩-೫) ; ಬಿಳಿಯರಳೆ [ಪಾಠಾಂ. ಳಿ]ಯಂತೆ ಗಂಗಾಜಳದಂತೆ ... ಅತ್ತಿ ಮಬ್ಬೆಯ ಚರಿತಂ (ಅಜಿಪು. ೧೨-೬) ; ಅರಳೆಯ ಕಿಚ್ಚಿನಂತೆ ಧನಮಾಯು ವಸಂತದ ಶೋಭೆಯಂತೆ (ಧರ್ಮಾಮೃ. ೫-೧೯) ; ಪಾಪವೆಲ್ಲಂ ಕ್ಷಣದೊಳು ಬೆಂದುಪೋಯ್ತರಳೆಗಳ ಬೆಟ್ಟದೊಳು ಕಿಡಿಯು ಬಿದ್ದಂದದೊಳು (ವೀಶೈಪು. ೨-೬-೪೪) ; ಕಾಳು ತೆಗೆದ ಹತ್ತಿಗೆ ಅರಳೆಯೆನ್ನುತ್ತಾರೆ (ಮುಂಬಯಿ. ೪-೨೭). **ಅರಲೆ :** ತನು ಪಂಜಿವೊಲ್ ಬೆಳತಿರ್ಪಿನೆಗಂ ಹಿಮಮೆಕ್ಕಿದರಲೆವೋಲ್ ಪುದಿದಿರೆಯುಂ (ಆದಿಪು. ೬-೩೩) ; ಗಾಳಿ ಮುಟ್ಟಿದರಲೆಯಂತೆ ನಡುಗಿ (ಧರ್ಮಾಮೃ. ೧೩-೧೦೬) ; ಅನಲನಡಸಿದರಲೆಯ ತೆಜದಿಂ (ಖಮಡ. ೫-೬೬). [?]

**ಅರಳ್$_2$** (ನಾ). ಕಂಬ ; ಸ್ಥಾಣು : ನೂಣದೆ ಅರಳೆಯ ತಿಟ್ಟನೆ ತಿರುಗುವ ಗಾಣದೆತ್ತಿನಂತೆ ಪೂರ್ವಲಿಖಿತ ಮುಂದುಗಾಣಲೀಯದು (ಬಸವ. ೫೭೮).
[ದೇ. ‖ ತಮಿ. ಎಱುಳ್ = ಕಂಬ ; ತೆಲು. ರಾಡು = ಕಂಬ]

**ಅರಳೆಲೆ**, ಅರಲೆಲೆ, ಅಲರೆಲೆ, ಅಳರೆಲೆ (ನಾ). ಮಕ್ಕಳ ಹಣೆಗೂ, ಸೊಂಟಕ್ಕೂ, ಪ್ರಾಣಿಗಳ ನೆತ್ತಿಗೂ, ಮನೆಗಳ ಮುಂಭಾಗಕ್ಕೂ ಕಟ್ಟುವ ಅರಳಿಯ ಎಲೆಯ ಆಕಾರದ ಒಂದು ಒಡವೆ : ನೊಸಲೊಳೊಡಂಬಡುವರಳೆಲೆ (ಪಂಪಭಾ. ೨-೪) ; ಅರಳೆಲೆ ಪೊಂಗುನೂಲ್ ಪುಲಿಯುಗುರ್ ಮಣಿಕಿಂಕಿಣಿಗೆಜ್ಜೆ ... ಏನೆಸೆದಿರ್ದುದೊ ಬಾಲಮಂಡನಂ (ಅಜಿಪು. ೫-೬೨) ; ಶಾಂಕರಿಗೆಸೆದುದು ಮುಂದಲೆಯೊಳಗರಳೆಲೆ ಬಹುರತ್ನನೂತ್ನಕಾಂತಿಗಳಿಂದಂ (ಗಿರಿಕ. ೩-೮೧) ; ಮಂಡೆಮೊದಲನಂಡಲೆವರಳೆಲೆಯನು ಕೊಂಡಾಡುವರೆನ್ನಳವೆ (ಅಂಜಚ. ೪-೪೬) ; ಕುರುವಿಂದದಳ ಖಚಿತ ಸೋಪಾನ ಬಜ್ಜರಗಳರಳೆಲೆಯು ಮರಕತದ ತಳ್ಕು (ವೆಂಕಾರಾ. ೫-೬-೨೧). **ಅರಲೆಲೆ :** ಅಲರೆಸೆವೆಳದಳಿರೆಲೆಯರಲೆಲೆ ಬಳ್ಮಿಡಿ ಮಿಸುಪ ಪಚ್ಚೆಗೊಂಡಲಮಳಿ ಕಜ್ಜಲ ತಿಲಕಮಾಗೆ ತೋರ್ಪುದು ಬಾಲನಂದದಿಂ ಮಾಕಂದಂ (ಕುಸುಮಾ. ೫-೩೬). **ಅಲರೆಲೆ :** ತಳೆದ ಸಹಜಚ್ಛಿದ್ರ ಕರ್ಣಂಗಳಿಗೆ ಮಣಿಮಾಂಗಾಯನಿಟ್ಟಳು ಅಲರೆಲೆಯ ಸಿಖಿಯಲಿ ತೊಡರ್ಚಿ (ಸಾಳ್ವಭಾ. ೨೧-೭೫). **ಅಳರೆಲೆ :** ಅಳರೆಲೆಗಳಲುಗೆ ಮಾಂಗಾಯ್ ಚಳಯಿಸೆ ಕಿಂಕಿಣಿಗಳುಳಿಯೆ ಶಿಶು ನಡೆಗಲ್ವಂ (ಪುಷ್ಪಪು. ೧೨-೬೬) ; ಅಳರೆಲೆಯತ್ತಿ [ಪಾಠಾಂ. ಅರಳೆಲೆ ಮತ್ತಿ, ಅಳಕಡ್ಡಿ ಮತ್ತಿ] ಕಾಯ್ ಪುಲಿಯುಗುರ್ ನಿಗಳಂ ಕಿಱುಗೆಜ್ಜೆ ... ಅಚ್ಯುತನಾದ ಮೊಪ್ಪಿದಂ (ಸೂಕ್ತಿಸು. ೭-೭೫). [ಅರಳಿ$_1$ + ಎಲೆ$_1$]

**ಅರಳೆಲೆಮಾಲೆ** (ನಾ). ಅರಳಿ ಎಲೆಗಳ ಆಕಾರದ ಬಟ್ಟುಗಳ ಚಿನ್ನ ಅಥವಾ ಬೆಳ್ಳಿಯ ಸರ : ತಲೆವಳಸಿ ನೆಲೆಗೊಳಿಸಿದ ಮಾಣಿಕ್ಯದ ತಲೆಮಾಲೆಯ ಪರಿಸರದೊಳೆಳಲೆವಿಟ್ಟ ಕನಕದರಳೆಲೆಮಾಲೆಯ (ರಾಜಶೇ. ೬-೧೧ ವ). [ಅರಳೆಲೆ + ಮಾಲೆ]

**ಅರಳೇಳ್** (ಕ್ರಿ). ಧಾನ್ಯದಂತೆ ಅರಳಾಗಿ ಸಿಡಿದು ಹೊಮ್ಮು ; ಅವಲಾಗು : ಘುರಿಘುರಿಲೆಂದು ಸೀದುವು ವಿಹಂಗಕುಲಂ ಕೆಱೆಬಾವಿಬೆಂಚೆಗಳ್ ಪುರಿದರಳೆಳ್ದುವು (ಗಿರಿಕ. ೯-೨೧). [ಅರಳ್$_3$ + ಏಳು$_1$]

**ಅರಳ್ಕೆ** 'ಅಲರ್ಕೆ' ನೋ.

**ಅರಳ್ಗಣ್**, ಅರಳುಗಣ್, ಅರಳುಗಣ್ಣು (ನಾ). ಅರಳಿದ ಕಣ್ಣು ; ಅಗಲವಾದ ಕಣ್ಣು : ಚೆಲ್ಲೆಗಣ್ಣವರರಳ್ಗಣ್ಣವರ್ ನಿಡುಗಣ್ಣ ಹುಲ್ಲೆಗಣ್ಣವರೆಸಟ್ಟಣ್ಣ ಲಲ್ಲೆಗಣ್ಣವರ್ ... ಎಯ್ದಿತೊಗ್ಗಿನಲಿ (ಮೋಹತ. ೨೪-೧೨) ; ಕೆಂಪೇಱಿದರಳ್ಗಣ್ಣ ಕಡೆ ಪರೆದ ಕುರುಳಾಂತ ಸುಂಪುವಣಿ ಮಸುಳ್ದ ತಿಲಕಂ (ಚಿಬಪು. ೧೯-೨೫). **ಅರಳುಗಣ್ :** ಇರಿಸಿದನೊಕ್ಕೈರವನೆಂದೆನಲರಳುಗಂಗಳ ಧಾಳಪೊಪ್ಪಿರೆ ಬಂದಳ್ (ಕುವ್ಯಾವಿ. ೧-೨೩) ; ಅಳಿಗುರುಳ ತಾವರೆಮೊಗದ ಪೊಳೆವರಳುಗಂಗಳ (ಸಾಳ್ವಭಾ. ೨-೨) ; ಪರಮಕಾರುಣ್ಯಾಬ್ಧಿ ನೆಲಸಿಹನರಳುಗಂಗಳಲಿ ಅಖಿಲ ಭುವನೋತ್ಕರ ಶುಭಪ್ರದನಾಗಿ (ನಿಭಾಗ. ೫-೧೦-೩೬). **ಅರಳುಗಣ್ಣು :** ಬೆರಳಳಲುಕದೊಳಾಂದೋಳಿಪಮಸ್ತಕದರಳುಗಣ್ಣಬಲೆಯೊಪ್ಪಿದಳು (ಕಂನವಿ. ೯-೧೭೪).
[ಅರಳು$_1$ (< ಅಲರ್$_1$) + ಕಣ್]

**ಅರಳ್ಗಱಿ** 'ಅಲರ್ಗಱಿ' ನೋ.

**ಅರಳ್ಗೂಡು** 'ಅಲರ್ಗೂಡು' ನೋ.

**ಅರಳ್ಚು** 'ಅಲರ್ಚು' ನೋ.

**ಅರಳ್ಬಿಲ್ಲು** 'ಅಲರ್ಬಿಲ್' ನೋ.

**ಅರಳ್ಮಲರು** (ನಾ). ಅರಳಿದ ಹೂವು : ಕುಚ್ಚು ಕುಚ್ಚಿನ ಕೇಸರದ ಅರಳ್ಮಲರುಗಳ್ (ಶ್ರೀರಾಮಾ. ೫೬೬-೩೮೭).
[ಅರಳ್$_1$ (< ಅಲರ್$_1$) + ಮಲರು (< ಮಲರ್)]

**ಅರಳ್ಮಳೆ** 'ಅಲರ್ಮಱೆ' ನೋ.

**ಅರಳ್ಮುಡಿ** 'ಅಲರ್ಮುಡಿ' ನೋ.

**ಅರಳ್ವಾಸು** 'ಅಲರ್ವಾಸು' ನೋ.

**ಅರಱಿ ?** 'ಅರಳಿ$_1$' ನೋ.

**ಅರಱಿಮುಳ್ಳು** (ನಾ). ಒಂದು ಪ್ರದೇಶದ (ಊರಿನ) ಹೆಸರು (?) : ಶ್ರೀಪ್ರಭು ಮೆಜಂಪೊತೆವಾನಾ ಮಗ ಎಲೋಯಮಗಮುವಖತನ ವಿಲ್ಲ ಡರಱಿಮುಳ್ಳುಳ್ ಸ್ವರ್ಗಯೋದನ (ಎಕ. X, ಚಿಂತಾಮ. ೧೦೭-೩; 800).
[ಅರಱಿ (< ಅರಳಿ$_1$) + ಮುಳ್ಳು (< ಮುಳ್)]

**ಅರಾಕು** 'ಅರಕ$_1$' ನೋ.

**ಅರಾಜಕ** (ಗು). ೧. ರಾಜನನ್ನು ಹೊಂದಿಲ್ಲದ. (ನಾ). ೨. ರಾಜನಿಲ್ಲದಿರುವ ಸ್ಥಿತಿ ; ಅವ್ಯವಸ್ಥೆ ; ಗೊಂದಲ : ಜಗವರಾಜಕವಾಯ್ತು (ಕುವ್ಯಾದ್ರೋ. ೧-೪೩). [ಸಂ.]

**ಅರಾಜಕತೆ** (ನಾ). ರಾಜನಿಲ್ಲದ ಸ್ಥಿತಿ ; ಅನಾಯಕತ್ವ ; ಅವ್ಯವಸ್ಥೆ : ಇಂಗ್ಲೀಷರು ಬಂಗಾಳಾದೇಶವನ್ನು ಅರಾಜಕತೆಯಿಂದ ಉದ್ಧಾರಮಾಡಿದರು (ಬಂಕಿಮ. ೨೭೧). [ಸಂ. ಅರಾಜಕತಾ]

**ಅರಾಜಿಕೆ** (ನಾ). = ಅರಾಜಕ ೨ : ಅರಾಜಿಕವಾದಾ ಕಾಲದಲ್ಲಿ ಡಕಾಯಿತಿಗಳನ್ನು ಮಾಡುವುದೇ ಎಲ್ಲರಿಗೂ ಕೆಲಸವಾಗಿದ್ದಿತು (ದೇವೀಚೌ. ೧೦೮). [< ಸಂ. ಅರಾಜಕ]

**ಅರಾಡಮುರಾಡ** (ನಾ). ೧. "ಹಟಮಾರಿ ; ಮಂಡ" (ಜಾನಕೋ. ೧೩). ೨. ಮೊಂಡಾಟ ; ಹಟ (ಸ್ಯಾಂಡರ್).
[ಅರಾಡ$_0$ + ಮುರಾಡ$_0$]

**ಅರಾತಿ** (ನಾ). ೧. ಹಗೆ ; ಶತ್ರು : ಶ್ರೀಯನರಾತಿಸಾಧನ ಪಯೋನಿಧಿಯೊಳ್ ಪಡೆದುಂ (ಪಂಪಭಾ. ೧-೧) ; ರಣದೊಳರಾತಿವಾರಣ ಘಟಾಳಿಯನೊರ್ವನೆ ಗೆಲ್ವನ್ (ಗದಾಯು. ೧-೧೭). ೨. [ಜ್ಯೋತಿಷ] ಲಗ್ನದಿಂದ ಆರನೆಯ ಸ್ಥಾನ ; ಶತ್ರುಸ್ಥಾನ : ಸಿತನಿಂ ಧರ್ಮ ಧನಾರಿ ಪಂಚಮ ದಶಾಯಸ್ಥಾನದೊಳ್ ಮಂದನಿಂ ತ್ರಿತಯಾರಾತಿ ಸುತಾಂತ್ಯದೊಳ್ ... ಇಂದ್ರಮಂತ್ರಿ ಶುಭದಂ (ಜಾತತಿ. ೧೦-೧೧). [ಸಂ.]

**ಅರಾತಿಕಾಂತೆ** (ನಾ). ಶತ್ರುವಿನ ಪತ್ನಿ : ಪಾವಡರ್ದಳಿವಂದೆಯಂತಿರಗಿವರ್ಸುಗಿವರ್ತದರಾತಿಕಾಂತೆಯರ್ (ರಾಜಶೇ. ೫-೧೦).
[ಅರಾತಿ + ಕಾಂತೆ]

**ಅರಾತಿದಲ್ಲಣ** (ನಾ). ಶತ್ರುಗಳಿಗೆ ಭಯವನ್ನುಂಟುಮಾಡುವವನು : ಕೊರ್ವಿದ ವಿಜಯ ಪರ್ವತವೇಱಿ ಬಂದನು ಗರ್ವಿತಾರಾತಿದಲ್ಲಣನು (ಭರಚ. ೩೬-೬೮). [ಅರಾತಿ + ತಲ್ಲಣ]

**ಅರಾತಿನಿಕರ** (ನಾ). ಹಗೆಗಳ ಗುಂಪು; ಶತ್ರುಗಳ ಸಮೂಹ: ನೃಪವೃಷಭನರಾತಿನಿಕರ ತರುದವದಹನಂ (ಕವಿರಾ. ೩–೧೫೭).
[ಅರಾತಿ + ನಿಕರ]

**ಅರಾತಿಸ್ಥಾನ** (ನಾ). ೧. ಶತ್ರುವಿನ ಸ್ಥಾನ. ೨. [ಜ್ಯೋತಿಷ] ಲಗ್ನದಿಂದ ಆರನೆಯ ಸ್ಥಾನ: ಇರೆ ಲಗ್ನಕ್ಕೆ . . . ಹಿಮಕರಂ . . . ಅರಾತಿಸ್ಥಾನದೊಳ್ ಕೂಡೆ ನಿಷ್ಠುರಂ (ಜಾತತಿ. ೧೮–೭). [ಅರಾತಿ + ಸ್ಥಾನ]

**ಅರಾತಿಹರ** (ನಾ). ಶತ್ರುಗಳನ್ನು ನಾಶಮಾಡುವವನು: ಅರಾತಿಹರ ಜಯ ಜೀಯ ಎಂದುದು ವಂದಿಸಂದೋಹ (ಕುವ್ಯಾಕ. ೨೧–೧೩).
[ಅರಾತಿ + ಹರ್ತೃ]

**ಅರಾಬಿ** (ನಾ). ಅಗಲ; ವಿಸ್ತಾರ; ವಿಶಾಲ.
**ಅರಾಬಿಗೋಡೆ** = ಊರ ಸುತ್ತಲೂ ಇರುವ ಗೋಡೆ; ಉದ್ದವಾದ ಗೋಡೆ (ಸ್ಯಾಂಡರ್).
[← **ಅರ.** ಅರಾಬಾ; **ಮರಾ.** ಅರಬಾ. / **ತುಳು.** ಅರಾಬಿ]

**ಅರಾಬು** (ನಾ). ಗಾಬರಿ; ಗದ್ದಲ; ಕಕ್ಕಾಬಿಕ್ಕಿ; ದಂಗೆ; ಅವಾಂತರ (ಸ್ಯಾಂಡರ್). [← **ಮರಾ.** ಅರಾಬಾ = ಗೊಂದಲ. / **ತೆಲು.**]

**ಅರಾಲ**, ಅರಾಳ$_1$ (ಗು). ೧. ಬಾಗಿದ; ಡೊಂಕಾದ; ವಕ್ರವಾದ. (ನಾ). ೨. ಒಂದು ಜಾತಿಯ ಗಿಡ; ರಾಳ. **ಅರಾಳ**$_1$ (ಗ್ಯಾರೆಟ್). ೩. [ನಾಟ್ಯ] ಅಸಂಯುತ ಹಸ್ತಗಳಲ್ಲಿ ಒಂದು: ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ ಪತಾಕ . . . ಅರಾಳ (ಅಭಾನ್ಯ. ೪೭). [**ಸಂ.**]

**ಅರಾಲು** (ನಾ). (ಕರಾ) ಕಡಲಿನ ಬಳಿಯ ಮರಳುದಿಣ್ಣೆ: ಅವರ ಮನೆಯಿರುವುದು ಅರಾಲಿನ ಒಂದು ಬದಿಯಲ್ಲಿ (ಮರವು. ೧).
[← **ತಮಿ.** ಅಜಲ್ = ಕಡಲ ಕರೆಯ ಕಪ್ಪು ಮರಳು]

**ಅರಾಷ್ಟ್ರಿಕತೆ** (ನಾ). ರಾಷ್ಟ್ರಕತೆಯಿಲ್ಲದಿರುವುದು: ಆಧುನಿಕ ಪ್ರಪಂಚದಲ್ಲಿ ಅರಾಷ್ಟ್ರಿಕತೆ (Statelessness) ಅತಿ ಭೀಕರವಾದ ಪರಿಸ್ಥಿತಿ (ನಂಟರು. ೧೦೧). [**ಸಂ.** ಅರಾಷ್ಟ್ರಿಕತಾ]

**ಅರಾಸ**$_1$ 'ಅರಸ$_1$' ನೋ.

**ಅರಾಸ**$_2$ (ನಾ). ಭೀತಿ; ಭಯ.
**ಅರಾಸವಿಲ್ಲದವ** = ಭೀತಿಯಿಲ್ಲದವನು; ಭಯವಿಲ್ಲದವನು (ಸ್ಯಾಂಡರ್). [?. / **ಹಿಂ.** ಹಿರಾಸ್ = ಭೀತಿ, ಭಯ]

**ಅರಾಳ**$_1$ 'ಅರಾಲ' ನೋ.

**ಅರಾಳ**$_2$ (ನಾ). ಆನೆಗಳಲ್ಲಿ ಮಧ್ಯಮವರ್ಗದ ಒಂದು ಜಾತಿ: ಯೀ ಪ್ರಮಾಣಕಿಂತಲೂ ಅಧಿಕವಾಗಿ ವಂದು ಅರತ್ನಿ ಪ್ರಮಾಣ ಉನ್ನತತ್ವವೂ ದೈರ್ಘ್ಯವೂ ವಿಸ್ತಾರವೂ ಉಳ್ಳ ಆನೆಗಳು ಮಧ್ಯಮಗಳೆನಿಸಿಕೊಂಡು ಅರಾಳಗಳೆಂಬ ಪೆಸರಂ ಪಡೆಯುವವು (ಸೌಗಂಧಿ. ೨೬೭–೧೩).
[**ಸಂ.** ಅರಾಲ = ಮದವೇರಿದ ಆನೆ]

**ಅರಿ**$_1$ (ಕ್ರಿ). ೧. ಕತ್ತರಿಸು; ಕಡಿದುಹಾಕು; ಕೊಯ್ಯು: "ಅರಿ–ಕೃಂತನೇ (ಕತ್ತರಿಸು)" (ಶಮಧಾ); "ಛೇದನದೊಳರಿಯೆಂಬ ಶಬ್ದಂ" (ಶಬ್ದಮಂ. ೧೦೫); ಪುಗುವ ಕಳ್ಳನ ಮೂಗನರಿದೊಡವಂ ಪೋಜಮುಟ್ಟು (ವಡ್ಡಾರಾ. ೧೫–೩೧); ವಿವೇಕ ವಿಕಳರಪೋಲ್ ಬಾಲರ ತಲೆಯನರಿದು ತಂದೆಯೊ (ಗದಾಯು. ೯–೩೪); ಅರಿ ಅರಿ ಪೊಯ್ ಪೊಯ್ ಸೀಳ್ ಸೀಳ್ (ಧರ್ಮಾಮೃ. ೬–೧೯೩); ಹರ ತನ್ನ ಭಕ್ತರ . . . ಅರಿದು ನೋಡುವ ಕಬ್ಬಿನ ಕೋಲಿನಂತೆ (ದೇದಾವ. ೪೩–೯೦); ಕೃಪಾಣವ ಜಡಿದು ಗಂಟಲ ಬಳಿಗೆ ಹೂಡಿದನರಿವುದಕೆ ಕೊರಳ (ಕುವ್ಯಾದ್ರೋ. ೧೪–೧೧); ತಜಿದರರಿದರ್ ಕೂಡೆ ಕತ್ತರಿಸಿದರ್ (ಚಿಬಪು. ೨೧–೨೦).
**ಅರಿದುಹೋಗು** = ಕತ್ತರಿಸಿಹೋಗು; ತುಂಡಾಗಿಹೋಗು: ಹರಿಗೆ ಕಪಟವನೆಸಗಿ ಕಿವಿಮೂಗರಿದುಹೋಯಿತು ನಿನ್ನ ತಂಗಿಗೆ (ಕೌಶಿರಾ. ೧೪–೨೨).
[**ದೇ.** ‖ **ತಮಿ. ಮಲ.** ಅರಿ; **ಕೊಲಾ. ನಾಯ್ಕಿ.** ಅರ್ಕ್]

**ಅರಿ**$_2$ 'ಅಜಿ' ನೋ.

**ಅರಿ**$_3$ (ಕ್ರಿ). ಅಕ್ಕಿ ಮುಂತಾದ ಧಾನ್ಯಗಳನ್ನು ನೀರಿನಲ್ಲಿ ಜಾಲಿಸಿ ಕಲ್ಲು ಮಣ್ಣು ತೆಗೆ, —ಶೋಧಿಸು.
[**ದೇ.** ‖ **ತಮಿ. ಮಲ. ಕೊಡ. ತುಳು.** ಅರಿ]

**ಅರಿ**$_4$ (ನಾ). ಹೊಲಗದ್ದೆಗಳಲ್ಲಿ ಹಿಡಿಹಿಡಿಯಾಗಿ ಕೊಯ್ದು ಅಲ್ಲಲ್ಲೇ ಗುಡ್ಡೆಹಾಕುವ ತೆನೆ, —ತೆನೆಯಿಂದ ಕೂಡಿದ ಹುಲ್ಲು: "ಧಾನ್ಯಯುತ ತೃಣದ ರಾಶಿಯೊಳ್ . . . ಅರಿಯೆಂಬ ಶಬ್ದಂ" (ಶಬ್ದಮಂ. ೧೦೫); ಸಾಳಿವನ ಬೆಳೆಯಿತ್ತು ಕೊಯಿದು ಅರಿಯ ಹಾಕಲಾಗಿ ಒಂದಕ್ಕೆ ಎರಡಾಗಿ ಎರಡಕ್ಕೆ ಮೂಜುಗೂಡಿ ಹೊಜೆಗಟ್ಟಿತ್ತು (ಅವರೀ. ೮೫). ೨. ನೆಲ್ಲು ಮುಂತಾದ ಧಾನ್ಯಗಳನ್ನು ಹುಲ್ಲಿನಿಂದ ಬೇರ್ಪಡಿಸಲು ಮೇಲಕ್ಕೆ ಎತ್ತಿ ಬಡಿಯುವಾಗ ಒಂದು ಬಾರಿಗೆ ತೆಗೆದುಕೊಳ್ಳುವಷ್ಟು ತೆನೆ ಹುಲ್ಲಿನ ಮೊತ್ತ (ಉಕ. ೬). [**ದೇ.** ‖ **ತಮಿ. ತುಳು.** ಅರಿ]

**ಅರಿ**$_5$ (ನಾ). ಕಣ್ಣಿನ ರೆಪ್ಪೆಗಳೊಳಗೆ ದುರ್ಮಾಂಸ ಬೆಳೆದುಕೊಳ್ಳುವ ಒಂದು ಬಗೆಯ ಕಣ್ಣುರೋಗ: "ನಯನರೋಗದೊಳ್ ಛೇದನದೊಳರಿಯೆಂಬ ಶಬ್ದಂ" (ಶಬ್ದಮಂ. ೧೦೫); ಅರಿ ಪಾಳಿ ಪಟೋಲಂ . . . ಎಂಬ ಪಲವಕ್ಷಿರೋಗಮುಂ ಕಳೆಗುಮಂಜನಂ (ಅಶ್ವಶಾ. ೧೫–೧೫). 'ಅರಿಗಣ್ಣು' ಪರಾ. [**ದೇ.** ‖ **ತಮಿ.** ಅರಿ]

**ಅರಿ**$_6$ (ನಾ). ೧. ಹಗೆ; ಶತ್ರು; ವಿರೋಧಿ. ೨. ಆರು ಎಂಬ ಸಂಖ್ಯೆಯ ಸಂಕೇತ. ೩. [ಜ್ಯೋತಿಷ] ಆರನೆಯ ಸ್ಥಾನ.
**ಅರಿತಟ್ಟಿಕಂಠೀರವ** = ಶತ್ರುಗಳಿಗೆ ಸಿಂಹಪ್ರಾಯನಾದವನು; ಒಂದು ಬಿರುದು: ವೀರಸಿಖಾಮಣಿ[ಅರಿತಟ್ಟಿಕ]ಣ್ಠೀರವಂ ಸಮರೈಕಭೈರವಂ (ಸೌಇಇ. XX, ೩೯–೧೮; 1064). **ಅರಿದಿಶಾಪಟ** = ಶತ್ರುಗಳನ್ನು ದಿಕ್ಪಾಪಾಲಾಗಿ ಓಡಿಸುವವನು; ಒಂದು ಬಿರುದು: ಅರಿದಿಶಾಪಟ ಬೀಳುಕೊಟ್ಟನು ರಾಯಸವ ಬರೆಸಿ (ಕುವ್ಯಾವಿ. ೧೦–೪೩). **ಅರಿದಿಶಾಪಟ ಮಲ್ಲ** = ಹಗೆಗಳನ್ನು ದಿಗಂತಕ್ಕೆ ಓಡಿಸಬಲ್ಲ ಶೂರ; ಒಂದು ಬಿರುದು: ಅರಿದಿಶಾಪಟಮಲ್ಲ ಬಂದನು ಪಯಣಗತಿಗಳಲಿ (ತೊರರಾ. ೧–೬–೭). [**ಸಂ.**]

**ಅರಿಉರ** (ನಾ). ಒಂದು ಊರಿನ ಹೆಸರು: ಅಕ್ಕಕೈಲೂರ ಮಕನ್ದಿರ್ ಮೂದಪ್ಪನ್ನಂ ಅರಿಉರದ ಅಗ್ಗಿರವೆರ್ ಪೆರ್ಗಡೆತನಕೆಯ (ಎಕ. IV, ಗುಂಡ್ಲುಪೇ. ೮೮–೩; 750).
**ಅರಿಉರ್ಪನ್ನಿರ್ವರ್** = ಅರಿವುರದ ಹನ್ನೆರಡು ಮಂದಿ (?): ಅರಿಉರ್ಪನ್ನಿರ್ವ್ವರು ತೊಜೆಕ್ಕಾರಟ್ಟಲು ಪೆಕ್ಕವಿಯ ಮುಪೊಲ್ಪೋಗೆಯು ಕೂಡಲೂರು ಇನೆತ್ತುಮೂರ್ ನೆರಸಾಸನಮಾಗೆ ಕುದಿಯ್ಯ (ಎಕ. IV, ಗುಂಡ್ಲುಪೇ. ೮೮–೪; 750). [ಅರಿ$_6$ + ಪುರ]

**ಅರಿಂಜಯ** (ನಾ). ೧. ಹಗೆಗಳನ್ನು ಗೆಲ್ಲುವವನು: ಮತ್ತಿನ್ನೆಸರ ಮುರದೊಳ್ ತಳತ್ತಳಿಸೆ ಬಂದನರಿಂಜಯನಂಜನಾಸುತಂ (ಪಂರಾಮಾ. ೧೧–೧೬೧). ೨. ಒಂದು ದೇಶದ ಹೆಸರು: ತೋರ್ಪುದಿಂತರಿಂಜಯ ಸಮಾಹ್ವಯಂ ಜನಪದಂ ಸುಖೈಕಾಸ್ಪದಂ (ಚಂದ್ರಪು. ೫–೯೩). [**ಸಂ.**]

**ಅರಿಂದಮ** (ನಾ). ಶತ್ರುಗಳನ್ನು ದಮನಮಾಡುವವನು: ಪತಿಯ ಪದಾರವಿಂದಮನರಿಂದಮನರ್ಚಿಸಿದಂ ಕಿರೀಟ ಕೀಲಿತ ಹರಿ ನೀಲ ರತ್ನ ರುಚಿ ಮಂಜರಿಯೆಂಬತಸೀಲತಾಂತದಿಂ (ಪಂರಾಮಾ. ೫–೧೨); ಹೇ ಅರಿಂದಮ, ಮಸೆಯುದಿರ್ ನೆನಹುಸಾಣಿಯೊಳಳಲ ಕತ್ತಿಯಂ (ಶ್ರೀರಾಮಾ. ೨೯೫–೨೮೪). [**ಸಂ.**]

**ಅರಿಕಟಕ** (ನಾ). ಹಗೆಗಳ ಪಾಳೆಯ; ಶತ್ರುಸೈನ್ಯ: ಅರಿಕಟಕಭೇದಕನ ನಾನಾಯುಧವಿಶಾರದನ . . . ಸೇನಾಪತಿಯ ಮಾಡುವುದರಸ (ಕುವ್ಯಾಉ. ೩–೮೮). [ಅರಿ$_6$ + ಕಟಕ]

**ಅರಿಕಟ್ಟು** (ಕ್ರಿ). ಕೊಯ್ದ ಹುಲ್ಲನ್ನು ಅಥವಾ ತೆನೆಯನ್ನು ಒಟ್ಟುಗೂಡಿಸಿ ಕಂತೆಕಂತೆಯಾಗಿ ಕಟ್ಟು; ಸಿವುಡುಕಟ್ಟು: ನಾನು ಕೊಯ್ದೆ ಅವಳು ಅರಿಕಟ್ಟಿದಳು (ಪುಸರು. ೪೭೫). [ಅರಿ$_4$ + ಕಟ್ಟು$_1$]

**ಅರಿಕತ್ತರಿ** (ನಾ). ವೈರಿಯ ಖಡ್ಗ: ಅರಿಕತ್ತರಿ ಹರಣದ ದಯದಿರವ ಬಲ್ಲುದೇ? ಬಿಜುನುಡಿವವ ಮಾನ್ಯರ ಮಾನದ ಮನ್ನಣೆಯ ಬಲ್ಲನೇ (ಮೋಳಿಮಾ. ೫೫). [ಅರಿ$_6$ + ಕತ್ತರಿ]

**ಅರಿಕಾಮಧ್ವಂಸಿ** (ನಾ). ೧. ಹಗೆಯಾದ ಕಾಮನನ್ನು ಧ್ವಂಸಮಾಡಿದವನು; ಶಿವ. ೨. ಶತ್ರುವಾದ ಕದಂಬ ಕಾಮನನ್ನು ಧ್ವಂಸಮಾಡಿದವನು. ೧, ೨: ಅರಿಕಾಮಧ್ವಂಸಿ ನಾಗವ್ರಜಮಯಕಟಕಂ ರಾಜರಾಜಪ್ರತಿಷ್ಠಾನಿರತಂ . . . ರಕ್ಷಿಸುಗೆ ವಸುಧೆಯಂ ಯುದ್ಧರಂಗ ತ್ರಿಣೇತ್ರಂ (ಜಗವಿ. ೧–೩). [< ಸಂ. ಅರಿಕಾಮಧ್ವಂಸಿನ್]

**ಅರಿಕುಠಾರ** (ನಾ). ೧. ಹಗೆಗಳಿಗೆ ಕೊಡಲಿಯಂತಿರುವವನು. ೨. ಒಂದು ಊರಿನ ಹೆಸರು: ಅರಿಕುಠಾರದ ಸೂರಿಪಂಡಿತರಾತ್ಮಜಂ ಚಿಕತಮ್ಮನಾವರ ಸುಪುತ್ರನು (ಅರ್ಹಸೇ. ೧ ಉಪೋ); ಅರಿಕುಠಾರದ ಠಾಣೆಯದಾರನು ನನ್ನನ್ನು ಗಿಡ್ಡಂಗಿಗೆ ನೂಕಿ ಅರಮನೆಗೆ ವರದಿ ಮಾಡದಿರುವುದಿಲ್ಲ (ಮಂತ್ರಶ. ೯೨–೧೬). ℙ ಈಗಿನ ಚಾಮರಾಜನಗರಕ್ಕೆ ಹಿಂದೆ ಇದ್ದ ಹೆಸರು. [ಅರಿ$_6$ + ಕುಠಾರ]

**ಅರಿಕೆ** 'ಅಱಿಕೆ' ನೋ.

**ಅರಿಕೆಗೊಳ್** (ಕ್ರಿ). ಪ್ರಖ್ಯಾತಿಯನ್ನು ಹೊಂದು; ಪ್ರಸಿದ್ಧವಾಗು: ಆ ಅರಮನೆಯ ಅರಿಕೆಗೊಂಡಿರುವ ಬೊಕ್ಕಸವನ್ನು ಮಾತ್ರ . . . ನಮಗೇ ಕಳುಹಿಕೊಡಬೇಕು (ಬಿಟ್ಟಆ. ೫೮). [ಅರಿಕೆ (< ಅಱಿಕೆ) + ಕೊಳ್]

**ಅರಿಕೆನಾಯಕ** 'ಅಱಿಕೆನಾಯಕ' ನೋ.

**ಅರಿಕೇಸರಿ** (ನಾ). ೧. ಶತ್ರುಗಳಿಗೆ ಸಿಂಹಪ್ರಾಯನಾದವನು; ಒಂದು ಬಿರುದು. ೨. ಒಬ್ಬ ರಾಜನ ಹೆಸರು: ಉದಾತ್ತನಾರಾಯಣನಾದ ದೇವನೆಮಗೀಗರಿಕೇಸರಿ ಸೌಖ್ಯಕೋಟಿಯಂ (ಪಂಪಭಾ. ೧–೧); ಶ್ರೀಮದರಿಕೇಸರಿ ದೇವರು (ಇಎ. XIII, ೧೭೧–೩೩; 1055). [ಅರಿ$_6$ + ಕೇಸರಿ]

**ಅರಿಕೋಲು** (ನಾ). ಒಕ್ಕಣೆಗಾಗಿ ಹಾಕುವ ಧಾನ್ಯದ ಅರಿಗಳನ್ನು ಹದವಾಗಿ ಹರಡಲು ಬಳಸುವ ಕೊಕ್ಕೆಗೋಲು; ಮೆರೆಗೋಲು: ಆಕಾಶದರಿಕೋಲು ಭೂಮಿತೂಕದ ಕುಂಟೆ . . . ನೂರೊಂದು ಸಾಲ ಹೊಡೆದವ್ನೆ (ಜಗೀತೆ. ೯೧); ಕೈಯಲ್ಲಿ ಮುಟ್ಟದೆ ಅರಿಗೋಲಿನಲ್ಲಿ ನೂಕುವನು (ಅರಸಾ. ೨೦೫). [ಅರಿ$_4$ + ಕೋಲು (< ಕೋಲ್)]

**ಅರಿಗ** (ನಾ). ೧. ಒಬ್ಬ ರಾಜ; ಅರಿಕೇಸರಿ: ಸರಸ್ವತಿ . . . ಈಗರಿಗಂಗೆ ವಿಶುದ್ಧ ಬುದ್ಧಿಯಂ (ಪಂಪಭಾ. ೧–೫). ೨. ಒಬ್ಬಾತನ ಹೆಸರು: ಪಡೆವಳ್ಳ ಅರಿಗನು ಎಱೆಯಬ್ಬೆಯುಂ (ಎಕ. VIII, ಸೊರಬ. ೫೦೧–೭; 958). [< ಅರಿಕೇಸರಿ]

**ಅರಿಗಂಟು** (ನಾ). ಬಿಡಿಸಲು ಶಕ್ಯವಿಲ್ಲದ ಗಂಟು; ಒಳಗಂಟು: ಬಲಿದು ಬಿಡಿಸಲಾರದ ಅರಿಗಂಟಾಗಿ ಪರಿಣಮಿಸುವವರೆಗೆ ಹಾಗೇ ಇರಬೇಕೆಂದು ಆ ಗಂಗನ ಎಣಿಕೆಯಾಗಿರಬೇಕು (ವೀರಬಂ. ೮). [< ಅರಿದು + ಗಂಟು]

**ಅರಿಗಣ್ಣು** (ನಾ). ರೆಪ್ಪೆಯೊಳಗೆ ದುರ್ಮಾಂಸ ಬೆಳೆದುಕೊಂಡ ಕಣ್ಣು; ಅರಿ ಬೆಳೆದುಕೊಂಡಿರುವ ಕಣ್ಣು: ಜಲಮಾಳ್ದಗಣ್ಣೊ ಅರಿಗಣ್ಣೊ (ಮಹಾವಿ. ೭–೫೧). [ಅರಿ$_5$ + ಕಣ್ಣು (< ಕಣ್)]

**ಅರಿಗಲ್ಲು** (ನಾ). ಕಣ್ಣಿನ ರೋಗಕ್ಕೆ ಔಷಧಿಯಾಗಿ ಉಪಯೋಗಿಸುವ ಕಲ್ಲು (ಸ್ಯಾಂಡರ್). [ಅರಿ$_5$ + ಕಲ್ಲು (< ಕಲ್$_2$)]

**ಅರಿಘಟೆ** (ನಾ). ಶತ್ರುಗಳ ಸೈನ್ಯ, —ಸಮೂಹ.

**ಅರಿಘಟೆಮಲ್ಲ** = ಶತ್ರುಗಳ ಸಮೂಹಕ್ಕೆ ಜಟ್ಟಿಯಾದವನು; ಒಂದು ಬಿರುದು: ಅರಿಘಟೆಮಲ್ಲನ ಬೀಡಂ ಪರಿರಕ್ಷಿಪ ತಳಜ ನಾಗವರ್ಮಂ ದಯೆಯಿಂ (ಸೌಇಇ. XX, ೫೫–೩೦; 1082). [ಅರಿ$_6$ + ಘಟೆ]

**ಅರಿಟಣ** 'ಅರುಟಾಳ' ನೋ.

**ಅರಿಟಾಳ** 'ಅರುಟಾಳ' ನೋ.

**ಅರಿಟ್ಟನೇಮಿ, ಅರಿಟ್ಟೋನೇಮಿ** (ನಾ). ೧. ಇಪ್ಪತ್ತೆರಡನೆಯ ತೀರ್ಥಂಕರನ ಹೆಸರು. ೨. ಒಬ್ಬಾತನ ಹೆಸರು: ಶ್ರೀಮತ್ಕಲೆಗೊಳ್ಳದ ಅರಿಟ್ಟನೇಮಿ ಪಣ್ಡಿತರ್ (ಎಕ. II, ೪೫೮–೧; 950). **ಅರಿಟ್ಟೋನೇಮಿ**: ೨. ಶಿಷ್ಯರ್ ಅರಿಟ್ಟೋನೇಮಿ ಮಾಡಿಸಿದರ್ ಸಿದ್ಧಂ (ಎಕ. II, ೬೧–೨; 900). [< ಸಂ. ಅರಿಷ್ಟನೇಮಿ]

**ಅರಿಣೆ** 'ಅಯ್ರಣೆ' ನೋ.

**ಅರಿತ** 'ಅಱಿತ' ನೋ.

**ಅರಿತ್ರ** (ನಾ). ೧. ಹರಿಗೋಲು: "ಅರಿತ್ರಯೆನೆ ನೀರ ಹರುಗೋಲ್" (ಮಂಗರಾ. ೧೨೩–೧೩). ೨. ಹರಿಗೋಲು ಮುಂದಕ್ಕೆ ಚಲಿಸುವಂತೆ ಮಾಡುವ ಸಾಧನ; ಹುಟ್ಟು: "ಅರಿತ್ರಂ ಕೋಟಿಪ[ಪಾ]ತ್ರಂ –ಈ ೨ ನಾವೆಯ ಸೋಗೆ" (ಹಲಾಯು. ೧೧೧–೫೦). [ಸಂ.]

**ಅರಿದಲ** 'ಅರಿದಾಳ' ನೋ.

**ಅರಿದಲೆ** (ನಾ). ೧. ಕತ್ತರಿಸಿದ ತಲೆಯ ಶಿಲ್ಪವನ್ನುಳ್ಳ ಒಂದು ಲಾಂಛನ. ೨. ಒಂದು ಬಿರುದು: ಅರಿದಲೆ ಸುಶಂಖಚಕ್ರಂ . . . ಬಿರುದುಗಳನೊಸೆದೆತ್ತಿ (ಕೆಳನೃ. ೧–೧೧೧); ತತ್ಸದಾಶಿವನಾಯಕಂಗಮರಿದಲೆ ಮೇಘಡಂಬರ ದಿವಾಪ್ರದೀಪ ಮುಂತಾದ ಬಿರುದುಗಳನಿತ್ತು (ಕೆಳನೃ. ೨–೪೯). [ಅರಿ$_1$ + ತಲೆ]

**ಅರಿದಲ್ಲಣ** (ನಾ). ಶತ್ರುಗಳನ್ನು ಭಯಪಡಿಸುವವನು: ಬಲ್ಲಿದರಿಗೆ ಬಲ್ಲಿದನೆಂಬ ಬಿರುದು ಅರಿದಲ್ಲಣನು ಎಂಬಂತೆ ಬಲು ಸಾಹಸ (ಕನಕ. ೧೨೫–೩). [ಅರಿ$_6$ + ತಲ್ಲಣ]

**ಅರಿದಳ** 'ಅರಿದಾಳ' ನೋ.

**ಅರಿದಾಳ, ಅರಿದಲ, ಅರಿದಳ** (ನಾ). ಶಂಖಪಾಷಾಣ ಮತ್ತು ಗಂಧಕಗಳ ಸಂಯೋಗದಿಂದಾದ ಒಂದು ಬಗೆಯ ಹಳದಿಯ ಧಾತುವಿಶೇಷ; ಹರಿತಾಲ: "ಅಂಗುಲಿಕಚೋರಮೆನಲರಿದಾಳಮೆನಿಸಿಕ್ಕು" (ಮಂಗರಾ. ೩೧–೭); ನಯಮುಳವಟ್ಟ ಪಚ್ಚೆ ಸಹಕಾರದೊಳಿಂಗುಳಿಕಂ ತಳಿರ್ತಶೋಕೆಯೊಳರಿದಾಳಮುಳ್ಳಲರ್ದ ಸಂಪಗೆಯೊಳ್ . . . ಸಮನಾಗೆ (ಶಾಂತಿಪು. ೧–೬೪); ಕಾಲ್ಗಳರಿದಾಳದ ಮೇಗಣ ಕೆಂಪಿನಣ್ಕೆಯಿಂ ದಿಟ್ಟಗೆ ಬಂದುದಾರ್ಬರೆವರಿಂತಳವಟ್ಟರೆ ರಾಜಹಂಸನಂ (ಮಲ್ಲಿಪು. ೫–೩೬); ಅರಿದಾಳಂ ಸಿಂಧೂದ್ಭವಮರಿಸಿನಮೆಳಗಱುಕೆಯೆಂಬಿವಂ ಗೋಮೂತ್ರಂ ಬೆರಸರೆದು ಪೂಸೆ ತರ್ದುಂ ಮುರವೂ[ವು]ವುಂ ಖರ್ಜಿಯುಂ ವಿಸರ್ಪಮುಮಱುಗುಂ (ಲೋಕೋಪ. ೯–೧೦೫); ಅರೆದಂತಾಡಿನ ಪಾಲಿಂದರಿದಾಳ ಬಿಡಾಲವಿಷ್ಟೆಯಂ ತೊಡೆದುಂ ಬಿಡುತಿರಲ್ (ಖಮದ. ೧೬–೧೬). **ಅರಿದಲ**: "ತಾಲ=ಅರಿದಲ" (ಒಷಧಿ. ೬೭). **ಅರಿದಳ**: "ಹರಿತಾಲಕ= ಅರಿದಳ" (ನಾಚಿರಾ. ಕಿ); ಚತುರಂಗದ ಒಡನೆ ಮಿಸುಪರಿದಳವ ಪಿಡಿದಿರ್ದ ಕಡ್ಡಿಯಿಂ ಕಡೆಮಾಡಿ ತೊಡೆವವಿದು ಚಿತ್ರವೆನೆ ಬರೆದರು (ಭಾವಚಿಂ. ೫–೨೫); ಅರಿದಳ, ಗಂಧಕ, ಪಾಷಾಣ, ಅಣಲೆಕಾಯಿ, . . . ಹದದಲ್ಲಿ ಇಳುಹಿ ಮೈಗೆ ಲೇಪ ಇಕ್ಕಿಸಲು (ವೈದ್ಯಸಾ. I, ೨೯೫). [< ಸಂ. ಹರಿತಾಲ. / ತುಳು, ಅರದಳೆ, ಅರದಾಲೆ, ಅರ್ದಳ್]

**ಅರಿದು,** ಅರಿಯ (ಗು). ೧. ಅಸಾಧ್ಯವಾದ; ಅಶಕ್ಯವಾದ; ಗಹನವಾದ: ಇನ್ತುವಾಟ್ಟುದರಿದಿನ್ನೆನಗೆನ್ದು ಸಮಾಧಿ ಕೂಡಿಏ (ಎಕ. II, ೯೩–೨; 700); ಬೆನ್ನಬೆನ್ನನೆ ಪರಿತಂದ ದೈನ್ಯಮರಿದಾದುದು ವಿಸಾಜಲತರ್ಕರ್ಯರೂಪೆಯೊ (ಶಾಂತಿಪು. ೮–೯೪); ನೀನಿಂತಳುತ್ತಿಪ್ಪಡೆನಗರಿದು ಬಸವಣ್ಣ (ಬಸರ. ೫–೩೦); ಬವರದೊಳರಿದಲ್ತೆ ಭೀಷ್ಮಾದಿಗಳಿಗೀ ರಣದ ಮೇಳಾಪ (ಕುವ್ಯಾಕ. ೨೦–೩೩); ಊಹಿಸುವೊಡರಿದೆನಲ್ ಕೈಲಾಸ ಪರ್ವತಂ ರಾಮಣೀಯಕಮಾದುದು (ಚಿಬಪು. ೨–೧೦). ೨. ಅಪೂರ್ವವಾದ: ಅರಿದಾದಂ ಕನ್ನಡದೊಳ್ ತಿರಿಕೋಱಿಗೊಂಡಱಿಯೆ ಪೇೞ್ವೆನೆಂಬುದಿದಾರ್ಗಂ (ಕವಿರಾ. ೧–೪೨). **ಅರಿಯ:** ಅಖಿಳಶಾಸ್ತ್ರ ವಿಶಾರದನಪ್ಪನುಂ ಗೆಲಲ್ಕರಿಯನುಮೊಂದಿಬಾರದನುಮಂಕದ ಕರ್ಣಂ (ಪಂಪಭಾ. ೯–೬೧); ನೆರದೊಳ್ ಕೊಲ್ವಂತೆ ನಗೇನರಿಯನೆ ಗಾಂಡೀವಧನ್ವಂ (ಪಂಪಭಾ. ೧೨–೨೦೪). ℙ ಅರಿಯವು, ಅರಿಯರ್ (ಬಹುವ): ಚಕ್ರಿಗರಿಯವುಮೊಳವೇ (ಆದಿಪು. ೧೪–೫೬); ಹರಿಯನುಬಲದಿಂ ಪಾಂಡವರರಿಯರ್ ಗೆಲಲ್ (ಗದಾಯು. ೯–೨೮).

[**ದೇ.** ‖ **ತಮಿ.** ಅರಿದು, ಅರಿಯ; **ಮಲ.** ಅರುತು, ಅರಿಯ; **ತೆಲು.** ಅರುದು, ಅರಿದಿ]

**ಅರಿಧೀರ** (ನಾ). ಒಂದು ಬಿರುದು: ಶ್ರೀಯಮ್ಮನೆ[ಮ್ಬೊ]... ಯ್ಸೆಸರ್ ಅರಿಧೀರನೆ[ಮ್ಬೊ]ದ (ಸೌಇಇ. XX, ೧೦–೩; ?). [ಅರ್$_6$ + ಧೀರ]

**ಅರಿಧ್ವಜಿನಿ** (ನಾ). ಶತ್ರುಸೈನ್ಯ: ತ್ರಿಪೃಷ್ಠಂಗರಿಧ್ವಜಿನೀ ಮಾರಣಮೇನೊ ಯೂಥವಧದಿಂದಕ್ಲೇಶಂ (ಶಾಂತಿಪು. ೫–೪೯).

[ಅರ್$_6$+ ಧ್ವಜಿನಿ]

**ಅರಿನಿರ್ದಾರಣ** (ನಾ). ಹಗೆಗಳನ್ನು ಸೀಳುವವನು; ಶತ್ರುಗಳನ್ನು ನಾಶಪಡಿಸುವವನು: ಶ್ರೀರಮಣೀರಮಣೀಯಂ ಸೀರಾಸ್ತ್ರಂ ನಿಂದನಾಥಿರಾಜ್ಯದೊಳರಿನಿರ್ದಾರಣನನಂತವೀರ್ಯನಪಾರಬಲಂ ಯೌವರಾಜ್ಯದೊಳ್ ನಿಂದಂ (ಶಾಂತಿಪು. ೨–೧). [ಅರ್$_6$ + ನಿರ್ದಾರಣ]

**ಅರಿಪದ** (ನಾ). = ಅರಿಸಮಾಸ: ತನಗರಿಪದನಿಲ್ಲ ಕರ್ಮಧಾರಯಮಕುವುಂ (ಶಮದ. ೧೬೮). [ಅರ್$_6$ + ಪದ$_2$]

**ಅರಿಪರದೂಷಣಸಂಧಿ** (ನಾ). [ರಾಜನೀ] ಹಗೆಯೊಡನೆ ಮಾಡಿಕೊಳ್ಳಬಹುದಾದ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು; ಉತ್ಕೃಷ್ಟವಾದ ಭೂಪ್ರದೇಶವನ್ನು ಶತ್ರುವಿಗೆ ಬಿಟ್ಟುಕೊಟ್ಟು ಮಾಡಿಕೊಳ್ಳುವ ಸಂಧಿ: ಸಾರಭೂಮಿಯಂ ಕುಡುವುದು ಅರಿಪರದೂಷಣಸಂಧಿಯೆಂಬುದಕ್ಕುಂ (ಪಂಚತಂ. ೨೨೧–೧).

[ಅರ್$_6$ + ಪರ + ದೂಷಣ + ಸಂಧಿ]

**ಅರಿಪೀಠ** (ನಾ). ಗೌರವದ ಪೀಠ; ಅಪೂರ್ವವಾದ ಪೀಠ (?): ××× ಯರುಳ್ಳರಿಪೀಠದಿಟಿಪ್ಪೊನಾನ್ ×× (ಎಕ. II, ೨೬–೨; 700).

[< ಅರಿದು + ಪೀಠ]

**ಅರಿಪು** 'ಅಱಿಪು' ನೋ.

**ಅರಿಪೆಣ** (ನಾ). ವೈರಿಯ ಹೆಣ; ಶತ್ರುಗಳ ಹೆಣ: ತೊರೆಯುತ ಮೊರೆಯುತ ಸುರಿಯುತ ರಕ್ತವ ಕರಚರಣಗಳಾಡಿಸುತ ಅರಿಪೆಣಗಳು ಲೆಕ್ಕವಿಲ್ಲದೆ ನೋಟಕಚ್ಚರಿಯ ಪುಟ್ಟಿಸುತೊಪ್ಪಿದುವು (ಕಂಸವಿ. ೧೫–೬೦).

[ಅರ್$_6$ + ಪೆಣ]

**ಅರಿಪ್ರಧ್ವಂಸನ** (ನಾ). ಶತ್ರುಗಳನ್ನು ನಾಶಮಾಡುವುದು: ಕೂರಗೆವಿಂಡಂ ಗಜವೈರಿ ಪೊಕ್ಕವೊಲರಿಪ್ರಧ್ವಂಸನಂ ಮಾಡುವೆಂ (ಶಾಂತಿಪು. ೬–೫೪). [ಅರ್$_6$ + ಪ್ರಧ್ವಂಸನ]

**ಅರಿಬಲ,** ಅರಿಬಳ (ನಾ). ೧. ಹಗೆಯ ದಂಡು; ಶತ್ರುಸೈನ್ಯ: ಅರಿಬಲವನೀ ಖಂಡಿಗಳೆ ನೋಹರಸಹಿತ ನಾ ಬಹೆನು (ಕುವ್ಯಾದ್ರೋ. ೪–೪೬); ಮದಾಂಧತೆಯಿಂದಾಂತರಿಬಲಬಲಾಹಕಪ್ರಸ್ಫುರಿತ ಮಹಾನಿಲನೊಳ್ (ಶಬಶಂ. ೪–೨೯). ೨. ಶತ್ರುವಿನ ಶಕ್ತಿ. **ಅರಿಬಳ:** ೧. 'ಅರಿಬಳ ಜೈತ್ರ' ಪರಾ. [ಅರ್$_6$ + ಬಲ$_2$]

**ಅರಿಬಳಜೈತ್ರ** (ನಾ). ಹಗೆಗಳ ದಂಡನ್ನು ಗೆಲ್ಲುವವನು; ಒಂದು ಬಿರುದು: ಅಮಿತಗುಣಾಧಾರಂ ನಿಮ್ಮ ಮಾಮಂ ಅರಿಬಳಜೈತ್ರಂ (ಸುಕುಮಾ. ೨–೪೦). [ಅರಿಬಳ (= ಅರಿಬಲ) + ಜೈತ್ರ]

**ಅರಿಬಿರಿದು** (ನಾ). ಅಪೂರ್ವವಾದ ಬಿರುದು: ಧರೆಯ ಮೇಲಣ ಮರದಲ್ಲಿ ಹಿರಿದಿಹ ಕೊಂಬಿನ ತುದಿಯಲ್ಲಿ ಅರಿಬಿರಿದಿನ ಪಕ್ಷಿ ಬಂದಿತ್ತು ನೋಡಾ (ಮೋಳಿಮಾ. ೭೮೮); ಆ ಚಿದಹಂಕಾರಾಗ್ರದಲ್ಲಿ ಒಪ್ಪುತಿಹುದೆಂಬುದೀಗ ಅರಿಬಿರಿದಿನ ಪಕ್ಷಿಬಂದಿತ್ತು ನೋಡಾ ಎಂಬ ಶಬ್ದಕ್ಕರ್ಥ (ಮೋಳಿಮಾ. ೭೮೮ ಟೀಕು). [< ಅರಿದು + ಬಿರಿದು (< ಬಿರುದು)]

**ಅರಿಬಿರುದ** (ನಾ). ಅಪೂರ್ವವಾದ ಬಿರುದುಳ್ಳವನು: ನೀಡಿದನರಿಬಿರುದ ಮಂಡಳಿಕರಿಗೆ ಕಾಳೆಗದ ವೀಳೆಯವ (ಕುವ್ಯಾದ್ರೋ. ೪–೧೫); ಅರರೆ ನರನೋ ನೂಕು ನೂಕರಿಬಿರುದರಾವೆಡೆ (ಕುವ್ಯಾದ್ರೋ. ೧೦–೧).

[< ಅರಿದು + ಬಿರುದು + –ಅ$_7$]

**ಅರಿಭಟ** (ನಾ). ಶತ್ರುಸೈನಿಕ: ಅರಿಭಟರುಣ್ಡಮಾಳಿಗಳನಿಕ್ಕಿ... ಭೀಕರತರಮಾಗೆ ನರ್ತ್ತಿಸುವ ಭೈರವನೀ ರಣರಂಗಭೈರವ (ಸೌಇಇ. XX, ೮೬–೩೪; ?). [ಅರ್$_6$ + ಭಟ]

**ಅರಿಭಯಂಕರ** (ನಾ). ಶತ್ರುಗಳಿಗೆ ಭಯವನ್ನುಂಟುಮಾಡುವವನು: ಅರಿಭಯಂಕರ ಭೀಮಸೇನನ ನಿರುಪಮಾಲಯವೆಡದ ಕಡೆಯಲಿ ಸರಿಸದಲಿ ಸೂತ್ರಿಸಿತು (ಕುವ್ಯಾಉ. ೧೧–೪೫).

[ಅರ್$_6$ + ಭಯಂಕರ]

**ಅರಿಭಾರಣೆ** (ನಾ). ಶತ್ರುಗಳ ಜತೆಯಲ್ಲಿ ನಿರ್ವಹಿಸುವುದು: ಅರಿಭಾರಣೆಯ ಭರವಸದ ಸಮತೆ ನಿಂದುದು ಸಾಹಸಿಕರು ಭ್ರಮಿಸುತಿದೆ ಭಟಜಲಧಿ (ಕುವ್ಯಾದ್ರೋ. ೧೦–೨೫). [ಅರ್$_6$ + ಭಾರಣೆ]

**ಅರಿಭೂಮಿಪ** (ನಾ). ಶತ್ರುರಾಜ: ಅರಿಭೂಮಿಪರೆರ್ದೆಗಳನಾಚರಣದಿನೊದೆವಂತೆ ಕಾಲಿನಲಾಡಿಸುವಂ (ಹಮ್ಮೀರ. ೨–೨೬).

[ಅರ್$_6$ + ಭೂಮಿಪ]

**ಅರಿಮಣ** (ನಾ). ಪಾರಸೀದೇಶ ಅಥವಾ ಜನ: ಮಗಧ ಮಾಳಸ[ವ] ಕೇರಳ ಒಡ್ಡಿಯ ಜಿನ ಜೊನೆಗ ಅರಿಮಣ ಕೊಂಕಣ ಚೇರ ಚೋಳ (ಎಕ. V, ಬೇಲೂರು. ೩–೯೨; 1397). [← ಅರ. ಅಹ್ರಿಮಾನ್]

**ಅರಿಮಣಿಗಿಡ** (ನಾ). ಕಣ್ಣಿನ ಅರಿಯ ದೋಷಕ್ಕೆ ಔಷಧಿಯಾಗಿ ಉಪಯೋಗಿಸುವ ಬೀಜಗಳುಳ್ಳ ಒಂದು ಸಣ್ಣ ಗಿಡ (ಕ).

[ಅರ್$_5$ + ಮಣಿ$_2$ + ಗಿಡ]

**ಅರಿಮರಿಸು** 'ಅರವರಿಸು' ನೋ.

**ಅರಿಮೂಗಿ** (ನಾ). ಕತ್ತರಿಸಿದ ಮೂಗುಳ್ಳವಳು: ಕೊರಲ ಶಂಖಿನ ಸರವೆರಲೆಗೊಂಬಿನ ಪಿಕಿಸೊರೆಯೋಡು ಕೆಲದರಿಮೂಗಿ ಕರದ ತ್ರಿಶೂಲ ಜಡೆಯೊತ್ತ ಜೋಗಿಗಳಿರಲೊಪ್ಪಿತಾ ರುದ್ರಭೂಮಿ (ಶ್ರೀಪಾಲ. ೧–೧೮).

[ಅರ್$_1$ + ಮೂಗು + –ಇ$_2$]

**ಅರಿಯ** 'ಅರಿದು' ನೋ.

**ಅರಿಯಮ** (ನಾ). ೧. ಸೂರ್ಯ. ೨. ಒಬ್ಬಾತನ ಹೆಸರು: ಧರಣಿಪಾಲಕನಾಗಕಳು ಹಿಡದರಿಯಮರಸಂ ಮರಳಿ ಬರುತಂ (ಬಸಪು. ೫೩–೪೬). [< ಸಂ. ಆರ್ಯಮನ್]

**ಅರಿಯಮಾನ್ವಯ** (ನಾ). ಸೂರ್ಯವಂಶ: ಅಘವಿದೂರಕನರಿಯಮಾನ್ವಯದರಸು ಸೃಂಜಯನ ನಗರವಿದು (ತೊರರಾ. ೧–೧೨–೧೫).

[ಅರಿಯಮ + ಅನ್ವಯ]

**ಅರಿಯಿಸು$_1$** (ಕ್ರಿ). ಕತ್ತರಿಸು ; ಸೀಳಿಸು : ಕೋಟಿ ಪೊನ್ನಂ ಕೊಟ್ಟು ಕೊಂಡುದುಮಲ್ಲದೆಯದನರಿಯಿಸಿ . . . ಸೊಸೆವಿರ್ಗೆಲ್ಲಂ . . . ಸಮ್ಮ ವಾವುಗೆಯನಲ್ತೆ ಮಾಡಿಸಿಕೊಟ್ಟಳ್ (ಸುಕುಮಾ. ೧೦–೧೨೦ ವ ; ೧೨೧).
[ಅರಿ$_1$ + –ಇಸು$_3$]

**ಅರಿಯಿಸು$_2$** 'ಅಱಿಯಿಸು' ನೋ.

**ಅರಿಯುವತಿ** (ನಾ). ಶತ್ರುಸ್ತ್ರೀ: ಅರಿಯುವತಿಬಾಷ್ಪ ಬಿಂದೂತ್ಕರಂಗಳಪ ಸೂತ್ರಹಾರಮಂ ಸ್ತನದೊಳ್ ಪೋಲ್ತಿರೆ (ಶಾಂತಿಪು. ೫–೧೧೪).
[ಅರಿ$_6$ + ಯುವತಿ]

**ಅರಿರಾಯ** (ನಾ). ಶತ್ರುರಾಜ : ಅರಿರಾಯ ತಲೆಯ ಕರವತ್ತಂ ಅರಿರಾಯ ಸೆಳೆವಂ (ಎಕ. VII, ಶಿಕಾರಿ. ೧೨೫–೫ ; 1019) ; ಕರ್ಣಾಸ್ತ್ರ ಹತಿಯಲಪಾಯವರಿರಾಯರಿಗಪೂರ್ವವೇ (ಕುವ್ಯಾಕ. ೧೪–೬).
ಅರಿರಾಯ ಗಜಸಿಂಹ = ಶತ್ರುರಾಜರೆಂಬ ಆನೆಗಳಿಗೆ ಸಿಂಹದಂತಿರುವವನು; ಒಂದು ಬಿರುದು : ರಾಜನಾಳುತ್ತಿರ್ಪನರಿರಾಯ ಗಜಸಿಂಹ ದೇವರಾಜೇಂದ್ರ (ರಾಘಚ. ೧–೪೧) ; **ಅರಿರಾಯ ಗಂಡರದಾವಣಿ**= ಶೂರರಾದ ಶತ್ರುರಾಜರಿಗೆ ಹಗ್ಗವಾಗಿರುವವನು, —ಬಂಧಿಸುವವನು ; ಒಂದು ಬಿರುದು : ಶ್ರೀಮನ್ಮಹಾಮಂಡಲೇಶ್ವರ ಅರಿರಾಯ ಗಂಡರದಾವಣಿ ಶ್ರೀವೀರಭಯಿರಪ (ಎಕ. XI, ಮೂಡಗೆ. ೪೦–೮ ; 1552).
**ಅರಿರಾಯದಲ್ಲಣ**=ಶತ್ರುರಾಜರಿಗೆ ಭಯವನ್ನುಂಟುಮಾಡುವವನು: ಅರಿರಾಯದಲ್ಲಣ ಸಾಂಬನುರವನು ತಿವಿದನು (ನಭಾಗ. ೧೧–೩೬–೧೮).
**ಅರಿರಾಯವಿಭಾಡ** = ಶತ್ರುರಾಜರನ್ನು ಸೀಳುವವನು : ಶ್ರೀಮನ್ಮಹಾಮಂಡಲೇಶ್ವರಂ ಅರಿರಾಯವಿಭಾಡ (ಸೌಇಇ. IX–ii, ೪೦೫–೩ ; 1357) ; ಅರರಾಯವಿಭಾಡ . . . ವೀರ ಬುಕ್ಕಣ್ಣವೊಡೆಯರು (ಮೈಆರಿ. ೧೯೩೮, ೪–೪ ; 1369). [ಅರಿ$_6$ + ರಾಯ]

**ಅರಿರಾಯದಳ** (ನಾ). ಶತ್ರುರಾಜರ ದಂಡು : ಸಂದಣಿಸಿತರಿರಾಯದಳ ಜಲರಾಶಿ ಜರಿವಂತೆ (ಕುವ್ಯಾದ್ರೋ. ೨–೧೯).
[ಅರಿರಾಯ + ದಳ$_2$ (< ದಟ)]

**ಅರಿಲ್** 'ಅಱಿಲ್$_1$' ನೋ.

**ಅರಿಲುಂಬ** (ನಾ). ಒಂದು ಬಗೆಯ ಮೀನು : ಕಲ್ಲಡಿ ಶಂಖಪಾಯನರಿಲುಂಬನಾನೆ ಮೂಗಂ (ತ್ರಿಪುವಿ. ೫೭–೮). [ಅರಿಲ್ + ಉಂಬ ?]

**ಅರಿಲ್ವಟ್ಟೆ** 'ಅಱಿಲ್ವಟ್ಟೆ' ನೋ.

**ಅರಿವಡೆ** (ನಾ). = ಅರಿಬಲ : ಅಡವಿಯ ಕಿಚ್ಚಿನಸಾರ್ಭಟೆಯಂತಿಹರರಿವಡೆಗಾ ನೃಪನ ಸುಭಟರು (ಕುರಾಸಾಂ. ೫–೩೬). [ಅರಿ$_6$ + ಪಡೆ$_2$]

**ಅರಿವಮ್ಮ** (ನಾ). ಒಬ್ಬಾತನ ಹೆಸರು : ಹುನುವಲ್ಪಳ್ಳಿಯ ಮಾದಗರ ಕಮ್ಮಯನಂ ಮಗಂನ್ ಅರಿವಮ್ಮ ಗಾವುಣ್ಡುಗೆಯ್ಯೆ (ಎಕ. VIII, ಸೊರಬ. ೫೩೨–೪ ; 964). [< ಅರಿವರ್ಮ ?]

**ಅರಿವರ್ಗ** (ನಾ). ೧. ಹಗೆಗಳ ಗುಂಪು ; ಶತ್ರುಸಮೂಹ. ೨. = ಅರಿಷಡ್ವರ್ಗ : ವೀರಭಕ್ತಿ ವಿಚಾರವೆಂಬ ಕಠಾರಿಯಿಂದರಿವರ್ಗವೆಂಬಾವರಣವನೊಡಸೀಳ್ದು (ಬಸಪು. ೩೪–೩೪). [ಅರಿ$_6$ + ವರ್ಗ]

**ಅರಿವಾಹಿನಿ** (ನಾ). = ಅರಿಬಲ : ಇಕ್ಕಿ ಮಿಕ್ಕನರಿವಾಹಿನಿಯಂ (ಕನಿರಾ. ೧–೬೫). [ಅರಿ$_6$ + ವಾಹಿನಿ]

**ಅರಿವಾಳ್** (ನಾ). ೧. ಕುಡುಗೋಲು ; ಬೆಳೆ ಮೊದಲಾದುವನ್ನು ಕೊಯ್ಯಲು ಉಪಯೋಗಿಸುವ ನಸುಬಾಗಿದ ಅಲಗುಳ್ಳ ಸಾಧನ : ಇರೆನಿನ್ನಿರೆಂ ಸತ್ಯವಿದೆ ಸತ್ಯವೆಂದೆನುತೆ ಅರಿವಾಳನಿರದೆ ಹಿಡತಲೆಗಾಗಿ ಮೋಹಿಸುತೆ (ಅರಿರ. ೫೨). ೨. ಒಬ್ಬಾತನ ಹೆಸರು: ಪಡಿಯಂ ಕೊಡುವನರಿವಾಳ್ ಕರ್ಪುರದ ವೀಳೆಯವನಿಕ್ಕುವನೆಮ್ಮ ರೇಚಯ್ಯ (ಬಸಪು. ೯–೩೬). [ಅರಿ$_1$ + ಬಾಳ್. / ತಮಿ, ಮಲ. ಅರಿವಾಳ್]

**ಅರಿವಾಳ** (ನಾ). ಒಂದು ಬಗೆಯ ಹುಲ್ಲು (?) : "ಮಂಪಳಂ – ಅರಿವಾಳ, ಬಿಳಿಯ ತಾವರೆ" (ಒಷಧಿ. ೧೧೫). [?]

**ಅರಿವಿಲಿ** (ನಾ). ತಿಳಿವಳಿಕೆಯಿಲ್ಲದಿರುವವನು ; ತಿಳಿವಳಿಕೆಯಿಲ್ಲದಿರುವ ಪ್ರಾಣಿ. 'ನಾಣಿಲಿ', 'ಪಲ್ಲಿಲಿ', 'ಅರಿವಿಲಿತನ' ಪರಾ.
[ಅರಿವು (< ಅಱಿವು) + –ಇಲಿ$_2$]

**ಅರಿವಿಲಿತನ** (ನಾ). ದಡ್ಡತನ : ಆದರೆ ನಮ್ಮ ಅರಿವಿಲಿತನ ಇಷ್ಟುದೂರ ಮುಟ್ಟಲಿಲ್ಲ (ನಮ್ಮನು. ೨೨೮). [ಅರಿವಿಲಿ + –ತನ]

**ಅರಿವಿದಾರ** (ನಾ). ಹಗೆಯನ್ನು ಸೀಳುವವನು : ಐವರು ಕುಮಾರಕರುಪ್ಪವಡಿಸಿದರರಿವಿದಾರರು ಮಾಡಿದರು ಮಾಂಗಲ್ಯ ಮಜ್ಜನವ (ಕುವ್ಯಾವಿ. ೧೦–೪). [ಸಂ.]

**ಅರಿವಿಧುಂತುದ** (ನಾ). ಶತ್ರುವಾದ ರಾಹು : ಸುರನದಿಗೆ ಶಿವನಾಯ್ತು ಮಕರಾಕರಕೆ ಕಳಶಜನಾಯ್ತು ತರಣಿಗೆ ಅರಿವಿಧುಂತುದನಾಯ್ತು ರಥಪದತತಿತ ಧೂಳಿಯಲಿ (ಕುವ್ಯಾದ್ರೋ. ೪–೫೮).
[ಅರಿ$_6$ + ವಿಧುಂತುದ]

**ಅರಿವಿರಾಮ** (ನಾ). ಶತ್ರುಗಳನ್ನು ಇಲ್ಲದಂತೆ ಮಾಡಿದವನು : ಒಲ್ದೀಕ್ಷಿಸಿದಂ ನಿಜಾಗ್ರಭವನಂ ದೈತ್ಯಾರಿ ತೇಜೋಭಿರಾಮನನುಗ್ರಾರಿವಿರಾಮನಂ (ಜಗವಿ. ೪–೫೮). [ಅರಿ$_6$ + ವಿರಾಮ]

**ಅರಿವು** 'ಅಱಿವು' ನೋ.

**ಅರಿವುಗೇಡಿ** (ನಾ). ತಿಳಿವಳಿಕೆಯಿಲ್ಲದ ವ್ಯಕ್ತಿ : ತಿಳಿಗೇಡಿ : ಸುಧಾರಿಸಿಕೊಳ್ಳೊ ಅಬ್ಬರದಾಗ ಅರಿವುಗೇಡಿ ಹಂಗ (ಹೊಸಂಸಾ. ೫೧) ; ಇಂದಿನ ಬಿಸಿಲಿನ ಬೇಗೆ ಅವಳನ್ನು ಆ ರೀತಿ ಅರಿವುಗೇಡಿಯನ್ನಾಗಿ ಮಾಡಿರಬಹುದು (ಹಳ್ಳಿಹಾ. ೧). [ಅರಿವು (< ಅಱಿವು) + ಕೇಡಿ]

**ಅರಿವುಗೊಡು** (ಕ್ರಿ). ತಿಳಿವಳಿಕೆಯನ್ನು ಕೊಡು : ದಾರಿಯುದ್ದಕ್ಕು ಎಡವಿ ಬಿದ್ದಿದೆ ಸ್ಮರಣೆ ಅರಿವುಗೊಡದೊಲು ಎಲ್ಲೊ ಜಿನುಗಿದೆ ಕರುಣೆ (ಸೆಲಮು. ೬೩). [ಅರಿವು (< ಅಱಿವು) + ಕೊಡು]

**ಅರಿವುದಪ್ಪು** (ಕ್ರಿ). ಚಕಿತನಾಗು ; ಪ್ರಜ್ಞೆತಪ್ಪು : ಏನು ಸುಂದರಿಯೋ ಅವಳು ! ನೋಡಿದ ಕೂಡಲೇ ನಾನು ಅರಿವುದಪ್ಪಿದೆ (ಕೊತಕಾ. ೧).
[ಅರಿವು (< ಅಱಿವು) + ತಪ್ಪು$_1$]

**ಅರಿವೆ** 'ಅಱುವೆ' ನೋ.

**ಅರಿವೆಅಂಚಡಿ** (ನಾ). ಬಟ್ಟೆಬರೆ; ಬಟ್ಟೆ ಮತ್ತು ವಸ್ತ್ರ : ಸಾಂಬಾರದಿನಸು, ಮದ್ದಿನ ದಿನಸು, ಅರಿವೆಅಂಚಡಿ ಇಂಥ ಯಾವ ಸಾಮಾನುಗಳೂ ಅವರಲ್ಲಿವೆ (ಸ್ವಪ್ನಹೊ. ೩೭). 'ಅಂಚಡಿ' ಪರಾ.
[ಅರಿವೆ (< ಅಱುವೆ) + ಅಂಚಡಿ]

**ಅರಿವೆಕಾಲು** (ನಾ). ೧. ಅರಿವೆಯನ್ನು ಸುತ್ತಿದ ಕಾಲುಳ್ಳವನು; ಪೋಲೀಸರವನು: ಪೋಲೀಸು ಸ್ಟೇಷನ್ನಿನಲ್ಲಿ ಯಾರಾದರೂ ಇದ್ದಾರೆಯೆ ಎಂದು ನೋಡಿದೆವು. ಒಬ್ಬ ಅರಿವೆಕಾಲು (ಕಾನ್‌ಸ್ಟಬಲ್) ಮಲಗಿದ್ದ (ಚಿಸ್ತಕ. ೩೧). ೨. (ಉಕ) (ಅಶಕ್ತಿಯಿಂದ) ಬಟ್ಟೆಯಂತೆ ಜೋಲಾಡುವ ಕಾಲು. [ಅರಿವೆ (< ಅಱುವೆ) + ಕಾಲು$_1$ (< ಕಾಲ್$_1$)]

**ಅರಿವೇಣಿ** 'ಅಯ್ರಾಣಿ' ನೋ.

**ಅರಿಷಡ್ವರ್ಗ** (ನಾ). ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಒಳಗಿನ ಆರು ಶತ್ರುಗಳು : ಮಲೆತು ಬೆನ್ನಟ್ಟುವ ಮಹಾರಿಷಡ್ವರ್ಗಮಂ ಗೆಲಲಱಿಯದವನಾವ ಹಗೆಗಳಂ ಗೆಲುವೆ (ಹಚಕಾ. ೯–೯).
**ಅರಿಷಡ್ವರ್ಗದೂರ** = ಆರು ಅಂತಶ್ಶತ್ರುಗಳಿಂದ ದೂರನಾದವನು : ಶ್ರೀಸ್ಮರಘಸಂಹಾರಿ ಭಕ್ತಸ್ಪಷ್ಟನರಿಷಡ್ವರ್ಗದೂರನು ನಿಷ್ಠಿತೇಂದ್ರಿಯ ಲಿಂಗಸುಖಿ ನಿಷ್ಠಾಪರಂ (ಬಸಪು. ೨೧–೪). [ಅರಿ$_6$ + ಷಡ್ವರ್ಗ]

**ಅರಿಷ್ಟ** (ನಾ). **೧.** ತೊಂದರೆಯಿಲ್ಲದಿರುವುದು ; ಪಾಪವಿಲ್ಲದಿರುವುದು. **೨.** ಶುಭ; ಮಂಗಳ. **೩.** ದುರದೃಷ್ಟ ; ಅಶುಭ; ಕೇಡು : "ಅಶುಭದಲ್ಲಿಯುಂ ಅರಿಷ್ಟಮೆಂಬುದು" (ಹಲಾಯು. ೧೩೪–೧೮) ; ಹಿಂದೂ ಧರ್ಮಕ್ಕೊದಗಿದ್ದ ಅರಿಷ್ಟವನ್ನು ತೊಡೆದುಹಾಕಿದ ರಾಮನಾಥ (ನಂಜುಂಡ. iv ಪ್ರಸ್ತಾ) ; ಅರಿಷ್ಟಕ್ಕೆ ಅಂಗಾರಕನೇ ಗುರಿ (ಗಾದೆ). 'ಬಾಲಾರಿಷ್ಟ' ಪರಾ. **೪.** ಅಪಶಕುನ. **೫.** ಕಾಗೆ : "ಅರಿಷ್ಟಃ, ಕರಟಃ . . . ವಾಯಸಃ—ಈ ೧೦ ಕಾಗೆ" (ಹಲಾಯು. ೪೧–೯೨). **೬.** ಮಜ್ಜಿಗೆ : "ಅರಿಷ್ಟಂ . . . ಮಥಿತಂ—ಈ ೬ ಅಳೆ" (ಹಲಾಯು. ೪೬–೧೨೦). **೭.** ಬೇವಿನ ಮರ : "ಅರಿಷ್ಟಃ, ಪಿಚುಮಂದಃ—ಈ ೨ ಬೇವು" (ಹಲಾಯು. ೩೩–೪೩). **೮.** ಅರಿಟಾಳದ ಮರ. **೯.** ಬೆಳ್ಳುಳ್ಳಿ. **೧೦.** ಒಬ್ಬ ರಾಕ್ಷಸ: ಮಾನವಭುಜಾವಷ್ಟಂಭಾರಿಷ್ಟನುಮೆಂಬರಿಷ್ಟನುಮಂ . . . ಎಂಬ ದಾನವರುಮಂ ಕರೆದು (ಜಗವಿ. ೩–೨೨ ವ). **೧೧.** ಶತ್ರು. **೧೨.** ರೋಗಾದಿ ಉಪದ್ರವ : "ಉಪಲಿಂಗಂ, ಅರಿಷ್ಟಂ . . . —ಈ ೧೦ ಉಪದ್ರವಂ" (ಹಲಾಯು. ೨೧–೧೨೭). **೧೩.** ಹೆರಿಗೆಯ ಮನೆ : "ಹಡೆವಲ್ಲಿಯ ನಿವಾಸಮುದರಿಷ್ಟಮೆನಿಸಿಕ್ಕುರ್ಕ" (ಮಂಗರಾ. ೫೯–೧೧). **೧೪.** ದುಷ್ಟ ; ಕೆಡುಕ : ನೀನು ಸುಮ್ಮನೆ ಅರಿಷ್ಟನಾಗಬೇಡ, ಧೃತರಾಷ್ಟ್ರ (ಬಿದುರಿ. ೧೦೫). **೧೫.** [ಜೈನ] ಲೋಕಾಂತಿಕದೇವರಲ್ಲಿ ಒಂದು ತೆರ, —ಬಗೆ : ಸಾರಸ್ವತರುಂ . . . ಅರಿಷ್ಟರುಮೆಂದು ಲೌಕಾಂತಿಕರೆಂಟು ತೆಱಂ (ತತ್ತ್ವಪ್ರ. ೨೨೨). **೧೬.** [ಜೈನ] ಒಂದು ರತ್ನವಿಶೇಷ : ರುಚಕಾಚಳದ ಮೂಡಣ ದೆಸೆಯ ಕೂಟಂಗಳೊಳಿರ್ಪ ವೈಡೂರ್ಯದ ವಿಜಯೆಯುಂ. . . ಅರಿಷ್ಟದಪರಾಜಿತೆಯುಂ. . . ಅಂಜನಮೂಳಕದ ನಂದವರ್ಧೆಯುಮೆಂಬ ದಿಗ್ದೇವಿಯರೆಣ್ಬರುಮಂ (ಚಂದ್ರಪು. ೧೧–೧೨೨ ವ). **೧೭.** [ವೈದ್ಯ] ಔಷಧದ್ರವ್ಯಗಳ ಸಾರವನ್ನು ಬಟ್ಟಿಯಿಳಿಸಿ ತೆಗೆದು ಸಕ್ಕರೆ, ಜೇನು, ಬೆಲ್ಲ ಮುಂತಾದ ವಸ್ತುಗಳೊಡನೆ ಕೂಡಿಸಿ ಭೂಪುಟವಿಟ್ಟು ತಯಾರಿಸುವ ಒಂದು ಬಗೆಯ ದ್ರವವಸ್ತು. 'ದಶಮೂಲಾರಿಷ್ಟ', 'ದ್ರಾಕ್ಷಾರಿಷ್ಟ' ಪರಾ. **೧೮.** ಒಂದು ನರಕದ ಹೆಸರು : ಅರಿಷ್ಟಸುಮನವೆಂಬೈದು ಮಂತ್ರಿನರಕಂಗಳೊಡನೆ (ವಿವೇಕ. ೧೮೦). [ಸಂ.]

**ಅರಿಷ್ಟಗೇಡಿ** (ನಾ). ಒಳ್ಳೆಯದನ್ನು ಹಾಳುಮಾಡತಕ್ಕುದು ; ಕೆಡುಕನ್ನು ತರತಕ್ಕುದು : ಸ್ವಾತಂತ್ರ್ಯಕೂಸು ಹುಟ್ಟಿತಲ್ಲಾ ಕರೆ, ಹುಟ್ಟಹುಟ್ಟುತಲೆ ದೇಶಾ ತುಂಡಮಾಡಿಕೊಂಡ ಹುಟ್ಟಿತು. ಅರಿಷ್ಟಗೇಡಿ ಮುಂದ ಏನೇನ ಆಗುತ್ತೋ (ಅಮಗಾಂ. ೨೫). [ಅರಿಷ್ಟ + ಕೇಡು + –ಇ₂]

**ಅರಿಷ್ಟಘರಟ್ಟ** (ನಾ). ಅರಿಷ್ಟರಿಗೆ ಬೀಸುವ ಕಲ್ಲಾಗಿರುವವನು ; ದುಷ್ಟರನ್ನು ನಾಶಮಾಡುವವನು : ಅಕಲಂಕರಾಮ ತಳವರ್ಗ ತಳಪ್ರಹಾರಂ ಅರಿಷ್ಟಘರಟ್ಟ ರಾಷ್ಟ್ರಕೂಟಕಾಳಕೂಟಂ (ಗದಾಯು. ೨–೭ ವ). [ಅರಿಷ್ಟ + ಘರಟ್ಟ]

**ಅರಿಷ್ಟನಿವಾರಕ** (ಗು). ಕೇಡನ್ನು ಹೋಗಲಾಡಿಸುವ : ಹಳೆಬೀಡಿನ ಗುಡಿಗಳಲ್ಲಿ ಅಶ್ಲೀಲವೆಂದು ಕಾಣುವ ಇಂಥ ಚಿತ್ರಗಳಿವೆ. ಇವುಗಳನ್ನು ಶುಭದಾಯಕವೆಂದೂ, ಅರಿಷ್ಠ[ಷ್ಟ]ನಿವಾರಕವೆಂದೂ ಜನರು ತಿಳಿದಿದ್ದರು (ಬಾಲಪ್ರ. II, ೮೩೩). [ಅರಿಷ್ಟ + ನಿವಾರಕ]

**ಅರಿಷ್ಟನೇಮಿ** (ನಾ). **೧.** ಗರುಡನ ಸಹೋದರ. **೨.** [ಜೈನ] ಇಪ್ಪತ್ತೆರಡನೆಯ ತೀರ್ಥಂಕರನ ಹೆಸರು : ಆ ಸುರೇಶ್ವರಂ ತ್ರಿವಿಷ್ಟಪಾಧೀಶ್ವರಂಗೆ ಅರಿಷ್ಟನೇಮಿಸ್ವಾಮಿಯೆಂಬ ಪುಣ್ಯಾಭಿಧಾನಮನಿಟ್ಟು (ನೇಮಿಪು. ೮–೧೬೬ ವ). **೩.** ಒಬ್ಬ ಶಿಲ್ಪಿಯ ಹೆಸರು : ಅರಿಷ್ಟನೇಮಿಯು . . . ಗೊಮ್ಮಟವಿಗ್ರಹವನ್ನೂ ಮಾಡಿಸಿರಬಹುದೆಂದು ಊಹಿಸಲಾಗಿದ್ದಿತು (ಹೊಯ್ಸವಾ. ೨೧೭). [ಅರಿಷ್ಟ + ನೇಮಿ]

**ಅರಿಷ್ಟಪತಿ** (ನಾ). ವಿಘ್ನೇಶ್ವರ ; ಗಣಪತಿ : ತುಷ್ಟಿಯಿಲ್ಲದಡಾ ಮಹೇಶಾರಿಷ್ಟಪತಿ [ಪಾಠಾಂ. ರಿಪು] ನೃಪಕೃಪಣರಲ್ಲಾ ತುಷ್ಟನಾದವನೇ ಕೃತಾರ್ಥನು (ನಿಭಾಗ. ೨–೧–೩೭). [ಅರಿಷ್ಟ + ಪತಿ₂]

**ಅರಿಷ್ಟಶಾಂತಿ** (ನಾ). ಅರಿಷ್ಟ ನಿವಾರಣೆಗಾಗಿ ಮಾಡುವ ಶಾಂತಿ : ಅರಿಷ್ಟಶಾಂತಿಗಾಗಿ ನವಗ್ರಹಪೂಜೆ ಮಾಡುತ್ತಾರೆ (ರೂಢಿ). [ಅರಿಷ್ಟ + ಶಾಂತಿ]

**ಅರಿಷ್ಟಸದ್ಮ** (ನಾ). ಹೆರಿಗೆಯ ಮನೆ ; ಸೂತಿಕಾ ಗೃಹ : ಪಿಚುಮಂದಪಲ್ಲವ ಸಮುಲ್ಲಸಿತಂ ಮುಸಲೋರು ಸೀರಡಂಬರಯುತಮೇಂ ಮನಕ್ಕೊಲವನಿತ್ತುದೊ ಬಾಗಿಲರಿಷ್ಟಸದ್ಮದಾ (ಚಂದ್ರಪು. ೩–೯೭). [ಅರಿಷ್ಟ + ಸದ್ಮ]

**ಅರಿಷ್ಟಾಂಶ** (ನಾ). [ಜ್ಯೋತಿ] ಅಶುಭವನ್ನು ಸೂಚಿಸುವ (ನಕ್ಷತ್ರ ಅಥವಾ ರಾಶಿಯ) ಭಾಗ : ಉತ್ಪನ್ನನಾದಂ ಮೂಲನಕ್ಷತ್ರದಿಂದರಿಷ್ಟಾಂಶದೊಳ್ ಸುಕುಮಾರನು (ಜೈಮಿಭಾ. ೨೮–೧೪). [ಅರಿಷ್ಟ + ಅಂಶ]

**ಅರಿಷ್ಟೆ** (ನಾ). ಒಂದು ನರಕದ ಹೆಸರು : ಅಲ್ಲಿಂದತ್ತಮೇಕರಜ್ಜುಪ್ರಮಾಣಾಂತರದೊಳಮರಿಷ್ಟೆಯೆಂಬ ಪೆಸರನುಳ್ಳ ಧೂಮಪ್ರಭೆಯೆಂಬಯ್ದನೆಯ ನರಕಬಿಲಂಗಳೆಲ್ಲಂ ಮೂಱುಲಕ್ಕಮಕ್ಕುಂ (ಅಜಿಪು. ೧೧–೬ ವ). [ಸಂ. ಅರಿಷ್ಟಾ]

**ಅರಿಸಮಾಸ** (ನಾ). ಕನ್ನಡ ಸಂಸ್ಕೃತ ಶಬ್ದಗಳು ಸೇರಿ ಆಗುವ ಸಮಾಸ; ವಿರುದ್ಧ ಸಮಾಸ : "ಕನ್ನಡ (ದೇಶ್ಯ ಅಥವಾ ತದ್ಭವ) ಪದಕ್ಕೂ ಸಂಸ್ಕೃತ ಪದಕ್ಕೂ ಸಮಾಸವು ಕೂಡದು. ಇದನ್ನು ಅರಿಸಮಾಸವೆನ್ನುವರು" (ಕೈಪಿಡಿ. ೨೨) ; ಅರಿಸಮಾಸಕ್ಕೆ – ಮುಖತಾವರೆ, ಅರಸುಕುಮಾರಂ, ಕೆಳದಿಸಮೇತಂ (ಶಮದ. ೧೭೪ ಪ್ರಯೋ). 'ಅರಿಪದ' ಪರಾ. [ಅರಿ₆ + ಸಮಾಸ]

**ಅರಿಸಿನ, ಅರಸಿಣ, ಅರಸಿನ** (ನಾ). **೧.** ಒಂದು ಬಗೆಯ ಹಳದಿ ಬಣ್ಣದ ಗೆಡ್ಡೆ, —ಅದರ ಪುಡಿ; ಹರಿದ್ರೆ : ಆಗಳೆ ತಂಬುಲಮರಿಸಿನಮಾಗಳೆ ದಿವ್ಯಾಂಬರಂಗಳ್ (ಅಜಿಪು. ೨–೧೦೯) ; ಜವೆ ತಿಲಮುರ್ದಿಂಗರಿಸಿನಮೆಂಬಿವನಿಂಬಾಗರೆದಿಕ್ಕಿ ಬಟ್ಟೆಕ್ಕೆ ಮಾಟ್ಕೆ ಸಂಡಗೆಗಳುಮಂ (ಲೋಕೋಪ. ೮–೧೭) ; ಕಳಸಗಳನಿಕ್ಕಿಯರಿಸಿನ ಕುಂಕುಮಗಳ ಗಂಧಾಕ್ಷತೆಯಿಟ್ಟು . . . ಕಾವೇರಿಯನೊಲಿದು ಪೂಜಿಸುತಿರ್ಪರಲ್ಲಿ (ಕಂನವಿ. ೫–೫೩). **೨.** ಅರಿಸಿನ ಹಾಕಿದ (ಬಿಸಿ) ನೀರು : ಅರಿಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು ಪುರುಷನ ಒಲವಿಲ್ಲದ ಲಲನೆಯಂತಾಗಿರ್ದೆನಯ್ಯಾ (ಬಸವ. ೨೬೯). **೩.** ಹಳದಿ ಬಣ್ಣ. **೪.** ಅರಿಸಿನಬಣ್ಣದ ಸೀರೆ. **ಅರಸಿಣ** : **೧.** ಅರಸಿಣ ಬಾನಕ್ಕೆ ಹೋಗಿ ವರುಷದ ಕೂಳು ಕಳಕೊಂಡ (ಗಾದೆ). **ಅರಸಿನ** : **೧.** ಧರಣಿಮಜ್ಜನಗೈದು . . . ಅರಸಿನವನ್ನು ತಿಗುರಿದೊಲು ರಮ್ಯದೆ ಮೆಱೆದುವು ಶಾಲಿಕ್ಷೇತ್ರಗಳು (ಕಂನವಿ. ೨೦–೪).

**ಅರಿಸಿನಕೊಂಬು** = ಅರಿಸಿನದ ಗೆಡ್ಡೆ : ಅರಿಸಿನಕೊಂಬನ್ನು ಕುಟ್ಟಿ ನುಣ್ಣಗೆ ಪುಡಿಮಾಡಬೇಕು (ರೂಢಿ). **ಅರಿಸಿನಗೊಡು** = ಅರಿಸಿನವನ್ನು ಕೊಡು : ಎಣ್ಣೆಯರಿಸಿನಗೊಟ್ಟರೆಲ್ಲರಿಗೆ (ಮೋಹತ. ೧೭–೪೦). **ಅರಿಸಿನ ಕುಂಕುಮಕ್ಕೆ ಬನ್ನಿ** = ಆರತಕ್ಷತೆಗೆ ಬನ್ನಿ ; ಸಂತೋಷಕಾರ್ಯಕ್ಕಾಗಿ ಬನ್ನಿ : ಅರಿಸಿನ ಕುಂಕುಮಕ್ಕೆ ಬನ್ನಿ ಎಂದು ಊರಿನವರನ್ನೆಲ್ಲಾ ಕರೆದರು (ರೂಢಿ). [< ಸಂ. ಹರಿದ್ರಾ. / ತಮಿ. ಅರಿಶಣ]

**ಅರಿಸಿನಕಾಮಾಲೆ** (ನಾ). ಮೈಯೆಲ್ಲಾ ಹಳದಿ ಬಣ್ಣವಾಗುವ ಒಂದು ರೋಗ ; ಕಾಮಣಿ : ಇಂತಹ ಸಂದರ್ಭಗಳಲ್ಲಿ ಟೈಫಾಯ್ಡ್ ರೋಗಾಣುಗಳು ಗರ್ಭವೇಷ್ಟನದಿಂದ ಪಿಂಡಕ್ಕೆ ಬಂದಾಗ ಜ್ವರ, ಅರಿಸಿನ ಕಾಮಾಲೆ (Jaundice), ಸೆಳವು . . . ಮಗುವಿನಲ್ಲಿ ಕಾಣುತ್ತವೆ (ಕೆಲರೋ. ೭೧) ; ಅರಿಸಿನಕಾಮಾಲೆ ರೋಗದವನಿಗೆ ಬೆಳ್ಳಗಿರುವ ವಸ್ತುಗಳೆಲ್ಲ ಹಳದಿಯಾಗಿ ಕಾಣುತ್ತವೆ (ರೂಢಿ). [ಅರಿಸಿನ + ಕಾಮಾಲೆ]

**ಅರಿಸಿನಕುತ್ತ** (ನಾ). = ಅರಿಸಿನಕಾಮಾಲೆ : ಅರಿಸಿನಕುತ್ತದವನಿಗೆ ಲೋಕವೆಲ್ಲಾ ಹಳದಿ (ಕನ್ನಗಾ. ೮).
[ಅರಿಸಿನ + ಕುತ್ತ. / **ತುಳು.** ಅರಸಿನಕುತ್ತ]

**ಅರಿಸಿನತೇಗ** (ನಾ). ಒಂದು ಜಾತಿಯ ತೇಗದ ಮರ.
[ಅರಿಸಿನ + ತೇಗ$_1$]

**ಅರಿಸಿನಮುಂಡ** (ನಾ). (ಕರಾ) = ಅರಿಸಿನ ಕಾಮಾಲೆ : ಅರಿಸಿನ ಮುಂಡದವನಿಗೆ ಊರೇ ಅರಿಸಿನ (ಗಾದೆ).
[ಅರಿಸಿನ + ಮುಂಡ. / **ತುಳು.** ಅರಸಿನಮುಂಡ]

**ಅರಿಸಿನಮುಂಡಿಗೆರೋಗ** (ನಾ). = ಅರಿಸಿನಕಾಮಾಲೆ (ದಕ. *).
[ಅರಿಸಿನ + ಮುಂಡಿಗೆ + ರೋಗ]

**ಅರಿಸಿನವುರ** (ನಾ). ಒಂದು ಊರಿನ ಹೆಸರು : ಅರಿಸಿನವುರನಾಮ ಗ್ರಾಮಃ (ಮೈಆರಿ. ೧೯೩೫, ೪೦-೬೯ ; 951). [ಅರಿಸಿನ + ಪುರ$_2$]

**ಅರಿಸು$_1$** (ಕ್ರಿ). ಕತ್ತರಿಸುವಂತೆ ಮಾಡು ; ಕೊಯ್ದುಹಾಕಿಸು : ಅಸಮಲೋಚನ . . . ಶಿಶುವನರಿ [ಪಾಠಾಂ. ನಱ]ಸುವ ಮರಳಿ ಬರಿಸುವ ಗಸಣಿಯೇತಕೆ (ಬಸವು. ೨೪-೬೫) ; ಸರಸತಿಯ ನಾಸಿಕವನರಿಸಿ ಚಂದ್ರನ ನೊರಸಿ (ಚೆಬವು. ೫೨-೨೨).

**ಅರಿಸಿಕೊಳ್** = ಕೊಯ್ಸಿಕೊಳ್ಳು : ಪೊನ್ನ ಸುರಿಗೆಯೆನೆ ಮೂಗ ನರಿಸಿಕೊಳ್ವುದು ಚದುರೆ (ಸಮುಪ. ೫-೬೪). [ಅರಿ$_1$ + -ಇಸು$_3$]

**ಅರಿಸು$_2$** (ಕ್ರಿ). ಬಿಡಿಸು ; ಎಕ್ಕು : ಹತ್ತೀ ಅರಿಸಿ ಸ್ವಚ್ಛಮಾಡಿ (ಮುಂಬಯಿ. ೪-೧೫೯). [< ಅರಿಸು$_1$ ?]

**ಅರಿಸೆ, ಅರುಸೆ** (ನಾ). ಮೂಲವ್ಯಾಧಿ ; ಮೊಳೆರೋಗ : "ಅರಿಸೆಯುಳ್ಳವನಂ ಅರ್ಶಸನೆಂಬುದು" (ಹಲಾಯು. ೯೯-೪೫೨). **ಅರುಸೆ** : ಅಳಿಯಿಂದಂ ಕಾಮಾಲೆ ತಂಡುಳಜಲದಿಂದರುಸೆ [ಪಾಠಾಂ. ರಿಸಿನ] ತಾಂಗಳ ಗಂಡಕ್ಷಯವಾತಂಗಳೆ ಕಿಡುಗು (ಲೋಕೋಪ. ೯-೩೯) ; ಚಿತ್ರಕಮಂ ಗೋಜಲದೊಳ್ ಕುಡಿದಳೆಗೂಱುಣೆ ಕೆಲವುಂದಿವಸಕ್ಕೆ ಕಿಡುಗುಮರುಸೆಯ ಮೊಳೆಗಳ್ (ಲೋಕೋಪ. ೯-೧೪೩). [< ಸಂ. ಅರ್ಶಸ್]

**ಅರಿಹ$_1$** (ನಾ). ಕತ್ತರಿಸುವುದು ; ಕೊಯ್ಲು : ಕಾವಣದರಿಹದ ಲಾಳ ಭಾಗವೊಂದು (ಸೌಇಇ. XI-ii, ೧೫೨-೪೧ ; 1103) ; ಎಲೆಯಂತರಿಹಕ್ಕೆ ವಂದು ನಾರಂತೆ ಹೊಸೆಹಕ್ಕೆವಂದು (ಧರ್ಮಾಮೃ. ೩-೭೭). 'ಅರಿಹ ಕೊಱ' ಪರಾ. [ಅರಿ$_1$ + -ಹ$_2$ (< -ಪ$_2$)]

**ಅರಿಹ$_2$** 'ಅರುಹ' ನೋ.

**ಅರಿಹಂತ** 'ಅರುಹಂತ' ನೋ.

**ಅರಿಹಕೊಱ** (ನಾ). ಕೊಯ್ಲುಮಾಡುವವನು ; ಪೈರುಗಳನ್ನು ಕೊಯ್ಯುವವನು ; ಒಕ್ಕಣೆಗಾರ (?) : ಅರಿಹಕೊಱರಲು ಕೊಯ್ವಾಳಿಗಳಲುಂ ಚೈತ್ರಕ್ಕೆ ಬೇಳೆ ಪವಿತ್ರಕ್ಕೆ ಬೇಳೆ ದಿನಂಪ್ರತಿ ಬಾಡಿನ ವಳವೆಗೆವೊಂದು ಸೂಡು ಅಯ್ದು ಕೊಯಿ (ಮುಂಬರಾ. X, ೨೪೯-೭೫ ; 1219).
[ಅರಿಹ$_1$ + -ಕೊಱ ?]

**ಅರಿಹುಲ್ಲು** (ನಾ). ತೆನೆಗೂಡಿದ ಹುಲ್ಲಿನ ಕಂತೆ : ಬಡಗಿಗಳು ಒಂದು ಹೊರೆ ಭಾರಿಯಾದ ಅರಿಹುಲ್ಲನ್ನು (ಭತ್ತ ಸಹಿತವಾದ ಹುಲ್ಲು) ಹೊತ್ತುಕೊಂಡು ಬರುವರು (ಹುಟ್ಟಹ. ೬೩) ; ಹಂಕಲು (ಒಂದು ಹುಲ್ಲುಕಡ್ಡಿ) ಆಯುತ್ತಿದ್ದವನಿಗೆ ಅರಿಹುಲ್ಲು (ಕಂತೆ ಹುಲ್ಲು) ಸಿಕ್ಕಿದ ಹಾಗಾಯ್ತು (ಹುಟ್ಟಹ. ೧೨೨). [ಅರಿ$_4$ + ಹುಲ್ಲು (< ಪುಲ್)]

**ಅರು$_1$** (ಕ್ರಿ). ಬಯಸು ; ಇಷ್ಟಪಡು.

**ಅರುತ್ತು** (ಭೂತಕೃ) : ವಾಜಿಮಾಂಸಮನಲಂಪಿಂ ಮೆಲ್ವ ಮಾತಂಗ ಭೀಕರಕುಂಭಸ್ಥಿತರಕ್ತಪಾನಮನರುತ್ತಾನಂದದಿಂ ಪೀರ್ವ (ಎಇ. XIX, ೨೩೦-೩೬ ; 1177). [?]

**ಅರು$_2$** (ನಾ). ಒಂದು ಗಿಡ ; ಮೆಣಸಿಗೆ ಗಿಡ ; ಕೆಂಪು ಕಗ್ಗಲಿ : "ಬಿಣಿಕೆ ಬಲವತಿಯಕ್ಕುಮೆಸಗಮಿಸುವಕ್ಕುಮರು ಮೆಣಸಿಗೆ" (ಮಂಗರಾ. ೪೨-೩೭). [ಸಂ.]

**ಅರು$_3$** (ನಾ). ೧. ಹುಣ್ಣು ; ವ್ರಣ : "ಅರುಃ, ವ್ರಣಃ — ಈ ೨ ಪುಣ್ (ಹುಣ್ಣು)" (ಹಲಾಯು. ೧೦೪-೮). ೨. ಮರ್ಮಸ್ಥಾನ. 'ಅರುಂತುದ' ಪರಾ. [ಸಂ. ಅರುಸ್]

**ಅರುಂಗಳ** (ನಾ). [ಜೈನ] ಯತಿಗಳ ಒಂದು ಶಾಖೆ : ಅರುಂಗಳಾನ್ವಯದಗುಣಸೇನ ಪಣ್ಡಿತದೇವರ್ಗ್ಗೆ ಮಾಡಿಸಿ ಧಾರಾಪೂರ್ವ್ವಕಂ ಕೊಟ್ಟರು (ಎಕ. II, ೩೫-೪೪ ; 1056) ; ಶ್ರೀಮದ್ರವಿಳ ಸಂಘದರುಂಗಳಾನ್ವಯದ (ಎಕ. VI, ಕಡೂರು. ೬೯-೨೬ ; 1160). [?]

**ಅರುಂತುದ** (ಗು). ೧. ಮರ್ಮವನ್ನು ನೋಯಿಸುವ. (ನಾ). ೨. ಮರ್ಮವನ್ನು ನೋಯಿಸುವವನು : "ಅರುಂತುದಂ ನೋಯಿಸುವನಕ್ಕುಂ" (ಮಂಗರಾ. ೭೦-೧೫) ; ಅನ್ಯರೊಳಗ ಸಂಗ್ರಹಿಸಿ ರಂಧ್ರಾನ್ವೇಷಣಂಗೈದು ಶಠರರುಂತುದರಪ್ಪರು (ವೆಂಕಾರಾ. ೬-೫-೧೩). [ಸಂ.]

**ಅರುಂಧತಿ** (ನಾ). ೧. ವಸಿಷ್ಠನ ಪತ್ನಿಯ ಹೆಸರು : ಪತಿಭಕ್ತಿಯೊಳರುಂಧತಿಗೆ ಸರಿ (ಹಚಕಾ. ೧-೪೪). ೨. ಒಂದು ಸಣ್ಣ ನಕ್ಷತ್ರದ ಹೆಸರು : ಸಪ್ತರ್ಷಿಮಂಡಲ—ಕೆಳಭಾಗದಲ್ಲಿ ಬಲಗಡೆಯಿಂದ ಎರಡನೆಯ ನಕ್ಷತ್ರವೇ ವಶಿಷ್ಠ ; ಅದರ ಸಮೀಪದಲ್ಲೇ ಸ್ವಲ್ಪ ಕೆಳಗಿರುವ ನಕ್ಷತ್ರವೇ ಅರುಂಧತಿ (ಆಕಾಶ. ೬೮). [ಸಂ. ಅರುಂಧತೀ]

**ಅರುಂಪೆಱಲ್** (ನಾ). ಪಡೆಯಲು ಕಷ್ಟವಾದುದು : ಅರುಂಪೆಱಲ್ ಕಾದಲ್ ಪೆಣ್ಣಣಿ ಕಲ್ಪಿನ್ (ಹೊಂಗಳು. ೪೪-೭).
[← ತಮಿ. ಅರುಮ್ಪೆಱಲ್]

**ಅರುಂಬು** (ನಾ). ಹೂವಿನ ಮೊಗ್ಗು (*).
[ದೇ. ‖ ತಮಿ. ಅರುಮ್ಬು ; ಮಲ. ಅರಿಂಪು]

**ಅರುಕಡ್ಡಿ** (ನಾ). ಸಣ್ಣ ಬಿದಿರು ಕೋಲು : ಎತ್ತುಕಾಯುವವನಿಗೆ ಎಳೆಸಣ್ಣ ಅರುಕಡ್ಡಿ ಪಚ್ಚೆತೆನೆಯಂತ ನಾಗಸರ ತಕ್ಕೊಂಡು ಎತ್ತೀನ ಜ್ಞಾನ ಮರೆತಾಸು (ಹಳ್ಳಿಯ. ೫೦). [ಅರು$_2$ ? + ಕಡ್ಡಿ]

**ಅರುಕಾಣಿಕೆ** (ನಾ). ನೇಗಿಲುಗಳ ಮೇಲೆ ಹಾಕುವ ಒಂದು ತೆರಿಗೆ (*ಸಂಗ್ರಾ. ೧೩೯). [ಅರು$_0$ (< ಆರ್$_4$) + ಕಾಣಿಕೆ]

**ಅರುಗ** (ನಾ). ಒಂದು ಬಗೆಯ ಹುಳು : ಹೇನು, ತಗಣಿ, ಅರುಗ, ಜಿರಲೆ (ನಮ್ಮನು. ೨೪೦). [?]

**ಅರುಗಡಿ** (ನಾ). ಒಂದು ಸುಂಕ (?) : ದೇಶದವರು ಒಕ್ಕಲುಗುತ್ತಗೆ ಅರುಗಡಿಯ ಮೇಲೆ ಹ[ಡಿ]ದ ವಸ್ತುವ (ಕಇ. I, ೫೩-೩೫ ; 1433) ; ನಾರಾಯಣಭಟ್ಟರು ಎಱದು ಕೊಟ್ಟ ಸ್ಥಳಂಗಳಿಂಗೆ ತೆಱ ಮುಡಗಡಿ ದೇವರ ದಮ್ಮ್ರ ಅರುಗಡಿ ಮನೆಹಣ ನೊಗಹಣ . . . ಮೊದಲಾಗಿ ಆಉದೂ ಸಲ್ಲ (ಕಇ. I, ೫೪-೩ ; 1433). [?]

**ಅರುಗಿಸು** (ಕ್ರಿ). ೧. ಅಂಚಿಗೆ ನಿಲ್ಲಿಸು; ಪಕ್ಕಕ್ಕೆ ಸರಿಸು. ೨. ಕಳಿಸು ; ಹೋಗುವಂತೆ ಮಾಡು : ರಾಮನಿಂದಧಿಕ ಭರತ ಧರೆಯನಾಳಲಿ ಗಹನಕೇಂ ನಿಮಿತ್ತದಿಂ ರಾಮನರುಗಿಸೆಂದೊರೆವೆಯಾತನ ಕಳುಪಲೀ ಲೋಕ ಹರುಷಿಪರದೆಂತು (ವೆಂಕಾರಾ. ೨-೬-೩೬). [ಅರುಗು$_1$ + -ಇಸು$_3$]

**ಅರುಗು$_1$** (ಕ್ರಿ). ಪಕ್ಕಕ್ಕೆ ಸರಿ, —ಹೋಗು : ಭಾನುಕುಲ ಸಂಭೂತಕಧಿನಾಥ ನೆರವಿಗೇಂ ಸತ್ಕೀರ್ತಿಯಹುದು ಕರಗತಮಾದ ಧರಣಿಯಂಬಿಟ್ಟರುಗಲು (ವೆಂಕಾರಾ. ೨-೧೦-೯) ; ವೈದೇಹಿ ಸಾಧ್ವೀಮತವ ಮೀರದೆ ಸಂತಸದಲರುಗಿರ್ಪಳು (ವೆಂಕಾರಾ. ೨-೧೪-೬ ; ೩-೬-೧೦ ; ೫-೩-೩೦ ನೋ).
[ದೇ‖ ತಮಿ. ಅರುಕು, ಅರುವು = ಸಮೀಪಿಸು ; **ತೆಲು.** ಅರುಗು = ಹೋಗು]

**ಅರುಗು$_2$,** ಅರಗು$_2$ (ನಾ). ಅಂಚು ; ಪಕ್ಕ ; ಮಗ್ಗಲು ; ಕಡೆ : ಇನಿಯನ ಮೊಗದ ಮುನಿಸು ತಿರ್ದುವುದೋ ಘನವಹುದೋ ಎನುತವೆ ಬಾಳಾಂಕಿಯ ವನೆಯರುಗಂ ಮೆಯ್ಯಾಣಿಸಿಕೊಳ್ಳದೆ ನಿಂದೋಸರು ಗೇಳ್ವಾ ವನಿತೆಯಿರವನೀಕ್ಷಿಸಿ (ಜಯಕಾ. ೧೪-೬೫) ; ಜಲದಲ್ಲಿ ಮುಳುಗ ದಂತಾವೆಯದಱರುಗಮೆಟ್ಟುತ್ತಷ್ಟದಿಗ್ಗಜಗಳು (ವೀಶೈಪು. ೪-೧೩-೧೧). **ಅರಗು$_2$** (ಕ).

**ಅರುಗಾಗು** = ಪಕ್ಕಕ್ಕೆ ಸರಿ; ಒಂದು ಕಡೆ ನಿಲ್ಲು; ಬಿಟ್ಟು ಹೋಗು: ಬಿಲ್ ಹಿಡಿದಣ್ಣ ಅರುಗಾಗೊ ಮಲ್ಲಯ್ನ ಸತ್ತಿಗ್ಗಾರುತಿ ಬೆಳಗೇವು (ನಾಪದ. ೯೯) ; ಅಲುಗದೆಯೆ ನೋಡುತಿರು ಅರುಗಾಗಿ (ಅಶ್ವತ್ಥಾ. ೫-೩) ; ಬಂದ ಗವುಂಡನು . . . ಮುಗಿದ ಕೈಗಳಲ್ಲಿ ಅರುಗಾಗಿ ನಿಂತನು (ಸವತಿ. ೧೬೨). **ಅರುಗುಮಾಡು** = ಪಕ್ಕಕ್ಕೆ ನೂಕು : ನಮಗೆ ಬರುವ ಸಿದ್ಧಾಯ ಸೊನ್ನೆ (ಕಣ್ಣಲ್ಲಿ ಹೊಸ ಮಿಂಚು) ಅವನನ್ನೆ ಅರುಗು ಮಾಡುವುದು (ತುಂಗಭ. ೫೨).

[ದೇ ॥ **ತಮಿ.** ಅರುಕು ; **ಮಲ.** ಅರು, ಅರುವು ; **ತುಳು.** ಅರು, ಅರುಗು]

**ಅರುಗುಗಾಲು** (ನಾ). ಬಾಗಿಲ ಚೌಕಟ್ಟು (?) : ಬೋದಿಗೆ ನಾಲ್ಕು ಕಂಭವೆಂಟು ಅರುಗುಗಾಲು ಹತ್ತು ತೊಲೆವೊಂದೆ ಹೇೞಿತ್ತು ಮುಚ್ಚಳ ವಲಗೆಗೆ ದಿಕ್ಕುಗಾಣದೆ ಕರ್ಮಕಾಂಡಿಗಳೆಲ್ಲರೂ (ಭೀಮುವ. ೨೨೪); "ಜೀವರಿಗೆ ದಶವಾಯುಗಳೆ ದುಶ್ಚರಿತ್ರವಾಗಿಹವೆಂಬುದೀಗ ಅರುಗುಗಾಲು ಹತ್ತು ಎಂಬ ಶಬ್ದಕ್ಕರ್ಥ" (ಭೀಮುವ. ಟೀಕು).

[**ದೇ.** ॥ **ತಮಿ.** ಅರುಕುಕ್ಕಾಲ್ = ಹೊಸ್ತಿಲು ; ಬಾಗಿಲಚೌಕಟ್ಟು]

**ಅರುಚಿ** (ನಾ). ೧. ರುಚಿಯಿಲ್ಲದಿರುವುದು ; ಅಪೇಕ್ಷೆಯಿಲ್ಲದಿರುವುದು: ಎಮ್ಮ ತಮ್ಮನ ಕಟಪ್ರದೇಶ ಭಾಗಕ್ಕಂ ಕಣ್ಣನೀರ್ ಬರ್ಪುದಕ್ಕಂ ಅರು ಚಿಗಮೇಕೆ ಮರ್ದಂ ಮಾಡಿಸಿದಿರಿಲ್ಲೆನೆ (ವಡ್ಡಾರಾ. ೨೭-೩) ; ಲಿಂಗದಲ್ಲಿ ಕಠಿಣವುಂಟೆ ಜಂಗಮದಲ್ಲಿ ಕುಲವುಂಟೆ ಪ್ರಸಾದದಲ್ಲಿ ಅರುಚಿ [ಪಾಠಾಂ. ಅನುರುಚಿ]ಯುಂಟೆ (ಬಸವ. ೨೮೫) ; ಭಕ್ತಿರುಚಿಕನು ಬಸುಱೊಳಿ ಹನಾಗಿ ಕಮಳವದನೆಗೆ ರುಚಿಯರುಚಿಯಾಯ್ತು (ಬಸಪು. ೩-೧). ೨. ಕಾಂತಿಯಿಲ್ಲದಿರುವುದು. ೩. ಆಸಕ್ತಿಯಿಲ್ಲದಿರುವುದು. [**ಸಂ.**]

**ಅರುಜ** (ನಾ). ರೋಗವಿಲ್ಲದವನು : "ಅರುಜಾದ್ರಿ ಮನೋಹರ ಸಹ್ಯ ವಾಚಕಂ" (ನಾನಾರ. ೧೦೨). [**ಸಂ.**]

**ಅರುಟಾಲ** 'ಅರುಟಾಳ' ನೋ.

**ಅರುಟಾಳ,** ಅರಟಾಳ, ಅರಡಾಳ, ಅರಿಟಣ, ಅರಿಟಾಳ, ಅರುಟಾಲ, ಅರುಠಾಳ (ನಾ). ನೀರಿನಲ್ಲಿ ನೆನಸಿ ಉಜ್ಜಿದಾಗ ನೊರೆಹೊರಡುವ ಒಂದು ಬಗೆಯ ಕಾಯಿ; ಅಂಟುವಾಳ: ಅರುಟಾಳಂ, ಹಾರಿವಾಳಂ... ಲೊಕ್ಕಿ (ಗಿರಿಕ. ೧-೭೨) ; ಅಂಕೋಲೆಯ ಮದಕ್ಕೆ ಪದ್ಮಾಕ್ಷಿಯದೊಂದರು (ಟಾ)ಠಾಳದ ಮದ ಶಮನಂ (ಖಮುದ. ೨-೧೧೮) ; ತಾರೆ ತಿಗರರುಟಾಳ ಚಿಲ್ಲರನೇಱಿಲಪ್ರತಿ ಹುಣಿಸೆ ನಾನಾಭೂರಿಭೂಜಗಳಿಂದ ಹೊಯ್ದಾಡಿದರು (ತೊರರಾ. ೪-೪-೨೩). **ಅರಟಾಳ** : "ಅರಿಷ್ಟಃ, ಫೇನಿಲಃ—ರಂಗುವಾಲದ ಗಿಡ, ಅರಟಾಳದ ಮರವೆಂತಲೂ ಅನ್ನುವರು" (ಸಿದ್ಧಾಂತಿ. ೧೦೪). **ಅರಡಾಳ** (ಕ). **ಅರಿಟಣ** : ಸುಜ್ಜಿಲರಳಿಸಾಗಡೆಯುದಿ ಸಂಪಗೆ ಬೆಜ್ಜಲು ಬೆಳೆವ ಬಿದಿರ್ ಬೇವರಿಟಣ ಸಜ್ಜರಸ ಕರಂಜಿಗೆಯರನೇಱಿಲ್ . . . ಬೆಳೆ ದಿರಲ್ (ಜಯಕಾ. ೧೫-೨೪). **ಅರಿಟಾಳ** : "ಅರಿ [ಪಾಠಾಂ. ರು]ಟಾಳ ಮುದರಿಷ್ಟಕಂ" (ಮಂಗರಾ. ೪೨-೩೯) ; "ಅರಿಟಾಳಮೆನಲರಿಷ್ಟದ್ರುಮಂ" (ಕಶರ. ೪) ; ಅರಿಟಾಳವೌದುಂಬರ ಹೊನ್ನಿ ಬನ್ನಿಯ ತರುಗಳಿಂದೆಸೆದುದಾ ಕಾಡು (ರಾಮುಕಾ. ೧೫-೫೯). **ಅರುಟಾಲ** : ಅರುಟಾಲ . . . ದಿಂಡ (ರೇವಣ. ೩೭-೧೩). **ಅರುಠಾಳ** ; ಬಜೆ ಕಟುಕತ್ರಯಂ ವರಸಮುದ್ರ ಫಲಂ ಅರುಠಾಳವೆಂಬ ಸತ್ಕುಜಫಲರಾಜಿಯೆಂಬಿವನೆ ಕೊಡುಗೆ (ಖಮುದ. ೭-೧೫) ; ಸೊಡರಿಯ ಬೇರರುಠಾಳಂ ಗುಡೂಚಿಯಾಡುಳಿಚಮೆಂಬಿವಂ ಕಟೆಯಿಂದಂ ಕುಡಿಯಿಸಲಹಿವಿಷಮುಱಿಗುಂ (ಖಮುದ. ೧೫-೬೭).

[< **ಸಂ.** ಅರಿಷ್ಟ]

**ಅರುಟಾಳಕ** (ನಾ). = ಅರುಟಾಳ : ಸಂಪಗೆ ಬಿಕ್ಕೆ ಕಕ್ಕೆ ತೆಂಗರಳರು ಟಾಳಕಂ ಮರಗಳೊಪ್ಪುಗುಂ (ಶ್ರೀಮುಹಾ. ೧-೪೭). [ಅರುಟಾಳ+ -ಕ$_2$]

**ಅರುಠಾಳ** 'ಅರುಟಾಳ' ನೋ.

**ಅರುಣ** (ನಾ). ೧. ಕೆಂಪುಬಣ್ಣ : "ಅರುಣಃ, ಶೋಣಃ . . . — ಈ ೭ ಕೆಂಪು" (ಹಲಾಯು. ೧೨೧-೪೮) ; "ಪಾಟಳಂ ಲೋಹಿತಂ ಶೋಣ ಮರುಣಂ ತಾಮ್ರಮೆನೆ ರಕ್ತಕಾಂತಿ" (ಮಂಗರಾ. ೧೩೧-೨೦) ; ಮೂಡಿ ದನುದಯಾದ್ರಿಯೊಳರುಣತರುಣಕಿರಣಪ್ರಸವಂ (ಕಾವ್ಯಸಾ. ೮೭೦). ೨. ಸೂರ್ಯನ ಸಾರಥಿಯ ಹೆಸರು; ಗರುಡನ ಅಣ್ಣ. ೩. ಸೂರ್ಯ. ೪. ಕಿರಣ. ೫. ಒಂದು ಬಗೆಯ ಕುಷ್ಠರೋಗ. ೬. ಪುನ್ನಾಗವೃಕ್ಷ. ೭. ಕೈಲಾಸದ ಪಶ್ಚಿಮಕ್ಕಿರುವ ಹಿಮಾಲಯದ ಒಂದು ಶಿಖರದ ಹೆಸರು. ೮. ಉದ್ದಾಲಕ ಋಷಿಯ ತಂದೆಯ ಹೆಸರು. ೯. ಸೂತ್ರ; ದಾರ. ೧೦. ಒಂದು ನದಿಯ ಹೆಸರು. ೧೧. ಧೂಳು. ೧೨. ಚಿನ್ನ. ೧೩. ಒಂದು ಬಗೆಯ ಸಣ್ಣ ವಿಷಕೀಟ. ೧೪. ತಾಮ್ರ; ಕೆಂಪು ಲೋಹ. ೧೫. ಒಂದು ಉಪನಿಷತ್ತಿನ ಹೆಸರು: ಅರುಣ . . . ಮೊದಲಾದುವೆ ಶತೋಪನಿಷತ್ತುಗಳು (ವಿವೇಕ. ೪). ೧೬. [ಜೈನ] ಎಂಟು ಬಗೆಯ ಲೋಕಾಂತಿಕ ದೇವರಲ್ಲಿ ಒಂದು ವರ್ಗದ ಹೆಸರು : ಸಾರಸ್ವತಾದಿತ್ಯ ವಹ್ನ್ಯರುಣ . . . ದೇವರ್ ಬಂದು (ಆದಿಪು. ೯-೬೦ವ) ; "ಕಿರಣಂ ಸಾರಥಿ ವರ್ಣ ಭೇದ ನದಿ ಸೂತ್ರಂ ರೇಣುಸೂರ್ಯಾದಿಗಳ್ ಅರುಣಾಖ್ಯಂ" (ನಾನಾರ. ೫೬). [**ಸಂ.**]

**ಅರುಣಕಮಲ** (ನಾ). ಕೆಂಪು ತಾವರೆ. 'ಅರುಣಕಮಲಾಂಬಕ' ಪರಾ. [ಅರುಣ + ಕಮಲ]

**ಅರುಣಕಮಲಾಂಬಕ** (ನಾ). ೧. ಕೆಂಪುತಾವರೆಯಂತೆ ಕಣ್ಣುಳ್ಳ ವನು. ೨. ಕೃಷ್ಣ : ಅರುಣಕಮಲಾಂಬಕನು ಭೀಮಾದಿಗಳ ಕರೆಸಿದನು (ತಿಮ್ಮಶಾಂ. ೨-೨೦). [ಅರುಣಕಮಲ + ಅಂಬಕ]

**ಅರುಣಚ್ಛವಿ** (ನಾ). ಕೆಂಪು ಬಣ್ಣ, —ಕಾಂತಿ : ತನುರೋಮಾಳಿ ತಳಿತುದು ರೋಷವಹ್ನಿಜ್ವಾಲೆ ಝುಳಪಿಸೆ ಜಡಿದವರುಣಚ್ಛವಿಯಲಕ್ಷಿಗಳು (ಕುವ್ಯಾಸ. ೧೦-೨೩). [ಅರುಣ + ಛವಿ]

**ಅರುಣಜಲ,** ಅರುಣಜಳ (ನಾ). ಕೆಂಪು ನೀರು ; ರಕ್ತ : ಅರುಣಜಲ ದಾಜ್ಯದಲಿ ಬಂಬಲುಗರುಳ ಚರುವಿನಲಿ . . . ಆಹವಯಜ್ಞದೀಕ್ಷಿತನಹೆನು (ಕುವ್ಯಾಉ. ೧೦-೧೯). **ಅರುಣಜಳ** : ಮಿಾಂಬೊಲಸು ನಾರ್ಪ ಮೆಯ್ಗ ಮಳುಂಬಂ ತೂಂಬುರ್ಚಿದಂತೆ ಸುರಿವರುಣಜಳಕ್ಕಂ ಬಿಡದೆ ಕಾಗೆಯುಂ ಪದ್ದಂ ಬಳಸುವವೆಂದೊಡಿಂತು ಕಿಸುಗುಳಿಯೊಳರೇ (ಸುಕುಮಾ. ೪-೫೯).

**ಅರುಣಜಲವರುಷ** = ರಕ್ತದ ಮಳೆ : ಅರಿಭಟನ ಬೊಬ್ಬೆಗಳ ಫೊಳಗಿ ನೊಳರುಣಜಲವರುಷದಲಿ ರಿಪುಗಳ ಕೊರಳ ಬನದಲಿ ಕುಣಿದುವೀತನ ಖಡ್ಗವನಕೇಕಿ (ಕುವ್ಯಾದ್ರೋ. ೬-೪೧). [ಅರುಣ + ಜಲ]

**ಅರುಣಜಲಂಬೊರೆ** (ಕ್ರಿ). ರಕ್ತವನ್ನು ಬಳಿದುಕೊಳ್ಳು ; ರಕ್ತದಿಂದ ಲೇಪಿತವಾಗು : ಅರುಣಜಲಂಬೊರೆದಧರಮುದಜಕೊಳೆಡೆಯಾಡುವ ಜನ ತತಿಯಾ ಸ್ವರಸಂತತಿ ಗರ್ಜಿತಮಾಗಲ್ಕೆ . . . ಹುಲಿಮೊಗವೊಪ್ಪಿದುದು (ಜಯಕಾ. ೧-೫೪). [ಅರುಣಜಲ + ಪೊರೆ$_2$]

**ಅರುಣಜಳ** 'ಅರುಣಜಲ' ನೋ.

**ಅರುಣತೆ** (ನಾ). ಕೆಂಪಾಗಿರುವಿಕೆ; ಕೆಂಪಾದ ಸ್ಥಿತಿ: ನಳನಳಿಪ ತರುಣತೆಯ ಸೊಂಪುವೆತ್ತರುಣತೆಯ ತಳಿರಿಡಿದ ತೋರಣದ (ಜೈಮಿಭಾ. ೩-೧೭). [ಸಂ. ಅರುಣತಾ]

**ಅರುಣದಾವರೆ** (ನಾ). ಕೆಂಪುತಾವರೆ: ಅರುಣದಾವರೆಯ ಮೊಗ ಬೆಳ್ದಾವರೆಯೊಲಾಯ್ತು (ಪ್ರೌಢರಾ. ೯-೪೪). [ಅರುಣ + ತಾವರೆ]

**ಅರುಣದಿನಮಣಿ** (ನಾ). ಕೆಂಪಾದ ಸೂರ್ಯ: ಅರುಣದಿನಮಣಿ ಬಯಲ್ದಾವರೆಯನೆ ಪೋಲ್ತಿರ್ದನಪರಗಿರಿವರಶಿರದೊಳ್ (ಕಾವ್ಯಸಾ. ೮೮೦ ಶೂದ್ರಕ). [ಅರುಣ + ದಿನಮಣಿ]

**ಅರುಣಮೂಲ** (ನಾ). ಒಂದು ಸಸ್ಯ; ಬಿಂಡಿಗ: "ಅರುಣಮೂಲಮೆನೆ ಬಿಂಡಿಗವಕ್ಕು" (ಮಂಗರಾ. ೩೫-೧೪). [ಸಂ.]

**ಅರುಣವಸ್ತ್ರ** (ನಾ). ಕೆಂಪುಬಟ್ಟೆ: ಅರುಣವಸ್ತ್ರವನಿಟ್ಟು ಶಿರದಲಿ ನೆರೆದು ದಾಸಣದಂಡೆಗಳ. . .ಬೀಳಿದನು (ಕೌಶಿರಾ. ೨೮-೧೨). [ಅರುಣ + ವಸ್ತ್ರ]

**ಅರುಣವಾರಿ** (ನಾ). ಕೆಂಪುನೀರು; ರಕ್ತ: ತಲೆಮಾಱಿಗಳು ಹೆಣ ಸಾಲನೆಡೆಹಿದರರುಣವಾರಿಯ ತೊಱೆಯನೀಸಿದರು (ಕುವ್ಯಾಭೀ. ೯-೧೫). [ಅರುಣ + ವಾರಿ$_3$]

**ಅರುಣಶಾಲಿ** (ನಾ). ಕೆಂಪುಭತ್ತ: ಬೆಳೆದು ಪೊದಟ್ಟು ನೀಳ್ದರುಣಶಾಲಿಯ ಸತ್ಕಣಿಶಾಳಿಯಂ ಶುಕಾವಳಿ ನಡೆಗರ್ಚಿ ಪಾಱುವ ಬೆಡಂಗು (ಪುಷ್ಪಪು. ೪-೯೪). [ಅರುಣ + ಶಾಲಿ]

**ಅರುಣಸಾರಥಿ** (ನಾ). ಅರುಣನನ್ನೇ ಸಾರಥಿಯಾಗುಳ್ಳವನು; ಸೂರ್ಯ. [ಅರುಣ + ಸಾರಥಿ]

**ಅರುಣಾಂಗ** (ನಾ). ಕೆಂಜಿಗ; ಕೆಂಪುಬಣ್ಣದ ಗೊದ್ದ: "ಅರುಣಾಂಗಮೆನಲು ಕೆಂಜಿಗೆಯಕ್ಕುಂ" (ಮಂಗರಾ. ೪೯-೧೩). [ಅರುಣ + ಅಂಗ$_2$]

**ಅರುಣಾಂಬು** (ನಾ). = ಅರುಣವಾರಿ: ಗಂಟಲಂ ಮುರಿದರುಣಾಂಬುವಂ ಪಿಱಿದು ಮರ್ದಿಸಿದಂ ವೃಷನಂ ಜನಾರ್ದನಂ (ಜಗವಿ. ೫-೩೮). [ಅರುಣ + ಅಂಬು$_3$]

**ಅರುಣಾಕ್ಷಿ** (ನಾ). ಕೆಂಪಾದ ಕಣ್ಣುಳ್ಳವಳು: ಅರುಣಾಕ್ಷಿ ಮುರಿದ ಪುರ್ವಿದು ಕರಮೆಸೆವುದು ಮುಳಿದು ಮುರಿದ ಮದನನ ಧನುವೋಲ್ (ಶಾಕುಂತ. ೭೦-೧೨೩). [ಸಂ. ಅರುಣಾಕ್ಷೀ]

**ಅರುಣಾಧರ** (ನಾ). ಕೆಂಪಾದ ತುಟಿ: ಅರುಣಾಧರದ ಚುಂಬನವಿತ್ತು . . . ಬಿಡರವನನಲ್ಲಿಯ ವಿಷಾಂಗನೆಯರು (ಜೈಮಿಭಾ. ೧೫-೪೮). [ಅರುಣ + ಅಧರ]

**ಅರುಣಾಬ್ಜ** (ನಾ). ಕೆಂಪು ತಾವರೆ: "ಅರುಣಾಬ್ಜಮೆನೆ ಕೋಕನದಮೆನಲ್ ಕೆಂಪುದಾವರೆಯಕ್ಕು" (ಮಂಗರಾ. ೧೨೪-೧೬); ವಿನತನಾಗೇಂದ್ರಹಸ್ತಾರುಣಾಬ್ಜಂ (ಅಜಿಪು. ೧-೧). [ಅರುಣ + ಅಬ್ಜ]

**ಅರುಣಾವರಜ** (ನಾ). ಅರುಣನ ತಮ್ಮ; ಗರುಡ. [ಅರುಣ + ಅವರಜ]

**ಅರುಣಾಶ್ಮ** (ನಾ). ಕೆಂಪುಕಲ್ಲು; ಕೆಂಪುರತ್ನ; ಮಾಣಿಕ: "ಅರುಣಾಶ್ಮಮೆನೆ ಪದ್ಮರಾಗಮೆನೆ ಮಾಣಿಕಂ" (ಮಂಗರಾ. ೩೧-೬). [ಸಂ. ಅರುಣಾಶ್ಮನ್ (ಅರುಣ + ಅಶ್ಮನ್)]

**ಅರುಣಿ** (ನಾ). ರಕ್ಷಣೆಗಾಗಿ ಕಟ್ಟಿದ ಗೋಡೆ; ಕಟ್ಟೆ; ಅಣೆಕಟ್ಟೆ (?): ಅರುಣಿ [ಪಾಠಾಂ. ಅರಣಿ] ತಿರ್ದುವರೆ ಕಳೆದ ನೀರ್ಗೆ ಚದುರರು ಮರುಳುತನವಿದೇಕೆ ನಿನಗೆ (ಕುರಾಸಾಂ. ೩೭-೨೧). [?. / ತಮಿ. ಅರಣ್ = ರಕ್ಷಣೆ (< ಸಂ. ಶರಣ)]

**ಅರುಣಿತ** (ಗು). ಕೆಂಪಾಗಿ ಮಾಡಲ್ಪಟ್ಟ; ಕೆಂಪಾದ: ಅಧರಮಯೂಖಾಳಿಯಿಂದೆತ್ತಲುಂ ಪಾಂಡುರಿತಂ ಪೈಶಂಗಿತಂ ಕರ್ಬುರಿತಮರುಣಿತಂ ವ್ಯೋಮರಂಗಂ (ಚಂದ್ರಪು. ೧೨-೭೭). [ಸಂ.]

**ಅರುಣಿಮೆ** (ನಾ). ಕೆಂಪುಬಣ್ಣ; ಕೆಂಪು: ಆಕಾಶದ ಅರುಣಿಮೆ ಲುಪ್ತಪ್ರಾಯವಾಗಿತ್ತು (ಬಾಣಆ. ೯೧). [< ಸಂ. ಅರುಣಿಮನ್]

**ಅರುಣಿಸು** (ಕ್ರಿ). ಉದಯವಾಗುವ ಹಾಗೆ ಮಾಡು; ಮೂಡಿಸು: ದೇವ ಕೊಟ್ಟು ಕಾವ ಜ್ಞಾನನೇತ್ರ ಕರುಣಿಸು, ಸತ್ಯದೃಷ್ಟಿ ಅದೇ ಸೃಷ್ಟಿ ಎನುವ ಭಾವ ಅರುಣಿಸು (ಜೀವಲ. ೫೨). [ಅರುಣ + – ಇಸು$_3$]

**ಅರುಣೀಭೂತ** (ಗು). ಕೆಂಪಾದ; ಕೆಂಪುಬಣ್ಣಕ್ಕೆ ತಿರುಗಿದ: ಅರುಣೀಭೂತವಿಯತ್ತಳಂ (ಪಂಚತಂ. ೨೩೯-೩). [ಸಂ.]

**ಅರುಣೆ** (ನಾ). ೧. ಅತಿಬಜೆಯೆಂಬ ಔಷಧದ್ರವ್ಯ ಮತ್ತು ಅದರ ಗಿಡ. ೨. ಮಂಜಿಷ್ಠೆ. ೩. ಲಾಲ್‌ತಿಗಡೆ. ೪. ಹಾವುಮೆಕ್ಕೆ. ೫. ಗುಲಗಂಜಿ ಗಿಡ. [ಸಂ. ಅರುಣಾ]

**ಅರುಣೋದಯ** (ನಾ). ೧. ಪೂರ್ವದಿಕ್ಕಿನಲ್ಲಿ ಕೆಂಪು ಬೆಳಕು ಕಾಣಿಸಿಕೊಳ್ಳುವುದು. ೨. ಸೂರ್ಯೋದಯ: ಹರ ಕರುಣೋದಯ ಮಾದಂತರುಣೋದಯಮಾಗೆ ನಿದ್ರೆ ತಿಳಿದೆದ್ದು (ಬಸರ. ೪-೫೭). [ಅರುಣ + ಉದಯ]

**ಅರುಣೋಪಲ**, ಅರುಣೋಪಳ (ನಾ). = ಅರುಣಾಶ್ಮ. **ಅರುಣೋಪಳೆ**: ಪಳುಕಿನ ಪಾದಪೀಠಮರುಣೋಪಳದಿಂ ಸಮೆದಂತೆ ಕಾಂತಿಯಂ ತಳೆದಿರೆ (ಮಲ್ಲಿಪು. ೩-೯೭). [ಅರುಣ + ಉಪಲ]

**ಅರುಣೋಪಳ** 'ಅರುಣೋಪಲ' ನೋ.

**ಅರುದಿಂಗಳು** 'ಅಱುದಿಂಗಳ್' ನೋ.

**ಅರುದು** (ನಾ). ಬೆರಗು; ಆಶ್ಚರ್ಯ: ಅಲ್ಲಿ ಬರ್ಫವು ಚಿರವಾಗಿ ನಿಲ್ಲುವುದಿಲ್ಲವೆಂದು ಕೇಳಿ ನೀವು ಅರುದಾಗಬಹುದು (ಮುಂಬಯಿ. ೬-೧೯೦); ನಿಮ್ಮ ಮಾತು ಕೇಳಿ ಅರುದಾಗುತ್ತದೆ (ಮುಂಬಯಿ.೬-೨೭೩); ಕಾಲಕ್ಕಾದ ಹಗೆಗಳ ಅರುದುಬೆಚ್ಚಿಗೆಗಳನ್ನು ಬಣ್ಣಿಸಲಾಸಲ್ಲ (ಮೋಬಾದ. ೩೯). [< ಅರಿದು. / ತೆಲು. ಅರುದು]

**ಅರುನೂರು** 'ಅಱುನೂಱು' ನೋ.

**ಅರುಪು** 'ಅಱಿಪು' ನೋ.

**ಅರುಬು$_1$** 'ಹರಿಬ' ನೋ.

**ಅರುಬು$_2$** 'ಅಱುಂಬು' ನೋ.

**ಅರುಬೆ** 'ಅಱುವೆ' ನೋ.

**ಅರುಮರುವು** 'ಅಱುವುಮಱವು' ನೋ.

**ಅರುಮೆ**, ಅರಮೆ$_3$ (ನಾ). ೧. ಮುದ್ದು; ಪ್ರೀತಿ: "ಅರುಮೆಯೆಂದುಂ, ಲಲ್ಲೆಯೆಂದುಂ ಮುದ್ದು" (ಕಶಸಾ. ೨೧-೪೨೦); "ಲಲ್ಲೆ ಮೇಣರುಮೆಯೆನೆ ಮುದ್ದಿಂಗೆ ಪೆಸರ್" (ಕಬ್ಬಿಕೈ. ೩೦); ತಾನರುಮೆ ಮೆಚ್ಚು ಪೊನ್ನನ್ನ ಮೆಚ್ಚದೆ (ಸೌಇಇ. IX–i, ೧೬-೪೪; 800). ೨. ಚಂಚಲತೆ; ತರಳಸ್ವಭಾವ (ಚತುನಿ. I, 72 ಟಿ). **ಅರಮೆ$_3$** : ೨ (ಟಿ). [ದೇ. ‖ ತಮಿ. ಅರ್ವಂ]

**ಅರುವಡಿ** 'ಅಱುವಡಿ' ನೋ.

**ಅರುವಣ** (ನಾ). ನೇಗಿಲು ತೆರಿಗೆ; ಒಂದು ತೆರನಾದ ಸುಂಕ (?): ಬಿಟ್ಟ ಮತ್ತರಾಜುವರುವಣಂ ರೋಣದ ಪೊಂಥರಣಂ (ಇಆ. XII, ೨೫೬-೧೮; 971); ಫಲವಾಗದ ಮಣ್ಣೆ ಅರುವಣವಿಲ್ಲ (ಸೌಇಇ. IX–i, ೭೭-೨೭; 993); ಅರಸರ್ಗೆ ಸೇಸೆಯೆಂದರಸರ ಕಾಣಿಯೆಂದು ದಾಯದ ವರ್ಗಳ ತೆಱಿಯೆಂದರುವಣಮೆಂದಳಿವಣಂ (ಎಕ. XII, ಶಿರಾ. ೪೦-೧೦೦; 1040); ಪರಿಕಿಸದೀ ಧರ್ಮ್ಮದೊಳರಸರ ಕಾಣಿಕೆ ಕೊಳ್ಳಿಯರುವಣಂ ಕಿಱುಸುಂಕಂ ಪುರದ ಮರ್ಣ ಬಂಣ್ಣಿಗೆಯೆಂದರೆವೀಸಮನಳಿಪಿಕೊಣ್ಣವಂ ಚಣ್ಡಾಳ[ಂ] (ಎಇ. XXVII, ೧೫-೫೯; 1114). [ಅರು$_0$ (< ಅರ್$_4$) + ಪಣ$_1$]

**ಅರುವತ್ತು** 'ಅಱುವತ್ತು' ನೋ.

**ಅರುವಾರ** (ನಾ). ಒತ್ತೆ ; ಅಧಾರ (?) : ತುಳುವ ಹೆಗ್ಗಡಿತಿಗೆ ಯಿರಿಸಿದ ಅರುವಾರದ ಬಾಳಿನ ವಿವರ ಮೂಡಲು ಕೊಳಚಿಯ ತಾಱಿಂದಂ ಪಡುವಲು ತೆಂಕಲು (ಸೌಇಇ. IX–ii, ೪೨೪–೪೬ ; 1401) ; ಯೀ ಧರ್ಮಸ್ಥಳದ ಅಮ್ರುತಪಡಿಗೆ ದೇವಡಿಗಳಿಗೆ ಬಿಟ್ಟ ಬಾಳಿಗೆ ಅರ್ಥ್ಯ ಅರುವಾರ ಸಲ್ಲ ಆರೊಬ್ಬರು ಕೊಟ್ಟ ಹೊನ್ನು (ಸೌಇಇ. IX–ii, ೪೭೦–೭೧ ; 1482) ; ನಾರಣಸೆಟಿ ಅರುವಾರವ ಮಾಡಿಕೊಂಡು ಕೊಟ ಅರ್ಥ (ಸೌಇಇ. IX–ii, ೫೧೨–೧೧ ; 1570). [← ತುಳು. ಅರವಾರ]

**ಅರುವು** 'ಅಱಿವು' ನೋ.

**ಅರುಷ್ಕರ** (ಗು). ೧. ಗಾಯವನ್ನುಂಟುಮಾಡತಕ್ಕ. (ನಾ). ೨. ಗೇರುಗಿಡ, —ಹಣ್ಣು, —ಬೀಜ : ಹಿಂಗು ವಚಾದ್ವಯ ಮರಿಚ ವಿಳಂಗಾರುಷ್ಕರ ಪತಾಕಮಳ ? ಸರ್ಷಪ ಗೋಶ್ರುಂಗ ಪಶುಮೂತ್ರದಿಂ ವೃಕ್ಷಂಗಳನಿಂಬಾಗಿ ಪೊರೆಯೆ ಕೀಟಾಪಹರಂ (ಲೋಕೋಪ. ೬–೧೧). [ಸಂ.]

**ಅರುಸೆ** 'ಅರಿಸೆ' ನೋ.

**ಅರುಹ,** ಅರಿಹ್ವ (ಗು). ೧. ಯೋಗ್ಯವಾದ ; ತಕ್ಕುದಾದ : ಅರಸ ನೊಕ್ಕ್ಯೋಗರಕೆ ತಾನರುಹನುಳಿದಂತೀ ಧರಿತ್ರಿಗೆ ನಿರುತವಧಿಪತಿ ನೀವೆಯಲ್ಲಾ ಬಸವ ಮಂತ್ರೀಶ (ಬಸಪು. ೫–೧೦) ; ದಾನಕ್ಕರುಹರಿವರಲ್ಲೆಂದು ನೋಡದೆ ಮೂಢಮಾರ್ಗದಲಿ ಕರೆದಪಾತ್ರಂಗಿತ್ತು (ಕುವ್ಯಾಉ. ೩–೨೩) ; ನಿನಗರುಹವೇ ಲಿಂಗಪ್ರಸಾದವೆಂದರೆ ಮುಳಿದು (ಸೌಂದಪು. ೪–೪೬). (ನಾ). ೨. ಜಿನ ; ಜೈನತೀರ್ಥಂಕರ : "ಅರ್ಹಂ – ಅರುಹಂ, ಬರ್ಹಂ – ಬರುಹಂ, ಅರ್ಹಂತಂ – ಅರುಹಂತಂ" (ಭಾಷಾಭೂ. ೫–೧೦೪ ಉದಾ) ; "ಅರ್ಹ – ಅರುಹ, ಆಕರ್ಷಣ – ಆಕರುಸನ" (ಶಮುದ. ೨೫೪ ಪ್ರಯೋ) ; ಮತಿ ತವದನ್ನೆಗಮುರುಹನನತಿಶಯಮೆನೆ ಪೊಗಬ್ಬುದು (ಸಮುಪ. ೧–೫೬) ; ಎಱಗುವನರುಹಂಗುಱಿದರ್ಗೆಱಗಂ (ಕಬ್ಬಿಕಾ. ೯). **ಅರಿಹ್ವ :** ೨. "ಅರ್ಹಂ–ಅರಿಹಂ, ಅರುಹಂ" (ಶಬ್ದಾನು. ೧೪೬–೨೧). [< ಸಂ. ಅರ್ಹ]

**ಅರುಹಂತ,** ಅರಹಂತ, ಅರಿಹಂತ (ನಾ). ಜಿನ ; ಜೈನ ತೀರ್ಥಂಕರ : "ಬರ್ಹಂ – ಬರುಹಂ, ಅರ್ಹಂ – ಅರುಹಂತಂ, ಗಾರ್ಹಪತ್ಯಂ – ಗಾರುಹಪತ್ಯಂ" (ಭಾಷಾಭೂ. ೫–೧೧೪ ಉದಾ) ; ಅರುಹಂತನ ಮೆಲ್ಲಡಿದಾವರೆಗಳ್ ಬಗೆಯಲ್ಲಿ ನಿಂದುವು (ಕಬ್ಬಿಕಾ. ೧೩). **ಅರಹಂತ :** ಅರಹಂತರ್ಜಗದೊಳಗೊರ್ಬರಲ್ಲ (ಸಮುಪ. ೨–೫) ; ಅರಹಂತಾ ಮಂಗಳಂ ಸಿದ್ಧಾಮಂಗಳಂ (ಶಬ್ದಾನು. ೫೭೨ ವ್ಯಾಖ್ಯಾ). **ಅರಿಹಂತ :** "ಅರ್ಹಂತಂ – ಅರಹಂತಂ, ಅರಿಹಂತಂ, ಅರುಹಂತಂ" (ಶಬ್ದಾನು. ೧೪೭ ವ್ಯಾಖ್ಯಾ). [< ಸಂ. ಅರ್ಹತ್]

**ಅರುಹಮಂದಿರ** (ನಾ). ಜಿನದೇವಾಲಯ ; ಜಿನಾಲಯ : ಪುರದೊಳೆಲ್ಲಿಯುಮಂಗಳಂಗಳೆ ಅರುಹಮಂದಿರ ಶೋಭಿಗೊಂಡಿರೆ (ಬಿಜ್ಜಪು. ೧೧೩–೧೦೦). [ಅರುಹ + ಮಂದಿರ]

**ಅರುಹು₁** 'ಅಱಿಪು' ನೋ.

**ಅರುಹು₂** 'ಅಱಿವು' ನೋ.

**ಅರುಳ್,** ಅರುಳು (ನಾ). ಕರುಣೆ ; ದಯೆ : ಅರುಳಿರ್ಕೆ, ವೀಡುಂ, ಅರಂ, ಪುರುಳಿಂಪುಂ (ಹೊಂಗಳು. ೪೫–೫). **ಅರುಳು :** ದೈವದ ಅರುಳು ಎಂದಿಗೂ ಸತ್ಯವಾಗದೆ ಇರದು (ಹಾಹುತ್ತ. ೩೨) ; ದೈವದ ಅರುಳನ್ನು ಕೇಳಲೆಂದು ಕೊಲ್ಲೂರಿಗೆ ತೆರಳಿದ ದುಗ್ಗಪ್ಪ ಇನ್ನೂ ಮರಳಿ ಬರಲಿಲ್ಲ (ಹಾಹುತ್ತ. ೪೬) ; ಅರಿವಾಗಿ, ಅರುಳಾಗಿ, ಅರನಿರಿಯ ತಿರುಳಾಗಿ (ಹೊಂಗಳು. ೩೩–೨೩) ; ಮಾತಾಯ ಕೃಪೆಯು ಸಿರಿಗುರುವಿನರುಳು ಕರುಳಾಗಿ ಪೊರೆಗೆ ದಯೆಯಿಂದ (ಹಾಡುಪಾ. ೩೫–೧೯). [← ತಮಿ. ಅರುಳ್]

**ಅರುಳಪಾಡು** (ನಾ). ಭಗವಂತನ ಕರುಣೆಯನ್ನು ಕುರಿತು ಹಾಡುವ ಕೆಲಸ : ತಿರುತಂಬುಲ ಮೊದಲಾದ ಸರ್ವ ತೇಜಸ್ವಾಮ್ಯವನೂ ಅರುಳ ಪಾಡನೂ ಯಿವು ಮೊದಲಾದ ತೇಜಸ್ವಾಮ್ಯವನು ತೆಗೆದುಕೊಂಡು (ಎಕ. XIV, ಶ್ರೀರಂಗ. ೨೫೯–೬ ; 1544). [← ತಮಿ. ಅರುಳ್‌ಪ್ಪಾಟು]

**ಅರುಳಾಳು** (ನಾ). ಕರುಣಾಳು : ಅರುಳಾಳು ಪರಮೇಶ್ವರನ ಅಕ್ಕರೆಯ ಅಣುಗ, ಪೃಥ್ವಿಧರಿಸಿ ಬಂದ ಶಿವಮಾರ (ತುಂಗಭ. ೭೧). [← ತಮಿ. ಅರುಳಾಳನ್]

**ಅರುಳಿ** (ನಾ). ಹೂವು : ಬಣ್ಣದರುಳಿಯ ಬಿಟ್ಟದಾವರೆ ಕಣ್ಣಿಗೆ ಪ್ರಿಯವಾದ ಸರ್ಪವು ಬಣ್ಣಬಣ್ಣದ ಕೀರಮರಿಗಳು ತಣ್ಣಗಿರ್ದವರಣ್ಯದಿ (ಗೋಹಾಡು. ೧೪). 'ಅರಣಿ₁' ಪರಾ. [< ಅರಲ್₂]

**ಅರುಳು** 'ಅರುಳ್' ನೋ.

**ಅರುಳುದೋರು** (ಕ್ರಿ). ಕರುಣೆಯನ್ನು ತೋರಿಸು ; ಅನುಗ್ರಹಮಾಡು : ಶಿವಶಿವಾ ! ಅರುಳುದೋರೆಯ ದೇವ (ಹಬ್ಬರ. ೧೨–೮೬). [ಅರುಳು (< ಅರುಳ್) + ತೋರು (< ತೋಱು)]

**ಅರುಳ್ಗೆಯ್** (ಕ್ರಿ). ಕರುಣೆದೋರು ; ಅನುಗ್ರಹಿಸು : ದೇವರು ಕೃಪೆಯಿಂದ ಅಡಿಯನಿಗೆ ಅರುಳ್ಗೈಯಬೇಕು (ಮುಡಿಕ್ಯಾ. VI, 1584; ರಾಮಾವಿ). [ಅರುಳ್ + ಕೈ (< ಕೆಯ್₁)]

**ಅರೂಪ** (ಗು). ರೂಪವಿಲ್ಲದ ; ನಿರಾಕಾರವಾದ. [ಸಂ.]

**ಅರೆ₁** (ಕ್ರಿ). ೧. ನುಣ್ಣಗೆ ಮಾಡು ; ಪುಡಿಮಾಡು ; ತೇಯು : "ಅರೆ– ಪೇಷಣೇ, ಅರ್ಧೇಚ" (ಶಮುಧಾ) ; ನಳಿತೋಳ ಬಳ್ವಳಿಕೆ ಕಣ್ಗೊಳ್ಗೆ ಘಟ್ಟಿ ಮಗುಳ್ಚುವಂದಮಲ್ತರೆದು ಮಗುಳ್ಚುವಂದಮೆ . ದಲೆನ್ನೆರ್ದೆಯಂ ಪೆಱತೇನದೆಂತು ಪೇಱ್ (ಪಂಪಭಾ. ೮–೭೦) ; ತಿಲಮಂಗಸೆ ವಿಳಂಗಂ ಸಿಂಧುಲವಣಮಿವನರೆದು (ಲೋಕೋಪ. ೩–೩೨) ; ಯಕ್ಷಕರ್ದಮಾದಿಗಳನರೆದಾವನಿತೆಗನುಲೇಪಿಸಿ (ಪದ್ಮರಾ. ೩–೪೪) ; ಕಟಕಿಯೇಕಿದು ಪರಶುರಾಮನ ಪಟುತನಕೆ ಮದ್ದರೆಧೆನೆಂಬೀ ನಿಟಿಲನೇತ್ರನ ಭುಜಬಲಕೆ ಸಮಜೋಳಿ ಗಡ (ಕುವ್ಯಾಭೀ. ೯–೩೨). ೨. ಪುಡಿಮಾಡಲ್ಪಡು : ತಳಪಟವ ತುಂಬಿದವು ತೇರುಗಳಿಳೆ ಜಡಿಯೆ ಕಾಲಾಳು ಹೊಕ್ಕೊಡೆಗಲಿಸಿ ಹೊಯ್ದರು ಚೂಣಿಯರೆದುದು ಕಳನ ಚೌಕದಲಿ (ಕುವ್ಯಾದ್ರೋ. ೨–೨೭). [ದೇ.‖ ತಮಿ. ಅರೈ ; ಮಲ. ಅರೆಕ್ಕ ; ತುಳು. ಅರೆಪು ; ತೆಲು. ರಾಸು]

**ಅರೆ₂** 'ಅಱೆ₄' ನೋ.

**ಅರೆ₃,** ಅರೆ₅ (ನಾ). ೧. ಅರ್ಧಭಾಗ : "ಅರೆ – ಪೇಷಣೇ, ಅರ್ಧೇಚ" (ಶಮುಧಾ) ; "ಅರೆಯೆಂಬ ಶಬ್ದಮೊಂದು ವಸ್ತುವಿನ ಸಮಭಾಗಮಂ ಪೇೞ್ವಲ್ಲಿಯುಂ" (ಶಮುದ. ೭೪ ವೃತ್ತಿ) ; ಸಜ್ಜುರಕ್ಕೆ ಪುಟ್ಟಗೆ ಒನ್ದರೆ (ಎಇ. IX, ೨೨–೭ ; 800) ; ಅರೆಮುಚ್ಚಿ ಕಣ್ಗಳಂ ವನಕರಿ ಮೆಲ್ಲದೆ ಲಲಿತ ಸಲ್ಲಕೀ ಪಲ್ಲವಮಂ (ಕವಿರಾ. ೩–೮) ; ಅರೆಮುಗಿದಿರ್ದ ಕಣ್ಗಳುಮಲರ್ದ ಮೊಗಂ (ಗದಾಯು. ೪–೫೩) ; ಇಂದಿಗಱುದಿಂಗಳರೆಯಾದುದೀ ಗ್ರಾಮವ ಪುಳಿಂದರಿಱಿದು (ಸಿದ್ಧೇಪು. ೯–೪೭). ೨. ನ್ಯೂನತೆ ; ಕೊರತೆ : ತಾವರಿಗಮರೆಯಾಯ್ತು ನಲವೆನೆ ಧರೆಯೊಳ್ ಕಾಲಮನದಾರೊ ಕಳೆಯಲ್ ಬಲ್ಲರ್ (ಚಂದ್ರಪು. ೮–೧೮) ; ತಿರಿವರಂಗೈಪಾತ್ರೆ ಕೊಳನು ಹರಿಯಲೇನರೆ ನಿಮಗೆ (ಪಶುಭಾ. ೧–೧೯) ; ಅರೆಯಾವುದಿಲ್ಲಿ ? ಜ್ವಲಿಸುವ ವಸಂತವಿದೆ ತಿಳಿನೀಲಿ ಗಗನವಿದೆ ಕೊರತೆ ಇನ್ನೆಲ್ಲಿ (ಇಂಗೀತ. ೭೬–೧) ; ಚಿಕ್ಕವನೇ ಆವನಿಗೇನು ಅರೆ (ಮುನಿಮಾ. ೩). **ಅರೆ₅ :** ೧. 'ಅರಕಾಣಿ', 'ಅರಗಚ್ಚು' ಪರಾ.

**ಅರೆಆಳು** = ಅರ್ಧಆಳು ; ಒಂದು ಆಳು ಮಾಡುವಷ್ಟು ಕೆಲಸದಲ್ಲಿ ಅರ್ಧ : ಅರೆಆಳಿನ ಕೂಲಿ (ರೂಢಿ). **ಅರೆಊಣಿಸು** = ಅರ್ಧಊಟ ; ಹೊಟ್ಟೆಗೆ ಸಾಲದಷ್ಟು ಊಟ : "ಓಮೋದರಿಎ – ಅರೆಉಣಿಸಿನಿಂದಂ" (ವಡ್ಡಾರಾ. ೬೩-೨). **ಅರೆಮಾಡು** = ಅರ್ಧವಾಗುವಂತೆ ಮಾಡು ; ಕುಗ್ಗಿಸು ; ತಗ್ಗಿಸು : ಮುನ್ನೀರ್ಗಳಂ ಕೆಲಬರ್ ಪೀರ್ದರೆ ಮಾಡುತುಂ ನಡೆದರ್ (ಕಬ್ಬಿಕಾ. ೨೫೩) ; ಬನವನರೆಮಾಡುವೀ ದುಷ್ಟ ಮರ್ಕಟ ತತಿಗೆ ಬುದ್ಧಿಯಂ ಹೇಳಿಕೊಂಡು (ಸಮ್ಯಕೌ. ೨-೮೦). **ಅರೆಯಾಗು** = ಅರ್ಧವಾಗು ; ಕುಗ್ಗು ; ಕುಂದು : ಶರಶರವರ್ಷಮನತ್ಯುದ್ಧುರ ಧುರದೊಳ್ ಕೃಷ್ಣಕೃಷ್ಣಮೇಘಂ ಕಱೆಯಲ್ ಪರಬಲ ಜೀವನ ಜೀವನವರೆಯಾಗುತಿರ್ದುದಂತದೇನಚ್ಚರಿಯೋ (ಜಗವಿ. ೮-೫೨) ; ಮಗಳ ಅರ್ಕೈಕೆಯೊಳರೆಯಾಗಿ ಹೋದರು ಮುಪ್ಪಿನ ತಂದೆ ತಾಯದಿರು (ಇಂದ್ರಚಾ. ೪೫-೧೫).

[**ದೇ.** ‖ **ತಮಿ.** ಅರ್ಕೈ ; **ಮಲ.** ಅರ ; **ತುಳು.** ಅರೆ ; **ತೆಲು.** ಅರ]

**ಅರೆ$_4$** (ನಾ). ೧. ಗೂಡು ; ಮಾಡ : ಗವಿಯ ಮುಂಭಾಗದ ಒಂದು ಗೋಡೆಯಲ್ಲಿ ಕೊರೆದ ಕಲ್ಲಿನ ಒಂದು ಅರೆಯಿತ್ತು (ಕುಡಿಕೂ. ೧೬). ೨. ಸೆಳೆಖಾನೆ : ಕುರ್ಚಿಯ ಮೇಲೆ ಕುಳಿತು ಮೇಜಿನ ಅರೆಯನ್ನು ಎಳೆಯಲು ಪ್ರಯತ್ನಪಟ್ಟಾಗ ಆ ಮೇಜು ತಿರುಗಮುರುಗಾಗಿತ್ತು (ರಂಗಕ. ೬೮) ; ಜಯಂತ ಅವಳು ಕೊಟ್ಟ ಪುಸ್ತಕವನ್ನು ಮೇಜಿನ ಅರೆಯೊಳಗಿರಿಸಿ ಹೊರಟ (ಹೂಹಣ್ಣು. ೧೩೬). [?. / **ತಮಿ.** ಅಱೈ]

**ಅರೆ$_5$** (ನಾ). ಅಜೀರ್ಣ (?) : ರಣಮಾರಿಗರೆಯಾಗಿ ಓಕರಿಪ ಮಾಳ್ಕೆಯಿಂ ಕಡಿದು ಬಡಿದು ಕುರಿದರಿಯೊಟ್ಟುವೆನು (ಶ್ರೀರಾಮಾ. ೬೭೫-೩೮೩). [?]

**ಅರೆ$_6$** (ನಾ). ಗಾಡಿಯ ಚಕ್ರದಲ್ಲಿರುವ ಮರದ ಕಾಲು, —ಕಡ್ಡಿ : ಭಾಗ್ಯವು ಚಕ್ರದ ಅರೆಗಳ ಸಾಲಂತೆ ಮತ್ತೆ ಮೇಲೇರಿತೆ ಕೊನೆಗೆ (ಇಂಚಾಪ. ೪೬-೯೫). [**ಸಂ.** ಅರ]

**ಅರೆ$_7$** (ಅ). ೧. ಎಲ್ಲಿಯಾದರೂ ; ಎಂದಾದರೂ ; ಕೆಲವೆಡೆ ; ಕೆಲಮಟ್ಟಿಗೆ ; ತುಸು ; ಸ್ವಲ್ಪ : "ಅರೆ ಅರಮೆ ಎಂಬ ನಿಪಾತಂಗಳ್ ಕ್ವಚಿದರ್ಥದಲ್ಲಿಯುಂ ಕದಾಚಿದರ್ಥದಲ್ಲಿಯುಂ ವರ್ತಿಕುಂ" (ಭಾಷಾಭೂ. ೨೬೮ ಉದಾ) ; "ಎತ್ತಾನುಮದೆಲ್ಲಿಯಾನುಮೆಂಬರ್ಥದೊಳಾಯತ್ತಂಗಳರಮೆ ಅರೆಗಳ್" (ಶಮದ. ೩೧೨) ; "ಕಿಱಿದೆಡೆಯಂ ನಿರೂಪಿಸುವ ನಿಪಾತಾರ್ಥದ ಅರೆಯೆಂಬ ಶಬ್ದ" (ಶಮದ. ೬೪).

**ಅರೆಬರ್** = ಕೆಲವರು ; ಸ್ವಲ್ಪ ಜನ : "ಅರೆಬರೆಂದು ಕೆಲಂಬರ್" (ಕಶಸಾ. ೧೮-೩೬೬) ; ಪಾಷಂಡಿಗಳರೆಬರ್ ಪುಟ್ಟಿಯುಮುಡಂಗುವರ್ (ಆದಿಪು. ೧೫-೨೯) ; ಇಱಿಯಲ್ಕಣ್ಮವರೀಯಲಾಜರರೆಬರ್ ಪೂಣ್ದೀವ ರಾರಾಸುಮಾಸ್ಸಿಱಿಯಲ್ಕಣ್ಮರ್ (ಎಕ. II, ೧೩೩-೧೫ ; 987) ; ಕುರುಕುಲಮಂ ನುಂಗಿದೆಯಿನ್ನರೆಬರುಮಂ ನುಂಗಲಿರ್ಪೆ (ಗದಾಯು. ೨-೯) ; ಅಡಿಯಿಟ್ಟರೆನೆರೆದು ಬಿಂಕಗಾರ್ತಿಯರರೆಬರ್ (ಕಬ್ಬಿಕಾ. ೯೫) ; ಅರೆಬರಿಂತೆಸಗಲಕ್ಕುಮೆಯೆಂಬರಲ್ಲಿ ಮತ್ತರೆಬರೆಸಗಿದೊಡಮೆಸಗುಗೆ ಪಾತ್ರಮೇಯೆಂಬರರೆಬರಾದೊಡಮದೇಂ ತನ್ನೊಡವೆಯೇಯೆಂಬರರೆಬರದು ತಾನಾದೊಡಂ (ಪದ್ಮರಾ. ೫-೪೮). [< ಅರೆ$_3$ ?]

**ಅರೆ$_8$** (ಅ) ಆಶ್ಚರ್ಯ, ಆಕ್ಷೇಪ ಮುಂತಾದುವನ್ನು ಸೂಚಿಸುವ ಅವ್ಯಯ. (i) ಆಶ್ಚರ್ಯಕ್ಕೆ : ಅರೆ ಹೋಯಜಬಾಪ್ಪೆಂದು ಹರಿಗನಂ ಗುರು ಪೊಗೞ್ದಂ (ಪಂಪಭಾ. ೨-೬೦) ; ಅರೆ ! ಇದೇನಯ್ಯಾ ನೀನು ಹೇಳೋ ಮಾತು ಆಶ್ಚರ್ಯವಾಗಿದೆಯಲ್ಲ (ರೂಢಿ). (ii) ಆಕ್ಷೇಪಕ್ಕೆ : ಅರೆ ! ನನ್ನಷ್ಟಕ್ಕೆ ನಾನು ಹೋಗುವವ ಇವನಾರು ನನಗೆ ಹೀಗೆ ಹೇಳಲಿಕ್ಕೆ (ನಡೆದಾ. II, ೧೨೨೮).

**– ಅರೆ$_9$** '– ಒಡ್ಡೆ' ನೋ.

**ಅರೆಉೞಿ, ಅರೆವುಳಿ** (ನಾ). ೧. ಕೆಲವುಕಡೆ, —ತಾವು: ಅರೆಎಡೆ ಹಸ್ತಿಶಿಕ್ಷಣ ವಿಚಕ್ಷಣರಿಂದರೆ ಅಶ್ವಶಿಕ್ಷೆಯಿಂದರೆಉೞಿ ಮಲ್ಲಮೇಷ ಮಹಿಷೋದ್ಧುರ ಯುದ್ಧರಸಪ್ರಿಯರ್ಕಳಿಂ (ಕಾವ್ಯಾವ. ೫೧). **ಅರೆವುಳಿ** : ೧. "ಅರೆವುಳಿಳಿ ಕೆಲವೆಡೆಯೊಳ್" (ಕರ್ಣಾನಿ. ೩೨). ೨. ಕೆಲವರು : "ಅರೆವುಳಿ ಕೆಲಬರೆನಿಪ್ಪರ್" (ಕವಿಕಂ. ೨೬೦) ; ಅರೆವುಳಿಯಲಿ[ನಿ]ಕ್ಕಿದಂ ಮತ್ತರೆವುಳಿಯಂ ಬೊಬ್ಬೆಯುಬ್ಬೆಯಿಂದಟ್ಟಿದನಂದರೆವುಳಿಯಂ ಕೈಪಱಿಯಬ್ಬರದಿಂ ದೋಡಿಸಿದನಾ ಗಣೇಶ್ವರನಾಗಳ್ (ವೀರವಿ. ೧೧-೫೯). [ಅರೆ$_7$ + ಉೞಿ]

**ಅರೆಎಡೆ** (ನಾ). ಕೆಲವು ಕಡೆ : ಅರೆ ಎಡೆ ಹಸ್ತಿಶಿಕ್ಷಣವಿಚಕ್ಷಣರಿಂದರೆ ಅಶ್ವಶಿಕ್ಷೆಯಿಂದರೆಉೞಿ ಮಲ್ಲಮೇಷಮಹಿಷೋದ್ಧುರ ಯುದ್ಧರಸ ಪ್ರಿಯರ್ಕಳಿಂದರೆ ಎಡೆ (ಕಾವ್ಯಾವ. ೫೧) ; ಅರೆಎಡೆಯೊಳ್ ಜತ್ವಂ ಮೇಣರೆಎಡೆಯೊಳ್ ಸಂಖ್ಯೆಯಾಗೆ ಛತ್ವಂ (ಶಮದ. ೬೮). [ಅರೆ$_1$ + ಎಡೆ$_3$]

**ಅರೆಕಟ್ಟು** (ಕ್ರಿ). ೧. ಅಡ್ಡಗಟ್ಟು (?) : ಅರವಿಂದಾನನೆ ಕೇಳು ಅರೆಮೊರೆಯಿಲ್ಲದೆ ಅರೆಕಟ್ಟ ಎನ್ನ ಅಧರ ಮುದ್ದಿಕ್ಕಿದ (ಪುರಂದ. ೪-೧೧೦-೩). ೨. ಆಕ್ಷೇಪಿಸು ; ಅಸಮಾಧಾನಗೊಳಿಸು (ಸ್ಯಾಂಡರ್).

[ಅರೆ ? + ಕಟ್ಟು$_1$]

**ಅರೆಕೆದ** 'ಅರೆಗದ' ನೋ.

**ಅರೆಕಲ್ಲು** (ನಾ). ಬಂಡೆಗಲ್ಲು : ದಿಬ್ಬವೇರಿ ಅರೆಕಲ್ಲಮೇಲೆ ಮರೆನಿಂತು ಕಣ್ಣಿಟ್ಟು ನೋಡಿದನು (ಮಲೆಮ. ೪೪೬).

[ಅರೆ$_2$ (< ಅಱೆ$_4$) + ಕಲ್ಲು (< ಕಲ್$_2$)]

**ಅರೆಕಾಣಿ, ಅರಕಾಣಿ, ಅರೆಗಾಣಿ** (ನಾ). ಒಂದು ಕಾಣಿಯ ಅರ್ಧ ಭಾಗ; ಅರ್ಧಕಾಣಿಯ ನಾಣ್ಯ ; ಯಾವುದೇ ಒಂದು ನಾಣ್ಯದ ೧/೧೨೮ ಭಾಗ (ಶ) : ಅರಸರ್ಗೆ ಸೇಸೆಯೆಂದರಸರ ಕಾಣಿಕೆಯೆಂದು ದಾಯದವರ್ಗಳ ತೆಱೆಯೆಂದರುವಣವೆಂದಳಿವಣವೆಂದರೆಕಾಣಿಯ ಕೊಣ್ಡವರ್ ಚಾಡಾ[ಣ್ಡಾ]ಳರ್ (ಎಕ. XII, ಶಿರಾ. ೨೩-೧೩೨ ; 1167) ; ನಿನ್ನ ಒಡವೆಯೊಳರೆಕಾಣಿಯುಂ ಸವೆದಡೆ ಬಳಿಕ ನಾಂ ಭಕ್ತನಲ್ಲೆ (ಬಸವು. ೧೧-೧೪). **ಅರಕಾಣಿ** (ಶ). **ಅರೆಗಾಣಿ** : [ಅ]ರೆಗಾಣಿಯನಕ್ಕೆ ಕೊಣ್ಡವರ್ ಚಾಣ್ಡಾಳರ್ (ಎಕ. XII, ಶಿರಾ. ೪೦-೧೦೦ ; 1040) ; ಧರ್ಮಕ್ಕೊಂದರೆಗಾಣಿಗೆ ಜೀವಮುಕಟೆ ಮೋಹಿಸುತಿರ್ಪಂ (ಧರ್ಮಾಮೃ. ೧೩-೯೧) ; ದ್ರವ್ಯದೊಳರೆಗಾಣಿ ಕುಂದದಿರಲು (ಸೌಂದಪು. ೬-೨೪).

[ಅರೆ$_3$ + ಕಾಣಿ$_1$. / **ತಮಿ.** ಅಱೈಕ್ಕಾಣಿ]

**ಅರೆಕಾರ** (ನಾ). ಒಬ್ಬರ ಭೂಮಿಯನ್ನು ಬೇಸಾಯಮಾಡಿ ಅದರಲ್ಲಿ ಅರ್ಧಪಾಲನ್ನು ತೆಗೆದುಕೊಳ್ಳುವವನು ; ವಾರಗಾರ (ಸ್ಯಾಂಡರ್).

[ಅರೆ$_3$ + -ಕಾರ (< -ಕಾಜ)]

**ಅರೆಕಾಲ್** (ನಾ). ಕಾಲುಭಾಗದಲ್ಲಿ ಅರ್ಧ; ಒಟ್ಟು ವಸ್ತುವಿನಲ್ಲಿ ಎಂಟನೆಯ ಒಂದು ಭಾಗ (ದಕ. ಶ).

[ಅರೆ$_3$ + ಕಾಲ್$_3$. / **ತಮಿ.** ಅಱೈಕ್ಕಾಲ್]

**ಅರೆಕಾಲು** 'ಅರೆಕಾಲು' ನೋ.

**ಅರೆಕಾಳ್ಗಿಟ್ಟೆ** (ನಾ). ಸೇರಿನಲ್ಲಿ ಎಂಟನೆಯ ಒಂದು ಭಾಗ; ಅರೆಪಾವು (ಸ್ಯಾಂಡರ್). [ಅರೆಕಾಲ್ + ಚಿಟ್ಟೆ]

**ಅರೆಕಾಸು** (ನಾ). ಅರ್ಧಕಾಸು ; ಕಾಸಿನಲ್ಲಿ ಅರ್ಧ : ಸ್ಥಲ ವೈಭವದ ವಸ್ತುಗಳು ಮೆರೆದಪವತಿಶಯಮಾಗುತಾ ತಾಣಮುಂ ಬಿಟ್ಟರೆಕಾಸಿಗುಂ ಸಲ್ಲಮೆನುತಮೆಲ್ಲರ್ ಬಲ್ಲರ್ (ವೆಂಕಾರಾ. ೬-೨೭-೨೦) ; ರಾವಣನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ (ಗಾದೆ). [ಅರೆ$_3$ + ಕಾಸು$_2$]

**ಅರೆಕೆಂಪು** (ನಾ). ಅರ್ಧಕೆಂಪು ಬಣ್ಣ ; ಸ್ವಲ್ಪಕೆಂಪು ; ನಸುಕೆಂಪು : ಕಂಗಳರೆಕೆಂಪಾಗೆ ಮೀಸೆಗಳು ಕೆತ್ತುತ್ತೆ (ಬಸರ. ೧೧-೪೯).

[ಅರೆ$_3$ + ಕೆಂಪು]

**ಅರೆಕೊರೆ** (ನಾ). ಅರ್ಧ ; ಅಪೂರ್ಣವಾಗಿರುವುದು : ನೆಕ್ಲುಡೋವ್ ಅವರೊಂದಿಗೆ ಅರೆಕೊರೆಯ ಅಸಂತೃಪ್ತ ಮನೋಭಾವದಿಂದ ಆಫೀಸು ಬಿಟ್ಟನು (ಪುನರು. ೨೭೨).
[ಅರೆ$_3$ + ಕೊರೆ$_4$ (< ಕೊಱೆ$_3$). / ತಮಿ. ಅಱೈಕ್ಕುಱೈ]

**ಅರೆಗಂಜಿ$_1$** (ನಾ). ಅರ್ಧಹೊಟ್ಟೆಗೆ ಸಾಲುವಷ್ಟು ಗಂಜಿ : ಧುರ ಧೀರರ್ಗರೆಗಂಜಿ ಹೇಡಿಗಳಿಗಂ ಮೃಷ್ಟಾನ್ನ (ಸೋಮೇಶ. ೬೦).
[ಅರೆ$_3$ + ಗಂಜಿ$_1$]

**ಅರೆಗಂಜಿ$_2$** (ನಾ). ಹಸ್ತದ ಹೆಬ್ಬೆರಳಿನ ನಡುವೆ ಇರುವ ರೇಖೆ ಅಥವಾ ಗೆರೆ: ಅತಿದೃಢನಿಮ್ನಸ್ನಿಗ್ಧಾಯತಲೇಖಾತ್ರಿತಯಮಾಗೆ ಕರತಲದೊಳ್ ಸನ್ನುತದಿನರೆಗಂಜಿ ಚೆಲ್ವಿಡಿದು ತೋಱೆ ಪೆರ್ವರಲೊಳಾತನುತ್ತಮ ಪುರುಷಂ (ಲೋಕೋಪ. ೧೧–೧೩) ; ಹೆಬ್ಬೆರಲಲ್ಲಿ ಅರೆಗಂಜಿಯಗಲವಾಗಿ ಎರಡು ರೇಖೆಗಳ್ ತೋಱುಹ (ಲೋಕೋಪ. ಟೀಕೆ).
[ಅರೆ$_3$ ? + ಗಂಜಿ$_1$ ?]

**ಅರೆಗಂಟು** (ನಾ). ೧. ಸಡಿಲವಾಗಿ ಕಟ್ಟಿದ ಗಂಟು. ೨. ಅರ್ಧದಿಂದ ಅತ್ತ ತುದಿಯನ್ನು ಸೇರಿಸಿ ಹಾಕಿದ ಮುಡಿಯ ಗಂಟು : ಸೀತಮ್ಮ ಅರೆಗಂಟು ಹಾಕಿಕೊಂಡು ಅಡಿಗೆ ಮನೆಗೆ ಹೋದಳು (ರೂಢಿ).
[ಅರೆ$_3$ + ಗಂಟು]

**ಅರೆಗಂದು** (ಕ್ರಿ). ಸ್ವಲ್ಪ ಬಾಡು ; ಬಣ್ಣಕೆಡು : ಕೊರಳ ತುಳಸಿಯ ದಂಡೆ ಬಾಡದು ಮುಡಿದ ಪೂಗಳರೆಗಂದವು [ಪಾಠಾಂ. ಗುಂದವು] (ಜೈಮಿಭಾ. ೧೧–೩೮). [ಅರೆ$_3$ + ಕಂದು$_1$]

**ಅರೆಗಚ್ಚು** (ಕ್ರಿ). ಅರ್ಧಕಚ್ಚು : ನಾಲಿಗೆಯನರೆಗಚ್ಚಿ ಕೆಡೆದ ಮೃಗಾಳಿ ಕೆಲವು (ತೊರರಾ. ೩–೩–೬೧) ; ಅರೆಗಚ್ಚಿದ ನಾಲಗೆ ಕಡೆವಾಯೊಳು ಸುರಿದ ಜೊಲ್ಲು ಬಿಟ್ಟ ಕಣ್ಣುಗಳ (ಕಂನವಿ. ೧೫–೧೬).
[ಅರೆ$_3$ + ಕಚ್ಚು$_1$ (< ಕಱ್ಚು$_1$)]

**ಅರೆಗಟ್ಟು$_1$** (ಕ್ರಿ). ಅರ್ಧಕಟ್ಟು ; ಸಡಿಲವಾಗಿ ಕಟ್ಟು : ಅರೆಗಟ್ಟ ತುರಿಪದಿಂ ಪರಿತರೆ ಮೇಖಲೆ ಸೋರ್ದು ಕಾಲ್ಗೆವರೆ ಮದನ ಮದೋದ್ಧುರ ಗಂಧಗಜಂ ನಿಗಳಂಬೆರಸಿರ್ಪಂತಿರ್ದು ನೋಡಿದಳ್ ಪೆಱಳೊರ್ವಳ್ (ಶಾಂತಿಪು. ೬–೧೦). [ಅರೆ$_3$ + ಕಟ್ಟು$_1$]

**ಅರೆಗಟ್ಟು$_2$** (ನಾ). ಅರ್ಧಕಟ್ಟೆ (?) : ಆಂಣಗೋಪಂಣ ಕಲಂಣನದು ಗದಕ್ಷೇತ್ರದಿಂ ತೆಂಕಲು ಅರೆಗಟ್ಟರೆಬದ ಹಳ್ಳದ ಬಡಗಣ (ಎಕ. III, ತಿರುಮ. ೨೬–೨೦ ; 1290). [ಅರೆ$_3$ + ಕಟ್ಟು$_2$]

**ಅರೆಗಟ್ಟೆ** (ನಾ). = ಅರ್ಧಕಟ್ಟೆ (?) : ಅರೆಗೆ[ಗ]ಟ್ಟೆಯ ಪೊಳಗೆಱೆಇಂ ಪಡುವಲು ಹೆಬ್ಬಳ್ಳದ ಬಡಗಣ ನೀರುವರಿಇಂ ಬಡಗಲು (ಎಕ. III, ತಿರುಮ. ೨೬–೨೫ ; 1290). [ಅರೆ$_3$ + ಕಟ್ಟೆ]

**ಅರೆಗಡಿ** (ಕ್ರಿ). ೧. ಅರ್ಧಕ್ಕೆ ಕತ್ತರಿಸು; ಮಧ್ಯಕ್ಕೆ ಸರಿಯಾಗಿ ತುಂಡು ಮಾಡು : ಒಡಲನರೆಗಡಿವುತ್ತಿರಲು ಧೃತಿ ಬಿಡದೆ . . . ಹೊಡವಡಲು (ಬಸವು. ೨೬–೩೫) ; ಬೆರಸಿ ಹೊಯ್ದಡರು ತಿವಿದರೆಚ್ಚರು ಅರೆಗಡಿದರೆತ್ತಿದ ರಿಟ್ಟೊರಸಿದರು (ಕುವ್ಯಾಭೀ. ೮–೨೬). ೨. ನಡುವೆ ಕತ್ತರಿಸಿ ಹೋಗು ; ಅರ್ಧಕ್ಕೆ ಸರಿಯಾಗಿ ತುಂಡಾಗು : ಮುಱಿದ ಬಲ್ಲೆಹದ ಅರೆಗಡಿದ ಬಿಲ್ಲುಗಳ ನೆಗ್ಗಿದ ಹರಿಗೆಯನು ಮುಕ್ಕಾದ ಕೈದುವ ತರಿಸಿ (ಕುವ್ಯಾದ್ರೋ. ೧೫–೧೮) ; ಅರೆಗಡಿದ ಹಸ್ತಗಳ ಹರಹಿನ ರಥದ ಹಂತಿಗಳ (ತೊರರಾ. ೩–೮–೩) ; ಗೋಣರೆಗಡಿದು ಪೆರ್ನರವಾಂತು ಮಿಡುಕುವ ಪ್ರಾಣದ ಶವ ಗಳೊಪ್ಪಿದುವು (ಮೋಹತ. ೪೦–೭೦) ; ಅವರ ಸಂಭಾಷಣೆ ಅರೆಗಡಿಯಿತು (ಪುನರು. ೨೪೨). [ಅರೆ$_3$ + ಕಡಿ$_1$]

**ಅರೆಗಡೆ$_1$** (ಕ್ರಿ). ಅರ್ಧಕಡೆ : ಅರೆಗಡೆದ ಮೊಸರು, ಅರೆಗಡೆದ ಮಜ್ಜಿಗೆ (ರೂಢಿ). [ಅರೆ$_3$ + ಕಡೆ$_1$]

**ಅರೆಗಡೆ$_2$** (ನಾ). ಅರ್ಧವಾಗುವಿಕೆ ; ಕಡಮೆಯಾಗುವಿಕೆ : ಸ್ವಲ್ಪ ಹೊತ್ತಿನ ಅನಂದ ಇನ್ನೂ ಅರೆಗಡೆಯಾಗಲಿಲ್ಲವೆಂದು ಕಾಣುತ್ತದೆ (ಪುನರು. ೩೨೩). [ಅರೆ$_3$ + –ಕಡೆ$_3$]

**ಅರೆಗಣ್, ಅರೆಗಣ್ಣು** (ನಾ). ಅರ್ಧತೆರೆದ ಕಣ್ಣು : ಅರೆಜೀವಮಾಗಿ ಕೈಕಾಲ್ಗಳುಡಿದರೆಗಂಗಳ ಬಿಡುವರ್ಗೆ ಲೆಕ್ಕವಿಲ್ಲ (ಚಿಬವು. ೪೯–೫೮). **ಅರೆಗಣ್ಣು** : ಅವರೆಲ್ಲಾ ಕಂಡರೆ ಅರೆಗಣ್ಣು, ವರನಂದಿ ನಿನ್ನ ಕಂಡರೆ ನಿಜಗಣ್ಣು (ಹುಟ್ಟಹ. ೮೪). [ಅರೆ$_3$ + ಕಣ್]

**ಅರೆಗಣ್ಣು** ‘ಅರೆಗಣ್’ ನೋ.

**ಅರೆಗಣ್ಬೀಡು** (ನಾ). ಅರ್ಧಕಣ್ಣನ್ನು ತೆರೆದಿರುವಿಕೆ : ತೆಗಳಿಗೆವಿಡೋ ಡಲುಂ ನಾಲಗೆಗಿತ್ತರೆಬಜತ ಬಾಯುಮುಟ್ವರೆಗಣ್ಬೀಡುಗಳುಂ ತಾಱುವ ತಾಳ್ಗಳುಮ ಗುರ್ವಿಸಲ್ ಕಾಡಕೋಣನೆಯ್ದಿದುದಜಾಲಂ (ಜಗವಿ. ೧೬–೬೬). [ಅರೆಗಣ್ + ಬೀಡು$_1$]

**ಅರೆಗಣ್ಮುಗಿ** (ಕ್ರಿ). ಅರ್ಧಕಣ್ಣು ಮುಚ್ಚು : ತರವಿಡಿದೇಕಪಾದದೊಳೆ ನಿಂದರೆಗಣ್ಮುಗಿದಾತ್ಮಚಂಚುವಂ ನಿಡುಗೊರಲಿಂ ಮರಲ್ಚಿ (ರಾಜಶೇ. ೬–೯). [ಅರೆಗಣ್ + ಮುಗಿ]

**ಅರೆಗದ, ಅರೆಕದ** (ನಾ). ಅರ್ಧತೆಗೆದ ಬಾಗಿಲು ; ಓರೆ ಮಾಡಿದ ಕದ : ಅವರು ಮನೆಬಿಟ್ಟು ಹೋಗುವಾಗ ಅರೆಗದವಮಾಡಿ ಹೋದರು (ರೂಢಿ). **ಅರೆಕದ** : ಬಾಗಿಲು ಅರೆಕದ ಮಾಡಿದನು (ಪುಟ್ಟರ. ೩೧).
[ಅರೆ$_3$ + ಕದ]

**ಅರೆಗಪ್ಪು** (ನಾ). ಅರ್ಧಕಪ್ಪು ; ನಸುಗಪ್ಪು : ಹೆಣ್ಣುಮಗು, ತಂದೆ ಯಂತೆಯೇ ಅರೆಗಪ್ಪಾಗಿದ್ದು ಅರೋಗ್ಯವಾಗಿ ಹುಟ್ಟಿ ಬೆಳೆಯಿತು (ಒಡ್ಡಿಉ. ೩೨). [ಅರೆ$_3$ + ಕಪ್ಪು$_4$ (< ಕರ್ಪು$_1$)]

**ಅರೆಗರಿ** (ಕ್ರಿ). ಅರ್ಧಸೀಯು ; ಅರ್ಧಸುಡು : ಪರಮತದತ್ತ ಪೊಕ್ಕಱಿ ವನೊಕ್ಕು ವಿಶುದ್ಧತಪೋಗ್ನಿಯಿಂದೆ ಬೆಂದರೆಗರಿದಿರ್ದಲಾಗಿ ಕಡುವೆಂ ದೊಡೆ ಬೂದಿಯುಮಾಗಿ (ಜೀವಸಂ. ೨೨೦–೧೮). [ಅರೆ$_3$ + ಕರಿ$_1$]

**ಅರೆಗರಿಂಕುವೋಗು** (ಕ್ರಿ). ಅರ್ಧಸೀದುಹೋಗು ; ಅರ್ಧಸುಟ್ಟು ಹೋಗು : ಅರೆಗರಿಂಕುವೋದ ಚಮರಿಗಳನನುಕರಿಸಿ ಕೊರಗಿ ಪರಿದ ಶೀತಳಿಕೆಗಳ ಬಳಗಮುಂ (ವರ್ಧಪು. ೫–೬೩ ವ).
[ಅರೆ$_3$ + ಕರಿಂಕು + ಪೋಗು$_1$]

**ಅರೆಗಲ್** (ನಾ). ಅರೆಯುವ ಕಲ್ಲು ; ಅಸಿಕಲ್ಲು ; ಮಸೆಕಲ್ಲು : ಸರಲಂ ಮುಂಗೈಯ ಬಲ್ಲಡ್ಡಿನೊಳೆ ಮಸೆಯುತುಂ ನೀಡುಮೆತ್ತಿರ್ದರ್ಗಿನ್ನರೆಗ ಲ್ಲೊಳ್ ಪಾಂಸುವಂ ಪುಟ್ಟಿಪ ತನುವಿನ ರೌದ್ರಾಸ್ಯದಿಂದರ್ಬಿಸುತ್ತುಂಬರೆ . . . ಎಟ್ಟುಂದಂ ಪುಳಿಂದಾಗ್ರಣಿ (ಕುಸುಮಾ. ೧೪–೩೩).
[ಅರೆ$_1$ + ಕಲ್ಲು (< ಕಲ್$_2$). / ತಮಿ. ಅರೈಕ್ಕಲ್]

**ಅರೆಗಲ್ಲು** ‘ಅಱೆಗಲ್’ ನೋ.

**ಅರೆಗವಚ** (ನಾ). ಅರ್ಧಕವಚ : ನಾನಂತೂ ಇಂಗ್ಲೀಷಿನವರಂತೆ ಅಸಭ್ಯ ಅರೆಗವಚವನ್ನೂ ಅಸಂಗತ ಗರಿಟೋಪಿಯನ್ನೂ ಹಾಕಿಕೊಂಡಿಲ್ಲ (ನಿಬಂಧ. II, ೧೬೧). [ಅರೆ$_3$ + ಕವಚ]

**ಅರೆಗವಡಿಕೆ** (ನಾ). ಕವಡೆಯ ಅರ್ಧ ; ಅರ್ಧಕವಡೆ : ಸಿರಿಗೆ ಸಿರಿ ಯುಮುಂ ಪುಲ್ಲೆ ಕೈಕೊಳ್ಳಳ್ . . . ಪಾರ್ವತಿಯಂ ತನ್ನೊಂದು ಪೆಂಪಿಂಗರೆ ಗವಡಿಕೆಯಂ ಕೊಳ್ಳಳೀವೇಟ್ಟಿಂ (ಅರ್ಧನೇ. ೩–೪).
[ಅರೆ$_3$ + ಕವಡಿಕೆ$_4$]

**ಅರೆಗಳಿಗೆ** ‘ಅರೆಗಱಿಗೆ’ ನೋ.

**ಅರೆಗತ್ತಲೆ** (ನಾ). ಅರ್ಧಕತ್ತಲೆ ; ಸ್ವಲ್ಪಕತ್ತಲೆ ; ಮಬ್ಬು : ನಸು ಗತ್ತಲೆಯರೆಗತ್ತಲೆ ಮುಸುಂಕುಗತ್ತಲೆ ಪೊದಳ್ದ ಪೆರ್ಗತ್ತಲೆ (೧೦ಕ. ೪–೬೩). [ಅರೆ$_4$ + ಕತ್ತಲೆ (< ಕಟ್ತಲೆ)]

**ಅರೆಗಟಿಗೆ,** ಅರಗಳಿಗೆ, ಅರಘಳಿಗೆ, ಅರೆಗಳಿಗೆ (ನಾ). ೧. ಒಂದು ಗಳಿಗೆಯಲ್ಲಿ ಅರ್ಧದಷ್ಟು ಕಾಲ; ಹನ್ನೆರಡು ನಿಮಿಷ: ಅಲರ್ದರೆಗಟಿಗೆಯೆ ಜಾದಿಯ ಮಲೆಪುಂ ಮಲ್ಲಿಗೆಯ ಪೊಂಕಮುಂ (ಆದಿಪು. ೧೧–೧೨೨); ಈ ನಿಜಸಂಗತಿಯಿಂ ಪೊಟ್ಟು ಪೋದುದರೆಗಟಿಗೆಯವೋಲ್ (ಮಲ್ಲಿಪು. ೪–೯೬). ೨. ಸ್ವಲ್ಪಕಾಲ; ತೀರಾ ಸ್ವಲ್ಪ ಸಮಯ: ನಾನು ಇನ್ನೊಂದು ಅರೆಗಳಿಗೆಯಲ್ಲೇ ಹಿಂತಿರುಗಿ ಬರುತ್ತೇನೆ (ರೂಢಿ). **ಅರಗಳಿಗೆ:** ೧. (ಮುಂಬಯಿ. ೪–೧೮, ೧೮೨ ಕ.). **ಅರಘಳಿಗೆ:** ೧. ಅರಘಳಿಗೆಗಿನನಾಳುವನು ಜಲಧಿಯಲಿ ಕಾಣೆನು ವೈರಿ ಸೈಂಧವನ (ಕುವ್ಯಾದ್ರೋ. ೧೪–೩೪). **ಅರೆಗಳಿಗೆ:** ೧. ನಿನ್ನ ಮೆಚ್ಚಿಸಿಕೊಡುವೆನಿನ್ನರೆಗಳಿಗೆ ಸೈರಿಸು ಮಾದ್ರಪತಿ (ಕುವ್ಯಾಕ. ೧೨–೧೯). [ಅರ್ಧ$_3$ + ಗಟಿಗೆ]

**ಅರೆಗಾಣಿ** 'ಅರೆಕಾಣಿ' ನೋ.

**ಅರೆಗಾಯ** (ನಾ). ಅರ್ಧಗಾಯ; ಸ್ವಲ್ಪಗಾಯ: ಹಾಯಿದವು ಮೃಗವಿಂಡು ಸರಳರೆಗಾಯದಲಿ (ತೊರರಾ. ೩–೩–೧೫). [ಅರ್ಧ$_3$ + ಗಾಯ]

**ಅರೆಗಾಲ** (ನಾ). (ಕರಾ) ಬೇಸಿಗೆ ಕಾಲ: ದಶಾವತಾರ ಮೇಳಗಳು ಇಲ್ಲಿ ಅರೆಗಾಲದಲ್ಲಿ ಸಂಚರಿಸುತ್ತಿರುತ್ತವೆ (ಯಕ್ಷಬ. ೧೫).
[ಅರೆ ? (< ಅಱು$_1$) + ಕಾಲ]

**ಅರೆಗಾವು**(ನಾ). ಅವಶ್ಯಕವಾದುದ್ದಕ್ಕಿಂತ ಕಡಮೆ ಕಾಯಿಸುವುದು; ಸ್ವಲ್ಪಕಾಯಿಸುವುದು: ಉಳಿದ ಹಾಲನ್ನು ಅರೆಗಾವು ಕಾಸಿ ಹೆಪ್ಪು ಹಾಕಿ ಹೆರದೇ ಹೋದ ಆ ಮೊಸರನ್ನು ಹಸುವಿನ ಮಜ್ಜಿಗೆಬೇಕೆಂದು ಕೇಳಿದವರಿಗೆಲ್ಲಾ ಕೊಟ್ಟು (ನೀತಿಚಿಂ. ೯–೨೯). [ಅರ್ಧ$_3$ + ಕಾವು]

**ಅರೆಗಾವುದ**(ನಾ). ಆರು ಮೈಲಿಗಳಷ್ಟು ದೂರ; ಎರಡು ಹರದಾರಿ: ಅರೆಗಾವುದಮುಂ ಪರಿದಂ (ಶಮುದ. ೧೨೮ ಪ್ರಯೋ); ತ್ರಿಪುರಾಂತಕನ ದೇವಾಲಯದ ಮೂಡಣ ಕಡೆಯೊಳರೆಗಾವುದದೊಳುಂಟು (ಬಸವು. ೧೦–೪); ಪುರವ ಬಿಟ್ಟರೆಗಾವುದದಲಿ ಬೀಡಿಳಿದಿರುವ ಭಂಗವನೇವೇಳ್ವೆ (ಕಂಸವಿ. ೧೫–೧). [ಅರ್ಧ$_3$ + ಗಾವುದ]

**ಅರೆಗಿರಿ** (ಕ್ರಿ). (ಹಲ್ಲುಗಳು) ಅರ್ಧಕಾಣುವಂತೆ ಬಾಯನ್ನು ತೆರೆ: ಬೆರಳ ಬಾಯ್ಗಳ ಬಿಸುಟ ಕೈದುಗಳರೆಗಿರಿದ ಹಲ್ಲುಗಳ (ಕುವ್ಯಾದ್ರೋ. ೧೮–೩೪). [ಅರ್ಧ$_3$ + ಕಿರಿ$_1$]

**ಅರೆಗುಂಡಿಗೆ**(ನಾ). ಧೈರ್ಯ ಸಾಲದ ಸ್ಥಿತಿ; ಅಂಜುಬುರುಕತನ: "ಅರೆಗುಂಡಿಗೆ – ಅಂಜುಬುರುಕತನ" (ಜಾನಕೋ. ೧೩).
[ಅರ್ಧ$_3$ + ಗುಂಡಿಗೆ]

**ಅರೆಗುಂದು** (ಕ್ರಿ). ಸ್ವಲ್ಪ ಕುಗ್ಗು; ತುಸು ಕುಗ್ಗು. [ಅರ್ಧ$_3$ + ಕುಂದು$_1$]

**ಅರೆಗುದಿ** (ಕ್ರಿ). ಅರ್ಧಕುದಿ; ಸ್ವಲ್ಪ ಕುದಿ. 'ಅರೆಗುದಿಯಿಸು' ಪರಾ. [ಅರ್ಧ$_3$ + ಕುದಿ$_1$]

**ಅರೆಗುದಿಯಿಸು** (ಕ್ರಿ). ಅರ್ಧಕುದಿಸು; ಸ್ವಲ್ಪ ಕುದಿ ಬರುವಂತೆ ಮಾಡು: ಗುಡದಿಂದೆಳ್ಳೆಣ್ಣೆಯನರೆಗುದಿಯಿಸಿ (ಲೋಕೋಪ. ೮–೪೨).
[ಅರೆಗುದಿ + –ಇಸು$_3$]

**ಅರೆಗುರಿಕೆ** (ನಾ). ೧. ಅರ್ಧಮಾತ್ರ ಆಗಿರುವುದು; ಅಪೂರ್ಣವಾಗಿರುವುದು. ೨. ಕೆಲಸವನ್ನು ಅರ್ಧಮಾತ್ರ ಪೂರೈಸುವವನು; ಅಸಂಪೂರ್ಣವಾಗಿ ಕಾರ್ಯವನ್ನು ಮಾಡುವವನು: ಯಾವ ಕೆಲಸ ಮಾಡಿದರೂ ನೀನು ಅರೆಗುರಿಕೆನಾಗಿಯೇ ಮಾಡುತ್ತೀಯೆ, ಒಂದನ್ನೂ ಪೂರೈಸುವುದಿಲ್ಲ (ರೂಢಿ). [ಅರ್ಧ$_3$ + ಕುರಿಕ$_0$]

**ಅರೆಗೆಯ್** (ಕ್ರಿ). ಅರ್ಧಮಾಡು; ಕಡಮೆಮಾಡು; ಕುಂದಿಸು: ಆಯುಗೆ ನಹುಷಂ ವಿದ್ವಿಷದಾಯುವನರೆಗೆಯ್ವನಧಿಗತನಯಂ ತನಯಂ (ಚಿಕವಿ. ೧–೮೩); ದಂದುಗವನರೆಗೆಯ್ದು ಸಂತಸವನಿಮ್ಮಡಿಪ ಬಾಂಧವ್ಯ ದೈವಕೃಪೆ (ಮಂಕುಕ. ೪೨೯). [ಅರ್ಧ$_3$ + ಗೆಯ್ (< ಕೆಯ್$_1$)]

**ಅರೆಗೆಲಸ** (ನಾ). ಅರ್ಧನಡೆದ ಕೆಲಸ; ಪೂರ್ಣವಾಗದ ಕಾರ್ಯ: ನಿಲ್ಲು ಬಹೆನುಳಿದರೆಗೆಲಸ ಪೂರೈಸಲೆಂದನು ನಗುತ ಕಲಿಭೀಮ (ಕುವ್ಯಾಆ. ೧೦–೩೩); ಅರೆಗೆಲಸದಲ್ಲಿ (ಯಾವುದನ್ನೂ) ಅರಸನಿಗೆ ತೋರಿಸಬೇಡ (ಗಾದೆ. ೬). [ಅರ್ಧ$_3$ + ಕೆಲಸ]

**ಅರೆಗೆಲಸಿ** (ನಾ). ಅರ್ಧದಲ್ಲಿಯೇ ಕೆಲಸವನ್ನು ಬಿಡುವವನು; ಕೆಲಸವು ಮುಗಿಯುವುದಕ್ಕೆ ಮುಂಚೆಯೇ ಬಿಟ್ಟುಬಿಡುವ ಸ್ವಭಾವದವನು: ಸುಕೃತದೊಳರೆಗೆಲಸಿಗಳು ನಾವೆ ನಿಮ್ಮಲಿ ಕೊಱತೆಯಿಲ್ಲೆಂದ (ಕುವ್ಯಾಗ. ೪–೩೯); ನರಪತಿಗಳೊಳು ಭಾಗ್ಯದಲಿ ಬಾಹಿರರಲಾ ನಾವಿಂದು ಸುಕೃತದೊಳರೆಗೆಲಸಿಗಳು ನಾವಲೇ (ತೊರರಾ. ೨–೨–೩೭).
[ಅರೆಗೆಲಸ + –ಇ$_2$]

**ಅರೆಗೆಱೆ** (ನಾ). ಶ್ರೇಷ್ಠವಾದ ಕೆರೆ: ಅರೆಗೆರೆ[ಱೆ]ಕೆಱೆ ಮಾವಿನ್ಮಾವೆ ನೋಡೆ ತರು ಸುರತರು ಕೊಡುವುವು ಬಂದು ಬೇಡೆ (ಶಾಂತಿಪು. ೩–೭).
[< ಅರಸು$_2$ (< ಅರಸ$_1$) + ಕೆಱೆ]

**ಅರೆಗೇಣ್** (ನಾ). ಒಂದು ಗೇಣಿನಲ್ಲಿ ಅರ್ಧ; ಅರ್ಧಗೇಣು: ಮೂಱುಂ ಮೊಟನರೆಗೇಣ್ ಸಪ್ತೋರ್ವೀವಳಯಂಬರಮುತ್ತಮತ್ತಮಿರ್ಮಡಿಯಕ್ಕುಂ (ಶಾಂತಿಪು. ೭–೮೮). [ಅರ್ಧ$_3$ + ಗೇಣ್$_1$]

**ಅರೆಗೊಡು** (ಕ್ರಿ). ಅರ್ಧಕೊಡು; ಸ್ವಲ್ಪ ನೀಡು: ಅರೆದ ಸಾಸುವೆಯ ಶುಂಠಿಯನಿಕ್ಕಿ ಪಚ್ಚರೆಮೊಸರಿನಲಿ ಮುಚ್ಚಿರೆ ನೀರ ಕದಡಿಯುದ ನೀರನರೆಗೊಟ್ಟು ನೀರೋಗರವನಿಕ್ಕಲು ಸುಗಂಧ ತಕ್ರೋದನ ಕಣಾ (ಸೂಪಶಾ. ೩–೨೩). [ಅರ್ಧ$_3$ + ಕೊಡು]

**ಅರೆಗೊಯ್** (ಕ್ರಿ). ಅರ್ಧಕೊಯ್ಯು, — ಕತ್ತರಿಸು: ತಮದಿಂದಂ ಬಿರ್ದು ಸತ್ತುದರೆಗೊಯ್ದುಂಬುದಱಿಂ ನೊಂದು ಸತ್ತುದಿಲ್ಲಱಪೋತಂ (ಯಶೋಚ. ೩–೭೫). [ಅರ್ಧ$_3$ + ಕೊಯ್]

**ಅರೆಗೊರಡು** (ನಾ). ಅರ್ಧ ಒಣಗಿದ ಕೊರಡು (?): ಅರೆಗೊರಡಿನಂತಲುಗದುಲಿಯದಲೆ ಕಂಗಳಂ ತೆರೆಯದಿರಲ್... ಪರಿಪರಿಯ ಯುಕ್ತಿಗಳೊಳೆಚ್ಚರಂಗೊಳಿಸುವೊಡುಪಾಯಗಳ ಮಾಳ್ದರೊಲಿದು (ವೆಂಕಾರಾ. ೨–೨೦–೩೨). [ಅರ್ಧ$_3$ + ಕೊರಡು$_3$ (< ಕೊಱಡು)]

**ಅರೆಗೊರತೆ,** ಅರಗೊರತೆ (ನಾ). ಅರ್ಧಕೊರತೆಯಾಗಿರುವುದು: ಆ ಆನಂದಾನುಭವ ಅರೆಗೊರತೆಯಾಗುವುದು (ಬೆಳುಮ. ೭೮). **ಅರಗೊರತೆ:** ನಿನ್ನ ಶಿರಮನ್ನೇರಿದ ಅಲ್ಪತ್ವದಿಂ ಬೆರದರಗೊರತೆಗಳಿಂದಂಡಲೆಯುತ್ತಿರುವ (ಸೌಗಂಧಿ. ೯–೨); ತನಗೆಯುದರಕಂಮಿತ್ತರದುಯರಗೊರತೆಯಾಯ್ತಿನಲ್ಕೆ (ತುರಂಗ. ೪–೧). [ಅರ್ಧ$_3$ + ಕೊರತೆ (< ಕೊಱತೆ)]

**ಅರೆಗೊಲೆ** (ನಾ). ಅರ್ಧಕೊಲೆ: ನೃಹರಿಯಸು ಪಿಂಗುವನ್ನೆಗಂ ವೀರನಾರುಂ ಕೊಲ್ಲದರೆಗೊಲೆಯನುಱೆ ಕೊಂದನು (ಚೆಬಪು. ೩೩–೨೩); ಅರೆಗೊಲೆಯು ಗಡಣಂಗಳಿಂ ನೋವ ಸಾವ ಬೇವನಿಬರಂ ಪದ್ಮಾಸನಂ ಕಂಡನು (ಚೆಬಪು. ೪೯–೩೨). [ಅರ್ಧ$_3$ + ಕೊಲೆ]

**ಅರೆಗೊಳ್** (ಕ್ರಿ). ಅರ್ಧವಾಗು; ಕಡಮೆಯಾಗು (?): ಪೊರಳ್ದು ಚಪ್ಪರಿದು ರುಧಿರವನೀಂಟಲು ತೃಪ್ತಿಯರೆಗೊಳ್ಳು [ಪಾಠಾಂ. ಪೊರಗೊಳ್ಳು]ದೆಂದು ಸುಮ್ಮನಿರೆ (ಭೈರವೇ. ೪–೧೦೪).
[ಅರ್ಧ$_3$ + ಕೊಳ್$_1$]

**ಅರೆಗೊಱೆ** (ಕ್ರಿ). ನ್ಯೂನತೆಯನ್ನುಂಟುಮಾಡು; ಅರ್ಧಂಬರ್ಧವೆನಿಸು: ಇರಿಸಿದ ಬಾಯಿನವನು ಕೊಂಬುದು ಮೇಲರೆಗೊಱೆಯದೆ ನೋಂಪುವುದು (ಅನಂಚ. ೧೫–೧೦೪). [ಅರ್ಧ$_3$ + ಕೊಱೆ$_3$]

**ಅರೆಚಡ್ಡಿ** (ನಾ). ಸಣ್ಣ ಚಡ್ಡಿ; ಹನುಮಾನ್ ಚಡ್ಡಿ; ಕಾಚಾ: ಅಲ್ಲಿ ಅರೆಚಡ್ಡಿ ಹಾಕಿಕೊಂಡಿದ್ದ ಪೈಲ್ವಾನರ ಹುಡುಗ ಲಾಗಹಾಕುತ್ತಿದ್ದ (ರೂಢಿ).
[ಅರ್ಧ$_3$ + ಚಡ್ಡಿ. / ತಮಿ. ಅರೈಚ್ಚಟ್ಟೈ]

**ಅರೆಚಣ** (ನಾ). ತೀರಾ ಸ್ವಲ್ಪಸಮಯ; ಅರೆಕ್ಷಣ: ಸುಮ್ಮನರೆಚಣ ವಿರದೆ ಪ್ರಕೃತಿ ತೊಡಗುತಿರೆ ಜನ್ಮ ಸಾಕೆನುವುದೇಂ (ಮಂಕುಕ. ೨೭೨); ಬಾಗಿ ತೂಗಿ ಬೇಡುವೆವು ನಿನಗೆ ಅರೆಚಣವು ಕೂಡ ನೋಡು (ಅರಳು.೨೪೩). [ಅರೆ$_3$ + ಚಣ$_2$]

**ಅರೆಜಾವ** (ನಾ). ಒಂದು ಜಾವದಲ್ಲಿ ಅರ್ಧ; ಮೂರುಮುಕ್ಕಾಲು ಗಳಿಗೆಯಷ್ಟು ಕಾಲ; ಒಂದೂವರೆಗಂಟೆಯಷ್ಟು ಕಾಲ; ಸ್ವಲ್ಪ ಕಾಲ: ಇರುಳರೆಜಾವಮಾದಾಗಳ್ ಭಟ್ಟರಿರ್ದೆಡೆಯನಜಸುತ್ತುಂ ಬಂದು (ಪಂಚತಂ. ೨೩೦–೧೦); ಇರ್ತಿಂಗಳನೋದಿದಂ, ಅರೆಜಾವಮಂ ನಿದ್ದೆಗೆಯ್ದಂ (ಭಾಷಾಭೂ. ೪–೭೭ ಉದಾ); ಸರಳ ಸಂಗರ ನಡೆದುದೊಂದರೆ ಜಾವಪರಿಯಂತ (ತೊರರಾ. ೬–೨೪–೧೩); ಅವಗಡದ ಬಾಣಗಳನೇಱಿ ಸಲವನಿಗೊಜಗಿದ ಮೂರ್ಛೆಯಲಿಯರೆಜಾವ ಪರಿಯಂತ (ಕೋಗಯ. ೧೦–೪೪). [ಅರೆ$_3$ + ಜಾವ]

**ಅರೆಜೀವ** (ನಾ). ಪ್ರಾಣ ಪೂರ್ತಿ ಹೋಗದೆ ಅರ್ಧವಾದ ಸ್ಥಿತಿ; ಅರ್ಧಜೀವವಾದ ಸ್ಥಿತಿ: ನೀನಾವಪರಿಯಲಿ ಮನ್ನಿಸಿದಡರೆಜೀವ ಕೌರವ ವಂಶವೇ ಸಪ್ರಾಣಿಸುವುದೆಂದು (ಕುವ್ಯಾಕ. ೫–೧೯); ಅರೆಜೀವವಾಗಿ ಕೈಕಾಲ್ಗಳುಡಿದು (ಚೆಬಪು. ೪೯–೫೮); ಕಾಲಿಗೆ ಗುಂಡು ತಗಲಿದುದರಿಂದ ಅಲ್ಲಿಯೇ ಅರೆಜೀವವಾಗಿ ಬಿದ್ದುಬಿಟ್ಟಿತು (ತೇವೋಡ. ೪೮). [ಅರೆ$_3$ + ಜೀವ]

**ಅರೆತಲೆನೋವು** 'ಅರೆದಲೆನೋವು' ನೋ.

**ಅರೆತಾರ** (ನಾ). ಒಂದು ಅಳತೆ (?): ದಿನವೊಂದಕ್ಕೆ ಅರೆತಾರದ ಮೊಸರಲ್ಲಿ (ಸೌಇಎ. ೧೯೩೨ ಉಡುಪಿ. ೨೯೦–೧೪; 1376). [ಅರೆ$_3$ ? + ತಾರ$_2$]

**ಅರೆತಿಳಿವು** (ನಾ). ೧. ಸ್ವಲ್ಪಮಾತ್ರವಾದ ಅರಿವು; ಅಲ್ಪವಾದ ತಿಳಿವು. ೨. ಅರ್ಧತಿಳಿಯಾಗಿರುವುದು: ತಮದ ಅರೆತಿಳಿವಿನಲಿ ಧರೆಯು ಮುಳುಗಿರಲು (ಏಸೀಗೀ. ೧೬–೩). [ಅರೆ$_3$ + ತಿಳಿವು]

**ಅರೆತುಂಬು** (ಕ್ರಿ). ಅರ್ಧತುಂಬು: ತುಂಬಿದ ಕೊಡ ನೋಡು ತುಳುಕದು ತುಳುಕುವುದರೆತುಂಬಿದಂತಹ ಕೊಡ (ಇಂಚಾಪ. ೧೪೫–೧೪). [ಅರೆ$_3$ + ತುಂಬು$_1$]

**ಅರೆತೆಱಿ** 'ಅರೆದೆಱಿ' ನೋ.

**ಅರೆತೊಡೆಚಲ್ಲಣ** (ನಾ). ತೊಡೆಯನ್ನು ಅರ್ಧಮುಚ್ಚುವ ಚಲ್ಲಣ; ಅರೆಚಡ್ಡಿ: "ಅರ್ಧೋರುಕಂ– ಅರೆತೊಡೆಚಲ್ಲಣ, ಚಡ್ಡಿ" (ಸಿದ್ಧಾಂತಿ. ೧೭೭). [ಅರೆ$_3$ + ತೊಡೆ + ಚಲ್ಲಣ]

**ಅರೆತ್ರುಟಿ** (ನಾ). ಅರ್ಧ ತ್ರುಟಿಯಷ್ಟು ಹೊತ್ತು; ಅರ್ಧ ನಿಮಿಷದ ಕಾಲ: ಪ್ರಸಾದದ ಸೊಂಪಿಂಗೆ ಚಿತ್ತಮರೆತ್ರುಟಿಯ ತೆರಪಿಲ್ಲದೆ ದಣಿಯ ದಾಡುತ್ತಿತ್ತು (ಮಲ್ಲಚ. ೫–೮). [ಅರೆ$_3$ + ತ್ರುಟಿ]

**ಅರೆದಪ್ಪಲು** (ನಾ). ಬಂಡೆಗಳಿಂದ ಕೂಡಿದ ತಪ್ಪಲು ಪ್ರದೇಶ: ಅರೆದಪ್ಪಲುಗಳಿಂದಲೂ . . . ವಿಚಿತ್ರವರ್ಣಮಾದ ಧಾತುಗಳಿಂದಲೂ ಭೂಷಿತವಾಗಿ (ಸೌಗಂಧಿ. ೪೨೮–೧೫). [ಅರೆ$_4$ (< ಅಱೆ$_4$) + ತಪ್ಪಲು]

**ಅರೆದಲೆನೋವು**, ಅರೆತಲೆನೋವು (ನಾ). ತಲೆಯ ಒಂದು ಪಾರ್ಶ್ವದಲ್ಲಿ ಮಾತ್ರ ಕಾಣುವ ನೋವು. **ಅರೆತಲೆನೋವು** (ಕ). [ಅರೆ$_3$ + ತಲೆ$_1$ + ನೋವು]

**ಅರೆದಲೆಬೇನೆ** (ನಾ). = ಅರೆದಲೆನೋವು: "ಅರ್ಧಭೇದಕವೆಂಬುದೊಂದು ಅದು ತಾನೇ ಅರೆದಲೆಬೇನೆ ಎನಿಸಿಕೊಂಬುದು" (ವೈದ್ಯಸಾ. II, ೧೩೦); ಮರಿಚಂ ಪೆಸಱಂಬಿಂತಿವನರೆದೆಳ್ಳ ಕಷಾಯದಿಂದೆ ನಸ್ಯಂಗೆಯ್ದಂಗರೆದಲೆಬೇನೆಯನದು ಸಂಹರಿಕುಂ (ಲೋಕೋಪ. ೯–೬೨). [ಅರೆ$_3$ + ತಲೆ$_1$ + ಬೇನೆ]

**ಅರೆದಿಟ್ಟಿ** (ನಾ). ೧. ಅರೆನೋಟ. ೨. ಅರ್ಧಬಿಟ್ಟ ಕಣ್ಣು: ಒಗುವ ನಯನೋದಕದಲರೆದಿಟ್ಟಿಗಳ ನೋಟದಲಪ್ಪಿ ಸತ್ಕದ ತಗಹಿನವನೀನಾಥನಾ ರಘುನಾಥಗಿಂತೆಂದ (ತೊರರಾ. ೨–೨–೩೩). [ಅರೆ$_3$ + ದಿಟ್ಟಿ]

**ಅರೆದುಱುಗು** (ಕ್ರಿ). ಅರ್ಧತುಂಬಿಕೊಂಡಿರು: ಅರೆದುಱುಗಿರ್ದ ಬಯಲ್ದಾವರೆಯೆಲೆಗೊಡೆಯಿಡುವಿನಲ್ಲಿ (ಕಾದಂಬ. ೨೮೨). [ಅರೆ$_3$ + ತುಱುಗು$_1$]

**ಅರೆದೆಱಿ**, ಅರೆತೆರೆ (ಕ್ರಿ). ಅರ್ಧತೆರೆ: ತನ್ನ ಕಣ್ಗಳರೆದೆಱೆದು ದರನಿಮಿಲಿತಲೋಚನ ಕಮಲಾಕರಮಿರ್ಪಂತೆಯಿರ್ದ (ಗದಾಯು. ೫–೪೦ ವ); ತೋಱಿಗಳ ಪುಳಿನತಳಂಗಳ ತೆಱಪುಗಳರೆದೆಱೆದು (ಕಾವ್ಯಾವ. ೨೪); ಕಣ್ಗಳನರೆದೆಱೆವುದು ನೆನೆನೆನೆದು ಕಾಂತೆಯಂ ಕಳಹಂಸಂ (ಗಿರಿಕ. ೨–೫೮); ಅರೆದೆಱಿವಬ್ಜದೊಳಿರುತಿರ್ದ ಮಱಿದುಂಬಿ ಸ್ವರಮಾಡಿ ಪೊಱಮಡುವಂತೆ (ಭರಚ. ೫–೫೭); ನಿಟಿಲಾಕ್ಷಮರೆದೆಱೆಯೆ (ಚೆಬಪು. ೪೬–೨೪). **ಅರೆತೆರೆ**: ಇಬ್ಬರೂ . . . ಅರೆತೆರೆದ ಬಾಗಿಲನ್ನು ದೂಡಿ ಒಳ ಹೊಕ್ಕರು (ಒಡ್ಡಿಉ. ೫). [ಅರೆ$_3$ + ತೆಱಿ$_1$]

**ಅರೆನಗು**, ಅರೆನಗೆ (ನಾ). ನಸುನಗೆ; ಮುಗುಳುನಗೆ: ಕೆರಳದೆ ಅರೆನಗು ಬೀರುತ್ತ (ಭಾಮಣಿ. ೩೧). **ಅರೆನಗೆ**: ಅರೆನಗೆಯ ಬಿಱುನಗೆಯ ನಗೆಗಳ ಹೊರಳಿಗಳಲಡಬಿದ್ದು (ತೊರರಾ. ೧–೧೫–೮). [ಅರೆ$_3$ + ನಗು$_2$]

**ಅರೆನಗೆ** 'ಅರೆನಗು' ನೋ.

**ಅರೆನಚ್ಚು** (ನಾ). ಅರ್ಧನಂಬಿಕೆ; ಅಪೂರ್ಣವಾದ ವಿಶ್ವಾಸ: ಮಿಕ್ಕದು ಪಾಲಿಗನ ಪಾಡು ಒಲ್ಲನವನ್ ಅರೆನಚ್ಚ (ಮಂಕುಕ. ೫೮೪). [ಅರೆ$_3$ + ನಚ್ಚು$_2$]

**ಅರೆನಿದ್ದೆ**, ಅರನಿದ್ದೆ (ನಾ). ಅರ್ಧನಿದ್ದೆ; ಅರ್ಧ ಎಚ್ಚರವಿರುವ ಸ್ಥಿತಿ; ಗಾಢವಲ್ಲದ ನಿದ್ದೆ: ಹಿಂದಿನ ದಿನದ ಅರೆನಿದ್ದೆಯ ಆಯಾಸ (ವಾತ್ಸಲ್ಯ. ೪೮). **ಅರನಿದ್ದೆ**: ಅರನಿದ್ದೆಮಾಡಿ ಒಮ್ಮೆಲೆ ಎಚ್ಚತ್ತನು (ಅನ್ನ. ೩೩೩); ಮಡದಿಯ ಎಬ್ಬಿಸಿದ್ರೆ ಅರನಿದ್ದೆ ಆದಾವು (ನಾಪದ. ೮೯). [ಅರೆ$_3$ + ನಿದ್ದೆ]

**ಅರೆನಿಮಿಷ** (ನಾ). ಅರ್ಧನಿಮಿಷ; ನಿಮಿಷದಲ್ಲಿ ಅರ್ಧ: ಇರಲು ಬಳಿಕಱುವತ್ತುಸಾವಿರ ವರುಷ ನಿಮ್ಮಯ್ಯಂಗೆ ನಮಗೊಂದರೆನಿಮಿಷವಾಯಿತು (ತೊರರಾ. ೩–೧–೪೪); ಅರೆನಿಮಿಷವಲ್ಲಿದ್ದು . . . ನಡೆತಂದ (ತೊರರಾ. ೫–೨–೯೦). [ಅರೆ$_3$ + ನಿಮಿಷ]

**ಅರೆನುಡಿ** (ನಾ). ಅರ್ಧಂಬರ್ಧದ ಮಾತು; ಅಸ್ಪಷ್ಟವಾದ ಮಾತು: ಮಾಣೆಂಬೀ ತೆಱಂಬೆತ್ತರೆನುಡಿಗಳನಾವೃತ್ತಿಗೆಯ್ಯುತ್ತೆ (ಚಿಕವಿ. ೬–೧೬೩). [ಅರೆ$_3$ + ನುಡಿ$_2$]

**ಅರೆನೂಂಕು** (ಕ್ರಿ). ಅರ್ಧತಳ್ಳು: ಕಱುವಂ ಕಾಯ್ವ ತನುಜನು ಹರಿದು ಬಂದಾಸತ್ತು ಹಸಿದಾತುರದೊಳವ್ವಾಯೆನುತ ಬಾಗಿಲ ಕದವನರೆ[ಪಾಠಾಂ. ನುಱಿ]ನೂಂಕಿ (ಬಸಪು. ೨೪–೫೪). [ಅರೆ$_3$ + ನೂಂಕು$_1$]

**ಅರೆನೆರಳು** (ನಾ). ಅರ್ಧದಷ್ಟು ನೆರಳು: ಉಪಚ್ಛಾಯೆ ಎಂದು ಕರೆಯಲ್ಪಡುವ ಅರೆನೆರಳು ಮುಚ್ಚಿದ ಸ್ವಚ್ಛತರವಾದ ಭಾಗ (ಜ್ಯೋತಿರ್ವಿ. ೮೭). [ಅರೆ$_3$ + ನೆರಳು (< ನೞಲ್$_1$)]

**ಅರೆನೆಲ** (ನಾ). ಅರ್ಧದಷ್ಟು ಭೂಮಿ: ಕಿಱಿಯ ರಾಚಮಲ್ಲಮನ್ನಿ ಬೇಡಿದೊಳರೆನೆಲನುಂ ಭಣ್ಡಾರವುಮಂ ಕೊಟ್ಟಾನೆನ್ದು ಬನ್ದು (ಎಕ. IV, ಹೆಗ್ಗಡ. ೧೧೬–೪; 930). [ಅರೆ$_3$ + ನೆಲ]

**ಅರೆನೆಲೆ**, ಅರನೆಲೆ (ನಾ). ಮುಂದುಗಡೆಯ ಸೈನ್ಯಕ್ಕೆ ಬೆಂಬಲವಾಗಿ ಹಿಂದುಗಡೆಯಿರುವ ಸೈನ್ಯ: "ಸನ್ನಯ– ಸೇನೆಯ ಹಿಂದೆ ಇದ್ದ ಅರೆನೆಲೆ" (ನಾಚಿರಾ. ಕ); ಅರೆನೆಲೆ[ಯೊಳ್ಪರ]ನೆಡೆಯೊಳ್ ದೂಷಣನುರುಮುದದಿಂ ಚೂಣಿಯೊ[ಳಗೆ] ತ್ರಿಶಿರಂ ಬರುತಾ (ಕುಮುರಾ. ೮–೪೩);

ಅರೆನೆಲೆಯ ದಳದತ್ತ ದೃಷ್ಟಿಯ ಹರಿಯಬಿಡು (ಕುವ್ಯಾಭೀ. ೨–೧೨); ಸುರಸುಭಟರಿಱಿತಕ್ಕೆ ಜೂಣ ಮುರಿದೋಡಿ ಕೂಡಿತು ಜಲಂಧರ ದೈತ್ಯ ನರೆನೆಲೆಯನು (ಚೆಬಪು. ೨೪–೧೦). **ಅರನೆಲೆ** : "ಸೇನಾವ್ಯೂಹ ರಚನೆಯಲ್ಲಿ ಅರಸನಿರಬೇಕಾದ ಸ್ಥಾನ" (ಪ್ರಭಣ್ಣ); ಅರಸುಗಳೆಂಬವರ್ಬರವರದೊಳ್ ಸೆರಗಿಂ ಪೆಱಗಿರ್ಪ್ಪ ಬುದ್ಧಿಯಿಂದರನೆಲೆಯೆಂದು ಮಾಡಿ ಪೆಱರಂ ಪೆಱರಿಂದಮೆ ಗೆಲ್ವರಲ್ಲದಿಂತಿರೆ ಪೆಱಗಾಗೆ ತನ್ನ ಬಲವನ್ಯಬಲಂ ಬೆಱಗಾಗಲೊಂದೆ ಸಿಂಧುರದೊಳೆ ಗೆಲ್ವರೇ ಪಗೆಯನಾರ್ ಸಮನಿಂತ ಸಹಾಯಶೂರನೊಳ್ (ಎಕ. XV, ಅರಸೀ. ೨೧೬–೧೩ ; 1195); ಅರನೆಲೆಯೊಳಿರ್ದು ಚಂದ್ರಾದಿತ್ಯಭೂಪಾಲನೆರಡು ದೆಸೆಯೊಳು ಗಜಾಶ್ವಾರೂಢರಪ್ಪ ಪಲವರಸುಗಳನಾಪ್ತಬಲವಂ ನೋಡಿ (ಸೋಮಚ. ೫–೪೮); ಅರನೆಲೆಯ ಸುಯಿಧಾನ ಬಾಹ್ಲಿಕ ತರಣಿಸುತ ಗುರುಸೂನು ಕೃತವರ್ಮರಿಗೆ (ಕುವ್ಯಾದ್ರೋ. ೪–೧೮); ಅರಿಭಟರು ಪವನಜನನಾನುತ ಮರಳುತುಬ್ಬರ ಬವರವನು ತಂದರನೆಲೆಗೆ ರಥಮನದಿರದೆ ಮೊಗಮಾಡಿದ ವಿಕ್ರಮ ಕೌರವನ (ಜಯುಕಾ. ೬–೫೫); ಅಪರಾಜಿತ ನೃಪಾಲಕನ ನಿಲಿಸಿ ಅರನೆಲೆಯೊಳು ವುಳಿದ ಪೆರ್ವಲವೆರಸಿ (ಸಾಳ್ವಭಾ. ೧೩–೩೮); ಗರ್ಜಿಸುವ ಸೇನಾಜಲಧಿಮಧ್ಯದೊಳ್ ಬಂದು ನಿಂದರನೆಲೆಯ ಸುಯಿದಾನಮಂ ಬಲಿದನು (ಜೈಮಿಭಾ. ೧೪–೩). ℙ 'ಅರೆನೆಲೆ' ಎಂಬುದು 'ಅರನೆಲೆ' ಶಬ್ದದ ಅಪಲಿಖಿತ. [< ಅರಸು₂ (< ಅರಸ₁) + ನೆಲೆ]

**ಅರೆನೋಟ** (ನಾ). = ಅರೆದಿಟ್ಟಿ : ತುದಿಖುರವನೂಱಿ ನವಾಯಿ ಮಿಗಲರೆನೋಟದಾಲಿಯ ಮಿಡುಕದೆ (ಕುವ್ಯಾದ್ರೋ. ೧೭–೯); ಅರೆನೋಟ ವಿದುಷಕಗೆ ನೆರೆನೋಟ ನಾಗರಿಕಗೆ (ಸರ್ವಜ್ಞ. ೧೬೩೨).
[ಅರ್ಧ₃ + ನೋಟ]

**ಅರೆಪ** (ನಾ). ಅರೆಯುವುದು ; ಅರೆತ : ಅರೆಪಂ, ಬರೆಪಂ (ಶಬ್ದಾನು. ೫೬೧ ಪ್ರಯೋ). [ಅರ್₁ + –ಪ್ಪ₂. *l* ತಮಿ. ಅರೈಪ್ಪು]

**ಅರೆಪಲ್ದೆಱೆ** (ನಾ). ಹಲ್ಲುಗಳು ಅರ್ಧ ಹೊರಗೆ ಕಾಣುವಂತೆ ಬಾಯಿ ಬಿಡು : ಅರೆಪಲ್ದೆಱೆದೋವದೆ ಕಂಡ ಕಂಡರಂ ಸ್ವೈರಣೆಗೆಟ್ಟು ಬೇಡದೆ (ಧರ್ಮಾಮೃ. ೪–೮೮). [ಅರ್ಧ₃ + ಪಲ್ + ತೆಱೆ₁]

**ಅರೆಪಾದ** (ನಾ). ಅಂಗಾಲಿನ ಅಥವಾ ಹೆಜ್ಜೆಯ ಅರ್ಧಭಾಗ : ಬಲದ ಅರೆಪಾದದಲ್ಲಿ ಊರ್ಧ್ವಮುಖನೆಂಬ ಗಣೇಶ್ವರನೆನಿಸಿರ್ಪಿರಿ ಅಯ್ಯ ಎಡದ ಅರೆಪಾದದಲ್ಲಿ ಸಚರಾಚರನೆಂಬ ಗಣೇಶ್ವರನೆನಿಸಿರ್ಪಿರಿ (ಸಿದ್ಧೇವ. ೧೮೮). [ಅರ್ಧ₃ + ಪಾದ]

**ಅರೆಪಾಲು** (ನಾ). ಅರ್ಧಭಾಗ : ಗೊಲ್ಲನ ಜಸದಲಿ ಅರೆಪಾಲೆಲ್ಲಾ ನಿನ್ನದೆ, ನಿನ್ನದೆ ಸೋದರನೆ ! (ಭಾವಗೀ. ೬೯); ಆದರೂ ಆ ಹುಟ್ಟುವಳಿಯಲ್ಲಿ ಅರೆಪಾಲು ಮಾತ್ರ ತನ್ನದಾಗಿತ್ತು (ಪುನರು. ೪೧೧). [ಅರ್ಧ₃ + ಪಾಲು₂]

**ಅರೆಪಾಲುಗಾರ** (ನಾ). ಅರ್ಧಪಾಲುಳ್ಳವನು ; ಅರ್ಧಭಾಗಕ್ಕೆ ಹಕ್ಕುದಾರ (ಕಿ). [ಅರೆಪಾಲು + –ಗಾರ (< –ಕಾಱ)]

**ಅರೆಪಾವು** (ನಾ). ಒಂದು ಬಗೆಯ ಕುಣಿತ ; ಯಕ್ಷಗಾನದಲ್ಲಿ ಸ್ತ್ರೀ ವೇಷ ಕುಣಿಯುವುದು.

**ಅರೆಪಾವಿನಾಟ** = "ಚಪ್ಪರಮಂಚದಾಟ ಎಂಬುದು ಈ ಸ್ತ್ರೀ ಪಾತ್ರದ ನರ್ತನಗಳಲ್ಲಿ ಒಂದು. ಈ ಕುಣಿತಕ್ಕೆ ಅರೆಪಾವಿನಾಟ – ಮುರಕಾಲಿನಾಟ ಎಂಬ ನಾಮಾಂತರಗಳೂ ಇವೆ" (ಪಾರ್ತಿಸು. ೩೩).
[ಅರೆ ? + ಪಾವು ?]

**ಅರೆಪುರುಷ** (ನಾ). ಅರ್ಧ ಆಳು ಪ್ರಮಾಣದ ಆಳ : ಪುತ್ತಿನಿಂ ಬಡಗಲ್ ಮೂಗಯ್ಯಿನತ್ತಲ್ ತಳರ್ದಗುಟಿಬ್ಬೊಡರೆಪುರುಷದೊಳಕ್ಕು ಮಸಿಯ ಬಣ್ಣದ ಕರ್ಪಿರಲ್ . . . ನೀರಧಾರೆಯಕ್ಕುಂ (ಅಟ್ಟಮ. ೧೧–೧೪). [ಅರ್ಧ₃ + ಪುರುಷ]

**ಅರೆಪೆರೆಯ** 'ಅರೆವೆಱೆಯ' ನೋ.

**ಅರೆಪೊರೆಕ** (ನಾ). "ಅರ್ಧವ್ಯಾಪಿಸಿದುದು" (ಪಂಪಭಾ. ಕೋಶ) ; ಆಗಳ್ ಶರದದ ಬಿಸಿಲಳುರೆ ಪೊಣ್ಮಿದ ಘರ್ಮಬಿಂದುಗಳಿಂ ನಾಂದು ಪುಚ್ಚಟಿದರೆಪೊ[ಪಾಠಾಂ. ವೊ]ರೆಕನಾದ ಕುಂಕುಮ ಪತ್ರಭಂಗದ ಕೊಱಗಿದ ನಗೆಮೊಗಂಗಳುಂ (ಆದಿಪು. ೧೧–೬೮ ವ) ; ಅಡೆವೊತ್ತದೆ ಕಿಱಿಕಿಱಿದೆನೆ ಸುಡದಿನಿಸರೆಪೊರೆಕ [ಪಾಠಾಂ. ಪೊರೆಕ]ನಾಗದೆ[ಯೆ] ಸಸಿದಂದೊಂದೆಡೆಯೊಳ ಗೊಟ್ಟಿರ್ದರಳೆಯನೊಡನಳುರ್ವಂತಳುರ್ದನನಲನರಗಿನಮನೆಯಂ (ಪಂಪಭಾ. ೨–೫). [ಅರ್ಧ₃ + ಪೊರೆ ? + –ಕ್ಕ₂]

**ಅರೆಬದ** (ನಾ). ಅರ್ಧ ಎತ್ತರವಿರುವ ಬದುವು : ಅರೆಗಟ್ಟರೆಬದ ಹಳ್ಳದ ಬಡಗಣ ಪಡುವಣ ನೀರುವರಿಇಂ ಪಡುವಲು (ಎಕ. III, ತಿರುಮ. ೨೭–೨೦ ; 1290). [ಅರ್ಧ₃ + ಬದ (< ಬದು)]

**ಅರೆಬರೆ** (ನಾ). ಪೂರ್ತಿಯಲ್ಲದಿರುವಿಕೆ ; ಅರ್ಧಂಬರ್ಧ.
**ಅರೆಬರೆಯಾಗು** = ಅರ್ಧಂಬರ್ಧವಾಗು : ಪರೀಕ್ಷೆಯೊಳಿನ್ನ ದುರ್ದೈವಕೆ ವಿಜಯವು ಅರೆಬರೆಯಾಗೆ (ಇಂಚಾಪ. ೧೯–೮೧). [ಅರ್ಧ₃ + –ಬರ್ಧ₃?]

**ಅರೆಬಳವಿ** (ನಾ). ಅರ್ಧಬೆಳವಣಿಗೆ ; ಅಪೂರ್ಣವಾದ ಬೆಳವಣಿಗೆ : ಹಣ್ಣೊಳು ಸಿಹಿ ಕಾಯೊಳು ಕಹಿ ಮರದ ರಸವದೆಂತು ಅರೆಬಳವಿಯೊಳಾನಂದವೇ ನೋವೆನಿಸುವುದಿಂತು (ಅಹಲ್ಯೆ. ೧೧೫–೪). [ಅರ್ಧ₃ + ಬಳವಿ]

**ಅರೆಬಳಿ** (ಕ್ರಿ). ಅರ್ಧಲೇಪಿಸು ; ಅರ್ಧಬಳಿ : ಎಳೆಯ ರವಿರಶ್ಮಿಗಳು ರಕ್ತೋತ್ಪಲದೊಳಗೆ ಹೊಳೆವಂತೆ ಹೊನ್ನರೆಬಳಿದ ಹಿಳುಕನೆ ಕಾಣಲಾದುದು ಭಟನ ಕಾಯದಲಿ (ಕುವ್ಯಾದ್ರೋ. ೬–೫೦) ; ಪುಲಿದೊಗಲ ಸೀಸಕವ ಕಿಗ್ಗಟ್ಟೊಲೆವ ಸುರಗಿಯ ಕಾಂಚನದೊಳರೆಬಲಿ[ಳಿ]ದ ಬಿಲ್ಲಂ ಬಿಗಿದ ತಿರುವಿನ ಬೆರಳ ಕೋಲುಗಳ (ಕುವ್ಯಾಭೀ. ೪–೧೧).
[ಅರ್ಧ₃ + ಬಳ್ಳಿ₁ (< ಬಟಿ₁)]

**ಅರೆಬಿರಿ** 'ಅರೆವಿರಿ' ನೋ.

**ಅರೆಬೆತ್ತಲೆ** (ಗು). ಅರ್ಧಬೆತ್ತಲೆಯಾದ ; ಅರ್ಧನಗ್ನವಾದ : ಉಜ್ವಲ ವರ್ಣರಂಜಿತವಾದ ಬಾಹುಯುಗ್ಮಗಳ ಆ ಅರೆಬೆತ್ತಲೆಯ ಹೆಂಗಸಿನ ಕಡೆಗೆ ಮತ್ತೊಮ್ಮೆ ನೋಡುತ್ತ . . . ತನ್ನೊಳಗೆ ತಾನು ಗೊಣಗಿಕೊಂಡನು (ಪುನರು. ೧೩೦). [ಅರ್ಧ₃ + ಬೆತ್ತಲೆ]

**ಅರೆಬೇ** (ಕ್ರಿ). ಅರ್ಧಬೇಯು ; ಅರ್ಧಬೆಂದುಹೋಗು : ಅರೆಬೆಂದುವು ತಾವರೆ ಖಗಮುರೆಬೆಂದುವು ಭೀಮಕೋಪ ಶಿಖಿ ಮುಟ್ಟೆ (ಗದಾಯು. ೭–೧೮) ; ಆ ಪುಲ್ಲು ಪೊತ್ತಿ ಪೊಗೆದುರಿದು ಮಂದುರಮಂ ಪೊತ್ತಿದೊಡಲ್ಲಿಯರೆಬೆಂದ ತುರಗಂಗಳನರಸಂ ಕಂಡು (ಪಂಚತಂ. ೧೭೯–೧೧) ; ಅರೆಬೆಂದನಂಗನಾದಂಗೆ ಪಳವಿಗೆಯಾದ (ನಂದಿಮಾ. ೨೩–೩೬). [ಅರ್ಧ₃ + ಬೇ₁]

**ಅರೆಭಾಷೆ** (ನಾ). ಚೆನ್ನಾಗಿ ಬೆಳೆಯದ ಭಾಷೆ (?) : ನೋಡಿರೆ ಪೇೞ್ವ ಮೂಱುವಱಿ[ರೆ] ಭಾಷೆಗಳಂ (ಶಾಂತಿಪು. ೧೨–೭೬) ; ಸಂಸ್ಕೃತಂ ಪ್ರಾಕೃತಮಪಭ್ರಂಶಂ ಪೈಶಾಚಿಕವೆಂಬ ಮೂಱುವರೆಭಾಷೆಗಳೊಳ್ (ಛಂದೋಂಬು. ಕಿ. ೬೭). [ಅರ್ಧ₃ + ಭಾಷೆ]

**ಅರೆಭೋಗ** (ನಾ). ಅರ್ಧಸುಖ ; ಸ್ವಲ್ಪ ಸುಖ : ಅರೆಮೆಯ್ವೆಣ್ಗರೆ ಭೋಗಮೆಲ್ಲ ಸೊಗಮುಂ ವೇಶ್ಯಾಜನಕ್ಕೀಕ್ಷಿಸಲ್ ದೊರೆಗಳ್ಗೆತ್ತಣ ನೀತಿಯೈ (ಸೋಮೇಶ. ೬೦). [ಅರ್ಧ₃ + ಭೋಗ]

**ಅರೆಮುತ್ತರು**, ಅರೆವತಲು, ಅರೆವತ್ತರು, ಅರೆವತ್ತಲು (ನಾ). ಅರ್ಧ ಮತ್ತರಿನ ಅಳತೆ : ಅರೆಮುತ್ತರು ಗದ್ದೆಯ ನೀರ್ವ್ವರಿಗಂ ಕ್ರಯವಂ ಕೊಟ್ಟು (ಸೌಇಇ. XX. ೮೨–೨೧ ; 1122). **ಅರೆವತಲು** : ೨೧ ಮಾರುಗಳೆಯಲು ಗದ್ದೆ ಅರೆವತಲು ಕೆಯೆ ದೇಪಯಂಗೆ ಸೋಮನಾಥದೇವರ ಸ್ಥಳದ ಹೆಗ್ಗಡಿಕೆಯಂ ಧಾರಾಪೂರ್ವ್ವಕವಾಗಿ ಕೊಟರು (ಎಕ. VII (೩), ಶಿಕಾರಿ. ೩೭೦–೧೨ ; 1300). **ಅರೆವತ್ತರು** : ಹರಳಕಟದ ಹಿಂದೆ ಗದೆ

ಅರೆವತ್ತರು ಆ ತೆಂಕಣ ಕೋಡಿಯಲು ಅರೆವತ್ತರು ಎರೆ (ಎಕ. XI, ದಾವಣ. ೭೧–೧೬ ; 1266). **ಅರೆವತ್ತಲು** : ಹರಿಹರ ಗಾವುಂಡನರೆವತ್ತಲು ಗದ್ದೆಯಂ ಬಿಟ್ಟರು (ಸೌಇಇ. XX, ೧೪೨–೪೧ ; 1145).
[ಅರೆ$_{6}$ + ಮತ್ತರು (< ಮತ್ತರ್)]

**ಅರೆಮುತ್ತು** (ನಾ). ಪೂರ್ಣಜ್ಞಾನವಿಲ್ಲದಿರುವಿಕೆ; ಅರ್ಧಅಮಲಿನಲ್ಲಿರುವಿಕೆ : ಆವಳು ಬಳಲಿ ಬಸವಳಿದು ಅರೆಮುತ್ತಿನಲ್ಲಿದ್ದಳು (ಪುನರು. ೩೨೫). [ಅರೆ$_{3}$ + ಮತ್ತು$_{1}$]

**ಅರೆಮನಸ್ಸು** (ನಾ). ಅರ್ಧಮನಸ್ಸು ; ಪೂರ್ಣವಾಗಿ ಇಚ್ಛೆಯಿಲ್ಲದಿರುವುದು : ಆಮೇಲೆ ವಸುಧಾ ಕೂಡ ಅರೆಮನಸ್ಸಿನಿಂದ ಹೊರಟು ನಿಂತಳು (ವಾತ್ಸಲ್ಯ. ೨೧೧). [ಅರೆ$_{3}$ + ಮನಸ್ಸು]

**ಅರೆಮುರಳು** (ಕ್ರಿ). ಅರ್ಧಹಿಂತಿರುಗು ; ಅರ್ಧಮುಚ್ಚು : ಅರೆಮುರಳು ವಾಲಿಗಳ ಹೆಗಲಲಿ ಮುರಿದ ಗೋಣಿನ ದುಱುದುಱಿಪ ನೆತ್ತರ ನಿಹಾರದ ಮೈಯ ಸಡಿಲಿದ ಕೈಯ ಬಿಲುಸರಳ ಅರಸನನು ಕಂಡಳಲಿದರು (ಕುವ್ಯಾಕ. ೧೧–೫೫). [ಅರೆ$_{3}$ + ಮರಳು$_{1}$ (< ಮರಲ್$_{1}$)]

**ಅರೆಮುರುಳ** (ನಾ). ಅರ್ಧಹುಚ್ಚ : ಅರೆಮುರುಳಗೆ ನಾಯಿ ಕಚ್ಚಿದಂತೆ (ಗಾದೆ). [ಅರೆಮುರುಳು + –ಅ$_{7}$]

**ಅರೆಮುರುಳು** (ನಾ). ಅರ್ಧಹುಚ್ಚು: ಹಿರಿಯಳ ಸ್ವಭಾವ ನಿನಗೆ ಗೊತ್ತು, ಅರೆಮುರುಳಾದವಳು ಯಾವಾಗಲೂ ಅಡಿಗೆ ಮನೆಯಲ್ಲಿ ಕೆಲಸಮಾಡುತ್ತ ಕೂಡುವಳು (ಕುಂಕುಮ. ೮೨).
[ಅರೆ$_{3}$ + ಮರುಳು (< ಮರುಳ್)]

**ಅರೆಮುರೆ, ಅರಮುರೆ** (ನಾ). ಸಂಕೋಚ ; ಮುಚ್ಚುಮರೆ : ಪರಲೋಕ ಮಾರ್ಗ ಪುರಬಟ್ಟೆಯಂತೆ ಅರೆಮುರೆಯಿಲ್ಲದೆ ಕಾಣಿಸುತಿಪ್ಪುದು (ವಿವಾಕ್ಯ. ೧೨೩–೩) ; ಅರೆಮುರೆ ಇದಕ್ಕಿಲ್ಲ ಶಾಶ್ವತವಾಕ್ಯವೆಂದು ನೆರೆ ನಂಬಿದೆ (ಮೋಕ್ಷದೀ. ೨). **ಅರಮುರೆ** : ಹರಿ ಸರ್ವೋತ್ತಮನಹುದೆಂದು ಅರೆಮುರೆ ಇಲ್ಲದಲೆ ಬಿರುದನು ವೊಹಿಸಿ (ತೀರ್ಥಮ. ೧೧೧–೧೫).
[ಅರೆ$_{3}$ + ಮರೆ$_{2}$ ?. / ತೆಲು. ಅರಮುರ]

**ಅರೆಮುರೆವು** (ನಾ). ಅರ್ಧಮರೆತುಹೋಗುವ ಸ್ಥಿತಿ ; ಅರ್ಧನೆನಪಿನ ಅವಸ್ಥೆ : ಹೀಗಾಗಿ ಅರೆಮರೆವಿನಲ್ಲೇ ಕಾಲೇಜಿಗೆ ಹೋಗುತ್ತಿದ್ದೆ (ಆಲಹೂ. ೫೪). [ಅರೆ$_{3}$ + ಮರೆವು (< ಮಱೆವು)]

**ಅರೆಮಾತ್ರಿಕೆ** (ನಾ). [ಛಂದ] ಅರ್ಧಮಾತ್ರೆಯಷ್ಟು ಬೆಲೆಯುಳ್ಳದ್ದು; ಅರ್ಧಮಾತ್ರೆಯಷ್ಟು ಕಾಲದ್ದು : ವ್ಯಂಜನಂಗಳರೆಮಾತ್ರಿಕೆಗಳ್ (ಕಾವ್ಯಾವ. ೭). [ಅರೆ$_{3}$ + ಮಾತ್ರಿಕೆ]

**ಅರೆಮಾನ,** ಅರಮಾನ, ಅರವಣ, ಅರವನ, ಅರವಾನ (ನಾ). ಅರ್ಧಅಳತೆ ಅಥವಾ ತೂಕ : ಸೋಲೆಗಳೆದ ಉಳ್ಳಿಯ ಬೇಳೆಯು ಅರೆಮಾನ ಹಸುವಿನ ಹಾಲಲ್ಲಿ . . . ಕಾಸಿ ಕೊಡಲು ವಾತ ಗುಲ್ಮ . . . ಕ್ಷಯ ಇಷ್ಟನು ಪರಿಹರಿಸುವುದು (ವೈದ್ಯಸಾ. I, ೨೯೬). **ಅರಮಾನ** : ಸಿವೆನಾಯಕಂಗೆ ಅರಮಾನಮಪ್ಪೆ ಕೂಟಿಗ್ಗೆ ಒಬ್ಬರ್ಗಳ್ಳ[ಅರಮಾನಂ] ಸೂರ್ಯಗ್ರಹಣ[ದೊ]ಳ್ಕೊಟ್ಟ ಸ್ತಿತಿ[ಯಕ್ಕು] (ಸೌಇಇ. IX–i, ೫೫–೧೧; 893) ; ಅದ್ದನ ಜೋಳ ಅರಮಾನ ಎಣ್ಣೆಯು ಕೊಂಡು (ಗಣಭಾ. ೭೬–೬). **ಅರವಣ** : ಅಂಗಡಿಗೆ ಹೋಗಿ ಅರವಣ ಎಣ್ಣೆ ತೆಗೆದುಕೊಂಡು ಬಾ (ರೂಢಿ). **ಅರವನ** : ಒಂದಡಕೆ ಎರಡೆಲೆ ಹೇಱಿಂಗರವನ ಬತ್ತ (ಎಕ. XII, ಪಾವಗ. ೫೨–೫೮ ; 1232). **ಅರವಾನ** : ಶ್ರೀ ಮರುಳೇಶ್ವರ ದೇವರಿಗೆ ಅಂಗಡಿಯಲರವಾನಂಗೊಳ್ವ ಸಟ್ಟುಗ ಭತ್ತಮುಂ (ಕಇ. II, ೧೦–೧೫ ; 1080) ; ಬೀಡಿನ ಗಾಣದಲು ಗಾಣವಾಲಿ ಎಣ್ಣೆ ಅರವಾನ ೧ (ಎಕ. XI, ಮೊಳಕಾ. ೪೧–೩೧ ; 1100) ; ಅರ[ವಾ]ನ ತುಪ್ಪ (ಸೌಇಇ. IX–i, ೩೭೬–೧೧ ; 1296). [ಅರೆ$_{3}$ + ಮಾನ]

**ಅರೆಮಾನಿಸ** 'ಅರೆಮಾನಿಸ' ನೋ.

**ಅರೆಮುಕ್ಕುಳಿಸು** (ಕ್ರಿ). ಅರ್ಧಹೊರಕ್ಕೆ ಚೆಲ್ಲು, —ಸೂಸು : ಕಳವಳವನರೆಮುಕ್ಕುಳಿಸಿದಾಲಿಗಳ . . . ಆಳಿಮನದ ಭೂಪಾಲನಿರವನು ಕಂಡನಾ ಪಾರ್ಥ (ಕುವ್ಯಾದ್ರೋ. ೧೮–೯). [ಅರೆ$_{3}$ + ಮುಕ್ಕುಳಿಸು]

**ಅರೆಮುಗಿ** (ಕ್ರಿ). ೧. ಅರ್ಧಮುಚ್ಚಿಕೊಳ್ಳು ; ಸ್ವಲ್ಪ ಮುಚ್ಚಿರು : ಅರೆಮುಗಿದಿರ್ದ ಕಣ್ಗಳು ಮಲರ್ದ ಮೊಗಂ ಕಡಿವೋದ ಕಯ್ಯುಂ (ಗದಾಯು. ೪–೫೩) ; ಅರೆಮುಗಿದಕ್ಷಿಗಳ್ ತೆಱೆದ ಚಂಚುಪುಟಂ (ಕುಸುಮಾ. ೪–೫೪) ; ಅರೆಮುಗಿದ ಲೋಚನದ ಬಳಲುವ ಕೊರಳ (ತೊರರಾ. ೩–೧೨–೪) ; ಅರೆಮುಗಿವಬ್ಜಮುಳ್ಳಲರ್ವ ಕೈರವಮಾಕುಲಿಪಾಮಧುವ್ರತಂ (ಗಿರಿಕ. ೪–೬೬). ೨. ಅರ್ಧಮಟ್ಟಿಗೆ ಪೂರೈಸು : ಚಿತ್ರಫಲಕದ ಮುಂದೆಯೂ ಅರೆಮುಗಿದ ಚಿತ್ರಗಳ ಮುಂದೆಯೂ ನಿಂತಾಗ . . . ಸ್ವಶಕ್ತಿಯ ಬಗೆಗೆ ಅಧೈರ್ಯವೂ ಅವನ ಮನಸ್ಸನ್ನಾಕ್ರಮಿಸಿತು (ಪುನರು. ೨೦). [ಅರೆ$_{3}$ + ಮುಗಿ]

**ಅರೆಮುಗಿಸು** (ಕ್ರಿ). ಅರ್ಧಪೂರೈಸು : ಯೋಚನೆಯಲ್ಲೇ ಮುಳುಗಿದ್ದ ವೆಂಕಣ್ಣ ಎರಡನೇ ಕಪ್ ಕಾಫಿಯನ್ನು ಅರೆಮುಗಿಸಿ, ಲೋಟವನ್ನು ಮೇಜಿನ ಮೇಲಿಡಲು ಹೋಗಿ ಕೈತಪ್ಪಿದ (ನಿಶಿಉ. ೫೬).
[ಅರೆಮುಗಿ + –ಇಸು$_{3}$]

**ಅರೆಮುಗುಳ್$_{1}$** (ಕ್ರಿ). ಅರ್ಧಮುಚ್ಚಿಕೊಳ್ಳು ; ಸ್ವಲ್ಪ ಮುಚ್ಚಿರು : ಯೋಗಾಭ್ಯಾಸದೊಳರೆಮುಗುಳ್ದ ರಕ್ತಾಂಭೋಜದಳವಿಳಾಸೋಪಹಾಸಿಗಳಪ್ಪ ಕಣ್ಗಳನೊತ್ತಂಬದಿಂ ತೆಱೆದು (ಪಂಪಭಾ. ೧೩–೬೩ ವ) ; ಕಂತುಶರಭೇದದ ವೇದನೆಗಳ್ಕಿದಂತೆ ಕಣ್ಣರೆಮುಗುಳ್ದಿರ್ದುವು (ಕಾದಂಪೂ. ೯೧೨); ಅರೆಮ[ಮು]ಗುಳ್ದಿರ್ದ ಕಣ್ಮಲರ್ಗ್ಗೆಳೋದುವ ಪಂಚಪದಂ (ಎಕ. II, ೧೪೩–೧೧೨ ; 1131). [ಅರೆ$_{3}$ + ಮುಗುಳ್$_{1}$]

**ಅರೆಮುಗುಳ್$_{2}$** (ನಾ). ಅರ್ಧಬಿರಿದ ಮೊಗ್ಗು : ನವ ಚಂಪಕದರೆಮುಗುಳಿದು [ಪಾಠಾಂ. ದರದಳಿತ] ತಾನೆಂಬಂದದಿಂ ಬಂಧುರಮಾದುದು (ಜಯಕಾ. ೩–೪೪). [ಅರೆ$_{3}$ + ಮುಗುಳ್$_{2}$]

**ಅರೆಮುಚ್ಚು** (ಕ್ರಿ). ಅರ್ಧಮುಚ್ಚು ; ಸ್ವಲ್ಪ ಮುಚ್ಚಿಕೊಳ್ಳು : ಅರೆಮುಚ್ಚಿ ಕಣ್ಗಳಂ ವನಕರಿ ಮೆಲ್ಲದೆ ಲಲಿತಸಲ್ಲಕೀಪಲ್ಲವಮಂ (ಕವಿರಾ. ೩–೮) ; ಧ್ಯಾನದೊಳಭವಂ ನೆಱೆದಿನಿಸಾನುಮನರೆಮುಚ್ಚಿ ಕಣ್ಗಳಂ ನಿಶ್ಚಳಿತಂ ತಾನಿರ್ದು ಮೆಱೆದು (ಪಂಪಭಾ. ೮–೧೩) ; ಕಣ್ಗಳನಿಂತರೆಮುಚ್ಚಿ ಪೀರುತುಂ (ಕುಸುಮಾ. ೫–೮೯). [ಅರೆ$_{3}$ + ಮುಚ್ಚು]

**ಅರೆಮುಚ್ಚುಗಣ್** (ನಾ). ಅರ್ಧಮುಚ್ಚಿದ ಕಣ್ಣು ; ಸ್ವಲ್ಪ ಮುಚ್ಚಿರುವ ಕಣ್ಣು : ಶೋಕದ ಕಳವಳದಲರೆಮುಚ್ಚುಗಣ್ಣಲಿ ಮತ್ತೆ ಮೈಮಱೆದ (ಕುವ್ಯಾಶ. ೧–೧೦) ; ತೂಗುವೊಡಲರೆಮುಚ್ಚುಗಂಗಳ (ಕುವ್ಯಾಕ. ೧೧–೩೦). [ಅರೆಮುಚ್ಚು + ಕಣ್]

**ಅರೆಮುಚ್ಚುಳ** (ನಾ). ಅರ್ಧಮಟ್ಟಿಗೆ ಮುಚ್ಚಿದ ಮುಚ್ಚುಳ : ಸಾರು ಉಕ್ಕಬಾರದೆಂದು ಅರೆಮುಚ್ಚುಳ ಮಾಡಿದ್ದರು (ರೂಢಿ).
[ಅರೆ$_{3}$ + ಮುಚ್ಚುಳ]

**ಅರೆಮುಸುಕು** (ನಾ). ಅರ್ಧಮುಸುಕು ; ಅರ್ಧಆವರಣ : ಅಖಿಳ ಖಳನಿಕರ . . . ವದನದರೆಮುಸುಕುಗಳಲಿದ್ದುದು (ತೊರರಾ. ೩–೭–೧೩).
[ಅರೆ$_{3}$ + ಮುಸುಕು$_{2}$ (< ಮುಸುಂಕು$_{2}$)]

**ಅರೆಮೂಕ** (ನಾ). ಅರ್ಧಮೂಕ : ಅರೆಮೂಕನಾಗಿಹೆನು ಕರೆಕರೆಯ ಪಡುತಿಹೆನು ಒರೆಯಲರಿಯೆ (ನಿವೇದ. ೫೬–೧). [ಅರೆ$_{3}$ + ಮೂಕ]

**ಅರೆಮೆಯ್, ಅರೆಮೈ** (ನಾ). ಅರ್ಧಶರೀರ ; ಶರೀರದಲ್ಲಿ ಅರ್ಧಭಾಗ : ಅಗಿಯುತ್ತಿರೆಯರೆಮೆಯ್ಯಂ ಬಗೆದನೆ ಸಸಿ ರಾಹುವಂ (ಚಕವಿ. ೧–೪೪) ; ಅರೆಮೆಯ್ ವಲ್ಮೀಕದೊಳ್ ತಾಂ ಪುದುಗಿರೆ . . . ಮೌನಿ

ತಾನಿರ್ಪ ತಾಣಂ (ಶಾಕುಂತ. ೧೦೨–೧೭೪). **ಅರೆಮೈ** : ಶಿವನರೆಮೈಯೊಳೊಂದಿರ್ದ ಸೌಖ್ಯಮಂ ಮಱೆದು ಪಾರ್ವತಿ (ಜೈಮಿಭಾ. ೧೫–೧೬); ಕಾಂತೆಗರೆಮೈಯನು ತೆತ್ತು ಬಿಡದಪ್ಪಿಕೊಂಡಿರ್ಪನೀಶ್ವರಂ (ಜೈಮಿಭಾ. ೨೮–೩).

**ಅರೆಮೆಯ್ಯಳ್** = ಅರ್ಧಶರೀರವಾದವಳು; ಅರ್ಧಾಂಗಿ; ಹೆಂಡತಿ: ಈರೇಳ್ಜಗಮನ್ನಿಕ್ಕುವದೇಂ ರಕ್ಷಿಪ್ಪುದದೇಂ ನಿನ್ನಿಂದೋ ನಿನ್ನರೆಮೆಯ್ಯಳ ಸೆಱಗಿಂದೋ ಪೇಳಭವ (ಉದ್ಭಟಕಾ. ೧–೩೨). [ಅರೆ$_3$ + ಮೆಯ್]

**ಅರೆಮೆಯ್ವೆಣ್** (ನಾ). ಅರ್ಧಾಂಗಿ; ಹೆಂಡತಿ: ಅರೆಮೆಯ್ವೆಣ್ಣರೆಭೋಗಮೆಲ್ಲ ಸೊಗಮುಂ ವೇಶ್ಯಾಜನಕ್ಕೀಕ್ಷಿಸಲ್ ದೊರೆಗಳ್ಗಿತ್ತಣ ನೀತಿಯ್ಯೆ (ಸೋಮೇಶ. ೬೦). [ಅರೆಮೆಯ್ + ಪೆಣ್]

**ಅರೆಮೇವು** (ನಾ). ಅರ್ಧಮೇವು; ಸಾಲದಷ್ಟು ಆಹಾರ; ಕಡಮೆ ಆಹಾರ: ಅರೆಮೇವಿನೊಳಿ ಕೆಂಗೆಟ್ಟ ಮಂದೆ (ಗೊಲ್ಲಭಾ. ೧೪–೪). [ಅರೆ$_3$ + ಮೇವು]

**ಅರೆಮೊರೆ** (ನಾ). = ಅರೆಮರೆ (?): ಅರವಿಂದಾನನೆ ಕೇಳು ಅರೆಮೊರೆಯಾದರೆ ಅಱಿಯದಂದದಿ ಬಂದು ಅಧರ ಮುದ್ದಾಡಿಪ (ಪುರಂದ. ೧–೨೧೮–೧); ಅರವಿಂದಾನನೆ ಕೇಳು ಅರೆಮೊರೆಯಿಲ್ಲದೆ ಅರೆಕಟ್ಟ ಎನ್ನ ಅಧರ ಮುದ್ದಿಕ್ಕಿದ (ಪುರಂದ. ೪–೧೧೦–೩). [ಅರೆ$_3$ + ಮೊರೆ ?]

**ಅರೆಮೈ** 'ಅರೆಮೆಯ್' ನೋ.

**ಅರೆಮೈವೆಣ್ಣ** (ನಾ). (ಶಿವನಂತೆ) ಅರ್ಧಶರೀರ ಹೆಣ್ಣಾದವನು: ಎಲ್ಲೆಲ್ಲಿ ನೋಡಲಹಿಕಟಕ ಕುಂಡಲಧಾರರೆಲ್ಲೆಲ್ಲಿ ನೋಡಲರೆಮೈವೆಣ್ಣರೆಸೆದಿರ್ದರಾ ಪುರದೊಳು (ಚಬಪು. ೩೦–೭). [ಅರೆಮೈ + ಪೆಣ್ + –ಅ$_7$]

**ಅರೆಯಂಗಡಿ** (ನಾ). ಚಿಲ್ಲರೆ ಅಂಗಡಿ; ಸಣ್ಣ ಅಂಗಡಿ (?): ಮತ್ತವಂಗಡಿಯರೆಯಂಗಡಿ ದೇವರಂಗಡಿ ಮಾನ್ಯದಂಗಡಿಯೆಂನದುಡಿಸುರಿಯಂ ಕೊಂಡು (ಕಇ. II, ೨೧–೨೩; 1147). [ಅರೆ$_3$ + ಅಂಗಡಿ (< ಅಂಗಾಡಿ)]

**ಅರೆಯಟ್ಟು** 'ಅಱೆಯಟ್ಟು' ನೋ.

**ಅರೆಯರೆಗಟ್ಟು** (ಕ್ರಿ). ಅರ್ಧರ್ಧವಾಗಿ ಕಟ್ಟು; ಅರ್ಧಂಬರ್ಧಕಟ್ಟು: ಇತ್ತಲೆಲಲ್ವ ಜೆಡೆಯಿಂದಿಳಿವ ಕಣ್ಣನೀರಿಂದಜತ ವಿಭೂತಿಯ ತಿಲಕದಿಂದರೆಯ [ಪಾಠಾಂ. ಅ]ರೆಗಟ್ಟುವ ಕೈಯಿಂಡೆಯಿಂ ಸಡಿಲ್ವ ರುದ್ರಾಕ್ಷೆಯ ಮಾಲೆಯಿಂ (ನಂಬಿರ. ೨–೫೪). [ಅರೆ$_3$ + ಅರೆ$_3$ + ಕಟ್ಟು$_1$]

**ಅರೆಯರೆಗೊಯ್** (ಕ್ರಿ). ಅರ್ಧರ್ಧವಾಗಿ ಕತ್ತರಿಸು; ಸಣ್ಣಸಣ್ಣ ಚೂರು ಮಾಡು: ಕಲಹದಲಿ ಮೃತ್ಯುವಿನ ಗಂಟಲಿಗಲಗ ಹೂಡಿದ ಲಯಕೃತಾಂತನ ತಲೆಯನರೆಯರೆಗೊಯ್ದು ಕಡುಹಿನ ಕಾಲಭೈರವನ (ತೊರರಾ. ೩–೭–೬). [ಅರೆ$_3$ + ಅರೆ$_3$ + ಕೊಯ್]

**ಅರೆಯಹಣ** (ನಾ). ಕೃಶವಾಗುವುದು; ಬಡವಾಗುವುದು: ವರನಿರೀಕ್ಷಣವೊಂದು ಚಿಂತೆಯದೆರಡು ಸುಯ್ಲುದು ಮೂಱು ಜ್ವರ ನಾಲ್ಕರೆಯಹಣವೈದೂಟವ ಬಿಡುವುದಾಱು . . . ಅಱು ದಶಾವಸ್ಥೆಗಳ (ಜೀವಂಚ. ೧೭–೪೭). [ಅರೆ$_3$+ ಅಹಣ]

**ಅರೆಯಳವಿ** (ನಾ). ಸ್ವಲ್ಪದೂರ; ತುಸು ದೂರ: ಬಳಿಕ ಬೀಜವರ್ಣೋಪೇತಮಾಗಿ ಪಜ್ಜಳಿಪ ಮಹಾಮಂತ್ರಗಳ ಗಳಪುವ ವೀರನನಾ ನೃಪವರನರೆಯಳವಿಯೊಳಗೆ ಕಂಡನಾಗ (ಶ್ರೀಪಾಲ. ೮–೪೦). [ಅರೆ$_3$ + ಅಳವಿ]

**ಅರೆಯಾಳತೆಱು** (ನಾ). ಒಂದು ಪ್ರದೇಶದ ಹೆಸರು (?): ಉತ್ತರಸ್ಯಾಂಧಿಶಿ ಬಾಚಿಗೊಟ್ಟೆ ಅರೆಯಾಳತೆಱು ಕೊಪಾಳಿ ಪಿಳ್ಳಿಗಾಳ್ವ ತೆಣ್ಣರುಳ್ (ಮೈಆರಿ. ೧೯೨೪; ೮೦–೯೮; 799). [?]

**ಅರೆಯಿರುಳು** (ನಾ). ಅರ್ಧರಾತ್ರಿ; ನಡುರಾತ್ರಿ: ಅರೆಯಿರುಳಿನ ಸನ್ನೆಯಾಯ್ತಾಗ (ಭರಚ. ೨೦–೧೨೪). [ಅರೆ$_3$ + ಇರುಳು (< ಇರುಳ್)]

**ಅರೆಯಿಸು** (ಕ್ರಿ). ಪುಡಿಮಾಡಿಸು; ಅರೆಯುವಂತೆ ಮಾಡು; ನಯಮಾಡಿಸು. [ಅರೆ$_1$ + –ಇಸು$_3$]

**ಅರೆಯುಗಿ** (ಕ್ರಿ). ಅರ್ಧಭಾಗವನ್ನು ಹೊರಕ್ಕೆ ತೆಗೆ: ನಿಷಂಗದಿಂದರೆಯುಗಿದಂಬನಂಜುತುಪಸಂಹರಿಪಂ ಸ್ಮರನೆಂದು ಶಂಕಿಪೆಂ (ಶಾಕುಂತ. ೮೧–೧೩೫). [ಅರೆ$_3$ + ಉಗಿ$_1$]

**ಅರೆಯುಡು** (ಕ್ರಿ). ಅರ್ಧಉಟ್ಟುಕೊಳ್ಳು: ಅರೆಯುಟ್ಟ ಸೀರೆ ನೆಲಕಲೆವ ಮೇಲುದು ಸಿರಂಬೊರೆದ ಕಮ್ಮಿಣ್ಣೆ (ಚಬಪು. ೧೯–೨೪). [ಅರೆ$_3$ + ಉಡು$_1$]

**ಅರೆಯುಣ್ಣು** (ಕ್ರಿ). ಅರ್ಧಕುಡಿ,—ಊಟಮಾಡು: ಅರರೇ ಜನನಿಯ ಮೊಲೆವಾಲರೆಯುಂಡೀ ಸಿಂಹಶಿಶುವನಿರದೊಡನಾಡಲ್ . . . ಕೇಸರಂಗಳಲೆಯೊಂದೆ ಸೆಳೆಯುತಿರ್ಪಂ ಬಲ್ಪಿಂ (ಶಾಕುಂತ. ೧೦೪–೧೭೭). [ಅರೆ$_3$ + ಉಣ್ಣು (< ಉಣ್)]

**ಅರೆಯೆಡ್ಡ** (ನಾ). ಅರ್ಧಪೆದ್ದ: ಕಡ್ಡ ಬೇಡೆಲೆ ಸ್ವಾಮಿ ನಾವರೆಯೆಡ್ಡರೆಮ್ಮೊಳು ನಿಮುಗೆನುತ ತಲೆಯೊಡ್ಡಿದರು ಪಾದದೊಳು ಶಂಕರದಾಸಿಮಯ್ಯಗಳ (ಶಂಕದಾ. ೮–೪). [ಅರೆ$_3$ + ಎಡ್ಡ$_2$]

**ಅರೆಯೆಸಳ್** (ನಾ). ಸಣ್ಣ ಎಸಳು: ಸಂದುವಿಡದಂತೆ ತರಂಗೋಳಿಸಿ ರಚಿಸಿದ ಕರ್ಣಿಕಾರದ ಪಲಗೆಗಟ್ಟನೆಡೆಯೆಡೆಯೊಳರೆಯೆಸಳ್ಗಳಂ ನೆಗಪಿ ಕೀಲಿಸಿದ ಪೊಂದಾವರೆಯ ಮೊಗ್ಗೆಗಳ ನುಣ್ಪುಗರಿಗಳಿಂ (ರಾಜಶೇ. ೧೦–೩೧ ವ). [ಅರೆ$_3$ + ಎಸಳ್ (< ಎಸೞ್)]

**ಅರೆಯೇಱು** (ನಾ). = ಅರೆಗಾಯ: ಅರೆಯೇಱಿಂ ಕುಳಿತವಸಾನಕಾಲದಿ ನರನೊರ್ವನಿಷ್ಟದೈವವನು ಸ್ಮರಿಯಿಪ ಶಾಂತರಸಕೆ ಮೆಚ್ಚಿತೆನೆ ಬಂದ ಮರುಳು ಮುಸುಱಿ ನೋಡಿದುವು (ಶ್ರೀಪಾಲ. ೮–೩೦). [ಅರೆ$_3$ + ಏಱು$_2$]

**ಅರೆಯೊಡಲ್** (ನಾ). ಅರ್ಧಶರೀರ: ಛಳಿಗಲ್ಮಗಳಿಗರೆಯೊಡಲನಿತ್ತ ಕೆಸವರವಸುರನಿಂ ತುಳಿಲ್ಗೈಸಿಕೊಂಬಾ (ನಂದಿಮಾ. ೨೧–೫೩). [ಅರೆ$_3$ + ಒಡಲ್]

**ಅರೆಯೊತ್ತು** (ಕ್ರಿ). ಅರ್ಧಅಮುಕು; ಅರ್ಧಮುಚ್ಚು: ಆಕೆಯ ನಯನಕುಮುದಾಸ್ತ್ರವತ್ತಿಲಿಡಲವನೀಶನುರದೊಳಗೊತ್ತಿ ಧಾಳಾಧೂಳಿಗೈಲರಿಯೊತ್ತಿ ನಯನಗಳೊರಗಿದಂಗನೆಯಂಕದೊಳು ಮರೆದು (ಬಜ್ಜಪು. ೩೦–೧೩). [ಅರೆ$_3$ + ಒತ್ತು$_1$]

**ಅರೆರಾಜಮಾವು** (ನಾ). ಒಂದು ಜಾತಿಯ ಮಾವಿನ ಗಿಡ: "ಮಧ್ವಾವ್ರಂ ಅರೆರಾಜಮಾವು" (ಓಷಧಿ. ೧೧೪). [< ಅರಸು$_2$ (< ಅರಸ$_1$) + ರಾಜಮಾವು]

**ಅರೆವಣ್** (ನಾ). ಅರ್ಧಪಕ್ವವಾದ ಹಣ್ಣು; ದೋರೆಹಣ್ಣು: ಬಸಂತದ ನಡು ಮನ್ಮಥಂಗೆ ನೆರಮಾದರೆವಣ್ಣಮಳಾದ ಪಣ್ ಬಸಂತದ ಕಡೆಯಾಗೆ ಸುಗ್ಗಿಯೆ ಮನೋಜನ ಕೆಯ್ಪಿಡಿಯಲ್ತೆ ಮಾಮರಂ (ಶಾಂತಿಪು. ೯–೭೫).

**ಅರೆವಣ್ಣಾಗು** = ಅರ್ಧಹಣ್ಣಾಗು: ಅರೆವಣ್ಣಾದ ಕಳವೆದೆನೆಗಱು ತ್ತರಗಿಳಿ ಪಾಱಲ್ (ಜಯಕಾ. ೧–೪೦); ಕೆಂಪಿಡಿದರೆವಣ್ ಪದ್ಮರಾಗಮೆನೆ . . . ನೇಱಿಲೆಸೆದುದು (ರಾಜಶೇ. ೨–೪೭). [ಅರೆ$_3$ + ಪಣ್]

**ಅರೆವತಲು** 'ಅರೆಮುತ್ತರು' ನೋ.

**ಅರೆವತ್ತರು** 'ಅರೆಮುತ್ತರು' ನೋ.

**ಅರೆವತ್ತಲು** 'ಅರೆಮುತ್ತರು' ನೋ.

**ಅರೆವರಿಸು** 'ಅರವರಿಸು' ನೋ.

**ಅರೆವಳ** (ನಾ). ಅರೆಯುವ ಕಾರ್ಯದಲ್ಲಿ ನಿಯುಕ್ತನಾದವನು : ಶಶಿಕಾಂತದ ಸಣ್ಣಿಗೆಯೊಳ್ಪೊರಳ್ಚಿ ಪೊಯ್ದರೆವಳರಂತೆ ಕತ್ತುರಿಯ ಘಟ್ಟಿಯನಲ್ಲಿಯ ಘಟ್ಟವಳ್ತಿಯರ್ (ಅನಂಪು. ೧-೧೦೭).
[ಅರೆ$_1$ + -ವಳ (< -ವಳ್ಳ)]

**ಅರೆವಳಿ** 'ಅಱೆವಳಿ' ನೋ.

**ಅರೆವಾಗ** (ನಾ). = ಅರ್ಧಹಾಗ : ಅಯ್ನೂಱಿನಾಲ್ವರುಂ ಅರೆವಾಗಮಂ ಕೊಟ್ಟರು (ಬೊಂಕಶಾ. ೧೯೩೪, ಹಿರೇಕೆ. ೨೨-೪೩; 7). [ಅರೆ$_3$ + ಪಾಗ]

**ಅರೆವಾಡ** (ನಾ). ಒಂದು ಪ್ರದೇಶ (?) : ಕೆಮುಳ್ಳಾರ್ ಅರೆವಾಡ (ಎಇ. XIV, ೧೯೧-೩೧ ; 725). [ಅರೆ ? + ಬಾಡ ?]

**ಅರೆವಾತು** (ನಾ). ಅಸ್ಪಷ್ಟವಾದ ಮಾತು: ಅಡಿಸುವ ತೋಳ್ ತೇರಯ್ಪ ಬಾಯ್ ತಪ್ಪಿ ಬರ್ಪರೆವಾತುಣ್ಮುವ ಕಿತ್ತುಸಿರ್ (ವರ್ಧಪು. ೪-೬೧).
[ಅರೆ$_3$ + ಮಾತು$_1$]

**ಅರೆವಾನಿಸ, ಅರೆಮಾನಿಸ** (ನಾ). ೧. ಅರ್ಧಮಾತ್ರ ಮನುಷ್ಯ; ನರಸಿಂಹ. ೨. ದಕ್ಷಬ್ರಹ್ಮ: 'ಅರೆವಾನಿಸವಗೆಯ' ಪರಾ. **ಅರೆಮಾನಿಸ** : ಬೀರದಿಂದರೆಮಾನಿಸನನಿಱಿದನಂತೆ (ಚೆಬಪು. ೪೭-೩೦).
[ಅರೆ$_3$ + ಮಾನಿಸ]

**ಅರೆವಾನಿಸವಗೆಯ** (ನಾ). ದಕ್ಷಬ್ರಹ್ಮನ ಶತ್ರು ; ವೀರಭದ್ರ : "ಅರೆವಾನಿಸವಗೆಯನೆಂದು ವೀರಭದ್ರಗೆ ಪೆಸರ್" (ಕಬ್ಬಿಕೈ. ೬); "ಬೀರನರೆವಾನಿಸವಗೆಯನೆಂದು ಸಲ್ವುದಾ ವೀರಭದ್ರನ ನಾಮಂ" (ಶಬ್ದಮಂ. ೬).
[ಅರೆವಾನಿಸ + ಪಗೆ + -ಅ$_7$]

**ಅರೆವಾನಿಸಿಕೆ** (ನಾ). ಅರ್ಧಮನುಷ್ಯನಾಗಿರುವಿಕೆ; ಅರ್ಧಮನುಷ್ಯತ್ವ ; ನರಸಿಂಹನಾಗಿರುವಿಕೆ : ಶೂದ್ರಕನ ವಿಕ್ರಮಾಡಂಬರಮಂದರೆವಾನಿಸಿಕೆಯೊಳೊಂದಿದ ನರಸಿಂಹಾಡಂಬರಕ್ಕೆ ನಸುನಗುತಿರ್ಕುಂ (ಕಾದಂಪೂ. ೧೦). [ಅರೆವಾನಿಸ + -ಇಕೆ]

**ಅರೆವಾಶಿ** 'ಅರೆವಾಸಿ' ನೋ.

**ಅರೆವಾಸಿ, ಅರೆವಾಶಿ** (ನಾ). ಅರ್ಧದಷ್ಟು ; ಅರ್ಧಪಾಲು : ಊಳಿಗಮಾನ್ಯದ ಅರೆವಾಸಿಯನ್ನೂ ಕೂಡ . . . ಸುಖದಿಂದನುಭವಿಸಿಕೊಂಡು ಬಹರು (ಎಕ. III, ಮೈಸೂರು. ೧೧೫-೪೧೫ ; 1724) ; ಬೀಡುದೇವಸ್ಥಾನದ ಅರೆವಾಸಿ ಊಳಿಗಮಾನ್ಯ ಕಮ್ಮಾರರ ತೊಟ್ಟದೆಱಿಗೆ (ಎಕ. III, ಶ್ರೀರಂಗ. ೧೦೦-೧೬೪ ; 1724) ; ನ್ಯಾಯಾಧಿಪತಿಯು ವ್ಯಾಸಂಗಕ್ಕೆ ಬೇಕಾದ ಖರ್ಚಿನ ಅರೆವಾಸಿ ಹಣವನ್ನು ತಾನು ಒದಗಿಸುವುದಾಗಿ ಹೇಳಿದನು (ದಾದಾನ. ೧೩). **ಅರೆವಾಶಿ**: ಅವರ ಸಂಸಾರ ದೊಡ್ಡದು ; ಅವರಿಗೆ ಎಂಟು ಮಕ್ಕಳು. ಅರೆವಾಶಿ ಹೆಣ್ಣು ; ಅರೆವಾಶಿ ಗಂಡು (ಬಿಟ್ಟಜೀ. ೩೭).
[ಅರೆ$_3$ + ವಾಸಿ$_3$]

**ಅರೆವಿರಿ, ಅರೆಬಿರಿ** (ಕ್ರಿ). ಅರ್ಧಬಿರಿ ; ಅರ್ಧಅರಳು : ಓರೊಂದೆಡೆಯ ಬೆಂಚೆಗಳೊಳರೆವಿರಿದ ನೀರ್ವೂಗಳ ಕಂಪಿಂಗೆ ಮಾಣದೆ ಮುಸುಱಿ ಮೊಱೆವ ಪೆಣ್ದುಂಬಿಗಳ (ಕಬ್ಬಿಕಾ. ೧೮) ; ಕಮಲಮರೆವಿರಿಯೆ ತಂಗಾಳಿ ತಲೆದೋಱಲು (ಚೆಬಪು. ೫-೩೧) ; ತರಂಗಿಣಿಯು ತಡಿಗೊಂಡು ಬೆಳೆದರೆವಿರಿದ ಸರಸಿಜದರಲ ಸರಸಪರಿಮಳಕೆ (ರಾಜಶೇ. ೨-೮ ವ) ; ನಸುನಗೆಯೊಳರೆವಿರಿದ ಮಲ್ಲಿಗೆಯನುಱೆ ಪೋಳೆವ ದಶನದೊಳ್ ಕುಂದವಂ (ಜೈಮಿಭಾ. ೬-೧೬). **ಅರೆಬಿರಿ** : ಅವಳ ಜಡೆಯಲ್ಲಿ ಅರೆಬಿರಿದ ಗುಲಾಬಿ ಹೂ ಎಲೆಸಹಿತ ಇತ್ತೋ (ರೂಪಸಂ. ೩೯). [ಅರೆ$_3$ + ಬಿರಿ$_1$]

**ಅರೆವೀರೆ** (ನಾ). ಒಂದು ಜಾತಿಯ ಕಹಿ ಹೀರೆ : ಪರಿಮರ್ದಿಸಿ ಕೈಪೆಯೆನಿಪ್ಪರೆವೀರೆಯ ಸೊರೆಯ ಕಾಯ ರಸದಿಂ ಶೃಂಗಾಂತರದೊಳ್ ತಿಂಬಿ ಬಱಿಕ್ಕಂತಿರೆ ಲೇಪಿಸೆ ಕುಡಿಸಲೊಡನೆ ನಸ್ಯಂಗೆಯ್ಕಲ್ (ಖಮುದ. ೧೩-೧೪೦). [ಅರೆ ? + ಪೀರೆ]

**ಅರೆವೀಸ, ಅರವೀಸ** (ನಾ). ಒಂದು ವೀಸದಲ್ಲಿ ಅರ್ಧ ; ಒಂದು ಹಣದ ಮೂವತ್ತೆರಡನೆಯ ಭಾಗ : ಪರಿಕಿಸದೀ ಧರ್ಮ್ಮದೊಳರಸರ ಕಾಣಿಕೆ . . . ಅರೆವೀಸಮನಳಿ[ಱಿ]ಪಿ ಕೊಣ್ಡವಂ ಚಣ್ಡಾಳಂ (ಎಇ. XXVII, ೧೫-೫೯ ; 1114). **ಅರವೀಸ** : ಸೊಪ್ಪಿಂಗೆ ಅರವೀಸ (ಸೌಇಇ. XI-ii, ೧೨೨-೧೩ ; 1072). [ಅರೆ$_3$ + ವೀಸ]

**ಅರೆವೀ[ರಲ್ವೀ]ಱು** (ನಾ). ಹೂವಿನ ಮಳೆ; ಪುಷ್ಪವೃಷ್ಟಿ: ಸುರಯಿಯ ಸೋನೆ ಸಂಪಗೆಯ ಸೂಟ್ವಱಿ ಮಲ್ಲಿಗೆವೂವಿನಚ್ಚಬೆಳ್ಸರಿ ಸುರಹೊನ್ನೆಯೊಂದೆವನಿ ಮೊಲ್ಲೆಯ ಬಲ್ಮುಗುಳಾಲಿಕೊಳ್ವಪಾದರಿಯರೆವೀ[ರಲ್ವೀ]ಱು [ಪಾಠಾಂ. ಯರಲೇಱು] ಕೇಸರದ ತಂದಲಗುಂದಲೆಯಾಗೆ ಸುತ್ತಲುಂ ಸರಿಯೆ ಸಡಿಲ್ಚಿ ಬೀಸುವುದು ತೆಂಕಣಗಾಳಿ (ಲೀಲಾವ. ೬-೧೩೪). ℙ ಈ ಶಬ್ದ 'ಅರಲ್ವೀಱು' ಎಂಬುದರ ಅಪಲಿಖಿತವಿರಬಹುದು.
[ಅರಲ್$_2$ + ಬೀಱು$_2$]

**ಅರೆವುಳಿ** 'ಅರೆಉಳಿ' ನೋ.

**ಅರೆವೆಣ್, ಅರೆವೆಣ್ಣು** (ನಾ). = ಅರ್ಧನಾರಿ : ಅರೆವೆಣ್ಣಾಕೃತಿಯಿಂ (ಬೊಂಕಶಾ. ೧೯೨೦. ಬಾಗೆವಾ. ೧೧೧-೨೩ ; 1165) ; ಅಗಡೆ ಮೃಡನಂ ಮೃಡಾನಿ ಭಯದಪ್ಪಿದಳೆಂದರೆವೆಣ್ಣೆನಿಪ್ಪನಂ (ನೇಮಿಪು. ೧೧-೧೧೧) ; ಸಮ್ಯಕ್ತಪೋನಿಷ್ಠೆಯಂ ಬಿಟ್ಟರೆವೆಣ್ಣಾಗಿರ್ದುದಂ ನೀಂ ನೆನೆ (ಜಗವಿ. ೧೮-೩೭). **ಅರೆವೆಣ್ಣು** : ಅರೆವೆಣ್ಣೆನಿಸಿ ಲೋಕಾಧಾರೆಯಾಗಿರ್ಪ ಗಿರಿರಾಜನಂದನೆ ಜಯ ಜಯ (ತ್ರಿಭುತಿ. ೧-೪) ; ಮದನನು ಶಿವನನ್ನು ಅರೆವೆಣ್ಣುಮಾಡಿ ಗೆದ್ದ ಕಥೆಯನ್ನು . . . ಬರೆಯಬಲ್ಲ (ತವನಿ. ೧೩೦).
[ಅರೆ$_3$ + ಪೆಣ್]

**ಅರೆವೆಣ** (ನಾ). ಅರ್ಧಹೆಣ ; ಬದುಕಿದ್ದರೂ ಹೆಣದಂತಿರುವವನು ; ಜೀವಚ್ಛವ : ಅರೆವೆಣನಾಗಿರೆ ಪುಣ್ಣೊಳ್ ಮಱುಗುತ್ತಿರ್ದನ್ನನೆತ್ತಿ (ದಶಕು. ೧೨-೧೦೦) ; ಅರೆವೆಣಗಳ ಕಂಡು ಬೇತಾಳಗಳಲ್ಲಿ ಕರುಣಿಸಿ ಮುಸುಕಿ ನೋಡಿದುವು (ಶ್ರೀಪಾಲ. ೮-೨೪). [ಅರೆ$_3$ + ಪೆಣ]

**ಅರೆವೆಣಂಗಾಣ್** (ಕ್ರಿ). ಅರ್ಧಹೆಣದಂತಿರುವ ಜೀವಿಯನ್ನು ಕಾಣು : ಘಾಯದಿಂ ಹೊರಳಿ ನರಳಿ ಬಾಯ್ಬುತ್ತಿ ವಿಧಿಯಂ ಬಯ್ಯುತಿರ್ಪರೆವೆಣಂಗಂಡು ಚಿತ್ತಜಪಿತಂ . . . ನಡೆತಂದನು (ಚೆಬಪು. ೩೨-೩).
[ಅರೆವೆಣ + ಕಾಣ್]

**ಅರೆವೆಣ್ಣ** (ನಾ). ಅರ್ಧಹೆಣ್ಣಾದವನು ; ಅರ್ಧನಾರೀಶ್ವರ : ಅರೆವೆಣ್ಣನೀಶಪುತ್ರೀವರಂ ಬ್ರಹ್ಮನಾಸುರದ ಜಾರಂ ಶಕ್ರಂ (ಸಿದ್ಧರಾ. ೪-೬೨) ; ಅಘಟಿನಳುರ್ಕೆಯಂ ಕಿಡಿಸಿ ಬಿಂಕಮನಟ್ಟಿಸಿಯೆನ್ನ ಕೋಲ್ಗಳಿಂ ಸದೆದರೆವೆಣ್ಣನಂ ಬಿಡದೆ ಮಾಡಿ (ಕಬ್ಬಿಕಾ. ೧೯೫) ; ಶರೀರ ಸಂಪಾದನಾರ್ಥವಾಗಿ ಆ . . . ದರ್ಪಕನನ್ನೂ ಅರೆವೆಣ್ಣನ ವರಪ್ರಸಾದಕ್ಕೆ . . . ತಪಸ್ಸಿಗಟ್ಟು ವಂತಹುದಹುದು (ಮಂತ್ರಶ. ೯೧-೭). [ಅರೆವೆಣ್ + -ಅ$_7$]

**ಅರೆವೆಣ್ಣು** 'ಅರೆವೆಣ್' ನೋ.

**ಅರೆವೆಣ್ತನ** (ನಾ). ಅರ್ಧಹೆಣ್ಣಾಗಿರುವ ಸ್ಥಿತಿ; ಅರ್ಧನಾರೀಶ್ವರತ್ವ : ಶಿವನರೆವೆಣ್ತನಂ ಹರಿಯ ಹಾದರವಬ್ಜಜನೊಲ್ದು ಲಜ್ಜೆ ಹೇಳವೆ ನನೆವಿಲ್ಲಬಲ್ಲಹನ ಶೌರ್ಯಮಂ (ಅನಂಪು. ೧-೯೧). [ಅರೆವೆಣ್ + -ತನ]

**ಅರೆವೆಣ್ಮೆಯ್ಯ** (ನಾ). ಅರ್ಧಹೆಣ್ಣಾದ ಮೈಯುಳ್ಳವನು ; ಅರ್ಧನಾರೀಶ್ವರ : ಅಲರ್ವೊಡೆಯಂಗೆ ನಡೆದಾಣಮುಮರೆವೆಣ್ಮೆಯ್ಯಂಗೆ ನೆರೆವನೆಯುಂ ದೆಸೆಯಾಣ್ಮರ್ಗೆ ಪೊಸವೀಡುಂ (ರಾಮಾಶ್ವ. ೭-೫).
[ಅರೆವೆಣ್ + ಮೆಯ್ + -ಅ$_7$]

**ಅರೆವೆಸ** (ನಾ). ಅರ್ಧಕೆಲಸ; ಅರೆಗೆಲಸ : ಅರೆವೆಸನಾಗಲಿತ್ತಪುವೆ ಪೂವಿನ ಪುತ್ತಳಿಗಳ್ಗೆ ನೋಟದಂತಿರೆ ನನೆಗಣ್ಗಳಲ್ಲಿ . . . ನಿಲುಂಬಿದ ನೀಱ ದುಂಬಿಗಳ್ (ಲೀಲಾವ. ೧೧-೬೯). [ಅರೆ$_3$ + ಬೆಸ$_1$]

**ಅರೆವೆಱೆ**, ಅರವೆಱೆ (ನಾ). ಅರ್ಧಚಂದ್ರ : "ಅರೆವೆಱೆಯೆಂದು ಅರ್ಧಚಂದ್ರಂ" (ಕಶಸಾ. ೩–೨೭) ; ಕಿವಿವರಂ ತೆಗೆದು ಸರ್ವ್ವೋದದಿಂದೆಸುವ ರಸದಾಳಿವಿಲ್ಲೋಯೆನಲ್ಕಾಗಳರೆವೆಱೆಯೊಗೆದುದು (ಪದ್ಮರಾ. ೮–೭೩) ; ಸಿತಪಕ್ಷದರೆವೆಱೆ . . . ಶೋಭಿಸುವಂ (ಜೀವಂಸಾಂ. ೭–೩). **ಅರವೆಱೆ** : ಸುರತರಂಗಿಣಿಯ ಮಧ್ಯದ ಕೆಂಜೆಡೆಗಳ ಮೇಲರವೆಱೆ ರಾರಾಜಿಸಿದುದು (ಕುರಾಸಾಂ. ೬–೮). [ಅರ್ರೆ$_3$ + ಪೆಱೆ]

**ಅರೆವೆಱೆದಲೆಯ** (ನಾ). ಅರ್ಧಚಂದ್ರನನ್ನು ಧರಿಸಿದ ತಲೆಯುಳ್ಳವನು ; ಈಶ್ವರ ; ಚಂದ್ರಮೌಳಿ : ತ್ರಿಪುರವನೆಸುವರೆವೆಱೆದಲೆಯನಂದದೊಳು (ಶ್ರೀಪಾಲ. ೧೩–೧೧೮). [ಅರೆವೆಱೆ + ತಲೆ$_1$ + –ಅ$_7$]

**ಅರೆವೆಱೆದಳೆ** (ಕ್ರಿ). ಅರ್ಧಚಂದ್ರನನ್ನು ಧರಿಸು : ಎಲ್ಲೆಲ್ಲಿ ನೋಡಲ್ಕೆ ಮೊಗ ಹತ್ತು ತೋಳಿನವರೆಲ್ಲೆಲ್ಲಿ ನೋಡಲರೆವೆಱೆದಳೆದ ಜಡೆದಲೆಯರ್ (ಜಬವು. ೩೦–೭). [ಅರೆವೆಱೆ + ತಳೆ$_1$]

**ಅರೆವೆಱೆದುಟಿ** (ನಾ). ಅರ್ಧಚಂದ್ರನಂತೆ ಮನೋಹರವಾದ ತುಟಿ : ಅರೆವೆಱೆದುಟಿಯ ಅಸಿಯಳ ತಕ್ಕೆಯೆಂದಹುದೋ (ಶತಸಾಂ. ೨೫–೪೯). [ಅರೆವೆಱೆ + ತುಟಿ]

**ಅರೆವೆಱೆಯ**, ಅರೆಪೆರೆಯ (ನಾ). ಅರ್ಧಚಂದ್ರನನ್ನು ತಲೆಯಲ್ಲಿ ಉಳ್ಳವನು ; ಶಿವ : ಅರೆವೆಱೆಯನಾನೆ ಪಶುಪತಿ ನೆರೆವೆಱೆಯಂ ತಾಳ್ದನಿಲ್ಲಿ ಬಸವನೆನಿಪ್ಪಾ ತೆಜನಂ ಪ್ರಕಟಿಸೆ (ವೃಷವಿ. ೫–೧೩). **ಅರೆಪೆರೆಯ** : ಅರೆಪೆರೆಯನಂ ಜೋ[ಬೋ]ಲ್ವ ಸಿರಿಬಾಳಮುಮನು ತಾತ್ಪರಿಯದಿಂ ಪಿಡಿದೆತ್ತಿ (ನವಮೋ. ೧೩–೨೪). [ಅರೆವೆಱೆ + –ಅ$_7$]

**ಅರೆವೊತ್ತು** (ಕ್ರಿ). ಸ್ವಲ್ಪ ಹತ್ತಿಕೊಳ್ಳು ; ಅರ್ಧಉರಿ ತಾಗು : ಪಿಡಿದು ದಿರ್ವ ಬಾಳಕಿಡಿಗ[ಳ]ನೊಡನೊಡನರೆವೊತ್ತಿ ತೊಟ್ಟ ಸನ್ನಣವುರಿಯಲ್ಕೊಡರಿಸಿದೊಡೆ (ಪಂಪಭಾ. ೧೦–೭೯) ; ಹರ ನಯನಾನಲಹತಿಯಿಂದರೆವೊತ್ತಿದ ಕುಸುಮಶರ ನಿಷಂಗೋಪಮೆಯಂ ಪರಿಭವಿಪುವು ಕಂದರ್ಪನ ಸುರುಚಿರ ಜಂಘೆಗಳ್ (ಕುಸುಮಾ. ೭–೧೩೦). [ಅರ್ರೆ$_3$ + ಪೊತ್ತು$_1$]

**ಅರೆಸಂಜೆ** (ನಾ). ಸೂರ್ಯ ಅರ್ಧಮುಳುಗಿರುವ ಸಮಯ ; ಅರ್ಧಸಂಜೆ : ಮೂಡುವ ಚಂದ್ರಬಿಂಬದಪರಾದ್ರಿಯನೈದಿದ ಭಾನುವಂಶುಗಳ್ ಕೂಡಿರಲಂದು ಕಣ್ಗೆ ಘನಶೋಭೆಯನೀವರೆಸಂಜೆಯಂತೆವೋಲ್ ನಾಡೆ ವಿರಾಜಿಪಾ ಸದವನೀಶತನೂಭವೆಗೊರ್ವಳೊಲ್ಮೆಯಿಂ ನೀಡಿ (ಉದ್ಭಟ. ೮–೪೦). [ಅರ್ರೆ$_3$ + ಸಂಜೆ]

**ಅರೆಸವೆ** (ಕ್ರಿ). ಅರ್ಧಸವೆದು ಹೋಗು : "ನಮ್ಮ ಊಟವೆ ? ಊಟವೇನೊ ತುಂಬ ಚೆನ್ನಾಗಿದೆ. ಒಂದು ವರಿಸೆಯಲ್ಲಿ ರೊಟ್ಟಿ ಮತ್ತು ಕ್ವಾಸ್ . . ." ಎಂದು ಮುದುಕಿ ಅರೆಸವೆದ ಹಲ್ಲುಗಿಂಜಿದಳು (ಪುನರು. ೨೭೯). [ಅರ್ರೆ$_3$ + ಸವೆ$_1$]

**ಅರೆಹರಿವಾಣ** (ನಾ). ಅರ್ಧಹರಿವಾಣ ; ಅರ್ಧತಟ್ಟೆಯಷ್ಟು ಪ್ರಮಾಣ : ಕತ್ತುರ್ಗ ಚೆಂನರಾಯಗೆ ಸಲುವ ಕಾಣಾಚಿ ವೊಳಗೆ ಅರೆಹರಿವಾಣ ಪ್ರಸಾದವನೂ (ಎಕ. V, ಬೇಲೂರು. ೩೧–೨ ; 1556). [ಅರ್ರೆ$_3$ + ಹರಿವಾಣ (< ಪರಿಯಣ)]

**ಅರೆಹಾನೆ** (ನಾ). ಅರ್ಧಹಾನೆ ; ಒಂದು ಅಳತೆ : ಸತ್ರದ ಬ್ರಾಹ್ಮರು ೧೨ ಕಂ ನಿತ್ಯಪಡಿ ಅರೆಹಾನೆ ೩ (ಮೈಆರಿ. ೧೯೨೪ ; ೨೦–೩ ; ?). [ಅರ್ರೆ$_3$ + ಹಾನೆ (< ಪಾನೆ)]

**ಅರೆಹುಚ್ಚ**, ಅರಹುಚ್ಚ (ನಾ). ಸ್ವಲ್ಪಮಟ್ಟಿಗೆ ಬುದ್ಧಿ ಕೆಟ್ಟವನು ; ಅರೆಮರುಳ : "ಮುತ್ಯಾಳರೇ ನೀವು ಅರೆಹುಚ್ಚರಾಗಿ ಭೂಮಿಯಲ್ಲಿ ಬಾಳಿ" ಎಂದೂ . . . ರೂಪಿಸುವಂತೆಯೇ (ರೂಪಸಂ. ೩೬). **ಅರಹುಚ್ಚ** : ಸುಮ್ಮನೆ ಕೂತರೆ ವಿಚಾರಮಾಡಿ ಮನುಷ್ಯ ಅರಹುಚ್ಚನಾಗುವ ಸಂಭವ ವಿರುತ್ತದೆ (ಕುಂಕುಮ. ೧೧). [ಅರ್ರೆ$_3$ + ಹುಚ್ಚ$_1$]

**ಅರೆಹುಲಿಸ** (ನಾ). ಅರ್ಧಹುಣಿಸೆಬೀಜ (?) : ಸರಪಣಿ ಪಿಲ್ಲಿ ಮಿಂಟಿಗೆ ಪಾದಸರ ಗೌಳಸರ ಭುಜಕೀರ್ತಿ ಮುಂತಾದ ಪರಿಪರಿಯಾಭರಣಂಗಳ ಬಿಸುಟರೊಂದರೆಹುಲಿಸಕೆ ಸರಿಗಂಡು (ಭರಚ. ೭೭–೧೨೦). [ಅರ್ರೆ$_3$ + ಪುಲಿಸ$_0$. P ← ತೆಲು. ಪುಲುಸು]

**ಅರೆಹೊಟ್ಟೆ$_1$**, ಅರಹೊಟ್ಟೆ (ನಾ). ಅರ್ಧಹೊಟ್ಟೆ ; ಹೊಟ್ಟೆಗೆ ಸಾಲದ ಸ್ಥಿತಿ : ಹಗಲಿರುಳೂ ಧನಿಗಳ ಗದ್ದೆಯಲ್ಲಿ ದುಡಿದರೆ . . . ಅರೆಹೊಟ್ಟೆಯಾದರೂ ಸಿಕ್ಕುತ್ತದೆ (ಮುಂಗಾಮು. ೩೪). **ಅರಹೊಟ್ಟೆ** : ಉಳಿದ ವೃತ್ತಿಯ ಜನರು ಕೈತುಂಬ ಹಣಗಳಿಸುತ್ತಿರುವಾಗ ಶಿಕ್ಷಕರು ಮಾತ್ರ ಹರಕು ಅಂಗಿಯನ್ನು ತೊಟ್ಟುಕೊಂಡು ಅರಹೊಟ್ಟೆಯಲ್ಲಿ ತಿರುಗಬೇಕೇನು ? (ರಂಗರೋ. ೫೪). [ಅರ್ರೆ$_3$ + ಹೊಟ್ಟೆ (< ಪೊಟ್ಟೆ)]

**ಅರೆಹೊಡೆ** (ನಾ). ಅರ್ಧಹೊರಗೆ ಕಾಣಿಸಿಕೊಳ್ಳುವ ಧಾನ್ಯದ ತೆನೆ : ಮುಗುಳುಹೊಡೆಗಳರೆಹೊಡೆ ನೆಱೆ ಮೇಲಕ್ಕೆ ನಿಗುರುವ ಹೊಡೆ ಪಸುರ್ವೊಡೆಯ ಒಗುಮಿಗೆಯಲಿ ಹಾಲುದುಂಬುದೆನೆಯ ಶಾಲಿ ಸೊಗಸನಿತ್ತುವು (ಕಂನವಿ. ೫–೬೨). [ಅರ್ರೆ$_3$ + ಹೊಡೆ$_2$ (< ಪೊಡೆ$_2$)]

**ಅರೋಕ** (ಗು). ೧. ರಂಧ್ರವಿಲ್ಲದ. ೨. ಒತ್ತಾದ ; ದಟ್ಟವಾದ. ೩. ಕಾಂತಿಯಿಲ್ಲದ ; ಕಪ್ಪಾದ. [ಸಂ.]

**ಅರೋಗ** (ಗು). ರೋಗವಿಲ್ಲದ ; ಆರೋಗ್ಯವುಳ್ಳ : ಅರೋಗನೆಂಬೊಂ ವಾತಪಿತ್ತಶ್ಲೇಷ್ಮಸನ್ನಿಪಾತಾದಿ ವ್ಯಾಧಿವಿರಹಿತ ಶರೀರನಕ್ಕುಂ (ಚಾವುಂಪು. ೫). [ಸಂ.]

**ಅರೋಗಿ** (ನಾ). ರೋಗವಿಲ್ಲದವನು ; ಆರೋಗ್ಯವಂತ. [ಸಂ. ಅರೋಗಿನ್]

**ಅರೋಚಕ** (ನಾ). ೧. ಹೊಳಪಿಲ್ಲದುದು. ೨. ರುಚಿಯನ್ನು ಹುಟ್ಟಿಸದುದು. ೩. ಬೇಸರವನ್ನುಂಟುಮಾಡುವಂಥದು ; ಸಮ್ಮತವಾಗದ್ದು : ಕಿವಿಗರೋಚಕವಾಯ್ತು ತೆಗೆಯೆಂದ (ಕುವ್ಯಾಸ. ೧೦–೨೦) ; ನಿನಗರೋಚಕವೆಮ್ಮ ಮಾತುಗಳು (ಕುವ್ಯಾಭೀ. ೧೦–೩೧). ೪. ನಾಲಗೆಗೆ ಆಹಾರ ರುಚಿಸದ ಒಂದುಬಗೆಯ ರೋಗ ; ಅರುಚಿ. ೫. ನಾಲಗೆಗೆ ಆಹಾರ ರುಚಿಸದ ರೋಗಕ್ಕೆ ಗುರಿಯಾದವನು ; ಅರುಚಿಯುಳ್ಳವನು : ನಿರತಿಶಯರಸಸಮೇತಮನರೋಚಕಂ ಮೆಚ್ಚದಂತೆ ಸೊಗಯಿಸುವುಣಿಸಂ (ಕವಿರಾ. ೩–೧೫೨). [ಸಂ.]

**ಅರೋಚಿ** (ನಾ). ವಿವೇಕಿ ; ವಿವೇಚನೆಯುಳ್ಳವನು : ಅರೋಚಿಗಳದಂತೆಗಟೆಂದಾ ಗದ್ಯಪದ್ಯಕಾವ್ಯದೊಳಿಕ್ಕರ್ (ಶಮುದ. ೬೦). [ಸಂ. ಅರೋಚಿನ್]

**ಅರೋಮಕ** (ಗು). ೧. ಕೂದಲಿಲ್ಲದ ; ರೋಮವಿಲ್ಲದ. (ನಾ). ೨. ಬಕ್ಕದಲೆಯವನು : "ಅರೋಮಕ—ಕೂದಲಿಲ್ಲದವ, (ಮೈಕೂದಲಿಲ್ಲದವ)" (ನಾನಾರ. ೧೪೪ ಟೀಕು). [ಸಂ.]

**ಅರ್ಕ$_1$** 'ಅರಕ' ನೋ.

**ಅರ್ಕ$_2$** (ನಾ). ೧. ಸೂರ್ಯ. ೨. ತಾಮ್ರ. ೩. ಲೋಹ. ೪. ಪ್ರಭೆ ; ಕಿರಣ. ೫. ಸ್ಫಟಿಕದ ಹರಳು. ೬. ಇಂದ್ರ. ೭. ಕಲ್ಪವೃಕ್ಷ. ೮. ಎಕ್ಕದ ಗಿಡ. ೯. ವೈಚಿತ್ರ್ಯ ; ಆಶ್ಚರ್ಯ. ೧೦. [ಛಂದ] ಅಕ್ಷರ ಗಣಗಳಲ್ಲಿ ಒಂದು ; ಜಗಣ (U–U). ೧೧. ಹನ್ನೆರಡು ಎಂಬ ಸಂಖ್ಯೆಗೆ ಕೊಡುವ ಸಂಕೇತ. ೧೨. ತಂಬಿಗೆ (ಗಂಗಾಮು. ೧೪). ೧೩. ಸೂರ್ಯನಾಡಿ : ಅರ್ಕನ ಅದ್ಭುತದಲ್ಲಿ ಕೆಟ್ಟರು ಹಲಬರು ತಪ್ಪುಕರಾದರು ಹಲಬರು (ಅವಚಂ. ೪೫–೧೯೨) ; "ವಾಸವಕಲ್ಪಭೂಜಪಟಿಕಾರ್ಕ ವಿಚಿತ್ರವನೇಜಮಿತ್ರಸಂಕಾಶಮಿವರ್ಕಮಕ್ಕು" (ನಾನಾರ. ೧೪) ; "ಎಕ್ಕೆಯೊಳು ಸ್ಪಟಿಕದೊಳು ದಿನಪನೊಳು ಸುರಪನೊಳು ಅರ್ಕಮಕ್ಕುಂ" (ಮಂಗರಾ. ೧೪೭–೩೯). [ಸಂ.]

**ಅರ್ಕಕರ** (ನಾ). ಸೂರ್ಯನ ಕಿರಣ : ಪುಗುಳ್ದೊಡಿರೆ ಬಿಳ್ದುದರ್ಕಕರ ಕಲ್ಪಿತ ಸಂಜ್ವರನೊಂದು ಕುಂಜರಂ (ರಾಜಶೇ. ೫–೩೯). [ಅರ್ಕ$_2$ + ಕರ$_4$]

**ಅರ್ಕಕುಳ** (ನಾ). ೧. ಸೂರ್ಯಸಮೂಹ : ಉದಯಾದ್ರೀಂದ್ರದೊಳೊಪ್ಪುವರ್ಕಕುಳಜನ್ಮಸ್ಥಾನಮೋ . . . ಎನಲ್ ಕಣ್ಗೊಪ್ಪಿ ತೋಱಲ್ ಪುರಂ (ನಂಬಿರ. ೯–೨). ೨. ಸೂರ್ಯವಂಶ. [ಅರ್ಕ$_2$ + ಕುಳ$_2$ (= ಕುಲ)]

**ಅರ್ಕಕ್ಷೀರ** (ನಾ). ಎಕ್ಕದ ಹಾಲು : ಇವಂ ಅರ್ಕಕ್ಷೀರದಲ್ಲಿ ಚೆನ್ನಾಗಿ ಮರ್ದಿಸಿ (ವಿವೈವಿ. ೪೪). [ಅರ್ಕ$_2$ + ಕ್ಷೀರ]

**ಅರ್ಕಗ್ರಾವ** (ನಾ). ಸೂರ್ಯಕಾಂತ ಶಿಲೆ : ಅರ್ಕತೇಜದಿನರ್ಕಗ್ರಾವದ ಕಾಯ್ಪೇಱುವವೋಲ್ (ಜಗವಿ. ೧೩–೪೧).
[ಸಂ. ಅರ್ಕಗ್ರಾವನ್ (ಅರ್ಕ$_2$ + ಗ್ರಾವನ್)]

**ಅರ್ಕಜ** (ನಾ). ೧. ಸೂರ್ಯನ ಮಗ. ೨. ಶನಿ. ೩. ಕರ್ಣ. ೪. ಯಮ. ೫. ಸುಗ್ರೀವ : ಕೋಟಿಯಲಿ ನಳನೀಲನರ್ಕಜ . . . ಕೋಟಿಯಲಿ ಖಳಪಡೆಯು ಹಳಚಿತು ಹತ್ತುಮುಖದಲ್ಲಿ (ತೌಶಿರಾ. ೨೧–೨೬). ೬. (?) : ಕೋಳಿಯ ಅರ್ಕಜದ ಅಜೀವನಜೀದ ಅಜುಹಿರಿಯರ ಅನುಭಾವಿಗಳ ಮಿಕ್ಕು ಭಾವಸೊಕ್ಕನುಂಡು ಕೊಕ್ಕಜನಾಯಿತ್ತು (ಅವಚಂ. ೮೨–೩೬೧). [ಸಂ.]

**ಅರ್ಕಜಾಂಬು** (ನಾ). ಯಮುನಾ ನದಿಯ ನೀರು : ತಳಿಯೆ ವಧೂಜನಂ ಮೃಗಮದೋದಕಮಂ ನೃಪನಲ್ಲಿ ನಾಂದು ಕಂಗೊಳಿಸಿದನರ್ಕಜಾಂಬು ಮುಸುಕಿರ್ದಮರೇಂದ್ರಗಜೇಂದ್ರದಂತೆ (ರಾಜಶೇ. ೧೦–೯೧).
[ಸಂ. (ಅರ್ಕಜಾ + ಅಂಬು$_3$)]

**ಅರ್ಕಜೆ** (ನಾ). ಸೂರ್ಯನ ಮಗಳು; ಯಮುನಾನದಿ.
[ಸಂ. ಅರ್ಕಜಾ]

**ಅರ್ಕದಳ** (ನಾ). ೧. ಎಕ್ಕದ ಎಲೆ. ೨. ಸೂರ್ಯಕಾಂತಿ ಗಿಡ : "ಅರ್ಕಕಾಂತಾ – ಅರ್ಕದಳ" (ಓಷಧಿ. ೬). [ಅರ್ಕ$_2$ + ದಳ$_2$]

**ಅರ್ಕಪರ್ಣ** (ನಾ). ಎಕ್ಕದ ಎಲೆ. [ಅರ್ಕ$_2$ + ಪರ್ಣ]

**ಅರ್ಕಪುಷ್ಪ** (ನಾ). ೧. ಎಕ್ಕದ ಹೂ. ೨. ಸೂರ್ಯಕಾಂತಿ ಹೂ.
[ಅರ್ಕ$_2$ + ಪುಷ್ಪ]

**ಅರ್ಕಬಂಧು** (ನಾ). ಬುದ್ಧ : ಗೌತಮಃ, ಅರ್ಕಬಂಧುಃ . . . ಬುದ್ಧದೇವರ ಹೆಸರುಗಳು (ಸಿದ್ಧಾಂತಿ. ೧೫) ; ಬುದ್ಧನು ಆದಿತ್ಯಗೋತ್ರದವನು, ಅಂದರೆ ಸೂರ್ಯವಂಶೋತ್ಪನ್ನನು ಎಂಬ ಕಾರಣ ಆತನಿಗೆ ಅರ್ಕಬಂಧು ಎಂದು ಹೆಸರಿದೆ (ವೈಶಾಖಿ. ೨೯–೬೦). [ಅರ್ಕ$_2$ + ಬಂಧು]

**ಅರ್ಕಭಕ್ತ** (ನಾ). ಒಂದು ಗಿಡ; ಸೂರ್ಯಕಾಂತಿ ಗಿಡ : "ಅರ್ಕಪತ್ರಾ = ಅರ್ಕಭಕ್ತನು" (ಓಷಧಿ. ೬). [ಸಂ.]

**ಅರ್ಕಮಂಡಲ** (ನಾ). ಸೂರ್ಯಮಂಡಲ, —ಬಿಂಬ : ಇಂದ್ರದಿಗ್ದೇವಿ ನವಾರ್ಕಮಂಡಲಮನಾಂತಿರೆ (ಜಗವಿ. ೨–೮೬).
[ಅರ್ಕ$_2$ + ಮಂಡಲ]

**ಅರ್ಕಮರೀಚಿ** (ನಾ). ೧. ಸೂರ್ಯನ ಕಿರಣ. ೨. [ಛಂದ] ಪ್ರತಿ ಪಾದದಲ್ಲೂ ೨೪ ಅಕ್ಷರಗಳಿರುವ ಒಂದು ವೃತ್ತದ ಹೆಸರು : ಅರ್ಕಮರೀಚಿ–ನಜಭಭಭಭಜರಂ ವಿಶ್ರಮಣಂ ಶೈಲದೊಳ್ (ಛಂದೋಂಬು. ೩. ೨೧೯). [ಅರ್ಕ$_2$ + ಮರೀಚಿ]

**ಅರ್ಕಮೆ** 'ಅಟ್ಕಮೆ' ನೋ.

**ಅರ್ಕಮೆವಡು** 'ಅಟ್ಕಮೆವಡು' ನೋ.

**ಅರ್ಕರೋಚಿ** (ನಾ). ಸೂರ್ಯನ ಪ್ರಕಾಶ; ಕಿರಣ : ಪ್ರವಿಷ್ಟಾರ್ಕರೋಚಿರ್ಜ್ವಲಿತಂ (ರಾಜಶೇ. ೨–೬೨).
[ಸಂ. ಅರ್ಕರೋಚಿಸ್ (ಅರ್ಕ$_2$ + ರೋಚಿಸ್)]

**ಅರ್ಕಱು** 'ಅಟ್ಕಱು' ನೋ.

**ಅರ್ಕಲ್** (ನಾ). ಕಲ್ಲುಭೂಮಿ ; ಜರುಗು ಹೆಚ್ಚಾದ ನೆಲ. 'ಅರ್ಕಲ್ ಕುಮ್ರಿ' ಪರಾ. [ಅರ್$_2$ (< ಅಱ್$_4$) + ಕಲ್$_2$]

**ಅರ್ಕಲ್‌ಕುಮ್ರಿ** (ನಾ). ಅರ್ಕಲ್ ವ್ಯವಸಾಯವನ್ನು ಮಾಡಿರುವ ಕುಮ್ರಿ (ಕಿಸಂಗ್ಲಾ. ೧೪೩). [ಅರ್ಕಲ್ ? + ಕುಮ್ರಿ]

**ಅರ್ಕಲ್‌ಸಾಗುವಳಿ** (ನಾ). ಬೆಟ್ಟಗಳಲ್ಲಿ ಕುಮರಿಗಳನ್ನು ಕಡಿದು ಮಾಡುವ ವ್ಯವಸಾಯ (ಕಿಸಂಗ್ಲಾ. ೬). [ಅರ್ಕಲ್ + ಸಾಗುವಳಿ]

**ಅರ್ಕವಾರ** (ನಾ). ಭಾನುವಾರ; ಆದಿತ್ಯವಾರ. [ಅರ್ಕ$_2$ + ವಾರ$_2$]

**ಅರ್ಕಸಾಲೆ** 'ಅಕ್ಕಸಾಲೆ' ನೋ.

**ಅರ್ಕಾಡು** 'ಅಟ್ಕಾಡು' ನೋ.

**ಅರ್ಕಾವಳಿ** (ನಾ). = ಅರ್ಕಾವೊತ್ತು (ಉಕ) : ಅಕ್ಷರಗಳ ಮುಂದೆ ಬರುವ 'ೞ' ಈ ಚಿಹ್ನೆಗೆ ಅರ್ಕಾವಳಿ ಎನ್ನುತ್ತಾರೆ (ರೂಢಿ).
[ಅರ್ + ಕಾ$_2$ + ವಳಿ ?]

**ಅರ್ಕಾವೊತ್ತು** (ನಾ). ರಕಾರದ ಉಚ್ಚಾರವನ್ನು ಸೂಚಿಸುವ ಗುರುತು (ೞ) : ಒತ್ತಕ್ಷರಗಳು, ಇಳಿದೀರ್ಘಗಳು, ಅರ್ಕಾವೊತ್ತು, ಪೂರ್ಣವಿರಾಮಗಳ ಪಕ್ಕದಲ್ಲಿ . . . ಸಮವಾಗಿ ಕಾಣುತ್ತದೆ (ಮುದ್ರಕ. ೨೬). [ಅರ್ + ಕಾ$_2$ + ಒತ್ತು$_2$ ?]

**ಅರ್ಕಾಶ್ಮ** (ನಾ). ಸೂರ್ಯಕಾಂತ ಶಿಲೆ.
[ಸಂ. ಅರ್ಕಾಶ್ಮನ್ (ಅರ್ಕ$_2$ + ಅಶ್ಮನ್)]

**ಅರ್ಕೆ** 'ಅಟ್ಕೆ' ನೋ.

**ಅರ್ಗಡ** (ನಾ). = ಅಗ್ಗಟಿ$_1$ ೧. (ಕಿ). [ಸಂ. ಅರ್ಗಲ]

**ಅರ್ಗಲ**, ಅರ್ಗಳ$_1$ (ನಾ). = ಅಗ್ಗಟಿ$_1$ ೧. **ಅರ್ಗಳ$_1$** : "ಅರ್ಗಳ – ಅಗುಟಿ" (ಶಮದ. ೨೬೪ ಪ್ರಯೋ) ; ಹೇಮಮಯಾರ್ಗಳಸ್ತಂಭದ ಸುತ್ತಿ ಕಟ್ಟಿದ ಕನಕಘಂಟೆಯ . . . ಮಂಟಪದ (ರಾಜಶೇ. ೮–೫ ವ). [ಸಂ.]

**ಅರ್ಗಲವಿಹೀನ** (ಗು). ೧. ಅಗುಳಿಯಿಲ್ಲದ ; ತಾಳಿಲ್ಲದ. ೨. ತಡೆಯಿಲ್ಲದ : ಅರ್ಗಲವಿಹೀನ ಸರ್ವಾರ್ಥ ಸಹಭಾಗಿತೆಯೆ ಅರ್ಘಾರ್ಹ ತತ್ತ್ವವೆಲೊ (ಮಂಕುಕ. ೮೬೯). [ಅರ್ಗಲ + ವಿಹೀನ]

**ಅರ್ಗಲಿಕೆ** (ನಾ). ಅಗುಳಿ ; ತಾಳು (ಕಿ). [ಸಂ. ಅರ್ಗಲಿಕಾ]

**ಅರ್ಗಳ$_1$** 'ಅರ್ಗಲ' ನೋ.

**ಅರ್ಗಳ$_2$** (ನಾ). ಶ್ರೇಷ್ಠನಾದವನು : ದುರ್ಗಮಂ ಕೊಂಡವರನಟ್ಟಿದೊಡೆ ನೀಂ ಜಗದೊಳರ್ಗಳನೆ (ಚಿಬವು. ೩೫–೧೬). [< ಅಗ್ಗಳ]

**ಅರ್ಗಳಿಸು** (ಕ್ರಿ). ಹೆಚ್ಚಾಗು ; ಹಿರಿದಾಗು : ಕಯ್ಯೊಳ್ಮುಟ್ಟಿದೊಡಿಂತರ್ಗ[ಪಾಠಾಂ. ಗ್ಗ]ಳಿಸಿ ತೋರ್ಕುಮೇ ಲಾವಣ್ಯಂ (ಕಾದಂಪೂ. ೫೧).
[ಅರ್ಗಳ$_2$ + –ಇಸು$_3$]

**ಅರ್ಘ** (ನಾ). ೧. ಬೆಲೆ; ಕ್ರಯ. ೨. ದೇವತೆಗಳಿಗೂ ಪೂಜ್ಯರಿಗೂ ಅರ್ಪಿಸುವ ಸತ್ಕಾರ; ಪೂಜಾದ್ರವ್ಯ. [ಸಂ.]

**ಅರ್ಘಕ್ಷಯ** (ನಾ). ಬೆಲೆಯಿಳಿಯುವಿಕೆ : ಏಡಂ ಪೊಕ್ಕೊಡೆ ಚಿತ್ರವೃಷ್ಟಿ ಕುರುಡಂ ಮುಂಪೊಕ್ಕೊಡರ್ಘಕ್ಷಯಂ ಸೇಡಂ ಪೊಕ್ಕೊಡೆ ಡಾವರಂ (ಅಟ್ಟಮು. ೪–೬). [ಅರ್ಘ + ಕ್ಷಯ]

**ಅರ್ಘ್ಯವಾಣಿ**, ಅಗಿಣಿ$_1$, ಅಗ್ಗಣಿ, ಅಗ್ಗವಣಿ, ಅಗ್ಗಿಣಿ, ಅಗ್ಘಣಿ, ಅಗ್ಘವಣಿ, ಅಘಣಿ (ನಾ). ಅಭಿಷೇಕಕ್ಕೆ ಉಪಯೋಗಿಸುವ ಮಡಿನೀರು ; ಶುದ್ಧೋದಕ : ಶ್ರೀಮತು ಕಲಿದೇವರ್ಗೆ ಪ್ರತಿವರ್ಷಂ ಲಕ್ಷ ಗಡುಗೆ ನಿಮಿತ್ತವಾಗಿ ಯಲ್ಲಿಯರ್ಗ್ಘ[ರ್ಘ] ವಾಣಿಯಂ ತಹರು ನಾಲ್ವರು (ಸೌಇಇ. IX–i, ೨೫೫–೧೬ ; 1148). **ಅಗಿಣಿ$_1$** (ಗಂಗಾಮು. ೪). **ಅಗ್ಗಣಿ** : ವರನದಿಗಳಗ್ಗಣಿಯಿನ್ (ಸಾನಂಚ. ೧–೬೦); ನಡೆಸಂದಾದ್ರೀಸಪ್ಪೋಗಗ್ಗಣಿಸೆನುತೆ ಬೆಸಂಬೇಳ್ವರಾಕ್ಷೇಪದಿಂದಂ (ಎಕ. VII, ಶಿವಮೊ. ೫–೧೫ ; 1218) ; ಹೊಂದಂಬಿಗೆಯಗ್ಗಣಿಯಿಂದೆ ಪಾದವ ತೊಳೆದು

(ಮೋಹತ. ೪೨–೫೧) ; ಬಂದ ಅಣ್ಣಯ್ಯಗೆ ಗಿಂಡೀಲಿ ಅಗ್ಗಣಿಯ ಕೊಟ್ಟು (ಜನಗೀ. ೭೯). **ಅಗ್ಗವಣಿ:** ಭುವರ್ಲೋಕದ ಸ್ಥಾವರಕ್ಕೆ ಸತ್ಯಲೋಕದ ಅಗ್ಗವಣಿಯಲ್ಲಿ ಮಜ್ಜನಕ್ಕೆರೆದು (ಪ್ರಭುವ. ೯೮–೨೪) ; ಉಚಿತದಗ್ಗವಣಿಗಳನೀಂಟಿಸಲಚಲಭಕ್ತಿಯನಜಾವನಾತನು (ಪ್ರಭುಲೀ. ೧೬–೨೦). **ಅಗ್ಗಿಣಿ:** ಶೀಲವಂತೆ ತಂದ ಅಗ್ಗಿಣಿ ಜಂಗಮಗೆ ಶಿವಾರ್ಚನೆ ಗಾಯಿತು (ಗಾದ). **ಅಗ್ಘಣಿ:** ತಮ್ಮ ಲಿಂಗದ ಮಜ್ಜನದ ಅಗ್ಘಣಿಯಲ್ಲದೆ ತಮ್ಮಂಗವ ಮುಟ್ಟಲಾಗದು (ಏಲೇಶ್ವ. ೫೫) ; ಅಗ್ಘಣಿಯ ಹೊನ್ನಯ್ಯ ಅಗ್ಘಣಿಯ ಹಂಪಯ್ಯ ಅಗ್ಘಣಿಯ ದೇವರಸ (ಸಾನಂಚ. ೯–೨೧) ; ಕೆಲರಂಗವಸ್ತ್ರಗಳನು ತಿಳಿಯುದಕದೊಳೆ ತೊಳೆವುತಗ್ಘಣಿಗಳಂ ತುಂಬಿ (ಲಶಿಚಂ. ೩೧–೧೩). **ಅಗ್ಘವಣಿ:** ಗಗನಗಂಭೀರದ ಭಾವಿಯೊಳಗೆ ಅಗೋಚರದ ಅಗ್ಘವಣಿಯ ತಂದು (ಶೂನ್ಯಸಂ. ೨೦–೨೪) ; ಕಲ್ಲ ಮೊಜಡಿಯೊಳಗೆ ಚಿಲುವೆಯಗ್ಘವಣಿಯುಂಟೆ ಅಯ್ಯ (ಆದವ. ೨೮) ; ಹೊಸ ಪುಷ್ಪಮಂ ತಿಳಿಯಗ್ಘವಣಿಯಂ ತಂದು (ಬಸರ. ೨–೬೮) ; ಆ ಸ್ಥಳದ ಅಯ್ಯಾವಂತರ್ ದೇವರಗ್ಘವಣಿಯ ಬಿಂದಿಗೆಗೆ ಆವಗೆಗಲನ ಕೊಟ್ಟರ್ (ಮುಂಬರಾ. X, ೨೭೦–೭೫ ; 1229). **ಅಘಣಿ:** ಅಘಣಿಯ ತಹ ಅದ್ದೊರೆಯರ ಜನ ಎರಡಕಂ ಪ್ರತಾಪ ಮೂವತ್ತಾರು (ಎಕ. XI, ಮೊಳಕಾ. ೩೧–೧೭ ; 1386) ; ಶ್ರೀಮಲಿಕಾರ್ಜುನದೇವರಿಗೆ ಅಭಿಷೇಕಕೆ ನಯಿವೇದ್ಯ ಅಘಣಿ ದಂಡೆಯಿದಕೆ ತೆಳನೂರ ವೀರಯಗವುಡ ಕೊಟ ಹೊಲ (ಎಕ. XIV, ತಿರುಮ. ೨೪೪–೪ ; ?). [< ಸಂ. ಅರ್ಘಪಾನೀಯ]

**ಅರ್ಘಿಸು** (ಕ್ರಿ). ಅರ್ಘ್ಯವನ್ನು ಕೊಡು : ತದನನ್ತರಂ ದಣ್ಣಾಧಿಪತಿ ರೇವದಾಸವೀಸೋತ್ತರ ಸೋಮಯಾಜಿಗಳನರ್ಗ್ಘಿ [ರ್ಘಿ] ಸಿ (ಎಇ. XIII, ೩೩೧–೨೪ ; 929) ; ಅರ್ಘ್ಯಮನೆತ್ತಿ ದಿನೇಶಂಗರ್ಘಿಸಿ ಪೊಡೆವಟ್ಟು (ಸುಕುಮಾ. ೩–೪) ; ತದುತ್ಸವದೊಳಾರ್ಯಜನಮನರ್ಘಿಸಿಯುಂ . . . ಪೂಜ್ಯಜನಮಂ ಪೂಜಿಸಿಯುಂ (ಪುಷ್ಪಪು. ೪–೮೬ ವ).
[ಅರ್ಘ + -ಇಸು₃]

**ಅರ್ಘ್ಯ** (ಗು). ೧. ಬೆಲೆಬಾಳುವ ; ಬಹಳ ಬೆಲೆಯ. ೨. ಪೂಜ್ಯವಾದ; ಗೌರವಾರ್ಹವಾದ : ಶ್ರೀ ವಾಸುದೇವನರ್ಘ್ಯನನೋಘಂ (ಜಗವಿ. ೧೭–೨೭). (ನಾ). ೩. ದೇವತೆಗಳಿಗೂ ಪೂಜ್ಯರಿಗೂ ಕೈತೊಳೆಯಲು ಕೊಡುವ ನೀರು. ೪. ಮೌಲ್ಯ. [ಸಂ.]

**ಅರ್ಘ್ಯಂಗುಡು** (ಕ್ರಿ). ಅರ್ಘ್ಯವನ್ನು ಕೊಡು ; ಪೂಜಿಸು ; ಸತ್ಕಾರ ಮಾಡು : ಆದಿತ್ಯಂಗರ್ಘ್ಯಂಗುಡಲೆನುತುಂ ಮೇದಿನಿಗಿಳಿದೆಯ್ದಿದ ಸುರಪತಿ ಮೊದಲಾದರನೆಲ್ಲರನಾಹ್ವಾನಿಸುತ (ಜಯಕಾ. ೨–೨೬).
[ಅರ್ಘ್ಯ + ಕುಡು₁ (< ಕೊಡು)]

**ಅರ್ಘ್ಯಕರ** (ನಾ). ಪೂಜಾದ್ರವ್ಯಗಳನ್ನು ಕೈಯಲ್ಲಿಟ್ಟುಕೊಂಡವನು : ವಿವಿಧಾರ್ಘ್ಯಕರರ್ ಕಾಣ್ಬುಜ್ಜುಗದಿಂ ಭವನ ಮಹತ್ತರದೇವರ್ ಕ್ರಮದಿಂ ಬರೆ (ಚಂದ್ರಪು. ೪–೬೩). [ಅರ್ಘ್ಯ + ಕರ₄]

**ಅರ್ಘ್ಯಜಲ** (ನಾ). = ಅರ್ಘವಾಣಿ : ಹೊಳೆವ ಹೊಂಬಟ್ಟಲಲಿ ಸೂಸಿದನರ್ಘ್ಯಜಲವನು ಜನಕನಿದಿರಿನಲಿ (ಕುವ್ಯಾಕ. ೮–೧೬). [ಅರ್ಘ್ಯ + ಜಲ]

**ಅರ್ಘ್ಯತೀರ್ಥ** (ನಾ). ಒಂದು ಪುಣ್ಯತೀರ್ಥದ ಹೆಸರು : ವಾರಣಾಸಿ ಕುರುಕ್ಷೇತ್ರಂ ಪ್ರಯಾಗೆಯಗ್ಗ್ಯ [ರ್ಘ್ಯ] ತೀರ್ತ್ಥಂ ಗಂಗಾಸಾಗರಮೆಂಬ ಪುಣ್ಯತೀರ್ತ್ಥಂಗಳೊಳ್ (ಸೌಇಇ. XI–ii, ೧೩೩–೬೦ ; 1087) ; ವಾರಣಾಸಿಯಲುಂ ಅರ್ಗ್ಘ್ಯ [ರ್ಘ್ಯ] ತೀರ್ತ್ಥ [ರ್ಥ] ದಲುಂ . . . ಕೋಟಿ ನನ್ದಾದೀವಿಗೆಯ (ಸೌಇಇ. XX, ೬೮–೧೭ ; 1107). [ಅರ್ಘ್ಯ + ತೀರ್ಥ]

**ಅರ್ಘ್ಯದ್ರವ್ಯ** (ನಾ). ಪೂಜೆಯ ಸಾಮಗ್ರಿ : ಕುಶಾಗ್ರ, ತಿಲ, ಬಿಳಿಯ ಸಾಸುವೆ, ಜವೆ, ನೆಲ್ಲು, ಕ್ಷೀರವೆಂಬಾಜುಂ ಅರ್ಘ್ಯದ್ರವ್ಯಂಗಳಂ (ವಿವೇಕ. ೧೧೫). [ಅರ್ಘ್ಯ + ದ್ರವ್ಯ]

**ಅರ್ಘ್ಯಲಾಜ** (ನಾ). ಪೂಜೆಗಾಗಿ ಅರ್ಪಿಸುವ ಭತ್ತದ ಅರಳು : ಮಂದಾನಿಲಂ ತೆಂಕಣಿಂ ಬರೆ ಚೈತ್ರಂ ಕುಡುವರ್ಘ್ಯಲಾಜತತಿಯೋ ಪೇಟಿಂಬಿನಂ ಪುಷ್ಪಮಂಜರಿಯುಂ . . . ನೋಡಿದೆಂ (ಕಾದಂಪೂ. ೭೪೧).
[ಅರ್ಘ್ಯ + ಲಾಜ]

**ಅರ್ಘ್ಯಹಸ್ತ** (ನಾ). = ಅರ್ಘ್ಯಕರ : ಮುನೀಶಂಗಂದಿದಿರೆಟ್ದರ್ಘ್ಯಹಸ್ತನೆಜಗಿದನಸುರಂ (ಜಗವಿ. ೨–೪೧). [ಅರ್ಘ್ಯ + ಹಸ್ತ]

**ಅರ್ಘ್ಯೋಪಚಾರ** (ನಾ). ಸತ್ಕಾರಪೂರ್ವಕವಾಗಿ ಮಾಡುವ ಉಪಚಾರ : ಸುರವಿರೋಧಿಯ ಗೆಲಿದೆ . . . ಕರುಣವತ್ಸಲ ಚಿತ್ತವಿಪುದರ್ಘ್ಯೋಪಚಾರವನು (ಕೌಶಿರಾ. ೪೪–೩೩). [ಅರ್ಘ್ಯ + ಉಪಚಾರ]

**ಅರ್ಚಕ** (ನಾ). ೧. ಪೂಜೆ ಮಾಡುವವನು : ಜಂಗಮಾರ್ಚಕನಾದಿ ಬಸವನನಂಗವೈರಿಯ ಶರಣರೊಳು ಸಲೆ ಸಂದ ದಾಸೋಹಿ (ಬಸವು. ೧–೩೨). ೨. ಪೂಜಾರಿ. [ಸಂ.]

**ಅರ್ಚನ, ಅಚ್ಚನ, ಅಚ್ಚನೆ** (ನಾ). ಪೂಜೆ ; ಸತ್ಕಾರ : ಇದಱೊಳಾವ ವಿರುದ್ಧವುಂಟೈ ಯಿದಕೆ ರುದ್ರನೆ ಗಣವಲ್ಲೆ ಬಳಿಕಿದಕೆ ನಂದಿಯೆ ಮುಖ್ಯನುಪನಯನಾರ್ಚನಂಗಳಿಗೆ (ಬಸವು. ೩–೫೩). **ಅಚ್ಚನ:** ರಘುನಂದನಂ ತತ್ತಟದೊಳಿಂದುವಮೌಳಿಯನಚ್ಚನಂಗೈದು (ವೆಂಕಾರಾ. ೬–೬೫–೯). **ಅಚ್ಚನೆ:** "ಅರ್ಚನಾ – ಅಚ್ಚನೆ" (ಶಮದ. ೨೬೧ ಪ್ರಯೋ) ; ಅಚ್ಚನೆ ನೋಡಲ್ . . . ಪೋಪೆಸಕದೆ ಪಾಂಬ[ಣ್ಬ]ರೊಳ್ನೆರೆವರಂ ಕುಲನಾರಿಯೆಂಬರೇ (ಮುಂಬರಾ. ೨೬೫–೪೩ ; 1229).

**ಅಚ್ಚನೆಯನಾಡು** = ಅರ್ಚನಾ ರೂಪವಾಗಿ ನರ್ತನಮಾಡು : ಕಿಚ್ಚನೆ ಹೊತ್ತುಕೊಂಡು ಅಚ್ಚನೆಯನಾಡಲು ಅಚ್ಚುಗವಾಯಿತ್ತವ್ವಾ ನಮ್ಮ ನಲ್ಲಂಗೆ (ಅವಚಂ. ೨೫–೧೦೬). [ಸಂ. ಅರ್ಚನ]

**ಅರ್ಚನಾವಿಧಿ** (ನಾ). ಪೂಜೆಯ ಕ್ರಮ : ಏಂ ದ್ರವ್ಯದ ಭಾವದರ್ಚನಾವಿಧಿ ಪಿರಿದೋ (ಶಾಂತಿಪು. ೧೨–೪೭). [ಸಂ. (ಅರ್ಚನಾ + ವಿಧಿ)]

**ಅರ್ಚನಾಸಕ್ತ** (ನಾ). ಪೂಜೆ ಮಾಡುವುದರಲ್ಲಿ ಆಸಕ್ತಿ ಇರುವವನು : ದೇವದ್ವಿಜಾರ್ಚನಾಸಕ್ತರು ಭಕ್ತರುದಾರರು ನಿತ್ಯ ನಿರ್ಮಲರು (ಇಂಚಾಪ. ೩೪–೫೭). [ಅರ್ಚನ + ಆಸಕ್ತ]

**ಅರ್ಚನೆ** (ನಾ). = ಅರ್ಚನ : ಚತುರ್ವಿಧಾರ್ಚನೆಗಳಂ ಪ್ರವರ್ತಿಸಿಯುಂ (ಅಜಿಪು. ೧೨–೪ ವ) ; ಮಾಡುವಟಮುಟದರ್ಚನೆಗಳಂ ಮಾಡಿ ಹೋದನು (ಬಸವು. ೪೩–೫೨) ; ಪೊಗಟಿತ್ತಿಗಮರ್ಚನೆಗಮರ್ಹನೆಂಬನೆ ಜೈನಂ (ಉಸಾರ. ೫೬). [ಸಂ. ಅರ್ಚನಾ]

**ಅರ್ಚನೆಗುಣಿ** (ಕ್ರಿ). ಪೂಜೆಯ ಅಂಗವಾಗಿ ಕುಣಿ, —ನರ್ತನ ಮಾಡು : ಉತ್ತಮ ಮಾಹೇಶ್ವರರುಂ . . . ತಮ್ಮುತ್ತಮಿಕೆಯನೊಕ್ಕಾಗಡೆ ಸತ್ತಪೆಮೆಂದಂಜಿ ಬಳರಿಗರ್ಚನೆಗುಣಿವರ್ (ಸಮುಪ. ೯–೯೨).
[ಅರ್ಚನೆ + ಕುಣಿ₁]

**ಅರ್ಚನೆಗೆಯ್** (ಕ್ರಿ). ಪೂಜೆಮಾಡು ; ಸತ್ಕಾರವನ್ನು ನಡೆಸು : ಶಿವಾರ್ಚನೆಗೆಯ್ವ ಮನೆಯೆಂದಾತ್ಮದೊಳು ನೆನೆದು (ಬಸವು. ೧೨–೧೬) ; ಮನಸಿಜನೆಂಬಂಕದ ಬಿಲ್ಲಾಳಂ ಮನವೊಸೆದರ್ಚನೆಗೆಯ್ವನೆನುತ (ಜಯಕಾ. ೩–೪೦). [ಅರ್ಚನೆ + ಗೆಯ್ (< ಕೆಯ್₁)]

**ಅರ್ಚನೋಪಕರಣ** (ನಾ). ಪುಷ್ಪ, ಗಂಧ, ಫಲ, ಶಾಲಿ, ಅಕ್ಷತೆ, ಧೂಪ, ದೀಪ, ಚರು ಎಂಬ ಪೂಜಾ ಸಾಮಗ್ರಿಗಳು : ಅನುಮಲ್ಲಿಗರ್ಚನೋಪಕರಣಂಗಳಂ ಕೊಂಡುಪೋದೆಂ (ಚಾವುಂಪು. ೨೧೬).
[ಅರ್ಚನ + ಉಪಕರಣ]

**ಅರ್ಚಾಕ್ರೀಡನ** (ನಾ). ಪೂಜೆಯ ವಿನೋದ : ತತ್ತತಿಮಾನೀಡಾಗಮನಮುಮರ್ಚಾಕ್ರೀಡನಮುಮಂ ಮುಕ್ತಿಹೇತುವಪ್ಪುದು ಪಿರಿದೇ (ಶಾಂತಿಪು. ೧೨–೪೯). [ಸಂ. (ಅರ್ಚಾ + ಕ್ರೀಡನ)]

**ಅರ್ಚಾವತಾರ** (ನಾ). (ದೇವರು) ವಿಗ್ರಹ ರೂಪದಿಂದ ಆವಿರ್ಭವಿಸುವುದು; ವಿಗ್ರಹಾಕಾರ: ಈತನು ಅರ್ಚಾವತಾರ ವಿಲಾಸವನ್ನು ಬರೆದಿದ್ದಾನೆ (ಕವಿಚ. III, ೨೧೨); ಮಾನವರು ನನ್ನನ್ನು ಅರ್ಚಾವತಾರವಾಗಿಯೇ ಪೂಜಿಸಬೇಕು (ಭಕ್ತವಿಜ. ೨೩).
[ಸಂ. (ಅರ್ಚಾ + ಅವತಾರ)]

**ಅರ್ಚಿ** (ನಾ). ೧. ಜ್ವಾಲೆ. ೨. ಕಾಂತಿ; ಪ್ರಕಾಶ; ಕಿರಣ: "ಅಗ್ನಿಯ ವಿಶಾಲಕಾಂತಿ ದ್ಯೋತಿ ಜ್ಯೋತಿಸ್ಸು ಹೇತಿ ಶಿಖೆಯರ್ಚಿ ಪ್ರಭಾಖ್ಯಮಕ್ಕುಂ" (ಮಂಗರಾ. ೧೪-೮).
**ಅರ್ಚಿರಲಂಕೃತ** = ಕಾಂತಿಯಿಂದ ಅಲಂಕಾರಗೊಂಡ; ಹೊಳಪಿನಿಂದ ಸಿಂಗರಿಸಲ್ಪಟ್ಟ: ರತ್ನಾರ್ಚಿರಲಂಕೃತಂ ಕೃತಕಶೈಲಂ (ಜಗವಿ. ೨-೨). [ಸಂ. ಅರ್ಚಿಸ್]

**ಅರ್ಚಿಃಕಣ** (ನಾ). ಕೆಂಡದ ಕಿಡಿ; ಬೆಂಕಿಯ ಚೂರು: ಸಂಜಾತೇಂದ್ರಗೋಪಪ್ರಸರವಿಸರದರ್ಚಿಃಕಣಂ . . . ಬಂದುದು ವಿರಹಿತರುವ್ರಾತಮಂ ಪರ್ವುವುಗ್ರಾನಳನೆಂಬಂತಬ್ದಕಾಲಂ (ಚಂದ್ರಪು. ೪-೨೯).
[ಸಂ. (ಅರ್ಚಿಸ್ + ಕಣ$_4$)]

**ಅರ್ಚಿಕೆಯ್** (ಕ್ರಿ). = ಅರ್ಚಿಸು: ××× ಯರುಳ್ಳರಿ ಪೀಠದಿಟ್ಟೊನಾನ್ ××× ತಾರಿಕುಮಾರರಿನರ್ಚ್ಚಿಕೆಯ್ಯೆ ತಾಂ ಸ್ಥಿರದರಳಿಸ್ತು ಪೆಗುರವು ಸುರಲೋಕ ವಿಭೂತಿ ಎಯ್ದಿದಾರ್ (ಎಕ. II, ೨೬-೨; 700).
[ಅರ್ಚಿ$_0$ + ಕೆಯ್$_1$]

**ಅರ್ಚಿತ** (ಗು). ೧. ಪೂಜಿಸಲ್ಪಟ್ಟ; ಗೌರವಿಸಲ್ಪಟ್ಟ: ಉನ್ನತಗಂಗಮಂಡಲೇಶ್ವರ ಮಕುಟಾರ್ಚಿತಂ (ಅಜಿಪು. ೧-೭). ೨. ಶ್ರೇಷ್ಠವಾದ; ಉತ್ತಮವಾದ. [ಸಂ.]

**ಅರ್ಚಿಷ್ಮಂತ** (ನಾ). ೧. ಕಾಂತಿಯುಕ್ತ; ತೇಜೋಮಯ. ೨. ಅಗ್ನಿ. [ಸಂ. ಅರ್ಚಿಷ್ಮತ್]

**ಅರ್ಚಿಷ್ಮತಿ** (ನಾ). ಅಗ್ನಿಯ ಹೆಂಡತಿ. [ಸಂ. ಅರ್ಚಿಷ್ಮತೀ]

**ಅರ್ಚಿಷ್ಮದಂಬಕ** (ನಾ). ಅಗ್ನಿನೇತ್ರ; ಶಿವ: ಹರಿದಶ್ವಾಬ್ಜವಿಲಸದರ್ಚಿಷ್ಮದಂಬಕ ವಿಯತ್ಪುರಗಹನ ದವದಹನ (ಉದ್ಭದೇ. ೧-೩೧).
[ಸಂ. (ಅರ್ಚಿಷ್ಮತ್ + ಅಂಬಕ)]

**ಅರ್ಚಿಸು, ಅರ್ಚ್ಚಿಸು$_1$** (ಕ್ರಿ). ಪೂಜಿಸು; ಆರಾಧಿಸು; ಗೌರವಿಸು: ಪಿರಿದಪ್ಪ ಪೂಜೆಯಂ ಮಾಡಿಯರ್ಚಿಸಿ ಪೂಜಿಸಿ (ವಡ್ಡಾರಾ. ೭೮-೨೬); ಬದ್ಧರಂ ಗೆಲಲ್ ಕಾಮನ ನಿಚ್ಚಮರ್ಚಿಸುವ ಕೈದುವೊ . . . ಎಂಬಿನಂ ಮಗಳ್ ಶ್ರೀಮತಿಯೆಂಬಳಾಗಿ (ಆದಿಪು. ೩-೧೮); ನಂದದೀವಿಗೆಗಂ ಅಚ್ಚಿ[ರ್ಚಿ]ಸುವ ಮಾಣಿಯ ಜೀವಿತಕ್ಕಂ ಕುಡುವುದು (ಕಇ. II, ೯-೨೮; 1075); ಕಮ್ಮಿದುವಪ್ಪ ಕಾಡ ಪೂಸಪೂಗಳಿನರ್ಚ್ಚಿಸಿ ಪಾದಪದ್ಮಮಂ (ಎಕ. II, ೨೩೪-೫೯; 1180); ಸಂಪಗೆಯರಲಿಂದಂ ಗಿರಿಜೆ ಹರನನೊಲ್ದರ್ಚಿಸುವಳ್ (ಗಿರಿಕ. ೩-೯೬); ಆದಿನಾರಾಯಣನ . . . ಒಲಿದರ್ಚಿಸಿದನಾ ಭೂಪ (ತೊರರಾ. ೧-೭-೨೮). **ಅಚ್ಚಿಸು$_1$**: ಅಚ್ಚಿಸುತ್ತಚ್ಚಿಸುತ್ತಾರುತ್ತ ಬೊಬ್ಬಿಡುತೆ ಮಚ್ಚಿಸುತೆ ಮಚ್ಚಿಸುತೆ ತೆಗೆದು ಮುಂಡಾಡುತ್ತೆ (ತಿರುರ. ೫).
[ಅರ್ಚನ + -ಇಸು$_3$]

**ಅರ್ಚೆ** (ನಾ). ೧. ಪೂಜೆ; ಆರಾಧನೆ. ೨. ಮೂರ್ತಿ; ವಿಗ್ರಹ.
[ಸಂ. ಅರ್ಚಾ]

**ಅರ್ಜಕ** (ನಾ). ಸಂಪಾದಿಸುವವನು; ಒದಗಿಸುವವನು. [ಸಂ.]

**ಅರ್ಜನ** (ನಾ). ಸಂಪಾದಿಸುವುದು; ಒದಗಿಸುವುದು. [ಸಂ.]

**ಅರ್ಜಿ$_1$** (ನಾ). = ಅಜ್ಜಿಕೆ ೧: ಅರ್ಜಿಯರ್ಗೆ ಕೆಂಪು ಕರಿದು ಮೊದಲಾದ ಪಲವು ತೆಱದ ಬಣ್ಣಮೆಂಬ ವಸ್ತ್ರವಿಕಾರಮಂ (ಶಾಸ್ತ್ರಟೀ. ೩-೯೫-೮).
[< ಸಂ. ಆರ್ಯಾ]

**ಅರ್ಜಿ$_2$, ಅರ್ಜು** (ನಾ). ಅರಿಕೆ; ಪ್ರಾರ್ಥನಾಪತ್ರ: ಪೂರ್ಣಯ್ಯನವರು ಸೋಸಲೆ ಅಮಲದಾರ ವೆಂಕಟರಮಣ್ಣೆಯಗೆ ಆಶೀರ್ವಾದ ಅದಾಗಿ ಕಳುಯಿಸ್ದ ಅರ್ಜಿಯಿಂದಾ ವಿವರ (ಮೈಆರಿ. ೧೯೩೮, ೫೩-೩; 1805); ತಾಲೂಕಿನ ಅಮಲುದಾರರು ಇದ್ದ ಅರ್ಜಿಗಳನ್ನು ನಿಮ್ಮಬಳಿಗೆ ಕಳುಹಿದ್ದರಿಂದ (ರಾಜೇಂದ್ರ. ೪೮); ಪರೀಕ್ಷೆಗೆ ಅರ್ಜಿ ತುಂಬಿ ಕಳುಹಿಸಿದರೂ ಕೂಡಲು ಶಕ್ಯವಾಗಲಿಲ್ಲ (ಸ್ವಪ್ನದ. ೧). **ಅರ್ಜು**: ನಿಂಮ ಸಾಸನದ ಕಲ್ಲವೊಡೆಹೊಯಿಸಲಾಗಿ ಆದಕೆ ನೀಉ ಬಂದು ಅರ್ಜುಮಾಡಿಕೊಳಲಾಗಿ (ಎಕ. XII, ಶಿರಾ. ೧೧೨-೨೯; 1720); ಅನಂತರ ಮಹಲುದಾರನು ತನ್ನ ದಣಿಯಿದ್ದಲ್ಲಿಗೆ ಹೋಗಿ ಬಹು ಕೋಪದಿಂದ . . . ಹೀಗೆ ಅರ್ಜುಮಾಡಿದನು (ಬಖೈರು. ೩).
[← ಪಾರ. ಅರ್ಜ್; ಮರಾ. ಹಿಂ. ಅರ್ಜ, ಅರ್ಜಿ]

**ಅರ್ಜಿತ** (ಗು). ಸಂಪಾದಿಸಿದ; ಗಳಿಸಿದ. [ಸಂ.]

**ಅರ್ಜಿದಾರ** (ನಾ). ಅರಿಕೆ ಮಾಡಿಕೊಳ್ಳುವವನು; ಅರ್ಜಿಯನ್ನು ಕೊಟ್ಟವನು: ಅರ್ಜಿದಾರರ ಹೆಸರನ್ನು ಕ್ರಮವಾಗಿ ಗುಮಾಸ್ತರು ಓದಿದರು (ರೂಢಿ).
[← ಪಾರ. ಅರ್ಜ್‌ದಾರ್; ಮರಾ. ಹಿಂ. ಅರ್ಜದಾರ, ಅರ್ಜಿದಾರ]

**ಅರ್ಜಿಸು** (ಕ್ರಿ). ಸಂಪಾದಿಸು; ಗಳಿಸು: ಭುಜಸತ್ತ್ವದಿನುಗ್ರವೈರಿಭೂದಾಯಮನರ್ಜಿಸಲ್ ಪಡೆಯಲೆಂದು ನಳಂ (ನಳಚಂ. ೩೧).
[ಅರ್ಜನ + -ಇಸು$_3$]

**ಅರ್ಜು** 'ಅರ್ಜಿ$_2$' ನೋ.

**ಅರ್ಜುನ** (ನಾ). ೧. ಬೆಳ್ಳಗಿರುವುದು; ಬಿಳುಪು: "ಧೌತಂ ಸಿತಂ ಗೌರಮರ್ಜುನಂ . . . ಶ್ವೇತಮಕ್ಕುಂ" (ಮಂಗರಾ. ೧೩೧-೨೨). ೨. ಮತ್ತಿಯ ಮರ: "ಅರ್ಜುನಃ, ಕಕುಭಃ — ಈ ೨ ಮತ್ತಿ" (ಹಲಾಯು. ೩೨-೪೨). ೩. ಪಾಂಡವರಲ್ಲಿ ಒಬ್ಬ: ಸಹದೇವನಾಗಿ ಸಮುದಿತ ನಕುಲನಾಗಿ ಸನ್ನಿಹಿತಾರ್ಜುನನುಮಾಗಿ (ಜೈಮಿಭಾ. ೧೦-೨). ೪. ತೃಣ: "ಎಲ್ಲಾವುಲ್ಲುಮಂ – ಅರ್ಜುನಮೆಂಬುದು" (ಹಲಾಯು. ೩೧-೩೬). ೫. ಅಭಿವೃದ್ಧಿಯಾದ ಧನ. ೬. ಬಂಗಾರ. ೭. ಬೆಳ್ಳಿ. ೮. ಕಣ್ಣಿನ ಬಿಳಿಯ ಗುಡ್ಡೆಯ ಮೇಲೆ ತೋರುವ ಒಂದು ಬಗೆಯ ಕಣ್ಣುರೋಗ. 'ಅರ್ಜುನಗಣ್ಣು' ಪರಾ. ೯. ಕೃತವೀರ್ಯನ ಮಗ ಕಾರ್ತವೀರ್ಯ: "ಇಂದ್ರಜಂ ಸಿತಹಯಂ ಗಾಂಡೀವಿ ಜಿಷ್ಣು ಹರಿಬಂಧು ಫಲ್ಗುಣನೆನಲ್ಕರ್ಜುನನೆನಿಕ್ಕು" (ಮಂಗರಾ. ೭೮-೩); "ವೃಕ್ಷಭೇದ ಧವಳಂ ಪಾರ್ಥಂ ಸುವರ್ಣಂ ತೃಣಂ ನಿರುತಂ ತಾನಿವಕರ್ಜುನಾಖ್ಯ" (ನಾನಾರ. ೧೧೩). [ಸಂ.]

**ಅರ್ಜುನಕುಜ** (ನಾ). ೧. ಬಿಳಿಯ ಮರ. ೨. ಮತ್ತಿಯ ಮರ: ಜಿನಸವನಸಲಿಲದಿಂ ಬೆಳ್ಪನಾಳ್ದುವರ್ಜುನಕುಜಂಗಳೆನಿಸದೆ ಚಿತ್ರಂ ನನೆವಡೆದು ಪಾಂಡುಕದ ಸೌಮನಸದ ನಂದನದ ಭದ್ರಶಾಲದ ತರುಗಳ್ (ಪುಷ್ಪಪು. ೧೧-೩೯). [ಅರ್ಜುನ + ಕುಜ]

**ಅರ್ಜುನಗಣ್ಣು** (ನಾ). 'ಅರ್ಜುನ' ಎಂಬ ರೋಗಕ್ಕೆ ಒಳಗಾದ ಕಣ್ಣು: ಅರಿಯು, ಪಟಲಂ, ನೀರು ಸುರಿವದು, ಅರ್ಜುನಗಣ್ಣು (ವಿಸ್ತೈವಿ. ೧೯೩). [ಅರ್ಜುನ + ಕಣ್ಣು (< ಕಣ್)]

**ಅರ್ಜುನತೇಜ** (ನಾ). ಬೆಳ್ಳಗಿರುವ ತೇಜಸ್ಸು; ಕಾಂತಿ: ಹಿಮವಂತನನುಜಿ ಸಾರ್ದಂತಮಳಾರ್ಜುನತೇಜದಿಂದೆ ಗಿರಿಪತಿಯಿರ್ದಂ (ಹಮ್ಮಿರ. ೧-೪೨). [ಸಂ. ಅರ್ಜುನತೇಜಸ್ (ಅರ್ಜುನ + ತೇಜಸ್)]

**ಅರ್ಜುನವಾಡ** (ನಾ). ಒಂದು ಊರಿನ ಹೆಸರು: ಅರ್ಜುನವಾದ(ಡ)ನಾಮ ಗ್ರಾಮ(ಮೇ) ಪಶ್ಚಿಮಸ್ಯಾಂದಿಶಿ (ಇಆ. VIII, ೨೧೪-೪೪; 10ನೆಯ ಶತ). [ಅರ್ಜುನ + ವಾಡ]

**ಅರ್ಜುನಶ್ಲೋಕ** (ನಾ). ೧. ಸ್ವಚ್ಛವಾದ ಕೀರ್ತಿ; ನಿರ್ಮಲವಾದ ಕೀರ್ತಿ. ೨. ಧವಳಕೀರ್ತಿಯುಳ್ಳವನು : ಭುವನಾಳೋಕಾಭಿರಾಮಂ ದಿಗವನಿತಳ ಪೂರ್ಣಾರ್ಜುನಶ್ಲೋಕಂ . . . ಪೆಸರ್ವಡೆದಂ ವೀರಬಲ್ಲಾಳದೇವಂ (ಎಕ. V, ಅರಸೀ. ೧೨೭–೨೧ ; 1185). [ಅರ್ಜುನ + ಶ್ಲೋಕ]

**ಅರ್ಜುನೋರ್ಜಿತ** (ಗು). ೧. ಮತ್ತಿಯ ಮರದಿಂದ ಮೇಲ್ಮೆಯನ್ನು ಪಡೆದ. ೨. ಪಾರ್ಥನಿಂದ ಏಳಿಗೆಯನ್ನು ಪಡೆದ. ೧, ೨ : ಪಾಂಡವಪ್ರಕರದಂತಾತ್ತಭೀಮನಕುಲದ್ರುಪದಮುಂ ಅರ್ಜುನೋರ್ಜಿತಮುಂ (ಚಂದ್ರಪು. ೫–೫೨ ವ). [ಅರ್ಜುನ + ಊರ್ಜಿತ]

**ಅರ್ಣ** (ನಾ). ೧. ನೀರು ; ಪ್ರವಾಹ. ೨. ಅಕ್ಷರ. ೩. ತೇಗದ ಮರ. ೪. [ಛಂದ] ಒಂದು ಪಾದದಲ್ಲಿ ಎರಡು ನಗಣಗಳೂ ಎಂಟು ರಗಣಗಳೂ ಬರುವ ಚತುಷ್ಪಾದ ವೃತ್ತ. [ಸಂ. ಅರ್ಣ, ಅರ್ಣಸ್]

**ಅರ್ಣವ** (ನಾ). ೧. ಸಮುದ್ರ : ಇದು ನಿಚ್ಚಂ ಪೊಸತರ್ಣವಂಬೊಲತಿಗಂಭೀರಂ ಕವಿತ್ವಂ (ಆದಿಪು. ೧–೨೭) ; ರಿಪುದರ್ಪಾರ್ಣವ ಸೇತುಬಂಧವಂ . . . ನೃಪಂ ನಿರ್ಮಿಸಿದಂ (ಪುಷ್ಪಪು. ೪–೮೩). ೨. [ಛಂದ] ಒಂದು ಪಾದದಲ್ಲಿ ಎರಡು ನಗಣಗಳೂ ಒಂಬತ್ತು ರಗಣಗಳೂ ಬರುವ ಚತುಷ್ಪಾದ ವೃತ್ತ. [ಸಂ.]

**ಅರ್ಣವಜಾತ** (ಗು). ೧. ಸಮುದ್ರದಲ್ಲಿ ಹುಟ್ಟಿದ. (ನಾ). ೨. ಚಂದ್ರ : ಅರ್ಣವಜಾತಾನನೆ ಸಂಪೂರ್ಣತೆಯಿಂ . . . ಪೇೞ್ವೆ (ಛಂದೋಂಬು. ೫–೨). [ಅರ್ಣವ + ಜಾತ]

**ಅರ್ತ** 'ಅೞ್ತು' ಪರಾ.

**ಅರ್ತಗಲ** (ನಾ). ನೀಲಿಹೂವಿನ ಗೋರಂಟೆ ಗಿಡ. [ಸಂ.]

**ಅರ್ತನ** (ನಾ). ತಪ್ಪು ಹೊರಿಸುವುದು ; ದೋಷಾರೋಪಣೆ. [ಸಂ.]

**ಅರ್ತಿ₁** 'ಅೞ್ತಿ₁' ನೋ.

**ಅರ್ತಿ₂** (ನಾ). ಚೀಲ : "ಅರ್ತಿಯೆನೆ ಚೀಲಂ" (ಮಂಗರಾ. ೧೦೫–೧೪). [?]

**ಅರ್ತಿ₃** (ನಾ). ೧. ನೋವು; ವ್ಯಥೆ. ೨. ಬಿಲ್ಲಿನ ಕೊನೆ ; ಕೊಪ್ಪು. [ಸಂ.]

**ಅರ್ತಿಕಾಱ** 'ಅೞ್ತಿಕಾಱ' ನೋ.

**ಅರ್ತಿಕಾಱಿಕೆ, ಅರ್ತಿಗಾಱಿಕೆ** (ನಾ). ಆಸೆಬುರುಕತನ : ಅರ್ತಿಕಾರ್ತ[ಱಿ]ಕೆಯಲ್ಲಿ ಮಾಡುವ ವ್ಯರ್ಥದ ಭಕ್ತಿ ಇತ್ತಲೆ ಉಳಿಯಿತು (ಮೆಱೆವಿಂ. ೨೩). **ಅರ್ತಿಗಾಱಿಕೆ** : ಸಿಕ್ಕಿದೆ ಅರ್ತಿಗಾಱಿಕೆ ಎಂಬ ಭಕ್ತಿಯಲ್ಲಿ (ಮೋಳಿಮಾ. ೩೬–೧೫). [ಅರ್ತಿಕಾಱ (<ಅೞ್ತಿಕಾಱ)+ –ಇಕೆ]

**ಅರ್ತಿಕೆ** (ನಾ). ಅಕ್ಕ ; ಹಿರಿಯ ಸಹೋದರಿ. [ಸಂ. ಅರ್ತಿಕಾ]

**ಅರ್ತಿಗ** 'ಅೞ್ತಿಗ' ನೋ.

**ಅರ್ತಿಗಾಳಗ** (ನಾ). ರತಿಕಲಹ : ನೆಗ್ಗಿಹೋದುವು ಬಳೆ ತಕ್ಕೆಯಿಂ ಮೊಲೆಕಟ್ಟು ಕುಗ್ಗಿದುವಧರ ಗಾಜಾಯ್ತು ಅಗ್ಗದ ವೀರನೊಳಿರುಳರ್ತಿಗಾಳಗ ಲಗ್ಗೆಯಾಯ್ತೆಂದಳಾ ಸುರಸೆ (ಭರಚ. ೪೨–೬). [ಅರ್ತಿ₁ (< ಅೞ್ತಿ₁) + ಕಾಳಗ]

**ಅರ್ತಿಗಾಱ** 'ಅೞ್ತಿಕಾಱ' ನೋ.

**ಅರ್ತಿಗಾಱಿಕೆ** 'ಅರ್ತಿಕಾಱಿಕೆ' ನೋ.

**ಅರ್ತಿಗುಂದು** 'ಅೞ್ತಿಗುಂದು' ನೋ.

**ಅರ್ತಿಗೆಡಿಸು** (ಕ್ರಿ). ಪ್ರೀತಿಯನ್ನು ಕೆಡಿಸು : ವನಿತೆಯಾ ನಿನ್ನೊಡನೆ ಬಂದಪೆನೆನುತ ಬೇಗದೊಳರ್ತಿ [ಪಾಠಾಂ. ರ್ಥಿ]ಗೆಡಿಸದೆ ಘನಕುಚೆಯೆ ಬಾಯೆನುತ ಕಾಲ್ದೊಡಕೆಕೆ ಮಗುಳೆನುತ (ಬಸವಪು. ೫–೩೧). [ಅರ್ತಿಗೆಡು + –ಇಸು₃]

**ಅರ್ತಿಗೆಡು** (ಕ್ರಿ). ಪ್ರೀತಿ ಕೆಟ್ಟುಹೋಗು : ಸನ್ಮಾರ್ಗಕ್ರಮಂದಪ್ಪಿ ನಿಃಕ್ರಿಯೆಯಿಂದಂ ನಡೆದೋಱೆಯಂ ಮಱೆದು ಮಿಥ್ಯಾಮಾರ್ಗಮಂ ಪೊರ್ದಿ ರೂಢಿಯ ಸದ್ಧರ್ಮದೊಳರ್ತಿಗೆ [ಪಾಠಾ. ವ]ಟ್ಟವನುಮಂ (ಸಮಪ. ೪–೪೫). [ಅರ್ತಿ₁ (< ಅೞ್ತಿ₁) + ಕೆಡು]

**ಅರ್ತಿಗೆಡುಕ** (ನಾ). ಪ್ರೀತಿಯನ್ನು ಹಾಳುಮಾಡುವವನು ; ಪ್ರೀತಿಗೆ ಭಂಗವನ್ನು ತರುವವನು : ತೊಡಗಿದ ಮದುವೆಗೆ ಕಿಸುರನಿಟ್ಟಾಗರ್ತಿಗೆಡುಕರಲ್ಲದೆ ನಾವು ನೃಪರೆ (ಭರಚ. ೫೬–೭೨). [ಅರ್ತಿ₁ (< ಅೞ್ತಿ₁) + ಕೆಡುಕ]

**ಅರ್ತಿಬಡು** 'ಅೞ್ತಿವಡು' ನೋ.

**ಅರ್ತಿವಡು** 'ಅೞ್ತಿವಡು' ನೋ.

**ಅರ್ತಿಸು₁** (ಕ್ರಿ). ಬಯಸು ; ಅಪೇಕ್ಷಿಸು : ಕನಸಿನೊಳು ಮೃಡನ ಭಕ್ತರ ನಲ್ಲದಾರುವನಱಿಯೆವರ್ತಿಸೆವು (ಬಸವು. ೪೦–೩೭) ; ಕವಿಯ ಜ್ಞಾನಕೆ ರಾಯ ರಾಯನುದಾರಗೌರವಕೆಲ್ಲರರ್ತಿಸುವಾಗ ಧವಲಶಂಖಧ್ವನಿ ಘಳಿಯಾರದಲ್ಲಿ ಭುಂಭುವ ಭುಂಮೆನೆ ಕೇಳಲಾಯ್ತು (ಭರಚ. ೨–೧೦೪). [ಅರ್ತಿ₁ (< ಅೞ್ತಿ₁) + –ಇಸು₃]

**ಅರ್ತಿಸು₂** 'ಅರ್ಥಿಸು' ನೋ.

**ಅರ್ಥ** (ನಾ). ೧. ಶಬ್ದದ ಅಭಿಪ್ರಾಯ ; ಅಭಿಧೇಯ. ೨. ಹಣ ; ದ್ರವ್ಯ. ೩. ವಿಷಯ ; ಉದ್ದೇಶ ; ಗುರಿ. ೪. ಕೋರಿಕೆ ; ಬೇಡಿಕೆ. ೫. ರೀತಿ ; ಕ್ರಮ. ೬. ಉಪಯೋಗ ; ಪ್ರಯೋಜನ. ೭. ಕಾರಣ. ೮. ವಸ್ತು ; ಪದಾರ್ಥ. ೯. ಕೆಲಸ ; ಕಾರ್ಯ. ೧೦. ಸ್ವರೂಪ. ೧೧. ಸೌಕರ್ಯ ; ಅನುಕೂಲತೆ. ೧೨. ಫಲಿತಾಂಶ ; ಪರಿಣಾಮ. ೧೩. ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ವಿಧವಾದ ಪುರುಷಾರ್ಥಗಳಲ್ಲಿ ಒಂದು : "ಧನಂ ಜೀವಂ ಶಬ್ದನಿರೂಪಣಂ ವಿಮಲಯೋಗಂ ತಾವಿವರ್ಥಾಂಕಿತಂ" (ನಾನಾರ. ೧೫೬). [ಸಂ.]

**ಅರ್ಥಕರಿ** (ಗು). = ಅರ್ಥಕಾರಿ.

**ಅರ್ಥಕರೀವಿದ್ಯೆ** = ಅರ್ಥವನ್ನು ಗಳಿಸುವ ವಿದ್ಯೆ : ಅವರ ಅರ್ಥಕರೀವಿದ್ಯೆ ಸಾಧಾರಣರ ಯಾವ ಕೆಲಸಕ್ಕೂ ಬರುತ್ತಿರಲಿಲ್ಲ (ನಿಬಂಧ. II, ೨೮೫). [ಸಂ. ಅರ್ಥಕರೀ]

**ಅರ್ಥಕಾರಿ** (ಗು). ಪ್ರಯೋಜನಕರವಾದ ; ಲಾಭಕರವಾದ ; ಸಾರ್ಥಕವಾದ. [ಸಂ. ಅರ್ಥಕಾರಿನ್]

**ಅರ್ಥಕೃತಿ** (ನಾ). ೧. ದ್ರವ್ಯಕ್ಕಾಗಿ ಬರೆದ ಕಾವ್ಯ. ೨. ಅರ್ಥಪ್ರಚುರತೆಯನ್ನುಳ್ಳ ಕಾವ್ಯ : ಪ್ರತಿಭೆ ನಿಸರ್ಗಮುಂಟು ಕಿಱಿದೋದುಗಳೊಳ್ಕಿಱಿದುಂಟು . . . ಕೆಲಬರೋದದೆ ಕೇಳದೆ ಕಲ್ಗಳಂತೆ ಗರ್ವಿತರಡಸಿರ್ಪರರ್ಥಕೃತಿಗೇಂ ಮತಿವಂತರೊ ಪುಣ್ಯವಂತರೋ (ಗದಾಯು. ೧–೫೦). [ಅರ್ಥ + ಕೃತಿ]

**ಅರ್ಥಖಂಡನ** (ನಾ). ಇತರರ ಅರ್ಥವನ್ನು ನಿರಾಕರಿಸುವುದು : ಮತ್ತಂ ಶಬ್ದಖಂಡನಮರ್ಥಖಂಡನಮನುಮಾನಖಂಡನಮೆಂಬ ತರ್ಕತಂತ್ರಕೋವಿದರಪ್ಪ ವಾದಿಗಳೊಳಂ (ಗಿರಿಕ. ೨–೧೦೫ ವ). [ಅರ್ಥ + ಖಂಡನ]

**ಅರ್ಥಗತಿ** (ನಾ). ಹಣದ ನಿಮಿತ್ತ : ಈ ಜೀವರಿಗೆ ದುಃಸ್ಥಿತಿ ಸುದತಿಯರ ದೆಸೆಯಿಂದ ರಾಜ್ಯದ ಹುದುವಿನಲಿ ಮೇಣರ್ಥಗತಿಯಲನರ್ಥ ತಪ್ಪದಲೇ (ಕುವ್ಯಾಅ. ೧೪–೩೧). [ಅರ್ಥ + ಗತಿ]

**ಅರ್ಥಗರ್ಭಿತ** (ಗು). ಅರ್ಥದಿಂದ ತುಂಬಿದ : "ನೀವು ಬಂದದ್ದು ಮೇಲಾಯಿತು ನಿಮ್ಮೊಡನೆ ಮಾತಾಡುವುದಿದೆ" ಎಂದವನು ಅರ್ಥಗರ್ಭಿತವಾಗಿ ನೆಕ್ಲುದೋವನ ಕಣ್ಣಲ್ಲಿ ಕಣ್ಣಿಟ್ಟು ನೋಡಿದನು (ಪುನರು. ೫೨೦). [ಅರ್ಥ + ಗರ್ಭಿತ]

**ಅರ್ಥಗುಣ** (ನಾ). [ಕಾವ್ಯಮೀ] ಅರ್ಥಕ್ಕೆ ಸಂಬಂಧಪಟ್ಟ ಗುಣ : ಪ್ರಸಾದ, ಅರ್ಥವ್ಯಕ್ತಿ, ಉದಾರತ್ವ, ಕಾಂತಿ ಮತ್ತು ಸಮಾಧಿ ಇವು ಅರ್ಥ ಗುಣಗಳೆಂದೂ ಮಾಧುರ್ಯವು ಉಭಯಗುಣವೆಂದೂ ಹೇಳಬಹುದು (ಕೈಪಿಡಿ. ೨೩೨). [ಅರ್ಥ + ಗುಣ]

**ಅರ್ಥಗ್ರಹಣ** (ನಾ). ಅರ್ಥವನ್ನು ತಿಳಿದುಕೊಳ್ಳುವುದು; ತಾತ್ಪರ್ಯವನ್ನು ಗ್ರಹಿಸುವುದು : ಸಾಹಿತ್ಯದಲ್ಲಿ ಅಭಿರುಚಿಯಿದೆ, ಅರ್ಥಗ್ರಹಣಶಕ್ತಿಯೂ ಇದೆ (ಸ್ವಪ್ನ ಹೊ. ೨೫೬). [ಅರ್ಥ + ಗ್ರಹಣ]

**ಅರ್ಥಗ್ರಾಹಿ** (ನಾ). ಪ್ರಯೋಜನವನ್ನು ಅಥವಾ ದ್ರವ್ಯವನ್ನು ಗ್ರಹಿಸುವವನು : ನಿರಂಜನರಾಗಿರ್ದುಮಶೇಷ ಲೋಕನಿಹಿತಾರ್ಥಗ್ರಾಹಿಗಳ್ (ಪುಷ್ಪಪು. ೧–೨). [ಸಂ. ಅರ್ಥಗ್ರಾಹಿನ್]

**ಅರ್ಥಘಟನೆ** (ನಾ). ಅರ್ಥದ ಹೊಂದಿಕೆ; ಅಭಿಪ್ರಾಯವು ಹೊಂದಿಕೊಳ್ಳುವುದು : ಇಲ್ಲಿ ಶಬ್ದಾವೃತ್ತಿ ಕೆಟ್ಟಪುರ್ದಾಗಿಯುಂ, ಕಜಿಯಂ ಪೊತ್ತಪ್ಪುದೆಂಬುದಂ ಕರೆಯಂ ಪೊತ್ತಪ್ಪುದೆಂದೊಡೆ ಅರ್ಥಘಟನೆ ಯಿಲ್ಲಾಗಿಯುಂ, ಯಮಕ ಲಕ್ಷಣಮಿಲ್ಲ (ಶಮದ. ೧೯ ಪ್ರಯೋ). [ಅರ್ಥ + ಘಟನೆ]

**ಅರ್ಥಚಯ** (ನಾ). ದ್ರವ್ಯರಾಶಿ : ಮೋಹಮನೆಯ್ದೆ ನೀಂ ಬಿಡುವುದರ್ಥಚಯಂಗಳೊಳ್ (ಜೀವಸಂ. ೧–೫೧). [ಅರ್ಥ + ಚಯ]

**ಅರ್ಥದ** (ಗು). **೧.** ಹಣವನ್ನು ಕೊಡುವ. (ನಾ). **೨.** ಹಣವನ್ನು ಕೊಡುವವನು; ಕುಬೇರ : "ಯಕ್ಷಸಖನೈಳಬಿಳನರ್ಥದಂ [ಪಾಠಾಂ. ಪಂ] . . . ಕುಬೇರನೆನಿಸಿಕ್ಕು" (ಮಂಗರಾ. ೧೬–೧೫). 'ಧನದ' ಪರಾ. [ಸಂ.]

**ಅರ್ಥದುಷ್ಟ** (ನಾ). [ಕಾವ್ಯಮೀ] ಅರ್ಥದೋಷಗಳಲ್ಲಿ ಒಂದು : ಅರ್ಥದುಷ್ಟಲಕ್ಷ್ಯಂ – ನೆರೆದೂರ್ಧ್ವರೇತನೊಳ್ ಪುರುಹಿರಣ್ಯರೇತೋತಿ ತೀವ್ರನೊಳ್ ಮುನಿವರನೊಳ್ ಪರಮಭಗಸಹಿತೆ ಮುದದಿರೆ ಪರಿಶ್ರಮ ಕ್ಕೆನ್ನ ನಿರ್ವಿಶೇಷನೊಳಾಗಳ್ (ಕವಿರಾ. ೧–೬೪). [ಅರ್ಥ + ದುಷ್ಟ]

**ಅರ್ಥದೂಷಕ** (ನಾ). ಹಣವನ್ನು ದುರುಪಯೋಗಪಡಿಸುವವನು : ಅರಸುಗಳ್ಗೆ ವಿರಸಮಾದವಸರದೊಳ್ . . . ಸೌಭಾಗ್ಯಮುಳ್ಳವನಂ ಪಾಣ್ಬನೆಂಬರ್ ತ್ಯಾಗಿಯಂ ಅರ್ಥದೂಷಕನೆಂಬರ್ ಅರ್ಥದೂಷಕನಂ ತ್ಯಾಗಿಯೆಂಬರ್ (ಪಂಚತಂ. ೫೧–೧೨). [ಅರ್ಥ + ದೂಷಕ]

**ಅರ್ಥದೃಕ್ಕು** (ನಾ). ನ್ಯಾಯಾಧ್ಯಕ್ಷ; ಧರ್ಮಾಧಿಕಾರಿ; ನ್ಯಾಯಾಧಿಪತಿ : "ಪ್ರಾಡ್ವಿವಾಕಃ, ಅರ್ಥದೃಕ್, ಸ್ಥೇಯಃ, ನ್ಯಾಯಾಧ್ಯಕ್ಷಃ – ಈ ೪ ನ್ಯಾಯಾಧ್ಯಕ್ಷಂ" (ಹಲಾಯು. ೭೧–೨೭೫). [ಸಂ. ಅರ್ಥದೃಕ್]

**ಅರ್ಥದೃಷ್ಟಿ** (ನಾ). ಶಬ್ದಾರ್ಥಗಳ ಕಡೆಗೆ ಗಮನವಿಡುವುದು : ಇನಿತುಪಪತ್ತಿಯಿಲ್ಲಿನಿತು ಬಿನ್ನಣಮಿಲ್ಲಿನಿತರ್ಥದೃಷ್ಟಿಯಿಲ್ಲ . . . ಇನಿತುಪರಂ ಪ್ರಬೋಧಮಣಮಿಲ್ಲ ಪೆಜರ್ಗೆ (ಅಜಿಪು. ೧೨–೩೫). [ಅರ್ಥ + ದೃಷ್ಟಿ]

**ಅರ್ಥದೋಷ** (ನಾ). [ಕಾವ್ಯಮೀ] ಕಾವ್ಯದೋಷಗಳಲ್ಲಿ ಒಂದು : ಕಾವ್ಯದಲ್ಲಿ . . . 'ದೋಷ' ಗಳನ್ನು ೧. ಪದದೋಷ, ೨. ಅರ್ಥದೋಷ, ೩. ರಸದೋಷ ಎಂದು ಮೂರುಭಾಗ ಮಾಡಬಹುದು (ಕೈಪಿಡಿ. ೨೨೬). [ಅರ್ಥ + ದೋಷ]

**ಅರ್ಥದ್ರಷ್ಟೃತ್ವ** (ನಾ). ಅರ್ಥದ ಸ್ವಾರಸ್ಯವನ್ನು ಕಾಣುವಿಕೆ : ಅಂತವರಿರ್ವರ ನುಡಿಗಮರ್ಥದ್ರಷ್ಟೃತ್ವಕ್ಕಮನುರೂಪಮಾದುವೆನುತ್ತುಂ ಬರ್ಪನ್ನೆಗಂ (ಚಂದ್ರಪು. ೭–೮೬ ವ). [ಸಂ. (ಅರ್ಥ + ದ್ರಷ್ಟೃತ್ವ)]

**ಅರ್ಥಧಾರಿ** (ನಾ). (ಯಕ್ಷಗಾನ ಪ್ರಸಂಗದಲ್ಲಿ ಭಾಗವಹಿಸಿ) ಅರ್ಥವನ್ನು ವಿವರಿಸುವವನು : ಊರ ಪರಊರ ಅರ್ಥದಾ[ಧಾ]ರಿಗಳು ಸೇರಿ ತಾಳಮದ್ದಳೆ ಜರುಗಿದರೆ ಶಾಲೆಯಲ್ಲಿ ಪ್ರೇಕ್ಷಕರಿಗೆ ನಿಂತುಕೊಳ್ಳಲೂ ಕೂಡ ಸ್ಥಳವಿಲ್ಲದಾಗುತ್ತಿತ್ತು (ಕುರುಕಾ. ೭೩). [ಸಂ. ಅರ್ಥಧಾರಿನ್]

**ಅರ್ಥನಾಥ** (ನಾ). ಧನಾಧಿಪತಿ; ಕುಬೇರ. 'ಅರ್ಥನಾಥಸಖ' ಪರಾ. [ಅರ್ಥ + ನಾಥ]

**ಅರ್ಥನಾಥಸಖ** (ನಾ). ಕುಬೇರನ ಗೆಳೆಯ; ಈಶ್ವರ : ಅರ್ಥನಾಥಸಖಪ್ರತಿಮನಭಯಾರ್ಥರಾಗಿರ್ದವರನಧಿಕ ಸ್ವಾರ್ಥ ಕರುಣಾವರಣ ನಿಶ್ಚಲಭಾವದಲಿ ನೋಡಿ (ಬಸವು. ೮೬–೪೯). [ಅರ್ಥನಾಥ + ಸಖ]

**ಅರ್ಥನಿಶ್ಚಯ** (ನಾ). ಅರ್ಥವನ್ನು ಖಚಿತಮಾಡುವುದು; ತಾತ್ಪರ್ಯವನ್ನು ನಿರ್ಣಯಿಸುವುದು. [ಅರ್ಥ + ನಿಶ್ಚಯ]

**ಅರ್ಥನೀಯ** (ಗು). ಬೇಡುವುದಕ್ಕೆ ಯೋಗ್ಯನಾದ : ನ್ಯಾಯಪರಾರ್ಥನೀಯನಭಿಮಾನಧನಂ ಸುಜನಪ್ರಿಯಂ (ಪಂಚತಂ. ೩೧೧–೧೫೧). [ಸಂ.]

**ಅರ್ಥನೆ** (ನಾ). ಬೇಡಿಕೆ; ಕೋರಿಕೆ; ಯೋಚನೆ. [ಸಂ. ಅರ್ಥನಾ]

**ಅರ್ಥಪ** (ನಾ). = ಅರ್ಥದ ೨ : "ರಾಜರಾಜಂ ತ್ರಿಯಕ್ಷಸಖನೈಳಬಿಳನರ್ಥಪಂ [ಪಾಠಾಂ. ದಂ] ವೈಶ್ರವಣಂ . . . ಕುಬೇರನೆನಿಸಿಕ್ಕು" (ಮಂಗರಾ. ೧೬–೧೫). [ಸಂ.]

**ಅರ್ಥಪಂಚಕ** (ನಾ). [ವಿಶಿಷ್ಟಾ] ಮೋಕ್ಷವನ್ನು ಪಡೆಯಲು ಬಯಸುವವರು ತಿಳಿಯಬೇಕಾದ ಐದು ವಿಷಯಗಳು. ☞ ಸ್ವಸ್ವರೂಪ, ಪರಸ್ವರೂಪ, ಪುರುಷಾರ್ಥಸ್ವರೂಪ, ಉಪಾಯಸ್ವರೂಪ, ವಿರೋಧಿಸ್ವರೂಪ : ಸಂಸಾರಿಯಾದ ಚೇತನನಿಗೆ ತತ್ತ್ವಜ್ಞಾನವು ಹುಟ್ಟಿ ಉಜ್ಜೀವಿಸುವಲ್ಲಿ ಅರ್ಥಪಂಚಕಜ್ಞಾನವು ಅವಶ್ಯಕವು (ಅರ್ಥಪಂ. ೧). [ಅರ್ಥ + ಪಂಚಕ]

**ಅರ್ಥಪತಿ** (ನಾ). **೧.** ರಾಜ. **೨.** ಕುಬೇರ. [ಅರ್ಥ + ಪತಿ]

**ಅರ್ಥಪೋಷ** (ನಾ). ಅರ್ಥ ಸಾರ್ಥಕವಾಗುವಿಕೆ, —ಅನ್ವರ್ಥವಾಗುವಿಕೆ : ವಜ್ರಾಯುಧನೆಂಬ ದೊಡ್ಡಿವೆಸರಂ ಕೊಳದೊಳ್ ತನಗರ್ಥಪೋಷಮಾಮ್ನಾಯಮುನೀಯೆ ಪೌರನಿಕರಂ ಪರಿವೇಷ್ಟಿಸೆ . . . ತದ್ಘನದಿಂ ತಳರ್ದಂ ನೃಪಾತ್ಮಜಂ (ಶಾಂತಿಪು. ೮–೫೬). [ಅರ್ಥ + ಪೋಷ]

**ಅರ್ಥಪ್ರಕೃತಿ** (ನಾ). [ನಾಟ್ಯ] : "ಕಥಾವಿಸ್ತರೀಕರಣದ ದೃಷ್ಟಿಯಿಂದ, ವಸ್ತುವಿನಲ್ಲಿ ಐದು ಅಂಶಗಳು ಕಂಡುಬರುತ್ತವೆ. ಅವುಗಳಿಗೆ 'ಅರ್ಥಪ್ರಕೃತಿ' ಗಳೆಂದು ಹೆಸರು. ಅವು ಯಾವುವೆಂದರೆ :– ೧. ಬೀಜ, ೨. ಬಿಂದು, ೩. ಪತಾಕಾ, ೪. ಪ್ರಕರೀ, ೫. ಕಾರ್ಯ" (ಕೈಪಿಡಿ. ೨೦೭); ಬೀಜ ಬಿಂದು ಪತಾಕಾ ಪ್ರಕರೀ ಕಾರ್ಯ ಈ ಲಕ್ಷಣಗಳುಳ್ಳ ಐದು – ಅರ್ಥಪ್ರಕೃತಿಗಳೆಂದು ಕೀರ್ತಿತವಾಗಿವೆ (ದಶರೂ. ೧–೨೭). [ಅರ್ಥ + ಪ್ರಕೃತಿ]

**ಅರ್ಥಪ್ರತೀತಿ** (ನಾ). ಸ್ಪಷ್ಟವಾದ ತಾತ್ಪರ್ಯ; ನಿಶ್ಚಿತವಾದ ಅರ್ಥ : ಸಮುದಾಯಾರ್ಥಮನಾರಯೆ ಸಮನಿಸುವರ್ಥಪ್ರತೀತಿ ತೋಜ ದೊಡೆಲ್ಲಂ ಕ್ರಮಮುಮಕ್ಕುಮರ್ಥಶೂನ್ಯಂ ಸಮಸ್ತಕವಿವೃಷಭದೂರದೂಷಿತಮಾರ್ಗಂ (ಕವಿರಾ. ೧–೭೪). [ಅರ್ಥ + ಪ್ರತೀತಿ]

**ಅರ್ಥಪ್ರಧಾನ** (ಗು). ಅರ್ಥವೇ ಪ್ರಧಾನವಾಗಿ ಉಳ್ಳ : "ನಮ್ಮ ಕರ್ತವ್ಯಾಕರ್ತವ್ಯಗಳಿಗೆ ಸಾಧಕ ಬಾಧಕಗಳು ಕಂಡುಬರುವಂಥ ಕಥೆಗಳನ್ನು ರಸಪ್ರಾಧಾನ್ಯವಿಲ್ಲದೆ ಹೇಳಿ ನೀತಿಯನ್ನು ಸೂಚಿಸುವ ಪುರಾಣಾದಿಗಳು 'ಮಿತ್ರಸಮ್ಮಿತ'. ಇವು ಅರ್ಥಪ್ರಧಾನ" (ಕೈಪಿಡಿ. ೧೬೪ ಟಿ). [ಅರ್ಥ + ಪ್ರಧಾನ]

**ಅರ್ಥಪ್ರಯೋಗ** (ನಾ). ಬಡ್ಡಿಗಾಗಿ ಹಣವನ್ನು ಸಾಲ ಕೊಡುವುದು; ಲೇವಾದೇವಿ. [ಅರ್ಥ + ಪ್ರಯೋಗ]

**ಅರ್ಥಪ್ರವರ್ತನ** (ನಾ). ಹಣಕಾಸಿನ ವ್ಯವಹಾರ; ದ್ರವ್ಯಸಂಪಾದನೆಯ ಉದ್ಯೋಗ : ವಣಿಗ್ವಂಶಕ್ಕೆ ಜಳಸ್ಥಳ ಯಾತ್ರಾ ಸಂವೃತಮರ್ಥ [ಪಾಠಾಂ. ವೃತ್ತಿ, ವಾರ್ತಾ] ಪ್ರವರ್ತನಮುಮಂ . . . ನಿಜಿಸಿ (ಆದಿಪು. ೮–೭೩ ವ). [ಅರ್ಥ + ಪ್ರವರ್ತನ]

**ಅರ್ಥಪ್ರಾಶಸ್ತ್ಯ** (ನಾ). ಅರ್ಥಕ್ಕೆ ಮುಖ್ಯತೆ, —ಪ್ರಾಧಾನ್ಯ: ಅರ್ಥಪ್ರಾಶಸ್ತ್ಯವಿರುವ ಕಡೆ ಅರ್ಥಾಲಂಕಾರ (ಕೈಪಿಡಿ. ೨೫೧). [ಅರ್ಥ + ಪ್ರಾಶಸ್ತ್ಯ]

**ಅರ್ಥಯತಿ** (ನಾ). [ಛಂದ] ಅರ್ಥಕ್ಕೆ ಅನುಸಾರವಾಗಿ ಬರುವ ಯತಿ ಅಥವಾ ವಿರಾಮಸ್ಥಾನ: ಅರ್ಥಯತಿಯು ಕನ್ನಡಗಣ ವೃತ್ತಗಳಲ್ಲಿಯೂ, ಮಾತ್ರಾವೃತ್ತಗಳಲ್ಲಿಯೂ ಕಂಡುಬರುವುದು (ಸಾಹಿವಿ. IV, ೮). [ಅರ್ಥ + ಯತಿ]

**ಅರ್ಥಯುಕ್ತಿ** (ನಾ). ಅರ್ಥದ ಚಮತ್ಕಾರ: ಓಜೆಯೊಳುದಾತ್ತತೆ ಸೂಕ್ತಿಯೊಳರ್ಥಯುಕ್ತಿ (ಕುಸುಮಾ. ೧-೪೪). [ಅರ್ಥ+ ಯುಕ್ತಿ]

**ಅರ್ಥಯುತ** (ಗು). ೧. ಹಣವುಳ್ಳ. (ನಾ). ೨. ಹಣವುಳ್ಳವನು; ಶ್ರೀಮಂತ: ಕುಬೇರಮಂದಿರದೊಳರ್ಥಯುತಂ . . . ಅಕ್ಕುಮವಂ (ಜಾತತಿ. ೧೭-೧೯). [ಅರ್ಥ + ಯುತ]

**ಅರ್ಥರಹಿತ** (ನಾ). ಅರ್ಥವಿಲ್ಲದ್ದು: ಈ ಮಹೀಪತಿಗರಸಂಬೆರಡಕ್ಕರಮನ್ಯರೊಳರ್ಥರಹಿತಮನ್ವರ್ಥಮೀತನೊಳ್ ಮೃಗನಯನೇ (ಶಾಂತಿಪು. ೫-೧೨೨). [ಅರ್ಥ + ರಹಿತ]

**ಅರ್ಥರೇಖೆ** (ನಾ). ಅಂಗೈಯೊಳಗಿನ ಧನರೇಖೆ: ಅರ್ಥರೇಖೆಯಿದ್ದಲ್ಲಿ ಫಲವೇನು ಆಯುಷ್ಯರೇಖೆಯಿಲ್ಲದನ್ನಕ್ಕ (ಬಸವ. ೧೦೮). [ಅರ್ಥ + ರೇಖೆ]

**ಅರ್ಥಲಂಬಿ, ಅರ್ಥಳಂಬಿ** (ನಾ). ಅರ್ಥವನ್ನು ಅವಲಂಬಿಸಿರುವಂಥದು. **ಅರ್ಥಳಂಬಿ**: ಶಿಳಿ ತಾಂ ನೀನಾನೆಂಬರ್ಥಳಂಬಿಗಳ್ ಪ್ರಥಮ ಮಧ್ಯಮೋತ್ತಮ ಪುರುಷಂಗಳ್ (ಶಮದ. ೨೨೪). [ಸಂ. ಅರ್ಥಲಂಬಿನ್ (ಅರ್ಥ + ಲಂಬಿನ್)]

**ಅರ್ಥಲೋಪ** (ನಾ). [ಕಾವ್ಯಮೀ] ಪದದೋಷಗಳಲ್ಲಿ ಒಂದು: ಶಬ್ದಪುನರುಕ್ತಿ, ಅರ್ಥಪುನರುಕ್ತಿ, ಅರ್ಥಲೋಪ, ವಿರುದ್ಧಾರ್ಥ . . . ಎಂಟು ಶಬ್ದದೋಷಂಗಳು (ವಿವೇಕ. ೨೨೬). [ಅರ್ಥ + ಲೋಪ]

**ಅರ್ಥವಂತ** (ನಾ). ಹಣವುಳ್ಳವನು; ಧನಿಕ. [ಸಂ. ಅರ್ಥವತ್]

**ಅರ್ಥವರ್ತನ** (ನಾ). ಅರ್ಥದ ಇರುವಿಕೆ, —ವ್ಯಾಪ್ತಿ: ಪರಪದದೊಳರ್ಥವರ್ತನಮಿರೆ ತತ್ಪುರುಷಂ (ಶಮದ. ೧೬೪). [ಅರ್ಥ + ವರ್ತನ]

**ಅರ್ಥವಾದ** (ನಾ). ೧. ವಿಷಯವು ಮನಮುಟ್ಟುವಂತೆ ವಿವರಿಸುವುದು: ಅರ್ಥವಾದವಲ್ಲ ಮನಸುಪೂರ್ವಕದಿಂದ ಪ್ರಾರ್ಥನೆ ಮಾಡುವೆ ಅನಾದಿ ಬ್ರಹ್ಮಚಾರಿ (ಮೋಕ್ಷದೀ. ೬). ೨. ವಿವರಣೆಗಾಗಿ ಕೊಡುವ ದೃಷ್ಟಾಂತಪೂರ್ವಕವಾದ ಟೀಕೆ, —ಟಿಪ್ಪಣಿ: ದೋಷೋದ್ಘಾಟನೆ ಮತ್ತು ಅನುವಾದಗಳ ಮೂಲಕ ಗುರಿಮುಟ್ಟುವಂತೆ ಮಾಡುವ ವಿಷಯನಿರೂಪಣೆ ಅರ್ಥವಾದಗಳೂ ವಿಧಿಯೊಡನೆ ಏಕವಾಕ್ಯವಾಗಿ ಸ್ತುತ್ಯರ್ಥವಾಗಿರುವವಾದ್ದರಿಂದ ಬೇರೆಯ ಅರ್ಥವುಳ್ಳವಾಗಿ ದೇವಾದಿಗಳಿಗೆ ವಿಗ್ರಹಾದಿಗಳು ಉಂಟೆಂಬುದಕ್ಕೆ ಕಾರಣತ್ವವನ್ನು ಪಡೆಯಲಾರವು (ಬ್ರಹ್ಮಭಾ. ೯೯೪). ೩. ಗುಣಪ್ರಶಂಸೆ. [ಅರ್ಥ + ವಾದ]

**ಅರ್ಥವಿಜಯಿ** (ನಾ). [ರಾಜ್ಯಶಾ] ದೊರೆಗಳಲ್ಲಿರುವ ಮೂರು ಪ್ರಕಾರಗಳಲ್ಲಿ ಒಂದು: ಅರ್ಥವಿಜಯಿಯುಮಸುರವಿಜಯಿಯುಂ ಧರ್ಮವಿಜಯಿಯುಮೆಂದರಸುಗಳ್ಮೂವರಪ್ಪರ್ (ಕಗವಿ. ೪೮ ಚಾವುಂಪು). [ಸಂ. ಅರ್ಥವಿಜಯಿನ್ (ಅರ್ಥ + ವಿಜಯಿನ್)]

**ಅರ್ಥವಿವರಣೆ** (ನಾ). ಅರ್ಥವನ್ನು ವಿವರಿಸುವುದು. [ಅರ್ಥ+ವಿವರಣೆ]

**ಅರ್ಥವಿಷಯ** (ನಾ). ಹಣಕ್ಕೆ ಸಂಬಂಧಪಟ್ಟುದು: ದನುಜೆಯಲ್ಲಾಂ ಮನುಜೆಯಾನರ್ಥವಿಷಯದಾಪೇಕ್ಷೆಯಿಂ ಕೊಂಡೊಯ್ದು ಕೊಂದೆನು (ಹಚಕಾ. ೧೩-೬). [ಅರ್ಥ + ವಿಷಯ]

**ಅರ್ಥವಿಸು** 'ಅರ್ಥೈಸು' ನೋ.

**ಅರ್ಥವಿಹೀನ** (ನಾ). ಹಣವಿಲ್ಲದವನು; ಬಡವ: ಕುವಲಯಸಖನಿರೆ ವೃಷಭದೊಳವನಿಸುತಾದಿಗ್ರಹಂಗಳೇಕ್ಷಿಪೊಡವನರ್ಥವಿಹೀನಂ (ಜಾತತಿ. ೨೦-೨); ಏತಜ ಮಾತೊ ಭೂತಳದೊಳರ್ಥವಿಹೀನನ ಶೌಚಮುಣ್ಮು ಪೆರ್ಮಾತು ಕುಲಂ ನೆಗಟ್ಟೆಯಿನಿತುಂ ವಿಫಲಂ (ಕಾವ್ಯಾವ. ೫೩). [ಅರ್ಥ + ವಿಹೀನ]

**ಅರ್ಥವೃತ್ತಿ** (ನಾ). ಅರ್ಥದ ವಿವರಣೆ: ಪ್ರಾಸಚ್ಛಂದೋನ್ವಯವಿನ್ಯಾಸದಿನಂತಿಂತು ಶಬ್ದಮಿರ್ಕುಂ ವೃತ್ತಿವ್ಯಾಸಂ ತದ್ವ್ಯಾಕುಳಮೆಂದಾ ಸೂತ್ರಕ್ಕರ್ಥವೃತ್ತಿ ವರ್ತಿಸೆ ಬರೆದೆಂ (ಶಮದ. ೬ ಪೀ). [ಅರ್ಥ + ವೃತ್ತಿ]

**ಅರ್ಥವೇಳು** (ಕ್ರಿ). ಅರ್ಥವನ್ನು ಹೇಳು; ಅಭಿಪ್ರಾಯವನ್ನು ವಿವರಿಸು: ಅಸುರದಿಂ ಕಬ್ಬಕರ್ಥವೇಳುವ ಬುಧಾಭಾಸರಿಗಾನಂಜುವೆನು (ಕುರಾಸಾಂ. ೧-೮೦). [ಅರ್ಥ + ಪೇಳು (< ಪೇೞ್)]

**ಅರ್ಥವ್ಯಕ್ತ** (ನಾ). [ಕಾವ್ಯಮೀ] ಕಾವ್ಯಗುಣಗಳಲ್ಲಿ ಒಂದು; ಸ್ಪಷ್ಟಾರ್ಥತೆ: ಸರಸಿಜರಜದಿಂ ಕನಕಚ್ಛವಿಯಾದುದು ಕೊಳನೆನೆ ಸೂಕ್ತಮನೇಯಮಪ್ಪುದರ್ಥವ್ಯಕ್ತಂ (ಉದಯಾ. ೫-೧೬). [ಅರ್ಥ + ವ್ಯಕ್ತ]

**ಅರ್ಥವ್ಯಕ್ತಿ** (ನಾ). ೧. ಅರ್ಥವು ಸ್ಪಷ್ಟವಾಗಿರುವುದು: ಕ್ರಿಯಾಕಾರಕದೊಳ್ ಪುದಿದರ್ಥವ್ಯಕ್ತಿಯನೀವುದು ಗದ್ಯಮನೇಕರೂಪಭೇದವಿವಿಕ್ತಂ (ಕವಿರಾ. ೧-೨೫). ೨. [ಕಾವ್ಯಮೀ] ಕಾವ್ಯದ ಗುಣಗಳಲ್ಲಿ ಒಂದು: ಕವಿಭಾವಕೃತಾನೇಕಪ್ರವಿಭಾಗ ವಿವಿಕ್ತಸೂಕ್ತಮಾರ್ಗಂ ಕಾವ್ಯಂ ಸವಿಶೇಷಶಬ್ದರಚನಂ ವಿವಿಧಾರ್ಥವ್ಯಕ್ತಿವರ್ತಿತಾಲಂಕಾರಂ (ಕವಿರಾ. ೧-೨೨); ಪದಮಂ ಕೇಳ್ವಾಗಳೆಯರ್ಥಂ ತೋಱುವರೆ ಅರ್ಥವ್ಯಕ್ತಿಯೆನಿಪುದು (ಅಪ್ರತಿ. ೧೧-೧೬); ವರ್ಣಿಸುವ ವಸ್ತುವಿನಿರವು ವ್ಯಕ್ತಮಾಗಿ ತೋಱೆ ಅರ್ಥವ್ಯಕ್ತಿಯೆನಿಪುದು (ಅಪ್ರತಿ. ೧೮-೧೬). ℙ ಶಬ್ದ ಮತ್ತು ಅರ್ಥಗುಣಗಳೆರಡರಲ್ಲಿಯೂ ಬರುತ್ತದೆ. [ಅರ್ಥ + ವ್ಯಕ್ತಿ]

**ಅರ್ಥವ್ಯಾಪ್ತಿ** (ನಾ). ಶಬ್ದದಲ್ಲಿರಬಹುದಾದ ಅರ್ಥದ ವಿಸ್ತಾರ, —ಹರವು: ಪ್ರಯೋಗಗಳು ತೀರ ಸಾಮಾನ್ಯ ಶಬ್ದಗಳಲ್ಲಿದ್ದ ಅರ್ಥವ್ಯಾಪ್ತಿಯನ್ನೂ ಕಾವ್ಯಶಕ್ತಿಯನ್ನೂ ಎತ್ತಿ ತೋರಿಸುತ್ತವೆ (ನವ್ಯಕಾ. ೨೮). [ಅರ್ಥ + ವ್ಯಾಪ್ತಿ]

**ಅರ್ಥಶಾಸ್ತ್ರ** (ನಾ). ೧. ರಾಜನೀತಿ; ದಂಡನೀತಿ. ೨. ಕೌಟಲ್ಯ ರಚಿಸಿದ ರಾಜ್ಯನೀತಿಶಾಸ್ತ್ರದ ಗ್ರಂಥ: ಲೋಕಕ್ಕಿದರ್ಥಶಾಸ್ತ್ರದ ಟೀಕೆನಿಸಿದ ತನ್ನ ನುಡಿ ಮನಂಗೊಳಿಸೆ (ಪಂಪಭಾ. ೯-೧೪). ೩. ದ್ರವ್ಯೋತ್ಪಾದನೆಯನ್ನೂ ಅದರ ವಿತರಣೆಯನ್ನೂ ತಿಳಿಸುವ ಶಾಸ್ತ್ರ. [ಅರ್ಥ + ಶಾಸ್ತ್ರ]

**ಅರ್ಥಶೂನ್ಯ** (ನಾ). [ಕಾವ್ಯಮೀ] ಕಾವ್ಯದೋಷಗಳಲ್ಲಿ ಒಂದು: ಸಮುದಾಯಾರ್ಥಮನಾರಯೆ ಸಮನಿಸುವರ್ಥಪ್ರತೀತಿ ತೋಱದೊಡೆಲ್ಲಂ ಕ್ರಮಮಕ್ಕುಮರ್ಥಶೂನ್ಯಂ (ಕವಿರಾ. ೧-೭೮). [ಅರ್ಥ + ಶೂನ್ಯ]

**ಅರ್ಥಶೌಚ** (ನಾ). ಇತರರ ವಸ್ತುವನ್ನು ಅಪಹರಿಸದ ಅಥವಾ ಬಯಸದ ಗುಣ: ಪರಸ್ವವನ್ನು ಅಪಹರಿಸಲೂ ಬಾರದು, ಅಪೇಕ್ಷಿಸಲೂ ಬಾರದು-ಹಾಗಿರುವುದು ಅರ್ಥಶೌಚವು (ಅರ್ಜುಧ. ೯೯). [ಅರ್ಥ+ಶೌಚ]

**ಅರ್ಥಶ್ಲೇಷ** (ನಾ). [ಕಾವ್ಯಮೀ] ಶಬ್ದಗಳಿಗೆ ಎರಡೆರಡು ಅರ್ಥವಾಗುವಂತೆ ಹೇಳುವುದು: "ಎರಡರ್ಥಮೊಂದೆ ಶಬ್ದಾಂತರದೊಳ್ ನೆಗಟ್ಟಿಂತು ಪೇಟ್ಟುದರ್ಥಶ್ಲೇಷಂ" (ಕಾವ್ಯಾವ. ೭೫೩). ಉದಾ: ಶ್ರೀವಿಶದವರ್ಣೆ ಮಧುರಾರಾವೋಚಿತೆ ಚತುರ ರುಚಿರ ಪದರಚನೆ ಚಿರಂ ದೇವಿ ಸರಸ್ವತಿ ಹಂಸೀಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್ (ಕವಿರಾ. ೧-೩); ನಾಡೊಳ್ ಕೀಟೆಂಬುದು ಕುದುರೆಯ ಬಾಯ ಕಬ್ಬಿಣದೊಳ್ ಕವರೆಂಬುದು ಚಪ್ಪರದೊಳ್, ಬಂದಿಯೆಂಬುದು ತೊಡವಿನೊಳ್ . . . ಅಲ್ಲದಿಲ್ಲ (ಕಬ್ಬಿಕಾ. ೨೫). 'ಶಬ್ದಶ್ಲೇಷ' ಪರಾ. [ಅರ್ಥ + ಶ್ಲೇಷ]

**ಅರ್ಥಸಂಕ್ರಮಣ** (ನಾ). (ಪ್ರಕರಣ ವಿಶೇಷದಿಂದ) ಬೇರೊಂದು ಅರ್ಥವುಂಟಾಗುವುದು ; ಅರ್ಥಸಂಯೋಗ : ಸಮಭಿರೂಢನಯಾಪೇಕ್ಷೆಯಿಂ ಇಂದ್ರಾದಿಶಬ್ದಂಗಳ್ ಅರ್ಥಾಂತರಕಲ್ಪನೆಯಂ ಪಡೆವವೊಲ್ ಮತ್ಯಾದಿಗಳುಂ ಅರ್ಥಸಂಕ್ರಮಣಮುಂಟಾಗಿಯುಂ ಮತಿಜ್ಞಾನಾವರಣೀಯಕ್ಷಯೋಪಶಮನಿಮಿತ್ತೋಪಯೋಗಮುಮಂ ಅತಿಕ್ರಮಿಸದುದಱಿಂ ಈಯರ್ಥಂ ವಿವಕ್ಷಿಸೆಪಟ್ಟುದು (ತತ್ತ್ವಪ್ರ. ೫೪). [ಅರ್ಥ + ಸಂಕ್ರಮಣ]

**ಅರ್ಥಸಂಚಯ** (ನಾ). ಹಣದ ರಾಶಿ ; ಹಣದ ಶೇಖರಣೆ ; ದ್ರವ್ಯ ಸಂಗ್ರಹ : ಬೇಡುವೆನರ್ಥಸಂಚಯಮನೆಂಬುದಿದುತ್ತರಮಾರ್ಗವಾಚಕಂ (ಕವಿರಾ. ೨-೧೦೦). [ಅರ್ಥ + ಸಂಚಯ]

**ಅರ್ಥಸಂಪತ್ತು** (ನಾ). ಹಲವು ಅರ್ಥಗಳಿರುವುದು : (ಶಬ್ದಸಮೂಹ, ಅರ್ಥಸಂಪತ್ತು, ಅಲಂಕಾರವೈಚಿತ್ರ್ಯ, ಉಕ್ತಿಕ್ರಮ ಮುಂತಾದವು ಮನಸ್ಸಿನಲ್ಲಿ ಪ್ರತಿಫಲಿಸುವಂತೆ ಮಾಡತಕ್ಕದ್ದೇ ಪ್ರತಿಭೆ) (ಕೈಪಿಡಿ. ೧೭೪ ಅಡಿಟ). [ಅರ್ಥ + ಸಂಪತ್ತು]

**ಅರ್ಥಸಂವರಣೆ** (ನಾ). ಹಣವನ್ನು ಬಚ್ಚಿಡುವುದು : ಅರ್ಥಸಂವರಣೆಯನರ್ಥಮಂ ಪಡೆಗುಂ (ಪಾರ್ಶ್ವಪು. ೧೨-೪೦). [ಅರ್ಥ + ಸಂವರಣೆ]

**ಅರ್ಥಸಿದ್ಧಿ** (ನಾ). ಉದ್ದೇಶಿಸಿದ ಅಭಿಪ್ರಾಯದ ಸಾಧನೆ ನೆರವೇರುವುದು : ಆದರೆ ಅಷ್ಟಕ್ಕೆ ನಿಲ್ಲದೆ ಮುನ್ನುಗ್ಗಿ ತನ್ನ ಉತ್ಸಾಹಪೂರ್ಣ ಪ್ರತಿಭಾ ಅರ್ಥಸಿದ್ಧಿಯನ್ನು ಸಾಧಿಸಿಕೊಟ್ಟಿತು (ನವ್ಯಕಾ. ೧೧೭). [ಅರ್ಥ + ಸಿದ್ಧಿ]

**ಅರ್ಥಹೀನ** (ಗು). ೧. ಅರ್ಥಶೂನ್ಯವಾದ. (ನಾ). ೨. ಹಣವಿಲ್ಲದವನು ; ಬಡವ. [ಅರ್ಥ + ಹೀನ]

**ಅರ್ಥಳಂಬಿ** 'ಅರ್ಥಲಂಬಿ' ನೋ.

**ಅರ್ಥಾಂತರ** (ನಾ). ೧. ಬೇರೊಂದು ಅರ್ಥ : ಏನಾದರೂ ಕಾರಣದಿಂದ ಶಬ್ದವನ್ನು ಅರ್ಥಾಂತರದಿಂದ ಪ್ರಯೋಗಿಸುವುದು (ಧ್ವನ್ಯಾಲೋ. ೨೦೦). ೨. ಬೇರೊಂದು ವಿಷಯ, —ವಸ್ತು. ೩. ವಿರುದ್ಧವಾದ ಅರ್ಥ. [ಅರ್ಥ + ಅಂತರ]

**ಅರ್ಥಾಂತರನ್ಯಾಸ** (ನಾ). [ಕಾವ್ಯಮೀ] "ಸಾಮಾನ್ಯಾರ್ಥ ವಿಶೇಷಾರ್ಥಗಳೆರಡೂ ಉಕ್ತವಾಗಿದ್ದು ಒಂದರಿಂದ ಒಂದು ಸಮರ್ಥಿತವಾಗುತ್ತಿದ್ದರೆ ಅರ್ಥಾಂತರನ್ಯಾಸಾಲಂಕಾರವಾಗುವುದು"(ಕೈಪಿಡಿ. ೨೭೦) ; "ಸಾಮಾನ್ಯ ವಿಶೇಷಂಗಳಂ ಪೇೞ್ವುದು ಅರ್ಥಾಂತರನ್ಯಾಸಂ" (ಅಪ್ರತಿ. ೧೦೫-೧೭) ; ಲಕ್ಷ್ಯ : ಅತುಲಬಲ ವಿಕ್ರಮಪ್ರಾನ್ವಿತಸಸಮರ್ಥಂಗೆ ಮುನಿಯಲಱಿಗುಮೆಯಧಿಕೋನ್ನತ ಗಜನಿವಹಂ ಭೂಜಪ್ರತತಿಯನುಡಿವಂತೆ ಪುಲ್ಲನೇನುಡಿದಪುದೇ (ಕೈಪಿಡಿ. ೨೭೦). [ಅರ್ಥಾಂತರ + ನ್ಯಾಸ]

**ಅರ್ಥಾಂತರವಿನ್ಯಾಸ** (ನಾ). [ಕಾವ್ಯಮೀ] = ಅರ್ಥಾಂತರನ್ಯಾಸ : ದೊರೆಕೊಳೆ ಪೇೞ್ದರ್ಥಮನಾದರದಿಂ ಸಾಧಿಸಲೆವೇಡಿ ಪೆಱತೊಂದರ್ಥಾಂತರಮಂ ಪೇೞ್ವುದದರ್ಥಾಂತರವಿನ್ಯಾಸಾಖ್ಯಂ (ಕವಿರಾ. ೩-೨೮). [ಅರ್ಥಾಂತರ + ವಿನ್ಯಾಸ]

**ಅರ್ಥಾಗಮ** (ನಾ). ಹಣದ ಆದಾಯ ; ದ್ರವ್ಯ ಬರುವುದು : "ಅರ್ಥಾಗಮಂ ಭಾಗಧೇಯಮಾಯಂ" (ಮಂಗರಾ. ೭೯-೭). [ಅರ್ಥ + ಆಗಮ]

**ಅರ್ಥಾತ್** (ಅ). ತಾತ್ಪರ್ಯವೇನೆಂದರೆ ; ಅಭಿಪ್ರಾಯವೇನೆಂದರೆ ; ಎಂದರೆ : "ವ್ಯವಹಾರ, ವಸೂಲಿ, ಹ್ಯಾಂಗ ನಡದದ, ಬಾಯ್ರಿ ?" ಎಂದು ಕೇಳಿದರು. ಅರ್ಥಾತ್ ನರಸಹರಿಯು ಮನೆಯಲ್ಲಿಲ್ಲದಾಗ ಈ ಮಾತು ನಡೆದಿದ್ದವು (ಸಮಜೀ. ೨೦೯). [ಸಂ.]

**ಅರ್ಥಾನುರೂಪ** (ಗು). ಅರ್ಥಕ್ಕೆ ಹೊಂದುವಂತಿರುವ ; ಅರ್ಥಕ್ಕೆ ಸರಿಹೋಗುವ : ಅನ್ವರ್ಥನಾಮಂ ಗುಣಾನುರೂಪಮೆಂದುಂ, ಅರ್ಥಾನುರೂಪಮೆಂದುಮಿರ್ತೆಱನಾಗಿರ್ಪುದು . . . ಅರ್ಥಾನುರೂಪಾನ್ವರ್ಥಕ್ಕೆ – ಹೆಟಿಗಾಲಂ, ನಿಡುಮೂಗಂ, ಕುಸಿಗೊರಲಂ (ಶಮದ. ೭೬ ವೃತ್ತಿ, ಪ್ರಯೋ). [ಅರ್ಥ + ಅನುರೂಪ]

**ಅರ್ಥಾಪತ್ತಿ** (ನಾ). ೧. [ಕಾವ್ಯಮೀ] ಕಾವ್ಯಾಲಂಕಾರಗಳಲ್ಲಿ ಒಂದು : "ಕಂಡುದಾದೊಡಂ ಕೇಳ್ದುದಾದೊಡಮೊಂದು ವಸ್ತು ಪೆಱತೊಂದು ವಸ್ತುವಿಲ್ಲದೆ ಕೂಡದೆಂಬುದರಿಂದಾ ಪೆಱತೊಂದು ವಸ್ತುವಂ ಕಲ್ಪಿಪ್ಪುದರ್ಥಾಪತ್ತ್ಯಲಂಕಾರಂ" (ಅಪ್ರತಿ. ೧೫೦-೧೦). ೨. [ತರ್ಕಶಾ] ಪ್ರತ್ಯಕ್ಷಾದಿ ಪ್ರಮಾಣಗಳಲ್ಲಿ ಒಂದು : "ಅರ್ಥಾಪತ್ತಿಯೆಂದರೆ ಒಂದಂಶದಿಂದ ಮತ್ತೊಂದಂಶವನ್ನು ಕಲ್ಪಿಸುವುದು" (ಹಿಂದಸಾ. ೨೦೩). [ಅರ್ಥ + ಆಪತ್ತಿ]

**ಅರ್ಥಾಭಾಸ** (ನಾ). ಅರ್ಥ ತೋರುವಂತೆ ಕಂಡರೂ ಅರ್ಥವಿಲ್ಲದಿರುವುದು : ಅರ್ಥಾಭಾಸದಿನಕ್ಷರಸಾರ್ಥಮನುಚ್ಚರಿಸೆ ಕಾವ್ಯಮೆಂತೆಸೆಗುಂ ತತ್ತ್ವಾರ್ಥಮನಱಿಯದ ಮುನ್ನಮಪಾರ್ಥಂ ರಂಜಿಸದ ಪಳಿಕುಮಣಿಯವೊಲಿರದೇ (ಜಗವಿ. ೧-೧೪). [ಅರ್ಥ + ಅಭಾಸ]

**ಅರ್ಥಾರ್ಥಿ** (ನಾ). ೧. ಹಣವನ್ನು ಬಯಸುವವನು. ೨. ಯಾವುದಾದರೂ ಪ್ರಯೋಜನವನ್ನು ಬಯಸುವವನು. ೧, ೨ : ಭಟ್ಟಂ ರಕ್ಷಣಾರ್ಥಮಂ ಬಗೆಯದೆ ಅರ್ಥಾರ್ಥಿಯಾಗಿ ಪೋಗಲ್ಬಗೆದು (ಪಂಚತಂ. ೧೮೪-೧೭). [ಸಂ. ಅರ್ಥಾರ್ಥಿನ್ (ಅರ್ಥ + ಅರ್ಥಿನ್)]

**ಅರ್ಥಾಲಂಕಾರ** (ನಾ). [ಕಾವ್ಯಮೀ] ಕಾವ್ಯಾಲಂಕಾರಗಳಲ್ಲಿ ಒಂದು ವಿಭಾಗ ; ಅರ್ಥಕ್ಕೆ ಸಂಬಂಧಿಸಿದ ಚತುರೋಕ್ತಿ : ಅರ್ಥಾಲಂಕಾರಗಳು ನೈಸರ್ಗಿಕವಾಗಿರುವ ಸೌಂದರ್ಯವನ್ನು ಹೆಚ್ಚಿಸುವ ರತ್ನಖಚಿತವಾದ ಕುಂದಣದ ಒಡವೆಗಳಂತಿದ್ದರೆ, ಶಬ್ದಾಲಂಕಾರಗಳು ಸದ್ದಿಗೋಸ್ಕರ ಕಟ್ಟಿಕೊಂಡಿರುವ ಗೆಜ್ಜೆಪಾಡಗಗಳಂತಿರುವುವೆಂದು ಹೇಳಬಹುದು (ಕೈಪಿಡಿ. ೨೪೮). [ಅರ್ಥ + ಅಲಂಕಾರ]

**ಅರ್ಥಾಲಂಕೃತಿ** (ನಾ). = ಅರ್ಥಾಲಂಕಾರ. [ಅರ್ಥ + ಅಲಂಕೃತಿ]

**ಅರ್ಥಾವಲಂಬನ** (ನಾ). ೧. ಹಣದ ಆಸರೆ. ೨. ದ್ರವ್ಯವನ್ನೇ ಮುಖ್ಯವಾಗಿ ಅವಲಂಬಿಸಿರುವುದು ; ಹಣವನ್ನೇ ಮುಖ್ಯವಾಗಿ ಆಶ್ರಯಿಸಿರುವುದು : ಬಹಳಾರ್ಥಾವಲಂಬನವೀ ಮುಖಪ್ರಾರಂಭವಿಸ್ತಾರ (ಕುವ್ಯಾಸ. ೭-೨೫). [ಅರ್ಥ + ಅವಲಂಬನ]

**ಅರ್ಥಾವೃತ್ತಿ** (ನಾ). [ಕಾವ್ಯಮೀ] ದೀಪಕಾಲಂಕಾರದಲ್ಲಿ ಒಂದು ಬಗೆ ; ಯಾವುದಾದರೂ ಪದ್ಯದಲ್ಲಿ ಅಥವಾ ಗದ್ಯಭಾಗದಲ್ಲಿ (ಒಂದೇ ಅರ್ಥವುಳ್ಳ ಬೇರೆಬೇರೆ ಪದಗಳು) ಮತ್ತೆ ಮತ್ತೆ ಚಮತ್ಕಾರವಾಗುವಂತೆ ಬರುವುದು : "ಶಬ್ದಂ ಬೇಱಾಗಿರ್ದೊಡಮರ್ಥಂ ಬಳಸಿಬರೆ ಅರ್ಥಾವೃತ್ತಿದೀಪಕಮೆಂದುಂ" (ಅಪ್ರತಿ. ೫೮-೧೭) ; ಉದಾ— ಅಲರ್ದುವು ಕುಟಜಂಗಳ್ ಪೂತುವಿಂಬಪ್ಪಿನಂ ಕಂದಲಿ ಕುಸುಮಿಸಿದತ್ತುದ್ದಾಮ ನೀಪಾವನೀಜಾವಲಿ ಬಿರಿದುವೆ ಜಾತೀಯೂಥಿಕಾ ಕೇತಕೀಸಂಕುಲಂ (ಕಾವ್ಯಾವ. ೬೫೫). [ಅರ್ಥ + ಆವೃತ್ತಿ]

**ಅರ್ಥಿ**$_1$ 'ಅಟ್ಟಿ$_1$' ನೋ.

**ಅರ್ಥಿ**$_2$ (ನಾ). ೧. ಬೇಡುವವನು ; ಬಯಸುವವನು ; ಯಾಚಕ : ಅರ್ಥಿಗರ್ಥಮಂ ಕೆಸವಿನ ಲೆಕ್ಕಮೆಂದು ಕುಡಲುಂ (ಪಂಪಭಾ. ೧-೧೧೭). ೨. ಸೇವಕ. ೩. ವಾದಿ. [ಸಂ. ಅರ್ಥಿನ್]

**ಅರ್ಥಿಕಾಱ** 'ಅಟ್ಟಿಕಾಱ' ನೋ

**ಅರ್ಥಿಕುಲ** (ನಾ). = ಅರ್ಥಿಗಣ : ಬರುತಿರ್ದನರ್ಥಿಕುಲವಾರಿಜದಿವಾಕರಂ (ನಂಬಿರ. ೫-೮೮). [ಅರ್ಥಿ$_2$ + ಕುಲ]

**ಅರ್ಥಿಗಣ** (ನಾ). ಬೇಡುವವರ ಗುಂಪು ; ಯಾಚಕರ ಸಮೂಹ : ನೋಡುವೆನಾ ಮಹೀಪತಿಯನರ್ಥಿಗಣಾರ್ಥಿತ ಕಲ್ಪವೃಕ್ಷನಂ (ಕವಿರಾ. ೨-೧೦೦). [ಅರ್ಥಿ$_2$ + ಗಣ]

**ಅರ್ಥಿಜನ** (ನಾ). ಯಾಚಕರು ; ಬೇಡುವವರು : ಕೊಟ್ಟನರ್ಥಿಜನಕ್ಕಾ ದಿವಿಜೇಂದ್ರಂ (ಶಾಂತಿಪು. ೧೧-೧೦) ; ಬೀರಕೆ ಬೀಯಕ್ಕಿಜೀವ ಬೆಡಂಗನೊಳಾರ್ದೊರೆ ನೆಱೆ ತೋರ್ಕುಮೆ ಶತ್ರುಜನಕ್ಕಮರ್ಥಿಜನಕ್ಕಂ (ಗದಾಯು. ೧-೧೮). [ಅರ್ಥಿ$_2$ + ಜನ]

**ಅರ್ಥಿತ** (ಗು). ಬೇಡಿದ ; ಬಯಸಿದ : ಪ್ರಾರ್ಥಿಸಿದ : ಅರ್ಥಿತ ಫಲದಾಯಿಯಾಗಿಯುಂ ನಿನ್ನೊಳ್ ತಾಂ ವ್ಯರ್ಥತೆಯಂ ಪಡೆಗುಂ ಪರಮಾರ್ಥನಚೇತನತೆಯಿಂದೆ ಕಲ್ಪಕುಜಾತಂ (ಕವಿರಾ. ೩-೪೪). [ಸಂ.]

**ಅರ್ಥಿನಿ** (ನಾ). ಅಪೇಕ್ಷೆಯುಳ್ಳವಳು : ಅನಪತ್ಯೆ ಪತಿವ್ರತೆ ಕೈಯನೆತ್ತಿದಳ್ ತೊಡುಗೆಗಳ್ಗೆ ಕರಮರ್ಥಿನಿ[ಪಾಠಾಂ. ಗೆ] ರೂಪಿನ ಕಣಿ ನಿಪುಣೆ (ಜಾತಕ. ೧೯-೭). [ಸಂ. ಅರ್ಥಿನೀ]

**ಅರ್ಥಿನಿಚಯ** (ನಾ). = ಅರ್ಥಿಗಣ : ಅಲಂಘ್ಯತೇಜನುಮುವನತರಿಪುಸಮಾಜನುಂ ಸಫಲೀಕೃತಾರ್ಥಿನಿಚಯಾಶನುಂ (ಚಂದ್ರಪು. ೨-೬೫). [ಅರ್ಥಿ + ನಿಚಯ]

**ಅರ್ಥಿಬಡು** 'ಅಱ್ತಿವಡು' ನೋ.

**ಅರ್ಥಿವಡು** 'ಅಱ್ತಿವಡು' ನೋ.

**ಅರ್ಥಿಸಮಿತಿ** (ನಾ). = ಅರ್ಥಿಗಣ : ಅದಿತಿಜ ಕುಜಂ ಎನಿಸಿದನರ್ಥಿಸಮಿತಿಗೆಲ್ಲಂ ಮಲ್ಲಂ (ಸೌಇಇ. XI–ii, ೧೪೭-೫೦ ; 1099). [ಅರ್ಥಿ$_2$ + ಸಮಿತಿ]

**ಅರ್ಥಿಸಾರ್ಥ** (ನಾ). ಯಾಚಕರ ಗುಂಪು : ಪರಮಾರ್ಥಂ ವಿದ್ವದರ್ಥಂ ತವಿಸದನ ಧನಂ ವ್ಯರ್ಥಮೆಂದರ್ಥಿಸಾರ್ಥಂ . . . ವಿಬುಧತತಿಗೆ ಪೊನ್ನಂ . . . ಕರೆದೀವಂ ಬೊಪ್ಪದೇವಂ (ಎಕ. V, ಬೇಲೂರು. ೧೨೪-೪೪ ; 1133). [ಅರ್ಥಿ$_2$ + ಸಾರ್ಥ]

**ಅರ್ಥಿಸು**, ಅರ್ತಿಸು$_2$ (ಕ್ರಿ). ಬೇಡು ; ಯಾಚಿಸು : ಪಾರ್ಥನೈದುವುದಿಂದ್ರಕೀಲದೊಳರ್ಥಿಸಲಿ ಶಂಕರನನಖಿಳಸ್ವಾರ್ಥಸಿದ್ಧಿಗೆ (ಕುವ್ಯಾಅ. ೫-೧೭) ; ತನಗನ್ಯರ್ ಗಡ ತನ್ನನರ್ಥಿಸುವವರ್ (ಶತಕ. ೧೧೭-೬೭). **ಅರ್ತಿಸು$_2$** (ಕ್ರಿ). [ಅರ್ಥ + -ಇಸು$_3$]

**ಅರ್ಥೇಶ** (ನಾ). = ಅರ್ಥಪತಿ : "ಸುರರಾಜನಗ್ನಿ ಕಾಲಂ ನಿರುತಿ ವರುಣನಾ ಮರುತಂ ಕುಬೇರನೀಶಂ [ಪಾಠಾಂ. ನರ್ಥೇಶನೀಶಂ] ದಿಶಾಧಿಪರು" (ಮಂಗರಾ. ೧೭-೧೮). [ಅರ್ಥ + ಈಶ]

**ಅರ್ಥೇಷಣ** (ನಾ). ಹಣದ ಬಯಕೆ ; ದ್ರವ್ಯದ ಮೇಲಿನ ಆಸೆ ; ಐಶ್ವರ್ಯಾಪೇಕ್ಷೆ. [ಅರ್ಥ + ಈಷಣ]

**ಅರ್ಥೈಸು**, ಅರ್ಥವಿಸು (ಕ್ರಿ). ಅರ್ಥಮಾಡು ; ಅರ್ಥವನ್ನು ಹೇಳು ; ವಿವರಿಸು : ಇಪ್ಪತ್ತೇಳು ವಚನಂಗಳಿಗೆ ಅರ್ಥಮಂ ತಾನೆ ಅರ್ಥೈಸಿದ ನೆಲ್ಲಾ ಶಿವಗಣಂಗಳಱಿವಂತೆ (ಕವಿಚ. II, ೬೩ ಮಂತ್ರಗೋ) ; ಅರಗಿಳಿ ಪಠಿಸಲರ್ಥೈಸುವ ಚಾಣಾಂಕಿ ಪರಭೃತಗಾನಶ್ರುತಿಗೆ ಸರಗೊಡುವಳಿ (ಶ್ರೀಪಾಲ. ೧೨-೪) ; ರಾಘವಾಂಕ ಪಂಡಿತ ನಿನ್ನ ಪದ್ಯ ತಪ್ಪು ಎನಲು ಅದಕೆ ಅರ್ಥಸಮುಸ್ಯಕ್ಕೆ ಪದ್ಯವಂ ಕೂಡಿಸಿ ಅರ್ಥೈಸಿಯೆನೆ (ಭೈರಸೂ. ೩೫). **ಅರ್ಥವಿಸು** : ಅರ್ಥಿಯೊಳು ಪರತತ್ತ್ವ ಸ್ವಾನುಭವಾರ್ಥಿಗಳಿಗೆ ಮಹತ್ತ್ವ ತತ್ತ್ವಮನರ್ಥವಿಸಿಯರ್ಥವಿಸಿ ತತ್ಸುಖರಸವನೆಱೆದೆಱೆದು (ಬಸಪು. ೬-೨೮) ; ಪುಲಿಗೆಱೆಯ ತಿರುಳ್ಗನ್ನಡ ಎಲ್ಲ ವಿಧದಲ್ಲಿಯೂ ತನ್ನದೇ ಆದ ಪ್ರತ್ಯೇಕ ಲಕ್ಷಣವುಳ್ಳ ದೇಸಿ ಎಂದು ಅರ್ಥವಿಸಕೊಡದು (ತವನಿ. ೭೭). [ಅರ್ಥ + -ಇಸು$_3$]

**ಅರ್ಥೋಕ್ತಿ** (ನಾ). ತಾತ್ಪರ್ಯವು ಸ್ಪಷ್ಟವಾಗುವಂತಹ ಮಾತು : ಸುಕಥಾಳಾಪಮನೋತು ಪೇಟ್ದುದು ಪದಾರ್ಥಾರ್ಥೋಕ್ತಿಯಿಂ ಶಾಸ್ತ್ರವಸ್ತು ಕವೀಂದ್ರರ್ ಬಗೆಗೊಳ್ವಿನಂ (ಸುಕುಮಾ. ೧-೪೬). [ಅರ್ಥ + ಉಕ್ತಿ]

**ಅರ್ಥೋತ್ಕರ** (ನಾ). ಅಭಿಪ್ರಾಯದ ಸಮೂಹ : ಅತಿಶಯಮಿತಿಹಾಸೋಪಾಶ್ರಯಂ ಮೇಣ್ ಕಥಾವಿಶ್ರುತ ಚತುರ ವಿ[ಕಾ]ಶೋತ್ಪಾದಿತಾರ್ಥೋತ್ಕರಂ (ಕವಿರಾ. ೩-೨೧೯). [ಅರ್ಥ + ಉತ್ಕರ]

**ಅರ್ಥೋಪಕ್ಷೇಪಕ** (ನಾ). [ನಾಟ್ಯ] ದೃಶ್ಯಕಾವ್ಯಗಳಲ್ಲಿ ಅಂಕಗಳ ಮೊದಲಿಗೆ ಅಥವಾ ಕೊನೆಗೆ, ನಡುವೆ ಬಿಟ್ಟುಹೋದ ಕಥೆಯನ್ನಾಗಲಿ, ಮುಂದೆ ಬರುವ ಪಾತ್ರಗಳ ಸನ್ನಿವೇಶವನ್ನಾಗಲಿ, ಸೂಚಿಸಲು ಬರುವ ಐದು ಸೂಚನೆಯ ಸಾಧನೆಗಳಲ್ಲಿ ಒಂದು : ವಿಷ್ಕಂಭ, ಚೂಲಿಕಾ, ಅಂಕಾಸ್ಯ, ಅಂಕಾವತಾರ, ಪ್ರವೇಶಕ – ಈ ಐದು ಅರ್ಥೋಪಕ್ಷೇಪಕಗಳಿಂದ ಸೂಚ್ಯ(ವಾದ ವಸ್ತುಭಾಗ)ವನ್ನು ಪ್ರತಿಪಾದಿಸತಕ್ಕದ್ದು (ದಶರೂ. ೧-೧೧೫) ; ನೀರಸವಾದ ಅಥವಾ ಅನುಚಿತವಾದ ವಸ್ತುಭಾಗಗಳು ದೃಶ್ಯಕಾವ್ಯದಲ್ಲಿ 'ಅರ್ಥೋಪಕ್ಷೇಪ'ಕಗಳಿಂದ ಸೂಚಿಸಲ್ಪಡಬೇಕು. ಮಧುರವಾಗಿಯೂ, ಉದಾತ್ತವಾಗಿಯೂ, ರಸಭಾವ ಪರಿಪೂರ್ಣವಾಗಿಯೂ ಇರುವ ಭಾಗಗಳು ಮಾತ್ರ ನೋಟಕ್ಕೆ ಯೋಗ್ಯವಾದವು. ಅರ್ಥೋಪಕ್ಷೇಪಕಗಳು ಯಾವುವೆಂದರೆ :– ೧. ವಿಷ್ಕಂಭ, ೨. ಪ್ರವೇಶಕ, ೩. ಚೂಲಿಕಾ, ೪. ಅಂಕಾಸ್ಯ, ೫. ಅಂಕಾವತಾರ (ಕೈಪಿಡಿ. ೨೦೬). [ಅರ್ಥ + ಉಪಕ್ಷೇಪಕ]

**ಅರ್ಥೋಪಾರ್ಜನ** (ನಾ). ಹಣದ ಸಂಪಾದನೆ : ಶುದ್ಧವೃತ್ತಿಯಿಂದರ್ಥೋಪಾರ್ಜನಂಗೆಯ್ವ ವಾರ್ತೆಯುಂ (ಆದಿಪು. ೧೫-೧೩ ವ). [ಅರ್ಥ + ಉಪಾರ್ಜನ]

**ಅರ್ಥೌಘ** (ನಾ). ಹಣದ ರಾಶಿ ; ನಿಧಿ ; ಸಂಪತ್ತು. [ಅರ್ಥ + ಓಘ]

**ಅರ್ಥ್ಯ** (ಗು). ೧. ಬೇಡತಕ್ಕ ; ಬಯಸಬಹುದಾದ. ೨. ಯೋಗ್ಯವಾದ. (ನಾ). ೩. ಹಣವಂತ ; ಶ್ರೀಮಂತ. ೪. ತಿಳಿವಳಿಕೆಯುಳ್ಳವನು. ೫. ಕರ್ಪೂರಶಿಲಾಜಿತು. [ಸಂ.]

**ಅರ್ದಿಡು** (ಕ್ರಿ). ಆಳವಾಗಿ ಚುಚ್ಚು, —ತಿವಿ : ಎಮಗಾರ್ ಶರಣೆಲ್ಲಿಗೆ ಪೋಪೆವೆಂದು ಮೆಳ್ಪಡಿನಸಿಪತ್ರನಂದನಮನೊಯ್ಯನೆ ಸಾರ್ವುದುಮಲ್ಲಿ ಮೈಯೊಳರ್ದಿಡುವುವು ಪತ್ರ ಪುಷ್ಪ ಫಲಸಂಕುಳದಂದದ ಶಸ್ತ್ರಕೋಟಿಗಳ್ (ಆದಿಪು. ೫-೮೮). [ಅರ್ದು (< ಅಱ್ದು) + ಇಡು]

**ಅರ್ದಿಸು$_1$**, ಅದ್ದಿಸು$_1$ (ಕ್ರಿ). ಮುಳುಗಿಸು : ಪುಸಿ ಕೊಲೆ ಕಳವು ಪರಸ್ತ್ರೀವ್ಯಸನಂ ಬಹುವಿಧಪರಿಗ್ರಹಂ ನರರಂ ಬಂಧಿಸಲೀ ಭವಾಬ್ಧಿಯೊಳಗರ್ದಿಸಲಾರ್ಕುಂ ದ್ಯೂತ ಮದ್ಯಮಾಂಸವ್ಯಸನಂ (ಅಜಿಪು. ೨-೬೭). **ಅದ್ದಿಸು$_1$** : ನೀರ ಬಟ್ಟಲ ತರಿಸಿ ಕೆಯ್ಗಳನ್ನದರೊಳದ್ದಿಸಿ ತೊಳೆದು (ಗೊಲ್ಲಾಥಾ. ೨೨೩). [ಅರ್ದು (< ಅಱ್ದು) + -ಇಸು$_3$]

**ಅರ್ದಿಸು$_2$**, ಅದ್ದಿಸು$_2$ (ಕ್ರಿ). ೧. ಮರ್ದಿಸು ; ಹಿಂಸಿಸು ; ನೋಯಿಸು : ಧೇವವೃಂದವನದ್ದಿಸುವೆನೆನೆ ಶಂಭು ದಾನವನುದ್ದುರುಟನೆಂದಱಿದು ನಿಂದಾ ದೈತ್ಯಗಿದಿರಾಗಿ ಅದ್ದರಕ್ಷೆಯೊಳವನನಾಕ್ಷಣಕದ್ದಿದನು ಭಯರಸದಿ (ಸಂಭಪ. ೬-೩೨). ೨. ಸೋಲಿಸು ; ಅಡಗಿಸು : ತನ್ನನರ್ಚಿಸಿರ್ಪಾತನನೊಯ್ಯಲೆಯ್ದಿದ ಕೃತಾಂತನನರ್ದಿಸಿದಂ ಮಹೇಶ್ವರಂ (ರಾಜಶೇ. ೩-೯೩) ; ಅರ್ದಿಸಿ ಕಾಯಗುಣಂಗಳಂ ಮನಂ ಮಿಸುಕದ ಮಾಟ್ಕೆಯಿಂ ತಡೆದು ಭಕ್ತಿಯೊಳಾಂ ಪಿಡಿವೆಂ ಮೃಡಾಂಘ್ರಿಯುಂ (ಶಬಶಂ. ೨-೯೦). **ಅದ್ದಿಸು$_2$ : ೧, ೨** : ಶಿವನು ತನ್ನಿಂದ ‖ ಬಿದ್ದರೆಂದತ್ಯಧಿಕ ದೇವರನದ್ದಿಸಿದೆನಾನೆಂದ ಕಾರಣ ರುದ್ರನನು ಶಾಪಿಸಿದ ವಾಣೀಪತಿಯು (ಕುವ್ಯಾಅ. ೦೨೧೯. ೩೩-೩೫, ೩೭). [ಅರ್ದನ$_0$ + -ಇಸು$_3$]

**ಅರ್ದು** 'ಅಱ್ದು' ನೋ.

**ಅರ್ಧ** (ನಾ). ೧. ಎರಡು ಸಮಪಾಲುಗಳಲ್ಲಿ ಒಂದು : ಅರೆ ವಸ್ತುವಿನರ್ಧವನುಸಿರುತ್ತಿರೆ ತಗಳ್ಚುವುದು ಸಂಹಿತೆಯಂ (ಶಮುದ. ೬೪). ೨. ಒಂದು ಅಂಶ ; ಸ್ವಲ್ಪಭಾಗ.

**ಅರ್ಧಂಬರ್ಧ, ಅರ್ಧಮರ್ಧ** = ಪೂರ್ತಿಯಾಗದ ; ಸ್ವಲ್ಪ ಭಾಗ ಮಾತ್ರ ; ಅಪೂರ್ಣ : ಹೆದರಿಕೊಂಡೇ ಅರ್ಧಂಬರ್ಧ ಮಾತುಗಳಲ್ಲಿ . . . ಹೇಳಿದಾಗ ಅವರು ರೌದ್ರಾವೇಶವನ್ನೇ ತಾಳಿದರು (ಮುಂಗಾಮು. ೪೮) ; ಅರ್ಧಂಬರ್ಧ ಓದಿಕೊಂಡಿದ್ದ ರತ್ನಳೂ ಗಂಡಾಂತರದಲ್ಲಿ ಸಂಪೂರ್ಣವಾಗಿ ಅದನ್ನು ಮರೆತುಬಿಟ್ಟಿದ್ದಳು (ಅವತಂ. ೨೧೧) ; ಬಂದಪ್ಪನು ಎಲ್ಲಿಯೋ ಕೇಳಿದ ಅರ್ಧಮರ್ಧ ಹಳಿಲಾವಣಿಪದ ಒಂದನ್ನು ಹಾಡುತ್ತಾ ಕುಣಿಯುತ್ತಾ ಪ್ರವೇಶಿಸುವನು (ಅಮಗಾಂ. ೨೩). [ಸಂ.]

**ಅರ್ಧಕಪೋಳಿತ** (ನಾ). [ಗಜ] ಆನೆಯ ಮದದ ಏಳು ಅವಸ್ಥೆಗಳಲ್ಲಿ ಮೂರನೆಯದು : ಆ ಪಟ್ಟಣದ ನರಸಿಂಗಮೊನೆಯರ ಪಟ್ಟದಾನೆ ಸಂಚಿತ ತಿಲಕಿತ ಅರ್ಧ [ಪಾಠಾಂ. ಆರ್ದ, ಆರ್ವ] ಕಪೋಳಿತ ಅತಿವರ್ತಿತ ಅಧೋನಿಬಂಧಿನಿ ಕ್ರೋಧಿನಿ ಗಂಧಚಾರಿಣಿಯೆಂಬ ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ (ನಂಬಿರ. ೨–೨೧).
[ಸಂ. ಅರ್ಧಕಪೋಲಿತ]

**ಅರ್ಧಕಪ್ಪಟೆ** (ನಾ). ಅರ್ಧವಸ್ತ್ರ ; ಸ್ವಲ್ಪ ಬಟ್ಟೆ.

**ಅರ್ಧಕಪ್ಪಟೆ ತೀರ್ಥಕರ** = ಅರ್ಧಶರೀರ ಮಾತ್ರ ಮುಚ್ಚುವಂತೆ ಬಟ್ಟೆಯನ್ನುಟ್ಟ ಗುರು ; ಅಡ್ಡಹೊದಿಕೆಯನ್ನು ಹೊದೆದ ಗುರು : ಬಿಳಿಯ ಕಂಬಳಿಯಂ ಪೊದೆದಿನ್ಮಡಿಸಿರ್ದ ಸೀರೆಯನುಟ್ಟು . . . ಬರ್ಪುದುಳಿದಂತೆ ಬರ್ಪುವನರ್ಧಕಮುಕ್ಕುಮೆಂದೊಡಂಬಡಿಸಲಾ ಪ್ರಕಾರದಿಂ ಕೆಲವು ದಿನಂ ಪೋಗಲವರ್ಗರ್ಧಕಪ್ಪಟೆತೀರ್ಥಕರರೆಂಬ ಪೆಸರಾಗಲ್ (ಪುಣ್ಯಾಸ್ರ. ೯–೧೮ ವ). 'ಅರ್ಧಗಪ್ಪಡ' ಪರಾ. [ಅರ್ಧ + ಕಪ್ಪಟೆ]

**ಅರ್ಧಗಪ್ಪಡ** (ನಾ). = ಅರ್ಧಕಪ್ಪಟೆ : ಕೈಯನೆಟಲಿಕ್ಕಿಯರ್ಧಗಪ್ಪಡ ಮನೆಡದ ಮುಯ್ಯಿನ ಮೇಗಿಕ್ಕಿ (ವಡ್ಡಾರಾ. ೯೨–೧೭) ; ಇಂತರ್ಧಗಪ್ಪಡದ ತೀರ್ಥಪಾರಂಪರ್ಯದಿಂದಂ (ವಡ್ಡಾರಾ. ೯೩–೪). [ಅರ್ಧ + ಕಪ್ಪಡ]

**ಅರ್ಧಗುಚ್ಛ** (ನಾ). "ಇಪ್ಪತ್ತುನಾಲ್ಕು ಎಳೆಗಳುಳ್ಳ ಹಾರ" (ಅದಿಪು. ಕೋಶ) ; "ನೂಱುಸರದ ಮುತ್ತು ದೇವಚ್ಛಂದಂ ಎಂಬುದು. ಅಯ್ವತ್ತು ಸರದ ಮುತ್ತು ಮಾಣವಕ ಎಂಬುದು. ಹಾರಃ, ಗುಚ್ಛಃ, ಅರ್ಧಗುಚ್ಛಃ, ಗೋಪುಚ್ಛಃ –ಎಂಬಿವು ಕ್ರಮದಿಂದಂ ಕುಂದುತ್ತಾ ಬರಲಪ್ಪುವು" (ಹಲಾಯು. ೯೨–೪೦೮) ; ತುಡಲ್ಕೆ ಯೋಗ್ಯಮಪ್ಪ ಸಾಸಿರದೆಂಟು ತೋರ ಮುತ್ತಿನ ಸರದಿಂ ಪ್ರಚ್ಛಂದಂ ಮೊದಲಾಗೆ ವಿಜಯಚ್ಛಂದಾರ್ಧಹಾರ ದೇವಚ್ಛಂದಾರ್ಧಹಾರ ರಶ್ಮಿಕಳಾಪಗುಚ್ಛ ನಕ್ಷತ್ರಮಾಲಾರ್ಧಗುಚ್ಛ ಮಾಣವಕಾರ್ಧಮಾಣವಕಂಗಳೆಂಬ ಪನ್ನೊಂದು ನಾನಾರತ್ನದ ಸುವರ್ಣ ಪದಕ ವಿರಚನಾದಿಭೇದದಿಂ (ಆದಿಪು. ೮–೫೪ ವ). [ಅರ್ಧ + ಗುಚ್ಛ]

**ಅರ್ಧಗೋಲ,** ಅರ್ಧಗೋಳ (ನಾ). ೧. ಗೋಳದಲ್ಲಿ ಅರ್ಧಭಾಗ. ೨. ಭೂಮಿಯ ಅರ್ಧಭಾಗ. **ಅರ್ಧಗೋಳ** : ೧. ಗೋಳದ ಒಂದು ಭಾಗದ ನಕ್ಷೆಯೆತ್ತುವುದಕ್ಕೆ ಆದರಲ್ಲಿಯೂ ಅರ್ಧಗೋಳ ನಕ್ಷೆಯೆತ್ತಲು ಮಾತ್ರ ಇದು ಉಪಯೋಗವಾಗುತ್ತದೆ (ಭೂವಿವ. ೩೧).
[ಅರ್ಧ + ಗೋಲ]

**ಅರ್ಧಗೋಳ** 'ಅರ್ಧಗೋಲ' ನೋ.

**ಅರ್ಧಚಂದ್ರ** (ನಾ). ೧. ಅರ್ಧಭಾಗ ಮಾತ್ರ ಕಾಣುವ ಚಂದ್ರ. ೨. ಅರ್ಧಚಂದ್ರನ ಆಕಾರದ ಬಾಣ ; ಕವಲಂಬು : "ಅರ್ಧಚಂದ್ರಮೆಂಬುದು ಹೆಱೆಯಂಬು" (ಹಲಾಯು. ೭೭–೩೧೫) ; "ಅರ್ಧಚಂದ್ರಮೆನೆ ಕವಲಂಬು" (ಮಂಗರಾ. ೮೭–೩೫) ; ದಡಿಗ ಬಿಲುಜೇವಡೆದು ಬಾಣವ ತೊಡಚಿ ಸುರಿದನು ಗಂಧಮಾದನ ಪಡೆಗೆ ರವಿಸುತನೆಡೆಗೆ ಮೋಹಿದನರ್ಧಚಂದ್ರಗಳ (ಕೌಶಿರಾ. ೧೯–೧೪). ೩. ನೃತ್ಯದಲ್ಲಿ ಒಂದು ಅಭಿನಯ ಮುದ್ರೆ : ಪತಾಕ, ಅರ್ಧಚಂದ್ರ, ತ್ರಿಪತಾಕ, ಪದ್ಮಕೋಶ, ಅಲಪದ್ಮ, ಹರಿಸ್ಯ . . . ಮೊದಲಾದ ನೂರಾರು ಹಸ್ತಮುದ್ರೆಗಳಿವೆ (ಬಾಲಪ್ರ. II, ೯೧). ೪. ಹೆಬ್ಬೆರಳು ತೋರ್ಬೆರಳುಗಳ ನಡುವಣ ಪ್ರದೇಶದಿಂದ ಕೊರಳನ್ನು ಹಿಡಿದು ತಳ್ಳುವುದು: ನೂಂಕಿದನೆಂಬೊಂದರ್ಧದೊಳ್ ಅರ್ಧಚಂದ್ರನನಿತ್ತನೆಂದು ನಕಾರಮುಪಚಾರಮಾಯ್ತು (ಶಮುದ.೧೦೭ ವೃತ್ತಿ); ರಾಜಮಂಡಲವಾದರೂ ನಿಶ್ಚಿತ ನ್ಯಾಯಬುದ್ಧಿ ಇಟ್ಟು ನಡೆಯದೆ ನಿಯಾಸನಿಗೆ ಅರ್ಧಚಂದ್ರವಿತ್ತಿತು (ನೂರಜ.೭). ೫.[ಜ್ಯೋತಿ] ಒಂದು ಯೋಗದ ಹೆಸರು. 'ಅರ್ಧಚಂದ್ರಯೋಗ' ಪರಾ.

**ಅರ್ಧಚಂದ್ರಪ್ರಯೋಗವಮಾಡು** = ಕುತ್ತಿಗೆ ಹಿಡಿದು ಹೊರಗೆ ನೂಕು. [ಅರ್ಧ + ಚಂದ್ರ]

**ಅರ್ಧಚಂದ್ರಕ** (ನಾ). [ಕಾಮಶಾ] ಅರ್ಧಚಂದ್ರಾಕೃತಿಯ ಉಗುರಿನ ಗಾಯ : ಪಂಚನಖಯೋಗ, ದ್ವಂದ್ವಯೋಗ, ಅರ್ಧಚಂದ್ರಕ, ಮಂಡಲ . . . ಎಂಬ ಸಪ್ತವಿಧ ನಖೋಪಕ್ಷತ (ವಿವೇಕ. ೨೩೦).
[ಅರ್ಧ + ಚಂದ್ರಕ]

**ಅರ್ಧಚಂದ್ರಪ್ರಸವ** (ನಾ). ಅರ್ಧಚಂದ್ರಯೋಗದಲ್ಲಿ ಹುಟ್ಟಿದವನು : ಅರ್ಧಚಂದ್ರಪ್ರಸವ ನರಂ ಸುಭಗನೆನಿಸುಗುಂ ಬುಧಮಿತ್ರಾ (ಜಾತತಿ. ೧೩–೧೯). [ಅರ್ಧಚಂದ್ರ + ಪ್ರಸವ]

**ಅರ್ಧಚಂದ್ರಯೋಗ** (ನಾ). [ಜ್ಯೋತಿ] "ಲಗ್ನಕ್ಕೆ ಎರಡನೆಯ ಸ್ಥಾನ (ಫಣಪರ) ದಿಂದ ಏಳುಸ್ಥಾನಗಳಲ್ಲಾಗಲೀ ಮೂರನೆಯ ಸ್ಥಾನ (ಅಪೋಕ್ಲೀಬ) ದಿಂದ ಏಳುಸ್ಥಾನಗಳಲ್ಲಾಗಲೀ ಏಳು ಗ್ರಹಗಳೂ ಇದ್ದರೆ ಅರ್ಧಚಂದ್ರಯೋಗ" (ಜಾತತಿ. ೧೩–೧೦ ಅಡಿಟ) ; ಉದಯದ ಪಣಫರದಿಂದಸ್ತದೆಡೆವರಂ ನಿಂದೊಡಂ ವಿಲಗ್ನಾಪೋಕ್ಲೀಬದಿನಸ್ತದೆಡೆವರಂ ನೆಲಸಿದೊಡಂ ಗ್ರಹಮೇೞುಮರ್ಧಚಂದ್ರಂ ಯೋಗಂ (ಜಾತತಿ. ೧೩–೧೦). [ಅರ್ಧಚಂದ್ರ + ಯೋಗ]

**ಅರ್ಧಚಂದ್ರಾಚೂಡ** (ನಾ). ಅರ್ಧಚಂದ್ರನನ್ನು ಮುಡಿಯಲ್ಲಿ ಧರಿಸಿದವನು ; ಶಿವ : ನೋಡಲಾಗದು ಜೂಜನಾಡುವ ಗಾಡಿಗನನೆಂದರ್ಧಚಂದ್ರಾಚೂಡನೊಲ್ಲದೆ ಬಿಟ್ಟನೇ ವ್ಯಸನಾರ್ಧದಿಂ ಜೂಜನಾಡಿ ಧರ್ಮಜಮುಖ್ಯರಳಿದರು (ಬಸಪು. ೪೪–೬೪). [ಸಂ. ಅರ್ಧಚಂದ್ರಚೂಡ]

**ಅರ್ಧಚಕ್ರವರ್ತಿ** (ನಾ). [ಜೈನ] ಮೂರು ಖಂಡಗಳಿಗೆ ಅಧಿಪತಿಯಾದ ಸಮ್ರಾಟ : ನಿಖಿಳ ಖೇಚರ ಲಲಾಮಾಯಮಾನಂ ತ್ರಿಖಂಡಾಧಿಪಂ ಅರ್ಧಚಕ್ರವರ್ತಿಯಪ್ಪ ಹಯಗ್ರೀವಂ (ಶಾಂತಿಪು. ೫–೨೬ ವ) ; ಅರ್ಧಚಕ್ರವರ್ತಿಗಳ್ ಮಾಳ್ಪ ಚತುರ್ಮುಖವೆಂಬ ಪೂಜೆಯುಂ (ಸುಕುಮಾ. ೬–೨೫ ವ). [ಸಂ. ಅರ್ಧಚಕ್ರವರ್ತಿನ್]

**ಅರ್ಧನಾರಿ$_1$** (ನಾ). ಒಂದು ಅರ್ಧಭಾಗ ಕಪ್ಪು ಬಣ್ಣ, ಇನ್ನೊಂದು ಅರ್ಧಭಾಗ ಕೆಂಪು ಬಣ್ಣದಿಂದ ಕೂಡಿರುವುದು : ಗಱಿಯಿಸುವ ತಮಮಂ ಮೂಡಲ್ ಪೊಱೆಗಟ್ಟುವ ಸಂಜೆಗೆಂಪು ಪಡುವಲ್ ಕೈಕೊಂಡೆಟಲೆ ಧರೆಗರ್ಧನಾರಿಯ ತಱೆವಿಡಿದಂತಾಯ್ತು ಗಗನಮಂಡಲಮಿನಿಸುಂ (ಅನಂಪು. ೭–೭೨). [ಅರ್ಧ + ನಾರಿ ?]

**ಅರ್ಧನಾರಿ$_2$** (ನಾ). ಪಾರ್ಶ್ವವಾಯು ; ಲಕ್ವ : ತನ್ನ ಬಲವಮನಿತುಮರ್ಧನಾರಿಯ ಬಲದಂತಿರಡಂಗಿಯುಂ ವೃದ್ಧನ ಬಲದಂತಿರಱಿದು ಪೋಗಿಯುಂ (ಅನಂಪು. ೧೪–೭ ವ). [< ಸಂ. ಅರ್ಧನಾಡೀ ?]

**ಅರ್ಧನಾರಿ$_3$** (ನಾ). ದೇಹದ ಅರ್ಧಭಾಗ ಹೆಣ್ಣುರೂಪಾಗಿರುವುದು : ರೂಪರ್ಧನಾರಿಯಾಯ್ತು ವಿರೂಪಾಕ್ಷಂಗೆ (ಕಾವ್ಯಾವ. ೭೨೪) ; ಕರದಲ್ಲಿ ಕಪಾಲವ ಪಿಡಿದವನ ಅರ್ಧನಾರಿಯಾದವನ ಬಾಣನ ಬಾಗಿಲ ಕಾಯ್ದವನ (ಬಸವ. ೫೦೩). [ಅರ್ಧ + ನಾರಿ]

**ಅರ್ಧನಾರೀಶ್ವರ** (ನಾ). ಶರೀರದ ಎಡಭಾಗ ಹೆಣ್ಣಿನ ಆಕಾರವಾಗಿಯೂ ಬಲಭಾಗ ಗಂಡಿನ ಆಕಾರವಾಗಿಯೂ ಇರುವ ಈಶ್ವರ. [ಅರ್ಧನಾರಿ₃ + ಈಶ್ವರ]

**ಅರ್ಧಪ್ರಸ್ತಾರ** (ನಾ). [ಛಂದ] ಒಂದು ಪದ್ಯದ ಪೂರ್ವಾರ್ಧಕ್ಕಾಗಲಿ ಉತ್ತರಾರ್ಧಕ್ಕಾಗಲಿ ಹಾಕುವ ಪ್ರಸ್ತಾರ: ಮುರಜಂ ಅರ್ಧಪ್ರಸ್ತಾರದಿಂ ಗೋಮೂತ್ರಿಕೆಯಕ್ಕುಂ (ಕಾವ್ಯಾವ. ೫೭೭). [ಅರ್ಧ + ಪ್ರಸ್ತಾರ]

**ಅರ್ಧಭ್ರಮಣ** (ನಾ). [ಕಾವ್ಯಮಿಾ] ಒಂದು ಬಗೆಯ ಶಬ್ದಚಿತ್ರದ ಕವಿತ್ವ: ಉದಾ— ಶ್ರೀರಾಮಾಧಾಮ ನಾಮಂ ತಾರಾರಾರಾರಾಸಮಾಸಮಂ ಮಾರಾರಿ ನಿನ್ನೊಳ್ ಸಮಾನಾಧಾರಾ ನಿನ್ನೂತನೊಳ್ ಸಮಂ (ಕಾವ್ಯಾವ. ೫೮೦). [ಅರ್ಧ + ಭ್ರಮಣ]

**ಅರ್ಧಮಂಡಳಿಕ** (ನಾ). ಅರ್ಧಮಂಡಲಕ್ಕೆ ಒಡೆಯ; ಚಿಕ್ಕ ಸಾಮಂತರಾಜ: ಅರ್ಧಮಂಡಳಿಕರ್ ಮಾಳ್ಪ ಸರ್ವತೋಭದ್ರಮೆಂಬ ಪೆಸರಂ . . . ಬಗೆದು (ಆದಿಪು. ೧೫–೧೩ ವ). [ಅರ್ಧ + ಮಂಡಳಿಕ]

**ಅರ್ಧಮಾಗಧಿ** (ನಾ). ಪ್ರಾಕೃತಭಾಷಾವರ್ಗಕ್ಕೆ ಸೇರಿದ ಒಂದು ಭಾಷೆ; ಜೈನಾಗಮಗಳ ಭಾಷೆ. [ಸಂ. ಅರ್ಧಮಾಗಧೀ]

**ಅರ್ಧಮಾಣವಕ** (ನಾ). ಹನ್ನೆರಡು ಎಳೆಗಳುಳ್ಳ ಮುತ್ತಿನ ಹಾರ: ಮಾಣವಕಾರ್ಧಮಾಣವಕಂಗಳೆಂಬ ಪನ್ನೊಂದು ನಾನಾರತ್ನದ ಸುವರ್ಣಪದಕವಿರಚನಾದಿ ಭೇದದಿಂ (ಆದಿಪು. ೮–೫೪ ವ). [ಅರ್ಧ + ಮಾಣವಕ]

**ಅರ್ಧಮಾನ್ಯ** (ನಾ). ಕಂದಾಯದಲ್ಲಿ ಅರ್ಧ ರಿಯಾಯಿತಿಯನ್ನು ಪಡೆದಿರುವ ಭೂಮಿ. (ರೈಸ್‌ಗೆ. ೫೪೨). [ಅರ್ಧ + ಮಾನ್ಯ]

**ಅರ್ಧಮಾನ್ಯದಾರ** (ನಾ). ಅರ್ಧಮಾನ್ಯವಾಗಿ ಭೂಮಿಯನ್ನು ಪಡೆದಿರುವವನು (ರೈಸ್‌ಗೆ. ೫೪೨). [ಅರ್ಧಮಾನ್ಯ + -ದಾರ್₃]

**ಅರ್ಧಮೈ** (ನಾ). = ಅರ್ಧಾಂಗ: ನಿಸ್ಸಾರವಾದ ಸಂಸಾರದೊಳಂಗನೆಯೊರ್ವಳೆ ಸಾರವೆಂದರಿತು ತನ್ನರ್ಧಮೈಯೊಳು ತಾನಾಗಿ ಗಿರಿಶನೆ ಗಿರಿಜೆಯನಾಂತಿಹನೋತು (ಇಂಚಾಪ. ೧೭೫–೬೧). [ಅರ್ಧ + ಮೈ (< ಮೆಯ್)]

**ಅರ್ಧರಥ** (ನಾ). ೧. ಒಮ್ಮೆ ಧೈರ್ಯದಿಂದಲೂ, ಮತ್ತೊಮ್ಮೆ ಅಧೈರ್ಯದಿಂದಲೂ, ಹಲವು ವೇಳೆ ಎಚ್ಚರತಪ್ಪಿಯೂ ಯುದ್ಧಮಾಡುವ ರಥಿಕ. ೨. ತನ್ನೊಡನೆ ಇನ್ನೊಬ್ಬರನ್ನು ಸಹಾಯಕ್ಕೆ ಕರೆದುಕೊಂಡು ರಥದಲ್ಲಿ ನಿಂತು ಯುದ್ಧಮಾಡಬಲ್ಲ ರಥಿಕ: ರಥಿಗಳನಗ್ರಸ್ಥಿತ ಸಾರಥಿಗಳನಿಸೆ ಸೀರಪಾಣಿ ಸಲೆ ರಥದ ಮನೋರಥದೊಡನೆ ಮಡಿದರಂದತಿರಥ ಸಮರಥರಾ ಮಹಾರಥಾರ್ಧರಥರ್ಕಳ್ (ಶಾಂತಿಪು. ೪–೧೨); ಕೃತ ಶಸ್ತ್ರವಿದ್ಯರಪ್ರತಿಹತ ಭುಜಬಲರುಭಯಬಲದ ರಥಿಗಳ್ ಗತಜೀವಿತರಾದರ್ ಸಂಗ್ರಾಮದೊಳತಿರಥ ಸಮರಥ ಮಹಾರಥಾರ್ಧರಥರ್ಕಳ್ (ಪಂರಾಮಾ. ೧೩–೭೨). [ಅರ್ಧ + ರಥ]

**ಅರ್ಧರಾತ್ರಿ** (ನಾ). ಮಧ್ಯರಾತ್ರಿ; ನಡುರಾತ್ರಿ: ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧರಾತ್ರಿಯಲ್ಲಿ ಕೊಡೆ ಹಿಡಿಸಿಕೊಂಡನಂತೆ (ಗಾದೆ). [ಅರ್ಧ + ರಾತ್ರಿ]

**ಅರ್ಧವಿರಾಮ** (ನಾ). ವಿರಾಮ ಚಿಹ್ನೆಗಳಲ್ಲಿ ಒಂದು ಗುರುತು (;): ಅಲ್ಪವಿರಾಮ, ಅರ್ಧವಿರಾಮ, ಪೂರ್ಣವಿರಾಮಗಳನ್ನು ಅರಿತುಕೊಳ್ಳಬೇಕು (ಮುಂಬಯಿ. ೨–೮). [ಅರ್ಧ + ವಿರಾಮ]

**ಅರ್ಧವಿಸದಿ** (ನಾ). (?): ಲಂಜಿಗೇಶ್ವರಂ ದೇವರ್ಕೆ ಪೂನಿಜುವ ಮಾಲ(ಲಾ)ಕಾರಗ್ಗೆ ಅರ್ದ್ಧವಿಸದಿ ಇತ್ತೊದಾನ್ ಅೞಿವೊನ್ ಪಂಚಮಹಾಪಾತಕನಕುಂ(ಕ್ಕುಂ) (ಇಅ. X, ೬೦–೩ ; 578). [ಅರ್ಧ + ವಿಸದಿ ?]

**ಅರ್ಧವಿಸರ್ಗ** (ನಾ). ಕ, ಖ ಎಂಬ ಅಕ್ಷರಗಳ ಹಿಂದೆ ಉಚ್ಚಾರವಾಗುವ ವಿಸರ್ಗದ (ᳵ) ಎಂಬ ಚಿಹ್ನೆ; ಜಿಹ್ವಾಮೂಲೀಯ; ಪ, ಫ ಎಂಬ ಅಕ್ಷರಗಳ ಹಿಂದೆ ಬರುವ ಅರ್ಧಸೊನ್ನೆಗಳುಳ್ಳ ಚಿಹ್ನೆ; ಉಪಧ್ಮಾನೀಯ. [ಅರ್ಧ + ವಿಸರ್ಗ]

**ಅರ್ಧಸಮ** (ನಾ). = ಅರ್ಧಸಮವೃತ್ತ: ಸಮಂ ಅರ್ಧಸಮಂ ವಿಷಮಮೆಂದು ವೃತ್ತಂ ಮೂಱು ತೆಱನಕ್ಕುಂ (ಛಂದೋಂಬು. ೧–೬೭). [ಅರ್ಧ + ಸಮ]

**ಅರ್ಧಸಮವೃತ್ತ** (ನಾ). [ಛಂದ] "ಒಂದು ಮೂರನೆಯ ಪಾದಗಳೂ ಎರಡು ನಾಲ್ಕನೆಯ ಪಾದಗಳೂ ಸಮನಾಗಿರುವುದು ಅರ್ಧಸಮವೃತ್ತವು" (ಕೈಪಿಡಿ. ೭೮). [ಅರ್ಧಸಮ + ವೃತ್ತ]

**ಅರ್ಧಸ್ವರ** (ನಾ). ಅರ್ಧಸ್ವರದಂತೆ ಇರುವ ವ್ಯಂಜನ; ಯ, ವ ಎಂಬ ಅಕ್ಷರಗಳಲ್ಲಿ ಒಂದು: ಸ್ವರಸಂಧಿಯಲ್ಲಿ ಆಗಮವಾಗುವ ಯ, ವ ಎಂಬ ಅಕ್ಷರಗಳು ಉಚ್ಚಾರಣೆಯ ಸೌಕರ್ಯವನ್ನು ಅನುಸರಿಸಿ ಬರುವುವು, ವ್ಯಂಜನಗಳಾದರೂ ಇವು ಅರ್ಧಸ್ವರಗಳೆಂದು ಪರಿಗಣಿತವಾಗಿವೆ (ಕೈಪಿಡಿ. ೮). [ಅರ್ಧ + ಸ್ವರ]

**ಅರ್ಧಹಾರ** (ನಾ). "ಅರವತ್ತುನಾಲ್ಕು ಎಳೆಗಳುಳ್ಳ ಮುತ್ತಿನ ಹಾರ" (ಆದಿಪು. ಕೋಶ); ದೇವಚ್ಛಂದಾರ್ಧಹಾರರಶ್ಮಿಕಲಾಪಗುಚ್ಛಮಾಣವಕಾರ್ಧಮಾಣವಕಂಗಳೆಂಬ ಪನ್ನೊಂದು ನಾನಾರತ್ನಸುವರ್ಣಪದಕವಿರಚನಾದಿ ಭೇದದಿಂ . . . ಅದ ಹಾರಂಗಳುಮಂ (ಆದಿಪು. ೮–೫೪ ವ). [ಅರ್ಧ + ಹಾರ]

**ಅರ್ಧಾಂಗ** (ನಾ). ಅಂಗದಲ್ಲಿ ಅರ್ಧಭಾಗ; ಶರೀರದಲ್ಲಿ ಅರ್ಧ: ಸರ್ವಪಿತನರ್ಧಾಂಗದಲ್ಲಿಹ ಸರ್ವಮಾತೆ ಕಡಂಗಿ ಬಂದಳು (ಬಸಪು. ೫೦–೮). [ಅರ್ಧ + ಅಂಗ₂]

**ಅರ್ಧಾಂಗವಾಯು** (ನಾ). (ಉಕ) ದೇಹದ ಅರ್ಧಭಾಗದ ಚಲನೆಯನ್ನು ಉಡುಗಿಸುವ ವಾತರೋಗ; ಪಾರ್ಶ್ವವಾಯು: ಅರ್ಧಾಂಗವಾಯುವಿನಿಂದ ಅವರ ಕಾಲುಗಳೆರಡೂ ಕೆಲಸಕ್ಕೆ ಬಾರದಂತಾಗಿವೆ (ಜನಜೀ. ೨). [ಅರ್ಧಾಂಗ + ವಾಯು]

**ಅರ್ಧಾಂಗಿ** (ನಾ). ಹೆಂಡತಿ: ವಿಷ್ಣುವಿನ ಅರ್ಧಾಂಗಿ ಲಕ್ಷ್ಮಿ (ಬಸವ. ೮೩೦); ವಸುದೇವನರ್ಧಾಂಗಿ ರೋಹಿಣಿದೇವಿ (ಜಗವಿ. ೨–೮೭ ವ). [ಸಂ. ಅರ್ಧಾಂಗೀ]

**ಅರ್ಧಾಯ** (ನಾ). ೧. ಅರ್ಧಆದಾಯ. ೨. ಅರ್ಧಪಾಲು: ಬಳಿಕ ಪಾಂಡವರಿಗರ್ಧಾಯವಮಂ ಕೊಡದ ಕಾರಣದಿಯುಭಯತ್ರರಿಂಗೆ ಜಗಳಾಗಿರ್ದುದು (ತುರಂಗ. ೮೦–೧೮). [ಅರ್ಧ + ಆಯ]

**ಅರ್ಧಾವಲಿಕ** (ನಾ). ಅರ್ಧಚಂದ್ರಾಕಾರವಾದ ಒಂದು ಬಗೆಯ ಬಾಣ; ಕವಲಂಬು: ಅಂತಶ್ವಸೇನನರ್ಧಾವಲಿಕಮೆಂಬಮೋಘಾಸ್ತ್ರಮಾಗಿ ಕರ್ಣನ ದೊಣೆಯೊಳಿರ್ದಂ (ಪಂಪಭಾ. ೫–೧೦೦ ವ). [ಸಂ. ಅರ್ಧಾವಲೀಕ]

**ಅರ್ಧಾವಶೇಷ** (ನಾ). ಅರ್ಧ ಉಳಿದಿರುವುದು: ಯಾಮಿನೀಚರಮಯಾಮಮರ್ಧಾವಶೇಷಮುಂಟೆನೆ (ಶಾಂತಿಪು. ೮–೧೯ ವ). [ಅರ್ಧ + ಅವಶೇಷ]

**ಅರ್ಧಾವಳೀಕ** (ನಾ). = ಅರ್ಧಾವಲಿಕ: ಮುಳಿಸಂ ನೆಱಪಲ್ಕರ್ಧಾವಳೀಕಶರರೂಪದಿಂದಸುಂಗೊಳೆ ದೊಣೆಯಿಂ ಪೊಳೆದು ಬರೆ (ಪಂಪಭಾ. ೧೨–೧೯೧). [ಸಂ. ಅರ್ಧಾವಲೀಕ]

**ಅರ್ಧಾಸನ** (ನಾ). ೧. (ಒಬ್ಬರು ಕುಳಿತುಕೊಂಡ) ಪೀಠದಲ್ಲಿನ ಅರ್ಧಭಾಗ: ಇಂದ್ರನೊಳರ್ಧಾಸನಮೇಱಿದೊಳ್ಪು ಹರಿಗಂಗಕ್ಕುಂ ಪೆಱಂಗಕ್ಕುಮೇ (ಪಂಪಭಾ. ೮–೨೮). ೨. ಒಂದು ಬಗೆಯ ಶಿವಯೋಗಾಸನ: ಶುದ್ಧಾಸನ, ಸಿಂಹಾಸನ . . . ಹೈಮಾಸನ, ಅರ್ಧಾಸನಾದಿಯೆಂಭತ್ತಾಲ್ಕಾಸನಭೇದಂಗಳ್ (ವಿವೇಕ. ೧೫೦). [ಅರ್ಧ + ಆಸನ]

**ಅರ್ಧಾಹಾರ** (ನಾ). ೧. ಆಹಾರದಲ್ಲಿ ಅರ್ಧಭಾಗ: ಸುಕುಮಾರಸ್ವಾಮಿ ಅರ್ಧಾಹಾರಮಂ ನುಂಗುಗುಮರ್ಧಾಹಾರಮನುಗುಟ್ಟುಂ (ವಡ್ಡಾರಾ. ೨೬–೨೪). ೨. ಅರೆಹೊಟ್ಟೆಗೆ ಆಗುವಷ್ಟು ಊಟ: ಜಠರಾಗ್ನಿ ನಂದ ದಂದದಿನರ್ಧಾಹಾರಮನಾರೋಗಿಸುವಾಚಾರದಿಂ (ಸುಕುಮಾ. ೪–೫). [ಅರ್ಧ + ಆಹಾರ]

**ಅರ್ಧಿಸು** (ಕ್ರಿ). ಅರ್ಧಕ್ಕೆ ಕತ್ತರಿಸು; ಎರಡು ಸಮಪಾಲಾಗಿ ಮಾಡು; ಅರ್ಧಭಾಗ ಮಾಡು: ಮೊದಲೊಳ್ ಛಂದದೀಯೆಡೆಯೆ ಲೆಕ್ಕದೆ ಕೆಟ್ಟುದು ವೃತ್ತಮೆಂದು ಪೇೞ್ವುದು ಬಗೆವಂದೊಡಾಗಳವಜಂಕಮ ನರ್ಧಿಸಿ ಬೆಳ್ಪನಿಟ್ಟುಕೊಳ್ವುದು (ಛಂದೋಂಬು. ೬–೩). [ಅರ್ಧ+ –ಇಸು₃]

**ಅರ್ಧೇಂದು** (ನಾ). ಅರ್ಧಚಂದ್ರ: ಅರವಿಂದಾಸ್ಯೆಯ ನೊಸಲ ಸಮಾನಂ ನಿರುಪಮಮರ್ಧೇಂದುಪ್ರತಿಮಾನಂ (ಸುಕುಮಾ. ೫–೫೧). [ಅರ್ಧ + ಇಂದು₁]

**ಅರ್ಧೇಂದುಮೌಳಿ** (ನಾ). ಅರ್ಧಚಂದ್ರನನ್ನು ತಲೆಯ ಮೇಲೆ ಧರಿಸಿದವನು; ಈಶ್ವರ. [ಅರ್ಧೇಂದು + ಮೌಳಿ]

**ಅರ್ಧೋಕ್ತಿ** (ನಾ). ಅರೆಮಾತು; ಪೂರ್ಣವಾಗದ ಉಕ್ತಿ: ಅ ಮೇನಕೆಯ ರೂಪಾತಿಶಯವನ್ನು ನೋಡಿ, (ಎಂದು ಅರ್ಧೋಕ್ತಿಯಲ್ಲಿ ಲಜ್ಜೆಯಿಂದ ಸುಮ್ಮನಿರುವಳು) (ಶಾಕುಂತ. ೧೪–೧೩). [ಅರ್ಧ + ಉಕ್ತಿ]

**ಅರ್ಧೋರುಕ** (ನಾ). = ಅರೆತೊಡೆಚಲ್ಲಣ: "ಅರ್ಧೋರುಕಂ ಚಂಡಾತಕಂ" (ವಸ್ತುಕೋ. ೭೮–೨೧). [ಸಂ.]

**ಅರ್ನ** 'ಅರನ' ನೋ.

**ಅರ್ನವ** (ನಾ). ಅರ್ಣವ; ಸಮುದ್ರ: ಧರೆ ಮುಸಗಿ ಬರುವ ಕಡಲಂತೆ ಸೇನಾರ್ನವಂ ನೆರವುತಿರ್ದ್ದವು (ತುರಂಗ. ೮೨–೧೬). [ಸಂ. ಅರ್ಣವ]

**ಅರ್ಪಣ** (ನಾ). ೧. ಒಪ್ಪಿಸುವುದು; ಅರ್ಪಿಸುವುದು; ಪ್ರೀತಿ ಗೌರವಗಳಿಂದ ಸಲ್ಲಿಸುವುದು: ಗುರುಪದಾಂಗಾರ್ಪಣವೆ ದಾನಂ ಪರಿಪರಿಯೊಳಿಂತನವರತಮುಂ ಸರಸಸಮ್ಮುದನಾಗಿ (ಬಸವು. ೩೯–೩೦). ೨. ಒಳಕ್ಕೆ ಹಾಕುವುದು; ಹುದುಗಿಸುವುದು. ೩. ಮೇಲೆ ಅಥವಾ ಒಳಗೆ ಅಳವಡಿಸುವುದು. ೪. ಹಿಂತಿರುಗಿ ಕೊಡುವುದು. [ಸಂ.]

**ಅರ್ಪಣಂಗೈ** (ಕ್ರಿ). ಅರ್ಪಿಸು; ಒಪ್ಪಿಸು: ಪ್ರಾಣೇಶ್ವರಂಗಿಷ್ಟಮೂರ್ತಿ ಗಾದರ್ಶಕ್ಕೆ ಪೇಳ್ ಪ್ರಾಣಾರ್ಪಣಂಗೈವ ಸೊಗದಿಂ ಮಿಗಿಲ್ ಸೊಗಂ ತಾನೊಳದೆ? (ಶ್ರೀರಾಮಾ. ೫೪–೧೪). [ಅರ್ಪಣ + ಗೈ (< ಕೆಯ್₁)]

**ಅರ್ಪಣವಿಧಿ** (ನಾ). ಒಪ್ಪಿಸುವ ಕ್ರಮ; ಅರ್ಪಿಸುವ ವಿಧಾನ: ಸಪ್ತ ಮಾಧಿಕರಣದಲ್ಲಿ ಸರ್ವಾಂಗಗಳಲ್ಲಿ ಪ್ರತಿಷ್ಠಿತವಾದ ಲಿಂಗಕ್ಕೆ ಅರ್ಪಿಸತಕ್ಕ ಅಂಗನ ಕ್ರಿಯಾಜ್ಞಾನಾತ್ಮಕವಾದ ಅರ್ಪಣವಿಧಿಯು ನಿರ್ದೇಶಿತವಾಗಿದೆ (ಶಿವಾಸೂ. ೧೪–೩೮. ಅಡಿಟಿ). [ಅರ್ಪಣ + ವಿಧಿ]

**ಅರ್ಪಣೆ** (ನಾ). = ಅರ್ಪಣ. [ಸಂ. ಅರ್ಪಣಾ]

**ಅರ್ಪಿತ** (ನಾ). ಒಪ್ಪಿಸಿದ್ದು; ಅರ್ಪಣೆ ಮಾಡಿದ್ದು; ನಿವೇದಿಸಿದ್ದು; ನೈವೇದ್ಯ: ಅರ್ಪಿತ ಅರ್ಪಿತವೆನುತಿಹರೆಲ್ಲರೂ ಅರ್ಪಿತದ ಮುಖವನಱಿಯರು ನೋಡಾ, ಜಂಗಮಕ್ಕೆ ನೀಡಿ ಜಂಗಮಪ್ರಸಾದವ ಕೊಂಡರೆ ನಿನಗರ್ಪಿತ ಕಾಣಾ (ಬಸವ. ೭೭೬); ಅರ್ಪಿತದ ಭೇದವನು ತಪ್ಪದಲೆ ತಿಳಿದಾತ ಸರ್ಪಭೂಷಣನ ಸಮನಹನು (ಸರ್ವಜ್ಞ. ೧೩೧). [ಸಂ.]

**ಅರ್ಪಿತಮುಖ** (ನಾ). [ವೀಶೈ] ಅರ್ಪಣೆಯ ಸ್ವರೂಪ (?): ಸುತಾಳವೆಂಬ ಶರಣನಂಗದಲ್ಲಿ ಬಿದ್ದು, ಗುರುವಿಂಗೆ ಪ್ರಸಾದವಾದುದು ಶಿಷ್ಯಂಗೆ ಓಗರ; ಲೌಕಿಕನಾಯಕ ನರಕ! ಅರ್ಪಿತಮುಖವನಱಿಯದೆ ಅನರ್ಪಿತಮುಖವಾಯಿತ್ತು ಗುಹೇಶ್ವರ (ಅವಚಂ. ೪೦–೧೭೧). [ಅರ್ಪಿತ + ಮುಖ]

**ಅರ್ಪಿಸು** (ಕ್ರಿ). ಒಪ್ಪಿಸು; ಅರ್ಪಣೆಮಾಡು; ಸಲ್ಲಿಸು: ಪದವನರ್ಪಿಸ ಬಹುದಲ್ಲದೆ ಪದಾರ್ಥಮನರ್ಪಿಸಬಾರದು... ಗುಹೇಶ್ವರ ನಿಮ್ಮ ಶರಣರು ಹಿಂದ ನೋಡಿ ಮುಂದನರ್ಪಿಸುವರು (ಅವಚಂ. ೪೦–೧೬೨); ವಿಮಲ ಶಂಭುಗೆ ಸಹಸ್ರ ಕಮಲಮಂ ನಿಚ್ಚಮವಿಚಲನಿಯಮದಿಂದರ್ಪಿಸುತಿರೆ (ಪದ್ಮರಾ. ೧೧–೭೬); ಬಲಿಯನು ಹರಿಯೊಳರ್ಪಿಸಿ ನಡುವಿರುಳು ಕಲಿಪಾರ್ಥ ನರ್ಚಿಸಿದನು ನಿಜಾಯುಧವ (ಕುವ್ಯಾದ್ರೋ. ೯–೩); ಪ್ರೇಮದಿ ನಿಖಿಲೋಪ ಚಾರವನರ್ಪಿಸಿ ನೇಮವ ನಿರ್ಣಯಿಸಿದರು (ಮೋಹತ. ೩–೪೭).

ಅರ್ಪಿಸಿಕೊಳ್ಳು = ಒಪ್ಪಿಸಿಕೊಳ್ಳು; ಅಂಗೀಕರಿಸು; ಸ್ವೀಕರಿಸು: ಈ ಸಕೀಲ ಸಂಬಂಧವಱಿದು ಅರ್ಪಿಸಿಕೊಳ್ಳದೆ ಅನರ್ಪಿತವ ಮುಟ್ಟದೆ ರೂಪುರುಚಿಯ ಹಾರದೆ ಸಂಗಸುಖದ ಸೋಂಕು ತನುವ ಸೋಂಕದ ಮುನ್ನವೆ (ಅದವ. ೭೪). [ಅರ್ಪಣ + –ಇಸು₃]

**ಅರ್ಬಿ** 'ಅರ್ವಿ' ನೋ.

**ಅರ್ಬಿಸು₁** 'ಅರ್ವಿಸು₁' ನೋ.

**ಅರ್ಬಿಸು₂** 'ಅರ್ವಿಸು₂' ನೋ.

**ಅರ್ಬಿಸು₃** 'ಅರ್ವಿಸು₃' ನೋ.

**ಅರ್ಬುತ** 'ಅದುಭುತ' ನೋ.

**ಅರ್ಬುದ₁** 'ಅದುಭುತ' ನೋ.

**ಅರ್ಬುದ₂** (ನಾ). ೧. ಹಾವು. ೨. ದುರ್ಮಾಂಸ ಬೆಳೆದುಕೊಳ್ಳುವ ಒಂದು ಬಗೆಯ ವ್ರಣರೋಗ; ಏಡಿಹುಣ್ಣು; ಕ್ಯಾನ್ಸರ್ ರೋಗ: ಎದೆ, ಗರ್ಭಕೋಶ, ಮೂತ್ರಕೋಶ, ಜಠರ ಮೊದಲಾದ ಅಂತರಿಂದ್ರಿಯಗಳ ಅರ್ಬುದ ರೋಗಕ್ಕೆ ರೇಡಿಯಂ ಅಮೋಘವಾದ ಔಷಧಿಯಾಗಿದೆ (ವಿಜ್ಞಾವಿ. ೧೩೦); ಬಾರ್ವು[ವು] ದೊಡ್ಡದಾಗಿ ಅರ್ಬುದವೆಂಬ ಹೆಸರನ್ನು ಸಂಪಾದಿಸಿತು (ಜಾರುದಾ. ೧೨೨); "ನನ್ನ ಮೊದಲನೆಯ ರೋಗಿ, ಒಬ್ಬ ಬಡರೈತ, ಈ ದಿನ ಅರ್ಬುದರೋಗದಿಂದ ತೀರಿಕೊಂಡ" (ಚಿಕಿತ್ಸ. ೫). ೩. "ಹಲ್ಲುಬೇನೆ" (ಗಂಗಾಮ. ೧೫). ೪. ಕಣ್ಣಿನ ಒಂದು ರೋಗ (ಕ). ೫. ಒಂದು ಸಂಖ್ಯೆ; ಹತ್ತುಕೋಟಿ: ಅರ್ಬುದಹಸ್ತದೊಳರ್ಚಿಸಿ ನಿರ್ಬುದನೇತ್ರದಿಂ ನೋಡಿ ಶಿವ ನಿಮ್ಮಡಿಯಂ ಖರ್ವ ಜಿಹ್ವೆಯೊಳು ಕೀರ್ತಿಸಿ ಕೊರ್ಬುವೆನೆಂದೋ ಪ್ರಸನ್ನ ಶಂಕರಲಿಂಗಾ (ಶಂಕಕಂ. ೧೧೬); ಸಾರಿಯನಿರಿಸುವ ಮನೆಯ ರೇಖೆಯೆಷ್ಟುಂಟು ಅಷ್ಟು ಅರ್ಬುದ ದ್ರವ್ಯವ ಸೋತನು (ಭೈರಸೂ. ೧೧೧); ಸಾವಿರ, ಲಕ್ಷ, ಕೋಟಿ, ಅರ್ಬುದ ಮೊದಲಾದ ಸಂಖ್ಯಾವಾಚಕಗಳು ... ನಾಮವಾಚಕಗಳಂತೆ ನಡೆಯುತ್ತವೆ (ಮಧ್ಯಮ. ೬೯). ೬. ಮಾಂಸವನ್ನು ತೆಗೆಯುವ ಸಲಾಕೆ. [ಸಂ.]

**ಅರ್ಬುದಾಂಶ** (ನಾ). ಹತ್ತುಕೋಟಿಯಲ್ಲಿ ಒಂದು ಪಾಲು: ಲಲಿತ ಮಾದಾಪುರಾಣಂ ಪೇಳ್ದುವೆಲ್ಲಮುಂ ಪೇಳ್ವೊಡೆನಗಮುಶಕ್ಯವುಗಳಿಲನ ದಱೊಳಗರ್ಬುದಾಂಶಮಂ ವಿವರಿಪೊಡೆ (ಅರಾಜ. ೨–೧೩). [ಅರ್ಬುದ₁ + ಅಂಶ]

**ಅರ್ಭಕ** (ನಾ). ೧. ಸಣ್ಣದು; ಚಿಕ್ಕದು: ಅರ್ಭಕವಾದದ್ದು ಎಂದರೆ ಅಲ್ಪವಾದದ್ದು (ಬ್ರಹ್ಮಭಾ. ೨೬೫). ೨. ಮೊಲೆಗೂಸು; ಎಳೆಯ ಮಗು: "ಬಾಲಃ, ಪಾಕಃ, ಅರ್ಭಕಃ, ... ಶಾಬಃ, ಡಿಂಭಃ–ಈ ೯ ಮಗುವು" (ಹಲಾಯು. ೮೩–೩೪೮); ಬಳಿಕೊರ್ವ ದಾದಿ ಶಿಶುವಂ ಕೊಂಡು ಪೊಱಮಟ್ಟು... ಸಾಕಿದಳರ್ಭಕನನತಿಪ್ರೇಮದಿಂದೆ (ಜೈಮಿಭಾ. ೨೮–೧೬); ಧರಣಿಪತಿ ಪುರುಷಾರ್ಥನಾಲ್ಕನು ಹೊರೆವವೋಲರ್ಭಕರ ಸಲಹುತ್ತಿರಲು (ಕೌಶಿರಾ. ೧–೭೮). [ಸಂ.]

**ಅರ್ಭಟೆ** (ನಾ). ಒಂದು ಬಗೆಯ ವಾದ್ಯ (?): ಜಗಳೆ ಜಾಗಟೆಯ ರ್ಭಟೆಯ ಚೌಷಷ್ಟಿಯು ನಗನಗಿಸುವ ಯೋಗಿಣಿಯೂ (ದೇವಾಂಪು. ೪–೪೨). [?]

**ಅರ್ಭರ್ಣ್ಯ** (ನಾ). = ಅಭ್ಯರ್ಣ (?) : ಇವಕೆ ಮೂಲಸ್ಥಲವೆ ಚಿತ್ತಂ ಭವದ ಬೀಜಂಗಳು ವಿಚಾರಿಸಲಿವು ಗುರುಗಳರ್ಭರ್ಣ್ಯಮಂ ಕಡುಭಕ್ತಿಯಂ ಸೇರಿ ಸವೆದ ತೆರದಿಂ ಸಂಸೃತಿಯ ರೋಗವನು ಯತ್ನೀಕರಿಸುತಿರಲ್ (ವಿವೇಭ. ೫-೩೩). [< ಸಂ. ಅಭ್ಯರ್ಣ ?]

**ಅರ್ಭಾಟ** (ನಾ). (ಉಕ) ೧. ಆರ್ಭಟ. ೨. ಸಡಗರ ; ಕೂಗಾಟ : ನಿನ್ನ ಅರ್ಭಾಟ ನೋಡಿ ನಾವು ಗಡ್ಡಕ್ಕೆ ಬೆಂಕಿ ಹಚ್ಚಿಕೊಳ್ಳಬೇಕಾದೀತು (ಅಮುಗಾಂ. ೭). ೩. ಅತ್ಯುತ್ತಮ : ಅಡಿಗೆ ಬಹಳ ಅರ್ಭಾಟವಾಗಿದೆ (ರೂಢಿ). [< ಆರ್ಭಟ]

**ಅರ್ಭಿಕ್ಕು** (ಕ್ರಿ). ಕೇಡುಂಟಾಗು ; ಅಪಾಯ ಸಂಭವಿಸು ; ಆಪತ್ತು ಒದಗು : ಚಕ್ರೇಶ್ವರಂ ಸಾರಗ್ರಾಹಿ ಸಮಸ್ತ ದೇಶದವರ್ಗಳ್ಗರ್ಭಿ[ರ್ಬಿ] ಕ್ಕಿರಲ್ ರಕ್ಷಿಪಂ (ಎಇ. XVIII, ೨೧೪-೧೬ ; 1162). [? + ಇಕ್ಕು$_1$]

**ಅರ್ಮ** (ನಾ). ಒಂದು ಬಗೆಯ ಕಣ್ಣಿನ ರೋಗ. [ಸಂ. ಅರ್ಮನ್]

**ಅರ್ಮಕೊಂಡ** (ನಾ). ಒಬ್ಬಾತನ ಹೆಸರು : ಸಕಳಭುವನವಿಖ್ಯಾತ ಕೀರ್ತಿ ಶ್ರೀಮದರ್ಮ್ಮಕೊಣ್ಡಗೆ ಶ್ರಾವಣಮಾಸ ಶುದ್ಧ ಪಕ್ಷದ ಪಞ್ಚಮಿಯುಮಾದಿತ್ಯ ××× ದ್ರಮ್ಮ ಸಾಸಿರದ ಮೂನು ಪೊಬಲ ನಿಗ್ಗುಡಿ (ಕಇಅ. ೧೪-೮೫-೧೭ ; 932). [ಅರ್ಮ ? + ಕೊಂಡ ?]

**ಅರ್ಮೆಳೆ, ಅಮ್ಮೆಳಿ, ಅಮ್ಮೆಳೆ** (ನಾ). ಒಂದು ಊರಿನ ಹೆಸರು : ಅರ್ಮ್ಮೆಳೆಯ ಪಳ್ಳಿ ಕುಱಿಪಟ್ಟಿಯೊಳೆ (ಮೈಆರಿ. ೧೯೩೩, ೩೪-೬ ; 801) ; ಶ್ರೀಮದ್ವಣ್ಣನಾಯಕ ತಿಕಣ್ಣ ಪ್ರಮುಖ ಲೆಂಕಸಾಸಿರ್ವ್ವರು ಅರ್ಮ್ಮೆಳೆ ನೆಲ್ಲಿ ಕುದಿರು ಸೊನ್ನಪೊಲಿಲ್ಗುಂಡೆ ಸೂಗುರು ಮೋರಿಂಗೆಱೆ ಮೊದಲಾ ಗಾಱುಂ ಬಾಡಮುಮನಣುಗಜೀವಿತವಾಗಿ (ಸೌಇಇ. IX-i, ೧೦೧-೨೧ ; 1045). **ಅಮ್ಮೆಳಿ** : ಅಮ್ಮೆಳಿಯ ಪತ್ತಣ್ಡಱುವ ಅಯ್ಯೂಱು ಭತ್ತ ಪಡಿಯಂ (ಎಕ. VI. ಚಿಕ್ಕಮ. ೪೨-೧೬ ; 959). **ಅಮ್ಮೆಳೆ** : ಜಳಧಿ ಪರೀತ ಭೂತಳದೊಳ(ಂ)ಮ್ಮೆಳೆ ರ(ಂ)ಮ್ಯಮದೆಂತು ಸೋರ್ಪಡಂ ಧರೆಗೆಸೆದಿರ್ಪ್ಪ(ಂ)ಮ್ಮೆಳೆಯಂ ಧರಣೀಪತಿ ದುರ್ವ್ವಿನೀತಗಂಗಂ ಪರ ಮಾದರದಿಂದೆ ರಾಜ್ಯಚಿಹ್ನಂಬೆರಸು ಕುಡಲ್ಪಡೆದನೆಸೆಯೆ ಪಶುಪತಿಭಟ್ಟಂ (ಸೌಇಇ. IX-i, ೧೫೩-೨೪ ; 1083) ; ಉತ್ತರಾಯಣ ಸಂಕ್ರಾನ್ತಿ ವ್ಯತೀಪಾತದಂದು ಅಮ್ಮೆಳೆಯಲು ಜ್ಞಾನಪ್ರಕಾಶಭಟ್ಟಾರಕ ದೇವರು ಮಾಡಿಸಿದ ಶ್ರೀನಾರಸಿಂಹದೇವರಂಗ[ಭೋ]ಗಕ್ಕೆ (ಸೌ ಇ ಇ. IX-i, ೨೪೨-೧೬ ; 1143). [?]

**ಅರ್ಯ** (ನಾ). ೧. ಒಡೆಯ ; ಯಜಮಾನ ; ಸ್ವಾಮಿ : "ಅರ್ಯಃ, ಪರಿವೃಢಃ, ಸ್ವಾಮೀ . . . ಅಧಿಪತಿಃ – ಈ ೧೦ ಒಡೆಯಂ" (ಹಲಾಯು. ೫೭-೧೪೮). ೨. ವೈಶ್ಯ. [ಸಂ.]

**ಅರ್ಯಮ** (ನಾ). ೧. ಪಿತೃದೇವತೆಗಳ ಪ್ರಮುಖ. ೨. ಸೂರ್ಯ. [ಸಂ. ಅರ್ಯಮನ್]

**ಅರ್ಯಾಣಿ** (ನಾ). ವೈಶ್ಯಜಾತಿಯ ಹೆಂಗಸು. [ಸಂ. ಅರ್ಯಾಣೀ]

**ಅರ್ರ್ರೆಕೊಠಾರ** (ನಾ). = ಅರಿಕುಠಾರ೨: ಅರ್ರ್ರೆಕೊಠಾರದ ಕೆಱೆಯ ಕೆಳಗಣ ಗದ್ದೆ ಯಿಪತ್ತುಖಂಡುಗ (ಎಕ. XIV, ಗುಂಡ್ಲುಪೇ. ೧೨೪-೮೪ ; 1810).

[ಅರ್ರ್ರೆ$_0$ (< ಅಱ್$_4$) + ಕೊಠಾರ. ℙ ಶಕಟರೇಫಕ್ಕೆ ಪ್ರತಿಯಾಗಿ ರೇಫ ದ್ವಿತ್ವವನ್ನೂ ರೇಫಕ್ಕೆ ಅರ್ಕಾವೊತ್ತನ್ನೂ ಬರೆದಿರುವುದು ಶಾಸನಗಳಲ್ಲೂ ಹಸ್ತಪ್ರತಿಗಳಲ್ಲೂ ಕ್ವಚಿತ್ತಾಗಿ ಕಂಡುಬರುತ್ತದೆ]

**ಅರ್ರ್ರೆಯಹಳ್ಳಿ** (ನಾ). ಒಂದು ಊರಿನ ಹೆಸರು : ಹೊಂನಗೌಡನ ಹಳ್ಳಿ ಅರ್ರ್ರೆಯಹಳ್ಳಿ ಕಬ್ಬುನಕೋಟೆ (ಎಕ. V, ಬೇಲೂರು. ೭೪-೧೨೧ ; 1261).

[ಅರ್ರ್ರೆ$_0$ (< ಅಱ್$_4$) + ಹಳ್ಳಿ (< ಪಳ್ಳಿ)]

**ಅರ್ಲು** 'ಅಱಲ್$_2$' ನೋ.

**ಅರ್ಲುಗಷ್ಟ** (ನಾ). ಮಣ್ಣನ್ನು ಕಟ್ಟಡಕ್ಕಾಗಿ ಕಲಸುವ ಕೆಲಸ : ಅರ್ಲಗಷ್ಟ ಮುಂತಾದ ಮೇಲ್ಗೆಲಸವನ್ನು ಕೂಲಿಕಾರರು ಮಾಡುತ್ತಾರೆ (ಮುಂಬಯಿ. ೪-೧೧೪). [ಅರ್ಲು (< ಅಱಲ್$_2$) + ಕಷ್ಟ]

**ಅರ್ವ** (ನಾ). ೧. ಹೀನ ; ನೀಚ. ೨. ಕುದುರೆ : "ಹರಿ ತುರಂಗಂ . . . ಅಶ್ವಮರ್ವಂ ವಾಹಮುರುರಥ್ಯಮೆನೆ ಕುದುರೆಯಕ್ಕು" (ಮಂಗರಾ. ೮೧-೧೨). [ಸಂ. ಅರ್ವನ್]

**ಅರ್ವತಿ** (ನಾ). ೧. ಹೆಣ್ಣುಕುದುರೆ. ೨. ಕುಂಟಣಿ. [ಸಂ. ಅರ್ವತೀ]

**ಅರ್ವವದನ** (ನಾ). ಕುದುರೆಯ ಮುಖದಂತೆ ಮುಖವುಳ್ಳವನು : ಕಿನ್ನರ ಅರ್ವವದನರು ವಿರಚಿಸುವ ಗಂಧರ್ವನಾದರಸಾಮ್ಯತಂ (ಬಸವು. ೨೫-೪೭). 'ಹಯವದನ' ಪರಾ. [ಅರ್ವ + ವದನ]

**ಅರ್ವಳೆ** (ನಾ). ಹದಿನೆಂಟು ತೊಲದ ತೂಕ (ಕಿಸಂಗ್ಲಾ). [?]

**ಅರ್ವಾಕ್ಕೂಲ** (ನಾ). ಈಚೆಯ ದಡ : "ಪಾರಮರ್ವಾಕ್ಕೂಲಮೆಂದ ಡಿತ್ತಡಿಯಕ್ಕು" (ಮಂಗರಾ. ೧೨೩-೧೨). [ಸಂ. (ಅರ್ವಾಚ್ + ಕೂಲ)]

**ಅರ್ವಾಚಿ** (ನಾ). ಇತ್ತೀಚಿನದು ; ಹೊಸದು : ಸರ್ವಹಿತವೊಂದುಂಟೆ ಅದಕೆ ಪಥ ನಮಗುಂಟೆ ? ನಿರ್ವಾಹಸಾಧನಗಳೆತ್ತ ? ಗುರುವೆತ್ತ ? ಪೂರ್ವ ವನು ನೆಟ್ಟಗಿಪ ನರಕೃತಿಯಿನಾಗದೇನ್ ಅರ್ವಾಚಿಯಲಿ ಸೊಟ್ಟು ? (ಮಂಕುತ. ೮೫೪). [ಸಂ. ಅರ್ವಾಚ್]

**ಅರ್ವಾಚೀನ** (ಗು). ಇತ್ತೀಚಿನ ; ಹೊಸದಾದ : ನವೀನರ ವಿದ್ವದಭಿಪ್ರಾಯದಲ್ಲಿ ಸಂಹಿತೆಗಿಂತಲೂ ಆರಣ್ಯಕವು ಅರ್ವಾಚೀನ ಸಾಹಿತ್ಯವು (ಆರ್ಯಧ. ೮). [ಸಂ.]

**ಅರ್ವಾಣ** (ನಾ). ಹೀನವಾದ ವಸ್ತು ; ನಿಕೃಷ್ಟವಾದ ವಸ್ತು : "ಅರ್ವಾಣಂ, ಅಣಕಂ, ಅಪಶದಂ . . . ಪಾಪಂ, ರೇಫಸಂ – ಈ ೧೩ ಹೊಲ್ಲಹ ವಸ್ತು" (ಹಲಾಯು. ೫೬-೧೪೨). [ಸಂ.]

**ಅರ್ವಿ, ಅಬ್ಬಿ$_1$, ಅರ್ಬಿ** (ನಾ). ಬೆಟ್ಟದಿಂದ ಬೀಳುವ ನದಿ ; ನೀರಿನ ಝರಿ ; ಜಲಪಾತ : ದೆಸೆಗೆತ್ತಂ ಗಜಜುತ್ತುಮಿರ್ಪ ಪುಲಿಯಿಂ . . . ಎತ್ತಗುರ್ವಿಸಿ ಪಾಯ್ವರ್ವಿಗಳಿಂ ಮದಾಂಧವ[ನ]ಗಂಧೇಭಂಗಳಿಂ ಕಣ್ಣಗುರ್ವಿಸಿಯುಂ ಚಿತ್ತದೊಳಂದು ಕಾಮ್ಯಕವನಂ ಮಾಡಿತ್ತತಿಪ್ರೀತಿಯಂ (ಪಂಪಭಾ. ೭-೪೮) ; ಪೇರರ್ವಿಗಳಿನಸದಳಂ ಕಣ್ಗೆ ಚೆಲ್ವಾಗಿ ನಾನಾಮಣಿಕೂಟಂ ಚಿತ್ರಕೂಟಂ ಸೊಗಯಿಸೆ (ಪಂರಾಮಾ. ೭-೩೧). **ಅಬ್ಬಿ$_1$** : ಕುಳಿಗಳೊಳು ಕಲುಗಳೊ[ಳಗ]ಬ್ಬಿಯೊಳು ಬೆಳೆಗೆಯ್ಯ ಸಂದಿಯೊಳು (ಸಿದ್ಧರಾ. ೨-೪೮) ; ಮರದ ಮರೆಯಲಿ ದುಮುಕುವಬ್ಬಿಗಳ ಹಬ್ಬಿ ಹರಡಿದ ಕೂಗು ಕೊರಲು (ಹೊಂಗಳು. ೧೬-೨೧) ; ತುಸು ದೂರದಲ್ಲೇ ನನಗೊಂದು ಅರೆಬತ್ತಿದ ಅಬ್ಬಿ ಕಂಡಿತು (ಗಂಗಾವ. ೨೪). **ಅರ್ಬಿ** : "ಬೆಟ್ಟದ ಹೊಳೆ, ನಿರ್ಝರ" (ಪ್ರಭಣ್ಣ) ; "ಅರ್ಬಿ = ನಿರ್ಝರ" (ಶಮದ. ಪರಿ. ೨) ; "ಅರ್ಬಿಯೆನಲ್ಕೆ ನಿರ್ಝರದ ನಾಮದೊಳಂ" (ಕರ್ಣಾನಿ. ೨೦) ; ಸುರಿವಾ ಬೆಮರರ್ಬಿಯುರ್ಬು ಕೋಮಲತನುಯಷ್ಟಿ ಕಲ್ಪಲತಿಕಾಂಕುರಂ (ಕಾವ್ಯಸಾ. ೬೧೨ ಶೂದ್ರಕ) ; ಬಿಸುನೆತ್ತ[ರ]ರ್ಬಿಗ ಳುರ್ವಿ ಪಾಯೆ (ಪಂಪಭಾ. ೧೦-೯೬ ವ).

[ದೇ. ‖ ತಮಿ. ಅರುವಿ ; ಮಲ. ಅರುವಿ, ಅರಿವಿ ; ತುಳು. ಅರ್ಬಿ]

**ಅರ್ವಿಸು$_1$, ಅರ್ಬಿಸು$_1$** (ಕ್ರಿ). ಸುಡು : ಕೇಳ್ದನಲಂ ಪರಸುತ್ತುಮಾಲಯಕ್ರೀಡೆಯೊಳೀ ಚರಾಚರಮುಮಂ ಸುಡುವಂದಿನ ಮೆಯ್ಗೆ ಮುಗ್ಗಳಂ ಮಾಡಿ ತಗುಳ್ದು ನೀಳ್ದು ಬಳೆದರ್ವಿಸೆ ಪರ್ವಿದನಾ ವನಾಂತಮಂ (ಪಂಪಭಾ. ೫-೮೫) ; ಕರ್ವಿನ ಗಾಣದೊಳ್ ಮಱುಗುವಾಣದೊಳೆಣ್ಣೆಯ ಕುಂಡದೊಳ್ ಕನಲ್ದರ್ವಿಸುವಚ್ಚುಗೊಂಡದೊಳಗುರ್ವಿಸೆ ಸೀಳಿಸಿ (ಶಾಂತಿಪು. ೭-೯೫) ; ಪರ್ವಿದ ಬೆಟ್ಟವೇಸಗೆಯ ಪೆರ್ವಿಸಲರ್ವಿಸೆ ಮೆಯ್ಯ ನೊಡ್ಡಿ ತಾಂ ನಿರ್ವಹಿಸಲ್ಕಮಾಱದೆ (ಬಾಧಪು. ೪-೮೨) ; ಚರಮಾಂಗ

ರವರರ್ವಿಸುವ ಕಿಚ್ಚಿಂದಳಿಯರೆಂದನು ಭೂಪತಿಗೆ ಮುನಿಪ (ಸಾಳ್ವಭಾ. ೨೩–೧೮). **ಅರ್ಬಿಸು₁** : ಹರನುರಿಗಂಣ ಕಾಯ್ಪು ಸಿಡಿಲೆಳ್ತರವರ್ಬ್ಬಿಪ ಬಾಡವಾಗ್ನಿ (ಎಇ. XV, ೩೫–೧೮ ; 1189).

[ಅರ್ವು₁ (< ಅಬ್ಬು) + –ಇಸು₃]

**ಅರ್ವಿಸು₂**, ಅರ್ಬಿಸು₂ (ಕ್ರಿ). ವ್ಯಾಪಿಸು ; ಅತಿಕ್ರಮಿಸು ; ಅಧಿಕವಾಗು : ಕಿಸುಸಂಜೆ ಪರ್ವೆಮುರ್ವರ್ವಿಸೆ [ಪಾಠಾಂ. ಪೆರ್ಚಿಮುರ್ವಿಸೆ, ಪೆರ್ಚಿನುರ್ವಿಸೆ] ತಾರಾನಿಕರಮೊಗೆಯೆ (ಪಂರಾಮಾ. ೧–೭೧) ; ಮೆಯ್ಯೊಂ ಜಳೂಕಾವಳಿಗಳು ಪೀರ್ವಲ್ಲಿ ಮುರ್ವು ಅರ್ವಿಸೆ (ಸುಕುಮಾ. ೪–೮ ವ) ; ತಗುಳೆ ತೃಷೆ ನೀರ್ಗೆ ಮಡುವಂ ಪುಗುವವರ್ವಿಸೆ ಪಸಿವು ಪಣ್ಗೆ ಮರನೇಱುವ ಚೇಷ್ಟೆಗಳಿಂ ಪ್ರಕಟಿಸಿದರವರ್ ಮಿಗೆ ಮುಂ ಬೆಂಕೊಂಡ ಕರ್ಮವೈರಿಯ ಭಯಮಂ (ವರ್ಧಪು. ೧೦–೪೨) ; ಮಿಸುನಿವೆಟ್ಟವೆ ನೀರ್ಮೊಗೆಯಲೆಂದೊಸೆದು ನೀಡಿತೊ ಕಡಲಿಗೆರಡರ್ವಿಸುವ ತೋಳ್ಗಳೆನೆಸೆ ಸಾಲಿಟ್ಟುದು ದಿವಿಜವೃಂದ (ಸಾಳ್ವಭಾ. ೨೧–೫೮). **ಅರ್ಬಿಸು₂** : ಇಳೆ ನುಡಿವಂತು ಪೆರ್ಬಿಸಿಲೊಳರ್ಬಿಸಿತುರ್ಬಿ ನಿದಾಘಮುರ್ಬಿಯೊಳ್ (ಜಗವಿ. ೧೭–೭೬) ; ಅಕ್ಕುಳಿಸಿರ್ದ ಪೊಟ್ಟೆ ಪೊಱಪಾಯ್ದೊರ್ದಯರ್ಬಿಪ ಪುರ್ಬು (ವರ್ಧಪು. ೧೫–೩೭) ; ಮದನದವಾಗ್ನಿ ಯೌವನವನಾಂತದೊಳರ್ಬಿಸೆ (ದ ಶ ಕು. ೮–೨೭೮). [ಅರ್ವು₂ + –ಇಸು₃]

**ಅರ್ವಿಸು₃**, ಅರ್ಬಿಸು₃ (ಕ್ರಿ). ೧. ಭಯಪಡಿಸು ; ಹೆದರಿಸು ; ಬೆದರಿಸು : ಕಾದನಾಗಳರ್ವಿಸೆ ತೆಗೆದೆಚ್ಚ ವೈಷ್ಣವಮನೊಡ್ಡಿಸಿ ವೈಷ್ಣವದಿಂ ಮುರಾಂತಕಂ (ಪಂಪಭಾ. ೧೨–೩೨) ; ಇಸುವಂಬನಂಬಿನಿಂ ಖಂಡಿಸಿ ಗರುಡಧ್ವಜನ ಗಜದ ಮೊಗಚರ್ಮಮನರ್ವಿಸುವಿನಮಿಸೆ (ಶಾಂತಿಪು. ೫–೬೦) ; ಅತ್ಯುಗ್ರಸತ್ವಂಗಳಿಂದರ್ವಿಸುವೀ ದುರ್ವಾರಕಾಂತಾರಮನಬಲೆಯೆ ನಿಶ್ಶಂಕೆಯಿಂದೆಂತು ಪೊಕ್ಕೈ (ಪಂರಾಮಾ. ೯–೩೯) ; ಬಾಯೆಂದುಸಿರ್ದೊಯ್ದಾ ಚಾರುದತ್ತನಂ ತಾಪಸನರ್ವಿಸುವ ವನದೊಳಗೆ (ನೇಮಿಪು. ೪–೮೬) ; ಕ್ರೂರೇಕ್ಷಣಮುಂ ದನುಜಾಕಾರಮನೊಡರಿಸೆ ನಿಶಾಟರರ್ವಿಸಿ ತೋರ್ಪರ್ (ಕಾವ್ಯಾವ. ೨೨೦) ; ಅರ್ವಿಸುವಾಕೃತಿ ಪರ್ವುಗೊಂಡು ಬಿಲ್ಲೊದವಿದ ಗರ್ಜಿತಂ ಸುರಿವ ಸಾಯಕವದ್ಭುತವಾಯ್ತು ಸಾಲ್ವನಾ (ಜಗವಿ. ೧೮–೯೦) ; ನೊಸಲಕಣ್ಣೀಶ್ವರನೆ ಕಪಟದಿಂದಿಳೆಗಿಳಿದು ಶಿಶುರೂಪಿನಿಂದಿರ್ದನೆಂಬಂತಿರರ್ವಿಸುವ ಹಸುಳೆಯಂ ಕಂಡು (ಸಾಳ್ವಭಾ. ೧೫–೩೪). **ಅರ್ಬಿಸು₃** : ೧. ಬಿಲ್ಲಂ ಮುಱಿಯೆಚ್ಚೊಡಂತನಿಬರುಂ ಬಾಳ್ಗಿಟ್ಟು ಮೇಲ್ವಾಯ್ದೊಡರ್ಬಿಸೆ ತಿಣ್ಣಂ ತೆಗೆದರ್ಧಚಂದ್ರಶರದಿಂ ಸೂೞ್ ಸೂೞೊಳೆಚ್ಚಾಗಳ್ (ಪಂಪಭಾ. ೧೨–೧೪೫) ; ಶಶಾಂಕನೆಂಬ ಸೊಂಕದ ಮೃಗವೈರಿಕೂಡೆ ಪರಿದರ್ಬಿಸಿ ಪರ್ಬಿದ ದುಸ್ತಮಸ್ತಮೋನ್ಮದಕರಿಯೂಥಮಂ ಪೆಳಱೆ ಪೋಱೆ (ಕಾವ್ಯಾವ. ೯೦೨) ; ಕಂಠೀರವದ ಮಸಕದಿಂದರ್ಬಿಸುತ್ತಾನೆಯಿಂದಾನೆಗೆ ಪೊಯ್ವಂ (ಮೈಆರಿ. ೧೯೪೦, ೧–೩೩; 1300). ೨. ಭಯಪಡು ; ಹೆದರು ; ಬೆದರು : ಮಣ್ಡಲಿಕರ್ಸ್ಸಂಕಿಸೆ ಬೇಡರರ್ಬ್ಬಿಸೆ ಕುಱುಂಬರ್ಬ್ಬೆಟ್ಟಿ ತನ್ನೊಂದೆ ತೋಳ್ವಲದಿಂ ಭೂತಳಮಂ ನಿಮಿರ್ಚ್ಚಿ . . . ಸಂದಂ ಸಿಂಹ ಭೂಪಾಳಕಂ (ಎಕ. VIII, ಸೊರಬ. ೧೮೪–೨೦ ; 1033).

[ಅರ್ವು₀ (< ಅಗುರ್ವು) + –ಇಸು₃]

**ಅರ್ವು₁** 'ಅಬ್ಬು' ನೋ.

**ಅರ್ವು₂** (ನಾ). ಹೆಚ್ಚಿಗೆ ; ಅತಿಶಯ. 'ಅರ್ವಿಸು', 'ಅರ್ವುವಡೆ' ಪರಾ. [?]

**ಅರ್ವುವಡೆ** (ಕ್ರಿ). ಹೆಚ್ಚಿಗೆಯಾಗು ; ಅತಿಶಯವನ್ನು ಹೊಂದು : ಘೋರತರಂ ಮುರ್ವು ನಾಡೆ ಪರ್ವಿದುವಾಗಳ್ ‖ ಅಂತರ್ವುವಡೆದ ರಾತ್ರಿಯೊಳು ಮುನಿಯುಮನರ್ಚಿಕೆಯುಮಂ ನೆಗಪಿಕೊಂಡು ಪೋಗಿ (ಪುಣ್ಯಾಸ್ರ. ೧೧–೧೯೩, ವ). [ಅರ್ವು₂ + ಪಡೆ₁]

**ಅರ್ಶಸ** (ನಾ). ಮೊಳೆರೋಗವುಳ್ಳವನು ; ಮೂಲವ್ಯಾಧಿಯಿಂದ ನರಳುವವನು : "ಅರಿಸೆಯುಳ್ಳವನಂ ಅರ್ಶಸನೆಂಬುದು" (ಹಲಾಯು. ೯೯–೪೫೨). [ಸಂ.]

**ಅರ್ಶೋಘ್ನ** (ನಾ). ಮೊಳೆರೋಗವನ್ನು ಹೋಗಲಾಡಿಸುವಂಥದು ; ಚೂರ್ಣಗೆಡ್ಡೆ ; ಸೂರಣದ ಗೆಡ್ಡೆ. [ಸಂ.]

**ಅರ್ಹ₁** (ನಾ). ೧. [ಜೈನ] ತೀರ್ಥಂಕರ ; ಜೈನಮುನಿ ; ಜೈನ ಸಂನ್ಯಾಸಿ : ಷಡಯನ ಕುಲದಂತಿರೆ ಕರ್ಪಿಡಿದೊಪ್ಪುವುದರ್ಹ ನಿನ್ನ ಪದಪಂಕರುಹಕ್ಕೊಡನೆಱಗಿದಮರಸಮಿತಿಯ (ಜಿನಾಲೆ. ೩೨) ; ನೀವು ಅರ್ಹನನ್ನಲ್ಲದೆ ಬೇರೆ ದೇವರನ್ನು ಕೈಕೊಳ್ಳುವವರಲ್ಲ (ಕಸಾಚಿ. ೧೧೧). ೨. [ಬೌದ್ಧ] ಬುದ್ಧ. [ಸಂ. ಅರ್ಹತ್]

**ಅರ್ಹ₂** (ಗು). ೧. ತಕ್ಕುದಾದ ; ಯೋಗ್ಯವಾದ ; ಉಚಿತವಾದ. ೨. ಬೆಲೆಬಾಳುವ. (ನಾ). ೩. ಹಕ್ಕುಳ್ಳವನು. ೪. ಶಕ್ತ ; ಸಮರ್ಥ. ೫. ಇಂದ್ರ. ೬. ಬೆಲೆ ; ಕ್ರಯ. [ಸಂ.]

**ಅರ್ಹಂತ** (ನಾ). ೧. [ಬೌದ್ಧ] ಬುದ್ಧ : ಆ ಭಗವಂತನು ನಿಸ್ಸಂಶಯವಾಗಿಯೂ ಅರ್ಹಂತನಾಗಿರಬೇಕು (ಬುದ್ಧಪ. ೧೫೧). ೨. [ಜೈನ] ತೀರ್ಥಂಕರ : ಇಪ್ಪತ್ತುನಾಲ್ಕನೆಯವರೇ ಮಹಾವೀರ ವರ್ಧಮಾನ ಜಿನೇಶ್ವರರು. ಇವರೇ ಅರ್ಹಂತರು ಮತ್ತು ಪರಮ ಜಿನಮುನಿಗಳು (ಹಿಂದಸಾ. ೭೨). [ಸಂ.]

**ಅರ್ಹಚ್ಛಾಸನ** (ನಾ). [ಜೈನ] ಜಿನನ ಆಜ್ಞೆ ; ಅರ್ಹಂತನ ಅಪ್ಪಣೆ : ಆ ಸಾಹಸ ಭೂಷಣೆ ನಾಲ್ವಾಸಿರ್ವರ್ ಕುಡದ ಕೂಸುಗಳ್ವೆರಸರ್ಹಚ್ಛಾಸನ ದೇಱವಿಡಿದಘಮಂ ತ್ರಾಸಿಸಲೆಂದಮಳದೀಕ್ಷೆಯಂ ಕೆಯ್ಕೊಂಡಳ್ (ಶಾಂತಿಪು. ೪–೮೪). ೨. ಜೈನಧರ್ಮ. [ಸಂ. (ಅರ್ಹತ್ + ಶಾಸನ)]

**ಅರ್ಹಣೆ** (ನಾ). ಪೂಜೆ ; ಆರಾಧನೆ ; ಸತ್ಕಾರ. [ಸಂ. ಅರ್ಹಣಾ]

**ಅರ್ಹತ** (ನಾ). = ಅರ್ಹಂತ ೧ : "ಬ್ರಾಹ್ಮಣನೆಂಬುದು ಅರ್ಹತನೂ ಸಮ್ಯಕ್‌ಸಂಬುದ್ಧನೂ ಆದ ತಥಾಗತನ ಹೆಸರಿನ ಗುರುತು" (ಬುದ್ಧಪ. ೭೩) ; ಮರದಡಿಯಲ್ಲಿದ್ದವರೂ ಅರ್ಹತರಾಗಬಹುದು ; ಪರ್ಣಶಾಲೆಯಲ್ಲಿದ್ದವರೂ ಅರ್ಹತರಾಗಬಹುದು (ಹತ್ತುಮು. ೯೪). [ಸಂ. ಅರ್ಹತ್]

**ಅರ್ಹತ್ಪದ** (ನಾ). ೧. ಅರ್ಹಂತನ ಪದವಿ. ೨. ಅರ್ಹಂತನ ಪಾದ : ಅರ್ಹತ್ಪದಮಂ ನೆನೆಯುತ್ತುಮನುಪ್ರೇಕ್ಷೆಯೆ ಮನದೊಳ್ ತಣ್ಮಲೆಯೆ ಸೇಸೆಗೊಳ್ ಖಚರಪತೀ (ಆದಿಪು. ೨–೫೭). [ಸಂ. (ಅರ್ಹತ್ + ಪದ₁)]

**ಅರ್ಹತ್ಪರಮೇಶ್ವರ** (ನಾ). ತೀರ್ಥಂಕರಸ್ವಾಮಿ ; ತೀರ್ಥಂಕರ ಪ್ರಭು : ಅರ್ಹತ್ಪರಮೇಶ್ವರನಂ ನಿರ್ಭರ ಭಕ್ತಿಯಿಂ ಸ್ತುತಿಗೆಯ್ದು (ಮಲ್ಲಿಪು. ೧೦–೨೨೮). [ಸಂ. (ಅರ್ಹತ್ + ಪರಮೇಶ್ವರ)]

**ಅರ್ಹತ್ಪ್ರತಿಬಿಂಬ** (ನಾ). ತೀರ್ಥಂಕರನ ಮೂರ್ತಿ, —ವಿಗ್ರಹ : ಕನಕಮಯಪ್ರಾತಿಹಾರ್ಯಾಷ್ಟಕಾರ್ಹತ್ಪ್ರತಿಬಿಂಬ ಭ್ರಾಂತಿಯಂ ಮಾಡಿದನವಯವದಿಂದೀಕ್ಷಣಕ್ಕಾಗಳೆನ್ನಾ (ಚಂದ್ರಪು. ೨–೮೨).

[ಸಂ. (ಅರ್ಹತ್ + ಪ್ರತಿಬಿಂಬ)]

**ಅರ್ಹತ್ಪ್ರತಿಮೆ** (ನಾ). = ಅರ್ಹತ್ಪ್ರತಿಬಿಂಬ : ಚತುರ್ವಿಂಶದರ್ಹತ್ಪ್ರತಿಮಾ ವಿರಾಜಮಾನ . . . ವಂದನಮಾಲೆಗಳೊಳಂ (ಆದಿಪು. ೧೭–೩೭ ವ).

[ಸಂ. ಅರ್ಹತ್ಪ್ರತಿಮಾ (ಅರ್ಹತ್ + ಪ್ರತಿಮಾ)]

**ಅರ್ಹತ್ಪ್ರವಚನ** (ನಾ). ತೀರ್ಥಂಕರನ ಉಪದೇಶ ; ಜಿನನ ಬೋಧೆ : ಪರಿಣತಿ ಸುಖಮಂ ಭಾವಿಸೆ ಶರೀರಿಗರ್ಹತ್ಪ್ರವಚನಮಲ್ಲದೆ ಪೆಱತಿಲ್ಲ (ಚಂದ್ರಪು. ೨–೩೯). [ಸಂ. (ಅರ್ಹತ್ + ಪ್ರವಚನ)]

**ಅರ್ಹದಾಲಯ** (ನಾ). ಜಿನಾಲಯ ; ಬಸದಿ : ಅವಱಿಡೆಯೊಳ್ ತಾನೊಂದೊಂದರ್ಹದಾಲಯಂ ಸೊಗಯಿಸುಗುಂ (ಆದಿಪು. ೧೦–೨೪).

[ಸಂ. (ಅರ್ಹತ್ + ಆಲಯ)]

**ಅರ್ಹದ್ದೀಕ್ಷೆ** (ನಾ). ಜೈನದೀಕ್ಷೆ: ಅರ್ಹದ್ದೀಕ್ಷೆಗೆ ಪೋಗದೆ ಮೆಯ್ದುಂದಂ (ಶಾಂತಿಪು. ೭–೪೬). [ಸಂ. ಆರ್ಹದ್ದೀಕ್ಷಾ (ಅರ್ಹತ್ + ದೀಕ್ಷಾ)]

**ಅರ್ಹದ್ದೇವ** (ನಾ). ಪೂಜ್ಯನಾದ ಜಿನ, —ತೀರ್ಥಂಕರ: ಅರ್ಹ [ಪಾಠಾಂ. ರುಹ]ದ್ದೇವನನರ್ಚಿಸಿದ ಪುಷ್ಪಚಯಮೆ ಪವಿತ್ರಂ (ಸಮುಪ. ೧–೧೨೦). [ಸಂ. (ಅರ್ಹತ್ + ದೇವ)]

**ಅರ್ಹದ್ಬೀಜ** (ನಾ). = ಅರ್ಹದ್ಬಿಂಬ (?): ಗುರುಪರಮೇಷ್ಠಿ ಚರಣಾನುಸ್ಮರಣಪೂರ್ವಕಮರ್ಹ[ದ್ಬೀ]ಜಮಂ ಹೃತ್ಪದ್ಮಸದ್ಮದೊಳ್ ನಿಶ್ಚಳಮಿರಿಸಿ (ಸೌಇಇ. XX, ೫೨–೩೭ ; 1077). ☞ ಈ ಶಬ್ದ ಅರ್ಹದ್ಬಿಂಬ ಎಂಬುದರ ಅಪಲಿಖಿತವಿರಬಹುದು. [ಸಂ. (ಅರ್ಹತ್ + ಬೀಜ)]

**ಅರ್ಹದ್ರೂಪ** (ನಾ). [ಜೈನ] ಜಿನನ ರೂಪ: ಮುನ್ನಂ ಭಗ್ನರಾದ ಕಚ್ಛ ಮಹಾಕಚ್ಛಾದಿಗಳರ್ಹದ್ರೂಪಮಂ ಕೈಕೊಂಡರ್ (ಆದಿಪು. ೧೧–೬೪ ವ). [ಸಂ. (ಅರ್ಹತ್ + ರೂಪ)]

**ಅರ್ಹನ್ಮತ** (ನಾ). [ಜೈನ] ಜೈನಸಿದ್ಧಾಂತ, —ಧರ್ಮ: ಉಱಿದ ತಪೋನಿಯಮಮಂ ನಿಷ್ಕಿಂಚನತ್ವಮರ್ಹನ್ಮತದೊಳ್ (ಶಾಂತಿಪು. ೬–೫೬). [ಸಂ. (ಅರ್ಹತ್ + ಮತ)]

**ಅರ್ಹನ್ಮಾರ್ಗ** (ನಾ). [ಜೈನ] ಜೈನಮಾರ್ಗ; ಜೈನಧರ್ಮ: ಅರ್ಹನ್ಮಾರ್ಗ ಪ್ರಭಾವನೆಯಂ ಮಾಡಿ ಪಾಪೇಭಕಂಠೀರವನಪ್ಪ ವಜ್ರಾಯುಧಂ ಸುಖದಿನರಸುಗೆಯ್ಯುತ್ತಿರ್ಪುದುಂ (ಶಾಂತಿಪು. ೮–೧೫೨ ವ). [ಸಂ. (ಅರ್ಹತ್ + ಮಾರ್ಗ)]

**ಅರ್ಹಲ್ಲಕ್ಷ್ಮಿ** (ನಾ). [ಜೈನ] ಮೋಕ್ಷಲಕ್ಷ್ಮಿ; ತೀರ್ಥಂಕರತ್ವದ ವೈಭವ: ಆಭವಂಗೆ ಕಾಲಲಬ್ಧಿಯ ವಿಭವಂ ದೊರೆಕೊಂಡ ಭವದಿನರ್ಹಲ್ಲಕ್ಷ್ಮೀಪ್ರಭುತೆವರಂ ಬರೆಯಿಸಿ ಭಕ್ತಿಭಾರಮಂ ಸಫಲಮೆನಿಸಿ ನಿಱಿಸಿದ ನಿಂದ್ರಂ (ಶಾಂತಿಪು. ೧೨–೪೧). [ಸಂ. ಆರ್ಹಲ್ಲಕ್ಷ್ಮೀ (ಅರ್ಹತ್ + ಲಕ್ಷ್ಮೀ)]

**ಅರ್ಹವ್ರತ** (ನಾ). ಜೈನವ್ರತ: ಕೆಲಬರರ್ಹವ್ರತವನಾಂತು (ಪದ್ಮರಾ. ೧೦–೬೨). [ಸಂ. (ಅರ್ಹತ್ + ವ್ರತ)]

**ಅರ್ಹಿತ** (ಗು). ಪೂಜಿಸಲ್ಪಟ್ಟ; ಗೌರವಿಸಲ್ಪಟ್ಟ; ನಮಸ್ಕರಿಸಲ್ಪಟ್ಟ. [ಸಂ.]

**ಅಲ್$_1$** (ಕ್ರಿ). ಬೇಡ, ಆಗದಿರು ಇತ್ಯಾದಿ ನಿಷೇಧಾರ್ಥದಲ್ಲಿ ಮಾತ್ರ ಬಳಕೆಯಿರುವ ಅಲ್ಲ ಎಂಬ ಕ್ರಿಯಾತ್ಮಕಾವ್ಯಯದ ಮೂಲರೂಪ: (ಪುಂ. ಏಕ). **ಅಲ್ಲಂ, ಅಲ್ಲೈ, ಅಲ್ಲೆನ್**, (ಸ್ತ್ರೀ. ಏಕ). **ಅಲ್ಲಳ್**, (ನಪುಂ. ಏಕ). **ಅಲ್ಲು, ಅಲ್ಲದು, ಅಲ್ತು**, (ಪುಂ. ಬಹುವ). **ಅಲ್ಲರ್, ಅಲ್ಲಿರ್**, (ಸ್ತ್ರೀ. ಬಹುವ). **ಅಲ್ಲರ್, ಅಲ್ಲೆವು**, (ನಪುಂ. ಬಹುವ). **ಅಲ್ಲವು**, (ವಿಶೇ). **ಅಲ್ಲ, ಅಲ್ಲವೆ, ಅಲ್ಲದೆ, ಅಲ್ಲಾ**: ಮಾಧವನೀತನ್ ಪೆಱನಲ್ಲ (ಇಆ. X, ೬೧–೬ ; 700) ; ವಿಶೇಷ್ಯಮುಂ ವಿಶೇಷಣಮುಮನೊಂದಲೀಯದಿರೆಯುಂ ಮಿಗೆ ಕಾರಕದೊ[ಳ]ಕಲ್ತದಂ ಪ್ರಣುತಪದಾಂತರೀಕರಣ (ಕವಿರಾ. ೧–೧೨೨) ; ಎಲ್ಲರಿಂ ಪಿರಿಯಾಕೆ ನಿನ್ನನಲ್ಲದೆ ಪೆಱರನೊಲ್ಲೆನೆಂದಿರ್ದೊಡೆ (ಪಂಪಭಾ. ೧–೭೪ ವ) ; ಏನೇನಭಿಮತಮಂ ಕೇಳಾನಾಸ್ವಾದಿಸಿದನಲ್ಲ ನೃಪಕುಲತಿಲಕಾ (ಕಾದಂಪೂ. ೮೫) ; ಸುಚರಿತೆ ಸೀತೆ ನಿನ್ನೊಡನೆ ಬರ್ಪವಳೆರ್ಪವಳಲ್ಲಳೆರ್ಪುದೇನುಚಿತಮೆ (ಪಂರಾಮಾ. ೬–೧೭೫) ; ನಿಜವನಱಿಯದೆ ಮುಳುಗಿದರಲ್ಲಾ ಮುಪ್ಪುರದಲ್ಲಿ (ಆದವ. ೩೧); ಮಿಗೆ ತಪ್ಪಲ್ಲ ತಪ್ಪಲ್ಲಂಬು ಬಿದ್ದವು ಗುಱಿಯ ಸರಿಸದಲಿ (ಕುವ್ಯಾದ್ರೋ. ೫–೪೬) ; ಅಲ್ಲದ ಋತುವಿನೊಳಿಲ್ಲದ ಪಣ್ಣಂ ನೆಲ್ಲಳ್ ಬಯಸಲ್ (ಜಯಕಾ. ೨–೩೧). [?]

**-ಅಲ್$_2$, -ಅಲು** (ಪ್ರ). ಸಾಧಾರಣವಾಗಿ ಧಾತುಗಳ ಮೇಲೆಯೂ ಕೆಲವು ಸಲ ನಾಮಪದಗಳ ಮೇಲೆಯೂ ಹತ್ತುವ ಭಾವನಾಮ ಪ್ರತ್ಯಯ: ಪೊಸಸಂಜೆ ಮುಗಿಲ ತುಱುಗಲ್ (ಆದಿಪು. ೭–೪೪) ; ತಾಱಲಾದುವು ತನು ಕೂಱನೀರದೆಸೆಯಿಲ್ಲದೊಡಲ್ಗಳನೆಂತು ತಾಳ್ದುವಂ (ಆದಿಪು. ೯–೪೯). 'ಕಾನಲ್', 'ಕೂಡಲ್', 'ತೂಱಲ್' ಪರಾ. **-ಅಲು**: 'ಕೂಡಲು', 'ತೂರಲು', 'ಬೀಳಲು' ಪರಾ.

**-ಅಲ್$_3$** (ಪ್ರ). ಒಂದು ಪ್ರತಿಷೇಧದ ವಿಧಿಸೂಚಕ ಪ್ರತ್ಯಯ: ಇಳಿಸಲಿಳಿಸಲ್ ಮಾರ್ಕೊಳ್ ಮಾರ್ಕೊಳ್ ಪುಗಲ್ ಪುಗಲೆಂದು ಸಂಗಳಿಸಿ ಶರದಿಂ ಕೊಳ್ ಕೊಳ್ಳೆಂದೆಚ್ಚೊಡೆಚ್ಚ ಶರಂಗಳಂ (ಶಾಂತಿಪು. ೪–೨೪) ; ಪಾಪಿ ಪುಗಲು ಪುಗಲುಗ್ರದ ಕೋಪಿ ಪುಗಲು ಪುಗಲಶೇಷಧರ್ಮದ್ರೋಹವ್ಯಾಪಾರಿ ಪುಗಲ್ ಪುಗಲೆಂದಾಪೊರ್ತುಂ ಕೋಕಿಳಂಗಳುಲಿಗುಂ ಬನದೊಳು (ಎಇ. XVI, ೩–೧೨ ; 978) ; ಪ್ರತಿಷೇಧದೊಳಂ ಕೆಲಬರ ಮತದಿಂದಲ್ ವರ್ತಿಕುಂ (ಕಾವ್ಯಾವ. ೪೧೧) ; ನಗೆಯೊಳಮಪ್ಪೊಡಮಿಂತೀ ತೆಗಱಿದುರುಕ್ತಿಗಳನೆಮ್ಮೊಳಿಂ ನುಡಿಯಲ್ ನೀಂ ಬಗೆಯೊಳ್ ಬೇಱೊಂದನಂ ಬಗೆಯಲ್ ನಿನಗೆ ಸುಮತಿ ಬೇಱಾಂ ಬೇಱೇ (ಕಾವ್ಯಾವ. ೪೧೨) ; ಕಿಱುಕುಳನೆಂದೇಳಿಸಲ್ (ಕಬ್ಬಿಕಾ. ೨೩೧).

**ಅಲ್‌ಬತ್** 'ಅಲ್ಬತ್' ನೋ.

**ಅಲ$_1$** 'ಅಲ್$_1$' ಪರಾ.

**ಅಲ$_2$**, ಅಳ (ನಾ). ೧. ಚೇಳಿನ ಕೊಂಡಿಯಲ್ಲಿರುವ ಮುಳ್ಳು. ೨. ಅರಿದಲ; ಹರಿತಾಲ. **ಅಳ**: ೧. "ಅಳಂ, ವೃಶ್ಚಿಕಲಾಂಗೂಳಂ – ಈ ೨ ತೇಟಿ (ಚೇಳ) ಬಾಲಂ" (ಹಲಾಯು. ೧೦೬–೨೩). [ಸಂ.]

**ಅಲಂ** (ಅ). ಸಾಕು ಎಂಬರ್ಥದ ಕ್ರಿಯಾರ್ಥಕಾವ್ಯಯ: ಅಲಮಲಂ ಕೊಸಾಡಿಸದಿರೆನ್ನ (ಹೆಬ್ಬಿರ. ೧೨–೭). [ಸಂ.]

**ಅಲಂಕರಣ**, ಅಳಂಕರಣ (ನಾ). ೧. ಅಲಂಕಾರ ಮಾಡುವುದು; ಶೃಂಗರಿಸುವುದು. ೨. ಒಡವೆ; ಆಭರಣ; ಶೃಂಗಾರ ಸಾಮಗ್ರಿ; ಅಲಂಕಾರ. ೩. [ಕಾವ್ಯಮೀ] ಕಾವ್ಯಾಲಂಕಾರ: ಪ್ರಸನ್ನಮತಿ ಮಧುರಮಲಂಕರಣಯುತಮೆನಿಸೆ ಪೇೞಲ್ ಧರೆಯೊಳ್ ಕವಿರಾಜಹಂಸನೊರ್ವನೆ ಬಲ್ಲಂ (ಛಂದೋಂಬು. ೧–೯). **ಅಳಂಕರಣ**: ೨. ಎರೆವ ಮರಲ್ವಲಲ್ಲಯಿಪ ಕಾಲ್ಪಿಡಿವೆಂಬುದನಿಂಬುಕೆಯ್ವಳಂಕರಣವಿಳಾಸಮಂ ಮೆಱೆವ ಮೇಳಿಸುವಂದಿನ ರೂಪು (ಆದಿಪು. ೩–೪೩). [ಸಂ.]

**ಅಲಂಕರಿಷ್ಣು** (ನಾ). ೧. ಅಲಂಕಾರ ಮಾಡುವವನು; ಅಲಂಕಾರದಲ್ಲಿ ಪ್ರೀತಿಯುಳ್ಳವನು: ಪರಿಪಾಳಿಕೆ ಜಿಷ್ಣುವಲಂಕರಿಷ್ಣು (ಶಮದ. ೨೨೯ ಪ್ರಯೋ). ೨. ಶಿವ. [ಸಂ.]

**ಅಲಂಕರಿಸು**, ಅಳಂಕರಿಸು (ಕ್ರಿ). ೧. ಸಿಂಗರಿಸು; ಅಲಂಕಾರ ಮಾಡು: ಭಸಿತದ ತಿಲಕಮನಲಂಕರಿಸಿದರ್ ಸತಿಯರ್ (ಗಿರಿಕ. ೧೦–೪೧) ; ಬಾಲಕರಿಗಿನ್ನೇನು ಗತಿ ಭೂಪಾಲ ಹೇಳೈ ಹೇಳೆನುತ ನಿಜಭಾಳವನು ಭಾಳದಲಲಂಕರಿಸಿದಳು ಶೋಕದಲಿ (ತೊರರಾ. ೨–೫–೨೯) ; ಭದ್ರದುಪ್ಪರಿಗೆಯನಲಂಕರಿಸು (ಭಾವಚಿಂ. ೫–೨೮) ; ಭುವನದೊಳಾಕೃತಿ ಸಾರರತ್ನವನೆನ್ನ ಕಿವಿಗಲಂಕರಿಸು ನಲ್ಲುಡಿಗಾಣ (ತ್ರಿಭುತಿ. ೧–೩೯) ; ಸೀತಮ್ಮನು ನೆಲವೆಲ್ಲವನ್ನೂ ಹಸಿಯ ಹಿಟ್ಟಿನ ರಂಗೋಲಿಯಿಂದ ಅಲಂಕರಿಸುತ್ತಿದ್ದಳು (ಮೊಗ್ಗು. ೪೨). ೨. (ಆಲಂ) ಕುಳಿತುಕೊಳ್ಳು; ಮಂಡಿಸು: ಒಡ್ಡೋಲಗಂಗೊಟ್ಟಿರ್ದಲ್ಲಿ ಸಿಂಹಾಸನೋಭಯಪಾರ್ಶ್ವಪ್ರದೇಶಗಳನಲಂಕರಿಸಿ ವಸುಂಧರೆಯುಂ ವಸುಮತಿಯುಮಿರೆ (ಶಾಂತಿಪು. ೧–೭೩ ವ). **ಅಳಂಕರಿಸು**: ೧. ದೇವೇಂದ್ರಂ . . . ಚಿತ್ರಪಟಮಂ ಕೆದಱಿ ಗಗನತಳಮನಳಂಕರಿಸಿದಂತೆ (ಪಂಪಭಾ. ೧೨–೧೩೭ ವ) ; ತೀವಿದ ಚೆಂಬೊನ್ನ ದೋಣಿಗಳೊಳಮಳಂಕರಿಸಿದ ಪಳುಕಿನ ಪಟ್ಟಿವಣಿಗೆಗಳೊಳಂ (ಕಾದಂಪೂ. ೭೦) ; ಮುಕುರಮನಟ್ಟಿಯಿಂ ಪಿಡಿವ ಚಾಮರಮಿಕ್ಕುವ ವಸ್ತ್ರಭೂಷಣಪ್ರಕರಮನೀವಳಂಕರಿಸುವಾಡುವ ಪಾಡುವ

ಕಾಂತೆಯರ್ (ಸುಕುಮಾ. ೧೦–೨೫); ಯಶಸ್ತಿಳಕಮುಖಿಳದಿಙ್ಮುಖ ಮನಳಂಕರಿಸೆಯುಂ (ಮಲ್ಲಿಪು. ೫–೨). [ಅಲಂಕರಣ + –ಇಸ್ಸು]

**ಅಲಂಕರ್ತೃ** (ನಾ). ಅಲಂಕಾರಮಾಡುವವನು. [ಸಂ.]

**ಅಲಂಕಾರ** (ನಾ). ೧. ಒಡವೆ; ಆಭರಣ: "ಭೂಷಣಮಲಂಕಾರಮಾಭರಣಮೆಂದೆನಲು ತೊಡುಗೆಗಭಿಧಾನಮಕ್ಕುಂ" (ಮಂಗರಾ. ೯೮–೧೮). ೨. ಭೂಷಣಪ್ರಾಯ: ಬಂದು ಮನೋವಲ್ಲಭನ ಸಿಂಹಾಸನಾರ್ಧಕ್ಕಲಂಕಾರಮಾಗಿರ್ದು (ಪುಷ್ಪಪು. ೩–೧೨೧ ವ). ೨. ಸೊಗಸು; ಚೆಲ್ವು. ೩. [ಕಾವ್ಯಮೀ] ಕಾವ್ಯದ ಸೊಗಸನ್ನು ಹೆಚ್ಚಿಸುವ ಶಬ್ದಾರ್ಥ ವೈಚಿತ್ರ್ಯ: "ಸಾಹಿತ್ಯದಲ್ಲಿ 'ಅಲಂಕಾರ' ವೆಂದರೆ ಅನುಪ್ರಾಸ ಉಪಮೆ ಮುಂತಾದ ಶಬ್ದಾರ್ಥವೈಚಿತ್ರ್ಯಗಳೆಂದು ಒಂದು ಅರ್ಥ; ಕಾವ್ಯದಲ್ಲಿರುವ ಸೌಂದರ್ಯ ಎಂದು ಮತ್ತೊಂದು ಅರ್ಥ" (ಕೈಪಿಡಿ. ೧೬೩); ಸಕಲ ವ್ಯಾಕರಣಾರ್ಥಶಾಸ್ತ್ರ ಗಣಿತಾಲಂಕಾರ ಸತ್ಕಾವ್ಯ ನಾಟಕ ವಾತ್ಸ್ಯಾಯನ ನೃತ್ತಗೀತ (ಮುದಶಿ. ೧–೫೧). ೪. [ಸಂಗೀತ] ಕೇಳುವವರಿಗೆ ಚಮತ್ಕಾರವಾಗಿ ಸಂತೋಷಕೊಡುವಂತೆ ವಿಶಿಷ್ಟವಾದ ಸ್ವರಗಳ ಜೋಡಣೆಯಿಂದಲೂ ಮೂರ್ಛನಾಜಾತಿವರ್ಣಗಳಿಂದಲೂ ಕೂಡಿದ ರಾಗವಿನ್ಯಾಸ. ೫. ದೇಶೀತಾಳ. [ಸಂ.]

**ಅಲಂಕಾರದೋಷ** (ನಾ). [ಕಾವ್ಯಮೀ] ಶಬ್ದಾರ್ಥವೈಚಿತ್ರ್ಯಗಳ ಕಲ್ಪನೆಯಲ್ಲಿಯೂ ಚಮತ್ಕಾರ ಕಲ್ಪನೆಯಲ್ಲಿಯೂ ತಪ್ಪಿರುವುದು: ಮಮ್ಮಟನು ಕೆಲವು ಅಲಂಕಾರದೋಷಗಳನ್ನು ಹೇಳಿದ್ದಾನೆ (ಕೈಪಿಡಿ. ೨೨೬ ಅಡಿಟ). [ಅಲಂಕಾರ + ದೋಷ]

**ಅಲಂಕಾರಪಂಕ್ತಿ** (ನಾ). ಮಾಧ್ವಯತಿಗಳು ತಮ್ಮ ಜೊತೆಗೆ ಊಟಕ್ಕೆ ಕೂರಿಸಿಕೊಳ್ಳುವ ಶಿಷ್ಟರ ಭೋಜನಪಂಕ್ತಿ: ಅಲಂಕಾರ ಪಂಕ್ತಿಯನ್ನು ನೋಡುವುದಕ್ಕೆ ಹೋಗೋಣ (ರೂಢಿ); ಮೊದಲು ಅಲಂಕಾರ ಪಂಕ್ತಿ; ಅನಂತರ ಭೂರಿಭೋಜನ (ರೂಢಿ). [ಅಲಂಕಾರ + ಪಂಕ್ತಿ]

**ಅಲಂಕಾರಪ್ರಸ್ಥಾನ** (ನಾ). ಕಾವ್ಯದಲ್ಲಿ ಅಲಂಕಾರಗಳೇ ಮುಖ್ಯವೆಂದು ಎಣಿಸುವವರ ಪಕ್ಷ: ಭಾಮಹನೂ ಅವನನ್ನು ಅನುಸರಿಸಿ ಉದ್ಭಟ ಮೊದಲಾದವರೂ ಅಲಂಕಾರಗಳೇ ಮುಖ್ಯವೆಂದು ಎಣಿಸಿದರು ... ಇವರ ಪಕ್ಷವನ್ನು ಅಲಂಕಾರಪ್ರಸ್ಥಾನವೆಂದು ಕರೆಯುವುದು ವಾಡಿಕೆಯಾಗಿದೆ (ಭಾರಮೀ. ೩೮). [ಅಲಂಕಾರ + ಪ್ರಸ್ಥಾನ]

**ಅಲಂಕಾರವೆರು** (ಕ್ರಿ). ಅಲಂಕಾರವನ್ನು ಪಡೆ, —ಹೊಂದು: ವಸ್ತ್ರಾಭರಣ[ಣಾ]ಲಂಕಾರವೆತ್ತು (ನವಮೋ. ೧೬–೧೩). [ಅಲಂಕಾರ + ಪೆರು (< ಪೆಱು)]

**ಅಲಂಕಾರಶಾಸ್ತ್ರ** (ನಾ). "ಸಾಹಿತ್ಯದಲ್ಲಿ ಶಬ್ದಾರ್ಥಗಳ ಉಕ್ತಿಚಮತ್ಕಾರವನ್ನೂ ಸೌಂದರ್ಯತತ್ತ್ವವನ್ನೂ ವಿಮರ್ಶಿಸಿ ವಿಭಾಗಿಸಿ ಹೆಸರಿಟ್ಟು ತೋರಿಸುವ ಶಾಸ್ತ್ರ" (ಭಾರಮೀ. ೬). [ಅಲಂಕಾರ + ಶಾಸ್ತ್ರ]

**ಅಲಂಕೃತ** (ಗು). ಸಿಂಗರಿಸಿದ; ಅಲಂಕಾರಮಾಡಲ್ಪಟ್ಟ; ಅಲಂಕಾರ ಹೊಂದಿದ. [ಸಂ.]

**ಅಲಂಕೃತಿ,** ಅಳಂಕೃತಿ (ನಾ). = ಅಲಂಕಾರ ೧: ಸಂದಲಂಕೃತಿ ಚಂಚಚ್ಚಮರೀಜಮಾಗೆ ... ಕವಿಚಕ್ರವರ್ತಿವೆಸರೇಂ ರನ್ನಂಗೆ ಮೆಯ್ವೆತ್ತುದೊ (ಅಜಿಪು. ೧–೮೫); ಇದು ಪೊಸರೀತಿ ನೋಡಿದು ನವೀನಮಲಂಕೃತಿ (ಶಬಶಂ. ೧–೨೬). **ಅಳಂಕೃತಿ:** ೧. ಅಳಿಕುಳಸನ್ನಿಭ ಮನಸಿಜಗೋಳಕ ವಿಳಸದಳಂಕೃತಿ ಕುಟಿಳಚಳಾಳಕ (ಸುಕುಮಾ. ೫–೫೧ ರ); ವಿಸ್ತಾರದಿ ನಿಟ್ಟು ಚಂದನದ ಬಟ್ಟನಳಂಕೃತಿಯಿಂದಮುಟ್ಟು ... ದುಕೂಲಮುಂ (ಧರ್ಮಾಮೃ. ೭–೧೭೮). [ಸಂ.]

**ಅಲಂಕೃತಿವೆಱು** (ಕ್ರಿ). ಅಲಂಕಾರವನ್ನು ಪಡೆ; ಸೊಗಸಾಗು: ಅಲಂಕೃತಿವೆತ್ತ ಗಣೇಶ್ವರಸಪ್ಫುರನ್ಮಂದಿರಪಂಕ್ತಿಯಿಂದ (ಶಬಶಂ. ೧–೫೫). [ಅಲಂಕೃತಿ + ಪೆಱು]

**ಅಲಂಕೃತೆ** (ನಾ). ಅಲಂಕಾರದಿಂದ ಕೂಡಿದವಳು: ದೇವಿಯುದಯಸಮಯದೊಳ್ ಮಂಗಳಾಲಂಕೃತೆಯಾಗಿ ಪರಿವಾರಾಂಗನಾಕರತಳಪರಿಕಳಿತ ವಿವಿಧಾರ್ಚನಾ ವಿಶೇಷಂಬೆರಸು (ಪುಷ್ಪಪು. ೩–೭೪ ವ). [ಸಂ. ಅಲಂಕೃತಾ]

**ಅಲಂಕ್ರಿಯಾರಚನೆ** (ನಾ). ಅಲಂಕಾರ ನಿರ್ಮಾಣ; ಸೊಗಸನ್ನು ಹೆಚ್ಚಿಸುವ ಕೆಲಸ: ಪದಿನಾಱಲ್ಲವಲಂಕ್ರಿಯಾರಚನೆ ಮೂವತ್ತಾಱು ನೇರ್ಪಟ್ಟುವು (ಗದಾಯು. ೧–೭). [ಸಂ. ಅಲಂಕ್ರಿಯಾರಚನಾ (ಅಲಂಕ್ರಿಯಾ + ರಚನಾ)]

**ಅಲಂಕ್ರಿಯೆ,** ಅಳಂಕ್ರಿಯೆ (ನಾ). ಅಲಂಕಾರ ಮಾಡುವುದು; ಸೊಗಸುಗೊಳಿಸುವ ಕೆಲಸ; ಸೌಂದರ್ಯವನ್ನು ಹೆಚ್ಚಿಸುವ ಕೆಲಸ. **ಅಳಂಕ್ರಿಯೆ:** ಮಾನಿತಮಳಂಕ್ರಿಯಾನುವಿಧಾನಂ ಮತ್ತಿಂತು ತದುಪಲಕ್ಷ್ಯವಿಕಲ್ಪಂ (ಕವಿರಾ. ೩–೧೦೮). [ಸಂ. ಅಲಂಕ್ರಿಯಾ]

**ಅಲಂಗ** (ನಾ). ಪ್ರಾಕಾರದ ಗೋಡೆ; ಕೋಟೆಯ ಗೋಡೆ: ಮಾಗಡಿಯ ಅರಸು ಅಲಂಗದ ನರಸಯ್ಯನೆಂಬವ ದೊರೆ ಕೃಷ್ಣರಾಜ ನೋಲಗಕೆ (ಸೌಂದಕಾ. ೧–೬೬). ಆಗ ಸುಲ್ತಾನನು ಕೇವಲ ಸ್ವಾಮಿಕಾರ್ಯಧುರಂಧರನಾದ ತನ್ನ ಆಪ್ತಸೇನಾಪತಿ ಸೈಯದ್ ಗಫೂರನನ್ನು ಕೋಟೆಯ ಅಲಂಗದ ಮೇಲಕ್ಕೆ ಕಳುಹಿಸಿದನು (ಮುಸುಗ. ೧೩). [← ಪಾರ. ಹಿಂ. ಅಲಂಗ್ = ಕಂದಕ]

**ಅಲಂಘನೀಯ** (ಗು). ದಾಟಬಾರದ; ಮೀರಬಾರದ: ಗುರುವಚನಮಲಂಘನೀಯಮೆಂಬುದು ಮಗನೇ (ಗದಾಯು. ೪–೨). [ಸಂ.]

**ಅಲಂಘ್ಯ** (ಗು). ದಾಟಲಾಗದ; ಮೀರಬಾರದ; ಅತಿಕ್ರಮಿಸಲು ಶಕ್ಯವಲ್ಲದ: ಪರಿಖಾವಳಯಮಲಂಘ್ಯಂ ಪರಿವೇಷ್ಟಿಸೆ (ಮಲ್ಲಿಪು. ೨–೫೧); ತಂದೆಯ ಪರಮವಚನಮಲಂಘ್ಯವೆನೆ (ಕುವ್ಯಾಅ. ೨–೫೫); ಇದಲಂಘ್ಯಂ ಪ್ರೇಮಕಾಮಿನೀಜನವೃತ್ತಂ (ರಾಜಶೇ. ೧೪–೧೧೫). [ಸಂ.]

**ಅಲಂಘ್ಯತೇಜ** (ನಾ). ಮೀರಲಾಗದ ತೇಜಸ್ಸುಳ್ಳವನು; ಅತಿಕ್ರಮಿಸಲಾಗದ ಪರಾಕ್ರಮವುಳ್ಳವನು: ಅಲಂಘ್ಯತೇಜನುಮವನತರಿಪುಸಮಾಜನುಂ (ಚಂದ್ರಪು. ೨–೭೪ವ). [ಸಂ. ಅಲಂಘ್ಯತೇಜಸ್ (ಅಲಂಘ್ಯ + ತೇಜಸ್)]

**ಅಲಂಘ್ಯತ್ವ** (ನಾ). ಮೀರಲಾಗದುದು; ದಾಟಬಾರದ ಸ್ಥಿತಿ: ಅಲಂಘ್ಯತ್ವದೊಳಂ ದ್ವೀಪಪರ್ಯಂತವೇಷ್ಟನದೊಳಂ ನೆಱೆದು (ಆದಿಪು. ೧೨–೬೮ ವ). [ಸಂ.]

**ಅಲಂಘ್ಯಬಲ** (ನಾ). ಅತಿಕ್ರಮಿಸಲಾಗದ ಬಲವುಳ್ಳವನು; ಮೀರಲಾಗದ ಶಕ್ತಿಯುಳ್ಳವನು: ಬಲದೇವವಾಸುದೇವರೊಳಲಂಘ್ಯಬಲನೊರ್ವನುಗ್ರಬಲನೊರ್ವಂ (ಶಾಂತಿಪು. ೧–೮೦); ಅಲಂಘ್ಯಬಲಂ ಬಲಗರ್ವದಿಂದಂ ಬಗೆದನೆ (ಪಂರಾಮಾ. ೫–೧೦೦). [ಅಲಂಘ್ಯ + ಬಲ]

**ಅಲಂಜರ** 'ಅಲಿಂಜರ' ನೋ.

**ಅಲಂದೆ** (ನಾ). ಒಂದು ಊರಿನ ಹೆಸರು: ಸೋಮೇಶ್ವರದೇವರ ನಂದಾದೀವಿಗೆಗೆ ಅಲನ್ದೆಯ ಮುದ್ರಾಪಣದ ಸುಂಕದೊಳಗೆ (ಎಇ. XXVIII, ೫–೫೬; 1082). [?]

**ಅಲಂದೆಸಾಸಿರ** (ನಾ). (ಸಾವಿರ ಗ್ರಾಮಗಳನ್ನುಳ್ಳ) ಒಂದು ನಾಡಿನ ಹೆಸರು: ಉತ್ತರಾಯಣ ಸಂಕ್ರಾಂತಿಪರ್ವ ನಿಮಿತ್ತದಿಂದಲಂದೆಸಾಸಿರದ ಮೊದಲ ಬಾಡವಲಂದಾಪುರದ ಸ್ವಯಂಭುಸೋಮೇಶ್ವರದೇವರಂಗಭೋಗಕ್ಕೆ (ಎಇ. XXVIII, ೫–೩೫; 1082). [ಅಲಂದೆ + ಸಾಸಿರ]

**ಅಲಂಪಱಿಯಾಗು** (ಕ್ರಿ). ಸಂತೋಷ ಅಧಿಕವಾಗು, —ಹೆಚ್ಚಾಗು: ಒಲವಿನೊಳಾಗಳೊಲ್ದೆಜಗೆ ಪೆರ್ಮೊಲೆಗಳ್ತೊರೆ[ದುರ್ಚೆ]ಪಾಯ್ವಪಾಲೊಳೆ ಮಿಸಿಸುತ್ತಮೆತ್ತಿ ಮಗನಂ ಬಿಗಿಯಪ್ಪಿ ಪೊದಳ್ದ ಕಣ್ಣನೀರ್ಗ್ಗಳನೊಳ [ಸೇದಿ]ತಾಂ ಪರಸಿ ಮತ್ತಮಲಂಪಳಿ[ಱಿ]ಯಾಗೆ ನೋಡಿ ಬೀಳ್ಕೊಳಿಸಿದಳಾ ವಿಳಾಸವತಿ ಧೀರತೆಯಿಂ ಬಲಿಕೆಯ್ದು ಚಿತ್ತಮಂ (ಕಾದಂಬ. ೫೦೬).
[ಅಲಂಪು + ಅಱಿ$_3$ + ಆಗು$_1$]

**ಅಲಂಪಾನ್** (ಕ್ರಿ). ಪ್ರೀತಿಯನ್ನು ಪಡೆ; ಸಂತೋಷವನ್ನು ಹೊಂದು: ಜಾತ್ಯಶ್ವಂ ಪಯಿಂಚ್ಛಾಸಿರಂ ಕ್ರಮದಿಂದೆಳ್ತರೆ ಕೊಡೆ ತಾನಿರದೆ ಕೈಲಾಸಕ್ಕಲಂಪಾಂತು ಚೇರಮನೇಂ ದಾಱಿಯನಿಕ್ಕನೇ (ಉದ್ಭಟ. ೧೨–೨೪). [ಅಲಂಪು + ಆನ್$_1$]

**ಅಲಂಪಿಕ್ಕು** (ಕ್ರಿ). ಬಳಿ; ಸವರು; ಲೇಪಿಸು: ರವಿ ಬಯ್ಗು [ಪಾಠಾಂ. ಬಯ್ಗೆ]ವೊೞ್ತಲಂಪಿಕ್ಕುವ ಕುಂಕುಮರಜದ ಪೊಟ್ಟಳಕ್ಕೊತ್ತಿದನೆಂಬವೊಲರಗಿನ ಮುದ್ರೆಯಿನೆಸೆದುವು ಮಧುಯುತ ಮುಕುಳಿತಾಂಬುಜಂಗಳೊಳಳಿಗಳ್ (ವರ್ಧಪು. ೮–೨೫); ಮೃಗಮದಮನಲಂಪಿಕ್ಕಿ ಸಾದಿನ ಕೆಂಪಂ ಕಕ್ಷಪುಟದೊಳ್ ಕೈಕೊಳಿಸಿ (ಬಸರ. ೪–೬). ☞ 'ಅಲಂಪು' ಎಂಬುದು ಆಲೇಪ್ಯದಿಂದ ಬಂದಿರಬಹುದೆ? [ಅಲಂಪು? + ಇಕ್ಕು]

**ಅಲಂಪು**, ಅಲಪು$_1$, ಅಲಹು (ನಾ). ೧. ಪ್ರೀತಿ; ಸಂತೋಷ; ಸಂಭ್ರಮ: "ಸಂತಸ ಹರಿಸಮಲಂಪುಂ ಸಂತೋಷಾಖ್ಯಾನ" (ಕವಿಕಂ. ೧೩೪); ಮಂಗಳಕಾರಣಂಗಳಂ ತರಿಸುವೆ ನಾಂ ಮನೋನಯನವಲ್ಲಭನೊಳ್ ಮನದೊಂದಲಂಪಿನಿಂ ನೆರೆವೆನಮೋಘಂ (ಕವಿರಾ. ೨–೧೦೪); ಪೂತಕಲ್ಪಲತೆಯಂ ಲಲಿತಾಂಗಿಯೆ ಗೆತ್ತಲಂಪಿನಿಂದೆಱಗುವುದುಂ (ಆದಿಪು. ೪–೧೩); ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರ್ (ಪಂಪಭಾ. ೪–೨೯); ಅಲಂಪಿಂ ಭೂರಿಕ್ಷ್ಮಾಚಕ್ರಮುಂ ಬಣ್ಣಿಸೆ ಸಲೆ ನೆಗೞ್ದಂ ರಟ್ಟಕಂದರ್ಪದೇವಂ (ಎಕ II, ೧೩೩–೭; 982); ಒದವಿದಲಂಪಿನ ಪೊಂಪುಳಿಯಿಂದೆವೆಗದ ಮುಚ್ಚಧೆ ನಡೆನೋಡುವ (ಜಯಕಾ. ೩–೧೨). ೨. ಸೊಗಸು; ಸೌಂದರ್ಯ: "ವಿಭವ" (ಚತುನಿ. ೬. I, ೧೦೫); ತದ್ವನದಲಂಪಂ ನಡೆ ನೋಡುತ್ತಂ ಬರೆವರೆ (ಉದ್ಭಟ. ೯–೧೨ ವ). ೩. ಉತ್ಕಟವಾದ ಇಚ್ಛೆ; ಬಹಳವಾದ ಆಸೆ: ಆತನುಂ ಪಸಿದಲಂಪಿನಿಂದಂ ಬಿಸಿಯಂಬಲಿಯಂ ಬಾಯೊಳಿಟ್ಟಾಗಳ್ ಕಯ್ಯುಂ ಬಾಯುಂ ಬೆಂದೊಡೆ (ವಡ್ಡಾರಾ. ೧೮೦–೧೯); ಅನ್ತು ಮನದಲಂಪು ಪೋಗೆ ಗಂಗಾನದಿಯಳೋಲಾಡಿ ನಿಜಗೃಹಕ್ಕೆವಂದು (ಎಕ. VII, ಶಿವಮೊ. ೪–೧೦; 1122). ೪. ಅತಿಶಯ; ಹೆಚ್ಚಿಗೆ; ಮೇಲ್ಮೆ: ಪೆಱತೇನೊ ಪಾದರದೊಳ್ಸಂಸಾರ ಸರ್ವಸ್ವಮುಂ ಗೆಲೆವಂದಿಂಪಿನಲಂಪನಾಳ್ದ ಸವಿಯುಂಟಕ್ಕುಂ (ಪಂಪಭಾ. ೪–೮೪); ನೆಟ್ಟಗೆ ಕಣ್ಪೇಟದೊಳಾದ ಮಚ್ಚರದಲಂಪಿಂ ಪೋವರ್ ದಿವ್ಯಾಂಗನಾಳಿಗೆ (ಕಾವ್ಯಸಾ. ೨೫೫); ಸೊಂಪುಗೆಟ್ಟುದು ಸಿರಿವದನ ಮನದಿಂಪು ಬೀತುದು ಭಕ್ತಮೋಹದಲಂಪು ಮಸುಳಿತು ಬಿಸುಟುಕಳೆದನು ಹಯದ ವಾಘೆಗಳ (ಕುವ್ಯಾಭೀ. ೬–೨೬). **ಅಲಪು$_1$**: ೨. "ಅಲಪುಗಾರ" ಪರಾ. **ಅಲಹು**: ೧. ನಲವಿಂದ ಮೇದು ... ಕಡಲ್ವಾಯ್ವ ಪೂರಾಂಬುವಂ ತಮ್ಮಲಹಿಂ ಪೊಕ್ಕೀಂಟಿ ಮೆಯ್ಯಂದಳೆದು ಪುದಿದು (ಶಾಂತೀಶ್ವ. ೧೨–೬೦). [?]

**ಅಲಂಪುಗಾಱ**, ಅಲಪುಗಾರ (ನಾ). ಸೊಗಸುಗಾರ; ಸಂತೋಷವುಂಟುಮಾಡುವವನು: ಚದುರಂ ಚಾಗಿಯಲಂಪುಗಾಱನೆಱೆಯಂ ... ಚಿಕದೇವೇಂದ್ರಂ (ಅಪ್ರತಿ. ೧೧–೧೯); ಅಲಂಪುಗಾಱನೆಱೆಯಂ ... ಚಿಕದೇವೇಂದ್ರಂ (ಗೀತಗೋ. ೧–೩). **ಅಲಪುಗಾರ**: "ಸಂಪತ್ತುಳ್ಳವನು, ಸಂತೋಷಚಿತ್ತನು" (ಪ್ರಭಣ್ಣ).
[ಅಲಂಪು + -ಗಾಱ (< -ಕಾಱ)]

**ಅಲಂಪುಗೊಳ್** (ಕ್ರಿ). ಸಿಂಗರಿಸಿಕೊಳ್ಳು; ಸೊಗಸುಮಾಡಿಕೊಳ್ಳು: ಮಿಸುಗುವ ಪುಷ್ಯರಾಗಮಣಿಮುದ್ರಿಕೆಯಿಂದಮಲಂಪುಗೊಂಡು ನಿಂದಸಿಯಳು ಪೋಲ್ತಳಂಗಜನ ವಲ್ಲಭೆಯರ್ಚಿಪ ಪೊನ್ನಬೊಂಬೆಯಂ (ಸೂಕ್ತಿಸು. ೮–೪೦೯). [ಅಲಂಪು + ಕೊಳ್$_1$]

**ಅಲಂಪುವಡೆ** (ಕ್ರಿ). ೧. ಸಂತೋಷವನ್ನುಂಟುಮಾಡು; ಸುಖವನ್ನು ಕೊಡು: ಘ್ರಾಣೇಂದ್ರಿಯೌತ್ಸುಕ್ಯಮಂ ಪ್ರಕಟಂಮಾಡಿ ನೃಪಂಗಲಂಪುವಡೆದತ್ತಂಭೋಜಗಂಧಾಸವಂ (ಆದಿಪು. ೪–೬೯). ೨. ಸಂತೋಷವನ್ನು ಹೊಂದು; ಸುಖವನ್ನು ಪಡೆ: ಜನಪಾಗ್ರಣಿ ನಿಷ್ಕಂಭಂ ಜಸಮುಂ ಪಡೆದಲಂಪುವಡೆದೆಸೆದಿರ್ದಂ (ಉದ್ಭಟ. ೧೧–೩೦). [ಅಲಂಪು + ಪಡೆ$_1$]

**ಅಲಂಪುವೆರಸು** (ಕ್ರಿ). ಪ್ರೀತಿಯಿಂದ ಕೂಡು: ಅಲಂಪುವೆರಸಿದ ನೋಟಕ್ಕಮಿಂಬುವೆರಸಿದ ಕೂಟಕ್ಕಂ (ಪಂಪಭಾ. ೪–೧೭ ವ).
[ಅಲಂಪು + ಬೆರಸು]

**ಅಲಂಪುವೋಗು** (ಕ್ರಿ). ಹಿಗ್ಗು; ತೃಪ್ತಿಪಡು: ಹೃದಯವಲಂಪುವೋಗೆ ಪದೆದೀಂಟದ ಮುನ್ನಮೆ ತನ್ನ ಕಂಪಿನಿಂ ಮದದ ಪೊದಱ್ಕೆಯಂ ಮನಕೆ ಮಾಱ್ಪ ... ಮಧುವಿಂಗೆ (ಕುಸುಮಾ. ೧೧–೧೫೬).
[ಅಲಂಪು + ಪೋಗು$_1$]

**ಅಲಂಪೂರ್** (ನಾ). ಒಂದು ಊರಿನ ಹೆಸರು: ಅಂದಲಂಪೂರೊಳ್ತ ತಿಷ್ಠಿಸಿ ವಂದಿಸುವನಾ ಬ್ರಹ್ಮನುತ್ಸುಕದಿಂದವಾ ಬ್ರಹ್ಮೇಶ್ವರನನಾ ಪುಷ್ಪಗಿರಿಯಲ್ಲಿ (ಬಸಪು. ೫೪–೬೪). [ಅಲಂಪು + ಊರ್]

**ಅಲಂಪೋಡು** (ಕ್ರಿ). ಸಂತೋಷವುಂಟಾಗು; ಪ್ರೀತಿಯುಂಟಾಗು: ಕೂಡುವ ಪಾರಿವಂಗಳುಲಿ ಕೇಳಿನಗಂಗಳೊಳುಣ್ಮೆ ಕೇಳ್ದಲಂಪೋಡೆ ಕೊಳಂಗಳೊಳ್ ನೆರೆದು ಕಣ್ಗೆಯಲಾಟಿಪ ಹಂಸಯುಗ್ಮಮಂ ನೋಡಿ ನವೋದಬಿಂದುಭರಮಂಥರ ದೃಷ್ಟಿ ಮರಳ್ದು ನಲ್ಲನಂ ನೋಡಿದಳ್ (ವರ್ಧಪು. ೬–೨೪). ☞ ಈ ಶಬ್ದ 'ಅಲಂಪೂಡು' ಇರಬಹುದೆ?
[ಅಲಂಪು + ಓಡು?]

**ಅಲಂಬು** 'ಅಲುಂಬು$_1$' ನೋ.

**ಅಲಂಬುದ್ಧಿ** (ನಾ). ಸಾಕು ಎಂಬ ಮನೋಧರ್ಮ; ತೃಪ್ತಿಯ ಭಾವನೆ; ವೈರಾಗ್ಯ: ಈ ಜಗತ್ತಿನಲ್ಲಿ ಯಾವಾಗಲೂ ಎಚ್ಚರದಿಂದ ನಡೆಯುವ ನೀನು ನನ್ನ ದರ್ಶನದಿಂದ ಅಲಂಬುದ್ಧಿಯನ್ನು ಪಡೆದೆನೆಂದು ಹೇಳುವುದು ಔಪಚಾರಿಕವೇ ಸರಿ (ಪದ್ಮನ. ೬); ತಾನಾದರೂ ಅವ ಅಲಂಬುದ್ಧಿಯಿಂದಲೇ ಉಳಿದುಬಂದನು (ನವರಾ. ೧೭–೯); ಆದರೆ ಬರುಬರುತ್ತಾ ಅವರ ವಿರಕ್ತಿಯು ಸಂಸಾರದಲ್ಲಿ ಅಲಂಬುದ್ಧಿಯಿಂದ ಬಂದುದಲ್ಲ (ಅನಂತ. ೮೪). [ಅಲಂ + ಬುದ್ಧಿ]

**ಅಲಂಬುನಾಡಿ** (ನಾ). ಒಂದು ನಾಡಿಯ ಹೆಸರು: ಇಡಾನಾಡಿಯಲ್ಲಿ ಮಂದಾಕಿನೀ, ... ಅಲಂಬುನಾಡಿಯಲ್ಲಿ ತಾಮ್ರಪರ್ಣೀ ... ಹೀಗೆ ೧೨ ನಾಡಿಗಳಲ್ಲಿ ೧೨ ನದಿಗಳನ್ನು ತಿಳಿದು (ಹಸಾರ. ೪೯೮–೧೯).
[ಅಲಂಬು? + ನಾಡಿ]

**ಅಲಂಬುಸೆ** (ನಾ). ಒಂದು ನಾಡಿಯ ಹೆಸರು: ತರಳ ತಿಳಿ ನಾಡಿಗಳ ಚೌದಶಗಳಿಗೆ ನಾಮಗಳಾ ... ಅಶ್ವಿನಿ ಅಲಂಬುಸೆಯು (ಗಗತಾ. ೯–೧೧).
[ಸಂ. ಅಲಂಬುಷಾ, ಅಲಂಬುಸಾ]

**ಅಲಂವಳ್ಳಿ** (ನಾ). ಒಂದು ಊರು: ವೆದೆವಳ್ಳಿಯರಾ ದೇವಡಿಯುಂ ಅಲಂವಳ್ಳಿಯರಾ ರವಿಚನ್ದನುಂ (ಎಕ. VII, ಶಿಕಾರಿ. ೧೫೪–೮; 685).
[ಅಲಂ? + ಪಳ್ಳಿ]

**ಅಲಕೆ**, ಅಳಕ$_4$ (ನಾ). ೧. ಮುಂಗುರುಳು; ಗುಂಗುರು ಕೂದಲು; ತಲೆಯ ಕೂದಲು: ಅಲಕಂ ಮಂದಾರಶೂನ್ಯಂ ಕದಪು ಮಕರಿಕಾಪತ್ರಶೂನ್ಯಂ (ಆದಿಪು. ೩–೧೩). ೨. ಹುಚ್ಚುನಾಯಿ. ೩. ಬೇಟೆಯ

ನಾಯಿ (ಗಂಗಾವು). **ಅಳಕ್**4: ೧. ಅಳಿಕುಳದವೋಲ್ ವಿನೀಳಂಗಳ್ ನಿನ್ನಳಕಾಳಿಗಳ್ (ಕವಿರಾ. ೩–೬೧); ಅಳಿಕುಳಸನ್ನಿಭ ಮನಸಿಜಗೋಳಕ ವಿಳಸದಳಂಕೃತಿ ಕುಟಿಳಚಳಾಳಕ (ಸುಕುಮಾ. ೫–೫೦ ರ); ಅದು ಕೊಯ್ದುದಳಕೆಯಳಕಮಂ . . . ಎನಲ್ ವೀತಶೋಕಪುರವರಮೆಸೆಗುಂ (ಮಲ್ಲಿಪು. ೨–೩೨). [ಸಂ.]

**ಅಲಕನೆ** 'ಅಲಕ್ಕನೆ' ನೋ.

**ಅಲಕಿಜುಕೆ** (ನಾ). ಒಂದು ಪ್ರದೇಶದ ಹೆಸರು : ಉತ್ತರಸ್ಯ[ಸ್ಯಾ] ನ್ದಿಶಿ ರಜಪನ್ತ . . . ಕೊಟ್ಟಲೆ ಪಳ್ಳದ ಅಲಕಿಜುಕೆಯೆ ಕರ್ಗಲ್ಲೊಟ್ಟಿಯೆ ಪುಣುಶೆಪಡಿಯೆ (ಎಕ. XVI, ತಿಪಟೂ. ೧೪೦–೭೨; 700). [?]

**ಅಲಕು**1 'ಅಲುಗು1' ನೋ.

**ಅಲಕು**2 (ನಾ). ಬೀಜಬಿತ್ತಿದ ಹೊಲದಲ್ಲಿ ಬೀಜಗಳು ಮಣ್ಣಿನಿಂದ ಮುಚ್ಚಿಕೊಳ್ಳುವಂತೆಯೂ, ಉತ್ತ ಮಣ್ಣು ಸಮವಾಗಿ ಹರಡಿಕೊಳ್ಳುವಂತೆಯೂ, ಮಾಡಲು ಬಳಸುವ ಒಂದು ಸಾಧನ; ಹಲುಬೆ : ಅಲಕು ಎಂದರೆ ಜಾಡರು ನೇಯುವ ಹಲಗೆಯ ಹಾಗಿರುವ ಕುಂಟೆಯ ದಿಂಡಿಗೆ ಜಂತಿ ಕುಂಟೆ ಹಲ್ಲಿನಹಾಗೆ ನಾಲ್ಕು ಬೆರಳು ಅಗಲವಾಗಿ ಮೊನೆಯಾದ ಹಲ್ಲುಗಳನ್ನು ಹತ್ತು ಹನ್ನೆರಡು ಇಪ್ಪತ್ತರವರೆಗೂ ಅದರ ಅನುವರಿತು ಹಲ್ಲುಗಳನ್ನು ಹಾಸಿರುವ ಕುಂಟೆಗೆ ಅಲಕುಕುಂಟೆ ಹಾಗು ಪಲಗೋರು ಎಂಬ ಹೆಸರು (ಕೃಷಿಪ್ರ. ೫೬).

**ಅಲಕುಹೊಡೆ** = ಹಲುಬೆಹೊಡೆ; ಹೊಲದಲ್ಲಿ ನೆಲವನ್ನು ಸಮಗೊಳಿಸಲು ಮತ್ತು ಬೀಜಗಳ ಮೇಲೆ ತೆಳ್ಳಗೆ ಮಣ್ಣು ಹರಡುವಂತೆ ಮಾಡಲು ಅಲಕಿನ ಮರವನ್ನು ಎತ್ತುಗಳ ಮೂಲಕ ಎಳೆಸು : ಅದೇ ಕೆಸರಲ್ಲಿ ಅಲಕುಹೊಡೆಯಬೇಕು (ಕೃಷಿಪ್ರ. ೫೬). [?. / ತೆಲು. ಅಲಕು = ಬಿತ್ತು]

**ಅಲಕು**3 (ನಾ). ಹೆಣೆದ ತೆಂಗಿನ ಗರಿ : ಚಪ್ಪರಕ್ಕೆ ಅಲಕು ಇಲ್ಲವೆಂದು ಮಗಳ ಮದುವೆ ನಿಲ್ಲಿಸಲಾದೀತೆ ! (ರೂಢಿ). [< ಅಲ್ಲು1 + –ಕ]

**ಅಲಕೆ, ಅಳಕೆ**2 (ನಾ). ೧. ಕುಬೇರನ ರಾಜಧಾನಿ; ಅಳಕಾನಗರ. ೨. ಎಂಟರಿಂದ ಹತ್ತು ವರ್ಷದೊಳಗಿನ ವಯಸ್ಸಿನ ಹುಡುಗಿ. **ಅಳಕೆ**2 ೧ : ಅದು ಕೊಯ್ದುದಳಕೆಯಳಕಮನದು ಮಿಕ್ಕುದು ಭೋಗವತಿಯ ಭೋಗಮಂ (ಮಲ್ಲಿಪು. ೨–೩೨). [ಸಂ. ಅಲಕಾ]

**ಅಲಕ್ಕನೆ, ಅಲಕನೆ** (ಅ). ಥಟ್ಟನೆ : ಅದು ಒಮ್ಮೆ ಇವರ ಸಾಲನ್ನೇ ಅಲಕ್ಕನೆ ಜಿಗಿದು ಪಾರಾಗಬೇಕೆಂದು . . . ಸರಿಯಿತು (ಮೇದಿಮು. ೧೪೬). **ಅಲಕನೆ** : ಜೋಗಿ ಎದ್ದಂತೆ ಅಲಕನೆದ್ದು ಮುಗಿಸಿದಿರಿ ಒಂದು ಸಂಧಿ (ಹೃದಸ. ೭೪). [ಅಲಕ್ಕು + –ಅನೆ1]

**ಅಲಕ್ಕು** (ನಾ). ಬೇರೆಯಾಗಿ ನಿಲ್ಲುವುದು.

**ಅಲಕ್ಕಾಗು** = ಬೇರೆಯಾಗಿ ನಿಲ್ಲು : ನೋಡಿದಿರಾ ವೆಂಕಣ್ಣ, ಯಜಮಾನರ ಬುದ್ಧಿವಂತಿಕೆ, ನಮ್ಮನ್ನು ಮುಂದೆ ನೂಕಿ ತಾವು ಅಲಕ್ಕಾಗುವುದು (ನಟಸಾ. ೩೪೭). [← ಮರಾ. ಹಿಂ. ಅಲಗ್ (< ಸಂ. ಅಲಗ್ನ)]

**ಅಲಕ್ತ** (ನಾ). = ಅಲಕ್ತಕ : "ಅಲಕ್ತಮೆನಲಲತಗೆ[ಗೆ] ನಾಮಮಕ್ಕುಂ" (ಮಂಗರಾ. ೧೧೧–೩೦); ಯೋಷಿಚ್ಚರಣಾಲಕ್ತಾಂಶುವಿಂ ಕೆಂಪಡರ್ದುಲತೆಯ ಬಾಚಿಟ್ಟೊಂಪದಿಂದೊಪ್ಪಿ . . . ಇರ್ದ ಹಾರೀತಕ ಹರಿತಶಿಲಾಪಟ್ಟದೊಳ್ ಭೂಪನಿರ್ದಂ (ಕಾದಂಉ. ೧೦೨). [ಸಂ.]

**ಅಲಕ್ತಕ** (ನಾ). ಅರಗು : ಆತ್ಮಾಂಗದೊಳ್ ರೋಹಿಣೀಚರಣಾಲಕ್ತಕರಾಗೆ ಮಚ್ಚಿಜಿದುದೋ (ಪಂಪಭಾ. ೪–೫೦). [ಸಂ.]

**ಅಲಕ್ತಕಚ್ಛವಿ** (ನಾ). ಅರಗಿನ ಹೊಳಪು; ಅರಗಿನ ಕೆಂಪು ಬಣ್ಣ : ಕವಿಲಾದ ರತ್ನಕಂಬಳಮುಮಲಕ್ತಕಚ್ಛವಿಯಲಕ್ತಕಮುಂ ಕಿಸುಗಲ್ಲ ರತ್ನಕಂಬಳಮುಂ (ಮಲ್ಲಿಪು. ೧೨–೯೦). [ಅಲಕ್ತಕ + ಛವಿ]

**ಅಲಕ್ತಕದ್ರವ** (ನಾ). ಅರಗಿನ ರಸ; ಅರಗಿನ ದ್ರಾವಕ : ಈ ಬಗೆಯೊಳಲಕ್ತಕದ್ರವದೊಳೊಂದದೆ ಸಿಂದವು ಪಾದಪಂಕಜಂ (ಪಂಪಭಾ. ೪–೬೭). [ಅಲಕ್ತಕ + ದ್ರವ]

**ಅಲಕ್ತಕರಸ** (ನಾ). = ಅಲಕ್ತಕದ್ರವ : ಚೆಂದಾವರೆ ಚೆಂಬಿಸಿಲಿಂದೊಂದುವ ತೇಜದಿಂದ ನಿನ್ನ ಮೃದುಪದಯುಗಮೆಂದೆಂದಿನವೊಲಲಕ್ತಕರಸದಿಂದಂ ಪೇಟಿಗೊಂದಿತಿಲ್ಲಿದೇನಿಂದುಮುಖಿ (ಕಾದಂಪೂ. ೩೩೨). [ಅಲಕ್ತಕ + ರಸ]

**ಅಲಕ್ತರಸ** (ನಾ). = ಅಲಕ್ತಕದ್ರವ : ಪಸುರ್ಮಣಿಯ ಸೋಪಾನಕ್ಕೆ ಪದತಳಮಲಕ್ತರಸದಿನಲ್ಲಿಗಲ್ಲಿ ಗಂದಂಗೊಳಿಸಿದ ಕೆಂಬರಲ ಸಿರಿಯಂ ನಿರವಿಸುತ್ತಿರೆಯುಂ (ರಾಜಶೇ. ೭–೧೭ ವ). [ಅಲಕ್ತ + ರಸ]

**ಅಲಕ್ಷಣ** (ಗು). ೧. ಲಕ್ಷಣವಿಲ್ಲದ. (ನಾ). ೨. [ಕಾವ್ಯಮೀ] ಒಂದು ಬಗೆಯ ವಾಕ್ಯದೋಷ : ಅನರ್ಥಕ, ಶ್ರುತಿಕಠೋರ, ವ್ಯಾಹತಾರ್ಥ, ಅಲಕ್ಷಣ, ಸ್ವಸಂಕೇತ, ಪ್ರಕ್ಲುಪ್ತಾರ್ಥ, ಅಸಂಮತ, ಅಪಭಂದಸ್ಸು . . . ಯೆಂಬ ಯೆಂಟು ವಾಕ್ಯದೋಷಮಿಲ್ಲದೆ (ವಿವೇಕ. ೨೨೬). [ಸಂ.]

**ಅಲಕ್ಷ** (ಗು). = ಅಲಕ್ಷ್ಯ ೧ : ದೃಷ್ಟದಲ್ಲಿ ಕೊಟ್ಟುದ ಲಕ್ಷಿಸಲಜಿಯದೆ ಅಲಕ್ಷವ ಲಕ್ಷಿಸಿ ಕಾಂಬುದಕ್ಕೆ ಲಕ್ಷ್ಯವೇನು (ಮೋಳಿಮಾ. ೨೪೩–೫೪). [ಸಂ. ಅಲಕ್ಷ್ಯ]

**ಅಲಕ್ಷಿತ** (ಗು). ಲಕ್ಷ್ಯಕ್ಕೆ ಬೀಳದ; ಗಮನಕ್ಕೆ ಬಾರದ; ಕಡೆಗಣಿಸಿದ. [ಸಂ.]

**ಅಲಕ್ಷಿಸು** (ಕ್ರಿ). ಕಡೆಗಣಿಸು; ಉದಾಸೀನಮಾಡು : ಅಡುಗೆಮನೆಯು ನಮ್ಮಿಂದ ಅಲಕ್ಷಿಸಲ್ಪಡುವಂತಹ ಸ್ಥಳವಲ್ಲ (ಅಡುಸೌ. ೧೧). [ಅಲಕ್ಷ್ಯ + –ಇಸು3]

**ಅಲಕ್ಷ್ಮಿ** (ನಾ). ದಾರಿದ್ರ್ಯ; ಬಡತನ : ಮಾನವೇಂದ್ರನು ಮಡಿದೊಡಾತನನೂನ ಲಕ್ಷ್ಮಿಯಲಕ್ಷ್ಮಿಯಾಯಿತು (ಬಸವು. ೬೧–೩೪). [ಸಂ. ಅಲಕ್ಷ್ಮೀ]

**ಅಲಕ್ಷ್ಯ** (ಗು). ೧. ಕಾಣಲಾಗದ; ಗಮನಕ್ಕೆ ಬಾರದ; ತಿಳಿಯಲಾಗದ (ನಾ). ೨. ಲಕ್ಷ್ಯವಿಲ್ಲದಿರುವುದು; ಕಡೆಗಣಿಸುವುದು; ಲೆಕ್ಕಕ್ಕೆ ತಾರದಿರುವುದು; ಉದಾಸೀನತೆ; ವಿಮನಸ್ಕತೆ. [ಸಂ.]

**ಅಲಗ** (ನಾ). ಮೃದಂಗವಾದನದಲ್ಲಿ ಒಂದು ರೀತಿ; ಮದ್ದಳೆ ಬಾರಿಸುವುದರಲ್ಲಿ ಒಂದು ಕ್ರಮ : ಸಮಹಸ್ತ ಅರ್ಧಸಮಹಸ್ತ ಕರ್ತರಿ ಅರ್ಧಕರ್ತರಿ ವಿಷಮಕರ್ತರಿ ಅಲಗ ಬೊಟ್ಟಳಗ ಬೊಟ್ಟುಗಳಂ ನುಡಿಸುತ್ತ (ವಿರೂಪಾ. ೮೦). [?]

**ಅಲಗಂಬು** (ನಾ). ಹರಿತವಾದ ಅಲಗಿನಿಂದ ಕೂಡಿದ ಬಾಣ : ಅಲಗಂಬಿಂಗಳ್ಕದ ಮನಮಲರಂಬಿಗಳ್ಕಿದಪ್ಪುದಸಿಯಳೆ ಮಸೆದಿರ್ಪಲಗಂಬು ತನುವನಲ್ಲದಲರಂಬಿನ ತೇಜದೆ ಮನವನೇಂ ಭೇದಿಕುಮೇ (ಪಾರ್ಶ್ವಪು. ೩–೨೫). [ಅಲಗು2 + ಅಂಬು2]

**ಅಲಗಣಸು** (ನಾ). ೧. ಅಲಗಿನ ಸ್ಪರ್ಶ, —ಏಟು, —ಹೊಡೆತ : ಯೋಗಿಗೆತ್ತಿದ ಖಡುಗಧಾರೆ ವಿಯೋಗಿಗೆತ್ತಿದ ಸಬಳವಖಿಳ ವಿರಾಗಿಗಳ ಹೆಡತಲೆಯ ದಡಿ ಸೃಷ್ಟಿಕರಿಗಲಗಣಸು ಆಗಮಿಕರೆದೆಶೂಲ. . . ಎಸೆದುದು ಕುಸುಮಮಯ ಸಮಯ (ಕು ವ್ಯಾ ಆ. ೫–೬); ಅನಿಮಿಷರಿಗಲಗಣಸು ನಿನ್ನಾನನದ ಲಕ್ಷ್ಮಿಗೆ ಮಾಂದ್ಯವೇಕೆ (ನಿಭಾಗ. ೧೦–೩೧–೮); ಬಣಗು ಕಪಿ ಕೇಳಲವೊ ರಣಕಲಗಣಸಹನು ಹನುಮಂತನಾತನ ಕುಣಿಪವೇನಾಯ್ತೆಂಬುದನು ನೋಡಲಿದ ಕಪಿಭಟರ (ತೊರರಾ. ೬–೩೨–೩೪). ೨. ಹೊಯ್‌ಕಯ್; ಸಮಾನ : ಪ್ರತಿಸ್ಪರ್ಧೆ : ದುಗುಲದ ಮುಜಿಯೊಳ್ ಜಲಜಲಿಪ ರತ್ನದೀಪಕ್ಕಲಗಣಸೆನುತಿರ್ಪುದಧರಮರುಣಾಧರೆಯಾ (ಮಲ್ಲಿಪು. ೩–೭೪); ಜಲಜಲಿಪ ಭಾಜನಾಂಗಮಹೀಜಕ್ಕಲಗಣಸೆನೆ ಕೊಸಗೆಸೆದುದು

ಮಲರ್ದಲರ್ದುಳ್ಳಲರ್ದ ಮಿಸುಪ ಪೊಸತಲರ್ದಲರಿಂ (ಚಂದ್ರಪು. ೭–೫೬); ಚರಿತ್ರದೊಳು ಗಂಗೆಗಲಗಣಸು [ಪಾಠಾಂ. ಗಣಿಸು] ಪತಿಭಕ್ತಿಯೊಳರುಂಧತಿಗೆ ಸರಿ (ಹಚಕಾ. ೧–೪೪); ರತಿಗಲಗಣಸು ರಂಭೆಗೆ ಸರಿಮಿಗಿಲು ಭಾರತಿಗೆಕ್ಕೆ ತೆಕ್ಕೆ (ಕುರಾಸಾಂ. ೧೭–೩೭). **೩.** ಅಧಿಕವಾಗುವುದು ; ಹೆಚ್ಚಾಗುವುದು.

**ಅಲಗಣಸಾಗು** = ಮೀರು ; ಸ್ಪರ್ಧಿಸು : "ಅಲಗಣಸಾದುದು–ಪ್ರತಿಹತಕ್ಕೆ ಪೆಸರ್" (ಕಶಸಾ. ೧೫–೨೯೬) ; "ಅಲಗಣಸಾದುದು ಮಿಕ್ಕುದು ಗೆಲೆವಂದುದು" (ಕವಿಕಂ. ೧೩೭). [ಅಲಗು$_2$ + ಅಣಸು$_2$]

**ಅಲಗಣಿಸು** (ಕ್ರಿ). ಅಸಹ್ಯವಾಗು: "ಅಲಗಣಿಸಿತೆನಲ್ಕಸಹ್ಯಮೆಂದಱಿಗೆ" (ಭಾರನಿ. ೫೧). [?]

**ಅಲಗರ್ಜಿ** (ಗು). ಚಟುವಟಿಕೆಯಿಲ್ಲದ : ಅಲಗರ್ಜಿ ನಿತ್ರಾಣವಾದ ಎತ್ತುಗಳಿಂದ ಹೊಲದ ಕೆಲಸವು ಸಾಗುವುದಿಲ್ಲ (ಕೃಷಿಪ್ರ. ೫೩).
[← **ಮರಾ.** ಅಲಗರಜೀ, ಅಲಗರದ, ಅಲಗರದೀ]

**ಅಲಗರ್ಜಿತನ** (ನಾ). ಅಲಕ್ಷ್ಯಮಾಡುವುದು ; ಉದಾಸೀನತೆ : ತಂದೆಯ ಅಲಗರ್ಜಿತನ ರಾಗಣ್ಣನನ್ನು ಕೊರೆಯಿತು (ಗೀಚುಗೆ. ೫೮).
[ಅಲಗರ್ಜಿ + –ತನ]

**ಅಲಗರ್ದ** (ನಾ). ನೀರುಹಾವು. [ಸಂ.]

**ಅಲಗಿಕ್ಕು** (ಕ್ರಿ). ಅಲಗಿನಿಂದ ಇರಿ; ಕತ್ತಿಯಿಂದ ಚುಚ್ಚು ; ಶಸ್ತ್ರಪ್ರಹಾರ ಮಾಡು : ಉಕ್ಕಿದುವು ಕಂಬನಿಗಳಧರೋಷ್ಠಮದಿರಿತಲಗಿಕ್ಕಿ ತಿರುಪಿದವೊಲಾಯ್ತು (ಜೈಮಿಭಾ. ೧೯–೧೪) ; ಕಾರಮ್ಮನ ಮಾತು ಕೇಳಿ ಆನಂದರಾಯನ ಎದೆಯಲ್ಲಿ ಒಮ್ಮೆಲೆ ಅಲಗಿಕ್ಕಿ ಹೊಡೆದಂತಾಯಿತು (ತೊಳೆಮು. ೫೨). [ಅಲಗು$_2$ + ಇಕ್ಕು]

**ಅಲಗಿನಗಿಡ** (ನಾ). ಒಂದು ಗಿಡ (ವೈಔಗಿ. ೫೧). [ಅಲಗಿನ ? + ಗಿಡ]

**ಅಲಗು$_1$** 'ಅಲುಗು$_1$' ನೋ.

**ಅಲಗು$_2$** (ನಾ). **೧.** ಕತ್ತಿ, ಚಾಕು, ಚೂರಿ ಮುಂತಾದ ಆಯುಧಗಳ ಹರಿತವಾದ ಅಂಚು, —ಬಾಯಿ : ಕುಸುಮಕಾರ್ಮುಕನ ಪೊಡೆಗೆ ಪದವಡಿಸಿ ಕಾಸಿ ಕಂದಿಸಿದ ಸೆಲಗಿನಂಬಿನಲಗುಗಳೆವೆನಿಸಿ ಕಡುಗಂದಿ ಸೂಸಿದ ಪಾಸಿದೆಳೆದಳಿರ್ಗಳುಂ (ವರ್ಧಪು. ೫–೬೩ ವ) ; ಎಲವೊ ಕಪಿ ಕೇಳೀ ಮಹಾಯುಧದಲಗಿಗಳಿಯದೆ ಸಮರದಲಿ ನೀನುಳಿದೆಯಾದರೆ (ತೊರರಾ. ೬–೨೭–೫೨). **೨.** ಕತ್ತಿ; ಖಡ್ಗ : ಮಿಸುಗುವ ರವಿಬಿಂಬಂಗಳ್ ಮಸೆದಲಗುಗಳಂ ಪಳಂಚಿ ಮಿಂಚುವ ಕಾಂತಿಪ್ರಸರದೆ ನೀಲೋತ್ಪಳ ಕುಮುದಸಮಾಜಮನಿಳಿಸಿ ಪೊಳೆದುವಂಬರತಳದೊಳ್ (ಕಾದಂಪೂ. ೪೬೬) ; ಮದನನಲಗಿನ ಮೊನೆದೋಱಿದನೊಡನೆ (ಮಲ್ಲಿಪು. ೫–೧೧) ; ಅಲಗಿನ ತುಪ್ಪದ ಸವಿಗೆ ಲಲ್ಲೆಯಿಂದ ನಕ್ಕಿದಡೆ ಅಲಗಿನ ಧಾರೆ ನಾಲಗೆಯ ತಾಗಿ ಆ ಜೀವ ಹಲುಬುವ ತೆಱದಂತೆ (ಏಲೀಶ್ವ. ೨೦) ; ಮುನಿದು ಗಗನಕ್ಕಲಗನುಗಿದಡೆ ಗಗನವಳುಕುವುದೇ (ಕುವ್ಯಾಭೀ. ೩–೪೬); ಮುನಿಪನುತ್ತರದಲಗು ಬೆನ್ನಲಿ ಮೂಡಿದುದು (ತೊರರಾ. ೧–೯–೨೮). **೩.** ಬಾಣ; ಅಂಬು : ಹೊಗರಲಗ ತಲೆಗಿಂಬ ರಚಿಸೆನೆ ಪಾರ್ಥ ಕೈಕೊಂಡು ಬಿಗಿದ ಬಿಲುಗೊಂಡೆದ್ದು ಮಂಡಿಸಿ ಹೊಗರ ಕವಲಂಬೈದನೆಚ್ಚನು (ಕುವ್ಯಾಭೀ. ೧೦–೨೨) ; ಅಲಗನೊಡಲೊಳು ತೊಳಸಿದಂತಿರೆ ಬಳಲಿದನು ಭೂಪಾಲ (ಕುವ್ಯಾದ್ರೋ. ಪರಿ. ೨೮೨) ; ಸವಗದೊಳೆಚ್ಚ ಕಣೆ ಬೆಚ್ಚಂತಾಗಲೊಡಂ ನಾಂಟದಲಗನಲಘುಭುಜಪ್ರತಾಪಂ ಎನಸುಂ ಬಗೆಯದೆ (ರಾಮಾಶ್ವ. ೧೪೫–೪).

**ಅಲಗಿನಂಬು** = ಅಲಗಂಬು : ಕಣಗಿಲೆಯ ಕೋಲುಳಿಯಂಬು ಕವಲಂಬಲಗಿನಂಬೀಸಾಡಿದುವು ಪರಸೈನ್ಯಸಾಗರವ (ಕುವ್ಯಾದ್ರೋ. ೧೦–೪).

**ಅಲಗಿನ ಚಾವಡಿ** = ಆಯುಧಾಗಾರ : ಈ ಪಟ್ಟಣದಲ್ಲಿ ಗುಡಿ, ಹಳೆಯ ಮನೆ, ಜಾನಸಾಲೆ, ಮದ್ದಿನ ಮನೆ, ಅಲಗಿನ ಚಾವಡಿ . . . ನಾವು ಕಂಡುಕೊಂಡಿದ್ದೇವೆ (ಮಂತ್ರಶ. ೫೩–೬).
[**ದೇ.** ‖ **ತಮಿ. ಮಲ.** ಅಲಗು ; **ತೆಲು.** ಅಲುಗು]

**ಅಲಗುಗಣೆ** (ನಾ). = ಅಲಗಂಬು : ಅಲಗುಗಣೆಗಳೊ ಮೇಘತರುವಿನ ತಳಿತ ತುದಿಗೊಂಬುಗಳೊ ಬೀಳುವ ತಲೆಗಳೋ ತತ್ಫಲ ಸಮೂಹವೊ ಚಿತ್ರವಾಯ್ತೆಂದ (ಕುವ್ಯಾಭೀ. ೪–೮೮). [ಅಲಗು$_2$ + ಕಣೆ$_1$]

**ಅಲಗುಗಾಣಿಸು** (ಕ್ರಿ). ಅಲಗಿನಿಂದ ಹೊಡೆ; ಆಯುಧದಿಂದ ಪ್ರಹರಿಸು : ತೊಳಲದಡವಿಗಳಿಲ್ಲ ತೋಹಿಗೆ ಸಿಲುಕದಿಹ ಮೃಗವಿಲ್ಲ ಬೇಂಟೆಯೊಳಲಗುಗಾಣಿಸದಿರ್ದ ಮೃಗವಿಲ್ಲಿನಿತು ಪರಿಯಂತ (ತೊರರಾ. ೩–೮–೩೯). [ಅಲಗು$_2$ + ಕಾಣಿಸು]

**ಅಲಗುಧಾರೆ** (ನಾ). **೧.** ಕತ್ತಿಯ ಅಂಚು, —ಬಾಯಿ. **೨.** ಬಾಣಗಳ ಧಾರೆ, —ಮಳೆ : ಹದಿನಾಲ್ಕು ವರ್ಷದ ಹಸುಳೆಯನು ರಿಪುಬಲದ ಮುಂದಿರಿಸಿಯಲಗುಧಾರೆಯ ಮೊನೆಗೆ ನೂಕಿಯೆ ತಾನೆ ಕೊಲಿಸಿದೆನು (ಕುವ್ಯಾದ್ರೋ. ಪರಿ. ೨೮೩). [ಅಲಗು$_2$ + ಧಾರೆ]

**ಅಲಗುಮಱಿ** (ನಾ). ಆಯುಧಗಳ ಏಟನ್ನು ತಡೆಯಬಲ್ಲ ರಕ್ಷಾಕವಚ : ಅಲಗುಮಱಿವುಳ್ಳವಂಗೆ ಶಸ್ತ್ರದ ಭಯವೇತಕ್ಕೆ (ಮದೇಮ್ಮ. ೧೩). [ಅಲಗು$_2$ + ಮಱಿ$_2$]

**ಅಲಗುವಿಡಿ** (ಕ್ರಿ). ಕತ್ತಿಯನ್ನು ಹಿಡಿ; ಆಯುಧವನ್ನು ಧರಿಸು : ಮಲ್ಲಗಾಸೆಯ ತೆಗೆದುಟ್ಟು ನಲಿದು ಭರದಲ್ಲಿ ವಜ್ರಾಂಗಿಯ ತೊಟ್ಟು ಸಲ್ಲಲಿತಲಗುವಿಡಿದು ಕಲಿವೀರಭಟರು (ಜೀವಂಸಾಂ. ೫–೩೫). [ಅಲಗು$_2$ + ಪಿಡಿ$_1$]

**ಅಲಗುಹುಲ್ಲು** (ನಾ). ಸೋಕಿದರೆ ಮೈಕೈಗಳನ್ನು ಕತ್ತರಿಸುವಷ್ಟು ಹರಿತವಾದ ಅಂಚುಳ್ಳ ಒಂದು ಬಗೆಯ ಹುಲ್ಲು; ಗಲಕುಹುಲ್ಲು (ಕಿ). [ಅಲಗು$_2$ + ಹುಲ್ಲು (< ಪುಲ್)]

**ಅಲಗೆ** (ನಾ). ಅಲಗೆ ಎಂಬ ಹುಲ್ಲು; ಆ ಹುಲ್ಲಿನಿಂದ ಮಾಡಿದ ಹಗ್ಗ : ಒಲವಿಂದೀವೊಡೆ ಗೋವಂಗಲಗೆ ಕೊಟಲ್ ಕೋಡಕಾಳೆ ಕೋಲುಡೆ ದೋಲ್ ಕಂಬಲ ಕಲ್ಲಿ ಚೆಲ್ಲಿ ಪೀಲಿಯ ತಲೆಸುತ್ತಲ್ಲದೆ ಮಹಾಗ್ರಪೂಜೆ ವಿರುದ್ಧಂ (ಜಗವಿ. ೧೭–೨೨). [?]

**ಅಲಗೆಗಟ್ಟು** (ಕ್ರಿ). ಅಲಗೆಹುಲ್ಲನ್ನು ತಲೆಗೆ ಕಟ್ಟು : ದೇವರ ದೊರೆಯ ವಿದಗ್ಧಜನಾವಳಿಯುಮನಲಗೆ [ಪಾಠಾಂ. ನೆಗಲೆ] ಗಟ್ಟ ಮಾಱುತ್ತುಂ ನಾನಾ ವಿಧದೊಳೆ ಪೊಕ್ಕಾಡುವ ಡಾವರ ಡಾಕಿನಿಯ ಮನೆಯನಾಗಳ್ ಕಂಡಂ (ಪಂಚತಂ. ೧೫೨–೧೯). [ಅಲಗೆ + ಕಟ್ಟು$_1$]

**ಅಲಗೆವಾರ** (ನಾ). ಅಲಗೆ ಹುಲ್ಲಿನಿಂದ ಮಾಡಿದ ಹಗ್ಗ, —ಚಾವಟಿ (?) : ಭೋರ್ಗರೆದುಲಿವ ಘಂಟೆಯುಮುರಗೆಜ್ಜೆಯುಮುಂದಂಬಡೆಯೆ . . . ನವಿಲ ಕಂಠದ ಬಾಸಿಗಮುಮಲಗೆವಾರಮುಂ ಉರಚೆಲ್ಲಿಯುಂ ನೇವಣಮುಂ ಲೀಲೆವಡೆಯೆ . . . ವೃಷಬಲೀವರ್ದಧ್ವಾನಮುಂ . . . ವಿಜೃಂಭಿಸೆ (ಜಗವಿ. ೪–೮೦ ವ). [ಅಲಗೆ + ವಾರ ?]

**ಅಲಗೇಱು** (ಕ್ರಿ). ಕತ್ತಿಯನ್ನು ಹಿಡಿ (?): ರಣಕ್ಕೆ ಅಲಗೇಱಿದಲ್ಲಿ ಹಲುಬಿದರೆ ಬಿಡುವರೆ? ಭಕ್ತಿಗೊರೆಗಟ್ಟ ತಪ್ಪಿಹೆನೆಂದರೆ ಬಿಡುವರೆ (ಮೋಳಿಮಾ. ೪೯–೨೦೬). [ಅಲಗು$_2$ + ಏಱು$_1$]

**ಅಲಘು** (ಗು). **೧.** ಲಘುವಲ್ಲದ : ಕಲಿತ ಮಂತ್ರೌಷಧಿಗಳಿಲ್ಲ ಸಫಲಗಳಿಂದವಲಘುಸಂಕಲ್ಪಸಿದ್ಧಿಸಿತಾತ್ಮಸಂತೋಷ (ವೆಂಕಾರಾ. ೨–೯–೪). (ನಾ). **೨.** ಹಗುರವಲ್ಲದ ವಸ್ತು ; ಮಹತ್ವವಾದದ್ದು. [ಸಂ.]

**ಅಲಘುತರ** (ಗು). ತುಂಬ ತೂಕವಾದ; ಮಹತ್ತರವಾದ; ಮೇಲಾದ : ಜಲನಿಧಿಮುಂ ಮಱಿಗೆವಂದ ಕುಲಪರ್ವತ ಸಂಕುಲಮಂ ರಕ್ಷಿಸಿ ತಳೆದತ್ತಲಘುತರ ಶ್ರೀಯುನಸಮುಗಂಭೀರತೆಯಂ (ಪಂಚತಂ. ೧೦೩–೧೮). [ಸಂ.]

**ಅಲಘುಭುಜ** (ನಾ). ೧. ಉದ್ದವಾದ ತೋಳು; ದೀರ್ಘಬಾಹು. ೨. ತೋಳುಬಲವುಳ್ಳವನು: ಅಲಘುಭುಜನಾಗಿಯು . . . ಮೇರು ಕಠಿಣ ಭೋಗಾಧಾರಂ (ಕವಿರಾ. ೩-೪೩); ಅಲಘುಭುಜರೆನಿಪ ಖೇಚರ ಕುಲತಿಲಕರ್ (ಪಂರಾಮಾ. ೧೦-೧೬೬). [ಅಲಘು + ಭುಜ]

**ಅಲಘುಭುಜಬಲ** (ಗು). ಮೇಲಾದ ತೋಳುಬಲವುಳ್ಳ; ತುಂಬ ಬಲಶಾಲಿಯಾದ: ಅಲಘುಭುಜಬಲಕರ್ಣ ನುಡಿದನು ಕೌರವೇಂದ್ರಂಗೆ (ಕುವ್ಯಾಭೀ. ೧-೭). [ಅಲಘುಭುಜ + ಬಲ$_2$]

**ಅಲಘುಸಾಹಸಿ** (ನಾ). ಮೇಲಾದ ಸಾಹಸವುಳ್ಳವನು; ಮಹಾ ಪರಾಕ್ರಮಿ: ವಲಲ ಮೆಚ್ಚಿದೆನೈ ಮಹಾದೇವಲಘುಸಾಹಸಿ ತನ್ನ ಬಿಡಿಸಿದೆ (ಕುವ್ಯಾವಿ. ೪-೯೫).

[ಸಂ. ಅಲಘುಸಾಹಸಿನ್ (ಅಲಘು + ಸಾಹಸಿನ್)]

**ಅಲಘೂಚ್ಚಾರಣೆ** (ನಾ). ಹ್ರಸ್ವವನ್ನು ದೀರ್ಘವಾಗಿ ಉಚ್ಚರಿಸುವುದು: ಅಜನೆಯ ವಿಭಕ್ತಿಯೊಳಲಘೂಚ್ಚಾರಣೆ ಯಥೇಷ್ಟಂ (ಕವಿರಾ. ೨-೧೮). [ಅಲಘು + ಉಚ್ಚಾರಣೆ]

**ಅಲಚು** (ಕ್ರಿ). = ಅಲಸು$_2$: ಶರಧಿಯೊಳಗಣ ವಸ್ತುಗಳನಲಚಿ ಜಾಲಿಸುವ ತೆರೆಯಂತೆ (ಮಂಕುಕ. ೨೨೫). [**ದೇ.** ‖ ತಮಿ. **ತುಳು.** ಅಲಸು]

**ಅಲತಗೆ$_1$**, ಅಲತಿಗೆ (ನಾ). ಅರಗು; ಅರಗಿನ ರಸ, —ಬಣ್ಣ; ಲಾಕ್ಷಾರಸ: ಅಡಿಯೂಡಲ್ಕಲತಗೆಯಂ ತುಡಲ್ಕೆ ತುಡುಗೆಯಂ . . . ಕುಡುವಮರಿ ಕಲ್ಪಲತೆಯನೆ ಪೋಲ್ತಳ್ (ಆದಿಪು. ೭-೧೧); ಈಕೆಯ ಪದದಲತಗೆ ಕೃಷ್ಣನಂಗದೊಳ್ ಪೊರೆಗುಂ ಬೇಟದ ಮುದ್ರೆಗಳಂತೆ (ಜಗವಿ. ೨೦-೧೦೮). **ಅಲತಿಗೆ**: ಉದಕದೊಳಲತೆ[ತಿ]ಗೆ ದಾಳಿಂಬದ ರಜಮೆಳಗಜುಕೆಯಣಿಲೆಯೆಂಬಿವನರೆದಂತದಱಿಂ ನಸ್ಯಮನೆಱಿಗೊರ್ಮೊದಲೊಳ್ ಮೂಗೊಡೆದು ಸುರಿವ ರಕ್ತಂ ಮಾಣ್ಗುಂ (ಲೋಕೋಪ. ೯-೮೦); ಅಲತಿಗೆಗಾಲ್ಗಳ ಕಂಚುಕಿಯೊರ್ವಳ್ (ಜಯಕಾ. ೨-೧೯); ಎಡೆವಿಡದೆಡೆಯಾಡುವ ಸಿರಿವಡದಿಯಡಿಯಲತಿಗೆಯಣ್ಬುವಜೆದು (ಚಿಕದೇವಂ. ೩೪-೧೫); ಅಲತಿಗೆಯನಾಂತ ನೊಸಲಿಂದೆ ಮುಂಡಾಡಬಹೆ (ರಾಘಚ. ೭-೫೦).

[< ಸಂ. ಅಲಕ್ತಕ]

**ಅಲತಗೆ$_2$** (ನಾ). ಏಳುನೂರು ಗ್ರಾಮಗಳುಳ್ಳ ಒಂದು ಸೀಮೆಯ ಹೆಸರು: ಕೂಮ್ಡಿ ದೇಶಾಭ್ಯಂತರೇ ಅಲತಗೆ ಸಪ್ತಶತಮಧ್ಯೇ ಕೊನ್ದಸೀ ನಾಮ ಗ್ರಾಮೋ ದತ್ತಃ (ಇಇ. XVI, ೨೪-೬೪; 1009) [?]

**ಅಲತಗೆವಜ್ಜೆ** (ನಾ). = ಅಲತಿಗೆಗಾಲ್: ನವಕೋಟ ತವಸಿಗಳಲತಗೆ ವಜ್ಜೆಗೆ ತವಕದಿಂದಾನೆಜಗುವೆನು (ಶ್ರೀಪಾಲ. ೧-೯).

[ಅಲತಗೆ$_1$ + ಪಜ್ಜೆ]

**ಅಲತಿಗೆ** 'ಅಲತಗೆ' ನೋ.

**ಅಲತಿಗೆಗಾಲ್** (ನಾ). ಅರಗಿನ ರಸವನ್ನು ಲೇಪಿಸಿದ ಪಾದ; ಅರಗು ಬಳಿದ ಕಾಲು: ಮೆಲ್ಲನೆ ಬಂದಲತಿಗೆಗಾಲ್ಗಳ ಕಂಚುಕಿಯೊರ್ವಳ್ ಜಲಜೋಪಮ ಕರಯುಗಮಂ ಮುಗಿಯುತೆ ಬಿನ್ನವಿಸಿದಳಿಂತು (ಜಯಕಾ. ೨-೧೯). [ಅಲತಿಗೆ (< ಅಲತಗೆ$_1$) + ಕಾಲ್$_1$]

**ಅಲತಿಗೆರಸ** (ನಾ). ಅರಗಿನ ರಸ; ಲಾಕ್ಷಾರಸ: ಅಲತಿಗೆರಸದಲ್ಲಿ ಕಲಸುಗೂಳ್ಗಟ್ಟಿಗೂಳೊಲೆದುರಿ ನಿಮಿರ್ವ ಧೂಪಘಟಾ ಮಿಳಿಮಿಳಿಸುವ ಸಾಲುಗೈದಿಂದ ರಕ್ಕಸವೊಳಲಂತೆ ಮೆಱೆದುದಾ ಸದನ (ಭರತೇಚ. ೨೦-೧೩೧). [ಅಲತಿಗೆ (< ಅಲತಗೆ$_1$) + ರಸ]

**ಅಲತಿಗೆವೊನ್** (ನಾ). (?): ಅಲ್ಲಿಗಲ್ಲಿಗೆ ಸಂಚರಿಪ ಕೇರಳಿಯರ ತಳಿರಡಿಯ ಲೆಪ್ಪದಲತಿಗೆವೊನ್ನಿಂ ಕೊರ್ವಿ ಬೆಳೆದ ಕೆಯ್ವೊಲನಿಂ (ರಾಮಾಶ್ವ. ೬೪-೧೪). ☞ ಈ ಶಬ್ದ 'ಅಲತಿಗೆವೊನಲ್' ಎಂದಿದ್ದಿರಬಹುದೆ?

[ಅಲತಿಗೆ (< ಅಲತಗೆ$_1$) + ಪೊನ್ ?]

**ಅಲತೆ** (ನಾ). ಕುದಿಸಿ ಕೆಂಪುಬಣ್ಣಕ್ಕೆ ತಿರುಗಿಸಿದ ಮಸಿ: ಅರಗು ಕುದಿಸಿದರೆ ಕೆಂಪುಮಸಿ ಆಗುತ್ತದೆ. ಅದಕ್ಕೆ ಅಲತೆಯೆನ್ನುತ್ತಾರೆ. ಅಲತೆಯೊಳಗೆ ಕಾಡಿಗೆ ತಿಕ್ಕಿದರೆ ಅಲತೆಯ ಮಸಿಯಾಗುತ್ತದೆ (ಮುಂಬಯಿ. ೧-೩೪). [< ಸಂ. ಅಲಕ್ತ]

**ಅಲತ್ತೂರ್** (ನಾ). ಒಂದು ಊರಿನ ಹೆಸರು: ಅನ್ದರಿ ಅಲತ್ತೂರ್ಪೂರ್ವರುಳೊ[ಳ]ಱಿ ಪನ್ನಗರಾದ್ಯನೇಕ ಸಮರಮುಖ (ಮೈಅಂ. ೧೯೩೯, ೬೯-೧೫; ಸು. 788). [?]

**ಅಲಪಟೆ** (ನಾ). ಅಲೆದಾಟ; ಬಳಲಿಕೆ; ಆಯಾಸ (ಈ).

[ಅಲೆ$_2$ + ಪಟ್ಟೆ$_0$ (< ಪಾಡು$_2$)]

**ಅಲಪಾಕು** 'ಅಲ್ಪಾಕ' ನೋ.

**ಅಲಪಾಟು** (ನಾ). ಅಲೆದಾಟ; ಆಯಾಸ; ದಣಿವು: ಆದರೆ ಈಚೀಚೆಗೆ ಹೊಟ್ಟೆಯ 'ಅಲಪಾಟನಲ್ಲಿ' ಅವಳ ದೇಹ ಕ್ಷಯಿಸಿದ್ದುದರಿಂದಲೂ (ನನ್ನರ. ೫೪). [ಅಲೆ + ಪಾಟು (< ಪಾಡು$_3$)]

**ಅಲಪು$_1$** 'ಅಲಂಪು' ನೋ.

**ಅಲಪು$_2$** 'ಅಲೆಪು' ನೋ.

**ಅಲಪುಗಾರ** 'ಅಲಂಪುಗಾಱ' ನೋ.

**ಅಲಬತ್** 'ಅಲ್ಬತ್' ನೋ.

**ಅಲಬು$_1$**, ಅಲುಬು$_1$ (ನಾ). ಒಂದು ಜಾತಿಯ ಹುಲ್ಲು; ಹುಲ್ಲಿನ ಜಾತಿಗೆ ಸೇರಿದ ಕಳೆ: ಆ ಸಸಿಯ ಮುಟ್ಟುವ ಸರ್ಪವರ್ಣದ ಸದೆಯಂ ಕಳೆದು ಅಷ್ಟಾವರಣದ ಅಲಬಂ ಕಿತ್ತು ದಶವಾಯುವೆಂಬ ಕಸವಂ ತೆಗೆದು ಆ ಸಸಿ ಪಸರಿಸಿ ಪ್ರಜ್ವಲಿಸಿ ಫಲಕ್ಕೆ ಬರಲಾಗಿ (ಕೃಷಿಪ್ರ. ೨೯೪); ತೀರದಲ್ಲೆಲ್ಲ ಎಳೆವಸರು ಗರಿಕೆಯೂ ಅಲಬು ಅಂಚಡಿಗಳೂ ಬೆಳೆದಿದ್ದುವು (ಶ್ರೀರಾಪ. ೬೮). **ಅಲುಬು$_1$** (ಈ). [← ?. **ತೆಲು.** ಅಲಮು]

**ಅಲಬು$_2$** 'ಅಲುಂಬು$_1$' ನೋ.

**ಅಲಬುಂನಬೋಯ** (ನಾ). ಒಬ್ಬಾತನ ಹೆಸರು: ಅಲಬುಂನಬೋಯಸ್ಯ ಕಾಶ್ಯಾ[ಶ್ಯ]ಪಗೋತ್ರ (ಇಇ. VII, ೧೮೭-೨೩; 668).

[ಅಲಬುಂನ$_0$ + ಬೋಯ]

**ಅಲಭ್ಯ** (ಗು). ೧. ಸಿಕ್ಕದಂತಹ; ದುರ್ಲಭವಾದ: ತತ್ಪಾಲಭ್ಯವೆಂಬುದದಂಗಿಸುತಮಿನಿತಿನಿತು ನೆನಪುಗಳಂಗವಿಪ . . . ನುಡಿಗಡಣೆಯಿಂದ (ಬಸಪು. ೭-೧೦). ೨. ಅಪೂರ್ವವಾದ; ಅಪರೂಪವಾದ [**ಸಂ.**]

**ಅಲಭ್ಯತರ** (ಗು). ೧. ಸಿಕ್ಕುವುದು ಕಷ್ಟವಾದ; ತುಂಬ ದುರ್ಲಭವಾದ. ೨. ತುಂಬ ಅಪರೂಪವಾದ; ಬಹು ಅನಿರೀಕ್ಷಿತವಾದ: ಅಲಭ್ಯತರಮಾದ ತದಂಘ್ರಿಗಳೆನ್ನಮೇಲೆ ಸಂಕ್ರಮಿಸಿದುವು (ಜಗವಿ. ೩-೪೨); ಏನಲಭ್ಯತರಮೋ ನೆಟಲುಂ ಜಳಮುಂ ನಿದಾಘದೊಳ್ (ಚಂದ್ರಪು. ೯-೮೦). [**ಸಂ.**]

**ಅಲಭ್ಯಲಾಭ** (ನಾ). ೧. ಅನಿರೀಕ್ಷಿತವಾಗಿ ಬಂದ ಲಾಭ; ದೊರೆಯಲಾರದ ಲಾಭ: ವ್ಯಾಪಾರಿಗೆ ಇಂದು ಅಲಭ್ಯಲಾಭವಾಯಿತು (ರೂಢಿ). ೨. (ಆಲಂ) ಅನಿರೀಕ್ಷಿತ ಭೇಟಿ (ಉಕ): ಏನು ಅಲಭ್ಯಲಾಭ ನಿಮ್ಮದು (ರೂಢಿ). [ಅಲಭ್ಯ + ಲಾಭ]

**ಅಲಮಾರು** 'ಅಲ್ಮೈರ' ನೋ.

**ಅಲರ್$_1$**, ಅರಲ್$_1$, ಅರಲು$_1$, ಅರಳ್$_1$, ಅರಳು$_1$, ಅಲರು$_1$ (ಕ್ರಿ). ವಿಕಾಸವಾಗು; ಅಗಲವಾಗು; ಬಿರಿ; ದೊಡ್ಡದಾಗು: ಮನ್ಮಥಶಿಖಿಜ್ವಾಲಾಳಿ ತಳ್ತೀಟಿ ಬೇಯದೆ ಕಾಯ್ದೋಡಿನ ಜೋಳದಂತಲರ್ದೊಡಾ ಕೆಂಪುಂ ಮನಸ್ತಾಪಮುಂ ಪುದಿದೆತ್ತಂಬರೆ (ಕಾವ್ಯಸಾ. ೫೮೮ ಶೂದ್ರಕ); ಅಲರ್ದಲರ್ಗಣ್ಗಳ ನೋಟದೆ ಸುಲಲಿತತನು ಶಿಶುವ ಮೆಯ್ಯ ತೀಟದೆ ತನಗಗ್ಗಲಿಸಿದಲಂಪಂ ಕುಡೆ ಪೊಸತಲರ್ದಂಕುರಿಸಿರ್ದ ಕಲ್ಪಲತೆಯನೆ

ಪೋಲ್ತುಳ್ (ಆದಿಪು. ೭–೪೭); ಅಲರ್ದ ತಾವರೆಗೆೞಗಳಿಂ (ಸಾಳ್ವಭಾ. ೧–೫೮). **ಅರಲ್**₁: ಜಿನುಗುವ ತುಂಬಿ ತುಂಬಿಯೊಳರಲ್ದಲರೆಂಬಿ ವೞಂ ಬಸಂತರಾಜನ ಮನೆಯಂತೆ ಕಣ್ಗೆಸೆದು ತೋಱುಗುಮಲ್ಲಿಯ ನಂದನಾಳಿಗಳ್ (ಆದಿಪು. ೧–೬೫); ಪಿರಿದೆನಿಪ ಭಕ್ತಿಭರದಿಂದರಲ್ದು ಸಿರಿ ನೆಲಸಿ ತೋರ್ಪ ಕಣ್ಮಲರ್ಗಳ್ ನಟ್ಟರೆ (ಕಾದಂಪೂ. ೬೭೨); ಕರ್ಣೋತ್ಪಲಂ ಲೋಲಲೋಚನಚಂದ್ರಾತಪದಿಂದರಲ್ದುದೆನೆ (ಮಲ್ಲಿಪು. ೩–೮೫). **ಅರಲು**₁: 'ಅರಲುಗೆಂಡ' ಪರಾ. **ಅರಳ್**₁: ಏಱುಂಜವ್ವನಂ ಶಿವಪೂಜೆಗೆಂದರಳಲಿರ್ದ ಪರಿಮಳದ ಮೊಗ್ಗೆಯಂತಿರ್ದಪುದು (ನಂಬಿರ. ೪–೪೨); ನಾಸಾಪುಟಮರಳೆ ಬೆಮರ್ ಚುಮ್ಮೆನುತ್ತುಣ್ಮೆ (ದಶಕು. ೬–೭). **ಅರಳು**₁: ವಿಕಸಿತ ಪುಷ್ಪದಂತರಳಿ ಕನ್ನಡಿಗರ್ಕರೆವಂತೆ ಬನ್ನಿ . . . ಪರ್ವಿದಟವ್ಯಮದ್ಭುತಂ (ಪುಣ್ಯಾಸ್ರ. ೧–೯೪); ಅರಳಿದಬುಜದ ಸತ್ತಿಗೆಯ ಮಂಜರಿಯ ಕುಸುಮದ (ಕುವ್ಯಾಅ. ೫–೭); ಅರಳಿತರಸನ ವದನಲಕ್ಷ್ಮಿಯ ಸಿರಿ ವಿಶಾಲದಲಿರ್ದ ನಮರೇಶ್ವರನು (ತೊರಬಾ. ೧–೫–೫೮); ಅರಳಿದರಳಿಂ (ಸಾಳ್ವಭಾ. ೨೧–೧೫). **ಅಲರು**₁: ಹುರಿಗಡಲೆಯಂತಾನುಂ, ಕಾಯ್ಪಾಱದೋಡಿನ ಜೋಳದೊಳ್ಮರಲಲರುವಂತಾನುಂ . . . ಕೆಕ್ಕರಿಕೆ ಬಿರಿವಂತಾನುಂ (ಶಾಂತಿಪು. ೭–೯೨); ದರಹಸಿತಮುಖವಲರಿ ನೋಡುತಿರೆ (ಬಸವು. ೬–೨೭); ಆ ನುಡಿಯನಾಲಿಸುತ ಮಾಯಾಮಾನಿನಿಯ ಮೊಗವಲರಿ ಸಲೆ ಸುಮ್ಮಾನದಲಿ (ಪ್ರಭುಲೀ. ೫–೨೮).

[**ದೇ.** ‖ **ತಮಿ. ಮಲ.** ಅಲರ್; **ತುಳು.** ಅರಲ್, ಅರಳ್, ಅಲರ್; **ತೆಲು.** ಅಲರು]

**ಅಲರ್**₂, ಅರಲ್₂, ಅರಲು₂, ಅರಳ್₂, ಅರಳು₂, ಅಲರು₂ (ನಾ). ಹೂವು; ಪುಷ್ಪ: ಮೊಗಮೆಂಬಂಬುಜದಲರಾ ನಗೆಯೆಂಬ ವಿಕಾಸ ಮೊಪ್ಪುವದಱೊಳ್ ಸುೞಗುಂ ಮಿಗೆ ಕಣ್ಗಳೆಂಬ ತುಂಬಿಗಳ್ (ಕವಿರಾ. ೩–೨೫); ಅಲರಂ ನೋಯಿಸದೊಯ್ಯನೊಯ್ಯನಳಿಗಳ್ ಬಂಡುಣ್ಬವು (ಪಂಪಭಾ. ೫–೮೧); ಮಲ್ಲಿಗೆಯಲರ್ ನಾಡೆ ರಾಜಿಪ (ಭಾವಚಂ. ೪–೨೧). **ಅರಲ್**₂: ತಂದತ್ತರಲ ಮೞೆಗಳಂ ಪುಷ್ಪಮೇಘಪ್ರತಾನಂ (ಆದಿಪು. ೧೪–೧೧೮); ನಿಶ್ಚಯಮಾಗರಲ್ ನಭದೊಳಿಲ್ಲ (ಪದ್ಮರಾ. ೧೧–೫೨); ವಿರಹತಾಪದಲಿ ನೀಳ್ದರಲ ಪಾಸಿನಮೇಲೆ (ಸೌಂದಪು. ೧೫–೩). **ಅರಲು**₂: ವರಲಿಂಗ ಶಿಖೆಯೊಳೊಂದರಲುಗುಂದಲು ರಾಜ್ಯವಿರದು (ಸಾನಂಚ. ೩–೯೮). **ಅರಳ್**₂: ಜಾದಿಯರಳಂ ಕೊಂಡು ಮಲ್ಲಿಗೆಗಳಂ ಕೊಂಡು (ಬಸರ. ೩–೨೭); ಸಂಪಗೆಯರಳ ಪರಿಮಳ ಪಥ್ಯವೇ ತುಂಬಿಗಳ ತಿಂತಿಣಿಗೆ (ಕುವ್ಯಾದ್ರೌ. ೪–೪೩). **ಅರಳು**₂: ನನೆಮೊಗ್ಗು ಅರಳು ಮೊದಲಾದವರಲ್ಲಿಯ ಗಂಧವನಱವುದು ಆಚಾರದಲ್ಲಿಯ ಜಂಗಮಲಿಂಗ (ಆದವ. ೧೨); ಅಳಿಯಿಲ್ಲದರಳುಗಳಿಲ್ಲಾ ವನದೊಳು (ಅಂಜಚ. ೩–೪೮). **ಅಲರು**₂: ನಕ್ಷತ್ರ ಮುಡಿಯಲರುಗಳಂತೆ ತಡೆಯೆ ಮಹೇಶ್ವರ ಹಿಡಿದನು ವರತ್ರಿಶೂಲವನು (ಮೋಹತ. ೩೯–೩೮); ವಿಕಸಿತಮಾದ ತಾವರೆಯರಲಿನೊಳು (ಸೌಂದಕಾ. ೩–೭೭).

**ಅಲರಲರ್** (ದ್ವಿರುಕ್ತಿ): ಬೆಳಬೆಳೆದ ರಾಜೀವದಲರಲರ ತುಳಿತುಳಿದು (ಜೈಮಿಭಾ. ೩–೩೭). **ಅಲರಾಗು** = ಹೂಬಿಡು; ಪುಷ್ಪಿತವಾಗು: ಲಲಿತಾಂಗಿಯ ಕೈಸೋಂಕಿನ ಸವಿಗಂತಲರಾದುದು ಪ್ರಿಯಂಗು (ಶ್ರೀಪಾಲ. ೫–೩೭). [**ದೇ.** ‖ **ತಮಿ. ಮಲ.** ಅಲರಿ; **ತೆಲು.** ಅಲರು]

**ಅಲರಂಬ**, ಅರಲಂಬ (ನಾ). ಹೂವನ್ನು ಬಾಣವಾಗಿ ಉಳ್ಳವನು; ಪುಷ್ಪಬಾಣ; ಮನ್ಮಥ: "ಅಲರಂಬಂ ನನೆವಿಲ್ಲಬಲ್ಲಹನೆನಲ್ ಪೂವಿಲ್ಲಕಾವಂ" (ಕರ್ಣಾನಿ. ೮); ಅಲರಂಬನಾನೆಯೆನಿಪೀ ತಂಗಾಳಿ (ಕಬ್ಬಿಕಾ. ೫೫); ಅಲರಂಬನ ಕಂಡರೆ ತೋಱಸೆಂದು ವ್ಯಾಕುಲದಿಂದೆ ಹಲುಬಿದ ಳಬಲೆ (ಮೋಹತ. ೯–೩೭). **ಅರಲಂಬ**: ಅರಲಂಬನಂಗಡಿ ರತಿಯ ರಾಗದೋವರಿ ಪದಿರ ಪಾಳೆಯಂ (ಪದ್ಮರಾ. ೮–೮೭); ತಾವರೆಯ ನೂಲ್ದಿರುವಿಗಿನಿವಿಲ್ಲನರಲಂಬನು ಅರರೆ ಪೂಡುತ್ತೆ ಚ್ಬೊಡೆ (ಭಾವಚಂ. ೩–೮); ಅರಲಂಬನಟ್ಟುಳಿಯನಂಗನಾತಂಕ ರತಿವರನ ಹಾವಳಿ (ಸಮ್ಯಕೌ. ೩–೨೮). [ಅಲರಂಬು + – ಅ₇]

**ಅಲರಂಬವಗೆಯ** (ನಾ). ಕಾಮನ ಶತ್ರು; ಶಿವ: ಅಲರಂಬವಗೆಯ . . . ಕಱಗೊರಲ ಪಣೆಗಣ್ಣ ಮಾದೇವ (ರಾಘಚ. ೧೩–೭). [ಅಲರಂಬ + ಪಗೆ + – ಅ₇]

**ಅಲರಂಬು**, ಅರಲಂಬು, ಅರಳಂಬು (ನಾ). ಹೂವಿನ ಬಾಣ: ಅಲರಂಬು ಕಬ್ಬುವಿಲ್ ಕೋಮಲ ಸರಸಿಜನಾಳತಂತು ತಿರು ಮತ್ತಿವಱಾ ಬಲದಿನಗಲ್ದರನೆಚ್ಚಾ ತ್ರಿಲೋಕಮಂ ಕಂತು ಬಸಕೆ ಬರಿಸುವನೆಂತುಂ (ಕವಿರಾ. ೩–೨೨೧); ಯೋಷಿಜ್ಜನಮಲರಂಬಿನ ವೇಷಂಗೊಂಡಂತೆ ನೆಱೆದು ಪೂದುಡುಗೆಗಳಿಂ (ಶಾಂತಿಪು. ೮–೨೩); ನೀರ್ಗುಡಿವ ತಾಪಸನ ನಂದಲರಂಬಿಗೆ ಗುಱಮಾಡಿ (ಕಂಠವಿ. ೯–೧೪೬); ಕಡೆಗಣ್ಣ ಕಾಂತಿ ಕಾವನಲರಂಬಂ ಕೆದಱೆ (ರಾಜಶೇ. ೪–೧೪ ವ). **ಅರಲಂಬು**: ಸ್ಮರನರಲಂಬು ಕೈಬರ್ದುಕಿ ಬರ್ಪವೊಲೊಯ್ಯನೆ ಬಂದು ನಿಂದ ಸುಂದರಿಯನೊಱಲ್ದು ಸಿಂಹಬಳಂ (ಪಂಪಭಾ. ೮–೬೪); ನಿನ್ನ ಬೆರಲ್ಗರಲಂಬಾಗದ ವಸ್ತು ನಿನ್ನ ನಾಭಿವಳಯಕ್ಕೆ ಪೂಗೊಳಂ ಪುಸಿ (ನಂಬಿರ. ೧೪–೧೭); ಚಿಣ್ಣನೀನೞಯದಾಡಿದೆ ಹೋಗೆಲವೊ ಮುಕ್ಕಣ್ಣನೆನ್ನರಲಂಬಿಗಳುಕಿ ಹೆಣ್ಣೊಡಲಾದ ಹಿಂಗಿದರೆ ಕೊಂದಪೆನೆಂದು ನನ್ನೊಳು ಸೆಣಸುವರಾರು (ಮೋಹತ. ೩೮–೧೦). **ಅರಳಂಬು**: ಅರಳಂಬುಗಳ್ ಕಬ್ಬುವಿಲ್ಲುಮಿವು ನಾಡೆ ನಿಬ್ಬರಮುಮರರಂ ಜಯಿಸಲೆಂದವಂ ಬಿಟ್ಟು ಶಂಬರಮಥನಂ (ಚಿಬಪು. ೧೦–೧೩).

[ಅಲರ್₂+ ಅಂಬು₂]

**ಅಲರಾಯ್** (ಕ್ರಿ). ಹೂವನ್ನು ಆರಿಸು; ಪುಷ್ಪಾಪಚಯಮಾಡು: ಅಲರಾಯ್ವ ಪದದೊಳೆರಡನೆಯಲರ್ಗಂ ಕೈ ನೀಡಿ ಸೇದೆವಡುವರ್ ಸತಿಯರ್ (ಕಾದಂಪೂ. ೧೦೦೫). [ಅಲರ್₂ + ಆಯ್₁]

**ಅಲರಿಕೆ** 'ಅಲರ್ಕೆ' ನೋ.

**ಅಲರಿಚ**, ಅರಲಿಚ (ನಾ). ಹೂವಿನಲ್ಲಿ ಹುಟ್ಟಿದವನು; ಬ್ರಹ್ಮ: ಪೊಱಲಿಚಂ, ಅಲರಿಚಂ, ಕೆರಹಡಿಚಂ (ಭಾಷಾಭೂ. ೭–೧೬೯ ಉದಾ); ಮುನ್ನಾಗಸಮನಳೆವಾಗಳಲರಿಚಂ ತೊಳೆದಿಟ್ಟ ಕುಂಕುಮದಣ್ಪಿನಿಂದವೋ . . . ಎಂಬಂತೆ ಕೆಂಪು ಪೆಂಪುವೆತ್ತ ಮೆಲ್ಲಡಿಗಳಿಂ (ಚಿಕವಂ. ೩೨–೧೨); ಅಲರಿಚಂ ಮುಗಿಲ್ದೇರಂ ಮುಂತಪ್ಪ ಬಿಡುಗಣ್ಣರುಂ (ಅದ್ಭುತ. ೧೯–೧೮); ಮುರಾರಿಯುಂದಲರಿಚಂ ಕಾಲ್ಗರ್ಚಿದಾ ಗಂಗೆಗಾಧಾರಂ ತನ್ನ ಶಿರಂಗಡೆಂಬ ಶಿವನಂ ನಾನಟ್ಕಱಂ ವಂದಿಪೆಂ (ಮೈಸೂಮ. ೧–೨). **ಅರಲಿಚ**: "ಅರಲಿಚ ನಾಲ್ಮೊಗ ನುಡಿವೆಣ್ಣೆಱೆಯಂ . . . ಎನೆ ಧಾತ್ರಂ" (ಕವಿಕಂ. ೨೯). [ಅಲರ್₂ + – ಇಚ]

**ಅಲರಿಚು** 'ಅಲರ್ಚು' ನೋ.

**ಅಲರಿಸು**, ಅರಳಿಸು (ಕ್ರಿ). ಅರಳುವಂತೆ ಮಾಡು; ವಿಕಾಸಗೊಳಿಸು: ಮನೆಯೊಳಗಿರ್ದು ಪುರಸ್ತ್ರೀಜನಮುಮನಾತ್ಮಪ್ರಭಾವದಿಂದಲರಿಸಿದಂ (ಅರ್ಧನೇ. ೫–೭); ಹೃದ್ಬಿಸಜವನಲರಿಸಿ . . . ಶಿರವ ತೂಗಿಸುವುದೀ ವಚನದ ರಚನೆ (ಮೋಹತ. ೧–೨೫); ನೃಪನಾಸ್ಯಶಶಿಬಿಂಬವಲರಿಸಿದುದು . . . ಜನದ ನೇತ್ರಕುಮುದವ (ತ್ರಿಭುತಿ. ೫–೧೩). **ಅರಳಿಸು**: ಹೃದಯದ ಕಮಲವನರಳಿಸುವನೆ ಜಯ (ಜಯಕಾ. ೮–೨೨). [ಅಲರ್₁ + – ಇಸು₃]

**ಅಲರು**₁ 'ಅಲರ್₁' ನೋ.

**ಅಲರು**₂ 'ಅಲರ್₂ ನೋ.

**ಅಲರುಗಣೆ** 'ಅಲರ್ಗಣೆ' ನೋ.

**ಅಲರುಗಣೆಯ** 'ಅಲರ್ಗಣೆಯ' ನೋ.

**ಅಲರುಗೋಲು** 'ಅಲರ್ಗೋಲ್' ನೋ.

**ಅಲರುಣಿ,** ಅರಲುಣಿ (ನಾ). ಹೂವಿನ ರಸವನ್ನು ಆಹಾರವಾಗಿ ಉಳ್ಳುದು; ತುಂಬಿ: "ಎಲ್ಲಿಯುಮಲರುಣಿಯುಂ ತಾಂ ಬಲ್ಲವರಿಂ ಭ್ರಮರಮುಕ್ಕುಂ" (ಕವಿಕಂ. ೬೯); ಅಲರುಣಿಯನಳಿಯೆಂಬರು (ಚಬಪು. ೬–೪೪); ಸುಟಿವೊರ್ಕುಟಿ ತಾವರೆಯಲರುಣಿಗಳ ಬಳಗದ ನೆರವಿನಿಂ ನಿಮಿರ್ದುವ (ಚಿಕವಂ. ೩೨–೮). **ಅರಲುಣಿ:** ಅರೆವಿರಿದರವಿಂದೋದರ ದೊಳಗೆಳೆಯರಲುಣಿ (ಜಯುಕಾ. ೨–೬೨).

[ಅಲರ್$_2$ + ಉಣ್ + – ಇ$_2$. / **ತುಳು.** ಅರಲುಣಿ]

**ಅಲರುಣಿಗಣ್** (ನಾ). ತುಂಬಿಯಂತೆ ಕಪ್ಪಾದ ಕಣ್ಣು: ನಗೆಗಣ್ಣ ನಿಡುಗಣ್ಣ ಬಗಸೆಗಂಗಳ ಶಿಶುಮಿಗಗಣ್ಣಲರುಣಿಗಣ್ಣಾ . . . ಬಗೆಗಾತಿಯ ರೈದಿದರು (ರಾಮಕಾ. ೭–೯೩). [ಅಲರುಣಿ + ಕಣ್]

**ಅಲರುದೋರಣ** 'ಅಲರ್ದೋರಣ' ನೋ.

**ಅಲರುವಕ್ಕಿ** 'ಅಲರ್ವಕ್ಕಿ' ನೋ.

**ಅಲರುವಿಲ್** 'ಅಲರ್ವಿಲ್' ನೋ.

**ಅಲರುವಿಲು** 'ಅಲರ್ವಿಲ್' ನೋ.

**ಅಲರುವಿಲುಗಾಱ** (ನಾ). ಹೂವಿನ ಬಿಲ್ಲುಳ್ಳವನು; ಕಾಮ: ಅಲರುವಿಲುಗಾಱನ ಸರಳ ಗಱಿಗಳವೊಲೆವೆಗಳಲರ್ಗು (ಬಸಪು. ೪–೨೬).

[ಅಲರುವಿಲು (< ಅಲರ್ವಿಲ್) + –ಗಾಱ (< –ಕಾಱ)]

**ಅಲರುವಿಲ್ಲ** 'ಅಲರ್ವಿಲ್ಲ' ನೋ.

**ಅಲರುಸರ** (ನಾ). ಪುಷ್ಪಬಾಣ; ಕಾಮ (ಪ್ರಭಣ್ಣ).

[ಅಲರು$_2$ (< ಅಲರ್$_2$) + ಸರ$_3$]

**ಅಲರೆಲೆ** 'ಅರಳೆಲೆ' ನೋ.

**ಅಲರೆಸಟಿ್** (ನಾ). ಹೂವಿನದಳ, —ಎಸಳು: ಕುಳಿರ್ವಲರ್ದಲರೆಸಟಿ ಪಸೆಯ ಮೇಲೊಱಗಿರ್ದಂ (ಕಾದಂಪೂ. ೯೦೫); ಸೊಂಪಿಡುವ ಪಲತೆಱದಲರೆಸಟಿ ಪಸೆಗಳಿಂ (ಕುಸುಮಾ. ೧೩–೪೬ ವ).

[ಅಲರ್$_2$ + ಎಸಟಿ್]

**ಅಲರೇಱ,** ಅರಲೇಱ (ನಾ). ತುಂಬಿ; ದುಂಬಿ: "ಅಱಿಡಿ ಪಱಮೆಗಳೆನಲಲರೇಱ" (ಚತುನಿ. ೭೮). **ಅರಲೇಱ** (ಚಿ).

[ಅಲರ್$_2$ + ಏಱು$_1$ + – ಇ$_2$]

**ಅಲರೇಱು** (ಕ್ರಿ). ಹೂಬಿಡು; ಪುಷ್ಪಿತವಾಗು: ಅಲರೇಱದೆ ಸೊಂಪಿಡಿದಿನಿವಣ್ಗಳನೆಲ್ಲರ್ಗೆಡೆವಿಡದೀವುತ್ತಮೊಪ್ಪುಗುಂ ಪನಸಕುಜಂ (ಉದ್ಭಟ. ೯–೨೦); ಭರದಿಂದಲರೇಱಿದ ಮಾಕಂದಂ ಸರಸಫಲಂದೋಱಿಪುರ್ದೆನಲ್ (ಜಯುಕಾ. ೨–೩೨). [ಅಲರ್$_2$ + ಏಱು$_1$]

**ಅಲರೊದ್ದೆ** (ನಾ). ಹೂವಿನ ರಾಶಿ: ಮುಗುಳಲರೊದ್ದೆ ಕರಂ ಸಿದ್ಧಮಾದುದಂಬರತಲದೊಳ್ (ಪಂಪಭಾ. ೧೨–೨೧೮).

[ಅಲರ್$_2$ + ಒದ್ದೆ$_0$ (< ದೊದ್ದೆ ?)]

**ಅಲರೋಳಿ** (ನಾ). ಹೂವಿನ ಸಾಲು, —ರಾಶಿ: ತಳಿರ್ಗಳ ತೊಂಗಲಿಂದಮಲರೋಳಿಗಳಲ್ಲುಗುವಂತೆ (ಆದಿಪು. ೪–೫೯); ತಳಿರ ಮೇಗಣಲರೋಳಿಗಳೋ (ಕಾವ್ಯಾವ. ೮೯೫). [ಅಲರ್$_2$ + ಓಳಿ]

**ಅಲರ್ಕ** (ನಾ). ೧. ರೇಗಿದ ನಾಯಿ. ೨. ಹುಚ್ಚುನಾಯಿ. ೩. ಬಿಳಿ ಎಕ್ಕೆಯ ಗಿಡ. [ಸಂ.]

**ಅಲರ್ಕೆ,** ಅರಲ್ಕೆ, ಅರಳ್ಕೆ, ಅಲರಿಕೆ (ನಾ). ಅರಳುವಿಕೆ; ಬಿರಿಯುವುದು; ವಿಕಾಸ: ಇಂದ್ರಾಣಿಯ ನಯನೋತ್ಪಳಕಂ ದ್ರುತಮಾನಂದವಾರ್ಧಿಗಂ ನೆಗಟ್ದರ್ಹಚ್ಚಂದ್ರನ ತನುರುಚಿ ಚಂಚಚ್ಚಂದ್ರಿಕೆ ಪಡೆದಲರ್ಕೆಯುಂ ಪೆರ್ಚುಗೆಯುಂ (ವರ್ಧಪು. ೧೩–೯೩); ವನಜಕ್ಕೊಯ್ಯನಲರ್ಕೆಯುಂ ಸಮನಿಸುತ್ತೋರಂತೆ ಮೆಯ್ವೆರ್ಚೆ ತಣ್ಣನೆ ತೀಡಿತ್ತೆಸಸುಂ ಪ್ರಭಾತಸಮಯ ಪ್ರೋದ್ಭೂತಶೀತಾನಿಲಂ (ಕುಸುಮಾ. ೧–೫೨). **ಅರಲ್ಕೆ:** ಮೇಣಿದರಲ್ಕೆಯೊಳಾದ ರಾಗದಿಂ ಪುದಿದರುಣಾರವಿಂದಚಯಮೋ (ಕಾದಂಪೂ. ೪೧೪). **ಅರಳ್ಕೆ:** ಚಂದ್ರಮಂ ಪೊರೆಯೊಳಿರೆ ತಾವರೆಗರಳ್ಕೆಯೇಕೆ (ಚಬಪು. ೩೭–೧೬). **ಅಲರಿಕೆ:** ಕಣ್ಣೈದಿಲಲರಿಕೆಯಿಂಪು ಕಳೆಯೆ ನಾಸಾನಿಲನ ಕಂಪು ಸುಳಿಯೆ (ಚಬಪು. ೧–೨).

[ಅಲರ್$_1$ + –ಕೆ]

**ಅಲರ್ಕೆಗುಂದು** (ಕ್ರಿ). ವಿಕಾಸವು ಕಡಮೆಯಾಗು; ಸಂಕೋಚಗೊಳ್ಳು: ಹಳಹಳನಿರ್ದ ತಾರೆ ಕಳೆಗುಂದಿದ ಚಂದ್ರನಲರ್ಕೆಗುಂದಿದುತ್ಪಲಂ (ಸೂಕ್ತಿಸು. ೯–೨). [ಅಲರ್ಕೆ + ಕುಂದು$_1$]

**ಅಲರ್ಗಂಪು** (ನಾ). ಹೂವಿನ ವಾಸನೆ: ಪೊತ್ತಲರ್ಗಂಪಂ ನೆಗೆದುಱಿ ತಣ್ಣೆಲರದಿನಿಸು ತೀಡಿತ್ತಾಗಳ್ (ಕಾದಂಉ. ೧೬೫); ಪಾದರಿಯಲರ್ಗಂಪು ಪಡ್ಡಳಿಯ ಕಂಪು (ಗಿರಿಕ. ೨–೬೧); ಅಲರ್ಗಂಪಿಂಗೆಱಗಿರ್ದ ತುಂಬಿಗಳ ಬಂಬಲ್ಕಾರ್ಮುಗಿಲ್ಪಲ್ಲವಾವಲಿ ವಿದ್ಯುತ್ತ್ರಚಯಂ ಪಿಕಪ್ರಕರನಾದಂ ಮೇಘನಾದಂ (ರಾಜಶೇ. ೨–೩೯). [ಅಲರ್$_2$ + ಕಂಪು]

**ಅಲರ್ಗಟ್ಟು** (ಕ್ರಿ). ಹೂವನ್ನು ಕಟ್ಟು: ಕಲಲೆಂದತಿ ಕೌತುಕದಿಂದಲರ್ಗಟ್ಟುವೆವೆಂಬದೊಂದು ಸಾಹಸಮಂತಿರ್ಕೆ (ಕಾದಂಪೂ. ೧೦೦೫).

[ಅಲರ್$_2$ + ಕಟ್ಟು$_1$]

**ಅಲರ್ಗಣ್** (ನಾ). ಹೂವನ್ನು ಹೋಲುವ ಕಣ್ಣು: ನಿಡಿಯಲರ್ಗಣ್ಗಳ ಬೆಡಂಗಿಯರ್ಕಳ್ (ಕಾವ್ಯಸಾ. ೧೭೮ ಶೂದ್ರಕ); ಪೊಳೆವಲರ್ಗಣ್ ಚಾಮರಮೆನೆ ಲಳಿತ ಭ್ರೂಲತೆ ಪತಾಕೆಯೆನೆ (ಆದಿಪು. ೬–೮೧); ಅಲರ್ಗಣ್ಗಳಮರ್ದುಗಂ ತೊದಳ್ನುಡಿಯ ತವಕಿಗಂ (ಬಸರ. ೧–೧೪೯); ಅಲರ್ಗಣ್ಣ ಬಂಬಲ್ವೆಳಗುಗಳ ಸೂಸುತೆ (ಪದ್ಮರಾ. ೮–೨೦).

[ಅಲರ್$_2$ + ಕಣ್]

**ಅಲರ್ಗಣೆ,** ಅಲರುಗಣೆ (ನಾ). ಹೂವಿನ ಅಂಬು; ಪುಷ್ಪಬಾಣ: ನೀಳಾಂಜನೆ ಕರ್ಬಿನ ಬಿಲ್ಲಿಂ ಮಸೆದ ಮದನನಲರ್ಗಣೆ ಬರ್ದುಕಿತ್ತೆನಿಸುತ್ತೊಳಪೊಕ್ಕಳ್ ಭೋಂಕೆನೆ ನಿಖಿಳಜನಾಂತರಂಗಮಂ ರಂಗಮುಮಂ (ಆದಿಪು. ೯–೧೯); ಗಿರಿಜೆಗೆ ರೂಪೋತ್ಸವದೊಡನೆ ಮೆಱೆವ ದಶವರ್ಷವದಾಯ್ತಲರ್ಗಣೆಗೆ ಕೊರ್ಪು ಕೂಡುವ ತೆಱದಿಂ (ಗಿರಿಕ. ೪–೨); ಅಂಗಜನಲರ್ಗಣೆಯಂತೆ ತಂಬೆಲರ ಬೆಡಂಗಿನಂತೆ (ಕುರಾಸಾಂ. ೧–೫೯). **ಅಲರುಗಣೆ:** ಅಲರುಗಣೆಗಳ ಕಬ್ಬುವಿಲ್ಲಿನ . . . ಮನ್ಮಥರಾಜ ಸುಳಿದನು ರಾಮನಿದಿರಿನಲಿ (ತೊರರಾ. ೩–೧೨–೨೭). [ಅಲರ್$_2$ + ಕಣೆ$_1$]

**ಅಲರ್ಗಣೆಯ,** ಅಲರುಗಣೆಯ (ನಾ). ಹೂವಿನ ಬಾಣವನ್ನುಳ್ಳವನು; ಕಾಮ: ನುಣ್ದೊಡೆಯೆಂಬ ಪೊಂಬಾಱಿಯ ಬಾಟ್ಗಂಬಮಲರ್ಗಣೆಯನೆಂಬ ಸೊರ್ಕಾನೆಯುಂ ತೊಲಗಲೀಯದೆ ನಿಲಿಸೆಯುಂ (ಕಬ್ಬಿಕಾ. ೧೨೩). **ಅಲರುಗಣೆಯ:** ಅಲರುಗಣೆಯನ ಡೊಣೆಗಳಿಂ ದಗ್ಗಳಿಪ ಕಿಱುದೊಡೆಗಳೆಸೆವುವು (ಬಸಪು. ೪–೧೮). [ಅಲರ್ಗಣೆ + –ಅ$_7$]

**ಅಲರ್ಗಣ್ಣ** (ನಾ). ೧. ಹೂವಿನಂತೆ ಕಣ್ಣುಳ್ಳವನು. ೨. ವಿಷ್ಣು: "ನೀವೊರ್ವೊಕ್ಕುಳನಲರ್ಗಣ್ಣಂ ಹರಿಯುಕ್ಕುಂ" (ಚತುನಿ. ೭); ಅತ್ವಕ್ಕೆ– ಅಲರ್ಗಣ್ಣಂ, ಬಟ್ಟದೊಡೆಯಂ (ಶಮುದ. ೧೮೬ ಪ್ರಯೋ).

[ಅಲರ್ಗಣ್ + –ಅ$_7$]

**ಅಲರ್ಗಣ್ಬೊಣರ್** (ನಾ). ಹೂವನ್ನು ಹೋಲುವ ಎರಡು ಕಣ್ಣುಗಳು: ಅಲಸಗಮನಮಂಬುಜಕುಟ್ಮಲಕುಚವಲರ್ಗಣ್ಬೊಣರಮೃತಾಧರ (ಜಯುಕಾ. ೩–೧೮). [ಅಲರ್ಗಣ್ + ಪೊಣರ್$_2$]

**ಅಲರ್ಗಯ್ದು** (ನಾ). ಹೂವಿನ ಆಯುಧ; ಪುಷ್ಪಬಾಣ: ಅಂಗೋದ್ಭವನೆಂಬ ಮಹಾ ಸಾಹಸಿಗಂಗೆಯೊಲಿದು ರತಿ ಬಾಸಟಮಿಟ್ಟಲರ್ಗಯ್ದಂ ಕುಡುವಂತೆ (ಜಯುಕಾ. ೧೪–೨೨). [ಅಲರ್$_2$ + ಕಯ್ದು]

**ಅಲರ್ಗಳಂ** (ಅ). ತಡೆಯಿಲ್ಲದೆ; ಅಂಕೆಯಿಲ್ಲದೆ; ಅಡ್ಡಿಯಿಲ್ಲದೆ: ನಿಗಳಂಬೊಲ್ ತೊಡರ್ದಿರ್ದ ಮೋಹನಿಗಳಂ ನಿರ್ವ್ಯಾಕುಳಂ ಪಿಂಗೆ ಮತ್ತಗಜೇಂದ್ರಂಬೊಲಲರ್ಗಳಂ ವನಮುನಂದಾನಂದದಿಂ ಪೊಕ್ಕನಾವಗ ಮಾದಟ್ಟಿಜಳುರ್ಕೆಯಿಂ . . . ಶ್ರೀಚಂದ್ರಭೂವಲ್ಲಭಂ (ಕಾವ್ಯಾವ. ೩೪೨). [< ಸಂ. ಅನರ್ಗಲಂ]

**ಅಲರ್ಗಱೆ**, ಅರಳ್ಗಱೆ (ಕ್ರಿ). ಹೂವನ್ನು ಸುರಿ; ಪುಷ್ಪವನ್ನು ಸೂಸು: ಒಂಬತ್ತು ತಿಂಗಳು ಹೊತ್ತ ಮಾತೃಕೆಯ ಪಾದಾಂಭೋರುಹ ಕೆಲರ್ಗಱೆದು ಮುಂಬಾಗಿ ಕೈನೀಡಿ ಶರಣೆಂಬ ರೀತಿಯೊಳ್ ಪೊಂಬಾಳೆ ಬನದೊಳೊಪ್ಪಿದುವು (ಮೋಹತ. ೨೪-೪೧). **ಅರಳ್ಗಱೆ**: ತಾಪಸ ಸೂರ್ಯ ತನ್ನಯ ವಂಶೋತ್ಪನ್ನ ಭೂಪಾಲಕರಿಗೆ ಕೂರ್ತು ರೂಪಾಂತ ನೆಂದರಳ್ಗಱೆದ ರೀತಿಯೊಳಿಂದ್ರಗೋಪದ ಪುಳುವುದುರಿದುವು (ಮೋಹತ. ೪-೩೬). [ಅಲರ್$_2$ + ಕಱೆ$_1$]

**ಅಲರ್ಗುಡಿ** (ನಾ). ೧. ಹೂವಿನ ಕುಡಿ. ೨. ಹೂವಿನ ಗೊಂಚಲು: ಸುಮನಶ್ಶಿಲೀಮುಖಾಕ್ರಾಂತಮಿದಲರ್ಗುಡಿ ದೇವ ತನ್ನೊಳುತ್ಕಳಿಕೆ ಕರಂ ನಿಮಿರ್ದಿರೆ ನಿನಗೆಱಕಮನಾಂತು ಮೆಱೆದಪುದು (ವರ್ಧಪು. ೪-೧೨); ಬಾಳಲರ್ಗುಡಿ ಪಿಕರುತಿ ಬಾಯ್ಕೇಳಿಕೆ ಮಾಂದಳಿರ ಕೆಂಪು ದೀವಿಗೆಯೆನೆ . . . ಬಂದುದು ವಸಂತಂ (ಯಶೋಚ. ೪-೨). [ಅಲರ್$_2$ + ಕುಡಿ$_2$]

**ಅಲರ್ಗೂಡು**, ಅರಳ್ಗೂಡು (ಕ್ರಿ). ೧. ಹೂವಿನ ಜೊತೆಯಲ್ಲಿ ಸೇರು. ೨. ಹೂವನ್ನು ಸೇರಿಸು, —ಬೆರಸು: ಅಕ್ಷತೆಯೊಳು ಕುಂಕುಮ ದಲರ್ಗೂಡಿ ಶೋಭಾಕ್ಷತೆವಟ್ಟಲಿಟ್ಟಹಳು (ಮೋಹತ. ೨೧-೧೧). **ಅರಳ್ಗೂಡು**: ೧. ಮಲ್ಲಿಗೆಯರಳ್ಗೂಡಿ ಪಾಲ್ದಳಿದಂದದಿ ಚೆಲ್ಲಿತು ಬೆಳುದಿಂಗಳಿಳೆಗೆ (ಮೋಹತ. ೧೮-೧೦೨). [ಅಲರ್$_2$ + ಕೂಡು$_1$]

**ಅಲರ್ಗೊಳ** (ನಾ). ಹೂವನ್ನು ಆಹಾರವಾಗಿ ಉಳ್ಳುದು; ತುಂಬಿ: "ಅಲರ್ಗೊಳನ್ = ದುಂಬಿ" (ಧನಂನಿ). 'ಮರಗೊಳ' ಪರಾ. [ಅಲರ್$_2$ + ಕೊಳ್ (< ಕೊಱ್) + -ಅ$_7$]

**ಅಲರ್ಗೊಂಚಲ್** (ನಾ). ಹೂವಿನ ಗೊಂಚಲು: ಅಲರ್ಗೊಂಚಲೆ ಕೇಸರಮೆಂಬಿನಂ ಮನಂಗೊಳೆ ಮಧುಮಾಸ ಕೇಸರಿ (ಅಜಿಪು. ೬-೨೩); ಪಾರಿಜಾತದೊಂದೆಸೆವಲರ್ಗೊಂಚಲಂ ಪಿಡಿದು ನಂದನದೊಳ್ ಬರು ತೋರ್ಪಳೊಪ್ಪಿದಳ್ (ಕಾದಂಪೂ. ೭೬೬); ಅಲರ್ಗೊಂಚಲ್ಗೆಱಪುಂಚ ದುಂಬಿಗಳ ಶುಂಭದ್ಗಾನದಿಂ (ಉದ್ಭಟ. ೯-೮); ಎಸೆವಲರ್ಗೊಂಚಲಂ ತಳೆದ ಮಲ್ಲಿಗೆ (ಕಬ್ಬಿಕಾ. ೧೧೧). [ಅಲರ್$_2$ + ಗೊಂಚಲ್]

**ಅಲರ್ಗೊಂಡೆ** (ನಾ). = ಅಲರ್ಗೊಂಚಲ್: ಎಳೆವೆಣ್ಣ ಪೊರ್ಕುಳಲ ಗೊಂಡೆಯಂತಿರೆ ಪೊಂಬೆಟ್ಟಂ . . . ಕಣ್ಗೊಳಿಕುಂ (ರಾಮಾಶ್ವ. ೨-೩). [ಅಲರ್$_2$ + ಗೊಂಡೆ]

**ಅಲರ್ಗೊಳ**, ಅರಲ್ಗೊಳ (ನಾ). ಹೂವಿನ ಕೊಳ: ಮಾನಧ್ವಜ ನುಪವನದೊಳ್ತಾನೆಸೆವಲರ್ಗೊಳದವೋಲ್ (ಉದ್ಭಟ. ೫-೩೭); ಅಲ ರ್ಗೊಳದಮಳ್ದಿರೆಯೆಡೆಯೊಳಗರಸಂಚೆಯ ಮಱಿ . . . ರಾಜಿಸುವಂದದಿ (ಜಯಕಾಂ. ೨-೬೨). **ಅರಲ್ಗೊಳ**: ನಲ್ಲಂಪುವೀಱಿ ಮೋಹಿಸುವ ಚೆಂಗಣಿಗಿಲೆಯರಲ್ಗೊಳಂ (ಪದ್ಮರಾ. ೮-೩೮). [ಅರಲ್$_2$ + ಕೊಳ$_1$]

**ಅಲರ್ಗೋಲ್**, ಅಲರುಗೋಲು, ಅಲರ್ಗೋಲು (ನಾ). ಹೂವಿನ ಬಾಣ: ಒಲುಮೆ ವಂಚಕರೆಲ್ಲಿ ದರೆಲ್ಲಿದರೆಂದಲರ್ಗೋಲಿಟ್ಟಂಗಭವನು (ಶ್ರೀಪಾಲ. ೨-೯೨); ಅಂಗಜನಾಗ ಕಿವಿವರೆಗೆ ತೆಗೆದು ತುಂಬೆಚ್ಚಲರ್ಗೋ ಲಂತರಂಗದೊಳ್ ನಾಂಟದುವು (ಜೈಮಿಭಾ. ೩೦-೨೨). **ಅಲರುಗೋಲು** (ರಮಾಕಾಂ). **ಅಲರ್ಗೋಲು**: ಕಟ್ಟಾಯವಡೆದಿರ್ದ ನಂಗಜನಲರ್ಗೋಲ ತೊಟ್ಟ ಮೋಹನ ಶಕ್ತಿಯಂತೆ (ಮೋಹತ. ೧೬-೩೮). [ಅಲರ್$_2$ + ಕೋಲು (< ಕೋಲ್$_1$)]

**ಅಲರ್ಗೋಲ** (ನಾ). ಹೂವಿನ ಬಾಣವನ್ನುಳ್ಳವನು; ಪುಷ್ಪಬಾಣ; ಮನ್ಮಥ: ನೋಡೆಲವೊ ಕಾಲಭೈರವನ ಕೈಚಳಕವನೆಂದಲರ್ಗೋಲನ ಮಗನನಿಕ್ಕಿದನು (ಮೋಹತ. ೩೫-೩೬). [ಅಲರ್ಗೋಲ್ + -ಅ$_7$]

**ಅಲರ್ಗೋಲು** 'ಅಲರ್ಗೋಲ್' ನೋ.

**ಅಲರ್ಚಿಸು** (ಕ್ರಿ). = ಅಲರಿಸು: ಅಲ್ಪಹಾಸಮಂ ಪ್ರಕಟಿಸುತುಂ ವಿಲಾಸ ಮನಲರ್ಚಿಸುತುಂ . . . ಕಾಂತೆಯರಾದವೊಪ್ಪಿದರ್ (ಉದ್ಭಟ. ೧೦-೬೯); ಹೆಂಗಳ ಮೊಗದಾವರೆ ದಿವ್ಯನಯನೋತ್ಪಲಂಗಳ ಮಿಗೆಯಲರ್ಚಿಸುವ ಮಂಗಳರವಿಶಶಿಬಿಂಬದೋಲ್ಪರಳೋಲೆ ಕಂಗೊಳಿಸಿದುವು ಕರ್ಣದಲಿ (ಕಂಸವಿ. ೨೪-೩೬). [ಅಲರ್ಚು + -ಇಸು$_1$]

**ಅಲರ್ಚು**, ಅರಲ್ಚು$_1$, ಅರಳಿಚು, ಅರಳ್ಚು, ಅಲರಿಚು (ಕ್ರಿ). ೧. ಅರಳುವಂತೆ ಮಾಡು; ವಿಕಾಸಗೊಳಿಸು: ವದನಸರಸಿಜಾಸವಸೇಕದೊಳೆ ವಕುಳಕುಜಂಗಳನಲರ್ಚಿಯುಂ (ಆದಿಪು. ೧೧-೧೩೦ ವ); ವನಜದಳಂಗ ಳೊಳೊಂದೊಂದನೆ ಮುಗಿಯಿಸಿ ಕುಮುದವನದಳಂಗಳೊಳೊಂದೊಂದನೆ ಪಿಡಿದಲರ್ಚುತಿರ್ದಪುವೆನೆ ಪೂಗೊಳದೊಳಗೆ ಪೊಳೆದುವಿಂದುಕರಂಗಳ್ (ಕಾದಂಉ. ೪೨೦); ಸವಿನಯಂಗಳ ಮೇಟ ದಾಸೋಹವನಲರ್ಚುವ ಚೇಟಿ (ಬಸಪು. ೬-೧೦); ಶಿವೈಕಭಕ್ತಿಯನಲರ್ಚುವುದುಮಂ . . . ನಿತ್ಯವ್ರತ ಮೆನಿಸಿ ಪೂಣ್ದು ಕೈಕೊಂಡು (ವೃಷವಿ. ೫-೩೮ ವ). ೨. ಚದುರಿಸು: ಹಿಮ ಮನಲರ್ಚಿ ತೀಡೆ ಪವನಂ (ಜಗವಿ. ೧೪-೫). **ಅರಲ್ಚು$_1$**: ೧. ಅನಿಮಿಷ ನಯನದೆ ನೋಟ್ಪುದುಮನಿಮಿಷಪತಿ ಲೀಲೆಯಿಂದರಲ್ಚಿದುದಾಗಳ್ ಜಿನ ಪತಿವಕ್ತ್ರೇಂದುಸಹಸ್ರನೇತ್ರಲೋಚನ ಸಹಸ್ರ ಕುವಲಯವನಮಂ (ಅಜಿಪು. ೪-೧೫). **ಅರಳಿಚು**: ೧. ತಡವೇನು ತಾ ವೀಳೆಯವನೆನುತೆಡಗಯ್ಯನರಳಿ ಚುತ (ಕುವ್ಯಾದ್ರೋ. ೧೫-೪೫); ಅಲಿಗಳನರಳಿಚುತ ನಗೆಗಳ ಮಾಲೆಗಳ ತೆರಳಿಚುತ . . . ಎಂದನು ಹರಿ ಸುಪರ್ಣಂಗೆ (ತೊರರಾ. ೧-೮-೫೪); ಕರುಣಾವನಧಿ ಕಂಗಳನರಳಿಚುತ ನಸುನಗೆಯಲಿ (ನಿಭಾಗ. ೩-೪-೪೦). **ಅರಳ್ಚು**: ೧. ತವಕಮನರಳ್ಚುತುಱೆ ಮೆಱೆವುವಾವ್ರುದೊಳ್ ಶುಕನಿಕರಂ (ಗಿರಿಕ. ೨-೩೮); ತನ್ನಯ ಬಂಧುಸಂತತಿಗಳೆಂಬ ಸರೋಜವನಂಗಳಂ ಪ್ರಮೋದೋನ್ನತಿಯಿಂದರಳ್ಚಿ (ಬಾಥಪು. ೪-೩೬). **ಅಲರಿಚು**: ೧. ಸರಸಿ ಯೊಳು ಪದುಮುಂಗಳೊಡನೆಯಲರಿಚುತ (ಭಕ್ತಾಚ. ೩-೪೬). [ಅಲರ್$_1$ + -ಚು]

**ಅಲರ್ಜೊಂಪ** (ನಾ). = ಅಲರ್ಗೊಂಚಲ್: ರಾಂತಕ್ಕೆ ಕುಳಿರ್ಗಾಳಿ . . . ಅಲರ್ಜೊಂಪಂ (ಶಮುದ. ೪೩ ಪ್ರಯೋ); ಸಂಪಗೆಯಲರ್ಜೊಂಪದ ಮುಂದೆ (ಉದ್ಭದೇ. ೧-೨೦); ಬಲವರ್ಪಾಱಿ ಬಗ್ಗಿಪ ಕೆಳಕಂಠಂ ತೊಂಡು ಗೆಡೆವ ಗಿಳಿ ಪೂತೆಸೆದಿರ್ಪಲರ್ಜೊಂಪಂ ಕಾತೊಱಗುವ ಫಲಾಳಿತಳ್ತಿರೆ ರಸಾಲಭೂರುಹಮೆಸೆಗುಂ (ರಾಜಶೇ. ೨-೩೮). [ಅಲರ್$_2$ + ಜೊಂಪ]

**ಅಲರ್ದಂಡೆ** (ನಾ). ಹೂವಿನ ಮಾಲಿಕೆ; ಹೂವಿನ ಸರ. 'ಅಲರ್ದಂಡೆ ವಿಡಿ' ಪರಾ. [ಅಲರ್$_2$ + ದಂಡೆ$_2$]

**ಅಲರ್ದಂಡೆವಿಡಿ** (ಕ್ರಿ). ಹೂವಿನ ಮಾಲಿಕೆಯನ್ನು ಹಿಡಿ: ಮಲ್ಲಿಗೆ ಯಲರ್ದಂಡೆವಿಡಿಯೆ ಬಂದೆಱಗುವ ಜಿಲ್ಲಿ ದುಂಬಿಗೆ ಬೆರ್ಚಿ ನಿಂದು ಸೊಲ್ಲಿಪ ಪೂಮಾಲೆಗಾರ್ತಿ (ಮೋಹತ. ೩-೧೭). [ಅಲರ್ದಂಡೆ + ಪಿಡಿ$_1$]

**ಅಲರ್ದಟ್ಟೆ** (ನಾ). ಹೂವಿಡುವ ತಟ್ಟೆ; ಹೂವಿನ ತಟ್ಟೆ: ಗಂಗೋದಕ ಹೂಜಿ ಘನರತ್ನಕೀಲಿತ ಪಿಂಗಾಣಿಗಂದಲರ್ದಟ್ಟೆ ಹೊಂಗಾಳಾಂಜಿಯ ಹೊಳೆವ ಬಿಜ್ಜಣಿಗೆಯ ಹೆಂಗಳು ತಂದಿರಿಸಿದರು (ಮೋಹತ. ೧೬-೨೮). [ಅಲರ್$_2$ + ತಟ್ಟೆ]

**ಅಲರ್ದಳೆ** (ಕ್ರಿ). ಹೂವನ್ನು ಪಡೆ, —ಹೊಂದು: ಬೆಳೆಯದ ಪೊಲಂಗಳಂ ಬೆಳ್ದಾವರೆಗಳಲರ್ದಳೆಯದ ಕೊಳಂಗಳಂ . . . ಅಱಸಲಾಂ ಕಾಣೆನಾ ಮಹೀಮಂಡಲದೊಳು (ಜೈಮಿಭಾ. ೩-೪). [ಅಲರ್$_2$ + ತಳೆ$_1$]

**ಅಲರ್ದಾವರೆ** (ನಾ). ಅರಳಿದ ತಾವರೆ : ಪೊಳೆವ ಲೋಚನದ ಮಱಿ ಮಿಾನ ಮೊಗದಲರ್ದಾವರೆಯ ತಿವಳಿಗಳ ಕಿಱು ದೆ ರೆ ಯ (ಜೈಮಿಭಾ. ೩೦–೬). [ಅಲರ್$_1$ + ತಾವರೆ]

**ಅಲರ್ದಿಱಿ** (ಕ್ರಿ). ಹೂವನ್ನು ಬಿಡಿಸು, —ಕೀಳು : ಷಟ್ಪದವೇಣಿ ತಳಿತ ಸಂಪಗೆಯಲರ್ದಿಱಿಯೆ ಮತ್ತೊರ್ವ ನಗೆಮೊಗದವಳು ಕೇತಕಿಯ ಗಂಡಿಸಿನಲರ್ ಪಗೆಯೆಂದು ತಿಱಿದಿಕ್ಕಿದಳು (ಮೋಹತ. ೨೪–೬೪). [ಅಲರ್$_2$ + ತಿಱಿ$_1$]

**ಅಲರ್ದುಳಿ** (ಕ್ರಿ). ಹೂವನ್ನು ತುಳಿ : ಹಿಮರುಚಿಕಾಂತ ತತ್ಕ್ರೀಡಾ ಕುಳಿಗೆ ಕುಂಕುಮದಲರ್ದುಳಿದೊಡೆಗಲಸಿ ರಮಣಿಯರ್ ತಳಿರಡಿದಳೆದಿರ್ದ ಲತೆಯಂತೆ ರಮಣೀಯವಾಯ್ತು ಕೆನ್ನೀರು (ಮೋಹತ. ೧೪–೩೭). [ಅಲರ್$_2$ + ತುಳಿ (< ತುಱು$_1$)]

**ಅಲರ್ದುಱುಗಲ್**, ಅರಲ್ದುಱುಗಲ್ (ನಾ). ಹೂವಿನ ಗುಂಪು, —ಸಮೂಹ : ನೆಱೆಯಲರ್ದಂಭೋರುಹದಲರ್ದುಱುಗಲನಲೆದೊಗೆದುವು ... ಬಂಬಲ್ದೆರೆಗಳ್ (ಪಂಪಭಾ. ೫–೫೭) ; ಬಂಡನುಗುಟ್ವಲರ್ದುಱುಗಲಿಂ (ಕಾದಂಬ. ೨೬೬). **ಅರಲ್ದುಱುಗಲ್** : ಕಣ್ಗಳಂ ಬಿಡುವಂತಿರ್ಪುವರಲ್ವರಲ್ದುಱುಗಲಿಂದೆ ... ಅಂಘ್ರಿಪವ್ರಾತಮುಂ (ಅ ರ್ಥ ನೇ. ೨–೬೭). [ಅಲರ್$_2$ + ತುಱುಗಲ್]

**ಅಲರ್ದೊಂಗಲ್**, ಅರಲ್ದೊಂಗಲ್ (ನಾ). ಹೂವಿನ ಗೊಂಚಲು, —ಕುಚ್ಚು : ಮಿಳಿರ್ವೆಳವಳ್ಳಿ ಬಾಲಮಲರ್ದೊಂಗಲೆ ಕೇಸರಮೆಂಬಿನಂ ಮನಂಗೊಳೆ ಮ ಧು ಮಾ ಸ ಕೇ ಸ ರಿ (ಅಜಿಪು. ೬–೨೩) ; ಮಲ್ಲಿಗೆಯಲರ್ದೊಂಗಲಂ ಮಹೇಶ್ವರಿ ತಿಱಿದಳ್ (ಗಿರಿಕ. ೫–೬೩) ; ಮಿಸುಪದುಗುಲದೊಳ್ಪುಡೆ ಪಿರಿದುಂ ಲ ಲಿ ತಾಂ ಗಿ ಗೆ ಸೊಗಯಿಸಿದತ್ತಲರ್ದೊಂಗಲ್ ಕಲ್ಪಲತೆಗೆ ಸೊಗಯಿಪ ತೆಱದಿಂ (ಜಗವಿ. ೧೧–೧೧೭). **ಅರಲ್ದೊಂಗಲ್**: ಅರಲ್ದೊಂಗಲ [ಪಾಠಾಂ. ಅಲರ್ದೊಂಗಲ]ನಿಱಿದಳಿರೊಳಗೆ ಜಿನುಂಗುವ ಪೆಣ್ದುಂಬಿಗಳುಂ (ಕಾವ್ಯಾವ. ೨೫೦). [ಅಲರ್$_2$ + ತೊಂಗಲ್]

**ಅಲರ್ದೊಂಬೆ** (ನಾ). ಹೂವಿನ ಗೊಂಚಲು : ಕೈಗೆ ನಿಲ್ಕದಲರ್ದೊಂಬೆಗಳ್ ಕೈಪಡುವಂತೆ ನಿಡುಗೊಂಬುಗಳಂ ಬಾಗಿಸಿ (ಚಿಕವಂ. ೧೦೩–೧೭) ; ನಿಜಮುಡಿಗಲಂಕರಿಸಿರ್ದ ಪರಿಮಳ[ದ]ಲರ್ದೊಂಬೆಯಂ (ನ ಂ ದಿ ಮಾ. ೨೨–೩೫). [ಅಲರ್$_2$ + ತೊಂಬೆ$_1$]

**ಅಲರ್ದೋಂಟ**, ಅರಲ್ದೋಂಟ, ಅಲರ್ದೋಟ (ನಾ). ಹೂವಿನ ತೋಟ : ಮದಮಧುಪಾಳಿ ಸುತ್ತದಲರ್ದೋಂಟಂ ... ಇಲ್ಲ (ಎಕ. XI, ದಾವಣ. ೩೫–೪೦ ; 1160) ; ರಾಂತಕ್ಕೆ – ಅಲರ್ದೋಂಟಂ, ಬಿದಿರ್ದಟ್ಟೆ (ಶಮುದ. ೪೩ ಪ್ರಯೋ). **ಅರಲ್ದೋಂಟ** : ಲತೆಯಿಂ ಕಲ್ಪಕುಜಂ ಮದಾಳಿಯಿನರಲ್ದೋಂಟಂ... ಮೆಱೆವವೋಲ್ ಪ್ರಾಣೇಶ್ವರೀಸ್ನೇಹದಿಂ ಸತತಂ ರಂಜಿಸುವಂ ನಿತಂಬವತಿಯಿಂ ತದ್ಭೂಭುಜಂ (ದಶಕು. ೧೨–೧೬೫). **ಅಲರ್ದೋಟ** : ಅಲ್ಲಲ್ಲಿಗೆ ಪೊಸಬನಂಗಳಲರ್ದೋಟಗಳ್ (ಉದ್ಭಟ. ೩–೩೩) ; ಅ ಲ ರ್ದೋ ಟ ವ ಪೊಕ್ಕು ಕೊಯ್ದರಾಯತನೇತ್ರೆಯರು ಪುಷ್ಪಚಯವ (ಮೋಹತ. ೨೪–೬೨). [ಅಲರ್$_2$ + ತೋಂಟ]

**ಅಲರ್ದೋಟ** 'ಅಲರ್ದೋಂಟ' ನೋ.

**ಅಲರ್ದೋರಣ**, ಅಲರುದೋರಣ (ನಾ). ಹೂವಿನ ತೋರಣ : ಅಲರ್ದೋರಣಂ, ಅಲರ್ದೋಂಟಂ (ಶಮುದ. ೪೩ ಪ್ರಯೋ). **ಅಲರುದೋರಣ** (ಸ್ಯಾಂಡರ್). [ಅಲರ್$_2$ + ತೋರಣ]

**ಅಲರ್ಪೊಡೆಯ** 'ಅಲರ್ವೊಡೆಯ' ನೋ.

**ಅಲರ್ಮಳೆ** 'ಅಲರ್ಮಱಿ' ನೋ.

**ಅಲರ್ಮಱಿ**, ಅರಲ್ಮಳೆ, ಅರಲ್ವಳೆ, ಅರಳ್ಮಳೆ, ಅ ಲ ರ್ಮ ಳೆ, ಅಲರ್ವಳೆ, ಅಲರ್ವಱಿ (ನಾ). ಹೂವಿನ ಮಳೆ; ಪುಷ್ಪವರ್ಷ : ಸುರತರುನಂದನಗಳಿನಲರ್ಮಱಿ ಬಂದೆಱಗಿತ್ತು (ಆ ದಿ ಪು. ೨–೬೫). **ಅರಲ್ಮಳೆ** : ಅಗಳ್ ಬಾನತ್ತಣಿನರಲ್ಮಳೆ [ಪಾಠಾಂ. ಅರಳ್ಮಳೆ] ಸುರಿದತ್ತು ರಾಮನ ಸಿರದೊಳ್ (ಅ ದ್ಭು ತ. ೩೭–೨೦). **ಅರಲ್ವಳೆ** : ತ್ರಿದಶರರಲ್ವಳೆ ಗಱಿದು ನೋಡಿದರ್ (ಚಿಬಪು. ೪೦–೩೨). **ಅರಳ್ಮಳೆ** : 'ಅರಲ್ಮಳೆ' ಶಬ್ದದ ಪಾಠಾಂತರವನ್ನು ನೋಡಿ. **ಅಲರ್ಮಳೆ** : ಛಾಯಾಪ್ರತಿಮೆಗೆ ನೃಪಗಾದಿಜಿನಬಿಂಬಕೊಯ್ಯಾರದಲರ್ಮಳೆಯಾಯ್ತು (ಭ ರ ಚ. ೧೩–೪೪). **ಅಲರ್ವಳೆ** : ಎಱಗಿತು ಮುಂದ[ದಾ]ರದಲರ್ವಳೆ ತಣ್ಣನೆ ನಱುಘಾಳಿ ಬೀಸಿತಂಬರವಾ (ವ ರ್ಧ ಸಾಂ. ೪–೫೪) ; ಕಮ್ಮನಲರ್ವಳೆ ಭೋಂಕನೆಱಗಿದುದು (ಸೌಂದಪು. ೧೨–೯೬). **ಅಲರ್ವಱಿ** : ಮುಕ್ಕೊಡೆ ಯೊಪ್ಪಿದಶೋಕೆ ಭಾಷೆಯಲರ್ವಱಿ . . . ಮೃಗಾಧಿಪಪೀಠಂ ಎಸೆಯೆ (ನೇಮಿಪು. ೧೪–೧೪೩) ; ತನೂದರಿಯರಲಂಪಿನಿಂ ತುಳುಕೆ ಕೃಷ್ಣನಮೇಲೆ ಪೊದಱ್ದುದೆಂದು ಕಪ್ಪುರವಡೆಯಂತಿರಾಲಿವಱಿಯಂತಿರಲರ್ವಱಿ ಯಂತಿ ರೆತ್ತಲುಂ (ಜಗವಿ. ೧೪–೯೪). [ಅಲರ್$_2$ + ಮಱಿ]

**ಅಲರ್ಮಾಲೆ** (ನಾ). ಹೂವಿನ ಮಾಲಿಕೆ; ಪುಷ್ಪಹಾರ : ಪೊಳೆವ ಪೆರ್ಜಡೆಯಲರ್ಮಾಲೆ ಹೊಂಗೆಜ್ಜೆ ಬಿಡಯವಿಲ್ಲದ ಹೊನ್ನಂಡೆಗಾತಿಯರು ಬೆಂಗಡೆಯ ಸಾರಿದರು (ಮೋಹತ. ೧೪–೬೧). [ಅಲರ್$_2$ + ಮಾಲೆ]

**ಅಲರ್ಮುಡಿ**$_1$ (ಕ್ರಿ). ಹೂವನ್ನು ಮುಡಿದುಕೊ. [ಅಲರ್$_2$+ ಮುಡಿ$_1$]

**ಅಲರ್ಮುಡಿ**$_2$, ಅರಳ್ಮುಡಿ (ನಾ). ಹೂವನ್ನು ಮುಡಿದ ತುರುಬು; ಹೂವನ್ನು ಧರಿಸಿದ ಮುಡಿ : ಮಲ್ಲಿಗೆಯಲರ್ಮುಡಿಯ ತನಿಗಂಪ ನೆರವಿ ನೆರವಿಗೆ ತಂದೆಲರ್ಮೆಲ್ಲಮೆಲ್ಲನೆ ಪ ರ ಪು ತಿ ರ್ದು ದು (ಜೈಮಿಭಾ. ೬–೧೨). **ಅರಳ್ಮುಡಿ** : ಸುಯ್ಯಗಂಪರಳ್ಮುಡಿಯಗಂಪು ಮೈಗಂಪೊಂದ ನೊಂದೊದಗಿ ತಂಗಾಳಿಯಂ ಕೊರ್ವಿಸೆ (ಚಿಬಪು. ೩೭–೫೦). [ಅಲರ್$_2$ + ಮುಡಿ$_2$]

**ಅಲರ್ವಂಡು** (ನಾ). ಹೂವಿನ ರಸ; ಮಕರಂದ : ಅಲರ್ವಂಡನುಂಡು ಸೊಕ್ಕಿ ಮೊರೆವ ಮೊರೆಪದಿಂ ತುಂಬಿಗಳುಂ ಪಲ್ಪಱಿಗುಟ್ಟೆದಪುವೆಂಬಂತೆಯುಂ (ಕಾದಂಬ. ೨೧೯) ; ಅಲರ್ವಂಡಿಂದಾದ ಬಂಬಲ್ದೊಱೆಗಳ ನಲವಿಂ ದಾಂಟಿ ಪೋಪನ್ನೆಗಂ (ಕಾವ್ಯಸಾ. ೧೧೩) ; ಅಲರ್ವಂಡನುಂಡು ಝೇಂಕರಿಸುವ ಮಱಿದುಂಬಿ (ರೇವಣ. ೩೧–೪೩). [ಅಲರ್$_2$ + ಬಂಡು$_1$]

**ಅಲರ್ವಕ್ಕಿ**, ಅರಲ್ವಕ್ಕಿ, ಅಲರುವಕ್ಕಿ (ನಾ). **೧.** ಹೂವಿನ ರಸವನ್ನು ಕುಡಿದು ಜೀವಿಸುವ ಹಕ್ಕಿ; ತುಂಬಿ; ಭ್ರಮರ : "ಅಲರ್ವಕ್ಕಿ = ತುಂಬಿ" (ಶಮುದ. ಪರಿ. ೨) ; "ಅಲರ್ವಕ್ಕಿಯೆಂದು ಭೃಂಗದೊಳ್" (ಕರ್ಣಾನಿ. ೧೦) ; ನಱುಸುಯ್ಯಲರ್ವಕ್ಕಿ ಜಿನುಂಗುತಿರ್ಪಿನಂ (ಕಬ್ಬಿಕಾ. ೩೪೨) ; ಅಲರ್ವಕ್ಕಿಗಳಂತೆ ನೀ ಲಾ ಳ ಕ ವಿ ರ್ದು ದ ವ ಳ ಮಸ್ತಕದಿ (ಮೋಹತ. ೨೩–೨೮) ; ಅಲರ್ವಕ್ಕಿಗಳ್ ಬಂಡನುಂಡುಂಡು ಬಾಯಾಱಿ ಬಂದು (ರಾ ಮಾ ಶ್ವ . ೫೨–೬). **೨.** ಕೋಗಿಲೆ : "ಅಲರ್ವಕ್ಕಿಯೆನೆ ಪೆಸರಕ್ಕು ಭ್ರಮರ ಕೋಗಿಲೆಗಳಿಗೆ" (ಕಶಂ. ೭). **ಅರಲ್ವಕ್ಕಿ** : **೨.** "ಅರಲ್ವಕ್ಕಿ = ಕೋಕಿಲೆ ? ಭ್ರಮರ" (ಪ್ರಭಣ್ಣ). **ಅಲರುವಕ್ಕಿ** : **೧.** ಅಂಜನದಲರುವಕ್ಕಿಯ ಬಣ್ಣಮೆನೆ ತೋರ್ಪ ಕಂಜಲೋಚನನ (ವ ರ್ಧ ಸಾಂ. ೪–೨). [ಅಲರ್$_2$ + ಪಕ್ಕಿ]

**ಅಲರ್ವಚ್ಚ** (ನಾ). ಹೂವಿನ ಒಡವೆ; ಪುಷ್ಪಗಳಿಂದ ಮಾಡಿದ ತೊಡಿಗೆ : ಅಲರ್ವಚ್ಚಂ ಪಚ್ಚಮುಂ ಪೊಚ್ಚಮುಮೆನಿಸದೆ ಮೆಯ್ವೆತ್ತೊಡಂಬಟ್ಟು ತನ್ನೊಳ್ ನಿಲೆ (ಶಾಂತಿಪು. ೮–೪೫) ; ಮುಗಮುಗಿಪಲರ್ವಚ್ಚದ ಪಡಲಿಗೆಗಳನೊಟ್ಟೈಸಿದವಚ್ಯುತನ ಮುಂದೆ ಮಾ ಲಾ ಕಾ ರ ಂ (ಜಗವಿ. ೬–೧೬) ; ಗೌರೀವಲ್ಲಭಂಗೆ ಪೂಗಳಂ ಕೊಟ್ಟಲರ್ವಚ್ಚಂಗಳಂ ಮಾಡಿ ದೇವಿಯಗಿರ್ತ್ತು (ವೀರವಿ. ೩–೫೭ ವ). [ಅಲರ್$_2$ + ಪಚ್ಚ$_2$]

**ಅಲರ್ವಡಿಗ,** ಅರಲ್ವಡಿಗ (ನಾ). ಹೂವಾಡಿಗ : "ಪೂವಡಿಗನುನ್ನತದ ಪೂವಳನಲರ್ವಡಿಗನಾತನೆಂದೆನ್ನಲಾ ಪುಲ್ಲವಡಕಾರಂಗೆ ಪೆಸರು" (ಶಬ್ದಮಂ. ೬೮). **ಅರಲ್ವಡಿಗ :** ಆರಲ್ವಡಿಗರ ನವಮಣಿಗಾಜರ ಹೊನ್ನ ಹರದರಂಗಡಿಯಿರ್ಪುವಲ್ಲಿ (ಶ್ರೀಪಾಲ. ೧-೬೮). [ಅಲರ್$_2$ + -ವಡಿಗ]

**ಅಲರ್ವಡೆ** (ಕ್ರಿ). ಹೂವು ಬಿಡು ; ಹೂವನ್ನು ಪಡೆ : ಕುಡಿಗೊಂಡುದು ಪುರ್ಬಿನೊಳಲರ್ವಡೆದುದು ವದನದೊಳೆ ಕೋಪಲತೆ ಭೂಭುಜನಾ (ವೃಷವಿ. ೧೨-೪೩). [ಅಲರ್$_2$ + ಪಡೆ$_1$]

**ಅಲರ್ವಸೆ,** ಅರಲ್ವಸೆ (ನಾ). **೧.** ಹೂವಿನ ಹಸೆಮಣೆ ; ಪುಷ್ಪಪೀಠ : ಆ ಮಂಟಪದೊಳಲರ್ವಸೆಯೊಳ್ ಪಸದನಂಗೊಂಡು ಕುಳ್ಳಿರ್ದು (ರಾಜಶೇ. ೬-೧೪ ವ). **೨.** ಹೂವಿನ ಹಾಸಿಗೆ : ಎಸೆವಲರ್ವಸೆಯಿಂ ಕಾಂತೆಯಿಂ ತಾನುಮೆೞ್ದೊಳ್ (ಕಾದಂಉ. ೨೩೪) ; ಅಲರ್ವಸೆಯೊತ್ತೆ ಪತ್ತಿದೆಸಳಿಂದೆಸೆವಂಗದ ಗಂಧೆ ಗಂಧಶೀತಲಜಲಬಿಂದುಗಳ್... ಉತ್ಪಲವಲಯಂಗಳೀಂ ನೆಱೆಯೆ ಪೇೞ್ವುದೊ ತಚ್ಛಿಶಿರೋಪಚಾರಮಂ (ಲೀಲಾವ. ೪-೧೫೮). **ಅರಲ್ವಸೆ : ೨.** ಮಿಸುನಿಮಂಚದರಲ್ವಸೆ ಕೀರಶಾರಿಕಾವ್ರಾತ ಕಳಸ್ವನಾದಿಗಳಿನೊಪ್ಪುಗುಮಂತದು ವೈಷ್ಣವಾಗ್ರಣೀ (ದಿವ್ಯಚ. ೬-೪೧). [ಅಲರ್$_2$+ ಪಸೆ$_1$]

**ಅಲರ್ವಳೆ** 'ಅಲರ್ಮುಟಿ' ನೋ.

**ಅಲರ್ವಳ್ಳಿ** (ನಾ). ಹೂವಿನ ಬಳ್ಳಿ ; ಪುಷ್ಪಲತೆ : ನಿರ್ಮಲ ಪುಳಿನತಳದಿಂ ತೊಡರ್ದಡರ್ದಲರ್ವಳ್ಳಿಗಳ ಮಂಟಪಂಗಳಿಂ (ಜೈಮಿಭಾ. ೨೯-೪೫). [ಅಲರ್$_2$ + ಬಳ್ಳಿ]

**ಅಲರ್ವಟಿ** 'ಅಲರ್ಮುಟಿ' ನೋ.

**ಅಲರ್ವಾಸು,** ಅರಲ್ವಾಸು, ಅರಳುವಾಸು, ಅರಳ್ವಾಸು (ನಾ). ಹೂವಿನ ಹಾಸಿಗೆ ; ಪುಷ್ಪಶಯ್ಯೆ : ಅಗರುವ ಮೆಚ್ಚು ಪಚ್ಚ ಸಿರಿಕಂಡದೊಳಗ್ಗಲಿಸಿತ್ತು ಸೂಡುಶಯ್ಯೆಗಳ ಬಿಯಕ್ಕೆ ಜೊಂಪದಲರ್ವಾಸುಗಳೊಳ್ ನೆಲಸಿತ್ತು (ಪಂಪಭಾ. ೫-೩೦) ; ತನುಮಧ್ಯೆಯರಲರ್ವಾಸಿನ ನನೆವಾಸಿನ ಮೇಲೆ ಪಾಸಿದರ್ ತನುತನುವಂ (ಮಲ್ಲಿಪು. ೩-೩೩) ; ಮಱಿದೊಱಗಿದ ಳಲರ್ವಾಸಿನೊಳಾಯಣೆವಕ್ಕಿಯೊಲೆಯ ಲಲಿತಾಂಗಿಯಗಲ್ದಿನಿಯನ ಬಯಸಿ (ಜಯಕಾ. ೪-೩೬). **ಅರಲ್ವಾಸು** (ಸ್ಯಾಂಡರ್). **ಅರಳುವಾಸು :** ಮಲ್ಲಿಗೆಯರಳುವಾಸಿನ ಮಂಚಕೆ ಕರಪಲ್ಲವವನು ಪಿಡಿದೆಳೆದು ನಿಲ್ಲದೆ ಕೆಡಹಿ (ಕಂಸವಿ. ೯-೧೮೬). **ಅರಳ್ವಾಸು** (ಕಲ್ಪದ್ರು). [ಅಲರ್$_2$ + ಪಾಸು$_2$]

**ಅಲರ್ವಿಜ್ಜಣ,** ಅಲರ್ವಿಜ್ಜಳ (ನಾ). ಹೂವಿನ ಗೊಂಚಲಿನಿಂದ ಮಾಡಿದ ಬೀಸಣಿಗೆ ; ಹೂವಿನ ಬೀಸಣಿಗೆ : ಅಲರ್ವಿಜ್ಜಣದೆ ತಣ್ಣೆಲರ ಸುಳಿವನೊದವಿಸುತ (ಪದ್ಮರಾ. ೮-೯೨). **ಅಲರ್ವಿಜ್ಜಳ :** ತಿಳಿನೀರ ನಂಗದಮೇಲೆ ತಳಿವುತ ತಳಿರಲರ್ವಿಜ್ಜಳದಿಂ ಬೀಸಿಕೊಳುತ ವಿರಹದೊಳಗಿರಲು (ಪ್ರಭಂಜ. ೪-೧೩). [ಅಲರ್$_2$ + ಬಿಜ್ಜಣ]

**ಅಲರ್ವಿಜ್ಜಣಿಗೆ** (ನಾ). = ಅಲರ್ವಿಜ್ಜಣ : ತಳಿರ್ವಾಸಿಕೆಯೊಳು ಮಲಗಿಪ ಪನ್ನೀರ್ಗಳ ತಳಿದಲರ್ವಿಜ್ಜಣಿಗೆಯಲಿ ಬೆಲೆವೆಣ್ಣು ಬೀಸಿಕೊಳುತಲಿ (ಸೌಂದಕಾ. ೪-೬೫). [ಅಲರ್$_2$ + ಬಿಜ್ಜಣಿಗೆ]

**ಅಲರ್ವಿಜ್ಜಳ** 'ಅಲರ್ವಿಜ್ಜಣ' ನೋ.

**ಅಲರ್ವಿಡಿ** (ಕ್ರಿ). ಹೂವನ್ನು (ಕೈಯಲ್ಲಿ) ಹಿಡಿ : ಮಲ್ಲಿಗೆಯಲರ್ವಿಡಿದು ಕೆಂಜಾದಿಯೆಂದೀವರ್ (ಜೈಮಿಭಾ. ೬-೧೮). [ಅಲರ್$_2$ + ಪಿಡಿ$_1$]

**ಅಲರ್ವಿಲ್,** ಅರಳ್ಬಿಲ್ಲು, ಅಲರುವಿಲ್, ಅಲರುವಿಲು (ನಾ). ಹೂವಿನ ಬಿಲ್ಲು : ನೃಪಸೌಂದರ್ಯಕ್ಕೆ ಮುಂದಿಟ್ಟು ತನ್ನಲರ್ವಿಲ್ಲಂ ನಿಜರಾಜಚಿಹ್ನಸಹಿತಂ . . . ಮನ್ಮಥನೃಪಂ ಕೊಟ್ಟಂ ಮಹೋತ್ಸಾಹದಿಂ (ಮಲ್ಲಿಪು. ೩-೩೦) ; ಓವೊ ನಿಟಿಲಾಗ್ನಿಯಿಂದಂ ಬೇವುದನಾನೆತ್ತ ಬಲ್ಲೆನಲರ್ವಿಲ್ಲರಸಾ (ಗಿರಿಕ. ೮-೬೧) ; ಅಲರ್ವಿಲ್ಲ ಜೀವೊಡೆಯ ರವವೆಂದು (ಪುಷ್ಪಪು. ೨-೩೯ ವ). **ಅರಳ್ಬಿಲ್ಲು** (ಸ್ಯಾಂಡರ್). **ಅಲರುವಿಲ್ :** ಅಲರುವಿಲ್ಲುಪ್ಪಬಾಣಗಳತಿ ಮೃದುವದಕಳುಕರು ಜನರೆಂದು (ಕಂಸವಿ. ೫-೬೪). **ಅಲರುವಿಲು :** 'ಅಲರುವಿಲುಗಾಱ' ಪರಾ. [ಅಲರ್$_2$ + ಬಿಲ್]

**ಅಲರ್ವಿಲ್ಲ,** ಅಲರುವಿಲ್ಲ (ನಾ). ಹೂವಿನ ಬಿಲ್ಲುಳ್ಳವನು ; ಮನ್ಮಥ : "ಅಲರ್ವಿಲ್ಲಂ . . . ಸ್ಮರಾರ್ಥದೊಳೆ" (ಕರ್ಣಾನಿ. ೮) ; "ಅಲರ್ವಿಲ್ಲನೆಂದು ಕಾಮಂ" (ಕವಿಕಂ. ೨೮) ; ಅಲರ್ವಿಲ್ಲನ ಶೋಭನ ಶಂಖದಂತಿರ್ದಗಳಮೆಸೆದುದು ಲಲಿತಾಂಗಿಯ (ತ್ರಿಭುತಿ. ೨೦-೫೬). **ಅಲರುವಿಲ್ಲ** (ಸ್ಯಾಂಡರ್).

ಅಲರ್ವಿಲ್ಲಬಲ್ಲಹ = ಹೂವಿನ ಬಿಲ್ಲಿಗೆ ಒಡೆಯನಾದವನು ; ಕಾಮ ; ಮನ್ಮಥ : ಶಿವಾಲಯಕೆ ನಡೆತಂದು ಕಂಡಳಲರ್ವಿಲ್ಲಬಲ್ಲಹನ ಕಡುಚೆಲ್ವ ಮಱಿಗೆಯ್ವ ನಂಬ್ಯಣ್ಣನ (ಸೌಂದಪು. ೧೩-೩೧). [ಅಲರ್ವಿಲ್ + -ಅ$_7$]

**ಅಲರ್ಪುಡಿ** (ನಾ). ಹೂವಿನ ಧೂಳಿ ; ಪುಷ್ಪಪರಾಗ : "ಅಲರ್ಪುಡಿಯೆ ಪರಾಗ" (ಕವಿಕಂ. ೯೮) ; ಸುರಗಿ ಸಂಪಗೆ ಸುರಹೊನ್ನೆಗಳಲರ್ಪುಡಿವೆರಸಿನಲವಿನಿಂದ ಪರಿವ ಪರಿಕಾಲ್ಗಳ ಪೊನಲಲ್ಲಿ ಕುಂಕುಮರಸದಿರವಿನಂತಿಹುದು ನೋಳ್ಪರಿಗೆ (ಕುರಾಸಾಂ. ೨-೨೫) ; ಅಲರ್ಪುಡಿಯಿಂ ಪೊರೆದ ಪರಮೆವಱಿಯಂ ಕೋಕದೆಳಬಿಟ್ಟುಗೆತ್ತು ಕರ್ದುಂಕಲೆಂದವ್ವಳಿಸುವ ಬಾಲಹಂಸಂಗಳಿಂ (ರಾಮಾಶ್ವ. ೫೨-೨೭). [ಅಲರ್$_2$ + ಪುಡಿ]

**ಅಲರ್ಪೊಕ್ಕುಳ** (ನಾ). ಹೂವನ್ನು ಹೊಕ್ಕುಳಲ್ಲಿ ಉಳ್ಳವನು ; ವಿಷ್ಣು : "ಅಲರ್ಪೊಕ್ಕುಳಂ ನಾಡೆ ತಾವರೆಗಣ್ಣ" (ಶಬ್ದಮಂ. ೭). [ಅಲರ್$_2$ + ಪೊಕ್ಕುಳ್ (< ಪೊರ್ಕುೞ್) + -ಅ$_7$]

**ಅಲರ್ಪೊಡೆಯ,** ಅರಲ್ಪೊಡೆಯ, ಅರಲ್ವೊಡೆಯ, ಅಲರ್ಪೊಡೆಯ (ನಾ). ಹೊಟ್ಟೆಯಲ್ಲಿ (ಹೊಕ್ಕುಳಲ್ಲಿ) ಹೂವನ್ನುಳ್ಳವನು ; ವಿಷ್ಣು : ಅಲರ್ಪೊಡೆಯನೊಳಂಬುಜಪುತ್ರನೊಳ್ಪೆದಲೆಯಂ ಪಿರಿದನುರಾಗಂ ಮಾಳ್ಪಂತೆ (ಜಯಕಾ. ೨-೭೨) ; ಅಲರ್ಪೊಡೆಯಂಗೆ ನಡೆದಾಣಮುಂ (ರಾಮಾಶ್ವ. ೭-೪). **ಅರಲ್ಪೊಡೆಯ** (ಕ). **ಅರಲ್ವೊಡೆಯ :** "ಅರಲ್ವೊಡೆಯಂ . . . ಶಾವನಯ್ಯಂ - ಈ ೧೨ ವಿಷ್ಣುಗೆ ಪೆಸರ್" (ಕಶಸಾ. ೧-೯). **ಅಲಪೊರ್ಡೆಯ** (ಕ). [ಅಲರ್$_2$ + ಪೊಡೆ$_2$ + -ಅ$_7$]

**ಅಲರ್ಪೋಗು** (ಕ್ರಿ). ಹೂವುಬಿಡು : ಸಿಸಿರಮನೆ ಪಿಡಿದು ಪರಕೆಗೆ ಬಸಂತನಲರ್ಪೋದ ಮಾವಿನಡಿಮಂಚಿಕೆಯೊಳ್ ಕುಸುರಿದಱಿದಡಗಿನಂತೆ ಪೊಲೆಸೆದುವು ತದ್ವನದೊಳುದಿರ್ದ ಮುತ್ತದ ಮುಗುಳ್ಗಳ್ (ಯಶೋಚ. ೧-೩೭). [ಅಲರ್$_2$ + ಪೋಗು$_1$]

**ಅಲರ್ಸುಪ್ಪತ್ತಿಗೆ** (ನಾ). ಹೂವಿನ ಮೆತ್ತೆ ; ಹೂವಿನ ಹಾಸಿಗೆ : ದಪ್ಪಕ ರತಿಯ ವಸಂತಕೇಳಿಯ ಚಿತ್ರವಿಪ್ಪುದ ನೋಡಿ ಸಂತಸದಿ ಚಪ್ಪರಮಂಚದ ಮೇಲೆ ಕುಂಕುಮದಲರ್ಸುಪ್ಪತ್ತಿಗೆಯಲಿ ಮಂಡಿಸಿದ (ಮೋಹತ. ೨೨-೧೨). [ಅಲರ್$_2$ + ಸುಪ್ಪತ್ತಿಗೆ]

**ಅಲಲ** (ಅ). ಆಶ್ಚರ್ಯವನ್ನು ಸೂಚಿಸುವ ಅವ್ಯಯ : ಅಲಲ ಬಿಲದೊಳಗಿಂದೆ ಹುಲಿಗಳು ಮುಳಿದು ರಾಜನಮೇಲೆ ರಭಸದೆ ಚಲಿಸಿ ಬರಲು (ರಘುವಂ. ೯೭). [**ಸಂ.** ಅಲಲೆ]

**ಅಲವಣ** (ನಾ). ಹಸಿಶುಂಠಿಯ ಮೇಲಣ ಸುಂಕ : ಪೇ[ಪೆ]ರಿಯಾ ಒಸಗೆಯುಂ ಅಲವಣವುಂ ಅಪುತ್ರಕ ಪೊರಳುಮಾನ್ ವಿಟ್ಟಾರ್ (ಇಆ. XIX, ೧೪೪-೫ ; 680). [ಅಲ್$_0$ (< ಅಲ್ಲ$_1$) + ಪಣ]

**ಅಲವತ್ತು** 'ಅಲವಟು' ಪರಾ.

**ಅಲವರಿಕೆ,** ಅಲವಲಿಕೆ (ನಾ). ೧. ಆಯಾಸ; ಕ್ಲೇಶ; ತೊಂದರೆ: ಇರುಳೊಳು ಅಲವರಿಕೆಯಿಲ್ಲದೊಂದೆರಡು ಜಾವಂ . . . ನಾಮಿ ವರ್ಗ ರೊಲಿದು ವಿಹರಣೆಗೆಯ್ಯಲೇನಾನುಮೊಂದು ಬಿಸವಂದಮಂ ಕಾಣಬಹುದು (ಸಮ್ಯಕೌ. ೨–೧೦೦); ನೀನು ಬಾಳ್ವನ್ನೆವರಮಲವರಿಕೆಯಿಲ್ಲದೇ ಉಣ್ಬನಿತ ನೀವೆನೆನೆ (ಸಮ್ಯಕೌ. ೬–೭). ೨. ಆಸೆ; ಬಯಕೆ; ಅತಿಯಾಸೆ: ಕಲುಷಾಂಧರ್ ಸುರತರು ಸಂಕುಲಮೆಮ್ಮವು ತಮ್ಮವೆಂದು ತಮ್ಮೊಳ ಗಾರ್ಯರ್ ತಲೆಯೊತ್ತಿ ಕುಟ್ಟಿ ಪೊಯ್ವವರಲವರಿಕೆಯೊಳಾದತೋಟಿಯಂ ತೊಲಗಿಸಿದಂ (ಪಂರಾಮಾ. ೧–೭೫). "ಪಟ್ಟುಹಿಡಿತ" (ಪಂರಾಮಾ. ಕೋಶ); ವಿಟತನದಲವರಿಕೆಯಲಿ ವಿಷಯಲಂಪಟತನದ ತವಕದಲಿ ಇಳೆಯ ಋಳರಋಳ ಹೋಗೆಂದುಲಿದು (ತೊರರಾ. ೬–೨೨–೨೪). **ಅಲವಲಿಕೆ**: ೨. (ಸ್ಯಾಂಡರ್). [ಅಲವರು (< ಅಲವಱು) + –ಇಕೆ]

**ಅಲವರಿಸು,** ಅಲವಲಿಸು (ಕ್ರಿ). ಆಸೆಪಡು; ಹಾತೊರೆ; ಆಸಕ್ತಿಯನ್ನು ಹೊಂದು: ಚೀಟಗನಿತು ಬೇಟಮಾದೊಡಂ ಮನವಾವೆಡೆಗ ಮೆಯ್ದುದೆಂದಲವರಿಸುವ ಕಡುವೇಟಗಾರ್ತಿಯ ಕಾತರಿಕೆಯಂ ಕಳೆಯಲ್ಪಡೆದೆವು (ಅರ್ಥನೇ. ೫–೨ ವ); ಅಲವರಿಸಿ ನೋಡಿದಳ್ ಕೋಮಲೆ ಕಣ್ಣೊಳ್ ಮೂಱು ವರ್ಣಮೆಸೆದಿರೆ ಕರ್ನೆಯ್ದಿಲ ಕಿಸುನೆಯ್ದಿಲ ಬೆಳ್ನೆಯ್ದಿಲ ಪೂವಿಂ ಮೋದುವಂತೆ ಚಂದ್ರೋದಯಮಂ (ಲೀಲಾವ. ೧೦–೪೬); ಲೋಧ್ರಲತಾಂತ ಸೌರಭಕ್ಕಲವರಿಸಿತ್ತು ಮತ್ತಮಧುಪಾಳಿ (ಜಗವಿ. ೧೪–೭); ಅಲವರಿಸಿ ಮಸಗಿ ಪರಿಪರಿದಲಸದೆ ತಿರಿದೆಜಗಿ ಪೆಣನದಂ ತಿಂದು ಕರಂ ನಲಿನಲಿದು ತನ್ನೊಳುಂ . . . ನುಡಿವ ಪೈಶಾಚಕರಿಂ (ಬಂಹರಿ. ೨–೧೫). **ಅಲವಲಿಸು**: ನಳಿನಿಯ ಬಿರಿಮುಗುಳೊಳ್ಪಾಯ್ದಳಿ ಕಳಭಂ ಬೆಂಡು ನೆಗೆದು ಬಂಡುಣ್ಬವೊಲಂದಲೆದಲೆದಲವಲಿಸಿ ಯಶೋದೆಯ ಮೊಲೆಯುಂಡಂ ನವ ತಮಾಲಕೃಷ್ಣಂ ಕೃಷ್ಣಂ (ಅರ್ಥನೇ. ೭–೫೫).
[ಅಲವರು (< ಅಲವಱು) + –ಇಸು₃]

**ಅಲವರು** 'ಅಲವಱು' ನೋ.

**ಅಲವಲಿಕೆ** 'ಅಲವರಿಕೆ' ನೋ.

**ಅಲವಲಿಸು** 'ಅಲವರಿಸು' ನೋ.

**ಅಲವಱು,** ಅಲವರು (ಕ್ರಿ). ೧. ಆಯಾಸಪಡು; ಸಂಕಟಪಡು; ತೊಂದರೆಗೆ ಒಳಗಾಗು; ದುಃಖಪಡು: ಅಲವತ್ತು (ಭೂತಕೃ): ಹಗಲಿರುಳದೆನ್ನದೇ ನಿನ್ನ ಹುಟ್ಟಿದೂರ್ ಮೊದಲಿಲ್ಲಿತನಕೊಱಲಿ ಕರೆದು ಕರೆದಲವತ್ತು ಹಂಬಲಿಸುತ (ಸಿದ್ಧರಾ. ೨–೫೪); ತನ್ನನಲವತ್ತಱಸಿ ಕಂಡು ಕೊಂಡುಯ್ವ ತವಕನ್ನಿಮಿತ್ತಂ ಬಪ್ಪ ಬೊಮ್ಮಯ್ಯನಂ ಕಂಡು (ಸಿದ್ಧರಾ. ೩–೨೮); ಕೊಲಲಾಗದು ಪುಸಿಯಾಗದು ಕಳಲಾಗದು ಪೆಜರ ಪೆಂಡಿರೊಳ್ ತನ್ನ ಮನಂ ಸಲಲಾಗದು ತೀರದುದಕ್ಕಲವಱಲಾಗದು (ಯಶೋಚ. ೪–೩೧); ಮಲಮಲ ಮಱುಗಿ ಕಂದಿ ಬಿಸುಸುಯ್ದಲವತ್ತು ಜಜ್ಜನೆ ಜರಿದು (ರಾಮವಿ. ೬–೪೦). ೨. ಆಸೆಪಡು; ಹಂಬಲಿಸು: ಹಲವು ಲಿಂಗದೊಳು ಹೊಲಬುಗೆಡುವರಂ[ರುಂ] ಹಲವು ಪ್ರಸಾದಕೆ ಅಲವಱುತಿಹರಂ[ರುಂ] ಎಂತಱಿವರು ನಿಜವನು (ದೀಕ್ಷಾಬೋ. ೧೨೪–೧೦); ಬಿಡು ಸೆಱಗನೆಂದೂಟ ಕಲವಱುವ ಮಕ್ಕಳಂ ಜಡಿದು (ರಾಘಚ. ೧೬–೪೬); ಆವೊನುಂ ಹೆಬ್ಬಯಕೆಗಲವತ್ತು, ಮಿತಿಮೀರಿ, ಕಯ್ಗೆ ಬಾರದ ಗುರಿಗೆ ಕಟ್ಟೊಲ್ಮೆಯನ್ ತೆತ್ತು, ಕಳೆಯಬಾರದು ದೇವರಿತ್ತೊಂದು ಭಾಗ್ಯವನ್ (ಪಾರಸಿ. ೭೧೦). 'ಅಲವರಿಕೆ' ಪರಾ. ೩. ಕಷ್ಟಪಡು: ಚಿತ್ತದೊಳು ಕೋಪಿಸುತ ನಾನಲವೊ[ವ]ತ್ತು ಮಾಡಿ ದದೇಗುಲವನೀವುತ್ತಮಾರ್ಜನೆಗಳನಳಿದು ಹೋದಪುದಧಿಕಕರ್ಮಿ (ಬಸಪು. ೧೭–೪೨). **ಅಲವರು**: ೧. ಮೀನಾಕ್ಷಮ್ಮನವರು ರಾಮುವಿಗೋಸ್ಕರ ಅಲೆ[ಲ]ವತ್ತುಕೊಂಡು ಹಣ್ಣಾಗಿ ಹೋಗಿದ್ದರು (ಸಂಧ್ಯಾರಾ. ೭೦); ಅತ್ತೆಯಮ್ಮ, ಯಾಕೆ ಅಲವತ್ತು[ತ್ತಿ]ಕೊಳ್ಳುತ್ತೀರಿ? ನನ್ನಿಂದ ಏನಾದರೂ ತಪ್ಪು ನಡೆದಿದ್ದರೆ ಕ್ಷಮಿಸಿದಲ್ಲಿ ನನಗೆ ತಕ್ಕ ಶಿಕ್ಷೆಮಾಡಿದಂತಾಯಿತು (ಅದೂಟ. ೯೩).
[ದೇ. ‖ ತಮಿ. ತೆಲು. ಅಲಮರು]

**ಅಲವಾನ** (ನಾ). ಒಂದು ಜಾತಿಯ ಕೆಂಪು ಬಟ್ಟೆ: ಇಕಾ ರಮಾ ಕಕ್ಕಿಗೆ ಎರಡ ಅಲವಾನ ತರಲಿಕ್ಕೆ ಹೇಳು ಗಿರಿಜಾಗ (ದೀಪಹ. ೨೭೯).
[← ಅರ. ಅಲವನ್; ಮರಾ. ಅಲವಾನ್]

**ಅಲವಾಲ** (ನಾ). = ಆಲವಾಲ. [ಸಂ.]

**ಅಲಸ** (ನಾ). ೧. ಸೋಮಾರಿ; ಆಲಸ್ಯವುಳ್ಳವನು: ಅಲಸರಪ್ಪವರ್ ತಮ್ಮಮೆಯ್ಯ ಸುಖಕ್ಕೆ ಪಾಪಹೇತುಗಳಪ್ಪ ಕುಧರ್ಮಮಂ ಪೇಱ್ದುಪೆಜರಂ ಮರುಳ್ಮಾಡಿ ಧರ್ಮಮೆಂದು ನೆಗೞಿಸುವರ್ (ಧರ್ಮಾಮ್ಮ. ೪–೩೪); ಪತಿಕಾರ್ಯದವಸರಂಸಂಭವಿಸಿತೀಗಲಸನಾಗಿರ್ದೊಡೆ(ವೆಂಕಾರಾ.೫–೨–೪೩). ೨. ಸೋಮಾರಿತನ; ಆಲಸ್ಯ; ದಣಿವು: ಬೆಳ್ಪೆಳಗಾನನ ಚಂದ್ರಬಿಂಬದೊಳ್ ಜನಿಯಿಸೆ . . . ಬಿಣ್ಪುಗೊಂಡಲಸಮಾ ನಿಜನಿರ್ಮಳ ಚಿತ್ತವೃತ್ತಿಯೊಳ್ (ಕುಸುಮಾ. ೧೨–೨೫); ನೂರ ನಿಜವಾಗಿ ನಿಸ್ತಬ್ಧಳಾದಳು. ಭಯ ಅಲಸ ಎದೆಯಲ್ಲಿ ತೋರಹತ್ತಿದುವು (ಸೂರಜ. ೩೫). [ಸಂ.]

**ಅಲಸಂದಿ** 'ಅಲಸಂದೆ' ನೋ.

**ಅಲಸಂದಿಗೆ** (ನಾ). = ಅಲಸಂದೆ: "ಕುಲ್ಮಾಷಃ . . . ಅಲಸಂದಿಗೆ ಕಾಳು, ಕಾಡುವುದ್ದಿಗೂ ಹೆಸರು" (ಸಿದ್ಧಾಂತಿ. ೨೩೯). [?]

**ಅಲಸಂದೆ,** ಅಲಸಂದಿ, ಅಳಸಂದೆ (ನಾ). ತಡಗುಣಿಯಂತಹ ಒಂದು ಬಗೆಯ ದ್ವಿದಳಧಾನ್ಯ; ಕುಲ್ಮಾಷ; ರಾಜಮಾಷ: "ಅಲಸಂದೆ ರಾಜಮಾಷಂ" (ವಸ್ತುಕೋ. ೧೬–೧೮); "ಸುಧಿಯಲಸಂದೆ" (ಮಂಗರಾ. ೧೧೦–೫); ಬಾಗಿದ ಅನ್ನ, ಪಾಯಸ, ಉದ್ದಿನ ತೋಯೆ, ಅಲಸಂದೆಯ ಗುಗ್ಗರಿ, ಕಬ್ಬಿನರಸ . . . ಯಿಾ ಬಲಿಯಂ ನಿವಾಳಿಸಿ (ಬಾಲಚಿ. ೧೨೬–೧೩). **ಅಲಸಂದಿ** (೩). **ಅಳಸಂದೆ**: ಆ ಸತಿಯರೊಮ್ಮೊಮ್ಮೆ ಚೆಂದಳಿರ್ಗೈಗಳಿಂ ಕುಸುಬೆಯಂ ಪಿಡಿಯೊಳಿರಿಸಿ ಮೋಸಮುಲ್ಲಳಸಂದೆಯೆಂಬರ್ (ಪರಶು. ೪–೨೬). [ದೇ. ‖ ತೆಲು. ಅಲಚಂದಲು, ಅಲಸಂದಲು, ಅಲಸಂದಿಯಲು]

**ಅಲಸಂಬೆಱು** (ಕ್ರಿ). ಆಯಾಸಗೊಳ್ಳು; ದಣಿ; ಬಳಲು: ಕೆಚ್ಚಲ ಕೊರ್ಬು . . . ನುರ್ಗೊತ್ತಿಯುಂ ಕಾಲಗಲ್ದಲಸಂಬೆತ್ತಿರೆ ಪೋಗದಂತು ನಡೆಯಂ ಮಾಣ್ದಂತು ಮೆಲ್ಕೊತ್ತುತುಂ ಸಲೆ ವಿಭ್ರಾಜಿಸುತ್ತಿರ್ಪುದಾ ವಿಷಯದೊಳ್ ಧೇನುವ್ರಜಂ (ಕುಸುಮಾ. ೨–೪೮). [ಅಲಸ + ಪೆಱು]

**ಅಲಸಕ** (ನಾ). = ಅಲಸ (೩). [ಸಂ.]

**ಅಲಸಗಮನೆ** (ನಾ). ನಿಧಾನವಾಗಿ ನಡೆಯುವವಳು: ಆರಯೆ ದುರ್ಘಟವೆನ್ನ ಮನೋರಥಮೆಂದಲಸಗಮನೆ ಮನದೊಳ್ ಪಿರಿದುಂ ದೂರಿಸಲದೇಕೆ (ಚಂದ್ರಪು. ೩–೬೭). [ಸಂ. ಅಲಸಗಮನಾ]

**ಅಲಸಗಾಮಿ** (ಗು). ನಿಧಾನವಾಗಿ ಚಲಿಸುವ; ಮಂದಗಾಮಿಯಾದ: ಅಲಸಗಾಮಿಯಾದ ನೆಕ್ಲುದೋವನ ಕುದುರೆ ತಂಡದೊಡನೆ ಏಗುತ್ತಿರಲಿಲ್ಲ (ಪುನರು. ೪೩೮). [ಸಂ. ಅಲಸಗಾಮಿನ್]

**ಅಲಸಗಾಮಿನಿ** (ನಾ). = ಅಲಸಗಮನೆ: ಘನಕುಚಭಾರಾಲಸಗಾಮಿನಿ ಗರ್ಭಂ ಬಳೆಯೆವಳೆಯೆ ನಸುಜೋಲ್ಪು ಬಟಿಲ್ದು (ಸುಕುಮಾ. ೧೦–೧೧).
[ಸಂ. ಅಲಸಗಾಮಿನೀ]

**ಅಲಸಟೆ** (ನಾ). ದಣಿವು; ಆಯಾಸ; ಹಿಂಸೆ; ಕಾಟ (೩). 'ಅಲಪಟೆ' ಪರಾ. [← ತೆಲು. ಅಲಸಟ]

**ಅಲಸತೆ** (ನಾ). ಆಲಸ್ಯ; ಸೋಮಾರಿತನ: ನೆಲಸಲಲಸತೆ ನಡೆಯೊಳ್ (ಕುರಾಸಾಂ. ೮–೪೦); ಬರೆಯಲು ಶಕ್ತರಾದ ಕೆಲವರಲ್ಲಿರುವ ಅಲಸತೆಯೂ (ಕಸಾಪ. ೧–೫೨). [ಸಂ. ಅಲಸತಾ]

**ಅಲಸತ್ವ** (ನಾ). = ಅಲಸತೆ (೩). [ಸಂ.]

**ಅಲಸಪ್ರವೃತ್ತಿ** (ನಾ). ಸೋಮಾರಿತನ; ಆಲಸ್ಯದಿಂದ ಕೂಡಿರುವಿಕೆ: ಸಾಮಾನ್ಯವಾಗಿ ಸೈನಿಕಜೀವನ ಮನುಷ್ಯನನ್ನು . . . ಅಲಸ ಪ್ರವೃತ್ತಿಗೆ ಪ್ರೇರೇಪಿಸುತ್ತದೆ (ಪುನರು. ೬೨). [ಅಲಸ + ಪ್ರವೃತ್ತಿ]

**ಅಲಸಭಾವ** (ನಾ). ಆಲಸ್ಯ: ಮದಗಜಗಾಮಿನಿ ಕಾಮಿನಿ ಬಂದಳು ಲೀಲೆಯಿಂದಲಸಭಾವದೊಳು (ಇಂಚಾಪ. ೯೮–೮೦). [ಅಲಸ + ಭಾವ]

**ಅಲಸಯಾನ**(ನಾ). ನಿಧಾನವಾಗಿ ನಡೆಯುವುದು; ಮಂದಗಮನ: ಸಾರ್ತಂದಳಂದುಪದೇಶಂಗುಡುವಂದದಿಂದಲಸಯಾನ ಪ್ರೌಢಿಯಿಂ ಹಂಸೆಗೆ (ಚಂದ್ರಪು. ೫–೧೧೪). [ಅಲಸ + ಯಾನ]

**ಅಲಸಾಟ** (ನಾ). ಅಲೆಯುವಿಕೆ; ಆಯಾಸ: ಬಹು ಅಲಸಾಟಬಿದ್ದು (ತತ್ವಚಿಂ. ೨೫೩–೮). [ಅಲಸು₃ + –ಆಟ₂]

**ಅಲಸಿ** (ನಾ). ಸೋಮಾರಿ; ಜಡಸ್ವಭಾವದವನು: ಜಾನಕಿಬಾಯವರ ತೋಟಗನು ಅಲಸಿ. ಆದರೆ ಹನುಮಂತನು ಪರೋಪಕಾರಬುದ್ಧಿಯವ (ಸಮುಜೀ. ೧೧ ಪೀ.). [ಅಲಸ + –ಇ₂]

**ಅಲಸಿಕೆ,** ಅಲಸಿಗೆ, ಅಲಸುಕೆ, ಅಲಸುಗೆ (ನಾ). ೧. ಆಯಾಸ; ದಣಿವು; ಬಳಲಿಕೆ: ಆಕೆಯ ಮಂದಗಮನಮುಂ ಪಗೆವರ ಮನಂಗಳು ಮೊಡನೊಡನಲಸಿಕೆಯಂ ಕೈಕೊಂಡುವು (ಪಂಪಭಾ. ೧–೧೪೧ ವ); ಅಲಸಿಕೆಯಾಗಳುಂ ಕೆಳದಿಯಂತಿರೆ ಪೊರ್ದಿದುದು (ಬಾಧಪು. ೪–೩೯); ಆಗುಳಿಕೆಯಲಿ ಸೀನಿನಲಿ ನಡೆವಾಗ ನುಡಿವಾಗಲಸಿಕೆಗಳಲಿ . . . ರಘುಕುಲ ಸಾಗರನ ನೆನಹಲ್ಲದಿಲ್ಲನ್ಯತ್ರ ವೀ ಸತಿಗೆ (ತೊರರಾ. ೫–೩–೪೪); ಇಂದಿಗೋಲಗ ಸಾಕು ದಕ್ಷಿಣನಾಯಕ ಬಂದಲಸಿಕೆಯ ಹಿಂಗಿಸಲಿ (ಭರಹ. ೪೭–೧೨೨). ೨. ಆಲಸ್ಯ; ನಿಧಾನ; ಸಾವಕಾಶ: ಅಲಸಿಕೆ ಮೆಯ್ಯಾದುದು ಕಣ್ಮಲರ್ಮುರಲ್ದೆಸೆದುವೊದವಿತಾಗುಳಿಕೆ ಶತಂ . . . ಕಾಂತೆಗಂದೆಳೆವಸಿಱೊಳ್ (ಕಾದಂಪೂ. ೩೮೧); ಜನನದ ನೆಲೆಯನಱಿಹಿದೊಡೊಪ್ಪುಗೊಂಬುದಲಸಿಕೆಯದೇಕೆ (ತೊರರಾ. ೧–೧೬–೨೬); ಸವಿನುಡಿಯನಾಶ್ರಯಿಸಿತಲಸಿಕೆ ವಿಶೇಷಮಾಂದ್ಯವನಾಂತುದೊಳ್ಪಡೆ (ಚಬಪು. ೪–೧೧). ೩. ಉದಾಸೀನತೆ; ಅಲಕ್ಷ್ಯ: ನೀನಲಸಿಕೆಯಿಲ್ಲದೆ ಮಾಡಿದಂ ಸಲೆ ಸಂಧೆಯವಂ ತಗುಳ್ಚದಂತೆ (ವಿಷ್ಣುಪು. ೧೦–೧೫೩); ಒಲಿದೋದಿಸಿ ಕೇಳಿ ತಿಳಿದೊಂದೆಡರು ಬಂದಲಿ ಜಱಿಯದೆ ತಿದ್ದಿ ಕೃತಿಯ ಅಲಸಿಕೆಮಾಡದೆ ರಚಿಸುವ ಸುಗುಣರ ಬಲಗೊಂಬೆ ನಾನನವರತ (ಜೀವಂಸಾಂ. ೨೦–೪೨). ೪. ನಿದ್ರೆ; ತೂಕಡಿಕೆ: "ತಂದ್ರಾ – ತಂದ್ರೀ = ಅಲಸಿಕೆ" (ನಾಚಿರಾ. ೬); ಅಲಸಿಕೆಯೊಳೈನೂಱು ಸಾವಿರ ನಳಿನಭವರಡೆಗೆಡೆವರೆಂಬಗ್ಗಳಿಕೆಯೆತ್ತಲು ಹುಲುಮನುಜ ನಾನೆತ್ತಲು (ಕುವ್ಯಾಭೀ. ೬–೩೯). **ಅಲಸಿಗೆ:** ೧. ಆತನ ಮೊಗವು ಅಲಸಿಗೆಯಿಂದ ಬೆಂದು ಬೇಗುದಿಗೊಂಡಂತೆ ತೋರುತ್ತಿದ್ದಿತು (ಶ್ರೀರಾಪ. ೩). **ಅಲಸುಕೆ:** ೨. 'ಅಲಸುಕೆಗಾಱ' ಪರಾ. **ಅಲಸುಗೆ:** ೧. "ಆಲಸ್ಯಕ–ಅಲಸುಗೆ" (ಶಮುದ. ೨೪೧ ಪ್ರಯೋ); ಪಸಿವುಂ ನೀರಡಿಕ್ಕೆಯುಂ ನಿದ್ದೆಯುಮಲಸುಗೆಯುಂ ಮಾಣ್ದುದೆಂಬಂದದಿಂ (ಪಾರ್ಶ್ವಪು. ೫–೧೧೨); ಎಡೆಬಿಡದ ಅಲಸುಗೆಗೆ ಬೇಸರಿಗೆ ನಿರುತ್ಸಾಹಕ್ಕೆ ಆಯಸಕ್ಕೆ ಸೆರೆಗಟ್ಟಿಕೊಂಡಿರಬೇಕು (ಬಿಟ್ಟಅ. ೧೪೪–೯).

ಅಲಸಿಕೆಯಾಗು = ದಣಿವಾಗು; ಆಯಾಸಗೊಳ್ಳು; ಬಳಲು: ಅತ್ರಿಋಷಿಗಳಿಗೆ ಒಂದು ದಿನ ದೇಹದಲ್ಲಿ ಅಲಸಿಕೆಯಾಯಿತು (ನೀತಿಚಿಂ. ೯–೧೬). [ಅಲಸು₃ + – ಇಕೆ. / ತುಳು. ಅಲಸಿಗೆ, ಅಲಸಲ್]

**ಅಲಸಿಕೆಗೊಳ್** (ಕ್ರಿ). ಆಲಸ್ಯಮಾಡು; ತಡಮಾಡು: ಒಲಿದು ಪತಿಯ ಮನದೊಲವನಾರೈದು ತಾನಲಸಿಕೆಗೊಳದನುಸರಿಸಿ ಕುಲಸತಿಯರ ಧರ್ಮ ಕೊನರಿಡೆ ನೇಹವ ನೆಲೆಗಾಣಿಸಿ ನೆಗಳುವುದು (ಹದಿಬ. ೩–೧೦). [ಅಲಸಿಕೆ + ಕೊಳ್₁]

**ಅಲಸಿಗ** (ನಾ). ಸೋಮಾರಿ: ಕೇಶವನು ಒಂದು ಅಲಸಿಗರ ಕೂಟವನ್ನು ನಿರ್ಮಿಸಿ ಅದಕ್ಕೆ ಮೇಲಧಿಕಾರಿಯಾದನು (ಸಮುಜೀ. ೨೪). [ಅಲಸು₃ + – ಇಗ]

**ಅಲಸಿಗೆ** 'ಅಲಸಿಕೆ' ನೋ.

**ಅಲಸಿಸು** (ಕ್ರಿ). ಆಯಾಸಪಡಿಸು; ದಣಿಸು: ಆತನ ಚಾಗಂ ಪೆರ್ಮಱಿ ಚಾತಕಪೋತಕಮನಲಸೆ ಕೊಳ್ವವೊಲರ್ಥಿವ್ರಾತಮನಲಸಿಸಿದುದು ಪೆರ್ಮಾಱಿನ ತೊಡವಿಂ ಮದಾಂಧಕರಿಯಿಂ ಹರಿಯಿಂ (ಶಾಂತಿಪು. ೯–೧೫೪). [ಅಲಸು₁ + –ಇಸು₃. / ತೆಲು. ಅಲಯಿಂಚು]

**ಅಲಸು**₁ (ಕ್ರಿ). ೧. ಆಯಾಸಗೊಳ್ಳು; ಬಳಲು: "ಅಲಸು – ಅಲಸ್ಯೇ" (ಶಮುಧಾ); ಅಂಜನಾಚಲದವೋಲ್ ಕಣ್ಗೊಪ್ಪಿ ಬರ್ಪಂಬುಜೋದರನಂ ಮೆಲ್ಲನೆ ನೋಡಿ ಮೆಯ್ಯಲಸಿದಂತೆಂತಾನುಮೆಟ್ಟಿರ್ದುರ್ (ಪಂಪಭಾ. ೯–೩೧); ಕಂದಿದೆಂ ಕುಂದಿದೆ ನಲಸಿದೆನಾಸತ್ತೆನಲ್ಲಾಡಿದೆಂ (ರಕ್ಷಾಶ. ೨೫); ಅಲಸುವ ಮೆಯ್ಯುಮಾ ಗುಳಿಸುವಾನನಮುಂ . . . ಅಪೂರ್ವಭಾವಮಂ ಅಲನೆಗೆ ತಂದುವಂದನು ದಿನಂ ಬಳೆಯುತ್ತಿರೆ ಗರ್ಭದರ್ಭಕಂ (ಪುಷ್ಪಪು. ೪–೧೫); ಮಾಡಿಪಂ, ಕೂಡಿಪಂ, ಅಲಪಂ, ಬೆಸಪಂ (ಶಬ್ದಾನು. ೫೧೫ ಪ್ರಯೋ). ೨. ತಡಮಾಡು; ಉದಾಸೀನಮಾಡು; ಅಲಕ್ಷ್ಯಮಾಡು: ಕುಲಜನೀತನೆ ಪಂಡಿತನೀತನುಜ್ವಲಯಶೋಧಿಕ ನೀತನೆ ತಿಬ್ಬಮೆಂದಲಸಿ ಪೇಟ್ವವಧಾರಣ ದೋಷಮಂ ನೆಲಸಲೀಯದಿರಿಂ ಕೃತಿನಾರಿಯೊಳ್ (ಕವಿರಾ. ೧–೧೩೯); ಆಕೆಯುಂ ವ್ಯಾಸಭಟ್ಟಾರಕನಲ್ಲಿಗೆ ಪೋಗಲಲಸಿ ತನ್ನ ಸೂಱಾಯ್ತೆಯಂ ತನ್ನವೊಲೆ ಕಯ್ಗೆಯ್ದು ಬರವಂ ಬೇಡಲಟ್ಟಿದೊಡೆ (ಪಂಪಭಾ. ೧–೮೫ವ); ಇಲಿಗಳ್ ಮನೆಯೊಳ್ ಪುಟ್ಟಿಯುಮಲಸದೆ ತವೆ ತೋಡಿ ಮನೆಗಳಂ ಕಿಡಿಸುವವೋಲ್ (ಪಂಚತಂ. ೧೦೬–೧೭); ಮುರಾಂತಕ ಸೂತತನಕಲಸಿದನೆ (ಕುವ್ಯಾದ್ರೋ. ೩–೬೨); ಹಳೆದಿನದ ತಾಯ್ತಂದೆಯರ ಬಿಡದಲಸದವರನು ಹೊತ್ತು ತೊಳಲಿದೆನಿಳೆಯೊಳುಳ್ಳ ಸಮಸ್ತ ತೀರ್ಥಕ್ಷೇತ್ರಗಿರಿವನವ (ತೊರರಾ. ೨–೫–೧೫); ನೀನಿಂದು ಅಲಸದೆ ನಾಣ್ಚದಂಜದೆಯಳುಕದೆ ಪೇಳು (ಹದಿಬ. ೧–೨೯). [ದೇ.॥ ತಮಿ. ಅಲಚು; ಮಲ. ಅಲ; ತುಳು. ಅಲಸು; ತೆಲು. ಅಲಂಚು. / ಸಂ. ಅಲಸ]

**ಅಲಸು**₂ (ಕ್ರಿ). ಜಾಲಾಡು; ನೀರಿನಲ್ಲಿ ಚೆನ್ನಾಗಿ ಅಲುಗಾಡಿಸು: ಈ ಬಟ್ಟೆಗಳನ್ನೆಲ್ಲಾ ನೀರಿನಲ್ಲಿ ಚೆನ್ನಾಗಿ ಅಲಸಿಕೊಂಡು ಬಾರಮ್ಮ (ದಕ–ಪ್ರಾದೇ). [< ಅಲಚು]

**ಅಲಸು**₃ (ನಾ). ೧. ಬಳಲಿಕೆ; ದಣಿವು: ನೆಲೆ ಚಲಿಸುವ ಸುರ್ಯ . . . ಅಲಸಾಱದ ಕಣ್ ಬೆಮರ್ವನಿಗಳ ಬೀಡೊಡೆಯದ ತೆಳ್ಪೊಡಲು (ಉದ್ಭದೇ. ೪–೧೮); ಸುರತದಲಸಂ ಪರಿಹರಿಸು (ಚಬಪು. ೧೦–೩೦); "ಆಲಸ್ಯ–ಅಲಸು" (ಶಬ್ದಾನು. ೧೬೦ ಪ್ರಯೋ). ೨. ಆಲಸ್ಯ; ಮೈಗಳ್ಳತನ: ಪಱಿವಱಿವಲಸೊಲಸು ಕುತ್ತಮಿಲ್ಲಾ ನಾಡೊಳ್ (ಶಬ್ದಾನು. ೧೪೦ ಪ್ರಯೋ). [< ಸಂ. ಆಲಸ್ಯ]

**ಅಲಸುಂಗಾಱ** 'ಅಲಸುಗಾಱ' ನೋ.

**ಅಲಸುಕೆ** 'ಅಲಸಿಕೆ' ನೋ.

**ಅಲಸುಕೆಗಾಱ,** ಅಲಸುಗೆಕಾಱ (ನಾ). ಸೋಮಾರಿ; ಜಡ: "ನಾಂಬಂ ಸೋಂಬನುಮೆನಲ್ಕಲಸುಕೆಗಾಱಂ" (ಕವಿಕಂ. ೧೫೫); **ಅಲಸುಗೆಕಾಱ:** "ಸೋಂಬನೆಂದುಂ ನಾಂಬನೆಂದುಂ ಅಲಸುಗೆಕಾಱಂ" (ಕಶಸಾ. ೧೮–೩೬೦). [ಅಲಸುಕೆ + –ಗಾಱ (< –ಕಾಱ)]

**ಅಲಸುಗಾಱ,** ಅಲಸುಂಗಾಱ (ನಾ). ಸೋಮಾರಿ; ಜಡ: "ಅಲಸ ಲೋಲ = ಅಲಸುಗಾಱ" (ನಾಚಿರಾ. ೬); "ಸೋಂಬ ನಾಂಬನೆನಲ್ಕಲಸುಗಾಱನು" (ಶಬ್ದಮಂ. ೪೮); ಅಲಸುಗಾಱಂಗೆ ದೋಷಮಂ ಪೇಟ್ಟು

ದುತ್ತರವಾಕ್ಯಂ, ಅಲಸಃ = ಅಲಸುಗಾಜಂ (ನೀತಿವಾ. ೯–೧೪೧) ; ಅಲಸುಗಾಜನುಂ ಸದಾ ವ್ಯಾಧಿಪೀಡಿತನುಂ (ಪಸಾರ. ೮೪೬–೧೫) ; ಅವಿರತಂ ಭುಜಿಸುತೆ ಬಳಿಕೆ ವ್ಯಡನಂ ನೆನೆದು . . . ಪಸರಿಪ ಅಲಸುಗಾಜರ ರಾಜಿಸುವ ಮಾನಸಾರ್ಚನೆಗಳಂ (ಅರಾಚ. ೨೧–೨೫). **ಅಲಸುಂಗಾಜಿ :** ಅಸಿತಂ ಕಡುನಿಡಿಯಂ ಸ್ನಾಯುಸಾರನನಿಲಾತಿರಕ್ತನಲಸುಂಗಾಜಂ . . . ರವಿಜಂ (ಜಾತತಿ. ೨–೨೬) ; ಪಾಡುಂಗಾಜಂ, ಅಲಸುಂಗಾಜಂ (ಶಮದ. ೨೦೦ ಪ್ರಯೋ). [ಅಲಸ್ಯು + –ಗಾಜ (< –ಕಾಜ)]

**ಅಲಸುಗೆ** 'ಅಲಸಿಕೆ' ನೋ.

**ಅಲಸುಗೆಕಾರ್ತಿ** (ನಾ). ಸೋಮಾರಿಯಾದ ಹೆಂಗಸು : ಹೊತ್ತು ಹೋಗದ . . . ಮುತ್ತ ಮುದುಕಿಯರಲಸುಗೆಕಾರ್ತಿಯರಿಗೆ ಅಪರಾಹ್ನ ಮಂತ್ರಣದ ಮಹಾಸಭೆಯಲ್ಲಿ . . . ಸಂತೃಪ್ತಿಯನೊಪ್ಪಿಸಲು (ಬೆ ಟ್ಟ ಅ. ೧೮೨–೧೫). [ಅಲಸುಗೆಕಾಜ + –ತಿ]

**ಅಲಸುಗೆಕಾಜ** 'ಅಲಸುಕೆಗಾಜ' ನೋ.

**ಅಲಸೇಂಗಿತ** (ನಾ). [ಕಾಮಶಾ] ಗಂಡನಿಗಿಂತ ಮುಂಚೆ ನಿದ್ದೆ ಹೋಗಿ ಗಂಡನು ನಿದ್ದೆಹೋದಮೇಲೆ ಎದ್ದು ವಿಹಾರಕ್ಕೆ ಹೋಗುವವಳು: ಪತಿಯಿಂ ಮುನ್ನಂ ನಿದ್ರಾಸ್ಥಿತೆಯಾಗಿರ್ದೋಪನೋಜಗಿದಿಂ ಬಟಿಕ ವಿನಿದ್ರಿತೆಯಾಗಿ ವಿಹರಿಸುವೊಡಾ ಸತಿಗಲಸೇಂಗಿತಮಿಮೆ[ದೆ]ಂದು ಬಗೆ ಮೃಗನಯನೇ (ಮದತಿ. ೧೧–೪೬). [ಸಂ.]

**ಅಲಹು** 'ಅಲಂಪು' ನೋ.

**ಅಲಜಿಸು** (ಕ್ರಿ). ಚದರಿಸು ; ನಾಶಮಾಡು : ಮನದಿಂ ನುಡಿಯಿಂ ತನುವಿಂದೆನಸುಂ ಮುನ್ನೆಜಪಿದಘಮನಲಜಿಪೆನೆಂಬೀ ಮನದಿಂದಮೊಸೆದು ಗೊಮ್ಮಟ ಜಿನನಂ ಸ್ತುತಿಯಿಸಿದನಿಂತು ಸುಜನೋತ್ತಂಸಂ (ಎಕ. II, ೨೩೪–೬೫ ; 1180). [ಅಲಜು + –ಇಸ್ಸು]

**ಅಲಜು** (ಕ್ರಿ). ಚದರು ; ಒಡೆ ; ಹಾಳಾಗು : ಶ್ರೀದುರಿತಾಭೂದ್ವೃಷಮಾನ್ಕೀಟ್ಟಲಜಿ ಪೊದೆದಜ್ಞಾನಶೈಲೇಂದ್ರಮಾನ್ ಪೋಟ್ಬುರ ಮಿಥ್ಯಾತ್ವ ಪ್ರಮೂಢಸ್ಥಿರತರ ನೃಪನಾನ್ ಮೆಟ್ಟ (ಎಕ. II, ೧೨–೧ ; 700) ; ಚಲಚಲದಾಂತು ಕಾದುವ ಸುಯೋಧನಸಾಧನದೊಡ್ಡುಗಳ್ ಕಟಿಲ್ದಲಜಿ ತೆರಳ್ಚು ತೂಳ್ದು ಬಿಜುತೋಡೆ (ಪಂಪಭಾ. ೧೧–೩೩).

[ದೇ. ‖ ತಮಿ. ಅಲಜು = ಚದರು ; ವಿಭಾಗವಾಗು]

**ಅಲಾ** 'ಅಲ್$_1$' ಪರಾ.

**ಅಲಾತ** (ನಾ). ಉರಿಯುತ್ತಿರುವ ಕಟ್ಟಿಗೆ ; ಕೊಳ್ಳಿ : "ಅಲಾತಂ, ಉಲ್ಮುಕಂ – ಈ ೨ ಕೊಳ್ಳಿ" (ಹಲಾಯು. ೧೨–೬೬). [ಸಂ.]

**ಅಲಾತಚಕ್ರ** (ನಾ). ಕೊಳ್ಳಿಯನ್ನು ವೇಗವಾಗಿ ತಿರುಗಿಸುವುದರಿಂದ ದುಂಡಗೆ ಕಾಣುವ ಚಕ್ರದಂತಹ ಆಕೃತಿ ; ಕೊಳ್ಳಿಯಿಂದ ಕಲ್ಪಿತವಾದ ವೃತ್ತಾಕಾರ : ಕೃಷ್ಣಂ ಗೆಲ್ದು ಪಿಂಗಾಲ್ಗಳಂ ಪಿಡಿದಾರ್ದೆತ್ತಿ ನಿಶಾಟನಂ ತಿರಿಪೆ ತದ್ಭ್ರಾಮ್ಯನ್ನಿಶಾಟಾಸ್ಯದಿಂ ಪೊಡರ್ದಸ್ರಾಂಬುವಲಾತಚಕ್ರಮೆನೆ ವೃತ್ತಾಕಾರದಿಂದುಣ್ಮಿತುಂ (ಜಗವಿ. ೬–೬೯) ; ದೀಪ್ತಿ ತಿರ್ರನೆ ತಿರುಗಿದುದಾ ಅಲಾತಚಕ್ರದ ತೆರದಿ (ಶ್ರೀರಾಮಾ. ೩೯೯–೧೦೦೬).

[ಅಲಾತ + ಚಕ್ರ]

**ಅಲಾತು** (ನಾ). ತಂತಿಗಳಿಂದ ಮಾಡಿದ ಹೊರಜಿ ; ಹುರಿ (ಕಿಸಂಗ್ಲಾ). [← ತುಳು. ಅಲಾತ, ಅಲಾದ್, ಅಲಾತ್]

**ಅಲಾಬಿ** (ನಾ). ಮೊಹರಂ ಹಬ್ಬ ; ಬಾಬಯ್ಯನ ಹಬ್ಬ.

**ಅಲಾಬಿಹಬ್ಬ** = ಮೊಹರಂ ಹಬ್ಬ ; ಬಾಬಯ್ಯನ ಹಬ್ಬ : ಒಂದು ಮಸೀದಿ ಇದೆ, ಹಾಗೆಂದಮೇಲೆ ಮೊಹರಂ ಇರಬೇಡವೇ? ಅಲಾಬಿಹಬ್ಬ ಆಗಬೇಡವೇ? (ಜಾರುವಾ. ೫೪). **ಅಲಾಬೀಹುಲಿ** = ಮೊಹರಂ ಹಬ್ಬದಲ್ಲಿ ಹುಲಿಯ ವೇಷವನ್ನು ಧರಿಸುವ ವ್ಯಕ್ತಿ ; ಬಾಬಯ್ಯನ ಹಬ್ಬದ ಹುಲಿ ವೇಷಧಾರಿ : ಈ ಅಲಾಬೀಹುಲಿಯನ್ನು ನೋಡಿ ಗದಿಗೆಯ್ಯನವರು ಮತ್ತಷ್ಟು ಕೆರಳಿದರು (ದೀಪಹ. ೫೬).

[← ಅರ. ಇಲಾಹಿ = ದೇವರು. / ತುಳು. ಅಲಾಬಿ, ಅಲಾಯಿ]

**ಅಲಾಬು** (ನಾ). ಸೋರೆ ಗಿಡ, —ಕಾಯಿ, —ಬುರುಡೆ : ಬಂಧುರ ರಸಗೇಯಮೆಂಬಮೃತಪೂರಮನೊಯ್ಯನಲಾಬುವಿಂದವೊತ್ತರಿಸುತು ಮಿರ್ದಳೀಕೆಯೆನೆ ಬಾಜಿಸಿದಳ್ ಪಜಿಳುನ್ನತಸ್ತನಾಂತರದೊಳಗೊಂಕಿ ವೀಣೆಯಂ (ಜಗವಿ. ೫–೧೮) ; ಕತಕ ಕಂದದ್ವಯಮಲಾಬು ಶಿಗ್ರ್ವಾದಿಗಳಹಿತಮೆನುತ ವರ್ಜಿಸುತ (ವೆಂಕಾರಾ. ೫–೨೧–೨೩). [ಸಂ.]

**ಅಲಾಬುವಲ್ಲಕಿ** (ನಾ). ಸೋರೆಯ ಬುರುಡೆಯಿಂದ ನಿರ್ಮಿಸಿದ ಒಂದು ಬಗೆಯ ತಂತ್ರೀವಾದ್ಯ : ಬಳಿಕ ವಿಪಂಚಿಕೆ . . . ಅಲಾಬು ವಲ್ಲಕಿ . . . ಕಾಲಕೀಯೆಂಬ ಮೂವತ್ತುಮೂಜು ತಂತ್ರೀವಾದ್ಯಂಗಳಲ್ಲಿ (ವಿವೇಕ. ೨೩೬). [ಅಲಾಬು + ವಲ್ಲಕಿ]

**ಅಲಾಬುಸ್ತನ** (ನಾ). ಸೋರೆಯ ಬುರುಡೆಯಂತಿರುವ ಸ್ತನ : ಪಿಸುಗಣ್ಣ ಕಿಸವಾಯ ವಕ್ರದಂತಂಗಳಿಂದೊಸರ್ವ ಶೋಣಿತ ಮಹೋದರಿಯಲಾಬುಸ್ತನಗರಸೆಯೊಳ್ (ವೆಂಕಾರಾ. ೬–೪೭–೭).

[ಅಲಾಬು + ಸ್ತನ]

**ಅಲಾಭ** (ನಾ). ೧. ಲಾಭವಿಲ್ಲದಿರುವುದು ; ಸಿಕ್ಕದಿರುವುದು. ೨. [ಜೈನ] ಚರಿಗೆಗೆ ಹೋದ ಜೈನಯತಿಗೆ ಯಾವ ಭಿಕ್ಷೆಯೂ ಸಿಕ್ಕದಿರುವುದು : ಸಂಸಾರ ನಿರ್ವೇಗಮಾಗೆಯಂದಿನ ದಿವಸಮುಲಾಭಂ ಮಾಡಿ [ಪಾಠಾಂ. ಮುಟ್ಟುಪಡಂಮಾಡಿ] ತನ್ಮಾವಾಸಕ್ಕೆ ಪೋದೊಡೆ ಭಟ್ಟಾರರೆಂದರ್ – ಏನಲಾಭಮಾದುದೆ (ವಡ್ಡಾರಾ. ೯–೨೧). [ಸಂ.]

**ಅಲಾಯಿದ** 'ಅಲಾಯಿದಾ' ನೋ.

**ಅಲಾಯಿದಾ, ಅಲಾಯಿದ** (ಅ). ಬೇರೆಯಾಗಿ ; ಪ್ರತ್ಯೇಕವಾಗಿ : ಅಲಾಯಿದಾ ಸಾಗವಳಿ ಆಗಿಯಿರುವ ಬಾಜೆಬಾಬುಗಳು ಸಹಾ (ಮೈಅರಿ. ೧೯೩೯, ೪೨–೯೭ ; 1825) ; ಎಲ್ಲಿ ಎಲ್ಲಿ ಪರಿಯಂತರಕ್ಕೂ ಅಲಾಯಿದಾ ಬಾಬು ಇದೆಯೋ ಅದು ಯಾವತ್ತೂ ಬಾಬಿಗೂ (ಮಹಾವಂ. I, ೬೬). **ಅಲಾಯಿದ :** ಖರ್ಚಿಗಾಗಿ ಅಲಾಯಿದಾ ಸ್ವಲ್ಪ ಹಣ ತೆಗೆದಿಡಿ (ರೂಢಿ).

[← ಅರ. ಅಲಾಹಿದಾ]

**ಅಲಾಲ್‌ಟೋಪಿ** (ನಾ). ಬೇಜವಾಬ್ದಾರಿಯ ವ್ಯಕ್ತಿ ; ಜವಾಬ್ದಾರಿಯಿಲ್ಲದ ಮನುಷ್ಯ : ಪ್ರಾಣಿಗಳಲ್ಲೆಲ್ಲಾ ಅಲಾಲ್‌ಟೋಪಿಗಳಂತೆ ಅಲೆಯುವುದರಲ್ಲಿ ಎತ್ತಿದ ಕೈಗಳು ಎನಿಸಿದ ಕತ್ತೆ ನಾಯಿಗಳೂ ಕೂಡ (ಸ್ವಾಮಿಸ್ನೇ. ೯೧).

[← ಹಿಂ. ಅಲಲ್‌ಟಪ್ಪೂ = ಅಸಂಬದ್ಧ, ಯದ್ವಾತದ್ವಾ]

**ಅಲಾಳನಾಥ** 'ಅಲ್ಲಾಳನಾಥ' ನೋ.

**ಅಲಿ$_1$** 'ಅಲ್ಲಿ' ನೋ.

**ಅಲಿ$_2$, ಅಳಿ$_5$** (ನಾ). ೧. ತುಂಬಿ ; ಭ್ರಮರ : ಅಲಿ [ಪಾಠಾಂ. ಅಳಿ] ಮಾಗೆಯಲ್ಲಿ ಮಲ್ಲಿಗೆಯಲರಂ ಪಡೆವಂತೆ ಭೂಪನಿರೆ ಕುರುಡಂ ಕಣ್ಮಲರಂ ಪಡೆದವೊಲೆಸೆದಂ (ಲೀಲಾವ. ೪–೧೬೨) ; ಅಲಿಗಳ ಸೋಂಕಿಂ ಪ್ರಾತರ್ಜಲರುಹಮಲರ್ವಂತೆ (ಜಗವಿ. ೩–೩೩). ೨. ಚೇಳು. ೩. ಕಾಗೆ. ೪. [ಜ್ಯೋತಿ] ವೃಶ್ಚಿಕರಾಶಿ. **ಅಳಿ$_5$ :** ೧. ಈ ಮುಗುಳೊಳಮಾಮಾಜ್ಕೆಯಿನಜಿಸಿ ಸುಜಿವುದಳಿ ಕೆಲಗೆಲದೊಳ್ (ಕವಿರಾ. ೩–೨೨೮) ; ಅಲರ್ದಂ ಭೋಜಕ್ಕೆ ಮೊಗಸಿದಳಿ ನೀರಾಜನ ಕುಸುಮವನೆ ಮುಸುಜಿ ಮೊಜೆಯುತ್ತಿರ್ಕುಂ (ಮಲ್ಲಿಪು. ೨–೬೬). [ಸಂ.]

**ಅಲಿಂಗ** (ಗು). ೧. ಯಾವ ಲಕ್ಷಣವೂ ಇಲ್ಲದ ; ಗುರುತಿಲ್ಲದ. ೨. [ವ್ಯಾಕ] ನಿರ್ದಿಷ್ಟವಾಗಿ ಯಾವ ಲಿಂಗವೂ ಇಲ್ಲದ. ಉದಾ— ಆನ್, ನೀನ್, ತಾನ್. [ಸಂ.]

**ಅಲಿಂಜರ,** ಅಲಂಜರ (ನಾ). ನೀರಿನ ಹರವಿ; ಗುಡಾಣ: "ಮಣಿಕಃ, ಅಲಿಂಜರಃ – ಈ ೨ ಕೇಲು" (ಹಲಾಯು. ೫೩–೧೫೨). **ಅಲಂಜರ** (೬). [ಸಂ.]

**ಅಲಿಂದ,** ಅಳಿಂದ (ನಾ). ಮನೆಯ ಹೊರಬಾಗಿಲಿನ ಮುಂದಿನ ಪಠಾರ; ಮೊಗಸಾಲೆ; "ಹೊರಬಾಗಿಲು" (ಗಂಗಾಮು). **ಅಳಿಂದ** (ಸ್ಯಾಂಡರ್). [ಸಂ.]

**ಅಲಿಂದಕ,** ಅಳಿಂದಕ (ನಾ). = ಅಲಿಂದ. **ಅಳಿಂದಕ:** "ಪ್ರಘಣಃ, ಪ್ರಘಾಣಃ, ಅಳಿಂದಕಃ – ಈ ೩ ಮೊಗಸಾಲೆ" (ಹಲಾಯು. ೫೦–೧೪೪). [ಸಂ.]

**ಅಲಿಕ,** ಅಳಿಕ$_2$ (ನಾ). ಹಣೆ; ನೆತ್ತಿ; ನೊಸಲು: "ಲಲಾಟಂ, ಅಲಿಕಂ– ಅಳೀಕಂ, ಹಣೆ, ಪಣೆ" (ಸಿದ್ಧಾಂತಿ. ೧೭೦); "ಲಲಾಟಂ, ಅಲಿಕಂ – ಈ ೨ ನೊಸಲ್" (ಹಲಾಯು. ೮೭–೩೭೧). **ಅಳಿಕ$_2$:** ಅಂತಾ ಫಣಿಕಾಂತೆ ಗಮುರಿ ಕಾಂತಾಳಿಕ ಫಳಕ ತಿಳಕ ಹರನೆನಿಪರಿಗಂಗಂ ತನಯನಧಿಕ ತೇಜೋವಂತನಿಳಾವಂತನಿಂದುಮಂಡಳಕಾಂತಂ (ಪಂ ಪ ಭಾ. ೪–೧೮); ಮಧ್ಯಸ್ಥಜನಕ್ಕಳಿಕದ ತಿಳಕದ ತೇಜದಿಂ (ಕೊಲ್ಹಾಶಾ. ೧೭–೨೯; 1196); ರಕ್ಷಿಸವೇಳ್ಕು ದಯದಿಂದ ಮಲಹರಾತ್ಮಕಾ ಎಂದು ಪಾದಾಂಬುಜಕ್ಕೆ ತನ್ನಳಿಕಮುಂ ಸಾರ್ಚಿ (ಗುರುಚಾ. ೩–೨). [ಸಂ.]

**ಅಲಿಕನೇತ್ರ,** ಅಳಿಕನೇತ್ರ (ನಾ). = ಅಲಿಕಲೋಚನ. **ಅಳಿಕನೇತ್ರ:** ಅಳಿಕನೇತ್ರನು ಪ್ರಮಥಲೋಕವನೊಲಿದು ನಂಬಿಗೆ ಸೂರೆಗೊಂಡನೇ (ಬಸವು. ೫೪–೭೩). [ಅಲಿಕ + ನೇತ್ರ]

**ಅಲಿಕಲೋಚನ,** ಅಳಿಕಲೋಚನ (ನಾ). ಹಣೆಗಣ್ಣ; ಶಿವ. **ಅಳಿಕಲೋಚನ:** ಅಳಿಕಲೋಚನನಾದೊಡಂ ಮಲಮೂತ್ರವಂ ಬಿಡುವ ನೆಲನದುಂಟೇ ಮೆಟ್ಟಲಹುದೇ (ಬಸವು. ೫೧–೪೧); ಅಳಿಕಲೋಚನ ನಿನ್ನ ಮೂರ್ತಿಯ . . . ನೋಳ್ಪ ಸುಖದಗ್ಗಳಿಕೆಯಿದ ನೀನೆನಗೆ ಪಾಲಿಸು (ಕೈಕವ. ೬೧–೩). [ಅಲಿಕ + ಲೋಚನ]

**ಅಲಿಕಾಕ್ಷ,** ಅಳಿಕಾಕ್ಷ (ನಾ). = ಅಲಿಕಲೋಚನ: "ಅಲಿಕಾಕ್ಷ = ಮಹಾದೇವ" (ಗುವಿಮೋ). **ಅಳಿಕಾಕ್ಷ** (೬). [ಸಂ. (ಅಲಿಕ + ಅಕ್ಷಿ + –)]

**ಅಲಿಕೀರನ್ಯಾಯ** (ನಾ). ದುಂಬಿಯನ್ನು ನೇರಳೆ ಹಣ್ಣೆಂದು ಗಿಳಿಯೂ, ಗಿಳಿಯ ಕೊಕ್ಕನ್ನು ಹೂವೆಂದು ದುಂಬಿಯೂ ಭ್ರಮಿಸಿ ಮೇಲೆರಗುವುದಕ್ಕೆ ಸಂಬಂಧಿಸಿದ ಒಂದು ನ್ಯಾಯ. [ಅಲಿ$_2$ + ಕೀರ$_2$ + ನ್ಯಾಯ]

**ಅಲಿಕುಂತಲೆ,** ಅಳಿಕುಂತಳೆ (ನಾ). ತುಂಬಿಯಂತೆ ಕಪ್ಪಾದ ತಲೆಗೂದಲುಳ್ಳವಳು. **ಅಳಿಕುಂತಳೆ:** ನಳಿನಾಕ್ಷಿಯೋಂಕಾರವೆಯ್ದೆ ಸರ್ವವನೊಲ್ದು ಬಳಸಿಹುದದಾಗಿನ್ನು ಬೇಜ ಮಂತ್ರಂಗಳಿಲ್ಲಳಿಕುಂತಳೆಯೆ (ವೀಶೈಪು. ೧–೫–೩೫). [ಸಂ. ಅಳಿಕುಂತಲಾ]

**ಅಲಿಕೇಕ್ಷಣ,** ಅಳಿಕೇಕ್ಷಣ (ನಾ). ೧. ಹಣೆಗಣ್ಣ ೨. ಹಣೆಯಲ್ಲಿ ಕಣ್ಣುಳ್ಳವನು; ಶಿವ. **ಅಳಿಕೇಕ್ಷಣ:** ಶಶಾಂಕಲೇಖಿ ಚೆಲ್ವಡರ್ದಳಿಕೇಕ್ಷಣಂ ನೊಸಲ ಸಿಂಧುರ ಬಟ್ಟಿನ ಪಾಂಗನಾಗಳೆ (ವೃಷವಿ. ೧೪–೨೯). [ಅಲಿಕ + ಈಕ್ಷಣ]

**ಅಲಿಖಿತ** (ಗು). ಲಿಖಿತವಲ್ಲದ; ಬಾಯಲ್ಲಿ ಹೇಳಿದ. [ಸಂ.]

**ಅಲಿಗಬೆ** (ನಾ). ಒಂದು ಹೆಸರು: ಅಲಿಗಬೆಯ ×× ಯ್ಯನು ಕುಪ್ಪಯ್ಯನು [ನೂ]ರ್ಗ್ಗವುಣ್ಣುಗೆಯೆ (ಎಕ. VIII, ಸೊರಬ. ೪೫೫–೪; 972). [ಅಲಿಗ$_0$ + ಅಬೆ (< ಅಬ್ಬೆ) ?]

**ಅಲಿಗುಲಿ** (ಕ್ರಿ). ಕತ್ತಿಯನ್ನು ಚುಚ್ಚು (?): ಪರೀಕ್ಷಿತಂ ರಾಜ್ಯಮನಾಳ್ವ ಸಮಯದೊಳ್ ವಿಪ್ರಶಾಪಂ ಅಲಿಗುಲಿದವೊಲ್ತಾಗಿ ತಾಪದಿ ಪರೀಕ್ಷಿತಂ ಜಲನಿಧಿಮಧ್ಯದೊಳಿರಲು (ತುರಂಗ ೨–೪). ℙ ಈ ಶಬ್ದ 'ಅಲಗುಗಿ' ಎಂಬುದರ ಅಪಲಿಖಿತವಿರಬಹುದು. [?]

**ಅಲಿನಿ,** ಅಳಿನಿ (ನಾ). ಹೆಣ್ಣುದುಂಬಿ. **ಅಳಿನಿ:** ನವಯೌವನದೊಳ್ ಗುಣದೋಷವಿಚಾರಮನಿಂತು ಮಾಡಲೀಯದ ಭಾವೋದ್ಭವನಿಂ ಪರವಶಿಯಾದೆಂ ನವಕುಸುಮಾಸವದೆ ಸೊರ್ಕಿದಳಿನಿಯ ತೆಜದಿಂ (ಕಾದಂಪೂ. ೭೪೫). [ಸಂ. ಅಲಿನೀ]

**ಅಲಿಪ್ತ** (ಗು). ೧. ಲೇಪವಿಲ್ಲದ; ಸಂಬಂಧವಿಲ್ಲದ. ೨. ಮೋಹ ಹಚ್ಚಿಕೊಳ್ಳದ: ವಿಷ್ಣುತ್ರಿವೇದಿಯರು ಅಲಿಪ್ತರಾಗಿದ್ದರು (ಸಮಜೀ. ೬೧೭). (ನಾ). ೩. ಯಾವ ಕಡೆಗೂ ಸೇರದವನು; ತಟಸ್ಥ: 'ಅಲಿಪ್ತನೀತಿ' ಪರಾ. [ಸಂ.]

**ಅಲಿಪ್ತತೆ** (ನಾ). ಯಾವ ಸಂಬಂಧವನ್ನೂ ಹಚ್ಚಿಕೊಳ್ಳದಿರುವುದು; ಮೋಹವಿಲ್ಲದಿರುವುದು; ತಾಟಸ್ಥ್ಯ: ಅವನ ಅಸಾಧಾರಣ ಮೌನ ಅಲಿಪ್ತತೆ ಲಲಿತಳಿಗೆ ಸೋಜಿಗವೆನಿಸಿದುವು (ಅಪವಾ. ೧೨೦). [ಸಂ. ಅಲಿಪ್ತತಾ]

**ಅಲಿಪ್ತನೀತಿ** (ನಾ). ಯಾವ ಪಕ್ಷಕ್ಕೂ ಸೇರದಿರುವುದು; ತಟಸ್ಥನೀತಿ: ಅಲಿಪ್ತನೀತಿ ತ್ಯಜಿಸಿದರೆ ಪೀಕಿಂಗಿಗೇ ಜಯವೆಂದು ನೆಹರು ಸ್ಪಷ್ಟನೆ (ಪ್ರಜಾವಾ. ೨೧–೩–೧೯೬೩; ೧–೩). [ಅಲಿಪ್ತ + ನೀತಿ]

**ಅಲಿಪ್ತರಾಷ್ಟ್ರ** (ನಾ). ಯಾವ ಪಕ್ಷಕ್ಕೂ ಸೇರದಿರುವ ರಾಷ್ಟ್ರ; ತಟಸ್ಥ ರಾಷ್ಟ್ರ: ಅಲಿಪ್ತರಾಷ್ಟ್ರಗಳೆಂದರೆ ಆದಕ್ಕಾಗದು. ಈ ರಾಷ್ಟ್ರಗಳಿಗೆ ರಷ್ಯ ನೆರವುನೀಡುವುದಕ್ಕೂ ಪೀಕಿಂಗಿಗೆ ಸಹನೆಯಿಲ್ಲ (ಪ್ರಜಾವಾ. ೨೧–೩–೧೯೬೩; ೧–೩). [ಅಲಿಪ್ತ + ರಾಷ್ಟ್ರ]

**ಅಲಿಮನೆ** (ನಾ). ಅಲ್ಯೂಮಿನಿಯಂ ಲೋಹ: ಅವರ ಹತ್ತಿರ ಅಲಿಮನೆಯ ಒಂದೆರಡು ಪಾತ್ರೆಗಳು. ಅದೇ ಅವನ ಸಂಸಾರ (ಫಲಸಂ. ೧೨). [← ಇಂ. Aluminium]

**ಅಲಿಮಾರಿ** 'ಅಲ್ಮೈರ' ನೋ.

**ಅಲೀಕ,** ಅಳೀಕ (ಗು). ೧. ಮೆಚ್ಚಲಾಗದ; ಸಂತೋಷಕರವಲ್ಲದ. (ನಾ). ೨. ಅಸತ್ಯ; ಸುಳ್ಳು. ೩. ಕಪಟ; ಮೋಸ; ನಟನೆ. **ಅಳೀಕ:** ೨. "ಅಳೀಕಂ, ವಿತಥಂ, ಮಿಥ್ಯಾ, ಮೃಷಾ, ಅನೃತಂ – ಈ ೫ ಅಸತ್ಯದ ಪೆಸರ್" (ಹಲಾಯು. ೨೩–೧೪೩); ಗುಣವಿಹೀನನನೆನ್ನಳೀಕ ಮಿತ್ರನಂ ನೆನೆಯದೆ (ಕಾದಂಉ. ೪೫೨). [ಸಂ.]

**ಅಲೀನ** (ಗು). ಲೀನವಾಗದ; ಕರಗದ. [ಸಂ.]

**–ಅಲು** '–ಅಲ್$_2$' ನೋ.

**ಅಲುಂಕಿಸು** 'ಅಲುಗಿಸು' ನೋ.

**ಅಲುಂಕು** 'ಅಲುಗು$_1$' ನೋ.

**ಅಲುಂಗು** 'ಅಲುಗು$_1$' ನೋ.

**ಅಲುಂಬು$_1$,** ಅಲಂಬು, ಅಲಬ್ಬು, ಅಲುಬ್ಬು$_1$ (ಕ್ರಿ). ೧. ನೀರಿನಿಂದ ಚೊಕ್ಕಟಮಾಡು; ಶುದ್ಧಿಮಾಡು; ತೊಳೆ: "ಅಲುಂಬು – ಜಲಕ್ಷಾಲನೇ" (ಶಮುಧಾ); ಸಮಿತ್ಕುಶಮಂ ತರವೋಪ ಧೌತವಲ್ಕಲಮನಲುಂಬುವ . . . ವ್ಯವಸಾಯಮೆತ್ತಲುಂ (ಕಾದಂಪೂ. ೨೨೪); ಇಂಬಾಗಿರೆ ಬಾಂದೊಜೆಯೊಳಲುಂಬಿದ ಮಂದಾರವಲ್ಕಲವಿರಚಿತ ನವದಿವ್ಯಾಂಬರವಾಮುನಿಪರನೊಳ್ ಬಿಂಬಿಸಿತು (ಕಾದಂಪೂ. ೭೩೮); ಸಿರಿಖಂಡದ ಬಂಡಿನೊಳಲುಂಬಿ ತಳಿರ್ವಸೆಯ ಪಕ್ಕದೊಳ್ ನೇಜಿದ ನವೀನ ಚಮರಜಂಗಳುಂ (ವರ್ಧಪು. ೫–೬೩ ವ). **ಅಲಂಬು:** ೧. "ಅಲಂಬೆಂದುಂ ಕರ್ಚೆಂದುಂ ಪ್ರಕ್ಷಾಳನಂ" (ಕಶಸಾ. ೨೩–೪೭೭). **ಅಲಬ್ಬು$_2$:** ೧. "ಅಲಬು–ತೊಳೆಯು" (ಗಂಗಾಮು). **ಅಲುಬ್ಬು$_1$:** ೧. ಪರಮಾನಂದ ಜಲದಲ್ಲಿ ಅಲುಬಿ ಮಹಾ

ಪ್ರಕಾಶದಲ್ಲಿ ಆಱಿಸಿ (ಅವಚಂ. ೧೮೨–೮೨೧); ಆದಱೊಳಲುಬಿ ತೊಯ್ದಾ ಪಟಮಂ (ಖಮದ. ೭–೨೦) ; ಒಲಿದುಂಬ ಬಟ್ಟಲು ಹರಿವಾಣದೊಳಗೆ ಕೈಯಲುಬುವ ಬಟ್ಟಲು ಹೊಱಗೆ (ಭರಚ. ೪–೬೪). **೨.** ಅಲ್ಲಾಡಿಸು ; ಅತ್ತಿತ್ತ ಸೆಳೆ : ಅಲುಬಿ ತಿರುಪಿ ತರುಚಂಡಿಕೆಗಳಂ ಭೋರ್ಭೋರೆಂದರೆದು ಬೀಸುತಿದೆ ಚಂಡಪ್ರಭಂಜನಂ (ಶ್ರೀರಾಮಾ. ೫೨೬–೭೦೨). **೩.** (ಆಲಂ) ಬಲವಾಗಿ ಕಚ್ಚಿ ಎಳೆದಾಡು : ನಾಸು ಹೋಗೋದು ಸ್ವಲ್ಪ ತಡ ಆಗಿದ್ದರೆ ಆ ಕಿರುಬ ನಮ್ಮ ಗಂಗೇನ ಖಂಡಿತ ಅಲುಬಿಹಾಕಿ ಬಿಡ್ತಾ ಇತ್ತು (ಸರ್ವಮಂ. ೨೪೨).

[**ದೇ.** ‖ **ತಮಿ. ಮಲ.** ಅಲಮ್ಬು ; **ತುಳು.** ಅಲಂಬು, ಅಲುಂಬು ; **ತೆಲು.** ಅಲಮು]

**ಅಲುಂಬು$_2$**, ಅಲುಬು$_2$ (ನಾ). ಕಾಲು ತೊಳೆದ ನೀರು : "ಅಲುಂಬು ಕರ್ಚಿನ್ನೆ ಕಾಲಿನುದಕಂ" (ಕವಿಕಂ. ೧೯೩). **ಅಲುಬು$_2$** (ಕ).

[< ಅಲುಂಬು$_1$]

**ಅಲುಕ** (ನಾ). ಅಲುಗುವುದು ; ಅಲ್ಲಾಟ : ತಳಿರಲರಿಂ ಮುಸುಕಿರ್ದ ಸುತೆಯ ಮೈಯಲುಕವಡಗಿದೆಳವಳ್ಳಿಯವೊಲು (ಸೊಬಸೋ. ೨೫–೬೩) ; ಶಿವನ ಪುರ್ಬುಗೊನೆಯಲುಕದಿಂ ಸಕಲಬ್ರಹ್ಮಾಂಡ ಸೂತ್ರಂಗಳು ಜಱಿಕಳಚಿ ಹೂಡುವುವು (ಚೆಬಪು. ೪೬–೩೫). [< ಅಲುಗು$_1$]

**ಅಲುಕು$_1$** 'ಅಲುಗು$_1$' ನೋ.

**ಅಲುಕು$_2$** (ನಾ). ಸ್ಥಿರವಾಗಿ ನಿಲ್ಲುವಿಕೆ ; ಶಾಶ್ವತತೆ (?) : ಆತನನುಜಂ ನೆಗೞ್ತೆಯ ಸೀತಾದೇವಿಯನೆ ಕಂಡು ಮುದ್ರಿಕೆಯಂ ಕೊಟ್ಟಾತಂ ಪತಿಹಿತದಲುಕಿನೆ ಭೂತಳದೊಳ್ ತಂತ್ರಪಾಳ ನಾಮಂ ನೆಗಬ್ದಂ (ಎಕ. XII, ಪಾವುಗ. ೪೩–೨೯ ; 1150).

[?. / **ತಮಿ.** ಅಲ್ಕು = ನೆಲೆಯಾಗಿ ನಿಲ್ಲುವುದು]

**ಅಲುಗಾಟ** (ನಾ). ಅಲ್ಲಾಟ ; ಕಂಪನ ; ಅಲ್ಲಾಡುವುದು : ನಾಲಗೆಯಲುಗಾಟವಿವನೊಳು ಸವಿಯ ಸಮ್ಮೇಳವವನೊಳು (ಕುರಾಸಾಂ. ೨೫–೧೩) ; ಅಲಸಿಕೆಯಿಲ್ಲ ರೋಗಗಳಿಲ್ಲ ಕಣ್ಣ ಎವೆಯಲುಗಾಟವಿಲ್ಲ (ಚಂಪ್ರಸಾಂ. ೫–೯೨).

[ಅಲುಗು$_2$ + ಆಟ$_1$]

**ಅಲುಗಾಡಿಸು** (ಕ್ರಿ). ಅಲ್ಲಾಡಿಸು ; ಅಲುಗುವಂತೆ ಮಾಡು ; ನಡುಗಿಸು ; ಸಡಿಲವಾಗಿಸು : ರಸವನು ಸೊರೆಯ ಗುಂಡಿಗೆಯೊಳು ತುಂಬಿ ಭರದಿಂದಾ ಹಗ್ಗದ ತುದಿಯೊಳು ಕಟ್ಟಿ ಪಿರಿದಾಗಿಯಲುಗಾಡಿಸಿದನು (ನೇಮಿಸಂ. ೧೦–೨೧೪) ; ಮಾನವಹೃದಯವನ್ನು ಅಲುಗಾಡಿಸುವ ಮಹಾಶಕ್ತಿ ಅದರಲ್ಲಿದೆ (ರಾಜವ. ೮೨) ; ಪ್ರಪಂಚದ ವಿಷಯವಾಗಿದ್ದ ಅಸ್ಪಷ್ಟ ಹಾಗೂ ದೃಢವಲ್ಲದ ಅಭಿಪ್ರಾಯಗಳನ್ನು ಅಲುಗಾಡಿಸಿದ ಮೊತ್ತ ಮೊದಲ ವಿಜ್ಞಾನಶಾಸ್ತ್ರಗಳಲ್ಲಿ ಖಗೋಲಶಾಸ್ತ್ರವೂ ಒಂದು (ಭೂಹುಟ್ಟು. ೧೬). [ಅಲುಗಾಡು + –ಇಸು$_3$]

**ಅಲುಗಾಡು**, ಅಗಲಾಡು, ಅಗಳಾಡು (ಕ್ರಿ). ಅಲ್ಲಾಡು ; ಚಲಿಸು : ಪಗೆಯಪ್ಪ ಭೃತ್ಯನಂ ಅಲುಗಾಡುವ ಹಲ್ಲಂ ದುಷ್ಟನಪ್ಪ ಮಂತ್ರಿಯಂ ಬೇರ್ವೆರಸಿ ಕೀೞ್ವುದೆ ಸುಖಂ (ಪಂಚತಂ. ೯೯–೨೧) ; ಶೀತಕ್ಕೆ ಕೋಡದ ವಾತಕ್ಕಲುಗಾಡದ . . . ನಂಜೂಱದ ಮುಪ್ಪುಬಾರದ ಯುವತ್ವಂ ತೀರದುತ್ಕರ್ಷಣಂ (ಅನಂಪು. ೬–೧೭) ; ಸುರಗಿರಿ ಕಂಪಿಸಲ್ ಬ್ರಹ್ಮಾಂಡವಲುಗಾಡೆ (ಬಸಪು. ೨–೧೫). **ಅಗಲಾಡು** (ಸ್ಯಾಂಡರ್). **ಅಗಳಾಡು** : ತೊಟ್ಟಿಲು ತೂಗಾಡಹತ್ತಿತೆಂದರೆ ಆ ಗುಂಡುಗಳು ಅಗಳಾಡುವುದನ್ನು ನೋಡಿದರೆ ಅದಕ್ಕೆ ಅದ್ಭುತವೆನಿಸುತ್ತದೆ (ಜ್ಯೋತಿಶ್ಯಾ. ೧) ; ತೊಟ್ಟಿಲವು ಅಗಳಾಡಿದರೆ ನಾವು ಅದು ತೂಗಾಡುತ್ತದೆಂದೆನ್ನುತ್ತೇವೆ (ಮುಂಬಯಿ. ೫–೧೦೨). [ಅಲುಗು$_1$ + ಆಡು$_1$]

**ಅಲುಗಿಸು**, ಅಲುಂಕಿಸು, ಅಲ್ಗಿಸು (ಕ್ರಿ). ಅಲ್ಲಾಡಿಸು ; ಅಲುಗುವಂತೆ ಮಾಡು : ಬೆಕ್ಕಸಂಬಟ್ಟಕ್ಕಜಂ ಮಿಕ್ಕಲುಗಿಸುತೆ ಶಿರವ (ಬಸಪು. ೫–೬೧) ; ಆ ತೃಣವಂ . . . ವಾಯುವಲುಗಿಸಿದುದಿಲ್ಲ (ಪದ್ಮರಾ. ೧೦–೨೫೪) ; ವಸಂತಂ . . . ಆ ಕೆಂಗಣ್ಣಕ್ಕಿಯ ಸರವೆಂಬ ಪೊಸಗಂಟೆಯನಲುಗಿಸೆ (ಜಯಕಾ. ೧–೫೦). **ಅಲುಂಕಿಸು** : ಸಾರಥಿಯ ಖಂಡಿಸುವ ನುಡಿಯನೆಚ್ಚರಗೊಳ್ವುದೆನುತಲುಂಕಿಸುತ ಕೈಬಿಡದಡಿಗೆ (ಜಿನಮು. ೧೯–೨೭). **ಅಲ್ಗಿಸು** : ಪೆಣ್ಗಳಂ ಪಲ್ಗಿರಿದೇಡಿಸುತ್ತೆ ಕಿಱುಕಿಱನುತುಂ ಬರಿಯಂ ಬರುಂಟಿ ಪುರ್ಬಲ್ಗಿಸಿ ಕಣ್ಗಳಂ ಮುಗಿದು ಝುಮ್ಮನಲರ್ಚುತೆ (ಕವಿಚ. II, ೨೭೪ ರಾಮನಾ).

[ಅಲಗು$_1$ + –ಇಸು$_3$]

**ಅಲುಗು$_1$**, ಅಲಕು$_1$, ಅಲುಂಕು, ಅಲುಂಗು, ಅಲುಕು$_1$, ಅಲ್ಗು (ಕ್ರಿ). **೧.** ಅಲ್ಲಾಡು ; ಚಲಿಸು ; ಅತ್ತಿತ್ತ ಸರಿ ; ಕದಲು : ಮಾಲೆಗಾಱಂ . . . ಮರದಲುಗುವ ಕೊಂಬಂ ಕಂಡು (ವಡ್ಡಾರಾ. ೧೭೩–೨) ; ಉದಗ್ರ ಮಂದರಮದಂದಲುಗಿತ್ತು (ಪಂಪಭಾ. ೮–೧೫) ; ಸುರಾಲಯಮಕ್ಕೆ ಲಿಂಗಮಕ್ಕಲುಗುವೊಡೆ . . . ದೇಶಮಹೀಶ ವಿನಾಶಕಾರಣಂ (ಲೋಕೋಪ. ೪–೭) ; ತುಂಗಕುಚಂಗಳಲುಗಲು ತೊಡಿಗೆಗಳು ಥಳಥಳಿಸೆ (ಬಸಪು. ೫–೨೮) ; ಅಗಿಯಲಲುಗುವ ತಲೆಯ ಮುಪ್ಪಿನ ಮುಗುದೆನೀತನ (ಕುವ್ಯಾಭೀ. ೧–೩೫) ; ನಾನಾ, ನಾನು ಅಲುಗಲಾರೆ (ಝಾರಾಣಿ. ೧೪). **೨.** ಅಲ್ಲಾಡಿಸು : ಚಲಿಸುವಂತೆ ಮಾಡು : ಪಾಡುವ ಬರ್ಬರಕಿರಾತೆಯರಿಂಗೊರಲೊಳೊದವಿ ಬಂದೆರ್ದೆಯನಳ್ಳಿವಿಳ್ಳೆಯಾಗಿ ಪಿಡಿದಲುಗುವಂತಲುಗೆ . . . ಸೀಯನಪ್ಪ ಗೇಯರಸಾಬ್ಧಿಪೂರದೊಳ್ (ಶಾಂತಿಪು. ೨–೨೨ ವ) ; ಅಳಿಯೆಜಗದನಿಲನಲುಗದ ರವಿಕರಂ ಪುಗದ . . . ಇರವಂತಿಯಿರೆ ಕಂಡು (ಪುಷ್ಪರ. ೯–೯) ; ಹಸಿದ ಹುಲಿಯ ಮೀಸೆಯನು ಹಿಡಿದಲುಗಿ ನೋಡಿದೆಯೆಂದನು (ಹಚಕಾ. ೮–೧೨) ; ಮಂಡೆಯನಲುಗಿ ನುಡಿದರೀ ವಧುವಿಗಾಖಂಡಲನರಸಿ ತಾನೆಣೆಯೆ (ಅಂಜಚ. ೫–೧೧೮) ; ಕಿವಿಗಳನಲುಗಿದುವು ಕರಿನಿಕರ (ಕುವ್ಯಾದ್ರೋ. ೧೭–೧೮) ; ಅರಸು ಇದ್ದರೆ ಊರು ನಡುಗುತ್ತದೆ, ಮುದುಕ ಅಂದರೆ ಗಡ್ಡ ಅಲುಗುತ್ತದೆ (ಗಾದೆ). **ಅಲಕು$_1$** : **೧.** ಅಲಕಿ ಮುಂದ್ಯೆದಡರೆ ರವಿಯಕ್ಕಲಿಸುವನೆ ಶಶಿರಾಜನೆಂದಾನುಳುಹಿದೆನು ದೀಪಾಳಿ ಮನೆಯಾವಳಿಯ ಹೊಕ್ಕಡಗಿ (ಜೀವಂಚ. ೧೬–೧೫). **ಅಲುಂಕು** : **೧.** 'ಅಲುಂಕಿಸು' ಪರಾ. **ಅಲುಂಗು** : **೧.** ಕೆಂಬರಲಂತೆ ತೊಳತೊಳಪ ನಾಸಾಭರಣ ಮೌಕ್ತಿಕಂ ಸಂಜೆಗೆಂಪು ಪುದಿದ ಶುಕ್ರನಂತೆ ಮೆಱೆದಲುಂಗು [ಪಾಠಾಂ. ದಲಗು ; ದಲುಗು]ತ್ತಮಿರೆಯುಂ (ರಾಜಶೇ. ೭–೧೭ ವ) ; ಈಸುಂ ಬಟ್ಟೆಯ ಬಿಟ್ಟಲುಂಗದೆ ತಿರಂಗೊಂಡಲ್ಲಿ ಸುತ್ತಾಡುತುಂ (ಮೈಸೂಮ. ೧–೫). **ಅಲುಕು$_1$** : **೧.** ಅಲುಕಲಮ್ಮದೆ ಸುಕ್ಕಿಸುಗಿದು ಬೆಂಬಿದ್ದುವಾನೆಗಳು (ಹಚಕಾ. ೫–೪೦) ; ತಱಿದು ಬಿಸುಡುವರವರು ಕೌರವಶತವನಲುಕಿದೊಡೆ (ಕುವ್ಯಾಸ. ೧೩–೭೧) ; ಪಡಿಬಲವಲುಕಿ [ಪಾಠಾಂ. ವವುಕಿ]ದುದು ರವಿಸುತನ ಸನ್ನೆಯಲಿ (ತೊರರಾ. ೬–೧೯–೩೬). **೨.** ಈಕೆಯನಲುಕಲಮ್ಮದು ನೋಡಲಮ್ಮದು ಮಂದಿ (ಕುವ್ಯಾವಿ. ೩–೧೦೬) ; ಪರಿಪೂರ್ಣಭಾವವೆಂದೆಂಬ ಕರವಿಟ್ಟಲುಕಿ ಪರತತ್ವವೆಂಬ ಬೆಣ್ಣೆಯನೆ ತೆಗೆದು (ಕೈಕವ. ೧೩೦–೧೭). **ಅಲ್ಗು** : **೧.** ಭೀಮಸೇನಂ ಮರನಂ ಪಿಡಿದಲ್ಗೆ [ಪಾಠಾಂ. ದಲುಗೆ] ಪಱ್ವೊಲನಿಬರುಮುದಿರ್ದರ್ (ಪಂಪಭಾ. ೨–೩೧) ; ಚದುರಂಗದ ಮಣೆಯನಲ್ಗಿ [ಪಾಠಾಂ. ಯೆನಲ್ಕಿ] ದಂತಪ್ಪಿನೆಗಂ (ಪಂಪಭಾ. ೧೧–೭೦) ; ಬಲ್ಗದೆಗಳುರವಣಿಸಿ ಥಿಣಿಥಿಟಿಲಲ್ಗುತಿಹವೋಲ್ (ಜಿನಭಾ. ೧೦–೨೧).

[**ದೇ.** ‖ **ತಮಿ.** ಅಲಙ್ಗು, ಅಲಕ್ಕು, ಅಲುಙ್ಗು ; **ಮಲ.** ಅಲುಕ್ಕು ; **ತುಳು.** ಅಲಂಕು, ಅಲಂಗು]

**ಅಲುಗು$_2$** (ನಾ). ಅಲ್ಲಾಟ; ಕಂಪನ; ಚಲನ; ಸ್ಪಂದನ: ಅಘನದೆಡೆಯೊಳಾವುದೇನಿನಿಸಿಲ್ಲವೆಂದಿರಲುಗೆಂತಾದುದು (ಮನೋವಿ. ೨-೧೧); ಸಿರಿಯಂತೆ ವಲ್ಲಕಿಯನುಂ ನುಡಿಸುತಿರುತಿರ್ದಳಲುಗಿನಿಂ ಸುಸ್ವರದೊಳು (ಪರಶು. ೬-೧೦).

[ದೇ. ‖ ತಮಿ. ಅಲಜ್ಞಲ್; ಮಲ. ಅಲುಜ್ಞಲ್; ತುಳು. ಅಲಗ್, ಅಲಗು = ಹಾಡುವಾಗ ಧ್ವನಿಯಲ್ಲುಂಟಾಗುವ ಸ್ಪಂದನ]

**ಅಲುಪ, ಅಲುಪ್ಪು$_2$, ಅಲ್ಪು** (ಗು). ೧. ಸಣ್ಣದಾದ; ಚಿಕ್ಕದಾದ. ೨. ಹೀನವಾದ; ತುಚ್ಛವಾದ; ಕ್ಷುದ್ರವಾದ: "ಅಲ್ಪ – ಅಲುಪ" (ಶಮದ. ೨೫೪ ಪ್ರಯೋ). **ಅಲುಪ್ಪು$_2$**: ಹುಳುವು ನಾನು ಎನಗೆ, ಸುಳಿದಿವಸವಿದ್ದರು ಕೆಳೆಯೊ, ಕರುಣದಿಂದ ಅಲುಪುವುಮಾಡಿ (ಮೋಕ್ಷದೀ. ೬೦). **ಅಲ್ಪು**: 'ಅಲ್ಪುಮನಸು' ಪರಾ. [< ಸಂ. ಅಲ್ಪ]

**ಅಲುಪು$_1$** 'ಅಟುಪು$_1$' ನೋ.

**ಅಲುಪು$_2$** 'ಅಲುಪ' ನೋ.

**ಅಲುಪ್ತ** (ಗು). ೧. ಲೋಪವಿಲ್ಲದ; ಮರೆಯಾಗದ. (ನಾ). ೨. ಲೋಪವಿಲ್ಲದಿರುವುದು; ಮರೆಯಾಗದೆ ಇರುವುದು: ಆತ್ಮನ ಹತ್ತೊಂಬತ್ತು ಮುಖಗಳು ಲುಪ್ತವಾಗಿರುವುದಿಲ್ಲ, ಅಲುಪ್ತವಾಗಿರುತ್ತವೆ (ಜೀವಾತ್ಮ. ೧೩೧). [ಸಂ.]

**ಅಲುಬು$_1$** 'ಅಲಬು$_1$' ನೋ.

**ಅಲುಬು$_2$** 'ಅಲುಂಬು$_1$' ನೋ.

**ಅಲುಬ್ಧ** (ನಾ). ಲೋಭಿಯಲ್ಲದವನು. 'ಅಲುಬ್ಧತ್ವ' ಪರಾ. [ಸಂ.]

**ಅಲುಬ್ಧತ್ವ** (ನಾ). ಲೋಭವಿಲ್ಲದಿರುವುದು; ಲೋಭಿಯಲ್ಲದಿರುವುದು: ಐಹಿಕಾದಿಯನುದ್ದೇಶಿಸದೆ ದಾನಮಂ ಮಾಳ್ಪುದು ಅಲುಬ್ಧತ್ವಮೆಂಬುದು (ಶ್ರಾವಕಾ. ೧೬೨). [ಸಂ.]

**ಅಲುಮಾರು** 'ಅಲ್ಮೈರ' ನೋ.

**ಅಲುರುಗುದುಗೆ** (ನಾ). ಭಯಪಡಿಸುವ ದೊಣ್ಣೆ (?): ತಳವಾರರುಗಳೆಲ್ಲ ಅಲುರುಗುದುಗೆಯ ಪಿಡಿದು ಯೆಲವೊ ಯಡಬಲದೊಳಿಹ ಅಂಗಡಿಗಳೊಳಗೆ ಮಲಗುವರದಾರೆನುತ ಕೇಳೆ (ಗುರುಬೋ. ೫೩-೨೧).

[ಅಲರ್ು (< ಅಳಜ್) + ಗುದುಗೆ (< ಗುದಿಗೆ)]

**ಅಲೂರ್** (ನಾ). ಆಲೂರ್ (?) ಒಂದು ಊರಿನ ಹೆಸರು: ಅಲೂರ್ ನಾಮ ಗ್ರಾಮಃ (ಮೈಆರಿ. ೧೯೨೪, ೮೦-೧೦೮; 799). [< ಆಲೂರ್ ?]

**ಅಲೆ$_1$** (ಕ್ರಿ). ೧. ಸಂಚರಿಸು; ಅಲ್ಲಾಡು: "ಅಲೆ – ಪರಿಭಾವ (ತಿರಸ್ಕರಿಸು), ಲೋಲನಯೋಃ (ಚಲಿಸು)" (ಶಮಧಾ); ಮುಸಗಿದ ಕಂಪು ಕಂಪನೊಳಕೊಂಡಲೆವೊಂದೆಲ[ರಂಬಿ]ವಂದು ಪಾಱುವುವು . . . ಪರಿಶ್ರಮಂಗಳಂ (ಪಂಪಭಾ. ೧೧-೪); ದೆಸೆದೆಸೆಯೊಳಲೆವ ಕಣ್ಮಲರ್ಗಳಿನುನ್ಮತ್ತಗಜಗಮನೆಯರ್ಬಂದೊತ್ತಿಗೆ ನಿಲ್ವರ್ (ಸುಕುಮಾ. ೯-೬೨); ಅಳೆದೊಡೊಂದಡಿ ಮೇರುತನಕತ್ತಲೆದುದೊಂದಡಿ ಮಾನುಷೋತ್ತರಕಳತೆಯಾದುದು ವಿಕ್ರಿಯೆಯನಾಂತಾ ತ್ರಿವಿಕ್ರಮನ (ಸಾಳ್ವಭಾ. ೮-೨೮). ೨. ಗುರಿಯಿಲ್ಲದೆ ತಿರುಗಾಡು; ವ್ಯರ್ಥವಾಗಿ ಸುತ್ತಾಡು: ಈ ಊರಿನಿಂದ ಆ ಊರಿಗೆ . . . ವರ್ಷಗಟ್ಟಲೆ ಅಲೆಯುತ್ತಿದ್ದೆ (ಬಾಣಅ. ೧೧); ಅವನು ಕೆಲಸವಿಲ್ಲದೆ ಸುಮ್ಮನೆ ಸಿಕ್ಕಿದ ಕಡೆ ಅಲೆಯುತ್ತಾನೆ (ರೂಢಿ). ೩. ಪರಿಭವಿಸು; ಸೋಲಿಸು: ವ್ಯಪಗತಭಯಾ ದಯಾಲೂ ರಿಪುವರ್ಗಮನಲೆದು ಗೆಲ್ವೆಯಾಗಾಹವದೊಳ್ (ಕವಿರಾ. ೨-೨೨). ೪. ಕಾಡು; ಹಿಂಸಿಸು: ನಮ್ಮ ಜನ್ಮಾಂತರದಿಂದಂ ಬಂದ ಮೋಹಂ ಬಿಡದಲೆವುದಱಿಂದಾದೊಡಂ (ಆದಿಪು. ೪-೮೯); ಬಲದೇವಂ ಭೀಮನ ಭುಜಬಳದೇವಂ ಮನಮನಲೆಯೆ (ಗದಾಯು. ೮-೪೩); ನಿಂದು ದೇಹವನಲೆದು ದಲ್ಲಿ ರೋಗದ ಕೇಳಿ (ಬಸರ. ೫-೧೪೮); ಜಳದಂ ಕಳಸಿಗೆ ಪಡಲರಿಫಳತ್ರಯಂ ದೇವದಾರು ನಿಶೆ ನಿಂಬಮಿವಂ ಜಳದಿಂ ಮಜುಗಿಸಿ ಕುಡಿಗದು ಕೆಳೆಗಿಗುಂ ಬಿಡದಲೆವ ಸನ್ನಿಪಾತಜ್ವರಮಂ (ಲೋಕೋಪ. ೯-೨೦). ೫. ಕಳೆ; ನಿವಾರಿಸು; ಹೋಗಲಾಡಿಸು: ಬಳ್ಳಿಗವುಂಗಂ ತಳ್ತೆಲೆವಳ್ಳಿಯ ಕಟ್ಟಲೆಯನಲೆವ ಸೊಡರ್ಗುಡಿಗಳನೀಯಳ್ಳಿಱಿದಲೆವುವು ಬನದೊಳಗುಳ್ಳಲರ್ದುಜ್ವಳಿಪ ಚಂಪಕಪ್ರಸವಂಗಳ್ (ಆದಿಪು. ೧೧-೬೬); ವಿಷಮುನಲೆಯಲಿಂತಿಧೆ ಸಾಲ್ಗುಂ (ಲೋಕೋಪ. ೧೦-೧೬); ತಂದರುಂಧತಿಯ ಮುಂದಿಡೆ ಭೂತಿದಳಿದಸುವನಿತ್ತು ಶಾಪವನಲೆಯಳೆ (ಪದ್ಮರಾ. ೧೧-೧೩೫). ೬. ಮೂದಲಿಸು; ಹಂಗಿಸು; ಹಾಸ್ಯಮಾಡು: ಒರ್ಬಿಸ ಕೆಳ್ಕುವ ಜೋಳಗಳ್ಕರಂ ಪಱೆಯಿಡೆಯಿಲ್ಲದೊಳ್ಪಲೆಯುತಿಪ್ಪುದು ಮಾವನ ಗಂಧಹಸ್ತಿಯಂ[ಯಾ] (ಎಕ. II, ೧೩೪-೩೩; 987). ೭. ತಾಗು; ಸ್ಪರ್ಶಿಸು: ಪಾದತಳಂಗಳಡಿಗೆಜಗಿದರಿನರಪಾಲರ ಮಕುಟಮಾಣಿಕ್ಯ ಮರೀಚಿ ಜಾಲ ಬಾಳಾತಪಂಗಳನಲೆದು ಕೆಂಕಮಾದಂತಾದುವು (ಪಂಪಭಾ. ೨-೩೬ ವ); ಗಿಳಿ ಸೋವರ್ ಬಳಲುವ ಮುಡಿ ಬೆನ್ನನಲೆಯೆ ಧವಳೇಕ್ಷಣೆಯರು (ಸೌಇಇ. IX-i, ೨೪೯-೨೯; 1147); ಸೆಳ್ಳುಗುರ್ಗಳಿಂ ಮುಂದಲೆಯನಲೆವ ನುಣ್ಗುರುಳನೊಯ್ಯಾರಿಸುತ (ಪದ್ಮರಾ. ೫-೪೩); ಹರಳೋಲೆ ಕುಣಿಯಲು ಜಡೆ ಬೆನ್ನನಲೆಯಲು (ಕಂನವಿ. ೬-೧೨೩). ೮. ತೊಳೆ; ಜಾಲಿಸು: ಪುಳಿಯೊಳಲೆದ ಪವಳದ ಬಟ್ಟನಂತೆ ಸೊಗಯಿಸುವ ಸಂಸಾರಸಾರೋದಯನ ಬಿಂಬಾಧರಮನಂಗರಾಗರಸದುರುಳಿಯಂತಾದುದು (ಪಂಪಭಾ. ೨-೩೯ ವ); ವಾರುಣಿಯನೊಲಿದು ಮುಟ್ಟಿದ ಕಾರಣದಿಂ ಮುಳುಗುವಂತೆ ತನ್ನಯ ಕಱಿಯಂ ನೀರೊಳಲೆವಂತೆ ಪಶ್ಚಿಮವಾರಿಧಿಯೊಳ್ ಮಗ್ನನಾದನವ್ಯುತಕರಂ (ಲೀಲಾವ. ೩-೬); ಕುದಿಸಿ ಉದಕದೊಳಲೆದು [ಪಾಠಾಂ. ಳಲುಬಿ] ಬೀಸುತ್ತೊಗೆದು . . . ಮೈಲಿಗೆ ಮಡಿಗಳಹುದು (ಬಸವು. ೩೬-೪೬).

**ಅಲೆದಾಡು** = ಸುತ್ತಾಡು; ತಿರುಗಾಡು: ಮೆಲ್ಲೆಲರೊಂದು ತಣ್ಣನಲೆದಾಡುತ್ತಿದೆ (ನಾಡೋಜ. ೨೨೬); ಮನಸ್ಸು ಚಂಚಲವಾಗಿ ಅಲೆದಾಡಿತು (ನನ್ನಜೊ. ೨೬); ಅವನ ಕಣ್ಣು ತನ್ನ ಮನೆಯನ್ನು ಹುಡುಕಿ ಅಲೆದಾಡಿತು (ಯೋಧಪು. ೧). **ಅಲೆದಾಟ** = ಸುತ್ತಾಟ; ತಿರುಗಾಟ. **ಅಲೆದಿಡು** = ಭದ್ರವಾಗಿ ಒತ್ತು: ಮೊಳೆಯಲ್ಲಮನುಪ್ಪಿನೊಳಂ ಪುಳಿಯೊಳಮಲೆದಿಟ್ಟು ದಾಸವಣದಲರಂ ತಂದಳೆಯೊಳರೆದಲ್ಲಿ ಕಲಸಿದೊಡೆಳಸುಗುಮುದು ಚೆಲ್ವವೆತ್ತ ಪವಳದ ಕುಡಿಯಂ (ಲೋಕೋಪ. ೮-೧೮).

[ದೇ. ‖ ತಮಿ. ಅಲೈ]

**ಅಲೆ$_2$** (ನಾ). ೧. ಹಿಂಸೆ; ತೊಂದರೆ; ಕಾಟ: ನುಡಿಯೊಳನೃತಂ ತೋಱದಂತೆ ನಿನ್ನಲೆಗೆ ನಿಂದಡೆ ಮೆಚ್ಚಿ ಮೇಲೇನ ಕೊಡುವೆನೆಂದೆಂದೆಯದ ಕೊಡು ಬೇಗದಿಂ [ದೆ] ವಿಶ್ವಾಮಿತ್ರ (ಹಚಕಾ. ೧೪-೧೧); ನೀವಿರ್ದು ಫಲವಾವುದೆಂಬಳಾ ಸಖಿಯರಂ ಭಾವಭವನಲೆಗೆ ಸೈರಿಸದಿಂದುಮುಖಿಯರಂ (ನಳಚಂ. ೧೯೫); ಕಡುಚೆಲ್ವ ನಿನ್ನ ವಾರತೆಗೇಳಿದಾಕ್ಷಣ ಕುಡುವಿಲ್ಲನಲೆಗೊಳಗಾದೆ (ಕಂನವಿ. ೧೦-೩೪); ನಿನ್ನನು ಮರೆದು ಕರ್ಮಾಸುರನಲೆಯೊಳತಿ ಕೊರಗಿ ಕರಗಿದೆನಯ್ಯಾ (ಸನತ್ಕು. ೧೦-೬); ಖರನಲೆಗೆ ಮುನಿಗಣಂ ಚಿತ್ರಾದ್ರಿಯಂ ತ್ಯಜಿಸೆ (ಶ್ರೀರಾಮಾ. ೧೬೬-೪೫). ೨. ಬೀಸುವಿಕೆ; ಚಲನ: ಎಲರಲೆಯಿಲ್ಲದೇಕೆಳವಳ್ಳಿ ನಡುಗಿತು (ಕಂನವಿ. ೬-೧೬೧). [ದೇ. ‖ ತಮಿ. ಅಲೈ]

**ಅಲೆ$_3$** (ನಾ). (ನೀರಿನ) ತೆರೆ; ತರಂಗ: "ಊರ್ಮಿಃ, ವೀಚಿಃ – ಅಲೆಗಳ ಹೆಸರುಗಳು" (ಸಿದ್ಧಾಂತಿ. ೬೯); ಆ ಹಾಲಿನಲೆಗಳನು ಬಿಡಿಸಿ ಬಂದಿತು ತೇಲಿ ಕೊಳಲ ದನಿ (ನಡೆದಾ. I, ೪೫೧); ವಿದ್ಯುತ್ತಿನ ಅಲೆಗಳಿಗೆ ಸಂಬಂಧಿಸಿದ ಪ್ರಯೋಗಗಳು ಪ್ರದರ್ಶಿಸಲ್ಪಟ್ಟವು (ಸಸ್ಯಕ. ೧೧೧).

[ದೇ. ‖ ತಮಿ. ಅಲೈ; ತೆಲು. ಅಲ]

**ಅಲೆ$_4$** 'ಅಲ್$_1$' ನೋ.

**ಅಲೆಕುಳಿ** (ನಾ). ಅಲೆಯುವುದೇ ಶೀಲವಾಗಿ ಉಳ್ಳವನು : ಬಿರುಗಾಳಿ ತೂಳ್ದಿಸವ ಅಲೆಕುಳಿಯೆ ಓವೋ ! (ಬದ್ಧಪ್ರ. ೧೧–೨೨೪). [ಅಲ್ದೆ$_2$ + –ಕುಳ್ಳಿ$_2$]

**ಅಲೆಗಾರ** (ನಾ). ಹಿಂಸೆಮಾಡುವವನು ; ತೊಂದರೆಪಡಿಸುವವನು : ಮನ್ಮಥನಲೆಗಾರನು ರಕ್ಷಿಸೆಂದು ಶರಣು ಹೊಗುವಂತೆ (ವಚಕಾ. ೧೬–೭). [ಅಲ್ದೆ$_2$ + –ಗಾರ (< –ಕಾಜ)]

**ಅಲೆಗೂದಲು** (ನಾ). ತೆರೆ ತೆರೆಯಂತಿರುವ ಕೂದಲು : ಅದೇ ನಸು ಗೆಂಪಿನ ಗುಂಡುಮುಖ, ಹೊಳಪಿನ ಕಣ್ಣುಗಳು, ಕಣ್ಣಿನ ಹತ್ತಿರಕ್ಕೆ ಬಾಗಿದ್ದ ಕಪ್ಪಾದ ಅಲೆಗೂದಲು (ಮರಳಿ. ೧೩೪). [ಅಲ್ದೆ$_3$ + ಕೂದಲು (< ಕೂಂದಲ್)]

**ಅಲೆಗೆಯ್** (ಕ್ರಿ). ಅಲುಗಾಡಿಸು ; ಮಿಡಿ : ತಂತಿಯನಲೆಗೆಯ್ದ ಬೆರಲ್ಗಳ್ ಅಂದು ಹೃದಯದಾನಂದದ ನಾಡಿಗಳೊಳಾಡುವಂತೆ (ಚಿಕವಂ. ೧೬೦–೨). [ಅಲೆ$_1$ + ಗೆಯ್ (< ಕೆಯ್$_1$)]

**ಅಲೆಗೈ** (ಕ್ರಿ). ಹಿಂಸೆಮಾಡು : ಅಲೆಗೈವ ಬಗೆಯನಜುಹಿ ತಂದೆತಾಯನು ಪಲಬಗೆಯೊಳು ಬಳಲಿಸದೆ (ಹದಿಬ. ೪–೨೮). [ಅಲ್ದೆ$_2$+ಗೈ (< ಕೆಯ್$_1$)]

**ಅಲೆತ$_1$** (ನಾ). ಅಲೆಯುವಿಕೆ; ತಿರುಗಾಟ; ಸುತ್ತಾಟ: ಏನು ಹೇಳೋಣವೋ ಅವನ ಅಲೆತವನ್ನು (ರೂಢಿ). [ಅಲೆ$_1$ + –ತ$_2$]

**ಅಲೆತ$_2$** (ನಾ). ಕ್ಲೇಶ ; ಹಿಂಸೆ : ಈಚೀಚೆಗೆ ಅವನಿಗೆ ಅಲೆತ ಹೆಚ್ಚಾಗಿದೆ (ರೂಢಿ). [ಅಲ್ದೆ$_2$ + –ತ$_2$]

**ಅಲೆಪ** (ನಾ). ೧. (ಗಾಳಿಯು) ಬೀಸುವಿಕೆ ; ಅಲುಗುವಿಕೆ : ತೆಂಕಣ ಲರಲೆಪದಿಂದಂಕುರಿಸಿದ ಚೂತದಂತೆ ಆತಂ ರೋಮಾಂಚ ಕಂಚುಕಿತ ಶರೀರನಾಗಿ (ಆದಿಪು. ೪–೨೧ ವ) ; ತೆಂಬೆಲರಲೆಪದ ಪೂಲತೆಯೆಂಬಿನ ಮಂಕುರಿಸೆ ಪುಳಕಂ (ಶಾಂತಿಪು. ೧೦–೭) ; ಚರಪುರುಷ ವಚನವರುಷದಿಂ ಕವಿದ ಕೋಪರಸತರಂಗಿಣಿಯ ತೆರೆಗಳಲೆಪದಿಂದಲುಗುವಂತೆ ನಡು ಗುವೊಡಲಂ (ವರ್ಧಪು. ೭–೪೧ ವ) ; ಚಳಿಪೆಲರಲೆಪಕ್ಕೆಳಲತೆಯೊಲೆವಂತೆ (ಉದ್ಭಟ. ೮–೧೦೦). **೨.** ಚಲನ ; ಸಂಚಾರ ; ಅಲುಗಾಟ : ದೀಪ ಕಳಿಕೆಗಳ ಅಲೆಪದಿಂದ ಕೆಚ್ಚಕೆಚ್ಚನೆ ಕೆದಕೆದರುತ್ತಿರುವ ಕೆಮ್ಮಿಂಚುಗಳ ಆ ವಿಮಾನ ಪ್ರಪಂಚವನ್ನೂ (ಮಂತ್ರಶ. ೧೯೯–೧೮). [ಅಲ್ದೆ$_3$ + –ಪ$_2$]

**ಅಲೆಪಡಿಸು** (ಕ್ರಿ). ಹಿಂಸಿಸು ; ತೊಂದರೆಗೆ ಸಿಲುಕಿಸು : ಅನುರಾಗ ದಿಂದೆನ್ನ ಮಗಳನಲೆಪಡಿಸುವೀಬಿನುಗು ಜಿನದತ್ತೆಯಂ ಕೊಲ್ಲಬೇಕೆಂ ದೆನಲ್ (ಸಮ್ಯಕ್ತ್. ೫–೩೧).

**ಅಲೆಯಪಡಿಸು** = ಹಿಂಸಿಸು : ಅಲೆಯಪಡಿಸಿದನಾಗ ಚಲದೊಳಾ ಶನಿಯಂ (ಯನಳ. ೮೭). [ಅಲ್ದೆ$_2$ + ಪಡು$_1$ + – ಇಸು$_3$]

**ಅಲೆಪು,** ಅಲಪ್ಪು$_2$ (ನಾ). ೧. ಚಲನ ; ಬೀಸುವಿಕೆ ; ಕುಲುಕಾಟ ; ಆಯಾಸ : ತಂಬೆಲರಲೆಪಿಂ ಕಳಿಕೆಯೊಳೆ ತುಜುಗಿ ತಳಿರೊಳೆ ತಳತಳ ಸಿದುದೊಂದಶೋಕಲತೆ (ಆದಿಪು. ೮–೨೭) ; ಮಲೆಯೆಲರಲೆಪುಂ ಮನಸಿಜ ನಲೆಪುಂ ಕೋಗಿಲೆಯ ಜಡಿಪುಮೊಡನೆಗಟ್ಟಿನಂ (ಅಜಿಪು. ೨–೧೪) ; ಎಲರಲೆಪಿಂ ತೆಜಂಬೊಳೆವ ಕೀಳೆಲೆ ಸೋಂಕೆ ಸಿತೇಕ್ಷುದಂಡದಿಂ ಸುಲಲಿತ ಚೂತ ಪಕ್ವಫಳದಿಂದುಗುತಿರ್ಪ ರಸಪ್ರವಾಹಮಂ ಗೆಲೆ (ಸೌಇಇ. IX–I ; ೧೧೮–೨೬, 1057). **ಅಲಪ್ಪು$_2$** : **೨.** ಕಾಟ ; ತೊಂದರೆ : ಸುರಕುಜದ ನೆಟಿಲೊಳಂಗಣದೊಳೇನುಮಲಪಿಲ್ಲದೆ ಕಟ್ಟಿರೆ ಕಾಮಧೇನು (ಪಂಪಭಾ. ೪–೧೦). [ಅಲ್ದೆ$_2$ + –ಪು]

**ಅಲೆಮಾಡು** (ಕ್ರಿ). ೧. ತೊಂದರೆಗೊಳಿಸು ; ಹಿಂಸಿಸು. **೨.** ಹಾಳು ಮಾಡು ; ನಾಶಪಡಿಸು. **೧,೨** : ಬನವನಲೆಮಾಡುವೀ ದುಷ್ಟ ಮರ್ಕಟತತಿಗೆ ಬುದ್ಧಿಯಂ ಹೇಳಿಕೊಂಡು ಬನಕೊಡೆಯನಾಗಿ ರಕ್ಷಿಸಿ ಕೊಂಡಿರು (ಸಮ್ಯಕ್ತ್. ೨–೮೦) ; ಇಂದೀಗ ಮೃಗವ ನಿರ್ಮಿಸಿ ದೇಶವ ನೆಲ್ಲ ತಿಂದು ಕೆಡಿಸಿ ಅಲೆಮಾಡಿ (ಹರಿಸಾಂ. ೧–೫೨). [ಅಲ್ದೆ$_2$ + ಮಾಡು$_1$]

**ಅಲೆಮಾನ್** 'ಅಲೇಮಾನ್' ನೋ.

**ಅಲೆಯೇಱು** (ನಾ). ಅಲೆಗಳ ಏರಿಕೆ, —ಉಬ್ಬರ : ಬಱಲದ ಎಱಲದ ಅಲೆಯೇಱಿಂದಂ ಅಲೆಬೀಱಿಂದಂ . . . ನೋಡಿವನ್ (ಬದ್ಧಪ್ರ. ೯–೧೭೬). [ಅಲ್ದೆ$_3$ + ಏಱು$_2$]

**ಅಲೇ** 'ಅಲ್$_1$' ನೋ.

**ಅಲೇಖ** (ನಾ). ೧. ಬರೆಯದ ತಾಳೆವೋಲೆ ಮತ್ತು ಕಡತ : ಶಬ್ದ ಹತ್ತದ ಅಲೇಖದಂತೆ, ಅನಿಲಮುಟ್ಟದ ಪುಷ್ಪದಂತೆ (ಗಣಭಾ. ೧೨೦–೪). **೨.** ಕಡವೆಯಿಲ್ಲದುದು ; ಬಹಳ. **೩.** ಚಾಮರ. **೪.** ದೇವತೆ : "ತ್ರಿದಶಾಲೇಖಮದಭ್ರಚಾಮರಮಲೇಖಾಖ್ಯಾನಮುಕ್ಕುಂ" (ನಾನಾರ. ೯೭). [ಸಂ.]

**ಅಲೇಮಾನ್,** ಅಲೆಮಾನ್, ಅಲೇಮಾನಿ (ನಾ). ಜರ್ಮನಿ, ಆಸ್ಟ್ರಿಯ, ಯೂರೋಪು ಮುಂತಾದ ಪಾಶ್ಚಾತ್ಯದೇಶಗಳು ; ಪರದೇಶ. **ಅಲೆಮಾನ್** (ಕ). **ಅಲೇಮಾನಿ** (ಕ).

**ಅಲೇಮಾನ್ ಚೂರಿ** = ಯೂರೋಪಿನ ಚಾಕು, —ಚೂರಿ. **ಅಲೇಮಾನಿ ಕತ್ತಿ** = ಯೂರೋಪಿನ ಖಡ್ಗ, —ಕತ್ತಿ. **ಅಲೇಮಾನಿ ತುರುಪು**=ಯೂರೋಪಿನ ಸೈನ್ಯದ ತುಕಡಿ. **ಅಲೇಮಾನಿ ರೂಪಾಯಿ**= ಸುಮಾರು ಹದಿನಾಲ್ಕಾಣೆ ಬೆಲೆಬಾಳುವ ಯೂರೋಪಿನ ಒಂದು ನಾಣ್ಯ (ಕ). [← **ಲ್ಯಾಟಿನ್.** Alemauni]

**ಅಲೇಮಾನಿ** 'ಅಲೇಮಾನ್' ನೋ.

**ಅಲೋಕ** (ನಾ). ಈ ಲೋಕವಲ್ಲದುದು ; ಈ ಲೋಕಕ್ಕೆ ಸಂಬಂಧಿಸ ದುದು. 'ಲೋಕಾಲೋಕ' ಪರಾ. [ಸಂ.]

**ಅಲೋಕದೃಷ್ಟಿ** (ನಾ). ಈ ಲೋಕಕ್ಕೆ ಸಂಬಂಧಿಸದ ದೃಷ್ಟಿ ; ಪರ ಲೋಕದೃಷ್ಟಿ : ಅಲೋಕದೃಷ್ಟಿಗೆ ಅಪಪ್ರಕ್ಷಕನೇ ಇರಬಹುದಾದ ಸ್ಟ್ರ್ಯಾಸ್ ಲೋಕದೃಷ್ಟಿಗೆ ಸ್ವೇಚ್ಛಾಚಾರಿಯಾಗಿ ಕಂಡುಬರುವುದು ಸಹಜ (ಬದ್ಧಪ್ರ. lii). [ಅಲೋಕ + ದೃಷ್ಟಿ]

**ಅಲೋಕಾಕಾಶ** (ನಾ). [ಜೈನ] ಲೋಕದ ಹೊರಗಿನ ಆಕಾಶ ; ಸಿದ್ಧರು ಇರುವ ಪ್ರದೇಶ : ಅತ್ತಲಲೋಕಾಕಾಶಂ ಸುತ್ತಿರ್ದುದನಂತ ಮಲ್ಲಿ ಲೋಕದೊಳೊಂದುಂ ಸುತ್ತಿಲ್ಲ (ಸುಕುಮಾ. ೧೧–೫೯). [ಅಲೋಕ + ಆಕಾಶ]

**ಅಲೌಕಿಕ** (ಗು). ಇಹಲೋಕಕ್ಕೆ ಸಂಬಂಧಿಸದ ; ಅಸಾಧಾರಣ ವಾದ : ಇಲ್ಲಿ ಲೌಕಿಕವು ಪಾರಮಾರ್ಥದೊಳಗಲೌಕಿಕವ ತೆರೆದು ತನ ದೊಂದು ಹೊಸಲೋಕ ಕಟ್ಟಿ ಸಂಪೂರ್ಣಯೋಗ ಬೆರೆದು (ನೆಲಮು. ೩೮–೫). [ಸಂ.]

**ಅಲೌಕಿಕತನ** (ನಾ). ಈ ಲೋಕಕ್ಕೆ ಸೇರದಂತಿರುವಿಕೆ; ಅಸಾಧಾರಣ ಸ್ಥಿತಿ. [ಅಲೌಕಿಕ + –ತನ]

**ಅಲೌಲ್ಯ** (ನಾ). ಚಂಚಲತೆಯಿಲ್ಲದಿರುವುದು ; ಚಾಪಲ್ಯವಿಲ್ಲದಿರು ವುದು ; ಇಂದ್ರಿಯಗಳಿಗೆ ಅಧೀನವಾಗದಿರುವುದು : ನಿತ್ಯಪ್ರಥಿತ ಕಲ್ಯಾಣ ಭಕ್ತಿ ನಿರರ್ಗಳಾಲೌಲ್ಯಾಲಸತ್ವದಲಿ (ಬಸಪು. ೫೭–೯೪). [ಸಂ.]

**ಅಲ್ಕಾಬು** (ನಾ). ಒಂದು ಬಿರುದು ; ಪ್ರಶಸ್ತಿ ; ಮರ್ಯಾದೆ (ಕ). [← **ಅರ.** ಅಲ್ಕಾಬ್ = ಬಿರುದಾವಳಿಗಳು]

**ಅಲ್ಗಳಿಳಿ** (ನಾ). ಉಯ್ಯಾಲೆ (?) : ರಾಜಪುಲಿ ಕುಲಮುದ್ದನ್ ಗೋ ಸಹಸ್ರಪ್ರದಾರುಂ ಪದಲುಂ ಕನ್ಯಾದಾನಮುಂ ಅಲ್ಗಳಿಳಿಯುಂ ಕೊಟ್ಟು ನಿಱಿಸಿದಂ (ಎಕ. VIII, ಸೊರಬ. ೯–೪ ; 800). [?]

**ಅಲ್ಗಿಸು** 'ಅಲುಗಿಸು' ನೋ.

**ಅಲ್ಗು** 'ಅಲುಗು$_1$' ನೋ.
**ಅಲ್ತು** 'ಅಲ್$_1$' ಪರಾ.
**ಅಲ್ಪ** (ಗು). ೧. ಸಣ್ಣದಾದ; ಚಿಕ್ಕದಾದ; ಕೊಂಚ; ತುಸು; ಸ್ವಲ್ಪ: ಗಗನವಿಹಾರಮಲ್ಪಮೆನೆಯುಂ (ಶಾಂತಿಪು. ೧೨-೨೩ ವ); ಆಕಟನ್ನೆಲ್ಲಿ ಹೊಗುವೈ ಕಂದ ಕುಂತಿಯ ಜಠರವಲ್ಪವಲೇ (ಕುವ್ಯಾದ್ರೌ. ೨-೪೭). (ನಾ). ೨. ತುಚ್ಛ; ನೀಚ; ಹೀನ: ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧರಾತ್ರಿಯಲ್ಲಿ ಕೊಡೆ ಹಿಡಿಸಿಕೊಂಡ (ಗಾದೆ); ಅಲ್ಪರ ಸಂಗ ಅಭಿಮಾನ ಭಂಗ (ಗಾದೆ).
ಅಲ್ಪಸ್ವಲ್ಪ = ಎಲ್ಲಿಯೋ ಸ್ವಲ್ಪ; ತುಸ ತುಸ: ಆತನಿಗೆ ಗೊತ್ತಿದ್ದುದು ಅಲ್ಪಸ್ವಲ್ಪ (ರೂಢಿ). [ಸಂ.]
**ಅಲ್ಪಕೆ** (ನಾ). = ಅಲ್ಪ (ದಕ. ೩). [ಸಂ.]
**ಅಲ್ಪಕಾಣಿಕೆ** (ನಾ). (ಬೆಲೆಯಲ್ಲಿ) ಕಡಮೆಯಾದ ಕಾಣಿಕೆ; ಚಿಕ್ಕದಾದ ಕೊಡುಗೆ: ಇಂತಹ ವ್ಯಾಸಂಗ ಕನ್ನಡದಲ್ಲಿ ಅಗತ್ಯವಾಗಿ ಆಗಬೇಕಾದ ಕಾರ್ಯವೆಂದು, ಅದು ಕನ್ನಡಲೋಕಕ್ಕೆ ಅಲ್ಪಕಾಣಿಕೆಯಾಗುವುದೆಂದೂ ಎಣ್ಣಿಸಿ ಈ ಸಮಸ್ಯೆಯನ್ನು ಎತ್ತಿಕೊಂಡಾಗಿದೆ (ಜಗದಾ. ೪). [ಅಲ್ಪ + ಕಾಣಿಕೆ]
**ಅಲ್ಪಕಾಲಿಕ** (ಗು). ಸ್ವಲ್ಪಕಾಲ ಮಾತ್ರ ಇರುವ, —ನಿಲ್ಲುವ. [ಅಲ್ಪ + ಕಾಲಿಕ]
**ಅಲ್ಪಜ್ಞ** (ನಾ). ಕಡಮೆ ತಿಳಿದವನು: ಜೀವಾತ್ಮನು ಅಲ್ಪಜ್ಞ (ಶಕ್ತಿವಿ. ೭). [ಸಂ.]
**ಅಲ್ಪತನ** (ನಾ). ಸಣ್ಣತನ; ನೀಚತನ; ಹೀನಸ್ವಭಾವ: ನಾನೂ ದೇಶ ದೇಶ ನೋಡಿದ್ದೇನೆ. ಈ ಅಲ್ಪತನ ಯಾರಲ್ಲಿಯೂ ಇಲ್ಲ (ದುಂಬಿಕ. ೧೫೮). [ಅಲ್ಪ + -ತನ]
**ಅಲ್ಪತನು** (ನಾ). ಸಣ್ಣದಾದ ಮೈ. [ಅಲ್ಪ + ತನು]
**ಅಲ್ಪತೆ** (ನಾ). = ಅಲ್ಪತನ: ಅಲ್ಪತೆಯ ಭಾವಂಗಳಂ ನೆರೆ ತೊರೆದು (ಶ್ರೀರಾಮಾ. ೧೨-೩೦೭). [ಸಂ. ಅಲ್ಪತಾ]
**ಅಲ್ಪತ್ವ** (ನಾ). ೧. = ಅಲ್ಪತನ. ೨. ತುಂಬ ಕಡಮೆ ಪರಿಮಾಣ. [ಸಂ.]
**ಅಲ್ಪದಂಡ** (ನಾ). ೧. ಸಣ್ಣ ಕೋಲು; ತುಂಡು ಕೋಲು (೩). ೨. ಜುಜುಬಿ ಜುಲ್ಮಾನೆ. [ಅಲ್ಪ + ದಂಡ]
**ಅಲ್ಪದಶನದಂಶ** (ನಾ). ಹಲ್ಲಿನಿಂದ ಸ್ವಲ್ಪ ಕಚ್ಚುವುದು: ಪಾಲ್ಗಡಲ ನೊರೆಯ ಪೊರೆಯ ತೆರೆಯನನುಕರಿಸಿಯುಮಲ್ಪದಶನದಂಶ ಮಾತ್ರಖಂಡನೀಯಕರೆಂಗಳೆನಿಸಿದ ಮಂಡಕಂಗಳುಮಂ (ಸುಕುಮಾ. ೧೧-೨೯ ವ). [ಅಲ್ಪ + ದಶನ + ದಂಶ]
**ಅಲ್ಪದಿನ** (ನಾ). ಕೆಲವು ದಿನ; ಸ್ವಲ್ಪ ದಿನ (ದಕ. ೩). [ಅಲ್ಪ + ದಿನ]
**ಅಲ್ಪದೂಷಿತ** (ನಾ). ಸ್ವಲ್ಪಮಾತ್ರ ದೋಷವುಳ್ಳದು; ಹೆಚ್ಚು ದೋಷವಿಲ್ಲದ್ದು: ನರಪತಿಯುಂ ನೃಪಾಂಗನೆಯರುಂ ನೆರೆದಟ್ಟೆಯಿನಾಡಿ ಪೋದರಾ ಪರಿಜನಮುಂ ಮಹೋತ್ಸವದೊಳೊಂದಿದುದೆಂಬುದಿದಲ್ಪದೂಷಿತಂ (ಕವಿರಾ. ೧-೧೨೧). [ಸಂ.]
**ಅಲ್ಪಪ್ರಕಾಶ** (ನಾ). ೧. ಸ್ವಲ್ಪವಾದ ಬೆಳಕು; ತುಸು ಹೊಳಪು. ೨. ಸ್ವಲ್ಪ ಹೊಳಪುಳ್ಳದು. [ಅಲ್ಪ + ಪ್ರಕಾಶ]
**ಅಲ್ಪಪ್ರಾಣ** (ಗು). ೧. ಸ್ವಲ್ಪವೇ ಶಕ್ತಿಯುಳ್ಳ; ಬಲಹೀನವಾದ. (ನಾ). ೨. [ವ್ಯಾಕ] ಉಚ್ಚರಿಸಲು ಸ್ವಲ್ಪವೇ ಉಸಿರು ಬೇಕಾದ ಕ್, ಗ್, ತ್, ಪ್, ಯ್ ಮುಂತಾದ ಅಕ್ಷರಗಳು: ಉಚ್ಚಾರಣೆಯಲ್ಲಿ ಕೊಂಚ ಉಸಿರು ಬೇಕಾಗುವ ಪಕಾರ ಬಕಾರಗಳಿಗೆ ಅಲ್ಪಪ್ರಾಣಗಳೆಂದೂ ... ಹೆಸರು (ಮಧ್ಯಮ. ೧೪). [ಅಲ್ಪ + ಪ್ರಾಣ]

**ಅಲ್ಪಪ್ರಾಣಾಕ್ಷರ** (ನಾ). [ವ್ಯಾಕ] = ಅಲ್ಪಪ್ರಾಣ ೨: ಮಿಗೆ ನಿಬಿಡ ಬಂಧಮೆಂಬುದು ತಗುಳ್ವುವು ವರ್ಣಂಗಳಗಲದಿರೆ ಮತ್ತಕ್ಕುಂ ನೆಗಟ್ದಲ್ಪಪ್ರಾಣಾಕ್ಷರ ನಿಗದಿತಮೇ ತದ್ವಿಪರ್ಯ್ಯಯೋಕ್ತಂ ಶಿಥಿಲಂ (ಕವಿರಾ. ೨-೬೨). [ಅಲ್ಪಪ್ರಾಣ + ಅಕ್ಷರ]
**ಅಲ್ಪಪ್ರಾಣಾನುಕರಣ** (ನಾ). ಅಲ್ಪಪ್ರಾಣಾಕ್ಷರಗಳಿಂದ ಕೂಡಿದ ಅನುಕರಣ ಶಬ್ದ: ಇವು ಮೊದಲಾದುವಲ್ಪಪ್ರಾಣಾನುಕರಣಂಗಳ್ (ಶಮದ. ಪರಿ. ೧). ಉದಾ: ಗುಬುಗುಬು ಗಬಗಬೆಯೆನುತುಂ ಪರಿವ ಪರಿ ಪೊನಲ್ ಸೊಗಯಿಸುಗುಂ (ಶಮದ. ೫೪ ಪ್ರಯೋ). [ಅಲ್ಪಪ್ರಾಣ + ಅನುಕರಣ]
**ಅಲ್ಪಬುದ್ಧಿ** (ನಾ). ೧. ಸಣ್ಣ ಬುದ್ಧಿ; ಔದಾರ್ಯವಿಲ್ಲದ ಮನಸ್ಸು (ದಕ. ೩). ೨. ಸಣ್ಣ ಬುದ್ಧಿಯುಳ್ಳವನು; ಕ್ಷುದ್ರಮನಸ್ಸುಳ್ಳವನು. [ಅಲ್ಪ + ಬುದ್ಧಿ]
**ಅಲ್ಪಮತಿ** (ನಾ). = ಅಲ್ಪಬುದ್ಧಿ: "ಶಟರಂ ಜಡಾಲ್ಪಮತಿ ... ಕೃಪಣಂ ಕ್ಷುಲ್ಲಕಮುಕ್ಕು" (ನಾನಾರ. ೫೯). [ಅಲ್ಪ + ಮತಿ]
**ಅಲ್ಪವಚೆ** (ನಾ). ಮಿತಭಾಷಿಣಿ; ಸ್ವಲ್ಪವಾಗಿ ಮಾತನಾಡುವವಳು: ನಯವಿದೆ ಶೌಚೆಯಲ್ಪವಚೆ ಸಾಧುಸುರಾಳಿಸುಪೂಜ್ಯೆ ಸಂತತಂ (ಮದತಿ. ೮-೮). [ಸಂ. ಅಲ್ಪವಚಸ್]
**ಅಲ್ಪವಯಿ** (ನಾ). ಚಿಕ್ಕ ವಯಸ್ಸು: ನಾವು ಮಾಡೋದು ಒಂದು, ಆದು ಆಗೋದು ಇನ್ನೊಂದು. ಗೌಡಿತಿ ಪಾಪ, ಹೆಣಮಗಳು; ಮಕ್ಕಳು ಅಲ್ಪವಯಿ; ದೊಡ್ಡ ಆಸ್ತಿ (ಗ್ರಾಮಾಯ. ೩೩೯). [< ಸಂ. ಅಲ್ಪವಯಸ್]
**ಅಲ್ಪವಸುಧೆ** (ನಾ). ಸಣ್ಣ ಭೂಪ್ರದೇಶ (೩). [ಅಲ್ಪ + ವಸುಧೆ]
**ಅಲ್ಪವಿದ** (ನಾ). ಕಡಮೆ ತಿಳಿದವನು: ಘನಪಂಡಿತೋತ್ತಮರಿಲ್ಲದ ಸಭೆಯೊಳು ಸನ್ಮಾನ್ಯರಹರಲ್ಪವಿದರು (ಇಂಚಾಪ. ೧೧೭-೬೨). [ಸಂ. ಅಲ್ಪವಿದ್]
**ಅಲ್ಪವಿರಾಮ** (ನಾ). ವಾಕ್ಯಗಳನ್ನು ಓದುವಾಗ ಅರ್ಥಕ್ಕನುಸಾರವಾಗಿ ಸ್ವಲ್ಪ ನಿಲ್ಲಿಸಿ ಓದಬೇಕಾದ ಸ್ಥಳಗಳನ್ನು ಸೂಚಿಸಲು ಬಳಸುವ ',' ಎಂಬ ಗುರುತು: ಅಲ್ಪವಿರಾಮ ... ಪೂರ್ಣವಿರಾಮಗಳನ್ನು ಅರಿತುಕೊಳ್ಳಬೇಕು (ಮುಂಬಯು. ೧-೮). [ಅಲ್ಪ + ವಿರಾಮ]
**ಅಲ್ಪವೃಷ್ಟಿ** (ನಾ). ಸ್ವಲ್ಪವಾದ ಮಳೆ; ಕಡಮೆ ಮಳೆ: "ಜಡಿ - ತರ್ಜನೇ (ಹೆದರಿಸು), ಅಲ್ಪವೃಷ್ಟ್ಯಾಚ" (ಶಮಧಾ). [ಅಲ್ಪ + ವೃಷ್ಟಿ]
**ಅಲ್ಪವ್ಯಾಹಾರಿ** (ನಾ). ಸ್ವಲ್ಪವಾಗಿ ಮಾತನಾಡುವವನು; ಮಿತಭಾಷಿ: ಅಮಿತನಮಿತಾರ್ಥಾಲ್ಪವ್ಯಾಹಾರಿ ಗಾಣಿಯರ್ಗೆಂಗುಂ (ಶಾಂತಿಪು. ೩-೨೩). [ಸಂ. ಅಲ್ಪವ್ಯಾಹಾರಿನ್ (ಅಲ್ಪ + ವ್ಯಾಹಾರಿನ್)]
**ಅಲ್ಪಶಂಕೆ** (ನಾ). ಮೂತ್ರವಿಸರ್ಜನೆಯೆಂಬರ್ಥದಲ್ಲಿ ನಾಗರಿಕರು ಬಳಸುವ ಗಂಭೀರವಾದ ಮಾತು. [ಅಲ್ಪ + ಶಂಕೆ]
**ಅಲ್ಪಶೀಲ** (ನಾ). ಸಣ್ಣ ನಡತೆಯುಳ್ಳವನು; ಹೀನಸ್ವಭಾವದವನು: ದೋಷಾನುಕೂಲರನಲ್ಪಶೀಲರನೆಮ್ಮನುದ್ಧರಿಸಿ (ಬಸವು. ೫೬-೪೪). [ಅಲ್ಪ + ಶೀಲ]
**ಅಲ್ಪಶ್ರುತ** (ನಾ). ಸ್ವಲ್ಪಮಾತ್ರ ಓದಿ ತಿಳಿದವನು: ಅತಿಗಂಭೀರ ಮೃದೂಕ್ತಿ ವಕ್ತ್ರದೊಳೊಡಂಬಟ್ಟೊಪ್ಪೆ ಕೇಳ್ದಂ ಬಹುಶ್ರುತನಲ್ಪಶ್ರುತನೆನ್ನದೆ (ಶಾಂತಿಪು. ೧-೮). [ಅಲ್ಪ + ಶ್ರುತ]
**ಅಲ್ಪಸರ** (ನಾ). ಸಣ್ಣಕೊಳ; ಕುಂಟೆ; ಹೊಂಡ: "ಸಣ್ಣ ಕೆರೆ" (ಗಂಗಾಮು. ೧೬). [ಸಂ. ಅಲ್ಪಸರಸ್ (ಅಲ್ಪ + ಸರಸ್)]
**ಅಲ್ಪಸರಸಿ** (ನಾ). = ಅಲ್ಪಸರ: "ಬೆಂಚೆ ಪಲವಲವೆನಲ್ ತಾನಲ್ಪಸರಸಿ" (ಶಬ್ದಮಂ. ೩೬). [ಸಂ. ಅಲ್ಪಸರಸೀ]

**ಅಲ್ಪಸಾರ** (ನಾ). ಸ್ವಲ್ಪಶಕ್ತಿ ಅಥವಾ ಸತ್ವವುಳ್ಳದ್ದು : ವಲನೆಂಬ ರಾಕ್ಷಸನ ಶರೀರದಲ್ಲಿ ಹುಟ್ಟಿದ ದೇವೇಂದ್ರನ ಹಸ್ತದಿಂದ ಬಿದ್ದಂಥಾ ಅಲ್ಪಸಾರವಾದ ವಜ್ರವು ವೃತ್ರಾಸುರನ ವಧೆಗೆ ಯೋಗ್ಯವಲ್ಲ (ಕಗವಿ. ೯೯ ಹಾಲಾವಾು). [ಅಲ್ಪ + ಸಾರ್ರ]

**ಅಲ್ಪಸುಖ** (ನಾ). ಸ್ವಲ್ಪವಾದ ಹಿತ; ಕಡಮೆ ಸುಖ : ಮಱೆದುಱಿದೀ ಸಂಸಾರಮುನಱಿಯದರಂತೇನುಮಲ್ಲದಲ್ಪಸುಖಕ್ಕುಂತೆಱಗಿ ಮರುಳಕ್ಕ ಕನಸಿನ ತೊಱೆಯೊಳ್ ನೀರ್ಗುಡಿದು ತಣಿವನಱಸಿದರೊಳರೇ (ಶಾಂತಿಪು. ೪-೯೮). [ಅಲ್ಪ + ಸುಖ]

**ಅಲ್ಪಸುಖಾಶಿ** (ನಾ). ಅಲ್ಪಸುಖಕ್ಕೆ ಆಸೆಪಡುವವನು : ಮುಕ್ತಿಯೊಳಾದ ನಂಬುಗೆ ಮನಂಬುಗದಲ್ಪಸುಖಾಶಿಗೆಂಬ ಲೋಕೋಕ್ತಿಯಿಂ (ಶಾಂತಿಪು. ೧-೮೬). [ಸಂ. ಅಲ್ಪಸುಖಾಶಿನ್ (ಅಲ್ಪ + ಸುಖಾಶಿನ್)]

**ಅಲ್ಪಸೂನು** (ನಾ). ಮಿತಸಂತಾನವುಳ್ಳವನು : ಅಲ್ಪಸೂನುವನಿಮಿತ್ತ ಕ್ರೋಧಿ ಸಿಂಹೋದ್ಭವಂ (ಜಾತತಿ. ೧೬-೫). [ಅಲ್ಪ + ಸೂನು]

**ಅಲ್ಪಾಂಶ** (ನಾ). ಸ್ವಲ್ಪ ಭಾಗ. [ಅಲ್ಪ + ಅಂಶ]

**ಅಲ್ಪಾಕ, ಅಲಪಾಕು** (ನಾ). ಪೆರು ದೇಶದ ಚತುಷ್ಪಾದಿ ಪ್ರಾಣಿ; ಒಂಟೆಯ ಜಾತಿಗೆ ಸೇರಿದ, ಉದ್ದವಾದ ತುಪ್ಪಟದ ಕೂದಲುಳ್ಳ ಪ್ರಾಣಿ: ಈ ಉದ್ದವಾಗಿಯೂ, ರೇಶ್ಮೆಯಂತೆ ನವುರಾಗಿಯೂ ಇರುವ ಇದರ ತುಪ್ಪಟದಿಂದ ಸೊಗಸಾದ ಬಟ್ಟೆಯು ತಯಾರಾಗುತ್ತದೆ. **ಅಲಪಾಕು** : ರೇಶಿಮೆ ಅಲಪಾಕಿನ ಜಾಕೀಟುಗಳನ್ನು ತೊಡುವನು (ಹೂಬಿಸಿ. ೭೪).

**ಅಲ್ಪಾಕಬಟ್ಟೆ** = ಅಲ್ಪಾಕಪ್ರಾಣಿಯ ಕೂದಲಿನಿಂದ ತಯಾರಿಸಿದ ಬಟ್ಟೆ, —ವಸ್ತ್ರ. [← ಇಂ. Alpaca]

**ಅಲ್ಪಾಕ್ಷರ** (ನಾ). ಕಡಮೆ ಅಕ್ಷರಗಳುಳ್ಳದ್ದು : ಸೂತ್ರವು ಅಲ್ಪಾಕ್ಷರ ಮತ್ತು ಅಸಂದಿಗ್ಧವಾಗಿರಬೇಕು (ರೂಢಿ). [ಅಲ್ಪ + ಅಕ್ಷರ]

**ಅಲ್ಪಾಚಮನ** (ನಾ). = ಅಲ್ಪಶಂಕೆ (೩). [ಅಲ್ಪ + ಆಚಮನ]

**ಅಲ್ಪಾನಲ್ಪ** (ಗು). ಚಿಕ್ಕದಾದ ಮತ್ತು ದೊಡ್ಡದಾದ.

**ಅಲ್ಪಾನಲ್ಪವಿಚಾರ** = ಚಿಕ್ಕ ಮತ್ತು ದೊಡ್ಡ ವಿಚಾರ: ಅಲ್ಪಾನಲ್ಪ ವಿಚಾರಗಳಲ್ಲಿ ಭೇದಭಾವವನ್ನೆಣಿಸದೆ ಸೇವಾವಕಾಶ ದೊರೆತೀತೇ ಎಂದು ಅವಳು ಸದಾ ಹಾತೊರೆಯುತ್ತಿದ್ದಳು (ಪುನರು. ೪೯೩). [ಅಲ್ಪ + ಅನಲ್ಪ]

**ಅಲ್ಪಾಯು** (ನಾ). ಕಡಮೆ ಆಯುಸ್ಸುಳ್ಳವನು : ನಾಕಸಂಭೂತನದೇ ಕಲ್ಪಾಯುವಾದಂ (ಕಾದಂಊ. ೬೯೯); ವಿಸ್ಮಯಮಾದಪುದಲ್ಪಾಯುವಲ್ಲ ನಕ್ಕುಂ ದನುಜಂ (ಪಂರಾಮಾ. ೧೪-೩೨). [ಅಲ್ಪ + ಆಯು]

**ಅಲ್ಪಾಯುಷ** (ನಾ). = ಅಲ್ಪಾಯು : ಅಲ್ಪಾಯುಷನುಮಾಸನ್ನಭವ್ಯನಪ್ಪುದಂ ಜಲಕ್ಕನಱಿದು (ಸುಕುಮಾ. ೪-೩೮ ವ). [ಅಲ್ಪ + ಆಯುಷ]

**ಅಲ್ಪಾಯುಷ್ಯ** (ನಾ). ಸ್ವಲ್ಪವಾದ ಆಯುಸ್ಸು : ತರುಣಿಗಲ್ಪಾಯುಷ್ಯವೆನುತಂ ಹರಸಲೊಲ್ಲದೆ ಹೋದನೇ ಶಿವ (ಬಸವು. ೮೬-೪೪).
[ಅಲ್ಪ + ಆಯುಷ್ಯ]

**ಅಲ್ಪಾವಧಿ** (ನಾ). ಸ್ವಲ್ಪಕಾಲ ಮಾತ್ರದ ವಾಯಿದೆ. 'ಅಲ್ಪಾವಧಿ ಸಾಲ' ಪರಾ. [ಅಲ್ಪ + ಅವಧಿ]

**ಅಲ್ಪಾವಧಿಸಾಲ** (ನಾ). ಸ್ವಲ್ಪ ಕಾಲದಲ್ಲಿಯೇ ಹಿಂತಿರುಗಿಸಬೇಕಾದ ಸಾಲ : ಅಲ್ಪಾವಧಿ ಸಾಲಕ್ಕೆ ಬಡ್ಡಿದರ ಒಂದು ವಿಶಿಷ್ಟರೀತಿಯದಾಗಿರುತ್ತದೆ (ರೂಢಿ). [ಅಲ್ಪಾವಧಿ + ಸಾಲ]

**ಅಲ್ಪಿಸು** (ಕ್ರಿ). ಕೀಳುಮಾಡು ; ಕಡೆಗಣಿಸು (?): ಪರರ ದುರ್ಗುಣವೆತ್ತಿ ನುಡಿಯದಿರು ಕಾಂಕ್ಷೆಯಿಂ ಪರರೊಡವೆಯಲ್ಪಿಸದಿರಲ್ಪರೊಡಸಾಡದಿರು (ಗುರುಚಾ. ೧೬-೪೬). [ಅಲ್ಪ + -ಇಸು]

**ಅಲ್ಪು** 'ಅಲುಪ' ನೋ.

**ಅಲ್ಪುಮನಸು** (ನಾ). ಸಣ್ಣ ಮನಸ್ಸು : ಮುಪ್ಪುರದೊಳಗಿದಕೆ ಎದುರು ಗಾಣನೆಂದು ಅಲ್ಪುಮನಸು ಮಾಡದೆ ವಾಸವಾದನು ಇಲ್ಲಿ (ತೀರ್ಥಮ. ೧೬೬). [< ಸಂ. ಅಲ್ಪಮನಸ್]

**ಅಲ್ಪೋಪಜಲ್ಪ** (ನಾ). ೧. ಮಿತವಾದ ಭಾಷೆ. ೨. ಮಿತಭಾಷಿ. ೧, ೨ : ಲೋಕಪ್ರತೀತ್ಯಾಶ್ರಯ ಸಕಳಕಳಾಲೀಲಾಕರಾಲ್ಪೋಪಜಲ್ಪಂ (ಕವಿರಾ. ೩-೨೧೬). [ಅಲ್ಪ + ಉಪಜಲ್ಪ]

**ಅಲ್ಬತ್, ಅಲ್‌ಬತ್, ಅಲಬತ್, ಅಲ್ಬತ** (ಅ). ಅವಶ್ಯವಾಗಿ ; ಕಡ್ಡಾಯವಾಗಿ ; ನಿಸ್ಸಂದೇಹವಾಗಿ : ಅಲ್ಬತ್ ನಮ್ಮ ಇಚ್ಛೆಯೇ ಪೂರ್ಣವಾಗುವುದು (ಕನ್ನಡಿ. ೧೦೯). **ಅಲ್‌ಬತ್** : ಅಲ್‌ಬತ್ ಸಲ್ಲುತ್ತದೆ (ದೌಲತ್. ೭೯). **ಅಲಬತ್** : ಅದಕ್ಕೇನು ಬಂದಿದೆ, ಅಲಬತ್ ಹೇಳುವೆನು (ದೋರಾಕ. ೭); ನೀ ಅಲಬತ್ ಆ ಕೆಲಸ ಮಾಡು (ಗ್ರಾಮಾಯ. ೧೨೪). **ಅಲ್ಬತ** : ಅಲ್ಬತ ಆ ಶೀಮೆಮೇಲೆ ಕುಂಪನಿ ಸರಕಾರದಿಂದ ಅಮಲದಾರರು ಮೊಕರರು ಆದಾರು (ರಾಜೇಂದ್ರ. ೧೦೪).
[← ಅರ. ಅಲ್‌ಬತ್ = ನಿಸ್ಸಂದೇಹವಾಗಿ ; ಹಿಂ. ಅಲಬತ್ತಾ]

**ಅಲ್ಬತ** 'ಅಲ್ಬತ್' ನೋ.

**ಅಲ್ಬಿದಾಯ** (ನಾ). ೧. ಬೀಳ್ಕೊಡುಗೆಯ ಗೀತೆ. ೨. ಮೊಹರಮ್ ಹಬ್ಬದ ಕಡೆಯ ದಿನ ಮುಸ್ಲಿಮರು ಹಾಡುವ ಚರಮಗೀತೆ : ಬಾಬಯ್ಯನ ಹಸ್ತಗಳನ್ನು ಕೆರೆಯಲ್ಲಿ ತೊಳೆದು 'ಅಲ್ಬಿದಾಯ' ಹಾಡುತ್ತಾ ಅವನು ಬರುವಾಗ ನೋಡಬೇಕು (ಊರುಕ. ೩೧). [← ಅರ. ಅಲ್ಬಿದಾ]

**ಅಲ್ಮೇರ** 'ಅಲ್ಮೈರ' ನೋ.

**ಅಲ್ಮೈರ, ಅಲಮಾರು, ಅಲಿಮಾರಿ, ಅಲುಮಾರು, ಅಲ್ಮೇರ** (ನಾ). ಬೀರು; ಕಪಾಟು. **ಅಲಮಾರು** : ಕಾಗದಪತ್ರಗಳು ಸುಮಾರು ೪೦-೫೦ ಜಡ್ಡಿ ಕಛೇರಿಯ ಅಲಮಾರಿನೊಂದರಲ್ಲಿ ಬಿದ್ದಿವೆಯೆಂದು ಹೇಳಿದನು (ಘೂರಾಣಿ. X, ಪಂಚ); ಅನ್ಯದೇಶ್ಯಗಳಿಗೆ ಇನ್ನು ಕೆಲವು ಉದಾಹರಣೆಗಳು ... ಪೋರ್ಚುಗೀಸಿನಿಂದ ಬಂದವು ಅಲಮಾರು, ಸಾಬೂನು, ಪಾದ್ರಿ, ಇಸ್ತ್ರಿ, ಮೇಜು (ಮಧ್ಯಮ. ೧೬೬); ಪುಸ್ತಕಗಳಿರುವುದು ಅಲಮಾರಿನಲ್ಲಿ (ಸುವಸಂ. ೪). **ಅಲಿಮಾರಿ** : ಗೋಡೆಯ ಬದಿಯಲ್ಲಿ ಎರಡು ಮೂರು ದೊಡ್ಡ ಪೆಟ್ಟಿಗೆಗಳು, ಅಲಿಮಾರಿಗಳು ಇದ್ದುವು (ಧೂಮಮು. ೧೦೨). **ಅಲುಮಾರು** : ಅಡಿಗೆ ಮನೆ ಅಲುಮಾರಿನಲ್ಲಿ ಸೀಸೆಯಲ್ಲಿ ಕಲ್ಸಕ್ಕರೆ ಇಟ್ಟಿದ್ದೇನೆ (ಮಹಾಗ. ೮೫). **ಅಲ್ಮೇರ** : ಅಲ್ಮೇರಾಗಳನ್ನೆಲ್ಲಾ ತೆಗೆದುನೋಡಿ (ನಡೆದಾ. II, ೧೦೭೬).
[← ಪೋರ್ಚು. Almirah]

**ಅಲ್ಯೂಮಿನಿಯಂ** (ನಾ). ಹಗುರವಾದ ಬೂದುಬಣ್ಣದ ಒಂದು ಲೋಹ. [← ಇಂ. Aluminium]

**ಅಲ್ಲ**1 (ನಾ). ಹಸಿಯ ಶುಂಠಿ ; ಕಾರಗೆಣಸು : "ಆರ್ದ್ರಕಂ, ಶೃಂಗಬೇರಂ —ಈ ೨ ಅಲ್ಲದ ಕೊಂಬು" (ಹಲಾಯು.೧೧೧-೪೬೨); ಕುಡಿಬಿದಿರ ಕುಡಿಯ ಮಾವಿನ ಮಿಡಿಯ ಮೂರುದಿನ ಮೆಣಸುಗಡಲೆಯ ಪುಡಿಯೊಳಡಸಿದಲ್ಲವಲ್ಲಣಿಗೆಯ ಚಿಕ್ಕಣಂಗಳಂ ಸವಿಸವಿದು (ಪಂಪಭಾ.೪-೮೭ವ); ಅರೆದುರ್ದಿನ ಬೇಳೆಯನೊಂದಿರೆ ಮೊಸರಥಿ(ಡಿ) ನೀರೊಳಿಂಗು ಜೀರಗೆ ಕೊತ್ತುಂಬರಿ ಮೆಣಸಲ್ಲಮಿವಿನಿತಂ ಬೆರಸಿಡ್ಡಲಿಗೆಯನಡಕ್ಕೆ ಕಂಪಂ ಕುಡುಗುಂ (ಲೋಕೋಪ. ೮-೧೧); ಮಾಗುಳಿವೇರ್ ಮೊಳೆಯಲ್ಲ ಮೇಲೆ ಕಮ್ಮಿಪ್ಪ ಸುಭದ್ರೆ ಮಾಮಿಡಿ ... ಅದಿಯಾದುಪ್ಪಿನಕಾಯ್ಗಳಂ (ಲೀಲಾವ. ೫-೭೧); ಅಲ್ಲವ ಮೆಲಿದೂದಲು ಕಿವಿಯೊಳಗೀ ಸಲ್ಲಲಿತಾಂಗಿಯೇಳುವಳು (ಅಂಜಜ. ೭-೧೦೭); ಹಸಿಯ ಅಲ್ಲವು ಲೇಸು ಬಿಸಿಯ ಪಳಿದೆಯು ಲೇಸು ಹುಸಿ ಲೇಸು ಕಳ್ಳ ಹೆಣ್ಣಿಂಗೆ ಬೈಗಿನ ಬಿಸಿಲು ಲೇಸು (ಸರ್ವಜ್ಞ. ೧೧೧೭).
[ಪ್ರಾ. ಅಲ್ಲಯ. / ತಮಿ. ತೆಲು. ಅಲ್ಲ (< ಸಂ. ಆರ್ದ್ರಕ)]

**ಅಲ್ಲ₂** 'ಅಲ್₁' ಪರಾ.

**ಅಲ್ಲಕಲ್ಲೊಳ** 'ಅಲ್ಲಕಲ್ಲೋಲ' ನೋ.

**ಅಲ್ಲಕಲ್ಲೋಲ,** ಅಲ್ಲಕಲ್ಲೊಳ, ಆಲ್ಲೋಲಕಲ್ಲೋಲ (ನಾ). ೧. ದೊಡ್ಡದೊಡ್ಡ ತೆರೆಗಳೇಳುವುದು; ಬಲವಾದ ಕ್ಷೋಭೆ; ಮಹತ್ತರವಾದ ಗದ್ದಲ. ೨. ಅಸ್ತವ್ಯಸ್ತವಾಗಿರುವುದು; ಚೆಲ್ಲಾಪಿಲ್ಲಿಯಾಗಿರುವುದು; ತಿರುಗು ಮುರುಗಾಗಿರುವುದು: ಪಾಂಡವ ಬಲಮೆಲ್ಲಮನಲ್ಲಕಲ್ಲೋಲಂಮಾಡಿ (ಪಂಪಭಾ. ೧೧-೬೦ ವ). **ಅಲ್ಲಕಲ್ಲೊಳ:** ೧. ಸಡಗರದೇೞ್ಗೆಯುಂ ಕಳಕಳಧ್ವನಿಯುಂ ಬೆರಸಾಡುವಂತೆರಟ್ಟಡೆಯೊಳಮಾಗಳೊರ್ಮೊದಲೆ ಪಲ್ಲಣಮಿಕ್ಕುವುದಲ್ಲಕಲ್ಲೊಳಂ (ಪಂಪಭಾ. ೧೩-೩೩). **ಆಲ್ಲೋಲಕಲ್ಲೋಲ:** ೧. ರಾಜ್ಯದಲ್ಲಿ ಆಲ್ಲೋಲಕಲ್ಲೋಲಗಳೇಳಬಹುದು (ಶಾಂತಲಾ. ೧೮); ದೇಶದಲ್ಲೆಲ್ಲ ಅಲ್ಲೋಲಕಲ್ಲೋಲವನ್ನುಂಟುಮಾಡಿದರು (ಸೇನಾಹ. ೬೪).
[ದೇ. ‖ ತಮಿ. ಮಲ. ಅಲಙ್ಕೋಲಂ; ತೆಲು. ಅಲ್ಲಕಲ್ಲೋಲ. / ಸಂ. ಉಲ್ಲಲಕಲ್ಲೋಲ, ಉಲ್ಲೋಲಕಲ್ಲೋಲ]

**ಅಲ್ಲಖಲ್ಲೆ** (ನಾ). = ಅಲ್ಲಕಲ್ಲೋಲ (?): ಪಾಂಡವರ ಪಾಳಯಮುಮಂ ನೆಱೆ ಸುತ್ತಿಮುತ್ತಿದಂ ನಡುವಿರುಳಲ್ಲಖಲ್ಲೆಗೊಳಗಪ್ಪಿನೆಗಂ ಕಟಕಾಂಗನಾದಿಗಳ್ (ಮಹಾನೀ. ೧೩-೨೯). [?]

**ಅಲ್ಲಗಳೆ** (ಕ್ರಿ). ೧. ನಿರಾಕರಿಸು. ೨. ಕಡೆಗಣಿಸು; ಕೀಳಾಗಿ ಎಣಿಸು: ಮುಳಿದಲ್ಲಿ ಮುಳಿದೆಳಸಿದುದನೆಳಸಿಯಲ್ಲಗಳೆದುದೆಲ್ಲವನಲ್ಲಗಳೆದು ಬಳಿವಿಡಿದಿನಿಯನ ಪಾದಾರವಿಂದದ ನೆಳಲಂತೆ ನೇಮದೊಳಿಹುದು (ಹದಿಬ. ೩-೪೧); ಅನುಭವದ ರುಚಿಯನ್ನು ನಾವು ಅಲ್ಲಗಳೆಯಲಾರೆವಷ್ಟೆ (ಗಾಳಿಗು. ೪೦); ಸಿದ್ಧಾರ್ಥನು ತನ್ನ ಇಷ್ಟಾರ್ಥವನ್ನು ಸಲ್ಲಿಸದೆ ತನ್ನನ್ನು ಅಲ್ಲಗಳೆದುದು ದೇವದತ್ತನಿಗೆ ಸಹಿಸಲಿಲ್ಲ (ಹಿಂಕಿರು. ೩೩); ನನ್ನ ಮಾತನ್ನು ನೀನು ಅಲ್ಲಗಳೆಯಬಾರದು (ಕಾವೇರಿ. ೨೪). [ಅಲ್ಲ₂ + ಕಳೆ₁]

**ಅಲ್ಲಗಳೆಯಿಸು** (ಕ್ರಿ). ನಿರಾಕರಿಸುವಂತೆ ಮಾಡು: ಕಡೆಗಣಿಸುವಂತೆ ಮಾಡು: ನಾನಂದುದನ್ನು ನಾಳೆಯದಿನ ಅಲ್ಲಗಳೆಯಿಸಬಹುದು (ಯಕ್ಷಬ. ೬ ಮು.) [ಅಲ್ಲಗಳೆ + -ಇಸು₃]

**ಅಲ್ಲಟಪಲ್ಲಟ** (ನಾ). ೧. ಅಲ್ಲೋಲಕಲ್ಲೋಲ (ಸ್ಯಾಂಡರ್). ೨. ಅಸ್ತವ್ಯಸ್ತ; ತಲೆಕೆಳಗು; ತಿರುಗುಮುರುಗು.
[ಪ್ರಾ. ಅಲ್ಲಟ್ಟಪಲ್ಲಟ್ಟ]

**ಅಲ್ಲಡ** (ಗು). ತಿಳಿವಳಿಕೆಯಿಲ್ಲದ: ನಡುವೆ ಇರುವ (ಶಾಮಲಾದೇವಿಯ) ಎರಡು ಗಂಡುಮಕ್ಕಳು ಏನೂ ತಿಳಿಯದ ಅಲ್ಲಡ ಹಸುಳೆಗಳು (ಹಕ್ಕಿಸೋ. ೬೬). [← ಮರಾ. ಅಲ್ಲಡ್ = ಅನುಭವವಿಲ್ಲದ, ತಿಳಿವಳಿಕೆ ಇಲ್ಲದ]

**ಅಲ್ಲಡಂ,** ಅಲ್ಲಡೆ (ಅ). ಹಾಗಿಲ್ಲದಿದ್ದರೆ; ಇಲ್ಲವಾದರೆ; ಅಲ್ಲದಿದ್ದರೆ: ಮರಮಾಚಿ ನಿನ್ನಣುಗನಂ ಕೊಂದನಲ್ಲಡಂ ತರಳ ಮಡಿವನೆ (ತುರಂಗ. ೬೦-೩೦): ಕೊಡಿಸಿದರೆ ಜೀಯ ನಮಗಪ್ಪಣೆಯ ಪಾರ್ಥನಂ ಪಿಡಿತಹೆವು ವೇಗದೊಳ್ ಭೂಪ ನೀನಲ್ಲಡಂ ನಡೆ ಜಗಳಕವ್ಮೆನಲ್ ಬಭ್ರುವಾಹನ ಸುಭಟರಂ ನೋಡಿ ಸಂತಸದೊಳು (ತುರಂಗ. ೮೨-೪). **ಅಲ್ಲಡೆ:** ಮಳೆಯ ಕತ್ತಲೆಯೊ? ಅಲ್ಲಡೆ ನಭೋಗ್ನಿಮುಖಿಯಿಂದುಗುವ ಕಬ್ಬೊಗೆಯೊ? (ಗೊಲ್ಲೊಘಾ. ೧೩-೭). [< ಅಲ್ಲದೊಡೆ, ಅಲ್ಲದಡೆ]

**ಅಲ್ಲಡೆ** 'ಅಲ್ಲಡಂ' ನೋ.

**ಅಲ್ಲಣಿ** 'ಅಲ್ಲಳಿ' ನೋ.

**ಅಲ್ಲಣಿಗೆ** (ನಾ). = ಅಲ್ಲಳಿ: "ಅಲ್ಲಣಿಗೆ = ಮೇಳಂ" (ಶಮದ. ಪರಿ. ೨); "ಅಲ್ಲಣಿಗೆ ಪ್ರಮೇಳದೊಳ್" (ಕರ್ಣಾನಿ. ೨೭); ಅಲ್ಲವಲ್ಲಣಿಗೆಯ ಚಿಕ್ಕಣಂಗಳಂ ಸವಿಸವಿದು (ಪಂಪಭಾ. ೪-೮೭ ವ); ನಿನ್ನ ಮನದನ್ನ ತನದ ಮೋಹನ ಮಂತ್ರವು ಬಲ್ಲವಲ್ಲಭ ಕೇಳಿಯ ಅಲ್ಲಣಿಗೆಯು (ಮಂತ್ರಶ. ೯೩-೭). 'ಅಲ್ಲಣಿಗೆಗಾಳೆಗ', 'ಅಲ್ಲಣಿಗೆಮುಳಿಸು' ಪರಾ.
[?. / ಪ್ರಾ. ಅಲ್ಲಿಯಾವಣ = ಒಟ್ಟುಗೂಡಿಸುವಿಕೆ]

**ಅಲ್ಲಣಿಗೆಗಾಳೆಗ** (ನಾ). ವಿನೋದಕ್ಕಾಗಿ ಮಾಡುವ ಯುದ್ಧ: ಶರವರ್ಷಮಯಮಾಗೆ ದೆಸೆಯೆಲ್ಲಮಂ ಪರ್ಬಿರ್ಪ ದಮಿತಾರಿಯೆಬ್ಬರಮಂ ಕಂಡು ಜಿನಚಂದ್ರಂ ತಮ್ಮನಂ ಪೇೞ್ದಲ್ಲಣಿಗೆ ಗಾಳೆಗಂಗಾದುತಿರ್ಪುದಂ (ಶಾಂತಿಪು. ೪-೪೩ ವ). [ಅಲ್ಲಣಿಗೆ + ಕಾಳೆಗ]

**ಅಲ್ಲಣಿಗೆಗೊಳ್** (ಕ್ರಿ). ಜೊತೆಗೂಡು: ಸೊಲ್ಲಿಸುತಿರೆ ಬಂದಲ್ಲಣಿಗೆಗೊಂಡು ಪೊಣ್ಮುತೆ ಕೊಲ್ಲಣಿಸುವರು ಜುಬಿ ನುಡಿವರೂೞಿಗವೆಣ್ಗಳ್ (ಚಿಕವಿ. ೪-೩೨). [ಅಲ್ಲಣಿಗೆ + ಕೊಳ್₁]

**ಅಲ್ಲಣಿಗೆಮುಳಿಸು** (ನಾ). ನಟನೆಯ ರೋಷ; ಹುಸಿಮುನಿಸು: ಪೆಱತೊಂದು ತಾಣದೊಳವಚಜಮಾದ ಪಟವೆಟದಿನಿಲ್ಲದ ದೋಷಮುನಿ(ಲ್ಲ)ಟ್ಟಲ್ಲಣಿಗೆಮುಳಿಸಂ ಮುಳಿದೊಲ್ಲದೆ ಪೋಪಸನೆರಡಿಲ್ಲದೆ ನಲ್ಲಳ್ ಪಿಡಿದು (ಶಾಂತಿಪು. ೮-೧೦೪ ವ). [ಅಲ್ಲಣಿಗೆ₁ + ಮುಳಿಸು]

**ಅಲ್ಲದು** 'ಅಲ್₁' ಪರಾ.

**ಅಲ್ಲದೆ** 'ಅಲ್₁' ಪರಾ.

**ಅಲ್ಲದೇ** 'ಅಲ್₁' ಪರಾ.

**ಅಲ್ಲಪ್ಪ** (ನಾ). ೧. ಒಬ್ಬಾತನ ಹೆಸರು: ಸೋಮಂಣನವರ ಭ್ರಾತೃನಾಗಂಣ ಸಿಂಗಂಣ ಅಲ್ಲಪ್ಪ ಭೊಪ್ಪಿಶೆಟ್ಟಿಯುಂಬಿವರೆಲ್ಲರಂ (ಎಕ. XII, ತಿಪಟೂ. ೧೨-೪೬; 1285). ೨. ಅಲ್ಲವೆಂದು ಹೇಳುವವನು: ಅಲ್ಲಪ್ಪನ ಚಾವಡಿಯಲ್ಲಿ ಅಲ್ಲಪ್ಪ, ಹೌದಪ್ಪನ ಚಾವಡಿಯಲ್ಲಿ ಹೌದಪ್ಪ (ಗಾದೆ).
[ಅಲ್ಲ ? + ಅಪ್ಪ₁]

**ಅಲ್ಲಮ್ಮ** (ನಾ). ಒಬ್ಬಳ ಹೆಸರು; ಒಂದು ಹೆಸರು: ಅನ್ತಿಯ ಸುಗ್ಗಯ್ಯನು ಬಿಡಿ ಪೊನ್ನಯ್ಯನುಂ ಅಲ್ಲಮ್ಮನುಂ ಬಯ್ಯರ ಜೋಗನುಂ ಇಂತಿನಿಬರುಂ ಸಾಕ್ಷಿಯಾಗೆ ಕೊಟ್ಟರ್ (ಎಕ. XI, ಹೊಳಲ್ಕೆ. ೩೦-೧೩; 964).
[ಅಲ್ಲ₀ + ಅಮ್ಮ₁]

**ಅಲ್ಲರ** (ನಾ). ಪ್ರೀತಿಪಾತ್ರರ ಅಗಲಿಕೆ; ವಿರಹ (ಚತುನಿ. I-೮೫ ಕಿ). [?]

**ಅಲ್ಲವಲ್ಲಣಿಗೆ** (ನಾ). ಹಸಿಯ ಶುಂಠಿಯ ಬೆರಕೆ, —ಮಿಶ್ರಣ: ಬೆಳ್ಳಿಯ ಸಿಪ್ಪುಗಳೊಳ್ . . . ಕುಡಿಬಿದಿರ ಕುಡಿಯ ಮಾವಿನ ಮಿಡಿಯಮಾರುದಿನ ಮೆಣಸುಗಡಲೆಯ ಪುಡಿಯೊಳಡಸಿದಲ್ಲವಲ್ಲಣಿಗೆಯ ಚಿಕ್ಕಣಂಗಳಂ ಸವಿಸವಿದು (ಪಂಪಭಾ. ೪-೮೭ ವ). ℙ ಈ ಶಬ್ದ 'ಅಲ್ಲದಲ್ಲಣಿಗೆ' ಎಂದಿರಬಹುದು. [ಅಲ್ಲ₁+ ಅಲ್ಲಣಿಗೆ]

**ಅಲ್ಲಳಿ,** ಅಲ್ಲಣಿ (ನಾ). ಮೇಳ; ವಿನೋದ. 'ಅಲ್ಲಳಿಗಾಳೆಗ' ಪರಾ. **ಅಲ್ಲಣಿ:** "ಅಲ್ಲಣಿಯೆನಲ್ಸಬ್ಬವಮುಮೆಂದು ಮೇಳಮುಂ" (ಕಬ್ಬಿಕೈ. ೭೭); ಪಲ್ಲಟದ ಘುಲ್ಲಣೆಯಲ್ಲಣಿಯ ಗಂಡುಗೋಗಿಲೆಯಿಂಚರಕ್ಕೆ (ರಾಮಾಶ್ವ. ೭೩-೪). [?]

**ಅಲ್ಲಳಿಗಾಳೆಗ** (ನಾ). ವಿನೋದಕ್ಕಾಗಿ ಮಾಡುವ ಯುದ್ಧ; ಹುಸಿಯುದ್ಧ: ಅಂತಮೋಘಾಸ್ತ್ರ ಧನಂಜಯಂ ತನ್ನಮೋಘಾಸ್ತ್ರಂಗಳಂ ಕಡಿದೊಡೆ ಸಾಮಾನ್ಯಾಸ್ತ್ರಂಗಳೊಳ್ ಧರ್ಮಪುತ್ರಂಗೆ ತನ್ನ ನುಡಿದ ನುಡಿವಳಿಯಂ ನೆನೆದು ಅಲ್ಲಳಿಗಾಳೆಗಂಗಾದೆ (ಪಂಪಭಾ. ೧೧-೪೩ ವ). 'ಮೇಳಗಾಳೆಗ' ಪರಾ. [ಅಲ್ಲಳಿ + ಕಾಳೆಗ]

**ಅಲ್ಲಾ₁** 'ಅಲ್' ಪರಾ.

**ಅಲ್ಲಾ₂** (ನಾ). ದೇವರು: ಅಲ್ಲಾ ಹಜರತ್ ಕದರೆ ಕುದರತ್ತು ಕುರಶೆದರಾಯತ್ ದಾರಾದಿರಾಯತ್ ಸುಲ್ತಾನೆ ರೂಂಕಲದಲ್ಲಾ ಹೂಮುಲ್ ಕುಹೂ ಇವರು (ರಾಜೇಂದ್ರ. ೧೯೯); "ಇಂದೂ ಅಲ್ಲಾನ ಸಂಕೇತವಿದೆ . . . ಅದರ ವಿರುದ್ಧ ನಾನು ಬಾಳಬೇಕೆ?" (ದಕ್ಷಿನ. ೫೩).
[← ಅರ. ಹಿಂ. ಅಲ್ಲಾಹ್]

**ಅಲ್ಲಾಟ, ಅಳ್ಳಾಟ** (ನಾ). ೧. ಅಲುಗಾಡುವುದು; ಕಂಪನೆ; ನಡುಕ; ಮಿಡಿತ: ಬಗೆಯಂ ತೆಗೆಯನಲ್ಲಾಟವುಂ ಕಾಟಮಂ ನೋವುದಂ ಸಾವುದ ನೆಲ್ಲಂದದಿಂ (ಪಂಪಭಾ. ೫-೪೩); ಉಗುರೊಳು ಠಜವನೆದೆಯೊಳಲ್ಲಾಟಮಂ ಕೈಯ ಪೊದಲೊಳು ಮಿಡುಕಂ . . . ಅರೆಯ್ದು ಕಾಣದೆ ನೊಂದಳು (ಹಚಹಾ. ೧೨-೨೬); ನೀಳ್ದ ಕಣ್ಗಳುಂ ಸೆಳೆನಡುವಿನಲ್ಲಾಟವುಂ ಕಂಡು ಪೊಜವಾಜಿಂದೇಜಿಆರ್ತುರ್ನವಿಲ್ಲ (ಕಬ್ಬಿಕಾ. ೭೮). ೨. ಚಂಚಲತೆ; ಆಕರ್ಷಣೆ: ನೋಟದಮರರ ನಯನಗಳಿಗಲ್ಲಾಟವೆನೆ ಪಯಚಕ್ರಗತಿಗಳ ತೋಟಕಾಜರು ಹೊಕ್ಕು ತಾಗಿದೆರುಭಯಸೇನೆಯಲಿ (ಕುವ್ಯಾಭೀ. ೪-೨೫); ಒಂದಿನಿಸಲ್ಲಾಟವುಂಟೋಜೆವಿಡಿದ ಬಾಯ್ದೆಜೆಯುಂಟು (ಭರಚ. ೧-೭೦). **ಅಳ್ಳಾಟ**: ೧. ಕುವಲಯದಳನಯನೆಯ ನೋಟಂ ತನ್ನ ಮನದೊಳಳ್ಳಾಟಮಂ ಪಡೆಯೆ (ಪಂಪಭಾ. ೪-೪೧ ವ); ಮನದೊಳಳ್ಳಾಟಮಿಲ್ಲದರಿನೃಪಕೋಟಿಯನಾಟರಲೆಂದಾಸ್ಫೋಟಿಸಿ (ಪಂಪಭಾ. ೧೨-೧೮ ವ).

[< ಅಲ್ಲಾಡು]

**ಅಲ್ಲಾಡಿಸು, ಅಳ್ಳಾಡಿಸು** (ಕ್ರಿ). ೧. ಅಲುಗುವಂತೆ ಮಾಡು; ಚಲಿಸು: ಆಕೆಯ ಸೆಳೆನಡು ನೋಡಿದರ ಮನಮನಲ್ಲಾಡಿಸುಗುಂ (ಮಲ್ಲಿಪು. ೩-೬೫); ತರುಣಹರಿಣಾಕ್ಷಿ . . . ಬಂದಳ್ ನೆರವಿಯ ನೋಟಕರ ಮನಮನಲ್ಲಾಡಿಸುತುಂ (ಧರ್ಮಾಮೃ. ೭-೧೮೮); ಪಾಡಜಿದೋಲಗೆ ಗೊಟ್ಟಾಚೆ ಶಿರವನಲ್ಲಾಡಿಸುತಿಹನು ನೋಳ್ಪವರಾ (ಭರಚ. ೧-೩೭); "ಇದಕಿಂತ ಆಶ್ಚರಿಯು ಏನಿಹುದು ಲೋಕದಲಿ!" ಎಂದು ನಿಲ್ಲಿಸಿ, ತಲೆ ಅಲ್ಲಾಡಿಸಿ (ವೀರಯೋ. ೧೧೦). ೨. ನಡುಗಿಸು; ಹೆದರಿಸು: ದೆಸೆಗಳಿಂ ದಹಿಸುತ್ತ ರಸೆಯನಲ್ಲಾಡಿಸುತೆ . . . ಒಗೆದುದು ಮಹಾವಿಷಂ (ನಂಬಿರ. ೧-೧೨); ಹಾಹಾಧ್ವನಿಯ ರವವಲ್ಲಾಡಿಸಿತು ಪರೆಬಲವನು (ಕುವ್ಯಾಕ. ೨೦-೧೧). **ಅಳ್ಳಾಡಿಸು**: ೧. ಪುಷ್ಪಕದಿಂ ನೆಲಕ್ಕಿಳಿದು ತನ್ನಿಪ್ಪತ್ತು ತೋಳ್ಗಳಿಂದಾ ಗಿರಿಯಂ ತಳ್ಕೈಸಿ ಅಳ್ಳಾಡಿಸೆ ಗಿರಿಜೆ ನಡುಗಿ ಭಯಂಗೊಂಡು (ಧರ್ಮಪ. ೯-೩೮ ವ). ೨. ಈ ಜಗಂಗಳನಳ್ಳಾಡಿಸುವ ಮದೀಯೋಗ್ರಾಸ್ತ್ರಂ ಪೆಸರ್ಗೊಳಲೇಂ ತನಗೆ ದೊರೆಯೆ (ಪಂಪಭಾ. ೯-೧೯). [ಅಲ್ಲಾಡು + -ಇಸು$_3$]

**ಅಲ್ಲಾಡು, ಅಳ್ಳಾಡು** (ಕ್ರಿ). ೧. ಚಲಿಸು; ಅಲುಗಾಡು; ತೂಗಾಡು: "ಅಲ್ಲಾಡು – ಸಂಚಲನೇ" (ಶಮಧಾ); ತ್ರಿದಶಾಸನಂಗಳಲ್ಲಾಡಿದುವು ಜಗದ್ಗುರುಗೆ ಬೇಗಮುಚ್ಚಾಸನದಿಂದಿದಿರೇಳಿಮೆಂದು ಪೇಟ್ವವೋಲ್ (ಆದಿಪು. ೭ ೪೦) ಸೆಳೆಗೊಂಬಲ್ಲಾಡುವವೊಲ್ ಫಳಭರದಿಂ (ಮಲ್ಲಿಪು ೩-೬೫), ಕಡುವೇಡ ಮರದಂತೆ ಮನದೊಳಲ್ಲಾಡದೆ (ಧರ್ಮಾಮೃ. ೧೧-೩೭); ಜಲಜಮುಖಿ ಬೆಮರಿಡಲು ಕೊರಳಿನ ಲಲಿತ ಮುಕ್ತಾಹಾರವಲ್ಲಾಡಲು ಸೆಜಗನಳವಡಿಸಿ ನಿಂದಳು (ನಳಚ. ೨-೩೪); ತಾನು ಸ್ವಲ್ಪ ಅಲ್ಲಾಡಿದರೆ ರಾಮನಿಗೆ ಎಚ್ಚರವಾಗುವುದಲ್ಲಾ ಎಂದು ಸೀತೆಯು . . . ಸಹಿಸಿಕೊಂಡಿದ್ದಳು (ಸೀತಚಂ. ೭-೧೧); ಅಳಿಲು ಏರಿದರೆ ಅರಳೀ ಮರ ಅಲ್ಲಾಡೀತೋ (ಗಾದೆ. ೧೮೭). ೨. ಬೆದರು; ನಡುಗು: ದಂಡಿನ ಸಾಮಗ್ರಿಗೆ ಪರಮಂಡಲಮಲ್ಲಾಡೆ (ಎಇ. X. ೧೫೨-೪೮; 915); ಬಲವಲ್ಲಾಡಿತೊಬ್ಬನೆ ಹಸುಳೆ ಹೊಕ್ಕನು ವೈರಿಮೋಹರವ (ಕುವ್ಯಾದ್ರೋ. ೫-೫). ೩. ಅಲ್ಲಾಡಿಸು; ತೂಗಾಡಿಸು; ಅಲುಗಾಡಿಸು: ಒಂದು ಗೋಲಾಂಗೂಲಂ . . . ಬೆಟ್ಟಿದ್ದ ತಜಿಯದ ಕೀಲನಿಕ್ಕೆಗಳಿಂ ಪಿಡಿದು ಅರ್ಪ ಭರದಿಂದಲ್ಲಾಡಿ ಕೀಟ್ಟುದುಂ (ಪಂಚತಂ. ೩೦-೭); ತಳಿರ ತೊಂಬೆಯನಲ್ಲಾಡಿ ಹೂಗೊಂಚಲೊಳ್ ಸುಳಿದು (ಅಂಜಚ. ೨-೫೧); ನೀವು ಕರುಣಿಸಿದಿರಿ ಕೃಪಾರಸಭಾವ ಹಿರಿಯರಲುಂಟಲೇ ತಪ್ಪಾವುದೆನುತಲ್ಲಾಡಿದನು ಶಿರವ (ಕುವ್ಯಾಸ. ೧೭-೧೦); ನೋಡಿದನು ಮುರಿದವನಿಪನನಲ್ಲಾಡಿದನು ತುದಿವೆರಳನು (ತೊರಧಾ. ೪-೪-೩೩); ಗಗನವ ತಬ್ಬಿ ತಾರೆಗಳ ಪೊಯ್ದಪ್ಪಿಸಿ ನಗಕುಲಗಳನಲ್ಲಾಡಿ ಮುಗಿಲ್ ಕತ್ತಲೆಗೆ ಕೈಯಿಟ್ಟಿರ್ಪ ಪಾವನ ಜಗಳದಾಳುಗಳು (ಕಂನವಿ. ೬-೧೮೯). **ಅಳ್ಳಾಡು**: ೧. ದಳ್ಳಿಸಿ ಕುಕಿಲುತ್ತಂಬುಧಿಯುಳ್ಳಾಳಂ ನೆಗಟಿ ಕವಿದು ನರ್ತಿಸಿ ನಡೆದತ್ತಳ್ಳಾಡೆ ನೆಳಲಂ ಬಲ ಪುದು ಕೊಳ್ಳಿರದು ಮಹಾರವಂ ಪೊದಟ್ದೆಸೆವಿನೆಗಂ (ಆದಿಪು. ೧೩-೫೩); ಮನದೊಳಳ್ಳಾಡದೆ ಯೋಗಿ ಬೆಳ್ಳವಾಸದೊಳಿರ್ದಂ (ಪಾರ್ಶ್ವಪು. ೧೩-೫೦). ೨. ಓಡೆ ತಮೋಬಳಮಗಿದಳ್ಳಾಡೆ ನಿಶಾಚರಬಲಂ . . . ನೇಸಜ್ ಮೂಡಿದುದು (ಪಂಪಭಾ. ೩-೨೭); ಚೋಳಂ ಮದಮನುಡುಗಿದಂ ಗೌಳನಳ್ಳಾಡಿದಂ ಬರ್ಬರರಾಜಂ ಗರ್ಬ್ಬಮಂ ತಾನುಳಿದಂ (ಸೌಇಇ. IX-i, ೧೧೮-೧೯; 1057); ಈ ಸ್ಥಳಂ ಕಾಷ್ಠ ಪಾಷಾಣ ವರ್ಜಿತಂ ಅಲ್ಲಾಡಿ ಕೆಡಪುವೆನೆಂದುಜಿದೆಗೊಂಡಳ್ಳಾಡಲಾ ಕಳಕಳಮಂ ಕೇಳ್ದು (ಜಗವಿ. ೪-೪೦ ವ).

[ದೇ. ‖ ತೆಲು. ಅಲ್ಲಲಾಡು, ಅಲ್ಲಲ್ಲಾಡು, ಅಲ್ಲಾಡು. P ಅಲ್ಲಾಡು, ಅಳ್ಳಾಡು ಇವು ಅಲ್$_0$ ಮತ್ತು ಅಳ್$_0$ ಎಂಬ ಬೇರೆ ಬೇರೆ ಧಾತುಮೂಲಗಳಿಂದ ಬಂದಿರಬಹುದೆ?]

**ಅಲ್ಲಾಬಿಉತ್ಸವ** (ನಾ). ಮೊಹರಂ ಹಬ್ಬ: ಅವನು ಊರಿನಅಲ್ಲಾಬಿ ಉತ್ಸವದಲ್ಲಿ ಅಂದರೆ ಮೊಹರಂ ಹಬ್ಬದಲ್ಲಿ ಪ್ರಮುಖಪಾತ್ರ ವಹಿಸುತ್ತಿದ್ದ (ಊರುಕ. ೩೧). [ಅಲ್ಲಾಬಿ$_0$ + ಉತ್ಸವ. P ← ಅರ. ಹಿಂ. ಅಲಾವಿ]

**ಅಲ್ಲಾಳನಾಥ, ಅಲಾಳನಾಥ, ಅಳ್ಳಾಳನಾಥ** (ನಾ). ೧. ಕರುಣಾಳುವಾದ ಪ್ರಭು. ೨. ಕಂಚಿಯ ವರದರಾಜಸ್ವಾಮಿಯ ಹೆಸರು: ದುಷ್ಟಜನ ದುರ್ಲಭ ಅಲ್ಲಾಳನಾಥ ದೇವರ ದಿವ್ಯಶ್ರೀಪಾದಪದ್ಮಾರಾಧಕ (ಎಕ. XIV, ಗುಂಡ್ಲುಪೇ. ೧೩೧-೬; 1310); ಅಲ್ಲಾಳನಾಥದೇವಗಳ (ಎಕ. VI, ಕಡೂರು. ೧೮-೧೧; 1491); ಅಲ್ಲಾಳನಾಥದೇವರಿಗೆ ಯೆಜದು ಕೊಟ್ಟರಿ (ಮೈಆರಿ. ೧೯೩೪, ೪೩-೧೦; 1561). **ಅಲಾಳನಾಥ**: ೨. ಮಹಾದೇವ ದೇವೋತ್ತಮ ಶ್ರೀ ಅ[ಅ]ಲಾಳನಾಥ ಸ್ವಾಮಿಯವರ ಪದಕೆ (ಮೈಆರಿ. ೧೯೨೯, ೪೮-೪; 1634). **ಅಳ್ಳಾಳನಾಥ**: ೨. ಪೃಥ್ವೀರಾಜ್ಯಂಗೆಯುತ್ತಂ ಇರಲು ಮಾಸಿತ್ತಿ ಅಳ್ಳಾಳನಾಥದೇವರಿಗೆ (ಎಕ. X, ಮಾಲೂರು. ೬೨-೫; 1542). [ಅಲ್ಲಾಳ್$_0$ (< ತಮಿ. ಅರುಳಾಳ್) + ನಾಥ]

**ಅಲ್ಲಿ, ಅಲಿ$_1$** (ನಾ). ಆ ಸ್ಥಳ; ಆ ಪ್ರದೇಶ; ಆ ಎಡೆ: ಇದಾನ್ ಕೊಳೆ . . . ಒಕ್ಕಲ್ತನಂ ಕೆಯ್ವೊನಾ ವಿತ್ತಿದಲ್ಲಿ ವೆಳೆಯ್ದಾಡೆ ಕೆಡುಗೆ (ಎಕ. VII, ಶಿಕಾರಿ. ೧೫೮-೧೬; 885); ಬೆಳಸುವೆಸಲ್ಲಿ ಲೌಕಿಕಮನಲ್ಲಿ ಜನ್ಮಗಮುಮಂ (ಪಂಪಭಾ. ೧೪-೬೦); ಎಲ್ಲಿ ಜನಭುವನಮೊಳವಂತಲ್ಲಿಯೇ ಮನದೆಜಕದೋಲಗಂ (ಧರ್ಮಾಮೃ. ೧-೨೧೩); ಅಲ್ಲಿಗಿರ್ವರುಂ ವಿಳಾಸಿನಿಯರೆಂದೆಯ್ತಂದು (ನಂಬಿರ. ೧-೩೯); ಅಲ್ಲಿ ದೈವದ ನೆನಹು (ಕುವ್ಯಾದ್ರೋ. ೩-೨೩); ಅಲ್ಲಿ ಇಲ್ಲಿ ತಿರುಗುವುದಕ್ಕಿಂತ ಬಿಲ್ಲಿ ತಿಂದು ಸಾಯೂವ ಅಂದ (ಗಾದೆ). **ಅಲಿ$_1$**: ಮಲಗುವಲಿ ತಿರುಗುವಲಿ ದೇಶದಲಲ್ಲಿ ಕುಳ್ಳಿದಲ್ಲಿ ನಿಂದಿಹ ಸ್ಥಳದಲಿ (ನಿಭಾಗ. ೧೧-೧೧-೫೮).

**ಅಲ್ಲಿಂಪೆಜಗೆ** = ಅದಕ್ಕಿಂತ ಹಿಂದೆ; ಅದರ ಹಿಂಭಾಗದಲ್ಲಿ: ಅಲ್ಲಿಂ ಪೆಜಗೆ . . . ಏಟ್ತಂದಂ ಚಂಡಿಕೆವೆರಸಿದ ಚಂಡಾಲಬಾಲಕಂ ಮತ್ತೋರ್ವಂ (ಕಾದಂಪೂ. ೩೬, ೩೭). **ಅಲ್ಲಿಂಬಳಿಕ್ಕೆ** = ಅಲ್ಲಿಂಥ ಮುಂದೆ; ಆ ತರುವಾಯ: ಕುಸುಬಿತ್ತು ಕೆಡಹಿತ್ತು . . . ಬಸವನಲ್ಲಿಂಬಳಿಕ್ಕೇ ಪೊಗಳ್ವೆನು (ಸೋಮಚ. ೫-೩೬). **ಅಲ್ಲಿಂಮುನ್ನಂ** = ಅದಕ್ಕಿಂತ ಹಿಂದೆ; ಅದಕ್ಕಿಂತ ಮೊದಲು: ನೆನೆವಲ್ಲಿಂ ಮುನ್ನಂ ಮದನನ ಪಂಚಬಾಣಂ ಪರಿತಂದು (ಗಿರಿಕ. ೮-೪೫ ವ). **ಅಲ್ಲಲ್ಲಿ** = ಆಯಾ ಸ್ಥಳದಲ್ಲಿ; ಆಯಾ ಎಡೆಯಲ್ಲಿ: ಸಹಕಾರದ ಸಾರಣಿಯೊಳಂ ಅಲ್ಲಲ್ಲಿ ಗಲಿರ್ದ ಪೂವಲಿಗಳೊಳಂ (ಕಾದಂಉ. ೭೮೩); ಎಲ್ಲಿ ಸುಳಿದಡೆ ಅಲ್ಲಲ್ಲಿ ಉಪಾಧಿ ಬಿಡದಯ್ಯ (ಅದವ. ೨೭); ಮೊಳಗಿದುವಲ್ಲಲ್ಲಿ ದೇಗುಲವಜ್ಜಿಗೆಗಳು (ಕಂನವಿ. ೯-೧೩೭).

ಅಲ್ಲಿಗಲ್ಲಿ = ಅಲ್ಲಲ್ಲಿ : ದೇವರಿಗರ್ಕ್ಕಿಯಿಂದವ ಮ್ಮಾಂಡಿದ[ನ]ಲ್ಲಿಗಲ್ಲಿ ಸೊಡರಲ್ಲಿ ನಿವೇದ್ಯಮನೊಪ್ಪೆ ಕೇಶವ (ಸೌಇಇ. XX, ೭೦–೨೪ ; 1108). **ಅಲ್ಲಿವರಂ**= ಆ ಸ್ಥಳದ ವರೆಗೆ: ಭೀಷ್ಮಂ ಶರಶಯನತಳವಿಗತನಾಗಿರ್ದಲ್ಲಿ ವರಂ . . . ಬಂದಾಗಳ್ (ಪಂಪಭಾ. ೧೩–೬೧ ವ). **ಅಲ್ಲುಗು** = ಅಲ್ಲಾಡಿ ಕೆಳಗೆ ಚೆಲ್ಲು ; ಹೊರಸೂಸು : ಸುರಿವರಲೊಂದು ಬೆಳ್ಸರಿಯದಾತ್ಮ ತನೂಭವನುತ್ತಮಾಂಗದೊಳ್ದೊರೆಕೊಳೆ ನಿಲ್ಲದಲ್ಲಿ ಕುಸುಮಂ ಕೆಲವಲ್ಲುಗೆ . . . ಸಾಹಸಮಂ ಪೊಗೞ್ದಂ ಸುರಾಧಿಪಂ (ಪಂಪಭಾ. ೫–೧೦೩) ; ಶತ ಖಂಡಮಪ್ಪಿನಂ ಖಂಡಿಸುವೆಂ ವಿಯಚ್ಚರನ ನಚ್ಚಿನ ಚಕ್ರಮನೆಂದು ಘರ್ಮವಾರ್ಮಂಡಲಿ ಗಂಡಮಂಡಲದಿನಲ್ಲುಗೆ . . . ಮಂಡಲಾಗ್ರಮನಿಡೆ (ಪಂರಾಮಾ. ೧೪–೧೭೭) ; ಅಲ್ಲುಗುವಧರಾಮೃತಮೆನೆ ಫುಲ್ಲಾಸ್ಯೆಯ ನಗೆಯ ತಂದಲೆನೆ ಸುಲಿವಲ್ಗಳ್ . . . ಕರಂ ಸೊಗಯಿಸಿದಳ್ (ಲೀಲಾವ. ೧೨–೭೯) ; ಹಾರಂ ತೂಗೆ ಕಣ್ಬೆಲ್ಲಮಲ್ಲುಗೆ ಪೊನ್ನೋಲೆ ಕದಂಪನಪ್ಪಳಿಸೆ (ಜಗವಿ. ೧೦–೧೦೦). [?]

**ಅಲ್ಲಿಗ** (ನಾ). ಒಬ್ಬಾತನ ಹೆಸರು : ಗಂಗವಂಶೋದ್ಭವಂ ಚನ್ದಿ × × × ಅಳಾಳೆ ಆತನ ಬೆಳವಡಿಚ ಅಲ್ಲಿಗಂ ಕಿಬ್ಬುಣಿಯಾಗಿ ಸ × × × ಪ್ರಸಾದ ಆತಂಗಂ (ಎಕ. XI, ದಾವಣ. ೧೧೯–೬ ; 930). [?]

**ಅಲ್ಲಿಗಾರಿಗ** (ನಾ). ಅಗಸ : ಅಲ್ಲಿಗಾರಿಗ [ಪಾಠಾಂ. ಅಟ್ಟಗಾಲಿಗ] (ಚತುನಿ. ೬. I, ೬೧). [?]

**ಅಲ್ಲಿದ** (ನಾ). ಆ ಸ್ಥಳದವನು ; ಅಲ್ಲಿ ಹುಟ್ಟಿದವನು ; ಅಲ್ಲಿಯವನು : ಕೆಲದನಲ್ಲಿದನಿಲ್ಲಿದನೀಗಳೆಂಬಿನಂ ಮುತ್ತಿದನೊಂದೆ ತೇರೊಳಮರೇಂದ್ರ ಸುತಂ ಕುರುವೃಂದಮೆಲ್ಲಮಂ (ಶಮದ. ೧೧೧ ಪ್ರಯೋ) ; ಅಲ್ಲಿಯಾದಂ ಪುಟ್ಟಿದಂ ಮೇಣ್ ಅಲ್ಲಿಯಣಂ, ಅಲ್ಲಿದಂ (ಶಬ್ದಾನು. ೪೨೨ ಪ್ರಯೋ).

**ಅಲ್ಲಿದಳ್** = ಆ ಸ್ಥಳದವಳು : ಅಲ್ಲಿದಳ್, ಇಲ್ಲಿದಳ್, ಎಲ್ಲಿದಳ್ (ಶಬ್ದಾನು. ೧೬೨ ಪ್ರಯೋ). 'ಇಲ್ಲಿದ', 'ಎಲ್ಲಿದ' ಪರಾ.

[ಅಲ್ಲಿ + –ದ$_2$]

**ಅಲ್ಲಿಬಿಲ್ಲಿ** (ನಾ). ಮುಖಸ್ತುತಿ ; ಆಕರ್ಷಣೆ ; ಪರಸ್ಪರ ಪ್ರೀತಿ ಪೂರ್ವಕ ಪರಿಚಯ,—ಆಸಕ್ತಿ (ಸ್ಯಾಂಡರ್) : "ಅಲ್ಲಿಬಿಲ್ಲಿ–ಕಲಿಬಿಲಿ (ಅಲಿಬಿಲಿ)" (ಜಾನಕೋ. ೧೪) ; ಇಲ್ಲಾಮಲ್ಲಿಯಾದವಳು ಅಲ್ಲಿಬಿಲ್ಲಿ ಮಾತಾಡುವಳು (ಸ್ಯಾಂಡರ್).

**ಅಲ್ಲಿಬಿಲ್ಲಿಮಾಡು** = ಪರಿಹಾಸಮಾಡು ; ವಿನೋದದಿಂದ ಕೆಣಕು ; ಮುದ್ದಾಡು (ಸ್ಯಾಂಡರ್). **ಅಲ್ಲಿಬಿಲ್ಲಿಯಾಗಿರು** = ತಮಾಷೆಯಾಗಿರು ; ವಿನೋದದಿಂದಿರು : ಅವರು ಎಷ್ಟು ಅಲ್ಲಿಬಿಲ್ಲಿಯಾಗಿದ್ದಾರೆ (ಸ್ಯಾಂಡರ್).

[← **ತೆಲು.** ಅಲ್ಲಿಬಿಲ್ಲಿ=ಬೆರೆತಿರುವುದು, ಸಾಂದ್ರತೆ, ಪ್ರಿಯವಾದುದು]

**ಅಲ್ಲಿಯಣ** (ನಾ). = ಅಲ್ಲಿದ : ಅಲ್ಲಿಯಾದಂ ಪುಟ್ಟಿದಂ ಮೇಣ್ ಅಲ್ಲಿಯಣಂ (ಶಬ್ದಾನು. ೪೨೨ ಪ್ರಯೋ). [ಅಲ್ಲಿ + –ಅಣ]

**ಅಲ್ಲಿಸು** (ಕ್ರಿ). ಅಲ್ಲವಾಗಿ ಮಾಡು ; ಹೀಯಾಳಿಸು : "ಅಲ್ಲಿಸು – ಹೀಯಾಳಿಸು" (ಜಾನಕೋ. ೧೪). [ಅಲ್ಲ$_2$ (< ಅಲ್$_1$) + –ಇಸು$_3$]

**ಅಲ್ಲೀಕೇರಿ** (ನಾ). ಹಳ್ಳಿಯಲ್ಲಿ ಹೆಣ್ಣುಮಕ್ಕಳು ನದಿಯ ಅಥವಾ ಕೆರೆಯ ದಂಡೆಗೆ ಹೋಗಿ ಸಾಲಾಗಿ ಕುಳಿತುಕೊಂಡು ಊಟ ಮಾಡುವ ಒಂದು ಸಮಾರಂಭ : ಅಲ್ಲೀಕೇರಿಯ ಸಡಗರವನ್ನು ನೋಡಬೇಕು, ನವಿಲುಗುಂದದ ನೀಲವ್ವನಕೆರೆಯ ದಂಡೆಯ ಮೇಲೆ (ಅಲ್ಪವಿ. ೧೦೨). [?]

**ಅಲ್ಲೀಪಾಕ** (ನಾ). ಹಸಿಶುಂಠಿ ಸಕ್ಕರೆಗಳಿಂದ ಮಾಡಿದ ಪಾಕ : ವೇಣು ಅಲ್ಲಿ ಹೊತ್ತು ಮಾರುತ್ತಿದ್ದವನಿಂದ 'ಅಲ್ಲೀಪಾಕ–ಚುರುಮುರಿ' ಕೊಂಡು – ಕೊಂಡಿದ್ದಳು (ನಿರೀಕ್ಷೆ. ೯೬). [ಅಲ್ಲೀ$_1$ (< ಅಲ್ಲ$_1$) + ಪಾಕ]

**ಅಲ್ಲು**$_1$ (ಕ್ರಿ). ಸೇರಿಸು ; ಜೋಡಿಸು ; ಹೆಣೆ ; ನೇಯು ; ಕಸೂತಿ ಹಾಕು ; ಹೊಲಿ (೬).

[ದೇ ‖ ತಮಿ. ತೆಲು. ಅಲ್ಲು ; ಕೊಲಾ. ಅಲ್ ; ಪರ್ಜಿ. ಅಲ್ವ್ = ಸುತ್ತುಹಾಕು, ಸುತ್ತಿಕೊಳ್ಳು ; ನಾಯ್ಕಿ. ಅಲ್ಲ್ ; ಕುಇ. ಅಲ್ಪ = ತಡಿಕೆಗಳನ್ನು ಹೆಣೆ, ಬೇಲಿಯನ್ನು ಕಟ್ಟು ; ಕುವಿ. ಅಲ್ಲಿನಯಲ್]

**ಅಲ್ಲು**$_2$, ಅಳ್ಳು$_1$ (ಕ್ರಿ). ಚಲಿಸು ; ಅಲುಗು : ಹಂದೆವಟ್ಟತಿತ್ತಲ್ಲಲ್ಲದಡಲುತ್ತ ಡಿಗೆ ಬಂದೆಜಗಿದ ಕಾಯಲೆಂದಿರುಹಂ (ಮದೇಪು. ೨೫–೨೪). **ಅಳ್ಳು**$_1$ : ಹಂಸನಾಥನ ನೋಡುವಾಗ ಕರ್ಮಾಳಿ ವಿಧ್ವಂಸನವಹುದೆನಲಿವನು ತಾಂ ಸಿಡಿದಳ್ಳನೆ ನೋಡಿರ್ದೈ ನಾಳೆ ತಂದಾಂ ಸೇವೆಗಿಕ್ಕಿ ತೋಱುವೆನು (ಭರಚ. ೨೪–೧೬). [?]

**ಅಲ್ಲೇಶ್ವರ** (ನಾ). ಒಂದು ದೇವರ ಹೆಸರು. 'ಅಲ್ಲೇಶ್ವರಗೆಯ್' ಪರಾ. [?]

**ಅಲ್ಲೇಶ್ವರಗೆಯ್** (ನಾ). ಅಲ್ಲೇಶ್ವರ ದೇವರಿಗೆ ಬಿಟ್ಟ ಗದ್ದೆ : ಅಲ್ಲೇಶ್ವರಗೆಯ್ಯದ ಱ ಮೂಡಣ ಕಂಬಿವಡ್ಡದೊಳ್ ನೂಱು × × ಮತ್ತರ್ ಕೆಯ್ಯುಂ ಸರ್ವಬಾಧಾಪರಿಹಾರಂ ನಮಸ್ಯವಾಗೆ . . . ವಿಟ್ಟನ್ (ಎಇ. XVI, ೨೯–೨೪ ; 1010). [ಅಲ್ಲೇಶ್ವರ + ಕೆಯ್$_2$]

**ಅಲ್ಲೋಲಕಲ್ಲೋಲ** 'ಅಲ್ಲಕಲ್ಲೋಲ' ನೋ.

**ಅವ** 'ಅದು$_1$' ಪರಾ.

**ಅವಂ** 'ಅದು$_1$' ಪರಾ.

**ಅವಂಗ** (ನಾ). ನಾರಂಬೇಳೆ ಗಿಡ : "ಅಜಗಂಧಾ–ಅವಂಗ" (ಓಷಧಿ. ೬). [?]

**ಅವಂತಿಸೋಮ** (ನಾ). ಅಕ್ಕಿ ತೊಳೆದ ನೀರು ; ಅಕ್ಕಿಗಚ್ಚು : "ಅಭಿಷವಂ, ಅವಂತಿಸೋಮಂ, ತು[ಪಾಠಾಂ. ಶು]ಷೋದಕಂ, ಶುಕ್ಲಂ –ಈ ೪ ಅಕ್ಕಿಗರ್ಚು" (ಹಲಾಯು. ೫೩–೧೬೩). [ಸಂ.]

**ಅವಂದಿರ್** 'ಅದು$_1$' ಪರಾ.

**ಅವಂದಿರು** 'ಅದು$_1$' ಪರಾ.

**ಅವಕರ** (ನಾ). ಕಸ ; ಧೂಳು : "ಅವಕರ ಸಂಕರಾಖ್ಯಮದು ಮನೆಯ ಕಸಂ" (ವಸ್ತುಕೋ. ೪೮–೨೧) ; ಅಪಾಸ್ತಖಿಳವ್ರಜಾವಕರಮುಜ್ಜ್ವಳಕೀರ್ತಿ ಸುಧಾಂಶು (ಎಕ. VI, ಕಡೂರು. ೫೩–೩ ; 1175). [ಸಂ.]

**ಅವಕರುಣೆ** (ನಾ). ಅಸಮಾಧಾನ ; ದಯಾಹೀನತೆ : ವೃಥಾ ರಾಜರವ ಕರುಣೆ ಸಂಪಾದಿಸಲೆ ? (ಹೆಬ್ಬೆರ. ೧೧–೧೬). [ಸಂ. ಅವಕರುಣಾ]

**ಅವಕರ್ಣನ** (ನಾ). ಕಿವಿಗೊಟ್ಟು ಕೇಳುವುದು ; ಆಲಿಸುವುದು. 'ಅವಕರ್ಣಿಸು' ಪರಾ. [ಸಂ.]

**ಅವಕರ್ಣಿಸು** (ಕ್ರಿ). ೧. ಆಲಿಸಿ ಕೇಳು ; ಮನಸಿಟ್ಟು ಕೇಳು : ಅಂತು ಪರಶುರಾಮನನಂಜಿಸಿದ ವೀರಂಗೆ ವೀರಪಟ್ಟಮಂ ಕಟ್ಟಿ ಪಗೆವರ ನೆನ್ನ ಮಂಚದ ಕಾಲೊಳ್ ಕಟ್ಟಿದೆನೆಂದು ಪೊಟ್ಟಳಿಸುವ ಸುಯೋಧನನ ನುಡಿಯನವಕರ್ಣಿಸಿ ಕರ್ಣನಿಂತೆಂದಂ (ಪಂಪಭಾ. ೧೦–೧೫ ವ) ; ತಂದೆಯ ಮಾತಂ ಕನ್ಯೆ ನಿರ್ಣಯಮಾಗಿಯವಕರ್ಣಿಸಿ (ಸುಕುಮಾ. ೭–೨೪ ವ) ; ಇದು ನಿನಗಿನ್ನೇಬಿನೆಯ ಭವಕ್ಕಾದಪುದೆಂದಾಕಾಶವಚನಮನವಕರ್ಣಿಸಿ ಮತ್ತಮಿಂತೆಂದಂ (ಅರ್ಧನೇ. ೨–೪೯ ವ). ೨. ಕಡೆಗಣಿಸು ; ಅಲಕ್ಷ್ಯ ಮಾಡು ; ಕೀಳ್ಮಾಡು : ಅಗ್ನಿಭೂತಿ ವಿಜಯಜಿಹ್ವಾದಿಯಿನಾದ ವೃತ್ತಕಮುಮಂ ಸಭಾಸದರ್ ತಮ್ಮನವಕರ್ಣಿಸಿ ಕಿಡೆನುಡಿದುದುಮಂ . . . ಸವಿಸ್ತರಮುಱಿಪುವುದುಂ (ಸುಕುಮಾ. ೨–೩೧ ವ). ೩. ಅಲಂಕರಿಸು : ರತಿಯ ಮಧುಪಾನಗೋಷ್ಠಿಯ ಸುವರ್ಣಚಷಕಮನವಕರ್ಣಿಸದ ಕರ್ಣಿಕಾರಮಿಲ್ಲ (ಪಂರಾಮಾ. ೧–೧೦೭ ವ). [ಅವಕರ್ಣನ + –ಇಸು$_3$]

**ಅವಕಲನ** (ನಾ). ಕಳೆಯುವುದು. 'ವ್ಯವಕಲನ' ಪರಾ. [ಸಂ.]

**ಅವಕಾಶ** (ನಾ). ೧. ಅಂತರ : ಸೂರ್ಯನಿಗೂ ಭೂಮಿಗೂ ಇರುವ ಅವಕಾಶದಲ್ಲಿ ಬೆಳಕು ಅಲೆಗಳಂತೆ ತೇಲಿಕೊಂಡು ಬರುವುದು (ಎಕ್ಸ್‌ರೇ. ೩). ೨. ಪುರಸತ್ತು ; ಬಿಡುವು. ೩. ಅನುಕೂಲಸಂದರ್ಭ ; ಸೌಕರ್ಯ : ಪೌರುಷಸಾಹಸಕವಕಾಶವಿರದಿರೆ ವ್ಯರ್ಥವೇನಲ್ಲವೆ ಬಾಳು (ಇಂಚಾ ಪ. ೬–೭೬). [ಸಂ.]

**ಅವಕಾಶಂಗುಡು** (ಕ್ರಿ). ಎಡೆಮಾಡಿಕೊಡು ; ಅನುಕೂಲ ಮಾಡಿಕೊಡು : ಶರದ್ವಿಧುವಿಶದ ತದೀಯ ಯಶಃಪ್ರಸರಕ್ಕವಕಾಶಂಗುಡುವಂತೆ ಜಲಧರಪಟಲನಿರೋಧರಹಿತಮಾಕಾಶಮತಿಪ್ರಕಾಶಿತಾಶಾಂತಮಾಗೆ (ಆದಿಪು. ೬–೩೫ ವ). [ಅವಕಾಶ + ಕುಡು$_1$ (< ಕೊಡು)]

**ಅವಕಿಲ,** ಅವಕಿಳ (ನಾ). ಕೆಸರು ; ರೊಚ್ಚು : "ಪಂಕಃ, ಸಾದಃ, ನಿಷದ್ವರಃ, ಜಂಬಾಳಃ, ಕರ್ದಮಃ, ಅವಕಿಲಃ–ಈ ೬ ಕೆಸಱು" (ಹಲಾಯು. ೧೧೨–೫೬). **ಅವಕಿಳ** : "ಜಂಬಾಲಮುವಕಿಳಂ ಪಂಕಮೆನೆ ಕೆಸಱಿನಿಕ್ಕುಂ" (ಮಂಗರಾ. ೧೨೩–೧೫). [ಸಂ.]

**ಅವಕಿಳ** 'ಅವಕಿಲ' ನೋ.

**ಅವಕೀರ್ಣ** (ಗು). ೧. ಎರಚಿದ ; ಚೆಲ್ಲಿದ ; ಕೆದರಿದ : ಭಯದಿಂ ಬನದೊಳಗೆ ಬಿಸುಟ್ಟುಪೋದ ವಿಷಮಾಸ್ತ್ರನ ನಚ್ಚಿನ ಬಾಣಾವಳಿಯೆನಿಸಿದುವ ನೂನ ಕುಸುಮಾವಕೀರ್ಣ ಬಾಣಾವಳಿಗಳ್ (ಚಂದ್ರಪು. ೨–೯೮). ೨. ತುಂಬಿದ ; ಕಿಕ್ಕಿರಿದ : ಭೂವರಾಢ್ಯಖಿಲರೀಕ್ಷಿಸುತಲಿಂತು ತೋರ್ಪ ಮಹಿಮಾವಕೀರ್ಣಾತ್ಮರಾರ್ ನಿನ್ನಂತೆ . . . ಗುರು ಪದ್ಮದೇವಾ (ಪದ್ಮರಾ. ೬–೮೨). ೩. ಬಿಟ್ಟ ; ತ್ಯಜಿಸಿದ : "ಅವಕೀರ್ಣಂ, ಅವಧ್ವಸ್ತಂ, ತ್ಯಕ್ತಂ, ಉತ್ಸೃಷ್ಟಂ, ಉಜ್ಝಿತಂ–ಈ ೫ ಬಿಡಲ್ಪಟ್ಟುದು" (ಹಲಾಯು. ೧೧೮–೫೯). (ನಾ). ೪. = ಅವಕೀರ್ಣಿ : "ಅತ್ತವ್ರತಸಂಸ್ಕಾರನಿವತ್ತಿ ತನವಕೀರ್ಣನುಂ ನಿರಾತ್ಮನುಮಕ್ಕುಂ" (ವಸ್ತುಕೋ. ೫೮–೩೮). [ಸಂ.]

**ಅವಕೀರ್ಣಿ** (ನಾ). ವ್ರತಗೆಟ್ಟವನು ; ವ್ರತಹೀನ ; ಕೆಡುಕ : "ಕೆಡುಕನಂ ಅವಕೀರ್ಣಿಯೆಂಬುದು" (ಹಲಾಯು. ೬೬–೨೫೦) ; ಬ್ರಹ್ಮಚರ್ಯವ್ರತಹೀನರಾದ ಅವಕೀರ್ಣಿಗಳಂ (ಭಾರಶಾಂ. ೩೪–೨೪೫). [ಸಂ. ಅವಕೀರ್ಣಿನ್]

**ಅವಕುಂಚಿತ** (ಗು). ಬಾಗಿದ ; ಕುಗ್ಗಿದ ; ಸಂಕೋಚಹೊಂದಿದ ; ಮುದುಡಿದ : "ಅವಕುಂಚಿತಂ ಮೇಣವರೂಪಿತಮುದವಲೀನಮುವನೀತ ನಿಷ್ಕಾಸಿತಂ ಅವಕೃಷ್ಟಮೆನೆ ಹರಹು ಗೆಟ್ಟುದೆನಿಸಿರ್ಕು" (ಮಂಗರಾ. ೧೩೩–೨೯). [ಸಂ.]

**ಅವಕುಂಠನ** (ನಾ). ೧. ಮುಖಪರದೆ ; ಮೇಲುಮುಸುಕು : ಆ ಬಾಲಕಿಯು ಅವಕುಂಠನದ ಬಟ್ಟೆಯಿಂದ ಕಣ್ಣೊರಸಿಕೊಂಡಳು (ಕೋಹಿನೂ. ೧೦೩). ೨. ಸುತ್ತುಗಟ್ಟುವುದು ; ಆವರಿಸುವುದು. [ಸಂ.]

**ಅವಕುಂಠನವತಿ** (ನಾ). ಮುಖಪರದೆಯುಳ್ಳವಳು ; ಮೇಲುಮುಸುಕಿನಿಂದ ಕೂಡಿದವಳು. [ಸಂ. ಅವಕುಂಠನವತೀ]

**ಅವಕುಂಠಿತ** (ಗು). ಹೊದಿಸಲ್ಪಟ್ಟ ; ಮರೆಮಾಡಲ್ಪಟ್ಟ : ಮೃಗಶೃಂಗನೆಂಬೊಂ . . . ಮಿಥ್ಯಾಂಧಕಾರಾವಕುಂಠಿತ ಸಮ್ಯಗ್ದರ್ಶನನಾಗೆ (ಶಾಂತಿಪು. ೭–೪೩ ವ) ; ಮಲಯಜರಸಲುಳಿತ ನಳಿನೀ[ದಳಾವಕುಂಠಿತ]ಮಾದ ಮೆಲ್ಲೆರ್ದೆಯೊಳಂ (ಕಾದಂಪೂ. ೯೨೭). [ಸಂ.]

**ಅವಕುಟ್ಟು** (ಕ್ರಿ). ಕಿರಿಕಿರಿಯಾಗು ; ರೇಗು (?) : ಎನ್ನ ಶಿಷ್ಯಂ ಬಿಟ್ಟ ಕಣ್ಣಂ ಪೊನ್ನಿರ್ದೆಡೆಯನಱಿಯದೊಡವಕುಟ್ಟುತ್ತುಂ ಮಠಮಂ ಪತ್ತುವಿಡದೆ ಪಿರಿಯದೊಂದು ಕರಕೆಯ ಕೂಟಂ ತಂದು ತಾನೊಂದು ಭಾಗಮನುಂಡು (ಪಂಚತಂ. ೩೦೨–೨೫). [?]

**ಅವಕೂರ** (ಗು). "ಅನ್ನವಿಲ್ಲದೆ ಹೋಗುವಂಥ" (ಗಂಗಾಮು. ೧೬). [ಸಂ.]

**ಅವಕೃಪೆ** (ನಾ). = ಅವಕರುಣೆ : ಅಕ್ಕನಿಗೆ ಅದೇ ದೈವದ ಅವಕೃಪೆಯೆನಿಸಿತೇನೊ (ಕರ್ನಾಕ. ೭೦). [ಸಂ. ಅವಕೃಪಾ]

**ಅವಕೃಷ್ಟ** (ಗು). ೧. ಕೆಳಕ್ಕೆ ಸೆಳೆದ. ೨. ಹೊರದೂಡಿದ. ೩. ಕೆಳದರ್ಜೆಯ ; ಹೀನವಾದ ; ಕೀಳಾದ. 'ಅಪಕೃಷ್ಟ' ಪರಾ. [ಸಂ.]

**ಅವಕೇಶಿ** (ಗು). ೧. ಬಂಜೆಯಾದ ; ಫಲಹೀನವಾದ : ಭಾವಕಿ ಪಾದಪಲ್ಲವದ ಕೆಂಪಿನ ಶೋಭೆಯೊಳಿತ್ತಲೆಂಬ ಮಾತೇವುದನೇಕ ಪಾರ್ಥಿವಕುಲಕ್ಕವಕೇಶಿವೆಸರ್ಗೆಳಿಲ್ಲದಿನ್ನಾವನ ನುಣ್ಗೊನಸಲ್ಗೆ [ಮುದದಿಂ] ಪದಪಟ್ಟ ಮನೀವಳೆಂದು ನಾನಾವಿಷಯಾಧಿಪರ್ ಪದತಳಂಗಳನೀಕ್ಷಿಸುತಿರ್ದರಾಕೆಯಾ (ನಳಚಂ. ೩೩೧). (ನಾ). ೨. ಫಲಬಿಡದ ಮರ. ೩. ಅತಿಸ್ವಲ್ಪ ಕೂದಲುಳ್ಳ ತಲೆಯವನು. [ಸಂ. ಅವಕೇಶಿನ್]

**ಅವಕ್ರಯ** (ನಾ). ೧. ಬಾಡಿಗೆ : "ಭಾಟಕಃ, ಅವಕ್ರಯಃ–ಈ ೨ ಬಾಡಗೆ" (ಹಲಾಯು. ೯೪–೪೧೯). ೨. ಬೆಲೆ ; ಕ್ರಯ. ೩. ಕೂಲಿ. ೪. ಬಾಡಿಗೆಗಾಗಿ ಕೊಡುವುದು. [ಸಂ.]

**ಅವಕ್ರಿಯೆ** (ನಾ). ಉದ್ದೇಶವನ್ನು ಸಾಧಿಸದ ಕೆಲಸ ; ಪ್ರಯೋಜನವಿಲ್ಲದ ಕೆಲಸ : ಎಮ್ಮ ಬಿತ್ತರಿಪ ಶಿಶಿರಕ್ರಿಯೆಯಂ ತನ್ನ ಮನೋರುಜೆಗವಕ್ರಿಯೆಯಾಗೆ ಕಂಡು (ಚಂದ್ರಪು. ೮–೮೮ ವ). [ಸಂ. ಅವಕ್ರಿಯಾ]

**ಅವಗಡ,** ಅವಘಡ (ನಾ). ೧. ತೊಂದರೆ ; ವಿಪತ್ತು ; ಅಪಘಾತ : "ಮುಕ್ಕುಡಿಯೆನಲವಗಡಕೆ ನಾಮಂ" (ಭಾರನಿ. ೪) ; ಕಲುಗುಂಡುಗಳನುಂ ಸುತ್ತಿವರೆ ಹಾಕಿಸಿದನವಗಡವಾಗೆ ದಾರಿಯಲಿ (ಬಸವು. ೧೫–೧೦) ; ಯುವತಿಯರ ನಂಬಿದರಿಗೀಪರಿಯವಗಡವು (ಕುವ್ಯಾ ಆ. ೬–೧೮). ೨. ಸಾಹಸ ; ಪರಾಕ್ರಮ : ಪವನಜನಂತು ಪೂಣ್ದು ಯುವರಾಜನನೆತ್ತರನಾರ್ದು ಪೀರ್ದನಿಂತವಗಡದಿಂ ದಿನೇಶಜನನಂಕದ ಗಾಂಡಿವಿಕೊಂದಂ (ಪಂಪಭಾ. ೧೩–೮) ; ಪೂರ್ವಾನ್ವಯದರಸುಗಳಿಂದಿನ ಚಕ್ರೇಶ್ವರರಂ ಪಿರಿದಪ್ಪವಗಡದಿಂದ ಪೆಳರ್ಚಿಸಿ ಬಲ್ಲಪ್ಪಂಗೊಂಡು (ಜಯಕಾ. ೧–೫೭). ೩. ಅಶಕ್ಯವಾದುದು ; ಅಸಾಧ್ಯವಾದುದು : ಅವಗಡದ ಕೈಲಾಸಮಂ ನೆಱೆ ಸೂಱೆಗೊಂಡವನು (ಬಸವು. ೨೪–೫೧) ; ಈ ಕೋಟೆಯಂ ಸಾಧಿಸುವೊಡವಗಡಂ (ಬಸವು. ೧೬–೧೦) ; ನುಡಿಯಬಾರದು ಪೆಣ್ಗಳಿರವು ಬೊಮ್ಮನಿಗವಗಡ ಮಿಕ್ಕ ಮನುಜರಿಗಳವೆ (ಕುರಾಸಾಂ. ೩೨–೪೮). ೪. ಭಯಂಕರವಾದುದು ; ರೌದ್ರವಾದುದು : ವಿಷವಹ್ನಿ ತೀವಿರ್ದವಗಡದ ಫಣಿವರ ಕಟಕ ನಿಮ್ಮುವನೆ ಹೊಂದಿದವರ್ಗೆ ಕೇಡಹುದಲ್ಲವೇ ಬಳಿಕ (ಬಸವು. ೪೮–೧೫) ; ಶಂಬರಾಸುರನ ಅವಗಡದ ಸಮರದಲಿ ಕೊಂದನು ಭುವನಭೀಕರಶೂರ (ಕೋಗಯ. ೧೯–೧೬). ೫. ಕಳವಳ ; ಭಯ (?) : ಅವಗಡವಾಗಿದೆಯೆನಗೆ ವಿಸ್ತರಿಸೆಂದು ಯುವತಿ ತನ್ನ ನಿಗೆ ಜಗಿದಳು (ಮೋಹತ. ೧೨–೨೮). **ಅವಘಡ** : ೧. ದಿನದಿನಕೆ ಬಂದವಘಡವ ಪರಿಹರಿಪೆ ಬಳಿಕೆನುತ (ಕೋಗಯ. ೧೦–೧೦೦) ; ಇಂತಹ ಅವಘಡವು ಪುನಃ ಅಡಸದಿರಲಿ (ಬಿಟ್ಟಅ. ೧೫೩) ; ಒಂದು ಅವಘಡ ತಪ್ಪಿದ್ದಕ್ಕಾಗಿ ಎಲ್ಲರಿಗೂ ಸಂತೋಷವಾಯಿತು (ಕುಡಿಕೂ. ೭೯) ; ಪೇಪರಿನಲ್ಲಿ ರೈಲ್ವೇ ಅವಘಡಗಳು . . . ಇತ್ಯಾದಿ ಅನಾಹುತಗಳೇ ತುಂಬಿಹೋಗಿದ್ದುವು (ನಡೆದಾ. II, ೮೭೮).

[< ಸಂ. ಅಪಘಾತ. / ತಮಿ. ಅವಗಡ = ಮೋಸ, ಕಪಟಾಚರಣೆ ; ಮಲ. ಅವಗಡ = ಅಪಾಯ ; ತುಳು. ಅವಗಡ = ದೋಷ, ಮೋಸ, ಅಸ್ತವ್ಯಸ್ತತೆ, ಕಳವಳ, ಕಠಿಣ, ಅಪಾಯ ; ತೆಲು. ಅವಗಡ = ಪ್ರಮಾದ, ಅಪಾಯ ; ಮರಾ. ಅವಘಡ = ಕಠಿನ, ಕಷ್ಟಪ್ರದ]

**ಅವಗಡಿಗ** (ನಾ). ತೊಂದರೆಯನ್ನುಂಟುಮಾಡುವವನು ; ಕೇಡಿಗ ; ದುಷ್ಟ : ಕವಿಕವಿಯೆಲೆಲೊ ಕೊಲ್ಲದಿರು ಸಿಂಗವದವಗಡಿಗರು [ಪಾಠಾಂ. ವಿದವಗಡೆಯನು] ಕೈಮಾಡದೆ (ಸೊಬಸೋ. ೫–೪೮). [ಅವಗಡ + -ಇಗ]

**ಅವಗಡಿಸು**, ಅವಘಟಿಸು, ಅವಘಡಿಸು (ಕ್ರಿ). ೧. ಕಡೆಗಣಿಸು; ಅಲಕ್ಷ್ಯಮಾಡು; ಹೀಯಾಳಿಸು: ಹರಿಸಂಧಾನಕ್ಕೆವಂದಂದವಗಡಿಸಿ ದಹಂಕಾರಮೆಲ್ಲಿತ್ತೊ (ಗದಾಯು. ೭-೧೪); ಬಲದೇವನಂದನೆಯು ಫಲಿತ ಮೃದು ತಾಂಬೂಲಪತ್ರಂಗಳನವಗಡಿಸಿ ಕದಪುಗಳು ನಿರ್ಮಳವೊದಗಿ ಥಾಳೈಸುತಿಪ್ಪುವು ಲೋಲಲೋಚನೆಯ (ಬಸವ. ೪-೨೩); ಅಡಿದಳದ ಬಲ್ಸೊಂಪು ಕೆಂದಳಿರ ಪೆಂಪನವಗಡಿಸಿ ಮರನೇಱಿಸೆ ಪೊದಳ್ದುಗುರ್ ಶುಕ್ತಿಜದ ಬೆಡಂಗಿಗೆ ಭಂಗಮಂ ಸಂಗಳಿಸೆ (ಪದ್ಮರಾ. ೩-೨೬); ಮಿಂಚಂ ಮಿನುಗುವ ಸಂಚಲತೆಯೊಳೆ ಪಳಂಚಿ ಗೆಲುವ ಚಟುಲಾಕ್ಷಿಗಳೆಸೆವ ವಿಪಂಚಿಯ ಪಂಚಮದಿಂಚರಮಂ ಪಿರಿದವಗಡಿಸುವ ಮಾತು (ಜಯಕಾ. ೨-೨). ೨. ಭಂಗಿಸು; ಸೋಲಿಸು: ಜವನುಂ ತೊಡರ್ದೆಡೆಯೊಳ್ ನಂಜವನುಂ ನೀನಲ್ಲದುೞಿದರವಗಡಿಸುವರಾರ್ (ಪಾರ್ಶ್ವಪು. ೨-೮೯); ಕವಲುಗೋಲಲಿ ದ್ರುಪದ ಮತ್ಸ್ಯರನವಗಡಿಸಿ ಹೈಡಿಂಬನಭಿಮನ್ಯುವನು ಮಸೆಗಾಣಿಸಿ ಮಹೀಶನ ರಥಕೆ ಮಾಱಾಂತ (ಕುವ್ಯಾದ್ರೋ. ೧-೬೦). ೩. ವಿರೋಧಿಸು; ಪ್ರತಿಭಟಿಸು; ಮೇಲೆ ನುಗ್ಗು: ದೈವಯಂತ್ರವನವಗಡಿಸಿ ಸೂಕುವರೆ ನಮ್ಮಳವೇ (ಕುವ್ಯಾಕ. ೧೪-೨೪); ತಿವಿಯೆಸೆ ಪೊಡೆ ಹಿಡಿ ಸ್ವಾಮಿದ್ರೋಹರನೆನುತವಗಡಿಸುತ ಲಾಗಿಸಿದರು (ಭರಚ. ೩೪-೭೯); ತವಕದಿನಾನೆ ಕುದುರೆ ಕಾಲಾಳು ಬಂದವಗಡಿಸಿದುದೇವೇಳ್ವೆ (ಕಂನವಿ. ೧೭-೨೭). ೪. ವ್ಯಾಪಿಸು; ಹರಡು: ಯುವತಿಯಂ ಕಂಡಿನಿಯನಾಗ್ರಹವವಗಡಿಸುತಿಂತೆಂದಂ (ಬಸವು. ೧೩-೨೦); ಜಲಜನಾಭಂ ಕಂಡು ತನ್ನ ಬತ್ತಳಿಕೆಯಿಂ ಸೆಳೆದನುನ್ನತ ವೈಷ್ಣವಾಸ್ತ್ರಮಂ ಪೆರ್ಗಿಡಿಯ ಬಳಗಂಗಳವಗಡಿಸೆ ಭಟರ ಭಯವಿಮ್ಮಡಿಸೆ ಪೂಡಿದಂ ಕಾರ್ಮುಕದೊಳು (ಜೈಬಪು. ೧೬-೨೮). ೫. ದುಡುಕು; ತ್ವರೆಗೊಳ್ಳು: ಸೋತ ಕರ್ಣನ ಹರಿಬವೆಮ್ಮದು ಮಾಕು ನೂಕೆಂದುರವಣಿಸಿದರು ಮತ್ತೆ ಕೌರವನನುಜರವಗಡಿಸಿ (ಕುವ್ಯಾದ್ರೋ. ೧೩-೨೭); ಸಲೆ ಕಂಡು ಕೇಳ್ದ ಹಿರಿಯರು ನೀವು ಸಾಮದಿಂದಳವಡಿಪರಲ್ಲದವಗಡಿಸಿ ದಂಡೋಪಾಯದಲಿ ಕೊಂಬ ಕಾರ್ಯ ಸುಮಂತ್ರವಲ್ಲ (ಸೌಂದಪು. ೪-೬೫). ೬. ನಿರೋಧಿಸು; ಅಡ್ಡಗಟ್ಟು: ಗಂಗೆ... ಭಗೀರಥನ ಬೆಂಬಳಿಯೊಳೆಯ್ತರಲು ಪಥದೊಳಗೆ ಜಹ್ನುಮುನಿಪ ಅವಗಡಿಸಿ ತಾಂ ಮಾಳ್ಪ ಯಜ್ಞವಳಿದಪುದೆಂದು ಪವಣಿಸಿದನೊಂದು ಕುಡಿತೆಯೊಳೀಂಟಲಾ ನದಿಯ (ಲಶಿಚಂ. ೨೫-೨೦); ದಿಕ್ಪಾಲನಿವಹಂ... ತಿವಿ ಬಸುಜನುಗಿ ಕರುಳನಗಿಯೆನುತ್ತಾಹವಕ್ಕವಗಡಿಸಿದುದು ವಜ್ರನಾಭನಿದಿರೊಳ್ ನಿಂದು ಸರಳ್ವಳೆಗಳಂ ಕರೆವುತೆ (ಜೈಬಪು. ೩೯-೩). ೭. ಚೋದಿಸು; ಪ್ರೇರಿಸು: ಇಭಪತಿಯನವಗಡಿಸಿ ನೂಕಿದೊಡಮಮ ದಿಕ್ಕರಿ ನಡುಗೆ ಚೌಕದ ಕಳನ ತುಳಿದುದು ಸುಪ್ರತೀಕಗಜ (ಕುವ್ಯಾದ್ರೋ. ೩-೧೧); ಕಿವಿಯ ಮುಚ್ಚಿದನರ್ಜುನನು ಹರಿಯವಗಡಿಸೆ ಕೈಕೊಂಡ ಸರಸನು (ಕುವ್ಯಾದ್ರೋ. ೧೮-೪೦); ಗಡಿಗಡಿಯೊಳಗುಳ್ಳ ಬಲುಗಡಿಯರನವಗಡಿಸುತ ಮೊಱೆವ ವಾದ್ಯಗಳ (ಕುರಾಸಾಂ. ೪೧-೮೧). **ಅವಘಟಿಸು**: ೩. ಕವಿದವಾನೆಗಳಟ್ಟೆ ರಾವುತರು ತಿವಿದರಂಬಿನ ಸರಿಯ ಸಾರದೊಳವಘಟಿಸಿದರು ರಥಿಕರು (ಕುವ್ಯಾಕ. ೧೨-೨೨); ಅವಘಟಿಸಿದುದು ದಂತಿ ದಂತಿಯ ಜವಗತಿಗೆ ಜವಗುಂದಿದರು ಬಹುಭುವನಕೋಶದ ಹೋಱಿಯ ಹೋಱಿಗೆಯ ಹೊಂತಕಾರಿಗಳು (ತೊರರಾ. ೬-೩೨-೧೪). **ಅವಘಡಿಸು**: ೧. ನುಡಿದ ದಿನಕವಬಾರನೆಂದವಘಡಿಸರಲೆ ಚಿತ್ತದಲಿ ನನ್ನಲಿ ತಡೆದುದಪರಾಧಾಂಶವದ ಬಿನ್ನೈಸಲೇಕಿನ್ನು (ತೊರರಾ. ೪-೬-೨೬); ಕಡುಚಪಲನು ನಾನೆನುತ ಪರರ ಅವಘಡಿಸಬೇಡೆಚ್ಚರಿಕೆ (ಪುರಂದ. ೨-೪೭-೧೦). [ಅವಗಡ + -ಇಸು$_3$]

**ಅವಗಡೆಯ$_1$** (ಗು). ಭಯಂಕರವಾದ; ರೌದ್ರವಾದ: ಅಲ್ಲಿಂದ ಹೊಱವಂಟವಗಡೆಯ ಪರ್ವತಕೆ ಬಂದರು ಯಾಮುನಾಹ್ವಯದ (ಕುವ್ಯಾಆ. ೧೪-೧೩); ನಡೆದುದಲ್ಲಿಂಮೇಲೆ ಬಲವವಗಡೆಯ ನಳನೀಲಾದಿ ಕಪಿಗಳ ಗಡಣದಲಿ (ತೊರರಾ. ೪-೪-೩); ಅವಗಡೆಯ ಮುನಿಯ ಕೈಹಿಡಿತೆಗೊಳಗಾಗಿ ಭಂಗವನಾಂತೆನೆಂದು (ಪಾಸೋಪು. ೧-೨೩).
[< ಅವಗಡ]

**ಅವಗಡೆಯ$_2$** (ನಾ). ೧. ರಭಸವುಳ್ಳ ಸ್ವಭಾವದವನು; ಸಾಹಸಿ: ಮಡಗದಿರು ಮಡಿವಳ ಶರಣನವಗಡೆಯನಾತನು ಕಲ್ಲಿನಾಥನ ಕಡುಗಲಿಯು ಮಾಸಾಳು (ಬಸಪು. ೩೭-೪೬); ಪಾಂಡುಸುತರು ಮೊದಲಾದವಗಡೆಯರನುವಾಗೆ (ಕುವ್ಯಾಸ. ೧೧-೨೫); ಅವಗಡೆಯನಾ ಭೀಮ ನೀವೆಂಬರು ನಿಸ್ಸೀಮರು (ಕುವ್ಯಾಅ. ೧೭-೨೫); ಕಡಿದು ವಜ್ರದಲಾನೆ ಸಹಿತವಗಡೆಯನಲ್ಲಿಂದಿರದೆ . . . ಹೊಱವಂಟನಾಕ್ಷಣಕೆ (ನಿಭಾಗ. ೬-೧೧-೨೨). ೨. ತೊಂದರೆ; ಅಪಾಯ: ತನುವಿಗೆ ರುಜೆಯುಡಸಿದಲ್ಲಿ ಆತ್ಮಕ್ಕೆ ಅವಗಡೆಯ ಬಂದಿತ್ತು (ಶಿವಮಂ. ೩೨). [ಅವಗಡ$_0$ + -ಅ$_7$]

**ಅವಗಡೆಯತನ** (ನಾ). ೧. ಸಾಹಸ; ಹುರುಪು; ಉತ್ಸಾಹ: ಲವಲವಿಕೆಯಲಿ ಕಾದಬೇಕೆಮ್ಮವನಿಯನು ಕೈಕೊಳಲುಬೇಕೆಂಬವಗಡೆಯತನವೆತ್ತಲಡಗಿತು ಪಾರ್ಥ ಹೇಳೆಂದ (ಕುವ್ಯಾಭೀ. ೩-೩೯); ಇವರು ಪರಿಯಂತೇಕೆ ಸತ್ತಿಗೆಯುವನು ಸಾಲದೆಯೆಂಬ ಸಾಹಸದವಗಡೆಯತನ ವಾರಿಗುಂಟೇ ನೆರೆದ ಭಟರೊಳಗೆ (ತೊರರಾ. ೬-೨-೧೬). ೨. ತುಂಟತನ: ತುಡುಕಿ ಬೆಣ್ಣೆಯ ಮೆಲುವ ಕೃಷ್ಣನ ಹಿಡಿದು ತಂದೊಪ್ಪಿಸುವುದೆನಗವಗಡೆಯತನವನು ಮಾಣಿಸುವೆನು (ನಿಭಾಗ. ೧೦-೮-೩೨).
[ಅವಗಡೆಯ$_2$ + -ತನ]

**ಅವಗಣಿತ** (ಗು). ಅಲಕ್ಷ್ಯಕ್ಕೆ ಗುರಿಯಾದ; ಉಪೇಕ್ಷಿಸಲ್ಪಟ್ಟ. [ಸಂ.]

**ಅವಗತ** (ಗು). ೧. ಹೊರಟುಹೋದ; ಕಳೆದುಹೋದ. ೨. ಚೆನ್ನಾಗಿ ತಿಳಿದುಕೊಂಡ: ವಿಭಂಗ ಜ್ಞಾನದಿಂದವಗತನರಕಲೋಕ ವೃತ್ತಾಂತರಾದಿಂಬೞಿಯಂ (ಸುಕುಮಾ. ೧೧-೪೨ ವ).

**ಅವಗತಮಾಡಿಕೊ** = ಚೆನ್ನಾಗಿ ತಿಳಿದುಕೊ: ಅವರ ಸುಖ ದುಃಖ ಕಷ್ಟನಷ್ಟಗಳೇನೆಂಬುದನ್ನು ಅವಗತಮಾಡಿಕೊಳ್ಳಬೇಕು (ಜನಜೀ. ೩೩). ಅವಗತವಾಗು = ೧. ಲೀನವಾಗು; ಐಕ್ಯವಾಗು: ವಿವಿಧ ಶಬ್ದಬ್ರಹ್ಮವಾ ಪರಬ್ರಹ್ಮದೊಳವಗತವಾಯ್ತೊಯೆಂಬಂತೆ (ಭರಚ. ೭೬-೨೪). ೨. ಗೊತ್ತಾಗು; ತಿಳಿದುಬರು: ನೃತ್ಯವೂ ಒಂದು ಕಲೆ, ಅದು ಅವಗತವಾಗದಿದ್ದರೆ ಸಂಸ್ಕೃತಿಯ ಒಂದು ಅಂಗ ಊನವಾದಹಾಗೆ (ಸಮಜೀ. ೬೧೮). [ಸಂ.]

**ಅವಗತಿ** (ನಾ). ಜ್ಞಾನ; ತಿಳಿವಳಿಕೆ; ಅರಿವು. [ಸಂ.]

**ಅವಗಮನ** (ನಾ). = ಅವಗತಿ [ಸಂ.]

**ಅವಗಮ್ಯ** (ಗು). ತಿಳಿಯಬಹುದಾದ; ತಿಳಿಯಲೇಬೇಕಾದ: ಆವುದಂತರ್ಬಹೀರೂಪದಿಂ ವಿಶದದರ್ಶನಾವಗಮ್ಯಂ ಅದೆಲ್ಲಮುಪಾಸ್ಯಪ್ರಭಾಸಿ (ಆದಿಪು. ೨-೯ ವ); ಅಪಥಾರು ವೇದಾಂತಾವಗಮ್ಯ ಮನೋರಥಪ್ರದ ನೀಲಗಳ ಬಿನ್ನಪವನವಧರಿಸು (ಬಸಪು. ೧-೬೬). [ಸಂ.]

**ಅವಗಯಿಸು$_1$**, ಅವಗಯ್ಸು (ಕ್ರಿ). ೧. ಗ್ರಹಿಸು; ಪಡೆ; ಹೊಂದು: ವಾಸವಪುರಮಿದಱೀ ವಿನ್ಯಾಸಮನಿದಱೀ ಗೃಹಾಧಿವಾಸಮನಿದಱೀ ಥೇಸೆಯನಿದಱೀ . . . ಬೆಡಂಗನವಗಯಿಸುಗುಮೇ (ಶಾಂತಿಪು. ೩-೮); ನೂಱ ನೂರ್ಛಾಸಿರಮಂ ವಿಗುರ್ವಿಸಿ ವಿಮಾನದ ಯಾನದ ವಾಹನಂಗಳಗ್ರೇಸರ ಸದ್ವಿಮಾನಮುಮನರ್ಚನೆಯೊಳ್ ದೊರೆಕೊಂಡ ಚೆಲ್ವುಮಂ॥ ಅವಗಯಿಸಿ (ಶಾಂತಿಪು. ೧೦-೨, ವ). ೨. ತೋರಿಸು; ಪ್ರದರ್ಶಿಸು: ದಿವಿಜೇಂದ್ರಭವನಮೆಂಬೀ ನಿವಾಸದಿಂದತ್ತ ಮತ್ತೆ ಮೇಲಿರ್ದಪುದೆಂದವಗಯಿಪವೊಲಲ್ಲಿಯ ವಾತವಿಧೂತವಿನೂತಕೇತುಗಳ್ ದಳ್ಪಿಸುಗುಂ (ಸುಕುಮಾ. ೧೦-೪೯). ೩. ತಿರಸ್ಕರಿಸು; ಪರಿಹಾಸಮಾಡು: ಅನೂನ

ಗಾಂಭೀರ್ಯದಿನಾ ಕಡಲನವಗಯಿಸಿ ತೋರ್ಪುದು ವಿಡಂಬಿ ಮಹಿಮಾವಳಂಬಿ ಕೌಶಾಂಬಿಪುರಂ (ಸುಕುಮಾ. ೧-೭೪); ಕೇಶಾವಳಿಗಳ್ ಮತ್ತಾಳಿನೀಕಾಂತಿಯನವಗಯಿಸಲ್ ಪ್ರೌಢವೇಶ್ಯಾಸಮೂಹಂ . . . ತೋಱುತ್ತುಮಿರ್ಕುಂ (ಬಾಧಪು. ೧-೧೩೫). **ಅವಗಯ್ಸು**: **೨.** ಕೂಡಿಕೆಯುದಬಿಂದು ಕೊಪ್ಪಿನ ಬೆಡಂಗನವಗಯ್ಸೆ . . . ಸತಿ ಸೊಗಯಿಸಿದಳ್ (ಶಾಂತಿಪು. ೮-೯೨). **೪.** ಬೆರೆತುಕೊಳ್ಳು; ಸೇರಿಕೊಳ್ಳು: ಬಗೆಮತ್ತೊಂದೆನೆಯುಂ ಗೆಯ್ವೊಗಮಿತ್ತೊಂದೆನೆಯುಮಂಗುಳೀನಖಚಯಕಾಂತಿಗಳನವಗಯ್ಸಿ ಸಲೆ ಪಾಸಗೆಯಂ ದೆಸೆದೆಸೆಗೆ ಪೊರಳ್ಚಿದಂ ಮತ್ತೊರ್ವಂ (ಶಾಂತಿಪು. ೫-೧೦೫).

[ಅವಗಯ್₀ (< ಅವಗ್ರಹ) + -ಇಸು₃]

**ಅವಗಯಿಸು₂** 'ಅವಗಹಿಸು₁' ನೋ.

**ಅವಗಯ್ಸು** 'ಅವಗಯಿಸು₁' ನೋ.

**ಅವಗವಿಸು** 'ಅವಗಹಿಸು₂' ನೋ.

**ಅವಗಹನ** (ನಾ). **೧.** ಜಲಾಶಯದಲ್ಲಿ ಪೂರ್ತಿಮುಳುಗಿ ಸ್ನಾನಮಾಡುವುದು. **೨.** [ಜೈನ] ಮುಕ್ತಾತ್ಮರ ಎಂಟುಗುಣಗಳಲ್ಲಿ ಒಂದು; ಒಂದು ದೀಪದ ಬೆಳಕಿನಲ್ಲಿ ನಾನಾ ದೀಪಗಳ ಪ್ರಕಾಶ ಸೇರಲು ಹೇಗೆ ಅವಕಾಶವಿರುವುದೋ ಹಾಗೆಯೇ ಮುಕ್ತಜೀವದಲ್ಲಿ ಅನೇಕ ಸಿದ್ಧಜೀವಿಗಳು ಸಂಕ್ರಮಿಸಲು ಇರುವ ಅವಕಾಶದ ಗುಣ: ಅನಂತಜ್ಞಾನಮುಂ ಅನಂತದರ್ಶನಮುಂ . . . ಅವಗಹನಮುಂ ಅವ್ಯಾಬಾಧಂಗಳೆಂಟುಂ ಗುಣಂಗಳಾತ್ಮಾಯತ್ತಮಾಗೆ (ಶಾಂತಿಪು. ೧೨-೫೧ ವ). 'ಅವಗಾಹನ' ಪರಾ.

**ಅವಗಹನಂಮಾಡು** = ಚೆನ್ನಾಗಿ ಮುಳುಗಿ ಸ್ನಾನಮಾಡು: ನೀಡು ನೋಲಾಡಿದನವಗಹನಂ ಮಾಡಿದಂ ರಾಗದಿಂದೀಂಟಿದನೊರಂತೀಸಿದಂ (ಸುಕುಮಾ. ೬-೪೩). [ಸಂ.]

**ಅವಗಹಿಸು₁**, ಅವಗಯಿಸು₂ (ಕ್ರಿ). ಒಳಹೊಗು; ಲೀನವಾಗು: ಆ ಅಱಿವಿಂಗೆ ಕುಱುಹಿನ ವಾಸ ಅವಗಹಿಸಿದ ಮತ್ತೆ ಬೇಱೊಂದಿಲ್ಲ (ಡಬೊಮ್ಮ. ೭೫); ಬಸವಣ್ಣ ಚರಲಿಂಗಾನಿವಹ ಸತ್ಪ್ರಾಣಾಶ್ರಿತೋಕ್ತಿಯೊಳವಗಡೆಯನಿಂತೀಗ ನಿನ್ನೊಳಗವಗಹಿಸಿ [ಪಾಠಾಂ. ಗಯಿಸಿ] ಬೆರಸಿದನು (ಬಸಪು. ೩೬-೩೩); ತವಕಿಸುವ ತನುವೊಂದಱೊಳಗೊಂದವಗಹಿಸಿತೆನೆ ಕೂಡಿ ಸುರತದ ಸವಿ ತವದೆ ಸವುಸುಖವನುಂಡರು ದಂಪತಿಗಳವರು (ಸಾಳ್ವಭಾ. ೬-೨೨). **ಅವಗಯಿಸು₂**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಅವಗಹನ + -ಇಸು₃]

**ಅವಗಹಿಸು₂**, ಅವಗವಿಸು (ಕ್ರಿ). = ಅವಗ್ರಹಿಸು **೧**: ಮೆಱೆವ ತಾಪತ್ರಯವದವಗಹಿಸಿ ಬೇಸಗೆಯೊಳುರಿವ ಬಿಸಿಲಂತೆನ್ನ ಕರಗಿ ಕೊರಗಿಪುದು (ಕೈಕವ. ೧೭-೪). **ಅವಗವಿಸು**: ಆಕಾಶವನವಗವಿಸಿದ ಗೋಳಾಕಾರದಂತೆ ಮಱಹಿಂಗೆ ಒಡಲಿಲ್ಲದೆ ಕೊಂಡುದು ಗಣಪ್ರಸಾದ (ಏಲೇಶ್ವ. ೧೨೭); ಥಂಗಾರ ರೂಪಿದ[ದ್ದ] ಲ್ಲದೆ ಬಣ್ಣವನವಗವಿಸದು . . . ಅಖಿದನವಗವಿಸಿ ನಿಂದುದು ಅಯಿಕ್ಯಸ್ಥಳಂ (ಶಿವಮಂ. ೫೩); ಭವರೋಗವೈದ್ಯ ಕೇಳೆನ್ನ ಪತಿಯೊಡಲನವಗವಿಸಿದುಗ್ರಜ್ವರವ ತವಿಸಿ (ಸೌಂದಪು. ೧೨-೭೭); ಚಂದ್ರಮನ ಬೆಳಕು ಮಂಡಲವನು ಅವಗವಿಸಲು ಮಂಡಲ ಕರಗಿ ಮಂಡಲಾಧಿಪತಿ ತನ್ನ ಕಂಡುದು ಸೋಜಿಗ (ಸಿದ್ದೇವ. ೩೪೪); ಮಹಂತ ಶರಣನ ಮನವನವಗವಿಸಿಕೊಂಡ ನಿಭ್ರಾಂತಲಿಂಗಸ್ಥಲಗಳಾಚರಿರವಂ ಪೇಳ್ವೆ (ಗುರುಚಾ. ೩-೭೪).

[ಅವಗಹ₀ (< ಅವಗ್ರಹ) + -ಇಸು₃]

**ಅವಗಳಿಯ₁** (ನಾ). ಪರಿಕರ: "ಅವಗಳಿಯಂ ಕರಂ ಪರಿಕರಂ" (ಕರ್ಣಾನಿ. ೪೨). [?]

**ಅವಗಳಿಯ₂** 'ಅವಗಟಿಯ' ನೋ.

**ಅವಗಳೆ** (ಕ್ರಿ). ಮೀರು; ಕಡೆಗಣಿಸು; ಉಲ್ಲಂಘಿಸು: ಇವರು ಮೊದಲಾಗೀಶ್ವರಾಜ್ಞೆಯನವಗಳೆಯಲಳವಲ್ಲ (ಅಮೃತ. ೨-೯೭).

[ಅವ₀ + ಕಳೆ₁]

**ಅವಗೞಿ₁** (ಕ್ರಿ). ನಾಶಮಾಡು (?): ಪಟಿಯರನುಜದಪಮಾನದೆ ಕಟಿಲ್ಚುವಂ ಬೀಡಿನಾಳ್ಗೆ ತೆಱಿಯಂ ಮತ್ತಂ ಘಟಿಯಿಸುವಂ ರಾಜ್ಯಮನವಗೞಿಯದೆ ದುಷ್ಟಪ್ರಧಾನನಿರಲಱಿದಪನೆ (ಸೂಕ್ತಿಸು. ೧೬-೫೫).

[ಅವ₀ + ಕೞಿ₁]

**ಅವಗೞಿ₂** (ನಾ). ಅತಿಶಯ; ಆಧಿಕ್ಯ: ಬಟಿಯಂ ಪೋಗುತ್ತುಂ ಪೆಱಗುಱಿವಿನನನುಚರರ ತೆಱಿದೆ ಕೆಯ್ದೀವಿಗೆಗಳ್ ಪಟಪಟನೆಸೆದಿರೆ ಬರವವಗೞಿಯೆನೆ ಕಣ್ಗೆಸೆವರೆ ಬರ್ಪ ವಜ್ರಾಯುಧನಾ (ಶಾಂತಿಪು. ೮-೬೪); ನೀರನವಗೞಿಯನುಂಡು ಶರೀರಂ ಬಡವಾಗೆ ತಲೆಯನೆತ್ತದೆ ವದನಂ ನೀರೋಡಿ ಬಾಡೆ ಮರಣಮನಾರಾಧಿಸಿ ತನಗೆ ತಂದುದೆಂದಱಿವುದದಂ (ಅಶ್ವಶಾ. ೬-೫೮). [ಅವ₀ + ಕೞಿ₂]

**ಅವಗೞಿಯ**, ಅವಗಳಿಯ₂ (ನಾ). **೧.** ರಭಸದಿಂದ ನುಗ್ಗುವ ಸ್ವಭಾವ: "ಅವಗೞಿಯಂ=ಉರವಣೆಕಾರ್ತನಂ" (ಶಮದ. ಪರಿ ೧); ಅಟಿಪು ಕೊಲೆ ಕಳವು ಪುಸಿಯವಗೞಿಯಂ ಪಟಿಯೆಂಬ ದೋಷದೊಳ್ ಪೊರೆದ ನರಂ ಕೆಟಿಕೆಟಿಗೆ ನರಕಬಿಲದೊಳ್ ಗಟಿಗಟಿನಿೞಿಗುಂ ರಸಾಂತಮುಂ ತಾಪಿನೆಗಂ (ಕಾವ್ಯಾವ. ೩೯೧). **೨.** ಅತಿಶಯ; ಅಧಿಕ: ಅವಧಂಸದೇನ ನಿತ್ತೊಡಮವಚತ್ತವೊಲಿರ್ಪಲೋಪನೊಳ್ ನೆರೆವೊಡೆ ನೋವವಗೞಿಯ ಮಾಕೆಗಲಸಿಕೆಯಿವಳಿಂದಂ ಬೀಯಕಾರ್ತಿಯರೊಳರೇ (ಲೀಲಾವ. ೨-೭೬). **ಅವಗಳಿಯ₂**: **೨.** ಅನಾಥೆ ಅಬಲೆ ಅಸಹಾಯೆ ಆ ಪರಸ್ತ್ರೀಯಳ ಅಂತರ್ಗೃಹಕ್ಕೆ ಆ ಮರ್ಯಾದೆಯಲ್ಲಿ ನುಗ್ಗಿಹೋದ ನನ್ನ ಅವಗಳಿಯದ ಪೊಲ್ಲಮೆಯನ್ನು ಮಹಾಪರಾಧವನ್ನು ಕ್ಷಮಿಸು (ಬೆಟ್ಟಅ. ೧೨೭-೬). ℙ ಅವಗಡೆಯ, ಅವಗೞಿಯ ಇವೆರಡೂ ಒಂದೇಶಬ್ದದ ಭಿನ್ನರೂಪಗಳಿರಬಹುದು. [?]

**ಅವಗೞಿಯಿಸು** (ಕ್ರಿ). ಉರವಣಿಸು; ಅತಿಶಯವಾಗು: ಪಟಿಯಿಗೆ ಬಿಟಿಲ್ದೊಡೆ ಬೀರದ ಪಟಿವಿಗೆಯಂ ನಿಱಿಸಲೆಂದೆ ಹರಿವಕ್ಷಮನಲ್ಲಟಿವೋಗೆಯೆಚ್ಚು ಮುಳಿಸವಗೞಿಯಿಸುತಿರೆ ನರನ ಬಿಲ್ಲಗೊಣೆಯುಮನೆಚ್ಚಂ (ಪಂಪಭಾ. ೧೨-೨೦೯).

[ಅವಗೞಿ₂ + -ಇಸು₃]

**ಅವಗಾಢ** (ಗು). ಮುಳುಗಿದ; ಮಗ್ನವಾದ: ಅರ್ಥದೊಳವಗಾಢಮಾಗಿ ಬಿಡದುಣ್ಮುವ ಭಾವ (ಕುಸುಮಾ. ೧-೫). [ಸಂ.]

**ಅವಗಾಹ** (ನಾ). **೧.** ಮುಳುಗುವುದು. **೨.** ಜಲಾಶಯದಲ್ಲಿ ಮೈಯನ್ನು ಮುಳುಗಿಸಿ ಸ್ನಾನಮಾಡುವುದು; ಸ್ನಾನ: ಅಂಬಂತಾರ್ಣವಾವಗಾಹದೊಳಿರ್ದೊಡೀ ಪೋದ ರಾತ್ರಿಯೊಳ್ ನಿನ್ನನೋಲಗಿಸಿ (ಶಾಂತಿಪು. ೬-೬೪ ವ). **೩.** ನೀರಿನ ದೋಣಿ; ನೀರನ್ನು ತುಂಬಿಡುವ ಪಾತ್ರೆ: "ಅವಗಾಹಃ, ಜಲದ್ರೋಣೀ - ಈ ೨ ನೀರದೋಣಿ" (ಹಲಾಯು. ೧೨೪-೬೯); "ಅವಗಾಹಮೆನೆ ಮರಗಿಯಕ್ಕು" (ಮಂಗರಾ. ೩೩-೨೬). **೪.** ಆಳ: ಯೋಜನ ಸಹಸ್ರಾವಗಾಹಮುಂ . . . ಅಗಿ ನೆಲಸಿರ್ದಪ್ಪುದಧಸ್ಥಳಂಬಿಡದಧೋಲೋಕಂ (ಆದಿಪು. ೧-೪೯ ವ. ೫೦); ಸಪಾದಷಡ್ಯೋಜನಾವಗಾಹದೊಳಂ ಪಂಚಷಡ್ಯೋಜನಾಧೋವಿಸ್ತಾರದೊಳಂ (ಆದಿಪು. ೧-೭೨ ವ). **೫.** = ಅವಗಹನ **೨**: ಬಟಿಯಂಕ್ಷಾಯಿಕಸಮ್ಯಕ್ತ್ವಾನಂತಜ್ಞಾನ ದರ್ಶನ ವೀರ್ಯ ಸೂಕ್ಷ್ಮಾವಗಾಹಾ ಗುರುಲಘುತಾವ್ಯಾಬಾಧಂಗಳೆಂಬ ಗುಣಮೆಂಟುಂ (ಆದಿಪು. ೧೬-೪೯, ವ, ೫೦).

[ಸಂ.]

**ಅವಗಾಹಂಗೆಯ್** (ಕ್ರಿ). ಸ್ನಾನಮಾಡು; ಮುಳುಗಾಡು: ಶೃಂಗಾರಾಮೃತರಸಪೂರಿತದಿ ಮನಂಗೊಳಿಸುವ ನಾಭೀಕಾಸಾರದೊಳಂಗಜಗಜಮವಗಾಹಂಗೆಯ್ಯಲ್ (ಜಯಕಾ. ೩-೩೬).
[ಅವಗಾಹ + ಗೆಯ್ (< ಕೆಯ್$_1$)]

**ಅವಗಾಹನ** (ನಾ). = ಅವಗಾಹ ೧: ಅವಗಾಹನಕ್ಕೆಂದು ಬಂದ ಸೊಕ್ಕಿದಾನೆಗಳ ಸಿಂದುರಂಬೊರೆದ ಸಲಿಲಂಗಳೊಳಂ (ಕಾದಂಪೂ. ೧೬); ಸಲಿಲಾವಗಾಹನಕ್ಕತಿಲಲಿತತೆಯಂ ಬನದೆಲರ್ಗೆ ಪಾದರಿಗಂಪಂ ಸುಲಭತೆಯಂ ನಿದ್ರೆಗೆ ನೆಳಲೊಳಗಿತ್ತುವು ಪರಿಣತಿಯೊಳೆ ಸೊಗಯಿಪ ಪಗಲ್ಗಳ್ (ಶಾಕುಂತ. ೧-೩). [ಸಂ.]

**ಅವಗಾಹನಂಗೆಯ್** (ಕ್ರಿ). = ಅವಗಾಹಂಗೆಯ್: ಸರಯೂನದಿಯೊಳವಗಾಹನಂಗೆಯ್ಯೆ ನೋಂತ ಭರತನದೆಂತೊ ಈವೊತ್ತಿನೀ ಚಳಿಗೆ ಮನದಂದಪಂ (ಶ್ರೀರಾಮಾ. ೧೧-೨೦೫).
[ಅವಗಾಹನ + ಗೆಯ್ (< ಕೆಯ್$_1$)]

**ಅವಗಾಹನಮಿರ್** (ಕ್ರಿ). ಮುಳುಗಿರು; ಮಗ್ನವಾಗಿರು: ನಿನಗೆ ರಸಮೊಂದೆ ಶಾಂತಮೆ ಜಿನೇಂದ್ರ ಮನಮಾ ರಸಾಂಬುನಿಧಿಯೊಳಗವಗಾಹನಮಿರ್ದು ಮಿಕ್ಕ ರಸಮಂ ಕನಸಿನೊಳಂ ನೆನೆಯದಂತು ಮಾಡೆಮಗರುಹಾ (ಪಂರಾಮಾ. ೭-೪೨). [ಅವಗಾಹನ + ಇರ್]

**ಅವಗಾಹನಸ್ನಾನ** (ನಾ). ಜಲಾಶಯದಲ್ಲಿ ಮೈಯನ್ನು ಮುಳುಗಿಸಿ ಮಾಡುವ ಸ್ನಾನ: ಹಿಮವತ್ಪರ್ವತದ ಮೇಲೂ ರಾಜಾಸ್ಥಾನದ ಮರುಭೂಮಿಯಲ್ಲಿಯೂ ಶೀತೋದಕಸ್ನಾನವೂ ಅವಗಾಹನಸ್ನಾನವೂ ಸಾಧ್ಯವಲ್ಲ (ಆರ್ಯಧ. ೩೦). [ಅವಗಾಹನ + ಸ್ನಾನ]

**ಅವಗಾಹನೆ** (ನಾ). ಗಮನ; ಪರಿಶೀಲನೆ: ವಿಶೇಷನಿಧಿಯ ಅವಗಾಹನೆಗೆ ಸಲ್ಲಿಸಲಾಗುವ ಯೋಜನೆಗಳು ಮೊದಲು ಸಲಹಾಸಮಿತಿಯಲ್ಲಿ ಚರ್ಚಿಸಲ್ಪಡುವುವು (ಅಂತಸಂ. ೧೪೦); ಈ ವಿಷಯ ತಮ್ಮ ಅವಗಾಹನೆಗೆ [illegible] [ಸಂ. ಅವಗಾಹನ]

**ಅವಗಾಹಪ್ರದ** (ಗು). ಮುಳುಗಿಸತಕ್ಕ: ಅದಱಿನುಱಿವುದಿಂತೀ ದೇಹದಾಹಾವಗಾಹಪ್ರದಮೆನಿಪ ವಿಷಾದೋನ್ಮಾದಮಂ (ಚಂದ್ರಪು. ೫-೩೩).
[ಸಂ. (ಅವಗಾಹ + ಪ್ರದ)]

**ಅವಗಾಹಮಿರ್**, ಅವಗಾಹವಿರ್ (ಕ್ರಿ). ಮುಳುಗಿರು; ಮಗ್ನವಾಗಿರು: ಭವಭಯಾಂಬುಧಿಯನುತ್ತರಿಸುವಂತುತ್ತರಿಸಿಯವಗಾಹಮಿರ್ದುಂ ಕೃತಾರ್ಥತೆಯನೆಯ್ದುತಿಪ್ಪವರನೀಕ್ಷಿಸಿ ಗಂಗೆ ಹೆಚ್ಚಿದಳು (ಹಚಕಾ. ೧೦-೩೨); ಚಿತ್ಸುಖಾಬ್ಧಿಯೊಳ್ ಕರಮವಗಾಹಮಿರ್ದನೀಶ್ವರ ಪಾದಸರೋಜಷಟ್ಪದಂ (ಶಬಶಂ. ೨-೧೦೦). **ಅವಗಾಹವಿರ್**: ಮುಱಿದೊಮ್ಮೆ ಕುಡಿತೆಗೊಂಡು ಕುಡಿದೆನಾದಡೆ ಮುಕ್ತಿಯವಗಾಹವಿರ್ದನಾದಡೆ ಗಣೇಶತ್ವ ಸಾರ್ದಡೆ ಮಹಾರುದ್ರತ್ವವಡೆವರೀ ಗಂಗೆಯಿಂದ (ಹಚಕಾ. ೧೦-೩೦); ಏಪೊಗಳ್ವೆನವಗಾಹವಿರ್ದು ಸರೋವರದಿನೊಂದಾನೆಯೆದ್ದುದು (ಸಾಳ್ವಭಾ. ೬-೧೦). [ಅವಗಾಹ + ಇರ್]

**ಅವಗಾಹವಿರ್** 'ಅವಗಾಹಮಿರ್' ನೋ.

**ಅವಗಾಹಿತ** (ಗು). ೧. ಆಳವಾಗಿ ತಿಳಿಯಲ್ಪಟ್ಟ; ಮನನ ಮಾಡಲ್ಪಟ್ಟ. ೨. ಒಳಕೊಂಡ: ಜಿನಮತದಂತೆ . . . ಅವಗಾಹಿತ ಸಮಸ್ತಪದಾರ್ಥಮುಮಾದ ಗಗನಮಂಡಲಮಂ (ಚಂದ್ರಪು. ೯-೪ ವ). [ಸಂ.]

**ಅವಗಾಹಿಸು** (ಕ್ರಿ). ೧. (ಜಲಾಶಯದಲ್ಲಿ) ಮುಳುಗಿ ಸ್ನಾನಮಾಡು: ಗೌತಮಿಯೊಳ್ ಕರಮವಗಾಹಿಸಿ ದಾನಮನಿರದಿತ್ತೊಡೆ ನರಕಮುಕ್ತರಕ್ಕುಂ ಪಿತೃಗಳ್ (ವಿಷ್ಣುಪು. ೧೨-೯೯). ೨. ವ್ಯಾಪಿಸು; ಹರಡು: ಅ ಮಹಾವನವಹ್ನಿಭೂತಸ್ತೋಮ ಸಂಹೃತಿ ಕರ್ಮಶೌರ್ಯೋದ್ದಾಮವವಗಾಹಿಸುತ ಬರುತಿರೆ ಮುಂದೆ ಚೂಣಿಯಲಿ ಧೂಮವಿಳಿದುದು (ಕುವ್ಯಾಆ. ೨೦-೫೯); ಹೈಹಸಾದವು ನಿಮ್ಮ ಕೃಪೆಯವಗಾಹಿಸುವೊಡೇನರಿದು ದೈತ್ಯರು ಸಾಹಸಿಕರೇ ಸದೆವೆನೀ ಪುರಜನಕೆ ಹಿತವಹರೆ (ಕುವ್ಯಾಅ. ೭೦೩. ೧೩-೧೧). ೩. ಚೆನ್ನಾಗಿ ತಿಳಿ; ಪೂರ್ಣವಾಗಿ ಅರಿ. [ಅವಗಾಹನ + -ಇಸು$_3$]

**ಅವಗೀತ** (ಗು). ೧. ತಪ್ಪು ತಪ್ಪಾಗಿ ಹಾಡಿದ. ೨. ನಿಂದಿಸಿದ; ತೆಗಳಿದ; ಹೀಯಾಳಿಸಿದ. ೩. ಮತ್ತೆ ಕಂಡ; ಉಪಲಬ್ಧವಾದ: "ಅವಗೀತಮುಪಲಬ್ಧಮೆನೆ ಮಗುಳೆ ಕಾಣ್ಬುದು" (ಮಂಗರಾ. ೧೩೩-೨೯). [ಸಂ.]

**ಅವಗುಂಠನ** (ನಾ). = ಅವಕುಂಠನ: ನವವಧುವಿನ ಅವಗುಂಠನವನ್ನು ತೆಗೆಯಲು ದಾಸಿಗೆ ಹೇಳಿದರು (ನಿಬಂಧ. I, ೫೦). [ಸಂ.]

**ಅವಗುಣ** (ನಾ). ದುರ್ಗುಣ; ದೋಷ: ಅವಗುಣಮಿನಿತಾದೊಡಮಾ ಕವಿತಾಬಂಧಮನಶೇಷಮಂ ದೂಷಿಸುಗುಂ (ಕವಿರಾ. ೧-೪೩); ಎನ್ನ ಕಾಯದೊಳುಳ್ಳವಗುಣಂಗಳ ಕಳೆದು ಕೃಪೆಯ ಮಾಡಯ್ಯ (ಬಸವ. ೨೬೦). [ಸಂ.]

**ಅವಗುಣಿ** (ನಾ). ಕೆಟ್ಟಸ್ವಭಾವವುಳ್ಳವನು; ದುರ್ಗುಣಿ; ದೋಷಿ: ಗುಣಂಗಳಂ ದೋಷಮೆಂದು ದೋಷಂಗಳುಮಂ ಗುಣಮೆಂದು ಪೞಿವ ಪೊಗೞ್ವವಗುಣಿಗಳ ಗುಣಮುಂ ಗುಣಜ್ಞನೇನೆಣಿಸುವುದೇ (ಸುಕುಮಾ. ೧-೪೮); ನಿಮ್ಮನಱಿಯದವಗುಣಿಗಳ ತೋಱದಿರಯ್ಯ ನಿಮ್ಮ ಧರ್ಮ (ಬಸವ. ೫೧೩). [ಸಂ. ಅವಗುಣಿನ್]

**ಅವಗೂಹನ** (ನಾ). ೧. ಮರೆಮಾಡುವುದು; ಬಚ್ಚಿಡುವುದು. ೨. ಆಲಿಂಗನ. [ಸಂ.]

**ಅವಗೂಹಿತ** (ಗು). ೧. ಮುಚ್ಚಲ್ಪಟ್ಟ; ಮರೆಮಾಡಲ್ಪಟ್ಟ: ಅನಿಮೇಷಾಹಿತನಾಸ್ಯಗಹ್ವರವಿನಿರ್ಯಲ್ಲೋಹಿತಂ ಕಾಕಗೃಧ್ರನಿಕಾಯಚ್ಛದನಾವಗೂಹಿತನೆನಲ್ ಬಿೞ್ದಿರ್ದನಂ (ಜಗವಿ. ೪-೫೯). ೨. ಆಲಿಂಗಿಸಲ್ಪಟ್ಟ. [ಸಂ.]

**ಅವಗೃಹ್ಯಮಾಣ** (ಗು). ಹಿಡಿಯಲ್ಪಟ್ಟ: ಆ ಕಾಂತೆಯನುಪಸಂಹೃತಮನ್ಯುವೇಗೆಯುಂ ಗದ್ಗದಿಕಾವಗೃಹ್ಯಮಾಣಕಂಠೆಯುಮಾಗಿ (ಕಾದಂಉ. ೫೪೪). [ಸಂ.]

**ಅವಗೆವಾಡಿ** (ನಾ). ಒಂದು ಊರಿನ ಹೆಸರು: ಶ್ರೀಮ[ದ್ಭು]ವನೈಕಮಲ್ಲದೇವರ್ಗ್ಗೆ ಅವಗೆವಾಡಿಯ ನೆಲೆವೀಡಿನೊಳ್ಪಿನ್ನಪಂಗೆಯ್ದು ಪರಮೇಶ್ವರ ದತ್ತಿಯಾಗೆ ಪಡೆದು (ಸೌಇಇ. XI-i, ೧೧೭-೧೬ ; 1076).
[ಅವಗೆ$_0$ + ವಾಡಿ]

**ಅವಗ್ರಹ** (ನಾ). ೧. ಬೇರ್ಪಡಿಸುವುದು; ದೂರಮಾಡುವುದು. ೨. ಅಡ್ಡಿ; ತಡೆ. ೩. ಹಿಡಿತ; ಹತೋಟಿ. ೪. ಮಳೆಯಿಲ್ಲದಿರುವುದು; ಅನಾವೃಷ್ಟಿ. ೫. ಆನೆಯ ಹಣೆ: ಅಂತು ಬಂದಾ ತ್ರಿಶೂಲಮವಗ್ರಹಮನುರ್ಚಿ ಪಂ[ಪೇ]ಚಕದೊಳ್ ಪೊಯ್ವಿನಂ . . . ಕುಳಿತ್ತೆಸೆದಿರ್ದಂ ಗಜದೈತ್ಯಂ (ವೀರವಿ. ೫-೫೭ ವ, ೫೮). ೬. ಬೈಗಳಿನ ಮಾತು. ೭. [ಜೈನ] ನಾಲ್ಕು ಬಗೆಯ ಪ್ರತ್ಯಕ್ಷ ಪ್ರಮಾಣಗಳಿಂದ ಬರುವ ಜ್ಞಾನಗಳಲ್ಲಿ ಒಂದು: ಸಕಲವಿನೇಯಸಂಹತಿಯೊಳಲ್ಲದವಗ್ರಹಮೆಂಬುದಿಲ್ಲ (ಅಜಿಪು. ೧-೨೨); ಅವಗ್ರಹ – ಅವಗ್ರಹಮುಂ, ಈಹಾ – ಈಹೆಯುಂ, ಅವಾಯ – ಅವಾಯಮುಂ, ಧಾರಣಾ – ಧಾರಣೆಯುಮೆಂದು ಮತಿಜ್ಞಾನವಿಕಲ್ಪಂ ಚತುರ್ವಿಧಂ . . . ಕಣ್ಣಿಂ ಬಣ್ಣಂ ಬಿಳಿದೆಂದುಕೊಳ್ವಂತೆ ವಿಷಯ ವಿಷಯಿ ಸನ್ನಿಪಾತಮಾಗೆ ಸತ್ತಾವಲೋಕನದರ್ಶನಮಕ್ಕುಂ ತದನಂತರಂ ಅರ್ಥಗ್ರಹಣಂ ಅವಗ್ರಹಂ (ತತ್ತ್ವಪ್ರ. ೫೬); ಪ್ರಮಾಣವು ಪ್ರತ್ಯಕ್ಷ, ಪರೋಕ್ಷವೆಂದು ಎರಡು ವಿಧ . . . ಒಂದನೆಯದರಲ್ಲಿ ಅವಗ್ರಹ, ಈಹ, ಅವಾಯ, ಧಾರಣಯೆಂದು ನಾಲ್ಕು ವಿಧ (ಹಿಂದಸಾ. ೮೫). [ಸಂ.]

**ಅವಗ್ರಹಚಿಹ್ನೆ** (ನಾ). [ವ್ಯಾಕ] ಸಂಸ್ಕೃತ ಸಂಧಿಯಲ್ಲಿ ಏಕಾರಾಂತ ಅಥವಾ ಓಕಾರಾಂತವಾದ ಪದಗಳೊಡನೆ ಮುಂದಿನ 'ಅ'ಕಾರವು ಲೀನವಾಗಿರುವುದನ್ನು ಸೂಚಿಸುವ 'ऽ' ಚಿಹ್ನೆ. ಉದಾ : ತೇಽಪಿ = ತೇ + ಅಪಿ ; 'ದೇವೋಽತ್ರ = ದೇವೋ + ಅತ್ರ. ☞ ಸವರ್ಣದೀರ್ಘಸಂಧಿಯಲ್ಲಿಯೂ ಕೆಲವು ವೇಳೆ ಈ ಚಿಹ್ನೆಯನ್ನು ಬಳಸುವುದುಂಟು. ಉದಾ : ತಥಾಽಽಸ್ತು = ತಥಾ + ಅಸ್ತು. [ಅವಗ್ರಹ + ಚಿಹ್ನೆ]

**ಅವಗ್ರಹಣ** (ನಾ). = ಅವಗ್ರಹ ೧, ೨, ೩. [ಸಂ.]

**ಅವಗ್ರಹಿಸು** (ಕ್ರಿ). ೧. ಹಿಡಿ ; ಆಕ್ರಮಿಸು : ರೋಮಾಳಿಯೆಂಬ ಕರಿಯುರಗ ತದ್ವನಿತೆಯಾನನೇಂದುವನಟ್ಟಿ ತಾನವಗ್ರಹಿಪೆನೆಂದು (ಭಿಕ್ಷಾಚ. ೩-೨೨). ೨. ಆವರಿಸು ; ವ್ಯಾಪಿಸು : ಬೇರಿಲ್ಲದ ಗಿಡುವಿಂಗೆ ಪರಿಮಳವಿಲ್ಲದ ಪುಷ್ಪ ಹುಟ್ಟಿ ರೂಹಿಲ್ಲದ ಅನಲನು ಅವಗ್ರಹಿಸಿತ್ತು ನೋಡಾ (ಅವಚಂ. ೬೮-೨೯೬) ; ಅಯ್ಯ ನಿಮ್ಮನೆನ್ನ ಪಂಚಮುಖದಲ್ಲಿ ಧರಿಸಿದಡೆ ನೀವೆನ್ನ ಸರ್ವಾಂಗವನವಗ್ರಹಿಸಿಕೊಂಡುದ ನಾನೇನೆಂಬೆನಯ್ಯ (ಆದವ. ೮೯) ; ಕುಲಮದವೆಂಬುದಿಲ್ಲ . . . ಅವ ಮದವೆಂಬುದಿಲ್ಲ ನೀನವಗ್ರಹಿಸಿದ ಕಾರಣ (ಮಹಾಸಾ. ೧೧೯). ೩. ಸ್ವೀಕರಿಸು ; ಪರಿಗ್ರಹಿಸು : ಪರಮಪ್ರಸಾದವನವಗ್ರಹಿಸಿ ಪರಮಸುಖಿಯಾಗಿಪ್ಪ ಮಹಾಶರಣನ ತೋಱಿಸೆನ್ನ ಬದುಕಿಸಾ (ಆದವ. ೮೪). [ಅವಗ್ರಹಣ + -ಇಸು₃]

**ಅವಗ್ರಾಹ** (ನಾ). = ಅವಗ್ರಹ ೨, ೩, ೪. [ಸಂ.]

**ಅವಗ್ರಾಹಕ** (ನಾ). ಗ್ರಹಿಸತಕ್ಕದ್ದು ; ಒಳಕೊಳ್ಳುವಂಥದು ; ಹಿಡಿಯುವಂಥದು : ಘನವ ಕಂಡು ಮನ ಅವಗ್ರಾಹಕವಾಯಿತ್ತು ಕಂಡು ಕಂಡು ಮನ ಮಹಾಘನವಾಯಿತ್ತು (ಅವಚಂ. ೧೫೦-೬೮೮). [ಸಂ.]

**ಅವಘಟಿಸು** 'ಅವಗಡಿಸು' ನೋ.

**ಅವಘಟ್ಟನ** (ನಾ). ೧. ತಳ್ಳುವುದು; ನೂಕುವುದು. ೨. ತಾಗುವುದು ; ಘರ್ಷಣೆ. ೩. ಕಲಕುವುದು ; ತೊಳಸುವುದು. [ಸಂ.]

**ಅವಘಡ** 'ಅವಗಡ' ನೋ.

**ಅವಘಡಿಸು** 'ಅವಗಡಿಸು' ನೋ.

**ಅವಘಾಟಕ** (ನಾ). ಮಧ್ಯದಲ್ಲಿ ಕ್ರಮವಾಗಿ ಸಣ್ಣ ಮುತ್ತುಗಳಿರುವ ಹಾರ : ಸುವರ್ಣಪದಕ ವಿರಚನಾದಿ ಭೇದದಿಂ ಪ್ರತ್ಯೇಕ ಶೀರ್ಷಕೋಪಶೀರ್ಷಕಾವ [ಪಾಠಾಂ. ಮ] ಘಾಟಕ ಪ್ರಕಾಂಡಕ ತರಳತರ ಬಂಧೋಪಪದಪಂಚಕಸಮೇತಂಗಳಾಗಿ ಪಂಚಪಂಚಾಶತ್ ಪ್ರಮಾಣಂಗಳೊಳಾದ ಹಾರಂಗಳುಮಂ (ಆದಿಪು. ೮-೫೪ ವ) ; "ಮಧ್ಯದಲ್ಲಿ ಕ್ರಮವಾಗಿ ಒಂದಕ್ಕಿಂತ ಒಂದು ಸಣ್ಣನಾಗಿರುವ ಮುತ್ತುಗಳಿಂದ ಮಾಡಲ್ಪಟ್ಟ ಯಷ್ಟಿಗೆ (ಹಾರಕ್ಕೆ) ಅವಘಾಟಕವೆಂಬ ಹೆಸರು" (ಆದಿಪು. ಕೋಶ). [ಸಂ.]

**ಅವಘಾತ** (ನಾ). ೧. ಬಲವಾದ ಪೆಟ್ಟು. ೨. ಅಪಾಯ ; ಅಪಘಾತ. ೩. ಮಿದಿಯುವುದು ; ಕುಟ್ಟುವುದು. [ಸಂ.]

**ಅವಚ** (ನಾ). ೧. ಮಾತಿಲ್ಲದ ಸ್ಥಿತಿ ; ಮೌನ. ೨. ಒಂದು ಮನೆತನದ ಹೆಸರು (?) : ಅವಚಾಗ್ರಗಣ್ಯರೂರ್ಜಿತಪುಣ್ಯರ್ (ಎಇ. VI, ೨೧೫-೩ ; 1057). [ಸಂ. ಅವಚಸ್]

**ಅವಚಂಬಡು** (ಕ್ರಿ). ವರ್ಣಿಸಲು ಅಶಕ್ಯವಾಗು ; ಅವರ್ಣನೀಯವಾಗು (?) : ಸಂಗರಲಾಭೋತ್ಸವಪುಷ್ಪಾಂಗತೆಯಿಂ ಕಿಱಿಯವಾದೊಡಟ್ಟಿಜನಕ್ಕಾ ಪೊಂಗವಚಂಗಳನಿತ್ತರ್ ಪಾಂಗವಚಂಬಡುವಿನಂ ಮಹಾವೀರಭಟರ್ (ಚಂದ್ರಪು. ೧೦-೬೪). [ಅವಚ + ಪಡು₁]

**ಅವಚಟ** (ನಾ). ಅನಿರೀಕ್ಷಿತವಾಗಿರುವುದು : ಕೋಡಿನ ಕೊನೆಯಲಿ ಡವರಿಸಿತು ಕುಸುಬಿತ್ತು ಕೆಡಹಿತ್ತು ಕೆಲಬಲಕ್ಕವಚಟದೊಳಾದಿಗೊಂಡುಬಿತ್ತು (ಸೋಮಚ. ೫-೩೬).

[?. / ಮರಾ. ಅವಚಟ = ಇದ್ದಕ್ಕಿದ್ದಂತೆ, ಅನಿರೀಕ್ಷಿತವಾಗಿ]

**ಅವಚಯ** (ನಾ). (ಹೂವು ಹಣ್ಣು ಮೊದಲಾದುವನ್ನು) ಕೊಯ್ಯುವುದು ; ಬಿಡಿಸುವುದು. 'ಪುಷ್ಪಾಪಚಯ' ಪರಾ. [ಸಂ.]

**ಅವಚರು** 'ಅವಚಱು₁' ನೋ.

**ಅವಚವಾಡಿ** (ನಾ). ಒಂದು ಊರಿನ ಹೆಸರು : ಅವಚವಾಡಿಯ ಪೆರ್ಮ್ಮಡಿಗಾವುಣ್ಡನಲಕೊಳ ಅದಿತ್ತನ ಮೆಳೆಯ ಪುಣಸುಗ ಸತ್ತಂ (ಎಕ. IV, ಚಾಮರಾ. ೧೩೪-೯ ; 839). [ಅವಚ್₀ + ವಾಡಿ]

**ಅವಚವಿಸು** (ಕ್ರಿ). ಕಾಂತಿಹೀನವಾಗು ; ಮಸಕಾಗು : ಮತ್ತೊಂದೆಡೆಯೊಳ್ ಅವಚವಿಸಿ ಪೊಯ್ದ [ಪಾಠಾಂ. ಜಿಸಿಪೋಯ್ತು] ನೇಹಂ ತವೆಯೊಡಂ ಗುಣಮನುರುಪಿ ಪಿರಿದಾಗಿಯೆ ಪೆರ್ಚುವ ಸೊಡರ್ಗಳ ಪೆರ್ಚಂ ನಗುವವೊಲುಜ್ಜ್ವಳಿಸಿದುವು ವಿಮಳ ಮಣಿದೀಪಿಕೆಗಳ್ (ಲೀಲಾವ. ೩-೨೦). [ಅವ್₀ + ಚವಿ + -ಇಸು₃]

**ಅವಚಱ** 'ಅವಚಱು₂' ನೋ.

**ಅವಚಱಾಗಿಸು** (ಕ್ರಿ). ಬೇಸರಪಡಿಸು ; ಜುಗುಪ್ಸೆಯನ್ನುಂಟುಮಾಡು : ಪೊಂಬೆಸದಿಂದಮೆಯ್ದೆ ಸಮೆದಂತೆಸೆದೊಪ್ಪುವ ಬಣ್ಣಮುಂ ಕರಂ ಪಂಬಲಿಸಲ್ಕೆ ತಕ್ಕವಚಱಾಗಿಸದೋಗರಗಂಪುಮಾವ ಪೂವಿಂ ಬಗೆವಾಗಳಿಂತಿವಱೊಳಗ್ಗಳಮಾದೊಡಮುಕ್ಕಟಾ ಮರುಳ್ದುಂಬಿಗಳೇಕೆ ಸಂಪಗೆಗಳೊಳ್ ಪಗೆಗೊಂಡುವೊ ನಿರ್ನಿಮಿತ್ತದಿಂ (ಕಾವ್ಯಾವ. ೧೩೮). [ಅವಚಱು₂ + ಆಗು₁ + -ಇಸು₃]

**ಅವಚಱು₁**, ಅವಚರು (ಕ್ರಿ). ಬೇಸರಪಡು ; ಜುಗುಪ್ಸೆಹೊಂದು. ಅವಚತ್ತು, ಅವಚರ್ತು (ಭೂತಕೃ) : ದಿವಸಮನೊಂದು ಮೇಣೆರಡು ಮೂಱನೆ ನಿಲ್ವುದು ಮೂಱುತಿಂಗಳಾಯ್ತವಚಱನಿಂತು ನಿಂದನೊಳನೇ (ಆದಿಪು. ೯-೮೯) ; ಒಂದೆ ಕೋರಕದೊಳಟ್ಟಮೆವೆತ್ತವಚತ್ತು ಲಂಘನಂಗೆಯ್ವುದುಮಾದುದಾ ಮಧುಪ ಕೀರ ಪಿಕಾಳಿಗೆ ನಂದನಂಗಳೊಳ್ (ಶಾಂತಿಪು. ೧-೬೩) ; ವಿಷಯಸುಖಕ್ಕವಚತ್ತಂ ಪಡೆದುಕೊಳ್ವೆನಕ್ಷಯಸುಖಮಂ (ಅಜಿಪು. ೨-೬೯) ; ಕರಶಾಖೆಗಳವಚರ್ತ್ತಂತಿರೆ ಜಳಯಂತ್ರಕ್ಕೆ ಮೆಲ್ಲನಾದುವು . . . ಬೆಡಂಗಿಯರ ತನುಲತೆಗಳ್ (ಅನಂಪು. ೭-೪೯) ; ತೆರಳ್ದ ವಲಸಿತ ತೆಱದಿ ಮೊಗಮುಂ ಸುರುಳ್ದವಚತ್ತಂತೆ ದೇಹಂ (ಕುಮುರಾ. ೫-೧೯) ; ಅವಚಱದಿನ್ನೆಗಂ ಸವಿದೆನಿಂದ್ರಿಯಸೌಖ್ಯಮುಂ (ಪಂಪರಾಮಾ. ೬-೬೩) ; ಮುಪ್ಪಿನೊಳ್ ವಿಷಯಸುಖಕ್ಕವಚಱಿತರರ್ ನರಪತಿಯವಚರ್ತಂ ಕರಗೆ ಮುಗಿಲದೇಂ ವಿಸ್ಮಯಮೋ (ಪಾರ್ಶ್ವಪು. ೪-೬೪) ; ಮುಂಬನಿಗಳು ಪವಣಿಸದೆ ಸುರಿಯೆ ಚಾತಕನಿಕರ ಕೊರಳೆತ್ತಿಯವಚಱದೆ ಚಂಚುಪುಟವಂ ತೆಱೆದು ನಲಿದೀಂಟಿದುವು (ಸಾಳ್ವಭಾ. ೧೬-೧೯). **ಅವಚರು** : ಹೇಸಿಗೆಯ ಕಾಣ್ಕೆಗಳಿಗವಚರುತ್ತೊರ್ಮೆ (ಶ್ರೀರಾಮಾ. ೪೫೯-೨೮). [ಅವ್₀ + ಚಱು₀]

**ಅವಚಱು₂**, ಅವಚಱ (ನಾ). ಬೇಸರ ; ಜುಗುಪ್ಸೆ : ಅವಚಱನಿಂದ್ರಿಯಸೌಖ್ಯಮಾಯೆ ವಿರಕ್ತಿಯಿಂದವನಿಯನಿತ್ತು (ಪಂಪರಾಮಾ. ೧೦-೨೨೦) ; ಅವಚಱನಾಗಿಸದೆಸೆದಿರ್ದುವು ವೇದಿದ್ವಾರಮುಂಗಳಂ ನಿಧಿಪ್ರತಿಹಾರವನಿತಾನಂಗಳ್ (ಚಂದ್ರಪು. ೧೫-೩೮) ; ಕರ್ಣಪೂರ ಕೈರವದ ರಜಂ ತೆಱಂದಿರದೆ [ರಿದು]ಮೆಲ್ಲೆಲರಿಂ ಪೊಱಸೂಸಿ ಪೊಕ್ಕುದೆಂಬವಚಱೊಳೀಕೆ ಚಾಮರದ ಕಾಮಿನಿಯಂ ಕಿಸುಗಣ್ಣೆ ನೋಡಿದಳ್ (ಧರ್ಮನಾ. ೩-೪೨). **ಅವಚಱ** : ಪೆಱತೊಂದು ತಾಣದೊಳವಚಱಮಾದ ಪಱಿವೇಟದಿನಿಲ್ಲದ ದೋಷಮುನಿ(ಲ್ಲ)ಟ್ಟಲ್ಲಣಿಗೆಮುಳಿಸಂ ಮುಳಿದೊಲ್ಲದೆ ಪೋಪನನೆರಡಿಲ್ಲದೆ ನಲ್ಲಳ್ ಪಿಡಿದು ನಿಂದು (ಶಾಂತಿಪು. ೮-೧೦೪ ವ) ; ಎನಗೆಂತುಂ ದುರ್ವಹಮಪ್ಪನೂನಸಾಮ್ರಾಜ್ಯಭರಮನಿದನವಚಱಮೆಂ[ಮಂ] ದಿನಿತಾಗಿರೆ ತಳೆವತಿಬಳರನುಪಮಿತರ್ ಪುತ್ರರಾದರಾಹವಜೈತ್ರರ್ (ಶಾಂತೀಶ್ವ. ೭-೮೦).

[< ಅವಚಱು₁]

**ಅವಚಿತ** (ಅ). ಇದ್ದಕ್ಕಿದ್ದಂತೆ; ಅನಿರೀಕ್ಷಿತವಾಗಿ: ಒಬ್ಬ ದಿವ್ಯದೇಹ ಧಾರಿಯಾದ ಪುರುಷನು ಅವಚಿತವಾಗಿ ಆ ಸ್ಥಳದಲ್ಲಿ ಪ್ರಕಟನಾಗಿ (ಮಂಜುಕ. ೧೬೧). [← ಮರಾ. ಅವಚಿತ]

**ಅವಚಿತ್ತ** (ನಾ). ಪ್ರಜ್ಞೆಯಿಲ್ಲದಿರುವುದು; ಪರವಶತೆ: ಶಿವನಿಳಯ ದತ್ತಲೆಯ್ತಂದನಾ ಕಣ್ಣಿಂದನವಚಿತ್ತನು [ಪಾಠಾಂ. ಚಿತದೊಳು] ರವಣಿಸಿ ತೆಜಿತೆಜಿ ಕದವನೆಂದ (ಕಣ್ಣರ. ೧೨೯–೨೨). [ಸಂ.]

**ಅವಚು**₁ 'ಅವುಚು₁' ನೋ.

**ಅವಚು**₂ (ನಾ). = ಅವಚಟು₂: ತವದುತ್ಕಂಠತೆ ಮಳ್ಳುಮಳ್ಳದೆಚಿಕಂ ತಳ್ಕಯ್ಸದಚ್ಚು ಬ್ ಮನಕ್ಕವಚಂಮಾಡದಳುರ್ಕೆ ಕುಂದದಳುಪೇವಂ ಗೊಳ್ಳದಾಸಕ್ತಿ (ಶಾಂತಿಪು. ೭–೩೭). [?]

**ಅವಚೂಡ** (ನಾ). ಬಾವುಟದ ತುದಿಯಿಂದ ಕೆಳಕ್ಕೆ ನೇತಾಡುವ ಆಭರಣ; ಅಲಂಕಾರಕ್ಕಾಗಿ ಕಟ್ಟಿದ ನೇಲುವ ಕುಚ್ಚು: "ಉಚ್ಚೂಡಾ, ಅವಚೂಡಾ – ಈ ೨ (ಪದವಿಡಿಯಂ) ಹಳಯಿಗೆಯ ಮೇ(ವ)ಲೆ ಮೊಗದ ಕೆಳಗೆ ಕಟ್ಟಿದ ಕುಂಚಂ" (ಹಲಾಯು. ೭೫–೩೦೪). [ಸಂ.]

**ಅವಚೂರ್ಣಿತ** (ಗು). ೧. ಪುಡಿಮಾಡಲ್ಪಟ್ಟ; ಚೂರ್ಣಿಸಿದ. ೨. ಪುಡಿಯನ್ನು ಮೇಲುದುರಿಸಿದ; ಚೂರ್ಣವನ್ನು ತಳಿದ; ಪುಡಿಯನ್ನು ಸೇರಿಸಿದ. [ಸಂ.]

**ಅವಚೂಲ** (ನಾ). = ಅವಚೂಡ. [ಸಂ.]

**ಅವಚ್ಛನ್ನ** (ಗು). ಮುಚ್ಚಲ್ಪಟ್ಟ; ಆವೃತವಾದ: ಆ ಮಹಾದೇವಿ ... ಧವಳಕರಿಡುಕಾವಚ್ಛನ್ನ ವೃದ್ಧಕಂಚುಕೀಜನ ಪರಿವೃತೆಯುಮಾಗಿ (ಅಜಿಪು. ೩–೧೩. ವ). [ಸಂ.]

**ಅವಚ್ಛಿನ್ನ** (ಗು). ೧. ಕತ್ತರಿಸಲ್ಪಟ್ಟ; ಮುರಿದ: ಕತ್ತರಿಸಲ್ಪಟ್ಟ ಭಾಗವು ಅವಚ್ಛಿನ್ನ (ಹಿಂದಸಾ. ೧೯೯). ೨. ನಿಶ್ಚಿತವಾದ. ೩. ವೈಲಕ್ಷಣ್ಯಹೊಂದಿದ. ೪. [ತರ್ಕಶಾ] ಒಂದು ವಸ್ತುವಿನಲ್ಲಿ ಮಾತ್ರವಿರುವ ವಿಶೇಷ ಗುಣಜಾತಿಕ್ರಿಯಾ ಧರ್ಮಗಳ ಮೂಲಕ ಅದು ಇತರ ಎಲ್ಲಾ ವಸ್ತುಗಳಿಂದಲೂ ಪ್ರತ್ಯೇಕಿಸಲ್ಪಟ್ಟ. [ಸಂ.]

**ಅವಚ್ಛೇದ** (ನಾ). ೧. ಕತ್ತರಿಸುವುದು: ಉದ್ದವಾದ ಕಟ್ಟಿಗೆಯನ್ನು ಕೊಡಲಿಯಿಂದ ಕತ್ತರಿಸುವ ಹಾಗೆ ದೊಡ್ಡವಸ್ತುವನ್ನು ಚಿಕ್ಕದಾಗಿ ಮಾಡಿ ಕೊಳ್ಳುವುದಕ್ಕೆ ಅವಚ್ಛೇದವೆಂದು ಹೆಸರು (ಹಿಂದಸಾ. ೧೯೯). ೨. ಕತ್ತರಿಸಿದ ಭಾಗ, —ಅಂಶ. ೩. ವಿಶೇಷಣತ್ವ. ೪. ವೈಲಕ್ಷಣ್ಯ. ೫. ವ್ಯತ್ಯಾಸ ಕಾಣುವುದು; ಭೇದವನ್ನು ತೋರಿಸುವುದು. ೬. ಎಲ್ಲೆ; ಮೇರೆ. [ಸಂ.]

**ಅವಚ್ಛೇದಕ** (ಗು). ೧. ಬೇರ್ಪಡಿಸಿ ತೋರಿಸುವ; ಭೇದವನ್ನು ತೋರಿಸುವ; ವೈಲಕ್ಷಣ್ಯಸೂಚಕವಾದ. ೨. ವಿಶಿಷ್ಟವಾದ ಸ್ವಭಾವದ. [ಸಂ.]

**ಅವಜೆ** (ನಾ). ಅಂಬಟೇಗಿಡ: "ಆವಜೆಯೆನಲಂಬಟಿಯೆನಿಕ್ಕು" (ಮಂಗರಾ. ೩೫–೧೩). [ಸಂ.]

**ಅವಜ್ಞತೆ** (ನಾ). ಕಡೆಗಣಿಸುವುದು; ಉಪೇಕ್ಷೆ; ಅಲಕ್ಷ್ಯ: ಸಂಸ್ಕೃತದ ವಿಷಯದಲ್ಲಿ ಅವಜ್ಞತೆಯನ್ನು ತೋರದೆ ಸುಂದರವಾದ ಕಾವ್ಯವನ್ನು ರಚಿಸುವುದೆಂಬ ಪ್ರತಿಜ್ಞೆಯನ್ನು ತಿಳಿಸಿರುವನು (ಬಾಲಪ್ರ. II, ೬೨೧). [ಸಂ. ಅವಜ್ಞತಾ]

**ಅವಜ್ಞಾತ** (ಗು). ಉಪೇಕ್ಷೆಮಾಡಲ್ಪಟ್ಟ; ಕಡೆಗಣಿಸಿದ. [ಸಂ.]

**ಅವಜ್ಞೆ** (ನಾ). ಉಪೇಕ್ಷೆ; ಅಲಕ್ಷ್ಯ: ಅಂತವಜ್ಞೆಯಂ ಮಾಡಿ ಪಕ್ಕಿಗಳೆಲ್ಲಮಿರೆ (ಪಂಚತಂ. ೨೪೯–೨೦); ಶಾಸನಕವಿ ಹಾಗೆ ಇದ್ದೂ ಅವುಗಳನ್ನು ಸೇರಿಸದೆ ಮಹಾರಾಣಿಗೆ ಅವಜ್ಞೆಮಾಡುತ್ತಿರಲಿಲ್ಲ (ಸವತಿ. ಪ್ರಸ್ತಾ. ೬). [ಸಂ. ಅವಜ್ಞಾ]

**ಅವಜ್ಞೆಗೆಯ್** (ಕ್ರಿ). ಅಲಕ್ಷ್ಯಮಾಡು; ಕಡೆಗಣಿಸು; ಉಪೇಕ್ಷಿಸು: ನಿಖಿಳಜನಪೂಜಾರ್ಹರನವಜ್ಞೆಗೆಯ್ಯಲಾಗದು (ಕಾದಂಪೂ. ೭೫೩); ಎಮ್ಮಂತಪ್ಪ ಪಟಿಯರುಮನಾಪ್ತರುಮನವಜ್ಞೆಗೆಯ್ದಲ್ಲಿಯಾನುಂ ಬಂದ ಜಲ್ಲಪೊತ್ತನ ಬೆಲ್ಲವಾತುಗಳಂ ಕೈಕೊಂಡು (ಪಂಚತಂ. ೧೦೫–೯); ಭೂಪೋತ್ತಮನಾಜ್ಞೆಯನವಜ್ಞೆಗೆಯ್ಯೆ ಕೊಡೆನೆಬಲ್ ನೆತ್ತಿಗೆ ಗೆಂಟಕ್ಕುಂ (ಪಂರಾಮಾ. ೭–೫೨). [ಅವಜ್ಞೆ + ಗೆಯ್ (< ಕೆಯ್₁)]

**ಅವಟ** (ನಾ). ಹಳ್ಳ; ಕುಳಿ; ರಂಧ್ರ: "ಅವಟಂ, ಛಿದ್ರಂ ... ದರಃ – ಈ ೧೫ ಕುಟಿ" (ಹಲಾಯು. ೧೦೩–೨). [ಸಂ.]

**ಅವಟಯಿಸು** 'ಅವಟಯ್ಸು' ನೋ.

**ಅವಟಯ್ಸು**, ಅವಟಯಿಸು, ಅವಟವಿಸು, ಅವಟೈಸು (ಕ್ರಿ). ೧. ಕೊಡು; ನೀಡು; ಒಪ್ಪಿಸು: ಕವಿತೆಗೆ ವಾಗ್ದೇವತೆ ಕಿಚ್ಚವಳಿಗೆವಿಡುವಂತೆ ತಂಬುಲಂದೀವಿದ ಪೊಂಗವಳಿಗೆಯಂ ಪಿಡಿದಂಬಿಕೆಗವಟಯ್ಸಿದ ಳೊರ್ವಳಿಂದ್ರವಧು ತಂಬುಲಮಂ (ಶಾಂತಿಪು. ೯–೧೮೦); ಸುರಶಿಲ್ಪಿಗಳಿಂ ಮುನ್ನಮೆ ವಿಚಿತ್ರಮಾಗಿ ನಿರ್ಮಿಸಿರ್ದುದಂ ತಂದವಟಯ್ಸುವುದುಂ ಪರವು ಪದವೀಪ್ರಾಸಾದ ಪ್ರಥಮ ಸೋಪಾನಮನೇಱುವಂತೆ (ಚಂದ್ರಪು. ೧೩–೯೯ ವ). ೨. ಉಂಟುಮಾಡು; ಒದಗಿಸು; ಸಿದ್ಧಪಡಿಸು: ನೋಟ್ಪರ ಕಣ್ಣಿಂ ಕೆಯ್ಸೆಱೆವಿಡಿದುಂ ಮತ್ತವಟಯ್ಸುವುದು ಮನಕ್ಕ ಮೊಲವನಾ ನೃಪರೂಪಂ (ಚಂದ್ರಪು. ೨–೧೧); ಕಡೆಗಣ್ಣ ಕಾಂತಿಯ ಜೊನ್ನದ ಚೆನ್ನನೀಯೆಯುಂ ಕಂಕಣದ ನುಣ್ಬರದ ನುಣ್ಪು ಕಳಕಂಠಸ್ವನ ಮನವಟಯ್ಸೆಯುಂ (ಪುಷ್ಪಪು. ೮–೪೭ ವ); ಪರಿಚಾರಿಕೆಯರತಿ ಸುರಭಿ ಘನಸಾರ ಕಾಶ್ಮೀರ ಮೃಗಮದಾದಿ ಸುಗಂಧದ್ರವ್ಯಮನತಿಸೇವ್ಯ ಕುಸುಮ ಮಾಳಾವಳಿಯುಮಂ ಬಹುಳ ತಾಂಬೂಳಮುಮನವಟಯ್ಸಿ ತಂದಿರಿಸಿ ಪೋಗೆ (ನೇಮಿಪು. ೪–೫೩ ವ). ೩. ಒಟ್ಟಾಗು; ಸೇರು: ಪಲ್ಲಣಿಸಿ ತತ್ತುಮಾರಕರೆಲ್ಲರುಮವಟಯ್ಸೆ ಬೆಂಗೆವರೆ ಕುವರಂ ತದ್ವಲ್ಲಭತುರಂಗಮಾಗಿಸಿತೆಲ್ಲರ್ಗಂ ತನ್ನ ಗತಿಯೊಳತಿಕೌತುಕಮಂ (ಮಹಾಸೇ. ೪–೬). **ಅವಟಯಿಸು**: ೧. ಅಚ್ಚರಿಯೆನಿಸಿದುಪಾಯನಸಹಸ್ರಮಂ ಸಖೀಸಹಸ್ರಂ ಕೈಗೈಯೊಳ್ ನೀಡೆ ತಾನೆ ಕೆಳೆದುಕೊಂಡು ಸಿಂಹಸೇನಮಹಾರಾಜಂಗಂ ಜಯಶ್ಯಾಮಾಮಹಾದೇವಿಗಮವಟಯಿಸುವಾಗಳ್ (ಅನಂಪು. ೨–೨೭ ವ); ಕೆಲರ್ ತಾಂಬೂಲಪರಿಚಾರಿಕೆಯರ್ ಭೋಗೋಪದ್ರವ್ಯಂಗಳಂ ತಂದವಟಯಿಸಿದರಾಗಳ್ (ಬಂಹರಿ. ೩–೭೨ ವ). ೨. ಶ್ರವಣಕ್ಕರ್ಥವ್ಯಕ್ತಿಯನವಟಯಿಸದೆ ನೆಗಟ್ದ ವಶ್ಯಮಂತ್ರಾಕ್ಷರದಂತೆ (ಪಂರಾಮಾ. ೩–೧೨೭); ಆರಾಧಿಸಿದಂ ದೇವಿಯನಾ ರಾತ್ರಿಯೊಳಮಳಗಂಧಪುಷ್ಪಾದಿಗಳಿಂ ಭೋರನವಟಯಿಸೆ ಖಚರಕುಮಾರಿಯರುಂ ಕೆಳೆಯನುಂ ಕಳಾರ್ಣವತೀರಂ (ಲೀಲಾವ. ೯–೫೩); ಕಿವಿಗೆ ಮೃದುಮಧುರ ನಿನದಮನವಟಯಿಸುವ ವಿವಿಧ ಹೃದ್ಯವಾದ್ಯಂಗಳಂ (ಶಾಂತೀಶ್ವ. ೬–೯೪); ಅವಟಯಿಸಿ ಜಗದ ಕಣ್ಗಳ್ಗೆವಿಷಯಮಾದರ್ಥಮಂ ಕವದುರ್ದೆಂಬದಿಲಿಂ? ಕವಿದಿನಿಸುಂ ಕೆಂಪಡದರ್ಥಾಕಿವಿವರೆಗಂ ಪಾಯ್ದುವವನ ನಿಟ್ಟೆಸಳ್ಗಣ್ಗಳ್ (ಚಿಕವಿ. ೪–೧೫೭). ೪. ವ್ಯಾಪಿಸುವಂತೆ ಮಾಡು; ಹರಡುವಂತೆ ಮಾಡು: ಅತ್ತಲಿತ್ತಲೆಳವೆಳ್ದಿಂಗಳಂ ಬಿತ್ತರಿಸುವ ಚಂದ್ರಕಾಂತದ ಪಾಸಱೆಗಳುಮಂ ಎಲ್ಲದೆಸೆಗಂ ತಣ್ಪಿಸಿಲನವಟಯಿಸುವ ವಜ್ರಶಿಲಾತಲಂಗಳುಮಂ (ಪಂರಾಮಾ. ೨–೧೩ ವ). ೫. ಆದರಿಸು; ಭಾವಿಸು: ಬೆಲೆವೆಣ್ಣಾಳಾವ ಬೊಜಗನೊಳ್ ‖ ಅನ್ಯರನವಟಯಿಸುವ ಸಾಮಾನ್ಯತೆಯಂ ಮಾಣ್ದು ಸನ್ನಿಗೆಯ್ಯುತ್ತಿರ್ಪರ್ಳ್ ಧನ್ಯನವನಲ್ತೆ ಜಗದೊಳನನ್ಯಜರಾಜನ್ಯಜನ್ಯವೈಭವಮಾನ್ಯಂ (ಚಿಕವಿ. ೬–೧೩೩ ವ, ೧೩೪). **ಅವಟವಿಸು**: ೬. ಯತ್ನಿಸು; ತೊಡಗು (?): ಕವಿಗಳ ಬಿಸುಟ್ಟಬಗೆಯುಂ ತವಗುಂಟಿ ವಿದಗ್ಧಹೃದ್ಯ ಕಾವ್ಯವಿಚಾರಕ್ಕವಟವಿಸಿ [ಪಾಠಾಂ. ಟನಿಸಿ] ಗಂಟಲೊಡೆದೊಣಗುವಿನಂ

ಬಾಯ್ಮಾಟ್ಟಿರೇಕೆ ಬೆಳ್ಳಕ್ಕರಿಗರ್ (ಲೀಲಾವ. ೧-೧೭). **ಅವಟ್ಯೆಸು** : ೨. ಆಕೆಗೆ ಕುಂಕುಮದುರುಳಿಯನವಟ್ಯೆಸುವ ಘಟ್ಟವಳ್ತಿಯರಂತೆ ಪಣ್ತ ನಾರಂಗವಲ್ಲಿಗಳಿಂ (ಅರ್ಧನೇ. ೪-೬೮ ವ); ಸರೋವರದ ತಡಿಗಳೊಳ್ ಜಲಕ್ರೀಡೆಯಿಂ ಚೆಲ್ಲಿರ್ದ ಯಕ್ಷಯುವತಿಯರ ಕರಕಲಿತ ಕುಂಕುಮಂ ಗಳಾಕೆಯರ ಮನದನುರಾಗಮೆ ಚೆಲ್ಲಿರ್ದುದೆಂಬ ಚೆಲ್ವನವಟ್ಯೆಸೆಯುಂ (ಜಗವಿ. ೧೬-೩೪); ಅಬ್ಬಜನವಟ್ಯೆಪ ನಾಡಕಡುನೀಟಿಯರಂ ನಡೆನೋಡೆ ಸೋಲದಿಂ ಮಱಿವುದು . . . ದೇವ ಸೌಂದರಿಯರಂ (ಸೂಕ್ತಿ ಸು. ೪-೧೨೭). [?]

**ಅವಟವಿಸು** 'ಅವಟಯ್ಸು' ನೋ.

**ಅವಟು** (ನಾ). ೧. ಕೊರಳಿನ ಹಿಂಭಾಗ; ಹೆಕ್ಕತ್ತು: ವಿಟವೃತ್ತಂ ಮೆಯ್ಯೊಳೆತ್ತಂ ಪಸರಿಸೆ ವಿಟಂ ಬೀಸೆ ನಿಂದಿರ್ದಳೊರ್ವಳ್ ಸ್ಫುಟಿತೋ ರೋಮಧ್ಯೆ ಭಿನ್ನಾವಟುತಟವಿಘಟದ್ಗ್ರಂಥಿ ನಿರ್ಗ್ರಂಥದಿಂದಂ (ಕಾವ್ಯಾವ. ೮೦೨). ೨. ಗುಳಿ; ಬಿಲ. [ಸಂ.]

**ಅವಟಿಕಾಯಿ** (ನಾ). ಅಮಟಿಕಾಯಿ: ಬಾಳೆ . . . ಅವಟಿಕಾಯಿ . . . ಇವು ಪೌಷ್ಟಿಕ (ಅಷ್ಟಾಂಗ. ೧೪೫-೧೧೭). [ಅವಟ್ಗಿ + ಕಾಯಿ]

**ಅವಟ್ಯೆಸು** 'ಅವಟಯ್ಸು' ನೋ.

**ಅವಠಾಣ** (ನಾ). ಮಲ್ಲಯುದ್ಧದ ಒಂದು ರೀತಿ, —ಅವಸ್ಥೆ (?): ಸುಳಿದರೆಡಬಲ ಚಾರಿಯಲಿ ಚಾಪಳದ ಪಯಪಾಡಿನಲಿ ಚಿತ್ರದ ಚಳಗತಿಯ ಚೇತನದ ಚಡ್ಡಣೆಗಳ ಚಡಾಳದಲಿ ಹೊಳೆದರಾವರ್ತದಲಿ ಪರಿಮಂಡಳಿಸಿದರು ಠಾಣದಲಿ ಜಂಘೆಯಲುಳಿಯಲವಠಾಣದಲಿ[ಪಾಠಾಂ. ಲಯಪಾಡಿನಲಿ ನವಧಾನದಲಿ, ನವಸಾನದಲಿ] ಮೆಱೆದರು ಭೀಮ ಕೌರವರು (ಕುವ್ಯಾಗ. ೬-೨೨). [ಪ್ರಾ. ಅವಟ್ಠಾಣ = ಅವಸ್ಥೆ, ಸ್ಥಿತಿ (< ಸಂ. ಅವಸ್ಥಾನ)]

**ಅವಡೀನ** (ನಾ). (ಪಕ್ಷಿಗಳಂತೆ) ಹಾರುತ್ತ ಕೆಳಕ್ಕೆ ಇಳಿಯುವುದು: ಭ್ರಮಿಯಿಸಿ ಸೆಡೆದುಡ್ಡೀನ ಸಂಡೀನ ತಿರ್ಯಗ್ಡೀನೋಡ್ಡೀನಾವಡೀನ ಪ್ರಕೃತಿ ಗರುಡನೇಂ ವಿಸ್ಮಯಂ ಸೌಭವೇಗಂ (ಜಗವಿ. ೧೮-೯೪). [ಸಂ.]

**ಅವಡು** (ನಾ). ಮುದ್ದೆ; ರಾಶಿ (?).

**ಅವಡವಡು** = (ದ್ವಿರುಕ್ತಿ): ಒಡಲವಡವಡಪ್ಪಿನಮೆಲ್ವಡಗಪ್ಪಿನ ಮಲಸದಾಯ್ದು ಸುಡುವಿನಮಿಭದೊಳ್ಪಡಗುಮನಡುಗುಮೆ ರತಿಯರ್ಗಡ ಗೊಲ್ಪಪ್ಪಿನಮಿಭೇಂದ್ರದಿಂ ತುಱಿಯಿಸುವೆಂ (ಶಾಂತಿಪು. ೬-೮೧). [?]

**ಅವಡುಸವಡು** (ನಾ). (ಉಕ). ೧. ಪೂರ್ತಿಯಾಗಿ ನುರಿಯದಿರುವುದು: ಚಟ್ನಿ ಅವಡುಸವಡಾಗಿತ್ತು (ರೂಢಿ). ೨. ಅವ್ಯವಸ್ಥೆ; ಗಡಿಬಿಡಿ. ೩. ಬೆರಕೆ; ಮಿಶ್ರ: ಅದೂ ಅಲ್ಲದೆ ಅದೂ ಅವಡುಸವಡು ಜಾತಿಗೆ ಸೇರಿದ ಕುಲ ಮಾಸ್ತರರು. ಪ್ರಸಂಗ ಬಂದಾಗ ನೋಡಿಕೊಳ್ಳೋಣ ವೆನ್ನುವಷ್ಟು ಬೇಸರ (ಕಯಾತ್ರ. ೩).
[?. / ಮರಾ. ಅವಡಚವಡ, ಅವಡಾಚವಡಾ = ಅವ್ಯವಸ್ಥಿತವಾಗಿ ಬೆರಸುವುದು, ಕುಟ್ಟುವುದು ಇತ್ಯಾದಿ]

**ಅವಡೆ** (ನಾ). (ಕಲಾ). ಅಲಸಂದೆ ಜಾತಿಯ ಧಾನ್ಯ: ರಾತ್ರಿ ಬೆಳುದಿಂಗಳಲ್ಲಿ ಹೊರಟು ಯಾರಾರು ನಟ್ಟ ಅವಡೆ (ಅಲಸಂದೆ ಜಾತಿಯ ಒಂದು ಧಾನ್ಯ) ಗದ್ದೆಯನ್ನು ಹೊಕ್ಕು ಬೇಕಾದಷ್ಟು ಕದ್ದು (ಹುಮುಖ. ೧೮); ಹಲಸಿನ ಬೀಜ, ಗೆಣಸು, ಅವಡೆ (ಮಡಿಕೆ) ಎಂಬ ಒಂದುಜಾತಿ ಧಾನ್ಯವನ್ನು ತಿಂದಿರುತ್ತಾರೆ (ಹುಮುಖ. ೬೭).
[← ತುಳು. ಅವಡೆ, ಆವಡೆ]

**ಅವಡೆಸೊಪ್ಪು** (ನಾ). ಅವಡೆಗಿಡದ ಸೊಪ್ಪು: ಅವಡೆಸೊಪ್ಪಿನ ಪಲ್ಯಕ್ಕೆ ಬರಗಾಲವಿಲ್ಲ (ಮರಮು. ೩೫). [ಅವಡೆ + ಸೊಪ್ಪು]

**ಅವಣ** (ನಾ). ೧. ರಕ್ಷಣೆ. ೨. ತೃಪ್ತಿ: "ಅವಣ – ಅವನ = ತೃಪ್ತಿ" (ತದ್ಭಕೋ. ೭). 'ಅವಣಜವಣ' ಪರಾ. [ಸಂ. ಅವನ]

**ಅವಣಜವಣ** (ನಾ). ಸಂರಕ್ಷಣೆ ಮತ್ತು ಆಹಾರ: ಎರಡು ಪದಗಳಪಭ್ರಂಶಕ್ಕೆ– ಅವನಜೀಮನ –ಅವಣಜವಣ (ಶಮದ. ೨೪೯ ಪ್ರಯೋ).
[ಅವಣ + ಜವಣ]

**ಅವತಂಸ** (ನಾ). ೧. ಕಿವಿಯ ಆಭರಣ: "ಉತ್ತಂಸಃ, ಅವತಂಸಃ – ಈ ೨ ಕರ್ಣಪೂರಂ" (ಹಲಾಯು. ೯೧-೪೦೦); ಅವತಂಸೋತ್ಪಲ ತಾಡನಂ ಕನಕಕಾಂಚೀಬಂಧನಂ (ಆದಿಪು. ೧೨-೪೮); ಕರ್ಣಲಗ್ನ ತೋಮರಮವತಂಸದಂತಿರೆ (ಗದಾಯು. ೪-೨೨). ೨. ತಲೆಯ ಮೇಲೆ ಧರಿಸುವ ಆಭರಣ. ೩. ಆಭರಣ; ಒಡವೆ: ರವಿಸುತನ ವಂಶಮಿರ್ಪುದವತಂಸಂ (ಶ್ರೀರಾಮಾ. ೨೯೪-೨೬೬). ೪. ಹೂವಿನ ಮಾಲೆ. ೫. (ಅಲಂ) ಭೂಷಣಪ್ರಾಯನಾದವನು: ಅವನೀಂದ್ರನಾಥ ಠಾಕೂರರು ಇವರೇ ಮೊದಲಾದ ಬಂಗಾಳಿ ಚಿತ್ರಕಲಾವತಂಸರಲ್ಲಿ ಇವರು ಮಿತ್ರಭಾವವನ್ನು ಪಡೆದು (ಜಗಚಂ. ೩೮). [ಸಂ.]

**ಅವತಂಸಕ** (ನಾ). = ಅವತಂಸ. [ಸಂ.]

**ಅವತಮಸ** (ನಾ). ೧. ಮಸುಗತ್ತಲೆ; ಮಬ್ಬು. ೨. ಕಗ್ಗತ್ತಲೆ; ಗಾಢಾಂಧಕಾರ: "ಅವತಮಸಂ, ಅಂಧತಮಸಂ, ಸಂತಮಸಂ – ಈ ೩ ಕಡುಗತ್ತಲೆ" (ಹಲಾಯು. ೧೮-೧೧೧); "ಪರೆಯದೆ ಸುತ್ತಲಿಹುದು ಸಂತಮಸಮವತಮಸಮಕ್ಕುಂ" (ಮಂಗರಾ. ೨೦-೮). [ಸಂ.]

**ಅವತರ** (ನಾ). = ಅವತಾರ ೧: ಸುರಲೋಕಾವತರೋತ್ಸವಂ ಪಂಕ್ತಂ ಜನ್ಮಾಭಿಷೇಕೋತ್ಸವಂ (ಅಜಿಪು. ೧-೯೫). [ಸಂ.]

**ಅವತರಣ** (ನಾ). ೧. ಇಳಿದುಬರುವುದು; ಇಳಿಯುವುದು: ಇದು . . . ಸುಧಾರ್ಣವಾವತರಣೋದ್ಯೋಗ ವರ್ಣನಂ (ಜಗವಿ. ೧-೮೦ ವ). 'ಗಂಗಾವತರಣ' ಪರಾ. ೨. ದೇವತೆ ಮೊದಲಾದವರು ಬೇರೆ ರೂಪದಿಂದ ಭೂಮಿಯಲ್ಲಿ ಹುಟ್ಟಿಬರುವುದು; ಅವತಾರ ಮಾಡುವುದು: ಪನ್ನಗಶಯನನವತರಣೋದ್ಯೋಗದಿಂ ನಾಗೇಂದ್ರನಂ ನೋಡಿ . . . ವಿಭುವಾ ವಿಭುಗಗ್ರಜನಾಗು ಲೀಲೆಯಿಂ (ಜಗವಿ. ೨-೫೬ ವ, ೫೭). ೩. ಜಲಾಶಯಕ್ಕೆ ಇಳಿಯುವ ಮೆಟ್ಟಲು, —ಸೋಪಾನ. ೪. ದಾಟುವುದು. ೫. ನಾಟಕದ ಪೂರ್ವರಂಗದಲ್ಲಿ ಗಾಯಕರೇ ಮುಂತಾದವರು ಸಿದ್ಧರಾಗಿ ಬಂದು ನೆಲೆಗೊಳ್ಳುವುದು: ಸಾಮಾನ್ಯವಾಗಿ ಎಲ್ಲಾ ರೂಪಕಗಳೂ ಒಂದೇ ವಿಧವಾಗಿ ಆರಂಭವಾಗುತ್ತವೆ. ಪ್ರತಿಯೊಂದಕ್ಕೂ 'ಪೂರ್ವರಂಗ'ವುಂಟು . . . ಇದರಲ್ಲಿ 'ಪ್ರತ್ಯಾಹಾರ' (ವಾದ್ಯಗಳನ್ನು ತಂದು ಇಟ್ಟುಕೊಳ್ಳುವುದು) 'ಅವತರಣ' (ಗಾಯಕಾದಿಗಳು ಸಿದ್ಧರಾಗಿ ಬರುವುದು) . . . ಮುಂತಾದ ನಾನಾ ಅಂಗಗಳಿವೆ (ಕೈಪಿಡಿ. ೨೧೨). ೬. ಬೇರೊಂದು ಗ್ರಂಥದಿಂದ ಉದ್ಧರಿಸಿ ಹೇಳುವ ವಿಷಯ. 'ಅವತರಣ ಚಿಹ್ನೆ' ಪರಾ. [ಸಂ.]

**ಅವತರಣಚಿಹ್ನೆ** (ನಾ). ಬೇರೊಂದು ಗ್ರಂಥದಿಂದ ಎತ್ತಿಹೇಳಿದ್ದೆಂದು ಸೂಚಿಸುವ " " ಗುರುತು. [ಅವತರಣ + ಚಿಹ್ನೆ]

**ಅವತರಣಿಕೆ** (ನಾ). ೧. (ಗ್ರಂಥದ) ಪೀಠಿಕೆ; ಪ್ರಸ್ತಾವನೆ; ಭೂಮಿಕೆ. ೨. = ಅವತರಣ: ೬. ಹಿರಿಯರು ಹೇಳಿದ ಪ್ರಯೋಗಗಳಲ್ಲಿ ಒಂದೆಂದು . . . ಎಂಬ ಅವತರಣಿಕೆಯನ್ನು ಕೊಟ್ಟಿದ್ದಾನೆ (ಕಸಾಚ. ೪೮).
[ಸಂ. ಅವತರಣಿಕಾ]

**ಅವತರಿಸು** (ಕ್ರಿ). ೧. ಇಳಿದುಬರು; ಮೇಲಿಂದ ಕೆಳಕ್ಕೆಬರು: ದೇವಾಪ್ಸರೋವೃಂದಂ . . . ದಿವ್ಯಾಭರಣಕಿರಣಂಗಳೊಳ್ ತೊಳಗಿ ಬೆಳಗೆ ಬಂದು ಮಹೀತಳಕ್ಕವತರಿಸಿ (ಪಂಪಭಾ. ೭-೮೧ ವ); ನಾರದನಭ್ರಪಥದಿನವನಿಗವತರಿಸೆ ಕಂಡು (ಶಾಂತಿಪು. ೨-೨೧ ವ); ಏನ್ಯೆಯುವನಿಗವತರಿಸಿದ ಕಥಾಂತರವೇನು ಹೇಳೆಂದ (ತೊರರಾ. ೩-೨-೨೨). ೨. (ದೇವತೆ ಮೊದಲಾದ ವ್ಯಕ್ತಿಗಳು) ಹುಟ್ಟಿಬರು; ಅವತಾರಮಾಡು:

ಶಾಶ್ವತದಿನವತರಿಸಿರ್ದಂ ಗದಾಶಂಖಚಕ್ರಾಂಕಿತಹಸ್ತಂ . . . ವಾಸುದೇವಂ (ಜಗವಿ. ೨–೯೯); ಪರಮಮುನಿ ಪೌಲಸ್ತ್ಯನಾ ಸರಸಿರುಹಗರ್ಭನ ಮಾನಸದಲವತರಿಸಿದನು (ತೊರರಾ. ೧–೮–೨೩); ದೇವತೆಗಳು ಮನುಷ್ಯ ರೂಪದಿಂ ಅವತರಿಸಿ ದುಷ್ಟರಂ ನಿಗ್ರಹಿಸಿ ಧರ್ಮಸಂಸ್ಥಾಪನಂಗೈದರು (ಸೌಗಂಧಿ. ೨೬೮–೫). ೩. ಉಂಟಾಗು; ಆವಿರ್ಭವಿಸು : ಯತಿ ಹತ್ತ ಜತ್ತವತರಿಸಿರ್ದೊಡಮಂಬುಜಾಯತಲೋಚನೇ ನವನಳಿನಂ ಕವಿರಾಜ ಹಂಸವಿನಿರ್ಮಿತಂ (ಛಂದೋಂಬು. ಕಿ. ೨–೧೮೨); ಉಣ್ಮುವಶ್ರುಗಳವ ತರಿಸುವ ಗದ್ಗದಂ ಮನೋಹರಮಾಗಳ್ (ಗಿರಿಕ. ೩–೨೬); ನವಮಣಿ ಭೂಷಣಮಂ ತಾಮೆಲ್ಲಂ ತವೆ ತೊಟ್ಟಲ್ಲದೆ ಕಡುಚೆಲ್ವಿಕೆ ತಮಗವತರಿಸದು (ಜಯಕಾ. ೩–೫೨). ೪. ಇಳಿಸು; ನೆಲೆಗೊಳಿಸು : ತನ್ನಂಶಮನಾಕೆಯ ಗರ್ಭದೊಳವತರಿಸಿ ಯಮಭಟ್ಟಾರಕನಂತರ್ಧಾನಕ್ಕೆ ಸಂದಂ (ಪಂಪಭಾ. ೧–೧೧೯ ವ). ೫. ಬೇರೊಬ್ಬರ ನುಡಿಯನ್ನಾಗಲೀ ಬೇರೊಂದು ಗ್ರಂಥದಲ್ಲಿ ಹೇಳಿರುವುದನ್ನಾಗಲೀ ಉದ್ಧರಿಸು : ಅಭಿನವವಾದಿವಿದ್ಯಾನಂದನ 'ಕಾವ್ಯಸಾರ' ವೆಂಬ ಸಂಕಲನಗ್ರಂಥದಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಅಂದರೆ ೪೧ ಪದ್ಯಗಳನ್ನು ಮತ್ತು ೧ ಗದ್ಯಭಾಗವನ್ನು 'ಶೂದ್ರಕ'ದಿಂದ ಅವತರಿಸಿಕೊಳ್ಳಲಾಗಿದೆ (ತವನಿ. ೫೧). ೬. ಹೊಂದು; ಪಡೆ (?) : ಅವರೊಳ್ ಪಿಟ್ಟಮನೆಂಬಂ ಭುವನದೊಳಸಿತಾದ್ರಿಯೆಂಬ ಕಾಳಾಂಜರಮೆಂಬಿವೆ ಮೇರೆಯಾದ ವಸುಧೆಯನವತರಿಪಂ (ಎಇ. XXVII, ೧೫–೧೧; 1114); ನಟ್ಟಗಾಯದೊಳಾತ ದೇಹಾಭಿಮಾನವ ಬಿಟ್ಟು ಮೂರ್ಛೆಯನವತರಿಸೆ ದುಷ್ಟದೈತ್ಯರು ಬಂದು ಕವಿದರು ರಣರಂಗದಿಟ್ಟ ಕುಮಾರನ ಮೇಲೆ (ಮೋಹತ. ೩೪–೨೨).

[ಅವತರಣ + –ಇಸು$_3$]

**ಅವತಳೆ, ಅವದಳೆ** (ನಾ). ನೆಲಕ್ಕೆ ಬೀಳುವುದು : ಪೃಥ್ವಿಯ ಮೇಲಣ ಕಣಿಯ ತಂದು, ಇಷ್ಟಲಿಂಗಮಂ ಮಾಡಿ, ಶಿಷ್ಯನ ತನುವಿನ ಮೇಲೆ ಅವಧರಿಸಿದ ಲಿಂಗವು ಅವತಳೆ [ಪಾಠಾಂ. ದಳೆ]ವಾಗಿ ಭೂಮಿಯಲ್ಲಿ ಸಿಂಹಾಸನಗೊಂಡಿತ್ತೆಂದು ಸಮಾಧಿಯ ಹೊಗುವರಯ್ಯ, ಲಿಂಗಕ್ಕೆ ಅವತಳೆ [ಪಾಠಾಂ. ದಳೆ]ವಾದರೆ ಭೂಮಿ ತಾಳಬಲ್ಲುದೇ ಅಯ್ಯ (ಉರಿಪೆ. ೬೯–೪೫).

**ಅವದಳೆ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[< ಸಂ. ಅವತರ]

**ಅವತಾರ** (ನಾ). ೧. ಕೆಳಕ್ಕೆ ಇಳಿಯುವುದು : ಮಹಾಭಾರಾವತಾರದೊಳತಿರಥ ಮಹಾರಥ ಸಮರಥಾರ್ಧರಥರ್ಕಳಂ ಪಡಲ್ವಡಿಸುವುದಜಿಂ ಸಾಹಸಾರ್ಜುನನುಂ (ಪಂಪಭಾ. ೧೪–೩೬ ವ). ೨. (ದೇವತೆ ಮೊದಲಾದವರು) ಹುಟ್ಟಿಬರುವುದು; ಕಾಣಿಸಿಕೊಳ್ಳುವುದು; (ಜಗತ್ತಿನ ಕಲ್ಯಾಣಕ್ಕಾಗಿ) ದೇವತೆಗಳು ಭೂಮಿಯಲ್ಲಿ ಹುಟ್ಟುವುದು : ಇದು ಪರಮಸರಸ್ವತೀತೀರ್ಥಾವತಾರ ನೃಪತುಂಗದೇವಾನುಮತಮಪ್ಪ (ಕವಿರಾ. ೩–೨೩೬ ವ); ಅರ್ಜುನನ ರಥಮೆಸಪ ಪನ್ನೊಂದನೆಯದು ಸೂತಾವತಾರಮುಂ ಹರಿಗಾಯ್ತೇ (ಗದಾಯು. ೩–೪೪); ಮುರಧ್ವಂಸಿ ನರಲೀಲಾವತಾರಮಂ ತಾಳ್ದು ಹೊಂದೇರನಿಳಿದೈತಂದು (ಜೈಮಿಭಾ. ೨–೪೯). 'ದಶಾವತಾರ', 'ರುದ್ರಾವತಾರ' ಪರಾ. ೩. ನಿರೂಪಣೆ; ಪ್ರಸಂಗ : ಕೃತಿ ಕಾದಂಬರಿಯೆನೆ ಸತ್ಕೃತಿ ಕಥಿತಕಥಾವತಾರಮೇಂ ಕೇವಳಮೇ (ಕಾದಂಪೂ. ೬). ೪. [ಜೈನ] ಎಂಟು ಬಗೆಯ ಗರ್ಭಾನ್ವಿತಕ್ರಿಯೆಗಳಲ್ಲಿ ಒಂದು : ಮತ್ತಮವತಾರ ವೃತ್ತಿಲೋಭ ಗಣಗ್ರಹಣ ಪೂಜಾರಾಧ್ಯ . . . ಎಂಬೆಂಟುಂಬೆರಸುಂ (ಆದಿಪು. ೧೫–೧೬ ವ); ಅವತಾರಮುಂ ವೃತ್ತಿಲಾಭಮುಂ . . . ಉಪಯೋಗಿತ್ವಮುಮೆಂಬೆಂಟು ಗರ್ಭಾನ್ವಿತಕ್ರಿಯೆಯೊಳು (ಚಾವುಂಉ. ೨೩೦). ೫. ಹತ್ತು ಎಂಬ ಸಂಖ್ಯೆ : ನಿನಗೆ ದಕ್ಷಿಣೆ ಎಷ್ಟು ಸಿಕ್ಕಿತು ? ಒಂದು ಅವತಾರ (ರೂಢಿ). ೬. (ಅಲಂ) ವೇಷ; ರೂಪ : ಇದೇನೋ ನಿನ್ನ ಅವತಾರ ನಾನು ನೋಡಲಾರೆ (ರೂಢಿ).

ಅವತಾರ ಎತ್ತು = ಅವತಾರವನ್ನು ತಾಳು; ಅವತರಿಸು. [ಸಂ.]

**ಅವತಾರಕ್ರಿಯೆ** (ನಾ). [ಜೈನ] ತೀರ್ಥಂಕರನಾಗತಕ್ಕ ಮಹಾಪುರುಷನು ಮಾತೃಗರ್ಭಕ್ಕವತರಿಸುವುದು : ಸ್ವರ್ಗಾವತರಣ ಕಲ್ಯಾಣಪೂರ್ವಕಂ ಷೋಡಶ ಶುಭಸ್ವಪ್ನಾನಂತರ ಕುಲಾಚಲದೊಳಿರ್ಪಂ ಶ್ರೀದೇವಿ ಪ್ರಭೃತಿದೇವಿ ಜನಸೇವಿತೆಯಪ್ಪೊಳ ಗರ್ಭಕ್ಕವತರಿಸುವುದುಂ ಅವತಾರಕ್ರಿಯೆ (ಚಾವುಂಉ. ೨೩೬).

[ಅವತಾರ + ಕ್ರಿಯೆ]

**ಅವತಾರಣ** (ನಾ). ೧. ಇಳಿಸುವುದು; ಅವತಾರಮಾಡಿಸುವುದು. ೨. ಪೂಜೆ. ೩. ಬೇರೊಂದು ಗ್ರಂಥದಿಂದ ಉದ್ಧರಿಸಿ ಹೇಳುವ ವಿಷಯ. ೪. ಭೂತ ಪಿಶಾಚಾದಿಗಳು ಮೈಮೇಲೆ ಬರುವುದು.

[ಸಂ.]

**ಅವತಾರಲೇಖಪತ್ರ** (ನಾ). ಜನ್ಮವೃತ್ತಾಂತವನ್ನು ಕುರಿತ ಬರವಣಿಗೆಯುಳ್ಳ ಪತ್ರ : ಮಂದಸಿನೊಳ್ ಕೂಸನಿಕ್ಕಿ ಪಿರಿದೊಡಮೆಯನವತಾರಲೇಖಪತ್ರಮನಲ್ಲಿಟ್ಟು (ಚಾವುಂಉ. ೪೦).

[ಅವತಾರ + ಲೇಖ + ಪತ್ರ]

**ಅವತಾರಾಕೃತಿ** (ನಾ). ಅವತಾರಸ್ಥಿತಿಯಲ್ಲಿ ಕಾಣಿಸಿಕೊಳ್ಳುವ (ದೇವರ) ಆಕಾರ : ಇಂದ್ರಾದ್ಯರ್ ಪರಮಾಕೃತಿ ದುರ್ಲಕ್ಷ್ಯವೆಂದೆನಲ್ ನಿನ್ನವತಾರಾಕೃತಿಯನರ್ಚಿಪರ್ (ಜಗವಿ. ೩–೧೦೬).

[ಅವತಾರ + ಆಕೃತಿ]

**ಅವತಾರಿ** (ನಾ). ಅವತಾರವನ್ನು ಧರಿಸಿದವನು. [ಸಂ. ಅವತಾರಿನ್]

**ಅವತಾರಿಕೆ** (ನಾ). ಒಂದು ವಿಷಯವನ್ನಾಗಲಿ, ಉದ್ಧರಣವನ್ನಾಗಲಿ ಪ್ರವೇಶಗೊಳಿಸುವ ಉಕ್ತಿ : ಈ ಬಗೆಯಾದ ಅವತಾರಿಕೆಯೊಡನೆ ಕೆಲವು ಶ್ಲೋಕಗಳೂ ಆರ್ಯೆಗಳೂ ಬಂದು (ಭಾರಮಿ. ೧೨).

[ಸಂ. ಅವತಾರಿಕಾ]

**ಅವತಾರಿತ** (ಗು). ಇಳಿಸಲ್ಪಟ್ಟ; ಕೆಳಗೆ ಇಳಿಸಿದ : ಮೋಹನೀಯಮಂ ನಿರ್ಮೂಲಮಪ್ಪಿನಂ ನಿರವಶೇಷ ಕ್ಷಪಿಯಿಸಿ . . . ಅವತಾರಿತ ಮೋಹನೀಯಭಾರಂ ಅಂತರ್ಮುಹೂರ್ತಕಾಲಂ ವೀತರಾಗಪರಿಣಾಮಪರಿಣತಂ (ತತ್ತ್ವಪ್ರ. ೩೬೮). [ಸಂ.]

**ಅವತಾರಿಸು** (ಕ್ರಿ). ೧. ಕೆಳಕ್ಕೆ ಇಳಿಸು. ೨. ಹುಟ್ಟು; ಜನ್ಮವೆತ್ತು : ಸಾರಚಂದ್ರೋಪಲದ ರಮ್ಯಾಗಾರದಲಿ ಸುಕುಮಾರ ನೀನವತಾರಿಸದೆ ಸುಡುಗಾಡಿನಲಿ ಬಂದುದಿಸುವರೆ (ಜೀವಂಚ. ೫–೨೯).

[ಅವತಾರಣ + –ಇಸು$_3$]

**ಅವತೀರ್ಣ** (ಗು). ೧. ಇಳಿದ; ಇಳಿಸಲ್ಪಟ್ಟ : ದುರ್ಧರ ತಪೋಮಹಾತಪಕ್ಷಪಿತ ಜೀವನಂ ಜೀವಿತಾಂತ್ಯದೊಳ್ ಸಮಾಧಿವಿಧಿಯಿನವತೀರ್ಣಶರೀರಭಾರನಾಗಿ (ಚಂದ್ರಪು. ೪–೬೦ ವ). ೨. ದಾಟಿದ; ಹಾದುಹೋದ. ೩. ಭಾಷಾಂತರಿಸಲ್ಪಟ್ಟ. ೪. ಬಂದು ಸೇರಿದ : ಭೂರಿಭೇರೀಧ್ವನಿ ಕರ್ಣಪಥಾವತೀರ್ಣಮಾದತ್ತಾಗಳ್ (ಮಲ್ಲಿಪು. ೪–೯೪).

[ಸಂ.]

**ಅವತೆ** (ನಾ). ಸಂಕಟದ ಸ್ಥಿತಿ; ದುರ್ದೆಸೆ : "ಅವಸ್ಥಾ–ಅವತೆ" (ಶಮುದ. ೨೫೬ ಪ್ರಯೋ); "ಅವತೆಯೆನಲ್ಕವಸ್ಥೆಯೊಳೆ" (ಕರ್ಣಾನಿ. ೪೨); ನಿನಗಿನಿತವತೆಯೇಕಾರಣದಿನಾದುದೆನೆ (ಪಂಚತಂ. ೨೯೧–೨೩); ಇಂತಿದೊಂದವತೆ (ರಾಮಾಶ್ವ. ೧೦–೨೧); ಮುರುಕುತುಂ ಕೊಕ್ಕರಿಸುತುಂ ಮರುಗಿ ಪೆನ್ನವತೆ ಮೆಯ್ಗೊಂಡು (ಸಂಸಪ. ೨೨–೧); ಯಾರಿಗೆ ಬೇಕು ಈ ಅವತೆ (ಚಿಕರಾ. ೬೩). [< ಸಂ. ಅವಸ್ಥಾ]

**ಅವತೋಕೆ** (ನಾ). ಕಂದು ಹಾಕಿದ ಹಸು; ಗರ್ಭಸ್ರಾವವಾದ ಆಕಳು: "ಅವತೋಕಾ, ಸ್ರವದ್ಗರ್ಭಾ – ಈ ೨ ಕಂದಿಕ್ಕಿದಾವು" (ಹಲಾಯು. ೪೫–೧೧೫); "ಕಂದಿಕ್ಕಿದಾಕಳವತೋಕೆಯಕ್ಕು" (ಮಂಗರಾ. ೫೪–೩). [ಸಂ. ಅವತೋಕಾ]

**ಅವತ್ತು** 'ಆಪೊಟ್ಟು' ನೋ.

**ಅವದಂಶ** (ನಾ). ಮದ್ಯಪಾನದ ನಡುವೆ ರುಚಿಯನ್ನು ಹೆಚ್ಚಿಸಿಕೊಳ್ಳಲು ನಂಜಿ(ಬಾಡಿಸಿ)ಕೊಳ್ಳುವ ಮಾಂಸದ ತುಣುಕು, ಉಪ್ಪಿನಕಾಯಿ ಮುಂತಾದ ಪದಾರ್ಥ; ಚಾಕಣ: "ಉಪದಂಶಃ, ಅವದಂಶಃ, ಭಕ್ಷಣಂ – ಈ ೩ ಕುಡಿವುತ್ತೆ ಬಾಡಿಸುವುದು" (ಹಲಾಯು. ೫೪–೧೭೩); "ಓರಂತೆ ಬಾಡಬಾಡಿಸುತ ಕಳ್ಳುಡಿವುದವದಂಶಮುಪದಂಶಮಕ್ಕುಂ" (ಮಂಗರಾ. ೬೬–೮). [ಸಂ.]

**ಅವದರಿಸು** 'ಅವಧರಿಸು' ನೋ.

**ಅವದಶೆ,** ಅವದೆಶೆ (ನಾ). ದುಸ್ಥಿತಿ; ದುರ್ದೆಸೆ; ಕಷ್ಟದ ಕಾಲ (ದಕ. ೬). **ಅವದೆಶೆ:** ಆ ಅವದೆಶೆಗಳೆಲ್ಲ ಯಾತಕ್ಕಾಗಿ ಬಂದುವು? (ಬಿಟ್ಟಹೊ. ೪೬). [ಸಂ. ಅವದಶಾ]

**ಅವದಳ** 'ಅವತಳ' ನೋ.

**ಅವದಳಿಯ** (ನಾ). ಹೆದರಿಕೆ; ಗಾಬರಿ(?): ಇನ್ನುಳಿದ ಪಕ್ಷಿಗಳು ಮೃಗವ್ರಜಂ ವ[ಅ]ವದಳಿಯವಿಲ್ಲದತಿಸುಖದಿಂದೆಯಿರುತಿರ್ದು... ನಿತ್ಯತ್ವವಾಗಿಹವಲಾ (ಪ್ರಭುಪು. ೮–೧೧೧); ವರಪುರಾತನರ್ಗೆ ಪೇಳಲು ಎನಗೆಯವದಳಿಯ ಹಿರಿಯರುಂ ನೀವಿರ್ದ ಬಳಿಕ ಸಂಶಯವಿಲ್ಲ(ಪ್ರಭುಪು. ೯–೧೫೫); "ಅವದಳಿಯ – ಯೋಗ್ಯತೆಯಿಲ್ಲದ" (ಪ್ರಭುಪು. ಕೋಶ). [?]

**ಅವದಾತ** (ಗು). **೧.** ಬಿಳಿದಾದ. **೨.** ಹಳದಿಯಾದ. **೩.** ಪರಿಶುದ್ಧವಾದ; ಸ್ವಚ್ಛವಾದ: ಜಳಧಾರಾಧೌತಾವದಾತ ಪೂತಚರಣಾರವಿಂದರ್ (ಸೌಇಇ. XX. ೪೬–೨೬; 1172). **೪.** ಮನೋಹರವಾದ; ಸುಂದರವಾದ. [ಸಂ.]

**ಅವದಾತಕೀರ್ತಿ** (ನಾ). ಸ್ವಚ್ಛವಾದ ಕೀರ್ತಿಯುಳ್ಳವನು; ನಿಷ್ಕಳಂಕವಾದ ಯಶಸ್ಸುಳ್ಳವನು: ಭೀಮಭುಜದಳಿತ ರಿಪುನೃಪಸಾಮಜನವದಾತಕೀರ್ತಿ ಸಾಹಸಭೀಮಂ (ಗದಾಯು. ೩–೧). [ಅವದಾತ + ಕೀರ್ತಿ]

**ಅವದಾತಯಶ** (ನಾ). = ಅವದಾತಕೀರ್ತಿ: ಅವದಾತಯಶಂ ಕವಿತಾಮನೋಹರಂ (ಪಂರಾಮಾ. ೧೦–೨೩೬). [ಅವದಾತ + ಯಶ]

**ಅವದಾನ** (ನಾ). **೧.** ಜನರು ಮೆಚ್ಚಿ ಒಪ್ಪಬಹುದಾದ ಕೆಲಸ; ಪ್ರಶಸ್ತವಾದ ಕೆಲಸ. **೨.** ನೆರವೇರಿಸಿದ ಕೆಲಸ; ತೃಪ್ತಿಕರವಾಗಿ ಮುಗಿಸಿದ ಕೆಲಸ. **೩.** ಪರಾಕ್ರಮ; ವೀರ್ಯ; ಶೌರ್ಯ. [ಸಂ.]

**ಅವದಾರಣ** (ನಾ). **೧.** ಸೀಳುವುದು; ಭೇದಿಸುವುದು. **೨.** ಅಗತೆಯ ಕೈಗುದ್ದಲಿ; ಪಿಕಾಸಿ. [ಸಂ.]

**ಅವದಾಹ** (ನಾ). ಲಾಮಂಚದ ಗಿಡ; ಬಾಳದ ಬೇರು. [ಸಂ.]

**ಅವದಿರು** 'ಅದು$_1$' ಪರಾ.

**ಅವದೀರ್ಣ** (ಗು). **೧.** ಕರಗಿದ. **೨.** ಒಡೆದ; ಮುರಿದ. [ಸಂ.]

**ಅವದೆಶೆ** 'ಅವದಶೆ' ನೋ.

**ಅವದ್ಯ** (ಗು). **೧.** ನಿಂದಾರ್ಹವಾದ; ಹೊಗಳಿಕೆಗೆ ಅನರ್ಹವಾದ. (ನಾ). **೨.** ನಿಕೃಷ್ಟವಾದುದು; ಹೀನವಾದುದು; ತುಚ್ಛವಾದುದು: "ಅಧಮಂ, ಅವದ್ಯಂ ... ನಿಕೃಷ್ಟಂ – ಈ ೧೩ ಹೊಲ್ಲಹವಸ್ತು" (ಹಲಾಯು. ೫೬–೧೮೨). **೩.** ದೋಷ; ಪಾಪ. [ಸಂ.]

**ಅವಧರಿಸು,** ಅವದರಿಸು (ಕ್ರಿ). **೧.** ಮನಸ್ಸಿಗೆ ತಂದುಕೊ: "ಅವಧರಿಸು – ಸ್ಮರಣೇ" (ಶಮುಧಾ); ಪುರುಷಾರ್ಥತ್ರಿತಯಮನವಧರಿಸದೆ ವೈರಾಗ್ಯಮೇಕೆ ಪುಟ್ಟಿದುದೋ (ಕಾದಂಉ. ೪೫೩); ಕುರುಕುಲಮಧ್ಯಮಹೀತಳ ಸಹಕಾರಭೂರುಹಂ ನಿಮಗೆ ವಿನಮಿತೋತ್ತಮಾಂಗನಾದನವಧರಿಸುವುದು (ಗದಾಯು. ೩–೮೪ ವ). **೨.** ಮನಸ್ಸಿಟ್ಟು ಕೇಳು; ಅವಧಾನದಿಂದ ಕೇಳು: ಅವಧರಿಸಿಂ ನಿಮ್ಮಯ್ಯಂಗವರಜೆ ತತ್ಸೂರ್ಯಮಿತ್ರ ಸಹಧರ್ಮಿಣಿ (ಸುಕುಮಾ. ೨–೪೨); ಅವಧರಿಸಿ ನಿಮ್ಮಡಿಗಳೆಲ್ಲರು (ಮಹದೇ. ೧೧–೧); ಕೃತಿಯನವಧರಿಸುವುದು ಸುಕವಿಯ ಮತಿಗೆ ಮಂಗಳವೀವುದು (ಕುವ್ಯಾಅ. ೧–೧೫); ಅವಧರಿಸು ಜೀಯ ತಾರಕದೈತ್ಯನಾತ್ಮಜರ್ ದಿವಿಜರಂ ಸದೆಬಡಿದು (ಚಬಪು. ೪೧–೩೬); ಪ್ರಭುಗಳು ಅವಧರಿಸಬೇಕು (ಶಾಂತಲಾ. ೧೯೫). **೩.** ದೃಢವಾಗಿ ಧರಿಸು: ಶಿಷ್ಯನ ತನುವಿನ ಮೇಲೆ ಅವಧರಿಸಿದ ಲಿಂಗ (ವಚಶಾ. I, ೩೪೨–೧೭). **ಅವದರಿಸು:** **೧.** ಅಂತು ಕಾಣ್ಕೆಗೊಟ್ಟವದರಿಪುದೆಂದಿಂತೆಂದಂ (ಕಬ್ಬಿಕಾ. ೮೯ ವ). [ಅವಧಾರಣ + –ಇಸು$_3$]

**ಅವಧಾತೃ** (ನಾ). ಅವಧಾನವುಳ್ಳವನು: ಅಸಂಚಳನೆಲ್ಲಿದನಪ್ರಮಾದಿಯೆಲ್ಲಿದನವಧಾತೃವೆಲ್ಲಿದನಿಭಧ್ವಜನೆಲ್ಲಿದಂ (ಅಜಿಪು. ೬–೧೧೮). [ಸಂ.]

**ಅವಧಾನ** (ನಾ). **೧.** ಮನಸ್ಸಿಗೆ ತಂದುಕೊಳ್ಳುವುದು; ಮನಸ್ಸನ್ನು ಪ್ರಸಕ್ತ ವಿಷಯದಲ್ಲಿ ನಿಲ್ಲಿಸಿರುವುದು; ಏಕಚಿತ್ತತೆ: ತಂದೆಯ ಬೆನ್ನನೆ ಪೋಪಂತವಧಾನಂ ಗೆಂಟುವೋದುದು (ಶಾಂತಿಪು. ೪–೭೯ ವ); ಮನದವಧಾನಪರಂಪರೆಯನಶೇಷಂ ತಾಳ್ದಿದತ್ತು ಭವ್ಯವ್ಯೂಹಂ (ಚಂದ್ರಪು. ೩–೯); ಹೂಡಿದನಂಬನವಧಾನದಲಿ ಬಿಡೆಯಜಿದು (ಕುವ್ಯಾಕ. ೨೦–೮). **೨.** ಕೇಳಿದ ವಿಷಯವನ್ನು ನೆನಪಿನಲ್ಲಿಟ್ಟುಕೊಳ್ಳುವುದು: ಇವನ ಅವಧಾನಪಾಂಡಿತ್ಯಕ್ಕೆ ಮೆಚ್ಚಿ ವ್ಯಾಸರಾಯರು ತಮ್ಮ ಸನ್ನಿಧಿಯಲ್ಲೇ ನಿಲ್ಲಿಸಿಕೊಂಡರು (ಕಭವಿ. ೧–೫೭). **೩.** ಎಚ್ಚರಿಕೆ: ದನುಜರಿಪುವವಧಾನವವಧಾನೆನುತ ವಿಮಳ ಮಹಾರ್ಘ್ಯ ಸಿಂಹಾಸನಕೆ ಬಿಜಯಂಗೈಸಿದರು (ಕುವ್ಯಾಸ. ೮–೬); ಅವಧಾನಮೆಚ್ಚಜಿಂದುಲಿವ ವಂದಿಸಂದೋಹದುಲಿಯ ನಾಲಿಸುತಂ (ಶಬ್ದಾನು. ೯೧ ವ್ಯಾಖ್ಯಾ). **೪.** [ವೀಶೈ] ಷಡ್ವಿಧಭಕ್ತಿಗಳಲ್ಲಿ ಒಂದು: ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ, ಸಮರಸ (ಇವು ಆರು ಷಡ್ವಿಧಭಕ್ತಿಗಳು) (ಶಿವಾಸೂ. ೨ ಅಡಿಟಿ). [ಸಂ.]

**ಅವಧಾನಗುಂದು** (ಕ್ರಿ). ಲಕ್ಷ್ಯ ಕಡಮೆಯಾಗು: ಪಾಂಡವರೊಳವಧಾನಗುಂದನು ರಾಯ ಗದುಗಿನ ವೀರನಾರಯಣ (ಕುವ್ಯಾದ್ರೋ. ೧೦–೬೩). [ಅವಧಾನ + ಕುಂದು$_1$]

**ಅವಧಾನತ್ರಯ** (ನಾ). [ವೀಶೈ] ಮೂರು ಬಗೆಯ ಅವಧಾನಗಳು: ಇಂದ್ರಿಯಾವಧಾನ ಪ್ರಾಣಾವಧಾನ ಭಾವಾವಧಾನಮೆಂಬ ಅವಧಾನತ್ರಯಕ್ಕೆ ಜ್ಞಾನವೇ ಕಾರಣವಾಗಿ ಅಜ್ಞಾನ ವಿಶ್ರಾಂತಿಯನೈದುವ ಪರಿಯಂತರ (ಪದಗೋ. ೮೪–೧೫). [ಅವಧಾನ + ತ್ರಯ]

**ಅವಧಾನಭಕ್ತಿ** (ನಾ). = ಅವಧಾನ ೪: ಮಹೇಶ್ವರ ಸ್ಥಲದಲ್ಲಿರುವ ನೈಷ್ಠಿಕೀಭಕ್ತಿಯೇ ಅವಧಾನಸ್ವರೂಪದಿಂದ (ಗುರುದತ್ತವಾದ ಶಿವಲಿಂಗದಲ್ಲಿರುವ ಎಚ್ಚರಿಕೆಯಿಂದ) ಅವಧಾನಭಕ್ತಿಯೆಂದೆನಿಸಿಕೊಂಡಿತು (ಶಿವಾಸೂ. ೮೪–೬೪); ಪರಮ ಸಮರಸಭಕ್ತಿಯಾನಂದಭಕ್ತಿ ಮತ್ತಿರಲದನುಭವಭಕ್ತಿಯವಧಾನಭಕ್ತಿ ಸುಸ್ಥಿರದಿಂದೆ ನೈಷ್ಠಿಕಾಭಕ್ತಿಯದು ಸದ್ಭಕ್ತಿಯೆಂದು ಷಡ್ವಿಧವನಾಂತು (ಚಬಪು. ೬೧–೨೩).
[ಅವಧಾನ + ಭಕ್ತಿ]

**ಅವಧಾನಿ** (ನಾ). **೧.** ಸ್ಮರಣಶಕ್ತಿ ಚೆನ್ನಾಗಿರುವವನು; ಲಕ್ಷ್ಯವುಳ್ಳವನು: ಅನುವಾಯಿತ್ತೆಂಬೆನೆ ಅವಧಾನಿ ನಾನಲ್ಲ (ಬಸವ. ೮೮೬); ಲಿಂಗಾಭಿಮಾನಿ ಸದಾಗಣಿತಸುವಿಧಾನಿ ಭಕ್ತವಿಭಾಗ ಮಹದವಧಾನಿ ನಿಗಮಾರ್ಥಾವಿರತ ದಾನಿ (ಬಸಪು. ೭–೫). **೨.** ವೇದಾದಿಗಳನ್ನು ಅಧ್ಯಯನಮಾಡಿದವನು. **೩.** ಗಂಡಸರ ಹೆಸರಿನ ಕೊನೆಯಲ್ಲಿ ಸೇರುವ ಮಾತು: ಉದಾ: ರಾಮಾವಧಾನಿ, ಶ್ರೀಕಂಠಾವಧಾನಿ. [ಸಂ. ಅವಧಾನಿನ್]

**ಅವಧಾನಿಸು** (ಕ್ರಿ). ಗಮನದಲ್ಲಿಡು; ಲಕ್ಷ್ಯದಲ್ಲಿಡು; ಮನಸ್ಸನ್ನು ಒಂದೇ ಕಡೆ ನಿಲ್ಲಿಸಿ ಚಿಂತಿಸು: ತಾನು ಮೊದಲವು ಮುನ್ನವವಜೊಳು ಗಾನವೊಪ್ಪುವ ದಂಡಿಗೆಯನವಧಾನಿಸುತ ಮಿಗೆ ಮೇಘಚಾಳನವೊಡನೆ ಯವುರಾಣ (ಬಸವು. ೧೯–೮); ಘಾಯ ಘಾತಿಯ ಸುಳಿವನವಧಾನಿಸುತ ತೂಗಿದರಾಯುಧವ್ರಯವ (ಕುವ್ಯಾಗ. ೭–೧೯).
[ಅವಧಾನ + -ಇಸು]

**ಅವಧಾನೋದಕ** (ನಾ). [ವೀಶೈ] ಹತ್ತು ವಿಧವಾದ ಪಾದೋದಕಗಳಲ್ಲಿ ಒಂದು ಬಗೆ: ದಶವಿಧ ಪಾದೋದಕಗಳು:—ಇವು ಗುರು ಪಾದೋದಕ, ಲಿಂಗಪಾದೋದಕ, ಜಂಗಮಪಾದೋದಕ, ಸ್ಪರ್ಶನೋದಕ, ಅವಧಾನೋದಕ, ಅಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕ, ಸತ್ಯೋದಕ ಎಂದು ಹತ್ತು ಇರುತ್ತವೆ (ಶಿವಾಕೋ. ೧೧೧). [ಅವಧಾನ + ಉದಕ]

**ಅವಧಾರಣ** (ನಾ). ೧. ನಿಶ್ಚಯವಾಗಿ ತಿಳಿದುಕೊಳ್ಳುವುದು; ನಿಶ್ಚಯ; ನಿರ್ಣಯ: ಸಮಸ್ತಾಗಮ ಪದಾರ್ಥಾವಧಾರಣಗುಣಸಮೇತನುಂ (ಸುಕುಮಾ. ೮–೫೮ ವ). ೨. [ವ್ಯಾಕ] ಒತ್ತಿ ಹೇಳುವುದು; ಮನಸ್ಸಿಗೆ ಚೆನ್ನಾಗಿ ಮುಟ್ಟುವಂತೆ ನುಡಿಯುವುದು: ಅವಧಾರಣಕ್ಕೆ—ಧನಮುಳ್ಳನಾವೊನಂತಾತನೆ ಶೂರನಾತನೆ ಕುಲೋದ್ಭವನಾತನೆ ಶುದ್ಧವೃತ್ತನಂತಾತನೆ ಇಂದ್ರನಾತನೆ ಮನೋಭವನಾತನೆ ಅಂಬುಜೋದ್ಭವಂ (ಕಾವ್ಯಾವ. ೫೩). [ಸಂ.]

**ಅವಧಾರಣೆ** (ನಾ). = ಅವಧಾರಣ ೨: "ಒಂದು ಅರ್ಥವನ್ನು ಒತ್ತಿ ಹೇಳುವುದಕ್ಕೂ ನಿರ್ಧರಿಸಿ ಹೇಳುವುದಕ್ಕೂ 'ಅವಧಾರಣೆ' ಎಂದು ಹೆಸರು" (ಮಧ್ಯಮ. ೧೬೪); ಅವಧಾರಣೆಗೆ – ಆತನಯೆ ತೋರದೊಡೆ ಗಳಿವಾತನ ನಿಡಿದೋಳ್. ಅವಳಯೆ, ಅದೆಜಯೆ (ಶಮದ. ೫೩ ಪ್ರಯೋ).
[ಸಂ. ಅವಧಾರಣಾ]

**ಅವಧಾರಿಸು** (ಕ್ರಿ). ೧. ಲಕ್ಷ್ಯದಲ್ಲಿಡು; ಮನಸ್ಸಿಗೆ ತಂದುಕೊಳ್ಳು; ಕೇಳು: ದೇವಣ್ಣಯ್ಯ . . . ಸ್ವಕೀಯ ಕನ್ನೆರಾಸಿಯೊಳ್ಸೋಮಗ್ರಹಣದೊ[ಳ್ಸಿ]ಸುಳಹಾಟಯ್ಯದಿಂಬರು ಮಹಾಜನಮನವಧಾರಿಸಿ (ಸೌ ಇ ಇ. XI–i, ೧೪–೧೧; 872); ಶಲ್ಯನ ನುಡಿದ ನುಡಿಯನವಧಾರಿಸಿ ತನ್ನ ಮನದೊಳೆ ಕರ್ಣನಿಂತೆಂದಂ (ಪಂಪಭಾ. ೧೨–೧೯೫ ವ); ಅಱಿವಂತು ಪೇಟ್ವೆನವಧಾರಿಸಿಮಿರ್ವರುಮೇಕಚಿತ್ತದಿಂ (ಶಾಂತಿಪು. ೨–೩೧); ಚಾರು ವೈದಿಕ ಹವ್ಯಕವ್ಯ ವಿಹಾರವೃತ್ತಿಗಳೆಳಿದವಿದನವಧಾರಿಸೆಂದಬುಜಾಸನನು ಮಾಡಿದನು ಬಿನ್ನಹವ (ಕುವ್ಯಾಕ. ೭–೨೨). ೨. ಸೈರಿಸು: ಅಶ್ವತ್ಥಾಮಂ ಕರ್ಣನೊಳಾದ ಮುಳಿಸನವಧಾರಿಸಲಾಱದೆ ಸುಯೋಧನನನಿಂತೆಂದಂ (ಪಂಪಭಾ. ೧೨–೪೨ ವ). [ಅವಧಾರಣ + -ಇಸು]

**ಅವಧಾರು** (ನಾ). ೧. ದೇವತೆ, ಗುರು, ರಾಜ, ಹಿರಿಯರು ಮೊದಲಾದವರ ಗಮನವನ್ನು ಸೆಳೆಯಲು ಬಳಸುವ ಮಾತು: ಭವರೋಗ ವೈದ್ಯ ನೀನು ಭವರಹಿತ ನೀನು ಅವಧಾರು (ಬಸವ. ೬೮); ಬಗೆಮಿಗೆ ಸತಿಯರ್ ಜಲಕೇಳಿಗೆ ಚಿತ್ತಂಗೊಟ್ಟು ದೇವಿಯವಧಾರೆನುತುಂ ಪುಗುತುಂ ಮಿಗುತುಂ ನಗುತುಂ ಸೊಗಯಿಸಿದರ್ (ಗಿರಿಕ. ೪–೨೨); ಜಯ ಜಯ ಸ್ವಾಮಿಯವಧಾರು (ಪದ್ಮರಾ. ೧೧–೩೦); ವಿಚಾರಿಸುವೊಡಳವಲ್ಲ ಚಿತ್ತವಧಾರು ಹೋ ಸರ್ವಜ್ಞರಾದರು ಸಲುಗೆ ಬಿನ್ನಪವ (ಕುವ್ಯಾಆ. ೧–೧೪). ೨. ಅವಧಾರು ಎಂಬ ಎಚ್ಚರಿಕೆಯ ಮಾತು: ಬಳಿಯ ಪಾಯುವಧಾರುಗಳ ಕಳಕಳದೊಳಗೆ ರಥವೇಱಿದರು (ಕುವ್ಯಾಕ. ೮–೨೪); ಮುಂದೆ ಪಾಯವಧಾರು ಸತಿಯರ ಸಂದಣಿಯ ಸಿಂಜಾರವದ ಸೊಗಸಿಂದ ಶಬ್ದ ಬ್ರಹ್ಮ ಸೋತುದು ಸೊರಹಲೇನೆಂದ (ಕುವ್ಯಾಆ. ೮–೧೩).
[< ಸಂ. ಅವಧಾರಯ]

**ಅವಧಾರ್ಯ** (ಗು). ಗಮನಿಸಬೇಕಾದ; ಮನಸ್ಸಿಗೆ ತಂದುಕೊಳ್ಳಬೇಕಾದ. [ಸಂ.]

**ಅವಧಿ** (ನಾ). ೧. ಗಡು; ಮೇರೆ; ಕೊನೆ; ಕಾಲ ದೇಶಗಳ ಪರಿಮಿತಿ: "ಕಡೆಯಲ್ಲಿಯುಂ ಅವಧಿಯೆಂಬುದು" (ಹಲಾಯು. ೧೩೩–೧೬); ಭಗದತ್ತ ಬಳಲಿದನವಧಿಯಿಲ್ಲದೆ ಶರವ ನೆಱೆ ತುಳುಕಿ (ಕುವ್ಯಾದ್ರೋ. ೩–೩೯); ಒಂದು ವರ್ಷದ ಅವಧಿಯೊಳಗೆ ಪ್ರತಿ ಶಾಲೆಗೂ ಒಂದೊಂದು ಕೊಟಡಿಯನ್ನು ಕೊಡಿಸುವ ಯತ್ನವನ್ನು ಕೈಗೊಳ್ಳಬೇಕು (ಶಿಕ್ಷದ. ೭೩೯). ೨. ಬಲ. ೩. ಸಂದರ್ಭ; ಅವಕಾಶ. ೪. ರಂಧ್ರ; ತೂತು; ಬಿಲ; ಗುಳಿ: "ಅಂತಿಕ ಗರ್ತಮಿಂತಪಥಿಯಕ್ಕು" (ನಾನಾರ. ೧೨೧). ೫. = ಅವಧಿಜ್ಞಾನ: ಜಿನಪತಿಗೆ ಪೂಜೆಯಂ ಮಾಡಿ ಮಗುಟ್ವಡಿಗೆಜಗಲೊಡಂ ಪಡೆದಂ ಗಡಮವಧಿಯನಧಿಕಭಕ್ತರೇನಂ ಪಡೆಯರ್ (ಆದಿಪು. ೩–೨೯ ವ); ಮುನಿನಾಥನವಧಿಯಿಂ ಬಗೆದು ನೋಡಿ ನಿನಗಾಯುರವಧಿ ಮೂಱುದಿನಂ . . . ಎಂದು (ಸುಕುಮಾ. ೧೨–೮). ೬. (?): ಧರಣಿಯೊಳು ಸಕಲೇಶ್ವರನ ಮಾದರಸನು . . . ದುರುಳ ಕಾಲನ ಬಾಯನೊದೆದಾಕರಿಸಿ ತಾಟಿಸಿಯವಧಿ ವಿಧಿಗಳ ತಾಱುಕುಂಡೆಗಳ ಉರವಣಿಸುವ ವಿಧಾತ್ರನಂ ಸಂಹರಿಸಿ (ಬಸವು. ೪೭–೧); ಕಾಲನೆಂಬ ದರ್ವೀಕರನ ದಾಡೆಯಂ ಕಿಳ್ತವಧಿವಿಧಿಗಳೆರ್ವರ್ಗೆ ತೊಳ್ತುಗೆಲಸಮನಿತ್ತು (ಪದ್ಮರಾ. ೨–೧೭). "ಯಮ" (ಪದ್ಮರಾ. ಕೋಶ). [ಸಂ.]

**ಅವಧಿಜ್ಞಾನ** (ನಾ). [ಜೈನ] ಎಂಟು ಬಗೆಯ ಜ್ಞಾನಗಳಲ್ಲಿ ಒಂದು: "ಮೂರ್ತಪದಾರ್ಥಮಂ ಏಕದೇಶ ಪ್ರತ್ಯಕ್ಷಮಾಗಿ ಅಱಿವುದು ಅವಧಿಜ್ಞಾನಂ" (ತತ್ತ್ವಪ್ರ. ೫೨); ಸೂರ್ಯಮಿತ್ರಾಚಾರ್ಯರ್ಗವಧಿಜ್ಞಾನಂ ಪುಟ್ಟಿತ್ತು (ವಡ್ಡಾರಾ. ೯–೧೪); ಮಾನಿಸರ ನುಡಿವ ತೆಱದಿಂ ಕೈಸೆಸಿ ಮರವೊಱೆಸಮಿಂತು ಗಟಪಿದವುದಿದಂ ಶ್ರೀನಾಥ ಬೆಸಸಿಮವಧಿಜ್ಞಾನದಿನಱಿದೆನೆ ನೃಪೇಂದ್ರನದುನಂ ಪೇಳ್ದುಂ (ಶಾಂತಿಪು. ೯–೯೧). [ಸಂ.]

**ಅವಧಿಜ್ಞಾನಾವರಣೀಯ** (ನಾ). [ಜೈನ] ಅವಧಿಜ್ಞಾನವನ್ನು ಮುಚ್ಚುವ ಕರ್ಮ: ಅವಧಿಜ್ಞಾನಾವರಣೀಯಂ . . . ಎಂದೀ ಪ್ರಕಾರದೆ ಪಂಚಪ್ರಕಾರ ಜ್ಞಾನಾವರಣೀಯಮುಂ (ಸುಕುಮಾ. ೩–೩೯ ವ). 'ಜ್ಞಾನಾವರಣೀಯ' ಪರಾ. [ಅವಧಿಜ್ಞಾನ + ಆವರಣೀಯ]

**ಅವಧಿಜ್ಞಾನಿ** (ನಾ). ಅವಧಿಜ್ಞಾನವುಳ್ಳವನು: ಒಂದು ದಿವಸಂ ಮಣಿಮಾಳಿ ರತಿಚಾರಣರೆಂಬ ಚಾರಣರನವಧಿಜ್ಞಾನಿಗಳಂ ಕಂಡಜಗರ ವೃತ್ತಾಂತಮಂ ಬೆಸಗೊಂಡು (ಆದಿಪು. ೨–೧೫ ವ); ಸೋಮ ಮಹಾದೇವಿ ಅವಧಿ ಜ್ಞಾನಿಯಪ್ಪ ನಿಜೇಶನಿಂ ತತ್ಫಲಮುನಱಿದು ಸುಷುಮಿ ಪಿರನಂ (ಚಾವುಂಉ. ೨೮೮). [ಸಂ. ಅವಧಿಜ್ಞಾನಿನ್]

**ಅವಧಿದರ್ಶನಿ** (ನಾ). = ಅವಧಿಜ್ಞಾನಿ: ಅವಧಿದರ್ಶನಿಗಳ್ ಅವಧಿಜ್ಞಾನಿಗಳ್, ಕೇವಲದರ್ಶನಿಗಳ್ ಕೇವಲಜ್ಞಾನಿಗಳಸಂಖ್ಯೇಯಮನೆಯ್ದುವರ್ (ತತ್ತ್ವಪ್ರ. ೨೫). [ಸಂ. ಅವಧಿದರ್ಶನಿನ್]

**ಅವಧಿದಿವಸ** (ನಾ). ಗಡುವಿನ ದಿನ; ವಾಯಿದೆಯ ಕಡೆಯ ದಿವಸ: ಪರಿಪೂರ್ಣಾವಧಿ ದಿವಸ ಸಾಯಂತನ ಸಮಯದೊಳ್ (ಶಾಂತಿಪು. ೬–೨೮ ವ). [ಅವಧಿ + ದಿವಸ]

**ಅವಧಿಬೋಧ** (ನಾ). = ಅವಧಿಜ್ಞಾನ: ಅವಧಿಬೋಧದಿಂದೀ ಯೊಡೆಯೊಳ್ ನೀಂ ಬಂದು ಪುಟ್ಟಿದುದನಱಿದು (ಆದಿಪು. ೫–೫೦); ಜಗತ್ರಯಜ್ಞಾಯನಭಿಪ್ರಾಯಮುನವಧಿಬೋಧದಿಂದಮಱಿದು ಬಂದು (ಮಲ್ಲಿಪು. ೧೩–೧೫೮). [ಅವಧಿ + ಬೋಧ]

**ಅವಧಿವಿಬೋಧ** (ನಾ). = ಅವಧಿಜ್ಞಾನ: ಅಂತು ವಿವರಣೆ ಬರ್ಪ ಪೊಲಿರದವಧಿ ವಿಬೋಧದೆ ಬರೆ ಮನಕ್ಕೆ ಬಗೆಯೊಳ್ ಕಂಡಂ ದಿವಿಜಪತಿ ತನ್ನ ಮುನ್ನಿನ ಭವಮಂ (ಶಾಂತಿಪು. ೭–೧೯). [ಅವಧಿ + ವಿಬೋಧ]

**ಅವಧಿಸಮಗ್ರ**(ನಾ). ಪೂರ್ಣವಾದ ಅವಧಿ; ವಾಯಿದೆ; ಗಡು: ಉಗ್ರ ಕರ್ಮವ ನೆನೆಯಬೇಡ ವ್ಯಗ್ರದಲಿ ಸಾಧಿಸಿದೆವವಧಿಸಮಗ್ರವನು ಸಾಕಿನ್ನು ಬಿಡಿಸು ವಿರಾಟಭೂಪತಿಯ (ಕುವ್ಯಾವಿ. ೪-೫೭). [ಅವಧಿ + ಸಮಗ್ರ]

**ಅವಧೀರಣ** (ನಾ). ತಿರಸ್ಕಾರದಿಂದ ಕಾಣುವುದು; ಅಲಕ್ಷ್ಯ ಮಾಡುವುದು; ಅಗೌರವದಿಂದ ನೋಡುವುದು. [ಸಂ.]

**ಅವಧೀರಿತ** (ಗು). ತಿರಸ್ಕಾರಮಾಡಲ್ಪಟ್ಟ; ಕಡೆಗಣಿಸಿದ: ಈಕೆ ಕನ್ಯಾಗ್ರಥ ಪರಿಮಂಡಲೆಯುಮವಧೀರಿತ ಮಹೀಪಾಲ ಕುಮಾರ ಮಂಡಲೆಯುಮಾದಳ್ (ಶಾಂತಿಪು. ೪-೮೮ ವ). [ಸಂ.]

**ಅವಧೀರಿಸು** (ಕ್ರಿ). ತಿರಸ್ಕರಿಸು; ಕಡೆಗಣಿಸು: ಮೋಜಿಂದು ಹಿತೋಪದೇಶಮನೆ ಕೇಳಲೊಡಂ ಸಿಡಿಲೇಱ್ಗೆಯೆರ್ದು ಮೆಯ್ಮಱುಗಿ ನಯಂ ಕಿಡಲ್ ಗಜನಿಮೀಲನದಿಂದವಧೀರಿಸುತ್ತೆ . . . ಮುಮ್ಮಲಂ ಮುಱುಗಿಪರಲ್ತೆ (ಕಾದಂಪೂ. ೫೪೪). [ಅವಧೀರಣ + – ಇಸು₃]

**ಅವಧೂತ** (ಗು). ೧. ತಳ್ಳಲ್ಪಟ್ಟ: ಆ ಜಯವರ್ಮನುಂ ಅವಮಾನಪವಮಾನಾವಧೂತನಾಗಿ ಪೋಗಿ (ಆದಿಪು. ೨-೩೮ ವ). (ನಾ). ೨. ಎಲ್ಲ ಬಗೆಯ ಅಭಿಮಾನವನ್ನು ತಳ್ಳಿಹಾಕಿದವನು; ವಿರಕ್ತರಲ್ಲಿ ಒಂದು ವಿಶೇಷ ಪ್ರಭೇದ: ಭವಗೇಡಿಯಾಗಿ ಬಯಸದೆ ಬಂದ ಭಿಕ್ಷಮಂ ಸವಿದು ಚರಿಪವಧೂತ ಬಂದು(ಭಿಕ್ಷಾಚ. ೩-೧೭); ದಿನದಿನಕೆ ದಾಯಾದಮತ್ಸರಂ ಪೆರ್ಚುತಿರೆ ಮನೆವಾಳ್ತೆಯೊಳ್ಪುಸುಗೆಯಂ ಕುಡದೆ ಗುರು ತಗುಳ್ದನುಜನಂ ಪೊಱಮಡಿಸೆ ಕಾಶಿಯೊಳ್ಪೋಗಿರ್ಪನಾತನವಧೂತನಾಗಿ (ಜೈಮಿಭಾ. ೫-೨೭). ೩. ವಿರಕ್ತರ ಹೆಸರಿನ ಕೊನೆಯಲ್ಲಿ ಸೇರುವ ಮಾತು(?). ಉದಾ: ಚಿದಾನಂದಾವಧೂತ. [ಸಂ.]

**ಅವಧೂತಮಾರ್ಗ** (ನಾ). ಅವಧೂತರು ಅನುಸರಿಸುವ ಪಂಥ, —ಕ್ರಮ: ಆಯಾಶ್ರಮಂ ಬಹುಶಿಖಿಗಳುಮವಧೂತಮಾರ್ಗಾಯತ್ತಂ (ವೀಶೈಪು. ೭-೬-೫೧). [ಅವಧೂತ + ಮಾರ್ಗ]

**ಅವಧೂತಾಶ್ರಮ** (ನಾ). ೧. ಅವಧೂತನ ಸ್ಥಿತಿ, —ಅವಸ್ಥೆ: ಸ್ಥಿರಗತಿಯ ನಾ ಹೇಳ್ವೆ ವಾಙ್ಮನಗತಿಗೆ ದೂರೆನಿಸುವುದು ಅವಧೂತಾಶ್ರಮವು ತಾನು (ಜ್ಞಾನಸಿಂ. ೪೨-೩). [ಅವಧೂತ + ಆಶ್ರಮ]

**ಅವಧೃತ** (ಗು). ಎಚ್ಚರಿಕೆಯಿಂದ ಕೇಳಿದ; ಗಮನಿಸಿದ; ಪರೀಕ್ಷಿಸಿ ತಿಳಿದ; ಭಾವಿಸಿದ. [ಸಂ.]

**ಅವಧ್ಯ** (ಗು). ೧. ವಧೆಮಾಡಬಾರದ; ಕೊಲೆಗೆ ಯೋಗ್ಯವಲ್ಲದ: ಕೃಪನೆಂದನು ನಿಧಾನಿಸಲಾವವಧ್ಯರು ಜನಪ ನಿನ್ನನು ನಾವು ಕೊಲ್ಲೆವು (ಕುವ್ಯಾಭೀ. ೨-೩೪). (ನಾ). ೨. ಕೊಲೆಗೆ ಅಶಕ್ಯನಾದವನು; ಕೊಲ್ಲಲಾಗದವನು: ಜಗದೊಳವಧ್ಯನಂ [ಪಾಠಾಂ. ವಂದ್ಯನಂ]ಗೆಲಲೆ ಬಾರದು (ಪಂಪಭಾ. ೧೧-೩೨); ನರಕಾಸುರನವಧ್ಯನು ಸಕಲ ದಿವಿಜರಿಗೆ (ಕುವ್ಯಾದ್ರೋ. ೩-೭೧). [ಸಂ.]

**ಅವಧ್ವಸ್ತ** (ಗು). ೧. ಚದುರಿದ; ಚಲ್ಲಾಪಿಲ್ಲಿಯಾದ. (ನಾ). ೨. ಬಿಡಲ್ಪಟ್ಟುದು; ತ್ಯಾಗಮಾಡಿದ್ದು: "ಅವಕೀರ್ಣಂ, ಅವಧ್ವಸ್ತಂ, ತ್ಯಕ್ತಂ, ಉತ್ಸೃಷ್ಟಂ, ಉಜ್ಝಿತಂ – ಈ ೫ ಬಿಡಲ್ಪಟ್ಟುದು" (ಹಲಾಯು. ೧೧೮-೨೯). ೩. ನುಚ್ಚಾಗಿ ಮಾಡಿದ್ದು. [ಸಂ.]

**ಅವನ್** 'ಅದು₁' ಪರಾ.

**ಅವನ** (ನಾ). ೧. ಸಂರಕ್ಷಣೆ; ಕಾಪಾಡುವುದು: ಅಸದನುಶಾಸನಂ ಸದವನಂ ನೃಪಲಕ್ಷಣಮೊಂದು ಬಾಹುಸಾಹಸಗುಣಮೊಂದು ದಾನಗುಣಮಾಯೆರಡುಂ ನಿಮಿರ್ವಂತು . . . ತೆಜಿಸಂದನುದಾತ್ತರಾಘವಂ (ಪಂರಾಮಾ. ೬-೧೧೩). ೨. ಸಂತೋಷ; ತೃಪ್ತಿ. ೩. ತೃಪ್ತಿಪಡಿಸುವುದು; ಸಂತೋಷಗೊಳಿಸುವುದು. ೪. ಬಯಕೆ; ಕೋರಿಕೆ. ೫. ಉಪಕಾರ; ಅನುಗ್ರಹ. ೬. ವೇಗ. ೭. ಬಾಗುವುದು. [ಸಂ.]

**ಅವನಜೇಮನ** (ನಾ). = ಅವಣಜವಣ. [ಅವನ + ಜೇಮನ]

**ಅವನತ** (ಗು). ೧. ಬಾಗಿದ; ಬಗ್ಗಿದ; ನಮಸ್ಕರಿಸಿದ: ಅಂತು ಪಾಂಡುರಾಜನಧಿಕತೇಜನುಮವನತವೈರಿಭೂಭೃತ್ಸಮಾಜನುಮಾಗಿ . . . ಪೋಗಿ (ಪಂಪಭಾ. ೧-೧೧೦ ವ); ಅವನತನಾಗಿ ತಂದೆವಿರ ತಾಯ್ವಿರ ಕಲ್ಪಿಸಿದುಕ್ತಿ ಕೇಳ್ದು(ಶಮುದ. ೯೭ ಪ್ರಯೋ.). (ನಾ). ೨. ನಮಸ್ಕರಿಸಿದವನು. ೩. ಕೆಳಮಟ್ಟದಲ್ಲಿರುವವನು; ಕೀಳುದೆಸೆಯಲ್ಲಿರುವವನು.

ಅವನತನಾಗು = ನಮಸ್ಕರಿಸು: ತನಗಹಮಿಕೆಯಿಂದಿರದೆಜಪನೃಪಾಳರ ಮೌಳಿಮಾಳಿಕುಟ್ಟಿಮಸಂಘಟ್ಟನದಿನತಿಮುಖರಮಾಗಿರ್ಪನೆಗಂ ಸಾರ್ತಂದು ತಂದೆಗವನತನಾದಂ (ಪುಷ್ಪಪು. ೪-೭೧). [ಸಂ.]

**ಅವನತಿ** (ನಾ). ೧. ನಮಸ್ಕಾರ. ೨. ಕೀಳುದೆಸೆ; ದುರ್ದೆಸೆ; ಕಷ್ಟದ ಕಾಲ: ಧರ್ಮಪಾಲಕವಲ್ಲದ ಕ್ಷಾತ್ರಶಕ್ತಿಯೂ ಸಹ ಸಂಸ್ಕೃತಿಯ ಅವನತಿಗೆ ಕಾರಣವಾಗುತ್ತದೆ (ಮುಕ್ಸಾರ. ೧೦೪ ಪೀ.). [ಸಂ.]

**ಅವನತೆ** (ನಾ). ೧. ನಮಸ್ಕರಿಸಿದವಳು. ೨. ಬಗ್ಗಿದವಳು; ತಲೆತಗ್ಗಿಸಿದವಳು: ನೀಟಾಗಿ ವೇಷಭೂಷಣಗಳನ್ನು ಹಾಕಿಕೊಂಡ ತೆಲುಗುಮುಖ್ಯಮಗಳು ಅಂಗೈಯಲ್ಲಿ ಮುಖವಿಟ್ಟುಕೊಂಡು ಅವನತೆಯಾಗಿದ್ದಳು (ಪುನರು. ೩೪೬). [ಸಂ. ಅವನತಾ]

**ಅವನದ್ಧ** (ಗು). ೧. ಕಟ್ಟಲ್ಪಟ್ಟ; ಅಳವಡಿಸಿದ; ಆವೃತವಾದ: ಕೆಳೆಯರ ಪಗೆವರ ಪೆಂಡಿರ ವಿಳೋಳಹಾರಾವನದ್ಧ ಕಂಠಂಗಳಿಳಾತಳನಾಥನ ಮಧ್ಯಸ್ಥಿತೆಯಳವಿಯನಳವಲ್ಲದೆಳೆಗೆ ಗೋಸನೆಗೊಳುಗುಂ (ಶಾಂತಿಪು. ೯-೧೫೨). (ನಾ). ೨. ಮದ್ದಳೆ, ಮೃದಂಗ ಮೊದಲಾದ ಚರ್ಮವಾದ್ಯಗಳಲ್ಲಿ ಒಂದು ಬಗೆ: ತತಘನಸುಷಿರಾವನದ್ಧವಾದ್ಯಂಗಳಂ (ಆದಿಪು. ೫-೩೫). [ಸಂ.]

**ಅವನಮ್ರ** (ಗು). ಬಾಗಿದ. [ಸಂ.]

**ಅವನಾಟ** (ನಾ). ಚಪ್ಪಟೆಯಾದ ಮೂಗುಳ್ಳವನು. [ಸಂ.]

**ಅವನಾಯ**₁ (ನಾ). ಕೆಳಕ್ಕೆ ಇಳಿಸುವುದು, —ಬಿಸುಡುವುದು; ಕೆಡಹುವುದು. [ಸಂ.]

**ಅವನಾಯ**₂ (ನಾ). ವಿವಿಧ ಸುಂಕಗಳು(?): ನಿಮ್ಮ ಕವತಾಳದ ಸೀಮೆಯಲು ಅರಮನೆಯವರೂ ಅವನಾಯವ ಮಾಡಲಾಗಿ ಅವನಾಯಕೆ ಅಂಜಿ ನೀಉ ಸಮಸ್ತ ಪ್ರಜೆಗಳೂ ಸೀಮೆಯನು ಬಿಟ್ಟು ಹಟಮಾಡಿ ಮಾಸವೆಯ ಸೀಮೆಗೆ ಬಿಟ್ಟುಹೋಗಿ (ಸೌಇಇ. IX–ii, ೫೫೪-೧೨; 1534); ಸರ್ವಮಾನ್ಯವಾಗಿ ನಡವುತ್ತಾಯಿರಲಾಗಿ ಮಧ್ಯೆ ಅವಾಂತರಪಾಗಿ ಬಂದಂಥಾ ಅವನಾಯಗಳ ರೊಕ್ಕ ಧಾನ್ಯಗಳನು (ಸೌಇಇ. IX–ii, ೫೭೧-೧೨; 1534). ℙ ತೆಲುಗು ಶಾಸನಗಳಲ್ಲಿ ಈ ಶಬ್ದ ಕಂಡುಬರುತ್ತದೆ: ಸುಂಕವೂನು ಸಾದಮೂನು ಮಾಡಉ ಆಇನ ಅವನಾಯಾಲೂನು (ಸೌಇಇ. X, ೪೯೬-೧೦; 1809?).

[ದೇ. ॥ ತೆಲು. ಅವನಾಯ]

**ಅವನಿ** (ನಾ). ೧. ಭೂಮಿ: "ಧರಣಿ ಧಾರಿಣಿ . . . ಸ್ಥಿರೆಯವನಿ ವಿಶ್ವಂಭರೆ . . . ನೆಲಕೆ ನಾಮಂ" (ಮಂಗರಾ. ೨೮-೧); ಅವನಿಯರ್ಧಪಹೀವುದು (ಕುವ್ಯಾಉ. ೯-೧). ೨. ಕರಿಬೇವಿನ ಗಿಡ: "ಅವನಿಯೆನೆ ಕರಿಬೇವು" (ಮಂಗರಾ. ೪೦-೩೨). ೩. ಅಗಸೆಮರ: "ಅಗಸೆಯವನಿಯೆನಿಕ್ಕು" (ಮಂಗರಾ. ೫೭-೫). [ಸಂ.]

**ಅವನಿಂದೆ** (ನಾ). ಇಲ್ಲದ ದೂರು; ಅಪನಿಂದೆ (ದಕ. ೪). [ಸಂ.]

**ಅವನಿಚಕ್ರ** (ನಾ). ಭೂಮಂಡಲ: ಅವನಿಚಕ್ರ ವಿಕ್ರಮಚಕ್ರಂ ದೊರೆಯಲ್ತು ಧರ್ಮಚಕ್ರಂ ದೊರೆಯಕ್ಕುಂ (ಶಾಂತಿಪು. ೧೧-೮೮); ಅಂದವನಿಚಕ್ರಂ ವಿಕ್ರಮಕ್ಕೆಯ್ದುದಾ ಬಲಿಯಂ . . . ಮೆಟ್ಟಿ ರಸಾತಳಕ್ಕಿೞಿಪಿದ್ದೆನೀಂ ವಾಮನಾಕಾರದಿಂ (ಜಗನಿ. ೧-೨೯). [ಅವನಿ + ಚಕ್ರ]

**ಅವನಿಜ** (ನಾ). ೧. ಮರ; ಗಿಡ. ೨. ಭೂಮಿಯ ಮಗ; ಅಂಗಾರಕ: "ಅಂಗಾರಕಂ ವಕ್ರನವನಿಜಂ" (ಮಂಗರಾ. ೧೧-೫). ೩. ಭೂಮಿಯಲ್ಲಿ ಹುಟ್ಟಿದ್ದು. [ಸಂ.]

**ಅವನಿಜಾತ** (ನಾ). = ಅವನಿಜ. [ಅವನಿ + ಜಾತ]

**ಅವನಿಜಾಪತಿ** (ನಾ). ಭೂಮಿಯ ಮಗಳಾದ ಸೀತೆಯ ಗಂಡ; ಶ್ರೀರಾಮ. [ಸಂ. (ಅವನಿಜಾ + ಪತಿ)]

**ಅವನಿಜೆ** (ನಾ). ಭೂಮಿಯ ಮಗಳಾದ ಸೀತೆ. [ಸಂ. ಅವನಿಜಾ]

**ಅವನಿತಳ** (ನಾ). ಭೂಮಿ; ಭೂಮಿಯ ಮೇಲ್ಮೈ: ಭುವನಾಲೋಕಾಭಿರಾಮಂ ದಿಗವನಿತಳ ಪೂರ್ಣಾರ್ಜುನ ಶ್ಲೋಕಂ... ಪೆಸರ್ವಡೆದಂ ವೀರಬಲ್ಲಾಳದೇವಂ (ಎಕ. V, ಅರಸೀ. ೧೨೬-೨೧; 1185). [ಅವನಿ + ತಳ (= ತಲ)]

**ಅವನಿದಿವಿಜ** (ನಾ). ಭೂಸುರ; ಬ್ರಾಹ್ಮಣ. [ಅವನಿ + ದಿವಿಜ]

**ಅವನಿಧರ** (ನಾ). ಭೂಮಿಯನ್ನು ಧರಿಸಿರುವುದು; ಬೆಟ್ಟ. [ಸಂ.]

**ಅವನಿಪ** (ನಾ). ಭೂಮಿಯನ್ನು ಕಾಪಾಡುವವನು; ದೊರೆ: ಅಂತವನಿಪನಿಕರಂ ಕೈಯಾಂತವನಿಪನಿಕರಮೊಂದು ಕೋಟಿಗೆ ಮಿಗಿಲೆಂಬಂತಾದೊಡಂ (ಗದಾಯು. ೧-೧೫). [ಸಂ.]

**ಅವನಿಪತಿ** (ನಾ). ಭೂಮಿಗೆ ಒಡೆಯ; ರಾಜ: ಅವನಿಪತಿ ಕೇಳಾ ಪುರದೊಳುತ್ಸವವನದನೇನೆಂಬೆನು (ನಳಚ. ೭-೪೩). [ಅವನಿ + ಪತಿ]

**ಅವನಿಪಾಲಕ** (ನಾ). = ಅವನಿಪ: ವೃಷಭದೊಳುಡುನಾಥಂ ನಿಲೆ ಪುಟ್ಟಿದ ಮನುಜನವನಿಪಾಲಕನಕ್ಕುಂ (ಜಾತತಿ. ೧೨-೧೬). [ಅವನಿ + ಪಾಲಕ]

**ಅವನಿರುಹ** (ನಾ). ಭೂಮಿಯಲ್ಲಿ ಹುಟ್ಟಿದ್ದು; ಮರ; ಗಿಡ. [ಸಂ.]

**ಅವನಿವಲ್ಲಭ** (ನಾ). = ಅವನಿಪತಿ. [ಅವನಿ + ವಲ್ಲಭ]

**ಅವನಿಸು** (ಕ್ರಿ). ೧. ಕಾಪಾಡು: ಅವನಿಕೆ ಬಲಭುಜಯುಗಂ... ಪದ್ಮಾವತೀರ್ಣಪೂರ್ಣಂ ನಿಮ್ಮಂ (ಸ್ವಪ್ನವಾ. ೧). ೨. ಆತುರಪಡು; ತ್ವರೆಗೊಳ್ಳು: ಓಂಕರಿಸಂ ಕಾತರಿಸಂ... ಜಿನುಗನವನಿಸಂ ಕೊಕ್ಕರಿಸಂ (ಅಜಿಪು. ೫-೮೬). [ಅವನ + -ಇಸು]

**ಅವನಿಸುತ** (ನಾ). = ಅವನಿಜ ೨. [ಅವನಿ + ಸುತ]

**ಅವನಿಸುತಕ್ಷೇತ್ರ** (ನಾ). ಮೇಷವೃಶ್ಚಿಕ ರಾಶಿಗಳು: ಇರೆ ಚಂದ್ರಂ... ಅವನಿಸುತಕ್ಷೇತ್ರದೊಳ್ ಸ್ತ್ರೀವಿಶುದ್ಧಾಚರಣಂ... ಕೂಡಿ ಬರ್ಕುಂ (ಜಾತತಿ. ೯-೧೬). [ಅವನಿಸುತ + ಕ್ಷೇತ್ರ]

**ಅವನಿಸುತೆ** (ನಾ). = ಅವನಿಜೆ: ಕಮಲಲೋಚನ ಕಾಯು ಕಾಯೆನುತಿರ್ದಳವನಿಸುತೆ (ಕೌಶಿರಾ. ೩೬-೧೫). [ಸಂ. ಅವನಿಸುತಾ]

**ಅವನಿಸುರ** (ನಾ). ಬ್ರಾಹ್ಮಣ. 'ಭೂಸುರ' ಪರಾ. [ಅವನಿ + ಸುರ]

**ಅವನೀಜ** (ನಾ). = ಅವನಿಜ ೧: ತರುಗಳೊಳು ಕಲ್ಪಾವನೀಜಂ... ಧೇನುಗಳೊಳಮರಧೇನು... ಅಖಿಲದೇವರೊಳು ಶಂಕರನುಮಿರ್ಪವೊಲೊಪ್ಪಿದಂ ಬಸವರಸನು (ಬಸವು. ೫-೬೯). [ಸಂ.]

**ಅವನೀಜಾತ** (ನಾ). = ಅವನಿಜ ೧: ಯಮಳಾರ್ಜುನಾವನೀಜಾತಮನಾಹತಂ ಕೆಡೆದುದಂ ನೆನೆದದ್ಭುತಮಿಲ್ಲಿ ಕಾಣಲಾಯ್ತು (ಜಗವಿ. ೩-೬೪). [ಸಂ. (ಅವನೀ + ಜಾತ)]

**ಅವನೀತ** (ಗು). ೧. ತೆಗೆದುಹಾಕಲ್ಪಟ್ಟ; ಹೋಗಲಾಡಿಸಿದ. ೨. ಬಾಗಿದ; ಕುಗ್ಗಿದ: "ಅವಕುಂಚಿತಂ ಮೇಣವರೂಪಿತಮುದವಲೀನಮವನೀತನಿಷ್ಕಾಸಿತಂ ಅವಕೃಷ್ಟಮೆನೆ ಹರಹುಗೆಟ್ಟುದೆನಿಸಿರ್ಕುಂ" (ಮಂಗರಾ. ೧೩೩-೨೯). [ಸಂ.]

**ಅವನೀತಳ** (ನಾ). ೧. = ಅವನಿತಳ: ಜಲಧಿ ಮೊಗೆಯಲಿ ಮಹಿಯೊಳಿನಮಂಡಲವು ಬೀಳಲಿ ಬಿಸುಡಲವನೀತಳವನಾಶಾದಂತಿ (ತೊರರಾ. ೧-೩-೨೫). ೨. ಭೂತಲ. [ಸಂ. (ಅವನೀ + ತಳ)]

**ಅವನೀತಳಪತಿ** (ನಾ). = ಅವನಿಪತಿ: ಕಡಡಿದುವವನೀತಳಪತಿಯ ಪಡೆಯೊಳರಿನೃಪಜಲಾಶಯಂ (ಶಾಂತಿಪು. ೧೦-೧೩೯). [ಅವನೀತಳ + ಪತಿ]

**ಅವನೀದಿವಿಜಪುರ** (ನಾ). ಬ್ರಾಹ್ಮಣರಿಗಾಗಿ ಬಿಟ್ಟ ಊರು; ಅಗ್ರಹಾರ: ಇವರು ತಮ್ಮೊಳಗೆಂದರವನೀದಿವಿಜಪುರದಲಿ ದೈನ್ಯವೃತ್ತಿಯ ನಿವಹ ನಿಲಲಿ (ಕುವ್ಯಾಆ. ೧೧-೨೦). [ಸಂ. (ಅವನೀ + ದಿವಿಜ + ಪುರ)]

**ಅವನೀದೇವ** (ನಾ). = ಅವನಿಸುರ.

ಅವನೀದೇವಾನ್ವಯ = ಬ್ರಾಹ್ಮಣರ ವಂಶ; ಬ್ರಾಹ್ಮಣ ಕುಲ: ವಾಗ್ಮಿಪ್ರವರಂ ವರೇಣ್ಯನವನೀದೇವಾನ್ವಯಕ್ಕುತ್ತಮಂ (ಸುಕುಮಾ. ೨-೩೪). [ಸಂ. (ಅವನೀ + ದೇವ)]

**ಅವನೀನಾಥ** (ನಾ). = ಅವನಿಪತಿ: ಅವನೀನಾಥನ ಗೆಯ್ದ ಪೊಲ್ಲಮೆಗಮೆನ್ನೊಳ್ಪಿಂಗಮಿಂ ಸಕ್ಕಿಯಾಗು (ಪಂಪಭಾ. ೯-೨೬); ಮೇಘನಿನಾದದಿಂ ಮೇಘರಥಾವನೀನಾಥನಿಂತೆಂದು ಪೇಳ್ದಂ (ಶಾಂತಿಪು. ೯-೮೩ ವ). [ಸಂ. (ಅವನೀ + ನಾಥ)]

**ಅವನೀನಿರ್ಜರ** (ನಾ). ಬ್ರಾಹ್ಮಣ: ನೆರೆದರವನೀನಿರ್ಜರರು ಕೇಸರಿಯ ಪೀಠವ ರಚಿಸಿ... ವಿಸ್ತರಿಸಿದರು ಮಂಗಳವ (ಕುವ್ಯಾಭೀ. ೧-೩೦). [ಸಂ. (ಅವನೀ + ನಿರ್ಜರ)]

**ಅವನೀಪಕ** (ನಾ). ಭೂಮಿಗೆ ಒಡೆಯ; ರಾಜ: ಚಾಗಮನೀಸಿಕೊಳ್ಳದವನೀಪಕರಿಲ್ಲವನೀಪಕಮ್ಮ ಗಾದೋದ್ಯೋಗಮನೊಕ್ಕು ಬಾಳದವರಿಲ್ಲ (ಎಕ. VII, ಶಿಕಾರಿ. ೧೦೩-೨೨; 1149). [ಸಂ.]

**ಅವನೀಪತಿ** (ನಾ). = ಅವನೀಪಕ: ಜಿನಮುನಿವೃಂದವವನೀಪತಿಯ ತಾವೈತಂದು ನೋಡಲು (ಬಸವು. ೫೦-೪೦). [ಸಂ. (ಅವನೀ + ಪತಿ)]

**ಅವನೀಭರ್ತೃ** (ನಾ). = ಅವನೀಪಕ: ಇಂದ್ರೇಭದಿಂದವನೀಭರ್ತೃ... ಪುಟ್ಟುಗುಂ ನಂದನಂ (ಜಗವಿ. ೨-೮೩). [ಸಂ. (ಅವನೀ + ಭರ್ತೃ)]

**ಅವನೀಭಾಗ** (ನಾ). ರಾಜ್ಯದ ಒಂದು ಪ್ರದೇಶ: ನೋಡವನೀಭಾಗದೊಳೆನ್ನ ಭಾಗಮುನದಂ ತಾನೀಯದಿರ್ದಾಗಳ್ (ಪಂಪಭಾ. ೯-೨೬). [ಸಂ. (ಅವನೀ + ಭಾಗ)]

**ಅವನೀರಕ್ಷಣ** (ನಾ). ರಾಜ್ಯವನ್ನು ಪಾಲಿಸುವುದು: ಅವನೀರಕ್ಷಣದಕ್ಷ ದಕ್ಷಿಣಭುಜಸ್ತಂಭಂ ಕೊಲಲ್ ಸಾಲದೇ (ಪಂಪಭಾ. ೯-೨೬). [ಸಂ. (ಅವನೀ + ರಕ್ಷಣ)]

**ಅವನೀರುಹ** (ನಾ). = ಅವನಿರುಹ. [ಸಂ.]

**ಅವನೀವಲ್ಲಭ** (ನಾ). = ಅವನಿಪತಿ: ಅವನೀವಲ್ಲಭ ವಲ್ಲಭಾನುಜ [ನು]ದಾತ್ತಂ ಬಿನ್ನಪಂಗೆಯ್ವುದುಂ (ಶಾಂತಿಪು. ೧೮-೧೨೩). [ಸಂ. (ಅವನೀ + ವಲ್ಲಭ)]

**ಅವನೀಶ** (ನಾ). = ಅವನಿಪತಿ: "ಶೌರಿಯೊಳು ವಾಸ್ತುಕದೊಳವನೀಶನೊಳು ಕುಂಭಕಾರನೊಳು ಚಕ್ರವರ್ತಿಯೆನಿಕ್ಕು" (ಮಂಗರಾ. ೧೫೧-೫೨); ಈ ತೆರಳಿಕೆಯದಾವಂಗೆಂದನವನೀಶ (ಕುವ್ಯಾದ್ರೋ. ೫-೧೭). [ಸಂ. (ಅವನೀ + ಈಶ)]

**ಅವನೀಶ್ವರ** (ನಾ). = ಅವನಿಪತಿ: ಭರತಾವನೀಶ್ವರಂ ಗುರು ಪಿರಿಯಣ್ಣಂ ಚಕ್ರವರ್ತಿ (ಆದಿಪು. ೧೪-೧೧೨). [ಸಂ. (ಅವನೀ + ಈಶ್ವರ)]

**ಅವನೀಸುರ** (ನಾ). = ಅವನಿಸುರ: ರಾಜನಿಕರಮಂ ತಱಿದೀಯನೇ ಪರಶುರಾಮನೀ ಧರೆಯನವನೀಸುರರ್ಗೆ (ಜೈಮಿಭಾ. ೨-೩೩). [ಸಂ. (ಅವನೀ + ಸುರ)]

**ಅವನೀಸ್ವಾಮಿ** (ನಾ). = ಅವನಿಪತಿ: ಅವನೀಸ್ವಾಮಿಗೆ ಚಕ್ರವರ್ತಿಗೆ ಬಟಿಕ್ಕಾ ದೂತನಿಂತೆಂದು ಬಿನ್ನವಿಕುಂ (ಶಾಂತಿಪು. ೩-೫೨) [ಸಂ. ಅವನೀಸ್ವಾಮಿನ್]

**ಅವಸು** 'ಅದು₁' ಪರಾ.

**ಅವಪಥ್ಯ** (ನಾ). = ಅಪಥ್ಯ. [ಸಂ.]

**ಅವಪಾತ** (ನಾ). ೧. ಕೆಳಗೆ ಬೀಳುವುದು; ಇಳಿಯುವುದು. ೨. ಹಳ್ಳ; ಕುಳಿ; ರಂಧ್ರ. [ಸಂ.]

**ಅವಪುತ್ರಿಕೆ** (ನಾ). ಮಕ್ಕಳಿಲ್ಲದವನು. 'ಅವಪುತ್ರಿಕದ್ರವ್ಯ' ಪರಾ. [ಸಂ.]

**ಅವಪುತ್ರಿಕದ್ರವ್ಯ** (ನಾ). ಮಕ್ಕಳಿಲ್ಲದೆ ಸತ್ತವರ ಆಸ್ತಿ, —ಹಣ: ಮಾಣಿಯಾಯುಧಂಬೆರಸು ಮಣ್ಣಪವೇಜಲ್ಸಲ್ಲವಿನ್ತೀದಣ್ಣದೊಳಂಕವರ್ತೆಯೊಳವಪುತ್ರಿಕದ್ರವ್ಯದ ದಶವನ್ನದೊಳಂ ಪುಟ್ಟಿದ ದ್ರವ್ಯಮುವಂ ಕಳೆ (ಎಇ. XX, ೬-೪೦; 1012). [ಅವಪುತ್ರಿಕ + ದ್ರವ್ಯ]

**ಅವಬದ್ಧ** (ಗು). ಕಟ್ಟಲ್ಪಟ್ಟ; ಜೋಡಿಸಿದ: ಶ್ರೀವಿಗ್ರಹಸ್ಥ ಹಸ್ತ್ಯಜಿನಂ ಘನಂ ಶ್ರುತಿಪುಟಾವಬದ್ಧಾಹೀಂದ್ರಗೀತಘೋಷಂ (ಪದ್ಮರಾ. ೧-೧). [ಸಂ.]

**ಅವಬಾಧೆ** (ನಾ). ನೋವು; ಹಿಂಸೆ; ದುಃಖ: "ಅವಬಾಧೆ ವೇದನೆ ವ್ಯಥೆ ಪೀಡೆಯಾರ್ತಿಯೆಂಬಿವು ದುಃಖಮೆನಿಸಿಕ್ಕು" (ಮಂಗರಾ. ೧೧೬-೨). [ಸಂ. ಅವಬಾಧಾ]

**ಅವಬೋಧ** (ನಾ). ೧. ಎಚ್ಚರಿಕೆಗೊಳ್ಳುವುದು. ೨. ಅರಿವು; ಜ್ಞಾನ: ಅವಬೋಧಂ ವಿಷಯ ಪರಿಪ್ಲವಂ (ಮನೋವಚನಕಾಯನಿಯಮಂ ಪಾರಿಪ್ಲವ) ಮಿನಿತಿಲ್ಲದೆ ಮೂಱುಂ ಭುವನಮನೆಜಗಿಸುವ ಸಮುತೆ ಸಮನಿಸಿದಪುದೇ (ಶಾಂತಿಪು. ೯-೧೧೯). ೩. ವಿವೇಕ. ೪. ನಿರ್ಣಯ; ನಿಶ್ಚಯ. ೫. ಶಿಕ್ಷಣ; ತರಬೇತು. [ಸಂ.]

**ಅವಬೋಧನ** (ನಾ). ೧. ಎಚ್ಚರಿಸುವುದು. ೨. ತಿಳಿವಳಿಕೆಯನ್ನುಂಟುಮಾಡುವುದು; ವಿವೇಕವನ್ನು ಹುಟ್ಟಿಸುವುದು: ತದ್ವೈಮಾನಿಕ ಭೇದಾವಬೋಧನಾರ್ಥಂ ಉತ್ತರ ಸೂತ್ರಾವತಾರಂ (ತತ್ತ್ವಪ್ರ. ೨೦೫). [ಸಂ.]

**ಅವಭಳೆ** (ನಾ). ಒಬ್ಬಾತನ ಹೆಸರು: ದೊಡೇರಿಯ ಅವಭಳಗೌಡರಿಗೆ ಲಕ್ಷುಮಿಯಪುರದ ಕೆಱೆಯ ಕೆಳಗೆ ಕೊಟ ಮಾನ್ಯದ ಧರ್ಮ (ಮೈಆರ್. ೧೯೨೯, ೧೦೯-೮; 1595). [< ಸಂ. ಅಹೋಬಲ]

**ಅವಭಾಸ** (ನಾ). ೧. ಪ್ರಭೆ; ಕಾಂತಿ; ಹೊಳಪು: ಅತಸೀಪುಷ್ಪಾವಭಾಸಂ ತನುವೆಸೆವಿನೆಗಂ... ಶಾಶ್ವತನವತರಿಸಿರ್ದಂ (ಜಗವಿ. ೨-೯೯); ದೇಶೀಯಗಣಗಜೇಂದ್ರಸಾಂದ್ರಮದಧಾರಾವಭಾಸರುಂ (ಎಕ. II, ೬೬-೬೫; 1176). ೨. ತೋರುವುದು; ಕಾಣುವುದು. [ಸಂ.]

**ಅವಭಾಸಮಾನ** (ಗು). ಪ್ರಕಾಶಿಸುವ; ದೃಷ್ಟಿಗೋಚರವಾಗುವ: ಅಂತೆ ಜಾಗ್ರದ್ದಶಾವಭಾಸಮಾನಾಂತರಂಗ ಬಹಿರಂಗವಸ್ತುಗಳುಂ (ಆದಿಪು. ೨-೯ ವ). [ಸಂ.]

**ಅವಭೃತ** (ನಾ). = ಅವಭೃಥ: ಕ್ರತುಸಮಾಪ್ತಿಯಲವಭೃತದ ಭೂಪತಿಯ ವಿಮಳಸ್ನಾನಪುಣ್ಯೋಚಿತದಲೋಕುಳಿಯಾಡಿ ದಣಿದುದು (ಕುವ್ಯಾಸ. ೧೧-೩); ಮಱುದಿವಸ ಮಱುವಲಿಯ ಸಮನಂತರದಲವಭೃತದೋಕುಳಿಯ ವಿಸ್ತರಣವೆಸೆದುದು (ತೊರರಾ. ೧-೧೬-೫೧). [ಸಂ. ಅವಭೃಥ]

**ಅವಭೃತಮಜ್ಜನ** (ನಾ). = ಅವಭೃತಸ್ನಾನ: ಪರಮಸತ್ಯವ್ರತ ಮಹಾಕ್ರತುವರದಲವಭೃತಮಜ್ಜನವ ವಿಸ್ತರಿಸಿ ಭೀಮಾದಿಗಳು ಸಹಿತ ವಿರಾಟನರಮನೆಗೆ ಅರಸ ಬಂದನು (ಕುವ್ಯಾವಿ. ೧೦-೬). [ಅವಭೃತ + ಮಜ್ಜನ]

**ಅವಭೃತಸವನ** (ನಾ). = ಅವಭೃಥಸ್ನಾನ: ಅಮರಜನಾಹ್ಲಾದಕರಮೆನಿಪ ಜಿನಗಂಧೋದಕದಿಂ ಕುಲಿಶಿಗಾದುದವಭೃತಸವನಂ (ಅಜಿಪು. ೪-೬೩). [ಅವಭೃತ + ಸವನ]

**ಅವಭೃತಾವಗಾಹನ** (ನಾ). = ಅವಭೃಥಸ್ನಾನ: ಷಟ್ಕರ್ಮ... ಸಂಸ್ಥಾವಭೃತಾವಗಾಹನ [ಪವಿ]ತ್ರೀಕೃತ ಶರೀರರ್ (ಸೌಇಇ. XX, ೨೯-೧೨; 1044); ವೇದಾರ್ಥ ವಿದ್ಯಾಪಾರಗರ್ ಷಟ್ಕರ್ಮನಿರತರ್ ಸಪ್ತಸೋಮ ಸಂಸ್ಥಾವಭೃತಾವಗಾಹನ ಪವಿತ್ರೀಕೃತಶರೀರರ್ (ಕಇ. II, ೧೦-೬; 1080). [ಅವಭೃತ + ಅವಗಾಹನ]

**ಅವಭೃಥ** (ನಾ). ೧. ಯಜ್ಞ ಮುಗಿಯುವುದು; ಯಾಗದ ಸಮಾಪ್ತಿ: "ಯಜ್ಞದ ತೀರ್ಕಣೆ ಅವಭೃತ[ಥ]ಮೆಂಬುದು" (ಹಲಾಯು. ೬೯-೨೬೩). ೨. = ಅವಭೃಥಸ್ನಾನ. [ಸಂ.]

**ಅವಭೃಥಸವನ** (ನಾ). = ಅವಭೃಥಸ್ನಾನ: ಜಿನಸವನಗಂಧತೋಯದಿನನಿಮಿಷಲೋಚನರ್ಗ ಮಾದುದವಭೃಥಸವನಂ (ಆದಿಪು. ೬-೧೦೩); ದುರ್ಯೋಧನನ ದೇಹಪ್ರಹರಣಲೋಹಿತದಿನಾದುದವಭೃಥಸವನಂ [ಪಾಠಾಂ. ಸ್ನಾನಂ] (ಗದಾಯು. ೮-೪೬). [ಅವಭೃತ + ಸವನ]

**ಅವಭೃಥಸ್ನಾನ** (ನಾ). ಯಾಗ ಅಥವಾ ಮಂಗಳಕಾರ್ಯವು ಮುಗಿದ ಮೇಲೆ ಮಾಡುವ ಸ್ನಾನ: ಅಗ್ರಪೂಜೆಯಂ ನಾರಾಯಣಂಗೆ ಕೊಟ್ಟವಭೃಥಸ್ನಾನದೊಳ್ ಪಿರಿದುಮೊಸಗೆಯಂ ಮಾಡಿ (ಪಂಪಭಾ. ೬-೬೫ ವ). [ಅವಭೃಥ + ಸ್ನಾನ]

**ಅವಮ** (ಗು). ೧. ತುಂಬ ಕೆಳಗಿನ. ೨. ಕಡಮೆಯಾಗುತ್ತಾ ಹೋಗುವ. 'ಅವಮೋದರ್ಯ' ಪರಾ. ೩. = ಅವಮೆ. [ಸಂ.]

**ಅವಮತ** (ಗು). ೧. ಅವಮಾನಿಸಲ್ಪಟ್ಟ. ೨. ಕಡೆಗಣಿಸಿದ. [ಸಂ.]

**ಅವಮತಿ** (ನಾ). ೧. ಅವಮಾನ. ೨. ಕಡೆಗಣಿಸುವುದು ೩. ಅವಿವೇಕ; ತಿಳಿಗೇಡಿತನ (೬). [ಸಂ.]

**ಅವಮತಿಗೈ** (ಕ್ರಿ). ೧. ಅವಮಾನಮಾಡು. ೨. ಅಲಕ್ಷ್ಯಮಾಡು: ಅತ್ತಿತ್ತ ನೋಡದೆ ಅವಮತಿಗೆಯ್ಯದೆ ಮತ್ತೆಯಾಗದೆ ಮರೆತಿರದೆ (ಹದಿಬ. ೪-೧೦). [ಅವಮತಿ + ಗೈ (< ಕೆಯ್₁)]

**ಅವಮನ್ನಣೆ** (ನಾ). ಅಗೌರವ; ಅವಮಾನ; ತಿರಸ್ಕಾರ: ನಿನ್ನ ಧರ್ಮಪತ್ನಿಯಾದ ಸುದೇಷ್ಣೆಯು ನನ್ನನ್ನು ವೃದ್ಧನು, ಅಧಮನು ಎಂದು ಅವಮನ್ನಣೆಯನ್ನು ಮಾಡಿ... ಕಳುಹಿಸಿದಳು (ಕೃವಾಳ. ೧೯೬). [< ಸಂ. ಅವಮಾನನಾ]

**ಅವಮರ್ದ** (ನಾ). ೧. ತುಳಿದುಹಾಕುವುದು; ಅಡಗಿಸುವುದು. ೨. ಪೀಡೆ; ಹಿಂಸೆ; ತೊಂದರೆ. ೩. ಶತ್ರುವಿನ ಸೀಮೆಗೆ ದಾಳಿಮಾಡಿ ಬೆಳೆ ಮುಂತಾದುವನ್ನು ನಾಶಗೊಳಿಸಿ ಶಿಕ್ಷಿಸುವುದು. [ಸಂ.]

**ಅವಮರ್ಯಾದೆ** (ನಾ). ಅಗೌರವ; ಮರ್ಯಾದೆಯಿಲ್ಲದುದು: ನೀನೋ ಶೂರ; ಅವಮರ್ಯಾದೆಯನ್ನು ಸಹಿಸದವನು (ವಚಭಾ. ೩). [ಸಂ. ಅವಮರ್ಯಾದಾ]

**ಅವಮರ್ಶ** (ನಾ). ೧. ವಿಮರ್ಶೆ; ಪರಾಮರ್ಶೆ. ೨. [ನಾಟ್ಯಶಾ] ನಾಟಕದ ಐದು ಸಂಧಿಗಳಲ್ಲಿ ಒಂದು. 'ಅವಮರ್ಶ ಸಂಧಿ' ಪರಾ. ೩. ಆಕ್ರಮಣ; ಮುತ್ತಿಗೆ. [ಸಂ.]

**ಅವಮರ್ಶಸಂಧಿ** (ನಾ). "ಅವಮರ್ಶ ಸಂಧಿಯಲ್ಲಿ ಕಥೆ ಗರ್ಭಸಂಧಿಗಿಂತ ಮುಂದುವರಿಯುತ್ತದೆ. ನಾಯಕನು ಕೋಪ ವ್ಯಸನ ವಿಲೋಭನಾದಿಗಳಿಂದ ಸ್ವಲ್ಪ ತಡೆದು ನಿಲ್ಲುತ್ತಾನೆ (ಆಮೇಲೆ ಫಲ ಪ್ರಾಪ್ತಿ ನಿಶ್ಚಯವಾಗುತ್ತದೆ)" (ಕೈಪಿಡಿ. ೨೦೮); ಕೋಪ, ವ್ಯಸನ ಅಥವಾ ಲೋಭದಿಂದ ಪರ್ಯಾಲೋಚಿಸುವಲ್ಲಿ [ಇರುವ] ಅಂಗಗಳ ಸಂಗ್ರಹವು ಅವಮರ್ಶ[ಸಂಧಿ]ಗರ್ಭದಲ್ಲಿ ಚೆನ್ನಾಗಿ ಒಡೆದು ಪ್ರಕಟವಾದ ಬೀಜವು [ಅಲ್ಲಿನ] ವಿಷಯವಾಗಿದೆ (ದಶರೂ. ೧-೪೧). 'ವಿಮರ್ಶಸಂಧಿ' ಪರಾ. [ಅವಮರ್ಶ + ಸಂಧಿ]

**ಅವಮಾನ** (ನಾ). ಅಪಮಾನ; ಅಗೌರವ: ದೇವಪುತ್ರ್ರನಂದಿನಿಯು ಅವಮಾನ ಅವನ ತಂಗಿಗಾದ ಅವಮಾನವೆಂದು ತಿಳಿಸು (ಚಾಣಅ. ೮೭).
**ಅವಮಾನಪಡಿಸು, ಅವಮಾನಮಾಡು** = ಅಗೌರವಕ್ಕೆ ಗುರಿಮಾಡು; ಮರ್ಯಾದೆ ಕೆಡುವಂತೆ ನಡೆ; ತಿರಸ್ಕಾರಕ್ಕೆ ಗುರಿಮಾಡು; ತಿರಸ್ಕಾರದಿಂದ ಕಾಣು. [ಸಂ.]

**ಅವಮಾನಿತ** (ಗು). ತಿರಸ್ಕಾರಕ್ಕೆ ಗುರಿಯಾದ; ಅವಮರ್ಯಾದೆ ಮಾಡಲ್ಪಟ್ಟ. [ಸಂ.]

**ಅವಮಾನಿಸು** (ಕ್ರಿ). ಮಾನಹಾನಿಗೆ ಗುರಿಮಾಡು; ಮರ್ಯಾದೆಯನ್ನು ಕೆಡಿಸು: ಅವಷ್ಟಂಭಿಸಿ ವಿಪ್ರಸಭೆಗೆ ಪಖ್ಯಾಣಿಸುತ್ತಮುದ್ಗ್ರೀವನವರನವಮಾನಿಸಿದಂ (ಸುಕುಮಾ. ೪–೨೪); ನನಗೆ ಅಡಿಗೆ ಮಾಡಲುಬರುವುದಿಲ್ಲವೆಂದು ಅವಮಾನಿಸಬೇಡಿ (ಕಾವೇರಿ. ೧೫). [ಅವಮಾನ + –ಇಸು$_3$]

**ಅವಮೆ** (ನಾ). ಅಮಾವಾಸ್ಯೆ: ವಸುಧಾಚಕ್ರಕ್ಕೆ ಕಾಲಾಯಸಗೃಹವರಣಂ ಚಂದ್ರಬಿಂಬಕ್ಕೆ ರಾಹುಗ್ರಸನಂ ಚಂಡಾಂಶುಬಿಂಬಕ್ಕವಮೆಯ ರಜನೀಪ್ರೋದ್ಗಮಂ... ಎಂಬಿನಂ ಬಂದುದು (ಕಾ.ಧ್ವಂಉ. ೫೨೯). "ಅಮಾವಾಸ್ಯೆ" (ಕಾದಂಉ. ಅಡಿಟ.). [ಸಂ. ಅವಮ]

**ಅವಮೋದರ್ಯ** (ನಾ). [ಜೈನ] ಹನ್ನೆರಡು ಬಗೆಯ ತಪಸ್ಸುಗಳಲ್ಲಿ ಎರಡನೆಯದು; ಆಹಾರವನ್ನು ಒಂದೊಂದು ತುತ್ತು ಕಡಮೆ ಮಾಡಿಕೊಳ್ಳುತ್ತಾ ಬಂದು, ಕಡೆಗೆ ಒಂದು ತುತ್ತಿನಷ್ಟಕ್ಕೆ ಮಾತ್ರ ಉಳಿಸಿಕೊಳ್ಳುವ ಆಹಾರವ್ರತ ಕ್ರಮ: "ಅವಮೋದರ್ಯ – ಅರೆಯುಣಿಸುಂ" (ತತ್ತ್ವಪ್ರ. ೩೪೧); ಏಕಕಬಲೋನಾದ್ಯೇಕಸಿಕ್ಥಪ್ರಮಾಣಾಹಾರಂಬರಂ ಬರ್ಪವಮೋದರ್ಯಮೆಂಬೆರಡನೆಯ ತಪದೊಳಂ (ಆದಿಪು. ೬–೩೦ ವ); ಪಾರಣೆಯ ದಿನಂಗಳೊಳವಧಾರಿಸಿ ಜಠರಾಗ್ನಿ ನಂದದಂದದಿನರ್ಧಾಹಾರಮನಾರೋಗಿಸುವಾಚಾರದಿನಳವಟ್ಟುದವರೊಳವಮೋದರ್ಯಂ (ಸುಕುಮಾ. ೪–೫). 'ಅಮರ್ಯ' ಪರಾ. [ಸಂ.]

**ಅವಯವ** (ನಾ). ೧. ಅಂಗ; ದೇಹದ ಒಂದು ಭಾಗ. ೨. ಭಾಗ; ಪೂರ್ಣವಾದ ವಸ್ತುವಿನ ಅಂಶ. ೩. ಸೌಲಭ್ಯ; ನಿರಾಯಾಸ: ಘೋರಮಪ್ಪ ಮೂವತ್ತೆರಡುಂ ದಂಡಣೆಗಳಿಂ ನೀಡುಂ ದಂಡಿಸೆಯ ನಿತುಮಂ ಬಾಟೆವಾಟೆ ಅವಯವದೆ ಸೈರಿಸಿಯುಂ (ವಡ್ಡಾರಾ. ೧೨೪–೨೨); ಕರಣಂಗಳ ಗಾಯಂಗಳ ಪರಿಣತೆಯಂ ಮೆಱೆದು ಪೊಣರ್ದು ಸಂದೊಂದೆಡೆಯೊಳ್ ಭರತನವಯವದೊಳೆ ಮಣಿಕಿರೀಟರುಚಿ ಬೆಳಗೆ ದೆಸೆಗೆ ಬೀಸಿದನಾಗಳ್ (ಆದಿಪು. ೧೪–೧೧೦); ದಿವ್ಯಚಾಪಕ್ಕೆ ಪೊಡಮಟ್ಟು ದನವಯವದಿನೆಡಗೆಯ್ಯೊಳೆತ್ತಿಕೊಂಡು (ಪಂಪಭಾ. ೩–೬೨ ವ); ಧರಣಿಯನವಯವದಿಂದಮಾ ಪರಿಪಾಲಿಸಲೆನ್ನ ಭುಜಮೆ ಸಾಲ್ವುದು (ಶಾಂತಿಪು. ೨–೧೩); ಸದ್ಭಾವದೆ ಶಿವನಂ ಚಿತ್ತದೊಳಾವಗಮವಯವದೆ ತಾಳ್ದಿದರ್ ಕೆರ್ತಾರರ್ (ಎಕ. XI, ಜಗಳೂ. ೧೦–೩೦; 1054); ಅವಯವದಿಂದಮೆನ್ನ ತನುಜಾನುಜರಂ ಪಿಡಿದುಯ್ದರ್ (ಪಂರಾಮಾ. ೧೪–೮೧); ಸುರರಾಜಂಗಂ ಭೇದಿಸಲರಿದೆನಿಸುವ ದಿವ್ಯರತ್ನಮನಗವಯವದಿಂ ಧೊರೆಕೊಂಡುದು (ಧರ್ಮಾಮೃ. ೬–೮೩); ಭುವನನುತ ಶ್ರುತದೇವಿಯನವಯವದಿಂಧೊಲಿಸಿ (ಧರ್ಮನಾ. ೧–೨೪). ೪. ಅಲಕ್ಷ್ಯ; ಉದಾಸೀನತೆ: ಇನಿಬರುಮನೊರ್ಮೆಯೆ ಪೊಸೆದು ಮುಕ್ಕುವೆನೆನೆ ಸಾಹಸಭೀಮಂ ಮಲ್ಲಂತಿಗೆಯನಪ್ಪೊಡಂ ಸಡಿಲಿಸದವನ ನವಯವದೊಳಿಂತೆಂದಂ (ಪಂಪಭಾ. ೩–೧೬ ವ). ೫. [ಕಾವ್ಯಮೀ] ಸಮುದಾಯ ವಸ್ತುವಿನ ಅಂಗ(ಶ)ಗಳನ್ನು ಚಮತ್ಕಾರವಾಗಿ ವರ್ಣಿಸುವುದರ ಮೂಲಕ ಒಟ್ಟಿಗೆ ಬೇರೊಂದು ಸುಂದರವಾದ ಅರ್ಥವು ಗಮ್ಯವಾಗುವಂತೆ ನಿರೂಪಿಸುವ ಅರ್ಥಾಲಂಕಾರ: ಸ್ಫುರಿತಾಧರಪಲ್ಲವೆ ಬಂಧುರಲೋಚನಕುಸುಮೆ ಲೋಲಭುಜಶಾಖೆಮನೋಹರೆ ಕಾಂತೆಯೆಂಬುದವಯವನಿರೂಪಣಕ್ರಮದಿನವಯವಂ ರೂಪಕದೊಳ್ (ಕವಿರಾ. ೩–೧೫); ಅವಯವಮುಖದಿಂ ಸಮುದಾಯ ವಿಶೇಷಣಮನ್ಯವಸ್ತುಗಮಕಮದಾದಂದವಯವಂ (ಕಾವ್ಯಾವ. ೭೫೯). ೬. [ನ್ಯಾಯಶಾ] ಒಂದು ಬಗೆಯ ತರ್ಕವಿಧಾನ: ನ್ಯಾಯದರ್ಶನದಲ್ಲಿ ಅವಯವ, ತರ್ಕನಿರ್ಣಯ... ಎಂಬ ಹದಿನಾರು ಪದಾರ್ಥಗಳನ್ನು ನಿರೂಪಿಸುವರು (ಹಿಂದಸಾ. ೧೧೨). [ಸಂ.]

**ಅವಯವಸಂಬಂಧ** (ನಾ). ಸಂಬಂಧಗಳಲ್ಲಿ ಒಂದು; ವಸ್ತುವಿನ ಒಂದು ಭಾಗವೆಂಬ ಹೊಂದಿಕೆ: ಸಂಬಂಧದೊಳೆ ಷಷ್ಠಿಯಕ್ಕುಂ ಅದು ಸ್ವಾಮಿಸಂಬಂಧ... ಅವಯವಸಂಬಂಧ ಎಂಬಿನಿತಱೊಳಮಕ್ಕುಂ (ಶಮದ. ೧೩೨ ವೃತ್ತಿ). [ಅವಯವ + ಸಂಬಂಧ]

**ಅವಯವಿ** (ನಾ). ಅವಯವಗಳನ್ನುಳ್ಳದ್ದು; ಹಲವಂಶಗಳನ್ನೊಳಕೊಂಡ ಪ್ರಧಾನ ವಸ್ತು. [ಸಂ. ಅವಯವಿನ್]

**ಅವಯೋಗ** (ನಾ). ಕೆಟ್ಟ ಸನ್ನಿವೇಶ; ಅಪಶಕುನ; ಕೇಡನ್ನು ಸೂಚಿಸುವ ಗಳಿಗೆ (ದಕ. ೬). [ಸಂ.]

**ಅವರ್** 'ಅದು$_1$' ಪರಾ.

**ಅವರ** (ಗು). ೧. ಹೀನವಾದ; ಕೆಳದರ್ಜೆಯ. ೨. ಆ ತರುವಾಯದ; ಕಡೆಯ. (ನಾ). ೩. ಆನೆಯ ಹಿಂಗಾಲಿನ ತೊಡೆ. [ಸಂ.]

**ಅವರಜ** (ನಾ). ತರುವಾಯ ಹುಟ್ಟಿದವನು; ತಮ್ಮ: "ಕನಿಷ್ಠಃ, ಅವರಜಃ, ಅನುಜಃ – ಈ ೩ ತಮ್ಮಂ" (ಹಲಾಯು. ೮೩–೨೫೨); ಕ್ಷಿತಿಯಂ ಕುಳಕುಧರಸ್ತನವತಿಯಂ... ತದವರಜನಾಳ್ದನಾ ಜಯಸಿಂಹಂ (ಎಕ. XI, ದಾವಣ. ೩೫–೧೩; 1100); ದೈವಮುಂ ಮುಂದಲೆವಿಡಿದು ತರುಬುವದಟರ್ಕೆ, ಅವರಜನೆ (ಶ್ರೀರಾಮಾ. ೮೨–೧೨೮). [ಸಂ.]

**ಅವರಜೆ** (ನಾ). ತರುವಾಯ ಹುಟ್ಟಿದವಳು; ತಂಗಿ: ಅವಧರಿಸಿಂ ನಿಮ್ಮಯ್ಯಂಗವರಜೆ ತತ್ಸೂರ್ಯಮಿತ್ರಸಹಧರ್ಮಿಣಿ (ಸುಕುಮಾ. ೨–೪೩). [ಸಂ. ಅವರಜಾ]

**ಅವರತಿ** (ನಾ). ೧. ಮುಗಿವು; ಕಡೆ. ೨. ವಿರಾಗ; ವೈರಾಗ್ಯ. [ಸಂ.]

**ಅವರವರ್ಣ** (ನಾ). ೧. ಕೆಳಜಾತಿ. ೨. ಕೆಳಜಾತಿಯವನು; ಶೂದ್ರ. [ಅವರ + ವರ್ಣ]

**ಅವರಸಚೌರಸ** (ಅ). (ಉಕ) ಅಡ್ಡವಾಗಿ ಮತ್ತು ಉದ್ದವಾಗಿ: ಗಿಡಗಳು ಯಾಸಿಯಾಗದಂತೆ ಅವರಸಚೌರಸ ಸಾಲು ಸಾಲು ಕಾಣುವಂತೆ ಗಿಡಗಳನ್ನು ದಾರಹಿಡಿದು ಹಚ್ಚಬೇಕು (ಕೃಷಿಪ್ರ. ೭೧). [← ಮರಾ. ಔರಸ್‌ಚೌರಸ್]

**ಅವರಾತ್ರಿ** (ನಾ). (ಉಕ) ಅಮೃತ ಅಮಾವಾಸ್ಯೆ; ಮಾಘಮಾಸದ ಅಮಾವಾಸ್ಯೆ: ಎಳ್ಳ ಅಮಾಸಿಗೆ ಎಳ್ಳಷ್ಟು, ಅವರೆಯಕಾಳಷ್ಟು ಬೆಳೆದಿತ್ತು. ಅವರಾತ್ರಿಗೆ ಬಿಸಲಲ್ಲ, ಬೇಯಿಸುವ ಬೆಂಕಿಯು! ಬೇಗೆಯು ಶಿವಶಿವ ಎನಿಸಿತ್ತು ಶಿವರಾತ್ರಿಗೆ (ಸಖೀಗೀ. ೧೯–೨೯೦). [ಸಂ. ಅಮಾರಾತ್ರಿ]

**ಅವರಿ, ಅವರ್ಿ$_2$** (ನಾ). ದೇವರಮಣಿ; ಅಪ್ಸರೆ: "ಮಕಾರಕ್ಕೆ ವಕಾರಂ– ಅಮರೀ – ಅವರಿ" (ಶಮದ. ೨೬೩ ಪ್ರಯೋ). **ಅವರ್ಿ$_2$**: "ಅಮರಿ – ಅವರಿ" (ಶಬ್ದಾನು. ೧೬೦ ಪ್ರಯೋ). [< ಸಂ. ಅಮರೀ]

**ಅವರಿಷ್ಠ** (ಗು). ೧. ಶ್ರೇಷ್ಠವಲ್ಲದ. ೨. ಸಣ್ಣದಾದ; ಅಲ್ಪವಾದ: "ಅವರಿಷ್ಠಮತಿಸೂಕ್ಷ್ಮಮಾಕ್ಷುದ್ರಮುಂ ದಭ್ರಮುಂ ವಪ್ರ ಕಿಂಚಿತ್ ತನುಸ್ತೋಕಮೆನೆ ಕಿಱಿದೆನಿಕ್ಕು" (ಮಂಗರಾ. ೧೨೬–೫). [ಸಂ.]

**ಅವರು** 'ಅದು$_1$' ಪರಾ.

**ಅವರುದ್ಧ** (ಗು). ತಡೆಗಟ್ಟಲ್ಪಟ್ಟ; ಆವೃತವಾದ: ಉಪವನಲತಾಕುಸುಮಪರಿಮಳಸಮೀರಣಾಂದೋಳಿತ ಪ್ರಾಸಾದಪತಾಕಾವರುದ್ಧಾಂಬರಮುಂ (ಆದಿಪು. ೩–೮ ವ). [ಸಂ.]

**ಅವರೂಪಿತ** (ಗು). ೧. ರೂಪುಗೆಟ್ಟ; ಆಕಾರಗೆಟ್ಟ; ವಿಕಾರವಾದ. ೨. ಬಾಗಿದ; ಕುಗ್ಗಿದ: "ಅವಕುಂಚಿತಂ ಮೇಣವರೂಪಿತಂ . . . ಹರಹುಗೆಟ್ಟುದೆನಿಸಿರ್ಕು" (ಮಂಗರಾ. ೧೩೩–೩೯). [ಸಂ.]

**ಅವರೆ**₁, ಅಮರೆ (ನಾ). ಒಂದು ಬಗೆಯ ದ್ವಿದಳ ಧಾನ್ಯ: "ನಿಷ್ಪಾವ ವಲ್ಲಸಂಜ್ಞಿಕವದವರೆ" (ವಸ್ತುಕೋ. ೯೪–೧೭); ಪಾರಕಿನ ಕೊಟುಮವರೆ ಯುಮೆಣ್ಣೆ [ಪಾಠಾಂ. ಮಾವರೆಯೆಣ್ಣೆ]ಯುಮಾಡಿನಳೆಯುಮಂ ಬಡ್ಡಿಸಿ ದೊಡೆ (ವಡ್ಡಾರಾ. ೬೮–೨೬); ಅವರೆಯುಮಂ ನೀಲಿಯ ಬೇರುವನರೆ ದಿರುಳೊಲೆಯೊಳಿಟ್ಟು ತಿಲತೈಲಮನಂತವಜಕೊಡನೆ ಕಲಸಿ ತಿನೆ ಕಿಡುಗುವ ಸಾಧ್ಯವೆನಿಸುಗುವಂಬುಕೀಟಿಯೊಳ್ ಕಿಡುಗುಂ (ಲೋಕೋಪ. ೯–೧೫೬); ಹಾಗಲ ಹಡಲಂ ಗುಳ್ಳಂ ಕೂಗಲಿ ಕೂಷ್ಮಾಂಡಮವರೆ ಬದನೆಗಳಿಂ ಲೇಸಾ ಗಿರೆ ಮಾಡಿದಸವಿಮೇಲೋಗರಮಂ ತಂದು ಬಡಿಸಿದರ್ ಕಾಂತೆಯರ್ (ಧರ್ಮಪ. ೨–೫೫); ಹಸಿಯವರೆಯಂತೆ ಕತ್ತರಿಸಿಹಾಕಲು ತಾನು ಕೆನೆ ಪಾಯಸಮಾದುದು (ಸೂಪಶಾ. ೩–೧೪). **ಅಮರೆ**: ಅವನು ಅಮರೆ ಕಾಯಿಯ ಉಸುಳಿಯನ್ನು ಮಿತಿಮೀರಿ ತಿಂದು ಹೊಟ್ಟೆ ಕೆಡಿಸಿಕೊಂಡನು (ರೂಢಿ).

**ಅವರೆಕಾಯಿ, ಅವರೆಯ ಕಾಯಿ** = ಅವರೆಯ ಗಿಡದ ಕಾಯಿ: ಅವರೆಕಾಯಿಗೆ ದುಡ್ಡು ಕೊಟ್ಟು ತಿನ್ನಬೇಕಾಗಿದೆಯಲ್ಲ (ರಂಗಕ. ೭); ಹಸಿದೆನೆಂದಾರೋಗಿಸುತ್ತಲವರೆಯ ಕಾಯ ಹಸನಾದುದೀ ಪದಾರ್ಥವ ನೀಡೆನುತ್ತ ನೀಡಿಸಿಕೊಂಡು ಸವಿದು ಸವಿದು (ಗುರುಚಾ. ೧೦–೯೧). **ಅವರೇ ಕಾಳು** = ಅವರೆಯ ಧಾನ್ಯದ ಬೀಜ: ನಮ್ಮ ರೈತನು . . . ಅವರೇ ಕಾಳನ್ನೂ ಯಾರ ಕೈಲೋ ಕೊಟ್ಟು ಹುಳೀ ಮಾಡಿ ಹೊಡೆದು (ಹುಟ್ಟಹ. ೧೩೪).

[ದೇ. ‖ ತಮಿ. ಅವರೈ; ಮಲ. ಅವರ, ಅಮರ; ತುಳು. ಅವರೆ, ಅಬರೆ]

**ಅವರೈ** 'ಅವರಿ' ನೋ.

**ಅವರೆತಿಪ್ಪೆ** (ನಾ). ಒಂದು ಪ್ರದೇಶದ ಹೆಸರು: ಅವರೆತಿಪ್ಪೆಯಲ್ಲಿ ಕೆಯಿಮತ್ತರ ಐದನುಮರುಂ (ಇಆ. IV, ೨೭೬–೮೬; 1184).

[ಅವರೆ ? + ತಿಪ್ಪೆ]

**ಅವರೆಹಾಳು** (ನಾ). ಅವರೆ ಬೆಳೆಯುವ ಹೊಲ: ಆ ತೋಟದ ಗದ್ದೆ ಅವರೆಹಾಳ ಸರ್ಬಾಬಾಧ ಪರಿಹಾರವಾಗಿ ವರ್ಶಕ್ಕೆ ಗದ್ಯಾಣ ೪ ತೆರು ವನ್ತಾಗಿ (ಎಕ. II, ೩೨೬–೫; 1200). [ಅವರೆ₁ + ಹಾಳು (< ಪಾೞ್)]

**ಅವರೋಧ** (ನಾ). ೧. ಅಡ್ಡಿ; ತಡೆ; ಪ್ರತಿಬಂಧ. 'ಅವರೋಧಿಸು' ಪರಾ. ೨. ಅಂತಃಪುರ; ರಾಣಿವಾಸ: ಮೆಯ್ಯನೀಡಾಡಿ ಬೆಳರ್ತು ದಟ್ಟುದಟಲಿಂದವರೋಧವಧೂಕದಂಬಕಂ (ಮಲ್ಲಿಪು. ೧೦–೩೦). [ಸಂ.]

**ಅವರೋಧಕ** (ಗು). ಅಡ್ಡಿಪಡಿಸುವ; ತಡೆಮಾಡುವ. [ಸಂ.]

**ಅವರೋಧಜನ** (ನಾ). ರಾಣಿವಾಸದ ಜನ: ಆಗಳ್ ಮಂತ್ರಿ ಪುರೋಹಿತ ಸೇನಾನಾಯಕಾಂತಃಪುರಾವರೋಧಜನಂಗಳ್ . . . ಅರಸಂಗ ಮರಸಿಯರ್ಗಂ ಸತ್ಯಭಾಮೆಗಂ ಶರೀರಪೂಜೆಯಂ ಮಾಡಿ (ಶಾಂತಿಪು. ೬–೯೭ ವ). [ಅವರೋಧ + ಜನ]

**ಅವರೋಧನ** (ನಾ). = ಅವರೋಧ. [ಸಂ.]

**ಅವರೋಧಿಸು** (ಕ್ರಿ). ತಡೆ; ನಿಗ್ರಹಿಸು: ಚಿತ್ತವೃತ್ತಿಗಳನ್ನು ಸರ್ವತೋ ಮುಖವಾಗಿ ಅವರೋಧಿಸಿ ಚಿತ್ತವನ್ನು ಏಕಾಗ್ರಗೊಳಿಸುವುದು (ಬ್ರಹ್ಮಜೀ. ೨೭೨). [ಅವರೋಧನ + -ಇಸು₃]

**ಅವರೋಹ** (ನಾ). ೧. ಇಳಿಯುವುದು. ೨. ಗಿಡದ ಕೊಂಬೆಯಲ್ಲಿ ಹುಟ್ಟಿ ಕೆಳಕ್ಕೆ ಇಳಿಯುವ ಬೇರು; ಬಿಳಲು. ೩. ಮರದ ಬುಡದಿಂದ ತುದಿಯವರೆಗೂ ಹಬ್ಬಿರುವ ಬಳ್ಳಿ: "ಅವರೋಹಂ ಲತೋದ್ಗಮಂ ಬಲಿದ ಮಡಲುಗಳಕ್ಕು" (ಮಂಗರಾ. ೩೨–೪). ೪. [ಸಂಗೀತ] "ಇಳುವರಿ ಕ್ರಮದಲ್ಲಿ ಸ್ವರಗಳು ಮೇಳೈಸುವುದು ಅವರೋಹ" (ಸಂಗೀಚಂ. ೨೨). [ಸಂ.]

**ಅವರೋಹಣ** (ನಾ). ೧. ಇಳಿಯುವುದು: ಶೀಘ್ರದೊಳು ಶೈತ್ಯೋಪಚರ ಕರಿಯಗ್ರಗೈದಾಲಯಕೆ ನಡೆಸತಿವೇಗ್ರದವರೋಹಣದಿ ಮಲಗಿಸಿ ತುಪ್ಪಳಾ ಸನದಿ ಉಗ್ರಮರವೆಯ ತೊಲಗಿಸಲು ನೃಪವಿಗ್ರಹವನಲುಗಿ (ಬಜ್ಜಪು. ೩೦–೧೪). ೨. [ಸಂಗೀತ] ಸಪ್ತಸ್ವರಗಳನ್ನು ಇಳಿಕೆಯ ಕ್ರಮದಲ್ಲಿ ಹಾಡುವುದು: 'ಸನಿದಪಮಗರಿಸ' ಈ ಸ್ವರಗಳ ಮೆಟ್ಟಲನ್ನು ಕ್ರಮವಾಗಿ ಏರುವುದಕ್ಕೆ 'ಆರೋಹಣ'ವೆಂದೂ ಇಳಿಯುವಿಕೆಗೆ 'ಅವರೋಹಣ' ವೆಂದೂ ಹೆಸರು (ಬಾಲಪ್ರ. II, ೧೧೩೯); ಅವರೋಹಣ – ಹೆಚ್ಚುಸ್ಥಾನದ ಸ್ವರದಿಂದ ಪ್ರಾರಂಭವಾಗಿ ಇಳುವರಿಕ್ರಮದಲ್ಲಿ ಸ್ವರಗಳು ಅನುಕ್ರಮಿಸಿ ತಗ್ಗುಸ್ಥಾನದ ಅಥವಾ ಸ್ಥಾಯಿಯ ಸ್ವರ ಸೇರುವುದು (ಸಂಗೀಚಂ. ೨೮).

**ಅವರೋಹಣಮಾಡು** = ಇಳಿದುಬರು: ನಿನ್ನ ದೈನ್ಯವಾದ ಪ್ರಾರ್ಥನೆ ಯನ್ನು ಲಾಲಿಸಿ ಆಕೆಯು ಭೂಲೋಕಕ್ಕೆ ಅವರೋಹಣಮಾಡುವಳು (ಹಂಕಿರು. ೯೭). 'ಆರೋಹಣ' ಪರಾ. [ಸಂ.]

**ಅವರೋಹಿ** (ಗು). ೧. ಇಳಿಯುವಂಥ. (ನಾ). ೨. [ಜ್ಯೋತಿ] ಇಳಿತದ ಕಾಲ: ದಿನನಾಥಾದಿಗಳುಚ್ಚದಿಂದಿೞಿಯೆ ನೀಚಾಂತಾಪಿನಂ ಕಷ್ಟಮಕ್ಕನಿತುಂ ತಾನವರೋಹಿ ತದ್ದಶೆ (ಜಾತತಿ. ೯–೬).

[ಸಂ. ಅವರೋಹಿನ್]

**ಅವರೋಹಿಣಿ** (ನಾ). = ಅವರೋಹಿ ೨: ಪಾಪರತಂ ಸ್ವಭೃತ್ಯಕಲಹಂ ಸರುಜಂ ಹೃದ್ರೋಗಿ ದಿನಪನವರೋಹಿಣಿಯೊಳ್ (ಜಾತತಿ. ೯–೧೮).

[ಸಂ. ಅವರೋಹಿಣೀ]

**ಅವರ್ಗ** (ಗು). ೧. ವರ್ಗಕ್ಕೆ ಸೇರದ; ಒಂದು ಕ್ರಮವಾದ ಗುಂಪಿ ನಲ್ಲಿರದ. (ನಾ). ೨. = ಅವರ್ಗೀಯ ವ್ಯಂಜನ: ಆ ವರ್ಗಾಕ್ಷರಂ ಗಳೆರ್ಪತ್ತೈದಱ ಕಡೆಯಕ್ಕರಂಗಳವರ್ಗಂಗಳ್: ಯ್ ರ್ ಲ್ ವ್ ಶ್ ಷ್ ಸ್ ಹ್ ಳ್ – ಎಂಬಿವು (ಶಮದ. ೧೩ ವೃತ್ತಿ). ೩. [ಗಣಿತ] ವರ್ಗವಲ್ಲದ್ದು. [ಸಂ.]

**ಅವರ್ಗಳ್** 'ಅದು₁' ಪರಾ.

**ಅವರ್ಗೀಯ** (ಗು). = ಅವರ್ಗ ೧. 'ಅವರ್ಗೀಯ ವ್ಯಂಜನ' ಪರಾ. [ಸಂ.]

**ಅವರ್ಗೀಯವ್ಯಂಜನ** (ನಾ). [ವ್ಯಾಕ] ಯಕಾರದಿಂದ ಳಕಾರದ ವರೆಗೆ ಇರುವ ಒಂಬತ್ತು ಅಕ್ಷರಗಳು: "ಯಕಾರದಿಂದ ಳಕಾರದ ವರೆಗೆ ಇರುವ ಒಂಬತ್ತು ವ್ಯಂಜನಗಳನ್ನು ವರ್ಗಗಳಾಗಿ ವಿಂಗಡಿಸುವುದಿಲ್ಲ. ಇವಕ್ಕೆ ಅವರ್ಗೀಯವ್ಯಂಜನಗಳೆಂದು ಹೆಸರು" (ಮಧ್ಯಮ. ೧೫).

[ಅವರ್ಗೀಯ + ವ್ಯಂಜನ]

**ಅವರ್ಜ** (ಗು). = ಅವರ್ಜ್ಯ. [ಸಂ. ಅವರ್ಜ್ಯ]

**ಅವರ್ಜ್ಯ** (ಗು). ಬಿಡಬಾರದ; ಬಿಡಲಾಗದ; ತೊರೆಯಲು ಶಕ್ಯ ವಿಲ್ಲದ. [ಸಂ.]

**ಅವರ್ಣ** (ಗು). ೧. ಬಣ್ಣವಿಲ್ಲದ. (ನಾ). ೨. ಅಕಾರ ಮತ್ತು ಆಕಾರ: ವರ್ಣಸಂಜ್ಞೆ ಎಂತೆಂದೊಡೆ ಅವರ್ಣಂ ಇವರ್ಣಂ ಉವರ್ಣಂ ಎಂಬಂತೆ (ಶಮದ. ೧೦ ಅಡಿಟ). ೩. ಅಪವಾದ; ನಿಂದೆ; ಅಪಕೀರ್ತಿ. [ಸಂ.]

**ಅವರ್ಣವಾದ** (ನಾ). ೧. ಅ ಆ ಎಂಬ ಅಕ್ಷರಗಳಿಗೆ ಸಂಬಂಧಿಸಿದ ಚರ್ಚೆ. ೨. ನಿಂದೆ; ದೂಷಣೆ: "ಅವರ್ಣವಾದಃ – ಪಳಿನುಡಿ" (ತತ್ತ್ವಪ್ರ. ೨೬೧). ೧, ೨: ಅವರ್ಣವಾದಕ್ಕೆಡೆಯಾಗದೊಳ್ಪಿಂದವರ್ಣಕಾಮರ್ ಗುಣವೃದ್ಧಿಧಾಮರ್ ದಿವಾಕರರ್ ವ್ಯಾಕೃತಿನಾಮಿಗಳ್ವೋಲ್ ದಿವಕ್ಕೆ ಪನ್ನಿರ್ವರೆ ಮುಖ್ಯರಾದರ್ (ಕಾವ್ಯಾವ. ೧೩). [ಅವರ್ಣ + ವಾದ]

**ಅವರ್ಣ್ಯ** (ಗು). ೧. ವರ್ಣಿಸಲಾಗದ. ೨. ವರ್ಣ್ಯವಲ್ಲದ : ಕಾಲ ದೇಶಾತೀತಮಂ ಅನುಭವಾವರ್ಣ್ಯಮಂ ಕೇಳ್ದಲೋ (ಶ್ರೀರಾಮಾ. ೩೩೧-೧೬). [ಸಂ.]

**ಅವರ್ತಿ** (ನಾ). ಬಡತನ; ಕಷ್ಟ: ಅವರ್ತಿ ಹೆಚ್ಚಿದಹಾಗೆ ಒಳಹೊರಗೆ ದಾಸರೂಪವೇ ಸ್ಥಿರವಾಗುತ್ತಿದೆ (ಕಳವಿ. ೨೬೨). [ಸಂ.]

**ಅವರ್ಷಣ** (ನಾ). ಅನಾವೃಷ್ಟಿಯ ಕಾಲ; ಬರಗಾಲ. [ಸಂ.]

**ಅವಲ್**₁ (ಕ್ರಿ). ಕುಟ್ಟು; ಒನಕೆಯಿಂದ ಇಡಿ : "ಅವಲ್ – ಮುಸಲ ಕ್ರಿಯಾಯಾಂ (ಕುಟ್ಟು), ಚಿಪಿಟಕೇ ಚ (ಅವಲಕ್ಕಿ)" (ಶಮುಧಾ); ನೆಲ್ಲೊರಳೊಳಿಟ್ಟವಲ್ದುಂ (ರಾಮಾಶ್ವ. ೮೦-೧೪).

[ದೇ. ॥ ತಮಿ. ಅವ್ವೈ; ಮಲ. ಅವೆಕ್ಕ; ತುಳು. ಅಬೆ]

**ಅವಲ್**₂, ಅವಲು₁ (ನಾ). ೧. ಕುಟ್ಟುವಿಕೆ; ಒರಳಲ್ಲಿ ಹಾಕಿ ಇಡಿಯುವುದು (ಕಿ). ೨. ಅವಲಕ್ಕಿ: "ಅವಲ್–ಮುಸಲಕ್ರಿಯಾಯಾಂ (ಕುಟ್ಟು), ಚಿಪಿಟಕೇ ಚ (ಅವಲಕ್ಕಿ)" (ಶಮುಧಾ); ಗಾಳಿಯಂ ಮೆಲ್ವನ ಬಾಯ್ಗವಲಂ ಪೊಯ್ದರೆಂಬಂತೆ (ಧರ್ಮಾಮೃ. ೨-೧೪೮); ಚಿಗುಳಿ ಚಕ್ಕುಲಿ . . . ಲಡ್ಡುಗೆ ಕಳವೆಯವಲಾದಿಯಾದ ಪಲವು ಫಲಂಗಳನು (ಬಸವು. ೧೪-೧೫); ಚಕ್ಕುಲಿಯಂ ಗಾರಿಗೆಯಂ ಪುರಿಗಡಲೆಯನವಲಂ ಕರ್ಬಂ ತೇಂಗಾಯಂ ನಿನಗಂ ಪಾಲಿತ್ತು ಮೊದಲೊಳರ್ಪಿಸುವೆಂ (ರಾಮಾಶ್ವ. ೮೮-೨೨). **ಅವಲು**₁ **:** ೨. ಹಬ್ಬಕೆ ಕಾಯಿ ಅವಲು ಅಸಾದಿಯ ಹಬ್ಬಕೆ (ಸೌಇಎ. ೧೯೩೨, ಉಡುಪಿ. ೨೮೨-೧೫; 1432). ೩. ಭತ್ತ, ಜೋಳ ಮುಂತಾದುವನ್ನು ಹುರಿದರೆ ಒದಗುವ ಪುರಿ; ಲಾಜ: ಬಣಬೆಗೆ ಕಿಚ್ಚನಿಕ್ಕಿ ಅವಲನಾದುಕೊಂಡು (ಎಕ. XII, ಗುಬ್ಬಿ. ೬೩-೫೭; 1672).

**ಅವಲಾಗು** = ಅರಿ ಅವಲಿನಂತೆ ಒಣಗು; ತಣ್ಣಗಾಗು: ಅನ್ನವೆಲ್ಲ ಆರಿ ಅವಲಾಗಿ ಹೋಯಿತು, ಇನ್ನು ಎಷ್ಟುಹೊತ್ತಿಗೆ ನೀವು ಊಟಕ್ಕೆ ಏಳುವುದು (ರೂಢಿ).

[ದೇ. ॥ ತಮಿ. ಅವಲ್ = ಅವಲಕ್ಕಿ; ಮಲ. ಅವಿಲ್]

**ಅವಲ್**₃ 'ಅವ್ವಲ್' ನೋ.

**ಅವಲ್‌ಮೋಸುಂ** (ನಾ). ಶೀಘ್ರ; ತ್ವರಿತ: ದೊರೆಗಳಿಗೆ ಬೇಕಾದ ಕುದುರೆ ಸಹ ಅವಲ್‌ಮೋಸುಮ್ಮಿನಲ್ಲಿ ಮುಂಬಾಯಿನಿಂದ ತರಿಸಿ ಕಳುಹಿಸ ಬಹುದು (ರಾಜೇಂದ್ರ. ೩೦); ಈಗ ನಾವು ಮುಂಬಾಯಿಗೆ ಹೋಗಿ ಪುನಹ ಅವಲ್‌ಮೋಸುಂಮಿನಲ್ಲಿ ಕೆಂಣೂರಿಗೆ ಬರುತ್ತೇವೆ (ರಾಜೇಂದ್ರ. ೩೦); ಆ ಬಳಿಕ ಅವಲ್‌ಮೋಸುಂಮಿಗೆ ಪುನಶ್ಚ ಮುಂಬಾಯಿಂದ ಈ ಕಡೆಗೆ ಬರುತ್ತೇವೆ (ರಾಜೇಂದ್ರ. ೩೯).

[ಅವಲ್ + ಮೋಸುಂ. P ← ಅರ. ಹಿಂ. ಮರಾ.]

**ಅವಲಂಬ** (ನಾ). ೧. ಆಸರೆ; ಆಶ್ರಯ; ಊರೆ; ಆಧಾರ. ೨. ನೆಲಹು; ನೆಲವು: "ಕಾಚಂ ಶಿಕ್ಯಮುವಲಂಬಮೆನೆ ನೆಲಹು" (ಮಂಗರಾ. ೬೩-೨೬). [ಸಂ.]

**ಅವಲಂಬನ** (ನಾ). = ಅವಲಂಬ ೧ : ಅಮಿತಗುಣಾವಲಂಬನನಂಬುಜೋದ್ಭವಮುಖ್ಯ ಸುರವಂದ್ಯ (ನಿಭಾಗ. ೧-೧-೧); ಶ್ರುತಿ ಸರ್ವರಿಗೂ ಪ್ರಧಾನವಾದ ಅವಲಂಬನ (ಶಕ್ತಿವಿ. ೨೩). [ಸಂ.]

**ಅವಲಂಬನೆ** (ನಾ). = ಅವಲಂಬ ೧. [ಸಂ. ಅವಲಂಬನ]

**ಅವಲಂಬಿ** (ಗು). ೧. ಆಶ್ರಯಿಸಿರುವ; ಆಧಾರವಾಗಿ ಉಳ್ಳ: ಸಲೆಯೆಂಬುದು ನಿತ್ಯಾರ್ಥಾವಲಂಬಿ (ಶಮುದ. ೩೧೩). ೨. ನೇತಾಡುತ್ತಿರುವ; ಜೋಲಾಡುತ್ತಿರುವ.

[ಸಂ. ಅವಲಂಬಿನ್]

**ಅವಲಂಬಿತ** (ಗು). ಆಶ್ರಯಿಸಿದ; ಆಸರೆಯಾಗಿ ಉಳ್ಳ. [ಸಂ.]

**ಅವಲಂಬಿಬಿಂಬ** (ಗು). ಇಳಿಯಬೀಳುತ್ತಿರುವ ಬಿಂಬವುಳ್ಳ: ಗಗನದ ಪಡುವಣ ಭಾಗದೊಳವಲಂಬಿಬಿಂಬನಾದಂ ದಿನಪಂ (ಶಾಂತಿಪು. ೮-೫೯). [ಅವಲಂಬಿ + ಬಿಂಬ]

**ಅವಲಂಬಿಸು**, ಅವಳಂಬಿಸು (ಕ್ರಿ). ೧. ಆಸರೆಗೊಳ್ಳು; ಆಶ್ರಯಿಸು: ಧೈರ್ಯಮನೆ ಮನದೊಳವಲಂಬಿಸಿ ಸಮಾಧಿವಡೆದು (ಆದಿಪು. ೫-೧೩ ವ); ಸಾಮಾಯಿಕ ವ್ರತಸಮಿತಿಗುಪ್ತಿಸಮನ್ವಿತವನವಲಂಬಿಸಿ ನಿಲ್ವುದುಂ (ಅಜಿಪು. ೬-೧೨೬ ವ); ಸಿತಾತಪತ್ರದಂಡಮನವಲಂಬಿಸಿರ್ಪಡಪದಾಕೆಯ ಮುಯ್ಪಿನ ಮೇಲೆ ಹಸ್ತಯುಗ್ಮಮನೊಸೆದಿಕ್ಕುತಿರ್ಪ ಮದಲೇಖೆಯಂ (ಕಾದಂಉ. ೯೮); ಕುಶನೆ ಕೇಳಂಬರವನನವಲಂಬಿಸಿದುದಸುರವರೂಥ (ತೊರರಾ. ೩-೧೦-೧). ೨. (ಕಾವ್ಯದ) ವಸ್ತುವಾಗಿ ಅಥವಾ ವಿಷಯವಾಗಿ ಮಾಡಿಕೊ: ಕಂಬುಕಂಧರೆ ಪರಮಾತ್ಮ ಕಲೆಯನವಲಂಬಿಸಿ ಹಾಡಿದ ಳೊಲಿದು (ಭರಚ. ೧೧-೨೩). ೩. ಇಳಿಯ ಬೀಳು; ತೊಂಗು: ಇನಿಸು ಪಡುವಣ ದೆಸೆಗವಲಂಬಿಸಲೊಡರ್ಚಿದತ್ತಿನಬಿಂಬಂ (ಕಾದಂಉ. ೪೫೭). ೪. ಅನುಸರಿಸು: ಆಕಳಿನ ಹಾಲಿನಲ್ಲಿ ಜೀವಾತುಗಳ ಅಂಶ ಆಕಳಿಗೆ ಕೊಡುವ ಆಹಾರವಸ್ತುಗಳನ್ನು ಅವಲಂಬಿಸಿದೆ ಎಂಬುದನ್ನು ಮರೆಯ ಬಾರದು (ಆಡುಸಾ. ೮೧); ಕ್ಷುದ್ರವೃತ್ತಿಯನ್ನೂ ಅವಲಂಬಿಸಬಾರದು (ಆರ್ಯಧ. ೪೭). **ಅವಳಂಬಿಸು :** ೧. ಆ ಭೀಮಾಟವೀಸರಸ್ತೀರದೊಳ್ . . . ಧೈರ್ಯಮನೆ ಮನದೊಳವಳಂಬಿಸಿ (ಶಾಂತಿಪು. ೪-೯೭ ವ); ಅವಿನಯರೊಳ್ ಮಾಧ್ಯಸ್ಥಮುಮನವಳಂಬಿಸುತ್ತುಂ (ಅಜಿಪು. ೭-೮ ವ). [ಅವಲಂಬನ + –ಇಸು₁]

**ಅವಲಕ್ಕಿ** (ನಾ). ಭತ್ತವನ್ನು ಕುದಿಯುವ ನೀರಿನಲ್ಲಿ ಹಾಕಿ ಸ್ವಲ್ಪ ಮಾತ್ರ ಬೇಯಿಸಿ, ಸೋರುಹಾಕಿ, ಸ್ವಲ್ಪ ಆರಿಸಿ, ಹುರಿದು, ಕೂಡಲೇ ಒರಳಲ್ಲಿ ಕುಟ್ಟುವುದರಿಂದ ಒದಗುವ ಚಪ್ಪಟೆಯಾದ ಅಕ್ಕಿ: "ಪೃಥುಕಃ, ಚಿಪಿಟಃ — ಈ ೨ ಅವಲಕ್ಕಿ" (ಹಲಾಯು. ೬೯-೪೩೦); ವರ್ಷಂಪ್ರತಿ ಅವಲಕ್ಕಿಗೆ ಖಂಡುಗ ಭತ್ತವ ಕೊಟ್ಟರ್ (ಎಕ. VIII, ಸೊರಬ. ೨೯೯-೪; 1074); ಒಪ್ಪಿಡಿ ಅವಲಕ್ಕಿಯಾ ಕೃಷ್ಣಯ್ಯ ನಿನಗೊಪ್ಪಿಸಿದವನಿಗೊಲಿದೆ (ಪುರಂದ. ೧-೯೨-೬); ಸಂಡಿಗೆ ಸಂಭಾರಗಡಲೆ ಪ್ರಾಸಕ ಕುಕ್ಕುಟಾಂಡವನವಲಕ್ಕಿಗಳನು ದುಂಡರಳ್ಗಡಲೆ ಭಕ್ಷ್ಯಗಳ ಬಡ್ಡಿಸಿಕೊಳುತುಂಡರು ನೆಚಿಕೆ ಸೊಕ್ಕುವನಕ (ಮೋಹತ. ೧೪-೮೭); ಮೂರು ಮುಷ್ಟಿಯವಲಕ್ಕಿಯಂ ಸೃಷ್ಟಿಮಾಡಿದಳು (ಕುಚೇಲೋ. ೪೧); ಕೆನೆಮೊಸರು ಅವಲಕ್ಕೀ ತಿಂದನು (ಮುಂಬಯಿ. ೨-೩೯).

[ಅವಲ್₂ + ಅಕ್ಕಿ₁. / ಕೊಡ. ಅವ್ಲ್‌ಅಕ್ಕಿ; ತೆಲು. ಅಟುಕುಲು]

**ಅವಲಕ್ಕಿಕುಟ್ಟು** (ಕ್ರಿ). ೧. ಅವಲಕ್ಕಿಯನ್ನು ಕುಟ್ಟು. ೨. (ಆಲಂ) ಎದೆ ಡವ ಡವ ಎಂದು ಹೊಡೆದುಕೊ; ಹೆದರು; ಭಯಪಡು: ವೆಂಕಮ್ಮನೂ ಹೆದರಿಕೊಂಡಿದ್ದರು. ಸೊಸೆಯ ಮುಂದೆ ಗಂಭೀರವಾಗಿದ್ದರೂ ಅವರ ಎದೆಯಲ್ಲಿ ಆಗಲೇ ಅವಲಕ್ಕಿಕುಟ್ಟುವುದಕ್ಕೆ ಆರಂಭಿಸಿತ್ತು (ಪದ್ಮಸ. ೧೧). [ಅವಲಕ್ಕಿ + ಕುಟ್ಟು₁]

**ಅವಲಕ್ಕಿಸರ** (ನಾ). ಅವಲಕ್ಕಿಯ ಆಕಾರಕ್ಕೆ ಬಿಲ್ಲೆಗಳನ್ನು ಮಾಡಿ ಜೋಡಿಸಿದ ಸರ: ಆಕೆಯ ಕೊರಳಲ್ಲಿ ಅವಲಕ್ಕಿಸರವಿತ್ತು (ರೂಢಿ).

[ಅವಲಕ್ಕಿ + ಸರ₂]

**ಅವಲಕ್ಷಣ** (ಗು). ೧. ಒಳ್ಳೆಯ ರೂಪವಿಲ್ಲದ. (ನಾ). ೨. ಅಶುಭ; ಅಮಂಗಳ: ಈ ಕ್ಷಿತಿಯೊಳಧವೋಕ್ತಿಯಿಂದವಲಕ್ಷಣದೊಳಾಚರಿಸುತಿರ್ದೊಡೆ ಈಕ್ಷಿಸಲು ಭಕ್ತಿಯು ಕೆಡುವುದು (ಬಸವು. ೩೦-೫೩); ಅವಲಕ್ಷಣ ! ತನ್ನಇಷ್ಟಕ್ಕೆ ಪ್ರತಿಯಾಗಿ ವಾದಿಸಿದವರ ಮೇಲೆಲ್ಲಾ ಹುಲಿಯ ಹಾಗೆ ಬಿದ್ದು ಆಕೆಯೇ ಗೆದ್ದಳು (ಯೋಧವು. ೩೦); ಅಂಗೈತೋರಿಸಿ ಅವಲಕ್ಷಣ ಅನ್ನಿಸಿಕೊಂಡ ಹಾಗೆ (ಗಾದೆ). ೩. ಕುರೂಪಿ. [ಸಂ.]

**ಅವಲಕ್ಷ್ಮಿ** (ನಾ). ಅಶುಭವನ್ನು ತರುವ ದೇವತೆ; ಅಮಂಗಳದ ದೇವತೆ: ಎಲೈ ಅರಸೇ ಈವರೆಗೂ ನಿನ್ನ ಅರಮನೆಯಲ್ಲಿ ನಾವು ಏಳು ಮಂದಿ ಲಕ್ಷ್ಮಿಯರೂ ಸ್ಥಿರವಾಗಿ ಇದ್ದೆವು, ಇನ್ನು ಇರುವುದಿಲ್ಲ, ಅದೇತಕ್ಕೆಂದರೆ ನಿನ್ನ ಅರಮನೆಗೆ ಅವಲಕ್ಷ್ಮಿಯು ಸೇರಿದಳು (ಬತ್ತೀಸ. ೧೩೩). [ಸಂ. ಅವಲಕ್ಷ್ಮೀ]

**ಅವಲಗ್ನ** (ಗು). ೧. ಸೇರಿದ; ಸೇರಿಕೊಂಡ; ಕೀಲಿಸಿದ; ಜೋಡಿಸಿದ. (ನಾ). ೨. ಸೊಂಟ; ನಡು: “ಅವಲಗ್ನಂ, (ವಿ)ಲಗ್ನಂ, ಮಧ್ಯಂ, ಮಧ್ಯಮಂ – ಈ ೪ ನಡು” (ಹಲಾಯು. ೮೫-೩೬೩). ೩. ಅಶುಭಮುಹೂರ್ತ. [ಸಂ.]

**ಅವಲರಗು** (ನಾ). ೧. ಕಾಗದಗಳನ್ನು ಮೊಹರು ಮಾಡುವ ಅವಲಕ್ಕಿ ಆಕಾರದ ಅರಗು (ಕ). ೨. ಅರಗಿನ ಪುಡಿ (ಕ). [ಅವಲು$_1$ (< ಅವಲ್$_2$) + ಅರಗು$_3$. / ತಮಿ. ಅವಲರಕ್ಕು]

**ಅವಲಿಪ್ತ** (ಗು). ೧. ಲೇಪಿಸಿದ; ಬಳಿದ: ಅರುಣಜಲಾವಲಿಪ್ತ ಪೊಸಕುಂಕುಮದಂತಿರೆ ಕರ್ಣಲಗ್ನತೋಮರಮವತಂಸದಂತಿರೆ (ಗದಾಯು. ೪-೨೨).(ನಾ).೨. ಗರ್ವಿಷ್ಠ; ಮದಿಸಿದವನು; ಅಹಂಕಾರಿ. [ಸಂ.]

**ಅವಲಿಪ್ತತೆ** (ನಾ). ೧. ಲೇಪ ಹೊಂದಿರುವುದು; ಬಳಿಯಲ್ಪಟ್ಟಿರುವುದು; ಬಳಿದಿರುವುದು. ೨. ಗರ್ವಿಷ್ಠನಾಗಿರುವುದು; ಅಹಂಕಾರ; ಗರ್ವ. [ಸಂ. ಅವಲಿಪ್ತತಾ]

**ಅವಲೀಢ** (ಗು). ೧. ನೆಕ್ಕಲ್ಪಟ್ಟ. ೨. ವ್ಯಾಪಿಸಲ್ಪಟ್ಟ: ಅಸಂಯುತಹಸ್ತಸಮುದಯದಂತೆ ಆತ್ತ ಕಪಿತ್ಥಮುಂ ತಾಮ್ರಚೂಡಾವಲೀಢಮುಂ (ಚಂದ್ರಪು. ೫-೫೨ ವ). [ಸಂ.]

**ಅವಲೀಢೆ** (ನಾ). ತಿರಸ್ಕಾರ; ಅವಹೇಳನ; ಕಡೆಗಣಿಸುವುದು; ಅಲಕ್ಷ್ಯಮಾಡುವುದು: “ಹೇಳಾ, ಅವಹೇಳಾ, ಲೀಢಾ, ಅವಜ್ಞಾ, ಅವಲೀಢಾ – ಈ ೫ ಲೀಲೆ” (ಹಲಾಯು. ೧೧೮-೩೦). ℙ “ಅವಜ್ಞೆ ಎಂದಿರಬೇಕು” (ಹಲಾಯು. ಅಡಿಟಿ). [ಸಂ. ಅವಲೀಢಾ]

**ಅವಲೀನ**(ಗು). ೧. ಕರಗಿಹೋದ. ೨. ಮರೆಯಾದ. ೩. ಬಾಗಿದ; ಕುಗ್ಗಿದ: “ಅವಕುಂಚಿತಂ ಮೇಣವರೂಪಿತಮುದವಲೀನಂ . . . ಹರಹುಗೆಟ್ಟುದೆನಿಸಿರ್ಕು” (ಮಂಗರಾ. ೧೩೩-೨೯). [ಸಂ.]

**ಅವಲು$_1$** ‘ಅವಲ್$_2$’ ನೋ.

**ಅವಲು$_2$** ‘ಅವ್ವಲ್’ ನೋ.

**ಅವಲುಪ್ತ** (ಗು). ೧. ಲೋಪಗೊಳಿಸಿದ; ಹೋಗಲಾಡಿಸಿದ: ಅವಲುಪ್ತ ಸಪ್ತಸಪ್ತಿದೀಪ್ತಿಪ್ರತಾಪವಿಧಾನ ನಿರತಂ (ಶಾಂತಿಪು. ೧-೭೧ ವ). (ನಾ). ೨. ಹಾವಿನ ಕಡಿತದಲ್ಲಿ ಒಂದು ರೀತಿ; ಗಾಯವಾಗದಂತೆ ಅಥವಾ ಗಾಯ ಕಾಣದಂತೆ ಕಚ್ಚುವುದು: ಆ ಸರ್ಪದಂಶ ಅವಲುಪ್ತವೆಂದು . . . ಖಂಡಿತವೆಂದು, ನಾಲ್ಕು ತೆರ. ಎಲ್ಲಿಯೂ ಗಾಯವಿಲ್ಲದೆ ಸುಮ್ಮನೆ ಕಚ್ಚುವುದು ಅವಲುಪ್ತವೆನಿಸಿಕೊಂಬುದು (ವೈದ್ಯಸಾ. II, ೧೮೫). [ಸಂ.]

**ಅವಲುಪ್ತಫಲ** (ಗು). ಫಲವನ್ನು ಕಳೆದುಕೊಂಡ: ಋಷ್ಯಮೂಕನಿವಾಸಿಯಪ್ಪ ಸುಗ್ರೀವನಿಂದವಲುಪ್ತಫಲಮಾದ ಲತಾವಿತಾನದಿಂ (ಕಾದಂಪೂ. ೧೧೭). [ಅವಲುಪ್ತ + ಫಲ]

**ಅವಲುಭೂಮಿ** (ನಾ). ಒಳ್ಳೆಯ ನೆಲ; ಶ್ರೇಷ್ಠವಾದ ಭೂಮಿ: ಉತ್ತಮಪ್ರತಿಯ ಅವಲುಭೂಮಿಯಾದರೆ (ಕೃಷಿಪ್ರ. ೭೭). [ಅವಲು$_2$ (< ಅವ್ವಲ್) + ಭೂಮಿ]

**ಅವಲುಮೀನು** (ನಾ). ಒಂದು ಜಾತಿಯ ಮೀನು: ಅವಲುಮೀನಿನ ಮರಿಗಳೆಂಬುದೇನೋ ಅವನಿಗೆ ತಕ್ಷಣವೇ ಗೊತ್ತಾಯಿತು (ಕಾನೂರು. ೨೩). [ಅವಲು ? + ಮೀನು]

**ಅವಲೆ** (ನಾ). ನೋವು; ರೋಗ (?): ಅಸ್ವತಂತ್ರನಾದವನ ನಿಂದಿತನಾದವನದೆತ್ತಲಾಂ ಅವಲೆವುಳ್ಳವನ ಕೃತಘ್ನನನಾಯತನನುತ್ತನಾಶಠವೃತ್ತಿಯಲ್ಲಿರುವವನಾ . . . ಶ್ರಾದ್ಧಕ್ಕೆ ಹೇಳಬಾರದು (ಶೀಷಧ. ೧೬-೨೦). [?. / ತಮಿ. ಅವಲವ್, ಅವಲೈ (< ಸಂ. ಅಬಲ)]

**ಅವಲೇಪ** (ನಾ). ೧. ಲೇಪನ; ಬಳಿಯುವಿಕೆ. ೨. ದರ್ಪ: ಕಾಶ್ಯಪಗೋತ್ರಮಂಡನನುಮೆನಿಸಿ ನಿಜಭುಜಬಲಾವಲೇಪ ಪ್ರತಾಪಾಟೋಪನಿರ್ಜಿತಾನೇಕಶತ್ರು ಜಿತಶತ್ರುವೆಂಬರಸಂ (ಅಜಿಪು. ೨-೨೩ ವ); ಕುಲಮುಂ ಚಲಮುಂ ವಿದ್ಯಾಬಲಮುಂ ಶೌರ್ಯಾವಲೇಪಮುಂ ಪೊಗಟೆ ನೆಲಂ (ಶಮುದ. ೧೧೮ ಪ್ರಯೋ). ೩. ಮದ; ಸೊಕ್ಕು. ೪. ಅಪವಾದ; ಆರೋಪ: ಅರಸನಿಗೆ ಸಂದ ಅವಲೇಪದಲ್ಲಿ ರಾಣಿಯಾದ ತನಗೆ ಒಂದು ಭಾಗ ಇದೆ ಎಂದು ಗೌರಮ್ಮಾಜಿಗೆ ತೋರಿತು (ಚಿಕರಾ. ೪೨೫). [ಸಂ.]

**ಅವಲೇಹ** (ನಾ). ಲೇಹ; ಲೇಹ್ಯ; ರಸಾಯನ ಮುಂತಾದ ನೆಕ್ಕುವ ಔಷಧ: ಕಷಾಯ, ಭಸ್ಮ, ಚೂರ್ಣ, ಅವಲೇಹ, ಆಸವ, ಅರಿಷ್ಟ, ತೈಲಗಳನ್ನು ಪಂಡಿತರು ಹೇಳಿದಂತೆ ಸಿದ್ಧಪಡಿಸಿ, ಸಿದ್ಧಪಡಿಸಿ, ಅನುಭವ ಪಡೆದ (ಶಾಂತಲಾ. ೨೪೩). [ಸಂ.]

**ಅವಲೋಕ** (ನಾ). = ಅವಲೋಕನ. [ಸಂ.]

**ಅವಲೋಕನ** (ನಾ). ೧. ನೋಡುವುದು; ದರ್ಶನ: ನಂದಗೋಪಂ ನಂದನಮುಖಾರವಿಂದಾವಲೋಕನೋತ್ಸುಕಂ ಗೋಕುಲಕ್ಕೆ ಪೋಗಿ (ಜಗವಿ. ೩-೨೩ ವ). ೨. ಪರಿಶೀಲನೆ; ವಿಮರ್ಶೆ: ತಂಜಾವೂರಿನ ಸರಸ್ವತಿಭಂಡಾರದ ಇತಿಹಾಸಗ್ರಂಥಗಳ ಅವಲೋಕನದಿಂದ . . . ವಿಷಯವನ್ನು ಸಂಗ್ರಹಿಸಿಕೊಂಡು (ಶಾಂತಲಾ. ೪ ಅರಿಕೆ). ೩. ದೃಷ್ಟಿ. [ಸಂ.]

**ಅವಲೋಕನಗೃಹ** (ನಾ). (ನೋಟವನ್ನು) ನೋಡಲು ಅನುಕೂಲವಾಗುವಂತೆ ಎತ್ತರವಾಗಿರುವ ಮನೆ; ಉಪ್ಪರಿಗೆ: ಗಿರಿಕೂಟಮೆಂಬ ದಿಗವಲೋಕನಗೃಹಮುಂ (ಆದಿಪು. ೧೫-೩ ವ). [ಅವಲೋಕನ + ಗೃಹ]

**ಅವಲೋಕಿನಿ** (ನಾ). = ಅವಲೋಕಿನೀವಿದ್ಯೆ: ತನ್ನವಲೋಕಿನಿಯಂ ದಶಾನನಂ ಸ್ಮರಿಸಿದಂ (ಪಂರಾಮಾ. ೯-೮೯). [ಸಂ. ಅವಲೋಕಿನೀ]

**ಅವಲೋಕಿನೀವಿದ್ಯೆ, ಅವಳೋಕಿನೀವಿದ್ಯೆ** (ನಾ). [ಜೈನ] ದೂರದಲ್ಲಿ ನಡೆದುದನ್ನು ತಿಳಿದು ಹೇಳಬಲ್ಲ ವಿದ್ಯೆ, —ಆ ವಿದ್ಯೆಯ ಅಧಿದೇವತೆ: ಅಂತು ನೆನೆಯಲೊಡಮವಲೋಕಿನೀವಿದ್ಯೆ ಮನದೊಡನೆ ಬಂದು ಬೆಸನಾವುದೆನೆ (ಪಂರಾಮಾ. ೯-೮೯ ವ). **ಅವಳೋಕಿನೀವಿದ್ಯೆ**: ಮಗನವಸ್ಥೆಯನಱಿದು ಬಾಯೆಂದವಳೋಕಿನಿ[ನೀ]ವಿದ್ಯೆಯನಾರಯಲಟ್ಟಿದೊಡೆ (ವಡ್ಡಾರಾ. ೬೦-೧); ಆನುಂ ಮದೀಯ ಪುರದೊಳಿರ್ದೆನ್ನ ಮಗಳಂ ನೋಡಲವಳೋಕಿನೀವಿದ್ಯೆಯನಟ್ಟಿದೊಡದು ನೋಡಿಬಂದೀ ವ್ಯತಿಕರಮನೆನಗೆ ಪೇೞ್ದುದುಂ (ಶಾಂತಿಪು. ೯-೬ ವ). [ಸಂ. ಅವಲೋಕಿನೀವಿದ್ಯಾ]

**ಅವಲೋಕಿಸು, ಅವಳೋಕಿಸು** (ಕ್ರಿ). ೧. ನೋಡು; ಕಾಣು: ತಱಿಸಂದು ಮನದೆಱಕದಿಂದವಲೋಕಿಸುತ್ತಿರ್ಪುದುಂ (ಪಂರಾಮಾ. ೨-೧೮ ವ); ಮೃಗಪಕ್ಷಿಗಳನವಲೋಕಿಸುತ ಶುಕಪಿಕಾದಿ ಧ್ವನಿಗಳನ್ನಾಲೈಸುತ (ಸೌಗಂಧಿ. ೨೮೨-೯). ೨. ಪರಿಶೀಲಿಸು; ಓದು: ಧರ್ಮಸ್ವರೂಪವನ್ನು ಯಥಾರ್ಥವಾಗಿ ಅರಿಯಲು ಶಾಸ್ತ್ರಾದಿಗಳನ್ನು ನಿತ್ಯವೂ ಅವಲೋಕಿಸುತ್ತಿರಬೇಕು (ಆರ್ಯಧ. ೪೧). **ಅವಳೋಕಿಸು**: ೧. ನಿಜಾಂಘ್ರಿನಖದರ್ಪಣಚುಂಬಿತಮುಗ್ನಜಾನನೇಂದುವನವಳೋಕಿಸುತ್ತವಧಿತಪ್ಪಿದುದಾಱೆನೆಪತ್ತುತಿಂಗಳಾದುವು (ಆದಿಪು. ೧೨-೪೩); ಅವರ ಚರಣಾಬ್ಜಯುಗಳಕ್ಕವನತೆಯಾಗಿರ್ದ ಕನ್ನೆಯಂ ಮಾನ್ಯೆಯನಂದವಳೋಕಿಪುದುಂ ವ್ಯಾಮೋಹವಶೀಕೃತನಾದನಗ್ನಿಭೂತಿಮುನೀಂದ್ರಂ (ಸುಕುಮಾ. ೬-೩); ಬಟುವಟಿಯಂಗನಾನಿಕರಮುಂ ಪದೆಪಿಂದವಳೋಕಿಸುತ್ತೆ (ಗಿರಿಕ. ೧೦-೯೭). [ಅವಲೋಕನ + -ಇಸು$_3$]

**ಅವಲೋಹ** (ನಾ). (ಉತ್ತಮ ಲೋಹದ ಜತೆಗೆ ಬೆರೆತಿರುವ) ಕೀಳಾದ ಲೋಹ: ಅವಲೋಹಂ ಪಿಂಗೆ ಹೇಮಂ ಸಹಜಗುಣದಿ ನಿರ್ಪಂತೆ ಕರ್ಮಂಗಳೆಂಟುಂ ತವೆ ನಿಂದಾತ್ಮಸ್ವರೂಪಂ ತಮಗೆ ತನುವೆನಲ್ (ಮಲ್ಲಿಪು.೧-೨); ಕಟ್ಟುಗ್ರದ ಕಾಮುಮತ್ಸರಗಳೆಂಬವ ಸುಟ್ಟುರುಹಿ ತನುವಿನ ಅವಲೋಹವ ಕೆಡಿಸಿ, ಮನದ ಸಂಚಲವ ನಿಲಿಸಿ . . . ನಿರ್ಮಳನಾದೆನು (ಅವಚಂ. ೨೩೪-೧೦೮೦); ಪರುಷದ ಬಲದಿಂದ ಅವಲೋಹದ ಕೇಡ ನೋಡಯ್ಯ (ಬಸವ. ೪೪೧); ತಮ್ಮಲ್ಲಿದ್ದ ಅವಲೋಹವನ್ನು ಕಳೆದು ಅಪರಂಜಿಗಳನ್ನಾಗಿ ಮಾಡಿದ (ಭಕ್ತಿಬ. ೧೨೧). [ಸಂ.]

**ಅವಲ್ಮಾಡು** (ಕ್ರಿ). (ಅವಲಕ್ಕಿಯಂತೆ) ಕುಟ್ಟು; ಪುಡಿಮಾಡು: ಅವಂ ಸ್ವರ್ಗಾಪವರ್ಗಕ್ಕೆಳಸುವನವನಂ ಗಂಡುದೊತ್ತಾಳ್ವುದೆಂದಿನ್ನಾವಂ ದೇವವ್ರತಖ್ಯಾತಿಯನವನನವಲ್ಮಾಟ್ಪುದೆಂದಾ ಪುರಸ್ತ್ರೀ ಭ್ರೂವಿಕ್ಷೇಪಕ್ಕೆ ಸೇನಾಪತಿಪದವಿಯನಿತ್ತಂ ಮನೋಜಾತಂ (ಮಲ್ಲಿಪು. ೨-೫೬).
[ಅವಲ್$_1$ + ಮಾಡು$_1$]

**ಅವಶ** (ಗು). ೧. ವಶವಿಲ್ಲದ; ಸ್ವತಂತ್ರವಾದ. ೨. ತನ್ನ ಅಧೀನತೆಯಲ್ಲಿ ತಾನಿಲ್ಲದ; ತನ್ನ ಇಚ್ಛೆ ನಡೆಯದ; ಪರಾಧೀನವಾದ: ಈಗ ಗೋವಿಂದಲಾಲನೂ ಅವಶನಾದನು (ಬಂಕಿಮ. ೭೮). ೩. ಆವಶ್ಯಕವಾದ; ಅಗತ್ಯವಾದ. [ಸಂ.]

**ಅವಶಕುನ** (ನಾ). ಅಪಶಕುನ: ಇದೆ ಅವಶಕುನವಿನ್ನೇನೀ ಮದುವೆ ಹಸನಾಗದೆನುತ್ತೆ (ನಂಬರ. ೬-೫೩); ಪೊಡವಿಯೊಳವಶಕುನಂಗಳಾದೊಡೆ ಕಂಡು ಮಡಮುರಿದೊಡೆ ಮಾನಭಂಗ (ಮೋಹತ. ೬-೨೭); ಶಕುನ ಇಲ್ಲದಿದ್ದರೂ ಅವಶಕುನಕ್ಕೆ ಕಡಿಮೆಯಿಲ್ಲ (ಗಾದೆ). [ಸಂ.]

**ಅವಶಿಷ್ಟ** (ಗು). ಉಳಿದ; ಮಿಕ್ಕ: ಇತ್ತ ರತ್ನಗ್ರೀವಾದ್ಯವಶಿಷ್ಟ ಖಚರರೊಡನೆ . . . ನೆರೆದು (ಶಾಂತಿಪು. ೪-೨೬); ಅವಶಿಷ್ಟದಳ ನಿಲೀಯಮಾನೋಚ್ಚಕಿತ ಚಕ್ರವಾಕಯುಗಮುಮೆನಿಸಿ (ಕಾದಂಉ. ೫೩೯). [ಸಂ.]

**ಅವಶೀರ್ಯಮಾಣ** (ಗು). ಬಿರಿಯುತ್ತಿರುವ; ಅರಳುತ್ತಿರುವ; ಒಡೆಯುತ್ತಿರುವ: ಅವಶೀರ್ಯಮಾಣೋದ್ದಂಡ ಕುಮುದದಳಗಹನಮುಂ . . . ಎನಿಸಿ ತಜ್ಜಲದೋಪಹತಿಯಿಂ ಬೇಱೊಂದು ಸರೋವರಮೆಂಬ ಸಂದೆಯಮಂ ಸಂದಿಸುವಚ್ಛೋದ ಸರೋವರಮಂ ಕಂಡು (ಕಾದಂಉ. ೫೩೯). [ಸಂ.]

**ಅವಶೇಷ** (ನಾ). ಮಿಕ್ಕುದು; ಉಳಿದುದು; ಶೇಷ: ಪರಮಾಯುರವಶೇಷಮುಱುದಿಂಗಳುಂಟಿನೆ (ಶಾಂತಿಪು. ೯-೧೬೧ ವ); ಹಗೆಯೊಳಿಮ್ಮವರೊಳಗೆ ಎದೆಗಿಚ್ಚುಗಳ ಖುಲ್ಲಕುಠಾರರಪನಂಬುಗೆಯ ಬಳಸಿದರದು ಪುರಾಕೃತಕರ್ಮದವಶೇಷ (ಕುವ್ಯಾಉ. ೬-೧೦). [ಸಂ.]

**ಅವಶೌಚ** (ನಾ). ಅಶುಚಿ; ಮೈಲಿಗೆ: ಎಂಜಲವಶೌಚವು ಸಂಜೆಯೆಂದೆನಬೇಡ ಕುಂಜರವು ವನವ ನೆನೆವಂತೆ ಬಿಡದೆ ನಿರಂಜನನ ನೆನೆಯೊ (ಸರ್ವಜ್ಞ. ೨೯೭). [ಸಂ.]

**ಅವಶ್ಯ** (ಗು). ೧. ಹಿಡಿತಕ್ಕೆ ಸಿಕ್ಕದ; ವಶಕ್ಕೆ ನಿಲುಕದ. ೨. ತಪ್ಪಿಸಲಾಗದ; ಅನಿವಾರ್ಯವಾದ. (ನಾ). ೩. ಆವಶ್ಯಕ; ಅಗತ್ಯ: "ಭೃಶದೊಳಮವಶ್ಯದೊಳು ಬಾಧಮೆಂದೆನಿಕು" (ಮಂಗರಾ. ೧೪೩-೨೪). ಅಂಬು ಬಿಲ್ಲಿಗವಶ್ಯ ಶಂಭು ಸಹಜಗವಶ್ಯ (ಸರ್ವಜ್ಞ. ೧೯೨೧).
**ಅವಶ್ಯಬೀಳು** = ಅಗತ್ಯವುಂಟಾಗು (ಕ). **ಅವಶ್ಯವಾಗಿ** = ತಪ್ಪದಂತೆ; ಕಡ್ಡಾಯವಾಗಿ. [ಸಂ.]

**ಅವಶ್ಯಂಭಾವಿ** (ಗು). ಆಗಲೇಬೇಕಾದ; ಅಗತ್ಯವಾಗಿ ತಪ್ಪದೆ ಉಂಟಾಗತಕ್ಕ: ಯಾವಾಗ ರಾಜರು ಬಲಿಷ್ಠರಾಗಿ . . . ನರಹಿಂಸಕರಾಗುವರೋ ಆಗ ರಾಜರಿಗೆ ಪರಸ್ಪರ ಯುದ್ಧವು ಅವಶ್ಯಂಭಾವಿ (ಭೀಷ್ಮಜ. ೧೪೮). [ಸಂ. ಅವಶ್ಯಂಭಾವಿನ್]

**ಅವಶ್ಯಾಯ** (ನಾ). ಹಿಮ; ಮಂಜು: ಈ ಲೋಕಮಂ ಹೈಮನಗಂ ಕೈಕೊಂಡುದೆಂಬನ್ನೆಗಮೊದವಿದವಶ್ಯಾಯದೊಳ್ ನಿಂದಂ (ಸುಕುಮಾ. ೪-೧೧). [ಸಂ.]

**ಅವಷ್ಟಂಭ** (ನಾ). ೧. ಆಶ್ರಯ; ಆಲಂಬನ. ೨. ನೆಲೆಯಾಗಿ ನಿಲ್ಲುವುದು; ಸ್ಥಿರವಾಗಿರುವುದು. ೩. ಆತ್ಮವಿಶ್ವಾಸ. ೪. ಆರಂಭ. ೫. ಕಂಭ. ೬. ಸೌಷ್ಠವ; ಸೌಂದರ್ಯ. ೭. ಲೇಸು; ಹಿರಿಮೆ; ಮೇಲ್ಮೆ: "ಸೌಷ್ಠವಂ, ಅ(ವ)ಷ್ಟಂಭಃ — ಈ ೨ ಲೇಸಾಗಿರ್ಪುದು" (ಹಲಾಯು. ೧೨೫-೭೪). ೮. ಚಿನ್ನ. ೯. ಗರ್ವ; ಹೆಮ್ಮೆ; ದರ್ಪ: ಶೌರ್ಯಾವಷ್ಟಂಭದೊಳಾನಿರೆ ಗೋವಳಿಗಂಗಗ್ರಪೂಜೆಯಂ ನೀಂ ಕುಡುವಾ (ಪಂಪಭಾ. ೬-೪೭); ದ್ರುಪದನಂ ತನ್ನ ಮಂಚದ ಕಾಲೊಳ್ ಕಟ್ಟವೇಟ್ಟು ತಲೆಯ ಮೇಲೆ ಕಾಲನವಷ್ಟಂಭದಿಂ ನೀಡಿ (ಪಂಪಭಾ. ೨-೬೨ ವ); ಈ ವಜ್ರಾವರ್ತ ಕೋದಂಡಮನವಯವದಿಂದೇಱಿಸಲ್ ಸಾಲ್ವ ದೋರ್ದಂಡಾವಷ್ಟಂಭ ಪ್ರಚಂಡಂ ಜನಕಜೆಗೆ ವರಂ ಬರ್ಪುದು (ಪಂರಾಮಾ. ೫-೭೬); ಅನಲನವಷ್ಟಂಭಮೋಡಿತ್ತು . . . ಒದವಿದವಶ್ಯಾಯದೊಳ್ (ಸುಕುಮಾ. ೪-೧೧). [ಸಂ.]

**ಅವಷ್ಟಂಭಿತ** (ಗು). ಅವಲಂಬಿಸಲ್ಪಟ್ಟ; ಆಶ್ರಯಿಸಿದ; ನೆಲೆಗೊಂಡ: ನವ್ಯಾಭರಣಾಲಂಕೃತ ಸರ್ವಾವಯವನುಂ ಆಚ್ಛಾದಿತ ದಿವ್ಯದುಕೂಲನುಂ ಅವಷ್ಟಂಭಿತ ತುರಂಗರಾಜನುಂ . . . ಆಗಿ (ನಂಬರ. ೧೬-೧೨೭); ಅವಷ್ಟಂಭಿತ ಕುಂಭಿಕುಂಭಸ್ಥಳಪೂರ್ವಾಸನನುಂ (ಗಿರಿಕ. ೩-೧೦೩ ವ).
[ಸಂ.]

**ಅವಷ್ಟಂಭಿಸು** (ಕ್ರಿ). ೧. ಆಶ್ರಯಿಸು; ಒರಗಿಕೊ: ದುಕೂಲ ಪ್ರಚ್ಛದಾಚ್ಛಾದಿತ ಸುಖಾಸೀನಂ ಮಣಿಮಯಸಿಂಹಾಸನಮನವಷ್ಟಂಭಿಸಿ (ಆದಿಪು. ೧೧-೨೭ ವ); ಮುನಿಪಂ ಬಂದು ವಿಶಿಷ್ಟವಿಷ್ಟರದೊಳಿಂಬಿಂ ಕುಳ್ಳಿರಲ್ಕಂಚಿವಾಸನವಷ್ಟಂಭಿಸಿ ತಾಂ ಪ್ರಿಯಾಗಮನಮಂ ಪಾರುತ್ತಮಿರ್ಪನ್ನೆಗಂ (ಜಗವಿ. ೧೨-೨); ಸಿಂಹವಿಷ್ಟರಮನವಷ್ಟಂಭಿಸುತ್ತುನ್ನತ ಚಿತ್ತಂ ಪುಷ್ಪಧನ್ವಂ ತನ್ನೊಳಿಂತೆಂದಂ (ಗಿರಿಕ. ೭-೩೩ ವ). ೨. ಗರ್ವಿಸು; ದರ್ಪವನ್ನು ತೋರಿಸು: ತನ್ನ ಧ್ವಜಿನೀಪತಿಯನಟ್ಟಿ ಬಾಯ್ಕೇಳಿಸಿ ಚಕ್ರರತ್ನಮಂ ಮುಂದಿಟ್ಟು ಮಧ್ಯಮಖಂಡಮುಮನೌಂಕಿ ಪೂಣೆ [ಪಾಠಾಂ. ಟಿ] ಪೊಕ್ಕವಷ್ಟಂಭಿಸಿ ನಿಂದಾಗಳ್ (ಆದಿಪು. ೧೩-೫೬); ಇರ್ದೆಡೆಯಿಂದ ಮೇಟಿಟಿಲೆಸಗದವಷ್ಟಂಭಿಸಿ ವಿಪ್ರಸಭೆಗೆ ವಖ್ಯಾಣಿಸುತ್ತುಮುದ್ಗ್ರೀವಮೆಲ್ಲುಲಿ ನವರನವಮಾನಿಸಿದಂ (ಸುಕುಮಾ. ೪-೨೪).
[ಅವಷ್ಟಂಭನ$_0$ + -ಇಸು$_1$]

**ಅವಷ್ಟಬ್ಧ** (ಗು). ೧. ಆಸರೆಯನ್ನು ಹೊಂದಿದ; ಆಶ್ರಯಿಸಿದ. ೨. ಹತ್ತಿರವಾಗಿರುವ. ೩. ಕಟ್ಟಲ್ಪಟ್ಟ. [ಸಂ.]

**ಅವಸಕ್ತ** (ಗು). ೧. ತನ್ಮಯವಾದ; ಉದ್ಯುಕ್ತವಾದ: ಕುಸುಮಾಪಚಯವ್ಯಸನಾವಸಕ್ತ ಸುರಯುವತಿ ಪಾಣಿಪಲ್ಲವರಾಗಂ ಮುಸುಕಿದುದು (ಆದಿಪು. ೬-೯೬). ೨. ಕೂಡಿದ; ಹೊಂದಿಕೊಂಡ; ಸೇರಿದ: [ಅಂಸಾವಸಕ್ತ ಚಮರೀಜ]ಯರಪ್ಪ ಕಾಂತೆಯರ ಪೊಂಗೆಜ್ಜೆಗಳ ಮೆಲ್ಲುಲಿಯೊಳಂ (ಕಾದಂಪೂ. ೬೭). [ಸಂ.]

**ಅವಸಥ** (ನಾ). ೧. ವಾಸಸ್ಥಾನ; ಆಲಯ; ನೆಲೆ: ದಿಗಿಭದಂಗದೊಳಿಂದ್ರನ ಜಿಹ್ವೆಯೊಳ್ ಶಿವಾವಸಥದ ಬಾಗಿಲಲ್ಲಿ ಬರೆದಿಪ್ಪುದದೆಂದೆನಲ್ (ಬಸರ. ೧೦-೧). ೨. ಗ್ರಾಮ; ಹಳ್ಳಿ. ೩. ಶಾಲೆ; ಮಠ. [ಸಂ.]

**ಅವಸನ್ನ** (ಗು). ೧. ಕಷ್ಟಕ್ಕೆ ಸಿಕ್ಕಿದ; ಹೀನಸ್ಥಿತಿಗೆ ಇಳಿದ. ೨. ಅಸಮರ್ಥವಾದ; ದುರ್ಬಲವಾದ. ೩. ಸಂತೋಷವಿಲ್ಲದ; ದುಃಖಿತವಾದ: ಗತಿಸಿದ ಕಡಲಿನ ನೆರೆ ತೆರೆ ಅವಲೋಕಿಸಿ ಸುತ್ತಾಡುತ್ತಿವೆ ಖಿನ್ನ ಉರುಳುರುಳುತ್ತಿವೆ ಅವಸನ್ನ (ಅರಳು. ೨೦೪). [ಸಂ.]

**ಅವಸನ್ನೆ** (ನಾ). ದುಃಖಿತೆ : ರಮೆಯಂತೂ ಅವಸನ್ನೆಯಾಗಿ ಜ್ಞಾನತಪ್ಪಿ ಬಿದ್ದಳು (ಶಾಂಭವಿ. ೧೪). [ಸಂ. ಅವಸನ್ನಾ]

**ಅವಸರ** (ನಾ). **೧.** ಸಮಯ ; ಸನ್ನಿವೇಶ : ಜಿನಮಜ್ಜನಾವಸರದೊಳ್ ವಿನಮಜ್ಜನ ಮಕುಟದುಗ್ಧದುಗ್ಧಾಂಬುಕಣಂ ಕನಕಮಕುಟಂಗಳಂ ಮುತ್ತಿನ ಮಕುಟಮಿದೆನಿಸಲಾರ್ತುದು (ಅಜಿಪು. ೪–೫೮) ; ಸವಿವವಸರಮಿದು ವಿದ್ಯಾಯುವತಿಯ ವದನಾರವಿಂದಮಧುವಂ (ಪಂರಾಮಾ. ೩–೧೪೬); ನಾನು ನಂನಅವಸರನಿಮಿತ್ತವಾಗಿ ನಂನಹೊಲೆಯಾಳು ಕೆಂನನ ಹೆಂಡತಿ ಚಲುಡಿಯೆಂಬ ಹುಡುಗಿಯನ್ನು ನಿಮಗೆ ಕ್ರಯಕ್ಕೆ ಕೊಟ್ಟೆನಾಗಿ (ಮೈಆರಿ. ೧೯೨೮, ೬೭–೭ ; 1808). **೨.** ಅಗತ್ಯವಾದ ಕಾಲ ; ಅವಶ್ಯವಾದ ಸಂದರ್ಭ : ನಿನ್ನವಸರಕ್ಕೆ ಬಂದು ಕೂಡುವ ಬಲದೇವನುಮಂ ನಿನ್ನಿರ್ದೆಡೆಯನಱಿಯದಱಸುವಶ್ವತ್ಥಾಮ ಕೃಪಕೃತವರ್ಮರುಮಂ ಕೂಡಿಕೊಂಡು (ಪಂಪಭಾ. ೧೩–೭೦ ವ) ; ಕಲಹಕ್ಕೆವಂದು ನಣ್ಪುದೋರ್ಪೊಡವಸರಮಲ್ತು ಕೆಯ್ದುಗೆಯ್ಯೆಂದು ಕಡುಕೆಯ್ದು ನಿಲ್ವುದುಂ (ಪಂರಾಮಾ. ೧೦–೧೫೩) ; ಶಿವಶರಣರವಸರಕೊದವಿದುಪಕಾರಿಯೋ (ಪದ್ಮರಾ. ೬–೮೫) ; ಜಜ್ಜಾರಮಾಸಾಳುಗಳು ನಿಜದಾತಾರನವಸರಕೊದಗಿ ಹಣವಿನ ಋಣನ ನೀಗಿದರು (ಕುವ್ಯಾದ್ರೋ. ೧–೫೦). **೩.** ಸೌಕರ್ಯ ; ಅವಕಾಶ : ಗಾಂಗೇಯನ ನುಡಿಯೊಳವಸರಮಂ ಪಸರಮಂ ಪಡೆಯದೆ . . . ಸಾಲ್ವಲನೆಂಬರಸನಲ್ಲಿಗೆ ಪೋಗಿ (ಪಂಪಭಾ. ೧–೭೫ ವ) ; ಅವಸರ ಬಂದರೆ ಮಾಱುವ ದೈವವನೆಂತು ಸರಿಯೆಂಬೆನಯ್ಯಾ (ಬಸವ. ೫೫೮) ; ದಿಕ್ಕರಿ ಹರಹಿಕೊಲುತಿದೆ ಮಾತಿಗಿಲ್ಲವಸರವು (ಕುವ್ಯಾದ್ರೋ. ೩–೪೪). **೪.** ವೇಳೆ ; ಕಾಲ ; ಹೊತ್ತು : ದೇವರಿಗೆ ಅವಸರ ಮೂಱಕ್ಕಂ ಅಕ್ಕಿವೊಕ್ಕಳ (ಎಕ. XI, ಮೊಳಕಾ. ೩೧–೭ ; 1386) ; ಶ್ರೀಮಲ್ಲಿಕಾರ್ಜುನ ದೇವರಿಗೆ ದಿನಕೆವೊಂದು ಅವಸರದ ಹರಿವಾಣದ ನೆಯಿವೇದ್ಯದ ಕಟ್ಟಳೆವು (ಸೌಇಇ. IX–ii, ೪೫೮–೯ ; 1458) ; ಕೀರ್ತಿನಾರಾಯಣದೇವರ ಮಧ್ಯಾಂನ ಮೂರು ಅವಸರಕೆ ಗ ೧೩೦ (ಮೈಆರಿ. ೧೯೩೦, ೩೮–೧೭ ; 1517) ; ಎಲ್ಲಾ ಸ್ಥಳಗಳಲ್ಲಿ ಎಲ್ಲಾ ಅವಸರಗಳಲ್ಲಿ ನನ್ನನ್ನು ಸುಖಿಯಾಗಿಡಬಲ್ಲುದು (ಪ್ರಕಾಶ. ೧೭೧). **೫.** ತ್ವರೆ ; ಆತುರ : ಪವನಾಪ್ತನಾ ಭರವನಾಲಿಸುತ್ತಿರೆ ವಿಷಾದವನಾಂತು ಕಾಂತೆಯೆಳ್ತಂದು ನಾಟ್ಯಾಲಯವನವಸರದೆ ಪೊಕ್ಕು (ಕೊಟ್ಟೂಬ. ೬–೩೫) ; ಶಾಲುಗಳನವಸರದೆ ಕಾಯದೊಳ್ ಕೊಟ್ಟುಟ್ಟು ಶಸ್ತ್ರಾಸ್ತ್ರನಿಕರಮಂ ಪಿಡಿದುಕೊಂಡು (ಅರ್ಜಾವಿ. ೨೪–೧೨) ; ಈಗಾಗಲೇ ಪ್ರೇಮಾ ಮದುವೆಗೇನು ಅವಸರ ? (ಕಮಕು. ೮೨) ; ಅವಸರದವನಿಗೆ ಎಲೆಯಲ್ಲಿ ಹಾಕಿ ನನಗೆ ನೆಲದಲ್ಲಿ ಹಾಕಿ (ಗಾದೆ). **೬.** ಅಗತ್ಯ ; ಅವಶ್ಯಕತೆ : ಇಂಥಾ ಆಸ್ಪತ್ರೆಗಳಿರಬೇಕಾದುದು ಅವಸರವೇ (ಹೂಅರ. ೧೦೩). **೭.** ಒಂದು ವರ್ಷ. **೮.** ಮಳೆ. **೯.** ಒಡೆಯನ ಅಪ್ಪಣೆ ಯಾವಾಗ ಯಾವ ಕಾಲಕ್ಕೆ ಬರುತ್ತದೋ ಎಂದು ಸಮಯ ನಿರೀಕ್ಷೆಯಿಂದ ಬಾಗಿಲ ಬಳಿಯಲ್ಲಿ ಯಾವಾಗಲೂ ಸಿದ್ಧವಾಗಿ ನಿಂತಿರುವ ಸೇವಕನ ಉದ್ಯೋಗ : ಆಗಾಮಿ ಸಿದ್ಧ ಸಾಧ್ಯ ಸ್ಥಾವರ ಜಂಗಮ ಸಹ ಅವಸರ ದಂಕಪ್ಪನವರು ಮಾಡಿದ ನಾನಾಗೋತ್ರದ ಬ್ರಹ್ಮರ ವೃತ್ತಿಗಳು (ಎಕ. X, ಕೋಲಾರ. ೧೬೨–೧೨ ; 1366) ; ಅವಸರದ ದೇವರ್ಸಯ್ಯನವರ (ಮೈಆರಿ. ೧೯೩೦, ೧೬–೫ ; 1527).

**ಅವಸರದ ಊೞಿಗದವಳು** = ರಾಣಿಗೆ ತಾತ್ಕಾಲಿಕವಾಗಿ ಬೇಕಾದ ಕೆಲಸಗಳನ್ನು ಆ ಕೂಡಲೇ ಮಾಡುವ ಸೇವಕಿ : ಆ ಗಿಣಿಯ ಪ್ರಸಂಗವ ಕೇಳಬೇಕೆಂಬ ಸಂತೋಷದಿಂದ ಅವಸರದ ಊೞಿಗದವಳ ಮುಖವ ನೋಡಿ ಗಿಣಿಯ ತರಹೇೞಲಾಗಿ (ವಚಕಾ. ೨–೧೨). **ಅವಸರದವನು, ಅವಸರದವಳು, ಅವಸರದರು** = ರಾಜನಿಗೆ ತಾತ್ಕಾಲಿಕವಾಗಿ ಬೇಕಾದ ಕೆಲಸಗಳನ್ನು ಆ ಕೂಡಲೆ ಮಾಡುವ ಸೇವಕರು : ಅರಮನೆಗೆ ಬಂದು ಅವಸರದವನ ಕಯ್ಯಿಂ ಹೇಳಿಕಳುಹಲು ಸಾರಂಗಧರನು ಆ ಮಂತ್ರಿಗಳಂ ಕರೆಸಿಕೊಂಡು (ಸಾರಂಗ. ೧೮) ; ಅರಮನೆಯ ಅವಸರದವನೊಬ್ಬ ಒಂದು ದೊಡ್ಡ ಬೆಳ್ಳಿಯ ಪರಾತದಲ್ಲಿ ಉತ್ತಮವಾದ ಚೀನಾಂಬರ . . . ತಾಂಬೂಲ ಎಲ್ಲವನ್ನೂ ತಂದು (ಶಾಂತಲಾ. ೩೫) ; ವೈಶಂಪಾಯನನಿಗೆ ಹಣ್ಣುಹಂಪಲ ಮೆಲ್ಲಿಸಿ ಇರಿಸಿಕೊಂಡಿದ್ದಲ್ಲಿ ಅವಸರದವಳು ಬಂದು ಕೇಳಲಾಗಿ (ವಚಕಾ. ೨–೧೭) ; ಇತ್ತಲಾ ದೊರೆರಾಯ ನೋಲಗಕ್ಕೆತರುವರ್ತಿಯ ಶುಭಮುಹೂರ್ತಗಳ ಹೊತ್ತನಱಿದು ದಳಪತಿಗವಸರದರು ಮತ್ತೆ ಬಿನ್ನೈಸಿದರಾಗ (ಕಂನವಿ. ೨೧–೨೯). **ಅವಸರದ ಹೋಬಳಿ** = ಅನಿರೀಕ್ಷಿತವಾದ ಮತ್ತು ಅತ್ಯವಶ್ಯವಾದ ಕೆಲಸಗಳಿಗಾಗಿ ಯಾವಾಗಲೂ ಸಿದ್ಧವಿರಬೇಕಾದ ಸೇವಕರ ಇಲಾಖೆ : ಅರಮನೆಯಲ್ಲಿ ಬೊಕ್ಕಸ ಮುಂತಾದ ಗೊತ್ತುಸ್ಥಳಗಳನ್ನು ಮಾಡಿಸಿದ್ದು:– (೧). ಹಣಕಾಸುಗಳನ್ನಿರಿಸುವ ಬೊಕ್ಕಸ, (೨). ಜವಳಿಯ ಬೊಕ್ಕಸ . . . (೨೨). ಅವಸರದ ಹೋಬಳಿ. ಅವಸರದ ಹೋಬಳಿಗೆ ಒಳಿತವಾಗಿರುವದು :– ಚಿನ್ನ ಬೆಳ್ಳಿ ಸೋಟಿಯವರು, . . . ನವಪತ್ತುಖಾನೆಯವರು, ಬೆಸ್ತರು, ದೀವಟಿಗೆಯವರು, ದೀಪದ ಕಂಭದವರು (ಮಹಾವಂ. I, ೧೨೮). **ಅವಸರದಾನೆ** = ಯಾವ ಸಮಯದಲ್ಲಿಯಾಗಲಿ ಸೇವೆಗೆ, ಸಹಾಯಕ್ಕೆ ಸಿದ್ಧವಾಗಿರುವ ಆನೆ : ಅಳಲದಿರು ಬಾ ಮಗನೆ ಕುರುಕುಲತಿಲಕನವಸರದಾನೆ (ಕುವ್ಯಾದ್ರೋ. ೧–೨೩). **ಅವಸರದಾಳು** = ಸಮಯಕ್ಕೊದಗುವ ಬಂಟ : ಮಾರನೆಯ ದಿನ ಅವಸರದಾಳು ಬಂದು (ಬಿಸ್ತಕ. ೭). **ಅವಸರಕೊಡು** = ಅವಸರಂಗುಡು : ಅವರಿಬ್ಬರೂ ಪುನಃ ಉತ್ಸಾಹಯುಕ್ತರಾಗುವಂತೆ ಅವರಿಗೆ ಅವಸರಕೊಡೋಣ . . . ಎಂದು ನಾವಿಕನು ನುಡಿದ (ಮಹಾತ್ಮ. ೧೪೩). **ಅವಸರ ನೋಡು** = ಸಮಯವನ್ನು ನಿರೀಕ್ಷಿಸು ; ಅವಕಾಶವನ್ನು ತಿಳಿ : ಹೊತ್ತು ಮುಣುಗಿದ ಬಳಿಕ ಅವಸರನೋಡಿ ಆತನು ಪಟ್ಟಣವನ್ನು ಪ್ರವೇಶಿಸಿ, ರಥವನ್ನು ಬಾಗಿಲಲ್ಲಿ ಬಿಟ್ಟು ಅರಮನೆಯನ್ನು ಹೊಕ್ಕನು (ತುಳಸಿ. ೧೫೩). **ಅವಸರಪಡು** = ಆತುರಪಡು ; ತವಕಿಸು : ನನಗೂ ಜ್ಞಾನಾಂಬೆಗೂ ಅದಷ್ಟು ಬೇಗ ವಿವಾಹವನ್ನು ಮಾಡಿಬಿಡಬೇಕೆಂದು ಸಂಬಂಧಿಮುದಲಿಯಾರರು ಅವಸರಪಟ್ಟರು (ಪ್ರತಾಪ. ೩೮); ನೀನು ಯಾಕೆ ಇಷ್ಟು ಅವಸರಪಡುತ್ತಿ (ಹಳ್ಳಿಹಾ. ೯೬). **ಅವಸರಮಾಡು** = **೧.** ಆತುರಪಡು : ಇದ್ದ ಸ್ಥಳವನ್ನು ಬಿಟ್ಟು ಬೇರೆ ಸ್ಥಳಕ್ಕೆ ಹೋಗಲು ಅವಸರಮಾಡಬಾರದು (ಆಶ್ರಮ. ೧೨). **೨.** ಆತುರಪಡಿಸು : ನನ್ನನ್ನು ಹೊರಡಿಸಲಿಕ್ಕೆ ಯಾಕೆ ಇಷ್ಟು ಅವಸರಮಾಡುತ್ತೀ (ರೂಢಿ). [ಸಂ.]

**ಅವಸರಂಗುಡಿಸು** (ಕ್ರಿ). ಅವಕಾಶವನ್ನು ಕೊಡಿಸು : ಪರಮನ ನೋಲಗಿಸಿ ಕೃತಾರ್ಥರೆಮಪ್ಪೆವವೋಘವವಸರಂಗುಡಿಸುವುದೆಂದಿರದೆನ್ನ ಭಕ್ತಿಯೆ ತರೆ ಬಂದುದು ದೇವ ದಿವಿಜಪೇಟಕಮನಿತುಂ (ಆದಿಪು. ೯–೧೦). ನಧಿಕ [ಅವಸರಂಗುಡು + –ಇಸು$_3$]

**ಅವಸರಂಗುಡು** (ಕ್ರಿ). ಅವಕಾಶಕೊಡು ; ಭೇಟಿಗೆ ಅವಕಾಶಕೊಡು : ಅಂತು ಮಂತ್ರಿಗಳ್ವೆರಸು ನಿರ್ನಿಕ್ತಕಾರ್ಯನಾಗಿ ಮಱುದಿವಸಮವಸರಂಗೊಟ್ಟು ಗಜಕರ್ಣ ದೂತನ ಮುಖಾವಲೋಕನಂ ಮಾಡಿ (ಪುಷ್ಪಪು. ೭–೫೨ ವ). [ಅವಸರ + ಕುಡು$_1$ (< ಕೊಡು)]

**ಅವಸರಂಬಡೆ** (ಕ್ರಿ). ಅವಕಾಶವನ್ನು ಹೊಂದು ; ಸಮಯವನ್ನು ಪಡೆ : ಆತನೊಳವಸರಂಬಡೆದು ಮೆಲ್ಲನೆಯ್ದೆವಂದು (ಕಾದಂಪೂ. ೭೫೯) ; ಕುಲಾಪವಾದ ಪರಾಭವದ ದಾವಾನಳದಿಂದ[ಂ]ದಹ್ಯಮಾನಸನುಮಸಹ್ಯಮಾನ ಚಿಂತಾಂತರಂಗನುಮಾಗಿ (ಸುಕುಮಾ. ೨–೧೦ ವ) ; ಅವಸರಂಬಡೆದು ದೇವೇಂದ್ರಾಸ್ಥಾನದ ಭದ್ರಮಂದಿರಮನಿಂದ್ರಂ ಬಂದು ಪೊಕ್ಕು (ಜಗವಿ. ೧೧–೬೯ ವ). [ಅವಸರ + ಪಡೆ$_1$]

**ಅವಸರಂಬಾರ್** (ಕ್ರಿ). ಸಮಯವನ್ನು ನಿರೀಕ್ಷಿಸು; ಅವಕಾಶಕ್ಕೆ ಕಾಯು : ಅನ್ನೆಗಂ ಮುನ್ನಮೆ ಬಿನ್ನವಿಸಲವಸರಂಬಾರುತ್ತಮಿರ್ದ ವಿದ್ಯಾಧರಚರರಂ (ವರ್ಧಪು. ೪–೧೧ ವ). [ಅವಸರ + ಪಾರ್]

**ಅವಸರಣ** (ನಾ). ಹಿಮ್ಮೆಟ್ಟುವುದು; ಪಲಾಯನ; ಹೊರಟು ಹೋಗುವುದು : "ಪಿಂಗು – ಅವಸರಣೇ" (ಶಮಥಾ). [ಸಂ.]

**ಅವಸರವಱಿ** (ಕ್ರಿ). ಸಮಯವನ್ನು ತಿಳಿ; ಅವಕಾಶವನ್ನು ಕಂಡುಕೊ : ನಮ್ಮ ರಾಕ್ಷಸವಾಸದವಸರವಱಿದು ನಿಮ್ಮಾಸುರದ್ವೇಷಿಯನು ಕಾಣಿಪೆನೆಂದನಾ ಶುಕ್ರ (ಕುವ್ಯಾಅ. ೫–೭೮). [ಅವಸರ + ಅಱಿ$_1$]

**ಅವಸರಸತ್ರ** (ನಾ). ತಾತ್ಕಾಲಿಕವಾದ ಸತ್ರ (?) : ಶ್ರೀ ಹರಿಹರ ದೇವರ ಅವಸರಸತ್ರಕ್ಕೆ ಸಮರ್ಪ್ಪಿಸಿದ್ದು ಎರಡು ಪಾಲು (ಇಆ. IV, ೩೨೮–೯; 1530). [ಅವಸರ + ಸತ್ರ]

**ಅವಸರಾಯ್ತ** (ನಾ). ಅವಸರದ ಊಳಿಗದ ಅಧಿಕಾರಿ. [ಅವಸರ + –ಅಯ್ತ]

**ಅವಸರಾಯ್ತಿ** 'ಅವಸರಾಯ್ತೆ' ನೋ.

**ಅವಸರಾಯ್ತೆ**, ಅವಸರಾಯ್ತಿ (ನಾ). ಅವಸರದ ಊಳಿಗದವಳು, —ಅಧಿಕಾರಿಣಿ : ಸೂಳಾಯ್ತೆ, ಸೂಳಾಯ್ತಿ, ಅವಸರಾಯ್ತೆ, ಅವಸರಾಯ್ತಿ (ಶಬ್ದಾನು. ೧೯೫ ಪ್ರಯೋ). **ಅವಸರಾಯ್ತಿ** : 'ಅವಸರಾಯ್ತೆ' ಶಬ್ದದ ಪ್ರಯೋಗವನ್ನು ನೋಡಿ. [ಅವಸರ + –ಆಯ್ತೆ]

**ಅವಸರಿಸು** (ಕ್ರಿ). ೧. ತ್ವರೆಗೊಳ್ಳು; ಆತುರಪಡು : ಅವನಱಿಯದೇ ಕುಱಿಯ ಬಳಿವಿಡಿದವಸರಿಸಿ ಬರುತಾ ಶಿವಾಲಯಮಂ ಪೊಗಲು (ಬಸಪು. ೨೮–೨೯); ಶಿರವನಾಗಳ್ ಕೊಯ್ದುಕೊಳಲವಸರಿಸುವೆಡೆಯಲಿ ಮೆಚ್ಚಿಯಭವಂ... ಬೇಡು ಬೇಡೆನಲು (ಬಸಪು. ೪೪–೬೨). ೨. ಆತುರಪಡಿಸು; ತ್ವರೆಗೊಳಿಸು : ಆಲಸದಂತೆ ಸ್ನೇಹ ಬಳಸು ಎಂದು ಹಲುಬಿ ಅವಸರಿಸದೆ, ಒಲಿಸಿ ಬೇಡಿದರೆ, ಆಗಲಿ ಎಂಬೊದೇನೊ, ಮಂಗಳ ಮೂರುತಿ (ಮೋಕ್ಷದೀ. ೬೦); ಅಷ್ಟರಲ್ಲಿ ಪ್ರಸಂಗ ಮುಗಿಯದಿದ್ದರೆ, ಅವಸರಿಸಬೇಕು (ಯಕ್ಷಬ. ೪೭); ಅಲಿಬಹದ್ದೂರನು ಅವಸರಿಸಬಾರದೆಂದು ಯೋಚಿಸಿದನು (ಝಾರಾಣಿ. ೧೦೭). [ಅವಸರ + –ಇಸು$_3$]

**ಅವಸರೋಚಿತ** (ಗು). ಸಮಯಕ್ಕೆ ತಕ್ಕ; ಕಾಲಕ್ಕೆ ಹೊಂದುವ : ಅಗಳರಸನವಸರೋಚಿತ ಫಳಪ್ರಾಪ್ತಿಗೆ ಸಂತಸಂಬಟ್ಟು (ಮಲ್ಲಿಪು. ೪–೩೩ ವ). [ಅವಸರ + ಉಚಿತ]

**ಅವಸರ್ಪ** (ನಾ). ಬೇಹುಗಾರ; ಗೂಢಚಾರ. [ಸಂ.]

**ಅವಸರ್ಪಣ** (ನಾ). ೧. ಇಳಿತಾಯ; ಕುಂದುವುದು. ೨. [ಜೈನ] ಮನುಷ್ಯರ ಆಯುಸ್ಸು ಸುಖ ಮುಂತಾದುವುಗಳು ಕ್ರಮವಾಗಿ ಕುಂದುವ ಕಾಲ : ಅವಱೊಳುದ್ಧಾರಸಾಗರೋಪಮಂಗಳ್ ಪತ್ತು ಕೋಟಿ ಕೋಟಿಗೊಂಡೊಡವಸರ್ಪಣಕಾಲಮಕ್ಕುಂ (ಅಜಿಪು. ೩–೧೫ ವ); ತನು ಭೋಗಾಯುಷ್ಯಂಗಳ್ ಮನುಷ್ಯರೊಳ್ ಕುಂದುವಡೆಗುಮವಸರ್ಪಣದೊಳ್ (ಪಂರಾಮಾ. ೧–೫೮). [ಸಂ.]

**ಅವಸರ್ಪಿಣಿ** (ನಾ). = ಅವಸರ್ಪಣ ೨ : ಅದು ಶರೀರಬಳಾಯುರ್ದೇಹಪ್ರಮಾಣೋಪಚಯಾಪಚಯಹೇತುತ್ವದಿಂದಮುತ್ಸರ್ಪಿಣಿಯವಸರ್ಪಿಣಿನಾಮಮಂ ಪಡೆದುದು (ಆದಿಪು. ೬–೪೮ ವ); ಗುಣಿಗಳುಮಂ ನೆಗೞ್ದೊಳ್ಪಿನ ಕಣಿಗಳುಮಂ ಕಾಣಲಪ್ಪುದದಱಿಂದವಸರ್ಪಿಣಿಯಲ್ತು ಕಾಲಮುತ್ಸರ್ಪಿಣಿಯೆಂಬಂತಾಯ್ತು (ಅಜಿಪು. ೧–೬೧); ಹನ್ನೆರಡವಸರ್ಪಿಣಿಯೊಳ್ (ಪ್ರತಿಷ್ಠಾ. ೧೦–೬೨). 'ಉತ್ಸರ್ಪಿಣಿ' ಪರಾ. [ಸಂ. ಅವಸರ್ಪಿಣೀ]

**ಅವಸಾದ** (ನಾ). ೧. ಕುಸಿಯುವುದು; ಕುಗ್ಗುವಿಕೆ. ೨. ದಣಿವು; ಆಯಾಸ. [ಸಂ.]

**ಅವಸಾನ** (ನಾ). ೧. ಕೊನೆ; ಅಂತ್ಯ; ಮುಕ್ತಾಯ : ಚಾತುರ್ಯಾಮಾವಸಾನಘಟಿತಘ[ಂ]ಟಿಕಾಧ್ವನಿಗಳುಂ ಸಂಧ್ಯಾಸಮಯ ಸಮುದಿತ ಶಂಖಧ್ವನಿಗಳುಂ (ಪಂಪಭಾ. ೧೦–೩೫ ವ); ದೇವಾಯತನನೂತ್ನಸ್ತಂಭವಂ ನೆಮ್ಮಿ ನಿಂದಿರ್ದು ತದಂಗನಾಗೀತಾವಸಾನ ಸಮಯಮಂ ಪಾರುತ್ತುಮಿರ್ಪುದುಂ (ಕಾದಂಪೂ. ೬೮೭). ೨. ಸಾವು; ಮರಣ : ಪುತ್ರನಾದರೆ ಅವಸಾನದಲ್ಲಿ ಹತ್ತಿರ ಇದ್ದಾನು (ಗಾಜಿ). [ಸಂ.]

**ಅವಸಾನಕಾಲ** (ನಾ). ಕೊನೆಗಾಲ; ಸಾಯುವ ಸಮಯ : ಅಂತು ಪಲಕಾಲಂ ತಪಂಗೆಯ್ದವಸಾನಕಾಲದೊಳ್ ನಿದಾನಪೂರ್ವಕಂ ಸತ್ತು (ಶಾಂತಿಪು. ೭–೪೪ ವ). [ಅವಸಾನ + ಕಾಲ]

**ಅವಸಾನಸಮಯ** (ನಾ). = ಅವಸಾನ ಕಾಲ : ರಾಜರವಿಯವಸಾನ ಸಮಯದೊಳಾದುದದ್ಭುತ (ಕುವ್ಯಾಗ. ೮–೨). [ಅವಸಾನ + ಸಮಯ]

**ಅವಸಿ** 'ಅಮವಾಸೆ' ನೋ.

**ಅವಸಿತ** (ಗು). ೧. ನೆಲೆಗೊಂಡ; ಒಂದೆಡೆಯಲ್ಲಿ ನಿಂತ. ೨. ಕೊನೆಗೊಂಡ; ಪೂರ್ತಿಯಾದ. ೩. ತಿಳಿದ; ಗೊತ್ತಾದ. ೪. (ಧಾನ್ಯದಂತೆ) ಕೂಡಿಟ್ಟ. (ನಾ). ೫. ನೆಲೆ; ವಾಸಸ್ಥಾನ; ಮನೆ : "ಅವಸಿತಂ ವೇಶ್ಮವೆನೆ ಗೇಹಮೆನೆ ಧಿಷ್ಣ್ಯಮೆನಲಿವು ಮನೆಗೆ ಪೆಸರಕ್ಕು" (ಮಂಗರಾ. ೫೮–೭). [ಸಂ.]

**ಅವಸಿತಿ** (ನಾ). ಕಡೆ; ಕೊನೆ; ಮುಗಿವು : ಕೀಲ್ಬೊಂಬೆಗಳನಾಡಿಸಿ ಅವಸಿತಿಯೊಳ್ ಈಳ್ದ ಕರಿದೆರೆಯೆಂಬವೊಲ್ ಕವಿದುದು ಕತ್ತಲೆ (ಶೇಷರಾ. ೧೬–೯). [ಸಂ.]

**ಅವಸೆ** 'ಅಮವಾಸೆ' ನೋ.

**ಅವಸೇಕ** (ನಾ). (ದ್ರವವಸ್ತುವಿನಿಂದ) ತೋಯಿಸುವುದು; ನೆನೆಸುವುದು; ಚಿಮುಕಿಸುವುದು. [ಸಂ.]

**ಅವಸ್ಕಂದ** (ನಾ). ೧. ದಾಳಿ; ಮುತ್ತಿಗೆ; ಆಕ್ರಮಣ : "ಅವಸ್ಕಂದಃ, ಪ್ರಪಾತಃ – ಈ ೨ ದಾೞಿ" (ಹಲಾಯು. ೭೪–೨೯೮). "ಪ್ರಪಾತಮುದವಸ್ಕಂದಮೆನೆ ಧಾಳಿ" (ಮಂಗರಾ. ೮೫–೨೬). ೨. ಬಿಡಾರ; ಠಾಣ್ಯ. ೩. [ನ್ಯಾಯ] ಆರೋಪಣೆ; ತಪ್ಪುಹೊರಿಸುವುದು. [ಸಂ.]

**ಅವಸ್ಕಂದನ** (ನಾ). ೧. = ಅವಸ್ಕಂದ ೧ : ದೆಸೆಗೆಟ್ಟೋಡುವಶನಿಘೋಷನನುರ್ವರಾಸ್ಯತಿಲಕಂ ಕೊಂದಲ್ಲದಿರೆನೆಂದು ವಿದ್ಯೆಗಳಂ ಬೆನ್ನೊಳೆ ತಗುಳವೇೞ್ದು ತಾನುಂ ಶ್ರೀವಿಜಯನುಂ ವಿದ್ಯಾಧರಶೂರಸೈನ್ಯಾವಸ್ಕಂದನ ಸಮನ್ವಿತಂ ಬೆಂಕೊಳ್ವುದುಂ (ಶಾಂತಿಪು. ೬–೩೯ ವ). ೨. = ಅವಸ್ಕಂದ ೨ : ಪರಾಂಗನಾವಸ್ಕಂದನ ರಾಗ ತೀವ್ರಾನಾಚಾರಾದಿಗಳ್ ನಪುಂಸಕವೇದನೀಯದ ಆಸ್ರವಂಗಳ್ ಅಪ್ಪುವು (ತತ್ತ್ವಪ್ರ. ೨೬೨). [ಸಂ.]

**ಅವಸ್ಕರ** (ನಾ). ೧. ಕಸ; ಕೊಳೆ. ೨. ಮಲ; ಹೇಸಿಗೆ. ೩. ಗುಹ್ಯಪ್ರದೇಶ. ೪. ತಿಪ್ಪೆ; ಕುಪ್ಪೆ : ಅವಸ್ಕರದವೋಲ್ ಮೂತ್ರ ಪುರೀಷಾದಿ ಮಲಭಾಜನಮುಂ (ತತ್ತ್ವಪ್ರ. ೩೨೯). [ಸಂ.]

**ಅವಸ್ತು** (ನಾ). ವಸ್ತುವಲ್ಲದುದು; ಕೆಲಸಕ್ಕೆ ಬಾರದ ಪದಾರ್ಥ; ಅಪ್ರಯೋಜಕವಾದುದು : ಇದುದಲವಸ್ತುವೆನ್ನದೆ ಮದುಕ್ತಿಯನೊಯ್ಯನೆ ಕೇಳ್ದು ದಿವ್ಯಚಿತ್ತದೊಳವಧಾರಿಸು (ಆದಿಪು. ೮–೧೧); ನಿಮ್ಮ ದೃಷ್ಟಿ ಮತ್ತು ಕೊಬ್ಬಿದ ಕೊಳಕು ಮೈಯೆಲ್ಲ ಅವಸ್ತುವಂತೆ ತೋರುತ್ತಿದೆ (ಪುನರು. ೨೧೭). [ಸಂ.]

**ಅವಸ್ತುಭೂತ** (ಗು). ಕೆಲಸಕ್ಕೆ ಬಾರದ; ನಿಷ್ಪ್ರಯೋಜಕವಾದ : ಸೋದರರೆಂದು ನಾಣ್ಚಿ ಸೆಡೆದಿರ್ದಪೆನಿರ್ದೊಡವಸ್ತುಭೂತನೆಂದಾದಮೆ ಭೂತಳಂ ಪೞಿಯೆ ತೇಜಮೆ ಕೆಟ್ಟಪುದು (ಪಂಪಭಾ. ೯–೧೮). [ಅವಸ್ತು + ಭೂತ]

**ಅವಸ್ಥಾಂತರ** (ನಾ). ಬೇರೊಂದು ಅವಸ್ಥೆ; ಕಷ್ಟದ ಸನ್ನಿವೇಶ: ನಾನಿರ್ಪವಸ್ಥಾಂತರದೊಳೆನಗೆ ನಿನ್ನನ್ನರಾರ್ ಬಂಧುಗಳ್ (ಕಾದಂಪೂ. ೪೫೧); ತನ್ನವಸ್ಥಾಂತರಕ್ಕೆ ತಾನೆ ಬೆಕ್ಕಸಂಬಡುತ್ತಿರ್ಪನ್ನೆಗಂ (ಚಂದ್ರಪು. ೫–೧೯ ವ). [ಸಂ.]

**ಅವಸ್ಥಾತ್ರಯ** (ನಾ). ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳು: ಜಾಗ್ರತ್ಸ್ವಪ್ನ ಸುಷುಪ್ತಿ ಮೂರು ಅವಸ್ಥಾತ್ರಯಗಳು (ಪಂಚೀಕ. ೬). [ಸಂ. (ಅವಸ್ಥಾ + ತ್ರಯ)]

**ಅವಸ್ಥಾತ್ರಿತಯ** (ನಾ). = ಅವಸ್ಥಾತ್ರಯ: ಕನಸು ಮೇಣೆಚ್ಚರು ಸುಷುಪ್ತಿಗಳೆನಿಪವಸ್ಥಾತ್ರಿತಯದಲೆ ಜೀವನು ವಿಸಂಚಿಸಿ ಬೀಳ್ವನಲ್ಲದೆ ಶರಕೆ ಸಿಲುಕುವನೆ (ಕುವ್ಯಾವಿ. ೮–೮೮). [ಸಂ. (ಅವಸ್ಥಾ + ತ್ರಿತಯ)]

**ಅವಸ್ಥಾನ** (ನಾ). ೧. ನೆಲೆ; ನಿಲುಗಡೆ; ವಾಸಸ್ಥಳ. ೨. ಸನ್ನಿವೇಶ; ಪರಿಸ್ಥಿತಿ. ೩. ಮಲ್ಲಯುದ್ಧ (ಜಟ್ಟಿಕಾಳಗ)ದಲ್ಲಿ ನಿಲ್ಲುವ ಒಂದು ರೀತಿ: ಕೃಷ್ಣಂ... ನಿರ್ವರ್ತನಾವರ್ತನ ಭ್ರಮಣಂ ಲಲನಂ ಪ್ಲವನಾವಸ್ಥಾನಾದಿಕ್ರಿಯಾಪರಿಣತಂ (ಚಾವುಂಪು. ೩೫೭). 'ಅವಠಾಣ' ಪರಾ. ೪. ಮಟ್ಟ; ಹಂತ; ದರ್ಜೆ: ಭಾಷೆಯು ಒಂದು ಅವಸ್ಥಾನವನ್ನು (Stage) ಮುಟ್ಟಿತೆಂದು ಹೇಳುವ ಸ್ಥಿತಿ ಬರುತ್ತದೆಯೆಂದೂ ... ಹೇಳಿದೆ (ಕೈಪಿಡಿ. ೩೦೯). [ಸಂ.]

**ಅವಸ್ಥಾಭೇದ** (ನಾ). ಸ್ಥಿತಿಯಲ್ಲಿರುವ ವ್ಯತ್ಯಾಸ: ವಿಷ್ಣುಶಿವರು ಪ್ರಪಂಚಕ್ಕೆ ಉಪಾದಾನ ನಿಮಿತ್ತರಾಗಿರುವರು. ಇವರಿಗೆ ಅವಸ್ಥಾಭೇದ ಹೊರತು ಸ್ವರೂಪಭೇದವಿಲ್ಲ (ಹಿಂದಸಾ. ೨೯೫).
[ಸಂ. (ಅವಸ್ಥಾ + ಭೇದ)]

**ಅವಸ್ಥಾಯಿ** (ಗು). ನೆಲೆಗೊಂಡ; ನಿಂತ; ವಾಸಿಸುವ.
[ಸಂ. ಅವಸ್ಥಾಯಿನ್]

**ಅವಸ್ಥಾರೂಪ** (ನಾ). ಇರುವ ರೀತಿ: ನಿಮ್ಮಯ ಮಗನವಸ್ಥಾರೂಪವಿದು ಚಿತ್ತವಿಸಿ ನೀವು (ಕುವ್ಯಾಸ. ೧೨–೪೨). [ಸಂ. (ಅವಸ್ಥಾ + ರೂಪ)]

**ಅವಸ್ಥಿತ** (ನಾ). [ಜೈನ] ಸಮ್ಯಗ್ದರ್ಶನಾದಿ ಗುಣಸ್ಥಾನದಿಂದ ಹುಟ್ಟಿದ ಇರವು, —ಸ್ಥಿತಿ: ಅವಸ್ಥಿತಮೆಂಬುದು ಸಮ್ಯಗ್ದರ್ಶನಾದಿ ಗುಣಸ್ಥಾನದಿಂ ಎನಿಬಿರಿದು ಪುಟ್ಟಿತ್ತು (ತತ್ತ್ವಪ್ರ. ೬೮). [ಸಂ.]

**ಅವಸ್ಥಿತಿ** (ನಾ). ೧. ನೆಲೆ. ೨. ಅನುಸರಿಸಿ ಇರುವುದು; ಅಭ್ಯಾಸ ಮಾಡುವುದು. [ಸಂ.]

**ಅವಸ್ಥೆ** (ನಾ). ೧. ಸ್ಥಿತಿ; ಸನ್ನಿವೇಶ. ೨. (ಸ್ವರೂಪ, ವಯಸ್ಸು, ಅವಕಾಶ ಮುಂತಾದುವುಗಳ) ಪರಿಸ್ಥಿತಿ: ಕನ್ನಡ ಭಾಷೆಗೆ ಮೂರು ಅವಸ್ಥೆಗಳುಂಟೆಂದು ಅಭಿಪ್ರಾಯಪಡುತ್ತಾರೆ (ಕೈಪಿಡಿ. ೩೧೦). ೩. ತೊಂದರೆ; ಕಷ್ಟ; ಕ್ಲೇಶ: ಎನಗಿನಿತೊಂದವಸ್ಥೆ ವಿಧಿಯೋಗದಿನಾದುದಿದರ್ಕೆ ನೀನಚಲ್ದಿನಿತು ಮನಃಕ್ಷತಂಬಡದಿರ್ (ಪಂಪಭಾ. ೧೩–೧೦೫); ಕಂಡರೆ ಮನೋಹರವಯ್ಯಾ, ಕಾಣದಿದ್ದರೆ ಅವಸ್ಥೆ ನೋಡಯ್ಯ (ಬಸವ. ೩೭೦); ಈಯವಸ್ಥೆಗೆ ನಮ್ಮ ತಂದನು ಭಾನುನಂದನನು (ಕುವ್ಯಾಕ. ೧–೧೩). ೪. ನಲವತ್ತೈದುಬಗೆಯ ಮಂತ್ರಸಾಧನಗಳಲ್ಲಿ ಒಂದು: ಅವಸ್ಥೆ, ಸ್ವರ, ಪ್ರಕೃತಿ ... ಅತ್ಮೈಕ್ಯಗಳೆಂಬ ಪಂಚಚತ್ವಾರಿಂಶನ್ಮಂತ್ರ ಸಾಧನಂಗಳೊಳು ಪ್ರಜ್ಞೆಗೊಂಡು (ವಿವೇಕ. ೮೦).

**ಅವಸ್ಥೆಗೊಳ್** = ೧. ಕಷ್ಟಪಡು; ಕ್ಲೇಶಪಡು; ದುಃಖಿಸು: ಹಚ್ಚಡದ ಸೆಜಗಂ ಪಿಡಿದು ಕೈಯಿಂದ ಸೆಳೆಸೆಳೆದು ಜೋಲುತ್ತ ತೆಗೆವಂ ಬಲುಮುನಿಸು ನಿಮ್ಮಿಂದವಲ್ಲದೆ ತಿಳಿಯದೆನುತುಂ ಬಾಲಲಿಂಗನವಸ್ಥೆಗೊಳುತಿರಲು (ಬಸವು. ೪೭–೪೭). ೨. ಸ್ಥಿತಿಯನ್ನು ಪಡೆ. [ಸಂ. ಅವಸ್ಥಾ]

**ಅವಸ್ಪಂದ** (ಗು). ಸ್ಪಂದವಿಲ್ಲದ; ನಿರ್ವಿಕಾರವಾದ; ಸ್ಥಿರವಾದ: ಎಂದೀ ಬಿನ್ನಪಮನವಸ್ಪಂದಮನಂತೆಯ್ದೆ ಕೇಳ್ದು ಮನುಜೋಕ್ತಿಪರಿಸ್ಪಂದಮತಿ ಕೇಳದಂತಿರ್ದಂದಪಗತಚಳನ ಜಳಧಿಯಂ ವಿಭು ಪೋಲ್ತಂ (ಶಾಂತಿಪು. ೧೦–೧೧೬). [ಸಂ.]

**ಅವಹಿತ** (ಗು). ೧. ನೆಲೆಗೊಳಿಸಿದ; ಇಡಲ್ಪಟ್ಟ. ೨. ನಿಯೋಜಿಸಿದ; ಅವಧಾನಗೊಂಡ. [ಸಂ.]

**ಅವಹಿತಧ್ಯಾನ** (ಗು). ಧ್ಯಾನದಲ್ಲಿ ಮಗ್ನನಾದ: ಇತ್ತ ವೃಷಭನಾಥನುಂ ವರೌನವ್ರತದಿಂ ಯೋಗಯೋಗ್ಯಪ್ರದೇಶದೊಳ್ ಅವಹಿತಧ್ಯಾನನಾಗಿ ವಿಹಾರಿಸಿ (ಚಾವುಂಪು. ೩೭–೫); ಯೋಗಯೋಗ್ಯಪ್ರದೇಶದೊಳ್ ವಾಕ್ಸಂಯಮನುಮವಹಿತಧ್ಯಾನನುಮಾಗಿರೆ (ಅಜಿಪು. ೭–೮ ವ).
[ಅವಹಿತ + ಧ್ಯಾನ]

**ಅವಹಿತಭಾವ** (ನಾ). ಮನಸ್ಸಿನ ಭಾವವನ್ನು ಅಡಗಿಸುವುದು: ಸ್ವಭಾವಗಂಭೀರವೃತ್ತಿಯಪ್ಪುದಱಿನವಹಿತಭಾವಮನವಳಂಬಿಸಿ (ಚಂದ್ರಪು. ೬–೧೩ ವ). [ಅವಹಿತ + ಭಾವ]

**ಅವಹಿತ್ಥ** (ನಾ). ೧. (ಮನಸ್ಸಿನ ವಿಕಾರವನ್ನು ಹೊರಗೆ ತೋರ್ಪಡಿಸದಂತೆ) ಬಚ್ಚಿಡುವುದು. ೨. [ಕಾವ್ಯಮೀ] ಮೂವತ್ತು ಮೂರು ಸಂಚಾರಿಭಾವಗಳಲ್ಲಿ ಒಂದು: "ನಾಚಿಕೆ ಭಯ ಮುಂತಾದವು ಉಂಟಾದಾಗ, ಅವು ಶರೀರದಲ್ಲಿ ಗೋಚರವಾಗದಂತೆ ಮರೆಸುವುದು ಅವಹಿತ್ಥ" (ಭಾರವಿಮಾ. ೩೪೭). ಮತಿನಿರ್ವೇದಾವಹಿತ್ಥಶ್ರಮಮದ ಜಡತಾ ... ಇವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೫). ೩. [ನಾಟ್ಯಶಾ] ಸಂಯುತಹಸ್ತಗಳಲ್ಲಿ ಒಂದು: ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತ ಹಸ್ತಗಳು ಯಾವುವೆಂದರೆ ೧. ಅಂಜಲಿ ... ೧೧ ಗಜದಂತ ೧೨ ಅವಹಿತ್ಥ ಮತ್ತು ೧೩ ವರ್ಧಮಾನ (ಅಭಾನ್ಯ. ೪೮). [ಸಂ.]

**ಅವಹಿತ್ಥೆ** (ನಾ). = ಅವಹಿತ್ಥ ೨: ಚಿಂತೆ, ಅಸೂಯೆ, ಅವಹಿತ್ಥೆ, ಉಗ್ರ, ಅಪಸ್ಮಾರಗಳೆಂಬ ಮೂವತ್ತುಮೂರು ಸಂಚಾರೀಭಾವಂಗಳಿಂ ಪರಿವರ್ಧಿಸಿ (ವಿವೇಕ. ೨೨೭). [ಸಂ. ಅವಹಿತ್ಥಾ]

**ಅವಹೇಳನ** (ನಾ). ಅಗೌರವದಿಂದ ಕಾಣುವುದು; ಅವಮಾನ; ತಿರಸ್ಕಾರ: ಇನ್ನೊಬ್ಬರ ಅವಹೇಳನವನ್ನು ಗುರಿಯಾಗಿಟ್ಟುಕೊಂಡ ಕಾವ್ಯವಾಗಲಿ, ಸಾಹಿತ್ಯವಾಗಲಿ, ಚಿತ್ರಕಲೆಯಾಗಲಿ ಬೆಳೆಯಲಾರದು (ರಂಗರೋ. ೧೦೮); ಯಜಮಾನರ ಪ್ರೇಮಪೂರ್ಣ ದೃಷ್ಟಿಗೋಸ್ಕರ ನಾನು ಅವಹೇಳನವನ್ನು ಸಹಿಸಬಲ್ಲೆ (ಕಲಕ. ೫೨).

**ಅವಹೇಳನಂಮಾಡು, ಅವಹೇಳನಮಾಡು** = ಅಗೌರವದಿಂದ ಕಾಣು; ತಿರಸ್ಕಾರಮಾಡು; ಹಾಸ್ಯಮಾಡು: ತನ್ನಣ್ಣನಾರ್ಪ ನಾಶಂಕಿಸಿದ ವಾನರನ ಕೀಳ್ಮೆಗವಹೇಳನಂ ಮಾಳ್ಪವೋಲ್ (ಶ್ರೀರಾಮಾ. ೨೮೮–೩೬೬); ಅವನ ಮೃದುಸ್ವಭಾವವನ್ನು ಕಂಡು ದೇವದತ್ತನು ಅವಹೇಳನ ಮಾಡುತ್ತಿದ್ದನು (ಹಿಂಕಿರು. ೩೩). [ಸಂ. ಅವಹೇಲನ]

**ಅವಹೇಳಿಸು** (ಕ್ರಿ). ಅವಹೇಳನಮಾಡು: ಖೇಲನವ ಬೇಡವೆನುವರನು ವಿಧಿರಾಯನವಹೇಳಿಪನು ಸೆರೆವಿಡಿದು (ಮುಂಕುಕ. ೨೬೭).
[ಅವಹೇಳನ + –ಇಸು$_3$]

**ಅವಳ್$_1$** 'ಅದ್ದು$_1$' ಪರಾ.

**ಅವಳ್$_2$** 'ಅಮುಳ್' ನೋ.

**ಅವಳ** 'ಅಮುಳ್' ನೋ.

**ಅವಳಂಬಿಸು** 'ಅವಲಂಬಿಸು' ನೋ.

**ಅವಳಜವಳ** 'ಅವಳಿಜವಳಿ' ನೋ.

**ಅವಳಿ** 'ಅಮುಳ್' ನೋ.

**ಅವಳಿಗಟ್ಟಿಗೆ** (ನಾ). ಜೋಡಿಕಟ್ಟಿಗೆ: ಉರಿಗೆಂಡದೊಳಗವಳಿಗಟ್ಟಿಗೆಯ ಕಟ್ಟ ನಡುವಿರಿಸಿ ಬೇಯಿಸಿ (ಸೂಪಶಾ. ೪–೪೯).
[ಅವಳಿ (< ಅಮುಳ್) + ಕಟ್ಟಿಗೆ]

**ಅವಳಿಗಿರಿ** (ನಾ). ಜೋಡಿ ಬೆಟ್ಟ; ಒಂದನ್ನೊಂದು ಹೋಲುವ ಎರಡು ಬೆಟ್ಟಗಳು: ಅವಳಿಗಿರಿಗಳವೋಲು ದೃಢತರದವಯವದ ಘನವಜ್ರಸಾರದ ಜವಳಿಸಿಂಹದವೋಲು ದುರ್ಧರ ಶೌರ್ಯಸಾಹಸರು (ನಿಭಾಗ. ೩–೮–೯).
[ಅವಳಿ (< ಅಮುಳ್) + ಗಿರಿ$_1$]

**ಅವಳಿಚುಕ್ಕಿ** (ನಾ). ಜೋಡಿನಕ್ಷತ್ರ; ಒಂದನ್ನೊಂದು ಹೋಲುವ ಎರಡು ನಕ್ಷತ್ರಗಳು; ಅಶ್ವಿನೀನಕ್ಷತ್ರ: ಪುನರ್ವಸು, ಪುನರ್ವಸು ದ್ವಿತೀಯ ಎಂಬ ಅವಳಿಚುಕ್ಕಿಗಳೇ ಮಿಥುನದ ತಲೆಗಳು (ಜ್ಯೋತಿರ್ವಿ. ೩೯). [ಅವಳಿ (< ಅಮುಳ್) + ಚುಕ್ಕಿ$_1$]

**ಅವಳಿಜವಳಿ, ಅವಳಜವಳ** (ನಾ). ೧. ಜೋಡಿ; ಒಂದೇ ಸಮನಾದ ಎರಡು ವಸ್ತುಗಳ ಜತೆ; ಯಮಳ. ೨. ಒಂದೇ ಹೆರಿಗೆಯಲ್ಲಿ ಹುಟ್ಟಿದ ಎರಡು ಮಕ್ಕಳು: ನಮ್ಮ ಹಿರಿಯರ ಹೊಟ್ಟೇಲಿ ನಾವಿಬ್ಬರು ಅವಳಿಜವಳಿ ಗಂಡುಮಕ್ಕಳು (ಮುಂಬಯಿ. ೪–೧೦೩); ಭಾಗವತ ಸಂಪ್ರದಾಯದಲ್ಲಿ, ಬಲರಾಮಕೃಷ್ಣರೆಂಬವರು ಒಬ್ಬರನ್ನೊಬ್ಬರು ಅಗಲಲಾರದಂಥ ಅವಳಿಜವಳಿಯರು (ಯಕ್ಷಬ. ೩೭); ನೀವು ಅವಳಿಜವಳಿಗಳೇ (ನಡೆದಾ. II, ೧೨೫೧). **ಅವಳಜವಳ**: "ಯಮಳ – ಅವಳ ಜವಳ, ಜೋಡು" (ಗಂಗಾಮ).

**ಅವಳಿಜವಳಿ ಮಕ್ಕಳು** = ಒಂದೇ ಹೆರಿಗೆಯಲ್ಲಿ ಹುಟ್ಟಿದ ಎರಡು ಸಂತಾನ: ಅವಳಿಜವಳಿ ಮಕ್ಕಳಂತಿದ್ದಾರೆ ಆ ಹುಡುಗರು (ರೂಢಿ).
[ಅವಳಿ (< ಅಮುಳ್) + ಜವಳಿ$_1$]

**ಅವಳಿಮೊಲೆ** (ನಾ). ಮೊಲೆಗಳ ಜೋಡಿ; ಸ್ತನಯುಗ: ನವರತ್ನದ ಪುಸ್ತಿ ಕಟ್ಟಾಣಿಮುತ್ತಿನ ಖಚಖಚಿಸುವ ಪಂಚಸರದ ಅವಳಿಮೊಲೆಯ ಮಧ್ಯಕಮರಿದ ಪದಕದೆ ಕುವಲಯನೇತ್ರೆಯೊಪ್ಪಿದಳು (ಕಂಸವಿ. ೯–೭೨).
[ಅವಳಿ (< ಅಮುಳ್) + ಮೊಲೆ]

**ಅವಳಿಸು** 'ಅವ್ವಳಿಸು' ನೋ.

**ಅವಳು** 'ಅದು$_1$' ಪರಾ.

**ಅವಳೆ, ಆವಳೆ** (ನಾ). ಸಣ್ಣ ಕಾಲುವೆ: ಸಂಕರನಾಯ್ಕ ಆಳುತ್ತ ವ್ರಿತ್ತಿಗಡಿ ತೆಂಕಲೂ ಹರಿದ ಅವಳೆ ಗಡಿ ಪಡು ಬಸ್ತಿಗಡಿ ಬಡಗಲೂ (ಕಇ. I, ೪೧–೩೦; 1417 ?); ಮೂಡಲು ಕಟ್ಟಿದ ಪಾಗರಲು ಮುಂದೆ ಹರಿದ ಅವಳೆ ಗಡಿ ತೆಂಕಲು ಅವಳೆಗಡಿ (ಕಇ. III-i, ೯–೧೫; 1538). **ಅವಳೆ**: ಪಡುವಲು ಸಂಜೆ[ನಾ]ಯಕನ ಮಾವಣನಾಯ್ಕ ಆಕಯ್ಯ ಅವಳೆಗಡಿ ಬಡಗಲು (ಕಇ. I, ೪೧–೪೭; 1417 ?). [?]

**ಅವಲೋಕಿನೀವಿದ್ಯೆ** 'ಅವಲೋಕಿನೀವಿದ್ಯೆ' ನೋ.

**ಅವಲೋಕಿಸು** 'ಅವಲೋಕಿಸು' ನೋ.

**ಅವಳ್ದಿರ್** 'ಅದು$_1$' ಪರಾ.

**ಅವಱು** (ಕ್ರಿ). ಹಲ್ಲಿನಿಂದ ಕಚ್ಚು; ಹಲ್ಲಿನಿಂದ ಬಲವಾಗಿ ಕಡಿ: ಸಿಂಗಂ ಪೆಱುತಿರಲಾ ಶಿಶುವಂ ತಾಯಂಗದಿ ತಲೆ ಹೊಱಟುದಯಿಪ ಸಮಯಕೆ ಮುಂಗಡೆಯೊಂದು ಮತಂಗದ ಮಱಿಯಿರೆ ಕಾಣುತ ಕಡು ಮುಳಿದು ಜಂಗಿಸಿಯಾವೊಡಲಿಂದದನವಱಿತು ತುಂಗಪರಾಕ್ರಮಿಗಳ್ ಕಿಱಿದಾದೊಡೆ ಪಿಂಗುವರೇ ತಮ್ಮಯ ಕೃತ್ಯವಂ (ಜಯಕಾ. ೧೫–೩೨). ℙ ಈ ಶಬ್ದ 'ಅವುಡು' ಎಂಬುದರ ಬೇರೊಂದು ರೂಪ.
[< ಅವುಡು$_1$]

**ಅವಾಂತರ** (ಗು). ೧. ನಡುವೆ ಉಂಟಾದ; ಮಧ್ಯದಲ್ಲಿ ಸೇರಿಕೊಂಡ. ೨. ಮುಖ್ಯವಲ್ಲದ; ಅಧೀನವಾದ. 'ಅವಾಂತರಭೇದ' 'ಅವಾಂತರಮುಕ್ತ'ಪರಾ. (ನಾ). ೩. (ಸೈನ್ಯ, ಯುದ್ಧ ಮುಂತಾದವುಗಳಿಂದ ಆಗುವ) ತೊಂದರೆ, —ಉಪದ್ರವ: ಊರಿಗೆ ಅನ್ಯಾಯ ಅವಾಂತರ ಬಂದಡಂ ಸ್ಥಾನಿಕರು ತಪೋಧನರ ಸಂಮತ × × ನಡೆವಂತಾಗಿ (ಸೌಇಇ. IX-i, ೩೨೭–೧೦; 1207); ವೀರಣನಾಯಕರು ಧಾರಾಪೂರ್ವಕವಾಗಿ ಕೊಟ್ಟರಾಗಿ ಕೃಷ್ಣರಾಯರ ಅವಾಂತರದಲಿ ಅರಸುಗಳು ಅರ್ಥಕೆ ತೆಗೆದುಕೊಂಡು × × × ನಡೆದು ಬರಲಾಗಿ (ಎಕ. XIV, ಶ್ರೀರಂಗ. ೨೬೦–೩; 1551); ಕಟಿಯ ಕೆಳಗೆ ಕುಣಿತದ ಬೆವರಿನ ಅವಾಂತರಕ್ಕಾಗಿ ಚಲ್ಲಣ ಧರಿಸಿ ಮೇಲೆ ವೀರಗಚ್ಚೆ ಹಾಕುತ್ತಾರೆ (ಯಕ್ಷಬ. ೧೩೫). ೪. ಗದ್ದಲ; ಗಡಿಬಿಡಿ: ಎಲಾ ಹುಡುಗ, ಈಗಿನಿಂದಲೇ ಇಷ್ಟು ಅವಾಂತರ, ಮುಂದೆ ಮದುವೆ ಆಗೋದಾದರೆ ಇನ್ನೇನು ಅವಾಂತರ ಮಾಡ್ತೀಯೋ ಕಾಣೆ (ಮರಳಿ. ೧೦೦); ಏನಿದು ಪಾರ್ವತಿ! ಈ ಅವಾಂತರ! ನನ್ನನ್ನು ಕೆರಳಿಸಬೇಕೆಂದಿರುವೆಯಾ? (ಕೈಲಾಕ. ೫೬).

**ಅವಾಂತರವೆಬ್ಬಿಸು** = ಗಡಿಬಿಡಿಯನ್ನು ಹುಟ್ಟಿಸು; ಗದ್ದಲವನ್ನು ಉಂಟುಮಾಡು; ತೊಂದರೆಗೊಳಿಸು: ಹೊಡೆದಾಡಿ ಒಬ್ಬರ ಮುಖವನ್ನೊಬ್ಬರು ಪರಚಿ, ಒಬ್ಬರ ಕೂದಲನ್ನೊಬ್ಬರು ಎಳೆದು ಕಿತ್ತು ಅವಾಂತರವೆಬ್ಬಿಸಿದ್ದಾರೆ (ನಗೆಹೊ. ೨೩೩). [ಸಂ.]

**ಅವಾಂತರಕಥೆ** (ನಾ). ಮುಖ್ಯವಾದ ಕಥೆಯ ನಡು ನಡುವೆ ಬರುವ ಉಪಕಥೆ. [ಅವಾಂತರ + ಕಥೆ]

**ಅವಾಂತರಕಾರಣ** (ನಾ). ಮುಖ್ಯವಲ್ಲದ ಕಾರಣ; ಅಧೀನವಾದ ಕಾರಣ; ಸಹಕಾರಿಯಾಗಿ ನಡುವೆ ಒದಗುವ ಕಾರಣ: ಘಟವು ಕಾರ್ಯವು, ಇದಕ್ಕೆ ಮೃತ್ತಿಕೆಯು ಕಾರಣ, ಅವಾಂತರಕಾರಣ ದಂಡ ಮೊದಲಾದುವು, ಕರ್ತಾ ಕುಂಬಾರನು (ಹಸಾರ. ೯೬೬–೩ ಟೀಕು).
[ಅವಾಂತರ + ಕಾರಣ]

**ಅವಾಂತರಪ್ರಲಯ** (ನಾ). ಮಹಾಪ್ರಳಯಕ್ಕೆ ಮುಂಚೆ ಬ್ರಹ್ಮಾಂಡದಲ್ಲಿ ಆಗತಕ್ಕ ಪ್ರಲಯ: ಬ್ರಹ್ಮಾಂಡದೊಳಗೆ ಆಗತಕ್ಕ ಪ್ರಲಯಗಳು ಅವಾಂತರಪ್ರಲಯಗಳು (ಹಿಂದಸಾ. ೨೮೪).
[ಅವಾಂತರ + ಪ್ರಲಯ]

**ಅವಾಂತರಫಲ** (ನಾ). ಮುಖ್ಯ ಫಲವಲ್ಲದೆ ನಡುವೆ ಒದಗಬಹುದಾದ ಬೇರೆಯ ಪ್ರಯೋಜನ: ಅವಾಂತರ ಫಲವೇನೆಂದರೆ ಹೀಗೆ ನಿಶ್ಚಯ ಬಂದಹೊತ್ತಿಗೂ ತ್ರಿವಿಧಕರಣಗಳನ್ನು ಮಿಶ್ರಕರ್ಮದಲ್ಲಿಯಾದರೂ ಬಿಡಬೇಕು. ಸರ್ವಾತ್ಮನಾ ಪಾಪಕರ್ಮದಲ್ಲಿ ಬಿಡದೆ ಇರಬೇಕು ಎಂಬುದೇ ಅವಾಂತರ ಫಲವೆನಿಸುವುದು (ವೇಸಾರ. ೨೧). [ಅವಾಂತರ + ಫಲ]

**ಅವಾಂತರಭೇದ** (ನಾ). ಒಳಭೇದ; ಒಂದೇ ಜಾತಿಯ ವಸ್ತು ಅಥವಾ ವಿಷಯಗಳಲ್ಲಿ ಇರುವ ಪರಸ್ಪರವಾದ ಸಣ್ಣಪುಟ್ಟ ವ್ಯತ್ಯಾಸ: ಶೈವಶಾಸ್ತ್ರವು ಬಲುವಿಸ್ತೃತವಾದುದು. ಅದರಲ್ಲಿ ಅನೇಕ ಅವಾಂತರ ಭೇದಗಳಿವೆ (ಚೆನ್ನಸಾ. ೨ ಮು).
[ಅವಾಂತರ + ಭೇದ]

**ಅವಾಂತರಮುಕ್ತ** (ನಾ). ಮೊದಲು ಪ್ರಾಪಂಚಿಕ ವ್ಯವಹಾರಗಳಲ್ಲಿ ತೊಡಗಿದ್ದು ಆಮೇಲೆ ಮುಕ್ತನಾದವನು; ಸಂಸಾರಿಯಾಗಿದ್ದು ತರುವಾಯ ಮುಕ್ತನಾದವನು; ಮೋಕ್ಷಹೊಂದಿದವನು: ಇವರು ಅನಾದಿಮುಕ್ತರಲ್ಲ ಅವಾಂತರಮುಕ್ತರೆಂಬ ಅವಲಕ್ಷಣದ ನಾಯನಾಲಿಗೆಯ ನೇನೆಂಬೆ (ಸಿದ್ಧೇವ. ೫೫); ಮೊದಲುಪ್ರಪಂಚವರ್ತನೆಯ ದೇಹವುಳ್ಳವರಾಗಿ ಆಮೇಲೆ ಮುಕ್ತರಾದವರು (ಅವಾಂತರ ಮುಕ್ತರು) ಎನ್ನುವರು ಶೈವಮತದವರು (ಸಿದ್ಧೇವ. ೫೫ ಟಿ). [ಅವಾಂತರ + ಮುಕ್ತ]

**ಅವಾಂತರವಾಕ್ಯ** (ನಾ). ಪ್ರಾಸಂಗಿಕವಾಗಿ ನಡುವೆ ಒದಗುವ ವಾಕ್ಯ; ಮಧ್ಯದಲ್ಲಿ ಉಂಟಾದ ವಾಕ್ಯ: ಎಲ್ಲಿ ಆ ಅವಾಂತರ ವಾಕ್ಯದ ಅರ್ಥವು ಮತ್ತೊಂದು ಪ್ರಮಾಣಕ್ಕೆ ವಿಷಯವಾಗಿರುವುದೋ ಅಲ್ಲಿ ಅದನ್ನು ಅನುವಾದಮಾಡಿಕೊಂಡು ಅರ್ಥವಾದವು ಪ್ರವರ್ತಿಸುತ್ತದೆ (ಬ್ರಹ್ಮಭಾ. ೫೦೧). [ಅವಾಂತರ + ವಾಕ್ಯ]

**ಅವಾಂತರಶೈವ** (ನಾ). ೧. ಶೈವರಲ್ಲಿ ಒಂದು ಒಳಪಂಗಡ : ಆ ದೀಕ್ಷಾಯುಕ್ತಮಾದ ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಪ್ರವರಶೈವ, ಅಂತರಶೈವವೆಂಬಿವೇ ಸಪ್ತಶೈವಂಗಳು (ವಿವೇಕ. ೬೨). ೨. ಅವಾಂತರ ಶೈವ ಪಂಗಡಕ್ಕೆ ಸೇರಿದವನು : ಶಿವದೀಕ್ಷಾ ಸಂಪನ್ನರಾದ ವೈಶ್ಯರೇ ಅವಾಂತರಶೈವರು (ವಿವೇಕ. ೬೨). [ಅವಾಂತರ + ಶೈವ]

**ಅವಾಂತರಸೃಷ್ಟಿ** (ನಾ). [ವೀಶೈ] ಪ್ರಾಸಂಗಿಕವಾಗಿ ಮಧ್ಯದಲ್ಲಿ ಆದ ಸೃಷ್ಟಿ : ಪರಮಾತ್ಮನ... ಲೀಲಾಯಾತ್ರೆಯೇ ಸೃಷ್ಟಿಯೆನಿಸುವುದು. ಇದು ಆದಿಸೃಷ್ಟಿಯಲ್ಲ, ಅವಾಂತರಸೃಷ್ಟಿ. ಪ್ರಳಯಕಾಲದಲ್ಲಿ ತನ್ನೊಳಗೆ ಚಿದ್ರೂಪದಲ್ಲಿ ಅಡಗಿದ್ದ ಜೀವರನ್ನು ಹೊರಪಡಿಸುವ ಲೀಲಾವಿನೋದವೇ ಈ ಸೃಷ್ಟಿ (ಶಕ್ತಿವಿ. ೨೪). [ಅವಾಂತರ + ಸೃಷ್ಟಿ]

**ಅವಾಂತ್ರ** (ನಾ).=ಅವಾಂತರ ೩ : ಹಾವಳಿ ಬರಪಗೌಡ್ರ ಅವಾಂತ್ರದಲು (ಎಕ. IX, ದೊಡ್ಡಬ. ೬–೬ ; 1596 ?) ; ಶ್ರೀಮತ್ ರಾಜಶ್ರೀ ತಮ್ಮಳ ನಾಯಕನವರಿಗೆ ವಂದು ಅವಾಂತ್ರ ಬರಲೀಕಾಗಿ (ಎಕ. XI, ಹಿರಿಯೂ. ೬–೪ ; 1617 ?) ; ಮಂತ್ರಿಕಾಪಾಯಮಾದುದರಿಂದ ಪಟ್ಟಣಕವಾಂತ್ರ ಸಂಜನಿಸಿದುದು (ವೆಂಕಾರಾ. ೬–೨೬–೪೩) ; ಸತ್ಯಮಂಗಲ ಮುಂತಾದ ಶೀಮೆಯಲ್ಲಿ ಕಾಡಾನೆಗಳ ಅವಾಂತ್ರ ಬಹಳವಾಗಿರುವುದು (ಕಥಾಮಂ. ೪–೬೩) ; ಅವಾಂತ್ರದಲ್ಲಿ ಸಿಕ್ಕಿದ ಕುದುರೆ ದೇಶಾಂತ್ರವಾಗಿ ಓಡಿ ಹೋಯಿತು (ಗಾದೆ). [< ಸಂ. ಅವಾಂತರ]

**ಅವಾಕ್ಕು** (ನಾ). ೧. ಮಾತಿಲ್ಲದಿರುವುದು. ೨. ಮೂಗ.

**ಅವಾಕ್ಕಾಗಿಸು** = ಮಾತನಾಡದಂತೆ ಮಾಡು ; ಮೂಕವಾಗಿಸು: ರಸಿಕರೆಲ್ಲರ ಎದುರಿಗೂ ಪಿಟೀಲುವಾದನ ನಡೆಸಿ ಎಲ್ಲರನ್ನೂ ಅವಾಕ್ಕಾಗಿಸಿದರು (ಸಂಗೀತ. ೧೦೪). **ಅವಾಕ್ಕಾಗು** = ಮಾತು ಹೊರಡದಂತಾಗು : ಈ ಆನಂದಪರವಶತೆಯಿಂದ ಲಕ್ಷ್ಮೀಬಾಯಿಯು ಅವಾಕ್ಕಾದಳು (ಭಕ್ತವಿಾ. ೮) ; ಮಾಚಿಕಬ್ಬೆ ಆಗ ಬಸದಿಯಿಂದ ಹಿಂದಿರುಗಿ ಮನೆಯ ಹೊಸ್ತಿಲನ್ನು ಸೇರಿ, ಪತಿಯನ್ನು ಕಂಡು ಅವಾಕ್ಕಾಗಿ ನಿಂತರು (ಶಾಂತಲಾ. ೩). [ಸಂ. ಅವಾಚ್]

**ಅವಾಕ್ಛ್ರುತಿ** (ನಾ). ೧. ಮೂಕತನ ಮತ್ತು ಕಿವುಡುತನ. ೨. ಮೂಗನೂ ಕಿವುಡನೂ ಆಗಿರುವವನು : "ಕಳಮೂಕಸ್ತ್ವವಾಕ್ಛ್ರುತಿಃ" (ಹಲಾಯು. ೧೦೦–೪೫೫). [ಸಂ.]

**ಅವಾಗ್ಗೋಚರ** (ಗು). ಮಾತಿಗೆ ಗೋಚರವಾಗದ ; ವರ್ಣಿಸಲು ಶಕ್ಯವಿಲ್ಲದ: ತ್ರಿಜಗತ್ಸಾರತರಂ ವಿಯಚ್ಚರಪುರಂ ಚೆಲ್ವಿಂದವಾಗ್ಗೋಚರಂ (ಶಾಂತಿಪು. ೫–೧೧). [ಸಂ.]

**ಅವಾಗ್ಭವ** (ಗು). ದಕ್ಷಿಣದಲ್ಲಿ ಹುಟ್ಟಿದ ; ತೆಂಕಲಲ್ಲಿ ಉಂಟಾದ. [ಸಂ. (ಅವಾಚ್ + ಭವ)]

**ಅವಾಗ್ಭಾಗ** (ನಾ). ೧. ದಕ್ಷಿಣಭಾಗ; ತೆಂಕಲು. ೨. ಗಿಡದ ಕೆಳಭಾಗ; ಮರದ ಬುಡ : "ಅವಾಗ್ಭಾಗಃ, ಬುಧ್ನಃ – ಈ ೨ ಮರದ ಮೊದಲ್" (ಹಲಾಯು. ೩೦–೨೬) ; "ಅವಾಗ್ಭಾಗಮೆನೆ ಬುಧ್ನಮೆನಲು ಎಸೆವ ತರು ಮೊದಲಕ್ಕು" (ಮಂಗರಾ. ೩೨–೨). [ಸಂ. (ಅವಾಚ್ + ಭಾಗ)]

**ಅವಾಗ್ವಿಷಯ** (ಗು). ಮಾತಿನಲ್ಲಿ ಹೇಳಲಾಗದ, —ವಿವರಿಸಲಾಗದ ; ವರ್ಣಿಸಲು ಶಕ್ಯವಲ್ಲದ : ಪುರಶ್ರೀಯನಾತನಮಾನುಷಮುಮವಾಗ್ವಿಷಯಮುಮವರ್ಣನಾಗೋಚರಮುಮಾಗೆ ಬಣ್ಣಿಸುತ್ತುಂ (ಶಾಂತಿಪು. ೩–೧೧ ವ). [ಸಂ.]

**ಅವಾಙ್ಮನಸಗೋಚರ** (ಗು). ಮಾತಿಗೂ ಮನಸ್ಸಿಗೂ ನಿಲುಕದ : ಅವಾಙ್ಮನಸಗೋಚರಂ ದಿಟಕೆ ನೀಂ ಬಟಿಕ್ಕಾವುದೀ ಭವಚ್ಚರಣಸೇವೆಯೊಳ್ ಕ್ರಿಯೆ ಜಿನೇಂದ್ರಚಂದ್ರಪ್ರಭಾ (ಚಂದ್ರಪು. ೧೪–೯೦). [ಸಂ.]

**ಅವಾಙ್ಮಾನಸಗೋಚರ** (ಗು). = ಅವಾಙ್ಮನಸಗೋಚರ : ಮುಕ್ತಜೀವನಪ್ಪೊಡೆ... ಅನುಪಮಾನನುಂ ಅವಾಙ್ಮಾನಸಗೋಚರನುಂ... ಅಕ್ಕುಂ (ಸುಕುಮಾ. ೮–೧೪ ವ). [ಸಂ.]

**ಅವಾಙ್ಮುಖ** (ಗು). ತಲೆಬಾಗಿದ ; ಕೆಳಮುಖವಾದ : "ಅವಾಚೀನಂ, ಅವಾಙ್ಮುಖಂ – ಈ ೨ ತಲೆವಾಗಿರ್ದುದು" (ಹಲಾಯು. ೧೨೫–೬೨) ; "ಅವಾಙ್ಮುಖಮಪಾಚೀನಮೆನೆ ತಲೆವಾಗುಹಂ" (ಮಂಗರಾ. ೧೩೪–೩೩). [ಸಂ.]

**ಅವಾಙ್ಮುಖಿ** (ನಾ). ತಲೆಯನ್ನು ತಗ್ಗಿಸಿದವಳು ; ಮುಖವನ್ನು ಕೆಳಗೆ ಮಾಡಿದವಳು : ಸ್ತಂಭಿತೆಯರಾಗಿದ್ದು, ಎದ್ದು, ಅವಾಙ್ಮುಖಿಯರಾಗುವರು (ಬಿಟ್ಟಅ. ೧೨–೧೧). [ಸಂ. ಅವಾಙ್ಮುಖೀ]

**ಅವಾಚಿ** (ನಾ). ದಕ್ಷಿಣ ದಿಕ್ಕು ; ತೆಂಕಲು. [ಸಂ. ಅವಾಚೀ]

**ಅವಾಚಿದಿಕ್ಕು** (ನಾ). = ಅವಾಚಿ. 'ಅವಾಚೀದಿಗ್ವಿಜಯ' ಪರಾ. [ಅವಾಚಿ + ದಿಕ್ಕು]

**ಅವಾಚೀದಿಗ್ವಿಜಯ** (ನಾ). ದಕ್ಷಿಣ ದಿಕ್ಕನ್ನು ಗೆಲ್ಲುವುದು ; ತೆಂಕಣ ಕಡೆಯಲ್ಲಿ ನಡಸುವ ದಿಗ್ವಿಜಯ : ಆ ಚಕ್ರವರ್ತಿ ನಡೆದನವಾಚೀದಿಗ್ವಿಜಯಹೇತುವಿಂ ಜಿನಚಂದ್ರಂ (ಶಾಂತಿಪು. ೧೧–೧). [ಸಂ. (ಅವಾಚೀದಿಕ್ + ವಿಜಯ)]

**ಅವಾಚೀದ್ವಾರ** (ನಾ). ದಕ್ಷಿಣ ದಿಕ್ಕಿನ ಬಾಗಿಲು ; ತೆಂಕಣಬಾಗಿಲು : ಸುವರ್ಣಕುಲಾಭಿಧಾನ ತರಂಗಿಣೀ ಪುಂಡರೀಕಪ್ರದದ ಅವಾಚೀದ್ವಾರದಿಂ ಪೊಱಮಟ್ಟು ತನ್ನಾಭಿಗಿರಿಯಂ ಅರ್ಧಪ್ರದಕ್ಷಿಣಂ ಮಾಡಿ ಪರಿದು (ತತ್ತ್ವಪ್ರ. ೧೩೬). [ಸಂ. (ಅವಾಚೀ + ದ್ವಾರ)]

**ಅವಾಚೀನ** (ನಾ). ದಕ್ಷಿಣದಿಕ್ಕಿನದು ; ತೆಂಕಲಿನದು : "ಅವಾಚೀನಂ, ಅವಾಕ್ – ಈ ೨ ತೆಂಕಲಾದುದಱ ಪೆಸರ್" (ಹಲಾಯು. ೧೬–೧೦೩). [ಸಂ.]

**ಅವಾಚ್ಯ** (ಗು). ೧. ನುಡಿಯಬಾರದ. (ನಾ). ೨. ಬೈಗಳು ; ನಿಂದೆ : ಬಿನ್ನವಿಸಲ್ಕವಾಚ್ಯಮಿದು ದೇವ ಪರಿಚ್ಯುತಭೀತಿಯಿಂದವಾಂ ಬಿನ್ನವಿಪೆಂ (ನೇಮಿಪು. ೩–೧೨೫) ; ಅವಾಚ್ಯ ಶಬ್ದಗಳಿಂದ ನಿಂದಿಸತೊಡಗಿದ (ನಾಪೋಲೀ. ೬೩) ; ಎದುರು ಬಿದ್ದು ಮಾತಾಡಬಾರದೆ ಎಂದು ಪ್ರಚೋದಿಸಲು ತನ್ನ ಶಬ್ದಕೋಶದಿಂದ ಅತಿ ಅವಾಚ್ಯವನ್ನು ಹುಡುಕುತ್ತ ಮಾತಾಡುತ್ತಾನೆ (ಹೊಸಕ್ವಿ. ೨೨೦). [ಸಂ.]

**ಅವಾಜು** (ನಾ). ಶಬ್ದ ; ಸದ್ದು : ಶನಿವಾರದ ದಿವಸ ಪಟ್ಟಣದಲ್ಲಿ ಫಿರಂಗಿ ಅವಾಜು ಬಂದಾಯಿತು (ರಾಜೇಂದ್ರ. ೯೬) ; ಆ ಇಬ್ಬರು ಸಾಹೇಬರು ದೊಡ್ಡ ಲಷ್ಕರಿನ ನಿಶಾನಿ ಫಿರಂಗಿ ಅವಾಜು ಕೇಳಿದರೆ ಅದರ ಜವಾಬು ಕೊಡುವ ಬಗ್ಗೆ (ರಾಜೇಂದ್ರ. ೧೩೪) ; ಟೀಪುಸುಲ್ತಾನರಿಗೂ ಇಂಗ್ರೇಜಿಯವರಿಗೂ ಸಿದ್ಧೇಶ್ವರನ ಗದ್ದಿಗೆ ಬಳಿಯ ಆದ ಲಡಾಯದ ಅವಾಜು ಕೇಳಿ (ರಾಜೇಂದ್ರ. ೯೩) ; ತಾಳ, ಡೋಲಕಗಳ ಗಡಚಿಕ್ಕುವ ಅವಾಜಿನಲ್ಲಿ ಮಾಸ್ತರರ ದನಿ ಅವರಿಗೆ ಕೇಳಿಸಲಿಲ್ಲ (ಮೂರುದಾ. ೬೩).

**ಅವಾಜುಮಾಡು** = ಧ್ವನಿಮಾಡು : ಈ ಜನ ಇನ್ನಷ್ಟು ಬೆದರಿತು. ಅವಾಜುಮಾಡುತ್ತಾ ಹಿಂಜರಿದು ಮನೆಗೆ ತೆರಳಿದರು (ಬೆಳುಮ. ೧೪೯). [← ಪಾರ. ಹಿಂ. ಮರಾ. ಆವಾಜ್]

**ಅವಾಢವ್ಯ** (ಗು). (ಉಕ) ಅಳತೆ ಮೀರಿದ ; ತುಂಬ ಹೆಚ್ಚಾದ : ಮನೆಯಲ್ಲಿ ಬೆಳೆಯುತ್ತಿರುವ ಅವಾಢವ್ಯ ಖರ್ಚನ್ನು ಅವಳು ಗಂಭೀರವಾಗಿ ಯೋಚಿಸುವಂತಾಯಿತು (ಮಣ್ಣಿನ. ೩೧) ; ಆದರೆ ಇಷ್ಟೊಂದು ಅವಾಢವ್ಯ ಬೆಲೆಕೊಟ್ಟು ಅದನ್ನು ಕೊಳ್ಳುವ ಧೈರ್ಯಸಾಲದೆ ಮರಳಿ ಹೋದರು (ರತ್ನಗೋ. ೮) ; ಮೇಲಾಗಿ ಅವಾಢವ್ಯ ಬಡ್ಡೀವ್ಯವಹಾರ (ತಿಡುಗು. ೬೯). [← ಮರಾ. ಅವಾಢವ್ಯ (< ಸಂ. ಅಪೋಢವ್ಯ)]

**ಅವಾಪ್ತ** (ಗು). ಹೊಂದಿದ; ಪಡೆದ; ಉಂಟಾದ: ನಕುಳಾರ್ಯನುಂ ಪ್ರಭಾಕರ ವಿಮಾನದೊಳ್ ಮನೋರಥಾವಾಪ್ತ ದಿವ್ಯಭೋಗಂ ಮನೋರಥನೆಂಬ ಕಲ್ಪಜನಾದಂ (ಆದಿಪು. ೫-೭ ವ). [ಸಂ.]

**ಅವಾಪ್ಯ** (ಗು). ಹೊಂದಬಹುದಾದ; ಪಡೆಯತಕ್ಕ: ಬಹಿರಂತರಸ್ಥಿತನವಾಪ್ಯನಂ ಲಿಂಗಸ್ವರೂಪಿ ನಿನಗಂ (ವೀಶೈಪು. ೬-೧-೩೯). [ಸಂ.]

**ಅವಾಮವೃತ್ತಿವರ್ತನ**(ಗು).೧.ನೇರವಾದ ಮಾರ್ಗದಲ್ಲಿನಡೆಯುವ; ಋಜುಮಾರ್ಗದಲ್ಲಿ ವ್ಯವಹರಿಸುವ. ೨. ಎಡದಿಂದ ಬಲಗಡೆಗೆ ಸುತ್ತುವ. ೧, ೨: ಉದಯಿಸಿದ ಮಹಾತ್ಮನಂ . . . ಅವಾಮವೃತ್ತಿವರ್ತನನೆಂಬುದಂ ಪೇೞ್ವಂತೆ ಅಧ್ವರಾನಲನವಾಮವೃತ್ತಿವರ್ತನ ಮಾದುದು (ಚಂದ್ರಪು. ೧೨-೩೩ ವ).
[ಸಂ. (ಅ- + ವಾಮವೃತ್ತಿವರ್ತನ, ಅವಾಮವೃತ್ತಿ + ವರ್ತನ)]

**ಅವಾಯ** (ನಾ). ೧. ಹೊರಟುಹೋಗುವುದು. ೨. ಸಮೀಪಿಸುವುದು. (?). ೩. ಅವಕಾಶಕೊಡುವುದು; ಹೇಳಿದುದಕ್ಕೆ ಒಪ್ಪಿಕೊಳ್ಳುವುದು. ೪. ಅಪಾಯ (?): "ಅವಗಡಮೆನಲ್ಕವಾಯಮೆನಿಪ್ಪುದು" (ಶಶರ. ೧೧೭); ರಾಯ ಹದುಳದೊಳಿಹನು ಬಂದುದವಾಯ ನಿಮ್ಮಡಿಗಿಂದು (ಉತ್ತರಾ. ೨೯-೪೮). [ಸಂ.]

**ಅವಾಯಿ** (ನಾ). ದೋಷಾರೋಪಣೆ: ಪ್ರಕೃತದ ಆವಾಯಿ ನೋಡಿದರೆ ನಮಗೆ ಪರಿಣಾಮವಾಗುವಹಾಗಿಲ್ಲ (ವಾಗ್ದೇವಿ. ೯೨).
[ಪ್ರಾ. ಅವಾಇ; ಮರಾ. ಅವಾಈ (< ಸಂ. ಅಪಾಯಿನ್)]

**ಅವಾರ** (ನಾ). ೧. ಈಚೆಕಡೆ. ೨. ನದಿಯ ಈಚೆಯ ದಡ. [ಸಂ.]

**ಅವಾರಿ** (ಗು). ಸಂತತವಾಗಿ ನಡೆಯುವ; ಯಾವ ನಿರ್ಬಂಧವೂ ಇಲ್ಲದೆ ನಡೆಯುವ (?): ಸಲುವುದು ಗ ೩೧ ಬಿರಾಡದಿಂದಲೂ ವೆಚ್ಚ ಬಿರಾಡ ಗ ||೦|| ಅವಾರಿಯಿಂದಲ್ ೩೧ ಉಭಯಂ ಗ|| ೪ ಲು ಗ ೪|| (ಎಕ. VIII, ತೀರ್ಥಹ. ೫೩-೧೪; 1630); ಅವಾರಿಯಿಂದ ಮಾಡುವ ತವೆ ಮಾಟಕೂಟದ ಸವಿನಯ ಭಕ್ತರ ಮಠಗಳು – ಒಂದು ಲಕ್ಷ ನವ್ಯಕಲ್ಯಾಣದಿ ಶೋಭಿಪವು (ಸಿದ್ಧಪು. ೨೮-೧೫). [< ಸಂ. ಅವಾರ್ಯ]

**ಅವಾರಿಚ್ಛತ್ರ** (ನಾ). = ಅವಾರಿಸತ್ರ: ಶ್ರೀಕಪಿಲಸಿದ್ಧಮಲ್ಲಿಕಾರ್ಜುನದೇವರ ಅಂಗಭೋಗ ರಂಗಭೋಗ ಜೀರ್ಣೋದ್ಧಾರ ಅವಾರಿಚ್ಛತ್ರಕ್ಕೆ (ಸೌಇಇ. XX, ೧೭೭-೩೪; 1190). [ಅವಾರಿ + ಛತ್ರ]

**ಅವಾರಿತ** (ಗು). ತಡೆಯಿಲ್ಲದಿರುವ; ತಡೆಯದಿರುವ; ತಡೆಬಡೆಯಿಲ್ಲದ: ಚೋಳಭೂನಾಥನ ಪಿರಿಯ ಕರಿ ಕಾಲಸಂಕಲೆ ಪಱಿದುಕೊಂಡು ತ್ತಾಲರೌದ್ರಾವಾರಿತೋದ್ಧತ ಬಹಳ ವೇಗದಲಿ . . . ಎಯ್ತುಪ್ಪ ಸಮಯದೊಳು (ಬಸಪು. ೨೨-೬). [ಸಂ.]

**ಅವಾರಿತಂ** (ಅ). ತಡೆಬಡೆಯಿಲ್ಲದೆ; ಅಡ್ಡಿಯಿಲ್ಲದೆ: ಎತ್ತೆತ್ತಮವಾರಿತಮುದ್ವೃತ್ತತೆಯಿಂ ಪರಿವ ಚಿತ್ತಗಜಮಂ ನಿಲಿಸಲ್ (ಉಸಾರ. ೧೬೧). [ಸಂ.]

**ಅವಾರಿಸತ್ರ** (ನಾ). ಎಡೆಬಿಡದೆ ನಡೆಯುವ ಧರ್ಮ ಛತ್ರ; ವರ್ಷದ ಎಲ್ಲ ಕಾಲದಲ್ಲಿಯೂ ನಡೆಯುವ ಧರ್ಮಛತ್ರ(?): ಆದಿಸ್ವಯಂಭುಭೈರವದೇವರ್ಗ್ಗಲ್ಲಿಯವಾರಿಶ[ಸ]ತ್ರಕ್ಕಂ ಸರ್ವನಮಶ್ಯಮಾಗೆ ಬಿಟ್ಟ ಕನ್ನೆಮೂನೂಱು ಬಳಿಯ ದುದ್ಧಿಯಾಲು (ಸೌ ಇ ಇ. IX-i, ೧೯೦-೩೧; 1057); ಶ್ರೀಮದಿಂದ್ರೇಶ್ವರ ದೇವರ್ಗಮಲ್ಲಿಯ ಅವಾರಿಶ[ಸ]ತ್ರಕಂ ಸರ್ವನಮಶ್ಯವಾಗಿ ಬಿಟ್ಟ ಕುಱುಕುನ್ದೆ (ಸೌಇಇ. IX-i, ೧೧೯-೩೫; 1057); ಶ್ರೀವೈದ್ಯನಾಥದೇವರ್ಗೆ ಅಂಗಭೋಗ ರಂಗಭೋಗಾರ್ತ್ಥಂಗಳಾಗಿ . . . ಊರಂ ದೇವರ್ಗ್ಗೆ ಕೊಟ್ಟು ಅವಾರಿಸತ್ರವ ನಡಸುವಂತಾಗಿ (ಎಇ. XXX, ೯-೧೨; 1220). [ಅವಾರಿ + ಸತ್ರ]

**ಅವಾರ್ಯ** (ಗು). ೧. ನಿವಾರಿಸಲಾಗದ; ತಡೆಯಲು ಶಕ್ಯವಿಲ್ಲದ. ೨. ತಡೆಯಬಾರದ: ಆಚಾರ್ಯನನವಾರ್ಯನನಸಮಶೌರ್ಯನನು (ಬಸಪು. ೪೬-೬೮). [ಸಂ.]

**ಅವಾರ್ಯವೀರ್ಯ** (ಗು). ೧. ಅನಿವಾರ್ಯವಾದ ಪರಾಕ್ರಮವುಳ್ಳ; ತಡೆಯಲಾಗದ ಸಾಮರ್ಥ್ಯವುಳ್ಳ: ಭೀಷ್ಮರ ಬೆಂಬಲದೊಳ್ ವಿಚಿತ್ರವೀರ್ಯನುಮವಾರ್ಯವೀರ್ಯನಾಗಿ (ಪಂಪಭಾ. ೧-೮೦ ವ); ಒದವಿದ ರಿಪುವಂ ಸೂಱಿಲ್ಲದಿಕ್ಕಿ ಗೆಲ್ದತುಳಬಲದ ಮಲ್ಲನುಮೆಚ್ಚಾಡಿದ ಬಿಲ್ಲುಮಿರ್ದತೆಜನಿರ್ದುದಱಿಪುಗುಮವನವಾರ್ಯವೀರ್ಯಂ ಶೌರ್ಯಂ (ಶಾಂತಿಪು. ೨-೪೫); ಸತ್ಯವಾಕ್ಯನವಾರ್ಯವೀರ್ಯಂ ಸಜ್ಜನಂ (ಬಸಪು. ೨೨-೨೪). (ನಾ). ೨. ಅನಿವಾರ್ಯವಾದ ಪರಾಕ್ರಮ: ಅದು ದೇವಲೋಕದಂತೊಪ್ಪಿದುದು . . . ಚಕ್ರಿಯ ತೇಜದ ಜಸದವಾರ್ಯವೀರ್ಯದ ಪೊದಳ್ದ ಭುಜವೀರ್ಯದೊಂದು ರೂಪನೆ ಪೋಲ್ಕುಂ (ಆದಿಪು. ೧೧-೩). [ಅವಾರ್ಯ + ವೀರ್ಯ]

**ಅವಾಸ** (ಗು). ೧. ಬೆತ್ತಲೆಯಾದ; ವಸ್ತ್ರವಿಲ್ಲದ. (ನಾ). ೨. ಬೆತ್ತಲೆಯಾದ ವ್ಯಕ್ತಿ. [ಸಂ. ಅವಾಸಸ್]

**ಅವಾಸ್ತವ** (ಗು). ವಾಸ್ತವವಲ್ಲದ; ದಿಟವಲ್ಲದ; ಸುಳ್ಳಾದ: ಅವಾಸ್ತವ ಮಹತ್ವಾಕಾಂಕ್ಷೆಯಾದ ಸಿಂಧಿಯನು (ಕೃಷ್ಣಾಕು. ೧). [ಸಂ.]

**ಅವಾಸ್ತವತೆ** (ನಾ). ಸತ್ಯಕ್ಕೆ ದೂರವಾಗಿರುವುದು; ದಿಟವಲ್ಲದಿರುವುದು: ಈ ರೀತಿ ಸಾಹಿತ್ಯವು ಸಾಂಪ್ರದಾಯ ಮತ್ತು ಅವಾಸ್ತವತೆಗಳ ಕೊಳಚೆಯ ನೀರಾಗದೆ . . . ಸಜೀವ ಪ್ರವಾಹವನ್ನಾಗಿ ಮಾಡಿದ ಶ್ರೇಯಸ್ಸು ಬಹುಮಟ್ಟಿಗೆ ಪತ್ರಿಕಾ ವ್ಯವಸಾಯಕ್ಕೇ ಸಲ್ಲಬೇಕು (ಪತ್ರಿಕಾ. ೬೦). [ಸಂ. ಅವಾಸ್ತವತಾ]

**ಅವಿ$_1$** (ಕ್ರಿ). ಅಡಗು; ಮರೆಯಾಗಿ ನಿಲ್ಲು; ಬಚ್ಚಿಟ್ಟುಕೊ: ಅವಿತು, ಅವಿದು (ಭೂತನ್ಯೂ): "ಅವಿ – ನಿಗೂಹನೇ (ಮರೆಯಾಗು)" (ಶಮಧಾ); "ಅವಿದಂ ಕರೆದಂ" (ಕರ್ಣಾನಿ. ೬೧); ಅಸುರನ ಶಸ್ತ್ರಪ್ರಹಾರಂಗಳಂ ಬಂಚಿಸುತುಂ ಬಾಹಾಸಹಸ್ರಾಟವಿಯೊಳವಿದು ದುರ್ಲಕ್ಷ್ಯನಾದಾಗಳಾ ರಾಕ್ಷಸನೋವೋ ಗೆಲ್ದೆನೆಂದಾರ್ವುದುಂ (ಜಗವಿ. ೧೭-೧೩೧); ಪಸಿಯನೇತ್ರದಿಂ ಮುಸುಂಕಿ ಮುನಿದವಿದಿರ್ದ ನಿಜಮನೋಹರಿಯೆಂದು ಬಗೆದು ಕಾಲಮೇಲೆ ಕವಿದುಬಿರ್ದು (ಲೀಲಾವ. ೧೪-೬೪ ವ); ನಿಜಮಂ ಮಾಱಿ ಕೃತಕದೊಳಗವಿದೊಡಂ . . . ದೇವಕಳೆ ಮನಕೆ ಮಂಗಳವಿತ್ತುದು (ಸಿದ್ಧರಾ. ೨-೨೪); ಪಱಮೆವಱಿವಿಂಡವಿದತ್ತದಿರ್ಮುತ್ತೆಯಲ್ಲಿ ಸಂದಣಿಗೊಳುತುಂ (ಕಬ್ಬಿಕಾ. ೫೭); ತುಱುಗಿದ ತಮಾಲದೊಳಗವಿದು ಸಖಿಯಂ ಕಾಡಿ (ಪುಷ್ಪಪು. ೨-೪೪); ಪಂಪೆಯೊಳ್ ಪಂಪಾವಿರೂಪಾಕ್ಷನೊಳಗವಿದ ಪಂಪೆಯ ಹರೀಶ್ವರನ ಪಾದಪದ್ಮಂಗಳಂ ನೆನೆದೆಸಗುವೆಂ ಕೃತಿಯನು (ಅರಾಚಾ. ೧-೨೨).

**ಅವಿತಿಡು** = ಬಚ್ಚಿಡು; ಮುಚ್ಚಿಡು: ಎಲ್ಲಿ ಅವಿತಿಟ್ಟಳೊ ಆ ಕಾಗದಾನ (ಅನ್ನಪೂ. ೫೯); ಅಲ್ಲಿ ತಪಸ್ಸು ಮಾಡುತ್ತಿದ್ದ ಕಪಿಲಋಷಿಯ ಹಿಂದೆ ಅವಿತಿಟ್ಟನು (ನೀತಿಚಂ. VII, ೨೪). **ಅವಿತಿರಿಸು** = ಬಚ್ಚಿಡು; ಮುಚ್ಚಿಡು: ಹೊಸತು ಹಳತಾದಂತೆ ತಿರೆತಾಯಿ ಮಡಿಲೊಳು ಅವುಗಳನವಿತಿರಿಸಿದಳು (ಇಂಚಾಪ. ೧೮೫-೧೫). **ಅವಿತುಕೊಳ್, ಅವಿದುಕೊಳ್** = ಬಚ್ಚಿಟ್ಟುಕೊ; ಅಡಗಿಕೊ: ಕೋಪದಿಂದ ಮುನ್ನವಿತುಕೊಂಡಿಹ ತಾಪಸಂ ನಡೆತಂದು (ಬಸಪು. ೧೮-೭೯); ಸೂರ್ಯಶರ್ಮನು . . . ಅಟ್ಟಕ್ಕೆ ಹತ್ತಿ ಕೆಳಗೆ ನಡೆಯುವುದನ್ನೆಲ್ಲಾ ಗುಟ್ಟಾಗಿ ನೋಡುತ್ತಾ ಅವಿತುಕೊಂಡಿದ್ದನು (ನೀತಿಚಂ. VI, ೯); ರಾಜಒಡೆಯನು ಭಕ್ತವೃಂದದ ಮರೆಯಲ್ಲಿ ಅವಿತುಕೊಂಡು ಶ್ರೀದೇವಿಯನ್ನು ಇಣಿಕಿಣಿಕಿ ನೋಡುತ್ತಿದ್ದನು

(ಶ್ರೀರಾಯ. ೨೫) ; ಭವಿಗಳಿದಿರ್ವರಲಂಜಿ ನಿಲ್ಲದೋಡುತ್ತಿಪ್ಪರವಿದವಿದು ಕೊಂಡು ದೂಷಕರಡಂಗುತ್ತಿಪ್ಪರಂದು (ಇಜಾರ. ೧೧೦–೨೨) ; ಒಂದು ಮರದೊಳಗವಿದುಕೊಂಡಿರಲು (ಚಂಡೇರ. ೨೪೮). [?]

**ಅವಿ$_2$** (ನಾ). ಒಂದು ಅಳತೆ: ಆವನ ನೆತ್ತಿಯ ಮೇಲೆ ಸುಮಾರು ಕಾಲು ಅವಿಯುದ್ದದ ಸೀಳುಗಾಯ ಕಂಡಿತು (ಕಲಸಿ. ೨೭೫). [?]

**-ಅವಿ$_3$**(ಪ್ರ). ಕೃದಂತ ಭಾವನಾಮ ಪ್ರತ್ಯಯ : ನಿನ್ನ ಯಶೋರಾಶಿಯ ನಿಂದು ದ್ಯುತಿಯ ನಿಕಾಶಮನೊಳಕೊಳ್ಗುಮಳವಿಗಱಿದಿರ್ದುದುಮಂ (ಕವಿರಾ. ೩–೯೪). [ಅಳಿ + -ಅವಿ] ; ಅಳವಿಗಱಿದಲಂಪುಮಂ ಬಳವಿ ವಡೆದಟ್ಟುಜುಮಂ (ಆದಿಪು. ೪–೫೨ ವ). [ಬಳೆ + -ಅವಿ] ; "ಬಳೆಬೆಳ ತೋರವ್ಯಸೂ" (ಶಬ್ದಾನು. ೫೬೩).

**ಅವಿ$_4$** (ನಾ). ೧. ಕುರಿ : "ಅವಿಃ, ಊರ್ಣಾಯುಃ . . . ಮೇಂಢಃ –ಈ ೮ ಕುಱಿ" (ಹಲಾಯು. ೪೭–೧೨೪) ; ಅಂದವಿಗೋಪರ್ಸೈಸೆ ಮರುಳೊಂದಿದ ರಿಂದು ಲಯಸ್ವರಜ್ಞರಾನಂದದೊಳಟ್ಟು ಬಾಟ್ಡರಮುಮಾ (ಚಿಕವಿ. ೪–೧೨೦). ೨. ಮೇಕೆ. ೩. ಸೂರ್ಯ. ೪. ಎಕ್ಕದ ಗಿಡ. ೫. ಬೆಟ್ಟ. ೬. ಗಾಳಿ. ೭. ಮುಟ್ಟಾದ ಹೆಂಗಸು. ೮. ಯಜಮಾನ. ೯. ಇಲಿ; ಹೆಗ್ಗಣ. ೧೦. ಶಾಲು; ಕಂಬಳಿ. [ಸಂ.]

**ಅವಿಂಧ** (ನಾ). ಕಿವಿ ಚುಚ್ಚಿಕೊಳ್ಳದವನು; ಯವನ: ಅವಿಂಧರು ಪರಮ ಕೃತಘ್ನರೂ, ದುರಾತ್ಮರೂ, ಕರುಣಹೀನರೂ ಆಗಿರುವರು (ಛತ್ರಪ. ೧೦೪). [ಸಂ. ಅವಿದ್ಧ]

**ಅವಿಕತ್ಥನ** (ನಾ). ತನ್ನನ್ನು ತಾನು ಹೊಗಳಿಕೊಳ್ಳದಿರುವುದು ; ಪ್ರಶಂಸೆ ಮಾಡಿಕೊಳ್ಳದಿರುವುದು : ಅಲಘುನಿಜನುತಿಗಳ್ಕವದಱಿ ನವಿಕತ್ಥನಂ ಫಲಿಸುತಿದೆ (ಪದ್ಮರಾ. ೧೩–೨೦). [ಸಂ.]

**ಅವಿಕಲ,** ಅವಿಕಳ (ಗು). ೧. ಕುಂದಿಲ್ಲದ; ನ್ಯೂನತೆಯಿಲ್ಲದ; ಸಮಗ್ರವಾದ; ಸಂಪೂರ್ಣವಾದ: ಜಲರಾಶಿಪ್ರಭವೆಯನವಿಕಲ ಕೃಷ್ಣಗುಣಾನುರಕ್ತೆಯಂ (ಕವಿರಾ. ೩–೧೬೧). ೨. ಕ್ರಮಬದ್ಧವಾದ; ಸ್ಥಿರವಾದ. **ಅವಿಕಳ:** ೧. ಧವಳಜಲಧರಕುಲಾಕುಲಮವಿಕಳಮಂಬರ ತಳಂ (ಕವಿರಾ. ೨–೬೧); ಅವಿಕಳನಿಯಮಶ್ರೀಯನಳವಡಿಸಿ ನಿಂದ ಧರಾಯುವತೀಶಂ (ಪಂಪಭಾ. ೮–೧). [ಸಂ.]

**ಅವಿಕಲ್ಪ** (ಗು). ವಿಕಲ್ಪವಿಲ್ಲದ; ವಿಕಾರವಿಲ್ಲದ; ಯಾವ ವಿಧವಾದ ನ್ಯೂನತೆಯೂ ಇಲ್ಲದ: ಶುಕ್ರಮಹಾಶುಕ್ರಂಗಳ್ ಕಲ್ಪಂಗಳಿರ್ಕುಮ ವಿಕಲ್ಪಂಗಳ್ (ಸುಕುಮಾ. ೧೧–೬೫). [ಸಂ.]

**ಅವಿಕಳ** 'ಅವಿಕಲ' ನೋ.

**ಅವಿಕಾರಿ** (ನಾ). ಯಾವ ಬಗೆಯ ವಿಕಾರವೂ ಇಲ್ಲದವನು : ಅವಿಕಾರಿ ಯೆಂಬೊಂ ಭ್ರೂಲಲಾಟನಯನ ನಾಸಾಪುಟೋಷ್ಠಶಿರಶಿರೋಧರ ಕರ ಚರಣೋದರ ವಿಕಾರ ವಿರಹಿತನುಂ . . . ಅಪ್ಪೊಂ (ಚಾವುಂಪು. ೬). [ಸಂ. ಅವಿಕಾರಿನ್]

**ಅವಿಕಾರಿತ್ವ** (ನಾ). ವಿಕಾರವಿಲ್ಲದಿರುವಿಕೆ. [ಸಂ.]

**ಅವಿಕಾರ್ಯ** (ಗು). ವಿಕಾರಕ್ಕೆ ಒಳಪಡದ; ನಿರ್ವಿಕಾರವಾದ: ಆತ್ಮನು ಹೆಚ್ಚು ದೇವಸದೃಶನೆಂದೂ ಅವಿಕಾರ್ಯನೆಂದೂ ತಿಳಿದುಬರುತ್ತದೆ (ಸೋಕ್ರಮ. ೭೮). [ಸಂ.]

**ಅವಿಕೃತ** (ಗು). ವಿಕಾರ ಹೊಂದದ; ವ್ಯತ್ಯಾಸವನ್ನು ಪಡೆಯದೆ ಇದ್ದಂತೆಯೇ ಇರುವ: ಸ್ವರೂಪದಿಂ ನಿಲ್ಕುಮವಿಕೃತಂಗಳವೆಂದುಂ (ಕಾವ್ಯಾವ. ೪೬). [ಸಂ.]

**ಅವಿಕೃತಿ** (ಗು). ವಿಕಾರ ಹೊಂದದಿರುವ; ಬದಲಾವಣೆ ಹೊಂದ ದಿರುವ : "ಅವಿಕೃತಿ ಶಬ್ದಂ = ವಿಕಾರವಿಲ್ಲದ ಶಬ್ದಂಗಳ್" (ಶಮದ. ೮೩ ಟೀಕೆ). [ಸಂ.]

**ಅವಿಗೊಳ್** (ಕ್ರಿ). ಮರೆಯಾಗು; ಬಚ್ಚಿಟ್ಟುಕೊಳ್ಳು: ಪೋದತ್ತ ಬೆಂಬಳಿವಿಡಿವ ಅವಿಗೊಳಲು ಸುತ್ತ ಸುತ್ತಿಸುವ ಕುಟಿಲದ ವೇಶ್ಯೆಗಣಿಕೆ ಯರು (ಪ್ರಭುಪು. ೪–೧೨೫). [ಅವಿ$_1$ + ಕೊಳ್$_1$]

**ಅವಿಗೋಪ** (ನಾ). ಪಶುಪಾಲಕ; ಕುರಿ ಮತ್ತು ದನಗಳನ್ನು ಕಾಯುವವನು : ಅಂದವಿಗೋಪರ್ಸೈಸೆ ಮರುಳೊಂದಿದರ್ (ಅಪ್ರತಿ. ೧೬–೧೯). [ಸಂ.]

**ಅವಿಘ್ನ** (ಗು). ೧. ಅಡ್ಡಿಯಿಲ್ಲದ: ನಿರ್ವಿಘ್ನವಾದ: ಮಾಟ್ಕಿರಧೆಮ ಗಾಗಳುಂ ವೃಷಭಯಕ್ಷನವಿಘ್ನಮನಃಪ್ರವೃತ್ತಿಯಂ (ಆದಿಪು. ೧–೮). (ನಾ). ೨. ವಿಘ್ನವಿಲ್ಲದಿರುವುದು; ಅಡ್ಡಿಯಿಲ್ಲದಿರುವುದು : ನಿನ್ನ ಧ್ವರದ ಚಾರುಹಯಮುವನಿಯೊಳವಿಘ್ನದಿಂ ತಿರುಗಿಬಂದುದು (ಜೈಮಿಭಾ. ೨೦–೩೪). [ಸಂ.]

**ಅವಿಚಲ,** ಅವಿಚಳ (ಗು). ಚಲನೆಯಿಲ್ಲದ; ನಿಶ್ಚಲವಾದ: ದುಷ್ಟರ ಸಂಗದೊಳಳಿಯುವುದಿಲ್ಲವು ಸಜ್ಜನರವಿಚಲ ಮನವು (ಇಂಚಾಪ. ೬೯–೩೫). **ಅವಿಚಳ** : ಅಮೂರ್ತಮುಂ, ಅವಿಚಳಮುಂ, ನಿತ್ಯಮುಂ . . . ಅಲೋ ಕಾಕಾಶಮುಕ್ಕುಂ (ತತ್ತ್ವಪ್ರ. ೨೩೬) ; ಹವಣಿಸಿಕೊಳ್ಳಬೇಕಿಂದ್ರಿಯವರ್ಗ ವನವಿಚಳನಾಗಿರಬೇಕು (ಭರಚ. ೨–೧೪) ; ಪವನಾಭ್ಯಾಸವಿಲ್ಲದೆ ಕೆಲಬರು ದೇಹಭವನದೊಳಿರ್ದ ಹಂಸನನು ಅವಿಚಳಮನದಿಂದ ಕಾಣ್ಬರು (ಭರಚ. ೬೯–೧೯). [ಸಂ.]

**ಅವಿಚಲಿತ,** ಅವಿಚಳಿತ (ಗು). ೧. ಅಲ್ಲಾಡದಿರುವ; ನಿಶ್ಚಲವಾದ; ಸ್ಥಿರವಾದ: ಅವಿಚಲಿತ ಧೈರ್ಯನುತ್ತುಂಗವಂಶನಪ್ರತಿಮ ಸಹಜಸತ್ವಂ ಕಪಿಕೇತುವುದಾತ್ತಂ ಬಂದಂ (ಪಂರಾಮಾ. ೧೦–೩) ; ಅವಿಚಲಿತಭಕ್ತಿಯು ಶಕ್ತಿಯುಂ . . . ಅಹುದು ಮನುಜರಿಗೆ (ಬಸಪು. ೩೪–೩೮). (ನಾ). ೨. ನಿಶ್ಚಲತೆ; ಸ್ಥಿರವಾಗಿರುವುದು : ತನ್ನಯ ಬಲಸಹಿತವವಿಚಲಿತದಿಂ ನಡೆತಂದುರವಣಿಸಿ ತಾಗಿ (ಬಸಪು. ೨೭–೩೦). **ಅವಿಚಳಿತ:** ೧. ಕ್ಷತ್ರಸಾರ ಸ್ಥಿತಿಯವಿಚಳಿತಂ (ಚಂದ್ರಪು. ೧–೭೬). [ಸಂ.]

**ಅವಿಚಳ** 'ಅವಿಚಲ' ನೋ.

**ಅವಿಚಳಿತ** 'ಅವಿಚಲಿತ' ನೋ.

**ಅವಿಚಾರ** (ನಾ). ೧. ವಿಚಾರಮಾಡದಿರುವುದು : ನೆವದಿಂದಂ ನಿಮ್ಮ ಪುಣ್ಯೋದರದೊಳೊಗೆದೊಡೀಬಾಲೆಯಂ ಪುತ್ರಿಯೆಂಬೊಂದವಿಚಾರಂ ಬೇಡ (ಗಿರಿಕ. ೪–೫೦) ; ಅವನಾಳ್ವ ಭುವನದೊಳಗನೃತವನ್ಯಾಯವಾಲೀ ಥತ್ವವವಿಚಾರ . . . ಇಲ್ಲೆಂದೆನೆ (ಹಚಕಾ. ೨–೧೦) ; ಪರದೈವಂಗಳನವಿಚಾ ರದಿಂ ಮುಟ್ಟನು (ಬಸಪು. ೫೩–೫೦) ; ಆ ಸಮಾಜದಲ್ಲಿ ತಾಂಡವವಾಡು ತ್ತಿದ್ದ ಅವಿಚಾರ ಅನೀತಿಗಳಿಗೆ ಅವನು ಮತ್ತೆ ಬಲಿಯಾದನು (ಪುನರು. ೩೩೫). ೨. ಹಿಂದೆ ಮುಂದೆ ನೋಡದಿರುವುದು ; ವಿಮರ್ಶೆ ಮಾಡ ದಿರುವುದು : ಮಾರಹರಭಕ್ತರ್ಗಳೆಯೊಳಪಕಾರವಂ ಮಾಡುವವದಿರನ ವಿಚಾರದಿಂ ಕೊಲುವುದು ತನಗೆ ನಿಜನೇಮವಾಗಿರಲು (ಬಸಪು. ೨೨–೫) ; ನಿನಗೆ ಅವಿಚಾರಂ ಶಿವಾಜ್ಞೆ (ಬಸಪು. ೩೮–೬೬). [ಸಂ.]

**ಅವಿಚಾರಣೆ** (ನಾ). = ಅವಿಚಾರ. [ಸಂ. ಅವಿಚಾರಣಾ]

**ಅವಿಚಾರಿ** (ನಾ). ವಿವೇಚನೆಯಿಲ್ಲದೆ ಕೆಲಸಮಾಡುವವನು; ವಿವೇಕ ವಿಲ್ಲದವನು; ಹಿಂದು ಮುಂದು ನೋಡದವನು : ಪೂಜಮಡಿಸಿ ಕಳೆದಂ ಪೊಟಲಿಂದವಿಚಾರಿ ಜೈನಮುನಿಸಂಕುಲಮಂ (ಪಂರಾಮಾ. ೯–೧೦); ಸಾರಬೋಧೆಯನಾದರಿಸದವಿಚಾರಿಯಾದೆನು (ಬಸಪು. ೪೫–೩೯). [ಸಂ. ಅವಿಚಾರಿನ್]

**ಅವಿಚಾರಿತ** (ಗು). ಸರಿಯಾಗಿ ವಿಚಾರಮಾಡದ; ವಿವೇಚಿಸಿ ನೋಡದ; ಪರ್ಯಾಲೋಚಿಸದ. 'ಅವಿಚಾರಿತರಮಣೀಯ' ಪರಾ. [ಸಂ.]

**ಅವಿಚಾರಿತರಮಣೀಯ** (ಗು). ವಿಚಾರಮಾಡದಿದ್ದಲ್ಲಿ ಮಾತ್ರ ಚೆನ್ನಾಗಿ ಕಾಣುವ; ತೋರಿಕೆಗೆ ಮಾತ್ರ ರಮಣೀಯವಾಗಿ ಕಾಣುವ : ಇನ್ನಾರಾರ ಕವಿತ್ವಮವಿಚಾರಿತರಮಣೀಯಮಲ್ಲಿ ಪುರುಳಜ ಸುವುದೇ (ಶಾಂತಿಪು. ೧೨–೬೯) ; ಅವಿಚಾರಿತರಮಣೀಯರ ಕವಿತೆಯ ಧಿರ್ಕೀ ಸಮಂತಭದ್ರತ್ರಯಮಂ ಕವಿಗಳ್ ರತ್ನತ್ರಯಮೆಂದೆ ವಲಂ ಕೊಂಡಾಡಿದರ್ (ಚಾವುಂಪು. ೭–೬) ; ಚತುರಚಮತ್ಕೃತಿಯುದ್ಘಾಟಿತ ರಮಣೀಯಂ ದಿಟಕ್ಕೆ ಪಂಪನ ಕೃತಿ ಮಿಕ್ಕಿತರರ ಕೃತಿತತಿಯವಿಚಾರಿತರ ಮಣೀಯಂ (ಪಾರ್ಶ್ವಪು. ೧–೬೦). [ಅವಿಚಾರಿತ + ರಮಣೀಯ]

**ಅವಿಚಾರ್ಯ** (ಗು). ವಿಚಾರಕ್ಕೆ ಯೋಗ್ಯವಲ್ಲದ. [ಸಂ.]

**ಅವಿಚಾಲಿತ** (ಗು). ೧. ಅಲ್ಲಾಡಿಸದ. ೨. ಅಲ್ಲಾಡದ; ನಿಶ್ಚಲವಾದ; ಸ್ಥಿರವಾದ (ದಕ. ೩). [ಸಂ.]

**ಅವಿಚು** (ಕ್ರಿ). ಬಚ್ಚಿಡು; ಮುಚ್ಚಿಡು; ಮರೆಮಾಡು : ಸೊಪ್ಪಿನ ಪಲ್ಯ ವನ್ನು ಮೆಲ್ಲಗೆ ತಟ್ಟೆಯ ಕೆಳಗೆ ಅವಿಚಿಡುತ್ತಾನೆ (ಸುಂದರಿ. ೯೮). [ಅವಿ + -ಚು]

**ಅವಿಚ್ಛಿನ್ನ** (ಗು). ೧. ಛಿನ್ನವಾಗದ; ಕತ್ತರಿಸದ. ೨. ಎಡೆಬಿಡದ; ನಿರಂತರವಾದ: ಇಂತು ಸೋಮವಂಶದಿಂದಮವಿಚ್ಛಿನ್ನಮಾಗಿ ಬಂದ ಭರತಾನ್ವಯದೊಳ್ (ಗದಾಯು. ೫–೪೪ ವ). ೩. (ನಾ). [ತತ್ತ್ವಶಾ] ಜೀವಾತ್ಮನಿಗೆ ಒಂದು ಹೆಸರು : ಸುಷುಪ್ತ್ಯವಸ್ಥೆಯಲ್ಲಿಯೂ ವೃಷ್ಟಿ ಕಾರಣಶರೀರದಲ್ಲಿಯೂ ಅಭಿಮಾನವಮಾಡಿದ ಜೀವನಿಗೆ ಪ್ರಾಜ್ಞನೆನು ತಲೂ ಪರಮಾರ್ಥಿಕನೆನುತಲೂ ಅವಿಚ್ಛಿನ್ನನೆನುತಲೂ ಹೆಸರು (ವೇಸಾರ. ೭). [ಸಂ.]

**ಅವಿಚ್ಛೇದ** (ಗು). ೧. ಕತ್ತರಿಸದಿರುವ ; ವಿಭಾಗಹೊಂದದಿರುವ ; ಸಮಗ್ರವಾಗಿರುವ. ೨. ಬಿಡುವಿಲ್ಲದಿರುವ ; ಸಂತತವಾಗಿರುವ. [ಸಂ.]

**ಅವಿಜ್ಞೇಯ** (ಗು). ೧. ತಿಳಿಯಲಾಗದ : ಅವರ ವಚನಂ ಜಡ ಸಂಸ್ಥಾನಮವಿಜ್ಞೇಯಮದರ್ಕೇನಾನುಂ . . . ನ್ಯಾಸಕಾರರಂ ತರ ವೇೞ್ಕುಂ (ಶಾಂತಿಪು. ೧೦–೧೮೦). (ನಾ). ೨. [ಬೌದ್ಧ] ಅವಿಜ್ಞೇಯ ಪರಮಾರ್ಥವಾದ ಶೂನ್ಯತತ್ತ್ವವನ್ನು ಉಪದೇಶಿಸುವ ಶಬ್ದಗಳಲ್ಲಿ ಒಂದು : ಈ ಪರಮಾರ್ಥವಾದ ಶೂನ್ಯತತ್ತ್ವವನ್ನು ಅನಭಿಲಪ್ಯ, ಅನಾಜ್ಞೇಯ, ಅವಿಜ್ಞೇಯ . . . ಇತ್ಯಾದಿ ಶಬ್ದಗಳಿಂದ ಉಪದೇಶಿಸುವರು (ಹಿಂದಸಾ. ೪೧). [ಸಂ.]

**ಅವಿತಥ** (ಗು). ೧. ಸುಳ್ಳಲ್ಲದ : ನಿಶಾವಸಾನಸಮಯದೊಳ್ ಕಂಡ ಕನಸುಗಳವಿತಥಂಗಳಪ್ಪುವದುಕಾರಣದಿಂ (ಕಾದಂಪೂ. ೩೭೪). ೨. ವ್ಯರ್ಥವಲ್ಲದ; ಸಾರ್ಥಕವಾದ: ಮಹಂತ ಸಕಳೇಶ್ವರದೇವರ ನೊಲಿಸಿದ ಪುರಾತನ ಪಥವಿದು ಅವಿತಥವಿಲ್ಲದೆ ನಂಬುವುದು (ವಚಸಂ. ೨೨೧–೭೬). [ಸಂ.]

**ಅವಿತರ್ಕ್ಯ** (ಗು). ತರ್ಕಕ್ಕೆ ಒಳಪಡದ; ತರ್ಕಕ್ಕೆ ಮೀರಿದ; ಊಹಿಸಿ ತಿಳಿಯಲಾಗದ : ರವಿಮಾತ್ರದಿಂದಲ್ಲ ಭುವಿಮಾತ್ರದಿಂದಲ್ಲ ಭುವನಪೋಷಣೆಯುಭಯ ಸಹಕಾರದಿಂದ ವಿವಿಧ ಶಕ್ತಿರಸಂಗಳೇಕೀಭವಿಸೆ ಜೀವ ಅವಿತರ್ಕ್ಯ ಸೂಕ್ಷ್ಮವದು (ಮಂಕುಕ. ೧೧೮). [ಸಂ.]

**ಅವಿದ** (ಗು). ಅವೇದ್ಯವಾದ; ಜ್ಞಾನಾತೀತವಾದ; ತಿಳಿಯಲು ಶಕ್ಯವಿಲ್ಲದ (?): ಓಡಿನಲೂಟ ಕಾಡಿನಲಾಟ ವಿಪರೀತಚರಿತ್ರ ಮರುಳಿನ ಕೂಟ ಕೋವಿದ ಕೋವಿದ ಅವಿದ ಅವಿದ ಲಿಂಗ ಗೋಗೇಶ್ವರನೆಂಬಾತ ನೊಬ್ಬನೆ ಹೊಜಗು ಉಳಿದವರೆಲ್ಲರೂ ಸೂತಕರಯ್ಯ (ಅವಚಂ. ೧೭೮–೬೭೬) ; "ಅವಿದ : ಜ್ಞಾನಾತೀತ, ಅವೇದ್ಯ" (ಅವಚಂ. ಕೋಶ). [ಸಂ. ?]

**ಅವಿದಿತ** (ಗು). ತಿಳಿಯದ ; ಗೊತ್ತಿಲ್ಲದ : ಅವಿದಿತಪರಸ್ಪರೋಚ್ಚ ವ್ಯವಹೃತಿ ತಂತಮಗೆ ವಿಸ್ಮಯಂ ಪುಟ್ಟುವಿನಂ ಭವನಾಮರಭವನಮ ನುಣ್ಮುವ ಶಂಖನಿನಾದವಾದಮೇಂ ತೀವಿದುದೋ (ಮಲ್ಲಿಪು. ೧೪–೧೦೫) ; ಅವಿದಿತಾಖಂಡ ಸತ್ವದಪಾರ ಜಲಧಿಯಲಿ ಭುವನದ ದ್ವೀಪ ಕಿಂಚಿನ್ಮಾತ್ರ ವಿದಿತ (ಮಂಕುಕ. ೧೦೦). [ಸಂ.]

**ಅವಿದೂರ** (ನಾ). ಹತ್ತಿರ; ಸಮೀಪ. [ಸಂ.]

**ಅವಿದೆ** (ಅ). = ಅವಿಧಾ : ಭೂಸುರರು ಭೂಕಾಂತನಲ್ಲಿಗೆ ಹೋಗಿ ಹೇಳಿ ದರವಿ [ಪಾಠಾಂ. ಅವಿಧಿ]ದೆಗಳನಿಡುತ (ಬಸವು. ೫೩–೪೨).

**ಅವಿದೆಯಿಡು** = ಮೊರೆಯಿಡು ; ಕಾಪಾಡಿರೆಂದು ಕೂಗಿಕೋ : ಅವಿದೆಯಿಡುತುಂ ನಿಮ್ಮ ಧರ್ಮದ ಕವಿಲೆಗಳು ನಾವೆನುತ ದೈನ್ಯಂಗವಿದು ಪೊಗಳುತ ಸಭೆಯ ಮಾನಸರಾಗ ವಂದಿಸುವ (ಬಸವು. ೫೭–೫೧). [ಸಂ. ಅವಿಧಾ]

**ಅವಿದ್ಧ** (ಗು). ೧. ಚುಚ್ಚದ. (ನಾ). ೨. ಕಿವಿ ಚುಚ್ಚಿಕೊಳ್ಳದವನು ; ಮಹಮ್ಮದೀಯ ; ಮ್ಲೇಚ್ಛ. [ಸಂ.]

**ಅವಿದ್ಧಕರ್ಣ** (ನಾ). = ಅವಿದ್ಧ ೨ : ಎಮ್ಮನೀ ಸಮಯದೊಳವಿದ್ಧ ಕರ್ಣರುಂ ಶಬರರುಂ ಮತ್ತಂ ಕೆಲಂಬರ್ ತುಂಡು ಮನ್ನೆಯರ್ಕಳುಂ ಕಂಡು ನಡೆಯದೆ (ಕಳವ್ಯ. ೧–೮೨). [ಅವಿದ್ಧ + ಕರ್ಣ]

**ಅವಿದ್ಧಕರ್ಣಿ** (ನಾ). ಅಗಳುಶುಂಠಿ ಗಿಡ. [ಸಂ.]

**ಅವಿದ್ಯಕ** (ಗು). ಅವಿದ್ಯೆಯಿಂದಾದ ; ಅವಿದ್ಯೆಗೆ ಸಂಬಂಧಪಟ್ಟ : ಸಕಲ ವ್ಯವಹಾರವೂ ಅವಿದ್ಯಕವೇ ಹೊರತು ವಾಸ್ತವವಲ್ಲವೆಂದು ಅಭಿಪ್ರಾಯ (ಹಿಂದಸಾ. ೬೯). [ಸಂ.]

**ಅವಿದ್ಯಮಾನತ್ವ** (ನಾ). ಇಲ್ಲದಿರುವಿಕೆ. [ಸಂ.]

**ಅವಿದ್ಯಾತೀತ** (ಗು). ಅವಿದ್ಯೆಗೆ ಮೀರಿದ; ಮಾಯೆಯನ್ನು ಅತಿ ಕ್ರಮಿಸಿದ : ಅವಿದ್ಯಾತೀತನಾನಂದಮಯನು . . . ಸುಕವಿ ಹಂಪೆಯ ಮಾದಿರಾಜನು (ಹಚಕಾ. ೧–೧೦). [ಸಂ. (ಅವಿದ್ಯಾ + ಅತೀತ)]

**ಅವಿದ್ಯಾದೃಷ್ಟಿ** (ನಾ). ಅವಿದ್ಯೆಯಿಂದ ಕೂಡಿದ ನೋಟ : ಅವಿದ್ಯಾ ದೃಷ್ಟಿಯಿಂದ ನೋಡಿದರೆ ಉಪಾಸ್ಯೋಪಾಸಕ ವ್ಯವಹಾರವಿರುತ್ತದೆ (ಬ್ರಹ್ಮಭಾ. ೧೪೬). [ಸಂ. (ಅವಿದ್ಯಾ + ದೃಷ್ಟಿ)]

**ಅವಿದ್ಯಾವಂತ** (ನಾ). ವಿದ್ಯಾವಂತನಲ್ಲದವನು : ವಿದ್ಯಾವಂತ ಅಥವಾ ಅವಿದ್ಯಾವಂತ ಎಂಬುದನ್ನು ಅವರವರ ನಡವಳಿಕೆಯಿಂದ ಅರಿಯಬಹುದು (ರೂಢಿ). [ಸಂ. ಅವಿದ್ಯಾವತ್]

**ಅವಿದ್ಯೆ** (ನಾ). ೧. ವಿದ್ಯೆಯಿಲ್ಲದಿರುವುದು; ಅಜ್ಞಾನ. ೨. [ಅದ್ವೈತ] ಮಾಯೆ. ೩. ಮಾಯಾಪಂಚಕದಲ್ಲಿ ಒಂದು : ಮತ್ತಮಾ ತಮಸ್ಸು ಮಾಯೆ ಮೋಹ ಅವಿದ್ಯೆ ಅನ್ಯತಾತ್ಮಿಕಯೆಂಬಿವೇ ಮಾಯಾಪಂಚಕ ಮದರಲ್ಲಿ . . . ವಿದ್ಯೆಯಿಂ ಕೆಡುವುದಱಿಂದವಿದ್ಯೆಯೆನಿಸುವುದು (ವಿವೇಕ. ೨೬). [ಸಂ. ಅವಿದ್ಯಾ]

**ಅವಿಧವಾನವಮಿ** (ನಾ). ಮುತ್ತೈದೆಯಾಗಿ ಸತ್ತ ಹೆಂಗಸಿಗೆ ಪಕ್ಷ ಮಾಸದ ನವಮಿಯಂದು ಮಾಡುವ ಶ್ರಾದ್ಧ, —ತಿಥಿ. [ಸಂ. ಅವಿಧವಾನವಮೀ (ಅವಿಧವಾ + ನವಮೀ)]

**ಅವಿಧಾ** (ಅ). ಕಾಪಾಡಿ ಕಾಪಾಡಿ ಎಂದು ಮೊರೆಯಿಡುವ ಕೂಗು : ಅವಿಧಾ[ಪಾಠಾಂ. ಧೋ] ಪಾರ್ವನಸೊರ್ವನುಳ್ಳ ಮಗನಂ ನಿಷ್ಕಾರಣಂ ನಿರ್ಘೃಣಂ ಜವನುಯ್ದಂ (ಅಜಿಪು. ೧೦–೧೧) ; ಬೆನ್ನಹತ್ತಿದ ಬಸಿರ್ವೆರಸಿ ತಡೆಯದವಿಧಾ ಎಂದು ಬಿಡದೆ ಮೊಱೆಯೋ ಎಂದು ಕಡಗಿ ಶಿವಧೋ ಎನುತ್ತ (ಹಚಕಾ. ೩–೬೫). 'ಅವಿಧೋ' ಪರಾ. [ಸಂ.]

**ಅವಿಧಾನವಮಿ** (ನಾ). = ಅವಿಧವಾನವಮಿ. [ಸಂ. (< ಅವಿಧವಾನವಮೀ)]

**ಅವಿಧಿ** (ನಾ). ೧. ವಿಧಿಯಿಲ್ಲದಿರುವುದು; ಅಕ್ರಮ. ೨. ದುರದೃಷ್ಟ. ೩. ತೊಂದರೆ. [ಸಂ.]

**ಅವಿಧೃತೋದ್ರೇಕ** (ಗು). ಉದ್ರೇಕವನ್ನು ತಾಳದಿರುವ; ವೇಗವನ್ನು ಕಳೆದುಕೊಳ್ಳುವ: ಅಪರಿಮಿತಸ್ತಂಬೇರಮಾನೀಕ ಶೀಕರ ನೀಹಾರ ವರ್ಷದಿಂದಂ ಉಷ್ಣಾಂಶುಪ್ರತಾಪಮುಂ ಊರ್ಜಿತಾರಾತಿರಾಜ ಪ್ರತಾಪಮುಂ ಅವಿಧೃತೋದ್ರೇಕಮಾಗೆಯುಂ (ಆದಿಪು. ೧೩–೭೬ ವ). [ಸಂ. (ಅವಿಧೃತ + ಉದ್ರೇಕ)]

**ಅವಿಧೇಯ** (ಗು). ೧. ನಿಯಮಕ್ಕೆ ಒಳಪಡದ; ವಿಧಿಗೆ ಸಿಕ್ಕದ. ೨. ವಿಧೇಯತೆಯಿಲ್ಲದಿರುವ; ಹೇಳಿದಂತೆ ಕೇಳದಿರುವ. [ಸಂ.]

**ಅವಿಧೇಯತನ** (ನಾ). ವಿಧೇಯತೆ ಇಲ್ಲದಿರುವಿಕೆ; ನಿಯಮಕ್ಕೆ ಒಳಪಡದೆ ಇರುವಿಕೆ: ಒಂದು ವೇಳೆ ಇದು ನಿನಗೆ ಅವಿಧೇಯತನವೆಂದು ಕಂಡುಬಂದರೆ ನಾನು ಮಾಲತಿ ಯಶೋದೆಯರ ಜೊತೆಗೆ ಬೇರೆ ನಿಲ್ಲಲೂ ಸಿದ್ಧನೇ (ವಾತ್ಸಲ್ಯ. ೧೭೬). [ಅವಿಧೇಯ + -ತನ]

**ಅವಿಧೇಯತೆ** (ನಾ). = ಅವಿಧೇಯತನ: ಮಗನ ಅವಿಧೇಯತೆಯಿಂದ ತಂದೆಗೆ ತುಂಬ ಸಂಕಟವಾಯಿತು (ರೂಢಿ). [ಸಂ. ಅವಿಧೇಯತಾ]

**ಅವಿಧೋ** (ಅ). = ಅವಿಧಾ: ಅಬ್ರಹ್ಮಣ್ಯಂ ಭೋಯೆನಲುಂ ಬ್ರಾಹ್ಮಣರವಿಧೋಯೆನಲುಂ ಬಲ್ಲರ್ (ಶಮದ. ೫೩ ಪ್ರಯೋ). [ಸಂ.]

**ಅವಿನಶ್ಯ** (ಗು). ನಾಶವಾಗದ; ಸ್ಥಿರವಾದ: ವಿಶ್ವಾನುಭವವೆ ವಿಶ್ವಾತ್ಮಾನುಭವಕೆ ಪಥ ನಶ್ಯದಿಂದವಿನಶ್ಯ ಮಂಕುತಿಮ್ಮ (ಮಂಕುಕ. ೪೦೦). [< ಸಂ. ಅವಿನಾಶ್ಯ]

**ಅವಿನಶ್ವರ** (ಗು). ನಶ್ವರವಲ್ಲದ; ಶಾಶ್ವತವಾದ; ಸ್ಥಿರವಾದ: ಸ್ತಿಮಿತ ಸಾಗರಧರಾಧೀಶ್ವರನವಿನಶ್ವರಸುಖಾನುಭವನಿರತಂ (ಶಾಂತಿಪು. ೧–೭೩ ವ); ಈಗ ಭರತಭೂಮಿಯಲ್ಲಿ ಅವಿನಶ್ವರ ಶರೀರಿಯ ಅವಿನಶ್ವರ ಕೀರ್ತಿಯನ್ನು ಕಿವಿದೆರೆದು ಕೇಳುವುದಾದರೂ ಉಂಟೆ? (ಆರ್ಯಕೀ. ೨೧). [ಸಂ.]

**ಅವಿನಾಣ** 'ಅವಿನ್ನಾಣ' ನೋ.

**ಅವಿನಾಭಾವ** (ನಾ). ಒಂದನ್ನೊಂದು ಅಗಲದೆ ಒಟ್ಟಿಗಿರುವುದು: ಇವೆರಡಕ್ಕೂ ಪರಸ್ಪರ ಅವಿನಾಭಾವ ಸಂಬಂಧವಿದೆ (ಭಾಗ್ಯಶಿ. ೩). [ಸಂ.]

**ಅವಿನಾಭಾವಿ** (ಗು). ಬಿಡದಿರುವಂಥ; ಯಾವಾಗಲೂ ಜೊತೆಗೇ ಇರುವಂಥ: ಭವವಿಜಯಮೆಂಬುದು ಜೀವಂಗೆ ಚೇತನಾಚೇತನಂಗಳೊಳ್ ಅವಿನಾಭಾವಿಸಹಾಯಮೊಂದುಮಿಲ್ಲಂ (ಅಜಿಪು. ೮–೨೮ ವ). [ಸಂ. ಅವಿನಾಭಾವಿನ್]

**ಅವಿನಾಶ** (ಗು). ವಿನಾಶವಿಲ್ಲದ; ನಾಶಹೊಂದದ: ಧರ್ಮನಂತ ವಿನಾಶರಿನನಂತಿರಪದಸ್ಥರು . . . ಎನಿಸುವ ಕಿರಾತರು ನೆರೆದರು (ಹಚಕಾ. ೫–೪); ಸುರಿಗೆಯಿದನು ನಿಮಗೀವ ಮನವಿದಂ ಕೊಂಡು ಕರುಣಿಸಬೇಹುದವಿನಾಶಯೆಂದಡೆ (ಸಿದ್ಧರಾ. ೪–೩೨). [ಸಂ.]

**ಅವಿನಾಶಿ** (ಗು). ನಾಶವಿಲ್ಲದ; ಶಾಶ್ವತವಾದ: ಈ ಆತ್ಮ ಅವಿನಾಶಿಯಾದುದು (ಜೀವಾತ್ಮ. ೧೮೯); ಯಾವುದರಿಂದ ಜಗತ್ತು ವ್ಯಾಪಕವಾಗಿದೆಯೋ ಅದನ್ನು ಅವಿನಾಶಿಯೆಂದು ನೀನು ತಿಳಿದುಕೊ (ಅನಾಸ. ೭). [ಸಂ. ಅವಿನಾಶಿನ್]

**ಅವಿನಾಶಿತ್ವ** (ನಾ). ನಾಶಹೊಂದದಿರುವುದು. [ಸಂ.]

**ಅವಿನೀತ** (ಗು). ೧. ವಿನಯವಿಲ್ಲದ. ೨. ಅವಿಧೇಯನಾದ: ಹರಿಕಾಂತನೆಂಬ ತನಯಂ . . . ತಂದೆಗವಿನೀತನಾಗಿ ಪೇಟ್ದುದಂ ಗೆಯ್ಯದೆ (ಆದಿಪು. ೫–೧೬ ವ); ಅವಿನೀತಂ ಮಗನೇ (ಸೋಮೇಶ. ೨೨). (ನಾ). ೩. ಗಂಗವಂಶದ ಒಬ್ಬ ರಾಜ: ಮಾಧವನ ತರುವಾಯ ಅವನ ಮಗನಾದ ಅವಿನೀತನು ಕ್ರಿ. ಶ. ೪೯೫ ರಲ್ಲಿ ಪಟ್ಟಕ್ಕೆ ಬಂದನು (ಕರ್ನಾಅ. ೧೯೨). [ಸಂ.]

**ಅವಿನೀತೆ** (ನಾ). ವಿನಯವಿಲ್ಲದವಳು; ಅವಿಧೇಯಳು. [ಸಂ. ಅವಿನೀತಾ]

**ಅವಿನ್ನಾಣ, ಅವಿನಾಣ** (ನಾ). ಗುರುತು; ಕುರುಹು: ವಿದುರನ ವಿಶ್ವಾಸದಾಸಂ ಕನಕನೆಂಬಂ ಬಂದು ಪಾಂಡವರಂ ಕಂಡೇಕಾಂತದೊಳ್ ವಿದುರನಟ್ಟಿದವಿನ್ನಾಣಂಗಳಂ ಪೇೞ್ದು ನಂಬಿಸಿ (ಪಂಪಭಾ. ೩–೪); ಆಕೆ ಬರೆದ ಪಟಮಂ ಕೊಂಡಲ್ಲಿ ಬರೆಯದವಿನ್ನಾಣಂಗಳಂ ಬೆಸಗೊಂಡು ಪೋಗಿ (ಚಾವುಂಪು. ೨೬–೧೯); ರಘುವೀರನಣುವಂಗೆ ಜಾನಕಿಯ ತನ್ನ ಕುಱಿಪಿನವಿನ್ನಾಣಂಗಳನಱಿಪಿ (ಪಂರಾಮಾ. ೧೧–೪೬ ವ). **ಅವಿನಾಣ**: ಎನ್ನಾತನಱಿವತಿರಹಸ್ಯಂಗಳಪ್ಪ ಕೆಲಕೆಲವುಂ ಅವಿನಾಣಂಗಳಂ ನಾಣ್ಚೆ ಬಂಚಿಸಿ ಪಿರಿದುಮನುರಾಗದಿಂದವೆನ್ನ ಬರೆದ ಪಟಮನಿದನರ್ಚಿಸಿ (ಆದಿಪು. ೩–೪೩ ವ); ಒದವಿದ ಬೇಟದತ್ತಳಗದೊಳ್ ಮುಳಿಸಂ ಪುರುಡುಂಟು ಮಾಡೆ . . . ಕಾದಿ ಮೋದಿದವಿನಾಣಮುದಿಲ್ಲಿದಲ್ಲಿ ನಲ್ಲಳಾ (ಆದಿಪು. ೪–೧೦); ಪೂರ್ವಸಂಭೋಗಸಂಸ್ಮರಣಂ ದೂತನ ಕೆಯ್ಯೊಳಟ್ಟುವ ವಿನಾಣಂ ಕೂಟದುದ್ಯೋಗದಾದರಮಿಾಯಲ್ (ಶಾಂತಿಪು. ೮–೧೪೫). [< ಸಂ. ಅಭಿಜ್ಞಾನ]

**ಅವಿಪಾಕನಿರ್ಜರೆ** (ನಾ). [ಜೈನ] "ಕರ್ಮವು ಉದಯವಾಗಿ ಫಲ ಕೊಡುತ್ತಿದ್ದರೂ ರಾಗದ್ವೇಷರಹಿತವಾದ ಆತ್ಮನಿಗೆ ಹೊಸಕರ್ಮಗಳ ಬಂಧವಾಗುವುದಿಲ್ಲ; ಮತ್ತು ಪೂರ್ವಬದ್ಧ ಕರ್ಮಗಳು ಉದುರಿಹೋಗುತ್ತವೆ. ಇದು ಅವಿಪಾಕನಿರ್ಜರೆ" (ಆದಿಪು. ಕೋಶ); ಮತ್ತೊಂದು ಕಾಲದೊಳ್ ಕೂಡಲಿರ್ದ ಕರ್ಮಮಂ ಪ್ರಯೋಗ ಪ್ರಗ್ರಹಂಗಳಿಂ ತೆಗೆದುಕೊಂಡು ದಯಾಗೋಪುಚ್ಛೆಯೊಳಿಕ್ಕಿ ಅನುಭವಿಸುವುದವಿಪಾಕನಿರ್ಜರೆ (ಶ್ರಾವಕಾ. ೭೫–೮). [ಸಂ. ಅವಿಪಾಕನಿರ್ಜರಾ]

**ಅವಿಭಕ್ತ** (ಗು). ೧. ವಿಭಾಗವಾಗದ; ಪಾಲುಮಾಡದಿರುವ. ೨. ಬೇರೆಮಾಡದ; ಒಂದಾಗಿರುವ: ಈ ವಿಭಕ್ತಾವಸ್ಥೆಯನ್ನು ಕಳೆದುಕೊಂಡು ಈಶ್ವರನೊಡನೆ ಒಂದಾಗುವುದು ಜೀವಿಯು ಅವಿಭಕ್ತನಾಗಿ ಭಕ್ತನಾದಾಗಲೇ (ಭಾರದ. ೧೧೮). [ಸಂ.]

**ಅವಿಭಕ್ತಕುಟುಂಬ** (ನಾ). ವಿಭಾಗಹೊಂದದೆ ಒಟ್ಟಿಗೆ ಇರುವ ಕುಟುಂಬ; (ಅಣ್ಣತಮ್ಮಂದಿರು ಆಸ್ತಿಯನ್ನು ವಿಭಾಗಮಾಡಿಕೊಳ್ಳದೆ) ಒಟ್ಟಿಗೆ ಒಂದೇ ಮನೆಯಲ್ಲಿ ವಾಸಮಾಡುವ ಕುಟುಂಬ: ಅಣ್ಣತಮ್ಮಂದಿರು ಒಂದು ದೊಡ್ಡ ಜಮಿಾನುದಾರಿಯನ್ನು ಸಂಪಾದಿಸಿ ಅವಿಭಕ್ತಕುಟುಂಬದಲ್ಲಿಯೇ ಜೀವಿಸುತ್ತಿದ್ದರು (ಬಂಕಿಮ. ೬೮). [ಅವಿಭಕ್ತ + ಕುಟುಂಬ]

**ಅವಿಭಕ್ತಘರಾಣೆ** (ನಾ). (ಉಕ) = ಅವಿಭಕ್ತಕುಟುಂಬ. [ಅವಿಭಕ್ತ + ಘರಾಣೆ]

**ಅವಿಭಕ್ತಸ್ನೇಹೆ** (ನಾ). ಅನನ್ಯಪ್ರೀತಿಯುಳ್ಳವಳು: ಅವಿಭಕ್ತಸ್ನೇಹೆಯಂ ರೋಹಿಣಿಯನೊಸೆಯಿಸಲ್ ಸೋಮಲೋಕಕ್ಕದೊಮ್ಮೊಮ್ಮೆ . . . ವಿಶೇಷಸ್ನೇಹಮಂ ಮಾಡುವನನುದಿನಮೆಟ್ಟಂದು ರಾಜೇಂದ್ರಚಂದ್ರಂ (ಕಾದಂಉ. ೮೨೨). [ಸಂ. ಅವಿಭಕ್ತಸ್ನೇಹಾ]

**ಅವಿಭಾಗ** (ಗು). ವಿಭಾಗವಿಲ್ಲದ; ಪಾಲುಮಾಡದ. [ಸಂ.]

**ಅವಿಭಾಜ್ಯ** (ಗು). ೧. ವಿಭಾಗಿಸಬಾರದ. ೨. ವಿಭಾಗಿಸಲು ಆಗದ. ೩. [ಗಣಿತ] ನಿಶ್ಶೇಷವಾಗಿ ಭಾಗಾಹಾರಮಾಡಲು ಶಕ್ಯವಿಲ್ಲದ. ಅವಿಭಾಜ್ಯ ಅಪವರ್ತನ = ವಿಭಾಗಮಾಡಲು (ನಿಶ್ಶೇಷವಾಗಿ ಭಾಗಿಸಲು) ಶಕ್ಯವಲ್ಲದ ಅಪವರ್ತನ: ಹದಿನೆಂಟಕ್ಕೆ ಅವಿಭಾಜ್ಯ ಅಪವರ್ತನಗಳಾವುವು (ರೂಢಿ); ನೂರತೊಂಭತ್ತೆಂಟಕ್ಕೆ ಅವಿಭಾಜ್ಯ ಅಪವರ್ತನವನ್ನು ವಿಂಗಡಿಸಿ ಬರೆಯಿರಿ (ರೂಢಿ). [ಸಂ.]

**ಅವಿಭಾಜ್ಯತೃಪ್ತಿ** (ನಾ). ವಿಭಜಿಸಲಾಗದ ತೃಪ್ತಿ : ಯಾರ ಅಧೀನವೂ ಅಲ್ಲವೆಂಬವಿಭಾಜ್ಯತೃಪ್ತಿಯ ಭಾಗ್ಯವೆನಗಿರಲಿ (ಇಂಚಾಪ. ೧೩೦–೩೯). [ಅವಿಭಾಜ್ಯ + ತೃಪ್ತಿ]

**ಅವಿಭಾವ್ಯ** (ಗು). ೧. ಯೋಚಿಸಿ ತಿಳಿಯಲು ಶಕ್ಯವಿಲ್ಲದ; ವಿಭಾವಿಸಲಾಗದ. (ನಾ). ೨. ಗುರುತಿಸಲು ಶಕ್ಯವಿಲ್ಲದವನು; ಪತ್ತೆ ಹಚ್ಚಲಾಗದವನು : ಜವವಟ್ಟಿಯುದಿದಿರೊಳೀಬರ್ಪ್ಪ ವಾಜಿಗಳ ನಡುವೆ ಪೀಲಿದಟ್ಟಿಗಳ ನೆಳಲಿಂದವಿಭಾವ್ಯನೆನಿಸಿ ಬರುತಿರ್ಪವನೇಂ ಕೇಯೂರನಾಗದಿರ್ಕುಮೆ (ಕಾದಂಉ. ೩೫೪). [ಸಂ.]

**ಅವಿಭೇದಿ** (ಗು). ೧. ಒಡೆಯದ; ವಿಭಾಗ ಹೊಂದದ. ೨. ಭೇದವಿಲ್ಲದ; ವ್ಯತ್ಯಾಸವಿಲ್ಲದ : ಅತಿಬಹಲಸ್ಥಿತಿಯಿಂ ಸಂಗತಗುಣಮವಿಭೇದಿಯಾಗೆ ತದ್ಗುಣಮೆನಿಕುಂ ॥ ಉದಾ : ಯಮುನಾಪಗೆ ಸುರನದಿಯಂ ಕಮಳೋದರನಿಂದುವಪೌಳಿಯಂ . . . ಪೋಲ್ತಿರ್ಪಿನಮಮಲಯಶೋರುಚಿ ಪೊದಳ್ದುದಿಳೆಗಿಂದರನಾ (ಕಾವ್ಯಾವ. ೭೪೬, ೭೪೭). [ಸಂ. ಅವಿಭೇದಿನ್]

**ಅವಿಮಧೂತ** (ನಾ). [ಜೈನ] ದರ್ಶನ ಮೋಹನೀಯಗಳಲ್ಲಿ ಒಂದು : ಮೋಹನೀಯಮಿರ್ಪತೆಂಟುತೆಜನಕ್ಕುವೆಂತೆನೆ :– ದರ್ಶನ ಮೋಹನೀಯಂ ಚಾರಿತ್ರಮೋಹನೀಯಮೆಂದಿರ್ತೆ ಜನಕ್ಕುಮವಿಮಧೂತಂ ಸಮ್ಯಗ್ವಿಧೂತಂ ಸಮ್ಯಕ್ತ್ವಪ್ರಕೃತಿಯುಮೆಂದು ದರ್ಶನ ಮೋಹನೀಯಂ ಮೂಱುಂ ತೆಱಂ (ಶಾಂತಿಪು. ೧೨–೧೧ ವ). [ಸಂ.]

**ಅವಿಮರ್ಶಕಾರಿ** (ನಾ). ದುಡುಕುಸ್ವಭಾವದ ವ್ಯಕ್ತಿ : ಅವಿಮರ್ಶಕಾರಿಯೆ ಅವಳನು ಹಗೆದರು ನಿನಗತಿಮುಚ್ಚಾದಳವಳು (ಗಾಥಾಸ. ೬–೧೦). [ಸಂ. ಅವಿಮರ್ಶಕಾರಿನ್]

**ಅವಿಮುಕ್ತ** (ಗು). ೧. ಬಿಡುಗಡೆ ಹೊಂದದ; ಮುಕ್ತಿಯನ್ನು ಹೊಂದದಿರುವ. (ನಾ). ೨. = ಅವಿಮುಕ್ತ ಕ್ಷೇತ್ರ : ಭೂರಿ ದುರಿತಂಗಳಂ ಕಂಡಮಾತ್ರದೊಳೆ ಸಂಹಾರಮಂ ಮಾಳ್ಪ ನಿಖಿಳ ಪ್ರಳಯಬಾಧೆಗಳ್ ದೂರಮೆನಿಪವಿಮುಕ್ತ ಕಾಶಿಗೈತಂದು ವಿಶ್ವೇಶಂಗೆ ಪೊಡಮಟ್ಟನು (ಜೈಮಿಭಾ. ೫–೩೦). [ಸಂ.]

**ಅವಿಮುಕ್ತಕ್ಷೇತ್ರ** (ನಾ). ಒಂದು ಪವಿತ್ರಕ್ಷೇತ್ರ; ಕಾಶಿ; ವಾರಣಾಸಿ: ಶರಣ ಬಸವಣ್ಣನಿದ್ದ ಕ್ಷೇತ್ರ ಅವಿಮುಕ್ತ [ಪಾಠಾಂ. ಐಮುಕ್ತಿ] ಕ್ಷೇತ್ರವಾಗಿ ಆನು ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು (ಮಹಾದೇ. ೧೧೩–೨೫೭). [ಅವಿಮುಕ್ತ + ಕ್ಷೇತ್ರ]

**ಅವಿಮುಕ್ತಿಕ್ಷೇತ್ರ** (ನಾ). = ಅವಿಮುಕ್ತಕ್ಷೇತ್ರ: ಆತನ ಇರವೆ ವಾರಣಾಸಿ ಅವಿಮುಕ್ತಿಕ್ಷೇತ್ರ (ಬಸವ. ೮೫೩). [ಅವಿಮುಕ್ತಿ + ಕ್ಷೇತ್ರ]

**ಅವಿಮೃಷ್ಟ** (ಗು). ಮುಟ್ಟದಿರುವ; ವಿಮರ್ಶೆ ಮಾಡದಿರುವ. 'ಅವಿಮೃಷ್ಟವಿಧೇಯಾಂಶ' ಪರಾ. [ಸಂ.]

**ಅವಿಮೃಷ್ಟವಿಧೇಯಾಂಶ** (ನಾ). [ಕಾವ್ಯಮಿ] ಪದದೋಷಗಳಲ್ಲಿ ಒಂದು: "ಅವಿಮೃಷ್ಟವಿಧೇಯಾಂಶ – ಹೇಳಬೇಕೆಂದಿರುವ ವಿಷಯದಲ್ಲಿ ಮುಖ್ಯಭಾಗಕ್ಕೆ ತಕ್ಕ ಪ್ರಾಶಸ್ತ್ಯ ಕೊಡದಂತಿರುವುದು" (ಕೈಪಿಡಿ. ೨೨೮). [ಅವಿಮೃಷ್ಟ + ವಿಧೇಯ + ಅಂಶ]

**ಅವಿಯಿಸು** (ಕ್ರಿ). ಬಚ್ಚಿಡು; ಮರೆಯಾಗುವಂತೆ ಮಾಡು: ಭುವನಹಿತಕೆರ್ದೆಗೊಟ್ಟು ಸಾಧಿಸುವ ಕರ್ತವ್ಯ ವಿವಿಧನಿರ್ವಹಣಂಗಳಂ ಬಲ್ಲನಿತನೆಂತೊ ಅವಿಯಿಪಂ ಗುಪ್ತಿಗೆಯ್ವಂ (ಸಂಸಪ. ೧೧–೧೦). [ಅವಿ$_1$ + –ಇಸು$_3$]

**ಅವಿರತ** (ಗು). ೧. ಬಿಡುವಿಲ್ಲದ; ನಿರಂತರವಾದ; ಒಂದೇ ಸಮನಾದ: ಯಾರು ಸತ್ತರೇನು, ಯಾರು ಇದ್ದರೇನು, ಜೀವನ ಸಾಗುವುದು ಅವಿರತವಾಗಿ (ಮುಕ್ತಿ. ೭). (ನಾ). ೨. ನಿವೃತ್ತನಲ್ಲದವನು; ವಿರಕ್ತನಲ್ಲದವನು. [ಸಂ.]

**ಅವಿರತಂ** (ಅ). ಬಿಡುವಿಲ್ಲದೆ; ನಿರಂತರವಾಗಿ: ಉಪಧಾವಿಶುದ್ಧ ಮಂತ್ರಿಮಂಡಲದೊಳವಿರತಂ ನಿಘರ್ಷಿಸಿಯುಂ (ಚಂದ್ರಪು. ೭–೬೦ ವ); ಪಶುಗಳನಾರಯಿದು ಕಾಯ್ತಪ್ಪನನುದಿನವು ಸವಿನಯದೊಳೀ ಕಾಯಕೋದ್ಯೋಗವೆ ತನಗೆ ನೆಲೆಯಾಗಿ ಜಂಗಮುಕವಿರತಂ ಮಾಡುತ (ಬಸಪು. ೨೩–೨). [ಸಂ.]

**ಅವಿರತಪ್ರಯತ್ನ** (ನಾ). ಬಿಡುವಿಲ್ಲದ ಯತ್ನ; ಸಂತತವಾದ ಉದ್ಯೋಗ : ಅವಿರತಪ್ರಯತ್ನದಿಂದ ತತ್ವವನ್ನು ತಿಳಿದಮೇಲೆ ಮಾನವನು ಕಾಮವಿಕಾರದಿಂದ ಪೂರ್ತಿಯಾಗಿ ಬಿಡುಗಡೆ ಹೊಂದುವನು. (ಕನ್ನನು. II, ೧೦). [ಅವಿರತ + ಪ್ರಯತ್ನ]

**ಅವಿರತಿ** (ನಾ). ವಿರಕ್ತಿಯಿಲ್ಲದಿರುವುದು; ಆಸೆ ಮೊದಲಾದುವನ್ನು ಬಿಡದಿರುವುದು : ಮಿಥ್ಯಾದರ್ಶನ ಅವಿರತಿ ಪ್ರಮಾದ ಕಷಾಯಯೋಗಗಳು ಬಂಧಹೇತುಗಳು (ಹಿಂದಸಾ. ೪೯). [ಸಂ.]

**ಅವಿರಲ,** ಅವಿರಳ (ಗು). ೧. ವಿರಳವಲ್ಲದ; ದಟ್ಟವಾದ; ಸಾಂದ್ರವಾದ; ನಿಬಿಡವಾದ. ೨. ನಡುವೆ ತೆರಪಿಲ್ಲದ; ಎಡೆಬಿಡದ; ನಿರಂತರವಾದ. (ನಾ). ೩. ಅಪರೂಪವಲ್ಲದ್ದು; ಎಲ್ಲೆಲ್ಲಿಯೂ ಹೇರಳವಾಗಿ ದೊರೆಯುವಂಥದ್ದು. ೪. ನಿರ್ದೋಷವಾದದ್ದು; ರಂಧ್ರವಿಲ್ಲದ್ದು (?). **ಅವಿರಳ** : ೧. ಅವಿರಳ ಧೂಪಾಮೋದ ಸಂಸಂಗಿ ಭೃಂಗಾನ್ವಿತಂ (ಚಂದ್ರಪು. ೧–೧೫೦). ೨. ಅವಿರಳ ವಾದ್ಯಸಮೇತಂ ಧವಳ ಪ್ರಾಸಾದಸಾರ ದೇವಾಗಾರಂ (ಜಗವಿ. ೨–೨೩); ಕವಿತಾಭಿಮಾನದಿಂ ಮೇಣವಿರಳವೇಳಾಪಸರಣ ಲೀಲೆಯಿನಲ್ತೀ ಭವಹರಚರಿತಂ (ಚಂದ್ರಪು. ೧–೬೩). ೪. ಅವಿರಳ ಸಮ್ಯಕ್ತ್ವದೊಳಂ ಕವಿತೆಯ ಬಲ್ಮೆಯೊಳಮೀ ಮಹೀಮಂಡಲದೊಳ್ ಕವಿಪಂಪನ ಕವಿಪೊನ್ನನ ಕವಿರತ್ನನ ದೊರೆಗ ಮೊರೆಗಮೇಂ ಬಂದಪರೇ (ಸುಕುಮಾ. ೧–೪೦). [ಸಂ.]

**ಅವಿರಲಿತ,** ಅವಿರಳಿತ (ಗು). = ಅವಿರಲ ೧. **ಅವಿರಳಿತ** : ಅವಿರತಾಪಗತಾನತಾರ್ತಿಯವಿರಳಿತ ತೇಜಃಪ್ರಪೂರ್ತಿಸಮಸ್ತವಿಸ್ಫೂರ್ತಿ (ಬಸಪು. ೪೬–೪೦). [ಸಂ.]

**ಅವಿರಳ** 'ಅವಿರಲ' ನೋ.

**ಅವಿರಳಗೊಳ್** (ಕ್ರಿ). ಒತ್ತಾಗಿ ಸೇರಿಕೊ; ಕಲಸಿಕೊ : ಜಿನಮತವ ನಜೀವಂ ಮತ್ತಿನಾಗಮಂಗಳನು ನೋಡುವಂದವಿರಳಗೊಂಡಿನಿಸುಂ ನಿಶ್ಚಯಮಿಲ್ಲೆಂತೆನೆ ಮೆಚ್ಚಿದ ತೆಱದೆ ನುಡಿವರಪ್ಪುದಱಿಂದಂ (ಸಮುಪ. ೩–೬೯). [ಅವಿರಳ + ಕೊಳ್$_1$]

**ಅವಿರಳವಿಸಾರಿ** (ಗು). ನಿರಂತರವಾಗಿ ಹರಡುವಂಥ; ಎಡೆಬಿಡದೆ ಪ್ರಸರಿಸುವಂಥ : ಆ ರಮಣಿಯ ದೇಹದ್ಯುತಿವಾರಿಯಿನವಿರಳವಿಸಾರಿಯಿಂ ತೊಳೆದಂತಾಚಾರಮೆನಿತ್ತನಿತುಂ ವಿಸ್ತಾರಿಸಿದುದು ವಿಮಲವೃತ್ತಿಯಿಂದನವರತಂ (ಚಂದ್ರಪು. ೨–೧೪).
[ಸಂ. ಅವಿರಳವಿಸಾರಿನ್ (ಅವಿರಳ + ವಿಸಾರಿನ್)]

**ಅವಿರಳಾಸ್ತ್ರ** (ನಾ). ಎಡೆಬಿಡದೆ ಬಿಡುವ ಬಾಣ : ಅವಿರಳಾಸ್ತ್ರಾನೀಕ ಡಾವರಿಸಿದವು ದಿಗುತಟವ (ಕುವ್ಯಾಭೀ. ೮–೩೬). [ಅವಿರಳ + ಅಸ್ತ್ರ]

**ಅವಿರಳಿತ** 'ಅವಿರಲಿತ' ನೋ.

**ಅವಿರುದ್ಧ** (ಗು). ೧. ವಿರುದ್ಧವಲ್ಲದ; ಹೊಂದುವಂತಹ; ಉಚಿತವಾದ. (ನಾ). ೨. ವಿರುದ್ಧವಲ್ಲದ್ದು; ಹೊಂದುವಂಥದು : ಮಾನಧನರಱಿದು ಪೇೞ್ದನುಮಾನಕ್ಕವಿರುದ್ಧಮಾಗೆ ಲಕ್ಷ್ಯಾಗಮದೊಳ್ (ಕವಿರಾ. ೩–೮೬). [ಸಂ.]

**ಅವಿರೋಧ** (ಗು). ೧. ವಿರೋಧವಿಲ್ಲದಿರುವ; ವಿರೋಧವಲ್ಲದಿರುವ. (ನಾ). ೨. ಪ್ರತಿಸ್ಪರ್ಧೆಯಿಲ್ಲದಿರುವುದು : ಆ ಮಹನೀಯರು ಅಧ್ಯಕ್ಷ ಸ್ಥಾನಕ್ಕೆ ಅವಿರೋಧವಾಗಿ ಆಯ್ಕೆಗೊಂಡರು (ರೂಢಿ). [ಸಂ.]

**ಅವಿರೋಧಿ** (ಗು). ವಿರೋಧಿಯಲ್ಲದಿರುವ; ಅನುಕೂಲವಾಗಿರುವ; ಹೊಂದುವಂಥ: ಸಾಧನಮಂ ಸಾಧ್ಯಕ್ಕವಿರೋಧಿಯನಱಿದೂಹೆಗೆಯ್ದು ದನುಮಿತಿಯೆನಿಕುಂ (ಕಾವ್ಯಾವ. ೬೩೪). [ಸಂ. ಅವಿರೋಧಿನ್]

**ಅವಿಲಂಬ** (ನಾ). ವಿಲಂಬವಿಲ್ಲದಿರುವುದು. [ಸಂ.]

**ಅವಿಲಂಬಂ,** ಅವಿಳಂಬಂ (ಅ). ವಿಳಂಬವಿಲ್ಲದೆ; ಸಾವಕಾಶವಿಲ್ಲ ದಂತೆ; ಜಾಗ್ರತೆಯಾಗಿ. **ಅವಿಳಂಬಂ**: ಮುಂಡಮುಂ ಶಿ[ಸೀ]ರ್ಳ್ದ ವಿಳಂಬಂ ಮಾಂಸಖಂಡಂದೆಗೆದು ಸಲಿಲದಿಂ ಕ್ಷಾಲನಂಗೆಯ್ವುತಾಗಳ್ (ವೃಷವಿ. ೧೪–೪೯). [ಸಂ.]

**ಅವಿಲಂಬನ** (ನಾ). ತಡಮಾಡದಿರುವುದು. [ಸಂ.]

**ಅವಿಲಂಬಿತಂ** (ಅ). ಜಾಗ್ರತೆಯಾಗಿ; ಬೇಗನೆ: ಲೋಕಾಯತ ಶಾಕ್ಯ ಮತಾವಲಂಬಿಯನವಿಲಂಬಿತಂ ಗೆಲ್ದು (ಶಾಂತಿಪು. ೮–೧೪೭ ವ). [ಸಂ.]

**ಅವಿಲಣ** (ನಾ). ಕುದುರೆಯ ಕಡಿವಾಣದ ಮೊಳೆ; ಕಡಿವಾಣದ ಕಬ್ಬಿಣದ ತುಂಡು: "ಅವಿಲಣಮಾಳಭೇದಮಥಮಂ ನೆರೆ ಕೀಳ್ವುದು ಕೀಲ[ಳ]ನಿಕ್ಕು" (ನಾ ನಾ ರ. ೧೫೦); ಘುರುಘುರುಸ್ವನದವಿಲಣದ ಕಿಱುನೊರೆಯ ಕಬ್ಬಿಯ ಘಣಘಣತ್ಕಾರದ ಗಡಾವಣೆಯ (ತೊರರಾ. ೬–೩೦–೩೩). [?]

**ಅವಿಲು** (ನಾ). ತರತರದ ತರಕಾರಿಗಳನ್ನು ಬೆರಸಿ ಮಾಡುವ ಪದಾರ್ಥ: "ತರತರದ ತರಕಾರಿಗಳನ್ನು ಬೆರಸಿ ಪದಾರ್ಥಮಾಡುವುದಕ್ಕೆ "ಅವಿಲು" ಎನ್ನುತ್ತಾರೆ (ದೇಜ್ಯೋತಿ. ೬೨); ಎಲ್ಲವೂ ಸೇರಿ ಒಂದು ಅವಿಲಿನಂತಾಯಿತು (ಅಳನಿ. ೧೦೩). [ದೇ. ‖ ತಮಿ. ಅವಿಯಲ್]

**ಅವಿವಕ್ಷಿತ** (ಗು). ಹೇಳಬೇಕೆಂದು ಉದ್ದೇಶಿಸದ: ಅವಿವಕ್ಷಿತ ಸಾಮಾನ್ಯ ಮತದ್ಗುಣಯೋಗದಿನನ್ಯತ್ವಾರೋಪಮುಪ್ಪುದುತ್ಪ್ರೇಕ್ಷೆ ವಲಂ (ಕಾವ್ಯಾವ. ೭೨೭). [ಸಂ.]

**ಅವಿವಕ್ಷಿತವಾಚ್ಯ** (ನಾ). [ಕಾವ್ಯಮೀ] ಧ್ವನಿಯಲ್ಲಿ ಒಂದು ಪ್ರಭೇದ: ಲಕ್ಷಣಾವೃತ್ತಿಯನ್ನು ಆಶ್ರಯಿಸಿ ಹೊರಡುವ "ಅವಿವಕ್ಷಿತ ವಾಚ್ಯಧ್ವನಿ" ಎಂಬ ವಿಭಾಗವನ್ನು ಮೊದಲು ತೆಗೆದುಕೊಳ್ಳೋಣ (ಭಾರಮೀ. ೨೭೬); 'ಧ್ವನಿ' ಯು ಇದ್ದೇ ಇದೆ. ಸ್ಥೂಲವಾಗಿ ಅದನ್ನು ವಿಂಗಡಿಸಿದರೆ 'ಅವಿವಕ್ಷಿತ – ವಾಚ್ಯ' ಮತ್ತು 'ವಿವಕ್ಷಿತಾನ್ಯಪರ – ವಾಚ್ಯ' ಎಂಬ ಎರಡು ವಿಧಗಳಾಗುತ್ತವೆ (ಧ್ವನ್ಯಾಲೋ. ೩೯).
[ಅವಿವಕ್ಷಿತ + ವಾಚ್ಯ]

**ಅವಿವೃತ್ತ** (ನಾ). ನಡೆಗೆಟ್ಟವನು; ದುಷ್ಟ; ಧೂರ್ತ: "ಅವಿವೃತ್ತನೆನೆ ಪೋಕನಕ್ಕು" (ಮಂಗರಾ. ೭೩–೨೫). [ಸಂ.]

**ಅವಿವೇಕ** (ನಾ). ೧. ವಿವೇಕವಿಲ್ಲದಿರುವುದು; ತಿಳಿವಳಿಕೆ ಸಾಲ ದಿರುವುದು: ಅವಿವೇಕಮೆ ಸುಖಘಾತಕಮಱಿವೊಂದೆ ದೇಹಿಗಪ್ಪುದು ಸುಖದಂ (ಪಾರ್ಶ್ವಪು. ೪–೧೫೩). ೨. [ಅದ್ವೈತ] ಅಧ್ಯಾಸ; ಭ್ರಾಂತಿ; ಅವಿದ್ಯೆ: ಅವಿವೇಕ ಪದಕ್ಕೆ ಅಧ್ಯಾಸ, ಭ್ರಾಂತಿ, ಅವಿದ್ಯೆ ಎಂಬ ಭಾವನೆ ಯಿಂದ ವಿಶುದ್ಧಾದ್ವೈತ ಸಿದ್ಧಾಂತವೂ ಈ ಮಾರ್ಗದಲ್ಲೇ ಮಧ್ಯಸ್ಥ ವಾಗಿರುವುದು (ಹಿಂದಸಾ. ೯೯). [ಸಂ.]

**ಅವಿವೇಕಾತ್ಮತೆ** (ನಾ). ವಿವೇಕವಿಲ್ಲದಿರುವ ಮನಸ್ಸಿನಿಂದ ಕೂಡಿರು ವುದು; ಅವಿವೇಕಿತನ: ಅವಿವೇಕಾತ್ಮತೆಯಿಂದೆ ಮೆಯ್ಯಱಿಯದಾಂ ದಿಙ್ಮೂಢನಾಗಿರ್ದೆನಿನ್ನೆವರಂ (ಸುಕುಮಾ. ೧೨–೧೫).
[ಸಂ. ಅವಿವೇಕಾತ್ಮತಾ]

**ಅವಿವೇಕಿ** (ಗು). ೧. ವಿವೇಕವಿಲ್ಲದ; ತಿಳಿವಳಿಕೆ ಸಾಲದ: ಅವಿವೇಕಿ ದಶಮುಖಂ ದೃಷ್ಟಿವಿಷಾಹಿಯ ಪೆಡೆಯ ಮಣಿಶಲಾಕೆಗೆ ಕೈನೀಡುವ ಗಾಂಪ ನಂತೆ ರಘುವೀರವಧೂಜನಕಜೆಗೆ ಮನದೊಳಳಿಪಂ ತಂದಂ (ಪಂರಾಮಾ. ೯–೮೮). (ನಾ). ೨. ವಿವೇಕವಿಲ್ಲದವನು. [ಸಂ. ಅವಿವೇಕಿನ್]

**ಅವಿವೇಕಿತನ** (ನಾ). ವಿವೇಕವಿಲ್ಲದಿರುವುದು: ಜೀಯ ನೀನವಿವೇಕಿ ತನದಲಿ ಮಗನ ಹೆಚ್ಚಿಸಿ ಸಾಕಿ ಕಲಿಸಿದೆ ಕುಟಿಲತನವನು (ಕುವ್ಯಾದ್ರೋ. ೧–೫). [ಅವಿವೇಕಿ + –ತನ]

**ಅವಿಶಾಲ** (ಗು). ವಿಶಾಲವಲ್ಲದ; ಚಿಕ್ಕದಾದ: ಅವಿಶಾಲಾಂಬರ ವಪ್ರಸನ್ನದಿವವಸ್ಪಷ್ಟಾಧ್ವವಸ್ವಚ್ಛತೋಯಂ... ಒಪ್ಪಿರ್ದುದಭ್ರಾಗಮಂ (ಜಗವಿ. ೪–೨೬). [ಸಂ.]

**ಅವಿಶಾಲಪರಿಧಿ** (ಗು). ೧. ವಿಶಾಲವಲ್ಲದ ಆವರಣವುಳ್ಳ. ೨. ಕಂಬಳಿ ಯಿಂದ ಸುತ್ತುವರಿದ ಆವರಣವುಳ್ಳ. ೧, ೨: ವಿಶಾಲಪರಿಧಿ ಯಾಗಿಯುಂ ಅವಿಶಾಲಪರಿಧಿಯೆನಿಸಿ ಗೃಹಮುಹತ್ತರಂ ಮುನ್ನಮೆ ಸಮೆದುದಂ ಪ್ರಸ್ಥಾನಶಿಬಿರಮಂ ಪೊಕ್ಕು ಯಥೋಚಿತ ಪ್ರಸಂಗದಿ ನಂದಿನ ದಿವಸಮಂ ಕಳಿಪಿ (ಚಂದ್ರಪು. ೧೦–೧೭ ವ).
[ಸಂ. (ಅ– + ವಿಶಾಲ + ಪರಿಧಿ, ಅವಿ + ಶಾಲ + ಪರಿಧಿ)]

**ಅವಿಶಿಷ್ಟ** (ಗು). ೧. ವಿಶೇಷವೇನೂ ಇಲ್ಲದ; ಸಾಧಾರಣವಾದ. ೨. ಕೂಡಿಲ್ಲದ; ಸೇರಿಲ್ಲದ. [ಸಂ.]

**ಅವಿಶಿಷ್ಟಲಿಂಗ** (ನಾ). [ವ್ಯಾಕ] ವಿಶಿಷ್ಟವಾದ ಲಿಂಗವ್ಯವಸ್ಥೆಯಿಲ್ಲ ದಿರುವುದು; ಎಲ್ಲಾ ಲಿಂಗಗಳಲ್ಲೂ, ಎಲ್ಲಾ ವಚನಗಳಲ್ಲೂ ಯಾವ ಮಾರ್ಪಾಡೂ ಇಲ್ಲದೆ ವರ್ತಿಸುವುದು: ಅವಿಶಿಷ್ಟಲಿಂಗ ವಚನ ವ್ಯವಸ್ಥೆಯಿಂದೊಂದಿ ಗುಂ ಕುಮಾದೇಶಂಗಳ್ ಬವರಿಸುಗುಂ ಸಂಪ್ರತಿಗಂ ಭವಿಷ್ಯದರ್ಥದೊಳಮನ್ಯವಚನೋಕ್ತಿಗಳೊಳ್ (ಕಾವ್ಯಾವ. ೩೯೭).
[ಅವಿಶಿಷ್ಟ + ಲಿಂಗ]

**ಅವಿಶೇಷ** (ನಾ). ೧. ವಿಶೇಷವೇನೂ ಇಲ್ಲದಿರುವುದು; ಸಾಧಾರಣ ವಾಗಿರುವುದು; ಯಾವ ವ್ಯತ್ಯಾಸವೂ ಇಲ್ಲದಿರುವಿಕೆ; ಸಮಾನತೆ: ಅವಿಶೇಷದಿನುಸಿರ್ವ ರೂಢಿಯನಿತಿನಿತೆನಿತೆಲ್ಲವು ಕೆಲವು ಪಲವು ತಾಮಂತ್ಯ ವರ್ಣಲೋಪಮನೆ ವತ್ವಮೊದವಿರೆ ಪಡೆಗುಂ (ಶಮದ. ೧೦೦); ಅವಿಶೇಷ ದಿನಾ ದೀರ್ಘವ್ಯವಹೃತಿ ಶಬ್ದಾಂತರಾಳದೊಳ್ ಪಕ್ಷದಿ ಸುದೃವಿಕುಂ (ಶಮದ. ೧೧೮). ೨. [ಕಾವ್ಯಮೀ] (ಕಾವ್ಯಾವಲೋಕನಕಾರನ ಪ್ರಕಾರ) ವರ್ಣ್ಯಾವರ್ಣ್ಯಗಳ ವಿಶೇಷಣಗಳು ಒಂದೇ ರೂಪ ವಾಗಿದ್ದು ಉದಾರವಾದ ಬೇರೊಂದು ಅರ್ಥವು ತೋರುವ ಒಂದು ಅರ್ಥಾಲಂಕಾರ: ಸದೃಶಾಕಾರ ವಿಶೇಷಣಮರ್ಥಮುದಾರಂ ಬೇಱೊಂದು ತೋರ್ಪೊಡವಿಶೇಷಾಖ್ಯಂ. ಉದಾ:—ಅವಿಶೇಷಕ್ಕೆ: ಗುರುಪರಿಣಾಹಂಗಳ್ ಪೀವರಂಗಳುನ್ನತಿಯುತಂಗಳುರ್ವರೆಗೆ ಮನೋ ಹರಕುಚಮಂಡಳದಂತಿರೆ ಕರಮೆಸೆವುವು ವಿಮಳ ದರ್ದುರಾದ್ರಿಗಳೆರಡುಂ (ಕಾವ್ಯಾವ. ೭೬೨, ೭೬೪). [ಸಂ.]

**ಅವಿಶೇಷಣ** (ಗು). ವಿಶೇಷಣವಿಲ್ಲದಿರುವ. [ಸಂ.]

**ಅವಿಶ್ರಾಂತ** (ಗು). ೧. ಸಂತತವಾದ; ನಿರಂತರವಾದ; ಎಡೆಬಿಡದ: ಅಂತವಿಶ್ರಾಂತಶ್ರೀಯನಪ್ಪುಕೆಯ್ದು (ಮಲ್ಲಿಪು. ೩–೨೩ ವ). ೨. ವಿಶ್ರಾಂತಿ ಹೊಂದದ. (ನಾ). ೩. ವಿಶ್ರಾಂತಿಯಿಲ್ಲದ ಸ್ಥಿತಿ.
ಅವಿಶ್ರಾಂತವಾಗಿ = ವಿಶ್ರಾಂತಿಯಿಲ್ಲದೆ; ನಿರಂತರವಾಗಿ: ಆ ಮಹನೀಯರು ಅವಿಶ್ರಾಂತವಾಗಿ ದುಡಿದವರು (ರೂಢಿ). [ಸಂ.]

**ಅವಿಶ್ವಾಸ** (ನಾ). ವಿಶ್ವಾಸವಿಲ್ಲದಿರುವುದು; ನಂಬಿಕೆಯಿಲ್ಲದಿರುವುದು. [ಸಂ.]

**ಅವಿಶ್ವಾಸನಿರ್ಣಯ** (ನಾ). ಮಂತ್ರಿ, ಸಭಾಪತಿ ಮುಂತಾದ ಅಧಿ ಕಾರಿಗಳಲ್ಲಾಗಲಿ ಸರ್ಕಾರದಲ್ಲಾಗಲಿ ತಮಗೆ ನಂಬಿಕೆ ಸಾಲದೆಂದು ಸಭೆಯ ಸದಸ್ಯರು ಮಾಡುವ ನಿರ್ಣಯ: ಪುರಸಭೆಯ ಸದಸ್ಯರು ಪುರಸಭಾಧ್ಯಕ್ಷರ ಮೇಲೆ ಅವಿಶ್ವಾಸನಿರ್ಣಯವನ್ನು ತಂದರು (ರೂಢಿ).
[ಅವಿಶ್ವಾಸ + ನಿರ್ಣಯ]

**ಅವಿಶ್ವಾಸಿನಿ** (ನಾ). ವಿಶ್ವಾಸವಿಲ್ಲದವಳು ; ನಂಬಿಕೆಯಿಲ್ಲದವಳು : 'ಬನ್ನಿ ನಾನು ಅವಿಶ್ವಾಸಿನಿಯಾಗಿದ್ದರೆ ನೀವು ಅದನ್ನು ಕಣ್ಣಾರೆ ನೋಡ ಬಹುದು' (ಕಪಾಕುಂ. ೯೭). [ಸಂ. ಅವಿಶ್ವಾಸಿನೀ]

**ಅವಿಷಮ** (ಗು). ವಿಷಮವಲ್ಲದ; ಸಮವಾದ; ಏರುಪೇರಿಲ್ಲದೆ ಒಂದೇ ಸಮನಾದ : ಸಮಮೆಂಬುದು ಬಂಧದೊಳವಿಷಮಂ ಮೃದು ಸ್ಫುಟವಿಮಿಶ್ರವಿನ್ಯಾಸಪದಕ್ರಮದಿಂ ಮೂಱು ತೆಱಂ (ಕಾವ್ಯಾವ. ೫೦೧). [ಸಂ.]

**ಅವಿಷಯ** (ಗು). ೧. ವಿಷಯವಲ್ಲದ; ತಿಳಿಯಲು ಶಕ್ಯವಲ್ಲದ; (ಇಂದ್ರಿಯ) ಗೋಚರವಲ್ಲದ : ಮಾಂಸನಯನಾವಿಷಯಮೆಲ್ಲ ಮಪ್ರತ್ಯಕ್ಷಮೆಂಬೀ ಜಡವಾದಮಂ ಕಂಡು (ಶಾಂತಿಪು. ೮-೧೪೧ ವ). ೨. ಪಾತ್ರವಲ್ಲದ; ಅಪಾತ್ರವಾದ; ಗುರಿಯಲ್ಲದ. (ನಾ). ೩. [ಬೌದ್ಧ] ಪರಮಾರ್ಥವಾದ ಶೂನ್ಯತತ್ತ್ವವನ್ನು ಉಪದೇಶಿಸುವ ಶಬ್ದಗಳಲ್ಲಿ ಒಂದು : ಪರಮಾರ್ಥವಾದ ಶೂನ್ಯತತ್ತ್ವವನ್ನು ಅನಭಿಲಪ್ಯ, ಅನಾಜ್ಞೇಯ ... ಅವಿಷಯ ... ಇತ್ಯಾದಿ ಶಬ್ದಗಳಿಂದ ಉಪದೇಶಿಸುವರು (ಹಿಂದಸಾ. ೪೧). [ಸಂ.]

**ಅವಿಸಂಗ** (ನಾ). ಪ್ರೀತಿ; ಆಸಕ್ತಿ; ಉತ್ಕಟವಾದ ಪ್ರೇಮ : "ಅಭಿಷ್ವಂಗ- ಅವಿಸಂಗ" (ಶಬ್ದಾನು. ೧೫೫ ಪ್ರಯೋ). [< ಸಂ. ಅಭಿಷ್ವಂಗ]

**ಅವಿಸಂವಾದ** (ಗು). ವಿರೋಧವಲ್ಲದ; ಪ್ರತಿಭಟನೆಯಿಲ್ಲದ; ಅಲ್ಲವೆನ್ನಲಾಗದ; ಅಸಾಂಗತ್ಯವಿಲ್ಲದಿರುವ : ಪಗೆವಂಗಂ ಕೆಳೆಯಂ ಗಮಾದ್ರ್ರಮತಿಯಂ ತ್ವನ್ಮೂರ್ತಿ ತೀರ್ಥೇಶ ಮಾಡುಗುಮಾಳೋಚಿಸೆ ನಿನ್ನ ತತ್ತ್ವಮ[ವಿ]ಸಂವಾದಂ ದುರಾಪಂ ಗುಣಾಬ್ಧಿ ಗಭೀರಂ ಭವದೀಯಂ (ಶಾಂತಿಪು. ೮-೧೫೪). [ಸಂ.]

**ಅವಿಸು** (ಕ್ರಿ). = ಅವಿಚು : ಇದನಾಂ ಕೈಯೊಳವಿಸಿರ್ಪೆಂ (ಮಿತ್ರಗೋ. ೨೭); ಅವಳನಂತವುರದೊಳೇ ಅವಿಸಿದಳ್ (ಮಿತ್ರಗೋ. ೫೧); ಅಂಸದೊಳುಗುರ್ವೊಯ್ಲ್ಲವಿಸಿ ಚತುರ್ದಶಿಯೊಳ್ ಕೂಡುವಿನಂ (ಮನ್ಮವಿ. ೩-೨೪). [ಅವಿ$_1$ + -ಇಸು$_3$]

**ಅವಿಸೋಢ** (ನಾ). ಕುರಿಯ ಹಾಲು : "ಅವಿಸೋಢಂ, ಅವಿಮರೀಸಂ, ಅವಿದೂಸಂ - ಈ ೩ ಕುಱಿಯ ಪಾಲ್" (ಹಲಾಯು. ೪೭-೧೨೪). [ಸಂ.]

**ಅವಿಸ್ಪಷ್ಟ** (ಗು). ಸ್ಪಷ್ಟವಿಲ್ಲದ; ತಿಳಿಯಲು ತೊಡಕಾದ; ಅಸ್ಪಷ್ಟವಾದ. [ಸಂ.]

**ಅವಿಹಿತ** (ಗು). ೧. ಶಾಸ್ತ್ರೋಕ್ತವಲ್ಲದ; ಶಾಸ್ತ್ರವಿರುದ್ಧವಾದ. ೨. ವಿಹಿತವಲ್ಲದ. 'ಅವಿಹಿತವೇಗ' ಪರಾ. [ಸಂ.]

**ಅವಿಹಿತವೇಗ** (ನಾ). ಹಿತವಲ್ಲದ ವೇಗ; ತಕ್ಕ ವೇಗವಿಲ್ಲದಿರುವಿಕೆ: ಅವಿಹಿತವೇಗಮೇಟಿಣ್ಗಿಯ ಜವಂ ವ್ರಣಮುಕ್ಷತಕಾಯಮೆತ್ತಿ ಕಟ್ಟುವ ಮದಮುಣ್ಮಿ ಸೋರ್ವ ಸೊನೆ ಬೀಟ್ವ ಗಜಧ್ವಜಮಂಬರಕ್ಕೆ ನಿಳ್ಕುವ ಜಯಕೇತು ಸಂದೆಯದ ದಂದುಗಮಂ ಕಿಡಿಸಿತ್ತು ಮುಂದಣೋಡುವ ರಿಪುದಂತಿಗಂ ಪೆಜಗಣಟ್ಟುವ ಜಟ್ಟರ ಮೇರುದಂತಿಗಂ (ಕಾವ್ಯಾವ. ೬೨೦). [ಅವಿಹಿತ + ವೇಗ]

**ಅವಿಹಿತಸಂಹಿತೆ** (ನಾ). [ವ್ಯಾಕ] (ಸಂಧಿಮಾಡಬೇಕಾದ ಸ್ಥಳದಲ್ಲಿ ಸಂಧಿಮಾಡದೆ) ಅನುಚಿತವಾದ ಕ್ರಮದಲ್ಲಿ ಶಬ್ದಗಳನ್ನು ಜೋಡಿಸುವುದು; ವಿಸಂಧಿ : ಅವಿಹಿತ ಸಂಹಿತೆ ಮೇಣ್ ಸಂಧಿವಿರೂಪಂ ಬಗೆಯೆ ತಾಂ ವಿಸಂಧಿಯೆನಿಕ್ಕುಂ ಉದಾ : ಆಸಿಯ ಒಱಿ ಬೆಸದ ಪಟ್ಟಿಗೆ ಮಿಸುಗುವ ಆರಂ ತೊಳಪ್ಪ ಕನ್ನವುರಂ (ಕಾವ್ಯಾವ. ೪೫೯, ೪೪೦). [ಅವಿಹಿತ + ಸಂಹಿತೆ]

**ಅವಿಳಂಬಂ** 'ಅವಿಲಂಬಂ' ನೋ.

**ಅವೀಚಿ** (ಗು). ೧. ತೆರೆಯಿಲ್ಲದ ; ಅಲೆಗಳಿಲ್ಲದ. (ನಾ). ೨. ಒಂದು ನರಕದ ಹೆಸರು : ಈ ಧರ್ಮ್ಮಮನಳಿದಾತಂ ಅವೀಚಿ ಮೊದಲಾಗೆಪ್ಪತ್ತೆಂಟು ಕೋಟಿ ನರಕದೊಳೊಳ್ಗುಂ (ಸೌಇಇ. XI-i, ೨೨-೪೩ ; 897). [ಸಂ.]

**ಅವೀರೆ** (ನಾ). ಗಂಡನೂ ಮಗನೂ ಇಲ್ಲದ ಹೆಂಗಸು. [ಸಂ. ಅವೀರಾ]

**ಅವು**$_1$ (ಕ್ರಿ). ಒನಕೆಯಿಂದ ಕುಟ್ಟು ; ಇಡಿ : "ಅವು- ಮುಸಲಕ್ರಿಯಾಯಾಂ" (ಶಮುಧಾ. ಸ) ; ಅವು ತವು ಇತ್ಯೇತಯೋರ್ಧಾತ್ವೋः ಇಕಾರಾದೇಶೋ ಭವತಿ (ಶಬ್ದಾನು. ೪೭೩). 'ಅವಲ್', 'ಅವಲಕ್ಕಿ' ಪರಾ. [?]

**ಅವು**$_2$ 'ಅದು$_1$' ಪರಾ.

**-ಅವು**$_3$ (ಪ್ರ). ಕೃದಂತಭಾವನಾಮಸೂಚಕ ಪ್ರತ್ಯಯ : ಮೆಚ್ಚನಾನೀ ಧರಣಿಯುಳಿರವಾನೆನ್ನು ಸನ್ಯಾಸನಂಗೆಯ್ದು (ಎಕ. II, ೮೮-೩ ; 700). [ಇರ್ + -ಅವು = ಇರವು] ; ರಿಸಿಯರ್ಕಳ ಬರವಂ ಕಂಡು (ವಡ್ಡಾರಾ. ೯೦-೧೯). [ಬರ್ + -ಅವು = ಬರವು] ಒಲವೆಂಬುದಿಂತುಟಾಗದೇ (ಆದಿಪು. ೧೨-೪೧). [ಒಲ್ + -ಅವು = ಒಲವು] ; ಚೆಲ್ವಾದ ತೊಡವುಗಳೊಳಂ (ಜಗವಿ. ೬-೧೭ ವ). [ತೊಡು + -ಅವು = ತೊಡವು].

**ಅವುಂಕಿಸು,** ಅವುಕಿಸು (ಕ್ರಿ). ಹಿಸುಕುವಂತೆಮಾಡು ; ಅದುಮಿಸು ; ಮೆಟ್ಟಿಸು : ಎಡೆಯಾಗದ ಮೃಗಮನವುಂಕಿಸಲುಮೊಲ್ದು[ಮೊಲ್ಲ]ದ ನಲ್ಲರಂತೆ ಮಿಡುಕಿಸಲುಂ (ಪಂಪಭಾ. ೫-೪೩ ವ) ; ಧೃತಿಯಂ ಬಿಡದೆ ತೆರಳ್ದಪೆನೆನುತವುಂಕಿಸಲೊಡನೆ ಹುಲಿಗೆಱಿಯರಸನಾಕ್ಷಣದೊಳಗೆ ಹರಿತಂದು (ಬಸವು. ೪೪-೬). **ಅವುಕಿಸು** (೩). [ಅವುಂಕು (< ಅಮುಂಕು) + -ಇಸು$_3$]

**ಅವುಂಕು** 'ಅಮುಂಕು' ನೋ.

**ಅವುಂಕುಹ,** ಔಂಕುಹ (ನಾ). ಅಮುಕುವಿಕೆ : ಬದ್ದಿಸಂ (ಬಡ್ಡಿಸಂ)= ಅವುಂಕುಹಂ (ಶಮುದ. ಪರಿ. ೧). **ಔಂಕುಹ** : "ಬದ್ದಿಸುಯೆಂದೊಡೌಂಕುಹಂ" (ಕಬ್ಬಿಕೈ. ೮೮). [ಅವುಂಕು (< ಅಮುಂಕು) + -ಹ$_2$ (< -ಪ$_2$)]

**ಅವುಂಗುರು** (ನಾ). ಹಿರಿಮದ್ದಿನ ಬೇರು; ಅಂಗರಬೇರು; ಅಶ್ವಗಂಧಿ : ಸವಳದೆ ಸಿತಘೃತ ಮಿಶ್ರಿತಮವುಂಗುರುಂ ಸೂಸಲೆಂಬಿವಂ ಸೇವಿಸೆ ಪುಷ್ಟಿವಿವರ್ಧನಮಕ್ಕುಂ (ಲೋಕೋಪ. ೯-೭). [< ಅಂಗುರ್]

**ಅವುಂಡಲ** 'ಅವುಡಲ' ನೋ.

**ಅವುಂಡಲಗೆ,** ಅವುಡಲಕೆ, ಅವುಡಲಕ್ಕೆ, ಅವುಡಲಗೆ, ಅವುಡಲಿಕೆ, ಆವುಂಡಲಗೆ, ಆವುಂಡಲಿಗೆ (ನಾ). ಹರಳುಗಿಡ ; ಔಡಲಗಿಡ : ಅವುಂಡಲಗೆಯ ಬಿತ್ತಿನಂತೆ ಬಂಧಮಿಲ್ಲಪ್ಪುದಱಿಂ (ಪಸಾರ. ೧೧೯೯-೭). **ಅವುಡಲಕೆ** : ಏರಂಡ, ವ್ಯಡಂಬಕ, ವರ್ಧಮಾನ ... ಅವುಡಲಕೆ" (ನಾಚಿರಾ. ೩). **ಅವುಡಲಕ್ಕೆ** : ಆನೆಯನಿಟ್ಟವುಡಲಕ್ಕೆಯಂ ಮುಱಿಗೊಂಡರೆಂಬಂತೊಡಿಪೋಗಿ ಕೋಂಟೆಯಂ ಮುಱಿಗೊಂಡು (ಪಾರ್ಶ್ವಪು. ೩-೧೨೯ ವ). **ಅವುಡಲಗೆ** : ತುಲಸಿಯ ನುಗ್ಗಿಯ ತಗ್ಗಿಯ ಬೆಳೆದಾವುಡಲದಗೆ[ಲಗೆ]ಯ ಕೆಕ್ಕೆಯೆಕ್ಕೆಯ ಪತ್ರಂಗಳೊಡನೆ ತೆಗಪಿಕೊಂಡದಱೊಳು ಸೇಕಂಗೆಯ್ಯೆ ಪತ್ರಸೇಕಂ ದಿವ್ಯಂ (ಅಶ್ವಶಾ. ೧೦-೨೧). **ಅವುಡಲಿಕೆ** : ಪಾರ್ವಂ ಪೋಗಿ ಎಳೆಯುನ್ಮತ್ತದೆಲೆ ಪಣ್ಣೆಕ್ಕೆಯೆಲೆಯವುಡಲಿಕೆಯೆಲೆಗಳನು ... ತಂದೀಶ್ವರ ಸರ್ವಾಂಗದೊಳು ಪೂಸಿ (ಬಸವು. ೧೬-೭) ; ಅವುಡಲಿಕೆಯಾ ಮುಱಿಗೊಳ್ವಂತೆ (ನೀತಿವಾ. ೨೬-೫೬). **ಆವುಂಡಲಗೆ** : ಸಲೆ ಪಂದಿಯ ನೆಣನುಮನಂಕೊಲೆಯ ಕಷಾಯಮುಮನೆಱಿಗೆ ಮೂಲದೊಳಾವುಂಡಲಗೆಗಿದಚ್ಚರಿಯೆನೆ ಪಾಗಲಕಾಯಕ್ಕುಂ (ಲೋಕೋಪ. ೬-೫೪). **ಆವುಂಡಲಿಗೆ** : ಬರಿವದಣೆ ಸುಣ್ಣಗಂದಿಗೆ ... ತವಸಿ ಆವುಂಡಲಿಗೆಯುಮಾ (ಅಶ್ವಶಾ. ೧೦೨-೬೦). [ಅವುಂಡಲ + -ಗೆ]

**ಅವುಂಡಿ** (ನಾ). (?) : ಇಂತು ಧರೆಯೊಳುಳ್ಳ ಹದಿನೆಂಟು ನಗರವು ಸಂತತ ಅವುಂಡಿಯ ಪರವೂ (ದೇವಾಂಪು. ೩-೩೪). [?]

**ಅವುಂಡು**, ಅವುಡು$_2$, ಔಂಡು$_2$, ಔಡು$_2$ (ನಾ). **೧.** ದವಡೆ. **೨.** ಕೆಳತುಟಿ : "ವಕಾರದೌತ್ವಕ್ಕೆ : ಕವುಂಗು – ಕೌಂಗು, ಅವುಂಡು – ಔಂಡು" (ಶಮುದ. ೧೬೮ ಪ್ರಯೋ). **ಅವುಡು$_2$ ೨** : ಅಸುರತರಮಾಗೆ ಕರ್ಚಿದವುಡುಂ ಬೆರಸು (ಗದಾಯು. ೪-೫೩) ; ಕರ್ಚಿದೀಯವುಡ ಪಾಂಗು (ಬಂಹರಿ. ೩-೧೨) ; ಬಡವನ ಕೋಪ ಅವುಡಿಗೆ ಮಾರಿ (ಗಾದೆ). **ಔಂಡು$_2$** : **೨.** "ಅವುಂಡು – ಔಂಡು" (ಶಮುದ. ೧೫೭ ಪ್ರಯೋ). **ಔಡು$_2$** : **೨.** ಕರ್ಚಿದೌಡುರ್ಚಿದ ಬಾಳ್ ಇಱಿಯಲನುಗೆಯ್ದ ಕೈ (ಗದಾಯು. ೪-೨೭) ; ಔಡಂ ಕರ್ಚಿ ಮಹಾ ರೌದ್ರಭಾವದಿಂದಂ ಕೆಡೆದಂ (ಬಂಹರಿ. ೧೨-೪೩) ; ಹುಬ್ಬುಗಳನುಱೆ ಬಿಗಿದೌಡನೊಡೆಯೊತ್ತಿ (ಕುವ್ಯಾದ್ರೋ. ೧೯-೧೩).

**ಔಡುಕಡಿ, ಔಡಗಿ = ಕೋಪದಿಂದ ಹಲ್ಲುಕಡಿ, —ತುಟಿಯನ್ನು ಕಚ್ಚು** (ಸ್ಯಾಂಡರ್). [**ದೇ.** ‖ **ತೆಲು.** ಅವುಡು, ಔಡು]

**ಅವುಂಡುಗರ್ಚು**, ಅವುಡುಗಚ್ಚು$_1$, ಅವುಡುಗರ್ಚು, ಔಂಡುಗರ್ಚು, ಔಡುಗಚ್ಚು$_1$, ಔಡುಗರ್ಚು (ಕ್ರಿ). (ಹಲ್ಲುಗಳಿಂದ) ತುಟಿಯನ್ನು ಕಚ್ಚು ; ಹಲ್ಲುಮುಡಿ ಕಚ್ಚು : ಕರಿಪೋತಮವುಂಡುಗರ್ಚಿ ಕೇಸರಿಣಿಯ ಕೆಚ್ಚಲಂ ತುಡುಕುತುಂ ಪರಿದತ್ತು (ಪಂಪಭಾ. ೬-೮೦). **ಅವುಡುಗಚ್ಚು$_1$** : ಅವುಡುಗಚ್ಚುತ್ತಿದ್ದನು (ಗಂಮಾಯಿ. ೧೩೧) ; ಸಿಟ್ಟಿನಿಂದ ಅವುಡುಗಚ್ಚಿ (ಪ್ರಕಾಶ. ೪೯). **ಅವುಡುಗರ್ಚು** : ಪುರ್ವುಗಳ್ ಬಿಗಿದವುಡುಗರ್ಚಿ ಮಂಡಿಗಳನಿಟ್ಟು (ಚಬಪು. ೪೦-೯). **ಔಂಡುಗರ್ಚು** : ತೊಡೆಯಿಂದಿಱುಂಕದಿರು . . . ಔಂಡುಗರ್ಚದಿರ್ (ಲೀಲಾವ. ೨-೧೨೦) ; ಹುಂಕೃತಿಯಂ ಮಾಡುತುವೌಂಡುಗರ್ಚಿ ಕಿಸುಗಣ್ಬಿಟ್ಟಚ್ಯುತಂ ರಂಜಿಕುಂ (ಜಗವಿ. ೩-೬೦). **ಔಡುಗಚ್ಚು$_1$** : ಆಲಿಯಲಿ ಕಿಡಿಸೂಸೆ ಮಿಾಸೆಯ ಮೇಲುದಿರುಹುತಲೌಡುಗಚ್ಚಿ . . . ಪಾರ್ಥನಿದಿರಾದ (ಕುವ್ಯಾಭೀ. ೬-೧೩) ; ಕೇಳುತ ಕಿಡಿಕಿಡಿಯಾಗಿ ಮಾಗಧನು ಮೈತೊಳೆದೆದ್ದೌಡುಗಚ್ಚಿದನು (ಭರಚ. ೨೪-೪೪). **ಔಡುಗರ್ಚು** : ಬಿಡದೌಡುಗರ್ಚಿ ನೋವಿಂದಡಿಗಡಿಗಹಹಾಯೆನುತ್ತುಂ (ಧರ್ಮಾಮೃ. ೧-೧೪೩). [ಅವುಂಡು + ಕರ್ಚು$_1$]

**ಅವುಕಾಟ**, ಔಕಾಟ (ನಾ). ಒತ್ತಡ ; ಅಮುಕುವಿಕೆ ; ಅದುಮುವುದು. **ಔಕಾಟ** : ಆ ಪ್ರದೇಶದ ಮೇಲ್ಗಡೆ ದಟ್ಟವಾದ ಬಂಡೆಯಿರುವುದರಿಂದ ಇದರ ಕೆಳಗಡೆ ಎಣ್ಣೆಯೂ ಅನಿಲವೂ ಸೇರುತ್ತ ಸೇರುತ್ತ ಎಣ್ಣೆಯ ಮೇಲಿನ ಔಕಾಟವು ಹೆಚ್ಚುವುದು (ವಿಜ್ಞಾನ. ೧-೧೮೩).
[ಅವುಕು (< ಅಮುಂಕು) + -ಆಟ$_2$]

**ಅವುಕಿಸು** 'ಅವುಂಕಿಸು' ನೋ.

**ಅವುಕು** 'ಅಮುಂಕು' ನೋ.

**ಅವುಕುಳಿ** (ನಾ). ಕುಟ್ಟುವುದೇ ಸ್ವಭಾವವಾಗಿ ಉಳ್ಳವನು : ಅವುಕುಳಿ, ತಪ್ಪಂ (ಶಬ್ದಾನು. ೪೬೩ ಪ್ರಯೋ). [ಅವು$_1$ + -ಕುಳಿ$_2$]

**ಅವುಗು**, ಔಗು$_2$ (ನಾ). "ಹಾಲುಖೋವದಿಂದ ಮಾಡಿದ ಕಡುಬು" (ಸಿದ್ಧರಾ. ಕೋಶ) : ಹಾಲಲವುಗು ಹಾಲವುಂಡೆ ಹಾಲಮಂಡಿಗೆಗಳನಟ್ಟು (ವೈಜರ. ೯೨-೨೪) ; ಫೇಣಿ ಗಾರಿಗೆ ಇಡ್ಡಲಿಗೆ ಅವುಗು ತಿಱಿಸೇವಗೆಯನು (ಸಿದ್ಧರಾ. ೮-೮೫) ; ಎಳ್ಳಕಚ್ಚರಿ ತುಪ್ಪ ಹಾಲು ಮೊಸರು ಅವುಗು . . . ಬಲಿಯಂ ಕೊಡಲು (ಬಾಲಚಿ. ೧೩೨-೨) ; ಪತ್ನಿಯು ಇವನ ಗಂಗಾಳದಲ್ಲಿ ಅವುಗನ್ನಿಟ್ಟು ಬಿಸಿ ಬಿಸಿ ಅಣ್ಣೆವಾಲನ್ನು ಬಡಿಸುತ್ತಿದ್ದಾಗ (ಬೆಳುವ. ೧೦೫). **ಔಗು$_2$** : ಕಳವೆಯಕ್ಕಿಯ ಪಿಟ್ಟಿಂದು ಕಾವಲಿಯೊಳೆಱೆದೌಗ ನಡುವೆನೆಂಬನುಮಂ (ಧರ್ಮಾಮೃ. ೧೧-೩೫) ; ಆ ಔಗು (ಶಬ್ದಾನು. ೪೩ ವ್ಯಾಖ್ಯಾ). [?]

**ಅವುಚು** 'ಅಮುರ್ಚು' ನೋ.

**ಅವುಟು$_1$** (ನಾ). "ಮೂರುವರೆ" (ಬಸಪು. ಕೋಶ) : ನಿಮ್ಮ ನೋಟವನಂತಸುಖ ಕೂಟ ಪರಮಸುಖ ಅವುಟುಕೋಟಿ ರೋಮಂಗಳೂ ಕಂಗಳಾಗಿ ನೋಡುತ್ತಿದ್ದೆನು (ಬಸವ. ೪೯೧). [?]

**ಅವುಟು$_2$** (ನಾ). ಸಿಡಿಮದ್ದನ್ನು ಹಾರಿಸುವ ಸಣ್ಣ ಫಿರಂಗಿ. 'ಅವುಟುಗುಂಡು' ಪರಾ. [?]

**ಅವುಟು$_3$** (ನಾ). **೧.** ಜೋರು ; ಜಂಭ ; ಆಡಂಬರ (?) : ಸೌಟು ಕೈಯಲ್ಲಿದ್ದಾಗ ಅವುಟು ಮಾಡಿದ್ದೇ ಬಂತು (ಗಾದೆ) ; ಅವುಟು ಇದ್ದವನಿಗೆ ಸೌಟನಿಂದ ಹೊಡೆದ ಹಾಗೆ (ಗಾದೆ). **೨.** ತೋರಿಕೆಯ ಮಾತು ; ದಿಟವಲ್ಲದ ನುಡಿ ; ಸೋಗಿನ ಮಾತು : ಏನು ಅವುಟು ಹೊಡೆಯುತ್ತೀಯಪ್ಪ (ರೂಢಿ). [< ಅವುಟ ?]

**ಅವುಟುಗುಂಡು** (ನಾ). ಸಣ್ಣಫಿರಂಗಿಯಿಂದ ಹೊಡೆಯುವ ಸಿಡಿಮದ್ದಿನ ಗುಂಡು (ಕಿ). [ಅವುಟು$_2$ + ಗುಂಡು]

**ಅವುಠಾಣ** (ನಾ). [ಸಂಗೀತ] ನಿಲುಗಡೆ (?) : ತಾನ ಮೊದಲಿವು ಮುನ್ನವವಱೊಳು ಗಾನವೊಪ್ಪುವ ದಂಡಿಗೆಯನವಧಾನಿಸುತ ಮಿಗೆ ಮೇಘಜಾಳನವೊಡನೆಯವುಠಾಣಮಾನಿತಂ ನವಠಾಣಮುಂ . . . ಅಮರ್ದಿರಲು (ಬಸಪು. ೧೯-೮). 'ಅವಠಾಣ' ಪರಾ. [< **ಸಂ.** ಅವಸ್ಥಾನ]

**ಅವುಡಲ**, ಅವುಂಡಲ, ಔಡಲ (ನಾ). ಹರಳುಗಿಡ ; ಹರಳು ; ಏರಂಡ : "ಗ್ರಾಮರುಹಮೇರಂಡಮಂದೊಡವುಡಲಮುದಕ್ಕು" (ಮಂಗರಾ. ೪೧-೩೪) ; ಬೂದಿಗುಂಬಳದ ಬೇರು, ಅವುಡಲದ ಬೇರು, ನೆಗ್ಗಿಲ ಬೇರು, ಈ ಮೂರನೂ ಪ್ರತ್ಯೇಕ ಐದುವರಹ ತೂಕವನು ಎರಡು ಮಾನ ನೀರಲ್ಲಿ ಹಾಕಿ ಕಷಾಯವ ಮಾಡಿ ಚತುರ್ಭಾಗಾವಶೇಷವಾಗಿ ಕಾಸಿ ಹಾಲು, ಸಕ್ಕರೆ ಬೆರಸಿ ಸೇವಿಸಲು ಗರ್ಭಿಣಿಯರ ಶೂಲೆ ಶಮನವಹುದು (ವೈದ್ಯಸಾ. ೪೬೬-೩೪೬ ಟೀಕೆ). **ಅವುಂಡಲ** (ಕಿ). **ಔಡಲ** : ಕೋಂಟೆಯಂ ಕೆಡಪಿಸಿ ಔಡಲಮಂ ಬಿತ್ತಿಸಿ ಆ ವಸ್ತುವಾಹನಂಗಳಂ ದೇಗುಲಂಗಳ್ಗಂ ಪಾರ್ವರ್ಗಮಿತ್ತುಂ (ಚಿಕವಂ. ೧೨-೧೨).
[**ದೇ.** ‖ **ತಮಿ.** ಅಮಣ್ಣವ್, ಆಡವ್, ಆಟಲೈ, ಅಮಣಕ್ಕು ; **ಮಲ.** ಆಮಣಕ್ಕು ; **ತುಳು.** ಅಲುಂಬುಡ, ಅಲುಂಬುಡೆ ; **ಕೊಡ.** ಅಣಕೆ ; **ತೆಲು.** ಆಮುದ ; **ಕೊಲಾ.** ಆಮೆದ್ದಾ, ಅಮೆದ. / **ಸಂ.** ಅಮಂಡ, ಅಮಂಡಕ, ಏರಂಡ]

**ಅವುಡಲಕೆ** 'ಅವುಂಡಲಗೆ' ನೋ.

**ಅವುಡಲಕ್ಕೆ** 'ಅವುಂಡಲಗೆ' ನೋ.

**ಅವುಡಲಗೆ** 'ಅವುಂಡಲಗೆ' ನೋ.

**ಅವುಡಲಿಕೆ** 'ಅವುಂಡಲಗೆ' ನೋ.

**ಅವುಡು$_1$**, ಔಡು$_1$ (ಕ್ರಿ). **೧.** ಹಲ್ಲಿನಿಂದ ಕಚ್ಚು, —ಅಗಿ : ಉರಗನವುಡಿದೊಡದಱ ವದನದೊಳಿರದೆ ಮೇಣಾ ದಷ್ಟದೇಹದೊಳಿರದೆ ರುಧಿರವು ಹರಿವವೊಲು (ಕುವ್ಯಾಉ. ಓರಿಇ. ೩-೧೩). **ಔಡು$_1$** : **೧.** "ಔಡು – ದಂತಚರ್ವಣೇ" (ಶಮುಧಾ) ; ಕಂಗೆಟ್ಟು ಡೆಂಡೆಣಿಸಿ ಸರಳಿಸುವ ಹರಿಣಂಗಳಂ ನೋಡಿ ಮುಱಿದೌಡಿ ಕೆಡಹಿದವು ದೀಹದ ಹುಲಿಗಳು (ಸೋಮಚ. ಪರಿ. ೩೨) ; ಪೊಟಿಲೊಳಗಿರ್ದ ದುಷ್ಟವ್ಯಾಳಂ ಮುಳಿದೆನ್ನ ಕೈಯನೌಡಲ್ (ದಶಕು. ೭-೧೦೧) ; ಸರ್ಪನೌಡಿದ [ಪಾಠಾಂ. ಗೊಡ್ಡಿದ] ಕಪ್ಪೆಯಂತೆ (ಲಶಿಚಂ. ೨೧-೧೮). **೨.** "ಮೆಲಕಾಡಿಸು" (ಗಂಗಾವು. ೬೧). [?]

**ಅವುಡು$_2$** 'ಅವುಂಡು' ನೋ.

**ಅವುಡು$_3$**, ಔಡು$_3$ (ನಾ). **೧.** ಕಾಳು ; ಅಗುಳು (ಕಿ). **ಔಡು$_3$** (ಸ್ಯಾಂಡರ್). **೨.** ಒರಟಾದದ್ದು ; ನುರಿಯದ್ದು (ಸ್ಯಾಂಡರ್). [?]

**ಅವುಡುಗಚ್ಚು$_1$** 'ಅವುಂಡುಗರ್ಚು' ನೋ.

**ಅವುಡುಗಚ್ಚು₂**, ಔಡುಗಚ್ಚು₂ (ನಾ). ತುಟಿಯನ್ನು ಹಲ್ಲುಗಳಿಂದ ಕಡಿಯುವುದು. **ಔಡುಗಚ್ಚು₂** : ಒಳಗೊಳಗೆ ಸನ್ನೆಗಳೋರೆ ಗೊರಳುಗಳೌಡುಗಚ್ಚುಗಳ (ಕುವ್ಯಾಕ. ೧–೨೦) ; ಸರಳ ಕೆನ್ನೆಯ ಬಿಗಿದ ಹುಬ್ಬಿನ ಮುರಿದ ಮೀಸೆಯಲೌಡುಗಚ್ಚಿನ ಕುರುಕುಲಾಂತಕ ಭೀಮ ಬಿಟ್ಟನು ಸೂಠಿಯಲಿ ರಥವ (ಕುವ್ಯಾಕ. ೧೦–೩೫).
[ಅವುಡು₂ (< ಅವುಂಡು) + ಕಚ್ಚು (< ಕರ್ಚು₂)]

**ಅವುಡುಗಡಿ**, ಔಡುಗಡಿ (ಕ್ರಿ). = ಅವುಂಡುಗರ್ಚು. **ಔಡುಗಡಿ** : ಹೋಗೆನುತ್ತೌಡುಗಡಿದು ಪಲ್ಲಿಂದು ಘುಡುಘುಡಿಸಿ ಮರಳಿದನು ಛಲದಂಕ ಭೀಮಂ (ಸೌಂದಪು. ೧೬–೩೦). [ಅವುಡು₂ (< ಅವುಂಡು) + ಕಡಿ₁]

**ಅವುಡುಗರ್ಚು** 'ಅವುಂಡುಗರ್ಚು' ನೋ.

**ಅವುಡೂಱು** (ಕ್ರಿ). ದವಡೆಯನ್ನು ಊರು (?) : ಅಖಿಳದಿಗ್ಗಜರಾಜಿಯವುಡೂಱಿ ಮಣ್ಣಚ್ಚಿದವು (ಚೆಬಪು. ೪೮–೨೨).
[ಅವುಡು₂ (< ಅವುಂಡು) + ಊಱು₁]

**ಅವುತ** (ನಾ). ತೆರಿಗೆಯಲ್ಲಿ ಮಾಫಿ (?) : ಲೋಕಯ್ಯಂತು × × × ಗಾಮುಣ್ಡಗೆ ಅವುತಮ(ಂ)ಬ್ಬಿಟ್ಟು (ಸೌಇಇ. XX, ೧೫–೬ ; 904). [?]

**ಅವುತಣ**, ಅವುತನ, ಔತಣ, ಔತನ (ನಾ). ೧. ಉತ್ತಮವೂ ರಸಭರಿತವೂ ಆದ ಊಟಕ್ಕೆ ಆಹ್ವಾನ. ೨. ರಸಭರಿತವಾದ ಹಬ್ಬದೂಟದಂಥ ಊಟ : ನಾನಾವಿಧವಾದ ಭಕ್ಷ್ಯಭೋಜ್ಯಗಳನ್ನೂ . . . ಸಮಸ್ತ ಬಂಧುಜನಗಳಿಗೂ ಅವುತಣವನ್ನು ಮಾಡಿಸಿ (ಕೃವಾವಿ. ೧೩೧) ; ನೀಡವುತಣ ಹಣ್ಣುಹಂಪಲ ಹಾಲ (ಹಬ್ಬೆರ. ೩೪). **ಅವುತನ** : ೨. ಈ ಅವುತನದಿಂದ ಹೈಮವತಿಯಲ್ಲಿ ಉಲ್ಲಾಸವಾಗಲಿ ಉತ್ಸಾಹವಾಗಲಿ ಕಂಡುಬರಲಿಲ್ಲ (ಎರಸೆ. ೭೪). **ಔತಣ** : ೨. ಇಲ್ಲಿಯೆಮಗೋರ್ವ ಭಕ್ತರ ಮನೆಯಲೌತಣಂ (ಅನೀರ. ೩೯–೧) ; ಆತನೆಲ್ಲಾ ಸುರಗೌರ್ತಣಮಂ ಪೇೞ್ದಿಲ್ಲರಂ ತನ್ನ ಮನೆಗೊಡಗೊಂಡು ಬಂದು (ಧರ್ಮಪ. ೩–೧೧೬ ವ) ; ನಾಳೆ ಹೆಣದೌತಣದಲುಣಬಡಿಸುವೆನು ಜಂಬುಕಕಾಕಸಂತತಿಗೆ (ಕುವ್ಯಾಕ. ೫–೮) ; ವಿನಮಿರಾಜಗೆ ಖೇಚರರಿಗೆ ಭೂವರನರಮನೆಯೊಳೌತಣವ ಮಾಡಿಸಿದ (ಭರಚ. ೩೨–೨). **ಔತನ** : ೨. ಕೃತಾಂತನ ತೆತ್ತಿಗರಿಗೌತನವ ಹೇಳಿಸಿದನು ಶರೌಘದಲಿ (ಕುವ್ಯಾದ್ರೋ. ೨–೨೮).
[ಪ್ರಾ. ಓದಣ, ಓದಣ (< ಸಂ. ಓದನ, ಓದನ)]

**ಅವುತನ** 'ಅವುತಣ' ನೋ.

**ಅವುತವೂರ್** (ನಾ). ಒಂದು ಊರಿನ ಹೆಸರು (?) : ಜಕ್ಕಿಯಬ್ಬೆ ನಾಗರಖಣ್ಡಮೆಪ್ಪತ್ತರ್ಕ್ಕ ಅವುತವೂರೊಳಾದ ನಾಟ್ಗಾವುಣ್ಡವಾಗಮಂ ಬಿಸುಟೋಳ್ (ಎಕ. VII, ಶಿಕಾರಿ. ೨೧೯–೧೫ ; 918).
[ಅವುತ ? + ಊರ್]

**ಅವುತಾಳಿಸು** (ಕ್ರಿ). ಕುಗ್ಗು ; ಕೆಳಕ್ಕೆ ಇಳಿ : ಜೇಳಲರುಹಿತರಾರು ಲೋಗರ ಹೇಳಿಕೆಯೊಳೀನಹುದು ಮನವವುತಾಳಿಸದೆ ನಿಂದಿರಿಸಿ ಯೋಚಿಸು ಕಾರ್ಯಸಂಗತಿಯ (ಅನಂರಾ. ೬–೧೦–೨).
[ಅವುತಾಳ್₀ (< ಸಂ. ಅವತಾರ) + –ಇಸು₃]

**ಅವುತಿ** 'ಅವುತೆ₁' ನೋ.

**ಅವುತೆ₁**, ಅವುತಿ, ಅವುಸೆ (ನಾ). ಜೀವರಕ್ಷಣೆಯ ಕವಚ ; ಕವಚ : "ಅವುತೆ[ಪಾಠಾಂ. ಅವುತಿ, ಅವುಸೆ]ಯೆಂದು ಕವಚಂ" (ಶಮುದ. ಪರಿ.೨) ; ಜೀವರಕ್ಕೆ ರಕ್ಕಸನ ಕಯ್ಯ ಕೋಲುಂ, ಮೆಯ್ಯವುತೆಯುಂ . . . ಕಡಿವಡೆದು (ರಾಮಾಶ್ವ. ೧೧೩–೨೬). **ಅವುತಿ, ಅವುಸೆ** : ಮೇಲಿನ ಪ್ರಯೋಗದ ಪಾಠಾಂತರಗಳನ್ನು ನೋಡಿ. [?]

**ಅವುತೆ₂** (ನಾ). ಅವಿತುಕೊಳ್ಳುವುದು ; ಕರೆಯುವುದು (?) ; "ಕರೆದುದು" (ಚತುನಿ. I, ೪೮ ಕಿ). [< ಅವಿ₁ + –ತೆ]

**ಅವುದುಂಬರ** (ನಾ). = ಔದುಂಬರ : ಅವುದುಂಬರಾಹ್ವಯದ ವೃಕ್ಷ ಕಿಡಿದಿಹ ಫಲಗಳನಲಘುಮೋಕ್ಷಣನಲೊಗೆದಿಹವು (ಗಗತಾ. ೧೨–೬೫).
[ಸಂ. ಔದುಂಬರ]

**ಅವುಪಾಸನ** (ನಾ). = ಔಪಾಸನ : ಅವುಪಾಸನ ಅಗ್ನಿಹೋತ್ರದ್ವಿಜಗುರು ದೇವತಾಪೂಜಾತತ್ಪರರುಂ (ಎಕ. XI, ಹೊಳಲ್ಕೆ. ೧೩೬–೨೮ ; 1307).
[ಸಂ. ಔಪಾಸನ]

**ಅವುಸು** (ನಾ). ಔಚಿತ್ಯ ; ಹೊಂದಿಕೆ ; ಅಚ್ಚುಕಟ್ಟು ; ಚೊಕ್ಕತನ (ಕಿ). [ದೇ. ‖ ತಮಿ. ಅವುಚು]

**ಅವುಸೆ** 'ಅವುತೆ₁' ನೋ.

**ಅವುೞ್** (ನಾ). = ಅಗುೞ್₄ : ಒಂದೊಂದು ತುತ್ತನುಣಿಸಿನೊಳೊಂದವುೞಿಪ್ಪಿನೆಗಮಿೞಿಪಿ ಮತ್ತೀೞುಪುದೆಂಬಂದದರಡನೆಯ ತಪಮೇಂ ಸಂದುದೊ ಮುನಿಪತಿಗೆ ವರ್ಯಮವಮೋದರ್ಯಂ (ಚಂದ್ರಪು. ೧೧–೯) ; ಸ್ಥಿರತರಮಾಗಿ ಕುಳ್ಳಿರದೆ ಸಂಚಳಿಪಾಸನ ಮುಣ್ಮಿ ಕಣ್ಣನೀರ್ ಸುರಿವುದುಮುಣ್ಬುದೊಂದ(ಗು)ವುೞನೊಯ್ಯನೆ ನುಂಗುತುಮೊಂದನೇವದಿಂದಿರದುಗುೞುತ್ತರೋಚಕದ ಮಾೞ್ಕೆಯಿನುಣ್ಬುದಿದೊಳ್ಳಿತಲ್ತು (ಜೀವಸಂ. ೧೧೦–೩೯). [ದೇ. ‖ ತಮಿ. ಅವಿೞ್]

**ಅವೆ** (ಅ). ಇವೆ, ಇರುತ್ತವೆ ಎಂಬ ಅರ್ಥದಲ್ಲಿ ಬಳಸುವ ಮಾತು : ನಿನ್ನ ವರ್ಗದಲ್ಲಿ ಎಷ್ಟು ಮಂದಿ ಹುಡುಗರು ಅವೆ? (ಮುಂಬಯಿ. ೧–೨೧) ; ಅವು ಕ್ಷೇಮದಿಂದ ಅವೆ (ಮುಂಬಯಿ. ೩–೬೯) ; ಹಳೇಗನ್ನಡ ಶಬ್ದಗಳು ಬಹಳ ಅವೆ (ವಚಶಾ. ೧೧ ಪ್ರಸ್ತಾ) ; ಕೆಳಗಿನ ಕೋಷ್ಟಕಗಳಲ್ಲಿ ತೋರಿಸಲ್ಪಟ್ಟವೆ (ಕಭಾಗೆ. ೨) ; ಎಲ್ಲ ಸಂಸ್ಕೃತ ನಾಟಕಗಳು ಬಹುಶಃ ರಮ್ಯವಾಗೇ ಅವೆ (ಉರಾಚ. ಪ್ರಸ್ತಾ). [ಅಹವು (< ಅಗು₁) + –ವು₂]

**ಅವೆಕೊ** (ಅ). = ಅದೆಕೊಳ್ : ಎನ್ನ ಮಹಾನುಭಾವರ ಬಡತನದಿರವನೀಗ ತೋಱುವೆನು ಅವೆಕೊ ಎನುತುಂ ಚೆಲ್ಲಲೊಡನೆ (ಬಸಪು. ೨೨–೫೫, ೫೬). [ಅವೆ + ಕೊಳ್]

**ಅವೇಕ್ಷಣ** (ನಾ). ೧. ನೋಡುವುದು. ೨. ಪರಿಶೀಲನೆ ; ವಿಮರ್ಶೆ. [ಸಂ.]

**ಅವೇಕ್ಷಣೆ** (ನಾ). = ಅವೇಕ್ಷಣ ೧ : ಟೈಕೊ ಬ್ರಾಹೆಯು ಗ್ರಹಗಳ ಸ್ಥಾನಗಳ ವಿಷಯವಾಗಿ ಬಹಳವಾಗಿ ಅವೇಕ್ಷಣೆಗಳನ್ನು (Observations) ಮಾಡಿ ಬರೆದಿಟ್ಟದ್ದನು (ಗಣಿಚ. ೧೧೩). [ಸಂ. ಅವೇಕ್ಷಣ]

**ಅವೇಕ್ಷೆ** (ನಾ). ೧. ನೋಡುವುದು. ೨. ಗಮನಕೊಡುವುದು ; ಎಚ್ಚರದಿಂದ ನೋಡುತ್ತಿರುವಿಕೆ ; ಶ್ರದ್ಧೆ ; ಎಚ್ಚರು : "ಅವೇಕ್ಷಾ, ಪ್ರತಿಜಾಗರ — ಈ ೨ ಎಚ್ಚತ್ತಿರ್ಪುದು" (ಹಲಾಯು. ೧೨೯–೯೭).
[ಸಂ. ಅವೇಕ್ಷಾ]

**ಅವೇದಿ** (ನಾ). ತಿಳಿಯದವನು : ವೇದಾನುವಾದದಿಂ ಸ್ತ್ರೀಪುಂನಪುಂಸಕವೇದಿಗಳ್ಗಂ ಅವೇದಿಗಳ್ಗಂ ಸಾಮಾನ್ಯೋಕ್ತಭಾವಂ (ತತ್ತ್ವಪ್ರ. ೪೭).
[ಸಂ. ಅವೇದಿನ್]

**ಅವೇದ್ಯ** (ಗು). ೧. ತಿಳಿಯಲಾಗದ. ೨. ತಿಳಿಯಬಾರದ. [ಸಂ.]

**ಅವೇಳೆ** (ನಾ). ವೇಳೆಯಲ್ಲದ ವೇಳೆ ; ಕಾಲವಲ್ಲದ ಕಾಲ ; ಅಕಾಲ : ಅವಳನ್ನು ಅವೇಳೆಯಾದರೂ ಚಿಂತೆಯಿಲ್ಲವೆಂದು ಜಗತ್ಸೇಟನ ಮನೆಯಲ್ಲಿ ಬಿಡಲು ಏರ್ಪಡಿಸಿದ್ದನು (ಬಂಕಿಮ. ೨೦೫) ; ಒಳ್ಳೆಯ ಅವೇಳೆಯಲ್ಲಿ ಆತನು ಬಂದ (ರೂಢಿ). [ಸಂ. ಅವೇಲಾ]

**ಅವೈಜ್ಞಾನಿಕೆ** (ಗು). ವೈಜ್ಞಾನಿಕವಲ್ಲದ ; ವಿಜ್ಞಾನಶಾಸ್ತ್ರಕ್ಕೆ ಅನುಸಾರವಾಗಿಲ್ಲದ : ಐದು ಸಹಸ್ರ ವರ್ಷಗಳಷ್ಟು ಪುರಾತನವಾದ ಅವೈಜ್ಞಾನಿಕವಾದ ಒಲೆಗಳಿಗಾಗಿ ಕಷ್ಟದಿಂದ ದುಡಿದ ಎಷ್ಟೊಂದು ಹಣವು ವ್ಯರ್ಥವಾಗಿ ಭಸ್ಮವಾಗಿ ಹೋಗಿಲ್ಲ ? (ಅಡುಸಾ. ೨೦). [ಸಂ.]

**ಅವೈದಿಕ** (ಗು). ೧. ವೈದಿಕವಲ್ಲದ; ವೇದಗಳಲ್ಲಿ ಹೇಳಿರುವ ಕ್ರಮಕ್ಕೆ ಸೇರದ, —ಹೊಂದದ: ಈಗಿನಂತೆ ಉಪನಯನಕರ್ಮವನ್ನು ಹದಿನಾರು ವಯಸ್ಸು ಕಳೆದ ಮೇಲೆ ನಡಸುವುದೆ ಅವೈದಿಕ ಕ್ರಮ (ರೂಢಿ). (ನಾ). ೨. ವೈದಿಕನಲ್ಲದವನು; ವೇದಶಾಸ್ತ್ರಗಳನ್ನು ಅನುಸರಿಸಿ ನಡೆಯದವನು: ಎಷ್ಟೋ ಕರ್ಮಗಳು ಈಗ ಅವೈದಿಕರಿಂದ ವಿಚಿತ್ರ ರೀತಿಯಲ್ಲಿ ಆಚರಿಸಲ್ಪಡುತ್ತಿವೆ (ರೂಢಿ). [ಸಂ.]

**ಅವೈರಾಗ್ಯ** (ನಾ). ವೈರಾಗ್ಯವಿಲ್ಲದಿರುವುದು; ವಿರಕ್ತಿಯಿಲ್ಲದಿರುವುದು: ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯ ಮೊದಲಾದ ಯಾವ ದೋಷವೂ ಸಂಬಂಧಿಸುವುದಿಲ್ಲ (ಹಿಂದಸಾ. ೯೬). [ಸಂ.]

**ಅವ್ಯಂಡೆ** (ನಾ). ನಸುಗುನ್ನಿ ಗಿಡ; ಕಪಿತುರಚಿ ಗಿಡ. [ಸಂ. ಅವ್ಯಂಡಾ]

**ಅವ್ಯಕ್ತ** (ಗು). ೧. ವ್ಯಕ್ತವಾಗದ; ಅಸ್ಪಷ್ಟವಾದ; ಪ್ರಕಾಶಿತವಾಗದ: ತ್ರಿಗುಣವು ಸೂಕ್ಷ್ಮವಾದುದರಿಂದ ಅವ್ಯಕ್ತವೆಂದೂ ಜಡವಾದುದರಿಂದ ತಮಸ್ಸೆಂದೂ (ಹಿಂದಸಾ. ೨೩೬). (ನಾ). ೨. ಪರಮಾತ್ಮ; ವಿಷ್ಣು. ೩. ಶಿವ. ೪. ಕಾಮ. ೫. ಮೂರ್ಖ: "ಅವ್ಯಕ್ತಃ ಪರಮಾತ್ಮನಿ ಮೂರ್ಖೇ" (ಹಲಾಯು. ೧೩೯–೫೩); "ಪರಮಾತ್ಮನಲಿ ಮೂರ್ಖನಲ್ಲಿ ಅಸ್ಪಷ್ಟದೊಳು ಸ್ಫುರಿತವವ್ಯಕ್ತವೆಂಬುದು" (ಮಂಗರಾ. ೧೪೪–೨೬). ೬. ಯುಗಭೇದ. ೭. ಚಿನ್ನ; ಹೊನ್ನು: "ಆತ್ಮಯುಗಭೇದಂ ಮೂರ್ಖಮಸ್ಪಷ್ಟಕಾಂಚನಮವ್ಯಕ್ತ ಸಮಾಹ್ವಯಂ" (ನಾನಾರ. ೧೪೩). ೮. [ತತ್ತ್ವಶಾ] ಜಗತ್ತಿನ ಮೂಲಬೀಜವಾದ ಪ್ರಕೃತಿ; ತ್ರಿಗುಣ; ಮಾಯೆ: ತನಯ ಕೇಳವ್ಯಕ್ತಮಾವುದದೆನಲನಿರ್ವಚನೀಯ ಮಾಯೆಯೆ (ಅನ್ಯತ. ೪–೧೨). ೯. [ಸಂಗೀತ] ಗಾಯಕ ದೋಷಗಳಲ್ಲಿ ಒಂದು: "ಅವ್ಯಕ್ತ – ಅರ್ಥಹೀನವಾಗಿ ಹಾಡುವವನು" (ಸಂಗೀಚಂ. ೧೦೩). [ಸಂ.]

**ಅವ್ಯಕ್ತತೆ** (ನಾ). ಸ್ಪಷ್ಟವಾಗಿ ತೋರದಿರುವುದು; ವ್ಯಕ್ತವಲ್ಲದಿರುವುದು. [ಸಂ. ಅವ್ಯಕ್ತತಾ]

**ಅವ್ಯಕ್ತಧ್ವನಿ** (ನಾ). ಅಸ್ಫುಟವಾದ ಧ್ವನಿ; ಅಸ್ಪಷ್ಟವಾದ ಧ್ವನಿ: "ಜಿನುಗು, ಜಿನುಂಗು – ಅವ್ಯಕ್ತಧ್ವನೌ, ವರ್ಣಭೇದೇಚ" (ಶಮಧಾ). [ಅವ್ಯಕ್ತ + ಧ್ವನಿ]

**ಅವ್ಯಕ್ತರವ** (ನಾ). = ಅವ್ಯಕ್ತಧ್ವನಿ. [ಅವ್ಯಕ್ತ + ರವ]

**ಅವ್ಯಕ್ತಲಕ್ಷಣ** (ಗು). ಲಕ್ಷಣವು ಸ್ಪಷ್ಟವಾಗಿ ಕಾಣದ; ಸ್ವರೂಪವು ಚೆನ್ನಾಗಿ ತಿಳಿಯಲಾಗದ: ಅವ್ಯಕ್ತಲಕ್ಷಣನನಾ ಹಂಸನಂ ಮಹಾಸೇವ್ಯನಂ ಜ್ವಾಲೆಗಳ ಮಾಲೆ ಬಳಸಿರೆ (ವೀಶೈಪು. ೬–೧–೩೩). [ಅವ್ಯಕ್ತ + ಲಕ್ಷಣ]

**ಅವ್ಯಗ್ರ** (ಗು). ೧. ಬೇರೆ ಕಡೆ ಮನಸ್ಸು ಕೊಡದ; ಏಕಾಗ್ರವಾದ: ಅವ್ಯಗ್ರಕುಶಾಗ್ರೀಯಬುದ್ಧಿಸಮೃದ್ಧಂ ಸ್ವಯಂಬುದ್ಧನವಧಾರಿಸಿ (ಆದಿಪು. ೨–೯ ವ). ೨. ಮನಸ್ಸಿನ ವ್ಯಾಕುಲವಿಲ್ಲದ; ಚಿಂತೆಯಿಲ್ಲದ. (ನಾ). ೩. ಬೇರೆಕಡೆ ಮನಸ್ಸು ಹರಿಯದ ಸ್ಥಿತಿ; ಏಕಾಗ್ರಚಿತ್ತತೆ: ಉಗ್ರವಾವುದು ದೈವದೊಳಗೆ ಸಮುಗ್ರವಾವುದು ಧರ್ಮದೊಳಗವ್ಯಗ್ರದಿಂದುಪದೇಶಿಸಲುಬೇಕೆಂದನಾ ಭೂಪ (ಕುವ್ಯಾಉ. ೪–೩೯). [ಸಂ.]

**ಅವ್ಯಗ್ರತೆ** (ನಾ). = ಅವ್ಯಗ್ರ ೩: ಅಗ್ರಮಹಿಷೀ ಪದಕ್ಕಮುದಗ್ರಪ್ರೇಮಾಸ್ಪದಕ್ಕಮವರಿರೆ ನೃಪನವ್ಯಗ್ರತೆಯಿನಿತಜ ವನಿತೆಯರಾಗ್ರಹಮುಂ ಬಿಟ್ಟಂ (ಶಾಂತಿಪು. ೧–೬೩); ಆತನೋರೊರ್ಮೆ ತನಗೆ ಸಹಜಮಾದಣಿಮಾಣು ಸಾಮಗ್ರಿಯಿಂ ನೆಲನನವ್ಯಗ್ರತೆಯಿನುರ್ಚಿಪೋಗಿ ನಾಗಭವನದ ಕೃತ್ರಿಮ ಚೈತ್ಯಯಾತ್ರೆಯಂ ನಿರ್ವರ್ತಿಸಿಯುಂ (ಚಂದ್ರಪು. ೯–೫೫ ವ). [ಸಂ. ಅವ್ಯಗ್ರತಾ]

**ಅವ್ಯಗ್ರಮನ** (ಗು). ಬೇರೆಕಡೆ ತಿರುಗದ ಮನಸ್ಸುಳ್ಳ; ಏಕಾಗ್ರಚಿತ್ತದಿಂದ ಕೂಡಿದ: ಹಾಹಾಕ್ರಂದನಮುಂ ಪುಟ್ಟಿಸಿ ಕೇಳ್ದುಂ ದನುಜಂ ಜಪಿಯಿಸುತುಮಿರ್ದನವ್ಯಗ್ರಮನಂ (ಪಂರಾಮಾ. ೧೪–೯೦). [ಸಂ. ಅವ್ಯಗ್ರಮನಸ್ (ಅವ್ಯಗ್ರ + ಮನಸ್)]

**ಅವ್ಯತಿರಿಕ್ತೆ** (ನಾ). ಬೇರೆಯಲ್ಲದವಳು; ಒಂದೇ ಆದವಳು: ಸತತಂ ನಿಜದೇಹದಿನವ್ಯತಿರಿಕ್ತೆಯೆನಿಪ್ಪ ಹೃದಯವಲ್ಲಭೆಯೊಳ್ (ಚಂದ್ರಪು. ೩–೨೫). [ಸಂ. ಅವ್ಯತಿರಿಕ್ತಾ]

**ಅವ್ಯಥೆ** (ನಾ). ೧. ವ್ಯಥೆಯಿಲ್ಲದಿರುವುದು. ೨. ವ್ಯಥೆಯಿಲ್ಲದಿರುವವಳು. ೩. ಅಳಲೆಕಾಯಿ; ಅದರ ಗಿಡ. ೪. ಕಂಪಿಲ್ಲದ ಗಿಡ; ರೋಚನೀ ಎಂಬ ಔಷಧಿ. [ಸಂ. ಅವ್ಯಥಾ]

**ಅವ್ಯಪಗಮ** (ನಾ). ಬಿಟ್ಟುಹೋಗದಿರುವುದು: ಧರೆಯಂ ಪೊತ್ತಿರ್ದ್ದ ಭಾರಾವ್ಯಪಗಮ ವಿವಶಂ ಭೋಗಮಂ ಕಾಣೆನೆಂದುಂ ನಿರುತಂ ಭೋಗೀಶನೆನ್ದುಂ ತಜಕಿದುದು (ಎಕ. VII, ಶಿಕಾರಿ. ೧೦೦–೨೧; 1129). [ಸಂ.]

**ಅವ್ಯಪದೇಶ್ಯ** (ಗು). ೧. ಪ್ರಶಂಸೆ ಮಾಡಲು ಅರ್ಹವಲ್ಲದ; ಅಪ್ರಸಿದ್ಧವಾದ. (ನಾ). ೨. [ಯೋಗಶಾ] ಒಂದು ವಿಧವಾದ ಭಾವನೆ: ಶಾಂತ ಉದಿತ ಅವ್ಯಪದೇಶ್ಯಗಳೆಂಬ ಈ ಮೂರು ವಿಧ ಭಾವನೆಗಳಿಗೆ ಫಲವಾಗಿ ಜ್ಯೋತಿಷ್ಮತೀ ಎಂಬುದು ನಾಲ್ಕನೆಯ ಸಿದ್ಧಿ ಇದರಲ್ಲೇ ವಿವೇಕ ಸಾಕ್ಷಾತ್ಕಾರವು (ಹಿಂದಸಾ. ೧೦೮). [ಸಂ.]

**ಅವ್ಯಪೇತ** (ಗು). ಬಿಡದಿರುವ; ಜತೆಯಲ್ಲೇ ಇರುವ; ಕೂಡಿದ. [ಸಂ.]

**ಅವ್ಯಪೇತಯಮಕ** (ನಾ). [ಕಾವ್ಯಮೀ] ಸಮಾನವಾದ ಆನುಪೂರ್ವಿಯುಳ್ಳ ಪದ ಅಥವಾ ವರ್ಣಗಳು ನಡುವೆ ವಿಚ್ಛಿತ್ತಿಯಿಲ್ಲದೆ ಬರುವ ಯಮಕ; ಪದ್ಯದ ಪಾದಗಳ ಆರಂಭದಲ್ಲಿ, ಮಧ್ಯದಲ್ಲಿ ಅಥವಾ ಕಡೆಯಲ್ಲಿ ಬರುವುದೆಂಬ ನಿಯಮವಿಲ್ಲದೆ ಹಿಂದಿನ ಪದ ಅಥವಾ ವರ್ಣಗಳ ಜತೆಗೇ ಕೂಡಿಬರುವ ಯಮಕ. ಉದಾ:– ಸರಂಸರಂ ಕೆಂತುವ ಮನ್ಮಥಾಂಬುಜಾಕರಂಕರಂ ನೋಡೆ ಮೊಗಂ ವಳಿತ್ರಯಾಂತರಂ ತರಂಗಂ ಸ್ಮರಸಿಂಧುಗಾಲತಾಂಕುರಂ ಕುರಂಗಾಕ್ಷಿಯ ಕಣ್ ಮನೋಜನಾ (ಕಾವ್ಯಾವ. ೫೪೧). 'ವ್ಯವಹಿತಯಮಕ' ಪರಾ. [ಅವ್ಯಪೇತ + ಯಮಕ]

**ಅವ್ಯಭಿಚಾರ** (ಗು). ೧. ತಪ್ಪಿ ನಡೆಯದಿರುವ; ತಪ್ಪದೆ ಇರುವ. (ನಾ). ೨. ಪಾತಿವ್ರತ್ಯ: 'ಯತ್ರಾಕೃತಿಸ್ತತ್ರ ಗುಣಾವಸಂತಿ' ಎಂಬೊಂದು ಸುಭಾಷಿತಾರ್ಥಮವ್ಯಭಿಚಾರಮೆಂದಮಿತಂಗಿಂತೆಂದಳ್ (ಶಾಂತಿಪು. ೩–೫೭ ವ); ಇವೆಲ್ಲಂ ಪುರುಷಂಗಕ್ಕುಮೆಂದು ಕೆಲರ್ ಕಲ್ಪಿಸುವರ್ ಅದು ಕಾರಣಂ ಅವ್ಯಭಿಚಾರಾರ್ಥಂ ತತ್ತ್ವಾರ್ಥಶ್ರದ್ಧಾನಮೆಂದು ಉಭಯೋ ಪಾದಾನಂ ತಕ್ಕುದು (ತತ್ತ್ವಪ್ರ. ೭). [ಸಂ.]

**ಅವ್ಯಭಿಚಾರಿ** (ಗು). ದೃಢವಾದ; ಸ್ಥಿರವಾದ. 'ಅವ್ಯಭಿಚಾರಿಮಿತ್ರ' ಪರಾ. [ಸಂ. ಅವ್ಯಭಿಚಾರಿನ್]

**ಅವ್ಯಭಿಚಾರಿಮಿತ್ರ** (ನಾ). ಸ್ಥಿರನಾದ ಸ್ನೇಹಿತ: ಪಾಪೇಭಕಂಠೀರವಾನುಜನವ್ಯಭಿಚಾರಿಮಿತ್ರಾನುಕಾರಿಯಪ್ಪ ಬಿಲ್ಲನದಂ ಬಿಸುಟ್ಟು (ಶಾಂತಿಪು. ೪–೫೦ ವ). [ಅವ್ಯಭಿಚಾರಿ + ಮಿತ್ರ]

**ಅವ್ಯಯ** (ಗು). ೧. ವ್ಯಯವಿಲ್ಲದ; ನಷ್ಟಹೊಂದದ; ವಿಕಾರವಾಗದ; ಒಂದೇ ಪ್ರಕಾರ ಇರುವಂಥ: ಅಮೇಯಂ ಅವ್ಯಯಂ ದೇವರದೇವನಾದಿಪುರುಷಂ ಜಳಶಯ್ಯೆಯೊಳಿರ್ದಪಂ (ಜಗವಿ. ೧–೩೨); ಸರ್ವಚರಾಚರ ವಸ್ತುಗಳ ಕಾರಣನಾದರೂ ಅವುಗಳ ಗುಣಗಳಿಂದ ಅಲಿಪ್ತನೂ ಅವ್ಯಯನೂ ಇದ್ದವನವನು (ವಚರ. ೯). (ನಾ). ೨. [ವ್ಯಾಕ] ಲಿಂಗವಚನ ವಿಭಕ್ತಿಗಳಿಗಾಗಿ ರೂಪಭೇದ ಹೊಂದದ ಶಬ್ದ:

"'ಅವ್ಯಯ' ಎಂದರೆ (ನಾಮಪದ ಕ್ರಿಯಾಪದಗಳಂತೆ) ಲಿಂಗ, ವಚನ, ವಿಭಕ್ತಿ ಸೂಚಕವಾದ ಪ್ರತ್ಯಯಗಳನ್ನು ಹೊಂದದೆ ಇರುವ ಶಬ್ದ" (ಕೈಪಿಡಿ. ೫೩) ; ಧಿಗಿಲನೆ ಭುಗಿಲನೆ ಭೋರನೆ ಎಂಬನುಕರಣಪದಂಗಳ್ ಬರೆಯುಂ ಅದು ಆನೆ ಎಂಬಿವು ಪದಾಂತ್ಯದೊಳಿರೆಯುಂ ಅವ್ಯಯಪದಂಗಳಪ್ಪುವು (ಶಮದ. ೩೦೦ ವೃತ್ತಿ) ; ವ್ಯತ್ಯಾಸ ಹೊಂದದೆ ಒಂದೇ ರೂಪದಲ್ಲಿ ನಿಲ್ಲುವ ಪದಗಳಿಗೆ ಅವ್ಯಯಗಳೆಂದು ಹೆಸರು. ಅವ್ಯಯ ಎಂದರೆ ವ್ಯತ್ಯಾಸ ಹೊಂದದಿರುವುದು ಎಂದು ಅರ್ಥ (ಮಧ್ಯಮ. ೮). ೩. ಮೋಕ್ಷ; ಶಾಶ್ವತವಾದ ಸ್ಥಾನ: ಸ್ವಾರ್ಜಿತತಪೋಬಲದ ಮಿಗಿಲಾದ ತೇಜದಿಂದೈದು ಸಶರೀರದಿಂದವ್ಯಯವನೆನೆ (ವೆಂಕಾರಾ. ೧–೧೮–೨೫). ೪. ನಿರ್ವಿಕಾರನಾದ ಪರಮಾತ್ಮ. [ಸಂ.]

**ಅವ್ಯಯಕ್ರಿಯಾಪದ** (ನಾ). ಲಿಂಗ, ವಚನ, ಪುರುಷ, ಕಾಲಗಳಿಗಾಗಿ ವ್ಯತ್ಯಾಸಹೊಂದದೆ ಒಂದೇ ರೂಪವಾಗಿರುವ ಕ್ರಿಯಾಪದ; ಕ್ರಿಯಾರ್ಥಕಾವ್ಯಯ. ಉದಾ—ಉಂಟು, ಇಲ್ಲ, ಬೇಕು, ಬೇಡ ಇತ್ಯಾದಿ (ದಕ. ೬). [ಅವ್ಯಯ + ಕ್ರಿಯಾಪದ]

**ಅವ್ಯಯಪದ** (ನಾ). ೧. ಶಾಶ್ವತವಾದ ಸ್ಥಾನ; ಮೋಕ್ಷ. ೨. = ಅವ್ಯಯ ೨: ಅತಿಶಯತರಾರ್ಥ ವೀಪ್ಸಾನ್ವಿತ ನಾಂತಾವ್ಯಯ ಪದಕ್ಕಮನುಕೃತಿಪದಕಂ ಕೃತಮಂತ್ಯಲೋಪಂ (ಶಮದ. ೧೯೩). [ಅವ್ಯಯ + ಪದ]

**ಅವ್ಯಯಲಿಂಗ** (ನಾ). [ವ್ಯಾಕ] ಲಿಂಗ, ವಚನ, ವಿಭಕ್ತಿಗಳಿಗಾಗಿ ರೂಪಭೇದ ಹೊಂದದ ಶಬ್ದ: ದೊರೆವಡೆದವ್ಯಯಲಿಂಗಂ ಸರಿ ಸರ್ವ ವಿಭಕ್ತಿಗಂ ತ್ರಿಲಿಂಗಕ್ಕಂ ತಾಂ ಸರಿ ವಚನತ್ರಿತಯಕ್ಕಂ ಸರಿ (ಶಮದ. ೯೦); ಅವ್ಯಯಲಿಂಗಕ್ಕೆ – ಕಂಮಿದಂ, ಕಂಮಿದಳ್, ಕಂಮಿತು ; ಭೋಂಕನೆ ಬಂದಂ, ಭೋಂಕನೆ ಬಂದಳ್, ಭೋಂಕನೆ ಬಂದುದು (ಶಮದ. ೮೮ ವೃತ್ತಿ). [ಅವ್ಯಯ + ಲಿಂಗ]

**ಅವ್ಯಯಲೋಕ** (ನಾ). ಶಾಶ್ವತವಾದ ಲೋಕ; ಮೋಕ್ಷಲೋಕ: ಭವ್ಯರಿಷ್ಟಾರ್ಥಕಿಲ್ಲಿರುತಿರ್ದಪನು ನಾಳೆ ಅವ್ಯಯಲೋಕಕೆಯ್ದುವನು (ಭರಚ. ೬೬–೧೧೧). [ಅವ್ಯಯ + ಲೋಕ]

**ಅವ್ಯಯೀಭಾವ** (ನಾ). ೧. ವ್ಯತ್ಯಾಸ ಹೊಂದದ ಸ್ಥಿತಿ; ನಿರ್ವಿಕಾರತೆ. ೨. ಪೂರ್ವಪದದ ಅರ್ಥವೇ ಮುಖ್ಯವಾದ ಸಮಾಸ: ಅವ್ಯಯೀಭಾವಮಾದಿಪದ ಮುಖ್ಯತೆಯಿಂ (ಶಮದ. ೧೬೫). ☞ ಇದಕ್ಕೆ ಅಂಶಿಸಮಾಸವೆಂದು ಹೆಸರುಂಟು. [ಸಂ.]

**ಅವ್ಯವಚ್ಛಿನ್ನ** (ಗು). ನಡುವೆ ಕತ್ತರಿಸಿಹೋಗದ; ಬಿಡುವಿಲ್ಲದ; ಎಡೆಬಿಡದ: ನಿರಂತರವಾದ; ಧಾರಾಕಾರವಾದ: ಎನ್ನ ದಾನಮಿದಾಗಳುಂ ಮಧುಪಾಶ್ರಯಂ ಧರೆಗವ್ಯವಚ್ಛಿನ್ನದಾನಮಿದಾಗಳುಂ ವಿಬುಧಾಶ್ರಯಂ (ಪಂಪಭಾ. ೧–೭) ; ಎನ್ನ ವಂಶಂ ಕುಲನದಿಯವೋಲಾಯ್ತವ್ಯವಚ್ಛಿನ್ನಮಿಾಗಳ್ (ಮಲ್ಲಿಪು. ೪–೯೨) ; ನಿಮಗೆ ದಮಿತಾರಿಯೊಳವ್ಯವಚ್ಛಿನ್ನ ಪ್ರೀತಿಯಿಂ ದಮಿತಾರಿಗಂ ನಿಮಗಮಿನ್ನುಮಾಂಸ ಪ್ರೀತಿಯುಮಂ ನೀರ ಕ್ಷೀರ ನ್ಯಾಯಮುಮಂ ಮಾಡಿ (ಶಾಂತಿಪು. ೨–೭೪ ವ). [ಸಂ.]

**ಅವ್ಯವಧಾನ** (ಗು). ೧. ಮುಸುಕಾಗಲಿ, ಮರೆಯಾಗಲಿ ಇಲ್ಲದ. (ನಾ). ೨. ಬಿಡುವಿಲ್ಲದಿರುವುದು; ಸಂತತವಾಗಿರುವುದು; ಎಡೆಬಿಡದಂಥದು: ಭ್ರಾಂತಿವಶದಿಂ ಗ್ರಾಹ್ಯಗ್ರಾಹಕಸಂವೇದನಾಕಾರತ್ರಯಾಕ್ರಾಂತಂಗಳ್ ವಿಜಾತೀಯಾವ್ಯವಧಾನ ಲಘೂತ್ಪತ್ತಿ ಸದೃಶಾಪರಾಪರೋತ್ಪತ್ತಿ ಎಂಬಿವಱಿಂ (ಆದಿಪು. ೨–೯ ವ). ೩. ಅವಧಾನವಿಲ್ಲದಿರುವುದು; ಅಜಾಗರೂಕತೆ. [ಸಂ.]

**ಅವ್ಯವಸಾಯ** (ನಾ). ೧. ವ್ಯವಸಾಯ ಮಾಡದಿರುವುದು; ಉದ್ಯೋಗವಿಲ್ಲದಿರುವುದು. ೨. ನಿಶ್ಚಯವಿಲ್ಲದಿರುವುದು. [ಸಂ.]

**ಅವ್ಯವಸ್ಥಿತ** (ಗು). ೧. ವ್ಯವಸ್ಥೆಯಿಂದ ಕೂಡಿಲ್ಲದ; ಕ್ರಮಕ್ಕೆ ಒಳಪಡದ; ಭದ್ರವಿಲ್ಲದ: ಬುಡವಾಗಲಿ ತಳಹದಿಯಾಗಲಿ ಅವ್ಯವಸ್ಥಿತವಾಗಿದ್ದರೆ ವ್ಯವಸ್ಥಿತವಾದ ಮರವಾಗಲಿ ಕಟ್ಟಡವಾಗಲಿ ಅದರಿಂದ ಹುಟ್ಟುವುದಿಲ್ಲ (ರಾಮರಾ. ೪೦). (ನಾ). ೨. [ಸಂಗೀತ] ಗಾಯಕ ದೋಷಗಳಲ್ಲಿ ಒಂದು: ಅವ್ಯವಸ್ಥಿತ – ಗಾನಪದ್ಧತಿ ತಿಳಿಯದೆ ಹಾಡುವವನು (ಸಂಗೀಚಂ. ೧೦೩). [ಸಂ.]

**ಅವ್ಯವಸ್ಥೆ** (ನಾ). ೧. ವ್ಯವಸ್ಥೆಯಿಲ್ಲದಿರುವುದು; ನಿಯಮವಿಲ್ಲದಿರುವುದು; ಏರ್ಪಾಡು ಸರಿಯಿಲ್ಲದಿರುವುದು: ಹಿಂದೂಚೀಣದಲ್ಲಿ ಇತ್ತೀಚೆಗೆ ಎಲ್ಲಿ ನೋಡಿದರೂ ಅವ್ಯವಸ್ಥೆಯೇ ಹೆಚ್ಚಾಗಿದೆ (ರೂಢಿ). ೨. ವಿಷ್ಣುವಿನ ವಾಸ. ೧, ೨: ಅವ್ಯವಸ್ಥೆ ಜಡಾಶ್ರಯದೊಳ್ ಪರಾಭವಂ ಸಂವತ್ಸರದೊಳ್ . . . ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨–೧ ವ). [ಸಂ. (ಅ– + ವ್ಯವಸ್ಥೆ ; ಅ೩+ ವ್ಯವಸ್ಥೆ)]

**ಅವ್ಯವಹಾರ** (ಗು). ವ್ಯವಹಾರವಿಲ್ಲದ ; ಅಕ್ರಮವಾದ : ಗಂಡನ ಈ ವೆಚ್ಚ ಅವ್ಯವಹಾರವೆಂದು ಅವಳಿಗೆ ಅನ್ನಿಸತೊಡಗಿತು (ರಂಗರೋ. ೯೯). [ಸಂ.]

**ಅವ್ಯವಹಿತ** (ಗು). ಅಗಲದಿರುವ; ನಡುವೆ ವಿಚ್ಛೇದವಿಲ್ಲದ; ಜತೆಯಲ್ಲಿಯೇ ಇರುವ. [ಸಂ.]

**ಅವ್ಯವಹಿತಪೂರ್ವಕಾಲ** (ನಾ). ಆಗತಾನೆ ಕಳೆದ ಕಾಲ; ಪ್ರಸಕ್ತ ಸಮಯಕ್ಕೆ ಸೇರಿದ ಹಿಂದಿನ ಕಾಲ. [ಅವ್ಯವಹಿತ + ಪೂರ್ವಕಾಲ]

**ಅವ್ಯವಹಿತಭ್ರಾತೃ** (ನಾ). ತನಗಿಂತ ವಯಸ್ಸಿನಲ್ಲಿ ಹಿರಿಯನಾದ (ಅಥವಾ ಕಿರಿಯನಾದ ಮಧ್ಯೆ ಬೇರೊಬ್ಬನು ಹುಟ್ಟಿಲ್ಲದ ಸಹೋದರ) ಅಣ್ಣ (೬). [ಅವ್ಯವಹಿತ + ಭ್ರಾತೃ]

**ಅವ್ಯಸನಿ** (ಗು). ದುರಭ್ಯಾಸಗಳಿಲ್ಲದ; ಕೆಟ್ಟ ನಡತೆಗಳು ಇಲ್ಲದ; ದುರ್ವ್ಯಸನಗಳಿಂದ ದೂರನಾದ: ಅವ್ಯಸನಿಯುಂ ಶಿವನಂ ಮನೋವಾಗ್ವ್ಯಾಪ್ತನಂ ಮಾಡಿ (ಬಸವು. ೩೯–೧೧). [ಸಂ. ಅವ್ಯಸನಿನ್]

**ಅವ್ಯಾಕುಲ, ಅವ್ಯಾಕುಳ** (ಗು). ೧. ವ್ಯಾಕುಲವಿಲ್ಲದ; ಶಾಂತವಾದ; ನೆಮ್ಮದಿಯಾದ. (ನಾ). ೨. ವ್ಯಾಕುಲವಿಲ್ಲದವನು; ಶಾಂತ; ನಿಶ್ಚಿಂತ: ಶ್ರೀವ್ಯಾಖ್ಯಾಮುದ್ರೆಯಿನೆಮಗವ್ಯಾಕುಲರೆನಿಸಲೆಱಿದುತಿಳಿವಿನ ಸೊದೆಯಂ ಭವ್ಯತೆಯನೀವ ದೇವನ ದಿವ್ಯಾಭಯಹಸ್ತಮೆಮ್ಮ ಸಕಲೈಶ್ವರ್ಯಂ (ವಸ್ತವಂ. ೨). ೩. ನೆಮ್ಮದಿ; ನಿಶ್ಚಿಂತೆ; ಶಾಂತಿ: ಅವ್ಯಾಕುಲದೊಳಚ್ಯುತಧ್ಯಾನದಿಂದೆ ಕರ್ತವ್ಯದಿಂದವನಿಯಂ ತಾಳ್ದಂ (ಜೈಮಿಭಾ. ೨೪–೧೫). **ಅವ್ಯಾಕುಳ**: ೧. ಉಚಿತಪದಂ ಶ್ರವ್ಯಮವ್ಯಾಕುಳಂ (ಆದಿಪು. ೧–೨೬). [ಸಂ.]

**ಅವ್ಯಾಕುಲಂ** (ಅ). ತಡೆಯಿಲ್ಲದೆ; ಕಳವಳವಿಲ್ಲದೆ: ಸಮವಾಯಂ ಮನುಜತ್ವಮಾದೊಡಮಘವ್ಯಾಪಾರದಿಂ ನೀಚಗೋತ್ರಮುಮಾಕ್ರಂದನಮುಂ . . . ಆತಂಕಕಳಂಕಮುಂ ಸಮನಿಕುಂ ಸಂಸಾರಗವ್ಯಾಕುಲಂ (ಸುಕುಮಾ. ೫–೩೫). [ಸಂ.]

**ಅವ್ಯಾಕುಲಾತ್ಮಕ** (ಗು). ಚಿಂತೆಯಿಲ್ಲದ ಮನಸ್ಸುಳ್ಳ; ಶಾಂತವಾದ ಮನಸ್ಸುಳ್ಳ: ಅಭಿಭವಿಸುವ ಶುಭಕರ್ಮಪ್ರಭಾವದಿಂದೀತನಿನ್ನೆಗಂ ಮಿಥ್ಯಾತ್ವಾನುಭವಿಯೆನಿಸಿರ್ದನಾಸನ್ನಭವ್ಯನವ್ಯಾಕುಲಾತ್ಮಕಂನಿವ್ಯಾಜಂ (ಸುಕುಮಾ. ೩–೧೧). [ಸಂ.]

**ಅವ್ಯಾಕುಳ** 'ಅವ್ಯಾಕುಲ' ನೋ.

**ಅವ್ಯಾಕೃತ** (ಗು). ೧. ವಿಭಾಗ ಹೊಂದದ; ವಿಂಗಡಿಸಲ್ಪಡದ. (ನಾ). ೨. [ತತ್ತ್ವಶಾ] ನಾಮರೂಪ ವಿಭಾಗಗಳನ್ನು ಹೊಂದದ ಮೂಲ ಪ್ರಕೃತಿ. ೩. ಅವಿದ್ಯಾಶಕ್ತಿ: ಅವ್ಯಾಕೃತವೆಂದರೆ ಅವಿದ್ಯಾಶಕ್ತಿಯು. ಅದು ಅನೇಕವಾಗಿರುತ್ತದೆ (ಬ್ರಹ್ಮಭಾ. ೩೨೫ ಅಡಿಟ). [ಸಂ.]

**ಅವ್ಯಾಜ** (ಗು). ೧. ವ್ಯಾಜವಿಲ್ಲದಿರುವ; ನಿಷ್ಕಪಟವಾದ; ಸರಳವಾದ; ಸಹಜವಾದ; ಪ್ರಾಮಾಣಿಕವಾದ. (ನಾ). ೨. ಸರಳತೆ; ಸೌಲಭ್ಯ: ಗಣನಾಯಕರ್ಸಮಜಿ ಭವ್ಯಶ್ರೇಣಿಗವ್ಯಾಜದಿಂದಜಿಯಲ್ ನಾಲ್ಕನುಯೋಗಮಾಡುದು (ಆದಿಪು. ೧–೩೯). [ಸಂ.]

**ಅವ್ಯಾಜಪ್ರವೃತ್ತಿ** (ನಾ). ಸಹಜವಾದ ಪ್ರವೃತ್ತಿ; ಸ್ವಭಾವಸಿದ್ಧವಾದ ಮನೋಧರ್ಮ: ದೇವತಾರ್ಚನೆಯು ಒಂದಲ್ಲ ಒಂದು ಪ್ರಕಾರದಲ್ಲಿ ಮಾನವಜಾತಿಗೇ ಸ್ವಾಭಾವಿಕವಾಗಿ ಪ್ರಾಪ್ತವಾದ ಅವ್ಯಾಜ ಪ್ರವೃತ್ತಿಯು ಮತ್ತು ನಿಷ್ಕಾಮಕರ್ಮವು (ಆರ್ಯಧ. ೪೭).
[ಅವ್ಯಾಜ + ಪ್ರವೃತ್ತಿ]

**ಅವ್ಯಾಪಾರ** (ಗು). ೧. ಕೆಲಸವಿಲ್ಲದ; ನಿರುದ್ಯೋಗಿಯಾದ. (ನಾ). ೨. ಕೆಲಸವಿಲ್ಲದಿರುವುದು; ನಿರುದ್ಯೋಗ. ೩. ತನಗೆ ಅಭ್ಯಾಸವಿಲ್ಲದ ಅಥವಾ ತಿಳಿಯದ ಕೆಲಸ: ಅಂಕಗಣಿತ ಅಸಹ್ಯವಾಗುವುದಕ್ಕೆ ಅದರಲ್ಲಿ ತುಂಬಿರುವ ಅಸಂಭಾವ್ಯ ಸಂಗತಿಗಳು ಬಹುಮಟ್ಟಿಗೆ ಕಾರಣವಾಗಿವೆ. ಅ ಬ ಕ ಮಹನೀಯರ ಅವ್ಯಾಪಾರಗಳನ್ನೆ ನೋಡಿರಿ (ಗಾಳಿಪ. ೧೮೭). ೪. ಕೆಟ್ಟ ಕೆಲಸ; ಮಾಡಬಾರದ ಕೆಲಸ: ಮಗನ ಅವ್ಯಾಪಾರಕ್ಕೆ ಅವರ ಕಡುತರ ಮಾರುತ್ತರ ಇದು (ವೈನಿ. ೩೭). [ಸಂ.]

**ಅವ್ಯಾಪಾರವೃತ್ತಿ** (ನಾ). ಮಾಡಬಾರದ ಕೆಲಸ ಮಾಡುವುದು: ನಾವೀ ರಾಜಕಾರ್ಯದೊಳ್ ತೊಡರ್ದು ಪರ್ಯಾಲೋಚನಾ ಪರಿವೃತ್ತಿಯೊಳೇನಪ್ಪುದು ಎಂತುಂ ಅವ್ಯಾಪಾರವೃತ್ತಿಯಾವುದುಂ ಪೊಲ್ಲದು (ಪಂಚತಂ. ೨೯–೭). [ಅವ್ಯಾಪಾರ + ವೃತ್ತಿ]

**ಅವ್ಯಾಪ್ತಿ** (ನಾ). ೧. ವ್ಯಾಪ್ತಿಯಿಲ್ಲದಿರುವುದು. ೨. ವ್ಯಾಪ್ತಿ ಸಾಲದಿರುವುದು. ೩. [ತರ್ಕಶಾ] ಲಕ್ಷಣ ಸೂತ್ರವು ಲಕ್ಷ್ಯವೊಂದರಲ್ಲಿ ಅನ್ವಯಿಸದೆ ಹೋಗುವುದೆಂಬ ರಚನಾದೋಷ; ಲಕ್ಷ್ಯವೊಂದು ಲಕ್ಷಣವಾಕ್ಯಕ್ಕೆ ಹೊರಗಾಗುವುದೆಂಬ ನ್ಯೂನತೆ. ಉದಾ—ಶಿಖಾಯಜ್ಞೋಪವೀತವುಳ್ಳವನು ದ್ವಿಜ— ಎಂದರೆ ದ್ವಿಜನಾಗಿದ್ದರೂ ಸಂನ್ಯಾಸಿಯಾಗಿ ಶಿಖಾಯಜ್ಞೋಪವೀತಗಳನ್ನು ಬಿಟ್ಟಿರುವ ವ್ಯಕ್ತಿಯಲ್ಲಿ ಈ ಮಾತು ಹೊಂದದೆ ಹೋಗುತ್ತದೆ. ಹಾಗೆಯೇ ಅಸುರರೆಲ್ಲರೂ ದುಷ್ಟರು—ಎಂದರೆ ಸಾಧುಶ್ರೇಷ್ಠರಾದ ಪ್ರಹ್ಲಾದ ಮತ್ತು ವಿಭೀಷಣ ಮುಂತಾದವರಲ್ಲಿ ಈ ಮಾತು ಅನ್ವಯಿಸದೆ ಹೋಗುತ್ತದೆ. ಇದು ಅವ್ಯಾಪ್ತಿದೋಷ. [ಸಂ.]

**ಅವ್ಯಾಪ್ಯ** (ಗು). ೧. ವ್ಯಾಪಿಸಲಾಗದ. ೨. ವ್ಯಾಪಿಸಬಾರದ. ೩. ಎಲ್ಲ ಕಡೆಗೂ ವ್ಯಾಪಿಸದ; ಎಲ್ಲ ಸನ್ನಿವೇಶಕ್ಕೂ ವಿಸ್ತರಿಸದ. ೪. ಅಸಾಧಾರಣವಾದ; ವಿಚಿತ್ರವಾದ. [ಸಂ.]

**ಅವ್ಯಾಬಾಧ** (ಗು). ೧. ಯಾವ ವಿಧವಾದ ಬಾಧೆಯೂ ಇಲ್ಲದ; ಬಾಧೆಗೆ ಒಳಗಾಗದ: ಅವ್ಯಾಬಾಧ ಸುಖಸಂಯುಕ್ತಾತ್ಯಂತಿಕಾವಸ್ಥಾಂತರಂ ಮೋಕ್ಷಂ (ತತ್ತ್ವಪ್ರ. ೧); ಅವ್ಯಾಬಾಧನುಮನಂತಸುಖಾಂಬುಧಿ ನಿಳಯನುಮಾಗಿ ನೆಲಸಿರ್ದಂ (ಆದಿಪು. ೧೬–೫೧ ವ). (ನಾ). ೨. [ಜೈನ] ಸಿದ್ಧಪರಮೇಷ್ಠಿಗಳ ಎಂಟು ಗುಣಗಳಲ್ಲಿ ಒಂದು; ಯಾವುದರಿಂದಲೂ ಕುಂದದ ಹೆಚ್ಚದ ಅನಂತಸುಖತ್ವ: ಪರಮ ಪದಮನೆಮನದೊಳ್ ನಿಜಿಸಿ ಸಮ್ಯಜ್ಞಾನದರ್ಶನಾನಂತವೀರ್ಯ ಸೂಕ್ಷ್ಮ ಗುರುಲಘುತ್ವಾವಗಾಹಾವ್ಯಾಬಾಧಂಗಳೆಂಬ ಸಿದ್ಧಪರಮೇಷ್ಠಿಗಳಷ್ಟಗುಣಂಗಳಂ ನೆನೆಯುತ್ತುಂ (ಆದಿಪು. ೧೦–೧೪ ವ). ೩. [ಜೈನ] ಎಂಟು ಲೋಕಾಂತಿಕ ದೇವತೆಗಳಲ್ಲಿ ಒಂದು ವಿಧದ ಪಂಗಡ: ಬ್ರಹ್ಮಕಲ್ಪಾಂತವಾಸಿಗಳುಮಪ್ಪ ಸಾರಸ್ವತಾದಿತ್ಯವಹ್ನ್ಯರುಣಗರ್ದತೋಯತುಷಿತಾವ್ಯಾಬಾಧಾರಿಷ್ಟರೆಂಬೆಣ್ಬರುಂ ಲೋಕಾಂತಿಕದೇವರ್ ಬಂದು (ಆದಿಪು. ೯–೭೦ ವ). [ಸಂ.]

**ಅವ್ಯಾವಹಾರಿಕ** (ಗು). ವ್ಯಾವಹಾರಿಕವಲ್ಲದ; ಆಚರಣೆಯಲ್ಲಿ ತರಲಾಗದ: ಕಾತ್ಯಾಯಿಷಳನ್ನು ಮದುವೆಯಾಗಬೇಕೆಂಬ . . . ತನ್ನ ಇತ್ತೀಚಿನ ನಿರ್ಧಾರಗಳು ಅವ್ಯವಹಾರಿಕವಾದ ಕನಸುಗಳೆಂದು ಅವನು ಎಣಿಸಿಕೊಂಡಿದ್ದನು (ಪುನರು. ೩೪೩). [ಸಂ.]

**ಅವ್ಯಾಹತ** (ಗು). ತಡೆಯಿಲ್ಲದ; ನಡುವೆ ಬಿಟ್ಟುಹೋಗದ; ಎಡೆಬಿಡದ; ತೊಡಕಿಲ್ಲದ; ನಿರ್ವಿಘ್ನವಾದ: ನಿರ್ಮೋಹದಿನಿರೆ ಯತಿಪತಿಗವ್ಯಾಹತಮಳವಟ್ಟುದುತ್ತಮಾಕಿಂಚನ್ಯಂ (ಮಲ್ಲಿಪು. ೧೧–೪೮); ಭುಜಂಗರಾಯರ ಓದೂ ಅವ್ಯಾಹತವಾಗಿ ನಡೆದಿದ್ದಿತು (ಸಮಜೀ. ೧೨೫೬); ಇದೇ ರೀತಿಯ ಹಳ್ಳಿಯ ಬಡಕಾಣಿಕೆಯೇ ಅವ್ಯಾಹತವಾಗಿ ಬಂದಿದ್ದರೆ ಕುಠೀರದ ಕಾರ್ಯಯೋಜನೆಗಳೆಷ್ಟೋ ಸುಲಭವಾಗಿ ರೂಪಕ್ಕೆ ಬರುತ್ತಿದ್ದುವು (ಚಿತಸ. ೭೪). [ಸಂ.]

**ಅವ್ಯುತ್ಪತ್ತಿ** (ನಾ). ೧. ವ್ಯುತ್ಪತ್ತಿಯಿಲ್ಲದಿರುವುದು; ಪಾಂಡಿತ್ಯವಿಲ್ಲದಿರುವುದು: ಅವ್ಯುತ್ಪತ್ತಿಯಿದ್ದರೂ ಕವಿಶಕ್ತಿ ಅದನ್ನು ಮರೆಗೊಳಿಸುವುದು (ಭಾರಮೀ. ೧೯೮ ಅಡಿಟಿ). ೨. [ಕಾವ್ಯಮೀ]: "ಅವ್ಯುತ್ಪತ್ತಿಯೆಂದರೆ ಅನುಪ್ರಾಸ ಮೊದಲಾದುವುಗಳನ್ನು ಹೆಣೆಯುವ ಉದ್ದೇಶದಿಂದ ಪ್ರವರ್ತಿಸುವುದು" (ಭಾರಮೀ. ೧೯೭). [ಸಂ.]

**ಅವ್ಯುತ್ಪನ್ನ** (ನಾ). ವ್ಯುತ್ಪತ್ತಿಯಿಲ್ಲದವನು; ಪಾಂಡಿತ್ಯವಿಲ್ಲದವನು; ತಿಳಿವಳಿಕೆ ಸಾಲದವನು: ಸವ್ಯಾಪಸವ್ಯಮೆಚ್ಚು ಪಿತೃವ್ಯನ ಕೈವಿಡಿವ ವಿಜಯವಧುವಂ ಕೈಕೊಂಡವ್ಯಾಜಶೌರ್ಯನಂಕುಶನವ್ಯುತ್ಪನ್ನನವೊಲಿಂತು ಮೋಜಿದಪ್ಪುವನೇ (ಪಂಪಭಾ. ೧೭–೧೭). [ಸಂ.]

**ಅವ್ರತ** (ಗು). ೧. ವ್ರತವಲ್ಲದ. (ನಾ). ೨. ವ್ರತಕ್ಕೆ ವಿರೋಧವಾದ ಕೆಲಸ: ಕಷಾಯ – ಕ್ರೋಧಾದಿ ಕಷಾಯಂಗಳುಂ, ಅವ್ರತ – ಹಿಂಸಾದ್ಯವ್ರತಂಗಳುಂ (ತತ್ತ್ವಪ್ರ. ೨೫೬). ೩. ವ್ರತವಿಲ್ಲದವನು. [ಸಂ.]

**ಅವ್ರತಯೋಗ** (ನಾ). ೧. ವ್ರತಾಚರಣೆ ಇಲ್ಲದಿರುವುದು. ೨. ಆಮೆಯಂತೆ ನೀರಿನಲ್ಲಿಯೇ ವಾಸಮಾಡುವುದು. ೧, ೨: ಅವ್ರತಯೋಗಂ ಜಳಪಕ್ಷಿಗಲ್ಲದೆ ಜನಕ್ಕಿಲ್ಲಲ್ಲಿ (ಪುಷ್ಪಪು. ೨–೨೯).
[ಸಂ. (ಅ– + ವ್ರತಯೋಗ; ಅ + ವ್ರತ + ಯೋಗ)]

**ಅವ್ರತಿಕ** (ನಾ). ವ್ರತವನ್ನು ಅನುಸರಿಸದವನು: ವ್ರತಿಕಂಗಂ ಭಾವಿಪಡವ್ರತಿಕಂಗಮುದಾವುದಂತರಂ (ಕಗವಿ. ೭೩ ಪುಣ್ಯಾಸ್ರ). [ಸಂ.]

**ಅವ್ವ₁** 'ಅವ್ವೆ' ನೋ.

**ಅವ್ವ₂** (ಅ) = ಅಮ್ಮ₃. 'ಅವ್ವಯ್ಯ' ಪರಾ. [< ಅಮ್ಮ₃]

**ಅವ್ವಕ್ಕ** (ನಾ). ಒಬ್ಬಾಕೆಯ ಹೆಸರು (ಉಕ. ೬).
[ಅವ್ವ₁ (< ಅವ್ವೆ) + ಅಕ್ಕ₁]

**ಅವ್ವಡಿಸು** 'ಅವ್ವಳಿಸು' ನೋ.

**ಅವ್ವಣಿಯೂರ್** (ನಾ). ಒಂದು ಊರಿನ ಹೆಸರು: ಆಳ್ವ ಮೂನೂರ್ವರು ಅವ್ವಣಿಯೂರ್ ಬೋಗಾದಿಯರುಮ್ (ಮೈಆರಿ. ೧೯೨೪; ೮೭–೪; 800 ?). [ಅವ್ವಣಿ₀ + ಊರ್]

**ಅವ್ವಪ್ಪ** (ಅ). = ಅವ್ವಯ್ಯ. [ಅವ್ವ₂ + ಅಪ್ಪ₃]

**ಅವ್ವಬ್ಬೆ** (ನಾ). ಒಬ್ಬಾಕೆಯ ಹೆಸರು: ಈ ಧರ್ಮ್ಮಂ ಇರುಗಮ್ಮಯ್ಯಗೊನ್ದು ಮನುಕಮಯ್ಯಂಗಂ ಅವ್ವಬ್ಬೆಗಂ ಒನ್ದು ಭಾಗಂ ಸಲ್ವುದು (ಎಕ. X, ಕೋಲಾರ. ೫೭–೧೭; 925). [ಅವ್ವ₁ (< ಅವ್ವೆ) + ಅಬ್ಬೆ₁]

**ಅವ್ವಯ್ಯ** (ಅ). ಆಶ್ಚರ್ಯಸೂಚಕ ಶಬ್ದ: ಅವ್ವಯ್ಯ ಒಲೆಮುಂದೆ ಒಂದು ಹಾವು ಮಲಗಿದೆ ಎಂದು ಹುಡುಗಿ ಕೂಗಿಕೊಂಡಳು (ರೂಢಿ).
[ಅವ್ವ₂ + ಅಯ್ಯ₂ (< ಅಯ್ಯೋ)]

**ಅವ್ವರಣಿ** (ನಾ). ಒಂದು ಗಿಡ: "ಚಿತ್ರಫಲಾಸ್ವಿತಾ – ಅವ್ವರಣಿ" (ಓಷಧಿ. ೧೪೩). [?]

**ಅವ್ವಲ್**, ಅವಲ್$_1$, ಅವಲು$_2$ (ಗು). ೧. ಹಸನಾದ; ಅತ್ಯುತ್ತಮವಾದ; ಮಿಶ್ರವಲ್ಲದ; ಉತ್ಕೃಷ್ಟವಾದ; ಮೊದಲನೆಯ ದರ್ಜೆಯ: ಆಗ ಗವರ್ನರ್ ಜನರಲ್‍ರವರು . . . ಕರ್ನಲ್ ಜಾನ್‍ಬ್ರಿಗ್ಸ್ ಎಂಬ ಸರದಾರರನ್ನು ಸೀನಿಯರ್ (Senior) ಎಂದರೆ ಅವ್ವಲ್ ಕಮಿಷನರ್ ಎಂದೂ . . . ನೇಮಿಸಿದರು (ಮಹಾವಂ. II, 98); ಅವ್ವಲ್ ಗೋವಾ ಸಾರಾಯಿ ಇದೆ ಕೊಡಲೋ? (ಅನಾಥ. ೧೩೪). ೨. ನೇರವಾದ; ಸಾಕ್ಷಾತ್ತಾಗಿ ಸಂಬಂಧಿಸಿದ. **ಅವಲ್$_1$**: 'ಅವಲ್‍ಪುಡಿ' ಪರಾ. **ಅವಲು$_2$**: 'ಅವಲುತರ', 'ಅವಲುಭೂಮಿ' ಪರಾ.

[← **ಅರ.** ಹಿಂ. ಅವ್ವಲ್; **ಮರಾ.** ಅವಲ್, ಅವ್ವಲ್]

**ಅವ್ವಲ್‍ಪುಡಿ** (ನಾ). ಹಸನಾದ (ನಶ್ಯದ) ಪುಡಿ: ಒಂದು ಚಿಟಿಕೆ ಏರಿಸಿ 'ಅವ್ವಲ್! ಅವ್ವಲ್‍ಪುಡಿ! ಉಡುಪಿದ್ದಲ್ಲ. ಇಲ್ಲಿ ಹೊಗೆಸೊಪ್ಪು ಕರಿ ಮಾಡಿಬಿಡುತ್ತಾರೆ . . .' (ಬಾಳಿಗಿ. ೧೦). [ಅವ್ವಲ್ + ಪುಡಿ]

**ಅವ್ವಲ್‍ರಾತೀಬು** (ನಾ). ಅತ್ಯುತ್ತಮವಾದ ಆಹಾರ: ಅವರಿಬ್ಬರೂ ಅರಸನ ಅಪ್ಪಣೆ ಪ್ರಕಾರ ಅವ್ವಲ್‍ರಾತೀಬು ಅಂದರೆ ಗೋಧಿ, ರೊಟ್ಟಿ, ತುಪ್ಪ, ಸಕ್ಕರೆ, ಹಾಲು, ಮಾಂಸ ಮುಂತಾದ್ದನ್ನು ಪಡಕೊಂಡು . . . ಮಹಾಬಲವಂತರಾಗಿ (ಕಥಾಮಂ. IV, ೨–೧).

[ಅವ್ವಲ್ + ರಾತೀಬು]

**ಅವ್ವಲ್‍ಲವಾಜಮಾ** (ನಾ). ಪಾಕಕ್ಕೆ ಬೇಕಾದ ಒಂದನೆಯ ದರ್ಜೆಯ ಪದಾರ್ಥವರ್ಗ: ಬೆಳಗಾಗುವುದರೊಳಗಾಗಿ ರಾಜಾಜ್ಞೆಯಿಂದ ನೂರಾರು ಜನರಿಗಾಗುವ ಅವ್ವಲ್‍ಲವಾಜಮಾ ಮೋತಿಖಾನೆಯಿಂದ ಬರಬೇಕು (ಕಥವಿ. ೩೪೧). [ಅವ್ವಲ್ + ಲವಾಜಮಾ]

**ಅವ್ವಳಿ** (ನಾ). ಮೇಲೆ ಹಾಯುವಿಕೆ (?): ನಿಲ್ಲೆ, ನಲ್ಮೆ, ಕವ್ವರಿ, ಅವ್ವಳಿ ಇತ್ಯಾದೌ ಅಂತಸ್ಥಾಕ್ಷರಾಣಾಂ ಚ ದ್ವಿರ್ಭಾವಃ ಸ್ಯಾತ್ (ಶಬ್ದಾನು. ೬೬ ವ್ಯಾಖ್ಯಾ). 'ಅವ್ವಳಿಸು' ಪರಾ. [?]

**ಅವ್ವಳಿಸು**, ಅವಳಿಸು, ಅವ್ವಡಿಸು (ಕ್ರಿ). ೧. ಮೇಲೆ ಬೀಳು; ಆಕ್ರಮಿಸು: "ಅವ್ವಳಿಸಿತೆಂದು ಮೇಲ್ವಾಯ್ದುದು" (ಕಶಸಾ. ೨೯–೬೨೬); ಮಹೀಭುಜರೆತ್ತಮೆಚ್ಚ ಕಿತ್ತಂಬುಗಳೆತ್ತಮುವ್ವಳಿಸೆ (ಪಂಪಭಾ. ೧೧–೪೨); ಒಲೆದು ಕೇಸರಿ ಹೊಯ್ವವೋಲವ್ವಳಿಸಿ ಕರ್ಣನ ಹಯರಥವನಪ್ಪಳಿಸಿ ಮರಳುವ ಲಾಗಿನಲಿ ಖಂಡೆಯವ ಖಂಡಿಸಿದ (ಕುವ್ಯಾದ್ರೋ. ೬–೫೦); ತೆಕ್ಕೆವರಿದೇಳ್ವ ಕರ್ಬೊಗೆಯ ಹೊರಳಿಗಳ ದಶದಿಕ್ಕುಗಳನವ್ವಳಿಪ ಕೇಸುರಿಯ (ಜೈಮಿಭಾ. ೧೩–೧೨). ೨. ಮುಂದೆ ನುಗ್ಗು; ಉರವಣಿಸು; "ಆತುರಿಸು" (ಶಾಪಮಂ. ಕೋಶ); ಅವ್ವಳಿಸುವ ಮುಳಿಸಿನ ದಳ್ಳುರಿಗಳ ನುಗುಳ್ವವೊಲುಗುಳ್ದನಸುರನುರಿವ ಪಟಿಗಳಂ (ಪಂಪಭಾ. ೬–೫೯); ಬಳ್ಳಿವಾಲುಮನೆಳನಾಗರೆಂದು ಸೆಳೆದು ಕೆಡಪಿ ಕಡಿದೀಡಾಡಲವ್ವಳಿಸುವ ಮುದಿಮುಂಗುಲಿಗಳು (ಶಬ್ಬಕಾ. ೨೩೪); ಆ ಸಿತಾಶ್ವನ ಬಿಲ್ಲನೊದೆದಾಕಾಶಕವ್ವಳಿಸುವ ಶರೌಘಕೆ ಮಾಸಲಜಿಯಾ ಕರ್ಣ ನಿನ್ನೊಡಲೆಂದನಾ ಶಲ್ಯ (ಕುವ್ಯಾಕ. ೯–೨೪); ಅಲರ ಸೊಗಸಿಗವ್ವಳಿಪಳಿಗಳು (ನಂದಿಮಾ. ೧೮–೧೬). ೩. ಮಾರಿಸು; ಮಾರು: ಎಳವಿದಿರ ಬಣ್ಣಮೊಳ್ಗಡು ಕಳಶಮನವ್ವಳಿಪ ಮೊಲೆ ಪೊದಳ್ದೆಳಸುವ ಬಾಯ್ ಬಳಸುವ ಕಣ್ ಮಿಳಿರ್ವ ಕುರುಳ್ ನಳಿಮೊಗಮೆನೆ ಸೊಬಗಿನಳ್ಗೆ ನಾಟ್ಯವರ್ತನಮೇ (ಆದಿಪು. ೪–೪೪). ೪. ಕಾಡು; ಹಿಂಸಿಸು: ಪಡಪೆತ್ತಿ ಬಯ್ವ ಕಿಜುದಂಗೆಯ ಕಣ್ಣೊಳೆ ಕೀಜಿ ಕಲ್ಪಿಪಣ್ಣನ ಬಿಯಕಿಲ್ಲದವ್ವಳಿಪ ತಮ್ಮನ ತೀನಿಗೆ ಮೆಯ್ಯನೊಡ್ಡಿ ನಿನ್ನನೆ ಪಿಡಿದೆನ್ನ ನಲ್ಮೆಗಿದು ತಕ್ಕುದೆ (ಶಾಂತಿಪು. ೮–೧೦೫). ೫. ಹಿಂದೆಗೆ; ಕುಗ್ಗು: ಗಿಳಿಯ ಮುಜುಕಿಕೆ ಗಿಡುಗನಗಿದವ್ವಳಿಸುವುದೆ (ಕುವ್ಯಾಸ. ೯–೪೬); ಒದಜಿ ಬಲನೊಡನೊಡನೆ ಪಳಚಿ ಧೊಡದಿರೆ ನೆಲನವ್ವಳಿಸಿ ದಿಕ್ಕರಿ ಮದವಡಗಿದವು (ಕುವ್ಯಾಭೀ. ೪–೪).

**ಅವಳಿಸು** ೧: ಕೈಯಿಂದಜಿಯಲ್ಕತ್ತವಳಿಪ ಸುತನ ಪರಿಯನೆಂದೀಕ್ಷಿಪನೋ (ಚಂದ್ರಪು. ೩–೪೭). ℙ ಈ ಶಬ್ದ 'ಉತ್ತವಳಿಸು' ಎಂಬುದರ ಅಪಲಿಖಿತವಾದ 'ಅತ್ತವಳಿಸು' ಎಂಬುದರ ತಪ್ಪುವಿಭಜನೆಯಿಂದ ಬಂದಿದೆ. **ಅವ್ವಡಿಸು**: ೧. ಎಡ ಬಲದೊಳವ್ವಡಿಪ ನಾಯ್ಗಳ ಗಡಣವನು ನೆಜೆಪೊಡೆದುದವುಂಕಿದುದಡಸಿ . . . ಒತ್ತಿ ಸಬ್ಬನೆ ಸೀಳಿ ತಿಕ್ಕೆಲಕೆ (ಸಾಳ್ವಭಾ. ೫–೩೪). [ಅವ್ವಳಿ + –ಇಸು$_1$]

**ಅವ್ವಾಣಿ** 'ಅವ್ವಾಳಿ' ನೋ.

**ಅವ್ವಾಳಿ**, ಅವ್ವಾಣಿ (ನಾ). ಕೈಲಾಗದವನು; ಅಶಕ್ತ (ಉಕ): ಮಗನ ನೀ ಎಂಥಾ ಅವ್ವಾಳಿ, ಒಂದು ಹೆಣ್ತೀನ್ನ ಸಂಬಾಳಸೋದು ಆಗೋದಿಲ್ಲ ನಿನ್ನಕಡಿಂದ (ಬಾಂಡಾಯ. ೯೯); "ಯಾವನೋ ಒಬ್ಬ ತುಂಟನ ಮಾತಿಗೆ ಬಂಟರ ಕೂಡೂ ಹೀಗೆ ಬೆದರಿದರೆ ಅವ್ವಾಳಿಗಳ ಪಾಡೇನು?" (ಜೀವಪ್ರ. ೯೮); ಶಿಕ್ಷಣವು ದೊರೆಯದಿದ್ದ ಅವ್ವಾಳಿಗಳ ಕೈಯಿಂದಲೂ . . . ದೇಶೋನ್ನತಿಯಂಥ ಮಹತ್ಕಾರ್ಯವು ಕೊನೆಗಾಣುವುದೆಂದು ಆಶಿಸುವುದೆಂದರೆ ಉಸುಕಿನ ಮೇಲೆ ಮನೆ ಕಟ್ಟುವಂತೆಯೇ ಸರಿ (ಅಮೇವಿ. ೧). **ಅವ್ವಾಣಿ** (೬). [?]

**ಅವ್ವಾಳಿತನ** (ನಾ). ಹೆಣ್ಣಿಗತನ; ಅಶಕ್ತತೆ: ಯಾವನಾದರೊಬ್ಬ ಉನ್ಮತ್ತ ಪಠಾಣನು ಊರನ್ನು ಸೇರಿ . . . ಓಡಿಸುವಾಗ ಕುರಿಯಂತೆ ಒದರಿ, ಒದರಿ ಮರುಗುವುದಕ್ಕಿಂತ ಹೆಚ್ಚಿನ ಅವ್ವಾಳಿತನವು ಮತ್ತಾವದಿರುವುದು (ಬ್ರಹ್ಮಜೀ. ೨೧೯). [ಅವ್ವಾಳಿ + –ತನ]

**ಅವ್ವೆ**, ಅವ್ವ$_1$ (ನಾ). ೧. ತಾಯಿ; ಹೆತ್ತಾಕೆ: ಇನ್ನೇವೇಟ್ದಪೆಂ ಪ್ರಸೂತ್ಯುದ್ಭಾವದಿನೆಮ್ಮವ್ವೆ ಕಟಿದಳೆಂತಾಕ್ಷಣದೊಳ್ (ಕಾದಂಪೂ. ೧೩೩); ಹೊಲಗೆಟ್ಟವ್ವೆಗತ್ತನ್ಯಳಂ ಕಂಡ ಶಿಶುವ ಪೋಲ್ತು (ಸಿದ್ಧರಾ. ೨–೫೬); ಎಮ್ಮವ್ವೆಗೆ ಪೇಟೆಲ್ಗೊಲವಿಂ (ದಶಕು. ೯–೫೫); ಸೋದರಿಯಲಾ ಕೃಷ್ಣನವ್ವೆ ವಿವಾದವೇ (ಕುವ್ಯಾಸ. ೧೧–೧೮); ಮನಸಿಜನಳಿಯನವ್ವೆಯ ಭಾವನ ಕೂಡೆ ಜನಿಸಿದವಳ ವಲ್ಲಭನ (ಕಂಸವಿ. ೮–೧). ೨. ಪ್ರೀತಿಗೌರವಾರ್ಹರಾದ ಹೆಂಗಸರನ್ನು ಕುರಿತು ಮಾತನಾಡುವಾಗ ಅವರ ಹೆಸರಿನ ಕಡೆಗೆ ಸೇರಿಸಿ ಅಥವಾ ಸ್ವತಂತ್ರವಾಗಿ ಬಳಸುವ ಮಾತು: ಶ್ರೀ ನವಿಲೂರ್ಸಂಘದಾ ಗುಣವತಿ ಅವ್ವೆಗಳಾ ನಿಸಿಧಿಗೆ (ಎಕ. II, ೧೧೨; 700); ಗೆರಸೊಪ್ಪೆಯ ಶ್ರೀಮತಿ ಅವ್ವೆಗಳು ಸಮಸ್ತರು ಗೋಷ್ಠಿಯ ಕೊಟು (ಎಕ. II, ೩೪೩; 1419 ?). ೩. ಅರಮನೆಯ ರಾಣಿವಾಸದಲ್ಲಿ ಸೇವೆಗಾಗಿರುವ ಗೌಡಿ ಅಥವಾ ಸೇವಕಿ: ಅರಮನೆಯ ಅವ್ವೆಯರ ಗೊತ್ತುಗಾತಿ ಒಳಗೆ ಬಂದು ತಲೆಬಾಗಿ ವಂದಿಸಿ ಬಿನ್ನವಿಸಿಕೊಂಡಳು (ಕೃಷ್ಣಭೂ. ೪); ರಣಧೀರನು ತೆರಕಣಾಂಬಿಯಿಂದ ಮೈಸೂರಿಗೆ ಬಂದನೆಂಬುದನ್ನು ಕೇಳಿ ರಾಜಮಾತೆ ತಮ್ಮ ಅವ್ವೆಯರೊಡನೆ ಮೈಸೂರಿಗೆ ತೆರಳುತ್ತಾರೆ (ಸಂಸಕ. ೧೦೭). **ಅವ್ವ$_1$**: ೧. ಅವ್ವಂ, ಅಮ್ಮಂ ಎಂಬಿವರ್ಕಮಿಂತಜಿವುದು (ಶಮುದ. ಸ. ೧೩೨ ಪ್ರಯೋ); ಅವ್ವ ಹೇಳಿದಳು, ನಾಳೆ ಗೌರಿಹಬ್ಬ (ಕಪಪು. ೧–೩೦); ಅರಸು ಯಾರಿಗೆ ಅಪ್ಪ, ಸೂಳೆ ಯಾರಿಗೆ ಅವ್ವ (ಗಾದೆ). 'ಪಿರಿಯವ್ವ' ಪರಾ. ೨. ಪದೆಪಿಂದಂ ಬಂದು ಮೇನಾಸತಿ ನಿಜಸುತೆಯಂ ನೋಡಿ ಮುಂಡಾಡಿ ದೇವೀ . . . ತಾಯೇ ಪದುಳಂ ಪೋಗವ್ವ ಪೋಗೆಂದತಿಭಯರಸದಿಂ ಬುದ್ಧಿವೇಳುತ್ತುಮಿರ್ದಳ್ (ಗಿರಿಕ. ೫–೧೨); ದ್ವಿಜನಿದ ಕೇಳಿ ಫಲವೇನವ್ವ ಎಂದನು ಸುಯ್ದು ದುಗುಡದಲಿ (ಕುವ್ಯಾಆ. ೧೨–೯); ಚಂದನಗಂಧಿ ನಿನ್ನಾಳ್ದ ಚಿತ್ತಜನಾದನೆಂದಳವಳಿಯದಿರವ್ವಾ (ಮೋಹತ. ೮–೪೭); ಅವ್ವನವರೇ ನೀವು ಒಳಿತಾಗಿದ್ದೀರೋ (ಮುಂಬಯಿ. ೩–೬೭).

[**ದೇ.** ‖ **ತಮಿ.** ಅವ್ವೈ; **ತುಳು.** ಅಬ್ಬೆ; **ಕೊಡ.** ಅವ್ವೆ; **ತೆಲು.** ಅವ್ವ; **ಗೊಂಡಿ.** ಅವ್ವಾರಿ. / **ಮರಾ.** ಆಯಿ]

**ಅನ್ವೆಯಕೆಱೆ** (ನಾ). ಒಂದು ಕೆರೆಯ ಹೆಸರು : ಅನ್ವೆಯಕೆಱೆ ಕೆಳಗೆ ಗದ್ದೆ ಬೆದಲೆ ಕಂಬ ೮೦ (ಎಕ. VI, ಶಿವಮೊ. ೪೪–೧೮ ; 1177).
[ಅನ್ವೆ + ಕೆಱೆ]

**ಅವ್ನೋರ್** (ಸ). ಅವರು (?) : ಸ್ವಸ್ತಿಶ್ರೀ ಅವ್ನೋರಯ್ವದಿರ್ವಕ್ಕು ಪದಿರ್ಖಂಡುಗ ನಲ್ವತ್ಥ (ಎಕ. VI, ಚಿಕ್ಕಮ. ೫೦–೬ ; ಸು. 480 ).
[< ಅದು₁. / ತಮಿ. ಅವ್ನೋರ್]

**ಅಶಂಕರತ್ವ** (ನಾ). ಶಂಕರತ್ವವಿಲ್ಲದಿರುವುದು; ಶುಭವನ್ನು ಉಂಟುಮಾಡದಿರುವುದು : ಶಂಕರಂಗೆ ಶಿವಂಗೆ ಕಂಕಾಳಾಂಕಪಾಣಿಗ ಶಂಕರತ್ವದ ಕಿಂಕರರು ಸರಿಯೇ (ಬಸವು. ೫೪–೨೩). [ಸಂ.]

**ಅಶಂಕಿತ** (ಗು). ಶಂಕೆಗೊಳ್ಳದ; ಹೆದರದ : ಕಣ್ಬುರಿಗೆಟ್ಟು ದಿವ್ಯ ಮುನಿಗಿತ್ತಪಮಾನದಿನಾರ್ತರೌದ್ರದಿಂ ಪೆಣ್ಬುಲಿಯಾಗಿ ಪುಟ್ಟಿ ಸಹದೇವಿ ಬರುತ್ತಿರೆ ಕಂಡಶಂಕಿತರ್ . . . ಉಪಸರ್ಗಸಹಿಷ್ಣುಗಳಿರ್ದರಿರ್ವರುಂ (ಪಂರಾಮಾ. ೨–೫೩). [ಸಂ.]

**ಅಶಕ್ತ** (ಗು). ೧. ಶಕ್ತಿಯಿಲ್ಲದ; ಅಸಮರ್ಥವಾದ; ದುರ್ಬಲವಾದ. (ನಾ). ೨. ಶಕ್ತಿಹೀನನಾದವನು; ಬಲಹೀನ: ಅಶಕ್ತರ ಕೈಯಲ್ಲಿ ಆಡಳಿತ ಸಿಕ್ಕಿದರೆ ಎಲ್ಲಕಡೆಯೂ ಅವ್ಯವಸ್ಥೆಯೇ ಆಗುತ್ತದೆ (ರೂಢಿ). [ಸಂ.]

**ಅಶಕ್ತತನ** (ನಾ). = ಅಶಕ್ತತೆ: ಆದರೆ ಬಹಳ ಅಶಕ್ತತನ ಬಂದಿದೆ (ಹೊಸಕ್ಷಿ. ೨೦೫). [ಅಶಕ್ತ + -ತನ]

**ಅಶಕ್ತತೆ** (ನಾ). ಶಕ್ತಿಯಿಲ್ಲದಿರುವುದು ; ದೌರ್ಬಲ್ಯ.
[ಸಂ. ಅಶಕ್ತತಾ]

**ಅಶಕ್ತಯಾನ** (ನಾ). ಅಶಕ್ತರನ್ನೂ ರೋಗಿಗಳನ್ನೂ ಒಯ್ಯುವ ವಾಹನ; ಅಶಕ್ತಯಾನ (Ambulance. ಇಂಕನಿ).
[ಅಶಕ್ತ + ಯಾನ]

**ಅಶಕ್ತಿ** (ನಾ). ಶಕ್ತಿಯಿಲ್ಲದಿರುವುದು ; ದುರ್ಬಲತೆ ; ಸಾಮರ್ಥ್ಯವಿಲ್ಲದಿರುವುದು. [ಸಂ.]

**ಅಶಕ್ಯ** (ಗು). ಅಸಾಧ್ಯವಾದ ; ಅಸದಳವಾದ : ಗುಣಸ್ತವಂಗಳನಿಂತೆಂದವನೆಣಿಸಲಶಕ್ಯಂ (ಸುಕುಮಾ. ೪–೪೯). [ಸಂ.]

**ಅಶತ್ರು** (ಗು). ೧. ಶತ್ರುವಿಲ್ಲದ. ೨. ಶತ್ರುವಲ್ಲದ. (ನಾ). ೩. ಹಗೆಯಿಲ್ಲದವನು ; ಸ್ನೇಹಿತ. ೪. ಚಂದ್ರ. [ಸಂ.]

**ಅಶನ** (ನಾ). ೧. ತಿನ್ನುವುದು. ೨. ಅನ್ನ; ಆಹಾರ : ಬದರಾಕ್ಷಾಮಲಕಪ್ರಮಾಣಮಶನಂ (ಶಾಂತಿಪು. ೬–೧೦೪) ; ಅಶನವಸನ ಸಿಕ್ಕಿದ ಮೇಲೆ ವ್ಯಸನವ್ಯಾಕೆ (ಗಾದೆ). [ಸಂ.]

**ಅಶನಘಾತಕ** (ನಾ). = ಅನ್ನಕಂಟಕ (ದಕ. ೬). [ಅಶನ + ಘಾತಕ]

**ಅಶನಪರ್ಣಿ** 'ಅಸನಪರ್ಣಿ' ನೋ.

**ಅಶನವೃತ್ತಿ** (ನಾ). ವಿಶ್ರಾಂತಿವೇತನ; ವಿರಾಮವೇತನ; ವರ್ಷಾಶನ: ಪ್ರತಿವರುಷಕ್ಕೆ ೩೦೦೦ ಪೌಂಡುಗಳ ಅಶನವೃತ್ತಿಯನ್ನು (Pension) ಪಡೆಯುತ್ತಿದ್ದನು (ಇಂಗ್ಲಇ. II, ೩೨). [ಅಶನ + ವೃತ್ತಿ]

**ಅಶನಾಚ್ಛಾದನ** (ನಾ). ಅನ್ನ ಹಾಗು ಬಟ್ಟೆ : ತಪೋಧನವರ್ಗ್ಗ ಛಾತ್ರವರ್ಗಮಶನಾಛಾ[ಚ್ಛಾ]ದನಕ್ಕೆ (ಸೌಇಇ. XX, ೩೯–೩೭ ; 1064) ; ಅಲ್ಲಿ ಕೇಳ್ವ ತಪೋಧನರಶನಾಚ್ಛಾದನಕ್ಕಂ (ಸೌಇಇ. XX, ೮೩–೨೧ ; 1123).
[ಅಶನ + ಆಚ್ಛಾದನ]

**ಅಶನಾಯಿತ** (ನಾ). ಹಸಿದವನು ; ಕ್ಷುಧಿತ. [ಸಂ.]

**ಅಶನಾಯೆ** (ನಾ). ಹಸಿವು; ಕ್ಷುಧೆ. [ಸಂ. ಅಶನಾಯಾ]

**ಅಶನಾರ್ಥಿ** (ನಾ). ಆಹಾರವನ್ನು ಬೇಡುವವನು ; ಅನ್ನಾಪೇಕ್ಷಿ.
[ಸಂ. ಅಶನಾರ್ಥಿನ್ (ಅಶನ + ಅರ್ಥಿನ್)]

**ಅಶನಿ** (ನಾ). ೧. ಸಿಡಿಲು : ಮನದೊಲವರದಿಂದೀ ಯಮತನಯನ ಕುಡುವಗ್ರಪೂಜೆ ಮತ್ಸನ್ನಿಧಿಯೊಳ್ ನಿನಗಶನಿಯ ಮಿಟ್ಟುವ ನಂಜಿನ ದೊರೆ (ಪಂಪಭಾ. ೬–೫೧). ೨. ವಜ್ರಾಯುಧ : ತ್ರಿಪೃಷ್ಟನರಾತಿಧ್ವ[ಜಿ]ನೀಸಮಸ್ತ ಮದಸಾಮಜಕುಲ ನಗಕುಲಕೆ ಶನಿಯುಮಶನಿಯುಮಾದಂ (ಶಾಂತಿಪು. ೫–೨೪). ೩. ಗೋಲಂದಾಜು ; ಕಲ್ಲುಗುಂಡುಗಳನ್ನು ಎಸೆಯುವ ಯಂತ್ರ (?) : ಮೂಱು ಕೋಟಿಯಸುರರು ಸಱಿಗಳಲಿಟ್ಟರಶನಿಯ ಶರದಲೆಡೆಯಲಿ ತಱುಬಿದರು ಕೈಸೋತುದೆನಗೆಂದ (ಕುವ್ಯಾಅ. ೧೨–೩೯). [ಸಂ.]

**ಅಶನಿಪಾತ** (ನಾ). ಸಿಡಿಲು ಹೊಡೆಯುವುದು ; ಸಿಡಿಲು ಎರಗುವಿಕೆ.
[ಅಶನಿ + ಪಾತ]

**ಅಶನಿಸನ್ನಾಹ** (ನಾ). ಕಲ್ಲುಗುಂಡುಗಳನ್ನು ಎಸೆಯುವ ಯಂತ್ರ ; ಗೋಲಂದಾಜ (?) : ಎರಡುಂ ಲಕ್ಕಂಬರಂ ಸುತ್ಥಣೆಯರಶನಿಸಂನ್ನಾಹದಿಂ . . . ತೋರ್ಕ್ಕವೆತ್ತೆಯ್ತರೆ (ಎಕ. XI, ದಾವಣ. ೨೫–೩೧ ; 1224).
[ಅಶನಿ + ಸನ್ನಾಹ]

**ಅಶರಣ** (ಗು). ರಕ್ಷಕರಿಲ್ಲದ ; ದಿಕ್ಕಿಲ್ಲದ ; ನಿರ್ಗತಿಕನಾದ. [ಸಂ.]

**ಅಶರಣಾನುಪ್ರೇಕ್ಷೆ** (ನಾ). [ಜೈನ] ಹನ್ನೆರಡು ಅನುಪ್ರೇಕ್ಷೆಗಳಲ್ಲಿ ಒಂದು ; ಹುಟ್ಟು, ಸಾವು, ಮುಪ್ಪು, ರೋಗ ಮುಂತಾದುವುಗಳ ಭಯದಿಂದ ಯಾರೂ ತನ್ನನ್ನು ರಕ್ಷಿಸಲಾರರೆಂದೂ ರತ್ನತ್ರಯಾತ್ಮಕ ಧರ್ಮವೇ ಶರಣೆಂದೂ ಭಾವಿಸುವಿಕೆ : ನಿಶ್ಚಲಾನುಭೂತಿರೂಪಾಭೇದ ರತ್ನತ್ರಯಾತ್ಮಕ ಧರ್ಮಮೆ ಶರಣಂ, ಪೆಱರಾರುಮಿಲ್ಲೆಂದು ಚಿಂತಿಸುವುದು ಅಶರಣಾನುಪ್ರೇಕ್ಷೆಯಕ್ಕುಂ (ತತ್ತ್ವಪ್ರ. ೩೨೬).
[ಅಶರಣ + ಅನುಪ್ರೇಕ್ಷೆ]

**ಅಶರೀರ** (ಗು). ೧. ಶರೀರವಿಲ್ಲದ; ದೇಹರಹಿತವಾದ : ತುಂಬಿದತ್ತಶರೀರಗಂಧರ್ವಗಾಯನಂ (ಶ್ರೀರಾಮಾ. ೧೬–೪೨೪). (ನಾ). ೨. ಕಾಮ ; ಮನ್ಮಥ. ೩. ಆಕಾಶ. [ಸಂ.]

**ಅಶರೀರತ್ವ** (ನಾ). ಶರೀರವಿಲ್ಲದಿರುವಿಕೆ : ಅಶರೀರತ್ವವನ್ನು ಪಡೆದ ಮೇಲೆ ಧರ್ಮವು ಬೇಕಾಗದೆ ಹೋಗಲಿ, ಅದನ್ನು ಪಡೆಯುವುದಕ್ಕಾದರೂ ಬೇಡವೇ ? – ಎಂದು ಪ್ರಶ್ನೆ (ಬ್ರಹ್ಮಭಾ. ೪೩ ಅಡಿಟಿ). [ಸಂ.]

**ಅಶರೀರಧ್ವನಿ** (ನಾ). = ಅಶರೀರವಾಕ್ಯ : ಅಶರೀರಧ್ವನಿಯಂತೆ ನಾರದನ ಪೇೞ್ದಾದೇಶಮಿಂದಾಯ್ತು (ಜಗವಿ. ೩–೧೯). [ಅಶರೀರ + ಧ್ವನಿ]

**ಅಶರೀರವಾಕ್ಯ** (ನಾ). ಶರೀರವು ಕಾಣದೆ ಕೇಳಿಬರುವ ಮಾತು ; ಆಕಾಶವಾಣಿ : ಆ ಸಮಯದೊಳ್ ನುಡಿದುದಶರೀರವಾಕ್ಯಮಾಕಾಶದೊಳ್ (ಜೈಮಿಭಾ. ೧೬–೧೫). [ಅಶರೀರ + ವಾಕ್ಯ]

**ಅಶರೀರವಾಣಿ** (ನಾ). = ಅಶರೀರವಾಕ್ಯ : ಹೋಮಶಾಲೆಯನ್ನು ಪ್ರವೇಶಿಸಿದ ತಂದೆಗೆ ಛಂದೋಮಯವಾದ ಅಶರೀರವಾಣಿಯು (ಶಾಕುಂತ. ೪೯–೬). [ಅಶರೀರ + ವಾಣಿ]

**ಅಶರೀರಿ** (ಗು). ಶರೀರವಿಲ್ಲದ ; ವಸ್ತುವಲ್ಲದ. [ಸಂ. ಅಶರೀರಿನ್]

**ಅಶಲ್ಯ** (ಗು). ೧. ಆಯುಧರಹಿತವಾದ ; ನಿರಾಯುಧವಾದ : ಶಲ್ಯನನಂದಶಲ್ಯನಂ ಬಗೆವವೊಲೇಳಿದಂ ಬಗೆದು ದಂತಿಯನಾಗಡೆ ತೋಱಿಕೊಟ್ಟು (ಪಂಪಭಾ. ೧೦–೧೧೧) ; ಅನವರನಶಲ್ಯರೆಂದುಱದೆ ಕಾದಿದೆನಪ್ಪೊಡೆ ಕಾರ್ಯಹಾನಿ ಸಂಭವಿಸುಗುಂ (ಪಂರಾಮಾ. ೧೪–೮೧). 'ನಿಶ್ಶಲ್ಯ' ಪರಾ. ೨. [ಜೈನ] ರಾಗದ್ವೇಷಗಳಿಲ್ಲದ. 'ಅಶಲ್ಯಭಾವೆ' ಪರಾ. [ಸಂ.]

**ಅಶಲ್ಯಭಾವೆ** (ನಾ). [ಜೈನ] ರಾಗದ್ವೇಷಗಳಿಲ್ಲದವಳು : ಪರಮಜಿನೇಂದ್ರನಂ ಬಗೆವ ಭಾವಮಚಾಲ್ಯಮಶಲ್ಯಭಾವೆಯಾ (ಸುಕುಮಾ. ೯–೧೬). [ಸಂ. ಅಶಲ್ಯಭಾವಾ]

**ಅಶಾಂತ** (ಗು). ೧. ಶಾಂತವಲ್ಲದ. ೨. ಶಾಂತಿಯಿಲ್ಲದ; ಕ್ಷೋಭೆಗೊಂಡ; ಕದಡಿದ. (ನಾ). ೩. ರೇಗಿದವನು; ಕೋಪಿಷ್ಠ. [ಸಂ.]

**ಅಶಾಂತಮತಿ** (ಗು). ಶಾಂತಿಯಿಲ್ಲದ ಮನಸ್ಸುಳ್ಳ; ಕದಡಿದ ಬುದ್ಧಿಯುಳ್ಳ; ಸ್ಥೈರಣೆಯಿಲ್ಲದ: ತಜ್ಜಶಿ ಪಲವು ಯೋನಿಯೊಳ್ ನಿಂದಶಾಂತಮತಿ ಚಂಡರುಚಿ ನಿಶಾಚರನಾದಂ (ಚಂದ್ರಪು. ೫–೮೮). [ಅಶಾಂತ + ಮತಿ]

**ಅಶಾಸ್ತ್ರ** (ಗು). ೧. ಶಾಸ್ತ್ರವಲ್ಲದ. ೨. ಶಾಸ್ತ್ರಕ್ಕೆ ವಿರುದ್ಧವಾದ. [ಸಂ.]

**ಅಶಾಸ್ತ್ರೀಯ** (ಗು). ೧. ಶಾಸ್ತ್ರದಲ್ಲಿ ಹೇಳಿಲ್ಲದ. ೨. ಶಾಸ್ತ್ರಕ್ಕನುಸಾರವಾಗಿಲ್ಲದ; ಶಾಸ್ತ್ರಕ್ಕೆ ವಿರೋಧವಾದ: ಅವನ ಆಚರಣೆ ಅಶಾಸ್ತ್ರೀಯ (ರೂಢಿ). [ಸಂ.]

**ಅಶಿಕ್ಷಿತ** (ಗು). ೧. ಶಿಕ್ಷಣವನ್ನು ಪಡೆಯದ; ತರಬೇತಿಲ್ಲದ. (ನಾ). ೨. ಕ್ರಮತಪ್ಪಿ ನಡೆಯುವವನು; ಅವಿಧೇಯ: ಅವರ ಮನೆಯ ಹುಡುಗ ತುಂಬ ಅಶಿಕ್ಷಿತನಾಗಿದ್ದಾನೆ ಯಾರ ಜೊತೆಯಲ್ಲಿಯೂ ಮರ್ಯಾದೆಯಿಂದ ನಡೆದುಕೊಳ್ಳುವುದಿಲ್ಲ (ರೂಢಿ). [ಸಂ.]

**ಅಶಿಕ್ಷೆ** (ನಾ). (ಉಕ) = ಅಶಿಕ್ಷಿತ ೨: ಹುಡುಗ ಬಹಳ ಅಶಿಕ್ಷೆಯಾಗಿದ್ದಾನೆ (ರೂಢಿ). [ಸಂ. ಅಶಿಕ್ಷಾ]

**ಅಶಿತ** (ಗು). ತಿಂದ; ಅಗಿದ; ನುಂಗಿದ. [ಸಂ.]

**ಅಶಿಥಿಲ** (ಗು). ಶಿಥಿಲವಲ್ಲದ; ಸಡಿಲಗೊಳ್ಳದ; ಭದ್ರವಾದ; ಬಿಗಿಯಾದ: ಅಶಿಥಿಲಪದಚಯರಚನಾತಿಶಯಂ ಸಂಶ್ಲಿಷ್ಟಮೆಂಬುದಕ್ಕು (ಕಾವ್ಯಾವ. ೫೦೫). [ಸಂ.]

**ಅಶಿರ** (ಗು). ೧. ಅಗ್ನಿ. ೨. ಸೂರ್ಯ. ೩. ಗಾಳಿ. ೪. ಒಬ್ಬ ರಾಕ್ಷಸನ ಹೆಸರು. ೫. ವಜ್ರ. [ಸಂ.]

**ಅಶಿವ** (ಗು). ಅಶುಭವಾದ; ಅಮಂಗಳವಾದ. 'ಅಶಿವರವ' ಪರಾ. [ಸಂ.]

**ಅಶಿವರವ** (ನಾ). ಅಮಂಗಳವಾದ ಧ್ವನಿ: ಪಾಂಡುಗೆ ಪುಟ್ಟಿಯುಂ... ಈ ಮರದಡಿಯೊಳ್ ಶಿವಾಶಿವರವಂಗಳಿನೆಟ್ಟಜುವಂತುಟಾದುದೇ (ಪಂಪಭಾ. ೩–೧೧). [ಅಶಿವ + ರವ]

**ಅಶಿಶಿರ** (ಗು). ಶಿಶಿರವಲ್ಲದ; ತಂಪಿಲ್ಲದ; ಉಷ್ಣವಾದ. 'ಅಶಿಶಿರಕರ' ಪರಾ. [ಸಂ.]

**ಅಶಿಶಿರಕರ** (ನಾ). ಉಷ್ಣಕಿರಣ; ಸೂರ್ಯ: ಅಶಿಶಿರಕರ ರಥ ತುರಗ ಖುರ ಶಿಖರ ನಿಖಂಡಿತ ಲವಂಗಪಲ್ಲವಮುಂ (ಪಂಪಭಾ. ೪–೧೮ ವ). [ಅಶಿಶಿರ + ಕರ$_4$]

**ಅಶಿಶಿರಕಿರಣ** (ನಾ). = ಅಶಿಶಿರಕರ: ಶಿಶಿರಕರನೆಲ್ಲಿ ನಿಂದೊಡ ಮಶಿಶಿರಕಿರಣಾದಿಗಳ್ ನಿರೀಕ್ಷಿಪೊಡೆ ಫಲಂ (ಜಾತತಿ. ೨೦–೧೫). [ಅಶಿಶಿರ + ಕಿರಣ]

**ಅಶಿಷ್ಟ** (ಗು). ೧. ಶಿಷ್ಟವಲ್ಲದ; ಒರಟಾದ. (ನಾ). ೨. ಅಯೋಗ್ಯವಾದ ನಡವಳಿಕೆ; ತಪ್ಪುದಾರಿ: ಕಂಸಂ ತದೀಯ ಬಾಲಹಿಂಸಾಪರನಾಗಿ ಸೂತಿಕಾಗೃಹಮಂ ಪೊಕ್ಕು ... ಶಿಷ್ಟರಶಿಷ್ಟಮೆನೆ ... ಪಾಸಜಿಯೊಳ್ ಕೂಸನಪ್ಪಳಿಸಿ (ಜಗವಿ. ೨–೫೩ ವ, ೫೪ ವ). [ಸಂ.]

**ಅಶೀತಿ** (ನಾ). ಎಂಬತ್ತು. 'ಅಶೀತಿಯೋಜನ' ಪರಾ. [ಸಂ.]

**ಅಶೀತಿಯೋಜನ** (ನಾ). ಎಂಬತ್ತು ಯೋಜನ: ಅಲ್ಲಿಂ ಮೇಗಶೀತಿಯೋಜನಾಂತರದೊಳ್ (ಸುಕುಮಾ. ೧೧–೫೯ ವ). [ಅಶೀತಿ + ಯೋಜನ]

**ಅಶೀಲ** (ಗು). ೧. ಶೀಲವಿಲ್ಲದ; ನಡತೆಗೆಟ್ಟ. (ನಾ). ೨. ಕೆಟ್ಟ ನಡವಳಿಕೆ; ನೀತಿಯಿಲ್ಲದಿರುವುದು. [ಸಂ.]

**ಅಶುಚಿ** (ಗು). ಶುಚಿಯಲ್ಲದ; ಅಶುದ್ಧವಾದ. (ನಾ). ೨. ಶುಚಿಯಿಲ್ಲದಿರುವುದು; ಅಶುದ್ಧತೆ. [ಸಂ.]

**ಅಶುಚಿತ್ವ** (ನಾ). ಶುಚಿಯಿಲ್ಲದಿರುವಿಕೆ; ಹೊಲೆ: ಒಡಲಶುಚಿತ್ವಮಂ ಗತಿಚತುಷ್ಟಯದೊಳ್ ದೊರೆಕೊಳ್ವನಿಷ್ಟಮಂ (ಪಂರಾಮಾ. ೬–೮೭). [ಸಂ.]

**ಅಶುಚಿತ್ವಾನುಪ್ರೇಕ್ಷೆ** (ನಾ). [ಜೈನ] ಹನ್ನೆರಡು ಅನುಪ್ರೇಕ್ಷೆಗಳಲ್ಲಿ ಒಂದು; ಮನುಷ್ಯದೇಹದಲ್ಲಿ ಒಂದಾದರೂ ಶುಚಿಯೂ ಪವಿತ್ರವೂ ಇಲ್ಲವೆಂದು ಭಾವಿಸುವುದು: "ಈ ಮನುಷ್ಯಶರೀರದೊಳ್ ಒಂದಪ್ಪೊಡಂ ಶುಚಿಯುಂ ಪವಿತ್ರಮುಂ ಇಲ್ಲದಜಿಂ ಜಲಾದಿಗಳಿಂ ಶುದ್ಧಿಯಿಲ್ಲ, ನಿಶ್ಚಯವ್ಯವಹಾರಾದಿ ಸಮ್ಯಗ್ದರ್ಶನಾದಿಗಳ್ ಜೀವಕ್ಕತ್ಯಂತ ಶುದ್ಧಿಕಾರಣಂಗಳೆಂದು ಭಾವಿಸುವುದು ಅಶುಚಿತ್ವಾನುಪ್ರೇಕ್ಷೆಯಕ್ಕುಂ" (ತತ್ತ್ವಪ್ರ. ೩೯). [ಅಶುಚಿತ್ವ + ಅನುಪ್ರೇಕ್ಷೆ]

**ಅಶುದ್ಧ** (ಗು). ೧. ಶುದ್ಧವಲ್ಲದ; ಅಪವಿತ್ರವಾದ. (ನಾ). ೨. ಶುಚಿಯಲ್ಲದವನು; ಅಪವಿತ್ರನು: ಕಜಿಯ ಬಹುದೆ ಕಾಮಧೇನುವ ಶುದ್ಧಂಗೆ (ಬಸವ. ೨೬೭). ೩. [ಶೈವ] ಎರಡು ಬಗೆಯ ಸೃಷ್ಟಿಯಲ್ಲಿ ಒಂದು: ಸೃಷ್ಟಿ ಶುದ್ಧ, ಅಶುದ್ಧವೆಂದು ಎರಡುಪ್ರಕಾರ (ಹಿಂದಸಾ. ೨೯೬). [ಸಂ.]

**ಅಶುದ್ಧಿ** (ಗು). ೧. ಶುದ್ಧಿಯಿಲ್ಲದ. (ನಾ). ೨. ಹೊಲಸು; ಮೈಲಿಗೆ. [ಸಂ.]

**ಅಶುಭ** (ಗು). ೧. ಅಮಂಗಳವಾದ; ಅನಿಷ್ಟಕರವಾದ. (ನಾ). ೨. ದುರದೃಷ್ಟ; ಕೇಡು. ೩. ಪಾಪ: "ವೃಜಿನಂ ... ಅಶುಭಂ, ಪಾಪಂ ... ಈ ೧೪ ಪಾಪಂ" (ಹಲಾಯು. ೧೦೩–೫). [ಸಂ.]

**ಅಶುಭಕರ್ಮ** (ನಾ). ೧. ಪಾಪಕಾರ್ಯ; ಅಮಂಗಳಕರವಾದ ಕೆಲಸ. ೨. [ವೀಶೈ] ನಾಲ್ಕು ಬಗೆಯ ಕರ್ಮಗಳಲ್ಲಿ ಒಂದು: ಕರ್ಮವು ಅಶುಭಕರ್ಮ, ಶುಭಕರ್ಮ, ಜ್ಞಾನಕರ್ಮ, ಪ್ರಸಾದಕರ್ಮವೆಂದು ನಾಲ್ಕು ತೆರನಾಗಿರುವುದು (ಶಿವಾಸೂ. ೧೩೧). [ಅಶುಭ + ಕರ್ಮ]

**ಅಶುಭಪ್ರವೃತ್ತಿ** (ನಾ). ಪಾಪಕರವಾದ ಉದ್ಯೋಗ; ಕೆಟ್ಟ ಕೆಲಸದಲ್ಲಿ ತೊಡಗುವಿಕೆ: ಈ ಪ್ರವೃತ್ತಿಯಲ್ಲಿ ಶುಭಪ್ರವೃತ್ತಿಯಿಂದ ಉತ್ತಮ ಜನ್ಮವೂ ಅಶುಭಪ್ರವೃತ್ತಿಯಿಂದ ಅಧಮಜನ್ಮವೂ ಬರುವುವು (ಹಿಂದಸಾ. ೧೨೨). [ಅಶುಭ + ಪ್ರವೃತ್ತಿ]

**ಅಶುಭಲೇಶ್ಯೆ** (ನಾ). [ಜೈನ] ಕರ್ಮಲೇಪದಿಂದ ಜೀವಕ್ಕೆ ಉಂಟಾಗುವ ಅಶುಭವಾದ ಬಣ್ಣ: ಮೊದಲಿನ ಕೃಷ್ಣ, ನೀಲ, ಕಾಪೋತ, ಲೇಶ್ಯೆ ಉಳ್ಳವರು – ಅಶುಭಲೇಶ್ಯೆ – ನಾಲ್ಕು ಗುಣಸ್ಥಾನಗಳನ್ನು ಹೊಂದುವರು (ಜೈನಧ. ೩೦೨). [ಸಂ. ಅಶುಭಲೇಶ್ಯಾ (ಅಶುಭ + ಲೇಶ್ಯಾ)]

**ಅಶುಭಸ್ಥಾಯಿ** (ಗು). [ಜ್ಯೋತಿ] ಅಮಂಗಳಕರವಾದ ಸ್ಥಾನದಲ್ಲಿರುವ: ಜೀಯ ಭಾಸ್ಕರಭೌಮರಶುಭಸ್ಥಾಯಿಗಳು ... ಚಿತ್ತವಿಸಿಯೆನೆ ಜೋಯಿಸರ ಜವಿವಲೆಗೆ ಸಿಲುಕೆನೆನುತ್ತ ಹೋಜವಂಟ (ಕುವ್ಯಾಳ. ೨೨–೪). [ಸಂ. ಅಶುಭಸ್ಥಾಯಿನ್ (ಅಶುಭ + ಸ್ಥಾಯಿನ್)]

**ಅಶೇಷ** (ಗು). ಶೇಷವಿಲ್ಲದಿರುವ; ಸಮಸ್ತವಾದ: ಕುಜಿತಂತೆ ಪೇಟ್ದ ಪದದೊಳ್ಕಜಿಯದೊಡೆಲ್ಲಂ ವಿವಕ್ಷಿತಾರ್ಥಮಶೇಷಂ (ಕವಿರಾ. ೧–೧೦೦); ಅವುದಶೇಷಲೋಕವಿಷಯಸ್ಥಿತಿಯಲ್ತು (ಕಾವ್ಯಾವ. ೮೪೪). [ಸಂ.]

**ಅಶೇಷನಕರ** (ನಾ). ನಕರ ಎಂಬ ವರ್ತಕರ ಸಂಸ್ಥೆಗೆ ಸೇರಿದವರೆಲ್ಲರು: ದೀವಿಗೆಗೆ ಗಾಣ ಒಂದು ಅಶೇಷನಕರ ಹೊನ್ನವಣ ಹೇಜಿಂಗೆ ೧೦೦ ಎಲೆಯಂ ಬಿಟ್ಟರು (ಕಇಆ. ೪೩–೧೭; 1100 ?). 'ನಕರ' ಪರಾ. [ಅಶೇಷ + ನಕರ]

**ಅಶೇಷಭರಣಕರ** (ಗು). ೧. ಎಲ್ಲರನ್ನೂ ಪೋಷಣೆ ಮಾಡುವ. ೨. ಶೇಷನೆಂಬ ಸರ್ಪರಾಜನನ್ನು ಕೈಗೆ ಭೂಷಣವಾಗಿ ಹೊಂದದ. ೧, ೨ : ಅತನುವಿಭೂತಿವಿಳಸಿತನಾಗಿಯುಮಶೇಷ [ಪಾಠಾಂ. ಷಾ]ಭರಣಕರನೆನಿಸಿರ್ದಂ (ರಾಜಶೇ. ೩-೯ ವ).
[ಸಂ. (ಅಶೇಷ + ಭರಣಕರ ; ಅ- + ಶೇಷ + ಭರಣ + ಕರ$_4$)]

**ಅಶೇಷಮಹಾಜನ** (ನಾ). ಎಲ್ಲ ಮಹಾಜನಗಳು : ಶ್ರೀನಾರಾಯಣದೇವ ಪಾದಪಂಕಜಭ್ರಮರರುಮಪ್ಪ ಶ್ರೀಮದಗ್ರಹಾರಂ ಸೇಡಿಂಬದ ಅಶೇಷಮಹಾಜನ ಮುನ್ನೂರ್ವರ್ರುಂ (ಕಇಅ. ೯೪-೩-೨೯ ; 1124). 'ಮಹಾಜನ' ಪರಾ. [ಅಶೇಷ + ಮಹಾಜನ]

**ಅಶೇಷಸಮಯ** (ನಾ). ೧. ಎಲ್ಲಾ ಸಮಯ ; ಎಲ್ಲಾ ಕಾಲ. ೨. ಎಲ್ಲಾ ಮತಧರ್ಮ ; ಎಲ್ಲಾ ಸಂಪ್ರದಾಯ.
ಅಶೇಷಸಮಯಂಗಳು = ಎಲ್ಲಾ ಸಂಪ್ರದಾಯಕ್ಕೆ ಸೇರಿದವರು; ಎಲ್ಲಾ ಸಮಯದವರು : ಕೇಸವಸೆಟ್ಟಿ ನಾವಿಸೆಟ್ಟಿ ಸಮಸ್ತ ಸೆಟ್ಟಿಕಾಜರುಂ ಅಶೇಷಸಮಯಂಗಳು ರಾಜಾಧ್ಯಕ್ಷಂ ಕಾವಣ ಹೆಗ್ಗ[ಡೆ]ಯ ಸನ್ನಿಧಾನದಲಾ (ಕಇಅ. ೩೮-೫೧-೧೨ ; 1091). ℙ ಬಹುವಚನದಲ್ಲಿ ಮಾತ್ರ ಈ ಮಾತು ಈ ಅರ್ಥದಲ್ಲಿ ಬರುತ್ತದೆ. 'ಸಮಯ' ಪರಾ. [ಅಶೇಷ + ಸಮಯ]

**ಅಶೋಕ** (ಗು). ೧. ಶೋಕವಿಲ್ಲದ ; ದುಃಖವಿಲ್ಲದ. (ನಾ). ೨. ದೇವತೆ. ೩. ಸಂನ್ಯಾಸಿ ; ಸಂಯಮಿ. ೪. ಒಂದು ಜಾತಿಯ ಮರ : ಕಕುಭಾಶೋಕಕದಂಬ ಲುಂಗಲವಲೀ ಭೂಜಾರ್ಜುನಾನೋಕಹ ಪ್ರಕರಂ (ಪಂಪಭಾ. ೫-೪೦). ೫. ಅಶೋಕ ಚಕ್ರವರ್ತಿ ; ಮೌರ್ಯ ವಂಶದರಾಜ : "ಸುರರುಂ ವೃಕ್ಷವಿಭೇದ ಸಂಯಮಿಗಳಿಂತೀ ಮೂರ ಶೋಕಾಹ್ವಯಂ" (ನಾನಾರ. ೯೫). [ಸಂ.]

**ಅಶೋಕಪಾದಪ** (ನಾ). ಒಂದು ಬಗೆಯ ವೃಕ್ಷ ; ಅಶೋಕವೆಂಬ ಮರ : ಪದ್ಮರಾಗಾರುಣಲಸದಶೋಕಪಾದಪಮುಂ . . . ಕರಮೊಪ್ಪೆ (ಶಾಂತಿಪು. ೧೨-೧೯ ವ). [ಅಶೋಕ + ಪಾದಪ]

**ಅಶೋಕರೋಹಿಣಿ** (ನಾ). ಕಟುಕರೋಹಿಣಿಯೆಂಬ ಒಂದು ಮೂಲಿಕೆ. [ಸಂ. ಅಶೋಕರೋಹಿಣೀ]

**ಅಶೋಕಲತಿಕೆ** (ನಾ). ಅಶೋಕದ ಬಳ್ಳಿ : ಹಿರಣ್ಮಯವೇದಿಕಾವಳಯಿತಮುಮಶೋಕಲತಿಕಾಪ್ರತಾನ . . . ಸಮಭಿರಾಮಮುಮಾಗಿ (ಆದಿಪು. ೧೦-೨೫ ವ). [ಸಂ. ಅಶೋಕಲತಿಕಾ]

**ಅಶೋಕವನ** (ನಾ). ೧. ಅಶೋಕವೃಕ್ಷಗಳ ತೋಟ. ೨. ಲಂಕೆಯಲ್ಲಿ ರಾವಣನು ಸೀತಾದೇವಿಯನ್ನು ಸೆರೆಯಿಟ್ಟಿದ್ದ ತೋಟದ ಹೆಸರು : ಅಶೋಕವನವಿರ್ಪ ತಾಣವನರಸಿ ತೊಳತೊಳಲಿ ಚರಿಸಿ (ಶ್ರೀರಾಮಾ. ೪೨೪-೧). [ಅಶೋಕ + ವನ]

**ಅಶೋಕವನಿಕೆ** (ನಾ). = ಅಶೋಕವನ ೨ : ಏರ್ದನ್ . . . ಕೆಮ್ಮಣ್ಣ್ ವೆಟ್ಟಮುಂ, ಅಶೋಕವನಿಕಾ ಮಧ್ಯೆ ಕಡಲಡಕನತಿದೂರಸ್ಥಮಂ (ಶ್ರೀರಾಮಾ. ೪೭೫-೨೭). [ಸಂ. ಅಶೋಕವನಿಕಾ]

**ಅಶೋಕವಲ್ಲರಿ** (ನಾ). ಅಶೋಕವೃಕ್ಷದ ಬಳ್ಳಿ : ಇಡಿದಿರೆ ಮಂಜಿನೊಳ್ ತುಱುಗಿ ತೆಂಕಣಗಾಳಿಯೊಳಾದ ಸೋಂಕಿನೊಳ್ ನಡುಗುವಶೋಕವಲ್ಲರಿಯ ಪಲ್ಲವದೊಳ್ (ಪಂಪಭಾ. ೩-೭೫). [ಅಶೋಕ + ವಲ್ಲರಿ]

**ಅಶೋಕವೃತ್ತ** (ನಾ). ಶೋಕಕ್ಕೆ ಒಳಗಾಗದ ನಡೆಯುಳ್ಳವನು : ಅಗಲ್ದು ಪೋದಂ . . . ಅಶೋಕವೃತ್ತನಭಯಾತ್ಮಕಂ (ಪುಷ್ಪಪು. ೧೯-೯೩). [ಅಶೋಕ + ವೃತ್ತ]

**ಅಶೋಕಸಂಗತ** (ಗು). ೧. ಅಶೋಕವೃಕ್ಷದಿಂದ ಕೂಡಿದ. ೨. ಶೋಕದ ಸೋಂಕಿಲ್ಲದ. ೧, ೨ : ಮತ್ತಮಾವನಂ . . . ತತತಾಪಸಸಮುಚ್ಚಯಮಾಗಿಯುಮಶೋಕಸಂಗತಮೆನಿಸಿರ್ದುದು (ರಾಜಶೇ. ೫-೭೪ ವ). [ಅಶೋಕ + ಸಂಗತ]

**ಅಶೋಕಿ** (ನಾ). ಶೋಕವಿಲ್ಲದವನು : ಅಶೋಕಿಯಾಗಿಹುದೆಂದೆನಗೆ ನೀಹೇಳಶೋಕೆಯೆ (ಬಸವು. ೪೫-೩೫). [ಸಂ. ಅಶೋಕಿನ್]

**ಅಶೋಕಿತ** (ಗು). ಶೋಕವಿಲ್ಲದ ; ದುಃಖವಿಲ್ಲದ : ಉಂಡರೇನೋ ? ಉಣ್ಣದಿದ್ದರೇನೋ ? ಶೋಕಿತ [ಪಾಠಾಂ. ಸೋಂಕಿತ]ವೇನೋ ? ಅಶೋಕಿತ [ಪಾಠಾಂ. ಅಸೋಂಕಿತ]ವೇನೋ ? ಹುಟ್ಟುವುದಿಲ್ಲಾಗಿ ಹೊಂದುವುದಿಲ್ಲ ಸತ್ತು ನಿಶ್ಚಿಂತವಾಯಿತ್ತು ಗುಹೇಶ್ವರ (ಅವಚಂ. ೧೨೭-೫೭೫). [ಸಂ.]

**ಅಶೋಕೆ** (ನಾ). ೧. = ಅಶೋಕಲತಿಕೆ : ಲಲಿತೆಯ ಶ್ರೀಪದತಳಗಳಶೋಕೆಯ ತಳಿರಂ ಪೋಲ್ವುವು (ಸುಕುಮಾ. ೫-೫೧). ೨. = ಅಶೋಕರೋಹಿಣಿ. ೩. ಶೋಕವಿಲ್ಲದವಳು : ಮಾವನನು ಕೊಲಲೆಂದು ದೇವರದೇವ ಬಂದನಶೋಕೆಯಾದಳು ದೇವಕೀವಧು (ಅಕ್ರೂಚ. ೬-೧೦).
[ಸಂ. ಅಶೋಕಾ]

**ಅಶೋಧಿತ** (ಗು). ೧. ಶೋಧಿಸಲ್ಪಡದ ; ಪರಿಷ್ಕಾರಗೊಳಿಸದ. ೨. ಹುಡುಕದ. ೩. ತಪ್ಪುಗಳನ್ನು ತಿದ್ದದ. [ಸಂ.]

**ಅಶೋಭಿತ** (ಗು). ಶೋಭೆಗೊಳಿಸದ ; ಅಲಂಕಾರಮಾಡದ. [ಸಂ.]

**ಅಶೌಚ** (ನಾ). ೧. ಶೌಚವಿಲ್ಲದಿರುವುದು ; ಕೊಳೆ : ಅನೃತವು ಲೋಭವು ಮಾಯೆಯಶೌಚವು . . . ಸಹಜಮಾಗಿಹವು (ಇಂಚಾಪ. ೧೭೫-೬೪). ೨. ಸೂತಕ. [ಸಂ.]

**ಅಶೌಚಿ** (ನಾ). ಶುಚಿಯಿಲ್ಲದವನು : ಅವಿನೀತಂ ಮಗನೇ ಅಶೌಚಿ ಮುನಿಯೇ (ಸೋಮೇಶ. ೨೨). [ಸಂ. ಅಶೌಚಿನ್]

**ಅಶ್ಮ** (ನಾ). ೧. ಕಲ್ಲು. ೨. ಮೇಘ. [ಸಂ. ಅಶ್ಮನ್]

**ಅಶ್ಮಂತ** (ನಾ). ಅಡಿಗೆಯ ಒಲೆ. [ಸಂ.]

**ಅಶ್ಮಂತಕ** (ನಾ). = ಅಶ್ಮಂತ. [ಸಂ.]

**ಅಶ್ಮಕಾರ** (ನಾ). ಕಲ್ಲುಕುಟಿಗ : "ಅಶ್ಮಕಾರಂ ಕಲ್ಲುಕುಟ್ಟಿಗಂ [ಪಾಠಾಂ. ಅಶ್ಮಕಾರಕಂ ಕಲ್ಲುಕುಟಿಗಂ]" (ಮಂಗರಾ. ೧೧೧-೧). [ಸಂ.]

**ಅಶ್ಮಕಾರಕ** (ನಾ). = ಅಶ್ಮಕಾರ. 'ಅಶ್ಮಕಾರ' ಶಬ್ದದ ಪಾಠಾಂತರವನ್ನು ನೋಡಿ. [ಸಂ.]

**ಅಶ್ಮಗರ್ಭ** (ನಾ). ಪಚ್ಚೆ ; ಮರಕತಮಣಿ : "ಅಶ್ಮಗರ್ಭಂ, ಮರ(ಕತಂ)ತಕಂ, ಹರಿನ್ಮಣಿಃ — ಈ ೩ ಪಚ್ಚೆ" (ಹಲಾಯು. ೨೯-೨೧).
[ಅಶ್ಮ + ಗರ್ಭ]

**ಅಶ್ಮಜ** (ನಾ). ೧. ಕಾವಿಕಲ್ಲು. ೨. ಶಿಲಾಜಿತು. ೩. ಕಬ್ಬಿಣ. [ಸಂ.]

**ಅಶ್ಮಪುಷ್ಪ** (ನಾ). ಕಲ್ಲುಹೂವು : ಕಾಲಾನುಸಾರ್ಯಂ ವೃದ್ಧಂ ಅಶ್ಮಪುಷ್ಪಂ ಶೀತಶಿವಂ ಶೈಲೇಯಂ ೫ ಕಲ್ಲುಹುವ್ವಿನ ಪೆಸರು, ಶಿಲಾಪುಷ್ಪ" (ಸಿದ್ಧಾಂತಿ. ೧೨೩). [ಅಶ್ಮ + ಪುಷ್ಪ]

**ಅಶ್ಮಯುಗ** (ನಾ). ಕಲ್ಲನ್ನು ಪ್ರಧಾನವಾಗಿ ಬಳಸುತ್ತಿದ್ದ ಯುಗ ; ಶಿಲಾಯುಗ : ಅಶ್ಮಯುಗದ ಬೇರೆ ಬೇರೆ ಪ್ರಕಾರದ ೩೪ ಆಯುಧಗಳೂ, ಉಪಕರಣಗಳೂ ಧಾರವಾಡ ಜಿಲ್ಲೆಯ ಬೆಣ್ಣೆಕೊಳ್ಳದಲ್ಲಿ ದೊರೆತಿವೆ (ಕರ್ನಾಪೂ. ೯೨). [ಅಶ್ಮ + ಯುಗ]

**ಅಶ್ಮಯೋನಿ** (ನಾ). = ಅಶ್ಮಗರ್ಭ (ಕ). [ಅಶ್ಮ + ಯೋನಿ]

**ಅಶ್ಮರಿ** (ನಾ). ಮೂತ್ರಕೋಶದಲ್ಲಿ ಕಲ್ಲುಕಟ್ಟಿಕೊಳ್ಳುವ ಒಂದು ರೋಗ ; ಕಲ್ಲುಕಟ್ಟು ; ಶಿಲಾಮೇಹ : ಶುಕ್ಲವು ವಾತದೋಷದಿಂದ ವಸ್ತಿ – ಸ್ಥಾನವನ್ನೈದಿ ಅಶ್ಮರಿಯಹುದು. ಅಶ್ಮರಿಯನೇ ಕಲ್ಲುಕಟ್ಟು ಎಂಬರು. ಹಾಗಲ್ಲದಿದ್ದರೆ ಶ್ಲೇಷ್ಮವಾದರೂ ವಸ್ತಿಸ್ಥಾನವ ಐದಿ ಅಶ್ಮರಿಯಹುದು ತೀವ್ರವಾದ ವೇದನೆಯಹುದು ; ಮೂತ್ರನಾಳದಲ್ಲಿ ಉರಿ

ಉಂಟಾಗಿಹುದು; ಅದು ಅಶ್ಮರಿ ಎನಿಸಿಕೊಂಬುದು (ವೈದ್ಯ ಸಾ. ೨೫೨–೮ ಟೀಕೆ); ಬೂರುಗದ ಮೂಡು ಹರಿದ ಬೇರಿನ ತಿಗಡು, ಈಚಲ ಎಲೆ, ಸುಳಿ, ಕಲ್ನಾರು, ಹರಿವಾಣ ಇವ ಮೊಸರೊಳು ತಳಿದು ಹಿಂಡಿಕೊಂಡುಅಕಳಮೊಸರು ಸಕ್ಕರೆಯಲ್ಲಿ ಹಾಕಿಕೊಳ್ಳಲು ಅಶ್ಮರಿ ಮಾಂಬುದು (ವೈಸೈವಿ. ೧೯೦). [ಸಂ. ಅಶ್ಮರೀ]

**ಅಶ್ಮರೀಹಾರಕ** (ನಾ). ಅಶ್ಮರೀ ರೋಗವನ್ನು ಹೋಗಲಾಡಿಸುವಂಥದು; ಮೂತ್ರಕೋಶದಲ್ಲಿ ಕಲ್ಲುಕಟ್ಟನ್ನು ಕರಗಿಸುವ ಔಷಧಿ: ಮೂತ್ರಕೋಶದಲ್ಲಿ ಕಲ್ಲು ಕೂಡದಂತೆ ಮಾಡುವ ಮತ್ತು ಕೂಡಿದ ಕಲ್ಲನ್ನು ಕರಗಿಸುವ (ಮದ್ದು); ಅಶ್ಮರೀಹಾರಕ (Antilithic. ಇಂಕನಿ). [ಸಂ. (ಅಶ್ಮರೀ + ಹಾರಕ)]

**ಅಶ್ಮಸಾರ** (ನಾ). ಕಬ್ಬಿಣ: ಬಿಸಿಲಉರಿ ಕರಗಿ ಹರಿವಶ್ಮಸಾರಮಂ ಗಿರಿಯ ನಿರ್ಝರಂಗೆತ್ತೇಂ ಚುಂಬಿಸಿ ಚಂಚು ಬೇಯೆ ತಲೆ ಬಿದಿರ್ದಸುವರೆಯಾದುದೊ ತೃಷಾರ್ತನೊಂದು ಮಯೂರಂ (ಚಂದ್ರಪು. ೯–೭೨). [ಸಂ.]

**ಅಶ್ಮಾತಕ** (ನಾ). ಒಂದು ವೃಕ್ಷ: ಅಶ್ಮಾತಕವೆಂಬ ವೃಕ್ಷದ ಯಡದ ಭಾಗದೊಳ್ (ಸೌಗಂಧಿ. ೪೩೧–೧೬). [ಸಂ.]

**ಅಶ್ಮಾರೋಪಣ** (ನಾ). ಮದುವೆಯಲ್ಲಿ ನಡಸುವ ಒಂದು ಕರ್ಮ; ವರನು ವಧುವಿನ ಬಲಗಾಲಿನ ಪಾದವನ್ನು ಹಿಡಿದು ಮೆಟ್ಟಕ್ಕಿಯ ಕಲ್ಲಿನ ಮೇಲೆ ಇಡುವ ಕರ್ಮ (ದಕ. ೬). [ಅಶ್ಮ + ಆರೋಪಣ]

**ಅಶ್ಮೀರ** (ನಾ). = ಅಶ್ಮರಿ (೬). [ಸಂ.]

**ಅಶ್ರ** (ನಾ). = ಅಸ್ರ ೨, ೩, ೪. [ಸಂ.]

**ಅಶ್ರದ್ಧೆ** (ನಾ). ಶ್ರದ್ಧೆಯಿಲ್ಲದಿರುವುದು; ಆಸಕ್ತಿಯಿಲ್ಲದಿರುವುದು; ಅಪನಂಬಿಕೆ: ತಮ್ಮ ಅಶ್ರದ್ಧೆಗೆ ಕಾರಣನಾದ ವ್ಯಕ್ತಿ ತಾನಿಲ್ಲದ ಹೊತ್ತಿನಲ್ಲಿ ಹೀಗೆ ಕಳ್ಳನಂತೆ ಬಂದುಹೋಗುತ್ತಿದ್ದಾನೆಂದು ಖಚಿತವಾದಾಗ ಶಾಸ್ತ್ರಿಗಳಿಗೆ ಇನ್ನಷ್ಟು ಅವನ ಮೇಲೆ ಹೇಸಿಕೆ ಹುಟ್ಟಿತು (ಹೊಸಕ್ಷಿ. ೧೬). [ಸಂ. ಅಶ್ರದ್ಧಾ]

**ಅಶ್ರಮ** (ಗು). ೧. ದಣಿವಿಲ್ಲದ. (ನಾ). ೨. ಶ್ರಮವಿಲ್ಲದಿರುವುದು; ಸೌಲಭ್ಯ; ನಿರಾಯಾಸ: ಅಂತು ನಾಗಪಾಶಮುಮನಶ್ರಮದೊಳ್ ಪಱಿದು (ಶಾಂತಿಪು. ೮–೫೧ ವ); ಅಶ್ರಮದಿಂ ಧರೆಯಂ ಸತ್ಯಾಶ್ರಯ ನಾಳ್ದಂ (ಕಇಅ. ೨–೨–೧೯; 1058). [ಸಂ.]

**ಅಶ್ರಾಂತ** (ಗು). ೧. ಶ್ರಮವಿಲ್ಲದ; ದಣಿವಿಲ್ಲದ. ೨. ನಿಲುವಿಲ್ಲದ; ಎಡೆಬಿಡದ: ಅಶ್ರಾಂತರಾಗದಿಂ ಸಂಭೋಗಸುಖದೊಳೋಲಾಡಿ (ಜಗವಿ. ೨–೭೫ ವ). [ಸಂ.]

**ಅಶ್ರಾಂತಂ** (ಅ). ಶ್ರಮವಿಲ್ಲದೆ; ದಣಿವಿಲ್ಲದೆ: ಅಶ್ರಾಂತಂ ಕಣ್ಗೊಪ್ಪಿದಂ ಮಂಜುಳಗುಣಗಣಮಾಣಿಕ್ಯಕೋಶಂ ಮಹೇಶಂ (ರಾಜಶೇ. ೧೪–೧೩೯). [ಸಂ.]

**ಅಶ್ರಾವ್ಯ** (ಗು). ೧. ಶ್ರಾವ್ಯವಲ್ಲದ; ಕೇಳಲು ಚೆನ್ನಾಗಿಲ್ಲದ: ಛಂದಸ್ಸು ಲಕ್ಷಣಮಲಂಕಾರ ಭಾವ ರಸಮೊಂದಿ ಕಳೆವೆತ್ತ ಸತ್ಕೃತಿಯುಕ್ತಮೊಂದುಮಿಲ್ಲದ ಕಾವ್ಯಮಶ್ರಾವ್ಯಮಹುದೆಂದಱಿಯದೆ (ಜೈಮಿಭಾ. ೧–೬). (ನಾ). ೨. [ನಾಟ್ಯ] ರೂಪಕದಲ್ಲಿ ಮಾತನಾಡುವ ಪಾತ್ರವಲ್ಲದೆ ಮತ್ತಾರೂ ಕೇಳುವುದಿಲ್ಲವೆಂದು ಸೂಚಿಸಿದ್ದು; ಮತ್ತಾರಿಗೂ ಕೇಳಿಸದ್ದು; ಸ್ವಗತ: "(ನಾಟ್ಯಧರ್ಮವನ್ನು ಅನುಸರಿಸಿ) ವಸ್ತುವಿನಲ್ಲಿ ಕೆಲವು ಭಾಗಗಳು 'ಶ್ರಾವ್ಯ'ವಾಗಿಯೂ ಮತ್ತೆ ಕೆಲವು ಭಾಗಗಳು 'ಅಶ್ರಾವ್ಯ'ವಾಗಿಯೂ ಇರುತ್ತವೆ. ಅವು ಯಾವುವೆಂದರೆ:– . . . ಸ್ವಗತಂ – ಮಾತನಾಡುವ ಪಾತ್ರವಲ್ಲದೆ ಮತ್ತಾರೂ ಕೇಳದ್ದು (ಅಶ್ರಾವ್ಯ)" (ಕೈಪಿಡಿ. ೨೦೭). [ಸಂ.]

**ಅಶ್ರಿ** (ನಾ). ೧. ಮೂಲೆ. ೨. ಏಣು; ಅಂಚು; ಕತ್ತಿ ಮುಂತಾದ ಆಯುಧದ ಅಲಗಿನ ಧಾರೆ: "ಅಣಿಃ; ಅಶ್ರಿಃ; ಕೋಟಿಃ; ಅಶ್ರಃ; ಕೋಣಃ – ಈ ೫ ಗೋಟು" (ಹಲಾಯು. ೧೨೦–೪೨). [ಸಂ.]

**ಅಶ್ರೀಕ** (ಗು). ಸಂಪತ್ತಿಲ್ಲದ; ಸೌಭಾಗ್ಯವಿಲ್ಲದ: ಲೋಕಾಲೋಕಾವಿತತವಿಲೋಕಂ ಜ್ಞಾನಂ ಸಮೂರ್ಜಿತಾವದ್ಯವಿದಶ್ರೀಕಂ ಚರಿತ್ರಮಱಿ ಪರಲೋಕಮುಮಿಾ ಲೋಕಮುಂ ತದಾಯತ್ತಂಗಳ್ (ಶಾಂತಿಪು. ೬–೪೭). [ಸಂ.]

**ಅಶ್ರು** (ನಾ). ಕಣ್ಣೀರು: ಅಶ್ರುವಂ ಪೇಱುವ ಕಣ್ಮಲರ್. . . ಇವಱಿಂದುದೊಂದು ಚೆಲ್ವೇಱಿರೆ ಭೋಗಿ ಭಾಮಿನಿಯರಾ ಮಡುವಿಂ ಪೊಱಮಟ್ಟ ರೆಚ್ಚಿಯಿಂ (ಜಗವಿ. ೩–೧೦೧); ಬನದ ತೊರೆ ಸೋರ್ದುದೆನೆ ಕಣ್ಮುಚ್ಚಿ ದೆವೆಗಳಿಂ ಸ್ರವಿಸಿದತ್ತಶ್ರು (ಶ್ರೀರಾಮಾ. ೧೬೬–೪೦೧). 'ಅಶ್ರುಕಣ' ಪರಾ. [ಸಂ.]

**ಅಶ್ರುಕಣ** (ನಾ). ಕಣ್ಣೀರಿನ ಹನಿ: ಸುರಿವ ನಿರಂಜನಾಶ್ರುಕಣದಿಂ ಕುಚದೊಳ್ ಪೊಸಮುತ್ತಿನಾರಮಂ. . . ನಿಯೋಜಿಪ (ಚಂದ್ರಪು. ೩–೫೪). [ಅಶ್ರು + ಕಣ೪]

**ಅಶ್ರುಜಲ** (ನಾ). ಕಣ್ಣೀರು: ಕಂಡಾಗಳಶ್ರುಜಲಂಗಳು ಸುರಿಯದಿದ್ದರೆ, ನುಡಿವಲ್ಲಿ ಗದ್ಗದಂಗಳು ಹೊಱಹೊಮ್ಮದಿದ್ದರೆ ಕೂಡಲ ಸಂಗಮದೇವರ ಭಕ್ತಿಗಿದು ಚಿಹ್ನ ಎನ್ನಲ್ಲಿವಿಲ್ಲವಾಗಿ ಅನು ಡಂಭಕ ಕಾಣರೇ (ಬಸವ. ೩೭೮). [ಅಶ್ರು + ಜಲ]

**ಅಶ್ರುತ** (ಗು). ಕಿವಿಯಿಂದ ಕೇಳದ; ಕೇಳಿಲ್ಲದ: ಜನಿಯಿಸುಗುಂ ದುರ್ಗತಿ ಬಂಧನಮೆಂಬೀ ದಿವ್ಯಭಾಷೆ ನಿನಗಶ್ರುತಮೇ (ಮಲ್ಲಿಪು. ೧೧–೬೯). (ನಾ). ೨. ವೇದವಿರುದ್ಧವಾದದ್ದು. [ಸಂ.]

**ಅಶ್ರುತಪೂರ್ವ** (ಗು). ಹಿಂದೆಂದೂ ಕೇಳಿಲ್ಲದ: ಆ ಮಹಿಯುತ್ಸವಮೆಂಬುದಸಾಮಾನ್ಯಮದೃಷ್ಟಪೂರ್ವಮಶ್ರುತಪೂರ್ವಂ (ಶಾಂತಿಪು. ೧೦–೧); ಈತನ ಮಾತು ಅಶ್ರುತಪೂರ್ವಮಿಾ ಚೋದ್ಯಮಂ ನೋಡುವಂ (ಪಂಚತಂ. ೧೭೧–೧೫). [ಸಂ.]

**ಅಶ್ರುತಪ್ರಕೃತಿಜನ** (ನಾ). ಶಾಸ್ತ್ರಜ್ಞಾನವಿಲ್ಲದ ಸಾಮಾನ್ಯ ಜನ: ಗುಣಮಿದು ದೋಷಮಿದೆಂಬೀ ಗಣಿದಮನೆತ್ತಱಿಗುಮಶ್ರುತಪ್ರಕೃ(ತಿ)ಜನಂ (ಕವಿರಾ. ೧–೮). [ಅಶ್ರುತ + ಪ್ರಕೃತಿ + ಜನ]

**ಅಶ್ರುಭರ** (ನಾ). ಕಣ್ಣೀರಿನ ಆಧಿಕ್ಯ; ಬಹಳವಾದ ಕಣ್ಣೀರು: ಶಕುಂತಳೆ ಪೋದಪಳೆಂದು ಕಂಠಮುಮ್ಮಳಿಸುವುದೊತ್ತುವಶ್ರುಭರದಿಂ ಜಡಮಾದುದು ದೃಷ್ಟಿ (ಶಾಕುಂತ. ೫೨–೨). [ಅಶ್ರು + ಭರ]

**ಅಶ್ರುರಸ** (ನಾ). ಕಣ್ಣೀರು: ಕಣ್ದಾವರೆಯೊಳಶ್ರುರಸಮುಗುವನ್ನೆಗಂ ರೋಮಹರ್ಷಂದಾಳ್ದು (ಶ್ರೀರಾಮಾ. ೧–೨). [ಅಶ್ರು + ರಸ]

**ಅಶ್ರುವಾರಿ** (ನಾ). ಕಣ್ಣೀರು: ಅಱಿಪಿದೊಡೆನ್ನ ಪೋಗನಿನಿಯಳ್ಗೆ ಮನಂ ಮಱುಕಕ್ಕೆ ನೀಳ್ದ ಕಣ್ಗೊಱಿದುಗುವಶ್ರುವಾರಿಗೆ ತೊದಲ್ನುಡಿ ಲಲ್ಲೆಗೆ ಪಕ್ಕುಗೊಟ್ಟು (ಪಂಪಭಾ. ೪–೧೨). [ಅಶ್ರು + ವಾರಿ]

**ಅಶ್ರುವೃಷ್ಟಿ** (ನಾ). ಕಣ್ಣೀರಿನ ಮಳೆ; ಕಣ್ಣೀರಿನ ವರ್ಷ: ಕಂಡವರು ಮಾಡಿದರು ಅಶ್ರುವೃಷ್ಟಿಯನು (ನಾದಲೀ. ೬೯–೧೮). [ಅಶ್ರು + ವೃಷ್ಟಿ]

**ಅಶ್ರುಸ್ನಾತ** (ಗು). ಕಣ್ಣೀರಿನಲ್ಲಿ ಸ್ನಾನಮಾಡಿದ; ಕಣ್ಣೀರಿಂದ ತೊಯ್ದ: ಸ್ತನಯುಗಮಶ್ರುಸ್ನಾತಂ (ಕಾದಂಪೂ. ೭೦). [ಅಶ್ರು + ಸ್ನಾತ]

**ಅಶ್ರುಸ್ರವೆ** (ನಾ). ಕಣ್ಣೀರು ಸುರಿಸುವವಳು: ಆ ಬಾಲಿಕೆ ಗದ್ಗದಕಂಠೆ ವಾಮಕರ ಪಲ್ಲವಾಂಗುಳಿ ನಖಾಕ್ಷಿಪ್ತಾಶ್ರುಸ್ರವೆ . . . ಬಿನ್ನವಿಕುಂ (ಶಾಂತಿಪು. ೬–೬೨ ವ). [ಸಂ. ಅಶ್ರುಸ್ರವಾ]

**ಅಶ್ಲಕ್ಷ್ಣ** (ಗು). ಮೃದುವಲ್ಲದ: ಅವಿಶಾಲಾಂಬರವಪ್ರಸನ್ನ ದಿವಸಸ್ಪಷ್ಟಾಧ್ವವಸ್ವಚ್ಛತೋಯವನುದ್ಯೋಗಜನೌಘವಸ್ತದವಸ್ಮೇರಾಬ್ಜವಶ್ಲಕ್ಷ್ಣ ಕೈರವಂ (ಜಗವಿ. ೪–೨೬). [ಸಂ.]

**ಅಶ್ಲಾಘೆ** (ನಾ). ನಿಂದೆ; ತೆಗಳಿಕೆ: ಪಿರಿಯಂ ಬ್ರಹ್ಮಾದಿ ದೇವರ್ಕಳಿನೆನೆಯುಮದೇಂ ವಿಷ್ಣುಗಶ್ಲಾಘೆಯಂ ಬಿತ್ತರಿಪೆಂ (ಜಗವಿ. ೧–೯೯). [ಸಂ. ಅಶ್ಲಾಘಾ]

**ಅಶ್ಲಾಘ್ಯ** (ಗು). ಶ್ಲಾಘ್ಯವಲ್ಲದ; ಪ್ರಶಂಸೆಗೆ ಯೋಗ್ಯವಲ್ಲದ; ಒಳ್ಳೆಯದಲ್ಲದ: ವಿಭುಗಪರಿಮಿತಾಳಾಪಮಶ್ಲಾಘ್ಯಮಲ್ತೇ (ಜಗವಿ. ೧–೬೬). [ಸಂ.]

**ಅಶ್ಲಿಷ್ಟ** (ಗು). (ಒಂದನ್ನೊಂದು) ಅಪ್ಪಿಕೊಳ್ಳದ; ಸೇರಿಲ್ಲದ: ಅಸ್ಫುರಿತಚಂದ್ರಾದಿತ್ಯವಶ್ಲಿಷ್ಟಕೋಕವಯೂನಾಧ್ವಗವಸ್ವರಾನ್ನಭೃತವಂದೊಪ್ಪಿರ್ದುದಭ್ರಾಗಮಂ (ಜಗವಿ. ೪–೨೬). [ಸಂ.]

**ಅಶ್ಲೀಲ** (ಗು). ೧. ಅಸಭ್ಯವಾದ; ಗ್ರಾಮ್ಯವಾದ. ೨. ಅಮಂಗಳವಾದ. (ನಾ). ೩. [ಕಾವ್ಯಮೀ] ಪದದೋಷಗಳಲ್ಲಿ ಒಂದು: "ಅಶ್ಲೀಲ = ಮನಸ್ಸು ಹಿಂದೆಗೆಯುವಂತೆ ಮಾಡುವುದು. ಇದು ಮೂರು ವಿಧ:—(೧) ನಾಚಿಕೆಗೊಳಿಸುವುದರಿಂದ, (೨) ಜುಗುಪ್ಸೆ ಅಥವಾ ಅಸಹ್ಯವನ್ನುಂಟುಮಾಡುವುದರಿಂದ, (೩) ಅಮಂಗಲ ಅಥವಾ ಕೆಟ್ಟದ್ದನ್ನು ಸೂಚಿಸುವುದರಿಂದ" (ಕೈಪಿಡಿ. ೨೨೬). [ಸಂ.]

**ಅಶ್ವ** (ನಾ). ೧. ಕುದುರೆ. ೨. ಪುರುಷಜಾತಿಯಲ್ಲಿ ಒಂದು: ಶಶವೃಷ ಅಶ್ವರೆಂದು ಮೂರು ಪುರುಷಜಾತಿಯಿರುವುದು (ಸೌಗಂಧಿ. ೪೯೩–೬). ೩. ಒಂದು ಔಷಧದ್ರವ್ಯ: "ಕಚ್ಛಃ ಕಾಂತಲಕಃ ನಂದಿವೃಕ್ಷಃ ... ಈ ಆಱು ಅಶ್ವವೆಂಬ ಗಂಧದ್ರವ್ಯ" (ನಾಚಿರಾ. ೧೧೧). [ಸಂ.]

**ಅಶ್ವಕರ್ಣ** (ನಾ). = ಅಶ್ವಕರ್ಣಕ. [ಸಂ.]

**ಅಶ್ವಕರ್ಣಕ** (ನಾ). ಮತ್ತೀಮರ. [ಸಂ.]

**ಅಶ್ವಗಂಧ** (ನಾ). = ಅಶ್ವಗಂಧಿ: "ಅಂಗುರಮಶ್ವಗಂಧಮಕ್ಕುಂ" (ಮಂಗರಾ. ೩೯–೨೬). [ಸಂ. ಅಶ್ವಗಂಧಾ]

**ಅಶ್ವಗಂಧಿ** (ನಾ). ಹಿರೀಮದ್ದಿನ ಗಿಡ; ಅಂಗುರದ ಗಿಡ, —ಬೇರು (ವೈಔಗಿ. ೭೮–೧೬೧೧). [ಸಂ.]

**ಅಶ್ವಗಂಧೆ** (ನಾ). = ಅಶ್ವಗಂಧಿ (ಕ). [ಸಂ. ಅಶ್ವಗಂಧಾ]

**ಅಶ್ವಗತಿ** (ನಾ). ಕುದುರೆಯ ನಡಗೆ, —ಓಟ: "ತರುಭೇದಂ ಭೃತಶಾಖಮಶ್ವಗತಿಯುಂ ತೂರ್ಣಂ ಮಖಾಂತ್ಯಂ ಛದಂ ನಿರುತಂ ವಾಜಿಯೆನಿಕ್ಕುಂ" (ನಾನಾರ. ೧೨೫). [ಅಶ್ವ + ಗತಿ]

**ಅಶ್ವಗ್ರೀವ** (ಗು). ೧. ಕುದುರೆಯ ಕೊರಳುಳ್ಳ. (ನಾ). ೨. ವಿಷ್ಣುವಿನ ಅವತಾರವಾದ ಹಯಗ್ರೀವಮೂರ್ತಿ. ೩. ಒಬ್ಬ ರಾಕ್ಷಸನ ಹೆಸರು. ೪. [ಜೈನ] ಒಬ್ಬ ವಿದ್ಯಾಧರನ ಹೆಸರು: ಅಶ್ವಗ್ರೀವನಭಶ್ಚರನಲ್ತೆ ಪುರಾತನವೈರದಿನಟಿದನಾ ತ್ರಿಪೃಷ್ಟನ ಕೈಯೊಳ್ (ಶಾಂತಿಪು. ೬–೬೪). 'ಹಯಗ್ರೀವ' ಪರಾ. [ಸಂ. (ಅಶ್ವ + ಗ್ರೀವಾ + –)]

**ಅಶ್ವಜಿತ** (ನಾ). ಕುದುರೆಗಳನ್ನು ಗೆಲ್ಲುವವನು: ಸುತ್ರಾಮಜಿತನು, ನೃಜಿತನು, ಉರ್ವರಾಜಿತನು, ಅಶ್ವಜಿತನು, ಗೋಜಿತನು, ಸ್ವರ್ಜಿತನು ... ಕೂಡಲಸಂಗಯ್ಯನು (ಬಸವ. ೯೫೪). [ಸಂ. ಅಶ್ವಜಿತ್]

**ಅಶ್ವತರ** (ನಾ). ೧. ಹೇಸರಕತ್ತೆ: ತುರಗಗತಿಯನಶ್ವತರ ಪರಿಸಲಕ್ಕುಮೇ (ವೆಂಕಾರಾ. ೬–೬೮–೧). ೨. ಶಿವನ ಆಸ್ಥಾನದ ಒಬ್ಬ ಗಾಯಕ: ಅಡಱತಹಿನಿಕರವೋಲೈಪಂತೆ ... ಸಂಗೀತಮಂ ಪಾಡಿ ಕಂಬಳಾಶ್ವತರರ ಕರ್ಣಕುಂಡಲಧರನ ನಡೆಗೆ ತಡೆಯಿಟ್ಟಳು (ಭಿಕ್ಷಾಚ. ೨–೪೧). [ಸಂ.]

**ಅಶ್ವತರಿ** (ನಾ). ಹೆಣ್ಣು ಹೇಸರಕತ್ತೆ. [ಸಂ. ಅಶ್ವತರೀ]

**ಅಶ್ವತ್ಥ** (ನಾ). ಅರಳೀಮರ: "ತೂದಃ, ಯೂಪಃ, ಕ್ರಮುಕಃ, ಬ್ರಹ್ಮಣ್ಯಃ, ಬ್ರಹ್ಮದಾರುಃ, ತೂಲಂ—ಈ ೬ ಅಶ್ವತ್ಥಾಕಾರಮಪ್ಪ ಬ್ರಹ್ಮವೃಕ್ಷಂ" (ನಾಚಿರಾ. ೧೧೭); ಪಾಲಾಶ, ಅಶ್ವತ್ಥ, ಶಮಿಾ, ಔದುಂಬರಾದಿ ಸಮಿತ್ಪಾತ್ರ ಪರ್ಣಾದಿ ಪದಾರ್ಥಂಗಳಿಂ (ವಿವೇಕ. ೧೩೫). [ಸಂ.]

**ಅಶ್ವತ್ಥಾಮ** (ನಾ). ೧. ಕುದುರೆಯ ಶಕ್ತಿ, —ವೇಗ. ೨. ದ್ರೋಣಾಚಾರ್ಯರ ಮಗ: ೧, ೨. ದಿವಿಜಾಶ್ವತ್ಥಾಮದೊಳೀ ಭುವನಂಗಳ್ ನಡುಗೆ ಶಿಶು ಸರಂಗೆಯ್ದೊಡೆ ನಕ್ಕವಯವದೆ ಕುಂಭಸಂಭವನಿವನಶ್ವತ್ಥಾಮನೆಂದು ಪೆಸರಿಡೆ ನೆಗೞ್ದಂ (ಪಂಪಭಾ. ೨–೪೪). ೩. ಭಾರತಯುದ್ಧದಲ್ಲಿ ಭೀಮನಿಂದ ಹತವಾದ ಒಂದು ಆನೆಯ ಹೆಸರು: ಸಾಮಜಮಶ್ವತ್ಥಾಮಂ ನಾಮದಿನೊಂದಱಿದೊಡೆ (ಪಂಪಭಾ. ೧೨–೨೬). [ಸಂ. ಅಶ್ವತ್ಥಾಮನ್]

**ಅಶ್ವಪತಿ** (ನಾ). ೧. ಕುದುರೆಗಳ ಒಡೆಯ. ೨. ಸಾವಿತ್ರಿಯ ತಂದೆಯಾದ ಮದ್ರದೇಶದ ರಾಜನ ಹೆಸರು. ೩. ಹದಿನೆಂಟು ಬಗೆಯ ವರಹದ ನಾಣ್ಯಗಳಲ್ಲಿ ಒಂದು: ೧೩. ಅಶ್ವಪತಿ (ಕಭಾಗ. ೨೮೦). [ಅಶ್ವ + ಪತಿ]

**ಅಶ್ವಪರೀಕ್ಷೆ** (ನಾ). ಕುದುರೆಯನ್ನು ಪರೀಕ್ಷೆಮಾಡುವುದು: ರತ್ನಪರೀಕ್ಷೆ ಗಜಾಶ್ವಪರೀಕ್ಷೆ ಪ್ರಯುಕ್ತಿಸಿ ಬಾಹ್ಯವಿಜ್ಞಾನ ರತ್ನತ್ರಯರೂಪನಾತ್ಮನೆಂದಱಿವುದು ನೂತ್ನಾಂತರಂಗ ವಿಜ್ಞಾನ (ಭರಚ. ೨–೧೯). [ಅಶ್ವ + ಪರೀಕ್ಷೆ]

**ಅಶ್ವಪಾಲ** (ನಾ). ೧. ಕುದುರೆಯನ್ನು ಪಾಲಿಸುವವನು; ಕುದುರೆಯನ್ನು ಮೇಯಿಸಿ ಮೇಲ್ವಿಚಾರಣೆ ನೋಡಿಕೊಳ್ಳುವವನು. ೨. ಅಶ್ವಪತಿಯೆಂಬ ರಾಜ. (ಕ). [ಸಂ.]

**ಅಶ್ವಪ್ರಾಸ, ಅಶ್ವಪ್ರಾಸು** (ನಾ). [ಛಂದ] ಪಾದದಲ್ಲಿ ಎರಡನೆಯ ಅಕ್ಷರ ಸಜಾತೀಯ ಸಂಯುಕ್ತಾಕ್ಷರವಾಗಿರುವ ಪ್ರಾಸ. **ಅಶ್ವಪ್ರಾಸು**: ಮಲ್ಲಿಗೆ ಮಾಮರದೆಳದಳಿರಲ್ಲಿ ಮುಗುಳ್ಗಡರೆ ... ಇರ್ಕುಂ–ಇದು ಅಶ್ವಪ್ರಾಸು (ಛಂದೋಂಬು. ೬. ೪೯). [ಅಶ್ವ + ಪ್ರಾಸ]

**ಅಶ್ವಪ್ರಾಸು** 'ಅಶ್ವಪ್ರಾಸ' ನೋ.

**ಅಶ್ವಪ್ರೇಮಿ** (ನಾ). ಕುದುರೆಗಳಲ್ಲಿ ಪ್ರೀತಿಯುಳ್ಳವನು, —ಆಸಕ್ತಿಯುಳ್ಳವನು: ಅಶ್ವಪ್ರೇಮಿ (Hippophil(e). ಇಂಕನಿ). [ಸಂ. ಅಶ್ವಪ್ರೇಮಿನ್]

**ಅಶ್ವಬಲ** (ನಾ). ೧. = ಅಶ್ವಶಕ್ತಿ. ೨. ಕುದುರೆಯ ಸೈನ್ಯ; ರಾವುತರ ಸೈನ್ಯ: ಆಳ್ವಲಮುಳ್ಳಡಶ್ವಬಲಮಿಲ್ಲ ಭಟಾಶ್ವಬಲಂಗಳುಳ್ಳಡಂತೋೞ್ಬಲಮಿಲ್ಲ (ಎಕ. VII, ಶಿಕಾರಿ. ೧೩೬–೨೬; 1068). [ಅಶ್ವ + ಬಲ್ಲ]

**ಅಶ್ವಮಹಿಷನ್ಯಾಯ** (ನಾ). ಕುದುರೆಗೂ ಕೋಣನಿಗೂ ಪರಸ್ಪರ ಇರುವಂತೆ ಸ್ವಾಭಾವಿಕವಾದ ಹಗೆತನ, —ವೈರ: ಆಯೆಡೆಗೆ ನೀರುಣಲ್ಬರೆ ಜಾಯಿಲಮರಸನ ಪಸಾಯಿತಂ ಕೋಡೆರಡುಂ ಕೋಯೆ ಸೆಳೆದಶ್ವಮಹಿಷನ್ಯಾಯಂ ನಿಲೆ ಕೊಂದುದು (ಯಶೋಚ. ೩–೬೭). ℙ ಇವೆರಡನ್ನೂ ಒಂದೆಡೆ ಕಟ್ಟಿದ್ದರೂ, ಇಲ್ಲವೆ ಒಂದರ ಎಂಜಲನ್ನು ಒಂದು ತಿಂದರೂ ಯಾವುದಾದರೂ ಒಂದು ಸಾಯುವುದೆಂದು ಅನುಭವಶಾಲಿಗಳು ಹೇಳುವರು. [ಅಶ್ವ + ಮಹಿಷ + ನ್ಯಾಯ]

**ಅಶ್ವಮಾರ** (ನಾ). ಕಣಿಗಿಲೆಯ ಗಿಡ: "ಕರವೀರಮಶ್ವಮಾರಂ ಕಣಗಿಲೆನಿಸಿಕ್ಕು" (ಮಂಗರಾ. ೩೪–೧೧). 'ಹಯಮಾರಕ' ಪರಾ. [ಸಂ.]

**ಅಶ್ವಮುಖ** (ನಾ). ೧. ಕುದುರೆಯ ಮುಖವುಳ್ಳವನು; ಕಿನ್ನರ. ೨. ಹಯಗ್ರೀವಮೂರ್ತಿ. ೩. ಹಯಗ್ರೀವನೆಂಬ ರಾಕ್ಷಸ. [ಅಶ್ವ + ಮುಖ]

**ಅಶ್ವಮೇಧ** (ನಾ). ಒಂದು ಯಜ್ಞ; ಕುದುರೆಯನ್ನು ಪಶುವನ್ನಾಗಿ ಬಲಿಕೊಡುವ ಒಂದು ಯಾಗ: ಮರುತನೆಂಬಾ ಯುಗದ ನೃಪನಶ್ವಮೇಧಮಂ ಮಾಡಿ ಬಹುಕನಕಮಂ ಭೂಸುರರ್ಗೆ ಈಯಲ್ (ಜೈಮಿಭಾ. ೨-೩೨). [ಸಂ.]

**ಅಶ್ವಮೇಧಯಾಗ** (ನಾ). = ಅಶ್ವಮೇಧ: ಅಶ್ವಮೇಧಯಾಗವಂತಿರಲಿ ಅಜಪೆಯುಪದೇಶಸಮಾಧಿಯಂತಿರಲಿ (ಬಸವ. ೬೧೨); ಯುಧಿಷ್ಠಿರನು ... ಅಶ್ವಮೇಧಯಾಗವನ್ನು ಮಾಡುತ್ತಾನೆ (ಭಾರಸ. ೧೦೦). [ಅಶ್ವಮೇಧ + ಯಾಗ]

**ಅಶ್ವಮೇಧೀಯ** (ಗು). ಅಶ್ವಮೇಧ ಯಾಗಕ್ಕೆ ಸಂಬಂಧಿಸಿದ. [ಸಂ.]

**ಅಶ್ವಯಜ್ಞ** (ನಾ). = ಅಶ್ವಮೇಧ: ವಾತಾಪಿಪುರವರೇಶ್ವರ[ನಶ್ವ]ಯಜ್ಞದೀಕ್ಷಿತಂ ಪೊಲಿಕೇಸಿವಲ್ಲಭಂ (ಸೌಇಇ. XX, ೧೯-೧೦; 1015). [ಅಶ್ವ + ಯಜ್ಞ]

**ಅಶ್ವರಥ** (ನಾ). ಕುದುರೆಗಳನ್ನು ಹೂಡಿದ ರಥ (ದಕ. ೬). [ಅಶ್ವ + ರಥ]

**ಅಶ್ವರಾಜ** (ನಾ). ೧. ಶ್ರೇಷ್ಠವಾದ ಕುದುರೆ; ಪಟ್ಟದ ಕುದುರೆ (ದಕ. ೬). ೨. ಅಶ್ವಪತಿಯೆಂಬ ಮದ್ರದೇಶದ ರಾಜ. [ಅಶ್ವ + ರಾಜ]

**ಅಶ್ವಲಕ್ಷಣ** (ನಾ). ಕುದುರೆಯ ಲಕ್ಷಣ; ಕುದುರೆಯ ಸ್ವರೂಪವನ್ನು ತಿಳಿಸತಕ್ಕ ಕುರುಹು: ನೀನಶ್ವಲಕ್ಷಣದ ಹೊಲಬ ಬಲ್ಲೈ (ತೊರರಾ. ೩-೨-೨೦). [ಅಶ್ವ + ಲಕ್ಷಣ]

**ಅಶ್ವಲಕ್ಷ್ಮಿ** (ನಾ). ಕುದುರೆಗಳ ಸಂಪತ್ತು; ಅಶ್ವರೂಪವಾದ ಐಶ್ವರ್ಯ; ಉತ್ತಮವಾದ ಕುದುರೆಗಳನ್ನು ಹೆಚ್ಚಾಗಿ ಹೊಂದಿರುವ ಭಾಗ್ಯ: ಆನೆ ಕಡಿಯುವೆನೇ ಗಜಲಕ್ಷ್ಮಿ; ಕುದುರೆ ಕಡಿಯುವೆನೇ ಅಶ್ವಲಕ್ಷ್ಮಿ; ಇನ್ನು ಯಾರನ್ನು ಕಡಿಯಲಿ ಅಂದರೆ ಕಡಿಯಲೆ ಬೋಳು ಹಾರುವನ (ಗಾದೆ). [ಸಂ. ಅಶ್ವಲಕ್ಷ್ಮೀ (ಅಶ್ವ + ಲಕ್ಷ್ಮೀ)]

**ಅಶ್ವವೈದ್ಯ** (ನಾ). ೧. ಕುದುರೆಗಳ ಚಿಕಿತ್ಸೆ. ೨. ಕುದುರೆಗಳಿಗೆ ಚಿಕಿತ್ಸೆ ಮಾಡುವ ವೈದ್ಯ. 'ಗೋವೈದ್ಯ' ಪರಾ. [ಅಶ್ವ + ವೈದ್ಯ]

**ಅಶ್ವಶಕ್ತಿ** (ನಾ). ಕುದುರೆಯ ಶಕ್ತಿ; ಕುದುರೆಯ ಬಲದಷ್ಟು ಬಲ: ನಮ್ಮ ಭೂಮಿಯ ಮೇಲೆ ಬೀಳುವ ಸೂರ್ಯನ ಶಕ್ತಿಯನ್ನು ನಮ್ಮ ಜನಸಂಖ್ಯೆಯಿಂದ ವಿಭಾಗಿಸುವುದಾದರೆ ಪ್ರತಿಯೊಬ್ಬನ ಪಾಲಿಗೆ ೧,೬೦,೦೦೦ ಅಶ್ವಶಕ್ತಿಯು ದೊರೆಯುತ್ತದೆ (ಬಾಲಪ್ರ. I, ೬೪). [ಅಶ್ವ + ಶಕ್ತಿ]

**ಅಶ್ವಶಾಲೆ** (ನಾ). ಕುದುರೆಯ ಲಾಯ. [ಅಶ್ವ + ಶಾಲೆ]

**ಅಶ್ವಶಾಸ್ತ್ರ** (ನಾ). ಕುದುರೆಗಳ ಶಕ್ತಿ, ಸ್ವಭಾವ ಮುಂತಾದ ವಿಷಯಗಳನ್ನು ವಿವರಿಸುವ ಶಾಸ್ತ್ರ. [ಅಶ್ವ + ಶಾಸ್ತ್ರ]

**ಅಶ್ವಶಿಕ್ಷಕ** (ನಾ). ಕುದುರೆಗಳನ್ನು ತರಪೇತುಮಾಡುವವನು; ಕುದುರೆಗಳನ್ನು ಪಳಗಿಸುವವನು. [ಅಶ್ವ + ಶಿಕ್ಷಕ]

**ಅಶ್ವಶಿಕ್ಷೆ** (ನಾ). ಕುದುರೆಗಳನ್ನು ತರಪೇತುಮಾಡುವುದು: ಅರಿಎಡೆ ಹಸ್ತಿಶಿಕ್ಷಣ ವಿಚಕ್ಷಣದಿಂದರೆ ಅಶ್ವಶಿಕ್ಷೆಯಿಂದ ... ಪುರಬಾಹಿರಮೊಪ್ಪಿ ತೋಱುಗುಂ (ಕಾವ್ಯಾವ. ೫೧). [ಅಶ್ವ + ಶಿಕ್ಷೆ]

**ಅಶ್ವಸ್ತನ** (ನಾ). ಮಾರನೆಯ ದಿನದ ಊಟಕ್ಕೆ ಇಟ್ಟುಕೊಳ್ಳದವನು; ನಾಳೆಗೆಂದು ಇಡದವನು: ಸಂಗ್ರಹಕಾರರನ್ನು ಕುಶೂಲಧಾನ್ಯರೆಂದೂ ಕುಂಭೀಧಾನ್ಯರೆಂದೂ, ತ್ರ್ಯಾಹಿಕರೆಂದೂ, ಅಶ್ವಸ್ತನರೆಂದೂ ವಿಂಗಡಿಸಿದ್ದಾರೆ ... ನಾಳೆಗೂ ಸಹ ಇಡದಹಾಗೆ ಆಯಾ ದಿವಸಕ್ಕೆ ತಕ್ಕಷ್ಟು ಇರುವವನು ಅಶ್ವಸ್ತನನು (ಅಶ್ವಸ್ತನಿಕನು) (ಆರ್ಯಧ. ೮೭). [ಸಂ.]

**ಅಶ್ವಹೃದಯ** (ನಾ). ೧. ಕುದುರೆಯ ಇಂಗಿತ, —ಸ್ವಭಾವ: ನಳನು ಬಲ್ಲವನಶ್ವಹೃದಯವನಿಳೆಯೊಳ್ (ತೊರರಾ. ೩-೨-೨೦); ಆ ನರೇಂದ್ರಂಗಶ್ವಹೃದಯವ ತಾನಱುಹಿ ಆತನಲಿ ಪಡೆದನು ಸಾನುರಾಗದಿ ಭೂರುಹದ ಹೃದಯವನು ನಿಮಿಷದಲಿ (ನಳಚ. ೮-೩೭). ೨. ಅಶ್ವಶಾಸ್ತ್ರ; ಕುದುರೆ ಸವಾರಿಯಲ್ಲಿ ನೈಪುಣ್ಯ. [ಅಶ್ವ + ಹೃದಯ]

**ಅಶ್ವಾರೂಢ** (ಗು). ಕುದುರೆಯನ್ನು ಏರಿದ; ಕುದುರೆಯನ್ನು ಹತ್ತಿದ: ಮಹಾಪುರುಷನೊಬ್ಬನು ಅಶ್ವಾರೂಢನಾಗಿ ವಿಷ್ಣುಪುರದಿಂದ ಹೊರಟು ಮಂದಾರಣ್ಯದ ಮಾರ್ಗದಲ್ಲಿ ಏಕಾಂಗಿಯಾಗಿ ಪ್ರಯಾಣಮಾಡುತ್ತಿದ್ದನು (ದುರ್ಗೇಶ. ೧). [ಅಶ್ವ + ಆರೂಢ]

**ಅಶ್ವಾರೋಹ** (ನಾ). ೧. ಕುದುರೆಯನ್ನು ಏರುವುದು. ೨. ಕುದುರೆಯ ಸವಾರ. [ಅಶ್ವ + ಆರೋಹ]

**ಅಶ್ವಾರೋಹಕ** (ನಾ). = ಅಶ್ವಾರೋಹ ೨: ದುರ್ಧರಾಶ್ವಾರೋಹಕ ತುರಂಗಬಲಾವಗಾಢಮುಂ ... ಅಪ್ಪ ನಿಜ (ಬ)ಲಂಬೆರಸು (ಆದಿಪು. ೧೪-೯೩ ವ). [ಅಶ್ವ + ಆರೋಹಕ]

**ಅಶ್ವಾರೋಹಣ** (ನಾ). = ಅಶ್ವಾರೋಹ ೧. [ಅಶ್ವ + ಆರೋಹಣ]

**ಅಶ್ವಾರೋಹಿ** (ನಾ). = ಅಶ್ವಾರೋಹ ೨: ಅಶ್ವಾರೋಹಿಗಳ ತಂಡವೊಂದು ಅರಮನೆಯ ಕಡೆಗೆ ಧಾವಿಸುತ್ತಿತ್ತು (ರೂಢಿ). [ಸಂ. ಅಶ್ವಾರೋಹಿನ್]

**ಅಶ್ವಾಸ್ಯ** (ನಾ). = ಅಶ್ವಮುಖ ೧: "ಕಿನ್ನರರು ಕಿಂಪುರುಷರಶ್ವಾಸ್ಯರೆನೆ ಮಯೂರರ್ಗೆ ನಿಜನಾಮುಮುಕ್ಕುಂ" (ಮಂಗರಾ. ೧೭-೧೭). [ಅಶ್ವ + ಅಸ್ಯ]

**ಅಶ್ವಿನಿ** (ನಾ). ೧. ಅಶ್ವಿನೀದೇವತೆಗಳ ತಾಯಿ; ಒಬ್ಬ ದೇವತೆ. ೨. ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಮೊದಲನೆಯದು. ೩. ಪರಿಮಾಣಕ್ಕನುಗುಣವಾಗಿ ಮೂರು ಬಗೆಯಾದ ಹೆಂಗಸರಲ್ಲಿ ಒಬ್ಬಳು: ಹರಿಣಿ ಅಶ್ವಿನಿ ಇಭಾಯಿತೆಯರೆಂಬ ತ್ರಿವಿಧ ಪರಿಮಾಣ ಪ್ರಮದೆಯರಿಂ (ವಿವೇಕ. ೨೨೯).

ಅಶ್ವಿನೀಕುಮಾರರು = ಅಶ್ವಿನೀದೇವತೆಯ ಅವಳಿಮಕ್ಕಳು. **ಅಶ್ವಿನೀದೇವತೆಗಳು** = ಅಶ್ವಿನೀಕುಮಾರರು; ದೇವಲೋಕದ ವೈದ್ಯರು. **ಅಶ್ವಿನೀಸುತರ್** = ಅಶ್ವಿನೀಕುಮಾರರು. [ಸಂ. ಅಶ್ವಿನೀ]

**ಅಶ್ವೀಯ** (ನಾ). ಕುದುರೆಗಳ ಗುಂಪು: ಅಶ್ವೀಯಬಹಳಮುಂ ಹಾಸ್ತಿಕಸಾಧನಮುಮಪ್ಪ ತಮ್ಮ ಬಲಮನೊಂದು ಮಾಡಿ (ಆದಿಪು. ೧೩-೫೬ ವ); ನಡೆದುದು ವಿತತಾಶ್ವೀಯಮುರ್ವೀಶ್ವರೀಯಂ (ಚಂದ್ರಪು. ೧೦-೨೨). [ಸಂ.]

**ಅಶ್ವೆ** (ನಾ). ಹೆಣ್ಣುಕುದುರೆ [ಸಂ. ಅಶ್ವಾ]

**ಅಷಡಕ್ಷೀಣ** (ನಾ). ೧. ಆರು ಕಣ್ಣುಗಳಿಗೆ ಕಾಣಲಾಗದ್ದು – ಎಂದರೆ ಇಬ್ಬರಿಗೆ ಮಾತ್ರ ಗೋಚರವಾದದ್ದು; ಗೂಢ; ರಹಸ್ಯ. ೨. (ಆಲಂ) ಗಂಭೀರ. ೧, ೨: ಬುಧನನ್ನಿಳಾವರಂ ವಾರಿಧಿಯಂತೆ ವಿಶಾಲ ವಿಲಸದಷಡಕ್ಷೀಣಂ ಮಧುಸಖನಂತಸಮಾಸ್ತ್ರಂ ಸುಧಾಂಶುಧರನಂತು ಮಾಧವಂ ಬಲ್ಲಾಳಂ (ಎಕ. V, ಅರಸೀ. ೭೭-೧೩; 1219). [ಸಂ.]

**ಅಷಡ್ಡಾಳ** 'ಅಸಡ್ಡಾಳ' ನೋ.

**ಅಷಡ್ಡಾಳ** 'ಅಸಡ್ಡಾಳ' ನೋ.

**ಅಷರಫಿ** (ನಾ). ಸುಮಾರು ಹದಿನಾರು ರೂಪಾಯಿಗಳಷ್ಟು ಬೆಲೆಯಿದ್ದ ಒಂದು ಚಿನ್ನದ ನಾಣ್ಯ; ಮೊಹರು. [← ಹಿಂ. ಅಷರ್ಫೀ]

**ಅಷರಫುಲ್**, ಅಷರಾಫ್ (ನಾ). ಒಳ್ಳೆಯವರಲ್ಲಿ ಒಳ್ಳೆಯವನು ; ಒಂದು ಬಿರುದು (ಸರದಾರ್ ಎಂಬಂತೆ). **ಅಷರಾಫ್** : ಅಷರು ಫುಲ್, ಅಷರಾಫ್, ಗವರ್‌ನರ್ ಜನರಲ್ ಸಾಹೇಬ್ ಬಹಾದ್ದರ್ (ರಾಜೇಂದ್ರ. ೧೨೭).

[← ಅರ. ಹಿಂ. ಅಷ್‌ರಾಫ್ = ಶ್ರೇಷ್ಠ, ಗೌರವಾನ್ವಿತ, ಸದ್ಗೃಹಸ್ಥ, ಸತ್ಕುಲಪ್ರಸೂತ]

**ಅಷರಾಫ್** 'ಅಷರಫುಲ್' ನೋ.

**ಅಷಾಢ** (ನಾ). ೧. = ಆಷಾಢಮಾಸ. ೨. ಬ್ರಹ್ಮಚಾರಿ ಅಥವಾ ಯತಿಯು ಕೈಯಲ್ಲಿ ಹಿಡಿಯುವ ಮುತ್ತುಗದ ದಂಡ. ೩. ಪೂರ್ವಾಷಾಢ ಅಥವಾ ಉತ್ತರಾಷಾಢ ನಕ್ಷತ್ರ. **೨, ೩** : ವಳಯೀಭೂತ ತಮಸ್ತಮಾಳಗಹನಂ ಸಾಷಾಢ ಸಪ್ತರ್ಷಿಸಂಕುಳಸಂಪೂತಮರುಂಧತೀಸ್ಥಿತಿನುತಂ ಮೂಲಾನ್ವಿತಂ ವ್ಯೋಮಮಂಡಳಮಾಯ್ತಾಶ್ರಮಂ (ಕಾದಂಪೂ. ೨೮೩). ೪. ಪೂರ್ವಾಷಾಢ ಅಥವಾ ಉತ್ತರಾಷಾಢ ನಕ್ಷತ್ರದಲ್ಲಿ ಹುಟ್ಟಿದವನು. ೫. ಮಲಯಪರ್ವತ. 'ಆಷಾಢ' ಪರಾ. [ಸಂ. ಅಷಾಢ, ಆಷಾಢಾ]

**ಅಷ್ಟ** (ನಾ). ಎಂಟು : ನಗಮಷ್ಟಂ ನವಮರ್ಕದಿಙ್ಮಮುದಿನಾಂಭೋರಾಶಿ (ಕವಿಜ. I, ೧೨೩); ಏಕ, ದ್ವಿ, ತ್ರಿ, ಚತುರ್, ಪಂಚ, ಷಟ್, ಸಪ್ತ, ಅಷ್ಟ, ನವ, ದಶ – ಎಂಬಿವು ಸಹಜದಿಂ ಲಿಂಗಮಾಗವು (ಶಮದ. ೮೨ ವೃತ್ತಿ).

[ಸಂ. ಅಷ್ಟನ್]

**ಅಷ್ಟಋದ್ಧಿ** (ನಾ). [ಜೈನ] ಬುದ್ಧಿಋದ್ಧಿ, ಕ್ರಿಯಾಋದ್ಧಿ, ವಿಕ್ರಿಯಾಋದ್ಧಿ, ತಪೋಋದ್ಧಿ, ಬಲಋದ್ಧಿ, ಔಷಧಋದ್ಧಿ, ರಸಋದ್ಧಿ, ಅಕ್ಷೀಣಋದ್ಧಿ ಎಂಬ ಎಂಟು ಬಗೆಯ ಋದ್ಧಿಗಳು : ಏಂ ಸಮನಿಸಿದುದೊ ಸನ್ನುತಮತಿಗಷ್ಟಋದ್ಧಿಗಳ್ ಕ್ರಮದಿಂದಂ (ಚಂದ್ರಪು. ೧೪–೩೦). [ಅಷ್ಟ + ಋದ್ಧಿ]

**ಅಷ್ಟಕ** (ನಾ). ೧. ಎಂಟು ಭಾಗಗಳುಳ್ಳದ್ದು. ೨. ಪಾಣಿನಿಯ ವ್ಯಾಕರಣಸೂತ್ರಗಳ ಎಂಟು ಅಧ್ಯಾಯಗಳು. ೩. ಋಗ್ವೇದದ ಎಂಟು ವಿಭಾಗಗಳಲ್ಲಿ ಒಂದು. ೪. ಎಂಟು ಪದ್ಯ ಅಥವಾ ಶ್ಲೋಕಗಳನ್ನುಳ್ಳ ಕವಿತಾರಚನೆ. ಉದಾ : ಗಂಗಾಷ್ಟಕ, ಕೃಷ್ಣಾಷ್ಟಕ, ಅನ್ನಪೂರ್ಣಾಷ್ಟಕ. ೫. ಎಂಟು ವಸ್ತುಗಳ ಸಮುದಾಯ. [ಸಂ.]

**ಅಷ್ಟಕರಿ** (ನಾ). ಎಂಟು ಆನೆಗಳು ; ಅಷ್ಟದಿಗ್ಗಜಗಳು. [ಅಷ್ಟ+ಕರಿ]

**ಅಷ್ಟಕರ್ತೃತ್ವ** (ನಾ). [ದ್ವೈತ] ಎಂಟು ಕೆಲಸಗಳನ್ನು ಮಾಡುವ ಅಧಿಕಾರ ; ಎಂಟು ಬಗೆಯಾದ ಕರ್ತೃತ್ವ: ಅಷ್ಟಕರ್ತೃತ್ವ – ಸೃಷ್ಟಿ, ಸ್ಥಿತಿಯೆಂದರೆ ರಕ್ಷಣೆ, ನಾಶ, (ಪ್ರಳಯ) ಮತ್ತು ಉಪಲಕ್ಷಣದಿಂದ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಂಬ ಇವು ಐದನ್ನೂ ಸೇರಿಸಿಕೊಂಡು ಸೃಷ್ಟ್ಯಾದಿ ಎಂಟು ವಿಧ ಕರ್ತೃತ್ವವೂ ಶ್ರೀ ಪರಮಾತ್ಮನದೆಂದು ಹೇಳಬೇಕು. ಅಷ್ಟಕರ್ತೃತ್ವವೇಕೆ ಹೇಳಬೇಕೆಂದರೆ – ಬ್ರಹ್ಮಸೂತ್ರಭಾಷ್ಯದಲ್ಲಿ ಶ್ರೀಮದಾಚಾರ್ಯರು . . . ಎಂದು ಹೇಳಿರುವರು (ಹಸಾರ. ೧–೧ ಟೀಕೆ). [ಅಷ್ಟ + ಕರ್ತೃತ್ವ]

**ಅಷ್ಟಕರ್ಮ** (ನಾ). [ಜೈನ] ಜ್ಞಾನಾವರಣೀಯ, ದರ್ಶನಾವರಣೀಯ, ಅಂತರಾಯ, ಮೋಹನೀಯ, ಆಯುಃಕರ್ಮ, ನಾಮಕರ್ಮ, ಗೋತ್ರಕರ್ಮ, ವೇದನೀಯ ಕರ್ಮ – ಎಂಬ ಎಂಟು ಬಗೆಯ ಕರ್ಮಗಳು : ಅಷ್ಟಕರ್ಮಾಗ್ನಿ ಪರಿಪ್ಲುಷ್ಟಂ . . . ನಿಕೃಷ್ಟಮಿಾ ಸಂಸಾರಂ (ಅಜಿಪು. ೨–೭೪). [ಅಷ್ಟ + ಕರ್ಮ]

**ಅಷ್ಟಕವರ್ಗ** (ನಾ). [ಜ್ಯೋತಿ] "ಜನನ ಕಾಲದಲ್ಲಿ ಸೂರ್ಯನೇ ಮೊದಲಾದ ಏಳುಗ್ರಹಗಳು ಮತ್ತು ಲಗ್ನ ಈ ಎಂಟು ಯಾವ ಯಾವ ರಾಶಿಯಲ್ಲಿರುವುವೋ ಆ ರಾಶಿಯಿಂದ ತಾವು ಶುಭಾಶುಭ ಫಲಗಳನ್ನು ಕೊಡುವ ಸ್ಥಾನಗಳನ್ನು ತಿಳಿಸುವ ಬಿಂದುಗಳ ಸಮೂಹ" (ಜಾತತಿ. ಪರಿ. ೩); ದಿವಸಕರಾದಿಗಳೊಳಭೀಷ್ಟವೆನಿಪ್ಪ ಗ್ರಹಮದೊಂದು ಶೇಷಗ್ರಹಮಾಜು ವಿಲಗ್ನಭವನಮೊಂದಿಂತಿವಜ ಶುಭಾಶುಭಮನಜಿುವುದಷ್ಟಕವರ್ಗಂ (ಜಾತತಿ. ೧೦–೧).

[ಅಷ್ಟಕ + ವರ್ಗ]

**ಅಷ್ಟಕಷ್ಟ** (ನಾ). ೧. ಮನುಷ್ಯನಿಗೆ ಸಾಮಾನ್ಯವಾಗಿ ಉಂಟಾಗಬಹುದಾದ ಎಂಟು ತೊಂದರೆಗಳು ; ಅನವಶ್ಯವಾದ ಪ್ರವಾಸ, ಹೆಂಡತಿಯ ಅಗಲಿಕೆ, ಕಷ್ಟದಲ್ಲಿರುವಾಗ ಬಂಧುಗಳ ಮನೆಗೆ ಬಂದು ಭಾರವಾಗುವಂತೆ ನೆಲಸುವುದು, ಇತರರು ತಿಂದು ಮಿಕ್ಕುದರಿಂದ ಜೀವಿಸುವುದು, ಮನಸ್ಸಿಗೆ ಬೇಡದವರನ್ನು ಅನುಸರಿಸಿ ನಡೆಯಬೇಕಾದ ಸ್ಥಿತಿ, ಹೆರವರು ಕೊಡುವ ಕೂಳಿಗಾಗಿ ಕಾಯಬೇಕಾಗುವುದು, ತಿಳಿದವರ ಸಭೆಯಲ್ಲಿ ಅಲಕ್ಷ್ಯಕ್ಕೆ ಗುರಿಯಾಗುವುದು, ಬಡತನ. ೨. ಬಹಳವಾದ ಕ್ಲೇಶ (ಉಕ. ೬).

[ಅಷ್ಟ + ಕಷ್ಟ]

**ಅಷ್ಟಕಾಂಗ** (ನಾ). ಎಂಟು ವಿಭಾಗಗಳುಳ್ಳ ಪಗಡೆಯ ಹಾಸು (೬).

[ಅಷ್ಟಕ + ಅಂಗ₂]

**ಅಷ್ಟಕೋಣ** (ನಾ). ಎಂಟು ಮೂಲೆಗಳುಳ್ಳ ಆಕೃತಿ : ವರ್ತುಳದೊಳಗಿನ ಸಮಪಾರ್ಶ್ವ ಅಷ್ಟಕೋಣದ ಕ್ಷೇತ್ರಫಲವು ಆ ವರ್ತುಳದ ಒಳಗಿನ ಅಥವಾ ಹೊರಗಿನ ಚೌಕದ ಪಾರ್ಶ್ವದ ಕಾಟಕೋಣ ಚೌಕೋಣಕ್ಕೆ ಸಮವಾಗಿದೆ (ಭೂಮಿಅ. ೫೨). [ಅಷ್ಟ + ಕೋಣ₂]

**ಅಷ್ಟಗಂಧ** (ನಾ). ಚಂದನ, ದೇವದಾರು, ಚಂಗಲ್‌ಕೋಷ್ಠ, ಕೇಸರಿ, ಕಲ್ಲುಹೂ, ಜಟಾಮಾಂಸಿ, ಗೋರೋಚನ, ಅಗಿಲು ಎಂಬ ಎಂಟು ಸುಗಂಧ ದ್ರವ್ಯಗಳು. ℙ ಈ ವಸ್ತುಗಳಲ್ಲಿ ಕೆಲವಕ್ಕೆ ಪ್ರತಿಯಾಗಿ ಬೇರೆಯವು ಉಕ್ತವಾಗಿವೆ : ಚಂದನಾಗರು ಕಸ್ತೂರಿ ಕರ್ಪೂರಕೇಸರ ಕಚೋರ ಲಾವಂಚ ಕೋಷ್ಠಂಗಳೆಂಬ ಅಷ್ಟಗಂಧಂಗಳಂ (ವಿವೇಕ. ೧೦೫). [ಅಷ್ಟ + ಗಂಧ]

**ಅಷ್ಟಗುಣ** (ನಾ). ೧. ಎಂಟು ಮಡಿ ಹೆಚ್ಚಾಗಿರುವುದು. ೨. = ಅಷ್ಟಭೋಗ ೨ : ಉಡುಪ ಭಟ್ಟ ಕೊಂಮೆಭಟ್ಟರ ಮೂಲವಾದ ಸೆಟ ಅಷ್ಟಗುಣವಾಗಿ ಮಾಡಿಕೊಂಡ ಗದೆ ಮುೞಕೆ ಗೇಣಿ ಅಕ್ಕಿ ಮುರ ಮತ್ತಂ ಅಯಿದುವರೆ ತಾರೆ (ಸೌಇಇ. IX–ii, ೪೭೧–೪೪; 1482). ೩. ಅಷ್ಟಸಿದ್ಧಿ ; ಅಣಿಮೆ, ಮಹಿಮೆ, ಗರಿಮೆ, ಲಘಿಮೆ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ಎಂಬ ಎಂಟು ಗುಣಗಳು : ಅಣಿಮಾದ್ಯಷ್ಟಗುಣಮಣಿನಿಧಾನನುಂ (ಚಂದ್ರಪು. ೧೧–೩೩ ವ). ೪. [ಜೈನ] ಮುಕ್ತಿಪಡೆದ ಜೀವನ ಎಂಟು ಲಕ್ಷಣಗಳು ; ಸಮ್ಯಕ್ತ್ವ, ಜ್ಞಾನ, ದರ್ಶನ, ವೀರ್ಯ, ಸೂಕ್ಷ್ಮ, ಅವಗಾಹನ, ಅಗುರುಲಘು, ಅವ್ಯಾಬಾಧ.

[ಅಷ್ಟ + ಗುಣ]

**ಅಷ್ಟಗೆ** (ನಾ). (ಕರಾ). ಅಷ್ಟಕಾ ಎಂಬ ಮಹಾಲಯ ಪಕ್ಷಶ್ರಾದ್ಧ.

[< ಸಂ. ಅಷ್ಟಕಾ]

**ಅಷ್ಟಗ್ರಾಮ** (ನಾ). ಎಂಟು ಗ್ರಾಮಗಳ ಸಮುದಾಯ ; ಎಂಟು ಗ್ರಾಮಗಳ ಪ್ರಾಂತ್ಯ. [ಅಷ್ಟ + ಗ್ರಾಮ]

**ಅಷ್ಟಚಾಪೋತ್ಸೇಧ** (ನಾ). ಎಂಟು ಬಿಲ್ಲುಗಳ ಪ್ರಮಾಣದಷ್ಟು ಎತ್ತರ : ಏಟುನೂಱಯ್ವತ್ತು ಧನುರ್ವಿಸ್ತಾರಮಂ ಅಷ್ಟಚಾಪೋತ್ಸೇಧಮುಮನಪ್ಪುಕೆಯ್ದು (ಮಲ್ಲಿಪು. ೧೪–೧೮೭).

[ಅಷ್ಟ + ಚಾಪ + ಉತ್ಸೇಧ]

**ಅಷ್ಟತನು** (ನಾ). (?) : ಮುದದಿಂದಲೆಂಟು ತಿಂಗಳಿಗಷ್ಟತನುಗಳು ವದಗಿ ತನ್ಮೂರ್ತಿಗೊಂಬವವು (ನವಮೋ. ೧೪–೫೧). [ಅಷ್ಟ + ತನು]

**ಅಷ್ಟತಾಲ,** ಅಷ್ಟತಾಳ (ನಾ). ೧. = ಅಟ್ಟತಾಳ. ೨. ಅಷ್ಟಕೋಣ (ಕ). **ಅಷ್ಟತಾಳ ೧ :** ಅಷ್ಟತಾಳ (ಯಕ್ಷಬ. ೨೭೮). [ಅಷ್ಟ + ತಾಲ]

**ಅಷ್ಟತಾಳ** 'ಅಷ್ಟತಾಲ' ನೋ.

**ಅಷ್ಟತೂರ್ಯ** (ನಾ). ಎಂಟು ಬಗೆಯ ವಾದ್ಯಗಳು; ಭೇರಿ, ಮದ್ದಳೆ, ಝಲ್ಲರಿ, ಕಹಳೆ, ಶಂಖ, ಕೊಳಲು, ವೀಣೆ ಮತ್ತು ತುಣವ ಎಂಬ ಎಂಟು ವಾದ್ಯಗಳು. 'ಅಷ್ಟತೂರ್ಯರವ' ಪರಾ. [ಅಷ್ಟ + ತೂರ್ಯ]

**ಅಷ್ಟತೂರ್ಯರವ** (ನಾ). ಎಂಟು ಬಗೆಯ ವಾದ್ಯಗಳ ಧ್ವನಿ: ಭೋರ್ಗರೆವಷ್ಟತೂರ್ಯರವಮಾರ್ಗೆ ಜಯಧ್ವನಿಯಾರ್ಗೆ ಪೇಟಿಂ (ಶಾಂತಿಪು. ೭-೧೫). [ಅಷ್ಟತೂರ್ಯ + ರವ]

**ಅಷ್ಟದರಿದ್ರ** (ನಾ). ಬಹಳ ಬಡವ: ಅವರೇನೋ ಕುಬೇರನ ಹಾಗಿರಬಹುದು; ನಾನು ಅಷ್ಟದರಿದ್ರ (ರೂಢಿ). [ಅಷ್ಟ + ದರಿದ್ರ]

**ಅಷ್ಟದಲ,** ಅಷ್ಟದಳ (ನಾ). ೧. ಎಂಟು ದಳ. ೨. ಎಂಟು ಎಸಳುಗಳುಳ್ಳದು; ಎಂಟು ವಿಭಾಗವುಳ್ಳದ್ದು. **ಅಷ್ಟದಳ : ೨.** ಅಷ್ಟದಳ ಕಮಲದಲ್ಲಿ ಸೃಷ್ಟಿಯಾಕೃತಿ ಭಜನೆ (ಅವಚಂ. ೧೮೦-೮೧೧). **೩.** ಒಂದು ಒಡವೆ; ಆಭರಣ: ದಾಡಿಮಾದಳದಷ್ಟದಳಮುಮಂ, ಕೇಸರದ ಕೇಯೂರಮುಮಂ (ಚಂದ್ರಪ್ರ. ೭-೧೧೪ ವ). [ಅಷ್ಟ + ದಲ]

**ಅಷ್ಟದಳ** 'ಅಷ್ಟದಲ' ನೋ.

**ಅಷ್ಟದಿಕ್ಕು** (ನಾ). ಎಂಟು ದಿಕ್ಕುಗಳು; ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ, ಈಶಾನ್ಯ, ನೈಋತ್ಯ, ವಾಯುವ್ಯ, ಆಗ್ನೇಯ. [ಅಷ್ಟ + ದಿಕ್ಕು]

**ಅಷ್ಟದಿಕ್ಪಾಲ,** ಅಷ್ಟದಿಕ್ಪಾಳ (ನಾ). ಎಂಟು ದಿಕ್ಕುಗಳ ಒಡೆಯರು; ಇಂದ್ರ, ಅಗ್ನಿ, ಯಮ, ನಿರುತಿ, ವರುಣ, ವಾಯು, ಕುಬೇರ, ಈಶಾನ ಎಂಬ ಎಂಟು ಮಂದಿ ದಿಕ್ಪತಿಗಳು: ಅಷ್ಟದಿಕ್ಪಾಲರು ಬಂದು ವಂಚಿಸಿದರು ನಿಷ್ಠೆಯಿಂದಿರುವಂಥ ಸತಿಯು ಭ್ರಷ್ಟಳಾಗುವುದಿಲ್ಲ(ಇಂಚಾಪ. ೧೦೦-೮೮). **ಅಷ್ಟದಿಕ್ಪಾಳ :** ಅಷ್ಟದಿಕ್ಪಾಳರು ತಮ್ಮಯ ಪಟ್ಟಣಗಳಿಗಟ್ಟುಳಿಯಾಗೆ ರಕ್ಕಸರ ನೆಟ್ಟನೆ ನಿಲುವ ತಾಣಗಳೆನೆ ಕೊತ್ತಳ ಕಟ್ಟಿಸಳೆ ದೊಳೊಪ್ಪಿದುವು (ಕಂಸವಿ. ೨-೬೨). [ಸಂ. (ಅಷ್ಟದಿಕ್ + ಪಾಲ)]

**ಅಷ್ಟದಿಕ್ಪಾಲಕ**(ನಾ). = ಅಷ್ಟದಿಕ್ಪಾಲ. [ಸಂ. (ಅಷ್ಟದಿಕ್ + ಪಾಲಕ)]

**ಅಷ್ಟದಿಕ್ಪಾಳ** 'ಅಷ್ಟದಿಕ್ಪಾಲ' ನೋ

**ಅಷ್ಟದಿಗ್ಗಜ** (ನಾ). ಎಂಟು ದಿಕ್ಕಿನ ಆನೆಗಳು; ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ ಎಂಬ ಎಂಟು ದಿಕ್ಕರಿಗಳು. [ಸಂ. (ಅಷ್ಟದಿಕ್ + ಗಜ)]

**ಅಷ್ಟದಿಗ್ಜಯ** (ನಾ). ಎಂಟು ದಿಕ್ಕುಗಳ ಗೆಲವು; ದಿಗ್ವಿಜಯ: ಅಷ್ಟದಿಗ್ಜಯೋಪಾರ್ಜಿತಯಶನುಂ ದಶಾಂಗಭೋಗ ಸಂಗತನುಮಾಗಿ (ಚಂದ್ರಪ್ರ. ೭-೩೫ ವ). [ಸಂ. (ಅಷ್ಟದಿಕ್ + ಜಯ)]

**ಅಷ್ಟದೇಹಿ** (ನಾ). = ಅಷ್ಟಮೂರ್ತಿ: ಆಹೊಯ್ದನಾಹೊಯ್ದನೆಲೆಲೆ ಶಿವ ಶಿವ ಅಷ್ಟದೇಹಿ ನೀನೆ [ಪಾಠಾಂ. ತನ್ನ ನೇಹಿನಿಯನೆನೆ] ಶರಣು ರಕ್ಷಿಸಬಲೆಯನು (ಹಚಕಾ. ೧೩-೧೩). [ಸಂ. ಅಷ್ಟದೇಹಿನ್ (ಅಷ್ಟ + ದೇಹಿನ್)]

**ಅಷ್ಟದ್ರವ್ಯ** (ನಾ). ೧. (ಕರಾ). ಗಣಪತಿಯ ಹೋಮದಲ್ಲಿ ಉಪಯೋಗಿಸುವ ಬೆಲ್ಲ, ತೆಂಗಿನಕಾಯಿ, ಕಬ್ಬು, ಎಳ್ಳು, ಅರಳು, ಬಾಳೆಹಣ್ಣು, ತುಪ್ಪ, ಅವಲಕ್ಕಿ—ಈ ಎಂಟು ವಸ್ತುಗಳ ಒಟ್ಟು. ೨. ಯಜ್ಞಗಳಲ್ಲಿ ಹೋಮಕ್ಕಾಗಿ ಬಳಸುವ ಎಂಟು ಹೋಮದ್ರವ್ಯಗಳು; ಅರಳಿ, ಅತ್ತಿ, ಆಲ, ಬಸರಿ ಎಂಬ ನಾಲ್ಕು ಬಗೆಯ ಸಮಿತ್ತುಗಳು ಮತ್ತು ತುಪ್ಪ, ಪಾಯಸ, ಎಳ್ಳು, ಬಿಳಿಸಾಸುವೆ ಎಂಬ ನಾಲ್ಕು ದ್ರವ್ಯಗಳು. [ಅಷ್ಟ + ದ್ರವ್ಯ]

**ಅಷ್ಟನವತಿ** (ನಾ). ತೊಂಬತ್ತೆಂಟು: ಅಷ್ಟನವತಿಯ ಪದ್ಯದೊಳಗಿದನು ಪುದುಗೊಳಿಸಿದಷ್ಟರತ್ನಂಗಳಿಗೆ ಪೇಳ್ದೆ ನಾಂ ಕನ್ನಡದಿ (ರತ್ನಶಾ. ೨೪-೧೧). [ಸಂ. (ಅಷ್ಟ + ನವತಿ)]

**ಅಷ್ಟನಾಗ** (ನಾ). ೧. ಎಂಟು ಆನೆಗಳು. ೨. ಎಂಟು ಸರ್ಪಗಳು. 'ಅಷ್ಟಫಣಿ' ಪರಾ. [ಅಷ್ಟ + ನಾಗ]

**ಅಷ್ಟಪತ್ರ** (ನಾ). "ದೊಡ್ಡ ಕಾಗದದ ಹಾಳೆಯನ್ನು ಮೂರು ಸಲ (ಅಥವಾ ೮ ಎಲೆಗಳಾಗುವಂತೆ) ಮಡಿಸುವುದರಿಂದಾದ ಪುಟ (ದ ಅಥವಾ ಪುಸ್ತಕದ ಆಕಾರ): ಅಷ್ಟಪತ್ರ" (Octavo. ಇಂಕನಿ); ಕ್ರೌನ್ ಕಾಗದವನ್ನು ಮಡಿಚಿ ಎಂಟಾಗಿ ಮಾಡಿದ ಪುಸ್ತಕಗಳಿಗೆ ಕ್ರೌನ್ ಅಷ್ಟಪತ್ರವೆನ್ನುವರು (ರೂಢಿ). [ಅಷ್ಟ + ಪತ್ರ]

**ಅಷ್ಟಪದಿ** (ನಾ). ೧. ಎಂಟು ಪಾದಗಳುಳ್ಳ ಆಕ್ಟೊಪಸ್ ಎಂಬ ಒಂದು ಜಲಚರ ಪ್ರಾಣಿ: ಸಮುದ್ರದಲ್ಲಿ ರಾಕ್ಷಸನಂತಿರುವ "ಅಷ್ಟಪದಿ" (Octopus)ಯೂ ಬಲಿಷ್ಠ ಪ್ರಾಣಿಗಳೇ (ಬಾಲಪ್ರ. I, ೪೯೦). ೨. [ಛಂದ] ಎಂಟು ಪಾದಗಳುಳ್ಳ ಒಂದು ಬಗೆಯ ಹಾಡುಗಬ್ಬ: ಷಟ್ಪದಿ ಅಷ್ಟಪದಿ ಗಣನಿಯಮ ಕಂದ ಶಂಖಾವೃತ್ತ ತಾಳವೃತ್ತ ಆದಿ ಜಾತಿಗಳ್ ಉಂಟು (ಛಂದೋಂಬು. ೧-೫೫ ಅಡಿಟ). [ಸಂ. ಅಷ್ಟಪದೀ]

**ಅಷ್ಟಪಾದ** (ನಾ). ೧. ಎಂಟು ಕಾಲುಗಳುಳ್ಳದ್ದು. ೨. ಜೇಡರ ಹುಳು. ೩. ಶರಭ ಎಂಬ ಒಂದು ಪ್ರಾಣಿ. [ಅಷ್ಟ + ಪಾದ]

**ಅಷ್ಟಪಾದಿ** (ನಾ). = ಅಷ್ಟಪದಿ (Octopus. ಇಂಕನಿ). [ಸಂ. ಅಷ್ಟಪಾದಿನ್]

**ಅಷ್ಟಪಾಶ** (ನಾ). [ತತ್ತ್ವಶಾ] ಮುಕ್ತಿಗೆ ಅಡ್ಡಿಬರುವ ಎಂಟು ಪಾಶಗಳು; ಭಯ, ಶಂಕೆ, ಶೀಲ, ಕುಲ, ಜಾತಿ, ಕರುಣ, ಲಜ್ಜೆ, ಜುಗುಪ್ಸೆ ಎಂಬ ಎಂಟು: "ತರುಣ ಕೇಳ್ ಭಯ ಶಂಕೆ ವರಶೀಲ ಕುಲ [ಪಾಠಾಂ. ಪ್ರತ] ಜಾತಿ ಕರುಣೆ ಲಜ್ಜಾಜುಗುಪ್ಸಂಗಳೆಂಟು ಪರಿಕಿಸಲ್ ಜೀವಗಿವು ನೆರೆದಷ್ಟಪಾಶವೆಂಬರು ಪೂರ್ವಿಗರ್ (ಮನೋವಿ. ೫-೩೯); ಅಷ್ಟಪಾಶವ ಹರಿದು, ಕ್ಲೇಶಗಳಿಟ್ಟಣೆಯ ನೆರೆ ಮುರಿದು (ಅಮೃತ. ೧-೨೨); "ಅಷ್ಟಪಾಶಗಳು-ಘೃಣಾ, ಶಂಕಾ, ಭಯಂ, ಲಜ್ಜಾ, ಜುಗುಪ್ಸಾ (ಚೇತಿ ಪಂಚಮಿ), ಕುಲಂ, ಶೀಲಂ, (ತಥಾ) ಜಾತಿ (ರಷ್ಟೌ ಪಾಶಾಃ ಪ್ರಕೀರ್ತಿತಾಃ)" (ಅಮೃತ. ೧-೨೨ ಅಡಿಟ). 'ಅಷ್ಟಮಲ' ಪರಾ. [ಅಷ್ಟ + ಪಾಶ]

**ಅಷ್ಟಪೈಲು** (ನಾ). ೧. ಎಂಟು ಮೂಲೆಗಳುಳ್ಳದ್ದು: ಕೇಶವನ ಈಗಿನ ವೇಷವೇ ಬೇರೆರಡು ಕೈಗಳ ಎಂಟು ಬೆರಳುಗಳಲ್ಲಿಯೂ ಅಷ್ಟಪೈಲಿನ ಉಂಗುರಗಳು (ಸಮುಜೀ. ೪೩). ೨. ಎಂಟು ಮೂಲೆಗಳುಳ್ಳ ಉಂಗುರ: ಬಲಗೈಯ ಅನಾಮಿಕೆಯಲ್ಲಿ ಅಷ್ಟಪೈಲಿನ ಜೋಡಿ (ತಿಡುಗು. ೬೫). [← ಮರಾ. ಅಷ್ಟಪೈಲೂ]

**ಅಷ್ಟಪ್ರಕಾರಾರ್ಚನೆ** (ನಾ). ಎಂಟು ಬಗೆಯಾದ ಪೂಜಾದ್ರವ್ಯಗಳಿಂದ ಮಾಡುವ ಪೂಜೆ: ರಸತೋಯಂ ಭಾವಗಂಧಂ ಪದಸದಕ ಚಯಂ ಕಾವ್ಯಪುಷ್ಪಂ ಗುಣಾನ್ನಪ್ರಸರಂ ವೃತ್ತಪ್ರದೀಪಂ ವಚನರುಚಿರ ಧೂಪಂ ಜಿನಶ್ರೀಫಲಂ ನಿಪ್ಪೊಸತಾಯ್ತಷ್ಟಪ್ರಕಾರಾರ್ಚನೆಯೆನಿಸಿದಪೆಂ ಸಲ್ಗನಂತಂಗೆ ಮತ್ಕಾವ್ಯಸಪರ್ಯಾಶ್ಚರ್ಯದೊಳ್ (ಅನಂಪು. ೧-೬೪). [ಅಷ್ಟ + ಪ್ರಕಾರ + ಅರ್ಚನೆ]

**ಅಷ್ಟಪ್ರಕೃತಿ** (ನಾ). ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ ಎಂಬ ಎಂಟು ಪ್ರಕೃತಿಗಳು: ಭೂಮಿ ... ಅಹಂಕಾರವೆಂಬಷ್ಟಪ್ರಕೃತಿಯಿಂ ವಿಕಾರಿಸಿ (ವಿವೇಕ. ೨೪೬). [ಅಷ್ಟ + ಪ್ರಕೃತಿ]

**ಅಷ್ಟಪ್ರಮಾಣ** (ನಾ). [ತತ್ತ್ವಶಾ] ಎಂಟು ಬಗೆಯ ಪ್ರಮಾಣಗಳು; ಪ್ರತ್ಯಕ್ಷ, ಅನುಮಾನ, ಆಗಮ, ಅರ್ಥಾಪತ್ತಿ, ಉಪಮಾನ, ಅನುಪಲಬ್ಧಿ ಸಂಭವ, ಐತಿಹ್ಯ: ಪ್ರತ್ಯಕ್ಷಪ್ರಮಾಣ ... ಐತಿಹ್ಯಪ್ರಮಾಣವೆಂಬವೇ ವಸ್ತುಸಿದ್ಧಿಗಷ್ಟಪ್ರಮಾಣಂಗಳು (ವಿವೇಕ. ೧೮). [ಅಷ್ಟ + ಪ್ರಮಾಣ]

**ಅಷ್ಟಫಣಿ** (ನಾ). ಮುಖ್ಯವಾದ ಎಂಟು ಸರ್ಪಗಳು; ಅನಂತ, ತಕ್ಷಕ, ವಾಸುಕಿ, ಶಂಖಪಾಲ, ಪದ್ಮ, ಕಾರ್ಕೋಟಕ, ಕ್ರೋಡ, ಕಾಲ ಎಂಬ ಎಂಟು ಹಾವುಗಳು: ಪನ್ನಗಂಗಳು ಸಾವಿರವಜಿಹ್ವೆಗಳುನ್ನತಾಷ್ಟಫಣಿಗಳೆನಲ್ಕೆ ... ಎಂಟು ಹಾವುಗಳಿಗೆ ಪತಿಗಳಾಗಿ (ಬಸಪು. ೪೭-೨೭). ☞ ಕ್ರೋಡ ಮತ್ತು ಕಾಲ ಎಂಬ ಈ ಎರಡಕ್ಕೆ ಪ್ರತಿಯಾಗಿ ಮಹಾಪದ್ಮ ಮತ್ತು ಗುಳಿಕ ಎಂಬ ಬೇರೆ ಎರಡು ಹೆಸರು ಕೆಲವು ಕಡೆ ಪ್ರಸಿದ್ಧವಿದೆ. [ಅಷ್ಟ + ಫಣಿ]

**ಅಷ್ಟಫಣೀಶ್ವರ** (ನಾ). = ಅಷ್ಟಫಣಿ: ಕಚ್ಚುವ ಮಹಾಷ್ಟಫಣೀಶ್ವರಾಂಶದ ಪವನಭಕ್ಷಣರಾಜಿ (ಬಸಪು. ೪೭-೩೦). 'ಅಷ್ಟಫಣಿ' ಪರಾ. [ಅಷ್ಟ + ಫಣೀಶ್ವರ]

**ಅಷ್ಟಬಂಧನ** (ನಾ). ೧. ಎಂಟರ ತಂಡ, —ಗುಂಪು; ಅಷ್ಟಕ. ೨. ದೇವಾಲಯಗಳಲ್ಲಿ ವಿಗ್ರಹಗಳನ್ನು ಪೀಠಗಳಲ್ಲಿ ಭದ್ರಗೊಳಿಸಿ ಅಳವಡಿಸಲು ಏರ್ಪಡಿಸಿದ ಸಾಧನ, —ನೆಲೆಗಟ್ಟು: ಪೂರ್ವದಲ್ಲಿ ಅಮ್ಮನವರಿಗೆ ಮಾಡಿದ್ದ ಅಷ್ಟಬಂಧನವು ಶಿಥಿಲವಾಗಿದ್ದುದರಿಂದ ದೊರೆಗಳು ಅಷ್ಟಬಂಧನವನ್ನು ... ಮಾಡಿಸಿದರು (ಮಹಾವಂ. I, ೧೨೪). [ಅಷ್ಟ + ಬಂಧನ]

**ಅಷ್ಟಭಕ್ತಿ** (ನಾ). ಎಂಟು ಬಗೆಯಾದ ಭಕ್ತಿ: ಅಷ್ಟಾಂಗಯೋಗಮುಮಂ ... ಅಷ್ಟಭಕ್ತಿಯನುಳ್ಳ ಶಿಷ್ಯರಂ ರಕ್ಷಿಸುತ್ತ (ವೀಶೈಪು. ೫-೧೬-೨). 'ಅಷ್ಟವಿಧ ಭಕ್ತಿಕ್ರಿಯೆ' ಪರಾ. [ಅಷ್ಟ + ಭಕ್ತಿ]

**ಅಷ್ಟಭಾಗ್ಯ** (ನಾ). ರಾಜ್ಯದ ಎಂಟು ಬಗೆಯ ಸಂಪತ್ತು; ರಾಜ್ಯ, ಭಂಡಾರ, ಸೈನ್ಯ, ಆನೆ, ಕುದುರೆ, ಛತ್ರ, ಚಾಮರ, ಆಂದೋಲನ ಎಂಬ ಎಂಟು (ಕಿ). [ಅಷ್ಟ + ಭಾಗ್ಯ]

**ಅಷ್ಟಭುಜ** (ನಾ). ೧. ಎಂಟು ತೋಳುಗಳುಳ್ಳವನು: ಸಂಖ್ಯಾವಾಚಿ ಸಮಾಸಕ್ಕೆ ಏಕಾಂಗ ... ಅಷ್ಟಭುಜ, ನವನಿಧಿ, ದಶವ್ಯಾಕರಣ ... ಎಂದು ಸಮಾಸಮಾಗಲೊಡಂ (ಶಮದ. ೮೨ ಪ್ರಯೋ). ೨. [ಗಣಿತ] ಎಂಟು ಬಾಹುಗಳುಳ್ಳ ಆಕೃತಿ. [ಅಷ್ಟ + ಭುಜ]

**ಅಷ್ಟಭೈರವ** (ನಾ). ಶಿವನ ಎಂಟು ವಿಧವಾದ ಭಯಂಕರ ರೂಪಗಳು. ☞ ಸಿತಾಂಗ, ರುರು, ಚಂಡ, ಕ್ರೋಧ, ಉನ್ಮತ್ತ, ಕಪಾಲ, ಭೀಷಣ, ಸಂಹಾರ (ದಕ. ಕಿ). [ಅಷ್ಟ + ಭೈರವ]

**ಅಷ್ಟಭೋಗ** (ನಾ). ೧. ಮನೆ, ಹಾಸುಗೆ, ವಸ್ತ್ರ, ಆಭರಣ, ಸ್ತ್ರೀ, ಪುಷ್ಪ, ಗಂಧ, ತಾಂಬೂಲ ಎಂಬ ಎಂಟು ವಸ್ತುಗಳು. ☞ ಅನ್ನ, ಉದಕ, ತಾಂಬೂಲ, ಪುಷ್ಪ, ಚಂದನ, ವಸ್ತ್ರ, ಶಯ್ಯೆ, ಅಲಂಕಾರ. ೨. ನಿಧಿ, ನಿಕ್ಷೇಪ, ಅಕ್ಷೀಣ, ಆಗಾಮಿ, ಸಂಚಿತ, ಜಲ, ಪಾಷಾಣ, ತರು ಎಂಬ ಎಂಟು ವಿಧದ ಸ್ವಾಮ್ಯ: ಅಷ್ಟಭೋಗ ತೇಜಸ್ವಾಮ್ಯ (ಕಆ. II, ೨೭-೧೯; 1173); ಚತುಸ್ಸೀಮೆಯೊಳಗುಳ್ಳ ನಿಧಿನಿಕ್ಷೇಪ ಜಲಪಾಷಾಣ ಅಕ್ಷೀಣಿ ಆಗಾಮಿ ಸಿದ್ಧ ಸಾಧ್ಯಂಗಳೆಂಬ ಅಷ್ಟಭೋಗ ತೇಜಸ್ವಾಮ್ಯವನೂ (ಮೈಆರಿ. ೧೯೪೦, ೨೮-೨೪; 1509); ಛತ್ರಚಾಮರಾಂದೋಳಿಕಾದಿ ಅಷ್ಟಭೋಗಂಗಳಂ ಕೊಟ್ಟು (ಮೈಆರಿ. ೧೯೨೮, ೬೩-೨೭; 1532); ನಿಧಿನಿಕ್ಷೇಪ ಪಾಷಾಣಂ ಸಿದ್ಧಸಾಧ್ಯ ಜಲಾನ್ವಿತಂ ಅಕ್ಷೀಣ್ಯಾಗಾಮಿ ಸಂಯುಕ್ತಂ ಅಷ್ಟಭೋಗ ಸಮನ್ವಿತಂ (ಎಇ. XIII, ೩೪-೧; ?). ೩. ಮನೆ, ತರಿ, ಬೆದ್ದಲು ಭೂಮಿಗಳು, ದನದರೊಪ್ಪಗಳು, ಅರಣ್ಯ, ಪಾಳುಭೂಮಿ, ಕಾಡುಮೃಗಗಳ ಸ್ಥಾನ, ನದಿಯ ಬಯಲು, ಬೆಟ್ಟದ ಸಾಲಿನ ಸ್ಥಳ ಎಂಬ ಎಂಟು; "ಅಷ್ಟಭೋಗವೆಂದರೆ ಎಂಟು ವಿಧವಾದ ಸ್ವತ್ತಿನ ಭೇದಗಳನ್ನು ಅನುಭವಿಸುವುದು" (ಸಂಭಾನಿ. ೨೦೨): ಮಂದಿರಂ ದ್ವಿವಿಧಂ ಕ್ಷೇತ್ರಂ ಗೋಷ್ಠಂ ಚ ವನಮೇವ ಚ ಖಿಲೀಭೂತಂ ಚ ಯತ್ ಕ್ಷೇತ್ರಂ ಮೃಗವಾಸಸ್ತಥೈವಚ ನದೀಪರ್ವತ ಭೋಗಾಶ್ಚ ಅಷ್ಟಭೋಗಾಃ ಪ್ರಕೀರ್ತಿತಾಃ (ಎಕ. XII, ಶಿರಾ. ೯೫-೧೪೮; 1403). [ಅಷ್ಟ + ಭೋಗ]

**ಅಷ್ಟಮ** (ಗು). ೧. ಎಂಟನೆಯ: ಗ್ರಹಂ ಗ್ರಹದಿಂದಂ ... ತುರ್ಯಾಷ್ಟಮಸ್ಥಾನದೊಳ್ ಗ್ರಹದಿಂ ಕೂಡೆ ಪರಸ್ಪರಂ ಸ್ವಗುಣದಿಂದಾಳ್ದುಂ ಚತುರ್ಥಾಂಶಮಂ (ಜಾತತಿ. ೯-೯). (ನಾ). ೨. [ಜ್ಯೋತಿ] ಲಗ್ನದಿಂದ ಅಥವಾ ರಾಶಿಯಿಂದ ಎಂಟನೆಯ ಸ್ಥಾನ: ಅವನಿಗೆ ಅಷ್ಟಮದಲ್ಲಿ ಶನಿಯಿದ್ದಾನೆ (ರೂಢಿ). [ಸಂ.]

**ಅಷ್ಟಮಂಗಲ**, ಅಷ್ಟಮಂಗಳ (ನಾ). ೧. ಎಂಟು ಬಗೆಯ ಶುಭದ್ರವ್ಯಗಳ ಸಮುದಾಯ; ಮಂಗಳಕರವಾದ ಎಂಟು ವಸ್ತುಗಳು; ಧ್ವಜ, ಕನ್ನಡಿ, ಚಾಮರ, ರತ್ನ, ಭೃಂಗಾರ (ಗಿಂಡಿ); ಬೀಸಣಿಗೆ, ಕಲಶ, ಛತ್ರಿ. ೨. (ಪಟ್ಟಾಭಿಷೇಕವೇ ಮುಂತಾದ ವಿಶೇಷ ಸಮಾರಂಭಗಳಲ್ಲಿ) ಸಿಂಹ, ವೃಷಭ, ಆನೆ, ಜಲಪೂರ್ಣ ಕಲಶ, ಬೀಸಣಿಗೆ, ಧ್ವಜ, ಭೇರಿ ಅಥವಾ ತುತೂರಿ, ದೀಪ ಎಂಬ ಎಂಟು ವಸ್ತುಗಳು: ಅಲ್ಲಿ ಉಪಕರಣಷ್ಟಮಂಗಲವೆಲ್ಲ ನವರತ್ನಗಳೆ (ಬಜ್ಜಪು. ೫-೨೧). **ಅಷ್ಟಮಂಗಳೆ**: ೧. ಧ್ವಜದರ್ಪಣ ಚಂಚಚ್ಚಮರಜಮಣಿ ಭೃಂಗಾರ ಸುಪ್ರತಿಷ್ಠಿತತಾಳವೃಜನ ಕಳಶಾತಪತ್ರಂ ತ್ರಿಜಗತ್ಪತಿಗಷ್ಟಮಂಗಳಂ ಸೊಗಯಿಸುಗುಂ (ಅಜಿಪು. ೮-೪೧). ೩. ಎಂಟು ವಿಧವಾದ ಶುಭಲಕ್ಷಣಗಳಿಂದ ಕೂಡಿದ ಕುದುರೆ; ಬಿಳಿದಾದ ಮುಖ, ಬಾಲ, ಕುತ್ತಿಗೆಯ ಮೇಲಣ ಕೂದಲು, ಎದೆ ಕಾಲ್ಗೊರಸುಗಳೂ ಉಳ್ಳ ಕುದುರೆ (ಕಿ). [ಅಷ್ಟ + ಮಂಗಲ]

**ಅಷ್ಟಮಂಗಳೆ** 'ಅಷ್ಟಮಂಗಲ' ನೋ.

**ಅಷ್ಟಮಚಂದ್ರ** (ನಾ). ೧. ಜನ್ಮಲಗ್ನದಿಂದ ಚಂದ್ರನು ಎಂಟನೆಯ ಸ್ಥಾನದಲ್ಲಿರುವುದು ೨. (ಅಲಂ) ಕೇಡು: ಅಮರಾಧ್ವದೊಳೊಂದಶರೀರ ಮಹಾಧ್ವನಿ ಕಂಸ ಕಂಸ ಕೇಳ್ ದೇವಕಿಯಷ್ಟಮಗರ್ಭದಾತನಿಂ ದಷ್ಟಮಚಂದ್ರಂ ನಿನಗೆ ನೆರೆಗುಮೆಂದುದಮೋಘಂ (ಜಗವಿ. ೨-೪೭). [ಅಷ್ಟಮ + ಚಂದ್ರ]

**ಅಷ್ಟಮತೀರ್ಥನಾಥ** (ನಾ). ಎಂಟನೆಯ ತೀರ್ಥಂಕರ; ಚಂದ್ರಪ್ರಭ ತೀರ್ಥಂಕರ: ಪ್ರಿಯದಿಂದಷ್ಟಮತೀರ್ಥನಾಥನಿರದಿಂದೆನ್ನಲ್ಲಿಗೇ ಮಾತೊ ನಿರ್ವ್ರಯ ಸೌಖ್ಯೋನ್ಮುಖನೆಂದು ತನ್ನಗರಿ ತಾಂ ಮೆಯ್ವೆರ್ಚಿ (ಚಂದ್ರಪು. ೧೧-೬೪). [ಅಷ್ಟಮ + ತೀರ್ಥನಾಥ]

**ಅಷ್ಟಮದ** (ನಾ). ಎಂಟು ಬಗೆಯಾದ ಮದಗಳು; ಧನಮದ, ಕುಲಮದ, ವಿದ್ಯಾಮದ, ರೂಪಮದ, ಯೌವನಮದ, ಬಲಮದ, ಪರಿವಾರಮದ, ಅಧಿಕಾರಮದ: ಅಷ್ಟಮದವ್ಯಪೇತನುಂ (ಚಾವುಂಪು. ೫); ಕುಲಬಲಧನರೂಪಯೌವನ ವಿದ್ಯಾರಾಜ್ಯ ತಪದೇಳ್ಗೆಯೆಂಬಷ್ಟಮದದಿಂ ಮದಿಸಿ (ವಿವೇಕ. ೨೪೭). [ಅಷ್ಟ + ಮದ]

**ಅಷ್ಟಮಲ** (ನಾ). [ಜೈನ] ಎಂಟು ವಿಧವಾದ ದೋಷಗಳು; ಶಂಕೆ, ಘೃಣೆ, ಭಯ, ಲಜ್ಜೆ, ಜುಗುಪ್ಸೆ, ಕುಲ, ಶೀಲ, ಜಾತಿ ಇವುಗಳ ಭಾವನೆ: ಶಂಕಾದ್ಯಷ್ಟಮಲಂಗಳುಮೆಂಟುಂ ಮದಂಗಳುಂ (ವಡ್ಡಾರಾ. ೬-೨೧); ಸಪ್ತರ್ಧಿಸಂಪನ್ನನುಂ ಅಷ್ಟಮಲವ್ಯಪೇತನುಂ (ಅಜಿಪು. ೩-೧ವ). 'ಅಷ್ಟಪಾಶ' ಪರಾ. [ಅಷ್ಟ + ಮಲ]

**ಅಷ್ಟಮಹಾಪ್ರಾತಿಹಾರ್ಯ** (ನಾ). [ಜೈನ] ಜಿನನ ಎಂಟು ಮಂಗಳ ಲಾಂಛನಗಳು : ಚತುಸ್ತ್ರಿಂಶದತಿಶಯಂಗಳುಮನಷ್ಟಮಹಾ ಪ್ರಾತಿಹಾರ್ಯಂಗಳುಮಂ . . . ಪೆಸರ್ಗೊಂಡು (ಆದಿಪು. ೩-೪೦ ವ); "ಅಷ್ಟಮಹಾಪ್ರಾತಿಹಾರ್ಯ-(೧) ಅಶೋಕವೃಕ್ಷ, (೨) ಸುರಪುಷ್ಪವೃಷ್ಟಿ, (೩) ದಿವ್ಯಧ್ವನಿ, (೪) ಚತುಷ್ಷಷ್ಟಿಚಾಮರ, (೫) ರತ್ನಜಡಿತ ಸುವರ್ಣ ಸಿಂಹಾಸನ, (೬) ಪ್ರಭಾವಲಯ, (೭) ದೇವದುಂದುಭಿ, (೮) ಛತ್ರ ತ್ರಯ" (ಆದಿಪು. ಅನು. ೨). [ಸಂ. (ಅಷ್ಟ + ಮಹಾ + ಪ್ರಾತಿಹಾರ್ಯ)]

**ಅಷ್ಟಮಹಿಷೀಪತಿ** (ನಾ). **೧.** ಎಂಟು ಜನ ಪ್ರಧಾನಪತ್ನಿಯರಿಗೆ ಗಂಡ; ಎಂಟು ಹೆಂಡಿರುಳ್ಳವನು. **೨.** ಶ್ರೀ ಕೃಷ್ಣ. [ಸಂ. (ಅಷ್ಟ + ಮಹಿಷೀ + ಪತಿ)]

**ಅಷ್ಟಮಾಂಶ** (ನಾ). ಎಂಟನೆಯ ಒಂದು ಪಾಲು. [ಅಷ್ಟಮ + ಅಂಶ]

**ಅಷ್ಟಮಿ** (ನಾ). ಚಾಂದ್ರಮಾನದ ಮೇರೆಗೆ ಶುಕ್ಲಕೃಷ್ಣ ಪಕ್ಷಗಳಲ್ಲಿ ಎಂಟನೆಯ ತಿಥಿ : ಪಂಚಾಕ್ಷರಾದಿಯಲಿರುವಖಿಳ ಮಂತ್ರಗಳ ಜಪ . . . ಅಶುಭ ಷಷ್ಠಿ ಅಷ್ಟಮಿ (ಗಗತಾ. ೪-೬೭). [ಸಂ. ಅಷ್ಟಮೀ]

**ಅಷ್ಟಮೀಂದು** (ನಾ). ಅಷ್ಟಮಿಯ ಚಂದ್ರ : ಅಷ್ಟಮೀಂದುನಿಟಿಳಂ ಶೇಷೋಲ್ಲಸದ್ಬಾಹು . . . ಧರಣೀಶಸೂನು ತಳೆದಂ ಸಾಕ್ಷಾದ್ಯರ್ಥ ಸೌಂದರ್ಯಮಂ (ಚಂದ್ರಪು. ೪-೭). [ಅಷ್ಟಮಿ + ಇಂದು]

**ಅಷ್ಟಮೂರ್ತಿ** (ನಾ). ಎಂಟು ರೂಪಗಳುಳ್ಳವನು; ಶಿವ; ಮಹಾದೇವ; ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ ಎಂಬ ಎಂಟು ರೂಪಗಳನ್ನು ಹೊಂದಿದವನು, ಅಥವಾ ಪಂಚಭೂತಗಳು – ಸೂರ್ಯ, ಚಂದ್ರ, ಯಾಗ ಮಾಡುವವನು ಎಂಬ ಎಂಟು ಆಕೃತಿಗಳುಳ್ಳವನು : ವಿವರಿಸೆ ಯಥಾಶಿವಮಯಂ ವಿಷ್ಣುವೆನಿಪಾ ನುಡಿಗಳು ತ್ರಿಮೂರ್ತಿಗಳಿವು ಶಿವನೆ ಎಂಬಾ ದುರುಕ್ತಿಗಳಷ್ಟ ಮೂರ್ತಿಗಳು ಶಿವನೆ ಎಂಬ ಕುಯುಕ್ತಿಗಳು (ಬಸವು. ೫೪-೭೯). [ಅಷ್ಟ + ಮೂರ್ತಿ]

**ಅಷ್ಟಯೋಗ** (ನಾ). = ಅಷ್ಟಾಂಗಯೋಗ : ಯಮನಿಯಮವಾಸನಂ ಪ್ರಾಣಾಖ್ಯಚಿರಯಾಮವಾಪ್ರೀತಿಯಾಹಾರ [ಪ್ರತ್ಯಾಹಾರ] ತದ್ಧ್ಯಾನ ಕರಧಾರಣಾದಿಕ ಸಮಾಧ್ಯಷ್ಟಯೋಗದಿಂ (ವೀಶೈಪು. ೭-೩-೪೪). [ಅಷ್ಟ + ಯೋಗ]

**ಅಷ್ಟರಸ** (ನಾ). [ಕಾವ್ಯಮೀ] ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಬೀಭತ್ಸ, ರೌದ್ರ ಎಂಬ ಎಂಟು ಕಾವ್ಯ ರಸಗಳು. [ಅಷ್ಟ + ರಸ]

**ಅಷ್ಟರು** 'ಅಷ್ಟು' ಪರಾ.

**ಅಷ್ಟಲೋಕ** (ನಾ). ಎಂಟು ಲೋಕಗಳು; ಅಷ್ಟದಿಕ್ಪಾಲಕರ ಲೋಕಗಳು (?). 'ಅಷ್ಟಲೋಕೇಶ' ಪರಾ. [ಅಷ್ಟ + ಲೋಕ]

**ಅಷ್ಟಲೋಕಪಾಲ** (ನಾ). ಎಂಟುಲೋಕಗಳ ಒಡೆಯರು : ಪ್ರಕೃಷ್ಟಾಷ್ಟಲೋಕಪಾಲ ಪರಿಪಾಲಿತ ಸಾಹಸನುಂ (ಶಾಂತಿಪು. ೧-೭೧ ವ). [ಅಷ್ಟಲೋಕ + ಪಾಲ]

**ಅಷ್ಟಲೋಕೇಶ** (ನಾ). = ಅಷ್ಟಲೋಕಪಾಲ : ಪುರಹರಂ ಕರುಣಿಸಿದ ಪುಣ್ಯವಾರ್ತೆಯ ಕೇಳ್ದು ನೆರೆಯಿತದನೇನೆಂಬೆನಮಮ ಹರಹರ ಗಣೇಶ್ವರರಷ್ಟಲೋಕೇಶರಷ್ಟಮೂರ್ತಿಗಳಷ್ಟವಸುಗಳು (ಹಚಕಾ. ೧೪-೧). [ಅಷ್ಟಲೋಕ + ಈಶ]

**ಅಷ್ಟವರ್ಗ** (ನಾ). **೧.** [ವೈದ್ಯಶಾ] ಮುಖ್ಯವೂ ಸಂಜೀವಕವೂ ಆದ ಎಂಟು ಮೂಲಿಕೆಗಳ ಸಮುದಾಯ; ಋಷಭ, ಜೀವಕ, ಮೇದೆ, ಮಹಾಮೇದ, ಋದ್ಧಿ, ವೃದ್ಧಿ, ಕಾಕೋಲಿ, ಕ್ಷೀರಕಾಕೋಲಿ ಎಂಬ ಎಂಟು ಮೂಲಿಕೆಗಳ ವರ್ಗ. **೨.** ಎಂಟು ವರ್ಗ; ಎಂಟು ಗುಂಪು : ಕಾದಿದ್ದರಯ್ಯ ಅಷ್ಟವರ್ಗವೆಂಬ ಮಕ್ಕಳು ಮುಟ್ಟದಂತೆ (ಅವಚಂ. ೨೭೭-೧೨೭೦). [ಅಷ್ಟ + ವರ್ಗ]

**ಅಷ್ಟವರ್ಗಿ** (ನಾ). ಎಂಟು ವರ್ಗಗಳಿಗೆ ಸೇರಿದವರು (?): ಧೃತಖಟ್ಗಿರಷ್ಟವರ್ಗಿಗಳತಿಚಟುಳರುಮೊಳಗಣೆರಡು ಕೆಲದೊಳ್ ಬರೆ ಭೂಪತಿ ಪೋಲ್ತನುರಗಶಾಖಾವೃತ ಜಂಗಮ ಸಾಂದ್ರರುಂದ್ರಚಂದನ ತರುವಂ (ಶಾಂತಿಪು. ೩-೧೦೪). [ಸಂ. ಅಷ್ಟವರ್ಗಿನ್]

**ಅಷ್ಟವಸು** (ನಾ). ಆಪ, ಧ್ರುವ, ಸೋಮ, ಧವ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ ಎಂಬ ಎಂಟು ಮಂದಿ ವಸುಗಳು : ಏಕಾದಶ ರುದ್ರರನಷ್ಟವಸುಗಳಂ ನೆಱೆ ಕಂಡಂ (ಜಗವಿ. ೫-೧೯). ℙ ಈ ಹೆಸರುಗಳು ಕಲ್ಪಭೇದಗಳಿಂದ ಬೇರೆಯಾಗುತ್ತವೆ. [ಅಷ್ಟ + ವಸು]

**ಅಷ್ಟವಿಂಶತಿ** (ನಾ). ಇಪ್ಪತ್ತೆಂಟು : ಶರ್ಕರಾಪ್ರಭೆಯೆಂಬೆರಡನೆಯ ನರಕಮಲ್ಲಿಂ ಕೆಳಗೇಕರಜ್ಜ್ವಂತರದೊಳಷ್ಟವಿಂಶತಿ ಸಹಸ್ರಯೋಜನ ಬಾಹುಲ್ಯದಿಂ (ಸುಕುಮಾ. ೧೧-೪೧ ವ); ಮುಷ್ಟಿಯುದ್ಧವ ಮಾಡುತಿರಲಂದಷ್ಟವಿಂಶತಿ ದಿವಸಪರಿಯಂತಿಷ್ಟಬಕುತನ ಕೂಡೆ ಲೀಲೆಯಲಾಡುವಂದದಲಿ (ನಿಭಾಗ. ೧೦-೬೭-೧೫). [ಸಂ. ಅಷ್ಟಾವಿಂಶತಿ]

**ಅಷ್ಟವಿಧ** (ಗು). ಎಂಟು ಬಗೆಯ. [ಅಷ್ಟ + ವಿಧ]

**ಅಷ್ಟವಿಧಪೂಜೆ** (ನಾ). ಎಂಟು ಬಗೆಯ ಪೂಜೆ; ಅಕ್ಷತೆ, ಜಲ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ, ಅಥವಾ ಫಲ – ಇವುಗಳ ಅರ್ಪಣೆ : ಅಷ್ಟವಿಧಪೂಜೆಸ್ಟನಿಷ್ಟಾತುಷ್ಟಮಾನಸಕಷ್ಟ ಸಂಸ್ತುತಿನಷ್ಟದೃಷ್ಟಾದೃಷ್ಟಗುಣವಿಸ್ಪಷ್ಟ ಬಸವೇಶ (ಬಸವು. ೪೮-೩೩). [ಅಷ್ಟವಿಧ + ಪೂಜೆ]

**ಅಷ್ಟವಿಧಭಕ್ತಿಕ್ರಿಯೆ** (ನಾ). ಎಂಟು ಬಗೆಯಾದ ಭಕ್ತಿಯ ಕಾರ್ಯಗಳು; ಸ್ಮರಣ, ಕೀರ್ತನ, ವಂದನ, ಪಾದಸೇವನ, ಅರ್ಚನ, ದಾಸ್ಯ, ಸಖ್ಯ, ಆತ್ಮನಿವೇದನ (ಕ). [ಅಷ್ಟವಿಧ + ಭಕ್ತಿ + ಕ್ರಿಯೆ]

**ಅಷ್ಟವಿಧರಿದ್ಧಿ** (ನಾ). ಅಷ್ಟಋದ್ಧಿ : ಬುದ್ಧಿ ಕ್ರಿಯಾದ್ಯಷ್ಟವಿಧರಿದ್ಧಿಯುಂ . . . ತನ್ನೊಳುಂ ಸಚ್ಛನ್ನಮಾಗಿ (ಪುಷ್ಪಪು. ೧೪-೧೬ ವ). [ಅಷ್ಟವಿಧ + ರಿದ್ಧಿ]

**ಅಷ್ಟವಿಧರ್ಧಿ** (ನಾ). = ಅಷ್ಟಋದ್ಧಿ : ವೃಷಭಸೇನಂ . . . ಅಷ್ಟವಿಧರ್ಧಿ ಪ್ರಾಪ್ತಂ ಪ್ರಥಮಗಣಧರನಾದಂ (ಚಾವುಂಪು. ೩೭). [ಸಂ.]

**ಅಷ್ಟವಿಧಶುದ್ಧಿ** (ನಾ). [ಜೈನ] ಕಾರ್ಯಶುದ್ಧಿ; ಭಾವಶುದ್ಧಿ, ಈರ್ಯಾಪಥ ಶುದ್ಧಿ, ಭಿಕ್ಷಾಶುದ್ಧಿ, ಪ್ರತಿಷ್ಠಾಪನಾಶುದ್ಧಿ, ಶಯನಾಸನಶುದ್ಧಿ ವಾಕ್ಯಶುದ್ಧಿ ಎಂಬ ಎಂಟು ಬಗೆಯ ಶುದ್ಧಿಗಳು : ಕಾಯಶುದ್ಧಿವಿನೇಯ ಶುದ್ಧ್ಯಾದ್ಯಷ್ಟವಿಧಶುದ್ಧಿಯುಂ . . . ತನ್ನೊಳುಂ ಸಚ್ಛನ್ನಮಾಗಿ (ಪುಷ್ಪಪು. ೧೪-೧೬ ವ). [ಅಷ್ಟವಿಧ + ಶುದ್ಧಿ]

**ಅಷ್ಟವಿಧಸಮಾಧಿ** (ನಾ). = ಅಷ್ಟಾಂಗಯೋಗ (ಕ). [ಅಷ್ಟವಿಧ + ಸಮಾಧಿ]

**ಅಷ್ಟವಿಧಾರ್ಚನೆ** (ನಾ). = ಅಷ್ಟವಿಧಪೂಜೆ : ತ್ರಿಲೋಕಶಿಖರಶೇಖರಂಗಷ್ಟಾಂಗಮೆಱಗಿ ಪೊಡಮಟ್ಟಷ್ಟವಿಧಾರ್ಚನೆಗಳಿನರ್ಚಿಸಿ (ಶಾಂತಿಪು. ೮-೧೦೪ ವ). [ಅಷ್ಟವಿಧ + ಅರ್ಚನೆ]

**ಅಷ್ಟವಿಭೂತಿ** (ನಾ). = ಅಷ್ಟೈಶ್ವರ್ಯ. [ಅಷ್ಟ + ವಿಭೂತಿ]

**ಅಷ್ಟವಿವಾಹ** (ನಾ). ಎಂಟು ಬಗೆಯ ಮದುವೆಯ ಕ್ರಮ; ಬ್ರಾಹ್ಮ, ದೈವ, ಆರ್ಷ, ಪ್ರಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ, ಪೈಶಾಚ—ಎಂಬ ಎಂಟು ಬಗೆಯ ವಿವಾಹ. [ಅಷ್ಟ + ವಿವಾಹ]

**ಅಷ್ಟವೆ** (ನಾ). ಅಷ್ಟಮಿತಿಥಿ : "ಅಷ್ಟವೆಯೆನಲ್ಕಕ್ಕದಷ್ಟಮಿಗೆ ಪೆಸರ್" (ಶಶರ. ೫). [< ಸಂ. ಅಷ್ಟಮೀ]

**ಅಷ್ಟಶೋಭೆ** (ನಾ). ಮಂಗಳಸೂಚಕವಾದ ಎಂಟು ಬಗೆಯ ಅಲಂಕಾರಗಳು ; ಸುಣ್ಣಬಣ್ಣಗಳನ್ನು ಹಚ್ಚುವುದು, ಸುಗಂಧ ದ್ರವ್ಯಗಳಿಂದ ಸಾರಣೆ, ರಂಗವಲ್ಲಿ, ತಳಿರುತೋರಣ, ಧ್ವಜ ವನ್ನು ಏರಿಸುವುದು, ಪುಷ್ಪಗುಚ್ಛಗಳಿಂದ ಅಲಂಕರಿಸುವುದು, ಚಪ್ಪರ ಹಾಕುವುದು, ಮೇಲುಕಟ್ಟು ಕಟ್ಟುವುದು : ಕತ್ತುರಿಯ ಸಗಣನೀರ್ ಬಿಡುಮುತ್ತಿನ ರಂಗವಲಿ ಮಿಳಿರ್ವ ದುಗುಲದ ಗುಡಿ ಸಂಪತ್ತಿನ ಬಿತ್ತರದೆತ್ತಿದ ಮುತ್ತಿನ ಮಂಡವಿಗೆ ಪೊಱಲ ಮನೆಗಳೊಳೆಲ್ಲಂ॥ ಅಂತಾಗಳೊಂದುತ್ತರಂ ಬಳೆಯೆ ಸೊಗಯಿಸುವ ಪೊೞಲೊಳಷ್ಟಶೋಭೆಯಂ ಮಾಡಿ (ಪಂಪಭಾ. ೩-೨ ವ) ; ಎನ್ನ ಪೆಂಡತಿ ಗಂಡುಮಗನಂ ಪೆಱಲೊಡಮಷ್ಟಶೋಭೆಯಂ ಮಾಡಿಸಿ ಮಹಾದಾನಂಗೆಯ್ದು (ಪಂಚತಂ. ೧೮೭-೫). [ಅಷ್ಟ + ಶೋಭೆ$_1$]

**ಅಷ್ಟಷಟ್ಪದಿ** (ನಾ). [ಛಂದ] (ಎಂಟು ಸಾಲುಗಳ ಒಂದು ಅಂಶವೂ ಆಮೇಲೆ ಆರು ಸಾಲುಗಳ ಮತ್ತೊಂದು ಅಂಶವೂ ಬರುವ ಒಟ್ಟು) ಹದಿನಾಲ್ಕು ಸಾಲುಗಳುಳ್ಳ ಪದ್ಯಜಾತಿ ; ಸಾನೆಟ್ : ಅಷ್ಟಷಟ್ಪದಿಯ ಶಿಲ್ಪಸಮರಚನೆ ಅದರ ಭಾವಬಂಧುರತೆಗೆ ಕಾರಣವಾಗುತ್ತದೆ (ಛಂದೋವಿ. ೩೦೩) ; ಭಾವಗೀತ, ಅಷ್ಟಷಟ್ಪದಿ . . . ಎಲ್ಲವೂ ಇಂದು ಕನ್ನಡದಲ್ಲಿ ನೆಲೆಗೊಂಡಿವೆ (ನವ್ಯಕಾ. ೨೪); ಅಷ್ಟಷಟ್ಪದಿಯಲ್ಲಿ ಉಯ್ಯಾಲೆಯಾಡುತಿದೆ ಕೌತುಕದ ಬಗೆ (ಉಯ್ಯಾಲೆ. ೩). [ಅಷ್ಟ + ಷಟ್ಪದಿ]

**ಅಷ್ಟಷಷ್ಟಿಕ್ಷೇತ್ರ** (ನಾ). ಅರವತ್ತೆಂಟು ದಿವ್ಯಕ್ಷೇತ್ರಗಳು : ನೆರೆದ ಶಿವಭವನಂಗಳಷ್ಟಷಷ್ಟಿಕ್ಷೇತ್ರ ನಿರುತವೆಂದೆತ್ತಿದೆನು ಕಯ್ಯನು (ಸಿದ್ಧರಾ. ೧-೮). [ಅಷ್ಟ + ಷಷ್ಟಿ + ಕ್ಷೇತ್ರ]

**ಅಷ್ಟಷಷ್ಟಿತೀರ್ಥ** (ನಾ). ಅರವತ್ತೆಂಟು ದಿವ್ಯತೀರ್ಥಗಳು : ಅಷ್ಟ ಷಷ್ಟಿತೀರ್ಥಂಗಳುಂಗುಷ್ಟದೊಳಗಿರೆ (ವೀಶೈಪು. ೧-೧-೩).
[ಅಷ್ಟ + ಷಷ್ಟಿ + ತೀರ್ಥ]

**ಅಷ್ಟಸಹಿತಶತ** (ನಾ). ನೂರೆಂಟು : ಒಂದೊಂದಱೊಳಕ್ಕುಂ . . . ವರಜಿನಬಿಂಬಂಗಳಷ್ಟಸಹಿತಶತಂಗಳ್ (ಸುಕುಮಾ. ೧೧-೫೧).
[ಅಷ್ಟ + ಸಹಿತ + ಶತ]

**ಅಷ್ಟಸಿದ್ಧಿ** (ನಾ). = ಅಷ್ಟಗುಣ ೩ : ಇಂತಷ್ಟಸಿದ್ಧಿಗಳ್ಗೆ ಧರ್ಮಾರ್ಥ ಕಾಮಮೋಕ್ಷಂಗಳ್ . . . ಅನ್ವಿತಂ (ಮಸೋವಿ. ೧-೩೦ ವ್ಯಾಖ್ಯಾ) ; ಅಣಿಮಾದಿ ಅಷ್ಟಸಿದ್ಧಿಗಳನ್ನು ಪಡೆದಿದ್ದ ಆ ಮಹಾತ್ಮರು ತಪ್ಪಿಸಿಕೊಂಡು ಹೋದ ಬಗ್ಗೆ. . . ವ್ಯಥೆಯಾಗಲಿಲ್ಲ (ರಾಜ್ಯೋದ. ೧೪೭).
[ಅಷ್ಟ + ಸಿದ್ಧಿ]

**ಅಷ್ಟಾಂಗ** (ನಾ). ೧. ಎಂಟು ಅಂಗಗಳು : ನಿಮ್ಮ ಶರಣಂಬೊಕ್ಕೆ ವೆನುತಂ ಬಿಮ್ಮಗೆಟ್ಟಷ್ಟಾಂಗದಿಂ ಪೊಡವಡುತ ನಸು ಸಾರ್ದು (ಬಸಪು. ೫೫-೪೩). 'ಅಷ್ಟಾಂಗಪ್ರಣಾಮ' ಪರಾ. ೨. [ಯೋಗಶಾ] ಎಂಟು ಅಂಗಗಳುಳ್ಳದ್ದು : ಯೋಗವು ಅಷ್ಟಾಂಗವೆಂದು ಪ್ರಸಿದ್ಧಿ (ಹಿಂದಸಾ. ೧೦೫). 'ಅಷ್ಟಾಂಗಯೋಗ' ಪರಾ. [ಅಷ್ಟ + ಅಂಗ$_2$]

**ಅಷ್ಟಾಂಗದಂಡಪ್ರಣಮ** (ನಾ). = ಅಷ್ಟಾಂಗಪ್ರಣಾಮ : ಭಕ್ತ ಗಣಂಗಳಿಗೆ ಧರಣೀತಳದೊಳಷ್ಟಾಂಗದಂಡಪ್ರಣಮವಂ ಮಾಡಿ (ಬಸಪು. ೩೬-೫೭). [ಅಷ್ಟಾಂಗ + ದಂಡ + ಪ್ರಣಮ]

**ಅಷ್ಟಾಂಗನಿಮಿತ್ತ** (ನಾ). ಭೂಮಿ, ಸ್ವಪ್ನ, ಶರೀರ, ಸ್ವರ, ಉತ್ಪಾತ, ಆಕಾಶ, ಲಕ್ಷಣ, ವ್ಯಂಜನ ಇವುಗಳಿಗೆ ಸಂಬಂಧಿಸಿದ ನಿಮಿತ್ತಗಳನ್ನು ಸೂಚಿಸುವ ಎಂಟು ಅಂಗಗಳಿಂದ ಕೂಡಿದ ಒಂದು ಶಾಸ್ತ್ರ : ಶಿವಗುಪ್ತಾಚಾರ್ಯರಷ್ಟಾಂಗನಿಮಿತ್ತಂಗಳಂ ಬಲ್ಲೋರ್ (ವಡ್ಡಾರಾ. ೭೭-೨೪) ; ಅಷ್ಟಾಂಗನಿಮಿತ್ತಮನಱಿವ ಮಹಾ ಮುನಿಯಂ ಬೆಸಗೊಂಡಂ (ಪಂಧಾಮಾ. ೧೧-೬೩) ; ಅಷ್ಟಾಂಗನಿಮಿತ್ತಂ ಬಗೆವೊಡವರ್ಗೆ ಶುದ್ಧಿಗೆಯಲ್ತೆ (ಧರ್ಮಾಮೃ. ೪-೧೫೮).
[ಅಷ್ಟಾಂಗ + ನಿಮಿತ್ತ]

**ಅಷ್ಟಾಂಗಪುಷ್ಟ** (ಗು). ಎಂಟು ಅಂಗಗಳು ಚೆನ್ನಾಗಿ ಪೋಷಣೆಗೊಂಡ : ಬಳೆದ ದೇಹಂಗೊಂಡಷ್ಟಾಂಗಪುಷ್ಟನಾಗಿ. . . ಕೈಪಱಿದ ದಂತಿ ಕಾಡೊಳ್ ಪೊಕ್ಕಂತೆ ಹೆಜಮೆಟ್ಟಿ ನಡೆನಡೆದು (ನಂಬಿರ. ೧೮-೧೧).
[ಅಷ್ಟಾಂಗ + ಪುಷ್ಟ]

**ಅಷ್ಟಾಂಗಪ್ರಣಾಮ** (ನಾ). ಸಾಷ್ಟಾಂಗ ನಮಸ್ಕಾರ ; ಅಷ್ಟಾಂಗ ಸಮೇತವಾಗಿ ಮಾಡುವ ನಮಸ್ಕಾರ; ಎದೆ, ತಲೆ, ಕಾಲುಗಳೆರಡು, ಮೊಣಕಾಲು, ದೃಷ್ಟಿ, ಕೈಗಳೆರಡು ನೆಲಕ್ಕೆ ಸೋಕುವಂತೆಯೂ, ಮನಸ್ಸಿನಲ್ಲಿ ತನ್ಮಯತೆಯನ್ನು ಹೊಂದಿಯೂ, ನಮಸ್ಕರಿಸುವೆನೆಂದು ಬಾಯಲ್ಲಿ ಹೇಳುತ್ತಲೂ ಮಾಡುವ ನಮಸ್ಕಾರ : ಕಂಡಷ್ಟಾಂಗಪ್ರಣಾಮಂಬೆರಸು ಹರಿಸದಿಂ ನಾರದಂ . . . ಶರಣೆನುತಂ ಸ್ತೋತ್ರಮಂ ಮಾಡುತಿರ್ದಂ (ಗಿರಿಕ. ೪-೪೫). ℙ ಇದರಲ್ಲಿ ಸಮಯ ಭೇದಗಳಿಂದ ಬೇರೆ ಬೇರೆ ಕ್ರಮಗಳಿವೆ.
[ಅಷ್ಟಾಂಗ + ಪ್ರಣಾಮ]

**ಅಷ್ಟಾಂಗಭಕ್ತಿ** (ನಾ). ಎಂಟು ಬಗೆಯಾದ ಭಕ್ತಿ : ನೈಜದಿಂದಷ್ಟಾಂಗ ಭಕ್ತಿಯೊಳೊಲಿದೊಲಿಸಿಯೊಲಿಸಿ (ಬಸಪು. ೬-೩೦). 'ಅಷ್ಟವಿಧಭಕ್ತಿ ಕ್ರಿಯೆ' ಪರಾ. [ಅಷ್ಟಾಂಗ + ಭಕ್ತಿ]

**ಅಷ್ಟಾಂಗಮೆಱಗು, ಅಷ್ಟಾಂಗವೆಱಗು** (ಕ್ರಿ). ಸಾಷ್ಟಾಂಗ ಪ್ರಣಾಮವನ್ನು ಮಾಡು: ತ್ರಿಲೋಕಶಿಖರಶೇಖರಂಗಷ್ಟಾಂಗಮೆಱಗಿ ಪೊಡಮಟ್ಟು (ಶಾಂತಿಪು. ೮-೧೧೪ ವ). **ಅಷ್ಟಾಂಗವೆಱಗು** : ಲಿಂಗಭಕ್ತಾಂಘ್ರಿಗಳ ಮೇಲಷ್ಟಾಂಗವೆಱಗಿ ನಮಿಸಿ ನಮಿಸಿ (ಬಸಪು. ೬-೨೪).
[ಅಷ್ಟಾಂಗ + ಎಱಗು]

**ಅಷ್ಟಾಂಗಯೋಗ** (ನಾ). [ಯೋಗಶಾ] ಎಂಟು ಅಂಗಗಳಿಂದ ಕೂಡಿದ ಕ್ರಮಬದ್ಧವಾದ ಯೋಗ ; ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ: ಸ್ವಾನುಭವದಷ್ಟಾಂಗಯೋಗಾನೂನಭಕ್ತಿಯೊಳಿಂತು ತನ್ನೊಳು ತಾನೆ ಮಱಹಿಂದಿಪ್ಪ ವೇಳೆಯೊ (ಬಸಪು. ೩೪-೨೦). [ಅಷ್ಟಾಂಗ + ಯೋಗ]

**ಅಷ್ಟಾಂಗಯೋಗಿ** (ನಾ). ಅಷ್ಟಾಂಗಯೋಗವನ್ನು ಅಭ್ಯಾಸ ಮಾಡಿದವನು: ಅಷ್ಟಾಂಗಯೋಗಿಗಳಗುರ್ವಗ್ರಗಣ್ಯ ಮೇಲಣ ಗವಿಯ ಶಾಂತನಂಜೇಶ ರಕ್ಷಿಸು (ವೀಶೈಪು. ೫-೧೬-೨).
[ಸಂ. ಅಷ್ಟಾಂಗಯೋಗಿನ್]

**ಅಷ್ಟಾಂಗವೆಱಗು** 'ಅಷ್ಟಾಂಗಮೆಱಗು' ನೋ.

**ಅಷ್ಟಾತ್ಮ** (ನಾ). [ವೀಶೈ] ಎಂಟು ಬಗೆಯ ಆತ್ಮಗಳು : ಜೀವಾತ್ಮನಂತರಾತ್ಮಂ ಪರಾತ್ಮಂ ನಿರ್ಮಲಾವಿಶೇಷಾತ್ಮ ಶುದ್ಧಾತ್ಮ ಸುಜ್ಞಾನಾತ್ಮನೋವಲು ಮಹಾತ್ಮ ಭೂತಾತ್ಮನಿಂತಷ್ಟಾತ್ಮರಿಂ (ವೀಶೈಪು. ೭-೩-೨೦).
[ಅಷ್ಟ + ಆತ್ಮ]

**ಅಷ್ಟಾದಶ** (ನಾ). ಹದಿನೆಂಟು : ಅಸದರ್ಥಂ . . . ಇನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೯. ೧-೪೦). [ಸಂ. ಅಷ್ಟಾದಶನ್]

**ಅಷ್ಟಾದಶಜಾತಿ** (ನಾ). ಹದಿನೆಂಟು ಬಗೆಯ ಜಾತಿಗಳು ; ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಲಿಂಗವಂತ, ಬಣಜಿಗ, ಗಂಗಡಿಕಾರವೊಕ್ಕಲಿಗ, ಮಡಿವಾಳಿ (ಅಗಸ), ಕೆಲಸಿಗ, ಕುರುಬ, ಕುಂಬಾರ, ಕಟುಕ, ಬಡಗಿ (ಓಜ), ಅಕ್ಕಸಾಲೆ, ತೊರೆಯ, ಉಪ್ಪಾರ, ಬೆಸ್ತ, ಹೊಲೆಯ, ಮಾದಿಗ (?) : ಜಾತಿ ಅಜಾತಿಯೆಂದು ಅಷ್ಟಾದಶಜಾತಿಯೊಳಗೆ ಇಕ್ಕಲಾಗದು ಅಷ್ಟಾದಶ ಜಾತಿಗಳೊಳಗೆಂದೂ ಭಾವಿಸಲಾಗದು (ಗಣಭಾ. ೨೪೯-೫). [ಅಷ್ಟಾದಶ + ಜಾತಿ]

**ಅಷ್ಟಾದಶತೀರ್ಥ** (ನಾ). ರಾಜನಿಗೆ ಸಹಾಯಕರಾದ ಹದಿನೆಂಟು ಅಧಿಕಾರಿಗಳು; ಮಂತ್ರಿ, ಪುರೋಹಿತ, ಯುವರಾಜ, ಕೋಶಾಧಿಕಾರಿ, ಅಂತರ್ವಂಶಿಕ, ನಗರಾಧ್ಯಕ್ಷ, ದ್ವಾರಪಾಲ, ಸೇನಾಧ್ಯಕ್ಷ, ಧರ್ಮಾಧ್ಯಕ್ಷ, ಧರ್ಮೋಪದೇಶಕ, ಕಾರ್ಯನಿರ್ಮಾಣಕ, ಸಭಾಧ್ಯಕ್ಷ, ದುರ್ಗಪಾಲಕ, ಅರಣ್ಯಪಾಲಕ, ಸೀಮಾಪಾಲಕ, ಸೆರೆಮನೆಯ ಅಧಿಕಾರಿ, ದಂಡಪಾಲ (ಕೊತ್ವಾಲ), ಯೋಜನಾಧಿಕಾರಿ: ಅನುಕ್ರಮದಿಂ ಚರರಂ ದ್ವಿಷನ್ನೃಪಾಷ್ಟಾದಶತೀರ್ಥದೊಳ್ನಡೆಯಿಸಲ್ (ಶಾಂತಿಪು. ೨-೯೨); ಸಹಜ ಕೃತ್ರಿಮವಿದ್ವಿಷ್ಟಾಷ್ಟಾದಶತೀರ್ಥಂಗಳೊಳ್ ವಿವಿಧವೇಷ ವಿದ್ಯಾವಿಶಾರದ ಪ್ರಚ್ಛನ್ನ ಪ್ರಣಿಧಿಗಳಂ ಪ್ರಯೋಗಿಸಿಯುಂ (ಚಂದ್ರಪು. ೨-೬೦ ವ). [ಅಷ್ಟಾದಶ + ತೀರ್ಥ]

**ಅಷ್ಟಾದಶದೋಷ** (ನಾ). ೧. [ಕಾವ್ಯಮಿ] ಹದಿನೆಂಟು ಕಾವ್ಯದೋಷಗಳು. P ಅಸದರ್ಥಂ ವಿಪರೀತಕಲ್ಪನೆಯಭವ್ಯಂ ದುಷ್ಕರಂ ಗ್ರಾಮ್ಯಂ ನೀರಸಮಪ್ರೌಢತೆಯಪ್ರತೀತಿವಚನಂ ದುಸ್ಸಂಧಿ ವಿಶ್ಲೇಷ ನಷ್ಟಸಮಾಸಂ ನಯನಾಶ ರೀತಿವಿಫಲಂ ದುರ್ಲಕ್ಷಣಂ ಹಾಸ್ಯ ವಾಗ್ವಿಷಮಾ ಸೌಮ್ಯ ಮನೋಜೆಯೆಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ಕ. ೧-೪೦). ಕನ್ನಡ ಕೈಪಿಡಿಯಲ್ಲಿ ಕೊಟ್ಟಿರುವ ದೋಷಗಳ ಸಂಖ್ಯೆ ಮತ್ತು ವಿವರಗಳು ಬೇರೆಯಾಗಿವೆ. ೨. [ಜೈನ] ಜೀವಿಗೆ ಅಂಟುವ ಹದಿನೆಂಟು ದೋಷಗಳು; "ಕ್ಷುಧೆ, ತೃಷೆ, ಭಯ, ದ್ವೇಷ, ರಾಗ, ಮೋಹ, ಚಿಂತೆ, ಜರೆ, ರೋಗ, ಮೃತ್ಯು, ಖೇದ, ಸ್ವೇದ, ಮದ, ಅರತಿ, ವಿಸ್ಮಯ, ಜನ್ಮ, ನಿದ್ರೆ, ವಿಷಾದ" (ಜೈನಪ. ೫೦೪); ವಿಗತಾಷ್ಟಾದಶದೋಷರಪ್ಪ ಜಿನರುಂ ಜ್ಞಾನರ್ಧಿಸಂಪನ್ನರಪ್ಪ ಗಣಾಧೀಶ್ವರರುಂ (ಪಂರಾಮಾ. ೧-೩೮). [ಅಷ್ಟಾದಶ + ದೋಷ]

**ಅಷ್ಟಾದಶಪರ್ವ** (ನಾ). ಮಹಾಭಾರತದ ಹದಿನೆಂಟು ಪರ್ವಗಳು; ಆದಿ, ಸಭಾ, ಅರಣ್ಯ, ವಿರಾಟ, ಉದ್ಯೋಗ, ಭೀಷ್ಮ, ದ್ರೋಣ, ಕರ್ಣ, ಶಲ್ಯ, ಗದಾ, ಸ್ತ್ರೀ, ಸೌಪ್ತಿಕ, ಶಾಂತಿ, ಆನುಶಾಸನಿಕ, ಅಶ್ವಮೇಧ, ಆಶ್ರಮವಾಸ, ಮೌಸಲ, ಸ್ವರ್ಗಾರೋಹಣ. [ಅಷ್ಟಾದಶ + ಪರ್ವ]

**ಅಷ್ಟಾದಶಪುರಾಣ** (ನಾ). ಹದಿನೆಂಟು ಪುರಾಣಗಳು; ಬ್ರಾಹ್ಮ, ಪಾದ್ಮ, ವಿಷ್ಣು, ಶೈವ, ಭಾಗವತ, ನಾರದೀಯ, ಮಾರ್ಕಂಡೇಯ, ಆಗ್ನೇಯ, ಭವಿಷ್ಯತ್, ಬ್ರಹ್ಮವೈವರ್ತ, ಲೈಂಗ್ಯ, ವರಾಹ, ಸ್ಕಾಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ. [ಅಷ್ಟಾದಶ + ಪುರಾಣ]

**ಅಷ್ಟಾದಶಪ್ರಜೆ** (ನಾ). ಹದಿನೆಂಟು ಬಗೆಯ ಪ್ರಜೆಗಳು: ಶ್ರೀಹು[ಲಿ]ಗೆಜೆಯ ನಾಡಗಉಡ ಪ್ರಜೆಗ[ಳು ಸೆಟ್ಟಿ] . . . ಅಷ್ಟಾದಶಪ್ರಜೆಗಳು (ಸೌಇಇ. XX, ೨೩೮-೧೧; 1547). [ಅಷ್ಟಾದಶ + ಪ್ರಜೆ]

**ಅಷ್ಟಾದಶಪ್ರಧಾನ** (ನಾ). ರಾಜನ ಹತ್ತಿರವಿರುವ ಹದಿನೆಂಟು ಮಂದಿ ಮುಖ್ಯ ವ್ಯಕ್ತಿಗಳು; ಪೌರೋಹಿತ, ದಂಡನಾಥ, ಅಧ್ಯಕ್ಷ, ಅಧಿಕಾರಿ, ಮಂತ್ರಿ, ಪ್ರಧಾನಿ, ಮಹೋಗ್ರಾಣಿ, ಭಂಡಾರಿ, ಸೇನಾನಾಯಕ, ಸಂಧಿವಿಗ್ರಹಿ, ಪ್ರತಿಹಾರಿ, ಅಂತಸ್ಥಿತ, ದ್ವಾರಪಾಲ, ಕರಣಿಕ, ದಂಡಪಾಣಿ, ಕೊಠಾರಿ, ಯುವರಾಜ, ತಳವಾರ. P ಪೌರೋಹಿತಂ ದಂಡನಾಥನಧ್ಯಕ್ಷನಧಿಕಾರಿ ಮಂತ್ರಿ ಪ್ರಧಾನಂ ಮಹೋಗ್ರಾಣಿ ಭಂಡಾರಿ ಸೇನಾನಾಯಕಂ ಸಂಧಿವಿಗ್ರಹಿ ಪ್ರತಿಹಾರಿಯಂತಸ್ಥಿತಂ ದ್ವಾರಪಾಲಂ ಕರಣಿಕಂ ದಂಡಪಾಣಿ ಕೊಠಾರಿ ಯುವರಾಜನಾ ತಳವಾರನೆಂಬಿವರು ಭೂರಮಣರಲ್ಲಿ ವಿನಿಯೋಗಮಂ ತಾಳ್ದು ಪದಿನೆಣ್ಬರ್ ಪ್ರಧಾನರೆನಿಕುಂ (ಮಂಗರಾ. ೮೦-೧೧). [ಅಷ್ಟಾದಶ + ಪ್ರಧಾನ]

**ಅಷ್ಟಾದಶವರ್ಣನೆ** (ನಾ). ಮಹಾಕಾವ್ಯದಲ್ಲಿರಬೇಕಾದ ಹದಿನೆಂಟು ವಿಷಯಗಳ ವರ್ಣನೆ; ಸಮುದ್ರ, ಪರ್ವತ, ಪಟ್ಟಣ, ರಾಜ, ವಿವಾಹ, ಪುತ್ರೋತ್ಪತ್ತಿ, ಸೂರ್ಯೋದಯ, ಚಂದ್ರೋದಯ, ಋತು, ಉದ್ಯಾನವನ, ಜಲಕ್ರೀಡೆ, ಮಧುಪಾನಗೋಷ್ಠಿ, ಸುರತ, ವಿರಹ, ಮಂತ್ರಾಲೋಚನೆ, ದೂತಪ್ರೇಷಣ, ಯುದ್ಧ, ಪ್ರಯಾಣ: P ಉದಧಿ ಪುರಾಧಿಪಸುತ ಮಂತ್ರ ದೂತಗಮನಾಜಿ ವಿರಹ ಪರಿಣಯ ಸುರತರ್ತು ದಿನೇಶ ಚಂದ್ರ ಮಧು ಕುಭೃದುದಕ ವನಸ್ಪತಿಯೆ ಕೃತಿಗೆ ಪದಿನೆಂಟಂಗಂ (ಉದಯಾ. ೧-೧೩). [ಅಷ್ಟಾದಶ + ವರ್ಣನೆ]

**ಅಷ್ಟಾದಶಾಮಾತ್ಯ** (ನಾ). = ಅಷ್ಟಾದಶಪ್ರಧಾನ: "ಮಂತ್ರಿ ಮೊದಲಾದಷ್ಟಾದಶಾಮಾತ್ಯರುಂ ಮುನಿ ಕೂಪಂ ಭಗ ಪುಣ್ಯತೀರ್ಥಮಿನಿತುಂ ತೀರ್ಥಾಭಿಧಾನಂ" (ನಾನಾರ. ೯೯). [ಅಷ್ಟಾದಶ + ಅಮಾತ್ಯ]

**ಅಷ್ಟಾಪದ** (ನಾ). ೧. ಎಂಟು ಕಾಲುಗಳುಳ್ಳ ಪ್ರಾಣಿ; ಶರಭ: ಭ್ರಮಿತಾಷ್ಟಾಪದಮುಗ್ರಖಡ್ಗಮೃಗಸಂಭನ್ನಂ (ಪಂರಾಮಾ. ೬-೧೨೨). ೨. ಜೇಡರಹುಳು. ೩. ಚಿನ್ನ. ೧, ೩: ಇದು ದೇಹಾರದ ಗೇಹದಂತೆ ಹರಿಣೀರಮ್ಯಂ ಗ್ರಹಗ್ರಾಮದಂತುದಿತಕ್ರೋಡವಿಭಾಸಿ ಕೋಶಗೃಹದಂತಷ್ಟಾಪದಾಧಿಷ್ಠಿತಂ (ಪುಷ್ಪಪು. ೫-೬೮); ಶಿಖಿನಿವಾಸಸ್ಥಾನಮಾಗಿ ದಿಗ್ಭಾಗಮಲ್ಲಷ್ಟಾಪದೋದ್ಭಾಸಮಾಗಿ ನೈಪಥ್ಯಮಲ್ಲ (ಜೈಮಿಭಾ. ೧೦-೬). ೪. ಚದುರಂಗದ ಅಥವಾ ಪಗಡೆಯ ಮಣೆ. ೫. ಒಂದು ಬಗೆಯ ಅಡವಿಮಲ್ಲಿಗೆ; ಕಾಡುಮಲ್ಲಿಗೆ. ೬. ಕೀಲು; ಕಡಾಣಿ. ೭. ಕೈಲಾಸ ಪರ್ವತ. [ಸಂ.]

**ಅಷ್ಟಾಪದಮಯ** (ನಾ). ಚಿನ್ನದಿಂದ ಮಾಡಿದ್ದು; ಸುವರ್ಣಮಯವಾದದ್ದು: ಅಷ್ಟಾಪದಮಯವಹ ಜಿನಸದನವ ಸೃಷ್ಟಿಪಾಲಕನರ್ಥಿಯಲಿ ನಿಟ್ಟಿಸಿ (ತ್ರಿಪುಸಾಂ. ೮೪). [ಸಂ.]

**ಅಷ್ಟಾಪದರಿಪು** (ನಾ). ೧. ಗಂಡಭೇರುಂಡ. ೨. ಸಿಂಹ. 'ಅಷ್ಟಾಪದರಿಪುಪೀಠ' ಪರಾ. [ಅಷ್ಟಾಪದ + ರಿಪು]

**ಅಷ್ಟಾಪದರಿಪುಪೀಠ** (ನಾ). ೧. ಸಿಂಹದ ಆಕೃತಿಯ ಪೀಠ; ಸಿಂಹಾಸನ. ೨. ಸಿಂಹಾಸನದ ಮೇಲೆ ಕುಳಿತವನು: ಅಷ್ಟಾಪದರಿಪುಪೀಠಂಗಷ್ಟವಿಧಾರ್ಚನೆಗಳೆಸೆಯೆ ಪದೆದರ್ಚಿಸಿದಂ (ಪುಷ್ಪಪು. ೧೧-೫೫). [ಅಷ್ಟಾಪದರಿಪು + ಪೀಠ]

**ಅಷ್ಟಾಪದವಿಷ್ಟರ** (ನಾ). ಸುವರ್ಣಪೀಠ: ರಾಜಪುತ್ರಸಮಾಜಪರಿವೇಷ್ಟಿತನಿಷ್ಪ್ರಾಷ್ಟಾಪದವಿಷ್ಟರೋಪವಿಷ್ಟನಜಿತಸೇನಚಕ್ರಧರನಿರೆ (ಚಂದ್ರಪು. ೯-೩ ವ). [ಅಷ್ಟಾಪದ + ವಿಷ್ಟರ]

**ಅಷ್ಟಾರ್ಘ್ಯ** (ನಾ). [ಜೈನ] ಜಲ, ಅಕ್ಷತೆ, ಗಂಧ, ಪುಷ್ಪ, ಧೂಪ, ದೀಪ, ಚರು, ಫಲ ಇವುಗಳ ಅರ್ಪಣೆ,—ಇವುಗಳನ್ನು ಒಳಗೊಂಡ ಪೂಜೆ: ದೊರೆವೆತ್ತಷ್ಟಾರ್ಘ್ಯಮುಮಂ ಮಾಡಿದುದಡಿಮೊದಲೊಳಂ ಮಂದಹಾಸಂ ಜಳಂ ಬಂಧುರಗಂಧಂ ಶ್ವಾಸಗಂಧಂ . . . ಬಿಂಬೋಷ್ಠಫಳಂ ತಾನೆನಿಸಿ ಜಿನನ ತಾಯ್ಗಿಂದ್ರಕಾಂತಾಕದಂಬಂ (ಪುಷ್ಪಪು. ೯-೬೧). P ವೈದಿಕಪದ್ಧತಿಯ ಪ್ರಕಾರ ಅಷ್ಟಾರ್ಘ್ಯವೆಂದರೆ ನೀರು, ಹಾಲು, ದರ್ಭೆ, ಮೊಸರು, ತುಪ್ಪ, ಅಕ್ಷತೆ, ಯವ, ಬಿಳಿಸಾಸುವೆ ಇವುಗಳಿಂದ ಕೂಡಿದ ಅರ್ಘ್ಯ. [ಅಷ್ಟ + ಅರ್ಘ್ಯ]

**ಅಷ್ಟಾವಂಕ** (ನಾ). = ಅಷ್ಟಾವಕ್ರ ೧: ಅಮೃತಮತಿಯೆತ್ತ ರೂಪಾಧಮನಷ್ಟಾವಂಕನೆತ್ತ (ಯಶೋಚ. ೨-೩೪). [< ಸಂ. ಅಷ್ಟಾವಕ್ರ]

**ಅಷ್ಟಾವಕ್ರ** (ನಾ). ೧. ಬಹಳ ವಿಕಾರವಾದ ಅವಯವಗಳುಳ್ಳ ವ್ಯಕ್ತಿ. ೨. (ಎಂಟು ಅವಯವಗಳು ವಕ್ರವಾದ) ಒಬ್ಬ ಋಷಿಯ ಹೆಸರು. ೩. ಬಹಳ ವಿಕಾರವುಳ್ಳದ್ದು: ಹೀಗೆಯೇ ತಮ್ಮ ಹೆಸರನ್ನು ಅಷ್ಟಾವಕ್ರವಾಗಿ ಮಾಡಿಕೊಂಡಿದ್ದಾರೆ (ನಾಡಿಗೇ. ೨೬೯). [ಸಂ.]

**ಅಷ್ಟಾವಧಾನ** (ನಾ). ೧. ಎಂಟು ವಿಷಯಗಳಿಗೆ ಒಂದೇ ಕಾಲದಲ್ಲಿ ಗಮನ ಕೊಡುವುದು : ಅಷ್ಟಾವಧಾನ ಗಣ್ಯವೆ ನೂಱುಸಾವಿರ ಶಿಷ್ಟ ಲಕ್ಷಾವಧಾನಗಳಾ ದೃಷ್ಟಿಯೆ ತನು ಸುಬುದ್ಧಿಯೆ ಮುಖವಾದಂತೆ ಸೃಷ್ಟಿಸಿ ತೋಱುವರವರು (ಭರಚ. ೬೪–೬೪) ; ಈ ಅಷ್ಟಾವಧಾನ ತಮ್ಮಿಂದ ನೀಗೀತೇ (ಗಂಮಾಯಿ. ೧೦೮). ೨. ದೇವತಾ ಪೂಜೆಯಲ್ಲಿ ಎಂಟು ವಿಧವಾದ ಸೇವೆಗಳ ಸಮರ್ಪಣ ; ನಾಲ್ಕು ವೇದಗಳ ಋಕ್ಕುಗಳ ಪಠನ, ಪುರಾಣಶ್ಲೋಕವಾಚನ, ಸ್ತೋತ್ರಪಾಠ, ಪಂಚಾಂಗ ಶ್ರವಣ, ಸಂಗೀತ (ಗಾಯನ). [ಅಷ್ಟ + ಅವಧಾನ]

**ಅಷ್ಟಾವಧಾನಿ** (ನಾ). ಎಂಟು ವಿಷಯಗಳಿಗೆ ಏಕಕಾಲದಲ್ಲಿ ಅವಧಾನ ಕೊಡಬಲ್ಲ ವ್ಯಕ್ತಿ : ಒಂದು ಕ್ಷಣವೂ ವಿರಾಮವಿಲ್ಲದೆ ಅವಳು ಅಷ್ಟಾವಧಾನಿಯಂತೆ ಒಮ್ಮೆಗೇ ಎಂಟೂಜನಕ್ಕೆ ಗಮನ ಕೊಡುತ್ತಾ ತನ್ನ ಕೆಲಸವನ್ನು ನಿರ್ವಹಿಸುತ್ತಿದ್ದಳು (ಮಹಾಗ. ೩೩೦).
[ಸಂ. ಅಷ್ಟಾವಧಾನಿನ್]

**ಅಷ್ಟಾವರಣ** (ನಾ). [ವೀಶೈ] ಎಂಟು ಆವರಣಗಳು : "ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷಿ, ಮಂತ್ರ ಇವುಗಳೇ ಅಷ್ಟಾವರಣಗಳೆಂದು ಪ್ರಸಿದ್ಧವಾದವುಗಳು" (ಅಷ್ಟಾವಿ.೧); ಅಷ್ಟಾವರಣದಲ್ಲಿ ನಿಬ್ಬೆಱಗಿನಿಂದ ಕೂಡಿ ಭಕ್ತಿಯೆಂಬ ಸಮುದ್ರದಲ್ಲಿ ಈಸಾಡುವುದೇ ಚಂದ (ವಚಸಂ. ೨೧೮–೬೧). [ಅಷ್ಟ + ಆವರಣ]

**ಅಷ್ಟಾವಶೇಷ** (ನಾ). ಎಂಟು ಅಂಶದಲ್ಲಿ ಉಳಿದ ಒಂದು ಅಂಶ ; ಎಂಟರಲ್ಲಿ ಒಂದು ಪಾಲು ಉಳಿಯುವುದು : ಅವಗಂ ಜನ್ನಿಗೆಯ ಪಾಲಷ್ಟಾವಶೇಷದ ಪಾಕಮಾಗಿರೆ ತೀವಿ ಕಬ್ಬಿನ ಕಟ್ಟಿಗೆಯ ಪುಡಿಯೊಂದು ಸೇರೆಯನು ದೇವರಿಗೆ ಕೊಟ್ಟು (ಬಸವು. ೧೧–೨೮) ; ಗಜ್ಜುಗದ ತಿರುಳು, ಚಿತ್ರಮೂಲ, ಶುಂಠಿ, ಕಿರುಗಡಸಿಗೆ, ಹೊಂಗೆತೊಕ್ಕು, ಕೊಡಸಾರಿ ಗೆಡ್ಡೆ ; ಇಷ್ಟನೂ ಪ್ರತ್ಯೇಕ ಎರಡು ವರಹ ತೂಕವ ಒಂದು ಬಳ್ಳ ನೀರಲ್ಲಿ ಕಷಾಯವೆತ್ತಿ ಅಷ್ಟಾವಶೇಷವಾಗಿ ಕಾಸಿಕೊಡಲು ಆಮಾತಿಸಾರ, ಅಗ್ನಿ ಮಾಂದ್ಯಗಳು ಪರಿಹರ (ವೈದ್ಯಸಾ. I, ೨೧೬).
[ಅಷ್ಟ + ಅವಶೇಷ]

**ಅಷ್ಟಾಶೀತಿ** (ನಾ). ಎಂಬತ್ತೆಂಟು : ಒರ್ವ ಚಂದ್ರನ ಪರಿವಾರಂ ಒರ್ವಾದಿತ್ಯನುಂ ಅಷ್ಟಾಶೀತಿಗ್ರಹಜಯಮುಂ . . . ಆಕ್ಕುಂ (ತತ್ತ್ವಪ್ರ. ೨೦೩) ; ಷಡುರಸಾನ್ನದಲಾದರಣೆಯಿಂದುಡುಗೆಯಿಂದವೆ ತುಷ್ಟಿಬಡಿಸಿದ ಪೊಡವಿಪಾಲಕ ಮುನಿಗಳಷ್ಟಾಶೀತಿ ಸಾವಿರವ (ಕುವ್ಯಾಅ. ೧೬–೬).
[ಅಷ್ಟ + ಅಶೀತಿ]

**ಅಷ್ಟಾಹ್ನಿಕ** (ನಾ). [ಜೈನ] ಶ್ರಾವಕರು ಆಚರಿಸುವ ಜಿನಪೂಜೆ. ☞ ಇದನ್ನು ಅಷ್ಟಮಿಯಿಂದ ಹುಣ್ಣಿಮೆಯವರೆಗೆ ಮಾಡುತ್ತಾರೆ : ಸಮಸ್ತ ಭವ್ಯಜನನಿರ್ವರ್ತ್ಯಮಾನಾಷ್ಟಾಹ್ನಿಕಮುಂ (ಆದಿಪು. ೧೫–೧೩) ; ಅಷ್ಟಾಹ್ನಿಕಮೆಂಬುದು ಸಕಲ ಶ್ರಾವಕಜನಂಗಳ್ ಮಾಳ್ಪ ಪೂಜೆಯಕ್ಕುಂ (ಅಜಿಪು. ೧೨–೧ ವ). [ಅಷ್ಟ + ಅಹ್ನಿಕ]

**ಅಷ್ಟಿ** (ನಾ). [ಛಂದ] ಅಕ್ಷರ ಛಂದಸ್ಸುಗಳಲ್ಲಿ ಹದಿನಾರನೆಯ ಛಂದಸ್ಸಿನ ಹೆಸರು ; ಒಂದು ಪಾದದಲ್ಲಿ ಹದಿನಾರು ಅಕ್ಷರಗಳಿರುವ ಸಮವೃತ್ತಗಳ ಸಮುದಾಯ : ಅಷ್ಟಿಯೆಂಬ ಛಂದದೊಳ್ ಪದಿನಾಱಕ್ಕರಂ ಪಾದಮಾಗಿ ಪುಟ್ಟುವ ೬೫, ೫೩೬ ವೃತ್ತಂಗಳೊಳಗೆ (ಛಂದೋಂಬು. ೨–೧೦೮ ವ). [ಸಂ.]

**ಅಷ್ಟು, ಅಯಿಷ್ಟು, ಅಯಿಾಷ್ಟು** (ನಾ). ಆ ಪರಿಮಾಣ ; ಆ ಅಳತೆ : ಸಲುವಷ್ಟನೆ ಅರ್ಪಿತಮಾಡಿ (ಏಲೇಶ್ವ. ೧೪೪) ; ದೃಷ್ಟಿವಾರೆ ನಿಮ್ಮ ನೋಡಲೊಡನೆ ಬಿಟ್ಟದಷ್ಟು ತಪ್ಪುಳ್ಳೊಡೆ ಮುಟ್ಟಲಮ್ಮವು ನೋಡಾ (ಮಹಾದೇ. ೯–೧) ; ಕಡಲೇಳಂ ಮುಗುಚಿಟ್ಟೊಡಂ ಕಲಿಯೆ ನಾನಾ ಹೃದ್ಯವಿದ್ಯಂಗಳಂ ಪಡೆದಷ್ಟಲ್ಲದೆ ಬರ್ಪುದೇ (ಸೋಮೇಶ. ೨೮) ; ಕಣ್ಣಿನಷ್ಟು ಪ್ರಕಾಶವಿಲ್ಲ, ಮಣ್ಣಿನಷ್ಟು ಆಧಾರವಿಲ್ಲ (ಗಾದೆ). **ಅಯಿಷ್ಟು** : ಒಂದು ದಿನ ಒಂದು ಕೊಱಗೇಲಿ ಬಿತ್ತುವ ಆಯಿಷ್ಟು ಭೂಮಿ ಯಿಷ್ಟನೂ ಆಚಂದ್ರಾರ್ಕ ದೇವರ ಅಮ್ರುತಪಡಿಗೆ ಸಲುವುದಕ್ಕೆ ಕೊಟ್ಟ ಭೂಮಿ (ಎಕ. XI, ಹೊಳಲ್ಕೆ. ೧೨೬–೨೦ ; 1387). **ಅಯಿಾಷ್ಟು** : ಯಿಾ ಧಂರ್ಮ್ಮ್ಮೂ ಸೂರ್ಯ್ಯಚಂದ್ರಮುಸ್ಸುಗಳು ಉಳ್ಳ ಅಯಿಾಷ್ಟು ಕಾಲವೂ ನಡವುದು (ಎಕ. XI, ಹೊಳಲ್ಕೆ. ೧೨೬–೨೧ ; 1387).

ಅಷ್ಟನೆಯ = ಆ ಸಂಖ್ಯಾಕ್ರಮಕ್ಕೆ ಸೇರಿದ. **ಅಷ್ಟರಲ್ಲಿ** = ೧. ಆ ಕಾಲದ ಪರಿಮಿತಿಯೊಳಗೆ; ಆ ವೇಳೆಯಲ್ಲಿ; ಆ ಸನ್ನಿವೇಶದಲ್ಲಿ. ೨. ಆ ಪ್ರಮಾಣದಲ್ಲಿ. **ಅಷ್ಟರವಂ** = (ಸಂಖ್ಯಾಕ್ರಮದಲ್ಲಿ) ಆ ಸ್ಥಾನಕ್ಕೆ ಸಿಕ್ಕತಕ್ಕವನು. **ಅಷ್ಟರು** = ಅನಿಬರು ; ಅಷ್ಟು ಮಂದಿ : ಸಂತೃಪ್ತಿ ಪಡಿಸಿದನಖಿಳ ಸತ್ಕಲಾಪರಿಣತರನುಚಿತ ಸನ್ಮಾನದಿಂದೆ ಅಷ್ಟರುಂ ಸಂತೃಪ್ತಿಯಿಂದ್ಯೆದೆ (ಭರಚ. ೨–೧೦) ; ಪಟ್ಟಣದ ಜನವಷ್ಟು ಬಿನ್ನೈಸಿ ಧರಣಿಪತಿಯಷ್ಟರುಂ ಸಂತವಿಟ್ಟಂ (ತುರಂಗ. ೩೦–೩೬). **ಅಷ್ಟೆ, ಅಷ್ಟೇ** = ೧. ಅಷ್ಟುಮಾತ್ರ : ಬೇರೇನೂ ಅಲ್ಲ ನಡೆದ ವಿಚಾರ ಅಷ್ಟೆ (ರೂಢಿ). ೨. ಅಲ್ಲವೆ : ನೀನು ಆ ದಿನ ಬಂದಿದ್ದೆಯಷ್ಟೆ ಅಂದು ಒಂದು ವಿಶೇಷ ವಿಷಯ ತಿಳಿಯಿತು (ರೂಢಿ). ೩. ವ್ಯತ್ಯಾಸವೇನೂ ಇಲ್ಲ; ಒಂದೇ ಸಮ : ನೀನು ನನ್ನ ಹಾಸಿಗೆಯನ್ನು ಹಾಸಿದರೂ ಅಷ್ಟೇ ಬಿಟ್ಟರೂ ಅಷ್ಟೇ, ನನಗೆ ನಿದ್ದೆ ಬರುವುದು (ಮುಂಬಯಿ. ೪–೧೧) ; ನೀನು ಬಂದರೂ ಅಷ್ಟೆ, ಬಿಟ್ಟರೂ ಅಷ್ಟೆ, ನಡೆಯುವುದು ಬೇರೆ ತಪ್ಪುವುದಿಲ್ಲ (ರೂಢಿ). **ಅಷ್ಟೇ ಒಂದು** = ಅಷ್ಟುಮಾತ್ರವಾದರೂ ; ಸ್ವಲ್ಪಮಾತ್ರ : ನನ್ನ ತಂದೆಗೆ ಈ ಕಾಲದಲ್ಲಿ ಅಷ್ಟೇಒಂದು ಹೊಟ್ಟೆಯ ಚಿಂತೆ ಕಡಿಮೆ ಆಗುವುದು (ಮುಂಬಯಿ. ೪–೬೬). **ಅಷ್ಟುಹೊತ್ತಿಗೆ** = ಆ ವೇಳೆಗೆ ಸರಿಯಾಗಿ : ನಾವು ಹೊರಡುವಷ್ಟುಹೊತ್ತಿಗೆ ಅವನು ಬಂದನು (ರೂಢಿ). **ಅಷ್ಟುಹೊತ್ತಿಗೇ ಏಳು** = ಹೊತ್ತಿಗೆ ಮುಂಚೆ ಏಳು. **ಅಷ್ಟಕ್ಕಷ್ಟೇ** = ಸಾಧಾರಣ ; ಪ್ರಶಂಸಾರ್ಹವಲ್ಲ ; ಅತೃಪ್ತಿಕರ : ಆವಾಗಿನ ಕಲಾಭಿರುಚಿಯೂ ಅಷ್ಟಕ್ಕಷ್ಟೇ (ಸಮುಜೀ. ೬ ಪೀ).
[ಅಸ್ಸು + –ಟು ? ; ಅ + ಇಷ್ಟು]

**ಅಷ್ಟುಪಾಸ** (ನಾ). ಎಂಟು ದಿನಗಳ ಉಪವಾಸ : ಇನಿತುಂ ಬಾಧಾವಿರಹಿತಮೆನಿಸಿರೆ ಬೇಹೂರ ವಿಪ್ರಮುಖ್ಯುರ್ಕ್ಳೆಟ್ಟಜ್ಜಿನಪೂಜೆಗಷ್ಟುಪಾಸದ ಮುನಿಗೆ ಮಹಾಗುಣಗೆ ಚಂದ್ರತಾರಂಬರೆಗಂ (ಸೌಇಇ. IX–i, ೧೧೫–೩೦ ; 1054). [< ಸಂ. ಅಷ್ಟೋಪವಾಸ]

**ಅಷ್ಟುಪಾಸಿ** (ನಾ). = ಅಷ್ಟೋಪವಾಸಿ : ತಾಂ ಮಾಡಿಸಿದಂ ಸಾಹಸನಿಳಯಂ . . . ದೇಹಾರಮನಷ್ಟುಪಾಸಿಮುನಿಪತಿಗಿತ್ತ (ಸೌಇಇ. IX–i, ೧೧೫–೫೪ ; 1054). [< ಸಂ. ಅಷ್ಟೋಪವಾಸಿನ್]

**ಅಷ್ಟೈಶ್ವರ್ಯ** (ನಾ). ೧. = ಅಷ್ಟಗುಣ ೩. ೨. ರಾಜ್ಯ, ಭಂಡಾರ, ಸೈನ್ಯ, ಆನೆ, ಕುದುರೆ, ಛತ್ರ, ಚಾಮರ, ಪಲ್ಲಕ್ಕಿ. ೩. ಎಂಟು ವಿಧವಾದ ಅಧಿಕಾರಗಳು ; "ಅಷ್ಟೈಶ್ವರ್ಯವೆಂದರೆ ಎಂಟು ವಿಧವಾದ ಅಧಿಕಾರದ ಲಕ್ಷಣಗಳು :— ೧. ಬೇಕಾದ ಆಜ್ಞೆಯನ್ನು ಮಾಡುವುದು. ೨. ಸುಂಕವನ್ನು ಗೊತ್ತುಮಾಡುವುದು. ೩. ದಂಡವನ್ನು ಅಂದರೆ ಜುಲ್ಮಾನೆಯನ್ನು ವಿಧಿಸುವುದು. ೪. ಮೊಹರನ್ನು ಉಪಯೋಗಿಸುವುದು. ೫. ಗಡಿಗಳನ್ನು ನಿರ್ಣಯಿಸುವುದು. ೬. ಪ್ರಜೆಗಳನ್ನು ನಿರ್ಭಯವಾಗಿ ಕಾಪಾಡುವುದು. ೭. ತನ್ನ ಇಷ್ಟಾನುಸಾರವಾಗಿ ಕಂದಾಯವನ್ನು ತೆಗೆದುಕೊಳ್ಳುವುದು. ೮. ಬೇಕಾದ ಶಿಲ್ಪಕಾರ್ಯವನ್ನು ಮಾಡಿಸಿಕೊಳ್ಳುವುದು" (ಸಂಭಾನಿ. ೨೦೧). [ಅಷ್ಟ + ಐಶ್ವರ್ಯ]

**ಅಷ್ಟೋತ್ತರ** (ನಾ). ೧. ನೂರೆಂಟು ನಾಮುಗಳನ್ನು ಹೇಳಿಕೊಂಡು ನಡೆಸುವ ದೇವತಾರ್ಚನೆ: ಗೋಪಾಳರಾಯರು ರಾಯರ ಭಕ್ತರು. ಗುರುವಾರಕ್ಕೊಮ್ಮೆ ಅಷ್ಟೋತ್ತರವಾಗಬೇಕು, ಅವರ ಮನೆಯಲ್ಲಿ (ವೈನಿ. ೬೧). ೨. ನೂರೆಂಟು ನಾಮುಗಳನ್ನುಳ್ಳ ದೇವತಾ ಸ್ತೋತ್ರ: ಬಸವ ಲಿಂಗನಾಮಾಷ್ಟೋತ್ತರ (ಕವಿಚ. III, ೨೯೪). ೩. ಒಂದೇ ಮಂತ್ರ ವನ್ನು ಅಥವಾ ನಾಮುವನ್ನು ನೂರೆಂಟು ಬಾರಿ ಪಠಿಸುವುದು. ೪. (ವ್ಯಂಗ್ಯವಾಗಿ) ಬೈಗಳು: ಆಯಿತಪ್ಪ ನನಗೆ ಅಷ್ಟೋತ್ತರ (ರೂಢಿ). [ಸಂ. P ಅಷ್ಟೋತ್ತರಶತದ ಸಂಕ್ಷಿಪ್ತ ರೂಪ]

**ಅಷ್ಟೋತ್ತರಶತ** (ನಾ). ನೂರೆಂಟು: ಅಮುರದೌವಾರಿಕ ಪರಿಪಾಳಿತ ಬಹಿರಂತರ್ಜಗತೀದ್ವಯ ನಿಹಿತ ಪ್ರತ್ಯೇಕಾಷ್ಟೋತ್ತರಶತಾಷ್ಟಮಂಗಳ ನವನಿಧಿ ಸಮನ್ವಿತ ಜಾತರೂಪ ಗೋಪುರಾಭ್ಯಂತರ ಮಹಾವೀಥೀ ಮಧ್ಯ ದೊಳ್ (ಆದಿಪು. ೧೦–೨೨ ವ).
[ಅಷ್ಟೋತ್ತರ + ಶತ]

**ಅಷ್ಟೋತ್ತರಸಹಸ್ರ** (ನಾ). ಸಾವಿರದ ಎಂಟು: ಅಷ್ಟೋತ್ತರ ಸಹಸ್ರ ನಾಮಾಂಕಿತ ಸ್ತುತಿಗಳಿಂ ಸ್ತುತಿಯಿಸಿ (ಆದಿಪು. ೧೫–೨೧ ವ).
[ಅಷ್ಟೋತ್ತರ + ಸಹಸ್ರ]

**ಅಷ್ಟೋಪವಾಸಿ** (ನಾ). ಎಂಟು ದಿನಗಳ ಉಪವಾಸವ್ರತವನ್ನು ಹಿಡಿದವನು: ಮೇಘನನ್ದಿಭಟ್ಟಾರಕರ ಶಿಷ್ಯರಪ್ಪ ಕೇಶವನನ್ದಿ ಅಷ್ಟೋಪ ವಾಸಿ ಭಳಾರರ ಬಸದಿಗೆ ಪೂಜಾನಿಮಿತ್ತದಿಂ ಧಾರಾಪೂರ್ವ್ವಕಂ (ಎಕ. VII, ಶಿಕಾರಿ. ೧೨೦–೧೪; 1048); ಆದಿವಾರ × ದು ದೇಸಿಗಣದ ಅಷ್ಟೋಪವಾಸಿಭಳರರ್ಗೆ ತಮ್ಮ ಮಾಡಿಸಿದ (ಸೌಇಇ. IX–i, ೧೧೫–೨೬; 1054). [ಸಂ. ಅಷ್ಟೋಪವಾಸಿನ್]

**ಅಷ್ಟೋಪವಾಸಿಗಟ್ಟು** (ನಾ). ಅಷ್ಟೋಪವಾಸಿಗೆ ಸೇರಿದ ಎಲ್ಲೆಕಟ್ಟು: ಭೇರುಣ್ಡಗಳೆಯೊಳ್ ಕೊಟ್ಟ ಗಜ್ಜಿ ಮತ್ತರಯ್ದು ಅದಱ ಸೀಮೆ ಬಡಗ ಟಾಣಗುನ್ದೂರ ಸೀಮೆಯ ಪಳ್ಳಂ ಮೂಡ ಪಾಸಱಗಲ್ಲು ತೆಂಕ ಅಷ್ಟೋಪವಾಸಿಗಟ್ಟು ಪಡುವ ನಟ್ಟಕಲ್ಲು (ಎಕ. VII, ಶಿಕಾರಿ. ೨೦–೧೮; 1048). [ಅಷ್ಟೋಪವಾಸಿ + ಕಟ್ಟು₂]

**ಅಷ್ಠಿ** (ನಾ). ಹಣ್ಣಿನ ಬೀಜ ಅಥವಾ ಓಟೆ; ಗೊರಟೆ. [ಸಂ.]

**ಅಷ್ಠೀಲೆ** (ನಾ). ೧. ಗುಂಡಾದ ಗ್ರಂಥಿ. ೨. ಹೊಕ್ಕುಳಿನ ಕೆಳಗೆ ವಾತದಿಂದ ಉಂಟಾಗುವ ಒಂದು ಬಗೆಯ ಗಂಟು, —ಊತ: ಸ(ಪ)ವಳದೆ ಕೊಗ್ಗಿಯನಕ್ಕಿಂದ್ರವಾರುಣಿಯ ಬೇರನಕ್ಕೆ ಸೇವಿಸೆ ತನ್ಮೂಲ ವನರೆದಂಬಲಿಯುಟ್ಟೊಡೆ ವಿವಿಧಾಷ್ಠೀಲಾದಿ ಜಠರರೋಗಂ ಕಿಡುಗುಂ (ಲೋಕೋಪ. ೯–೧೨೪). [ಸಂ. ಅಷ್ಠೀಲಾ]

**ಅಸ₁** (ನಾ). ತೆಳ್ಳಗಿರುವಿಕೆ; ದುರ್ಬಲತೆ. 'ಅಸಮುಸೆ' ಪರಾ.
ಅಸವಲ್ಲದ = ಸಣ್ಣದಲ್ಲದ; ದುರ್ಬಲವಲ್ಲದ; ಅಲ್ಪವಲ್ಲದ; ಮಹತ್ತಾದ: ಹಸವೀಗಿ ಹಾಲ್ಗೊಟ್ಟು ಶಿಶುವೀಗಿ ಬೆಣ್ಣೆಕೊಟ್ಟು ಬಿಸಿಲಿಗಿ ನಿಂತವರ ನೆರಳೀಗಿ ಕರದರ ಅಸವಲ್ಲದ ಪುಣ್ಯ ಮಗನೀಗಿ (ಗರತಿ. ೬೯). **ಅಸವಲ್ಲದ ಕೆಲಸ** = ಬಹಳ ಕಷ್ಟವಾದ ಕಾರ್ಯ. **ಅಸವಲ್ಲದ ದೆವ್ವ** = ಬಲಿಷ್ಠವಾದ ದೆವ್ವ. **ಅಸವಲ್ಲದ ರೋಗ** = ಬಲವಾದ ರೋಗ; ಮಹತ್ತರವಾದ ವ್ಯಾಧಿ. **ಅಸವಲ್ಲದವ** = ಶಕ್ತ; ಬಲಿಷ್ಠ; ಸಮರ್ಥ: ಅಸವಲ್ಲದವನ ಕೂಡೆ ಆರಂಬಾ ಮಾಡಿ ಹಸೀ ಅವರೆಕಾಯಿಗೆ ಮೋಹಿಸಿದ (ಗಾದೆ).
[< ಅಸಿದು. / **ತಮಿ.** ಅಶು = ಸೂಕ್ಷ್ಮತೆ, ನಾಜೂಕು, ಅಲ್ಪತೆ; **ಮಲ.** ಅಶು = ತೆಳ್ಳಗಿನ, ಕೋಮಲ; **ತುಳು.** ಅಸಲೆ, ಅಸಳೆ = ತೆಳ್ಳಗೆ, ದುರ್ಬಲ, ಕೃಶ; **ತೆಲು.** ಅಸದು, ಅಸಿ = ಚಿಕ್ಕದು; **ಕುರುಖ್.** ಅಚಾ = ತೆಳ್ಳಗಿನ, ದುರ್ಬಲಗೊಳಿಸಿದ, ಶಕ್ತಿಗುಂದಿದ]

**ಅಸ₂** (ನಾ). ೧. ಹೊಂದಿಕೆ; ಕ್ರಮ. ೨. ಪ್ರಸಿದ್ಧಿ; ಯಶಸ್ಸು: ಕಮ್ಮಯ್ಯರ ಸಂಗಮುನೂನ ವಿದಿತ ಗುಣಗಣ ಶಿಲಾಭರಣಭೂಷಿತ ಸಗರಬ್ಬರಸಿಗಮುಸಮೆಸೆಯ ಪುಟ್ಟಿದಂ ಪುಲಿಕಾಲ (ಎಇ. III, ೨೩೩–೨೩; 1070). [< ಸಂ. ಯಶಸ್?]

**ಅಸ₃** (ನಾ). ಶೀಘ್ರ; ವೇಗ. 'ಅಸಕಟಿ', 'ಅಸದಳ', 'ಅಸವಸ' ಪರಾ. [< ಸಂ. ಆಶು]

**ಅಸ₄** (ನಾ). ಹಸನುಮಾಡುವುದು. 'ಅಸಗೆಡಿಸು', 'ಅಸಗೆಯ್' ಪರಾ. [< ಹಸ? < ಹದ < ಪದ]

**ಅಸ₅** (ನಾ). ಸಮಾಸಪದಗಳಲ್ಲಿ 'ಅಸಗ'ಶಬ್ದ ಪೂರ್ವಪದ ವಾಗಿದ್ದಾಗ ಬರುವ ಆದೇಶ ರೂಪ. 'ಅಸಬಡಿ', 'ಅಸವನೆ' ಪರಾ. [< ಅಸಗ]

**ಅಸ₆** (ನಾ). ಪ್ರಾಣ; ಚೈತನ್ಯ. 'ಅಸವಳಿ' ಪರಾ. [< ಸಂ. ಅಸು]

**ಅಸ₇** (ನಾ). ೧. ಸ್ವಾಧೀನ; ವಶ. 'ಅಸಕೊಳ್ಳು' ಪರಾ. ೨. ಪರಾ ಕ್ರಮ; ಶಕ್ತಿ: ಅಹಂಕಾರವೆಂಬಸದ ಮದಗಜವೇಱಿ ವಿಧಿಗೆ ಗುಱಿ ಯಾಗಿ ನೀವು ಹೋದಿರಲ್ಲಾ (ಬಸವ. ೬೪೯). [< ಸಂ. ವಶ]

**ಅಸಂಕೀರ್ಣ** (ಗು). ೧. ಬೆರಸಿಹೋಗದ; ಕಲಸಿಕೊಳ್ಳದ; ಮಿಶ್ರ ವಲ್ಲದ. ೨. ಸರಳವಾದ. [ಸಂ.]

**ಅಸಂಕ್ಲುಪ್ತ** (ಗು). ೧. ಕ್ಲುಪ್ತವಿಲ್ಲದ; ನಿಯಮಿತವಲ್ಲದ. (ನಾ). ೨. ಐದು ಬಗೆಯ ಭಿಕ್ಷೆಗಳಲ್ಲಿ ಒಂದು. P ಇಲ್ಲಿಯೇ ಬೇಡ ಬೇಕೆಂಬ ನಿಯಮವಿಲ್ಲದೆ ಎಲ್ಲಿಯಾದರೂ ಪಡೆಯುವ ಭಿಕ್ಷೆ: ಮಾಧೂಕರ ಅಸಂಕ್ಲುಪ್ತ ಪ್ರಾಕ್ಪ್ರಣೀತ ಅಯಾಚಿತ ತಾತ್ಕಾಲಿಕವೆಂಬ ಪಂಚವಿಧಭಿಕ್ಷಂಗಳನಾದೊಡಂ (ವಿವೇಕ. ೧೯೬). [ಸಂ.]

**ಅಸಂಖ್ಯ** (ಗು). ಎಷ್ಟೆಂದು ಹೇಳಲಾಗದ; ಲೆಕ್ಕವಿಲ್ಲದ: ಹಿಂದೂ ಧರ್ಮದಲ್ಲಿಯೇ ಅಸಂಖ್ಯಪಂಗಡಗಳಿವೆ (ಧರ್ಮಸಾ. ೨). [ಸಂ.]

**ಅಸಂಖ್ಯಾಕ** (ಗು). = ಅಸಂಖ್ಯ. [ಸಂ.]

**ಅಸಂಖ್ಯಾತ** (ಗು). ೧. = ಅಸಂಖ್ಯ: ದ್ವೀಪಾಬ್ಧಿವರ್ಗಕ್ರಮಮದು ಮಸಂಖ್ಯಾತಮಾ ಸಂಖ್ಯೆಯೊಳ್ (ಆದಿಪು. ೧–೪೮); ಪೂತುರೇ ಕುರು ಸೈನಿಕವಸಂಖ್ಯಾತವೆಂದಿಗೆ ಸವೆವುದೋ (ಕುವ್ಯಾದ್ರೋ. ೧೬–೭). (ನಾ). ೨. [ವೀಶೈ] ಶಿವಶರಣ: ಎಲೆ ಅಸಂಖ್ಯಾತರಿರ ಹುಯ್ಯಲನವಧರಿಸಿ ಸಲಹಿ (ಬಸಪು. ೪೪–೪೮). [ಸಂ.]

**ಅಸಂಖ್ಯಾತಕ** (ಗು). = ಅಸಂಖ್ಯ: ಧರಾಬ್ಧಿಗಳಸಂಖ್ಯಾ(ತ)ಕಂಗಳಂ ಸುತ್ತಿ (ಜೀವಸಂ. ೨–೧೦). [ಸಂ.]

**ಅಸಂಖ್ಯೇಯ** (ಗು). ಎಣಿಸಲಾಗದ; ಲೆಕ್ಕವಿಲ್ಲದ: ಆತನಿಂಬಱಿ ಯಮುಸಂಖ್ಯೇಯವರ್ಷಪ್ರಮಿತಮನ್ವಂತರಾತಿಕ್ರಮದೊಳ್ (ಆದಿಪು. ೬–೬೫ ವ). [ಸಂ.]

**ಅಸಂಗ** (ಗು). ೧. ಸಂಗವಿಲ್ಲದ; ಸಂಪರ್ಕವಿಲ್ಲದ. (ನಾ). ೨. ಸಂಗ ವಿಲ್ಲದವನು; ನಿಸ್ಸಂಗ: ಲಿಂಗಸುಖಕೇಳೀವಿಲೋಲಾಸಂಗ ತತ್ಪರ ಯುಕ್ತ (ಬಸಪು. ೭–೨೬). [ಸಂ.]

**ಅಸಂಗತ** (ಗು). ೧. ಸೇರದ; ಕೂಡದ; ಹೊಂದದ; ಅಸಂಬದ್ಧ ವಾದ. (ನಾ). ೨. ಅಸಂಬದ್ಧವಾದುದು: ಹೇಳುತಿದ್ದರಸಂಗತ ವನಿದು ಹೋಲುವುದಲೇ ಮುನಿಕುಮಾರರು ಕಾಳಗವನೇಗುವರು ಬಳಿಕೇ ನೆಂದನಾ ಭೂಪ (ಕುವ್ಯಾದ್ರೋ. ೮–೬೪); ಇನ್ನೂ ಕೆಲವು ಲೇಖಕರು ... ಅದು ದೋಷವೆಂದು ಹೇಳುವುದು ಅಸಂಗತವೆಂದು ಅಭಿಪ್ರಾಯ ಪಟ್ಟಿದ್ದಾರೆ (ಪೈಗಂಬ. ೧೨೬). [ಸಂ.]

**ಅಸಂಗತಕೆ** (ನಾ). ೧. ಅಸಂಬದ್ಧತೆ. ೨. ಸಮಂಜಸವಲ್ಲದ್ದು; ಹೊಂದಾವಣೆಯಿಲ್ಲದ್ದು. [ಸಂ.]

**ಅಸಂಗತಿ** (ನಾ). ೧. ಸಂಬಂಧವಿಲ್ಲದಿರುವುದು ; ಹೊಂದಿಕೆಯಿಲ್ಲದಿರುವುದು. ೨. ಅನೌಚಿತ್ಯ ; ಅಕ್ರಮ : ಪ್ರಸಂಗ ಕೇಳಿದರೂ ಅಸಂಗತಿ ಬಿಡಲಿಲ್ಲ (ಗಾದೆ). ೩. [ಕಾವ್ಯಮೀ] ಒಂದು ಕಾವ್ಯಾಲಂಕಾರ : "ಕಾರಣಮೊಂದೆಡೆಯೊಳ್ ಅದರ್ಕೆ ವಿರುದ್ಧಮಾದ ಪೆಜತೊಂದೆಡೆಯೊಳ್ಕಾರ್ಯಮಿರ್ಪುದೆಂದು ಪೇಳ್ದುದು ಅಸಂಗತ್ಯಲಂಕಾರಂ" ಎಂತೆನೆ :— ಕಾನಂಗೆ ಗುಂಡುತಾಕಿದುದಾನೆಯ ಮೇಲಿಂದೆ ಚೆನ್ನಬಸವಂ ಬಿಟ್ಟಂ ತಾನ್ನೆಗೂರವನಚಿದನಿದೇನಚ್ಚರಿ ತಿಳಿಯದೆಮಗೆ (ಅಪ್ರತಿ. ೩–೯೬). [ಸಂ.]

**ಅಸಂಗಿ** (ನಾ). ೧. ಸಂಗವಿಲ್ಲದವನು. ೨. ಈಶ್ವರ : ಮತ್ತಮಾ ಅಂತರ್ಯಾಮಿ ಮೊದಲಾದ ಈಶ್ವರತ್ರಯಕ್ಕೆ ಅಧಿಷ್ಠಾತೃ . . . ನಿರಂಜನ ಅಸಂಗಿ . . . ಎಂಬಿವು ಮೊದಲಾದವೇ ಅದ್ವೈತಬ್ರಹ್ಮಪರ್ಯಾಯನಾಮಂಗಳಕ್ಕುಂ (ವಿವೇಕ. ೨೭). [ಸಂ. ಅಸಂಗಿನ್]

**ಅಸಂಚಲಿತ** (ಗು). ಸ್ವಲ್ಪವೂ ಚಲಿಸದ ; ಅಳ್ಳಾಡದ ; ದೃಢವಾದ : ಅಸಂಚಲಿತ ಘೋರಾಕಾರನಾಗಿ ಮಹಾಪ್ರತಾಪದಲಿ . . . ಹರಿತಂದು (ಬಸವು. ೨೧–೧೩). [ಸಂ.]

**ಅಸಂಚಿತ** (ಗು). ಕೂಡಿಡದ; ಸಂಪಾದನೆಮಾಡದ; ಶೇಖರಿಸದ.
**ಅಸಂಚಿತಸುಕೃತ**=ಪುಣ್ಯವನ್ನು ಕೂಡಿಡದವನು: ಉತ್ತಮದಾನಂ ಸಂಚಿತಸುಕೃತಂಗಲ್ಲದಸಂಚಿತಸುಕೃತಂಗೆ ಬಯಸಿ ಸಮನಿಸಿದಪುದೇ (ಶಾಂತಿಪು. ೯–೨೨). [ಸಂ.]

**ಅಸಂಜ್ಞಿ** (ನಾ). [ಜೈನ] ಆಹಾರ, ಮೈಥುನ, ಭಯ, ಪರಿಗ್ರಹ ಎಂಬ ನಾಲ್ಕು ಸಂಜ್ಞೆಗಳಿಲ್ಲದ ಜೀವಿ ; ಪಂಚೇಂದ್ರಿಯ ಜೀವಿಗಳಲ್ಲಿ ಒಂದು ಬಗೆ : ಆ ಪಂಚೇಂದ್ರಿಯಮುಂ ಸಂಜ್ಞಿಯಸಂಜ್ಞಿಯೆಂಬ ಭೇದದಿಂದಿತ್ತೆಱನಕ್ಕುಂ (ಸುಕುಮಾ. ೮–೬ ವ) ; "ಸಂಜ್ಞೆಗಳು ಆಹಾರ, ಭಯ, ಮೈಥುನ, ಪರಿಗ್ರಹಗಳೆಂದು ನಾಲ್ಕು ವಿಧವಾಗಿವೆ. ಇಂಥ ಸಂಜ್ಞೆಗಳುಳ್ಳ ಜೀವಿಗಳು 'ಸಂಜ್ಞಿ' ಎಂದೂ, ಇಲ್ಲದುವುಗಳು 'ಅಸಂಜ್ಞಿ' ಯೆಂದೂ ಹೇಳಲಾಗುತ್ತದೆ" (ಜೈನಪ. ೩೦೦). [ಸಂ. ಅಸಂಜ್ಞಿನ್]

**ಅಸಂತಾಯ** (ನಾ). 'ಅಸತು'ಎಂಬ ಸುಂಕದಿಂದ ಬರುವ ಆದಾಯ: ತೆಜುಮಾಂನ್ಯವಾಗಿ ಮತಾವವೊಸಗೆ ಅಸಂತಾಯ ಅಕರ ಅನ್ಯಾಯ ಕಾಣಿಕೆ ಕಡಾಯ ಬಿಟ್ಟೆ ಬಿಡಾರ ಆಸೆ ಅಪ್ಪಣೆ ವರಡಸರಡ ಸರ್ವಬಾಧಾ ಪರಿಹಾರವಾಗಿ (ಕಇ. III–i, ೯–೬೨ ; 1538). [ಅಸತು + ಆಯ]

**ಅಸಂತುಷ್ಟ** (ಗು). ೧. ಸಂತೋಷವಿಲ್ಲದ. ೨. ತೃಪ್ತಿಯಿಲ್ಲದ ; ಅಸಮಾಧಾನಗೊಂಡ. 'ಅಸಂತುಷ್ಟಚಿತ್ತ' ಪರಾ. [ಸಂ.]

**ಅಸಂತುಷ್ಟಚಿತ್ತ** (ನಾ). ತೃಪ್ತಿಯಿಲ್ಲದ ಮನಸ್ಸುಳ್ಳವನು ; ಅತೃಪ್ತ ; ಸಮಾಧಾನವಿಲ್ಲದವನು : ಮಹಾಲೋಭಾಭಿಭೂತನಸಂತುಷ್ಟಚಿತ್ತನಿವನಂ ಕೊಲ್ಲಿಮೆಂದು ತಳಾಱಂಗೆ ಬೆಸವೇೞ್ದೊಡೆ (ವಡ್ಡಾರಾ. ೨೨–೧೫). [ಅಸಂತುಷ್ಟ + ಚಿತ್ತ]

**ಅಸಂತುಷ್ಟಿ** (ನಾ). ೧. ಅತೃಪ್ತಿ. ೨. ಅಸಂತೋಷ : ಸಂತುಷ್ಟಿಯೇ ಸುಖಕ್ಕೆ ಮೂಲವು, ಅಸಂತುಷ್ಟಿಯೇ ದುಃಖಕ್ಕೆ ಕಾರಣವು (ಆರ್ಯಧ. ೮೭). [ಸಂ.]

**ಅಸಂತೃಪ್ತ** (ಗು). = ಅಸಂತುಷ್ಟ ೨ : ರೈತರು ಮಾತಿನಲ್ಲಿ ಕೃತಜ್ಞತೆಸಲ್ಲಿಸಿದ್ದರೂ ಅವರ ಮುಖದಲ್ಲವನು ಅಸಂತೃಪ್ತಭಾವನೆಯನ್ನು ಗಮನಿಸಿದ್ದನು (ಪುನರು. ೨೬೨). [ಸಂ.]

**ಅಸಂತೋಷ** (ನಾ). ಸಂತೋಷವಿಲ್ಲದಿರುವುದು ; ಅಸಮಾಧಾನ : ಪಾಟಣಕರನು ಪ್ರಮಿಾಲೆಯ ವಿರುದ್ಧ ವಾಡಿಕೆಯಾಗಿ ಮಾತನಾಡುತ್ತಿರಲಿಲ್ಲ. ಆದರೆ ಆಕೆಯ ಮಾತಿನಿಂದ ಉಂಟಾಗುತ್ತಿರುವ ಅಸಂತೋಷವು ಅವನಿಗೆ ಕಂಡಿತ್ತು (ಸಮಜೀ. ೪೮೬). [ಸಂ.]

**ಅಸಂದರ್ಭ** (ನಾ). ಅನುಕೂಲವಲ್ಲದ ಸಮಯ ; ಅಸೌಕರ್ಯ ; ಅಡಚಣೆ. [ಸಂ.]

**ಅಸಂದಿಗ್ಧ** (ಗು). ಸಂದಿಗ್ಧವಲ್ಲದ ; ಸಂದೇಹವಿಲ್ಲದ : ಎನಿತೊಳವು ಮನದ ಸಂದೆಯಮನಿತುಮಸಂದಿಗ್ಧಮೆನಿಸುಗುಂ ಧರ್ಮದೊಳಪ್ಪನುರಾಗಮೊದವುಗುಂ ರತ್ನನ ಪೇೞ್ದಜಿತಪುರಾಣಮಂ ಕೇಳಲೊಡಂ (ಅಜಿಪು. ೧೨–೩೨). [ಸಂ.]

**ಅಸಂಧೇಯ** (ಗು). ೧. ಸಂಧಿಮಾಡಲು ಶಕ್ಯವಿಲ್ಲದ; ಸಂಧಾನಕ್ಕೆ ಸಾಧ್ಯವಿಲ್ಲದ : ಮಂತ್ರೋಪಧಾಸಿದ್ಧಿ ಗುಣಶಕ್ತಿಗಳ್ಗಸಂಧೇಯನುಮು ಸಾಧ್ಯನುಮಾದಂ (ಚಂದ್ರಪು. ೯–೧೧೭ ವ). ೨. ಬೆಸೆಯಲು ಶಕ್ಯವಿಲ್ಲದ ; ಕೂಡಿಸಲಾಗದ. [ಸಂ.]

**ಅಸಂಪೂರ್ಣ** (ಗು). ಪೂರ್ಣವಲ್ಲದ ; ಅಪೂರ್ಣವಾದ : ಯಾವ ಕೆಲಸವನ್ನಾದರೂ ಅಸಂಪೂರ್ಣವಾಗಿ ಮಾಡಬಾರದು (ರೂಢಿ). [ಸಂ.]

**ಅಸಂಬಂಧ** (ಗು). ೧. ಸಂಬಂಧವಿಲ್ಲದ ; ಸೇರುವೆಯಿಲ್ಲದ. (ನಾ). ೨. [ವೀಶೈ] ಈಶ್ವರ : ಅಸಂಬಂಧ ಸಂಬಂಧವಾಯಿತ್ತು ಲಿಂಗಸಾರಾಯರ ಸನುಮತದಿಂದ, ಉತ್ತಮ ಮಧ್ಯಮವ ಕೆಡಿಸಿತ್ತು ಏಕೋ ಸತಿಪತಿ ಗುಣದಿಂದ (ಬಸವ. ೮೪೩). [ಸಂ.]

**ಅಸಂಬಂಧಾತಿಶಯೋಕ್ತಿ** (ನಾ). [ಕಾವ್ಯಮೀ] 'ಅತಿಶಯೋಕ್ತಿ' ಎಂಬ ಅಲಂಕಾರದಲ್ಲಿ ಒಂದು ಭೇದ; ಸಂಬಂಧವಿದ್ದರೂ ಇಲ್ಲವೆಂದು ಹೇಳುವುದು: "ಸಂಬಂಧಮಿರ್ದೊಡಮಿಲ್ಲೆಂದು ಪೇೞ್ವುದು ಅಸಂಬಂಧಾತಿಶಯೋಕ್ತಿಯೆನಿಪುದು" ಎಂತೆನೆ:– ಅರಯೆ ಚಿಕದೇವೇಂದ್ರನ ಭೂರಿದಯಾಮೃತವನೀಂಟಿ ತಣಿದೀ ವಿಬುಧರ್ ತಾರರ್ ತಮ್ಮೆಣಿಕೆಗೆ ಮುನ್ನೀರೊಳ್ಪೆಸದೊಡನೆ ಸಮೆದ ಕಟ್ಟುಪ್ಪೆಸರಂ (ಅಪ್ರತಿ. ೩–೪೫).
[ಅಸಂಬಂಧ + ಅತಿಶಯೋಕ್ತಿ]

**ಅಸಂಬದ್ಧ** (ಗು). ಹೊಂದಿಕೆಯಿಲ್ಲದ : ಈಗಿನ ಜೀವನಕ್ಕೆ ಸಂಬಂಧಪಟ್ಟ ವಿಷಯಗಳನ್ನು ಮಾತ್ರ ಗಮನವಿಟ್ಟು ಕರ್ಮವ್ಯವಸ್ಥೆ ಮಾಡಿಕೊಳ್ಳಬೇಕು. ಅಸಂಬದ್ಧಪ್ರಯತ್ನವೆಲ್ಲವೂ ವ್ಯರ್ಥ (ಜೀವಾತ್ಮ. ೭); ಅವಳ ನೃತ್ಯವು ಶುದ್ಧ ಅಸಂಬದ್ಧವಾಗಿದ್ದಿತು (ಮೊಗ್ಗು. ೪೭). [ಸಂ.]

**ಅಸಂಬದ್ಧತನ** (ನಾ). ಹೊಂದಿಕೆಯಿಲ್ಲದಿರುವುದು ; ಸಂಬಂಧವಿಲ್ಲದಿರುವುದು : ಎಲ್ಲಿಯವರೆಗೆ ನಿಮ್ಮ ಮಾತುಗಳೊಳಗೆ ಅಸಂಬದ್ಧತನವೂ ಗೋಪನ ಗೌಪ್ಯವೂ ನಮಗೆ ತೋರಿಬರುವುವೋ ಅಲ್ಲಿಯವರೆಗೂ ನಾವು ನಿಮ್ಮ ಮಾತಿನಲ್ಲಿ ವಿಶ್ವಾಸವಿಡುವುದಿಲ್ಲ (ಅಂಬಿಕೆ. ೪೪).
[ಅಸಂಬದ್ಧ + –ತನ]

**ಅಸಂಬದ್ಧತೆ** (ನಾ). = ಅಸಂಬದ್ಧತನ : ನ್ಯಾಯದರ್ಶಿಗಳು ಮಂಡಿಸಿರುವ ಉತ್ತರ ಅಸಂಬದ್ಧತೆಯಿಂದ ಕೂಡಿದೆ (ಪುನರು. ೨೦೪).
[ಸಂ. ಅಸಂಬದ್ಧತಾ]

**ಅಸಂಬದ್ಧಪ್ರಲಾಪ** (ನಾ). ಪ್ರಕರಣಕ್ಕೆ ಸಂಬಂಧಿಸದ ಮಾತು ; ಪ್ರಸ್ತುತವಲ್ಲದ, ಹೊಂದಾಣಿಕೆಯಿಲ್ಲದ ಮಾತು : ಇಂತಹ ಅಸಂಬದ್ಧಪ್ರಲಾಪಗಳು ಹೇರಳ (ಕೆಲರೋ. ೨) ; ಹರಪ್ಪಲಿಪಿಯನ್ನು ಭಾರತೀಯರು ಸಂಪೂರ್ಣ ಮರೆತರೂ ಶೈವಮತ ಮೊದಲಾದುವನ್ನು ಮರೆಯಲಿಲ್ಲವೆಂದು ಹೇಳುವುದು ಅಸಂಬದ್ಧಪ್ರಲಾಪದಂತೆ ಕಂಡುಬರುವುದು (ಭಾರಸಂ. ೧೮). [ಅಸಂಬದ್ಧ + ಪ್ರಲಾಪ]

**ಅಸಂಬದ್ಧಪ್ರಲಾಪಿ** (ನಾ). ಪ್ರಕರಣಕ್ಕೆ ಸಂಬಂಧಿಸದಿರುವ ಮಾತುಗಳನ್ನಾಡುವವನು ; ಗೊತ್ತುಗುರಿಯಿಲ್ಲದೆ ಮಾತಾಡುವವನು : ಈ ಅಸಂಬದ್ಧಪ್ರಲಾಪಿಯ ಜತೆಯಲ್ಲಿ ಮಾತಾಡುವುದು ಕಷ್ಟವಾಗಿದೆ (ರೂಢಿ). [ಸಂ. ಅಸಂಬದ್ಧಪ್ರಲಾಪಿನ್]

**ಅಸಂಬಳ** 'ಅಯ್ಸಂಬರ' ನೋ.

**ಅಸಂಬಾಧ** (ಗು). ೧. ಇಕ್ಕಟ್ಟಿಲ್ಲದ; ವಿಶಾಲವಾದ. ೨. ಜನಸಂಮರ್ದವಿಲ್ಲದ; ನಿಬಿಡವಲ್ಲದ; ವಿವಿಕ್ತವಾದ. (ನಾ). ೩. ನಿರ್ಬಂಧವಿಲ್ಲದಿರುವುದು; ತೊಂದರೆಯಿಲ್ಲದಿರುವುದು; ತಡೆಯಿಲ್ಲದ ಸ್ಥಿತಿ. [ಸಂ.]

**ಅಸಂಭವ** (ಗು). ೧. ಉಂಟಾಗಲು ಶಕ್ಯವಿಲ್ಲದ; ಘಟಿಸಲಾರದ: ಅಸಮಬಲ ಭವದ್ವಿಕ್ರಮಮಸಂಭವಂ ಪೆಱರ್ಗೆ (ಗದಾಯು. ೪–೫೬). (ನಾ). ೨. [ಕಾವ್ಯಮೀ] ಒಂದು ಅರ್ಥಾಲಂಕಾರ; ಉಪಮೇಯಕ್ಕೆ ಕೊಟ್ಟ ವಿಶೇಷಣಗಳು ಉಪಮಾನಕ್ಕೆ ವಿರುದ್ಧವಾಗಿ ತೋರುವಂತೆ ವರ್ಣಿಸುವುದು: ಪೆಸರೊಳಸಂಭವಮೆನಿಸುಗುಮಸಂಭವಂ ತದ್ವಿಶೇಷಣಂ ಪೃಥಗರ್ಥಂ ಪೊಸೆಯಿಸೆ . . . ಲಕ್ಷ್ಯಂ॥ ಅಸಂಭವಕ್ಕೆ॥ ಅವ್ಯಪಚ್ಛೇದನನತಿಧವಳ ವರ್ಣನುತ್ಸಾರಿತಾರಿ ಬೇಱೊರ್ವಂ ದಾನವಮಥನನೀತನೆನಿಸಿದನವನಿಗೆ ಪುರುಷೋತ್ತಮಾನುಭಾವಂ ಕೃಷ್ಣಂ (ಕಾವ್ಯಾವ. ೭೬೫, ೭೬೬); ಅಕಸ್ಮಿಕಮಾಗಿ ಒಂದು ಕಜ್ಜಮುಂ ಪುಟ್ಟಿತೆಂದು ಪೇೞಿಯದು ಅಸಂಭವಾಲಂಕಾರಂ (ಅಪ್ರತಿ. ೩–೯೪ ವೃತ್ತಿ). [ಸಂ.]

**ಅಸಂಭವನೀಯ** (ಗು). = ಅಸಂಭವ ೧: ಅಸಂಭವನೀಯ (Improbable)ವಾದುದನ್ನು ಅದು ಜನಾಭಿಪ್ರಾಯಕ್ಕೆ ಸಮ್ಮತವಾಗಿದೆಯೆಂದು ತೋರಿಸುವುದರಿಂದಲೋ . . . ಅದನ್ನು ಸಮರ್ಥಿಸಬೇಕು (ಅರಿಕಾ. ೧೪೫). [ಸಂ.]

**ಅಸಂಭವೋಪಮೆ** (ನಾ). [ಕಾವ್ಯಮೀ] ಒಂದು ಅರ್ಥಾಲಂಕಾರ: ಹರಿಣಧರನೊಳ್ ವಿಷಂ ಮಲಯರುಹದೊಳನಲಾರ್ಚಿ ನಿನ್ನ ವದನೋದರದೊಳ್ ಪರುಷತರವಚನಮಪ್ಪುದು ದುರವಾಪಮಿದಿಂತಸಂಭವೋಪಮಮಕ್ಕುಂ (ಕವಿರಾ. ೩–೭೯). [ಅಸಂಭವ + ಉಪಮೆ]

**ಅಸಂಭಾವಿತ** (ಗು). ೧. ಯೋಚಿಸಲು ಶಕ್ಯವಿಲ್ಲದ; ಭಾವಿಸಲಾಗದ; ಊಹಿಸಲಾಗದ: ಎಂತೀ ಮಾತಸಂಭಾವಿತದವೊಲೆನಗಾದಪ್ಪುದು (ಕಾದಂಪೂ. ೩೬೯); ಏನಸಂಭಾವಿತವನಾದೊಡಂ ವೃದ್ಧರನುಮಾನವಿಲ್ಲದೆ ನುಡಿವರ್ (ಸಿದ್ಧರಾ. ೧–೪೪). (ನಾ). ೨. ಸಂಭಾವಿತನಲ್ಲದವನು; ಗೌರವಿಸಲ್ಪಡದವನು. [ಸಂ.]

**ಅಸಂಭಾವ್ಯ** (ಗು). ಭಾವಿಸಲು ಶಕ್ಯವಿಲ್ಲದ; ಊಹೆಗೆ ಸಿಲುಕದ: ತತ್ಕಾಂಕ್ಷೆ ಕೈಸಾರದುದಂ ತೋಱುತ್ತಮಿರ್ದತ್ತೆನಗೆ ಪಿರಿದುಮೀ ಚಿತ್ರದೊಂದಾಸೆ ದಲ್ಮಾಯದ ಕುಂಚಂಬೋಲಸಂಭಾವ್ಯಮನೆ ದಿಟಮೆನಲ್ತೋಱುತ್ತಿರ್ದಪ್ಪುದೀಗಳ್ (ಕಾದಂಉ. ೯೧). [ಸಂ.]

**ಅಸಂಯತ** (ಗು). ೧. ಸಂಯಮವಿಲ್ಲದ; ಹಿಡಿತಕ್ಕೆ ಸಿಕ್ಕದ: ಈ ಕತೆಯ ದುರ್ಬಲತೆಯೆಂದರೆ ಅದರ ಅಸಂಯತವಾದ ಬರವಣಿಗೆ (ಹೊಸಕ್ಷಿ. ೨೮೨). (ನಾ). ೨. [ಜೈನ] ಸಂಯಮವಿಲ್ಲದವನು; ಒಳ್ಳೆಯ ನಡತೆ ಆಚರಣೆ ಭಾವನೆಗಳಿಲ್ಲದವನು: ದರ್ಶನವಿಶುದ್ಧನಾಗಿಯುಂ ಶೀಲವ್ರತಭಾವನಾರಹಿತನಸಂಯತಂ ಜಘನ್ಯಪಾತ್ರಂ (ಆದಿಪು. ೧೦–೯ ವ). [ಸಂ.]

**ಅಸಂಯತಸಮ್ಯಗ್ದೃಷ್ಟಿ** (ನಾ). [ಜೈನ] ಸಮ್ಯಗ್ದರ್ಶನವುಳ್ಳವನಾದರೂ ಸಂಯಮವಿಲ್ಲದವನು; ಅಜಿತೇಂದ್ರಿಯನಾದ ಸಮ್ಯಗ್ದೃಷ್ಟಿ: ಅಸಂಯತಸಮ್ಯಗ್ದೃಷ್ಟಿ ಮೊದಲಾಗೇಕಾದಶೋಪಾಸಕದೇಶಸ್ಥಾನಮಂ ಸಪ್ರಪಂಚಂ ಪೇೞ್ದು (ಚಾವುಂಉ. ೨೨೮). [ಅಸಂಯತ + ಸಮ್ಯಗ್ದೃಷ್ಟಿ]

**ಅಸಂಯಮ** (ನಾ). ಸಂಯಮವಿಲ್ಲದಿರುವುದು: ಸಾಮಾಯಿಕ . . . ಸಂಯಮ ಅಸಂಯಮ ವಿಕಲ್ಪದಿಂ ಸಂಯಮಂ ಸಪ್ತವಿಧಂ (ತತ್ತ್ವಪ್ರ. ೧೭). [ಸಂ.]

**ಅಸಂಯುಕ್ತ** (ಗು). ಕೂಡಿಲ್ಲದ; ಹೊಂದಿಕೊಳ್ಳದಿರುವ. [ಸಂ.]

**ಅಸಂವೇದ್ಯ** (ಗು). ತಿಳಿಯಲಾಗದ; ಅರಿಯಲಾಗದ: ಕಾಮಜೀವನದ ಗಂಧವನ್ನರಿಯದ ಮತ್ತೊಬ್ಬಾಕೆಗೆ ಲೈಂಗಿಕಪ್ರೇಮವೆಂಬುದು ಅಸಂವೇದ್ಯವಾದ ಅನುಭವವಾಗಿ ಕಳಂಕಪ್ರಾಯವಾಗಿ ತೋರಿತು (ಪುನರು. ೪೯೪). [ಸಂ.]

**ಅಸಂಶಯ** (ಗು). ಸಂಶಯವಿಲ್ಲದ; ನಿಸ್ಸಂದೇಹವಾದ. [ಸಂ.]

**ಅಸಂಸಾರಿ** (ನಾ). ೧. ಸಂಸಾರಿಯಲ್ಲದವನು. ೨. ಸಂಸಾರದಲ್ಲಿ ತೊಳಲದವನು: ಸಂಸಾರಿ ಜೀವನು ಶಿವನಸಂಸಾರಿ (ಬಸವು. ೫೦–೨೮). [ಸಂ. ಅಸಂಸಾರಿನ್]

**ಅಸಂಸ್ಕಾರ** (ನಾ). ೧. ಸಂಸ್ಕಾರವಿಲ್ಲದಿರುವುದು. ೨. ಸಂಸ್ಕಾರವನ್ನು ಹೊಂದದವನು; ವರ್ಣಾಶ್ರಮೋಚಿತವಾದ ಸಂಸ್ಕಾರಗಳನ್ನು ಪಡೆಯದವನು. ೩. [ವೀಶೈ] ವೀರಶೈವ ದೀಕ್ಷೆಯನ್ನು ಪಡೆಯದವನು: ಅಸಂಸ್ಕಾರರಚಿತ ಪಾಕಂಗಳಂ ಪರಿಹರಿಸೆನೇ (ಬಸವು. ೪೪–೧೫). [ಸಂ.]

**ಅಸಂಸ್ಕೃತ** (ಗು). ೧. ಸಂಸ್ಕೃತವಲ್ಲದ. ೨. ಸಂಸ್ಕಾರವಿಲ್ಲದ; ಸಂಸ್ಕಾರಹೊಂದದ. ೩. ನಯಗೊಳಿಸಿ ಒಗ್ಗರಣೆ ಮುಂತಾದುವುಗಳಿಂದ ವಾಸನೆ ಕಟ್ಟದ. (ನಾ). ೪. ಉತ್ತಮವಾದ ಸಂಸ್ಕಾರವನ್ನು ಪಡೆಯದವನು; ನಯ ನಾಜೂಕುಗಳಿಲ್ಲದವನು; ಅನಾಗರಿಕ: ಅವನು ಶುದ್ಧ ಅಸಂಸ್ಕೃತ (ರೂಢಿ). [ಸಂ.]

**ಅಸಂಹತ** (ಗು). ೧. ಕೂಡಿಲ್ಲದ; ಸೇರದ; ಸಡಿಲವಾದ. (ನಾ). ೨. ಬೇರೆ ಬೇರೆಯಾಗಿ ನಿಂತ ಸೈನ್ಯವ್ಯೂಹ. [ಸಂ.]

**ಅಸಕಳಿ**$_1$ 'ಅಸಕೞಿ' ನೋ.

**ಅಸಕಳಿ**$_2$ (ಕ್ರಿ). ವಶತಪ್ಪು: ಸುಗಿದು ಸುರುಂಟಿ ಮುರುಂಟಿ ಮರವಟ್ಟು ಮೂಗುವಟ್ಟು ಮೆಯ್ಗೆಟ್ಟಸಕಳಿದರೆಲ್ಲರ್ (ರಾಮಾಶ್ವ. ೧೧೪–೨೯). [ಅಸ$_7$ + ಕಳಿ$_1$ (< ಕೞಿ$_1$)]

**ಅಸಕೞಿ**, ಅಸಕಳಿ$_1$ (ಕ್ರಿ). ೧. ಅತಿಕ್ರಮಿಸು; ಮೀರಿಸು; ಕಡೆಗಣಿಸು: "ಅಸಕೞಿ – ಅತಿಕ್ರಮಣೇ" (ಶಮಧಾ); ಬೆಳಗುವ ಮಣಿಮುಕುರಂಗಳುಂ ಅವರ್ಕೆ ತಾಂಗಾಗಿ ಪಚ್ಚೆಯ ಪಸಲೆಯ ಪಸುರನಸಕೞಿದು ನಿಮಿರ್ದ ನೆಲೆವಡಲಗೆಯ ಜಾಗಂಗಳುಮಂ (ಆದಿಪು. ೮–೧೫ವ); ಪೊನ್ನ ಪುತ್ತಳಿಗೆಯ ವಿಳಾಸಮನಸಕೞಿದು . . . ಮನಸಿಜಂ ಪ್ರತಿಷ್ಠೆಗೆಯ್ದ ರತಿಯಂತೆ ನಿರತಿಶಯಮಾಗಿರ್ಪುದುಂ (ಪಂರಾಮಾ. ೫–೫೭ ವ); ತತ್ಪಾರ್ಥಿವಂಗಂ ಸಿರಿಯುಂ ಸೌಂದರ್ಯದಿಂ ಪೆಂಪಿನೊಳಸಕೞಿವಾ ಕಾಂತೆಗಂ ಲೋಕಚೇತೋಹರ ಬಾಣಂ ಪುಟ್ಟಿದಂ (ಲೀಲಾವ. ೧–೯೩); ಪಾಂಡ್ಯನಂ ಪರಿಹರಿಸಿ ಪಾಂಡವರನರವರಿಸಿ ಕುರುಕುಳರನತಿಗಳೆದು ಮರುಪತಿಯನಸಕೞಿದು . . . ದೇವಾದಿದೇವನಂ ಶ್ರೀವಾಸುದೇವನಂ ಪ್ರಿಯಶಂಕೆಯಂ ತಂದು (ಜಗನಿ. ೧೭–೧೧೮ ರ); ಅಂಚೆಯ ನಸಕೞಿದಮುರ್ದಂ ಬಂಚಿಸಿ ಮಂಜಂಮರಳ್ಚಿಬಂದವಿಚಳಿತಂ ಚಂಚಚ್ಚಳಲಕ್ಷ್ಮಿಯದೇಂ ಚಂದ್ರಪ್ರಭನತನುವಿನೊಳ್ ನೆಲಸಿದುದೋ (ಚಂದ್ರಪು. ೧೫–೧೦೦); ಮಣಿಘಂಟಾಗಣದ ಮಸಕಮಸಕೞಿದ ರವಂಗಳಿನಂದೆಸೆಯೆ (ಪುಷ್ಪಪು. ೧೦–೪೪ ರ). ೨. ತುಂಬ ಹೆಚ್ಚಾಗು; ಅಳತೆ ಮೀರು: ಅಸಕೞಿದಟಿಲುಂ ಬಸಿಱೊಳ್ ಕುಸುಂಬೆವುರಿಯುರಿಯೆ ಸತ್ತಳತ್ತಳ್ ಬಸಿಱಿಂ ಪೊಸೆದಳ್ (ಅರ್ಧನೇ. ೭–೩೫); ಅಂತಳವಿಗೞಿದ ಲೀಲಾವತಿಯ ವಿರಹಮುಮನಸಕೞಿದ ವಸಂತಸಮಯಮುಮಂ ಕಂಡು (ಲೀಲಾವ. ೯–೧೩೪ ವ); ಅಸಕೞಿದ ತಾಪಮಂ ಸೈರಿಸಲಾಱದೆ ಸಾವ ಬವಸೆಯಿಂ ಪೊರ್ದುವಳರ್ಬಿಸುವ ಪುಲಿಯೆಂದು ಮಧುಪಪ್ರಸೂನ ಸಂಕೀರ್ಣ ಕರ್ಣಿಕಾರದ್ರುಮಮಂ (ವರ್ಧಪು. ೪–೬೮); ನಿನಗೆ ನೀನ್ ಕಾಣಲ್ಕೆ ಅಱಿಯಯರ್ ಅಸಕೞಿದು ಪೊರಳ್ವ ನಾಲಗೆಗೆ ತೆಱುವಂತಪ್ಪ ತೆಱಿಯನ್ (ಬದ್ಧಪ್ರ. ೧೮–೩೭೩).

೩. ನಿವಾರಿಸು; ತಪ್ಪಿಸು : ಪ್ರಾಪ್ತಿಯನಸಕೞಿಯಲುಮಪ್ರಾಪ್ತಿಯನಾಗಿಸಲುಮಾಗದು (ಪಂರಾಮಾ. ೬-೧೨೧). **ಅಸಕಳಿ₁ : ೧.** "ಕೈಗಳಿದುದಸಕಳಿದುದೆನಿಪ್ಪ ನಾಮಂ" (ಚತುನಿ. ೧೧); "ಅಸಕಳಿದುದೆಂದು ಕೈಮೀರಿದುದು" (ಕಬ್ಬಿಕೈ. ೬೪); "ಅಸಕಳಿದುದೆನಲ್ ಸ್ವಾಧೀನತಪ್ಪಿದ ಪೆಸರ್" (ಕಶರ. ೬); ಇದಿರಾಂಪರಳವನಸಕಳಿದು (ಚಿಕವಿ. ೬-೧೫೪); ಚಿಕ್ಕದೇವನೃಪಾಲನ ಬಾಹುದಂಡದೊಳ್ ವಸುಮತಿಚಕ್ರಿ ವಕ್ರಗತಿಯಿಂ ನಡೆವಾದಿಭುಜಂಗರಾಯನೆಂದಸಕಳಿದಷ್ಟದಿಕ್ಕರಿಗಳಷ್ಟಮದಾನ್ವಿತರೆಂದು . . . ಪೊರ್ದಿದಳ್ (ಕವುಮಾ. ೧-೧೦೯). **ಅಸಗಳಿ** : ವೇದವ ನಿಂದಿಸಿ ಶಾಸ್ತ್ರವ ಪಳಿದನುವಾದ ದ್ವಿಜರನಸಗಳಿದು ವಾದಿಸುವರ್ಗೆಲ್ಲ ಸೊಕ್ಕಡಗಿಸುವಲ್ಲಿ ನೀ ದಿಟ್ಟನಲ್ತೆ (ಶತಸಾಂ. ೧೨-೭೦).

**ಅಸಕೞಿದಂ** = ಕೈಮೀರಿದವನು : "ಅಸಕೞಿದನೆಂದು ಕೈಮೀಱಿದಂ" (ಶಮುದ. ಪರಿ. ೨); "ಅಸಕೞಿದನೆನೆ ಕೈಮೀಱಿದಂ" (ಸಂಜೀವ. ೪). **ಅಸಕೞಿದುದು** = ಕೈಮೀರಿದುದು : "ಕೈಮೀಱಿದುದಕ್ಕಸಕೞಿದುದು" (ಕವಿಕಂ. ೨೩೫). [ಅಸ₄ + ಕೞಿ₁]

**ಅಸಕೞಿಹ** (ನಾ). ಕೈಮೀರುವುದು; ಕೈವಶತಪ್ಪುವುದು : "ಅಸಕೞಿಹಮೆಂದು ಕೈಮೀಱುಹಂ" (ಶಮುದ. ನ. ಪರಿ. ೨). [ಅಸಕೞಿ + -ಹ₂]

**ಅಸಕೊಳ್ಳು** 'ಅಸಗೊಳ್ಳು' ನೋ.

**ಅಸಕ್ತ** (ನಾ). ಆಸಕ್ತಿಯಿಲ್ಲದವನು; ಏನನ್ನೂ ಮನಸ್ಸಿಗೆ ಹಚ್ಚಿಕೊಳ್ಳದವನು; ನಿರ್ಲಿಪ್ತ (ಕ). [ಸಂ.]

**ಅಸಗ**, ಅಗಸ₁ (ನಾ). ೧. ಬಟ್ಟೆಗಳನ್ನು ಒಗೆದು ಮಡಿಮಾಡಿಕೊಡುವ ವೃತ್ತಿಯವನು; ಮಡಿವಾಳ : "ಅಸಗಂ ತಾಂ ಸ್ವೀಕೃತನಿರ್ಣೇಜಕಾಭಿಧಾನಂ ರಜಕಂ" (ವಸ್ತುಕೋ. ೬೫-೭೯); "ಅಸಗಂ ರಜಕನಕ್ಕುಂ" (ಮಂಗರಾ. ೧೧೧-೩); ಅಸಗ ಗಜ್ಜಯನ ಮಗಂ ಪಿಟ್ಟುವಿಗಜ್ಜಂ ಭಿಟ ಸ್ತಿತಿ (ಮೈಆರಿ. ೧೯೩೦, ೪೦-೧; ೮ನೆಯ ಶತ); ಆಯ್ದು ಕಷಾಯೋದಕದೊಳ್ ತೊಯ್ದಸಗಂಬೋಲ್ ನೃಪೇಂದ್ರಸಭೆಯೆಂಬ ಕೊಳಕ್ಕುಯ್ದ[ಲಸದಲೆದು ಸೆಲೆಯೊಳ್] ಪೊಯ್ದಂ ಕವಿಚಕ್ರವರ್ತಿ ಕವಿಚೀವರಮಂ (ಶಾಂತಿಪು. ೧೨-೭೩); ಈಯಸಗನೂರಸೀರೆಯನೆಲ್ಲಮನೆನ್ನ ಬೆನ್ನೊಳೊಟ್ಟಿಕೊಂಡುಮತ್ತಲಿತ್ತಲುಮಾಹಾರಾರ್ಥಕ್ಕೆ ಪೋಗಲೀಯಂ (ಪಂಚತಂ. ೨೮೨-೨೩); ಊರಸೀರೆಗೆ ಅಸಗ ತಡಬಡಿಹಡೆದಂತೆ (ಬಸವ. ೩೦೯); ಅಸಗ ನೀರಡಸಿ ಸತ್ತಂತಾಯಿತ್ತು (ಮೋಳಿಮಾ. ೭೨-೨೮೫); ಹೊದ್ದಿ ಸೊಸೆಗೆ ಬುದ್ಧಿವೇಳ್ವತ್ತೆಯಸಗನೊಳಿದ್ದಂತೆ (ನಾಗಕು. ೯-೮೭). ೨. ಒಂದು ಪಕ್ಷಿ : ಮರಕುಟಿಗ ಚಂಬೋತ ಶುಕ ಜಾಗರಿಗ ನರಳಿಗನಸಗ ಸಾಳುವ. . .ಮೋಳಗಳಿತ್ತಲಿವೆಯೆಂದ (ತೊರರಾ. ೩-೧-೩೨); ಹರಡೆ ಚಿಲುಮಿಲಿಗನು ಚೆಲುವೆ ಗಿಜುಗಿರಳೆ ಕಮ್ಮರನಸಗ ಕೊಟ್ಟುಳೆ ಹೊಜಸು ಹೊಡೆ . . . ಎಂಬ ಪಕ್ಕಿಗಳವರೊಳೊಪ್ಪಿದವು (ಸಾಳ್ವಭಾ. ೫-೨೧). 'ಅಸಗವಕ್ಕಿ' ಪರಾ. ೩. ಒಬ್ಬ ಪ್ರಾಚೀನ ಕನ್ನಡ ಕವಿಯ ಹೆಸರು: ಕನ್ನಡಗವಿತೆಯೊಳಸಗಂಗನ್ನೂರ್ಮಡಿರೇಖೆಗಗ್ಗಳಂ (ಶಾಂತಿಪು. ೧-೧೧); ಗಜಗನ ಗುಣನಂದಿಯ ಮನಸಿಜನಸಗನ . . . ಸುಮಾರ್ಗಮಿದೞೊಳೆ ಲಕ್ಷ್ಯಂ (ಶಮುದ. ೫). ೪. ಒಬ್ಬ ರಾಜನ ಹೆಸರು : ಒಗೆದ[ಂ] ತತ್ಕುಲದೊಳು ಜಸಮೊಗೆದಿರೆ ತತ್ಕುಲದೊಳಸಮ ಬಳನಸಗಂ (ಕಇಅ. ೭೪-೧೨-೬; 1170). **ಅಗಸ₁ : ೧.** ಬಡಗಿಯಂತೆ ಕೆತ್ತುವರ್ ಅಗಸನಂತೆ ಬೀಸಿ ಪೊಯ್ವರ್ (ಧರ್ಮಾಮೃ. ೩-೭೩); ಅಕ್ಕಸಾಲೆ ಕುಂಬಾಱ ಅಗಸ ನಾವಿಂದ ಜೇಡ ಬೇಡನೆಂದು ನುಡಿಯುತ್ತಿಪ್ಪರು (ಗಣಭಾ. ೨೪೭-೪); ಆನೆಯ ಮಡುಹಿದ ಅಗಸನ ಕೆಡಹಿದ (ಪುರಂದ.೨-೭೬-೧೧); ಯಾರೂ ಇಲ್ಲದ ಊರಿಗೆ ಅಗಸರ ಮಾಳಿಯೇ ಮುತ್ತೈದೆ (ಗಾದೆ).

**ಅಸಗನ ಕಟ್ಟೆ** = ಒಂದು ಕಟ್ಟೆಯ ಹೆಸರು : ಅಲಿಂದಂ ಪಡುವಲಾಗಿ ನಡದು ಯಾರೆಯೂರ ಅಸಗನ ಕಟ್ಟೆಯ ಯೇರಿಯ ಪಡುವಲು ಸಲುವುದು (ಎಕ. XIV, ಗುಂಡ್ಲುಪೇ. ೧೨೭-೧೭; 1879). [?]

**ಅಸಗಗಾರಕ** (ನಾ). ಅಗಸನ ವೃತ್ತಿಯ ಮೇಲೆ ಹಾಕುವ ತೆರಿಗೆ (?) : ಯೀ ಮಠಕ್ಕೆ ಉತ್ತಾರವಾದ ಗ್ರಾಮುಗಳಲ್ಲೂ ಯಿ ಹವಕಲುಗಳಿಂದ ಬಾಹಕಾರಕದಿಂದ ಗಾಜನೂರ ಸೀಮೆ ಅನುಪಿನಕಟ್ಟೆ ಗ್ರಾಮದಿಂದ ಹಟಿಕಾರ ಮಗ ೨ಕ್ಕೆ ಗ ೧ ॥ ೨ ಹುಡಿಕೆಕಾರಕದಿಂದ ಜನ ೨ಕ್ಕೆ ಗ ॥ ೨ ಹಂಬುಗಾರಕದಿಂದ ಜನ ೨ಕ್ಕೆ ಗ ೧ಲ್ ೩ ಅಸಗಗಾರಕದಿಂದ ಜನ ೧ಕೆ ಗ ॥ ೩ ಅಂತ್ತು ಗ ೪ ॥ (ಎಕ. VIII, ತೀರ್ಥಹ. ೯೫-೬೧; 1709). [ಅಸಗ + ಕಾರಕ]

**ಅಸಗಗೋಡು** (ನಾ). ಒಂದು ಊರಿನ ಹೆಸರು : ತಾಳವಾರನುಂ ಕಾಕಂಬಾಟಿ ಕಂಬಯ್ಯನುಂ ಅಸಗಗೋಡ ಸಿರಿಯಮ್ಮನುಂ (ಎಕ. XI, ಚಿತ್ರದು. ೭೫-೨೩; 941); ಅಸಗಗೋಡಗಾಮುಣ್ಡ (ಎಕ. XI, ಜಗಳೂ. ೧೩-೧; 1010). [ಅಸಗ + ಕೋಡು₂]

**ಅಸಗಪೊೞಿ** 'ಅಸಗವೊೞಿ' ನೋ.

**ಅಸಗಯ್ಯ** (ನಾ). ಒಬ್ಬಾತನ ಹೆಸರು : ಪಣರವಾಡಿಯ ರಟ್ಟಗುಡ ನಣ್ಣಪಯ್ಯಕ ಮಗ ಅಸಗಯ್ಯ (ಎಕ. V. ಚನ್ನರಾ. ೨೬೭-೧೩; 971). [ಅಸಗ + ಅಯ್ಯ₁]

**ಅಸಗವಕ್ಕಿ** (ನಾ). ಒಂದು ಶಕುನದ ಹಕ್ಕಿ : ಪಯಣದೊಳಶೇಷಶಕುನಂ ನಯಮಂ ಕುಡೆ ಕಾರ್ಯಸಿದ್ಧಿ ಸಮವಾಯಂ ದುರ್ನಯಮಾದೊಡಸಗವಕ್ಕಿಯ ನಯದಿಂದಿಷ್ಟಾರ್ಥಸಿದ್ಧಿಯಕ್ಕುಮಮೋಘಂ (ಲೋಕೋಪ. ೧೨-೫); ಪೆಣ್ಗಾಗೆ ಬೆಣ್ಣೆಗರಗಂ ಮುಂಗುರಿ ನವಿಲಸಗವಕ್ಕಿಯರಗಿಳಿಕಾರೇಡಂ ಗಿಡುಗಂ . . . ತಾಂ ಪುಗೆ ಶುಭದಂ (ಲೋಕೋಪ. ೧೨-೧೯); ಸಾಳ್ವನರಳಿಗನಸಗವಕ್ಕಿಗಳ ಸಂಘಮೊಪ್ಪಿರ್ದುವಲ್ಲಿ (ರುಕ್ಮಾಂಗ. ೧೦-೫). [ಅಸಗ + ಪಕ್ಕಿ]

**ಅಸಗವನೆ** (ನಾ). ಅಗಸನ ಮನೆ; ರಜಕಗೃಹ : ನೀರ ಪೊೞಿ ಪಾಡುವೆಡೆ ಹೊಲಗೇರಿ ಪರೇತವನವಸಗವನೆ ಸಭೆ ದೇವಾಗಾರಂ ಚೌವಟಮೆಸೆದಿರ್ಪಾರವೆಯೆಂಬೆಡೆಗಳುಚಿತವೋಸಱಿಗೇಟಿಲ್ (ಲೋಕೋಪ. ೧೨-೫೩). [ಅಸಗ + ಮನೆ]

**ಅಸಗವರಿ** (ನಾ). ಒಂದು ಬಗೆಯ ಆಟ : ಗುಡುಗು ಗುತ್ತಿನ ಚೆಂಡುಗುಮ್ಮನ ಬಡಿವ ಕತ್ತಲೆಗುದ್ದು ಗಂಬದಗಡಣೆ ಕಣ್ಮುಚ್ಚಸಗವರಿ[ಪಾಠಾಂ. ಕಣ್ಮುಚ್ಚಾಟಸವಗಲಿ] ಹರಿಹಲಗೆ . . . ವಿನೋದದಲಾಡಿದರು (ಕುವ್ಯಾಅ. ೬-೨). [ಅಸಗ + ಪರಿ₂]

**ಅಸಗವೊಯ್** (ನಾ). ಅಗಸನ ಹೊಡೆತ; ಮಡಿವಾಳನ ಬಡಿತ : ಎಲ್ವಡಗಪ್ಪನ್ನೆಗಮೆತ್ತಿಕೊಂಡಸಗವೊ[ಯ್ವೊ]ಯ್ವೊಳ್ ತಡಂಬೊಯ್ದು (ಪಂಪಭಾ. ೧೦-೧೦೪); ಶಿಳಾಗ್ರದೊಳ್ ಭೀಮಾಟೋಪದಿಂ ಕೋಪದಿಂ ದಂದತ್ಯದ್ಭುತಮಾಗಿರಲಸಗವೊಯ್ವೊಯ್ದಂ ಮಿದುಳ್ ಸೂಸೆ (ನೇಮಿಪು. ೬-೧೪೮). [ಅಸಗ + ಪೊಯ್₂]

**ಅಸಗವೊಯಲ್** 'ಅಸಗವೊಯ್ಲು' ನೋ.

**ಅಸಗವೊಯಿಲು** 'ಅಸಗವೊಯ್ಲು' ನೋ.

**ಅಸಗವೊಯ್ಲು**, ಅಗಸವೊಯ್ಲು, ಅಸಗವೊಯಲ್, ಅಸಗವೊಯಿಲು, ಅಸಗಹೊಯ್ಲು (ನಾ). = ಅಸಗವೊಯ್ : ಎರಡುಂ ಕರಪರಿಘದಿನಡಸಿ ಗುರ್ದಿ ಪೆಱಪಿಂಗುವಿನಂ ಮುರಿದಡಸಿ ಘಟ್ಟಿಸಿ ಪಿರಿಯಱೆಯೊಳ್ ಪೊಯ್ದನಸಗವೊಯ್ಲಂ ಭೀಮಂ (ಪಂಪಭಾ. ೩-೩೦); ಸಿಲೆಯೊಳಸಗವೊಯ್ಲಂ ಪೊಯ್ದಂ (ಪಂರಾಮಾ. ೭-೫೭). **ಅಗಸವೊಯ್ಲು** : ಊರಸೀರೆಗಗಸಂ ಬಡಿವೆತ್ತನೆನಿಪ್ಪ ಜನದ ನಾಚ್ಚುಡಿ

ನಿನಗಾಗಲ್ಕಗಸವೊಯ್ಲ ಸವಿಯಂ ತೋರ್ಪೆಂ (ಜಗವಿ. ೬-೭). **ಅಸಗವೊಯಲ್**: 'ಅಸಗವೊಯಲ್ವೊಯ್' ಪರಾ. **ಅಸಗವೊಯಿಲು**: ಶಿಶುಗಳನು ಖಳದುರಾತ್ಮಕ ಕಂಸ ಕೊಂಡತ್ತಲತಿಮುಳಿದು ಶಿಲೆಯೊಳಸಗವೊಯಿಲನು ಹೊಯಿದು ಕೊಂದ (ಸಾಳ್ವಭಾ. ೧೧-೩). **ಅಸಗಹೊಯ್ಲು**: ಮಸಕದಿನಾ ಹರಿಯಾ ಕಂಸನನೆತ್ತಿಯಸಗಹೊಯ್ಲಿಂ ಕೊಂದನಾಗ (ನೇಮಿಸಂ. ೧೬-೧೪೪). [ಅಸಗ + ಪೊಯ್ಲು]

**ಅಸಗವೊಯಲ್ವೊಯ್** (ಕ್ರಿ). ಅಗಸನ ಹೊಡೆತವನ್ನು ಹೊಡೆ: ಅಸಗವೊಯಲ್ವೊಯ್ಯೆಯುಂ ಚಿತ್ರವಧಂಗೆಯ್ಯೆಯುಂ (ಅಜಿಪು. ೧೧-೧೦ ವ). [ಅಸಗವೊಯಲ್ + ಪೊಯ್$_1$]

**ಅಸಗವೊಟ್ಟಿ**, ಅಸಗಪೊಟ್ಟಿ (ನಾ). ಅಗಸನ ಹೊಳೆ, —ನದಿ: ಅಸಗವೊಟ್ಟಿಯೊಳೊರ್ವಳಸಗನ ಪೆಂಡತಿ ಕುರುಡಪ್ಪಸಗಂಗೆ ಲಲಿತಾಂಗಂ ಬಂದನೆಂದು ಪೇೞ್ದೊಡೆ (ಧರ್ಮಾಮೃ. ೨-೫೫). **ಅಸಗಪೊಟ್ಟಿ**: ಮೂಡಮೊಗದೆ ತಣ್ಡಲಗದಪು ತೆಂಕಮೊಗದೆ ಪೋಗಿ ಅಸಗಪೊಟ್ಟಿಯ (ವೈಆರಿ. ೧೯೩೪, ೩೮-೧೯ ; IIನೆಯ ಶತ). [ಅಸಗ + ಪೊಟ್ಟಿ$_1$]

**ಅಸಗಹೊಯ್ಲು** 'ಅಸಗವೊಯ್ಲು' ನೋ.

**ಅಸಗೞಿ** (ಕ್ರಿ). ನಾಶಮಾಡು: ಮಸಗಿ ಮಹಿಶೂರವರ್ತಗುಳ್ದಸಗೞಿದರ್ ನಾಡಪೀಡೆಯೊಡನಾರೆಯರಂ (ಅಪ್ರತಿ. ೩-೬೪).

[ಅಸಗು$_0$ + ಅೞಿ$_1$. P ತಮಿ. ಅಶಙ್ಗು = ಚಲಿಸು, ನಡುಗು, ಅಲ್ಲಾಡು]

**ಅಸಗಿತಿ**, ಅಗಸತಿ (ನಾ). ಅಗಸನ ಹೆಂಡತಿ; ಮಡಿವಾಳಿತಿ: ಗಾಣಿಗಿತಿ, ಅಸಗಿತಿ, ಕನ್ನಡಿಗಿತಿ, ಕೊಂಕಣಿಗಿತಿ (ಶಬ್ದಾನು. ೧೯೦ ಪ್ರಯೋ). **ಅಗಸತಿ**: ಕೀಳುಕೋಟಿಯೊಳೊಬ್ಬ ಅಗಸಾಲ ಸತ್ತರೆ ಮೇಲುಕೋಟಿಯೊಳೊಬ್ಬ ಅಗಸತಿ ಅಳುವಳು (ಪುರಂದ. ೨-೧೨-೩). [ಅಸಗ + -ಇತಿ]

**ಅಸಗೆಡಿಸು** (ಕ್ರಿ). ಹದಗೆಡಿಸು; ಹಾಳುಮಾಡು: ಅಸಗೆಡಿಪರು ರಾಜಕಾರ್ಯವ ರಾಜ[ಜ್ಯ]ದಾವಸಗೆ ಮಸುಳಿಪ ಮಂತ್ರಿಗಳು (ಸೌಂದಕಾ. ೧೩-೭೫). [ಅಸ$_4$ (< ಹಸ) + ಕೆಡು + -ಇಸು$_3$]

**ಅಸಗೆಯ್** (ಕ್ರಿ). ಹದಗೊಳಿಸು; ಕ್ರಮಪಡಿಸು: ಪೂವಿನ ಬಿಲ್ಲನೇಱಿಸುವ ಬಂಡಬಸಂತನನಾಸೆಮಾಡುವಿಂಮಾವಿನರಲ್ಗಳಂಬನಸಗೆಯ್ವಳದಿಂಗಳ ಪಂಗುಗೊಳ್ವ ಬಲ್ಪೇಱುದೆನುತ್ತ ಚಿತ್ತಭವನಾವನ ಮೆಯಿವಳಿಗೊಂಡು ಕಂಡ ಕಾಂತಾವಳಿಯಂ ಮರಳ್ಚುವನೆನಲ್ವೊಬಗೆಂತುಟೊ ಲಕ್ಷ್ಮಣಾಂಕನಾ (ಸೌಇಇ. IV, ೨೬೭-೫೬; 1130).

[ಅಸ$_4$ (< ಹಸ) + ಗೆಯ್ (< ಕೆಯ್$_1$)]

**ಅಸಗೊಳ್ಳು**, ಅಸಕೊಳ್ಳು, ಅಸುಗೊಳ್ಳು (ಕ್ರಿ). ವಶಕ್ಕೆ ಸಿಕ್ಕು; ಹಿಡಿತಕ್ಕೆ ದಕ್ಕು: ಅಸಗೊಳ್ಳದ ಅಗಡುಕುದುರೆಗಳನ್ನು ಸಾಗುಮಾಡುವುದರಲ್ಲಿ ಇವನು ಜಾಣನಿದ್ದನು (ಪ್ರಾಚೀಹಿಂ. ೫೨); ಎಂಟು ಜನಾ . . . ಬಂದರ ಅಸಗೊಳ್ಳಲಿಲ್ಲರಿ ಅಂವಾ (ಗ್ರಾಮಾಯ. ೨೪೦). **ಅಸಕೊಳ್ಳು**: ಟೀಪುವು ಎಷ್ಟು ಪ್ರಯತ್ನ ಮಾಡಿದರೂ ಬೇಲಿಯು ಅವನಿಗೆ ಅಸಕೊಳ್ಳಲಿಲ್ಲ (ಚರಿಸಂ. ೧೫೨); ಬೇಲಿಯಂತೂ ಯಾತಕ್ಕೂ ಅಸಕೊಳ್ಳದಹಾಗಾಗಿ ಕಳ್ಳದನಗಳಿಗೂ . . . ಅಸಾಧ್ಯವಾಗಿ ಸುತ್ತಲೂ ಮಾರ್ಗವಿಲ್ಲದಂತೆ ಆಗುವುದು (ಕೃಷಿಪ್ರ. ೧೩೪); ನನಗೊಬ್ಬನಿಗೆ ಅದು (ಕುದುರೆ) ಅಸಕೊಳ್ಳಲಿಕ್ಕಿಲ್ಲ (ಮುಂಬಯಿ. ಕಿ. ೧-೩). **ಅಸುಗೊಳ್ಳು**: ಎತ್ತುಗಳು ಅಸುಗೊಳ್ಳದೆ ಅವರನ್ನು ಕಿತ್ತಿ ಒಗೆದು ಮುಂದೆ ಸಾಗಿದ್ದವು (ಬೆಳಭಾ. ೧೪೫). [ಅಸ$_7$ + ಕೊಳ್ಳು (< ಕೊಳ್$_1$)]

**ಅಸಜ್ಜನ** (ನಾ). ೧. ದುರ್ಜನ; ಕೆಟ್ಟಜನ. ೨. ಕುಲಸ್ತ್ರೀಯಲ್ಲದವಳು: ಮಾಯೆಯೆಂಬ ಸ್ತ್ರೀ ಅಸಜ್ಜನಭಾವದಿಂ ಪಣ್ಯಾಂಗನೆಯಾಗಿರುತಿರ್ಪಳ್ (ಪದಗೋ. ೩೮-೭). [ಸಂ. (ಅಸತ್ + ಜನ)]

**ಅಸಡಾಳೆ** 'ಅಸಡ್ಡಾಳ$_2$' ನೋ.

**ಅಸಡಿ** 'ಆಸಡಿ' ನೋ.

**ಅಸಡ್ಡಾಳ$_1$**, ಅಷಡ್ಡಾಳ, ಅಷಡ್ಢಾಳ, ಅಸಡ್ಡಾಳು (ನಾ). ೧. ಕ್ರಮವಿಲ್ಲದಿರುವುದು; ಅಕ್ರಮ; ಅವ್ಯವಸ್ಥೆ: ಕಿಡಿಕಿಗಳು ಕಿರಿದಾಗಿ ಅಂದಗೇಡಿಯಾಗಿದ್ದಾವು ಬಿದಿರಿನ ಚಪ್ಪರ ಅಸಡ್ಡಾಳ ಸುರಿಯುತ್ತಿದ್ದಾವು ಎಂದು ಅವಳು ಕನಸಿನಲ್ಲಿಯೂ ಕಂಡಿರಲಿಲ್ಲ (ಅರಗಿ. ೭೮). ೨. ಕುರೂಪ; ಅಂದಗೇಡಿತನ: ಏನು ಎತ್ತರ, ಏನು ದಪ್ಪ, ಏನು ಅಸಡ್ಡಾಳ (ಹುಚ್ಚಾಟ. ೩೬). **ಅಷಡ್ಡಾಳ**: ೧. ಅನ್ಯಾಯದಲ್ಲಿ ಸಂಪಾದಿಸಿದ್ದು ಅಷಡ್ಡಾಳದಲ್ಲಿ ಹೋಯಿತು (ಗಾದೆ). **ಅಷಡ್ಢಾಳ**: ೧. ಅಷಡ್ಢಾಳ ಸಾವಿರ ಇರಲಿ, ಆಡಂಬರ ಇದ್ದರೆ ಎಲ್ಲಾರೂ ಮುಂದೆ ಬರ್ರಿ ಅಂದಾರು, ಮರ್ಯಾದೆ ಮಾಡ್ಯಾರು (ದಾಕೂಟ. ೧೦೭). **ಅಸಡ್ಡಾಳು**: ೨. ಈ ಮೇರೆಗೆ ಕರಡಿಯ ಅವಯವಗಳೆಲ್ಲ ಅಸಡ್ಡಾಳಾಗಿ ಬಲವುಳ್ಳವಿರುತ್ತವೆ (ಮುಂಬಯಿ. ೩-೧೦೪). [?]

**ಅಸಡ್ಡಾಳ$_2$**, ಅಸಡಾಳ, ಅಸಡ್ಢಾಳ (ಗು). ೧. ಕುರೂಪವಾದ; ಅವಲಕ್ಷಣವಾದ: ಅವನಂತಹ ಅಸಡ್ಡಾಳ ಮುಸುಡಿಯ ಮನುಷ್ಯನನ್ನು . . . ಈ ಮೊದಲಾದರೂ ನೋಡಿರಲಿಲ್ಲ (ಅಂಬಿಕೆ. ೯). ೨. ಕ್ಷುದ್ರವಾದ; ಅಲ್ಪವಾದ. **ಅಸಡಾಳ**: ೨. ಮಂಗಳೋದಯ ನಿತ್ಯಪರಮೇಶಂಗನೀಶರು ಸರಿಯೆ ಸೊಡ್ಡಳ ಲಿಂಗದೇವನ ಸದೃಶವೇ ಅಸಡಾಳ ದೈವಗಳು (ಬಸಪು. ೫೩-೨೭). **ಅಸಡ್ಢಾಳ**: ೧. ಜಟ್ಟಿಗಳು ಅದಕ್ಕಿಂತಲೂ ಅಸಡ್ಡಾಳವಾಗಿದ್ದುದರಿಂದ ಆ ಚಿತ್ರ ಚಂದವೆಂದೇ ಹೇಳಬೇಕು (ಗಾಳಿಪ. ೬೪). ೨. ಎಂಥಾ ಅಸಡ್ಡಾಳ ನಾಟಕದೊಳಗೂ ಹೀಂಗ ಚಟಕ್ಕನ ಒಬ್ಬರನ್ನೊಬ್ಬರು ಬಿಟ್ಟು ಹೋಗಲಿಕ್ಕೆ ಆಗೂದಿಲ್ಲ (ಹೊಸಂಸಾ. ೧೩೪). [?]

**ಅಸಡ್ಡಾಳತನ** (ನಾ). ಅಶ್ರದ್ಧೆ; ಅವ್ಯವಸ್ಥೆ: ಇಂಗ್ಲಂಡದವರೆಗೆ ಬಂದು ನಮ್ಮ ಅಸಡ್ಡಾಳತನ ತೋರಿಸಬೇಕೆ? (ಶ್ರೀರಂಗ. ೬೭).

[ಅಸಡ್ಡಾಳ$_1$ + -ತನ]

**ಅಸಡ್ಡಾಳು** 'ಅಸಡ್ಡಾಳ$_1$' ನೋ.

**ಅಸಡ್ಡಿಸು** (ಕ್ರಿ). ಅಲಕ್ಷ್ಯದಿಂದ ಕಾಣು; ಉದಾಸೀನಮಾಡು: ಕೆಲವು ಜನರಿಗೆ ಭೂತಕಾಲವನ್ನು ಅಸಡ್ಡಿಸುವ ಭೂತಬಾಧೆಯಾಗಿದೆ (ಕನ್ನನು. ೧-೧೫೩). [ಅಸಡ್ಡೆ + -ಇಸು$_3$]

**ಅಸಡ್ಡೆ** (ನಾ). ಆಸಕ್ತಿಯಿಲ್ಲದಿರುವುದು; ಅಲಕ್ಷ್ಯ; ಉದಾಸೀನತೆ: ಒಂದೆರಡು ಬಾರಿ ತಿಳುಹಿದಾಗ್ಯೂ ನೀವು ಅಸಡ್ಡೆಯಿಂದ ಕುಳಿತಿರುವುದು ತಿಳಿದುಬಂದುದರಿಂದ . . . ನಿಮಗೆ ಎಚ್ಚರಕೊಡೋಣಾಗುತ್ತದೆ (ಕುರುಕಾ. ೫); ಸತ್ಯದ ಗುತ್ತಿಗೆ ತಮ್ಮದೊಂದೇ ಪಕ್ಷಕ್ಕೆ ಇದ್ದಂತೆ ಆವೇಶ ತಾಳಿ ಉಳಿದವರನ್ನು ಅಸಡ್ಡೆಯಿಂದ ನಡೆಸಿಕೊಳ್ಳುವುದು ಅನ್ಯಾಯ (ಯಕ್ಷಪ್ರ. ೧೮೩).

**ಅಸಡ್ಡೆಮಾಡು** = ಅಲಕ್ಷ್ಯದಿಂದ ಕಾಣು; ಉದಾಸೀನಮಾಡು: ಅವರ ಎಚ್ಚರಿಕೆಯನ್ನು ಅಸಡ್ಡೆಮಾಡಿದ್ದರಿಂದ ಉಂಟಾದ ಘೋರ ಪಾಪಫಲವನ್ನು ಅನುಭವಿಸು (ಕೃವಾಭೀ. ೧೬೧); ನೀನು ಇಲ್ಲದ ಅಹಂಕಾರವನ್ನು ತೋರಿ ಅವನನ್ನು ಅಸಡ್ಡೆಮಾಡಿದಿ (ತೇಮೋಡ. ೯೯); ನನ್ನ ವರ್ತನೆ ಅಂಥ ಅಸಡ್ಡೆ ಮಾಡುವಂಥದೇನಿದೆ (ಕಪ್ಪುಹು. ೧೩).

[< ಸಂ. ಅಶ್ರದ್ಧಾ]

**ಅಸಡ್ಡೆಗೈ** (ಕ್ರಿ). = ಅಸಡ್ಡಿಸು: ನೀವು ನಮ್ಮ ಆಜ್ಞೆಗಳನ್ನು ಅಸಡ್ಡೆಗೈದ ವಿಚಾರ ನಮಗೆ ಹೇಗೆ ಗೊತ್ತಿರಬೇಕು (ಪ್ರವಾಇ. II, ೩).

[ಅಸಡ್ಡೆ + ಗೈ (< ಕೆಯ್$_1$)]

**ಅಸಡ್ಢಾಳ** 'ಅಸಡ್ಡಾಳ$_2$' ನೋ.

**ಅಸತಿ** (ನಾ). ನೀತಿಗೆಟ್ಟ ಹೆಂಗಸು ; ಜಾರೆ : ಅಸತೀಸಂಕುಲದೂರನಂ ಮನುಮುನೀಂದ್ರಾಚಾರನಂ (ಮದತಿ. ೧-೪೭) ; ಹಠಾತ್ತನೆ ಬಂದೆರೆಯನಿಗೆಯೆ ಜಾರನನಿತ್ತಳು ಅಸತಿ (ಗಾಥಾಸ. ೩-೯೭). [ಸಂ. ಅಸತೀ]

**ಅಸತಿವಸಥ** (ನಾ). ಜಾರೆಯ ಮನೆ : "ಪಾದರದ ಮನೆಯಸತಿವಸಥಂ [ಪಾಠಾಂ. ವದನಂ] " (ಮಂಗರಾ. ೫-೧೧). [ಸಂ. ಅಸತೀವಸಥ]

**ಅಸತೀಕೇಳಿ** (ನಾ). ಜಾರೆಯೊಡನೆ ವಿಹರಿಸುವುದು : ಸ್ಮರರಾಗಾಂಧತ್ವದಿಂದಂ ಪಗಲೊಳಮಸತೀಕೇಳಿ ಪೊಣ್ಮಲ್ (ಕಾದಂಪೂ. ೭೨೦). [ಸಂ. ಅಸತೀಕೇಲಿ]

**ಅಸತು** (ನಾ). ಒಂದು ಬಗೆಯ ಸುಂಕ : ತೋಂಟಕ್ಕೆ ಕರವಂದ ತಳಭೋಗಮಸತು ಮೊದಲಾಗೆ ಸರ್ವಬಾಧಾ ಪರಿಹಾರಂ (ಸೌಇಇ. XI–i, ೫೨-೭೪ ; 1007); ತಳಾಜಿಗೂಲಿ ಅಸತನ್ಯಾಯವಿಂತಿನಿತುಮಂ(ಬೊಂಕಶಾ. ೧೯೩೦, ಬಾಗೇವಾ. ೧೦೩-೪೪ ; 1165). 'ಅಸತುದೆಱೆ' ಪರಾ. [?]

**ಅಸತುದೆಱೆ** (ನಾ). 'ಅಸತು' ಎಂಬ ಸುಂಕ : ಒಸೆದಿತ್ತಮ್ಮಾರ್ಜನಮಿಾ ಬಸದಿಯ ಸೂಳೆಗೆ ವಿಶೇಷದಿಂ ಪರಿಯರಮ್ಮೆಂದಸತುದೆಱೆಮ್ಮೆಂದಿ ಕರವಡವಿಸಿವಾಕೊಳ್ಳಾ[ಗ್ಗೆ]ಯ್ದು ತಳಭೋಗೆವಿವ (ಸೌಇಇ. XI–i, ೫೨-೭೭ ; 1007). [ಅಸತು + ತೆಱೆ]

**ಅಸತ್ಕಥೆ** (ನಾ). ೧. ಕೆಟ್ಟಕಥೆ. ೨. ಕೆಟ್ಟವರ ವಿಷಯದ ಮಾತುಕಥೆ ; ಕೆಟ್ಟವರ ಚರಿತ್ರೆ. [ಸಂ. ಅಸತ್ಕಥಾ]

**ಅಸತ್ಕರ್ಮ** (ನಾ). ಕೆಟ್ಟಕೆಲಸ : ಅಸತ್ಕರ್ಮಬಂಧಮಶುಭಮೆಂಬುದಕ್ಕುಂ (ಶಾಂತಿಪು. ೧೨-೫ ವ). [ಸಂ. ಅಸತ್ಕರ್ಮನ್]

**ಅಸತ್ಕಾರ** (ನಾ). ೧. ಸತ್ಕರಿಸದಿರುವುದು ; ಸತ್ಕಾರವಿಲ್ಲದಿರುವುದು. ೨. ಸತ್ವಹೀನವಾದ ಸ್ಥಿತಿ. ೧, ೨ : ಅಸತ್ಕಾರಂ ನೀರಸಕ್ಷೇತ್ರದೊಳ್ . . . ಅಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ). [ಸಂ.]

**ಅಸತ್ಕಾರ್ಯ** (ನಾ). = ಅಸತ್ಕರ್ಮ : ಅಶ್ರದ್ಧೆಯಿಂದ ಮಾಡಿದುದು ಅಸತ್ಕಾರ್ಯವಾಗುವುದು (ಅರ್ಯಧ. ೯೧). [ಸಂ. (ಅಸತ್ + ಕಾರ್ಯ)]

**ಅಸತ್ಕೃತಿ** (ನಾ). ೧. ಕೆಟ್ಟಕಾರ್ಯ. ೨. ಕೆಟ್ಟಕಾವ್ಯ ; ದುಷ್ಕಾವ್ಯ. ೩. ಆದರಿಸದಿರುವುದು. [ಸಂ. (ಅಸತ್ + ಕೃತಿ)]

**ಅಸತ್ತು** (ನಾ). ೧. ಇಲ್ಲದಿರುವುದು : ಅಸತ್ತು ಅಚಿತ್ತು ಅನಾನಂದಾದಿಗಳಿಲ್ಲದಂದು ಸಚ್ಚಿದಾನಂದ ಪರಬ್ರಹ್ಮ ನೀನೇ ಆಗಿ(ಸಿದ್ಧೇವ. ೩೧); ಅಸತ್ತಿನಿಂದ ಸತ್ ಹುಟ್ಟಲಾರದು, ಅಭಾವದಿಂದ ಭಾವ ಹೊರಡದು. ಈ ಸತ್ ಅಸತ್ತೂ ಆಗಲಾರದು. ಶೂನ್ಯದಿಂದ ವಸ್ತುವಾಗಲಾರದು (ಋಕ್ಸಾರ. ಪೀ. ೯). ೨. ಸತ್ಯವಲ್ಲದ್ದು. ೩. ಕೆಟ್ಟದ್ದು ; ಹೇಯವಾದದ್ದು : ಮ್ಯಾಕ್‌ಬೆತ್ ತನ್ನ ಸ್ವಭಾವದಲ್ಲಿದ್ದ ಅಸತ್ತಿಗೆ ಮತ್ತು ಮಾಟಗಾತಿಯರ ಪ್ರಾರ್ಥನೆಗೆ ವಶವಾಗಿ ಪಾತಕಕ್ಕೆ ನಿಶ್ಚಯವಾಗಿ ಕೈವರ್ತಿಸುವ ಗಳಿಗೆಯಲ್ಲೇ ನಿಜವಾದ ಸಂದಿಗ್ಧಾವಸ್ಥೆ ಉಂಟಾಗುತ್ತದೆ (ಸಾಹಿಪ್ರ. ೨೧೨). [ಸಂ. ಅಸತ್]

**ಅಸತ್ಯ** (ನಾ). ಸತ್ಯವಲ್ಲದುದು ; ಸುಳ್ಳು : "ಅಳೀಕಂ, ವಿತಥಂ, ಮಿಥ್ಯಾ, ಮೃಷಾ, ಅನೃತಂ – ಈ ೫ ಅಸತ್ಯದ ಪೆಸರ್" (ಹಲಾಯು. ೨೩-೧೪೩) ; ಯಮವೆಂದರೆ ಬಿಡತಕ್ಕದ್ದು ; ಅದು ಹಿಂಸೆ ಅಸತ್ಯ ಸ್ತೇಯ ದುರಾಚಾರ ಪರಿಗ್ರಹ ಎಂದು ಐದು ಪ್ರಕಾರ (ಹಿಂದಸಾ. ೧೦೫). [ಸಂ.]

**ಅಸತ್ಯವಾದಿ** (ನಾ). ಅಸತ್ಯವನ್ನು ಹೇಳುವವನು ; ಸುಳ್ಳುಗಾರ : ಧರಣೀಪುತ್ರನಿವಾಸದೊಳ್ ನಿಲೆ ಬುಧಂ ಕೊಟಕ್ರಿಯಾವೇದಿ ತಸ್ಕರನದ್ರವ್ಯನಸತ್ಯವಾದಿ . . . ಎನಿಕುಂ (ಜಾತತಿ. ೧೭-೨೨). [ಸಂ. ಅಸತ್ಯವಾದಿನ್]

**ಅಸತ್ತ್ವ** (ನಾ). ೧. ಸತ್ವವಿಲ್ಲದಿರುವುದು. ೨. [ತತ್ತ್ವಶಾ] ಇಲ್ಲದಿರುವುದು ; ಅಭಾವ : ಅಸತ್ತ್ವವೆಂಬ ಸ್ವಭಾವವುಳ್ಳ ವಸ್ತುವೇ ಇಲ್ಲವೆಂದು ಅಭಿಪ್ರಾಯ (ಹಿಂದಸಾ. ೫೦). [ಸಂ.]

**ಅಸದನುಶಾಸನ** (ನಾ). ದುಷ್ಟನಿಗ್ರಹ : ಅಸದನುಶಾಸನಂ ಸದವನಂ ನೃಪಲಕ್ಷಣಮೊಂದು (ಪಂರಾಮಾ. ೬-೧೧೩) ; ಅಸದನುಶಾಸನಂ ರಘುಕುಲಕ್ಕೆ ಕುಲವ್ರತಂ (ಪಂರಾಮಾ. ೧೧-೫). [ಸಂ. (ಅಸತ್ + ಅನುಶಾಸನ)]

**ಅಸದರ್ಥ** (ನಾ). ೧. ಕೆಟ್ಟ ಅರ್ಥ ; ತಪ್ಪು ವಿವರಣೆ. ೨. ಅನ್ಯಾಯದ ಮಾರ್ಗದಲ್ಲಿ ಸಿಕ್ಕುವ ದ್ರವ್ಯ. ೩. ಕೆಟ್ಟ ಉದ್ದೇಶ ; ತಪ್ಪಾದ ಗುರಿ. ೪. [ಕಾವ್ಯಮಿಾ] ಕೆಟ್ಟ ಅರ್ಥ ಬರುವಂತೆ ಮಾತುಗಳನ್ನು ಬಳಸುವ ಒಂದು ಕಾವ್ಯದೋಷ ; ಹದಿನೆಂಟು ಕಾವ್ಯದೋಷಗಳಲ್ಲಿ ಒಂದು : ಅಸದರ್ಥಂ ವಿಪರೀತಕಲ್ಪನೆ. . . ಇನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೬. ೧-೪೦). [ಸಂ. (ಅಸತ್ + ಅರ್ಥ)]

**ಅಸದರ್ಥಬೋಧನ** (ನಾ). [ಕಾವ್ಯಮಿಾ] ನಿದರ್ಶನಾಲಂಕಾರದ ಒಂದು ಪ್ರಭೇದ : ಒಂದು ವಸ್ತುವಿನೊಳಿರ್ಪುದೊಂದು ಕಾರ್ಯಂ ಲೋಗರ್ಗೆ ಪೊಲ್ಲದ ಕಜ್ಜಮಂ ತಿಳಿಪುವಂತಿರ್ಪುದೆಂದು ಪೇೞ್ದ (೩) ಅಸದರ್ಥಬೋಧನಮೆಂದುಂ ; ನಲ್ಗೆಯ್ತಮಂ ತಿಳಿಪುವಂತಿರ್ಪುದೆಂದು ಪೇೞ್ದ (೪) ಸದರ್ಥಬೋಧನಮೆಂದುಂ, ಎರಡುಂ ನಿದರ್ಶನೆಯೆನಿಪುದು. ಎಂತೆನೆ :— ಅಱಿಕಲ್ಲೂಡಂ ಕೊಂಡವರುಱುಬಿದೊಡಿದಿರಾಂಪುದರಿದು ಬಿದಿರೂರವರೆಂದಱಿಯುತೆ ಚಿಕದೇವೇಂದ್ರಂ ತಱಿತಱಿದಿರ್ಕೆರಿಯವರ ಸೊರ್ಕಂ ಮುಱಿದಂ (ಅಪ್ರತಿ. ೩-೭೦ ವೃತ್ತಿ, ೭೧). [ಅಸದರ್ಥ + ಬೋಧನ]

**ಅಸದಳ** (ನಾ). ಅಸಾಧ್ಯ ; ಅಶಕ್ಯ ; ಅತಿಶಯ : "ಅಸದಳಮೆಂದು ಅಸಾಧ್ಯಂ" (ಕಶಸಾ. ೩೧-೭೭೩) ; ಹುಸಿಮುಸುಕಿದ ಲಿಂಗಾರ್ಚನೆಯೆಂಬುದು ಅಸದಳದಖಿಳ ನರಕಂಗಳನುಂಬುದು (ದೀಕ್ಷಾಬೋ. ೧೧೯-೧೩); ಮೊಗಕ್ಕೆ ಪಿರಿದೊಪ್ಪುವ ಬಿಂಕದ ಸಂಕದೋಲೆಕರ್ಪಸದಳಮಾದ ಸಣ್ಣವಳೆ (ಚಂದ್ರಪು.೮-೫೧); ಕಂದ ವೈರಿವ್ಯೂಹವಸದಳವೆಂದೆನಿಪುದು(ಕುವ್ಯಾದ್ರೋ. ೪-೪೦) ; ಆರು ಗೆಲಬಹುದರಸ ಕೇಳ್ ಕಾಮಾರಿಗಸದಳವಬಲೆಯರ ಕಣ್ಣೋರೆಗಳ ಕಾಲಾಟಕಳುಕದರುಂಟೆ (ತೊರರಾ. ೧-೫-೫೨) ; ನನ್ನಿಂದ ಯಾವ ನೆರವನ್ನೂ ನೀಡಲು ಅಸದಳ (ಧೂಮುಮು. ೫೭). [?]

**ಅಸದಳಂ** (ಅ). ಅತಿಶಯವಾಗಿ ; ಅಸಮಾನವಾದ ರೀತಿಯಲ್ಲಿ : ಮಿಸುಗುವ ಪೊಸಪಸೆಯೊಳಸದಳಮೆಸೆಯೆ ಪಸರಿಸಿ ಪೊಸಯಿಸಿದ ಪೊಸಸುಸಿಲ ಮುಸಕದ ಬಸದೊಳ್ ಬಸದಾಗಿಯುಂ (ಆದಿಪು. ೪-೧೨ ವ) ; ಅಸದಳಮಾಗಿಯು[ಮಿಾ] ನಮ್ಮ ಸೈನ್ಯಮಿಂತೊರ್ವರೊರ್ವರೊಳ್ ಸೆಣಸಿ ಖಳವ್ಯಸನದೊಳೆ ಕೆಟ್ಟುದು (ಪಂಪಭಾ. ೧೨-೪೨) ; ಇಸುವಂಬನಂಬಿನಿಂ ಖಂಡಿಸಿ ಗರುಡಧ್ವಜನ ಗಜದ ಮೊಗಚರ್ಮಮನರ್ವಿಸುವಿನಮಿಸೆ ಪೊಸಮಸೆಯೆಂಬಸದಳಮೊಡನೆಱಗಿ ತುಱುಗಿ ಪಾಯ್ದುವು ಕೆಲವುಂ (ಶಾಂತಿಪು. ೫-೬೦); ಶ್ರೀ ಮ ಜ್ಜಿ ನ ಮ ಜ್ಜ ನ ದ ಮಹಾಮಹಿಮಾತಿಶಯಮಸದಳಂ ಪೊಗೞಲ್ (ಅಜಿಪು. ೫-೧) ; ಜಯಮುಂ ಧರ್ಮಕ್ಕೆ ಧರ್ಮ್ಮಾನ್ವಯಮನಸದಳಂ ಸಾಧುವರ್ಗ್ಗಕ್ಕೆ(ಎಕ. VII, ಶಿಕಾರಿ. ೧೩೬-೧೦; 1068); ಪೂರ್ವಾನುರಾಗಮಂ ಪ್ರಸ್ತಾವಿಸುವ ನೆವದಿಂ ಶ್ರವಣನಾಳದೊಳ್ ಸುಖಸುಧಾರಸಮನಸದಳಂ ತಳಿಯೆ (ವರ್ಧಪು. ೪-೧೨ ವ). [< ಅಸದಳ]

**ಅಸದಳಿಸು** (ಕ್ರಿ). ಅತಿಶಯವಾಗು ; ಅಧಿಕವಾಗು : ಅಸದಳಿಸಿ ಮಾರ್ಮಲೆತು ಮುತ್ತಿದ ವಿಷಮವೀರರನದ್ರಿಕುಜಸಹಿತುಸುರಗಾಳಿಯಲೂದಿ ಹಾಱಿಸಿದನು (ತೊರರಾ. ೬-೨೭-೧೦) ; ಶ್ವಸನಸುತ ಸುಗ್ರೀವ ಖಿಪಿನೌಕಸರ ಸೇನಾನಾಥ ವಾಲಿಜರಸದಳಿಸಿದರು ನಿಜಪತಿಯ ಸೇವಾಭಿಮಾನದಲಿ (ತೊರರಾ. ೬-೨೭-೨೫). [ಅಸದಳ + -ಇಸು]

**ಅಸದಾಖ್ಯಾತಿ** (ನಾ). [ಕಾವ್ಯಮೀ] (ವರ್ಣನಾಕ್ರಮದಲ್ಲಿ) ಲೋಕದಲ್ಲಿ ವಸ್ತುತಃ ಇಲ್ಲದಿರುವ ಕೆಲವು ವಿಷಯಗಳನ್ನು ಉಂಟು ಎಂದು ವರ್ಣಿಸುವ ಒಂದು ಕವಿಸಮಯ; ಇಲ್ಲದಿದ್ದರೂ ಉಂಟೆನ್ನುವುದು: "ಅಸದಾಖ್ಯಾತಿ ಎಂದರೆ ಇಲ್ಲದೆ ಇರುವುದನ್ನು ಇರುವಂತೆ ವರ್ಣಿಸುವುದು" (ಕೈಪಿಡಿ. ೨೪೩); ಅತತ ಸತ್ಕವಿಸಮಯಂ ಜಾತಿದ್ರವ್ಯಕ್ರಿಯಾಗುಣಾಶ್ರಯಮಸದಾಖ್ಯಾತಿ ಸದಕೀರ್ತನಂ ನಿರ್ಣೀತಂ ನಿಯಮಾರ್ಥಮೈಕ್ಯಮೆನೆ ನಾಲ್ಕು ತೆಜಂ (ಕಾವ್ಯಾವ. ೮೪೫); ಉದಾ:—ಸಲಿಲಾಶ್ರಯಮಾತ್ರದೊಳಂ ಕಲಹಂಸಪ್ರಭೃತಿ ನದಿಗಳೊಳ್ ಕಮಲ ಸಿತೋತ್ಪಲ ಕುವಲಯಾದಿ ಶೈಲಾವಲಿಯೊಳ್ ರತ್ನಾದಿಯುಂ ಪ್ರಯೋಗಿಸೆ ಪಡೆಗುಂ (ಕಾವ್ಯಾವ. ೮೪೬). [ಸಂ. (ಅಸತ್ + ಆಖ್ಯಾತಿ)]

**ಅಸದಾಗ್ರಹ** (ನಾ). ಸಲ್ಲದ ಹಟ; ಅನುಚಿತವಾದ ಆಗ್ರಹ: ಬಿಸುಡುವುದಸದಾಗ್ರಹಮಂ ಪ್ರಸನ್ನ ಗಂಭೀರಚಿತ್ತದಿಂದಿದನವಧಾರಿಸುವುದು (ಆದಿಪು. ೧೪–೧೦೪); ಈವುದು ಜಾನಕಿಯನುಜಿವುದಸದಾಗ್ರಹಮಂ (ಪಂರಾಮಾ. ೧೨–೬೧). [ಸಂ. (ಅಸತ್ + ಆಗ್ರಹ)]

**ಅಸದೃಶ** (ಗು). ೧. ಅಸಮಾನವಾದ; ತನಗೆ ಸಮಾನವಾದ ಬೇರೊಂದಿಲ್ಲದ: ವಿರಹಿತೇಂದ್ರಿಯಕರ್ಮಿಯಸದೃಶ ಪರಮಲಿಂಗ ಸಧರ್ಮಿ ಕರುಣಾಭರಿತ (ಬಸಪು. ೬–೩೭). ೨. ಅನುಚಿತವಾದ; ಅನುರೂಪವಲ್ಲದ. [ಸಂ.]

**ಅಸದ್ವ್ಯಯ** (ನಾ). ಅನ್ಯಾಯವಾದ ವೆಚ್ಚ; ಅನುಚಿತವಾದ ಖರ್ಚು: ಎಂತಾನುಂ ಪಡೆದ ಧನಮನಸದ್ವ್ಯಯಂಗೆಯ್ದೊಡೆ ಬಡತನಮಕ್ಕುಂ (ಪಂಚತಂ. ೩೦೧–೨); ತ್ಯಾಗ ಭೋಗೋಪಭೋಗಾದಿ ವ್ಯಸನಕ್ಕಸದ್ವ್ಯಯಂ ಮಾಡಿ ಕಿಡಿಸಿಯುಂ (ಸುಕುಮಾ. ೨–೫೨ ವ). [ಸಂ. (ಅಸತ್ + ವ್ಯಯ)]

**ಅಸದ್ವಾದ** (ನಾ). ೧. ಕೆಟ್ಟ ಚರ್ಚೆ; ಅನುಚಿತವಾದ ವಾದ: ಕುಟಿಲನುನ್ನತಂ ಪಿರಿದಸದ್ವಾದಕುಶಲಂ ಧರ್ಮಮಾರ್ಗೇತರಂ ನಿಕೃಷ್ಟಂ (ಅರಾಚ. ೧–೪). ೨. [ಬೌದ್ಧ] ತತ್ತ್ವವಿಲ್ಲವೇ ಇಲ್ಲ ಎಂಬ ವಾದ: "ಶೂನ್ಯಂ ತತ್ತ್ವಂ ಎಂದರೆ ತತ್ತ್ವವಿಲ್ಲವೇ ಇಲ್ಲವೆಂದರ್ಥವು. ಈ ವಾದಕ್ಕೆ ಅಸದ್ವಾದವೆಂದು ಹೆಸರು" (ಹಿಂದಸಾ. ೪೬). [ಸಂ. (ಅಸತ್ + ವಾದ್ಯ)]

**ಅಸದ್ವಿಷಯ** (ನಾ). ೧. ಯೋಗ್ಯವಲ್ಲದ ವಿಷಯ. ೨. ಸಲ್ಲದ ಇಂದ್ರಿಯಾರ್ಥ, —ವಿಷಯಸುಖ: ಮನಮಂ ನಿಗ್ರಹಿಸುತ್ತಸದ್ವಿಷಯದತ್ತಲ್ಪೊರ್ದದಂತಾಗೆ ಮಾಡಿ (ಕಾದಂಪೂ. ೯೫೩). [ಸಂ. (ಅಸತ್ + ವಿಷಯ)]

**ಅಸನ**$_1$ (ನಾ). ಅನ್ನ; ಆಹಾರ: ಹಸಿದು ಹಲವೂರೊಳಗೆ ತಿರಿತಂದಸನದೊಳಗುಂಬಾಗ ನಾಯ್ದಿಟ್ಟಿಸಿದವೊಲಾಯ್ತು (ನಿಭಾಗ. ೫–೩–೨೭); ಹಸಿದ ಹಾರುವನಾಗಿ ಭಾಮೆಯೊಳಸನಮಂ ಪಡೆದುಣುತ (ಸಾಳ್ವಭಾ. ೨೮–೩೪); ಪಶುಪತಿಯ ಪದವ ಪಡೆಯುವಡೆ ಹಸಿದರಿಗೆ ಅಸನವನು ಇಕ್ಕು (ಸರ್ವಜ್ಞ. ೬೪೨). [< ಸಂ. ಅಶನ]

**ಅಸನ**$_2$ (ನಾ). ಹೊನ್ನೆಯಮರ: "ಅಸನಂ ಪೀತಸಾರಮೆನೆ ಹೊನ್ನೆಯದು" (ಮಂಗರಾ. ೩೫–೧೨). [ಸಂ.]

**ಅಸನಪರ್ಣಿ**, ಅಶನಪರ್ಣಿ (ನಾ). ಹೊನ್ನೆಯ ಮರ. **ಅಶನಪರ್ಣಿ**: ಉಪರಾಜಿತೆ ಅಶನಪರ್ಣಿ (ನಾಚಿರಾ. ೬). [ಸಂ. ಅಶನಪರ್ಣಿನ್]

**ಅಸನಬೆಸನ** (ನಾ). ಆಹಾರದ ಚಿಂತೆ; ಅನ್ನದ ವ್ಯಸನ: ಕಲಿದೇವಮುನಿಪನಾತ್ಮಜ ಸಲೆ ಮೂಜಗದೊಳಗೆ ಮೆಜೆವ ಮಾನವದೇವಂ ಗೆಲಿದಂ ಅಸನಬೆಸನವ ಛಲರಧಿಕಂ ಹಾಲಬಸವಿದೇವ ಮುನೀಶಂ (ಎಇ. XXI, ೨–೩೪; 1260). [ಅಸನ$_1$ + ಬೆಸನ$_3$]

**ಅಸನರಿ**$_1$ (ನಾ). ಉಪಾಯಗಾರ: ಅವನೇನು ಅಸನರಿ ಮನುಷ್ಯನಲ್ಲ (ರೂಢಿ). [?]

**ಅಸನರಿ**$_2$ (ನಾ). (ಉಕ). ದುರ್ಬಲ; ಅಶಕ್ತ: ಹುಡುಗಿ ಹ್ಯಾಂಗ ಇದ್ದಾಳ ನೋಡಲಿಕ್ಕೆ? ಸ್ವಭಾವ ಹ್ಯಾಂಗ ಅದ? ಅಸನರಿ ಇದ್ರ ಮತ್ತ ಇವರ ತಿರಗಿದ್ದಾಂಗ (ದೀಪಸಿ. ೩೯). [?]

**ಅಸನಿ** (ನಾ). ವಜ್ರಾಯುಧ: "ಅಶನಿ – ಅಸನಿ" (ಶಮದ. ೨೫೩ ಪ್ರಯೋ). [< ಸಂ. ಅಶನಿ]

**ಅಸನೆಗ** (ನಾ). ಒಂದು ಬಗೆಯ ಭೂಮಿ (?): ಕರಡಿಕೆಜೆಯ ಕೆಳಗೆ ಗದ್ದೆ ಮತ್ತರು ೧ ಅಸನೆಗಭೂಮಿ ಮತ್ತರುಂ × × × ಗವಿನು × × ಮತ್ತರು ೧। ಮಂಗಳಮಹಾಶ್ರೀ (ಎಕ. VII, ಶಿವಮೊ. ೧೧೬–೨೭; 1173). [?]

**ಅಸಫ್‌ನೌಕರಿ** (ನಾ). ಮಂತ್ರಿಯ ಉದ್ಯೋಗ (?): ಟೀಪು ಸುಲ್ತಾನರ 'ಕಾಲದಲ್ಲಿ ಫೌಜುದಾರಿಯನ್ನೂ ಮತ್ತು ಅಸಫ್‌ನೌಕರಿಯನ್ನೂ ಮಾಡಿದ್ದ ಅರುಣಾಚಲ ಪಂಡಿತ (ಮಹಾವಂ. II, ೧೪). [← ಅರ. ಪಾರ. ಅಸಫ್‌ನೌಕರಿ]

**ಅಸಬಡಿ** (ಕ್ರಿ). ಅಗಸನು ಬಟ್ಟೆಯನ್ನು ಒಗೆಯುವಂತೆ ಹೊಡೆ, —ಬಡಿ; ಸದೆಬಡಿ: ಬಲುರಥವನಸಬಡಿದು ಸೂತನನಿಳುಹಿ ಹಯವೋಡಿದುವು ಮುಮ್ಮಳಿಸಿ ತನಿಗುದಿಗುದಿದು ಕೋಟಲೆಗೊಂಡುದರಿಸೇನೆ (ಕುವ್ಯಾದ್ರೋ. ೧೯–೩೬); ಅಸಬಡಿವುತಸುರೇಂದ್ರನತಿಸರಭಸದ ಸೌರಂಭದಲಿ ಬರೆ ಕಂಡಸುರಹರ ಮೂಗಿನಲಿ ಬೆರಳಿಟ್ಟೊಲೆದನವಯವವ (ತೊರರಾ. ೬–೫೩–೫೦); ಕೈಕಾಲುಗಳನಸಬಡಿದು ಕೆಡವುತೇಳುತ ಕೂಡೆ ಮೈ ನಡನಡುಗಿ ಬೆವರುತ . . . ಒಜಲಿದಳು ಖೇಚರಿ ಬೆಟ್ಟ ಬಿರಿವಂತೆ (ನಿಭಾಗ. ೧೦–೫–೪೦). [ಅಸ$_5$ + ಬಡಿ$_1$]

**ಅಸಬಳೆ** (ನಾ). ಸ್ವಚ್ಛ; ನಿರ್ಮಲ (?): ಬಿಸಿಲತೊಜೆಯೊಳ್ ತೋರ್ಪ ಪುಸಿಜಲದೊಳು ಎಸೆಯವೇ ತೆರೆನೊರೆಗಳಸಬಳದೊಳಾ ಪರಿಯ ಪುಸಿರೂಪ ಮನವೆ ಕಾಣಿಸುವುದಿಂತು (ಮನೋವಿ. ೪–೧೯). [ಪ್ರಾ. ಅಸಬಲ = ಅಮಿಶ್ರಿತ, ನಿರ್ದೋಷ, ಪವಿತ್ರ < ಸಂ. ಅಶಬಲ = ನಿರ್ಮಲ, ಶುಭ್ರ]

**ಅಸಭ್ಯ** (ಗು). ಸಭ್ಯವಲ್ಲದ; ಒಳ್ಳೆಯ ನಡತೆಯಿಲ್ಲದ: ಉಪಾಧ್ಯಾಯರ ಬಗ್ಗೆ . . . ಅಸಭ್ಯವೆನ್ನಬಹುದಾದ ರೀತಿಯಲ್ಲಿ ವರ್ತಿಸುವುದರಿಂದಲೂ ಶಿಸ್ತುಭಂಗದ ಪ್ರಸಂಗಗಳಿಂದಲೂ ವ್ಯಕ್ತಪಡುತ್ತಿದೆ (ಶಿಕ್ಷದ. ೬೬೫). [ಸಂ.]

**ಅಸಭ್ಯತನ** (ನಾ). ಒಳ್ಳೆಯ ನಡತೆಯಿಲ್ಲದಿರುವುದು: ಅಸಭ್ಯತನದ ದೋಷವು ನನ್ನ ಪಾಲಿಗೆ ಬರುವುದು (ಮಂಜುಕ. ೩೩). [ಅಸಭ್ಯ + –ತನ]

**ಅಸಮ** (ಗು). ೧. ಸಮವಲ್ಲದ: ಅತಿರಥರಸಮಸಂಗರವಾಯ್ತು (ಕುವ್ಯಾದ್ರೋ. ೬–೪). ೨. ಸಮಾನವಿಲ್ಲದ; ಅಸದೃಶವಾದ: ಸ್ಮರನನುರಿಪಿಯುಂ ಕಾಮಿ ಸರ್ವೇಶ್ವರಂ ಮತ್ತಸಮಂ (ರಕ್ಷಾಶ. ೮೩). ೩. ಬೆಸಸಂಖ್ಯೆಯ; ವಿಷಮವಾದ. 'ಅಸಮನೇತ್ರ' ಪರಾ. [ಸಂ.]

**ಅಸಮಂಜಸ** (ಗು). ಸಮಂಜಸವಲ್ಲದ; ಅನುಚಿತವಾದ: ಗಡಿ ಪ್ರಶ್ನೆ ಪುನರ್‌ಪರಿಶೀಲನೆ ಅಸಮಂಜಸವಾದುದು (ತಾಯಿನಾ. ೧–೪; 4–2–1965). [ಸಂ.]

**ಅಸಮಚ್ಛದ** (ನಾ). ಏಳು ಎಲೆಗಳಿರುವ ಬಾಳೆ: "ಅಸಮಚ್ಛದಂ ಸಪ್ತವರ್ಣಮೆನಲೇಳೆಲೆಯ ಬಾಳೆ" (ಮಂಗರಾ. ೩೪–೯). [ಅಸಮ + ಛದ]

**ಅಸಮುಜಸೆ** (ನಾ). ಅಸಮಾನವಾದ ಕೀರ್ತಿಯುಳ್ಳವಳು: ಆ ವಸುವಸುಮತಿಯಸು ನಿಸುಗಳನಸಮುಜಸೆ ಕಾಳಿಕಾಂಬೆ ಕುಂದಿಸುತಿರ್ಪ್ಪಳು (ಶಾಸಪ. ೪೯; 1179). [ಅಸಮ + ಜಸ + –ಎ$_2$]

**ಅಸಮುತೋಲ** (ನಾ). ತೂಕವು ಸರಿಯಿಲ್ಲದಿರುವುದು; ಏರು ಪೇರು: ಇವತ್ತಿನ ಪ್ರಸಂಗಸಾಹಿತ್ಯವನ್ನು ಪರಿಶೀಲಿಸಿದರೆ, ಈ ಅಸಮು ತೋಲದ ದೋಷ ಅದರಲ್ಲಿ ಬಿಂಬಿಸಿರುವುದು ಕಾಣಿಸುತ್ತದೆ (ಯಕ್ಷಬ. ೧೦೫). [ಅಸಮು + ತೋಲ]

**ಅಸಮುನಯನ** (ನಾ). ವಿಷಮ ಸಂಖ್ಯೆಯ ಕಣ್ಣುಳ್ಳವನು; ಶಿವ: ಇಳೆಯೊಳಗತಿದಯಾಪರರಸಮುನಯನನ ಭಕ್ತರೆಂಬರು (ಬಸಪು. ೨೭-೩೦). [ಅಸಮು + ನಯನ]

**ಅಸಮುನೇತ್ರ** (ನಾ). = ಅಸಮುನಯನ: ಅಸಮುನೇತ್ರನೆ ಬಸವನಾಮದಿ ನೆಸೆದನಲ್ಲದೆ ಬಸವನಿಳೆಗುದಯಿಸಿದ ಮಾತ್ರದೊಳಾತನಂ ನರಜಾತನೆನ ಬಹುದೆ (ಬಸಪು. ೧-೨೮); ಅಸಮುನೇತ್ರನ ಭಕ್ತರಂ ನಿಂದಿಸುವವಂದಿರ ತಲೆಗಳಂ ಖಂಡಿಸುತಮಿರು (ಬಸಪು. ೪-೬೭). [ಅಸಮು + ನೇತ್ರ]

**ಅಸಮುಬಲ** (ನಾ). ಅಸಮಾನವಾದ ಶಕ್ತಿಯುಳ್ಳವನು: ಅಸಮುಬಲ ಭವದ್ವಿಕ್ರಮುಮುಸಂಭವಂ ಪೆಜಗ್ಗೆ (ಗದಾಯು. ೪-೫೬). [ಅಸಮು + ಬಲ]

**ಅಸಮುಯ** (ನಾ). ಸಮುಯವಲ್ಲದ ಸಮುಯ; ಅಕಾಲ. [ಸಂ.]

**ಅಸಮುಯಕೃತ** (ಗು). ಅಕಾಲದಲ್ಲಿ ಮಾಡಲ್ಪಟ್ಟ; ಅವೇಳೆಯಲ್ಲಿ ಮಾಡಿದ: ತ್ರೈಕಾಲ್ಯಯೋಗಿ ಬಂದುದನೀ ಕುಸುಮುಫಳಂಗಳಿಂದ ಮುಸಮುಯಕೃತ ಭೃಂಗೀಕೀರಕೇಕಿಕೋಕಿಳ ಕಾಕಳಿಯಿಂದಱಿದು ಬನ ದೊಳಜಸಿದೆನಾಗಳ್ (ಚಂದ್ರಪು. ೨-೮೧). [ಅಸಮುಯ + ಕೃತ]

**ಅಸಮರ್ಥ** (ಗು). **೧.** ಶಕ್ತಿಯಿಲ್ಲದ; ದುರ್ಬಲವಾದ; ಕೈಯಲ್ಲಿ ಸಾಗದ: ಭಕ್ತರೆ ಸಮರ್ಥರು ಅಸಮರ್ಥರೆನಲುಂಟೆ (ಬಸವ. ೬೮೨). **೨.** [ಕಾವ್ಯಮೀ]=ಅಸಮರ್ಥಪದ: ಅಸಮರ್ಥಮಪ್ರತೀತಂ ವಿಸಂಧಿ ವಿಪರೀತಕಲ್ಪನಂ ಕಷ್ಟಂ ನೀರಸಮೆಂದು ದೋಷಮಿವು ಸಮನಿಸುಗುಂ ಪದದೊಳ್ ಪದಾಗಮಜ್ಞರ ಮತದಿಂ (ಕಾವ್ಯಾವ. ೪೩೫). [ಸಂ.]

**ಅಸಮರ್ಥಪದ** (ನಾ). [ಕಾವ್ಯಮೀ] ಉದ್ದಿಷ್ಟಾರ್ಥವನ್ನು ಸ್ಪಷ್ಟ ವಾಗಿ ತಿಳಿಸದ ಪದ: "ತೆಱೆದಿರೆ ತದ್ವಾಚಕತೆಯನಱಿಪಲ್ ನೆಱೆಯ ದುದೆ ಕೃತಿಯೊಳಸಮರ್ಥಪದಂ" (ಕಾವ್ಯಾವ. ೪೩೬). ಉದಾ:— ಉರಗಾಳಿ ನಂದನಾವಳಿ ತರತರದಿಂದೆಱಗಿ ಜಳಭೃದಂತಿಕದೊಳ್ ಮಾಣ್ದಿರದೆ ಕುಡಿದುಪ್ಪುನೀರಂ ಧರೆಗಿನಿದಂ ಕಱೆವುದಿಂತಿದೇಂ ವಿಸ್ಮಯಮೋ (ಕಾವ್ಯಾವ. ೪೩೭). [ಅಸಮರ್ಥ + ಪದ$_2$]

**ಅಸಮರ್ಪಕ** (ಗು). ಸಮರ್ಪಕವಲ್ಲದ; ತೃಪ್ತಿಕರವಾಗಿಲ್ಲದ: ಬಹಳ ಖರ್ಚುಮಾಡಿ ಹೊಗೆನಳಿಗೆ ಅಥವಾ ಕಂಡಿಯನ್ನು ರಚಿಸಿದರೂ ಅವು ಹೊಗೆ ಹರಡುವುದನ್ನು ತಡೆಯುವುದಕ್ಕೆ ಅಸಮರ್ಪಕವಾಗಿವೆ (ಅಡುಸೌ. ೨೯). [ಸಂ.]

**ಅಸಮುಲೋಚನ** (ನಾ). = ಅಸಮುನಯನ: ವಸುಧೆಯೊಳ್ ಕಾಮಿತ ಫಲಂಗಳನಸಮುಲೋಚನನಿತ್ತು ಪರಿಪಾಲಿಸುವನೆಲ್ಲಾ ಕಾಲದೊಳು ಕಾರುಣ್ಯಭಾವದಲಿ (ಬಸಪು. ೩೮-೭೭). [ಅಸಮು + ಲೋಚನ]

**ಅಸಮುವಗೆ** (ನಾ). ಅಸಮಾನವಾದ ಶತ್ರು, —ವೈರಿ: ಮುಗುವ ಹಿಡಿತಕ್ಕಿನಿತು ಬಲಮ್ಯಾಕೆಯುಮ್ಮ ಬಿಡಬೇಕಸಮುವಗೆಯ ವ್ಯಾಳೇ (ನವಮೋ. ೧೨-೪೨). [ಅಸಮು + ಪಗೆ]

**ಅಸಮುವಿಭೂತಿ** (ನಾ). ಅಸಮುವಾದ ಐಶ್ವರ್ಯ; ಅಸದೃಶ ಸಂಪತ್ತು: ಅಸಮುವಿಭೂತಿಗಳನುಪಾರ್ಜಿಸುವೊಡೆ ಜನಮುಂ ಸ್ವಕೀ ಯಮುಂ ಮಾಳ್ಪುದು (ಚಂದ್ರಪು. ೪-೨೧). [ಅಸಮು + ವಿಭೂತಿ]

**ಅಸಮುಶರ** (ನಾ). ವಿಷಮುಸಂಖ್ಯೆಯ ಬಾಣಗಳುಳ್ಳವನು; ಪಂಚ ಶರ; ಮನ್ಮಥ: ಆ ಪುರದುಪವನದೊಳಸಮುಶರ ಕಿಶೋರಕೇಸರಿ ಗಜಱಿ ಗರ್ಜಿಸದ ಕೃತಕಗಿರಿಗಳಿಲ್ಲ (ಪಂರಾಮಾ. ೧-೧೦೭ ವ). [ಅಸಮು + ಶರ]

**ಅಸಮುಸಂಖ್ಯೆ** (ನಾ). [ಗಣಿತ] ವಿಷಮುಸಂಖ್ಯೆ; ಬೆಸಸಂಖ್ಯೆ: ಉದಾ:—೧, ೩, ೫, ೭, ೯: ಸಂಖ್ಯಾಗಣಿತದಲ್ಲಿ ಅಸಮು (odd) ಸಂಖ್ಯೆಗಳನ್ನು ಕ್ರಮುವಾಗಿ ಕೂಡುವುದರಿಂದ ಘನಸಂಖ್ಯೆಗಳನ್ನು ಪಡೆ ಯುವ ಕ್ರಮುವು ನಿಕೊಮಾಕಸ್ಸನಿಂದ ಬಂದುದು (ಗಣಿಚ. ೪೬). [ಅಸಮು + ಸಂಖ್ಯೆ]

**ಅಸಮುಸೆ, ಅಸವಸ್ಸೆ$_2$** (ನಾ). ಅತ್ಯಲ್ಪವಾದ ಗಾಯ; ಸಣ್ಣಗಾಯ: ಅಸಮು[ಪಾಠಾಂ. ವ]ಸೆಗೆ ಮೈಯಳುಕದೆಱಗುವ ಹುಸಿವ ಜಾಱುವ ಹೊಳೆವ ಹಣುಗುವ ಬೆಸುವ ಬಿಡಿಸುವ ದಿಟ್ಟವಾಳರು ಹೊಕ್ಕು ಚೆಣಗಿದರು (ಕುವ್ಯಾಸ. ೨-೧೦೫); ದೆಸೆದೆಸೆಗೆ ಹರಿದಖಿಳ ದೇವಪ್ರಸರವನು ನೀವ್ ನೆರಹಿ ಮೇಲಿನ್ನಸಮುಸೆಗೆ ಹೆದಱದಿರಿ (ಕುವ್ಯಾಕ. ೬-೨೪); ಎಸೆವರಿಱಿವರ್ ಪೊಯ್ವರುಬ್ಬುವರ್ . . . ಅಸಮುಸೆಯನುಳಿದು ಕೈದುಡುಕುವರ್ ಕುಸುರಿದಱಿದಡಗನಿರದೊಟ್ಟುವರ್ ಮೆಟ್ಟುವರ್ (ಚಬಪು. ೩೮-೩೬). **ಅಸವಸ್ಸೆ$_2$**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಅಸ$_1$ + ಮುಸ್ಸೆ$_2$]

**ಅಸಮುಸ್ತ** (ಗು). **೧.** ಅಪೂರ್ಣವಾದ; ಸ್ವಲ್ಪವಾದ. **೨.** [ವ್ಯಾಕ] ಸಮಾಸಮಾಡದ; ಒಟ್ಟಾಗಿ ಸೇರಿಸದ; ಬೇರೆಬೇರೆಯಾದ. [ಸಂ.]

**ಅಸಮಾಂಬಕ** (ನಾ). = ಅಸಮುನಯನ: ನಂಬಿದರುಂಟೆ ನಿನ್ನಂತೆ ಲೋಕದೊಳಸಮಾಂಬಕ ಶರಣರನು (ತ್ರಿಭುತಿ. ೧೯-೧೫). [ಅಸಮು + ಅಂಬಕ]

**ಅಸಮಾಕ್ಷ** (ನಾ). **೧.** = ಅಸಮುನಯನ: ಅಸಮಾಕ್ಷಲಿಂಗಕ್ಕೆ ಅನ್ಯ ದೈವವ ಸರಿಯೆಂಬನ ಬಾಯಲ್ಲಿ ಮುಸೆದ ಕೂರಲಗನಿಕ್ಕದೆ ಮಾಣ್ಬನೇ (ಬಸವ. ೫೬೭); ಅಶನಕ್ಕೆ ಹರಿಯದಿರು ಅಸಮಾಕ್ಷನಡಿಯ ಬಿಡದಿರು (ಸರ್ವಜ್ಞ. ೯೧). **೨.** ಒಂದು ಬಗೆಯ ಪಕ್ಷಿ; ಹೊಂಗಾಗೆ; ಹಂಗ: "ಅಸಮಾಕ್ಷಮೆನೆ ಹಂಗಮುಕ್ಕು" (ಮಂಗರಾ. ೫೨-೮). [ಸಂ. (ಅಸಮು + ಅಕ್ಷಿ + –)]

**ಅಸಮಾಖ್ಯಾತ** (ನಾ). ಪ್ರಸಿದ್ಧಿ ಹೊಂದದ್ದು; ಹೇಳದ್ದು: ಜನರಿ ಗಹುದೇ ನಿನಗೆಯಲ್ಲದೆ ವಿನುತಿಸಲು ಲಿಂಗದ್ವಯಮೆನಲವನಿಯೊಳಸಮಾ ಖ್ಯಾತವೆನಲನ್ಯರಿಗದೇಕಹುದು (ಬಸಪು. ೩೮-೬೬). [ಸಂ.]

**ಅಸಮಾಧಾನ** (ನಾ). ಸಮಾಧಾನವಿಲ್ಲದಿರುವುದು; ಅತೃಪ್ತಿ; ಅಶಾಂತಿ; ಕ್ಷೋಭೆ: ಶಾಲೆಯ ಸ್ಥಿತಿ ಚೆನ್ನಾಗಿಲ್ಲವೆಂದು ಜನತೆಯಲ್ಲಿ ಅಸಮಾಧಾನವಾಗಿದೆಯಂತೆ (ಕಾವೇರಿ. ೯೪). [ಸಂ.]

**ಅಸಮಾನ** (ಗು). **೧.** ಹೋಲಿಕೆಯಿಲ್ಲದ; ಸದೃಶವಿಲ್ಲದ: ಅಸಮಾನ ಮೆನ್ನೊಳಿರ್ವರ ಪಸಾಯಂ (ಶಾಂತಿಪು. ೪-೮೧). (ನಾ). **೨.** [ಸಂಗೀತ] ಸ್ವರದೋಷಗಳಲ್ಲಿ ಒಂದು ಬಗೆ: ಕಂಪಿತ . . . ಅಸಮಾನ ಕಾಲಹೀನ ವೆಂಬ ಹದಿನೈದು ಸ್ವರದೂಷಣಂಗಳಂ ತೊಱೆದು (ವಿವೇಕ. ೨೩೬). [ಸಂ.]

**ಅಸಮಾನಗಾರ** (ನಾ). **೧.** ಹೋಲಿಕೆಯಿಲ್ಲದವನು; ಅಸದೃಶ ನಾದವನು: ಕುಸುಮಾಲನದೀಂ ಹೊಸ್ಮಾತೀನ್ಬಾಣ್ಬೀಗ ಅಸಮಾನ ಗಾಡಾ ವೈದಾರಸೂ (ಹುಟ್ಟಹ. ೧೦೧). **೨.** ಸೂಕ್ಷ್ಮಮನಸ್ಸಿನವನು (ದಕ). [ಅಸಮಾನ + –ಗಾರ (< –ಕಾಱ)]

**ಅಸಮಾನಗಿರಿ** (ನಾ). **೧.** (ಉಕ). ಛಾವಣಿಯ ಅಲಂಕಾರಕ್ಕಾಗಿ ಕಟ್ಟುವ ಬಟ್ಟೆ; ಮೇಲ್ಕಟ್ಟು; ವಿತಾನ. **೨.** ನವಿಲುಗರಿಯಿಂದ ಮಾಡಿದ ಅಲಂಕಾರದ ಕುಂಚ (ದಕ. ೬). [← ಮರಾ. ಅಸ್ಮಾನ್‌ಗಿರೀ]

**ಅಸಮಾನತೆ** (ನಾ). **೧.** ಹೋಲಿಕೆಯಿಲ್ಲದಿರುವುದು; ಸದೃಶ ವಿಲ್ಲದ್ದು. **೨.** ವ್ಯತ್ಯಾಸ ಹೆಚ್ಚಾಗಿರುವುದು. [ಸಂ. ಅಸಮಾನತಾ]

**ಅಸಮಾಪ್ತ** (ಗು). ಮುಗಿಯದಿರುವ ; ಅಸಂಪೂರ್ಣವಾದ. [ಸಂ.]

**ಅಸಮಾಯುಧ** (ನಾ). = ಅಸಮಶರ : ವಿಲಾಸದಿಂ ಜಓಡಿಸಿದನಾತ ನೀತನಸಮಾಯುಧನಂ (ಪಂರಾಮಾ. ೩-೬೧); ಲತಾಂಗಿ ಪೋಲ್ತ ಳಸಮಾಯುಧ ಮೋಹನ ಮಂತ್ರಶಕ್ತಿಯಂ (ಮಲ್ಲಿಪು. ೩-೯೭).
[ಅಸಮ + ಆಯುಧ]

**ಅಸಮಾಸತೆ** (ನಾ). [ವ್ಯಾಕ] ಸಮಾಸವಾಗಿಲ್ಲದಿರುವುದು; ಭಿನ್ನ ಪದವಾಗಿರುವುದು: ಕ್ಷಿತಿಯೊಳ್ ರೂಢಾನ್ವರ್ಥಾಂಕಿತಮೆಂದಾ ನಾಮ ಮಜಿಗೆ ಮೂದೆಜನಸಮಾಸತೆಯೊಳ್ ನೆಲಸಿರ್ಪುದು ನಿಶ್ಚಿತನಾಮಂ (ಶಮದ. ೭೬). [ಸಂ. ಅಸಮಾಸತಾ]

**ಅಸಮಾಸ್ತ್ರ** (ನಾ). ೧. ಬೆಸಸಂಖ್ಯೆಯ ಬಾಣ. ೨. = ಅಸಮಶರ : ಕಡುಪಿಂ ತಗುಳ್ದು ನಟ್ಟಲೆನಸಮಾಸ್ತ್ರವಕ್ರತೆಯೊ ದೈವಿಕವೋ ನಿನಗೇನ ನೆಂಬೆಂ (ಕಾದಂಪೂ. ೯೨೧). [ಅಸಮ + ಅಸ್ತ್ರ]

**ಅಸಮಾಸ್ತ್ರತೆ** (ನಾ). ಸಮವಲ್ಲದ ಎಂದರೆ ಬೆಸಸಂಖ್ಯೆಯ ಬಾಣ ಗಳಿರುವುದು : ಅಖಿಳಲೋಕಗುರುವಂ ಭರದಿಂದಸಮಾಕ್ಷನನಿರದಾರ್ದಿ ಸುವಸಮಾಸ್ತ್ರತೆ ಜಲಧಿಶಯನ ವಸುಧೆಯೊಳುಂಟೇ (ಗಿರಿಕ. ೭-೨೯).
[ಸಂ. ಅಸಮಾಸ್ತ್ರತಾ]

**ಅಸಮಿಸಿ** 'ಅಸಿಮಿಸಿ' ನೋ.

**ಅಸಮೀಕ್ಷೆ** (ನಾ). ಚೆನ್ನಾಗಿ ನೋಡದಿರುವುದು; ವಿಮರ್ಶೆಮಾಡ ದಿರುವುದು. [ಸಂ. ಅಸಮೀಕ್ಷಾ]

**ಅಸಮೀಕ್ಷ್ಯಕಾರಿ** (ನಾ). ವಿಮರ್ಶೆಯಿಲ್ಲದೆ ಕೆಲಸಮಾಡುವವನು ; ಮುಂದಾಲೋಚನೆಯಿಲ್ಲದೆ ಕೆಲಸಮಾಡುವವನು : "ಜಾಲ್ಮಃ, ಅಸಮೀಕ್ಷಕಾರೀ – ೨ ವಿಚಾರಿಸಿ ನೋಡದೇ ಕಾರ್ಯವನ್ನು ಮಾಡುವವನ ಹೆಸರುಗಳು, ಆತುರಗಾರ" (ಸಿದ್ಧಾಂಶಿ. ೨೪೧).
[ಸಂ. ಅಸಮೀಕ್ಷ್ಯಕಾರಿನ್]

**ಅಸಮೀಕ್ಷ್ಯಕಾರಿತ್ವ** (ನಾ). ವಿಮರ್ಶೆಯಿಲ್ಲದೆ ಕೆಲಸಮಾಡುವುದು ; ವಿಚಾರಮಾಡದೆ ಕೆಲಸಮಾಡುವುದು. [ಸಂ.]

**ಅಸಮೇಕ್ಷಣ** (ನಾ). = ಅಸಮನಯನ : ಅಸಮೇಕ್ಷಣಂ ವಿಷವಂ ಧರಿಸಿ ತನುವಕ್ಷಯದೊಳಿರೆ ಗಂಡುಡುಗಿ ಪೆಣ್ಣಾಗನೇ ಶೌರಿ (ಬಸವು. ೫೪-೩೭).
[ಅಸಮ + ಈಕ್ಷಣ]

**ಅಸಮ್ಮತ** (ಗು). ೧. ಒಪ್ಪಲಾಗದ. (ನಾ). ೨. [ಕಾವ್ಯಮೀ] ಒಂದು ವಾಕ್ಯದೋಷ : ಅನರ್ಥಕ, ಶ್ರುತಿಕಠೋರ . . . ಅಸಮ್ಮತ, ಅಪಭಂದಸ್ಸು, ಮತಿಭ್ರಷ್ಟ, ದುಷ್ಟ, ಅಸತ್ಕ್ರಿಯೆಯೆಂಬ ವಾಕ್ಯದೋಷ ವಿಲ್ಲದೆ (ವಿವೇಕ. ೨೨೬). [ಸಂ.]

**ಅಸಮ್ಮತಿ** (ನಾ). ಸಮ್ಮತಿಸದಿರುವುದು ; ಒಪ್ಪದಿರುವುದು ; ಇಷ್ಟ ವಿಲ್ಲದಿರುವುದು : 'ತನ್ನ ಅಸಮ್ಮತಿಯನ್ನು ತೋರಲೆಂದೇ ಕ್ಷತ್ರಿಯರು ವೈದ್ಯರಾಗರು' ಎಂದನು (ಮಣಿಸ. ೪). [ಸಂ.]

**ಅಸರಂತ**$_1$ (ಗು). (ಉಕ) ಅವಿಶ್ರಾಂತವಾದ ; ನಿರಂತರವಾದ : ಮೈಯಮಲೆಯ ತಲೆಯಲ್ಲಿ ಎಲ್ಲ ಅಸರಂತ ದೇವಲೀಲೆ (ಕಮೇಘ. ೧೧-೧೩) ; "ನನ್ನೊಡನೆ ಮಾತ್ರ ಎಲ್ಲರದೂ ಅಸರಂತ ಜಗಳವಾಗುತ್ತಿದೆ ಯೇನೋ" (ಅರಗಿ. ೯೩). [< ಸಂ. ಅಶ್ರಾಂತ]

**ಅಸರಂತ**$_2$ (ಅ). ಯಾವಾಗಲೂ ; ಅವಿಶ್ರಾಂತವಾಗಿ : ಅಸರಂತಾ ಈ ಬಡವರ ಕೇಳಿ ಕೇಳೀ (ಹುಚ್ಚಾಟ. ೯೯-೮). [< ಅಸರಂತ$_1$]

**ಅಸರಣಿ** (ನಾ). ಸರಣಿಯಿಲ್ಲದಿರುವುದು (?) : ಆದುದೆಮಗಂದೆ ಬೇಡಿತ್ತು ಬಂದುದು ಎಂದು ಉಸುರೆ ಕೇಳಿಹಪಗೆಯರೇನೆಂಬ ಪರಿ ಯೆನಲು ಅಸರಣಿಯ ಮಾತನೆಮಗಜಿಪುವುದು ನೀವೆನೆಲು (ಇಹರ. ೩೮-೨೪). [?]

**ಅಸರಪಸರ** (ನಾ). ಅವಕಾಶ ; ಆಸರೆ ; ಸಲಿಗೆ : ಅನಿಂದ್ಯರಾಜಭವನ ಪುರೋಭಾಗದೊಳಿರ್ದು ನಡೆದೆರೆದರ(ದ) ನರೆನಿಸಿ ಲೋಭಕ್ಕಸರಪಸರ ಮಿಲ್ಲದಿರ್ದ ಬಚ್ಚರ ಪಸರಂಗಳುಮಂ (ಶಾಂತಿಪು. ೩-೧೫ ವ).
[ಅಸರ$_0$ (< ಅವಸರ) + ಪಸರ]

**ಅಸರಫಿ** (ನಾ). ಸುಮಾರು ಹದಿನಾರು ರೂಪಾಯಿಗಳಷ್ಟು ಬೆಲೆ ಯಿದ್ದ ಒಂದು ಚಿನ್ನದ ನಾಣ್ಯ, —ಮೊಹರು : ನಾನು ನಿಮಗೆ ಇವುಗಳ ಬೆಲೆಯನ್ನು ಹೇಳಬೇಕೆಂಬ ಹಾಗೇನೂ ಇಲ್ಲ. ಒಂದೊಂದಕ್ಕೆ ಒಂದೊಂದು ಅಸರಫಿಯನ್ನು ಕೊಟ್ಟುಬಿಡಿರಿ (ವಿಕಾಶ. ೩). 'ಅಷರಫಿ' ಪರಾ. [← ಪಾರ. ಹಿಂ. ಅಷರ್ಫೀ]

**ಅಸಲ್**, ಅಸಲು, ಅಸ್ಸಲ್ (ಗು). ೧. ಮೂಲವಾದ ; ಮೊದಲಿನ ; ಮುಖ್ಯವಾದ. ೨. ಚೊಕ್ಕವಾದ ; ಅಪ್ಪಟವಾದ ; ಸಹಜವಾದ ; ಘನವಾದ : ನಿಂ ಚಹಾಯಿ ಮಾಡುವ ನೀತಿ ಅಸಲ್ ನಿರ್ಭೀತಿ ಹೇಳಿಕೇಳಿ (ಸೂರ್ಯಪಾ. ೨೦-೧೧). (ನಾ). ೩. ಮೂಲಧನ ; ಬಂಡವಾಳ ; ಬಡ್ಡಿಗಾಗಿ ಕೊಟ್ಟ ಮೊದಲಿನ ಹಣ. **ಅಸಲು** : ೩. ಕೊಟ್ಟ ಅಸಲು ಹಣಕ್ಕೆ ಒಂದು ನಿಯಮಪ್ರಕಾರ ಕೂಡಿಸಿ ಹೆಚ್ಚಿಗೆ ಕೊಡುವ ಹಣಕ್ಕೆ ಬಡ್ಡಿಯೆಂದು ಹೆಸರು (ಕುರುಕಾ. ೩೩) ; ಅಸಲು ಬಡ್ಡಿ ಎಲ್ಲಾ ಕಳೆದು ಮೇಲೆ ೫೦ ರೂಪಾಯಿ ಕೈಗೆ ಬಂದರೆ ಅದೇ ಹೆಚ್ಚು (ಮುಗಮಾಂ. ೮೨) ; ಆತನ ಮೂಳೆಗಳನ್ನು ಎಷ್ಟು ಸವೆಸಿದರೂ ಬಡ್ಡಿಯ ಹೊರೆಯೇ ಇಳಿಯು ವುದಿಲ್ಲ ; ಮತ್ತೆ ಅಸಲಿನ ಮಾತು ತೆಗೆಯುವುದೇ ಬೇಡ (ಚಿಗುಬ. ೭) ; ಅಸಲುಯಿಲ್ಲದೆ ಬಡ್ಡಿಯಿಲ್ಲ, ಮೊಸರುಯಿಲ್ಲದೆ ಮಜ್ಜಿಗೆಯಿಲ್ಲ (ಗಾದೆ) ; ಅಸಲಿಗೆ ಮೋಸ ಲಾಭಕ್ಕೆ ಗುದ್ದಾಟ (ಗಾದೆ). **ಅಸ್ಸಲ್** : ೩. ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ ಶಬ್ದಗಳೆಂದರೆ ಕಚೇರಿ . . . ನಾಮರ್ದ, ಅಸ್ಸಲ್ ಇತ್ಯಾದಿ (ಭಾಷಾಶಾ. ೧೬೬).

**ಅಸಲ್‌ಅಧಿಕಾರ** = ಒಂದು ಹುದ್ದೆಗೆ ಹೊಂದಿಕೊಂಡು ಹೋದ ಅಧಿಕಾರ : ಚೀಫ್ ಕೋರ್ಟಿನವರು ಅಸಲ್ ಅಧಿಕಾರ ಚಲಾಯಿಸು ವಲ್ಲಿ (ಗ್ರಾಮಾಕ. ೧೭೪). **ಅಸಲ್ ಮಾಲು**=ಶುದ್ಧವಾದ ವಸ್ತು : ನಮ್ಮ ಕಂಪೆನಿ ಅಸಲ್ ಮಾಲು ಪ್ರಚಾರಕ್ಕೆ – ಹತ್ತು ಜನಕ್ಕೆ ಗೊತ್ತಾಗೂಕೆ ನಾವು ನಿಮ್ಗೆ ಹೇಳ್ತಾ ಇದ್ದೀವಿ (ಮಾಮನೆ. ೯೨).
[← ಹಿಂ. ಅಸಲ್, ಅಸಲು ; **ಮರಾ.** ಅಸಲ್ ; **ಅರ.** ಅಸ್, ಅಸ್ಸಲ್]

**ಅಸಲಸನದು** 'ಅಸಲುಸನದು' ನೋ.

**ಅಸಲು** 'ಅಸಲ್' ನೋ.

**ಅಸಲುಕ್ರಯ** (ನಾ). ನಿಜವಾದ ಬೆಲೆ; ಮೂಲಬೆಲೆ; ಒಬ್ಬರು ಕೊಂಡುಕೊಂಡ ಬೆಲೆ : ಈ ಮನೆಯ ಅಸಲುಕ್ರಯವೆಷ್ಟು ? (ರೂಢಿ).
[ಅಸಲು (< ಅಸಲ್) + ಕ್ರಯ]

**ಅಸಲುಖರೀದಿ** (ನಾ). = ಅಸಲುಕ್ರಯ : ಈ ಆಸ್ತಿಯನ್ನು ಅಸಲು ಖರೀದಿಗೇ ಕೊಂಡುಕೊಂಡೆ (ರೂಢಿ). [ಅಸಲು (< ಅಸಲ್)+ಖರೀದಿ]

**ಅಸಲುಪ್ರತಿ** (ನಾ). ಮೂಲಪ್ರತಿ : ಈ ದಾಖಲೆಯ ಅಸಲುಪ್ರತಿ ಕಚೇರಿಯಲ್ಲಿದೆ (ರೂಢಿ). [ಅಸಲು (< ಅಸಲ್) + ಪ್ರತಿ]

**ಅಸಲುಸನದು**, ಅಸಲಸನದು (ನಾ). ಮೂಲಪತ್ರ : ಅಸಲುಸನದು ಶ್ರೀಸ್ವಾಮಿಗಳವರ ಮಠಕೆ ವಾಪಸು ಕೊಡುವುದು (ಮೈಆರಿ. ೧೯೩೪, ೫೨-೧೫ ; 1812). **ಅಸಲಸನದು** : ಯಿ ಸನದ್ನಿ ನಕಲಂನೂ ಶಿರಸ್ತೇ ದಾರರ ದಪ್ತರಕೆ ಬರಸಿಕೊಂಡು ಅಸಲಸನದಂನು ಹೆಚಿ ತಿಂಮಯನ ವಶಕೆ ಕೊಡುವದು (ಎಕ. VI, ಕೊಪ್ಪ. ೪೮-೫೧ ; 1811).
[ಅಸಲು (< ಅಸಲ್) + ಸನದು. / **ಅರ.** ಅಸ್ಲಸನದ್ = ಮೂಲ ಪ್ರಮಾಣಪತ್ರ]

**ಅಸಲಿ** (ನಾ). ಕೊರಳಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ : ಕತ್ತಿನಲ್ಲಿ ಅಡ್ಡಿಕೆ, ಅಸಲಿ, ಬಂದಿ, ಜೋಮಾಲೆ, ಏಕಾವಳಿಸರ, ಹನುಮನ ತಾಳಿ, ಹುಲಿಯುಗುರು (ಮಲ್ಲಿ. ೪೦).
[← ಮರಾ. ಹಸಲೀ, ಹಸಳೀ ; ಹಿಂ. ಹಸಲೀ. / ಸಂ. ಅಂಸಲೀ]

**ಅಸಲೆ** (ನಾ). ಆಶ್ಲೇಷಾ ನಕ್ಷತ್ರ : ಅಸಲೆ ಮಳೆಗೆ ಸಸ್ಲೆ ಬೆಟ್ಟಕ್ಕೆ ನೆಗೀತು (ಗಾದೆ). [< ಸಂ. ಆಶ್ಲೇಷಾ]

**ಅಸಲೇಕಾರ** (ನಾ). ಮುಖ್ಯಕರ್ತ : ಯಿಾ ಹಣಕ್ಕೆ ಪಟಣದಿಂದ ಅಸಲೇಕಾರ ನಜರಾಣಿ ಮೋಮುಲಕಿ ಅರವಾಸಿಗೆ ಬಹದರು ಜಾಮಿನಾಗಿ (ಹೈದರ. ೧೧೧). [< ಅಸಲ್ + -ಕಾರ (< -ಕಾಱ)]

**ಅಸವನೆ** (ನಾ). = ಅಸಗವನೆ : ಅಸವನೆಗೆ ಕೆಯ್ಗೆ ತೋಂಟಕ್ಕೆ ಸಿಂಹದ್ವಾರಗೃಹಕೆ ಪೊಲೆವನೆಗಾಳ್ಗಾಂ ಬೆಸವೋದೆನೆಂದು ಪುಂಶ್ಚಲಿ ಸುಶೀಲೆ ಪೋಕುಂ (ಮದತಿ. ೮-೪೯) ; ಅಸವನೆಗಂಗಳಕ್ಕೆ ತಲೆವಾಗಿಲೆಗಜ್ಜನೆ ನೋಡಲೀಱುಲಿಂಗೊಸಗೆಗೆ ನೋಂಪಿಗಂಗಡಿಗೆ ಬಾಡಿನ ಸಂತೆಗೆ ಬಾಯಿನಕ್ಕೆ ಪೋಪೆಸಕದೆ ಪಾಂಬರೊಳ್ ನೆರೆವರಂ ಕುಲನಾರಿಯರೆಂಬುದೇ (ಸೌಇಇ. XX, ೨೪೮-೪೩ ; 1228).
[ಅಸ್$_5$ + ಮನೆ]

**ಅಸವರ** (ನಾ). ಅವಸರ (?) : ಶ್ರೀಮನುಮಹಾಪ್ರಧಾನ ಹಿರಿಯ ಹೆಡೆಯ ಅಸವರ ಮಾರಯ್ಯಂಗಳ ಸಂನ್ನಿಧಾನದಲು (ಎಕ. VII, ಶಿವಮೊ. ೬೫-೨ ; 1204). [< ಸಂ. ಅವಸರ]

**ಅಸವರ್ಣ** (ಗು). ಸವರ್ಣವಲ್ಲದ ; ಬೇರೆ ವರ್ಣಕ್ಕೆ ಸೇರಿದ ; ವಿಜಾತೀಯ. 'ಅಸವರ್ಣಸ್ತ್ರೀ' ಪರಾ. [ಸಂ.]

**ಅಸವರ್ಣಸ್ತ್ರೀ** (ನಾ). ಸವರ್ಣಳಲ್ಲದ ಹೆಂಗಸು ; ವಿಜಾತೀಯ ಸ್ತ್ರೀ: ಕುಲಪತಿಗಳಾದ ಕಣ್ವರಿಗೆ ನಿಜವಾಗಿ ಈಕೆ ಅಸವರ್ಣಸ್ತ್ರೀಯಲ್ಲಿ ಜನಿಸಿರಬಹುದೆ ? ಒಂದು ಪಕ್ಷದಲ್ಲಿ ಸಂದೇಹವೇತಕ್ಕೆ ? (ಶಾಕುಂತ. ೧೦-೨೫).
[ಅಸವರ್ಣ + ಸ್ತ್ರೀ]

**ಅಸವಸ**, ಅಸವಸ್ಸೆ$_1$, ಅಸಿವಸಿ (ನಾ). ೧. ತ್ವರೆ ; ಆತುರ ; ಸಂಭ್ರಮ: "ಅಸವಸವವಸರವೆನಿಕ್ಕು" (ಶಬ್ದಮಂ. ೬೨) ; "ಅಸವಸವೆಂದೊಡವಸರಂ" (ಕಬ್ಬಿಕೈ. ೫೪) ; ಅಸವಸದೊಳಾದ ಮನದೆಱಕದಿನೆಱಗಿ ಪೊಡೆವಟ್ಟು (ಆದಿಪು.೩-೩೬ವ); ಅಸವಸದಿಂ ಪಱಗೆಯ್ಯಂ ಕಸಮುಂ ಸೋದಿಸದೆ ಬಿತ್ತಿದೊಕ್ಕಲಿಗನವೋಲ್ (ಕಾವ್ಯಾವ. ೪೫೪) ; ಬರೆ ತನ್ಮನಿ ಪೊರೆಗೆ ವನೇಚರನಸವಸದೆಱಗಿದಂ (ವರ್ಧಪು. ೧೦-೩೩) ; ಅಸವಸದಿನಬಲೆಯರ ನೆಟ್ಟಿಸನೆ ಕುಮಾರನನಿದೇನೊ ಮಾರನ ಬಗೆ (ಪುಷ್ಪಪು. ೧೨-೮೭) ; ನಿದ್ರಾತುರಣಿಯನಾ ಧರಣಿಪಾಲಕನು ಅಸಿಯಳದೊರ್ವಳ್ ದೊರಕಲ್ಕಾಣುತ್ತಸವಸದಿಂ ಪೊಱಮಡಿಸಿದನು (ಜಯಕಾ. ೮-೬೩). ೨. ಹಿಂದುಮುಂದು ನೋಡದಿರುವುದು ; ದುಡುಕುವುದು : ಬಸದಿಗೆ ಬಿಟ್ಟೀ ಧರ್ಮಮನೊಸದು ಕರಂ ಸಲಿಸುತಿರ್ದರ್ಗಕ್ಕುಂ ಪುಣ್ಯಂ ಅಸವಸದಿ ಕೆಡಿಸಿದವರ್ಗಳು ಪಸುವುಂ ಬ್ರಾಹ್ಮಣನ ಕೊಂದ ವಧೆ ಸಮನಿಸುಗುಂ (ಮೈಆರ. ೧೯೩೪, ೩೮-೧೭ ; 1121) ; ವೃಥಾಳಾಪದಿನಸವಸದಿಂ ಕಾಮದಿಂ ಕೋಪದಿಂ . . . ಎಲ್ಲಂದದಿಂ ದೇವ ನಿಮ್ಮಂ ಸ್ಮರಿಯಿಪ್ಪಂತಿತ್ತು (ರಕ್ಷಾಶ. ೬೦) ; ದಳ್ಳುರಿಯೊಳಡಗು ಹೋಗೆಂದೊಡೆಯುನು ಬೆಸಸಿದಡೆ ನಾನಾಱನೆನಬಾರದೆಂಬಾಗಳಸವಸದೊಳೆವಕಲಸಿ ಸೆಡೆದೆನಾದಡೆ ಕೊಟ್ಟ ಬೆಸನ ನಡಸುವೆನೆಂಬ ನುಡಿ ಸಡಿಲವಾಗದೇ (ಹಚಕಾ. ೧೧-೩೪) ; ಅವಿವೇಕಿಗಳಸವಸದಿಂದವಧೀರಣೆಗೈದು ಪಱಿಯೆ . . . ಸೈರಿಪುದು ಗುಣದೊಳಗ್ಗಳಂ (ನೀತಿಮಂ. II, ೧೧೧) ; ಅಸವಸದಿಂದ ಕೊಟ್ಟು ಮಿಡುಕುವುದಕ್ಕಿಂತ ವಿಚಾರಿಸಿ, ವಿಮರ್ಶಿಸಿ ಸತ್ಪಾತ್ರದಲಿ ಕೊಟ್ಟು ಸಮಾಧಾನವನ್ನು ಪಡೆಯುವುದು ಲೇಸು (ದಾಬುತ್ತಿ. ೩೬). ೩. ಅಸ್ತವ್ಯಸ್ತ ; ತಾರುಮಾರು : "ತಾಱುವ[ಮಾ]ಱಾದುದಸವಸಂ" (ವಸ್ತುಕೋ. ೧೧೬-೩೩). ೪. ಅವಶ್ಯ : "ಅಸವಸಮೆಂದವಶ್ಯಂ" (ಕಶಸಾ. ೨೪-೪೯೭). **ಅಸವಸ್ಸೆ$_1$** : ೩. "ಅಸವಸೆಯೆಂದೆನಲವಶ್ಯಮುಕ್ಕುಂ" (ಕವಿಕಂ. ೨೦೦). **ಅಸಿವಸಿ** : ೧. ತತ್ತಿಯನ್ನೊಡೆದು ಮರಿಯನ್ನು ಹುಡುಕಾಡುವ ಅಸಿವಸಿಯ ಅವಿವೇಕವು ಅವಳಿಗೆ ಹೊರತು (ನಿರಾಭ. ೨೯-೧೭) ; ಹುಸಿಯೆ ಅಸಿವಸಿ ಸಾಕು (ಉಯ್ಯಾಲೆ. ೨೯-೮) ; ಅದಕ್ಕೆ ದೊರೆತಷ್ಟೆ ಜ್ಞಾನದಿಂದ ಅಸಿವಸಿಯಲ್ಲಿ ಅದು ಸಿದ್ಧಾಂತ ಕಟ್ಟಲು ಹೆಣಗಾಡುವದು (ಬೆಳಗು. ೧೯).

**ಅಸವಸಬಡು** = ಆತುರಪಡು ; ಸಂಭ್ರಮಿಸು : ಸನ್ನಿಹವೆಸಗುರಣಕೈತರುವರಾಗಸವಸಬಡದಿರು ಪೋಪೆ ದ್ವಾರಕಿಗೆಂದನಾ ವಿಷ್ಣು (ಜಿನಭಾ. ೬೪-೨). [ಅಸ್$_3$ + ವಶ]

**ಅಸವಸಂಗೊಳ್** (ಕ್ರಿ). ೧. ಆತುರಪಡು ; ಸಂಭ್ರಮಿಸು. ೨. ಬಾಡು; ಕಂದು : ಬಸವಳಿದನಕಟಕಟ ಹಾಯೆಂದು ರಾಮುನಾಲಿಸಿದೊಡನದಂ ಸಿಡಿಲ ಧಗೆ ತಟ್ಟಿದವನವೋಲಸವಸಂಗೊಂಡು ಶೀತೋಪಚಾರಂಗೈದು ಸಂತವಿಸಲಾ ಚಾರರು ನಸುತೆರೆದು ಮುಚ್ಚಿರ್ದ್ದ ಕಣ್ಗಳಂ (ಶೀಷರಾ. ೩-೪೪).
[ಅಸವಸ + ಕೊಳ್$_1$]

**ಅಸವಸ್ಸೆ$_1$** 'ಅಸವಸ' ನೋ.

**ಅಸವಸ್ಸೆ$_2$** 'ಅಸಮುಸೆ' ನೋ.

**ಅಸವಳಿ** (ಕ್ರಿ). ಶಕ್ತಿಗುಂದು ; ಆಯಾಸಗೊಳ್ಳು ; ಬಳಲು : ವಸುಧೆ ಬಾಯ್ಬಿಡೆ ದೆಸೆಗಳಸವಳಿದು ಮಱುಗೆ (ಹಚಕಾ. ೯-೧೧) ; ಮಗನ ಮೊಗಮುಂ ನೋಡಿ ಕೆಟ್ಟೆನಿನ್ನೇನೆಂದು ಅಸವಳಿದು (ಸಮ್ಯಕೌ. ೯-೧೫) ; ಅತಿವಿಷಯ ಕಾಳೋರಗ ಕಡಿವುತಿರಲಸವಳಿಯೆ ಪಾಲಿಸುವನಚ್ಯುತನಲ್ಲದಾರುಂಟು (ನಿಭಾಗ. ೧೧-೧೫-೨೪) ; ವಿಕಸಿತ ಸುಖದೊಳದ್ದ ಮನವೆದ್ದ ರೋಮಾಂಚಮಸವಳಿದ ಕೈ ಮುಸುಳ್ದ ಮಕರಪತ್ರದ ಕದಪು . . . ಅಳಿದ ತಿಲಕಂ ಪರಿದ ಕುರುಳ್ ಸೊಪ್ಪಾದಧರಮೊಪ್ಪಿತಾ ಕಾಂತೆಗೆ (ಜೈಮಿಭಾ. ೧೧-೨೫) ; ಹಸಿವು ಬಾಯಾರಿಕೆಯೊಳಸವಳಿದು ಬೀಳುತ್ತ ಬರಲು (ಗಣೇಶ. ೮೪-೧೨). [ಅಸ್$_7$ + ಅಳಿ$_1$ (< ಅೞಿ$_1$)]

**ಅಸವೆ** (ನಾ). ಅಮ್ಮಿಕಲ್ಲು (?):"ಅಸವೆ-ಅಸಮು"(ರಾಮಾಶ್ವ. ಕೋಶ): ವಾರಗೇರಿಯೊಳೇಱುಂಜೌವನದ ನೀಱೆಯರ . . . ಕೈಯೆಡೆಯೊಳ್ ಮೆಯ್ಯುಡಿದುಂ, ಕಂದಿನೊಳ್ ಕುಂದಿಯುಂ ಅಸವೆಯೊಳಸಕಳಿದುಂ ಸುಯ್ಯೊಳ್ ಸುಗಿದುಂ (ರಾಮಾಶ್ವ. ೨-೨೧). [?]

**ಅಸಹ** (ನಾ). ೧. ಸೈರಣೆಯಿಲ್ಲದಿರುವವನು. ೨. ಹಗೆ ; ಶತ್ರು (?) : ನಡೆದ ನೆಲಂ ರಣೋರ್ವ್ವರೆಯೊಳಂತನಿತುಂ ತನಗಜ್ಜಪಜ್ಜರಿಂ ಪಡೆದ ನೆಲಂ ದಲೆಂಬನಸಿಗನ್ಯನೃಪಾಳರನಿಕ್ಕದುಂತೆ ಕಿಟ್ಟಿಡೆ ಕಡುದೋಸವೆಂಬನಸಹಂ ಮಿಗೆ ಬೆಂಗುಡೆ ಪತ್ತೆ ತಾನೆ ಬೆಂಗುಡುವವೊಲೆಂಬನೇನದಟನೋಕಲಿ ರೇಚಣದಣ್ಣನಾಯಕಂ (ಎಕ. VII, ಶಿಕಾರಿ. ೧೯೭-೩೩ ; 1181).
[< ಸಂ. ಅಸಹನ]

**ಅಸಹಕಾರ** (ನಾ). ಸಹಕರಿಸದೆ ಇರುವುದು : ಈ ಕ್ರಾಂತಿಯನ್ನು ಆಗಿಸುವುದಕ್ಕೆ ಸಾಧನೆ ಗಾಂಧೀಜಿಯ ಅಹಿಂಸೆ ಮತ್ತು ಅಸಹಕಾರ (ರಾಮರಾ. ೩೭). [ಸಂ.]

**ಅಸಹನ** (ನಾ). ೧. ಸೈರಣೆಯಿಲ್ಲದಿರುವುದು ; ಕೋಪ. ೨. ಶತ್ರು ; ಹಗೆ. [ಸಂ.]

**ಅಸಹನೀಯ** (ಗು). ೧. ಸಹಿಸಲಾಗದ : ದುಃಖ ನನಗೆ ಅಸಹನೀಯವಾಗಿತ್ತು (ಕುಂಕುಮ. ೮೮). ೨. ಸಹಿಸಬಾರದ. [ಸಂ.]

**ಅಸಹನೀಯತೆ** (ನಾ). ಸಹಿಸಲಾಗದಿರುವಿಕೆ : ಅದೇ ನಗೆಯನ್ನು ನಕ್ಕನು. ಅದರ ಅಸಹನೀಯತೆಯನ್ನು ವಾಸುವಿಗೆ ತಡೆಯಲು ತುಂಬ ಕಷ್ಟವಾಯಿತು (ಬಾಡಿಬ. ೬೧). [ಸಂ. ಅಸಹನೀಯತಾ]

**ಅಸಹನೆ** (ನಾ). = ಅಸಹನ ೧, ೨ : ಹತ್ತಿಕ್ಕಿದ ಭಾವನೆಗಳು ವಿಕಾರದ ರೂಪವನ್ನು ತಾಳಿದಾಗ ಅಸಹನೆಯನ್ನು ತೋರಿ ಮಗನನ್ನು ದಂಡಿಸುತ್ತೀರಿ (ರಂಗರೋ. ೧೨೬). [ಸಂ. ಅಸಹನ]

**ಅಸಹಾಯ** (ಗು). ೧. ಸಹಾಯಕನಿಲ್ಲದ : ಅಸಹಾಯ ಸಾಹಸ ವಿನೋದಿ (ಕವಿರಾ. ೩-೨೨೯). ೨. ಇತರರ ಸಹಾಯವಿಲ್ಲದೆ ಕೆಲಸ ಮಾಡುವ ಸಾಮರ್ಥ್ಯವುಳ್ಳ; ಸ್ವಯಂಸಮರ್ಥನಾದ : ಅಸಹಾಯ ಕವೀಶ್ವರಂ ಕುರುಳ್ಗಳಸವಣಂ (ಶಾಂತಿಪು. ೧೨-೭೫). [ಸಂ.]

**ಅಸಹಾಯಕ** (ಗು). ಸಹಾಯವಿಲ್ಲದ ; ನೆರವಿಗೆ ಯಾರೂ ಇಲ್ಲದ. 'ಅಸಹಾಯಕಸ್ಥಿತಿ' ಪರಾ. [ಸಂ.]

**ಅಸಹಾಯಕಸ್ಥಿತಿ** (ನಾ). ಯಾರ ಸಹಾಯವೂ ಇಲ್ಲದ ಸ್ಥಿತಿ : ತನ್ನ ಅಸಹಾಯಕಸ್ಥಿತಿಯಲ್ಲಿ ತಾನೇನೂ ಮಾಡಲಾಗದೆ ಉಮ್ಮಳಿಸಿ ಬರುತ್ತಿರುವ ಎದೆಯ ದುಃಖವನ್ನು ಪ್ರಯತ್ನಪೂರ್ವಕವಾಗಿ ತಡೆಹಿಡಿಯುವಂತೆ . . . ತೋರುತ್ತಲಿತ್ತು (ಚಿತಿಸ. ೧೦೩). [ಅಸಹಾಯಕ + ಸ್ಥಿತಿ]

**ಅಸಹಾಯತನ** (ನಾ). ನೆರವು ಇಲ್ಲದಿರುವಿಕೆ ; ಒಂಟಿಗತನ; ಏಕಾಂಗವೀರತೆ : ಧಾನ್ಯದೊಳಕ್ಕಿ ಪಾಲೊಳ್ ತನಿವಾಲ್ ತುಪ್ಪದೊಳ್ ಬೆರಸದುದು ಬಂಟರೊಳ್ ನಿಚ್ಚಟಗಲಿ . . . . ಕುಲದೊಳಗ್ಗಳಿಕೆ ರಾಜ್ಯದೊಳಸಹಾಯತನಮುಮುಪ್ಪ ನಿರ್ಗ್ರಂಥಮನೆ ಜನಂ ಬಯಸುವುದಱಿಂದಮುಂ (ಧರ್ಮಾಮೃ. ೯-೧೦೮). [ಅಸಹಾಯಕ + -ತನ]

**ಅಸಹಾಯಶೂರ** (ನಾ). ೧. ಏಕಾಂಗವೀರ : ಉರಿಯಕೋಟೆಗೆ ಸಿಕ್ಕಿದಂತವ ತಿರುಗಿ ಸೇನೆಯನೊಬ್ಬ ತುಳಿದನು ಮರಳಿಸಿದನಸಹಾಯಶೂರನು ಮೂರು ಯೋಜನಕೆ (ಕೌಶಿರಾ. ೨೧-೩೫). ೨. ಒಂದು ಬಿರುದು : ಮಲಪರೊಳು ಗಂಡನಸಹಾಯಶೂರ ಸನಿವಾರಸಿದ್ಧಿ ಗಿರಿದುರ್ಗ್ಗಮಲ್ಲ (ಎಕ. V, ಅರಸೀ. ೫೯-೧೧ ; 1209). [ಅಸಹಾಯ + ಶೂರ]

**ಅಸಹಾಯಸಿಂಹ** (ನಾ). ಸಹಾಯವನ್ನು ನಿರೀಕ್ಷಿಸದ ಪರಾಕ್ರಮಿ ; ಒಂದು ಬಿರುದು : ಪ್ರಭು ಮಂತ್ರೋತ್ಸಾಹಶಕ್ತಿತ್ರಯ ಸಂಪನ್ನನಸಹಾಯಸಿಂಹಂ ತಗುಬ್ಬುಳ್ದ ಬಡಿವಂ ದುಷ್ಟಮನ್ನೆಯ ಪ್ರಳಯಕಾಳಂ ಶ್ರೀಮತ್ಪೆರ್ಗ್ಗಡೆ ಮಾದಿ [ಮ]ಯ್ಯಂ (ಸೌಇಇ. XX, ೫-೬ ; 1034). [ಅಸಹಾಯ + ಸಿಂಹ]

**ಅಸಹಿಷ್ಣು** (ನಾ). ಸಹನೆಯಿಲ್ಲದವನು : ಅಸಹಿಷ್ಣುವಧ್ವಗಮನ ವ್ಯಸನಂ (ಜಾತತಿ. ೧೩-೧೧) ; ನಿಲೆ ಕುಜನಂಗನಾಮಿಥುನದೊಳ್ . . . ಕೆಲಿಯಸಹಿಷ್ಣು ಮಿತ್ರರಹಿತಂ (ಜಾತತಿ. ೧೭-೧೯). [ಸಂ.]

**ಅಸಹಿಸು** (ಕ್ರಿ). ಅಸಹ್ಯಪಡು ; ಜುಗುಪ್ಸೆ ಹೊಂದು (ಕಿ). [ಅಸಹನ + -ಇಸು$_3$]

**ಅಸಹ್ಯ** (ಗು). ೧. ತಡೆಯಲು ಶಕ್ಯವಿಲ್ಲದ ; ಸಹಿಸಲಾಗದ : ಅಸಹ್ಯ ಪರಿಭವಾನಲದಂದಹ್ಯಮಾನಗಾತ್ರೆಯುಮಾಗಿ (ಗದಾಯು. ೧-೫೫ ವ). ೨. ಜುಗುಪ್ಸೆಗೆ ಕಾರಣವಾದ. (ನಾ). ೩. ಸೈರಣೆಯಿಲ್ಲದವನು ; ಈರ್ಷ್ಯೆಯುಳ್ಳವನು : ಇರೆ ಲಗ್ನಕ್ಕೆ ಚತುರ್ಥದೊಳ್ ಹಿಮಕರಂ . . . ಕೂಡಿರೆ ತತ್ಸಪ್ತಮದೊಳ್ ಮದಾರ್ದಿತನಸಹ್ಯಂ ತದ್ವಿಲಗ್ನೋದ್ಭವಂ (ಜಾತತಿ. ೧೪-೭).

**ಅಸಹ್ಯವಾಗು** = ಜುಗುಪ್ಸೆಯಾಗು : ಘೋರಮುಖವನ್ನು ಕಂಡು ನನಗೆ ಭಯವಾಯಿತು ಅಸಹ್ಯವಾಯಿತು (ಪ್ರತಾಪ. ೨೦). [ಸಂ.]

**ಅಸಹ್ಯಂಬಡು** (ಕ್ರಿ). ಜುಗುಪ್ಸೆಹೊಂದು : ತಮ್ಮೊಳಗೆ ಗುಜಗುಜಗುಟ್ಟುತಂ ನಡೆತಂದಸಹ್ಯಂಬಟ್ಟು ಬಿಜ್ಜಳರಾಯನೊಡನಿಂತೆಂದು (ಬಸವಪು. ೫೪-೩). [ಅಸಹ್ಯ + ಪಡು$_1$]

**ಅಸಹ್ಯತನ** (ನಾ). ಸಹಿಸಲಾಗದಿರುವಿಕೆ. [ಅಸಹ್ಯ + -ತನ]

**ಅಸಹ್ಯಭಾವ** (ನಾ). = ಅಸಹ್ಯತನ (ಕಿ). [ಸಂ.]

**ಅಸಹ್ಯಭಾವನೆ** (ನಾ). ಅಸಹ್ಯಭಾವದಿಂದ ಕೂಡಿರುವುದು : ಅಸಹ್ಯಭಾವನೆಯಿಂದವದಿರು ಮತ್ತೆಯುಂ ಪಾಪಿಷ್ಠರಾಗಿರ್ದು (ಬಸವಪು. ೫೯-೨೦). [ಅಸಹ್ಯ + ಭಾವನೆ]

**ಅಸಹ್ಯಮಾನ** (ಗು). ಸಹಿಸಲಾಗದ : ದ[o]ದಹ್ಯಮಾನ ಮಾನಸನು ಮಸಹ್ಯಮಾನ ಚಿಂತಾಂತರಂಗನುಮಾಗಿ (ಸುಕುಮಾ. ೨-೧೦ ವ). [ಸಂ.]

**ಅಸಹ್ಯವೃತ್ತಿ** (ನಾ). ಸಹಿಸಲಾಗದ ನಡತೆ ; ಜುಗುಪ್ಸೆಯನ್ನು ಹುಟ್ಟಿಸುವ ಕೆಲಸ : ವಿಷಯದೊಳೊಂದಿದಸಹ್ಯವೃತ್ತಿಯೊಳ್ ತಾಂ ಬಹುತ್ವಮೇಕತ್ವದೊಳಂ (ಶಮುದ. ೧೦೨). [ಅಸಹ್ಯ + ವೃತ್ತಿ]

**ಅಸಹ್ಯಾಭಾವ** (ನಾ). = ಅಸಹ್ಯತನ : ಅಸಹ್ಯಾಭಾವದಿಂ ಸೊಗಸದೆ ಶಿವೈಕ್ಯಗೆ ಭೂವರಂ ಪ್ರಾತಾಪನಾರಾಯಣ ಪುರದ ನಡುವೆ (ಬಸವಪು. ೫೨-೩೧). [< ಸಂ. ಅಸಹ್ಯಭಾವ]

**ಅಸಹ್ಯೋಕ್ತಿ** (ನಾ). ಅಸಹ್ಯವನ್ನುಂಟುಮಾಡುವ ಮಾತು ; ಜುಗುಪ್ಸೆಯನ್ನು ತರುವ ನುಡಿ : ಪದಯುಗದ ಸಂಧಿಯಂ ಬೇಱದೊಂದಸಹ್ಯೋಕ್ತಿ ಪುಟ್ಟೆ ಮಾಡುವುದಂ ಮಾರ್ಗದೊಳುಳ್ಳ ಸಂಧಿಯಂ ಕಿಡಿಪುದುಮಾಗದು (ಶಮುದ. ೬೭). [ಅಸಹ್ಯ + ಉಕ್ತಿ]

**ಅಸಳೆ** (ನಾ). ದುರ್ಬಲ ; ಶಕ್ತಿಹೀನ : ನದೀಜಲಂ ಚಂಚಲಂ ತಿಳಿದಸಳೆ ಪಸಿಯಳಗೆಯಂತೆ ಜಗಂ (ಸಾನಂದ. ೮-೬೨).
[← ತುಳು. ಅಸಲೆ, ಅಸಳೆ = ನಯವಾದ ; ತೆಳುವಾದ]

**ಅಸಾಂಗತ್ಯ** (ನಾ). ಹೊಂದಿಕೆಯಿಲ್ಲದಿರುವಿಕೆ : ತಳಬುಡವಿಲ್ಲದೆ ಅಸಾಂಗತ್ಯದಿಂದ ಕೂಡಿದ್ದ ಆಪಾದನೆಯ ಬಗ್ಗೆ ಅವನು ಕೋಪ ವ್ಯಕ್ತಪಡಿಸಿದನು (ಪುನರು. ೩೧೩). [ಸಂ.]

**ಅಸಾಕಲ್ಯ** (ನಾ). ಪೂರ್ಣವಾಗಿಲ್ಲದಿರುವಿಕೆ ; ಅಸಮಗ್ರತೆ ; ಅಸಂಪೂರ್ಣತೆ ; ಅರಕೆಯಸ್ಥಿತಿ (ಕಿ). [ಸಂ.]

**ಅಸಾಡಿ** 'ಅಸಡಿ' ನೋ.

**ಅಸಾದೃಶ್ಯ** (ನಾ). ೧. ಹೋಲಿಕೆಯಿಲ್ಲದಿರುವಿಕೆ ; ವೈಷಮ್ಯ. ೨. [ಕಾವ್ಯಮೀ] ಉಪಮಾದೋಷಗಳಲ್ಲಿ ಒಂದು. ಉದಾ :- ಅಸಾದೃಶ್ಯಕ್ಕೆ : ದಾನಾಂಬುಚುಂಬಿತಕಪೋಲತಲಂ ಮದೇಭಂ ತಾನೊಪ್ಪುವಂತೆ ಸೊಗಯಿಪ್ಪುದು ನೋಡೆ ಪೀನಂ ನಾನಾರುಚಿಪ್ರಚುರ ಚಾಪಕಳಾಪಕಾಂತಂ ಸಾನುಪ್ರದೇಶದೊಳುಪಾಗತಮೀ ಮಯೂರಂ (ಕಾವ್ಯಾವ. ೬೮೩). [ಸಂ.]

**ಅಸಾಧಾರಣ** (ಗು). ಸಾಮಾನ್ಯವಲ್ಲದ ; ವಿಶಿಷ್ಟವಾದ; ಗಮನಾರ್ಹವಾದ : ಇನಿವಿರಿದು ಸತ್ಕಾರಮುಂ ಪೆರ್ಗಡೆತನಂ ಬಂದನಾವನುಂ ದೇವರ ದೊರೆಯ ರಾಜಾಧಿರಾಜನೊಳ್ ಪಡೆಯನೌದಾರ್ಯಮಸಾಧಾರಣಮಿದೆಲ್ಲಂ ಚಕ್ರವರ್ತಿಯೊಳಪ್ಪ . . . ಅನುರಾಗಂ (ಶಾಂತಿಪು. ೨-೪೭ ವ). [ಸಂ.]

**ಅಸಾಧಾರಣತ್ವ** (ನಾ). ೧. ಸಾಮಾನ್ಯವಲ್ಲದಿರುವಿಕೆ. ೨. ಹಿರಿಮೆ. [ಸಂ.]

**ಅಸಾಧಾರಣೋಪಮೆ** (ನಾ). [ಕಾವ್ಯಮೀ] ಒಂದು ಕಾವ್ಯಾಲಂಕಾರ : ಹರಿಣಧರ ಸರಸಿಜಂಗಳ್ ದೊರೆಯಲ್ಲಿವು ತನಗೆ ತಾನೆ ದೊರೆ ನಿನ್ನ ಮೊಗಂ ನಿರುಪಮಮೆಂಬುದನಱಿವುದು ನಿರುತಮಸಾಧಾರಣೋಪಮೋದಯವಿಧಿಯಂ (ಕವಿರಾ. ೩-೭೭). [ಅಸಾಧಾರಣ + ಉಪಮೆ]

**ಅಸಾಧು** (ಗು). ೧. ಉಚಿತವಲ್ಲದ ; ಯೋಗ್ಯವಲ್ಲದ : ಉಗ್ರವಾಗಿ ಬೈಯುವುದು ಅಸಾಧುವೆನಿಸಿದೆ (ಶಿಕ್ಷದ. ೩೧೨). (ನಾ). ೨. ಸಾಧುವಲ್ಲದವನು ; ದುಷ್ಟ. [ಸಂ.]

**ಅಸಾಧುಜನ** (ನಾ). ಸಾಧುವಲ್ಲದ ಜನ ; ಕೆಟ್ಟ ಜನ : ತೊಱೆವುದು ತೊಱೆವಂತಸಾಧುಜನ ಸಂಗತಿಯಂ (ಕವಿರಾ. ೧-೬೬). [ಅಸಾಧು + ಜನ]

**ಅಸಾಧುಪದ** (ನಾ). ಸಾಧುವಲ್ಲದ ಪದ; ಸರಿಯಲ್ಲದ ಶಬ್ದ: ಶಿಷ್ಟರು ಅಸಾಧುಪದಪ್ರಯೋಗ ಮಾಡುವುದಿಲ್ಲ (ರೂಢಿ).
[ಅಸಾಧು + ಪದ$_2$]

**ಅಸಾಧ್ಯ** (ಗು). ೧. ಶಕ್ಯವಲ್ಲದ; ಸಾಧಿಸಲಾಗದ: "ಅಸದಳಮೆನಲಸಾಧ್ಯ" (ಕವಿಕಂ. ೨೪೬); ಲುಬ್ಧಕರಾಜನುಗ್ರಬಲಸಂಪನ್ನಂ ತಗುಳ್ದೀ ವನಪ್ರದೇಶದ ನಾಡೆಲ್ಲಮನೊತ್ತಿ ಪಿಡಿಸುತುಮುಸ್ಸಾಸಾಧ್ಯನಾಗಿರ್ದು ಪೊರ್ದಿದಂ (ಪುಷ್ಪಪು. ೫-೬೧); ಜನರ ಗುಂಪು ಅಸಾಧ್ಯವಾಗಿ ಸೇರಿತ್ತು (ರೂಢಿ). ೨. ಗಟ್ಟಿಗ; ಶೂರ: ಅವನೊಬ್ಬ ಅಸಾಧ್ಯವ್ಯಕ್ತಿ (ರೂಢಿ). ೩. ವ್ಯವಹಾರ (?): ಅರಮನೆಗೆ ಸಲುವ ಕುಳಪ್ರಮಾಣದ ಹೊನ್ನು ಅಲ್ಲಿಯ ಅಸಾಧ್ಯ ಪಾರುಪತ್ಯ ನಿಧಿನಿಕ್ಷೇಪ ಜಲಪಾಷಾಣ ಅಷ್ಟಭೋಗ ಸಹವಾಗಿ ಆಚಂದ್ರಾರ್ಕವಾಗಿ ಬಾಳುವಂತಾಗಿ ಧಾರಾಪೂರ್ವಕವಾಗಿ ಬಾಳಿಯೆಂದು ಬರೆಸಿಕೊಟ್ಟ ಶಿಲಾಶಾಸನ (ಸೌಇಇ. IX–ii, ೪೭೯–೧೩; 1501). [ಸಂ.]

**ಅಸಾಧ್ಯಲಿಂಗ** (ನಾ). ಶಾಸ್ತ್ರಜ್ಞಾನದಿಂದ ಸಾಧಿಸಲಾಗದ ಲಿಂಗ; ಇಂತೆಂದು ತಿಳಿಯಲು ಶಕ್ಯವಿಲ್ಲದ ಲಿಂಗ: ವೇದ ವೇಧಿಸಲಱಿಯದೆ ಅಭೇದ್ಯಲಿಂಗನೆಂದು ನಡನಡುಗಿತ್ತು ಶಾಸ್ತ್ರ ಸಾಧಿಸಲಱಿಯದೆ ಅಸಾಧ್ಯ ಲಿಂಗವೆಂದು ಸಾಱುತೈದಾವೆ (ಬಸವ. ೯೫೨). [ಅಸಾಧ್ಯ + ಲಿಂಗ]

**ಅಸಾಮಂಜಸ್ಯ** (ನಾ). ಸಮಂಜಸವಿಲ್ಲದಿರುವಿಕೆ; ಅಸಮಂಜಸತೆ: ಜೊತೆಗೆ ಯಾವ ಅಸಾಮಂಜಸ್ಯವನ್ನೂ ಲೆಕ್ಕಿಸದೆಯೇ ಅವಳು ಚರ್ಚ್ ವಿಧಾಯಕಮಾಡಿದ್ದ ಎಲ್ಲ ಸಂಸ್ಕಾರಗಳನ್ನೂ ಆಚರಿಸುತ್ತಿದ್ದಳು (ಪುನರು. ೩೨೯). [ಸಂ.]

**ಅಸಾಮಾಜಿಕ** (ಗು). ಸಮಾಜಕ್ಕೆ ವಿರೋಧವಾದ: ಅವರ ಮನಸ್ಸು ಈ ದಿನಗಳಲ್ಲಿ ಸ್ವಾಭಾವಿಕವಾಗಿ ಪ್ರವೃತ್ತವಾಗಬಹುದಾಗಿದ್ದ ಅಸಾಮಾಜಿಕ ಪ್ರವೃತ್ತಿಯಿಂದ ದೂರ ಉಳಿಯಿತು (ರಂಗರೋ. ೧೩೬). [ಸಂ.]

**ಅಸಾಮಾನ್ಯ** (ಗು). = ಅಸಾಧಾರಣ: ಅಂದಾ ಮಹಿಯುತ್ಸವಮೆಂಬುದಸಾಮಾನ್ಯಮದೃಷ್ಟಪೂರ್ವಮಶ್ರುತಪೂರ್ವಂ (ಶಾಂತಿಪು. ೧೦–೧); ಲೀಲಾ ಗಂಡನ ದೃಷ್ಟಿಯಲ್ಲಿ ಅಸಾಮಾನ್ಯ ಹೆಣ್ಣಾಗಿದ್ದಳು (ರಂಗರೋ. ೧೮೩). [ಸಂ.]

**ಅಸಾಮಿ** 'ಆಸಾಮಿ' ನೋ.

**ಅಸಾರ** (ಗು). ಸಾರವಿಲ್ಲದ; ನಿರುಪಯೋಗವಾದ: ಅಸಾರಮುಪ್ಪುದಂ ಸಾರವಿದೆಂದು ನಂಬಿ (ಅಜಿಪು. ೨–೫೬); ಅಸಾರಂ ಸಂಸಾರಂ (ಜಿನಾಲೆ. ೨೪–೨೪). [ಸಂ.]

**ಅಸಾರಚೇತನ** (ನಾ). ಸತ್ವಹೀನವಾದ ಮನಸ್ಸುಳ್ಳವನು: ಲೆಪ್ಪದ ರಸಂ ಕೊಲವೇೞ್ದನಸಾರಚೇತನಂ (ಪಂರಾಮಾ. ೩–೨೮).
[ಸಂ. (ಅಸಾರ + ಚೇತನಾ + –)]

**ಅಸಾರ್ದ್ರತೆ** (ನಾ). ೧. ದ್ರವವಿಲ್ಲದಿರುವ ಸ್ಥಿತಿ; ಶುಷ್ಕವಾದ ಅವಸ್ಥೆ; ನೀರಸತ್ವ. ೨. ದಯೆ ದಾಕ್ಷಿಣ್ಯಗಳಿಲ್ಲದಿರುವುದು: ಆ ಘನ ಸಮಯಂ . . . ಅತಿಪರುಷ ಘನನಿನದಯುಕ್ತಮಾಗಿಯುಂ ಅಸಾರ್ದ್ರತಾನುವಿದ್ಧಮಲ್ತು (ಚಂದ್ರಪು. ೪–೪೨ ವ). [ಸಂ. ಅಸಾರ್ದ್ರತಾ]

**ಅಸಾವಧಾನತೆ** (ನಾ). ಎಚ್ಚರ ತಪ್ಪಿರುವುದು; ಅವಧಾನವಿಲ್ಲದಿರುವುದು: ಪಂತನು ಆತನ ಆ ಅಸಾವಧಾನತೆಯನ್ನು ಸಾಧಿಸಿ, ಒಮ್ಮೆಲೆ ಅವನ ಕೈಯೊಳಗಿನ ನಿಡಿದಾದ ಚೂರಿಯನ್ನು ಕಸಿದನು (ಅಂಬಿಕೆ. ೫೫).
[ಸಂ. ಅಸಾವಧಾನತಾ]

**ಅಸಾವೇರಿ** (ನಾ). [ಸಂಗೀತ] ಒಂದು ರಾಗದ ಹೆಸರು: ಅಸಾವೇರಿ ಪ್ರಾಚೀನ ರಾಗ, ೮ನೆಯ ಮೇಳಕರ್ತ ಹನುಮತೋಡಿಯಲ್ಲಿ ಜನ್ಯ ಕರುಣಾರಸ ಪ್ರಧಾನರಾಗ, ಶ್ರೇಷ್ಠರಕ್ತಿರಾಗ (ಸಂಗೀತಂ. ೧೩೫). [?]

**ಅಸಾಸೋಟಿ** (ನಾ). ಒಂದು ಬಿರುದು: ಸಾಧಾರಣ ಬಿರುದುಗಳು . . . ಡಮರುಗ, ಪಂಚಘಂಟೆ, ಅಸಾಸೋಟಿ, ಜಮುದಂಡ, ಗಗ್ಗರಿಕಟ್ಟಿಗೆ (ಗುರುದ. ೧೦). [?]

**ಅಸಿ$_1$** (ಕ್ರಿ). ಈಡಾಡು; ಚೆಲ್ಲು: "ಅಸಿದಂ = ಈಡಾಡಿದಂ" (ಶಮದ. ಪರಿ. ೨). [?]

**ಅಸಿ$_2$** (ಕ್ರಿ). ನಡುಗು; ಅಲ್ಲಾಡು: ಕರತಲಮುಸಿದು ಬಳ್ಕೆ ಅಂಕದೊಳಿಟ್ಟು ಮುಂಕಂ ಕದಕ್ಕದಿಸೆ ನೆಲನೊಳ್ ಧರಿಸಿಯುಂ (ರಾಮಾಶ್ವ. ೨೬–೪); ಪಱಮೆವಱಗಳ ಮೆಲ್ಲುಲಿಗಸಿದು ಕಿಸಿದು ಪಿಸಿದೆಸಟ ತನಿಗಂಪಿಂ ಪೊರೆದ ಕಿಱುಗಾಳಿಯ ತೀಟಕ್ಕೆ ಕದಡುಗೊಂಡ ತಣ್ಗೊಳದೊತ್ತಿನೊಳ್ (ರಾಮಾಶ್ವ. ೧೩೬–೨೨). [ದೇ. ‖ ತಮಿ. ಅಶೈ]

**ಅಸಿ$_3$** (ಕ್ರಿ). ಸಣ್ಣನಾಗು; ಕ್ಷಯಿಸು; ಬತ್ತು; ಕೃಶವಾಗು: ಅಸಿದು ವರಿವ ಪೆರ್ವಳ್ಳದಿರ್ವಕ್ಕದೊಳ್ ನಿಲ್ತೊಸೆದೊಂದಂ ಜಾನಿಸುತ್ತಿರ್ದುದು ಚಳಶಫರೀ ಶಾಳಕೂಟಂ ಬಕೋಟಂ (ಜಗವಿ. ೧೬–೬೨).
[ದೇ. ‖ ತಮಿ. ಅಶೈ; ಕುರುಖ್. ಆಸಾ, ಆಸ್ನಾ]

**ಅಸಿ$_4$** 'ಅಸುವೆ' ನೋ.

**ಅಸಿ$_5$** 'ಅಸಿದು' ನೋ.

**ಅಸಿ$_6$, ಅಸ್ಸೆ$_2$** (ನಾ). ಒಂದು ಜಾತಿಯ ಹುಲ್ಲುಗಿಡ: "ಅಸಿ[ಪಾಠಾಂ. ಸೆ]ಯೆನಲು ಬಾಳುಬುಲು ಚಿಕ್ಕಣಿಕೆ ಬಂದಿಯಕ್ಕು" (ಮಂಗರಾ. ೩೩–೮). **ಅಸ್ಸೆ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [?]

**ಅಸಿ$_7$, ಅಸ್ಸಿ** (ಅ). ಬೇಸರವನ್ನಾಗಲಿ, ಆಕ್ಷೇಪವನ್ನಾಗಲಿ ಸೂಚಿಸುವ ಅವ್ಯಯ: ಅಸಿ! ಬಸಪ್ಪನ್ನ ಕಾಣ್ಯಾ? ನಾಟಕಗೀಟಕ ಬರದವ್ನೆ ನೋಡು (ಸಂಧ್ಯಾರಾ. ೨೬). **ಅಸ್ಸಿ**: ಅಸ್ಸಿ! ಏನೆಂದಾರು ಜನ ಹೀಗೆ ಮಾಡಿದರೆ (ರೂಢಿ).

**ಅಸಿ$_8$** (ನಾ). ೧. ಕತ್ತಿ; ಖಡ್ಗ: ಅಸಿ ಮಷಿ ಕೃಷಿ ವಣಿಗ್ವಿದ್ಯಾ ಶಿಲ್ಪ ಕರ್ಮಂಗಳಿಂ (ಆದಿಪು. ೧೫–೧೩ ವ); ಅಸಿ ಮಷಿ ಕೃಷಿ ವಾಣಿಜ್ಯಾದ್ಯ ಸದುದ್ಯೋಗಂಗಳಿಂದ ಪಾಪಾಯಾಸ ಪ್ರಸರಮುದಕ್ಕುಂ (ಉಸಾರ. ೧೦). ೨. ಕತ್ತಿಯನ್ನು ಹಿಡಿದು ಇತರರಿಗೆ ಸೇವೆ ಸಲ್ಲಿಸುವುದು; ಸೈನಿಕ ವೃತ್ತಿ; ಭಟನಾಗಿ ಜೀವಿಸುವುದು: "ಅಸಿಯೆಂಬುದು ಕೈದುವಂ ಪಿಡಿದೋಲಗಿಸುವುದು" (ಪಸಾರ. ೬೮–೫). [ಸಂ.]

**ಅಸಿಉನ್ನತೆ** (ನಾ). ಒಬ್ಬಾತನ ಹೆಸರು (?): ಅಸಿಉನ್ನತನ್ ಎನ್ಬೊನ್ ಕೆಳೆ ಇನಿತ್ತನ್ (ಎಕ. XVI, ತುಮುಕೂ. ೯೫–೮; 780). [?]

**ಅಸಿಂಬಾಲ** (ನಾ). ಒಂದು ಸ್ಥಳದ ಹೆಸರು (?): ಮಣಿಯ ಟಗುರೆ ಅಸಿಂಬಾಲ ನಂದಿ ಆಲಾದ್ಯನೇಕ ಮಹಾಮನುಷ್ಯಪ್ರತ್ಯಕ್ಷವಪ್ (ಸ್ಮೈಅರಿ. ೧೯೨೪, ೭೯–೩೬; ?). [?]

**ಅಸಿಕ$_1$** (ನಾ). ತೆಳ್ಳಗಿರುವವನು; ಕೃಶ: ಕರಿಕಂ, ಅಸಿಕಂ, ದಸಿಕಂ (ಶಮದ. ೨೦೩ ಪ್ರಯೋ). [ಅಸಿ$_5$ (< ಅಸಿದು) + –ಕ$_2$]

**ಅಸಿಕ$_2$** (ನಾ). ಸಣ್ಣಕತ್ತಿ; ಕಠಾರಿ: ಲೋಭಮೆಂಬ ಸವಗಮಿಕ್ಕಿ ಮೋಹಮೆಂಬಸಿಕಮನಿಕ್ಕಿ . . . ನಿಷ್ಕಾರುಣನಾಗಿ ಮೆಚ್ಚಿದ ಕಲೆಗಳಂ ಕೊಲ್ವಾತನಂ ಕಂಡು ಬೆಚ್ಚಿ (ಧರ್ಮಾಮೃ. ೧೦–೭೬ ಅಡಿಟಿ). [ಸಂ.]

**ಅಸಿಕಲೆ** (ನಾ). ಖಡ್ಗವಿದ್ಯೆ: ಕೃಷಿಯಿಂದ ಮುಂದಣ ಫಲವ ಕಾಂಬಂತೆ ಅಸಿಕಲೆಯಿಂದ ಮುಂದಣ ಅರಿಬಲವ ಗೆಲುವಂತೆ (ಬಾಬೊಮ್ಮ. ೬೯).
[ಅಸಿ$_8$ + ಕಲೆ]

**ಅಸಿಕಲ್ಲು** 'ಅಸುವೆಕಲ್ಲು' ನೋ.

**ಅಸಿಕಾಯ** (ನಾ). ಬಡವಾದ ಶರೀರ; ದೇಹ: ಅವರ ಬದಲಿಗೆ . . . ಉದ್ದನೆಯ ಅಸಿಕಾಯದ ಅಗ್ನಿಶಾಮಕದಳದ ಕ್ಯಾಪ್ಟನ್ . . . ನಿಂತಿದ್ದನು (ಪುನರು. ೪೫೦). [ಅಸಿ$_5$ (< ಅಸಿದು) + ಕಾಯ]

**ಅಸಿಕೇಅಡಿಕೆ** (ನಾ). ಹಣ್ಣಾದ ಅಡಕೆ: ಮೊದಲು ನೆಲ ಪೊಳ್ಳುಮಾಡಿ ಅಸಿಕೇಅಡಿಕೆಗಳನ್ನು ತುಂಬುಮೇಲು ಮಾಡಿ ಹುಗಿದು ಮೇಲೆ ಬಾಳೆ ಯೆಲೆಯ ನೆರಳು ಮಾಡಿ ಪ್ರತಿದಿವಸ ನೀರುಹಾಕುತ್ತ ಹೋಗುವರು (ಕಭಾಗ. ೨೭೪). [ಅಸಿಕೇ$_0$ + ಅಡಿಕೆ]

**ಅಸಿಕ್ನಿ** (ನಾ). ರಾಜಸ್ತ್ರೀಯರಿಗೆ ಸೇವಕಳಾಗಿ ಅಂತಃಪುರದಲ್ಲಿರುವ ಚಿಕ್ಕವಯಸ್ಸಿನ ಸೇವಕಿ: "ಅಸಿಕ್ನಿ ಎಂಬುದು ಲೆಂಕಿತಿ" (ಹಲಾಯು. ೮೧–೩೩೭). [ಸಂ. ಅಸಿಕ್ನೀ]

**ಅಸಿಖೇಟಕಹಸ್ತೆ** (ನಾ). ಕತ್ತಿ, ಗುರಾಣಿಗಳನ್ನು ಕೈಯಲ್ಲಿ ಹಿಡಿದ ವಳು: ಆಕೆಯುಮಸಿಖೇಟಕಹಸ್ತೆಯಾಗಿ ವಿಭೀಷಣಮಪ್ಪ ರೂಪಮಂ ವಿಗುರ್ವಿಸಿ (ವಡ್ಡಾರಾ. ೬೦–೧೧); ಅಸಿಖೇಟಕಹಸ್ತೆ ತೂಳ್ದಿದಳ್ (ಶಾಂತಿಪು. ೯–೬).
[ಸಂ. ಅಸಿಖೇಟಕಹಸ್ತಾ (ಅಸಿ + ಖೇಟಕ + ಹಸ್ತ + –)]

**ಅಸಿಗಲೆ** (ಕ್ರಿ). (?): "ನಡುಗು" (ಸೋಮಚ. ಕೋಶ); ನಿಜದ ಯ ನಡಿಗಡಿಗೆ ಕಳೆದುಡುವ ನೆವದಿಂ ಮನವನಱಿವ ಪದುರುನುಡಿಸಿದೊಡೆ ನಸುನಗುವೆ ಕೆಲದೆಗೆದು ಮುಖವ ನೀಗುರ್ಡಿಯಲೆಱಿವುತ್ತ ದೊರೆವಸಿಗಲೆ [ಪಾಠಾಂ. ಸೀಗುರಿ]ಯ ತುಟಿಗೆ ಹದಕೊಡುವ ನಾಲಗೆಯ ಸುದತಿಯ ರೊಪ್ಪಿದರು (ಸೋಮಚ. ೧–೧೧೩). [?]

**ಅಸಿಗಲ್ಲು** 'ಅಸುವೆಕಲ್ಲು' ನೋ.

**ಅಸಿತ$_1$** (ನಾ). ಆಹಾರ: ಶಾಕಪಿಶಿತಮಸಿತಮಾಗೆ ಬೇಗದಿಂ ರೋಗಮಂ ನೀಗಿ ರಾಗದಿಂ ಬಾೞ್ವ (ವರ್ಧಪು. ೧೬–೬೦ ವ). [ಸಂ. ಅಶಿತ ?]

**ಅಸಿತ$_2$** (ಗು). ೧. ಬಿಳುಪಲ್ಲದ; ಕಪ್ಪಾದ: ಶ್ವೇತಂ ಹಾಸ್ಯಂ ಕಾರುಣ್ಯಂ ಧೂಮ್ರಮಸಿತಮುೞಿದುವವೆರಡುಂ (ಕಾವ್ಯಾವ. ೮೩೬). (ನಾ). ೨. ಕಪ್ಪು: "ಅಸಿತಂ, ಶಿತಿ(ಃ) . . . ಮೇಚಕಂ – ಈ ೬ ಕರಿದು" (ಹಲಾಯು. ೧೨೧–೪೯). ೩. ಕೃಷ್ಣಪಕ್ಷ: "ಬಹುಲಃ, ಅಸಿತಃ – ಈ ೨ ಕೃಷ್ಣಪಕ್ಷ" (ಹಲಾಯು. ೯–೫೦). ೪. ಶನಿ: "ಅಸಿತಃ, ಕ್ರೋಡಃ . . . ಶೌರಿಃ – ಈ ೬ ಶನಿಯ ಪೆಸರ್" (ಹಲಾಯು. ೯–೪೯). ೫. ಒಬ್ಬ ಋಷಿಯ ಹೆಸರು: ನಿಮಗೆ ಅಸಿತವಾರ್ಷಾಗಣ ಮಹರ್ಷಿ ಗಳಿಂದ ಉಪದೇಶವಾಗಿರುವ . . . 'ಮಂಥಕರ್ಮ'ವನ್ನು ನೀವು ಅವರಿಗೆ ಉಪದೇಶಮಾಡಿ (ಚಿತಂಬಾ. ೬). [ಸಂ.]

**ಅಸಿತಕಂಠ** (ನಾ). ಕಪ್ಪಾದ ಕೊರಳುಳ್ಳವನು; ನೀಲಕಂಠ; ಶಿವ: ಘನ ಕವೀಶ್ವರ ರಾಜಧಾನಿಗಳಿನಸಿತಕಂಠನ ನಗರಿಗಳಿನಹಿತ ವಿಧು ರಾಹು ವೆನಿಪ ಬಿರುದಿನ ಕೇತುಮಯ ಪತ್ತನಂಗಳಿಂ (ಭಾವಚಿಂ. ೩–೪).
[ಅಸಿತ$_2$ + ಕಂಠ]

**ಅಸಿತಕಂಧರ** (ನಾ).= ಅಸಿತಕಂಠ: ವನಜಲೋಚನಯುಗಳೆ ಬಂದಳು ಕನದಸಿತಕಂಧರನ ಬಳಿಯಿಂ (ಬಸಪು. ೪೯–೧೦). [ಅಸಿತ$_2$ + ಕಂಧರ]

**ಅಸಿತಖಗ** (ನಾ). ಕರಿಯ ಹಕ್ಕಿ: "ಅಸಿತಖಗಮೆನೆ ಕರಿಯ ಹಕ್ಕಿ" (ಮಂಗರಾ. ೫೨–೮). [ಅಸಿತ$_2$ + ಖಗ]

**ಅಸಿತಗಲ**, ಅಸಿತಗಳ (ನಾ). = ಅಸಿತಕಂಠ. **ಅಸಿತಗಳ**: ಅಪ್ರತಿ ಮನಂ ತನ್ನಿ ಜಂಗಮಸುಪ್ರಸಾದಿಯನರಿಸಮರಸರಸಿಪ್ರಹಾರಿಯನಸಿತ ಗಳಗಣನಾಥನಂ ತನ್ನಿ (ಬಸಪು. ೫೮–೩೪); ಅಸಿತಗಳನವನ ಭಕ್ತಿಗೆ ಮೆಚ್ಚಿ ಸಮೆಯದಿಹ ಸಮಸ್ತವಸ್ತುವನಿತ್ತು (ಸೌಂದಪು. ೬–೨೩).
[ಅಸಿತ$_2$ + ಗಲ$_2$]

**ಅಸಿತಗಳ** 'ಅಸಿತಗಲ' ನೋ.

**ಅಸಿತಗ್ರೀವ** (ನಾ). = ಅಸಿತಕಂಠ: ಸಿತಕಿರಣಜೂಟನಸಿತಗ್ರೀವನ ಭಯಕರಯುತ ಜಗತ್ಕುಕ್ಷಿ ಹರಿನೇತ್ರಾಂಘ್ರಿಯಭವನಣುಗರ್ಗಂಟಿ ತನ್ನ ವರ್ಗಳು (ಭಾವಚಿಂ. ೭–೨೨). [ಸಂ. (ಅಸಿತ + ಗ್ರೀವಾ + –)]

**ಅಸಿತತೆ** (ನಾ). ಕಪ್ಪಾಗಿರುವಿಕೆ; ನೀಲಿಮೆ. 'ಅಸಿತತೆವಡೆ' ಪರಾ.
[ಸಂ. ಅಸಿತತಾ]

**ಅಸಿತತೆವಡೆ** (ಕ್ರಿ). ಕಪ್ಪಾಗು: ಪೊಡರ್ವ ಕಜ್ಜಲವೆಚ್ಚದಸಿತತೆವಡೆದ ದಿಟ್ಟಿಗಳೊಪ್ಪೆ (ಸಾಳ್ವಭಾ. ೨೦–೧೭). [ಅಸಿತತೆ + ಪಡೆ$_1$]

**ಅಸಿತಪಕ್ಷ** (ನಾ). ಕೃಷ್ಣಪಕ್ಷ: ಅಸಿತಪಕ್ಷಾಷ್ಟಮಿಯದಿನ ಸಂಧಿಸಿದರು (ಕುವ್ಯಾವಿ. ೪–೩೬). [ಅಸಿತ$_2$ + ಪಕ್ಷ]

**ಅಸಿತಪಯೋಜ** (ನಾ). ನೀಲಿಯ ತಾವರೆ; ಕನ್ನೈದಿಲೆ: ಅಸಿತ ಪಯೋಜನೇತ್ರೆಯರತಿಪ್ರಿಯಕಾಂತೆಯರ್ (ಶಾಂತಿಪು. ೨–೪೮).
[ಅಸಿತ$_2$ + ಪಯೋಜ]

**ಅಸಿತಪಯೋಧರ** (ನಾ). ನೀಲಮೇಘ; ಕಾರ್ಮುಗಿಲು.
[ಅಸಿತ$_2$ + ಪಯೋಧರ]

**ಅಸಿತರಕ್ತ** (ಗು). ೧. ಕಪ್ಪು, ಕೆಂಪು ಮಿಶ್ರವಾಗಿರುವ. ೨. ಕಪ್ಪಾದ ರಕ್ತ. ೩. ಅಗ್ನಿಯ ಏಳು ನಾಲಗೆಗಳಲ್ಲಿ ಒಂದು: "ಬಹುರೂಪಮತಿ ರಕ್ತಮಸಿತರಕ್ತಂ ಸದಂಶು ಹಿರಣ್ಯಮಾ ಕನಕಮರ್ಚಿಯೆನಲಗ್ನಿಯಲ್ಲಿಹ ವೇಳು ನಾಲಗೆಗಳಕ್ಕು" (ಮಂಗರಾ. ೧೪–೭). [ಅಸಿತ$_2$ + ರಕ್ತ]

**ಅಸಿತರಸೆ** (ನಾ). ಕಪ್ಪಾದ ಭೂಮಿ; ಎರೆಯ ಭೂಮಿ: "ಅಸಿತರಸೆ ಕೃಷ್ಣಮೃತ್ತಿಕೆಯೆನಲ್ಕೆರೆಯಕ್ಕು" (ಮಂಗರಾ. ೨೮–೩). [ಅಸಿತ$_2$+ ರಸೆ]

**ಅಸಿತರುಚಿ** (ನಾ). ಕಪ್ಪು ಬಣ್ಣ, —ಕಾಂತಿ: ಹಸಿತಯಶಃಪ್ರಭೃತಿ ಯೊಳು ಲ್ಲಸಿತಂ ಸಿತಭಾವಮಯಶದೊಳ್ ಪಾಪದೊಳಂತಸಿತರುಚಿ ಕೋಪ ರಾಗಪ್ರಸರದೊಳಾರಕ್ತವರ್ಣಮಭಿವರ್ಣಿಸುಗುಂ (ಕಾವ್ಯಾವ. ೮೬೧). [ಅಸಿತ$_2$ + ರುಚಿ]

**ಅಸಿತವಸನ** (ನಾ). ಕಪ್ಪುಬಟ್ಟೆ; ನೀಲಿವಸ್ತ್ರ: ತಂದೆ ಕಾಲಾಯ ಸಾಸನದೊಳಸಿತವಸನವನಾಂತು, ರಕ್ತವರ್ಣದ ಪುಷ್ಪಮಾಲೆಯಂ ಧರಿಸಿ . . . ಕಳ್ತೆಯನಡರಿ ತೆಂಕಮೊಗಮಾಗಿ ಪೋಗುತಿರ್ದನ್ (ಶ್ರೀರಾಮಾ. ೧೦೪–೧೨೧). [ಅಸಿತ$_2$ + ವಸನ]

**ಅಸಿತಾಂಬರ** (ನಾ). ೧. ನೀಲಿವಸ್ತ್ರ. ೨. ನೀಲಿವಸ್ತ್ರವುಳ್ಳವನು; ಬಲರಾಮ: "ಅಸಿತಾಂಬರಂ ದನುಜರೂಪುವಿಹಾಯಸವಾರಿ ದೊಡ್ಡಿತೆಂ ಬೆಸೆವಿವರೊಳ್ಬಲಾಖ್ಯೆ" (ನಾನಾರ. ೧೫). [ಅಸಿತ$_2$ + ಅಂಬರ]

**ಅಸಿತಾಶ್ಮ** (ನಾ). ಕರಿಯ ಕಲ್ಲು; ನೀಲಶಿಲೆ; ಇಂದ್ರನೀಲಮಣಿ: "ಹರಿಕಾಂತಮಸಿತಾಶ್ಮವೆನೆ ನೀಲಮಕ್ಕು" (ಮಂಗರಾ. ೩೧–೬).
[ಅಸಿತ$_2$ + ಅಶ್ಮ]

**ಅಸಿತಾಹಿ** (ನಾ). ಕರಿಯ ಹಾವು ಕೃಷ್ಣಸರ್ಪ: ಅಗರುವ ಧೂಪ ಧೂಮಲತೆಯೆಂದಸಿತಾಹಿಗೆ ಸಾರ್ವ . . . ಪುಣ್ಯಮೆಂದು ವಿಷವಲ್ಲಿಗೆ ನೀರೆಱೆವೆಗ್ಗನಂತೆ (ಕಾದಂಪೂ. ೮೪೭). [ಅಸಿತ$_2$ + ಅಹಿ]

**ಅಸಿತಾಹಿದಂಶ** (ನಾ). ಕೃಷ್ಣಸರ್ಪದ ಕಡಿತ: ಪಿರಿದಪ್ಪ ನಂಜು ಪುಗುಳುರ್ಬಿದವಂಗಸಿತಾಹಿದಂಶಮಾದುದು ದಿಟಂ (ಕಾದಂಪೂ. ೮೮೩).
[ಅಸಿತಾಹಿ + ದಂಶ]

**ಅಸಿತಾಳವನ** (ನಾ). ಒಂದು ನರಕ: ಮತ್ತಂ ಅಸಿತಾಳವನ . . . ಇಕ್ಷು ಯಂತ್ರಸಂಮರ್ದನವೆಂಬೈದು ಮಂತ್ರಿನರಕಂಗಳಿಂ (ವಿವೇಕ. ೧೮೦).
[ಅಸಿ$_8$ + ತಾಳ (= ತಾಲ) + ವನ]

**ಅಸಿತೇಂದೀವರ** (ನಾ). = ಅಸಿತಪಯೋಜ: ಅಸಿತೇಂದೀವರಲೋಲ ಲೋಚನೆಯನಂದಂತಾ ಸಭಾಮಧ್ಯದೊಳ್ ಪಸುವಂ ಮೋದುವವೋಲೆ ನೋದೆಯುಂ (ಪಂಪಭಾ. ೭–೫೮). [ಅಸಿತ$_2$ + ಇಂದೀವರ]

**ಅಸಿತೋತ್ಪಲ** (ನಾ). = ಅಸಿತಪಯೋಜ: ಪ್ರಣಯಿಜನಕ್ಕೆ ಕಾಮನಸಿ ತೋತ್ಪಲವರ್ಣನವನ್ (ಎಕ. XI, ಚಿತ್ರದು. ೪೩–೩; 500).
[ಅಸಿತ$_2$ + ಉತ್ಪಲ]

**ಅಸಿತೋತ್ಪಲಿನಿ** (ನಾ). ೧. ಕನ್ನೈದಿಲೆಗಳ ಗುಂಪು. ೨. = ಅಸಿತ ಪಯೋಜ : ಕಿಸುಸಂಜೆಯೊಳ್ ಬಿಸಿಲ್ವೊರೆದಸಿತೋತ್ಪಲಿನಿಯವೊಲಾಕೆ ಕಣ್ಗೆಸೆದಿರ್ದಳ್ (ಕಾದಂಪೂ. ೩೯). [ಅಸಿತ$_3$ + ಉತ್ಪಲಿನಿ]

**ಅಸಿದನಿ** (ನಾ). ಕೃಶವಾದ ಧ್ವನಿ ; ಕಿರುದನಿ : ಸೆರೆಬಿಗಿದ ಕೊರಲೊಳ್ ಸಿಲ್ಕಿದ ಅಸಿದನಿಯುಂ (ಚಿಕವಂ. ೧೧೬–೫). [ಅಸಿ$_5$ (< ಅಸಿದು)+ದನಿ$_2$]

**ಅಸಿದು, ಅಸಿ$_5$, ಅಸಿಯ** (ಗು). ೧. ಸಣ್ಣದಾದ ; ಚಿಕ್ಕದಾದ ; ತೆಳ್ಳಗಿರುವ ; ಸೂಕ್ಷ್ಮವಾದ : ಪೆಱಗಸಿದಾಗಿ ಮುಂತಗಲಿತಪ್ಪುದಱಿಂದೆ. . .ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೭೪೭ ಶೂದ್ರಕ) ; ಪೊಡರ್ವ ಪಗೆವರೊಡನೆ ಕರಮಸಿದಾದ ಮಧ್ಯಪ್ರದೇಶಮುಂ (ಆದಿಪು. ೨–೯ ವ) ; ಕರಮಸಿದಾದ ಜಂಘೆ ಚಿಟುಕೆಂದು ಪಳಂಚುವ ಜಾನು (ಲೋಕೋಪ. ೧೧–೫೨). **ಅಸಿ$_5$** : ಸಮಾಸದ ಪೂರ್ವಪದವಾಗಿದ್ದಾಗ 'ಅಸಿದು' ಶಬ್ದಕ್ಕೆ ಆದೇಶವಾಗಿ ಬರುವ ರೂಪ. 'ಅಸಿನಡು', 'ಅಸಿವೊಗ' ಪರಾ. **ಅಸಿಯ** : ೧. ಬಿಳಿಯ ತಾವರೆಯೆಳಗಾವಿನಸಿಯನೂಲೊಳ್ ಕೋದ ತೋರಮಲ್ಲಿಗೆಯ ಬಿರಿಮುಗುಳ ಸರಿಗೆಯುಮಂ (ಪಂಪಭಾ. ೫–೬ ವ). ೨. ಕೃಶವಾದ : ನೋಡಿದರ್ ಭಾವಿಸಿ ಸಗರನನಸಿಯ ಪಸಿಯ ಪೊಸಜವ್ವನೆಯರ್ (ಅಜಿಪು. ೯–೩೬). ℙ ಗಮಕ ಸಮಾಸದಲ್ಲಿ ಪೂರ್ವಪದವಾಗಿದ್ದಾಗ 'ಅಸಿದು' ಶಬ್ದಕ್ಕೆ ಆದೇಶವಾಗಿ ಬರುವ ರೂಪ.

**ಅಸಿದುಗೊಳ್** = ಸಣ್ಣಗಾಗು ; ತೆಳ್ಳಗಾಗು ; ಕೃಶವಾಗು : ಬಳವಳಿದು ಬಡವಾಗಿ ಬಾಗಿ ಕದಪಿನ ಬಳಿಯೊಳೀಳಿದಸಿದುಗೊಂಡು ಮೆಲ್ಲನೆ ನುಸುಳಿ ಹೋಗಲಿಹ ತೆಳುಗತ್ತಲೆಯ ಮುಱಿಗಳೊಯೆನಿಪ್ಪಂತೆಸೆದವೀಶನ ಭ್ರೂಲತೆಗಳು (ಸೋಮಚ. ೪–೭೫). **ಅಸಿಯದು** = ಸಣ್ಣದು ; ಚಿಕ್ಕದು (?) : ಅಸಿಯದಱಿಡೆವೊತ್ತಿ ಪೊಕ್ಕು ಕೆಲನಂ ಕೊರ್ಬುತೆಸೆಭುವಿದಿರ್ದಾರ್ದುರ್ಗಂ (ಕವಿರಾ. ೧–೬೬). **ಅಸಿಯನ್** = ಸಣ್ಣವನು ; ಕೃಶವಾದವನು: ನಾರಾಚದಂತಸಿಯನುಂ ಕೂರಿದನುಮಾಗಿ (ಶಾಂತಿಪು. ೪–೩೬ ವ); ಕರಮಸಿ [ಪಾಠಾಂ. ಮಿಱಿ]ಯನಾದ ದೆವಸಂ ಹರಿಣಧರಂ ದಿನಪನಲ್ಲಿ ಗಾಸೆಯೊಳಂದಂತಿರೆ ತಾಂ ಪೋದಂ (ಜೀವಸಂ. ೩೨–೯). **ಅಸಿಯನಾಗಿಸು**= ಸಣ್ಣನಾಗಿಸು : ಪಸಿವು ದೊರೆಕೊಳ್ಳು ಮುಣಿಸುಗಳಿನಿಕೆಯ್ಯು ಮಾವಂದದೊಳ್ ಕನಲ್ದಾದ ಮೆಯ್ಯನಸಿಯನಾಗಿಪುದು (ಪಂಪಭಾ. ೫–೪೭). **ಅಸಿಯಲ್ತು** = ಕೃಶವಲ್ಲ ; ದೊಡ್ಡದು : ನಿನಗೇನಸಿಯಲ್ತು ನನ್ನ ಬಗೆಯುಬ್ಬೆಗಂ (ಶ್ರೀರಾಮಾ. ೩೦೨–೨೯). **ಅಸಿಯಳ್, ಅಸಿಯವಳ್** = ತೆಳುವ್ಮೈಯವಳು ; ಕೃಶಾಂಗಿ : ಪಸರಿಸಿ ಪೊಸಯಿಸಿದ ಪೊಸಸುಸಿಲ ಮಸಕದ ಬಸದೊಳೆ ಬಸದಾಗಿಯುಮಸಿಯಳೆನಗಸವಸದೊಳ್ ಬೆಸೆದು ಪೋಗಿ (ಆದಿಪು. ೪–೧೨ ವ) ; ಹಾರ ಮರೀಚಿಪ್ರಸರಂ ಬಳಸುತ್ತಿರೆ ಬರ್ಪಸಿಯಳ್ ಪಾಲ್ಗಡಲೊಳೆಸೆವ ಸಿರಿಯಂ ಪೋಲ್ತಳ್ (ಕಾದಂಪೂ. ೫೧೮) ; ಅನುರಕ್ತೆ ನಚ್ಚಿನಸಿಯವಳನುಪಮ ವಿಗ್ರಹವಿಳಾಸೆ (ಪುಷ್ಪಪು. ೯–೪೨). **ಅಸಿಯರ್** (ಬಹುವ) = ಕೃಶರು : ನಕುಳನುಂ ತೆಂಕಣ ದೆಸೆಯ ಮಲೆಪರಂ ಮಂಡಳಿಕರನಸಿಯರಾಗೆ ಕವರ್ದುಕೊಂಡು (ಪಂಪಭಾ. ೬–೩೨ ವ). **ಅಸಿಯವು** = ಸಣ್ಣವು ; ಚಿಕ್ಕವು : ಮೂಱಸಿಯವು ಮೂಱು ದೊಡ್ಡಿದುವು ಮೂಱಿಡೆ ತೆಳ್ಳಿದುವಂಬುಜಾಕ್ಷಿಯಾ (ಪಂಪಭಾ. ೪–೭೨). **ಅಸಿಯಾಗು** = ಸಣ್ಣಗಾಗು ; ಕೃಶವಾಗು ; ಸೂಕ್ಷ್ಮವಾಗು : ಅಡಿಯನೊಡವೆ ಕೆಚ್ಚನಿಹ ಕೇಸಡಿಗಳೊತ್ತದೆ ನಿಱಿವಿಡಿದ ಕುರುಳಡಸಿ ವರದಸಿಯಾಗಿ ಕೊಂಕಿದ ನಿಡಿಯ ಪುರ್ವುಗಳು (ಸಾಳ್ವಭಾ. ೨೦–೧೬).

[ದೇ. ‖ ತಮಿ. ಅಶು ; ಮಲ. ಅಸು ; ತೆಲು. ಅಸದು, ಅಸಿ ; ಕುರುಖ್. ಅಸಾ]

**ಅಸಿಧಾರಾವ್ರತ** (ನಾ). ೧. ಕತ್ತಿಯ ಅಲಗಿನ ಮೇಲೆ ಹೆಜ್ಜೆಯಿಟ್ಟು ನಡೆಯುವಂತೆ (ಅಥವಾ ಕುಳ್ಳಿರುವಂತೆ) ಆಚರಿಸಲು ಬಲು ಕಷ್ಟವಾದ ಒಂದು ವ್ರತ : ಅಸಿಧಾರಾವ್ರತದಿಂದೆ ಪಂಪೆಸೆವಿನಂ ಮುಳ್ಳುಂದದೊಳ್ ಮುನ್ನೆ ಸಂನ್ಯಸನಕ್ಕೆಯ್ದೆ ನಿವೃತ್ತಿಗೆಯ್ದು (ಚಾವುಂಪು. ೩–೧೫). ೨. ದಂಪತಿಗಳು ಏಕಶಯ್ಯೆಯಲ್ಲಿದ್ದರೂ ಸಂಯಮದಿಂದ ಇರುವುದು. ೩. ಕತ್ತಿಯ ಅಲಗಿನಿಂದ ಶತ್ರುಗಳನ್ನು ನಾಶಮಾಡುವ ವ್ರತ : ಅಸಿಧಾರಾವ್ರತಮಂ ಸಾಧಿಸಿ ಜಯವಧುವಾಣಿ ಬಾಣಮುಖಮಂ ಸಲೆ ಸಾಧಿಸಿ ಬಂದು ಭುಜದೊಳಾಸ್ಯದೊಳೆಸೆದಿರ್ಪಳ್ ವೀರಪಾಂಡ್ಯ ಭೂಪಾಳಕನಾ (ಎಇ. XVI, ೪೦–೪೯ ; 1152). 'ಅಸಿಪತ್ರವ್ರತ' ಪರಾ. [ಸಂ. (ಅಸಿ$_8$ + ಧಾರಾ + ವ್ರತ)]

**ಅಸಿಧಾರೆ** (ನಾ). ಕತ್ತಿಯ ಅಲಗು : ಅಸಿಧಾರೆ ಮೊಗದಲಿ ಮಿಂಚಿದುವು ಮುತ್ತಿದುವು ಕಳಶಜನ (ಕುವ್ಯಾದ್ರೋ. ೧೮–೪೫) ; ಲೇಪಿಸಿದ ಜೇನಿನಾಸೆಗಸಿಧಾರೆಯಂ ನೆಕ್ಕಲೆಳಸುತಿಹೆ (ಶ್ರೀರಾಮಾ. ೨೪೫–೪೮೨).
[ಅಸಿ$_8$ + ಧಾರೆ]

**ಅಸಿಧಾವಕ** (ನಾ). ಕತ್ತಿಯನ್ನು ಸಾಣೆ ಹಿಡಿಯುವವನು (ತ).
[ಅಸಿ$_8$ + ಧಾವಕ]

**ಅಸಿಧೇನು** (ನಾ). ಸಣ್ಣಕತ್ತಿ ; ಕಿಗ್ಗತ್ತಿ : ಸಿಂಗಬಲನೆಂಬಗುರ್ವಿನ ಸಿಂಗಮನಸಿಧೇನು ಕಿರಣ ಕೇಸರಮಾಲಾಸಂಗತಮನಡಸಿ ನುಂಗಲ್ ಸಂಗತಬಲನೊಂದು ಶರಭಮಿರ್ಪಂತಿರ್ದಂ (ಪಂಪಭಾ. ೮–೭೪). [ಅಸಿ$_8$+ಧೇನು]

**ಅಸಿಧೇನುಕೆ** (ನಾ). = ಅಸಿಧೇನು : ಕಟೀತಟಪ್ರಬದ್ಧಾಸಿಧೇನುಕನುಮೆಂಬ ಧೇನುಕನುಮಂ . . . ಕರೆದು (ಜಗವಿ. ೩–೨೨ ವ).
[ಅಸಿ$_8$ + ಧೇನುಕೆ]

**ಅಸಿನಡು** (ನಾ). ಸಣ್ಣನಡು ; ಬಡನಡು : ಅಸಿನಡುವಿನೊಳ್ಪೊಳೆವ ಗರ್ಭಂ (ಜೈಮಿಭಾ. ೧೮–೩೫) ; ಅಸಿನಡು ಬಳೆದುದು . . . ಭೂಪನ ಶಶಿಮುಖಿ ಗರ್ಭವ ಧರಿಸೆ (ಕಂನವಿ. ೪–೫೯).
[ಅಸಿ$_5$ (< ಅಸಿದು) + ನಡು$_2$]

**ಅಸಿಪತ್ರ** (ನಾ). ೧. ಕತ್ತಿಯ ಅಲಗು : ನಿಶಿತಾಸಿಪತ್ರ ಪತಿತ ಪ್ರಚಂಡ ಸುಭಟಮಸ್ತಕೋಚ್ಚಳಿತ (ಪಂಪಭಾ. ೧೩–೫೧ ವ). ೨. = ಅಸಿಧಾರಾವ್ರತ ೧ : ಇಂತಾ ಹಯಂ ತಾನೆ ಮೇದಿನಿಯೊಳೊಂದು ವರ್ಷಂ ತಿರುಗಿ ತನ್ನಿಳೆಗೆ ಬಂದು ನಿಲುವಲ್ಲಿ ಪರಿಯಂತಮಸಿಪತ್ರಮೆಂಬುರುತರವ್ರತವನಾಚರಿಸುತಿರ್ದು (ಜೈಮಿಭಾ. ೨–೩೦). ೩. ಕತ್ತಿಯ ಚೀಲ; ಒರೆ. ೪. ಕತ್ತಿಯ ಆಕಾರದ ಎಲೆಗಳುಳ್ಳ ಮರ. ೫. ಒಂದು ನರಕ. 'ಅಸಿತಾಳವನ' ಪರಾ. ೬. ಕಬ್ಬು. [ಅಸಿ$_8$ + ಪತ್ರ]

**ಅಸಿಪತ್ರನಂದನ** (ನಾ). ಕತ್ತಿಯಂತೆ ಎಲೆಗಳುಳ್ಳ ಮರಗಳ ತೋಟ : ಎಮಗಾರ್ ಶರಣೆಲ್ಲಿಗೆ ಪೋಪೆವೆಂದು ಮೆಟ್ಟಿಡಿನಸಿಪತ್ರನಂದನಮನೊಯ್ಯನೆ ಸಾರ್ವುದುಂ (ಆದಿಪು. ೫–೮೮). [ಅಸಿಪತ್ರ + ನಂದನ]

**ಅಸಿಪತ್ರವನ** (ನಾ). = ಅಸಿಪತ್ರನಂದನ : ಮತ್ತಮಸಿಪತ್ರವನನಿಕರ್ತದೊಳಂ ತಪ್ತಾಯಃಪುತ್ರಿಕಾಲಿಂಗನದೊಳಂ (ಅಜಿಪು. ೧೧–೧೦ ವ) ; ಸಂಧಿಸಂಧಿಗಳಂ ಗಂಟುಗಡಿವುದುಂ ತಡಂಗಡಿವುದುಂ ಅಸಿಪತ್ರವನದೊಳೂಳಿಕ್ಕೆಗುರ್ದುವುದುಂ (ಸುಕುಮಾ. ೧೧–೪೭ ವ). [ಅಸಿಪತ್ರ + ವನ]

**ಅಸಿಪತ್ರವ್ರತ** (ನಾ). = ಅಸಿಧಾರಾವ್ರತ ೨ : ಶ್ಲಾಘ್ಯದಿಂದಾದ ಮಜ್ಜನ ಭೋಜನದ ಸದಾರೋಗ್ಯದಿಂ ತಾಂಬೂಲ ವಸ್ತ್ರಭೂಷಣದ ಸೌಭಾಗ್ಯದಿಂ ಕುಸುಮಪರಿಮಳಲೇಪನಂಗಳಿಂ ಸ್ತ್ರೀಪುರುಷರೇಕಾಂತಕೆ ಯೋಗ್ಯವಹ ಸೆಜ್ಜೆವನೆಯೊಳಗಿರ್ವರುಂ ದಿವ್ಯಭೋಗ್ಯಮೆನಿಪೊಂದು ಮಂಚದೊಳೊಜಗಿ ಕಾಮವೈರಾಗ್ಯಮಾಗಿರ್ಪುದಸಿಪತ್ರವ್ರತಂ (ಜೈಮಿಭಾ. ೮–೯).
[ಅಸಿಪತ್ರ + ವ್ರತ]

**ಅಸಿಪರ್ಣಿ** (ನಾ). ಹೆಗ್ಗಣಿಗಲೆ ಗಿಡ: "ಪೆಗ್ಗಣಿಗಿಲ ಸಿಪರ್ಣಿ" (ಮುಂಗರಾ. ೭೨-೩೭). [ಸಂ. ಅಸಿಪರ್ಣಿನ್]

**ಅಸಿಪುತ್ರಿ** (ನಾ). = ಅಸಿಧೇನು. [ಅಸಿ$_8$ + ಪುತ್ರಿ]

**ಅಸಿಪುತ್ರಿಕೆ** (ನಾ). = ಅಸಿಧೇನು: "ಅಸಿಪುತ್ರಿಕಾ, ಅಸಿಧೇನುಃ, ಕ್ಷುರಿಕಾ, ಪತ್ರಂ, ಶಸ್ತ್ರಿಕಾ – ಈ ೫ ಸುರಿಗೆ" (ಹಲಾಯು. ೭೮-೩೧೯).
[ಅಸಿ$_8$ + ಪುತ್ರಿಕೆ]

**ಅಸಿಮುಸೆ** (ನಾ). ಕತ್ತಿಯ ಏಟಿನಿಂದಾದ ಗಾಯ: ಪೊಸಕಾಲನೆಂಬಂತೆ ಸಮರಭೂಮಿಯೊಳು ಪೊಕ್ಕಸಿಮುಸೆಯನೆಸಗಿ ಕಪಿಸಂತತಿಯ ಭಕ್ಷಿಸುತ ಮೆಸೆದಂ (ವೆಂಕಾರಾ. ೬-೨೯-೨). [ಅಸಿ$_8$ + ಮುಸೆ$_2$]

**ಅಸಿಮಿಸಿ, ಅಸಮಿಸಿ** (ನಾ). ಹಿಂದೆಗೆಯುವುದು; ಹಿಂದೆ ಮುಂದೆ ನೋಡುವುದು: "ನಾಚಿಕೆ, ಹೇಸಿಕೆ, ಸಂಕೋಚ, ಅಸಿಮಿಸಿ"(ಕಂನುಹು. ೮೬); ಸೇಡು ತೀರಿಸಿಕೊಳ್ಳಲಿಕ್ಕೆ ತಕ್ಕ ಸಮಯವು ಒದಗಿರುತ್ತದೆ ಅಂದ ಬಳಿಕ ಅಸಿಮಿಸಿಯೇಕೆ? (ಮಾಧವ. ೨೬). **ಅಸಮಿಸಿ**: ಏನಿಹೆನೋ ಅದೆ ಮಾಡಿರಿ ಜನನೀ ನಾನಿದಕಸಮಿಸಿಗೊಳ್ಳೆನು ಕರುಣೀ (ನನಲ್ಲ. ೯೬).

**ಅಸಿಮಿಸಿ ಅನ್ನು** = ಆಕ್ಷೇಪಿಸು; ತಕರಾರುಮಾಡು; ಹಿಂದೆಗೆ: ಹುಡುಗೀ ಇನ್ನಮ್ಯಾಲೆ ಅಸಿಮಿಸಿ ಅಂಬೂಹಾಂಗಿಲ್ಲಾ, ಹಾಂಗ ಹಾಕೇನಿ ಒಂಟೀ ಹಿಡತಾ (ಮಿಂಚಹು. ೮೯). **ಅಸಿಮಿಸಿನೋಡು**=ಸಂದೇಹಪಡು; ಹಿಂದೆಗೆ: ಈ ಪಿಂಡ ಭೂಮಿಗೆ ಬಿದ್ದೊಡನೆ, ರಾಧಾಕಕ್ಕಿ ಹೇಳಿದರೆಂದು ಅವಳು ಅಸಿಮಿಸಿನೋಡದೆ ತಲೆಯ ಹತ್ತಿರದ ಬಿಳಿಯ ಪೊರೆಯನ್ನು ನಖಾಗ್ರದಿಂದ ಸಲೀಲವಾಗಿ ಹರಿದು ಅರ್ಭಕ ಜೀವಜಗತ್ತಿನಲ್ಲಿ ಕಣ್ಣು ಬಿಡುವಂತೆ ಮಾಡಿದಳು (ದೀಪಹ. ೩). [?]

**ಅಸಿಮೊಗ** (ನಾ). (ಗಾತ್ರದಲ್ಲಿ) ಚಿಕ್ಕದಾಗಿರುವ ಮುಖ; ಸಣ್ಣ ಮುಖ: ಕಿಱುಗಿವಿ ದೇಸವೆತ್ತಸಿಮೊಗಂ ಸಘುರುಸ್ವನನಾಸಿಕಾಪುಟಂ... ಘನವಾಜಿಗಳ್ (ಚಿಕವಿ. ೨-೯೫). [ಅಸಿ$_5$ (< ಅಸಿದು) + ಮೊಗ$_2$]

**ಅಸಿಯ** 'ಅಸಿದು' ನೋ.

**ಅಸಿಯಜಂಘೆ** (ನಾ). ಸಣ್ಣದಾದ ಮಾನಖಂಡ: ಅಸಿಯಜಂಘೆ [ಪಾಠಾಂ. ಗೆ]ಯ ... ಗುಜ್ಜರಿಯರೊಪ್ಪಿದರು ಸಭೆಯೊಳಗೆ (ಕುವ್ಯಾಉ. ೮-೫೪). [ಅಸಿಯ (< ಅಸಿದು) + ಜಂಘೆ]

**ಅಸಿಯಡಿ** (ನಾ). ಚಿಕ್ಕದಾದ ಪಾದ; ಪುಟ್ಟ ಹೆಜ್ಜೆ: ತಳಿರಡಿಯ ಮೆಲ್ಲಡಿಯ ತಾವರೆಗಳಡಿಯ ಥಳಥಳಿಪ ಚೆನ್ನಡಿಗಳಸಿಯಡಿಯ ಲಲಿತಾಂಗಿಯರ್ (ಚಿಬಪು. ೩೭-೪೧). [ಅಸಿ$_5$ (< ಅಸಿದು) + ಅಡಿ$_1$]

**ಅಸಿಯದು** 'ಅಸಿದು' ಪರಾ.

**ಅಸಿಯನ್** 'ಅಸಿದು' ಪರಾ.

**ಅಸಿಯನಡು** (ನಾ). = ಅಸಿನಡು: ಅಸಿಯ ನಡು, ಪಸಿಯ ಬಣ್ಣಂ, ಬಿಳಿಯ ಕರ್ಬುಗೆ, ನಿಡಿಯ ನಾಲಗೆ (ಶಮುದ. ೧೬೮ ಪ್ರಯೋ); ಹರಿಣಧರನ ಪೊಲೊಳುಮೊಗಂಗಳ ಹರಿಯನಡುವಿಂದಸಿಯನಡುಗಳ ಸುರನದಿಯ ಸುಳಿಗಳಿಗೆಸೆವ ಗಂಭೀರನಾಭಿಗಳ (ಬಸವು. ೫-೨೪).
[ಅಸಿಯ (< ಅಸಿದು) + ನಡು$_2$]

**ಅಸಿಯನೂಲ್** (ನಾ). ತೆಳ್ಳಗಿರುವ ದಾರ; ಸೂಕ್ಷ್ಮವಾದ ದಾರ: ಬಿಳಿಯ ತಾವರೆಯೆಳಗಾವಿನಸಿಯನೂಲೊಳ್ ಕೋದ ತೋರಮಲ್ಲಿಗೆಯ ಬಿರಿಮುಗುಳ ಸರಿಗೆಯುಮಂ (ಪಂಪಭಾ. ೫-೬ ವ).
[ಅಸಿಯ (< ಅಸಿದು) + ನೂಲ್$_2$]

**ಅಸಿಯಪುರ್ವು** (ನಾ). ಚಿಕ್ಕದಾದ ಹುಬ್ಬು; ಸಣ್ಣದಾದ ಹುಬ್ಬು: ಸಮುಜದೆ ಕೊಂಕಿ ನೀಳ್ದಸಿಯಪುರ್ವುಗಳೆಚ್ಚದೆ ನಾಡೆಯುಂ ಬೆಡಂಗುಮರ್ದಸಿತಾಕ್ಷಿಯುಗ್ಮಮಡಿಯೂಡದೆ (ಕಾವ್ಯಾವ. ೭೩೭).
[ಅಸಿಯ (< ಅಸಿದು) + ಪುರ್ವು]

**ಅಸಿಯರೆ** (ಕ್ರಿ). ಸಣ್ಣನಾಗುವಂತೆ ಅರೆ; ನಯವಾಗಿ ಚೂರ್ಣಿಸು; ಪುಡಿಪುಡಿ ಮಾಡು: ಕಡುಮುನದ ಕೈಸೂಱೆಗಾಱರನಡಗೆಡಹಿದನು ಧುರದ ಗೆಲವಿಗೆ ಮಿಡುಕುವರನಸಿಯರೆದು ನೆಗ್ಗಿದನೇನನುಸುರುವೆನು (ಕುವ್ಯಾಭೀ. ೫-೨೩); ಪರಶುವಿನಿಂದೆ ಮುಸುಕಿ ಮುದ್ಗರದಿಂದಲಸಿಯರೆದು ಬಾಣಂಗಳಿಂದೆಚ್ಚು (ಚಿಬಪು. ೪೪-೩೨). [ಅಸಿ$_3$ + ಅರೆ$_1$]

**ಅಸಿಯಳ್** 'ಅಸಿದು' ಪರಾ.

**ಅಸಿಯಿಡು** (ಕ್ರಿ). ಅರೆಯುವ ಕಲ್ಲಿನ ಮೇಲಿಡು: ಅರರೆ ಮೃತ್ಯುವಿನ ಜಕೆಗೌಷಧವರೆವವೊಲು ರಿಪುಬಲವನಸಿಯಿಟ್ಟರೆದವಿಭ ಬರಿಕ್ಕೆಯ ಭಾರಿಯ ಲಾಳವುಂಡಿಗೆಯ (ಕುವ್ಯಾಭೀ. ೪-೮೦).
[ಅಸಿ$_4$ (< ಅಸುವೆ) + ಇಡು]

**ಅಸಿಯೇಱು** (ನಾ). ೧. ಕತ್ತಿಯ ಗಾಯ. ೨. ಖಡ್ಗಯುದ್ಧ. ೩. ವಂಚನೆ; ಮೋಸ: "ಅಭಿಚಾರೇಣ = ಬೇಳುವೆಯಸಿಯೆ[ೇ]ಱು ಮೊದಲಾದುವಱಿಂ (ಕಪಟದಿಂದ)" (ನೀತಿವಾ. ೨೫-೩೩); ಮನದೊಳ್ ನೀಂ ಮುಳಿದರನಱಿವನೊಸೆದರಂ ಕಾವನೆಂಬ ನಚ್ಚಿನ ಜವನುಂ ನಿನಗ ಮಸಿಯೇಱಿನವನಾದನೆ ತಮ್ಮನೆ ಪಿಡಿದ ಕೆಯ್ದುವುಂ ಪಾವಾಯ್ತೇ (ವರ್ಧಪು. ೯-೬೨). [ಅಸಿ$_8$ + ಏಱು$_2$]

**ಅಸಿಯೇಱುಕಾಱ** (ನಾ). ೧. ಖಡ್ಗಯುದ್ಧವನ್ನು ಮಾಡುವವನು. ೨. ವೇಷಧಾರಿ; ವಂಚಕ; ಮೋಸಗಾರ: "ಗೂಢಪುರುಷ = ಅಸಿಯೆ[ೇ]ಱುಕಾಱಂ" (ನೀತಿವಾ. ೨೪-೧೧೯). [ಅಸಿಯೇಱು + -ಕಾಱ]

**ಅಸಿಯೊಱೆ** (ನಾ). ಕತ್ತಿಯ ಚೀಲ; ಒರೆ. 'ಅಸಿಯೊಱೆದೆಗೆ' ಪರಾ. [ಅಸಿ$_8$ + ಒಱೆ$_3$]

**ಅಸಿಯೊಱೆದೆಗೆ** (ಕ್ರಿ). ಕತ್ತಿಯ ಒರೆಯನ್ನು ಕಳಚು; ಒರೆಯಿಂದ ಕತ್ತಿಯನ್ನು ಹಿರಿ: ಆ ವಧುವಿನ ಗೃಹಕೆಯ್ದಿ ಮುಸುಂಕಿದ ಧಾವಳ್ಯಾಂಬರಮಂ ತೆಗೆದಂ ಸ್ಮರನಸಿಯೊಱೆದೆಗೆವಂತೆ (ಜಯಕಾ. ೨-೪೨).
[ಅಸಿಯೊಱೆ + ತೆಗೆ$_1$]

**ಅಸಿರತ್ನ** (ನಾ). ಶ್ರೇಷ್ಠವಾದ ಕತ್ತಿ: ಅಸಿರತ್ನಂ ಚಕ್ರರತ್ನಂ ನವನಿಧಿಪಲವುಂ ವಿದ್ಯೆ ಕೈಸಾರ್ದುವುಳ್ಳಂಜಿಸಿದೆಂ ದಿಕ್ಪಾಲರಂ (ಪಂರಾಮಾ. ೯-೧೭೭). [ಅಸಿ$_8$ + ರತ್ನ]

**ಅಸಿಲತಾಧಾರೆ** (ನಾ). ಬಳ್ಳಿಯಂತೆ ಬಳುಕುವ ಕತ್ತಿಯ ಅಲಗು: ವೈರಿಭೂಪಾಳಕಜಾಳಸ್ವಾಂತಚಿಂತಾಭರಮನಸಿಲತಾಧಾರೆಯಿಂ... ಮಾಡಿ (ಚಂದ್ರಪು. ೪-೮೪). [ಸಂ. ಅಸಿಲತಾಧಾರಾ]

**ಅಸಿವಲಗೆವಿಡಿ** (ಕ್ರಿ). ಕತ್ತಿ, ಗುರಾಣಿ ಎಂಬ ಆಯುಧಗಳನ್ನು ಹಿಡಿ,—ಧರಿಸು: ಪಲ್ಮೊರೆಯುತಸಿವಲಗೆವಿಡಿದವನ ಮೇಲೆ ನಡೆಯಲ್ (ಜೈಮಿಭಾ. ೧೨-೩೩). [ಅಸಿ$_8$ + ಪಲಗೆ + ಪಿಡಿ$_1$]

**ಅಸಿವಸಿ** 'ಅಸವಸ' ನೋ.

**ಅಸಿವೆರಲ್** (ನಾ). ತೆಳುವಾದ ಬೆರಳು; ಕೋಮಲವಾದ ಬೆರಳು: ಅಸಿವೆರಲ್ಗಳೊಪ್ಪುವುಗುರ್ಗಳಿಂ (ಜೈಮಿಭಾ. ೧೮-೨೯).
[ಅಸಿ$_5$ (< ಅಸಿದು) + ಬೆರಲ್]

**ಅಸಿಹೇತಿ** (ನಾ). ಕತ್ತಿಯನ್ನು ಆಯುಧವಾಗಿ ಉಳ್ಳವನು; ಖಡ್ಗಪಾಣಿ (*). [ಅಸಿ$_8$ + ಹೇತಿ]

**ಅಸೀಮ** (ಗು). ಎಲ್ಲೆಯಿಲ್ಲದ; ತುಂಬ ಹೆಚ್ಚಾದ: ಒಂದು ತತ್ತ್ವಕ್ಕಾಗಿ ಹೋರಾಡಿ ಅಸೀಮ ಸಂಕಟಕ್ಕೊಳಗಾಗಿ ನಿರ್ಗತಿಕರಾದ ನೂರಾರು ಆಪ್ತಬಾಂಧವರ ಚಿತ್ರವು (ಕರವೀ. ೨೩೪). [ಸಂ.]

**ಅಸು$_1$** (ನಾ). ಆಕ್ರಮಿಸಿ ತೆಗೆದುಕೊಂಡದ್ದು; ಬಲಾತ್ಕಾರದಿಂದ ಕಿತ್ತುಕೊಂಡದ್ದು: "ಅಸುವೆಂದೊಡಂ ಸಲಂಗೊಂಡುದೆಂದೆನಿಸಲ್ಕೆಯಾಕ್ರಮಿಸಿಕೊಂಡುದಕ್ಕುಂ" (ಕಬ್ಬಿಕೈ. ೮೭). [?]

**ಅಸು₂** (ನಾ). ಶೀಘ್ರ; ಬೇಗ: "ಆಸು [ಪಾಠಾಂ. ಆಸು]ವೆಂದು ಶೀಘ್ರಂ" (ಶಮುದ. ಪರಿ. ೨). [< ಸಂ. ಆಶು]

**-ಅಸು₃** (ಪ್ರ). ಕೆಲವು ಎಕಾರಾಂತ ಧಾತುಗಳ ಮುಂದೆ ಪ್ರೇರಣಾರ್ಥದಲ್ಲಿ ಸೇರುವ ಪ್ರತ್ಯಯ. ಉದಾ: ಕರಸು, ನಡಸು.

**-ಅಸು₄** (ಪ್ರ). ಕೃದಂತಭಾವನಾಮ ಪ್ರತ್ಯಯ: "ಬಳೆಬೆಳೆತೋರ ವ್ಯಸೂ . . . ಬೆಳಸು, ಬೆಳಸುಗಳ್" (ಶಬ್ದಾನು. ೫೬೩ ಪ್ರಯೋ); ನಾಡ ಕಾಡ ಬೆಳಸಿಂ ಬೆಳಸಾ ವಿಷಯಾಂತರಾಳದೊಳ್ (ಪಂಪಭಾ. ೧–೫೪); ಓರಂತಿರೆ ಬೆಳಪ ಬೆಳಸು ಸುಖದುಃಖಂಗಳ್ (ಶಾಂತಿಪು. ೮–೧೪೧); ಬೆಳೆಯೆಂಬ ಧಾತುವಿನ ಭಾವವಚನಂ ಬೆಳೆಯೆಂದುಂ ಬೆಳಸೆಂದುಮಿರ್ಪುದು (ಶಮುದ. ೨೧೮ ವೃತ್ತಿ).

**ಅಸು₅** (ನಾ). **೧.** ಪ್ರಾಣ; ಜೀವ; ಉಸಿರು: "ಜೀವಿತವಸು ಪ್ರಾಣ ಜೀವವೆನೆ ಪ್ರಾಣವಕ್ಕು" (ಮಂಗರಾ. ೯–೨೯); ಮೆಯ್ಗಳೆರಡಾದೊಡ ಮೇನಸುವೊಂದೆ (ಆದಿಪು. ೩–೫). **೨.** ಮನಸ್ಸು; ಹೃದಯ.

**ಅಸುವೞಿಯಾಗು** = ಜೀವವಿಲ್ಲದಂತಾಗು; ಸತ್ತ್ವವಿಲ್ಲದಂತಾಗು: ಆದಿವರಾಹನೆತ್ತುವಂದಸುವೞಿಯಾದ ಸೇದೆ ತನಗಾಱಿದು ದೆಂಬಿನವೀಗಳಿಟ್ಟಪಳ್ ವಸುಮತಿ ವಿಕ್ರಮಾಭರಣ ಭೂಪನ ಭೂರಿಭುಜ ಪ್ರದೇಶದೊಳ್ (ಎಇ. XIII, ೪೩–೨೮ ; 1112); ಪೊಗಸಿನೊಳ್ ಮೊಗಸಿ ಬೈಗುವರೆಗಂ ಬೇಟೆವೆಸದಿನಸುವೞಿಯಾಗಿ ತಮ್ಮಿರ್ಕೆವೆಟ್ಟುಗಳ ಗುಹಾಶಯ್ಯೆಯಿಂದುಱೆ ಸನ್ನೆಗೆಯ್ದು (ಚಂದ್ರಪು. ೮–೪ ವ); ನೀಡುಮೆಸಗಿಯಸುವೞಿಯಾಗಿ ನಿರರ್ಥಕ ಪ್ರಯಾಸಂಬೆತ್ತು (ವರ್ಧಪು. ೧೫–೩೯ ವ). **ಅಸುವೊೞಿಯಾಗು** = ಜೀವಹೋಗು: ರೋಗದಿಂ ಪತ್ತೆಂಟುದಿವಸಕಸುವೊೞಿಯಾಗಿ ಬೇಗದಿಂ ರಜತಗಿರಿಗೈದಿದಂ (ಬಸರ. ೫–೧೪೯). [ಸಂ.]

**ಅಸು₆** 'ಅಸುವೆ' ನೋ.

**ಅಸುಂಗೊಳ್, ಅಸುಗೊಳ್** (ಕ್ರಿ). **೧.** ಪ್ರಾಣವನ್ನು ತೆಗೆ; ಕೊಲ್ಲು: "ಅಸುಂಗೊಳ್ – ಪ್ರಾಣಾಪಹರಣೇ" (ಶಮುಧಾ); ಇಱಿಯದೆ ಕೆಮ್ಮನಂತೆ ಭುವನಂಗಳಸುಂಗೊಳೆ ತಕ್ಕುದೆಂದೊಡೇಮಱುಕಮನೆಂಬುದೇ ನಿರಿದು (ಕಾವ್ಯಸಾ. ೪೧೧ ಶೂದ್ರಕ); ಅಪ್ರತಿಮಂ ಕೃತಾಂತ ಸದೃಶಂ ರಿಪುಸೇನೆಯನೊಟ್ಟಸುತ್ತು ನಿನ್ದೊಪ್ಪಭಟರ್ಕಳನ್ನಿಱಿದಸುಂಗೊಳೆ ಪೊಂದಿದ ಕೇಸವಯ್ಯನ್ (ಎಕ. III, ನಂಜನ. ೭೮–೧೭ ; 900); ಪೊಗಟಿದಿರ್ಪವೆ ಮೆಚ್ಚಿದಾಂತ ಚತುರ್ಬಲಂಗಳ ಮೆಯ್ಗಳೊಳ್ ಬಗಿದಸುಂಗೊಳೆ ಸುಯ್ದುಕೆತ್ತುವ ಪುಣ್ಣ ಬಾಯ್ಗಳೆ ಬೀರಮಂ (ಕಾವ್ಯಾವ. ೩೫); ಅಸುಂಗೊಂಡಂ, ಅಸುಗೊಂಡಂ, ನಿನ್ನಸುಂಗೊಂಡೊಡೆ ದೋಷಮಾದುದೆ (ಶಮುದ. ೧೬೭ ಪ್ರಯೋ). **೨.** ಹೆದರು; ಭಯಗೊಳ್ಳು; ಗಾಬರಿಯಾಗು: ಜಕ್ಕವಕ್ಕಿಗಳ್ ಸುರತ ಮಕರಧ್ವಜನ ಸುಭದ್ರೆಯ ವಿರಹಪರಿತಾಪಮಂ ಪಚ್ಚುಗೊಂಡಸುಂಗೊಂಡಗಲೆ (ಪಂಪಭಾ. ೪–೪೮ ವ); ನಭಸ್ಥಳದೊಳಾದುದುಳ್ಕಾಪಾತಂ, ಅದಂ ಕಂಡು ಅಸುಂಗೊಂಡು (ಅಜಿಪು. ೬–೪೬ ವ); ರಿಪುಭೂಪರೀ ನಿಕಟಪ್ರದೇಶದೊಳ್ ಸಾಹಸತುಂಗನಾ ಪುರಮಸುಂಗೊಳೆ ಬಿಟ್ಟರಲ್ (ನೇಮಿಪು. ೭–೧೨೮). **೩.** ಬೆರಗಾಗು; ಆಶ್ಚರ್ಯಪಡು: ಗಂಗಾವಾರ್ಧಿಯೊಳಾತ್ಮತುರಂಗಮಮಂ ಮಿಸಿಸಿ ನೆಗಟ್ದ ಡಾಳಪ್ರಿಯನೊಳ್ ಸಂಗತ ಗುಣನಸಿಲತೆಯನಸುಂಗೊಳೆ ಭುಜವಿಜಯ ಗರ್ವದಿಂ ಸ್ಥಾಪಿಸಿದಂ (ಪಂಪಭಾ. ೧–೩೮); "ಶಕ್ತಿಗುಂದಿಸು" (ಪಂಪಭಾ. ಕೋಶ); ಉಚ್ಚಂಗಿಯ ಕೋಟೆಯುಂ ಜಗಮುಸುಂಗೊಳೆ ಕೊಂಡ ನೆಗಟ್ತಿ (ಎಇ. V, ೧೭೮–೯೪ ; 1088); ಭುವನೈಕಮಲ್ಲನಂ ಭೂಭುವನಮುಸುಂಗೊಳೆ ಮರಳ್ಚಿ ರಾಜ್ಯಮನಧಿಕೋತ್ಸವದಿಂ ತ್ರಿಭುವನಮಲ್ಲಂಗವಯವದಿಂ ಕೊಣ್ಡು ಕೊಟ್ಟ ಗಣ್ಡಂ ಪಾಣ್ಡ್ಯ (ಎಕ. V, ಅರಸೀ. ೧೦೨–೪೪ ; 1100). "ಅಸುಂಗೊಳೆ = ಬೆರಗಾಗಲು" (ಶಾಪಮಂ. ಕೋಶ).

**ಅಸುಗೊಳ್**: **೧.** ಅಸುಂಗೊಂಡಂ, ಅಸುಗೊಂಡಂ (ಶಮುದ. ೧೬೭ ಪ್ರಯೋ); ಈ ದುರುಳ ನೈಶಾಟರಸುಗೊಳಲ್ಯೆದಿಬರುತಿಹರೆಂದು ಬಹಮಾಯಾದುರಾತ್ಮನ ಕಂಡು ಮುನಿ ಕಾಕುತ್ಸ್ಥಗಿಂತೆಂದ (ತೊರರಾ. ೧–೧೧–೧೯). **೪.** ಮನವನ್ನು ಅಪಹರಿಸು, —ಕದಿ: ಮುದ್ದುವೆಣ್ಣಗೆ ಪೇಳಿದಳು ನಿನ್ನ ಬಿಟ್ಟು ಕಾಲೆದ್ದು ಪೋಪನೆ ಪೋಪುದಿಲ್ಲ ಗೆದ್ದು ನಿನ್ನಸುಗೊಂಡು ಪೋದಾಳ್ದನ ತರದಿದ್ದು ಮಾಡುವುದೇನು ಮಗಳೆ (ಮೋಹತ. ೨೯–೩). [ಅಸು₅ + ಕೊಳ್₁]

**ಅಸುಂಗೊಳಿಸು, ಅಸುಗೊಳಿಸು** (ಕ್ರಿ). **೧.** ಪ್ರಾಣವನ್ನು ತೆಗೆಯಿಸು; ಕೊಲ್ಲಿಸು. **೨.** ಹೆದರಿ ನಡುಗುವಂತೆ ಮಾಡು; ಭಯಪಡಿಸು; ಗಾಬರಿಗೊಳಿಸು: ಆಂತಾ ಕೂಸುಗಳ್ ನಿಜಜನನೀಜನಕರ ಮನಮನಿಱುಕಿಗೊಳಿಸಿಯುಮರಾತಿಜನಂಗಳ ಮನಮನಸುಂಗೊಳಿಸಿಯುಂ ಬಳೆಯೆ ಬಳೆಯೆ (ಪಂಪಭಾ. ೨–೧೧ ವ); ಈತನೋಲಗಂಗೊಟ್ಟರೆ ಸಪ್ತಾಂಗದ ರಾಜ್ಯದ ತೇಜಮುಸುಂಗೊಳಿಸುವುದನ್ಯಮಂಡಲಾಧೀಶ್ವರರಂ (ಶಾಂತಿಪು. ೫–೧೨೮). **೩.** ಆಶ್ಚರ್ಯಪಡಿಸು; ಬೆರಗಾಗಿಸು: ದಿವ್ಯಾಸ್ತ್ರಮುಮರ್ದ ಕೋದಂಡಮುಸುಂಗೊಳಿಸೆ ಭಯಂಗೊಳಿಸೆ ಸಭಾಸದರನುಜದೆ ಕರ್ಣಂ ಬಂದಂ (ಪಂಪಭಾ. ೨–೭೮); ತ್ರಿಣೇತ್ರನುಮನಸುಂಗೊಳಿಸಿದ ಸಾಹಸದೊಳ್ ಕದನತ್ರಿಣೇತ್ರನುಂ (ಪಂಪಭಾ. ೧೪–೩೭ ವ). **ಅಸುಗೊಳಿಸು**: **೧.** ಖಳರ ಶೀಲಾಚಾರವ ನಂಬಿ ಮೆಯ್ಮಱೆದೊಳಗಾಗೆ ಕೇಡಾಗದಿರದು ಹುಲಿಯುಪವಾಸ ಪಶುಗಳ ನೆರವಿಯಸುಗೊಳಿಸದೆ ಸುಮ್ಮನಿರ್ದಪುದೆ (ಕುರಾಸಾಂ. ೧–೫೬).
[ಅಸುಂಗೊಳ್ + -ಇಸು₃]

**ಅಸುಂದೊಱೆ, ಅಸುದೊಱೆ** (ಕ್ರಿ). ಪ್ರಾಣವನ್ನು ಬಿಡು; ಜೀವವನ್ನು ತೊರೆ: ಮುಕ್ಕಿದರ್ ಕೊಱೆದರಱೆದರ್ ಕೊಂದರಂದಗೆಡಿಸಿದರಸುಂದೊಱೆವಿನಂ ಬಾಯ್ಗಳಂ ತೆಱೆವಿನಂ ಮೆಯ್ಗಳಂ ಮಱೆವಿನಂ ಸುರರಸುರರ (ಚಿಬಪು. ೨೧–೨೦). **ಅಸುದೊಱೆ**: ತಂದೆಗೋಸುಗ ಮಾಳ್ಪನವಸರಕೆ ಗೋನಿಮಿತ್ತಂ ದೇವವಿಪ್ರಾರ್ಥಕಸುದೊಱೆದೊಡಾತಂಗೆ ಸಂದೇಹಮಿಲ್ಲದಾದಪುದು ಗಡ ಕೈವಲ್ಯಂ (ಜೈಮಿಭಾ. ೨೩–೧೧).
[ಅಸು₅ + ತೊಱೆ₁]

**ಅಸುಂಬು, ಅಸುಬು** (ಕ್ರಿ). ಅಲ್ಲಾಡಿಸು: "ಅಸುಂಬು – ಸಂಚಾಲನೇ (ಅಲ್ಲಾಡಿಸು)" (ಶಮುಧಾ); ನಿತ್ಯಬಿಂದುಗೆ – ಬೆಡಂಗು . . . ಅಸುಂಬಿದಂ, ಕರಂಡಗೆ (ಶಮುದ. ೩೬ ಪ್ರಯೋ). **ಅಸುಬು**: ಭರವಸದಿಂದ ಸಂಜೀವಿನಿಯ ತಂದು ಅಸುಬಿ ವಾನರರಿಗೋಸುಗ ಗಿರಿಯನೆತ್ತಿ ಚಿಮ್ಮಿಸಿ ನೆಲಕೆ ನಿಲಿಸಿದನೀ ಹನುಮಂತ (ಪುರಂದ. ೨–೬೭–೮).
[**ದೇ.** ‖ ತಮಿ. ಅಶಙ್ಕು, ಅಶಕ್ಕು, ಅಯಕ್ಕು; **ಮಲ.** ಅಯಕ, ಅಯೆಕ = ಕಳಿಸು, ಬಿಟ್ಟುಬಿಡು, ಸಡಿಲಮಾಡು; **ಕೊಡ.** ಅಯ್ = ಕಳಿಸು; **ತೆಲು.** ಅಸಿಯಾಡು = ಚಲಿಸು, ನಡುಗು, ನೇತಾಡು; **ಕುರುಖ್.** ಅಸ್ರ್ನಾ = ನಡುಗು]

**ಅಸುಕೆ** 'ಅಸುಗೆ' ನೋ.

**ಅಸುಖ** (ಗು). **೧.** ಸುಖವಿಲ್ಲದ. (ನಾ). **೨.** ಸುಖವಲ್ಲದ್ದು; ದುಃಖ. [ಸಂ.]

**ಅಸುಖಕರ** (ನಾ). ಹಿತವಲ್ಲದ್ದು; ಅಹಿತ; ಕ್ಲೇಶವನ್ನುಂಟುಮಾಡುವಂಥದು: ಕೂಸಿನ ತಲೆಯೊಳ್ಬೆಣ್ಪೊಱೆಯನಿಟ್ಟವೋಲಸುಖಕರಂ (ಕವಿರಾ. ೨–೬). [ಸಂ.]

**ಅಸುಗತಿ** (ನಾ). ದುರ್ಗತಿ; ಕೀಳುಗತಿ: ಪಾವನವಾದುದನು ಲಿಂಗಕ್ಕೆ ಮಾಡುವುದೆ ಆಚಾರ ವಿಷಯಕ್ಕೆ ಇಕ್ಕಿ ಅಸು[ಪಾಠಾಂ. ಅಧೋ]ಗತಿಗಿಳಿಯದಿರಿ (ಬಸವ. ೬೩೦). [ಸಂ.]

**ಅಸುಗಳೆ** (ಕ್ರಿ). ಜೀವಬಿಡು ; ಪ್ರಾಣತ್ಯಾಗಮಾಡು : ತನ್ನನುವಿಂಗೆ ಕೊರತೆಬರೆಯಸುಗಳೆವೆನೆಂಬ ನಿಶ್ಚೈಯಸಾಂತು (ಪದ್ಮರಾ. ೨-೩೭) ; ಪೊರೆಯೊಳಸುಗಳೆದಿರ್ದ ವೇಶ್ಯೆಗಂ ಪರಣಮ್ಯೆತಂದುದು (ಚಿ ಬ ಪು. ೬-೩೩). [ಅಸು$_5$ + ಕಳೆ$_1$]

**ಅಸುಗಾವಲು** (ನಾ). ಪ್ರಾಣರಕ್ಷಣೆ; ಜೀವವನ್ನು ಕಾಯುವುದು (ಕಿ). [ಅಸು$_5$ + ಕಾವಲು (< ಕಾವಲ್)]

**ಅಸುಗುಡಿ** (ಕ್ರಿ). ಪ್ರಾಣವನ್ನು ಹೀರು ; ಸಾಯಿಸು : ಪಿಡಿವ ಪುಲಿ ಕರಡಿ ಬಾಯ್ವಿಡುವ ಭೂತಂಗಳಸುಗುಡಿವ ಪಾವುಗಳಟ್ಟಸುಡುವ ಕಾಳ್ಕಿಚ್ಚು (ಜೈಮಿಭಾ. ೪-೨೩). [ಅಸು$_5$ + ಕುಡಿ$_1$]

**ಅಸುಗೆ, ಅಸುಕೆ** (ನಾ). ಅಶೋಕವೃಕ್ಷ: "ಅಸುಗೆ ಕಂಕೆಲ್ಲಿ ತಾನಶೋಕಾಖ್ಯಯಂ" (ವಸ್ತುಕೋ. ೩೩-೧) ; ಪುಗಲೆನ್ನದೆ ದಲ್ ಪುಗಿಮೆಂದು ಮೆಲ್ಪುಗುಂದದ ದನಿಯಿಂ ತಳಿರ್ತಸುಗೆಯೊಳ್ ನೆಲಸಿರ್ದ ಪಿಕಾಳಿ ಮೆಲ್ಲನೂಳ್ದುದು (ಪಂಪಭಾ. ೧೪-೧೨) ; ಕಿಸಲಯದಿನಸುಗೆಯಸದಳ ಮೆಸೆಗುಂ (ಕುಸುಮಾ. ೫-೪೦) ; ಕೆಂಪಾದಸುಗೆಯ ತಳಿರಂ (ಕಬ್ಬಿಕಾ. ೮೮). **ಅಸುಕೆ**: ಅಸುಕೆಯ ಕೆಂಪು ಪಾದರಿಯ ಕಂಪು (ಸುಕುಮಾ. ೯-೪೮) ; ಕುಸುಮಕಿಸಲಯಮೆ ಲೋಕಕ್ಕೆಸೆವುತ್ತಂ ಸಾವತಂಸಮೆನೆ ಸಾಲದೆ ಸಂದಸುಕೆಗೆ ನಿಸ್ಸಾರಫಲಪ್ರಸೂತಿ ಮತ್ತಂತದಾದೊಡೇನಾಗದೊಡೇಂ (ಕಾವ್ಯಾವ. ೮೭೦); ಹೀಲಿಗಳನೊಲಿದುಟ್ಟು ತಳಿರಿನ ಮೇಲುದಿಟ್ಟು ಸುಕೆಗಳ ಮೊಲ್ಲೆಯ ಮಾಲೆಗಳ ತಲೆಸೂಡಿ (ಸಾಳ್ವಭಾ. ೫-೮).
[< ಸಂ. ಅಶೋಕ]

**ಅಸುಗೆಡು** (ಕ್ರಿ). ಸತ್ತ್ವಕುಗ್ಗು : ಮಸೆದಸಿಯ ಪಂಜರದೊಳಿನ್ನೆಗ ಮಸುಗೆಡುತಮಿರ್ದುಗ್ರಸೇನನನೆಸೆವ ಪದ್ಮಾವತಿಯ ಬಂಧನವನು ಕಳೆದು (ಸಾಳ್ವಭಾ. ೧೨-೭೮). [ಅಸು$_5$ + ಕೆಡು]

**ಅಸುಗೆದಳಿರ್** (ನಾ). ಅಶೋಕವೃಕ್ಷದ ಚಿಗುರು : ಬಾಸುಟ ತಳ್ಪ ಶೋಕಶಿಖಿಯಂ ಕಟಿಲ್ಗಲೆಂದೊಟ್ಟದಸುಗೆದಳಿರಂ ಪೋಲ್ಕುಂ (ಕಾವ್ಯಾವ. ೨೦೧) ; ಘುಸೃಣರಸದಿನಸುಗೆದಳಿರಂ ತೊಯ್ವಂತೆ (ಚಂದ್ರಪು. ೬-೬೩ ವ); ಸುರಯಿಯರಲ ಪರಾಗದ ಪೊಂಜಗಲಿಯ ಮೇಲಣಸುಗೆದಳಿರಲರ್ವಾಸಿನೊಳ್ (ರಾಜಶೇ. ೧೦-೩೧ ವ). [ಅಸುಗೆ + ತಳಿರ್$_2$]

**ಅಸುಗೆನನೆ** (ನಾ). ಅಶೋಕೆಯ ಮೊಗ್ಗು, —ಹೂವು : ಅಸುಗೆನನೆಗಳ ನಿಮಿರ್ದು ಬಳಸಿದೆಳವಳ್ಳಿಗಳೆವೆಂಬಿನಂ ಸೊಗಸೆಸೆಯಲ್ ಪಸುರ್ವಣಿಯುಂಗ[ಗು]ರಗಳನೊಲ್ದಸಿಯಳ ಕರಶಾಖೆಗಳ್ಗಮರ್ಚಿದಳೊರ್ವಳ್ (ಉದ್ಭಟ. ೮-೩೭). [ಅಸುಗೆ + ನನೆ$_3$]

**ಅಸುಗೊಳ್** 'ಅಸುಂಗೊಳ್' ನೋ.

**ಅಸುಗೊಳಿಸು** 'ಅಸುಂಗೊಳಿಸು' ನೋ.

**ಅಸುಗೊಳ್ಳು** 'ಅಸಗೊಳ್ಳು' ನೋ.

**ಅಸುತ** (ನಾ). ಮಕ್ಕಳಿಲ್ಲದವನು : ಇನಜಂ . . . ಒಂದಿ ನಿಲೆ ಸೌಮ್ಯ ಕ್ಷೇತ್ರದೊಳ್ ದುಃಖಿತಂ ಧನಹೀನಂ ಸ್ಖಲಿತಾಂತರಂಗನಸುತಂ ನಿರ್ಲಜ್ಜಕಂ ರಕ್ಷಕಂ (ಜಾತತಿ. ೧೭-೩೨). [ಸಂ.]

**ಅಸುದೆಗೆ** (ಕ್ರಿ). = ಅಸುಂಗೊಳ್ ೧ : ಪರರಸುದೆಗೆವುದೆ ಕುಲಧರ್ಮವಾಗಿರಲವನಿಗಿನ್ನುಪದೇಶವೇಕೆ (ಇಂಚಾಪ. ೨೧೭-೭೧). [ಅಸು$_5$ + ತೆಗೆ$_1$]

**ಅಸುದೊಱೆ** 'ಅಸುಂದೊಱೆ' ನೋ.

**ಅಸುಧಾರಣೆ** (ನಾ). ಪ್ರಾಣಧಾರಣೆ; ಜೀವವನ್ನು ಹಿಡಿದಿರುವುದು ; ಬದುಕುವುದು. [ಅಸು$_5$ + ಧಾರಣೆ]

**ಅಸುನೆಜ** (ನಾ). ನಯವಾದ ಅಥವಾ ಕೋಮಲವಾದ ದೇಹವುಳ್ಳವನು (?) : ಬಾಳಂ ಬಾಳಮೃಣಾಳದಂತಸುನೆಜಂ ದುಗ್ಧಪ್ಲವಂ ಸ್ಥೂಳ ಕಲ್ಲೋಳಿಸಾಪ್ಲಾಳಿತ ಹೇಮಶೈಲಮಿದನಿನ್ನೇವಣ್ಣಿದಂ ಶಕ್ರನೆಂಬಾಳೋಚಂಬೆರಸಿರ್ಪ ದೇವಗಣಮಂ (ಆದಿಪು. ೬-೯೧). ℙ ಈ ಶಬ್ದ 'ಅಸಿನೆಜ' ಎಂಬುದರ ಅಪಲಿಖಿತವಿರಬಹುದೆ ?
[ಅಸಿ$_6$ ? + ನೆಜ. ℙ ತಮಿ. ನಿಜಂ = ಶರೀರ]

**ಅಸುಬು** 'ಅಸುಂಬು' ನೋ.

**ಅಸುಭೃದ್ವರ್ಗ** (ನಾ). ಪ್ರಾಣಿಸಮೂಹ; ಜೀವಕೋಟಿ: ಅಸುಭೃದ್ವರ್ಗಕ್ಕೆ ಸೀಮಾಗಳುಂ ಕಾರುಣ್ಯಾನ್ವಿತಚಿತ್ತರಾಗಿಂ (ಜೀವಸಂ. ೯-೩೪). [ಸಂ. (ಅಸು$_5$ + ಭೃತ್ + ವರ್ಗ)]

**ಅಸುಮೋಕ್ಷ** (ನಾ). ಪ್ರಾಣವಿಯೋಗ ; ಸಾವು : ಕೆಳೆಯಂಗಾಯ್ತು ಸುಮೋಕ್ಷಮಾಗದೆನಗಂ ಬಾಷ್ಪಾಂಬುಮೋಕ್ಷಂ (ಗದಾಯು. ೫-೩೧).
[ಅಸು$_5$ + ಮೋಕ್ಷ]

**ಅಸುರ್** (ಕ್ರಿ). ೧. ಅಸಹ್ಯಪಡು ; ಸಹಿಸಲಾರದೆ ಹೋಗು ; ಬೇಸರಗೊಳ್ಳು : "ಅಸುರ್ – ಅಸಹ್ಯಭಾವೇ" (ಶಮದ). ೨. ಬಳಲು ; ಆಯಾಸಗೊಳ್ಳು.
[ದೇ. ‖ ತಮಿ. ಅಶರ್, ಅಯರ್ = ಬಳಲು ; ಮಲ. ಅಯರ್ = ಪ್ರಜ್ಞೆತಪ್ಪು]

**ಅಸುರ** (ನಾ). ೧. ರಾಕ್ಷಸ ; ದೈತ್ಯ : "ಅಸುರಃ, ದಾನವಃ . . . –ಈ ೮ ಅಸುರರ ಪೆಸರ್" (ಹಲಾಯು. ೨-೫) ; "ಜುಕ್ಕಿಗುವರರು ರಕ್ಕಸರು ಮಬ್ಬಿಗರುಯೆನಲ್ಕೆ ಅಸುರಾಭಿಧಾನದೊಳ್ ಸಲೆ ತೋರ್ಪುದು" (ಶಬ್ದಮಂ. ೧೧). ೨. ಸೂರ್ಯ. ೩. ಪರಮಾತ್ಮ. [ಸಂ.]

**ಅಸುರಗುರು** (ನಾ). ರಾಕ್ಷಸರ ಗುರು ; ಶುಕ್ರಾಚಾರ್ಯ : "ಅಸುರಗುರುವೆಂದೆನಲು ಶುಕ್ರಂ" (ಮಂಗರಾ. ೧೨-೬) ; "ರಕ್ಕಸರೋಜ ಜುಕ್ಕಿಯೆನಲೂ ಕಂಗೊಳಿಕುಮಸುರಗುರುವಿನೊಳು" (ಶಬ್ದಮಂ. ೧೮).
[ಅಸುರ + ಗುರು]

**ಅಸುರಧೂಳೀಪಟ** (ನಾ). ರಾಕ್ಷಸರನ್ನು ನಾಶಮಾಡುವವನು ; ವಿಷ್ಣು ; ಕೃಷ್ಣ : ಘನಮೋಹರದ ಮಧ್ಯದೊಳಸುರಧೂಳೀಪಟನು ಹೊಱವಂಟ (ಕುವ್ಯಾಉ. ೧೧-೩೭).
[ಅಸುರ + ಧೂಳೀಪಟ (= ಧೂಲೀಪಟ)]

**ಅಸುರಬಲಿ** (ನಾ). ದೈತ್ಯನಿಗೆ ಸಲ್ಲಿಸುವ ಆಹಾರ : ಮತಿಯುಳ್ಳೊಡಿವನಸುರಬಲಿಗೊದಗಿಸಿದ ಕೂಳನತಿಮಹೋದರಕಡಸಿಕೊಂಬನೇ (ಜೈಮಿಭಾ. ೨-೫೮). [ಅಸುರ + ಬಲಿ$_2$]

**ಅಸುರರಿಪು** (ನಾ). ರಾಕ್ಷಸರ ಶತ್ರು ; ವಿಷ್ಣು ; ಕೃಷ್ಣ : ಪರಮಾರ್ಥಂ ನಿಮ್ಮ ಸಮ್ಯಕ್ ಪರತರ ನಿಜಮುಂ ಭಾವಿಸಲ್ ಬಣ್ಣಿಸಲ್ ತಾಮರಸೋದ್ಭೂತಂಗೆ ಶಕ್ರಂಗಸುರರಿಪುಗೆ ವೇದಕ್ಕತರ್ಕ್ಕಗಂ (ರತ್ನಾಶ. ೮೨) ; ಕೆಂಗಱಿಯ ಮಱಿದುಂಬಿ ತಾವರೆಗಂಗವಿಸುವವೊಲಸುರರಿಪುವಿನ ಮಂಗಳಾನನ ಕಮಲದಲಿ ಶರವಾಳಿ ಗಱಿಗಡಿಯೆ (ಕುವ್ಯಾಭೀ. ೬-೨೫).
[ಅಸುರ + ರಿಪು]

**ಅಸುರವಿಜಯಿ** (ನಾ). ೧. ವಿಷ್ಣು. ೨. [ಜೈನ] ಮೂರು ಬಗೆಯ ಅರಸುಗಳಲ್ಲಿ ಒಬ್ಬ ; ನೀಚಸ್ವಭಾವದ ಅರಸು : ಅರ್ಥವಿಜಯಿಯುಮಸುರವಿಜಯಿಯುಂ ಧರ್ಮವಿಜಯಿಯುಮೆಂದರಸುಗಳ್ ಮೂವರಪ್ಪರ್ (ಕಗವಿ. ೪೮-೧೯ ಚಾವುಂಪು). [ಸಂ. ಅಸುರವಿಜಯಿನ್]

**ಅಸುರವಿರೋಧಿ** (ನಾ). = ಅಸುರರಿಪು : ಕುಂತೀಸೂನುವನು ಬೆಸಗೊಂಡನಸುರವಿರೋಧಿ (ಕುವ್ಯಾಉ. ೬-೩). [ಸಂ. ಅಸುರವಿರೋಧಿನ್]

**ಅಸುರವೈರಿ** (ನಾ). = ಅಸುರರಿಪು : ಪಿಡಿದವರಸುರವೈರಿಯನೊಡಂಬಡಿಂ (ಪಂಪಭಾ. ೧೦-೮). [ಅಸುರ + ವೈರಿ]

**ಅಸುರಹರ** (ನಾ). ದೈತ್ಯರನ್ನು ಸಂಹರಿಸುವವನು ; ವಿಷ್ಣು.
[ಅಸುರ + ಹರ$_1$]

**ಅಸುರಾಂತಕ** (ನಾ). = ಅಸುರಹರ : ಅಸುರಾಂತಕನಾಮುಮುದಂದು ಸಾರ್ಥಕಂ (ಜಗಪಿ. ೧-೭೩) ; ಆ ಶಿರವನಸುರಾಂತಕಂ ಮೈದುನಂಗುಚಿ ತೋಜಿ ಹಂಸಧ್ವಜನ ಮುಂದಕಿಡಲ್ (ಜೈಮಿಭಾ. ೧೩-೫೨).
[ಅಸುರ + ಅಂತಕ]

**ಅಸುರಾಮಾತ್ಯ** (ನಾ). ದೈತ್ಯರ ಮಂತ್ರಿ ; ಶುಕ್ರಾಚಾರ್ಯ : ಹಿಮಧಾಮಂ . . . ಅಸುರಾಮಾತ್ಯನಿಂದಂ ಚತುಸ್ಸಪ್ತಮ ಕರ್ಮಾಯ ತ್ರಿಧರ್ಮಾತ್ಮಜನೊಳ್ . . . ಅತಿಶುಭದಂ (ಜಾತತಿ. ೧೦-೪).
[ಅಸುರ + ಅಮಾತ್ಯ]

**ಅಸುರಾರಾತಿ** (ನಾ). = ಅಸುರರಿಪು : ಆನೆಯಿಂದಿಳಿಗಿಳಿದು ಬಿಜಯಂಗೈದನಸುರಾರಾತಿ ಕರುಣದಲಿ (ಕುವ್ಯಾವಿ. ೧೦-೫೧).
[ಅಸುರ + ಅರಾತಿ]

**ಅಸುರಾರಿ** (ನಾ). = ಅಸುರರಿಪು : ನಿಖಿಳಯಾದವಜಾಲ ಪಯಣವ ಮಾಡಲೆಂದಸುರಾರಿ ನೇಮಿಸಿದ (ಕುವ್ಯಾವಿ. ೧೦-೪೨). [ಅಸುರ + ಅರಿ$_6$]

**ಅಸುರಾವಾಸ** (ನಾ). ಅಸುರರ ವಾಸಸ್ಥಾನ ; ದೈತ್ಯರ ನೆಲೆ : ಪಂಚಾಣೂತ್ತರೆಯಿಂದಮಿತ್ತಲಸುರಾವಾಸಂಬರಂ ಹೀನಮಕ್ಕುಂ (ಮಲ್ಲಿಪು. ೧೩-೧೨೨). [ಅಸುರ + ಆವಾಸ]

**ಅಸುರಿ** (ನಾ). ೧. ರಾಕ್ಷಸಿ ; ದೈತ್ಯರ ಹೆಂಗಸು. ೨. "ಕರಿಸಾಸವೆ" (ಅಮರ. ಟೀಕೆ). [ಸಂ. ಆಸುರೀ]

**ಅಸುರುಸುರು** (ನಾ). ದಣಿವಿನಿಂದಾಗುವ ಉಸುರು ; ಆಯಾಸ; ನಿಶ್ಶಕ್ತಿ. 'ಅಸುರುಸುರುಗೊಳ್' ಪರಾ. [← ತೆಲು. ಅಸುರುಸುರು]

**ಅಸುರುಸುರುಗೊಳ್** (ಕ್ರಿ). ಆಯಾಸಗೊಳ್ಳು ; ದಣಿವನ್ನು ಹೊಂದು ; ಶ್ರಮದಿಂದ ಏದು : ಜಾಂಬವನ ಕಾಣ್ಬೆನೆಂಬಾ ಎಸಕದಿಂ ದೈತರಲ್ಕಡಿದುಡಿದ ಪದಗಳಿಂ ಮುಸುಕಿದಂಬಿನ ಸಮುದಯಂಗಳೊಳ್ಪೊಕ್ಕಿಯಂತಸುರುಸುರುಗೊಳುತ ಕಂಗೊಂಡುದಂ (ವೆಂಕಾರಾ. ೬-೩೪-೪೪).
[ಅಸುರುಸುರು + ಕೊಳ್$_1$]

**ಅಸುರೆ** (ನಾ). ೧. ರಾಕ್ಷಸಿ : ಹೇವರಿಸದಸುರೆಯಸುವೀಂಟಿದವರಾರೊ (ಜೈಮಿಭಾ. ೨-೬೧). ೨. ಕೋಳಿಕುಟುಮನ ಗಿಡ ; ಹಾಲ್ಗಂಚಿ ಗಿಡ : "ಕೋಳಿಕುಟುಂಬಮೆಂದೆನಕ್ಕ[ಲ್ಕ]ಸುರೆ ಪಾಲ್ಗಂಚಿ [ಪಾಠಾಂ. ಪಾಲ್ಕಂಚಿ, ಪಾಲಂಜಿ]ಯಕ್ಕುಂ" (ಮಂಗರಾ. ಕಿ. ೪೦-೩೦).
[ಸಂ. ಆಸುರೀ]

**ಅಸುರೇಂದ್ರ** (ನಾ). ರಾಕ್ಷಸರಾಜ; ರಾಕ್ಷಸರ ಅಧಿಪತಿ,—ಒಡೆಯ : ಅಸುರೇಂದ್ರನಳ್ಕಿ ಬೆಳ್ಕುತ್ತಿರದೆ . . . ನಿಜವಿಮಾನದೊಳಗಂ ಪೊಕ್ಕಂ (ಶಾಂತಿಪು. ೮-೫೨). [ಅಸುರ + ಇಂದ್ರ]

**ಅಸುವಡೆ** (ಕ್ರಿ). ಪ್ರಾಣವನ್ನು ಪಡೆ ; ಚೈತನ್ಯವನ್ನು ಹೊಂದು : ದೇವ ರಾಮನ ಕಟಕ ಮೃತಸಂಜೀವಿನಿಯಲಸುವಡೆದ ಬಳಿಕ ವಿಭಾವರಿಯೊಳಂದಾಯ್ತು ಲಂಕಾಪುರ ಪುನರ್ದಹನ (ತೊರರಾ. ೬-೩೭ ಸೂ).
[ಅಸು$_5$ + ಪಡೆ$_1$]

**ಅಸುವಡ್ಡಿ** (ನಾ). ಒಂದು ಊರಿನ ಹೆಸರು (?) : ಪಿರಿಯ ಪಾಗವಡ್ಡಿಯೊಳಸುವಡ್ಡಿಯೂರಿಂಗೆ ಕದ ×× ಣ ಗದ್ಯಾವಿಪ್ಪತ್ತೆರಡು ಅಂಕದೊಳು (ಸೌಇಇ. XV, ೧-೨೩ ; 1059). [?]

**ಅಸುವಳಿ** 'ಅಸುವೞಿ' ನೋ.

**ಅಸುವಳಿಸು** (ಕ್ರಿ). ಪ್ರಾಣಹೋಗಿಸು ; ಜೀವಕ್ಕೆ ಹಾನಿಯನ್ನುಂಟು ಮಾಡು : ಅಸಿಯುಳಸಿಯು ಬೆಳ್ಪಾಂತಿರ್ಪ ಮೈಗೊಂಚಲಿಂ ಛೇದಿಸಿದ ಕಿಸಲಯಂಬೊಲ್ ಕೋಮಲಂ ಬಾಡುತಿರ್ಕುಂ ಅಸುವಳಿಸುವಳಲ್ಲ ತ್ಯುಗ್ರಕಂ ಮಾಗಿ ನೇಸರ್ ಬಿಸಿಗೆ ಬಳಲುವಂತಾ ಕೇತಕೀಗರ್ಭಪತ್ರಂ (ಉರಾಚ. ೪೪). [ಅಸುವಳಿ (< ಅಸುವೞಿ) + -ಇಸು$_3$]

**ಅಸುವೞಿ**, ಅಸುವಳಿ (ಕ್ರಿ). ಪ್ರಾಣಹೋಗು ; ಜೀವಬಿಡು : "ಅಸುವೞಿದುದರ್ಕೆಯುಂ ಸೊಪ್ಪಾದುದರ್ಕೆಯುಂ ಪೆಸರಟ್ಟಿತೆನಿಸುಗುಂ" (ಸಂಜೀವ. ೧೨). **ಅಸುವಳಿ** : ಸೆಣಸಿ ಷಡುರಥರೊಡನೆ ಹೊಯ್ದಾಡಲು ಅಳಕವಿಲ್ಲದೆ ಕಾಡುತಸುವಳಿದು ಪೋಪಾಗ ತ್ರಿನಯನಸಖ ಪಾರ್ಥರಿದ್ದೇನ ಮಾಡಿದರು (ಪುರಂದ. ೨-೬೨-೯) ; ಎತ್ತಿಕೊಂಡಾ ಮಾಲೆಯ ನೋಡಲು ಪೊತ್ತಿ ಮಾಲೆಯುಂಬಂದದಲಿ ಕೆನ್ನೆತ್ತರನು ಹೀರಿ ಹೀರಿ ಅಸುವಳಿವಂತೆ ಪೊರೆಯಿಟ್ಟು (ಸಾಳ್ವಭಾ. ೧೧-೪೧). [ಅಸು$_5$ + ಅೞಿ$_1$]

**ಅಸುವಾಹಕ** (ನಾ). ೧. ಪ್ರಾಣವನ್ನು ತೆಗೆದುಕೊಂಡು ಹೋಗುವವನು ; ಯಮದೂತ. ೨. ಜೀವಧಾರಿ ; ಆತ್ಮ : ಅಲ್ಲಿಯೆ ಅಡಗಿತ್ತು ಬಂಕೇಶ್ವರ ಲಿಂಗವ ಅಱಿವ ಅಸುವಾಹಕಂಗೆ (ಸುಂಕಬಂ. ೬೪).
[ಅಸು$_5$ + ವಾಹಕ]

**ಅಸುವಿಡಿ$_1$** (ಕ್ರಿ). ಜೀವವನ್ನು ಹಿಡಿದಿರು ; ಬದುಕಿರು ; ಪ್ರಾಣಧಾರಣೆ ಮಾಡು : ಕೈಮುದ್ದೆಗೊಂಡನು ಕಾಲನಸುವಿಡಿದಿದ್ದವರ ನಾ ಕಾಣೆ ತೊಡಕಿದ ವೈರಿಬಲದೊಳಗೆ (ಕುವ್ಯಾಕ. ೩-೫) ; ಅಲಸಿ ಬಳಿಕಸುವಿಡಿಯಲೊಲ್ಲದೆ ಸುತವಿಯೋಗದಲಿ . . . ನಳಿನಜನಿಳಯಕಭಿಮುಖರಾದರನಿಬರು (ತೊರರಾ. ೨-೫-೨೭). [ಅಸು$_5$ + ಪಿಡಿ$_1$]

**ಅಸುವಿಡಿ$_2$** (ನಾ). ವೇಗದಿಂದ ಎದುರು ಜಟ್ಟಿಯನ್ನು ಹಿಡಿಯುವುದು ; ಮಲ್ಲಯುದ್ಧದ ಒಂದು ಪಟ್ಟು : ಕಕ್ಷವಡಂ ಮುಹಡಂ ತುಳಾಡಿ ಸಂದಸುವಿಡಿಪಟ್ಟಸಂಗುಣವಳುಂಬಗೆ ಪಾಸಗೆವನ್ನಿ ಮುಟ್ಟೆ ಚಟ್ಟು ಸಿರಣವಟ್ಟ ಬಾಹುದಣೆ . . . ಬಿನ್ನಣಮೊಪ್ಪೆ ಕಾದಿದರ್ (ಚಂದ್ರಪು. ೫-೭೮). [ಅಸು$_2$ + ಪಿಡಿ$_2$]

**ಅಸುವಿಡು** (ಕ್ರಿ). ಪ್ರಾಣಪ್ರತಿಷ್ಠೆಮಾಡು ; ಜೀವಕೊಡು : ಋಷಿ ಛಂದಮುಖ್ಯಾದಿ ದೇವತಾವರಣದಿಂ ವಸುರಜತಸ್ಫಟಿಕ ಶಿಲಾಮಯಲಿಂಗ ವಸುವಿಟ್ಟು ಪೂಜಿಸುತೆ (ನವಮೋ. ೨-೩೬). [ಅಸು$_5$ + ಇಡು]

**ಅಸುವೆ**, ಅಸಿ$_4$, ಅಸು$_6$, ಅಸೆ$_1$ (ನಾ). ಸಂಬಾರ ಮುಂತಾದುವನ್ನು ಅರೆಯುವ ಅಡಿಗಲ್ಲು : ವಿಶಾಲ ವಜ್ರದಸುವೆಯೊಳಿಕ್ಕಿ ಸಣ್ಣನಾಗರೆವುದುಂ (ಶಾಂತೀಶ್ವ. ೯-೧೧೦ ವ) ; ಪೊಸತೆನಿಪ ಸಿಂಧುವಾರದ ರಸದಿಂ ದರಿದಾಳ ಕೋಷ್ಠಶಿಲೆಯೆಂಬಿವನಿಂತಸುವೆಯೊಳರೆದೀಂಟಲೊಡಂ ವಸುಧೆಯ ಮೂಷಿಕ ವಿಷಂಗಳೆಲ್ಲಂ ಕಿಡುಗುಂ (ಖಮದ. ೧೨-೧೨) ; ಅಸುವೆಯೊಳೊತ್ತೊತ್ತಿ ಪನಿನೀರನೆಱೆದೆಱೆದು (ರಾಮಾಶ್ವ. ೧೦೩-೪). **ಅಸಿ$_4$** : ಅರರೆ ಮೃತ್ಯುವಿನಜಕೆಗೌಷಧವರೆವವೊಲು ರಿಪುಬಲವನಸಿಯಿಟ್ಟರೆದವಿಭ ಬರಿಕೈಯ ಭಾರಿಯ ಲಾಳವುಂಡಿಗೆಯ ಸರಿಸಗುಂಡಿನೊಳು (ಕುವ್ಯಾಭೀ. ೪-೮೦). **ಅಸು$_6$** : "ಅಸು ಶಿಲಾಪಟ್ಟವೆನಲ್" (ಮಂಗರಾ. ೬೧-೧೯).
**ಅಸೆ$_1$** : 'ಅಸೆಕಲ್ಲು' ಪರಾ.

ಅಸಿಯಗುಂಡು = ಅಸಿಯಕಲ್ಲಿನ ಮೇಲೆ ಅರೆಯುವ ಗುಂಡು,—ಕಲ್ಲು : ಸ್ಮರನಂ ನೋಡದ ಮುನಿಜನದಾ ಉರುಧೈರ್ಯವನರೆಯಲ್ಕೆನುತುಂ ರತಿ ಕರದೊಳು ಧರಿಸಿದಸಿಯಗುಂಡೋ ಎನೆ ತರುಣೀರತ್ನದ ಕಿಱುದೊಡೆ ಕಣ್ಗೆ ಕರಂ ಚೆಲ್ವೆನಿಸಿದುದು (ಜಯಕಾ. ೩-೨೯). [?]

**ಅಸುವೆಕಲ್ಲು**, ಅಸಿಕಲ್ಲು, ಅಸಿಗಲ್ಲು, ಅಸೆಕಲ್ಲು (ನಾ). ೧. ಸಂಬಾರ ಮುಂತಾದುವನ್ನು ಅರೆಯುವ ಗುಂಡುಕಲ್ಲು : ತೊಳಲಿಕಲ್ಲಸುವೆಕಲ್ಲು ಕಲ್ಲೊರಳಕಲ್ಲೊನಕೆಯೆಂದಿವು ಮೊದಲಾಗಿ (ಪಸಾರ. ೬೨೭-೧೪). **ಅಸಿಕಲ್ಲು** : ೨. ಸಂಬಾರ ಮುಂತಾದುವನ್ನು ಅರೆಯುವ ಅಡಿಗಲ್ಲು : ಅತ್ತೆಗೆ ಅಸಿಕಲ್ಲು ಸೊಸೆಗೆ ಗುಂಡುಕಲ್ಲು (ಗಾದೆ). **ಅಸಿಗಲ್ಲು** : ಅದನ್ನೇ ಗೋರಿಯ ವಿರುದ್ಧ ಕತ್ತಿ ಮಸೆಯಲು ಅಸಿಗಲ್ಲಾಗಿ ಉಪಯೋಗಿಸಿಕೊಳ್ಳತೊಡಗಿದರು (ನಡೆವಾ. II, ೮೮೮). **ಅಸೆಕಲ್ಲು** : ಅಸೆಕಲ್ಲಿಗೂ ಹಪ್ಪಳದ ಹಿಟ್ಟಿಗೂ ನಂಟು (ರೂಢಿ).

**ಅಸಿಯಕಲ್, ಅಸಿಯಕಲ್ಲು, ಅಸುವೆಯಕಲ್, ಅಸೇಕಲ್ಲು** = ಸಂಬಾರ ಮುಂತಾದುವನ್ನು ಅರೆಯುವ ಅಡಿಗಲ್ಲು ಅಥವಾ ಗುಂಡುಕಲ್ಲು : "ಅಸು ಶಿಲಾಪಟ್ಟಮೆನಲಸಿಯಕಲ್‌ಗುಂಡಿಂಗೆ ಪೆಸರು" (ಮಂಗರಾ. ೬೧–೧೯); ಅಸಿಯಕಲ್ಲಂ ಮಡಗಿಕೊಂಡೊಡೆ ಮದುವೆ ಕೆಡುವುದೆ (ಆರಾಚ. ೮–೪೧); ಅಸುವೆಯಕಲ್ಗಳಂ ತೊಳೆದು ಚಂದನಮಂ ಪನಿನೀರ್ಗಳಿಂದೆ ಚಾರಿಸಿ (ಗಿರಿಕ. ೨–೪೯); ಈ ಒಲೆಯ ಮುಂದಿರುವ ಅಸೇಕಲ್ಲು ಹ್ಯಾಂಗೆ ಬಂತು (ಮುಂಬಯಿ. ಕಿ. ೪–೧೬೭).
[ಅಸುವೆ + ಕಲ್ಲು$_2$ (< ಕಲ್$_2$)]

**ಅಸುವೆಳೆ** (ಕ್ರಿ). ಪ್ರಾಣತೆಗೆ; ಜೀವವನ್ನು ಸೆಳೆ: ತುಂಗಹಯಂಗಳ ಸಾರಥಿಯನೆಚ್ಚಂಗದಿಂದಸುವೆಳೆದು ವಹಿಲದಿ ಸಿಂಗರರಥವನು ಹಿಡಿದು ತಂದೊಪ್ಪಿಸಿದಂ (ಸಾಳ್ವಭಾ. ೯–೧೯). [ಅಸು$_5$ + ಎಳೆ$_1$ (< ಎೞೆ$_1$)]

**ಅಸುವೊಸರ್** (ಕ್ರಿ). ಜೀವಹೋಗು; ಪ್ರಾಣ ಸೋರಿಹೋಗು; ಸಾಯು: ನೀನಿನಿತಂ ಕೇಳ್ ಯಮನಂದನ [ಅಸು]ವೊಸರ್ದರಸುಮಕ್ಕಳಂ ಕುಡುವುದವರ ವನಿತೆಯರ್ಗೀಗಳ್ (ಗದಾಯು. ೧೦–೧೭).
[ಅಸು$_5$ + ಒಸರ್$_1$]

**ಅಸುಹೃತ್ತು** (ನಾ). ಸುಹೃತ್ತಲ್ಲದವನು; ಶತ್ರು: ಅಸುಹೃದ್ವೇಷಾಂಕುರಮುದಯಿಸಿದತ್ತು (ಜಗನ್ನಿ. ೩–೨೨). [ಸಂ. ಅಸುಹೃದ್]

**ಅಸುಹೃತ್ಸೇನೆ** (ನಾ). ಶತ್ರುಸೈನ್ಯ: ಅಸುಹೃತ್ಸೇನೆಗೆ ಸಾಲ್ವನೊರ್ವನೆ ಗಡಂ (ಗದಾಯು. ೨–೧೦). [ಸಂ. ಅಸುಹೃತ್ಸೇನಾ]

**ಅಸುಹೃದ** (ನಾ). = ಅಸುಹೃತ್ತು: "ರಿಪುಶತ್ರುಸಪತ್ನನಸುಹೃದಂ ... ಪರಿಪಂಥಿಯೆನಲು ಹಗೆಯಕ್ಕು" (ಮಂಗರಾ. ೮೭–೨೯).
[ಸಂ. ಅಸುಹೃದ್]

**ಅಸುಹೃದ್ಧ್ವಜಿನಿ** (ನಾ). = ಅಸುಹೃತ್ಸೇನೆ: ರಾವಣಂ ನಡೆದನಸುಹೃದ್ಧ್ವಜಿನಿಯನೋಡಿಸಿ (ಪಂರಾಮಾ. ೧೦–೧೮೧).
[ಸಂ. ಅಸುಹೃದ್ಧ್ವಜಿನೀ]

**ಅಸುಳೆ** (ನಾ). ಮಗು; ಕಂದ (?): ಅಸಮುದೆ ಯತೋವಾ ಇಮಾನಿ ಭೂತಾನಿ ಸಲ್ಲಸಿತ ಜಾಯಂತೇ ಎನಿಪ ವೇದಕ್ಕೆ ಕೇಳಸುಳನೇ ಕಾಲುಗಾಹಿನ ಯುಕ್ತಿ ಯಾವುದೆನೆ ತಜ್ಜಗತ್ತೆಂದೆಂಬುದೂ (ವೀಶೈಪು. ೫–೧೪–೧೦).
[< ಹಸುಳೆ?]

**ಅಸೂಯೆ** (ನಾ). ೧. ಹೊಟ್ಟೆಕಿಚ್ಚು; ಮತ್ಸರ; ಕರುಬು: "ಕಱುಬಕ್ಕಱಮಸೂಯೆಯಕ್ಕುಂ" (ಕವಿಕಂ. ೧೯೬); ಹುಟ್ಟಿದುದು ಬಳಿಕಾಯತಿಕೆ ಗಱಿಗಟ್ಟಿತಗ್ಗದಸೂಯೆ (ತೊರರಾ. ೨–೧–೩೭). ೨. ದ್ವೇಷ; ಹಗೆತನ. ೩. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು: ಮತಿ ಲಜ್ಜೆ ... ಅಸೂಯೆ ಅವಹಿತ್ಥೆ ಉಗ್ರ ಅಪಸ್ಮಾರಗಳೆಂಬ ಮೂವತ್ತು ಮೂರು ಸಂಚಾರಿಭಾವಂಗಳಿಂ (ವಿವೇಕ. ೨೨೭); ಅಸಹನೆಯೇ ಅಸೂಯೆ (ಭಾರಮೀ. ೩೨೦). [ಸಂ. ಅಸೂಯಾ]

**ಅಸೂಯೆಗೊಳ್** (ಕ್ರಿ). ೧. ಹೊಟ್ಟೆಕಿಚ್ಚುಪಡು. ೨. ಅಸಮಾಧಾನ ಹೊಂದು: ಅಯವಱಿತು ತರಲಱಿಯದ ಪತಿಯೊಳಸೂಯೆಗೊಳದೆ ಸುಖಿಸುವುದು (ಹದಿಬ. ೩–೨೭). [ಅಸೂಯೆ + ಕೊಳ್$_1$]

**ಅಸೃಕ್ಕಣ** (ನಾ). ರಕ್ತದ ಬಿಂದು; ನೆತ್ತರ ಹನಿ: ತನ್ಮೌಕ್ತಿಕಾಸೃಕ್ಕಣೋತ್ಕರಮೆತ್ತಂ ಸುರಿವಂತೆ ಸೂಸಿತು (ವಿಷ್ಣುಪು. ೫–೨–೪೯).
[ಸಂ. (ಅಸೃಜ್ + ಕಣ$_4$)]

**ಅಸೃಕ್ಕು** (ನಾ). ರಕ್ತ; ನೆತ್ತರು. [ಸಂ. ಅಸೃಜ್]

**ಅಸೃಙ್ನದಿ** (ನಾ). ರಕ್ತದ ನದಿ: ನೃಪಚಾಪಮುಕ್ತಬಾಣಂಗಳ ಪಾತದಿಂ ಸುರಿದಸೃಙ್ನದಿಯೊಳ್ಪೆರೆದೆಯ್ದಿ ಕೂಡೆ ರತ್ನಂಗಳವಂಗೆ ಮೇಣ್ಪೊರೆದುವಲ್ಲದೊಡಬ್ಧಿಗವೆಂತು ಸಾರ್ದುವೋ (ರಾಜಶೇ. ೬–೧೦೭). [ಸಂ. ಅಸೃಙ್ನದೀ]

**ಅಸೃಕ್ತೋಯಧಿ** (ನಾ). ರಕ್ತದ ಸಮುದ್ರ; ನೆತ್ತರ ಕಡಲು: ಶ್ರೀಯನರಾತಿಬಳಾಸೃಕ್ತೋಯಧಿಯೊಳ್ ಪಡೆದ ವೀರಂ (ಪಂಪಭಾ. ೩–೧). [ಸಂ. (ಅಸೃಜ್ + ತೋಯಧಿ)]

**ಅಸೃಕ್ಪಂಕ** (ನಾ). ನೆತ್ತರ ಕೆಸರು; ರಕ್ತದ ಕೆಸರು: ಘನಮಾರ್ಗಂ ನಖಟಂಕಭಿನ್ನದಿತಿಜಾಸೃಕ್ಪಂಕದಿಂ ಕೆಂಕಮಾಗಿ ನಿಲಲ್ (ಜಗನ್ನಿ. ೧–೫೮).
[ಸಂ. (ಅಸೃಜ್ + ಪಂಕ)]

**ಅಸೃಕ್ಪೂರ** (ನಾ). ರಕ್ತಪ್ರವಾಹ; ನೆತ್ತರ ತೊರೆ: ಕರವಾಳಾಹತವಿದ್ವಿಷಂ ದ್ವಿಶದಸೃಕ್ಪೂರಪ್ಲುತೇಭಂ ಪ್ಲುತೇಭಂ ರಥಾಲಂಬಿತ ಖಳ್ಗಿ ... ಭರತಶ್ರೀಮಚ್ಚಮೂವಲ್ಲಭಂ (ಎಕ. VI, ಚಿಕ್ಕಮ. ೧೬೧–೯೪; 1137).
[ಸಂ. (ಅಸೃಜ್ + ಪೂರ)]

**ಅಸೃಗಾಲಿಪ್ತ** (ಗು). ರಕ್ತದಿಂದ ಚೆನ್ನಾಗಿ ಲೇಪಿತವಾದ; ನೆತ್ತರು ಬಳಿದುಕೊಂಡಿರುವ: ಪರಕಂಧರಾಸೃಗಾಲಿಪ್ತ ಮಹಾಬಾಣಂ(ವಿಷ್ಣುಪು. ೫–೧–೩೦). [ಸಂ. (ಅಸೃಜ್ + ಆಲಿಪ್ತ)]

**ಅಸೃಗ್ಜಲ, ಅಸೃಗ್ಜಳ** (ನಾ). ರಕ್ತದ ನೀರು: ತಲೆ ಪಱಿದು ಪಾಱಿಪಾಱುವ ತಲೆವರಮೊಡೆವಱಿಯದಟ್ಟೆಯಿಂದುಣ್ಮುವಸೃಗ್ಜಲಧಾರೆ ನಾಳಮೆನೆ ಪಂದಲೆ ಪೋಲ್ತುದು ನಭದೊಳಲರ್ದ ಕೆಂದಾವರೆಯಂ (ಪಂರಾಮಾ. ೯–೨೪). **ಅಸೃಗ್ಜಳ**: ಉರಮಂ ಬಿರಿಯೆಚ್ಚೊಡೆ ಸೂಸಿ ಪಾಯ್ವಸೃಗ್ಜಳಮವನುಗ್ರಕೋಪಶಿಖಿ ತಳ್ತಳುರ್ವಂತೆವೊಲಾಗೆ (ಪಂಪಭಾ. ೧೦–೧೧೫).
[ಸಂ. (ಅಸೃಜ್ + ಜಲ)]

**ಅಸೃಗ್ಜಳ** 'ಅಸೃಗ್ಜಲ' ನೋ.

**ಅಸೃಗ್ದರ** (ನಾ). ಹೆಂಗಸರ ರಕ್ತಸ್ರಾವ ರೋಗ; ಪ್ರದರ; ಸೀರೆರೋಗ; ಹೆನ್ನೆತ್ತರು: ಸ್ತ್ರೀಯರುಗಳ ಯೋನಿಮಾರ್ಗದಲ್ಲಿ ಅಕಾಲದಲ್ಲಿ ಸ್ರವಿಸುವ ರಕ್ತ ಅಸೃಗ್ದರವೆನಿಸಿಕೊಂಬುದು (ವೈದ್ಯಸಾ. ೧೪೧). [ಸಂ.]

**ಅಸೃಗ್ಧರ** (ನಾ). ಚರ್ಮ; ತೊಗಲು: "ಅಸೃಗ್ಧರಃ, ಅಜಿನಂ, ಚರ್ಮ, ಕೃತ್ತಿಃ, ತ್ವಕ್ – ಈ ೫ ತೊವಲ್" (ಹಲಾಯು. ೧೦೪–೮).
[ಸಂ. ಅಸೃಗ್ಧರಾ]

**ಅಸೃಗ್ಧರೆ** (ನಾ). = ಅಸೃಗ್ಧರ: "ಚರ್ಮ ತ್ವಚಂ ಕೃತ್ತಿ ಅಜಿನವದಸೃಗ್ಧರೆಯೆನಲು ತೊಗಲಕ್ಕು" (ಮಂಗರಾ. ೧೧೭–೩). [ಸಂ. ಅಸೃಗ್ಧರಾ]

**ಅಸೃಜ್ಯ** (ಗು). ಸೃಷ್ಟಿಸಲ್ಪಡದ: ಎರಡು ವಿಧದಲ್ಲಿ ಲೋಕದೊಳು ಜೀವರುಗಳಿಪ್ಪರು ಸಂತತ ಕ್ಷರಾಕ್ಷರ ವಿಲಿಂಗ ಸಲಿಂಗ ಸೃಜ್ಯಾಸೃಜ್ಯಭೇದದಲಿ (ಹಸಾರ. ೧೪–೨೩). [ಸಂ.]

**ಅಸೃತಿ** (ನಾ). ೧. ಕೆಟ್ಟ ನಡತೆ (?). ೨. ಸುಳ್ಳು: "ಕುಸೃತಿ ಮಾಯೆ ಕುಹಕಮ[ಪಾಠಾಂ. ಕು] ಸೃತಿ ಮಿಥ್ಯೆಯೆನಲು ಸಟೆ" (ಮಂಗರಾ. ೧೩೩–೨೮). [ಸಂ.]

**ಅಸೆ$_1$** 'ಅಸುವೆ' ನೋ.

**ಅಸೆ$_2$** 'ಅಸಿ$_6$' ನೋ.

**ಅಸೆ$_3$** (ನಾ). ಮುಖ. 'ಅಸೆಯಿಱಿ', 'ಅಸೆವಿರಿ' ಪರಾ. [< ಸಂ. ಆಸ್ಯ]

**ಅಸೆಕಲ್ಲು** 'ಅಸುವೆಕಲ್ಲು' ನೋ

**ಅಸೆಯಿಱಿ** (ಕ್ರಿ). ಮುಖವನ್ನು ಚುಚ್ಚು, —ತಿವಿ (?): ಎನಿತಡಗನೂಡೆಯುಂ ಬಾಯಾಡಿ ನಲಿಯದೆ ತಿಂಬಡಗಂ ತೋಡಿಕೊಂಡು ಕಾಡುವ ಕೂಸಂ ದಸಿಯೊಳಸೆಯಿಱಿದು ಬಿಸಿಯಡಗಂ ಬಾಯೊಳ್ಗಿಡಿದು ತಿನ್ನು ತಿನ್ನೆಂದವುಡಂ ತಿಂಬ ತಾಯಿರಕ್ಕಸಿಯರುಮಂ (ಅರ್ಧನೇ. ೫–೪೧ ವ).
[ಅಸೆ$_3$ + ಇಱಿ$_1$]

**ಅಸೆವಿರಿ** (ಕ್ರಿ). ಮುಖ ಬಿರಿದುಹೋಗು (?): ಅಸೆವಿಱಿ[ರಿ]ವಂತೆನಟ್ಟುಗಿವ ಕೋಡೊಡನುಣ್ಮುವಸೃಗ್ನಿಷೇಕಮಾಱಿಸೆ ... ಮುಸಗಿ ಪೋರ್ದುವೆರೆಟ್ಟಲದಂಕದಾನೆಗಳ್ (ವರ್ಧಪು. ೮–೫೪). [ಅಸೆ$_3$ + ಬಿರಿ$_1$]

**ಅಸೇಚಕ** (ನಾ). = ಅಸೇಚನಕ ೨: "ಮಿಾಱಿ ತಣಿವಿಲ್ಲದನಸೇಚಕ [ಪಾಠಾಂ. ಅಸೇಚ, ಅಸೇಚನ] ನೆನಿಕ್ಕು" (ಮಂಗರಾ. ೬೯–೧೦). [ಸಂ.]

**ಅಸೇಚನ** (ನಾ). = ಅಸೇಚನಕ ೧. [ಸಂ.]

**ಅಸೇಚನಕ** (ಗು). ೧. ಎಷ್ಟು ನೋಡಿದರೂ ತೃಪ್ತಿಯಾಗದಿರುವ. (ನಾ). ೨. ತೃಪ್ತಿಪಡಿಸಲು ಶಕ್ಯವಿಲ್ಲದವನು; ಎಷ್ಟು ತಿಂದರೂ ತೃಪ್ತಿಯಿಲ್ಲದವನು: "ಅಸೇಚನಕವೆಂಬುದು ತಣಿವಿಲ್ಲದವಂ" (ಹಲಾಯು. ೫೮–೧೯೫). [ಸಂ.]

**ಅಸೇಧ** (ನಾ). ಅಡ್ಡಿ; ನಿರೋಧ; ಪ್ರತಿಬಂಧ: ಯೀ ಮೂಜು ಕೆಯ್ಯನು ಹೇಮದೇವಾಚಾರ್ಯ್ಯರವರು ಅಸೇಧವನು ಮಾಡುತಿರಲಾಗಿ ಆ ಕ್ರಮಣದಲ್ಲಿ ಆ ಸಿವರಾಮಯ್ಯಗಳವರು ಭೋಗಿಸುತಂ ಯಿದ್ದಾರೆ (ಸೌಇಇ. XX, ೨೩೨–೪೪ ; 1412). [ಸಂ.]

**ಅಸೇವ್ಯ** (ಗು). ೧. ಸೇವಿಸಬಾರದ; ಮಾಡಬಾರದ; ಅನುಸರಿಸಬಾರದ: ಸೇವ್ಯರಸೇವ್ಯಮೆನೆ . . . ಪಾಸಱಿಯೊಳ್ ಕೂಸನಪ್ಪಳಿಸಿ (ಜಗವಿ. ೨-೫೩). (ನಾ). ೨. ಸೇವಿಸಬಾರದವನು; ಸೇವೆಗೆ ಅನರ್ಹ: ವಿಯಚ್ಚರಪತಿಯಪ್ಪ ರಾವಣನಿರಲ್ ಕರಮೇಳಿದರಪ್ಪ ಭೂಮಿಗೋಚರರೊಳಸೇವ್ಯರೊಳ್ ತನಗೆ ಕಿಂಕರಭಾವಮನಪ್ಪುಕೆಯ್ದಂ (ಪಂರಾಮಾ. ೧೧–೧೦೪). [ಸಂ.]

**ಅಸೇವ್ಯವರ್ಣನ** (ನಾ). ಮಾಡಬಾರದ ಅಥವಾ ಸಹಿಸಲಾಗದ ವರ್ಣನೆ: ಕೋಟಲೆಗೊಳಗಾಗಿ ಪಂದಿ ನಮೆವಂದಮುದಾರ್ಗಮಸೇವ್ಯ ವರ್ಣನಂ (ಸುಕುಮಾ. ೫–೧೮). [ಅಸೇವ್ಯ + ವರ್ಣನ]

**ಅಸೌಮ್ಯ** (ಗು). ೧. ಸೌಮ್ಯವಲ್ಲದ; ಭಯಂಕರವಾದ: ಜಯವಧುಗಾಣ್ಮನಾಗಿಯುಮಸೌಮ್ಯನೆ (ಶಾಂತಿಪು. ೧೧–೬೬). (ನಾ). ೨. [ಕಾವ್ಯಮಿಾ] ಕಾವ್ಯದೋಷಗಳಲ್ಲಿ ಒಂದು: ಅಸೌಮ್ಯಮನೋಜೆಯೆಂ ಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೬. ೧–೪೦). [ಸಂ.]

**ಅಸೌಮ್ಯಸ್ವರ** (ನಾ). ಸೌಮ್ಯವಲ್ಲದ ಧ್ವನಿ; ಕರ್ಕಶಧ್ವನಿ. [ಅಸೌಮ್ಯ + ಸ್ವರ]

**ಅಸ್ಕಂಧ** (ನಾ). ಬುಗುರಿ ಗಿಡ: "ಅಸ್ಕಂಧ [ಪಾಠಾಂ. ಅಸ್ಮಂಡೆ] ಮೆನಲಾ ಬುಗರಿ" (ಮಂಗರಾ. ೩೫–೧೫). [ಸಂ.]

**ಅಸ್ಖಲಿತ** (ಗು). ೧. ಅಲ್ಲಾಡದ; ಜಗ್ಗದ; ಭದ್ರವಾದ. 'ಅಸ್ಖಲಿತ ಗತಿ' ಪರಾ. ೨. ಜಾರದ; ಬೀಳದ. ೩. ತಪ್ಪದ; ಚ್ಯುತವಾಗದ: ಈ ಹಸುಗೆಯಸ್ಖಲಿತವಿದಜಲಿ ರಾಮನೀ ಕುರುಬಲವ ಬಿಟ್ಟನದೇಕೆ (ಕುವ್ಯಾಗ. ೬–೭) ; ಭಯಂ ತ್ಯಜತಭದ್ರಂ ಎಂಬ ಅಭೀತ್ಯುಕ್ತಿಯಸ್ಖಲಿತಂ ತಾನೆನೆ ಸಾಕ್ಷಿಯಕ್ಕೆನಗಮೀ ಹಸ್ತಂ (ವಸ್ತವಂ. ೧೪–೧೦೫) ; ತುಂಬಿದ ಸಭೆಯಲ್ಲಿ ಅಸ್ಖಲಿತವಾಗಿ ಮಾತನಾಡಬಲ್ಲ ತನಗೆ ಇಂದು ಮಾತೇಕೆ ಹೊರಡುತ್ತಿಲ್ಲ (ಹೊಸಕ್ಷಿ. ೪೩). [ಸಂ.]

**ಅಸ್ಖಲಿತಂ, ಅಸ್ಖಳಿತಂ** (ಅ). ತಪ್ಪದಂತೆ; ತೊದಲದಂತೆ; ಎಡವದಂತೆ: ಕ್ರಮವಾಗಿ ಪದ್ಮಲತೆಯುಂ ಸಮ್ಯಗ್ದರ್ಶನಮಂ ಅಸ್ಖಲಿತಮಾರಾಧಿಸಿ . . . ಲೋಕಾಂತರಿತರಾಗೆ (ಚಾವುಂಪು. ೨೬–೨೯) ; ವರ್ಣಮಾತ್ರಾಸ್ವರರುಚಿರಮುಮಾದಾರ್ಯೆಯಂ ವ್ಯಕ್ತದಿಂದಸ್ಖಲಿತಂ ತಾನೆನ್ನನುದ್ದೇಶಿಸಿ ಸುಲಲಿತವೆಂಬಂದದಿಂದೋದಿ ತೋರ್ದಿರ್ೕ ಗಿಳಿಗೆ (ಕಾದಂಪೂ. ೬೩). **ಅಸ್ಖಳಿತಂ**: ಕನಕಲತೆಯುಂ ಪದ್ಮಲತೆಯುಂ ಸಮ್ಯಗ್ದರ್ಶನಮನಸ್ಖಳಿತಮಾರಾಧಿಸಿ (ಶಾಂತಿಪು. ೬–೮೬). [ಸಂ.]

**ಅಸ್ಖಲಿತಗತಿ** (ನಾ). ೧. ತಡೆಯಿಲ್ಲದ ನಡೆ; ಅಡ್ಡಿಯಿಲ್ಲದ ಗಮನ. ೨. ತಡೆಯಿಲ್ಲದ ನಡೆಯುಳ್ಳದ್ದು: ಅಸ್ಖಲಿತಗತಿಯಪ್ಪ ಚಕ್ರರತ್ನಸ್ಖಲನಕ್ಕೆ . . . ಚಕ್ರಿ ವಿಸ್ಮಯಂಬಟ್ಟು (ಆದಿಪು. ೧೪–೬ ವ). [ಅಸ್ಖಲಿತ + ಗತಿ]

**ಅಸ್ಖಲಿತವಾಣಿ** (ನಾ). ತಡೆಯಿಲ್ಲದ ಮಾತು; ನಿರರ್ಗಳವಾದ ನುಡಿ: ಅವರು ತಮ್ಮ ಅಸ್ಖಲಿತವಾಣಿಯಲ್ಲಿ ನಮ್ಮೆಲ್ಲರ ಮೇಲೆ ಬಿದ್ದಿರುವ ಜವಾಬ್ದಾರಿಯನ್ನು . . . ತಿಳಿಸಿದ್ದಾರೆ (ರಾಜ್ಯೋದ. ೮). [ಅಸ್ಖಲಿತ + ವಾಣಿ]

**ಅಸ್ಖಳಿತಂ** 'ಅಸ್ಖಲಿತಂ' ನೋ.

**ಅಸ್ತ** (ಗು). ೧. ಎಸೆಯಲ್ಪಟ್ಟ; ಬಿಸುಟ. ೨. ಕಳುಹಿಸಲ್ಪಟ್ಟ. ೩. ನಿವಾರಿಸಿದ; ತಳ್ಳಿಹಾಕಿದ. ೪. ಮರೆಯಾದ; ಕಳೆದುಹೋದ. (ನಾ). ೫. ಪಶ್ಚಿಮಪರ್ವತ; ಸೂರ್ಯನು ಮರೆಯಾಗುವಂತೆ ತೋರುವ ಬೆಟ್ಟ. ೬. ಮರೆ; ಕೊನೆ; ಸಾವು. ೭. (ಹೊತ್ತು) ಮುಳುಗುವಿಕೆ; ಅಸ್ತಮಯ. ೮. [ಜ್ಯೋತಿ] ಲಗ್ನದಿಂದ ಏಳನೆಯ ಸ್ಥಾನ: ತುಷಾರಕರನಿಂದ . . . ಅಸ್ತದೊಳಿಂದ್ರಮಂತ್ರಿ ಶುಭದಂ (ಜಾತತಿ. ೧೦–೧೧). [ಸಂ.]

**ಅಸ್ತಂಗತ** (ನಾ). ೧. ಮುಳುಗಿದವನು; ಮರೆಯಾದವನು: ಸತತೋದಯನಪ್ರತಿಹತಗತಿ ತೀವ್ರಂ ತದ್ದಿನಾಧಿನಾಥನುಮಸ್ತಂಗತನಾದನಂತೆ ನಿಯತಪ್ರತೀತಿಯಂ ಕೞಿಯಲಕ್ಕುಮೇ ವ್ಯಾಪಕಮಂ (ಕವಿರಾ. ೩–೩೦). ೨. ಕಾಲವಾದವನು; ನಷ್ಟವಾದವನು. [ಸಂ.]

**ಅಸ್ತಂಗಿಸು** (ಕ್ರಿ). ಮುಳುಗು; ಮರೆಯಾಗು: ಭಾನುವಸ್ತಂಗಿಸಲು ನಯನಕ್ಕೇನುವನು ಕಾಣಿಸಲಱಿಯದದು (ನಿಭಾಗ. ೧೧–೩೪–೨೮). [ಅಸ್ತಂಗಮನ ? + –ಇಸು₃]

**ಅಸ್ತಗತಿ** (ನಾ). ಕೊನೆಗಾಲದ ಸ್ಥಿತಿ; ಮುಳುಗುವ ಪರಿಸ್ಥಿತಿ: ಪ್ರತ್ಯಗ್ಭೂಧರವಾತ್ಮಾಧಿತ್ಯಕದೊಳ್ ತಳೆದುದಸ್ತಗತಿಯಿಂ ಬೀೞ್ವಾದಿತ್ಯನನೆಂದುಮುದಾರ್ಗಂ ನಿತ್ಯಪರಾರ್ಥೈಕವೃತ್ತನಕ್ಕುಂ ಗ್ರಾಹ್ಯಂ (ಚಂದ್ರಪು. ೮–೩). [ಅಸ್ತ + ಗತಿ]

**ಅಸ್ತಗಾಮಿ** (ಗು). ಮುಳುಗುತ್ತಿರುವ: ಆ ಸಮಯದಲ್ಲಿ ಅಸ್ತಗಾಮಿಯಾಗುತ್ತಿದ್ದ ದಿನಮಣಿಯ ಮೃದುಲವಾದ ಕಿರಣದಲ್ಲಿ ನೀಲವಾದ ಜಲರಾಶಿಯ ಒಂದು ಭಾಗವು . . . ಪ್ರಜ್ವಲಿಸುತ್ತಿದ್ದಿತು (ಕಪಾಕುಂ. ೧೮). [ಸಂ. ಅಸ್ತಗಾಮಿನ್]

**ಅಸ್ತಗಿರಿ** (ನಾ). ಸೂರ್ಯನು ಮುಳುಗಿ ಮರೆಯಾಗುವಂತೆ ತೋರುವ ಪರ್ವತ; ಪಶ್ಚಿಮ ದಿಕ್ಕಿನ ಪರ್ವತ: ಅಸ್ತಗಿರಿಯನು ಸೂರ್ಯ ಮಱೆಗೊಂಡ (ಕುವ್ಯಾಭೀ. ೬–೪೮) ; ಪೊಸ ಪೊನ್ನ ಪರಿಯಾಣಮೆನಲಸ್ತಗಿರಿ ಮಸ್ತಕದೊಳಿನಬಿಂಬಮೆಸೆದಿರ್ದುದು (ಚಬಪು. ೯–೨). [ಅಸ್ತ + ಗಿರಿ₁]

**ಅಸ್ತಗೃಹ** (ನಾ). [ಜ್ಯೋತಿ] ಲಗ್ನದಿಂದ ಏಳನೆಯ ಮನೆ, —ಸ್ಥಾನ: ರವಿ ಲಗ್ನಾವಸಥಕ್ಕೆ ಷಷ್ಠಗೃಹದೊಳ್ ನಿಂದಂದಖಿಲ್ಯಂ ಪರಾಭವಭಾಜಂ ನೆಲಸಿರ್ದೊಡಸ್ತಗೃಹದೊಳ್ ಸ್ತ್ರೀದೋಷದಿಂದಂ ಪರಾಭವಭಾಜಂ . . . ಅಕ್ಕುಂ ನರಂ (ಜಾತತಿ. ೧೮–೩). [ಅಸ್ತ + ಗೃಹ]

**ಅಸ್ತದವ** (ಗು). ಅಡಗಿದ ಅಥವಾ ನಂದಿದ ಕಾಡುಕಿಚ್ಚುಳ್ಳ: ಅನುದ್ಯೋಗಜನೌಘವಸ್ತದವವಸ್ಮೇರಾಬ್ಜಂ . . . ಒಪ್ಪಿರ್ದುದಭ್ರಾಗಮಂ (ಜಗವಿ. ೪–೨೬). [ಅಸ್ತ + ದವ]

**ಅಸ್ತನಗ** (ನಾ). = ಅಸ್ತಗಿರಿ: ಪಡೆಮಾತೇನುದಯಾಚಲಾಸ್ತನಗಹೈಮಾದ್ರೀಂದ್ರ ತತ್ಸೇತುವಾ ಕಡೆಗಳ್ . . . ಪರ್ವಿ (ಶಾಂತಿಪು. ಪರಿ. I, ೫). [ಅಸ್ತ + ನಗ]

**ಅಸ್ತಪ್ರಾಪ್ತಿ** (ನಾ). ಮುಳುಗುವುದು; ಮರೆಯಾಗುವುದು: ಇನಂ . . . ಅಸ್ತಪ್ರಾಪ್ತಿಯಂ ಸಾರ್ವುದುಂ ಇನಿತಾಯುತ್ಸವಮುತ್ಪಲಕ್ಕೆ (ಚಂದ್ರಪು. ೮–೧೧). [ಅಸ್ತ + ಪ್ರಾಪ್ತಿ]

**ಅಸ್ತಬೆಸ್ತ** (ನಾ). = ಅಸ್ತವ್ಯಸ್ತ : ಅಱಿಯಲೆ ಚಿತ್ರಮೀಯದಘಸಂತತಿಯಾತ್ಮನನೆತ್ತಲಾನುಮೊಲ್ದಱಿದೊಡೆಯಸ್ತಬೆಸ್ತವನೆ ಮಾಡುವುದು (ಅಪಶ. ೬೪). [< ಸಂ. ಅಸ್ತವ್ಯಸ್ತ]

**ಅಸ್ತಮಯ** (ನಾ). (ಹೊತ್ತು) ಮುಳುಗುವುದು ; ಮರೆಯಾಗುವುದು. 'ಅಸ್ತಮಯಸಮಯ' ಪರಾ. [ಸಂ.]

**ಅಸ್ತಮಯಸಮಯ** (ನಾ). (ಹೊತ್ತು) ಮುಳುಗುವ ಕಾಲ ; ಸಂಧ್ಯಾಕಾಲ : ಮುಂದಾಗಿ ದಿನಪನುದಯಾನಂದದೊಳಸ್ತಮಯಸಮಯದೊಳ್ ಸಂಜೆ ಕರಂ ಪಿಂದುಱಿದುದು (ಕಾವ್ಯಸಾ. ೮೯ ಶೂದ್ರಕ); ತೊಳತೊಳಗಿದನಸ್ತಮಯಸಮಯದೊಳ್ ದಿನಪಸುತಂ (ಪಂಪಭಾ. ೧೨-೨೧೦). [ಅಸ್ತಮಯ + ಸಮಯ]

**ಅಸ್ತಮಾನ** (ನಾ). = ಅಸ್ತಮಯ : ಉದಯಾಸ್ತಮಾನದಲ್ಲೀವುದು ಕೃತ್ರಿಮಜನ್ಯವಿಷದ ನೀರ್ಗುಂದಲ್ (ಋಮದ. ೧೪-೭೯) ; ಹೊತ್ತಾಱಿ ಎದ್ದ ಕುರುಡಂಗೆ ಅಗಸೆಯಲ್ಲಿ ಅಸ್ತಮಾನವಾದಂತೆ ಆನು ಭಕ್ತಿಯ ಬಯಸಿದರಹುದೆ (ಬಸವ. ೨೯೨). [ಸಂ.]

**ಅಸ್ತಮಿತ** (ಗು). ೧. ಮುಳುಗಿದ ; ಮರೆಯಾದ. ೨. ಕಳೆದುಹೋದ : ಸಿಂಹಪೀಠದಿನಿರದೆೞ್ದನಸ್ತಮಿತಪುಣ್ಯದಶಾನನನಾ ದಶಾನನಂ (ಪಂರಾಮಾ. ೯-೬೩). [ಸಂ.]

**ಅಸ್ತಮಿತಶಠ** (ನಾ). ಶಠತ್ವ (ಮಾಯೆ) ತೊಲಗಿಹೋದವನು ; ಕೇವಲಜ್ಞಾನಿ : ಭವತ್ಪದಯುಗಮಂ ಚಿಂತಿಸುವಂಗೆಲ್ಲಮುಕ್ಕುಮಸ್ತಮಿತಶಠಾ (ಜಿನಾಲೆ. ೧೨-೧೨). [ಅಸ್ತಮಿತ + ಶಠ]

**ಅಸ್ತಮಿತಹರುಷ** (ನಾ). ಸಂತೋಷವು ಮರೆಯಾದವನು ; ಹರ್ಷಗೆಟ್ಟವನು : ಅಸ್ತಮಿತಹರುಷನು ನಿಂದು ನೆನೆದನು ತನ್ನ ಮನದೊಳಗೆ (ಕುವ್ಯಾಅ. ೧೯-೪). [ಅಸ್ತಮಿತ + ಹರುಷ]

**ಅಸ್ತಮಿಸು** (ಕ್ರಿ). ೧. ಮುಳುಗು ; ಮರೆಯಾಗು : ಉದಯಿಸಿ ನಡುವಗಲಪ್ಪುದುಮುದಿತೋದಿತನಾಗಿ ಸೂರ್ಯನಸ್ತಮಿಸುವವೋಲ್ (ಪಂರಾಮಾ. ೧-೮೪) ; ನಂದಿತು ಬೆಳುದಿಂಗಳ ಕಿಚ್ಚು ಪಾಪಿಷ್ಠ ಚಂದ್ರಮನಸ್ತಮಿಸಿದನು (ಮೋಹತ. ೨೭-೬೪). ೨. ಸಾಯು : ಗಗನದ ಮುಗಿಲ ಮೋಹರವ ಥಾಳಿಯಲಿಯಱಿಯಟ್ಟಿ ಸುಂಟರುಗಾಳಿಯುರವಣೆ ನಿಂದವೊಲು ಸುರಪಾಲತನಯನ ತನಯನಸ್ತಮಿಸಿದನು ರಣದೊಳಗೆ (ಕುವ್ಯಾದ್ರೋ. ೬-೬೦). [ಅಸ್ತಮನ$_0$ + -ಇಸು$_3$]

**ಅಸ್ತರ** 'ಅಸ್ತರು' ನೋ.

**ಅಸ್ತರಾಗ** (ನಾ). ಅಸ್ತಮಯ ಸಮಯದ ಕೆಂಪು ; ಸಂಜೆಗೆಂಪು : "ಅಸ್ತರಾಗಮುಂ ಸಂಧ್ಯಾರಾಗಮುಕ್ಕು" (ನಾನಾರ. ೬೮). [ಅಸ್ತ + ರಾಗ]

**ಅಸ್ತರಾಶಿ** (ನಾ). [ಜ್ಯೋತಿ] ಲಗ್ನದಿಂದ ಏಳನೆಯ ರಾಶಿ : ಪುರುಷಸ್ತ್ರೀಜಾತಕಫಲಮೆರಡುಂ ಸಮಂ. . . ಅಸ್ತರಾಶಿಬಲದಿಂದಮಱಿವುದಾಕೆಯ ಸೊಬಗಂ (ಜಾತತಿ. ೨೨-೧). [ಅಸ್ತ + ರಾಶಿ]

**ಅಸ್ತರು, ಅಸ್ತರ** (ನಾ). ಅಂಗಿ, ಕವಚ ಮುಂತಾದುವುಗಳಿಗೆ ಹಾಕುವ ಒಳಬಟ್ಟೆ ; ಲೈನಿಂಗು (ಇ). **ಅಸ್ತರ** : "ಒಳ ಅರಿವೆ" (ಜಾನಕೋ. ೧೪). [← ಪಾರ. ಮರಾ. ಹಿಂ. ಅಸ್ತರ್]

**ಅಸ್ತವಿಳಾಸ** (ನಾ). ಸಂತೋಷವು ಮರೆಯಾದವನು ; ಹರುಷಗೆಟ್ಟವನು ; ಸುಖವನ್ನು ಕಳೆದುಕೊಂಡವನು : ಬಿಲ್ಲುಂಬೆಜಗಾಗಿರ್ದಂ ರತೀಶನಸ್ತವಿಳಾಸಂ (ಗಿರಿಕ. ೮-೩೭). [ಅಸ್ತ + ವಿಳಾಸ (= ವಿಲಾಸ)]

**ಅಸ್ತವ್ಯಸ್ತ** (ನಾ). ಅಕ್ರಮವಾಗಿರುವುದು ; ಚೆಲ್ಲಾಪಿಲ್ಲಿಯಾಗಿರುವುದು ; ಅಸಂಬದ್ಧ : ಹಱಿಗವಿಗಳ ಕಬ್ಬಂಗಳ ಹೊಜಗಳಿಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ಬಱಿ ತಾಱಿಗ ಬೀಱಿಗ ವೆತ್ತಜ ತತ್ತಜವೆಕ್ಕಸಕ್ಕಮಸ್ತವ್ಯಸ್ತಂ (ಗಿರಿಕ. ೧-೨೩) ; ಮನೆಯಾಕೆ ಕಣ್ಣು ಮುಚ್ಚಿದ್ದರಿಂದ ಆ ಮನೆ ಅಸ್ತವ್ಯಸ್ತವಾಗಿಯೇ ಇದ್ದಿತು (ರಂಗರೋ. ೯೭) ; ಜಾನಕೀಬಾಯರು ಅಸ್ತವ್ಯಸ್ತವಾಗಿ ಉಟ್ಟುಕೊಂಡಿದ್ದ ಧಾಬಳಿ (ಸಮುಜೀ. ೭ ಪೀ); ಅದನ್ನು ಮುಟ್ಟಿ ಯಾರೂ ಅಸ್ತವ್ಯಸ್ತ ಮಾಡಿದಂತೆ ಕಂಡುಬರಲಿಲ್ಲ (ತೇಮೋಡ. ೨೬). [ಸಂ.]

**ಅಸ್ತವ್ಯಸ್ತತೆ** (ನಾ). ಅಕ್ರಮ ; ಅವ್ಯವಸ್ಥೆ : ಆ ಪುಸ್ತಕ ಭಂಡಾರವೆಲ್ಲಾ ಅಸ್ತವ್ಯಸ್ತತೆಯಿಂದ ಕೂಡಿದೆ (ರೂಢಿ). [ಸಂ. ಅಸ್ತವ್ಯಸ್ತತಾ]

**ಅಸ್ತಶೈಲ** (ನಾ). = ಅಸ್ತಗಿರಿ : ಸರೋಜಸಖನೊಯ್ಯನೆ ಪೊರ್ದಿದನಸ್ತಶೈಲಮಂ (ಕಾದಂಪೂ. ೨೭೪). [ಅಸ್ತ + ಶೈಲ]

**ಅಸ್ತಸಮಯ** (ನಾ). (ಹೊತ್ತು) ಮುಳುಗುವ ವೇಳೆ ; ಸೂರ್ಯ ಮರೆಯಾಗುವ ಸಮಯ : ದಿನಪಾಸ್ತಸಮಯದೊಳ್ ದಿನಪನ ಪಿಂಬಡಿನೊಳ್ ಕೋಮಳೆಯ ಮೊಗಂಗಿಡುವಂತಿರೆ ಕಿಡುವುದರಿದೆ ಕಮಳವಿಳಾಸಂ (ಶಾಂತಿಪು. ೮-೬೨). [ಅಸ್ತ + ಸಮಯ]

**ಅಸ್ತಾಂತರಗತ** (ನಾ). ಅಸ್ತಪರ್ವತದೊಳಗೆ ಸೇರಿದವನು : ಸರಸಿಜಬಾಂಧವನಸ್ತಾಂತರಗತನಾಗಿರೆ ಸರೋಜಿನೀವನಮಾದಂ ಕೊರಗುತ್ತೆ ಮುಗಿಗುಮಿಾಶ್ವರ ವಿರಹದೆ ಶೋಕಾಕುಲಂ ವಿಶೇಷಾಪ್ತಜನಂ (ಕವಿರಾ. ೩-೩೧). [ಅಸ್ತ + ಅಂತರ + ಗತ]

**ಅಸ್ತಾಕ್ಷರ** (ನಾ). ಅಕ್ಷರಲೋಪವುಳ್ಳದ್ದು : ಕರಮಸ್ತಾಕ್ಷರ [ಪಾಠಾಂ. ಮರ್ಧಾಕ್ಷರ] ಮುಚಿತಾಕ್ಷರಮವಲಂಬಪ್ರಸನ್ನಮತಿಮಧುರಮಲಂಕರಣಯುತಮೆನಿಸಿ ಪೇಟಿಲ್ ಧರೆಯೊಳ್ ಕವಿರಾಜಹಂಸನೊರ್ವನೆ ಬಲ್ಲಂ (ಛಂದೋಂಬು. ಕಿ. ೧-೩). [ಅಸ್ತ + ಅಕ್ಷರ]

**ಅಸ್ತಾಗಾರ** (ನಾ). [ಜ್ಯೋತಿ] = ಅಸ್ತಗೃಹ : ಕ್ರೂರರ್ ನಿಲೆ ಲಗ್ನಾಸ್ತಾಗಾರಂಗಳೊಳ್ (ಜಾತತಿ. ೬-೨). [ಅಸ್ತ + ಅಗಾರ]

**ಅಸ್ತಾಚಲ, ಅಸ್ತಾಚಳ** (ನಾ). = ಅಸ್ತಗಿರಿ. **ಅಸ್ತಾಚಳ** : ಬಸುಱೊಳು ಪೊಕ್ಕ ಮಿತ್ರನ ತೇಜವಂ ಕೆಡಿಸಿ ಕನಲುವಸ್ತಾಚಲದ ಗೌರವವೆನಿತು (ಬಸಪು. ೧೯-೨೮). [ಅಸ್ತ + ಅಚಲ]

**ಅಸ್ತಾಚಳ** 'ಅಸ್ತಾಚಲ' ನೋ.

**ಅಸ್ತಾದ್ರಿ** (ನಾ). = ಅಸ್ತಗಿರಿ : ಉದಯಾದ್ರಿಯುಮಸ್ತಾದ್ರಿಯುಮುದಗ್ರಕೋಪೋತ್ಕರಂಗಳಿರ್ಪಂತಿರೆ ನೀಳ್ದೊದವಿದರ್ . . . ಭೀಮಭುಜಗಧ್ವಜರುಂ (ಗದಾಯು. ೮-೬) ; ಅಸ್ತಾದ್ರಿಯಂ ಸಾರುತಿಹ ಸೂರ್ಯನಂತೆ (ಹಚಕಾ. ೧೨-೮). [ಅಸ್ತ + ಅದ್ರಿ]

**ಅಸ್ತಾಬ್ಧಿ** (ನಾ). ಸೂರ್ಯನು ಮುಳುಗುವ ಸಮುದ್ರ ; ಪಶ್ಚಿಮಸಮುದ್ರ : ಆ ಕ್ಷಿತಿಪಂಗೆನ್ನಂದದಿಂದಂ ಸಮನಿಸುಗುಮಧಃಪಾತಮಸ್ತಾಬ್ಧಿಯೊಳ್ (ಚಂದ್ರಪು. ೨-೪೫). [ಅಸ್ತ + ಅಬ್ಧಿ]

**ಅಸ್ತಾವಸ್ಥೆ** (ನಾ). ಪ್ರಾಣ ಹೋಗುವ ಸ್ಥಿತಿ ; ತುಂಬ ಕಷ್ಟದ ಸ್ಥಿತಿ : ನಾಯಕನ ಸ್ಥಿತಿಯು ಅಸ್ತಾವಸ್ಥೆಗಿಟ್ಟಿತು (ಕಭವಿ. I, ೨೪೮). [ಅಸ್ತ + ಅವಸ್ಥೆ]

**ಅಸ್ತಿ** (ನಾ). ೧. ಇರುವಿಕೆ ; ಸ್ಥಿತಿ ; ಇರವು. ೨. [ವೀಶೈ] ನಾದ : ಕಂದ ಕೇಳಸ್ತಿಯೆಂಬಂದವೇ ನಾದ (ಮನೋವಿ. ೨-೩೨) ; ಸುವಿವೇಕ ಅಸ್ತಿಯೆಂದೊಡೆ ನಾದಮೆನಿಸುಗುಂ (ಮನೋವಿ. ೨-೩೨ ಟೀಕು). [ಸಂ.]

**ಅಸ್ತಿಕಾಯ** (ನಾ). [ಜೈನ] ಬಹುಪ್ರದೇಶವುಳ್ಳ ವಸ್ತು : ಧರ್ಮ ಅಧರ್ಮ ಆಕಾಶ ಪುದ್ಗಲ ಜೀವ ಇವುಗಳಿಗೆ ಅಸ್ತಿಕಾಯವೆಂದು ಹೇಳುತ್ತಾರೆ. ಅಸ್ತಿಕಾಯವೆಂದರೆ ಬಹುಪ್ರದೇಶವುಳ್ಳ ವಸ್ತುವೆಂದರ್ಥ (ಹಿಂದಸಾ. ೮೧) ; ಕಾಲವನ್ನು ಬಿಟ್ಟು ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶಗಳು ಸತ್ತಾಯುಕ್ತವಾಗಿದ್ದು ಬಹಳ ಪ್ರದೇಶವುಳ್ಳವುಗಳಾಗಿವೆ. ಅದಕ್ಕಾಗಿ ಇವುಗಳಿಗೆ ಅಸ್ತಿಕಾಯಗಳೆಂದು ಕರೆಯುವರು (ಜೈನಪ. ೪೨೩). [ಅಸ್ತಿ + ಕಾಯ]

**ಅಸ್ತಿತೆ** (ನಾ). ಇರುವಿಕೆ ; ಉಂಟೆಂಬ ಸ್ಥಿತಿ : ಇವು ತಿಳಿಯೆ ಷಡ್ಭಾವ ವಿಕೃತಿಗಳ್ ಜಾಯತೆಯೆ ತವೆ ಜನನಿಯುದರದಿಂ ಬರ್ಪುದಸ್ತಿತೆಯುಂಟು (ಚೆಬಪು. ೫೮–೯೨). [ಸಂ. ಅಸ್ತಿತಾ]

**ಅಸ್ತಿತ್ವ** (ನಾ). ಇರುವಿಕೆ : ಅವಧಿಜ್ಞಾನಾಸ್ತಿತ್ವಮನವಧಾರಿಸಿ ಸಕಲ ಚಕ್ರವರ್ತಿಯ ಸಚಿವಪ್ರವರಂ ಬೆಸಗೊಳೆ (ಶಾಂತಿಪು. ೯–೮). [ಸಂ.]

**ಅಸ್ತಿಭಾರ** 'ಅಸ್ತಿವಾರ' ನೋ.

**ಅಸ್ತಿವಳ್ಳಿ** 'ಅಸ್ಥಿವಳ್ಳಿ' ನೋ.

**ಅಸ್ತಿವಾರ, ಅಸ್ತಿಭಾರ** (ನಾ). ತಳಹದಿ ; ಬುನಾದಿ : ಸತ್ಯ, ನ್ಯಾಯ, ನೀತಿಗಳ ಅಭೇದ್ಯವಾದ ಅಸ್ತಿವಾರದ ಬೆಂಬಲವೂ ಅವರಿಗಿಲ್ಲ (ರಾಜವ. ೭೭). **ಅಸ್ತಿಭಾರ** : ಎಲ್ಲ ವಿಧವಾದ ಸೌಖ್ಯಕ್ಕೂ ಧರ್ಮವೇ ಅಸ್ತಿಭಾರ (ರೂಢಿ).

[**ದೇ.** ‖ **ತಮಿ.** ಅಸ್ತಿಪಾರ, ಅಸ್ತಿವಾರ ; **ಮಲ. ತುಳು.** ಅಸ್ತಿವಾರ ; **ತೆಲು.** ಅಸ್ತಿಭಾರ]

**ಅಸ್ತಿವಾರಶಿಲೆ** (ನಾ). ತಳಹದಿಯ ಕಲ್ಲು ; ಅಡಿಗಲ್ಲು : ಕಾರ್ಖಾನೆಗೆ ಅಸ್ತಿವಾರಶಿಲೆಯನ್ನು ಹಾಕಿದರು (ಭಾಗ್ಯಶಿ. ೧೨೯). [ಅಸ್ತಿವಾರ + ಶಿಲೆ]

**ಅಸ್ತು** (ಅ). ಆಗಲಿ ; ಹಾಗಾಗಲಿ ; ಉಂಟಾಗಲಿ : ತಾಪಸವರಂ ಶಿವಮಸ್ತು ಶಿವಮಸ್ತೆಂದು ಪರಸಲ್ಕೆ (ಬಸವು. ೩೨–೧೪). [ಸಂ.]

**ಅಸ್ತುಗುಟ್ಟು** (ಕ್ರಿ). ಆಗಲಿ ಎಂದು ಹೇಳು ; ಹಾಗಾಗಲೆಂದು ಒಪ್ಪಿಕೊಳ್ಳು ; ಸಮ್ಮತಿಸು : ನಮ್ಮಣಿಕೆ, ಆ ಸಮಾಧಾನಕ್ಕೆ ಅಸ್ತುಗುಟ್ಟಲೊಲ್ಲದು (ನಾಡೋಜ. ೩೬೦). [ಅಸ್ತು + ಕುಟ್ಟು$_1$]

**ಅಸ್ತುಗೊಡು** (ಕ್ರಿ). ಒಪ್ಪಿಗೆ ಕೊಡು ; ಸಮ್ಮತಿಸು : ನಾನು ಅವನ ಮಾತಿಗೆ ಅಸ್ತುಗೊಡಲಾರೆ (ರೂಢಿ). [ಅಸ್ತು + ಕೊಡು]

**ಅಸ್ತುಬಡು** (ಕ್ರಿ). ಒಡಂಬಡು ; ಸಮ್ಮತಿಸು : ಬೆಸ್ತನಾ ಬಹುಜನರು ಪೇಳ್ದುದಕಸ್ತುಬಡದಲೆ ಹಾನಿಯನೆ ಘಳಿಸಿ (ಜಿರಾಪಾ. ೨೭೭–೧೩). [ಅಸ್ತು + ಪಡು$_1$]

**ಅಸ್ತೇಯ** (ನಾ). ೧. ಕದಿಯದಿರುವುದು ; ಅಪಹರಿಸದಿರುವುದು. ೨. [ಜೈನ] ಪಂಚಾಣುವ್ರತಗಳಲ್ಲಿ ಒಂದು ; ಕದಿಯದಿರುವ ವ್ರತ : "ಅಸ್ತೇಯವೆಂದರೆ ಪರಕೀಯ ವಸ್ತುಗಳನ್ನು ಕದಿಯದಿರುವುದು" (ಹಿಂದಸಾ. ೮೮) ; ಹೀನಾಧಿಕ ವಿನಿಮಾನಸ್ತೇನಾ[ಹೃತ] ದಾನಸದೃಶಮಿಶ್ರ ವಿಲೋಪಸ್ತೇನ ಪ್ರಯೋಗಮೆಂದಿವು ತಾನಸ್ತೇಯವ್ರತಕ್ಕತಿಕ್ರಮಮುಕ್ಕುಂ (ಸುಕುಮಾ. ೬–೧೫). [ಸಂ.]

**ಅಸ್ತೇಯಭಾವನೆ** (ನಾ). ಇತರರ ವಸ್ತುವನ್ನು ಬಯಸದಿರುವುದು : ಪರದ್ರವ್ಯಾನಭಿಲಾಷೆಯೆಂಬ ಅಸ್ತೇಯಭಾವನೆ ನಿಂತರೆ ಸರ್ವಧನಿಯಾಗುವನು (ಹಿಂದಸಾ. ೧೦೫). [ಅಸ್ತೇಯ + ಭಾವನೆ]

**ಅಸ್ತೋಕ** (ಗು). ೧. ಸ್ವಲ್ಪವಲ್ಲದ ; ಅಧಿಕವಾದ ; ಮಹತ್ತಾದ : ಆಕೆವಾಳರಿಗಜುಹಿ ನೀ ವಸ್ತೋಕ ಪುಣ್ಯರು ತಿಳುಹಿ ವಿಗಳಿತಶೋಕರೆನಿಸುವುದಂಥನೃಪ ಗಾಂಧಾರಿದೇವಿಯರ (ಕುವ್ಯಾಗ. ೧೦–೧೧). (ನಾ). ೨. ಅತಿಶಯ ; ಮಹತ್ವ : ಅಸ್ತೋಕದಿಂ ರುದ್ರಯೆನುತಾರಾಧನಯೆನುತ್ತ (ಪದ್ಮರಾ. ೧೧–೨೪). [ಸಂ.]

**ಅಸ್ತ್ರ** (ನಾ). ೧. ಬಾಣ. ೨. ಆಯುಧ : "ಹೇತಿಃ, ಶಸ್ತ್ರಂ, ಪ್ರಹರಣಂ, ಆಯುಧಂ, ಅಸ್ತ್ರಂ— ಈ ೫ ಕೆಯ್ದು" (ಹಲಾಯು. ೬೭–೩೦೪) ; ಅಸಿ ಮುಸಲ . . . ತೋಮರ ಪಾಶಾಂಕುಶಾದಿ ಶಸ್ತ್ರಾಸ್ತ್ರಂಗಳೊಳೆಚ್ಚುಂ (ಪಂರಾಮಾ. ೧೩–೭೭ ವ). [ಸಂ.]

**ಅಸ್ತ್ರಕದಂಬಕ** (ನಾ). ಅಸ್ತ್ರಗಳ ಸಮೂಹ : ಬಿಲ್ಲುಂಬೆಜಗುಮಾಗಿ ತಮ್ಮ ಮನಂ ಕಯ್ಯಂಬೇಜಿನದಟುಮಸ್ತ್ರಕದಂಬಕಮುಂ ಸೋರೆ (ಶಾಂತಿಪು. ೬–೮೮). [ಅಸ್ತ್ರ + ಕದಂಬಕ]

**ಅಸ್ತ್ರಗ್ರಾಮ** (ನಾ). = ಅಸ್ತ್ರಕದಂಬಕ : ಆ ತಪೋಧನ ಬೇಗನಿತ್ತನಸ್ತ್ರಗ್ರಾಮುಮಂ (ವೆಂಕಾರಾ. ೧–೧೨–೫೭). [ಅಸ್ತ್ರ + ಗ್ರಾಮು]

**ಅಸ್ತ್ರಜಾಳ** (ನಾ).= ಅಸ್ತ್ರಕದಂಬಕ: ತನ್ನಸ್ತ್ರಜಾಳಂಗಳಿಂತವನೇರ್ದಾರ್ದನನಂತವೀರ್ಯಂ (ಶಾಂತಿಪು. ೯–೯೪). [ಅಸ್ತ್ರ + ಜಾಳ (= ಜಾಲ)]

**ಅಸ್ತ್ರಜೀವ** (ನಾ). ೧. ಆಯುಧದ ಬಲದಿಂದ ಜೀವಿಸುವವನು ; ಯೋಧ ; ಸೈನಿಕ. ೨. ಬೇಡರವನು (ದಕ. ೩). [ಸಂ.]

**ಅಸ್ತ್ರಜೀವಿ** (ನಾ). = ಅಸ್ತ್ರಜೀವ. [ಸಂ. ಅಸ್ತ್ರಜೀವಿನ್]

**ಅಸ್ತ್ರತತಿ** (ನಾ). = ಅಸ್ತ್ರಕದಂಬಕ : ಖೇಚರರಾಜನಸ್ತ್ರತತಿಯಂ ತನ್ನಸ್ತ್ರಜಾಳಂಗಳಿಂ ತವೆ ನೇರ್ವಾರ್ದರ್ದಂ (ಶಾಂತಿಪು. ೯–೯೪). [ಅಸ್ತ್ರ + ತತಿ$_1$]

**ಅಸ್ತ್ರದೇವತೆ** (ನಾ). ಆಯುಧದ ಅಥವಾ ಬಾಣದ ಅಭಿಮಾನ ದೇವತೆ : ನೇಪಥ್ಯದಲ್ಲಿ ಅಸ್ತ್ರದೇವತೆಗಳು ಸೀತೆಯಂ ಕುರಿತು . . . ಎಂದರು (ಕಗವಿ. ೧೨೭ ಉತ್ತರಾ). [ಅಸ್ತ್ರ + ದೇವತೆ]

**ಅಸ್ತ್ರರುಚಿ** (ನಾ). ಆಯುಧಗಳ ಕಾಂತಿ ; ಬಾಣಗಳ ಹೊಳಪು : ಮಿಂಚಿನಂಗಿಯು ಪೊಳಪಂ ಭಟಾಸ್ತ್ರರುಚಿಯೆಂದಿರದಂಗಜರಾಜ ಸೈನ್ಯಭೀತಿಯನೊಳಕೆಯ್ದುದಬ್ದಸಮಯೋತ್ಸವದೊಳ್ ಪಥಿಕಾಂಗನಾಜನಂ (ಚಂದ್ರಪು. ೯–೪೯). [ಅಸ್ತ್ರ + ರುಚಿ]

**ಅಸ್ತ್ರವಿದ್ಯೆ** (ನಾ). ಅಸ್ತ್ರಗಳನ್ನು ಪ್ರಯೋಗಿಸುವ ವಿದ್ಯೆ, —ಕಲೆ: ಅಸ್ತ್ರವಿದ್ಯಾನಿಯತಮತಿ ಮೋಹರಿಸಿ ಸಮರಕೆ ದ್ರೋಣನನುವಾದ (ಕುವ್ಯಾದ್ರೋ. ೯ ಸೂ).

**ಅಸ್ತ್ರವಿದ್ಯಾಭಾಳಲೋಚನ** = ಅಸ್ತ್ರಗಳನ್ನು ಪ್ರಯೋಗಿಸುವುದರಲ್ಲಿ ರುದ್ರನಿಗೆ ಸಮನಾದವನು ; ಒಂದು ಬಿರುದು : ಪದ್ಮವ್ಯೂಹದಲಿ ಹೊಕ್ಕಾಳು ಮುರಳಿದಡಸ್ತ್ರವಿದ್ಯಾಭಾಳಲೋಚನನೆಂಬ ಬಿರುದನು ಬಿಟ್ಟೆ ನಾನೆಂದ (ಕುವ್ಯಾದ್ರೋ. ೪–೯). **ಅಸ್ತ್ರವಿದ್ಯಾಪಾರಗ**= ಅಸ್ತ್ರಗಳನ್ನು ಪ್ರಯೋಗಿಸುವ ಕಲೆಯಲ್ಲಿ ಪಾರಂಗತ : ಹಾರುವರು ನಾವಸ್ತ್ರವಿದ್ಯಾಪಾರಗರು ನಾವಲ್ಲ (ಕುವ್ಯಾದ್ರೋ. ೯–೪೨). [ಅಸ್ತ್ರ + ವಿದ್ಯೆ]

**ಅಸ್ತ್ರಶಾಲೆ** (ನಾ). ಆಯುಧಗಳನ್ನಿಡುವ ಮನೆ; ಶಸ್ತ್ರಾಗಾರ : ಬಂದುದಿಂದು ವಿಯಚ್ಚಕ್ರದಿನಸ್ತ್ರಶಾಲೆಗೆ ಮಹಾ ಚಕ್ರಂ (ಶಾಂತಿಪು. ೧–೧೧೫). [ಅಸ್ತ್ರ + ಶಾಲೆ$_2$]

**ಅಸ್ತ್ರಸಂಪ್ರದಾಯ** (ನಾ). ಅಸ್ತ್ರಗಳನ್ನು ಬಳಸುವ ಕ್ರಮ : ಈ ಕುಮಾರರಲ್ಲವೆ ಜನ್ಮಸಿದ್ಧವಾಗಿರುವ ಅಸ್ತ್ರಸಂಪ್ರದಾಯವುಳ್ಳವರು (ಕಗವಿ. ೧೨೮. ಉತ್ತರಾ). [ಅಸ್ತ್ರ + ಸಂಪ್ರದಾಯ]

**ಅಸ್ತ್ರಾಲಿ** (ನಾ). ಬಾಣಗಳ ಸಮೂಹ ; ಅಸ್ತ್ರಗಳ ಸಾಲು : ಶೂಲಾಯುಧದಿಂದಿಡೆ ಲಯಕಾಲೋರಗನಂತೆ ಬರ್ಪುದಂ ಜಯಲಕ್ಷ್ಮೀಲೋಲಂ ಲಕ್ಷ್ಮೀಧರನಸ್ತ್ರಾಲಿಗಳಿಂ ಖಂಡಖಂಡಮಾಗಿರೆ ಕಡಿದಂ (ಪಂರಾಮಾ. ೧೪–೨೫). [ಅಸ್ತ್ರ + ಅಲಿ$_5$]

**ಅಸ್ತ್ರಿ** (ನಾ). ಅಸ್ತ್ರಧಾರಿ ; ಬಿಲ್ಗಾರ : "ಬಿಲ್ಗಾರನು" (ಅಮರ. ಟೀಕೆ). [ಸಂ. ಅಸ್ತ್ರಿನ್]

**ಅಸ್ಥಾಗ** (ನಾ). ಆಳವಾದುದು ; ಅಗಾಧ : "ಅತ(ಳಾ)ಳಃ, ಅಸ್ಪರ್ಶಂ, ಅಗಾಧಃ, ಗಂಭೀರಂ, ಗಭೀರಂ, ಅಸ್ಥಾಗಂ — ಈ ೫ ಗುಂಡಿತು" (ಹಲಾಯು. ೧೦೭–೨೭). [ಸಂ.]

**ಅಸ್ಥಾನ** (ನಾ). ಸ್ಥಾನವಲ್ಲದ್ದು ; ಯೋಗ್ಯವಲ್ಲದ ಸ್ಥಾನ : ಇದು ಮೂಲೋಕಕ್ಕಮೊಂದಚ್ಚರಿಯೆನಿಸಿದುದಸ್ಥಾನದೊಳ್ ರೂಪಮಂ ಮಾಡಿದ ಪಾಣೀಶಪ್ರಯತ್ನಂ (ಕಾದಂಪೂ. ೫೦). [ಸಂ.]

**ಅಸ್ಥಾನಪದ** (ನಾ). [ಕಾವ್ಯಮೀ] ಒಂದು ಕಾವ್ಯದೋಷ : "ಅಸ್ಥಾನಪದ – ಪದಗಳನ್ನು ಸರಿಯಾದ ಸ್ಥಾನಗಳಲ್ಲಿ ಉಪಯೋಗಿಸದೆ ಇರುವುದು" (ಕೈಪಿಡಿ. ೨೨೮). [ಅಸ್ಥಾನ + ಪದ$_2$]

**ಅಸ್ಥಿ** (ನಾ). ಮೂಳೆ; ಎಲುಬು : "ಮೂಳೆಯೆನಲೆಲುವೆನಲ್ಕಸ್ಥಿ" (ಶಬ್ದಮಂ. ೩೩); ನೆರೆದ ಹಲವಂಗದಸ್ಥಿಗಳನಾರ್ದ್ರೆಯುತ್ತ ಹೊಕ್ಕನಾ ಸುಡುಗಾಡನವನೀಶನು (ಹಚಕಾ. ೧೧–೪೧). [ಸಂ.]

**ಅಸ್ಥಿಗತ** (ಗು). ಮೂಳೆಯನ್ನು ಹೊಕ್ಕ; ಎಲುಬನ್ನು ಸೇರಿದ; ಮೂಳೆಗೆ ವ್ಯಾಪಿಸಿದ; ಬಹುಕಾಲದಿಂದ ಇರುವ: ರಾ ಎಂಬ ಮಾತ್ರದೊಳು ರಕ್ತಮಾಂಸದೊಳಿದ್ದ ಆಯಸ್ಥಿಗತವಾದ ಅತಿಪಾಪವನ್ನು ಮಾಯವನು ಮಾಡಿ ಮಹರಾಯ ಮುಕ್ತಿಯ ಕೊಡುವ ದಾಯವನು ವಾಲ್ಮೀಕಿ ಮುನಿರಾಯ ಬಲ್ಲ (ಪುರಂದ. ೫–೫೧–೧); ಬಹುಕಾಲದಿಂದ ಅಲ್ಲಿ ನೆಲಸಿ ಅಸ್ಥಿಗತವಾದ ಗುಣಕ್ರಿಯಾ ವ್ಯಾಪಾರಗಳು (ನಿಬಂಧ. I, ೧೦). [ಅಸ್ಥಿ + ಗತ]

**ಅಸ್ಥಿಗತಜ್ವರ** (ನಾ). ಮೂಳೆಯೊಳಗೆ ಸೇರಿದ ಜ್ವರ : ಕಹಿಪಡವಲ, ಕಟುಕರೋಹಿಣಿ, ಭದ್ರಮುಸ್ತೆ, ಎಲುವನ ಸಂದಿಬೇರು, ಶುಂಠಿ, ಪಾಪಟಿಬೇರು, ಪರ್ಪಾಟಕ ಇವೆಲ್ಲ ಸಮಭಾಗ ಕಷಾಯವಿಕ್ಕಿ ಸೇವಿಸೆ ಅಸ್ಥಿಗತಜ್ವರ ಗುಣವಕ್ಕುಂ (ಸಕವೈ. ೧೦೮). [ಅಸ್ಥಿಗತ + ಜ್ವರ]

**ಅಸ್ಥಿಪಂಜರ** (ನಾ). ಎಲುಬುಗೂಡು; (ಶರೀರದ) ಮೂಳೆಗಳ ರಚನೆ: "ಅಸ್ಥಿಪಂಜರಂ ಕಂಕಾಳಮೆನಲೊಡಲಯೆಲು" (ಮಂಗರಾ. ೧೧೬–೬); ಅಸ್ಥಿಪಂಜರದಂತೆವೋಲಸ್ಥಿರ ಸ್ಥವಿರೆಯಂ ಕಂಡೊಡನೆ ಕೈಕೆ ನಡೆದಳ್ ಬಳಿಗೆ (ಶ್ರೀರಾಮಾ. ೨೧–೫೫೩). [ಅಸ್ಥಿ + ಪಂಜರ$_1$]

**ಅಸ್ಥಿಭಂಗ** (ನಾ). ಮೂಳೆ ಮುರಿಯುವುದು. [ಅಸ್ಥಿ + ಭಂಗ]

**ಅಸ್ಥಿರ** (ಗು). ೧. ಸ್ಥಿರವಲ್ಲದ; ನೆಲೆಯಿಲ್ಲದ; ಸ್ವಲ್ಪಕಾಲ ಮಾತ್ರ ನಿಲ್ಲುವ; ಚಂಚಲವಾದ: ಸ್ಥಿರಾಸ್ಥಿರ ಶುಭಾಶುಭ ಸುಸ್ವರದುಸ್ವರ . . . ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬–೪೯ ವ). ೨. ಭದ್ರವಲ್ಲದ; ಅಲ್ಲಾಡುವ. [ಸಂ.]

**ಅಸ್ಥಿರಚರಿತೆ** (ನಾ). ಚಂಚಲವಾದ ನಡತೆಯುಳ್ಳವಳು : ಅನುಚಿತೆಯರಸ್ಥಿರಚರಿತೆಯರು ವಿಗಡೆಯರು (ಬಸವು. ೪೦–೫೩).
[ಸಂ. ಅಸ್ಥಿರಚರಿತಾ]

**ಅಸ್ಥಿರತೆ** (ನಾ). = ಅಸ್ಥಿರತ್ವ. [ಸಂ. ಅಸ್ಥಿರತಾ]

**ಅಸ್ಥಿರತ್ವ** (ನಾ). ಸ್ಥಿರವಿಲ್ಲದಿರುವಿಕೆ; ಚಂಚಲತೆ. [ಸಂ.]

**ಅಸ್ಥಿವಳ್ಳಿ, ಅಸ್ತಿವಳ್ಳಿ** (ನಾ). ಮಂಗರವಳ್ಳಿ ಗಿಡ; ನರಳೆಕುಡಿ; ವಜ್ರವಲ್ಲಿಗಿಡ : "ಅಸ್ಥಿವಳ್ಳಿ [ಪಾಠಾಂ. ಅಸ್ತಿವಳ್ಳಿ, ಯಸ್ತಿಮಲ್ಲಿ] ಮಂಗುರವಳ್ಳಿ" (ಮಂಗರಾ. ೪೩–೪೩). **ಅಸ್ತಿವಳ್ಳಿ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ. ಅಸ್ಥಿವಲ್ಲೀ]

**ಅಸ್ಥಿಸಂಗ್ರಹ** (ನಾ). ಹೆಣವನ್ನು ಸುಟ್ಟಮೇಲೆ ಶಾಸ್ತ್ರೋಕ್ತವಾಗಿ ಮೂಳೆಗಳನ್ನು ಸಂಗ್ರಹಿಸುವುದು. [ಅಸ್ಥಿ + ಸಂಗ್ರಹ]

**ಅಸ್ಥಿಸಂಚಯ** (ನಾ). = ಅಸ್ಥಿಸಂಗ್ರಹ. [ಅಸ್ಥಿ + ಸಂಚಯ]

**ಅಸ್ಥಿಸಾರ** (ನಾ). ಮಜ್ಜೆಯೆಂಬ ಧಾತು. [ಅಸ್ಥಿ + ಸಾರ$_2$]

**ಅಸ್ಥಿಸ್ರಾವ** (ನಾ). ಮೂಳೆ ಕರಗಿ ಹರಿಯುವ ಒಂದು ರೋಗ; ಶ್ವೇತಸ್ರಾವ; ಸೋಮರೋಗ; ಬಿಳಿಸೆರಗು : ಘೃತಶೇಷವಾಗಿ ಕಾಸಿ ಹದದಲ್ಲಿ ಇಳುಹಿ ಪ್ರಾತಃಕಾಲದಲ್ಲಿ ಸೇವಿಸಲು ಸ್ತ್ರೀಯರುಗಳಿಗೆ ಹೆನ್ನೆತ್ತರು, ಅಸ್ರುಗ್ದರ, ಪ್ರದರ, ಅಸ್ಥಿಸ್ರಾವ ಇಷ್ಟೂ ಪರಿಹರ (ವೈದ್ಯಸಾ. ೧೪೨ ಟೀಕೆ). [ಅಸ್ಥಿ + ಸ್ರಾವ]

**ಅಸ್ನಾತ** (ಗು). ಸ್ನಾನ ಮಾಡದ. [ಸಂ.]

**ಅಸ್ನಾತೆ** (ನಾ). ಸ್ನಾನ ಮಾಡದವಳು : ಅಸ್ನಾತೆಯಾಗಿಯೆ ಪೂಜ್ಯೆ ತೆರಳ್ಕೆ ಬಯಸುವಳ್, ತಂದೆ, ಪತಿ ಪಾದದರ್ಶನಕೆ (ಶ್ರೀರಾಮಾ. ೮೩೪–೨೧೧). [ಸಂ. ಅಸ್ನಾತಾ]

**ಅಸ್ನಿಗ್ಧ** (ಗು). ೧. ಜಿಡ್ಡಿಲ್ಲದ. ೨. ಸ್ನೇಹವಿಲ್ಲದ; ಕ್ರೂರವಾದ : "ಅಸ್ನಿಗ್ಧಮೆನೆ ಬೆಟ್ಟಿತು" (ಮಂಗರಾ. ೧೩೪–೩೪). [ಸಂ.]

**ಅಸ್ನೇಹಿ** (ನಾ). ಸ್ನೇಹವಿಲ್ಲದವನು; ಪ್ರೀತಿಯಿಲ್ಲದವನು : ಎಂಥವನನ್ನು ಅಸ್ನೇಹಿ ಎಂದು ಕರೆಯುತ್ತೇವೋ ಅಂಥವನೂ ಸಹ ಸಮಾಜ ಸಂಬಂಧಗಳನ್ನು ಉಳಿಸಿಕೊಂಡಿರುತ್ತಾನೆ (ರಾಜ್ಯಶಾ. ೩೬).
[ಸಂ. ಅಸ್ನೇಹಿನ್]

**ಅಸ್ಪಂದತೆ** (ನಾ). ಅಲುಗದಿರುವಿಕೆ; ಅಲ್ಲಾಡದಿರುವಿಕೆ: ಇಂದು ಚತುರ್ದಶಿಯಾಯ್ತುದಱಿಂದಂ ತದ್ವಿಧ್ಯೆಯಂ ಮನೋಮುದದಿಂದಸ್ಪಂದತೆಯಿನಿರ್ದು ಸಾಧಿಪೊಡೊಂದಿದ ಮಿತ್ರರ್ಕಳಿಲ್ಲದುಬ್ಬೆಗಮುತ್ತೆಂ (ನೇಮಿಪು. ೩–೧೫೪). [ಸಂ. ಅಸ್ಪಂದತಾ]

**ಅಸ್ಪರ್ಶ** (ಗು). ೧. ಸ್ಪರ್ಶವಿಲ್ಲದಿರುವ. (ನಾ). ೨. [ವ್ಯಾಕ] (ವರ್ಣಮಾಲೆಯಲ್ಲಿ) ಸ್ವರ ಮತ್ತು ಅವರ್ಗೀಯ ವ್ಯಂಜನಗಳು. [ಸಂ.]

**ಅಸ್ಪಷ್ಟ** (ಗು). ಸ್ಪಷ್ಟವಾಗಿಲ್ಲದ; ಸರಿಯಾಗಿ ಕಾಣದ; ಅವ್ಯಕ್ತವಾದ: ನುಡಿ ಮುನ್ನಂ ಸ್ಪಷ್ಟಮಾಗಿರ್ದುದು ಬೞಿಕಮಿದಸ್ಪಷ್ಟಮಾಯ್ತುಗ್ಗಿ ಶಾಪಂಗುಡಲ್ (ಕಾದಂಪೂ. ೬೬). [ಸಂ.]

**ಅಸ್ಪಷ್ಟಾಕ್ಷರ** (ನಾ). ೧. ಸ್ಪಷ್ಟವಾಗಿಲ್ಲದ ಅಕ್ಷರ. ೨. [ಕಾವ್ಯಮೀ] ಪ್ರಹೇಳಿಕೆ; ಕಾವ್ಯದ ಒಂದು ಪ್ರಭೇದ; ಸ್ಪಷ್ಟವಾದ ಅಕ್ಷರಗಳಿಲ್ಲದಿರುವುದರಿಂದ (ಅರ್ಥದಲ್ಲಿ ಸ್ಪಷ್ಟತೆಯಿಲ್ಲದಿರುವ) ಒಂದು ಬಂಧ: ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನಮಾನಟ್ಟು ಬಡ್ಡಿಸು ನಾಮಱಿಯದೆನಸುಂ ಸವಿಯಂ ಪುಟ್ಟದಾಱುಮಱಿಯದದಱ ಪೆಸರೊಳುಟ್ಟುದಂ ಪೇೞ್ ಕೇಳ್ದನೆಂದಱಿಯೆಂ—ಇದು ಅಸ್ಪಷ್ಟಾಕ್ಷರಂ (ಕವಿರಾ. ೨–೧೪೫). [ಅಸ್ಪಷ್ಟ + ಅಕ್ಷರ]

**ಅಸ್ಪೃಶ್ಯ** (ಗು). ೧. ಮುಟ್ಟಬಾರದ. ೨. ಮುಟ್ಟಲಾಗದ : ಬೀಱುಡೆ ಬಾಯ ತಂಬುಲಮಿವಸ್ಪೃಶ್ಯಂಗಳೇನಲ್ಲಮೇ (ಪಂರಾಮಾ. ೯–೧೪೧). (ನಾ). ೩. ಮುಟ್ಟಬಾರದವನು; ಹೊಲೆಯ. [ಸಂ.]

**ಅಸ್ಪೃಶ್ಯಕಾರು** (ನಾ). ಚಮ್ಮಾರ ಮುಂತಾದ ಕಸುಬುದಾರರಲ್ಲಿ ಅಸ್ಪೃಶ್ಯವರ್ಗಕ್ಕೆ ಸೇರಿದ ಪಂಗಡ : ಸ್ಪೃಶ್ಯಾಸ್ಪೃಶ್ಯಕಾರುಗಳುಮೆಂದಿರ್ತೆಱದ ಶೂದ್ರಸಂತತಿಗೆ . . . ಉಪದೇಶಂಗೆಯ್ದು (ಆದಿಪು. ೮–೬೪ ವ). [ಅಸ್ಪೃಶ್ಯ + ಕಾರು$_5$]

**ಅಸ್ಪೃಷ್ಟ** (ಗು). ಮುಟ್ಟಲ್ಪಡದ; ಮುಟ್ಟದ. 'ಅಸ್ಪೃಷ್ಟಪಾಂಶು' ಪರಾ. [ಸಂ.]

**ಅಸ್ಪೃಷ್ಟಪಾಂಶು** (ನಾ). ಧೂಳು ಸೋಕದವನು; ಧೂಳಿನ ಸಂಪರ್ಕವಿಲ್ಲದವನು : ಅಸ್ಪೃಷ್ಟಪಾಂಶುವಾದೊಡಂ ಶಾಂತಿಧಾರಾರ್ಥಮಾಗಿ ಶ್ರೀಪದಮಂ ಹರ್ಷಾಶ್ರುಪ್ರಾಪಿತ ಜಳದಿಂದೆ ತೊಳೆದು ತಲೆಯೊಳ್ ತಳಿದು (ಚಂದ್ರಪು. ೫–೨೨ ವ, ೨೩). [ಅಸ್ಪೃಷ್ಟ + ಪಾಂಶು]

**ಅಸ್ಫುಟ** (ಗು). ಸ್ಫುಟವಲ್ಲದ; ಸ್ಪಷ್ಟವಾಗಿಲ್ಲದ; ವ್ಯಕ್ತವಾಗಿ ತೋರದ: ಮುಗ್ಧಮೆಂಬವೋಲಸ್ಫುಟಂ ಸುಸ್ಥಿರಮುಪುಷ್ಪವನರಾಜಿಗಳ್ (ಶ್ರೀರಾಮಾ. ೧೧–೨೧೮). [ಸಂ.]

**ಅಸ್ಫುಟವಚನ** (ನಾ). ಸ್ಪಷ್ಟವಾಗಿ ಕೇಳಿಬರದ ಮಾತು; ಅಸ್ಪಷ್ಟವಾದ ಮಾತು; ತೊದಲು ನುಡಿ: ನೆಗಟ್ದರ್ಧಮಾಗಧೀಯಂ ನೆಗಟ್ದಜಿತಾನನದೊಳಾಗಳಸ್ಫುಟವಚನಂ (ಅಜಿಪು. ೫–೬೫).
[ಅಸ್ಫುಟ + ವಚನ]

**ಅಸ್ಫುರಿತ** (ಗು). ಪ್ರಕಾಶಿಸದ; ಹೊಳೆಯದ : ಅಶ್ಲಕ್ಷ್ಣಕೈರವವಕ್ರೀಡಿತ ಹಂಸವಸ್ಫುರಿತ ಚಂದ್ರಾದಿತ್ಯಂ . . . ಒಪ್ಪಿರ್ದುದಭ್ರಾಗಮಂ (ಜಗನ್ನಾ. ೪–೨೬). [ಸಂ.]

**ಅಸ್ಮತ್ಕಾರ್ಯ** (ನಾ). (ನನ್ನ) ನಮ್ಮ ಕೆಲಸ: ಅರಿಪುರತ್ರಯ ದಹನ ಕರ್ಮಸ್ಫುರಣವಸ್ಮತ್ಕಾರ್ಯವದು ಗೋಚರಿಸಿತು (ಕುವ್ಯಾಕ. ೭–೪೪).
[ಸಂ. (ಅಸ್ಮದ್ + ಕಾರ್ಯ)]

**ಅಸ್ಮತ್ಪಿತೃ** (ನಾ). (ನನ್ನ) ನಮ್ಮ ತಂದೆ : ಅಸ್ಮತ್ಪಿತೃವೆನ್ನ ತಂಗೆಯಂ ಮದುವೆಮಾೞ್ಪುತ್ಸಾಹದಿಂದಟ್ಟಿದಂ (ಪಂರಾಮಾ. ೨–೬). [ಸಂ. (ಅಸ್ಮದ್ + ಪಿತೃ)]

**ಅಸ್ಮತ್ಪುತ್ರ** (ನಾ). (ನನ್ನ) ನಮ್ಮ ಮಗ : ಎಂತಸ್ಮತ್ಪುತ್ರನಂ ಸಂಗರದೊಳಟ್ಟಿದೆ (ಪಂಪಭಾ. ೧೧–೧೫೧) ; ನೀಂ ರಕ್ಷಿಸು ರೌಹಿಣೇಯನೆನಿಪಸ್ಮತ್ಪುತ್ರನಂ (ಜಗವಿ. ೩–೨೩). [ಸಂ. (ಅಸ್ಮದ್ + ಪುತ್ರ)]

**ಅಸ್ಮತ್ಪುರೋಭಾಗ** (ನಾ). (ನನ್ನ) ನಮ್ಮ ಮುಂಭಾಗ, —ಎದುರುಗಡೆ: ಇದಾರಸ್ಮತ್ಪುರೋಭಾಗದಲ್ಲಿ ಸೇವಾಮಧುರವಚನವಿಳಾಸಪರರೆಂದ (ಕುವ್ಯಾಗ. ೧೦–೪). [ಸಂ. (ಅಸ್ಮದ್ + ಪುರೋಭಾಗ)]

**ಅಸ್ಮತ್ಪ್ರಭು** (ನಾ). (ನನ್ನೊಡೆಯ) ನಮ್ಮೊಡೆಯ : ಅಸ್ಮತ್ಪ್ರಭು ಕೂಸಿಂದಿರ್ದನಿಲ್ಲೆ (ಶಾಂತಿಪು. ೧೦–೬೨). [ಸಂ. (ಅಸ್ಮದ್ + ಪ್ರಭು)]

**ಅಸ್ಮತ್ಪ್ರಿಯ** (ನಾ). (ನನ್ನ) ನಮ್ಮ ಪ್ರಿಯ: ಇನನಸ್ಮತ್ಪ್ರಿಯಂ (ಚಂದ್ರಪು. ೮–೧೧). [ಸಂ. (ಅಸ್ಮದ್ + ಪ್ರಿಯ)]

**ಅಸ್ಮದನುಗ್ರಹಾರ್ಥ** (ಗು). (ನನ್ನನ್ನು) ನಮ್ಮನ್ನು ಅನುಗ್ರಹಿಸುವ ಉದ್ದೇಶದಿಂದ ಕೂಡಿದ: ಕಿರಾತವ್ಯವಹರಣೆಯಲಿ ಸುಳಿದುದಸ್ಮದನುಗ್ರಹಾರ್ಥವಲಾ (ಕುವ್ಯಾಅ. ೬–೫೦). [ಸಂ. (ಅಸ್ಮದ್ + ಅನುಗ್ರಹ + ಅರ್ಥ)]

**ಅಸ್ಮದಾದ್ಯ** (ನಾ). ನಾನೇ ಮುಂತಾದವರು ; (ನನ್ನಂಥ) ನಮ್ಮಂಥವರು : ಅಂಘ್ರಿಯ ದರುಶನದ ಫಲಭೋಗ ಸಾರಿದುದಸ್ಮದಾದ್ಯರಿಗೆ (ಕುವ್ಯಾಉ. ೮–೫೬). [ಸಂ. (ಅಸ್ಮದ್ + ಆದ್ಯ)]

**ಅಸ್ಮದಾರಾಧನ** (ನಾ). (ನನ್ನ) ನಮ್ಮ ಪೂಜೆ: ಸದೋಷನಿವಂದಲಸ್ಮದಾರಾಧನ ವಿಘ್ನಕಾರಿ (ಶಾಂತಿಪು. ೯–೬). [ಸಂ. (ಅಸ್ಮದ್ + ಆರಾಧನ)]

**ಅಸ್ಮದೀಯ** (ಗು). ೧. (ನನಗೆ) ನಮಗೆ ಸೇರಿದ; ನಮ್ಮದಾದ : ಪೋದೆಡೆಯೊಳಸ್ಮದೀಯ ಕುಶಲವಾರ್ತೆಗೆ ತಲ್ಲಣಿಸಲ್ವೇಡ (ಶಾಂತಿಪು. ೨–೬೬ ವ) ; ಇನ್ನಸ್ಮದೀಯ ಸಹಜಾತನಂ ಪುರಾಭ್ಯಂತರದೊಳೆಂತು ವಿಹಾರಿಸಲೀವೆನಲ್ಲೆಂ ನೀಮೆಲ್ಲಮನುರಾಗದೆ ಪೋಗಿಂ ಎಂದು ಮಹೀವಲ್ಲಭಂ ಬೆಸಸೆ (ನೇಮಿಪು. ೩–೧೩೬ ವ). (ನಾ). ೨. (ನನ್ನದು) ನಮ್ಮದು. [ಸಂ.]

**ಅಸ್ಮದ್ಗುಣ** (ನಾ). (ನನ್ನ) ನಮ್ಮ ಗುಣ : ತಾನೊಂದುಪಚಾರಧರನಾಗಿಯುಮಸ್ಮದ್ಗುಣಚ್ಛೇದಕಸಮರ್ಥಕನಾಗಿ ಬಂದು (ಶಾಂತಿಪು. ೯–೯೧ ವ). [ಸಂ. (ಅಸ್ಮದ್ + ಗುಣ)]

**ಅಸ್ಮದ್ಗುರು** (ನಾ). (ನನ್ನ) ನಮ್ಮ ಗುರು: ಅಸ್ಮದ್ಗುರುಗಳುಂ ತ್ರೈಲೋಕ್ಯಗುರುಗಳುಮಪ್ಪ ಕೀರ್ತಿಧರ ಗುರುಗಳ ಸಭಾಮಂಡಳಮಂ (ಶಾಂತಿಪು. ೪–೮೨ ವ). [ಸಂ. (ಅಸ್ಮದ್ + ಗುರು)]

**ಅಸ್ಮದ್ಧರಣೀಶ** (ನಾ). (ನನ್ನ) ನಮ್ಮ ನೆಲದೊಡೆಯ; ನಮ್ಮ ರಾಜ : ತುರಗಾರೂಢನೀಬರ್ಪನಸ್ಮದ್ಧರಣೀಶಂ (ಶಾಂತಿಪು. ೫–೩೯). [ಸಂ. (ಅಸ್ಮದ್ + ಧರಣೀಶ)]

**ಅಸ್ಮರಣ** (ನಾ). ಸ್ಮರಣೆಯಿಲ್ಲದಿರುವುದು ; ನೆನಪಿಲ್ಲದಿರುವುದು ; ವಿಸ್ಮೃತಿ: ಪರಿಕಿಪೊಡಸ್ಮರಣಮನಾದರಂ . . . ಸಾಮಯಿಕವ್ರತಕ್ಕತಿಚಾರಂ (ಸುಕುಮಾ. ೬–೨೧). [ಸಂ.]

**ಅಸ್ಮಾನಿ** (ನಾ). ನೀಲಿಯ ಬಣ್ಣ ; ಮೇಘವರ್ಣ: ೫ನೆದರಿಂದ ಆಸ್ಮಾನೀ ಬಣ್ಣದ್ದು (ಮುಂಬಯಿ. ೬–೧೫೧) ; "ನನ್ನ ಅಸ್ಮಾನೀಪತ್ತಲ ಮೊನ್ನೆ ಗಂಜಿಗೆ ಕೊಟ್ಟೆಯಲ್ಲ ? ಇನ್ನು ನಾನು ಯಾವುದು ಉಡಬೇಕು" (ರಕ್ತಧ್ವ. ೨೩೪). [← ಮರಾ. ಅಸ್ಮಾನೀ ; ಹಿಂ. ಆಸ್‌ಮಾನೀ = ಆಕಾಶನೀಲಿ]

**ಅಸ್ಮಿತೆ** (ನಾ). ೧. ಮಂದಹಾಸವಿಲ್ಲದವಳು. ೨. [ತತ್ತ್ವಶಾ] ನಾನು, ನನ್ನದು ಎಂಬ ಅಭಿಮಾನ; ಅಹಂಕಾರ: ಕ್ಲೇಶಗಳು – ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ ಎಂದು ಐದು ಇವೆ (ಅಮೃತ. ೧–೨೨ ಟೀಕು) ; ಸ್ಮಿತವೆ ವಿಸ್ಮಿತವಾಯ್ತು ಅಸ್ಪರ್ಶ ಸ್ಪರ್ಶದಲಿ ಅಸ್ಮಿತೆಯ ಸ್ಫೂರ್ತಿಸಿತ್ತು (ಸೂರ್ಯಪಾ. ೬೯–೧೮). [ಸಂ. ಅಸ್ಮಿತಾ]

**ಅಸ್ಮೃತ** (ಗು). ಸ್ಮರಿಸದ; ನೆನೆಯದ. [ಸಂ.]

**ಅಸ್ಮೃತಾಹಾರ** (ನಾ). ಆಹಾರವನ್ನು ಸ್ಮರಿಸದವನು : ವಿಂಶತಿಸಹಸ್ರವರ್ಷಪರ್ಯಂತ[ಮ]ಸ್ಮೃತಾಹಾರನುಂ (ಶಾಂತಿಪು. ೭–೭೭ ವ). [ಅಸ್ಮೃತ + ಆಹಾರ]

**ಅಸ್ಮೃತಿ** (ನಾ). ನೆನಪಿಲ್ಲದಿರುವುದು ; ಮರೆವು. [ಸಂ.]

**ಅಸ್ಮೇರ** (ಗು). ೧. ಮುಗುಳುನಗೆಯಿಲ್ಲದ. ೨. ಅರಳದ ; ಬಿರಿಯದ: ಅಸ್ಮೇರಾಬ್ಜವಶ್ಲಕ್ಷ್ಣಕೈರವಂ . . . ಒಪ್ಪಿರ್ದುದಭ್ರಾಗಮಂ (ಜಗವಿ. ೪–೨೯). [ಸಂ.]

**ಅಸ್ರ** (ನಾ). ೧. ಕಣ್ಣೀರು : "ಅಶ್ರು . . . ನಯನಜಳಂ, ಅಸ್ರಃ — ಈ ೫ ಕಣ್ಣನೀರ್" (ಹಲಾಯು. ೮೬–೩೬೫). ೨. ರಕ್ತ: "ಕ್ಷತಜಂ, ಲೋಹಿತಂ, ಅಸ್ರಂ, ರುಧಿರಂ, ಅಸೃಕ್, ಶೋಣಿತಂ, ರಕ್ತಂ— ಈ ೭ ನೆತ್ತರು" (ಹಲಾಯು. ೧೨೪–೧೦) ; ಅತಿವಿಶದ ವಿಶಾಲೋರುಕ್ಷತದಿಂದೊಱೆದನಿತು ಜಡೆಯುಮಂ ನಾಂದಿ ಮನಃಕ್ಷತದೊಡನೆಬ್ಬಱಿಸಿದುದುತ್ಥಿತಮಾವಂದಸ್ರಮಿಶ್ರಗಂಧಂ ಮುನಿಯಂ (ಪಂಪಭಾ. ೧–೧೦೫). ೩. ಕೂದಲು ; ತಲೆಕೂದಲು. ೪. ರಾಗದ್ವೇಷದಿಂದ ಶತ್ರುವನ್ನು ಭೇದಿಸುವುದು : "ವಿಲೋಚನಜಲ ರಕ್ತ ಕೇಶಲಮೆಂಬಿವುಮಸ್ರವೆನಿಕ್ಕುಂ" (ನಾನಾರ. ೬೬). ೫. ಮೂಲೆ; ಕೊನೆ. 'ಚತುರಸ್ರ' ಪರಾ. [ಸಂ.]

**ಅಸ್ರಪ** (ನಾ). ರಕ್ತ ಕುಡಿಯುವವನು; ರಾಕ್ಷಸ; ದೈತ್ಯ. [ಸಂ.]

**ಅಸ್ರು** (ನಾ). ಕಣ್ಣೀರು (ಕ). [ಸಂ. ಅಶ್ರು]

**ಅಸ್ವ** (ನಾ). ಏನೂ ಇಲ್ಲದವನು ; ತನ್ನದಾಗಿ ಯಾವ ಸ್ವತ್ತೂ ಇಲ್ಲದವನು : ರಸದ ಬಾವಿಯಲ್ಲಿ ಅಸಿಯ ಮಡುವ ಕಲಕಿ . . . ಅಸ್ವನ ಚಿತ್ತವ ಕಿತ್ತು ನಿಶ್ಚಯದಲ್ಲಿ ಆಡುವಾತನೆ ನಿಜವಸ್ತು (ಅಜಿಮಾ. ೪೦–೬೯) ; ರವಿ . . . ಕುಂಭದೊಳ್ ಕೂಡೆ ದೇಹೋದ್ಭವ ಭಾಗ್ಯೋತ್ಸೃಷ್ಟನಸ್ವಂ (ಜಾತತಿ. ೧೭–೧೭). [ಸಂ.]

**ಅಸ್ವಚ್ಛ** (ಗು). ಸ್ವಚ್ಛವಲ್ಲದ; ಶುದ್ಧವಲ್ಲದ : ಅವಿಶಾಲಾಂಬರವಪ್ರಸನ್ನದಿವವಸ್ಪಷ್ಟಾಧ್ವವಸ್ವಚ್ಛತೋಯಂ . . . ಒಪ್ಪಿದುರ್ದಭ್ರಾಗಮಂ (ಜಗವಿ. ೪–೨೯). [ಸಂ.]

**ಅಸ್ವಚ್ಛಂದ** (ನಾ). ಪರಾಧೀನ; ಅಸ್ವತಂತ್ರ ; ಸ್ವಂತ ಇಚ್ಛೆಯಂತೆ ನಡೆಯಲಾರದವನು. [ಸಂ.]

**ಅಸ್ವತಂತ್ರ** (ನಾ). ಸ್ವಾತಂತ್ರ್ಯವಿಲ್ಲದವನು; ಪರಾಧೀನ. [ಸಂ.]

**ಅಸ್ವತಂತ್ರತೆ** (ನಾ). ಇತರರಿಗೆ ಅಧೀನವಾಗಿರುವಿಕೆ; ಪರಾಧೀನತೆ : ಮಾಯೆಯು ಮಿಥ್ಯೆಯಪ್ಪುದಱಿಂ ಸದ್ರೂಪಚೈತನ್ಯಮಂ ಬಿಟ್ಟು ತೋಱದಿಹುದೇ ಅಸ್ವತಂತ್ರತೆಯೆನಿಸುವುದು (ವಿವೇಕ. ೨೯). [ಸಂ. ಅಸ್ವತಂತ್ರತಾ]

**ಅಸ್ವಪ್ನ** (ಗು). ೧. ನಿದ್ರೆಯಿಲ್ಲದ. (ನಾ). ೨. ದೇವತೆ: "ನಿರ್ಜರಃ, ಅಸ್ವಪ್ನಃ . . . ದೈವತಂ – ಈ ೨೧ ದೇವರ್ಕಳ ಪೆಸರ್" (ಹಲಾಯು. ೨–೪) ; ಅವನಿಯಂ ಧರಣಿಯಸ್ವಪ್ನರಿಂಗರ್ಪಿಸಿದ ಕಾರಣಂ ಕೇಳುವೆಂ (ಪರಶು. ೪೦–೩೫). [ಸಂ.]

**ಅಸ್ವಪ್ನಾದ್ರಿ** (ನಾ). ದೇವತೆಗಳ ಪರ್ವತ; ಮೇರುಪರ್ವತ: ಅಬ್ಧಿಗಳೊಳ್ ಪಾಲ್ಗಡಲ್ ಅದ್ರಿಸಂಕುಲದೊಳಸ್ವಪ್ನಾದ್ರಿ . . . ಹೊಯ್ಸಳೋರ್ವೀಶಮಂತ್ರಿಗಳೊಳ್ ಕೇಶವದಂಡನಾಯಕನನೂನಶ್ರೀಗಧಿಷ್ಠಾಯಕಂ (ಎಕ. V, ಚನ್ನರಾ. ೨೪೪–೨೧ ; 1209). [ಅಸ್ವಪ್ನ + ಅದ್ರಿ]

**ಅಸ್ವಸ್ನಾನಕೆ** (ನಾ). ದೇವ ದುಂದುಭಿ; ದೇವತೆಗಳ ಭೇರಿ: ದಿವಿಜ ಜಯಧ್ವಾನಮುಂ ಕಿನ್ನರೀಗೇಯಮುಮಸ್ವಸ್ನಾನಕಧ್ವಾನಮುಮೆಸೆಯೆ (ಜಗನಿ. ೮–೧೧೦). [ಅಸ್ವಪ್ನ + ಅನಕ]

**ಅಸ್ವಭಾವಿಕೆ** (ನಾ). = ಅಸ್ವಾಭಾವಿಕ: ಅಸ್ವಭಾವಿಕವಲ್ಲ ನೈಜವಿದು ತನಗೆ (ಜೈಮಿಭಾ. ೨೬–೨೦). [< ಸಂ. ಅಸ್ವಾಭಾವಿಕ]

**ಅಸ್ವರ** (ಗು). ೧. ಸ್ವರವಲ್ಲದ. ೨. ಸ್ವರವಿಲ್ಲದ; ಶಬ್ದವಿಲ್ಲದ: ಅಸ್ವರಾನ್ಮಭೃತವಂದೊಪ್ಪಿರ್ದುದಭ್ರಾಗಮುಂ (ಜಗನಿ. ೪–೨೬). ೩. [ವ್ಯಾಕ] ಸ್ವರವಲ್ಲದ್ದು; ವ್ಯಂಜನ: ನಿನಗೆ ಯೆನಗೆ ತನಗೆಂದು ಚತುರ್ಥೀ ನಿರ್ದೇಶಕ್ಕಿತರ ಸ್ಥಾನಕ್ಕಸ್ವರದಿನಿರ್ಪ ನಿನ್ ಎನ್ ತ ಂ ಗ ಳ್ (ಶಮದ. ೧೪೬). [ಸಂ.]

**ಅಸ್ವರವಿಧಿ** (ನಾ). [ವ್ಯಾಕ] ಸ್ವರವಲ್ಲದ ನಿಯಮ; ವ್ಯಂಜನವಿಧಿ: ಯರಲಣಜಟವರ್ಣೋತ್ಕರಮೆ ವಲಂ ಪದದ ಕಡೆಯೊಳಸ್ವರವಿಧಿಯಂ ಪಿರಿದುಂ ತಾಳ್ದುಗುಂ (ಶಮದ. ೪೮). [ಅಸ್ವರ + ವಿಧಿ]

**ಅಸ್ವಸ್ಥೆ** (ನಾ). ಆರೋಗ್ಯವಿಲ್ಲದವಳು; ನೆಮ್ಮದಿಯಿಲ್ಲದವಳು: ಮತ್ಪ್ರಾಣಸಮಾನೆಯಾಕೆ ನಿಜದಿಂದಸ್ವಸ್ಥೆ (ಕಾದಂಪೂ. ೯೯೧). [ಸಂ. ಅಸ್ವಸ್ಥಾ]

**ಅಸ್ವಾಧೀನ** (ಗು). ಸ್ವಂತ ಇಚ್ಛೆಗೆ ಅಧೀನವಲ್ಲದ; ಪರತಂತ್ರವಾದ. [ಸಂ.]

**ಅಸ್ವಾಧ್ಯಾಯ** (ನಾ). ೧. ವೇದಾಭ್ಯಾಸವಿಲ್ಲದಿರುವುದು; ಅಧ್ಯಯನ ಮಾಡದಿರುವುದು. ೨. ವೇದಾಭ್ಯಾಸ ಮಾಡದವನು: "ಅಸ್ವಾಧ್ಯಾಯಃ, ನಿರಾಕೃತಿಃ – ಈ ೨ ವೇದವಿಲ್ಲದವಂ" (ಹಲಾಯು. ೬೬–೨೫೧). [ಸಂ.]

**ಅಸ್ವಾಭಾವಿಕೆ** (ಗು). ಪ್ರಕೃತಿಗೆ ವಿರುದ್ಧವಾದ; ಸಹಜವಲ್ಲದ; ಕೃತಕವಾದ. [ಸಂ.]

**ಅಸ್ವಾಭಾವಿಕತೆ** (ನಾ). ನೈಜವಿಲ್ಲದಿರುವಿಕೆ; ಕೃತಕತೆ: ಅವರ ಭಾವಗಳಲ್ಲಿ ಆಗಾಗ್ಗೆ ಅಸ್ವಾಭಾವಿಕತೆಯು ಬರುತ್ತದೆ (ಕೆಲಕ. ೫೦). [ಸಂ. ಅಸ್ವಾಭಾವಿಕತಾ]

**ಅಸ್ವಾಮಿವಿಕ್ರಯ** (ನಾ). (ವಸ್ತುವಿನ) ಒಡೆತನವಿಲ್ಲದೆ ಮಾರುವುದು; ಸ್ವಾಮ್ಯವಿಲ್ಲದೆ ವಿಕ್ರಯಮಾಡುವುದು: ವ್ಯವಹಾರವು (೧) ಋಣಾದಾನ (Debt) (೨) ನಿಕ್ಷೇಪ (Bailment) (೩) ಅಸ್ವಾಮಿ ವಿಕ್ರಯ (Selling Property which is not one's own) . . . ಎಂದು ಹದಿನೆಂಟು ವಿಧವಾಗಿ ವಿಭಜಿಸಲ್ಪಟ್ಟಿತ್ತು (ಭಾರದ. ೫೬). [ಅಸ್ವಾಮಿ + ವಿಕ್ರಯ]

**ಅಸ್ವಾಮ್ಯ** (ನಾ). ಒಡೆತನವಿಲ್ಲದಿರುವುದು: ಗುರುನದೀಸುತರಳಿದ ಬಳಿಕೀ ಧರೆಗೆ ನಿನಗಸ್ವಾಮ್ಯ (ಕುವ್ಯಾಶ. ೧–೧೬). [ಸಂ.]

**ಅಸ್ವಾರಸ್ಯ** (ನಾ). ಸ್ವಾರಸ್ಯವಿಲ್ಲದಿರುವುದು; ಸೊಗಸಿಲ್ಲದಿರುವುದು; ನೀರಸ; ಸಪ್ಪೆ. [ಸಂ.]

**ಅಸ್ವಾಸ್ಥ್ಯ** (ನಾ). ಸ್ವಸ್ಥತೆಯಿಲ್ಲದಿರುವುದು; ಅನಾರೋಗ್ಯ. [ಸಂ.]

**ಅಸ್ವೈರಿಣಿ** (ನಾ). ೧. ಜಾರೆಯಲ್ಲದವಳು. ೨. ಸ್ವೇಚ್ಛೆಯಾಗಿ ನಡೆಯದವಳು. [ಸಂ. ಅಸ್ವೈರಿಣೀ]

**ಅಸ್ಸಲ್** 'ಅಸಲ್' ನೋ.

**ಅಹ**$_1$ 'ಆಗು$_1$' ಪರಾ.

**ಅಹ**$_2$ 'ಅಹಹ' ನೋ.

**ಅಹ**$_3$ (ನಾ). = ಅಹಂ ೨: ಇಂದು ಪವನಜನಹವ ಮುಱಿದರು (ಕುವ್ಯಾದ್ರೋ. ೪–೪೨); ಇವನಹವ ಮುರಿಯಲು ನಿಮ್ಮ ಮಾನಕೆ ನಿಮಿಷ ತಾನಿಲ್ಲ (ಕೋಗಯು. ೯–೮೭). [ಸಂ. ಅಹಂ]

**ಅಹಂ** (ನಾ). ೧. ನಾನು ಎಂಬ ಭಾವ: ಮನ ಮುಗ್ಧವಾದಡೇನಯ್ಯ, ಅಹಮೆಂಬುದ ಬಿಡದನ್ನಕ್ಕ? (ಲಿಂಗವ. ೪). ೨. ಗರ್ವ: ಅವನಿಗೆ ಈಚೆಗೆ ತುಂಬ ಅಹಂ, ತಡೆಯಲಿಕ್ಕೆ ಶಕ್ಯವಿಲ್ಲ (ರೂಢಿ). [ಸಂ.]

**ಅಹಂಕರಣ** (ನಾ). = ಅಹಂಕಾರ. [ಸಂ.]

**ಅಹಂಕರಿಸು** (ಕ್ರಿ). ಅಹಂಕಾರಪಡು; ಗರ್ವಿಸು; ಗರ್ವಿಷ್ಠನಾಗು: ಪಿರಿಯ ನಾನೆಂದಹಂಕರಿಸಿಕೊಂಡಿರ್ಪುದಂ ಪರಿಹರಿಸಿ (ಪದ್ಮರಾ. ೯–೧೪); ವೃಥಾ ನೀವೇಕಹಂಕರಿಸುವಿರಿ (ಕುವ್ಯಾದ್ರೋ. ೧೪–೩೧); ಹಗೆ ಬಡವೆಂದಹಂಕರಿಸುವರೆ (ಅಕ್ರೂಚ. ೨–೧೩). [ಅಹಂಕರಣ + –ಇಸು$_3$]

**ಅಹಂಕರಿಸುಹ** (ನಾ). ಅಹಂಕಾರಪಡುವುದು; ಗರ್ವಿಸುವುದು: "ಅಹಮಹಮಿಕೆ ನಾ ಬಲ್ಲಿದನ್ ತಾ ಬಲ್ಲಿದನ್ ಎಂದು ಅಹಂಕರಿಸುಹಂ" (ನಾಚಿರಾ. ೬). [ಅಹಂಕರಿಸು + –ಹ$_2$ (< –ಪ$_2$)]

**ಅಹಂಕಾರ** (ನಾ). ೧. ಗರ್ವ; ಹಮ್ಮು: ಮನುಷ್ಯನಿಗೆ ಆವೇಶ ಬಂದಾಗ ಇರುವಷ್ಟು 'ಅಹಂ'ಕಾರವು ಮತ್ತಾವಾಗಲೂ ಇರುವುದಿಲ್ಲ (ಮಲೆನಾ. ೪); ಅಹಂಕಾರಕೆ ಉದಾಸೀನವೆ ಮದ್ದು (ಗಾದೆ). ೨. [ತತ್ತ್ವಶಾ] ಸಾಂಖ್ಯ ಮತದ ಇಪ್ಪತ್ತೈದು ತತ್ತ್ವಗಳಲ್ಲಿ ಮೂರನೆಯದು: ಆ ಬುದ್ಧಿಯೆಂಬ ಸಮುದ್ರದಲ್ಲಿ ಗುಳ್ಳೆಗಳಂತೆ ಅಹಂಕಾರವೆಂಬ ಮೂರನೆಯ ತತ್ತ್ವವು ಹೊರಬೀಳುವುದು (ಹಿಂದಸಾ. ೫೫). ೩. ಅಂತಃಕರಣಗಳಲ್ಲಿ ಒಂದು: ಬುದ್ಧಿ, ಅಹಂಕಾರ, ಮನಸ್ಸು ಎಂದು ಮೂರು ಅಂತಃಕರಣಗಳು (ಹಿಂದಸಾ. ೬೦). [ಸಂ.]

**ಅಹಂಕಾರಕಾಯ** (ನಾ). 'ಅಹಂ' ಎಂದು ತಿಳಿಯುವ ಜೀವವನ್ನೇ ಶರೀರವಾಗಿ ಉಳ್ಳವನು; ಅಹಂಕಾರವನ್ನೇ ಶರೀರವಾಗಿ ಪಡೆದವನು: ಸ್ವಾಮಿಯೆಯಹಂಕಾರಕಾಯ ಲಸದೀಶಾಯತೇ . . . ನಿನಗೋಸ್ಕರಂ ನಮಸ್ಕಾರ (ವೀಶೈಪು. ೬–೧–೪೫). [ಅಹಂಕಾರ + ಕಾಯ]

**ಅಹಂಕಾರಗರಿಮ** (ನಾ). ಅಹಂಕಾರದ ಹೆಚ್ಚಳವನ್ನುಳ್ಳುದು; ಪ್ರತಿಷ್ಠೆಯನ್ನು ಪ್ರದರ್ಶಿಸುವಂಥದು: ಅಹಂಕಾರಗರಿಮಂ ಊರ್ಜಸ್ವಿ (ಕಾವ್ಯಾವ. ೬೭೨). [ಅಹಂಕಾರ + ಗರಿಮ]

**ಅಹಂಕಾರತತ್ತ್ವ** (ನಾ). ೧. [ಸಾಂಖ್ಯ] ಇಪ್ಪತ್ತೈದು ತತ್ತ್ವಗಳಲ್ಲಿ ಒಂದು: ೧ ಪ್ರಧಾನ, ೧ ಮಹತ್ತತ್ತ್ವ, ೧ ಅಹಂಕಾರತತ್ತ್ವ, ೫ ಭೂತತನ್ಮಾತ್ರೆಗಳು, ೫ ಮಹಾಭೂತಗಳು, ೧೧ ಇಂದ್ರಿಯಗಳು, ೧ ಪುರುಷ, ಈ ೨೫ ಸಾಂಖ್ಯರ ಎಣಿಕೆ (ಅಮೃತ. ೩–೧೫೦ ಟೀಕೆ); ತದನಂತರ ಮಹತ್ತತ್ತ್ವದ ದೆಸೆಯಿಂದ ವೈಕಾರಿಕ ತೈಜಸ ತಾಮಸವೆಂಬ ಮೂರು ವಿಧವಾದ ಅಹಂಕಾರತತ್ತ್ವ ಹುಟ್ಟಿತು (ಹಸಾರ. ೩–೧ ಟೀಕು). ೨. [ಅದ್ವೈತ] "ಹಿರಣ್ಯಗರ್ಭನೆಂಬ ಪ್ರಥಮಜೀವನ ಲಿಂಗಶರೀರಕ್ಕೆ ಮಹತ್ತತ್ತ್ವವೆಂದೂ ನಮ್ಮಗಳ ಲಿಂಗಶರೀರಕ್ಕೆ ಅಹಂಕಾರತತ್ತ್ವವೆಂದೂ ವ್ಯವಹಾರ" (ಹಿಂದಸಾ. ೧೯೬). ೩. [ದ್ವೈತ] ಇಪ್ಪತ್ತು ದ್ರವ್ಯಗಳಲ್ಲಿ ಒಂದು: ಗುಣತ್ರಯ, ಮಹತ್ತತ್ತ್ವ, ಅಹಂಕಾರತತ್ತ್ವ . . . ವಾಸನಾ ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಹಿಂದಸಾ. ೨೭೫). [ಅಹಂಕಾರ + ತತ್ತ್ವ]

**ಅಹಂಕಾರತನ** (ನಾ). = ಅಹಂಕಾರಭಾವ: ತಮ್ಮಯ ಹೆಚ್ಚುಕುಂದಿನ ಜೀವಕಳೆಯಱಿಯದ ನಿರರ್ಥಕ ಜೀವಿಗಳಹಂಕಾರತನಕೇನೆಂಬುದಿದಕೆಂದ (ಕುವ್ಯಾಕ. ೯–೧೭). [ಅಹಂಕಾರ + –ತನ]

**ಅಹಂಕಾರಭಾವ** (ನಾ). ಹೆಮ್ಮೆಯಿಂದ ಕೂಡಿರುವುದು; ತಾನೇ ಮೇಲು ಎಂಬ ಎಣಿಕೆ ಬೆರೆತಿರುವುದು: "ಬೆಡಿ – ಅಹಂಕಾರಭಾವೇ (ಗರ್ವಪಡು)" (ಶಮುಧಾ). [ಅಹಂಕಾರ + ಭಾವ]

**ಅಹಂಕಾರವಂತ** (ನಾ). ಅಹಂಕಾರಿ; ಗರ್ವಿಷ್ಠ. [ಸಂ. ಅಹಂಕಾರವತ್]

**ಅಹಂಕಾರವಂತೆ** (ನಾ). ಅಹಂಕಾರವನ್ನು ಉಳ್ಳವಳು ; ಗರ್ವಿಷ್ಠೆ.
[ಅಹಂಕಾರವಂತ + –ಎ$_2$]

**ಅಹಂಕಾರಾವಲಂಬನ** (ನಾ). ತಾನು ಮೇಲೆಂಬ ಭಾವನೆಯನ್ನು ಹೊಂದಿರುವುದು : ಜೀವಜಾತಕ್ಕೊಡೆಯನಾ ರಾಜೀವನಾಭನು ಬರಿಯಹಂಕಾರಾವಲಂಬನದಿಂದ ಕೆಡುತಿಹುದಖಿಳಜಗವೆಂದ (ಕುವ್ಯಾದ್ರೌ. ೮–೬೧). [ಅಹಂಕಾರ + ಅವಲಂಬನ]

**ಅಹಂಕಾರಿ** (ನಾ). ತಾನೇ ಹೆಚ್ಚೆಂಬ ಭಾವವುಳ್ಳವನು ; ಗರ್ವಿಷ್ಠ : "ಅಹಂಕಾರಿಯೆನೆ ಹೆಜರಿಂದ ಮೇಲೆಂಬನಕ್ಕು" (ಮಂಗರಾ. ೬೮–೯).
[ಸಂ. ಅಹಂಕಾರಿನ್]

**ಅಹಂಕೃತಿ** (ನಾ). = ಅಹಂಕಾರ ೧ : ಇನಿತಹಂಕೃತಿ ಭಕ್ತಿಯದು ವರ್ಧನವಹುದೆ ಹೇಳಯ್ಯ (ಬಸಪು. ೨೫–೩೨) ; ತನಗಹಂಕೃತಿಯಿಲ್ಲ ವೈರೋಚನಿಯ ಪಡಿಹಾಱಿಕೆ ಕಿರೀಟಿಯ ಮನೆಯ ಬಂಡಿಯ ಬೋವನಾದನು ವೀರನಾರಯಣ (ಕುವ್ಯಾಉ. ೧–೪೫). [ಸಂ.]

**ಅಹಂಕ್ರಿಯೆ** (ನಾ). = ಅಹಂಕಾರ ೧ : "ಸೊಕ್ಕು" (ಗಂಗಾವು. ೨೦).
[ಅಹಂ + ಕ್ರಿಯೆ]

**ಅಹಂಗೆ** 'ಅಹಗೆ' ನೋ.

**ಅಹಂತವ್ಯ** (ಗು). ಕೊಲ್ಲಬಾರದ : ನರಜೀವಿಗಳಿಗಹುದೇನಹಂತವ್ಯ ಪ್ರಯತ್ನತೆಯು (ಬಸಪು. ೩೮–೬೫). [ಸಂ.]

**ಅಹಂತೆ** (ನಾ). ಹೆಮ್ಮೆ; ಸೊಕ್ಕು : ತತ್ತುಭಯಕರ್ಮಮಧ್ಯದೊಳ್ ಪರ್ಹಂತೆಯಂ ಚಿತ್ತೆಂಬ ಕತ್ತರಿಯೊಳುಱದೆ ಕತ್ತರಿಪಂತೆ (ಲಕ್ಷ್ಮೀಚಿಂ. ೩೮–೨೦೩). [ಸಂ. ಅಹಂತಾ]

**ಅಹಂಪೂರ್ವಂ** (ಅ). ನಾನು ಮುಂದು, ತಾನು ಮುಂದು ಎಂದು : ಚಾರುತರ ಷಡ್ರಸೋಪೇತ ಮೃಷ್ಟಾನ್ನಮನೋರಂತಹಂಪೂರ್ವಮೆನೆ ಸೂದರೆಡೆಮಾಡುತ (ವೆಂಕಾರಾ. ೨–೬–೫೦). [ಸಂ.]

**ಅಹಂಪೂರ್ವಿಕೆ** (ನಾ). ನಾನು ಮುಂದು, ತಾನು ಮುಂದು ಎಂದು ನಡಸುವ ಕೆಲಸ; ಯುದ್ಧಸೇವೆ ಮುಂತಾದುವುಗಳಲ್ಲಿ ತಾನು ಮುಂದಾಗಬೇಕೆಂಬ ಉತ್ಸಾಹ : ಆಸ್ಥಾನದ ಉಪ್ಪಿನಿಂದ ಪರಿಪುಷ್ಟ ಧನ್ಯರಾಗುತ್ತಿರುವ ಸೌಭಾಗ್ಯರಿಗೆ ಸೇವಾನುಸಂಧಾನೋತ್ಸವದಲ್ಲಿ ತಪ್ಪದ ಸೌಹಾರ್ದದ ಅಹಂಪೂರ್ವಿಕೆಯ ಕೋಲಾಹಲನ (ಮಂತ್ರಶ. ೧೪–೨೨).
[ಸಂ. ಅಹಂಪೂರ್ವಿಕಾ]

**ಅಹಂಬ್ರಹ್ಮತ್ವ** (ನಾ). ತಾನೇ ಬ್ರಹ್ಮನೆಂಬ ಗರ್ವದಿಂದ ಮೆರೆಯುವುದು; ಮಿತಿಮೀರಿದ ಹೆಮ್ಮೆ; ಅಹಂಕಾರ. [ಸಂ.]

**ಅಹಂಭಾವ** (ನಾ). ತಾನೇ ಮೇಲೆಂಬ ಭಾವ; ಅಹಂಕಾರ : ಅಹಂಭಾವ ತುಂಬಿ ತುಳುಕುವ ಕಾರಣವೇ ಅಜ್ಞಾನದ ಪರದೆ ಕಣ್ಣು ಮುಂದೆ ಕಟ್ಟುವುದು (ಧರ್ಮಸಾ. ೧೦೬). [ಸಂ.]

**ಅಹಂಭಾವಲಾಂಛಿತ** (ನಾ). ಅಹಂಕಾರದಿಂದ ಕೂಡಿದವನು; ಹಮ್ಮಿನಿಂದ ಕೂಡಿದವನು : ಕಠೋರಮತಿಗಳು ಅಹಂಭಾವಲಾಂಛಿತರು (ಕಬಸಾ. ೪ ಪೀ). [ಅಹಂಭಾವ + ಲಾಂಛಿತ]

**ಅಹಂಮತಿ** (ನಾ). ೧. ಹೆಮ್ಮೆ. ೨. [ತತ್ತ್ವಶಾ] ನಾನು ಎಂಬ ಬುದ್ಧಿ; ದೇಹಾತ್ಮ ಭ್ರಾಂತಿ. [ಅಹಂ + ಮತಿ]

**ಅಹಂಮದಿ** (ನಾ). ಮುಸಲ್ಮಾನ. 'ಅಹಂಮದಿದವಲತ್ತು' ಪರಾ.
[← ಪಾರ. ಅಹ್ಮದ್]

**ಅಹಂಮದಿದವಲತ್ತು** (ನಾ). ಮುಸಲ್ಮಾನರ ಅಧಿಕಾರ : ಸರಕಾರದ ಅಹಂಮದಿದವಲತ್ತಿಗೆ ಶ್ರೀಯಸ್ಸು ಅಪೇಕ್ಷಿಸಿಕೊಂಡು ಸುಖದಲ್ಲಿಯಿರೋದು (ಎಕ. IX, ದೊಡ್ಡಬ. ೧೨–೪ ; 1786).
[ಅಹಂಮದಿ + ದವಲತ್ತು (< ದೌಲತ್)]

**ಅಹಂಮನ್ಯ** (ನಾ). ೧. ತಾನು ಮೇಲೆಂದು ತಿಳಿದವನು. ೨. ತಾನು ದೇವರ ಅಂಶವೆಂದು ತಿಳಿದವನು : ನಿನಗೆ ನೀನನ್ಯನೆನಲೊ ? ನನಗೆ ನಾನನ್ಯ ? ಅಹಂಮನ್ಯ ವಿಶ್ವಜನ್ಯ ಹೇಳು ಸ್ವಯಂಧನ್ಯ ! (ಸೂರ್ಯಪಾ. ೧೦೮–೭). [ಸಂ.]

**ಅಹಂಮನ್ಯತೆ** (ನಾ). = ಅಹಂಭಾವ : ನ್ಯಾಯಾನ್ಯಾಯ ವಿಧಾನವನ್ನು ಕಾಲ ಕೆಳಗೆ ಹಾಕಿ ಅಹಂಮನ್ಯತೆಯಿಂದ ತಲೆಯೆತ್ತಿ ಮೆರೆಯುವ ಹಿಂದೂ ಸಮಾಜ (ಅಲ್ಪವಿ. ೬೫). [ಸಂ. ಅಹಂಮನ್ಯತಾ]

**ಅಹಂಮಮತೆ** (ನಾ). ನಾನು ಮತ್ತು ನನ್ನದು ಎಂಬ ಭಾವ : ಬಿಡು ಸಂದೇಹವನಹಂಮಮತೆಗಳ ಬೀಳ್ಕೊಟ್ಟು ನೋಡು (ಕುವ್ಯಾದ್ರೌ. ೭–೨೭) ; ಬ್ರಹ್ಮವನು ನೆರೆ ತಿಳಿಯಲರಿಯದಹಂಮಮತೆಯಿಂದ (ಅಮೃತ. ೩–೬). [ಸಂ. ಅಹಂಮಮತಾ]

**ಅಹಂಮಮತ್ವ** (ನಾ). = ಅಹಂಮಮತೆ : ಶಾಪಭೀತರಹಂಮಮತ್ವ ಕೃತಾಪರಾಧರು (ಕುವ್ಯಾಅ. ೫–೧೩) ; ಭರತನ ಪ್ರೇಮವು ಅಹಂಮಮತ್ವಗಳಿಂದ ಕಲುಷಿತಜೀವಕ್ಕೆ . . . ಅತರ್ಕ್ಯವಾಗಿತ್ತು (ತುಳಸಿ. ೧೬೯).
[ಸಂ. (ಅಹಂ + ಮಮತ್ವ)]

**ಅಹಂವಾದಿ** (ನಾ). ತಾನು ಮೇಲೆಂದು ವಾದಿಸುವವನು.
[ಸಂ. ಅಹಂವಾದಿನ್]

**ಅಹಃಪತಿ** (ನಾ). ಹಗಲಿನ ಒಡೆಯ ; ಸೂರ್ಯ : ರುದ್ರಭಟ್ಟಕೃತಿ ವೈಷ್ಣವಕಾವ್ಯರಸಾರ್ಣವಂ ತುಳುಂಕಾಡುಗೆ ಭೂಮಿ ನಿಲ್ವಿನಮಹಃಪತಿ ನಿಲ್ವಿನಮಿಂದು ನಿಲ್ವಿನಂ (ಜಗವಿ. ೧೮–೧೧೩) ; ಕೋಂಟೆಯಂ ನುಗುಳ್ದು ಪೋಗಲಹಃಪತಿ ಬೇಱೆ ಬಟ್ಟೆಗಾಣದೆ ತಡೆದಿರ್ಪಂ (ಪುಷ್ಪಪು. ೨–೬೪).
[ಸಂ. (ಅಹನ್ + ಪತಿ)]

**ಅಹಃಪತಿಸುತ** (ನಾ). ೧. ಸೂರ್ಯಪುತ್ರ. ೨. ಶನಿ. ೩. ಯಮ. ೪. ಸುಗ್ರೀವ. ೫. ಕರ್ಣ : ಕುರುಕುಲದರ್ಪಣ ಮಱೆವುದಿನ್ನಹಃಪತಿಸುತನಂ (ಗದಾಯು. ೫–೩೨). [ಅಹಃಪತಿ + ಸುತ]

**ಅಹಗೆ, ಅಹಂಗೆ, ಅಹಾಂಗೆ, ಆಹಂಗೆ, ಹಾಂಗೆ, ಹಾಗೆ** (ಅ). ಆ ರೀತಿಯಲ್ಲಿ; ಆ ಕ್ರಮದಲ್ಲಿ; ಆ ಮಾದರಿಯಲ್ಲಿ : ಅಹಗೆ ಮಾಡಿದಂ ಕಿಡುವಂ ಅದು ಎಹಗೆಂದೊಡೆ, ಕಚದ್ರುಮನೆಂಬರಸಿನಹಗೆ (ಪಂಚತಂ. ೨೭–೧೫) ; ತಿಬ್ಬವೆಹಗಹುದಹಗೆ ಮಾಡಿದಂ. . . ದೋಷರಹಿತಂ ಎಹಗಹುದಹಗೆ ಪೇೞ್ದಂ (ಶಮದ. ೧೪೪ ಪ್ರಯೋ) ; ನಾವೆಹಗೆ ಹೇಳಿದರಹಗೆ ತಪ್ಪದು (ಸದ್ಗುರು. ೬–೧೭). **ಅಹಂಗೆ** : ಕ್ಷೇತ್ರಕ್ಕೆ ಹಾನಿಯಾಗದ ಅಹಂಗೆ ವೊಡಂಬಡ್ಸಿ ಕಟ್ಟುವರು (ಎಕ. XII, ತಿಪಟೂ. ೨–೧೨ ; 1263). **ಅಹಾಂಗೆ** : ಹೇಗೆ ಮನ ಅಹಾಂಗೆ ವಚನ ತಪ್ಪದು (ಪದಗೋ. ೧೧೨–೨೩೦). **ಆಹಂಗೆ** : ಪಂಚಭೂತ ಪ್ರಾಣಿ ಬಂದು ಸೋಂಕಿದಡೆ ಎಹಂಗೆ ಇದ್ದಿತ್ತು ಅಹಂಗೆ ಇದ್ದಿತ್ತಾಗಿ ಇದನೇನೆಂದಱಿಯೆ (ಅವಚಂ. ೧೯೧–೮೬೦). **ಹಾಂಗೆ** : ನಿರ್ಮಲ ಜಲ ಪಂಕವ ಬೆರಸಿದಲ್ಲಿ ತನ್ನಯ ಸಾರವೆಂದ ಕೆಸಱಹ ಹಾಂಗೆ (ಬಬ್ಬಬಾ. ೧೨) ; ಸರಸ ಖಾದ್ಯಸುವಸ್ತುಗಳಿರ್ದ ಹಾಂಗೆ ಮಣ್ದಿನ್ನದೆ ಸ್ವೈರಿಸಳ್ (ಅನಂಪು. ೧೨–೭೬) ; ತಂಗಿ ಕೇಳಾ ನಾವು ಬೆಸಸಿದ ಹಾಂಗೆ ಸುತನಂ ಕರೆಯಲಾಗದೆ (ಬಸಪು. ೨೪–೩೫) ; ಆ ಮುನೀಶ್ವರರ್ ಹಾಂಗೆ ಬಿಸುಡುವರಲ್ಲೆನೆ (ಪುಣ್ಯಾಸ್ರ. ೩–೫೭ ವ) ; ಹಾಂಗೆನಗೆ ಸತ್ಪ್ರಭುವನಂ (ವೀಶೈಪು. ೧–೨–೨೯). **ಹಾಗೆ** : ತಾನೆ ಶಿವನೆಂದು ಕುಱುಹ ತೋಱುವಹಾಗೆ ಮರ್ತ್ಯದಲ್ಲಿ ಸುಳಿದನಲ್ಲದೆ (ಆದವ. ೧೨೩) ; ಈ ಕೃತಿ ಎಲ್ಲಾ ಕೃತಿಯ ಹಾಗೆ ತರುಗಿರಿಖಗಮೃಗಾದಿ ಸ್ತ್ರೀವ್ಯಾವರ್ಣನೆಯ ಪೊಗಳಿ ಕರ್ಣಕ್ಕೆ ಸೊಗಸ ಹುಟ್ಟಿಸುವುದಲ್ಲ (ಸಾನಂಚ. ೩ ವ) ; ಹಾಗೆಂದ ಮೇಲೀಕಥೆಗಿಚ್ಛಾಮಿಯೆನ್ನಿ ಚೆನ್ನಾಗಿನ್ನು ಕೇಳಿ (ಭರಚ. ೧–೧೮).

ಆಹಗಿಹಗೆ = ಹಾಗೆ ಹೀಗೆ: ಭಕ್ತರ ಕುಲಂಗಳನಹಗಿಹಗೆಯೆಂ ದಜಸದದು ತುದಿಪದವಲಾ ಬಸವ (ಬಸಪು. ೪–೬೩).

[ಆ$_2$ + ಪಾಂಗು + –ಎ$_2$]

**ಅಹಣ** (ನಾ). ಆಗುವುದು; ಆಗುವಿಕೆ: ವರನಿರೀಕ್ಷಣವೊಂದು ಚಿಂತೆ ಯದೆರಡು ಸುಯ್ಲುದು ಮೂಱು ಜ್ವರ ನಾಲ್ಕರೆಯಹಣವೈದೂಟ ಬಿಡುವು ದಾಱು (ಜೀವಂಚ. ೧೭–೪೭). [< ಆಗು$_1$]

**ಅಹತ** (ಗು). ೧. ಹೊಡೆಯಲ್ಪಡದ. ೨. ಒಗೆಯದ. ೩. ನಷ್ಟ ವಾಗದ; ಕುಗ್ಗದ: ಅಹತಪರಿತೋಷದಲಿ ಮುನಿವರನಹಿಮಕರಕುಲ ಕೀರ್ತಿಕರನಂದನರಿಗಿಂತೆಂದ (ತೊರರಾ. ೧–೮–೧೬). (ನಾ). ೪. ಹೊಸ ಬಟ್ಟೆ; ಒಂದು ಬಾರಿಯೂ ನೀರಿಗೆ ಹಾಕಿ ಒಗೆಯದ ವಸ್ತ್ರ. ೫. ಹೊಡೆತಕ್ಕೆ ಸಿಕ್ಕದವನು: ಏಕನಾತ್ಮನನಂತನಚಲನಶೋಕನವ್ಯಯ ನಮಲನಭವನಲೋಕನಿಸ್ಪೃಹನಮಿತ ಕ್ರಿಯನಹತನಭ್ರಮನು (ಕುವ್ಯಾಭೀ. ೩–೫೯). [ಸಂ.]

**ಅಹನಿ** (ನಾ). ಹಗಲು ಮತ್ತು ರಾತ್ರಿ.

ಅಹನ್ಯಹನಿ (ದ್ವಿರುಕ್ತಿ): ಅಹನ್ಯಹನಿಯ ಹಾಹಾಕಾರವಿರಲಿಲ್ಲ (ಆರ್ಯಧ. ೮೩). **ಅಹನ್ಯಹನಿ ಕಾಲಕ್ಷೇಪ** = ಪ್ರತಿದಿನವನ್ನೂ ಹೇಗೋ ತಳ್ಳುವದು: ಬೇರಾವ ವರಮಾನವಿಲ್ಲದೆ ವೆಂಕಪ್ಪಯ್ಯನ ಸಂಸಾರ ಅಹನ್ಯಹನಿ ಕಾಲಕ್ಷೇಪ ಮಾಡುತ್ತಿತ್ತು (ವಿದ್ಯಾರಿ. ೬); ಈ ಹಳ್ಳಿಯಲ್ಲೇ ಇದ್ದರೆ ಅಹನ್ಯಹನಿ ಕಾಲಕ್ಷೇಪ ಮಾಡಿಕೊಂಡು ಸಾಯುವವರೆಗೂ ಬಡ ತನದಲ್ಲೇ ಕಾಲ ಕಳೆಯಬೇಕಾಗುವುದು (ಗುಣಸಾ. ೨೩).

[< ಸಂ. ಅಹನ್]

**ಅಹನೀಸರಂಜಾಮು** (ನಾ). ಉಳಿ, ಕತ್ತರಿ ಮುಂತಾದ ಕೆಲಸದ ಸಾಧನ; ಆಯುಧಸಾಮುಗ್ರಿ (ಕ).

[← ಹಿಂ. ಅಹನೀ (= ಕಬ್ಬಿಣ) + ಸರಂಜಾಮು]

**ಅಹನು** 'ಆಗು$_1$' ಪರಾ.

**ಅಹನೆ** 'ಆಗು$_1$' ಪರಾ.

**ಅಹಪ್ಪ** 'ಆಗು$_1$' ಪರಾ.

**ಅಹಮುಹಮಿಕ** 'ಅಹಮುಹಮಿಕೆ' ನೋ.

**ಅಹಮುಹಮಿಕಾಬುದ್ಧಿ** (ನಾ). ಅಹಮುಹಮಿಕೆಯ ಭಾವ: ದೈತ್ಯೋತ್ತಮರ ಸಂತೆ ಭುಲ್ಲವಿಸುತಹಮುಹಮಿಕಾಬುದ್ಧಿಯಿಂ ಪಿಡಿದು ಸಮರಕೆ ಪೊರಡುವಾ (ವೆಂಕಾರಾ. ೬–೩೦–೪೯).

[ಸಂ. (ಅಹಮುಹಮಿಕಾ + ಬುದ್ಧಿ)]

**ಅಹಮುಹಮಿಕೆ**, ಅಹಮುಹಮಿಕ (ನಾ). ೧. ನಾನು ಮುಂದು, ತಾನು ಮುಂದು ಎಂದು ಯಾವುದಾದರೂ ಕೆಲಸಕ್ಕೆ ಸ್ಪರ್ಧೆ ಯಿಂದ ನುಗ್ಗುವುದು: "ಒಂದೊರ್ವರೊಡನ(ಹಂ)ಕೃತಿಯಿಂದಂ ಮಾಡುವುದು ತಾನ(ದ)ಹಮುಹಮಿಕೆ" (ವಸ್ತುಕೋ. ೧೧೬–೩೨); ಚಂದ್ರೋದಯಕ್ಷುಭಿತ ಸಾಗರದಂತೆ ಬಾಗಿಲೊಳ್ ಘೂರ್ಣಿಸುತಿರ್ದಂ ರಾಜಲೋಕಮಹಮಹಮಿಕೆಯಿಂ ಪ್ರಣಾಮಲಾಲಸರಾಗೆ (ಕಾದಂಪೂ. ೪೬೮); ಗುಹಗಹನದ ಬಹುಮಹಿಮೆಯನಹಮುಹಮಿಕೆಯಿಂದಹೀಂದ್ರ ಜಿಹ್ವೆಗಳೊಳಗಾಗಹಹೆಣಿಸಲೆಯ್ದುವೆಂದಡೆ (ಎಕ. XI, ದಾವಣ. ೭೦–೨೫; 1275); ತಮತಮಗಹಮುಹಮಿಕೆಯಿಂದಮೃತಪದಕ್ಕೊಗೆದೊಡಿಂದೆ ಪಾಳೆ ನಿಸುಗುಮಕ್ರಮದೆ ಜಗಂ (ಉಸಾರ. ೧೮೬). ೨. ತಾನು ಮೇಲೆಂಬ ಭಾವ; ಅಹಂಕಾರ: ಯಾರ ಅಹಮುಹಮಿಕೆಯೂ ಇಲ್ಲಿ ನಡೆಯುವ ಹಾಗಿಲ್ಲ (ಸಮಜೀ. ೫೬೨). **ಅಹಮುಹಮಿಕೆ: ೧.** "ಅಹಮುಹಮಿಕಮ ದೊರ್ವರೊರ್ವರಿಗೆ ಮುಂಚುವುದು" (ಮಂಗರಾ. ೧೩೬–೪೨).

[ಸಂ. ಅಹಮುಹಮಿಕಾ]

**ಅಹಮಿಂದ್ರ** (ನಾ). [ಜೈನ] ಹದಿನಾರು ಸ್ವರ್ಗಗಳೂ ಅಣೂತ್ತರಗಳೂ ಆದ ಮೇಲೆ ಬರುವ ಗ್ರೈವೇಯಕವೆಂಬ ಲೋಕಭಾಗದಲ್ಲಿ ಹುಟ್ಟಿದ ಜೀವ: ನಿಜ ಜೀವಿತಾವಸಾನದೊಳ್ ಸೌಮನಸವೆಂಬೂರ್ಧ್ವ ಮಧ್ಯಮದ ನವಗ್ರೈವೇಯಕದೊಳ್ ಅಹಮಿಂದ್ರನಾಗಿ (ಆದಿಪು. ೩–೭೮ ವ); ನಿನಗಹಮಿಂದ್ರರುಮಿಂದ್ರರುಮನಿಬರುಮೀಲೋಕಪಾಲರುಂ . . . ಎಱಗುವರ್ (ಅಜಿಪು. ೮–೨೧). [ಸಂ.]

**ಅಹಮಿಂದ್ರತ್ವ** (ನಾ). [ಜೈನ] ಅಹಮಿಂದ್ರತನ. [ಸಂ.]

**ಅಹಮಿಂದ್ರಪದವಿ** (ನಾ). ಅಹಮಿಂದ್ರನ ಸ್ಥಾನ, —ಪದವಿ: ಸುಕುಮಾರ ಮಹಾಮುನೀಂದ್ರನಹಮಿಂದ್ರಪದವಿಯಂ ಕೈಕೊಂಡಂ (ಸುಕುಮಾ. ೧೨–೪೩). [ಅಹಮಿಂದ್ರ + ಪದವಿ]

**ಅಹಮಿಕೆ** (ನಾ). = ಅಹಮುಹಮಿಕೆ ೧: ತನಗಹಮಿಕೆಯಿಂದಿರದೆಜಪ ನೃಪಾಳರ ಮೌಳಿಮಾಳಿ ಕುಟ್ಟಿಮಸಂಘಟ್ಟನದಿನತಿಮುಖರಮಾಗಿರ್ಪಿನೆಗಂ ಸಾರ್ತಂದು ತಂದೆಗವನತನಾದಂ (ಪುಷ್ಪಪು. ೪–೭೧); ತನತನಗೆ ಮುಂಕೊಂಡು ಸಂಗರವೆನಗೆ ತನಗೆಂಬಖಿಳವೀರಾವನಿಪರಹಮಿಕೆಯಿಂದ ಹೊಯ್ದರು ಪವನನಂದನನ (ಕುವ್ಯಾದ್ರೋ. ೧೨–೨೨).

[ಸಂ. ಅಹಮಿಕಾ]

**ಅಹಮ್ಮಿಸು** (ಕ್ರಿ). ನಾನು ಮುಂದು, ತಾನು ಮುಂದು ಎಂದು ಮುಂದೆ ನುಗ್ಗು: ದ್ರುಪದಾದಿ ನಾಯಕರ ಕಣೆ ಚಿಮ್ಮಿದವು ಕರಿಘಟಿ ತುರಂಗದೊಳ್ಕಾಲಾಳ ಹಮ್ಮಿಸಿತು ಘೂರ್ಮಿಸಿತು ದಿಕ್ತಟವನಳ್ಳಿರಿದು ಪಾಂಡವ ಮಹಾರಥರ (ತುರಂಗ. ೪೯–೧೯). [ಅಹಮ್ಮು + –ಇಸು$_3$]

**ಅಹಮ್ಮು**, ಹಮ್ಮು (ನಾ). ನಾನು ಎಂಬ ಭಾವ; ತಾನು ಹೆಚ್ಚು ಎಂಬ ಭಾವನೆ; ಅಹಂಕಾರ: ಕಾಡಿ ಕಾಡಿ ಕೆಡಿಸಿಹುವೆನ್ನ . . . ಅಹ ಮ್ಮೆಂಬ ಅಹಂಕಾರವೆನ್ನ (ಬಸವ. ೨೫೨). **ಹಮ್ಮು**: "ಬಿಂಕಂ . . . ಹಮ್ಮು, ಗಬ್ಬಂ, ಅದಟು – ಈ ೭ ಗರ್ವಂ" (ಕಶಸಾ. ೧೨–೨೩೧); ಜಂಗಮಲಿಂಗ ತೃಪ್ತನಾದೊಡೆ ಹಮ್ಮಿಲ್ಲದಿರಬೇಕು (ಆದವ. ೧೨); ರಾಜನ ಮುಂದೆ ಭೃತ್ಯಗೆ ಗುರುವಿನ ಮುಂದೆ ರಾಜಗೆ ಹಮ್ಮು ಸಲ್ಲ (ಭರಚ. ೩–೧೧). [< ಸಂ. ಅಹಂ]

**ಅಹರಹ** (ನಾ). ಪ್ರತಿದಿನ; ದಿನದಿನ: ದಹನಸಂಚಯನ ವಾಸೋದಕ ತಿಲೋದಕವನಹರಹದೊಳಿತ್ತುವೇದೋಕ್ತಶಾಂತಿಯನೆಸಗಿ(ಭರಚ.೪–೯೭). ☞ ಸಂಸ್ಕೃತದ ಅವ್ಯಯಗಳನ್ನು ಕನ್ನಡಕ್ಕೆ ಪ್ರಕೃತಿ ಮಾಡಬಾರದು ಎಂಬ ನಿಯಮಕ್ಕೆ ಈ ಶಬ್ದ ಅಪವಾದ. [< ಸಂ. ಅಹರಹರ್]

**ಅಹರು** 'ಆಗು$_1$' ಪರಾ.

**ಅಹರ್ನಿಶ** 'ಅಹರ್ನಿಶಂ' ನೋ.

**ಅಹರ್ನಿಶಂ**, ಅಹರ್ನಿಶ (ಅ). ಹಗಲೂ ರಾತ್ರಿಯೂ; ಹಗಲಿರುಳೂ: ಪಡೆದತ್ತಹರ್ನಿಶಂ ಪೆರ್ಚನಂಗಕ್ಕೆನ್ನಾ (ಕವಿರಾ. ೧–೫೫); ಅಹರ್ನಿಶ ಮದುವೆ ನಿರ್ವೇಗಕಾರಣಮಾಗೆ (ಶಾಂತಿಪು. ೯–೨೫ ವ). **ಅಹರ್ನಿಶ**: ಈತನೇ ಗುಣವಂತಜಾತನೆನಲ್ಕೆ ಬದುಕಿದೆ ನಾನಹರ್ನಿಶವು (ಬಸಪು. ೪೧–೧೩); ಹಿಂಸಾಪರನಹರ್ನಿಶವಾ ದುರಾತ್ಮನ ವರಿಸಿದರು ದೇವಾಂಗನೆಯರೀ ಕಥೆಯ ಕೇಳು (ಕುವ್ಯಾಕ. ೧೭–೧೭). [ಸಂ.]

**ಅಹರ್ನಿಶಿ** (ಅ). = ಅಹರ್ನಿಶಂ: ಶತಶತಮಾನಗಳಿಂದ ಅಹರ್ನಿಶಿ ಬಿಡುಗಡೆಯ ಹೋರಾಟ ನಡೆಸಿದ ಹುತಾತ್ಮರ ಪವಿತ್ರ ನೆನಪು ನಮ್ಮ ಎದೆಯಲ್ಲಿ ನುಗ್ಗಿಬರುತ್ತದೆ (ಅನ್ನಾವ. ೧೯). [< ಸಂ. ಅಹರ್ನಿಶಂ]

**ಅಹರ್ಪತಿ** (ನಾ). ಹಗಲಿನ ಒಡೆಯ; ಸೂರ್ಯ: ನಿನಗಮ್ಮನಹರ್ಪ[ಪಾಠಾಂ. ಸ್ಪ]ತಿ (ಪಂಪಭಾ. ೯–೬೪). [ಸಂ. (ಅಹನ್ + ಪತಿ)]

**ಅಹರ್ಮುಖ** (ನಾ). ಮುಂಜಾವು; ಬೆಳಗಿನ ಜಾವ: "ಪ್ರಾತಃಕಾಲ" (ಅಮರ. ಟೀಕೆ). [ಸಂ. (ಅಹನ್ + ಮುಖ)]

**ಅಹಲೆಕಾರ,** ಅಹಲೇಕಾರ, ಅಹಲ್ಲೆಕಾರ (ನಾ). ಕೆಳದರ್ಜೆಯ ಅಧಿಕಾರಿ,—ಕೆಲಸಗಾರ: ಸಮಸ್ತ ಜಿಲ್ಲೊ, ಅರಸುಗಳು, ಅಹಲೆಕಾರರು ಮುಂತಾದವರೊಡನೆ (ಮಹಾವಂ. II, ೧೮೩).. **ಅಹಲೇಕಾರ**: ಅನೇಕ ದೊಡ್ಡ ದೊಡ್ಡ ಅಧಿಕಾರಿಗಳೂ ಅಹಲೇಕಾರರೂ ಆ ಬೀದಿಯಲ್ಲಿ ಮನೆ ಕಟ್ಟಿಕೊಂಡಿದ್ದರು (ಕು ರಾ ಚ. ೫೧); ಅರಮನೆಯ ಅಹಲೇಕಾರರು, ಕಚೇರಿಯ ಉದ್ಯೋಗಸ್ಥರು, ಸಮ್ಮುಖದ ವಿದ್ವಾಂಸರು ಮೊದಲಾದವರೆಲ್ಲಾ ಔತಣ ಹೇಳಿದ್ದರು (ಮಾಮುರಾ. ೬೫). **ಅಹಲ್ಲೆಕಾರ**: ಅದರೂ ತನ್ನ ಕೈಕೆಳಗಿನ ಅಹಲ್ಲೆಕಾರರ ಅಭಿಪ್ರಾಯವನ್ನು ತಿಳುಕೊಳ್ಳುವ ಪೂರ್ವ ಪದ್ಧತಿಯನ್ನು . . . ಬಿಡುವವನಲ್ಲ (ವಾಗ್ದೇವಿ. ೭೩).

[← ಹಿಂ. ಅಹಲಕಾರ್=ಕಾರ್ಯಕರ್ತ, ಉದ್ಯೋಗಸ್ಥ, ಅಧಿಕಾರಿ]

**ಅಹಲೇಕಾರ** 'ಅಹಲೆಕಾರ' ನೋ.

**ಅಹಲ್ಲಾದ** (ನಾ). ಸಂತೋಷ; ಹರ್ಷ: ಆದೊಡಾಂ ಶಿವಭಕ್ತರಣುಗನ ಹೆನೆನುತಹಲ್ಲಾದದಿಂದವನ ಬಾಯೆಳ್ಳನೀತಂ ಮೆಲಲ್ಕೆ (ಚೆಬಪು. ೫೫-೨೯).

[< ಸಂ. ಆಹ್ಲಾದ]

**ಅಹಲ್ಲಾದಿಸು** 'ಆಹ್ಲಾದಿಸು' ನೋ.

**ಅಹಲ್ಲೆಕಾರ** 'ಅಹಲೆಕಾರ' ನೋ.

**ಅಹವಾಲ್** 'ಅಹವಾಲು' ನೋ.

**ಅಹವಾಲು,** ಅಹವಾಲ್ (ನಾ). ೧. ತಮಗಿರುವ ತೊಂದರೆಯನ್ನು ತಿಳಿಸಿ ಪರಿಹಾರಕ್ಕಾಗಿ ಮಾಡುವ ಮನವಿ; ವಿನಂತಿ: ದಾಸಪನಹಳಿಯಂನು ಆ ಸ್ತಳದ ಗೌಡುಗಳು ನಂಮಹವಾಲಿಗೆ ಪುತ್ರ ಪೌತ್ರ ಪಾರಂಪರೆಯಲು ಅನುಭವಿಸಿಕೊಳುವಂತೆ ಯೀಸ್ತಳದ ಗೌಡಿಕೆಯನ್ನು ನಮುಗೆ ಕೊಡಲಾಗಿ (ಎಕ. XII, ಶಿರಾ. ೯೨-೮; 1591). ೨. (ಉಕ) ವರದಿ. ೩. ಪರಿಸ್ಥಿತಿ; ಸ್ಥಿತಿ; ಸನ್ನಿವೇಶ: ಆದರೂ ಕಕ್ಷಿಗಾರನೇನಾದರೂ ಅವರ ಅಹವಾಲನ್ನು ಮಹಾರಾಜರವರ ಸನ್ನಿಧಾನದಲ್ಲಿ ಅರಿಕೆಮಾಡಿಕೊಂಡರೆ, ಖಾವಂದರು . . . ಸಮಜಾಯಿಷಿ ಕೇಳುತ್ತಿದ್ದರು (ಮಹಾವಂ. II, ४೫); ಯಾವ ಮುಸ್ಲಿಂಮನೇ ಆಗಲಿ ನೇರವಾಗಿ ಕಲಿಫನನ್ನು ಕಂಡು ತನ್ನ 'ಅಹವಾಲನ್ನು' ಅರಿಕೆಮಾಡಿಕೊಳ್ಳಬಹುದಾಗಿತ್ತು (ಇಸ್ಲಾಂ ಸಂ. ೩೯). **ಅಹವಾಲ್** (ಮೈಗೆಜಿ. IV, ೭೬೧).

[← ಅರ. ಹಿಂ. ಮರಾ. ಅಹವಾಲ್]

**ಅಹವು** 'ಅಗು₁' ಪರಾ.

**ಅಹಷಾಮ್** (ನಾ). ೧. ಅನುಯಾಯಿಗಳು; ಸೇವಕರು. ೨. ಸಶಸ್ತ್ರ ಸೈನಿಕರು; ಆಯುಧಪಾಣಿಗಳಾದ ಪೋಲೀಸಿನವರು: ಸಾದ್ರಿ ಬೆಹಾರಿಗೆ ಹೇಳಿ ಕಳುಹಿದ್ದರಿಂದಾ ಆವನು ಕೆಲವು ಬಾರು ಅಹಷಾಮ್ ಜನ ಮಾಪಿಳ್ಳೆರ ಸಹ ಕಟ್ಟಿಕೊಂಡು (ರಾಜೇಂದ್ರ. ೯೬); ಬಾಗಿಲ ಕಂದಾಚಾರದ ಚಾವಡಿ– ಇಲ್ಲಿ ಸವಾರರು, ಬಾರಿನವರು, ಬಾರಿಗಿರಿಯವರು ಅಹಷಾಂ . . . ಮುಂತಾದವರ ಲೆಕ್ಕವನ್ನು ಬರೆವಂತೆ ಗೊತ್ತುಮಾಡಿದರು (ಮಹಾವಂ. II, 147). [← ಅರ. ಅಹಷಾಮ್]

**ಅಹಸ್ಕರ** (ನಾ). = ಅಹರ್ಪತಿ: ದಟ್ಟೈಸಿ ಬೆಳೆದ ತಮವನು ಅಹಸ್ಕರ ನಟ್ಟಿವೊಲ್ (ಷತಿಲ. ४-೧೩೭). [ಸಂ.]

**ಅಹಸ್ಪತಿ** (ನಾ). = ಅಹರ್ಪತಿ: "ದಿವಾಕರನಹಸ್ಪತಿ ಕರ್ಮಸಾಕ್ಷಿ . . . ಮಾರ್ತಾಂಡನಕ್ಕುಂ" (ಮಂಗರಾ. ೧೦-೧); ಸತಿಯ ಕುಚಕೋಕಮಂ ಮುಖಶತಪತ್ರಮನೊಲ್ದಲರ್ಚಲೆಯ್ತಂದನಹಸ್ಪತಿ ಬಿಸುಪನುಟಿದು ಕೆಲಕೆನೆ ಶತಮುಖವಧು ಪಿಡಿದಳೊಪ್ಪೆ ಮುತ್ತಿನ ಕೊಡೆಯಂ (ಪುಷ್ಪಪು. ೯-೬೩). [ಸಂ. (ಅಹನ್ + ಪತಿ)]

**ಅಹಸ್ಸು** (ನಾ). ಹಗಲು: ಅದು ತ್ರಿಂಶದ್ಗುಣಮಾದೊಡಾದಪುದು ಅಹಸ್ಸು (ವಿಷ್ಣುಪು. ೧-೧೨೦). [ಸಂ. ಅಹನ್]

**ಅಹಹ,** ಅಹ್ವ (ಅ). ವಿಸ್ಮಯ, ಭಯ, ವೇದನೆ ಮುಂತಾದುವನ್ನು ಸೂಚಿಸುವ ಅವ್ಯಯ: "ವೇದನೆಯೊಳಹಹಮೆಂಬುದು . . . ಅಹಹಂ ಎಂಬವ್ಯಯಂ ನೋವಂ ಸೂಚಿಪಲ್ಲಿ ಪೇಟಲ್ಪಡುಗುಂ" (ಶಮದ. ೩೦೮ ವೃತ್ತಿ); "ಅಹಹ – ಉತ್ಕ್ರಾರ್ಥ, ಆಶ್ಚರ್ಯಾರ್ಥಶ್ಚ" (ಶಬ್ದಾನು. ೨೦ ವ್ಯಾಖ್ಯಾ); "ನಿಪಾತಾವ್ಯಯಗಳು – ಇವು ಭಯ ವಿಸ್ಮಯಾದಿ ಭಾವಗಳನ್ನು ತಿಳಿಸುತ್ತವೆ. ಅಹಹ (ನೋವು)" (ಕೈ ಪಿ ಡಿ. ೫೨). (i) ವಿಸ್ಮಯಕ್ಕೆ: ಮಹಾಧರ್ಮಮುಮಂ ಬಿಸುಟಹಹ ನೋಡ ಕೋಣೆಯ ಕುಸುಕುಜು ಧರ್ಮಮನದೆಂತು ನಂಬಿದನೀತಂ (ಧರ್ಮಾಮೃ. ೧-೧೦೪); ಆರು ಮೆಚ್ಚುವರಿದನಹಹ ಲೇಸಾಯ್ತು ಹರಹರ ಚದುರನಹೆ (ಬ ಸ ಪು. ४೦-೨೦); ಅಹಹ ಕಾಲದೋಷಮಿದಲ್ತೇ? ಅಹಹ ಗಗನಮಂ ನೀಳ್ದು ನಿಂದಂ ಮುನೀಂದ್ರಂ (ಶಬ್ದಾನು. ೨೦ ವ್ಯಾಖ್ಯಾ). (ii) ಭಯಕ್ಕೆ: ಅಹಹ ಕೃತ ಪ್ಪಾಯ್ತು ರಾಯನ ಸಹಭವನು ನೊಂದನು ಶಿವಾ ಎನುತ (ಕುವ್ಯಾದ್ರೋ. ೫-೫೧). (iii) ವೇದನೆಗೆ: "ಅಹಹಮೆನಲ್ ನೋವಿನ ನುಡಿ" (ಭಾರನಿ. ೨೧). **ಅಹ್ವ**: (i) ಅಹ, ಅಹಹ. ಅಹನೆ ಗಹಗಹಿಸಿತೆಲ್ಲೊ ದೂರದ ದಿಗಂತದಲ್ಲಿ (ಸೂರ್ಯಪಾ. ३४-೧); ಅಹ ಎಷ್ಟು ಚೆನ್ನಾಗಿದೆ ಈ ಗಿಳಿ (ರೂಢಿ).

**ಅಹಳ್** 'ಅಗು₁' ಪರಾ.

**ಅಹಾ** 'ಆಹಾ' ನೋ.

**ಅಹಾಂಗೆ** 'ಅಹಗೆ' ನೋ.

**ಅಹಾದು** 'ಅಗು₁' ಪರಾ.

**ಅಹಾರ್ಯ** (ಗು). ೧. ಅಪಹರಿಸಲು ಅಥವಾ ಕಿತ್ತುಕೊಂಡು ಹೋಗಲು ಆಗದ; ತೆಗೆದುಕೊಂಡು ಹೋಗಬಾರದ. (ನಾ) ೨. ಪರ್ವತ. [ಸಂ.]

**ಅಹಿ** (ನಾ). ೧. ಹಾವು: ವೈರಮನೆ ಬಗೆಯದಹಿನಕುಲಂಗಳ್ ಹರಿಣ ಚಮೂರಂಗಳ್ ಶಾಂತರೂಪದಿಂದಿರ್ದುವು (ಅಜಿಪು. ೭-೬). ೨. ವೃತ್ರನೆಂಬ ರಾಕ್ಷಸ. ೩. ರಾಹು. ४. ಪ್ರಯಾಣಿಕ. ೫. ಸೂರ್ಯ. ೬. ಆಶ್ಲೇಷಾ ನಕ್ಷತ್ರ. ೭. ದುಷ್ಟ; ನೀಚ. [ಸಂ.]

**ಅಹಿಂಸಾಧರ್ಮ** (ನಾ). ಹಿಂಸೆ ಮಾಡದಿರುವ ಧರ್ಮ; ಜೈನ ಧರ್ಮ: ಪ್ರಾಣಿಸಾಮಾನ್ಯದಲ್ಲೂ ಆತ್ಮಪೀಡನವು ಕೂಡದೆಂದು ಅಹಿಂಸಾ ಧರ್ಮವನ್ನು ಸ್ಥಾಪಿಸಿ (ಹಿಂದಸಾ. ೭೩). [ಸಂ. (ಅಹಿಂಸಾ + ಧರ್ಮ)]

**ಅಹಿಂಸಾರತ** (ನಾ). ಅಹಿಂಸಾಧರ್ಮದಲ್ಲಿ ಆಸಕ್ತ; ಅಹಿಂಸೆಯಲ್ಲಿ ಶ್ರದ್ಧೆಯುಳ್ಳವನು: ವೇದಪ್ರಯುತಶ್ರೋತ್ರಿಯನಹಿಂಸಾರತನುಮಹ ಪುರುಷನು (ಕುವ್ಯಾಅ. ೨೩-४೧). [ಸಂ. (ಅಹಿಂಸಾ + ರತ)]

**ಅಹಿಂಸಾವ್ರತ** (ನಾ). ೧. ಹಿಂಸೆ ಮಾಡೆನೆಂಬ ನಿಯಮ. ೨. [ಜೈನ] ಶ್ರೋತೃವಿನಲ್ಲಿ ಇರಬೇಕಾದ ಎಂಟು ಗುಣಗಳಲ್ಲಿ ಒಂದು: ಅಹಿಂಸಾವ್ರತಮೆಂಬುದು ಆರಂಭರಹಿತಮಪ್ಪ ಧರ್ಮಂ (ಚಾವುಂಪು. ೭-೧೨). [ಸಂ. (ಅಹಿಂಸಾ + ವ್ರತ)]

**ಅಹಿಂಸಾಶುದ್ಧಿ** (ನಾ). [ಜೈನ] ದೀಕ್ಷಾನ್ವಯಕ್ರಿಯೆಗಳಲ್ಲಿ ಹತ್ತನೆಯದು: ಧರ್ಮಾರ್ಥಮುಂ ದೇವತಾರ್ಥಮುಂ ಔಷಧಾರ್ಥಮುಂ ಸ್ವಬೋಧಾರ್ಥಮುಮಾಗಿ ಕೊಲ್ಲದುದಹಿಂಸಾಶುದ್ಧಿ (ಚಾವುಂಪು. ೨४೧). [ಸಂ. (ಅಹಿಂಸಾ + ಶುದ್ಧಿ)]

**ಅಹಿಂಸಾಸಿದ್ಧಿ** (ನಾ). [ಯೋಗ] ಅಷ್ಟಾಂಗಯೋಗದ ಯಮುವೆಂಬ ವಿಭಾಗದಲ್ಲಿ ಒಂದು ಪ್ರಕಾರ; ಹಿಂಸೆಯನ್ನು ಬಿಟ್ಟು ನಡೆಯುವ ವ್ರತವು ನೆರವೇರುವಿಕೆ: ಈ ಯಮ ನಿಯಮಗಳ ಸಿದ್ಧಿಗಳಲ್ಲಿ ಅಹಿಂಸಾಸಿದ್ಧಿಯುಂಟಾದರೆ ಆ ಯೋಗಿಯ ಸಮೀಪದಲ್ಲಿ ಯಾವ ಪ್ರಾಣಿಗಳಿಗೂ ಪರಸ್ಪರ ವೈರವಿಲ್ಲವೆಂದು ತಿಳಿಯಬೇಕು (ಹಿಂದಸಾ. ೧೧೫). [ಸಂ. (ಅಹಿಂಸಾ + ಸಿದ್ಧಿ)]

**ಅಹಿಂಸೆ** (ನಾ). ೧. ಹಿಂಸೆ ಮಾಡದಿರುವುದು. ೨. [ಜೈನ] ಐದು ಅಣುವ್ರತಗಳಲ್ಲಿ ಒಂದು : ಮನಸ್ಸಿನಿಂದಲೂ ವಾಕ್ಕಿನಿಂದಲೂ ಕರ್ಮದಿಂದಲೂ ನಾವಾಗಿ ಪ್ರಾಣಿಮಾತ್ರಕ್ಕೆ ಹಿಂಸೆಯನ್ನು ಮಾಡದಿರುವುದು ಅಹಿಂಸೆಯು (ಅರ್ಯಧ. ೭೨). ೩. [ಯೋಗ] ಅಷ್ಟಾಂಗಯೋಗದಲ್ಲಿ ಯಮವೆಂಬ ವಿಭಾಗದಲ್ಲಿನ ಒಂದು ವ್ರತ: ಅಹಿಂಸೆ, ಸೂನೃತ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹವೆಂದು ಅಯ್ದು ಪ್ರಕಾರ (ಹಿಂದಸಾ. ೮೮) ; ಅಹಿಂಸೆ . . . ಶೌಚವೆಂಬ ಯಮಾಂಗದಶಕಮಂ (ವಿವೇಕ. ೧೪೮). [ಸಂ. ಅಹಿಂಸಾ]

**ಅಹಿಕ₁** (ನಾ). ಈ ಲೋಕಕ್ಕೆ ಸಂಬಂಧಿಸಿದುದು ; ಐಹಿಕವಾದುದು : ಎನ್ನಾಶೆ ಸಿದ್ಧಿಸಲಿ ಉತ್ತಮರ ಸಂಗತಿಯಿಂದ ಕೋಶಭಂಡಾರಾದಿ ಅಹಿಕ ಬೇಡುವದಿಲ್ಲ ಸಾಸಿರಕೆ ನಿಮ್ಮ ಪ್ರಸಾದವಾಗಲಿ (ವಿಪ್ರಸು. ೨೪–೪). [< ಸಂ. ಐಹಿಕ]

**ಅಹಿಕ₂** (ನಾ). ಒಂದು ಬಗೆಯ ಕುರುಡು ಹಾವು. [ಸಂ.]

**ಅಹಿಕಟಕ** (ನಾ). ೧. ಸರ್ಪವನ್ನು ಕೈಕಡಗವಾಗಿ ಹೊಂದಿದವನು ; ಶಿವ : ಸಂದಹಿಕಟಕಪ್ರಸಾದದೆ ಮನೋಜನುಮಂ ಗೆಲೆವಂದನಾಗಳುಂ ಸಹಜಮನೋಜನೋಜಂ (ಪಂಪಭಾ. ೧–೪); ಮಹಾಹಿಕಟಕಂ ತತ್ಪ್ರಸಾದ ಸುದೇಹನಂ ಮಾಡಿ ಪ್ರಿಯದೊಳಡಿಗಡಿಗೆ ಬಿಗಿದಪ್ಪಿ (ಬಸವು. ೪೪–೩೧). ೨. ಹಾವುಗಳ ಗುಂಪು. (ಕಿ). [ಅಹಿ + ಕಟಕ₂]

**ಅಹಿಕಸಂಪತ್ತು** (ನಾ). ಐಹಿಕ ಸಂಪತ್ತು. [ಅಹಿಕ₁ + ಸಂಪತ್ತು]

**ಅಹಿಕಸುಖ** (ನಾ). ಐಹಿಕಸುಖ : ವೇಣುಗಾನಪ್ರಿಯನ ಅಹಿಕಸುಖಾನುಭವ ಬೇಡದಲೆ (ಹಸಾರ. ೧೯–೨೧) ; ವೈದಿಕ ಪದವಿಯಾದ ಮೋಕ್ಷವನ್ನು ಕೊಡುವವನಿಗೆ ಅಹಿಕಸುಖವನ್ನು ಕೊಡುವುದು ಮಹಾ ಆಶ್ಚರ್ಯವೇ ? ಅಹಿಕಸಂಪತ್ತು ಸುಖದಾಸಂಗೆ ಬೇಕಾಗಿದ್ದಿಲ್ಲ (ವಿಜಯ. ೧೪೯). [ಅಹಿಕ₁ + ಸುಖ]

**ಅಹಿಕಾಂತ** (ನಾ). ಸರ್ಪರಾಜ ; ಶೇಷ ; ವಾಸುಕಿ. [ಅಹಿ + ಕಾಂತ]

**ಅಹಿಕಾಂತಕಟಕ** (ನಾ). = ಅಹಿಕಟಕ ೧ : ಪುರತ್ರಯವನಹಿಕಾಂತಕಟಕನು ಬೇಗೆಯಿಂ ಸುಡುವಂತೆ ಸುಟ್ಟನಲಾ (ಬಸವು. ೫೪–೫೪). [ಅಹಿಕಾಂತ + ಕಟಕ₂]

**ಅಹಿಕಾಯ** (ನಾ). ಸರ್ಪದ ದೇಹ ; ಹಾವಿನ ಮೈ : "ಅಹಿಕಾಯದೊಳ್ . . . ಭೋಗಮುಕ್ಕು" (ಮಂಗರಾ. ೧೫೦–೫೦). [ಅಹಿ + ಕಾಯ]

**ಅಹಿಕುಂಡಲ** (ನಾ). ಸರ್ಪವನ್ನು ಕರ್ಣಾಭರಣವನ್ನಾಗಿ ಹೊಂದಿದವನು ; ಶಿವ : ಅಮಮ ಮುಕ್ಕಣ್ಣ ಅಂದದಹಿಕುಂಡಲ ಚತುರ್ಭುಜ ನಂದಿವಾಹನ ಗೌರಿಸಹಿತಂ ಮುಂದೆ ನಿಂದು (ಬಸವು. ೨೭–೨೭). [ಅಹಿ + ಕುಂಡಲ]

**ಅಹಿಕುಲ** (ನಾ). ಸರ್ಪಗಳ ಸಮೂಹ : ಸೌಪರ್ಣನಹಿಕುಲಕೆ ಮುನಿದೆಜಗಿ ಕೊಲುವಂತೆ (ಹಚಕಾ. ೬–೧೩). [ಅಹಿ + ಕುಲ]

**ಅಹಿಕೇತನ** (ನಾ). ಸರ್ಪವನ್ನು ಬಾವುಟದ ಗುರುತಾಗಿ ಉಳ್ಳವನು ; ಸರ್ಪಧ್ವಜ ; ದುರ್ಯೋಧನ : ಭೀಷ್ಮ ಶರಾಚಾರ್ಯರ ನುಡಿ ತಪ್ಪು ಗಡಮನಾರ್ಯಂಗಹಿಕೇತನಂಗೆ ವಿಧಿವಿಳಸನದಿಂ (ಗದಾಯು. ೨–೨೭). [ಅಹಿ + ಕೇತನ]

**ಅಹಿಗರಳ** (ನಾ). ಸರ್ಪದ ವಿಷ. 'ಅಹಿಗರಳಹರ' ಪರಾ. [ಅಹಿ + ಗರಳ (= ಗರಲ)]

**ಅಹಿಗರಳಹರ** (ನಾ). ಸರ್ಪದ ವಿಷವನ್ನು ಹೋಗಲಾಡಿಸತಕ್ಕವನು ; ಗರುಡ : ಜವನೆಂಬ ಬಜಸಿಡಿಲೆಜಗಿದುದೆಜಗುವವೊಲಹಿಯನಹಿಗರಳಹರಂ (ಸುಕುಮಾ. ೨–೧೧). [ಅಹಿಗರಳ + ಹರ್ಕ]

**ಅಹಿಗೃಹ** (ನಾ). ಹಾವಿನ ನೆಲೆ, —ಹುತ್ತ : ಅಹಿಗೃಹಮಂ ಘನಕುಚಿ ರಜನೀಚರಮದೊಳ್ ಜಿನಾಂಬಿಕೆ ಕಂಡಳ್ (ಶಾಂತಿಪು. ೯–೨೦೭); ಅಹಿಯ ವಿಷವಹ್ನಿ ನೆಗೆದಹಿಗೃಹಮಂ ಪೀರ್ದುರ್ಚುರ್ವಜ್ಜಳಿಲ್ಲನ ಬಾಯಂ ದಹಿಯಿಸಿ (ಅರ್ಧನೇ. ೫–೮೫). [ಅಹಿ + ಗೃಹ]

**ಅಹಿತ** (ಗು). ೧. ಹಿತವಲ್ಲದ ; ವಿರೋಧವಾದ : ಆ ಹೆಂಗಸನ್ನು ಮದುವೆಯಾಗುವ ವಿಷಯ ಅವನಿಗೆ ಅಹಿತವಾಗಿ ಕಂಡಿತು (ಪುನರು. ೩೬೬). (ನಾ). ೨. ಶತ್ರು : "ಅಭಿಯಾತಿಃ . . . ಅರಿಃ, ಅಹಿತಃ . . . –ಈ ೨೮ ಹಗೆ" (ಹಲಾಯು. ೭೫–೩೧೧) ; ನರಮಹಿತಾ ನಿನಗೇನಹಿತರು ಮೊಳರೇ (ಕವಿರಾ. ೧–೮೨) ; ಅಹಿತನಂ ಕಡಿವಾಗಳೆ ಮಿಂದಂ (ಗದಾಯು. ೧–೧೯). [ಸಂ.]

**ಅಹಿತಕರ** (ಗು). ಕೇಡನ್ನು ತರುವ ; ಹಿತವಲ್ಲದ : ಅಹಿತಕರವಾಯು (ಮುಂಬಯಿ. ೩–೩೬). [ಸಂ.]

**ಅಹಿತಕಾರ** (ನಾ). ಕೆಡುಕನ್ನು ಉಂಟುಮಾಡುವವನು : ಶಿವಗಣದೂಷಣಾಹಿತಕಾರ ಜಂಗಮತೋಷಣಾಚಾರ (ಬಸವು. ೧೯–೩೮). [ಅಹಿತ + –ಕಾರ (< –ಕಾಜ)]

**ಅಹಿತಕುಲ** (ನಾ). ಹಗೆಗಳ ಸಮೂಹ : ಅಹಿತಕುಲವನು ಸಮರದಲಿ ನಿರ್ವಹಿಸಿ ಶರಣಾಗತರ ಪಾಲಿಸುತಿಹಡವನು ಮಗನೆನಿಸುವನು (ಕುವ್ಯಾ.ಉ. ೩–೮೨). [ಅಹಿತ + ಕುಲ]

**ಅಹಿತಚ್ಯುತಿ** (ನಾ). ಶತ್ರುನಾಶ : ಪತಿಕರಿಸಿದ್ದೆ ವೀರಸುಭಟಪ್ರತತಿ ಮಧ್ಯದಲೆಮ್ಮನಹಿತಚ್ಯುತಿಗೆ ಸಾಧನವೆಂದು ನಿಜಸೇನಾಧಿಪತ್ಯದಲಿ (ಕುವ್ಯಾ.ಶ. ೧–೨೭). [ಅಹಿತ + ಚ್ಯುತಿ]

**ಅಹಿತತ್ವ** (ನಾ). ೧. ಸರ್ಪಗಳ ಸಂಬಂಧವಾದ ತತ್ತ್ವ. ೨. ಹಗೆತನ ; ಶತ್ರುತ್ವ. ೧, ೨ : ಗಾರುಡದೊಳಹಿತತ್ವಮಾರಣ್ಯದೊಳ್ ದಾನವಾರಣಂ . . . ಉಂಟಲ್ಲದಿಲ್ಲಮಿವು ಮತ್ತೆಲ್ಲಿಯುಂ ಧರ್ಮಜನ ನೆಲದೊಳು (ಜೈಮಿಭಾ. ೨–೮). [ಸಂ. (ಅಹಿ + ತತ್ತ್ವ ; ಅಹಿತ + –ತ್ವ)]

**ಅಹಿತನಿಷೂದನ** (ನಾ). ಹಗೆಗಳನ್ನು ನಾಶಮಾಡುವವನು ; ಶತ್ರುನಾಶಕ : ತೋಱಿದಳಿಂದೂದಯಕಾಂತನನಹಿತನಿಷೂದನನಂ ದಿವಿಜರಾಜ ಲೀಲಾಸ್ಪದನಂ (ಶಾಂತಿಪು. ೫–೧೧೭). [ಅಹಿತ + ನಿಷೂದನ]

**ಅಹಿತವರ್ಗ** (ನಾ). ಶತ್ರುಗಳ ಗುಂಪು ; ವೈರಿಸಮೂಹ : ಅವಯವದಿಂದಿಱಿಗುಂ ಪಂಚವಿಧಾಹಿತವರ್ಗ ದುರ್ಗಪಂಚಕಮಂ . . . ತತ್ಪ್ರಭು ಮಂತ್ರಶಕ್ತಿಗಳ್ (ಶಾಂತಿಪು. ೨–೪೭). [ಅಹಿತ + ವರ್ಗ]

**ಅಹಿತವಿಘಾತಿ** (ನಾ). ಹಗೆಗಳನ್ನು ಸದೆಬಡಿಯುವವನು : ಭೀತನಾದನು ಭೀಮನಹಿತವಿಘಾತಿ ಮಾಗಧರಾಯಮಲ್ಲವ್ರಾತಕುಲಗಿರಿವಜ್ರನೆಂದುದು ಮಗಧಪರಿವಾರ (ಕುವ್ಯಾ.ಸ. ೨–೧೦೨). [ಸಂ. ಅಹಿತವಿಘಾತಿನ್]

**ಅಹಿತವಿಧ್ವಂಸಕ** (ನಾ). = ಅಹಿತವಿಘಾತಿ : ಏಕವಾಕ್ಯರಹಿತವಿಧ್ವಂಸಕರಾಶ್ರಿತಜನಕಲ್ಪವೃಕ್ಷರ್ (ಸೌಇಇ. XX, ೭೦–೪೩ ; 1108). [ಅಹಿತ + ವಿಧ್ವಂಸಕ]

**ಅಹಿತಶಕ್ತಿ** (ನಾ). ಹಗೆಯ ಬಲ ; ಶತ್ರುವಿನ ಸಾಮರ್ಥ್ಯ : ಚಾರ್ವಾಕೋಕ್ತಿಯನಹಿತಶಕ್ತಿಯಂ ಭೇದಿಸುವಂತೇಕಕ್ಷಣದೊಳೆ . . . ಭೇದಿಸಿದಂ (ಶಾಂತಿಪು. ೮–೧೩೫). [ಅಹಿತ + ಶಕ್ತಿ]

**ಅಹಿತಶಿರ** (ನಾ). ಹಗೆಯ ತಲೆ ; ಶತ್ರುವಿನ ಶಿರ : ಕಲಿಭೀಮ ಮಾಡಿದ ರಹವನದನೇನೆಂಬೆನ್ನೆ ಕೂರಿಹ ಕಠಾರಿಯ ಹಣಿಗೆಯಲಿ ಬಾಚಿದನು ಸಿರಿಮುಡಿಯ ಅಹಿತಶಿರವಿದಲಾಯೆನುತ ಗೃಹಮಹಿಳೆಯರು ವಿಹಿತಾಂಗುಲಿಯ ಸಂಪ್ರಹರಣದಿ ಪರಿಭವಿಸಿದರು ಘೊಳ್ಳೆನಲು ನಿಖಿಳಜನ (ಕುವ್ಯಾ.ಆ. ೨೨–೪೧). [ಅಹಿತ + ಶಿರ]

**ಅಹಿತಾನೀಕ** (ನಾ). ೧. ಹಗೆಯ ಸೈನ್ಯ. ೨. ಹಗೆಯ ಗುಂಪು : ಗೆಲಿದ ನಹಿತಾನೀಕವನು ರಿಪುಬಲದಿಶಾಪಟ ಭೀಷ್ಮನು (ಕುವ್ಯಾಭೀ. ೫–೨೪). [ಅಹಿತ + ಅನೀಕ]

**ಅಹಿತಾನ್ನ** (ನಾ). ೧. ಹಿತವಲ್ಲದ ಆಹಾರ. ೨. ಶತ್ರು ನೀಡುವ ಆಹಾರ. ೧,೨ : ಅನ್ನವೇ ಅಹಿತವಾದರೂ ಅಹಿತರಿಟ್ಟನ್ನವಾದರೂ ಅಹಿತಾನ್ನವು (ಆರ್ಯಧ. ೨೧೮). [ಅಹಿತ + ಅನ್ನ$_3$]

**ಅಹಿತಾನ್ವಯ** (ನಾ). = ಅಹಿತಕುಲ : ಸುಡುವೆನಹಿತಾನ್ವಯವ (ಕುವ್ಯಾಭೀ. ೬–೩೫). [ಅಹಿತ + ಅನ್ವಯ]

**ಅಹಿತಾವನೀಶ** (ನಾ). ಶತ್ರುರಾಜ : ಕೌರವನ ಛಲ ಸಂದುದಿನ್ನಹಿತಾವನೀಶರಿಗಾಯ್ತು ಪರಿತೋಷ (ಕುವ್ಯಾಅ. ೨೩–೩೩). [ಅಹಿತ + ಅವನೀಶ]

**ಅಹಿತುಂಡ** (ನಾ). ಹಾವಿನ ಬಾಯಿ ಅಥವಾ ಮುಖ : "ಅಹಿತುಂಡ– ಹಾವಿನ ಮುಖ" (ನಾನಾರ. ೨೮ ಟೀಕು). [ಅಹಿ + ತುಂಡ$_2$]

**ಅಹಿತುಂಡಿಕ** (ನಾ). ಹಾವುಗಳನ್ನು ಹಿಡಿಯುವವನು; ಹಾವಾಡಿಗ : ಘ್ರಾಣೇಂದ್ರಿಯಲೋಲುಪಂಗಳುಂ ಔಷಧಗಂಧಲುಬ್ಧಂಗಳುಂ ಅಪ್ಪ ವಿಷಧರಂಗಳ್ ಅಹಿತುಂಡಿಕನ ದೆಸೆಯಿಂ ವಿನಾಶಮನೆಯ್ದುವುವು (ತತ್ತ್ವಪ್ರ. ೩೩೦) ; "ಎಲ್ಲೆ ಆ ಅಹಿತುಂಡಿಕನಂ ಒಳಗೆ ಬರಹೇಳು" ಎಂದನು. ದೂತನು ಆ ಹಾವಾಡಿಗನನ್ನು ಕರೆತಂದು ನಿಲ್ಲಿಸಿದನು (ಮುದ್ರಾಮಂ. ೨೪೪). [ಸಂ. (ಅಹಿ + ತುಂಡಿಕ)]

**ಅಹಿತೆ** (ನಾ). ಹಿತವಲ್ಲದವಳು : ಲಲನೆ ಪತಿಯೆಡೆಯೊಳಿರ್ಪುದನೆಳಪುದವಂಗಹಿತೆಯಾದೊಡಂ ಬಂಧುಜನಂ (ಶಾಕುಂತ. ೬೬–೧೧೬). [ಸಂ. ಅಹಿತಾ]

**ಅಹಿಧರ** (ನಾ). ಸರ್ಪವನ್ನು ಧರಿಸಿದವನು ; ಶಿವ : ಅಹಿಧರಂ ನುಡಿವುತಿರ್ದಂ ವೇದಮಂತ್ರಸನ್ನಿಹಿತೋಪದೇಶವುಳ್ಳವನೆ ಸದ್ಬ್ರಾಹ್ಮಣಂ (ವೀಶೈಪು. ೮–೧೬–೫೭). [ಸಂ.]

**ಅಹಿಧಾಮ** (ನಾ). ಸರ್ಪಾಶ್ರಯ ; ಶಿವ : ಶಾತ್ರವಭೀಮಾ ಶಾಶ್ವತನಾಮಾ ಕನದಹಿಧಾಮಾ . . . ಸಲಹು (ಉದ್ಭದೇ. ೬–೩೫). [ಅಹಿ + ಧಾಮ]

**ಅಹಿಧ್ವಜ** (ನಾ). = ಅಹಿಕೇತನ : ನಿಜಮತಮನೆನಗೆ ಮಾಜಲ್ಕಜಾತ ದೊರೆಯಲ್ಲವಲ್ಲದಿರ್ದೊಡಮೆನ್ನಿಂ[ದ]ಜನಿಸಿ ನುಡಿಯಿಸಿದುವಹಿಧ್ವಜನೋವದೆ ಮುನ್ನೆ ನೆಗಟ್ದ ದುಶ್ಚರಿತಂಗಳ್ (ಪಂಪಭಾ. ೯–೨೧) ; ಕೆಳೆಗೊಣ್ಡ ನರಂಗೆ[ಬೆನ್ನುಲಂ] ಪಿಡಿದ ಚಲಕ್ಕಹಿಧ್ವಜನುದಾರತೆಯೊಳ್ಪಿಬಿ ಚಾರುದತ್ತನೆನ್ನಡೆ ಸಲೆ[ಮೆಚ್ಚಿ] ಬಣ್ಣಿಸುವರಾಗ್ಗ್ರಳ ರಾಜಿತ ರಾಜಪೂಜ್ಯನಂ (ಸೌಇಇ. XX, ೩೧–೧೪ ; 1044). [ಅಹಿ + ಧ್ವಜ]

**ಅಹಿನಾಯಕ** (ನಾ). ೧. ಸರ್ಪರಾಜ ; ಆದಿಶೇಷ : ಅಹಿನಾಯಕನಱಿಯಂ ಪೇಟಲುಟಿದನದನೆತ್ತಱಿವೊಂ (ಶಾಂತಿಪು. ೪–೧೧೩). ೨. ವಾಸುಕಿ. [ಅಹಿ + ನಾಯಕ]

**ಅಹಿನಿಕರ** (ನಾ). = ಅಹಿಕಟಕ ೨ : ಗರುಡನುಬ್ಬಟೆಗಹಿನಿಕರ ಜರ್ಝರಿತವಾದವೊಲು (ಕುವ್ಯಾದ್ರೋ. ೧೬–೧೨). [ಅಹಿ + ನಿಕರ$_1$]

**ಅಹಿಪ** (ನಾ). = ಅಹಿನಾಯಕ : ನವರತ್ನದ ವೇದಿಕೆಯಿಂದಲಳವಟ್ಟ ಭವನದ ಬಹುರಚನೆಯನು ವಿವರಿಪಡಹಿಪಗಲ್ಲದೆ ಮಿಕ್ಕ ಕವಿಗಳ ನಿವಹಕ್ಕೆ ಗೋಚರವಹುದೆ (ತ್ರಿಪುಸಾಂ. ೭–೭೯). [ಸಂ.]

**ಅಹಿಪಕಂಕಣ** (ನಾ). = ಅಹಿಕಟಕ ೧ : ಶಂಕರನಹಿಪಕಂಕಣನಭವ ನಕ್ಷರನು (ಬಸಪು. ೪೫–೩೩). [ಅಹಿಪ + ಕಂಕಣ$_2$]

**ಅಹಿಪತಲ್ಪ** (ನಾ). ಆದಿಶೇಷನನ್ನು ಹಾಸಿಗೆಯಾಗಿ ಉಳ್ಳವನು ; ವಿಷ್ಣು : ನವಗಾದೀ ಖೇದಮಂ ಬಿನ್ನವಿಪವಹಿಪತಲ್ಪಂಗೆ (ಜಗವಿ. ೧–೩೫). [ಅಹಿಪ + ತಲ್ಪ]

**ಅಹಿಪತಿ** (ನಾ). = ಅಹಿನಾಯಕ : ಅಹಿಪತಿ ಪೆಡೆಯಂ ಬಿರ್ಚಿದಂ (ಜಗವಿ. ೩–೪) ; ಕೂಡೆ ಸೂಟಿಯೊಳಟ್ಟಿಲಿಳೆಯಲ್ಲಾಡಲಹಿಪತಿ ಹೆದಱಲಿತ್ತಲು ನೋಡಿ ಕೌರವಸೇನೆ ಕೆಡೆದುದು ನಗೆಯ ಕಡಲೊಳಗೆ (ಕುವ್ಯಾವಿ. ೬–೧೩). [ಅಹಿ + ಪತಿ$_2$]

**ಅಹಿಪತಿತಳಪ** (ನಾ). = ಅಹಿಪತಲ್ಪ : ಪ್ರಳಯಕಾಲದಲವನು ವಟತರು ತಳಿರಲೊರಗುವನೆಂಬರಹಿಪತಿತಳಪನೆಂಬರು ಕೆಲರು ಪಾಲ್ಗಡಲರಸನೆಂಬರಲಾ (ಕೌಶಿರಾ. ೨೬–೫). [ಅಹಿಪತಿ + ತಳಪ$_2$]

**ಅಹಿಭಯ** (ನಾ). ೧. ಹಾವಿನ ದೆಸೆಯಿಂದಾದ ಹೆದರಿಕೆ. ೨. ಸ್ವಪಕ್ಷದಿಂದ ಉಂಟಾಗುವ ಭಯ. [ಅಹಿ + ಭಯ]

**ಅಹಿಭುಕ್ಕು** (ನಾ). ೧. ಹಾವುಗಳನ್ನು ತಿನ್ನುವ ಪ್ರಾಣಿ. ೨. ನವಿಲು. ೩. ಗರುಡ. ೪. ಮುಂಗುಸಿ. [ಸಂ. ಅಹಿಭುಜ್]

**ಅಹಿಭೂಷಣ** (ನಾ). ಹಾವುಗಳನ್ನು ಒಡವೆಯಾಗಿ ಉಳ್ಳವನು ; ಶಿವ (ಕಿ). [ಅಹಿ + ಭೂಷಣ]

**ಅಹಿಮ** (ಗು). ತಂಪಿಲ್ಲದ; ಬಿಸಿಯಾದ. 'ಅಹಿಮಕರ' ಪರಾ. [ಸಂ.]

**ಅಹಿಮಕರ** (ನಾ). ಉಷ್ಣಕಿರಣ ; ಸೂರ್ಯ : ಅಹಿಮಕರ ಸಮಸ್ಪರ್ಧಿಯಾದತ್ತು ತೇಜಂ (ಎಕ. VII, ಶಿಕಾರಿ. ೧೮೫–೧೮ ; 1157) ; ಸೂರ್ಯನಂತಹಿಮಕರಪ್ರಭಾವಂ (ಎಕ. V, ಹಾಸನ. ೫೩–೨೯ ; 1170). [ಅಹಿಮ + ಕರ$_4$]

**ಅಹಿಮಕಿರಣ** (ನಾ). = ಅಹಿಮಕರ : ಮಂಜಿನ ಮಱೆಯನಹಿಮಕಿರಣನಾತ್ಮಕಿರಣಂಗಳಿಂ ಕಿಡಿಸುವಂತೆ (ಶಾಂತಿಪು. ೪–೧೪ ವ). [ಅಹಿಮ + ಕಿರಣ]

**ಅಹಿಮರುಚಿ** (ನಾ). ಉಷ್ಣಕಿರಣ; ಬಿಸಿಯಾದ ಪ್ರಭೆ : [ಸುತ್ತಂ] ಸೂಸಿದೀಶಾನನ ಜಡೆಗಳವೊಲ್ಕಾಯ್ದ ಪೊನ್ನೀರ್ಗವಿಲ್ಗೆಂಪಿನ [ಪೆಂಪಂ] ಸಿಂಪಿಸುತ್ತಿರ್ದಹಿಮರುಚಿಗಳಂ ತಿಗ್ಮರುಚ್ಮೌಲಿಬಿಂಬಂ (ಕಾದಂಉ. ೩೬೪). [ಅಹಿಮ + ರುಚಿ]

**ಅಹಿಮಹಿಲೆ** (ನಾ). ನಾಗಕುಲದ ಹೆಣ್ಣು ; ನಾಗಕನ್ನಿಕೆ (ಕಿ). [ಸಂ. ಅಹಿಮಹಿಲಾ]

**ಅಹಿರಣಿ** (ನಾ). ಎರಡು ತಲೆಗಳನ್ನು ಹೊಂದಿರುವ ಒಂದು ಬಗೆಯ ಹಾವು ; ಇರ್ತಲೆಗ : "ದ್ವಿಮುಖಮಹಿರಣಿಯೆನಲ್ಕಿರ್ತಲೆಗನಕ್ಕು" (ಮಂಗರಾ. ೧೧೮–೩). [ಸಂ. ಅಹೀರಣಿ]

**ಅಹಿರಾಜ** (ನಾ). = ಅಹಿನಾಯಕ : ಪೊಗಟಲ್ಕದನಹಿರಾಜಂಗಮರಿದು (ಶಾಂತಿಪು. ೩–೬ ರ) ; ಅಹಿರಾಜಂ ದ್ವಿಸಹಸ್ರಜಿಹ್ವನಱಿಯಂ ವ್ಯಾವರ್ಣಿಸಲ್ (ಜಗವಿ. ೨–೩೭). [ಅಹಿ + ರಾಜ]

**ಅಹಿರಾಜಾತ್ಮ[ನು]ಜೆ** (ನಾ). ವಾಸುಕಿಯ ತಂಗಿ; ಜರತ್ಕಾರು : ಅಹಿರಾಜಾತ್ಮ[ನು]ಜೆ ಮಂತ್ರತಂತ್ರವಱಿದಾಣ್ಮಂ ಪೋಗೆ ತಾಂ ತಂದಳೀ (ಸೋಮೇಶ. ೯೨). [ಅಹಿರಾಜ + ಅನುಜೆ]

**ಅಹಿರಿ** 'ಆಗು$_1$' ಪರಾ.

**ಅಹಿರ್ಬುಧ್ನ್ಯ** (ನಾ). ಈಶ್ವರ ; ಶಿವ : "ಅಹಿರ್ಬುಧ್ನ್ಯಃ, ವಿರೂಪಾಕ್ಷಃ . . . ನೀಲಲೋಹಿತಃ – ಈ ೪೫ ಮಹಾದೇವರ ಪೆಸರ್" (ಹಲಾಯು. ೪–೧೩). [ಸಂ.]

**ಅಹಿವೈರಿ** (ನಾ). ೧. ಹಾವುಗಳ ಶತ್ರು ; ಗರುಡ. ೨. ವೃತ್ರಾಸುರನ ಶತ್ರು ; ಇಂದ್ರ. 'ಅಹಿವೈರಿವೈರಿ' ಪರಾ. [ಅಹಿ + ವೈರಿ]

**ಅಹಿವೈರಿವೈರಿ** (ನಾ). "ಇಂದ್ರಜಿತು" (ಶಾಪಮಂ. ಕೋಶ) : ನಾಗಾರಿಭೀಕರ ಸಾಮಂತನಿಕಾಯ ದೈತ್ಯಬಳವತ್ಕಂಸಾರಿ ಕಂಸಾರಿ ಸಂಗರರಂಗಕ್ಕಹಿವೈರಿವೈರಿಯೆನಿಪಂ ಸಾಮಂತ ನಾಗಾರ್ಜುನಂ (ಎಕ. VI, ತರೀಕೆ. ೪೨–೪೦ ; 1205). [ಅಹಿವೈರಿ + ವೈರಿ]

**ಅಹಿಶೀರ್ಷ** (ನಾ). ಹಾವಿನ ತಲೆ; ಹೆಡೆ : ಉತ್ಕಟತಟತ್ತ್ರಿಯು ತ್ಪಣಿತಾಹಿಶೀರ್ಷರತ್ನಜ ಘೃಣಿಮಾಲೆ ಫಾಲಶಿಖಿ ಮೇಘಶಿಖಾವಹನಾಗೆ ನರ್ತಿಪಂ ಗಜರಿಪುವೋಲ್ ಘನಾಗಮುಮುದೇಂ ಬಗೆಗೊಂಡುದೊ ನೋಟ ಕ್ಕರ್ಕಳಾ (ರಾಜಶೇ. ೮-೧೦೭). [ಅಹಿ + ಶೀರ್ಷ]

**ಅಹಿಸಾಯಕ** (ನಾ). ಸರ್ಪಬಾಣ; ಸರ್ಪಾಸ್ತ್ರ : ವೃಥಾ ರಾಧೇಯ ನುದವೇಕಿನ್ನು ನಿನಗಹಿಸಾಯಕದ ಸಾವಿನಲಿ ನೀರಿಳಿಸುವೆನು ನೆತ್ತರಲಿ . . . ಎನುತ ತೆಗೆದೆಚ್ಚನಾ ಪಾರ್ಥ (ಕುವ್ಯಾಕ. ೨೬-೭).
[ಅಹಿ + ಸಾಯಕ]

**ಅಹಿಹಯ** (ನಾ). ಹೈಹಯವೆಂಬ ಕುಲ : ಮಾಹಿಷ್ಮತೀಪುರವರೇಶ್ವ ರನಹಿಹಯಕುಳಕಮಳ ಮಾರ್ತಣ್ಡಂ (ಕ ಇ ಅ. ೩-೭-೨೫೭ ; 1062) ; ಇತರ ರಾಜಪುತ್ರ ಕುಲಗಳೊಡನೆ ಹೆಣಗಾಡುತ್ತಲಿದ್ದ ಅಹಿಹಯ (ಹೈಹಯ) ಅಥವಾ ಕಲಚೂರ್ಯಕುಲದವರು ಈ ಸಮಯವನ್ನು ಸಾಧಿಸಿದರು (ಭಾಇಪ್ರ. ೩೨೫). [< ಸಂ. ಹೈಹಯ]

**ಅಹೀಂದ್ರ** (ನಾ). **೧.** = ಅಹಿನಾಯಕ: **೧.** ತಳಮನಹೀಂದ್ರರುಂದ್ರಫಣ ಮೆಂದು . . . ಧರಿತ್ರಿ ಬಂದು ನಿಶ್ಚಳತೆಯಿನಿರ್ಪಳಲ್ತೆ ಭುಜಮಂಡಳದೊಳ್ ವಸುಧಾಧಿನಾಥನಾ (ಚಂದ್ರಪ್ರ. ೩-೨೧). **೨.** [ಜೈನ] ನಾಗರಾಜ : ಸಿಡಿಲಿಂ ಮಿಂಚಿಂ ಮೊಟಗಿಂ ಪಡೆಗುಳ್ಕಂ ಪಡೆವಹೀಂದ್ರರೆರ್ದೆಗಿಡುವಿನೆಗಂ ಸಿಡಿಲಂ ಮಿಂಚಂ ಮೊಟಗುಮನೊಡನೆ ತೆರಳ್ಚಿದುವು ಜಯನ ಶರನಿಕರಂಗಳ್ (ಆದಿಪು. ೧೩-೬೨) ; ನತದಿವಿಜೇಂದ್ರಾಹೀಂದ್ರ ವಾಸುಪೂಜ್ಯ ಜಿನೇಂದ್ರಾ (ಸುಕುಮಾ. ೪-೪೯). [ಅಹಿ + ಇಂದ್ರ]

**ಅಹೀಂದ್ರಕೇತನ** (ನಾ). = ಅಹಿಕೇತನ : ಪಗೆ ಪೊಲ್ಲ ಪಾಂಡುನಂದನ ರೊಳಹೀಂದ್ರಕೇತನನ ಜೂದಿನ ಗೆಲ್ಲಮದೆಂತುಟಿನ್ನ ನಂಜಿನ ಸವಿಯಂತುಟೆಂದೊಡಿನಿಸಂತದೊಳಂತಕನಲ್ಲಿ ಗಟ್ಟುಗುಂ (ಪಂಪಭಾ. ೬-೬೫).
[ಅಹೀಂದ್ರ + ಕೇತನ]

**ಅಹೀಂದ್ರಲೋಕ** (ನಾ). ನಾಗರಾಜನ ಲೋಕ ; ನಾಗಲೋಕ : ಅಲ್ಲಿಯ ಮಾಲೆಗಾರ್ತಿಯರ್ ಮಿಗುವರಹೀಂದ್ರಲೋಕದೆಳವೆಂಡಿರಂ (ಚಂದ್ರಪ್ರ. ೧೧-೭೧). [ಅಹೀಂದ್ರ + ಲೋಕ]

**ಅಹೀನ** (ಗು). **೧.** ಹೀನವಲ್ಲದ ; ಉತ್ತಮವಾದ : ಮಹಿಪತಿಭೋಗ ಪ್ರಕರಮನಹಿಪತಿ ಭೋಗೋಪಮಾನಮೆಂದಜಿದಂತರ್ಬಹಿರರ್ಥನಿಚ ಯಮಂ ತೋಱಿದಹೀನ ಜೈನೇಂದ್ರರೂಪಮಂ ಕೆಯ್ಕೊಂಡಂ (ಶಾಂತಿಪು. ೯-೨೭) ; ವಸುಧೆಗೆ ಸಂದಹೀನರಿಪುವರ್ಗಮನೋಡಿಸಿ (ಕಾವ್ಯಾವ. ೬೪೪). (ನಾ). **೨.** ಸರ್ಪರಾಜ ; ವಾಸುಕಿ. **೧,೨** : ಉಲ್ಲಸದಹೀನಾಲಂಕೃತಂ ಮೂರ್ತಿ . . . ದೇವಗಣಪಂ ರಕ್ಷಿಕ್ಕೆ (ಜಗವಿ. ೧-೫).
[ಸಂ. (ನ- + ಹೀನ ; ಅಹಿ + ಇನ)]

**ಅಹೀನತಾನ್ವಿತ** (ನಾ). **೧.** ಸರ್ಪರಾಜನೆಂಬ ಬಿರುದಿನಿಂದ ಕೂಡಿದವನು. **೨.** ಹೀನತೆಯಿಲ್ಲದವನು ; ಉತ್ತಮಗುಣದಿಂದ ಯುಕ್ತನಾದವನು. **೧,೨** : ಅಹೀನತಾನ್ವಿತನಾಗಿಯುಂ ಅನುಕ್ರಮ ಸಮೇತನುಂ (ಚಂದ್ರಪ್ರ. ೨-೭ ವ).
[ಸಂ. (ಅಹಿ + ಇನತಾ + ಅನ್ವಿತ ; ನ- + ಹೀನತಾ + ಅನ್ವಿತ)]

**ಅಹೀರಣಿ** (ನಾ). = ಅಹಿರಣಿ : "ಅಹೀರಣಿಯೆಂಬುದು ಇರ್ತಲೆ ಗುಯ್ಯು" (ಹಲಾಯು. ೧೧೭೬-೨೧). [ಸಂ.]

**ಅಹೀಶ್ವರ** (ನಾ). **೧.** ಸರ್ಪರಾಜ. **೨.** [ಜೈನ] = ಅಹೀಂದ್ರ **೨** : ಅಹೀಶ್ವರಂ ವಿಭವವರ್ಣನೆಯಿಂದೆ ಧನೇಶ್ವರಂ ವಿನೂತನ ಧನದಾನದಿಂ ನೆರೆದರೇಂ ಸಲೆ ಮೇಘರಥಂ ಸಪುಣ್ಯನೋ (ಶಾಂತಿಪು. ೯-೪೩).
[ಅಹಿ + ಈಶ್ವರ]

**ಅಹುದು$_1$** 'ಅಗು$_1$' ಪರಾ.

**ಅಹುದು$_2$**, ಹವುದು, ಹೌದು (ಅ). ಇತರರು ಆಡಿದ ಮಾತಿಗೆ ಅಥವಾ ಕೇಳಿದ ಪ್ರಶ್ನೆಗೆ ಉತ್ತರವಾಗಿ ಉಂಟು, ದಿಟ, ಸತ್ಯ ಎಂಬ ಅರ್ಥ ಬರುವಂತೆ ಸಮ್ಮತಿಯನ್ನು ಸೂಚಿಸುವ ಒಂದು ಕ್ರಿಯಾರ್ಥಕ ಅವ್ಯಯ : ಅಹುದು ಸಂಜಯ ಶೋಕಶಿಖಿ ನೆಱೆ ದಹಿಸಿ ತನ್ನನು ಬೆಂದ ವಸ್ತುಗೆ ದಹನವುಂಟೇ ಎಂಬ ನಾಣ್ನುಡಿ ನಮ್ಮೊಳಾದುದಲಾ (ಕುವ್ಯಾಶ. ೧-೬) ; ಅಹುದು ಮತ್ತೇನಿಳೆಯ ಜನ ನಿಗ್ರಹವ ದಾರವರಿಂದ ಬಳಿಕೀ ಮಹಿಗೆ ಬಂದ ವಿರೋಧವಾವುದು ಹೇಳಬೇಕೆನಲು (ತೊರರಾ. ೧-೮-೧೬) ; ಅಹುದು ಸ್ವಾಮಿ, ಅದೊಂದನ್ನೇ ಒಯಿದಿದ್ದನು (ಮುಂಬಯಿ. ೪-೫೨). **ಹವುದು** : ಹವುದೆಂದರೆ ಬಯ್ಯುತ್ತಾನೆ, ಅಲ್ಲ ಎಂದರೆ ಹೊಡೆಯುತ್ತಾನೆ (ಗಾದೆ). **ಹೌದು** : ಹೌದು ಹೌದು ಅವಳು ಯಾವಾಗಲೂ ಹಾಗೆಯೇ (ಆರ್ಯಕ. ೧೧) ; ಹೌದಪ್ಪನ ಚಾವಡಿಯಲ್ಲಿ ಹೌದಪ್ಪ, ಅಲ್ಲಪ್ಪನ ಚಾವಡಿಯಲ್ಲಿ ಅಲ್ಲಪ್ಪ (ಗಾದೆ). ℙ ನಡುಗನ್ನಡ ಮತ್ತು ಹೊಸಗನ್ನಡದಲ್ಲಿ ಈ ಶಬ್ದ ಅವ್ಯಯದಂತೆ ಪ್ರಯೋಗವಾಗಿದೆ.

**ಅಹುದಹುದು** (ದ್ವಿರುಕ್ತಿ) : ದೇವನಕ್ಕಟ ವೀರನಹುದಹುದೀ ವಿಪಿನದೊಳಗೊಬ್ಬನುಂ ಬಿಡದಾವಗಂ ತಾನಿಪ್ಪನಾಗಿ ವಿಚಾರಮುಮುನುಳಿದು (ಬಸಪು. ೧೬-೭) ; ನೋಡಿ ಭುಗಿಭುಗಿಲೆಂಬ ಕೋಪಂ ಮೂಡಿ ಯಹುದಹುದಾ ಉಮಾಪತಿ ಬೇಡಿದನೆ ಮಾಂಸವನು ತನುಜನನಿಕ್ಕಿದನೆ ಸೆಟ್ಟಿ (ಬಸಪು. ೨೫-೨೧). **ಅಹುದಾಗು** = ಒಪ್ಪಿಗೆಯಾಗು : ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ (ಕನಕ. ೧೩೧ ಪ). **ಅಹುದೆನಿಸು** = ಮೆಚ್ಚಿಸು : ಬವರವಾದರೆ ಹರನ ವದನಕೆ ಬೆವರ ತಹೆನವಗಡಿಸಿದರೆ ವಾಸವನ ಸದೆವೆನು ಹೊಕ್ಕಡಹುದೆನಿಸುವೆನು ಭಾರ್ಗವನ (ಕುವ್ಯಾದ್ರೋ. ೪-೫೬) ; ಸಂತಸವು ಜನಿಸಿ ದೇವಕಿ ಪುತ್ರನನು ತಾನನುನಯದಿ ನೋಳ್ಪುಜ್ಜುಗವನೋಪನೊಲೊಡಂಬಡೆ ಪೇಳ್ದಳಹುದೆನಿಸಿದಳು ಹಲಧರನ (ಸಾಳ್ವಭಾ. ೧೨-೨). **ಅಹುದೆನ್ನು** = ಒಪ್ಪು ; ಮೆಚ್ಚು : ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ (ಕನಕ. ೧೩೧ ಪ). [< ಅಪ್ಪುದು (< ಆಗು$_1$)]

**ಅಹುಬಲ** (ನಾ). ಒಂದು ಊರಿನ ಹೆಸರು : ವೀರ ಥಡಿ ಅಹುಬಲ ನಾರಸಿಂಹಸ್ವಾಮಿಯ ದೇವಸ್ಥಾನದ ಮುಂದೆ ನಿಲ್ಲಿಸಿದ ಶಾಸನದ ವಿವರ (ಎಕ. XI, ದಾವಣ. ೧೬೪-೨ ; 1698). ℙ ಈಗಿನ ಅಹೋಬಲ ಎಂಬ ಊರಿನ ಹೆಸರು. [< ಸಂ. ಅಹೋಬಲ]

**ಅಹೆವು** 'ಆಗು$_1$' ಪರಾ.

**ಅಹೇತು** (ಗು). **೧.** ಕಾರಣವಲ್ಲದ. **೨.** ಕಾರಣವಿಲ್ಲದ. (ನಾ). **೩.** [ಕಾವ್ಯಮೀ] ಅತಿಶಯವೆಂಬ ಅಲಂಕಾರದಲ್ಲಿ ಒಂದು ಭೇದ : ವಿರೋಧಮುತ್ಪ್ರೇಕ್ಷೆ ವಿಭಾವನಾಹ್ವಯಂ ತಿರೋಹಿತಂ ಪೂರ್ವಮಹೇತು ತದ್ಗುಣಂ ಪರಸ್ಪರಾಸಂಗತಿಕಂ ವಿಶೇಷಮುಂ ನಿರೂಪ್ಯಮಾಣಾತಿಶಯ ಪ್ರಭೇದಮುಂ (ಕಾವ್ಯಾವ. ೭೨೬). 'ಅಹೇತುಕ' ಪರಾ. [ಸಂ.]

**ಅಹೇತುಕ** (ಗು). **೧.** ಕಾರಣವಿಲ್ಲದ ; ನಿಷ್ಕಾರಣವಾದ. **೨.** = ಅಹೇತು **೩** : ಸ್ವನಿಮಿತ್ತದೊಳಂ ಕಾರ್ಯಂ ಜನಿಯಿಸದಿರ್ಪಿರವಹೇತುಕಂ ಪೆಸರಕ್ಕುಂ (ಕಾವ್ಯಾವ. ೭೪೧) ; ಅಹೇತುಕಕ್ಕೆ॥ ಪೆತ್ತುಂ ತೆಳ್ಪಟಿಯದ ನಡು ಮುತ್ತುಂ ಬೀಱದ ಪಯೋಧರಂ ಮುನಿದುಂ ಚೆಲ್ವೊತ್ತರಿಪ ನಗೆಮೊಗಂ ಮೊಯ್ವೆತ್ತಿರೆ ಕರಮೊಪ್ಪಿದಪ್ಪುರಲ್ಲಿಯ ಪೆಂಡಿರ್ (ಕಾವ್ಯಾವ. ೭೪೪). [ಸಂ.]

**ಅಹೇರು$_1$** (ನಾ). ಶತಾವರಿ ಗಿಡ ; ಆಷಾಢಿಬೇರು. "ಪಿಲ್ಲಪಿಚ್ಚರ, ಆಸಡಿ" (ಅಮರ. ಟೀಕೆ). [ಸಂ.]

**ಅಹೇರು$_2$** (ನಾ). ಶುಭಕಾರ್ಯಗಳಲ್ಲಿ ಕೊಡುವ ಉಡುಗೊರೆ.
[← ಮರಾ. ಅಹೇರ್]

**ಅಹೋ**, **ಹೋ** (ಅ). ಆಶ್ಚರ್ಯ, ವೇದನೆ, ಸಂಬೋಧನೆ, ನಿವಾರಣೆ, ಮೆಚ್ಚಿಗೆ ಮುಂತಾದ ಅರ್ಥಗಳನ್ನು ಸೂಚಿಸುವ ಅವ್ಯಯ: "ಹೋ, ಅಹೋ, ಓಹೋ, ಹೋಹೋ – ವೇದನಾ ನಿವಾರಣಯೋಃ" (ಶಬ್ದಾನು. ೨೧ ವ್ಯಾಖ್ಯಾ). (i) ಆಶ್ಚರ್ಯಕ್ಕೆ: ಸುರಭೇರೀನಿನದಂ ದಿವಿಜರಹೋ ದಾನಶ್ರುತಿ ನೆಗಟೆ ನೆಗಟ್ದ ಪಂಚಾಶ್ಚರ್ಯಂ (ಪಂಪಭಾ. ೯–೨); ಹದಿರಿಂದ ಕೂಗಿತ್ತಹೋ ಗಂಗೆ (ಗುರುಚಾ. ೧–೧೬). (ii) ವೇದನೆಗೆ: ಅಹೋ . . . ಮನುಷ್ಯ ಭವದ ಸುಖಮೆಂಬ ಪುಲ್ಸನಿಯೊಳ್ ಸಿಲ್ಕಿ ಶಿವಸುಖವನೆಯ್ದುಸುವ ಸಚ್ಚಾರಿತ್ರದಿಂ ಬಚ್ಚಿದೆಂ (ವಡ್ಡಾರಾ. ೨೮–೧೫); ಅಹೋ ಕಷ್ಟಂ ಸಂಸಾರಮೆಂದು ಸಿದ್ಧಾರ್ಥ ಭಟ್ಟಾರರ್ (ವಡ್ಡಾರಾ. ೪೮–೨೪); ಹರನ ಭಕ್ತನನೊರ್ವ ಪಳಿದವಂ ಯುಗಕೋಟಿ ವರಮಹೋವಿಷ್ಟಿಯೊಳ್ ಕ್ರಿಮಿಯಾಗಿ ಪುಟ್ಟಿ (ಪದ್ಮರಾ. ೧೧–೧೧೧). (iii) ಸಂಬೋಧನೆಗೆ: "ಬೀಹವಚನವಾಸರಂ ಕರೆಹವೆಂಬಿವಹೋಯೆ ನಿಕ್ಕು" (ನಾನಾರ. ೧೫೦). **ಹೋ**: (i) ಸುರವಂದಿಗಳಿಂ ಹೋ ಹೋಯಿರೆ ಯೆನಿಸಿದುದಾಟಮಿಂತು ನೀಲಾಂಜನೆಯಾ (ಆದಿಪು. ೯–೩೯). (iv) ನಿವಾರಣೆಗೆ: "ಸವನಿಪುದೋಹೋ ಹೋ ಎನೆ ನಿವಾರಣಾರ್ಥಂ" (ಶಮುದ. ೩೦೯); ದೇವನೀಂ ಬೆಸಸಿದರ್ಕಾವಾವೆ ಹೋ ಸಾಲ್ವೆಂದು . . . ಇಳೇಶರ್ ಗರ್ಜಿಸಲ್ (ಜಗವಿ. ೭–೪೬); ಈತನಾರರ್ಜುನನೆ ಹೋ ಹೋ ಮಾತು ಮಾಣಲಿ ಮಾಣಲಿ (ಕುಮ್ಯಾಅ. ೭–೩೯). (v) ಮೆಚ್ಚಿಗೆಗೆ: ಅರೆ ಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗಟ್ದಂ (ಪಂಪಭಾ. ೨–೭೦); ಬಸವಣ್ಣನ ಬಿಂಕದ ಭಾಷೆ ಭಾಷೆ ಹೋ ಬಸವನ ನಿಷ್ಠೆ ನಿಷ್ಠೆ (ಬಸರ. ೮–೧). [ಸಂ.]

**ಅಹೋಧ್ವಾನ** (ನಾ). ಅಹೋ ಎಂಬ ಧ್ವನಿ, —ಕೂಗು: ದೇವರಾರ್ವಹೋಧ್ವಾನನಿನಾದಮೊಪ್ಪಿದುದು ರಾಜಿತ ರಾಜಗೃಹಾಂತರಾಳದೊಳ್ (ಶಾಂತಿಪು. ೬–೭೪). [ಸಂ.]

**ಅಹೋರಾತ್ರ** (ನಾ). ಹಗಲು ಮತ್ತು ರಾತ್ರಿ: "ಘಳಿಗೆ ಷಷ್ಟಿ ಸಂಖ್ಯೆಗೆಯಹೋರಾತ್ರಮಕ್ಕುಂ" (ಮಂಗರಾ. ೧೯–೫). [ಸಂ.]

**ಅಹೋರಾತ್ರಂ** (ಅ). ಹಗಲೂ ಇರುಳೂ: ನಚ್ಚಿನ ನಾಕಿನಿಕಾಯಮು ಮಗಲದಹೋರಾತ್ರಮೋಲಗಿಕುಂ (ಶಾಂತಿಪು. ೧೦–೮೭); ಮಟೆ ಭೋರ್ಭೋರೆಂದಹೋರಾತ್ರಮುಮುಗದೆ ಕೊಳ್ವಲ್ಲಿ (ಸುಕುಮಾ. ೪–೯). [ಸಂ. ಅಹೋರಾತ್ರ]

**ಅಹೋರಾತ್ರಿ**, **ಅಹೋರಾತ್ರೆ** (ನಾ). = ಅಹೋರಾತ್ರ: ಅಹೋರಾತ್ರಿಯಲ್ಲಿ ನಿಮ್ಮ ಶರಣರ ಸೇವೆಯಲ್ಲಿರಿಸು ಕೂಡಲ ಸಂಗಮದೇವಾ (ಬಸವ. ೮೫೦). **ಅಹೋರಾತ್ರೆ**: "ಅಜುವತ್ತು ಗಳಿಗೆಗಳ್ ತಾಂ ನೆಜೆ ದೊಡಹೋರಾತ್ರೆ" (ವ್ಯವಹಾ. ೫–೨೭). [ಸಂ. ಅಹೋರಾತ್ರ]

**ಅಹೋರಾತ್ರೆ** 'ಅಹೋರಾತ್ರಿ' ನೋ.

**ಅಹ್ನ** (ನಾ). ಹಗಲು ವೇಳೆ: "ಅಹ್ನವೆಂದೊಡದು ವೇಳೆಗಭಿಧಾನಮಕ್ಕುಂ" (ಮಂಗರಾ. ೨೦–೭). [< ಸಂ. ಅಹನ್]

**ಅಹ್ರಿಮನ್** (ನಾ). ಆಸುರತತ್ತ್ವದ ಅಧಿದೇವತೆ: ಅಹಿ, ವೃತ್ರ, ಮಾರ, ಕಲಿ, ಅಹ್ರಿಮನ್, ಸೈತಾನ್ (ಹೂಗಳು. ३೭–೨೩). [← ಪಾರ. ಅಹ್ರಿಮನ್]

**ಅಳ್**$_1$ 'ಅಟ್$_1$' ನೋ.

**ಅಳ್**$_2$ 'ಅಟ್$_2$' ನೋ.

**ಅಳ್**$_3$ (ಗು). ಕೋಮಲವಾದ; ಮೃದುವಾದ; ತೆಳುವಾದ. 'ಅಳ್ಳಿತ್ತಿ', 'ಅಳ್ಮಿದುಳ್' ಪರಾ. [?]

**ಅಳ್**$_4$ (ಗು). ಮಂದವಾದ; ಗಟ್ಟಿಯಾದ. 'ಅಳ್ಗಡಿ', 'ಅಳ್ಗಿಸರ್', 'ಅಳ್ಮದ' ಪರಾ. [ದೇ. ॥ ತಮಿ. ಅಳ್, ಅಳ್ಳು = ದಟ್ಟವಾಗು]

**–ಅಳ್**$_5$, **–ಅಳು**$_4$ (ಪ್ರ). ಸ್ತ್ರೀಲಿಂಗಸಾಧಕ ಪ್ರತ್ಯಯ: ಕಂಡೊಸೆದಂ ಬನದೊಳಗೆ ಜನಕತನಯಳನಣುವಂ (ಕವಿರಾ. ೨–೩೮); ಮಲಯಜ ಚರ್ಚಿತೆಯಂ ಕೇವಲ ಧವಳಾಭರಣೆಯಂ ದುಕೂಲಾಂಬರೆಯಂ ಕೆಲದೊಳ್ ನಿಲೆಯುಂ ಜ್ಯೋತ್ಸ್ನಾವಿಲಾಸದೊಳ್ ಬಗೆದೆನಿಲ್ಲ ನಲ್ಲಳನಿನಿಸಂ (ಕವಿರಾ. ३–೯३); ಸೌಂದರಾಂಗಿ ಸೌಂದರಿಯೆಂಬಳ್ . . . ಸುನಂದೆ ಗಂದು ನಂದನೆಯಾದಳ್ (ಆದಿಪು. ೮–೫೪); ಮಜುಗುವೆ ನಾನಿವಳ್ಗಿವಳವಂಗೆರಡಿಲ್ಲದ ನಲ್ಲಳ್ (ಆದಿಪು. ೧೨–३೦); ಪೆಜೆನೊಸಲಳನಗಲದಿರಲ್ (ನೇಮಿಪು. ೬–೨೪); ಇನಿಯಳ್, ಕಿಜಿಯಳ್, ಅಸಿಯಳ್ (ಶಮುದ. ೨೦೮ ಪ್ರಯೋ); ತಮತಮಗರುಂಧತಿಯಳನಸೂಯಳಾದಿಯಾದಮಳರುಷಿಪತ್ನಿಯರ್ ಸಂದಣಿಸಿ (ಪರಶು. ೧೫–३೬); ಮೆಲ್ಲೆರ್ದೆಯಳ್, ನಿಡುವಣೆಯಳ್ (ಕೈಪಿಡಿ. ३೫); ಅಲ್ಲಿದಳ್, ಎಲ್ಲಿದಳ್, ತೆಂಕಣಳ್, ಮೂಡಣಳ್ (ಕೈಪಿಡಿ. ३೫). **–ಅಳು**$_4$: ಕೂಸಿನ ರೂಪದಿ ಪೋಸವ ಮಾಡಿದಗೆ ದಾಸಿಯೊಬ್ಬಳು ಬೇಕೆ (ವಾದಕೀ. ೧–೭೭–೫).

**ಅಳೆ** (ನಾ). (ಉಕ) ಮನೆಯ ಮೇಲ್ಛಾವಣಿಯ ಗಳುಗಳನ್ನು ಭದ್ರಪಡಿಸಲು ಅಡ್ಡಲಾಗಿ ಕಟ್ಟಿ ಹುರಿಯಿಂದ ಬಿಗಿಯುವ ಅಡ್ಡಪಟ್ಟಿ; ಅಡ್ಡಗಳ: ಗಳ ಸರಿಯದೆ ಇರಬೇಕಾದರೆ ಅಳೆ ಬಿಗಿಯಾಗಿ ಇರಬೇಕು (ರೂಢಿ). [?]

**ಅಳಂಕರಣ** 'ಅಲಂಕರಣ' ನೋ.

**ಅಳಂಕರಣಗೃಹ** (ನಾ). ಅಲಂಕಾರ ಮಾಡಿಕೊಳ್ಳುವ ಮನೆ: ಬಂದ ಳಂದಳಂಕರಣಗೃಹಕ್ಕೆ . . . ದೇವಿ ಲೀಲೆಯಿಂ (ಚಂದ್ರಪು. ೧೨–೭). [ಅಳಂಕರಣ (= ಅಲಂಕರಣ) + ಗೃಹ]

**ಅಳಂಕರಿಸು** 'ಅಲಂಕರಿಸು' ನೋ.

**ಅಳಂಕು**$_1$ (ಕ್ರಿ). ೧. ಬಣ್ಣವನ್ನು ಬಳಿ; ಲೇಪಿಸು (?): ಎರೆವ ಮರಲ್ವ ಲಲ್ಲಯಿಪ ಕಾಲ್ಪಿಡಿವೆಂಬುದನಿಂಬುಕೆಯ್ವಳಂಕರಣ ವಿಳಾಸಮಂ ಮೆಜೆವ ಮೇಳಿಸುವಂದಿನ ರೂಪು ಶಾಸನಂ ಬರೆದುದು ಬರ್ಚಿಸಿತ್ತ ಮರ್ದುದಟ್ದುದಳಂಕಿದುದು [ಪಾಠಾಂ. ಅಡಂಗಿದುದು]ರ್ಚಿ ಪೊಕ್ಕು ಬೀರ್ವರಿದುದು ಬೆಚ್ಚುದಚ್ಚಿಜಿದುದೆನ್ನೆರ್ದೆಯೊಳ್ ಲಲಿತಾಂಗದೇವನಾ (ಆದಿಪು. ३–೪३). ೨. ಒತ್ತಾಗು; ಅಂಟು: ವಸಂತ ವಲ್ಲಭನ ತೇಜದೋಜೆಯಂತೆ ಕೆಂದಳಿರಳಂಕಿದ ಕಂಕೆಲ್ಲಿಯ ಕುಸುಂಕುಜುಗಳ (ಅನಂಪು. ೧–೯೦ ವ). [< ಸಂ. ಅಲೇಖ್ಯ]

**ಅಳಂಕು**$_2$ 'ಅಳುಂಕು' ನೋ.

**ಅಳಂಕು**$_3$ (ನಾ). "ಒಂದು ಜಾತಿಯ ಪ್ರಾಣಿ, ಚಿಪ್ಪುಹಂದಿ" (ಸಿಂಕೋ). [?]

**ಅಳಂಕೃತಿ** 'ಅಲಂಕೃತಿ' ನೋ.

**ಅಳಂಕೆ**$_1$ (ನಾ). ಜೋಡಣೆ; ಸೇರುವೆ; ಅಳವಡಿಕೆ (?): ಕಾಂತಿಯಿಂ ತಳತಳಿಸುವ ಕಾಂಚಿ ಕಿಂಕಿಣಿಯಳಂಕೆಯೊಳೇಂ ಕರಮೊಪ್ಪುತಿರ್ದುದೋ (ನಳಚಂ. ३೧೬). [< ಅಳಂಕು$_1$ ?]

**ಅಳಂಕೆ**$_2$, **ಅಳಕೆ**$_2$ (ನಾ). ತಲೆಯ ಕೂದಲು: ಹಳದಿಯನುಟ್ಟು ವೇಣಿಯನಳಂಕೆಗೆ ಸಿಕ್ಕಿ . . . ಓಕುಳಿಗನುವಾದರಂಗನೆಯರಂಗಜಭಿತ್ತಿಯ ಚಿತ್ರವೆಂಬಿನಂ (ನಳಚಂ ४೭३). **ಅಳಕೆ**$_2$: ಅಳಕಕ್ಕಳಕೆ ಎಂದು ಎದಂತದೊಳಿರ್ದುಂ ಲಿಂಗಮಕ್ಕುಂ (ಶಮುದ. ೯३ ಪ್ರಯೋ). [< ಸಂ. ಅಲಕ]

**ಅಳಂಕೆಗೆಯ್**$_1$ (ಕ್ರಿ). ಅಂಟಿಸು; ಜೋಡಿಸು; ಅಳವಡಿಸು: ತೊಡವನಳಂಕೆಗೆಯ್ವ ಜನವಶ್ಯವಿಭೂತಿಯನಿಟ್ಟುಕೊಳ್ವ ಕನ್ನಡಿಗಳನೊಪ್ಪಿ ನೋಜ್ಪ . . . ಉಜ್ಜುಗದೊಳಿರ್ದುದು ಚಾಪಳ ಭೂಪಸಂಕುಳಂ (ನಳಚಂ. ३೧೦). [ಅಳಂಕೆ$_1$ + ಗೆಯ್ (< ಕೆಯ್$_1$)]

**ಅಳಂಕೆಗೆಯ್**$_2$ (ಕ್ರಿ). ಪರಿಹಾಸಮಾಡು (?) : ನಿಱಿ ಸೊಪ್ಪಾದುದು ಕೋಡಗಂ ಸೆಳೆದುದೇ ಮೈಬಾಸುಱೀಱ್ವನ್ನೆಗಂ ಪಱಿದತ್ತು ಕ್ಕಟ ಪೊಕ್ಕು ಕೇದಗೆಯ ಪೂಗೊಯ್ಯಲ್ಕೆ ಘರ್ಮಾಂಬುಗಳ್ ತುಱುಗಲ್ಗೊಂಡವು ತಂಗೆ ಬಲ್ಲಿತೆ ಬಿಸಿಲ್ ಪೂವೋಂಟದೊಳ್ ನಿನ್ನನೆಂದಱಿದುತ್ಸಾಹಿಯಳಂಕೆಗೆಯ್ದು ಸಖಿಯುಂ ತನ್ನಂಗಿ ಕಣ್ಬೇ [ಪಾಠಾಂ. ಣ್ಬೇ] ಱಿದಳ್ (ಸೂಕ್ತಿಸು. ೧೧–೬೨). [ಅಳಂಕೆ ? + ಗೆಯ್ (< ಕೆಯ್$_1$)]

**ಅಳಂಕೆಗೊಳ್** (ಕ್ರಿ). ೧. ಅಂಟಿರು ; ಸೇರಿರು ; ಅಳವಟ್ಟಿರು : ತುದಿಯೆಯ್ದಿತ್ತೆನಗೆನ್ನ ಪೂಣ್ಕೆ ನಿನಗಂ ಪುಣ್ಯೋದಯಂ ಸಾರ್ಚಬಂದುದು ಧಾತ್ರಂಗಮಳಂಕೆಗೊಂಡು ಪಿರಿದುಂ ಚಿಂತಾಂತರಂ ಪೋಯ್ತು ಕೂಡಿದುದಾ ಶ್ರೀಮತಿಗಂ ಮನೋರಥಫಲಂ (ಆದಿಪು. ೪–೧೮) ; ನೀರ್ವಟ್ಟಾ ನರನಾಥನ ಕೊರ್ವಾರ್ಳೊಳಳಂಕೆಗೊಂಡ ಧಾರಾಜಲದೊಳ್ ಬೀರ್ವರಿದಿರೆ (ಚಂದ್ರಪು. ೩–೨೦) ; ವಿಗ್ರಹೋಜ್ಜ್ವನದೊಳಳಂಕೆಗೊಂಡು ಸಲೆ ಸದ್ರತಿಯೊಳ್ ನೆರೆದು . . . ಸಮಸ್ತ ಭೂಜನದ ಮನಕ್ಕೆ ತನ್ನೊಳನುರಾಗಮನಾವಗಮುಂಟುಮಾಡುವಂ (ಚಂದ್ರಪು. ೭–೩೬) ; ಸ್ವರದೊಳ್ ಪದದೊಳ್ ತಾಳದೊಳಿರದವಧಾನದೊಳಳಂಕೆಗೊಂಡಿರೆ ರಾಗೋಚ್ಚರಣಲಯಗೀತಮಾಯ್ತುಚ್ಚರಿ ತದ್ಗಂಧರ್ವವಿದ್ಯೆ ಸುರಸುಂದರಿಯಾ (ಚಂದ್ರಪು. ೧೧–೧೪೦) ; ಕಣ್ಗಳಂತೆ ಬೆಳ್ವೆಳಗನಳಂಕೆಗೊಂಡುವು (ಅನಂಪು. ೧೨–೭೭) ; ನೊಸಲೊಳಳಂಕೆಗೊಂಡಿರೆ ಮನಂ ಮನದಲ್ಲಿಯೆ ವಾಯುಪಂಚಕಂ ಮಿಸುಕದಡಂಗೆ ಕಣ್ಗಳರೆ ಮುಚ್ಚಿದವೊಲಿರೆ (ವೈಆರಿ. ೧೯೪೦, ೧–೫೨ ; 1300). ೨. ದೊರೆಕೊಳ್ಳು ; ಉಂಟಾಗು : ಇದು ನೆಲನಾಗಸಂದೆಸೆಯಿರುಳ್ಪಗಲೆಂಬ ವಿಕಲ್ಪಮಾರ ಚಿತ್ತದೊಳಮಳಂಕೆಗೊಳ್ಳವಿಷುಜಾಲಮಯಂ ಬಗೆವಂದು ವಿಶ್ವಮೆಂಬಿದೆ ದೊರೆಕೊಳ್ಗುಂ (ಚಂದ್ರಪು. ೧೦–೬೮) ; ಅಶ್ಚರ್ಯಮಳಂಕೆಗೊಳ್ವಿನಮಳಂಕರಿಸಿದಾಗಳ್ (ಅನಂಪು. ೬–೪೮ ವ). ೩. ಚಿತ್ರಿತವಾಗು: ಪರೆಯಂ ವರ್ಣಮಳಂಕೆಗೊಂಡ ನಯವತ್ಯಾಶ್ಚರ್ಯಸೌಂದರ್ಯವೊಂದಿರೆ ಭೇದಂ ಲವಮಿಲ್ಲದಾತ್ಮಜೆಯಿ ದಲ್ ತಾನಿಂತಿದೆಂಬಂತೆ ಬಿತ್ತರಿಸುತ್ತಿರ್ಪ ತದೀಯ ಚಿತ್ರಪಟಮಂ ನೋಡುತ್ತುಂ (ಕುಸುಮಾ. ೧೫–೭೦). [ಅಳಂಕೆ$_1$ + ಕೊಳ್$_1$]

**ಅಳಂಕೆಗೊಳಿಸು**, ಅಳಕೆಗೊಳಿಸು (ಕ್ರಿ). ೧. ಸೇರಿಸು ; ಅಳವಡಿಸು ; ಹೊಂದಿಸು : ಅರಿಬಳಪ್ರಹರಣ ನಿವಾರಂಗಳಪ್ಪಾಳ್ವೞಿಯ ತುಱುಗಲಂ ತುಱುಂಬುಗೊಳಿಸಿಯುಂ . . . ಅಂಕುಶಂಗಳನಳಂಕೆಗೊಳಿಸಿಯುಂ (ಪುಷ್ಪಪು. ೭–೬೯ ವ). ೨. ದೊರೆಕೊಳಿಸು ; ಉಂಟುಮಾಡು : ಲಾವಣ್ಯರಸದಿಂದ ನುಣ್ಣಿಸಿದಂತೆ ಮಂದಗಮನೆಯ ಸೌಂದರ್ಯಮಾಶ್ಚರ್ಯಮನಳಂಕೆಗೊಳಿಸೆ (ಅನಂಪು. ೨–೫೪ ವ). **ಅಳಕೆಗೊಳಿಸು**: ೧. ಪರಕಾಯಪ್ರವೇಶಂಗೆಯ್ವಂತೆ ಮನಕ್ಕೆ ಮನಮನಾಂಕೆಗೊಟ್ಟು ಮದಕರಿಯ ಮೇಗಣ ಬದಗನಂತೆ ಮೆಯ್ವೞಿಗೆ ಸಂದಳಕೆಗೊಳಿಸುವನಂತೆ ತನ್ನಿಚ್ಚೆಗೆ ತಂದು ಮತಿಯಂ ಮೊದಲ್ಗಿಡಲೀಯದೆ (ಲೀಲಾವ. ೪–೭೧ ವ). [ಅಳಂಕೆಗೊಳ್ + –ಇಸು$_3$]

**ಅಳಂಕೆವೆಱು** (ಕ್ರಿ). ಜೋಡಣೆಯನ್ನು ಪಡೆ, —ಹೊಂದು ; ಕೂಡಿರು ; ಸೇರಿರು ; "ಅಳಂಕೆವೆತ್ತಿರು=ಚಿತ್ರಿತವಾಗು" (ಸುಕುಮಾ. ಕೋಶ) : ಕಳಿಕೆಗಳಿಂ ಪೂದುಱುಗಲಿನಳಂಕೆವೆತ್ತಿರೆ ಬಸಂತದೊಳ್ ಶೋಭಿಸುವಂದೆಳಮಾವಿನ ತೆಱದಿನದೇಂ ವಿಲಾಸ ಯೌವನ ವಿಭೂತಿಯಂ ತಾಳ್ದಿದನೋ (ಸುಕುಮಾ. ೧೦–೬೨) ; ಚಂಡಗಜಾರೋಹಕರುದ್ದಂಡವೇದಂಡಂಗಳನಳಂಕೆವೆತ್ತಂಕುಶಮನಿಕ್ಕಿ ಜಂಕಿಸಿ ಭೋಂಕನಣೆದಾರ್ದು ಸಾರ್ದೌಂಕಿ ಕೊಂಕಿ ನೂಂಕಿದಾಗಳ್ (ರಾಜಶೇ. ೬–೬೯ ವ). [ಅಳಂಕೆ$_1$ + ಪೆಱು$_1$]

**ಅಳಂಕ್ರಿಯೆ** 'ಅಲಂಕ್ರಿಯೆ' ನೋ.

**ಅಳಂಗಿ** (ನಾ). ಒಂದು ಜಾತಿಯ ಮರ; ಹೆಮ್ಮರ (ಕಿ). [?]

**ಅಳಂಪೂರು** (ನಾ). ಒಂದು ಊರಿನ ಹೆಸರು : ಶ್ರೀಮದಳಂಪೂರ ಶ್ರೀಬ್ರಹ್ಮೇಶ್ವರದೇವರಂಗಭೋಗ (ಕ ಇ ಅ. ೧೦೫–೧೧–೨೫ ; 1067). [ಅಳಂಪು$_0$ + ಊರು$_3$ (< ಊರ್)]

**ಅಳಂಬೆ** 'ಆಳಂಬೆ' ನೋ.

**ಅಳಕ**$_1$ 'ಅಳ್ಳಕ' ನೋ.

**ಅಳಕ**$_2$, ಅಳಕೆ$_4$ (ನಾ). ಬರೆವಣಿಗೆಗಾಗಲಿ, ಚಿತ್ರಲೇಖನಕ್ಕಾಗಲಿ ಬಳಸುವ ಹಲಗೆ ಅಥವಾ ಲೇಖನ ವಸ್ತು : "ಆಲೇಖ – ಅಳಕ" (ಶ ಮ ದ. ೨೭೪ ಪ್ರಯೋ) ; "ಓರಂತಿರಲೇಖಮೆನ್ನಲಳಕಮದಕ್ಕುಂ" (ಕವಿಕಂ. ೧೧೨) ; ಲಲಿತಪದಂ ಪ್ರಸನ್ನ ಕವಿತಾಗುಣಮಿಲ್ಲದೆ ಪೂಣ್ದು ಪೇೞ್ದ ಬೆಳ್ಗಳ ಕೃತಿಬಂಧಮುಂ ಬರೆಹಕಾಱರ ಕೈಗಳ ಕೇಡು ನುಣ್ಣನಪ್ಪಳಕದ ಕೇಡು (ಪಂಪಭಾ. ೧–೧೨). **ಅಳಕೆ**$_4$ : "ಆಲೇಖ, ಆಳಕೆ" (ಶಬ್ದಾನು. ೧೬೦ ಪ್ರಯೋ). [< ಸಂ. ಆಲೇಖ]

**ಅಳಕ**$_3$ 'ಅಲಕ' ನೋ.

**ಅಳಕಗುಚ್ಛ** (ನಾ). ಮುಂಗುರುಳಿನ ಗೊಂಚಲು, —ಸಮೂಹ : ಅಲ್ಲಲ್ಲಿ ಹೆರಳಿನಿಂದ ಬಿಚ್ಚಿಹೋಗಿದ್ದ ಅಳಕಗುಚ್ಛಗಳು (ಕಪಾಕುಂ. ೯೪). [ಅಳಕ$_3$ (= ಅಲಕ) + ಗುಚ್ಛ]

**ಅಳಕಪಂಕ್ತಿ** (ನಾ). ಮುಂಗುರುಳಿನ ಸಾಲು : ಷಡಯನಕುಲದಂತಿರೆ ಕರ್ಪಿಡಿದೊಪ್ಪುವುದ ಹರ್ ನಿನ್ನ ಪದಪಂಕರುಹಕ್ಕೊಡನೆಱಗಿದಮರಸಮಿತಿಯ ಬೆಡಂಗುವೆತ್ತಳಕಪಂಕ್ತಿ ಸಹಜವಿಳಾಸಾ (ಜಿನಾಲೆ. ೩೨–೩೨). [ಅಳಕ$_3$ (= ಅಲಕ) + ಪಂಕ್ತಿ]

**ಅಳಕಲು** (ನಾ). ದಟ್ಟವಾಗಿಲ್ಲದುದು ; ತೆಳುವಾದುದು : ಮರದಳಕಲಿನ ಎಳಬಿಸಿಲು ಅವನ ಮೇಲೆ ಸುತ್ತಲೂ ಬಲೆ ನೆಯ್ದಿತ್ತು (ಮಲೆಮ. ೫೬). 'ಹೆದ್ದಳಕಲು' ಪರಾ. [ಅಳಕ$_1$ (< ಅಳ್ಳಕ) + –ಅಲು]

**ಅಳಕಾನೀಕ** (ನಾ). ಮುಂಗುರುಳಿನ ಸಮೂಹ; ಗುಂಗುರು ಕೂದಲಿನ ರಾಶಿ : ಅಳಕಾನೀಕಮನಿಂದ್ರನೀಳಮುಗುರಂ ವಜ್ರಂ . . . ಆರಾಧಿಸಿ ಪೋಲ್ತುವೆಂದಿರದೆ ಪೇೞ್ (ಸುಕುಮಾ. ೯–೯೪). [ಅಳಕ$_3$ (= ಅಲಕ) + ಅನೀಕ]

**ಅಳಕಾಳಿ** (ನಾ). = ಅಳಕಾನೀಕ : ಅಳಿಕುಲದವೋಲ್ ವಿನೀಲಂಗಳ್ ನಿನ್ನಳಕಾಳಿಗಳ್ (ಕ ವಿ ರಾ. ೩–೬೧) ; ಸಂಚಳದಳಕಾಳಿಗಳ್ ಮಿಳಿರ್ದು ನರ್ತಿಸೆ (ಸುಕುಮಾ. ೧೧–೧೧). [ಅಳಕ$_3$ (= ಅಲಕ) + ಆಳಿ$_3$(= ಆಲಿ$_5$)]

**ಅಳಕಿಸು** 'ಅಳ್ಕಿಸು' ನೋ.

**ಅಳಕೆ**$_1$ 'ಅಡಕೆ$_1$' ನೋ.

**ಅಳಕೆ**$_2$ 'ಅಳಂಕೆ$_2$' ನೋ.

**ಅಳಕೆ**$_3$ 'ಅಲಕೆ' ನೋ.

**ಅಳಕೆ**$_4$ 'ಅಳಕ$_2$' ನೋ.

**ಅಳಕೆಗೊಳಿಸು** 'ಅಳಂಕೆಗೊಳಿಸು' ನೋ.

**ಅಳಕೋದ್ಭಾಸಿ** (ಗು). ೧. ಮುಂಗುರುಳಿನಿಂದ ಶೋಭಿಸುವ; ಮುಂಗುರುಳಿನ ಹೊಳಪುಳ್ಳ. ೨. ಅಳಕಾನಗರದಲ್ಲಿ ಶೋಭಿಸುವ. ೧, ೨ : [ಆಲೇಖ್ಯಗತೆ]ಯಂತೆ ದರ್ಶನಮಾತ್ರಫಲೆಯುಂ . . . ಯಕ್ಷಾಧಿಪಲಕ್ಷ್ಮಿಯಂತೆ ಅಳಕೋದ್ಭಾಸಿಯೆನಿಸಿದೀಱುಂಜವ್ವನೆಯ ರೂಪಾತಿಶಯಮನೆವೆಯಿಕ್ಕದೆ ಶೂದ್ರಕಂ ನೋಡುತ್ತುಂ (ಕಾದಂಪೂ. ೪೯). [ಸಂ. ಅಲಕೋದ್ಭಾಸಿನ್]

**ಅಳಗ**$_1$ (ನಾ). ೧. ಹವಳ. ೨. ಹವಳದ ಬಣ್ಣದ ಹಸು, ಕುದುರೆ, ನಾಯಿ ಮುಂತಾದ ಪ್ರಾಣಿ : ಶ್ವೇತ ಪೀತ ಹರಿತ ಕಪೋತ ಕೃಷ್ಣ ಗೌರವ ಮಾಂಜಿಷ್ಟ ಕಪಿಲ ಕರ್ಬುರ ಅಳಗ ಬೊಟ್ಟಳಗ ಇಂತೀ ದಶ

ವರ್ಣದ ಪಶುನಾಮುದ ಅನುವನಜೀತು (ತುಜುಗಾ. ೧೨); ಅಳಗ [ಪಾಠಾಂ. ಅಳಿಗ] ನನಾಳಿಗೊಂಡು ಸಲೆ ಜಾಯಿಲನಂ ನಲವಿಂದೆ ಮಿಾಜೀ ಪುತ್ತಳಿಯನೆ ದಾಂಟೆ . . . ಚಂದ್ರನ ಮೊಲಕ್ಕೆಣೆಯಪ್ಪಿನ ಮಿಾಜೀ ಪೋಯ್ತು . . . ಪೆರ್ಮೊಲಂ (ಸೂಕ್ತಿಸು. ೩–೨೨೨); ಜನ್ನನಂ ನೀಲ ವನಳಗನಂ ತನ್ನಿ ಕೆತ್ತಳಮೌವ್ವಳಿಗನಂ ತನ್ನಿ ಜಂಬನ ನಾಕಯಿರನಂ ತನ್ನಿ ಜೇರನನು ತನ್ನಿ . . . ವಾಹಕರಿರಾ ನೀವು (ಬಸಪು. ೫೯–೪೦); ಪೊಳೆವಳಗ ತಿಳಗ ಕೊಂಗ ಸವಳ ಬಿಂಬೆಯ ನೀಲ ಜನ್ನ ಜಂಬ ಮಹುವ ಕೆತ್ತಳ ಸಾರಂಗವೆನಿಪ್ಪಗ್ಗಳಿಕೆಯ ಹಯಮುಂ ತುರಂಗಿಗಳ್ ಕೈಗೆಯ್ದುರ್ (ಶ್ರಿಪುವಿ. ೨೪–೨೯೪); ಕುಡಿವಾಲನ ಕೊಳ್ಳಿವಾಲನ ಬೆಳ್ಳನ ನಿಡುಗಾಲ ಬಲು ಕುಕ್ಕುರನಾ ಮಡಿಗಿವಿಯಳಗನ ಬಿಡುತಡೆ ಹಿಡಿಯೆಂದು ನುಡಿವರು ಬಿಯದರಬ್ಬಾಕ್ಷಿ (ರಾಮುವಿ. ೧೫–೬೮).

[ಪ್ರಾ. ದೇ. ಅಲಯ = ವಿದ್ರುಮ, ಪ್ರವಾಳ]

**ಅಳಗ₂** (ನಾ). [ಸಂಗೀತ] ತಾಳವಾದ್ಯ ಬಾಜನೆಯಲ್ಲಿ ಒಂದು ಕ್ರಮ; ಜತಿಯ ಭೇದ (?): ಅಳಗಂ ಸುಚಿಯಳಗಂ ಬೊಟ್ಟಳಗ ಮೊಳಕತ್ತರಮುಮೆಸೆವ ಹೊಜಕತ್ತರಮುಗ್ಗಳಿಸಿರೆ ನಾನಾ ಭೇದಂಗಳ ಪಹರಣೆ ತುಡುಕುವಮೌರಿ [ಪಾಠಾಂ. ಮೋರಿ]ಯಂ ಬಾಜಿಸಿದಂ (ಧರ್ಮಪ. ೨–೨೩). [?]

**ಅಳಗ₃** (ನಾ). ಸುಂದರ; ಚೆಲುವ. 'ಅಳಗಪೆರುಮಾಳೆ' ಪರಾ.

[← ತಮಿ. ಅೞಗನ್]

**ಅಳಗ₄** (ನಾ). ಹಣೆ: ಅಳಗಲ್ಲಿ ಮಾಗಾಯಿ ಬೆರಳಲ್ಲಿ ಹೊನ್ನುಂಗ್ರ ಅರಳೀಯ ಮರದ ನೆರಳಲ್ಲಿ ಆಡುವ ತರಳ ನೀನಾರ ಮಗನಯ್ಯ (ಹಳ್ಳಿಯ. ೯೦). [< ಸಂ. ಅಲಿಕ]

**ಅಳಗಪೆರ್[ರು]ಮಾಳೆ** (ನಾ). ಒಬ್ಬಾತನ ಹೆಸರು: ಅತ್ರೇಯ ಗೋತ್ರದ ಅಳಗಪೆರ್[ರು]ಮಾಳಿಗೆ (ಸೌಇಇ. IX–ii, ೪೨೧–೩೧; 1392).

[ಅಳಗ₃ + ಪೆರುಮಾಳೆ]

**ಅಳಗಾರ** (ನಾ). = ಅಳಗ₃ : ಅಂಬಾಡೀ ಮಾವೂ ಕಿರನೆಲ್ಲಿ ತಾಳಡಿಯ ಅಳಗಾರ ಚಲ್ವಯ್ಯೆ ಕುಯ್ದಾರೆ (ಹುಟ್ಟಿಹ. ೮೦).

[ಅಳಗ₃ + –ಗಾರ (< –ಕಾಜ)]

**ಅಳಗಿಯಮನವಾಳ** (ನಾ). ೧. ಅಳಗಿರಿಯಲ್ಲಿರುವ ಶ್ರೀರಂಗನಾಥ. ೨. ಸುಂದರನಾದ ವರ. ೩. ಒಬ್ಬಾತನ ಹೆಸರು (?): ನಂಮ ಅಪ್ಪಾಜಿಯವರು ಪ್ರಾಕಾರಭ್ಯ ಅಳಗಿಯಮನವಾಳ ರಾಮಾನುಜಜಿಯ್ಯರವರ ಮುಖಾಂತರವಾಗಿ (ಎಕ. III, ಶ್ರೀರಂಗ. ೧೦೦–೧೪೪; 1724).

[← ತಮಿ. ಅೞಗಿಯಮನವಾಳನ್]

**ಅಳಗೆ₁**, ಅಳಿಗೆ (ನಾ). ಮಣ್ಣಿನ ಪಾತ್ರೆ; ಮಡಕೆ; ಗುಡಾಣ: ನೆಜೀ ಕಾಸಿದಾ ಅಳಗೆಯೊಳಟ್ಟೆ ಪಳಿದ್ಯದೊಳು ಪಾಕವಂ ಮಾಡಿ ಯಿಳುಹಿ (ಸೂಪಶಾ. ೧–೬೦); ಅಳಗೆಯೊಳಗೆಣ್ಣೆಯಂ ಬಿಟ್ಟು ವಗ್ಗರಿಸಿಯದ ಮುಕ್ಕುದಿಯ ಬರಿಸಿಕೊಂಡು (ಸೂಪಶಾ. ೩–೩೨); ಗೋಧಿಯನ್ನು ಅಳಗೆಗೂ, ಭತ್ತವನ್ನು ಕಣಜಗಳಿಗೂ, ರಾಗಿಯನ್ನು ಗುಳಿಗಳಿಗೂ ತುಂಬಿದನು (ಕಿಂಕಥೆ. ೧೬೩); ಕೊಳಗ ಭತ್ತ ಕೊಟ್ಟು ಅಳಗೆ ತಂದೆ (ರೂಢಿ). **ಅಳಿಗೆ**: ಒಟ್ಟಿದಳಿಗೆಯ ಚಿನ್ನತಿಗೋಲ ತುದಿಯಿಂದ ಕುಟ್ಟುವನಂತೆ . . . ನೃಪ ಹೋಳುಗುಟ್ಟಿಬಿಟ್ಟನು ನಿಮಿಷದೊಳು (ಭರಚ. ೨೯–೬೨); ಅಂಬಲಿ ಕುಡಿದವ ಅಳಿಗೆ ಹೊತ್ತುಕೊಂಡು ಹೋದಾನೆ (ಗಾದೆ); ಅಳುವ ಕಂದನಿಗೆ ಅಳಿಗೆ ಅಂಬಲಿ (ಗಾದೆ). [?]

**ಅಳಗೆ₂** (ನಾ). ಒಂದು ಊರಿನ ಹೆಸರು: ರಾಚಗೊಂಡ ಪಂಡಿತರ ಅಳಗೆಯ ಪಂಡಿತರಿಗೆ ಶ್ರೀಮನುಮಹಾವಡ್ಡಬ್ಯವಹಾರಿ ಕೆಂಚಗಾಜಸೆಟ್ಟಿ (ಎಕ. III, ಮಳವ. ೫೬–೮; 1142) [?]

**ಅಳಗೆದೆಜೀ** (ಕ್ರಿ). ಮಡಕೆಯ ಮುಚ್ಚಳವನ್ನು ತೆಗೆ: ಒಂದೆರಡು ಕುದಿ[ಪಾಠಾಂ. ನುಡಿ]ಗೊಮ್ಮೆ ಒಂದೊಂದಳಗೆದೆಜೀ[ಪಾಠಾಂ. ಗೆ]ದು ಒಂದು ಹದನಾಗಿ ಹೊಗೆಯಿಲ್ಲದಿಹ ದೀಪಾಗ್ನಿಯಿಂದ ನೊಂದಂದದೊಳು ಸಟ್ಟುಗೆವಿಡಿದು ತೊಳಸಿ (ಸೂಪಶಾ. ೩–೨). [ಅಳಗೆ₁ + ತೆಜೀ₁]

**ಅಳಘೆ** (ನಾ). ಸುಂದರಿ; ಚೆಲುವೆ: ಎನ್ನೆಂ ಯೆನ್ನೆಂ ಅಳಘೆಯ ಜಾಲೇ ಎನ್ನೆಂ ಯೆನ್ನೆಂ ಶಿವಂಥಕಾಲೇ (ತಿರುನಾ. ೨೨೪–೨೩).

[← ತಮಿ. ಅೞಗಿ]

**ಅಳತೆ** (ನಾ). ಪ್ರಮಾಣ; ಪರಿಮಾಣ; ಪರಿಮಿತಿ: "ಅಳತೆಯ ಬಳ್ಳಮಂ ಪ್ರಸ್ಥಮೆಂದೆಂಬುದು" (ಮಂಗರಾ. ೧೩೯–೮); ಮಿಾಂಗಳಳತೆ ಯೋಜನದಗಲಂಗಳ್ (ಕಾವ್ಯಸಾ. ೬೭ ಶೂದ್ರಕ); ಅಳತೆಗೆ ತೂಕಕ್ಕೆಣೆ ಕೆಗೆಯೊಳಗಾದುವು ಸಕಲ ವಸ್ತುಗಳ್ (ಆದಿಪು. ೧೦–೫೩); ನಳಿನನಾಭನ ಕರುಣದಳತೆಯ ತಿಳಿದು ಪೊಂಪುಳಿಯಾಗಿ . . . ಧೌಮ್ಯನ ಬಳಿಗೆ ಬಂದರು (ಕುವ್ಯಾಅ. ೨೬–೧೫); ಐವತ್ತುಕೋಟಿ ಯೋಜನದಳತೆಯೊಳ್ (ಚಿಬಪು. ೨–೨); ನಮ್ಮ ಊಟದ ಅಳತೆ ನಮಗಿರಬೇಕು (ಮುಂಬಯಿ. ೪–೩೩).

**ಅಳತೆಬದ್ದು** = ಅವಧಿ; ಪರಿಮಿತಿ: ನಾವು ದುಡಿಯಾಕೇನರ ಅಳತಿ[ತೆ]ಬದ್ದು ಐತಿಲ್ರಿ (ಭಾಗ್ಯಶ್ರೀ. ೩೯).

[ಅಳಿ₁ + –ತೆ. / ಮಲ. ಅಳತ್ತ; ತುಳು. ಕೊಡ. ಅಳತೆ]

**ಅಳತೆಕಡ್ಡಿ** (ನಾ). = ಅಳತೆಗೋಲು: ಪುಟದ ನಕಾಶೆಯನ್ನು ಇಟ್ಟುಕೊಂಡು ಒಂದು ಅಳತೆಕಡ್ಡಿಯ ಸಹಾಯದಿಂದ ಪುಟಗಳೆಲ್ಲವೂ ಒಂದೇ ಉದ್ದವಿರುವಂತೆ ವಿಂಗಡಣೆ ಮಾಡಿ (ಮುದ್ರಕ. ೩೮). [ಅಳತೆ + ಕಡ್ಡಿ]

**ಅಳತೆಗೆಡು** (ಕ್ರಿ). ಪ್ರಮಾಣವನ್ನು ಮಿಾರು: ಅಳತೆಗೆಟ್ಟು ಭೋಜನ ಮಾಡಿ (ಮುಂಬಯಿ. ೪–೧೨೨); ಅಳತೆಗೆಟ್ಟು ಎಂದಿಗೂ ಸರಾಯ ಕುಡಿಯಲಿಕ್ಕಿಲ್ಲ (ಮುಂಬಯಿ. ೫–೨೩೦). [ಅಳತೆ + ಕೆಡು]

**ಅಳತೆಗೋಲು** (ನಾ). ಅಳೆಯುವ ಕಡ್ಡಿ; ಮಾನದಂಡ: ಪಾವನ ಸುಮೇರು ಪರ್ವತವಿಹುದು ಕಮಲಜಾಂಡಾವಳಿಯನಳೆವಳತೆಗೋಲಂತೆ (ಸೌಂದಪು. ೧–೨೫); ಜನರ ಆರೋಗ್ಯ, ಸಂಸ್ಕೃತಿ ಮತ್ತು ಜೀವನದ ಮಟ್ಟವನ್ನು ಅಳೆಯಬೇಕಾದರೆ ಅವರ ಅಡುಗೆಯ ಮನೆಯೇ ಉತ್ತಮವಾದ ಅಳತೆಗೋಲು (ಅಡುಸಾ. ೨೦); ಯಕ್ಷಗಾನ ಸಂಪ್ರದಾಯವಾದರೂ ಇದೇ ಅಳತೆಗೋಲಿಗೆ ಸಿಗಬೇಕಾಗುತ್ತದೆ (ಯಕ್ಷಬ. ೮).

[ಅಳತೆ + ಕೋಲು (< ಕೋಲ್₁)]

**ಅಳತೆಮಾಪು** (ನಾ). = ಅಳತೆಗೋಲು: ತನ್ನ ಭಾವಬುದ್ಧಿಯ ಅಳತೆ ಮಾಪಿನಂತೆ 'ಪ್ರತಿಮಾ' ನಿರ್ಮಾಣದಲ್ಲಿ ಹಿಗ್ಗುಗೊಳ್ಳುತ್ತಾನೆ (ಕರ್ಣಾಟ. ೮). [ಅಳತೆ + ಮಾಪು]

**ಅಳತೆವಡು** (ಕ್ರಿ). ಪರಿಮಿತವಾಗು; ಅಳತೆಗೆ ಬರು, —ಸಿಕ್ಕು: ಬುವಿಗೆ ಪ್ರಭೆ ಪ್ರತಾಪಂ ರವಿಬಿಂಬದಿನಳತೆವಟ್ಟು ಬರ್ಪೆಸಕಂಬೋಲ್ (ಸಂಸಪ. ೪೫–೮೩). [ಅಳತೆ + ಪಡು₁]

**ಅಳದಕ್ಕಿ** (ನಾ). (ಉಕ) ಗೋಳಾಟ; ದುಃಖ: ಅಕ್ಕೂನ ಸುಖ–ದುಃಖದ ಅಳದಕ್ಕಿ ಹಾಡಿಕೊಳ್ಳಿಕ್ಕೆ ನಾ ಇಲ್ಲಿ ಬಂದಿಲ್ಲ (ಜಾಜು. ೪೪); ನನ್ನ ಅಳದಕ್ಕಿಯನ್ನು ನಾನು ನಿಮ್ಮೆದುರಿನಲ್ಲಿ ಹೇಳಿಕೊಂಡಿದ್ದೇನೆ (ಬಾಂಡಾಯ. ೮೭).

**ಅಳದಕ್ಕೀತನ** = ಗೋಳಾಡುವಿಕೆ: "ಊರ್ವಸಿ ಅಂಥಾ ಹುಡುಗೀನ ತಂದೇನಿ, ಇನ್ನ ಯಾಕೆ ಈ ಅಳದಕ್ಕೀತನಾ ಎಂದು ತಿಪ್ಪನನ್ನು ರಮಿಸಿದರು" (ಸಮಜೀ. ೫೨೩). [< ಅಳು₁ (< ಅೞ್₁) + ಅಟ್ಕೆ ?]

**ಅಳಪ** (ನಾ). ಒಂದು ರಾಜವಂಶದ ಹೆಸರು: ಬಟರಿಕುಲಾಮಲ ವ್ಯೋಮತಾರಾದಿನಾಥನ್ನಳಪಗಣಪಶುಪತಿ (ಮೈಆರಿ. ೧೯೩೬, ೧೬–೫; 450). 'ಅಳುಪ' ಪರಾ. [?]

**ಅಳಬಳ** (ನಾ). ೧. ಶಕ್ತಿ; ಸಾಮರ್ಥ್ಯ; ಸತ್ತ್ವ: ಫಲುಗುಣನ ಕಣೆಗಿಣೆಯ ಪವನಜನಳಬಳವ ಕೈಕೊಂಬ ಕರ್ಣನೆ (ಕುವ್ಯಾಕ. ೯–೩೦); ನಿಮ್ಮಯ ದೊಡ್ಡನನು ಕರೆತನ್ನಿ ನೋಡುವೆವಾತನಳಬಳವ (ಪ್ರಭುಲೀ. ೧೩–೧೩). ೨. ಸನ್ನಿವೇಶ; ಸ್ಥಿತಿಗತಿ; ಸ್ವರೂಪ: ಫಲುಗುಣನಳಬಳವ ತಿಳಿದಲ್ಲದೆನ್ನಸು ಸೈರಿಸದು ತನುವ (ಕುವ್ಯಾದ್ರೋ. ೧೨–೩); ಪೊಸಬರೀ ದೇಶದಳಬಳವನಱಿಯಿರಿ ಹಾರಿಸುವ ಮನುಜರೊಳು ಪರಿಚರಿಯವಿಲ್ಲೆಂದು (ಸೌಂದಪು. ೮–೬೭); ತೊಲಗುವುದು ನಿನಗಪಯಶವು ನಿರ್ಮಲನನು ನೀನಹೆ ಲೋಕದಲಿ ನಿನ್ನಳ ಬಳವದೇನೆಲವೊ ಬೇಗದಲು ಸುರುತನಗೆಂದ (ತೊರರಾ. ೬–೫೦–೧೪); ಎಲೆ ಮುನಿಪೋತ್ತಮನೆ ಗಯ ಜಳಜನಾಭಗದೇನ ಮಾಡಿದನಳಬಳವ ವಿಸ್ತರಿಸಿ ಹೇಳು (ಕೋಗಯ. ೨–೧೯). ೩. ಅಂತರಂಗ; ಅಭಿಪ್ರಾಯ; ಉದ್ದೇಶ: ಮಲಗ ನೆಮ್ಮುತ ಗದ್ದುಗೆಯ ಮೇಲೊಲಿದು ಕುಳ್ಳಿತು ತನ್ನ ಮನದಳಬಳವನೊಪ್ಪದೆ ಸೂಚಿಸುವೆನಿನ್ನೋಜೆಯಿಂದೆನುತ (ಪ್ರಭುಲೀ. ೫–೨೨).
[ಅಳವು + ಬಳ್ಳ$_2$ (= ಬಲ)]

**ಅಳರಿ** 'ಅರಳಿ$_1$' ನೋ.

**ಅಳರು** 'ಅಳಱ್$_1$' ನೋ.

**ಅಳರೆಲೆ** 'ಅರಳೆಲೆ' ನೋ.

**ಅಳರ್ಕ** (ನಾ). ಒಂದು ಜಾತಿಯ ಹುಳು: ಘೋರಾಕಾರಮಾಗಿ ಮುಳ್ಳಂದಿಯ ರೂಪಮನಾಂತು ಪಡಲ್ವಟ್ಟಿರ್ದ ಅಳರ್ಕಮೆಂಬ ಪೆಸರ ಪುಳುವಂ ಕಂಡು (ಭಾರಶಾಂ. ೩–೧೩).
[< ಸಂ. ಅಲರ್ಕ ?]

**ಅಳರ್ಪು** (ನಾ). ೧. ಭಯ; ಹೆದರಿಕೆ; ಬೆರಗು: "ಅಳರ್ಪಿನಲು ಬೆರಗು" (ಕಶರ. ೮). ೨. ಮನೋವ್ಯಥೆ; ವೇದನೆ; ಆತಂಕ (ಕಿ).
[ಅಳಱ್$_2$ + -ಪು$_2$]

**ಅಳಲ್$_1$** 'ಅಟಲ್$_1$' ನೋ.

**ಅಳಲ್$_2$** 'ಅಟಲ್$_2$' ನೋ.

**ಅಳಲಿಕೆ** 'ಅಳಲ್ಕೆ' ನೋ.

**ಅಳಲಿಗ** 'ಅಟಲಿಗ' ನೋ.

**ಅಳಲಿಸು** 'ಅಟಲಿಸು' ನೋ.

**ಅಳಲು$_1$** 'ಅಟಲ್$_1$' ನೋ.

**ಅಳಲು$_2$** 'ಅಟಲ್$_2$' ನೋ.

**ಅಳಲುಗಿಚ್ಚು** 'ಅಳಲ್ಗಿಚ್ಚು' ನೋ.

**ಅಳಲುಗಿತಿ** (ನಾ). ದುಃಖಕ್ಕೆ ಕಾರಣವಾದವಳು: ಹೊಳದು ಹೋದಳು ಹೋದಳೇ ನಮ್ಮಳಲುಗಿತಿ ತಪ್ಪೇನು ತಪ್ಪೇನೊಳಗುಮಾಡಿದ ಕುಹಕಿಗಳನೆಂದುದು ಖಳವ್ರಾತ (ನಿಭಾಗ. ೮–೧೦–೨).
[ಅಳಲಿಗ (< ಅಟಲಿಗ) + -ಇತಿ]

**ಅಳಲುನಗೆ** (ನಾ). ದುಃಖದಿಂದ ಕೂಡಿದ ನಗೆ; ಶೋಕಯುಕ್ತವಾದ ನಗೆ: ಜಡೆಗಳೊಡೆಯಗೆ ನಿನಗೆ ಕಚ್ಚುಟ ಅಡವಿಯರ ಮನೆಲೆಕ್ಕ ಸರಿಯಾಯ್ತೊಡೆಯ ಬಂಟರಿಗೆನುತ ರಕ್ಕಸನಳಲುನಗೆ ನಕ್ಕ (ಕಾಶಿರಾ. ೨೨–೧೪). [ಅಳಲು$_2$ (< ಅಟಲ್$_2$) + ನಗೆ]

**ಅಳಲುಪಾಡು** 'ಅಟಲ್‌ಪಾಡು' ನೋ.

**ಅಳಲುರಿ** (ನಾ). ದುಃಖದ ಬೇಗೆ; ಅಳಲ ಬೆಂಕಿ: ಅಕಟ ಭಂಗಕ್ಕೆ ಪಕ್ಕಾದೆನೆಂದಾತ್ಮಗತಾರ್ವಾಗ್ನಿ ಜ್ವಲಂಬೆತ್ತಳಲುರಿಯೊಳಕೊಂಡಂತೆ ತೋರ್ಕುಂ ಸಮುದ್ರಂ (ಶಬಶಂ. ೧–೩೨).
[ಅಳಲು$_2$ (< ಅಟಲ್$_2$) + ಉರಿ$_2$]

**ಅಳಲೆ** 'ಅಣಿಲೆ$_1$' ನೋ.

**ಅಳಲ್ಕೆ**, ಅಳಲಿಕೆ (ನಾ). ೧. ವ್ಯಸನ; ದುಃಖ: ತಿರಸ್ಕರಿಸದಿರ್ ವೀರವರ, ಪೆಣ್ಣೆದೆಯಳಲ್ಕೆಯಂ (ಶ್ರೀರಾಮಾ. ೪೫೨–೨೦೨). ೨. ಕ್ಲೇಶ; ಆಯಾಸ: ಪರಿದೋಡಿಬಂದಳಲ್ಕೆಯಂ ಪರಿಹರಿಸಿಕೊಳ್ಳುತಂ (ವೃಷವಿ. ೧೬–೧೮ ವ). **ಅಳಲಿಕೆ:** ೧. ಚಲುವ ಲಕುಮಿ ನಲ್ಲ ವಿಜಯ ವಿಠ್ಠಲ ಎನ್ನ ಬಳಲಿಕೆ ಪರಿಹರಿಸೊ ಅಳಲಿಕೆ ಪುಟ್ಟದಂತೆ (ಮೋಕ್ಷದೀ. ೯೨).
[ಅಳಲ್$_2$ (< ಅಟಲ್$_2$) + -ಇಕೆ]

**ಅಳಲ್ಗಿಚ್ಚು**, ಅಳಲುಗಿಚ್ಚು (ನಾ). = ಅಳಲುರಿ: ಈ ಅಳಲ್ಗಿಚ್ಚಿಂದೆ ಸುಡದಿರೆನ್ನೆದೆಯ ಕೆಚ್ಚಿನ ಮರದ ಬೇಗರ್ಗಳಂ (ಶ್ರೀರಾಮಾ. ೭೩೫–೩೫). **ಅಳಲುಗಿಚ್ಚು:** ದನುಜೇಂದ್ರನನುಜನು ಸತ್ತಳಲುಗಿ[ಪಾಠಾಂ. ಕಿ]ಚ್ಚಿನಲಿ ತಾಯೆದೆ ಹೊತ್ತಿ ಹೊಗೆಯಲು (ನಿಭಾಗ. ೭–೨–೧೩).
[ಅಳಲ್$_2$ (< ಅಟಲ್$_2$) + ಕಿಚ್ಚು (< ಕಿರ್ಚು)]

**ಅಳಲ್ನುಡಿ** (ನಾ). ದುಃಖದ ನುಡಿ; ಸಂಕಟದ ಮಾತು: [ಅ]ಸ್ವಾಧೀನದಿಂದಳಲ್ನುಡಿಯಂ ನುಡಿವ ಮಗನಂ ತಾನೆ ಬಂದು ಕಳುಪಿದಪೆಂ ... ಕಂದಾ ನಡೆಯೆನುತ್ತುಂ (ನಂಬರ. ೧೬–೭೭).
[ಅಳಲ್$_2$ (< ಅಟಲ್$_2$) + ನುಡಿ$_2$]

**ಅಳಲ್ವೆಂಕೆ** (ನಾ). = ಅಳಲುರಿ: ಗುರುವರೇಣ್ಯರ ನುಡಿಗೆ ದೊರೆಯೆರ್ದೆಯಳಲ್‌ವೆಂಕೆ ನೂರ್ಮಡಿಸುತುಕ್ಕಿದುದು (ಶ್ರೀರಾಮಾ. ೧೧೧–೪೬).
[ಅಳಲ್$_2$ (< ಅಟಲ್$_2$) + ಬೆಂಕೆ]

**ಅಳವಡಿಕೆ**, ಅಳವಳಿಕೆ (ನಾ). ೧. ಹೊಂದಿಕೆ; ಜೋಡಣೆ; ಸೇರುವೆ: ಮುಂದಾರಕುಸುಮದಾಮಂಗಳಿಂ ವಿಳಸಿತಮೆನಲಳವಡಿಕೆವಡೆದುದ್ವರ್ತನಂಗೆಯ್ದು ಯಕ್ಷಕರ್ದಮಮಂ ಸೊಗಸೆ (ಧರ್ಮಪ. ೩–೬೮ ವ); ಇಂತತಿವಿಲಾಸದಿಂದಂ ಸೌಂದರವತಿವೆರಸು ನೀರಾಟಮಂ ನೆಗಱ್ಚುವೆಳವೆಣ್ಗಳೊಳಳವಡಿಕೆಯಂ ಕಂಡುದ್ಭಟರಾಜೇಂದ್ರಂ ಸಂತಸಮಂ ತಳೆದು (ಉದ್ಭಟ. ೯–೧೨೭ ವ); ಹೊಳೆವ ಕಣೆಗಳ ಮಂಚ ತಲೆಗಿಂಬಳವಡಿಕೆಯಲಿ ಭೀಷ್ಮ ಸುಖದಲಿ ಮಲಗಿದನು (ಕುವ್ಯಾಭೀ. ೧೦–೨೩). ೨. ರೀತಿ; ಕ್ರಮ: ಕೆಲರು ವಿಭೂತಿಯಂ ಗಾಳಿಸುತ ಪುಷ್ಪಮಂ ತಳಿರಪತ್ರೆಗಳನಳವಡಿಕೆಯಿಂ ಶೋಧಿಸುವ ... ಸದ್ಭಕ್ತರಂ (ಲಶಿಚಂ. ೩೧–೧೩); ಫಡ ಜಯದ್ರಥ ಹೋಗು ಹೋಗಳವಡಿಕೆಯಲ್ಲಿದು ಸಾರು (ಕುವ್ಯಾದ್ರೋ. ೪–೬೦); ಕೆಳದಿಯರ ಕೈಸನ್ನೆಗಳ ಮೈವಳಿಯ ಮಾತಿಂಗೇಳ್ವ ಕುಳ್ಳಿರುವಳವಡಿಕೆ ಬಲ್ಲರಿಗೆ ಬೆಜಗೇನಲ್ಲವೇಯೆಂದ (ತೊರರಾ. ೧–೮–೭೫); ಬಳಿಕ ಹಂಸಧ್ವಜಂಗಾ ಬಭ್ರುವಾಹನಂಗಳವಿಯೊಳ್ಕಾಳೆಗಂ ಪೂಣ್ದುದು ಕಠೋರಮೆನೆ ದಳಕೆ ದಳಮುಗ್ಗಳಿಕೆಗಗ್ಗಳಿಕೆ ಧೃತಿಗೆ ಧೃತಿ ಕೋಲೆಗೆ ಕೋಲೆ ಕೋಲ್ಗೆ ಕೋಲು ... ಅಳವಡಿ [ಪಾಠಾಂ. ಳಿ]ಕೆಗಳವಡಿ [ಪಾಠಾಂ. ಳಿ]ಕೆ ಸಮಮಾಗೆ (ಜೈಮಿಭಾ. ೨೨–೪೭). ೩. ಅನುಕೂಲತೆ; ಸೌಕರ್ಯ: ಅಂತಿಱುಂಬಿನಡವಿಯ ನಿಡಿಯ ಮರಂಗಳಿನಡವಿಯಂ ಪಡೆಗೆ ನಡೆಯಲಳವಡಿಕೆಯಪ್ಪಂತೊಡರಿಸೆ (ಪಾರ್ಶ್ವಪು. ೧೧–೬೨ ವ); ಕೆಳದಿಯರೆಲ್ಲರ್ ತಂತಮ್ಮಳವಡಿಕೆಯ ಠಾವಿನಲ್ಲಿ ... ಶಯ್ಯಾತಳದೊಳ್ ಮೆಱೆದಿರ್ದರ್ (ದಶಕು. ೮–೨೧೮); ನಿನ್ನ ಮನಸಿನೊಳಳವಡಿಕೆಯೆಹಗಹಗೆ ಮಾಡುವೆನಣ್ಣ (ಬಸಪು. ೪೪–೧೩). **ಅಳವಳಿಕೆ:** ೨. ಸಱಿಯನಿಟ್ಟಳವಳಿಕೆ ರೇಖೆಯ ನಿಱಿಗೆ ಬಣ್ಣದ ಜಾತಿ ಭಾವದ ನೆಜವಣಿಗೆಯಿಂ ಬಲಿದ ನಿಪುಣತೆ ಕಣ್ಗೆ ಸೊಗಯಿಸಲು (ಕುಮುರಾ. ೩–೫೧). [ಅಳವಡು + -ಇಕೆ]

**ಅಳವಡಿಸು**, ಅಳವಳಿಸು$_3$ (ಕ್ರಿ). ೧. ಹೊಂದಿಸು; ಜೋಡಿಸು; ಸರಿಯಾಗಿಸು; ಸೇರಿಸು: ಅವಯವದಿಂದಮೆ ದೇವಾಂಗವಸ್ತ್ರದುಳ್ಳುಡೆಯನೋಸರಿಸುವ ಸೂಸುವ ಹಾರಲತೆಯನಳವಡಿಸುವ ಭಂಗಿಯೆ ಮದನರಾಜ ರಾಜ್ಯವಿಳಾಸಂ (ಆದಿಪು. ೯–೩೬); ಗದಾದಂಡಮಂ ಭುಜಾದಂಡದೊಳಳವಡಿಸಿ ನೋಡಿ (ಪಂಪಭಾ. ೧೩–೮೬ ವ); ಮನಮನಳವಡಿಸಿ

ಗರುಡನನುನಿಲನುಮಂ ಜವಮನುಟಿ್ಟಯಿವೆಂಬಂತೆ ನಭೋವನನಿಧಿಯೊಳ್ ಪರಿಪುದು ಪರಿವ ನಾವೆಯಂತಿರೆ ವಿಭಾಸಮಾನ ವಿಮಾನಂ (ಶಾಂತಿಪು. ೨–೮೩); ಅಳವಡಿಸುವಂತೆ ಮಣಿಕುಂಡಳಮಂ ನಸುಮುರಿದು ಜನಕಸುತೆಯ ಕಪೋಲಸ್ಥಳಮಂ ಮೃಗಮದ ಪತ್ರಾವಳಿ ವಿಳಸಿತಮಂ ಮರುಳ್ದು ನೋಡಿದನೊರ್ವಂ (ಪಂರಾಮಾ. ೫–೬೦); ವಿಷಮ ವಿಷವಿಟಂಕ ದಂಷ್ಟ್ರಾಂಕುರದಂತಗುರ್ವಿಸುವ ವಿಷಲತಾಗುಲ್ಮಕಂಟಕಂಗಳಂ ಗಾಡಿಯಿನಳವಡಿಸಿಯುಂ (ಪುಷ್ಪಪು. ೬–೬೯ ವ); ಸುದತಿಯನೆರ್ದೆಯೊಳಳವಡಿಸಿ ತದ್ವಿರಹೋದ್ರೇಕದಿಂದಂ ರಣರಣಕಮಂ ತಾಳ್ದು (ಉದ್ಭಟ. ೬–೯ ವ), ತೋಳಬಂದಿಗೆ ಪೆಡೆವಣಿಯ ಮಣಿವಾವುಗಳನಳವಡಿಸಿದನು (ಕುವ್ಯಾಕ. ೬–೧೨); ಜಲವನಿಂದ್ರಿಯಗೂಡಿ ತೃಷೆಗವ್ವಳಿಸಿ ಬಂದು ಕುರಂಗಿ ಜಠರದೊಳಳವಡಿಸಿದುದು ಬೆಳೆದುದದಱುದರದಲಿ ಮ ನಿವೀರ್ಯ (ತೊರರಾ. ೧–೫–೧೩); ಸಡಿಲಿಸಿದಳು ದುಕೂಲವನು ಹೊಂದೊಡವುಗಳ ಮಲಿನಾಂಬರವನಳವಡಿಸಿದಳು ಬಿಚ್ಚಿದಳು ಸೌಗಂಧಿಕದ ಸಿರಿಮುಡಿಯ (ತೊರರಾ. ೨–೧–೪೧); ಅಸುಗೆಯ ತಳಿರೊಳ್ಮಲಗಿಸಿ ಪಕ್ಷದ ಪದಱೊಳಗಳವಡಿಸಿ (ಜಯಕಾ. ೨–೨೯); ಜಲಜಮುಖಿ ಬೆಮರಿಡಲು ಕೊರಳಿನ ಲಲಿತ ಮುಕ್ತಾಹಾರವಲ್ಲಾಡಲು ಸೆಱಗನಳವಡಿಸಿ ನಿಂದಳು ಬಿಸುಸುಯ್ಯುತ್ತ (ನಳಚ. ೨–೩೪); ಪೂಸರವ ಮಿಗೆ ಶಿಖೆಗಮರಿಸಿ ದೂವಟ ರುಮ್ಮಾಲ ಬಿಗಿದಳವಡಿಸಿದನಾಗ (ಕಂನವಿ. ೧೦–೧೮). **೨.** ವಶಪಡಿಸು; ಪಳಗಿಸು: ಎಳಸಿ ಬಳಸಿಪರ್ಪ ಮೃಗಸಂಕುಳಂಗಳೆಂದನಿತುಮೊಡನೆ ಕೋಟ್ಟ್ಕಸಗಿದೊಡಾಕುಳರಾದಾರ್ಯಜನಕ್ಕವನಳವಡಿಸುವ ಬಗೆಯನಾ ಮಹಾತ್ಮಂ ಪೇೞ್ದಂ (ಆದಿಪು. ೬–೫೭). **೩.** ಶಮನಮಾಡು; ಶಾಂತಗೊಳಿಸು; ತಗ್ಗಿಸು; ಕಳೆ; ನೀಗು: ಅತ್ತ ಕನಕಶ್ರೀ . . . ಕಲ್ಲನೆ ಕನಲುತ್ತಮಿರಲ್ ತತ್ತ್ವಪ್ರಾಯವಚನಂಗಳಿನವಳನಳವಡಿಸಿ ಜೈನಶಾಸನ ಚೂಡಾಮಣಿ . . . ಪದವಡಿಸಿ (ಶಾಂತಿಪು. ೪–೫೭); ಪರಿವ ಪರಿವೊನಲ ಹಿಮಶೀಕರಂಗಳೊಳ್ ಪುದಿದ ಮಂದಮರುತಂ ಮಲಯೋಚ್ಚರಪವನಂ ಸೊಗಯಿಪ ಚಮರರುಹಾನಿಲನೊಗೆದ ಬೆಮರನಳವಡಿಸುವಿನಂ (ಶಾಂತಿಪು. ೯–೭೯); ಗಜಪುರದೊಳೊಂದು ಮದಗಜಂ ಇರುಳ್ ವಿಸಟಂಬರ್ಪುದಂ ಕಂಡು ಮೂವತ್ತೆರಡುಂ ಕ್ರೀಡೆಗಳೊಳಳವಡಿಸಿ ವಶಂಮಾಡೆ (ಚಾವುಂಪು. ೧೦೭–೨೬). **೪.** ಉಂಟುಮಾಡು; ಒದಗಿಸು; ಅಣಿಮಾಡು; ಏರ್ಪಡಿಸು: ರಕ್ತಾಂಬುಜದ ಚೆಲ್ವನಭಯಂಕರಾಂಬುಜಮಳವಡಿಸೆ ನಾಭಿರಾಜಂ ನುಡಿದಂ (ಆದಿಪು. ೬–೭೬); ಬಳಿಕ ತತ್ತ್ವವಿವೇಕವೆಲ್ಲವನಳವಡಿಸಿ ಕೊಟ್ಟೈಕ್ಯಭಾವಸ್ಥಳವ ಕಾಣಿಸಿ (ಪ್ರಭುಲೀ. ೬–೪೦); ಕುಲವಿಹಿತ ಚೌಲೋಪನಯನವನವರಿಗಳವಡಿಸಿ (ಕುವ್ಯಾಅ. ಓರಿಇ. ೧೪–೨೦); ಆ ಮಹಾಋಷಿಕುಲವು ಬ್ರಾಹ್ಮವನಾತಗಳವಡಿಸಿ ಕಾಮಧೇನು ವನಿತ್ತು (ಕುವ್ಯಾಅ. ಓರಿಇ. ೨೫–೫೩); ತವೆ ಮಿಸುನಿಯ ಹರಿಣಾಣಬಟ್ಟಲುಗಳ ಯುವತಿಯರಳವಡಿಸಿದರು (ಕಂನವಿ. ೮–೮೩). **೫.** ಆವರಿಸು; ವ್ಯಾಪಿಸು; ಸುತ್ತಿಕೊ: ಸುತ್ತಲುಂ ನಿನ್ನನಾ ಕೋಮಳೆಯಂ ದಂಬೆತ್ತ ಸುತ್ತುಂಗುರುಳಳವಡಿಸಲ್ . . . ಪಿರಿದು ತೊಡರ್ಪಾದುದಿನ್ನೆತ್ತ ಪೋಪೈ (ಆದಿಪು. ೪–೨೧). **೬.** ಜೊತೆಗೊಳ್ಳು; ಕೂಡು; ಸೇರು: ಭಾಸ್ಕರನ ಕುಜನ ಮಂತ್ರಿಯ ವಿಳಸದ್ಬುಧನಳವಡಿಸೆ . . . ಮುಟಿ್ಟಯಕ್ಕುಂ (ಜಟ್ಟಮ. ೬–೩೮). **೭.** (ಬೇರೊಂದು ರೂಪವನ್ನು) ಧರಿಸು; ತಾಳು: ದೇವನನುರೂಪದಲಿ ನಿಂದರು ದೇವಿಯರು ಗುಹ ಗಣಪತಿಗಳೆಲ್ಲಾ ವಿನೋದವ ನೋಡಲಳವಡಿಸಿದರು ಶಾಬರವ (ಕುವ್ಯಾಅ. ೬–೩೦); ಅತ ಬಳಿಕಳವಡಿಸಿದನು ಶಬರಾತಿಶಯದಂಗವನು ಪಾರ್ಥಿವ ರೀತಿಯನು ಮುಱಿನಾಡಿ ಕೂಡಿದನಾ ಪುಳಿಂದಕರ (ತೊರರಾ. ೩–೩–೮).

**ಅಳವಳಿಸ್ಯು:** **೧.** ರೂಢಿಯಾವುಜಿಗಂ ಕಣ್ಗೊಳಿಪ ಕಾಂತಿಯ ಸೊಂಪಿನಿಂ ಶೋಭಿವಡೆದಾವುಜಮನಳವಳಿಸಿಕೊಂಡು . . . ಬಾಜಿಸುತ್ತಿರೆಯುರಿ (ಶಾಂತೀಶ್ವ. ೬–೯೩ ವ); ಬಳಿಕ ನಿಯಮ ಸಮಾಪ್ತಿಯನು ಕೈಕೊಳಿಸಿ ಹೂಡಿದ ಬಂಡಿಗಳನಳವಳಿಸಿ ಕಱು ತುಱು ಬಾಲವನಿತಾ ವೃದ್ಧಜನ ಸಹಿತ . . . ಬಂದರಾ ಗೋಕುಲಕೆ ಗೋಪರು (ನಿಭಾಗ. ೧೦–೨೯–೨೪); ರಾಜವದನೆಯರ್ . . . ದೂರ್ವಾಕ್ಷತೆಗಳ ರಾಜಿಗಳನಳವಳಿಸೆ (ಜೈಮಿಭಾ. ೬–೧೭).

**ಅಳವಡಿಸಿಕೊಳ್, ಅಳವಡಿಸಿಕೊಳ್ಳು** = **೧.** ಜೋಡಿಸಿಕೊ; ಹೊಂದಿಸಿಕೊ: ಗದಾದಂಡಮಂ ಭುಜಾದಂಡದೊಳಳವಡಿಸಿಕೊಂಡು (ಪಂಪಭಾ. ೧೦–೧೦೦ ವ). **೨.** ತುಂಬಿಕೊ; ಮೊಗೆದುಕೊ: ಪೊಚ್ಚ ಪೊಸ ಪೊನ್ನಕುಂಭದೊಳಚ್ಚಿಗೋಳಿಪ್ಪುದುಮನಳವಡಿಸಿಕೊಂಡಾ . . . ಶಿವಾಲಯಮನೊಳಪೊಕ್ಕಂ (ಉದ್ಭಟ. ೧೧–೭೬). **೩.** ಬಳಕೆಗೆ ತಂದುಕೊ; ಅನುಸರಿಸು; ಅಭ್ಯಾಸಕ್ಕೆತರು: ಗ್ರಂಥಸಂಪಾದನೆಯ ಕಲೆಯನ್ನು ನಾವು ಚನ್ನಾಗಿ ಅಳವಡಿಸಿಕೊಂಡಿಲ್ಲ (ತವಸಿ. ೧೮); ಕಾಲದೇಶಗಳಿಗನುಗುಣವಾದ ವ್ಯವಸ್ಥೆಯನ್ನು ಅಳವಡಿಸಿಕೊಳ್ಳಬೇಕೇ ಹೊರತು ಎಲ್ಲಾ ಕಾಲಕ್ಕೂ ಒಂದೇ ವ್ಯವಸ್ಥೆ ಸಮರ್ಪಕವೆಂದು ಹೇಳಲಾಗದು (ಅನಾಮಿ. ೫೪); ಜಲ್ಹಾಮರ್ ನೃತ್ಯದಲ್ಲಿನಂತೆ ಗೊಂಡರು ಹಲವಾರು ನೃತ್ಯಗಳನ್ನು ಅಳವಡಿಸಿಕೊಂಡಿದ್ದಾರೆ (ಭಾರಜಾ. ೯೧). **೪.** ಪಡೆ; ಹೊಂದಿರು: ಅವನು ತನ್ನ ತಂದೆಯಿಂದ ಸಸ್ಯಶೋಧನೆಗಳಿಗೆ ಬೇಕಾದ ಒಂದು ತರಹದ ಮನೋವಿಕಾರವನ್ನು ಅಳವಡಿಸಿಕೊಂಡನೆಂದರೂ ಆಶ್ಚರ್ಯವೇನಿಲ್ಲ (ಸಸ್ಯಕ. ೮). **೫.** ಪಾತ್ರವಾಗಿಸು; ವಿಷಯವಾಗಿಸು: ತನ್ನ ಪತಿಯ ಕಳೇಬರವಿದ್ದಲ್ಲಿಗೆ ಹೋಗಿ ಪತಿಯ ಎರಡು ಕಾಲುಗಳನ್ನೂ ಪ್ರಭುವಿನ ದೃಷ್ಟಿಗೆ ಅಳವಡಿಸಿದಳು (ಶಾಂತಲಾ. ೩೧೭). [ಅಳವಡು + –ಇಸ್ಕು]

**ಅಳವಡು** (ಕ್ರಿ). **೧.** ವಶವಾಗು; ಹಿಡಿತಕ್ಕೆ ಸಿಕ್ಕು: ಎಂತಪ್ಪ ಗರ್ವವ್ಯಾಳಿಯುಮನತಿವರ್ತಿಗಳುಮನಾರೂಢದೊಳ್ ತನಗಳವಡುವುದಱಿಂ ದಾರೂಢ ಸರ್ವಜ್ಞನುಂ (ಪಂಪಭಾ. ೪–೩೭ ವ); ನಳನೃಪನ ಬಯಸುವಡೆ ನಿನಗವನಳವಡನು (ನಳಚ. ೩–೪೦). **೨.** ದೃಢವಾಗು; ಬಿಗಿಯಾಗು: ಶೀತಳಜಳಮಿಶ್ರಿತ ವಸ್ತ್ರವನಳವಟ್ಟರೆ ಸುತ್ತಲಿನಿಸು ಬೇನೆಗಳಱಿಗುಂ (ಲೋಕೋಪ. ೯–೧೬೬); ಉಮ್ಮಳಿಸುವರೇಕೆ ದುರ್ಮತಿಗಳಾಗದುದಾಗ ದಪ್ಪುದಪ್ಪುದೆಂದಳವಡೆ ಚಿತ್ತಮಂ ಪಿಡಿದು ನಿಲ್ಲದೆ ತಲ್ಲಣದಿಂ ಧರಿತ್ರಿಯೊಳ್ (ದಶಕು. ೮–೨೬); ತುಱುಬ ಬಲಿದೊಳಗೌಕಿ ಮೊನೆ ಮುಂಜೆಱಗನಳವಡೆ ಸೆಕ್ಕಿ (ಕುವ್ಯಾದ್ರೋ. ೧೭–೧೯). **೩.** ಸಾಧ್ಯವಾಗು; ಶಕ್ಯವಾಗು: ತಂದಿತ್ತು ಕೆಯ್ಸೆಱೆಯಂ ಕೊಟ್ಟಳವಟ್ಟ ಸಾರಧನಮಂ ಮೂವಿಟ್ಟಗಂ ಪೂಣ್ದು ಕಾಳ್ಗೆಱಗಿತ್ತಂತರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ (ಪಂಪಭಾ. ೬–೩೦); ಇದೆಮಗವಶಕುನಂ ಈ ಬಾರಿಯ ಮದುವೆಯಳವಡದು (ನಂಬಿರ. ೬–೧೨೦); ನಿರ್ಮಳ ನಕ್ಷತ್ರಸಮಾಜಮಂ ನೆಗಟ್ದಲಂಪಿಂ ರಾಸಿಗೈದಂತೆ ಕಣ್ಗಳವಟ್ಟಂತುರುಕಾಂತಿಯಿಂ ಪರಪುತಂ ಪ್ರೋತ್ತುಂಗ ತಾರಾಚಳಂ (ಉದ್ಭಟ. ೧೨–೧೧೯); ನೂಕಬೇಹುದು ನುಡಿದ ವತ್ಸರವ ಗುಪಿತವೆಂತಳವಡುವುದಾಶ್ರಯದಪದಶೆಯನೆಂತಾನುವಿರಿ (ಕುವ್ಯಾವಿ. ೧–೫); ಎಲವೊ ನಿನ್ನಯ ಬಾಯ ಹವಣಂಗಳವಡದ ಬಲುದುತ್ತನಂಗೈಗಳಲಿ ಧರಿಸಿದೆ ಪಾಪಿ ಕೆಡಿಸಿದೆ ಕರ್ಬುರಾನ್ವಯವ (ತೊರರಾ. ೩–೮–೬); ಜಡರೆನಿಪ ಮಾನವರ ಮತಿಗಳವಡುವವೊಲು ಶ್ರುತಿಗಳನು ಶಾಖೆಯ ಕಡಿದು ಕೈಗೊಳಿಸಿದನು ವೇದವ್ಯಾಸರೂಪದಲಿ (ನಿಭಾಗ. ೨–೩–೧೦); ನಾಮಸ್ಮರಣೆ ನಾಲಗೆಗಳವಡದೆ ಮುತ್ತಾ ಮರಾಮರವೆಂದರವಗೆ ಪ್ರೇಮದೊಳೊಲಿದು ಸದ್ಗತಿಯ ಪಾಲಿಸಿದ ಶ್ರೀರಾಮ ವಿಭೀಷಣವರದ (ಮೋಹತ. ೪೧–೨೨). **೪.** ಒಪ್ಪು; ಹೊಂದಿಕೆಯಾಗು;

ಅನುರೂಪವೆನಿಸು : ಮಿಂಚುವೆತ್ತ ಸುಲಿಪಲ್ಗಳಳವಟ್ಟ ದುಕೂಲಮೊಪ್ಪೆ ಬೆಳ್ಪಸದನಮಂತದೇನೆಸೆದುದೊ ಪರಿಪೂರ್ಣ ಸು ಧಾ ಂ ಶು ವ ಕ್ತ್ರೆ ಯಾ (ಸುಕುಮಾ. ೯–೧೧೪) ; ತರಿಸಿ ತೀರ್ಥಕರ ಜನನೀಜನಕರಂ ನಿಜನಿರ್ಮಿತ ಮಣಿಮಂಟಪದೊಳಳವಟ್ಟ ಕಳಧೌತಪೀಠದೊಳಿರಿಸಿ(ನೇಮಿಪು. ೮–೮೦ ವ); ಅನುನಯಮಪ್ಪ ಚೆಲ್ವ ಹರೆಯಂ ಹರೆಯಕ್ಕಳವಟ್ಟ ರೂಪು ರೂಪಿನ ಪೊಸ ದೇಸೆಗೊಪ್ಪುವ ಗುಣಂ (ದಶಕು. ೬–೯೦) ; ತನುಗಳವಟ್ಟ ರೂಪು ಘನ ರೂಪನಲಂಕರಿಪಚ್ಚಜೌವನಂ ಮನಕಿನಿದಾದ ಜೌವನಕೆ ತಕ್ಕ ವಿಳಾಸತೆ (ರಾಜಶೇ. ೩–೧೯). **೫. ಉ ಂ ಟಾ ಗು ; ಒದಗು :** ಕುಂದದ ರುಚಿ ತಮಗಳವಡೆ ಕುಂದದ ನವನಿಧಿ ಗೃಹಾಳಿ ಸಿರಿಯಂ ನೋಡಲ್ ಬಂದ ಮರ್ದಿನತಾಯ್ಗಡಲೆಂಬಂದಮನುಕ್ಕಂದಮಾಗಿ ತಳೆದೆಸೆದಿರ್ಕುಂ(ಮಲ್ಲಿಪು. ೨–೭೧) ; ಅಂಗಸುಖಿಗೆ ಲಿಂಗಸುಖವಳವಡದು ಲಿಂಗಸುಖಿಗೆ ಅಂಗಸುಖ ವಳವಡದು (ಆದವ. ೯೩) ; ಈ ಮಹಾತ್ಮಂ ಮದುವೆನಿಲಲ್ವೇೞ್ಕುಮಂತು ನಿಂದೊಡೆ ರಾಜ್ಯಾಭ್ಯುದಯ ಮಳವಡುಗುಮಳವಡೆ ಪದುಳಂ ಲೋಕಕ್ಕೆ ಧರ್ಮಸಂತತಿ ನಿಲ್ಕುಂ (ಪು ಷ್ಪ ಪು . ೧೨–೯೧). **೬. ಕೂಡು ; ಸೇರು ; ಜೊತೆಯಾಗು :** ಶಾಸ್ತ್ರದಾನಮುಮಳವಟ್ಟವೊ ಕಾಡಿಯೂರೊಳಾರ್ ನೋಡುವೊಡಂ (ಎಇ. XIII, ೩೩೨–೪೧ ; 929) ; ಚೈತನ್ಯದೊಳಳವಡೆ ಸರ್ವಾಂಗಂ ಮೆಚ್ಚಿತ್ತನಾಗಳ್ (ಕಾ ದ ಂ ಉ . ೭೮೯) ; ಅಳವಟ್ಟದಟುಂ ಸೊರ್ಕುಂ ಬಳಮುಂ ಜವ್ವನಮು ಮೊದಪೆ ತೀವ್ರತೆಯಿಂ ಸಂಚಳಮತಿ ಬಿಡದಾರುಮನೊಬ್ಬಳ ತ ವು ಡಿ ಂ ಗಾ ಗ ದ ಂ ತು ಬಯ್ವಂ ಪೊಯ್ವಂ (ಧರ್ಮಾಮೃ. ೨–೧೬) ; ಮೊಲೆವಾಲನೂಡಿ ತೊದಳಿಂದವೆ ಬಣ್ಣಿಸಿ ಹಾಡಿ ಕಂಪದಿಂದಳವಡೆ ತೂಗಿಯಚ್ಚಸುಖನಿದ್ರೆಯನಂದಮನುಂಟುಮಾಡಿ (ಪಂಪಾಶ. ೩) ; ಇದು ಕೃತಾಂತನ ಸೀಮೆಗಳವಟ್ಟುದು ಸುಯೋಧನ ನೃಪತಿ ವಿಗತಾಭ್ಯುದಯನಾದಂ (ಕುವ್ಯಾದ್ರೋ. ೧೦–೪೦) ; ತಳುವದೆ ತಳತಂತ್ರಗೂಡಿ ಸನ್ನಾಹ ದೊಳಳವಟ್ಟು ನಡೆದನುಬ್ಬಿನಲಿ (ಕಂನವಿ. ೧೧–೧೦). [ಅಳವು + ಪಡು$_1$]

**ಅಳವರಿ** 'ಅಳವಱಿ' ನೋ.

**ಅಳವಳ** (ನಾ). ದುಃಖ; ವ್ಯಥೆ : ಮೃದುತರ ಮಾರ್ಗದೆ ಕೆನ್ನಂ ಮದನ ಶರಾನೀಕಮೊಯ್ಕನೊಲವಂ ಪಡೆಗುಂ ಹೃದಯಮನಳವಳವಿಂ [ಪಾಠಾಂ. ಅ ಳ ವ ಳ ಲಿ ಂ, ಅ[ಬಲ]ಳವಿಂ]ದುೞಿ ವಿದಾರಿಸುವುದಿಂತು ಕುಸುಮ ಮಯಮಲ್ತದೞಿಂ (ಕವಿರಾ. ೩–೧೦೦) ; ಒಂದು ಬೇವಿನ ಬುಡಕೆ ನಿಂದು ಅಳವಳದಿಂದ, "ಎಂದಿಗೂ ಸಿಗಲಾರೆಯಾ ಜೇನಿನರಸಿಯೇ !" ಮನದೆ ಕಡುನೊಂದು ಎಂದೆ (ಸಖೀಗೀ. ೬೩–೬). [?]

**ಅಳವಳಿ** 'ಅಳವೞಿ' ನೋ.

**ಅಳವಳಿಕೆ** 'ಅಳವಡಿಕೆ' ನೋ.

**ಅಳವಳಿಸು$_1$** 'ಅಳವೞಿಸು' ನೋ.

**ಅಳವಳಿಸು$_2$** 'ಅಳವಡಿಸು' ನೋ.

**ಅಳವಳಿಸು$_3$** (ಕ್ರಿ). ಧ್ವನಿಮಾಡು ; ಸಲ್ಲಾಪಮಾಡು (?) : ಪೊಸತ ಲರ್ದಂಭೋರುಹದೊಳ್ ಮುಸುಂಬು ಮುಱುಗುವಿನಮೆಱಗಿ ಗಂಧಮ ನಾಘ್ರಾಣಿಸುತುಮಳವಳಿಸುವಳಿಗಳ ಪಸವೋಡಿದುದಿಲ್ಲ ರಜನಿಸಮಯಾ ತ್ಯಯದೊಳ್ (ಅಜಿಪು. ೬–೬೬).

[ಅಳವಳ ? + –ಇಸು$_3$. / **ತಮಿ.** ಅಳವಳಾವು = ಸೇರಿ ಮಾತಾಡು, ಕೂಡಿ ಮಾತಾಡು]

**ಅಳವಳ್ಳ** (ನಾ). (ಉಕ) ವ್ಯವಹಾರಜ್ಞಾನವಿಲ್ಲದವನು ; ಪೆದ್ದ : ಗುರುವಾರ ದಿನ ತಯಾರ ಆಗಿ ಕೂತುಕೋ ಅಳವಳ್ಳನಂಗ ಏನಾರ ಮಾತಾಡತಾನ ಆತು (ಮುಗಿಮ. ೯೨) ; ಅವನು ಬಹಳ ಅಳವಳ್ಳನಿದ್ದಾನೆ (ರೂಢಿ). [?]

**ಅಳವಱಿ, ಅಳವರಿ** (ಕ್ರಿ). **೧.** ಪ್ರಮಾಣವನ್ನು ತಿಳಿ; ಅಳತೆಯನ್ನರಿ : ಸೂರ್ಯಕಾಂತದ ಧೂಪಗುಂಡಿಗೆಯೊಳಳವಱಿಯದೆ ಸೆಜ್ಜೆವಳ ನಿಕ್ಕಿದ ಕೇ ಶ ಸ ಂ ಸ್ಕಾ ರ ಕಾಳಾಗರುಧೂಪಂ . . . ದಂಪತಿಯಂ . . . ಕೊಂದುದು (ಆದಿಪು. ೫–೨೨ ವ, ೨೩) ; ಅಳವಱಿಯದೆಗ್ಗು ಬಳವಳ ಬಳೆವಿನೆಗಂ ಪಚ್ಚಪಸಿಯ ತುಱುಕಾಱಂಗಗ್ಗಳಿಕೆಯನೆ ಮಾಡಿ ನೀನುಂ ಪೞಿಯಂ ಕಟ್ಟದೆಯೊ ಭೂಪರಿನಿಬರ ಕೊರಲೊಳ್ (ಪಂಪಭಾ. ೬–೪೬). **೨.** ಸ್ವರೂಪವನ್ನು ತಿಳಿ; ಯೋಗ್ಯತೆಯನ್ನು ತಿಳಿ ; ಸಾಮರ್ಥ್ಯವನ್ನು ಅರಿ : ಅಳವಱಿ [ಪಾಠಾಂ. ಅಳವಱಿ]ಯದ ಭಾಷೆ, ಬಹುಕುಳ ವಾದ ನುಡಿ, ಇಂತೆರಡರ ನುಡಿ ಹುಸಿಯಯ್ಯಾ (ಅವಚಂ. ೩೧–೧೩೦) ; ತದ್ಬಲದಿನರಾತಿಯಳವಱಿದು ಬೞಿಯಮೆನ್ನ ಕೂರ್ಪಂ ತೋ ೕ ಪೆ ೯ ೦ (ಚ ಂ ದ್ರ ಪು . ೧೦–೯೪ ವ) ; ತನ್ನ ಪಡೆಯೆಲ್ಲಮನಳವಱಿದು ಮನ್ನಿಸಿ (ಕಬ್ಬಿಕಾ. ೩೩೩). **ಅಳವರಿ : ೧.** ಕಲೆಯೆನ್ನುವುದು ಸೃಷ್ಟಿಯಲ್ಲಿ ವಿಚಿತ್ರ ವಾದ, ಅಳವರಿಯಲಾಗದ ದಿವ್ಯಶಕ್ತಿ (ಸಾಹಿಜೀ. ೭). [ಅಳವು + ಅಱಿ]

**ಅಳವೞಿ, ಅಳವಳಿ** (ಕ್ರಿ). **೧.** ಯೋಗ್ಯತೆ ಕೆಡು : ಗೋವುಗಾದಳ ವೞಿದಿರ್ದ ಕೃಷ್ಣನೊಡನಿರ್ದುದಱಿಂದವೆ ಗೋವಿಯಾದೆ (ಗದಾಯು. ೯–೫). **೨.** ಶಕ್ತಿಗುಂದು ; ಬಳಲು : ಕಂಬುದ್ವೀಪದೊಳಳವೞಿದಂಬರ ಚರನೆಱಕೆಮುಱಿದ ಪಕ್ಕಿವೊಲಿರ್ದಂ (ಪ ಂ ರಾ ಮಾ. ೯–೧೪೭) ; ಸೂಳೆ ಯರ್ ಗಾಳದ ಮೀನಂತಳವೞಿಯೆ (ಧರ್ಮಾಮೃ. ೨–೭೯). **ಅಳವಳಿ : ೨.** ಚೋಳನಳವಳಿದು ಪುರೆಮಂ ಪಾಳಿಕ್ಕಿ ಭಯಕ್ಕೆ ಮೊತ್ತಂ ಮೊದಲಿಗ ನೆನೆ (ಮೈ ಆ ರಿ. ೧೯೩೦, ೭೬–೨೦ ; 1080) ; ಗಂಗಿಮಯ್ಯ ಬೆಳಗ ವರ್ತ್ತಿಯ ಮೇಲೆ ಧಾಳಿಯನಿಟ್ಟಳೆ[ಳ]ವಳಿದು ಪಲರಳಿವಿನಲು ತನ್ನ ಪರಿಚ್ಛೇದಿಸಿ (ಎಕ. VII, ಶಿವಮೊ. ೫೬–೨೫; 1125) ; ಚಿತ್ತದುಮ್ಮಳಿಕೆಯಂ ಕಳೆ ಹರಿಶ್ಚಂದ್ರ ಭೂನಾಥಯೆಂದಳವಳಿದು ಬಾಯ್ಬಿಟ್ಟು ಕೈ ಮು ಗಿ ದು ನುಡಿದರ್ (ಹಚಕಾ. ೭–೧೫) ; ಆಳಿದುದು ಬಲವೆಂದು ಕಾಟಣ್ಣನೇನಳ ವಳಿದನೆ ನೆರವ ಹಾರಿದನೆ (ಕುರಾಸಾಂ. ೧೩–೨೧). **೩.** ಗೋಳಾಡು ; ಪ್ರ ಲಾ ಪಿ ಸು : ಭಕ್ತಜನಪಾಲನೆಂಬೀ ಬಿರುದನುಳಿದನೋ ಹರನೆನುತ ಭುವನಜನಮಳವಳಿದುದು (ಚಬಪು. ೧೬–೨೬). [ಆಳವು + ಅೞಿ$_1$]

**ಅಳವೞಿಸು, ಅಳವಳಿಸು** (ಕ್ರಿ). **೧.** ಶಕ್ತಿಗುಂದು ; ಬಳಲು : ಅಳವಳಿಸಂ ಬೆಬ್ಬಳಿಸಂ ಕಳವಳಿಸಂ ಕನಲನೊನಲನಳ್ಕಂ ಬಳ್ಕಂ (ಅಜಿಪು. ೫–೯೦) ; ಕಳಕಳಿಪ ಹೆಪ್ಪಳಿಪ ಶೋಕಿಪ ಹಳವಿಸುವ ಬಾಷ್ಪಂಗಳಲ್ಲುಗೆ ಅಳುವ ನಿಜಕರ್ಮಂಗಳಂ ಬಯ್ದಳವೞಿಪ ಸೆಡೆವ (ಸಾನಂಚ. ೮–೧೬). **ಅಳವಳಿಸು : ೨.** ಶಕ್ತಿಗುಂದಿಸು ; ಬಳಲಿಸು : ವರದುಗ್ಧಾಂಬುಧಿಯನುಱೆ ಮಥಿಸಲಾಕ್ಷಣಂ ನವಚಂದ್ರಬಿಂಬಮುದಿಸಿದುದು ಶೀತ ಪ್ರಭೆಯೊಳಖಿಳ ದೇವಾಸುರರನಳವಳಿಸುತೆ (ಚ ಬ ಪು. ೨೨–೨೨) ; ಪರ ದಳವನೊಳವೊಕ್ಕು ಸುಭಟರಂ ಸದೆದು ಸೊಪ್ಪರೆದಳವಳಿಸಲಾಗ ಭೀತಿ ಯಿಂದೆಸೆದೆಸೆಗೆ ಪರೆದಳವಡಿಸಿದರ್ಪಲಾಯನವನತಿಬಲರ್ (ಜೈ ಮಿ ಭಾ . ೨೨–೨೫). [ಆಳವಳಿ (< ಅಳವೞಿ) + –ಇಸು$_3$]

**ಅಳವಾನು** (ಕ್ರಿ). ಸಾಮರ್ಥ್ಯವನ್ನು ಪಡೆ; ಶಕ್ತಿಯನ್ನು ಹೊಂದು : ಅಳವಾಂತು ಗರುಡ ಕೃಷ್ಣನ ಕೊಂಡು ತೆರಳಲ್ಕೆ ವಳಯುದೆ ಪುಣ್ಯಮೂರುತಿಯ ನೆಳಲಾದ ಸ್ವಸ್ಥಾನದೆ ಬಿದ್ದ ಮಾರ್ಗದ ಪೊಳಲವರ್ ಪುಣ್ಯವೆಯ್ದಿದರು (ಮೋಹತ. ೪೨–೧೦). [ಅಳವು + ಆನು (< ಆನ್$_1$)]

**ಅಳವಾಳಗೊಟ್ಟಗೆ** (ನಾ). ಮಕ್ಕಳು ಕಟ್ಟೆಯಾಕಾರದಲ್ಲಿ ಸುತ್ತ ಕುಳಿತು ಆಡುವ ಆಟ (?) : ಮಳಲುಕುಪ್ಪೆ ಗುಬ್ಬಿಮನೆ ಕಣ್ಣು ಮುಚ್ಚಣಿಕೆ ಬೆಳದಿಂಗಳಕುಪ್ಪೆ ಉಯ್ಯಾಲೆ ಜೋಜೋ ಅಳವಾಳಗೊಟ್ಟಗೆ ಅಟ್ಟಗೆವುಟ್ಟಗೆ (ವಿಸ್ತೋಸು. ೧೯–೩).

[ಅಳವಾಳ$_0$ (< **ಸಂ.** ಆಲವಾಲ) + **ಗೊಟ್ಟಗೆ**]

**ಅಳವಿ** (ನಾ). **೧.** ಅಳತೆ; ಪರಿಮಾಣ : ಉಪಮಾರಹಿತಮಪ್ಪುದನಳವಿಯಿಲ್ಲದುದನಾವ ಕಾಲಮುಂ ಕಿಡದುದಂ (ವಡ್ಡಾರಾ. ೯೯–೮) ; ನೆಱೆಯಲ ಕಟ್ಟ ಕಟ್ಟುವುದರ್ಕ್ಕೆ ಕೊಟ್ಟ ಸ್ಥಿತಿಕ್ರಮುವೆನ್ತುವೆನ್ದೊಡೆ ಒನ್ದರಣೆಯ ನೀರ ಬಯಗಿದ ವರಿಸ ಪತ್ತೊನ್ದಿ ಎರಡನೆಯ ವರಿಷಮೆಟಳವಿ ಮೂಱನೆಯ ವರಿಷದನ್ದಿಗೆ ಆಯ್ದಳವಿ ಎಲ್ಲಾ ಕಾಲಕ್ಕಂ ಎಲ್ಲಿಟ್ಟುದಟಲು ಸಲ್ಗುಂ (ಎಕ. III, ಶ್ರೀರಂಗ. ೧೪೮–೧೮ ; 904) ; ಕನಲ್ಪುದರ್ಕಳವಿಯುಮುಂತುಮಿಲ್ಲ ಸನಿಯನ್ನಳೆ ಕುಂಟಣಿ (ಪಂಪಭಾ. ೪–೯೮) ; ವರನ ಕೊರಲಳವಿಗೆತ್ತಿರ್ದ ರತ್ನನವಮಾಲೆ ನೇಲೆ ನೆಲನಂ ನೋಡುತ್ತಿರೆ ಕನ್ನಿಕೆ (ಶಾಂತಿಪು. ೫–೧೧೧); ಸತ್ತವರೇಟ್ವರೆ ಪೇಱೊಡಸತ್ತರೆ ತಮ್ಮಟಲಿನಳವಿಯಂ ಮಱ್ಗಿ ಸಲೆಂ ದುತ್ತವಳಿಕೆಯೊಳೆ ಸಾವಸ್ಸರ್ತ್ತವರವರ್ಗಾವ ಹಿತಮನಾಚರಿಸುವರೋ (ಕಾದಂಪೂ. ೯೬೧) ; ಬಳಿಕ ಹಸಾದವೆನುತ ನಂಜರಾಜೇಂದ್ರ ಸಲೆ ಗಡಿಗಳ ಮನ್ನೆಯರ ತಳುವದೆ ಮಾರ್ಬಲ ಸಹಿತ ಕರಸಿ ಕಾರ್ಯದಳವಿಯು ಪೇಳ್ದ ನಿಂತೆಂದು (ಕಂಸವಿ. ೧೩–೫೧). **೨.** (ಹಿಡಿತಕ್ಕೆ ಸಿಲುಕುವಷ್ಟು) ಹತ್ತಿರ, —ಸಮೀಪ : ಬಿಲ್ಲಂ ಕುದುರೆಯಂ ಕಾಲಾಳಂ ನಾಯ್ಗಳುಮಂ ತಿಣ್ಣಮಿರಿಸಿ ಕೆಯ್ಯಂ ನೇಣುಮನಳವಿಯೊಳ್ ಕೂಡಿ ನಡೆಯಲ್ವೇೞ್ದು ಬೇಂಟೆವಸದನಂಗೊಂಡು (ಪಂಪಭಾ. ೫–೪೭ ವ) ; ನೀಡಿ ಕರಾಗ್ರದಿಂದಳವಿಗೊಯ್ಯನೆ ಬಾರದೆ ಪೂದುಱುಂಗಲಿಂ ನಾಡೆ ವಿರಾಜಿಸಿರ್ಪ ಸೆಳೆಗೊಂಬೆಲರಿಂ ತೊನೆದು (ಕುಸುಮಾ. ೫–೧೧೧) ; ಕಿರೀಟಿಯನಳವಿಯಲಿ ಕಂಡಿದಿರುವಂದನು ನಗುತ ಶತಮನ್ಯು (ಕುವ್ಯಾಅ. ೮–೮೭) ; ಕಾದಿ ದಂದುಗಬಡದ ಮುನ್ನವೇ ತನ್ನಳವಿಗೈದಿದಂಕದ ಭಟರ ತೇರ್ಗಳಂ ತೆಗೆದಿಳೆಗೆ ಮೋದಿದಂ (ಜೈಮಿಭಾ. ೭–೪೭). **೩.** ಯೋಗ್ಯತೆ; ಘನತೆ: ಕರಮ[ನ]ಯದೆ ನಿನ್ನಳವಿಗಳವನಱಿಯದೆ ನೆಗೞ್ದೈ (ಪಂಪಭಾ. ೬–೫೨) ; ಪರಿಜನಮನಳವಿಯಱಿದಾಳರಸೆಂಬುದನಱಿಯಲಾಗದಂತಿರೆ ಪೊರೆದಾ ನರಪತಿಯ ಗುಣಾಗುಣದಂತರಂ (ಶಾಂತಿಪು. ೧–೬೯) ; ಅರಮನೆ ನೆರೆಮನೆ ನಂಟಂ ನರಪತಿ ತನಗಾಪ್ತಪರಿಜನಂ ಸಚಿವರೆನಲ್ ದೊರೆವಡೆದಂ ಬಲ್ಲಾಳನ ಪುರದಳವಿಗೆ ಕುವರ ಲಕ್ಷ್ಮದಂಡಾಧೀಶಂ (ಎಕ. V, ಬೇಲೂರು. ೧೧೨–೪೦ ; 1220). **೪.** ಶಕ್ತಿ ; ಸಾಮರ್ಥ್ಯ : ಕಡುಮನದ ಕಾಲಾಳು ಕಱಿದುದು ಖಡುಗಧಾರೆಯನೀತನಳವಿಯ ಕೆಡಿಸಿ ತಲೆಯೊತ್ತಿದರು ಭೂಪನ ಮೊನೆಯ ನಾಯಕರು (ಕುವ್ಯಾದ್ರೋ. ೬–೩೯). **೫.** ವಶ; ಅಧೀನತೆ; ಹಿಡಿತ : ಈ ಮುಗ್ಧಬಾಳಕಿಯರಳವಿಗೊಳಗಾದವಿನ್ನಿವರನೆನ್ನ ಬಿನದಕ್ಕೆ ತಕ್ಕ ದೀವಮುಂ ಮಾೞ್ಪೆಂ (ವರ್ಧಪು. ೯–೬೦ ವ) ; ಮೊಳೆತುವಾಕ್ಷಣ ಕಾಮುಬಾಣದ ಹಿಳುಕುಗಳು ಹಿರಿದಾಗಿ ಚಿತ್ತಜನಳವಿಯಲಿ ಸಿಲ್ಕಿದಳು ಮಾಯೆ ಮಹಾನುರಾಗದಲಿ (ಪ್ರಭುಲೀ. ೫–೧೧). **೬.** ಶಕ್ಯ; ಸಾಧ್ಯ : ಅವರನಿಂತುಗ್ಗಡಿಸಿ ಕೀರ್ತಿಸಲೆಮ್ಮಳವಿಯೇ (ಬಸಪು. ೨೯–೨೮) ; ಹೊಲೆಯರಿಗೆ ಶಿವಭಕ್ತಿ ಮಹಿಮೆಯನಳವಿಯೇ ತಿಳಿಯಲಿಕೆ (ಬಸಪು. ೫೬–೪೯). **೭.** ವಿಶ್ವಾಸ; ನಂಬಿಕೆ (ಕಿ). **೮.** ಯುದ್ಧ ; ಕಾಳಗ : ಕುಂಭಕರ್ಣನನಗಿವ ಬೊಬ್ಬೆಯಲಳವಿಗಳುಕದ ವಿಗಡರಕ್ಕಸರೆಕ್ಕತುಳದಲಿ ಹೊಕ್ಕರುರವಣಿಸಿ (ತೊರರಾ. ೫–೮–೩೯) ; ಎನ್ನ ನೀಂ ಪಳಿದೆಲಾ ಕಾಣಬಹುದಿನ್ನೇಕೆ ನೋಡು ತತ್ತಳವಿಯೊಳ್ ನೀನೆನ್ನ ಸೋಲು ಗೆಲವುಗಳ (ಚಿಬಪು. ೧೬–೭) ; ಪಟುಭಟರಳವಿಗೊಟ್ಟಾಗಿ ಸಲೆ ಸರಳಗಾಯದಿಂ ಮಡಿವುತಿರ್ದರು (ಜೈಮಿಭಾ. ೪–೫೫). **೯.** ಯುದ್ಧಭೂಮಿ : ತೇರ್ಮಗುಳ್ದಳವಿಯಿಂ ತೊಲಗಿ ಬೆಂಡಾಗಿ ನಾನೂರ್ಮೊಳಂ ಪೋಗಲ್ಕೆ ತಲೆದೂಗಿ ಮುರಹರಂ (ಜೈಮಿಭಾ. ೧೩–೩೨).

[ಅಳೆ$_1$ + -ವಿ$_1$. / ತಮಿ. ಮಲ. ಅಳವು; ತೆಲು. ಅಲವಿ, ಅಲವು ; ಕೊಲಾ. ಲಾವ್]

**ಅಳವಿಗ** (ನಾ). ಪರಾಕ್ರಮಿ; ಶೂರ : ಪ್ರಜೆಗಳ್ ವೀರರೆನಿಸಿಯುಂ ವಿನಯವಂತರುಂ ನಲ್ವಾತುಗರಾಗಿಯುಂ ನನ್ನಿಗರುಂ . . . ಅಳವಿಗರಾಗಿಯುಂ ಪಾಪಭೀರುಗಳೆನಿಸಿರ್ಪರ್ (ಚಕವಂ. ೧೪೨–೨೦) ; ಬಲ ಮುರಿದು ಕಾಲಾಳು ಮೇಲಾಳುಗಳ್ತಿರಳಲಳವಿಗನು ಸುಡು ಸುಡೀ ಬಣಗುಗಳು ಕ್ಷಾತ್ರಿಯರ ಕುಲದಲುಂಟಾಗಿ ಮುರಿದೋಡಿದರೆನುತ್ತಿರ್ದನಾ ಭೀಮ ಮೋಹರದೊಳು (ತುರಂಗ. ೬೪–೩೩). [ಅಳವಿ + -ಗ$_2$]

**ಅಳವಿಗಳಿ** 'ಅಳವಿಗೞ' ನೋ.

**ಅಳವಿಗೞ, ಅಳವಿಗಳಿ** (ಕ್ರಿ). ಅಳತೆಮೀರು ; ಹೆಚ್ಚಾಗು ; ಅತಿಶಯವಾಗು : ಆಶಾವಳಯಿತ ಲೋಕಾಕಾಶಮಿದೇನತಿ ವಿಶಾಲಮೋ ನಿನ್ನ ಯಶೋರಾಶಿಯನಿಂದುದ್ಯುತಿಯ ನಿಕಾಶಮನೊಳಕೊಳ್ಗುಮಳವಿಗೞಿದಿರ್ದುದುಮಂ (ಕವಿರಾ. ೩–೯೪) ; ಆ ಮಹಾರೌದ್ರ ಭದ್ರಾಕಾರನ ಪೊಡರ್ಪಿನಾರ್ಪಿನಳವಿಗೞಿದ ದರ್ಪಮಂ ಪೇೞ್ವೊಡೆ (ಪಂಚತಂ. ೪೫–೧೮) ; ಅಳವಿಗೞಿದ [ಪಾಠಾಂ. ಗಳೆದ] ಸಿರಿಯೊಳಮುಪಮೆಗಳೆದ ಭೋಗದೊಳಂ (ಧರ್ಮಾಮೃ. ೧–೯೨) ; ಅವಳಳವಿಗೞಿದಂಗಜಜ್ವಳನ ಸಂಜ್ವರೋದ್ರೇಕಮಂ ಪೇೞ್ದೊಡೆ (ವರ್ಧಪು. ೪–೫೭ ವ). **ಅಳವಿಗಳಿ :** ಕಳಿದ ಪೂಗಳ ತೆಱದಿ ರೇಚಕದೆಲರಿನಿಂದುದುರಿದುವು ತಾರೆಗಳಳವಿಗಳಿದಾ ತೋಳ್ಗಳುಬ್ಬೆಗೆ ದಿಗ್ಗಜವ್ರಜವು ಪೆಳಱಿದವು (ಸಾಳ್ವಭಾ. ೨೧–೧೦೪) ; ಅಳವಿಗಳಿಯದೈತರೆ ನೆಗೆದೆಱಗಿ ಗಜೞ ಗರ್ಜಿಸಿ ಕುಂಭಿ ಕುಂಭಸ್ಥಳಮಂ ಕೂರುಗುರ್ಗಳಿಂ ಸೀಳ್ದು ಸಿಱುಂಬಳಾಡಿ ಸಿಡಿಲ್ಸಿಡಿವಂತೆ ನಗಾಧಿತ್ಯಕಕ್ಕೆ ನೆಗೆವ ಮೃಗೇಂದ್ರಂಗಳಿಂ (ರಾಜಶೇ. ೫–೫೫ ವ) ; ಶ್ರೀಮನ್ಮಹಾರಾಜರವರ ಅಳವಿಗಳಿದ ಅಷ್ಟೈಶ್ವರ್ಯಗಳ ಸನ್ನಿಧಾನದಲ್ಲಿ (ಚಿಟ್ಟಅ. ೭೪–೨೨). [ಅಳವಿ + ಕೞ$_1$]

**ಅಳವಿಗಾಣ್** (ಕ್ರಿ). ಅಳತೆಯನ್ನು ಕಾಣು ; ಪರಿಮಿತಿಯನ್ನು ಕಾಣು : ಮಾನಭಂಗಮಂ ಮಾಡೆ ಮನಃಕ್ಷತಕ್ಕಳವಿಗಾಣೆವು ನೋಡಿರೆ ಪಾಂಡುರಾಜನಂ (ಪಂಪಭಾ. ೬–೧೬). [ಅಳವಿ + ಕಾಣ್]

**ಅಳವಿಗಿಡು** 'ಅಳವಿಗೆಡು' ನೋ.

**ಅಳವಿಗೆಡಿಸು** (ಕ್ರಿ). ಸತ್ವಗುಂದಿಸು ; ಶಕ್ತಿ ಕಡಮೆಯಾಗುವಂತೆ ಮಾಡು : ಉರ್ಬಿ ಕೊರ್ಬಿ ಕೋಳಾಹಳಂಗೆಯ್ದಳವಿಗೆಡಿಸಿ ಪೊಳೆದು ಪೊಗರೇರ್ವ ದಳಮಂ ಕಂಡು (ಹರಿಮ್ಮರ. ೩–೩೫ ವ).

[ಅಳವಿಗೆಡು + -ಇಸು$_3$]

**ಅಳವಿಗೆಡು, ಅಳವಿಗಿಡು** (ಕ್ರಿ). **೧.** ಶಕ್ತಿಗುಂದು : ಅಳವಿಗೆಡೆ ಧುಮ್ಮಿಕ್ಕಿ ರಥದವರಿಳಿಯಬಿದ್ದರು ಭಯದಿ ತೇಜಿಯನಿಳಿದು ರಾವ್ತರು ಕರವ ಮುಗಿದರು ಕೊರಳ ಸಲಹೆನುತ (ಕುವ್ಯಾದ್ರೋ. ೫–೧೪). **ಅಳವಿಗಿಡು :** **೨.** ಯೋಗ್ಯತೆ ಕೆಡು ; ಘನತೆ ಹಾಳಾಗು : ಪೆಱನಿಕ್ಕುಂಗೂೞೊಳಂ ಕೀೞಲೊಳಮಳವಿಗೆಟ್ಟಿರ್ಪ ನಿಮ್ಮಿರ್ಪುದರ್ಕಂ ಮಱುಗುತ್ತಿರ್ಪಳ್ಗೆ (ಪಂಪಭಾ. ೮–೭೧). [ಅಳವಿ + ಕೆಡು]

**ಅಳವಿಗೊಡು** (ಕ್ರಿ). ಪ್ರತಿಭಟಿಸು; ಎದುರಾಗು ; ಕಾಳಗಕ್ಕೆ ನಿಲ್ಲು : ಧೃಷ್ಟದ್ಯುಮ್ನನಾಜ್ಞೆಯೊಳಳವಿಗೊಟ್ಟುದು ಸೇನೆ . . . ರಭಸದಲಿ (ಕುವ್ಯಾಭೀ. ೧–೬೪) ; ಎಲವೆಲವೊ ಹೆಂಗಳ್ಳ ಹೋಗದಿರಳವಿಗೊಡು ಸಂಗರಕೆ ನಿಜ ಭುಜಬಲವ ತೋಱು (ನಿಭಾಗ. ೧೦–೬೦–೧೮) ; ತೊಳಪ ಪಲ್ಲವಸತ್ತಿಗೆಯ ತಣುನೆಳಲೊಳೀ ಗಜಕಂಧರದೊಳಿದ್ದಳವಿಗೊಡುವವನಾರು ಬಲ್ಲಡೆ ಸೂತ ಹೇಳೆಂದ (ಸಾಳ್ವಭಾ. ೮–೭೫). [ಅಳವಿ + ಕೊಡು]

**ಅಳವಿಗೊಳ್** (ಕ್ರಿ). ಆವರಿಸು ; ಮುತ್ತು (?) : ಝೂಡಿಸಿದ ಝಲ್ಲರಿಯ ಬಳಗವತ್ತೆಸೆದವು ಜಯದ್ರಥನಳವಿಗೊಂಡಾ ನಿಶಾಂಧಕಾರದ (?) ಸುಳಿವು ತಾನೆನೆ ಮೆಱೆದುದಖಿಳವ್ಯೂಹ ರಚನೆಯಲಿ (ಕುವ್ಯಾದ್ರೋ. ೬೦೩. ಪರಿ. ೨೮೭). [ಅಳವಿ + ಕೊಳ್$_1$]

**ಅಳವಿದಪ್ಪು** (ಕ್ರಿ). ೧. ಅಳತೆಮೀರು ; ಹೆಚ್ಚಾಗು : ಅಳವಿದಪ್ಪಿದಾ ಕುಳತೆಯಿಂ ಬಂಧುಜನಂಗಳ್ ಕೆದಱಿ ಮಂಜಿನಂತೆ ಪಸರಿಸುವಭಿಷೇಕದ ಪುಡಿಯ ಪೊರೆಹದೊಳಂ (ಚಂದ್ರಪು. ೫-೯ ವ). ೨. ಗುರಿತಪ್ಪು : ಮುಂದಣ ಮಿಗಮಂ ಕಳಿಪದೆ ಸಂದಿಸಿ ಬೞಿಗೊಳ್ವ ಮಿಗಮುಮಂ ಕಳಿಪದೆ ತಾನೊಂದಳವಿದಪ್ಪದೆಚ್ಚು (ಪಂಪಭಾ. ೫-೪೮) ; ಅಳವಿದಪ್ಪದೆ ದಂತಿಘಟೆಗಳನಳುಕದೆಚ್ಚನು (ಕು ವ್ಯಾ ದ್ರೋ ೯. ಓ೧೩. ಪರಿ. ೨೪೯). ೩. ಶಕ್ತಿಗುಂದು : ದ್ರೋಣನ ಬಲುಸರಳ ಸರಿವಳೆಗೆ ದಂಡೆಯಸೊಡ್ಡಿ ದಳವುಳಿಸಿ ಅಳವಿದಪ್ಪದೆ ಕೆಲದ ಖಡ್ಗವ ಸೆಳೆದು ಗುರುವಪ್ಪಳಿಸಿ ಕೈಯಲಿ ಕಳೆದು ಹೊಕ್ಕನು ಭೀಮ ಬೊಬ್ಬಿಱಿದು (ಕುವ್ಯಾದ್ರೋ. ೧೩-೧೨).
[ಅಳವಿ + ತಪ್ಪು$_{1}$]

**ಅಳವಿಯಱಿ** (ಕ್ರಿ). ಅಳತೆಯನ್ನು ತಿಳಿ ; ದೂರವನ್ನು ತಿಳಿ : ಅಳವಿಯಱಿದು ಘುಳುಘುಳಿಸಿ ಪರಿತಂದು ಉಂಗುಟದಿಂ ಭಾಳಾಗ್ರಂಬರಂ ಪೋಳ್ದೆತ್ತಿ (ಸಂಬಿರ. ೧೮-೧೭). [ಅಳವಿ + ಅಱಿ$_{1}$]

**ಅಳವು** (ನಾ). ೧. ಶಕ್ತಿ ; ಸಾಮರ್ಥ್ಯ ; ಪರಾಕ್ರಮ : "ಅಳವೆಂದೆನೆ ಸತ್ತ್ವಮುಂ ಸಮೀಪಮುಮಕ್ಕುಂ" (ಭಾ ರ ನಿ. ೩೮) ; ನೃಪತುಂಗನೆಂಬಳವನೊಲ್ದಂಗೀಕೃತಂ ಮಾಡಿದಂ (ಎಇ. XIII, ೨೪-೪ ; 929) ; ಅಂತು ವಜ್ರನಾಭಿ ಚೆಲ್ವಿಂಗೆ ನಾಭಿಯುಂ ವಿಳಾಸಕ್ಕಾವಾಸಮುಂ ಅಳವಿಂಗೆ ದಳಮುಂ ಆಱಿವಿಂಗೆ ಗುಱಿಯುಂ ಕಳೆಗೆ ಕುಲಭವನಮುಂ ಪ್ರತಾಪಕ್ಕಡರ್ಪುಮಾಗಿ ಬಳೆವನ್ನೆಗಂ (ಆದಿಪು. ೬-೨೨ ವ) ; ಪಾಂಡುನಂದನರಳವಿನುಬ್ಬಟೆ ಬಿಸಿಲು ಪಸರಿಸಿತು ದೆಸೆದೆಸೆಗೆ (ಕುವ್ಯಾಅ. ೩೪-೪) ; ಮಲೆತರಾದರೆ ರಾಮಲಕ್ಷ್ಮಣರಳವ ಮುಱಿವೆವು (ತೊರರಾ. ೬-೧೭-೧೦). ೨. ಶಕ್ಯವಾದುದು ; ಸಾಧ್ಯವಾದುದು : ಇದೆನ್ನಳವೆ ಗಣಧರರೋದಿತ ಚರಿತಂ (ಆದಿಪು. ೧-೩೪) ; ನೆಱೆ ಬಣ್ಣಿಸಲಬ್ಜಭವಂ ನೆಱಿಯಂ ಪೆಱರಳವೆ (ಲೋಕೋಪ. ೬-೨೦) ; ಕೊಱೆಯುಂ ಬಿಣ್ಪುಂ ಲೋಳೆಯು ಮಳವಲ್ಲದ ವಜ್ರಲೇಪದಂತಿರೆ (ಧರ್ಮಾಮೃ. ೪-೧೬೬) ; ಮೀಱಲಳವೆ ಶಿವನಾ ಮಾಯಿಕವನು (ಪದ್ಮರಾ. ೧೧-೬). ೩. ಅಳತೆ ; ಪರಿಮಾಣ ; ಮಿತಿ : ಗರ್ಭದ ಕೂಸಿನ ಬಳೆದಳವಿಯಳವನಳೆವರುಮೊಳರೇ (ಪಂಪಭಾ. ೧-೧೨೬) ; ಈಗಳಾತನ ಪುರುಷಾರ್ಥದ ಪುರುಳುಂ ಶಕ್ತಿಯಳವುಂ ಕಲಿತನದ ಗುಣ್ಪುಂ ಪರಾಕ್ರಮದ ಬಿಣ್ಪುಂ ಕರತಳಾಮಳಕಮಾಗಿರ್ದಪ್ಪುದು (ಪಂಚತಂ. ೯೫-೨೧) ; ಆಗ ಮುಸಲ್ಮಾನರು ಮಾಡಿದ ಕೊಲೆಗೆ ಅಳವಿಲ್ಲ (ಮುಂಬಯಿ. ೪-೧೦). ೪. (ಹಿಡಿಯಲು ಬೇಕಾಗುವಷ್ಟು) ಹತ್ತಿರ; ಸಮೀಪ: ತೋಳನಳವಿಗೆ ಸಿಕ್ಕಿತೋ ಮೃಗಜಾಲ (ಕುವ್ಯಾದ್ರೋ. ೨-೭೪) ; ಅವು ತಮ್ಮ ಅಳವಿಗೆ ಬಂದ ಕೂಡಲೇ ಹಾರಿ ಅವುಗಳನ್ನು ಗಪ್ಪನೆ ಹಿಡಿಯುವುವು (ಮುಂಬಯಿ. ೨-೩೧). ೫. ವಿವೇಕ ; ಜ್ಞಾನ : ಇಳೆಯಂ ಘಾತಿಸಿ ತಕ್ಕರಂ ಕವರ್ದುಕೊಂಡಾದರ್ಥಮಂ ಪೂಱ್ದು ಮಿಳ್ಮಿಳ ನೋಡುತ್ತುಮುದಗ್ರಲೋಭವಶದಿಂ ತನ್ನುಂಡುದುಮಂ ತಪ್ಪುದೆಂದಳವಂ ಮಾಣಿಸಿ ಸತ್ತು ದಂಡಕನೃಪಂ (ಆದಿಪು. ೨-೧೫).

**ಅಳವಾರು**=ಸತ್ತ್ವ ಅಧಿಕವಾಗು; ಶಕ್ತಿಗೂಡು: ಸುಸಿಲ ಸೊಕಕ್ಕೆ ಸೊರ್ಕಡರೆ ಮೆಯ್ಯಳವಾರಿದ ತೋಳ ತಳ್ಪನಾಳಿಸುವಿರದೊಟ್ಟಮಂ ಸವಿವ (ಚಂದ್ರಪು. ೮-೭೭).

[ದೇ. ‖ ತಮಿ. ಅಳವು, ಅಳವೈ ; ಮಲ. ಅಳವು ; ತೆಲು. ಅಳವಿ]

**ಅಳವುಗಿಡಿಸು** 'ಅಳವುಗೆಡಿಸು' ನೋ.

**ಅಳವುಗಿಡು** 'ಅಳವುಗೆಡು' ನೋ.

**ಅಳವುಗುಂದು** (ಕ್ರಿ). ಶಕ್ತಿಹೀನವಾಗು ; ಬಳಲು : ಇನಿಯನನಗಲಿ ತಾನಿರವುಗಾಣದೆ ಮಿಗೆಯನುಗೆಡುತಳವುಗುಂದುವಳು (ಹದಿಬ. ೭-೨೮).
[ಅಳವು + ಕುಂದು$_{1}$]

**ಅಳವುಗೆಡಿಸು, ಅಳವುಗಿಡಿಸು** (ಕ್ರಿ). ಬುದ್ಧಿಯನ್ನು ಕೆಡಿಸು ; ವಿವೇಕವನ್ನು ಹಾಳುಮಾಡು : ಎಳವೆಣ್ಗಳೀ ಕೃತಿಗೇಳೆ ತಮ್ಮಿನಿಯರ ನೆಳವೆಯೊಳಳವುಗೆಡಿಸದೆ ಬಳಿಸಂದು ಬಾಳುವರು (ಹದಿಬ. ೧-೫೩).
**ಅಳವುಗಿಡಿಸು** : ಭೂತಳರಾಜ್ಯ ವಿಮೋಹಮುಚಿರರುಚಿಸಂಚಳಮಿಂತಳವುಗಿಡಿಸಿದುದು ಮನುಕುಲ ತಿಳಕನುಮಂ (ಆದಿಪು. ೧೪-೧೨೧).
[ಅಳವುಗೆಡು + -ಇಸು$_{3}$]

**ಅಳವುಗೆಡು, ಅಳವುಗಿಡು** (ಕ್ರಿ). ಶಕ್ತಿಗುಂದು ; ಬಳಲು : ಪಥಿಕರಂಗಜಾಗ್ನಿಯಿಂದಳವುಗೆಟ್ಟಲ್ಲಿ ನಿಂದಿಹರು (ಕುರಾಸಾಂ. ೨-೪೬).
**ಅಳವುಗಿಡು** : ಬಳೆಗಾರರಳವುಗೆಟ್ಟ ಕುದುರೆಯಂತೆ ನಿಲೆ (ಧರ್ಮಾಮೃ. ೨-೬೯) ; ತುಳುವನಳವುಗೆಟ್ಟೋಡಿದಂ (ಎಕ. V, ಅರಸೀ. ೬೨-೨೯ ; 1177). [ಅಳವು + ಕೆಡು]

**ಅಳವುಗೊಡು** (ಕ್ರಿ). ೧. ಅಳತೆಗೆ ಸಿಕ್ಕು ; ಪರಿಮಿತವಾಗು : ಅಳವುಗೊಡದಾನಂದಮಯವಹ ಜಲಧಿಯೆಂಬುದೆ ಪಾದ್ಯಮೆಂಬುಪಚಾರ (ಅಮೃತ. ೧೧-೧೨). ೨. ಒದಗಿಸು ; ಸಿದ್ಧಪಡಿಸು : ಬೆಳ್ಗೊಳದ ಗುರುಸಂಸ್ಥಾನದವರು ಅಳವುಗೊಟ್ಟ ಲೆಕ್ಕಪತ್ರಗಳನ್ನೆಲ್ಲ ಆಸ್ಥಾನದ ಕರಣಿಕರು ಪರಿಶೋಧಿಸಿ (ಚೆಟ್ಟಅ. ೨೦೦-೧೮). [ಅಳವು + ಕೊಡು]

**ಅಳವುಗೊಳ್** (ಕ್ರಿ). ಸಾಮರ್ಥ್ಯವನ್ನು ಪಡೆ; ಶಕ್ತಿಯನ್ನು ಹೊಂದು : ಬಳಿಕ ಬಂದರು ಶಿಶುಪಾಲ ಜರಾಸಂಧರು . . . ದಳದುಳಕಾಜನೆನಿಪ ದಂತವಕ್ರನುಮಳವುಗೊಂಡಲ್ಲಿಗೆಯ್ದಿದನು (ಕರ್ಣಾಮೃ. ೫-೫).
[ಅಳವು + ಕೊಳ್$_{1}$]

**ಅಳವುಗೋಲು** (ನಾ). ಅಳತೆಗೋಲು (ದಕ. ಈ).
[ಅಳವು + ಕೋಲು (< ಕೋಲ್$_{1}$). / ತಮಿ. ಅಳವುಕೋಲ್]

**ಅಳವೂರ್** (ನಾ). ಒಂದು ಊರಿನ ಹೆಸರು : ಅಳವೂರಗ್ರಾಮೇ ಚತುರ್ಥ್ವವರ್ತನೀ (ಮೈಆರಿ. ೧೯೪೩, ೧-೫ ; 500). [ಅಳ ? + ಊರ್]

**ಅಳವೆ**$_{1}$ (ನಾ). ರೈತರಿಗೆ ಸಾಗುವಳಿ ಬಗ್ಗೆ ಬರೆದುಕೊಡುವ ಒಪ್ಪಂದ; ಲಿಖಿತಮೂಲಕವಾದ ಸಾಗುವಳಿ ಕರಾರು (ದಕ. ಈ). [?]

**ಅಳವೆ**$_{2}$ 'ಅಳುವೆ' ನೋ.

**ಅಳವೆ**$_{3}$ (ನಾ). ನೀರಿನ ಬಿಡುಗಂಡಿ; ತೂಬು : ಸಾರಸಹಕಾರಧಾರಾಸಾರಂ ಕೊಳದಳವೆ[ಪಾಠಾಂ. ಳವಿ, ಱವೆ]ಯಂತೆ ಸುರಿತರೆ ಪಲವುಂ ಧಾರಾಗೃಹಂಗಳತನುವಿಕಾರಮನೊದವಿದಪುದು ದೇವದಂಪತಿಗದಱೊಳ್ (ಆದಿಪು. ೬-೯೫). [ದೇ. ‖ ತೆಲು. ಅಲುವು = ಜಲನಿರ್ಗಮನ ಮಾರ್ಗ]

**ಅಳಸಂದೆ** 'ಅಲಸಂದೆ' ನೋ.

**ಅಳಸಗಾಮಿನಿ** (ನಾ). ನಿಧಾನವಾಗಿ ನಡೆಯುವವಳು : ಕುಚಭಾರಾಳಸಗಾಮಿನೀ ಪರಿವೃತಂ (ಪಂಪಭಾ. ೩-೮೫). [ಸಂ. ಅಲಸಗಾಮಿನೀ]

**ಅಳಸಬಂಧಿ** (ನಾ). ಒಬ್ಬಾತನ ಹೆಸರು : ಅಳಸಬಂಧಿಯ ಮಗ ಹುಲಿಮದ್ದನಡ ರಾಜೇನ್ದ್ರ (ಎಕ. IV, ಹುಣಸೂ. ೧೦-೭ ; 1230). [?]

**ಅಳಸು**$_{1}$ (ಕ್ರಿ). ೧. ಸುರತಧ್ವನಿಮಾಡು : ಅಳಸುವ ಬಯ್ವ ಬಗ್ಗಿಸುವ ಬತ್ತುವ ಬಾಯ್ದೆಱಿಗೊಳ್ವ ನುಂಗುವವ್ವಳಿಸುವ ಮುದ್ದುಗೆಯ್ವ . . . ಜರ್ಬುವ ಪುರ್ಬೆಸೆಯಲ್ಕೆ ಕೂಡಿದಳ್ (ಲೀಲಾವ. ೭-೫೬) ; ಅಳಸುವ ದನಿ ಬಳಸುವ ಮದೆಕೊಳಿಸುವ ಕೋಡೆಱಕೆ ಮೆಱೆಯೆ ತಳಿರ್ಗೊಂಬುಗಳೊಳ್ ಗಿಳಿ ಮರಳ್ವರಗಿಳಿ ಪೆಣ್ಗಿಳಿನೆಳಮಾವಿಳಿಸಿದುದು ರತಿಯ ಜಕ್ಕನ್ನೊಬಿವಂ (ಅನಂಪು. ೬-೮೦). ೨. ಪ್ರಣಯದ ಮಾತುಗಳನ್ನು ನುಡಿ (?) : ಮರಕತದ ಕಲ್ಲ ಕವಿಗಳೊಳೆರಡಱಿಯದೆ ಕೊರ್ತ ಧೂರ್ತ ಸುರಮಿಥುನಂಗಳ್ ನೆರೆದಳಸುಗಲಿಸೆ ಗಿಳಿಯುಂ ಪುರುಳಿಯುಮಳಸುವುವು ದೇವಭಾಷೆಗಳಳಸಂ (ಕಾವ್ಯಾವ. ೮೫೧). [?]

**ಅಳಸು**$_{2}$ 'ಅಳೆಯಿಸು' ನೋ.

**ಅಳಸು$_3$** (ನಾ). ಸುರತಧ್ವನಿ : "ಅಳಸು – ಸುರತಧ್ವನಿ" (ಶಮದ. ಪರಿ. ೨) ; ಮುಗ್ಧಾಕ್ಷಿ ಚಿಂತಾಂತರಕ್ಕೆಡೆಯಾಗಿರ್ಪಿನಮೆರ್ದೆಱಿಂಕೆಯಿಲರಿಂದುದ್ವಿದ್ಧಪಾರಾವತಂ ಸೊಡರಂ ಪೊಯ್ದುದು ಕೇಳಲಾಕೆಯಳಸಂ ತಾನಱಿತ್ತಿವಟ್ಟಂತೆವೋಲ್ (ಲೀಲಾವ. ೩–೧೯) ; ಅಳಸುಱಿ ರಿಗ್ಗವಣೆಯ ಪಱಿಗಳ ನಿನದಂ ಬೀಣೆಯಿಂಚರಂ ತಾನಾಗಲ್ ಕೆಳದಿಯುಪರಿರತದಿಂ ಕಣ್ಗೊಳಿಸಿದಳಾ ಸಮಯದೊಳ್ಕಣಿವ ನಚ್ಚಣಿವೋಲ್ (ವೀರವಿ. ೬–೮೦).
[< ಅಳಸು$_1$]

**ಅಳಸು$_4$** (ನಾ). ಒಂದು ಬಗೆಯ ಭಕ್ಷ್ಯ : ಕರಮೊಪ್ಪೆ ಸಮೆದ ಓಗರದ ರಾಸಿಗಳಲ್ಲಿ . . . ಗಾರಿಗೆಯ ಅಳಸುಗಳ ಕುತ್ತಱುಗಳಲ್ಲಲ್ಲಿ ಹೂರಿಗೆಯ ಲಡ್ಡುಗೆಯ ಬೆಟ್ಟಂಗಳಲ್ಲಲ್ಲಿ (ಬಸರ. ೭–೯). [?]

**ಅಳಸುಗಲಿಸು** (ಕ್ರಿ). ಪ್ರಣಯದ ಮಾತುಗಳನ್ನು ಕಲಿಸು : ಮರಕತದ ಕಲ್ಲ ಕವಿಗಳೊಳೆರಡಱಿಯದೆ ಕೂರ್ತ ಧೂರ್ತ ಸುರಮಿಥುನಂಗಳ್ ನೆರೆದಳಸುಗಲಿಸೆ ಗಿಳಿಯುಂ ಪುರುಳಿಯುಮಳಸುವುವು ದೇವಭಾಷೆಗಳಳಸಂ (ಕಾವ್ಯಾವ. ೮೫೧). [ಅಳಸು$_1$ + ಕಲಿಸು]

**ಅಳಹೂರು** (ನಾ). ಒಂದು ಊರಿನ ಹೆಸರು : ನಾಡಬಳಿಯ ಬಾಡದ ಅಳಹೂರನಿಱಿದು ಪೆಂಡಿರ ಉಡೆ ಉಚ್ಚಿಕೊಂಡು ಹೋಹಲ್ಲಿ (ಎಕ. VII, ಶಿಕಾರಿ. ೧೮೧–೪ ; 1170). [?]

**ಅಳಱ್$_1$**, ಅಳರು, ಅಳಱು$_1$ (ಕ್ರಿ). ೧. ಅಂಜು ; ಹೆದರು ; ಭಯಪಡು : ಬಲಮೆಲ್ಲಮನಳಱೆ ಪೆಳಱೆ ಕಿವುಱಿ ಮುಱಿದು ಕೊಲ್ವಲ್ಲಿ (ಪಂಪಭಾ. ೧೧–೧೦ ವ) ; ಬಲಿಯುಂ ಮೊದಲಾಗೆ ಪಲರುಮಡ್ಡಂಬಂದು ತನ್ನ ಬಲಮನಳಱೆ ಕಾದುತ್ತುಮಿರೆ ಕುಂಭಕರ್ಣನತಿ ಕುಪಿತನಾಗಿ (ಪಂರಾಮಾ. ೧೩–೧೩೨ ವ) ; ದೈವಮೆಂಬ ಪೆಸರಿಂಗೆ ಕುದೈವಮುಮನಳರ್ತಾರಾಧಿಸಿದೊಡೆ ಸುದೈವಮನಾರಾಧಿಸಿ ಪಡೆದ ಲಾಭಮುಂ ಪೋಲಲಱಿಯದು (ಧರ್ಮಾಮೃ. ೭–೭೯) ; ಕೇಳ್ದವರ ಪಕ್ಕದೆ ಧರ್ಮಮನಾಗಳಂತವರ್ ಮುಂಡಿತಚಿತ್ತರಾತ್ಮಕೃತ ದುಶ್ಚರಿತಕ್ಕಳರ್ದಂದುಸಂತತಂ (ನೇಮಿಪು. ೨–೭೯) ; ಕಡುಕೆಯ್ದಾಂತನ್ಯಸೈನ್ಯಂಗಳನಳಱೆ ಭರಂಗೆಯ್ದು ನಿರ್ಮ್ಮೊಂದೆಮೆಯ್ಯೊಳ್ ಕಿಡಿಸಲ್ ಸಾಲ್ವಿರ್ (ಕಾವ್ಯಾವ. ೩೭೭). ೨. ನಡುಗು ; ಕಂಪಿಸು : ಧರಾತಳಮಳಱೆ ರಥದ ಗಾಲಿಯಂ ಕಿೞ್ತು ಮತ್ತಂ ರಥಮನಪ್ರತಿರಥನೇಱೆ (ಪಂಪಭಾ. ೧೨–೨೦೮ ವ). **ಅಳರು** : ೧. ಕಾಲನ ಭಟರು ಕರೆಯೆ ಮನಸಿನೊಳು ನೀಮಳರದಿರು (ಪ್ರಭುಪು. ೩–೯೫) ; ಇಕ್ಕೆಯ್ಯ ಮುಗಿಯಲಂಬಿಕೆ ಮಾಯೆಯಂ ಮೊಗದ ಕಂಡ ಕಂಡಳರೆಯವಳು (ಪ್ರಭುಪು. ೬–೪). **ಅಳಱು$_1$** : ೧. "ಅಳಱು – ಭಯೇ" (ಶಮುಧಾ) ; ಪರವಾದಿ ನೃಪರು ನಿನಗಳಱಿ ಕೆಟ್ಟೋಡೆ (ವೀಶೈಪು. ೪–೯–೨) ; ನಾನಿನ್ನದಟಂ ಕೇಳ್ದಯ್ತಂದೆಂ ಪುಟ್ಟುವ ಸಾವಳಱಿಂಗಳಱಿ ವಿದಿತ ಕೃಪಾಕರ ಶಂಕರ . . . ಸಲಹೆನ್ನಂ (ಉದ್ಭದೇ. ೩–೨೬) ; ಅಳಱಿದೆಡಗೈಯಿಂದದಱ ಮೀಸೆವಿಡಿದು ನೆಱೆ ಬಲಗೈಯೊಳದಱ ದಾಡೆಯ ಪಿಡಿದವುಂಕಿ (ಪಾಸೋಪು. ೫–೮೦) ; ಕೊರೆವ ಸಬುದಮಂ ಸಿಂಗದ ಗರ್ಜನೆಗೆತ್ತು ಗಜಂಗಳಳಱೆ (ರಾಮಾಶ್ವ. ೧೬೦–೨೭). ೨. ಭರದಿಂದಂ ದಂಡದೊಳ್ ತಾಟಿಸಿದೊಡೆ ವಿಜಯಾರ್ಧಾಚಳಂ ತೊಟ್ಟನಾಗಳ್ ಬಿರಿದತ್ತೆಂಬಂತುಮಾ ಪರ್ವತಮಳಱಿದುದೆಂಬಂತುಂ . . . ಪೆರ್ಚಿತ್ತುಗ್ರಘೋಷಂ (ಆದಿಪು. ೧೩–೩೭) ; ನೆಲಸಿರ್ದ ವಜ್ರಪಂಜರಮಳಱುವಿನಂ ಪಾಯ್ದು ಸಿಂಧುರಾರಾತಿಯುಂ . . . ಚಮೂಪತಿ ಕಂಡಂ (ಆದಿಪು. ೧೬–೪೫). [?]

**ಅಳಱ್$_2$**, ಅಳಱು$_3$ (ನಾ). ೧. ಭಯ ; ಅಂಜಿಕೆ : ತೊವಳಂ ನುಡಿಯನ್ತೊಡರ್ದ ಮಾಣನಳಱಿನ್ದಮಿದೇನುನ್ನತಿವಡೆದುದೊ ಚಾಗದ ನನ್ನಿಯ ಬೀರದ ನೆಗಱ್ತೆ ಚಲದಗ್ಗಱಿಯಾ (ಎಕ. II, ೧೩೩–೫೯ ; 982). ೨. ಸಂಕಟ; ಬೇಗುದಿ; ಅಳಲು; ಮನೋವ್ಯಥೆ (ದಕ. ೬).

**ಅಳಱು$_3$** : ೧. "ಅಳಱು ಭಯಂ" (ಕರ್ಣಾನಿ. ೬೦) ; "ಅಗುರ್ವು . . . ಅಳಱು, ಪೆಳಱು, ಮಲ್ಲಱಿ, ತಲ್ಲಱಂ, ಆದಿರ್ಪು – ಈ ೧೦ ಭಯಂ" (ಕಶಸಾ. ೧೧–೨೨೩) ; ಮೊಗದಿಂದ ಸಿಂಗರಂ . . . ಸೊಗಯಿಪ್ಪ ಸೆಳೆನಡುವಿನಿಂದಳಱ ಬಗೆ . . . ಈ ನವರಸವೆ ರೂಪೆನಿಸಲೆಸೆದಿರ್ದಳು (ಉದ್ಭದೇ. ೨–೫೭) ; ಮರುಳತ್ತಣಿಂದಳಱು ಮರುಳಳಱು (ಶಬ್ದಾನು. ೩೦೩ ಪ್ರಯೋ) ; ಅಳಱು ಪೆರ್ಚಿತು (ಶಬ್ದಾನು. ೮೨ ಪ್ರಯೋ). ೩. ಭೀಕರತೆ : ಬಾಣ ಬಾಣಂ ತಾಗಿ ಕಿಡಿಗೆದಱುವಳಱಿಂದೆ ತೊಡಗಿತಂತಾ ಕಾಳಗಂ (ಚೇರಮ ೪–೧೪). [< ಅಳಱ್$_1$]

**ಅಳಱಿಸು$_1$** (ಕ್ರಿ). ಹೆದರಿಸು ; ಅಂಜಿಸು ; ಭಯಪಡಿಸು : ದಿಗ್ಗಜಮನಳಱಿಸಲ್ ವಾರ್ಧಿಯಂ ಶೋಷಿಸಲ್ಕೇಂ ಚಳಮೊ ಪೇೞ್ (ಎಇ. XVI, ೭೧–೨೭ ; 1074) ; ಮನೋಜನಯ್ದುಂ ಸರಲ್ಗಂ ತೊಳಗುವಲಗಾಗೆ ವಿರಹಿಯನಳಱಿಸಿದುದು ಮುದಿತ ಮಧುಪ ವೃಂದಂ ಕುಂದಂ (ಪುಷ್ಪಪು. ೬–೪೨) ; ನೆಲದೊಳ್ ಪಗೆ ಪುಗೆ ಫಣಿಯುಮೊಲೊಳಪೊಕ್ಕಳಱಿಸಿದನೆಂಬ ನಿಯಮಮಂ ದೂಷ್ಯಂ (ಶಮದ. ೧೯ ಪ್ರಯೋ) ; ಲೋಕವನಳಱಿಸುವ ದನಿ ಮಾಯುವಾದುದು (ಸಾಳ್ವಭಾ. ೧೮–೬೫) ; ದಾಱಿಯೊಳರಿಗಳನಳಱಿಸಿ ಪಾಱಿಯೊಳಳವಡಿಸಿ ನೆಲನಂ (ಶಬ್ದಾನು. ೧೪೦ ಪ್ರಯೋ) ; ಕಂತುವನೆಂತಳಱಿಸಿದೆ ಕೃತಾಂತನನುಱದೆಂತು ಗೆಲ್ದೆ . . . ಪೇೞೆನಗಹಾ (ಶಬ್ದಾನು. ೪೪೨ ಪ್ರಯೋ). [ಅಳಱ್$_1$ + –ಇಸು$_3$]

**ಅಳಱಿಸು$_2$** (ಕ್ರಿ). ಚದರಿಸು ; ಹೋಗಲಾಡಿಸು ; ಪರಿಹರಿಸು ; ನಾಶಮಾಡು : ಸುದತಿ ವಾಗುರೆಯೆಂಬೊಳ್ ಬಱಿಸಂದಿರೆ ವಿಂಧ್ಯಕನತಿಬಳನಳಱಿಪನೆಯ್ದೆ ಕಾಯ್ದು ಮೃಗರಿಪುತತಿಯಂ (ನೇಮಿಪು. ೧–೭೪) ; ಉದ್ಧುರಯೋಗದಿನಳಱಿಸಿದಂ ದುರಘಂಗಳೆನಿಪ್ಪ ಘಾತಿತತಿಯಂ ಕ್ಷಿತಿಪಾ (ನೇಮಿಪು. ೩–೮೦) ; ವಿಶ್ವನಂದಿಗಳನಿಂದಿತ ಜಿನೇಂದ್ರ ದೀಕ್ಷಾಕೌಕ್ಷೇಯಕದಕ್ಷರಾಗಿ ಕರ್ಮಾರಿಬಳಮನಳಱಿಸಲ್ ನಡೆದಿಂಬಱಿಯಂ (ವರ್ಧಪು. ೩–೧೧ವ) ; ಭೂಪೋತ್ತಮ ಸೂರ್ಯಪ್ರಭನೊಲ್ದಿತ್ತೆ ಬಳಾತಪದ ಬಾಧೆಯುಮನಳಱಿಸುಗುಂ (ಪಾರ್ಶ್ವಪು. ೧೨–೩) ; ನಯ ಪ್ರಮಾಣ ಪಾರಾವಾರೋದ್ಗತ ಯುಕ್ತ್ಯಮೃತಂ ವಿಬುಧ ಪ್ರತತಿಯ ಮಿಥ್ಯಾತ್ವ ಮೃತಿಯನಳಱಿಪುದರಿದೇ (ಪುಷ್ಪಪು. ೧೪–೬) ; ತರುಣಾಂಶುಬಿಂಬಮೆಂಬಂತರುಣಾಂಶುವಿನೆಸೆದು ತಮಮನಳಱಿಪ ಮಣಿಭಾಸುರ ದೀಪಕದಂಬಕದಿಂ (ಪುಷ್ಪಪು. ೧೪–೬) ; ಶೀತತೋಯದಿಂ ರಂಜಿಪ ಪುತ್ರಜೀವಿಯನೆ ನಿಷ್ಕಸಮಾನಮನಿತ್ತೊಡಂತೆ ತಾನಂಜನನಶ್ಯದಿಂದಳಱಿಕುಂ (ಖಮದ. ೨–೧೮) ; ಸಕಲಜನಾಂತಸ್ಥಲ ತಮಮಂ ತಮ್ಮುದಯದೊಳಳಱಿಸಿದರೆ ರವಿಗಳೆಮಗೆ ಕವಿಗಳೆ ವಂದ್ಯರ್ (ಧರ್ಮನಾ. ೧–೩೩) ; ವರ ವೀರಶೈವ ದೀಕ್ಷಾ ದೀಪದಿಂದೆ ಸಂಸೃತಿ ತಮಮನಳಱಿಸುತ್ತೆ (ಆರಾಚ. ೧–೯೮).
[ಅಳಱು$_2$ + –ಇಸು$_3$]

**ಅಳಱು$_1$** 'ಅಳಱ್$_1$' ನೋ.

**ಅಳಱು$_2$** (ಕ್ರಿ). ೧. ಚದರು ; ತೊಲಗು ; ನಾಶವಾಗು : ತಮ್ಮಂ ಕಂಡನಿತಱೊಳೆ ತೆರಳ್ದಿನ್ನಾ ಮನೋಗತಧ್ವಾಂತ ಬಂಧಮಳಱಿತ್ತೆಲ್ಲಂ (ಕವಿರಾ. ೨–೬೭) ; ಅಳಱಿ ಕಿಡೆ ಘಾತಿಗಳ್ . . . ಕೈವಲ್ಯ ಲಕ್ಷ್ಮಿಯಂ ಯತಿ ಪಡೆದಂ (ಆದಿಪು. ೧೦–೧೪) ; ಅಲಘು ನಿತಂಬದ ಪೊಯ್ಲೊಳ್ ನೆಲೆಮೊಲೆಯಳ್ಳೇಱಿನೊಳ್ ತರಂಗಂಗಳ್ ತೊಳ್ದಲಱುಗುಮವಱಳ್ಳೇಱಿನೊಳಲಱುಗುಮೆರ್ದೆ ತೆರೆಗಳಳಱಿ ತೂಳ್ವುದು ಪಿರಿದೇ (ಆದಿಪು. ೧೧–೧೪೬) ; ಸಕಲ ಭುವನಮೊಂದೊಂದಱೊಳ್ ಕೇಣಿಗೊಂಡುಚ್ಚಳಿಸಲ್ ಸೂಸಲ್ ಪಳಂಚಲ್ ಸಿಡಿದೊಡೆದಳಱಲ್ (ಪಂಪಭಾ. ೧೦–೬೫) ; ಕರಿಮಕರಾಹತಹತಿಯಿಂ ಬಿರಿದಳಱುವ ಭೈತ್ರದಂತೆ . . . ಅಳಱಿದುವಾ ಸಂಗರಜಳನಿಧಿಯೊಳ್ ವರೂಥ ಕರಿನಿಕರಂಗಳ್ (ಪಂಪಭಾ. ೧೩–೩೫).

೨. ಚೆದರಿಸು ; ದೂರಮಾಡು ; ಹೋಗಲಾಡಿಸು ; ನಾಶಮಾಡು : ವನಜಾಯತನಯನೆ ನಿನ್ನ ಕಾರಣದಿಂದಾನಿನಿತುಂ ಕಾಲಂ ಕರ್ಮಾರಿ ನಿಕಾಯಮನಳಱಿದಿರ್ದೆನುಂತಿರ್ದಪೆನೇ (ನೇಮಿಪು. ೧೪–೬೫) ; ಧುರದೊಳ್ ತಾನೆಚ್ಚ ಸಮ್ಮೋಹನಶರವಹಿತಾಷ್ಟಾದಶಾಕ್ಷೌಹಿಣೀ ವೀರರುಮಂ ಪ್ರತ್ಯೇಕಮೋರಂತಳಱಿ ಸುೞಿಯೆ (ಜಗವಿ. ೮–೬೦) ; ಸುಚತುರ ಕವಿರವಿಗಳಖಿಳ ಚೇತೋಗಗನ ಪ್ರಚುರ ತಮಸ್ತಿಮಿರಮನಳಱೆ ಚಳಿಯಿಸಲ್ ನೆಱೆಗುಂ (ವರ್ಧಪು. ೧–೧೯) ; ಬನದ ಕುಂಜದೊಳ್ ಕೊಂಬುಗೊಂಡ ಕಟ್ಟಲೆಯ ಪೊೞ್ತಿನ ಬಲದಿನಿನಕರಾನೀಕಮನವುಂಕಿ ಬೆಂಕೊಂಡಳಱೆ ಸೂೞ್ಪೆಪ ಸಣ್ಣಗಾಳಿಯುಲಿಯೆನಿಸಿ . . . ಉಲಿವ ಪಕ್ಕಿಗಳ ಕಳಕಳಂ (ವರ್ಧಪು. ೬–೨೩ ವ). [< ಅಲಱು]

**ಅಳಱು₃** 'ಅಳಱ್₂' ನೋ.

**ಅಳಿ₁** 'ಅೞಿ₁' ನೋ.

**ಅಳಿ₂** 'ಅೞಿ₂' ನೋ.

**ಅಳಿ₃** 'ಅೞಿ₃' ನೋ.

**ಅಳಿ₄** (ನಾ). ಪ್ರೀತಿ. 'ಅಳಿಚೆನ್ನ' ಪರಾ. [?]

**ಅಳಿ₅** 'ಅಲಿ₂' ನೋ.

**ಅಳಿ₆** (ನಾ). ಕುಲ (?) : ಅಳಿನೋಡಿ ಹೆಣ್ಣು ತತ್ತಾ, ತಳಿ ನೋಡಿ ದನ ತತ್ತಾ (ಗಾದೆ). [?]

**ಅಳಿ₇** (ನಾ). ಬಲಿಯದ್ದು ; ಎಳೆಯದು. 'ಅಳಿಕೂಸು' ಪರಾ. [?. / ತಮಿ. ಅಳಿ = ಕಾಯಿ]

**ಅಳಿ₈** (ನಾ). ಮದ್ಯ. 'ಅಳಿಪಾಕ', 'ಅಳಿಪಾತ್ರೆ' ಪರಾ. [ಸಂ. ಅಲಿ]

**ಅಳಿಂದ** 'ಅಲಿಂದ' ನೋ.

**ಅಳಿಂದಕ** 'ಅಲಿಂದಕ' ನೋ.

**ಅಳಿಕ₁** (ನಾ). ಹೇಡಿ ; ಅಂಜುಬುರುಕ (?) : ರಿ ಪು ಶ ರಾ ಹ ತಿ ಗೆ ಭಯಂಬಟ್ಟಳಿಕನೋಡುವಂತಿರೆ ಕಟ್ವಾಯದ ಕಣೆಯೆನಿಪ್ಪನೇನೋಡುಗುಮೋ (ಚಂದ್ರಪು. ೬–೩೮) : ಪಿಡಿವಡೆ ಬಲ್ಪಿಂ ಪಾವಂ ಪಿಡಿವಂತಿರೆ ಪಿಡಿವುದಳಿಕನಾದಡೆ ತನ್ನಂ ಪಿಡಿಯದೆ ಮಾಣದುವದಱಿಂ ಪಡೆಮಾತೇ ನಕಟಯೆತ್ತಿದುದನಿಳಿಪುವುದೇ (ಪುಣ್ಯಾಸ್ರ. ೩–೬೦). [< ಅಳ್ಕು ?]

**ಅಳಿಕ₂** 'ಅಲಿಕ' ನೋ.

**ಅಳಿಕನೇತ್ರ** 'ಅಲಿಕನೇತ್ರ' ನೋ.

**ಅಳಿಕಲಭ** (ನಾ). ಮ ರಿ ದು ಂ ಬಿ : ಕುಸುಮಿತ ಚಂಪಕಾನೋಕಹಮಂ ಕಂಡಳಿಕಲಭದಂತೆ ಮೊಗಂದಿರಿಪೆಯುಂ (ಪಂರಾಮಾ. ೮–೩೦ ವ). [ಅಳಿ₅ (= ಅಲಿ₂) + ಕಲಭ]

**ಅಳಿಕಲೋಚನ** 'ಅಲಿಕಲೋಚನ' ನೋ.

**ಅಳಿಕಾಕ್ಷ** 'ಅಲಿಕಾಕ್ಷ' ನೋ.

**ಅಳಿಕಾಬಂಧ** (ನಾ). ಹಣೆಗೆ ಕಟ್ಟುವ ಆಭರಣ ; ಬಾಸಿಂಗ : "ಕ್ಷಳಕ್ಕೆ- ಅಳಿಕಾಬಂಧ [ಪಾಠಾಂ. ಬದ್ಧಂ] ಅೞಿಗೆವದ್ದಂ" (ಶಮದ. ನ. ೨೧ ಪ್ರಯೋ). [ಸಂ. ಅಲಿಕಾಬಂಧ]

**ಅಳಿಕುಂತಳ** (ನಾ). ತುಂಬಿಯಂತೆ ಕಪ್ಪಾದ ತಲೆಗೂದಲು : ಅಪಾಂಗರೋಚಿಯಿಂ ಪಡೆದಳಿಕುಂತಳಕ್ಕಲರ ಬಾಸಿಗಮುಂ (ಚಂದ್ರಪು. ೭–೭೭). [ಅಳಿ₅ (= ಅಲಿ₂) + ಕುಂತಳ (= ಕುಂತಲ)]

**ಅಳಿಕುಂತಳೆ** 'ಅಲಿಕುಂತಲೆ' ನೋ.

**ಅಳಿಕುಲ,** ಅಳಿಕುಳ (ನಾ). ತುಂಬಿಗಳ ಗುಂಪು, —ಸಮೂಹ. **ಅಳಿಕುಳ** : ಕಮಳಮಳಿಕುಳೋತ್ಸವ ಜನಕಂ (ಕವಿರಾ. ೩–೬೬). [ಅಳಿ₅ (= ಅಲಿ₂) + ಕುಲ]

**ಅಳಿಕುಲಾಳಕಿ,** ಅಳಿಕುಳಾಳಕಿ (ನಾ). ತುಂಬಿಗಳ ಗುಂಪನ್ನು ಹೋಲುವ ತಲೆಗೂದಲುಳ್ಳವಳು : ತಿಲೋತ್ತಮಾಹ್ವಯದಳಿಕುಲಾಳಕಿಗಬುಜಭವ ನೇಮಿಸಿದನೀ ಹದನ (ಕುವ್ಯಾಅ. ೧೮–೩೮). **ಅಳಿಕುಳಾಳಕಿ** : ಅಳಿಕುಳಾಳಕಿ [ಪಾಠಾಂ. ಳಿಕೆ]ಯುಟ್ಟ ಸೀರೆಯನೂರುಮಧ್ಯದಲಿ ಸುಲಿಸಿದರು (ಕುವ್ಯಾಗ. ೧೧–೬೨). [ಸಂ. ಅಲಿಕುಲಾಲಕಾ]

**ಅಳಿಕುಳ** 'ಅಳಿಕುಲ' ನೋ.

**ಅಳಿಕುಳಾಳಕಿ** 'ಅಳಿಕುಲಾಳಕಿ' ನೋ.

**ಅಳಿಕೂಸು,** ಅಳುಗೂಸು (ನಾ). (ಉಕ). ಬಲಿಯದ ಮಗು : "ಅಳಿಕೂಸು – ದಿನ ತುಂಬದೆ ಹುಟ್ಟಿದ ಮಗು" (ಜಾನಕೋ. ೧೫). **ಅಳುಗೂಸು₂** : ನೀನು ನೆನ್ನೆ ಕಣ್ಣು ಬಿಟ್ಟ ಅಳುಗೂಸು (ದೇವೀಚಾ. ೧೪೦). [ಅಳಿ₇ + ಕೂಸು]

**ಅಳಿಕೇಕ್ಷಣ** 'ಅಲಿಕೇಕ್ಷಣ' ನೋ.

**ಅಳಿಗ** (ನಾ). ಹಲ್ಲಿ ಮತ್ತು ಗೋಸುಂಬೆ ಜಾತಿಗೆ ಸೇರಿದ ಒಂದು ಪ್ರಾಣಿ (ಕ). 'ಕಂಬಳಿಯುಳಿಗ' ಪರಾ. [?]

**ಅಳಿಗಂಡು** 'ಅೞಿಗಂಡು' ನೋ.

**ಅಳಿಗಂಡುತನ** (ನಾ). ಅಲ್ಪ ಪರಾಕ್ರಮ ; ಹೀನವಾದ ಶೌರ್ಯ : ಅಳಿಗಂಡುತನವನೆಯ್ದುಳಿದು ಭ ರ ತೇ ಶ್ವ ರ ನ ಚರಣನಳಿನಕ್ಕೆಱಗು ಬಂದೀಗಳ್ (ಕುಮುರಾ. ೭–೩೪). [ಅಳಿಗಂಡು (< ಅೞಿಗಂಡು) + –ತನ]

**ಅಳಿಗಂಪು** (ನಾ). ಅಲ್ಪ ವಾಸನೆ ; ಸ್ವಲ್ಪ ಕಂಪು : ಹೊಂಪುಳಿಯ ಘನಸೌಖ್ಯ ಮಿಕ್ಕಳಿಗಂಪುಗಳಲಿಲ್ಲೆನುತ ತನ್ನೊಳು ಜೊಂಪಿಸುವ ಮನವೆಂಬ ತುಂಬಿಯ ಭಾವ ಮಿಗೆ ತುಂಬಿ ಸಂಪಗೆಯ ಸಾರ್ವಂತೆ (ಪ್ರಭುಲೀ. ೧೭–೩). [ಅಳಿ₂ (< ಅೞಿ₂) + ಕಂಪು]

**ಅಳಿಗಜ್ಜ** 'ಅೞಿಗಜ್ಜ' ನೋ.

**ಅಳಿಗಣ್** 'ಅೞಿಗಣ್' ನೋ.

**ಅಳಿಗಣ್ಣ** 'ಅೞಿಗಣ್ಣ' ನೋ.

**ಅಳಿಗಣ್ಣು** 'ಅೞಿಗಣ್' ನೋ.

**ಅಳಿಗಪ್ಪು** (ನಾ). ತುಂಬಿಯ ಕಪ್ಪುಬಣ್ಣ ; ಅತಿಕಪ್ಪು : ತಲೆದೋಱಿತ್ತಳಿಗಪ್ಪು ಬಾಸೆಯೊಳುದಗ್ರಂ ತ ತ್ಕು ಚಾ ಗ್ರಂ ಗ ಳೊ ಳ್ (ಕುಸುಮಾ. ೫–೯). [ಅಳಿ₅ (= ಅಲಿ₂) + ಕಪ್ಪು₃ (< ಕರ್ಪು₃)]

**ಅಳಿಗಬ್ಬ** 'ಅೞಿಗಬ್ಬ₁' ನೋ.

**ಅಳಿಗಬ್ಬಿಗ** 'ಅೞಿಗಬ್ಬಿಗ' ನೋ.

**ಅಳಿಗರುವಿಕೆ** (ನಾ). ಅಲ್ಪವಾದ ಹಿರಿಮೆ ; ಸ್ವಲ್ಪ ಗೌರವ : ಬರಡು ಗುಣ್ಪಿನ ಅಳಿಗರುವಿಕೆಯ ಕರುಬಿನಿಂದ ಅವರ ಅಧಿಕಾರರಂಗವನ್ನು . . . ಕಿರಿದುಗೆಯ್ದು (ಮಂತ್ರಶ. ೬೯–೧೯). [ಅಳಿ₂ (< ಅೞಿ₂) + ಗರುವಿಕೆ]

**ಅಳಿಗವಿ** 'ಅೞಿಗವಿ' ನೋ.

**ಅಳಿಗಾಲ** 'ಅೞಿಗಾಲ' ನೋ.

**ಅಳಿಗುರುಳ್,** ಅಳಿಗುರುಳು (ನಾ). ತುಂಬಿಯಂತೆ ಕಪ್ಪಾದ ತಲೆಗೂದಲು. **ಅಳಿಗುರುಳು** : ಅಳಿಗುರುಳುಗಳ ನೇವರಿಸಿ ಕಮಲದಳಾಕ್ಷಿಗಿಂತೆಂದ (ಜೀವಂಚ. ೮–೫೬) ; ಅಳಿಗುರುಳೋಳಿಯುಸಿಯಳ ಮೊಗದೆ ಸೂಸಿಹುದು (ವರ್ಧಚ. ೫–೨೦) ; ಅಳಿಗುರುಳಬಲೆಯರ್ ಸುಳಿಯೆ (ಕಂನವಿ. ೨೧–೧೦೬). [ಅಳಿ₅ (= ಅಲಿ₂) + ಕುರುಳ್₁]

**ಅಳಿಗುರುಳು** 'ಅಳಿಗುರುಳ್' ನೋ.

**ಅಳಿಗೆ** 'ಅಳಗೆ₁' ನೋ.

**ಅಳಿಗೆರೆ** (ನಾ). ಸಣ್ಣಕೆರೆ: ಉಪ್ಪಿನ ಮೊಳೆ ಅಳಿಗೆರೆಗಳಲಿ ನೀರು ನಿಲ್ಲು ವಂಥಾ ಸೀಮೆ ಈ ಕೆರೆಗೆ ಸಹ ಕಾಲುವೆ (ಎಕ. III, ಮಳವ. ೧೨೧–೧೬೫; 1424). [ಅಳಿ$_1$ (< ಅೞಿ$_1$) + ಕೆರೆ$_2$ (< ಕೆಱೆ)]

**ಅಳಿಚೆನ್ನ** (ನಾ). ಪ್ರೀತಿಯುಳ್ಳ ಚೆಲುವ(?): ಅಳಿಚೆನ್ನಂ, ಕಡುಚಾಗಿ (ಭಾಷಾಭೂ. ೩೦ ಪ್ರಯೋ). [ಅಳಿ$_4$ + ಚೆನ್ನ]

**ಅಳಿಜಸ** 'ಅೞಿಜಸ' ನೋ.

**ಅಳಿಜೀವಿ** (ನಾ). ಅಲ್ಪ ಜಂತು; ಕ್ಷುದ್ರವಾದ ಪ್ರಾಣಿ: ತಮ್ಮಳಿವೊಡಲ ದುಸ್ಥಿತಿಯ ಬಗೆಯದಾ ತಮ್ಮಂದದಳಿಜೀವಿಗಳೆನಿಪ ಸತಿಸುತ ಕಳತ್ರಾದಿಗಳೆನಿಪವರಲಾವುದೋ ಸುಖವೀ ಮನುಷ್ಯರಿಗೆ (ನಿಭಾಗ. ೨–೧–೭). [ಅಳಿ$_2$ (< ಅೞಿ$_2$) + ಜೀವಿ]

**ಅಳಿಜುಳುಕು** (ನಾ). ಹೀನಾಯವಾಗಿ ಹಿಮ್ಮೆಟ್ಟುವುದು,—ಹಿಂದೆಗೆಯುವುದು: ಇಭ ಹಯ ರಥಾವಳಿಯ ನಿಲಿಸು ರಣಮುಖಕ್ಕಿನ್ನದೇಕಳಿ [ಪಾಠಾಂ. ಕಿಣಿ, ಅಳು] ಜುಳುಕು ಹೋಗು (ತೊರರಾ. ೬–೬–೬೪).
[ಅಳಿ$_2$ (< ಅೞಿ$_2$) + ಜುಳುಕು]

**ಅಳಿತೇಜಸ** (ನಾ). ಹೀನವಾದ ತೇಜಸ್ಸುಳ್ಳವನು; ತೇಜಗೆಟ್ಟವನು; ಕಾಂತಿಹೀನ: ಸಾಂದ್ರಭಸ್ಮಾಚ್ಛನ್ನ ಶಿಖಿಯೊಲಳಿತೇಜಸಂ ಕೋಸಲ ಧರಾವಲ್ಲಭಂ (ಶ್ರೀರಾಮಾ. ೯೧–೩೫೩). [ಅಳಿ$_2$ (< ಅೞಿ$_2$) + ತೇಜಸ]

**ಅಳಿನಿ** 'ಅಲಿನಿ' ನೋ.

**ಅಳಿನೀನಿನದ** (ನಾ). ಹೆಣ್ಣುತುಂಬಿಗಳ ಧ್ವನಿ; ಭ್ರಮರಿಗಳ ಝೇಂಕಾರ: ಸುರನಂದನಾಳಿನೀನಿನದವಿದೆಂಬಿನಂ ಪಸರಿಸಿತ್ತಮರೀಮೃದುಗೇಯನಿಸ್ವನಂ (ಜಗವಿ. ೩–೩). [ಸಂ. ಅಲಿನೀನಿನದ]

**ಅಳಿನೀಮಾಲೆ** (ನಾ). ಹೆಣ್ಣುತುಂಬಿಗಳ ಸಾಲು; ಭ್ರಮರಿಗಳ ಪಂಕ್ತಿ: ಬೆಳರ್ತಂಗಲೇಖೆ ಕರ್ಪಡೆರ್ದ ಬಾಸೆಯಂ ತಳೆದೆಸೆದತ್ತಳಿನೀಮಾಲೆಯ ತಿರುವಂ ತಳೆದಂಗಜಪುಷ್ಪಚಾಪಮೆನೆ ದೇವಕಿಯಾ (ಜಗವಿ. ೨–೯೦). [ಸಂ. ಅಲಿನೀಮಾಲಾ]

**ಅಳಿನೀರುತಿ** (ನಾ). = ಅಳಿನೀನಿನದ: ಪಾಸಱೆ ಸಿಂಹಪೀಠಮಳಿನೀರುತಿ ಮಂಗಳಗೀತಿ ಭೂತಳಂ ಪಾಸು (ಪಂಪಭಾ. ೭–೨೯). [ಸಂ. ಅಲಿನೀರುತಿ]

**ಅಳಿನೀಸಂಕುಳ** (ನಾ). ಹೆಣ್ಣುತುಂಬಿಗಳ ಸಮೂಹ: ಅಳಿನೀಸಂಕುಳವೇಷ್ಟಿತ ಪ್ರವಿಳಸನ್ಮಲ್ಲೀವನಂ (ಪಂಚತಂ. ೧೨೪–೨೦).
[ಸಂ. ಅಲಿನೀಸಂಕುಲ]

**ಅಳಿನುಡಿ** 'ಅೞಿನುಡಿ' ನೋ.

**ಅಳಿನೆತ್ತಿ$_1$** (ನಾ). ಕೆಟ್ಟ ಬರೆಹದಿಂದ ಕೂಡಿದ ಹಣೆ; ದುರದೃಷ್ಟ: ತಲ್ಲಣಿಸಿ ಚನ್ನಬಸವಂ ಸೊಲ್ಲಿಸಿಯಳಿನೆತ್ತಿ ತನ್ನದೆಂದಳವೞಿದಂ (ಅಪ್ರತಿ. ೪೮–೩೩). [ಅಳಿ$_1$ (< ಅೞಿ$_1$) + ನೆತ್ತಿ]

**ಅಳಿನೆತ್ತಿ$_2$** 'ಅಳ್ನೆತ್ತಿ' ನೋ.

**ಅಳಿಪ$_1$**, ಅಳುಪ (ನಾ). ಬಯಸುವವನು; ಆಸೆಗಾರ: ಪಡೆದರ್ಥಂಕಳ್ಳರಿಂ ದಾಯಿಗರಿನಳಿಪರಿಂ ಭೂಪರಿಂ ಕಿಚ್ಚಿನಿಂದಂ ಕಿಡುಗುಂ(ಎಕ. XI, ದಾವಣ. ೯೦–೩೮; 1228). **ಅಳುಪ**: ವನಿತೆ ಪರಸ್ತ್ರೀ ಪೆಱಗಿರ್ತ್ತನಿತಱೊಳಱಿದಱಿದುಮಳುಪನಾದಶ್ವಗ್ರೀವನ ಮಿಟ್ಟು ಪೊಟ್ಟುವಾರ್ದಪುದೆನಗೇಂ ತಡಮೆಂಬ ತೆಱದಿನಿನನುದಯಿಪುದುಂ (ಶಾಂತಿಪು. ೫–೫೦).
[ಅಳಿಪು$_3$ + –ಅ$_7$]

**ಅಳಿಪ$_2$** (ನಾ). ಕುದುರೆಯ ಒಂದು ಲಕ್ಷಣ (?): ಹೀನಧ್ರುವನುಂ ಪ್ರೋಥಸ್ಥಾನವಳಿತ್ರಯನುಮುಳಿಪನುಂ ಪಡಪೆಯು . . . ಅಱುವರ್ಷದೊಳಱಿಗುಂ (ಅಶ್ವಶಾ. ೬–೭). [?]

**ಅಳಿಪಳಿ** (ನಾ). ಕೆಟ್ಟದೂರು; ತುಚ್ಛವಾದ ನಿಂದೆ. 'ಅಳಿಪಳಿಯಾಡು' ಪಠಾ. [ಅಳಿ$_1$ (< ಅೞಿ$_1$) + ಪಳಿ$_2$ (< ಪೞಿ$_2$)]

**ಅಳಿಪಳಿಯಾಡು** (ಕ್ರಿ). ಕೆಲಸಕ್ಕೆ ಬಾರದ ಮಾತುಗಳನ್ನೂ ಇಲ್ಲದ ದೂರನ್ನೂ ಹೊರಿಸಿ ನುಡಿ (?): ಅಳಿಪಿ ಕಿಱಿದಕ್ಕೆ ಕಿಮ್ಮನೆ ಗಳಗಳಿಸುತ್ತೇಳಿದರ್ಕಳೊಳ್ ಬಿಡದೆ ತಗುಳ್ದಳಿಪಳಿಯಾಡುವನಂತುಳಿಯಕ್ಕುಂ ತುಳಿಲ ಸಾಂದನಕ್ಕುಮೆ ಧರೆಯೊಳ್ (ಬಂಹರಿ. ೧೧–೧೦೧).
[ಅಳಿಪಳಿ + ಆಡು$_1$]

**ಅಳಿಪಾತ್ರೆ** (ನಾ). ಮದ್ಯವನ್ನು ಕುಡಿಯುವ ಪಾತ್ರೆ: ಅಂಜಳಿಯೊಳಳವಟ್ಟು ತೊಳಪ್ಪಳಿಪಾತ್ರೆಗಭಿವಂದಿಸಿ (ಉದ್ಭಟ. ೫–೬೯ ವ).
[ಅಳಿ$_8$ + ಪಾತ್ರೆ]

**ಅಳಿಪಾನ** (ನಾ). ಮದ್ಯಪಾನ: ಎಳವೆಣ್ಗಳಳಿಪಾನಂ ಮಾಡಿ ಸೊರ್ಕಿ ವಿರಾಜಿಸುತ್ತಿರ್ದರು (ಉದ್ಭಟ. ೫–೬೯ ವ). [ಅಳಿ$_8$ + ಪಾನ]

**ಅಳಿಪು$_1$** 'ಅೞಿಪು$_1$' ನೋ.

**ಅಳಿಪು$_2$**, ಅಳಿಹು$_2$, ಅಳುಪು$_2$, ಅಳುಹು$_1$ (ಕ್ರಿ). ಬಯಸು; ಕಾಮಿಸು; ಆಸೆಪಡು: "ಅಳಿಪು – ಲೋಲತ್ವೇ" (ಶಮಧಾ); ಏಕಾಂತಂ ಸಮನಿಸಿದೊಡಾಕೆಗಳಿಪದೆ ಪೋಗವೇೞ್ದ ಧನದತ್ತನೊಳ್ಪಿದಂ (ವಡ್ಡಾರಾ. ೧೪–೨೩); ಭಾಗಮನಾಸೆವಟ್ಟಳಿಪಿ ಬೇಡ್ಪುದು ನಿನ್ನಯ ಕಲ್ತ ವಿದ್ದೆ (ಪಂಪಭಾ. ೯–೪೬); ಪುಸಿವುದೆ ತಕ್ಕು ಕೊಟ್ಟಳಿಪಿ ಕೊಳ್ವುದೆ ಮನ್ತ್ರಣಮನ್ಯನಾರಿಗಾಟಿಸುವುದೆ ಚಿತ್ತಂ (ಎಕ. II, ೧೩೩–೪೫; 982); ತಾಯ್ಗಂ ತಂಗೆಗಮುಳಿಪಿದವಂ (ಸೌಇಇ. IX–i, ೧೦೭–೨೬; 1050); ನಂಬಿಯ ನಳಿಪಿ ತೊಳ್ತುಗೊಂಡವಂಗೆ (ಪದ್ಮರಾ. ೧೩–೮). **ಅಳಿಹು$_2$**: ಆಚಾರ್ಯ್ಯರಿಗೆ ಕವುಟಲ್ಯಬುದ್ಧಿಯಂ ಕಲಿಸಿ ಒಂದಕೊಂದ ನೆನೆದು ತೊಳಸಾಟವಂ ಮಾಡಿ ಹಾಗಬೆಳೆಯನಳಿಹಿ ಬೇಡಿಕೊಳ್ಳಿಯೆಂದು ಆಚಾರ್ಯ್ಯರಿಗೆ ಮನಂಗೊಟ್ಟಡೆ (ಎಕ. II, ೩೩೩–೨೧; 1206); ಇ ಧರ್ಮವನಳಿಹಿ ಕೊಂಡವ ಗೋ[ಚ]ತುರ್ವೇದ ಬಹ ಬ್ರಹ್ಮಣನ ಕೊಂನ್ದಇಸು ದೋಷ (ಕಇ. IV, ೨–೨೮; 1241). **ಅಳುಪು$_2$**: ಬಾರಿಸೆ ವಾರಿಸೆ ಬಂದು ಮನೋರಮೆಗಳುಪಿದನುಪೇಂದ್ರನತಿರಕ್ತರನಾರ್ ಬಾರಿಸುವರ್(ಶಾಂತಿಪು. ೬–೭೬); ಧರೆಯ ವೈಭವಕಳುಪಿ ಕಳುಹಿದರೆನ್ನ ಕಂದನನು (ಕುವ್ಯಾದ್ರೋ. ೭–೧೭); ಮುಂದಕೆ ಕುಡಿವರಿವ ಸತ್ಕೀರ್ತಿ ಲೋಗರ ಮಡದಿಗಳುಪಿದ ಕಥನದಿಂ ಬಯಲಾಯ್ತು ನಿನಗೆಂದ (ತೊರರಾ. ೬–೨೬–೬೩); ದಳವಾಯಿ ರಾಮರಾಜಂ ಬಱಿಕಱಿಜಸದೊಡನೆವೆರಸಿಯಾಳ್ದನ ಸಿರಿಗಂದಳುಪಿಯಳಿಯನೆನಿಸಿಯುಮೊಡನಱಿದಂ (ಚಿಕವಿ. ೨–೧೬). **ಅಳುಹು$_1$**: ಕಾಲಪಾಶವ ಬಳಿಚಬೇಕೆಂಬವರು ವಿಷಯಕ್ಕಳುಹದಾಶ್ರಯಿಸೂದು ಹರಿಗುರುಚರಣಪಂಕಜವ (ನಿಭಾಗ. ೫–೧೨–೨೫); ಇದಕೆ ಅಳುಹಿದಡೆ ಕಳ್ತೆಯ . . . ಕರಡುಗು (ಎಕ. VII, ಶಿವಮೊ. ೪೭–೧೦; 1688); ಬ್ರಾಹ್ಮಣಿಗೆ ತಾಯಿಗೆ ಒಡಹುಟ್ಟಿದವಳಿಗೆ ಮಗಳಿಗೆ ಅಳುಹಿ ಕೆಡಿಸಿದ ಹಾಗೆ (ಬಿಟ್ಟಅ. ೧೯೪–೧೩).

**ಅಳಿಪಿಱಿವೋಗು** = ಪ್ರೀತಿ ಕಡಮೆಯಾಗು,—ಇಳಿದು ಹೋಗು: ಎನಿತಾನುಂ ತೆಱದ ಲಲ್ಲೆಯಿನಳಿಪಂ ತೋಱಿ ಬಾಯಱಿದು ತನ್ನ ನುಡಿಗಳಳಿಪಿಱಿವೋಗೆ ಸ್ವೈರಿಸಲಾಱದೆ ಪಿಡಿವುದುಂ ಪಾಂಚಾಲರಾಜತನೂಜೆಯಿಂತೆಂದಳ್ (ಪಂಪಭಾ. ೮–೬೯ ವ). [ಅಳಿ$_4$ + –ಪು]

**ಅಳಿಪು$_3$**, ಅಳಿಹು$_3$, ಅಳುಪು$_3$ (ನಾ). ಅತಿಯಾಸೆ; ಬಯಕೆ; ವ್ಯಾಮೋಹ: ಅನ್ಯಾಯವರ್ಜ್ಜಿತನಳಿಪಿಲ್ಲದಾತಂ (ಎಕ. VII, ಶಿಕಾರಿ. ೨೮೪–೩; 902); ಎನಿತಾನುಂ ತೆಱದೊಳಱಿ[ಳಿ]ಪಿನ ಲಲ್ಲೆಯ ಚೆಲ್ಲದ . . . ಪಡೆಮಾತುಗಳಂ ನುಡಿದುಂ ಕಾಲ್ವಿಡಿದುಂ (ಪಂಪಭಾ. ೭–೯೪ ವ); ಅಳಿಪಿನೊದವಿಂ ನೀಡುಂ ಪೀರ್ವಂದದಿಂ ನಡೆನೋಡಿ ಸಂಗಳಿಸೆ ನಿಡುಸುಯ್ ರೋಮಾಂಚಂ ಪೊಣ್ಮೆ (ಕಾದಂಉ. ೭೮೭); ಚಲದೋಜನಳಿಪಿಲ್ಲದಾತಂ (ಎಇ. XVI, ೨೯–೨೦; 1010); ಇನ್ನಳಿಪಿಂದಂ ಪಿಡಿಯೆಂ

ಖಳಸಂಸ್ಕೃತಿಯಂ ಬಿಡುವೆಂ ಪಿಡಿವೆಂ ಜಿನೇಂದ್ರಪದಸರಸಿಜಮುಂ (ಧರ್ಮಾಮೃ. ೨-೨೩೭); ಲಲನೆಯ ವಕ್ತ್ರಶೋಭೆಯನೆ ನೋಟ್ಪಳಿಪಿಂದ ಮಳೇಂದು ದರ್ಪಣಚ್ಛಲದೊಳೆ ಕೈಗೆವಂದನೆನೆ ಕನ್ನಡಿಯಂ ಪಿಡಿದು (ಕುಸುಮಾ. ೧೧-೧೪೩); ಅಳಿಪಿಂ ತನ್ನಯ ರಾಣಿವಾಸದವರೊಳ್ ಮಾತಾಡುವಾಗಳ್ ಪೆಸರ್ತಳಿಯಲ್ ಪಲ್ಲಟಮುಂ ಸಮಂತೊಗೆದ ನಾಣಿಂ ಸುಮ್ಮನಿರ್ಪಂ ನೃಪಂ (ಶಾಕುಂತ. ೮೧-೧೩೬). **ಅಳಿಹು$_3$**: ಪಾಪಕರ್ಮ್ಮ ನಳಿಹಿಂದ ದ್ವೇಷದಿಂದ ಕಿಡಿಸಿದನವಂ (ಸೌಇಇ. XV, ೪೫-೯೧; ?). **ಅಳುಪು$_3$**: ಮದನನಲೆದಪಂ ಕಾಯೆನ್ನನೆಂಬಂತೆ ಶರಣ್ಬುಗುವೆನೆಂಬಂತೆ ಮನದೊಳೆಡೆಗುಡೆಂದಳುಪಂ ತೋ೯ಜುವಂತೆ (ಕಾದಂಪೂ. ೭೪೬); ಬಿಟ್ಟರಾ ಬಿಟ್ಟವಳುಪಿಲ್ಲವೇ ಇಲ್ಲೆನಲು (ಸಿದ್ಧರಾ. ೫-೧೬); ಅಳುಪ ಕಾಣೆವು ಚಿತ್ತವೃತ್ತಿಯ ನೆಲೆ ನಿಜೇಶನ ಮೇಲೆ (ತೊರರಾ. ೫-೩-೪೫).

[< ಅಳಿಪು$_1$]

**ಅಳಿಪು$_4$**, ಅಳಿವು$_2$, ಅಳುಹು$_3$ (ನಾ). ಒಂದು ತೆರಿಗೆ (?): ಆನಂದ ಸಂವತ್ಸರ ಮೊದಲಾಗಿ ಗದ್ಯಾಣ ಮೂವತ್ತೆರಡ ತೆಱುವರು ಅಲಿಂಮೇಲೆ ಅಳಿಪು ಅಂನ್ಯಾಯುವ ತೆಱುವರು (ಎಕ. III, ಮಳವ. ೧೪೨-೨೦; 1251). **ಅಳಿವು$_2$**: ಈ ಚತುಸೀಮೆಯೊಳಗಣ ಗದ್ದೆ ಬೆದ್ದಲು ನಿಧಿ ನಿಕ್ಷೇಪ ಜಲ ಪಾಷಾಣ ಸಿದ್ಧಸಾಧ್ಯ ಅಕ್ಷೀಣ ಆಗಾಮಿ ಅಷ್ಟಭೋಗ ತೇಜಃಸ್ವಾಂಮ್ಯ ಸೇಸೆ ಸಿದ್ಧಾಯ ಅಳಿವು ಅನ್ಯಾಯ ಕಿಱುಕುಳ ತಪ್ಪುತೌಡಿವೊಳಗಾದ ಸಮಸ್ತಬಳಿ ಸಹಿತವಾಗಿ (ಎಕ. XII, ಚಿಕ್ಕನಾ. ೬೮-೨೩; 1318); ಬಿಟ್ಟಿ ಕೊಟ್ಟಣ ಅಳಿವಂನ್ಯಾಯ ಸುಂಕ ಹುಟ್ಟಿ[ದೆರೆ] ತಪ್ಪು ತೌವಡಿ (ಎಕ. XI, ಚಿತ್ರದು. ೨-೨೨; 1355). **ಅಳುಹು$_3$**: ಯಿಂಪುರಿ ಅಳುಹು ಅಂನ್ಯಾಯ ಅವುದು ಯಿಲ ಸ್ವಸ್ತಿಶ್ರೀ (ಎಕ. XIV, ತಿರುಮ. ೭೨-೨೯; 1100). 'ಅಳ್ಪು$_3$' ಪರಾ. [?]

**ಅಳಿಪು$_5$** (ನಾ). = ಅಳಸು$_3$: "ಅಳಿಪೆಂದು ಸ್ಮರಕೇಳಿ ಶಬ್ದನಿಚಯಂ" (ಕರ್ಣಾನಿ. ೪೫). [< ಅಳಸು$_3$ ?]

**ಅಳಿಬ** (ನಾ). ಒಬ್ಬಾತನ ಹೆಸರು: ಬೀರಗಲನು ಯೆತ್ತಿಸಿದರು ಮಾಡಿದ ಅಚಾರಿ ಅಳಿಬನೂ ಅಲಿಂದಂಯಿಲಿ ರಂಗಗವುಡನ ಮಗ (ಎಕ. III, ಮಂಡ್ಯ. ೮೫-೮; 1242). [?]

**ಅಳಿಬಲ** (ನಾ). ೧. ಸಣ್ಣ ಸೈನ್ಯ; ಅಲ್ಪ ಸೈನ್ಯ: ಎಲವೊ ದುಷ್ಟಗ್ರಹದ ಬಾಧೆಯ ನಿಲಿಸಲಱಿಯರೆ ಮಂತ್ರವಾದಿಗಳಳಿಬಲವನಂಜಿಸಿದ ಕೊಬ್ಬು ಗಳಕಟ ನಮ್ಮೊಡನೆ (ಕುವ್ಯಾದ್ರ್ರೋ. ೧೩-೧೦). ೨. ಬಲಹೀನ; ದುರ್ಬಲ: ಅಳಿಬಲರು ನರರೆಂದು ಸಮ್ಮುಖದಲಿ ಸಮಿಾಕವನೆಸಗದಿರು (ತೊರರಾ. ೩-೭-೨೩); ಅಳಿಬಲರ ಕಣುಮಱಸಿ ಧನವನು ಕೊಂಬ ತೆಱನಂತೆ (ನಿಭಾಗ. ೮-೧೧-೪೯).

[ಅಳ್ಕ$_2$ (< ಅಟ್ಟು$_2$) + ಬಲ]

**ಅಳಿಬಾಳ್** (ಕ್ರಿ). ತುಚ್ಛವಾಗಿ ಬಾಳು; ಅಲ್ಪತನದಿಂದ ಬದುಕು: ಆವುದು ಮಾಡೊಡೆ ಸಾವುದು ಮಾಣದು ಜೀವ ಚಿರವೆ ಪಲಪಗಲು ಭಾವಕಿ ಕೇಳದಱಿಂದಳಿಬಾಳ್ವುದು ಗಾವಿಲತನ ನೃಪವರರ್ಗೆ (ಶ್ರೀಪಾಲ. ೫-೧೦೬).

[ಅಳ್ಕ$_2$ (< ಅಟ್ಟು$_2$) + ಬಾಳ್$_1$ (< ಬಾೞ್$_1$)]

**ಅಳಿಬೀಳು** (ಕ್ರಿ). ಎಣ್ಣೆ ಮೊದಲಾದ ದ್ರವ್ಯಗಳನ್ನು ಅಳತೆ ಮಾಡುವಾಗ ತುಂಬಿ ಸುರಿ: ಎಣ್ಣೆ ಅಳಿಬೀಳುವಂತೆ ಅಳೆಯಬೇಕು (ರೂಢಿ).

[ಅಳ್ಕ$_3$ (< ಅಟ್ಟು$_3$) + ಬೀಳು$_1$ (< ಬೀೞ್$_1$)]

**ಅಳಿಬೇನೆ** (ನಾ). ೧. ಸ್ವಲ್ಪ ನೋವು: ಅಂದಿಂಗೆ ನವಮಾಸಸಂಪೂರ್ಣಮಾಗಲಾ ಕಂದರ್ಪನಂಗನೆಗೆಯಳಿಬ್ಯಾ[ಬೇ]ನೆ ಸೂಚಿಸಲು (ನವಮೋ. ೧೫-೧೩). ೨. ಕೆಟ್ಟ ರೋಗ. [ಅಳ್ಕ$_2$ (< ಅಟ್ಟು$_2$) + ಬೇನೆ]

**ಅಳಿಮನ$_1$** 'ಅಟಿಮನ' ನೋ.

**ಅಳಿಮನ$_2$** (ನಾ). ೧. ತುಂಬಿಯ ಮನಸ್ಸು; ಚಂಚಲ ಮನಸ್ಸು. ೨. ಕೆಟ್ಟ ಮನಸ್ಸು. ೧, ೨: ಅಳಿಮನದ ಪರಿಯೆಂದು ಬಗೆಯದಿರು ನೀನೆನುತೆ (ಪುಷ್ಪರ. ೩೫-೧೧).

[ಅಳ್ಕ$_5$ (= ಅಲ್ಕಿ$_2$) + ಮನ; ಅಳ್ಕ$_2$ (< ಅಟ್ಟು$_2$) + ಮನ]

**ಅಳಿಮಾಲೆ**, ಅಳಿಮಾಳೆ (ನಾ). ತುಂಬಿಗಳ ಸಾಲು: ಪೂವಲಿಯಲ್ಲಿ ಜಿನುಗುತಿರ್ದುದು ಬಲವಂದಳಿಮಾಲೆ ಮಧುರ ಮಂದ್ರಧ್ವನಿಯಿಂ (ಕಾದಂಉ. ೨೦೧). **ಅಳಿಮಾಳೆ**: ರಸಮಂ ನಾಲಗೆ ಕವಿತಾ ರಸಮಂ ಕವಿ ಕುಸುಮರಸಮನಳಿಮಾಳೆ ಸುಧಾರಸಮಂ ಸುರರಕ್ಷಯಸುಖರಸಮಂ ಪರಮಾತ್ಮನಱಿವನುಱಿದವರಱಿಯರ್ (ಮಲ್ಲಿಪು. ೧-೨೮).

[ಅಳ್ಕ$_5$ (= ಅಲ್ಕಿ$_2$) + ಮಾಲೆ]

**ಅಳಿಮಾಳು** (ನಾ). ಒಂದು ರೀತಿಯ ದುರ್ಮಾಂಸ: ಬಾಯಿ ಹುಣ್ಣಾಗಿ ಅಳಿಮಾಳು (Gangrene) ಉಂಟಾಗಬಹುದು (ಕೆಲರೋ. ೭೭). [?]

**ಅಳಿಮಾಳೆ** 'ಅಳಿಮಾಲೆ' ನೋ.

**ಅಳಿಯ** (ನಾ). ೧. ಮಗಳ ಗಂಡ: ಬನವಾಸಿಯ ಅನೆಸೆಟಿಯ ಅಳಿಯ ಬಸನ್ತಕುಮರ (ಎಕ. VIII, ಸೊರಬ. ೫೭೧-೨೭; 692); ದ್ರುಪದಂ ಬಂದವರ್ ಪಾಂಡವರಪ್ಪುದುಮಂ ತನ್ನಳಿಯಂ ವಿಕ್ರಮಾರ್ಜುನನಪ್ಪುದುಮಂ ತಪ್ಪಿಲ್ಲದಱಿದು (ಪಂಪಭಾ. ೩-೭೩ ವ); ಮಲೆತವರ್ಗಳ ನಿರದಳಿವಂ ನೆಱೆ ನಿನ್ನಳಿಯನೆನೆ (ವೀರೇಶ. ೧-೪೮); ಮನೆಯಳಿಯನ ಕೂಡೆ ಮಚ್ಚರವೇಕೆ (ವೋಹತ. ೩೫-೨೮); ಅಳಿಯನೆಂದೊಡೆ ಅಳಿಯನೇ ಚಲವಳಿಯ ಚಾಗವನಳಿಯ ಪಾಳಿಯನಳಿಯ ಪಂಥವನಳಿಯ ಪೆರ್ಮೆಯನಳಿಯ (ಸಾಳ್ವಭಾ. ೧-೩೧); ಅಳಿಯನ ಕುರುಡು ಬೆಳಗಾದರೆ ಕಂಡೀತು (ಗಾದೆ); ಅಳಿಯನ ಹಿಂದೆ ಗೆಳೆಯ (ಗಾದೆ). ೨. ಸೋದರಳಿಯ: ಮದ್ರರಾಜನಳಿಯನ ಪರಾಕ್ರಮಕ್ಕೊಸೆದು (ಪಂಪಭಾ. ೧೦-೧೦೭); ಅಳಿಯನಳಿವನು ಹೇಳಬಾರದು ತಿಳಿಯಲಿದನಿನ್ನೆನುತ ಚಿಂತಿಸಿ ನಳಿನಲೋಚನ ಬರುತ ಕಂಡನು ವರಸರೋವರವ (ಕುವ್ಯಾದ್ರೋ. ೮-೨).

[ಅಳಿದು$_0$ + -ಅನ್. / ತಮಿ. ತುಳು. ಅಳಿಯ; ತೆಲು. ಅಲ್ಲುಡು, ಅಲ್ಲುಂಡು, ಅಲ್ಲುವಾಂಡು]

**ಅಳಿಯಕಟ್ಟು** (ನಾ). (ಕರಾ) ಚರ ಸ್ಥಿರ ಆಸ್ತಿಯ ಹಕ್ಕು ಸೋದರಳಿಯನಿಗೆ ಬರುವ ತುಳುನಾಡಿನ ಒಂದು ಪದ್ಧತಿ. 'ಅಳಿಯ ಸಂತಾನಕಟ್ಟು' ಪರಾ. [← ತುಳು. ಅಳಿಯಕಟ್ಟು]

**ಅಳಿಯಕ್ಕರ** (ನಾ). ಅನುಚಿತವಾದ ಅಥವಾ ಹೀನವಾದ (ಸಲ್ಲದ) ಅಕ್ಷರ: ಹಱಿಗವಿಗಳ ಕಬ್ಬಂಗಳ ಹೊಱಗಳಿಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ಬಱಿತಾಱಿಗ ಬೀಱಿಗ ವೆತ್ತಱತತ್ತಱವಕ್ಕಸಕ್ಕಮುಸ್ತವ್ಯಸ್ತಂ (ಗಿರಿಕ. ೧-೨೩). [ಅಳ್ಕ$_2$ (< ಅಟ್ಟು$_2$) + ಅಕ್ಕರ$_2$]

**ಅಳಿಯಡಕೆ** (ನಾ). ಕೋಮಲವಾದ ಅಥವಾ ಎಳೆಯ ದಾದ ಅಡಕೆಯ ಸಸಿ: ದೇವರ ಕೆಯ್ಯಿಂ ಪಡುವಲು ಮತ್ತರು ೨ ಮತ್ತಂ ಕೊಳಗದಾಯಮುಳಿಯಡಕೆಯಂ ನಡುವುದು (ಸೌಇಇ. IX–i, ೧೫೩-೭೧; 1083). [ಅಳ್ಕ$_7$ + ಅಡಕೆ$_1$]

**ಅಳಿಯತನ** (ನಾ). ೧. ಅಳಿಯನ ಭಾವ; ಅಳಿಯನಾಗಿರುವಿಕೆ. ೨. ಮದುವೆಯಾದ ಮೊದಲ ದೀಪಾವಳಿಯಲ್ಲಿ ಅಳಿಯನಿಗೆ ಮಾಡುವ ಆದರೋಪಚಾರ: ದೀಪಾವಳಿಯಲ್ಲಿ ಅಳಿಯತನ ಸರಿಯಾಗಿರಲಿಲ್ಲ (ರೂಢಿ). [ಅಳಿಯ + -ತನ]

**ಅಳಿಯದೇವರು** (ನಾ). ಅಳಿಯನನ್ನು ಗೌರವಪೂರ್ವಕವಾಗಿ ನಿರ್ದೇಶಿಸುವ ಮಾತು: ಅಳಿಯದೇವರುಗಳು ಮಾವನ ಮನೆ ಬಿಡದೆ ಭದ್ರವಾಗಿ ಹೆಂಡಂದಿರ ಜೊತೆ ಇದ್ದುಬಿಟ್ಟರು (ಮಾಮುನಿ. ೨೧೧).

[ಅಳಿಯ + ದೇವರು]

**ಅಳಿಯನಗಿಡ** (ನಾ). ಪೊದರಾಗಿ ಬೆಳೆಯುವ ಒಂದು ಬಗೆಯ ಗಿಡ; ವಿಷಪ್ರಹರಿ ಗಿಡ (?). [ಅಳಿಯ₀ + ಗಿಡ (< ಗಿಡು)]

**ಅಳಿಯನಮಾವನಗಿಡ** (ನಾ). = ಅಳಿಯನಗಿಡ (ಶ). [ಅಳಿಯ + ಮಾವ₁ + ಗಿಡ (< ಗಿಡು)]

**ಅಳಿಯಮ್ಮೈಯ** (ನಾ). = ಅಳಿಯ ೧: (ಕುಣಿತ ಮುಗಿದ ಮೇಲೆ ಅಳಿಯನನ್ನು ತಬ್ಬಿಕೊಂಡು ಮುದ್ದಿಸಿ) ಚೆಂದಾಗಿ ಕುಣೀತೀ ಅಳಿಯ ಮ್ಮೈಯ (ತಿರುಪಾ. ೧೪). [ಅಳಿಯಮ್ಮ₀ + ಅಯ್ಯ₁]

**ಅಳಿಯಮ್ಮ** (ನಾ). = ಅಳಿಯ ೧: ಜೋ ನೀಂ ಮಗನೇ ತಮ್ಮನೆ ಜೋ ನೀನಳಿಯಮ್ಮ[ಪಾಠಾಂ. ಯೆಂಮು]ಮೆಯ್ದುನಾ ಕಿಱಿಯಮ್ಮಾ (ಜೀವಸಂ. ೯೦-೩೩). [ಅಳಿಯ + ಅಮ್ಮ₁]

**ಅಳಿಯಸಂತಾನ** (ನಾ). (ಕರಾ). ಸೋದರಳಿಯನಿಗೆ ಮನೆತನದ ಆಸ್ತಿಯ ಹಕ್ಕುನಿಯಮ. 'ಅಳಿಯಸಂತಾನಕಟ್ಟು' ಪರಾ. [ಅಳಿಯ + ಸಂತಾನ]

**ಅಳಿಯಸಂತಾನಕಟ್ಟು** (ನಾ). = ಅಳಿಯಕಟ್ಟು: ತೌಳವ ಸಂಸ್ಕೃತಿಯ ವೈಶಿಷ್ಟ್ಯಕ್ಕೆ ದೃಷ್ಟಾಂತವಾಗಿ—(೧) ಭೂತಾಳ ಪಾಂಡ್ಯನ ಅಳಿಯ ಸಂತಾನಕಟ್ಟು (ತುಳುನಾ. ೨೪೭). [ಅಳಿಯಸಂತಾನ + ಕಟ್ಟು₂]

**ಅಳಿಯಾಸೆ₁** 'ಅಟೀಯಾಸೆ' ನೋ.

**ಅಳಿಯಾಸೆ₂** (ನಾ). ೧. ತುಂಬಿಯ ಬಯಕೆ. ೨. ದುರಾಸೆ: ಕುಂದು ಹೆಚ್ಚುಂಟೆಂಬುದಬ್ಧಿಯೊಳಿಂದುವಿನೊಳಳಿಯಾಸೆ ನವಮುಕರಂದದಲಿ (ಜೀವಂಚ. ೨-೧೧). [ಅಳಿ₅ (= ಅಲಿ₂) + ಆಸೆ; ಅಳಿ₂ (< ಅಟಿ₂) + ಆಸೆ]

**ಅಳಿಯಾಳು** 'ಅಟೀಯಾಳ್' ನೋ.

**ಅಳಿಯಿಸು** 'ಅಟೀಯಿಸು' ನೋ.

**ಅಳಿಯೂಟ** (ನಾ). ಅಳಿಯನಿಗೆ ಏರ್ಪಡಿಸುವ ಊಟ: ಹುಡುಗ ಕೆಲದಿನ ತಿರುಗಾಡಿಕೊಂಡು ಅತ್ತೆಮನೇಲಿ ಅಳಿಯೂಟ ಮಾಡಿಕೊಂಡಿರಲಿ (ಬೆಳುಮ. ೨೧೦). [ಅಳಿಯ + ಊಟ]

**ಅಳಿಯೂರು** 'ಅಟೀಯೂರು' ನೋ.

**ಅಳಿರ್ವಳ್ಕು** (ಕ್ರಿ). ಕೆಸರಿನಲ್ಲಿ ಜಾರು(?): ಬಳವದರಾತಿಸೇನೆ ಕಿಡೆ ವಾಜಿಬಳಂ ಪೆಱಪಿಂಗೆ ಹಸ್ತಿಸಂಕುಳಮಳಿರ್ವಳ್ಕಿ ಬಳ್ಕೆ (ಎಕ. VIII, ಸೊರಬ. ೧೮೪-೮; 1033). [ಅಳಿಜ್ + ಬಳ್ಕು. P ತಮಿ. ವಟುಕ್ಕು = ಜಾರು]

**ಅಳಿಲು₁** 'ಅಣಿಲ್' ನೋ.

**ಅಳಿಲು₂** (ನಾ). ಸಡಿಲವಾದುದು; ಜಾರುವುದು: ಅಳಿಲಾದ ನಿಱಿಯ ಬಳಲಿದ ಮುಡಿಯ ಸೊಪ್ಪಾದ ತಿಲಕದ ಕೆದರ್ದ ಕಾಡಿಗೆಯ . . . ಕೋಮಲೆಯರ್ (ಜೈಮಿಭಾ. ೧೦-೫೦); "ಅಳಿಲಾದ=ಜಾರಿಹೋದ" (ಜೈಮಿಭಾ. ಟೀಕೆ). [ಅಳ್ ? + -ಇಲು₂ (< -ಇಲ್₃)]

**ಅಳಿಲುಳಿ** (ನಾ). ಕುದುರೆಯ ಒಂಬತ್ತು ಗತಿಗಳಲ್ಲಿ ಒಂದು: ಪಲ್ಲಣಮಂ ಕಟ್ಟಿಯೇಱಿ ಈಶ್ವರನಧ್ಯಕ್ಷತನಮಂ ತನ್ನೊಳಳವಡಿಸಿ ದಾಟು ದೀಟು ಹೊಳಹು ಹೊಮ್ಮಚ್ಚುವಡೆ ಮೋಡಿ ಭವರಿ ಭಂಜನೆ ಅಳಿಲುಳಿತವರ ತರಹಮೆಂಬ ನವಗತಿಗಳೊಳು (ಪುಣ್ಯಾಸ್ರ. ೭-೫೪ ವ). [ಅಳಿ ?+ ಉಳಿ ?]

**ಅಳಿಲೆ** 'ಅಣಿಲೆ₁' ನೋ.

**ಅಳಿಲೆಗಾಯ್** (ನಾ). ಅಣಿಲೆಕಾಯಿ: ಅಡಕೆಯ ತೆಗೆದು ವೀಳೆಯಂ ಗೊಳಲ್ನೋಳ್ಪಲ್ಲಿ ಹಡಪದೊಳ್ ಅಳಿಲೆಗಾಯಾಗಿರ್ದುವು (ಸಿದ್ಧೇಪು. ೨-೨೭). [ಅಳಿಲೆ (< ಅಣಿಲೆ₁) + ಕಾಯ್₂]

**ಅಳಿವಡೆ** (ಕ್ರಿ). ನಾಶಹೊಂದು; ನಷ್ಟವಾಗು: ಮೂಗುಬಾಯಿಗಳಿಂದ ನೊರೆನೆತ್ತರನು ಕಾಱುತ ಸಂದನಂತರ್ಧಾನದೆಡೆಗೆ ದುರಾತ್ಮನಳಿವಡೆದು (ನಿಭಾಗ. ೧೦-೪೨-೩೨). [ಅಳಿವು₁ (< ಅಟಿವು) + ಪಡೆ₁]

**ಅಳಿವಣ** (ನಾ). ಒಂದು ಬಗೆಯ ತೆರಿಗೆ ಹಣ: ಅರಸರ್ಗೆ ಸೇಸೆಯೆಂದರಸರ ಕಾಣಿಕೆಯೆಂದು ದಾಯದವರ್ಗಳ ತೆಱೆಯೆಂದರುವಣ ವೆಂದಳಿವಣವೆಂದರೆ ಕಾಣಿಯಕೊಂಡವರ್ ಚಾಂಡಾಳರು (ಎಕ. XII, ಸಿರಾ. ೨೩-೧೩೨; 1167). [< ಅಳಿವು₂ (< ಅಳಿವು₄) + ಪಣ₁]

**ಅಳಿವಣಿಗೆ** (ನಾ). ಅವನತಿ; ಕೀಳುದೆಸೆ: ಈಗಿನ ವ್ಯವಸಾಯದ ಅಳಿವಣಿಗೆ ರೇಷ್ಮೆಯ ಅಗ್ಗದ ಬೆಲೆ ಇದರಲ್ಲಿ ಅವರ ಹಣದ ಗಳಿಕೆ ತೆಳುವಾಗಿತ್ತು (ಸಕಕ. ೩೫). [ಅಳಿ₂ (< ಅಟಿ₂) + -ವಣಿಗೆ]

**ಅಳಿವಣ್ಣ** (ನಾ). ತುಂಬಿಯ ಬಣ್ಣ; ಕಪ್ಪು ಅಥವಾ ನೀಲಿ ಬಣ್ಣ: ಅಳಿವಣ್ಣದಾಕಾಶ ಗಿಳಿವಣ್ಣದ ಮುಗಿಲು ಅಳಿದಳಿದುಮರ್ಕನುದಯಿಸಲು ಮಳೆಯು ತಾ ತಳುವದೇ ಬಕ್ಕು (ಸರ್ವಜ್ಞ. ೧೫೭೭). [ಅಳಿ₅ (= ಅಲಿ₂) + ಬಣ್ಣ]

**ಅಳಿವಣ್ಣು** (ನಾ). ಅಲ್ಪವಾದ ಹಣ್ಣು; ಸಣ್ಣ ಹಣ್ಣು: ಅಱಿವಡಳಿವಣ್ಣಂಗೆ ಕೊಂಬರೆ ಕರಗಸವನೊಣವುಲ್ಲ ಸುಡುವರೆ ಹರನ ಹಣೆಗಿಚ್ಚೇಕೆ (ನಿಭಾಗ. ೬-೨-೨೧). [ಅಳಿ₁ (< ಅಟಿ₁) + ಪಣ್ಣು₂ (< ಪಣ್₂)]

**ಅಳಿವರೆಪ** (ನಾ). ಕೆಟ್ಟ ಲಿಪಿ; ಹೀನವಾದ ಬರೆಹ: ಪರಮೇಷ್ಠಿ ತಮ್ಮ ಪಣೆಯೊಳ್ ಬರೆದಳಿವರೆಪಂಗಳಿರವನನುಗೆಯ್ಯಲ್ಕೆಂದರಿನೃಪತಿಗಳಪ್ರತಿಮನ ಸಿರಿಯಡಿಯುಂಗುಟದೊಳೊರಸಿ ಪಿಂಸೊಗವಾಳ್ದರ್ (ಅಪ್ರತಿ. ೫೦-೧೯). [ಅಳಿ₂ (< ಅಟಿ₂) + ಬರೆಪ]

**ಅಳಿವಱಿ** (ನಾ). ತುಂಬಿಯ ಮರಿ: ಸಿರಿಗಂಪು ಸುಯ್ಗಂಪಿಗೆಡೆಯಾಡುವಳಿವಱಿ ಪಿರಿದೊಪ್ಪಿದುವು (ಶ್ರೀಪಾಲ. ೧-೮೧). [ಅಳಿ₅ (= ಅಲಿ₂) + ಮಱಿ]

**ಅಳಿವಿಂಡು** (ನಾ). ತುಂಬಿಗಳ ಹಿಂಡು; ಭ್ರಮರಗಳ ಗುಂಪು: ಬಲ್ಲಡಿಗ ಮರುಳಿಂ ಕಿರ್ಚಿಂ ಕಾಡಾನೆಯಿಂದಳಿವಿಂಡಿನಿಂ ಜಡಿದು ಕರದಿಂ ಪೊ ಪೋ ಪೋಗೆಂದು ನೂಂಕುವ ಬೇಡರಿಂ (ಧರ್ಮಾಮೃ. ೨-೨೨೯, ೨೩೦); ಕುರುಳಳಿವಿಂಡಕ್ಷಿಮಿನಾನಂ (ಉದ್ಭಟ. ೧೦-೯೨); ಕಮಲಕೆಱಗುವ ಅಳಿವಿಂಡುಗಳು (ಕಂಸವಿ. ೯-೧೧). [ಅಳಿ₅ (= ಅಲಿ₂) + ಪಿಂಡು₂]

**ಅಳಿವು₁** 'ಅಟೀವು' ನೋ.

**ಅಳಿವು₂** 'ಅಳಿಪು₄' ನೋ.

**ಅಳಿವೆ** 'ಅಳುವೆ' ನೋ.

**ಅಳಿವೆಣ್** 'ಅಟೀವೆಣ್' ನೋ.

**ಅಳಿವೆದೆ** (ನಾ). ತುಂಬಿಗಳಿಂದಾದ ಬಿಲ್ಲಿನ ಹಗ್ಗ; ತುಂಬಿಯ ಹೆದೆ: ಅಳಿವೆದೆ ಹೂವಿನ ಬಿಲ್ಲ ಕೆಸಱಿನೊಳು ಬೆಳೆದ ತಾವರೆ ಜೊನ್ನದೊಳಗೆ ಬಳಲಿ ಬಾಯ್ವಿಡುವ ನೆಯ್ದಿಲ ನೆಚ್ಚ ಕಾಳಗಕೆಳಸಿದೆ ಮರುಳು ಮನ್ಮಥನೆ (ವರ್ಧಚ. ೧೨-೨೧); ಅಭವನಂ ನೇಮದಿಂ ಪೂಜಿಸಲ್ ಕಾವನಿನಿವಿಲ್ಲಿಗಳಿವೆದೆಯ ಸೇರಿಸಿದನು (ಚಬಪು. ೩೫-೨೧); ಅಳಿವೆದೆಯಂ ಸಡಿಲ್ಚಿ ನಿಲಿಸಿದತನುಚಾಪಲತೆಯಂತೆ ತನುಲತೆ ನಿಡುಜೆಡೆಯಿಂ ಕಡುಬೆಡಂಗು ವಡೆಯೆ (ರಾಜಶೇ. ೫-೧೯ ವ). [ಅಳಿ₅ (= ಅಲಿ₂) + ಪೆದೆ₂]

**ಅಳಿವೆಸರ್** (ನಾ). ಕೆಟ್ಟ ಹೆಸರು; ಅಪಕೀರ್ತಿ: ಆ ಅರಸುಮಕ್ಕಳೆಲ್ಲರುಮಳಿದರಳಿಸಾವನ್ ಅಳಿವೆಸರನುಳಿಸಿ (ಪಾರಸಿ. ೧೭-೧೩). [ಅಳಿ₂ (< ಅಟಿ₂) + ಪೆಸರ್]

**ಅಳಿಸಾವಿರ** (ನಾ). ಅಳಿಯ ಸಂತಾನದ ಸಾವಿರ ಜನ, —ಮಂದಿ (?): ಶ್ರೀಮತು ಪುತ್ತಿಗೆಯಲು ಬಾಳುವ ತುಳುವರಸರಾದ ಚೌಟರು ಅಳಿಸಾವಿರ ಬಳಿಸಾವಿರದವರು (ಸೌಇಎ. ೧೯೩೧, ಮಂಗಳೂ. ೩೩೬-೪; 1450). [< ಅಳಿಯ ? + ಸಾವಿರ]

**ಅಳಿಸು₁** 'ಅಟೀಸು' ನೋ.

**ಅಳಿಸು₂** 'ಅಟೀಯಿಸು' ನೋ.

**ಅಳಿಸುವಿಕೆ** (ನಾ). ನಾಶಮಾಡುವುದು ; ಒರಸುವುದು : ನಿರ್ವಾಣ ವೆಂಧರೆ ಕೇವಲ ಅಳಿಯುವಿಕೆಯಲ್ಲ ; ಅಳಿಸುವಿಕೆಯುಲ್ಲ (ಪರಪ. ೧೭).
[ಅಳಿಸು$_1$ (< ಅೞಿಸು$_1$) + -ಇಕೆ]

**ಅಳಿಹು$_1$** 'ಅೞಿವು$_1$' ನೋ.

**ಅಳಿಹು$_2$** 'ಅಳಿವು$_1$' ನೋ.

**ಅಳಿಹು$_3$** 'ಅಳಿವು$_3$' ನೋ.

**ಅಳಿಱ್**, ಅರಲು$_3$, ಅಲರ್ು, ಅಱಲು, ಅಱಿಲ್ (ನಾ). ಕೆಸರು ; ಬದಿ : ತೆಗೆ ವಾರುವಮಂ ಹಾರುವ ಬಗೆಯಂ ತನಗಿರುಳ ಬವರಮೆನುತ ಸವಂಗಂಬುಗುವ ಕಟಕಿಗರನಳಿಱಂ ಪುಗಿಸಿದುದು ಭುಜಾಸಿ ಗಂಗ ದಂಡಾಧಿಪನ (ಎಕ. II, ೭೩–೨೩.; 1118) ; ಸಂದುಗ್ರಾಹಿತ ರಕ್ತದಿಂ ದವಳಿಱಾದತ್ತೀ ಮಹೀಚಕ್ರಂ (ಎಕ. XI, ದಾವಣ. ೨೫–೨೯ ; 1224) ; ಪ್ರಕೃತಿರೂಪಂಗಳ್ ಱಾಂತಂಗಳಾಗಿರ್ಪುವು : ಅಳಿಱ್, ಕೆಸಱ್, ಬಸಿಱ್, ಪೆಸಱ್, ಹಗಱ್ (ಶಮುದ. ೪೩ ಅಡಿಟ) ; ದ್ರೋಹನ್, ದುರ್ದೈವನ್, ಪೞಿಯುಳಿಱೊಳೞ್ದಿನ್ (ಅಶ್ವತ್ಥಾ. ೨೪–೬). **ಅರಲು$_3$** : ಅರಲು ತುಳಿಯುತ ಮಿದ್ದಿ ಹದಗೊಳಿಪ ಕುಂಬಾರ (ಭಾವಜೀ. ೭) ; ಹೆಜ್ಜೆಗಳನ್ನು ಅರಲಿನಲ್ಲಿ ಮೂಡಿಸಿ, ಅವುಗಳ ಅಳತೆಗಳಿಗೂ ಆ ಅರಣ್ಯದಲ್ಲಿ ಮೂಡಿದ್ದ ಪಾದಗಳ ಅಳತೆಗಳಿಗೂ ಹೊಂದಿಸಿ ತೋರಿಸಿದನು (ಅಂಬಿಕೆ. ೪೬). **ಅಲರ್ು** : ಕುಂಬಾರರು ಕೊಪ್ಪದ ಕೆರೆಯಿಂದಲೂ ಅತ್ತಿಕೊಳ್ಳದಿಂದಲೂ ಅಲರ್ು ತಂದು ಯೆರಡೂ ಕೂಡಿಸಿ ಹದಮಾಡಿ ಗಡಗಿ . . . ಮಾಡುತ್ತಾರೆ (ಕಭಾಗ. ೪೫೩) ; ಮೂರ್ತಿ ಮಾಡಬೇಕಾದರೆ ಉಸುಕಿನಿಂದಲ್ಲ ; ಅದಕ್ಕೆ ಅಲರ್ುಬೇಕು. ಸುಜ್ಞನ ಮನಸ್ಸು ಅರ್ಲನಂತೆ ಇರುವುದು (ಉದವೈ. ೫೫) ; ಒಂದು ದಿನ ನಸುಕಿನಲ್ಲಿಯೇ ಆಳುಮಕ್ಕಳು ಬಂದು ಅಲರ್ುಕಲಸಲು ಪ್ರಾರಂಭಿಸಿದರು (ಸಮುಜೀ. ೪೮೨). **ಅಱಲು** : ಬಿಸಿಲಲಿರ್ದಱಲು ಹತ್ತಿದ ಲಿಂಗಕೆ ಬಿಸುಸುಯ್ದು ಮುಕ್ಕುಳಿಸಿ (ಸಾನಂಚ. ೩–೬೯). **ಅಱಿಲ್** : "ಅಱಿಲೆಂದು ಪಂಕಂ" (ಕಶಸಾ. ೮–೧೬೩) ; "ಅಱಿಲೆಂದೆನೆ ಪಂಕಮಕ್ಕು" (ಕವಿಕಂ. ೯೨) ; ತಾಱುವ ತಾಳ್ಗಳು ಮಗುರ್ವಿಸಲ್ ಕಾಡಕೋಣನೆಯ್ದಿದುದಱಿಲಂ (ಜಗವಿ. ೧೭–೬೮) ; ರುಧಿರದ ಬಿಱುವೊನಲ ಬಲುಗೆಸಱ ನೆಣವಸೆಯಱಿಲ ನೆಲದಲಿ ಧೂಳಿಯೆದ್ದುದು ದಳದ ಪದಹತಿಗೆ (ಕುವ್ಯಾಕ. ೧೨–೬) ; ಎಡೆತೊಱೆಗಳ ಮುಂದೆ ನಡೆವವರ್ ಕುಡಿದರು ನಡುವೆ ಪೋಪರಿಗಱಿಲಾಯ್ತು [ಪಾಠಾಂ. ಅರಿದಾಯ್ತು] (ಭರಚ. ೨೩–೫೬).

ಅಲರ್ುಗಷ್ಟ = ಮಣ್ಣುಗೆಲಸ ; ಕೆಸರಿನಲ್ಲಿ ಮಾಡುವ ಕೆಲಸ : ಅಲರ್ುಗಷ್ಟ ಮುಂತಾದ ಮೇಲ್ಗೆಲಸವನ್ನು ಕೂಲಿಕಾರರು ಮಾಡುತ್ತಾರೆ (ಮುಂಬಯಿ. ೪–೧೧೮). [**ದೇ.** ‖ **ತಮಿ.** ಅಳಱು = ಕೆಸರು, ಬದಿ]

**ಅಳೀಕ** 'ಅಲೀಕ' ನೋ.

**ಅಳೀಕಭಕ್ತ** (ನಾ). ಕಪಟಭಕ್ತಿಯುಳ್ಳವನು : ಪರಿಭಾವಿಸದೊಳ್ಪನೞ್ಕಱಂ ಮನದೊಳಗಣಂ ವಿಚಾರಿಸವೆ ನಿಸ್ಪೃಹತಾತ್ಮಕನೆಂಬಳೀಕಭಕ್ತನುಮುಪಚಾರಶೀಲನುಮೆನಿಪ್ಪನೆಗಂ ನುಡಿವೊಂದು ಮಾಟವೊಂದೆನಿಸಿದ ಮಾನವಂಗೆನಗೆ (ಕಾದಂಉ. ೨೬೧).
[ಅಳೀಕ (= ಅಲೀಕ) + ಭಕ್ತ]

**ಅಳೀಕಭ್ರುಕುಟಿ** (ನಾ). ಹುಸಿಹುಬ್ಬುಗಂಟು; ತೋರಿಕೆಯ ಹುಬ್ಬುಗಂಟು : ಉದಾರ ವೀರಚರಿತನಿರತ[illegible]ಕದನಕರ್ಕಶ ಕ್ಷತ್ರಿಯಂಗೆ ವಿಪಕ್ಷಕ್ಷತ್ರಿಯಪರಾಕ್ರಮಾಕರ್ಣನೋದಿ[illegible]ರ್ಣಕ್ರೋಧದೊಳಳೀಕಭ್ರುಕುಟಿಯುಮನರ್ಥಕಲಲಾಟತ್ರಿಪತಾಕೆ[illegible]ಯುಂ ಅಪಾರ್ಥವಿಲೋಹಿತವಿಲೋಚನರುಚಿಯುಂ . . . ತಕ್ಕುದಲ್ಲ[illegible] (ಆದಿಪು. ೧೪–೮೧ ವ).
[ಅಳೀಕ (= ಅಲೀಕ) [illegible]ಭ್ರುಕುಟಿ]

**ಅಳೀಕಮಿತ್ರ** (ನಾ). ಕಪಟ ಸ್ನೇಹಿತ; ತೋರಿಕೆಯ ಸ್ನೇಹಿತ : ಜನಿಯಿಸಿದಂದುತೊಟ್ಟಗಲದಾತನನಿಂತಿರಗಲ್ದ ಪಾಪಕರ್ಮನನವಿವೇಕಿಯಂ ಗುಣವಿಹೀನನನೆನ್ನನಳೀಕಮಿತ್ರನಂ ನೆನೆಯದೆ ನಿಂದೊಡಂ (ಕಾದಂಉ. ೪೫೨). [ಅಳೀಕ (= ಅಲೀಕ) + ಮಿತ್ರ]

**ಅಳೀಕಸೊಬಗು** (ನಾ). ಹುಸಿ ಸೊಗಸು ; ಮಿಥ್ಯಾಸೌಂದರ್ಯ : ಬೆಸನಕ್ಕಾಗರಮಾದಳೀಕ ಸೊಬಗಿಂ ಕೂರ್ತಂದದಿಂ ಮತ್ತೆ ಪತ್ತಿಸಲೆಂ ದಾಟಿಸಿ ಬಂದಪಂ (ಕಾದಂಉ. ೬೨). [ಅಳೀಕ (= ಅಲೀಕ) + ಸೊಬಗು]

**ಅಳು$_1$** 'ಅೞ್$_1$' ನೋ.

**ಅಳು$_2$** 'ಅೞ್$_2$' ನೋ.

**ಅಳು$_3$** (ನಾ). ಒಂದು ಬಗೆಯ ತೆರಿಗೆ : ಪೂರ್ವಾಯ ಅಪೂರ್ವಾಯ ಅಳುಯನ್ಯಾಯ ಯೇನೂ ಇಲ್ಲೆಂದು ಧಾರಾಪೂರ್ವಕ ಮಾಡಿದ ಧರ್ಮ (ಎಕ. VII, ಶಿವಮೊ. ೬೮–೩ ; 1313) ; ಆ ಮನೆಗೆ ಸೇಸೆ ಸಿದ್ಧಾಯ ಅಳು ಅಂನ್ಯಾಯ ಏನು ಬಂದಡೆಯು ಆ ಊರ ಸಮಸ್ತ ಪ್ರಜೆಗೌಡುಗಳು ತೆಱುವರು (ಮೈಆರಿ. ೧೯೪೩ ; ೧೪–೧೫ ; 1318). 'ಅಳಿವು$_4$' ಪರಾ.
[< ಅಳಿವು$_4$]

**-ಅಳು$_4$** '-ಅಳ್$_5$' ನೋ.

**ಅಳುಂಕು**, ಅಳಂಕು$_2$ (ಕ್ರಿ). ಅಲುಗಾಡು ; ಚಂಚಲವಾಗು : ನಿಮಿರ್ದುವು ಪೊಳೆದುವಳುಂಕಿದುವಮರ್ದುವು ಚುಂಬಿಸಿದುವಪ್ಪಿದುವು ಸಂಭ್ರಮದಿಂ ಸಮುದ್ದೃಷ್ಟಿಯಾಗಿ ಸಿಲ್ಕಿದುವೆಮೆಯಿಕ್ಕಲ್ಮಱೆದುವವಳ ಧವಳ ಕಟಾಕ್ಷಂ (ಶಮುದ. ೨೨೫ ಪ್ರಯೋ). **ಅಳಂಕು$_2$** : ಕೊಡದಲ್ಲಿ ತುಂಬಾ ನೀರಿದ್ದರೆ ನೀರು ಅಳಂಕಿ ಚೆಲ್ಲಿಹೋಗುತ್ತದೆ (ರೂಢಿ). 'ಅಲುಂಗು' ಪರಾ. [**ದೇ.** ‖ **ತುಳು.** ಅಳಂಕು]

**ಅಳುಂದಾರೆ** (ನಾ). ಕಣ್ಣೀರಿನ ಧಾರೆ; ಅಶ್ರುಪ್ರವಾಹ : ಅಳುವು ಬಂದು ಅಳುಂದಾರೆಯು ಹರಿಯಿತು (ದೇವೀಚೌ. ೧೪೮).
[ಅಳು$_2$ (< ಅೞ್$_2$) + ದಾರೆ$_2$]

**ಅಳುಂಬ**, ಅಳುಂಬು (ನಾ). ೧. ವೆಗ್ಗಳ ; ಅತಿಶಯ ; ಆಧಿಕ್ಯ ; ಅಸಾಧ್ಯ ; ಅಶಕ್ಯ : "ಯಥೇಷ್ಟಮಳುಂಬಂ" (ಕರ್ಣಾನಿ. ೩೫) ; "ಅಗುಂದಲೆಯಣಿಯರಮಳುಂಬವೆಂಬಿವುಗಳಕ್ಕಧಿಕ ಭಾವದೊಳಗೆ" (ಕಶರ. ೬) ; ಪೊಗೞಲ್ಕಳುಂಬಮಪ್ಪೊಳ್ಪುಗಳನೆ ತನಗವನೆ ಸಾ(ಶಾ)ಶ್ವತಂ ಮಾಡಿ (ಇಆ. XX, ೬೯–೭ ; ಸು. 900) ; ಪೊಗರ್ತೆಗಳುಂಬಂ (ಎಇ. XII, ೩೩೧–೩೧ ; 929) ; ಅಳತೆಗೆ ತೂಕಕ್ಕೆಣಿಕೆಗೆಯೊಳಗಾದುವು ಸಕಳವಸ್ತುಗಳ್ ಭುವನಜನಕ್ಕಳೆಯಲ್ ತೂಗಲ್ಕೆಣಿಸಲ್ಕಳುಂಬಮೆನಿಸಿದುವು ನಿನ್ನ ಗುಣಗಣಮರ್ಹಾ (ಆದಿಪು. ೧೦–೫೩) ; ಪಗೆಯೊಡ್ಡು ಗೆಲಲ್ಕಳುಂಬವೆಂಬಿನಿತುವರಂ ಮನಕ್ಕೆ ನಿಮಗತ್ತಳಗಂ ಬರೆ ಮತ್ತೆ ಮಾಣ್ಬನೇ (ಪಂಪಭಾ. ೧೧–೮೮) ; ಅಳುಂಬಮಾಗಿರ್ದ ಮೂತ್ರಕೃಚ್ಛ್ರಂ ಕಿಡುಗುಂ (ಲೋಕೋಪ. ೯–೧೩೪) ; ಒಪ್ಪುವೊಳ್ಪಿಡಿಯೆ ತೀವಿ ಪೊಗೞ್ತೆಗಾದಮಳುಂಬಮಾಗಿಯುಂ (ಕಾವ್ಯಾವ. ೬೦) ; ಮುನೀಶ್ವರನ ಮಹತ್ವಮಂ ಗಣಿಯಿಸಲ್ ಫಣಿಪಂಗಳುಂಬಮಲ್ಲವೇ (ಕುಸುಮಾ. ೧–೧೩೫) ; ಪಾಟಳಿಗಳೆಸಕದಿಂ ನಿಂಬೆಗಳಳುಂಬದಿಂ ಮಿಾಟುವಡೆದೆಸೆವ ಸುರಹೊನ್ನೆಯ ಕದಂಬದಿಂ (ಉದ್ಭಟ. ೩–೯೩) ; ಆಕೆಯ ಮೆಯ್ಬಿಸುಪೇನಳುಂಬವೋ (ಕಬ್ಬಿಕಾ. ೩೧೩); ಇಂತು ನೆಗೞ್ತೆಗಂ ಪೊಗೞ್ತೆಗಮುಳುಂಬಮಪ್ಪ ಧರ್ಮತತ್ಪರತೆಯಿಂ (ಪುಷ್ಪಪು. ೩–೧೧೪ ವ) ; ಥೀಬ್ಬಿನರಸು ಅರಿಯೊಮರ್ದ್ದ ಚೌಗುಗಳೆಡೆಪಡಗು ಪಳಕೆಯಾಳ ನೆರವಿ ಎಣಿಕೆಗಳುಂಬ (ಪಾರಸಿ. ೩–೭೦). ೨. ಮನೋಹರವಾದುದು : "ಪೆಂಪೆಯ್ದೆ ನಾಡೆ ಕೆನ್ನಂಸೊಂಪಂದಮಳುಂಬ ಪೆರ್ಚುಗೆ" (ಕವಿಕಂ. ೧೧೯) ; ಚಿತ್ರಪತ್ರಂಗಳಳುಂಬಮಾದ ಪೊಂಬಾೞಿಯ ಕಂಬಂಗಳ್ (ಚಂದ್ರಪು. ೭–೯೫ ವ).

೩. ಆಶ್ರಯ; ಆಸ್ಪದ: ಮಹಿಮೆಗಳುಂಬನಾದ ಒಂದು ಮಾಮರನ ನೆಬಿಲಂ ಕೊಂಡಾಡಿ (ದಶಕು. ೬–೨೬ ವ). (ಗು). ೪. ಅತಿಶಯವಾದ; ಹೆಚ್ಚಿನದಾದ: ನೆರೆದ ಕನ್ಯಾಕದಂಬದೊಳಳುಂಬವಿಭವದಿಂ ನಿಜತನೂಜಂಗತಿ ಮುದದಿಂ ಪರಿಣಯನಂ ಮಾಳ್ಪುದುಂ (ನೇಮಿಪು. ೨–೯೨ ವ); ಇತ್ತಲಳುಂಬ ಭಟಕೋಳಾಹಳದಿ ಮರಳಿದರು ಪುರಿಗೆ (ಸಾಳ್ವಭಾ. ೧೩–೨೪). **ಅಳುಂಬು :** ೧. ಸೊಗಯಿಪುದು ಪರಿಸ್ಫುರಿತ ವರಭರ್ಮಹರ್ಮ್ಯೋತ್ಕರದಿಂ ಭೋಗಪುರಮೆಂಬುದಿಂಬಿನಳುಂಬಿಂ (ನೇಮಿಪು. ೨–೮೧).

ಅಳುಂಬಮುಮಂ ತುಂಬಮುಮಾಗು = ಅಧಿಕವೂ ಪೂರ್ಣವೂ ಆಗು: ಬಿಳಿಯ ಕಂಜದ ಬಣ್ಣಮುಮೊಂದಳುಂಬಮುಮಂ ತುಂಬಮುಮಾಗೆ ತಿಂಬಿದುದು ಕಟ್ಟಲೆಗಂ ಶಶಿಕಾಂತಿಗಳ್ (ಲೀಲಾವ. ೫–೬೨); ಪೊಗೆಟ್ಟಿಗಳುಂಬಮುಮಂ ತುಂಬಮುಮಾದ ಮಜ್ಜನಮಂಡಪದ ತೋರಣದ್ವಾರೋಪಕಂಠದೊಳ್ (ಅನಂಪು. ೫–೫೩ ವ).

[ದೇ ॥ ತಮಿ. ಅಱುವಂ = ಆಧಿಕ್ಯ, ವಿಸ್ತಾರ]

**ಅಳುಂಬಂ** (ಅ). ಅತಿಶಯವಾಗಿ; ಹೆಚ್ಚಾಗಿ: ಅದುದಳುಂಬಂ ಮನದೊಸಗೆ ಕೊಂತಿಗಂ ತತ್ಪತಿಗಂ (ಪಂಪಭಾ. ೨–೨); ಇನಬಿಂಬಂ ಕಣ್ಗಳುಂಬಂ ತೊಳಗಿ ಬೆಳಗೆ (ಕಾದಂಪೂ. ೩೫೪); ಉರಿಯುಂ ಪೊಗೆಯುಂ ನೆಗೆಯುತ್ತಿರೆ ಸುಯ್ಯೊಳಿ ಕೂಡೆ ಭೀಕರೋರಗಚಯಮಂಬರದೊಳಳುಂಬಂ ಪರ್ವುತ್ತಿರೆ ಬರೆ ದರ್ವೀಕರೋಗ್ರಬಾಣಂ ನಭಮಂ (ನೇಮಿಪು. ೧೨–೨೪೫); ತುಂಬಿ ತಾವರೆಗೆಱಗುವಂತಿರಳುಂಬವೆಱಗಿ ಬಳಿಕ್ಕೆ ಮುನಿಪಾದಾಂಬುಜದ ಕೆಲದಲ್ಲಿ ಮೈಯಿಕ್ಕಿದನು (ಸಾಳ್ವಭಾ. ೫–೪೧); ಕುಸುಮವಿಸರದಿಂದೆ ದಂಡೆಗಳನಳುಂಬಮಲಂಕರಿಸಿ ಪೂಜಿಸಿ (ವೃಷವಿ. ೨೯–೭೧ ವ).

[< ಅಳುಂಬ]

**ಅಳುಂಬಿಸು** (ಕ್ರಿ). ಅತಿಶಯವಾಗು; ವಿಸ್ತಾರವಾಗು: ಕೆಳರ್ದೊಡೆ ಸಿಂಗದಬ್ಬರಮರಲ್ದೊಡೆ ಮಾರಿಯ ಮೂರಿ ಕೋಪದಿಂದಳುರ್ದೊಡೆ ಕಾಡಗಿಚ್ಚಿನ ಮೊಗಂ ಬಱಸಂದೊಡೆ ಕಾಲಮೃತ್ಯು ವೆಗ್ಗಳಿಸಿ ಬಗುಳ್ದೊಡರ್ಣವನಿನಾದಮುಳುಂಬಿಸಿ ನೀಳ್ದು ಗಂಟಲಿಂದೊಳರ್ದೊಡೆ ರಾಹುವಿಂದೊಗರನೆಕ್ಕಲವಂದಿಗೆ ತಕ್ಕುದುರ್ವಿಪಾ (ಸೂಕ್ತಿಸು. ೩–೯೯).

[ಅಳುಂಬ + –ಇಸು$_3$]

**ಅಳುಂಬು** 'ಅಳುಂಬ' ನೋ.

**ಅಳುಕಿಸು** 'ಅಳ್ಕಿಸು' ನೋ.

**ಅಳುಕು$_1$** 'ಅಳ್ಕು$_1$' ನೋ.

**ಅಳುಕು$_2$** (ಕ್ರಿ). ಮುಳ್ಳು ಚುಚ್ಚಿ ಮಿಡಿ, —ದುಡಿ, —ನೋಯು: ಕಾಲಲ್ಲಿ ಮುಳ್ಳು ನಟ್ಟು ಅಳುಕುತ್ತಿದೆ (ರೂಢಿ). [?]

**ಅಳುಕು$_3$** (ಕ್ರಿ). (ಉಕ). ಅಳಿಸು; ಒರೆಸು: ನೀರು ಬಿದ್ದು ಅಕ್ಷರಗಳೆಲ್ಲ ಅಳುಕಿಹೋಗಿವೆ (ರೂಢಿ). [?. / **ತೆಲು.** ಅಲುಕು = ಸಾರಿಸು]

**ಅಳುಕು$_4$** 'ಅಳ್ಕು$_2$' ನೋ.

**ಅಳುಕು$_5$** (ನಾ). ಚುಚ್ಚಿದ ಮುಳ್ಳಿನಿಂದ ಉಂಟಾಗುವ ಮಿಡಿತ, —ನೋವು (ಕ). [< ಅಳುಕು$_2$]

**ಅಳುಕು$_6$** (ನಾ). ಮೋಸ; ವಂಚನೆ (?): ಕಳವಳದ ನೆಲೆ ಭಯದ ಜನ್ಮಸ್ಥಳ ವಿಷಾದದ ಪೇಟೆ ಖಾತಿಯ ನಿಳಯ ಖೋಡಿಯ ಕಟಕ ಭಂಗದ ಸಂಭವಸ್ಥಾನ ಅಳುಕಿನಂಗಡಿ ಹಳುವಿನಾಡುಂಬೊಲ ನಿರೋಧದ ಶಾಲೆ ದುಗುಡದ ಕಳನೆನಿಸಿತೀ ನಗರಿ ಈಗಲು ಪಾರ್ಥ ಕೇಳೆಂದ (ಕುವ್ಯಾಅ. ೧೨–೫); ವಿನತಾದೇವಿಯರ ತಾನಳುಕಿನಲಿ ಸೋಲಿಸಿಯೆ ಸವತಿಯ ನೊಲಿದು ತೊತ್ತಾಗಿರಿಸಿಕೊಂಡಳು ತನ್ನ ಮಂದಿರಕೆ (ಸಂಭಪ. ೫–೫೧).

[< **ಸಂ.** ಅಲೀಕ]

**ಅಳುಗಜಗುಳು** (ನಾ). ಅಸ್ತವ್ಯಸ್ತ (?); "ವ್ಯರ್ಥವಾದ ಹರಟೆ" (ಸಮ್ಯಕೌ. ಕೋಶ); ಬಳಿಕ ಬಲ್ಲಾಳಿಟ್ಟಗೊಂಡಂತೆ ಯಮದಂಡನಃಳಿವು ತನಗಿನ್ನಿಲ್ಲ ಕಟ್ಟೊಡೆಯನೇ ಪಿರಿದು ಮುಳಿದೆನೆನುತಿರಲು ಮಱುದಿನದೊಳವನಂ ಕರಸಿ ಕಳ್ಳರಂ ತರ್ಪುದರ್ಕೆ ಅಳುಗಜಗುಳಂ [ಪಾಠಾಂ. ಅಳುಗು ಜಳುಗಂ]ಮಾಡಿಕೊಂಡೆಯಲ್ಲಾ ಎನಲ್ (ಸಮ್ಯಕೌ. ೨–೪೯).

[ಅಳುಗ$_0$ + ಜಗುಳು]

**ಅಳುಗು** (ಕ್ರಿ). ಮಿನುಗು; ತೊಳಗು (?): ಘನಮಾಯದಿಂ ನಿಶಿಯು ಅವನಿಯನು ಮುಸುಕಿ ತಾರೆಗಳುಯಳುಗಿದವು ವಾರೆಯಾದವು ಪಕ್ಷಿ ಜಾರ ಚೋರರುಯಲ್ಲಿ ಮೀರಿ ತಾ ನಡಿಯೆ (ಯನಳ. ೭೧). [?]

**ಅಳುಗುನ್ನಿ** (ನಾ).=ಅಳುಗೂಸು$_1$: ಈ ಅಳುಗುನ್ನಿಯನ್ನು ಕಟ್ಟಿಕೊಂಡು ಎಲ್ಲಿಗೂ ಹೋಗುವಂತಿಲ್ಲ (ರೂಢಿ). [ಅಳ್ಳು$_2$ (< ಅೞ್$_2$) + ಕುನ್ನಿ]

**ಅಳುಗುಳಿ** (ನಾ). ಅಳುವುದೇ ಸ್ವಭಾವವಾಗುಳ್ಳ ವ್ಯಕ್ತಿ: ಅವನು ಹಿಂದಿರುಗುವಾಗ ಶೋಕವಸ್ತ್ರ ಧರಿಸಿದ ಅಳುಗುಳಿ ಹೆಂಗಸೊಬ್ಬಳನ್ನು ಕರೆತಂದನು (ಪುನರು. ೩೪೫). [ಅಳ್ಳು$_2$ (< ಅೞ್$_2$) + –ಕುಳ್ಳಿ$_2$]

**ಅಳುಗೂಸು$_1$** (ನಾ). ಅಳುವುದೇ ಸ್ವಭಾವವಾಗಿರುವ ಕೂಸು; ಅಳುವ ಮಗು: ಅಯೆಂದು ಅಳುಗೂಸು ಜೋಯೆಂದು ತೂಗಿದರೆ ತಾಯ ಹಂಬಲವ ಮಱೆಸುವುದು ಶಿಶು ಗಾನದಾಯತವ ನೋಡ (ಸರ್ವಜ್ಞ. ೧೩೩೩). [ಅಳ್ಳು$_2$ (< ಅೞ್$_2$) + ಕೂಸು]

**ಅಳುಗೂಸು$_2$** 'ಅಳಿಕೂಸು' ನೋ.

**ಅಳುತ್ತ** (ನಾ). ಹರಹು; ವಿಸ್ತಾರ (?): ಮುಡಲು ಅ[ಜೆ]ಯ ಗದ್ದೆ ತೆಂಕಲು ದಾಷವ ಶ[ಟ]ಯ ಅಳುತ್ತ ಹಿತ್ತಿಲುಗಡಿ ಪಡುವಲು ಬೇಲಿ ಬಡಗಲು ಅಗ್ರದ ಹಿತ್ತಿಲು ಇಂತೀ ನಾಲುಕು ಗಡಿಯಿಂದ ಒಳಗುಳ ಮನೆ (ಕಇ. I, ೫೫–೧೪; 1433).

[?. / **ತಮಿ.** ಅಱುವಂ = ಹರಹು, ವಿಸ್ತಾರ]

**ಅಳುದನಿ** (ನಾ). ಅಳುವ ಧ್ವನಿ; ನೋವಿನ ಧ್ವನಿ: ನನ್ನಿಂದಾಗದು ನನ್ನಿಂದಾಗದು (ಅಳುದನಿಯಿಂದ) ಹಾಳು ಮಂತ್ರಿಯ ಸೇವೆ ಸಾಕೆಂದಿಗೆ (ಚಂದ್ರಸ. ೨೫). [ಅಳ್ಳು$_2$ (< ಅೞ್$_2$) + ದನಿ]

**ಅಳುಪ** 'ಅಳಿಪ' ನೋ.

**ಅಳುಪು$_1$** 'ಅಱಪು$_1$' ನೋ.

**ಅಳುಪು$_2$** 'ಅಳಿಪು$_2$' ನೋ.

**ಅಳುಪು$_3$** 'ಅಳಿಪು$_3$' ನೋ.

**ಅಳುಬುರಕ** 'ಅಳುಬುರುಕ' ನೋ.

**ಅಳುಬುರುಕ,** ಅಳುಬುರಕ (ನಾ). ಯಾವಾಗಲೂ ಅಳುವುದೇ ಸ್ವಭಾವವಾದ ವ್ಯಕ್ತಿ; ಗೋಳುಕರೆಯುವ ವ್ಯಕ್ತಿ: ಅಳುಬುರುಕ ಮಡಿವಂತರ ಗೊಡವೆ ತಿಂಮನಿಗಿಲ್ಲ (ತಿಂಮುತ. ೮); ಬೆದರಿಕೆಯು ಅವರನ್ನು ಅಳುಬುರುಕರನ್ನಾಗಿ ಮಾಡಿತು (ಮಣಿಸ. ೫೩); ಇದೆಲ್ಲಿಯ ಅಳುಬುರುಕ ವೇದಾಂತ ಕಲಿತಿರಿ (ಕೃತಕೃ. ೧೫೧). **ಅಳುಬುರಕ :** ಅಳುವವರನ್ನೂ ಅಳುಬುರಕರನ್ನೂ ಕಂಡರೂ ನನಗೆ ಬಹಳ ಸಿಟ್ಟು (ಮೋದಿಮು. ೩). [ಅಳ್ಳು$_2$ (< ಅೞ್$_2$) + –ಪುರುಕ]

**ಅಳುಬೇನೆ** (ನಾ). (ಉಕ) ೧. ಹೆರಿಗೆ ಸಮಯದಲ್ಲಿ ಬರುವ ನೋವು. ೨. ಗೋಳಾಟ; ದುಃಖ. [ಅಳ್ಳು$_2$ (< ಅೞ್$_2$) + ಬೇನೆ]

**ಅಳುಮುಖ** (ನಾ). ಅಳುವಿನಿಂದ ಕೂಡಿದ ಮುಖ: ಮನೆಯಲ್ಲಿ ನನ್ನ ಅಳುಮುಖ ನೋಡಲಾರದೆ ಅವರು ಹೆಚ್ಚಾಗಿ ಸ್ನೇಹಿತರ ಜೊತೆಗೆ ತಿರುಗಾಡ ಹತ್ತಿದರು (ಕುಂಕುಮ. ೮೪); "ಹ್ಞೂ ಏನಿಲ್ಲ ಸುಳ್ಳೇ ಸುಳ್ಳು" ಎಂದು ಅಳುಮುಖ ಮಾಡಿಕೊಂಡ (ಹೊಸಕ್ಷಿ. ೧೧೭).

[ಅಳ್ಳು$_2$ (< ಅೞ್$_2$) + ಮುಖ]

**ಅಳುವೊಗ** (ನಾ). = ಅಳುಮುಖ : ಎಣ್ಣೆ ಕಾಣದ ಕೂದಲು, ಅಳುವೊಗ, ವೇದನಾಯುಕ್ತ ಹೃದಯ—ಎಲ್ಲಕ್ಕೂ ಮಿಗಿಲಾಗಿ ಹಸಿದ ಹೊಟ್ಟೆ! (ಮುಂಗಾಮು. ೩೧). [ಅಳು$_2$ (< ಅೞ್$_2$) + ಮೊಗ]

**ಅಳುಮೋರೆ** (ನಾ). = ಅಳುಮುಖ : ಪ್ರಸನ್ನವಾದ ಮುಖಮುದ್ರೆಯು ನಷ್ಟವಾಗಿ, ಅದು ಸೌಂದರ್ಯಹೀನವಾಗಿಯೂ ದುಃಖಿಯಾಗಿಯೂ ಮತ್ತು ಅಳುಮೋರೆಯಾಗಿಯೂ ತೋರಹತ್ತುವುದು (ಬ್ರಹ್ಮಜೀ. ೧೮); ಪ್ರಕೃತಿಯೇ ಅಳುಮೋರೆಯನ್ನು ತಾಳುತ್ತದೆ (ಜ್ಯೋತಿರ್ವಿ. ೭೧); ಅವಳ ಹಿಂದುಗಡೆ . . . ಅಳುಮೋರೆಯ ಸಣಕಲು ಮೈಯ್ಯ ಬಸರಿಯೊಬ್ಬಳು ನಿಂತಿದ್ದಳು (ಪುನರು. ೧೪೨).
[ಅಳು$_2$ (< ಅೞ್$_2$) + ಮೋರೆ (< ಮೋಱೆ)]

**ಅಳುರ್**$_1$, ಅಳುರು (ಕ್ರಿ). ೧. ಆವರಿಸು; ವ್ಯಾಪಿಸು; ಹರಡು : "ಅಳುರ್ – ಆವರಣೇ (ಮುತ್ತಿಕೊಳ್ಳು)" (ಶಮುಧಾ); ಬಳೆದ ತಮಮೆಂಬ ಕರಡಮನಳವಲ್ಲದೆ ಸುಟ್ಟು ಕಿಡಿಸಲೆಂದಜನುದಯಾಚಲದೊಳ್ ತಗುಳ್ಚಿ ತಳ್ತೊಡನಳುರ್ವ ದವಾಗ್ನಿಯವೊಲರ್ಕನುದಯಂಗೆಯ್ದಂ (ಕಾವ್ಯಸಾ. ೮೭೧ ಶೂದ್ರಕ); ಒಡನಳುರ್ವ ಕೋಪದಿಂ ಕಣ್ ಕಿಡಿಯಂ ಕೆಂಡಮುಮನುಗುೞೆ ಮುಳಿದಂ ಭರತಂ (ಆದಿಪು. ೧೨-೮೭); ಮುನಿನಿವಹಮಾಱಲಿಕ್ಕಿದ ತನುತರಕಾಷಾಯವಲ್ಕವಸನಂಗಳನಂದೆನಸುಂ ತಾಳ್ದಿದುವೆನೆ ಬೈಗಿನ ಕೆಂಬಿಸಿಲಳುರಲೆಸೆದುವಾಶ್ರಮ ತರುಗಳ್ (ಕಾದಂಪೂ. ೨೭೫); ಒಡನಳುರ್ವ ಮಾಗೆಯ ಹಿಮಕ್ಕೆ (ಕುಸುಮಾ. ೭-೧೨); ದುಂದುಭಿ ಕಹಳಾಬಹುಳರವಂ ದೆಸೆಗಳನಳುರೆ (ದಮುಸ್ವ. ೪-೨); ತನುವನಳುರಲ್ಕೆ ಜುಮ್ಮನೆ ಸಾಂದ್ರಪುಳಕಾವಳಿ (ಶೀಷರಾ. ೭-೫೨). ೨. ಸುಡು; ದಹಿಸು: ಜ್ಞಾನಮಯಂ ತೇಜೋನಿಧಿ ತಾನಿರ್ದಂ ತಾಯ ಗರ್ಭದೊಳ್ ಪೀಡೆಯನಂತೇನಂ ಮಾಡಿದನಿಲ್ಲ ಕೃಶಾನುವ ನೆೞಲಳುರದಂತೆವೊಲ್ ಕನ್ನಡಿಯಂ (ಆದಿಪು. ೭-೩೨); ಅಳುರದು ಕಿಚ್ಚು ಮುಟ್ಟದು ವಿಷಾಹಿ (ಅಜಿಪು. ೧-೬೬). **ಅಳುರು** : ೩. ಚದುರಿಹೋಗು : ಅಶೇಷ ಖಚರನಿಕರಂ ನಿನ್ನಭ್ಯುದಯದಿನೞಿಗುಂ ಚಂದ್ರಮನುದಯದಿನಳುರುವವೊಲತುಳ ತಿಮಿರಪ್ರಸರಂ (ಶಾಂತಿಪು. ೨-೬೮). [**ದೇ.** ‖ **ತೆಲು.** ಅಲಮು]

**ಅಳುರ್**$_2$ (ನಾ). ವ್ಯಾಪ್ತಿ; ವಿಸ್ತಾರ : ಬೆಳತ್ತ ಬೆಳವಾರ್ಯ್ ಕರಂ ಪೊಳೆವಪಾಂಗೆ ಕಣ್ಣಿಂದಳುರ್ತಳುಂಕೆ ನಿಡುವುರ್ಗಳ್ ಪೊಡರೆ . . . ಪಿಡಿದು ಮೆಟ್ಟುವಳ್ ನೋೞ್ಪರಂ (ಪಂಪಭಾ. ೪-೮೯). [< ಅಳುರ್$_1$]

**ಅಳುರು** 'ಅಳುರ್$_1$' ನೋ.

**ಅಳುರ್ಕೆ** (ನಾ). ೧. ಆವರಿಸುವುದು; ಹರಡುವುದು; ಅತಿಶಯವಾಗುವುದು : "ಅಳುರ್ಕೆಯೆಂದುಂ ದಳ್ಳಿಸಿತೆಂದುಂ ಆವರಿಸಿದುದುಂ" (ಕಶಸಾ. ೨೩-೪೮೭); ಮಿೞ್ತುದೇವತೆಯನಟ್ಟಿಱಳುರ್ಕೆಯಿನಪ್ಪುವಂತೆವೋಲ್ (ಪಂಪಭಾ. ೨-೧೮); ಭೀಷಣಮತಿರೌದ್ರಮದ್ಭುತಮಗುರ್ವಿನ ತೇಜದಳುರ್ಕೆ ಧಲ್ಲನ (ಸೌಇಇ. XI-i, ೫೨-೧೦ ; 1007); ಈತನ ಪರಾಕ್ರಮದಳುರ್ಕೆಯಿಂ ಪೇೞ್ವೊಡೆ (ಪಂರಾಮಾ. ೧೧-೧೦೩); ಕೋಪದಳುರ್ಕೆಯೇ ತನಗೆ ಮೆಯ್ಸಿರಿ (ನಳಚಂ. ೩೭೮). ೨. ಅತಿಶಯ; ಆಧಿಕ್ಯ; ಹೆಚ್ಚಳ (?) : ಬಿಟ್ಟದಟನಳುಕ್ಕೆಯಿಂ ಮೆಱೆದು ಸಾವುದು ಬೋಯಿಗನನ್ತಿಳಾಗ್ರದೊಳ್ (ಎಕ. II, ೧೩೮-೧೪ ; 940); ಪೂವಿನ ಪಸೆಯೊಳ್ ಪೊರಳ್ಚಿದನಳುರ್ಕೆಯ ಬರ್ದೆಯರಂ ಗುಣಾರ್ಣವಂ (ಪಂಪಭಾ. ೨-೪೦); ವಿದಗ್ಧೆಯರೊಲ್ದು ಪೊನ್ನ ಚಾಮರಮನಳುರ್ಕೆಯಿಂ ಮುದದಿನಿಕ್ಕೆ (ಧರ್ಮಾಮೃ. ೧೧-೧೯೫); ವಾಗ್ವಧುಗಾಯತಿ ಲೀಲೆಗಾಸ್ಪದಮಳುರ್ಕೆಗೆ ತಾಯ್...ತಾನಾ ಕಾಮಿನಿ (ಕಾವ್ಯಾವ. ೧೭೪). ೩. ಶಕ್ತಿ; ಸಾಮರ್ಥ್ಯ: ಎಱೆಯನಳುರ್ಕೆಯಿಂ ನೆಲಸಿದಂ (ಎಇ. XIII, ೩೭೧-೩೨ ; 929); ಉಗ್ರ ದೈತ್ಯರನಳುರ್ಕೆಯಿನಿಕ್ಕಿದೆನಿಲ್ಲಿ (ಪಂಪಭಾ. ೫-೬೮); ತದೀಯಸೂನು ದೋರ್ದಂಡದಳುರ್ಕೆಯಿಂ ಸುರರನಂಡಲೆದಂ (ನೇಮಿಪು. ೭-೪೨); ಕೇಸರಿ ಹಿಮಸಂಗಮಕ್ಕಗಿದಳುರ್ಕೆಯನೊಕ್ಕು ಕರೀಂದ್ರಪಾರ್ಶ್ವಮಂ ಗಿರಿಯ ನಿತಂಬಮೆಂದು ಗಡ ಸಾರ್ದು ನಿಕುಂಚಿತಗಾತ್ರಮಿರ್ದುದು (ಕಾವ್ಯಸಾ. ೬೯೦). [ಅಳುರ್$_1$ + -ಕೆ$_2$]

**ಅಳುರ್ಕೆಗತ್ತಲೆ** (ನಾ). ಹೆಚ್ಚಾದ ಕತ್ತಲೆ; ಅತಿಶಯವಾದ ಕತ್ತಲೆ : ತುಡುಗೆಯ ಕೆಂಬರಲ ಪಸುಳೆವಿಸಿಲೊಳಂ ಕಡೆಗಣ್ಣ ಕಾಂತಿಯ ಕಡುವೆಳದಿಂಗಳೊಳಂ ಮುಡಿಯ ಕರ್ಪಿಟ್ಟಳುರ್ಕೆಗತ್ತಲೆಯೊಳಂ ಮನಸಿಜ ಮಹೇಂದ್ರಜಾಲವೆಂಬ ಲೀಲೆಗಾಲಂಬಮಾಗಿ (ಅನಂಪು. ೨-೨೦ ವ).
[ಅಳುರ್ಕೆ + ಕತ್ತಲೆ]

**ಅಳುರ್ಕೆಗಿಡಿಸು** (ಕ್ರಿ). ಶಕ್ತಿಗುಂದಿಸು; ಭವಪಾಶಮಂ ಪಱಿಪಡಿಸಿ ವಿಮೋಹಮನಳುರ್ಕೆಗಿಡಿಸಿ ನರೇಂದ್ರಂ (ಪುಷ್ಪಪು. ೧೩-೭೫).
[ಅಳುರ್ಕೆಗಿಡು + -ಇಸು$_3$]

**ಅಳುರ್ಕೆಗಿಡು** (ಕ್ರಿ). ಶಕ್ತಿಗೆಡು; ವ್ಯಾಪ್ತಿಯನ್ನು ಕಳೆದುಕೊ : ಕೆಡೆದಂ ಪದ್ಮಜನಾಸನಾಂಬುರುಹದಿಂದಾಗಳ್ ಸುರೇಂದ್ರಾಚಳಂ ನಡುಗಿತ್ತರ್ಕನಳುರ್ಕೆಗೆಟ್ಟು ನಭದಿಂ ತೂಳ್ದಂ (ಪಂಪಭಾ. ೧೦-೨೬); ಬಳಕೋಳಾಹಳದಿಂ ವಿಯಚ್ಚರಗಣಂ . . . ಅಳುರ್ಕೆಗೆಟ್ಟು ಕಿವಿ ಶಬ್ದಂಗೆಟ್ಟು ನಿಲ್ವನ್ನೆಗಂ (ಜಗವಿ. ೭-೪೧). [ಅಳುರ್ಕೆ + ಕಿಡು (< ಕೆಡು)]

**ಅಳುರ್ಕೆಗುಂದು** (ಕ್ರಿ). ಶಕ್ತಿಕುಗ್ಗು : ಕರಣಗ್ರಾಮಮಳುರ್ಕೆಗುಂದಿರೆ ಮನಂ ಭ್ರೂಮಧ್ಯದೊಳ್ ಸಯ್ತು ತಳ್ತಿರೆ . . . ಏಂ ಕರಮೊಪ್ಪಿರ್ದನೊ ಪುಷ್ಪದಂತಮುನಿಪಂ (ಪುಷ್ಪಪು. ೧೪-೩೧). [ಅಳುರ್ಕೆ + ಕುಂದು$_1$]

**ಅಳುರ್ಕೆಗೊಳ್** (ಕ್ರಿ). ಆವರಿಸು; ಹರಡು; ವ್ಯಾಪಿಸು : ಜಲಜಲನೊೞ್ಕುತಿರ್ಪ ಪರಿಕಾಲ್ ಪರಿಕಾಲೊಳಳುರ್ಕೆಗೊಂಡ ನೆಯ್ದಿಲ ಪೊಸ ಪೂ (ಪಂಪಭಾ. ೧-೫೨). [ಅಳುರ್ಕೆ + ಕೊಳ್$_1$]

**ಅಳುರ್ಕೆವೆಱು** (ಕ್ರಿ). ೧. ಅತಿಶಯವಾಗು; ಹೆಚ್ಚಾಗು : ಮುಕುಂದಂ ಸಭಾಂತರಮಂ ಪೊಕ್ಕನಳುರ್ಕೆವೆತ್ತದಟಂ (ನೇಮಿಪು. ೬-೧೧೭). ೨. ವ್ಯಾಪ್ತಿಯನ್ನು ಪಡೆ; ಅತಿಶಯತ್ವವನ್ನು ಹೊಂದು: ಅಖಂಡಳಂ ಸಹಸ್ರಮಯೂಖನ ತೇಜದಿಂ ಪ್ರಕೀರ್ಣಪಾದನ್ಯಾಸಂ ವ್ಯಾಖಂಡಿತಮೆನಿಸಿದ ವೈಶಾಖಸ್ಥಾನದೊಳಳುರ್ಕೆವೆತ್ತೆಸೆದಿರ್ದಂ (ಪುಷ್ಪಪು. ೧೨-೨೯).
[ಅಳುರ್ಕೆ + ಪೆಱು$_1$]

**ಅಳುಚ್ಚು** (ಕ್ರಿ). ವ್ಯಾಪ್ತಿಯನ್ನುಂಟುಮಾಡು; ಹರಡು : ಜಯಮಂ ಬಯಸುವಡರಿಮಾರಿಯನಾವರ್ತಿಸಿದರೆಂಬ ನಾಣ್ನುಡಿಗಮಳುಚ್ಚಿಯೆ ನಿನ್ನೊಳೆಡಱಿ ತನಗಱಿಕೆಯ ಮಿೞ್ತುವನಿಂತು ತಂದುಕೊಂಡರುಪೊಳರೇ (ಶಾಂತಿಪು. ೩-೭೨). [ಅಳುರ್$_1$ + -ಚು$_2$]

**ಅಳುವೆ**, ಅಳವೆ$_2$, ಅಳಿವೆ (ನಾ). ನದಿಗಳು ಸಮುದ್ರಕ್ಕೆ ಸೇರುವ ಪ್ರದೇಶ; ನದಿಯ ಮುಖ : ಬಸಱೂರ ಅಳುವೆಯ × × × ಹಸರಕೆ × × × ಯ ಒಳಗಿಂದ ಹೋಹಂಥಾ ಸರಕಿಗೂ ಒಬ್ಬ ತಳದ ಸೇನಬೋವನ ಮರಿಯಾದೆಯ ಸರಿತೆಯಲೂ ಯಿಾಹೊಂನನು ಯೆತ್ತಿಕೊಂಬುದು (ಸೌಇಇ. IX-ii, ೪೫೯-೨೨ ; 1465); ಜಲನಿಧಿಯ ತೀರದಳುವೆಯೊಳು ಪೊಕ್ಕು (ಗೋಮಟೇ. ೧೦-೬೧); ರಾಮಐತಾಳರ ಮನೆ ಇರುವುದು ಅಳುವೆಬಾಗಿಲಿಂದ ಬಡಗುದಿಕ್ಕಿಗೆ (ಮರಮ. ೮). **ಅಳವೆ**$_2$ : ನದೀಮುಖದಲ್ಲಿರುವ ಮುಮ್ಮೂಲೆಯ ಭೂಮಿಗಳಲ್ಲಿಯೂ ಅಳವೆಗಳಲ್ಲಿಯೂ ಮುಖ್ಯವಾಗಿ ಬೆಳೆಯುವ ಧಾನ್ಯವೆಂದರೆ ಭತ್ತ (ದಭಾಇ. ೭). **ಅಳಿವೆ** : ದಕ್ಷಿಣಕ್ಕೆ ನೀಳವಾದ ಮರಳಿನ ದಂಡೆಯಿದೆ ನದಿ ಅದನ್ನೇ ಕಡಿದು ಅಳಿವೆಯನ್ನಾಗಿ ಮಾಡಿಕೊಂಡು ಕಡಲನ್ನು ಸೇರುತ್ತದೆ (ಸ್ವಪ್ನಹೊ. ೧೦೭).
[**ದೇ.** ‖ **ತಮಿ.** ಅರುವಿ, ಅೞಿ, ಅೞಿವಾಯ್, ಅೞಿವಿ, ಅೞಿವು; **ಮಲ.** ಅೞಿ; **ತುಳು.** ಅರುವೆ, ಅಳುವೆ]

**ಅಳುಹು$_1$** 'ಅೞುಪು$_1$' ನೋ.
**ಅಳುಹು$_2$** 'ಅೞುಪು$_2$' ನೋ.
**ಅಳುಹು$_3$** 'ಅಳಿಪು$_4$' ನೋ.
**ಅಳೆ$_1$** (ಕ್ರಿ). ಅಳತೆಮಾಡು; ಪ್ರಮಾಣ ಅಥವಾ ಪರಿಮಾಣವನ್ನು ಕಂಡುಹಿಡಿ : "ಅಳೆ – ಪರಿಮಾಣೇ, ತಕ್ರೇಚ" (ಶಮುಧಾ) ; ಪೆರ್ಮನಡಿಗಳ್ ಅರಸಿಯ ಬೆಸತಿ ಪೆಮೊಗೆಯನ್ ಅಳೆದೊ ವದುವಿನ ಈೞ್ತಲೆ ಪತೊನ್ದಿವಿಟ್ಟರ್ (ಎಕ. XIV, ತಿರುನು. ೨೩೪–೬ ; ಅಸೆಯ ಶತ) ; ಗೞ್ದಿಯನಳ[ೆ]ದು ದ ಯೆ ಗೆ ಯ್ದು ಬಿ ಟ್ಟ (ಎಕ. VIII, ಸೊರಬ. ೧೦–೧೩ ; 800) ; ಆಱುವತ್ತು ಬಳ್ಳಮನಿ[ರ್ಪ್ಪ]ತ್ತು ಬಳ್ಳವೊಂದಳೆದು (ವಡ್ಡಾರಾ. ೨೦–೧೧) ; ಅಳೆಯಲ್ ತೂಗಲ್ಕೆಣಿಸಲ್ಕಳುಂಬಮೆನಿಸಿದುವು ನಿನ್ನ ಗುಣಗಣಮರ್ಹಾ (ಆದಿಪು. ೧೦–೫೫) ; ಅಂದಿಳೆಯನಳೆದಾ ತ್ರಿವಿಕ್ರಮನಂದಕಿಮ್ಮಡಿಯೆನಲು ಬೆಳೆದನು (ತೊರರಾ. ೪–೧೨–೨೬) ; ತನಯನಾಗಿ ಧರೆ ಅಳೆದನೆ (ಪುರಂದ. ೨–೫೪–೨) ; ನಾರಾಯಣನಳೆವಾಗಳ್ ಧಾ ರು ಣಿ ಯ ಂ (ಅಪ್ರತಿ. ೪೩–೧೭) ; ಆಸೆಗಳ ತೊರೆದಿಹೆನು ಮೋಸಗಳನರಿಯೆನು ದೇಶದೇಶದ ಜನರ ಸೌಖ್ಯವಳೆದಿಹೆನು (ವಿಸೀಗೀ. ೨೦–೬).

**ಅಳೆದುಸುರಿ, ಅಳೆದುಹೊಯ್** = ವಿಚಾರಿಸು : ಅತನು ಯಾವ ಕೆಲಸ ಮಾಡಬೇಕಾದರೂ ಅಳೆದೂ ಸುರಿದೂ ಮಾ ಡು ತ್ತಾ ನೆ (ರೂಢಿ) ; ಹೆಚ್ಚು ಬೆಲೇದೇನೂ ಬೇಕೂಂತಿಲ್ಲ, ಎಂದು ಅಳೆದುಹೊಯ್ದು ಕೇಳುವುದು ನೋಡಿದರೆ ಅಮ್ಮನಿಗೆ ಸಿಡಿಸಿಡಿ ಎನ್ನುತ್ತಿತ್ತಂತೆ (ಹೊಸಕ್ಷಿ. ೨೪೯).

[**ದೇ.** ‖ **ತಮಿ. ಮಲ. ಕೊಡ.** ಅಳ ; **ತುಳು.** ಅಳ = ಅಳತೆ ; **ತೆಲು.** ಆಲವಿ = ಅಳತೆ]

**ಅಳೆ$_2$** (ನಾ). ಮಜ್ಜಿಗೆ : "ಅಳೆ – ಪರಿಮಾಣೇ, ತಕ್ರೇಚ" (ಶಮುಧಾ) ; "ಅಳೆ ತಕ್ರಮಹುದು" (ಕವಿಕಂ. ೮೭) ; ತಱಿಸಂದಾ ಸಕ್ಕದಮುಮನಱಿಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್ ಕುಱಿತು ಬೆರಸಿದೊಡೆ ವಿರಸಂ ಮ ಱು ಗು ವ ಪಾಲ್ಗಳೆಯ ಪನಿಗಳಂ ಬೆರಸಿದವೊಲ್ (ಕವಿರಾ. ೧–೫೭) ; ಪಾಲ್ ನಿರ್ಗ್ರಂಥಮಾದೊಡಳೆಯ ಸವಿ (ಧರ್ಮಾಮೃ. ೯–೭೪) ; ನಿಚ್ಚವಳವೋರ್ವ್ವ ಬ್ರಾಹ್ಮಣಂಗೆ . . . ತುಪ್ಪ ಸೊಳಸಿಗೆ ೨ ಮೊಸರು ಬ[ಅಳೆ ಬ]ಅಡಿಕೆ ೨ ಎಲೆ ೪ . . . ಬಿಟ್ಟರು (ಸೌ ಇ ಇ. IX–i, ೨೪೫–೩೪ ; 1146) ; ಅಳೆಯುಂಬಕಳಕೆ ಮನವೆಳಸಿತ್ತು (ಸಿದ್ಧರಾ. ೨–೩೧) ; ಅಳೆಯ ಪಳಿದ್ಯಗಳು (ಭೀಮಸೂ. ೩೫–೨೭) ; ರನ್ನಮನಳೆಗಿತ್ತರೆಂಬ ನಾಣ್ಣಾತಿನವೋಲ್ (ದಶಕು. ೮–೧೨೫) ; ಓಗರಮುಂಟು ಅಳೆಯುಂಟು ಈಗಳೆ ಇಕ್ಕುವೆಂ (ರಾಮಾಶ್ವ. ೨೩–೨೩).

[**ದೇ.** ‖ **ತಮಿ.** ಅಳೈ ; **ತುಳು.** ಅಲೆ, ಅಳೆ ; **ತೆಲು.** ಚಲ್ಲ ; **ಕೊಲಾ.** ಸಲ್ಲ ; **ನಾಯ್ಕಿ.** ಸಳ ; **ಪರ್ಜಿ.** ಚಲ್ಲ]

**ಅಳೆಗಳೆ** (ಕ್ರಿ). ಮೀರು ; ಅತಿಶಯವಾಗು : ರತಿಯ ರೂಪಂನಳೆಗಳೆವ ನಿಜಸುತೆಯ ಬಲರಹಿತಾತ್ಮಕುಲವಂ ಪ್ರ ತಿ ದಿ ನ ದೊ ಳ್ ತಿನ್ನುತ್ತ ನೀರಿನೊಳ್ ಮುಳುಗಿ ಚರಿಸುತ್ತ ಅ ತಿ ಚ ಪ ಲ ಮತ್ಸ್ಯನಿಗೆ ಮದುವೆಯನತಿಶಯದಿ ಮಾಡಲ್ಕೆ (ಅರ್ಚಾವಿ. ೧೭–೪೮). [ಅಳೆ$_1$ + ಕಳೆ$_1$]

**ಅಳೆಗೊಳ್** (ಕ್ರಿ). ಮಜ್ಜಿಗೆಯನ್ನು ಕೊಂಡುಕೊ : ವರರತ್ನಂಗಳನಿತ್ತು ಮುತ್ತೆರದ ಪಣ್ಣಂ ಕೊ ಳ್ವ ವೋ ಲ್ ಶುದ್ಧಸಿದ್ಧರಸಂಗೊಟ್ಟಳೆಗೊಳ್ವವೋಲ್ ಸುಮತಿವೆತ್ತುಂ ಮರ್ತ್ಯರಂ ವರ್ಣಿಪೀ ಮರುಳಾಟಂದರಘಾಶ್ರಯಂ (ಶಾಂತೀಶ್ವ. ೧–೫೩). [ಅಳೆ$_2$ + ಕೊಳ್$_1$]

**ಅಳೆಗೋಲು** (ನಾ). ಅಳತೆಯ ಕೋಲು ; ಮಾನದಂಡ : ಸಿಕ್ಕ ಅಳೆಗೋಲಿನಿಂದ ನಮ್ಮ ಸಾಹಿತ್ಯವನ್ನು ಸಿಕ್ಕಂತೆ ಅಳೆದು (ಸಾಹಿಶೋ. ೭೯). [ಅಳೆ$_1$ + ಕೋಲು (< ಕೋಲ್$_1$)]

**ಅಳೆತ** (ನಾ). ಅಳೆಯುವುದು ; ಅಳತೆ. [ಅಳೆ$_1$ + –ತ$_8$]

**ಅಳೆಬೀಯ** (ನಾ). ದಿನಕ್ಕೆ ಇಷ್ಟೆಂದು ಕ್ಲುಪ್ತವಾಗಿ ಅಳತೆ ಮಾಡಿ ಕೊಡುವ ಅಕ್ಕಿಯ ಪಡಿ : ಯುಧಿಷ್ಠಿರಂ ನಡೆಸಿಕೊಡುವಳೆಬೀಯದಿಂ ಒಡಲವೊರೆವುದಂ ಕಾಣಲಾರೆ (ತುರಂಗ. ೪೧–೨೧). [ಅಳೆ$_1$ + ಬೀಯ$_1$]

**ಅಳೆಮಾಱು** (ಕ್ರಿ). ಮಜ್ಜಿಗೆಯನ್ನು ಮಾರು, —ವಿ ಕ್ರ ಯಿ ಸು : ಒಪ್ಪಿದರೆ ಕೆ ಲ ಬ ಲ ದೂ ಗೆರ್ ಪೋಗಿಯಳೆಮಾಱಿ ಮಗುೞ್ತರುತಿರ್ಪ ಗೋಪಿಯರ್ (ಲೀಲಾವ. ೫–೧೧೬). [ಅಳೆ$_2$ + ಮಾಱು$_1$]

**ಅಳೆಯಿಸು**, ಅಳಸು$_2$, ಅಳೆಸು (ಕ್ರಿ). ಅಳತೆಮಾಡಿಸು; ಪರಿಮಾಣವನ್ನು ತಿಳಿಯುವಂತೆ ಮಾಡು. **ಅಳಸು$_2$** (ಕ). **ಅಳೆಸು** (ಕ). [ಅಳೆ$_1$ + –ಇಸು$_3$]

**ಅಳೆಸು** 'ಅಳೆಯಿಸು' ನೋ.
**ಅಳ್ಕಜ** 'ಅೞ್ಕಜ'$_1$ ನೋ.
**ಅಳ್ಕಜಂಬಡು** 'ಅೞ್ಕಜಂಬಡು' ನೋ.
**ಅಳ್ಕಜಕಾಱ**, ಅಳ್ಕಜಗಾರ (ನಾ). ಹೊಟ್ಟೆಕಿಚ್ಚುಪಡುವವನು ; ಅಸೂಯೆಗಾರ : ಕಬ್ಬಿಗರೇಕೆ ಕಬ್ಬಮಂ ಗದಿಪರೊ ಬೇಱೆನುತ್ತೆ ನುಡಿವಳ್ಕಜಕಾಱನವಂಗೆ ಪುತ್ರಸಂಪದಮೆ ದಲೇಕೆ (ರಾಜಶೇ. ೧–೩೫).

**ಅಳ್ಕಜಗಾರ** : "ಅಳ್ಕಜಗಾರ–ಹೊಟ್ಟೆಕಿಚ್ಚಿನವನು" (ಗುವಿಮೋ. ೧೨).
[ಅಳ್ಕಜ (< ಅೞ್ಕಜ$_1$) + –ಕಾಱ]

**ಅಳ್ಕಜಗಾರ** 'ಅಳ್ಕಜಕಾಱ' ನೋ.
**ಅಳ್ಕನೆ** (ಅ). ಇದ್ದಕ್ಕಿದ್ದಹಾಗೆ; ಅನಿರೀಕ್ಷಿತವಾಗಿ ; ಥಟ್ಟನೆ : ಬಗೆದಳ್ಕನೆ ಬೆರಳಸಿತ್ತಡೆ (ಹೆಬ್ಬೆರ. ೩೬–೯). [ಅಳ್ಕು$_2$ + –ಅನೆ]
**ಅಳ್ಕಮೆ** 'ಅೞ್ಕಮೆ' ನೋ.
**ಅಳ್ಕರು$_1$** 'ಅೞ್ಕಱ್$_1$' ನೋ.
**ಅಳ್ಕರು$_2$** 'ಅೞ್ಕಱ್$_2$' ನೋ.
**ಅಳ್ಕರೆ** 'ಅೞ್ಕಱ್$_2$' ನೋ.
**ಅಳ್ಕರೆವೊಗಳ್ಕೆ** (ನಾ). ಪ್ರೀತಿಯಿಂದ ಕೂಡಿದ ಹೊಗಳಿಕೆ ; ಆದರದಿಂದ ಕೂಡಿದ ಕೊಂಡಾಟ : ಅಳ್ಕರೆವೊಗಳ್ಕೆಗೆರ್ದೆಯುರ್ಕೆ ಸೊರ್ಕುತೆ (ಶ್ರೀರಾಮಾ. ೪೦೦–೧೦೪೧).
[ಅಳ್ಕರೆ (< ಅೞ್ಕಱ್$_2$) + ಪೊಗಳ್ಕೆ (< ಪೊಗೞ್ಕೆ)]
**ಅಳ್ಕಱು** 'ಅೞ್ಕಱ್$_2$' ನೋ.
**ಅಳ್ಕಱುಗೂಡು** (ಕ್ರಿ). ಪ್ರೀತಿಯಿಂದ ಕೂಡು : ಕುಲಸತಿಯಳ್ಕಱುಗೂಡಿ ನಲವಿಂದವನಿಗನ್ನವನೀಯುವೆನೆಂದು ಕೆಲದೊಳು ಕುಳ್ಳಿರಿಸಿದಳು (ಹದಿಬ. ೨–೩೭). [ಅಳ್ಕಱು (< ಅೞ್ಕಱ್$_2$) + ಕೂಡು$_1$]
**ಅಳ್ಳಾಟ** (ನಾ). ಕಂಪನ ; ನಡುಕ ; ಹೆದರಿಕೆ ; ಬೆದರುವಿಕೆ : ಆಟಂ ಮನಸಿಜನಂಬೆದರ್ಾಟಂ ನಡೆನೋೞ್ಪ ಜನದ ಮನದಳ್ಳಾಟಂ (ಅ ಜಿ ಪು. ೫–೪೪) ; ಬಲವದ್ವಜ್ರಮಹಾಕವಾಟಮೆರ್ದೆಗಳ್ಳಾಟಂ ರಿ ಪು ಶ್ರೇ ಣಿ ಗೆ (ಪುಷ್ಪಪು. ೯–೨೬). [ಅಳ್ಕು$_1$ + ಆಟ]
**ಅಳ್ಳಾಡು$_1$** (ಕ್ರಿ). ೧. ಭಯದಿಂದ ನಡುಗು ; ಹೆದರು : ನೆಲಂ ಮೊೞಗಿದುದೊಂಭತ್ತುಂ ಗ್ರಹಂಗಳಳ್ಳಾಡುತ್ತಿರ್ದುವು ಬಿದ್ದುವಳ್ಕೆ ಪಗಲುಳ್ಕಂಗಳ್ (ಶಾಂತಿಪು. ೩–೧೦೩) ; ಸುರರೞ್ಕಾ[ಳ್ಳಾ]ಡುವ ಮೇರುವಕ್ಕುಳಿಸುವೆನ್ನೀಶೌರ್ಯಮುಂ ಧೈರ್ಯಮುಂ ಹರಿಯೊಳ್ ಕಾದಿ ಕೃತಾರ್ಥಮಕ್ಕುಂ (ಜಗವಿ. ೭–೩೮) ; ಅಡಿನ ಬೆನ್ನೊಳು ಕುಳ್ಳಿರ್ದು ಮನದೊಳಳ್ಳಾಡದೆ ಪೋಗಲು ಬೇಕು (ನೇಮಿಸಂ. ೧೦–೨೫೮). ೨. ಬಳಲು ; ಶಿಥಿಲವಾಗು : ಕುಜಚ್ಛದಂಗಳಿಱುಬಂ [ಮಿಗೆ]ಪೊಕ್ಕಮಿತ ಶ್ರಮದಲ್ಲಿಯಳ್ಳಾಡೆ ತೊೞಲ್ಚಿ ತೂಳ್ದು ಕಡುಪಿಂ ಕೆದಱಟ್ಟಿ ಮಹಾಂಧಕಾರಮಂ ಕೂಡೆ ಗುಹಾಳಿಯಂ ಪುಗಿಸುತಿರ್ದುದು ಚಂದ್ರಿಕೆ ಸಾಂದ್ರಶೋಭೆಯಿಂ (ಕುಸುಮಾ. ೧೦–೧೩).
[ಅಳ್ಕು$_1$ + ಆಡು$_1$]

**ಅಳ್ಳಾಡು₂** 'ಅಟ್ಟಾಡು₁' ನೋ.

**ಅಳ್ಕಿಸು,** ಅಳುಕಿಸು (ಕ್ರಿ). ೧. ಭಯಪಡಿಸು; ಹೆದರುವಂತೆ ಮಾಡು; ಬೆದರಿಸು: ದಿಗುಜಯಂ ದಿಶಾಪಾಳರನಳ್ಕಿಸಿತ್ತಿದಿರಲಾಂಪವರಾರ್ ಜಯಸಿಂಘದೇವನ (ಎಕ. VII, ಶಿಕಾರಿ. ೧೨೫-೧೮; 1019); ಪುಡಿವಂ ಚಕ್ರವನಳ್ಕಿಪಂ ಜವನನಾ ದಿದ್ದ(ಗ್ದ)ಂತಿಯಂ ಕೂಡೆ ಕೀಳಿಡಿಪಂ (ಕಇ. IV, ೧-೬೫; 1204); ಸಿದ್ಧರಂ ಬಗೆಗೆಡಿಸುತ್ತೆ ಬಿಜ್ಜಳನನಳ್ಕಿಸಿ ನೇತ್ರಮನಿತ್ತು ತೆಲ್ಲಿಗಂಗೆ (ರಾಜಶೇ. ೧-೫೪). ೨. ಪ್ರತಿಭಟಿಸು: "ತಳ್ಪೊಯ್ . . . ಅಳ್ಕಿಸು - ಈ ೨೫ ಪ್ರತಿಹತಕ್ಕೆ ಪೆಸರ್" (ಕಶಸಾ. ೧೫-೨೯೬). ೩. ಹಿಂಸಿಸು. ೪. ಮೀರು: "ಅಳ್ಕಿಸಿದುದುಮೋರಂಡಲ ಮಂಡಲೆದುದು ಪಳಂಚಿದುದು ತಾನಳಿಸಿದುದಂ ಪೊಡೆದುದ್ಯೆದೆ ಮಾಱಿದುದೆಂದುಂ" (ಕವಿಕಂ. ೧೩೭). **ಅಳುಕಿಸು:** ೧. ಹಲವು ಪರಿಯಲಳುಕಿಸಿದಡಾನಳುಕೆ ಮದ್ದುಗ್ಗರುವೆ ನಿಲುವೆನೆಂಜದೆ ಭಕ್ತಿಬಲದಿಂದ ಸದ್ಗುರುವೆ (ದೀಕ್ಷಾಬೋ. ೯೫-೨೨); ಬೊಬ್ಬೆಯ ಕುಲಿಶರವವಳುಕಿಸಿತು [ಪಾಠಾಂ. ವಿಳುಹಿಸಿತು] ಭವಬ್ರಹ್ಮಾಮರೇಶ್ವರರ (ತೊರರಾ. ೪-೪-೧೩).

[ಅಳ್ಕು₁ + -ಇಸು₃]

**ಅಳ್ಕು₁,** ಅಳುಕು₁ (ಕ್ರಿ). ೧. ಹೆದರು; ಭಯಪಡು: "ಅಳ್ಕು - ಭಯೇ, ಅಶಕ್ತೌ ಚ" (ಶಮಧಾ); ಅರಸುಗಳೆಲ್ಲಂ ಬಾಯ್ಕೇಳ್ದರೆಂದುಮಾಶಾಂತರಂಗಳಳ್ಕಿದುವೆಂದುಂ ಧರಣಿತಳಂ ಕೀರ್ತಿಸೆ (ಆದಿಪು. ೧೪-೪೯); ಪರಸೈನ್ಯ ಭೈರವನ ಬರವಿಂಗಳ್ಕಿ ಗಾಳಿಗೊಡ್ಡಿದ ಸೊಡರಂತೆ ನಡನಡ ನಡುಗುವ ಕುರುಧ್ವಜಿನಿಯಂ ಕಂಡು (ಪಂಪಭಾ. ೮-೧೧೧ ವ); ಅಳ್ಕದಾನ್ತಿ ಱಿವಣ್ಮಂ ಪಿರಿದೀವ ಪೆಂಪುಮೆಸೆದೊಪ್ಪಿದ್ದಪ್ಪುವು (ಎಕ. II, ೧೩೩-೧೭; 982); ಕಂತುಶರಭೇದದ ವೇದನೆಗಳ್ಕಿದಂತೆ ಕಣ್ಣರೆಮುಗುಳ್ದಿರ್ದವಾಂ ಬಱಿಸಲಲ್ಕಡೆ ನೋಡಲಿಕಾರ್ತೆನಿಲ್ಲ (ಕಾದಂಪೂ. ೯೧೨); ಅಳ್ಕದೆ ಬೆಚ್ಚದೆ ಬೆದಱದೆ ಬೆಳ್ಕುತ್ತಡಹಡಿಸಿ ಕುಸಿದು ಕುಂದಿರದೆ . . . ದಿಗಂಬರನಿರ್ದಂ (ಸುಕುಮಾ. ೪-೧೦); ಸೆರಗಂ ಪಾರದೆ ಬೆಚ್ಚದಳ್ಕದೆ ಭಯಂಗೊಂಡೋಡದೆ (ಧರ್ಮಾಮೃ. ೧೩-೯೩); ಕೆಲದೊಳ್ ಪುಳಿಂದಿಯಿರೆ ಪೆರ್ಬುಲಿ ಬಂದೊಡಮಂಜನಳ್ಕನೋಡಂ ನೋಡಂ (ಗಿಂಕ. ೧-೧೧೭); ಉದಿತಾತ್ಮುಗ್ರಭುಜಪ್ರತಾಪದ ಪೊಡರ್ಪ್ಪಂ ಕಂಡು ಸಿಂಗ × × × ರಾಪ್ಪೆಳುಕುಬಿರಾಪ್ಪೊಡಪ್ಪುಡುಗರಾರಾನ್ನೋಡಿ ಬೋಡಾಗಿ ಪೋಗದರಾರಟಬು [ಳು] ಕದರಾರ್ಮನಂಗಿಡದರಾಸ್ಸರ್ವಸ್ವಮಂ ತೆತ್ತು (ಎಇ. XX, ೧೨-೮; 1187); ದಿಕ್ಪಾಲಕರ್ ಸೆಡೆಯಲ್ ದಿಕ್ಕರಿವ್ರಂದಮಳ್ಕೆ ಭಗಣಂ ಪಾಯ್ದುಳ್ಕೆ (ರಾಜಶೇ. ೬-೧೧). ೨. ಹಿಂಜರಿ; ಹಿಂದೆಗೆ; ಸಂಕೋಚಪಡು: ಮುಸು ಮುತ್ತಂತೆ ತೆರಳ್ದ ತನ್ನ ಮೊಗಮಂ ಕಂಡಳ್ಕನೋ (ಆದಿಪು. ೨-೪೫); ಒಬ್ಬೆಸಕಳ್ಕುವ ಜೋಳಗಳ್ಪರಂ ಪಱಿಯೆಡೆಯಿಲ್ಲದೊಳ್ಪಲೆಯುತಿಪ್ಪುದುಮಾವನಗನ್ಧಹಸ್ತಿಯಂ (ಎಕ. II, ೧೩೪-೩೧; 982); ಮನಮುಱಿಗುಂ ನರೇಂದ್ರಸುತನೆಂದಿನಿಸಳ್ಕನೆ ಸುತ್ತಲುಂ ಸಖೀಜನ ಮಿರೆಯುಂ ವಿಚಾರಿಸೆನೆ (ಕಾದಂಉ. ೭೬). ೩. ಶಕ್ತಿಹೀನವಾಗು; ದುರ್ಬಲವಾಗು: "ಅಳ್ಕು - ಭಯೇ, ಅಶಕ್ತೌ ಚ" (ಶಮಧಾ); ಶ್ರೀ ಭದ್ರಬಾಹು ಸಚನ್ದ್ರ ಗುಪ್ತಮುನೀನ್ದ್ರಯುಗ್ಮದಿನೊಪ್ಪೆವಲ್ ಭದ್ರಮಾಗಿದ ಧರ್ಮ್ಮಮನ್ದು ವಳಿಕ್ಕೆವನ್ದಿನಿಸಳ್ಕಲೋ (ಎಕ. II, ೩೧-೨; 650); ತಡಕುಂ ಪಿಟ್ಟೆಯುಮೊತ್ತೆ ಮೆಲ್ಲಡಿಗಳಂ ಬಳ್ಕುತ್ತುಮಳ್ಕುತ್ತು ಮೋರಡಿಗೊರ್ಮೊರ್ಮೆ ಕುಳುತ್ತುಮೇಱುತಿರೆ ಕಂಡು (ಪಂಪಭಾ. ೩-೯); ಮೊದಲೊಳ್ ಸೊಕ್ಕಿದವಂಗೆ ಕಳ್ ವಿಷದಿನಳ್ಕಿರ್ದ್ದಂಗೆ ದುರ್ನಿದ್ರೆ (ಕಾದಂಪೂ. ೮೦೩); ಮಱುಗೆ ಶರೀರಂ ಕಣ್ಗಳ್ ಪೊಱಮಡೆ ಮೇಲ್ವಾಸ ಮೆತ್ತೆ ಸೆಡೆದಳ್ಕಿ ಬಲಂ ಪಱಿವಡೆ ಜೊಮ್ಮನೆ ಜೋಲ್ದುಂ (ಧರ್ಮಾಮೃ. ೪-೧೬೨); ಕೋಪದಿಂದಳ್ಕಿದೆನತಿಮುದದಿಂ ಮುಂದುಗೆಟ್ಟಿರ್ದಪೆಂ (ರಕ್ಷಾಶ. ೨೪). ೪. ನಡುಗು; ಕಂಪಿಸು; ಚಂಚಲವಾಗು: ಬೆಳಗಪ್ಪ ಜಾವದಯ್ಯೆಲ್ ಕೊಳೆ ಶೀತಕ್ಕಾಜದಳ್ಕಿ ತೊಟ್ಟಿರ್ದ ಧರಾತಳಮೆಂಬ ಪೆಣ್ಣ ಪೊಸಕಂಚುಳಿಕೆಯ ಸೀಮರ್ಮುತ್ತಿನಂದ ಮಾದುವು ಪನಿಗಳ್ (ಕಾವ್ಯಸಾ. ೭೪ ಶೂದ್ರಕ); ಅದಿರದ ಚಿತ್ತಮಳ್ಕದ ಮನಂ ಬಗೆಗೊಳ್ಳದ ಮೋಹಮೆತ್ತಿ ಕಟ್ಟಿದ ಜಡೆ (ಪಂಪಭಾ. ೭-೭೯); ಪುರಂದರನ ಗಣಿಕೆಯರ ಕಡೆಗಣ್ಣ ನೋಟಕ್ಕಂ ಕಾಟಕ್ಕಮಳ್ಕದ ಶೌಚಾಂಜನೇಯನ ಶೌಚಮುಮಂ (ಪಂಪಭಾ. ೯-೫೨); ಪೆಣನೆ ಗೆತ್ತು ಖಳಂ ಪಿರಿದಪ್ಪ ಕಿರ್ಚಿನಿಂದನ್ನೆಱೆ ಸುಟ್ಟೊಡಂ ಮನದೊಳಳ್ಕದೆ ಬಳ್ಕದೆ ಮಂದರರಕ್ಷಮಂ (ಧರ್ಮಾಮೃ. ೧೨-೪೫). **ಅಳುಕು₁:** ೧. ಭೀತಿಯಿಂದನ್ನಡುಗುತ್ತುಮುಳ್ಳಳುಕಿಕಾಡುವ ಬುದ್ಧಿಯನೊಲ್ಲದಂತುಂ(ಧರ್ಮಾಮೃ. ೧೩-೧೪೨); ಒಂದಕ್ಕಂಜುವೆ ಒಂದಕ್ಕಳುಕುವೆ ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ (ಬಸವ. ೪೪೬); ಅಂಜದರನಂಜಿಸುವಂ ಸುಭಟತ್ರಿನೇತ್ರನಳುಕದ ಚಲದಂಕರಾಮಂ (ನ್ಯೆಆರಿ. ೧೯೩೦, ೧-೨೯; 1773); ಆಳವಿಗಳುಕುವುದಾಳುತನದಗ್ಗಳಿಕೆಯೇ (ಕುವ್ಯಾದ್ರ್ರೋ. ೨-೪೯); ಕಟ್ಟಿಱುಹೆ ಕಚ್ಚಿದರೆ ದಿಗ್ಗಜವಳುಕಿ ನೊಂದಪುದೆ (ತೊರರಾ. ೬-೧೧-೪); ಉರಗಗಳುಕಿ ಪೂಜಿಸುವರಲ್ಲದೆ ಮತ್ತೆ ಗರುಡನಿಗಂಜುವರುಂಟೆ (ಕಂನವಿ. ೧-೧೪). ೨. ಎಲವೊ ನೀ ದಿಟರಾಯನಾದೊಡಳುಕದೆ ಬಂದು ನೆಲದಲ್ಲಿ ಕುಳ್ಳಿರ್ಪೆ (ಹಚಕಾ. ೧೧-೩೩); ಕೊಲುವಡವ್ವೆಗೆ ಕೊಟ್ಟ ಮಾತಿಂಗಳುಕುವೆನು (ಕುವ್ಯಾಕ. ೧೧-೬೧); ಕೊಲೆಗೆ ಬೇಸಱರಿವರು ಸಾವುದಕಳುಕದವದಿರು (ಕುವ್ಯಾಕ. ೪-೧೭). ೪. ಆಳುಕುವ ನಡು ಘನಕುಚಯುಗದೊಳು ನಸುಸೆಳೆಯುತ್ತುಮಿರ್ಪಿನಂ . . . ನೀಡುಂ ಪರಿತಂದೊರ್ವಳ್ ನೋಡಿದಳೊಲ್ದು ರೂಪವಿದ್ಯಾಧರನಂ (ಸುಕುಮಾ. ೧೧-೧೩); ನೆಲನಳುಕೆ ನಡೆದವು ದಂತಿ (ಕುವ್ಯಾದ್ರ್ರೋ. ೧೨-೮). ೫. ಕಡೆಗಣಿಸು; ಉಪೇಕ್ಷಿಸು: ಪರುಷ ಕಲ್ಲೆಂದಳುಕಿ ಸುರತರು ಮರನು ತೆಗೆಯೆಂದಮರ ಧೇನುವ ಪರರ ಮನೆಯಲಿ ಮಾಱಿ ಚಿಂತಾಮಣಿಗೆ ಕೈದುಡುಕಿ ಹರಳುಟಿಕ್ಕೆಯಿದೆಂಬ ಪಾಪಿಗೆ ಪರಮಗುರು ನಾನಾದೆನ್ನೆ (ಕುವ್ಯಾಭೀ. ೩-೭೯).

**ಅಳ್ಕಿಬಳ್ಕು** = ಬೆದರಿ ನಡುಗು; ಭಯದಿಂದ ಶಕ್ತಿಗುಂದು: ಇದಿರಾದ ನ್ರಿಪಾಳಕರಳ್ಕಿಬಳ್ಕಿ ಕಂಡಿತ್ತು ಸಮಸ್ತವಸ್ತುಗಳನಾಳುತನಮಂ (ಎಕ. II, ೧೪೩-೪೮; 1131); ನಡೆದರಡಂಗಿದರ್ ಮುಡಿದರೋಡಿದರಳ್ಕಿ ಬಳ್ಕಿದರ್ (ಎಕ. XI, ದಾವಣ. ೪೪-೪೫; 1160).

[**ದೇ. ‖ ತಮಿ. ಮಲ.** ಅಳುಕ್ಕು; **ತುಳು.** ಅಲ್ಕು, ಅಳ್ಕು; **ತೆಲು.** ಅಲುಕು, ಅಳುಕು]

**ಅಳ್ಕು₂,** ಅಳುಕು₄ (ನಾ). ಹೆದರಿಕೆ; ಅಂಜಿಕೆ; ಭಯ: "ಅಳ್ಕೆಂದು ಭಯಂ" (ಶಮದ. ಪರಿ. ೨); ಎನ್ನವೊಲಾಗಲಳ್ಕಿನಿಂ ಪರವಶೆಯಾಗಿ ನಿಂದು . . . ಉಸಿರ್ದಳ್ (ಕಾದಂಪೂ. ೯೪೪); ಪುಲಿಯತ್ತಣಿಂದಳ್ಕು, ಪುಲಿಯಳ್ಕು (ಶಬ್ದಾನು. ೩೦೩ ಪ್ರಯೋ). **ಅಳುಕು₄:** ಅವನಿಗೇನೋ ಮನಸ್ಸಿನಲ್ಲಿ ಅಳುಕು (ರೂಢಿ). [< ಅಳ್ಕು₁]

**ಅಳ್ಕುಱು** (ಕ್ರಿ). ಭಯವನ್ನು ಹೊಂದು; ಭಯಪಡು: ಕರಿ ನೊಂದು ಕೋಪದಿಂ ಪಿಡಿದೆಜಗಿತ್ತು ಭೀಮನನಗುರ್ವಿಸಿ ಪಾಂಡವಸ್ಯೆನ್ಯಮಳ್ಕುಱಲ್ (ಪಂಪಭಾ. ೧೧-೭೪); ಕೋಪವಹ್ನಿದುರ್ಧರತರಮೆಂದೊಡಳ್ಕುಱದೆ ಕಾದುವರಾರೆಱೆಯಂಗದೇವನ (ಎಕ. II, ೧೩೨-೧೮; 1123); ನೆಱೆ ಮುನ್ನಂ ಸಮಜೋ ಅಮೋಘವಯಣೋಯೆಂಬುಕ್ತಿಯಿಂ ವ್ಯಕ್ತಮಾಗಱಿದಿರ್ದಂ ಮಱೆದಿರ್ದನಿಲ್ಲೆನನಿತಂ ಕಂಡಿರ್ದುಮುಂಡಿರ್ದುಮಳ್ಕುಱದಾಂ ಮೆಯ್ಮಱೆದಿರ್ದೆನಪ್ಪೊಡೆ (ಸುಕುಮಾ. ೧೦-೪೨); ಮುಸಲಂ ಗಗನದಿನೆಟ್ಟಂದರಿಸೇನೆಗಳಳ್ಕು[ಳ್ಕು]ಱೆ ನೆಲಸಿದತ್ತನಂತನ ಕರದೊಳ್ (ಜಗವಿ. ೬-೭೫). [ಅಳ್ಕು₂ + ಉಱು]

**ಅಳ್ಕಿ$_1$** 'ಅಟ್ಕಿ' ನೋ.

**ಅಳ್ಕಿ$_2$** (ನಾ). ದಟ್ಟವಾಗುವಿಕೆ; ಸಂಮರ್ದ (?): ಚಕ್ರಂ ಪ್ರಸನ್ನ ದಶದಿಕ್ಚಕ್ರಂ ಮುಂದಾಗಿ ನಡೆಯೆ ನಭದೊಳ್ ರಥಚಕ್ರಾಕ್ರಮಣಕ್ಕಖಿಳ ವಸುಧಾಚಕ್ರಂ ಪಡೆಗಳ್ಕಿಯಾಗಿ ನಡುಗೆ ಸುರರ್ಕಳ್ (ಶಾಂತಿಪು. ೩–೧೧೨); ಮದನಹರಂ ತಪೋಗ್ರಹಣದಿಂದೆ ತಗುಳ್ದೆಡೆಮಾಡದಂತೆ ನಿಂದುದಱಿನ (ನ)ಲ್ಪಕಾಲಕೃತಯೋಗವಿದಿರ್ಚೆ ನಿಮಿರ್ಚೆ ಮುಯ್ಪಿನೊಳ್ ಪುದಿದ ಕುರುಳ್ ಸಮೀರಣ ಸಮೀರಿತಮಳ್ಕಿಯ ಪೂತ ಕಿಂಕಿರಾತದೊಳಿಱಿಗುತ್ತು ಮಿರ್ಪಳಿಯ ಗಾವಳಿಯಂದದಿನೊಪ್ಪಿ ತೋಱುಗುಂ (ಶಾಂತಿಪು. ೧೧–೧೯೯).
[ಅಳ್$_4$ + –ಕೆ$_1$]

**ಅಳ್ಕೈಸು** (ಕ್ರಿ). ಶಕ್ತಿಗುಂದಿಸು: ಆಳಿಪಾರಾರಾಯುಮಂ ಕಂದಿಸದು ಕದಡದಾರಾರ ಗುಣ್ಪುಳ್ಳ ಧೈರ್ಯಂಗಳನಾರಾರೊಳ್ಪನಳ್ಕೈಸದು ಮಸುಳಿಸದಾರಾರ ಪೆರ್ಚಿರ್ದ ತೇಜಂಗಳಂ (ಕವಿಜ. II, 170 ಅರ್ಧೇಂದು).
[ಅಳ್ಕು$_1$ + –ಇಸು$_3$]

**ಅಳ್ಗರುಳ್** (ನಾ). ಸೂಕ್ಷ್ಮವಾದ ಕರುಳು; ಕೋಮಲವಾದ ಕರುಳು: ನೆತ್ತರಿಂ ನೆಣದಿನಳ್ಗರುಳಿಂದಮೆ ಭೂತಕೋಟಿಯಂ ತಣಿಪ ನೆಗಟ್ತೆಯಂ ಪಡೆದ (ಎಕ. VIII, ಸಾಗರ. ೧೦೮–೨೧; 1042); ಅರಿಭಟರಳ್ಗರುಳ್ಪಿಣಿಲ ಬಾಸಿಗದಿಂ ನೊರೆ ನೆತ್ತರೆಂಬ ಬನ್ಧುರತರ ಕುಂಕುಮ ದ್ರವದಿಂ (ಎಕ. VII, ಶಿಕಾರಿ. ೯೮–೧೮; 1103); ನಡುಬೆನ್ನೊಳಳ್ಗರುಳನೊಮ್ಮೆಯೆ ನೆಯ್ದಲ ಕಾವನುರ್ಚುವನ್ತನಿತುಮನುರ್ಚದಿರ್ಪನೆ ರಣಾಗ್ರಣಿ ಬಿಜ್ಜಲದೇವ ಭೂಭುಜಂ (ಎಕ. XI, ದಾವಣ. ೪೨–೩೬; 1162).
[ಅಳ್$_3$ + ಕರುಳ್]

**ಅಳ್ಗಿಡಿ** (ನಾ). ದಟ್ಟವಾದ ಕಿಡಿ; "ಸಣ್ಣ ಕಿಡಿ" (ಪಂರಾಮಾ. ಕೋಶ); ದಶರಥನೆಚ್ಚಂ ಸಿಡಿಲಳ್ಗಿಡಿ[ಪಾಠಾಂ. ವೊಳ್ಗಿಡಿ]ಗಳವೊಲಂಬನಂಬಟ್ಟುವಿನಂ (ಪಂರಾಮಾ. ೩–೫೯). [ಅಳ್$_4$ + ಕಿಡಿ]

**ಅಳ್ಗಿಸು** 'ಅಟ್ಗಿಸು' ನೋ.

**ಅಳ್ಗು** 'ಅಟ್ಗು' ನೋ.

**ಅಳ್ಗುಡಿ** (ನಾ). ಕೋಮಲವಾದ ಕುಡಿ: ಒಂದಲೆವೋದಶೋಕೆಯೆರಡಳ್ಗುಡಿ [ಪಾಠಾಂ. ಡೊಲ್ಗುಡಿ] ಬಾಲತಮಾಲಷಂಡದೊಳ್ ಮಂದಸಮೀರನಿಂ ಪೊಳೆವವೋಲ್ (ಪಂರಾಮಾ. ೩–೮೮). [ಅಳ್$_3$ + ಕುಡಿ$_2$]

**ಅಳ್ಗೆಸಱ್** (ನಾ). ಮಂದವಾದ ಕೆಸರು; ಗಟ್ಟಿಯಾದ ಕೆಸರು: ಪಣೆ ವರುಡಲ್ಕೆ ಪರ್ವಿದೆರ್ದೆಯೊಳ್ ಪೊರೆದಳ್ಗೆಸಱಿಂ ವೃಷಂಗಳೊಳ್ ಪೊಣರ್ದು (ಅರ್ಧನೇ. ೪–೧೨೨); ತೆರೆಗೊನೆಯೊಳ್ ತೆರಳ್ದು ನಿಱಿಗಟ್ಟಿದ ಕತ್ತುರಿಯಳ್ಗೆಸಱ್ [ಪಾಠಾಂ. ಯೊಳ್ಗೆಸಱ್] (ವರ್ಧಪು. ೪–೭೩).
[ಅಳ್$_4$ + ಕೆಸಱ್]

**ಅಳ್ತಿ** 'ಅಟ್ತಿ' ನೋ.

**ಅಳ್ತಿಕಾಱ$_1$** 'ಅಟ್ತಿಕಾಱ' ನೋ.

**ಅಳ್ತಿಕಾಱ$_2$** (ನಾ). ಯಾಚಕ; ಬೇಡುವವನು: ಬಂದುದಾಸೀನದಿಂ ಬೇಡಿವಿತ್ತಂಗೊಂಡು ಪೋಪುದಿದು ಪರಿಭಾವಿಸೆ ಸಂದಳ್ತಿಕಾಱರೊಳಗುಂಟೆ (ಪದ್ಮರಾ. ೫–೫೧). [ಅಳ್ತಿ$_0$ (< ಸಂ. ಅರ್ಥಿ) + –ಕಾಱ]

**ಅಳ್ತಿಗಾಳಗ** (ನಾ). ವಿನೋದಕ್ಕಾಗಿ ಮಾಡುವ ಯುದ್ಧ: ಮಾಸಾಳು ಮಲ್ಲರು ಮೊದಲಾದ ಮೇಳಯದಳ್ತಿಗಾಳಗದೊಳಗಾ ನೃಪಬಾಲಕರ್ ದಿನದ ನೂಂಕುವರು (ಶ್ರೀಪಾಲ. ೨–೮೮).
[ಅಳ್ತಿ (< ಅಟ್ತಿ) + ಕಾಳಗ (< ಕಾಳೆಗ)]

**ಅಳ್ತಿವಂದಿ** (ನಾ). ಪ್ರೀತಿಪಾತ್ರನಾದ ಹೊಗಳು ಭಟ್ಟ: ಕಳುಪಿಪ ತನ್ನೊಡವಂದರ ಮಕ್ಕಳ ಕಳುಪಿದನಳ್ತಿವಂದಿಗಳಾ... ಪೊಕ್ಕನು ತನ್ನ ನಿಳಯವನಾ ರಾಜೇಂದ್ರ (ರಾಮಕಥಾ. ೧–೧೩೫). [ಅಳ್ತಿ (< ಅಟ್ತಿ) + ವಂದಿ]

**ಅಳ್ತಿವಡು** 'ಅಟ್ತಿವಡು' ನೋ.

**ಅಳ್ದರಿ** (ನಾ). ದೊಡ್ಡಗುಹೆ, —ಕಣಿವೆ: ಆ ಕಾಲದೊಳ್ ದರಿಯುಮಳ್ದರಿಯುಂ ಕುಟಿಯುಂ ಕುತ್ತುಱುಂ... ಉಪನದಿಯುಮುಪಸಮುದ್ರಮುಂ ಪುಟ್ಟಿ (ಪಂರಾಮಾ. ೧–೮೧ ವ).
[ಅಳ್ ? + ದರಿ$_1$]

**ಅಳ್ನೀರ್** (ನಾ). ಹೆಚ್ಚಾದ ಕಾಂತಿ (?): ಚಾಳುಕ್ಯಮಹೀಶನ ಕೊಬ್ಬಾರ್ಗಳ್ನೀ[ಪಾಠಾಂ. ಟ್ನಿ]ರೊಳಗೆ ನೋಡೆ ಪೊಳೆವುತ್ತಿರ್ಪ್ಪಾ ಬಾಳೆಗೆರೆಯೋಡುವರಿ ನರಪಾಳರ ಗಜಘಟೆಗಳೇನಿದೊಂದಚ್ಚರಿಯೋ (ಎಕ. VII, ಶಿಕಾರಿ. ೧೩೭–೨೦; 1114). [ಅಳ್$_3$ + ನೀರ್$_2$]

**ಅಳ್ನೆತ್ತಿ, ಅಳಿನೆತ್ತಿ** (ನಾ). ೧. (ಎಳೆಯ ಮಗುವಿನ) ಮೃದುವಾದ ನೆತ್ತಿ; ಕೋಮಲವಾದ ನೆತ್ತಿ. ೨. ಆನುಶಂಕೆ (ದಕ). **ಅಳಿನೆತ್ತಿ**: ೧. "ಅಳಿನೆತ್ತಿ – ಕೂಸಿನ ನೆತ್ತಿ" (ಜಾನಕೋ. ೧೫); ಭ್ರೂಣದ ಮತ್ತು ಎಳೆಮಗುವಿನ ತಲೆಬುರುಡೆಯ ಗೋಡೆಮೂಳೆಗಳ ಪಕ್ಕಕೋನಗಳಲ್ಲಿ ಸೂಕ್ಷ್ಮ ಚರ್ಮಾವರಣವುಳ್ಳ ಅವಕಾಶ; ಅಳಿನೆತ್ತಿ; ಸುಳಿನೆತ್ತಿ (Fontanelle. ಇಂಕಶ). [ಅಳ್$_3$ + ನೆತ್ತಿ]

**ಅಳ್ನೆಲ** (ನಾ). ಜೌಗುನೆಲ; ಜವಳು ನೆಲ (ದಕ. ೬).
[ಅಳ್$_3$ + ನೆಲ]

**ಅಳ್ಪು$_1$** (ನಾ). = ಅಪ್ಪು$_2$: "ತಾಳ್ಪಿನಲಳ್ಪಿಂಗೆ ನಾಮುಂ" (ಚತುನಿ. ೫೬).
[< ಅಪ್ಪು$_2$ ?]

**ಅಳ್ಪು$_2$** 'ಅಳಿಪು' ನೋ.

**ಅಳ್ಪು$_3$** 'ಅಟಿಪು' ನೋ.

**ಅಳ್ಮದ** (ನಾ). ಮಂದವಾಗಿ ಸುರಿಯುವ ಮದ; ಗಟ್ಟಿಯಾದ ಮದ: ಇನಿಸನಡತ್ತುರ್ಗೆ ನಿಂದುಱದೆ ಕಾದದೆ ಗೆಯ್ಯದೆ ಧಾರೆ ಪೇಳ್ದ ದಂಡಿನ ಘಟೆಯಾನೆಯಳ್ಮ [ಪಾಠಾಂ. ಟ್ಮ]ದದ ಧಾರೆಯೊಳದ್ದುವುದು (ಎಕ. VII, ಶಿಕಾರಿ. ೧೩೭–೧೮; 1114). [ಅಳ್$_4$ + ಮದ]

**ಅಳ್ಮಿದುಳ್** (ನಾ). ಮೃದುವಾದ ಮಿದುಳು: ಪರಿವಡಿಯಂಕದಂತೆ ಪೊಱಮಟ್ಟದೆ ಸೂಳಿಱಿವ [ಪಾಠಾಂ. ವೊ]ಳ್ಮಿದುಳ್ ಸಿಡಿಲ್ತರೆ ಪೆಱಸಾರ್ದು ಸನ್ನೆದಗರಂದದೆ ತಾಗುವ (ವರ್ಧಪು. ೮–೫೭); ಮಾಳವನಳ್ಮಿ[ಪಾಠಾಂ. ಳುಮಿ]ದುಳುಗೆ ಖಚನೀರಿಗೆ ಪಾಂಡ್ಯನ ಕಾಳಿಜಕ್ಕೆ ನೇಪಾಳನ ಬೆಂನ ಸೂಂಟಿಗೆಗೆ (ಎಕ. IV, ಹುಣಸೂ. ೧೩೭–೧೭; 1162); ಬೀರರಳಿಮಿ[ಳ್ಮಿ]ದುಳುದಿರ್ವ್ವನ್ನವಪ್ಪಳಿಸಿ ಸಂಗರದೊಳು ಚಲದಂಕರಾಮನಗ್ಗದ ಹನ್ನನಾಂತಿಱಿದನಾಜಿನಾಜಿಭಯಂಕರನಪ್ಪ ಸಂಕರನು (ಸೌಇಇ. XX, ೧೨೭–೯; 1186). [ಅಳ್$_3$ + ಮಿದುಳ್]

**ಅಳ್ವು** 'ಅಟ್ವು' ನೋ.

**ಅಳ್ಳಂಕೆ** (ನಾ). ದಿಗಿಲು; ಭಯ (?). 'ಅಳ್ಳಂಕಗೊಳ್' ಪರಾ. [?]

**ಅಳ್ಳಂಕೆಗೊಳ್** (ಕ್ರಿ). ದಿಗಿಲುಗೊಳ್ಳು; ಭಯಹೊಂದು (?): ಘುಳ್ಳಿಡುವ ನಾಯಿ ಸುತ್ತಲು ಪರಿಯೆ ಗಾಳಿವಿಡಿದಳ್ಳಂಕೆಗೊಂಡು ಹೋಗಲ್ಬಾರದಿಟ್ಟೆಡೆಯೊಳೆಡಬಲನನಾರಯ್ಯುತ... ಹಿಂದೆ ಮರಳ್ದೆಕ್ಕಲನಂ (ಹಚಕಾ. ೬–೧೧). [ಅಳ್ಳಂಕೆ + ಕೊಳ್$_1$]

**ಅಳ್ಳಕ, ಅಳಕ$_1$** (ನಾ). ೧. ಸಡಿಲ; ಬೇಕಾದ ಅಳತೆಗಿಂತ ಹೆಚ್ಚಾಗಿರುವುದು: ಅವರು ಕನ್ನಡಕ ಹಾಕಿಕೊಂಡಿರುತ್ತಾರೆ ಮತ್ತು ಅಳ್ಳಕವಾಗಿ ಕೋಟು ಹಾಕಿಕೊಳ್ಳುತ್ತಾರೆ (ಶಾಲಿಮ. ೩೩). ೨. ನಿರ್ಬಂಧ ಹೆಚ್ಚಿಲ್ಲದಿರುವುದು; ಸಡಿಲವಾದ ಕಟ್ಟು: ಧರ್ಮವೆಂಬುದರಲ್ಲಿ ಅಂಥ ಸಮಭಾವವಿರುತ್ತದೆ. ಅದರಲ್ಲಿ ಕಟ್ಟುನಿಟ್ಟೂ ಉಂಟು ಅಳ್ಳಕವೂ ಉಂಟು, ಹದ್ದುಬಸ್ತೂ ಉಂಟು (ರಾಜ್ಯಶಾ. ೨೦೦). **ಅಳಕ$_1$**: ೧. ಕೈಗೆ ಕಟ್ಟಿದ ಕಂಕಣ ಅಳಕವಾಗಿದೆ (ರೂಢಿ).

ಅಳ್ಳಕಮಾಡು = ಸಡಿಲಗೊಳಿಸು; "ತೆಳ್ಳಗೆ ಮಾಡು; ಕೃಶ ಮಾಡು; ವಿರಳಮಾಡು; ಅಳ್ಳಕಮಾಡು . . ." (Attenuate. ಇಂಕನಿ). ಅಳ್ಳಕವಾಗು=ಗಟ್ಟಿಯಿಲ್ಲದಿರು; ನೀರಾಗಿರು: ದೋಸೆಹಿಟ್ಟು ತುಂಬಾ ಅಳ್ಳಕವಾಗಿದೆ (ರೂಢಿ). [ದೇ ‖ ತಮಿ. ಅಳಕಂ = ನೀರು]

**ಅಳ್ಳಗೆ** (ಅ). ಉದುರಾಗಿ; ಬಿಡಿಬಿಡಿಯಾಗಿ: ಅನ್ನವನ್ನು ತುಸು ಅಳ್ಳಗಾಗಿ ಮಾಡಿ ಗೊಡ್ಡುಸಾರು ಮಳ್ಳಿಸುತ್ತೇನೆ (ಜನನಾ. ೪೨).
[< ಅಳ್ಳಕ]

**ಅಳ್ಳಬರು** (ಕ್ರಿ). ಅಡ್ಡವಾಗಿ ಬರು; ಅಡ್ಡಿಯಾಗು (?): ಸುರ ಮಥನ ನೀನಳ್ಳಬಾರದಿರರೆಗಳಿಗೆಯೊಳಗೀಗ ಗರಳದಲುರುಹಿ ತೋಱುವೆ ವೆನುತ ಹರಿದರು ಬಾಣಸಿಗರಂದು (ಪ್ರಹ್ಲಾಚ. ೭-೭೮).
[ಅಳ್ಳ ? + ಬರು (< ಬರ್)]

**ಅಳ್ಳಮ್ಮಗವುಂಡ** (ನಾ). ಒಬ್ಬಾತನ ಹೆಸರು: ಅಳ್ಳಮ್ಮಗವುಣ್ಡರ ಮಗ ಜೋಳನಿಳ್ದ ಜಿತೇನಲಭ್ಯತೇ (ಎಕ. VII, ಶಿವಮೊ. ೨೪-೪; 970).
[ಅಳ್ಳಮ್ಮ$_0$ + ಗವುಂಡ (< ಗಾಮುಂಡ)]

**ಅಳ್ಳಾಗು** (ಕ್ರಿ). ಸಡಿಲವಾಗು: ತಲೆ ಎಲುವು ತೀರಾ ಅಳ್ಳಾಗಿದೆಯಂತೆ (ಕುರಿಹಿಂ. ೫೫). [ಅಳ್ಳು ? + ಆಗು$_1$]

**ಅಳ್ಳಾಟ** 'ಅಲ್ಲಾಟ' ನೋ.

**ಅಳ್ಳಾಡಿಸು** 'ಅಲ್ಲಾಡಿಸು' ನೋ.

**ಅಳ್ಳಾಡು** 'ಅಲ್ಲಾಡು' ನೋ.

**ಅಳ್ಳಾಳನಾಥ** 'ಅಲ್ಲಾಳನಾಥ' ನೋ.

**ಅಳ್ಳಿಕುಂಚ** (ನಾ). ಅಣಿಲು; ಅಳಿಲು: ಅಳ್ಳಿಕುಂಚಗಳು ಮರದಮೇಲೆ ವಿಶೇಷವಾಗಿ ಓಡಾಡುತ್ತವೆ (ರೂಢಿ). [ಅಳ್ಳಿ$_0$ + ಕುಂಚ ?]

**ಅಳ್ಳಿಬಲೆ** (ನಾ). (ಕರಾ) ದೊಡ್ಡ ಕಣ್ಣಿನ ಮಾರಿಬಲೆ.
[ಅಳ್ಳಿ$_0$ + ಬಲೆ]

**ಅಳ್ಳಿರಿ** 'ಅಳ್ಳಿಱು$_1$' ನೋ.

**ಅಳ್ಳಿಸು** (ಕ್ರಿ). ಅರಳಿಸು; ದೊಡ್ಡದು ಮಾಡು; ಉಬ್ಬಿಸು: ಬಸುಱಂ ಕಣ್ಣನಳ್ಳಿಸುತೆ ಮೆಳ್ಳಿಸುತಲಂತಕಾಂತಕನ ನಗಿಸುತೆ ಸೊಗಸುತಂ ಭೃಂಗಿ ನಟಿಸಿದ ನವನಾಟ್ಯವ (ಮದೇಪು. ೧-೩೭). [< ಅರಳಿಸು < ಅಲರಿಸು]

**ಅಳ್ಳಿಱು$_1$, ಅಳ್ಳಿರಿ** (ಕ್ರಿ). **೧.** ಅಲುಗಾಡು; ಸ್ಪಂದಿಸು; ಅದುರು: "ಅಳ್ಳಿಱು – ಸ್ಪಂದನೇ" (ಶಮುಧಾ); ಅಳ್ಳಿಱಿಯೆ ಹರಿಕೇತು ನಭದೊಳ್ ಮಿಱುಗುವ ಚೆಂಬೊನ್ನರಥದನಶ್ವತ್ಥಾಮಂ (ಪಂಪಭಾ. ೧೦-೫೭); ಮಜ್ಜನಕ್ಕೆಱೆವುತಳ್ಳಿಱಿದು ತಪ್ಪಿ ತಡಬಡಿಸುತಂ (ಹಲಾರ. ೯೦-೧೫); ಎಮ್ಮೊಡಲೊಳಳ್ಳಿಱಿವುತಿಪ್ಪಳಲ ಬೇಗೆಯ ಬೆಂಕಿಯುರಿ ನಿನ್ನನಿಱಿಯದೇ (ಹಚಕಾ. ೯-೭); ಒಡನೆ ನೆಲನಳ್ಳಿಱಿಯೆ ವಾದ್ಯದ ಗಡಣ ಮೊರೆದುದು (ಕುವ್ಯಾಕ. ೮-೨೧). **೨.** ನಡುಗಿಸು; ಅಲುಗಾಡಿಸು: ಕಟ್ಟೆಲೆಯ ನಲೆವ ಸೊಡರ್ಗುಡಿಗಳನೀಯಳ್ಳಿಱಿದಲೆವುವು ಬನದೊಳಗುಳ್ಳಲರ್ದು ಜ್ಜ್ವಳಿಪ ಚಂಪಕಪ್ರಸವಂಗಳ್ (ಆದಿಪು. ೧೧-೬೭); ಮಂತ್ರಸಿದ್ಧಿಗಮ ರೇಂದ್ರನನಳ್ಳಿಱಿವಂತೆ ನೀಳ್ದಗುರ್ವಿನ ಗಱಿಯೆತ್ತಿ ಬಂದನವನೊರ್ವನ ಪೂರ್ವಿಗನಿಂದ್ರಜಾಲಿಗಂ (ಲೀಲಾವ. ೪-೭೫). **೩.** ಚುಚ್ಚು; ತಿವಿ: ಕೋಗಿಲೆಗಳೆಡೆವಿಡದುಗುರ ಮೊನೆಯೊಳಳ್ಳಿಱಿಯೆ ಸುರಿವ ಸಹಕಾರ ಫಲ ರಸದ ಸೋನೆಗಳಿಂ (ಕಾದಂಪೂ. ೧೦೧೦); ಜಯಪತಾಕೆ ನಭಮನಳ್ಳಿಱಿಯೆ (ಪಂರಾಮಾ. ೩-೬೦ ವ); ನಗರನಗರಿಯೊಳೆಸೆವ ದೇವಾಲಯಂಗಳಿಂ ಮುಗಿಲನಳ್ಳಿಱಿವ ಘನಮಾಡ ಕೊಟಂಗಳಿಂ (ಮಲುರ. ೮-೧೬); ಅಳ್ಳಿಱಿದುದು ಮಾನಸಮಂ ತಳ್ಪಂಕಂ (ಶಬಶಂ. ೪-೯೦). **೪.** ಧ್ವನಿ ಮಾಡು; ಗರ್ಜಿಸು; ಆರ್ಭಟಿಸು: ಸೂಳುಮಿಗಲಳ್ಳಿಱಿವ ನಿಸ್ಸಾಳೋಳಿಗಳ ತಂಬಟದ ಕೊಂಬಿನ (ಕುವ್ಯಾಭೀ. ೬-೯); ಅಳ್ಳಿಱಿವ ವಾದ್ಯರವಮೊಡನೆ ಬ್ರಹ್ಮಾಂಡಮಂ ತೀವೆ ಬರುತಿರ್ದರ್ (ಚಬಪು. ೩೨-೪೩); ಸೊರ್ಕಿನಿಂದಳ್ಳಿಱಿವಾ ಶಿವಾಜಿಸುತ ಶಂಭುಜಿಯೇಱಿಗೆಯ ನುರ್ಬುರ್ ಕೊರ್ಬುಮಂ ತೆಳ್ಳನೆಗೆಯ್ದಂ (ಚಿಕಬಿ. ೫). **ಅಳ್ಳಿರಿ: ೨.** ಆ ಗಡಿಯೊಳಿರ್ಪ ಸೈನಿಕರಾಗಿಸಿದುದ್ಭಟ ಶತಘ್ನಿಗಳ ಗಾವರದುರ್ಬಾಗಳ್ ಜಯನಿರ್ಘೋಷದ ಯೋಗಂಬಡೆದಾದಮಳ್ಳಿರಿದು ದೆಣ್ದೆಸೆಯಂ (ಮರಾಚ. ೬-೯೫).

**ಅಳ್ಳಿಱಿದಾಡು** = ಸಂಚರಿಸು; ಅಲೆದಾಡು; ಅತ್ತ ಇತ್ತ ಓಡಾಡು: ನೀಡನಿಕಾಯದತ್ತಲಾದಂ ಮನಮಿತ್ತುವೆಣ್ದೆಸೆಯೊಳಳ್ಳಿಱಿ ದಾಡುವ ಪಕ್ಷಿಸಂಕುಳಂ (ದಶಕು. ೧೧-೨); ಈ ಕಳ್ಳಿಯ ಬೇಲಿವಳ್ಳಿ ಯೊಳಗಳ್ಳಿಱಿದಾಡುತೆ ಜಳ್ಳವೋದೆವು (ಅಪ್ರತಿ. ೧೪-೩೮).
[ಅಳ್$_0$ + ಇಱು$_1$]

**ಅಳ್ಳಿಱು$_2$** (ನಾ). ಧ್ವನಿ; ಶಬ್ದ; ಸದ್ದು: ನರನ ನಿಷ್ಠುರ ಸಿಂಹರವವಿದೆ ತುರಗಪಳ್ಳಿಱು ಸಾಱುತಿದೆ ಸಂಗರಕೆ ಸಾಹಸಮಲ್ಲ ಮೊಳಗಿದನೆಂದನಾ ದ್ರೋಣ (ಕುವ್ಯಾವಿ. ೭-೧೪). [< ಅಳ್ಳಿಱು$_1$]

**ಅಳ್ಳಿಱಿಸು** (ಕ್ರಿ). ಅಲುಗಿಸು; ಅದುರುವಂತೆ ಮಾಡು; ಸ್ಪಂದನಗೊಳಿಸು; "ಬಾರಿಸು" (ಚತುನಿ. ೮೭ ಕಿ); ಆ ತನೂದರಿಯರಾನಾಭೀಯನ ಮನಸ್ಸರಸ್ತಟಮಂ ತಮ್ಮ ವಳಿತ್ರಯ ತರಂಗಂಗಳಿಂದ ಮಳ್ಳಿಱಿಸಿಯುಂ (ಆದಿಪು. ೮-೨೪ ವ). [ಅಳ್ಳಿಱು$_1$ + -ಇಸು$_3$]

**ಅಳ್ಳು$_1$** 'ಅಲ್ಲು$_2$' ನೋ.

**ಅಳ್ಳು$_2$** (ನಾ). ಅಂಗಡಿ ಸಂತೆಗಳಲ್ಲಿ ಧಾನ್ಯ ಆಳೆಯುವ ಕೂಲಿಗಾಗಿ ಕೊಡುವ ಧಾನ್ಯ: ಶ್ರೀ ಭೈರವದೇವರ ಸನ್ನಿಧಿಯ ಸಂತೆ ಕಿಲವಾಗಿರಲಾಗಿ ಪ್ರತಿಹುಟ್ಟಿಸಿ ಅಳ್ಳು ಆಡಿಕಾಸು ಸಹ ದ್ರವ್ಯಮುಖದಿಂ ದೇವರ ದೇವತಾರಾಧನೆಗೆ (ಸೌಇಇ. IX–ii, ೫೩೨-೯; 1530).
[ದೇ. ‖ ತಮಿ. ಅಳ್ಳು]

**ಅಳ್ಳೂಮು** (ನಾ). ಅಣಿಲು; ಅಳಿಲು; ಇಣಚಿ (ದಕ. ಕಿ). [?]

**ಅಳ್ಳೆ$_1$** (ನಾ). **೧.** ಹೊಟ್ಟೆಯ ಒಂದು ಪಕ್ಕ; ಪಕ್ಕೆ: ಮಡಕಾಲ್ ಕಣ್ ಕಿವಿ ಮೂಗು ಬಾಯ್ ಬಸಿಱುಗುರ್ ಪುರ್ವಳ್ಳೆ ಪಲ್ ಕೆಕ್ಕೆ ಕಾಲಡಿಯೆಂದಿಂತಿವನುರ್ಚಿಪೋದುವಿಸೆ ತತ್ಸ್ವಾಜನ್ಯ ಕಂದಾಂಕುರಂ (ಶಾಂತಿಪು. ೪-೧೭); ಅಳ್ಳೆ[ಪಾಠಾಂ. ಮೆಳ್ಳೆ]ಯಂ ಕುತ್ತೆಯುಮಿರ್ಕುಳೊಳೊತ್ತೆಯುಂ (ಅಜಿಪು. ೧೧-೧೦ ವ); ಉಗಿದು ಹಾಯ್ಕುವ ಖಳನ ನಿಡುದೋಳುಗಳು ಬಳಲಿದವಳ್ಳೆಹೊಯ್ದವು (ಕುವ್ಯಾಸ. ೧೩-೨); ಕಿಡಿಗೆದಱುವ ಬಾಯಿ ಮಿಂಚೇಳ್ವ ಕಣ್ಣುಸುಮಿಡಿವಳ್ಳೆ ನಸುಹೆಚ್ಚಿದುಸುರು (ಭರಚ. ೧೪-೧೨).
[ದೇ. ‖ ಮಲ. ಅಳ್ಳಿ; ತುಳು. ಅಳ್ಳೆ, ಅಲ್ಲೆ]

**ಅಳ್ಳೆ$_2$** (ನಾ). ಪೊಳ್ಳಾಗಿರುವಂಥದು; ಸಡಿಲ; ಶಿಥಿಲ; ದುರ್ಬಲ. 'ಅಳ್ಳೆಗೊಂಬು', 'ಅಳ್ಳೆಜೊಳ್ಳೆತನ' ಪರಾ. [?]

**ಅಳ್ಳೆ$_3$** (ನಾ). ಎಡಿ: ಈ ಬಾಣಗಳೂ . . . ನನ್ನ ಕವಚವನ್ನು ಹೊಕ್ಕು ಅಳ್ಳೆಯ ಬಸುರುಹೊಟ್ಟೆಯನ್ನು ಸೀಳಿಕೊಂಡು ಹೊರಡುವ ಮರಿಗಳ ಹಾಗೆ ನನ್ನ ಪ್ರಾಣಗಳನ್ನು ಅಪಹರಿಸುತ್ತವೆ (ಕೃವಾಭೀ. ೧೮೮). [?]

**ಅಳ್ಳೆಕುಡಿ** (ನಾ). ಪಕ್ಕೆಯ ಕಡೆ; ಅಳ್ಳೆಯ ತುದಿ (ದಕ. ಕಿ).
[ಅಳ್ಳೆ$_1$ + ಕುಡಿ$_2$]

**ಅಳ್ಳೆಗುಕ್ಕು** (ನಾ). ಪಕ್ಕೆಯನ್ನು ತಿವಿಯುವುದು: ಭಾವ ಸಿಕ್ಕಿದನೆಂದು ಸಭೆಯ ವಿಭಾವರೀಚರರುಬ್ಬಿ ನಗೆಯಲಿ ಪಾವಮಾನಿಯ ಮುಕ್ಕುಱಿಕ್ಕಿದರಳ್ಳೆಗುಕ್ಕಿನಲಿ [ಪಾಠಾಂ. ಗುತ್ತಿನಲಿ] (ತೊರರಾ. ೫-೭-೪೬).
[ಅಳ್ಳೆ$_1$ + ಕುಕ್ಕು$_2$]

**ಅಳ್ಳೆಗುತ್ತು** (ಕ್ರಿ). = ಅಳ್ಳೆಗುಕ್ಕು. 'ಅಳ್ಳೆಗುಕ್ಕು' ಶಬ್ದದ ಪ್ರಯೋಗದ ಪಾಠಾಂತರವನ್ನು ನೋಡಿ. [ಅಳ್ಳೆ$_1$ + ಕುತ್ತು$_2$]

**ಅಳ್ಳೆಗೊಂಬು** (ನಾ). ಸಣ್ಣಕೊಂಬೆ; ತೂರಲು ಕೊಂಬೆ; ರೆಂಬೆ: ತೆಱಂದಿಱಿದಳ್ಳೆಗೊಂಬಿನೊಳ್ ಪಾಯ್ವುದುವೊಂದೆ ಪಣ್ಣ ರಸಮಂ ಸವಿದಾಱದೆ ಚಂಚುವಂ ಕೆಲಕ್ಕುಯ್ವುದುಂ (ಶಾಂತಿಪು. ೧-೬೩); ಮಾಮರನಳ್ಳೆಗೊಂಬಿನೊಳ್ ಮಿಳಿರ್ವೆಳವಳ್ಳಿಬಾಲಂ . . . ಎಂಬಿನಂ ಮನಂಗೊಳೆ ಮಧುಮಾಸಕೇಸರಿ (ಅಜಿಪು. ೬-೨೩); ತಳ್ತ ನಾನಾವಿಧದಳ್ಳೆಗೊಂಬು ಸೆಳೆಗೊಂಬೆಳೆಗೊಂಬುಗಳಿಂದಮೊಪ್ಪುವಿಮ್ಮಾವಿನ . . . ಸೊಂಪೆಸೆಗುಂ ವನಾಂತದೊಳ್ (ಜಗವಿ. ೧೪-೨೬); ನಡೆಗಳೊಳಂಚೆ ನುಣ್ಗುರುಳೊಳಾಱಡಿ ತೋಳ್ಗಳೊಳಳ್ಳೆಗೊಂಬು (ಕಬ್ಬಿಕಾ. ೯೨).
[ಅಳ್ಳೆ$_2$ + ಕೊಂಬು$_2$]

**ಅಳ್ಳೆಗೊಬ್ಬು** (ನಾ). ಕೊಬ್ಬು; ಮೈಕೊಬ್ಬು (?): ಕೊಳ್ಪದೀ ಧನುವೀತನುಬ್ಬಿನೊಳಳ್ಳೆಗೊಬ್ಬಿನೊಳೌಂಕಿ . . . ಬಿಲ್ಲ ಬಿಡದವನಿಯಲಿ ಬಿದ್ದನು (ಕುವ್ಯಾಅ. ೩೦-೨೩). [ಅಳ್ಳೆ$_1$ + ಕೊಬ್ಬು$_2$ (< ಕೊರ್ವು$_2$)]

**ಅಳ್ಳೆಜೊಳ್ಳೆತನ** (ನಾ). ನಿಸ್ಸಾರವಾಗಿರುವುದು: ಮುಸುಮುತ್ತಂತೆ ತೆರಳ್ದ ತನ್ನ ಮೊಗಮಂ ಕಂಡಳ್ಕನೋ ಕೂಡೆ ಜೋಲ್ದು ಸಡಿಲ್ದಿರ್ದೊಡಳ್ಳೆಜೊಳ್ಳೆತನಮಂ ಮೇಣ್ಕಾಣನೋ (ಆದಿಪು. ೨-೪೫).
[ಅಳ್ಳೆ$_2$ + ಜೊಳ್ಳೆ + -ತನ]

**ಅಳ್ಳೆಜೊಳ್ಳೆಯ** (ನಾ). ನಿಸ್ಸಾರನಾದವನು; ಅಶಕ್ತ: ಆಧಿಗಳುಮನೇಕವಿಧವ್ಯಾಧಿಗಳುಂ ಬಾಧಿಸುತ್ತುಮಿರೆ ನರಜನ್ಮಾಂಭೋಧಿಯೊಳಗರ್ದು ದುರಿತವಿರೋಧಿಗಳಳ್ಳೇಱೊಳಳ್ಳೆಜೊಳ್ಳೆಯನಾದೆಂ (ಅಜಿಪು. ೨-೮೩). 'ಅಳ್ಳೆ ಜೊಳ್ಳೆತನ' ಪರಾ. [ಅಳ್ಳೆ$_2$ + ಜೊಳ್ಳೆ + -ಅ$_7$]

**ಅಳ್ಳೆದೆ** 'ಅಳ್ಳೆರ್ದೆ' ನೋ.

**ಅಳ್ಳೆದೆಗೊಳ್ಳು** (ಕ್ರಿ). ಎದೆಗೆಡು; ಧೈರ್ಯಗುಂದು; ಧೃತಿಯಿಲ್ಲವಾಗು: ಒದಱಿದುವು ರಣವಾದ್ಯಚಯವಳ್ಳೆದೆಗೊಳಲು ಬ್ರಹ್ಮಾಂಡ (ತೊರರಾ. ೬-೧೭-೧೩).
[ಅಳ್ಳೆದೆ (< ಅಳ್ಳೆರ್ದೆ) + ಕೊಳ್ಳು (< ಕೊಳ್$_1$)]

**ಅಳ್ಳೆಬಾಱು** (ಕ್ರಿ). ಪಕ್ಕೆಗಳು ಹೊಡೆದುಕೊಳ್ಳು, —ಕಂಪಿಸು: ಕ್ರತುಗಳಡಗಿದವಖಿಳ ಸುರರಾಹುತಿಗಳಕ್ಕುಡಿಸಿದವು ಕವ್ಯಸ್ಥಿತಿಗಳೋಸರಿಸಿದವು ಧಾರ್ಮಿಕರಳ್ಳೆಬಾಱಿದವು [ಪಾಠಾಂ. ಅಳ್ಳೆಬಾಱಿದರು] (ತೊರರಾ. ೧-೮-೪೩). [ಅಳ್ಳೆ$_1$ + ಪಾಱು$_1$]

**ಅಳ್ಳೆರ್ದೆ, ಅಳ್ಳೆದೆ** (ನಾ). **೧.** ನಡುಗುವ ಎದೆ: ದೇಸೆಯುನಾಂತು ವಿಳಾಸದಿಂದಿಱುಂಕಿದ ನಿಱಿ ಗಂಡರಳ್ಳೆರ್ದೆಗಳಂ ತುಱುವೋಜೆಯನುಂಟುಮಾಡುವಂದದೆ ನಿಡುಗಣ್ಗಳೊಳ್ ನಡೆ (ಪಂಪಭಾ. ೪-೩೫); ಪೌರವನಂಗಳೊಳ್ ಕುಸುಮಸೌರಭಸಾರಸಮೀರಮಂದಸಂಚಾರಮೆ ಪಾಂಥರಳ್ಳೆರ್ದೆಯನಾರ್ದಿಸುವಂಗಜಬಾಣಮೋಕ್ಷಹುಂಕಾರಮೆ (ಪಂರಾಮಾ. ೧-೧೦೮); ಅಳ್ಳೆರ್ದೆ ಡಕ್ಕೆವಾಯ್ (ಅನಂಪು. ೨-೪೮); ಎಕ್ಕೆಪಾಱುವಳ್ಳೆರ್ದೆಯುಂ (ಕುಸುಮಾ. ೧೩-೪೬). **೨.** ಚಂಚಲವಾದ ಮನಸ್ಸು: ಅಬಲೆಯರಳ್ಳೆರ್ದೆಗಳ್ ಪುರುಷಗುಣಮನಱಿದೆಱಗುಗುಮೇ (ಆದಿಪು. ೧೨-೧೭); ಆನಂದವಾರಾಶಿಯೊಳ್ ಮುೞುಗಿರ್ದಳ್ಳೆರ್ದೆ ಮೂಡದಂತು ಕುವರಂ ಕೂಡಿರ್ದನಬ್ಜಾಕ್ಷಿಯೊಳ್ (ಅರ್ಧನೇ. ೩-೧೦೭). **೩.** ಹೆದರುವ ವ್ಯಕ್ತಿ; ಭಯಪಡುವ ವ್ಯಕ್ತಿ: ಕಲ್ಲೆರ್ದೆ, ಅಳ್ಳೆರ್ದೆ (ಭಾಷಾಭೂ. ೧೫೦ ಉದಾ). 'ಕಡುಗಲ್ಲೆರ್ದೆ' ಪರಾ. **ಅಳ್ಳೆದೆ: ೧.** ಅಳ್ಳೆದೆಯ ಮನ್ನೆಯರನೊಗ್ಗಿನ ಡೊಳ್ಳುಗರ ಕಟವಾಯ ಕೊಯ್ (ಕುವ್ಯಾದ್ರೋ. ೩-೨೦); ಅಳ್ಳೆದೆಯುವಳು ರೂಪಾಣಿಯೊಬ್ಬಳು ಲಜ್ಜೆಯಿಲ್ಲದೆ ನಿನಗೆಱಗಿದಳು (ಭರಚ. ೧೪-೯೬); ಅಂತಹ ಧೀರ ದಳಪತಿಯನ್ನು ಕಂಡ ಮಾತ್ರಕ್ಕೆ ಎಂತಹ ಅಳ್ಳೆದೆಯ ಸೈನಿಕನಾದರೂ ಉತ್ಸಾಹದಿಂದ ಯುದ್ಧ ಮಾಡುತ್ತಿದ್ದನು (ಸವಶಿ. ೫೨).

ಅಳ್ಳೆದೆಯಾಗು = ಭಯವುಂಟಾಗು: ಸುರಪುರಕೆ ಸಂಧಾನವೋ ನಾನಱಿಯೆನಳ್ಳೆದೆಯಾದುದೆನಗೆಂದ (ಕುವ್ಯಾಕ. ೧೪-೧೧).
[ಅಳ್$_3$ + ಎರ್ದೆ]

**ಅಳ್ಳೆರ್ದೆತನ** (ನಾ). ಅಂಜಿಕೆ; ಅಧೈರ್ಯ: ಅಳ್ಳೆರ್ದೆತನವ ಕಾಣಿಸದೊಯ್ಯನೆ ತನಗುಳ್ಳ ವಿದ್ಯಾಕಲೆಗಳನು ಒಳ್ಪಿದಳಂತೆ ತೋಱಿಸಿದಳು (ಕುರಾಸಾಂ. ೨೫-೧೮); ಆತ್ಮನೊಳಿರ್ದ ಮಲೀಮಸಂಗಳಂ ಶೋಧಿಪೆನೆಂಬೆನಳ್ಳೆರ್ದೆತನಂ ಬಿಡದಾಯ್ತು (ಅಪರಾ. ೨೩). [ಅಳ್ಳೆರ್ದೆ + -ತನ]

**ಅಳ್ಳೆರ್ದೆವಡೆ** (ಕ್ರಿ). ಅಧೀರತೆಯನ್ನು ಪಡೆ; ಹೆದರು: ಆಯತಿಗೆಟ್ಟಳ್ಳೆರ್ದೆವಡೆದಱಿವಿನ ಬೀಯದೆ ಮಱೆದೊಱಗಿದಳು (ಜಯಕಾ. ೪-೩೬). [ಅಳ್ಳೆರ್ದೆ + ಪಡೆ$_1$]

**ಅಳ್ಳೆವಿಳ್ಳೆ** (ನಾ). ಚದರಿಹೋಗುವುದು; ಹರಿಹಂಚಾಗುವುದು.

ಅಳ್ಳೆವಿಳ್ಳೆಯಾಗು = **೧.** ಚದರಿಹೋಗು; ಅಸ್ತವ್ಯಸ್ತವಾಗು: ಅಂಬರಂಬರಂ ಬಗಿದು ನಿಮಿರ್ವ ತೆರೆಗಳೆಂಬ ಗಿರಿಗಳ ಮೇಗೆ ಕೃತಕಗಿರಿಗಳಿರ್ಪಂತಿರ್ದ ವೀಣಾಧರ ಕಿನ್ನರ ಪನ್ನಗಾಮರರುಮನೋಳಿವಟ್ಟು ಬರ್ಪ ಶಂಖದ ಬಳ್ಳವಳ್ಳಿಗಳುಮನಳ್ಳೆವಿಳ್ಳೆಯಾಗಿ ಪೋಗಲೀಯದೆ (ಆದಿಪು. ೧೨-೭೯ ವ); ಪಗಲಿನನುವರದೊಳಳ್ಳೆವಿಳ್ಳೆಯಾದ ಪಾಂಡವರನಿರುಳೊಳ್ ಗೆಲ್ವೆನೆಂದು (ಪಂಪಭಾ. ೧೨-೪ ವ); ಬಲವದ್ವಿಪಕ್ಷ ತ್ರಿಂಶದಕ್ಷೋಹಿಣೀಬಲ ಪುನಃಪುನರಾಗಮನ ಸಂಘಟ್ಟದಿಂದಳ್ಳೆವಿಳ್ಳೆಯಾದ ಯಾದವದೇಶದ ಜನಕ್ಲೇಶಮಂ (ಜಗವಿ. ೮-೩ ವ). **೨.** ಅತ್ಯಾಯಾಸ ಹೊಂದು: ಪಯಣದೊಳಳ್ಳೆವಿಳ್ಳೆಯಾಗಿ ಬಂಬಲ ಬಾಡಿದ ತನುಲತೆಗಳುಂ (ಆದಿಪು. ೧೧-೭೦ ವ). [ಅಳ್ಳೆ$_1$ + ವಿಳ್ಳೆ. / ತಮಿ. ವಿಳಲ್ = ಬೇರ್ಪಡು]

**ಅಳ್ಳೆವೊಯ್, ಅಳ್ಳೆಹೊಯ್** (ಕ್ರಿ). ಅಳ್ಳೆಬಡಿದುಕೊ; ಪಕ್ಕೆ ಹೊಡೆದುಕೊ: ಶಿಲೆ ಮುಂದಿರೆ ಭೋಂಕನೆ ಕಂಡು ಮಿಂಡರುತ್ಪಾಟಿಪೆವೆಂದು ಪೂಣ್ದಖಿಳಶಕ್ತಿಯಿನೆತ್ತುತುಮಳ್ಳೆವೊಯ್ಯೆ ನಿಃಪಾಟವರಾಗಿ ಪಿಂಗೆ (ವರ್ಧಪು. ೩-೪೫); ಬಸವಳಿದಳ್ಳೆವೊಯ್ದೆದೆಯಾಱಿ ಮೈ ನುಗ್ಗುನುಸಿಯಾಗಿ ಜಡರು ಕೂಡುವರು (ಭರಚ. ೧೧-೧೨೬). **ಅಳ್ಳೆಹೊಯ್:** ಬಡವರಿಗೆ ಬದುಕಿಲ್ಲವೆಂದಳ್ಳೆಹೊಯ್ವಂತೆ ತೆರೆಹೊಯ್ಲಿನಿಂ ಮೆರೆದುದು (ನವಮೋ. ೨-೯). [ಅಳ್ಳೆ$_1$ + ಪೊಯ್$_1$]

**ಅಳ್ಳೆಹೊಯ್** 'ಅಳ್ಳೆವೊಯ್' ನೋ.

**ಅಳ್ಳೆಹೊಯ್ಕ** (ನಾ). ಹೆದರಿ ಅಳ್ಳೆಬಡಿದುಕೊಳ್ಳುವವನು; ಹೇಡಿ: ಕೊಲ್ಲದಿರು ಕೋಡಗಗಳನು . . . ಇದಿರಾಗುತ್ತ ಕೈದೋರು ಅಳ್ಳೆಹೊಯ್ಕರ ಹೊಯ್ದು ಫಲವೇನುಳ್ಳ ಸತ್ವರ ತೋರು (ಮೂಲರಾ. ೩-೧೭). [ಅಳ್ಳೆಹೊಯ್ (< ಅಳ್ಳೆವೊಯ್) + -ಕ$_3$]

**ಅಳ್ಳೇಱು** (ನಾ). ಬಲವಾದ ಪೆಟ್ಟು, —ಹೊಡೆತ (?): ತಾರಕಾಸಂಕುಲಂ ತೋಳ್ಗಳದೊಂದಳ್ಳೇಱಿನೊಳ್ ಪೂವಲಿವೊಲುದುರ್ವಿನಂ . . . ಎಸೆದತ್ತಿಂದ್ರನಾನಂದನೃತ್ಯಂ (ಆದಿಪು. ೭-೧೨೦); ಅಳ್ವಾಡೆ ನರನ ಕೂರ್ಗಣೆಯಳ್ಳೇಱಿಂಗಳ್ಕಿ ಬಳ್ಕಿ ಕುರುಬಲಮೆಲ್ಲಂ ಬೆಳ್ಪೋಟವೋಡೆ (ಕಾವ್ಯಾವ. ೨೨೪). [ಅಳ್$_4$ + ಏಱು$_4$]

**ಅಳ್ಳೊಳ್ಳಿಬಾವಾ** (ನಾ). ಭಿಕ್ಷಕ್ಕಾಗಿ ಬರುವ ಒಂದು ಬಗೆಯ ವೇಷಧಾರಿ (?): ದೇವರುಗಳಂತೂ ಧೂಳ ಹತ್ತಿ ಅಳ್ಳೊಳ್ಳಿಬಾವಾ ಆದವು (ಶಿಭ್ರಮ. ೪೯). [ಅಳ್ಳೊಳ್ಳಿ$_0$ + ಬಾವಾ]

**ಅಳ್ಳೊಱತೆ** (ನಾ). ಸ್ವಲ್ಪವಾಗಿ ನೀರು ಉಕ್ಕುವ ಚಿಲುಮೆ; ನೀರಿನ ಸಣ್ಣ ಒರತೆ, —ಬುಗ್ಗೆ: ಅಂತು ಪೋಪಿನಮೊಂದೆಡೆಯೊಳಿಡಿದ ಮೞಲೇರಿಗೊಂಡು ಬಳಸಿ ತಳಿದಳ್ಳೊಱತೆಯೊಳ್ . . . ನೀರನುಂಬೆರಲೆಯಂ ಬರಲೊಲ್ಲದೆ ನೋಡಿದಂ ನೃಪಂ (ಲೀಲಾವ. ೬-೫೫, ೫೬).
[ಅಳ್$_3$ + ಒಱತೆ (< ಒಱಂತೆ)]

**ಅಱ$_1$**, ಅರ$_3$ (ನಾ). ಬಹಳ ಕಾಲ ಮಳೆ ಬೆಳೆಗಳಿಲ್ಲದುದು ; ಬರ ; ಕ್ಷಾಮ ; ಅಭಾವ : ಆತಗಳ ವಿಮಲಾಂಶದಲಿ ಸಂಜಾತನಾದನಿಗವನಿಸುರ ಸಂಪ್ರೀತಿಯಱವೇ ಸಹಜವಿನಯವಿಶಾಲ ನೀನೆಂದ (ನಿಭಾಗ. ೮–೧೬–೫). **ಅರ$_3$** : ಅರನಿಲ್ಲ ಬರನಿಲ್ಲ ಸೂರೆಧಾಳಿಗಳಿಲ್ಲ (ಜಿನರಾ. ೧–೪೨) ; ಅತ ಅರದಲ್ಲಿಯೂ ಒಂದೆ ಬರದಲ್ಲಿಯೂ ಒಂದೆ(ಗಾದೆ); ಅಕ್ಷಯ ಸಂವತ್ಸರದ ಅರದಲ್ಲಿ ಬಹಳ ಜನ ಸತ್ತರು (ರೂಢಿ). [< ಆಱು$_1$]

**ಅಱ$_2$**, ಅರ$_2$ (ನಾ). **೧.** ಧರ್ಮ ; ನ್ಯಾಯ : ಭೋಗಿಪೆನೆನ್ನ ಜವ್ವನಮುಮೀ ಧನಮುಂ ತವುವನ್ನೆಗಂ . . . ಅನ್ನೆಗಮತ್ತಱನಂ ತಗುಳ್ವೆನೆಂತಾಗಿಯುಮೆಂಬ ನಿನ್ನ ಮೊಲಗಱ್ತಲೆಗಾಂ ಬೆಱಗಾದೆಂ (ಆದಿಪು. ೩–೬೩) ; ಮಾರ್ಗಂದಪ್ಪಿದ ಕುರುಡರನಱದ ಬಟ್ಟೆಗುಯ್ವರೆ ಪಿರಿಯರ್ (ಶಾಂತಿಪು. ೪–೧೦೧) ; ಅಱನಲ್ಲದೆ ಬಱನಿಲ್ಲ ಪೆರ್ಚಲ್ಲದೆ ಬೆರ್ಚಲ್ಲ (ಅಜಿಪು. ೧–೨೧ ವ) ; ಅಱನಿಲ್ಲದೆ ಪಾಪಮಿಲ್ಲ (ಅರ್ಧನೇ. ೧–೫೮) ; ಕೊಲ್ಲದುದೆ ದಿಟದಿನಱಂ (ಕಬ್ಬಿಕಾ. ೨೨೩). **೨.** ಧರ್ಮಕಾರ್ಯ : ದಾಱಿಯೊಳರಿಗಳನಳಱಿಸಿ ಪಾಱಿಯೊಳಳವಡಿಸಿ ನೆಲನನಱನಂ ಕಱಿವಾ ಕೇಱಿಯೊಳೆ ನಲಿದು ತನ್ನಯ ಪೀಱಿಗೆಯಂ ನೆಱಿಯೆ ನಿಱಿಸಿದಂ ಧರಣೀಶಂ (ಶಬ್ದಾನು. ೧೪೦ ವ್ಯಾಖ್ಯಾ) ; ವಱಂ ಪಳಿಕುಂ ಗೈಮೆ ಮಡಲ್ಗುವೊಳ್ಪಮಱಂ ಪೆಂಪೇಱುಗುಂ . . . ತಳಿರ್ವನ್ನಂ ಚಿಕದೇವರಾಯನ ದಯಾಂಕೂರಂ ಕಟಾಕ್ಷಾಂತದೊಳ್ (ಚಿಕವಿ. ೫–೧೦೬). **೩.** ಯಮಧರ್ಮರಾಜ : "ಅಱ . . . ಜವಂ, ಜಗುನೆಯ ಪಿರಿಯಂ — ಈ ೫ ಯಮಂಗೆ ಪೆಸರ್" (ಕಶಸಾ. ೩–೩೫) ; ಅಱನ ಮಗಂ ಪ್ರಾರ್ಥಿಸೆ ಬಾಂದೊಱಿಯ ಮಗಂ ಮಾಡೆ ಸಂಧಿಯಾದಪುದೆನುತುಂ ಮಱುಗುವೆಂ (ಗದಾಯು. ೧–೭೨). **ಅರ$_2$** : ೩. ಇರದೆ ಬೆಳ್ದಿಂಗಳಂ ದಾವಾಗ್ನಿಯಂ ಮಾಳ್ಪರರನೊಡೆದುಳಿದು ಮೃತ್ಯುವಿನ ಗಂಟಲ ಮೆಟ್ಟಿ ದಾಡೆಯಂ ಕೀಳ್ವಭಟರು (ಗುರುಚಾ. ೨–೬೧). [**ದೇ.** ‖ **ತಮಿ. ಮಲ. ಅಱ**]

**ಅಱಂಬು** 'ಅಱುಂಬು' ನೋ.

**ಅಱಂಬುಗಱಿ**, ಅಱಬುಗಱಿ (ಕ್ರಿ)· ಉತ್ಪಾತವೇ ಮೊದಲಾದ ದೋಷ ನಿವಾರಣೆಗಾಗಿ ಗೋವಿನಿಂದ ಹಾಲುಕರೆ (?) : ತ್ರಿವಿಧೋತ್ಪಾತದೊಳುರ್ವಿ ನಾಭಸವಿಕಾರಂ . . . ಮಹೀದಾನಂಗಳಂ ಕೊಟ್ಟು ಹೋಮವನೀಶಾನ್ಯದೊಳೊಯ್ದಱಂಬುಗಱಿದಂದಾ ದೋಷಮುಂ ಪಿಂಗುಗುಂ (ಲೋಕೋಪ. ೪–೪) ; ನಾಳೆ ನೀವೆಲ್ಲಂ ನೋಂಪಿಗೆ ಬರ್ಪುದಲ್ಲಿರ್ದಱಂಬುಗಱಿವುದರ್ಚಿಸುವುದೆಂದು ಪೇೞ್ದು (ಬಂಹರಿ. ೬–೨೩ ವ). **ಅಱಬುಗಱಿ** : ಅನಂತರಂ ಸಮಸ್ತ ಗೋಕುಳ ಸಮೇತಂ ಗೋಪನಿಕರಮುಂ ತತ್ಕುಟುಂಬಿನೀಸಹಿತಂ ನೆರಪಿಕೊಂಡು ನಂದಂ ಸ್ವಕೀಯ ದಾರದಾರಕೋಪೇತನಾಗಿ ಬಂದಾ ಯಕ್ಷಿಯ ಸಮಕ್ಷದೊಳಱಬುಗಱಿದರ್ಚಿಸಿರ್ದನಿರೆ (ನೇಮಿಪು. ೬–೧೦೪ ವ).
[ಅಱಂಬು (< ಅಱುಂಬು) + ಕಱಿ$_1$]

**ಅಱಂಬೆ** 'ಅಱಮೆ' ನೋ.

**ಅಱಕೆ$_1$** (ನಾ). **೧.** ಅರಸುವುದು ; ಹುಡುಕುವುದು : ಮುರಹರ ಸರಸಿಜಾಂಬಕ ರಾಮ ರಕ್ಷಿಸು ತರಳನಲಿ ಗುಣದೋಷದಱಕೆಯ ದೇವ (ಕುವ್ಯಾಭೀ. ೬–೩೭) ; ಮಸಗಿದುದು ಪರಿವಾರ ಕೌರವವಸುಮತೀಶ್ವರನಱಕೆಯಲಿ ದಳ ಪಸರಿಸಿತು ಬಿಡದಱಸಿ ಕಂಡರು (ಕುವ್ಯಾಗ. ೨–೧೧) ; ಭೂತವೇತಾಳಸಂಕುಲದಡಗಿನಱಕೆಗಳ ಸುಡುಗಾಡೊಳಾ ಮಂತ್ರಿ ಚಂಡಿಕಾಲಯದೆಡೆಗೆ ನಡೆತಂದನು (ಜೈಮಿಭಾ. ೩೧–೫೫). **೨.** ಬಯಕೆ ; ಆಸೆ ; ತೃಷ್ಣೆ : "ವೃಷಸ್ಯಂತೀ, ರತಾರ್ಥಿನೀ – ಈ ೨ ಸುರತದಱಕೆಯವಳ್" (ಹಲಾಯು. ೮೦–೩೩೧) ; ಎಲೆ ಸಿದ್ಧರಾಮಯ್ಯ ನಿನ್ನ ಮನದಱಕೆಯುಂ ಫಲಿಸಿತೇ ಫಲಿಸಿದತ್ತು (ಸಿದ್ಧರಾ. ೩–೧೫) ; ಬಸುಱ ಬಱನ ಕಳೆಯೆಂದೆಂಬ ಕನ್ನೆಯಂ ನೋಡಿ ನಸುನಗುತಾವುದಱಕೆಯೆನೆ (ಸಿದ್ಧರಾ. ೬–೩) ; ಮಾರಿಯಱಕೆಗಳಡಗದಂತಕನೂರು ತುಂಬದೆ . . . ಡಾಕಿನಿಯರಿಗೆ ಡೊಳ್ಳು ಸಾಲಿಡದೆ (ಕುವ್ಯಾಉ. ೧೨–೧೦). [ಅಱಸು$_1$ + -ಕೆ$_1$]

**ಅಱಕೆ$_2$** (ನಾ). **೧.** ಬಾಯಾರಿಕೆ ; ದಾಹ ; ತೃಷೆ : ನೀರಱಕೆ ತೊಟ್ಟನೆ ಮಾಣ್ದುದು (ಸೂಕ್ತಿಸು. ೧೦–೨೩೭) ; ಅಱಕೆಯಿಂ ವಾರ್ಧಾರೆಯ ಪೀರಿ ಚಾತಕ ಮೆಱಿದುವು ಹರುಷದುಬ್ಬಿನೊಳು (ಅನಂಚ. ೧೨–೨೨). **೨.** ಎಷ್ಟು ನೀರನ್ನು ಕುಡಿದರೂ ಬಾಯಾರಿಕೆಯಡಗದ ಒಂದು ರೋಗ : ಮೃತ್ಯುವಿನಱಕೆಗೌಷಧವರೆವವೊಲು (ಕುವ್ಯಾಭೀ. ೪–೮೦).
[ಆಱು$_1$ (< ಆಱು$_1$) + -ಕೆ$_1$]

**ಅಱಕೆ$_3$** (ನಾ). ಕೊರತೆ ; ಕಡಮೆ. 'ಅರಕೆ', 'ಅಱಕೆಗೆಡು' ಪರಾ.
[ಆಱಿ$_1$ + -ಕೆ$_1$]

**ಅಱಕೆಕಾಱ** (ನಾ). **೧.** ಹುಡುಕುವವನು ; ಅನ್ವೇಷಕ : "ಅನ್ವೇಷ್ಟಾ, ಅನುಪದೀ– ಈ ೨ ಅಱಕೆಕಾಱಂ" (ಹಲಾಯು. ೬೨–೨೨೫). **೨.** ಅಭಿಲಾಷೆಯುಳ್ಳವನು ; ಇಷ್ಟವುಳ್ಳವನು : ಉಱುಬಿನುಸುರಳ್ಳಿಗಳ ಮಿಗೆ ತೂಪಿಱಿವ ರಕುತದ ರಣದ ನಾಟಕದಱಕೆ [ಪಾಠಾಂ. ದಱಿಕೆ, ದಿಱಿತ] ಕಾಱರು ತಾವುರಿಯಲೊದಗಿದರು ಸರಿಸದಲಿ (ತೊರರಾ. ೬–೧೪–೨೨). [ಅಱಕೆ$_1$ + -ಕಾಱ]

**ಅಱಕೆಗೆಡು** (ಕ್ರಿ). ಕೊರತೆ ತಪ್ಪು : ಆಱಿವಿಲ್ಲದವರಿಗೆ ಆಚಾರವಿದ್ದರೆ ಅಱಕೆಗೆಟ್ಟು ಸುಖವೆಂದಪ್ಪುದಯ್ಯ (ಮದಾದೇ. ೫೬–೧೩೯).
[ಅಱಕೆ$_3$ + ಕೆಡು]

**ಅಱಕೆಗೊಳ್** (ಕ್ರಿ). ಒಣಗು ; ಶುಷ್ಕವಾಗು : ಅಂಗೈಯೊಳಗಣ ಹಂಸೆ ಹಾಲನೊಲ್ಲದೆ ನೀರ ಕುಡಿಯಿತ್ತು ನೀರು ಬಾಯಾಱಿ ನೀರಡಸಿ ಅಱಕೆಗೊಂಡಿತ್ತು (ಆದವ. ೧೦೪). [ಅಱಕೆ$_2$ + ಕೊಳ್$_1$]

**ಅಱಕೆವಡು** (ಕ್ರಿ). ಬಯಕೆಯನ್ನು ಹೊಂದು : ಆಸೆಪಡು : ಕಱಿಗೊರಲ ವೃಡನು ನೆಱಿಗೋನಿಕರ ಪಾಲ್ಗೊಂಡು ಅಱಕೆವಟ್ಟಾನಂದಮಯನಂತದಂ ಕಂಡು (ಚಂಡೇರ. ೭೮–೨೪) ; ಅಱಕೆವಟ್ಟುಳ್ಳರಲೆ ನೀಳನೈದಿಲ್ . . . ಮಿಱುಗುತ್ತೆ ಮೂಡಿದುದು ನಾಡೆ ಜೋಡೆಯರ ಕಯ್ಸೆಱಿವನೆ ಚಕೋರಿಯೆರ್ದೆಯೊರಲಿತ್ತು ಬಿರಯಿಗಸುವೊರೆ ಜೊನ್ನದೊಱಿ ನೆಱಿವೆಱಿ (ಉದ್ಭದೇ. ೪–೧೧). [ಅಱಕೆ$_1$ + ಪಡು$_1$]

**ಅಱಕೆಱಿ** (ನಾ). ಒಂದು ಊರಿನ ಹೆಸರು : ಅಱಕೆಱಿ ಹುಯಿ[ಲೊ]ಳು ಸತ್ತನ್ (ಮೈಆರಿ. ೧೯೨೬, ೯೦–೩ ; ೯ನೆಯ ಶತ). [ಅಱ ? + ಕೆಱಿ]

**ಅಱಗಂಜಿ** (ನಾ). ಧರ್ಮಕ್ಕಾಗಿ ಕೊಡುವ ಗಂಜಿ : ಕೂಱಿರ್ದಂತಱ ಗಂಜಿಯಂ ಕುಡಿವ ಪೊನ್ನಿರ್ದಂತೆ ಕರ್ಗಲ್ಲನತ್ಯಾಳಾಪಂ ಬಗೆಗೆಟ್ಟು ಕೊಳ್ವ ಧರಣೀಸಾಮ್ರಾಜ್ಯಮಿರ್ದಂತೆ ಬಂದಾಳಾಗಿರ್ಪ ವಿಭೂತಿಯಂ ಬಿಸುಟು ಭೈಕ್ಷಂಗೊಂಡು ತಾನುಣ್ಬ ಬೆಳ್ಳಾಳಂ ಪೋಲನೆ (ಧರ್ಮಾಮೃ. ೪–೪೮). [ಅಱ$_2$ + ಗಂಜಿ]

**ಅಱಗಂಡಿ** (ನಾ). ಯುದ್ಧಮಾಡುವವನು ನುಸುಳಿತಪ್ಪಿಸಿಕೊಳ್ಳಲು ಇರುವ ಅವಕಾಶ (?) : ಮನದೊಳೆನಸುಂ ಪೆಂಪಂ ಕಯ್ಕೊಳ್ಳದೇಳಿದರಪ್ಪ ದುರ್ಮನುಜರಿಱಿಯಲ್ ಮುನ್ನಂ ಬಂದಿರ್ದೊಡೇನಱ [ಪಾಠಾಂ. ನಱಿ] ಗಂಡಿಯಾಯ್ತೆನೆ ಸುಖವಿರಲಿಂ ಪೋಗಿಂ (?) ನಿರಾಕುಳಮೆಂದು ಘೋಷನೆವಿಡಿಸುತಂ ಬಂದಂ ಶಲ್ಯಂ ಮಹಾಬಲಗರ್ವಿತಂ (ಬಂಹರಿ. ೧೨–೩). 'ನುಸುಳುಗಂಡಿ' ಪರಾ. [ಅಱ$_2$ + ಕಂಡಿ$_1$]

**ಅಱಗಡಲ್** (ನಾ). ಧರ್ಮಕ್ಕೆ ಸಮುದ್ರ : ಅಱಗಡಲೆನಿಸಿದ ಸುಗುಣನ ಮೆಱಿವ ಪದದ್ವಂದ್ವಮೆಂಬ ಪಾಱಂ ಕಟ್ಟಟ್ಟಱಿನೆಯ್ದಿದವರ್ಗಲ್ಲದೆ ಪೆಱಗಡಲಂ ದಾಂಟಲಾರ್ಗಮರಿದೇಗೆಯ್ದುಂ (ನೀತಿಮಂ. ೮).
[ಅಱ$_2$ + ಕಡಲ್$_2$]

**ಅಱಗುಲಿ,** ಅರಗುಲಿ (ನಾ). ೧. ಧರ್ಮವನ್ನು ನಾಶಮಾಡುವ ವ್ಯಕ್ತಿ; ಧರ್ಮದ್ರೋಹಿ: ತೆಱಪನೆ ಪಾರ್ದಿರ್ಪರಂ ಮಾಯ್ದಱ[ಪಾಠಾಂ. ಱು]ಗುಲಿ ಜವಂ (ಆದಿಪು. ೪–೭೬); ಎಯ್ದಿದನಱು[ಱ]ಗುಲಿ ಕರ್ವೇಡನೆನ್ನ ಪೊಲಿಲಿಂಗಾಗಳ್ (ಕಾದಂಪೂ. ೧೮೩); ಅಱಿಯದೆ ಪೊಲಲಂ ಪುಗೆ ಕೆಲರಱ[ಪಾಠಾಂ. ಱು]ಗುಲಿ ಋಷಿಯರ್ಗೆ ಮುನಿದು ಕೊಂದು ಪಾತಕಿ ತೆಱಿದಂ ಪುಗಲೆಂದು ನಿರಯದರಱೆಪುಟಮಂ (ಪಂರಾಮಾ. ೯–೧೧); ಇದಿರ್ಚಿದ ಮಿಱ್ಱುವಟ್ಟಿತಿನ್ನಱಗುಲಿ ಮಾರಿಯೆಂ ಬರರಿಕುಮಾರಕರೊಚಿದೇವನಂ (ಮುಂಬರಾ. XI, ೨೨೨; 1162); ಅ ಗುಣವತಿಯನೇಗೆಯ್ದುಂ ತನಗೆ ಬಸದಾಗಿಸಲ್ಕೆಱಿಯದಱಗುಲಿ ಮಱುಗಿ ಕೋಪಾಟೋಪದಿಂ (ವರ್ಧಪು. ೧೫–೪೯ ವ); ಕಱುಗೋವಳರ ಕಳ್ಳರನು ತೋಱಿನುತ ಅಱು[ಱ]ಗುಲಿಯನೊತ್ತಿದೊಡೆ ಕಂಗಳು ಹೊಱಗೆ ಹಾಯ್ದುವು (ನಿಭಾಗ. ೧೦–೩೨–೪೯); ಗಾಜಿನ ಮಣಿಗಾಗಿ ಚಿಂತಾಮಣಿಯನು ತೀಱಗೆಡಿಸಿ ಕಳೆವಂತೆ ರಾಜರತ್ನವ ನೂಂಕಿದ ಶ್ರೀಧರಗಾಗಿ ರಾಜೇಂದ್ರನೇನಱು[ಱ]ಗುಲಿಯೊ (ನಾಗಕು. ೧೧–೪೯). ೨. ಬೇಡರವನು; ಬೇಟೆಗಾರ. (?). ೩. "ಅನ್ಯಾಯದಿಂದ ಕೊಲುವವ" (ಶಮುದ. ನ. ೧೯೭ ಅಡಿಟಿ). **ಅರಗುಲಿ : ೧.** ಯಾವ ಅರಗುಲಿ ಬೇಡ ಬೇಟೆಯ ಕಾಳರಕ್ಕಸತನವಿದೋ (ದ್ರಾಕ್ಷಿದಾ. ೩೭–೧೪); ನಿಪುಣೆಯರ್ ಮೂಳೆಯರರಗುಲಿಗಳ್ ಪೆಣ್ಗಳ್ ಕಿಡುನಡೆಯರ್ (ಸೌನಂದ. ೮–೩೩).
[ಅಱ್ಱ + –ಕುಲಿ]

**ಅಱಗುಲಿಗ** (ನಾ). = ಅಱಗುಲಿ ೧: ಅಱಗುಲಿಗ ಹಾರುವ ನೆರವಿ ಗೀಶಾಲಯದ ಕದವಂ ತೆಱಿವನೆ ಘಡ (ಸಾನಂಚ. ೯–೩೯).
[ಅಱಗುಲಿ + –ಗ$_2$]

**ಅಱಗುಲಿತನ** (ನಾ). ಧರ್ಮವನ್ನು ನಾಶಮಾಡುವುದು; ಧರ್ಮದ್ರೋಹ: ಶಿಶುಗಳ ಕೊರಲುಗಳ ಅಱು[ಱ]ಗುಲಿತನದಿ ಮಱಿಸಿ (ನೇಮಿಸಂ. ೧೫–೭೭). [ಅಱಗುಲಿ + –ತನ]

**ಅಱಗೆಱೆ** (ನಾ). ಆರದ ಕೆರೆ; ಬತ್ತಿಹೋಗದ ಕೆರೆ; ತುಂಬಿದ ಕೆರೆ: ಅಱಗೆಱೆ ಮಡು ಮೊದಲಾಗಿರೆ ಬಱಬಱ ಬತ್ತುವೊಡೆ . . . ತಡೆಯದಾ ಪುರಂ ಪಾಟಿಕ್ಕುಂ (ಲೋಕೋಪ. ೪–೪೭).
[ಅಱ್$_1$ + ಕೆಱೆ]

**ಅಱಗೇಡು** (ನಾ). ಸ್ವರೂಪದ ಹಾನಿ: ಕಿಱಿಯುಂದು ಲೋಕಮೆಱಗುವ ನೆ[ಱಿ]ದಡೆ ವಿಬುಧಾಳಿ ತುಷ್ಟಿವಡುವಮೃತಕರಂಗಱಗೇಡಾದುದನಱಿದಱಿದೆಱಗುವರೇಕಕಟ ರಾಜಪದವಿಗೆ ಮನುಜರ್ (ಧರ್ಮನಾ. ೫–೮೪).
[ಅಱಿ$_1$ + ಕೇಡು]

**ಅಱಚು** 'ಅಱುಚು' ನೋ.

**ಅಱದಿ** (ನಾ). ಒಂದು ಊರಿನ ಹೆಸರು: ಬೆಣ್ಣಗೂರ ಕಪ್ಪೊಲೆ ಪಾಣಸಾಮಿ ಮಗನ್ ಪುರೆ ಕಾಮುನ್ ನೂಱು ಮಾನಸದಿಂದ ಪೋಗುತಿರೆ ಅಱದಿಯೊಳ್ ಸತ್ತೋನ್ (ಎಕ. X, ಬೌರಿಂಗ್. ೪೫–೧೦; 880). [?]

**ಅಱದೊಱೆ** (ನಾ). ಒಂದು ನದಿಯ ಹೆಸರು: ಪಾನುಜ್ಞಲ್ ವಿಷಯೇ ಅಱದೊಱೆನದೀ ದಕ್ಷಿಣತಟೇ (ಎಕ. X, ಕೋಲಾರ. ೭೩–೬೭; 757).
[ಅಱ್$_2$ + ತೊಱೆ$_2$]

**ಅಱಬು** 'ಅಱುಂಬು' ನೋ.

**ಅಱಬುಗಱೆ** 'ಅಱಂಬುಗಱೆ' ನೋ.

**ಅಱಬೆ** 'ಅಱವೆ' ನೋ.

**ಅಱಮಂಟಪ** (ನಾ). ಧರ್ಮಸತ್ರ; ಧರ್ಮಮಂಟಪ (?): ಕನ್ಯಾದಾನ ಅಱಮಣ್ಣಪ ಅಗ್ಗಿ ××× ಅಲ್ಲಳ್ ಒಕ್ಕಲು . . . ಇತ್ತ ಧರ್ಮ್ಮ (ಎಕ. VIII, ಸೊರಬ. ೪೧೧–೧೬; 700). [ಅಱ್$_2$ + ಮಂಟಪ]

**ಅಱಮಂಡಮೆಗಾಲು** (ನಾ). ಒಂದು ಪ್ರದೇಶದ ಹೆಸರು: ದುಗ್ಗಮಾರ ಕೋಯಿಲ್ಪಸದಿಗೆ ಅಱುಗಣ್ಣುಗಬ್ಬೆದೆ ಮಣ್ಕೊಟ್ಟರ್ ಅಱಮಣ್ಡಮೆಗಾಲುಮುಗೊಕೆಮೊಗೆಯು ಒಡ್ಡಿಪಾಡಿಯುಂ ಗೊಯ್ಯಿನ್ದಮ್ಮಗಳಱುಗಣ್ಡುಗ ಬೆದೆನ್ನೆಲ್ಮಣ್ಕೊಟ್ಟರ್ (ಮೈಆರಿ. ೧೯೩೨, ೫೮–೩; 825). [?]

**ಅಱಮಗ** (ನಾ). ಯಮನ ಮಗ; ಧರ್ಮರಾಯ: ಅಱಮಗನ ಪವನತನಯನ ನೆಱಿದಾಶೀರ್ವಚನಶತಮನಾಂತು (ಪಂಪಭಾ. ೯–೩); ಅಱಮಗನಿರ್ಕರ್ಜುನನಿರ್ಕಱಿಕೆಯ ಮಾದ್ರೀಸುತರ್ಕಳಿರ್ಕೆ (ಗದಾಯು. ೭–೬೧); ಅನಿಲನಂದನನಂ . . . ಪಿಡಿದ ನಹುಷನಱಮಗನಂ ಕರಮೆ ನಿರೀಕ್ಷಿಸಿ ಬಿಡುವಂದದಿ (ಜಯಕಾ. ೭–೩೯). [ಅಱ್$_2$ + ಮಗ]

**ಅಱಮಾನ್ಯ** (ನಾ). ಧರ್ಮಕ್ಕಾಗಿ ಬಿಟ್ಟ ಮಾನ್ಯ; ಧರ್ಮಕಾರ್ಯಗಳಿಗಾಗಿ ಬಿಟ್ಟ ಮಾನ್ಯ: ಮಠಕ್ಕೆ ಅಱಮಾನ್ಯವಾಗಿ ಕೊಟೆದು (ಸೌಇಇ. IX–ii, ೪೬೬–೮; 1472). [ಅಱ್$_2$ + ಮಾನ್ಯ]

**ಅಱಮುವರದೇವ** (ನಾ). ಒಬ್ಬಾತನ ಹೆಸರು (?): ಎಣ್ಬನೂ ಱಯ್ಪತ್ತೊಮ್ಬತ್ತನೆಯ ವರಿಷದನ್ದು ಸದಾಯಿಯೊಳಱಮುವರದೇವನು (ಎಕ. X, ಚಿಂತಾಮ. ೧೬೫–೫; 936). [?]

**ಅಱವೆ,** ಅಱಂಬೆ, ಅಱಬೆ, ಅಱವೆ (ನಾ). ಅಜೀರ್ಣ; ಆಹಾರವು ಅರಗದಿರುವುದು: "ಅಟ್ಕವೆ = ಅಱವೆ" (ಶಮುದ. ಪರಿ. ೧). **ಅಱಂಬೆ :** ವಿಕಲ್ಪಬಿಂದುಗೆ—ಅಱಂಬೆ, ಅಱಬೆ (ಶಮುದ. ೩೬ ಪ್ರಯೋ); "ಅಟ್ಕವೆಯೆಂದುಂ, ಅಱಂಬೆಯೆಂದುಂ, ಅಜೀರ್ಣಂ" (ಕಶಸಾ. ೨೨–೪೬೬). **ಅಱಬೆ :** ವಿಕಲ್ಪಬಿಂದುವಿಗೆ—ಅಱಂಬೆ, ಅಱಬೆ (ಶಮುದ. ೩೬ ಪ್ರಯೋ). **ಅಱವೆ :** "ಅಱವೆಯಳ್ಕವೆಯೆಂಬ ನುಡಿಯಜೀರ್ಣದ ನಾಮಂ" (ಶಬ್ದಮಂ. ೬೧); ಭೂತಕೋಟಿ ಪೆಣನಂ ನೆಣನಂ ಬರಿತೀವಿ ತಿಂದು ಕಟ್ಟಱವೆಯನಾನುವೆಂತಮಿತನಂ ಪೊಗಳ್ವೆಂ ಪಗೆಮೆಚ್ಚೆಗಣ್ಡನಂ (ಸೌಇಇ. IX–i, ೩೪೩–೨೭; 1226); ಅಱವೆಯನುಪವಾಸಕೇಱಿಸುವಂತಿಂದ್ರನಱಿಕೆಯಿಂ ಬಂದಳನೆನ್ನ ನೆಱೆ ಭೀತಿಯಿಂ ಬಿಟ್ಟು ಸಾಧುವನೆಂಬೀ ಕುಱಿಗೇತಕೆ ಮಾನಗರ್ವ (ಕುರಾಸಾಂ. ೬–೧೧೩).
[ದೇ.॥ ತುಳು. ಅರ್ಕವೆ; ತೆಲು. ಅಱಕ, ಅಱುಕು = ಅಜೀರ್ಣ]

**ಅಱಲ್,** ಅಱಲು$_1$ (ನಾ). ೧. ಆರಿಹೋಗುವುದು; ಬತ್ತಿಹೋಗುವುದು; ಒಣಗುವುದು: ನೀರಱಲಿಂ ಸರಸ್ತಟಾಕದ ಶಫರಾಳಿ ಕುತ್ತೆಸಱ ಮೀನವೊಲಿರ್ದುದು (ಚಂದ್ರಪು. ೯–೭೯). ೨. ಬಾಯಾರಿಕೆ; ದಾಹ; ಗಂಟಲೊಣಗುವುದು. 'ಅಱಲ್ಗೊಳ್' ಪರಾ. **ಅಱಲು$_1$: ೧.** ಮತ್ತೆ ಮತ್ತೆ ಮನಂ ಸುಖದಱಲು ಪತ್ತಿ ಅಪ್ಪು ಸಡಿಲ್ದ ಕಡುವಿರಹದಿಂ (ಸಂಬರ. ೧೪–೫೫); ಬಿಸಿಲಲಿರ್ದಱಲುಹತ್ತಿದ ಲಿಂಗಕೆ ಬಿಸುಸುಯ್ದು ಮುಕ್ಕುಳಿಸಿ ಪೊಸೆದೆದ್ದು ಕಣ್ಣಪನ ದೆಸೆಯನು (ಸಾನಂಚ. ೩–೬೯).
[ಅಱು$_1$ (< ಅಱು$_1$) + –ಅಲ್$_2$]

**ಅಱಲು$_1$** 'ಅಱಲ್' ನೋ.

**ಅಱಲು$_2$** (ನಾ). ಒಂದು ಸೀಮೆಯ ಹೆಸರು: ಅಱಲು ಮೂನೂಱಕ್ಕೆ ತಿಲಕವಿರ್ಪಂತಿರ್ದ ಅಗ್ರಹಾರಂ ನಾಗವಾವಿಯೊಳ್ (ಹೈಆರಿ. VIII, ೧೫–೧೬೭; 1058). [?]

**ಅಱಲು$_3$** 'ಅಳಿಱು' ನೋ.

**ಅಱಲುಗೊಳ್** 'ಅಱಲ್ಗೊಳ್' ನೋ.

**ಅಱಲ್ಗೊಳ್,** ಅಱಲುಗೊಳ್ (ಕ್ರಿ). ೧. ನೀರಡಿಕೆಯಾಗು; ಬಾಯಾರು; ಗಂಟಲೊಣಗು: ಮಣಲ್ದಾಣಂಗಳುಮಂ ಪಥಿಕರಱಲ್ಗೊಂಡು ತೋಡಿದಱುಂಬುನೀರ ಬಗರಗೆಗಳುಮಂ (ಕಾದಂಉ. ೨೬೬). **ಅಱಲುಗೊಳ್ : ೧.** ಉಷ್ಣತೃಷೆ ಘನವಾಗಿ ಕಡಲೇಳು ಸಮುದ್ರವ ಕುಡಿದು ನೀರಡಸಿದಾತ ಅಱಲುಗೊಂಡು ಬೆಱಗಾದ (ಅಪಚಂ. ೬–೧೪);

ಅೞಲುಗೊಂಡಂಗೆ ಸುರನದಿಯಿ ಪರ್ಣಂತೆ (ನಂಬಿರ. ೧೮-೫೦). ೨. ಒಣಗು; ಆರಿಹೋಗು: ಅೞಲುಗೊಂಡ [ಪಾಠಾಂ. ಅಱಿಲುಗೊಂಡ]ಕೆಱೆಗೆ ತೊಱೆ ಬಂದು ಹಾಯ್ದಂತೆ ಬೞಲುಗೊಂಡ ಸಸಿಗೆ ಮಳೆ ಸುರಿದಂತಾಯಿತ್ತು (ಮಹಾದೇ. ೧೩-೨). ೩. (?): ವೈಮಱಿದರದ್ದರು ಶೋಕಜಲಧಿಯೊಳೞಲು [ಪಾಠಾಂ. ಉರುಕು]ಗೊಂಡರು ತಳ್ಳಬಾಱಿದರವರು ನಿಮಿಷದಲಿ (ಕುವ್ಯಾಗ. ೮-೫೭). [ಅೞಲ್ + ಕೊಳ್$_{1}$]

**ಅಱವಂಟಿಗೆ** 'ಅಱವಟ್ಟಿಗೆ' ನೋ.

**ಅಱವಂಟಿಗ** 'ಅಱವಟ್ಟಿಗ' ನೋ.

**ಅಱವಂಟಿಗೆ** 'ಅಱವಟ್ಟಿಗೆ' ನೋ.

**ಅಱವಟಿಕೆ** 'ಅಱವಟ್ಟಿಗೆ' ನೋ.

**ಅಱವಟಿಗೆ** 'ಅಱವಟ್ಟಿಗೆ' ನೋ.

**ಅಱವಟ್ಟಿಗ,** ಅಱವಂಟಿಗ (ನಾ). ಅರವಟ್ಟಿಗೆಯನ್ನು ಇಟ್ಟು ನಡಸುವವನು. (ಉಕ. ೬). **ಅಱವಂಟಿಗ** (೬). [ಅಱವಟ್ಟಿಗೆ + -ಅ$_{7}$ ?]

**ಅಱವಟ್ಟಿಗೆ,** ಅರವಂಟಿಗೆ, ಅರವಟಿಗೆ, ಅರವಟ್ಟಿಗೆ, ಅಱವಂಟಿಗೆ, ಅಱವಂಟಿಗೆ, ಅಱವಟಿಕೆ, ಅಱವಟಿಗೆ (ನಾ). ಧರ್ಮಕ್ಕಾಗಿ (ನೀರು, ಪಾನಕ, ನೀರುಮಜ್ಜಿಗೆ, ಎಳನೀರು ಮುಂತಾದ) ಪಾನೀಯಗಳನ್ನು ದಾರಿಹೋಕರಿಗೆ ಕೊಡುವ ತಾತ್ಕಾಲಿಕ ಧರ್ಮಶಾಲೆ: "ಪ್ರಪಾ, ಪಾನೀಯಶಾಲಾ— ಈ ೨ ಅಱವಟ್ಟಿಗೆ" (ಹಲಾಯು. ೫೦-೧೪೨); ಕೆಱೆ ಬಾವಿ ಬಸದಿ ದೇಗುಲಮರ[ಱ]ವಟ್ಟಿಗೆ ಸತ್ರಮೆಂಬ ಧರ್ಮಮನಿನಿತುಂ ನೆಱೆದವು (ಸೌಇಇ. XI-ii, ೧೭೭-೧೬; 1047); ಕೆಱೆಯಂ ದೇವಾಲ್ಯಂಗಳನಱವಟ್ಟಿಗೆಯನ್ನದಾನ ಪರಹಿತಮೆಂಬೀಯಱಿಕೆಯ ಫಲಕ್ಕೆ ಧರ್ಮಮನುಱೆ ಮೆಱೆದಪನೊದ್ದಿರಾಜವಿಪ್ರತನೂಜಂ (ಎಕ. VI, ಕಡೂರು, ೩೫-೬೪; 1136); ನಗಧರನ ನಿಶಿತನಾರಾಚಗಣಂ ನಡೆ ಪಾಯ್ವ ರಿಪುಭಟಾರುಣಜಲಧಾರೆಗಳಂ ಜವನಿಟ್ಟಱವಟ್ಟಿಗೆಯೆನೆ ಪೂತನಿಯರಾಂತು ಕುಡಿದರ್ ಘುರದೊಳ್ (ಜಗವಿ. ೭-೮೨); ಪವಳದ ಕೆಯ್ಯ್ ಮುಗಿಲ್ಗಳಱವಟ್ಟಿಗೆ ನೀರ್ಗಳ ಗೊತ್ತು . . . ಮಹಾರ್ಣವಂ (ಸೂಕ್ತಿಸು. ೨-೩೮); ಸಾಗರವನಱವಟ್ಟಿಗೆಯನಿಟ್ಟರೆ ವಡಬನಲ್ಲಾ ನೀರ ಕುಡಿವವನು (ಕುವ್ಯಾದ್ರೋ. ೧೬-೫); ಬಟ್ಟೆಬಟ್ಟೆಯೊಳೆಲ್ಲಿಯುಂ ಕುಳಿರ್ವೆರಸಿದಱವಟ್ಟಿಗೆಯ ಸದನಂಗಳಿಂದೆ ಬಾಗಿಲ್ಗೆ ಪೊಱಮಟ್ಟು ಕಲಶಮನೆತ್ತಿ ನೀರೆಱೆವ ಕಾಮಿನಿಯರು (ಜೈಮಿಭಾ. ೩-೯). **ಅರವಂಟಿಗೆ**: ಹಿಂಗದರವಂಟಿಗೆಯ ಮುಂದಿ ಸಾಗಿದಂತೆ ಸಂಗಾತದವರು ತನ್ನ ಕೂಡಲಿದ್ದರು (ವಿಸಾಸು. ೧೫-೩). **ಅರವಟಿಗೆ**: ಎಲ್ಲಿ ನೋಡಲು ಛತ್ರ ಅರವಟಿಗೆಲ್ಲಿ ನೋಡಲು ಸಕಲಧಾನ್ಯದ ಬೆಳೆಯು ಸೊಂಪಿನಲಿ (ಬಿಜ್ಜಪು. ೧೭-೪). **ಅರವಟ್ಟಿಗೆ**: ಅರವಟ್ಟಿಗೆಗಳನ್ನದಾನಂಗಳಿಂದಾ (ರುಕ್ಮಾಂಗ. ೨-೧೧); ಅರವಟ್ಟಿಗೆಯ ಸೇರಿ ತಂಪು ತೋರೆ (ಸೌಪರಿ. ೯-೭೬); ದಾರಿಗರನ್ನು ಕರೆಕರೆದು ಕೊಡುವ ತನಿವಣ್ಣು ಎಳನೀರ ಕಬ್ಬಿನರಸದ ಪನಿವಾರಗಳ ಅರವಟ್ಟಿಗೆಗಳು (ಶಾಂತಲಾ. ೧೦೨). **ಅಱವಂಟಿಗೆ**: ಸಲಿಸದ ದೇವಾಲಯಮಿಡದಱವಂಟಗೆಗಳೊಳವೆ ಮಧುಸೂದನನಾ (ಹೈಆರಿ. VIII, ೧೮-೧೪೦; 1058); ಅಱವಂಟಗೆಗನ್ನದಾನದೆಡೆಗೀ ಜಗದೊಳ್ಪವಣಿಲ್ಲ (ಎಕ. VII, ಶಿವಮೊ. ೧೦-೪೫; 1085); ಅಱವಂಟಿಗೆಯ ಉದಕದಾನಕ್ಕಂ (ಸೌಇಇ. IX-i, ೩೨೨-೩೦; 1214). **ಅಱವಂಟಿಗೆ**: ಅಱವಣ್ಟಿಗೆಗೆ ಚಕ್ರಸೆಟ್ಟಿ ಬಿಡಿಸಿದ ಮತ್ತರು ೧ (ಸೌಇಇ. XI-i, ೧೭೫-೩೧; 1107); ವಿನಾಯಕ ದೇವರ ಪೂಜೆಗೆ ಅಱವಣ್ಟಿಗೆಗಂ ಬಿಟ್ಟ ಧರ್ಮ್ಮ (ಸೌಇಇ. IX-i, ೨೨೩-೪೪; 1127); ನಂಜಯ ನಾಯ್ಕ ಅಱವಂಟಿಗೆ (ಎಕ. III, ಶ್ರೀರಂಗ. ೩೨-೨; ?). **ಅಱವಟಿಕೆ**: ಹೆಸರ ಕೆಱೆಯಱವಟಿಕೆಯಾಱವೆಗಳಲ್ಲಲ್ಲಿ (ಮಲುರ. ೧೧೫-೮). **ಅಱವಟಿಗೆ**: ಒಱತೆಗಳ ಕಂಡಿಂತು ಕೆಲರು ಬಾವಿಯ ತೋಡೆಂಬರು ಅಱವಟಿಗೆ ಛತ್ರವು ತಮ್ಮದೆಂಬರು (ದೇದಾವ. ೪೦-೭೮); ವಿದ್ಯಾಧರಾಳಿಗೆ ವಸಂತನಿಟ್ಟಱವಟಿಗೆಯೋ (ಹಚಕಾ. ೩-೨೮); ಪಾನಮಂ ಪನಿನೀರ ತಿಳಿನೀರ ತುಂಬಿದಿಂದೂಪಲದ ಭಾಂಡಂಗಳಿಂದಱವಟಿಗೆಗಳೆಸೆಗುಂ (ಪದ್ಮರಾ. ೮-೮); ಕೃತಾಂತನ ಭಟರ ಪದಗಳಿಗಿಟ್ಟಱವಟಿಗೆಯೊ (ತೊರರಾ. ೬-೩೦-೨೧); ಅಱವಟಿಗೆಯುದಕವನು ಪರರ ಕೈಯನ್ನವನು ಪರನಿಂದೆ ಹಿಂಸೆ ಸ್ತ್ರೀಯರನು ಬಿಟ್ಟಾತ ವರಯೋಗಿ ಕಾಣೊ (ಸರ್ವಜ್ಞ. ೫೬೪); ಚಿನ್ನದ ಕುಂಭದಲಿ ಕಂಪಿಂಪು ತಂಪೆಸೆವಂಬುವೆಱೆವರು ಪಥಿಕರಿಗೆ ಅಱವಟಿಗೆಸತಿಯರು (ಸಾಳ್ವಭಾ. ೧-೬೩); ಓ! ಇದೆ! ಇದೆ! ಕಾಣಿಸಿಕೊಳ್ಳುವದಱವಟಿಗೆ (ರಾಮಾಶ್ವ. ೯-೧೩).

[ಅಱ$_{2}$ + ವಟ್ಟಿಗೆ$_{0}$ (< ಸಂ. ವಾಟಿಕಾ)]

**ಅಱವಟ್ಟಿಗೆದಾಣ** (ನಾ). ಅಱವಟ್ಟಿಗೆಯಿಟ್ಟ ಸ್ಥಳ: ಅಲ್ಲಿಯ ಬನಂ ಮುಗಿಲೆಡೆಯೊಳೆಡೆವಿಡದೆಡೆಯಾಡಿ ಬೞಲ್ದ ಬಿಜ್ಜೋದರಿಯರ್ಕಳಱವಟ್ಟಿಗೆದಾಣಮೆಂಬಂತೆಸೆವೆಳನೀರ್ಗಳಂ ಪೊತ್ತು . . . ಚೆಂದೆಂಗಿನ ಮರಂಗಳೊಳಂ (ಕಬ್ಬಿಕಾ. ೩೦). [ಅಱವಟ್ಟಿಗೆ + ತಾಣ$_{2}$]

**ಅಱವಟ್ಟಿಗೆವಾರ್ವ** (ನಾ). ಅರವಟ್ಟಿಗೆಯ ಕೆಲಸದಲ್ಲಿರುವ ಹಾರುವ: ಎಱಗುವ ಕೈಗರಗಂಗಳೊಳೆಱೆಯುತ್ತೆಳನೀರ್ಗಳಂ ಕುಱಾಳಿಗೆ ಜಗಮಂ ಮಱುಗಿಸಿ ಮನೋಜನಱಕಿಟ್ಟಱವಟ್ಟಿಗೆವಾರ್ವರಂತೆ ತೆಂಗಿನ ಮರಗಳ್ (ಲೀಲಾವ. ೬-೧೧೬). [ಅಱವಟ್ಟಿಗೆ + ಪಾರ್ವ]

**ಅಱವಟ್ಟು** (ನಾ). = ಅಱವಟ್ಟಿಗೆ: ಕಟ್ಟಿಸಿದ ತಟಾಕಮುಮರ[ಱ]ವಟ್ಟಿಸೆದೆತ್ತಿಸಿದ ದೇವತಾಯತನಂ ಸಾಲಿಟ್ಟಿಟ್ಟಾರವೆ ಪೇಳವೆ ನೆಟ್ಟನೆ ತಾವೆಯ್ದೆ ಮೋಟಗೌಂಡನ ಪೆಂಪಂ (ಎಕ. XII, ಚಿಕ್ಕನಾ. ೩೧-೬೮; 1233). [ಅಱ$_{2}$ + ಪಟ್ಟು ?]

**ಅಱವಟ್ಟೆ** (ನಾ). ಧರ್ಮದ ಮಾರ್ಗ. 'ಅಱವಟ್ಟೆಗ' ಪರಾ.

[ಅಱ$_{2}$ + ಬಟ್ಟೆ$_{1}$]

**ಅಱವಟ್ಟೆಗ** (ನಾ). ಧರ್ಮಮಾರ್ಗದಲ್ಲಿ ನಡೆಯುವವನು: ಆರು ಹಂತಂ ನಲ್ಮೆಯಿಂ ಮಾಱಿಕ್ಕೆ ಬೇಡಿದುದಂ ತನ್ನಱವಟ್ಟೆಗರ್ಗೆ (ಕಬ್ಬಿಕಾ. ೩೪೯). [ಅಱವಟ್ಟೆ + -ಗ$_{2}$]

**ಅಱವಣ** 'ಅಱುವಣ' ನೋ.

**ಅಱವಱಗು** (ನಾ). ಮಳೆಯಿಲ್ಲದೆ ಒಣಗು.

ಅಱವಱಗಾಗು = ಮಳೆಯಿಲ್ಲದೆ ಒಣಗಿಹೋಗು: ಅಂತು ನಿಶಾಚರಬಲಮಱವಱಗಾದ ಕಾಡನಳುರ್ವ ಬೇಗೆಯ ದಳ್ಳುರಿಯಂತೆ ದಳ್ಳಿಸಿ ಕೊಳ್ಳೆಂದರಾತಿಬಲಮನಳುರೆ (ಪಂಪಭಾ. ೧೨-೭ ವ).

[ಅಱ$_{1}$ + ಬಱಗು]

**ಅಱವಿಡು** (ಕ್ರಿ). ಧರ್ಮಕ್ಕಾಗಿ ದಾನಮಾಡು: ಉರಾ ಅಯ್ಯದೇವ ಪರವಿಟ್ಟ ತೊಡಿಕೆ ಅಱವಿಟ್ಟೋರ್ (ವೈಆರಿ. ೧೯೩೪, ೪೨-೬; ೧೦ನೆಯ ಶತ). [ಅಱ$_{2}$ + ಬಿಡು$_{1}$]

**ಅಱವುಳ್ಳಿ** 'ಅಱುವುಳ್ಳಿ' ನೋ.

**ಅಱವೆ** 'ಅಱಮೆ' ನೋ.

**ಅಱಸಿಲ್** (ನಾ). (?). 'ಅಱಸಿಲ್ಗಱಿ' ಪರಾ. [?]

**ಅಱಸಿಲ್ಗಱಿ** (ನಾ). (?): ತರುಣಿ ಪರಿಪರಿದು ಕುಸುಮಾಕರಂಗಳಂ ತಿಱಿದು ಮುಱಿದು ತರುತಿರ್ದಂ ತಣ್ಣೆರಲಱಸಿಲ್ಗಱಿಯಂ ನಾಂ [ಪಾಠಾಂ. ಣ್ಣೆರಲಱಸಿ(ಸಲ್)ಗಱಿಯಂ ನಾಂ; ಣ್ಣೆಲರಱಿದರಿಸಿಲ್ಮುಱಿಯಂ] ಹರಿಚಂದನರಸದೊಳದ್ದಿ ಬೀಸುತ್ತಿರ್ದಂ (ಲೀಲಾವ. ೬-೧೨೪). ☞ ಇದು 'ಇಱಸಲ್' ಎಂಬ ಶಬ್ದದ ಅಪಪಾಠವಿರಬಹುದೆ?

[ಅಱಸಿಲ್ ? + ಗಱಿ]

**ಅಱಸು$_1$**, ಅರಸು$_1$ (ಕ್ರಿ). ಹುಡುಕು; ಬೆದಕು; ಅನ್ವೇಷಣೆ ಮಾಡು; ಅಱಪ (ಭವಿಷ್ಯ): "ಅಱಸು–ಅನ್ವೇಷಣೇ" (ಶಮುಧಾ); "ಅಱಸುವಲ್ಲಿ ನಖಘಾತದಲ್ಲಿ ಬೆದಕಕ್ಕು" (ಶಬ್ದಮಂ. ೮೦); "ಪುಡುಕೆಂದೆನಲಱಸು ವರ್ಥಂ" (ಕವಿಕಂ. ೨೨೩); ತಲೆಯೆತ್ತಿಡಲ್ಕಱಸಿಯೇನುಮಂ ಕಾಣದೆ (ವಡ್ಡಾರಾ. ೭೬–೨೬); ನೆಱೆದಾಯುಷ್ಯಮೆ ಮಿಱುವನಱಸುವ ತೆಱದಿಂದ ಮವರ ಪೋಬಱಿಯನೆ ಬಂದಱಸಿ (ಶಾಂತಿಪು. ೩–೭೪); ಬಾಣಸಿನ ಮನೆಯಱಸಿ ಮೊಲಂ ಪೊಕ್ಕಂತಕ್ಕುಂ (ಪಂಚತಂ. ೨೨೭–೨೨); ಅಱಸಿತಿಂಬ ದೈವಕ್ಕೆ ಪೋಗಿ ಪಾಱಂಬಿಡುವಂತೆ (ಪಾರ್ಶ್ವಪು. ೪–೪೪); ಅಱಸಲೇತಕೆ ಕಾಲಮೃತ್ಯುವನಱಸುವರೆ ಕಾಲಾಗ್ನಿಯನು ನೀನಱಸಲೇಕರ್ಜುನನನೀಗಳೆ ತೋಱಿಸುವೆನೆಂದ (ಕುವ್ಯಾಕ. ೯–೪); ಒಱೆಯುಗಿದ ಕೂರಸಿಯ ಮೊನೆಯಿಂದಱಸಿಯುಂಬುದೆ ಕ್ಷತ್ರಿಯರ ಗುಣ (ಸಾಳ್ವಭಾ. ೬–೧). **ಅರಸು$_1$**: ಸೂರ್ಯನು ಕಾಮೋದ್ರೇಕದಿಂದ ಪತ್ನಿಯಂ ಸ್ಮರಿಸಿ ಅರಸಿಕೊಂಡು ಪೋಗಿ (ಸೌಗಂಧಿ. ೩೬೭–೩೩); ಯಾವ ಉದ್ಯೋಗಿಯಾಗಲಿ ನಿರಂತರವೂ ಹೊಸ ಹೊಸಮಾರ್ಗಗಳನ್ನು ಉದ್ದೇಶಪೂರ್ವಕವಾಗಿ ಅರಸುತ್ತಿದ್ದು, ತನ್ನ ಕೆಲಸವನ್ನು ಉತ್ತಮಗೊಳಿಸಲು ಯತ್ನಿಸುತ್ತಿರುತ್ತಾನೆ (ಶಿಕ್ಷದ. ೬೫).

**ಅಱಸಿಕೊಳ್** = ಹುಡುಕಿಕೊಳ್ಳು: ಇನ್ನುಮುಸಿರದಿರ್ದೊಡೆ ಪೆಱತೊಂದು ಬಿಲನನಱಸಿಕೊಳ್ವೆಂ (ಪಂಚತಂ. ೩೮–೧೪); ಎನ್ನ ವಂಶ ವಂಶದಪ್ಪದೆ ಅಱಸಿಕೊಂಡು ಬರುತ್ತಿದೆಯಯ್ಯ (ಮಹಾದೇ. ೨–೩).

[ಅಱ್$_0$ + –ಸು$_1$]

**ಅಱಸು$_2$** (ನಾ). ಹುಡುಕುವುದು; ಬೆದಕುವುದು. "ಪರ್ಯೇಷಣೆ, ಅನ್ವೇಷಣೆ" (ನಾಚಿರಾ. ೩). [< ಅಱಸು$_1$]

**ಅಱಿ**, ಅರ್ಱಿ (ಕ್ರಿ). ತಿಳಿ; ಕಲಿ; ಅಭ್ಯಾಸಮಾಡು; ಅಱಿತು, ಅಱಿದು (ಭೂತಕೃ): "ಅಱಿ–ಜ್ಞಾನೇ" (ಶಮುಧಾ); ತನಗೆ ಮೃತ್ಯುವರವಾನಱಿದೆನ್ದು ಸುಪಣ್ಡಿತನ್ . . . ತಾನ್ದಿಪಮೇಱಿದಾನ್ (ಎಕ. II, ೧೧೩–೧; 700); ಜಾಣರ್ಕಳಲ್ಲದವರುಂ ಪೂಣಿಗರಱಿಯದೆಯುಮಱಿವ ಪೋಲವಗುಣದಾ ತಾಣಮಂ (ಕವಿರಾ. ೧–೪೦); ಗಿರಿವರಮಿದು ಕರಿವರಮೆಂದರಿದಱಿಯಲ್ ಗಹನದೊಳಗೆ ಗಿರಿಯಂ ಕರಿಯಂ (ಕಾವ್ಯಸಾ. ೧೦೫೭ ಶೂ ಪ್ರ ಕ); ಸಿರಿಮೆಯ್ಯೊಳಗಂದಱಿವಿರೆ ನೆರವಿಯೊಳಾರಱಿವರೊರ್ಮೆ ಕಂಡರನಱಿಯಲ್ಕರಿದೆಮ್ಮಂ ಬಡ ಪಾರ್ವರನರಸರೆ ನೀಮಿಾಗಳಱಿವಿರಱಿಯಿರೊ ಪೇೞಿಂ (ಪಂಪಭಾ. ೨–೬೩); ತನ್ನ ಮಗಳ್ ವಿವಾಹಯೋಗ್ಯೆಯಾದುದನಱಿತು (ಚಾವುಂಪು. ೭೮–೧೪); ಎನ್ನನಱಿತಱಿಯದಂತೆ ನಕ್ಕುದಱ ದೆಸೆಯಿಂದ (ಸಿದ್ಧರಾ. ೧–೨೫); ಕೆಲವಂ ಸಜ್ಜನಸಂಗದಿಂದಲಱಿಯಲ್ ಸರ್ವಜ್ಞನಪ್ಪಂ ನರಂ (ಸೋಮೇಶ. ೧); ಎಲ್ಲಾ ಲೋಕವಱಿತಿರಲು (ಬಸಪು. ೨೭–೧೨); ವಿವಿಧ ಶಾಸ್ತ್ರಂಗಳನಱಿವ ಬಯಕೆ ಶಿವನುಮಂ ಶಿವಭಕ್ತರಂ ತಣಿವೊಲರ್ಚಿಸುವ ಬಯಕೆ (ಪದ್ಮರಾ. ೨–೩೯); ಆ ಪರಾಪರವಸ್ತುವಿನ ನಿಜರೂಪು ನಾಮದ ಗಾಢತರ ಮಹಿಮಾ ಪಯೋಧಿಯ ನೆಲೆಯನಱಿವವರಾರು ಲೋಕದಲಿ (ತೊರರಾ. ೧–೨–೮); ಅಲ್ಲಮನೊಳಱಿವನಱಿಯಲ್ಕಾಗ ಮುಕ್ಕಣ್ಣನರಸಿಯಂಶವೆ ಬಂದು ಧರೆಯೊಳಗೆ (ಚಬಪು. ೧–೧೫). **ಅರ್ಱಿ**: ದೇವರೆಂಬುದದೇನು ಕಗ್ಗತ್ತಲೆಯ ಗವಿಯೆ? ನಾವರಿಯಲಾರದೆಲ್ಲದರೊಟ್ಟು ಹೆಸರೆ? (ಮಂಕುಕ. ೫); ಅರಿತರೆ ಶರಣ ಮರೆತರೆ ಮಾನವ (ಗಾದೆ); ಅರಿಯನೆಂದರೆ ಅರವತ್ತು ಗುಣ ಬಲ್ಲೆನೆಂದರೆ ಬಹಳ ಕಷ್ಟ (ಗಾದೆ).

**ಅಱಿಮಿ** = ತಿಳಿಯಿರಿ: ಉಱಿಪಿದ ಆಚಾರಿಯ ಪೆಸರಿವನಱಿಮಿ (ಇಅ. X, ೧೬೫–೭; ೭ನೆಯ ಶತ). ℙ ಇದು ಪೂರ್ವದ ಹಳಗನ್ನಡ ವಿಧ್ಯರ್ಥಕ ಮಧ್ಯಮಪುರುಷ ಬಹುವಚನ ರೂಪ.

[ದೇ.‖ ತಮಿ. ಮಲ. ಅಱಿ; ತೆಲು. ಎಱುಗು]

**ಅಱಿಕೆ**, ಅರಿಕೆ (ನಾ). ೧. ತಿಳಿವಳಿಕೆ; ಅರಿವು; ಜ್ಞಾನ: ತನ್ನ ಪ್ರಕೃತಿ ಬಿಡದಿರಲ್ ಅಱಿಕೆಯೇನಂ ಮಾಡುವುದು (ಪಂಚತಂ. ೧೮–೨); ಘನಭುಜಮುದದ ದಿವ್ಯಾಸ್ತ್ರದಱಿಕೆಗಳ ಭರಮುದದ ಮರ್ಕಟವಿಲಾಸರು (ಕುವ್ಯಾದ್ರೋ. ೧೨–೨೮); ಅರಳಿದುದು ಮನದಱಿಕೆ ಭೋಂಕನೆ (ಪ್ರಭುಲೀ. ೬–೨೨). ೨. ಪ್ರಸಿದ್ಧಿ; ಕೀರ್ತಿ: ಅಱಸಿಕೊಲುತಿರ್ಪ ಜವನೆಂಬಱಿಕೆಯ ಪಗೆವಂಗದೆಂತು ಪಂಗಿಗನಪ್ಪೆಂ (ಆದಿಪು. ೪–೭೭); ಆದಂ ಕಂಡು ಸುಮಾಲಿ ಮಾಲ್ಯವಂತರುಂ ಋಕ್ಷರಜಸೂರ್ಯರಜರುಂ ಪೆಱರುಮಱಿಕೆಯ ನಾಯಕರುಂ ಬಿಱಿತೋಡಿ ಪೋಗಿ ಪಾತಾಳಲಂಕೆಯಂ ಪೊಕ್ಕರ್ (ಪಂರಾಮಾ. ೧೦–೧೩೬ ವ); ಅಱಿಕೆಯ ಪದಿನೆಣ್ಬಾಸಿರ್ವರರಸುಗಳ್ (ಕಾವ್ಯಾವ. ೨೮೧); ಅಱಿಕೆಯ ಖಾನರೆಲ್ಲರ ಕೊಂದು ದಾಳಿಯ ಮುಱಿಯಲಿಱಿದು ಮುಂದುಗೆಡಿಸಿ (ಕುರಾಸಾಂ. ೧೮–೧೫೨). ೩. ಬಳಕೆ; ರೂಢಿ: ಮುಱುದಿನವಾ ಪೊತ್ತಪ್ಪಿನಮುಱಿಕೆಯ ನೀರೂಟತಂಬುಲಂಗಳ ಮಾತಂ ತೊಱೆದು (ಧರ್ಮಾಮೃ. ೧–೧೩೩); ಜನದಱಿಕೆಯಿಂದೆ ವಾರುಣಿಗೆ ಮೋಹಿಪ ಮಹಾತ್ಮನ ತೇಜಮಿರ್ದಪುದೆ (ಚಿಬಪು. ೯–೨). ೪. ಬಯಕೆ; ಆಸೆ: ಕಲ್ಯಾಣಕರಾಮೃತಾಹಾರಂಗಳನಾರೋಗಿಸುವೆನೆಂಬಱಿಕೆಯುಳ್ಳೊಡಂ ಮೃದುಶಯ್ಯಾತಲದೊಳೊಱಗುವೆನೆಂಬಿಚ್ಛೆಯುಳ್ಳೊಡಂ (ಧರ್ಮಾಮೃ. ೬–೧೬೬); ಗುರುಲಿಂಗ ತೃಪ್ತನಾದೊಡೆ ಅಱಸುವ ಅಱಿಕೆ ಇಲ್ಲದಿರಬೇಕು (ಅದವ. ೧೨); ಉಱುವ ಮಕ್ಕಳನಿಕ್ಕಿ ಸಾಧಿಸುವಱಿಕೆಯಾವುದು ಹೇಳಲಾಗದು (ಕುವ್ಯಾಸ. ೧೬–೨೯); ಮದನಮೋಹಿನಿ ಕೇಳು ನಿನ್ನಱಿಕೆಯನಾ ಮುದದಿ ಸಲಿಸುವೆ ನಂಜದಿರು (ಕಂಸವಿ. ೯–೧೪೯). **ಅರಿಕೆ**: ೫. ಬಿನ್ನಹ; ವಿಜ್ಞಾಪನೆ: ಈ ರತ್ನಮೃಷ್ಟಾನ್ನಶಾಕವಂ ಕೊಡುವುದು ಎಂದು ಋಷಿ ಅನುಗ್ರಹಿಸಿ ಕೊಟ್ಟು ಇದ್ದಾರೆ—ಎಂದು ಅರಿಕೆಯಂ ಮಾಡಲಾಗಿ (ಬತ್ತೀಪು. ೧೮); ಗಂಗವ್ವ ಕಾಶಿಗೆ ಹೊರಟಳು ವಿಶ್ವನಾಥನೆದುರು ತನ್ನ ಕೊನೆಯ ಅರಿಕೆಯನ್ನು ಒಯ್ಯುವುದಕ್ಕಾಗಿ (ಗಂಮಾಯಿ. ೮).

**ಅರಿಕೆಮಾಡು** = ತಿಳಿಸು; ಬಿನ್ನವಿಸು: ಆ ಪಂಕಜನೇತ್ರೆ ಭೂನಾಥನಂ ಕುರಿತು ಅರಿಕೆಮಾಡುವೆನೆಂಬಳು (ಸೌಗಂಧಿ. ೮೨–೬); ರಾಯಭಾರಿ . . . ಮೈಸೂರಿನ ವಿದ್ಯಮಾನಗಳನ್ನೆಲ್ಲಾ ಯಥೋಚಿತವಾಗಿ ಅರಿಕೆ ಮಾಡಿದನು (ಶ್ರೀರಾಯ. ೧೯೦). [ಅಱಿ + –ಕೆ$_1$]

**ಅಱಿಕೆಗಾಳಗ** 'ಅಱಿಕೆಗಾಳೆಗ' ನೋ.

**ಅಱಿಕೆಗಾಳೆಗ**, ಅಱಿಕೆಗಾಳಗ (ನಾ). ಪ್ರಸಿದ್ಧವಾದ ಯುದ್ಧ: ವಿಕ್ರಮಮಂ ಸೋಲ್ವಿನಮಾವರ್ಜಿಸಿದಂ ನಾಲ್ವತ್ತೆರಡಱಿಕೆಗಾಳೆಗಂಗಳೊಳೆತಂ (ಪಂಪಭಾ. ೧–೨೫). **ಅಱಿಕೆಗಾಳಗ**: ಕೂರಾಳ್ಗಳ ಗಂಡನಾದ ನರಸರಾಜನಱಿಕೆಗಾಳಗಂಗೊಳಲ್ ಬಂದಂ (ಚಿಕವಂ. ೪೬–೨೧).

[ಅಱಿಕೆ + ಕಾಳೆಗ]

**ಅಱಿಕೆಗೊಡು** (ಕ್ರಿ). ಎಚ್ಚರಿಕೆಯಿಂದಿರು; ಮೈಮರವಿಲ್ಲದಿರು: ನಡದುಗುರುರ್ ಕೆರಗದೆರ್ದೆ ಪೊಯ್ಗುಳುಣ್ಮದ ಸರಸಮುಱಿಕೆಗೊಡಿದ ಪರವಶಂ ಜಾರರೊಳ್ ಮೇೞಿದುದು (ಚಿಬಪು. ೯–೧೫). [ಅಱಿಕೆ + ಕೊಡು$_1$]

**ಅಱಿಕೆಗೈ** (ಕ್ರಿ). ಬಿನ್ನವಿಸು; ತಿಳಿಸು: ಅತನಂ ಬಾಜ್ವಲೆವಿಡಿವೊಡೀಗಳೆಮ್ಮಾ ಕಾವರಾಯಂ ದಂಡೆತ್ತಿ ಬರ್ಪುಮಂತದಱಿನೀಯೊಸಗೆಯಂ ನಿಮ್ಮೊಳಾಡುವುದೆಂದೆನ್ನಂ ಕಳಿಪಿದನೆಂದಱಿಕೆಗೈದಂ (ರಾಮಾಶ್ವ. ೫೭–೬).

[ಅಱಿಕೆ + ಗೈ (< ಕೆಯ್$_1$)]

**ಅಱಿಕೆದಾಣ** (ನಾ). ಶ್ರೇಷ್ಠವಾದ ಸ್ಥಳ; ಪ್ರಸಿದ್ಧವಾದ ಪ್ರದೇಶ: ವಂದಿಸುತುಂ ವಂದ್ಯರನಭಿವಂದಿಸುತುಂ ಬುಧರನಱಿಕೆದಾಣದೊಳೆಸೆವಂತೊಂದಿಸುತುಂ ವಿಜಯಧ್ವಜವೃಂದಮನುತ್ತರದಿಗಂತಮಂ ಸಾರ್ತಂದಂ (ಪುಷ್ಪಪು. ೫–೫೯). [ಅಱಿಕೆ + ತಾಣ$_2$]

**ಅಱಿಕೆನಾಯಕ,** ಅರಿಕೆನಾಯಕ (ನಾ). ಪ್ರಸಿದ್ಧನಾದ ಮುಖಂಡ: ಅರಿಸಮಾಸಂ ಮಾರ್ಗದೊಳುಳ್ಳವರ್ಕೆ — ಕಡುರಾಗಂ, ಮೊಗರಾಗಂ, ಅಱಿಕೆನಾಯಕಂ (ಶಮದ. ೧೭೪ ಪ್ರಯೋ). **ಅರಿಕೆನಾಯಕ :** ನಮ್ಮ ಹಿರಿಯರಲ್ಲಿ ಶ್ರೀಕೃಷ್ಣನೆಂಬಾತನು ಬಹು ಪ್ರಸಿದ್ಧ ಅರಿಕೆನಾಯಕ (ಮಂತ್ರಶ. ೩೨–೧೦). [ಅಱಿಕೆ + ನಾಯಕ]

**ಅಱಿಕೆವಡೆ** (ಕ್ರಿ). ತಿಳಿವಳಿಕೆಯನ್ನು ಪಡೆ, — ತಿಳಿ : ಮಡದಿಯ ಬಡನಡುವೆಂಬಭಿಧಾನಂ ಬಿಡದಿರ್ದದಱಭಿಧೇಯಂ ತಾನಾವೆಡೆಯೊಳಡಂಗಿರ್ದಪುದೋ ಅದನಾನಱಿಕೆವಡೆದುದಿಲ್ಲ (ಜಯಕಾ. ೩–೩೩).
[ಅಱಿಕೆ + ಪಡೆ$_1$]

**ಅಱಿಕೆವೆಸರು** (ನಾ). ಪ್ರಸಿದ್ಧವಾದ ಹೆಸರು : ಬೆಱಗುವಟ್ಟಂಗದ ಬೆದಱುವೆದೆಯ ಬೆಮರೊಱಿವ ಮೊಗದ ಮಲ್ಲುಕರ ಮಱಿಯಿಂದ ಮೊಗದೋಱಿದನು ಬಾದುರನೆಂಬಱಿಕೆವೆಸರ ಖಾನನೊರ್ವ (ಕುರಾಸಾಂ. ೧೮–೭೪). [ಅಱಿಕೆ + ಪೆಸರು (< ಪೆಸರ್)]

**ಅಱಿಗದೆ** (ನಾ). ಕೆಸರುಗದ್ದೆ : ಅತ್ತಿವಟಿಲು ಪರ್ವಯನ ಅಱಿಗದೆ ಖ॥೦ (ಸೌಇಇ. IV, ೨೫೪–೬೧ ; 1513).
[ಅಱ್$_0$ (< ಅಱಿಲ್$_2$) + ಗದ್ದೆ (< ಗಟ್ಟಿ)]

**ಅಱಿಗುಱಿ** (ನಾ). ಜ್ಞಾನದಲ್ಲಿ ಕುರಿಯಂತಿರುವವನು; ದಡ್ಡ; ಅಜ್ಞಾನಿ : ಇಂತೀ ಅಱಿವ ಮಱೆದು ನರಗುಱಿಗಳ ಬಾಗಿಲಲ್ಲಿ ನಿಂದು ತಡೆಯಿಸಿಕೊಂಬ ಅಱಿಗುಱಿಗೇಕಱಿವಿನ ಮಾತು (ಮೆಱಿವಿಂ. ೩೪) ; ಕೊಱಸಿಕೊಂಬರು ಕೊರಳನಂತಂತಱಿಗುಱಿಗಳಕಟಾ ಕೃತಾಂತನ ಕುಱಿಗಳೇ ಪಾಪಿಗಳು (ನಿಭಾಗ. ೫–೧೧–೨). [ಅಱಿ + ಕುಱಿ$_2$]

**ಅಱಿಗುಱುಪು** (ನಾ). ತಿಳಿವಳಿಕೆ ಅಥವಾ ಜ್ಞಾನದ ಗುರುತು : ಕಟ್ಟದಿರ ಸುಖಮನಿನಿತಂ ಬಿಟ್ಟೇಗಳೆ ಬರ್ಪುದೆಂದು ಬರೆದಱಿಗುಱುಪಂ ಕೊಟ್ಟು ಪರಲೋಕದೋಲೆಯನಟ್ಟದರಾರಾರ ಪಿತೃಪಿತಾಮಹರರಸಾ (ಧರ್ಮನಾ. ೫–೧೧೩). [ಅಱಿ + ಕುಱುಪು (< ಕುಱಿಪು)]

**ಅಱಿಗೇರಿ** (ನಾ). ಒಂದು ಊರಿನ ಹೆಸರು : ಅಱಿಗೇರಿಯ ನಾಟ್ಯಾವುಣ್ಣ (ಎಕ. VII, ಶಿವನೊ. ೨೨–೩ ; 993). [ಅಱ್$_0$ + ಕೇರಿ]

**ಅಱಿಚು** 'ಅಱುಚು' ನೋ.

**ಅಱಿತ,** ಅರಿತ (ನಾ). ತಿಳಿವಳಿಕೆ; ಜ್ಞಾನ; ವಿವೇಕ : "ಜ್ಞಾನಂ— ಅಱಿತಂ" (ನೀತಿವಾ. ೨೦) ; "ಅಱಿತದಲ್ಲಿಯಂ ವೇದನಾಯೆಂಬುದು" (ಹಲಾಯು. ೧೩೬–೩೨) ; ಇವಱೊಳಾದಮಾನುಮಱಿತಮುಂ ಕುಶಲಿಕೆಯುಂ ನಂಬುಗೆಯುಂ ಆಗಿ (ವಡ್ಡಾರಾ. ೬–೨೦) ; ಅಮುಳಾಗಮದೋಱಿ ಮಿಕ್ಕು ತೋರ್ಪಱಿತದಳುರ್ಕೆ (ಎಇ. XIII, ೩೩೨–೫೬; 929) ; ಮುನ್ನಿನ ಭವಮುಂ ಬಂಧುಗಳನ್ನೆಱಿ ತಿಳಿವಱಿತವಮಾಯ್ತು ಭವದೀಯ ಪದಾಸನ್ನತೆಯಿಂದಾದೊಡಮೇಂ (ಕಾದಂಬ. ೬೯೪) ; ಅನುಪಲಬ್ಧದೊಳಱಿತಮುಂ ಮಱೆದುಪಲಬ್ಧದೊಳ್ ನಿಶ್ಚಯಗ್ರಾಹಿಯಾಗಿ (ಮಲ್ಲಿಪು. ೩–೧೧) ; ಚಾಪವಿದ್ಯದೊಳಱಿತವುಂಟೋ (ಕುವ್ಯಾಭೀ. ೯–೩೪) ; ಹೊಸಹರೆಯದಲಲನೆಯರ ವಿಲಾಸಂ ನೃಪನಱಿತಮನೆಳಕುಳಿಗೊಳಿಸಿದುದು (ಜಯಕಾ. ೨–೩). **ಅರಿತ :** ತಾಯ್ಮಳಲಡಿಯ ತಳದಾಳದರಿತದಿಂ (ಸಂಸಪ. ೨೫–೧೨). [ಅಱಿ + –ತ$_2$]

**ಅಱಿಪ,** ಅಱಿಹ (ನಾ). ೧. ತಿಳಿಯುವುದು ; ಅರಿಯುವುದು. ೨. ವಿಜ್ಞಾಪನೆ; ಬಿನ್ನಹ : ಇಂತು ವಿರಾಜಿಪ ರಾಜಾಸ್ಥಾನಕೆ ಸಂತಸದಿಂ ಪಡಿಯಱನಱಿಪದಿನತ್ಯಂತ ಚತುರ ಚಿತ್ರಿಕನೊರ್ವಂ ಬಿಂಕಂಬಡೆದೈತಂದು (ಜಯಕಾ. ೩–೪). **ಅಱಿಹ :** ೨. ಪ್ರಮಿತಿಪ್ರಮೆ–ಸಮ್ಯಕ್ಕಾಗಿ ಅಱಿಹ (ನಾಚಿರಾ. ೬) ; ಪರಚೇಷ್ಟೆಯಿಂದೆ ಅಱಿಹಂ (ನಾಚಿರಾ. ೬).
[ಅಱಿ + –ಪ$_2$]

**ಅಱಿಪು,** ಅರಿಪು, ಅರುಪು, ಅರುಹು$_1$, ಅಱಿಹು$_1$, ಅಱುಪು, ಅಱುಹು$_1$ (ಕ್ರಿ). ತಿಳಿಸು ; ಬಿನ್ನವಿಸು ; ಮನಸ್ಸಿಗೆ ಮುಟ್ಟುವಂತೆ ಮಾಡು : ಕುಱಿತಂತು ಪೆಱರ ಬಗೆಯಂ ತೆಱದಿರೆ ಪೆಱರ್ಗಱಿಪಲಾರ್ಪವಂ ಮಾತಱಿವಂ (ಕವಿರಾ. ೧–೧೫) ; ಇನಿಸಂತರ್ಮಂಡಲಸಾಧನಮುಂಟೆಂದಱಿಪಿದುದುಮನಿನ್ನಱಿಪುವೆವೇ (ಆದಿಪು. ೧೪–೧೫) ; ಈತಂಗಱಿಪದ ಕಜ್ಜಮುಂ ವೈದ್ಯಂಗಱಿಪದ ಕುತ್ತಮುಂ ತೀರಲಱಿಯದು (ಪಂಚತಂ. ೩೬–೩) ; **ಅರಿಪು :** ಭಕ್ತರಿಗರಿಪೆನು ಮೋಸವನು (ಕವಿಸೋ. ೫೧–೨). **ಅರುಪು :** ತಮ್ಮ ಆಗಮನಮಂ ರಾಜಸನ್ನಿಧಿಯೊಳರುಪೆಂದು ಪೇಳಲು (ಮುದ್ರಾಮಂ. ೨). **ಅರುಹು$_1$ :** ನಂಜ ಮನಿಗೆ ಬಂದು ಆಡಿಹೋದ ಖ್ಯಾತಿಯನ್ನು ಮಗನಿಗೆ ಸಂಗನು ಅರುಹಿದನು (ಜೀವಪ್ರ. ೧೦೦) ; ಸ್ತ್ರೀ ಸುಲಭವಾದ ಬಿಂಕದಿಂದ ನನ್ನೊಡನೆ ತನ್ನ ಪರಿಚಯವನ್ನು ಅರುಹದಿರಬಹುದೆ (ಶ್ರೀರಾಯ. ೨೫೦). **ಅಱಿಹು$_1$ :** ಬಸವಂಗೆ ಪ್ರಾಣಲಿಂಗವನಱಿಹಿಕೊಟ್ಟು ಸಂತಸದಿ ಕಿಚ್ಚಿನ ಪವಾಡಮಂ ಗೆಲ್ದು (ಚಿಬಪು. ೬ ಸೂ). **ಅಱುಪು :** ಕಿವಿಯತ್ತಲ್ ಸಾರ್ದು ಮೆಲ್ಲನಱುಪಿದಳಾಗಳ್ (ಕಾದಂಪೂ. ೩೮೫) ; ಜಗಕ್ಕಱಿಪಿದನೋಜೆಯಿಂದ ಮಾದಿಬ್ರಹ್ಮಂ (ಸಮಪ. ೨–೧೪) ; ಬೇಕಾದರೆಮ್ಮನು ನೀನು ಕರೆಸುವುದಱುಪುವುದು . . . ಸಂಗತಿಯ (ಕುವ್ಯಾಭೀ. ೧–೧೮) ; ಹಾವ ಭಾವ ವಿಲಾಸ ವಿಭ್ರಮಗಳ ಪರಿವಿಡಿಯನು ಜೀವಿಕಗೆ ಅಱಿಪುವೆನೆಂದೆಯ್ದುಹ ಭಾರತಿಯಂತೆ (ಜೀವಂಸಾಂ. ೧೪–೪೩) ; ಎನ್ನ ಶಿಕ್ಷಾರಕ್ಷೆಗಳ್ಗೆ ಕರ್ತಂ ಮಹೇಶ್ವರನೆಂದು ನೆಟ್ಟನಱುಪಿ (ಸೌಂದಪು. ೬–೫) ; ಸ್ಥಳಮಹಾತ್ಮೆಯನೆನಗಱುಪೆನೆ ಮುನಿಕುಳ ನುಡಿದುದು ಪ್ರೀತಿಯಿಂದ (ಕಂನವಿ. ೫–೨೬). **ಅಱುಹು$_1$ :** ಬೊಪ್ಪಂಗಱುಹಿ ನಿನಗೆ ಎನಗಂ ಮತ್ತೆ ಸಂವಾದ (ಬಸವು. ೧೪–೨೨) ; ಭಾಸುರಾನುಗ್ರಹರಹಸ್ಯವನಱುಹಬೇಕೆಂದು (ತೊರರಾ. ೧–೨–೬) ; ಏವೇಳುವೆನೆನ್ನ ಮಹದಾನಂದವನಾವ ಬಗೆಯೊಳಱುಹುವೆನು (ಹದಿಬ. ೧–೪೩).

**ಅಱಿಪವೇಟ್** = ತಿಳಿಸುವಂತೆ ಹೇಳು : ಈಗಳ್ ತಕ್ಕಂದದೆ ದೇವಿಯರ್ಗಾಂ ಪ್ರತಿಸಂದೇಶಮನೇನನಱಿಪವೇೞ್ವೆಂ ನಿನ್ನಂ (ಕಾದಂಬ. ೩೯೮). **ಅಱುಹಿಕೊಡು** = ತಿಳಿಯಹೇಳು : ಪ್ರಾಣಲಿಂಗದ ನೆಲೆಯನಱುಹಿಕೊಟ್ಟು (ಚಿಬಪು. ೧–೧೩). [ಅಱಿ + –ಪು$_1$]

**ಅಱಿಮರುಳ್,** ಅಱಿವರುಳ್ (ನಾ). ಅರಿವು ಮರುಳಾಗುವುದು ; ಬುದ್ಧಿಭ್ರಮೆ : ಮತಿಗೆಟ್ಟು ಮನಂಗೆಟ್ಟು ಮೆಯ್ಯಱಿದಱಿಮರುಳಾಗಿ (ನೇಮಿಪು. ೧೪–೧೦೦ ವ) ; ಅಱಿಮರುಳಾಗಿ ಹೋದರಯ್ಯಾ (ಲಿಂಗವ. ೧೩–೫೦). **ಅಱಿವರುಳ್ :** ಬಹ್ವಾರಂಭದೊಳ್ . . . ಅಱಿದುಂ ತೊಡರ್ದೊಡೆ ನಾಡೆಯುಮಱು [ಱಿ] ವರುಳೆಂದಱಿವರೆನ್ನನುಱಿವರ್ ಬಱಿಯಂ (ಚಂದ್ರಪು. ೪–೫೯). [< ಅಱಿವು + ಮರುಳ್]

**ಅಱಿಮರುಳ,** ಅಱಿಮರುಳು, ಅಱಿವರುಳ (ನಾ). ಅರಿವು ಮರುಳಾದವನು ; ಬುದ್ಧಿಭ್ರಮೆಯಾದವನು : ಕಿಱಿದುಂ ಬೇಗಮಱಿಮರುಳಂತು ಪಲುಂಬಿ ಪಂಬಲಿಸಿ (ಪಂಪಭಾ. ೪–೭೪ ವ) ; ಎಲ್ಲಿತ್ತೋ ಸಗ್ಗಮಱಿವೊಡದೆಲ್ಲಿತ್ತೋ ನರಕವಕಟ ಅಱಿದಱಿಮರುಳಂ ಮೆಲ್ಲನೆ ಕಿವಿಯೊಳ್ ಪೇೞ್ದುದೆ ಗೆಲ್ಲಂ (ಧರ್ಮನಾ. ೫–೧೧೫) ; ಅಱಿಯದಱಿತವೆನಿಸುವ ಅಱಿಮರುಳಗೆ ನಗೆ ನಲ್ಲಱಿವನನುಗೊಳಿಸು (ಗೀತಗೋ. ೮೨–೧೬). **ಅಱಿಮರುಳು :** ಈ ಸಾವನಱಿಯದ ಅಱಿಮರುಳುಗಳ ಅಱಿವು ಮಾನಹಾನಿ ಕಾಣಾ ಗುಹೇಶ್ವರ (ಅವಚಂ. ೧೧೧–೫೦೨). **ಅಱಿವರುಳ :** ಅಱಿವರುಳರಾದ ವಾದಿಗಳೆಂದರೇಂ ಪುಸಿಯೊ (ಪದ್ಮರಾ. ೧–೨೩). [ಅಱಿಮರುಳ್ + –ಅ$_7$]

**ಅಱಿಮರುಳು** 'ಅಱಿಮರುಳ' ನೋ.

**ಅಱಿಮರುಳುತನ** (ನಾ). ಬುದ್ಧಿಭ್ರಮಣೆ: ಅಱಿಯದಿದನಜ್ಞಾನಮದ ಮತ್ಸರ ಮಹಾಮೋಹಾಂಧಕಾರದಲಱಿಮರುಳುತನದಿಂದ ಮಾಯಾ ಮೂಢಬುದ್ಧಿಗಳು (ನಿಭಾಗ. ೯-೭-೪೭).
[ಅಱಿಮರುಳು (< ಅಱಿಮರುಳ) + -ತನ]

**ಅಱಿಮಿ** 'ಅಱಿ' ಪರಾ.

**ಅಱಿಯಮಿಕೆ** (ನಾ). ಅಜ್ಞಾನ; ತಿಳಿವಳಿಕೆಯಿಲ್ಲದಿರುವುದು: ಅಱಿಯದಿದಂ ಮಾಡಿದೆನೆನ್ನಱಿಯಮಿಕೆಗೆ ಸೈರಿಸೆಂದು ನೀಂ ಸಭೆಯೊಳ್ ಕಾಲ್ಗೆಱಗೆಱಗು (ಪಂಪಭಾ. ೬-೫೮). [ಅಱಿಯಮೆ + -ಇಕೆ]

**ಅಱಿಯಮೆ** (ನಾ). ೧. ಅರಿವಿಲ್ಲದಿರುವುದು; ಅಜ್ಞಾನ: ನಿನ್ನಱಿಯಮೆಯೆ ನಿನ್ನನಿನಿತಂ ಮಱುಗಿಸಿದುದು ಪಾಪಕರ್ಮ (ಆದಿಪು. ೫-೯೫); ಮುನ್ನಮೆನ್ನಱಿಯಮೆಯಿಂದಿನ್ನೆವರಮುನ್ನೆಯಮನಾಚರಿಸಿದೆಂ (ಪಂರಾಮಾ. ೭-೧೧೬ ವ); ಕಿಡುತಂದುದು ಮನದಱಿಯಮೆ ನುಡಿಯ ತೊದಲ್ ಪಿಂಗಿಪೋಯ್ತು. . .ಶೈಶವಾತಿಕ್ರಮದೊಳ್ (ಚಂದ್ರಪು. ೪-೨). **೨.** ಅಜ್ಞಾನದಿಂದ ಮಾಡಿದ ತಪ್ಪು ಕೆಲಸ; ದೋಷ: ಎಱಗಿದನಿತಱೊಳೆ ಮಱೆವಂ ಪೆಱರಱಿಯಮೆಗಳನೆನಿತ್ತನಾದೊಡಮದಱಿಂದೆಱಗಿ ಪತಿಗಾತ್ಮಪದದೊಳ್ ಮೆಱೆದಿರು ನೃಪರೊಳಗೆ ಧರ್ಮವಿಜಯಮದೀಶಂ (ಪಾರ್ಶ್ವಪು. ೨-೫೭). [ಅಱಿ + -ಅಮೆ$_2$. / **ತಮಿ.** ಅಱಿಯಾಮೈ]

**ಅಱಿಯಿಸು, ಅರಿಯಿಸು$_2$, ಅರಿಸು$_3$** (ಕ್ರಿ). ತಿಳಿಯುವಂತೆ ಮಾಡು; ತಿಳಿಸು: ಅದು ಶಬ್ದಾತ್ಮಕಮಾಗಿಯುಂ . . . ಕಿವಿವೊಕ್ಕುಂ ಮೆಯ್ಯೊಳಂ ತೆಯ್ವೆವೊಕ್ಕುದನುದ್ಯತ್ಪುಳಕಂಗಳಿಂದಱಿಯಿಸುತ್ತುಂ (ಕಾದಂಪೂ. ೭೯೯); ತವರೂರ ಮಱೆಯಿಸಿ ನಿದ್ರೆಯ ತೊಱೆಯಿಸಿ ಸವಿಗಳನಱಿಯಿಸಿ ನಮ್ಮ ದಿವರಾತ್ರಿಯೆನ್ನದೆ ಸುಖದೊಳೋಲಾಡಿಸುವ ಗಡ (ಭರಚ. ೬-೩೯); ಅಱಿಯಿಸದಱಿಪುದು ಗುಣಮುಂ (ಚಿಕವಿ. ೧-೪೦). **ಅರಿಯಿಸು$_2$:** "ಆದನ್ನು ಅಪ್ಪಾಜಿಯವರಿಗೆ ಅರಿಯಿಸಬೇಕು" ಎಂದಳು (ಚಿಕರಾ. ೩೯೬); ಅಂತರಂಗದಲ್ಲಿ ಅರಿಯಿಸಿ ಬಹಿರಂಗದಲ್ಲಿ ತೋರಿ ನನ್ನನ್ನು ಇಷ್ಟು ದೂರ ನಡಯಿಸಿ ತಂದೆ (ಶಿವಭ. ೩೮); ಇನ್ನಾರುಮರಿಯದಿಹ ಅರಿಯಿಸಲುಮಾಗದಿಹ ಜೀವಾತ್ಮಸಂಸ್ಥೆಯಿದು (ಮಲೆದೇ. ೨೭-೧). **ಅರಿಸು$_3$:** ನಮ್ಮ ನಿಜ ಮಾತೆಗಂ ಮಗನೆನುತ್ತರಿಸುತಿದೆ ದೇವ (ತುರಂಗ. ೭೦-೨೭); ಮುನಿಗಳ ಭಾವಕ್ಕೆ ಅರಿಸದ ಶಾಸ್ತ್ರಕೆ ಸಿಲುಕದ ವೇದಕೆ ಕುರುಪಿಡಲರಿಯದ ಚರಿತನನು (ಸುಸಾರ. ೧೧೦-೫). [ಅಱಿ + -ಇಸು$_3$]

**ಅಱಿಲ್$_1$, ಅರಿಲ್, ಆಱಿಲ್** (ನಾ). ನಕ್ಷತ್ರ; ಚುಕ್ಕಿ; ತಾರೆ: "ಅಱಿಲೆಂದು ತಾರಗೆ" (ರನ್ನಕಂ. ೯); "ಅಱಿಲ್—ನಕ್ಷತ್ರಂ" (ಶಮದ. ಪರಿ. ೨); "ಮೀನ್, ತಾರಗೆ, ಅಱಿಲ್—ಇ ನಕ್ಷತ್ರಕ್ಕೆ ಪೆಸರ್" (ಶಬ್ದಸಾ. ೪-೪೩); ಎಸೆದುದು . . . ಮಿಸುಪಱಿಲೆಂಬರಲ್ಗಣೆಗಮುಳ್ಳದ ಕಲ್ಲೆರ್ದೆ ವೆಣ್ಗಳೊಡ್ಡನಾರ್ದಿಸೆಯುರಿಗೊಂಡು ಪೊಣ್ಮುವ ಪಿರಂಗಿಯ ಗುಂಡೆನೆ ಚಂದ್ರಮಂಡಲಂ (ಚಿಕವಿ. ೬-೧೭); ಬಾಂಬೊಲಂ ಬಿತ್ತಿದಱಿಲಗೆಯಿಂ ಸೊಗಯಿಸಿದತ್ತು (ರಾಮಾಶ್ವ. ೮೩-೧೪). **ಅರಿಲ್:** ಮೆರೆದತ್ತೊಡನೊಡನುದಯಿಸಿದರಿಲ್ಗಳಿಂ ಗಗನಚಕ್ರಮೆತ್ತೆತ್ತಲುಂ (ಮರಾಜ. ೫-೮೮); ಅರಿಲ ಮುತ್ತುಗಳನು ಹುಡುಕಿ ಪೋಣಿಸಿತ್ತು ಮಾಲೆಯ (ಸ್ವದರ್ಶಿ. ೧೬); ಮರುಗಿ ಬಾನು ಅರಿಲನೆಳೆದು ಕಣ್ಣು ಮುಚ್ಚಿ ಒಣಗಿ ಬಿಕೋ ಎನ್ನುತಿಹುದು (ದೀಪಮ. ೧೬); ಅರಿಲ್ಗಳ ನಡುವೆ ಎಸೆವ ತಣ್ಗದಿರನೊಲು ನಿಂತಿಹನು ಮನಮೋಹಿಸಿ (ಚಂದ್ರಸ. ೬). **ಆಱಿಲ್:** ವಿಯತ್ತಳೋದರದಿನೊತ್ತಿದನ್ನಾಸಿಕವಾತಘಾತದಿಂದಾಱಿಲನೆಯ್ದೆ ದಕ್ಷಿಣ ಕರಾಗ್ರದ ಶಂಕಸಮುಗ್ರನಿಸ್ವನಂ (ಮಹಾನೀ. ೧೪-೧೦೫); ಏಱುಂ ಕಡಲಂ ಕಡಂಗಿ ಕುಡಿವೆಂ ತಳ್ತಾಱಿಲಂ ಪೊಯ್ದು ತೂಱುವೆನೈದುಂ ಮೊಗಮುಳ್ಳನಂ ಕೆಡಪುವೆಂ (ಕಬ್ಬಿಕಾ. ೧೫೪). [?]

**ಅಱಿಲ್$_2$** 'ಅಳಿಱ್' ನೋ.

**ಅಱಿಲ್ವಟ್ಟೆ, ಅರಿಲ್ವಟ್ಟೆ** (ನಾ). ನಕ್ಷತ್ರಮಾರ್ಗ; ಆಕಾಶ: "ಪೆಸರಪ್ಪುದಂಬರಕೆ ಬಾನಲರ್ವಟ್ಟೆಯಾಗಸವಱಿಲ್ವಟ್ಟೆ ಸಗ್ಗಿಗವಟ್ಟೆಯೆಂದು" (ಶಬ್ದಮಂ. ೧೫). **ಅರಿಲ್ವಟ್ಟೆ:** "ಅರಿಲ್ವಟ್ಟೆಯೆನಲಾಕಾಶವು" (ಕಶರ. ೫); ಪಗೆದಲೆಗಳರಿಲ್ವಟ್ಟೆಯೊಳ್ ನಚ್ಚಣಿಸುತಿರ್ಪನಂ (ನರಚ. ೧೦೪ ವೃತ್ತಿ); ಅರಿಲ್ವಟ್ಟೆಯಂ ಸಮೀಕ್ಷಿಸಿದನರಿಯೆ ಪೊಳ್ತುಂ (ಶ್ರೀರಾಮಾ. ೪೫೯-೧೮).
[ಅಱಿಲ್$_1$ + ಬಟ್ಟೆ$_1$]

**ಅಱಿವಗೆ** (ನಾ). ಜ್ಞಾನಕ್ಕೆ ವೈರಿ; ದಡ್ಡ: ಜೋಗಗೆಳೆಯರೆಣ್ಬರೇಱಿವರ್ಪನ್ನಮಱಿವಗೆಗಳಿಱಿವೋದ ನಿಚ್ಚಣಿಗೆಯೆಂಬಂತಿರಿರ್ಬದಿಯೊಳಮೆಲ್ಗಳ ಸಾಲ್ಗಳ್ ತೋಱೆ (ರಾಮಾಶ್ವ. ೪೦-೨೬).
[ಅಱಿ + ಪಗೆ$_2$]

**ಅಱಿವಣ** (ನಾ). ತಿಳಿಯುವುದು; ಅರಿತುಕೊಳ್ಳುವುದು: ಸರ್ವಭವದಲ್ಲಿ ಬಂದಾ ಆತ್ಮವಸ್ತುವಲ್ಲಾಯೆಂದು ಮತ್ತಿನ್ನೇನಱಿವಣ (ಅಱಿಮಾ. ೧೮೦). [ಅಱಿ + -ವಣ]

**ಅಱಿವರುಳ್** 'ಅಱಿಮರುಳ್' ನೋ.

**ಅಱಿವರುಳ** 'ಅಱಿಮರುಳ' ನೋ.

**ಅಱಿವಿಡಿ** (ಕ್ರಿ). ತಿಳಿದುಕೊಳ್ಳು; ಅರಿತುಕೊಳ್ಳು: ಮತ್ತಂ ಪಂದಿವೇಂಟೆಯ ನಾಯೆಂತಪ್ಪುದೆಂದೊಡೆ . . . ಜಾತ್ಯಶ್ವದಂತೆ ಬೇಗಮಾಗಿ ಕೋಟಿಕಾಳಿಕಾಜನಂತೆ ಬಱಿಯಱಿವಿಡಿದು ತುಂಬಿನ ನೀರನುರ್ಚಿದಾಗಳಡೆ ಪರಿದು ಮನ್ನೆಯರಾಳಂತೆ ಕಾದಿಯಲಸದೆ (ಪಂಪಭಾ. ೫-೪೬ ವ); ಮುನಿಪದಪದ್ಮಕ್ಕೆಱಗಿ ಜಿನರೂಪಮೆಂಬೊಂದಱಿವಿಡಿದಘಬಲಮನಲೆದು ಶಿಲೆಯೊಳ್ ಪೊಯ್ದಂ (ಆದಿಪು. ೩-೫೧). [ಅಱಿ + ಪಿಡಿ$_1$]

**ಅಱಿವು, ಅರಿವು, ಅರುವು, ಅರುಹು$_2$, ಅಱುಹು$_2$** (ನಾ). ತಿಳಿವಳಿಕೆ; ಜ್ಞಾನ; ವಿವೇಕ: ಅಱಿವು ಧರ್ಮಮುಂ ಜಕ್ಕ ನಿನಗಲ್ಲದಿಲ್ಲ ಭುವನದೊಳ್ (ಎಕ. VIII, ನಗರ. ೬೨-೧; 800); ಎನ್ನ ಪ್ರಾಣದಲ್ಲಿ ಅಱಿವ ತೋಱಿದನಯ್ಯ ಬಸವಣ್ಣನು (ಮಹಾದೇ. ೨೦-೨); ಅಱಿವು ಮಱವೆಗಳೆನಿಪ್ಪೆರಡಱ ಮಧ್ಯಾವಸ್ಥೆಯೊಳ್ (ಕುಸುಮಾ. ೯-೧೦೯); ಅಱಿವನಱಿದಡೆ ಜೀವ ನೆಱೆ ಸದಾಶಿವನಕ್ಕು (ಸರ್ವಜ್ಞ. ೩೯೦). **ಅರಿವು:** ಪುಸ್ತಕದಿ ದೊರೆತರಿವು ಮಸ್ತಕದಿ ತಳೆದ ಮಣಿ (ಮಂಕುಕ. ೩೦); ದೇವಾ ನನ್ನ ನಿನ್ನರಿವು ಮುಗುದೆಯ ಕಡು ನೇಹದಂತೆ (ಪ್ರಣಸ. ೪). **ಅರುವು:** ಬೆಳಗಾಗುವಷ್ಟರೊಳಗೆ ಗಂಡ ಸತ್ತುಹೋದನು ಹೆಂಡತಿಯು ಅರುವು ಹಾರಿ ಬಿದ್ದಿದ್ದಳು (ಮುಂಬಯಿ. ೫-೧೫೩); ಶ್ರೀ ಗುರುವೆ ಅರುವೆ, ಶರಣಾಗಿ ಬರುವೆ (ಆರಳು. ೩); ವೇದಿಕೆಯ ಮೇಲೆ ನಿಂತರೆಂದರೆ ಅವರಿಗೆ ಅರುವು ತಪ್ಪುತ್ತದೆ (ಹುಚ್ಚುಹು. ೧೦೨). **ಅರುಹು$_2$:** ಆಳಿಯಿಂದರು ಹಾಗಲಾಕೆ ಕೇಳಿದಳು (ವೆಂಕಾರಾ. ೨-೧೦-೩೯); ಅರುಹಂ ತೊರೆಯ ಬೇಡೈ ಬಲವೇ (ಸೂರ್ಯಪಾ. ೯೧-೧೪). **ಅಱುಹು$_2$:** ನಿಜವ ನೆಮ್ಮಿ ಅಱುಹ ಕಂಡೆ ಅಱುಹಿಂದ ಆಚಾರವ ಕಂಡೆ (ಲಿಂಗವ. ೧೧-೪೦); ಅಖಿಳ ಭಕ್ತರಿಗೆ ಅಱುಹನಂಗೀಕರಿಸಿ (ಪ್ರಭುಲೀ. ೧೧-೨೬); ಅಱುಹನೊಳಕೊಂಬಱುಹಿಂಗೆ ಸಾಕ್ಷಿ (ವಿವೇಕ. ೫೦).

**ಅಱಿವು ಮರುಳಾಗು** = ಬುದ್ಧಿಭ್ರಮೆಯುಂಟಾಗು: ಈ ಎರಱ್ ಮಕ್ಕಳುಮ್ ನಾನೆಣಿಪೆನ್, ಅಱಿವುಮರುಳಾದರ್ (ಅಂತಿಗೊ. ೫೩೯).
**ಅಱಿವಿಂಗೋಜ** = ವಿದ್ಯೆಗೆ ಗುರು; ಒಂದು ಬಿರುದು: ಪುಟ್ಟಿದನುದಾತ್ತಸತ್ವಂ ನೆಟ್ಟನೆ ವಿಬುಧೇಂದ್ರವಂದ್ಯನಱಿವಿಂಗೋಜಂ (ಎಇ. X, ೧೫೨-೪೮; 915).

[ಅಱಿ + -ವು. / **ತಮಿ. ಮಲ.** ಅಱಿವು; **ಕೊಡ.** ಅರಿಮ್ಮೆ; **ತುಳು.** ಅರುವು, ಅರುಹು; **ತೆಲು.** ಎಱುಕು, ಎಱುಗು]

**ಅಱಿವುಗೆಡಿಸು** (ಕ್ರಿ). ಬುದ್ಧಿಯನ್ನು ಹಾಳುಮಾಡು ; ತಿಳಿವಳಿಕೆಯನ್ನು ಕೆಡಿಸು : ಅಱಿವುಗೆಡಿಸುತ್ತುಮೆಲ್ಲಾತೆಱದಿಂ ದೆಸೆಗೆಡಿಸದಿರದು ವಿಷಯಸಮೂಹಕ್ಕೆಱಗಿ ಬಿಡದಂತೆ ಪತ್ತುವ ಮಱುಕಂ ದಿಙ್ಮೋಹದಂದ [ದಿಂ ಮಾನಿ]ಸರಂ (ಕಾದಂಪೂ. ೫೩೮). [ಅಱಿವುಗೆಡು + -ಇಸು$_3$]

**ಅಱಿವುಗೆಡು, ಅಱುಹುಗೆಡು** (ಕ್ರಿ). ತಿಳಿವಳಿಕೆಯಿಲ್ಲವಾಗು ; ವಿವೇಕತಪ್ಪು : ಇಂತೀಲೋಕದೊಳ್ ರೂಪುಗಾಣಲೊಡಂ ತೊಟ್ಟನೆ ಲಜ್ಜೆಗೆಟ್ಟಱಿವುಗೆಟ್ಟೆನ್ನಂತೆ ಕಣ್ಗೆಟ್ಟು ಪೇಱೊಲವಿಂದಿಂತೆರ್ದೆಗೆಟ್ಟರಾರ್ (ಕಾದಂಪೂ. ೭೫೧). **ಅಱುಹುಗೆಡು** : ಪೂಜೆಯಂ ನೋಡಿ ಮೆಚ್ಚದೆ ಪೂಜೆಯಂ ಮಾಡಿ ಓಜೆಗೆಟ್ಟಱುಹುಗೆಟ್ಟತಿಲಲ್ಲೆಯಂ ಮಾಡಿ (ಬಸರ. ೩-೫೫). [ಅಱಿವು + ಕೆಡು]

**ಅಱಿವುಮಱೆ** (ಕ್ರಿ). ಬುದ್ಧಿಶೂನ್ಯವಾಗು ; ವಿವೇಕವನ್ನು ಮರೆ; ಮೈಮರೆ : ಅಱಿವುಮಱೆದಪಕೀರ್ತಿನಾರಿಯ ಸೆಱಗ ಹಿಡಿದರು (ಕುವ್ಯಾದ್ರೋ. ೬-೨೭). [ಅಱಿವು + ಮಱೆ$_1$]

**ಅಱಿವೆ** 'ಅಱುವೆ' ನೋ.

**ಅಱಿಸೆಣೆ** (ನಾ). ಒಂದು ಪ್ರದೇಶದ ಹೆಸರು (?) : ಅದಱ ತದನನ್ತರ ಪಿರಿಪಲ್ಲಿಪಾಲೆ ಅದಱ ತದನಾನ್ತರ ಪಡುವಣ ದಿಸಾಭಾಗದ ಕೆಳಗೆ ಅಱಿಸೆಣೆ ಅದರ ತದನಾನ್ತರ ಎಣಿತೊಣೆಯ ಮಟ್ಟಱಿ (ಸೌಇಇ. IX-i, ೪೧-೨೭ ; ೧೧ನೆಯ ಶತ). [?]

**ಅಱಿಹ** 'ಅಱಿಪ' ನೋ.

**ಅಱಿಹಿಸು, ಅಱುಹಿಸು** (ಕ್ರಿ). ತಿಳಿವನ್ನುಂಟುಮಾಡು ; ತಿಳಿಸು : ನಿಮ್ಮಿನಿಬರ್ಗೆ ಮೊದಲಾತನೇ ತಾನೆಂದಱಿಹಿಸಲ್ಕೆ ನಾಣ್ಚಿ . . . ಮಹಾದೇವನಱಿಹಿಸೆಯಱಿದು ಮಱಹಿಸೆ ಮಱೆವಂ (ಪದ್ಮರಾ. ೧೦-೮೦). **ಅಱುಹಿಸು** : ತತ್ತನಯನಾಸ್ಥಿತಿಯನಱುಹಿಸೆ ಕೇಳ್ದು (ಪದ್ಮರಾ. ೨-೨೬) ; ಹೊಕ್ಕು ಬಾಗಿಲ ಮುಱಿದು ನೈಯಱಿ [ಪಾಠಾಂ. ಯುರು]ಹಿಸಿ ಯುಧಾಮನ್ಯುವ ವಿದಾರಿಸಿದ (ಕುವ್ಯಾಗ. ೯-೩೨) ; ನಮ್ಮಯ ಬರವ ನಿಮ್ಮವಗಱುಹಿಸುವುದು (ತೊರರಾ. ೬-೬-೪೫).

**ಅಱುಹಿಸಿಕೊಳ್ಳು** = ಹೇಳಿಸಿಕೊಳ್ಳು ; ತನಗೆ ತಿಳಿಸುವಂತೆ ಮಾಡು : ಜ್ಞಾತೃ, ಜ್ಞಾನ, ಜ್ಞೇಯ ಲಿಂಗವಾದರೆ ಅಱಿವುದೇನು ? ಅಱುಹಿಸಿಕೊಂಬುದೇನು ? (ಆದವ. ೯೨).

[ಅಱಿಹು$_2$ (< ಅಱಿವು) + -ಇಸು$_3$]

**ಅಱಿಹು$_1$** 'ಅಱಿಪು' ನೋ.

**ಅಱಿಹು$_2$** 'ಅಱಿವು' ನೋ.

**ಅಱು$_1$** 'ಆಱು$_1$' ನೋ.

**ಅಱು$_2$** (ನಾ). ಪ್ರೀತಿ ; ಸ್ನೇಹ. 'ಅಱುಗೊಳ್' ಪರಾ.

[? . / ತಮಿ. ಅಱು = ಸ್ನೇಹ ; ಪ್ರೀತಿ]

**ಅಱು$_3$** (ನಾ). ಆರು ಎಂಬ ಸಂಖ್ಯೆಗೆ ಸಮಾಸದ ಪೂರ್ವಪದದಲ್ಲಿ ವಿಕಲ್ಪತೆಯಿಂದ ಒದಗುವ ರೂಪ. 'ಅಱುಗಂಡುಗ', 'ಅಱುದಿಂಗಳ್' ಪರಾ. [< ಆಱು$_3$]

**ಅಱುಂಬು, ಅರಪು, ಅರಬು, ಅರುಬು$_2$, ಅಱಂಬು, ಅಱಬು, ಅಱುಬು** (ನಾ). ೧. ಬರ ; ಕ್ಷಾಮ ; ಅನಾವೃಷ್ಟಿ : 'ಅಱುಂಬುನೀರ್' ಪರಾ. **ಅರಪು** : 'ಅರಪುಕತ್ತಿ' ಪರಾ. **ಅರಬು** : ಈ ಏಕಾಗ್ರತೆಯು ದುರ್ಲಭವಾಗುವುದರಿಂದಲೇ ಸ್ವತಂತ್ರವಿಚಾರದ ಬರವೂ ಅರಬೂ ಬೀಳುವುದು (ವಿಚಾಮಂ. ೫೮). **ಅರುಬು$_2$** : ೧. ಚಿತ್ರದುರ್ಗದಲ್ಲಿ ಸೀನೀರಿನ ಅರುಬು ಹೆಚ್ಚಾಗಿತ್ತು (ಕನ್ನನು. I, ೧೮೫). **ಅಱಂಬು** : ೨. ನೀರು ಬತ್ತಿಹೋದ ಗುಣಿ, —ಕಾಲುವೆ : ದಿವಸಕರಾಪಸಾರಣದೊಳ್ಪೆದಿಸಿ ಬೆನ್ನನೆ ಬರ್ಪ ಪೆರ್ವಲಕ್ಕವತಮಸಪ್ರಚಂಡಚರರಿಕ್ಕಿದ ಸೊಪ್ಪೆನೆ ಬೆಂದಱಂಬಿ[ಪಾಠಾಂ. ದುಱಿಂಬಿ]ನೊಳ್ ಕವಿಲ ಬಿಸಿಲ್ಗಳೇಂ ಮಱಸಲಾರ್ತುವೊ ತೀವ್ರಕರಾಭಿಘಾತದಿಂದವನಿಯ ಬೆಂದ ಪುಣ್ಗಳೆಗಳೊಯ್ಯನೆ ಕೆಂಗಲೆಗಟ್ಟಿದಂದಮಂ (ಅನಂಪು. ೬-೬೦ ; ಸೂಕ್ತಿಸು. ೮-೨ ನೋ). **ಅಱಬು** : ೧. ಇಂದುವಿನೊಳುರಿಯುಂಟೆ ಸಿಂಧುವಿನೊಳಱಬುಂಟೆ ಸಂದ ವೀರನೊಳು ಭಯವುಂಟೆ ಭಕ್ತಗೆ ಸಂದೇಹವುಂಟೆ (ಸರ್ವಜ್ಞ. ೨೬೬). ೩. ಉತ್ಪಾತ ಮೊದಲಾದವುಗಳ ದೋಷಕ್ಕಾಗಿ ನೆಲದ ಕುಳಿಗೆ ಹಸುವಿನ ಹಾಲು ಕರೆದು ತಂಪು ಮಾಡುವ ಒಂದು ಕರ್ಮ; ದೋಹನ ಕ್ರಿಯೆ : ನಾಳೆ ನಿನ್ನ ಗೋಬೃಂದಮನಿಲ್ಲಿ ತಂದು ಮುದದಿಂದಱಬಂ ಕಱೆ ಎಂದೊಡೆ (ನೇಮಿಪು. ೬-೧೦೦) ; ತುಱುವನೆಲ್ಲವ ತರಿಸುಯಿಲ್ಲಿಯೆ ಅಱಬ್ಬ[ಬ] ಕಱೆಯಲು ಬೇಹುದೆನೆ ತಾನೆಱಗಿ ಜೀಯೆನಲು (ಸಾಳ್ವಭಾ. ೧೨-೪). **ಅಱುಬು** : ೩. ಮೆಱೆವ ಯಕ್ಷಿಯ ಮುಂದೆ ಅಱುಬನು ಕಱೆದರಾನಂದಾಶ್ರು ಕಣ್ಣಿಂ ಕಱೆಯೆ ದೇವಕಿಗಾಗ ಗೋಪಕುಮಾರಕರುವೆರಸಿ (ಸಾಳ್ವಭಾ. ೧೨-೭).

[< ಅಱು$_1$ + -ಬು$_1$ . / ತಮಿ. ಮಲ. ಅಱುಮ್ಬು = ಬರ, ಕ್ಷಾಮ, ಕೊರತೆ ; ಅಱುವು = ನೀರುಬತ್ತಿ ಹೋದ ಕಾಲುವೆ]

**ಅಱುಂಬುನೀರ್** (ನಾ). ಬತ್ತಿದ ಹಳ್ಳದಲ್ಲಿ ತೋಡಿದಾಗ ಬರುವ ನೀರು : ಪಥಿಕರಱಲ್ಗೊಂಡು ತೋಡಿದಱುಂಬುನೀರ ಬಗರಗೆಗಳುಮಂ (ಕಾದಂಉ. ೨೬೬). [ಅಱುಂಬು + ನೀರ್$_1$]

**ಅಱುಕಾಱ** (ನಾ). ಕೊಯ್ಲಾಳು ; ಕಟಾವುಮಾಡುವವನು : ಯಾಸ್ಥಳದೊಳಗೆ ಬಂದ ದೇವದವಸಯಱುಕಾಱರಲ್ಲಿ ಯಾದೇವರ ದೇವಕಾರ್ಯಕೆ ಬಿಟ್ಟ ವೊಟ್ಟಲಿಂಗೆ ಭತ್ತ ಬಳ್ಳವೊಂದು (ಕಇ. I, ೨೫-೮೮ ; 1186). [ಅಱು ? + -ಕಾಱ. / ತಮಿ. ಅಱು = ಕೊಯ್ಯು, ಕತ್ತರಿಸು]

**ಅಱುಕುಳಿ** (ನಾ). ಆರಿಹೋಗುವ ಸ್ವಭಾವವುಳ್ಳದು ; ಒಣಗುವುದೇ ಸ್ವಭಾವವಾದುದು (?) : ಕುಳಿ ಪ್ರತ್ಯಯಕ್ಕೆ—ಪೋರ್ಕುಳಿ . . . ಅಱು [ಪಾಠಾಂ. ಮಱು, ಕುಱು] ಕುಳಿ, ಪೇಂಕುಳಿ, ಇಱುಕುಳಿ, ಅಯ್ಕುಳಿ (ಶಮದ. ೨೦೩ ಪ್ರಯೋ). [ಆಱು$_1$ (< ಅಱು$_1$) + -ಕುಳಿ$_3$]

**ಅಱುಗಂಡುಗ** (ನಾ). ಆರು ಖಂಡುಗದ ಅಳತೆ : ಕಱನಿ ಪೆರ್ಗ್ಗೆಱೆಯಾ ಕೆಱಗೆ ಅ [ಅ] ಱುಗಣ್ದುಗಂ (ಎಕ. III, ನಾಗಮಂ. ೮೫-೬೮ ; 776) ; ಮುಂಗಾರಗೆಱೆಯ ಕೆಱಗೆ ಅಱುಗಣ್ದುಗಂ ಕಱನಿ ಕೆರ್ಗೆಱೆಯ ಕೆಱಗೆ ಅಱುಗಣ್ದುಗಂ ಕಱನಿ ಈ ಎನೆತ್ತುಂ ಜಡಿಯಕ್ಕೆ ಪೊಯ್ದೋದು (ಎಕ. IX, ನೆಲಮಂ. ೬೦-೧೨೫ ; 797) ; ಕೋಯಿಲ್ವಸದಿಗೆ ಅಱುಗಣ್ದುಗಬ್ಬೆದೆ ಮಣ್ಕೊಟ್ಟರ್ (ಮೈಆರಿ. ೧೯೩೨, ೫೮-೨ ; 825) ; ತ್ರೈಲೋಕಮೊಱಲ ದೊಮ್ಮಬ್ಬೆ ಆಳುತಿರೆ ಅಲ್ಲಿ ಕೊಟ್ಟುದು ಅಱುಗಣ್ದುಗ ಮಣ್ಣು (ಎಕ. XII, ಶಿರಾ. ೨೪-೪೫ ; 900). [ಆಱು$_3$ + ಖಂಡುಗ]

**ಅಱುಗದ್ಯಾಣ** (ನಾ). ಆರುಗದ್ಯಾಣ : ಅಱುಗದ್ಯಾಣ ರಾಣಿ (?)ದೆ ಪನ್ನೆರಡುಗದ್ಯಾಣ ದಣ್ಡ (ಮೈಆರಿ. ೧೯೪೨, ೪೭-೧೯ ; 790).

[ಆಱು$_3$ + ಗದ್ಯಾಣ]

**ಅಱುಗಯ್** (ನಾ). ಆರು ಕೈಗಳಷ್ಟು ; ಆರು ಮೊಳದಷ್ಟು ಪ್ರಮಾಣ : ಕೊಟ್ಟ ವೃಂದಾವನದ ಹೂದೋಂಟ ದೇವಾಲ್ಯದಿಂ ಬಡಗಲು ಅಱುಗಯ್ಯಗಲ ಹನ್ನೆರಡು ನೀಳದ ಮನೆ (ಕಇ. I, ೩೩-೨೯ ; 1240). [ಆಱು$_3$ + ಕೆಯ್$_2$]

**ಅಱುಗಳೆ** (ನಾ). ಆರುಕೊಳಗ (?) : ಅಱುವತ್ತು ಖಂಡುಗದೀರಱುಗಳಮದು ಪೊಂಗಳಯ್ದು ಪಣಮಯ್ದಕ್ಕಂ (ವ್ಯವಹಾ. ೧೩-೭) ; ಯಿಧರ್ಮಕ್ಕೆ ಬಿಟ್ಟುದು ಪಡುವಗೆಱೆಯಲಿ ಅಱುಗಳ ಗದ್ದೆ ಅಱುಗಳ ಹೊಲಯಿಷ್ಟನು ನಡೆಸಬಹೆವು (ಎಕ. IX, (S) ಕಾನಕಾ. ೪೯-೮ ; 1368).

[ಆಱು$_3$ + ಗಳ$_0$ (< ಕೊಳಗ)]

**ಅಱುಗಾವುದ** (ನಾ). ಆರುಗಾವುದ ದೂರ: "ಅಱುಗಾವುದಂ, ಆಱುಗಾವುದಂ" (ಶಬ್ದಾನು. ೮೮ ಪ್ರಯೋ). [ಆಱು$_3$ + ಗಾವುದ]

**ಅಱುಗೆಯ್** (ನಾ). ಒಣಗಿದ ಗದ್ದೆ; ನೀರು ಇಂಗಿದ ಗದ್ದೆ: ಎಳೆವೆಣ್ಣ ಮೆಯ್ಯ ಕೋಮಲ ನಖರೇಖೆಯಂತಿರಱುಗೆಯ್ಗಳೊಳಾದುವು ಕೂಡೆ ಬೀಡೆಗಳ್ (ಜಗವಿ. ೧೪–೭). [ಅಱು$_1$ (< ಆಱು$_1$) + ಕೆಯ್$_3$]

**ಅಱುಗೆಱೆ** (ನಾ). ಬತ್ತಿದ ಕೆರೆ; ಒಣಗಿದ ಕೆರೆ; ನೀರು ಇಂಗಿಹೋದ ಕೆರೆ: ಕಂಪಲ್ ಮಸಗುತ್ತುಂ ಬತ್ತೆ ತೆರ್ಪಂಬಡೆದಱುಗೆಱೆಗಳ್ ಬೀಡೆವೊಗಿರ್ದ ತಣ್ಣೀರೊಸರ್ದಾಣಂ (ಜಗವಿ. ೧೭–೬೨); ಸುಡುಗಾಡಿಡುಗಿಚ್ಚಡುಗೂಟುಡುಗೊಱೆಯುಂ ಮಾಱು . . . ತುಡುಜೊಡರಱುಗೆಱೆಯೆಂಬಿವು ಪಡೆಯವು ಬಿಂದುವನುದಂತವೃತ್ತಿಯನಾಳ್ದುಂ (ಶಮದ. ೧೭೧). [ಅಱು$_1$ (< ಆಱು$_1$) + ಕೆಱೆ]

**ಅಱುಗೇಣ್** (ನಾ). ಆರುಗೇಣು: ಆಱುವೆರಲ್, ಅಱುಗೇಣ್, ಅಱುವತ್ತು (ಭಾಷಾಭೂ. ೧೫೭ ಉದಾ). [ಆಱು$_3$ + ಗೇಣ್]

**ಅಱುಗೊಳ್** (ಕ್ರಿ). ಪ್ರೀತಿಯನ್ನು ಹೊಂದು: ವಿದ್ದೆಯಂ ಗುಣಕಱುಗೊಂಡು ಕೊಟ್ಟನಗೆ ಸಂತಸಮಪ್ಪಿನಮೀವ ನಿನ್ನ ದಕ್ಷಿಣೆಯದು (ಪಂಪಭಾ. ೨–೬೧); ಗುಣಕಱುಗೊಂಡಂ (ಶಮದ. ೧೭೪ ಪ್ರಯೋ).
[ಅಱು$_2$ + ಕೊಳ್$_1$]

**ಅಱುಚು, ಅರಚು, ಅಱಚು, ಅಱೆಚು** (ಕ್ರಿ). ಗಟ್ಟಿಯಾಗಿ ಒರಲು; ಕೂಗಿಕೊಳ್ಳು; ಕಿರುಚು; ಒರಲು: "ಅಱುಚು – ಉಚ್ಚೈರ್ಧ್ವನೌ" (ಶಮಧಾ); ಆಱುಚದೆ ಪೋ (ಜಗವಿ. ೧೧–೭೨). **ಅರಚು:** ರಾವುತ ಬಿದ್ದನೆಂದರಚಿ ಮಾವುತ ಪಿಡಿದೀವುತ ಅಂಕುಶದೊಳಗೆ ಕೋಯೆನುತಿಟ್ಟ (ಸೌಂದಕಾ. ೭–೬೪); ಇದ್ದಕ್ಕಿದ್ದಹಾಗೆ ಹೆಣ್ಣುದನಿಯೊಂದು ಛಿಟಾರೆಂದು ಅರಚಿ ಮೌನವನ್ನು ಕತ್ತರಿಸಿತು (ಮಹಾಲ. ೧೧೨). **ಅಱಚು:** ನಿನದಂಗೆಯ್ದಱಚುತ್ತುಮೆಯ್ದೆ ಪರಿತಂದಾನಂದದಿಂದೊಂದನೊಂದನಲಂಪಿಂದಮರ್ದಪ್ಪಿ (ಶಾಂತೀಶ್ವ. ೧೧–೯೮); ಕಾಗೆ ಸಾಕಿದ ಕೋಗಿಲೆಯ ಮಱಿ ಕೂಗುವುದು ಸುಸ್ವರದೊಳಲ್ಲದೆ . . . ಕಾವು ಕಾವೆಂದಱಚುವುದೆ ಹೇಳು (ಬಸಪು. ೩–೭೯); ಹರಿಯೊಡನೆ ಜಂಬುಕನಱಚಿ [ಪಾಠಾಂ. ನೊರಲಿ]ದರೆ ನಾನೇನ ಹೇಳುವೆ (ಕುವ್ಯಾಸ. ೯–೪೬). **ಅಱೆಚು:** ಕಾಗೆಗಳಂತಱೆಚಿ ಗೂಗೆಗಳಂತೆ ಪಲುಂಬಿ ಕತ್ತೆಗಳಂತೊಱಲಿ (ಬಸರ. ೮–೧೦೦); ತರಣಿ ಸಮಂತು ನಮ್ಮಧಿಪನಾಗಿಯುಮಿಂತುಱೆಕಾಯ್ದನೆಂದು ತತ್ಸರಸಿಜಲಕ್ಷ್ಮಿಗೆಯ್ದಱೆಚುತಿರ್ದಪುದೆಂಬಿನಮಾ ನಿದಾಘ ಭೀಕರತರ ತಾಪದೇೞ್ಗೆಗೆನಸುಂ ನಿಲಲಾಱದೆ ಚೀಱುತುಂ . . . ಇರ್ದುದು ಕೋಕಸಂಕುಳಂ (ಕುಸುಮಾ. ೮–೧೨೯); ಘುಮ್ಮಿಕ್ಕಿ ಕೂರುಮನಱೆಚಿ ದಿಕ್ಕುವಿದಿಕ್ಕು ಧಿಗ್ಗೆನಲು (ತೊರರಾ. ೪–೪–೨೭); ಕಣ್ಬೇನೆಯ ಕರಡಿಯವೊಲಱೆಚುವಂ ವಾಚಕನೇ (ನೀತಿಸಾ. ೩೪). [ದೇ. ‖ ತೆಲು. ಅಱಚು]

**ಅಱುತು** 'ಆಱು$_1$' ಪರಾ.

**ಅಱುತೆಱ** (ನಾ). ಆರುಬಗೆ, —ವಿಧ: ಸಂದಣಿಸಿದ ನವಚಿತ್ರಸುವರ್ತಕನೆಂದೆಂಬಱುತೆಱದಣ್ಪು ಕರಂ ಮನಸಂದುದು (ಜಯಕಾ. ೩–೫). [ಆಱು$_3$ + ತೆಱ$_1$]

**ಅಱುದಿಂಗಳ್, ಅರುದಿಂಗಳು** (ನಾ). ಆರುತಿಂಗಳು; ಅರ್ಧವರುಷ: ಆಱುದಿಂಗಳೊಳಾ ಅಯ್ನೂಱು ರಥಮಂ ಸಮೆದು (ವಡ್ಡಾರಾ. ೧೪೭–೫); ಪೂಣ್ದತೆಱ [ದೊಂ] ದಱುದಿಂಗಳೊಳೊಂದು ಮೂಱು ತಿಂಗಳೊಳೆ ಸಮಾಪ್ತಿಯಾದುದೆನೆ (ಪಂಪಭಾ. ೧೪–೬೦); ಆಱುದಿಂಗಳ್ವರ ಜಿನಪೂಜೆಯಂ ಮಾಡಿ (ಚಾವುಂಪು. ೨೫–೫); ಇಂದೀವರಾಕ್ಷಿಗೊಂದು ದಿನದಂದದಿಂದಮಱುದಿಂಗಳ್ ನೆಱೆಯೆ (ವರ್ಧಪು. ೧೩–೫೬ ವ); ಅಱುದಿಂಗಳನಿತಕ್ಕೆ ಸಂಪೂರ್ಣಮಾಗಲ್ (ರೇವಣ. ೧೦೧–೫೭). **ಅರುದಿಂಗಳು:** ಜಲ್ಪಿಸಲು ಅರುದಿಂಗಳಾದಿಯದುಲ್ಪ ನವಮಾಸಾಂತ್ಯ ಸುರಪತಿ ಕಲ್ಪಿಸುವ ನವರತ್ನವೃಷ್ಟಿಯ ಮೂರುಸಂಜೆಯಲಿ (ಬಿಜ್ಜಪು. ೯–೩೬). [ಆಱು$_3$ + ತಿಂಗಳ್]

**ಅಱುನೀರ್** (ನಾ). ಬತ್ತಿದ ನೀರು; ಇಂಗಿಹೋದ ಜಲ: ಮಱುಗಿದಱುನೀರ ಮೀಂಗಳ್ವೊಲಾದರ್ (ವಡ್ಡಾರಾ. ೫೭–೧೨); ಅಱುನೀರಾಗಿರೆ ತಾಯ್ಮಟಿಲ್ವರೆಗಮಾ ವಾರಾಶಿಯಂ ತುಳ್ಕಲುಂ (ಪಂರಾಮಾ. ೯–೧೮೩); ಬಱುಗೊಳದವೊಲಾಯ್ತಾಕ್ಷಿಸಿ ಮಱುಗಿದುದಱುನೀರ ಮೀಂಬೊಲಿಂದೆನ್ನ ಮನಂ (ಯಶೋಚ. ೩–೬); ನೀರಡಸಿ ಬೇಸಗೆಯೊಳ್ ಬಡಗೊಂದೆ ಬಂದು ತಾಂ ಪಡೆದದಱುನೀರನೆಯ್ದದೆಯುಮಲ್ಲಿಯ ಕೊೞ್ಕೆಸಱಲ್ಲಿ ಬೀೞ್ವವೋಲ್ (ಜೀವಸಂ. ೮೧–೧೦).
[ಅಱು$_1$ (< ಆಱು$_1$) + ನೀರ್$_1$]

**ಅಱುನೀರ್ವಳ್ಳ** (ನಾ). ನೀರು ಬತ್ತಿಹೋದ ಹಳ್ಳ; ಒಣಗಿಹೋದ ಹಳ್ಳ: ಅಱುನೀರ್ವಳ್ಳಂ ನೆಱಲ್ಗುಂದಿದ ತರುನಿಚಯಂ (ದಶಕು. ೩–೧೨).
[ಅಱುನೀರ್ + ಪಳ್ಳ]

**ಅಱುನೂಱು, ಅರುನೂರು** (ನಾ). **೧.** ಆರುನೂರು: ಕಲಿದೇವರಿಗೆ ಅಱುನೂಱು ಮರದ ತೋಣ್ಟ (ಇಎ. ೧೯೪೭. ಹಾನಗಲ್. ೨೮೬–೧೪; 974); ಐಸಾಸಿರದಱುನೂಱವಧಿಜ್ಞಾನಿಗಳುಂ (ಅಜಿಪು. ೮–೨೫ ವ). **೨.** ಆರುನೂರು ಗ್ರಾಮಗಳುಳ್ಳ ಸೀಮೆ (?): ಚೋಳಧನಞ್ಜಯನೆ ಎರಿಗಾಲ್ವಾದಿ ಅಱುನೂಱು ಆಳೆ (ಎಕ. XII, ಮದ್ದಗಿ. ೯೨–೧; 750); ಈ ಅಱುನೂಱು ಭೂಮಿ ಅಗ್ರಹಾರಮುಂ (ಎಇ. XXI, ೨೯–೧೭; ೮ನೆಯ ಶತ); ಕನ್ನಡಮೆರಡಱುನೂಱಱ ಕನ್ನಡಮಾ ತಿರುಳಕನ್ನಡಂ (ಗದಾಯು. ೧–೪೨). **ಅರುನೂರು:** **೧.** ಸಾವಿರದ ಅರುನೂರ ಹತ್ತೊಂಭತ್ತನೆಯಾ ವೊರುಶಯಿಾಶ್ವರನಾಮ ಸಂವತ್ಸರದ ಮಾಘ ಶುಧ ೫ಲ್ಲು (ಎಕ. XI, ದಾವಣ. ೧೬೪–೬; 1688). [ಆಱು$_3$ + ನೂಱು]

**ಅಱುಪು** 'ಅಱಿಪು' ನೋ.

**ಅಱುಬು** 'ಅಱುಂಬು' ನೋ.

**ಅಱುಬೋನ** (ನಾ). "ಆರುಬಗೆಯ ಅನ್ನ" (ಸಿದ್ಧರಾ. ಕೋಶ); ತಱಗು ಚಕ್ಕುಲಿ ಹೂಸಣಂಬ ಹೂರಿಗೆಗಳಂ ಆಱುಬೋನ ಫೇಣಿ ಗಾಂಗೆ ಇಡ್ಡಲಿಗೆ ಅವುಗು ತಿಱುಸೇವಗೆಯನು (ಸಿದ್ಧರಾ. ೮–೮೫).
[ಆಱು$_3$ + ಬೋನ]

**ಅಱುಮೆ$_1$** (ನಾ). ಪ್ರೀತಿ; ಲಲ್ಲೆ; ಮುದ್ದು: "ಅಱುಮೆಯುಂ ತಾಂ ಲಲ್ಲೆಯೆನ್ನಲಿವು ಮುದ್ದಕ್ಕುಂ" (ಕವಿಕಂ. ೧೮೦). [ಅಱು$_2$ + -ಮೆ$_1$]

**ಅಱುಮೆ$_2$** (ನಾ). ಆರುಬಾರಿ, —ಸಲ: ಆಱುಮೆ . . . ಅಱುವರ್ (ಶಬ್ದಾನು. ೩೬೫). [ಆಱು$_3$ + -ಮೆ$_2$]

**ಅಱುಮೊಗ** (ನಾ). ಆರುಮುಖವುಳ್ಳವನು; ಷಣ್ಮುಖ; ಕುಮಾರಸ್ವಾಮಿ: "ನವಿಲ್ದೇರಂ ಬಗೆಯಲಱುಮೊಗಂ ತಾನೆನ್ನಲ್ . . . ಷಣ್ಮುಖಂಗಮುರ್ವವು ನಿರುತಂ" (ಕವಿಕಂ. ೨೧); ಮಾದೇವಿಯೆಱಕದಱುಮೊಗನೊಡನೆ ಕಱಿಗೊರಲನೊಪ್ಪಿರ್ದನು (ಭಾವಚಿಂ. ೯–೪೬).
[ಆಱು$_3$ + ಮೊಗ. / ತಮಿ. ಆರ್ಮೊಗಂ]

**ಅಱುಮೊೞ** (ನಾ). ಆರುಮೊಳ: "ಅಱುಮೊೞಂ, ಆಱುಮೊೞಂ" (ಶಬ್ದಾನು. ೩೫೫ ಪ್ರಯೋ). [ಆಱು$_3$ + ಮೊೞ]

**ಅಱುಲುಗದ್ದೆ** (ನಾ). ಕೆಸರುಗದ್ದೆ (?).
[ಅಱುಲು$_0$ (< ಅಳಿಱ್) + ಗದ್ದೆ (< ಗೞ್ದೆ)]

**ಅಱುವಗೆ** (ನಾ). ಅರಿಷಡ್ವರ್ಗ; ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಆರು ಶತ್ರುಗಳು: ಅಱುವಗೆಯಂ ತೊಱೆದು ಹರಿಯೊಳಿರೆ (ಅದ್ಭುತ. ೨೮–೧೫). [ಆಱು$_3$ + ಪಗೆ$_2$]

**ಅಱುವಡಿ,** ಅರುವಡಿ (ನಾ). ೧. ಆರುಮುಡಿ; ಆರರಷ್ಟು: ಆಱಕ್ಕೆ–ಅಱುವಡಿ, ಅಱುವತ್ತು (ಶಮುದ. ೧೮೯ ಪ್ರಯೋ). **ಅರುವಡಿ :** ೨. ಆರನೆಯ: ಆಳಿದ ಮಹಾಸ್ವಾಮಿಯವರು ಅರುವಡಿ ಶ್ರೀಮಚ್ಚಾಮರಾಜ ಒಡೆಯ ಮಹಾಸನ್ನಿಧಾನದ ಕಯ್ಮುದ್ರೆಯಿಂದ (ಮಂತ್ರಶ. ೧೫–೯).
[ಅಱು₃ + ಮಡಿ₃]

**ಅಱುವಣ,** ಅಱವಣ (ನಾ). ಒಂದು ತೆರಿಗೆ: ಮೂಡಲೆರಡುಂ ಪಳ್ಳದ ಕೂಡಲೆ ಮೇರೆಯಾಗೆ ಬಿಟ್ಟರದಕ್ಕಱುವಣಗದ್ಯಾಣವಿಪ್ಪತ್ತು (ಸೌಇಇ. XI–i, ೫೨–೫೪; 1007); ಎರಡಱುವತ್ತು ಪೊನ್ನಱುವಣಂ ಸಮಕಟ್ಟಿನೆ ಮಾಡಿ (ಎಇ. XV, ೩೪೧–೩೯; 1071); ಅಱುವಣ ಪಣವೊಂದು (ಸೌಇಇ. V, ೮೪೮–೩೬; 1097); ಸೋದರ ಸೋಮಗೌಡ ಹಿಟ್ಟುಕಾಱರಿಗೆ ಅಱುವಣ ಮತ್ತರಿಂಗೆ ಹಂನೆರಡು ಹೊಂನ ಮರಿಯಾದೆ ಕೋಲುಕೊಳಗದೇವರಿಗೆ (ಎಇ. XXIII, ೩೦–೬೦; 1265); ಕೆಱೆಯ ತೋಂಟವಱುವಣದಿಂ ಕೆಱೆಗೆ ತೆರುವ ಗದ್ಯಾಣ (ಬೊಂಕಶಾ. ೧೯೩೩; ಹಾವೇರಿ. ೬೦–೨೬; ?). **ಅಱವಣ :** ತ್ರಿಳೋಚನ ಪಂಡಿತರ್ಗೆ ಧಾರಾಪೂರ್ವಕಂ ಮಾಡಿ ಬಿಟ್ಟುಕೊಟ್ಟ ಅಱವಣದ ಮತ್ತರ್ ಮೂವತ್ತು (ಮುಂಬರಾ. XI, ೨೪೧–೩೮; 1060).

**ಅಱುವಣದ ಗೌಡು** = ಮಾನ್ಯದ ಭೂಮಿಯ ಮೇಲಿನ ರಿಯಾಯಿತಿ ತೆರಿಗೆಯನ್ನು ವಸೂಲ್ಮಾಡುವಾತ: ಸಮಸ್ತ ಮಾಣಿಕ್ಯನಗರಂಗಳು ಕಬ್ಬಾಹುನಾಥ ಅಱುವಣದ ಗೌಡುಪ್ರಜೆಗಳು ಮುಂತಾಗಿ (ಎಕ. II, ೩೪೬–೩೬; 1296). [ಅಱು₃ + ಪಣ₂]

**ಅಱುವತೊಕ್ಕಲ್** 'ಅಱುವತ್ತೊಕ್ಕಲ್' ನೋ.

**ಅಱುವತ್ತಿಗ** (ನಾ). ಬಿತ್ತಿದ ಅರುವತ್ತು ದಿವಸಕ್ಕೆ ಬೆಳೆ ಬರುವ ಭತ್ತ; ಎರಡೇ ತಿಂಗಳಲ್ಲಿ ಬೆಳೆಕೊಡುವ ನೆಲ್ಲು: "ಷಷ್ಟಿಕ – ಅಱುವತ್ತಿಗ" (ಒಷಧಿ. ೧೬೩); "ಮಾಸದ್ವಯೋದ್ಭವ — ಅಱುವತ್ತಿಗನ ನೆಲ್ಲು" (ಒಷಧಿ. ೧೨೫). [ಅಱುವತ್ತು + –ಇಗ]

**ಅಱುವತ್ತು,** ಅರವತ್ತು, ಅರುವತ್ತು (ನಾ). ಆರನ್ನು ಹತ್ತರಿಂದ ಗುಣಿಸಿದಾಗ ಬರುವ ಲಬ್ಧ; ಒಂದು ಸಂಖ್ಯೆ: ಅಱುವತ್ತು ಬಾಡಮನಾಳುತ್ತಂ (ವಡ್ಡಾರಾ. ೧೮೫–೧೧); ಇಲ್ಲಿಗಱುವತ್ತು ಯೋಜನದೊಳಿಂದ್ರಪ್ರಸ್ಥಮೆಂಬುದು ಪೊೞಲ್ (ಪಂಪಭಾ. ೪–೮ ವ); ಅಱುವತ್ತು ತುಂಬಿದೊಡೆ ಮಱುವಾತುಬೇಡೆಂದು ನಾಣ್ನುಡಿಗಳುಂಟು (ಸಿದ್ಧರಾ. ೧–೪೫). **ಅರವತ್ತು :** ಅರಿಯೆ ಅಂದರೆ ಅರವತ್ತು ಗುಣ ಬಲ್ಲೆನೆಂದರೆ ಬಹಳ ಕಷ್ಟ (ಗಾದೆ). **ಅರುವತ್ತು :** ಅರುವತ್ತು ಮೂವರ ತ್ರಿಪದಿ (ಕವಿಚ. II, ೧೫೩).

**ಅಱುವತ್ತುನಾಲುಕು ಬಿಜ್ಜೆ** = ಅರವತ್ತು ನಾಲ್ಕು ವಿದ್ಯೆಗಳು: ಗುತ್ತಿಗೆವಿಡಿದಂತೆ ನೆಱೆ ಸಾಧಿಸಿದಱುವತ್ತುನಾಲುಕು ಬಿಜ್ಜೆಗುಱುಹ ವೃತ್ತಕುಚಾನ್ವಿತೆಯರ ಪರಿಕೆಯ ನೋಡು ಚಿತ್ತಯಿಸೆಂದರಂಗಜನ (ಮೋಹತ. ೧೬–೧೧). **ಅಱುವತ್ತುಮೂವರು** = ತಮಿಳು ಶೈವರಲ್ಲಿ ಪ್ರಸಿದ್ಧರಾದ ಅರವತ್ತುಮೂರು ಮಂದಿ ಪುರಾತನ ಭಕ್ತರು: ಅಭವಂಗೇಱಿದುತ್ತಮಭಕ್ತಿಯುಳ್ಳಱುವತ್ತುಮೂವಱೊಳು (ಬಸಪು. ೧೦–೮); ಧರೆ ಬೆರಲೆತ್ತಿ ಬಣ್ಣಿಸುತಿರಲ್ ಪೊಗಳ್ವಿಂ ಘನಭಕ್ತಿಯಿಂ . . . ಶರಣೆನೆ ಕಾಪರಂ ಸುಕೃತಜೀವರನೊಲ್ದಱುವತ್ತುಮೂವರಂ (ತ್ರಿಪುವಿ. ೧–೪೩).
[ಅಱು₃ + ಪತ್ತು₃. / **ತಮಿ. ಮಲ.** ಅಱುಪತು; **ತುಳು.** ಅಜಿಪ, ಅಜಿಪ್ಪ, ಅಜಿಪ; **ಕೊಡ.** ಅರುವದಿ; **ತೆಲು.** ಅಱುವದಿ, ಅರುವೈ, ಅರವೈ]

**ಅಱುವತ್ತೊಕ್ಕಲ್,** ಅಱುವತೊಕ್ಕಲ್ (ನಾ). ಅರುವತ್ತು ಮನೆ, —ಕುಟುಂಬ: ಗಾವುಂಡುಗಳುಮಱುವತ್ತೊಕ್ಕಲುಂ ತೋಂಟದಲೊಂದು ಬಳ್ಳಿಯುಂ ನಡೆಯಿಸುವರು (ಸೌಇಇ. XI–i, ೫೦–೨೦; 1005); ಧಾರಕ್ಕಮಂ ಅಱುವತ್ತೊಕ್ಕಲು ಒಕ್ಕಲ[ಲ್ಲಿ]ಎಣ್ಣೆಗೆ ಗಾ[ಗೌ]ಡಿಗೆ ೧ (ಇಆ. XI, ೨೬೪–೩೩; 1080); ದೇವಂಗೇರಿಯ ಸಾಯಿರ ಪರಿವಾರಂ ಅಱುವತ್ತು(ತ್ತೊ)ಕ್ಕಲುಂ (ಎಇ. XIX, ೧೯೫–೩೨; 1210). **ಅಱುವತೊಕ್ಕಲ್ :** ಭೂನುತರಪ್ಪಱುವತೊಕ್ಕಲುಂ (ಕೊಲ್ಹಾಶ. ೧೬–೩೯; 1196). [ಅಱುವತ್ತು + ಒಕ್ಕಲ್₂]

**ಅಱುವದಿಂಬರ್** (ನಾ). ಅರುವತ್ತು ಮಂದಿ, —ಜನ: ಉತ್ತರಾಯಣ ಸಂಕ್ರಾನ್ತಿಯನ್ದು ಗಾವುಣ್ಡನಾ[ಗಿ]ಯುಮ್ಮಗಮಱುವದಿಂಬಗ್ಗರ್ಗಂ ಕೊಟ್ಟ ವ್ಯವಸ್ಥೆ (ಸೌಇಇ. XI-i, ೪೩–೧೬; 970); ನಾಲ್ವತ್ತೆಣ್ಬರುಮಱುವದಿಂಬರುಮೆಪ್ಪತ್ತಿರ್ವರುಂ (ತಸೂವೃ. ೩೩೩).
[ಅಱು₃ + ಪದಿಂಬರ್]

**ಅಱುವಿಡು** (ಕ್ರಿ). (?): ಅಱಿತ್ತೋನ್ ಪಞ್ಚ ಮಹಾಪಾಕ್ಕು ಒಕ್ಕಲ್ಕೊರಿ ಪೋಗುಗೆ ಈ ಪಟ್ಟಂ ಅಱುವಿಟ್ಟರ್ (ಎಕ. XIV, ತಿರುಮ. ೧೫೧–೧೦; ?).
[?. / **ತಮಿ.** ಅಱುವಿಡು = ಬಾಕಿಯನ್ನು ಪೂರ್ತಿ ವಸೂಲುಮಾಡು]

**ಅಱುವುಳ್ಳಿ,** ಅಱವುಳ್ಳಿ (ನಾ). ಒಣಗಿದ ಸೌದೆ, —ಪುಳ್ಳೆ: ಮಿಱುಗುವ ಶಿವಧ್ಯಾನಮಂ ಕೆಡಿಪೆವೆಂದು ಬಗೆದಱುವುಳ್ಳಿವೊತ್ತವನ ಮೇಲಡಕಿಕಿಚ್ಚಿಡಲ್ಕಱಿದನೇ (ಪದ್ಮರಾ. ೪–೫೪). **ಅಱವುಳ್ಳಿ :** ನೆಱೆ ಚತುರ್ಭುಜನ ಹೆಣಕೆಱೆಯರಿಲ್ಲದೆ ಪಾರ್ಥನಱವುಳ್ಳಿವೊತ್ತ ಕಥೆಗಳನವಱೊಳೆ (ಸಾನಂಚ. ೨–೧೧೯). [ಅಱು₁ (< ಆಱು₁) + ಪುಳ್ಳಿ]

**ಅಱುವೆ,** ಅರಿವೆ, ಅರುಬೆ, ಅಱಿವೆ (ನಾ). ಬಟ್ಟೆ; ಪಂಚೆ; ವಸ್ತ್ರ: ಆಱುವೆಯನೊಂದೋಜಲೆ ಕೊಂಡೊಡೆ ಆಕಾಶವನುಡುಮೇಯಿತ್ತಲ್ಲಾ (ಅವಚಂ. ೧೩೨–೬೦೨); ಉಟ್ಟಱುವೆಯುಂ ಉರದ ಮೇಲಕ್ಕೆ ತೆಗೆಯುತ್ತ (ಹಚಕಾ. ೧೨–೧೬); ಒಂದಱುವೆಯುಂ ದಿಟ್ಟಗಳ ಮೇಲೆ ಕಟ್ಟಯುಪವಾಸಮಂ ಕೊಂಡನೆಲ್ಲವರುಮ್ಮಳಿಸುವಂದದಿ (ಸಮ್ಯಕೌ. ೧೧–೪೬); ಮಿಸುಪರನ್ನಮಂ ಮುಸಿಯಱುವೆಯಿಂದೆ ಬಾಸಣಿಸುವಂದದಿ (ಕೊಟ್ವೊಬ. ೭–೨೩). **ಅರಿವೆ:** ಮಾಣಿಕ್ಯವನ್ನು ಮುಸಿ ಅರಿವೇಲಿ ಕಟ್ಟಿದಹಾಗೆ (ಗಾದೆ). **ಅರುಬೆ:** ನುಡಿದ ಗುರು ತರಿಸೆಣ್ಣೆಯಂನರುಬೆಯಂನದ್ದಿ ಶೀಘ್ರದಲಿ ಬರಲಿ (ತುರಂಗ. ೫೬–೧); ಹಾದಿಯ ಅರುಬೆಯ ಜೋಡಿಸಿ ಆಯೋರು . . . ಅಯ್ದ ಆರುಬೆ ಹಸ್ರೂ ಸಕ್ಲಾತಿ ಕಾಣೆ (ಹುಟ್ಟಹ. ೪೮). **ಅಱಿವೆ :** ತೊಯ್ದಱ(ಱು)ವೆಯನೆ ನೃಮೂತ್ರದಿಂದೆ ನಸ್ಕಂಗೆಯ್ (ಖಮುದ. ೭–೨೧); ಅಱಿವು ಎಂಬ ಅಱಿವೆಹಾಸಿ ಹರವಿ ಹಾಲ ಮೊಸರ ತಳಿದು (ಪುರಂದ. ೧–೧೨೮–೪); ತೈಲದೊಳಗೆ ಅಱಿವೆಯೆದ್ದಿಮ್ಮೆಗೆ ಉರಿಯ ಸುತ್ತಲಿಕ್ಕೆ (ವಿದಾಕ್ಯ. ೧೧೬–೩).

**ಅಱಿವೆಯಂಚಟೆ** = ಅರಿವೆ ಅಂಚಡಿ: ಅಱಿವೆಯಂ[ಪಾಠಾಂ. ಹಂ]ಚಟೆಗಳಲಿ ಸುತ್ತಿ ಸಮೀರ ಬಾಂಧವನ (ತೊರರಾ. ೬–೨೩–೫).
[**ದೇ.** ‖ **ತಮಿ.** ಅಱುವೈ; **ತುಳು.** ಅರ್ವೆ; **ತೆಲು.** ಅಱ = ಚಿಂದಿ, ಜೂಲುಬಟ್ಟೆ]

**ಅಱುವೆಗಪ್ಪಡ** (ನಾ). ಕೊಳಕೂ ಹರಕೂ ಆದ ಬಟ್ಟೆ; ಮಲಿನ ವಸ್ತ್ರ (?): ಅಱುವೆಗಪ್ಪಡವುಟ್ಟು ಹೆಂಡತಿಯಿರಲ್ಕಂಡು ಮಱುಗಿ ಮುದವಳಿದು (ಪಿಂಡೋರ. ೨–೩); ಮೊಗ ಕಂದಿ ಕೆಳೆಗುಂದಿಯಱುವೆಗಪ್ಪಡವುಟ್ಟು ರಾಗವಳಿದೊಪ್ಪಗೆಟ್ಟು (ಹಚಕಾ. ೮–೬೨). [ಅಱುವೆ + ಕಪ್ಪಡ]

**ಅಱುವೆರಲ್,** ಅಱುವೆರಳು (ನಾ). ಆರುಬೆರಳು: ಅಱುದಿಂಗಳ್, ಆಱುವೆರಲ್, ಆಱುಗೇಣ್ (ಭಾಷಾಭೂ. ೧೫೭ ಉದಾ); ಎನಗಱಿಯೆ ಕೌತುಕಂ ಮುನ್ನಿನ ನಿನ್ನಱುವೆರಲ ಮೆಯ್ಯೊಳೀ ವರದಕರಂ ಎನಿತುಂ ಕಿಱಿದಾಗಿರ್ದುದೊ (ವಸ್ತವಂ. ೪–೩೦). **ಅಱುವೆರಳು :** ಎಡದಂಘ್ರಿಗಱುವೆರಳಾಗಿ ದಿವದೊಳುತ್ಪನ್ನನಾದಂ ಮೂಲನಕ್ಷತ್ರದಿಂದರಿಷ್ಟಾಂಶದೊಳ್ ಸುಕುಮಾರನು (ಜೈಮಿಭಾ. ೨೮–೧೪). [ಅಱು₃ + ಬೆರಲ್]

**ಅಱುವೆರಳು** 'ಅಱುವೆರಲ್' ನೋ.

**ಅಱುಸಾಸಿರ** (ನಾ). ೧. ಆರುಸಾವಿರ, —ಸಹಸ್ರ: ಅಱುಸಾಸಿರ ಬಿಲ್ನಿಡಿಯವಾಗಿ (ಆದಿಪು. ೫-೪೧ ವ); ಪರಮಪ್ರಮಾಣಮಱುಸಾಸಿರಂ ಬರಂ (ಶಾಂತಿಪು. ೬-೧೦೩). ೨. ಆರುಸಾವಿರ ಗ್ರಾಮಗಳುಳ್ಳ ಸೀಮೆ (?): ಸ್ವಸ್ತಿ ಶ್ರೀ ಶಿವಮಾರ ಪೃಥುವೀರಾಜ್ಯಂಕೆಯೆ ಪುನ್ನಾಡಱು ಸಾಸಿರಕ್ಕೆ ಎಱೆಯರ್ (ಎಕ. III, ನಂಜನ. ೨೬-೨; 310); ಶ್ರೀನೊಲಿ ಮ್ಬಾಧಿರಾಜಂ ಗಙ್ಗಱುಸಾಸಿರವುಮಾನಾಳುತ್ತಿರೆ (ಎಕ. X, ಕೋಲಾರ. ೭೯-೭; 890).

ಅಱುಸಾಸಿರ್ಬರ್ = ಆರುಸಾವಿರ ಮಂದಿ: ತೊಂಭತ್ತಱುಸಾಸಿರ್ಬರು (ಇಆ. VI, ೧೦೨-೬; 887). [ಅಱು₂ + ಸಾಸಿರ]

**ಅಱುಹಿಗ** (ನಾ). ತಿಳಿವಳಿಕೆಯುಳ್ಳವನು; "ಬಲ್ಲವನು; ಜ್ಞಾನಿ" (ಶೂನ್ಯಸಂ. ಕೋಶ. ೫೧೦). [ಅಱುಹು₂ (< ಅಱಿವು) + -ಇಗ]

**ಅಱುಹಿರಿಯ** (ನಾ). ಜ್ಞಾನದಲ್ಲಿ ಶ್ರೇಷ್ಠನಾದವನು: ಕೊಂಕಣ ದ್ವೀಪದಲ್ಲಿ ಒಂದು ಕಪಿ ಹುಟ್ಟಿತ್ತು ... ಅಱುಹಿರಿಯರ ತಲೆಯ ಮೆಟ್ಟಿ ಅರಿಯಿತ್ತು (ಅವಚಂ. ೮೨-೩೬೧); ಎರಳೆಯ ಕೊಂಬಿನ ನುಲಿಕೆಯ ಬಳಸಿನಲ್ಲಿ ಅಱುಹಿರಿಯರೆಲ್ಲ ಬಳಸ್ಯಾಡುತ್ತೈದಾರೆ (ಅಱಿಮಾ. ೨೫-೬೦); ಬಲ್ಲಿದರೆಂಬ ಅದ್ವೈತಜ್ಞಾನಿಗಳೆಲ್ಲರೂ ಮಾಯಾಪ್ರಪಂಚಿನಲ್ಲಿ ವರ್ತಿಸುತ್ತಿಹರೆಂಬುದೀಗ ಅಱುಹಿರಿಯರೆಲ್ಲರೂ ಬಳಸ್ಯಾಡುತ್ತೈದಾರೆಯೆಂಬ ಶಬ್ದಕ್ಕರ್ಥ (ಅಱಿಮಾ. ೨೫-೬೦ ಟೀಕು). [ಅಱು₀ + ಹಿರಿಯ (< ಪಿರಿಯ)]

**ಅಱುಹಿರಿಯತನ** (ನಾ). ಜ್ಞಾನದಲ್ಲಿ ಮೇಲಾಗಿರುವೆನೆಂಬ ಭಾವ: ಆಱಿಕೆಯಾದೆನ್ನೆಂಬ ಅಱುಹಿರಿಯತನ ಬೇಡ (ಅಂಬಿವ. ೯೧).
[ಅಱುಹಿರಿಯ + -ತನ]

**ಅಱುಹಿಸು** 'ಅಱುಹಿಸು' ನೋ.

**ಅಱುಹು₁** 'ಅಱಿಪು' ನೋ.

**ಅಱುಹು₂** 'ಅಱಿವು' ನೋ.

**ಅಱುಹುಗೆಡು** 'ಅಱಿವುಗೆಡು' ನೋ.

**ಅಱೆ₁** (ಕ್ರಿ). ಬತ್ತು; ಇಮರು; ಒಣಗು; ಮರೆಯಾಗಿ ಹೋಗು; ರೂಪಗೆಡು; ಶೋಷಿಸು; ಅಱತು, ಅಱೆತು (ಭೂತಕೃ); "ಅಱೆ— ಸ್ವರೂಪಾಭಾವೇ (ಸ್ವರೂಪವನ್ನು ನೀಗು) ಶಿಲಾಯಾಂ ಚ" (ಶಮಧಾ); "ಒಱೆ ಅಱೆ ಸ್ರಾವಶೋಷಣಯೋಃ" (ಶಬ್ದಾನು. ೫೦೮); ನೀರೆಲ್ಲ ಮಱತು ಪೋಗೆ (ಚಾವುಂಪು. ೮೧-೨೪); ಆದಿವರಾಹನೆತ್ತುವಂದಸುವಱೆಯಾದ ಸೇದೆತನಗಾಱುದುದೆಂಬಿನಮೀಗಳೆರ್ದಪಳ್ (ಎಇ. XIII, ೪೨-೨೮; 1112); ಹಸಿವಱತಲ್ಲದೆ ಪ್ರಸಾದಿಯಲ್ಲ ತೃಷೆಯಱತಲ್ಲದೆ ಪಾದೋದಕಿಯಲ್ಲ ನಿದ್ರೆಯಱತಲ್ಲದೆ ಭಾವವಿರಹಿತನಲ್ಲ (ಅವಚಂ. ೧೨೪-೫೬೫); ಆಸೆಯಱತು ನೋಟಂ ಬಱತು ವಿರಹಾಗ್ನಿಯೆತ್ತಿ (ಗಿರಿಕ. ೪-೧೯೯ ವ); ತೋಱೆಗಳುರ್ಕುಗೆಟ್ಟಱತು ಬಯಲ್ದೋಱೆಯಾದುವು (ಜಗವಿ. ೧೭-೬೪); ಅಱೆಯದ ಕೆಱೆಗಳ ಕುಂದದ ಬೆಳಸೆಂದುಂ ಆ ನಾಡೊಳ್ (ತ್ರಿಪುವಿ. ೨-೪೪); ಬಿಱುಗಾಳಿ ಬಡಿದಾರ್ದು ಕಡೆಗೆ ಕಡಲನ್ ತಣಿಪಿ ಎತ್ತಲೋ ಅಱೆಗುಂ (ಅಶ್ವತ್ಥಾ. ೨೭-೨೫). [?]

**ಅಱೆ₂** (ಕ್ರಿ). ಅಪ್ಪಳಿಸು; ಹೊಡೆ: ಕೆಲರಂ ದೆಸೆವಲಿಗೆಯ್ದು ಕೆಲರಂ ಭುಜಬಲದಿನಱೆದು ಶಿಲೆಯೊಳ್ಪೊಯ್ದಂ (ಗದಾಯು. ೩-೧೦).

ಅಱೆಯೊತ್ತು = ಚೆನ್ನಾಗಿ ತಟ್ಟಿ ತಟ್ಟಿ ಒತ್ತು: ನೆತ್ತಿಯೊಳೆಱೆದೆಱೆದಿನಿಸಱೆಯೊತ್ತಿ ಬಱಿಕ್ಕಿಱಿಯೆ ಪೊಸೆದು ಜಡೆಗೊಂಡಿರ್ದುದ್ವೃತ್ತಕುಚಯುಗೆಯ ಕೇಶಮನೆತ್ತಂ ಪಸರಿಸಿದನೆಯ್ದೆ ಪಸರಿಸಿದದಟಂ (ಪಂಪಭಾ. ೧೨-೧೫೪).

[ದೇ. ॥ ತಮಿ. ಅಱೈ; ಮಲ. ಅಱ; ಕುರುಖ್. ಅಸ್ಸನಾ]

**ಅಱೆ₃** (ನಾ). ಹೊಡೆತ; ಬಡಿತ; ಪೆಟ್ಟು: ಕಳ್ಳರಾಯಿಲಮಱೆಯೇಱು ಮಾರಿ ಪಸವಿಬ್ಬಿ ಬಱಿಂ ಪೆಱವುಂ ಭಯಂಗಳಾಕುಲಿತೆಗಳಿಲ್ಲ (ಆದಿಪು. ೧-೫೨); ಅಱೆಮಱೆಗಳೆಂಬ ನುಡಿ ನಾಡೆ ಭೂಧರಕುಲಂಗಳೊಳ್ (ಭಾವಚಿಂ. ೨-೫).
[ದೇ. ॥ ತಮಿ. ಅಱೈ; ಮಲ. ಅಱ]

**ಅಱೆ₄**, ಅರೆ₂ (ನಾ). ಕಲ್ಲುಬಂಡೆ; ದೊಡ್ಡ ಶಿಲೆ; ಕಲ್ಲುಗುಂಡು: "ಅಱೆ—ಸ್ವರೂಪಾಭಾವೇ (ಸ್ವರೂಪವನ್ನು ನೀಗು) ಶಿಲಾಯಾಂ ಚ" (ಶಮಧಾ); ಪೂರ್ವತಃ ಕೆಯವನ್ ಅಱೆ (ಮೈಆರಿ. ೧೯೧೪, ೧೦-೧೩; 729); ದಾಡೆಗಳನಱೆಯೊಳಿಂಬಿಂ ತೀಡುತ್ತುಂ ತೀವ್ರಮಾಗೆ (ಪಂಪಭಾ. ೩-೨೮); ಅಱೆಯುಂ ಸೀಳುವೊಡಾನೆ ಮೆಟ್ಟಲಹುದೇ ಚಾಣಂಗಳಿಂದಲ್ಲದೇ (ಸೋಮೇಶ. ೭೬); ಮುಸುಕಿರ್ದ ಮೇಘಮಂ ಜಡಿಯೆಂಬರುರು ಶಿಲೆಯನಱೆಯೆಂಬರು (ಜೈಮಿಭಾ. ೨-೯); ಪಳಿಕುಗಮ್ಮರಿ ಪಚ್ಚೆಯಱೆ ನೀಲದಗವಿ ಕುಲಿಶದ ಡೊಣೆ (ಶ್ರೀಪಾಲ. ೪-೩೮); ನೀಲದಱೆಯ ಮೇಲ್ಪೊದಕೆ ಪವಳದ ಲೋವೆ (ನಂದಿಮಾ. ೧೦-೩೫). ಅರೆ₂: ಹೂವಯ್ಯನೊಬ್ಬನೆ ಒಂದು ಎತ್ತರವಾದ ಅರೆಯ ಮೇಲೆ ಕುಳಿತಿದ್ದನು (ಕಾನೂರು. ೨೭೮); ನೀನು ಒಡೆದಿರುವ ಅರೆಯ ಒಂದು ತುಂಡು ಚೂಪಾಗಿಯೂ ಒರಟಾಗಿಯೂ ಇಲ್ಲವೆ (ಮತಂಪ. ೩).
[ದೇ. ॥ ತಮಿ. ಅಱೈ; ತೆಲು. ಱಾಯಿ, ರಾಯಿ]

**ಅಱೆಗಲ್**, ಅಱೆಗಲ್ಲು, ಅರೆಗಲ್ಲು (ನಾ). = ಅಱೆ₄: ಒಡೆದು ತಲೆ ಹುಡಿಗುಟ್ಟುವಱೆಗಲ್ಲ ವೃಷ್ಟಿಯಿಂ (ಸಾನಂಚ. ೪-೧೪೭ ವ); ಸರಲಂ ಮುಂಗೈಯ ಬಲ್ದಡ್ಡಿನೊಳೆ ಮಸೆಯುತುಂ ನೀಡುಮೆತ್ತಿರ್ದರ್ಗಿನ್ನಱೆಗಲ್ಲೊಳ್ ಪಾಂಸುವಂ ಪುಟ್ಟಿಪ ತನುವಿನ ರೌದ್ರಾಸ್ಯದಿಂ ... ಎಟ್ಟಂದಂ ಪುಳಿಂದಾಗ್ರಣಿ (ಕುಸುಮಾ. ೧೪-೩೩); ಮುಡುವೆಲ್ಲಂ ತೀರ್ಥಂಗಳ್ ಗಿಡುವೆಲ್ಲಂ ಮರುಜೆವಣಿಗಳಱೆಗಲ್ಲೆಲ್ಲಂ ಕಡುಮಿಸುಪ ಸಿದ್ಧಪೀಠಂ (ಉದ್ಭಟ. ೩-೬೧); ಮುಱಿಮೀನ್ಗಳಿಂ ಪೊಳೆವಱೆಗಲ್ಗಳಿಂದಲ್ಲಿ ಮೆಱೆದುದಾ ನದಿ ನಲವಿಂದ (ಮೋಳಿಪು. ೧-೨೯). ಅಱೆಗಲ್ಲು: ಎತ್ತುಗಲ್ಲುಗಳೇಱುಗಲ್ಲು ಕವಣೆಗಲ್ಲು ಬಿತ್ತರದಱೆಗಲ್ಲುಗಳು ಮೊತ್ತದಸಿಯಕಲ್ಲು ಕೊರಳಿಗೆ ಬೀಱುವ ಜೊತ್ತಿಗೆ ಮೆಱೆದುವರ್ತಿಯಲಿ (ಕಂನವಿ. ೧೧-೧೩೫); ಮೊನೆಗಲ್ಲು ಗುಂಡುಗಲ್ಲುಗಳಱೆಗಲ್ಲುಗಳ್ ಘನವಾದಪರಳುಗಲ್ಲುಗಳು (ಕಂನವಿ. ೧೮-೪೪). ಅರೆಗಲ್ಲು: ಈ ಊರಿಗೆ ವಾಯುವ್ಯ ಮೂಲೆ ಅರೆಗಲ್ಲು ಮೇಲೆ ಹುಟ್ಟುಗಲ್ಲು (ಎಕ. XIV, ಶ್ರೀರಂಗ. ೧೪-೧೪೦; 1686).
[ಅಱೆ₄ + ಕಲ್₂]

**ಅಱೆಗಲ್ಲು** 'ಅಱೆಗಲ್' ನೋ.

**ಅಱೆಗುಂಡು** (ನಾ). = ಅಱೆ₄: ಪರುಷದಱೆಗುಂಡು [ಪಾಠಾಂ. ದೆಡೆಗೊಂಡ] ಚಿಂತಾಮಣಿಯ ಮೊಱಡಿಗಳು (ಸಿದ್ಧರಾ. ೧-೧೬).
[ಅಱೆ₄ + ಗುಂಡು]

**ಅಱೆಗೇಡು** (ನಾ). ಸಂಪೂರ್ಣವಾದ ನಾಶ; ಕೇಡು: ರಣದಲಿ ನುಗ್ಗುನುಗ್ಗಾಗದೆ ಸಹೋದರರೊಗ್ಗುಮುಱಿಯದೆ ಮಾಣದಱೆಗೇಡಾಯ್ತು ನಿಮಗೆಂದ (ಕುವ್ಯಾಭೀ. ೧-೫೮). [ಅಱೆ₁ + ಕೇಡು]

**ಅಱೆಗೊಲೆ** (ನಾ). ಹೊಡೆದು ಸಾಯಿಸುವುದು; ಕೊಲೆ: ಹೊಱಗೆ ಸರ್ಪವ ಬಿಡಬಹುದು ಚಿತ್ತದೊಳಿದ್ದ ಕಱೆಯನೊಂದನು ಬಿಡಲರಿದು ಅಱುವೆಯ ಬಿಸುಟರೆ ತಪಸಿಯೆ ಹೆರೆಬಿಟ್ಟರಱೆಗೋ[ಗೊ]ಲೆ ವಿಷ ಹೋಯ್ತೆ ಫಣಿಗೆ (ಭರಚ. ೫೪-೧೯). [ಅಱೆ₂ + ಕೊಲೆ]

**ಅಱೆಬರಿ** (ನಾ). ಬಂಡೆಯ ಪಕ್ಕ: ಪೊಯ್ಲಿಂದೆ ಪೋಟ್ಬನ್ ಮೇಣದಱ ರೂಕ್ಷಮಯ ಅಱೆಬರಿಯ ಅಪ್ಪುಗೆಯಲೊತ್ತಿಟ್ಟಪನ್ ಬಯ್ತೊಡಲ್ ನಿನತನ್ (ಬದ್ಧಪ್ರ. ೫೪-೧೧೭೯). [ಅಱೆ₄ + ಬರಿ₁]

**ಅಱಿಯಕೆಱಿ** (ನಾ). ಒಂದು ಕೆರೆಯ ಹೆಸರು (?): ಗಿರಿದುರ್ಗ ವುಚ್ಚಂಗಿಯ ಕೋಟೆಯ ದಕ್ಷಿಣಭಾಗದ ಅಱಿಯಕೆಱಿಯ ಕೆಳಗಣ ನೀರ್ಮ್ಮಣ್ಣು (ಸೌಇಇ. IX–i, ೨೪೫–೨೨ ; 1146). [ಅಱಿ$_4$ ? + ಕೆಱಿ]

**ಅಱಿಯಟ್ಟು**, ಅರೆಯಟ್ಟು (ಕ್ರಿ). ೧. ಬೆನ್ನಟ್ಟಿಹೋಗು : “ಅಱಿಯಟ್ಟು–ಅನುಧಾವನೇ” (ಶಮಧಾ) ; “ಎಬ್ಬಟ್ಟು ಅಱಿಯಟ್ಟುವುದು” (ಕಬ್ಬಿಕೈ. ೬೫) ; ಒಂದನೆ ನಂಬಿದೆನ್ನಣುಗದಮ್ಮನನಿಕ್ಕಿದನಂ ಪೊರಳ್ಚಿ ಕೊಂದಂದಱಿಯಟ್ಟಿ ಮುಟ್ಟಿ ಪಿಡಿತಂದು (ಗದಾಯು. ೧–೧೯) ; ಮರದೆಲೆಯೆಲ್ಲಂ ಪಿರಿದಪ್ಪ ತೇಟಿರೂಪಿಂದಱಿಯಟ್ಟಿ ಮುಟ್ಟಿ ಕಡಿವುವು ಮುಳಿಸಿಂ (ಧರ್ಮಾಮೃ. ೩–೮೫) ; ಬಿಟ್ಟ ಮುಡಿಯ ಬೆಡಗಿನ ಕುಡಿನೋಟದ ಬಟ್ಟ ಮೊಲೆಯ ಭಾರಕಿರದೆ ದಟ್ಟಡಿಯಿಡುತ ಶುಕವನಱಿಯಟ್ಟುವ ದಿಟ್ಟೆಯರಿರುತಿಹರಲ್ಲಿ (ಅಂಜಚ. ೨–೧೦೪). ೨. ಹೊಡೆದೋಡಿಸು : ಪಡೆಯನಱಿಯಟ್ಟಿದೊಡೆ ಕಾಳಗದೊಳ್ (ಮೈಆರಿ. ೧೯೨೫, ೮೬–೧೨ ; 918) ; ಪೊಯ್ಸಳಂ ತಳ್ತಱಿಯಟ್ಟಿ ವಿರೋಧಿ ಭೂಪರಂ (ಎಕ. II, ೩೮೪–೭ ; 1135) ; ಪೊಱಮಡುತ ದೇಗುಲದ ಹಿಂದಕೆಱಗೆಱಗಿ ನೋಡುತ್ತ ಪೋಗುತ್ತಱಿದು ಭಕ್ತರು ತನ್ನನಿಂತಱಿಯಟ್ಟುವರೊ ಬಳಿಕ (ಬಸಪು. ೨೬–೨೯) ; ಬಱನಱಿಯಟ್ಟಲೊರ್ಬರನೊರ್ಬರ್ ತಿಸುತ್ತಿರೆ (ದಶಕು. ೧೨–೬೯ ವ) ; ತರಳನಱಿಯಟ್ಟಿದನು ಧುರದಲಿ ದುರುಳ ದುರಿಯೋಧನನ ಮಕ್ಕಳ (ಕುಮ್ಯಾದ್ರೋ. ೫–೭೭). **ಅರೆಯಟ್ಟು**: ೧. ವಿಲಯದ ಭೈರವನ ಬಲದಂತೆಯೊಂದೇಬಾರಿ ಮುಳಿದರೆಯಟ್ಟಿ ಸದೆದರು ಕೋಟಿಸಂಖ್ಯೆಗಳ (ಕೋಗಯು. ೨೩–೪೮) ; ಇರದೆ ಕೊಗುತ್ತಡವಿಶಬರಿಯರು ಪುರುಷಮಿಗಮರೆಯಟ್ಟಿ ಸರಳ್ಗರೆವ ಮಾಳ್ಕೆಯಿಂ (ನವಮೋ. ೧೦–೬೨). [ಅಱಿ$_2$ + ಅಟ್ಟು$_2$]

**ಅಱಿಯಬ್ಬೆ** (ನಾ). ಒಬ್ಬಾಕೆಯ ಹೆಸರು : ತಾಯ್ ಪೆಂಪಳಂಕರಿ ಸುತ್ತಿಬ್ಬಱಿಯಬ್ಬೆಯೇ ನಗುಳಭೂಪಾಳಂ ಮಹಾಧನ್ಯನೊ (ಮೈಆರಿ. ೧೯೩೧, ೭೪–೬೬ ; 1053). [ಅಱಿ$_4$ ? + ಅಬ್ಬೆ$_1$]

**ಅಱಿಯಮಾಲ್** (ನಾ). ಕಲ್ಲುಗುಂಡುಗಳ ಬೆಟ್ಟ; ಮೊರಡಿ: ತೆಂಕಲು ಹಲಸಿನ ಮಾಸಿ ಕೂಲಂಬಿಕೊಡಲು ಅಱಿಯಮಾಲಿಂದಂ ಬಡಗಲು ಪಡುವಲು ಕುದುರೆಗುಂಡಿಯ ಹರಿದ ಹೊಳೆಯಿಂದಂ ಮುಡಲು (ಸೌಇಇ. IX–ii, ೪೭೦–೩೦ ; 1482).
[ಅಱಿ$_4$ + ಮಾಲ್. P ತಮಿ. ಮಾಲ್ = ಬೆಟ್ಟ]

**ಅಱಿಯಹಳ್ಳಿ** (ನಾ). ಒಂದು ಊರಿನ ಹೆಸರು : ಇಪ್ಪತ್ತೊಂದು ಭಟ್ಟರುಗಳಿಗೆ ಬೆಣ್ಣೆಯೂರು ಅಱಿಯಹಳ್ಳಿ ಕೆಳೆಯಬೆಯಹಳ್ಳಿ ಸಹಿತ (ಎಕ. V, ಬೇಲೂರು. ೭೧–೨೫೫ ; 1117). [ಅಱಿ$_4$ ? + ಹಳ್ಳಿ (< ಪಳ್ಳಿ)]

**ಅಱಿಯೂರು** (ನಾ). ಒಂದು ಊರಿನ ಹೆಸರು : ಕೀಳೂರು ಅಱಿಯೂರು ಹಱಿಗೆ ಗಾವುಣ್ಡವೃತ್ತಿಯುಮಂ (ಎಕ. VII, ಶಿವಮೊ. ೧೦–೫೧ ; 1085). [ಅಱಿ$_4$ ? + ಊರು$_2$ (< ಊರ್$_2$)]

**ಅಱಿವಳೆ**, ಅರೆವಳೆ (ನಾ). ಬಿರುಸಾದ ಮಳೆ; ಚಚ್ಚುಮಳೆ: ಬಿಱುಗಾಳಿಯಂ ಬೀಸಲಮ್ಮನನಿಲಂ ಸುರಪನಱಿವಳೆಗಳಂ ಕಱಿಯಲಮ್ಮಂ (ಹಚಕಾ. ೮–೫). **ಅರೆವಳೆ** : “ಅರೆವಳೆ – ಬಿರುಮಳೆ, ಚಚ್ಚುಮಳೆ” (ಸಿರಿಕೋ. ೨೨). [ಅಱಿ$_2$ + ಮಳೆ (< ಮೞೆ)]

**ಅಱಿವೆಣ** (ನಾ). ರೂಪಗೆಟ್ಟ ಹೆಣ (?): ಬಡವ ಬಲ್ಲಿದನ ಕೊಂದ ಸತ್ತ ಶಾವಿನಲ್ಲಿ ಬಂಧುಗಳೆಲ್ಲರೂ ಕೂಡಿ ಎತ್ತುವರಿಲ್ಲದೆ ಅಱಿವೆಣನಾಯಿತ್ತು (ಗುಪ್ತಮಂ. ೨೦). [ಅಱಿ$_1$ + ಪೆಣ]

**ಅಱಿವೊನಲು** (ನಾ). ಕೊಚ್ಚಿಕೊಂಡು ಹೋಗುವ ಹೊಳೆ: ತೆಗೆದು ದುಬ್ಬಿದ ಧೂಳಿ ಹೆಣಸಾಲುಗಳು ಹರಿದವು ರಕುತದಱಿವೊನಲುಗಳು ಹರಿದವು (ಕುಮ್ಯಾಭೀ. ೪–೧೦).
[ಅಱಿ$_2$ + ಪೊನಲು (< ಪೊನಲ್)]

**ಅಱಿವೊಯ್$_1$** (ಕ್ರಿ). ಅಪ್ಪಳಿಸಿ ಹೊಡೆ; ಬಲವಾಗಿ ಹೊಡೆ: ಬಱಸಿಡಿಲಂ ಬಱಸಿಡಿಲುಱಿ ಕಱುತ್ತು ಮಾರ್ತಾಗುವಂತಿರೋರೊರ್ವರ ನಂದಱಿವೊಯ್ದು ಪೊಯ್ಯೆ ಭೋಂಕೆನೆ ನೆಱಿದೊಡನೊಡನಾಂತು ಕಳೆದು ತಾಗಿದರಾಗಳ್ (ನೇಮಿಪು. ೧೨–೧೯೫). [ಅಱಿ$_2$ + ಪೊಯ್$_1$]

**ಅಱಿವೊಯ್$_2$** (ನಾ). ಬಲವಾದ ಹೊಡೆತ; ರಭಸದ ಹೊಡೆತ: ಅಹವದೋಹಳಂ ತಮಗೆ ಕೈಮಿಗೆ ಬಾಳಱಿವೊಯ್ಯೆ [ಪಾಠಾಂ. ಜವೊಯ್ಲು] ಬೆರ್ಚದುತ್ಸಾಹಮನಪ್ಪುಕೆಯ್ದಿಱಿದು (ಪಂರಾಮಾ. ೧೩–೬೫).
[ಅಱಿ$_2$ + ಪೊಯ್$_2$]

**ಅಱಿವೊಱಿ** (ನಾ). ಬಂಡೆಯಂತಹ ಭಾರದ ಹೊರೆ; ಕಲ್ಲುಗುಂಡಿನ ಹೊರೆ : ನೋವನೊಡೆಮೆಟ್ಟಿ ದಡದಡನೆ ನಡೆವೆನೆಂಬಡೆ ಬೆಂದ ದೈವವಱಿವೊಱಿ ಹೊಱಿಸಿತು [ಪಾಠಾಂ. ಮಱಿದುಱಿ ಹೊಱಿಸಿದ] (ಹಚಕಾ. ೯–೨೮). [ಅಱಿ$_4$ + ಪೊಱಿ$_2$]

**ಅಱಿಹಳ್ಳಿ** (ನಾ). ಒಂದು ಊರಿನ ಹೆಸರು : ಮಹಾಸಾಮಂತಾಧಿಪತಿ . . . ಅಱಿಹಳ್ಳಿಯ ವೊಳಗೆ ಉತ್ತಮ ಸಮುದ್ರದ ಗ್ರಾಮಕ್ಕಂ (ಎಕ. X, ಕೋಲಾರ. ೧೭೮–೬ ; 1422). [ಅಱಿ$_4$ ? + ಹಳ್ಳಿ (< ಪಳ್ಳಿ)]

**ಅೞ್$_1$**, ಅಳ್$_1$, ಅಳು$_1$, ಅೞು$_1$ (ಕ್ರಿ). ರೋದಿಸು; ಕಣ್ಣೀರು ಸುರಿಸು; ದುಃಖಿಸು; ಅೞ್ತು, ಅಳ್ತು, ಅತ್ತು (ಭೂತಕೃ); ಅೞ್ವ (ವರ್ತಕೃ): “ಅೞ್ – ರೋದನೇ” (ಶಮಧಾ) ; ಮುಳಿವಳಿಱಿಪ್ಪ ಳಲ್ವಳಿರ್ದೆಯಂ ಬಡಿವಳ್ ಪುರುಡಿಪ್ಪಳೊಳ್ವಳ್ (ಕಾವ್ಯಸಾ. ೯೯೩ ಶೂದ್ರಕ); ಬೆಳ್ಗೊಡೆ ನೋಡೆ ನೋಡೆ ನಿಂದುರಿದುವು ಸಾಲಭಂಜಿಕೆಗಳೞುವು ವೈರಿನರೇಂದ್ರ ಗೇಹದೊಳ್ (ಪಂಪಭಾ. ೬–೨೯) ; ಅನವರತ ಮುೞು ಬಾತ ಕಣ್ಗಳುಂ (ಶಾಂತಿಪು. ೪–೭೯ ವ) ; ವಿದೂಷಕಂ ಅೞುತ್ತುಂ ಬಂದ ತನ್ನಂ ನಗುತ್ತುಂ ಪೋಪಂತೆ ಸಂತೋಷಂ ಮಾಡಿಸಿದುದರ್ಕೊಡಂಬಟ್ಟು (ಗದಾಯು. ೨–೧೦ ವ) ; ನೊಂದು ಸ್ವೈರಣೆಗೆಟ್ಟೞ್ತಳ್ ನೆನೆದು ನೆನೆದು ಕನ್ನೆಯ ಗುಣಮಂ (ಧರ್ಮಾಮೃ. ೩–೨೩೪) ; ಎಲರಿಂದೆಟ್ಟೞ್ತು ಲೀಲಾವತಿ ನಿಜಪತಿಯಂ ಮಂಚದೊಳ್ ಕಾಣದಾಗಳ್ . . . ಕಳವಳಿಸಿದ ಳಾಸತ್ತಳೞ್ತಳ್ ಬೆಮರ್ತಳ್ (ಲೀಲಾವ. ೧೦–೬೬). **ಅಳ್$_1$** : ನೀಂ ಕುಡಿಯೆಮ್ಮವ್ವೆ ದಿಟಂ ಕರಂ ಬಡಿವಳೆಂದಳ್ತಳ್ತು ಕಾರ್ಪಣ್ಯದಿಂ ನುಡಿಯಲ್ಕೆ (ಪಂಪಾಶ. ೬೭). **ಅಳು$_1$** : ಅಳುವುದ್ಯಾತಕೊ ರಂಗ ಅತ್ತರಂಜಿಪ ಗುಮ್ಮ (ಪುರಂದ. ೩–೧೦–೧) ; ಅತ್ತನೆ ಶಿವ ಶಿವ ದೇಶಿಗನಾದನೆಂದತ್ತರಿರ್ದರು ದುಗುಡದಲಿ (ನೋಹತ. ೩೪–೩೩) ; ಅಳುವ ಹೆಂಗಸನ್ನೂ ನಗುವ ಗಂಡಸನ್ನೂ ನಂಬಬಾರದು (ಗಾದೆ) ; ನಿತ್ಯ ಸಾಯುವವರಿಗೆ ಅಳುವವರು ಯಾರು (ಗಾದೆ). **ಅೞು$_1$** : ಅೞುವೆನ್ನಂ ತರಳಿಕೆ ಮೆಯ್ವೞಿಯಿಂ ಪಿಡಿದೊಯ್ಯನೆತ್ತಿ ಮೆಲ್ಲನೆ ತಡಿಗಾಗಿಱಿತಂದು (ಕಾದಂಪೂ. ೯೫೦).
[ದೇ. ‖ ತಮಿ. ಮಲ. ಅೞು ; ತೆಲು. ಏಡುಚು ; ಕೊಲಾ. ಅರ್ ; ನಾಯ್ಕಿ. ಅರ್ ; ಪರ್ಜಿ. ಅಳ್]

**ಅೞ್$_2$**, ಅೞು$_2$ (ನಾ). ಅಳುವಿಕೆ; ರೋದನ (ಕ). **ಅೞು$_2$** (ಕ).
[< ಅೞ್$_1$]

**ಅೞಲ್$_1$**, ಅಳಲ್$_1$, ಅಳಲು$_1$ (ಕ್ರಿ). ದುಃಖಿಸು ; ಶೋಕಿಸು; ವ್ಯಥೆಪಡು : ಅೞಿಪಿದವರುಂ ವಿಭೀತರುಮಱಲ್ದರುಂ ಸಲೆ ವಿಯೋಗದಿಂ ನಿಜಜನದಿಂ ಕೞಿಯೆ (ಕವಿರಾ. ೨–೨೫) ; ಒಡನಿರಲಿತ್ತುದಿಲ್ಲ ವಿಧಿ ನಮ್ಮನೞಲ್ದಱವೇಡ ನೀಂ (ಆದಿಪು. ೧೨–೨೫) ; ಬನ್ನಮನಾತನೊಳ್ ನೆಱಪಲಾಱದನಾಥೆಯೆನೆಂದೞಲ್ದು ನೀನೆನ್ನ ಮನಕ್ಕೆ ಮಾಡುವುದೆ ಮಲ್ಲಿಗೆ ಕೆಮ್ಮನೆ ತೀವ್ರತಾಪಮಂ (ಮಲ್ಲಿಪು. ೩–೩೭) ; ಬಾಯ್ಗೆಬಂದುದಂ ನುಡಿದೊಡೞಲ್ದು ಸೋಲ್ತ ಪದದೊಳ್ ದೆಸೆಗಾಣದೆ (ಸಮಪ. ೬–೫೧) ; ಕೞಲನೞಲಂ ಬಾಡಂ ಕೋಡಂ ಹಿಮಾತಪಬಾಧೆಯಿಂ (ಪುಷ್ಪಪು. ೧೨–೮೩).

**ಅೞಲ್₁**: ಪರಮಪತಿವ್ರತಾಸತಿ ನಿಜಪ್ರಿಯವಲ್ಲಭನೊಲ್ಲದಿರ್ದೊಡತ್ಯುರುತರದುಃಖಭಾವದಿನೞಲ್ವ ಬೞಲ್ವ ಕೆರಳ್ವ ಬೈವವೊಲ್ (ಶತಕ. ೨೨೮–೨೪). **ಅೞಲು₁** : ಅೞಲುಗೆ ಮನ ನಿಮ್ಮಲ್ಲಿ (ಮಹಾದೇ. ೧೮–೧) ; ಓಡಿದುದಹಂಕಾರಮೞಲಿದುದು ಚಿತ್ತಂ (ಚಿಬಪು. ೨೨–೨೬) ; ಅೞಲಿದುರಗನ ನೆರವಿಟೊಪ್ಪಿಗೆಗಳೆದ ಸಾಳ್ವನ ಹಿಂಡು (ಕುವ್ಯಾಭೀ. ೩–೧೬) ; ಅೞಲಿದರು ಬಳಿಕೊಬ್ಬರೊಬ್ಬರು (ತೊರರಾ. ೨–೬–೨೬).

[ದೇ. ‖ ತಮಿ. ಅೞಲ್ = ಸುಡು ; ಮಲ. ಅೞಲು = ಪರಿತಪಿಸು, ಮತ್ಸರಿಸು ; ಅೞಲ್ = ಮೆಣಸಿನಕಾಯಿ ತಿಂದವರಂತೆ ಉರಿಹತ್ತು, ಕಷ್ಟಪಡು ; ತುಳು. ಅಲ್ರ್ = ಸುಡು, ಬೇಗೆಯುಂಟಾಗು ; ತೆಲು. ಅಡಲು = ದುಃಖಿಸು]

**ಅೞಲ್₂**, ಅೞಲ್₂, ಅೞಲು₂ (ನಾ). **೧.** ದುಃಖ ; ಶೋಕ ; ಪ್ರಲಾಪ : ಕಮಲಾಕರದೊಳ್ ಸಂಕೋಚಮನೞಲಂ ಚಕ್ರವಾಕದೊಳ್ ಮಾಡದು ನಿನ್ನ ಮುಖೇಂದುಬಿಂಬಮಿಂದುಗೆ ಸಮನೆಂಬುದು ಮಿಗೆ ವಿರುದ್ಧರೂಪಕಮಕ್ಕುಂ (ಕವಿರಾ. ೩–೧೯) ; ಮಗನೞಲೊಂದು ಭೂಪತಿಯ ತಮ್ಮನೊಳಾದೞಲೊಂದು ನೊಂದು ಬಿನ್ನಗೆ ಮೊಗದಿಂದೆ ಕುಂದಿ ಫಣಿಕೇತನನಿರ್ದೞಲೊಂದು (ಪಂಪಭಾ. ೧೨–೧೭೦) ; ಅರ್ಥದೞಲಂ ಪತ್ತುವಿಟ್ಟು ಮತ್ತಂ ಸತ್ವಾವಲಂಬಿಯಾಗಿ ಪೋಗಿ (ಪಂಚತಂ. ೨೩೧–೧). **೨.** ಭಯ : “ಬೆಗಳ್ ಪೆಳಱೞಲೆಂದಲ್ಲಿಯು . . . ಭಯನಾಮ” (ಕವಿಕಂ. ೧೦೮). **ಅೞಲ್₂** : ತಿಳಿಯಱಂತೆಯೆ ಕಾಣದಂತೆಯೆ ಅೞಲ್ವ ಬಂಧುಗಳಿಲ್ಲದೆ (ಕಎಪು. ೪೧). **ಅೞಲು₂** : **೧.** ಅಂಗತವಿಲ್ಲದ ಸಂಗವು ಅೞಲಿಲ್ಲದ ಹುಯ್ಯಲಂತೆ (ಬಸವ. ೪೫೫) ; ಅೞಲು ಕೈಮಿಗಲಾ ವಿರಾಟನ ಲಲನೆ ಸೈರಂಧ್ರಿಯನು ಕರೆಸಿದಳು (ಕುವ್ಯಾವಿ. ೩–೧೦೭) ; ಹರಿಗೆ ಬಲುಹಗ್ಗಿಗಳಲುರಿ ಯಮಂಗುಬ್ಬಸಂ ನಿರುತಿಗತಿಸಂಕಟ (ಚಿಬಪು. ೨೪–೨೭).

[ದೇ. ‖ ತಮಿ. ಅೞಲ್ = ಬೆಂಕಿ, ಜ್ವಾಲೆ ; ಮಲ. ಅೞಲ್ = ಶಾಖ, ಬೆಂಕಿ ; ತೆಲು. ಅಡರು = ದುಃಖ]

**ಅೞಲ್ಪಾಡು**, ಅೞಲುಪಾಡು (ನಾ). ದುಃಖದ ಸ್ಥಿತಿ : ಅೞಲ್ ಪಾಡಿನತ್ತಣಿನ್ ತೆಱಪುಗೊಳ್ಳಿನಿತು (ಬದ್ಧಪ್ರ. ೧೮–೩೭೦). **ಅೞಲುಪಾಡು** : ಒಳಿತನ್ನು ಎಸಗಲು ಹೋಗಿ ಅನುಭವಿಸಬೇಕಾಗಿ ಬಂದ ಅೞಲುಪಾಡನ್ನು ಲೋಕಕ್ಕೆ ಎತ್ತಿಹೇಳಿ ಸಹಾನುಭೂತಿಯನ್ನು ನಿರೀಕ್ಷಿಸುತ್ತಾನೆ (ಬದ್ಧಪ್ರ. XIV ಪೀ). [ಅೞಲ್₂ + ಪಾಡು₂]

**ಅೞಲಿಗ**, ಅೞಲಿಗ (ನಾ). **೧.** ದುಃಖಕ್ಕೆ ಗುರಿಯಾದವನು ; ಸಂಕಟಗೊಂಡವನು. **೨.** ಪ್ರಿಯ ; ಆಪ್ತ ; ಆಸಕ್ತ : ಬಲ್ಲಾಳಿಗಮೆನಿಪ ಬಿಲ್ಲಾಳಿಗಮಂ ನೀಡುಂ ಕಾದುವನ್ನೆಗಂ ಅೞಲಿಗರುಂ ವೇಗಾಯ್ಲರುಮಪ್ಪನ್ನಯಾಗತ ನಭೋಗತಿಗಳ್ (ಶಾಂತಿಪು. ೪–೩೩ ವ). **ಅೞಲಿಗ** : **೧.** ನೊಂದ ಜವನೋ ಜಗವನುರುಹಲು ಬಂದ ಶಿವನೋ . . . ತಂದೆಯೞಲಿಗನಿರವು ವಿಶ್ವವನೊಂದು ನಿಮಿಷಕೆ ಸುಡುವುದೋ (ಕುವ್ಯಾದ್ರೋ. ೧೯–೧೨) ; ಅರಿಗಾರ್ಗೆ ಸುಖವ ಮಾಳ್ಪವರಾರಿಗಾರ್ಗೆಯೞಲಿಗರು ಸಂಸಾರವೀಶ್ವರ ತಂತ್ರವಲ್ಲೈ (ನಿಭಾಗ. ೬–೧೪–೬). **೨.** ರಾಯನೞಲಿಗರಿವರಘಾಟದ ನಾಯಕರು ಕಾಣಿರೆ (ಕುವ್ಯಾಕ. ೧೧–೩೩) ; ಮುಱಿದುದುರವಣಿಗವನ ಸೇನೆ ಬಳಿಕೞಲಿಗರ್ ತರಹರಿಸಿ ಸುತ ಸಹೋದರ ಮಂತ್ರಿ ಬಾಂಧವರು ಧುರದೊಳಾಂತೞದರರ್ಜುನನೊಳು (ಜೈಮಿಭಾ. ೯–೧೬). [ಅೞಲ್₂ + -ಇಗ]

**ಅೞಲಿಸು**, ಅೞಲಿಸು (ಕ್ರಿ). ಸಂಕಟಪಡಿಸು; ದುಃಖಕ್ಕೆ ಗುರಿಮಾಡು; ಆಯಾಸಪಡಿಸು: ವಿಷಯಲೋಭದಿನೇನಸ್ಸಂತಾನಮೆನ್ನನೇನೞಲಿಸದೋ (ಪಂರಾಮಾ. ೨–೧೮) ; ಮನ್ನಿಸದೆ ತಂದೆಯುಂ ಪೊೞಲಂ ನೆಱೆ ಕಾಡುತ್ತುಮೞಲಿಸುತ್ತುಂ ದೂರ್ತಿಂದಂ ನೃಪಸುತನಿರೆ (ಧರ್ಮಾಮೃ. ೨–೯೩). **ಅೞಲಿಸು** : ನಿಮ್ಮವನೞಲಿಸಿದೆನೆನ್ನಿಂದ ಪಾಪಿಗಳೊಳರೆ ಭುವನದೊಳು (ಕುವ್ಯಾಭೀ. ೧–೮) ; ಧರೆಯೊಳದಱಿನೊಳ್ಳಿದರ್ಗೆಣೆ ತಾಮೆಂಬರನಘಮೞಲಿಸದೆ (ಜಯಕಾ. ೩–೫೪) ; ಅರನನೞಲಿಸಿದೆನೊ ತಪೋವ್ರತರಾರ ಜಱಿದೆನೊ ತನ್ನ ನಿಜಸಂಸಾರವೀ ತೆಱನಾಯ್ತು (ನಳಚ. ೮–೫).

[ಅೞಲ್₂ + -ಇಸು₃]

**ಅೞಲ್ಚು** (ಕ್ರಿ). = ಅೞಲಿಸು : “ಅೞಲ್ಚು – ದುಃಖೋತ್ಪಾದನೇ” (ಶಮುಧಾ). [ಅೞಲ್₂ + -ಚು]

**ಅೞಲ್ವೆ** (ನಾ). ದುಃಖ; ಶೋಕ; ರೋದನ : ಬಡಿಹದ ಮಕ್ಕಳಂತೆ ಅೞಲ್ವೆಯೊಳಂ ನೀರ್ ಮುಟ್ಟದ ಕೆಂಡದಂತುಪಶಮನದೊಳಂ (ಧರ್ಮಾಮೃ. ೫–೧೨೫). [ಅೞಲ್₂ + -ವೆ]

**ಅೞಿ₁**, ಅೞ್₁ (ಕ್ರಿ). **೧.** ಕೆಡು ; ನಾಶವಾಗು ; ಸಾಯಿ : “ಅೞಿ— ವಿನಾಶೇ, ಮಾನಶೇಷ ರಸೇ ಚ (ಅೞಿಯುವ ಪಾತ್ರೆಯಲ್ಲಿ ನಿಂತ ದ್ರವ), ಭ್ರಮರಾರ್ಥೇ ಕ್ಷಳಂ (ಅೞಿ)” (ಶಮುಧಾ) ; ಕೇಡಡಸಿದೊಡಂ ಬಗೆಯಂ ಕೂಡದು ಕೂಡಿದುದುಮೞಿದು ವಿಪರೀತಮುಮಂ ಮಾಡುಗುಂ (ಕವಿರಾ. ೧–೭೩) ; ತೋರ್ಕೆಯುರ್ಬೞಿಯದೆ ತಳ್ತ ಪೆರ್ಮೊಲೆಗಳೊಳ್ (ಕಾವ್ಯಸಾ. ೬೧೧ ಶೂದ್ರಕ) ; ಅಂಗಜೋತ್ಪತ್ತಿಸುಖಕ್ಕೆ ಸೋಲಲೞಿಗುಂ ಪುರುಷವ್ರತಂ (ಪಂಪಭಾ. ೧–೭೫) ; ಮೋಹಾಗ್ನಿಯಿಂದಮೞಿವುದು ಜೀವಂ (ಧರ್ಮಾಮೃ. ೬–೩೧). **೨.** ಮರೆಯಾಗು : ತಾರಗೆಗಳೞಿಯೆ ನೆಯ್ದಿಲ್ ನೀರಂ ಪುಗೆ ಕೂಡೆ ಮರ್ಬು ಮೆಯ್ವೆರ್ಚೆ (ಕಬ್ಬಿಕಾ. ೧೪೯). **೩.** ಕೆಡಿಸು ; ಹಾಳುಮಾಡು ; ನಾಶಪಡಿಸು ; ಕೊಲ್ಲು : ಅದಾನ್ ಅೞಿವೊನ್ಗೆ ಮಹಾಪಾತಕಂ (ಮೈಅರಿ. ೧೯೩೬, ೧೬–೧೫ ; 450) ; ಇತ್ತೊದಾನ್ ಅೞಿವೊನ್ (ಎಇ. III, ೩೬೦–೮ ; 740) ; ದೇವಸ್ವಮನೞಿವನಿಂ ನಿಕೃಷ್ಟರುಮೊಳರೇ (ಎಇ. XVI, ೫–೬೩ ; 978) ; ಕವಿಲೆಯುಮನೞಿದ ಪಾತಕಂ (ಎಇ. XIX, ೨೧೯–೧೫ ; 1037) ; ಈ ಧರ್ಮಮನೞಿದಾತಂ (ಕಇ. II, ೯–೩೩ ; 1075). **ಅೞ್₁** : **೧.** ಲಿಂಗೈಕ್ಯರಿಗೆ ಪ್ರಾಣಗುಣವೞಿಯದವರ ಸಂಗವೇ ಭಂಗ (ಮಹಾದೇ. ೨೫–೧೦) ; ಓವೊ ಗಣಿಕಾನಾಮ ದೋಷವೞಿವುದು ಶಿವಂಗಾವು ಸಲಲೆಂದು ಬಹುಮುಖದಿನಲರ್ದಂತಿರ್ಪ ಸೇವಂತಿಯಂ (ಪದ್ಮರಾ. ೮–೫೪) ; ಪತಿಯೞಿದ ಸತಿಯಿರವು ನಾಯಕರತುನವಿಲ್ಲದ ಪದಕ (ಕುವ್ಯಾದ್ರೋ. ೮–೧೮). **೩.** ಅೞಿವೆನೋ ಹದಿನಾಲ್ಕು ಲೋಕವ ಹರಿಯಜಭವಾದ್ಯರ ತೞಿವೆನೋ (ತೊರರಾ. ೩–೭–೧೪).

**ಅೞಿವೊಡಲ್** = ನಶ್ವರವಾದ ದೇಹ : ಜಗುಳುವಾತನು ಜಾಱುವಾತನ ಹೆಗಲ ಹಿಡಿದವೊಲಂತಕನ ತಾಳಿಗೆಗೆ ತುತ್ತಾಗಿರ್ದ ತಮ್ಮೞಿವೊಡಲ ದುಃಸ್ಥಿತಿಯ ಬಗೆಯದೆ (ನಿಭಾಗ. ೨–೧–೭). **ಅೞಿತೊಂ**, **ಅೞಿತ್ತೋನ್** = ಕೆಡಿಸಿದವನು ; ಹಾಳುಮಾಡಿದವನು : ಈ ಧರ್ಮ್ಮಮನೞಿತೊಂ (ಎಕ. IV, ಹೆಗ್ಗಡ. ೪–೧೦ ; 750) ; ಇದಾನೞಿತ್ತೋನ್ (ಎಕ. IV, ಹೆಗ್ಗಡ. ೮೭–೪ ; 700). **ಅೞಿದುಕೊಳ್** = ಹಾಳುಮಾಡಿಕೊ ; ನಷ್ಟಪಡಿಸಿಕೊ : ಈಗಳಾತನೆನ್ನನೞಿದು ತನ್ನ ಜಸಮುಮಂ ಧರ್ಮಮುಮನೞಿದುಕೊಳಲ್ಬಗೆದಂ (ಪಂಚತಂ. ೧೩೮–೧೧). **ಅೞಿಪ್ಪಾನ್**, **ಅೞಿಪ್ಪೊನ್** = ಕೆಡಿಸುವವನು ; ಹಾಳುಮಾಡುವವನು : ಅದಾನೞಿಪ್ಪಾನ್ಪಞ್ಚಮಹಾಪಾತಕನಪ್ಪೋನ್ (ಎಕ. X, ಚಿಂತಾಮ. ೧೨೮–೪; 800) ; ಅೞಿಪ್ಪೊನ್ ಪಞ್ಚಮಹಾಪಾತಕನಪ್ಪೊ (ಎಕ. X, ಚಿಂತಾಮ. ೧೧೫–೪; 750). **ಅೞಿಮಿನ್** = ನಾಶಮಾಡಿರಿ : ಅೞಿಮಿನೆನ್ದುಪಾದೇಶಂ ಕೊಡುವೋರುಂ (ಎಕ. VI, ಕೊಪ್ಪ. ೩೮–೯ ; 675). **ಅೞಿವಲ್** = ನಾಶಮಾಡಲು : ಅದಾನೞಿವೋರುಂ ಅೞಿವಲ್ಬಚ್ಚಿದೋರ್ ಮನದೆ ನೆನೆವೋರುಂ (ಎಕ. VI, ಕೊಪ್ಪ. ೩೮–೮ ; 675).

ಅೞಿಪೊನ್ = ಅೞಿಪ್ಪೊನ್ : ಅದಕ್ಕೞಿಪೊನ್ಪೞ್ಞು ಮಹಾಪಾತಕವಕುಮ್ (ಎಕ. X (S), ಶ್ರೀನಿವಾ. ೧೧೬-೭ ; 700). **ಅೞುತ್ತು** = ಹಾಳುಮಾಡಿ; ಕೆಡಿಸಿ : ಇದಾನೞುತ್ತು ಕೆಡಿಪಿದನೊಕ್ಕಲ್ ಕೆಡುಗ (ಮೈಆರಿ. ೧೯೩೭, ೩೪-೫ ; 225).

[ದೇ. ‖ ತಮಿ. ಮಲ. ಅೞಿ ; ತುಳು. ಅಲಿ, ಅಳಿ]

**ಅೞಿ$_2$** (ನಾ). ೧. ನಾಶ; ಕೇಡು. ೨. ಅಲ್ಪತನ; ಹೀನತನ: ಅೞಿಯೊಳ್ ಜಾನಕಿಯಂ ತಂದೞಿಗಂಡನೆ ನಿನ್ನ ಪೆಂಡಿರಂ ನೀಂ ನೋೞ್ಪಂತೆೞಿದುಯ್ದಪೆಂ (ಪಂರಾಮಾ. ೧೪-೧೦೨).

[< ಅೞಿ$_1$. / ತಮಿ. ಅೞಿ ; ತುಳು. ಅಳಿಕಟ್ಟ್, ಅಳಿಯಂತರ]

**ಅೞಿ$_3$**, ಅಳಿ$_3$ (ನಾ). ಅಳತೆಪಾತ್ರೆಯ ತಳದಲ್ಲಿ ನಿಲ್ಲುವ ದ್ರವ: "ಅೞಿ— ವಿನಾಶೇ, ಮಾನಶೇಷ ರಸೇ ಚ (ಅಳಿಯುವ ಪಾತ್ರೆಯಲ್ಲಿ ನಿಂತ ದ್ರವ) ಭ್ರಮರಾರ್ಥೇ ಕ್ಷಳಂ (ಅಳಿ)" (ಶಮಧಾ); "ಅೞಿಯೆಂದು ಬಳ್ಳದೞಿಯೊಳಂ ವಿಧಿಕ್ರಿಯೆಯೊಳಂ ಱೞಂ" (ಶಮದ. ಪರಿ. ೧). **ಅಳಿ$_3$** : ಎಣ್ಣೆಯನ್ನು ಅಳಿಬೀಳುವ ಹಾಗೆ ಅಳೆ (ರೂಢಿ). **ಅಳಿಬಿಡು** = ತುಂಬಿ ಚೆಲ್ಲುವಂತೆ ಅಳೆ: ಎಣ್ಣೆಯನ್ನು ಅಳಿಬಿಡು (ರೂಢಿ). **ಅಳಿಬೀಳು** = ಅಳಿಬಿಡು : ಅಳಿಬೀಳುವಂತೆ ಈ ಪಾತ್ರೆಗೆ ಎಣ್ಣೆಯನ್ನು ಸುರಿ (ರೂಢಿ). **ಅಳೀಮಟ** = ತುಂಬಿ ಚೆಲ್ಲುವ ಮಟ್ಟ; ಪಾತ್ರೆಯ ಬಾಯಿಯ ಅಂಚಿನವರೆಗೆ ತುಂಬಿದ ಸ್ಥಿತಿ : ಇಳಿಸಬೇಕೆಂದರೆ 'ಅಳೀಮಟ' ತುಂಬಿದ ಆ ಚಹದ 'ಗುಂಡಿ'ಗೆ ಕುತ್ತಿಗೆಯೇ ಇಲ್ಲ (ನಡೆದಾ. I, ೧೨೬೫). [?]

**ಅೞಿಕೆ** (ನಾ). ನೀಚ; ಹೀನ; ಕೆಡುಕ: ಕಿಡುಕಂ ಅೞಿಕಂ ಬೆಳುಕಂ (ಶಮದ. ೨೦೫ ಪ್ರಯೋ.). [ಅೞಿ$_2$ + -ಕ$_2$]

**ಅೞಿಗಂಡ** (ನಾ). ಪೌರುಷವಿಲ್ಲದವನು; ಅಲ್ಪಶೌರ್ಯವುಳ್ಳವನು: ನಿನಗುಱದೇನುಮಲ್ಲದೞಿಗಂಡರಿದಿರ್ಚುವರಲ್ಲರ್ (ಪಂಪಭಾ. ೧೨-೬೬); ಪೊಚ್ಚಱ ನುಡಿವೞಿಗಣ್ಣರಂ ನಗುವುದೊಟ್ಟೞೆ ಮಾವನಗನ್ಧಹಸ್ತಿಯಂ (ಎಕ. II, ೧೩೪-೫೪ ; 982); ಬಸಂತನಾಣೆಗಡ ಬಲ್ಲೊಡವಾನೞಿಗಂಡರೆಂಬುದಂ (ಲೀಲಾವ. ೨-೫೬). [ಅೞಿ$_2$ + ಗಂಡ$_1$]

**ಅೞಿಗಂಡು**, ಅಳಿಗಂಡು (ನಾ). ಅಲ್ಪಶೌರ್ಯ; ಹೀನವಾದ ಪರಾಕ್ರಮ: ಅೞಿಗಂಡಿನೊಳೇಂ ಕೈದುವನುೞಿ (ಪಂರಾಮಾ. ೧೪-೧೮೨); ಪೞಿಯಾಳ್ತನದೞಿಗಂಡಿಂದೞಿಯದೆ ಮೆಯ್ವೆರ್ಚಿಪೋಗಿ (ಧರ್ಮಾಮೃ. ೬-೨೩). **ಅಳಿಗಂಡು** : 'ಅಳಿಗಂಡುತನ' ಪರಾ. [ಅೞಿ$_2$ + ಗಂಡು]

**ಅೞಿಗಚ್ಚು** (ನಾ). (?) : ಮಾನಧನನಂ ನೆಗೞ್ತೆಯ ಮಾನಸನಂ ತನಗೆ ಹಿತನನೊಂದೞಿಗಚ್ಚಾದಾ [ಪಾಠಾಂ. ದೋಷಕ್ಕಾ] ನರಪತಿ ಕೆಡಿಸದೆ ಕಣ್ಬೇನೆಗೆ ತಲೆದಿವಿಸಿಕೊಳ್ವನಂ ನೆಱೆ ಪೋಲ್ಗುಂ (ನೀತಿಸಾ. ೩೨೦; ಸೂಕ್ತಿಸು. ೧೬-೬೩ ನೋ). ℙ ಈ ಶಬ್ದ 'ಅೞಿಗಟ್ಟು' ಎಂಬುದರ ಅಪಲಿಖಿತವಿರಬಹುದು.

[?. / ತಮಿ. ಅೞಿಗಟ್ಟು = ಸುಳ್ಳುದೂರು, ಸುಳ್ಳುನಿಂದೆ]

**ಅೞಿಗಜ್ಜ** (ನಾ). ಮಾಡಬಾರದ ಕೆಲಸ; ಹೀನವಾದ ಕೆಲಸ: ಮುನ್ನಂ ನೀಂ ಬಾರಿಸೆಯುಮುದನ್ನಯಮುಪ್ಪೆನ್ನ ಮಾಡಿದೞಿಗಜ್ಜಂ ಪೇೞ್ಪೆನ್ನೆಂತು ಮಾಡಲಕ್ಕುಂ (ಪಂಚತಂ. ೬೪-೨೧); ಮುನ್ನಱಿಗಜ್ಜಮದೆನಿತೆನಿತುನ್ನೆಗೞ್ದಾ ನೆಲೆಯನುೞಿದು ನೀನೇ ಗತಿಯೆಂಬನ್ನೆಗಮಡಿಗೆಱಗಿದರಂ ಮನ್ನಿಸಿ ಸಲಪುವರುಪೇಂದ್ರ ಚಿಕದೇವೇಂದ್ರರ್ (ಅಪ್ರತಿ. ೬೫-೯). [ಅೞಿ$_2$ + ಕಜ್ಜ]

**ಅೞಿಗಣ್**, ಅಳಿಗಣ್, ಅಳಿಗಣ್ಣು (ನಾ). ವಿಕಾರವಾದ ಕಣ್ಣು; ಕೆಟ್ಟ ಕಣ್ಣು : ಅೞಿಗಣ್ಣವರಂತೆ ಕೊೞಿಗಣ್ಗಳುಂ ಮಾಗಿಯ ದೇಸಿಗನಂತೆ ಬೂದಿನೆರಸಿರ್ದೊಡಲುಂ (ಧರ್ಮಾಮೃ. ೪-೭೫ ವ); ಪಱಿದಲೆ ಕುೞಿನೊಸಲೞಿಗಣ್ಣೊಱವಾಯ್ ಹಪ್ಪಳಿಕೆ ಮೂಗು ಮುಱುಟಿದ ಕಿವಿ (ಯಶೋಚ. ೨-೨೦). **ಅಳಿಗಣ್** : ಅಳಿಗಣ್ಣೊ ಪೊಸನೀಲಿಗಣ್ಣೋ (ಮಹಾವಿ. ೬-೫೧). **ಅಳಿಗಣ್ಣು** : ಅಲಿನೊಂದುದೊ ಕಣ್ಣಬೇನೆಯೊ ಮೈಲಿಗೆಯೊ ಹೂ ಹುಟ್ಟಿಹುದೊ ಕಣುಶೂಲೆಯೋಯಳಿಗಣ್ಣೊ ತಿಮಿರವೊ (ಬಸವು. ೧೮-೬೬). [ಅೞಿ$_2$ + ಕಣ್]

**ಅೞಿಗಣ್ಣ**, ಅಳಿಗಣ್ಣ (ನಾ). ವಿಕಾರವಾದ ಕಣ್ಣುಳ್ಳವನು: ಅೞಿಗಣ್ಣರಂತೆ ಮಿಳಮಿಳನೆ ನೋಡುತ್ತುಂ (ಪಂಚತಂ. ೧೮೭-೧೮). **ಅಳಿಗಣ್ಣ** : ಈ ಅಳಿಗಣ್ಣನಿಗೆ ಯಾರು ಹೆಣ್ಣು ಕೊಡುವರು (ರೂಢಿ).

[ಅೞಿಗಣ್ + -ಅ$_7$]

**ಅೞಿಗಬ್ಬ**, ಅಳಿಗಬ್ಬ (ನಾ). ೧. ಹೀನವಾದ ಕಾವ್ಯ; ಕುತ್ಸಿತವಾದ ಕಾವ್ಯ: ಪೞಿಗನ್ನಡಂ, ಅೞಿಗಬ್ಬಂ, ಕೆಂದಳಿರ್ (ಭಾಷಾಭೂ. ೨೪ ಉದಾ). ೨. ಅಕಾಲದಲ್ಲಿ ಸ್ರವಿಸುವ ಗರ್ಭ; ಅಳಿದು ಹೋಗುವ ಗರ್ಭ: ೧, ೨ : ಅೞಿಗಬ್ಬಂ ಬೆಳ್ಳಕ್ಕರಿಗರೊಳ್ . . . ಅಲ್ಲದಿಲ್ಲಂ (ರಾಮಾಶ್ವ. ೬-೨೪). **ಅಳಿಗಬ್ಬ** : ೧. ಅಂತುಮಿಂತುಮಳಿಗಬ್ಬಮನಾಗಿಸಿ ಕೇಳಿಸುತ್ತೆ ಕಾಲುರಿಚರ ತೋರ್ಪ ದುಷ್ಕವಿ ಮಹಾಕವಿಮಧ್ಯದೊಳೊಪ್ಪಲಾರ್ಪನೇ (ರಾಜಶೇ. ೧-೨೩). [ಅೞಿ$_2$ + ಕಬ್ಬ$_1$ ; ಅೞಿ$_2$ + ಗಬ್ಬ$_2$]

**ಅೞಿಗವಿ**, ಅಳಿಗವಿ (ನಾ). ಅಸಮರ್ಥನಾದ ಕವಿ; ಕುಕವಿ: ಮುತ್ತಂ ಮೆಱಸಂ ಕೋದಂತಿರೆ ಪೇೞ್ವೞಿಗವಿಗಳ ಕವಿತೆ ಬುಧರ ನೆರ್ದೆಗೊಳಿಸುಗುಮೇ (ಕಾವ್ಯಾವ. ೫೫); ಒಳ್ಗವಿ, ಬೆಳ್ಗವಿ, ಅೞಿಗವಿ (ಭಾಷಾಭೂ. ೧೩೨ ಉದಾ). **ಅಳಿಗವಿ** : ಪೆಳವನ ಕಣ್ಗಳಂಧಕನ ಕಾಲ್ಗಳಿವಿಂತೊಡಗೂಡಿ ಗಾವುದಂ ತಳರ್ದೊಡೆ ಬಲ್ಲಿದಂ ನಡೆದ ಮಾಳ್ಕೆಯೆನಿಪ್ಪುದೆ ಬೇಡ ಮಾಣೆಲೇ ಅಳಿಗವಿ ನಿನ್ನ ತನ್ನೆರವಿನೋದಿನ ಕಬ್ಬಮಂ (ಗಿರಿಕ. ೧-೨೪). [ಅೞಿ$_2$ + ಕವಿ$_2$]

**ಅೞಿಗಾಲ**, ಅಳಿಗಾಲ (ನಾ). ೧. ಕೆಟ್ಟ ಕಾಲ; ಕಷ್ಟವಾದ ಕಾಲ. ೨. ವಿನಾಶಕಾಲ (ಕ). **ಅಳಿಗಾಲ** : ೨. ಅಳಿಗಾಲವನ್ನು ತಪ್ಪಿಸುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ (ಯಕ್ಷಪ್ರ. ೩೧).

[ಅೞಿ$_2$ + ಕಾಲ. / ತಮಿ. ಅೞಿವುಕಾಲಂ = ಕೆಟ್ಟಕಾಲ]

**ಅೞಿಗಾಳೆಗ** (ನಾ). ಅಲ್ಪಕದನ; ಸಣ್ಣಯುದ್ಧ : ಪರಿವ ಜಾತ್ಯಶ್ವಂಗಳ್ಗೆಲ್ಲಮೞಿಗಾಳೆಗದೊಳ್ ಸತ್ತೊಡೆ (ಪಂಪಭಾ. ೮-೯೪ ವ).

[ಅೞಿ$_2$ + ಕಾಳೆಗ]

**ಅೞಿಗೆಯ್ತ** (ನಾ). ನೀಚವಾದ ಕೆಲಸ; ತುಚ್ಛವಾದ ಕಾರ್ಯ: ಅಗಳವನಳಿಪಿನೞಿಗೆಯ್ತಕ್ಕೆ ಸೀತೆ ಸೈರಿಸದೆ ನೀನೆನ್ನ ಸೋಂಕಿದೊಡೆ ನಾಲಗೆಗಿಱ್ಱು ಸಾವೆನೆಂದು ಪರಿಚ್ಛೇದಿಸಿ ನುಡಿಯೆ (ಪಂರಾಮಾ. ೯-೧೪೪ ವ).

[ಅೞಿ$_2$ + ಗೆಯ್ತ]

**ಅೞಿಗೆಯ್ಮೆ** (ನಾ). ಹೀನಕಾರ್ಯ; ಪಾಪಕಾರ್ಯ: ಕರ್ಕಶರೞಿಗೆಯ್ಮೆವಟ್ಟೆಗೊಡನಡಿಯಿಟ್ಟರ್ (ಚಕವಿ. ೨-೯೦). [ಅೞಿ$_2$ + ಗೆಯ್ಮೆ]

**ಅೞಿಗೆವದ್ದ** (ನಾ). = ಅಳಿಕಾಬಂಧ : ಕ್ಷಳಕ್ಕೆ— ತಾಳಂ = ತಾೞ್ . . . ಅಳಿಕಾ ಬದ್ಧಂ = ಅೞಿಗೆವದ್ದಂ (ಶಮದ. ೨೧ ಪ್ರಯೋ).

[< ಸಂ. ಅಳಿಕಾಬದ್ಧ]

**ಅೞಿಚಟ್ಟು$_1$** (ನಾ). ಹೀನವಾದ ಲೇಪನ ದ್ರವ್ಯ; ಅಯೋಗ್ಯವಾದ ಲೇಪನವಸ್ತು (?) : ಅೞಿಚಟ್ಟಂ ತಲೆ ಬುಗುಂಟುಪೋಧುದೆಂಬ ನಾಣ್ಣುಡಿಯಂತೆ (ಧರ್ಮಾಮೃ. ೬-೨೬). [ಅೞಿ$_2$ + ಚಟ್ಟು$_1$]

**ಅೞಿಚಟ್ಟು$_2$** (ನಾ). ಹೀನವಾದ ಶಿಷ್ಯತನ. [ಅೞಿ$_2$ + ಚಟ್ಟು$_2$]

**ಅೞಿಚಾಗಿ** (ನಾ). ಅಲ್ಪನಾದ ತ್ಯಾಗಿ: ದೀಪವರ್ತಿಯಂತೆ ಪೊಂಗೆಱಗದೆ ಅೞಿಚಾಗಿಯಂತೆ ಪೊಗೞ್ತೆಗಾಸೆಗೆಯ್ಯದೆ (ಧರ್ಮಾಮೃ. ೪-೪೬).

[ಅೞಿ$_2$ + ಚಾಗಿ]

**ಅಱಿಜಗಳೆ** (ನಾ). ಕೆಲಸಕ್ಕೆ ಬಾರದ ಜಗಳ; ತುಚ್ಛವಾದ ಜಗಳ: ಸಂಸಾರದೊಳ್ ಪೇಸುಗೆಗೆಟ್ಟೀ ನಾಣ ಪುತ್ತುಪ್ಪಱಿಜಗಳದೊಳೇನಮ್ಮ ತಕ್ಕೊರ್ಮೆಯುಂಟೇ (ಶಾಂತಿಪು. ೬-೮೭). [ಅಱ್$_2$ + ಜಗಳ]

**ಅಱಿಜಪ** (ನಾ). ಹೀನವಾದ ಜಪ; ಫಲವಿಲ್ಲದ ಜಪ: ಅಱಿಯೊಳೆ ಜಾನಕಿಯುಂ ತಂದಱಿಗಂಡನೆ... ಉಱಿದಱಿಜಪಮುಂ ದನುಜ ತೋರ್ಪುದೆನ್ನೊಳ್ ಕೂರ್ಪಂ (ಪಂರಾಮಾ. ೧೪-೧೦೨). [ಅಱ್$_2$ + ಜಪ]

**ಅಱಿಜಸ, ಅಳಿಜಸ** (ನಾ). ಅಪಕೀರ್ತಿ; ಕೆಟ್ಟಹೆಸರು: ಅಱಿಜಸಂ, ತುರಗದಱಿಂ (ಶಬ್ದಾನು. ೨೯೬ ಪ್ರಯೋ). **ಅಳಿಜಸ**: ಅಳಿವುದೊಡಲು ಜಸವಳಿಜಸವೆರಡಿವು ಬಳಿಯೊಕ್ಕಲು (ಕುರಾಸಾಂ. ೪೨-೨೦); ಪೊರೆದ ದಾತಾರಗಿನ್ನೆರಡನೆಣಿಸೆಯಳಿಜಸ ಚಂದ್ರಸೂರ್ಯರುಳ್ಳನ್ನ ವರ್ತಿಪುದು ಸತ್ಯ (ಲಕ್ಷ್ಮೀಭಾ. ೫-೪-೨೭); ಅಳಿಜಸ ಪಿರಿದಾಗಿ ಮುಂದ್ಯೆದುವುದ ನಱಿಯದೆ ನಮ್ಮ ಕೆಣಕಿದನೆಂದವನೀಶ ಗರ್ಜಿಸಿದ (ಕಂನವಿ. ೧೧-೧೨೪). [ಅಱ್$_2$ + ಜಸ]

**ಅಱಿತೊಂ** 'ಅಱ್$_1$' ಪರಾ.

**ಅಱಿತ್ತೋನ್** 'ಅಱ್$_1$' ಪರಾ.

**ಅಱಿದೆರೆ** (ನಾ). ಸಣ್ಣ ತೆರೆ; ಚಿಕ್ಕ ಅಲೆ: ಎಸಗುವ ಮಂದಾನಿಲನಿಂ ಕುಸುಮರಜಂಬೊರೆದು ಪೊಣ್ಮುವಱಿದೆರೆಗಳಿನೇನೆಸೆದುದೊ . . . ಸರೋವರಮಾಗಳ್ (ಕಾದಂಪೂ. ೬೩೭). [ಅಱ್$_2$ + ತೆರೆ$_2$]

**ಅಱಿದೆಸೆ** (ನಾ). ಕೆಟ್ಟದೆಸೆ; ದುರ್ದೆಸೆ: ನೀನುಮೆನ್ನಱಿದೆಸೆಯ ನೆಱೆ ನೋಡಿ ಅರಯಲ್ ಬಂದೆಯೇನ್ (ಬದ್ಧಪ್ರ. ೧೭-೩೫). [ಅಱ್$_2$+ದೆಸೆ]

**ಅಱಿದೋಷ** (ನಾ). ಅಲ್ಪದೋಷ; ಸಣ್ಣ ತಪ್ಪು: ಮಾನಧನನಂ ನೆಗಱ್ತೆಯ ಮಾನಸನಂ ತನಗೆ ಹಿತನನೊಂದಱಿದೋಷ[ಪಾಠಾಂ. ಗಚ್ಚು]ಕ್ಕಾ ನರಪತಿ ಕೆಡಿಪೊಡೆ ಕಣ್ಬೇನೆಗೆ ತಲೆದಿವಿಸಿಕೊಳ್ವನಂ ನೆಱೆ ಪೋಲ್ಗುಂ (ಸೂಕ್ತಿಸು. ೧೭-೬೩; ನೀತಿಸಾ. ೩೨೦ ನೋ). [ಅಱ್$_2$ + ದೋಷ]

**ಅಱಿನಿಷಾದ** (ನಾ). ದುಷ್ಟನಾದ ಬೇಡ; ನೀಚನಾದ ವ್ಯಾಧ: ಬಹುಜನರೊಳ್ ಧರ್ಮದಯಾರಹಿತರೊಳವನಿಪರೊಳಱಿನಿಷಾದರೊಳಕ್ಕುಂ ಬಹುವಿಧ ವೈರಂ (ಜಾತಕ. ೯-೨೮). [ಅಱ್$_2$ + ನಿಷಾದ]

**ಅಱಿನೀರ್** (ನಾ). ಅತ್ಯಲ್ಪವಾಗಿರುವ ನೀರು: ಕುದಿಯಿಸುವಿಂದ್ರಿಯಂಗಳಿನಬಲ್ದು ಬಬಲ್ದು . . . ಬರ್ದಿದೆಯಱಿನೀರ್ಗೆ [ಪಾಠಾಂ. ಮೆಲೆನೀರ್ಗೆ] ನೀರಡಸಿ ಬೇಸಗೆಯೊಳ್ (ಜೀವಸಂ. ೮೧-೧೦). [ಅಱ್$_2$ + ನೀರ್$_1$]

**ಅಱಿನುಡಿ, ಅಳಿನುಡಿ** (ನಾ). ತುಚ್ಛವಾದ ಮಾತು; ಸಲ್ಲದಮಾತು: ಅಱಿಪಿದೆಯಂತುಮಲ್ಲದೆ ನಿಶಾಚರಿಯ್ಯೆ ನಿನಗಪ್ಪುದಪ್ಪುದೀಯಱಿನುಡಿ ಬರ್ಕೆ ನಿನ್ನ ಪಿರಿಯಣ್ಣನೆ (ಪಂಪಭಾ. ೩-೧೬). **ಅಳಿನುಡಿ**: ಬಿಡು ಕರ್ಮಂ ದೈವಮೆಂದೆಂಬವರಳಿನುಡಿಯಂ (ಪಂಪಾಶ. ೬೫). [ಅಱ್$_2$ + ನುಡಿ$_2$]

**ಅಱಿನೆಗಱ್ತೆ** (ನಾ). ಕೆಟ್ಟ ಕಾರ್ಯ; ಹೀನಕಾರ್ಯ: ದುಶ್ಶಂಕಿತಮೆಂಬ ಕಳ್ಳರಂ ಪೊರ್ದಲೀಯದೆ ದುರಾಚಾರಮೆಂಬ ತೆರೆಗಳಂ ತಪ್ಪಿಸಿ ಅಱಿನೆಗಱ್ತೆಯೆಂಬ ಮೊಸಳೆಯಂ ತೊಲಗಿಸಿ (ಧರ್ಮಾಮೃ. ೬-೨೧೧). [ಅಱ್$_2$ + ನೆಗಱ್ತೆ]

**ಅಱಿಪ** (ನಾ). ೧. ನಾಶಮಾಡುವವನು; ಹಾಳುಮಾಡುವವನು: "ಅಱಿಪನೆಂದು ಅಱಿಪುವನುಂ ಅಱಿಪಿದವನುಮಕ್ಕುಂ" (ಶಮದ. ೩. ೨೩ ವೃತ್ತಿ); ಅಱಿಪಂ = ಅಱಿಪುವಂ; ಅಱಿಪಿದವಂ (ಶಮದ. ಪರಿ. ೧). ಬಱಿವಱಿಯೆಂಬುದು ಬಡವಂಗಱಿಪಂಗೇಂ ಮುಟ್ಟೆ (ಶಾಂತಿಪು. ೬-೨೦). ೨. ಅಲ್ಪನಾದವನು: ಅಱಿಪರಪ್ಪ ರಿಸಿಯರ್ ಮೊದಲಾಗಿ ಯುಸಿರದೆಮ್ಮ ಪೇೞ್ದಂತೆ ಮೋನದಿಂದುಂಬರ್ (ಧರ್ಮಾಮೃ. ೧-೧೬೪). [ಅಱ್$_1$ + -ಪ್ಪ. / ತಮಿ. ಅಱಿಪ್ಪನ್]

**ಅಱಿಪಾೞು** (ನಾ). ಕೆಟ್ಟಪಾಡು; ದುಸ್ಥಿತಿ: ಮಱೆಯದಿರ್ ಇಂತಪ್ಪ ಸೊರ್ಕೆ ನಿನ್ನನೀ ಅಱಿಪಾಡಿಗಿಱಿಪಿದುದು ಎಂಬುದನ್ (ಬದ್ಧಪ್ರ. ೫೧-೧೧೧೧). [ಅಱ್$_2$ + ಪಾಡು$_2$]

**ಅಱಿಪಾಲು** (ನಾ). ದುರದೃಷ್ಟ; ದೌರ್ಭಾಗ್ಯ: ಅಂತಲ್ಲದೀಗಳಿನ ಅಱಿಪಾಲ ಪೊೞೆಗೆ ಮತ್ತಿನಿತು ಪೊಸವಡಕುವಯ್ (ಬದ್ಧಪ್ರ. ೧೮-೩೭೫). [ಅಱ್$_2$ + ಪಾಲು$_2$]

**ಅಱಿಪು$_1$, ಅಲುಪು$_1$, ಅಳಿಪು$_1$, ಅಳಿಹು$_1$, ಅಳ್ಪು$_3$** (ಕ್ರಿ). ನಾಶವಾಗುವಂತೆ ಮಾಡು; ಹಾಳುಮಾಡು; ಕೆಡಿಸು. **ಅಲುಪು$_1$**: ಎನಿತು ವಿಪರೀತಗಳನೆಸಗಿದರು ಕರವಿಡಿದು ಜನಪತಿಯು ಕೋಪಿಸಂ ಮತ್ತಾವನಲುಪಿದರು ಮನದಲಿಡನಿದು ತಥ್ಯ (ವೆಂಕಾರಾ. ೪-೧೮-೩೭). **ಅಳಿಪು$_1$**: ಪೊರೆಯಲ್ ಸಾಧುಗಳಂ ನೆರೆ ದುರುಳರನಳಿಪಲ್ಕೆ ಧರ್ಮಮಂ ನೆರೆಗೊಳಿಸಲ್ (ಮರಾಚ. ೨-೧). **ಅಳಿಹು$_1$**: ಇ ಧರ್ಮವ ಅಳಿಹಿದವನು ಪಂಚಮಹಾಪಾತಕಂ (ಎಕ. VIII (S), ಸೊರಬ. ೫೮೬-೮೪; 1201); ಯಿದನು ಆರು ಅಳಿಹಿದಡೆ (ಎಕ. IX, ಕೊಡಗು. ೬೫-೧೬; 1174); ಇ ಧರ್ಮವನಳಿಹಿದವರು ಗಂಗೆಯ ತಡಿಯಲಿ ಕವಿಲೆಯ ಕೊಂದಪಾಪಕ್ಕೆ ಹೋಹರು (ಎಕ. IV, ಚಾಮರಾ. ೧೨೦-೧೦; 7). **ಅಳ್ಪು$_3$**: ಯಿ ಧರ್ಮ್ಮವನು ಆರು ಅಳ್ಪಿದಡಂ ವಾರಣಾಸಿಯ ತಡಿಯಲು ಕವಿಲೆಯ ಕೋಟಿಯ ಕೊಂದ ಪಾಪದ[ಲಿ] ಹೋಹರು (ಎಕ. XII, ಶಿರಾ. ೧೧-೩೩; 1256). [ಅಱ್$_1$ + -ಪು$_2$. / ತಮಿ. ಅಱಿಪು, ಅಱಿಪ್ಪು]

**ಅಱಿಪು$_2$** (ನಾ). ಭಂಗ; ಕೇಡು: ಇಱಿಯದೆಯುಂ ಮಲ್ಲಂತಿಗೆಯಱಿಯದೆಯುಂ ಕಾಲೊಳೊತ್ತೆ ಮಾರ್ದನಿವೆರಸಂದಱಿಪಿಂ ಕರುಣಾಧ್ವನಿ ಪೊಂಪುಱಿಯಾದುದು ಗಿರಿಯ ಪಿರಿಯ ತಾಱಲೊಳಾಗಳ್ (ಶಾಂತಿಪು. ೯-೮೨). [ಅಱ್$_2$ + -ಪು$_2$]

**ಅಱಿಪೂಜೆ** (ನಾ). ವಿಧಿ ವಿರುದ್ಧವಾದ ಪೂಜೆ; ಕ್ಷುದ್ರಮಾರ್ಗದ ಪೂಜೆ: ಬಡವನಂತೆ ಮನ್ನಣೆಗಾಸೆಗೆಯ್ಯದೆ ವ್ಯಂತರನಂತಱಿಪೂಜೆಗೆಱಗದೆ (ಧರ್ಮಾಮೃ. ೫-೯೯). [ಅಱ್$_2$ + ಪೂಜೆ]

**ಅಱಿಪ್ಪಾನ್** 'ಅಱ್$_1$' ಪರಾ.

**ಅಱಿಪ್ಪೊನ್** 'ಅಱ್$_1$' ಪರಾ.

**ಅಱಿಬಂಟು** (ನಾ). ಕುತ್ಸಿತವಾದ ಅಥವಾ ಅಲ್ಪವಾದ ಶೌರ್ಯ: ಅಱಿಚಟ್ಟಂ ತಲೆಬುಗುಂಟುವೋದುದೆಂಬ ನಾಣ್ನುಡಿಯಂತಱಿಬಂಟಂ ಪೋಗಿ ಪೊಕ್ಕನಪ್ಪೊಡೆ ಕಾಪಿನವರ ಕಯ್ಯ ಸಾವು ನಿಶ್ಚಯಂ (ಧರ್ಮಾಮೃ. ೬-೨೭). [ಅಱ್$_2$ + ಬಂಟು]

**ಅಱಿಬರ್ದ** (ನಾ). ಪ್ರೌಢಿಮೆ ಸಾಲದವನು; ಅಲ್ಪ ಪ್ರೌಢಿಮೆಯುಳ್ಳವನು: ಬಱಿಕೀಶ್ವರನರಸಮುಖರ್ ತುಱಿಲಾಳ್ಗಳ್ ದೊರೆಗಳೆನಿಸಿ ತೊಲಗಿದರ್ದ್ಯೆವರ್ ತುಱುವರ್ ಸದಾಶಿವಾಭಿಧನಱಿಬರ್ದಂ ಪೊರೆಯುತಿರ್ದನೆಳಮೆಯೊಳಿಳೆಯಂ (ಚಿಕವಿ. ೨-೧೪). [ಅಱ್$_2$ + ಬರ್ದ + -ಅ$_7$]

**ಅಱಿಬಳಿ** (ನಾ). ಮೇರೆಮೀರುವುದು; ಅತ್ಯಧಿಕವಾಗುವುದು (?): ತೀವಿದ ಯೌವನ ಭರಮುಂ ಲಾವಣ್ಯರಸಂ ತುಳುಂಕೆ ನಯಮಱಿಬಳಿ ಪೊಂದಾವುದುವೆಳವೆಳ್ದಿಂಗಳ ಭಾವಿಸಿದ ಸುಧಾಂಶುಕೇಳಿಯಂ ಮಱೆಯಿಸಿದಳ್ (ಅನಂಪು. ೬-೨೯); ಅಂತು ನಿರ್ಮೇಘಂ ಸುರಿವಮೋಘದಿವ್ಯವಚನ ವರ್ಷಾಗಮದೊಳ್. . . ದಯಾರಸ ನೀರತಟಾಕಂ ತೀವಿ ತುಳುಂಕಿ ಕೋಡಿ ಮುರಳೆಯುಂ ದಾನ ತೀರ್ಥಸರೋವರಂಗಳಱಿಬಳಿವೋಗೆಯುಂ (ಅನಂಪು. ೧೪-೪೭ ವ). ℙ ಈ ಶಬ್ದ 'ಅಳಬಱಿ' (ಅಳಬು + ಅಱಿ) ಎಂದಿರಬಹುದು. [< ಅಳಬು$_0$ (< ಅಳವು) + ಅಳ್$_3$ (< ಅಱ್$_3$)]

**ಅಱಿಬು** 'ಅಱಿವು' ನೋ.

**ಅೞಿಭವ** (ನಾ). ಹೀನವಾದ ಜನ್ಮ; ನೀಚಜನ್ಮ: ಇರುಳುಂ ಪಗಲುಂ ಜಾನಿಸಿ ಸುರತ್ವಮಂ ಕೊಟ್ಟು ಮಗುೞೆ ಕೊಂಡೞಿಭವಮಂ ಪಿರಿದಂ ಕಿಱಿದಕ್ಕೀವಂತಿರೆ ಖಚರಸುಖಕ್ಕೆ ನೀಂ ನಿದಾನಂಗೆಯ್ದುಯ್ (ಶಾಂತಿಪು. ೪–೬೯). [ಅೞ್₂ + ಭವ]

**ಅೞಿಮಂತ್ರ** (ನಾ). ೧. ಹೀನವಾದ ಮಂತ್ರ. ೨. ಹೀನವಾದ ಮಂತ್ರಾಲೋಚನೆ: ತಂತ್ರಂ ಬಹುವಿಧಮಪ್ಪೞಿಮಂತ್ರಂ ನಾನಾ ಪ್ರಕಾರದಿಂದಿರ್ಪ ಮಹಾಯಂತ್ರಂ ಕೇಡಡಸಿದೊಡವು ಜಂತ್ರದ ಕೀಲ್ಕಳಚಿದಂತೆ ಕಳಕುಳಮಕ್ಕುಂ (ಧರ್ಮಾಮೃ. ೩–೫೪). [ಅೞ್₂+ ಮಂತ್ರ]

**ಅೞಿಮನ**, ಅಳಿಮನ₁ (ನಾ). ೧. ಹೀನವಾದ ಮನಸ್ಸು; ದುರ್ಬಲವಾದ ಮನಸ್ಸು: ಪೊನ್ನೆಂದೊಡೆ ಸುವ್ರತಸಂಪನ್ನರ ಮನಮುಂ ಮರಂಗಳುಂ ಸೊಡರ್ಗುಡಿಯುಂ ತಾನ್ನಿರುತಮೆಱಗುಗುಂ ಪೇೞಿನ್ನುೞಿದೞಿಮನದ ಮನುಜರೆಱಗದರೊಳರೇ (ಪಂಚತಂ. ೧೫೬–೨೨).
**ಅಳಿಮನ₁**: ೧. ಅಳಿಮನವ ಮಾಡಿದೊಡೆ ಬಲ್ಲೆನ್ನೆಸೆ (ಮಹಾದೇ. ೨೪–೧); ಹಿಳಿದ ಫಲದ ವಿಡಾಯಿ ಧೈರ್ಯದ ತಳಿತ ಭೀತಿಗೆ ಕಾಲುವೋಳಿಯಾದಳಿಮನದ ಭೂಪಾಲನಿರವನು ಕಂಡನಾ ಪಾರ್ಥ (ಕುಮಾ.ದ್ರೋ. ೧೮–೯). ೨. ದುರ್ಬಲವಾದ ಮನಸ್ಸುಳ್ಳವನು; ಹೀನವಾದ ಮನಸ್ಸಿರುವವನು: ಹಳಿವಿನಬ್ಬರಕಂಜದಿರಿ ನಿಜಗಳದ ಹಸುಗೆಯ ಹಾರದಿರಿಯೆಂದಳಿಮನರು ಬೆಂಗೊಟ್ಟು ಹೊಕ್ಕುದು ಕಳಶಜನ ಮಱೆಯ (ಕುಮಾ.ದ್ರೋ. ೧೨–೧೦); ಮೊಲೆಯ ಮೇಲುದು ಜಾಱೆ ಜಾಱಿದರಳಿಮನರು (ಕುಮಾ.ವಿ. ೧–೨೫). [ಅೞ್₂ + ಮನ]

**ಅೞಿಮಾನಸ**, ಅಳಿಮಾನಿಸ, ಅೞಿಮಾನಿಸ (ನಾ). ಕೆಟ್ಟಮನುಷ್ಯ; ಅಲ್ಪಮನುಷ್ಯ: ಸಾದುಗೆತ್ತು ಬಗೆಯಾದವನಾನೋಡಲಟ್ಟದೇನಾದಮಾನುಮೞಿಮಾನಸನಾಗದೆ ಮಾಳದೊಳ್ (ಕವಿರಾ. ೧–೧೨೭).
**ಅಳಿಮಾನಿಸ**: ಮದಿಸಿದ ಹಂಹಗೆಯ್ತುದಳಿಮಾನಿಸ (ಸಂಸಪ. ೩೯–೯).
**ಅೞಿಮಾನಿಸ**: ರಾಯನೆಂಬೊಂದು ಪೆಸರ್ ತೊಡಂಕಿದೞಿಮಾನಿಸನಂ ಕರೆತಂದು (ಚಕವಿ. ೫–೪೫). [ಅೞ್₂ + ಮಾನಸ₂]

**ಅೞಿಮಿನ್** 'ಅೞ್₁' ಪರಾ.

**ಅೞಿಮಿಳಿ** (ನಾ). ಸಣ್ಣಹಗ್ಗ (?): ಅರ್ತ ಕದಂಪು ಬತ್ತಿದ ಕಾಲುಂ ಹುರಿಯೞಿದೞಿಮಿಳಿಯೆಸದ, ಸೆರೆಯುಂ [ಪಾಠಾಂ. ಹುರಿರಯಳಿದಳಿ ಮಿಳಿರ್ವೆಸಕದ ಕಯ್ಸೆರೆಯುಂ] (ಶಮದ. ೨೪೦ ಪ್ರಯೋ). [ಅೞ್₂+ಮಿಳಿ]

**ಅೞಿಮೆಯ್** (ನಾ). ತುಚ್ಛವಾದ ದೇಹ; ಹೀನವಾದ ಶರೀರ: ಎನ್ನೀ ಅೞಿಮೆಯ್ಯಂ ಬಾವಿ ದಾವುಗಳ್ಗೊಪ್ಪಿಸಿ (ರಾಮಾಶ್ವ. ೪೨–೧). [ಅೞ್₂ + ಮೆಯ್]

**ಅೞಿಮೋಹ** (ನಾ). ಕೀಳಾದ ಅಥವಾ ಹೀನವಾದ ಮೋಹ, —ಭ್ರಮೆ: ಎಳಸದೆ ಮೈಸುಖಕ್ಕೆ ಪೆಱತೊಂದೞಿಮೋಹಮನುಂಟುಮಾಡಿ ಸಂಚಲಿಸಿ ವಿಭೂತಿಯಂ ನೆನೆಯದೊರ್ಮೆ (ಧರ್ಮಾಮೃ. ೮–೧೦೦); ತನಗೆ ಕಡಂಗಿ ಮಿರ್ತು ಬರೆ ಮಾನಸರುಂ ಕುೞಿಯಂ ಬಳಾರಿಗಾರ್ಪನಿತನೆ ಕೊಟ್ಟು ಜೀವಿಸುವೆನೆಂಬೞಿಮೋಹದೆ ಕೊಲ್ವ ಪಾಪಕರ್ಮನೆ ನಿಮಿಷಾರ್ಧಮಂ ಬರ್ದುಕನಾಗಳೆ ಸಾವಂ (ಸಮಪ. ೫–೨೦). [ಅೞ್₂ + ಮೋಹ]

**ಅೞಿಯಾಸೆ**, ಅಳಿಯಾಸೆ₁ (ನಾ). ಕೀಳಾದ ಆಸೆ; ತುಚ್ಛವಾದ ಬಯಕೆ; ಬಯಲಾಸೆ: ಎನ್ನೊಡವುಟ್ಟಿದರ್ ಪೆಸರ ನೂರ್ವರೊಳೊರ್ವರುಮಿಲ್ಲ ಬಾೞ್ವೆನೆಂಬೆನ್ನೞಿಯಾಸೆಯುಂ ಬಿಸುಡಿಂ (ಗದಾಯು. ೮–೯); ಆ ದ್ವಿಜಕುಮಾರಂ... ಎನ್ನನಪ್ಪುವೞಿಯಾಸೆಯಿಂ ದೂರದೊಳ್ ನಿಮಿರ್ವ ನಿಡುತೋಳ್ಗಳುಂ ತನ್ನೊಳ್ ತೋಱೆ... ಯುಕ್ತಾಯುಕ್ತ ವಿವೇಕಕ್ಕೆ ಪಿಂತೆಗೆದು ಉನ್ಮತ್ತನಂತಚ್ಚಬೆಳ್ದಿಂಗಳೊಳೊಯ್ಯನೊಯ್ಯನೆ ಬರುತಿರ್ದನನಾಂ ದೂರದೊಳ್ಕಂಡು ಭಯಂಗೊಂಡು (ಕಾದಂಉ. ೫೬೭).
**ಅಳಿಯಾಸೆ₁**: ೧. ಅಳಿಯಾಸೆ ಬೇಡ ನಿಮಗಿಲ್ಲಿ ಸೋಲುವರಿಲ್ಲ (ಪುಷ್ಪರ. ೩೯–೧೫೫); ನಿಜವಱಿಯದಳಿಯಾಸೆ [ಪಾಠಾಂ. ಶೆ]ಯಲಿ ಭೂಭುಜರು ಬರುತಿರ್ದರು (ತೊರರಾ. ೩–೨–೧೭); ಅಳಿಯಾಸೆ [ಪಾಠಾಂ. ಶೆ]ಯಲಿ ಬೆಂಬತ್ತಿದನು ರಾಮ (ತೊರರಾ. ೩–೮–೫೪). [ಅೞ್₂ + ಆಸೆ]

**ಅೞಿಯಾಳ್**, ಅಳಿಯಾಳು (ನಾ). ಹೀನಮನುಷ್ಯ; ತುಚ್ಛವಾದ ವ್ಯಕ್ತಿ; ಅಯೋಗ್ಯ: ಬಳನಂ ನಚ್ಚುವೊಡೀ ಕೃಷೀವಲನುಮಾ ಜೂದಾಳಿಯುಂ ಗಾಳಿಗಾದೞಿಯಾಳೀ ಬಳೆದೊಟ್ಟ ನಟ್ಟುವನುಮಾ ಗೋಪಾಳರಪ್ಪೀ ಯಮಳ್ಗಳೆ ದಲ್ ಚಂಡಭುಜರ್ (ನೇಮಿಪು.೧೧–೧೦೦).
**ಅಳಿಯಾಳು**: ಈಯುದನೈಶ್ವರಿ ಮರೆಹೊಗೆ ಕಾಯದನ ಮಹತ್ವಮಾಳ್ದ ನಳಿವಿನ ಪದದೊಳ್ ಸಾಯದಳಿಯಾಳಿನಿರವುಂ ಭೀಯೆನಿಸಿಯೆಕೊಳ್ಳದಿಹುದೆ ಚೂಡಾರತ್ನ (ನೀತಿಸಾ. ೧೯೦). [ಅೞ್₂ + ಆಳ್₂]

**ಅೞಿಯಿಸು**, ಅಳಿಯಿಸು, ಅಳಿಸು₂ (ಕ್ರಿ). ಕೆಡಿಸು; ನಾಶಮಾಡು; ಹಾಳುಮಾಡು; ಒರಸು: "ಅೞಿಯಿಸು – ಲಯೇ" (ಶಮಧಾ); ಪೆಸರ್ಗೊಳೆ ಪಾಪಮನುಱೆಯೞಿಯಿಸುಗುಂ (ಚಾವುಂಪು. ೩–೧೩).
**ಅಳಿಯಿಸು**: ಕುತ್ತಮೆಲ್ಲಮನಳಿಯಿಪ ಮದ್ದುಗಿಡುಗಳಿಂ (ಅದ್ಭುತ. ೧–೫); ಈ ಜಗವನಳಿಯಿಸಿ ಹೂವ ಸೌರಭ್ಯವುಳಿಯಿಸಿ (ಬಾಸಿಗ.೧೬–೫).
**ಅಳಿಸು₂**: ಹಣೆಯೊಳು ಬರೆದುದನಳಿಸಲಶಕ್ತರು (ಇಂಚಾಪ. ೧೪೫–೧೨).
**ಅಳಿಸಿಹೋಗು** = ಒರಸಿಹೋಗು; ಕೆಟ್ಟುಹೋಗು; ನಾಶವಾಗು: ಗಂಟಲಿನಿಂದ ರೋಗಾಣುಗಳು ಸಂಪೂರ್ಣವಾಗಿ ಅಳಿಸಿಹೋಗುವವರೆಗೆ ರೋಗಿಯನ್ನು ಪ್ರತ್ಯೇಕವಾಗಿಟ್ಟರಬೇಕು (ಕೆಲರೋ. ೨೪). [ಅೞ್₂ + –ಇಸು₃]

**ಅೞಿಯೂರ್**, ಅಳಿಯೂರು (ನಾ). ಸಣ್ಣಹಳ್ಳಿ; ಕುಗ್ರಾಮ: ಸರ್ವನಿವೇದಕಮೆಂಬ ಯಜ್ಞಮಂ ಕ್ಷಿತಿ ಪೊಗೞ್ವನ್ನಮಿತ್ತು ಗುರುದಕ್ಷಿಣೆಯಾಗಿರೆ ಕಶ್ಯಪಪ್ರಜಾಪತಿಗೆ ಸಮುದ್ರಮುದ್ರಿತ ಧರಿತ್ರಿಯನೊಂದೞಿಯೂರನೀವವೋಲ್ (ಪಂಪಭಾ. ೨–೪೫); ಚಲಮನೆ ಪೇೞ್ವೊಡಯ್ವರುಮನಯ್ದೞಿಯೂರೊಳೆ ಬಾೞಿಸೆಂದು ಮುಂಬಲಿಬಲಸೂದನಂ ನುಡಿಯೆಯುಂ ಕುಡದಿರ್ದುದೆ ಪೇೞ್ಗುಂ (ಪಂಪಭಾ. ೧೨–೪೮).
**ಅಳಿಯೂರು**: ಅಳಿಯೂರ ತಳವಾರ ಕಳೆಯುಳ್ಳ ಸೂಳೆಯು ಹೊಳಲಸುಂಕಿಗನು ಹಳೆನಾಯಿ ಯಾಚಕನು ತೊಲಗುವವರಲ್ಲ (ಸರ್ವಜ್ಞ. ೧೫೧೩). [ಅೞ್₂+ ಊರ್₂]

**ಅೞಿಯೊಡಲ್** (ನಾ). ನಶ್ವರವಾದ ದೇಹ: ಅೞಿಯೊಡಲಂ ನಂಬದೆ ಮಿಗೆಯೞಿಸೊಗಮಂ ಪಗೆಯ ಕಂಡ ತೆಱದಿಂ ಕಾಣುತ್ತೆ (ಧರ್ಮಾಮೃ. ೩–೨೭೮); ಅೞಿಯೊಡಲೆಂಬ ಮಣ್ಣಮಱೆಗೋಟೆಯೊಳಿಂದ್ರಿಯ ದುಃಪರಿಗ್ರಹಂಗಳನೊಳಕೊಂಡು (ಸಮಪ. ೧೫–೨೬). [ಅೞ್₂ + ಒಡಲ್]

**ಅೞಿಯೋಲೆ** (ನಾ). ಅಲ್ಪವಾದ ಪತ್ರ: ನಿಜಾಜ್ಞೆಯನಾಂತೊಂದೞಿಯೋಲೆಗೇದೊರೆಯರುಂ ಮೂವಿಟ್ಟಗಂ ಪೂಣ್ದು (ಶಾಂತಿಪು. ೯–೨). [ಅೞ್₂ + ಓಲೆ]

**ಅೞಿರಕ್ಕಸ** (ನಾ). ನೀಚನಾದ ರಾಕ್ಷಸ: ಕೇಳಾ ಅೞಿರಕ್ಕಸರ ಪುಟ್ಟಂ (ರಾಮಾಶ್ವ. ೧೨–೨೫). [ಅೞ್₂ + ರಕ್ಕಸ]

**ಅೞಿವಗೆ₁** (ನಾ). ಅಲ್ಪನಾದ ಶತ್ರು: ಅಱಮಗನಿರ್ಕೆರ್ಜುನನಿರ್ಕೆೞಿಕೆಯ ಮಾದ್ರೀಸುತರ್ಕಳಿರ್ಕೆೞಿವಗೆಯಂ ಪಱಿಪಡಿಸಲ್ಕೆ ಹಲಾಯುಧನೆಱೆದಿರ್ದಪೆನೆನಗೆ ತೋಱೆ ಬಿಡು ಕೌರವನಂ (ಗದಾಯು. ೭–೬೧). [ಅೞ್₂ + ಪಗೆ₂]

**ಅೞಿವಗೆ₂** (ನಾ). ಹೀನವಾದ ಯೋಚನೆ; ಅಲ್ಪವಾದ ಬಗೆ: ಇನ್ನಾದೊಡಂ ಸರಂದೋಱೆ ನರಿಯಂ ಬರಿಸಿ ತಿಂಬೆನೆಂಬೞಿವಗೆಯಂ ಬೇಡರಂತೆ ಬಗೆದು (ಪಂಚತಂ. ೩೮–೧೮). [ಅೞ್₂ + ಬಗೆ₂]

**ಅೞಿವಗ್ಗ** (ನಾ). ದೌರ್ಭಾಗ್ಯ; ದುರದೃಷ್ಟ: ತುರಿಪದೆ ಕಾದಿ ಗೆಲ್ದು ಹಯಮಂ ತಾರದುೞಿದೆನಾದೊಡೆ ಶ್ರೀರಾಮರಂ ಮೊಕ್ಕಳಂ ತನ್ನೊಂದು ಹಂಹದೞಿವಗ್ಗಿನ ಬೆಸಗೆಯ್ಮೆಯಿಂ ತೆಗೞ್ವ ಕೀೞಿನ ದುರ್ಗತಿಗಿೞಿವೆಂ (ರಾಮಾಶ್ವ. ೧೧೧–೧೮). [ಅೞಿ$_2$ + ಬಗ್ಗ$_4$]

**ಅೞಿವಡೆ** (ನಾ). ನೀಚವಾದ ಪಡೆ; ಕ್ಷುದ್ರವಾದ ಸೈನ್ಯ: ನಡೆ ಮಾಡಮನಡರ್ದು ಹಯಮನುಯ್ವ ಮರ್ಬಿಗನಂ ತಱುಬಿ ಅೞಿವಡೆಯಂ ಬೞಿಕೆಯ್ವ ಪವಣರಾಯನ ಕಟ್ಬಾಣತಿಯಂ ಪಾರುತಿರ್ಪುದುಂ (ರಾಮಾಶ್ವ. ೧೧೦–೧೮). [ಅೞಿ$_2$ + ಪಡೆ$_4$]

**ಅೞಿವಡೆಮಾತು** (ನಾ). ಅಪಕೀರ್ತಿಯ ಮಾತು; ಹೀನ ವೃತ್ತಾಂತ: ಜಸಮದೊಂದೆ ಕಿಡದದನಾಂ ಬಲ್ವಿಡಿವಿಡಿದು ನೆಗೞ್ದಸುೞಿವೞಿವಡೆ ಮಾತಂ ಮಾಡಿ ನೀನೆ ಕೆಮ್ಮನೆ ನುಡಿವಯ್ (ಪಂಪಭಾ. ೧೨–೧೮೧). [ಅೞಿ$_2$ + ಪಡೆಮಾತು]

**ಅೞಿವಲ್** 'ಅೞಿ$_1$' ಪರಾ.

**ಅೞಿವಾಡ** (ನಾ). = ಅೞಿಯೂರ್ : ಅಯ್ದುೞಿವಾಡದೊಳಯ್ವರುಮಂ ನೀಂ ಕೂರ್ತಿರಿಸೆಂದೊಡಮೆಂತುಮೇಗೆಯ್ದುಮದೊಲ್ಲದ ಕಾರಣದಿಂದಂ ನೋಡಿನಿತಾದುದು (ಪಂಪಭಾ. ೧೩–೮೬). [ಅೞಿ$_2$ + ಬಾಡ]

**ಅೞಿವಾದ** (ನಾ). **೧.** ಅತಿಕ್ರಮ; ಮೀರಿನಡೆಯುವುದು: ಅತಿಪಾತಂ, ಅೞಿವಾದಂ (ಶಬ್ದಾನು. ೧೪೦ ವ್ಯಾಖ್ಯಾ). **೨.** ಕಳೆದುಹೋಗುವುದು. **೩.** ಸಂಭವಿಸುವುದು. **೪.** ಸುರಿಯುವುದು. [< ಸಂ. ಅತಿಪಾತ]

**ಅೞಿವಾನಿಸ** 'ಅೞಿಮಾನಸ' ನೋ.

**ಅೞಿವಿಧಿ** (ನಾ). ದುರದೃಷ್ಟ; ದೌರ್ಭಾಗ್ಯ: ಗಾಂಪು ಪಡಿಕುಮೞಿವಿಧಿಯಱಿವನಗಲ್ಚುಗುಂ (ಕುಜಳ್. ೧–೩೮–೨). [ಅೞಿ$_2$ + ವಿಧಿ]

**ಅೞಿವು, ಅಳಿವು$_1$**, ಅೞುಬು (ನಾ). **೧.** ವಿನಾಶ; ಕೇಡು : ಊರೞಿವಿನೊಳ್ (ಮೈಅರಿ. ೧೯೩೬, ೨೧–೯ ; 896); ಪೞಿಯ ಧರಾತಳಮಂ ಗುಣದೞಿವನೊಡಂಬಡದ ಕಾಮದಂಗೀಯದದರ್ಕೞಿಪೆ ದೆಸೆಗಳ್ಗೆ ಕೆಮ್ಮನೆ ಮೊೞಗುವಿರೇಂ ಮೊೞಗಿದಂತೆ ಕೊಳ್ಸುವೆ ಮೞೆಗಳ್ (ಕಾವ್ಯಸಾ. ೪೩೬ ಶೂದ್ರಕ). **೨.** ಸಾವು : ಎನ್ನ ತನೂಜನಾಳ್ವಸಾಮಿಗಮೞಿವಾಗೆ ಶೋಕರಸಮಿರ್ಮಡಿಸಿತ್ತು (ಪಂಪಭಾ. ೧೩–೧೦೬) ; ಏಪಡೆಮೂತೀ ಜಗದೊಳ್ ಕೋಪನನಂ ಪಾಪರೂಪನಂ ನಂಬಿದವಂಗಾಪತ್ತೞಿವವಿವೇಕ ಮನಸ್ತಾಪ ಪರಂಪರೆಗಳೆಂಬಿವಕ್ಕುಮಮೋಘಂ (ಪಂಚತಂ. ೧೧೪–೧೦). **ಅಳಿವು$_1$** : **೧.** ಹಿಸುಣು ಧರ್ಮದ್ರೋಹ ರುಜೆ ಕೈಮುಸಕವಳಿವನ್ಯಾಯವೆಂಬಿವೞಿಸಕ ಹೊದ್ದದಯೋಧಿಪನ ಧರಣೀತಳಾಗ್ರದಲಿ (ತೊರರಾ. ೧–೩–೨೬). **೨.** ಬೆಳಗವರ್ತಿಯದಾ . . . ಮೇಲೆ ಧಾಳಿಯನಿಟ್ಟಳಿವರಿದು ಪಲರಳಿವಿನಲು ತನ್ನ ಪರಿಚ್ಛೇದಿಸಿ (ಎಕ. VII, ಶಿವಮೊ. ೫೬–೨೫ ; 1125) ; ದುಷ್ಟಚಮೂರು ಚಪ್ಪರಿಸಿದುಧೊ ಕೆಡೆದನೊ ಹಳ್ಳಕೊಳ್ಳದಲಿ ನೀರೊಳಗೆ ಜಾಱಿದನೊ ಮೇಣುಗ್ರೋರಗನೊಳಳಿವಾಯ್ತೊ (ತೊರರಾ. ೨–೫–೨೧). **೩.** ಜೀರ್ಣವಾಗಿರುವಿಕೆ; ಶೈಥಿಲ್ಯ : ಹೊಸಕೆಱೆಯ ಕಟ್ಟಿಸಿ ತೂಬ ನಿಕ್ಕಿಸಿ ಭೂಮಿಯಂ ತಿೞ್ದಿ ಸೋಮೇಶ್ವರ ದೇವರ ದೇಗುಲವ ಅಳಿವಂ ಸೋದಿಸಿ ಸೊತೆಯನಿಕ್ಕಿಸಲ್ (ಎಕ. X, ಚಿಂತಾಮ. ೩೦–೧೧ ; 1047). **ಅೞಿಬು** : **೧.** ನಿನ್ದಿಯಕೊರಸ್ತಿಯರಸರ ಮಕ್ಕಳ್ನಾಲ್ವರ್ವರು ನೆಲದೞಿಬಿನೊಳ್ ಕಾದಿ ಸತ್ತ(ರ್) (ಎಕ. IV, ಹೆಗ್ಗಡ. ೧೧೬–೧೦ ; 930). [ಅೞಿ$_2$ + –ವು./ತಮಿ. ಅೞಿವು = ಕೆಟ್ಟಕಾರ್ಯ; ತುಳು. ಅಲಿವು]

**ಅೞಿವೆಜ್ಜ** (ನಾ). ಕುತ್ಸಿತನಾದ ವೈದ್ಯ; ಅಲ್ಪನಾದ ವೈದ್ಯ : ಅಧರಾಮೃತಸೇವನೆಯಿಂದೆ ಪಿತ್ತಂ . . . ಪೋಗುಗುಂ ಕಫಮದೞಿವೆಜ್ಜರ ಪೇೞ್ದ ಶುಂಠಿ ಪಿಪ್ಪಲಿ ಮೆಣಸೇಂ ತ್ರಿದೋಷಹರಣಕ್ಕಬಲಾಜನ ಸೇವೆ ಸಾಲದೆ (ಸೂಕ್ತಿಸು. ೧೪–೪). [ಅೞಿ$_2$ + ಬೆಜ್ಜ]

**ಅೞಿವೆಣ್, ಅಳಿವೆಣ್** (ನಾ). ಹೀನಸ್ವಭಾವದ ಹೆಂಗಸು; ನೀಚಸ್ತ್ರೀ: "ಅೞಿವೆಣ್ಣೆಂದು ಅಲ್ಪಸ್ತ್ರೀ" (ಕಶಸಾ. ೧೮–೩೬೦) ; ಅೞಿವೆಣ್ಣಾದೊಡ ಮೊಂದೆರೞ್ದಿವಸವೊಂದಾಗಿರ್ದವಂ ಕೞಿದಂದು (ಪಂರಾಮಾ. ೬–೬೯). **ಅಳಿವೆಣ್** : "ಅಳಿವೆಣ್ಣೆನಲ್ ಕುತ್ಸಿತಸ್ತ್ರೀಯಕ್ಕುಂ" (ಕಶರ. ೮).

ಅೞಿವೆಂಡಿರ್ = ಕೆಟ್ಟಹೆಂಗಸರು ; ದುಷ್ಟಸ್ತ್ರೀಯರು : ಕಸವರದಾಸೆಯಿಂ ಪದಪುದೋರ್ಪೞಿವೆಂಡಿರ ನಲ್ಮೆಯೆಂದು ಭಾವಿಸದಿರು (ಕಾವ್ಯಾವ. ೩೦೪) ; ನಾನೆಂದುಮನ್, ಅೞಿವೆಂಡಿರನ್ ನನ್ನ ಮಕ್ಕಳ್ಗೆ ತಾಳೆನ್ (ಅಂತಿಗೊ. ೫೪೬). [ಅೞಿ$_2$ + ಪೆಣ್]

**ಅೞಿವೆಸನ** (ನಾ). ಹೀನವಾದ ಕೆಲಸ; ಕೆಟ್ಟ ಕೆಲಸ : ಪೆಸರೊಳ್ ಸೈರಂಧ್ರಿಯೆನೞಿವೆ [ಪಾಠಾಂ. ವ]ಸನದ ದೆಸೆಯುಱಿಯೆಂ (ಪಂಪಭಾ. ೮–೫೬). [ಅೞಿ$_2$ + ಬೆಸನ]

**ಅೞಿವೊಡಲ** (ನಾ). ವ್ಯರ್ಥವಾದ ದೇಹವುಳ್ಳವನು; ಹೀನ ಮನುಷ್ಯ; ನೀಚ : ಪೆತ್ತ ಕೊಡಗೂಸಂ ಪಣಕೆ ಮಾಱಾಡಿ ಒಡಲಂ ಪೊರೆವೞಿವೊಡಲಿ[ಲ]ಂಗೆ . . . ಬೊಮ್ಮವೊಲೆಯಂಗೆ (ರಾಮಾಶ್ವ. ೬೪–೩). [ಅೞಿ$_2$ + ಒಡಲ್ + –ಅ$_7$]

**ಅೞಿವೊನ್** 'ಅೞಿ$_1$' ಪರಾ.

**ಅೞಿಸು, ಅಳಿಸು$_1$** (ಕ್ರಿ). ಅಳುವಂತೆ ಮಾಡು; ದುಃಖಪಡಿಸು : ಅಶ್ವಕಂಠಮಥನಾಂಕಿತ ಸೂಕ್ತಿಯನಾರ ಮುಂತೆ ಕೇಳಿಸಿದಪಿರಿನ್ನೆನುತ್ತೞಿಸಿದಂ ಪರಿಪಾಠಕ ಕೀರಜಾಳಮಂ (ವರ್ಧಪು. ೯–೬೯). **ಅಳಿಸು$_1$** : ಶೋಕಂ ದಳವೇಱುತೆ ಮೀಱುತೆ ಸಂದಣಿಸುತ್ತಳಿಸಿತಸ್ತ್ರರತಿಯಂ ರತಿಯಂ (ಗಿರಿಕ. ೮–೫೬) ; ಅಳುವವರ ನಗಿಸುವುದು ನಗುವವರನಳಿಸುವುದು ಗೆಲಿದವರ ಸೋಲಿಸಿ ಗೆಲಿಸುವುದು ಸೋತವರನೀ ವಿಪರೀತ ಗತಿ ವಿಧಿಗೆ (ಕುವ್ಯಾಕ. ೧೨–೩). [ಅೞ್$_1$ + –ಇಸು$_3$]

**ಅೞಿಸುಖ** (ನಾ). ತುಚ್ಛವಾದ ಸುಖ; ಅಲ್ಪಸುಖ : ಪೆಱವರೞಿಸುಖಮಂ ಮನದೊಳ್ ಮಱೆದುಂ ಚಿಂತಿಸದೆ (ಧರ್ಮಾಮೃ. ೩–೨೬೪). [ಅೞಿ$_2$ + ಸುಖ]

**ಅೞಿಸೊಗ** (ನಾ). = ಅೞಿಸುಖ : ಅೞಿಯೊಡಲಂ ನಂಬದೆ ಮಿಗೆಯೞಿಸೊಗಮಂ ಪಗೆಯ ಕಂಡ ತೆಱದಿಂ ಕಾಣುತ್ತ (ಧರ್ಮಾಮೃ. ೩–೨೬೮). [ಅೞಿ$_2$ + ಸೊಗ]

**ಅೞು$_1$** 'ಅೞ್$_1$' ನೋ.

**ಅೞು$_2$** 'ಅೞ್$_2$' ನೋ.

**ಅೞುಗ** (ನಾ). ಒಬ್ಬಾತನ ಹೆಸರು (?) : ನಾಲ್ಕುಂ ಸೀಮೆಯ ಸ್ಥಳದ ಮಗಿಲೊಳಗೆ ಅೞುಗಯಿವರ ಮನೆ ಮಗಿಲಹೊಱಗೆ ಇಕೈಯ್ಯಿ ಮನೆ ಅಕ್ಷೀಣಿ ಆ ಗಾಮಿ ಸಹಿತ . . . ಅಗ್ರಾಮೇಶ್ವರ ದೇವರಿಗೆ ಕ್ರಯದಾನವಾಗಿ ಕೊಟ್ಟರು (ಕಕುಲ. ೪೧೦–೬೧ ; 1198). [?]

**ಅೞುಗು** 'ಅೞ್ಗು' ನೋ.

**ಅೞುಹ** (ನಾ). ರೋದನ; ಅಳುವಿಕೆ : ಅರಣ್ಯರುದಿತಂ – ಅಡವಿಯೊಳೞುಹವುಂ (ಪಂಚತಂ. ೧೩೬–೮) ; ನೀರೊಳಗಣ ಪ್ರತಿರೂಪುಗಳ್ ನುಡಿಹ ಅಲ್ಲಾ ಅದಱಲ್ಲಿ ಒಱಲುಹ ಹಾರೈಸಿ ಪಾಡುಹ ಅೞುಹ ಈ ವಿಕಾರಂಗಳಿಂದೆ ಆದೇಶಮಂ ಮಾರಿಯಟ್ಟೆ ಅಲೆದು ಕಿಡಿಸುವುದು (ಲೋಕೋಪ. ೪–೫೦ ಟೀಕೆ). [ಅೞು$_1$ (< ಅೞ್$_1$) + –ಹ$_2$ (<–ಪ$_2$)]

**ಅೞೆ** (ನಾ). = ಅಣೆ (?) : ದೋ [ದೊ]ಣೆಯ ಅೞೆ ಅಲುಕುರ ಕೆಱೆ (ಇಅ. XIV, ೨೩೩–೬೦ ; ೯ನೆಯ ಶತ). [?]

**ಅೞ್ಕಜ$_1$**, ಅಕ್ಕಜ$_1$, ಅಳ್ಕಜ (ನಾ). ಹೊಟ್ಟೆಕಿಚ್ಚು; ಕರುಬು; ಅಸೂಯೆ : "ಅೞ್ಕಜಮೆಂದುಂ ಕಱುಂಬೆಂದುಂ ಅಸೂಯೆ" (ಕಶಸಾ. ೨೨–೪೩೬) : ಅೞ್ಕಜದಿಂದೆ ಪುಟ್ಟುವುದದವೞಿಲ್ (ನೀತಿಮಂ. ೬–೧೨೪).

**ಅಕ್ಕಜ :** "ಕೇಣಂ, ಮಚ್ಚರಂ—ಈ ೩ ಮತ್ಸರಂ, ಅಕ್ಕಜ [ಪಾಠಾಂ. ಟಾ]ಮೆಂದು ಅದಱ ಭೇದಂ" (ಕ ಶ ಸಾ. ೨೨–೫೫೭, ೫೫೮); "ಕಱು ಬಕ್ಕಜಮೆಂದಸೂಯೆಯಕ್ಕುಂ" (ಕವಿಕಂ. ೧೯೬); ಅಂಬುಜದಳಲೋಲ ಲೋಚನೆಯರೆಂಬೆಳವಳ್ಳಿಗಳಂ ಕಡಂಗಿಯಕ್ಕಜದಿನಡಂಗಿಸುತ್ತೆ ಮು ನಿ ಶಾಂತಿಜಳೌಘಮನೀಂಟುತ್ತೈದೆ ಋತ್ವಿಜರೆರ್ದೆಬೆಂಚೆಯಂ ಮಿಗೆ ಕಲಂಕುತೆ ಬಂದುದು ದೈತ್ಯಕುಂಜರಂ (ಉದ್ಭಟ. ೪–೬೪); ಜೂಜಿನಲಕ್ಕಜವಮಾಡಿದೆ ಯಲಾ ಮಾನಿನಿಯ ಮುಡಿವಿಡಿದು (ಕು ವ್ಯಾ ಕ. ೧೯–೫೦). **ಅಳ್ಕಜ :** ಒಂದೆಜಮೇಲೊಂದಳ್ಕಜಮುಂ ಪುಟ್ಟಿಪುವು (ಅದ್ಭುತ. ೮–೨೩); ಭುಜ ಬಲಮುಂಟೆನುಗೆಂದಳ್ಕಜದಿಂ ನೃಪನೀತಿದಪ್ಪಿ ತೊಡರ್ದೊಡೆ ಸಖರೊಳ್ (ಚಂದ್ರಪ್ರಭ್ಯು. ೧೨–೯೫).

[? . / ತಮಿ. ಅಟುಕ್ಕು = ಕೋ ಪ, ಹೊಟ್ಟೆಕಿಚ್ಚು; ಅಟುಕ್ಕಱು, ಅಟುಕ್ಕಾಱು = ಹೊಟ್ಟೆಕಿಚ್ಚು]

**ಅಟ್ಕಿಜ₂, ಅಕ್ಕಜ₂, ಅಕ್ಕದ** (ನಾ). ಆಶ್ಚರ್ಯ; ಸೋಜಿಗ; ಬೆರಗು : ತನ್ನ ತೊಡಂಕದೈದೆ ನೂರ್ಮಡಿ ಮನದೊಳ್ ಪಳಂಚಲೆಯೆ ಡಕ್ಕೆಯೊಳಟ್ಕಿಜವಾಗೆಯಾಡಿದಳ್ (ಪಂಪಭಾ. ೪–೯೦). **ಅಕ್ಕಜ₂ :** ೫೬೭ನೆಯ ಪುಟವನ್ನು ನೋಡಿ. **ಅಕ್ಕದ :** ಅಜೇಯರತುಳ ವಿಕ್ರಮಿ ಗಳ್ . . . ಆಯೆರಡುಂ ಬಲಮುದಿರಲ್ ವಿದ್ಯಾಸಾಯಕಮಂ ತೊಟ್ಟೆ ಚ್ಚಾಡುವೆನೆನುತಾಯತಮಾದರ್ ಮೇಲಣ ಸುರತತಿಯಕ್ಕದಗೊಂಬಂತೆ (ಜಯಕಾ. ೭–೧೩).

[? . / ತೆಲು. ಅಕ್ಕಜ; ಕುಇ. ಆಕಜಕ ಆವ = ಭಯಾಶ್ಚರ್ಯಗಳಿಂದ ಮೂಕನಾಗು]

**ಅಟ್ಕಿಜಂಬಡು,** ಅಳ್ಕಜಂಬಡು (ಕ್ರಿ). ಅಸೂಯೆಪಡು; ಕರುಬು; ಹೊಟ್ಟೆಕಿಚ್ಚುಪಡು : "ಅಟ್ಕಿ [ಪಾಠಾಂ. ಳ್ಕ] ಜಂಬಡು – ಅಸೂಯಾ ಯಾಂ" (ಶಮಧಾ). **ಅಳ್ಕಜಂಬಡು :** ವಸಿಷ್ಠಮುನಿವರನನುಳಿದೆನ್ನೆ ಡೆಗೆ ಬಂದನೆಂದಳ್ಕಜಂಬಟ್ಟು ಕೇಳ್ ಶಕ್ರಪದಮಂ ಭರದಿಂದೆ ಕುಡುವುದೇ ನಚ್ಚರಿ . . . ಬಾರೆನುತ್ತೆ (ಪಾಸೋಪು. ೮–೪೦); ಅಂತಿಯ್ಯಲೊಡಮಳ್ಕ ಜಂಬಟ್ಟು ಕರಿಯ ಕೇಶವಂ ತಾಳಿ . . . ನಿಂದೆಜಗಿ ಕರಂಗಳಂ ಮುಗಿದು (ವೃಷವಿ. ೮–೩ ವ). [ಅಟ್ಕಿಜ₁ + ಪಡು₁]

**ಅಟ್ಕಿಮೆ,** ಅಕ್ಕಮೆ, ಅಕ್ಕವೆ₁, ಅರ್ಕಮೆ, ಅಳ್ಕಮೆ (ನಾ). ಜೀರ್ಣ ವಾಗದಿರುವಿಕೆ; ಅಜೀರ್ಣವಾಗಿರುವುದು : "ಅಟ್ಕಿಮೆ = ಅಜಮೆ" (ಶಮದ. ಪರಿ. ೧); "ಅಜವೆಯಟ್ಕಿಮೆಯಜೀರ್ಣಂ" (ಕವಿಕಂ. ೧೯೬); ಇನಿದುಣಲಟ್ಕಿಮೆಯಕ್ಕುಮೆ ತ ನು ವಿಂ ಗೆ ವಿರುದ್ಧಮುಂಡೊಡಟ್ಕಿಮೆ ಯಕ್ಕುಂ (ಜೀವಸಂ. ೧೨–೨೧); ಗಟ್ಕನೆ ಕೊಳೆ ಕಡುಗಂಪಿನೊಳಟ್ಕಿ ಮೆಗೊಳಗಪ್ಪೆವೆಂದು ಮಧುಪಂಗಳ್ (ಸೂಕ್ತಿಸು. ೧೧–೧೪); ತೀರಮೆ, ಅಟ್ಕಿಮೆ (ಶಮದ. ೨೧೧ ಪ್ರಯೋ). **ಅಕ್ಕಮೆ :** ಅಕ್ಕಮೆಯಕ್ಕು ಮೆಂಬಂಜಿಕೆಯಿಂ (ನೀತಿವಾ. ೯–೧೨೧). **ಅಕ್ಕವೆ₁ :** ಅನುಭಾವವಕ್ಕವೆ ಯಾಗದೆ ಬೆಬ್ಬನೆ ಬೆಱತೆನಯ್ಯ (ಬಸವ. ೨೯). **ಅರ್ಕಮೆ :** 'ಅರ್ಕ ಮೆವಡು' ಪರಾ. **ಅಳ್ಕಮೆ :** ಅಱತಬ್ಧಸಂಕುಳಂ ನೀರ ಪರಾಗಮುಂ ಕುಡಿದು ಬಂದುಱಯಳ್ಕಮೆಯಾಗೆ ನಾಡೆಯುದ್ಗಾರಿಸುವಲ್ಲಿ (ವೀ ರ ವಿ. ೬–೮). [ಅಟ್ಕು₁ + -ಅಮೆ₂]

**ಅಟ್ಕಿಮೆವಡು,** ಅರ್ಕಮೆವಡು (ಕ್ರಿ). ಅಜೀರ್ಣವಾಗು : ಅಟ್ಕಿಮೆ ವಡುವುವು ಕುಡಿದೊಂದು ಪಣ್ಣ ರಸದೊಳೆ ಗಿಳಿಗಳ್ (ಪಂಪಭಾ. ೧–೫೭); ಜವನೇನಟ್ಕಿಮೆವಟ್ಟನೇ (ಕಾವ್ಯಸಾ. ೧೧೨೬). **ಅರ್ಕಮೆವಡು :** ಆ ವಿಪ್ರಕುಲಲಲಾಮಂ ದೇವಪಿತೃಪ್ರತತಿ ಹವ್ಯಕವ್ಯಂಗಳನುಣ್ಣಾವಗಮರ್ಕ ಮೆವಡುವಿನಮಾ ಪೊತ್ತು ರ್ಗಂ ತತ್ಸಮಾಜಯಜನೈಕರತಂ (ಎಇ. XII, ೨೮೦–೧೪೯; 1077). [ಅಟ್ಕಿಮೆ + ಪಡು₁]

**ಅಟ್ಕಿಮೆವೆಱು** (ಕ್ರಿ). = ಅಟ್ಕಿಮೆವಡು : ಒಂದೆ ಕೋರಕದೊಳಟ್ಕಿಮೆ ವೆ ತ್ತ ವ ಚ ತ್ತು ಲಂಘನಂಗೆಯ್ಯುದುಮಾದುದಾ ಮಧುಪಕೀರಪಿಕಾಳಿಗೆ ನಂದನಂಗಳೊಳ್ (ಶಾಂತಿಪು. ೧–೬೩). [ಅಟ್ಕಿಮೆ + ಪೆಱು₁]

**ಅಟ್ಕಿವೆ** (ನಾ). ಸಾಮರ್ಥ್ಯ; ಪರಾಕ್ರಮ : "ಅಟ್ಕಿವೆಯೆನಲ್ಕೆ ತಾನಳ ವಿಯೊಳಂ" (ಕರ್ಣಾನಿ. ೭೫). [?]

**ಅಟ್ಕಿಱ್₁,** ಅಕ್ಕಱು₁, ಅಳ್ಕರು₁ (ಕ್ರಿ). ಪ್ರೀತಿಸು; ವಿಶ್ವಾಸತೋರು; ಅಟ್ಕಿಱಿದು, ಅಟ್ಕಿರ್ತು (ಭೂತಕೃ) : ಕೊಂಗನಾಡೆಪ್ಪತ್ತುಂ ದಯೆ ಗೆಯ್ದನಟ್ಕಿಱಿದು ಕಲ್ನಾಟನುದ್ಗೋವಿನ್ದರ (ಎಕ. XIV, ಎಡತೊ. ೩೧–೧೦; 900); ಸರ್ವಬಾಧಾಪರಿಹಾರಂ ಅಟ್ಕಿರ್ತುಗೊಟ್ಟಂ (ಎಕ. III, ನಂಜನ. ೧೨೨–೧೬ ; ?); ರಾಜತಾದ್ರೀಂದ್ರ ಶೋಭಾವಿಭವಕ್ಕಟ್ಕಿರ್ತು ತತ್ಪರ್ವತ ನಿಕಟವನೋಪಾಂತದೊಳ್ ಬೀಡುಬಿಟ್ಟಂ (ಆದಿಪು. ೧೩–೭೮); ನಾಡವ ರೆಲ್ಲಂ ನೆಱಿದುಂ ನೀಡಿರದಟ್ಕಿರ್ತು ಭಕ್ತಿಪೂರ್ವಕದಿಂ ಕೊಂಡಾಡೆ ಗುರು ವೆಂದು (ಧರ್ಮಾಮೃ. ೪–೧೯೨). **ಅಕ್ಕಱು₁ :** ಅಱಿಯರೇ ಮುನಿ ಮುಖ್ಯರೆಲ್ಲವ ತೊಱದು ನೀನೇ ಗತಿಯೆನುತ್ತಕ್ಕಱಿತು ಹೃದಯಸರೋಜ ದಲಿ ನಿಜಪಾದಪಂಕಜವ ಸೆಱಿವಿಡಿದು ಸಂಸಾರ ದುಃಖವ ಮಱಿವರು (ನಿಭಾಗ. ೧೦–೨೫–೪೩). **ಅಳ್ಕರು₁ :** ಅಳ್ಕರದ ನೀಂ ಬರ್ದುಂಕಿಮೊಡೇಂ ಸತ್ತೊಡೇಂ (ಸಂಸಪ. ೨೯–೧).

ಅಟ್ಕಿರ್ತಂ = ಪ್ರೀತಿಸಿದವನು : "ಅಟ್ಕಿರ್ತಂ ಪ್ರೀತಿವಟ್ಟನ್" (ಕರ್ಣಾನಿ. ೭೫). ಅಟ್ಕಿರ್ತಳ್ = ಪ್ರೀತಿಪಟ್ಟವಳು; ಒಲಿದವಳು : "ಅ ಟ್ಕಿ ರ್ತ ಳ್ ಗುಣಕಱುಗೊಂಡಳ್ ಸಲೆಕೊರ್ತಳ್ . . . ಒಲಿದವ ಳಕ್ಕುಂ" (ಕವಿಕಂ. ೧೭೦); "ಅಟ್ಕಿರ್ತಳೆಂದೊಡೆ ಮೇಣೊರಲ್ದಳೆಂಬೀ ಪೆಸರ್ ಕೊರ್ತಳ್ಗೆ ತಾನೆನಿಕು" (ಕಬ್ಬಿಕೈ. ೧೭೦).

[ಅಟ್ಕು ? + ಅಱ್ ?]

**ಅಟ್ಕಿಱ್₂,** ಅಕ್ಕರ್, ಅಕ್ಕರ₁, ಅಕ್ಕರು, ಅಕ್ಕರೆ₁, ಅಕ್ಕಱ್, ಅಕ್ಕಱ, ಅಕ್ಕಱು₂, ಅಕ್ಕಱೆ, ಅರ್ಕಱು, ಅಳ್ಕರು₂, ಅಳ್ಕರೆ, ಅಳ್ಕಱು, ಅಟ್ಕಿಱು (ನಾ). ಪ್ರೀತಿ; ಆದರ : "ಅಟ್ಕಿಱು – ಪ್ರೇಮ್ಣಿ" (ಶಮಧಾ. ನ); ಸಯ್ಪಿದೇಂ ಸಂಭವಿಸಿತೊ ನಮಗಪ್ಪಟ್ಕಿಱಿಂ ಗಂಗೆ ತೆಂಕಣ್ಣದಿರಂ ಬನ್ದಿದ್ದುದೆಂಬನ್ತ ತಿ ಬಹಳ ಜ ಳ ನ್ದೀ ವ ಳ ಬ್ಬಾ ಸ ಮು ದ್ರಂ (ಎಕ. X, ಮುಳಬಾ. ೩೮–೨೪ ; 890); ಅಟ್ಕಿಱೊಳ್ ನೋಡೆ ಮೈಯ್ಯೆಲ್ಲಂ ದಿಟ್ಟಿಗಳಾದೊಡಿಂದ್ರನೆನಿಸಲ್ಕಾರ್ತಂ ಮಹೇಂದ್ರಾಂತಕಂ (ಕಾ ವ್ಯ ಸಾ. ೫೫೧ ಶೂದ್ರಕ); ಧನುರ್ದಂಡ ಟಂಕಾರಮಂ ಕೇಳಲುಮಟ್ಕಿರ್ಪೆರ್ಚೆ (ಶಾಂತಿಪು. ೭–೩೭); ಅಟ್ಕಿಱಿನಿಂ ಕೈಕೊಳ್ವುದೆಂದಾತ್ಮಜೆಯನೊಲವಿನಿಂ ದಿತ್ತು ಸಾಕ್ಷ್ಯಕ್ಕೆ ಕೈನೀರೆಱಿದಂ ಗಂಧರ್ವರಾಜಂ (ಕಾದಂಉ. ೮೧೧); **ಅಕ್ಕರ್ :** ಅಕ್ಕರಿಂದೆನ್ನ ಬೆಸಗೊಂಡರೇನರಿಪುವೆಂ (ವೆಂಕಾರಾ. ೫–೫–೧೩). **ಅಕ್ಕರ₁ :** ತೌರುಮನೆಯ ಆದರ ಅಕ್ಕರ ಇಲ್ಲಿ ಮಿ ಥ್ಯೆ ಯಾ ಗಿ ತ್ತು (ಜೀವನ. ೧೩). **ಅಕ್ಕರು :** ಉಕ್ಕಿಹರಿಯುವ ಕರುಣೆಯೊರತೆಯನ್ನು ಅಕ್ಕರನು ಸ್ನೇಹವನು (ವಿಶೀಗೀ. ೧೦೮). **ಅಕ್ಕರೆ₁ :** "ಅಕ್ಕರೆಯೆನಲ್ ಪ್ರೀತಿ" (ಕಶರ. ೬); ವೆಂಕಜ್ಜಿಗೆ ಮಕ್ಕಳೆಂದರೆ ಬಲು ಅಕ್ಕರೆ (ತ್ಯಾಗನು. ೧೭೬); ಹೆರವರ ಮಕ್ಕಳನ್ನು ಅಷ್ಟೇ ಅಕ್ಕರೆಯಿಂದ ಮುದ್ದಾಡುವುದ ರಲ್ಲಿಯೇ ಧನ್ಯತೆ ಇದೆ (ಶ್ಯಾಮುತಾ. ೨೮); ಅಕ್ಕರೆ ಬೆರೆತ ದನಿಯಲ್ಲಿ ನುಡಿದ (ಹಾಹುತ್ತ. ೭೨). **ಅಕ್ಕಱ್ :** ಎನ್ನ ಮನವಿವನೊಳಕ್ಕರ್ವೆರಸು ತಿದೆ ರೂಪನುನ್ನಿಸುವೊಡನುಜೆಗೀತಂಗೆ ಪಾಸಟಿ (ಜೈ ಮಿ ಭಾ. ೩೦–೫೨). **ಅಕ್ಕಱ :** ಅಕ್ಕಱದಿ ಮೆಲ್ಲನೆ ಕರವ ನೀಡುತ ಪಿಡಿದನಂಚೆಯನು (ನಳಚ. ೨–೧೬); ನಿನಗೆ ನಾನಣ್ಣನೆಂಬಕ್ಕಱವಿಲ್ಲ ನೀನನುಜನೆಂಬಕ್ಕಱುಂಟಪ್ಪ (ಭರಚ. ೫೧–೧೦೭); ರೊಕ್ಕವಿಲ್ಲದ ಬಾಳ್ವೆ ಮಕ್ಕಳಿಲ್ಲದ ಮನೆಯು ಅಕ್ಕಱ ವಿರದ ತವರೂರು ಇವು ಮೂರು ದುಕ್ಕ ಕಾಣಯ್ಯ (ಸರ್ವಜ್ಞ. ೧೬೯೨).

**ಅಕ್ಕಱು** : ಮುಕ್ತಾಯಕ್ಕನ ಅಕ್ಕಱು ಸತ್ಯಕ್ಕನ ಯುಕ್ತಿ (ಅದವ. ೩೯) ; ಕಱೆಗೊರಳನಕ್ಕಱಿಂ ಕರುಣದಿಂ ಕಳುಪುತಿರೆ (ಬಸರ. ೧-೮೬) ; ಜಿನಮತದೊಳಗುಳ್ಳ ಜಿನಮುನಿಗಳಿಗೆನ್ನಯ ಮನದಕ್ಕಱು ತವಿಪಂತೆ ಮನವೊಲಿದಾನು ವಂದಿಸುವೆ (ಅಂಜಚ. ೧-೬೭). **ಅಕ್ಕಱೆ** : ಅಜಾಮಿಳ ನಿನ್ನಕ್ಕಱೆ ಮಗನೆ ಪೇಳೊ (ಪುರಂದ. ೧-೯೨-೨). **ಅರ್ಕಱು** : ತಮ್ಮದೊಂದರ್ಕಱಿಂದಂ ಪೊಗಳಲ್ (ಎಇ. XIII, ೩೩೦-೮ ; 929) ; ಜಯಸಿಂಘದೇವ ನರಪಂ ಕೂರ್ತರ್ಕಱಿಂ ಕೊಟ್ಟೊಡೆ (ಸೌಇಇ. XI–i, ೭೫-೩೩ ; 1042) ; ಬಂಣ್ಣಿಸುತಿಪ್ಪರ್ದೀ ವಸುಂಧರೆ ಪಿರಿದರ್ಕಱಿಂ ಪ್ರಿಥ್ವಿ(ಥಿವಿ) ಸೆಟ್ಟಿಯನ್ (ಕಇ. IV, ೧-೪೯ ; 1204) ; ಶ್ರೀಕಾಂತಾ ಕಾಂತನಾತ್ಮೋದರಭುವನದೊಳೊಂದರ್ಕಱಿಂ ಬಯ್ತು (ಕೊಲ್ಹಾಶಾ. ೮-೪ ; ?). **ಅಳ್ಕರು₂** : "ಅಳ್ಕರೆನೆ ಪ್ರಿತಿ" (ಕಶರ. ೧೧೬). **ಅಳ್ಕರೆ** : ಅಳ್ಕರೆವೊಗಳ್ಕೆಗೆರ್ದೆಯುರ್ಕಿ ಸೊರ್ಕುತೆ (ಶ್ರೀರಾಮಾ. ೪೦೦-೧೦೪೧). **ಅಳ್ಕಱು** : ಚೇಳ್ ಚಿಕ್ಕದೆಂದಳ್ಕಱಿಂ ತೆಗೆಯಲ್ ಕಚ್ಚದೆ (ಸೋಮೇಶ. ೪೧) ; ತಂದೆ ತಾಯ್ಗಳ್ ತಮ್ಮ ಮಕ್ಕಳ್ಗೆ ತನಿವಾಲ ತಂದಳ್ಕಱಿಂದೆಱೆವ ಮಾಳ್ಕೆಯಿಂ (ಚಿಬಪು. ೩-೨೪). **ಅಱ್ಕಱು** : "ತಕ್ಕು, ಅಱ್ಕಱು ... –ಈ ಅ ಸ್ನೇಹಕ್ಕೆ ಪೆಸರ್" (ಕಶಸಾ. ೧೯-೩೯೦) ; "ಎಱಕಂ ತಕ್ಕಱ್ಕಱು ಕೂರ್ಪೊರ್ಱಲುಂ ಕಾದಲ್ಮೆಯೆನ್ನಲಿವು ಸುಸ್ನೇಹಂ" (ಕವಿಕಂ. ೧೭೩) ; ಕಾಣಿಕೆಯಂ ಕೈಕೊಳ್ವುದೆಂದಱ್ಕಱುಮಿಗೆ ನಲವಿಂ ಬಿನ್ನಪಂಗೆಯ್ದನಾಗಳ್ (ದಶಕು. ೭-೧೧೩).
[ದೇ ‖ ಮಲ. ಅಱಿವು ; ತುಳು. ಅರ್ಕಮೆ ; ತೆಲು. ಅಕ್ಕಱ]

**ಅಱ್ಕಱು** 'ಅಱ್ಕಱ್₂' ನೋ.

**ಅಱ್ಕಾಡಿಸು**, ಅಕ್ಕಾಡಿಸು (ಕ್ರಿ). ನಾಶಗೊಳಿಸು ; ಧ್ವಂಸಮಾಡು : ಈ ತ್ರಿಕೂಟಗಿರಿಯಂ ತತ್ಸೂರ್ಯಹಾಸಾಸಿಯಿಂದಿಱಿದಱ್ಕಾಡಿಸಲುಂ ದ್ವಿಷನ್ನೃಪರನೇಕಾಕ್ಷೌಹಿಣೀಸೇನೆಯಾ ನೆಱೆವಂ (ಪಂರಾಮಾ. ೯-೧೮೩) ; ಅಂಗಜದಹನಪರಿತಾಪದುಜ್ಜುಗಂ ಲಜ್ಜಾರಸಮನಱ್ಕಾಡಿಸೆ ಕನ್ನೆ (ಜಗವಿ. ೧೬-೧೧೧ ವ) ; ಎನ್ನ ಲೇಸನಱ್ಕಾಡಿಪುದರ್ಥಿಯೇ (ಅನಂಪು. ೮-೨೬). **ಅಕ್ಕಾಡಿಸು** : ಸೊಕ್ಕಿದ ಮದಾಂಧ ಭೂಪರನಕ್ಕಾಡಿಸಿ ತನ್ನ ಕೀರ್ತಿಯಂ ದಿಗ್ವಧುಗಳ್ತೆಕ್ಕರ್ಯಯ್ಸುವಿನೆಗವೆಸೆದಂ (ಎಕ. V, ಅರಸೀ. ೧೦೨-೬೦ ; 1100) ; ಗೋವ್ರಜಂಗಳನಿರದಕ್ಕಾಡಿಸಿ ವಿಗ್ರಹಶೀಲಂ ಬೇಡಂ (ಪುಣ್ಯಾಸ್ರ. ೫-೪೦) ; ವನಿತೆಯರ ಕಡೆಗಣ್ಣನೋಟದಂಬಿನ ಹೊಗರಮೊನೆಯೊಳಕ್ಕಾಡಿಸುವೆಂ (ಲಶಿಚಂ. ೧೪-೨೬). [ಅಱ್ಕಾಡು + –ಇಸು₃]

**ಅಱ್ಕಾಡು**, ಅಕ್ಕಾಡು, ಅರ್ಕಾಡು, ಅಳ್ಕಾಡು₂ (ಕ್ರಿ). ೧. ಪೂರ್ತಿ ನಷ್ಟವಾಗು : "ಅಱ್ಕಾಡು (ಅಱ್ಕು + ಆಡು) – ನಿರವಶೇಷೇ (ಜೀರ್ಣವಾಗು)" (ಶಮುಧಾ) ; ತುರಗಂ ಪತ್ತೆಂಟುಲಕ್ಕಂ ಪಡಲ್ವಟ್ಟಱ್ಕಾಡಿದುವೊಂದೆ ಬಿಲ್ಗನೆ (ಪಂಪಭಾ. ೧೦-೧೧೬); ಇದಱೊಳ್ ಶ್ವೇತಾತಪತ್ರಸ್ಥಗಿತ ದಶದಿಶಾಮಂಡಲಂ ರಾಜಚಕ್ರಂ ಪುದಿದಱ್ಕಾಡಿತ್ತಡಂಗಿತ್ತಿದಱೊಳೆ ಕುರುರಾಜಾನ್ವಯಂ (ಪಂಪಭಾ. ೧೨-೧೫೬) ; ಆಗಳಾ ಶೈಲರಾಜನ ಶೃಂಗಾರರಸಮೆ ಕುದಿದಱ್ಕಾಡುವಂತಱ್ಕಾಡುವ ನಿರ್ಝರ ಜಲಂಗಳುಮಂ (ಜಗವಿ. ೮-೩೫ ವ). ೨. ನಿಶ್ಶೇಷಗೊಳಿಸು ; ಲಯಗೊಳಿಸು : ಉರ್ಕಿಬಂದು ಮೇಲ್ವಾಯ್ದ ಮಾರ್ವಲಂಗಳಂ ತನ್ನ ಬಾಳ ಬಾಯೊಳಱ್ಕಾ[ಪಾಠಾಂ. ಳ್ಕಾ, ಕ್ಕಾ]ಡಿದುದಱಿಂ ಪರಸೈನ್ಯಭೈರವನುಂ (ಪಂಪಭಾ. ೧೪-೩೬ ವ). **ಅಕ್ಕಾಡು** : ೧. ಜಗನೇಕಚ್ಛತ್ರಮಾಯ್ತುರ್ಕಿದ ಧರಣೀಧರದ್ರೋಹರಕ್ಕಾಡಿದರ್ (ಎಕ. VIII, ಸೊರಬ. ೨೯೯-೧೧ ; 1073) ; ಅರ್ಚನೆ ಆವರಿಸಿತ್ತಯ್ಯಾ ... ಅಱಪೆ ಅಕ್ಕಾಡಿತ್ತು ಸಮತೆ ಪರಿಣಾಮಿಸಿತ್ತು (ಪದಗೋ. ೬-೧೯೫) ; ಜೋಡಿನ ಸರಪಳಿಯಲಕ್ಕಾಡಿದವು ಕಲಿ ಭೀಷ್ಮನಂಬುಗಳು (ಕುವ್ಯಾಭೀ. ೬-೨೩) ; ಬೀಳುತಿರ್ದವು ಬಹಳ ರಭಸದಲೀಳೆಗಳು ಫಲಭಾರದಲಿ ಕಿತ್ತೀಳೆ ಬಾಳೆಯ ವನಗಳಕ್ಕಾಡಿದುವು (ನಿಭಾಗ. ೧೦-೫೩-೨೫).

**ಅರ್ಕಾಡು** : ೧. ಜನಕೆಲ್ಲಂ ತಾನೆ ಕಣ್ಣುಂ ಗತಿಯುಮೆನಿಸಿ ತನ್ನಿಂ ರಿಪುಕ್ಷತ್ರ ನಕ್ಷತ್ರ ನಿಕಾಯಂ ನಿಲ್ಲದೆಲ್ಲಂ ಮಸುಳೆ ಕಳಿಮಳಧ್ವಾಂತಮರ್ಕಾಡೆ ವಿಶ್ವಾವನಿಯಂ ಮಿಕ್ಕೇಳ್ಗೆಯಿಂದಂ (ಎಕ. VII, ಶಿಕಾರಿ. ೧೨೪-೨೦ ; 1077) ; ಸಮಪಾದಂ ಪೊರ್ದೆ ಬಲ್ಪಂ ಕರಣ ಸಮುದಯಂ ತನ್ನೊಳರ್ಕಾಡೆ ಕಣ್ಗಳ್ ನಿಮಿಷ ವ್ಯಾಸಂಗಮಂ ಬಿಟ್ಟಿರೆ (ಅರ್ಧನೇ. ೩-೬೭). **ಅಳ್ಕಾಡು₂**: ನೆಱೆಸೋಂಕದ ದೇಹಮದೇಕೆ ಕೂಡಿಯಳ್ಕಾಡದ ಚಿತ್ತವೇಕೆನಗೆ ಹಂಪೆಯ ಲಿಂಗವೆ (ಪಂಪಾಶ. ೮). [ಅಱ್ಕು₁ + ಆಡು₁]

**ಅಱ್ಕಿಸು**, ಅಕ್ಕಿಸು₁ (ಕ್ರಿ). ಅರಗಿಸಿಕೊ ; ಜೀರ್ಣಿಸಿಕೊ : ಕಣ್ಣನೀರಿಱಿದುವು ಬಾಳೆಮೀನ್ ಜಲಮನಱ್ಕಿಸಲಾಱದೆ ಕಾಱುವಂತೆವೋಲ್ (ಕಾವ್ಯಸಾ. ೬೧೧ ಶೂದ್ರಕ) ; ಖಳದುಶ್ಶಾಸನ ಲೋಹಿತಜಳಮುಂ ಕುಡಿದೆನಸುಮಱ್ಕಿಸಲ್ಕಾಱದೆ ಕಣ್ಗೊಳೆ ಕಾಱುವಂತೆ ಕೌರವಕುಳಾಂತಕಂ ತರಳತಾಮ್ರಲೋಚನನಾದಂ (ಗದಾಯು. ೮-೫) ; ನೆಗೆವ ಪೊಗೆ ಗುಡಿಗಳಿಂದೇಂ ಸೊಗಯಿಸುತಿರ್ದಪುವೊ ಸುತ್ತಲುಂ ಕಱ್ತಲೆಯಂ ಮಿಗೆ ಕುಡಿದಱ್ಕಿಸಲಾಱದೆ ಮಗುಱ್ದೆವೆ ಕಾಱಿದಪುವೆನಿಸಿ ಕೈದೀವಿಗೆಗಳ್ (ವರ್ಧಪು. ೫-೮). **ಅಕ್ಕಿಸು₁** : ಇಱಿದ ರಣಂಗಳಿಂ ತಣಿದರೋಚಕಮಾಯ್ತು ಜವಂಗೆ ... ಬಿಸುನೆತ್ತರನಕ್ಕಿಸಲು ನೆಲಂ ನೆಱೆಯದು (ಸೌಇಇ. IX–i, ೩೪೩-೨೬ ; 1226) ; ಗರಳವನು ಕುಡಿದಕ್ಕಿಸಲು ಬಹುದುರಿಯ ನುಂಗಲು ಬಹುದು ... ಉತ್ತರಿಸಬಾರದು ಸೇವೆಯೆಂಬುದನು (ತೊರರಾ. ೬-೪೮-೩೫) ; ಪುರವನಿತೆಯರ ಮೈಗಂಪನುಂಡಕ್ಕಿಸಲರಿದೆಮಗಕ್ಕೌಷಧಿಯ ಇರದೀವುದೆಂಬಂತೆ ಗಂಧಿಗವಸರದಿ ಮೊರೆವಳಿನಿವಹ ರಾಜಿಪುದು (ನಾಗಕು. ೨-೫೭). [ಅಱ್ಕು₁ + –ಇಸು₃]

**ಅಱ್ಕು₁**, ಅಕ್ಕು₂ (ಕ್ರಿ). ಜೀರ್ಣಿಸು ; ಲಯವಾಗು ; ನಿಶ್ಶೇಷವಾಗು : "ಅಱ್ಕು – ಜೀರ್ಣೇ" (ಶಮುಧಾ) ; ವಿದಿತಂ ಲೋಕಕ್ಕೆ ಮುನ್ನಂ ರಘುಕುಲದಹನೋಗ್ರೇಷುವಿಂ ಕಾಯ್ದು ತಿಣ್ಣಂ ಕುದಿಗೊಂಡಱ್ಕಿತ್ತಗಸ್ತ್ಯಂ ಕುಡಿಯುತುಗುಱ್ದನಿಂ ಕಟ್ಟುಪಟ್ಟೆಱ್ದುದು (ಎಕ. X, ಮುಳಬಾ. ೩೮-೧೩ ; 890) ; ಭವಲಲಾಟವಿಲೋಚನಾಗ್ನಿಶಿಖೆಯಿಂ ಬೆಂದಱ್ಕಿ ಮತ್ತಂ ಮನೋಭವನೆಱ್ಚತ್ತೊಡೆ (ಪಂಪಭಾ. ೭-೨೪) ; ಅರಗಿನ ಮಾಡದೊಳಾವಿಭುವುರಿದಱ್ಕಿದ[ಪಾಠಾಂ. ರ್ಕಿದ]ನೆಂದೊಡೆ (ನೇಮಿಪು. ೯-೪೮) ; ತುಂಬಿಗಱ್ಕದ ನಱುಗಂಪು ಪೊಂಪುಳಿಸೆ ಪೆಂಪೆಸೆದಿರ್ದುದು ಚಂಪಕವ್ರಜಂ (ದಶಕು. ೧-೫೨). **ಅಕ್ಕು₂** : ಮತ್ಸ್ಯ ಸಮುದ್ರವ ಕುಡಿದು ಕೆಱೆಯ ತಪ್ಪಲ ನೀರಿಗಾಱದೆ ಸತ್ತಿತ್ತು ನೀರಕ್ಕದೆ (ಮನುಗುಂ. ೮) ; ಆದುದುತ್ಸವ ಕರ್ಣಮರಣದ ಖೇದವಕ್ಕಿತು ಹಗೆಗೆ ... ಬೀದಿವರಿದುದು ಬಿಂಕ (ಕುವ್ಯಾಶ. ೧-೨೫) ; ಜಾರ ಚೋರರ ಕಜ್ಜವಕ್ಕಿತು ಸೂರ್ಯನುದಯದಲಿ (ಬಿಜ್ಜರಾ. ೧೨-೩). [ದೇ ?. / ತಮಿ. ಅಱು ; ತೆಲು. ಅಱುಗು]

**ಅಱ್ಕು₂**, ಅಕ್ಕು₄ (ನಾ). ಜೀರ್ಣಿಸಿದ ಸ್ಥಿತಿ ; ಕರಗಿಹೋದ ಸ್ಥಿತಿ : (ಕಿ). **ಅಕ್ಕು₄** : ಎದ್ದನಾ ಗಜಸಿಂಗ ಬಾಣಸಿದೊದ್ದೆಗೂಳಿನ ಮೈಸಿರಿಯ ಬಲು ಬಿದ್ದಿನಕ್ಕಿಸ [ಪಾಠಾಂ. ಬಿದ್ದನಿಕ್ಕುವ] ಭೂತಪವಮಾನಜನ ಕಿಬ್ಬದಿಯ ಗುದ್ದಿದರೆ (ಕುವ್ಯಾವಿ. ಕಿ. ೨-೫೮ ; ಓರಿಇ. ೪-೬೦). [< ಅಱ್ಕು₁]

**ಅಱ್ಕೆ**, ಅಕ್ಕೆ₁, ಅರ್ಕೆ, ಅಳ್ಕೆ₁ (ನಾ). ಅಳುವಿಕೆ ; ರೋದನ ; ವಿಲಾಪ : "ಅಱ್ಕೆ – ರೋದನಂ" (ಶಮುದ. ಪರಿ. ೧) ; ಆನೊರ್ವರರಸಿಯಱ್ಕೆಯಂ ಮಱ್ಗಿಸಿ ದುಃಖಮಂ ಮಱೆಯಿಸುವೊರ್ (ವಡ್ಡಾರಾ. ೧೧೮-೧೨); ತನುಗೆ ಪೊಱೆ ತುಡುಗೆ ನವಲೇಪನಮೆ ಮಳಂ ಗೀತಮಱ್ಕೆ ನೃತ್ಯಂ ಬಗೆಯಲ್ಕೆನಗೆ ದಲುನ್ಮತ್ತವಿಳಾಸನಂ (ಆದಿಪು. ೯-೫೫) ; ಆ ಶಿಶುವಿನಱ್ಕೆ ತೆಕ್ಕನೆ ತೀವಿತ್ತನಿತುಂ ದಿಕ್ತಟಮಂ (ಜಗವಿ. ೩-೧೨). **ಅಕ್ಕೆ₁** : ಅಕ್ಕೆಯಂ ಮಾಳ್ಪ ಶೋಕಮಂ (ತಸೂವ್ಯ. ೨೫೪) ; ಅಯ್ಯಯ್ಯ ನೀ ಹೋಹಾಗಳಕ್ಕೆ ನೀ ಬಾಹಾಗಳಕ್ಕೆ ಅಕ್ಕೆಬಾರದಮುನ್ನ ಪೂಜಿಸು (ಬಸವ. ೧೬೭);

ಬಿರಿವೆದೆ ಬಿಕ್ಕುವಳ್ಳೆ ಕಣ್ಣೊಳಗೊಱತ ಜಲ ಸೆರೆಗಳೊದೆದುಬ್ಬಿ ಬಿಗಿದ ಗಂಟಲಿನ ಮುಕ್ಕುಳಿಸಿದಕ್ಕೆಗಳೆಸೆವ ಸತಿಯುಳಲು (ಹಚಕಾ. ೧೨–೧೩); ಯುವತಿಯಕ್ಕೆಯ ಸೈರಿಸದೆ (ಕುವ್ಯಾಅ. ೧೭–೩೧); ಕೂಸಂ ಶ್ರೀಮುಖಿಯೆಂಬ ದೇವತೆ ಪಿಡಿದೊಡೆ . . . ಹಲವು ಪರಿಯ ಅಕ್ಕೆಯಿಂದಳುಗುಂ (ಬಾಲಚ. ೧೨೯–೯). **ಅರ್ಕೆ** (ಕ). **ಅಳ್ಕೆ$_1$** : ತರಳೆಯು ಠಕ್ಕಿನಳ್ಕೆಯೆಯೆಂದು ನೆನೆವ ತನ್ನರಸಿಯು ಬೆಱಗಾಗುತಿಹಳು (ಭರಚ. ೯–೬೯).

[ಅೞ್$_1$ + -ಕೆ]

**ಅೞ್ಗಿಸು**, ಅಗ್ಗಿಸು$_1$, ಅಳ್ಗಿಸು (ಕ್ರಿ). ೧. ಲಯವಾಗುವಂತೆ ಮಾಡು; ಕ್ಷೀಣಿಸು: ಮಿಸುಗುವ ಕಾಂಚನಾಚಲದ ಕಾಂತಿಕಳಾಪಮನೆಯ್ದೆ ಪೀರ್ದು ತನ್ನೆಸಕದ ತೇಜದುಗ್ರತೆಯಿನಾ ತಪನಂ ತಪನೀಯದೀಧಿತಿಪ್ರಸರಮನೞ್ಗಿಸಲ್ (ಕುಸುಮಾ. ೪–೮). **೨.** ಹೋಗಲಾಡಿಸು; ನೀಗು; ಅಡಗಿಸು; ಕಡೆಗಣಿಸು: ಒರ್ವನನೞ್ಗಿಪರೊರ್ವನ ಮುನ್ನಂ ಬೞಿಕ್ಕವನೊಳ್ಗುಣಂಗಳಂ ನೋಡಿ ಸೈರಿಸದೆ ಪುರುಡಿಪಂತಿರೆ ಪೊರೆವರ್ . . . ಅರಸುಗಳ್ (ಪಂಚತಂ. ೫೧–೧೦೫); ಕಾಯಕ್ಲೇಶಮನೞ್ಗಿಸಲ್ (ಲೀಲಾವ. ೩–೮೬); ಅದಟನಳುರ್ಕೆಯಂ ಕಿಡಿಸಿ ಬಿಂಕಮನೞ್ಗಿಸಿಯೆನ್ನ ಕೋಲ್ಗಳಿಂ ಸದೆದರೆವೆಣ್ಣನಂ ಬಿಡದೆ ಮಾಡಿ (ಕಬ್ಬಿಕಾ. ೧೯೫). **ಅಗ್ಗಿಸು$_1$**: ೧. ತಮದೊತ್ತರಂ ತರಣಿಪ್ರಭಾತಕವನಗ್ಗಿಪುದೆ (ನಂದಿಮಾ. ೯–೬೧). ೨. ಸುರನಾಥನಾಥನಂ ವಿದ್ಯಾಗಣಯೂಥನಂ ನೋಡಿ ಪುಳಕಿಸೆ ಮಜ್ಜನಕ್ಕೆಱೆದು ಮನಗೊಂಡು ನಾಡೆ ಅಗ್ಗಿಸುತ ವೀರಾಳಾಪಮಂ ಕೈಕೊಂಡು (ನಾಚಿರ. ೧೭೬–೧೩); ಪರಿಚಯದಬಲೆಯರನಗ್ಗಿಸುವಳ್ (ಜೈಮಿಭಾ. ೩೦–೩೪). **ಅಳ್ಗಿಸು** : ೧. ಅಂತರನಂತಕಾನನದೊಳಳ್ಗಿಸಿ ಮತ್ತಮಿಳಿದೋಡಿದನ್ಯಭೂಕಾಂತರನನ್ತಕಾನನದೊಳಳ್ಗಿರೆ ಶಾಸಿಸಿ (ಎಕ. XI, ದಾವಣ. ೪೨–೨೧; 1162); ಏತಾದೃಶದುರ್ಜನಸಂಘಾತಮನಳ್ಗಿಸಲೊಡರ್ಚಿದಂ (ವಿಷ್ಣುಪು. ೫–೨–೮೧). [ಅೞ್ಗು + -ಇಸು$_3$]

**ಅೞ್ಗು**, ಅಗ್ಗು, ಅಳ್ಗು, ಅೞುಗು (ಕ್ರಿ). ೧. ಲಯವಾಗು: "ಅೞ್ಗ– ಲಯೇ, ಕ್ಷೀಣತ್ವೇ" (ಶಮುಧಾ); ಅರಗಿನ ಮನೆಯೊಳ್ ಪಾಂಡವರುರಿದೞ್ಗಿದರಕ್ಕಟಯ್ಯೊ (ಪಂಪಭಾ. ೩–೭); ಖಳಕುಸುಮಾಸ್ತ್ರಗರ್ವತಮುಮೞ್ಗೆ (ಶಾಂತೀಶ್ವ. ೧–೨೫); ಹಿಮಾಹಿಮ ಭೇದಮೞ್ಗಿಪೋಯ್ತು (ಕುಸುಮಾ. ೭–೭); ಕಲುಷಂ ಪುಣ್ಯಮುಮೞ್ಗಿದಲ್ಲದೆ ಮಹಾಮೋಕ್ಷಾರ್ಥಮೆಂತು (ವಿಷ್ಣುಪು. ೫–೩–೧೩೧). ೨. ಕುಗ್ಗು; ತಗ್ಗು; ಕುಸಿ: ಪದಸಂಘಟ್ಟನೆಯಿಂ ಶಿಲೋಚ್ಚಯಕುಲಂ ನುಗ್ಗಾಗೆ ಸೇನಾಸುಭಾರದಿನುರ್ವೀತಳಮೞ್ಗೆ (ದಶಕು. ೧–೭೨); ತೊದಳುತ್ತುಗ್ಗುತೆಯೞ್ಗುತಂತು ನಗುತಂ ಪೊಂಗುತ್ತೆ (ವೈಸೂಮೆ. ೪–೫೭). **ಅಗ್ಗು** : ೧. ಅಗ್ಗಿತಾ ಮಾತೇಕೆ ರಣದಲಿ ನುಗ್ಗುನುಗ್ಗಾಗದೆ ಸಹೋದರರೊಗ್ಗು ಮುಱಿಯದೆ ಮಾಣದು (ಕುವ್ಯಾಭೀ. ೧–೫೮). **ಅಳ್ಗು** : ೨. ಪೊಱಪೊಣ್ಮದೆಲ್ಗಳಿಂದಳ್ಗಿದ ಕಣ್ಗಳಿಂ (ವೀರವಿ. ೧೨–೧೧೦). **ಅೞುಗು** : ೧. ಅೞುಗಿವೆಳಿಯಂೞ್ಬುನೆಱಗಿ ಕೞ್ಕದೆ ತಳ್ತುಮಱುವಕ್ಕಮಾದ ನೃಪರ್ಕಳಾ (ಎಕ. VIII, ಸೊರಬ. ೨೨–೯; 800).

ಅೞ್ಗಿತೞ್ಗು = ಕುಸಿದುಹೋಗು; ನಾಶವಾಗು: ಅನಿತನಿತೆನ್ನದಾಂತ ಸುರಪನ್ನಗ ಕಿನ್ನರಸೈನ್ಯಮೆಲ್ಲಮಂಬಿನ ಮೊನೆಯೊಳ್ ಪಡಲ್ವಡೆ ಲತಾಭವನಂ ಕೃತಕಾಚಳಂಗಳೆಂಬಿನಿತುಮವೞ್ಗಿತೞ್ಗಿ (ಪಂಪಭಾ. ೫–೧೦೪). ಅೞ್ಗಿಮೞ್ಗು = ನಾಶವಾಗು; ಕ್ಷಯಹೊಂದು: ಮಹೀಭುಜರ್ ಧುರದೊಳೆನ್ನಯ ದೂಸಱಿನೞ್ಗಿಮೞ್ಗಿದಂತಾದರ್ (ಪಂಪಭಾ. ೧೩–೪೯).

[ದೇ. ‖ ತಮಿ. ಅೞುಙ್ಗು = ಕೆಟ್ಟುಹೋಗು, ಗಾಯಗೊಳ್ಳು, ರೂಪುಗೆಡು; ಮಲ. ಅೞುಕು]

**ಅೞ್ಗೆ** 'ಅಡುಗೆ' ನೋ.

**ಅೞ್ತಿ**, ಅತ್ತಿ$_2$, ಅರ್ತಿ$_1$, ಅರ್ಥಿ$_1$, ಅಳ್ತಿ (ನಾ). ೧. ಪ್ರೀತಿ; ಆಸಕ್ತಿ: "ಅೞ್ತಿಯೆಂದು ಪ್ರೀತಿ. ಆದನ್ನರ್ತಿ [ಪಾಠಾಂ. ಳ್ತಿ]ಯೆಂದು ಪೇೞಲಾಗದು" (ಶಮುದ. ನ. ೩೩ ಪ್ರಯೋ); ಪನ್ನಿರ್ವರ್ತ್ತರ್ ಕೆಯ್ಯಂ . . . ತನ್ನೞ್ತಿಯೆಕೊಟ್ಟು ಕೆಱೆಗೆ ಯಶಮುಂ ಪಡೆದರ್ (ಇಅ. XIX, ೨೨೩–೬; 929); ಈವೞ್ತಿಯುದಾಗಳುಂ ನಿನಗೆ ದಲ್ (ಪಂಪಭಾ. ೫–೨೦); ಕರತಳಂಗಳಿನೞ್ತಿಯೊಳೆತ್ತಿ (ಅಜಿಪು. ೪–೧೩). ೨. ಹರ್ಷ; ಸಂತೋಷ: ತ್ರಿದಶಸುರಲೋಕವಾಸಾಸ್ಪದಮಂ ಪೆಱುಗುಂ ಮನುಷ್ಯ ಮನುಜಂ ನಿನ್ನಾಪದಚರಣಯುಗದ್ವಯಮಂ ಮುದದೞ್ತಿಯೆ ಬಗೆದು ನೆನೆವನನುದಿನಮೆಂದುಂ (ಕವಿರಾ. ೧–೮೪); ಅೞ್ಕಱಿಂದಮರ್ದಿನೊಳ್ ತಾನೞ್ತಿಯಿಂ ತೊಯ್ದು . . . ಪಡೆದಂ (ಪಂಪಭಾ ೪–೭೫); ಆ ಸಾಹಸಕೇಳಿ ಪಿರಿದುಮೞ್ತಿಯನೀಗುಂ (ನೇಮಿಪು. ೧೦–೩೧). **ಅತ್ತಿ$_2$** : ೨. ರಾಯರನೆ ಬಡಿಮೊಲಂಗೊನ್ದು ತಂದತ್ತಿಯಿಂ ದೀವದ ರಾಯರ್ ಮಾಡಿ ಕಾರಾಗೃಹದೊಳಿರಿಸಿದಂ ವಿಕ್ರಮಾದಿತ್ಯದೇವಂ (ವೈಆರಿ. ೧೯೨೯, ೬೫–೧೯; 1081). **ಅರ್ತಿ$_1$** : ೧. ನಡೆಯಿಲ್ಲದ ಕರ್ತೆ ಮನಕ್ಕೆಡಂಬಡಂಮಾೞ್ಕುಮರ್ತಿಯಂ ಮಾಡುಗುಮೇ (ಅಜಿಪು. ೬–೯೬). ೨. ಒಲ್ದು ಮಾಡು ಮುನಿಸಂದೋಹಕ್ಕೆ ನೀನರ್ತಿಯಂ (ಧರ್ಮಾಮೃ. ೪–೨೭೦); ನಿನ್ನ ಶೃಂಗಾರ ಅವರ ಕಣ್ಣಿನ ಅರ್ತಿ (ಮಾಮಲ್ಲಿ. ೨೯). ೩. ಇಷ್ಟ: ಈ ವಸಂತಸಮಯದೊಳ್ ತಮ್ಮೊಡನೆ ವನವಿಹಾರಂಗೆಯ್ಯಲರ್ತಿಯಾದುದು (ಚಾವುಂಪು. ೫೦); ಕೆನೆಮೊಸರ್ ನಿನಗರ್ತಿ ದಮ್ಮಯ್ಯ ಕೊಳ್ಳಯ್ಯ (ಬಸರ. ೭–೧೩೫); ಧೂಪದೀಪ ನೈವೇದ್ಯಂಗಳಿಂ ಪೂಜಿಸಿದಳರ್ತಿಯಲಿ (ಕುವ್ಯಾಅ. ೨೦–೨೦). ೪. ಸೊಗಸು; ಠೀವಿ: ವರಲಕ್ಷ್ಮೀವಿಲಾಸದ ಚೆಲ್ವಿಕೆಯಿಂದಲರಮನೆ ಮೆಱೆವುದರ್ತಿಯಲಿ (ಕಂನವಿ. ೨–೭೯). **ಅರ್ಥಿ$_1$** : ೧. ರಾಮೇಶ್ವರದೇವರ ದೇಗುಲಮನರ್ತ್ಥಿ[ರ್ಥಿ]ಯಿಂ ಮಾಡಿಸಿದಂ (ಕೊಲ್ಹಾಶಾ. ೩–೨೦; 1079); ಹಳೆಯೆತ್ತನಿದಿರಾಗೇಱೆ ಹರನೈತಹುದನೀಕ್ಷಿಸುವರ್ಥಿ ನಿನಗಾಯ್ತೇ (ನಿಭಾಗ. ೪–೫–೪೩). **ಅಳ್ತಿ** : ೧. ದೇವಸಂಗಯ್ಯ ಸಲಿಸೆನ್ನ ಮನದಳ್ತಿಯಂ (ಬಸರ. ೫–೧೪೩); ವಿಳಾಸಿನಿಯರಳ್ತಿಯಿಂದಾ ಕುಮಾರನನು ಮಜ್ಜನಂ ಮಾಡಿಸಿ (ಸೌಂದಪು. ೪–೨೧). ೨. ಈ ನಗದ ತಪ್ಪಲೊಳಗತುಳಸುರತರುವನಮನೇ ನಿನ್ನ ಮನಕಳ್ತಿಯಪ್ಪಂತೆ ಗೈದನಲೆ (ಚಿಬಪು. ೪೫–೪).

[ಅಳ್ + -ತಿ. / **ಮಲ.** ಅೞವು; **ತುಳು.** ಅರ್ಕಮೆ; **ತೆಲು.** ಅಕ್ಕರ]

**ಅೞ್ತಿಕಾರ್ತಿ** (ನಾ). ಪ್ರೀತಿಯುಳ್ಳವಳು; ಪ್ರಿಯೆ: ತಾವೆ ತಮಗೇ ನೆರವಪ್ಪರೊ ಚಿತ್ತಜಂಗೆ ಬಾೞ್ಮೊದಲೆನಿಪೞ್ತಿಕಾರ್ತಿಯರೞಲ್ದು ನೃಪಾಲಮನೋಜನಿಂತು ನೋಡಿದ ಕಡೆಗಣ್ಣಕಾಂತಿಲತಿಕಾಸುಮನಶ್ವರ ಮೋಹಪಾಶದೊಳ್ (ಅನಂಪು. ೨–೪). [ಅೞ್ತಿಕಾಱ + -ತಿ$_1$]

**ಅೞ್ತಿಕಾಱ**, ಅರ್ತಿಕಾಱ, ಅರ್ತಿಗಾಱ, ಅರ್ಥಿಕಾಱ, ಅಳ್ತಿಕಾಱ (ನಾ). ೧. ಪ್ರೀತಿಸುವವನು: ಮನೆಗೆಲ್ಲಂ ಪಗೆಯಾದೆಂ . . . ನಿನ್ನ ಕತದಿಂ ಕೇಳೞ್ತಿಕಾಱಂಗೆ ಕೂರ್ತೆನಗಿಲ್ಲಿಂ ಪಿರಿದಕ್ಕುಮೆಂದು ಸುರಿದಳ್ ಭೋರೆಂದು ಬಾಷ್ಪಾಂಬುವಂ (ಲೀಲಾವ. ೨–೬೧). **ಅರ್ತಿಕಾಱ** : ೨. ಆಸೆಗಾರ; ಬಯಕೆಯುಳ್ಳವನು: ಇಂತೀ ಅರ್ತಿಕಾಱರಿಗೆ ಸಿಕ್ಕುವನೆ ನಿಜವಸ್ತು (ಮೋಳಿಮಾ. ೧೪–೫೩); ಒಂದು ತಗರನು ಕಟ್ಟಿಕೊಂಡು ಮುಕುಂದನಯ್ಯನ ಕಂಡೆಱಗಿ ಜೀಯೆಂದು ತಗರನು ಬಿಡಿಸಿ ನೀವಿದಕರ್ತಿಕಾಱರಲೆ (ಸಾಳ್ವಭಾ. ೧೮–೩೯); ನೆರೆದುದಾನಗರಿಯೊಳುಳ್ಳರ್ತಿ[ಪಾಠಾಂ. ಳ್ತಿ]ಕಾಱರ ನೆರವಿಯು ಚೆಂಡಾಟದೆಡೆಗೆ (ಕುರಾಸಾಂ. ೩೧–೨೮). **ಅರ್ಥಿಕಾಱ** : ೨. ಏಸನುಸುರಿದೊಡರ್ಥಿಕಾಱನು ದೋಷಮಂ ತಾನಱಿಯನು (ಬಸಪು. ೪೦–೪೭); ಮಿಂಡುದುಂಡಿಗಳರ್ಥಿಕಾಱರು ಗಂಡಿಗರು ಗರ್ವಿತರು ರಣದುದ್ದಂಡರು (ತೊರರಾ. ೫–೫–೧೪).

ಅರ್ತಿಗಾೞಿ: 'ಅರ್ತಿಗಾೞಿಕೆ' ಪರಾ. ಅಳ್ತಿಕಾೞಿ : ೧. ಅಳ್ತಿಕಾೞಿಂ ಲೆಕ್ಕಿಸುವನೇ ದೋಷವೆಂಬವೊಲಕ್ಕರಲ್ಲದೆ ಬಸವನಂ ಕೀರ್ತಿಸುವಡೆನ್ನಳವೆ (ಬಸಪು. ೧-೩೪) ; ಮೇಳದವರು ಮನ್ನೆಯರು ಮೇಲಾಳು ಕಾಲಾಳಳ್ತಿಕಾೞಿರೆಯ್ತಂದು ಆಳುತನದ ಬಲು ಮಚ್ಚರದಿಂದಾಟಕಾಳಾಗಿ ನಿಂದರತ್ತಿತ್ತ (ಕುರಾಸಾಂ. ೩೧-೬೧). [ಅಱ್ತಿ + -ಕಾೞಿ]

**ಅಱ್ತಿಗ**, ಅರ್ತಿಗ (ನಾ). ೧. ಪ್ರೀತಿಯುಳ್ಳವನು ; ಬಯಸುವವನು. ೨. ಆಸಕ್ತ : ಶೌರ್ಯಾಲಂಬಂ ರಾಮಂ ರಣಕ್ಕಱ್ತಿಗನೆನೆ ಬೆಸನಂ ತಂದೆಯಂ ಬೇಡಿಕೊಂಡಂ (ಪಂರಾಮಾ. ೪-೫೦) ; ದಯಾಪರನಪ್ಪುದೊಳ್ಪಿನಭ್ಯಾಸದೊಳಿರ್ಪುದೊಳ್ತಪದೊಳಱ್ತಿಗನಪ್ಪುದು (ಜೀವಸಂ. ೫೧-೨೬). **ಅರ್ತಿಗ** : ೧. ಮನುಮುನಿಮಾರ್ಗನೇಮ ಜಿನಪೂಜೆಯೊಳರ್ತಿಗನೆಂದು ದಾನಿಯೆಂದು . . . ಬಣ್ಣಿಸುಗುಂ . . . ರಾಜನಂ (ಎಇ. XVI, ೬೧-೩೮ ; 1081) ; ಶೃಂಗಾರಕರ್ತಿಗನಪ್ಪ ಬಡವನಂತೆ ಚಿಂತಿಸಿ ಕೆಡದೆ (ಧರ್ಮಾಮೃ. ೧೪-೮೯) ; ಅರುಹನಾಗಮದೊಳರ್ತಿಗನಾತ್ಮಕಲೆಯೊಳು ಸರಸನಾಗಿರಬೇಕು ನೃಪತಿ (ಭರಚ. ೨-೧೩). [ಅಱ್ತಿ + -ಗ$_2$]

**ಅಱ್ತಿಗುಂದು**, ಅರ್ತಿಗುಂದು (ಕ್ರಿ). ಆಸಕ್ತಿಗುಂದು : ಪಂಕೇರುಹರಾಜಿ ಕಂದೆ ಪೊಣರ್ವಕ್ಕಿಯ ಕಣ್ಬೊಣ[ರಱ್ತಿ]ಗುಂದೆ . . . ಕಣ್ಗೆಸೆದುದುಜ್ವಲದಿಕ್ಪ್ರಕರಂ ಸುಧಾಕರಂ (ಸೂಕ್ತಿಸು. ೮-೨೯೫). **ಅರ್ತಿಗುಂದು**: ೨. ಶ್ರದ್ಧೆಗೆಡು; ಉತ್ಸಾಹಕುಗ್ಗು ; ಪ್ರೀತಿ ಕಡಮೆಯಾಗು : ತಪದೊಳರ್ತಿಗುಂದದಿರಿನಿಸುಂ (ಧರ್ಮಾಮೃ. ೫-೧೫೪). [ಅಱ್ತಿ$_1$+ಕುಂದು$_1$]

**ಅಱ್ತಿಗೆ**, ಅತ್ತಿಗೆ$_2$ (ನಾ). ೧. ಪ್ರೀತಿಯುಳ್ಳವಳು : ಗುರುಜನರಲ್ಲಿ ಮಾಡಧಿಕಭಕ್ತಿಯನರ್ಚಿಸು ದೇವರಂ ಮುನೀಶ್ವರಪರಿಚರ್ಯೆಯೊಳ್ ಪಿರಿದುಮಱ್ತಿಗೆ[ಪಾಠಾಂ. ಮಾದೃತೆ, ಮರ್ತಿತೆ]ಯಾಗು (ಕಾದಂಪೂ. ೩೪೮) ; ಜಿನಧರ್ಮಾತಿಶಯಮುಮಂ ಜಿನದತ್ತಾದೇವಿ ಕೇಳಲಱ್ತಿಗೆಯಾದಳ್ (ಅರ್ಧನೇ. ೨-೨೬). **ಅತ್ತಿಗೆ$_2$**: ೨. ಪ್ರೀತಿಪಾತ್ರಳು ; ನಲ್ಲೆ: ಪುರುಷವ್ರತಮಿಾಗಳಬ್ಬೆಯೆಂದತ್ತಿಗೆಯೆಂಬ ಮಾತನೆನಗೇನೆನಲಕ್ಕುಮೊ ಪಂಕಜಾನನೇ (ಪಂಪಭಾ. ೧-೭೫). [ಅಱ್ತಿ + -ಗೆ]

**ಅಱ್ತಿವಡು**, ಅರ್ತಿಬಡು, ಅರ್ತಿವಡು, ಅರ್ಥಿಬಡು ; ಅರ್ಥಿವಡು, ಅಳ್ತಿವಡು (ಕ್ರಿ). ೧. ಪ್ರೀತಿಸು ; ಆಸೆಪಡು ; ಬಯಸು : ಮುಕ್ತಾಫಲಂಗಳುಮನಱ್ತಿವಟ್ಟು ನೋಡುತ್ತುಂ (ಆದಿಪು. ೧೨-೮೦ ವ) ; ಆದಱಿ ಚೆಲ್ವಂ ಕಂಡಾಕೆಯಱ್ತಿವಟ್ಟುದನಱಿದು (ಚಾವುಂಪು. ೫೫-೨೨). ೨. ಸಂತೋಷಿಸು : ತನ್ನೊಳಿರ್ಪ ನಿತ್ಯಮುಕ್ತರ ನೆಲೆವಾಱ್ತಿಯೊಳಱ್ತಿವಡುತ್ತುಂ (ಚಕವಿ. ೧-೫೯ ವ). **ಅರ್ತಿಬಡು** : ೧. ಧೀರ ಚೋರವಿಟಾದಿ ಕಥೆಗಳು ಸಾರಕಥೆಗಳೆ ಪೇಳ್ದ ಕವಿಯಘಭೀರುವೇಯದನರ್ತಿಬಡುವರ ಬಗೆಗೆ ಬೆಱಗಾದೆ (ಸಾಳ್ವಭಾ. ೧-೩೭). **ಅರ್ತಿವಡು** : ೧. ಎಳಲತೆಯಿನೆಬಿದಿ ಲೋಕಮನಳಲಿಸಲೆಂದರ್ತಿವಟ್ಟು ವನಿತಾರೂಪಂ ಗಳಿಯಿಸಿದನೞಿದೆಂ (ಧರ್ಮಾಮೃ. ೩-೪೦) ; ಆತ್ಮತತ್ತ್ವವ ಮುಟ್ಟಿ ಬರೆದಿದ್ದ ಲಿಪಿಗಳನಾತ್ಮನೊಳರ್ತಿವಟ್ಟೆರಿಸು (ಭರಚ. ೩೬-೮೬). **ಅರ್ಥಿಬಡು** : ೧. ವನಜನಾಭನು ಬಂದನಾದೊಡೆ ತನುಜನನು ತಾನೆತ್ತಿ ತಂದಾತನಿಗೆ ಪೊಡಮಡಿಸುವೆನೆನುತ ಮೊದಲರ್ಥಿಬಡುತಿಹೆನು (ತಿಮ್ಮಅ. ೪-೪-೫೮). **ಅರ್ಥಿವಡು** : ೧. ಪುರಶ್ರೀಯನರ್ಥಿವಟ್ಟು ನೋಡಿ ಮೆಚ್ಚುತುಂ ಬಂದು (ಆದಿಪು. ೧೪-೪೩ ವ). **ಅಳ್ತಿವಡು** : ೧. ಜನಮೊಲ್ದಾಲಿಪುದಱ್ತಿವಟ್ಟು (ಹಸ್ತಿಮಾ. ೧-೧೯). ೨. ಎಣ್ದೆಸೆಯ ಮೆಟ್ಟಿದುದು ಸಕಲ ವಾದ್ಯಂಗಳ ನಿನದಮಳ್ತಿವಟ್ಟರಚ್ಚರಿಯರು (ಚೆಬಪು. ೬-೫೨). [ಅಱ್ತಿ + ಪಡು$_1$]

**ಅಱ್ತಿವರ್** (ಕ್ರಿ). ಪ್ರಿಯವಾದ ಸಂದೇಶ ಬರು : ನಲ್ಲರ ದೆಸೆಯಿಂದ ಮಱ್ತಿ [ಪಾಠಾಂ. ರ್ಥಿ] ವರೆ ಕೋಗಿಲೆಯಕ್ಕೆಲರಕ್ಕೆ . . . ಬಂಧೊಡ ಮೊಱಲ್ದೆದೆಯಾಱುವರ್ (ಪಂಪಭಾ. ೪-೧೦೧). [ಅಱ್ತಿ + ಬರ್]

**ಅಱ್ತಿಕೆಱೆ** (ನಾ). ಒಂದು ಕೆರೆಯ ಹೆಸರು : ಶ್ರೀದೇಕಬ್ಬೆ ಮಹಾದೇವರ್ಗೆ ಬಿಟ್ಟ ಪೂಂಬೊಲಂ. . . ನಿರ್ಮಾಣಮಱ್ತಿಕೆಱೆಯ ತೆಂಕಣಕಡೆಯಲ್ (ಎಕ. IV, ಹೆಗ್ಗಡ. ೧೮-೩೩ ; 1087). [ಅಱ್ತಿ$_0$ + ಕೆಱೆ]

**ಅಱ್ದು**, ಅಜ್ಜು$_1$, ಅದ್ದು, ಅರ್ದು (ಕ್ರಿ). ೧. ಮುಳುಗಿಸು; ನೆನೆಯಿಸು: "ಅಱ್ದು- ಜಲನಿಮಗ್ನೇ"(ಶಮಧಾ) ; ಗಂಗಾದೇವಿಯ ಮಡುವಿನೊಳಱ್ದಿದರಾವರಿಸದೆ ತಮ್ಮ ಕುಲಮನಡಿಗಱ್ದುವವೋಲ್ (ಪಂಪಭಾ. ೨-೩೨) ; ನೂತ್ನಪ್ರವಾಳಲತಾಸಾರದೊಳಱ್ದಂತೆಸೆದುದಾ ಬಿಂಬಾಧರಂ ಕನ್ನೆಯಾ (ದಶಕು. ೧೨-೧೧೭). **ಅಜ್ಜು$_1$** : ೧. ಆಕಾಶವೆಂಬ ಅಕ್ಕಸಾಲೆಯು ಸೂರ್ಯಬಿಂಬವೆಂಬ ಚಿನ್ನದ ಗಟ್ಟಿಯಂ ಸಂಜೆಕೆಂಪೆನಿಸುವ ಬೆಂಕಿಯೊಳ್ ಕಾಸಿ ಸಮುದ್ರದ ನೀರಿನೊಳ್ ಅಜ್ಜಲು (ಸೌಗಂಧಿ. ೧೮೬-೧೦). **ಅದ್ದು** : ೧. ಸೀರೆಯನೆಣ್ಣೆಯೊಳದ್ದಿ ಪಾದದಿಂ ತಲೆವರಂ ಸುತ್ತಿ ಕಿಚ್ಚಂ ತಗುಳ್ಚುವುದುಂ (ಧರ್ಮಾಮೃ. ೧೪-೧೨೯) ; ಕಪಿಲಸಿದ್ಧ ಮಲ್ಲಿನಾಥಯ್ಯ ಹಾಲಲದ್ದು ನೀರಲದ್ದು ನೀನೆ ಗತಿಮತಿ (ಸಿದ್ಧವ. ೩೫-೧೯೬) ; ನೀರನು ಬಿಟ್ಟಿರಲಪ್ಪುದೆ ಮತ್ಸ್ಯಾವತಾರ ನೀನೆಂದು ನೀಱೆಯರು ರಾರಾಜಿಸುತಿಪ್ಪ ಕುಂಕುಮ ಜಲದೊಳು ನಾರಾಯಣನನದ್ದಿದರು (ಮೋಹತ. ೧೪-೫೪). ೨. ಕೆಡಿಸು; ಹಾಳುಮಾಡು: ಅಸುರರಿಪುವಿನ ಮಾತ ನೀ ಮನ್ನಿಸದೆ ಕೌರವ ಕುಲವನದ್ದಿದೆ ನುಸಿಗಳಿವದಿರು ಮುನಿದು ಪಾರ್ಥನನೇನಮಾಡುವರು (ಕುವ್ಯಾಭೀ. ೧-೧೩). **ಅರ್ದು** : ೧. ಕುಂಕುಮದೊಳರ್ದಿದ ಬಾಳೆಗಳನ್ನವಾಗಿ (ಆದಿಪು ೧೨-೨೫) ; ದುಶ್ಚರಿತಂಗಾನತೆಯಾಗಿ ನಮ್ಮ ಕುಲಮಂ ನೀಂ ನೀರೊಳಿಂತರ್ದುವೋ (ಸುಕುಮಾ. ೬-೪೭).

ಅಱ್ದಿದಂ = ೧. ಸೊಪ್ಪಾದವನು. ೨. ಕೆಟ್ಟುಹೋದವನು ; ಸತ್ತುಹೋದವನು:"ಅಱ್ದಿದನೆಂದು ಸತ್ತನುಂ ಸೊಪ್ಪಾದನುಮಕ್ಕುಂ" (ಶಮದ. ನ. ೩೩ ವೃತ್ತಿ) ; "ಅಱ್ದಿದಂ ಕೆಟ್ಟನೊಳುಂ" (ಕರ್ಣಾನಿ. ೭೬).

[ಅಱ್ + -ದು. / **ತಮಿ. ಮಲ.** ಅಱುತ್ತು; **ತುಳು.** ಅದ್ರ್=ತೊಳೆ, ಚೆಲುವೆಮಾಡು ; **ತೆಲು.** ಅದ್ದು]

**ಅಱ್ಕು$_1$** 'ಅಣ್ಕು$_1$' ನೋ.

**ಅಱ್ಕು$_2$** 'ಆಳ್ಕು' ನೋ.

**ಅಱ್ವು$_1$**, ಅರ್ವು$_1$, ಅಳ್ವು (ಕ್ರಿ). ೧. ಸುಡು ; ದಹಿಸು : ಪಾವಕನಱ್ವು ಖಾಂಡವಮನುಂಡಪನರ್ಜುನನೂಡಿದಪ್ಪಂ (ಪಂಪಭಾ. ೫-೭೮) ; ಸೆಲೆಯ ಮೇಲೆ ಸೂರ್ಯಾಂಶುಗಳಱ್ವುತ್ತುಮಿರೆ ನಿಯಮ ನಿಶ್ಚಲಚಿತ್ತಂ ಬೇಸಗೆಯೊಳಂದು ಕಲ್ನೆಲೆ ನಿಂದಂ (ಅಜಿಪು. ೧೨-೪) ; ಬಡಬಾನಳನಱ್ವಿ ಕಾಯ್ವುದೋ (ಸೂಕ್ತಿಸು. ೨-೧೧). ೨. ವ್ಯಾಪಿಸು ; ಹರಡು : "ಅಱ್ವು —ದಹನಾತಿಕ್ರಮಣೇ (ಮಿತಿಮಿಾರಿ ಉರಿಯು)" (ಶಮಧಾ) ; ಆಗಳಾಗಡೆ ಪಸಿವಱ್ವ ನೀಳ್ದ ಪೊಗೆಯುಂ ಕಿಡಿಯುಂ ಬಿಸುಸುಯ್ಯ ಗಾಳಿಯೊಳ್ ತೊಡರ್ದೊಡನುಣ್ಮೆ (ಆದಿಪು. ೨-೪೦) ; ಕವಿವ ಶರಾಳಿಯಂ ನಿಜಶರಾಳಿಗಳಱ್ವಿ ತೆರಳ್ದಿ ತೂಳ್ದಿ ಮಾರ್ಕವಿದು ಪಳಂಚಿ ಪಾಯ್ದೊರಸೆ (ಪಂಪಭಾ. ೧೨-೧೯೦). **ಅರ್ವು$_1$** : 'ಅರ್ವಿಸು' ಪರಾ. **ಅಳ್ವು** : ೧. ಇನ್ದೆತ್ತಲ್ ಪರಿಯಿತ್ತು ಸುಟ್ಟನೊದಗಿಲ್ಲೆಂದಳ್ವಿ ಕೋಪಾಗ್ನಿ ಕಾಯ್ದಿಂದಾರಂ ಗಡ ತೂಂತಿದಂ ಜವನ ಬಾಯೊಳ್ (ಎಇ. XVI, ೩೫೮-೩೯ ; 1081) ; ಏನಳ್ವಿತೋ ಸೇವುಣಬಳವನಮುಂ ವೀರಬಲ್ಲಾಳ ಕೋಪೋದ್ಧುರದಾವೋಗ್ರಾನಳಂ (ಎಕ. VI, ತರೀಕೆ. ೪೨-೨೬ ; 1205).

[ಅಱ್ + -ವು ? . / **ತಮಿ.** ಅೞಲ್ ; **ಮಲ.** ಅೞಲು ; **ತುಳು.** ಅಲ್ರ್ ; **ತೆಲು.** ಅಡರು]

**ಅಱ್ವು$_2$** (ನಾ). ಬಯಲು ; ಕಾಡು (?) : ಬೆಟ್ಟದ ಕೆಱಗಣ ಪೇರಱ್ವಿನ ತೆಂಕಣ (ಎಇ. X, ೬೬-೫೭ ; 892).

[?. / **ತಮಿ.** ಅಱುವಂ = ಹರಹು, ಕಾಡು]

**ಆ**$_1$ (ನಾ). ಕನ್ನಡ ವರ್ಣಮಾಲೆಯ ಎರಡನೆಯ ವರ್ಣ ; ಆಕಾರ : ಅಆ . . . ಒ ಔ—ಎಂಬೀ ಪದಿನಾಲ್ಕುಂ ಸ್ವರಂಗಳ್ (ಶಮುದ. ೬ ಪ್ರಯೋ).

**ಆ**$_2$ 'ಅದು$_1$' ನೋ.

**ಆ**$_3$ 'ಆನ್$_2$' ನೋ.

**-ಆ**$_4$ '-ಅ$_2$' ನೋ.

**ಆ**$_5$ (ಅ). ಆಶ್ಚರ್ಯ, ಪೂರ್ವಸ್ಮರಣೆ, ಪ್ರಸಿದ್ಧಿ, ಸಂತೋಷ, ಗಡಾರ್ಥ ಇತ್ಯಾದಿ ಅರ್ಥಗಳನ್ನು ವ್ಯಕ್ತಪಡಿಸುವ ಅವ್ಯಯ : (i) ಆಶ್ಚರ್ಯಕ್ಕೆ : ನಿನ್ನಯ ಪರಿಯನಱಿದೆನಲಾಯೆನುತ (ಬಸಪು. ೫೯–೧೨); ಬಲ್ಸೆಡಕುಗಾರ್ತಿ ಕಣಾ (ರಾಮಾಶ್ವ. ೧೧೬–೨೬). (ii) ಪೂರ್ವಸ್ಮರಣೆಗೆ : ತತ್ತಿಮಿಂಗಳನುಮನಾ ತಿಮಿಂಗಿಳಗಿಳಂಗಳೆ ನುಂಗಿದುವೊಂದು ತಾಣದೊಳ್ (ಕಾವ್ಯಸಾ. ೬೬ ಶೂದ್ರಕ) ; ಆ ಪ್ರಸ್ತಾವದೊಳ್ (ಆದಿಪು. ೨–೪೦ ವ) ; ಇದು ಲಾಕ್ಷಾಗೇಹದಾಹಕ್ಕಿದು ವಿಷಮ ವಿಷಾನ್ನಕ್ಕಿದಾ ನಾಡ ಜೂದಿಂಗೆ (ಗದಾಯು. ೮–೧೯) ; ಜಗತ್ಪ್ರಪಂಚವ ಮಾಡಿ ಆ ಜಗದಲ್ಲಿ ಜೀವರೂಪಿಂದ ಬಳಿಸಂದನೆಂದು ಹೇಳುವ ಶ್ರುತಿಯಂತಿರಲಿ (ಆದವ. ೧೦). (iii) ಪ್ರಸಿದ್ಧಿಗೆ : ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್ (ಕವಿರಾ. ೧–೩೬) ; ಆ ಮೈಸೂರನು ಬಳಸಿದುದ್ಯಾನವು (ಕಂನವಿ. ೨–೩೯). (iv) ಸಂತೋಷಕ್ಕೆ : ಆಯೆನುತ ಬೊಬ್ಬಿರಿದು ವಿಪ್ರನಿಕಾಯ ಕುಣಿದುದು (ಕುವ್ಯಾಅ. ೧೫–೩೦). (v) ಗಡಾರ್ಥಕ್ಕೆ : ಪಾಲಾ ಅಮರ್ದಾ ಇನಿದು ಗಡಾ ; ಆನಾ ಇಮ್ಮಡಿಯಾ ಎರಟ್ಟುದುರೆಯಾ ಇರ್ಬರ್ಗೆರಟ್ಟಿರ್ಕ್ಕುದುವಾ (ಶಮುದ. ೫೭ ಪ್ರಯೋ).

**-ಆ**$_6$ '-ಅ$_3$' ನೋ.

**-ಆ**$_7$ '-ಅ$_4$' ನೋ.

**ಆ**$_8$ (ಅ). ಅದೋ ಅಗೋ ಎಂಬ ಅರ್ಥಗಳಲ್ಲಿ ಬರುವ ನಿರ್ದೇಶಕವಾದ ಅವ್ಯಯ : ಪಿಡಿದಪನೀಗಳಾ ಪಿಡಿಯಲೆಯ್ದಿದನಾ ಪಿಡಿದಪ್ಪನೀಗಳಾ ಪಿಡಿದನೆ ಕಿನ್ನರದ್ವಯಮನೆಂಬಿನೆಗಂ ಬೞಿಸಂದು (ಕಾದಂಪೂ. ೬೨೦) ; ಭಯದಿಂದೀ ಬಂದನಾ ಬಂದನೆಂದುಬ್ಬಿ (ಎಕ. VI, ಕಡೂರು. ೧೬–೩೦ ; 1171) ; ಆ ತೋರ್ಪುದಾ ತೋರ್ಪುದೆ ಬಾನೊಳ್ ಧ್ವಜಪಟಂ (ಶಮುದ. ೧೯೫ ಪ್ರಯೋ).

**ಆಂ** 'ಆನ್$_2$' ನೋ.

**ಆಂಕರ, ಹಂಕಾರ, ಹಾಂಕಾರ** (ನಾ). ಅಹಂಕಾರ ; ಗರ್ವ : ನಾಂ ಧನಾಢ್ಯನೆಂದೊಳ್ಪಿದನೆಂಬಾಂಕರಮಂ ತಾಳ್ದಿರ್ಪ೦ (ಪರಮಾ. ೫–೧೪). **ಹಂಕಾರ :** ಹಮ್ಮು ಹಂಕಾರ ಎಲ್ಲ ಬಲವಾಗಿ ಬೇರೂರಿರುವ ಹೆಣ್ಣೆ (ಚಿಂಗೂಲಿ. ೧೯೩) ; ಹಂಕಾರಕ್ಕೆ ಉದಾಸೀನವೇ ಮದ್ದು (ಗಾದೆ). **ಹಾಂಕಾರ :** ಪ್ರೀತಿಯಿಂ ಹಾಂಕಾರಶಿಖಿಯನು ಆತಗೆಯು ಹಾಕಿದಳು (ಜ್ಞಾನಸಿಂ. ೨೮–೧೩) ; ನಾವು ನಾಲ್ಕು ದಿನ ಪಟ್ಟಾಗಿ ಮಲಗಿದರೆ ಗಂಡಸರ ಹಾಂಕಾರ ಮುರಿಯುತ್ತೆ (ಶ್ರೀಕಥೆ. ೧೬೦).

[< ಸಂ. ಅಹಂಕಾರ]

**ಆಂಕರು** (ನಾ). ಅತಿಯಾಸೆ; ದುರಾಸೆ : ಜನಗಳು ಬಾಯಲ್ಲಿ ದುಡ್ಡಿನ ಆಂಕರು ಇಲ್ಲ ಎನ್ನುತ್ತಿದ್ದಾರೆ (ಜಾರುದಾ. ೨೭). [< ಆಟ್ಕುಜು ?]

**ಆಂಕಿಜ** (ನಾ). ಒಂದು ಲಾಂಛನ ; ಅಂಕುಶ (?) : ಆನ್ಕಿಜಸುಲದಿ ಕಂಬುಕಂಟಿ ಕುಲಿಶಾವನ ಶಿತ್ರಾ ನಂದಿಕೋಲು ಸಂಗಮೇಶ್ವರನ ನುಡಿಗೆ (ಎಕ. XVI, ಗುಬ್ಬಿ. ೭೪–೨೦ ; 1672). [?]

**ಆಂಕೆ, ಆಕ್ಕೆ**$_2$ (ನಾ). ೧. ಎದುರಿಸುವಿಕೆ ; ಪ್ರತಿಭಟನೆ ; ಅಡ್ಡಲಾಗಿ ನಿಲ್ಲುವುದು ; ಅಡ್ಡಿ ; ತಡೆ : ಮೆಯ್ಗೆ ಮೆಯ್ಯಾಂಕೆಯಮೆಯ್ದು ಶಂಖಿಯನು (ಕವಿಚ. I, ೩೮೫ ಮಹಾನೇ) ; ಆಂಕೆಯ ಗಂಡನಾವನುಜದೀ ನಡೆತಂದನೆ (ಪುಷ್ಪಪು. ೮–೩೦). ೨. ಊರೆ; ಆಸರೆ ; ಒತ್ತಾಸೆ : ಚೋಳನ ನೆತ್ತಿಯೊಳ್ಮೆಱೆದ ಕೂರಸಿಯಾಯುಗವಾಂಕೆಯಾಗೆ (ಕಇ. IV, ೧–೨೦ ; 1204) ; ನೂಂಕುವವುಂಕುವ . . . ಕೀಳ್ವೞಿಗಳಾಂಕೆಯೆನಲ್ ಭರದಿ ಲೌಡಿಕಾಱರ್ ಪೊಯ್ದರ್ (ಮಹಾನೇ. ೧೨–೩೮) ; ಇಱಿವಾಳ್ಗಳಾಂಕೆಯೊಳ್ ಗಡಣಿಸಿ ಕಾದುತಿರ್ದುದು ಮಹೇಂದ್ರಪತಾಕಿನಿ (ಕಾವ್ಯಸಾ. ೪೭೬) ; ಹೊಗಲಿ ಸಮರಕೆ ಸ್ವಾಮಿದ್ರೋಹರು ತೆಗೆಯಬೇಡೋ ಬೆನ್ನಲಾಂಕೆಗೆ [ಪಾಠಾಂ. ನಾಂಕೆಗೆ, ಲೈದನೆ] (ಕುವ್ಯಾಶ. ೭–೨೬ ; ಸಾಳ್ವಭಾ. ೧೨–೬೯ ; ನಾಗಕು. ೧೨–೭೩; ಕುರಾಸಾಂ. ೧–೭ ; ರಾಜಶೇ. ೭–೯೨ ವ ; ರಾಮಾಶ್ವ. ೧೦೮–೧೧ ನೋ). **ಆಕ್ಕೆ**$_2$ **:** ೧. ನೂಕಿದರು ಮುಂಗುಡಿಯವರು ಬನದಾಕೆಯಲಿ ಹೊಯ್ದರು (ಕುವ್ಯಾಅ. ಓರಿಇ. ೨೦–೪).

[ಆನ್$_1$ + -ಕೆ$_1$]

**ಆಂಕೆಗಂಭ** (ನಾ). ಊರೆಯಾಗಿ ಕೊಟ್ಟ ಕಂಬ ; ಆಸರೆಯ ಕಂಬ : ಸುರಲೋಕ ಪಳತಾಗಿ ಸಡಿಲ್ದೊಡೆ ತಾಳ್ಗುಮೆ ನರಲೋಕಮೆಂದು ಜೋಕೆಯೊಳು ಸರಸಿಜಸಂಭವ ಕೊಟ್ಟಾಂಕೆಗಂಭದೊಂದಿರವಾದುದಾ ಮಹಾಮೇರು (ನಾಗಕು. ೨–೧೨) ; ಇಳೆಗೆ ಭರದಿ ಬಿದ್ದಪುದಿದೆಂದಿಟ್ಟಾಂಕೆಗಂಭದೊಂದಿರವಾದುದಾ ಹೇಮಾದ್ರಿ (ರಾಮವಿ. ೨–೧೩).

[ಆಂಕೆ + ಕಂಭ]

**ಆಂಕೆಗುಡು** 'ಆಂಕೆಗೊಡು' ನೋ.

**ಆಂಕೆಗೆಯ್** (ಕ್ರಿ). ೧. ಊರೆಯಾಗಿ ಕೊಡು. ೨. ನಮಸ್ಕರಿಸು : ಆ ಪಾವನಶಕ್ತಿಯಾವನಡಿಗಾತ್ಮ ಶಿರಸ್ಕಮನಾಂಕೆಗೆಯ್ವಳಾ ದೇವನೊಳಾಂದಿಟಂ ಶಿವಶಿವಾ ಮುಳಿಸಿಂ ಸೆಣಸಲ್ಸಮರ್ಥನೆ (ಶಬಶಂ. ೪–೧೩೪).

[ಆಂಕೆ + ಗೆಯ್ (< ಕೆಯ್$_1$)]

**ಆಂಕೆಗೊಡು, ಆಂಕೆಗುಡು** (ಕ್ರಿ). ಊರೆ ಕೊಡು ; ಆಸರೆಯನ್ನು ಒದಗಿಸು : ಮೂಗಿಗೆ ತಾವರೆಯಾಂಕೆಗೊಟ್ಟೀಕೊಚ್ಚತಾಗಿ ನುಡಿವೆಯೆಂದರೊಡನೆ (ಭರಚ. ೪೨–೨೨). **ಆಂಕೆಗುಡು:** ಮೊಲೆವಿಣ್ಪಿಂ ಮುಱಿದಪುದೀ ಲಲನೆಯ ಬಡನಡುವಿದೆಂದು ಕುಸುಮಶರಂ ಕೈವಲದಾಂಕೆಗೊಟ್ಟ ನೀಲದ ಸಲಿಗೆಯಿದೆನೆ ರೋಮರಾಜಿ ರಂಜಿಸಿ ತೋರ್ಕುಂ (ಅರ್ಥನೇ. ೧–೭೪) ; ಪರಕಾಯ ಪ್ರವೇಶಂಗೆಯ್ವಂತೆ ಮನಕ್ಕೆ ಮನಮನಾಂಕೆಗೊಟ್ಟು (ಲೀಲಾವ. ೪–೭೨ ವ) ; ವಿಕಸಿತ ಪ್ರಶಸ್ತ ಹಸ್ತತಳಮಂ ಕಪೋಳಮೂಳಕ್ಕಾಂಕೆಗೊಟ್ಟು (ಬಾಧಪು. ೩–೧ ವ).

[ಆಂಕೆ + ಕೊಡು]

**ಆಂಕೆಗೊಳ್** (ಕ್ರಿ). ಎದುರಿಸು ; ಪ್ರತಿಭಟಿಸು : ಪರಿದುದು ಸುಪ್ರತೀಕಗಜಮೇಱಿದವಂ ಭಗದತ್ತನಾ ಮದದ್ವಿರದಮನಾಂಕೆಗೊಂಡು ಪೆಣೆವಂ ಪವನಾತ್ಮಜನೀಗಳಾಹವಂ ಪಿರಿದು (ಪಂಪಭಾ. ೧೧–೭೬) ; ನಿನಗಿಂದ್ರಂ ದೊರೆ ಸಂಗರಕ್ಕೆ ದೊರೆ ನೀನಿಂದ್ರಂಗೆ ಮತ್ತೊರ್ವರಾತನನೇನಾಂಕೆಗೊಳಲ್ ಸಮರ್ಥರೆ (ಪಂರಾಮಾ. ೧೦–೨೦೫) ; ಆ ನೆಗೞ್ದಿಂದ್ರನೆಕ್ಕತುಳದೊಳ್ ಧುರದೊಳ್ ಕಡಂಗಿನಿಂದಾನಲೊಡರ್ಚಲಾಂಕೆಗೊಳಲಾಱದೆ ಪೋಗಿ . . . ಮುರಾಂತಕಂಗಾನತನಾಗಿ ಪುಯ್ಯಲಿಡೆ (ಜಗವಿ. ೩–೨೦). [ಆಂಕೆ + ಕೊಳ್$_1$]

**ಅಂಕೆಮಾಡು** (ನಾ). ಎದುರಿಸು; ಪ್ರತಿಭಟಿಸು : ಎತ್ತಿದ ಕುದುರೆಯ ದಳಮುಂ ಸುತ್ತಿದ ಕಾಲಾಳನಾಂಕೆಮಾಡಿಱಿದೆಡೆಯೊಳ್ (ಎಕ. VIII, ಸಾಗರ. ೫೮–೧೬ ; 1143). [ಅಂಕೆ + ಮಾಡು$_1$]

**ಅಂಕೆಯಾಳ್** (ನಾ). ಪ್ರತಿಭಟಿಸುವ ಭಟ; ಎದುರಿಸುವ ಸೈನಿಕ : ಪೊಱಮಟ್ಟೆಱಿವಾಳ್ಗಮಾಂಕೆಯಾಳ್ ಗಡಣಿಸೆ (ಚಂದ್ರಪು. ೫–೧೦೬). [ಅಂಕೆ + ಆಳ್$_1$]

**ಅಂಗಿಕ** (ಗು). ೧. ಶರೀರಕ್ಕೆ ಸಂಬಂಧಿಸಿದ. (ನಾ). ೨. [ನಾಟ್ಯ] ಅಂಗಗಳ ಚಲನವಲನಗಳಿಂದ ತೋರಿಸುವ ಅಭಿನಯ; ನಾಲ್ಕು ಬಗೆಯ ಅಭಿನಯಗಳಲ್ಲಿ ಒಂದು : ಅಂಗೋಪಾಂಗಂಗಳೊಳೆಸೆವಾಂಗಿಕಮುಂ (ಆದಿಪು. ೯–೨೮) ; ಪ್ರಕಟಾಂಗಿಕ ವಾಚಿಕ ಸಾತ್ವಿಕಾಹಾರ್ಯಂಗಳೆಂಬ ನಾಲ್ಕಭಿನಯಂ (ಅಜಿಪು. ೫–೯) ; ಅಭಿನಯವು 'ಅಂಗಿಕ' (ಅಂಗ ಚಲನೆಗಳು) 'ವಾಚಿಕ' (ಮಾತಿಗೆ ಸಂಬಂಧಪಟ್ಟವು) 'ಆಹಾರ್ಯಕ' (ವೇಷಭೂಷಾದಿಗಳ ರಚನೆ) 'ಸಾತ್ವಿಕ' (ರೋಮಾಂಚಾದಿಗಳ ಪ್ರದರ್ಶನ) ಎಂದು ನಾಲ್ಕುವಿಧ (ಕೈಪಿಡಿ. ೨೦೫ ಅಡಿಟ). [ಸಂ.]

**ಅಂಗಿರ** (ನಾ). = ಅಂಗಿರಸ ೨ : ಅಬ್ಜಪ್ರಿಯಸೂನುಗಾಂಗಿರನುದಾಸೀನಂ (ಜಾತತಿ. ೨–೧೫) ; ಅಂಗಿರಸ – ಅಂಗಿರ (ಶಮದ. ೨೮೦ ಪ್ರಯೋ). [< ಸಂ. ಅಂಗಿರಸ]

**ಅಂಗಿರಸ** (ನಾ). ೧. ಅಂಗಿರಸ್ ವಂಶದವನು. ೨. ದೇವತೆಗಳ ಗುರುವಾದ ಬೃಹಸ್ಪತಿ : "ಅಂಗಿರಸನಮರಗುರು ವಾಕ್ಪತಿ ಗುರು ಬೃಹಸ್ಪತಿ" (ಮಂಗರಾ. ೧೧–೬). ೩. ಅರವತ್ತು ಸಂವತ್ಸರಗಳಲ್ಲಿ ಆರನೆಯದು. [ಸಂ.]

**ಅಂಗೀರಸ** (ನಾ). = ಅಂಗಿರಸ ೩ : ಮತ್ತಮಾ ವರುಷವೇ ಪ್ರಭವ ವಿಭವ ಶುಕ್ಲ ಪ್ರಮೋದೂತ ಪ್ರಜೋತ್ಪತ್ತಿ ಅಂಗೀರಸ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೧). [ಸಂ.]

**ಅಂಗುಲಿ** (ನಾ). ಹಸುವನ್ನು ಕೊಲ್ಲುವವನು : ಮುನಿಗಳ್ ಅಂಗುಲಿಗೆಂತಂತು ಮುನಿದು ತಿರೆಯೊಳ್ ರಕ್ಕಸನಾಗಿ ಪುಟ್ಟೆಂದು ಬಯ್ದರ್ (ರಾಮಾಶ್ವ. ೧೩೬–೨೨). [ಆವು$_1$ + –ಕುಲಿ$_1$]

**ಅಂಗೊಳ** 'ಅಂಗೊಳಗು' ನೋ.

**ಅಂಗೊಳಗು, ಅಂಗೊಳ** (ನಾ). ಹಸುವಿನ ಕಾಲಿನ ಗೊರಸು : "ಅಂಗೊಳಗೆಂದು ಆವಿನ ಕೊಳಗು" (ಕಶಸಾ. ೭–೧೩೩) ; "ಆವಿನ ಕೊಳಗುವುದಾಂಗೊಳಗೆನಿಕುಂ" (ಕವಿಕಂ. ೮೭) ; ಜಲಧಿಯ ನೀರನದೊಂದಾಂಗೊಳಗಿನ ನೀರೆಂದು ಬಗೆದು (ಆದಿಪು. ೧೩–೪) ; ಆ ಜಳಧಿಯಾಂಗೊಳಗೆಂದೆನೆ ದಾಂಟ (ನೇಮಿಪು. ೧೧–೨೦) ; ಇನಿತೊಂದು ಮಾಚ್ಕೆಯಿಂ ಮಡಿದಾಂಗೊಳಗೆಂತಂತು ಪೋಚ್ಚು(ರಾಮಾಶ್ವ. ೧೧೪–೧೧). **ಅಂಗೊಳ**: ಅಂಗೊಳಗು = ಅಂಗೊಳಂ (ಶಮದ. ೧೭೬ ಪ್ರಯೋ). [ಆವು$_1$ + ಕೊಳಗು]

**ಅಂಗ್ರವಂಕೆ** (ನಾ). ಒಂದು ಸೀಮೆ (?) : ಕರಣೀಕರ ಆಠವಣೆಯ ಮಾಗಣೆ ಶಾನುಭೋಗರ ವರ್ತನೆಯಿಂದ ಗ ೨ ಅಂಗ್ರವಂಕ್ಕೆ ನಾಡೋಪಾದಿಯಲ್ಲಿ ಬಾಹ ಉಂಬಳಿಯ (ಮೈಆರಿ. ೧೯೩೪, ೨೭–೨೬ ; 1430). [?]

**ಅಂಗ್ಲ** (ಗು). ೧. ಇಂಗ್ಲಿಷರಿಗೆ ಸಂಬಂಧಿಸಿದ; ಇಂಗ್ಲೀಷರ : ಕುಮಾರಿಯು ಇನ್ನೂ ಅಂಗ್ಲತರುಣಿಯೊಡನೆ ಮಾತನಾಡುತ್ತ ಕುಳಿತಿದ್ದಳು (ಸಮಜೀ. ೫೮೪). (ನಾ). ೨. ಇಂಗ್ಲಿಷ್ ಜನಾಂಗದವನು : ಹುಚ್ಚು ಹಿಡಿದ ಆ ಅಂಗ್ಲನೊಬ್ಬನನ್ನು ನೀನು ನೋಡಿಲ್ಲವೆ (ಸಮಜೀ. ೫೭೭). [<– ಇಂ. Anglo]

**ಅಂಗ್ಲಭಾರತೀಯ** (ನಾ). "ಅಂಗ್ಲ–ಭಾರತೀಯ" ಎಂದರೆ ಯಾವನೊಬ್ಬ ಮನುಷ್ಯನ ತಂದೆಯಾಗಲಿ, ಪಿತೃಪರಂಪರೆಯ ಇತರ ಪೂರ್ವಜ ಗಂಡಸರಲ್ಲಿ ಯಾರೇ ಆಗಲಿ ಯೂರೋಪೀಯ ಸಂತತಿಯವನಾಗಿ ಅಥವಾ ಆಗಿದ್ದು, ಯಾವಾತನು ಭಾರತದ ರಾಜ್ಯಕ್ಷೇತ್ರದೊಳಗೆ ಅಧಿವಾಸಿಯಾಗಿರುತ್ತಾನೋ ಮತ್ತು ಅಲ್ಲಿ ಕೇವಲ ತಾತ್ಕಾಲಿಕವಾದ ಉದ್ದೇಶಗಳಿಗಾಗಿ ಮಾತ್ರ ನೆಲಸಿರದೆ ರೂಢಿಯಾಗಿ ನಿವಾಸಮಾಡುವ ತಾಯಿತಂದೆಗಳಿಂದ ಅಂಥ ರಾಜ್ಯಕ್ಷೇತ್ರದಲ್ಲಿ ಜನ್ಮಪಡೆದಿರುತ್ತಾನೋ ಅಥವಾ ಪಡೆದನೋ ಅಂಥ ಮನುಷ್ಯ ಎಂದು ಅರ್ಥ (ಭಾಧಾನ. ೨೧೬). [ಅಂಗ್ಲ + ಭಾರತೀಯ]

**ಅಂಗ್ಲೀಯ** (ಗು). ೧. = ಅಂಗ್ಲ ೧ : ಇದು . . . ಅಂಗ್ಲೀಯ ಭಾಷೆಯ Mind ಎಂಬ ಅರ್ಥದಲ್ಲಿ ಬಳಸಲಾಗಿದೆ (ಜೀವಾತ್ಮ. ೧೦೪). ೨. = ಅಂಗ್ಲ ೨ : ಒಬ್ಬ ಅಂಗ್ಲೀಯನು ರಸ್ತೆಯ ನಡುವೆ ನಿಂತಿದ್ದನು (ರೂಢಿ). [< ಅಂಗ್ಲ]

**ಅಂಡ** (ನಾ). ಶಿವಭಕ್ತ. 'ಇಹಃಪಗೆಯಾಂಡ' ಪರಾ. [< ಅಣ್ಡ]

**ಅಂಡನೂರ್** (ನಾ). ಒಂದು ಊರಿನ ಹೆಸರು: ಶ್ರೀಮನ್ನಾಳ್ವಭುವಾಂಡನೂರ ಚಿಮ್ಮಗಾವುಂಡ (ಎಕ. XI, ಚಿತ್ರದು. ೨೩–೨೩ ; 1205). [?]

**ಅಂಡಮ್ಮೆ** (ನಾ). ಒಬ್ಬಾಕೆಯ ಹೆಸರು : ಕುಂಡಿನಗೋತ್ರದ ಕಿಡುಕೆಯ ಅಟಿಹಿಯ ಮಣವಾಳರಿಗಂ ಅಣ್ಡಂಮೆಗಂ ಕುಲದೀಪಕನಾಗಿ ಪುಟ್ಟಿದ ಸುಪುತ್ರ ಪೆರಿಯಾಳುವ ಸೆಟ್ಟಿ (ಸೌಇಇ. IX–i, ೨೬೮–೩೪ ; 1162). [ಅಂಡ$_0$ + ಅಮ್ಮೆ]

**ಅಂಡಯ್ಯ** (ನಾ). ೧. ಒಬ್ಬಾತನ ಹೆಸರು : ಜವಯ್ಯನುವರ್ ಅಣ್ಡಯ್ಯನುವರ್ ಬಾಳುಗಚ್ಚು ಮೆಚ್ಚಿ ಬಾಧಾಪರಿಹಾರಂ (ಮೈಆರಿ. ೧೯೨೪, ೪೬–೨; ?). ೨. 'ಕಬ್ಬಿಗರ ಕಾವ' ಗ್ರಂಥವನ್ನು ರಚಿಸಿದ ಕವಿಯ ಹೆಸರು : ಲೆಕ್ಕಿಗರರಸನೊಗೆದನೆಸೆವಾಂಡಯ್ಯಂ (ಕಬ್ಬಿಕಾ. ೧೧). [ಅಂಡ$_0$ + ಅಯ್ಯ$_1$]

**ಅಂಡಾರಿ** (ನಾ). ೧. ಭಕ್ತ; ಶರಣ; ದೈವಭಕ್ತಿಯಲ್ಲಿ ಮುಳುಗಿದವನು : ಶೈವಭಕ್ತಿ ಪ್ರವಾಹವನ್ನು ಅಂಡಾರಿಗಳು ಹೆಚ್ಚಿಸಿದರು (ಭಕ್ತಿಬ. ೧೦೬). ೨. ಒಬ್ಬ ಶಿವಶರಣನ ಹೆಸರು : ತರುಣಿ ಪೇಳಿದ ದೋಷಮುಂ ಕೇಳ್ದಿರದು ಕಣ್ಣಂ ಕಳೆದುಹಾಯ್ಕಲು ಮರಳಿ ಪಡೆದನು ಗುರುತನಯ ನಾಂಡಾರಿಯಕ್ಷಿಗಳ (ಬಸಪು. ೪೫ ಸೂ). [<– ತಮಿ. ಅಂಡಾರ್]

**ಅಂಡಿ** (ನಾ). ಶೈವ ಸಂನ್ಯಾಸಿ; ಜಂಗಮ : ಕೊಡಲಿಯಿಂದೀಯಾಂಡಿ ತಲೆಯನರಿದಂ ದೇವ (ಇಱರ. ೪೨–೯) ; ಜೋಲ್ಲಡಿನಾಚಿ ಬರುತಲಾ ಹರನ ಪೂಜೆಯ ಪೂವನೊಂದ ವಾಸಿಸೆ ಕಂಡು ತೊಣೆಯಾಂಡಿ ಮೂಗರಿಯಲು (ಚಬಪು. ೫೫–೧೩). [ದೇ. ‖ ತಮಿ. ಮಲ. ಅಣ್ಡಿ]

**ಅಂಡು** 'ಅಡ್ಡು' ನೋ.

**ಅಂಡುಗಿ** (ನಾ). ಒಂದು ಊರಿನ ಹೆಸರು : ಸಿಮ್ಮನೂರ ಕಿಳ್ಳಮ್ಮನ್ ಅಣ್ಡುಗಿಯರಟ್ಟಿಗನ್ ಬೆದೆಮೆಟ್ಟಿಯಾಲಮ್ಮಾನ್ (ಎಕ. VIII, ಸೊರಬ. ೧೦–೧೩ ; 800). [?]

**ಅಂಡೆ** (ನಾ). ಒಂದು ಮನೆತನದ ಹೆಸರು : ಎಡೆಯಾಂಡೆಯ ಮಕ್ಕಳು ಮಾದೆಯಾಂಡೆ ಪಂಡಿತಾಂಡೆ (ಮೈಆರಿ. ೧೯೩೯, ೪೩–೧೬ ; 1189). [?]

**ಅಂತ** 'ಅನ್$_1$' ಪರಾ.

**ಅಂತರ** (ಗು). ಒಳಗಿನ; ನಡುವಣ; ಮಧ್ಯದ : "ಹೀಗೆ ಭಾಷಾ ವ್ಯತ್ಯಾಸ ಹೊಂದುವುದಕ್ಕೆ ಇರುವ ಮುಖ್ಯವಾದ ಕಾರಣಗಳನ್ನು ಅಂತರ ಬಾಹ್ಯ ಎಂದು ಎರಡು ಪಂಗಡಗಳಾಗಿ ವಿಭಾಗಿಸಬಹುದು" (ಕೈಪಿಡಿ. ೨೯೫). [ಸಂ.]

**ಅಂತರಗಭೀರ** (ನಾ). ಒಳಗಿನ ಆಳ; ಅಂತರಂಗದ ರಹಸ್ಯ : ಅಂತರಂಗವನ್ನೆಲ್ಲ ಬಿಚ್ಚಿತೋರಿಸನಾರು ಅಂತರಗಭೀರಗಳ ತಾನೆ ಕಂಡವರಾರ್ (ಮುಂಕುಕ. ೧೯೪). [ಅಂತರ + ಗಭೀರ]

**ಅಂತರದೀಕ್ಷೆ** (ನಾ). ಅಂತರಂಗಕ್ಕೆ ಸೇರಿದ ದೀಕ್ಷೆ,— ವ್ರತ: ವಿಷ್ಣುದೀಕ್ಷೆಯಲ್ಲಿ ಬಾಹ್ಯದೀಕ್ಷೆಯೆಂದೂ ಅಂತರದೀಕ್ಷೆಯೆಂದೂ ಎರಡು ಪ್ರಕಾರ (ಹಸಾರ. ೧೬–೧೮ ಟೀಕು). [ಅಂತರ + ದೀಕ್ಷೆ]

**ಅಂತರವಸ್ತು** (ನಾ). ಒಳಗಿನ ವಸ್ತು: ಚಾರ್ವಾಕರು ಬಾಹ್ಯವಸ್ತುಗಳನ್ನು ಮಾತ್ರ ಅಂಗೀಕರಿಸಿದರು. ಯೋಗಾಚಾರರು ಅಂತರವಸ್ತುಗಳನ್ನು ಮಾತ್ರ ಅಂಗೀಕರಿಸಿದರು (ಹಿಂದಸಾ. ೬೯). [ಅಂತರ + ವಸ್ತು]

**ಅಂತರಸುಖ** (ನಾ). ಒಳಗಿನ ಸುಖ; ಅಂತರಂಗದ ಸೌಖ್ಯ: "ಒಳ್ಳೆಯ ವರ್ತಮಾನವನ್ನು ಅಥವಾ ಮಾತನ್ನು ಕೇಳಿದರೆ . . . ಒಳ್ಳೆಯ ಕಾವ್ಯವನ್ನು ಓದಿದರೆ ತೊಡಕಾದ ಸಮಸ್ಯೆಯನ್ನು ಬಿಡಿಸಿದರೆ . . . ಉಂಟಾಗುವ ಸುಖವನ್ನು ಅಂತರಸುಖವೆಂದು ಹೇಳಬಹುದು" (ಕೈಪಿಡಿ. ೧೬೯). [ಅಂತರ + ಸುಖ]

**ಅಂತರಾಳಿಕ** (ನಾ). ಒಳಗಿನದು; ಅಂತರಂಗಕ್ಕೆ ಸೇರಿದ್ದು; ನಡುವಿನದು: ತನಗಂ[ಗಾಂ]ತರಾಳಿಕವಾದ ಮಾಯಾಕಾರ್ಯ ಘನತೆ ಮುಂ[ಮುಂ]ದಾದರ್ಕೈದುವವೇ (ಅರಸಾ. ೫–೨೨೫). [ಸಂ.]

**ಅಂತರಿಕ** (ಗು). ಒಳಗಿನ; ನಡುವಣ: ಅಂತರಿಕವಾದ ದೋಷದಿಂದ ಧರ್ಮವು ಶಿಥಿಲವಾಗುವ ಸಂದರ್ಭದಲ್ಲಿ ಬುದ್ಧ ಮತ್ತು ಮಹಾವೀರರು ಧರ್ಮರಕ್ಷಣೆ ಮಾಡಿವ್ವಾರೆ (ಬುಕ್ಸಾರ. ಪೀ. ೧೦೩); ಸಕಲ ಸೃಷ್ಟಿಯ ಹಿನ್ನೆಲೆಯಲ್ಲಿ ಒಂದು ಆಳವಾದ ಹಾಗೂ ಅಂತರಿಕವಾದ (Intrinsic) ಆನಂದ ಹಾಗೂ ಸೌಂದರ್ಯವಿದೆ (ನವ್ಯಕಾ. ೭೩). [ಸಂ.]

**ಅಂತರಿಕಕಾರಣ** (ನಾ). ಒಳಗಿನ ನಿಮಿತ್ತ; ತನ್ನೊಳಗೆ ತಾನೇ ಒದಗುವ ಕಾರಣ; ಪ್ರಕೃತಿಸಹಜವಾದ ಕಾರಣ: ಭಾಷೆ ದೇಶ ಕಾಲ ಭೇದದಿಂದ ವ್ಯತ್ಯಾಸವನ್ನು ಹೊಂದುವುದಕ್ಕೆ ಅಂತರಿಕಕಾರಣವೇ ಸಾಕಾಗಿರುತ್ತದೆ (ಕೈಪಿಡಿ. ೨೯೫). [ಅಂತರಿಕ + ಕಾರಣ]

**ಅಂತರಿಕಕ್ರಿಯೆ** (ನಾ). ಒಳಗಿನ ಕೆಲಸ; ಅಂತರಂಗದ ಕ್ರಿಯೆ: ಮಾನವನ ಅಂತರಿಕಕ್ರಿಯೆಗಳಿಂದ ಪ್ರಕೃತಿಯ ಕ್ರಿಯೆಗಳನ್ನು ವಿವರಿಸ ತಕ್ಕದ್ದೆಂದು ಅವರ ನಂಬಿಕೆ (ಬುಕ್ಸಾರ. ೨೯ ಪೀ). [ಅಂತರಿಕ + ಕ್ರಿಯೆ]

**ಅಂತರಿಕಚಾರಿತ್ರ** (ನಾ). ಒಳಗಿನ ನಡೆ; ಅಂತರಂಗದ ಶೀಲ: ಜೀವನದೊಳಗಿನ ವೈಷಮ್ಯದ ಕಾರಣಗಳನ್ನು ಇಲ್ಲದಂತೆ ಮಾಡುವುದು ಚಾರಿತ್ರದ ಕಾರ್ಯವಾಗಿದೆ . . . ಅಂತರಿಕಚಾರಿತ್ರದಲ್ಲಿ ಆತ್ಮಜ್ಞಾನ ಸಂಪಾದನೆ ಮಾಧ್ಯಸ್ಥಭಾವಗಳ ಸಿದ್ಧಿಗಳ ಸಮಾವೇಶವಾಗುತ್ತದೆ (ಜೈನಪ. ೧೧). [ಅಂತರಿಕ + ಚಾರಿತ್ರ]

**ಅಂತರಿಕತೆ** (ನಾ). ಮನಸ್ಸು ಒಳಮುಖವಾಗಿರುವುದು; ಅಂತರ್ಮುಖತೆ: ನರಹರಿಯ ಸಹವಾಸದಿಂದ ಅಂತರಿಕತೆಯೊಂದು ಅವನಲ್ಲಿ ಕಾಣಿಸಿಕೊಂಡಿತು (ಸಮಜೀ. ೯೭೭). [ಸಂ. ಅಂತರಿಕತಾ]

**ಅಂತರಿಕಪರೀಕ್ಷೆ** (ನಾ). ಒಳಗಡೆಯ ಪರೀಕ್ಷೆ: ಕಾರ್ಯದರ್ಶಿ ಕೂಡಲೇ ಅಂತರಿಕಪರೀಕ್ಷೆಯ ವರದಿಯನ್ನು ಓದಲಾರಂಭಿಸಿದನು (ಪುನರು. ೮೯). [ಅಂತರಿಕ + ಪರೀಕ್ಷೆ]

**ಅಂತರಿಕಪ್ರಮಾಣ** (ನಾ). ಒಳಗಿನ ಪ್ರಮಾಣ,—ಆಧಾರ: ಇನ್ನು ಅಂತರಿಕ ಪ್ರಮಾಣದ ಕಡೆಗೆ ನಾವು ಹೊರಳಬಹುದು (ಸಾಹಿಸ. ೧೫೨). [ಅಂತರಿಕ + ಪ್ರಮಾಣ]

**ಅಂತರಿಕವಿಭಜನೆ** (ನಾ). ಒಳವಿಭಾಗ: ಮುಖ್ಯವಿಷಯ ವಿಭಾಗಗಳಲ್ಲಿಯ ಅಂತರಿಕ ವಿಭಜನೆ ಅರ್ಥಪೂರ್ಣವಾಗಿದೆ (ಗ್ರಂಥಾಲ. ೨೩). [ಅಂತರಿಕ + ವಿಭಜನೆ]

**ಅಂತರಿಕಶಕ್ತಿ** (ನಾ). ಒಳಗಿನ ಶಕ್ತಿ,— ಬಲ: ಒಳಿತಿಗೆ ಬಾಹ್ಯ ಪ್ರದರ್ಶನಯೋಗ್ಯವಾದ ಶಕ್ತಿಯಿಲ್ಲವಾದರೂ ಅಂತರಿಕಶಕ್ತಿಯಿದೆ ಯೆಂದು ಸಮಾಧಾನಪಟ್ಟುಕೊಳ್ಳಬಹುದು (ಬದ್ಧಪ್ರ. XVII). [ಅಂತರಿಕ + ಶಕ್ತಿ]

**ಅಂತರ್ಯ** (ನಾ). ೧. ಅಂತರಂಗ; ಅಭಿಪ್ರಾಯ; ಒಳಗುಟ್ಟು; ರಹಸ್ಯ: ಬರಿದೆ ಬಯ್ವುದೆ ತಂದೆಯಂ ತಿಳಿಯದಾಂತರ್ಯಮಂ (ಶ್ರೀರಾಮಾ. ೮೧–೮೮). ೨. ಸಮೀಪ ಬಂಧುತ್ವ; ತುಂಬ ಬೇಕಾಗಿರುವುದು; ಅಂತರಂಗದ ಸ್ನೇಹ. ೩. ಮನಸ್ಸು: ಪುರುಷರಿ ತಮ್ಮನ್ನು ಗೆಲ್ಲಲೆಂದೆಲ್ಲರು ಬಯಸುವರಾಂತರ್ಯದೊಳಗೆ (ಇಂಚಾಪ. ೯೧–೪೧). [ಸಂ.]

**ಅಂತರ್ಯಕ** (ನಾ). ಪ್ರೀತಿ ವಿಶ್ವಾಸಗಳಿಂದ ಕೂಡಿರುವುದು; ಆತ್ಮೀಯತೆ: ನನಗೆ ನೀನು ನುಡಿಸುತ್ತಿದ್ದ ವೀಣೆಯ ನೆನಪು ಬರುತ್ತಿತ್ತು. ಕುಮುದಾ . . . ಅದರೊಡನೆ ನೀನು ಎಷ್ಟು ಸರಸವಾಗಿ, ಎಷ್ಟು ಅಂತರ್ಯಕವಾಗಿ ಮುಗುಳುನಗೆಯಿಂದ ಮಾತನಾಡುತ್ತಿದ್ದೆ (ಹೊಸಕ್ಷಿ. ೮). [ಸಂ.]

**ಅಂತರ್ಯದರ್ಶನ** (ನಾ). ಅಂತರಂಗವನ್ನು ಕಾಣುವುದು: ಅದರ ಅದೇ ಮೌನ ಶಿಷ್ಟರಿಗೆ ಅವನ ಮಾತು ಹೇಳಬಹುದಾದ್ದಕ್ಕಿಂತಲೂ ಹೆಚ್ಚು ಅವನ ಅಂತರ್ಯದರ್ಶನ ಮಾಡಿಕೊಡುತ್ತಿತ್ತು (ಹೊಸಕ್ಷಿ. ೩೬). [ಅಂತರ್ಯ + ದರ್ಶನ]

**ಅಂತರ್ಯವಿಚಾರ** (ನಾ). ೧. ಒಳಗಿನ ವಿವೇಚನೆ; ಅಂತರಂಗದ ಪರೀಕ್ಷೆ. ೨. ಗುಟ್ಟಾದ ವಿಷಯ; ರಹಸ್ಯವಾದ ವಿಚಾರ. [ಅಂತರ್ಯ + ವಿಚಾರ]

**ಅಂತು** 'ಅನ್$_1$' ಪರಾ.

**ಅಂತುಕ್ಕೂರ್** (ನಾ). ಒಂದು ಊರು: ಅನ್ತುಕ್ಕೂರಗ್ರಾಮುಕ್ಕ (ಇಅ. IX, ೧೦೩–೮; ?). 'ಆತುಕೂರ್' ಪರಾ. [?]

**ಅಂತ್ರ** (ಗು). ೧. ಕರುಳಿಗೆ ಸಂಬಂಧಿಸಿದ. (ನಾ). ೨. ಕರುಳು; ದೊಡ್ಡ ಕರುಳು: "ಅಂತ್ರಂ, ಪುರೀತತ್—ಈ ೨ ಕರುಳ್" (ಹಲಾಯು. ೧೦೪–೧೩); ಹತಾಶ್ವೌಘಜರ್ಜರಿತಾಂತ್ರೌಘ ವಿಕೀರ್ಣ ಘೇರವರವ ವ್ಯಾಜೃಂಭಿತಂ (ಎಕ. VI, ಚಿಕ್ಕಮ. ೧೬೧–೯೬; 1137). [ಸಂ.]

**ಅಂತ್ರರಸ** (ನಾ). ಕರುಳಿನ ರಸ; ಕರುಳಿನಲ್ಲಿ ಉತ್ಪತ್ತಿಯಾಗುವ ರಸ: ಲಾಲಾರಸ ಜಠರರಸ . . . ಅಂತ್ರರಸಗಳು ಹೇಗೆ ತಮ್ಮ ಕಾರ್ಯ ಮಾಡಬೇಕಾಗುವುದೋ (ಸಾಹಿವಿ. ೮೯). [ಅಂತ್ರ + ರಸ]

**ಅಂತ್ರವಾಯು** (ನಾ). ೧. ಕರುಳಿಗೆ ಸಂಬಂಧಿಸಿದ ವಾಯು (ರೋಗ). ೨. ಅಂತ್ರವೃದ್ಧಿ (೬). [ಅಂತ್ರ + ವಾಯು]

**ಅಂತ್ರಸ್ರಜ** (ನಾ). ಕರುಳಿನ ಮಾಲೆ: ಮಹಾಂತ್ರಸ್ರಜಮಂ ತಾಳ್ದಾತನಸುವನಾಗಳ್ ಬೀಳ್ದಂ (ವಿಷ್ಣುಪು. ೨–೨೫೧). [ಅಂತ್ರ + ಸ್ರಜ]

**ಅಂದಿ** (ನಾ). ಹೊಣೆ; ಜಾಮೀನು: ನೀನರಮನೆಯೊಳೆನಗೋಸ್ಕರವಾಗಿ ಆಂದಿಯಾದರೆ ಅವರು ನನ್ನನ್ನು ಬಿಟ್ಟುಬಿಡುವರು (ಸ್ಯಾಂಡರ್). [ಅನ್$_1$ + -ದಿ]

**ಅಂದಿಗ** (ನಾ). ೧. ಹೊಣೆಗಾರ; ಜಾಮೀನುದಾರ (ಸ್ಯಾಂಡರ್). ೨. ಮೋಜುಗಾರ; ಸೆಡಕಿನವನು. (ಸ್ಯಾಂಡರ್). [ಅಂದಿ + -ಗ$_2$]

**ಅಂದಿಗಲ್** ಅಂದುಗಲ್ ನೋ.

**ಅಂದುಗಲ್**, ಅಂದಿಗಲ್ (ನಾ). ೧. ಹೊರೆಯನ್ನು ಇಳಿಸಲು ನೆಟ್ಟಿರುವ ಹಾಸುಗಲ್ಲು (ಸ್ಯಾಂಡರ್). ೨. ಬೀಸುವಕಲ್ಲು (ಸ್ಯಾಂಡರ್). ಅಂದುಗಲ್ಲು ಕೊಳ್ಳು (ಕಲ್ಪದ್ರು. ೨೪). **ಅಂದಿಗಲ್** : ೨. "ಅಂದಿಗಲ್ – ಬೀಸುವ ಕಲ್ಲು" (ಪ್ರಭಣ್ಣ). [ಅಂದಿ + ಕಲ್$_1$]

**ಆಂದು** (ನಾ). ಒಂದು ಸುಂಕ (?) : ಕುಜುಕುಂದಿಯ ಗ್ರಾಮದ ನಾಯಿಂದರಿಗೆ ಸರ್ವಮಾನ್ಯವಾಗಿ ಆಂದು ಪಂನು ಬಿಟ ಬಿರಾಡವನೂ ಸರ್ವ ಮಾಂನ್ಯವಾಗಿ ಬಿಡಿಸಿದಾತ (ಸೌಇಇ. IX–ii, ೬೧೫–೯ ; 1545). [?]

**ಆಂದೆ** (ನಾ). ಗೂಬೆಯ ಜಾತಿಗೆ ಸೇರಿದ ಪಕ್ಷಿ; ಹಂದಿಗೀರನ ಹಕ್ಕಿ : ಹಂಸೆ ಕುರ್ಕುಗಿಳಿ ಪುರುಳಿಪೆಂಗುರು ಕಾರಂಡವಾಂದೆ ಮೊದಲಾಗೊಡೆಯ ಗಗನಚರಂ (ವಡ್ಡಾರಾ. ೯೭–೮) ; ಆ ರಾಜಹಂಸಂಗಂ ಕನಕಾಕ್ಷನೆಂಬೊಂದಾಂದೆಗಂ ಪರಮಮಿತ್ರತ್ವಮಾಗಿ (ಪಂಚತಂ. ೧೨೪–೧೬) ; ಎಲೆ ದೇವರೆ ಪುತ್ತುಂ ಬತ್ತಲೆಯುಂ ಬಱಿದಿಲ್ಲದೆಂಬರದು ಕಾರಣದಿಂ ನೆಲೆಯಾಂದೆಯನಚ್ಚಿದವೋಲೆಲೆಮಿಡುಕದೆ ನೆನೆಯುತಿರ್ದಿರೇನಂ ಮನದೊಳ್ (ಯಶೋಚ. ೪–೧೫) ; ಕಾಳಾಯಸ ಕಳಾಪುರುಷಂ ಕಣ್ಗಳೊಳ್ ಸುಟಿಯೆ ದೀಪ್ತದೊಳಾಂದೆಗಳ್ಪೆಟಿಯೆ ರಣರಸೋದ್ರೇಕಾಂಧಂ ಜರಾಸಂಧನವಂ ಬಗೆಯದೆ (ಮಹಾನೇ. ೧೧–೬೬ ವ).

[ದೇ. ‖ ತಮಿ. ಆನ್ದೈ = ಗೂಬೆ, ಚುಕ್ಕಿಯಿರುವ ಸಣ್ಣಗೂಬೆ ; ಮಲ. ಆನ್ತ = ದುಶ್ಶಕುನದ ಪ್ರಾಣಿ]

**ಆಂದೆಗ** (ನಾ). = ಆಂದೆ (ಕ). [ಆಂದೆ + –ಗ$_2$]

**ಆಂದೆಗೀರ** (ನಾ). = ಆಂದೆ : ಅಂತಾ ಪಿಂಗಳಿಯೆಂಬ ಆಂದೆಗೀರನಾ ಹಂಸೆಗೆ ಕಾಮುಪುರುಷನಂತೆ ತನಗಿಲ್ಲದ ಮೈಮೆಯನುಂಟುಮಾಡಿ ನುಡಿಯುತ್ತಿರ್ಪನ್ನೆಗಂ (ಪಂಚತಂ. ೧೨೬–೧೦). [ಆಂದೆ + ಕೀರ]

**ಆಂದೋಲ, ಆಂದೋಳ** (ನಾ). **೧.** ತೂಗಾಡುವುದು (ಕ). **೨.** ಉಯ್ಯಾಲೆ. **೩.** ಮೇನ ; ಪಲ್ಲಕ್ಕಿ. **ಆಂದೋಳ** : **೧.** ಕಣ್ಗೊಳಿಸಿತ್ತಬ್ಜಾಕರಂ ತಂಪಲೆಪ ಮಲಯಮಂದಾನಿಲಾಂದೋಳದಿಂದಂ (ಕಾದಂಉ. ೭೮೦). **೨.** "ದೋಳಾಂದೋಳಮುಯ್ಯಲಕ್ಕುಂ" (ಮಂಗರಾ. ೬೧–೧೭) ; ಕರ್ಣಾಟೀಕರ್ಣಪೂರನ ಪಾಲೆಗಳುಂ ಸರಸ್ವತಿಯಾಡುವ ಲೀಲಾಂದೋಳದಂತಾದುವು (ಪಂಪಭಾ. ೨–೩೯ ವ). **೩.** "ನೃಪರ ಪಲ್ಲಕ್ಕಿಯಂದಣಾಂದೋಳಮಕ್ಕುಂ" (ಮಂಗರಾ. ೭೮–೧) ; ಶಿಬಿಕಾಂದೋಳಾದಿ ಯಾನಂಗಳುಮಂ (ಆದಿಪು. ೪–೫೪ ವ). **೪.** ಚಂಚಲತೆ ; ಅನಿಶ್ಚಿತಭಾವ : ಬಿಡು ಮನದಾಂದೋಳವ ಪಂಪಾಂಬೆಯ ಕಡು ಕೃಪೆಯಾಯಿತು ನಿನಗೆ (ಕಂನವಿ. ೯–೧೬೩). [ಸಂ.]

**ಆಂದೋಲಕ** (ನಾ). **೧.** = ಆಂದೋಲನ. **೨.** ಗಡಿಯಾರದ ಮುಳ್ಳುಗಳನ್ನು ನಿಯಂತ್ರಿಸುತ್ತ ಎಡಕ್ಕೂ ಬಲಕ್ಕೂ ಚಲಿಸುವ ಲೋಲಕದಂಡ : ಗಡಿಯಾರದ ಆಂದೋಲಕಗಳನ್ನು ಮಾಡುವ ಕೆಲಸಕ್ಕೆ ಬಹಳ ಉಪಯುಕ್ತವಾಗಿರುತ್ತದೆ (ಮುಂಬಯಿ. ೫–೨೨೩). [ಸಂ.]

**ಆಂದೋಲಕೇಲಿ** (ನಾ). ಉಯ್ಯಾಲೆ ಆಟ : ಪರಮೋಲ್ಲಾಸದಿಂಗಡಲೊಳರಸಂಚೆಯಂತಿರಾಂದೋಲಕೇಲಿಯನೆಸಗುತೆ (ಪದ್ಮರಾ. ೭–೩೧). [ಆಂದೋಲ + ಕೇಲಿ]

**ಆಂದೋಲಛತ್ರಿಕೆ, ಆಂದೋಳಛತ್ರಿಕೆ** (ನಾ). **೧.** ಪಲ್ಲಕ್ಕಿ ಮತ್ತು ಛತ್ರಿ. **೨.** ಪಲ್ಲಕ್ಕಿಯ ಮೇಲಿನ ಛತ್ರಿ. **ಆಂದೋಳಛತ್ರಿಕೆ** : **೧.** ಎರಡುಪದಂಗಳಪಭ್ರಂಶಕ್ಕೆ – ಆಂದೋಳಛತ್ರಿಕಾ, ಅಂದಳಸತ್ತಿಗೆ (ಶಮದ. ೨೪೯ ಪ್ರಯೋ). [ಆಂದೋಲ + ಛತ್ರಿಕೆ]

**ಆಂದೋಲನ, ಆಂದೋಳನ** (ನಾ). **೧.** ತೂಗಾಡುವಿಕೆ : ಅನುಕೂಲ ಮಾರುತಾಂದೋಲನದಿಂ ಕೈಸನ್ನೆಗೆಯ್ವವೋಲ್ ಗಿರಿಶಿಖರಾವನಿಯೊಳ್ ಮಿಳ್ಳಿಸಿದುದು ಕೇತನಪಲ್ಲವಂ (ಪಂರಾಮಾ. ೧೦–೪೯) ; ಆದರೆ ಗಡಿಯಾಲದ ಸ್ಥಲದಲ್ಲಿ ಅವನು ತನ್ನ ನಾಡಿಗಳನ್ನು ಹಿಡಿದು ನೋಡಿ, ಆ ಆಂದೋಲನಗಳ ಕಾಲವನ್ನು ಗೊತ್ತು ಮಾಡಿದನು (ಮುಂಬಯಿ. ೫–೨೨೩). **೨.** ಉಯ್ಯಾಲೆ. **೩.** ಪಲ್ಲಕ್ಕಿ. **೪.** ಚಳವಳಿ ; ಕ್ರಾಂತಿ : ಶೀನು ಕುಸುಮಾವನ್ನು ನೋಡಿದಾಗಿನಿಂದ ಅವನ ಆಂತರಿಕ ಜೀವನದಲ್ಲಿ ವಿಲಕ್ಷಣವಾದ ಆಂದೋಲನವೆದ್ದಿತ್ತು (ಸಮುಜೀ. ೩೬೬) ; ಆಂದೋಲನದ ಕಾಲದಲ್ಲಿ – ಪ್ರತಿಭಟನೆಗಿಂತ ಅನಾದರ ಹೆಚ್ಚಿನ ಅಸ್ತ್ರ (ಗೊಂಡಾರ. ೧೧) ; ಪ್ರಚಂಡಾಂದೋಲನವು ರಾಷ್ಟ್ರದಾದ್ಯಂತ ವ್ಯಾಪಿಸಿತು (ಕುರುಕಾ. ೧೩೨). **ಆಂದೋಳನ** : **೧.** ಮಂದಾನಿಳಾಂದೋಳನಾಕುಳಿತಾರಾಮ ಫಲಾಮ್ರತೋಪಮ ರಸಸ್ರೋತಂಗಳೊಳ್ (ಆದಿಪು. ೧–೬೪) ; ಸ್ಮರಮಂತ್ರದೇವತೆಯವೋಲ್ ಬಾಹಾಲತಾಂದೋಳನಂ ಬಗೆಯಂ ಬಲ್ಸೆಱಗೆಯ್ಯೆ ಬಾಲೆ ಮೆಱೆದಳ್ ಲೀಲಾಪದನ್ಯಾಸಮಂ (ಪಂರಾಮಾ ೫–೪೨). **೩.** ರಸಚಿತ್ರಂ ರತ್ನಭೂಷಾವಳಿಮೃದುವಸನಶ್ರೇಣಿ . . . ಪೊಂಬಟ್ಟೆ ಬಟ್ಟಲ್ ಕನಕಕಳಶಮಾದರ್ಶಮಾಂದೋಳನಂ ದಂತಿಸಮೂಹಂ ವಾಜಿವೃಂದಂ (ರಾಜಶೇ. ೯–೪೦). **೪.** ಇದಾದ ಮೇಲೆ ಒಂದು ದೊಡ್ಡ ಆಂದೋಳನವೆದ್ದಂತಾಯಿತು (ಶೇಪ್ರಶ್ನೆ. ೧೧೧). [ಸಂ.]

**ಆಂದೋಲಪರಿಯಂಕ, ಆಂದೋಳಪರಿಯಂಕ** (ನಾ). ತೂಗುಮಂಚ (ಕ). **ಆಂದೋಳಪರಿಯಂಕ** : "ಆಂದೋಳಪರಿಯಂಕಮೆನೆ ತೂಗುಮಂಚಮಕ್ಕುಂ" (ಮಂಗರಾ. ೬೧–೧೭).

[ಆಂದೋಲ + ಪರಿಯಂಕ]

**ಆಂದೋಲಾಯಮಾನ, ಆಂದೋಳಾಯಮಾನ** (ಗು). ಉಯ್ಯಾಲೆಯಂತೆ ಆಡುವ ; ತೂಗಾಡುವ : ಅನುಕೂಲಾನಿಲಾಂದೋಲಾ[ಪಾಠಾಂ. ಳಾ]ಯಮಾನ ರಾಜಕುಂಜರ ವಿಜಯ ಕದಲಿಕಾ ತರಂಗಿತ ಗಗನಾಂಗಣನುಂ (ಆದಿಪು. ೧೨–೬೧ ವ). **ಆಂದೋಳಾಯಮಾನ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ಆಂದೋಲಿಕ, ಆಂದೋಳಿಕ** (ನಾ). **೧.** ಪಲ್ಲಕ್ಕಿ (ಕ). **ಆಂದೋಳಿಕ** : **೨.** [ಸಂಗೀತ] "ದೀರ್ಘಕಾಲ ಒಂದು ಸ್ವರ ನುಡಿದ ನಂತರ ಮುಂದಿನ ಸ್ವರಕ್ಕೆ ಲೀನವಾಗುವಂತೆ ತಂತಿ ಎಳೆಯುವುದು" (ಸಂಗೀಚಂ. ೨೬). [ಸಂ. ಆಂದೋಲಿಕಾ]

**ಆಂದೋಲಿತ, ಆಂದೋಳಿತ** (ಗು). **೧.** ತೂಗಾಡಿಸಲ್ಪಟ್ಟ. (ನಾ). **೨.** ತೂಗಾಟ; ಅಲ್ಲಾಟ. **೩.** [ನಾಟ್ಯ] ತೋಳಿನ ಒಂದು ಬಗೆಯ ಚಲನಕ್ರಮ : ಊರ್ಧ್ವ . . . ಆಂದೋಲಿತ, ಉತ್ಸಾರಿತ – ಈ ಹದಿನಾರು ತೋಳ ಭೇದಂಗಳ್ (ಲಾಸ್ಯರಂ. ೨–೧೨೨ ವ). **೪.** ಉಯ್ಯಾಲೆ ಆಟ. **೫.** [ಸಂಗೀತ] ಒಂದು ಬಗೆಯ ದೇಶೀಗಮಕ. **ಆಂದೋಳಿತ** : **೧.** ಮುಹುರ್ಮುಹುರಾಂದೋಳಿತೋತ್ತಮಾಂಗನಾಗಿ (ಗದಾಯು. ೫–೫೫ ವ) ; ಮರುದಾಂದೋಳಿತ ನಂದನಪರಿವೃತಮುಜ್ಜಯಿನಿಯೆಂಬ ಪೊಱಲುಂಟು (ಪಂಚತಂ. ೨೧–೧೫). **೩.** ದಳಿತ ತರುಣಾಂಬುರುಹ ಮುಚ್ಚಳಿತ ತರಂಗಪ್ರಪಾತದಿಂ ಚಲಿಯಿಪ ಪಾಂಗಳವಡೆ ಲಾವಣ್ಯರಸಾವಿಳಮಾಂದೋಳಿತದಿನೆಸೆದುದಾಸ್ಯಂ ನಟಿಯಾ (ರಾಜಶೇ. ೧೨–೭೪). **೪.** ಚಿಂದು ಜಕ್ಕಡಿ . . . ಆಂದೋಳಿತ ಮೊದಲಾದ ಆಟಂಗಳಿಂ ಮಧುರನಾಗೆ ಮೆಚ್ಚನಚ್ಚೊತ್ತಿದಳ್ (ವಿರೂಪಾ. ೮೮ ವ). **೬.** ಕಂಪಿತ ಸ್ಫುರಿತ . . . ಆಂದೋಳಿತ . . . ದೇಶೀಗಮಕಂಗಳೆಂತಲೂ (ವಿವೇಕ. ೨೩೨).

[ಸಂ.]

**ಆಂದೋಲಿಸು, ಆಂದೋಳಿಸು** (ಕ್ರಿ). ಅಲುಗಾಡು ; ಕಂಪಿಸು ; ತೂಗಾಡು : ಸ್ತ್ರೀಯರೂ ಪುರುಷರೂ ಗುಂಪುಗಳಾಗಿ . . . ಕೈಗಳನ್ನು ಹಿಡಿದುಕೊಂಡು ಹಿಂದಕ್ಕೆ ಮುಂದಕ್ಕೆ ಆಂದೋಲಿಸುತ್ತಾ ಕುಣಿಯುತ್ತಾರೆ (ಆಭಾನೃ. ೧೨೪). **ಆಂದೋಳಿಸು** : ಬೆರಳಲುಕದೊಳಾಂದೋಳಿಪ ಮಸ್ತಕದರಳುಗಣ್ಣಬಲೆಯೊಪ್ಪಿದಳು (ಕಂನವಿ. ೯–೧೬೪).

[ಆಂದೋಲನ + –ಇಸು$_3$]

**ಆಂದೋಳ** 'ಆಂದೋಲ' ನೋ.

**ಆಂದೋಳಛತ್ರಿಕೆ** 'ಆಂದೋಲಛತ್ರಿಕೆ' ನೋ.

**ಅಂದೋಳನ** 'ಅಂದೋಲನ' ನೋ.

**ಅಂದೋಳನಂಗೆಯ್** (ಕ್ರಿ). ತೂಗಾಡಿಸು: ಮುಹುರ್ಮುಹು ಶ್ರೀಹರ್ಷಾಂದೋಳನಂಗೆಯ್ವುತ್ತುಮಂತಃಪುರಕ್ಕೈವರ್ಪಾಗಳ್ (ಪುಷ್ಪ ಪು. ೩-೭೭ ವ). [ಅಂದೋಳನ (=ಅಂದೋಲನ) + ಗೆಯ್ (< ಕೆಯ್$_1$)]

**ಅಂದೋಳಪರಿಯಂಕ** 'ಅಂದೋಲಪರಿಯಂಕ' ನೋ.

**ಅಂದೋಳಾಯಮಾನ** 'ಅಂದೋಲಾಯಮಾನ' ನೋ.

**ಅಂದೋಳಾಯಿತ** (ಗು). ಉಯ್ಯಾಲೆಯಂತೆ ಆದ; ತೂಗಾಡುವ: ಅಯನಲೀಲಾಂದೋಳಾಯಿತ ರತ್ನವಳಯೋನ್ಮುಖಮಯೂಖಲತಿಕಾ ಪ್ರತಾನಪರಿವೇಷ್ಟಿತ ಭುಜಾದಂಡ ಪಾರಿಜಾತಕಾಂಡನುಂ (ಚಂದ್ರ ಪು. ೪-೬೮ ವ). [ಸಂ. ಅಂದೋಲಾಯಿತ]

**ಅಂದೋಳಿ** (ನಾ). [ಸಂಗೀತ] ಒಂದು ರಾಗ: ಕೌಶಿಕಿ . . . ಅಂದೋಳಿ ಗೌಡಿ . . . ಎಂಬ ೩೪ ರಾಗಂಗಳು (ವಿವೇಕ. ೨೩೩). [?]

**ಅಂದೋಳಿಕ** 'ಅಂದೋಲಿಕ' ನೋ.

**ಅಂದೋಳಿಕೆ** (ನಾ). ಪಲ್ಲಕ್ಕಿ; ಮೇನ: ರತ್ನಮುತ್ತುಗಳಿಂದಲೂ ಪುಷ್ಪಮಾಲೆಗಳಿಂದಲೂ ಅಲಂಕೃತವಾದ ಅಂದೋಳಿಕೆಯಲ್ಲಿ ಕುಳಿತು . . . ಬಂದರು (ಕಥವಿ. I, ೧೨೯). [ಸಂ. ಅಂದೋಲಿಕಾ]

**ಅಂದೋಳಿತ** 'ಅಂದೋಲಿತ' ನೋ.

**ಅಂದೋಳಿಸು** 'ಅಂದೋಲಿಸು' ನೋ.

**ಅಂಧಸಿಕ** (ನಾ). ಅಡಿಗೆಯವನು; ಬಾಣಸಿಗ. [ಸಂ.]

**ಅಂಧ್ಯ** (ನಾ). ೧. ಕುರುಡುತನ; ಕುರುಡು: ಅದರ ರಚನಾಕ್ರಮವನ್ನು ಹೇಳಲು ನಿನಗೆ ಆಂಧ್ಯವಿಲ್ಲವು (ಭಾಮೃತ. ೫೫). ೨. ಕತ್ತಲು: ಜ್ಯೋತಿಸ್ಸಮುದ್ರಮಿತ್ತಲ್ ಭೂತಲದಾಂಧ್ಯದ ನಿವಾಸಮತ್ತಲ್ (ನಿವೇದ. ೨೭-೧). [ಸಂ.]

**ಅಂಧ್ರ** (ನಾ). ೧. ತೆಲುಗು ಭಾಷೆ. ೨. ತೆಲುಗು ದೇಶ: ಪುಟ್ಟುವ ದ್ರವಿಡಾಂಧ್ರಕರ್ಣಾಟಕಾದಿ ಷಟ್ಪಂಚಾಶತ್ ಸರ್ವವಿಷಯ ಭಾಷಾ ಜಾತಿಗಳಕ್ಕುಂ (ಛಂದೋಂಬು. ೧-೭೭). ೩. ತೆಲುಗು ದೇಶದವನು: "ತೆಲುಗನಾಂಧ್ರನೆನಿಕ್ಕು" (ಮಂಗರಾ. ೧೧೨-೭); ನೆಜಿಯಾಂಧ್ರಮನ್ನೆಯ ದಳವುಳಕಾಜನೆಂದಿರದೆ ಪಾಡಿದರಂಗನೆಯರು (ಕಂನವಿ. ೮-೭೬); ಶ್ರೀರಂಗರಾಯನು ಅಂಧ್ರನಲ್ಲವೇ (ಶ್ರೀರಾಯ. ೧೭). [ಸಂ.]

**ಅಂಧ್ರಕ** (ನಾ). ಆಂಧ್ರದೇಶದವನು; ತೆಲುಗುದೇಶದವನು: ಆ ಖಚರಕನ್ಯಾಸ್ವಯಂವರಕ್ಕೆ . . . ಕಪಿಕೇತುಗಳಪ್ಪ ಕಿಷ್ಕಿಂಧಾಂಧ್ರಕರುಂ ಲಂಕಾಧಿಪನಪ್ಪ ಸುಕೇಶನುಂ ಮೊದಲಾಗೆ (ಪಂರಾಮಾ. ೧೦-೧೨೩ ವ). [ಸಂ.]

**ಅಂಧ್ರಿ** (ನಾ). ೧. ಆಂಧ್ರದೇಶದ ಹೆಂಗಸು: ಅಂಧ್ರೀನೀರಂಧ್ರಬಂಧುರಸ್ತನಹಾರನುದಾರಂ ಸರಸ್ವತೀಮಣಿಹಾರಂ (ಆದಿಪು. ೧-೩೨). ೨. [ಸಂಗೀತ] ಒಂದು ರಾಗ: ಭಿನ್ನವಾದ ಗಾನಪದ್ಧತಿ ಇತ್ತೆಂಬುದಕ್ಕೆ ಅಂಧ್ರಿ, ದ್ರಾವಿಡಿ, ಸೌವೀರಿ ಮುಂತಾದ ಪ್ರಾಚೀನ ಜಾತಿ ರಾಗಗಳ ಹೆಸರುಗಳೇ ಸಾಕ್ಷಿ (ಗಾನಕ. ೪೭). [ಸಂ. ಅಂಧ್ರೀ]

**ಅಂಬರ** 'ಅವ್ರು$_1$' ನೋ.

**ಅಂಬಡೆ** 'ಅಂಬೊಡೆ' ನೋ.

**ಅಂಬೊಡೆ**, ಅಂಬಡೆ, ಅಮುವಡೆ (ನಾ). ಕಡಲೆಬೇಳೆ ಮುಂತಾದ ದ್ವಿದಳಧಾನ್ಯಗಳನ್ನು ನೀರಿನಲ್ಲಿ ನೆನೆಯಿಕ್ಕಿ ತೆಂಗಿನಕಾಯಿ ತುರಿ ಮತ್ತು ಮಸಾಲೆಯೊಡನೆ ಒರಳಲ್ಲಿ ರುಬ್ಬಿ, ಬಿಲ್ಲೆಯಂತೆ ತಟ್ಟಿ, ಎಣ್ಣೆ ಅಥವಾ ತುಪ್ಪದಲ್ಲಿ ಕರಿದು ಮಾಡುವ ಒಂದು ಭಕ್ಷ್ಯ: ಪರಮ ಮಂಗಳ ಅಪ್ಪವು ಅತಿರಸ ಹರುಷದಿಂದಲಿಯಿಟ್ಟ ಹೊಸತುಪ್ಪವೊಬೆಯೊಂ[ಯಾಂ] ಬೊಡೆ ಪಥಿವಡೆಯು ತಿಂಥಿಣಿ ಒಡೆಯ ಎಡೆಗೆ ಒಡನೆ ಬಡಿಸಿದೆ (ಪುರಂದ. ೧-೭೬-೩); ಹೆಂಗಸರನ್ನು ಗೋಲನ್ ಮಾಡಿ ತುಪ್ಪದ ದೋಸೆ, ಬೋಂಡ . . . ಅಂಬೊಡೆ ಮುಂತಾಗಿ ತಿಂಡಿಗಳನ್ನು ಮಾಡಿಸುತ್ತ (ಬಾಲಪ್ರ. II, ೧೧೬೨). **ಅಂಬಡೆ**: ಬೊಂಡಾ (ಅಂಬಡೆ) ಟೋಪಿ (ನಾಡಿಗೇ. ೨೧೫). **ಅಮುವಡೆ** (೩).
[ದೇ. ‖ ತಮಿ. ಅಮುವಡೈ; ಮಲ. ತುಳು. ತೆಲು. ಅಮುವಡೆ]

**ಅಂಬ್ರ** 'ಅವ್ರು$_1$' ನೋ.

**ಅಂಶಿಕ** (ಗು). ಅಂಶಕ್ಕೆ ಮಾತ್ರ ಸಂಬಂಧಿಸಿದ; ಅಪೂರ್ಣವಾದ. [ಸಂ.]

**ಅಂಹತಿ** (ನಾ). ಪ್ರೀತಿ; ಅನುರಾಗ (?): ಹತ್ತು ನೂರು ಶಬ್ದಗಳಲ್ಲಿ ವರ್ಣಿಸಲಾಗದ ಅಂಹತಿ ಹತ್ತು ಶಬ್ದಗಳ ಟೆಲಿಗ್ರಾಮಿನಲ್ಲಿ ತುಂಬಿದ್ದನ್ನು ರಾಜ ಕಂಡುಕೊಂಡ (ನಟಸಾ. ೫೧೮). [?]

**ಅಃ** 'ಅಃ' ನೋ.

**ಅಕಂಠ** (ಅ). ಗಂಟಲಿನವರೆಗೆ ಬರುವಷ್ಟು: ಭಾವಪೂರ್ವಕವಾಗಿ ಆಕಂಠ ಭೋಗಿಸಿಯೇ ಅನುಭವಿಸಬೇಕು (ಇಪ್ಪಕ. ೨೮೫)
[ಸಂ. ಆಕಂಠಂ]

**ಆಕಂಠಪೂರ** (ನಾ). ಗಂಟಲಿನವರೆಗೂ ತುಂಬುವಷ್ಟು: ಈ ಕರಗದಲ್ಲಿ ತುಂಬಿ ತಂದೊಡೆ ಸಾಕಲಾ ವಿರೂಪಾಕ್ಷದೇವಂಗೇಕಣಕವಜ್ಜಯ್ಯ ನಿನಗಾಕಂಠಪೂರವಲ (ಬಸವು. ೫೯-೪). [ಆಕಂಠ + ಪೂರ]

**ಆಕಂಠಪೂರ್ತಿ** (ನಾ). = ಆಕಂಠಪೂರ: ಪ್ರತ್ಯುತ್ತರವೀಯುತ್ತಲೇ ಆಕಂಠಪೂರ್ತಿಯಾಗಿ ಭೋಜನಮಾಡಿದನು (ಬಿನ್ನಬೇ. ೧೮).
[ಆಕಂಠ + ಪೂರ್ತಿ]

**ಆಕಂಠಪ್ರಮಾಣ** (ನಾ). = ಆಕಂಠಪೂರ: ದಿವ್ಯಾಹಾರಮನಾಕಂಠ ಪ್ರಮಾಣಂ ಬರೆಗಂ ತಣಿಯುಂಡು (ವಡ್ಡಾರಾ. ೭೮-೨೨).
[ಆಕಂಠ + ಪ್ರಮಾಣ]

**ಆಕಂಠೋಷ್ಠಂಬರಂ** (ಅ). ಗಂಟಲು ಮತ್ತು ತುಟಿಯವರೆಗೆ: ಇಂಬಾಗಿರೆ ಮುದದಿಂ ಪಲವುಂಬಣ್ಣದ ಭಕ್ಷ್ಯರಾಶಿವೆರಸಾಕಂಠೋಷ್ಠಂ ಬರಮುಂಡೊಯ್ಯನೆ ಪಾರ್ವಂ ಬಂದಾ ಕೊಡನ ಕೆಳಗೆ ಪಟ್ಟಿರ್ದಾಗಳ್ (ಪಂಚತಂ. ೧೮೫-೨೫). [ಆಕಂಠ + ಓಷ್ಠ + -ಬರಂ]

**ಆಕಂಪನ** (ನಾ). ನಡುಕ; ಅಲ್ಲಾಟ. 'ಆಕಂಪನಗೊಳ್' ಪರಾ. [ಸಂ.]

**ಆಕಂಪನಗೊಳ್** (ಕ್ರಿ). ನಡುಕಗೊಳ್ಳು: ಕಂಪಿಸು: ಕಾಮದೇವನ ಕೊರಲಗಿನ ಧ್ವನಿಯೆಂದು ಕೋಕಿಲಧ್ವನಿಗಾಕಂಪನಗೊಳುತ್ತುಂ (ಗಿರಿಕ. ೪-೧೨೦ ವ). [ಆಕಂಪನ + ಕೊಳ್$_1$]

**ಆಕಂಪಿತ** (ಗು). ನಡುಗಿಸಲ್ಪಟ್ಟ; ಅಲ್ಲಾಡಿಸಲ್ಪಟ್ಟ. [ಸಂ.]

**ಆಕಂಪಿಸು** (ಕ್ರಿ). ಅದುರು; ನಡುಗು; ಅಲ್ಲಾಡು: ಮುಡಿ ಸೂಪ್ಪಾಗದು ನೀವಿ ಬಿರ್ಚದಧರಂ ಬೆಳ್ಪೇಜದೂರುದ್ವಯಂ ಪೊಡರ್ದಾಕಂಪಿಸ ದಕ್ಷಿ ಕೆಂಪಡಸದು (ಜಗವಿ. ೧೬-೧೨೬). [ಆಕಂಪನ + -ಇಸು$_3$]

**ಆಕಟ** (ನಾ). ತಿರಸ್ಕಾರ; ಅಣಕ (?): ಆ ಹೆಂಗಸು ಆವ ನಗುವಿನಿಂದಾ ಮಾತನ್ನು ಹೇಳಿದಳೋ ಅದರಿಂದದು ಆಕಟವೆಂದು ಹೊರ್ತು ಬೇರೆ ಅರ್ಥವಾಗಲಿಲ್ಲ (ಕಪಾಕುಂ. ೪೭). [?]

**ಅಕಡೆ** (ನಾ). ಅತ್ತಕಡೆ; ಆಚೆಯ ಕಡೆ: ಈಕಡೆಮನೆಯೊಳಾಕಡೆ ಮನೆಯೊಳುಂ ಹೋಗನಾ ಶಿಶು (ಬಸವು. ೪೮-೨೫); ಅವನು ಅಕಡೆಯಿಂದ ಬಂದನು (ರೂಢಿ). [ಆ$_2$ (< ಅದು$_1$) + ಕಡೆ$_4$]

**ಅಕಯ್ಯ** (ನಾ). ಒಬ್ಬಾತನ ಹೆಸರು (?): ಪಡುವಲು ಸಂಣೆ[ನಾ]ಯಕನ ಮಾವಣನಾಯ್ಕ ಅಕಯ್ಯ ಆವಳೆಗಡಿ ಬಡಗಲು ಸಂಣೆಮನಾಯ್ಕ (ಕಇ. I, ೪೧-೪೭; 1417). 'ಅಕಯ್ಯ' ಪರಾ. [?]

**ಆಕರ$_1$** (ನಾ). ಬಾಯಾರಿಕೆ; ದಾಹ; ನೀರಡಿಕೆ: ಅಯ್ಯಾ ಬಹಳ ಆಕರ ಆಗ್ತದೆ, ಒಂದೀಟು ನೀರು ಕುಡುಕೊಂಡು ಬತ್ತೀನಿ (ಕಾನೂರು. ೬೧೩). [?]

**ಆಕರ$_2$** (ನಾ). ಒಂದು ಬಗೆಯ ತೆರಿಗೆ: ಯೀ ಸ್ಥಳಕ್ಕೆ ಆಕರ ಅನ್ಯಾಯ ಕಾಣಿಕೆ ಖಡ್ಡಾಯ ಬಿಟ್ಟೆ ಬಿರಾಡ ಮುಂತಾಜು . . . ಬಾತ್ತ್ರರಂಗಳು ಇಲ್ಲದೆ (ಕಇ. III–i, ೧೫–೨೪; 1550). 'ಆಕಾರ$_3$' ಪರಾ. [?]

**ಆಕರ$_3$** (ನಾ). ೧. ಉತ್ಪತ್ತಿಸ್ಥಾನ; ಆಧಾರ: ಆ ಕೃತಿ ಮುನ್ನಂ ಚೆಲ್ವಿಂಗಾಕರಮೆನಿಸಿರ್ದು ಮತ್ತೆ ಕನ್ನಡಿಸಿತ್ತಿನ್ನೀ ಕವಿತೆಯಿಂ (ಕಾದಂಪೂ. ೬). ೨. ಗುಂಪು; ಸಮೂಹ. ೩. ಗಣಿ; ಖನಿ. ೪. ಹಳ್ಳಿ; ಗ್ರಾಮ: ಅಲ್ಲಿ ಪುರ ಆಕರ ಗ್ರಾಮ ಮಡಂಬ ಖೇಟ ಖರ್ವಟ ಪಟ್ಟಣಾದಿಗಳ ರಚನೆಗಳಂ ನೋಡುತ (ಪುರುಚ. ೧೫೭). ೫. ಅವಕಾಶ; ಕಾರಣ: ಇವುಗಳು ಅತ್ಯಂತ ಪ್ರಾಬಲ್ಯಕ್ಕೆ ಬರಲು ಆಕರವಾಯಿತು (ಪಾಳೆಗಾ. ೧೪). [ಸಂ.]

**ಆಕರ$_4$** (ನಾ). ಮರದಲ್ಲಿ ಅಥವಾ ಲೋಹದಲ್ಲಿ ರಂಧ್ರವನ್ನು ಕೊರೆಯುವ ಸಾಧನ; ಬೈರಿಗೆ: ಪಾರಿಗೆ ಆಕರದಿಂದ ವೆಜ್ಜ ಮಾಡಬೇಕು (ರೂಢಿ). [< ಇಂ. Auger]

**ಆಕರಗ್ರಂಥ** (ನಾ). ಆಧಾರವಾದ ಗ್ರಂಥ; ಮೂಲಗ್ರಂಥ: ಆಕರ ಗ್ರಂಥಗಳಲ್ಲಿ ರಮ್ಯವಾದ ಬಗೆಬಗೆಯ ಉಪಾಖ್ಯಾನಗಳೇ . . . ಎಷ್ಟೋ ಬಂದಿರುತ್ತವೆ (ಅಹಲ್ಯೆ. ೭ ಪ್ರಸ್ತಾ). [ಆಕರ$_3$ + ಗ್ರಂಥ]

**ಆಕರಣ** (ನಾ). = ಆಕರಣೆ$_1$ (೩). [ಸಂ.]

**ಆಕರಣೆ$_1$** (ನಾ). ೧. ಕರೆಯುವುದು; ಬರಮಾಡಿಕೊಳ್ಳುವುದು; ಆಹ್ವಾನ: ಓಕರಿಸಿದುದು ಮೃತ್ಯುವೆನ್ನನು ಲೋಕದಿಂ ಹೊಱಗೆಂದು ಯಮುಗಿಮರಾಕರಣೆಗಳ [ಪಾಠಾಂ. ಯಮನ ನಿರಾಕರಣೆಗಳ] ಜೀವಜಾತಿಯೊಳಲ್ಲ ನೀನೆಂದು ಲೋಕದಲಿ ಡಂಗುರವ ಹೊಯ್ಸಿದನೀ ಕಮಲನಾಭನೆ (ಕುವ್ಯಾಅ. ಓರಿಇ. ೧೫–೧೯); ಛಲದ ಬಲುಹನು ಬಿಡು ವೃಥಾ ಯಮನಾಕರಣೆಗೊಳಗಾಗಬೇಡೆಂದ (ತೊರರಾ. ೬–೫೧–೫೪). ೨. ವಸೂಲಿ; ಶೇಖರಣೆ: ಸೆಪ್ಟೆಂಬರ್ ತಿಂಗಳ ಕರಾಕರಣೆಯಿಂದ ಒಟ್ಟು . . . ರೂ ಕೊಡಿವೆ ಎಂದು ಹೇಳಬಹುದು(ಹುಸಂಕ. ೧೯–೧೧–೫೯). ೩. ಕಂದಾಯ ಹಾಕುವುದಕ್ಕಾಗಿ ಆಸ್ತಿಯ ಬೆಲೆಕಟ್ಟುವುದು: ಪೇಟೆಗೆ ಒಯ್ದು ಮಾರಲು ಯಾವ ವೆಚ್ಚ ತಗಲಬಹುದೋ ಆ ಮಾನದಿಂದಲೇ ಆ ಹುಟ್ಟುವಳಿಯ ಬೆಲೆಯ ಆಕರಣೆ ಆಗುತ್ತದೆ (ಮಾವಾದ. ೧೩೯).

[ಸಂ. ಆಕಾರಣ]

**ಆಕರಣೆ$_2$** (ನಾ). ತೊಂದರೆ; ಹಿಂಸೆ; ಕಷ್ಟ (?): ಶೋಕ ರೋಗ ಜನನ ಮರಣಾದಿಗಳಲ್ಲಿ ಆಕರಣೆಗೊಳಗಾಗುತ್ತ (ವಿಲೇಶ್ವ. ೧೪೮); ಹಸಿವು ನೀರಡಿಕೆಯಾ ಆಕರಣೆಯಿಲ್ಲ (ವೀಶೈಪು. ೧–೩–೧೮); ಓಕರಣೆ ಬಹ ತುತ್ತ ನಱಿದಱಿದಾಕರಣೆಯಿಂದುಣ್ಣದಿರು (ಪ್ರಹ್ಲಾಚ. ೭–೫೦). [?]

**ಆಕರಮಂಡಳಿಕೆ** (ನಾ). ಗಣಿಗಳ ಮೇಲ್ವಿಚಾರಕ: ಮದನಮಹೇಸ್ವರ ಆಕರಮಂಡಳಿಕಾ ಚಾಗುರು ಪಂಚಪಾಂಡವ ರಮೆಯ ದೇವನು (ಎಕ. V, ಬೇಲೂರು. ೧೬೬–೭; 1279). [ಆಕರ$_3$ + ಮಂಡಳಿಕೆ]

**ಆಕರಿಕೆ** (ನಾ). ಆಸೆ: ಆತನಿಗೆ ಹಣದ ಆಕರಿಕೆ ಬಹಳ (ರೂಢಿ). [ಆಕರ$_1$ + –ಇಕೆ]

**ಆಕರಿಸಣ** 'ಆಕರುಷಣ' ನೋ.

**ಆಕರಿಸು$_1$** (ಕ್ರಿ). ೧. ಅಂಗೀಕರಿಸು; ಸ್ವೀಕರಿಸು; ಹೊಂದು: ಏಕತೆಯೆ ತನಗೆ ಬಹುತೆಯನಾಕರಿಸದು ಜಾತಿ ತಾಂ ವಿಶೇಷಣಮುಖದಿಂದಾ ಕಾರಕಮೇಕತ್ವಮನೇಕತ್ವಮನಾ ಕ್ರಿಯಾಪದಂ ಪಡೆಯಲೊಡಂ (ಶಮದ. ೧೩೪); "ಆಕರಿಸದು– ಅಂಗೀಕರಿಸದು" (ಶಮದ. ೧೩೪ ಟೀಕೆ); ಏಕ ದ್ವಿತ್ರಿ ಚತುಃ ಶಬ್ದಾಕೃತಿಗೆಕ್ಕ ದು ತಿ ಚೌಗಳಾದೇಶಂಗಳ್ ಸ್ವೀಕೃತ ಸಮಾಸಪೂರ್ವದೊಳಾಕರಿಪರ್ ಪ್ರತ್ಯಯಾಂತದೊಳಮಾ ವಿಧಿಯಂ (ಶಮದ. ೨೯೦). ೨. ಬರಮಾಡಿಕೊ; ಕರಸಿಕೊ: ಸಹ್ಯಾಚಲದ ಕೊಳ್ಳದ ಕುತ್ತಿರಿನ ಭೂಪರ ವಿಭಾಡಿಸಿ ಸುತ್ತಿ ಬಂದಾಕರಿಸಿದನು ತದ್ಗಿರಿನಿವಾಸಿಗಳ (ಕುವ್ಯಾಸ. ೫–೧೯); ಆಕರಿಸಿ ಬೆಸಗೊಂಡು ಬಿಟ್ಟರನೇಕ ನೃಪರನು ಬೇಹು ಹರಿದುದು ನಾಕುವ್ಯೆಯಲಿ (ತೊರರಾ. ೪–೯–೧೦). ೩. ವಸೂಲ್ಮಾಡು; ತೆಗೆದುಕೊ: ನಿರುತಿಯ ಮೇಲೆ ಮೇಲಲ್ಲಿಂದ ನಡೆದಾಕರಿಸಿದನು ಧನವ (ತೊರರಾ. ೧–೮–೩೫); ಬೆಲೆಗಳ ಆಧಾರದಿಂದ ಅತ್ಯಂತಿಕವಾಗಿ ಲಾವಣಿಯನ್ನು ತೆರಿಗೆಯನ್ನು ಆಕರಿಸಬಲ್ಲನು (ಮಾವಾದ. ೧೪೦); ೧೨ ಲಕ್ಷ ರೂಗಳಷ್ಟು ವೆಚ್ಚದ ಕರವನ್ನು ಆಕರಿಸಲಾಗಿದೆ (ಹುಸಂಕ. ೧೯–೧೧–೫೯). [ಆಕರಣ + –ಇಸು$_3$]

**ಆಕರಿಸು$_2$** (ಕ್ರಿ). ೧. ಭಯಗೊಳ್ಳು; ನಡುಗು; ಕ್ಲೇಶಪಡು; ಕಷ್ಟಕ್ಕೆ ಗುರಿಯಾಗು: ತನ್ನಾದಮಂ ಕೇಳುತುಂ ಖತ್ವಿಜರುಬ್ಬೆಗಂಗೊಳೆ ಹೋತೃಗಳಾಕರಿಸೆ ಸಾಮಾಜಿಕರ್ ಸಂಕ್ಲೇಶಂಬಡೆಯೆ ಆಚಾರ್ಯರಡಂಗೆ (ಉದ್ಭಟ. ೪–೬೩ ವ); ಪರಮಪಾತಕಿಯಾದೆ ವೈಜೀಗೊರವನೆಲ್ಲಿಗೆ ಸರಿದನೋ ಆಕರಿಸಿಕೊಳ್ಳದೆ ತೋಱು (ಬಸವು. ೫೨–೭); ಜನಿಸಿದನು ಪ್ರಹ್ಲಾದದೇವಗೆ ತನುಜ ವೈರೋಚನನು . . . ಲೋಕವಾಕರಿಸೆ (ಕುವ್ಯಾಅ. ೯–೧೮); ಭೀಕಂ ಘೂಕಂ ಶಲಭಂ ಶ್ರೀಕಾಂತ ಮುನೀಂದ್ರ ಸೂರ್ಯರಂ ಜಱಿದೊಡೆ ತಾನಾಕರಿಸಿ ಘನತೆ ಪೋಕುಮೆ ಕಾಕರ ನುಡಿಯಿಂ ಕೊಱಂತೆ ಕೃತಿಗಪ್ಪುದೆ ಮೇಣ್ (ಹಮ್ಮಿರ. ೧–೧೯); ನಾರಿಯರು ನಡನಡುಗಿ ಆಕರಿಸಿ ಹೀಕರಿಸಿ ಶೋಕಮಾಕ್ರಾಂತರಾಗಿ (ಜಿನಮು. ೧೫–೪೩); ಆಕರಿಸುತಿಹರೆಲ್ಲರಳಲಳಲಿ ಬಳಬಳಲಿ (ಜಿನಮು. ೨೪–೨೩). ೨. ಮೆಟ್ಟು; ನಿಗ್ರಹಿಸು; ಅತಿಕ್ರಮಿಸು; ಆಕ್ರಮಿಸು: ದುರುಳ ಕಾಲನ ಬಾಯ ನೊದೆದಾಕರಿಸಿ ತಾಟಸಿಯವಧಿ ವಿಧಿಗಳ (ಬಸವು. ೪೭–೧); ಹಿಡಿದಾಕರಿಸಿ ಮಾದಿಗದುರುಳನಂ . . . ಹೊಡೆದು ಕೆಡಹಿ (ಬಸವು. ೫೭–೩೭); ದುರುಳ ದುರ್ಜನ ನೃಪರ ಹಿಡಿದಾಕರಿಸಿ ಬೆಸಗೊಳಲು (ತೊರರಾ. ೪–೯–೨); ನಾಕವನಿತೆಯ ನಯನ ಕಾಂತಿ ನಿರಾಕುಳಿಸೆ ಹರಿಣೀಕುಳವನಿಂತಾಕರಿಸಿದಳು ಚಾರುವನಲಕ್ಷ್ಮಿಯನು ಚಪಲಾಕ್ಷಿ (ನಿಭಾಗ. ೫–೨–೭); ಆಕರಿಸಿತೇ ಮಾಯೆ ತನ್ನ ವಿವೇಕವನು ವಿಧಿಕೃತವ ಮಾಱುವರಾರು (ನಿಭಾಗ. ೬–೧೬–೧೪); ಆಕರಿಸಿ ನಿಖಿಳೇಂದ್ರಿಯವನಂದೇಕಚಿತ್ತದ ಲಾಂತ್ರಮಾಲಾಂಗೀಕೃತಾಂಗದಲಚ್ಯುತಾಂಘ್ರಿಧ್ಯಾನಪರನಾದ (ನಿಭಾಗ. ೧೦–೬೧–೩೫); ಖಡ್ಗದಿಂ ಶಕ್ತಿಯಿಂದಾಕರಿಸಿ ಚತುರಂಗ ಬಲಗಳಂ ತಲೆಗಳಂ ಹಾರಿಸಿದ ಸಂಗರದೊಳು (ತುರಂಗ. ೫೨–೩೪); ಸಕಲ ರಿಪುಬಲಗಳನಾಕರಿಸಿ ಸಬಳದೊಳ್ . . . ಪೊಯ್ದೊರಸಿದರ್ (ತುರಂಗ. ೫೯–೧೮); ಅವನಿಯೆಲ್ಲವನಾಕರಿಸುವಂತಧಿಕ ಶಕ್ತಿಯ ಸಾಕಲಿಲ್ಲವೆ ಧರ್ಮಸುತ ನೀನೆಂದ ಶ್ರೀಕೃಷ್ಣ (ಜನಭಾ. ೬೨–೩೦). ೩. ಬಿಟ್ಟುಬಿಡು; ತ್ಯಜಿಸು: ಆಕರಿಸದು ದುರ್ಗುಣಮಂ ಪೋಕರಿಸದು ವಿಷಯ ಸುಖಕೆ ಮನ ಮಚ್ಚರಮಂ ನೀಕರಿಸದು ನಿಮ್ಮೊಳಗೇಕೀಕರಿಸದಲಾ (ಶಂಕಕಂ. ೧೯). [ಆಕರಣೆ$_2$ ? + –ಇಸು$_3$]

**ಆಕರಿಸು$_3$** (ಕ್ರಿ). ಆಕಾರವನ್ನು ತಾಳು, —ಧರಿಸು: ಲೋಕವ ತಾಳ್ದನ ಮನೆಯಲಿ ಪುಟ್ಟಿ ಶೋಕದ ನುಡಿಗಳ ಕದ್ದವನನಾಕರಿಸಲು ನಮಗೆ ಗೋಪರೂಪದಿಂದ ಆಕರಿಸಿದನ ಕುಣಿಸಿದರಯ್ಯ ಹರಿಯೇ ಕುಣಿಯೆನುತ (ಪುರಂದ. ೩–೧೧೧–೪). [ಆಕಾರ$_2$ + –ಇಸು$_3$]

**ಆಕೆರಿಸು$_4$** (ಕ್ರಿ). ಆಸೆಪಡು; ಬಯಸು: ಅವನು ಹಣಕ್ಕಾಗಿ ಬಹಳ ಆಕರಿಸುತ್ತಾನೆ (ರೂಢಿ). [ಆಕರ$_1$ + –ಇಸು$_3$]

**ಆಕೆರು** (ನಾ). ಭರ; ಆತುರ; ಗಡಿಬಿಡಿ (?): ನಿಮ್ಮ ತುದಿ ಬುಡವಿಲ್ಲದ ಮಾತಿನ ಆಕರಿನಲ್ಲಿ ಊಟವನ್ನು ಮರೆತು (ಬಿಟ್ಟಜೀ. ೪೭). [?]

**ಆಕರುಷಣ,** ಆಕರಿಸಣ, ಆಕರುಸನ (ನಾ). ಸೆಳೆತ; ಎಳೆತ; ಆಕರ್ಷಣೆ: ಮೆಚ್ಚದರಾರು ಸತ್ಕವಿತಾವಿಲಾಸದ- ಸೂರಿಗಳ ಹೃದಯಾಕರುಷಣಕಥಾಕುತೂಹಲವ (ತೊರರಾ. ೧-೧-೯). **ಆಕರಿಸಣ** (ಕ). **ಆಕರುಸನ:** "ಆಕರ್ಷಣ – ಆಕರುಸನ" (ಶಮದ. ೨೫೪ ಪ್ರಯೋ). [< ಸಂ. ಆಕರ್ಷಣ]

**ಆಕರುಷಿಸು** 'ಆಕರ್ಷಿಸು' ನೋ.

**ಆಕರುಸನ** 'ಆಕರುಷಣ' ನೋ.

**ಆಕರ್ಣಕ** (ನಾ). "ಹೃದಯ ಮೊದಲಾದುವುಗಳ ತುಡಿತದ ಶಬ್ದಗಳನ್ನು ಆಲಿಸಿ ಕೇಳಲು ಉಪಯೋಗಿಸುವ ಸಾಧನ; ಆಕರ್ಣಕ" (Stethoscope. ಇಂಕನಿ). [ಸಂ.]

**ಆಕರ್ಣಕೃಷ್ಟ** (ಗು). ಕಿವಿಯವರೆಗೆ ಸೆಳೆಯಲ್ಪಟ್ಟ,—ಎಳೆದ: ಆಕರ್ಣಕೃಷ್ಟೋತ್ಸೃಷ್ಟ ನಿಜ ವಿಕೀರ್ಣಟಂಕಂಗಳಿಂದಂ (ಆದಿಪು. ೧೪-೧೦೩ ವ). [ಸಂ. (ಆಕರ್ಣಂ + ಕೃಷ್ಟ)]

**ಆಕರ್ಣನ** (ನಾ). ಕಿವಿಯಿಂದ ಕೇಳುವುದು; ಆಲಿಸುವುದು: ಇತರೇತರ ಹೇಷಾರವಾಕರ್ಣನೋದೀರ್ಣ ರೋಷಹಯ ಹೂಂಕಾರ ನಿಷ್ಠುರ (ಆದಿಪು. ೧೪-೯೫ ವ); ಶೈವಪುರಾತನವ್ರಜ ಪುರಾಣಾಕರ್ಣನೋತ್ಸಾಹದಿಂ (ರಾಜಶೇ. ೯-೨). [ಸಂ.]

**ಆಕರ್ಣನೀಯ** (ಗು). ಕಿವಿಯಿಂದ ಕೇಳಲು ಯೋಗ್ಯವಾದ; ಆಲಿಸಬೇಕಾದ: ದ್ವಿರೇಫೋದಿತನಾದಾಕರ್ಣನೀಯಂ ಪಂಚೇಂದ್ರಿಯ ಸುಖದೊದವಂ ನಂದನಂ ಮಾಳ್ಪುದೆಂದುಂ (ಚಂದ್ರಪು. ೧-೧೧೨). [ಸಂ.]

**ಆಕರ್ಣನೇತ್ರೆ** (ನಾ). ಕಿವಿಯವರೆಗೆ ವಿಸ್ತಾರವಾದ ಕಣ್ಣುಗಳುಳ್ಳವಳು: ಸುರುಚಿರ ಚಕೋರನೇತ್ರೆಯರುಯಾಕರ್ಣನೇತ್ರೆಯರು ಬೆಳ್ನೇತ್ರದವರು (ನವಮೋ. ೧೫-೧೬). [ಸಂ. ಆಕರ್ಣನೇತ್ರಾ (ಆಕರ್ಣಂ + ನೇತ್ರ + -)]

**ಆಕರ್ಣಪೂರ** (ನಾ). (ಬಿಲ್ಲಿನ ಹೆದೆಯನ್ನು) ಕಿವಿಯವರೆಗೆ ಸೆಳೆದಿರುವುದು: ಅಸಮಬಲನಾಕರ್ಣಪೂರದಿನೆಸೆ ವಿರಾಟಕುಮಾರನಸು ಲಂಘಿಸಿತು ಕಾಯವನೊದೆದು ಖಚರೀಜನದ ಕುಚಯುಗಕೆ (ಕುವ್ಯಾಭೀ. ೫-೨೬). [ಸಂ. (ಆಕರ್ಣಂ + ಪೂರ)]

**ಆಕರ್ಣಾಂತ** (ಅ). = ಆಕರ್ಣಾಂತಂ: "ತೆಗೆನೆಜೆ—ಆಕರ್ಣಾಂತೇ (ಪೂರಾ ಎಳೆ)" (ಶಮಧಾ); ಜಗತೀನಾಥನನಾಕುಮಾರನೊಸೆದಾಕರ್ಣಾಂತ ವಿಶ್ರಾಂತ ದೃಷ್ಟಿಗಳಿಂ ನೋಡುತುಮೆಯ್ದೆವರ್ಪುದುಂ (ಸುಕುಮಾ. ೧೧-೨). [ಸಂ. ಆಕರ್ಣಾಂತಂ]

**ಆಕರ್ಣಾಂತಂ** (ಅ). ಕಿವಿಯ ಅಂಚಿನ ವರೆಗೆ: ಆನೀವ ಕೋಲಂ ಬಿಲ್ಗೆ ಜೋಡಿಸುತೆ ಆಕರ್ಣಾಂತಂ ಸೆಳೆದಿಸುವುದು (ಅದ್ಭುತ. ೩೩-೬). [ಸಂ.]

**ಆಕರ್ಣಾಂತಂಬರಂ** (ಅ). = ಆಕರ್ಣಾಂತಂ: ಧನಂಜಯನಾಕರ್ಣಾಂತಂಬರಂ ತೆಗೆದಾ ಕರ್ಣಾಂತಂ ಮಾಡಲ್ ಬಗೆದು ಕಂಧರಸಂಧಿಯಂ ನಿಟ್ಟಿಸಿ (ಪಂಪಭಾ. ೧೨-೨೧೨ ವ). [ಆಕರ್ಣಾಂತಂ + -ಬರಂ]

**ಆಕರ್ಣಾಯತಾಂಬಕ** (ನಾ). ಕಿವಿಯವರೆಗೆ ವಿಸ್ತಾರವಾದ ಕಣ್ಣುಗಳುಳ್ಳವನು: ಸಾಯಕವ ತಿರುಹುತ್ತಲಾಕರ್ಣಾಯತಾಂಬಕನೆಡಬಲದ ಕುರುರಾಯನನುಜರ ಮೇಳದಲಿ ಹೊಜವಂಟನಾ ಪಾರ್ಥ (ಕುವ್ಯಾ ಅ. ೭-೪೭). [ಸಂ. (ಆಕರ್ಣಂ + ಆಯತ + ಅಂಬಕ)]

**ಆಕರ್ಣಾಯತಾಸ್ತ್ರ** (ನಾ). ಬಿಲ್ಲಿಗೆ ಬಾಣವನ್ನು ಹೂಡಿ ಕಿವಿಯವರೆಗೆ ಸೆಳೆದಿರುವವನು: ರಾಯನಾತನ ಬಳಿಯಲಾಕರ್ಣಾಯತಾಸ್ತ್ರರು ಕಾರ್ಮುಕಸ್ವಾಧ್ಯಾಯಸಿದ್ಧರು ಹತ್ತುಸಾವಿರ ಮುಕುಟವರ್ಧನರು (ಕುವ್ಯಾಭೀ. ೩-೯). [ಸಂ. (ಆಕರ್ಣಂ + ಆಯತ + ಅಸ್ತ್ರ)]

**ಆಕರ್ಣಿಸು** (ಕ್ರಿ). ಕಿವಿಯಿಂದ ಕೇಳು; ಆಲಿಸು: ದಮನಕನ ಮಾತನಾಕರ್ಣಿಸಿ (ಪಂಚತಂ. ೧೬೮-೧೬); ಕನ್ಯಾಗುಣಕೀರ್ತನಮನಾಕರ್ಣಿಸುತ್ತುಂ ಮನ್ಮಥವಿಕಾರದಿಂ ಕುಮಾರಕಂಠೀರವನಿರೆ (ನಂಬಿರ. ४-೯೯); ಸವಿಗೊರಲನಾಕರ್ಣಿಸಲ್ ಕಿವಿಯನಿತ್ತವಗೆ (ಶ್ರೀರಾಮಾ. ೨೯-೩೩). [ಆಕರ್ಣನ + -ಇಸು₃]

**ಆಕರ್ಷ** (ನಾ). ೧. ತನ್ನ ಕಡೆಗೆ ಸೆಳೆಯುವುದು,—ಎಳೆಯುವುದು. ೨. ಬಿಲ್ಲಿಗೆ ಬಾಣವನ್ನು ಹೂಡಿ ಪ್ರಯೋಗಕ್ಕಾಗಿ ಸೆಳೆಯುವುದು. ೩. ಬಿಲ್ಲು. ೪. ಮನಸ್ಸು ಪರವಶವಾಗುವುದು; ಮೋಹಗೊಳ್ಳುವುದು. ೫. ಪಗಡೆಯಾಡುವುದು; ಪಗಡೆಯಾಟ. ೬. ಪಗಡೆಯ ದಾಳ. ೭. ಪಗಡೆಯ ಹಾಸು; ಹಾಸಂಗಿ: "ಹಾಸಂಗಿಯಲಿ ಮತ್ತದಾಕರ್ಷಮೆಂದೆಂಬುದು" (ಮಂಗರಾ. ೧೧೪-೨೮). ೮. ಪಗಡೆ ಅಥವಾ ಚದುರಂಗದ ಕಾಯಿ. ೯. ಇಂದ್ರಿಯ. ೧೦. ಸೂಜಿಗಲ್ಲು; ಅಯಸ್ಕಾಂತ. ೧೧. ಒಂದು ಬಗೆಯ ವಿಷವೃಕ್ಷ. ೧೨. ಬಿಲ್ಲನ್ನು ಸೆಳೆಯುವ ಕೈ: "ಬಿಲುವಿಡಿದು ನೂಂಕುವಂ ಕರದಂಡೆಯಕ್ಕು ಬರೆಸೆಳೆವ ಕೈಯಾಕರ್ಷಂ" (ಮಂಗರಾ. ೮೮-೩೬). [ಸಂ.]

**ಆಕರ್ಷಕ** (ಗು). ೧. (ಮನಸ್ಸನ್ನು) ಆಕರ್ಷಿಸುವ; ಸೆಳೆಯುವ: ಸೀರೆ ತುಂಬಾ ಆಕರ್ಷಕವಾಗಿತ್ತು (ಪದ್ಮ ಸ. ೨೧೧). (ನಾ). ೨. ಸೂಜಿಗಲ್ಲು; ಅಯಸ್ಕಾಂತ. [ಸಂ.]

**ಆಕರ್ಷಣ** (ನಾ). ೧. ಸೆಳೆಯುವುದು; ಎಳೆತ; ಹಿಡಿದು ಸೆಳೆಯುವುದು: ಒಂದು ಲೋಹಚುಂಬಕದ ದಕ್ಷಿಣ ತುದಿಯನ್ನು ಎರಡನೇದರ ಉತ್ತರ ತುದಿಯ ಸಮೀಪಕ್ಕೆ ಒಯ್ದರೆ, ಅವೆರಡು ಒಂದನ್ನೊಂದು ಎಳೆದುಕೊಳ್ಳುತ್ತವೆ. ಇದಕ್ಕೆ ಲೋಹಚುಂಬಕಗಳ ಆಕರ್ಷಣವೆಂದೆನ್ನುವರು (ಮುಂಬಯಿ. ೫-೨೨೯); ಸಜಾತೀಯ ಧ್ರುವಗಳು ನಿರಸನವನ್ನೂ (Repulsion) ವಿಜಾತೀಯ ಧ್ರುವಗಳು ಆಕರ್ಷಣವನ್ನೂ (Attraction) ಪ್ರದರ್ಶಿಸುವುವು (ಭೌತವಿ. ೩೧೦). ೨. ಸುಲಿಗೆ: "ಸುಲಿಗೆಯಲ್ಲಿಯು ಆಕರ್ಷಣ" (ಶಬ್ದಮಂ. ೮೨). [ಸಂ.]

**ಆಕರ್ಷಣಶಕ್ತಿ** (ನಾ). ಎಳೆತದ ಶಕ್ತಿ,—ಸಾಮರ್ಥ್ಯ. [ಆಕರ್ಷಣ + ಶಕ್ತಿ]

**ಆಕರ್ಷಣೀಯ** (ಗು). ಮನಸ್ಸನ್ನು ಸೆಳೆಯುವ; ಮನೋಹರವಾದ: ಆವರ ಆ ಕುಣಿತ ಆಕರ್ಷಣೀಯವಾಗಿತ್ತು (ಯಕ್ಷಗಾ. ೧೦); ಅವಳ ಮುಖ... ಆಕರ್ಷಣೀಯವಾಗಿ ಪ್ರಶಾಂತವಾಗಿತ್ತು (ಪುನರು. ೧೯೨). [ಸಂ.]

**ಆಕರ್ಷಣೆ** (ನಾ). = ಆಕರ್ಷಣ ೧: ಮಾತಿನಲ್ಲಿ ಆಕರ್ಷಣೆ ಇರುತ್ತಿತ್ತು (ರಂಗರೋ. ೮); ಪ್ರಪಂಚ ಸುಳ್ಳಾದರೂ ಅದರ ಆಕರ್ಷಣೆ ಅವನನ್ನು ಸೆಳೆಯದಿರುವುದಿಲ್ಲ (ಶಕ್ತಿವಿ. ೧೯). [ಸಂ. ಆಕರ್ಷಣ]

**ಆಕರ್ಷಿ** (ನಾ). ಬಾವಿಯಿಂದ ನೀರನ್ನು ಮೇಲಕ್ಕೆ ಎತ್ತುವ ಸಾಧನ; ಏತ: "ಆಕರ್ಷಿಯೇತ" (ಮಂಗರಾ. ೧೨೯-೧೯). [ಸಂ. ಆಕರ್ಷಿನ್]

**ಆಕರ್ಷಿತ** (ಗು). ಎಳೆಯಲ್ಪಟ್ಟ; ಸೆಳೆಯಲ್ಪಟ್ಟ: ಮೃಷ್ಟಾನ್ನ ಭೋಜನ, ಕೈತುಂಬ ದಕ್ಷಿಣೆ, ಮೇಲಾಗಿ ಅಮ್ಮನವರ ಯಶಸ್ಸು ಇವುಗಳಿಂದ ಆಕರ್ಷಿತರಾಗಿ... ಬರುತ್ತಿದ್ದರು (ಕಳಹು. ೨೬). [ಸಂ.]

**ಆಕರ್ಷಿಸು,** ಆಕರುಷಿಸು (ಕ್ರಿ). ಸೆಳೆ; ಎಳೆ; ಹತ್ತಿರಕ್ಕೆ ಬರಮಾಡಿಕೊ: ವಿಷಯೋಪಭೋಗವು ದೇಹವನ್ನು ಆಕರ್ಷಿಸುತ್ತದೆ (ಆರ್ಯಧ. ೯೮); ಅವಳ ಅಪೂರ್ವಪ್ರೇಮ, ವಿಶ್ವಾಸ—ಆ ಮಕ್ಕಳನ್ನು ಅಷ್ಟು ಆಕರ್ಷಿಸಿತ್ತು (ಜೀವರಂ. ೬೯). **ಆಕರುಷಿಸು:** ಹರ್ಷೋತ್ಕರ್ಷ ಜನನಸ್ಥಳವಿದೆನಲಾಕರುಷಿಸಿತು ಜನಮನವನನುಪಮ ಪರಿಣಯಸ್ಥಾನ (ತೊರರಾ. ೧-೧೬-೪೯). [ಆಕರ್ಷಣ + -ಇಸು₃]

**ಆಕರ್ಷೆ** (ನಾ). = ಆಕರ್ಷಣ ೧ : ನಿಜಭಕ್ತಿ ಪರಮದಾಕರ್ಷೆಯದು (ಮಂಕುಕ. ೪೯೪). [ಸಂ. ಆಕರ್ಷ]

**ಆಕಲಕರೆ** 'ಅಕ್ಕಲಕರೆ' ನೋ.

**ಆಕಲನ** (ನಾ). ೧. ಶೇಖರಿಸುವುದು ; ಕೂಡಿಸುವುದು: ಪ್ರಾಕಟಪ್ರಿಯ ವಿನಯಪೂರ್ವ ಸ್ವೀಕರಣ ಸತ್ಕಾರ ಸಂತುಷ್ಟಾಕಲನನಂ ಮಾಡಿ (ಬಸವು. ೫–೧೭). ೨. ಗ್ರಹಿಸುವುದು : ಅದರ ಸಂಪೂರ್ಣ ಸ್ವರೂಪದ ಆಕಲನವನ್ನು ಒಮ್ಮೆಲೇ ಮಾಡಲು ಬರುವುದಿಲ್ಲ (ಪ್ರಬಂಧ. ೧೧೩). ೩. ಕ್ರಿಡಿತದಲ್ಲಿಡುವುದು : ಮಾಯಾಮೋಹ ಹಾಗು ಅಹಂಕಾರ ಇವುಗಳ ತ್ಯಾಗ ಮಾಡಿ, ವಿಷಯಪ್ರವೃತ್ತಿಯಿಂದ ಇಂದ್ರಿಯಗಳ ಆಕಲನ ಮಾಡಬೇಕು (ಭಾವ್ಯಮೃತ. ೪೯). [ಸಂ.]

**ಆಕಲನಶಕ್ತಿ** (ನಾ). ವಿಷಯವನ್ನು ಕೂಲಂಕಷವಾಗಿ ತಿಳಿಯುವ ಸಾಮರ್ಥ್ಯ ; ಗ್ರಹಣಶಕ್ತಿ : ಅಭ್ಯಾಸದಿಂದ ನಮ್ಮ ಜ್ಞಾನ ಬೆಳೆದು, ಮನಸ್ಸು ವಿಸ್ತೃತವಾಗಿ, ಅದರಲ್ಲಿ ಆಕಲನಶಕ್ತಿ ಉಂಟಾಗುತ್ತದೆ (ಮುಂಬಯಿ. ೬–೨೩೬). [ಆಕಲನ + ಶಕ್ತಿ]

**ಆಕಲನೆ** (ನಾ). ಗ್ರಹಿಸುವುದು : ವಿಚಾರವು ಬೇರೆ ವಿಚಾರಿಗಳ ಮನನಕ್ಕೆ ಆಕಲನೆಗೆ ನಿಲುಕದೆ ಹೋದರೆ (ವಿಚಾರಮಂ. ೬೧). [ಸಂ. ಆಕಲನ]

**ಆಕಲಿತ**, ಆಕಳಿತ (ಗು). ೧. ಸೇರಿದ ; ಕೂಡಿದ ; ಹೊಂದಿಕೊಂಡ ; ಬೆರಸಿದ : ಝಣಝಣಿತ ಮೇಖಲಾಕಲಿತ ಹಾರಕೇಯೂರ ಭೂಷಣ ಪ್ರಭೆ ದಿಗಂತಮಂ ಬೆಳಗೆ (ಕಾದಂಬ. ೭೬೮) ; ಏಕ ದ್ವಿ ತ್ರಿ ಚತುಃ ಪಂಚಾಕಲಿತಾರ್ಥಂಗಳಾಗಿ ಜಟಿನೊಳವು ನಿಸರ್ಗಾಕೃತಿಯಿಂದೆ (ಶಮದ. ೨೩). ೨. ಗ್ರಹಿಸಿದ ; ಹಿಡಿದ. ೩. ಗಣಿಸಿದ ; ಲೆಕ್ಕಿಸಿದ. **ಆಕಳಿತ** : ೧. ಸೊಗಯಿಸಿತಾಕಳಿತಪದಾಂಶು ಹರಿತಮಣಿ ಸೋಪಾನಂ (ಚಂದ್ರಪ್ರ. ೭–೧೨೩). [ಸಂ.]

**ಆಕಲಿಸು**, ಆಕಳಿಸು₂ (ಕ್ರಿ). ೧. ಗ್ರಹಿಸು : ವಿಶ್ವದ ಗತಿಶೀಲತೆ ನವೀನತೆ ಕಾಲದ ನಿರಂತರ ಪ್ರವಾಹ ಇವುಗಳನ್ನು ಸರಿಯಾಗಿ ಆಕಲಿಸಿ ನಾವು ಅನುಭವಿಸದಿದ್ದರೆ ಜೀವನವೆಲ್ಲ, ವಿಶ್ವವೆಲ್ಲ ಒಂದು ಕೇವಲ ಯಾಂತ್ರಿಕ ಕ್ರಿಯೆ (ಯಾತ್ರಿಕ. ೪೨). **ಆಕಳಿಸು₂** : ೨. ಹಿಡಿ : ನಳಿನಿಯ ನಳಿನಮನಿನನಾಕಳಿಪಂತಿರೆ ಕರದೆ ವಧುವ ಕರಮಂ ಕರದಿಂ ತಳೆದಂ ಕುಮಾರಂ (ಚಂದ್ರಪ್ರ. ೬–೭೪). [ಆಕಲನ + –ಇಸು₃]

**ಆಕಲ್ಪ₁** (ನಾ). ಒಡವೆ ; ಆಭರಣ ; ಅಲಂಕಾರ : ಬಂದತ್ತು ನಾಗಾರಿ ಹಸ್ತದೊಳುದ್ಭಾಸಿತ ದಿವ್ಯಕುಂಡಲ ಕಿರೀಟಾಕಲ್ಪವಾಕಾಶದಿಂ (ಜಗವಿ. ೮–೨೮) ; ಆಸ್ಥಾನರಂಗಕ್ಕೆ ರತ್ನಮಯಾಕಲ್ಪಮೆನಿಸಿಪ್ಪನಂ . . . ಅಮಾತ್ಯನಾದನಧಿಕಂ ಪೋಲಾಳ್ವದಂಡಾಧಿಪಂ (ಎಕ. XI, ದಾವಣ. ೨೫–೫೫ ; 1224). [ಸಂ.]

**ಆಕಲ್ಪ₂** (ಅ). ಕಲ್ಪದ ವರೆಗೆ : ತಮಗಂತಿರ್ಪಿಡೆಗಳ್ದೊರಮಾದೊಡಂ ಪ್ರೀತಿವಮಾಣದಾಕಲ್ಪಾಂತಂ (ಕಾದಂಬ. ೧೭೫). [ಸಂ. ಆಕಲ್ಪಂ]

**ಆಕಲ್ಯ** (ನಾ). ರೋಗ : "ಆಕಲ್ಯಂ . . . ರುಜಾ — ಈ ೧೨ ವ್ಯಾಧಿ" (ಹಲಾಯು. ೯೮–೪೪೬). [ಸಂ.]

**ಆಕಸ** 'ಅಗಸ' ನೋ.

**ಆಕಸ್ಮಿಕ** (ಗು). ೧. ಅನಿರೀಕ್ಷಿತವಾದ ; ಆಕ್ಷಣವೇ, ಅಲ್ಲೆ, ಹಾಗೆಯೇ ಉಂಟಾದ ; ಕಾರಣವನ್ನು ಹೇಳಲಾಗದ : ನರಕ ನಗರ ಲಗ್ನಾಕಸ್ಮಿಕಾಗ್ನಿಸ್ಫುಲಿಂಗಸ್ಫುರದವಿರಳ ಲಾಕ್ಷಾಗೇಹಪೂರಂ (ಆದಿಪು. ೫–೪೯) ; ಸುಭಟರಿಗಜುಹಿತಾಕಸ್ಮಿಕದ ಭಯವವನೀಶ ಕೇಳೆಂದ (ಕುವ್ಯಾಗ. ೮–೫). (ನಾ). ೨. ಅನಿರೀಕ್ಷಿತವಾದ ಘಟನೆ : ನಾಳೆ ನಾನೇ ಮನೆಯಲ್ಲಿ ಇಲ್ಲದಿದ್ದಾಗ ರಾತ್ರಿಹೊತ್ತು ಏನಾದರೂ ಆಕಸ್ಮಿಕ ನಡೆದರೆ ಆಗ ನಿನಗೇನಾಗುತ್ತದೆ ಹೇಳು (ದೇವಹಂ. ೩೭). ೩. ಅಪಘಾತ ; ಅವಘಡ. [ಸಂ.]

**ಆಕಸ್ಮಿಕಂ** (ಅ). ಅನಿರೀಕ್ಷಿತವಾಗಿ : ಸತಿಪತಿಗಳ್ ಸುಖದಿಂ ಪರ್ಯಂಕಾಗ್ರದೊಳ್ ನಿದ್ದೆಗೆಯ್ವಾಗಳಾಕಸ್ಮಿಕಮಾಗಿ ಪ್ರಣವವೇ ಕರಚರಣಾದ್ಯವಯವಂಗಳಂ ಧರಿಸಿರ್ಬರ ಮಧ್ಯದೊಳ್ ಮಲಗಿರಲೊಡನೆ (ಹವ್ಮಿರ. ೨–೧೬ ವ) [ಸಂ.]

**ಆಕಸ್ಮಿಕತೆ** (ನಾ). ಅನಿರೀಕ್ಷಿತವಾಗಿರುವಿಕೆ. [ಸಂ. ಆಕಸ್ಮಿಕತಾ]

**ಆಕಸ್ಮೀಕ** (ಗು). = ಆಕಸ್ಮಿಕ : "ಅಕ್ಷಣ ವಿಶೂನ್ಯಂ ಕಾರಣಂ ಮೂರಿ ವಾಕಸ್ಮೀಕಾಹ್ವಯಮುಮಂ" (ನಾನಾರ. ೧೨೭). [ಸಂ. ಆಕಸ್ಮಿಕ]

**ಆಕಳ್**, ಆಕಳ, ಆಕಳು (ನಾ). ೧. ಹಸು ; ಗೋವು : "ಆಕಳೆಂದು ಪಶು" (ಕಶಸಾ. ೭–೧೨೯) ; ಆಕಳ್ಗಳಿಲ್ಲದೆಯುಮಾ ಕಳ್ಗಳ ಸೊರ್ಕು ನಿಂದುದಜಿಂದೆ (ಲೀಲಾವ. ೫–೧೧೮) ; ಕಾಮಧೇನಿರ್ದುಮೂಟಕೆ ಗೊಡ್ಡಾಕಳನಾಳ್ವರೇ (ಸೋಮೇಶ. ೩). ೨. ದನಕರು ; ಗೋಸಮುದಾಯ : "ಗೋಸಮುದಾಯವಾಕಳೆಂದಕ್ಕು" (ಶಬ್ದಮಂ. ೩೫) ; "ತುಜುಗಳೆನಲ್ಕಾಕಳೆಂದು ತಿಳಿಗೆ ವಿದಗ್ಧರ್" (ಭಾರನಿ. ೪೬). **ಆಕಳ** : "ಗೋ— ಆಕಳ" (ಗಂಗಾಮ. ೧೨೧) ; ಆಕಳದ ಮೇಲೆ ನಿಬಂಧ ಬರೆದರೆ ಮೊದಲು ಆದರ ವ್ಯಾಖ್ಯೆ ಆಮೇಲೆ ಅದರ ಅವಯವಗಳು, ಅದಾದ ಮೇಲೆ ಆಕಳದ ಸದುಪಯೋಗ (ಮುಂಗಾವು. ೫). **ಆಕಳು** : ಆಕಳಿಗೆಮ್ಮೆಯಂ ಯುವೆಗೆ ಗೋಧುವೆಯಂ ತುರಗಕ್ಕೆ ಕತ್ತೆಯಂ . . . ಪ್ರತಿಮಾಡಿದಸೊರ್ವ ಜೀಯನೆಂದೇಕೆಯೊ ಮೂಢರೊಳ್ಪರ್ (ಸಮಪ. ೧೦–೧೧೭) ; ಜೀವಂ ಪೋದೊಡಲಿನಂತೆ ಪಾಳುಮನೆಯಂತೆ ಪಾಲ್ಬತ್ತಿದಾಕಳಿನಂತೆ (ಧರ್ಮಾಮೃ. ೯–೨೩) ; ಮಾನದ ತೋರಿಹ ಆಕಳಿಗೆ ಕೊಳಗದ ತೋರಿಹ ಕೆಚ್ಚಲು (ಅವಚಂ. ೧೨–೪೮) ; ಆಕಳು ಕಪ್ಪಾದರೆ ಹಾಲು ಕಪ್ಪೇ (ಗಾದೆ).
[ಅವು₁ + –ಕಳ್₂]

**ಆಕಳ** 'ಆಕಳ್' ನೋ.

**ಆಕಳಾಸ** (ನಾ). ಜುಗುಪ್ಸೆ ; ಅಸಹ್ಯ (ದಕ. ಕ). [?]

**ಆಕಳಿ** 'ಆಯ್ಕುಳಿ' ನೋ.

**ಆಕಳಿಕೆ** 'ಆಗುಳಿಕೆ' ನೋ.

**ಆಕಳಿತ** 'ಆಕಲಿತ' ನೋ.

**ಆಕಳಿಸು₁** 'ಆಗುಳಿಸು' ನೋ.

**ಆಕಳಿಸು₂** 'ಆಕಲಿಸು' ನೋ.

**ಆಕಳು** 'ಆಕಳ್' ನೋ.

**ಆಕಳುಮಂದೆ** (ನಾ). ೧. ಗೋವುಗಳ ಸಮೂಹ ; ಹಸುಗಳ ಗುಂಪು. ೨. ಹೊಲದಲ್ಲಿ ನಿಲ್ಲಿಸುವ ಮಂದೆ (ಕ).
[ಆಕಳು (< ಆಕಳ್) + ಮಂದೆ]

**ಆಕಳೇರು** (ನಾ). ಗೋರೋಚನ (ಸ್ಯಾಂಡರ್).
[ಆಕಳ್ + ಏರು₀ (< ಈರು)]

**ಆಕಾಂಕ್ಷಣ** (ನಾ). = ಆಕಾಂಕ್ಷೆ ೧ : ಈಕೆಯ ವದನಾಕಾರಮನೇಕಾಂತಂ ಪೋಲ್ವೆನೆಂಬುದರ್ಕಾಗಿ ಕನತ್ಕೋಕನದಕ್ಕಿಂದುಗಮುಂಟಾಕಾಂಕ್ಷಣಮ ದಜಿಕೊಳೆಂಬುದುಪಮೋತ್ಪ್ರೇಕ್ಷಂ (ಕವಿರಾ. ೩–೬೭). [ಸಂ.]

**ಆಕಾಂಕ್ಷಿತ** (ಗು). ಅಪೇಕ್ಷೆಪಟ್ಟ ; ಬಯಸಿದ : ಲೋಕಮದೂರ್ಧ್ವಾಧೋಮಧ್ಯಾಕಾಂಕ್ಷಿತ ಭೇದರೂಪದಿಂ ಮೂಜಕ್ಕುಂ (ಕವಿರಾ. ೧–೧೧೮).
[ಸಂ.]

**ಆಕಾಂಕ್ಷಿಸು** (ಕ್ರಿ). ಬಯಸು ; ಅಪೇಕ್ಷಿಸು ; ಆಶಿಸು : ತತ್ತ್ವಾಲೋಕದಿನಾಕಾಂಕ್ಷಿಪ ಮುಕ್ತಿಯಕ್ಕುಂ (ಶಮದ. ೧೦) ; ಎಹಗೆ ಮನವಾಕಾಂಕ್ಷಿಸುವುದೊಡಲಹಗೆ ಬೆಳೆದಪುದಶನದಿಚ್ಛೆಗೆಯಹಗೆ ಮನದಾಂಕಾಕ್ಷೆ ಕುಂದುವು ದಶನದಿಚ್ಛೆಯದು ಆಹಗೆ ಕುಂದುವುದು (ಬಸವು. ೪೩–೫೬).
[ಆಕಾಂಕ್ಷಣ + –ಇಸು₃]

**ಆಕಾಂಕ್ಷೆ** (ನಾ). **೧.** ಅಪೇಕ್ಷೆ; ಬಯಕೆ : ಮನವಾಕಾಂಕ್ಷೆಯಿಂದೆನ್ನಪ್ಪನೆನ್ನೊಡನನುದಿನಂ ಕೂಡಿಪ್ಪಂ (ಬಸವು. ೪೭–೪೨) ; ಬಾಲನಾಕಾಂಕ್ಷೆಗಚ್ಚರಿಪಡುತೆ ಮೌನಮಿರೆ (ಶ್ರೀರಾಮಾ. ೨೦–೫೩೮). **೨.** [ವ್ಯಾಕ] "ಭಾಷೆಯಲ್ಲಿ ವಾಕ್ಯವೇ ಮುಖ್ಯ ; ಪದಗಳು ಅದರ ಅವಯವಗಳು . . . ಈ ವಿಷಯದಲ್ಲಿ ಶಾಸ್ತ್ರಜ್ಞರು ವಿಚಾರ ನಡಸಿ, ಆಕಾಂಕ್ಷೆ, ಸನ್ನಿಧಿ (ಅಥವಾ ಆಸತ್ತಿ), ಯೋಗ್ಯತೆ—ಈ ಮೂರನ್ನುಳ್ಳ ಪದಸಮುದಾಯವೇ ವಾಕ್ಯವೆಂದು ನಿರ್ಧರಿಸಿದ್ದಾರೆ. ವಾಕ್ಯದ ಪದಗಳು ಅರ್ಥದ ಹೊಂದಿಕೆಗಾಗಿ ಒಂದನ್ನೊಂದು ಕೋರುವುದೇ ಆಕಾಂಕ್ಷೆ" (ಭಾರವಿಾ. ೨೫೦).
[ಸಂ. ಆಕಾಂಕ್ಷಾ]

**ಆಕಾರ್‌ಬಂದ್** (ನಾ). ಕೃಷಿಕ್ಷೇತ್ರದ ಸರ್ವೇನಂಬರಿನ ವಿಸ್ತಾರ, ಸಂಬಂಧಪಟ್ಟ ಕಂದಾಯ ಮುಂತಾದುವುಗಳನ್ನು ತಿಳಿಸುವ ದಾಖಲೆ ಪುಸ್ತಕ (ರೈಸ್‌ಗೆ. ೫೪೧). [← **ಮರಾ.** ಆಕಾರ್‌ಬಂದ್]

**ಆಕಾರ**$_1$ (ನಾ). [ವ್ಯಾಕ] 'ಆ' ಎಂಬ ವರ್ಣ. [ಸಂ.]

**ಆಕಾರ**$_2$ (ನಾ). **೧.** ರೂಪ; ಆಕೃತಿ : ಆಕಾರಂ ಸ್ಮರಾಕಾರಮನಜನಿಸೆ (ಪಂರಾಮಾ. ೨–೩) ; ಗುರುಗಳೇ ಪೃಥ್ವಿಯ ಆಕಾರವನ್ನು ಕುರಿತು ತಮಗೆ ಕೆಲವು ಪ್ರಶ್ನೆಗಳನ್ನು ಕೇಳಬೇಕೆಂದು ಬಯಸುತ್ತೇನೆ (ಮುಂಬಯಿ. ೪–೬೪). **೨.** ಮನಸ್ಸಿನ ಭಾವಗಳನ್ನು ಹೊರಗೆಡಹುವ ಮುಖಚರ್ಯೆ, ಅಂಗಚೇಷ್ಟೆ ಮುಂತಾದುವು. **೩.** ಸೂಚನೆ ; ಚಿಹ್ನೆ ; ಗುರುತು. [ಸಂ.]

**ಆಕಾರ**$_3$ (ನಾ). **೧.** ಹೊಲ, ಗದ್ದೆ, ತೋಟ ಮುಂತಾದ ಕೃಷಿಕ್ಷೇತ್ರದ ವಿಸ್ತಾರ. **೨.** ಜಮೀನಿನ ಕಂದಾಯ ಅಥವಾ ಸರಕಾರಕ್ಕೆ ಕೊಡಬೇಕಾದ ತೆರಿಗೆ : ರೆವಿನ್ಯೂ ಸರ್ವೇನಂಬರ . . . ೨೦ ಎಕರೆ ೨೪ ಗುಂಟೆ ಕ್ಷೇತ್ರದ ೧೩ ರೂ. ಆಕಾರದ ಆಸ್ತಿಯನ್ನು ೨೦೦ ರೂ. ಗಳಿಗೆ . . . ಮಾರಾಟ ಮಾಡಿದ್ದಾರೆ (ಶರೀಫ. ೬೩) ; ಖಾತೇದಾರರು ಅದರ ವಸೂಲಿಗಾಗಿ ಹೆಚ್ಚು ಆಕಾರ (ಚಾರ್ಜು) ಮಾಡಬೇಕಾಗುವದು (ಬ್ಯಾಂಕಕ್ಕೆ. ೬೮) ; ವಿಸ್ತೀರ್ಣ ಎರಡು ಎಕರೆ ಆಕಾರ ಆರು ರೂಪಾಯಿ (ರೂಢಿ). **೩.** ಉತ್ಪತ್ತಿ; ಹುಟ್ಟುವಳಿ : ಅದರ (ಎಲೆಯ ತೋಟದ) ಆರೈಕೆಯನ್ನು ಇಲ್ಲಿ ಹೇಳಿದ ಪ್ರಕಾರ ಮಾಡುತ್ತಾ ಹೋದರೆ ಪ್ರತಿ ವರ್ಷಕ್ಕೂ ಸಾವಿರ ರೂಪಾಯದ ಆಕಾರಕ್ಕೇನೂ ಕಡಿಮೆಯಿಲ್ಲ (ಕೃಷಿಪ್ರ. ೧೬೩). [ಸಂ. ?]

**ಆಕಾರಂಗಿಡು** (ಕ್ರಿ). ರೂಪಗೆಡು : ಈ ಕಷ್ಟನಂದದಿಂ ಮೆಯ್ಯಾಕಾರಂಗೆಟ್ಟು ನಮೆವರಂ ಕಂಡಜಿಯೆಂ (ಧರ್ಮಾಮೃ. ೪–೯೦).
[ಆಕಾರ$_2$ + ಕಿಡು (< ಕೆಡು)]

**ಆಕಾರಂಬಡೆ** (ಕ್ರಿ). ರೂಪವನ್ನು ಧರಿಸು : ಲೋಕಂ ಡಮರುಗಮಂ ಡಮರುಗದೊಳ್ ಮಗುಚಿಟ್ಟಂತೆ ಆಕಾರಂಬಡೆದುದು (ಜಯಕಾ. ೧–೨೮). [ಆಕಾರ$_2$ + ಪಡೆ$_1$]

**ಆಕಾರಗುಪ್ತಿ** (ನಾ). **೧.** ರೂಪವನ್ನು ಮರೆಮಾಡಿಕೊಳ್ಳುವುದು. **೨.** [ನಾಟ್ಯ] ಮನಸ್ಸಿನ ಭಾವಗಳನ್ನು ಹೊರಗೆ ತೋರ್ಪಡಿಸದಂತೆ ಮರಸಿಡುವುದು ; ಅವಹಿತ್ಥ.
[ಆಕಾರ$_2$ + ಗುಪ್ತಿ]

**ಆಕಾರಗೊಳ್ಳು** (ಕ್ರಿ). ರೂಪವನ್ನು ಧರಿಸು ; ಮೂರ್ತಿಮತ್ತಾಗು : ಕವಿಯ ಕಲ್ಪನೆಗಳು ಅವನ ಪ್ರತಿಮೆಗಳಲ್ಲಿ ಆಕಾರಗೊಳ್ಳುತ್ತವೆ (ರೂಢಿ).
[ಆಕಾರ$_2$ + ಕೊಳ್ಳು (< ಕೊಳ್$_1$)]

**ಆಕಾರಗೋಪನ** (ನಾ). = ಆಕಾರಗುಪ್ತಿ **೧.**
[ಆಕಾರ$_2$ + ಗೋಪನ]

**ಆಕಾರಣ** (ನಾ). **೧.** ಕರೆಯುವುದು ; ಬರಮಾಡಿಕೊಳ್ಳುವುದು. **೨.** ಸವಾಲು ಹಾಕುವುದು. [ಸಂ.]

**ಆಕಾರಣೆ** (ನಾ). ಉತ್ಪತ್ತಿ ; ಹುಟ್ಟುವಳಿ : ಪೆಜ್ಜುಂಕದ ವೆಗ್ಗಡೆ ಕರಣಂಗಳು ಬಿಟ್ಟ ಧರ್ಮಮಾಉದೆಂದಡೆ ಕುಳಿಯ ಸುಂಕದಾಕಾರಣೆಯಿಂ ಬಿಟ್ಟ ತೋಂಟ (ಸೌಇಇ. XI–ii, ೧೬೨–೪೬ ; 1121). [?]

**ಆಕಾರಪೂಜೆ** (ನಾ). ವಿಗ್ರಹಾರಾಧನೆ; ಮೂರ್ತಿಪೂಜೆ (ಕ).
[ಆಕಾರ$_2$ + ಪೂಜೆ]

**ಆಕಾರರಚನೆ** (ನಾ). ಆಕಾರವನ್ನು ಸೃಷ್ಟಿಮಾಡುವುದು : ಈ ಕತೆಗಳಲ್ಲಿ ಸೋದ್ದಿಶ್ಯವಾದ ಆಕಾರ ರಚನೆಯ ಪ್ರಯತ್ನವಿದೆ (ಹೊಸಕ್ಷಿ. ೨೮೩). [ಆಕಾರ$_2$ + ರಚನೆ]

**ಆಕಾರಶುದ್ಧಿ** (ನಾ). ರೂಪದಲ್ಲಿ ಏನೂ ಕೊರತೆಯಿಲ್ಲದಿರುವುದು : ಅವಳದು ನೀಳವಾದ, ಹಾಳಿತವಾದ ಆಕಾರಶುದ್ಧಿಯುಳ್ಳಂಥ ದೇಹ (ಒಂಟಿದ. ೩೫). [ಆಕಾರ$_2$ + ಶುದ್ಧಿ]

**ಆಕಾರಸಂವರಣೆ** (ನಾ). **೧.** = ಆಕಾರಗುಪ್ತಿ **೧** : ನಿಖಿಲ ಮೃಗಗಣಪರಿವೃತನುಮಾಗಿಯಾಕಾರಸಂವರಣೆಯನುಂಟುಮಾಡಿಕೊಂಡಿರ್ಪುದುಂ (ಪಂಚತಂ. ೩೬–೧೩) ; ಅಪಮಾನಂಬಟ್ಟು ಉಪಧಾವಿಶುದ್ಧನಪ್ಪ ಮಂತ್ರಿಯಂತಾಕಾರಸಂವರಣೆಯನುಂಟುಮಾಡಿಕೊಂಡು (ಪಂಚತಂ. ೩೬–೧೯). **೨.** = ಆಕಾರಗುಪ್ತಿ **೨** : "ಅವಹಿತ್ಥಮೆಂಬುದು ಆಕಾರಸಂವರಣೆ" (ಹಲಾಯು. ೧೨೭–೮೭). [ಆಕಾರ$_2$ + ಸಂವರಣೆ]

**ಆಕಾರಹಕ್ಕ** (ನಾ). (?) : ಅಂತಾಕಾರಹಕ್ಕದಧಿಷ್ಠಾಯಕಂ ಮೊಲ್ಲೆಯಬರ್ಮಣ್ಣಂ ಮಾಡಿದ ಧರ್ಮ (ಮುಂಬರಾ. XI, ೨೪೯–೨೬ ; 1121). [?]

**ಆಕಾಲಿಕಿ, ಆಕಾಳಿಕಿ** (ನಾ). **೧.** ಕ್ಷಣಿಕವಾದದ್ದು. **೨.** ಮಿಂಚು. **ಆಕಾಳಿಕಿ : ೨.** ಆಖಂಡಲ ಲಲಿತಧನುರ್ಲೀಲಮಾಕಾಳಿಕೀಸಂಚಲವಿಾಸೌಂದರ್ಯಮಿಂತೀ ನವರಸಚಯಮೀ ದೇಹಂ (ಅಜಿಪು. ೬–೫೦).
[ಸಂ. ಆಕಾಲಿಕೀ]

**ಆಕಾಶ** (ನಾ). **೧.** ಪಂಚಭೂತಗಳಲ್ಲಿ ಒಂದು ; ಗಗನ ; ಅಂತರಿಕ್ಷ : "ತೂಗುವ ಮುಗಿಲ್ವಟ್ಟೆ ಗಾಳಿವಟ್ಟೆಯೆನಲ್ಕಂದಾಗಲಾಕಾಶವೆಸರದು" (ಕವಿಕಂ. ೪೬) ; ಪುಳಿಯೊಳ್ ಕರ್ಚಿದ ಬಾಳ ಬಣ್ಣಮನೆ ಪೋಲ್ವಾಕಾಶಮಾಕಾಶಮಂಡಳಮಂ ಪರ್ವಿದ ಬೆಳ್ಮುಗಿಲ್ (ಪಂಪಭಾ. ೭–೭೧) ; ಆಕಾಶದಲಾಡುವ ಹದ್ದನೊಂದ ಕಂಡೆ (ಆದವ. ೧೯೭–೧) ; ಆಕಾಶಕ್ಕಿಂತ ಎತ್ತರವಿಲ್ಲ, ಭೂಮಿಗಿಂತ ಅಗಲವಿಲ್ಲ (ಗಾದೆ). **೨.** ಬಯಲು ; ಶೂನ್ಯಪ್ರದೇಶ. **೩.** [ಛಂದ] ತಗಣ (– – ∪) ಎಂಬ ಒಂದು ಅಕ್ಷರಗಣ : ದಿವಾಕರಾಕಾಶ ದಿನೇಶ ಪಾವಕರ್ ಸುವಿಶ್ರಮಂ ಬಂದಿರೆ ಸಪ್ತಸಂಖ್ಯೆಯೊಳ್ . . . ವಂಶಸ್ಥಮೆನಿಪ್ಪ ನಾಮದಿಂ (ಛಂದೋಂಬು. ೨–೭೮). **೪.** [ಜೈನ] ಆರುಬಗೆಯ ದ್ರವ್ಯಗಳಲ್ಲಿ ಒಂದು. 'ಆಕಾಶದ್ರವ್ಯ' ಪರಾ. **೫.** [ಗಣಿತ] ಬಿಂದು ; ಸೊನ್ನೆ : ಗಗನಂ ಶೂನ್ಯಾಂಬರ ಖಂ ಮಿಗೆಯಾಕಾಶಂ . . . ನಭಮುಂ ಸೊಗಯಿಪ ಬಿಂದುವಿನ ನಾಮ ನಾಸ್ತಿ ಸಮೇತಂ (ವ್ಯವಹಾ. ೧೦–೧೦). [ಸಂ.]

**ಆಕಾಶಕೇಶ** (ನಾ). ಆಕಾಶವೇ ತಲೆಗೂದಲಾಗುಳ್ಳವನು ; ಶಿವ : ಕೀನಾಶಮದನಾಶ ಪುರನಾಶ ಪರಮೇಶ ಆಕಾಶಕೇಶಾ (ನವಮೋ. ೨೦–೩೨). [ಆಕಾಶ + ಕೇಶ]

**ಆಕಾಶಕೊಳವೆ** (ನಾ). = ಆಕಾಶಬಾಣ **೧.** (ದಕ).
[ಆಕಾಶ + ಕೊಳವೆ]

**ಆಕಾಶಗಂಗೆ** (ನಾ). **೧.** ದೇವಗಂಗಾನದಿ ; ಬಾಂದೊರೆ : ಪ್ರಾಣಲಿಂಗಕ್ಕೆ ಕಾಯಕವೇ ಸೆಜ್ಜೆ, ಆಕಾಶಗಂಗೆಯಲ್ಲಿ ಮಜ್ಜನ ಹೂವಿಲ್ಲದ ಪರಿಮಳದ ಪೂಜೆ, ಹೃದಯಕಮಲದಲ್ಲಿ ಶಿವಶಿವಾ ಎಂಬ ಶಬ್ದ (ಅವಚಂ. ೪೬–೧೯೮). **೨.** ತಿರುಪತಿ ಮುಂತಾದ ಕ್ಷೇತ್ರಗಳಲ್ಲಿ ಒಂದು ಜಲಪ್ರಪಾತದ ಹೆಸರು. [ಆಕಾಶ + ಗಂಗೆ]

**ಆಕಾಶಗಂಟೆ** (ನಾ). ವೇಶ್ಯೆಯರ ಮನೆಯ ಮುಂಭಾಗದಲ್ಲಿ ಎತ್ತರದಲ್ಲಿ ಕಟ್ಟಿರುವ ಗಂಟೆ (?): ಜಗದಂತಂಬರಮಂ ಧರಾತಳಮುಮಂ ಪೋಲ್ವುಗ್ರಪಾತಾಳಸೂಜಿಗಳಂ ಗರ್ಜಿಪ ಭೇರಿ ಕಾಟಕಿಯರಂ ಪೇಗಿಲ್ಲದಾಕಾಶಗಂಟೆಗಳಂ ವಿಸ್ಮಯಮಾಗೆ ಬಂಚಿಪ ಕೃತಾಕೃತ್ಯತ್ವದಿಂ ಸಂದಾಳುಗಳಂ ಕುಂಟಣಿಯರ್ಕಳಂ ಪಲರುಮಂ ಕಂಡರ್ವಣಿಜ್ನಂದನಂ (ಬಂಹರಿ. ೩-೩೩). [ಆಕಾಶ + ಗಂಟೆ]

**ಆಕಾಶಗರುಡಬಳ್ಳಿ** (ನಾ). ಗಿಣಿಮೂಗಿನ ಗೆಡ್ಡೆ ಗಿಡ (ಕಿ).
[ಆಕಾಶ + ಗರುಡ + ಬಳ್ಳಿ]

**ಆಕಾಶಗಾಮಿ** (ನಾ). ಅಂತರಿಕ್ಷದಲ್ಲಿ ಸಂಚರಿಸುವವನು ; ಖೇಚರ; ದೇವತೆ: ಆತನಾಕಾಶಗಾಮಿ ನೀಮೆಂತು ಕೊಲ್ವಿರೆನೆ (ವಡ್ಡಾರಾ. ೫೯–೨೩).
[ಸಂ. ಆಕಾಶಗಾಮಿನ್]

**ಆಕಾಶಗಾಮಿತ್ವ** (ನಾ). ಗಗನದಲ್ಲಿ ಸಂಚರಿಸುವುದು : ಪದವಿನ್ಯಾಸಮಿಲ್ಲದೆಯುಂ ಆಕಾಶಗಾಮಿತ್ವಮೆಂಬುದು (ಶ್ರಾವಕಾ. ೯೩–೨೦). [ಸಂ.]

**ಆಕಾಶಗಾಮಿನಿ** (ನಾ). = ಆಕಾಶಗಾಮಿತ್ವ : ಬಿಲ್ಲು ತೀರು . . . ಆಕಾಶಗಾಮಿನಿ. . .ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾಧಿ ಸಾಧನ ವಿಶೇಷಂಗಳಿಂದಲುಂ (ವಿವೇಕ. ೨೬೩). [ಸಂ. ಆಕಾಶಗಾಮಿನೀ]

**ಆಕಾಶಗಾಮಿನಿವಿದ್ಯೆ** (ನಾ). ಗಗನದಲ್ಲಿ ಸಂಚರಿಸುವ ಶಕ್ತಿಯನ್ನು ಕೊಡುವ ವಿದ್ಯೆ : ಸೀತೆಯ ಕೋಮಳಾಂಗಸ್ಪರ್ಶನದಿನಾಕಾಶಗಾಮಿನಿ ವಿದ್ಯಾವಿನಾಶಮಕ್ಕುಮೆಂಬ ಭಯದಿಂ ಮುಟ್ಟಲಂಜಿ (ಕಗವಿ. ೪೪ ಚಾವುಂಪು). [ಆಕಾಶಗಾಮಿನಿ + ವಿದ್ಯೆ]

**ಆಕಾಶಗೂಡು** (ನಾ). = ಆಕಾಶದೀಪ (ಕಿ). [ಆಕಾಶ + ಗೂಡು]

**ಆಕಾಶದೀಪ** (ನಾ). ದೀಪಾವಳಿ ಮುಂತಾದ ಹಬ್ಬದ ದಿನಗಳಲ್ಲಿ ಎತ್ತರವಾದ ಕಂಬದ ತುದಿಯಲ್ಲಿ ತೂಗುಬಿಡುವ ದೀಪ; ಗೂಡುದೀಪ. [ಆಕಾಶ + ದೀಪ$_1$]

**ಆಕಾಶದ್ರವ್ಯ** (ನಾ). [ಜೈನ] ಷಡ್ದ್ರವ್ಯಗಳಲ್ಲಿ ಒಂದು : "ಈ ಭೌತಿಕ ಜಗತ್ತು ಆರುದ್ರವ್ಯಗಳಿಂದ ನಿರ್ಮಾಣವಾಗಿದೆ. ಅವುಗಳಲ್ಲಿ ಜೀವ ಅಜೀವ ಎಂದು ಎರಡು ಭೇದಗಳು. ಅಜೀವದ್ರವ್ಯಗಳಲ್ಲಿ ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ ಎಂಬ ಐದು ವಿಧಗಳನ್ನು ಹೇಳಲಾಗಿದೆ" (ಜೈನಪ. ೪೩೧) ; ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಗಳೆಂಬ ಷಡ್ದ್ರವ್ಯಂಗಳ ಗುಣಪರ್ಯಾಯಮುಮಂ (ಸುಕುಮಾ. ೩–೩೯ ವ). [ಆಕಾಶ + ದ್ರವ್ಯ]

**ಆಕಾಶಪುರಾಣ** (ನಾ). ನಿರಾಧಾರವಾದ ಕಥೆ ; ಕೆಲಸಕ್ಕೆ ಬಾರದ ಮಾತು ; ಕಟ್ಟೇಪುರಾಣ : ಕಾಗೆ ಗೂಗೆಗಳ ಕತೆಯಾಗಿ ಆಕಾಶಪುರಾಣವಾಗಿ ಮೂಲೆಗುಂಪಾಗುತ್ತದೆ (ನಂಜುಂಡ. ೧೨೪). [ಆಕಾಶ + ಪುರಾಣ]

**ಆಕಾಶಪುಷ್ಪ** (ನಾ). ಅತ್ಯಂತ ಅಸಂಭವವಾದ ವಸ್ತು ; ಗಗನಕುಸುಮ : ಆಕಾಶಪುಷ್ಪವು ಅರಳಿತ್ತು ಹೊರಳಿತ್ತು ತೆರಳಿದ ದಿಟ್ಟಿಯು ಒಂದು ಕಡೆ (ಸಖೀಗೀ. ೧೬–೩೯೯). [ಆಕಾಶ + ಪುಷ್ಪ]

**ಆಕಾಶಬಳ್ಳಿ** (ನಾ). ಒಂದು ಬಗೆಯ ಬಳ್ಳಿ : ದುರಾಂಟಾ ಎಂಬ ಬೇಲಿಯಗಿಡದ ಮೇಲೆ ಒಂದು ಬಳ್ಳಿ ಹರಡಿರುವುದನ್ನು ನೀವು ಸಾಮಾನ್ಯವಾಗಿ ನೋಡಿರಬಹುದು. ಇದನ್ನು ಆಕಾಶಬಳ್ಳಿ ಅಥವಾ ಮುಂಗನಬಳ್ಳಿ ಎಂದು ಕರೆಯುತ್ತಾರೆ (ಸಸ್ಯಶಾ. ೧೦೯).
[ಆಕಾಶ + ಬಳ್ಳಿ. / **ಮಲ.** ಆಕಾಶವಳ್ಳಿ ; **ಹಿಂ.** ಆಕಾಶಬೇಲ್]

**ಆಕಾಶಬಾಣ** (ನಾ). **೧.** ಆಕಾಶದ ಕಡೆಗೆ ಬಿಡುವ ಮದ್ದಿನ ಬಾಣ. **೨.** "ಬಾಣಬಿರುಸು, ಸಂಕೇತಸೂಚನೆ, ತೊಂದರೆಯಲ್ಲಿರುವ ಹಡಗಿಗೆ ಹಗ್ಗವೆಸೆಯುವುದು ಮೊದಲಾದವುಗಳಲ್ಲಿ ಉಪಯೋಗಿಸುವ, ಒಳಗಿನ ಮದ್ದನ್ನು ಹೊತ್ತಿಸುವುದರಿಂದ ಮೇಲಕ್ಕೊ ದೂರಕ್ಕೊ ಹಾರಬಲ್ಲ, ಲೋಹದ ಅಥವಾ ಕಾಗದದ ಉರುಳೆಯಾಕಾರದ ಕೋಶ ; ಆಕಾಶಬಾಣ" (Rocket. ಇಂಕನಿ).
[ಆಕಾಶ + ಬಾಣ]

**ಆಕಾಶಬಿಲ್ಲು** (ನಾ). ಕಾಮನಬಿಲ್ಲು ; ಮಳೆಬಿಲ್ಲು : "ಇಂದ್ರಾಯುಧ— ಅಂದರೆ ಸುರಚಾಪವೆಂಬ ಆಕಾಶಬಿಲ್ಲು" (ಸಿದ್ಧಾಂತಿ. ೨೮).
[ಆಕಾಶ + ಬಿಲ್ಲು$_1$ (< ಬಿಲ್$_2$)]

**ಆಕಾಶಬುಟ್ಟಿ** (ನಾ). **೧.** = ಆಕಾಶದೀಪ. **೨.** "ಸರಿಸುಮಾರಾಗಿ ಗುಂಡಾಗಿರುವ, ಗಾಳಿ ತೂರದ ಪಟ್ಟೆಯ ಚೀಲದಲ್ಲಿ ವಾಯುವಿಗಿಂತಲೂ ಹಗುರವಾದ ಅನಿಲವನ್ನು ತುಂಬಿ, ತಾನಾಗಿ ಮೇಲಕ್ಕೇರುವಂತೆ ಮಾಡಿರುವ ಸಾಧನ; ಆಕಾಶಬುಟ್ಟಿ (Balloon ಇಂಕನಿ) ; ಇಡಿಯ ವರುಷದ ಹರುಷ ಆಕಾಶಬುಟ್ಟಿಯಲಿ ಬಣ್ಣದೊಟ್ಟಿಲದಲ್ಲಿ ಕಣ್ಣು ತುಂಬುವ ಕಂದ (ನೆಲವು. ೬೨). [ಆಕಾಶ + ಬುಟ್ಟಿ]

**ಆಕಾಶಭಾಷಿತ** (ನಾ). [ನಾಟ್ಯ] "ಯಾವ ಪಾತ್ರಗಳೂ ಮಾತನಾಡದೆ ಇದ್ದರೂ, ಮಾತನ್ನು ಕೇಳಿದಂತೆ ನಟಿಸಿ . . . ಉತ್ತರ ಕೊಡುವುದು" (ಕೈಪಿಡಿ. ೨೦೬). [ಆಕಾಶ + ಭಾಷಿತ]

**ಆಕಾಶಮಧ್ಯೆ** (ನಾ). ಆಕಾಶದಂತೆ ಸೂಕ್ಷ್ಮವಾದ ಸೊಂಟವುಳ್ಳವಳು : ಆಕಾಶಮಧ್ಯೆ ಮನ್ಮಥಕಳಾಬೋಧ್ಯೆ (ನವಮೋ. ೧–೧).
[ಸಂ. ಆಕಾಶಮಧ್ಯಾ (ಆಕಾಶ + ಮಧ್ಯ + –)]

**ಆಕಾಶಮಲ್ಲಿಗೆ** (ನಾ). ಒಂದು ಬಗೆಯ ಹೂವು ; ತಿಲಕಪುಷ್ಪ.
[ಆಕಾಶ + ಮಲ್ಲಿಗೆ]

**ಆಕಾಶಯಾನ** (ನಾ). **೧.** ಆಕಾಶಮಾರ್ಗದಲ್ಲಿ ಮಾಡುವ ಪ್ರಯಾಣ. **೨.** ಆಕಾಶದಲ್ಲಿ ಪ್ರಯಾಣಮಾಡುವ ಸಾಧನ.
[ಆಕಾಶ + ಯಾನ]

**ಆಕಾಶಲಿಂಗ** (ನಾ). [ವೀಶೈ] ಬಯಲೇ ರೂಪವಾಗಿರುವ ಶಿವಲಿಂಗ: ಕಾಂಚೀಪುರದಲ್ಲಿ ಪಾರ್ಥಿವಲಿಂಗ, ಜಂಬೂದ್ವೀಪದಲ್ಲಿ ಅಪ್‌ಲಿಂಗ, ತಿರುವಣ್ಣಾಮಲೆಯಲ್ಲಿ ತೇಜೋಲಿಂಗ, ಕಾಳಹಸ್ತಿಯಲ್ಲಿ ವಾಯುಲಿಂಗ, ಚಿದಂಬರದಲ್ಲಿ ಆಕಾಶಲಿಂಗ – ಹೀಗೆ ವಿಶ್ವದಲ್ಲಿ ಕಾಣುವ ಪಂಚಭೂತಗಳ ರೂಪದಲ್ಲಿಯೂ ಪರಮಾತ್ಮನು ಸಾದಾಖ್ಯಗಳೆನಿಸಿ ವಿರಾಜಿಸುತ್ತಿರುವುದನ್ನು ನಾವು ಸ್ಪಷ್ಟವಾಗಿ ಕಾಣುತ್ತೇವೆ (ಶಕ್ತಿವಿ. ೨೬). [ಆಕಾಶ + ಲಿಂಗ]

**ಆಕಾಶವಚನ** (ನಾ). ಅಶರೀರವಾಣಿ : ಸುತನ ಶೋಕದ ಮಱುಕವಾಕಾಶವಚನದೊಳಾಯ್ತು (ಕುವ್ಯಾದ್ರೋ. ೮–೫). [ಆಕಾಶ + ವಚನ]

**ಆಕಾಶವಲೆ** (ನಾ). ಹಕ್ಕಿಗಳನ್ನು ಹಿಡಿಯಲು ಎತ್ತರದ ಪ್ರದೇಶದಲ್ಲಿ ಹರಡಿದ ಬಲೆ : ಪಿಂಪಿನಾಕಾಶವಲೆ ಸುತ್ತುವಲೆ ಸುಲಭವಲೆ (ರುಕ್ಮಾಂಗ. ೧೦–೧೯). [ಆಕಾಶ + ಬಲೆ]

**ಆಕಾಶವಲ್ಲಿ** (ನಾ). = ಆಕಾಶಬಳ್ಳಿ : ಆಕಾಶವಲ್ಲಿ ಎಂಬ ಬಳ್ಳಿಯು ಕಳ್ಳಿಗಿಡದ ಮೇಲೆ ಹುಟ್ಟಿ ಅಲ್ಲೇ ಬೆಳೆಯುತ್ತದೆ (ಮುಂಬಯಿ. ೪–೨೬೯).
[ಆಕಾಶ + ವಲ್ಲಿ$_1$]

**ಆಕಾಶವಾಣಿ** (ನಾ). **೧.** ಗಗನದಲ್ಲಿ ಕೇಳಿಬರುವ ಶಬ್ದ ; ಅಶರೀರವಾಣಿ : ಬಂದದ್ದೆಲ್ಲ ಶ್ರುತಿಪ್ರಮಾಣವಲ್ಲ ಆಕಾಶವಾಣಿಯಾಗದು (ಅರಳು. ೨೯೩–೧೧). **೨.** ತಂತಿಯಿಲ್ಲದೆ ಬರುವ ಸಮಾಚಾರ ಮುಂತಾದುವು: ಸದ್ದು ಹೊರಡುವ ಸಮಯಕ್ಕೆ ಸರಿಯಾಗಿ ಮೇಲಿನ ಸ್ಥಳದಿಂದ ಆಕಾಶವಾಣಿಗಳನ್ನು (Wireless) ಕಳುಹುವರು (ಬಾಲಪ್ರ. II, ೭೫೮) ; ಸ್ವಲ್ಪ ದೂರ ಸರಿಯುವುದರಲ್ಲಿಯೆ ಅವರ ವಿಮಾನದ 'ಆಕಾಶವಾಣಿ' ಉಪಕರಣವು ಹಾಳಾಯಿತು (ಬಾಲಪ್ರ. II, ೯೫೦). **೩.** ರೇಡಿಯೋ ; ಬಾನುಲಿ : ಆಕಾಶವಾಣಿಯ ಹವೆಯ ಮುನ್ಸೂಚನೆ ಕೇಳಿಯೆ ಬೆಚ್ಚುವರೇನೆ (ಚಂದ್ರವೀ. ೧೩೧–೨೩). [ಆಕಾಶ + ವಾಣಿ]

**ಆಕಾಶವಿಮಾನ** (ನಾ). ಗಗನದಲ್ಲಿ ಸಂಚರಿಸುವ ವಾಹನ; ಆಕಾಶಯಾನ; ಏರೋಪ್ಲೇನ್: ಆಕಾಶವಿಮಾನದಿಂದ ಕಂಡುಬರುವ ಇದರ ದೃಶ್ಯವನ್ನು ಇಲ್ಲಿ ಕೊಡಲಾಗಿದೆ (ಭೂವಿವ. ೧೯೬).
[ಆಕಾಶ + ವಿಮಾನ]

**ಆಕಾಶವೀಣೆ** (ನಾ). ತಂತಿಯ ವಾದ್ಯಗಳಲ್ಲಿ ಒಂದು ಬಗೆ: ವಿಪಂಚಿಕೆ... ಆಕಾಶವೀಣೆ ಎಂಬ ಮೂವತ್ತುಮೂಱು ತಂತ್ರೀವಾದ್ಯಂಗಳಲ್ಲಿ (ವಿವೇಕ. ೨೩೬); ಪ್ರಾಚೀನ ಗ್ರಂಥಗಳು, ಕಿನ್ನರಿ, ಪಿನಾಕಿ, ರುದ್ರವೀಣೆ, ಆಕಾಶವೀಣೆ ... ಮುಂತಾಗಿ ನಾನಾ ರೀತಿಯ ವೀಣೆಗಳನ್ನು ನಮೂದಿಸುತ್ತವೆ (ಸಂಗೀತಂ. ೩೧೦). [ಆಕಾಶ + ವೀಣೆ]

**ಆಕಾಶಸ್ವರ** (ನಾ). ಮೂಗಿನ ರಂಧ್ರದ ಮತ್ತು ಶ್ವಾಸನಾಳದ ಮೂಲಕ ಉಚ್ಛ್ವಾಸ ನಿಶ್ವಾಸಗಳು ನಡೆಯುವಾಗ ಕಾಲಕ್ಲುಪ್ತಿಯಿಂದ ಹೊರಡುವ ಒಂದು ಬಗೆಯ ಸ್ವರ: ಸ್ವರಭೇದದಿಂ ಆಯುಃಪರಿಮಾಣವನಱಿವ ಕ್ರಮವೆಂತೆಂದೊಡೆ ನಾಸಿಕಾರಂಧ್ರದಿಂ ಇಡೆ ಪಿಂಗಳೆ ಎಂಬೆರಡು ನಾಡಿಗಳಿಂದೊಡಗೂಡಿದೆರಡು ನಾಳಗಳಿಹವು ಅವುಗಳೊಂದೊಂದು ನಾಳದಲ್ಲಿ ಪೃಥ್ವೀಸ್ವರ ಅಪ್ಪುಸ್ವರ ತೇಜಸ್ಸಿನ ಸ್ವರ ವಾಯುವಿನ ಸ್ವರ ಆಕಾಶಸ್ವರ ಇಂತೀ ಪಂಚಸ್ವರ ಸಂಜ್ಞೆಯಿಂ ತಾಳಿ ಕಾಲಕ್ಲುಪ್ತಿಯಿಂ ಉಚ್ಛ್ವಾಸ ನಿಶ್ವಾಸವಾಯುವೇ ಸಂಚರಿಸುತ್ತಿಹುದು (ವಿವೇಕ. ೧೮೭). [ಆಕಾಶ + ಸ್ವರ]

**ಆಕಾಶಾಸ್ತಿಕಾಯ** (ನಾ). [ಜೈನ] ಐದು ವಿಧವಾದ ಅಸ್ತಿಕಾಯಗಳಲ್ಲಿ ಒಂದು: ಜೀವಾಸ್ತಿಕಾಯಂ ಪುದ್ಗಲಾಸ್ತಿಕಾಯಂ ಧರ್ಮಾಸ್ತಿಕಾಯಂ ಅಧರ್ಮಾಸ್ತಿಕಾಯಂ ಆಕಾಶಾಸ್ತಿಕಾಯಮೆಂಬ ಪಂಚಾಸ್ತಿಕಾಯನಿಕಾಯಮುಮಂ (ಸುಕುಮಾ. ೩-೩೬ ವ).
[ಆಕಾಶ + ಅಸ್ತಿಕಾಯ]

**ಆಕಾಸ** 'ಆಗಸ' ನೋ.

**ಆಕಾಸವನಿ** (ನಾ). ಮೇಲಿನಿಂದ ಬೀಳುತ್ತಿರುವ ಮಳೆಯ ಹನಿ: ಚಾದಗೆಯಂತಾಕಾಸವನಿಗೆ ಬಾಯಂ ಬಿಡುತ್ತುಂ (ಧರ್ಮಾಮೃ. ೧-೧೬೦).
[ಆಕಾಸ (< ಆಗಸ) + ಪನಿ$_2$]

**ಆಕಾಳಿಕಿ** 'ಆಕಾಲಿಕಿ' ನೋ.

**ಆಕಿಂಚನ್ಯ** (ನಾ). ೧. ತನ್ನದಾಗಿ ಏನೂ ಇಲ್ಲದಿರುವುದು; ಬಡತನ: ಕ್ಷಮಾಮಾರ್ದವಾರ್ಜವ ಸತ್ಯ ಶೌಚ ಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಾಪರ್ಯಾಪ್ತ ದಶಧರ್ಮಂಗಳುಮಂ ಕೈಕೊಂಡು (ಆದಿಪು. ೬-೩೦ ವ); ದೇಹಸುಖಹೇತುಗಳುಮಂ ದೇಹಮುಮಂ ತನ್ನವೆಂದು ಪಂಬಲಿಸದೆ ನಿರ್ಮೋಹದಿನಿರುತಿರೆ ಯತಿಪತಿಗವ್ವಾಹತಮುಳವಟ್ಟಿದುತ್ತಮಾಕಿಂಚನ್ಯಂ (ಮಲ್ಲಿಪು. ೧೧-೪೮). ೨. ತುಂಬ ಬಡತನ; ನಿರ್ಗತಿಕತೆ. [ಸಂ.]

**ಆಕಿಮಾರಿ** (ನಾ). ಒಬ್ಬ ವ್ಯಕ್ತಿಯ ಹೆಸರು (?): ತೊ[ಟ್ಟರ್ದು]ತಂಬು ... ಸೂಱುಗುಬ್ಬು ಆಕಿಮಾರಿವೆಚ್ಚ [ಡೆ] (ಸೌ ಇ ಇ. XI-i, ೧೧-೨೪; 865). [?]

**ಆಕೀರ್ಣ** (ಗು). ಹರಡಿದ; ತುಂಬಿದ; ಕಿಕ್ಕಿರಿದ: ಸ್ವಯಂಪ್ರಭಾಚಲದಂಬರಮೆಡೆಯೆಡೆಯೊಳಿರ್ಪ ದ್ವೀಪಸಮುದ್ರಂಗಳ್ ಕಲ್ಪವೃಕ್ಷವನಾಕೀರ್ಣಂಗಳಾಗಿ ಪುಟ್ಟಿ (ಸುಕುಮಾ. ೧೧-೫೪ ವ); ಮಣಿಮುಕುರಮಧ್ಯಬಿಂಬಿತವದನನತುಳಬುಧಮಂಗಳಾಶೀರ್ವಾದ ಶೇಷಾಕ್ಷತಾಕೀರ್ಣ ಜಯಮಸ್ತಕ (ಹಚಕಾ. ೪-೫೮). [ಸಂ.]

**ಆಕುಂಚ** (ನಾ). [ನಾಟ್ಯ] ಹಸ್ತದ ಐದು ಬಗೆಯ ಅಭಿನಯಗಳಲ್ಲಿ ಒಂದು: ಕಳೆದಿರೆ ನಿಕುಂಚಮೇಗಯ್ಯೊಳವಟ್ಟೊಳಕಯ್ಯೊಳೆಯಲಾಕುಂಚಂ (ಲಾಸ್ಯರಂ. ೨-೧೫೧). [ಸಂ.]

**ಆಕುಂಚನ** (ನಾ). ಮುದುರುವುದು; ಬಾಗುವುದು; ಮಡಿಸುವುದು; ಕುಗ್ಗುವುದು: ಕಮಲವುದಯದೊಳರಳಿ ಸಂಜೆಯಲಿ ಮುಗುಳಾಗಿ ಸುಮವಪ್ಪುದಂತೆ ಮರುವಗಲು ಮಗುಳ್ದಂತು ಅಮಿತಪ್ರಪಂಚನಾಕುಂಚನಾವರ್ತನಕ್ರಮವೆ ವಿಶ್ವಚರಿತ್ರೆ (ಮಂಕುಕ. ೯೧). [ಸಂ.]

**ಆಕುಂಚನಂಗೆಯ್** (ಕ್ರಿ). ಸೆಳೆ; ಆಕರ್ಷಿಸು (?): ಮೋದದಿಂದಾಕುಂಚನಂಗೆಯ್ದಾದಿಶಕ್ತಿಯನಾಂತು ಮೆಟ್ಟಿ ದ್ವಾದಶಾತ್ಮನನಮೃತಕರನಂ ಕಟ್ಟಿ ದೃಷ್ಟಿಯನು (ಬಸವಪು. ೫೫-೪೯).
[ಆಕುಂಚನ + ಗೆಯ್ (< ಕೆಯ್$_1$)]

**ಆಕುಂಚಿತ** (ಗು). ೧. ಕುಗ್ಗಿದ; ಮುದುರಿದ: ಅಂತಃಪುರದಾಸೇರಕನನೇಱಿ ಕಿಂಚಿದಾಕುಂಚಿತಾಗ್ರತರ್ಜನೀ ನಿಶಿತಾಂಕುಶನಂತಃಪುರ ಪ್ರಮದವನ ಪ್ರವಿಷ್ಟನಾಗಿ (ಆದಿಪು. ೮-೪೧ ವ). (ನಾ). ೨. (ಗದಾಯುದ್ಧದಲ್ಲಿ) ಒಂದು ಹೊಡೆತ: ವಿಳಂಬಿತಮಾಕುಂಚಿತಮಾಸ್ಫೋಟಿತಮಾಕ್ಷಿಪ್ತ ಎಂಬೆಂಟುಂ ತೆಱದ ಪ್ರಹರಣಂಗಳೊಳಂ (ಗದಾಯು. ೮-೧ ವ). ೩. [ನಾಟ್ಯ] ನಾಟ್ಯದಲ್ಲಿ ಒಂದು ಭಂಗಿ: ಸಮಮಾಕುಂಚಿತ ... ಎಸವುತಿರ್ಪ ವಿವರ್ತಂ ರಮಣೀ ಕೇಳುದ್ವಾಹಿತಮುಮುಮಂ ನತಮಿಂತಿವಾಱು ಸುಪ್ತಸ್ಥಾನಂ (ಲಾಸ್ಯರಂ. ೭-೧೧). [ಸಂ.]

**ಆಕುಂಚಿಸು** (ಕ್ರಿ). "ಕುಗ್ಗಿಸು, ಸಂಕೋಚಮಾಡು, ಕಿರಿದಾಗು, ಕಿರಿದುಮಾಡು" (ಪ್ರಭಣ್ಣ). [ಆಕುಂಚನ + -ಇಸು$_1$]

**ಆಕುಲ, ಆಕುಳ** (ಗು). ೧. ಅಸ್ತವ್ಯಸ್ತವಾದ; ಕದಡಿದ; ಕೆದರಿದ. ೨. ಚಿಂತೆಯಿಂದ ಕೂಡಿದ; ವ್ಯಾಕುಲವುಳ್ಳ; ಕೊರಗುವ: ಎನ್ನನಶ್ರುಪಿಹಿತಾಕುಲದೃಷ್ಟಿಗಳಿಂದೆ ನೋಡಿದಳ್ (ಕಾದಂಉ. ೩೬೮). ೩. ತುಂಬಿದ; ಆವೃತವಾದ: ಧವಳಜಲಧರಕುಲಾಕುಲಮವಿಕಳಮಂಬರತಳಂ (ಕವಿರಾ. ೨-೬೧). (ನಾ). ೪. ವ್ಯಾಕುಲ; ಕಳವಳ; ಕ್ಲೇಶ: ಈ ಕಲಹದೊಳಣ್ಣ ನಿಮ್ಮ ಕುಲಮಾಕುಲಮುಂ ನಿಮಗುಂಟು ಮಾಡುಗುಂ (ಪಂಪಭಾ. ೧೦-೨೧). **ಆಕುಳ್**: ೪. ಆಕುಳಮಿಲ್ಲದೆ ವಿಬುಧರಱಿಗೆ ಧರ್ಮೋಪಮೆಯಂ (ಕವಿರಾ. ೩-೬೧); ಏಕಿನಿತಾಕುಳಂ ಪ್ರಭುಗಿದಾದುದೊ (ಆದಿಪು. ೩-೪೯); ಮನದಾಕುಳದ ಬೇಗೆಯ ಬೆಳಸಿನಸುರಾಧೀಶ ನಿಂದಿರೆ (ತೊರರಾ. ೬-೨೬-೨೦). [ಸಂ.]

**ಆಕುಲಕ, ಆಕುಳಕ** (ನಾ). = ಆಕುಲ ೪. **ಆಕುಳಕ**: "ಆಕುಳಕಂ ... ಕಳವಳಕ್ಕೆ ಪೆಸರ್" (ಮಂಗರಾ. ೧೨೪-೧೦). [ಸಂ.]

**ಆಕುಲತ್ತೆ** (ನಾ). = ಆಕುಲೆ: ಪರಿಜನಂಬೆರಸು ಬಂದಾಕುಲತ್ತೆಯರಾಗಿ ದೇವರಂ ಬಂದಿಸುವುದುಮಂ (ಚಾವುಂಪು. ೬೮). [ಸಂ. ಆಕುಲಾರ್ತಾ]

**ಆಕುಲಿತ, ಆಕುಳಿತ** (ಗು). ೧. ವ್ಯಾಪ್ತವಾದ; ತುಂಬಿದ: ನಿಸ್ಸೀಮಶೋಕಂ ಭಯಾಕುಲಿತಂ... ಬಿಬ್ಬಿಂ ಧರಾತಲದೊಳ್ (ಪಂಪರಾಮಾ. ೧೬-೪೯). ೨. ಕಲಕಿದ; ಕದಡಿದ; ಅಸ್ತವ್ಯಸ್ತವಾದ. (ನಾ). ೩. ಕಳವಳ; ಚಿಂತೆ: "ಉತ್ಪಿಂಜನಂ, ಆಕುಳ[ಲಿ]ತಂ — ಈ ೨ ಕಳವಳಿಸುಹ" (ಹಲಾಯು. ೧೨೧-೯೬). **ಆಕುಳಿತ**: ೨. ಮಂದಾನಿಳಾಂದೋಳನಾಕುಳಿತಾರಾಮುಫಲಾಮೃತೋಪಮ ರಸಸ್ರೋತಂಗಳೊಳ್ (ಆದಿಪು. ೧-೬೪). [ಸಂ.]

**ಆಕುಲಿತೆ** (ನಾ). ಚಿಂತೆ; ವ್ಯಥೆ; ಕೊರಗು: ಆಕೆಯರಲಾಪೇಕ್ಷೆಯಾಗದವರೊಲಿವರಲ್ಲಾ ಕುಲಿತೆಬ್ಯಾಡವೇನರೆಯುಂಟು (ಜಿನಮು. ೨೩-೨೪).
[ಸಂ. ಆಕುಲತಾ]

**ಆಕುಲೆ, ಆಕುಳೆ** (ನಾ). ಚಿಂತೆಗೆ ಒಳಗಾದವಳು; ದುಃಖಕ್ಕೆ ಈಡಾದವಳು: ವಸಂತಂ ಬರಲೊಡನೊರ್ಮೆಯೆ ಗಂಧರ್ವರಾಜಸುತೆ ಮನದೊಳಾಕುಲೆಯಾದಳ್ (ಕಾದಂಉ. ೭೮೨); ನೃಪೇಂದ್ರನಂ ಕಾಣುತಾ ಕೇಕಯ ಕುಲೀನೆಯಾಕುಲೆಯಾದಳೆದೆಗರಗಿ (ಶ್ರೀರಾಮಾ. ೭೧-೪೭೧).

ಆಕುಳಿ : ಶರಪಾಶಂಗಳ ನಡುವಣ ಹರಿಣಿಯವೋಲ್ ಮನದೊಳಾಗಳಾಕುಳಿಯಾದಳ್ (ಆದಿಪು. ೪-೫೦).

ಆಕುಲೆಯಾಗು = ಆಸಕ್ತಿಯಿಂದ ಕೂಡಿದವಳಾಗು : ವೈಭವಗಳಿನೇಳ್ಗೆವೆತ್ತಿನನಕೃತ್ಯದೊಳಾಕುಲೆಯಾಗುತಾವಗಂ (ಶಾಕುಂತ. ೫೭-೯೭). [ಸಂ. ಆಕುಲಾ]

**ಆಕುಳ** 'ಆಕುಲ' ನೋ.

**ಆಕುಳಕ** 'ಆಕುಲಕ' ನೋ.

**ಆಕುಳಿ₁** (ನಾ). ಒಂದು ಬಗೆಯ ತಮಟೆ; ದೇವರಿಗೆ ಪೂಜಾಕಾಲದಲ್ಲಿ ಮಾಡುವ ವಾದ್ಯಸೇವೆ (?): ಸಂಬುಮುಡಕೆಗೆ ಗ ೧ ಚಯಿತ್ರಮಾಸದ ದವನ ವುಪಾರಗಡುಗೆಯ ದಕ್ಷಿಣೆಗೂಡಿ ಪ ೬ ಆಕುಳಿಗೆ ಪ ೪ ಕಾರ ಪರ್ಬದಲು ದೇವರು ನಂದೀಶ್ವರ ದೇವರ ವುಪ್ಪಾರಕೆ ಪ ೧ (ಎಕ. VI, ಕಡೂರು. ೪೯-೫೭; 1291). [?. / ತಮಿ. ಆಕುಳಿ]

**ಆಕುಳಿ₂** 'ಅಯ್ಕುಳಿ' ನೋ.

**ಆಕುಳಿಕೆ** 'ಆಗುಳಿಕೆ' ನೋ.

**ಆಕುಳಿಗೊಳ್** 'ಅಯ್ಕುಳಿಗೊಳ್' ನೋ.

**ಆಕುಳಿತ** 'ಆಕುಲಿತ' ನೋ.

**ಆಕುಳಿಸು** 'ಆಗುಳಿಸು' ನೋ.

**ಆಕುಳೀಕೃತ** (ಗು). ಆಕುಳಿತವಾಗಿ ಮಾಡಲ್ಪಟ್ಟ: ಧ್ವನದಳಿಕುಳಾಕುಳೀಕೃತವನಂಗಳಿಂದೆಸೆ[ವ ಪದ್ಮಷಂಡಂ]ಗಳ ಚೆಲ್ವಿನೊಳಂ ಕಣ್ಣಂ ಮನಮುಮನನುವಿಸುವ (ಪಂಪಭಾ. ೮-೫೨). [ಸಂ.]

**ಆಕುಳೆ** 'ಆಕುಲೆ' ನೋ.

**ಆಕೂತ** (ನಾ). ಅಭಿಪ್ರಾಯ; ಆಶಯ; ಇಂಗಿತ : "ಆಕೂತಂ, ಅಭಿಪ್ರಾಯಃ—ಈ ೨ ಬಗೆ" (ಹಲಾಯು. ೧೨೫-೭೭); ಸಂವೃತಾಕಾರನುಂ ನಿಭೃತೇಂಗಿತನುಮಾಗಿ ದಕ್ಷಜನೋಪಲಕ್ಷಿತಾಕೂತನಪರಾಜಿತಾನುಜನ್ಮಂ ನುಡಿವಾಗಳ್ (ಶಾಂತಿಪು. ೨-೫೧ ವ); ಈ ತರುಣರನೆಂತಟ್ಟುವೆವಾತೀಕ್ಷ್ಣಂ ಕಂಸನಲ್ಲಿಗೆಂಬೊಂದು ಭಯಾಕೂತಂ ಬೇಡ . . . ಈತಂಗಳನಾದಿಮಧ್ಯನಿಧನರನೋಘಂ (ಜಗವಿ. ೫-೮೭). [ಸಂ.]

**ಆಕೂತಿ** (ನಾ). = ಆಕೂತ: ಮೇರುದಂಡವು ಚಿಗಿತು ಹೂತಹಾಗೆ ಹೃದಯದಾಕೂತಿಗಿದೆ ಕಣ್ಣುಮೇಗೆ (ಸೂರ್ಯಪಾ. ೧-೧೨); ಅಖಂಡಿತವಾಗಿ ಆದಿಪುರುಷನ ಭಕ್ತರಾಗಿ ಬಾಳಲಿ — ಇದು ಜ್ಞಾನದೇವನ ಹೃದಯಾಂತರಾಳದ ಆಕೂತಿ (ಮಸಾಹಿ. ೧೫). [ಸಂ.]

**ಆಕೃತಿ** (ನಾ). ೧. ಆಕಾರ; ರೂಪ: ದಿವ್ಯಾಕೃತಿಯಂ ಧರಿಯಿಸಿ ಕೃಷ್ಣಂ (ಜಗವಿ. ೪-೮೧); ಬೆಳೆದುದು ಕೂಸು . . . ಜನರ ಕಣ್ಗೆ ಹೇಸಿನಾಕೃತಿಯಾಗಿ (ಶ್ರೀರಾಮಾ. ೨೨-೫೯೦). ೨. ದೇಹ; ಶರೀರ. ೩. ಬುಡಕಟ್ಟು; ಪಂಗಡ. ೪. [ಛಂದ] ಇಪ್ಪತ್ತೆರಡನೆಯ ಛಂದಸ್ಸು: ಅಕೃತಿಯೆಂಬ ಛಂದದೊಳಿಪ್ಪತ್ತೆರಡಕ್ಷರಂ ಪಾದಮಾಗಿ ಪುಟ್ಟುವ . . . ವೃತ್ತಂಗಳೊಳಗೆ (ಛಂದೋಂಬು. ೨-೧೩೪). ೫. ಮಂತ್ರಸಾಧನಗಳಲ್ಲಿ ಒಂದು : ಅಕೃತಿ . . . ಇತ್ಯಾದಿ ಪಂಚಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (ವಿವೇಕ. ೮೦). [ಸಂ.]

**ಆಕೃತಿಗಿಡು** (ಕ್ರಿ). ರೂಪಗೆಡು; ಆಕಾರ ಕೆಟ್ಟುಹೋಗು: ಪುದಿಯೆ ಘನಾಧ್ವಮಂ ಸರಳಪಂಜರದಿಂ . . . ರೂಪುಗೆಟ್ಟುದು ದೆಸೆ ತೋರ್ಕೆಗೆಟ್ಟುದಿನಮಂಡಲಮಾಕೃತಿಗೆಟ್ಟುದಾಗಸಂ (ಜಗವಿ. ೭-೮೦).

[ಆಕೃತಿ + ಕಿಡು (< ಕೆಡು)]

**ಆಕೃತಿದಾಳ್** (ಕ್ರಿ). ಆಕಾರವನ್ನು ಧರಿಸು; ರೂಪವನ್ನು ತಾಳು: ಕಪಟನಾಟಕ ಲೀಲಾಲಸಚಿತ್ತಂ ಬಿನದದಿಂ ಭೈರವಾಕೃತಿದಾಳ್ದನದೆಂತೆನೆ (ವೃಷವಿ. ೧೪-೨೮ ವ). [ಆಕೃತಿ + ತಾಳ್₁]

**ಆಕೃತಿವಂತ** (ನಾ). ಒಳ್ಳೆಯ ಆಕಾರದಿಂದ ಕೂಡಿದವನು; ರೂಪವಂತ : ಒರ್ವನಪೂರ್ವಂ . . . ಅವಗತಾರ್ಥಶಾಸ್ತ್ರನಾಕೃತಿವಂತನುದಾತ್ತೋದಂತ ಸಂಭಾಷಣಸಮುತ್ಪಾದಿತತೋಷಣಂ . . . ಖೇಚರಂ ಬಂದು (ಶಾಂತಿಪು. ೨-೧೮ ವ). [ಸಂ. ಆಕೃತಿಮತ್]

**ಆಕೃತಿಸಂವೃತಿ** (ನಾ). = ಆಕಾರಗುಪ್ತಿ ೧ : ಆ ದೇವನ ತಪೋಲಕ್ಷ್ಮಿಗೆ ವಿಸ್ಮಯಾಕ್ಷಿಪ್ತ ಚಿತ್ತನಾಗಿ ನಿಜಾಕೃತಿಸಂವೃತಿಯಿಂ ತ್ರಿಃಪ್ರದಕ್ಷಿಣಂಗೆಯ್ದು (ಆದಿಪು. ೯-೧೦೦ ವ). [ಆಕೃತಿ + ಸಂವೃತಿ]

**ಆಕೃಷ್ಟ** (ಗು). ಆಕರ್ಷಿಸಲ್ಪಟ್ಟ; ಸೆಳೆಯಲ್ಪಟ್ಟ : ಅವಲುಪ್ತ ಸಪ್ತಸಪ್ತಿದೀಪ್ತಿಪ್ರತಾಪವಿಧಾನನಿರತನುಮಾಕೃಷ್ಟಸುಂದರ ಸುಂದರೀ ಕಟಾಕ್ಷವಿಕ್ಷೇಪನುಂ (ಶಾಂತಿಪು. ೧-೭೧ ವ); ದೋಸೆಯ ವಾಸನೆಯಿಂದಲೇ ಆಕೃಷ್ಟನಾಗಿ ಅಂತಕ್ಕನ ಮನೆಗೆ ನುಗ್ಗಿದ (ಮಲೆಮ. ೬೩). [ಸಂ.]

**ಆಕೃಷ್ಟಿ** (ನಾ). ೧. ಸೆಳೆಯುವಿಕೆ; ಆಕರ್ಷಣ : ಪಾಂಚಾಲೀಕುಂಚಿತಕೇಶಪಾಶಾಕೃಷ್ಟಿ ಪಾತಕ ಪ್ರಧಾನನಿಹಿತಹಿತನೆನಿಸಿದ ಫಣಿರಾಜಕೇತನಂಗಂ (ಗದಾಯು. ೭-೬೨ ವ); ಬುಧಹರ್ಷಾಕೃಷ್ಟಿ ಸರ್ವಾಂಗಸುಂದರಿ ವಿದ್ಯಾನಟ (ಪಂರಾಮಾ. ೧-೬). ೨. [ನಾಟ್ಯ] ಹಸ್ತಾಭಿನಯಗಳಲ್ಲಿ ಒಂದು: ಮಿಸುಪಾಕೃಷ್ಟಿ ವಿಕೃಷ್ಟಂ . . . ತರ್ಜನಾಖ್ಯಂಗಳಿಂದೆ ತೋಱುವ ಭೇದಂ ಸತಿ ಕೇಳ್ ಕರಕರ್ಮಂಗಳ್ ಸತತಿಪ್ಪತ್ತೆಂಬ ಭಾವದಿಂ ರಂಜಿಸುಗುಂ (ಲಾಸ್ಯರಂ. ೪-೧೨, ೧೩). [ಸಂ.]

**ಆಕೃಷ್ಟಿಮಂತ್ರ** (ನಾ). ಆಕರ್ಷಿಸಿ ವಶಪಡಿಸಿಕೊಳ್ಳುವ ಮಂತ್ರ: ಶ್ರೀಗಂ ವಿದ್ವಿಡ್ವಿಜಯಶ್ರೀಗಮಿದಾಕೃಷ್ಟಿಮಂತ್ರಮೆನಿಸಿದ ಮಂತ್ರೋದ್ಯೋಗದಿನಿರ್ದಂ ನೃಪಂ (ಚಂದ್ರಪು. ೧೦-೧). [ಆಕೃಷ್ಟಿ + ಮಂತ್ರ]

**ಆಕೆ₁** 'ಅಂಕೆ' ನೋ.

**ಆಕೆ₂** 'ಅದು₁' ಪರಾ.

**ಆಕೆಯವಾಳ** 'ಆಕೆವಾಳ' ನೋ.

**ಆಕೆವಾಳ, ಆಕೆಯವಾಳ** (ನಾ). ಶೂರ; ವೀರ; ಪರಾಕ್ರಮಿ : "ಆಕೆವಾಳನೆ ಶೂರಂ" (ಭಾರನಿ. ೭); ಸ್ವಸ್ತಿಶ್ರೀ ಶಿಲ ಆದಿತ್ಯನ್ ದಿಶಾಮ್ ಭಗ್ಗ್‌ನ್ ಆಕೆವಾಳನ್ ಅಗ್ಗಳ ಕಣ್ಬಕನ್ ಪೇರಾಳ್ಕೆವರೆ (ಮೈಆರಿ. ೧೯೨೩, ೭೨-೧ ; 700); ನೂಕಿದರು ಶಲ್ಯಂಗೆ ಪಡಿಬಲದಾಕೆವಾಳರು (ಕುವ್ಯಾಶ. ೨-೫೨); ಅಂ ತಾನೆಂಬಾಕೆವಾಳರ ಗಲ್ಲಣೆಯ ಬಲ್ಲುಲಿಯಂ ಮಾಣಿಸಿ (ರಾಮಾಶ್ವ. ೪೭-೬). **ಆಕೆಯವಾಳ**: ನೂಕಿರೊ ಬಡಿಬಡಿದಾಯ್ಕಿರೊ ಪರಬಲದಾಕೆಯವಾಳರನು ಪೋಕರಿಸಿದಿರೆನುತ್ತೆ (ರಾವದಿ. ೧೩).

[ಆಕೆ₁ (< ಅಂಕೆ) + -ವಾಳ]

**ಆಕೆವಾಳತನ** (ನಾ). ಶೂರತನ; ಪರಾಕ್ರಮ; ಸಾಹಸ: ಮಹಾಸತಿಯಾಕೆವಾಳತನಕ್ಕೆ ನಮಿಸಿದೆ (ಕುವ್ಯಾಅ. ೨೩-೪೦); ಅಣಿಯೊಳೆಸೆದ ನಂದು ದಳಪತಿ ನರಸಿಂಗು ರಣದಾಕೆವಾಳತನದಲಿ (ಕುರಾಸಾಂ. ೧೨-೩೫); ಆಕೆವಾಳಿ[ಳ]ತನಕ್ಕೆ ಮುಡಿದಡೆ ನಾಕವನು ಸಾರುವರು (ತ್ರಿಮ್ಮಸ್ತ್ರೀ. ೧-೫೫). [ಆಕೆವಾಳ + -ತನ]

**ಆಕೆವಾಳತೆ** (ನಾ). = ಆಕೆವಾಳತನ : ಸಕಲ ಭೂಮಿಪರೂ ಆಕೆವಾಳತೆ ಮೆಱೆದು ಘೋರಸಮಿಕದೊಳು ಮಿಗೆ ಮಡಿದು ಶಾಶ್ವತ ನಾಕದಖಿಳವ ಸೂಱೆಗೊಂಡರು (ತಿಮ್ಮಸ್ತ್ರೀ. ೩-೭). [ಆಕೆವಾಳ + -ತೆ]

**ಆಕೆವಾಳಿಕೆ** (ನಾ). = ಆಕೆವಾಳತನ : ನಿನಗಾಕೆವಾಳಿಕೆಯ ಧೀರತ್ವಮುಂಟಾದೊಡದು ಬಳಿಕೆಮ್ಮ ಪುಣ್ಯ (ಜೈಮಿಭಾ. ೪-೩೪). [ಆಕೆವಾಳ + -ಇಕೆ]

**ಆಕೇಕರ** (ನಾ). ೧. ಅರೆತೆರೆದ ಕಡೆಗಣ್ಣು : ಆಕೇಕರಾಲೋಕಮುಖಂ ನೋಡುತ್ತವೇಜಲ್ ಕರೆವ ತೆಜದೆ ಹೇಷಾರವಂ ಪೊಣ್ಮೆ (ಕಾದಂಪು.೪೬೩). ೨. [ನಾಟ್ಯ] ದೃಷ್ಟಿಚಲನಗಳಲ್ಲಿ ಒಂದು : ಮಿಳಿರ್ವಾಲಿ ಪಲವು ಸೂಳಂ ಕೆಳೆಗೊಳಲಾಕೇಕರಾಖ್ಯದೃಷ್ಟಿಯೆನಿಕ್ಕುಂ (ಲಾಸ್ಯರಂ. ೩-೩೫). [ಸಂ.]

**ಆಕ್ಕೈರು** 'ಆಖ್ಯೈರು' ನೋ.

**ಆಕೋಜ** (ನಾ). ಒಬ್ಬಾತನ ಹೆಸರು : ಈ ಕಲ್ಲ ಪೊಯ್ದ ಕಲ್ಕುಟಿಗ ಆಕೋಜ (ಎಕ. III, ಶ್ರೀರಂಗ. ೧೧೯–೯ ; 1108). [ಆಕ್$_0$ + ಓಜ$_1$]

**ಆಕ್ಕ** (ನಾ). ಒಬ್ಬಾತನ ಹೆಸರು (?) : ವಚ್ಛಗೋತ್ರದ ಕಣ್ಣಮಯ್ಯನ ಮಗ ನಿರುಗಮ್ಮಯ್ಯನುಂ ಮದುಕಮ್ಮಯ್ಯನುಂ ಆಕ್ಕನುಂ (ಎಕ. X, ಕೋಲಾರ. ೫೭–೯ ; 925). [?]

**ಆಕ್ಕಕೈಲೂರ್** (ನಾ). ಒಂದು ಹೆಸರು : ಶ್ರೀಪುರುಷ ಪ್ರಿ(ಥಿ)ವೀ ರಾಜ್ಯಕೆಯೆ ಆಕ್ಕಕೈಲೂರ ಮಕನ್ದಿರ್ ಮಾದಪ್ಪನ್ನಂ ಅರಿಉರದ ಅಗ್ಗಿರವೆರ್ ಪೆರ್ಗಡೆತನ ಕೆಯೆ (ಎಕ. IV, ಗುಂಡ್ಲುಪೇ. ೮೮–೨ ; 750).
[ಆಕ್ಕಕೈಲ್$_0$ + ಊರ್$_2$]

**ಆಕ್ಕಾ** 'ಆಗು$_1$' ಪರಾ.

**ಆಕ್ಕಿ** 'ಆಗು$_1$' ಪರಾ.

**ಆಕ್ಕು** 'ಆಗು$_1$' ಪರಾ.

**ಆಕ್ಯ** (ನಾ). ಹೆಸರು ; ಪ್ರಸಿದ್ಧಿ (?) : ಆಕ್ಯವೆನದಹುದೆನ್ನ ಸಾಹಸವು ನಿನ್ನೊಳಗಯಿಕ್ಯವಿಲ್ಲಸುರಾರಿಗುಂಟು (ಜಿನಮು. ೨೦–೩).
[< ಸಂ. ಆಖ್ಯಾ]

**ಆಕ್ರಂದ** (ನಾ). ಯುದ್ಧ ; ಕಾಳಗ : "ಧುರಂ, ವಿಗ್ರಹಂ . . . ಆಯೋಧನಂ . . . ಆಕ್ರಂದಂ ಎನಲು ಕಾಳಗಕ್ಕೆ ನಾಮಮಕ್ಕುಂ" (ಮಂಗರಾ. ೮೫–೨೮). [ಸಂ.]

**ಆಕ್ರಂದತ್ಸ್ವರ** (ನಾ). (ನೋವಿನಿಂದ) ಕೂಗಿಕೊಳ್ಳುವ ಧ್ವನಿ : ನಿಮಿಷಳನ್ನೇತ್ರ ಸೀದದ್ಗಾತ್ರಮುಹ್ಯನ್ಮಾನಸಾಕ್ರಂದತ್ಸ್ವರ ಪರಿಗತರ್ ಸ್ಯೈರಿಸಲಾಜದೆ ತಡತಡಿಸಿ (ಆದಿಪು. ೫–೮೭ ವ).
[ಸಂ. (ಆಕ್ರಂದತ್ + ಸ್ವರ)]

**ಆಕ್ರಂದನ** (ನಾ). ಗಟ್ಟಿಯಾಗಿ ಅಳುವುದು; ರೋದನ: ಸಾರೆಯೊಳಟ್ಟಿ ಮಹಾದ್ವಿಜನಾರಿಯ . . . ಕಾರುಣ್ಯಾಕ್ರಂದನಮನಿವಾರಿತಮೊರ್ಮೊದಲೆ ಬಂದು ತೀಡಿತ್ತಾಗಳ್ (ಪಂಪಭಾ. ೩–೨೪ ವ) ; ಪ್ರಭುಗಳ ಸಂಕಟ ಈ ಆಕ್ರಂದನಗಳನ್ನು ಕೇಳಿ ಇನ್ನಷ್ಟು ಹೆಚ್ಚಿತು (ಶಾಂತಲಾ. ೩೧೦). [ಸಂ.]

**ಆಕ್ರಂದನಂಗೆಯ್** (ಕ್ರಿ). ಗೋಳಿಡು ; ಗಟ್ಟಿಯಾಗಿ ಅಳು : ಪೋದೆಂ ಬೞಿಕಾತನಿದ್ದೆಡೆಗೆ ಹಾಹಾಕ್ರಂದನಂಗೆಯ್ಯುತುಂ (ಕಾದಂಪೂ. ೯೦೪).
[ಆಕ್ರಂದನ + ಗೆಯ್ (< ಕೆಯ್$_1$)]

**ಆಕ್ರಂದನಧ್ವನಿ** (ನಾ). ಅಳುವಿನ ಸ್ವರ; ದುಃಖಧ್ವನಿ : ಮೊರೆಯಿಡೆ ಕೇಳಿದನು ಕಲಿಭೀಮ ಸತಿಯಾಕ್ರಂದನಧ್ವನಿಯ (ಕುವ್ಯಾವಿ. ೩–೯೯) ; ಅಱಿಯೆನುಪಮಿಸಲವರ ಬಹುಳಾಕ್ರಂದನಧ್ವನಿಯ (ಕುವ್ಯಾಸ. ೧೮–೩).
[ಆಕ್ರಂದನ + ಧ್ವನಿ]

**ಆಕ್ರಂದಿತ** (ನಾ). ಅಳುವಿನ ಕೂಗು ; ನೋವಿನಿಂದ ಕೂಗಿಕೊಳ್ಳುವುದು. [ಸಂ.]

**ಆಕ್ರಂದಿಸು** (ಕ್ರಿ). = ಆಕ್ರಂದನಂಗೆಯ್ : ಉಗ್ರಶೋಕದಿನಾಕ್ರಂದಿಸಿದೆಂ (ಆದಿಪು. ೩–೫೨) ; ಭಯವಶದಿನಿರದಾಕ್ರಂದಿಸುವಂತೆಸೆಯೆ ಬೇಱಿ ಶಂಖರವಂ (ಶಾಂತಿಪು. ೩–೧೧೧). [ಆಕ್ರಂದನ + –ಇಸು$_3$]

**ಆಕ್ರಮಣ** (ನಾ). ೧. ಮುತ್ತುವುದು ; ಮೇಲೆ ಬೀಳುವುದು. ೨. ದಾಳಿನಡೆಸುವುದು ; ದಂಡಯಾತ್ರೆ. ೩. (ಮೇಲೆಬಿದ್ದು) ಕಿತ್ತುಕೊಳ್ಳುವುದು ; ವಶಪಡಿಸಿಕೊಳ್ಳುವುದು. ೪. ಅತಿಕ್ರಮಿಸುವುದು ; ಮೀರುವುದು. [ಸಂ.]

**ಆಕ್ರಮಣಧ್ವನಿ** (ನಾ). ಮೇಲೆ ಬೀಳುವ ಅಥವಾ ಮುತ್ತಿಗೆ ಹಾಕುವ ಸಂದರ್ಭದಲ್ಲಿ ಹುಟ್ಟುವ ಶಬ್ದ : "ಜರ್ಬು– ಆಕ್ರಮಣಧ್ವನೌ (ಅಗ್ರಹಧ್ವನೌ) (ಗದರಿಸು)" (ಶಮಧಾ). [ಆಕ್ರಮಣ + ಧ್ವನಿ]

**ಆಕ್ರಮಣೆ** (ನಾ). = ಆಕ್ರಮಣ ೧ : ಆಕ್ರಮದೊಳೊಮ್ಮೆ ಪರಿವಿಡಿಯಿಂದಲೊಮ್ಮೊಮ್ಮೆ ಆಕ್ರಮಣೆಯಿಂದೊಮ್ಮೆ ಕರಗುತ್ತಲೊಮ್ಮೊಮ್ಮೆ (ತಿರುರ. ೫–೮). [ಸಂ. ಆಕ್ರಮಣ]

**ಆಕ್ರಮಿಸು** (ಕ್ರಿ). ೧. ಮೇಲೆಬೀಳು ; ಮುತ್ತಿಗೆ ಹಾಕು : ಪಿಂದೆ ಪರಭೂಮಿಯನಾಕ್ರಮಿಸಲ್ಕೆ ನಿಂದನೆಂಬೆನೊ (ಕಾದಂಉ. ೪೪೬) ; ಶಕ್ರನ ಮಱೆವೊಕ್ಕಡವ ಕಾಯಲರಿದೆಂದಾಕ್ರಮಿಸುತಲಿಟ್ಟನವನಾ (ವರ್ಧಸಾಂ. ೭–೩೫). ೨. ವ್ಯಾಪಿಸು ; ಹರಡು : ಸೇನೆಯಂ ನೆಱೆಯಿಸಿ ಬಳಸುತ ಸಮಾನವಿಕ್ರಮದಿಂದೆ ಪಂಚಮಹಾನಿನದವಾಕ್ರಮಿಸುತಿರೆ ಬಲು ದುರ್ಗವಂ ಬಲಿದು (ಬಸವು. ೧೬–೧೪) ; ಜಂಗಮಾವಳಿಯಾಸುರದ ಕೋಳಾಹಳಧ್ವಾನಂಗಳಾಕ್ರಮಿಸೆ (ಬಸವು. ೩೭–೨೧). ೩. ಅತಿಕ್ರಮಿಸು ; ಮೀರು ; ಹೆಚ್ಚಾಗು : ಚಕ್ರಿ ಮುಂತಾದ ಸರ್ವರ ಮೈಗಳುದ್ದ ಯಥಾಕ್ರಮವೈನೂಱು ಮಾರು ನಕ್ರಕೇತನಿಗೊಬ್ಬಗಂದಿಪ್ಪತ್ತೈದುಮಾರಾಕ್ರಮಿಸಿತು ಚಿತ್ರವೆನಿಸಿ (ಭರಚ. ೫೧–೬೩). ೪. ಹೆಜ್ಜೆಯಿಡು : ಆಕ್ರಮಿಪೆಡೆಯೊಳ್ ಮೂಱುಂ ವಿಕ್ರಮದಾಯಾಸಮಾಯ್ತು ಮುಂ ಚಕ್ರಿಗೆನುತ್ತಾಕ್ರಾಂತ ಸಮಸ್ತ ಜಗಚ್ಚಕ್ರಂ ನೃಪನೊಂದೆ ವಿಕ್ರಮಂ ನಗುತಿರ್ಕುಂ (ಕಾದಂಪೂ. ೯). [ಆಕ್ರಮಣ + –ಇಸು$_3$]

**ಆಕ್ರಮ್ಯ** (ಗು). ಆಕ್ರಮಣಕ್ಕೆ ಯೋಗ್ಯವಾದ ; ಮೇಲೆ ಬೀಳಲು ಅರ್ಹವಾದ (ಕ). [ಸಂ.]

**ಆಕ್ರಾಂತ** (ಗು). ೧. ಆಕ್ರಮಿಸಲ್ಪಟ್ಟ ; ಆವರಿಸಲ್ಪಟ್ಟ ; ವ್ಯಾಪ್ತವಾದ : ಆಕ್ರಾಂತಸಿ (ಸು) ಶೈಲಸಾಗರಧರಾಶಾಚಕ್ರವಾಳಾಂಬರಂ . . . ಪರಮಾನಂದಿತಲೋಕಮೊಪ್ಪೆ ನೆಲೆಗೊಳ್ಗಾಚಂದ್ರತಾರಂಬರಂ (ಕವಿರಾ. ೩–೨೩೬) ; ಆ ದ್ವಿಜನ ನುಡಿಯಂ ಕೇಳ್ದು ವಿಸ್ಮಯಾಕ್ರಾಂತಸ್ವಾಂತನಾಗಿ (ಅಜಿಪು. ೧೦–೧೬ ವ). (ನಾ). ೨. ವಶಪಡಿಸಿಕೊಂಡದ್ದು ; ಹಿಡಿಯಲ್ಪಟ್ಟುದು : "ಆಕ್ರಾಂತಮಾಸ್ಥಿತಮೆನಲ್ ಕೆಯ್ಕೊಳುಹಮಕ್ಕುಂ" (ಮಂಗರಾ. ೧೩೫–೩೭). ೩. ಮುತ್ತಿಗೆಹಾಕಲ್ಪಟ್ಟದ್ದು ; ದಾಳಿಗೆ ಗುರಿಯಾದದ್ದು. [ಸಂ.]

**ಆಕ್ರಾಂತಿ** (ನಾ). = ಆಕ್ರಮಣ ೧ : ಭೂಭಾರಮಂ ಪಿಂಗಿಸಲುದಯಿಸಿದಂ ಚಕ್ರಿ ನಮ್ಮಾ ಭರಾಕ್ರಾಂತಿನಿರೋಧಂ ಮಾಣ್ದುದಿನ್ನು (ಜಗವಿ. ೩–೪). [ಸಂ.]

**ಆಕ್ರಾಂತೆ** (ನಾ). ಆಕ್ರಮಿಸಲ್ಪಟ್ಟವಳು ; ಆವರಿಸಲ್ಪಟ್ಟವಳು ; ವ್ಯಾಪ್ತಳಾದವಳು : ಅಂತೆನಿಪ ವೆಣ್ಣಮಯ್ಯನ ಕಾಂತೆ ಗುಣಾಕ್ರಾಂತೆ [ಪಾಠಾಂ. ಗುಣವ್ರಾತೆ] ಧರಣಿಸುತೆಗಂ ಮಿಗಿಲ್ (ಛಂದೋಂಬು. ಕ. ೧–೧೩). [ಸಂ. ಆಕ್ರಾಂತಾ]

**ಆಕ್ರೀಡ** (ನಾ). ೧. ಆಟ ; ವಿನೋದ. ೨. ರಾಜೋದ್ಯಾನ. "ಅರಸುಗಳಿಗೆ ಸೇರಿದ ತೋಟ" (ಅಮರ. ಟೀಕ). ೩. ಸಾರ್ವಜನಿಕರಿಗಾಗಿ ರಾಜನಿಂದ ಏರ್ಪಡಿಸಲ್ಪಟ್ಟ ಉದ್ಯಾನವನ. [ಸಂ.]

**ಆಕ್ರೀಡೆ** (ನಾ). = ಆಕ್ರೀಡ (ಕ). [ಸಂ. ಆಕ್ರೀಡ]

**ಆಕ್ರೋಶ** (ನಾ). ೧. ದುಃಖದಿಂದ ಗಟ್ಟಿಯಾಗಿ ಕೂಗಿಕೊಳ್ಳುವುದು,—ಅರಚುವುದು. ೨. ಶಾಪ ; ಬೈಗಳು : "ಶಾಪಃ, ಆಕ್ರೋಶಃ, ಆಕ್ಷೇಪಃ, ಕ್ಷಾರಣಾ, ವಿರೂಕ್ಷಣಾ – ಈ ೫ ಬಯ್ಗುಳ್" (ಹಲಾಯು. ೨೪–೧೪೮) ; ಪರಾಭವಂ ಸಂವತ್ಸರದೊಳ್ ಆಕ್ರೋಶಂ ಪಥಪ್ರಮಾಣಂಗಳೊಳ್ . . . ಉತ್ತುಂಗಭಂಗಂ ಕಡಲೊಳ್ . . . ಜನಪದದ ಜನಂಗಳೊಳಿಲ್ಲ (ಜಗವಿ. ೨–೧ ವ). ೩. ರೋಷ ; ಸಿಟ್ಟು : ಕಲ್ಪಾಂತರುದ್ರನ ತೆರದಿ ಕೋಪಿಸುವ ಸೌಮಿತ್ರಿಯಂತರಂಗಾಕ್ರೋಶಮಂ ತಿಳಿದು (ವೆಂಕಾರಾ. ೨–೯–೧೪) ; ತನ್ನ ಮೇಲಣ ಕನಿಕರ ಹಾಗೂ ಅವನ ಮೇಲಣ ಆಕ್ರೋಶದಿಂದ ಅವಳು ಉದ್ವೇಗಗೊಂಡಳು (ಪುನರು. ೩೨೫).

ಆಕ್ರೋಶಮಾಡು = ೧. ದುಃಖದಿಂದ ಕೂಗುತ್ತಾ ಅಳು; ಒರಲು: ಅವ್ವಾ ನಡೆದುಬಿಟ್ಟೆಯಾ ಅವ್ವಾ, ಎಂದು ಗೋದಾವರಿ ತಾಯಿಯ ಶವದ ಮೇಲೆ ಬಿದ್ದುಕೊಂಡು ಆಕ್ರೋಶಮಾಡತೊಡಗಿದಳು (ಭಾರಥಿ. ೨೨೯). ೨. ಕೋಪದಿಂದ ರೇಗಾಡು; ರೇಗು; ಗದ್ದರಿಸು: ಅವರು ನನ್ನ ಮೇಲೆ ತುಂಬಾ ಆಕ್ರೋಶಮಾಡಿದರು (ರೂಢಿ). [ಸಂ.]

**ಆಕ್ರೋಶಗೊಳ್** (ಕ್ರಿ). ದುಃಖಗೊಳ್ಳು; ಸಂತಾಪಪಡು; ಶೋಕಿಸು: "ಪ್ರಿಯೆ, ನನಗೆ ಸಂಪ್ರಾಪ್ತಮಾಗಿದೆ ವನವ್ರತಂ. ಬೆದರಿದರ್ ಧೀರರಾಜರ್ಷಿ ಸುತೆ. ಸದ್ವಂಶಸಂಜಾತೆ, ಸೀತೆ, ನೀನಾಕ್ರೋಶಗೊಳ್ಳದಿರ್ (ಶ್ರೀರಾಮಾ. ೮೬-೨೩೩). [ಆಕ್ರೋಶ + ಕೊಳ್$_1$]

**ಆಕ್ರೋಶಧ್ವನಿ** (ನಾ). ೧. ದುಃಖದಿಂದ ಒರಲಿಕೊಳ್ಳುವ ಕೂಗು; ರೋದನಧ್ವನಿ. ೨. ರೇಗಾಟದ ಧ್ವನಿ; ಕೂಗಾಡುತ್ತಾ ಬಯ್ಯುವ ಶಬ್ದ: "ಕೊರಲ್ಪು-ಆಕ್ರೋಶಧ್ವನೌ" (ಶಮುಧಾ). [ಆಕ್ರೋಶ + ಧ್ವನಿ]

**ಆಕ್ರೋಶನ** (ನಾ). = ಆಕ್ರೋಶ. [ಸಂ.]

**ಆಕ್ರೋಶಿಸು** (ಕ್ರಿ). ರೋಷದಿಂದ ಕೂಗು; ಕಿರುಚು: ಇಷ್ಟು ತ್ಯಾಗ ಮಾಡಿದವರಿಗೆ ಇರದ ಸ್ಥಳ ಈ ಪಿಶಾಚಿಗೆ ಎಂದು ಮುದುಕ ಆಕ್ರೋಶಿಸಿದ (ಕಣ್ಮಣಿ. ೯೨). [ಆಕ್ರೋಶನ + -ಇಸು$_1$]

**ಆಕ್ನಾರ** (ನಾ). ಒಂದು ರೋಗ: ಆಕ್ನಾರಕ್ಕೆ - ಸಿರಿಹುಡೆ . . . ಬಂಜೆವಾಗಲದ ಬೇರಂ ನೀರಲ್ಲಿ ತೇದು ನಾಲಿಗೆಗೆ ತೊಡೆದು ದೇಹಕ್ಕೆ ಕೊಳ್ಳಲು ಆಕ್ನಾರ ಮಾಣ್ಗುಂ (ವಿವೈವಿ. ೧೨೯). [ಸಂ.]

**ಆಕ್ಷಿಪ್ತ** (ಗು). ೧. ಎಸೆಯಲ್ಪಟ್ಟ; ಬಿಸುಟ. ೨. ಕೂಡಿದ; ಸೇರಿದ: ಆ ಕ್ಷತ್ರಿಯಪುತ್ರಂ ವಿಸ್ಮಯಾಕ್ಷಿಪ್ತಚಿತ್ತನಾಗಿ (ಕಾದಂಪೂ. ೫೨೪). ೩. ನಿಂದೆಗೆ ಗುರಿಯಾದ. (ನಾ). ೪. ಹಾಸ್ಯ; ಪರಿಹಾಸ: ಶಿಖಿಯಹುದೆ ನೋಡೆನಲ್ಕೆ ದೃಪ್ತಭಾವದೊಳಾಕೆ ನಡೆತಂದು ನಿಟ್ಟಿಸಲ್ಪತ್ತಮಾದುದು ಮೇಲುದಿನ ವಸನಮಾಗಳಾಕ್ಷಿಪ್ತಮುಂ ಮಾಡಿ ನಗುತಿರ್ದನಾಭೂವರಂ ಸಭೆಯೊಳ್ವಿನೋದದಿಂದೆ (ಜೈಮಿಭಾ. ೯-೯). ೫. ಕೆಟ್ಟವನು: "ಆಕ್ಷಿಪ್ತಃ, ಹತಕಃ - ಈ ೨ ಕೆಟ್ಟವಂ" (ಹಲಾಯು. ೬೨-೨೨೩). ೬. ಗದಾಯುದ್ಧದಲ್ಲಿ ಎಂಟು ಬಗೆಯ ಪ್ರಹಾರಕ್ರಮಗಳಲ್ಲಿ ಒಂದು: ಆಸ್ಫೋಟಿತಮಾಕ್ಷಿಪ್ತಮುದ್ಭ್ರಾಮಿತಂ ದಿಗ್ಭ್ರಾಮಿತಂ . . . ಎಂಬೆಂಟು ತೆಜದ ಪ್ರಹರಣಂಗಳೊಳಂ (ಗದಾಯು. ೮-೧ ವ). ೭. [ನಾಟ್ಯ] ಅಂಗಹಾರಗಳಲ್ಲಿ ಒಂದು: ವಿಕ್ಷಿಪ್ತಮುಲಾತಂ ಕೇಳಾಕ್ಷಿಪ್ತಮೆನಿಪ್ಪ ಮೂಜುಕರಣಮನತ್ಯಾಪೇಕ್ಷೆಯಿನಿಮ್ಮಡಿಮಾಡಲ್ಕಾಕ್ಷಿಪ್ತಮೆನಿಪ್ಪ ಪೆಸರನಾಂತೆಸೆದಿರ್ಕುಂ (ಲಾಸ್ಯರಂ. ೫-೨೩). [ಸಂ.]

**ಆಕ್ಷೇಪ** (ನಾ). ೧. ಎಸೆಯುವುದು; ಬಿಸಾಡುವುದು. ೨. ನಡುಕ; ಕಂಪನ; ಮಿಡಿತ (ಕ). ೩. ಮೂದಲಿಸುವುದು; ಗದ್ದರಿಸಿ ನುಡಿಯುವುದು; ಬೈಯುವುದು: "ಆಕ್ಷೇಪಮೆನೆ ಬೈಗುಳೆನಿಸಿಕ್ಕು" (ಮಂಗರಾ. ೨೬-೫); ಬೇಡದುದ್ವೃತ್ತನೊಳಿನ್ನೇನ್ . . . ಎಸಗುವಾಕ್ಷೇಪಮಂ ಮಾಣ ನೀಂ ಕ್ರೋಧನನಾಗಲ್ ನಿನ್ನ ತಮ್ಮಂ ನಿನಗೆಜಗಂ (ಆದಿಪು. ೧೪-೮೪). ೪. ಸಂಶಯ. ೫. ವಿರೋಧ; ಅಡ್ಡಿ: ಸಂದಾದ್ರೀಸ ಪೋಗಗ್ಗಣಿಗೆಸುತೆ ಬೆಸಂಬೇಳ್ವರಾಕ್ಷೇಪದಿಂದಂ (ಎಕ. VII, ಶಿವಮೊ. ೫-೧೫; 1218). ೬. [ಕಾವ್ಯಮೀ] ಒಂದು ಅರ್ಥಾಲಂಕಾರ: ವಿದಿತಾರ್ಥ ವಿಪರ್ಯಾಸಾಸ್ಪದಮೆ ದಲಾಕ್ಷೇಪಮೆಂಬಲಂಕಾರಂ (ಕವಿರಾ. ೩-೧೦೦; ಉದಯಾ. ೮ ನೋ).

ಆಕ್ಷೇಪಮಾಡು = ಆಕ್ಷೇಪಿಸು: (ಮುಂಬಯಿ. ೪-೧೨೭ ಕ). [ಸಂ.]

**ಆಕ್ಷೇಪಂಗೆಯ್** (ಕ್ರಿ). ವಿರೋಧಿಸು; ಪ್ರತಿಭಟಿಸು; ದೂಷಿಸು: ಎಂದು ನುಡಿದ ತಾರಾಪೀಡನರೇಂದ್ರನನಾಕ್ಷೇಪಂಗೆಯ್ದು (ಕಾದಂಉ. ೪೭೭). [ಆಕ್ಷೇಪ + ಗೆಯ್ (< ಕೆಯ್$_1$)]

**ಆಕ್ಷೇಪಕ** (ಗು). ೧. ಆಕ್ಷೇಪಿಸುವ; ಅಡ್ಡಿಬರುವ. ೨. ಎಸೆಯುವ; ಬಿಸಾಡುವ. ೩. ನಿಂದಿಸುವ; ಬೈಯುವ. (ನಾ). ೪. ಬೈಯುವುದು; ದೂಷಿಸುವುದು: "ಮೆಚ್ಚಿನೊಳಾಕ್ಷೇಪಕದೊಳ್ ಬೆಚ್ಚೋವಭ್ಯುಪಗಮಾರ್ಥದೆಮಶಬ್ದಂ" (ಶಮದ. ೫೭). ೫. ಆಕ್ಷೇಪಿಸುವವನು: ಅದೊಂದು ವ್ಯರ್ಥಪ್ರಲಾಪವೆಂದು ಆಕ್ಷೇಪಕರ ಅಭಿಪ್ರಾಯ (ಜೀವಾತ್ಮ. ೧೦೨). ೬. [ವೈದ್ಯಶಾ] ಇಪ್ಪತ್ತು ನಾಲ್ಕು ಬಗೆಯ ಪ್ರಸಿದ್ಧ ವಾಯುರೋಗಗಳಲ್ಲಿ ಒಂದು ಬಗೆ; ಎಳೆವು; ಸೆಳೆತ: ಮತ್ತೆ ಮತ್ತೆ ಶರೀರವ ಮುರಿದು ಹಿಂಡುವುದರಿಂದ ಆಕ್ಷೇಪಕವೆನಿಸಿಕೊಂಡಿತು (ವೈದ್ಯಸಾ. I, ೪೦೫). [ಸಂ.]

**ಆಕ್ಷೇಪಣ** (ನಾ). = ಆಕ್ಷೇಪ (ದಕ. ಕ). [ಸಂ.]

**ಆಕ್ಷೇಪಣೀಯ** (ಗು). ೧. ಪ್ರತಿಭಟಿಸಲು ತಕ್ಕುದಾದ. (ನಾ). ೨. [ಜೈನ] ನಾಲ್ಕು ಬಗೆಯ ಧರ್ಮಕಥೆಗಳಲ್ಲಿ ಒಂದು: ಧರ್ಮಕಥೆಯೆಂಬುದಾಕ್ಷೇಪಣೀಯಂ ವಿಕ್ಷೇಪಣೀಯಂ ಸಂವೇದನೀಯಂ ನಿರ್ವೇದನೀಯಮೆಂದು ಚತುರ್ವಿಧಮಕ್ಕುಮವಜೊಳ್ ಅವುದೊಂದಜೊಳ್ ಜೀವಾದಿ ಪದಾರ್ಥಂಗಳ ನವಭಾಗಂಗಳಂ ಯಾಥಾತ್ಮ್ಯಪ್ರರೂಪಣಂಗೆಯ್ವುದಾಕ್ಷೇಪಣೀಯಮೆಂಬುದು (ಚಾವುಂಪು. ೩೯೫-೧೪). [ಸಂ.]

**ಆಕ್ಷೇಪಣೆ** (ನಾ). ಅಭಿಪ್ರಾಯವನ್ನಾಗಲೀ ಕೆಲಸವನ್ನಾಗಲೀ ಪ್ರತಿಭಟಿಸಿ ನುಡಿಯುವುದು; ನಿಂದೆ: ". . . ಜೀವಾತ್ಮನು ಅಭೌತನು ಅವನಲ್ಲಿ ಭೌತತತ್ತ್ವವಿಲ್ಲವೆಂದು ಹೇಳಿದರೆ ಅವನು ಏನಾಗಿದ್ದಾನೆಂಬ ಪ್ರಶ್ನೆಯು ಇದ್ದೇ ಇರುತ್ತದೆ" ಯೆಂದು ಕೆಲವರ ಆಕ್ಷೇಪಣೆ (ಜೀವಾತ್ಮ. ೧೪೧). [ಸಂ. ಆಕ್ಷೇಪಣ]

**ಆಕ್ಷೇಪವಾಚಕ** (ನಾ). ಪರಿಹಾಸಕ್ಕೆ ಆಸ್ಪದವಾದ ಮಾತು: ಧನದ ಪವಣಜಿಯರೆನಿಸಿದ ಧನಪತಿಗಳೆ ಪುರದ ಪರದರವರಂ ನೋಡಲ್ ಧನಪತಿ ನಿರ್ಧನನದಜಿಂ ಧನಪತಿಗಾಕ್ಷೇಪವಾಚಕಂ ತನ್ನಾಮಂ (ಮಲ್ಲಿಪು. ೨-೬೧). [ಆಕ್ಷೇಪ + ವಾಚಕ]

**ಆಕ್ಷೇಪಾಲಂಕಾರ** (ನಾ). = ಆಕ್ಷೇಪ ೬: "ಮೊದಲು ಏನಾದರೂ ಒಂದು ವಿಷಯವನ್ನು ಹೇಳಿ, ಆಮೇಲೆ ವಿಚಾರಮಾಡಿ, ಆ ವಿಷಯವಿಲ್ಲದಿದ್ದರೂ ಕೊರತೆಯಿಲ್ಲ ಎಂದು ಸಮರ್ಥಿಸುವುದು—ಆಕ್ಷೇಪಾಲಂಕಾರ" (ಕೈಪಿಡಿ. ೨೭೭). [ಆಕ್ಷೇಪ + ಅಲಂಕಾರ]

**ಆಕ್ಷೇಪಿಸು** (ಕ್ರಿ). ಬೇರೊಬ್ಬರ ಅಭಿಪ್ರಾಯವನ್ನಾಗಲೀ, ಕೆಲಸವನ್ನಾಗಲೀ ವಿರೋಧಿಸಿ ಮಾತನಾಡು; ನಿಂದಿಸು: ಹೊಸ ಮಡಕೆಯಂ ಹೊತ್ತುಕೊಂಡು ರಭಸದಿ ಹೋಗಲು ಕಾಣುತಾಕ್ಷೇಪಿಸುತ ನೋಡಾ ಕೊಬ್ಬಿದಳು ಮೂಸಂಡಿ ದೊತ್ತಿ ವಳು (ಬಸವು. ೫೫-೨೯); ಮದುವೆ ನಿಶ್ಚಯವಾದಾಗ ಅವಳ ಭಾವೀ ಅತ್ತೆಮಾವಂದಿರು ಗೃಹಕೃತ್ಯಗಳಲ್ಲಿ ಅವಳ ಅಜ್ಞಾನದ ಬಗ್ಗೆ ಆಕ್ಷೇಪಿಸಿದರು (ಭಾರಜಾ. ೧೧೯); ಕನಕಮ್ಮನವರು ಅಷ್ಟು ನಿಷ್ಠುರವಾಗಿ ಮಾತನಾಡಬಾರದಿತ್ತು ಎಂದು ಆಕ್ಷೇಪಿಸಿದರು (ಮೂಲಾನ. ೩೭).

[ಆಕ್ಷೇಪಣ + -ಇಸು$_1$]

**ಆಕ್ಷೋಟ** (ನಾ). ಒಂದು ವೃಕ್ಷದ ಹೆಸರು: "ಬೆಟ್ಟದಲ್ಲಿ ಹುಟ್ಟಿದಂಥಾ ಆ ಒಗನಿಯಲ್ಲಿ ಅಕ್ಷೋಟ, ಕಂದರಾಲ ಎಂಬ ಎರಡು ಶಬ್ದಂಗಳು ನೆಗಳ್ಗು" (ನಾಚಿರಾ. ಕ). "ಬೆಟ್ಟದ ಗೋನುಮರ, ಬೆಟ್ಟಗೋಣೀ ಮರ" (ಸಿದ್ಧಾಂತಿ. ೧೦೪). [ಸಂ.]

**ಆಕ್ಷೋಡ** (ನಾ). = ಆಕ್ಷೋಟ: ಬೃಹಚ್ಛದಃ - ಆಕ್ಷೋಡಃ (ಓಷಧಿ. ೯೭). [ಸಂ.]

**ಆಕ್ಷೋಟಿ** (ನಾ). = ಆಕ್ಷೋಟ: "ಆಕ್ಷೋಟಂ - ಆಕ್ಷೋಟಿಂ" (ಶಬ್ದಾನು. ೧೪೦ ವ್ಯಾಖ್ಯಾ). [< ಸಂ. ಆಕ್ಷೋಟ]

**ಅಖಂಡಲ,** ಅಖಂಡಳ (ನಾ). ದೇವೇಂದ್ರ: "ಇಂದ್ರಃ . . . ಅಖಂಡಲಃ . . . ಮೇಘವಾಹನಃ —ಈ ೩೯ ದೇವೇಂದ್ರನ ಪೆಸರ್" (ಹಲಾಯು. ೧೦–೫೩); ಕಂಡೆಂ ಗ್ರಹಣಮನದನಾಖಂಡಲ ದಿಙ್ಮುಖದೆ (ಗದಾಯು. ೧–೨೬); ಅಗಳಾಖಂಡಲನ ಬೆಸದಿಂ (ಪಂಪರಾಮಾ. ೧೬–೨೯ ವ). **ಅಖಂಡಳ:** ಮುದುಪಾರ್ವನಾಗಿ ಮೆಲ್ಲನೆ ಸಾರ್ವಾಖಂಡಳನಂ ಕಾಣಲೊಡಂ (ಪಂಪಭಾ. ೮–೨); ಕಣ್ಗೊಂಡನಾಖಂಡಳಂ (ಪುಷ್ಪಪು. ೧೨–೩೭). [ಸಂ.]

**ಅಖಂಡಲದ್ರುಮ** (ನಾ). ಕಲ್ಪವೃಕ್ಷ: ಭಕ್ತಜನಕಾಖಂಡಲದ್ರುಮವೆಂದು ತಕ್ಕೈಸಿದನು ಹರಿಪದವ (ಕುವ್ಯಾಸ. ೩–೨). [ಅಖಂಡಲ+ದ್ರುಮ]

**ಅಖಂಡಳ** 'ಅಖಂಡಲ' ನೋ.

**ಅಖಂಡಳತನಯ** (ನಾ). ೧. ಇಂದ್ರನ ಮಗ. ೨. ವಾಲಿ. ೩. ಅರ್ಜುನ: ನೆಗೆದು ಪಾಜುವಾಗಳದನೆರಬ್ಬಂಡಮುಪ್ಪಿನಮಾಖಂಡಳತನಯನಿಸುವುದುಂ (ಪಂಪಭಾ. ೫–೯೯ ವ). ೪. ಜಯಂತ

[ಅಖಂಡಳ (= ಅಖಂಡಲ) + ತನಯ]

**ಅಖಂಡಳಾತ್ಮಜ** (ನಾ). = ಅಖಂಡಳತನಯ ೩: ಮರಳಿತು ಸರ್ಪಶರವಾಖಂಡಳಾತ್ಮಜನತ್ತ ಹಾಳಾಹಳದ ಜೂಣಿಯಲಿ (ಕುವ್ಯಾಕ. ೨೫–೪೩).

[ಅಖಂಡಳ (= ಅಖಂಡಲ) + ಆತ್ಮಜ]

**ಅಖರಿ,** ಅಖರು (ನಾ). = ಅಖ್ಯೆರು: ತಿಂಗಳಿನ ಅಖರಿಯಲ್ಲಿ ಕೊಡುತ್ತೇವೆ (ದಕ. ೬). **ಅಖರು** (೬).

[← ಅರ. ಪಾರ. ಹಿಂ. ಆಖಿರ್, ಆಖಿರೀ; ಮರಾ. ಅಖರೀ]

**ಅಖರು** 'ಅಖರಿ' ನೋ.

**ಅಖಾತ** (ನಾ). ನೈಸರ್ಗಿಕವಾದ ಕೊಳ ಅಥವಾ ಸರೋವರ; ಕೊಲ್ಲಿ: ಕಾರನಾಡ ಬೇಲಿಕೆರಿಯೆಂಬೆರಡು ಸಣ್ಣ ಅಖಾತಗಳಿವೆ (ಕಭಾಗೆ. ೧–೪); ಮಧ್ಯಾಹ್ನ ಹಿರಣ್ಮಯಿ ಹಡಗವು ಬಂಗಾಲ ಅಖಾತದಲ್ಲಿ ಚಲಿಸುತ್ತಾ ಇದೆ (ಭಾರತೀ. ೯೦); ಅಲ್ಲಿಯ ಅಖಾತವು ಜಗತ್ತಿನಲ್ಲಿಯೇ ಶ್ರೇಷ್ಠವಾದದ್ದು (ಸಮುದ್ರ. ೯೯೩). [ಸಂ.]

**ಅಖು** (ನಾ). ಇಲಿ: "ಆಖುಃ, ವೃಷಃ, ಮೂಷಕಃ —ಈ ೩ ಇಲಿ" (ಹಲಾಯು. ೩೯–೮೨); ಬಡ ಬಿಡಾಲನು ಹೇಡಿ ಅಖುಗಳ್ ಭೀತಿಸುವ ಬಿಡಯ ಕಡುಗೊಳದು (ಜಿನಮು. ೧೯–೪೩). [ಸಂ.]

**ಅಖುಗ** (ನಾ). ಇಲಿಯ ಮೇಲೆ ಸವಾರಿ ಮಾಡುವವನು; ಗಣೇಶ. [ಸಂ.]

**ಅಖುದ್ವಿಷ** (ನಾ). ಇಲಿಯ ಹಗೆ; ಬೆಕ್ಕು: "ಮಾರ್ಜಾಲಂ ಬಿಡಾಲಮಾಖುದ್ವಿಷಂ . . . ಬೆಕ್ಕೆನಿಕ್ಕುಂ" (ಮಂಗರಾ. ೪೯–೧೧).

[ಸಂ. ಆಖುದ್ವಿಟ್]

**ಅಖುಭುಜ** (ನಾ). ಇಲಿಯನ್ನು ತಿನ್ನುವ ಪ್ರಾಣಿ; ಬೆಕ್ಕು.

[ಸಂ. ಆಖುಭುಜ್]

**ಅಖುರಥ** (ನಾ). ಇಲಿಯನ್ನು ರಥವನ್ನಾಗಿ ಉಳ್ಳವನು; ಗಣಪತಿ: "ಹೇರಂಬಃ . . . ಅಖುರಥಃ . . . ವಿನಾಯಕಃ —ಈ ೯ ಬೆನಕನ ಪೆಸರ್" (ಹಲಾಯು. ೪–೧೯). [ಅಖು + ರಥ]

**ಅಖುವಾಹನ** (ನಾ). = ಅಖುರಥ. [ಅಖು + ವಾಹನ]

**ಅಖುಶಾಬ** (ನಾ). ಇಲಿಯ ಮರಿ: ಮಾರ್ಜಾರಂಗಳ್ ತರುಣಾಖುಶಾಬಶತಕಂಧರಮಂ ನಖಮುಖದಿನುಜಿಸಿ ತುಜಿಸಿದುವೊಲವಿಂ (ಪುಷ್ಪಪು. ೧೪–೧೯). [ಅಖು + ಶಾಬ]

**ಅಖೇಟ** (ನಾ). ೧. ಬೇಟೆ: ಕರೆದೊಡೆ ಜೂದಿಂಗಂ ಧುರಭರಕಾಖೇಟಕ್ಕೆ ಭೂಭುಜಂಗಾಗದು ಮೆಯ್ಗುರೆದಿರಲ್ (ಪಂಪಭಾ. ೬–೭೧). ೨. ಭಯ; ಅಂಜಿಕೆ; ಗಾಬರಿ (೬). [ಸಂ.]

**ಅಖೇಟಕ** (ನಾ). ೧. ಬೇಟೆ: "ಆಚ್ಛೋಟನಂ, . . . ಅಖೇಟಕಂ— ಈ ೬ ಬೇಂಟೆ" (ಹಲಾಯು. ೭೧–೨೮೧). ೨. ಬೇಟೆಗಾರ. [ಸಂ.]

**ಅಖ್ಯೆರಿ** (ಗು). ಕೊನೆಯ; ಕಡೆಯ: ಪದ್ದಿ ತನ್ನ ಅಖ್ಯೆರಿ ತೀರ್ಮಾನ ಹೇಳಿದಳು (ಚಿಗುಬ. ೮೪); ಅಖ್ಯೆರಿ ಮಾತು ಹೇಳಿಬಿಡ್ತೀನಿ ಅಪ್ಪಯ್ಯ (ಅನ್ನಾವ ೪೨). [← ಹಿಂ. ಆಖಿರೀ]

**ಅಖ್ಯೆರು,** ಅಕ್ಕೆರು (ನಾ). ಕಡೆ; ಕೊನೆ; ಅಂತ್ಯ: ಸಸಿ ಹಾಕುವುದು ಅಖ್ಯೆರಾಯಿತೆಂದು ಬೈಲುಕೊಡಿಗೆಯಿಂದ ಸಸಿ ತಂದೆವಲ್ಲ ಅದಕ್ಕೇನು ಮಾಡುವೇ? (ಗಂಗಾಳ. ೧೧೮); ಅವರ ಅಪ್ರಮಾಣಿಕನವೇ ಅಖ್ಯೆರಾಗಿರತಕ್ಕುದು (ಛಾಧಾನ. ೧೬೦). **ಅಕ್ಕೆರು:** ಗುರುವಾರಕ್ಕೆ ಅಕ್ಕೆರು ಅಗಿ ಇದೆ (ಎಕ. I, ೧೨–೧೬; 1782). [< ಅಖರಿ]

**ಅಖ್ಯೆರುಸಾಲು** (ನಾ). ವರ್ಷದ ಕೊನೆ: ಜಾಮೀನು ತೆಗೆದುಕೊಂಡು ಅಖ್ಯೆರು ಸಾಲಿಗೆ ಐವಜು ವಸೂಲಾಗಿ ಬರುವಹಾಗೆ ಬಂದೋಬಸ್ತು ಮಾಡಿಕೊಂಡು ಯಿತಬಾರಿ ಐವಜದಾರ ಬರೆಸಿಕೊಡುವುದು (ಮಹಾವಂ. II, ೭೧). [ಅಖ್ಯೆರು + ಸಾಲ್ಕು]

**ಅಖ್ಯಾತ** (ಗು). ೧. ಹೇಳಲ್ಪಟ್ಟ; ತಿಳಿಸಲ್ಪಟ್ಟ. ೨. ಪ್ರಸಿದ್ಧವಾದ. ೩. [ವ್ಯಾಕ] ರೂಪನಿಷ್ಪತ್ತಿಯನ್ನು ತಿಳಿಸಿದ; ನಿಷ್ಪನ್ನವಾದ. (ನಾ). ೪. [ವ್ಯಾಕ] ಧಾತುವಿಗೆ ಕಾಲಸೂಚಕ ಪ್ರತ್ಯಯವೂ ಪುರುಷಸೂಚಕ ಪ್ರತ್ಯಯವೂ ಸೇರಿ ಆಗುವ ಕ್ರಿಯಾಪದ: ಕ್ರಮದಿಂದೆ ಸಂಧಿನಾಮಂ ಸಮಾಸಮಾ ತದ್ಧಿತಂ ಪೊದಜ್ಬಾಖ್ಯಾತಂ ಪ್ರಮುದಿತಧಾತುಮಪಭ್ರಂಶಮವ್ಯಯಂ ಸಂಧಿ ಶಬ್ದಮಣಿದರ್ಪಣದೊಳ್ (ಶಮುದ.೮). [ಸಂ.]

**ಅಖ್ಯಾತಕ** (ನಾ). = ಅಖ್ಯಾತ ೪: ಚರಮಸ್ವರಕ್ಕೆ ಚರಮಾಕ್ಷರಕಕ್ಕುಂ ಲೋಪಮುಗ್ರದೊಳ್ ತದ್ಧಿತಮೊಂದಿರೆ ತನ್ನೊಳಾಸಮಾಸಾಂತರದಾಖ್ಯಾತಕದ ಲಕ್ಷಣಂ ವ್ಯವಹರಿಕುಂ (ಶಮುದ. ೨೦೯). [ಸಂ.]

**ಅಖ್ಯಾತಪದ** (ನಾ). ಕ್ರಿಯಾಪದ; ಧಾತುವಿಗೆ ಅಖ್ಯಾತ ಪ್ರತ್ಯಯವು ಸೇರುವುದರಿಂದ ಆಗುವ ಪದ: ನುಡಿ ನೋಡು ಎಂಬ ಧಾತುವನಿಜಿಸಿ ಅವರ್ ಎಂಬ (ಅಖ್ಯಾತ) ವಿಭಕ್ತಿಯಂ ಕುಡೆ ನುಡಿದಂ, ನೋಡಿದಂ ಎಂದು (ಅಖ್ಯಾತ) ಪದಮಕ್ಕುಂ (ಶಮುದ. ೩೫ ವೃತ್ತಿ).

[ಅಖ್ಯಾತ + ಪದ್ಯ]

**ಅಖ್ಯಾತಪ್ರತ್ಯಯ** (ನಾ). [ವ್ಯಾಕ] "ಕ್ರಿಯಾರ್ಥವನ್ನು ತಿಳಿಸುವ ಶಬ್ದಗಳಿಗೆ, ಎಂದರೆ ಧಾತುಗಳಿಗೆ, ಕೆಲವು ಪ್ರತ್ಯಯಗಳು ಸೇರಿ ಕ್ರಿಯಾಪದಗಳಾಗುತ್ತವೆ. ಈ ಪ್ರತ್ಯಯಗಳಿಗೆ ಅಖ್ಯಾತಪ್ರತ್ಯಯಗಳೆಂದು ಹೆಸರು" (ಕೈಪಿಡಿ. ೪೨); "ಪುರುಷ, ವಚನ, ಲಿಂಗಗಳನ್ನು ಸೂಚಿಸುವುದಕ್ಕಾಗಿ ಧಾತುವಿಗೆ ಸೇರುವ ಪ್ರತ್ಯಯಗಳಿಗೆ ಅಖ್ಯಾತ ಪ್ರತ್ಯಯಗಳೆಂದು ಹೆಸರು" (ಮಧ್ಯಮ. ೭೮). ℙ ಗುಣವಾಚಕ, ನಾಮವಾಚಕ, ಸಂಖ್ಯಾವಾಚಕ, ಸರ್ವನಾಮಗಳಿಗೆ ಪುರುಷವಾಚಕ ಪ್ರತ್ಯಯಗಳು ಸೇರಿ ಕೆಲವು ವೇಳೆ ಕ್ರಿಯಾರೂಪಗಳಾಗುವುದೂ ಉಂಟು: ವಿನುತಗುಣವಚನದೊಳ್ ಸರ್ವನಾಮದೊಳ್ ಸಂಖ್ಯೆಯೊಳ್ ಪ್ರವರ್ತಿಪುವಾಖ್ಯಾತ ನಿಯುಕ್ತ ವಿಭಕ್ತಿಗಳಿವು ಘನತರ ಸಂಸ್ಕೃತ ಗುಣೋಕ್ತಿಯೊಳಮುಮರ್ದಿರ್ಕುಂ (ಶಮುದ. ೨೧೯).

[ಅಖ್ಯಾತ + ಪ್ರತ್ಯಯ]

**ಅಖ್ಯಾತಿ** (ನಾ). ೧. ಹೇಳುವುದು; ನಿರೂಪಣೆ; ವಿವರಣೆ. 'ಅಸದಾಖ್ಯಾತಿ' ಪರಾ. ೨. ಕೀರ್ತಿ; ಯಶಸ್ಸು. [ಸಂ.]

**ಅಖ್ಯಾತಿಸು** (ಕ್ರಿ). ಹೇಳು; ವಿವರಿಸು; ಸ್ಪಷ್ಟಪಡಿಸು: ಮಾತೆ ಮೇಧಾವಿನಿಗೆ ಬಂದು ನಿರ್ಗಮವನಾಖ್ಯಾತಿಸಿ ಪದಾಂಬುಜಕೆ ಪಣಿಯಿಟ್ಟನಾ ಚಂದ್ರಹಾಸ (ಜೈಮಿಭಾ. ೨೯–೪೦).

[ಅಖ್ಯಾತ + –ಇಸು]

**ಆಖ್ಯಾನ** (ನಾ). ೧. ಹೇಳುವುದು ; ನಿರೂಪಣೆ : ಆ ಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸಂಪತ್ಪರಿವರ್ಣನಮುಂ ರಾಜ್ಯರಮಣೀಯಕಾಖ್ಯಾನಮುಂ . . . ಎಂದಿಂತವಯವಂಗಳೆಂಟಕ್ಕುಂ (ಆದಿಪು. ೧–೪೨ ವ). **೨.** ಹೆಸರು. **೩.** ಕಥೆ, ಪುರಾಣ ಮತ್ತು ಇತಿಹಾಸಗಳಲ್ಲಿ ಬರುವ ವೃತ್ತಾಂತ ವಿಶೇಷಗಳು : ಶ್ರೀಕಾಂತೆಯಂ ತನ್ನ ಪೇರುರದೊಳ್ ತಾಳ್ದಿ ಬುಧಾಳಿಯೇಂ ಪೊಗಳದೋ ಶ್ರೀವಲ್ಲಭಾಖ್ಯಾನಮುಂ (ಎಕ. VIII, ನಗರ. ૩೭–೭೬ ; 1147) ; ಈ ಮುಖ್ಯವಾದ ಆಖ್ಯಾನವೇ ಅನೇಕ ಉಪಾಖ್ಯಾನಗಳನ್ನೊಳಗೊಂಡು ಬೃಹತ್ಕಥೆಯಾಗಿದೆ (ಭಾರದ. ೧೦೦). [ಸಂ.]

**ಆಖ್ಯಾನಕ** (ನಾ). = ಆಖ್ಯಾನ ೩ : ಬರೆಪಂ ಬಾಜನೆ ಗಂಡಯುಕ್ತಿಗಣಿತಂ ಗಂಧರ್ವಮಾಖ್ಯಾನಕಂ ಭರತಾಭ್ಯಾಸಂ (ಪುಷ್ಪಪು. ೪–೫೯). [ಸಂ.]

**ಆಖ್ಯಾನಜಾತಿ** (ನಾ). ಕಥೆಗಳ ಗುಂಪು,—ವರ್ಗ : ಗದ್ಯಕಾವ್ಯವು ಆಖ್ಯಾಯಿಕೆ, ಕಥೆ ಎಂಬುದಾಗಿ ಎರಡು ವಿಧವೆಂದು ಹೇಳಿ ಕೊನೆಗೆ ಇವುಗಳಿಗೂ ಹೆಚ್ಚು ಭೇದವಿಲ್ಲವೆಂದೂ, ಎರಡೂ ಒಂದೇ ಎಂದೂ ತೋರಿಸಿ ಮಿಕ್ಕ "ಆಖ್ಯಾನಜಾತಿ"ಗಳೆಲ್ಲಾ ಇದರಲ್ಲಿಯೇ ಅಡಕವಾಗುವುವೆಂದೂ ಹೇಳಿದ್ದಾನೆ (ಕೈಪಿಡಿ. ೧೮೦). [ಆಖ್ಯಾನ + ಜಾತಿ]

**ಆಖ್ಯಾಯಕ** (ನಾ). ೧. ಹೇಳುವವನು ; ನಿರೂಪಿಸುವವನು. **೨.** ಓಲೆಕಾರ ; ದೂತ. [ಸಂ.]

**ಆಖ್ಯಾಯಿಕೆ** (ನಾ). ಕಥೆ ; ಗದ್ಯಗಳಲ್ಲಿ ಒಂದು ಬಗೆ : ಗದ್ಯಮಯಂ ಪದ್ಯಮಯಂ ತದ್ಯಮುಳವಿಮಿಶ್ರಮೆಂದು ಕೃತಿ ಮೂಱು ತೆಱಂ ಗದ್ಯದೊಳೆ ಸಮೆದುಮಂತವು ಹೃದ್ಯವಚಃಪ್ರೌಢಿಗಳ್ ಕಥಾಖ್ಯಾಯಿಕೆಯೊಳ್ (ಕಾವ್ಯಾವ. ೯೪೯) ; ಸಂಸ್ಕೃತದಲ್ಲಿಯೂ ಹಿಂದೆ ಗದ್ಯದಲ್ಲಿ—ಮುಖ್ಯವಾಗಿ — ಕಥೆಗಳನ್ನು ಬರೆದಿದ್ದಂತೆ ತೋರುತ್ತದೆ. ಇವು ಆಖ್ಯಾಯಿಕೆ, ಕಥೆ, ಖಂಡಕಥೆ, ಪರಿಕಥೆ, ಕಥಾನಿಕೆ ಎಂಬಂತೆ ಐದು ವಿಧವಾಗಿದ್ದಂತೆ ಅಗ್ನಿಪುರಾಣವು ತಿಳಿಸುತ್ತದೆ (ಕೈಪಿಡಿ. ೧೮೦) ; ಅವರ ವಿಷಯವಾಗಿ ಪ್ರಚಲಿತವಾದ ಆಖ್ಯಾಯಿಕೆಗಳನ್ನು ಇಲ್ಲಿ ನಿರೂಪಿಸಬೇಕಾಗಿಲ್ಲ (ತವನಿ. ೧೫೭). [ಸಂ. ಆಖ್ಯಾಯಿಕಾ]

**ಆಖ್ಯೆ** (ನಾ). ೧. ಹೆಸರು : ಕರ್ಣಾಟ ಭಾಷೆಯೊಳ್ . . . ಅನುನಾಸಿಕಾಖ್ಯೆಯಂ ತಳೆದಿರ್ಕುಂ (ಶಮುದ. ೧೫). **೨.** ಪ್ರಖ್ಯಾತಿ (ದಕ. ಕ).
[ಸಂ. ಆಖ್ಯಾ]

**ಆಖ್ಯೇಯ** (ಗು). ಹೇಳಬೇಕಾದ ; ತಿಳಿಸಬೇಕಾದ; ಹೇಳಲು ಅರ್ಹವಾದ : ಆಖ್ಯಾತ ಆಖ್ಯೇಯ ಸಂಬಂಧ ಇತ್ಯಾದಿ ಬಗೆಬಗೆಯ ಸಿದ್ಧಾಂತಗಳನ್ನು ಕಾಣುವೆವು (ಪರಪ. ೨೨೫). [ಸಂ.]

**ಆಗ**$_1$ 'ಆಗಡು' ನೋ.

**ಆಗ**$_2$ (ನಾ). ಪಾಪ ; ಅಪರಾಧ : "ಆಗ–ಆಗಸ್ = ಪಾಪ" (ತದ್ಭಕೋ. ೩) ; ಆಗಕ್ಕೆ ಭೋಗವೇ ಸಾಕ್ಷಿ (ಗಾದೆ). [ಸಂ. ಆಗಸ್]

**ಆಗ**$_3$ 'ಆಗು$_1$' ಪರಾ.

**ಆಗಂ** 'ಆಗಡು' ನೋ.

**ಆಗಂತು** (ಗು). ೧. ಅನಿರೀಕ್ಷಿತವಾಗಿ ಬಂದ ; ಹೊರಗಿನಿಂದ ಬಂದ ; ಆಕಸ್ಮಿಕವಾದ ; ಪ್ರಾಸಂಗಿಕವಾದ. (ನಾ). **೨.** ಅತಿಥಿ ; ಅಭ್ಯಾಗತ ; ಔತಣಕ್ಕಾಗಿ ಬಂದವನು : "ಆವೇಶಿಕಃ, ಪ್ರಾ (ಘು) ಹುಣಕಃ, ಆಗಂತುಃ, ಅತಿಥಿಃ—ಈಳ ಬಿರ್ದಿನಂ" (ಹಲಾಯು. ೫೯–೨೦೩). [ಸಂ.]

**ಆಗಂತುಕ** (ಗು). ೧. = ಆಗಂತು ೧ : ಸಮನಿಸುವ ಸಹಜ ಶಾರೀರ ಮಾನಸಾಗಂತುಕ ಪ್ರಕರಮೆನಿಸಿದ ನಾಲ್ಕುಮುದಗ್ರ ಪೀಡೆಗೆಡೆಯಾದ ಮಾನನಂಗಾವ ಭವದೊಳಂ ಸುಖಮುಂಟೇ (ಪುಷ್ಪಪು. ೧೩–೩೨) ; ಸತತಾಗಂತುಕ ಮಾನಸದುಃಖವರ್ಜಿತರು (ಚಂಪ್ರಸಾಂ. ೩–೯೬) ; ದುಃಖ ರಾಗದ್ವೇಷಾದಿ ಪರ್ಯಾಯಗಳು ಆಗಂತುಕಗಳು (ಹಿಂದಸಾ. ೮೩) ; ಹೊರಗಿನಿಂದ ಬರುವುದು ಆಗಂತುಕ (ಆರ್ಯಧ. ೯೭). (ನಾ). **೨.** ಹೊಸದಾಗಿ ಬಂದ ಅಪರಿಚಿತ : ಆಗಂತುಕರು, ತಾಯೆ! ನಿನ್ನನ್ನು ಬಿಟ್ಟು ನಾವು ಓಡಿಹೋಗುವುದಿಲ್ಲ (ಶ್ರೀರಾಯ. ೨೩೦) ; ಯಾವ ಆಗಂತುಕ ಆ ಕಂಬಕ್ಕೆ ಒರಗಿ ನೆಲದ ಮೇಲೆ ಕೂತಾನು (ಕಂಬಹು. ೧). **೩.** ಅನಿರೀಕ್ಷಿತವಾಗಿ ಬಂದವನು; ತಾನಾಗಿ ಬಂದವನು : ಆಗಂತುಕರಾಗಿ ಬಂದ ಬ್ರಾಹ್ಮಣರನ್ನು ಕಂಡು ಜರಾಸಂಧನು ಎದ್ದು ಪ್ರತ್ಯುತ್ಥಾನ ಮಾಡಿದನು (ರಾಜಸೂ. ೧೭) ; ದೊರೆಯು ಆಗಂತುಕರನ್ನು ಆದರದಿಂದ ಬರಮಾಡಿಕೊಂಡು ಹಳೆಯ ಮತವನ್ನು ಅವರು ಬಿಟ್ಟುದಕ್ಕೇನು ಕಾರಣವೆಂದು ಕೇಳಿದನು (ಪೈಮಹ. ೨೫). **೪.** ಅನಿರೀಕ್ಷಿತವಾಗಿ ಬಂದ ಸುಂಕದ ರೂಪದ ಆದಾಯ : ಸುಂಕ ಆಗಂತುಕ ಸಹ ಬಾಧೆ ಪರಿಹಾರವಾಗಿ ಬಿಟ್ಟ ದತ್ತಿ (ಮೈಆರಿ. ೧೯೪೫, ೧೬–೨೯ ; 1132). [ಸಂ.]

**ಆಗಗಾಡಿ** (ನಾ). ಉಗಿಬಂಡಿ ; ಹೊಗೆಬಂಡಿ : ವ್ಯಾಪಾರಕ್ಕೋಸ್ಕರವಾಗಿಯೂ ಆಗಗಾಡಿಯ ರಸ್ತೆಗಳಾಗಲಿ ದೊಡ್ಡ ರಸ್ತೆಗಳಾಗಲಿ ಇದ್ದೇ ಇರುತ್ತವೆ (ಬೆಳುಮು. ೪) [← ಹಿಂ. ಆಗ್‌ಗಾಡೀ]

**ಆಗಡ**$_1$ (ನಾ). ಕೆಟ್ಟಕೆಲಸ; ಅಯೋಗ್ಯವಾದ ಕೆಲಸ; ದುಷ್ಟಚೇಷ್ಟೆ : ಆಗಡವ ಮಾಡಿ ಮಾಗುಡವ ಮಿಂದರೆ ತಾ ಕೊಡಬಲ್ಲನೆ ಕೂಡಲಸಂಗಮದೇವ (ಬಸವ. ೬೪೫) ; ಏಳುನೂಱಿಪ್ಪತ್ತು ಅಮರಗಣಂಗಳ ಲಾವಿದ್ದಂತೆ ನಿಮ್ಮ ಆಗಡವೇಕಯ್ಯಾ (ಮೋಳಿಮಾ. ೨೦೭).
[ದೇ. ‖ ತಮಿ. ಆಗಡಿಯ ; ತೆಲು. ಆಗಡಮು]

**ಆಗಡ**$_2$ 'ಆಗಡು' ನೋ.

**ಆಗಡಕಾಱ** (ನಾ). ಹಿಂಸಿಸುವವನು ; ತೊಂದರೆ ಮಾಡುವವನು ; ಅಯೋಗ್ಯಕೆಲಸ ಮಾಡುವವನು (ಕ).
[ಆಗಡ$_1$ + –ಕಾಱ. / ತೆಲು. ಆಗಡಕಾಡು]

**ಆಗಡಿಗ** (ನಾ). = ಆಗಡಕಾಱ : ಕಲ್ಲು ದೇವರೆಂದು ಪೂಜಿಸುವರು ಆಗದು ಕಾಣಿರೋ ಆಗಡಿಗರಾದಿರಲ್ಲಾ (ಅವಚಂ. ೪೯–೨೧೦); ಆಗಡಿಗರಿವರಮರವಧುಗಳು ನಾಗರಿಗರಿವರೆತ್ತ ಭಾರತ ಭೂಗತರು ತಾವೆತ್ತಲಿದು ಘಟಿಸಿದುದು ವಿಧಿಯೆಂದ (ಕುವ್ಯಾಅ. ೯–೪೪). [ಆಗಡ$_1$ + –ಇಗ]

**ಆಗಡಿಗತನ** (ನಾ). ಕೇಡಿತನ; ಹೊಲ್ಲತನ; ಗೌರವಕ್ಕೆ ಹಾನಿ ತರುವ ನಡತೆ : ನುಡಿದ ದಿವಸಕೆ ಬಾರದಿದ್ದಾ [ಪಾಠಾಂ. ದಿಹುದವ] ಗಡಿಗತನವದು ಜೀಯ ನಮ್ಮಾ ಪಡೆಯ ನೆರಹಲು ಸರಿದವವಧಿಗೆ ದಿವಸ ಹನ್ನೆರಡು (ತೊರರಾ. ೪–೬–೨೯). [ಆಗಡಿಗ + –ತನ]

**ಆಗಡು**, ಆಗ$_1$, ಆಗಂ, ಆಗಡ$_2$, ಆಗಲ್$_1$, ಆಗಲು$_1$, ಆಗವೆ, ಆಗಳ್, ಆಗಳು, ಆಗ್ಗೆ, ಆಗ್ಯೆ, (ಅ). ೧. ಆ ಸಮಯದಲ್ಲಿ; ಆ ಹೊತ್ತಿನಲ್ಲಿ ; ಆ ಕ್ಷಣದಲ್ಲಿ ; ಆ ಗಳಿಗೆಯಲ್ಲಿ : "ತಳೆಗುಂ ಕಾಲಾರ್ಥಮನಾಗಳೀಗಳೆಂಬಾಗಡೀಗಡೆಂಬಿವು" (ಶಮುದ. ೩೨೧) ; ಬಡಗಮೊಗದಿರ್ದು ಕರ್ಮದ ತೊಡರಂ ಪಱಿವಂತೆ ಕೇಶಪಾಶಮನಂತಾಗಡೆ ಪಱಿದು ತಪಂಗೊಂಡಂ (ಆದಿಪು. ೬–೨೪) ; ಪಡೆಯಂ ಸಾಱಲ್ವೇೞ್ದಾಗಡೆ ಪುತ್ರ ಕಳತ್ರ ಮಿತ್ರ ಸಹಿತಂ ಮಹಿಪಂ ನಡೆದಂ (ಶಾಂತಿಪು. ೧–೮೪) ; ಅಕ್ರೂರನೊಡನೆ ಹರಿ ಪೊಱಮಡಲಾಗಡೆ ಪೊಱಮಟ್ಟುದದೊರ್ವಳ ನಿಡುಸುಯ್ಲು ಸಮೀರನೊಡನೆ ಜೀವಸಮೀರಂ (ಜಗವಿ. ೫–೯೮). **೨.** ಯಾವಾಗಲೂ ; ಯಾವ ಸಮಯದಲ್ಲೂ : ವಿನೇಯಜನಮಂ ಕಲ್ಪಿಪ್ಪುಪಾಧ್ಯಾಯರಾಗಡುಮೆಮ್ಮಂ ಮನವೊಲ್ದು ಕಲ್ಪಿಸುಗೆ ಸನ್ಮಾರ್ಗೋಪದೇಶಂಗಳಂ (ಸುಕುಮಾ. ೧–೪) ; ಆಗಡುಂ ಪಿಂಗದೆ ಕರ್ಣನೀವಗುಣವಿಂದ್ರನ ಲೀಳೆ ಭುಜಂಗರಾಜನೊಳು ಸಂಗಳಿಸಿರ್ದ್ದಪೆಮ್ಮೆ ಸುರಶೈಳದ ಬಿಣ್ಪು ಪೊಱಲ್ದು ನಿಂದುವೀ ಗಂಗನ ಪುತ್ರನೊಳ್ (ಎಕ. XII, ತುಮಕೂ. ೯–೧೩ ; 1160).

ಆಗ$_1$ : ೧. ಮುಂತೆ ಕಿನ್ನರರು ನವರಸದಿ ಪಾಡಲ್ಕಾಗ ನಂತರಂ ಭೃಂಗೀಶ ನರ್ತನಕೆ ನಿಂದಾಗ (ಬಸರ. ೧–೨೪); ಆಗ ನಳನೃಪನೊಡಲ ದಕ್ಷಿಣಭಾಗ ಭುಜನಯನಂಗಳದಿರಿದುವು (ನಳಚ. ೨–೪೩); ಬಿನ್ನಹ ಗುರುವೆ ಧ್ಯಾನಕೆ ಬೇಸಱಾದಾಗ ನಿನ್ನನಾದಿಯ ಮಾಡಿಕೊಂಡು ಕನ್ನಡದೊಳಗೊಂದು ಕಥೆಯ ಪೇಳುವೆನು (ಭರಚ. ೧–೫). ೩. ಯಾವಾಗ; ಯಾವ ಸಮಯದಲ್ಲಿ: ಈ ರುಚಿರಕೋಮಲ ಶರೀರನಂಗದ ರುಧಿರವಾರಿ ಯಿನ್ನಾವ ರುಚಿಯೋ ಆಗ [ಪಾಠಾಂ. ಯೋ ಅವಗ, ಯೋವಾಗ] ಸವಿವೆನೋ ಶೀರಲೆಂದೆಳಸಿ ಲವಲವಿಸಿ (ಸಿದ್ಧರಾ. ೬–೨). ಆಗಂ : ೧. ಇಂತಾ ಗಂಗೆಯು ಕಾಣುತ ಕಾಂತೆಯು ಮನದಲ್ಲಿ ಹರುಷವನು ತಾಳ್ದಾಗಂ ನಿಂತಲ್ಲಿಹ ನಾವಿಕರೊಡನಿಂತೊರೆದಳು (ನೀಲಧ್ವ. ೪೫); ಸಾರಿದವು ತಾಮ್ರಚೂಡವು ಧೀರನೆ ಬೆಳಗರೆಯಿತೆಂದು ಬನದೊಳಗಾಗಂ (ಹಮಚ. ೬೩). ಆಗಡ್ಡ$_2$ : ೧. ಆಗಡ, ಈಗಡ (ಶಬ್ದಾನು. ೨೦ ಉದಾ). ಆಗಲ್$_1$: ೧. ಆಗಲಟ್ಟಿದೊಡಾ ಪುರಾರಿಯ್ಯು ದೇಗುಲಕ್ಕವರೆಯ್ದಿ (ಬಸವು. ೨೮–೩೭); ಬಳಿಕ ತಿರುವಿಟ್ಟಾಗಲಸ್ತ್ರವ ಸೆಳೆದು ಬಿಲುವಿದ್ಯಾಚಮತ್ಕೃತಿ ಯಳವ ತೋಱಿದಡೆ (ಕುಮಾರವ್ಯಾ. ೯–೯); ಆಗಲವನ ಪಡೆದಂತಿರವಳಿ ಗನುರಾಗ ಕೈಮಿಾಱಿ ಮನದೊಳು (ಕುರಾಸಾಂ. ೧೩–೧೬೪). ಆಗಲು$_1$: ೧. ಹೊಗೆಯನಾಗಲು ಕಾಣುತದೆಗಳು ಧಿಗಿಲು ಧಿಗಿಲೆನೆ(ಬಸವು. ೫೮–೬೧). ೨. ಕೆಲಸವಾಗಲು [ಪಾಠಾಂ. ಳು] ಮಾಡಲಾಱದೆ ಬಳಲುತೆನ್ನಂ ತೋಱಿದು (ಬಸವು. ೧೮–೫೫); ಸಂತೆ ಸಾಲಕೆ ಹೊಲ್ಲ ಕೊಂತ ಡೊಂಕಲು ಹೊಲ್ಲ ಬೊಂತೆ ಹಚ್ಚಡವ ಹೊದೆ ಹೊಲ್ಲ ಆಗಲು ಚಿಂತೆಯೇ ಹೊಲ್ಲ (ಸರ್ವಜ್ಞ. ೧೧೫೨); ಸೋಗೆಯ ರಸ ಹೊಲ್ಲ ಮಾಗಿಯ ಚಳಿ ಹೊಲ್ಲ ಆಗಲುಂ ಉರಿವ ನೆರೆ ಹೊಲ್ಲ ದುರ್ಜನರ ಯೋಗವೇ ಹೊಲ್ಲ (ಸರ್ವಜ್ಞ. ೮೨೭). ಆಗವೆ : ೧. ಗುರುವಿಂಗೆ ತನುವ ಕೊಟ್ಟಾಗವೆ ಬ್ರಹ್ಮನ ಬಲೆ ಲಿಂಗಕ್ಕೆ ಮನವ ಕೊಟ್ಟಾಗವೆ ವಿಷ್ಣುವಿನ ಬಲೆ ಜಂಗಮಕ್ಕೆ ಧನವ ಕೊಟಾಗವೆ ರುದ್ರನ ಬಲೆ ಇಂತಿವು ಇದಿರಿಟ್ಟ ಭೇದ ಸ್ಥೂಲ ಸೂಕ್ಷ್ಮ ಕಾರಣ ಈ ಮೂಱು ಮೂಱಕ್ಕೊಡಲಾದ ಕಾರಣ ಮತ್ತೆ ಇದ ಸಾರಲೇತಕ್ಕೆ (ಮೋಳಿಮಾ. ೨೮–೧೧೭). ಆಗಳ್ : ೧. ಪರದಗ್ರ್ಗಾರ್ಪಾರ್ವಗ್ರ್ಗಾರ್ಯ್ತ ರಸಗ್ರ್ಗಾ ಕುಡಿಯರಪ್ಪ ನಾಲ್ಬಗ್ರ್ಗಾಗಳ್ (ಕವಿರಾ. ೧–೬೫); ಭೂಷಣವ ನೆಲ್ಲವನಾಗಳ್ ಕಳೆದು (ಕಾದಂಪೂ. ೬೮). ೨. ಎನ್ನ ದಾನಮಿದಾಗಳುಂ ಮಧುಪಾಶ್ರಯಂ (ಪಂಪಭಾ. ೧–೭); ನಿರ್ಗರ್ವರಾಗಿ ಪಂಪನ ಗೀರ್ಗುಂಫದ ಪೆಂಪನಾಗಳುಂ ಬಣ್ಣಿಸುವರ್ (ಪಂಚತಂ. ೫–೨೦); ನಿನ್ನ ರೂಪನೆ ನೋಡಿ ಬಾಱುವೆನಾಗಳುಂ (ಧರ್ಮಾಮೃ. ೨–೨೨೧). ಆಗಳು : ೧. ನಾವು ಆಗಳು ತೊಡಗಿ ನಿಮ್ಮ ಗುಣಾವಳಿಗಳಂ ಕೇಳ್ದು ನಿಮ್ಮಯ ಹಿಂದೆ ಬರುತಿರಲು (ಬಸವು. ೩೮–೨೦). ೨. ಮೆಲುನುಡಿಗಳಿನಿದಂ ನೆನೆವ ನಾಗಳು ಸಮೇಳಂ (ಬಸವು. ೪೨–೨೫). ಆಗ್ಗೆ : ೧. ಆಗ್ಗೆ ಈ ಊರಿನ ಪರಿಚಯ ಅಷ್ಟಾಗಿ ಆಗಿರಲಿಲ್ಲ (ರೂಢಿ); ಆಗ್ಗೆ ದವಸಧಾನ್ಯಗಳು ಅಗ್ಗ ವಾಗಿ ಸಿಕ್ಕುತ್ತಿದ್ದುವು (ರೂಢಿ). ೪. ಅಂಥ ಸನ್ನಿವೇಶದಲ್ಲಿ; ಆ ಪಕ್ಷಕ್ಕೆ: ಆಗ್ಗೆ ನಾನೇನು ಮಾಡಿದ್ದೆ ಗೊತ್ತೆ ? (ರೂಢಿ). ಆಗ್ಯೆ : ೧. ಹೊತ್ತು ಕೊಂಡು ಹೋಗುವಾಗ್ಯೆ . . . ದಾರೀಹಿಡಕೊಂಡು ನೋಡುವಾಗ್ಯೆ (ಮೈಅರಿ. ೧೯೨೯, ೧೮–೩೨, ೩೫; 1402); ಬರೋವಾಗ್ಯೆಯೇನು ತಂದಿ ಬರುತಲೆ ಎಲ್ಲಾನು ನನ್ನದೆಂದಿ (ಪುರಂದ. ೨–೫೪–೨); ಆಕಾಶ ಹರಿದು ಬೀಳುವಾಗ್ಯೆ ಅಂಗ್ಯೆ ಒಡ್ಡಿದರೆ ನಿಂತೀತೆ (ಗಾದೆ).

ಆಗಾಗ (ದ್ವಿರುಕ್ತಿ): ಉಗ್ಗುಗಳನಾಗಾಗ ಬಯಸಲು ಹಿಗ್ಗುವಳು (ಬಸವು. ೧೫–೧೪). ಆಗಳಂತೆ = ಕೂಡಲೇ; ಆ ಗಳಿಗೆಯಲ್ಲೇ; ತಕ್ಷಣವೇ; ಶೀಘ್ರವಾಗಿ: "ತಕ್ಷಣಂ, ಏಕಪದಂ, ಸದ್ಯಃ, ಸಪದಿ— ಈ ೪ ಆಗಳಂತೆ" (ಹಲಾಯು. ೧೨೪–೩೭); ತತ್ಪ್ರಪಂಚಮೆಲ್ಲಮಂ ತಿಳಿಯೆ ಪೇಱ್ದೊಡೆ ಕಮಳೆ ಬೆಱಗಾಗಿ ನಿರ್ವೇಗದಿಂದಮಾಗಳಂತೆ ತೋಱಿವೆ ನೆಂದೊಡೀಗಳ್ ಬೇಡ (ಜೀವಸಂ. ೮೯–೩೧ ವ); ಸೂಡಿದ ಬಾಸಿಗಮಾ ಗಳಂತೆ ದಳ್ಳುರಿ ತಗುಳ್ದಂದದಿಂ ಕರಿದುದು (ಕಬ್ಬಿಗಕಾ. ೩೧೩). [?]

ಆಗತ (ಗು). ೧. ಬಂದ; ಸೇರಿದ. ೨. ಉಂಟಾದ; ಪ್ರಾಪ್ತವಾದ. [ಸಂ.]

ಆಗತಿ (ನಾ). ೧. ಬರುವುದು; ಸೇರುವುದು. ೨. ಲಾಭ; ಆದಾಯ; ಪ್ರಾಪ್ತಿ. ೩. ಅನಿರೀಕ್ಷಿತವಾದುದು; ಎಣಿಸಿಲ್ಲದುದು. [ಸಂ.]

ಆಗತೆ (ನಾ). = ಆಗತಿ ೨: ಈ ಪಾಳೆಯಗಾರ ಆಳಿಕೆಗಳ ಗ್ರಾಮಗಳ ಬಾರಾಬಲೂತಿ ಕೆಲಸದವರಿಗೆ ಮಾನ್ಯ ಮಿರಾಸಿ ಮೊದಲಾದ ಆಗತೆಗಳ ನ್ನುಂಟುಮಾಡಿಕೊಟ್ಟು (ಚಿತ್ರಪಾ. ೮). [ಸಂ. ಆಗತಿ]

ಆಗತ್ಯ 'ಅಗಾತ್ಯ' ನೋ.

ಆಗಬೆ (ನಾ). ಒಬ್ಬ ವ್ಯಕ್ತಿಯ ಹೆಸರು: ಲೋಕಯ್ಯನ ಪರೋಕ್ಷದ ಗೋಶಸಿ ಭೂಮಿ ೫ ಆಗಬೆಯುಂ ಕೇತಯ್ಯನುಂ ನಿಱಿಸಿದ ಕಲ್ಲು (ಎಕ. VII, ಶಿಕಾರಿ. ೯–೧೨; 1021). [?]

ಆಗಭೋಗ (ನಾ). = ಅಂಗಭೋಗ (?): ಆಗಭೋಗಗಳಿವೆ ಅನು ಭೋಗಗಳಿವೆ ಈಗಲೆ ಕೊಡೆನಗೆ ಮುಕ್ತಿಯನು (ಪುರಂದ. ೩–೮೩–೩); ವಾಸುವಿನ ಜತೆಯವನಾದ ಪುಟ್ಟನಿಗೆ ಆಗುತ್ತಿದ್ದ ಆಗಭೋಗಗಳಲ್ಲಿ ಅಲ್ಪವಾದರೂ ವಾಸುವಿಗೆ ಆಗದೇ ಹೋಗುತ್ತಿರಲಿಲ್ಲ. (ಬಾಡಿಬ. ೧೯); ಆಗಭೋಗಕ್ಕೆ ರಂಗಸ್ವಾಮಿ ಸತ್ಯಪ್ರಮಾಣಕ್ಕೆ ಗಂಗಾಧರೇಶ್ವರ (ಗಾದೆ). [< ಸಂ. ಅಂಗಭೋಗ ?]

ಆಗಮ (ನಾ). ೧. ಬರುವುದು; ಸೇರುವುದು: ಒಪ್ಪಿದುದು ನೀರದ ಶಾರದ ನಿರ್ಗಮಾಗಮಂ (ಪುಷ್ಪಪು. ೪–೮೮); ಚೈತ್ರನಾಗಮವಾಯ್ತು ಮಂಥರೆಯ ಶಿಶಿರಕ್ಕೆ (ಶ್ರೀರಾಮಾ. ೨೩–೬೦೮). ೨. ಪೂರ್ವದಿಂದಲೂ ಬಂದ ಸಂಪ್ರದಾಯದ ಗ್ರಂಥ, —ಶಾಸ್ತ್ರ: ಆಪ್ತನೆ ಪೇೞ್ವುದಾಗ ಮಮಾಗಮಮದರ್ಥಮಾವುದದುವೆ ಪದಾರ್ಥಂ (ಆದಿಪು. ೫–೫೪); ಡಂಬಿಸಿ ಪೆಱರೊಡವೆಗಳಂ ತಿಂಬುದು ಪೊಲ್ಲೆಂದು ಪೇೞ್ವ ನಿನ್ನಾಗಮಮುಮಂ ನಂಬದೆ ಜಿನಪತಿ ಪೆಱತಂ ನಂಬಿದವರ್ಗಿಗಮುಕ್ಕು ತುದಿಯೊಳ್ ಗಾಢಂ (ಜಿನಾಲೆ. ೧೪). ಜಿನಾಗಮ, ಶೈವಾಗಮ ಇತ್ಯಾದಿ ಹೋ. ೩. ದೇವಪೂಜಾ ತಂತ್ರವಿಧಾನವನ್ನು ತಿಳಿಸುವ ಶಾಸ್ತ್ರ. ಪಾಂಚರಾತ್ರಾಗಮ, ವೈಖಾನಸಾಗಮ ಇತ್ಯಾದಿ ಹೋ. ೪. [ವ್ಯಾಕ] ಸಂಧಿಯಲ್ಲಿ ನಡುವೆ ಒಂದು ವರ್ಣ ಅಥವಾ ವರ್ಣಸಮುದಾಯವು ಹೊಸ ದಾಗಿ ಬಂದು ಸೇರುವುದು: ಇರ್ದುದಂಕೆಡಿಸದೆ ಪತ್ತುವುಪಾಗಮಂ (ಶಮದ. ೧೬೪ ವೃತ್ತಿ); ಸಮನಿಸುಗುಮಾ ವಿಭಕ್ತಿಗಳ ಮೊದಲೊಳಾದಂ ಗಳಾಗಮಂ ದ್ವಿತ್ವಬಹುತ್ವಮದಾಗೆ (ಶಮದ. ೧೦೫). ೫. ಜ್ಞಾನ; ತಿಳಿವಳಿಕೆ; ಬುದ್ಧಿವಂತಿಕೆ. ೬. ಸನ್ನದು; ಹಕ್ಕಿನ ದಸ್ತಾವೇಜು; ಅಧಿಕಾರಪತ್ರ. [ಸಂ.]

ಆಗಮಕುಳ (ನಾ). ಆಗಮಗಳ ಸಮೂಹ; ಶಾಸ್ತ್ರರಾಶಿ: ಆಗಮ ಕುಳದ ವಾದ ಭೋಗಿ ತಾನಲ್ಲ (ಅವಚಂ. ೨೮೪–೩); ಗೀತಂ ಸಕಳಾಗಮ ಕುಳಜಾತಂ ಗೀತಂ ಪರಾಪರೈಕ ಸಮೇತಂ (ಬಸರ. ೧೦–೩). [ಆಗಮ + ಕುಳ$_3$ (= ಕುಲ)]

ಆಗಮಕೋವಿದ (ನಾ). ಶಾಸ್ತ್ರಗಳನ್ನು ಚೆನ್ನಾಗಿ ತಿಳಿದವನು: ಆಗಮಕೋವಿದ ನಿಗದಿತಮಾರ್ಗಂ (ಕವಿರಾ. ೧–೫೧); ಯೋಗ ಪಂಕ ರುಹ ದಿನೇಶರೆಂದು ಸಕಳಾಗಮಕೋವಿದರೆಂದು (ಸೌಇಇ. XX, ೪೯–೫೮; 1076 ?). [ಆಗಮ + ಕೋವಿದ]

ಆಗಮಜ್ಞ (ನಾ). ಆಗಮಗಳನ್ನು ತಿಳಿದವನು: ಅನಿತಾಗಮಜ್ಞರಾ ರನಿತು ವಿನೇಯ ಲೋಕಹಿತರಾರ್ (ಚಾವುಂಪು. ೩–೧೭). [ಸಂ.]

**ಆಗಮತತಿ** (ನಾ). ಆಗಮಗಳ ಸಮುದಾಯ ; ಶಾಸ್ತ್ರಗಳ ಗುಂಪು "ಆಗಮತತಿ—ವೇದಸಮೂಹ" (ನಾನಾರ. ೮೦ ಟೀಕು).
[ಆಗಮ + ತತಿ$_1$]

**ಆಗಮನ** (ನಾ). ಬರುವುದು ; ಬರವು : ಕಲಕಂಠನುಲಿ ಘೋಷಿಸಿತು ಜಗಕೆ ರಾಮಾಗಮನವಾರ್ತೆಯಂ (ಶ್ರೀರಾಮಾ. ೧೫-೧೦೪). [ಸಂ.]

**ಆಗಮಭಾವನೆ** (ನಾ). ಶಾಸ್ತ್ರಗಳ ಆಲೋಚನೆ, —ವಿಚಾರ : ತಪೋನುಷ್ಠಾನಕ್ರಮದಿಂದಿಂದ್ರಿಯ ದರ್ಪಸಾಧನಂಗೆಯ್ದು ಆಗಮಭಾವನೆಯಿಂ ಜ್ಞಾನಿಯಪ್ಪುದು (ಜೀವಸಂ. ೧-೯ ವ). [ಆಗಮ + ಭಾವನೆ]

**ಆಗಮಭಾಷೆ** (ನಾ). ಆಗಮಗಳ ಮಾತು ; ಶಾಸ್ತ್ರಗಳಲ್ಲಿ ಹೇಳಿರುವ ವಿಷಯ : ಪೆಱವುೞಿವುಳ್ಳುವಿಲ್ಲಿಯೊಳವಾಗಮಭಾಷೆಗಳಲ್ಲಿಯುಳ್ಳವಂ ಪೆಱವುೞಿ ಕಾಣಲಾಗದೆನೆ (ಅಜಿಪು. ೧೨-೩೩). [ಆಗಮ + ಭಾಷೆ]

**ಆಗಮವಿತ್ತ್ವ** (ನಾ). ಆಗಮಗಳನ್ನು ತಿಳಿದಿರುವಿಕೆ ; ಶಾಸ್ತ್ರಜ್ಞಾನ : ಅನ್ವಿತಚತುರಾನನತ್ವಮಖಿಳಾಗಮವಿತ್ತ್ವಂ . . . ಏಂ ಜಿನನೊಳ್ ಪೊದಬ್ದುವೋ (ಆದಿಪು. ೧೦-೪೨). [ಸಂ.]

**ಆಗಮವಿದ** (ನಾ). = ಆಗಮಜ್ಞ [ಸಂ. ಆಗಮವಿದ್]

**ಆಗಮವಿದೆ** (ನಾ). ಶಾಸ್ತ್ರಗಳನ್ನು ತಿಳಿದವಳು : ದಿವ್ಯಜ್ಞಾನಿ ನಾನಾಗಮವಿದೆ ಸದಲಂಕಾರೆ ಸಾರಾಂಗಿ ವಿಶ್ವೋದರೆಯೆನ್ನಂ ರಕ್ಷಿಸು (ಗಿರಿಕ. ೮-೧೪). [ಸಂ. ಆಗಮವಿದಾ]

**ಆಗಮವೇದಿ** (ನಾ). = ಆಗಮಜ್ಞ : ಎಯ್ದೆ ಒಮ್ಮೆ ಕಣ್ದೆಱೆಯೆ ನೆಗಟ್ಟಿದಂ ಕವಿಚತುರ್ಮುಖನಾಗಮವೇದಿಯಪ್ಪುದುಂ (ಅಜಿಪು. ೧೨-೩೩). [ಸಂ. ಆಗಮವೇದಿನ್]

**ಆಗಮಸಂಧಿ** (ನಾ). = ಆಗಮ ೪ : "ಹಿಂದೆ ಇಲ್ಲದಿದ್ದ ಒಂದು ವರ್ಣವು ಹೊಸದಾಗಿ ಸೇರುವುದಕ್ಕೆ ಆಗಮವೆಂದೂ, ಈ ಸಂಧಿಗೆ ಆಗಮಸಂಧಿಯೆಂದೂ ಹೆಸರು" (ಮಧ್ಯಮ. ೧೮). [ಆಗಮ + ಸಂಧಿ]

**ಆಗಮಸಂಪ್ರದಾಯ** (ನಾ). ಆಗಮಗಳ ಮಾರ್ಗ : ವೇದವಿರುದ್ಧವೆಂದು ಆಗಮಸಂಪ್ರದಾಯವನ್ನು ಪೂರ್ವಮೀಮಾಂಸಕರು ಬಹಿಷ್ಕರಿಸಿದರು (ಹಿಂದ್ಸಾ. ೯೪). [ಆಗಮ + ಸಂಪ್ರದಾಯ]

**ಆಗಮಸಮಯ** (ನಾ). ಆಗಮಗಳ ಸಂಪ್ರದಾಯ ; ಶಾಸ್ತ್ರೀಯವಾದ ನಿಯಮ : ಆಗಮಸಮಯ ನ್ಯಾಯವಿಭಾಗ ಕಳಾಕಾಲಲೋಕದೇಶವಿರುದ್ಧಂ ಭೋಗಿವಿಷಂಬೊಲ್ ಪ್ರಾಣತ್ಯಾಗಮನಾಗಿಸುಗುಮಮಳಕೃತಿವಧುಗಿನಿತುಂ (ಕವಿರಾ. ೧-೬೯). [ಆಗಮ + ಸಮಯ]

**ಆಗಮಸ್ಥಾನ** (ನಾ). [ವೀಶೈ] ಶಾಸ್ತ್ರೋಕ್ತವಾದ ಪ್ರದೇಶ : ಅಲ್ಲಿಗೆಂದಿನಂದದೊಳ್ ಆಗಮಸ್ಥಾನದೊಳಿಟ್ಟ [ಪಾಠಾಂ. ಸ್ಥಾನಂಗಳೊಳಗಿಟ್ಟ] ವಿಭೂತಿಯ ತೊಟ್ಟ ರುದ್ರಾಕ್ಷೆಯ ಹೊದೆದ ಧವಳೋತ್ತರೀಯದ . . . ಸೋಮಾಸಿಮಾರರು ಮೆಲ್ಲಮೆಲ್ಲನೆ ಭದ್ರದ ಮೇ[ಗೆ] ಬಂದು (ನಂಬಿರ. ೧೬-೧೦೩). [ಆಗಮ + ಸ್ಥಾನ]

**ಆಗಮಿ** (ನಾ). ಹೊಸದಾಗಿ ಬಂದವನು : ಪೂರ್ವದ ಹೂಣರಿಗೂ ಈ ನವೀನ ಆಗಮಿಗಳಿಗೂ ತಂತಮ್ಮೊಳಗೆ ಕ್ರಮೇಣವಾಗಿ ಸಂಪರ್ಕವಾಗತೊಡಗಿತು (ಬಾಲಪ್ರ. II, ೯೯೫). [ಸಂ. ಆಗಮಿನ್]

**ಆಗಮಿಕ** (ನಾ). ೧. ಆಗಮಗಳನ್ನು ತಿಳಿದವನು : ಪೇಱೋಜೆಗೆ ಸಮನಿಲ್ಲ ಧನಂಜಯಂಗೆ ಕವಿತಾಗಮಿಕರ್ (ಸುಕುಮಾ. ೧-೩೬) ; ಆಗಮಿಕರೆದೆಶೂಲ ಗರ್ವಿತ ಗೂಗೆಗಳ ನಖಸಾಳವಗ್ಗದ ಭೋಗಿಗಳ ಕುಲದೈವವೆಸೆದುದು ಕುಸುಮಮಯ ಸಮಯ (ಕುವ್ಯಾಅ. ೫-೬). **೨.** ವಿಗ್ರಹ ಪ್ರತಿಷ್ಠೆ ಮೊದಲಾದ ಆಗಮಶಾಸ್ತ್ರವನ್ನು ಅರಿತವನು; ದೇವಸ್ಥಾನದ ಪೂಜಾರಿ : ಪಂಡಿತರೂ ಆಗಮಿಕರೂ ಸೇರಿ . . . ಶುಭಮುಹೂರ್ತವನ್ನು ಪ್ರತಿಷ್ಠೆಗೆ ನಿಶ್ಚಯಿಸಿದರು (ಶಾಂತಲಾ. ೧೨೮). **೩.** ಆಗಮಕ್ಕೆ ಸಂಬಂಧಿಸಿದುದು ; ಶಾಸ್ತ್ರಕ್ಕೆ ಸಂಬಂಧಪಟ್ಟುದು : ಆದಿಪುರಾಣವೆಂದರೆ ಆಗಮಿಕ ಅಥವಾ ಅಲೌಕಿಕ ಕಾವ್ಯ (ನಾಡೋಜ. ೬೨) ; 'ಗದಾಯುದ್ಧ'ವು ರನ್ನನ 'ಕೃತಿರತ್ನ'. 'ಅಜಿತಪುರಾಣ'ವು ಆಗಮಿಕವಾದರೆ ಇದು ಲೌಕಿಕ ಕಾವ್ಯ (ಕಸಾಚ. ೧೦೮). [ಸಂ.]

**ಆಗಮಿಸು** (ಕ್ರಿ). ಬರು ; ಬಂದು ಸೇರು : ನನ್ನ ನೆರೆಮನೆಯಾಕೆಗೆ ೧೨ ಜನರ ಗುಂಪೊಂದು ಬೀಗರಾಗಿ ಆಗಮಿಸಿತು (ಮೊಪಾಸಾ. ೧೬) ; ದುಷ್ಯಂತನು ಆಶ್ರಮಕ್ಕೆ ಆಗಮಿಸುತ್ತಾನೆ (ಧರ್ಮಸಾ. ೬೮).
[ಆಗಮನ + -ಇಸು$_3$]

**ಆಗಮೀಕ** (ನಾ). = ಆಗಮಿಕ ೧ : ಆಗಮೀಕರ ಮನೆಯು ಕರಿಕರಿಯಾಗಿ ಕೆಡೆಯಿತು (ಬಸಪು. ೫೬-೩೫) ; ಒಡನಂತಾಗಮೀಕನು ನಗುತಲೆಂದನು (ಬಸಪು. ೫೭-೨). [ಸಂ. ಆಗಮಿಕ]

**ಆಗಮೆ$_1$** (ನಾ). ಆರಂಬ ; ವ್ಯವಸಾಯ ; ಕೃಷಿ : ಅವರು ಆಗಮೆ ಮಾಡಿಸುವುದರಲ್ಲಿದ್ದಾರೆ (ಮರಮ. ೪೧೧). [?]

**ಆಗಮೆ$_2$** (ಅ). ಆಗಲೆ; ಆ ಕೂಡಲೇ ; ಅವನಾನೊರ್ವನಂ ಮುಳಿದು ನೋಳ್ಪರ್ನ್ನೋಡಿದಾಗಮೆ ಸಾವುದು (ತಸೂವ್ಯ. ೧೨೦).
[ಆಗಂ (< ಆಗಡು) + -ಎ$_2$]

**ಆಗಮೋಕ್ತ** (ಗು). ಆಗಮಗಳಲ್ಲಿ ಹೇಳಲ್ಪಟ್ಟ ; ಶಾಸ್ತ್ರಗಳಲ್ಲಿ ಹೇಳಿದ: ಈಗ ದೃಷ್ಟಪ್ರತ್ಯಯಂಗಳನಾಗಮೋಕ್ತದಿ ತೋಱುವೆಂ (ಬಸಪು. ೫೧-೫೨) ; ಅವರು ಆಗಮೋಕ್ತಕ್ರಮದಿಂದ ವಿಗ್ರಹವನ್ನು ಪ್ರತಿಷ್ಠೆ ಮಾಡಿಸಿದರು (ರೂಢಿ). [ಆಗಮ + ಉಕ್ತ]

**ಆಗಮೋಕ್ತಿ** (ನಾ). ಆಗಮಗಳಲ್ಲಿ ಹೇಳಿರುವ ಮಾತು ; ಶಾಸ್ತ್ರಗಳಲ್ಲಿ ತಿಳಿಸಿರುವ ಮಾತು.

**ಆಗಮೋಕ್ತ್ಯಾಶ್ರಯ** = ಆಗಮಗಳಲ್ಲಿ ಹೇಳಿರುವ ಮಾತಿನ ಆಧಾರ; ಶಾಸ್ತ್ರಗಳಲ್ಲಿ ಹೇಳಿರುವ ಮಾತಿನ ಆಧಾರ : ನಿಯತೋದ್ದೇಶಿಯುಮನುದೇಶಿಯುಮನನು(ವಿನಂ)ತು ಪೇೞ್ ಯಾಥಾಸಂಖ್ಯಾಹ್ವಯಮಕ್ಕುಮಾಗಮೋಕ್ತ್ಯಾಶ್ರಯದಿಂ ವ್ಯತಿರೇಕಮಕ್ಕುಮಲ್ಲದುವೆಲ್ಲಂ (ಕವಿರಾ. ೧-೮೬). [ಆಗಮ + ಉಕ್ತಿ]

**ಆಗರ$_1$** (ನಾ). ಆಧಾರವಾದ ಸ್ಥಳ; ಮೂಲಸ್ಥಾನ; ಆಶ್ರಯ ; ಗಣಿ : "ಆಕರ-ಆಗರ" (ಶಮದ. ೨೫೫ ಪ್ರಯೋ) ; "ಆಗರಂ ಆಶ್ರಯಕ್ಕೆ ಪೆಸರ್" (ಕಶಸಾ. ೧೫-೨೦೦) ; ಪರಶುರಾಮನನಂಜಿಸಿ ಬೀರಕ್ಕಾಗರಮಾದ ನದೀಜನೇದೊರೆಯಂ (ಪಂಪಭಾ. ೭-೬೫) ; ಇದು ಪೆಂಪಿಗೆ ತವರ್ ಸುಖಕ್ಕೆ ಕಣಿ ಸೌಖ್ಯಕ್ಕಾಗರಂ (ಸುಕುಮಾ. ೧-೬೮) ; ಅಱಿವಿಂಗಾಗರಮೊಳ್ಗುಣಕ್ಕೆ ಕಣಿ ಶೌಚಕ್ಕಾಸ್ಪದಂ (ಪಂಚತಂ. ೧೧-೫) ; ಮಣಿಗಳಾಗರಮಂದೆಸೆದತ್ತು ಸಾಗರಂ (ಸೂಕ್ತಿಸು. ೨-೩೭) ; ಉಪ್ಪಿನಾಗರದ ಗೇಣಿಯಂ ವರುಷ ೧ಕ್ಕಂ ಬಹರೊಕ್ಕ ೧೬ (ಸೌಇಇ. IX–i, ೪೦೯–೨೨ ; 1365). [ಸಂ. ಆಕರ]

**ಆಗರ$_2$** (ನಾ). **೧.** ಮನೆ; ವಾಸಸ್ಥಾನ: ಒಡಲಪ್ಪೊಡಶುಚಿ ನಿಲ್ಲದು ಪಡಿಕೆಕರಂ ಜಂತಿನಾಗರಂ ಪೆರ್ವೇಲಿರ್ಪೆಡೆ (ಧರ್ಮಾವ್ಯ. ೭-೧೩೯) ; ದೇವರ ಆಗರದ ಕಱುಕೆಯ ತೆಂಕ ಕಡೆಯ ಹೊಸಮಂಟಪದ (ಸೌಇಇ. IX–ii, ೪೦೯–೨೧; 1365); ಶೃಂಗಾರದಾಗರ ಸುಖಮಯಸಾಗರ ಮಂಗಲಾರ್ಥಕೆ ನೆಲೆವೀಡು (ಕಂನವಿ. ೭-೩೮). **೨.** ಸ್ಥಳ (ಗಂಗಾಮ. ೨೩). **೩.** ತೋಟ : ಆಗರದೊಳು ರಸದಾಳಿ ತೆಂಗಾಳಿಯಿಂ ತಾಗಲೊಂದಱೊಳೊಂದು ಹಳಚಿ ಮೇಗೋಲ್ಗಳೊಡೆದಿನಿರಸದ ಪರಿಯೊಳಿಕ್ಷುಸಾಗರ ತುಂಬಿದಂತಾಯ್ತು (ಮೋಹತ. ೨-೪೮) ; ಗರವ ಆಕಂಡರಸುಗಿಳಿಯೊಲು ಮೇಘಮಂ ಕಂಡಾಪ್ತ ನವಿಲೊಲು (ಶಂಕದಾ. ೬-೪೮). **೪.** ಉಪ್ಪಿನ ಮಡಿ (ಸ್ಯಾಂಡರ್). [ಸಂ. ಆಗಾರ]

**ಆಗರಡಕಂಠ** (ನಾ). ಒಂದು ಪ್ರದೇಶ (?) : ಹಿ[ರಿ]ಯ ಮನೆಯ ಕೆಳಗಡಿಯಿಂದಂ ಬಡಗಲು ಪಡುವಲು ಆಗರಡಕಂಠಂದಿಂದಂ ಮೂಡಲು ಬಡಗಲು ಮೂಡಕರೆಯ ಗಡಿಯಿಂದಂ ತೆಂಕಲು (ಸೌಇಇ. IX–ii, ೪೨೪–೪೮ ; 1401). [?]

**ಆಗರೆ** (ಕ್ರಿ). 'ಆ' ಎಂದು ಕೂಗು, —ಧ್ವನಿಮಾಡು : ಗೋಕುಲಂ ಸಾರುತಂ ಬಪ್ಪವೇನೆ ತಮತಮಗೆ ವತ್ಸಂಗಳಾಧ್ಯಾಸದಿಂದಾಗರ[ರೆ] ವುತಡಿ ಗಡಿಗೆ ಧೂಳಿಯಂ ಸಾನುರಾಗದೊಳಭ್ರಕುಪ್ಪರಿಸುವಂತೆ (ಪರಶು. ೩೩–೪). [ಆ₁ + ಕರೆ₁]

**ಆಗರ್ಭ** (ಅ). ಗರ್ಭದಿಂದ ಹಿಡಿದು ; ಗರ್ಭದಿಂದಲೇ.
[ಸಂ. ಆಗರ್ಭಂ]

**ಆಗರ್ಭಶ್ರೀಮಂತ** (ನಾ). ಗರ್ಭದಲ್ಲಿ ಇರುವ ಕಾಲದಿಂದಲೂ ಶ್ರೀಮಂತ; ಹುಟ್ಟಿದಂದಿನಿಂದಲೂ ಐಶ್ವರ್ಯವಂತ : ಪಂಡಿತ ಜವಹರಲಾಲ್ ನೆಹರು ಅವರು ಆಗರ್ಭಶ್ರೀಮಂತರು (ರೂಢಿ).
[ಆಗರ್ಭ + ಶ್ರೀಮಂತ]

**ಆಗರ್ಭಸುಖಿ** (ನಾ). ಹುಟ್ಟಿದಂದಿನಿಂದಲೂ ಸುಖವಾಗಿರುವವನು.
[ಸಂ. ಆಗರ್ಭಸುಖಿನ್]

**ಆಗಲ್₁** 'ಆಗಡು' ನೋ.

**ಆಗಲ್₂** 'ಆಗು₁' ಪರಾ.

**ಆಗಲ್₃** 'ಆಗು₁' ಪರಾ.

**ಆಗಲೀಸು** (ಕ್ರಿ). ಆಗಗೊಡು ; ಆಗುವುದಕ್ಕೆ ಅವಕಾಶಕೊಡು ; ಇರಲು ಅಥವಾ ಬದುಕಲು ಅವಕಾಶ ಕೊಡು : ಯಾಗದ ನೆಪದಿಂದ ಕೂಗಿ ತಿಂಬರು ಆಡ ಯಾಗದಲಿ ಬಂದು ದಿಟವಿರಲು ಹೋತುಗಳನಾಗ ಲೀಸುವರೆ (ಸರ್ವಜ್ಞ. ೯೩೩). [ಆಗಲ್₃ (< ಆಗು₁) + -ಈಸು ?]

**ಆಗಲು₁** 'ಆಗಡು' ನೋ.

**ಆಗಲು₂** 'ಆಗು₁' ಪರಾ.

**ಆಗವೆ** 'ಆಗಡು' ನೋ.

**ಆಗಸ**, ಆಕಸ, ಆಕಾಸ (ನಾ). ಆಕಾಶ ; ಗಗನ : ಆಗಸದೊಳಗೊಂದು ಮಹೀಭಾಗದೊಳಿನ್ನೊಂದು ದಾಡೆಯಾಗಿರೆ ಮನದಿಂ ಬೇಗಂ ಬರ್ಪಳ ದಿಟ್ಟಿಗಳಾಗಳೆ ಪತ್ತಿದುವು ಗೆಂಟಚೊಳ್ ಮಾರುತಿಯಂ (ಪಂಪಭಾ. ೩–೧೩) ; ಆಗಸಮೆಲ್ಲಂ ಸುಧೆಯಿಂದೆ ಲೇಪಿಸಿದುದು . . . ಎಂಬಿನ ಮೊಂದು ಬೆಳ್ಪೆಳಗು ಪರ್ವಿತ್ತೆಯ್ದೆ ರೋದೋಂತಮಂ (ಕಾದಂಬ. ೧೦೩); ಬೆಳ್ಗೊಡೆ ಪಳಯಿಗೆಗಳಾಗಸವ ತುಂಬಿತು (ಸಾಳ್ವಭಾ. ೨೧–೭೯). **ಆಕಸ** : ಆಕಸದ ದರ್ಪಣದ ಬಕ ರತ್ನಾಕರನಲೊಂದೊಂದು ಗುಣವಿರಬೇಕು ನೃಪರಿಗೆ (ಕುವ್ಯಾಸ. ೧–೫೪) ; ಆಕಸಕೆ ನೆಗೆದಸುರನಂ ಪಿಡಿದೌಕಿ ರೆಕ್ಕೆಯ ಮುರಿದು (ಅನಂರಾ. ೫–೪–೧೧). **ಆಕಾಸ** : "ಆಕಾಶಂ–ಆಕಾಸ, ಆಗಸ" (ಶಮದ. ೨೫೩ ಪ್ರಯೋ) ; ಪಸುರ್ಗರ್ಪಿಂ ಸುತ್ತಲುಂ ಕಟ್ಟಿಲಿಪ ಪಸಲೆ ಯಾಕಾಸಮಂ . . . ಪೋಲ್ತು (ಪುಷ್ಪಪು. ೩–೭೬).

**ಆಗಸದಬ್ಬೆ** = ಒಂದು ದೇವತೆ : ಪಸಕಾಲದೊಳೆಱಿಯಪನಾಗಸದಬ್ಬೆ ಬಳಾರಿ ಭೈರವಂ ಮೈಲಾರಂ ಮಸಣಿ ಮಾರಬ್ಬೆಯೆಂದಿಂತು ಸತ್ತರಾ ಭಕ್ತರೇಕೆಯೋ ಕೊಂಡಾಡರ್ (ಸಮಪ. ೯–೧೦೫).
[< ಸಂ. ಆಕಾಶ]

**ಆಗಸಂಬೊಚ್ಚ** 'ಆಗಸವೊಚ್ಚ' ನೋ.

**ಆಗಸಗೆಱಿ** (ನಾ). ಒಂದು ಊರಿನ ಹೆಸರು : ಮತ್ತವವರೊಳಗೆ ತಿಪ್ಪ ಗಾವುಂಡನ ಸಾತಿಗಾವುಂಡಂ ಆಗಸಗೆಱೆಯ ತಂನ ವೀಸಂ ಕಾಣಿಯ ಬಳ ದೊಳಗೆ ಗೂಗೆಯ ಬಾಗಿಂ ಪಡುವಣ (ಕಇ. I, ೨೫–೮೧ ; 1186).
[ಆಗಸ + ಕೆಱೆ]

**ಆಗಸದೊಱೆ** (ನಾ). ಆಕಾಶದ ನದಿ ; ದೇವಗಂಗೆ : ಆಗಸದೊಱೆ ಪೆಱೆಯ ನಾಂತ ಗಗನಕೇಶಾ (ಸಾನಂಚ. ೧–೭೫) ; ಆಗಸದೊಱೆ ಮೇಲ್ಮಿನುಪೊಳ್ತೊಱೆಯೊಳಗಾಳ್ದಲ್ಲಿಯ ಬೆಳ್ದಾವರೆಗೆಯ್ದಿ (ಉದ್ಭದೇ. ೨–೬೬). [ಆಗಸ + ತೊಱೆ₂]

**ಆಗಸಮಣಿ** 'ಆಗಸವಣಿ' ನೋ.

**ಆಗಸವಕ್ಕಿ** (ನಾ). ಉದ್ದವಾದ ಬಾಲವುಳ್ಳ ಒಂದು ಬಗೆಯ ಹಕ್ಕಿ : "ಬಾನಡಿ ಟಿಟ್ಟಿಭ ಟೀವಂ ತಾನಾಗಸವಕ್ಕಿ ಖಂಜರೀಟಮೆನಿಕ್ಕುಂ" (ಕವಿಕಂ. ೬೨) ; "ಟೀವಮೆಂದುಂ ಆಗಸವಕ್ಕಿಯೆಂದುಂ ಖಂಜರೀಟಂ" (ಕಶಸಾ. ೬–೯೮). [ಆಗಸ + ಪಕ್ಕಿ₁]

**ಆಗಸವಟ್ಟೆ** (ನಾ). ಗಗನಮಾರ್ಗ ; ಆಕಾಶಮಾರ್ಗ : ನವರತ್ನ ಖಚಿತ ಪುಷ್ಪಕಮೆಂಟು ಕನಕಮಯ ಕೋಟಿ ಸೂರ್ಯಪ್ರಕಾಶಂಗಳಿಂ . . . ನೆಗೆದುವಾಗಸವಟ್ಟೆಗೆ (ಭಾಪಚಂ. ೯–೫೩) ; ತ್ರಿಜಗವು ನೆಱೆದು ಬಂದುದು ನಿಮಿಷಕಾಗಸವಟ್ಟೆಯಲಿ ನಿಂದು ಸುರಪತಿಯ ಬಹ ಬರವ ಸಾಱುತ್ತಿರಲ್ (ಸಾಳ್ವಭಾ. ೨೧–೧೨). [ಆಗಸ + ಬಟ್ಟೆ₁]

**ಆಗಸವಟ್ಟೆಗ** (ನಾ). ಆಕಾಶದಲ್ಲಿ ಸಂಚರಿಸುವವನು ; ಖೇಚರ ; ದೇವತೆ : "ಎಸೆವ ಬಿಡುಗಣ್ಣವರ್ ಬೋಳೆಯರ್ ತಿಳಿಯಲಾಗಸವಟ್ಟೆಗರು ಸಗ್ಗಿಗರು ಬರ್ದಿಲರ್ಸೈದೆಯಾ ಪೆಸರು ಸಲ್ವದು ಸುರರ್ಗೆ" (ಶಬ್ದಮಂ. ೧೦) ; ಆಗಸವಟ್ಟೆಗರಾಯನಣುಗನುಂ ಸೋಗೆಮುಡಿಯ ಕಾಂತಾಪತಿ ಯುಂ ಸಮವಾಗಿಯುದಯಗಿರಿಯೇಱಿದ ಶಶಿರೋಹಿಣಿಯಂತೊಪ್ಪಿದರು (ಜಯಕಾ. ೧೩–೨೩) ; ಆ ಘಳಿಗೆಯೊಳಾಗಸವೇಗನೆಂದೆಂಬಾಗಸವಟ್ಟೆಗ ನಿಳಿದು . . . ಈ ಗರುವೆಯನು ಕಂಡನವನು (ಶ್ರೀಪಾಲ. ೫–೧೮).
[ಆಗಸವಟ್ಟೆ + -ಗ₂]

**ಆಗಸವಟ್ಟೆವೆಣ್** (ನಾ). ಆಕಾಶಮಾರ್ಗದಲ್ಲಿ ಸಂಚರಿಸುವ ಹೆಣ್ಣು : ಖೇಚರಿ ; ದೇವತಾಸ್ತ್ರೀ : ನಟ್ಟನಡುವೆಯೊಲೆದಾಡುತಿರ್ಪಾಗಸವಟ್ಟೆ ವೆಣ್ಗಳ ತಂಡಮಿಹುದು (ಶ್ರೀಪಾಲ ೧–೭೧). [ಆಗಸವಟ್ಟೆ + ಪೆಣ್]

**ಆಗಸವಣಿ**, ಆಗಸಮಣಿ (ನಾ). ಗಗನಮಣಿ ; ಸೂರ್ಯ : "ಪೊಳ್ತು ನೇಸಱಾಗಸವಣಿ ಸೆಗಳಿಗದಿರ . . . ಎನೆ ಸೂರ್ಯನಾಮಂ" (ಶಬ್ದಮಂ. ೧೫). **ಆಗಸಮಣಿ** : "ಆದಿತ್ಯನೊಳಾಗಸಮಣಿಯೆನಿಕ್ಕುಂ" (ಕಶರ. ೧೨). [ಆಗಸ + ಮಣಿ₄]

**ಆಗಸವಳಯ** (ನಾ). ಆಕಾಶಮಂಡಲ ; ಆಕಾಶವಲಯ : ಕಿಚ್ಚು ಬಾಳ್ಗಳ ಗೊಂದಣ ಬೆಳಗುಗಳ ಬಳಗಂಗಳೊಳಾಗಸವಳಯಮೆಲ್ಲಂ ಕುವಳಯಿತವಾಗೆ ಬಂದು ತಾಗುವುದುಂ (ಶಾಂತಿಪು. ೪–೨೬ ವ).
[ಆಗಸ + ವಳಯ (= ವಲಯ)]

**ಆಗಸವೊಚ್ಚ**, ಆಗಸಂಬೊಚ್ಚ (ನಾ). = ಆಗಸದೊಱೆ : ಬೆಟ್ಟಂ ಗಾಡು, ಬೆಟ್ಟಗಾಡು ; ಆಗಸಂಬೊಚ್ಚಂ, ಆಗಸವೊಚ್ಚಂ (ಶಬ್ದಾನು. ೩೭೯ ಪ್ರಯೋ). **ಆಗಸಂಬೊಚ್ಚ** : ಮೇಲಿನ ಪ್ರಯೋಗವನ್ನು ನೋಡಿ.
[ಆಗಸ + ಪೊಚ್ಚ₂]

**ಆಗಸ್ಕರ** (ನಾ). ೧. ಅಪರಾಧಿ ; ದೋಷಿ : ಲೋಗರ್ ಪೊಲ್ಲಮೆ ಗೆಯ್ದೊಡಮಾಗಸ್ಕರನಲ್ಲದಿರ್ಪ ತನ್ನೊಳ್ ಕೇಡಂ ಯೋಗಿಯವಗ್ಗೊಳಡ ರಿಸಿದೊಡೆ ನೀಗಲ್ಕರಿದಪ್ಪ ದುಃಖಕಿರಲೆಡೆಯುಪ್ಪಂ (ನೀತಿಮಂ. II, ೨೬೩). ೨. ಪಾಪಮಾಡಿದವನು : ತದಾಗಸ್ಕರಂ ಕೋಟಿಪಾಪೌಘವಿಶೇಷಾ ವಾಪ್ತಿಯಂ ಮೇಣ್ಪಡೆಯನೆ ಸುಕೃತಕ್ಕಾದ ಬಲ್ಪೇನಘಕ್ಕಿಲ್ಲವೆ (ರಾಜಶೇ. ೧೪–೧೦). [ಸಂ.]

**ಆಗಸ್ಸು** (ನಾ). ೧. ಅಪರಾಧ ; ಅಪ್ರಿಯವಾದ ಆಚರಣೆ : "ವಿಪ್ರಿಯಂ ಮಂತುವಾಗಸ್ಸುವಾವೇಳಿಕಮದಪರಾಧಮಕ್ಕು" (ಮಂಗರಾ. ೧೩೦–೧೬). ೨. ಪಾಪ. [ಸಂ. ಆಗಸ್]

**ಆಗಳ್** 'ಆಗಡು' ನೋ.

**ಆಗಳಿ** (ನಾ). ಒಂದು ಊರಿನ ಹೆಸರು: ದುಗ್ಗಮಾರೆಱೆ ಅಪ್ಪೋ ಕುವಳಾಲನಾಡು ಮೂ ನೂ ಱು ಂ ಗಂಗಱುಸಾಸಿರಮುಮಾಳೆ ಅವರಾ ಮಹಾದೇವಿ ಕಞ್ಚಿಅಬ್ಬೆ ಆಗಳಿ ಆಳೆ ಮದುರೆಗಿಱಾವೆಲ್ಲ ಸಮ್ಮಂಗೆ ಕೊಟ್ಟೋದು (ಎಕ. X, ಮುಳಬಾ. ೮೦-೩ ; 762). [?]

**ಆಗಳಿಕೆ** 'ಆಗುಳಿಕೆ' ನೋ.

**ಆಗಳಿಸು** 'ಆಗುಳಿಸು' ನೋ.

**ಆಗಳು** 'ಆಗಡು' ನೋ.

**ಆಗಾಂತರ** (ನಾ). ಭವಿಷ್ಯತ್ಕಾಲದ ವಾರ್ತೆ, —ಸಮಾಚಾರ (?) : ಎಂದಿಂತು ಚೆನ್ನಬಸವೇಶನಂದತಿಕರುಣದಿಂದಾಗ ಸಿದ್ಧರಾಮೇಶಂಗೆ ಪೇಳ್ದನಿದು ಮುಂದಣಾಗಾಂತರದ ಸುದ್ದಿ ನೀಂ ಸೊನ್ನಲಾಪುರದೊಳ್ಬೆಕ್ಕ ಸ್ಥಲದಲಿ ನಿಂದು ನಿಜಸುಖ ಸಮಾಧಿಯೊಳಿರೆನೆ (ಚಿಬಪು. ೬೩-೭೫). [?]

**ಆಗಾಂತುಕ** (ನಾ). = ಆಗಂತುಕ ೩ : ಸಿದ್ದಾಯ ಕಿಱುಕುಳ ಆಗಾಂತುಕವೊಳಗಾದ ಸಮಸ್ತಾಯಮನಾ ದೇವರ ಸನ್ನಿಧಿಯಲು (ಎಕ. VI, ಚಿಕ್ಕಮ. ೭೮-೩೯ ; 1185). [< ಸಂ. ಆಗಂತುಕ]

**ಆಗಾಡ** (ನಾ). ಎಲ್ಲೆ ; ಸೀಮೆ ; ಮೇರೆ : ಸಮಸ್ತ ಗುಣಸಂಪನ್ನರಪ್ಪ ಶ್ರೀಮತ್ಸಮಸ್ತಾಗಾಡದ ಪನ್ನಾಯದ ಗುಗ್ಗರಿಯ ಮಾಚಿಸೆಟ್ಟಿಯ ಮಗಂ ಚಟ್ಟಯ್ಯನಾಯಕನುಂ (ಸೌಇಇ. XI-i, ೧೪೯-೩ ; 1081).
[< ಸಂ. ಆಘಾಟ]

**ಆಗಾಣಿ** (ನಾ). ಒಂದು ಊರಿನ ಹೆಸರು: ಶ್ರೀಮತು ಗುರುತಂಮಂಣನು ಆಗಾಣಿಯ ಬಯಿರವಗಉಡಗೆ ಕೊಟ ನೆತ್ತರಗೊಡಗಿಯ (ಎಕ. X, ಮುಳಬಾ. ೮೭-೩ ; 1540). [?]

**ಆಗಾತ್ಯ**, ಆಗತ್ಯ (ನಾ). ಬಹಳ ನೋವು, ಹಿಂಸೆ, ತೊಂದರೆಗಳುಂಟಾಗಿವೆಯೆಂದು ನಟಿಸುವುದು ; ಸ್ವಲ್ಪವಾದ ಕಷ್ಟವನ್ನು ಮಹತ್ತರವಾದದ್ದೆಂದು ಕೂಗಿಕೊಂಡು ಅವಾಂತರ ಮಾಡುವುದು ; ಪ್ರಾಣಬಿಡುತ್ತೇನೆಂದು ಹೆದರಿಸುವುದು (ಕ) : ಮೈ ಬೆಚ್ಚಗಾಗುವುದಕ್ಕಿಲ್ಲ ಭಾರಿ ಜ್ವರ ಬಂದವರಂತೆ ಆಗಾತ್ಯಮಾಡಿ ಕೂಗಿಕೊಳ್ಳುತ್ತಾನೆ (ರೂಢಿ). **ಆಗತ್ಯ** : ಅವನಿಗೆ ತುಂಬ ಆಗತ್ಯ ಹೆಚ್ಚು, ಸ್ವಲ್ಪ ಜ್ವರ ಬಂದರೆ ಒರಲಿಕೊಳ್ಳುತ್ತಾನೆ (ರೂಢಿ).
[?. / **ತಮಿ.** ಆಗಾತ್ತಿ ; **ತೆಲು.** ಆಗಾತ್ಯ, ಆಕಾತ್ಯ, ಆಗಾಯಿತ್ತು, ಆಗಾಯಿತ್ಯ, ಆಘಾತ್ಯ, ಓಗಾತ್ಯ, ಓಗಾಯಿತ್ಯ = ಉಗ್ರಸ್ವಭಾವ, ಮೊಂಡುತನ, ಕೀಳುತನ]

**ಆಗಾತ್ಯಗಾರ** (ನಾ). ಆಗಾತ್ಯವನ್ನು ಮಾಡುವವನು : ಆಗಾತ್ಯಗಾರನಿಗೆ ಬ್ರಹ್ಮೇತಿಗಾರ ಸಾಕ್ಷಿ (ಗಾದೆ).
[ಆಗಾತ್ಯ + -ಗಾರ (< -ಕಾಱ)]

**ಆಗಾಧ** (ನಾ). = ಅಗಾಧ (ದಕ. ಕ). [ಸಂ.]

**ಆಗಾಧಜಲ** (ನಾ). ಬಹಳ ಆಳವಾದ ನೀರುಳ್ಳ ಮಡು, —ಸರೋವರ. [ಆಗಾಧ + ಜಲ]

**ಆಗಾಮಿ** (ಗು). ೧. ಬರಲಿರುವ ; ಮುಂದಿನ ; ಭವಿಷ್ಯತ್ತಿನ : ಪರಶುರಾಮನಾಗಾಮಿಕಾರ್ಯಮನಱಿಪಿ ಕಳುಹಿದಂ (ಜಗವಿ. ೮-೨೧) ; ಸಂಚಿತಾಗಾಮಿಗಳ ಕರ್ಮ ವಿರಿಂಚಿಜನಕನ ಭಜಿಸೆ ಕೆಡುವುವು (ಹಸಾರ. ೧೯-೧೬). (ನಾ). **೨.** ಈ ಜನ್ಮದಲ್ಲಿ ಮಾಡುವ ಕರ್ಮ : "ಹಿಂದೆ ಮಾಡಿದ ಕರ್ಮಗಳಿಗೆ ಸಂಚಿತವೆಂತಲೂ ಮುಂದೆ ಮಾಡುವ ಕರ್ಮಗಳಿಗೆ ಆಗಾಮಿಯೆಂತಲೂ ಹೆಸರು" (ಹಸಾರ. ೩-೪ ಟೀಕು) ; ಹಿಂದಿನ ಜನ್ಮದ ಕರ್ಮಗಳೆಲ್ಲವೂ ಪ್ರಾರಬ್ಧ, ಈ ಜನ್ಮದ ಕರ್ಮಗಳೆಲ್ಲವೂ ಆಗಾಮಿ ಎಂದು ನಿರ್ಣಯವಾಗುತ್ತದೆ (ಹಿಂದಸಾ. ೧೭೬). [ಸಂ. ಆಗಾಮಿನ್]

**ಆಗಾಮಿಕ** (ಗು). ೧. ಭವಿಷ್ಯತ್ತಿಗೆ ಸಂಬಂಧಿಸಿದ ; ಮುಂದೆ ಬರಲಿರುವ : ಅಂತು ಭಾರದ್ವಾಜನಾಗಾಮಿಕ ಸಂಗ್ರಾಮರಂಗಕ್ಕೆ ಪಾತ್ರಂಗಳಂ ಸಮೆಯಿಸುವ ಸೂತ್ರಧಾರನಂತೆ (ಪಂಪಭಾ. ೨-೫೯ ವ). (ನಾ). **೨.** ಮುಂದೆ ಬರಬಹುದಾದ ಆದಾಯ : ಹಲಗೂರ ಸುಂಕ ಆಗಾಮಿಕ ಮಗ್ಗದೆಱೆ ಇವಂ (ಮೈಆರಿ. ೧೯೪೫, ೧೭-೯ ; ?). [ಸಂ.]

**ಆಗಾಮಿಕರ್ಮ** (ನಾ). ಮುಂದೆ ಮಾಡಲಿರುವ ಕರ್ಮ : ಹೆಣ್ಣಿನಾಸೆ ಉಳ್ಳನ್ನಕ್ಕರ ಆಗಾಮಿಕರ್ಮ ಬಿಡದು (ಅಖಂಡೇ. ೧೩೪-೧೧೧) ; ಆಗಾಮಿಕರ್ಮ ವ್ಯಕ್ತವಾಗಿ ಬೀಜದಲ್ಲಿ ವೃಕ್ಷ ಅಣಿಗಿರೋಪಾದೇಲಿ . . . ಆಗಾಮಿಕರ್ಮಯಿರುತ್ತದೆ (ಅಧ್ಯಾಮಾ. ೯೩). [ಆಗಾಮಿ + ಕರ್ಮ]

**ಆಗಾಮಿಕಾರ್ಯ** (ನಾ). ಬರಲಿರುವ ಕೆಲಸ ; ಭವಿಷ್ಯತ್ತಿನ ಕಾರ್ಯ : ಪುರೋಹಿತಂ . . . ರಾಮಕೃಷ್ಣರೆಂಬ ನಾಮಕರಣಂ ಮೊದಲಾಗೆ ಪಲವುಮನ್ವರ್ಥನಾಮವನಿಟ್ಟು ಆಗಾಮಿಕಾರ್ಯವನಱಿಪಿ ಪರಸಿ ಪೋಪುದುಂ (ಜಗವಿ. ೩-೨೬ ವ). [ಆಗಾಮಿ + ಕಾರ್ಯ]

**ಆಗಾರ** (ನಾ). ೧. ಮನೆ ; ವಾಸಸ್ಥಾನ : ಜಿನನಾಥಾಗಾರದೊಳರ್ಚನೆಯಿಂದಲ್ಲಿರ್ದ ಜಿನಪನಂ ಪೂಜಿಸಿ (ನೇಮಿಪು. ೭-೪೩) ; ಭೂರಮಣಿಯ ಶೃಂಗಾರಾಗಾರಮಿದೆನೆ (ಪುಷ್ಪಪು. ೯-೨೨). **೨.** "ಸ್ಥಳ" (ಗಂಗಾಮ. ೨೩). [ಸಂ.]

**ಆಗಿಸು** (ಕ್ರಿ). ೧. ಆಗುವಂತೆ ಮಾಡು ; ಉಂಟುಮಾಡು ; ನೆರವೇರಿಸು : ಶ್ರೀವಿಜಯ ಪ್ರಭೂತ ಮುದಮಂ ತನಗಾಗಿಸಿದೊಂ ಕವೀಶ್ವರಂ (ಕವಿರಾ. ೨-೧೫೫) ; ಶ್ರೀಗೆ ಭುಜಶಿಖರಮಂ ನೆಲೆಯಾಗಿಸಿ ನೀಂ ನೆಲಸು (ಪಂಪಭಾ. ೨-೧) ; ವಿನಯಮನಾಗಿಸಲ್ಕೆಱೆಯದನ್ವಯಮುಂ ಶ್ರುತಮುಂ . . . ಅಂತುಟೆ ವಲಂ (ಕಾದಂಪೂ. ೫೪೧) ; ಆಗುಳಿಕೆ ಸೀಸು ತೇಗಿದನಾಗಿಸುಗುಂ ಗಳದೊಳಿರ್ದದಾನವ್ಯಾನಂ (ಕಲ್ಯಾಕ. ೨-೧೭) ; ದೇವಾಧೀಶನೆ ಕಲ್ಲು ನಿನ್ನ ಹೃದಯಂ ತಾನೆಂಬುದಂ ರಾಕ್ಷಸರ್ ಭಾವಕ್ಕಾಗಿಸಿದರ್ ಗಡಾ ಖಡುಗದಿಂ ಪೊಯ್ದಾಡಿ (ವೈಸೂಮೆ. ೨-೬೩). **೨.** ಮಾಡು ; ರಚಿಸು : ತಾವರೆಗಾವೊಳಾಗಿಸಿದ ಬಿಲ್ಗದಱೀರೆಳೆಯೇಱಿಸುತ್ತೆ (ರಾಜಶೇ. ೨-೧೭) :
[ಆಗು$_{1}$ + -ಇಸು$_{3}$]

**ಆಗು$_{1}$** (ಕ್ರಿ). (ಕ್ರಿಯಾರೂಪಗಳು) ಅಕುಂ, ಅಕ್ಕು, ಅಕ್ಕುಂ, ಅಕ್ಕುಗುಂ, ಅಪ್ಪಂ, ಅಪ್ಪಳ್, ಅಪ್ಪುದು, ಅಪ್ಪೊಂ, ಅಪ್ಪೊನ್, ಅಪ್ಪೋನ್, ಅಪ್ಪೋರ್, ಅಹನು, ಅಹನೆ, ಅಹಳ್, ಅಹಾದು, ಅಹಿರಿ, ಅಹುದು$_{1}$, ಆಕ್ಕು, ಆಗುಗುಂ, ಆಗುಗುಗುಂ, ಆದತ್ತು, ಆಯಿತು, ಆಯಿತ್ತು, ಆಯ್ತು, ಆಹುದು, ಆಹೋದು. (ಕೃದಂತ ರೂಪಗಳು) ಅಪ್ಪ$_{4}$, ಅಹ$_{1}$, ಅಹಪ್ಪ, ಆಕ್ಕಿ, ಆಗಿ, ಆದ, ಆಹ$_{2}$. (ನಿಷೇಧ ರೂಪಗಳು) ಆಗ$_{3}$, ಆಗದು, ಆಗಲ್$_{2}$. (ಸತಿಸಪ್ತಮಿ ರೂಪಗಳು) ಆಗಲ್$_{3}$, ಆಗಲು$_{2}$, ಆಗೆ. (ಪಕ್ಷಾರ್ಥಕ ರೂಪಗಳು) ಅಪ್ಪಡೆ, ಅಪ್ಪೊಡೆ, ಅಹರೆ, ಆದಡೆ$_{2}$, ಆದರೆ$_{2}$, ಆದೊಡೆ$_{2}$, ಆದ್ರೆ$_{2}$. (ವಿಧ್ಯರ್ಥಕ ರೂಪಗಳು) ಅಕ್ಕೆ, ಆಕ್ಕಾ, ಆಗುಗೆ. (ಕೃಲ್ಲಿಂಗ ರೂಪಗಳು) ಆದುದು. (ಸಂಭಾವನಾ ರೂಪಗಳು ☞ ಇವು ಹೊಸಗನ್ನಡದಲ್ಲಿ ಮಾತ್ರ ಬಳಕೆಯಲ್ಲಿವೆ) ಆದಾತು, ಆದಾನು, ಆದಾರು, ಆದಾವು, ಆದಾಳು, ಆದೀತು, ಆದೀಯೆ, ಆದೀರಿ, ಆದೇನು, ಆದೇವು. ೧. ಹುಟ್ಟು ; ಉಂಟಾಗು ; ಸಂಭವಿಸು : "ಆಗು — ಪ್ರಾದುರ್ಭಾವೇ" (ಶಮುಧಾ) ; ವಿದ್ರುಮಾಧರ ಶಾನ್ತಿಸೇನ ಮುನೀಶನಾಕ್ಕಿಎ ವೆಳ್ಗೊಳ ಆದ್ರಿ ಮೇಲಶನಾದಿವಿಟ್ಟಪುನರ್ಭವಕ್ಕೆಱೆ ಆಗಿ (ಎಕ. II, ೩೧-೩ ; 650) ; ದುಷ್ಟನೊರ್ವನದಱ ಫಲಮಂ ತಿಂಬವಂ . . . ಕುಲಕ್ಷಯಮಾಗುಗುಂ (ಎಕ. VIII, ನಗರ. ೯೦-೧೫ ; 897) ; ರಾಗಮುಗುಂದಲೆಯುಂ ಪೊಂಪುಱಿಯುಮಾಯ್ತು (ಪಂಪಭಾ. ೯-೪) ;

ಜಾಬಯ್ಯಗೆ ತಾಮಾದರ್ ತನಯರ್ (ಎಕ. II, ೧೩೯–೪; 950); ನೀತಿಯೆ ಸಕಲ ಲೋಕಕ್ಕಾಗಬೇಕೆಂದು ಪೇಳಿದ ಸೋಮಂ (ಸೋಮೇಶ. ೨); ಪುಲಸ್ತ್ಯನಾ ಸರಸಿರುಹಗರ್ಭನ ಮಾನಸವಲವತರಿಸಿದನು ತನ್ಮನಿಪ ಗಾದನು ವಿಶ್ರವಸು ಬಳಿಕ (ತೊರರಾ. ೧–೮–೨೩). **೨.** ಜರುಗು; ನಡೆ; ಪ್ರವರ್ತಿಸು: ಅಂತಾದೊಡೆ ಕರಮೊಳ್ಪಿತ್ತು (ಕುಸುಮಾ. ೬–೫೧ ವ); ಆವಾವನೊಬ್ಬ ತಪ್ಪಿ ಬಂದವನಾದ್ರೆ (ಸೌಇಇ. IX–ii, ೪೦೮–೩೫ ; 1364); ಅಶ್ರುತಾಯುಧ ಮಡಿದನಲ್ಲಿ ಮಹಾಸುರದ ರಣವಾಯ್ತು (ಕುವ್ಯಾದ್ರೋ. ೧೦–೧೫); ಮೂವರು ಕಾಂತೆಯರಿಗಾದುದು ಕಣಾ ಸೀಮಂತ ಸೌರಂಭಾತಿ ಶಯದುಬ್ಬರದ ವಿಭವದಲಿ (ತೊರರಾ. ೧–೮–೫); ಜನರೇನು ಬಲ್ಲರು ಒಳಗಾಗೋ ಕೃತ್ಯವ (ಕೈಕವ. ೬೩–೩). **೩.** ಬೆಳೆ; ವೃದ್ಧಿಹೊಂದು: ಆದ ಮುಳಿಸಿಂದಮೆಲ್ವಂ ತೇದುಂ ಕುಡಿಯಲ್ಕೆ ತಕ್ಕ ಪಗೆವನ ರುಧಿರಾಬ್ಧೋದಮನೆ ಕುಡಿದು ಮಾಣ್ದ ವೃಕೋದರನೇನಾವ ತೆಜದೊಳಂ ದೋಷಿಗನೇ (ಪಂಪಭಾ. ೧೨–೧೫೯); ದಿನದಿನಕಾದುದಖಿಳೈಶ್ವರ್ಯ (ತೊರರಾ. ೧–೮–೨೯); ನನ್ನಹಾಗೆ ಆಗು ಮಗಳೇ (ಗಾದೆ). **೪.** ಪಾಲಿಗೆ ಬರು; ಒದಗಿ ಬರು: ಎನ್ನ ಪಾಪಕರ್ಮದ ಕತದಿಂದಮಿಾ ನಿಮಗಮಿಾಯಿರವಾದುದೆ ಸಿಂಧುನಂದನಾ (ಗದಾಯು. ೫–೪೦); ಭಾಗನಾಲ್ಕರಲೆರಡು ಭಾಗಂಗಳು ಸುಮಿತ್ರಾ ತರುಣಿಗಾದವು (ತೊರರಾ. ೧–೭–೫೮); ಕೋರ್ಟಿನ ನಿರ್ಣಯದಂತೆ ಆ ಹೊಲ ನನಗಾಯ್ತು (ರೂಢಿ). **೫.** ಪರಿಣಮಿಸು; ಬದಲಾವಣೆ ಹೊಂದು: ಅಂಕದಶ್ವಗೋಪಾಳಕರೆಂಬರಾ ನಕುಳನುಂ ಸಹದೇವನುಮಾದರ್ (ಪಂಪಭಾ. ೯–೬); ಪ್ರಭಾವತಿಯುಂ . . . ತಪದೊಳ್ ನೆಗಬ್ದಿ ಅಚ್ಯುತಕಲ್ಪದೊಳ್ ಪ್ರತೀಂದ್ರನಾದೊಳ್ (ಚಾವುಂಪು. ೨೯–೧೩); ಚರಿಪಾರಣ್ಯದ ಪಕ್ಷಿಗೊಂದು ತರುಗೊಡ್ಡಾಗಲ್‌ಫಲಂತೀವಿದಾಮರಗಳ್ ಪುಟ್ಟವೇ (ಸೋಮೇಶ. ೨೬). **೬.** ಇರು; ವರ್ತಿಸು: ಈ ದೊರೆಯ ಮಹಾ ಪ್ರಸಿದ್ಧಕವಿ ಪೋದರೊಳಿಲ್ಲಾದರೊಳಿಲ್ಲಪ್ಪರೊಳಿಲ್ಲ (ಅಜಿಪು. ೧೨–೩೩); ಕಬ್ಬೆಂಬಭಿಧಾನಂ ಕಾಟ್ಗಬ್ಬಿಂಗಂ ನೆಗಟ್ದ ಮೆಲ್ಪ ಕಬ್ಬಿಂಗಂ . . . ಅಕ್ಕುಂ (ಧರ್ಮಾಮೃ. ೧–೧೯೦); ಅಕ್ಕರಮುಂ ವರ್ಣಮುಮೆಂದಕ್ಕುಂ ಶುದ್ಧಾಕ್ಷರಕ್ಕೆ ನಾಮಂ (ಶಮದ. ೨); ನಿಮ್ಮ ಕಿಱಿಯಣ್ಣ . . . ಎಮ್ಮ ಪುರಕೆ ಬಂದಹನೆಯೆಂಬಾ ನುಡಿಯನು ಕೇಳಿ (ಪ್ರಭಂಜ. ೩–೧೨೯); ಅವಳೀಗ ನಿನ್ನ ಮನವ ಸೂಱೆಗೊಳುವಂತೆ ರಂಜಿಸುತಹಳೆ (ಭರಚ. ೩೭–೯೩). **೭.** ನೆರವೇರು; ಕೊನೆಗೊಳ್ಳು; ಈಡೇರು; ಮುಗಿ: ಸಯ್ತಾಯ್ತುಜ್ಜನ ಮಾತು ನಮ್ಮ ಪಡೆಯಂ ಕಾವರಿನ್ನಾರೊ (ಪಂಪಭಾ. ೧೧–೫೨); ರಾಜಕೀರನೆ ನೀಂ ಪಲ್ದೆದಿದ ಕಜ್ಜಮಾದುದೆ (ಉದ್ಭಟ. ೭–೧೧೬). **೮.** ಒಳಹೊಗು; ಹಿಡಿಸು; ಹೊಂದಿಕೆಯಾಗು: ನೀನು ಚಿಕ್ಕವನಪ್ಪ ನಿನ್ನ ಅಂಗಿ ನನಗೆ ಆಗುವುದಿಲ್ಲ (ರೂಢಿ). **೯.** ಒಪ್ಪು; ಸರಿಯಾಗು; ತಕ್ಕುದೆನಿಸು: ಎನಗೆ ದೀಕ್ಷೆಯಂ ದಯೆಗೆಯ್ಯಿಮೆನೆ ಭಟಾರರೆಂದರೆಮಗಂತು ದೀಕ್ಷೆಯಂ ಕುಡಲಾಗ ಮಗನೆ (ವಡ್ಡಾರಾ. ೭೪–೧೨); ಅಗದು ಸಮರಂ ಗುಣಯುತನಾಗು (ಗದಾಯು. ೭–೪೩); ನೀಂ ನಿನ್ನ ಕಣ್ಣ ಪಾಪೆಯನುನ್ನತಿಯಿಂದಱಿಯದನಿತಱಿಂ ಪಾಪೆಗಳಿಲ್ಲೆನ್ನಲ್ಕಕ್ಕುಮೆ (ಧರ್ಮಾಮೃ. ೫–೧೮೭); ಇವು ವರ್ಣಾವೃತ್ತಿಗೆ ಸಲ್ವುವು ಸಂದುಂ ಪ್ರಾಸದೆಡೆಗೆ ಸಲ್ಲವು ಯಮಕವ್ಯವಹೃತಿಗಾಗವು (ಶಮದ. ೧೯); ತಲೆಗೆ ಕೊಂಡೆವು ಹಣವನಿನ್ನುಳುಹಿಕೊಂಡಿರಲಾಗದು (ಕುವ್ಯಾದ್ರೋ. ೨–೪೯). **೧೦.** ಪ್ರೀತಿಯಿರು; ಬೇಕಾಗಿರು: ಆರ್ಜಿಸಿ ರಕ್ಷೆಯಂ ಕಟ್ಟಲ್ ಆಗದ ರಹಿತ ಬುದ್ಧಿಯಿಂ ಮಾಡಿದ ಕುಟಿಲಂಗಳ್ ಕಿಡುಗುಂ (ಖಮದ. ೧೪–೬೬ ವ); ಕೊಂಡೊಯ್ದು ಕೊಲಿಸುವರ ಕೊಂಡಾಡುತಿರಬೇಕು ಕಂಡರಾಗದವನ ಹೊಗಳಬೇಕು (ಪುರಂದ. ೨–೭೭–೮); ಆಗದರ ಮನಮನಱಿದೊಡೆ ಬೇಗದೆ ತೊಲಗು (ಶಬ್ದಾನು. ೫೮ ಪ್ರಯೋ); ಕಂಡರಾಗದವರು ಕೂಡಿಕೊಂಡು ಉಂಡರಂತೆ (ಗಾದೆ). **೧೧.** ತೀರು; ಸಾಧ್ಯವಾಗು: ನುಡಿಯಲಕ್ಕುಮೆ ಪೂಗಳ ಲೆಕ್ಕಮನೆಂದೆಯ್ದೆ ಕಾಮನೊಡ್ಡೋಲಗದೊಳ್ ಮುಡಿಗೆಯಿಕ್ಕಿಯುಂ ಕೈಯನೆತ್ತಿ ಪೊಗಟ್ದಂ ತಣಿಯನೆ ಮದನನುಂ ಮಲ್ಲಿಗೆಯಂ (ಆದಿಪು. ೧೧–೧೦೯); ಪುಲಿಯ ಮಿಾಸೆಯನಂಜದುಯ್ಯಲನಾಡಲಪ್ಪುದು (ಧರ್ಮಾಮೃ. ೧–೧೬೯); ಯೋಗವೈದ್ಯರು ಬಂದು ಮಂತ್ರಿಸಿ ನಾಗವಿಷದಿಂ ಮಡಿದ ರಾಯನನಾಗದಯ್ಯೋ ನಮ್ಮ ಕೈಯಲೆನುತ್ತ ತೊಲಗಿದರು (ಬಸಪು. ೪೬–೨೩); ಸಾರಿದುದು ಸರಸಿಜಭವನನಾತನಿನಾಗದಿರೆ ಮುರಿದು ಮದನಮದಮರ್ದನನ ಮಱೆಹೊಕ್ಕುದು (ತೊರರಾ. ೨–೭–೧೧); ಕೈಯ್ಯಲ್ಲಾಗದ್ದು ಮೈಯೆಲ್ಲ ಹರಕೊಂಡಿತು (ಗಾದೆ). **೧೨.** ಸೇರಿರು; ಸಂಬಂಧವಿರು: ಆ ಕೂಸೆಂಬುದು ನಿಮ್ಮ ತಮ್ಮನಪ್ಪ ವಾಯುಭೂತಿಯುಪ್ಪ ಜೀವಂ (ವಡ್ಡಾರಾ. ೧೦–೧); ಈತಂ ನಿನಗೇನಪ್ಪನದೇತಕ್ಕೀ ಬನಕೆ ಬಂದಿರೀರ್ವರ್ (ಉದ್ಭಟ. ೭–೨೫); ಬೆಳತನಕ ರಾಮಾಯಣ ಕೇಳಿ ಬೆಳಗಾಗ ರಾಮನಿಗೆ ಸೀತೆ ಏನಾಗಬೇಕು ಎಂದಂತೆ (ಗಾದೆ). **೧೩.** (ಸ್ಥಿತಿಯನ್ನು) ಹೊಂದು; ಪಡೆ: ಏಱನೆಯಾ ನರಕದಾ ಪುೞು ಅಕು(ಕ್ಕು)ಂ (ಇಅ. X, ೯೦–೪ ; 570); ಪಂಚಮಹಾಪಾತಕನಕ್ಕುಂ (ಎಕ. VI, ಕೊಪ್ಪ. ೩೭–೧೨; 675); ಇದೊನ್ ಕೆಡಿಸಿದೊನ್ ಪಞ್ಚಮಹಾಪಾತಕನಕ್ಕು (ಎಕ. III, ಮೈಸೂರು. ೫೫–೨೦ ; 740); ಬಾರಣಾಸಿಯಾ ಆಱಿದಾನಾಕ್ಕು ಸ್ವಸ್ತಿ (ಎಕ. X, ಬೌರಿಂಗ್, ೮೯–೧೫; 820); ಸಿಂಧುಕ್ಷಿತಿಪಂ ತಾನೇನನಾದಂರಣದೊಳದನೆ ಪೋಗಾನುಮಪ್ಪೆಂ (ಪಂಪಭಾ. ೧೧–೧೨೬); ಕವೀಂದ್ರಚೂಡಾಮಣಿಯ ಕವಿತ್ವಂ ತತ್ತ್ವಕ್ಕವಳಂಬನ ಮಾದುದು (ಸುಕುಮಾ. ೧–೪೧); ಧರಣಿಪತಿ ಮಱುಗಿದನು ಮಗನೇನಾದನೋ ಎನುತ (ಕುವ್ಯಾದ್ರೋ. ೫–೬೨). **೧೪.** ದೊರಕು; ಲಭಿಸು; ಪ್ರಾಪ್ತವಾಗು: ಸರಸ್ವತಿಯಂ ಸಾಧಿಸೆ ಸಂದ ಸಯ್ತು ಸವಣಂಗಕ್ಕುಂ ಪೆಱಂಗಕ್ಕುಮೇ (ಶಾಂತಿಪು. ೧–೮); ಪುರೋಹಿತರ್ಗೆಂಟುತಿಂಗಳೊಳಗ ಪಾಯಮಕ್ಕುಗುಂ (ಲೋಕೋಪ. ೪–೬); ತಾನವಿವೇಕದಲುಪಾರ್ಜಿಸಿದ ದುಷ್ಕೃತ ಫಲವೆ ತನಗಾಯ್ತು (ಕುವ್ಯಾದ್ರೋ. ೪–೩); ಅದನು ರಾಮ ನಿನಗೆ ಮಾತಿವು ಚೆನ್ನಾದವಿನ್ನೇನು (ಕುರಾಸಾಂ. ೨೬–೯೬); ಸಂತತಿ ಆಹೋದು ರಾಮಾಯಣವ ಕೇಳಲು (ಪುರಂದ. ೫–೧೩ ಉ); ಹೊದ್ದಿ ಪಾಂಡವರನೋಲೈಸಲಾದುದು ಭಾಗ್ಯ (ಜೈಮಿಭಾ. ೬–೪೭); ಗುರುಪಾದ ಕೆಱಗಿದರೆ ಶಿರಸು ತಾ ಮಣಿಯಕ್ಕು ಪರಿಣಾಮವಕ್ಕು ಪದವಕ್ಕು ಕೈಲಾಸ ನೆರೆಮನೆಯಕ್ಕು (ಸರ್ವಜ್ಞ. ೮೨); ಹಲವು ಬಗೆಯಿಂದ ತಿಳಿದು ಮಾಡಲು ಮಹಫಲವಾಹುದು (ಮೋಕ್ಷಪ್ರ. ೧೬೮–೨೧). **೧೫.** ನೆರವಾಗು; ಪ್ರಯೋಜನಕ್ಕೆ ಬರು: ಸುತನಿರ್ದೇಂ ಮುಪ್ಪಿನಲ್ಲಾಗದಾ (ಸೋಮೇಶ. ೧೬); ಈತನೆ ಕಾದಿ ಕೊಂದನೆಡರ್ಗೀತನೆ ತಾಂ ನಮಗಾದಂ (ಜೀವಸಂ. ೫೯–೪೨); ಆ ದೇವರ ದೇವ ಭುವನದ ಪ್ರಾಣಿಗಳಿಗಾದವನೆ ದೇವ (ಸರ್ವಜ್ಞ. ೧೯೦); ನಿನಗಾದುದಿಲ್ಲ ನಾ ನೀನೆನಗಾದೆ (೧೪ವಿಂ. ೫); ನೀನಾರಿಗಾದೆಯೋ ಎಲೆ ಮಾನವಾ (ಕಪಪು. ೪–೩೧). **೧೬.** ನಿರ್ಮಾಣವಾಗು; ರಚಿತವಾಗು: "ಕಾರ್ಪಾಸಂ, ಬಾದರಂ—ಈ ೨ ಹತ್ತಿಯಿಂದಾದ ಸೀರೆ" (ಹಲಾಯು. ೯೦–೩೯೬); "ಇಟ್ಟಿಗೆಯಲಾದ ಮನೆ ಪ್ರಾಸಾದವಕ್ಕು" (ಮಂಗರಾ. ೫೭–೫); ಮಣ್ಣಿಂದ ಮತ್ತು ಏನೇನು ಆಗುತ್ತವೆ? (ಮುಂಬಯಿ. ೧–೧). **೧೭.** ದಕ್ಕು; ಉಳಿ; ಸ್ಥಿರವಾಗಿ ನಿಲ್ಲು: ಪುರಗಳ್ ಪುಟ್ಟವೆ ನಿಂದುದಿಲ್ಲ ದಶಕಂಠಂಗಾಯಿತೇ ಲಂಕೆ . . . ಭಿಲ್ಲಗಾದುದೇ ಗೋಪುರಂ (ಸೋಮೇಶ. ೩೦).

[**ದೇ.** ‖ **ತಮಿ. ಮಲ.** ಆಗು; **ತುಳು.** ಆಪಿ; **ಕೊಡ.** ಆಗ್; **ತೆಲು.** ಆಗು, ಅವು; **ಕೊಲಾ.** ಅನ್, ಆನ್; **ನಾಯ್ಕಿ.** ಅಂದ್; **ಕುಇ.** ಆವ; **ಕುವಿ.** ಆಯ್‌ಯಲಿ, ಆನೈ; **ಬ್ರಾಹೂಈ.** ಅನ್ಸ್, ಅನ್ನಿಂಗ್]

**ಆಗು$_2$** (ನಾ). ೧. ಆಗುವಿಕೆ; ಉಂಟಾಗುವಿಕೆ; ನೆರವೇರುವಿಕೆ: ಎನ್ನತ್ಯಾಶ್ಚರ್ಯವೇ ಎನ್ನತಿಶಯಗುರುವೇ ಎನ್ನ ಚೈತನ್ಯದಾಗೇ ಎನ್ನ ಪ್ರಾಣೇಶ ಪಂಪಾಪುರದರಸ (ರಕ್ಷಾಶ. ೯೬); ಶರಣತತಿ ಹೋಹುದೇ ಎನ್ನ ಹರಣದ ಹೋಗು ಶರಣರ ಬರವೇ ಎನ್ನ ಹರಣದ ಬರವಿನಾಗು (ಬಸರ. ೯–೧೮೪); ಜ್ಞಾನವಹ್ನಿಯ ಬಾಗು ಸಾರಾನೂನಭಕ್ತಿತ್ರಿತಯದಾಗು . . . ಶೈವಾಚಾರಸಂಪ್ರೀತಿ (ಬಸಪು. ೬–೯). ೨. ಲಾಭ; ಜಯ: ಹಾಗಕ್ಕೆ ಹಾಗ ಗಳಿಸಿ ಆಗಾಯಿತ್ತೆಂದು ಉಣಲೊಲ್ಲದಿಪ್ಪ ಮರುಳೇ ಕೇಳು (ಪಚಶಾ. I, ೧೫೧); ಭಕ್ತಂಗೆ ಆಗೂ [ಪಾಠಾಂ. ಆಗೆಯು] ಇಲ್ಲ ಚಾಗೆಯು ಇಲ್ಲ (ಚನ್ನವ. ೧೦೪–೨). ೩. ಅಭಿವೃದ್ಧಿ; ಏಳಿಗೆ: ನುಡಿಯ ಆಗು ಸಾಗಿಗೆ ಪರಂಪರೆಗೆ ಅಡ್ಡಿ ಬಂದರೆ ಶಾಶ್ವತ ಮೂರ್ಛೆಯೊದಗಬಹುದು (ಕನ್ನನು. I, ೧೫೦).

ಆಗುಮಾಡಿಸು=ನೆರವೇರುವಂತೆ ಮಾಡು: ಅದನ್ನು ಆಗುಮಾಡಿಸಿ ನನ್ನ ಮೊದಲ ಕಾದಂಬರಿಯನ್ನು ಪ್ರಕಟಿಸಿರುವ . . . ಮೂರ್ತಿಯವರಿಗೆ ನಾನು ಚಿರಋಣಿ (ಗೋಪುರ. ೪ ಮುನ್ನು). **ಆಗುಮಾಡು** = ೧. ಒದಗಿಸು; ಹುಟ್ಟಿಸು; ಉಂಟುಮಾಡು: ಪರಶಿವನು ತನ್ನ ಲೀಲಾವಿನೋದಕ್ಕೆ ಸಕಲವೆಲ್ಲವನು ರೂಪಿಸಿ ಆಗುಮಾಡಿ ತೋಱಲು ಎಲ್ಲವು ಎನ್ನಿಂದಾಯಿತ್ತು ನಾ ಮಾಡಿದೆನೆಂದುಲಿವ ದೇಹಿಯನೇನೆಂಬೆನಯ್ಯ (ಚನ್ನವ. ೫೦–೧೦); ಅನುರೂಪರನಿವರಂ ಪಡೆದನುರಾಗಮನಾಗುಮಾಡಿ ಕನಸಿಂ ಕೂಡಲ್ಕನುವಿಸುತಿರ್ದಪನೀಗಳ್ ಬಿನದಮನೇನೆಂದು ಪೇೞ್ವೆನಬ್ಜೋದ್ಭವನಾ (ಲೀಲಾವ. ೭–೯೮); ದೇವಿಯುರಚ್ಚೆಯಂ ಸಲಿಸಲಿಲ್ಲದ ವಸ್ತುವನಾಗು ಮಾಡಿ ನೀವೀವೊಲವಿಂದೆ ಪೂಣ್ದಿರೆನೆ (ಜಗವಿ. ೧೩–೨೦); ಆಗುಮಾಡಿದ ಸುಕೃತವಂ ನೆಱೆ ಚೇಗೆಯಾಗಲು ಬಗೆದೆ ಶಿವಶಿವ (ಬಸಪು. ೨೪–೨೫). ೨. ಸೃಷ್ಟಿಸು; ನಿರ್ಮಿಸು: ರಾಗ ಮಿಗೆ ಬ್ರಹ್ಮಾಂಡ ಕೋಟಿಯನಾಗು ಮಾಡುವನಲಸಿದರೆ ಮುನಿವಾಗ ನುಂಗುವುದೊಂದು ಲೀಲೆ (ಕುವ್ಯಾದ್ರೋ. ೧೦–೩೮). ೩. ವಶಕ್ಕೆ ತೆಗೆದುಕೊಳ್ಳು; ಸ್ವೀಕರಿಸು: ಹತ್ತಿಯ ಸುಂಕ ಮುಂತಾಗಿ ಏನುಳ ಸರ್ವಸ್ವಾಮ್ಯವನು ಆಗುಮಾಡಿಕೊಂಡು ವೀರಭದ್ರ ದೇವರ ಅಂಗರಂಗಭೋಗಕ್ಕೆ ಸಲುದು (ಮೈಆರಿ. ೧೯೪೬, ೧೮–೨೩; 1488); ನಿಮಗೆ ಗುತ್ತಿಗೆಗೆ ಕೊಟ್ಟೆವಾಗಿ . . . ಏನುಂಟಾದ ಸರ್ವ್ವಸ್ವಾಮ್ಯವನು ಆಗುಮಾಡಿ ಅನುಭವಿಸಿಕೊಂಡು ನೀಉ ತೆಱುವ ಸುತ್ರಿಯದ ಗುತ್ತಿಗೆ (ಮೈಆರಿ. ೧೯೪೭, ೨೯–೧೨; 1530); ಅಷ್ಟಭೋಗ ತೇಜಃ ಸ್ವಾಮ್ಯವನು ಆಗುಮಾಡಿಕೊಂಡು ದೇವತಾಸೇವೆ ಸತ್ರಧರ್ಮವನು ನಡೆಸಿಕೊಂಡು (ಎಕ. VII, ಶಿವಮೊ. ೨–೧೩೭; 1646). ೪. ನೆರವೇರಿಸು; ಕೈಗೂಡಿಸು; ಆಗುವಂತೆ ಮಾಡು: ಯಥಾಕ್ರಮವಾಗಿ ಮಜ್ಜನ ಭೋಜನಾದಿಗಳಂ ಆಗುಮಾಡಿ (ಸೌಗಂಧಿ. ೨೩–೧); ನನ್ನ ಕೆಲಸವನ್ನು ತಾವು ದಯವಿಟ್ಟು ಆಗುಮಾಡಿಕೊಡಬೇಕು (ರೂಢಿ).

[< ಆಗು$_1$]

**ಆಗುಂಚೇಗಿ** 'ಆಗುಚೇಗೆ' ನೋ.

**ಆಗುಚೇಗೆ, ಆಗುಂಚೇಗಿ, ಆಗುಛೇಗೆ** (ನಾ). ಆಗುಹೋಗು; ಉತ್ಪತ್ತಿ ಅವಸಾನ (?); "(೧) ಆದಿಅಂತ್ಯ, (೨) ಸುಖದುಃಖ, (೩) ಹುಟ್ಟು ಬೆಳವಣಿಗೆ" (ಮೋಳಿಮಾ. ಕೋಶ): ಜಗದ ಆಗುಚೇಗೆಯಲ್ಲಿ ಲೋಲನಾಗದೆ ಕಾಯಗುಣವ ಕರ್ಮದಿಂದ ಕಳೆದು ಜೀವಗುಣವ ಅಱಿವಿನಿಂದ ಮಱೆದು ಭಾವ ನಿರ್ಭಾವವಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನ ತಾನು ತಾನೆ (ಮೋಳಿಮಾ. ೨–೨). **ಆಗುಂಚೇಗಿ**: ಏಗೆಯ್ದೊಡಮೆಲ್ಲಿದ್ದೊಡಮೇಗಳ್ ಸಾಹಸಮನೆಸಗಿದೊಡಮಧಿಕಮೆನಿಪ್ಪಾಗುಂಚೇಗಿಯುಮೆಂಬಿವು ಭೋಗಾದೃಷ್ಟಾನುಸಾರಿಯೆಂಬುದು ಪುಸಿಯೇ (ದಶಕು. ೭–೧೧೫). **ಆಗುಛೇಗೆ**: ಕುಟಿಲದ ರಸವಾದ ಮಾತಿನ ಮಾಲೆಯೇಕೆ ಆಗುಛೇಗೆಯನಱಿದು ಬೋಧಿಸಲೇಕೆ (ಮನುಗುಂ. ೭೫); ಬೀಜವಳಿದು ಬೆಳೆದು ಪುನರಪಿ ಬೀಜವಾದಂತೆ ಆದಱ ಆಗುಛೇಗೆಯನಱಿದಲ್ಲಿ ಇಷ್ಟ ಪ್ರಾಣಯೋಗ ಕ್ರಿಯಾದ್ವೈತ (ಶಿವಮಂ. ೬೩); ಆಗುಛೇಗೆಯನಱಿಯದ ಹೋರಾಟ (ಪ್ರಭೋಗ. ೭೦); ನಡೆ ನುಡಿ ಶುದ್ಧಾತ್ಮಗೆ ಆಗುಛೇಗೆ ಸೋಂಕಿದಲ್ಲಿ ವಂದನೆ ನಿಂದೆ ಬಂದಲ್ಲಿ ತನುವಿನ ಪ್ರಾಪ್ತಿ ಸಂಭವಿಸಿದಲ್ಲಿ (ಅವರೇ. ೩೬). [ಆಗು$_2$ + ಚೇಗೆ]

**ಆಗುಛೇಗೆ** 'ಆಗುಚೇಗೆ' ನೋ.

**ಆಗುನುಡಿ** (ನಾ). ಪೂಜ್ಯತೆಯನ್ನು ಸೂಚಿಸುವ ಮಾತು; ಗೌರವ ಸೂಚಕವಾದ ಶಬ್ದ (?): "ಆಗುನುಡಿ ಭಗವತ್ತು ಭವತೆನಿಕು ಪೆಸರ ಕಡೆಯಾಗುನುಡಿ ದೇವಮಕ್ಕು" (ಮಂಗರಾ. ೨೭–೭). [ಆಗು$_2$ + ನುಡಿ$_2$]

**ಆಗುವಳಿ** (ನಾ). "(ಕೈಗಾರಿಕೆ, ಗಣಿಕೆಲಸ, ದುಡಿತ ಮೊದಲಾದುವುಗಳಿಂದ ಬಂದ) ಉತ್ಪನ್ನ, ಹುಟ್ಟುವಳಿ, ಆಗುವಳಿ" (Output. ಇಂಕನಿ). [ಆಗು$_1$ + –ವಳಿ$_1$]

**ಆಗುವೆ** (ನಾ). ಬಳಕೆ; ಉಪಯೋಗ (?): ಹೇಮ ಬಣ್ಣವ ಕೂಡಿದ ದೆಸೆಯಿಂದ ಮರ್ತ್ಯರುಗಳಿಗೆ ಆಗುವೆಗಳಿಗೆ ಈಡಾಯಿತ್ತು (ಕೋಲಶಾಂ. ೧೦). [ಆಗು$_1$ + –ವೆ]

**ಆಗುಹ** (ನಾ). ಆಗುವಿಕೆ; ಆಗುವುದು: ವಿಪರೀತಂ, ಪರಾಚೀನಂ – ಈ ೨ ಹಿಂದುಮುಂದಾಗುಹಂ (ಹಲಾಯು. ೧೨೫–೭೨); ತಳಮುಳಗೆಂದು ಬೆಱಗಾಗುಹಂ (ಶಮುದ. ನ. ಪರಿ. ೨). [ಆಗು$_1$ + –ಹ$_2$]

**ಆಗುಹೋಗು** (ನಾ). ೧. ಲಾಭ ನಷ್ಟ; ಜಯಾಪಜಯ: ಕಾಯದ ಮಾಯದ ಸಡಗರದಲ್ಲಿ ಹುಟ್ಟಿಸಿದಿರಿ ಎನ್ನ ಆಗುಹೋಗು ನಿಮ್ಮ ಲೀಲಾವಿನೋದ (ಬಸಹೆ. ೨೮೬); ಆಗಲದು ತಪ್ಪೇನು ಧರ್ಮಜನಾಗುಹೋಗರ್ಜುನನ ಮೇಲೆ (ಕುವ್ಯಾಕ. ೧೫–೧೨); ಕೌರವನ ನೀಗಿದಳೆ ಜಯಲಕ್ಷ್ಮಿ ಪಾಂಡವರಾಗುಹೋಗೇನಾಯ್ತು (ಕುವ್ಯಾಗ. ೪–೨೧). ೨. ಇಷ್ಟಪ್ರಾಪ್ತಿ ಮತ್ತು ಅನಿಷ್ಟ ನಿವೃತ್ತಿ: ಆಗುಹೋಗುಗಳು ನೆಱೆ ರಾಗಭೋಗಗಳು ಸರಾಗವಾಗಿಕ್ಕು ಶಿವನೊಲಿದಡಲ್ಲದಿರೆ ಹೋಗಿಕ್ಕು (ಸರ್ವಜ್ಞ. ೨೪೬); ಕೇವಲ ಕ್ಷಣಿಕ ಸುಖಕ್ಕಾಗಿ ಮನುಷ್ಯನು ತನ್ನ ಆಗುಹೋಗುಗಳನ್ನು ಹಾಳುಮಾಡಿಕೊಳ್ಳುತ್ತಾನೆಯೆ? (ಗಾಳಿಗು. ೨೭). ೩. ಹುಟ್ಟು ಸಾವು: ಆಗುಹೋಗೆಂಬುವಿಲ್ಲದ ಗುರುವೆ (ಭಾವಚಿಂ. ೪–೧). ೪. ಸಾಧ್ಯಾಸಾಧ್ಯತೆ: ಈ ಪ್ರಯತ್ನದ ಬಗ್ಗೆ ಆಗುಹೋಗುಗಳನ್ನು ಈಗಲೇ ಹೇಳುವಂತಿಲ್ಲ (ರೂಢಿ). [ಆಗು$_2$ + ಹೋಗು$_2$ (< ಪೋಗು$_2$)]

**ಆಗುಳ್, ಆಗುಳಿ** (ನಾ). ತೂಕಡಿಕೆ, ನಿದ್ರೆ, ಅಸ್ವಸ್ಥತೆ, ಬೇಸರ ಮುಂತಾದುವುಗಳಲ್ಲಿ 'ಆ' ಎಂದು ಅಗಲವಾಗಿ ಬಾಯಿ ಬಿಚ್ಚಿ ಮತ್ತೆ ಮುಚ್ಚಿಕೊಳ್ಳುವ ಒಂದು ಬಗೆಯ ಕ್ರಿಯೆ; ಆಗುಳಿಸುವುದು: ವನಿತಾಸೇವನೆ ರೂಕ್ಷಮುಕ್ಕೆ ಪಸಿವಾಗುೞ್ [ಳ್] ಚಿಂತೆ ವಿಣ್ಮೂತ್ರವೇಗ ನಿರೋಧಂ ಶ್ರಮಮತ್ಯಜೀರ್ಣಮಿವಱಿಂ ಕಾರ್ಗಾಲದೊಳ್ ಮಾರುತಂ ಜನಿಯಿಕ್ಕುಂ (ಲೋಕೋಪ. ೯–೪). **ಆಗುಳಿ**: ವಿಭೂಷಣಂಗಳೊಳ್ ತೀಡುವ ರಶ್ಮಿಗಳ್ ಮಸುಳ್ದುವಾಗುಳಿಯಾಯ್ತನಿತುಬ್ಬೆಗಂ ಮೊಗಂ ಬಾಡಿತಗುಳ್ದು ಸೂಚಿಸಿದುದಾ ದಿವಿಜಂಗವಸಾನಕಾಲಮಂ (ಆದಿಪು. ೩–೩); ನಳಿನದಳನಯನೆ ತನಗಾಗುಳಿವರೆ ಕರತಳದೆ ವದನಮಂ ಮುಚ್ಚುತುಂ (ಕಾದಂಉ. ೧೨೮); ತನು ಬಡವಪ್ಪ ತೂಂಕಡಿಸುವಾಗುಳಿ ಪುಟ್ಟೆ ಕನಲ್ದೊನಲ್ದು ಸುಯ್ ಜನಿಯಿಸುವಂಘ್ರಿ ಝೊಮ್ಮಡರ್ವ ಪೊಂಗಿ ಬಸಿಱ್ ಬಿಗಿದನ್ನಗರ್ಭಿಣೀಜನದ ವಿಕಾರಮಾ ಸತಿಯೊಳಾಗವೆ (ಪುಷ್ಪಪು. ೯–೧೧೭).

[ದೇ. ‖ ತಮಿ. ಮಲ. ಆವಿ; ತುಳು. ಆವಲು; **ತೆಲು.** ಆವಲಿಂತ; ಪರ್ಜಿ. ಅಂಕುಡ್, ಅವ್ಕಡ್, ಆಕುಬ್]

**ಆಗುಳೆ** (ನಾ). ಐದು ಕೊಳಗ ಬೀಜವರಿಯುಳ್ಳ ನೆಲ (?) : ಶ್ರೀಮನು ಪರದೇಶಿ ಆರಾಧ್ಯರ ಮಾನ್ಯದ ಹೊಲ ಆಗುಳಯಿ × ಯಿಾ ಧರ್ಮವ ಆರು ನಡೆಸಿದ × × × ಯಿನ್ತೀ ಶಿವಗೋದಾನ ಮಾಡಿದ ಫಲ (ಎಕ. XII, ಪಾವಗ. ೩೨–೨ ; ?). [< ಅಯ್ಗುಳ ?]

**ಆಗುಳದು** (ನಾ). ಗುಳ್ಳದ ಜಾತಿಯ ಗಿಡ : ಬಿಳಿಯ ಸಾಸವೆ ತಗರ ಕೋಡು ಆನೆಯ ದಂತ ತಲೆಯ ನವಿರುಂ ಬೇವಿನಯೆಲೆ ಕಹಿ ಆಗುಳದು ಯಿವಂ ಸಮಂಗೊಂಡು ಕೂಸಿಂಗೆ ಧೂಪವಿಕ್ಕುವದು (ಬಾಲಚಿ. ೧೨೬). [?]

**ಆಗುಳಿ** 'ಆಗುಳ್' ನೋ.

**ಆಗುಳಿಕೆ, ಆಕಳಿಕೆ, ಆಕುಳಿಕೆ, ಆಗಳಿಕೆ, ಆಗುಳಿಕ್ಕೆ, ಆಗುಳಿರ್ಕೆ** (ನಾ). = ಆಗುಳ್ : "ಜೃಂಭಃ, ಜೃಂಭಣಃ — ಈ ೨ ಆಗುಳಿಕೆಯ ಪೆಸರು" (ನಾಚಿರಾ. ೯೮) ; ಅಲಸಿಕೆ ಮೆಯ್ಯಾದುದು ಕಣ್ಮಲರ್ ಮರಲ್ದೆ ಸೆದುವೊದವಿತಾಗುಳಿಕೆ (ಕಾದಂಪೂ. ೩೮೧) ; ಆಗುಳಿಕೆ ತೇಗು ಸೀನಿದ ನಾಗಿಸುಗುಂ (ಕಲ್ಯಾಕಾ. ೨–೧೬) ; ಲಿಂಗಪ್ರಸಾದಕ್ಕೆ ಬಾಯಂ ಬಿಡುವ ನಿಂತೆಂದು ತೋರ್ಪಂದದಿಂ ಹರಿಣಾಕ್ಷಿಗಾಗುಳಿಕೆಯಾದುದು (ಪದ್ಮರಾ. ೨–೪೧). **ಆಕೆಳಿಕೆ** : ಸುತನ ಬರವಿಗೆ ಬಾಯ್ದೆಱೆವ ತೆಱದಿ ಪರಮಸತಿ ಗಾಕಳಿಕೆ ಬಂದುದು (ಬಸಪು. ೩–೨) ; ಹೆದರಿಕೆಯೊಡನೆ ಕೂಡಿದ ಬಾಯಿ ಯಿಂದ ಯುಕ್ತವಾಗಿ ಕಣ್ಣಿನಲ್ಲಿ ನೀರು ಸುರಿಯುತ್ತ, ಆಕಳಿಕೆಗೂಡಿ ಮೈ ಹುರುಕುಳಿಸಿ . . . ಧ್ವನಿ ಭಾರವಾಗಿ ಇರುವುದೇ ಜ್ವರವೆನಿಸಿಕೊಂಬುದು (ಸಕವೈ. ೬೨) ; ಅಜ್ಜಿಗೆ ಮೊಮ್ಮಗ ಆಕಳಿಕೆ ಕಲಿಸಿದನಂತೆ (ಗಾದೆ). **ಆಕುಳಿಕೆ** : ಗಗನವ ತುಡುಕುವಾಕು [ಪಾಠಾಂ. ಗು]ಳಿಕೆಗಳ ಮೊರಹಿನ ಮಿಡುಕುಗಳ ನಾಯ್ ನೂಕಿದುವು ಹಾಸದ ವಿಳಾಸದಲಿ (ಕುವ್ಯಾಅ. ೧೪–೨೦) ; ಬಿಗಿದ ನಿದ್ರೆಯ ವದನದಾಕು [ಪಾಠಾಂ. ಗು]ಳಿಕೆಗಳ (ತೊರರಾ. ೬–೨೬–೩೪). **ಆಗಳಿಕೆ** : ತೇಗು ಬಿಕ್ಕುಳು ಸೀನು ಉದುಗರವಾಗಳಿಕೆ ಯಾಲಸ್ಯ ಕೆಮ್ಮುಗಳೋಗಡಿಕೆ ಮದ ನಿದ್ರೆ ತೂಕಡು ಕನಸು ಕಳವಳಿಕೆ ಆಗುಹೋಗೆಂದೆಂಬ ಗೊಡವೆಯ ನೀಗಿ (ಪ್ರಭುಲೀ. ೧೮–೭). **ಆಗುಳಿಕ್ಕೆ** : ಆಗಳುಂ ಮಿಾರ್ದ ಕಣ್ಬಿಡುನೀರ್ ಮೆಯ್ಮುರಿವಾಗುಳಿಕ್ಕೆಗಳಿವೇ ದುಷ್ಕರ್ಮ ಬಂಧಂ (ರತ್ನಾಶ. ೧೧೩). **ಆಗುಳಿರ್ಕೆ** : ಅಲಸಿಕೆಯಾಗಳುಂ ಕೆಳದಿ ಯಂತಿರೆ ಪೊರ್ದಿದುದಾಗುಳಿರ್ಕೆಯುಂ ತೊಲಗದು (ಬಾಧಪು. ೪–೨೯).

[ಆಗುಳ್ + –ಇಕೆ]

**ಆಗುಳಿಕ್ಕೆ** 'ಆಗುಳಿಕೆ' ನೋ.

**ಆಗುಳಿರ್ಕೆ** 'ಆಗುಳಿಕೆ' ನೋ.

**ಆಗುಳಿಸು, ಆಕಳಿಸು$_1$, ಆಕುಳಿಸು, ಆಗಳಿಸು, ಆವಳಿಸು** (ಕ್ರಿ). ನಿದ್ರೆಯಿಂದಲೋ ಬೇಸರದಿಂದಲೋ ಅಸ್ವಸ್ಥತೆಯಿಂದಲೋ 'ಆ' ಯೆಂದು ಬಾಯಿಬಿಡು : ಮಾತಾಪಿತೃಯುಗಳಂಗಳ್ ಸೀಂತುಮಾಗುಳಿ ಸಿಯುಂ ಪರಾಸುಗಳಾಗೆ (ಆದಿಪು. ೫–೪೧ ವ) ; ಯುಗಳಂಗಳ್ಪುಟ್ಟಿ ಸೀಂತಾಗುಳಿಸಿ ಪಿತೃಯುಗಂ ಸತ್ತು (ಪಂರಾಮಾ. ೧–೭೭) ; ಐವಾಯ ಹುಲಿ ಆಗುಳಿಸುತ್ತಿಪ್ಪುದು (ಅವಚಂ. ೧೦೫–೪೭೯) ; ಬಂದುದು ಮೂರಿ ವಿಡುತುಂ ತಿರುಗುತ್ತುವಾಗುಳಿಸುತುಂ ರೌದ್ರಜ್ವರಂ (ಜಗವಿ. ೧೮–೧೩) ; ಕೃತವರ್ಮನೊಲೆದಾಗುಳಿಸಿ ತೂಕಡಿಸಿದನು ತೆಗೆದುದು ನಿದ್ರೆ ತನುಮನವ (ಕುವ್ಯಾಗ. ೯–೩). **ಆಕಳಿಸು$_1$** : ಎರಡು ಬಾರಿ ಯಶೋದೆ ಆಕಳಿಸಿದಳು (ವಾತ್ಸಲ್ಯ. ೭) ; ಮತ್ತೊಬ್ಬರು ಆಕಳಿಸುವುದನ್ನು ಕಂಡಾಗ ನಾವೂ ಆಕಳಿಸಿ ಬಿಡುತ್ತೇವೆ (ಶಿಕ್ಷದ. ೨೩). **ಆಕುಳಿಸು** : ಭರದ ನಿದ್ರೆಯಲಾಕು [ಪಾಠಾಂ. ಗು]ಳಿಸಿ ಮೈಮುರಿದು ಕೈಕಾಲುಗಳ ನಿಗುರಿಸೆ (ತೊರರಾ. ೬–೨೬–೩೯). **ಆಗಳಿಸು** : ಚಿಂತಿಸುತಿರ್ಪಾಗಳಚ್ಯುತನಾಗಳಿಸೆ (ಧರ್ಮಪ. ೫–೨೦ ವ) ; ಆಗಳಿಸುತ ಕಣ್ಣ ತೀಡಿಕೊಳುತ (ಭರಚ. ೧೦–೮೮) ; ನೀಡಿ ನಗುವ ತಲೆ ಯಾಗಳಿಸುವ ತಲೆ ಕೂಡೆ ಬೊಬ್ಬಿಡುವ ತಲೆಗಳು (ಮೋಳಪು. ೪–೧೬೩). **ಆವಳಿಸು** : ಆವಳಿಸುವಾಗ ಯಶೋದಾದೇವಿಗೆ ದೇವ ತನ್ನೊಳಗೆ ಹುದುಗಿದ್ದ ಭುವನವೆಲ್ಲವ ತೋಱಿದುದಿಲ್ಲವೇ (ಲಕ್ಷ್ಮೀಶೋ. ೪೩).

[ಆಗುಳ್ + –ಇಸು$_3$. / ತೆಲು. ಆವಲಿಂಚು, ಆವುಲಿಂಚು]

**ಆಗೇರ** (ನಾ). ಉಪ್ಪುಮಾಡುವವನು ; ಉಪ್ಪಲಿಗ ; ಉಪ್ಪಾರ : ಆಗರವೆಂದರೆ ಉಪ್ಪಿನ ಕಣ ; ಇದರಿಂದ ಆಗೇರರೆಂದರೆ ಉಪ್ಪುಮಾಡು ವವರು. ಜತೆಗೆ ತಾಡವೋಲೆಯ ಛತ್ತರಿಗೆ ಮಾಡಿ ಮಾರುವವರು (ಕಭಾಗೆ. ೨೨೧) ; ಇದಿರಿನ ಹಿತ್ತಲದಲ್ಲಿನ ಗುಡಿಸಲೊಳಗೆ ಆಗೇರ ಎಂಕೂನ ಗಾಡಿಗ ತನ ಸುರುವಾಗಿತ್ತು (ಮೂರುದಾ. ೨೩೯).

[← ಹಿಂ. ಮರಾ. ಅಗರೀ]

**ಆಗ್ಗಡಿ** (ನಾ). ಒಂದು ಊರಿನ ಹೆಸರು (?) : ಅರಟ್ಟಗತಳರ ಕೂಡ ಲೂರ ವೃತ್ತಿನೊಕ್ಕಿ ಊರೊಳೆ ಆಗ್ಗಡಿ ಕಳೂಸ ಕೊಟ್ಟ ನೆಲ ತೆನೆನ್ದಕ ಕಾಡೆಱುಕು ಸಾಕ್ಷಿ (ಮೈಆರಿ. ೧೯೧೬, ೧೩–೭ ; ಸು. 770). [?]

**ಆಗ್ಗೆ** 'ಆಗಡು' ನೋ.

**ಆಗ್ನೀಧ್ರ** (ನಾ). ೧. ಯಜ್ಞಯಾಗಾದಿಗಳಲ್ಲಿ ಅಗ್ನಿಯನ್ನು ಪುಟ ಗೊಳಿಸಿ ಅದು ಆರಿಹೋಗದಂತೆ ನೋಡಿಕೊಳ್ಳುವವನು : ವ್ಯಾಸ ಕಶ್ಯಪ ವಿಶ್ವಾಮಿತ್ರ ಭಾರದ್ವಾಜ ಬ್ರಹ್ಮಾಧ್ವರ್ಯ್ವಾಗ್ನೀಧ್ರ ಮೈತ್ರಾ [ಪಾಠಾಂ. ಬ್ರಹ್ಮಧ್ವೈರ್ಯಾಗ್ನಿಹೋತ್ರ] ವರುಣಾಗ್ನಿ ಪರಿಚಾರಕೋದ್ಗಾತೃ ನೇತೃ ಹೋತೃ ಜಮದಗ್ನ್ಯಾದಿಗಳಪ್ಪ ಷೋಡಶರ್ತ್ವಿಜರ್ಕಳಿಂ ಬೇಳ ಲ್ವೇಱ್ದು (ಪಂಪಭಾ. ೬–೩೩ ವ). ೨. ಯಜ್ಞದಲ್ಲಿ ಅಗ್ನಿಯನ್ನು ಪ್ರತಿಷ್ಠೆ ಗೊಳಿಸುವ ಸ್ಥಳ. [ಸಂ.]

**ಆಗ್ನೇಯ** (ಗು). ೧. ಅಗ್ನಿಗೆ ಸಂಬಂಧಿಸಿದ. (ನಾ). ೨. ಅಗ್ನಿ ದಿಕ್ಕು ; ಪೂರ್ವಕ್ಕೂ ದಕ್ಷಿಣಕ್ಕೂ ನಡುವೆ ಇರುವ ದಿಕ್ಕು : ರಾಜ ಗೃಹಂಗಳಂ ಕಟ್ಟುವೊಡೆ ಮೂಡಲಾದಿಯಾಗಿ ಮೂಡಲ್ ಮಜ್ಜನದ ಮನೆ ಆಗ್ನೇಯದಲ್ಲಿ ಬಾಣಸಿನ ಮನೆ (ಲೋಕೋಪ. ೩–೧೮. ಟೀಕೆ).

[ಸಂ.]

**ಆಗ್ನೇಯಸ್ನಾನ** (ನಾ). ಐದು ಬಗೆಯ ಸ್ನಾನಗಳಲ್ಲಿ ಒಂದು ; ಮಂತ್ರಪೂತವಾದ ಭಸ್ಮವನ್ನು ಮೈಗೆಲ್ಲಾ ಹಚ್ಚಿಕೊಳ್ಳುವ ಸ್ನಾನ : ದಿವ್ಯಸ್ನಾನ ವಾರುಣಸ್ನಾನ ವಾಯುವ್ಯಸ್ನಾನ ಮಾನಸಸ್ನಾನ ಮತ್ತು ಆಗ್ನೇಯಸ್ನಾನವೆಂದು ಪಂಚವಿಧ ಸ್ನಾನಂಗಳೊಳಗೆ (ವಿವೇಕ. ೧೪೫) ; ಭಸ್ಮಸ್ನಾನಮಂ ಮಾಡಲು ಅದು ಆಗ್ನೇಯಸ್ನಾನವೆನಿಸುವುದು (ಸೌಗಂಧಿ. ೩೮೨–೩) ; ಜಲಾದಿಸ್ನಾನಗಳಿಗಿಂತಲೂ ಭಸ್ಮದಿಂದ ಮಾಡಲ್ಪಟ್ಟ ಸ್ನಾನವೇ ಉತ್ತಮವಾದುದು. ಇದಕ್ಕೆ ಆಗ್ನೇಯಸ್ನಾನವೆಂದು ಹೆಸರು (ಅಷ್ಟಾವಿ. ೪).

[ಆಗ್ನೇಯ + ಸ್ನಾನ]

**ಆಗ್ನೇಯಾಸ್ತ್ರ** (ನಾ). ಅಗ್ನಿಮಂತ್ರದಿಂದ ಅಭಿಮಂತ್ರಿಸಿ ಬಿಡುವ ಬಾಣ : ಬತ್ತಳಿಕೆಯಿಂದುಗಿದು ಹೂಡಿ ವಿಯತ್ತಳಕೆ ಹಾಯ್ಸಿದನು ಕರ್ಬೊಗೆ ಸುತ್ತಿ ದಳ್ಳುರಿ ಸುಳಿದುದಾಗ್ನೇಯಾಸ್ತ್ರಧಾರೆಯಲಿ (ಕುವ್ಯಾಅ. ೭–೪೩). [ಆಗ್ನೇಯ + ಅಸ್ತ್ರ]

**ಆಗ್ನೇಯಿ** (ನಾ). ೧. ಅಗ್ನಿಯ ಹೆಂಡತಿ ; ಸ್ವಾಹಾದೇವಿ : "ಆಗ್ನೇಯೀ, ಸ್ವಾಹಾ (ಕಥ್ಯತೇ) – ಈ ೨ ಅಗ್ನಿಯ ಸ್ತ್ರೀ" (ಹಲಾಯು. ೧೨–೬೬). ೨. ಆಗ್ನೇಯ ದಿಕ್ಕು. ೩. ಪಕ್ಷದ ಮೊದಲ ತಿಥಿ ; ಪಾಡ್ಯಮಿ.

[ಸಂ. ಆಗ್ನೇಯೀ]

**ಆಗ್ಯೆ** 'ಆಗಡು' ನೋ.

**ಆಗ್ರ** (ನಾ). ೧. ಮನೆ. 'ಒಳಾಗ್ರ' ಪರಾ. (ಕಿ). ೨. ಸುತ್ತು ಮುತ್ತಿನ ಪ್ರದೇಶ : ಜಾನಕಮ್ಮನ ಮದುವೆ ವಿಜೃಂಭಣೆ ಹೊಗಳುವು ದಕ್ಕೆ ಹತ್ತು ಬಾಯಿ ಸಾಲದು. ಇನ್ನೂ ಇಷ್ಟು ವರುಷಗಳಾದರೂ ಈ ಆಗ್ರದ ಜನವೆಲ್ಲಾ ಕೊಂಡಾಡುತ್ತಾ ಇದೆ (ಅದೂಟ. ೪೭). [?]

**ಅಗ್ರಹ** (ನಾ). ೧. ಹಿಡಿಯುವುದು ; ತೆಗೆದುಕೊಳ್ಳುವುದು : ಕಂತು ಶರಭವ[ನ]ನಾ ಪ್ರಿಯಕಾಂತಾ ಭ್ರೂವಿಭ್ರಮಗ್ರಹಾಗ್ರಹವಶದಿಂ ಭ್ರಾಂತಿ ಸದುಪಶಾಂತಮನಂ ಶಂತನುಗಿತ್ತಂ ಸಮಸ್ತರಾಜ್ಯಶ್ರೀಯಂ (ಪಂಪಭಾ. ೧-೬೬). ೨. ಮೇಲೆಬೀಳುವುದು ; ಆ ಕ್ರ ಮ ಣ . ೩. ಹಟ ; ಒತ್ತಾಯ : ನಿಮ್ಮಾಗ್ರಹದಿಂದಂ ನಿಜೀಸಿದ ಪದಾರ್ಥಂ ಸುಖ ದುಃಖ ಹರ್ಷ ವಿಷಾದಂಗಳೊಳಾದುದೊಂದು ವಿಜ್ಞಾನಸಂತಾನಮಾದುದಲ್ಲದೆ ತದ್ವ್ಯತಿರಿಕ್ತಂ ಜೀವನೆಂಬುದಿಲ್ಲ (ಶಾಂತಿಪು. ೮-೧೪೨ ವ). ೪. ಆಸಕ್ತಿ ; ವಿಶ್ವಾಸ: ಇವರ್ ನಮ್ಮನತ್ಯಾಗ್ರಹದಿಂ ಶಿಕ್ಷಿಸಿ ಸಾಕ್ಷರಿಕರಂ ಮಾಡಿಪ್ಪೊಡೆ ನಮ್ಮೊಳ್ಳಿದುದಾವುದೆಂದು (ಸುಕುಮಾ. ೨-೫೫ ವ) ; ಒಂದು ಪ್ರಸ್ತಾವದೊಳರಸಂ ನೊಳಂಬೇಶ್ವರ ದೇವರ ನೋಟ್ಬಿತ್ಯಾಗ್ರಹದಿಂ ದೇವಾಲಯಕ್ಕೆ ವನ್ದು (ಸೌಇಇ. IX-i, ೧೨೮-೨೬ ; 1065). ೫. ಶಕ್ತಿ ; ಸಾಮರ್ಥ್ಯ ; ಧೈರ್ಯ. ೬. ಕೋಪ ; ಸಿಟ್ಟು : ಉತ್ತರ ಗೋಗ್ರಹಂ ಪಿರಿದುಮಾಗ್ರಹಮಂ ಮನದೊಳ್ ತಗುಳ್ಚೆ (ಪಂಪಭಾ. ೮-೯೨) ; ಕಕ್ಕಯ್ಯಂಗಳಾಗ್ರಹವಡಸಿ ತದ್ದ್ರೋಹಿಯನುಜದೆ ಸಬಳದಿನಿಜೀದು ತೆಗೆದು (ಬಸವು. ೫೭-೨೯).

ಅಗ್ರಹಂಬೆರಸು = ಕೋಪದಿಂದ ಕೂಡಿ : ಪಿರಿದುಮಾಗ್ರಹಂಬೆರಸು ಗೋಗ್ರಹಣಪ್ರಪಂಚಮನೆ ನಿಶ್ಚಯಿಸಿ (ಪಂಪಭಾ. ೮-೮೯ ವ). **ಅಗ್ರಹ ಮಾಗು** = ಆಸಕ್ತಿಯುಂಟಾಗು ; ಆಸೆಯಾಗು : ಭವತ್ಕೃತಾಪ ಕಥೆಯಂ . . . ಕೇಳ್ವಾಗ್ರಹಮಾಯ್ತನುಗ್ರಹಿಪುದೆನ್ನಂ ದೇವ ಕಾರುಣ್ಯದಿಂ (ಪುಷ್ಪಪು. ೫-೩). [ಸಂ.]

**ಅಗ್ರಹಂಗೆಯ್** (ಕ್ರಿ). ಒತ್ತಾಯಮಾಡು ; ಬಲಾತ್ಕರಿಸು : ನಿಮ್ಮರಸಂಗಾಳಾಗಲೆವೇಟ್ಕುಮೆಂದೆನ್ನ ನೀನಾಗ್ರಹಂಗೆಯ್ದಪೆ (ಪಂಚತಂ. ೫೧-೨) ; ಎನಿತೆನ್ನನಾಗ್ರಹಂಗೆಯ್ದು ನುಡಿದೊಡಂ ಬಿಸುಡೆ ಲೊಲ್ಲೆಂ (ಸುಕುಮಾ. ೬-೫೧). [ಅಗ್ರಹ + ಗೆಯ್ (< ಕೆಯ್$_1$)]

**ಅಗ್ರಹಪಡಿಸು** (ಕ್ರಿ). = ಅಗ್ರಹಂಗೆಯ್ : ಆ ಅರಿವೆಯನ್ನು ನೋಡಿದರೆ ಅದು ಕುಮಾರಿಕೆಯದಹುದೋ ಅಲ್ಲವೋ ಎಂಬುದನ್ನು ನಾವು ಹೇಳ ಬಲ್ಲೆವು ಎಂದು ಬಲವಂತಾದಿ ಜನರು ಅಗ್ರಹಪಡಿಸಿದರು (ಅಂಬಿಕ. ೧೨). [ಅಗ್ರಹ + ಪಡು$_1$ + -ಇಸು$_3$]

**ಅಗ್ರಹಪೂರ್ವಕ** (ಗು). ಒತ್ತಾಯದಿಂದ ಕೂಡಿದ ; ಬಲವಂತ ದಿಂದ ಕೂಡಿದ: ಟಿಳಕರಿಗೆ ಪೇಂಡಸೆಯವರಿಂದ ಅಗ್ರಹಪೂರ್ವಕ ವಾದ ಆಮಂತ್ರಣ ಬಂದಿತ್ತು (ಸ್ಮೃತಿಚಿ. ೯೦). [ಅಗ್ರಹ + ಪೂರ್ವಕ]

**ಅಗ್ರಹಮಾಡು** (ಕ್ರಿ). = ಅಗ್ರಹಂಗೆಯ್ : ಸೀತಕ್ಕ ಅವನನ್ನು ಊಟ ಮಾಡುವಂತೆ ಅಗ್ರಹಮಾಡಿದರು (ಬಾಡಿಬ. ೩೮). [ಅಗ್ರಹ + ಮಾಡು$_1$]

**ಅಗ್ರಹಾಯಣಿ** (ನಾ). ೧. ಮಾರ್ಗಶೀರ್ಷಮಾಸದ ಹುಣ್ಣಿಮೆ. ೨. ಮೃಗಶಿರಾ ನಕ್ಷತ್ರ. [ಸಂ. ಅಗ್ರಹಾಯಣೀ]

**ಅಗ್ರಹಾಯಣಿಕ** (ನಾ). ಮಾರ್ಗಶೀರ್ಷಮಾಸ. [ಸಂ.]

**ಅಗ್ರಹಿಸು** (ಕ್ರಿ). ೧. ಒತ್ತಾಯಮಾಡು ; ಬಲಾತ್ಕರಿಸು : ಮತ್ತಂ ಬರವಿಂಗಾಗ್ರಹಿಸಲಿಂನುಡಿಯದಿರಿಂ ಚಂದ್ರಾಪೀಡನೊಳ್ ನೆರೆವ ಪುಣ್ಯ ಮೆನಗಿಲ್ಲ (ಕಾದಂಬ. ೪೪೮) ; ಅಹುದಲ್ಲವೆನ್ನದೆ ಸುಮ್ಮನಿರ್ದಪೆಯೆಲೆ ವಿಹಗ ಪೇಳ್ನಿನ್ನಯ ಮನಕೆ ಬಹವೊ ಬಾರವೊ ನನ್ನ ನುಡಿಗಳೆಂದಸಿಯ ಳಾಗ್ರಹಿಸಿ ಕೇಳಿದಳು (ಭರಚ. ೬-೯೮). ೨. ಕೋಪಿಸು ; ಸಿಟ್ಟಾಗು : ಮೂಱು ನಾಲ್ಕು ದಿವಸದೊಳೀ ಪೊನ್ನನಾವಪ್ರಕಾರದೊಳಮಾಗಿಯು ಮಾರಯ್ದು ತಂದುಕುಡುವುದಲ್ಲದೊಡೆ ಕಳ್ಳಂಗೆ ಮಾಳ್ಪ ನಿಗ್ರಹಮಂ ಮಾಳ್ಪೆನೆಂದರಸನಾಗ್ರಹಿಸಿ ನುಡಿವುದುಂ (ಸುಕುಮಾ. ೬-೮ ವ). [ಅಗ್ರಹ + -ಇಸು$_3$]

**ಆಘಟಿತ** (ಗು). ಸೇರಿದ ; ಜೋಡಿಸಿದ ; ಕೂಡಿದ : ಶರಣಪದಾಂಬು ಜಂಗಳಿಗೆ ಸಂಧಿಸಲು ಭಾಳಸ್ಥಳಂಗಳಮಂದಭಕ್ತಿಯೊಳವರ ಸುಪದರ ವಿಂದ ಸಂಘಟರೇಣುಪಟಳಾಘಟಿತಶಿರರಾಗಿ (ಬಸವು. ೫೭-೭). [ಸಂ.]

**ಆಘಾಟ** (ನಾ). ೧. ಎಲ್ಲೆ ; ಮೇರೆ : "ಅವಧಿಃ, ಮರ್ಯಾದಾ, ಆಘಾಟಃ, ಸೀಮ, ಸೀಮಾ—ಈ ೫ ಹೊಲಮೇರೆ" (ಹಲಾಯು. ೪೩-೧೦೪) ; ನೆಲ ನಿಲ್ಲಿಂದಿತ್ತಲಲ್ಲೆಂಬಿನಮಿನಿತೆ ದಿಶಾಘಾಟಮೆಂಬನ್ನೆಗಂ ಕಟ್ಟಲೆ ಚಂದ್ರಾ ದಿತ್ಯತೇಜಕ್ಕದಿರದಿದಿರನೊಡ್ಡಿರ್ದುದೆಂಬನ್ನೆಗಂ ಕಟ್ಟಲಿಸುತ್ತಿರ್ದತ್ತು (ಪಂರಾಮಾ. ೭-೧೨೩) ; ರಾಮನಾಥದೇವರ ಭೂಮಿಯಿಂ ಪಡುವಲು ಚತುರಾಘಾಟ ಲಿಂಗಮುದ್ರೆಯ ಕಲ್ಲಿನ ಸೀಮೆಯಿಂದೊಳಗೆ (ಕಇ. IV, ೧-೧೦೦ ; 1204). ೨. ಉತ್ತರಣೆಯ ಗಿಡ ; ಅಪಾಮಾರ್ಗದ ಗಿಡ. [ಸಂ.]

**ಆಘಾಟಶುದ್ಧಿ** (ನಾ). ಎಲ್ಲೆಕಟ್ಟಿನ ನಿರ್ಣಯ ; ಗಡಿಯ ಅಥವಾ ಮೇರೆಯ ನಿಶ್ಚಯ : ಅಜನೆಯ ಕುಳಧರಂ ಪುಟ್ಟಿ ಮರ್ಯಾದಾವಿಪ್ರತಿ ಪತ್ತಿಯಿಂದಮುಬ್ಬ್ಯಾರ್ಯಜನಕ್ಕಾಘಾಟಶುದ್ಧಿಯಂ ಮಾಡಿ ಸೀಮಂಧರ ನೆಂಬನಾದಂ. (ಆದಿಪು. ೬-೫೭ ವ) ; ಆತನಿಂ ಬೞಿಯಂ ಸೀಮಂಧರ ನೆಂಬೊಂ ಅಜನೆಯ ಕುಲಧರಂ . . . ಸೀಮೆಗಳ್ಗಾಘಾಟಶುದ್ಧಿಯಂ ಮಾಡಿದೊಂ (ಚಾವುಂಪು. ೧೦). [ಆಘಾಟ + ಶುದ್ಧಿ]

**ಆಘಾತ** (ನಾ). ೧. ಪೆಟ್ಟು ; ಹೊಡೆತ : ಅವತಂಸೋತ್ಪಲತಾಡನಂ ಕನಕಕಾಂಚೀಬಂಧನಂ ನೂಪುರಾರವ ಝಂಕಾರಿತ ಚಾರುವಾಮಚರಣಾ ಘಾತಂ . . . ಚಕ್ರಿಗಿತ್ತುವಲಂಪಂ (ಆದಿಪು. ೧೨-೪೮) ; ತುಂಗವನ್ಯ ಮತಂಗಜದಂತಾಘಾತನಿಪಾತಿತ ಸಲ್ಲಕೀ ಭಂಗಮುಂ . . . ಶತಶೃಂಗಮಂ (ಪಂಪಭಾ. ೧-೧೧೫). ೨. ಹಾನಿ ; ಕೇಡು : ಶಿಷ್ಟಾಚಾರಕ್ಕೆ ಅಥವಾ ನೀತಿವರ್ತನೆಗೆ ಆಘಾತವನ್ನುಂಟುಮಾಡುವಂಥ . . . ವಿಚಾರಕ್ಕೆ ಸಂಬಂಧ ಪಟ್ಟ . . . ವಿಧಿಯ ಅಮಲಿಗೆ ಅಡ್ಡಿಯಾಗಿರತಕ್ಕುದಲ್ಲ (ಭಾಧಾನ. ೧೦). [ಸಂ.]

**ಆಘಾರ** (ನಾ). ೧. ಮೇಲೆ ಚಿಮುಕಿಸುವುದು,—ಸುರಿಯುವುದು ; ಹೋಮಹವನಗಳಲ್ಲಿ ಅಗ್ನಿಯಲ್ಲಿ ತುಪ್ಪವನ್ನು ಅರ್ಪಿಸುವುದು. ೨. ಜೆಣ್ಣೆಕಾಯಿಸಿದ ತುಪ್ಪ. 'ಅಭಿಘಾರ' ಪರಾ. [ಸಂ.]

**ಆಘೂರ್ಮಿಸು** (ಕ್ರಿ). ಶಬ್ದವಾಗು ; ಮೊಳಗು : ತವತವಗೆ ಜಯ ಜಯಯೆನಿಪ ರವವಾಘೂರ್ಮಿಸಲಖಿಳಮಾನವರು ನಮಿಸಲು ಬಹಳ ವಾದ್ಯಧ್ವನಿಗಳಗ್ಗಳಿಸೆ (ಬಸವು. ೫೨-೪೧). [ಆಘೂರ್ಮಣ$_0$ + -ಇಸು$_3$]

**ಆಘೋಷ** (ನಾ). ಗಟ್ಟಿಯಾದ ಕೂಗು. [ಸಂ.]

**ಆಘೋಷಣ** (ನಾ). ೧. ಗಟ್ಟಿಯಾಗಿ ಕೂಗಿ ಸಾರುವುದು. ೨. ಒಂದು ಬಗೆಯ ಚರ್ಮವಾದ್ಯ : ಭದ್ರವೆಂಬ ಕರಾಡಿ ಶಾಸಕವೆಂಬ ನಗಾರಿ ಭೀಷಣವೆಂಬ ತ್ರಾಸಾಘೋಷಣವೆಂಬ ಹುಡುಕ್ಕಾ ಡಿಂಡಿಮವೆಂಬ ಡಿಕ್ಕಿ . . . ಇತ್ತೆಜದ ದಶವಾದ್ಯಂಗಳಂ ಬಾರಿಸಲುಳ್ಳ ವಿಚಕ್ಷಣರಿಂ (ವಿವೇಕ. ೨೩೬). [ಸಂ.]

**ಆಘೋಷಿಸು** (ಕ್ರಿ). ಗಟ್ಟಿಯಾಗಿ ಕೂಗು ; ಸಾರು : ಹರಸಿದನು ಚತುರಾಸ್ಯನಮರರ ತರುಣಿಯರು ಸೂಸಿದರು ಸೇಸೆಯ ಸುರಮುನಿಗ ಳಾಘೋಷಿಸಿದರುಬ್ಬಿದರು ದಿಗಧಿಪರು (ತೊರರಾ. ೪-೧೨-೩೬) ; ಅ ಜನಾ ವಳಿಯಲಾಘೋಷಿಸಿದನಾ ನಂದನಡಿಗಡಿಗೆ (ನಿಭಾಗ. ೧೦-೬-೩). [ಆಘೋಷಣ + -ಇಸು$_3$]

**ಆಘ್ರಾಣ** (ನಾ). ವಾಸನೆ ನೋಡುವುದು ; ಮೂಸಿನೋಡುವುದು : ಮತ್ತಾಘ್ರಾಣವೆ . . . ಎನುತುಂ ಮೂರ್ಧಾ[ಪಾಠಾಂ. ಧ್ರಾ] ಘ್ರಾಣಂಬೆರಸ ಗಲದಪ್ಪಿದಂ ಗಿರಿರಾಜಂ (ಗಿರಿಕ. ೩-೧೧೦). [ಸಂ.]

**ಆಘ್ರಾಣಿತ** (ಗು). = ಆಘ್ರಾತ (ಕ). [ಸಂ.]

**ಆಘ್ರಾಣಿಸು** (ಕ್ರಿ). ಮೂಸಿನೋಡು; ವಾಸನೆತೆಗೆದುಕೊ: ಸಪ್ತಚ್ಛದಗಂಧಮನೀ ವನೇಭಮಾಘ್ರಾಣಿಸಿ ಪೆರ್ಚಿದ ಮುಸಕದಿಂದೆ ಪಾಯಲ್ಕದಿರ್ಪುಗೆಯ್ದಪುದು ನೋಡ ವನವೇದಿಕೆಯಂ (ಆದಿಪು. ೧೧-೬೪); ಪುಷ್ಪವಾಸನೆಯಾ ಆಘ್ರಾಣಿಸುತ (ಸೌಗಂಧಿ. ೩೬-೧೪); ಪರಸುತಿರೆ ಗುರುಹಿರಿಯರೆಲ್ಲರುಂ ಶಿರವನಾಘ್ರಾಣಿಸುತೆ (ಶ್ರೀರಾಮಾ. ೩೧-೮೩). [ಆಘ್ರಾಣ + -ಇಸು₁]

**ಆಘ್ರಾತ** (ಗು). ವಾಸನೆ ನೋಡಲ್ಪಟ್ಟ; ಮೂಸಿನೋಡಿದ; ಮೂಸಿದ: ಸವಿಶೇಷ ಶೇಷಮಂ ಜಂಗಮಾಘ್ರಾತಮಂ ತವೆಪಿಡಿದುದಂ ನೋಡಿತಂ ಕೊಡುವುದೈ ಕೂರ್ತು (ವೀಶೈಪು. ೧-೩-೪೫). [ಸಂ.]

**ಆಘ್ರಾಯಿಸು** (ಕ್ರಿ). = ಆಘ್ರಾಣಿಸು: ಜಿನಾಂಘ್ರಿಶ್ರೀಸದಮೃತಾಬ್ಜಮನಾಘ್ರಾಯಿಸಿದಂ ಜಿನಚಂದ್ರನಾ ಸಹಾಯ ಸಮೇತಂ (ಶಾಂತಿಪು. ೭-೪೧). [< ಆಘ್ರಾಣಿಸು]

**ಆಚ₁** (ನಾ). ಆಚದ ಮರ; ಸಾಲವೃಕ್ಷ: ಹಿಡಿಹಿಡಿಕೆಯಾಚ ಕತ್ತರಿಮಡುವಾಗಲ್ ನೆಲ್ಲಿ ಗೋಣಿ ಕಿಱುನೆಲ್ಲಿಯ ಚಿಲ್ಲೊಡರಿಸಿದೆಲೆಯಂ ಕೋಲದ ಗಿಡುದಳಿರುಪನಾಹಮುಖಿಳ ವಿಷಮುಂ ಕಳೆಗುಂ (ಖಮುದ. ೧೬-೭೭); ಎಲವಂ ಸಂಪಗೆ ಹೊನ್ನೆ ಚೆನ್ನೆ ಕವಳಂ ಕಾರಾಚಮಾಚಂ ಪುಲಿಂಗಿಲೆರಂ (ರಾಜಶೇ. ೫-೫೭). [?]

**ಆಚ₂** (ನಾ). ಒಬ್ಬಾತನ ಹೆಸರು: ಹೊನ್ನಂಗಿಯ ಬಸದಿಯರುಂ ಆಚಂಗೆ (ಎಕ. VI, ಮೂಡಗೆ. ೧೨-೭; 1172). 'ಆಚಬ್ಬೆ', 'ಆಚಯ್ಯ' ಪರಾ. [< ಪ್ರಾ. ಆಇಚ್ಚ (< ಸಂ. ಆದಿತ್ಯ)]

**ಆಚಂದ್ರತಾರಂ** (ಅ). ಚಂದ್ರ ಮತ್ತು ನಕ್ಷತ್ರಗಳಿರುವವರೆಗೆ: ಪಾಟಿ ನಿಲೆ ನೆಗೞಿ ಬಾೞ್ವುದು ಬಾೞಿಂಬುದು ನಿಕ್ಕುವಂ ಗುಣಗ್ರಾಮಣಿಗಳ್ ಪಾೞಾಗೆ ತೆಗೞಿ ಬಾೞ್ವಾಬಾೞೀನಾಚಂದ್ರತಾರಮೋ ಮಾನಸರಾ (ಕವಿರಾ. ೩-೧೭೭); ಕಾದಂಬರಿ ಪಸರಿಸಿ ರಾಜೇಂದ್ರಚಂದ್ರಾಂಕನೊಳ್ ಸಂಗತಿವೆತ್ತಾದಂ ತ್ರಿಲೋಕೀಸಹಚರಿಯೆನೆ ತಾಂ ಸಂದುದಾಚಂದ್ರತಾರಂ (ಕಾದಂಸಂ. ೮೨೪); ಮಹೇಶಂ . . . ಶುಭಮನನುದಿನಂ ಮಾಡುಗಾಚಂದ್ರತಾರಂ (ಕೊಲ್ಹಾಶಾ. ೮-೪; 1147). [ಸಂ.]

**ಆಚಂದ್ರತಾರಕಂ** (ಅ). = ಆಚಂದ್ರತಾರಂ: ಆಚನ್ದ್ರತಾರಕಂ ಪೊಱಲ ಸಾಸಿರ್ವ್ವರ್ಗ್ಗುಂ ಸಾಲೆ ಆಚನ್ದ್ರತಾರಕಂ ಕುಪ್ಪಟೂರಾ ಸಾಸಿರ್ವ್ವರ್ಗ್ಗುಂ ಸಾಲೆ ಆಚನ್ದ್ರತಾರಕಂ ತದ ಮೂರಾಸಾಸಿರ್ವರ್ಗ್ಗುಂ ಸಾಲೆ ಆಚನ್ದ್ರತಾರಕಂಮಿಟ್ಟೆಸೆ (ಎಕ. VII, ಶಿಕಾರಿ. ೪೫-೯; 890); ಶಿವಾರ್ಚಕಂಗೀ ಮಾನಮಾಚಂದ್ರತಾರಕಮಿದೆಂದೆನುತಿರಲ್ಕೆ (ಬಸಪು. ೪೦-೪೮). [ಸಂ.]

**ಆಚಂದ್ರಸ್ಥಾಯಿ** (ಗು). ಚಂದ್ರನಿರುವವರೆಗೂ ನಿಲ್ಲತಕ್ಕ; ಸ್ಥಿರವಾದ; ಶಾಶ್ವತವಾದ: ಪವಿತ್ರಾರೋಹಣಮನಾಚಂದ್ರಸ್ಥಾಯಿಯಾಗಿ ನಡಸುತ್ತುಂ ಬರ್ಪರ್ (ಕೊಲ್ಹಾಶಾ. ೫-೫೫; 1106). [ಸಂ. ಆಚಂದ್ರಸ್ಥಾಯಿನ್]

**ಆಚಂದ್ರಾಯತ** (ನಾ). ಚಂದ್ರನಿರುವಷ್ಟು ದೀರ್ಘಕಾಲ ಇರುವಂಥದು; ಶಾಶ್ವತವಾದುದು: ಬೀಯವಾಗಲಿ ದೇಹವಾಚಂದ್ರಾಯತವೆ (ಕುವ್ಯಾಸ. ೧೪-೯೧); ಸಾಯಲಾಗದೆ ಸುಭಟರಾಚಂದ್ರಾಯತವೆತನು (ಕುವ್ಯಾಗ. ೬-೧೮). [ಸಂ.]

**ಆಚಂದ್ರಾರ್ಕಂ** (ಅ). ಚಂದ್ರನೂ ಸೂರ್ಯನೂ ಇರುವವರೆಗೆ; ಶಾಶ್ವತವಾಗಿ: ಸಾಮ್ರಾಜ್ಯಂ . . . ಎನಗಿದಾಚಂದ್ರಾರ್ಕಮೇ ದೇವ (ಆದಿಪು. ೪-೭೯); ಜೀವನಮಾಚಂದ್ರಾರ್ಕಮೆ (ಪಂರಾಮಾ. ೧೪-೭೯); ಮಱಿವೊಕ್ಕವಂ ಜಗದೊಳಾಚಂದ್ರಾರ್ಕಮಾಗಿ ಬಾಳ್ವ (ಜೈಮಿಭಾ. ೧೮-೪೩). [ಸಂ.]

**ಆಚಂದ್ರಾರ್ಕತಾರಂ** (ಅ). ಚಂದ್ರ ಸೂರ್ಯ ನಕ್ಷತ್ರಗಳಿರುವವರೆಗೆ; ಶಾಶ್ವತವಾಗಿ: ಶ್ರೀಮದಾಹವಮಲ್ಲದೇವರ ವಿಜಯ ರಾಜ್ಯಂ. . . ಆಚಂದ್ರಾರ್ಕ್ಕತಾರಂ ಸಲುತ್ತಮಿರೆ (ಸೌಇಇ. IX-i, ೭೪-೪; 981); ಆಚಂದ್ರಾರ್ಕತಾರಂ ಸುಖಸತ್ಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ (ಕಇ. ೭-೩-೨೪೩; 1062); ಶ್ರೀಮತ್ತ್ರಿಭುವನಮಲ್ಲ ದೇವರ ವಿಜಯ ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾಚಂದ್ರಾರ್ಕತಾರಂ ಸಲುತ್ತುಮಿರೆ (ಕೊಲ್ಹಾಶಾ. ೩-೭; 1079). [ಸಂ.]

**ಆಚಂದ್ರಾರ್ಕತಾರಂಬರಂ** (ಅ). ಚಂದ್ರ ಸೂರ್ಯ ನಕ್ಷತ್ರಗಳು ಇರುವಷ್ಟು ಕಾಲದವರೆಗೆ: ವಿಜಯರಾಜ್ಯಮಾಚನ್ದ್ರಾರ್ಕತಾರಂಬರಂ ಸಲುತ್ತಮಿರೆ (ಎಕ. XI, ಚಿತ್ರದು. ೭೬-೨; 937); ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಂ . . . ಆಚಂದ್ರಾರ್ಕತಾರಂಬರಂ ಸಲುತ್ತಮಿರೆ (ಕೊಲ್ಹಾಶಾ. ೪-೩; 1083); ಕಾರುಣ್ಯದಿಂದ ಧರೆಯೊಳಾಚಂದ್ರಾರ್ಕತಾರಾಂ[ರಂ]ಬರಂ ನಡೆವುತಿರಲು ಧರ್ಮಕ್ಕೆಂದು ನಂದಿಂಗೆ ಮೊದಲಾದ ಪಿರಿಯ ನೂಱೊಂದಗ್ರಹಾರಂಗಳಂ ಬಿಟ್ಟು ಕ್ಷಿತಿಯ ಪಾಲಿಸುತಿರ್ದನು (ಹಚಕಾ. ಪರಿ. ೨೩೩-೧೬). [ಆಚಂದ್ರಾರ್ಕತಾರಂ + -ಬರಂ]

**ಆಚಗಾವುಂಡ** (ನಾ). ಒಬ್ಬಾತನ ಹೆಸರು: ಶ್ರೀಮತು ಹಬ್ಬೆಯ ನಾಯಕರು ಆಚಗಾವುಂಡನ ಮಗ ತೇಜಿಯ ಚಟ್ಟಗಾವುಂಡನ ಕಯ್ಯೊಳುಂ (ಕಇ. I, ೨೫-೭೪; 1186). [ಆಚ₂ + ಗಾವುಂಡ (< ಗಾಮುಂಡ)]

**ಆಚಪಯ್ಯ** (ನಾ). ಒಬ್ಬಾತನ ಹೆಸರು: ಸಾಮಿ ಕಟ್ಟಿಯಮ್ಮನುಂ ಆಚಪಯ್ಯನುಂ ಕಾಲಂ ಕೆಟ್ಟು (ಇಅ. XII, ೨೫೭-೧೨; 951). [ಆಚ₂ + ಅಪ (< ಅಪ್ಪ₁) + ಅಯ್ಯ₁]

**ಆಚಬ್ಬೆ** (ನಾ). ಒಬ್ಬಾಕೆಯ ಹೆಸರು: ಚೊಕ್ಕಯ್ಯಂಗ್ಗಂ ಆಚಬ್ಬೆಗಂ ಪುಟ್ಟಿದಂ (ಎಕ. XII, ಶಿರಾ. ೩೫-೫; 948). [ಆಚ₂ + ಅಬ್ಬೆ₁]

**ಆಚಮ** (ನಾ). ಒಬ್ಬಾತನ ಹೆಸರು: [ಈ] × × × ಯ್ಯಗರಾಳೆ ಆಚಮಗಳ[ಱಿ]ಯಱದ ಕೊ[ಳೆ] ಎದಿಜ್ಞು (ಸೌಇಇ. XX, ೮-೨; 8ನೆಯ ಶತ). [ಆಚ₂ + ಅಮ (< ಅಮ್ಮ₁)]

**ಆಚಮನ** (ನಾ). ೧. (ಧಾರ್ಮಿಕ ಕರ್ಮಗಳ ಅಂಗವಾಗಿ, ಊಟಕ್ಕೆ ಮುಂಚೆ, ಊಟದ ತರುವಾಯ ಮುಂತಾದ ಸಮಯಗಳಲ್ಲಿ) ಆತ್ಮಶುದ್ಧಿಗೋಸ್ಕರ ಅಂಗೈಗುಳಿಯಲ್ಲಿ ಶುದ್ಧೋದಕವನ್ನು ಮಂತ್ರಪೂರ್ವಕವಾಗಿ ಕುಡಿಯುವುದು: "ಆಚಮನಂ, ಉಪಸ್ಪರ್ಶನಂ-ಈ ೨ ಅಂಗದಂಟುಬಾರಿಸುವುದು" (ಹಲಾಯು. ೬೮-೨೫೪); ಸಸಿನೆಯಾಚಮನಂಗಳಂ ಮುಟ್ಟಸಲಱಿಯದೀ ಕರ್ಮಗಳ ಸ್ವೈರಸದ ಬದ್ಧರ ನುಡಿಗಳಂ ಕೇಳುವರೆ ಭೂನಾಥಾ (ಬಸಪು. ೫೭-೫೭); ಅಧಿಕಾರಿಯು ಆಚಮನವನ್ನು ಮಾಡಿ (ಕಪಾಕುಂ. ೩೧). ೨. ಬಾಯಿ ಮುಕ್ಕುಳಿಸುವುದು. ೩. ಬಾಯಿ ಮುಕ್ಕುಳಿಸಲು ಬಳಸುವ ನೀರು. [ಸಂ.]

**ಆಚಮನಕ** (ನಾ). ೧. ಆಚಮನದ ನೀರು. ೨. ಉಗುಳುವುದಕ್ಕಾಗಿ ಇಟ್ಟಿರುವ ಪಾತ್ರೆ; ಪೀಕದಾನಿ. [ಸಂ.]

**ಆಚಮನೀಯ** (ಗು). ೧. ಆಚಮನಕ್ಕಾಗಿ ಬಳಸುವ: ಫಲ ಕಚೋರ ಕರ್ಪೂರ ಕೋಷ್ಟ ಕುಂಕುಮುಯಾಲಕ್ಕಿಯೆಂಬಾಜು ಆಚಮನೀಯ ದ್ರವ್ಯಂಗಳಂ (ವಿವೇಕ. ೧೦೫). (ನಾ). ೨. ಆಚಮನಕ್ಕಾಗಿ ಬಳಸುವ ವಸ್ತು: ಆಚಾರ್ಯರನ್ನು ಊರಬಾಗಿಲಲ್ಲಿಯೆ ಇದಿರುಗೊಂಡು ಸಾಷ್ಟಾಂಗವೆರಗಿ ಅರ್ಘ್ಯ, ಪಾದ್ಯ, ಆಚಮನೀಯಗಳನ್ನಿತ್ತು (ಶಾಂತಲಾ. ೨೧೧). [ಸಂ.]

**ಆಚಮಿಸು** (ಕ್ರಿ). ಆಚಮನ ಮಾಡು: ಪೊಸವಾವುಗೆಯಂ ಮೆಟ್ಟಿ ಕನಕ ಸ[ಂವ್ಯಾನ]ಸೂತ್ರನಾಚಮಿಸಿ ಕನಕಕಮಳಂಗಳಿಂ ಕಮಳಾಕರಬಾಂಧವಂಗರ್ಘ್ಯಮೆತ್ತಿ (ಪಂಪಭಾ. ೧೨–೧೧೮ ವ). [ಆಚಮನ + –ಇಸು₃]

**ಆಚಯ್ಯ** (ನಾ). ಒಬ್ಬಾತನ ಹೆಸರು: ಶ್ರೀಮತು ತೊಱೆಕಾರಾಟ್ಟಿಯ ಆಚಯ್ಯನ ಮಗಂ ಕೇಸವಭಟ್ಟಂ (ಎಕ. III, ಗುಂಡ್ಲುಪೇ. ೯೩–೨೦; 1049). [ಆಚ್ಚ + ಅಯ್ಯ₁]

**ಆಚರಣ** (ನಾ). ೧. ಅನುಸರಿಸುವುದು; ಆಚರಿಸುವುದು; ನಡೆಯುವುದು; ನಡೆ: ಎರಡೆ ವಲಂ ಕುಲವಧುಗಾಚರಿಸಲ್ ಪತಿಯಿಂ ಪರೋಕ್ಷದೊಳ್ ಜಿನದೀಕ್ಷಾಚರಣಂ ಮೇಣ್ ಶುಭಚರಿತದೆ ಮರಣಂ (ಅಜಿಪು. ೧–೪೬). ೨. ಅಭ್ಯಾಸ; ರೂಢಿ; ಬಳಕೆ. [ಸಂ.]

**ಆಚರಣೆ** (ನಾ). = ಆಚರಣ ೧: ಪಾನರನಱಿವುದೇ ಗರುವಿಕೆಯ ನಾಚರಣೆಯುಂ ಗಾರ್ದಭನಱಿವುದೇ (ಬಸವು. ೬೦–೪೨); ನರರಾಚರಣೆಗಳ ನಾಟಕವ ತಾನೇ ನಟಿಸಿ ತೋಱಿದನು (ಕುವ್ಯಾಉ. ೮–೧೭).
[ಸಂ. ಆಚರಣ]

**ಆಚರಣೋಕ್ತಿ** (ನಾ). ಆಚರಣೆಗೆ ಸಂಬಂಧಪಟ್ಟ ವಚನ: ಓಜೆಯುಂ ಮಱೆಯದೆ ಬುದ್ಧಿಯಂ ಮಱೆಯದೆ ಆಚರಣೋಕ್ತಿಯನುಕ್ತಿ ಮಾರ್ಗಮಂ ಮಱೆಯದೆ (ಸುಕುಮಾ. ೨–೪೪). [ಆಚರಣ + ಉಕ್ತಿ]

**ಆಚರಸ, ಆಚರ್ಸ** (ನಾ). ಒಬ್ಬಾತನ ಹೆಸರು: ಸಕಲಕಲಾಪುಂಜನುಮಪ್ಪ ಆಚರಸರ್ (ಮುಂಬರಾ. XI, ೨೭೮–೮; 1060). **ಆಚರ್ಸ**: ಆಚರ್ಸರ ಅಧಿಕಾರದಲು (ಮೈಆರಿ. ೧೯೨೫, ೪–೬; 1368).
[ಆಚ್ಚ + ಅರಸ₁]

**ಆಚರಿತ** (ನಾ). = ಆಚರಣ ೧: ಲಿಂಗಕೆ ಸಾರ್ಥರಾದವರ ಆಚರಿತಕೊಡಬಡುವನೊಲದರನ್ಯಾಚಕರಿಗತ್ತತ್ತ ನಿಲಿಸಿದ (ಬಜ್ಜಪು. ೬೭–೧೮). [ಸಂ.]

**ಆಚರಿಸು** (ಕ್ರಿ). ೧. ನಡೆಸು; ನೆರವೇರಿಸು: ಚತುರ್ವಿಧ ರಾಜವೃತ್ತಮನುದಾತ್ತಮಪ್ಪಂತಾಚರಿಸುತ್ತುಂ (ಅಜಿಪು. ೨–೪೭ ವ); ಅಭಿಲಷಿತ ಸಿದ್ಧಿಗೆಂದಾವುದೊಂದು ಸದ್ವ್ರತಮನಾಚರಿಸುತ್ತಿರ್ದಿರದನೇ ನೀವನು ಬಂಧಿಸುವುದು (ಕಾದಂಉ. ೬೨೫); ಕೋಮಲತುರಂಗಮುಂ ಸಾಧಿಸಿ ಮಹಾಕ್ರತುವನಾಚರಿಪೊಡೆ (ಜೈಮಿಭಾ. ೨–೨೬). ೨. ನಡೆ; ವರ್ತಿಸು: ವರುಷತನಕ ನಪುಂಸಕದಲಾಚರಿಸಬಲ್ಲೆನೆ (ಕುವ್ಯಾಆ. ೯–೪೨); ಧರ್ಮವೇತಜದೆಂದು ಭೋಗಕ್ಕೆ ಮರುಳಾಗಿ ಕರ್ಮಿಗಳಾಚರಿಸುವರು (ಭರಚ. ೨–೧೦). ೩. ತಿನ್ನು; ಉಣ್ಣು: ಇನ್ನಿನಗೆ ಜಾತಿಗೆ ತಕ್ಕಂತಾಹಾರಮನಾಚರಿಸೆ ದೋಷಮಿಲ್ಲಂ (ಕಾದಂಉ. ೭೫೭). ೪. ಮಾಡು; ಉಂಟುಮಾಡು: ಪೊಲ್ಲದನೇನನಾಚರಿಸಿದಳ್ ನಿನ್ನೊಳ್ಳಹಾಶ್ವೇತೆ (ಕಾದಂಪೂ. ೯೦೦); ಪತಿಸೇವೆಯೊಳಂತು ಪಸಿದ ಪಾರ್ವನ ಮಱೆದತಿವಿಳಂಬವನಾಚರಿಸೆ ಸತಿಯರ ಧರ್ಮದ ಸಾರವನಱಿಯದೆ ಖತಿಗೊಂಡು ಮುನಿಗಳಪಿದನು (ಹದಿಬ. ೨–೩೯). ೫. ಓಡಾಡು; ಚಲಿಸು: ಮಬ್ಬಿನೊಳಗಾಚರಿಸಿ [ಪಾಠಾಂ. ಚಲಿಸಿ] ಕೆಡೆವರಿಂ ಮಡಿವರಿಂ ಬೆಬ್ಬಳಿಸಿ ಧರೆಗೆ ಬೀಳ್ವಳ್ಳರಿಂ ತೊಳಲ್ವರಿಂ (ಚಬಪು. ೪೬–೨೦). ೬. ಹೆದರು; ಭಯಪಡು (?): ಮುಳುಗಿಸಿದುದಾ ಖಳನ ಮೈಗತ್ತಲೆ ದಿವಾಕರಬಿಂಬವನು ... ಕುಲಿಶದಂಷ್ಟ್ರದ ವಿಕೃತವಕ್ತ್ರದ ವಿಲಯಭೈರವನಂತೆ ಮುಂದಕೆ ಸುಳಿಯಲಾಚರಿಸಿದಳು ಕಂಡು ಕುಮಾರಿ ಕುಂಭಿನಿಯ (ತೊರರಾ. ೩–೧–೮). [ಆಚರಣ + –ಇಸು₃]

**ಆಚರ್ಸ** 'ಆಚರಸ' ನೋ.

**ಆಚಲದೇವಿ** (ನಾ). ಒಬ್ಬಾಕೆಯ ಹೆಸರು: ಶ್ರೀಮತು ಪಿರಿಯ ಹೆಗ್ಗಡಿತಿಯಾಚಲದೇವಿಯಿಯನ್ನಯವೆಂತೆಂದೊಡೆ (ಎಕ. II, ೩೨೭–೪೫; 1181). [ಆಚಲ₀ + ದೇವಿ]

**ಆಚಲು** (ನಾ). ಒಂದು ಜಾತಿಯ ಗಿಡ (ಮೈಔಗಿ. ೧೨–೨೧೨). [?]

**ಆಚಲೆ** (ನಾ). = ಆಚಲದೇವಿ: ಗೌರಿ ತಪಂಗಳಂ ನೆಗಳ್ದುತಾಂ ನೆರೆದಳ್ಗಡ ಚಂದ್ರಮೌಳಿಯೊಳ್ ... ಆಚಲೆವೋಲ್ ಸೊಬಗಿಂಗೆ ನೋನ್ತರಾರ್ (ಎಕ. II, ೩೨೭–೬೨; 1181). [?]

**ಆಚಾಂತ** (ಗು). ಆಚಮನ ಮಾಡಿದ: ಆರೋಗಿಸಿದಿಂಬಱಿಯಿಂ ಆಚಾಂತಚಂದ್ರಕಾಂತದ್ರವ ಸುರಭಿಸಲಿಲನುಂ ಘನಸಾರ ಚಂದನಸಾರ ಪ್ರಮೃಷ್ಟಕರತಳನುಮಂಗೀಕೃತ ಕಸ್ತೂರಿಕಾ ವಿಲೇಪನನುಂ ... ಆಗಿ (ಆದಿಪು. ೧೧–೨೬ ವ). [ಸಂ.]

**ಆಚಾಮ** (ನಾ). ೧. = ಆಚಮನ. ೨. ಅನ್ನವನ್ನು ಬೇಯಿಸಿ ಬಸಿದ ಗಂಜಿ; ಅನ್ನದಮೇಲಿನ ಗಂಜಿ. [ಸಂ.]

**ಆಚಾಮ್ಲ** (ನಾ). ೧. [ಜೈನ] ಒಣಗಿದ ಅನ್ನ ಮುಂತಾದ ಆಹಾರ ಪದಾರ್ಥಗಳನ್ನು ನೀರಿನಲ್ಲಿ ನೆನಸಿ ತಿನ್ನುವುದು. ೨. ಒಂದು ಉಪವಾಸವ್ರತ: ಧರ್ಮವೃಷ್ಟಿಯನು ಕರೆವುತಾಚಾಮ್ಲಚಾಂದ್ರಾಯಣ ಧರ್ಮದಿ ವರಚಕ್ರ ಮುಕ್ತಾವಳಿಯ (ಜ್ಞಾನಚ. ೨೪–೬೪). [ಸಂ.]

**ಆಚಾಮ್ಲವರ್ಧನ** (ನಾ). [ಜೈನ] ಒಂದು ಬಗೆಯ ಉಪವಾಸ ವ್ರತ: ಆಚಾಮ್ಲವರ್ಧನಮೆಂಬ ನೋಂಪಿಯಂ ಪನ್ನೆರಡು ವರ್ಷಂಬರಂ ನೋಂತು ಸಮಾಧಿಮರಣದಿಂ ಮುಡಿಪೆ (ವಡ್ಡಾರಾ. ೬೬–೧೭); ಆಚಾಮ್ಲವರ್ಧನಮುಂ ತಪ್ಪದೆ ನೋಂತು (ಶಾಂತಿಪು. ೯–೮೪); ಆಚಾಮ್ಲವರ್ಧನವೆಂಬ ನೋಂಪಿಯಂ ನೋನಲುದ್ಯುಕ್ತೆಯಾದಳ್ (ಸುಕುಮಾ. ೯–೧೦ ವ). [ಆಚಾಮ್ಲ + ವರ್ಧನ]

**ಆಚಾಮ್ಲವರ್ಧನತಪ** (ನಾ). = ಆಚಾಮ್ಲವರ್ಧನ: ಅಭಿನಂದನ ಗುರುಗಳಂ ಸಾರ್ದು ಶಾಶ್ವತಸೌಖ್ಯವರ್ಧನಕರಮಪ್ಪಾಚಾಮ್ಲವರ್ಧನತಪದೊಳ್ ನೆಗೞ್ದು ಪರಮಪದವನೆಯ್ದಿದಂ (ಆದಿಪು. ೩–೬೫ ವ); ಆಚಾಮ್ಲವರ್ಧನತಪದಿಂ ನೆಗೞ್ದು ಜಯವರ್ಮಂ ಪರಮಪದಮನ್ಯೆದಿದೊಂ (ಚಾವುಂಪು. ೩೭೩–೨೩). [ಆಚಾಮ್ಲವರ್ಧನ + ತಪ]

**ಆಚಾರ** (ನಾ). ೧. (ವ್ಯಕ್ತಿಯ ಧಾರ್ಮಿಕಜೀವನದಲ್ಲಿ ಅನುಸರಿಸಬೇಕಾದ ಮತ ಸಂಬಂಧವಾದ) ಕಟ್ಟುಪಾಡು; ನಿಯಮ; ಸಂಪ್ರದಾಯ: ಭವನ ಭಕ್ತಿಯೆ ಸಂದ ಕಾಹು ನೋಡಾ ಪುರಕೆ ಗುಣ್ಪಱಿಯಬಾರದಾಚಾರದಗಳಾ ಪುರಕೆ (ತಿರುರ. ೨–೫). ೨. ಒಳ್ಳೆಯ ನಡತೆ: ಸತ್ಯವ ನುಡಿವುದೆ ದೇವಲೋಕ; ಮಿಥ್ಯವ ನುಡಿವುದೆ ಮರ್ತ್ಯಲೋಕ! ಆಚಾರವೇ ಸ್ವರ್ಗ, ಅನಾಚಾರವೇ ನರಕ (ಬಸವ. ೨೪೯); ಲಿಂಗಕ್ಕೆ ಆಚಾರವೇ ಚೆಲುವು (ಅಖಂಡೇ. ೨೯೦–೫೪); ಹಬ್ಬಹುಣ್ಣಿಮೆಗಳಲ್ಲಿ ... ನಡೆಸಬೇಕಾದ ಕೆಲವು ಆಚರಣೆಗಳನ್ನೂ ಆಚಾರವ್ಯವಹಾರಗಳನ್ನೂ ಮಕ್ಕಳು ಕಲಿಯಬೇಕಾಯಿತು (ಶಿಕ್ಷದ. ೩೫).

ಆಚಾರವಿಚಾರ = ಒಂದು ಜನಾಂಗ ಅಥವಾ ಪಂಗಡಕ್ಕೆ ಸಂಪ್ರದಾಯವಾಗಿ ಬೆಳೆದುಬಂದಿರುವ ಆಚರಣೆಯ ಪದ್ಧತಿ ಮತ್ತು ವಿಚಾರಗಳು: ಆತನು ಪರದೇಶದಲ್ಲಿ ನೆಲಸಿದ್ದರೂ ತನ್ನ ತಾಯ್ನಾಡಿನ ಆಚಾರವಿಚಾರಗಳನ್ನು ಮರೆತಿಲ್ಲ (ರೂಢಿ). [ಸಂ.]

**ಆಚಾರಕಲಿ** (ನಾ). ಆಚಾರವನ್ನು ಅನುಸರಿಸುವುದರಲ್ಲಿ ಗಟ್ಟಿಗ; ಸಂಪ್ರದಾಯದ ಅನುಷ್ಠಾನದಲ್ಲಿ ಶೂರ: ಆಚಾರಕಲಿಗಳಪ್ಪ ಶ್ರೀಮುದಯ್ಯೂರ್ವರ್ ಸ್ವಾಮಿಗಳುಂ (ಸೌಇಇ. XI–ii, ೧೪೮–೮; 1099).
[ಆಚಾರ + ಕಲಿ₂]

**ಆಚಾರಗಾಣಿಕೆ** (ನಾ). ಅಕ್ಕಸಾಲಿ, ಬಡಗಿ, ಕಮ್ಮಾರ ಮುಂತಾದ ಕಸಬಿನವರು ಸಲ್ಲಿಸುವ ತೆರಿಗೆ: ಉಪ್ಪಿನ ಮೋಳೆ ಆಚಾರಗಾಣಿಕೆ ಇವೇ ಮೊದಲಾದುವುಗಳು ಸೇರಿದ್ದವು (ಚಿತ್ರಪಾ. ೪ ಉಪೋ.).
[ಆಚಾರ + ಕಾಣಿಕೆ]

**ಆಚಾರಗೈಸು** (ಕ್ರಿ). ಕಟ್ಟಳೆಮಾಡಿಸು ; ನಿಯಮವನ್ನು ಮಾಡಿಸು : ಲಿಂಗವನು ಬಿಟ್ಟರ ಮೋರೆ ನೋಡದ ರೀತಿಯೊಳು ಆಚಾರಗೈಸಿದ ವೀರ ಶೈವರಿಗೆಲ್ಲ ಬಸವಣ್ಣ (ಬಿಜ್ಜಪು. ೪೯–೫೫). [ಆಚಾರ + ಗೈ (< ಕೆಯ್$_1$) + –ಸು$_2$]

**ಆಚಾರತ್ರಯ** (ನಾ). [ವೀಶೈ] ಮೂರು ಬಗೆಯ ಆಚಾರಗಳು : "ಆಚಾರತ್ರಯ —ಸದಾಚಾರ ನಿಯತಾಚಾರ ಗಣಾಚಾರವೆಂದು ಆಚಾರ ಲಿಂಗ ತ್ರಿವಿಧವು" (ವಿವೇಕ. ೧೨೨). 'ಪಂಚಾಚಾರ' ಪರಾ. [ಆಚಾರ + ತ್ರಯ]

**ಆಚಾರದೂರ** (ನಾ). ಒಳ್ಳೆಯ ಕಟ್ಟುಪಾಡುಗಳನ್ನು ಮೀರಿದವನು ; ನಡತೆಗೆಟ್ಟವನು ; ದುರಾಚಾರಿ : ಅಸ್ಥಿರವಚನನಾಚಾರದೂರನು ಪಾತಕಿಯು ಖಳನು (ಬಸಪು. ೪–೫೫). [ಆಚಾರ + ದೂರ]

**ಆಚಾರದ್ರೋಹ** (ನಾ). [ವೀಶೈ] ಬಹಳ ಕಾಲದಿಂದ ಬಂದಿರುವ ಆಚಾರಕ್ಕೆ ವಿರೋಧವಾಗಿ ನಡೆಯುವುದು : ಗುರುದ್ರೋಹ, ಲಿಂಗ ದ್ರೋಹ, ಜಂಗಮದ್ರೋಹ, ಆಚಾರದ್ರೋಹ, ಪ್ರಸಾದದ್ರೋಹ ಇಂತೀ ಪಂಚಮಹಾಪಾತಕಂಗಳು ಭಕ್ತಂಗಲ್ಲದೆ ಭವಿಗೆಲ್ಲಿಯದೊ (ಬಸವ. ೭೬೭). [ಆಚಾರ + ದ್ರೋಹ]

**ಆಚಾರಬಾಬು** (ನಾ). ಒಂದು ಬಗೆಯ ಧಾರ್ಮಿಕ ನಿಬಂಧನೆ ; ಧರ್ಮಶಾಸ್ತ್ರದ ನಿಯಮ : ಆಚಾರಬಾಬು ಶಿವಾಯಿಬಾಬುಗಳೆಂಬ ಧಾರ್ಮಿಕ ನಿಬಂಧನೆ ಪ್ರಕಾರ ಕಲಹಗಳ (ವ್ಯಾಜ್ಯ) ನಿರ್ಣಯಮಾಡಿ (ಗುರುದ. ೧೯). [ಆಚಾರ + ಬಾಬು]

**ಆಚಾರಭ್ರಷ್ಟ** (ಗು). ನಡತೆಗೆಟ್ಟ ; ಆಚಾರವನ್ನು ಬಿಟ್ಟ. [ಆಚಾರ + ಭ್ರಷ್ಟ]

**ಆಚಾರಭ್ರಷ್ಟತೆ** (ನಾ). ಆಚಾರವನ್ನು ಬಿಟ್ಟು ನಡೆಯುವುದು ; ನಡತೆಗೆಟ್ಟಿರುವುದು. [ಸಂ. ಆಚಾರಭ್ರಷ್ಟತಾ]

**ಆಚಾರಲಾಜ** (ನಾ). (ಶುಭಕಾರ್ಯಗಳಲ್ಲಿ) ಎರಚುವ ಬತ್ತದ ಅರಳು : ಮಾನಿನಿಯರಾಚಾರಲಾಜಗಳ ಸೂಸುತಿರೆ (ವೆಂಕಾರಾ. ೨–೭–೫೮). [ಆಚಾರ + ಲಾಜ]

**ಆಚಾರಲಿಂಗ** (ನಾ). [ವೀಶೈ] ೧. ಆರು ಲಿಂಗಗಳಲ್ಲಿ ಒಂದು : "ಶ್ರದ್ಧಾಭಕ್ತಿಯುಳ್ಳ ಭಕ್ತನ ಕುರಿತು ಬಿಂದುವೆ ಆಚಾರಲಿಂಗವೆನಿಸಿದುದು" (ಮನೋವಿ. ೨–೪೨ ವ್ಯಾಖ್ಯಾ). 'ಗುರುಲಿಂಗ' ಪರಾ. ೨. ಇಷ್ಟಲಿಂಗ : "ಕರ್ಮಾತ್ಮಕ, ಸಕಲ ತತ್ತ್ವಾಶ್ರಯ, ನಿವೃತ್ತಿ ಮಾರ್ಗೋನ್ಮುಖ, ಕ್ರಿಯಾಶಕ್ತಿಯುಕ್ತವೂ ಆಗಿ, ಚಿತ್ತಗಮ್ಯವಾದುದೇ ಆಚಾರಲಿಂಗವು" (ಶಿವಾಸೂ. ೪೨–೩೩) ; ಆಚಾರಲಿಂಗವಿಡಿದು ಗುರುಲಿಂಗವ ಕಾಣಬೇಕು (ಅವಚಂ. ೧೬೮–೭೫೭) ; ಆಚಾರಲಿಂಗ ಪ್ರಸಾದಿಯಾದರೆ ಜಿಹ್ವೆಲಂಪಟ ವಿಲ್ಲದಿರಬೇಕು ಆಚಾರಲಿಂಗ ತೃಪ್ತನಾದಡೆ ಭಕ್ತಕಾಯ ಮಮಕಾಯ ನಾಗಿರಬೇಕು (ಅದವ. ೧೯೮–೩೫೧). [ಆಚಾರ + ಲಿಂಗ]

**ಆಚಾರವಂಚಕ** (ನಾ). ಆಚಾರಕ್ಕೆ ತಪ್ಪಿ ನಡೆಯುವವನು : ಆಚಾರ ವಂಚಕರ ಎನಗೆ ತೋಜದಿರು (ಬಸವ. ೭೬೨). [ಆಚಾರ + ವಂಚಕ]

**ಆಚಾರವಂತ** (ನಾ). ಆಚಾರವುಳ್ಳವನು ; ನಿಷ್ಠಾವಂತ : ನಾರಿ ವಾರಿಯುನೆಜಿಯೆ ತೊಳೆದಾಚಾರವಂತನು ಸೆಟ್ಟಿ ತತ್ಚರಣಾರವಿಂ ದಾಂಬುಗಳನೀಂಟಿ (ಬಸಪು. ೨೪–೨೨) ; ಜೀವಮಾನದ ಕಡೆಯವರೆಗೂ ಬಹಳ ಆಚಾರವಂತನಾಗಿದ್ದನು (ಸಸ್ಯಕ. ೩೧). [ಸಂ. ಆಚಾರವತ್]

**ಆಚಾರವತಿ** (ನಾ). ಆಚಾರವನ್ನುಳ್ಳವಳು ; ನಿಷ್ಠಾವಂತೆ : ಸುಖಮ ನೆಂತುಂ ಬಯಸುವೆಯಪ್ಪೊಡಾಚಾರವತಿಯಾದಂದಾರುಂ ಪರಿಭವಿಸು ವರುಂ ನರಕದುಃಖಭಾಗಿಗಳಪ್ಪರ್ (ಕಗವಿ. ೪೩–೧೧ ಚಾವುಂಪು). [ಸಂ. ಆಚಾರವತೀ]

**ಆಚಾರಶಾಸ್ತ್ರ** (ನಾ). ಒಳ್ಳೆಯ ನಡೆನುಡಿಗಳ ವಿಚಾರವನ್ನು ತಿಳಿಸುವ ಶಾಸ್ತ್ರ. [ಆಚಾರ + ಶಾಸ್ತ್ರ]

**ಆಚಾರಶೀಲ** (ನಾ). ೧. ಆಚಾರವನ್ನು ತಪ್ಪದೆ ಅನುಸರಿಸುವ ಸ್ವಭಾವದವನು ; ಆಚಾರವಂತ. ೨. ಆಚಾರಯುಕ್ತವಾದ ಚಾರಿತ್ರ : ಆ ಸ್ತ್ರೀರತ್ನಮಾಚಾರಶೀಲಸರಃಪದ್ಮಿನಿ ಮಲ್ಲಿನಾಥಜಿನನಂ ಪೆತ್ತಳ್ ಜಗನ್ನಾಥನಂ (ಮಲ್ಲಿಪು. ೧೧–೧೩೬). [ಆಚಾರ + ಶೀಲ]

**ಆಚಾರಾಂಗ** (ನಾ). [ಜೈನ] ಜೈನಾಗಮದ ದ್ವಾದಶಾಂಗ ಗ್ರಂಥ ಗಳಲ್ಲಿ ಒಂದು : ಈ ವೇದಗಳಿಗೆ ಆಚಾರಾಂಗ, ಸೂತ್ರಕೃತಾಂಗ . . . ದೃಷ್ಟಿವಾದಾಂಗಗಳೆಂಬ ಹನ್ನೆರಡು ಅಂಗಗಳಿವೆ (ಭಾರದ. ೧೭೯). [ಆಚಾರ + ಅಂಗ$_2$]

**ಆಚಾರಾಧಿಕ್ರಮ** (ನಾ). ಅನುಸರಿಸುವುದು ; ಆಚರಣೆ : "ಆಚಾರಾಧಿ ಕ್ರಮಃ ಕ್ರಿಯಾ – ಈ ೨ ನೆಗಟ್ಟಿ" (ಹಲಾಯು. ೧೨೯–೯೮). [ಆಚಾರ + ಅಧಿಕ್ರಮ]

**ಆಚಾರಿ** (ನಾ). ೧. ಆಚಾರವುಳ್ಳವನು : ಭಕ್ತಿಯುಕ್ತಾಚಾರಿಗೀಯದೆ ಮತ್ಸುತೆಯನಿನ್ನಾರಿಗೀವೆನು (ಬಸಪು. ೪–೧). ೨. ಕಮ್ಮಾರ, ಬಡಗಿ, ಅಕ್ಕಸಾಲಿಗ ಮತ್ತು ಶಿಲ್ಪಿ ಮುಂತಾದ ಕೆಲಸಗಾರರ ಕುಲಕ್ಕೆ ಸೇರಿದವನು : ಕೂನಾಚಾರಿ ಲಿಖಿತಂ (ಮೈಆರಿ. ೧೯೩೬, ೫೩–೩೫ ; 550) ; ಪಲ್ಲವಾಚಾರಿ ಲಿಖಿತಂ (ಎಕ II, ೨೧–೫ ; 750). [ಸಂ. ಆಚಾರಿನ್]

**ಆಚಾರಿಗ** (ನಾ). = ಆಚಾರಿ ೨ : ಶ್ರೀಮತ್ ಕಮ್ಮಜಚನ್ದ ಆಚಾರಿಗ (ಎಕ. II, ೪೩೦ ; 1000). [ಆಚಾರ + –ಇಗ]

**ಆಚಾರಿಯ, ಆಚಾರ್ಜ್ಯ** (ನಾ). = ಆಚಾರ್ಯ ೧ : ದುರ್ವ್ಯಸನ ಲಂಪಟರಿಗಾಚಾರಿಯರು ಖಳರಿಗೆ ನಿಮ್ಮೊಳುಪದೇಶ (ಕುವ್ಯಾಕ. ೯–೨೨) ; ತಪ್ಪದಾಚಾರಿಯನ ನುಡಿ (ಕುವ್ಯಾಗ. ೯–೧೨) ; ವಾದಿಗಳಾಚಾರಿಯನಾಗಿ ಹರನೊಳು ಕಾದಿ ಬೂದಿಯನೆಯ್ದಿದೆಯಾ (ಮೋಹತ. ೮–೨೦). ಆಚಾರ್ಜ್ಯ : ಆಬ್ಬಮ್ಮವೊಂಗಂ ಕುಡಲಪ್ಪೊಂಗಂ ಒಬ್ಬರ್ನೊ ಆಚಾರ್ಜ್ಯನ್ (ಎಇ. XXIV, ೨೬–೮ ; 885). [< ಸಂ. ಆಚಾರ್ಯ]

**ಆಚಾರ್ಜ್ಯ** 'ಆಚಾರಿಯ' ನೋ.

**ಆಚಾರ್ಜ್ಯಪುರುಷ** (ನಾ). = ಆಚಾರ್ಯಪುರುಷ : ಆಬ್ಬಮೆಚ್ಚಿ ನಾಳ್ಗಣ್ಡನ್ ಆಚಾರ್ಜ್ಯಪುರುಷ ಇಜಿದು ಬಸಮಜಿಯದೆ ಬೀಟ್ಟೊರಸ್ ತೆಜನ ಮೆಚ್ಚದೊಂ (ಎಇ. XXIV, ೨೬–೧೦ ; 885). [ಆಚಾರ್ಜ್ಯ (< ಆಚಾರಿಯ) + ಪುರುಷ]

**ಆಚಾರ್ಯ** (ನಾ). ೧. ಗುರು : ಓಲಗಿಸಲಾ ಮುನಿಗಳೆಲ್ಲಕೆ ಮೇಲೆನಿಪ ಗುರುವೊಬ್ಬನಾಭೂಪಾಲಕಂಗಾಚಾರ್ಯನಾಗಿ ಜಿನಪ್ರಬುದ್ಧಿಯಲಿ (ಬಸಪು. ೫೧–೧). ೨. ಪುರೋಹಿತ. ೩. ವಿದ್ವಾಂಸರು ಮತಪ್ರವರ್ತಕರು ಮೊದಲಾದವರ ಹೆಸರಿನ ಕೊನೆಯಲ್ಲಿ ಗೌರವ ಸೂಚಕವಾಗಿ ಸೇರಿಸುವ ಶಬ್ದ : ಉದಾ— ಪೂಜ್ಯಪಾದಾಚಾರ್ಯ, ಮಧ್ವಾ ಚಾರ್ಯ, ರಾಮಾನುಜಾಚಾರ್ಯ, ಶಂಕರಾಚಾರ್ಯ. ೪. [ಜೈನ] ಪಂಚಪರಮೇಷ್ಠಿಗಳಲ್ಲಿ ಒಬ್ಬ : ಕಾರ್ಯಮೆಮಗಿದುವೆ ಶಿವಪದ ಪರ್ಯಂತಂಬರಮುಮೋಘಮುದ್ಧರಿಸುಗೆ ತಾತ್ಪರ್ಯದಿನರ್ಹತ್ಸಿದ್ಧಾ ಚಾರ್ಯೋಪಾಧ್ಯಾಯ ಸರ್ವಸಾಧುಗಳೆಮ್ಮಂ (ಆದಿಪು. ೧–೬); ತಪದಿಂ ಸ್ವಾಧ್ಯಾಯದಿಂ ಪರ್ಯರಪ್ಪಾಚಾರ್ಯರ್ ನಮಗೀವರಕ್ಕೆ ದಯೆಯಿಂದಾ ಚಾರ್ಯಸಂಪತ್ತಿಯಂ (ಮಲ್ಲಿಪು. ೧–೩). [ಸಂ.]

**ಆಚಾರ್ಯತೆ** (ನಾ). ಆಚಾರ್ಯನಾಗಿರುವಿಕೆ : ಭಿಲ್ಲರಿಗೆ ವಿಪ್ರರಾಚಾ ರ್ಯತೆಯ ಸಮಾಜವೆ, ಸಂಪ್ರದಾಯವೆ ನಿಷೇಧಿಸುತ್ತಿರಲಾ ಸಮಾಜಾಂಗ ವಾದ ನಾನುಲ್ಲಂಘಿಸಲೆ ? (ಹೆಬ್ಬೆರ. ೧೧–೧೭). [ಸಂ. ಆಚಾರ್ಯತಾ]

**ಆಚಾರ್ಯನಿಷ್ಠೆ** (ನಾ). [ವಿಶಿಷ್ಟಾ] ತಾನು ಪಶು ಪುತ್ರಾದಿಗಳಂತೆ ತನ್ನ ಆಚಾರ್ಯನಿಗೆ ಸೇರಿದವನು ಎಂಬ ಭಾವ: ಈ ಪ್ರವೃತ್ತಿ ಸ್ವನಿಷ್ಠಾ, ಉಕ್ತಿನಿಷ್ಠಾ, ಆಚಾರ್ಯನಿಷ್ಠಾ ಎಂದು ಮೂರು ಪ್ರಕಾರ. ಹಿಂದೆ ಹೇಳಿದ ಅನುಸಂಧಾನದಲ್ಲಿ ಪಶುಪುತ್ರಾದಿಗಳಂತೆ ಶಿಷ್ಯನು ಆತ್ಮೀಯನಾಗಿ ಸೇರಿರುವುದೇ ಆಚಾರ್ಯನಿಷ್ಠೆ (ಹಿಂದಸಾ. ೨೬೨). [ಆಚಾರ್ಯ + ನಿಷ್ಠೆ]

**ಆಚಾರ್ಯಪುರುಷ** (ನಾ). ಪೂಜ್ಯನಾದ ವ್ಯಕ್ತಿ; ಯಾವುದಾದರೂ ಒಂದು ಪದ್ಧತಿ ಅಥವಾ ಸಂಪ್ರದಾಯಕ್ಕೆ ಮೂಲಪುರುಷ; ಆದ್ಯ ಪ್ರವರ್ತಕ: ಬಿ. ಎಂ. ಶ್ರೀಕಂಠಯ್ಯನವರು ಹೊಸಗನ್ನಡ ಸಾಹಿತ್ಯಕ್ಕೆ ಆಚಾರ್ಯಪುರುಷರಂತಿದ್ದಾರೆ (ರೂಢಿ). [ಆಚಾರ್ಯ + ಪುರುಷ]

**ಆಚಾರ್ಯಷಟ್ಕರ್ಮ** (ನಾ). [ಜೈನ] ಆಚಾರ್ಯರೂ ಶ್ರಾವಕರೂ ಅನುಸರಿಸುವ ಆರು ಕರ್ಮಗಳು: ಇಜ್ಯೆಯುಂ ವಾರ್ತೆಯುಂ ದತ್ತಿಯುಂ ಸ್ವಾಧ್ಯಾಯಮುಂ ಸಂಯಮಮುಂ ತಪಮುಮೆಂಬೀ ಆಚಾರ್ಯ ಷಟ್ಕರ್ಮಂಗಳುಂ ಶ್ರಾವಕಜನಕ್ಕೆ ಕುಲಧರ್ಮಂಗಳ್ (ಚಾವುಂಪು. ೨೨೮). [ಆಚಾರ್ಯ + ಷಟ್ಕರ್ಮ]

**ಆಚಾರ್ಯಾಣಿ** (ನಾ). ಆಚಾರ್ಯನ ಪತ್ನಿ: ಉಪಾಧ್ಯಾಯ ಪತ್ನೀ ಎಂಬ ಅರ್ಥದಲ್ಲಿ ಉಪಾಧ್ಯಾಯಿನೀ ಆಚಾರ್ಯಾಣೀ ಎಂದು ವ್ಯವಹಾರ (ಹಿಂದಸಾ. ೧೫೯). [ಸಂ. ಆಚಾರ್ಯಾಣೀ]

**ಆಚಾರ್ಯಾನಿ** (ನಾ). = ಆಚಾರ್ಯಾಣಿ (ಕ). [ಸಂ. ಆಚಾರ್ಯಾನೀ]

**ಆಚಾರ್ಯಾತಿಶಯ** (ನಾ). ಶ್ರೇಷ್ಠನಾದ ಆಚಾರ್ಯ: ಈತ ಸಚರಾಚರದ ಗುರು ವಿಖ್ಯಾತ ಋತ್ವಿಜನೀತನಾಚಾರ್ಯಾತಿಶಯನೀತನು ಮಹಾಪ್ರಿಯನೀತ ನೃಪನೀತ (ಕುವ್ಯಾಸ. ೮-೫೨). [ಆಚಾರ್ಯ + ಅತಿಶಯ]

**ಆಚಾರ್ಯೆ** (ನಾ). ಆಚಾರ್ಯತ್ವವನ್ನು ವಹಿಸಿದ ಹೆಂಗಸು; ಉಪದೇಶಕಳು; ಉಪಾಧ್ಯಾಯಿನಿ (ಕ). [ಸಂ. ಆಚಾರ್ಯಾ]

**ಆಚಿತ** (ಗು). ೧. ಕೂಡಿಸಲ್ಪಟ್ಟ; ಶೇಖರಿಸಿದ. (ನಾ). ೨. ಒಂದು ಗಾಡಿ ತುಂಬುವಷ್ಟು; ಹತ್ತು ಭಾರಗಳ ತೂಕ. [ಸಂ.]

**ಆಚಿಭಟ್ಟ** (ನಾ). ಒಬ್ಬಾತನ ಹೆಸರು: ಆಚಿಭಟ್ಟೋ ಭರದ್ವಾಜಗೋತ್ರಜೋ ಯಾಜುಷುಸುಧೀ (ಎಕ. XIV, ನಾಗಮಂ. ೧೩೮-೨೩; 1109). [ಆಚಿ$_0$ + ಭಟ್ಟ]

**ಆಚಿಮಯ್ಯ** (ನಾ). ಒಬ್ಬಾತನ ಹೆಸರು: ನಾರಣದೇವನುಂ ಮುದಯನಾಯಕನುಂ ಆಚಿಮಯ್ಯನು (ಕಇ. IV, ೩೪-೨೩; 1109). [ಆಚಿಮ$_0$ + ಅಯ್ಯ$_1$]

**ಆಚಿಯಕ್ಕ** (ನಾ). ಒಬ್ಬಾಕೆಯ ಹೆಸರು: ಚಂದ್ರಮೌಳಿ ವಧೂಟೀ ಶ್ರೀ ಆಚಿಯಕ್ಕಂ ಜಗಜ್ಜನಸಂಸ್ತುತ್ಯೆ (ಎಕ. II, ೩೨೭-೪೪; 1181). [ಆಚಿ$_0$ + ಅಕ್ಕ$_1$]

**ಆಚು** (ನಾ). (ಉಕ) ಅವಶ್ಯಕತೆ; ಅಗತ್ಯ; ಸಮಯ; ಕಷ್ಟಕಾಲ; ದರದು: ತಿಗುರಿ ತಿರುಗಿದರೆ ನಿಲ್ಲಿಸುವ ಆಚು ಕುಂಬಾರನದು (ರಕ್ತಧ್ವ. ೨೫೭); ನಿಮ್ಮ ಧಣಿಯರಿಗೆ ನನ್ನ ಆಚನ್ನಷ್ಟು ತಿಳಿಸಿಹೇಳು (ಜನನಾ. ೫೭); ನಮ್ಮ ಆಚಿನಾಗ ನಿಮ್ಮಹಾಂಗ ನೆರವಿಗೆ ಬರೂಮಂದಿ ಕಡಿಮಿಾರಿ (ತಿಡುಗು. ೫೧); ಅಂಗಾಲಿಗೆ ಹೇಸಿಗೆ ಇಲ್ಲ ಆಚಿದ್ದವರಿಗೆ ನಾಚಿಕೆ ಇಲ್ಲ (ಗಾದೆ). [← ಮರಾ. ಹಿಂ. ಆಚ್]

**ಆಚುಗಿ** (ನಾ). ಒಬ್ಬಾತನ ಹೆಸರು: ಅನುಪಮವೈರಿ ಮಣ್ಡಳಿಕನಾಚುಗಿ ತತ್ಸಹಜಾತರಪ್ಪ ನಾಕನೃಪ (ಸೌಇಇ. XV, ೧೩೪-೧೯; 1178). [?]

**ಆಚುಪೇಚು** (ನಾ). ತೊಡಕು; ತೊಂದರೆ; ಅಡ್ಡಿ; ಆತಂಕ: ನಿಮುಗೆ ವ್ಯವಹಾರದ ಆಚುಪೇಚು ಗೊತ್ತಿಲ್ಲ (ಎತ್ತಿಕೈ. ೭೬). [ಆಚು + ಪೇಚು]

**ಆಚೆ** (ಅ). ೧. ಅತ್ತಕಡೆ; ಆಕಡೆ: ಆ ಮರದ ತೆಪ್ಪದಲ್ಲಿ ಧರೆಯವರು ಹೋಗಿ ಆಚೆಯ ಧರೆಯ ಬೆವಹಾರವ ತಂದು (ಮೋಳಿಮಾ. ೪೮); ನೆರೆದ ದೈವದ ಹಿಂದನಿರದೆಯಾಚೆಗೆ ನೂಂಕಿ (ಸಾಸಂಚ. ೨-೨೧೧); ತೆಗೆದು ದಾಚೆಯಲವರ ಬಲ ಜಗದಗಲದುಬ್ಬಿನ ಬೊಬ್ಬೆಯಲಿ (ಕುವ್ಯಾಕ. ೧-೭); ವಾದ್ಯಗೀತಾಮೃತಲಹರಿ ಲಳಿ ಮಸಗಿತಾಚೆಯಲರಸು ಹಂತಿಯಲಿ (ತೊರರಾ. ೧-೭-೫೨); ಹೋಗಿಬಾರ್ಯೆ ಎಂದಾಚೆಗೆಳೆದರೂ ತಲೆಬಾಗಿ ನಿಂತೂ ಅಲ್ಲಿ ಮೌನವಾಗಿ ಓಗರಕೆ ಮನೆಮನೆಯ ತಪ್ಪದೆ ತಿರುಗುವ ಜೋಗಿಯ (ಪುರಂದ. ೧-೬೪-೩); ಪಾಡಜಾಡೋಲಗಗೊಟ್ಟಾಚೆ ಶಿರವ ನಲ್ಲಾಡಿಸುತಿಹನು ನೋಳ್ಪವರಾ (ಭರಚ. ೧-೩೭); ಆಚೆಯ ಬೀದಿಯಲ್ಲಿ ಅವಮಾನವಾದರೆ ಈಚೆಯ ಬೀದಿಯಲ್ಲಿ ಹೊಸ ಆಳು (ಗಾದೆ). ೨. ಅನಂತರ; ಆಮೇಲೆ: ಆಚೇನಾಡದ ಶುಕ್ರವಾರ (ಮುಂಬಯಿ. ೧-೭). ೩. ಹೊರಗಡೆ; ಹೊರಗೆ (ದಕ): ಅವರು ಮನೆಯಲ್ಲಿಲ್ಲ ಆಚೆ ಹೋಗಿದ್ದಾರೆ (ರೂಢಿ).

**ಆಚೀಚೆ** = ಆಕಡೆ ಮತ್ತು ಈಕಡೆ: ಕಾವಲುಗಾರರು ಆಚೀಚೆ ಹೋದರೆ ನಾನು ನೋಡಿಕೊಳ್ಳುವುದು (ಮಾರ್ಗದ. ೨೩೫). [ದೇ. ‖ ತುಳು. ಅಂಚಿ, ಆಪೆ; ತೆಲು. ಅಚ್ಚಟ, ಅಚ್ಚಟು, ಅಚ್ಚೋಟು, ಆಡ = ಅಲ್ಲಿ, ಅಸ್ಥಳ]

**ಆಚೇಶ್ವರ** (ನಾ). ಒಂದು ಈಶ್ವರಮೂರ್ತಿಯ ಹೆಸರು: ಕೇಶವ ದೇವರು ಆಚೇಶ್ವರ ಗವಜೇಶ್ವರ ಗಂಗೇಶ್ವರ ಚಿತ್ರೇಶ್ವರ ತೆಲ್ಲಿಗೇಶ್ವರ (ಎಕ. VI, ಚಿಕ್ಕಮ. ೨೦-೫೨; 1249). [ಆಚ್ಚ + ಈಶ್ವರ]

**ಆಚ್ಛನ್ನ** (ಗು). ಮುಚ್ಚಲ್ಪಟ್ಟ; ಹೊದಿಸಲ್ಪಟ್ಟ; ಮರೆಮಾಡಿದ: ಸಾಂದ್ರಭಸ್ಮಾಚ್ಛನ್ನ ಶಿಖಿಯೊಲಳಿತೇಜಸಂ ಕೋಸಲಧರಾವಲ್ಲಭಂ ಮಗನ ನಪ್ಪಲ್ಕೆಳಸಿ (ಶ್ರೀರಾಮಾ. ೯೧-೩೫೩). [ಸಂ.]

**ಆಚ್ಛಾದನ** (ನಾ). ೧. ಮುಚ್ಚುವುದು; ಮರೆಮಾಡುವುದು: ಆದಿತ್ಯನು ... ಕಿರಣಗಳಿಂದ ಲೋಕಗಳನ್ನು ಆಚ್ಛಾದನಮಾಡುತ್ತಾ (ಶುಕ್ಸಾರ. ೨೭೪). ೨. ಹೊದಿಕೆ; ಬಟ್ಟೆ: ಚೇಲಂ ... ಆಚ್ಛಾದನಂ, ಅಂಬರಂ ... ಪಟಃ -ಈ ೧೦ ಸೀರೆ" (ಹಲಾಯು. ೯೦-೩೯೪). ೩. ಗೌಸು; ಚೀಲ; ಒರೆ. ೪. ಮನೆಯ ಮೇಲ್ಛಾವಣಿಗೆ ಆಧಾರವಾದ ಮರದ ಪಟ್ಟಿ: "ಆಚ್ಛಾದನಂ, ವಲಭಿಃ -ಈ ೨ ಮನೆಯ ಹೊ(ದಿ)ದಕೆ" (ಹಲಾಯು. ೫೧-೧೪೮). [ಸಂ.]

**ಆಚ್ಛಾದಿತ** (ಗು). ಮುಚ್ಚಲ್ಪಟ್ಟ; ಹೊದಿಸಲ್ಪಟ್ಟ; ಮರೆಮಾಡಿದ: ಆಚ್ಛಾದಿತ ದಿವ್ಯದುಕೂಲನುಂ ಆಗಿ (ನಂಬಿರ. ೧೬-೧೨೬); ಮೇಘಾಚ್ಛಾದಿತವಾಗಿದ್ದರೆ ಅರುಣಚ್ಛಾಯೆಯೆಂತು? (ಶಾಂತಲಾ. ೨೫೮); ಬೆಟ್ಟಗಳು ಗಿಡಗಂಟಿ ಎಲೆಬಳ್ಳಿಗಳಿಂದ ಆಚ್ಛಾದಿತವಾಗಿದ್ದು ... ಒಪ್ಪುವುವು (ಹೇಮಂತ. ೧). [ಸಂ.]

**ಆಚ್ಛಾದಿಸು** (ಕ್ರಿ). ಮುಚ್ಚು; ಹೊದಿಸು; ಮರೆಮಾಡು: ಸಲೆ ಮಾಯಾಮೋಹವಾಚ್ಛಾದಿಸೆ ನೆಜಧೃತಿಗೆಟ್ಟಂ (ರಕ್ಷಾಶ. ೫೩); ಉಗುರಿಂದಂಟ ಬೆರಂಟಿಯುಂಜನಮುದಕ್ಕುಂ ಚೌಕಮುಂ ಕೀಜುತುಂ ತೆಗೆದಾಚ್ಛಾದಿಸೆ ಕೇಳ ನೀಳಪಟಮುಕ್ಕುಂ (೧೧ಂಕ. ೪-೭೬). [ಆಚ್ಛಾದನ + -ಇಸು$_3$]

**ಆಚ್ಛಾದ್ಯ** (ಗು). ೧. ಮುಚ್ಚಲ್ಪಟ್ಟ; ಹೊದಿಸಲ್ಪಟ್ಟ: ಉಪಪಾದ ಭವನತಳ್ಪದೊಳುಪಚ್ಛದಾಚ್ಛಾದ್ಯತಳದೊಳನವದ್ಯದೊಳಗ್ಗಲಿತನಿರೆ ಪಾಸಿನೊಳ್ (ಶಾಂತಿಪು. ೭-೧೩). (ನಾ). ೨. ಹೊದಿಕೆ; ಉಡಿಗೆ: ಚಾಮರೋದ್ದಾಮ ಚೀನಾಂಬರಾಚ್ಛಾದ್ಯಂಗಳೊಳಂ ... ಅಳವಟ್ಟು ಮದನ ಮಂಗಳಾಗಾರದ್ವಾರ ಮಕರತೋರಣದಂತಿರ್ದ ನವಿಲುಯ್ಯಾಲ ಕೆಲಕ್ಕೆ ವಂದು (ಚಂದ್ರಪು. ೮-೪೫ ವ). [ಸಂ.]

**ಆಚ್ಛಾದ್ಯಮಾನ** (ಗು). ಮುಚ್ಚಲ್ಪಡುತ್ತಿರುವ ; ಮರೆಮಾಡಲ್ಪಡುತ್ತಿರುವ : ಆ ಬಾಲಿಕೆ ಗದ್ಗದಕಂಠಿ ವಾಮಕರಪಲ್ಲವಾಂಗುಳಿನಖಾಕ್ಷಿಪ್ತಾಶ್ರುಸ್ರವೆ ದಕ್ಷಿಣಹಸ್ತಾಚ್ಛಾದ್ಯಮಾನ ಸ್ತನಾಂಶುಕೆಯಾಗಿ (ಶಾಂತಿಪು. ೬–೬೨ ವ). [ಸಂ.]

**ಆಚ್ಛುರಿತ** (ಗು). ೧. ಬೆರಸಿದ ; ಸೇರಿಸಿದ. ೨. ಉಗುರಿನಿಂದ ಗೀರಿದ. ೩. ಹೊದಿಸಿದ ; ಮುಚ್ಚಿದ (ನಾ). ೪. ಕೈಯುಗುರುಗಳನ್ನು ಪರಸ್ಪರವಾಗಿ ಉಜ್ಜಿ ಶಬ್ದಮಾಡುವುದು. ೫. ಗಟ್ಟಿಯಾದ ನಗು ; ಒರಟು ನಗು. ೬. [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು : ಸ್ಥಿರಹಸ್ತ ಪರ್ಯಸ್ತ . . . ಆಲೀಢ ಆಚ್ಛುರಿತ . . . ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಲಾಸ್ಯರಂ. ೫–೭ ವ) ; ವಿಲಸಿತ ನೂಪುರ ಭ್ರಮರ. . .ಆಗ್ಗದ ನೃತ್ಯಶಾಸ್ತ್ರದೊಳ್ ಸಲೆ ಪೆಸರಾದುದಾಚ್ಛುರಿತಮೆಂದೆನುತಂ ನೆಗಳ್ದಂಗಹಾರಮುಂ (ಲಾಸ್ಯರಂ. ೫–೩೦). [ಸಂ.]

**ಆಚ್ಛುರಿತಕ** (ನಾ). = ಆಚ್ಛುರಿತ ೫. [ಸಂ.]

**ಆಚ್ಛೇದ** (ನಾ). ಕತ್ತರಿಸುವುದು ; ಕೊಯ್ದು ಹಾಕುವುದು. 'ನಿರಾಚ್ಛೇದ' ಪರಾ. [ಸಂ.]

**ಆಚ್ಛೇದಿಸು** (ಕ್ರಿ). "ಕತ್ತರಿಸಿಹಾಕು" (ಪ್ರಭಣ್ಣ).
[ಆಚ್ಛೇದನ$_0$ + –ಇಸು$_3$]

**ಆಚ್ಛೋಟನ** (ನಾ). ಬೇಟೆ : "ಆಚ್ಛೋಟನಂ, ಮೃಗಯಾ, ಮೃಗವ್ಯಂ, ಪಾಪರ್ಧಿಃ, ಆಖೇಟಕಃ — ಈ ೬ ಬೇಂಟೆ" (ಹಲಾಯು. ೭೧–೨೮೧).
[ಸಂ.]

**ಆಚ್ಛೋದನ** (ನಾ). = ಆಚ್ಛೋಟನ. [ಸಂ.]

**ಆಜ** (ಗು). ಆಡುಗಳಿಗೆ ಸಂಬಂಧಿಸಿದ ; ಆಡಿನ. [ಸಂ.]

**ಆಜಂತಿ** (ನಾ). ಒಬ್ಬ ಅಧಿಕಾರಿ: ಯೆಮ್ಮಾರ್ಗಳಆಜಂತಿಯಾದ ಮಾರಂಮವೆಗ್ಗಡೆಯುರು (ಸೌಇಇ. IX–ii, ೪೨೬–೮ ; 1402). [?]

**ಆಜಕ** (ನಾ). ಆಡುಗಳ ಗುಂಪು ; ಮೇಕೆಯ ಮಂದೆ. [ಸಂ.]

**ಆಜಗ** (ನಾ). ಸಲಿಗೆ ; ಸದರ (?) : ಗಂಡಹೆಂಡಿರಾದರೂ ಪರಸ್ಪರ ಸೌಹಾರ್ದವಿಲ್ಲದಿದ್ದರೆ ದುಃಖಮಯ. ಮಕ್ಕಳಿಗೆ ಆಜಗವನ್ನು ಕೊಡದಿದ್ದರೆ ಕೊಡಲಿಲ್ಲವೆಂದು ದುಃಖ, ಕೊಟ್ಟರೆ ಕೆಟ್ಟತನದ ದುಃಖ (ಮುಸುಗ. ೧೩೭). [?]

**ಆಜನ್ಮ** (ಅ). ೧. ಜನನಕಾಲದಿಂದ ಹಿಡಿದು ; ಹುಟ್ಟಿದಂದಿನಿಂದ. ೨. ಜನ್ಮವಿರುವವರೆಗೆ; ಜೀವಿತಾವಧಿಯವರೆಗೆ: ಈ ಮಹಾಮಂಗಳವನ್ನು ನೀನು ನಿರಾಕರಿಸಿದೆಯಾದರೆ ನಾನು ಆಜನ್ಮದುಃಖಿಯಾದೇನು (ಶಾಂತಲಾ. ೮೩). [ಸಂ. ಆಜನ್ಮಂ]

**ಆಜಮ್ಮರಸ** (ನಾ). ಒಬ್ಬಾತನ ಹೆಸರು : ಶ್ರೀ ಕದಮ್ಬರಾ ಆಜಮ್ಮರಸ ಗೌತಮಸ್ಥಾನಕ್ಕೆ ಕೊಟ್ಟುದು ಸೊಡರು (ಎಕ. VII, ಶಿಕಾರಿ. ೪೫–೬೦ ; 890). [ಆಜಮ್ಮ$_0$ + ಅರಸ$_1$]

**ಆಜವಂಜವ** (ನಾ). ಸಂಸಾರ ; ಹುಟ್ಟುಸಾವುಗಳ ಪರಂಪರೆ : ಆ ಮಹಾನುಭಾವನಾಜವಂಜವ ವಿಭಾವಕ್ಕೇವಯಿಸಿ ವಜ್ರಜಂಘನೊಳಾತ್ಮೀಯ ಧರಾಭಾರಮಂ ನಿಱಿಸಿ . . . ಮೋಕ್ಷಲಕ್ಷ್ಮೀ ಕಟಾಕ್ಷೈಕ ಲಕ್ಷ್ಯನಾದಂ (ಆದಿಪು. ೪–೬೭ ವ) ; ಜಿನೇಂದ್ರ ದೀಕ್ಷೆಯ ಮಱೆವೊಕ್ಕಂ ಬೇಗಮಾಜವಂಜವಭಯದಿಂ (ಶಾಂತಿಪು. ೯–೧೮). [ಸಂ.]

**ಆಜವಾನ** 'ಅಜವಾನ' ನೋ.

**ಆಜಸ್ರಂ** (ಅ). ಯಾವಾಗಲೂ ; ಎಡೆಬಿಡದೆ ; ಸಂತತವಾಗಿ : ಕರಿತುರಗರಥಪದಾತಿಯ ಚರಣಾಸಂಘಾತಜಾತರಜಮಾಜಸ್ರಂನೆರೆದಂಬರಕೊಗೆಯಲ್ ಬಳಭರದಿಂ ಧರೆಯೆಬ್ಬಿಪಾಱುವಂತಾಯ್ತಾಗಳ್ (ಪಂಪಭಾ. ೧೦–೬೮). [< ಸಂ. ಅಜಸ್ರಂ]

**ಆಜಾನುಬಾಹು** (ನಾ). ೧. ನೇರವಾಗಿ ನಿಂತು ನೀಡಿದರೆ ಮಂಡಿಯನ್ನು ಮುಟ್ಟುವಷ್ಟು ನೀಳವಾದ ತೋಳು ; ಉದ್ದವಾದ ತೋಳು : ಸ್ಥೂಲೋನ್ನತಾಜಾನುಬಾಹು ಸಲ್ಲಕ್ಷಣವಿಶಾಲವಕ್ಷಂ (ವೀಶೈಪು. ೪–೧೨–೨೫) ; ರಂಗ ನಿನ್ನಾಜಾನುಬಾಹು ಬೆರಳುನಖಮಂಗಂಡವರು ಮಱುಹುಟ್ಟ ಮುಂಗುಱುಹಱಿಯರು (ಶತಸಾಂ. ೩–೧೩) ; ತಮ್ಮ ಆಜಾನುಬಾಹುಗಳಿಂದ . . . ಮಗಳನ್ನು ಹೊತ್ತುಕೊಂಡು (ಹೊಸಕ್ಷಿ. ೨೫). ೨. ಮಂಡಿಯನ್ನು ಮುಟ್ಟುವಷ್ಟು ನೀಳವಾದ ತೋಳುಳ್ಳವನು : ಒಬ್ಬೊಬ್ಬರೂ ಒಂದೊಂದು ಗೂಳಿಯಂತಿದ್ದರು ; ಆಜಾನುಬಾಹುಗಳು ; ತುಂಬಿದ ಭುಜವುಳ್ಳವರು (ವಚಭಾ. ೫೮). ೩. ಎತ್ತರವಾದ ಮನುಷ್ಯ.
[ಸಂ. (ಆಜಾನು + ಬಾಹು$_2$)]

**ಆಜಾನುವಿಲಂಬಿತ** (ಗು). ಮಂಡಿಯವರೆಗೂ ನೀಡಿದ,—ನೇತಾಡುತ್ತಿರುವ,—ನೇತುಬಿದ್ದಿರುವ : ನನ್ನ ಆಜಾನುವಿಲಂಬಿತ ಕೇಶರಾಶಿಯನ್ನು ಬಿಚ್ಚಿಬಿಟ್ಟು ಪುನಃಪುನಃ ಅವನ ಪಾದಧೂಳಿಯನ್ನು ಎತ್ತಿ ಮೈಗೆ ಬಳಿದುಕೊಂಡೆನು (ಇಪ್ಪಕ. ೧೯೦). [ಸಂ. (ಆಜಾನು + ವಿಲಂಬಿತ)]

**ಆಜಾನುವಿಳಂಬಿ** (ನಾ). ಮಂಡಿಯವರೆಗೆ ನೀಳವಾದದ್ದು : ಬಾಹುಗಳಾಜಾನುವಿಳಂಬಿಗಳ್ (ಆದಿಪು. ೧–೭೪).
[ಸಂ. ಆಜಾನುವಿಲಂಬಿನ್]

**ಆಜಾನೇಯ** (ಗು). ೧. (ಕುದುರೆಯನ್ನು ನಿರ್ದೇಶಿಸುವಾಗ) ಒಳ್ಳೆಯ ತಳಿಯಲ್ಲಿ ಹುಟ್ಟಿದ : ಆಜಾನೇಯಾಶ್ವೋತ್ಕರಂ ಬಾಱಿತ್ತೆಯೊ ಮಣಿನಿಚಯಂ ಬಾಱಿತ್ತೆಯೋ ಪೇಱಿಂ (ಪಂಪಭಾ. ೬–೪೦) ; ಆಜಾನೇಯ ಕಾಂಭೋಜ ಭೂಮಿಜಂಗಳಪ್ಪ ಜಾತ್ಯಶ್ವಂಗಳುಮಂ (ಪಂಪಭಾ. ೬–೭೨ ವ). (ನಾ). ೨. ಉತ್ತಮಜಾತಿಯ ಕುದುರೆ : ರಾಜನ ಐಶ್ವರ್ಯವನ್ನೂ ಅಲಂಕೃತರಾದ ನಾರಿಯರನ್ನೂ ಆಜಾನೇಯಗಳು ಕಟ್ಟಿದ ಸೊಗಸಾದ ರಥವನ್ನೂ (ಶೀರ್ಷಕ. ೭೧). [ಸಂ.]

**ಆಜಾರಿ** (ನಾ). ರೋಗ : ಇದಲ್ಲದೆ ದಂಡಿನಲ್ಲೂ ಕಾಯಿಲೆ ಆಜಾರಿ ಆದಂಥಾ ಜನರನ್ನು ವೀರರಾಜೇಂದ್ರಪ್ಯಾಟೆಗೆ ಕಳುಹುತ್ತೇನೆ (ರಾಜೇಂದ್ರ. ೭೭). [←ಅರ. ಪಾರ. ಮರಾ. ಆಜಾರೀ = ರೋಗಿ]

**ಆಜಿ$_1$** (ನಾ). ೧. ಯುದ್ಧ ; ಕದನ : ನಿನ್ನನುಱುಗಿಸಲುಮಾಜಿಯೊಳೆನ್ನಂ ಬೆಂಕೊಂಡು ಕಾದಲುಂ ಬಂದೀಗಳ್ (ಪಂಪಭಾ. ೩–೭೩) ; ವೀರನೆಂದಱಿದುದಿಲ್ಲೇಕಾಕಿ ಸಾಮಾನ್ಯನೆಂದನಿತುಂ ರಾಜಸಮಾಜಮಾಜಿಗಱಿದೆಯ್ತಂದತ್ತು (ಪಂರಾಮಾ. ೩–೪೮). ೨. ಯುದ್ಧರಂಗ : ಈ ಮಾಳ್ಕೆಯಿನಾಜಿಯೊಳೋರೊಂದೆಡೆಯೊಳ್ . . . ಜುದ್ಧಂ ಪೆರ್ಚಿರೆ (ರಾಮಾಶ್ವ. ೯೭–೧೨). ೩. ಪಣಕಟ್ಟಿ ಸ್ಪರ್ಧೆಯಿಂದ ಓಡುವುದು ; ಓಟದ ಜೂಜು. ೪. ಬೈಗಳು. [ಸಂ.]

**ಆಜಿ$_2$** (ನಾ). ಅಜ್ಜಿ : ಪ್ರಿಯಂವದೆ ಅಜ್ಜಿಯನ್ನು ಹಾಸ್ಯಮಾಡಿ ಶಕುಂತಲೆಗೆ, ". . . ನೀನು ಬರುವವರೆಗೆ ಮುದುಕಿಯಾಗಿದ್ದ ಆಜಿ ನಿನ್ನನ್ನು ನೋಡಿದೊಡನೆ ಹುಡುಗಿಯಾಗಿಬಿಟ್ಟರು," ಎಂದಳು. ಅನಸೂಯೆ "ಆಜಿಯನ್ನು ಮುದುಕಿಯೆಂತ ಯಾರು ಹೇಳಿದರು . . ." ಎಂದಳು (ಸಣ್ಣಕ. VII, ೧೭). [←ಹಿಂ. ಆಜೀ]

**–ಆಜಿ$_3$** (ಪ್ರ). ಪ್ರೀತಿ ಬಾಂಧವ್ಯಗಳ ಸೂಚಕವಾಗಿ ಅಕಾರಾಂತ ಪದಗಳ ಕೊನೆಯಲ್ಲಿ ಸೇರುವ ಪ್ರತ್ಯಯ. ಉದಾ— ಅಕ್ಕಾಜಿ, ಅಣ್ಣಾಜಿ, ಭಾವಾಜಿ, ಮಾವಾಜಿ : ಕುಸುಮವಿದ್ದೆಡೆಗೆ ಮಧುವ್ರತ ಹೋಹಂತೆ ಕುಸುಮಾಜಿಯರಮನೆಗಾಗಿ (ಭರಚ. ೯–೨೮) ; ಕ್ಷೇಮವೆ ಭಾವಾಜಿ ಮತ್ತು ನಿಮಗೆ ಪರಿಣಾಮವೆ ಹೇಳು ಭಾವಾಜಿ (ಭರಚ. ೯–೩೭) ; ಎಲ್ಲರೂ ಎನ್ನುತ್ತಿದ್ದರು ಅಕ್ಕಾಜಿ, ಅಕ್ಕಾಜಿ ತಾನೂ ಎನ್ನುತ್ತಿದ್ದ (ಅಕ್ಕಾಜಿ. ೩೨). [?]

**ಆಜಿಜಯ** (ನಾ). ಯುದ್ಧಜಯ : ಅಜಿಜಯೋದಾರಸಾರಸುತನಿಲ್ಲದೆ . . . ಶಿವನ್ನೈಜೋನ್ನತ ಭಕ್ತಿಮುಕ್ತಿಗೆಂತೆನುತಿರ್ದಂ (ಹವ್ಮಿ.ರ. ೨-೨). [ಆಜಿ$_1$ + ಜಯ]

**ಆಜಿರಂಗ** (ನಾ). ಯುದ್ಧಭೂಮಿ ; ರಣರಂಗ : ಭವದೂರುಯುಗಂಗಳ ನಾಜಿರಂಗದೊಳ್ ಗಿಜಿಗಿಜಿಮಾಡಲೆಂದವನ ಪೂಣ್ದುದು ನಿಕ್ಕುವಮಾಗ ದಿರ್ಕುಮೇ (ಪಂಪಭಾ. ೯-೫೨); ವಾಹಕರಟ್ಟೆಯುಂ ತುರಗದಟ್ಟೆಯುಮಾ ಡಿದುವಾಜಿರಂಗದೊಳ್ (ಪಂರಾಮಾ. ೧೩-೬೫). [ಆಜಿ$_1$ + ರಂಗ]

**ಆಜಿರಖೊಲ್ಲ** (ನಾ). ಒಂದು ಊರಿನ ಹೆಸರು : ಆಜಿರಖೊಲ್ಲಾನುಗತ (ಎಇ. III, ೨೧೦-೧೮ ; 1143). 'ಆಜಿರಗೋಳ' ಪರಾ. [ಆಜಿರ$_0$ + ಖೊಲ್ಲ ?]

**ಆಜಿರಗೋಳ** (ನಾ). ಒಂದು ಊರಿನ ಹೆಸರು : ತೊಜಗೆಲೆ ಜಟ್ಟಹಳ್ಳಿ ನೆಗಬ್ದಾಜಿರಗೋಳಮೆನಿಪ್ಪಗುರ್ವುವೆತ್ತಱಕೆಯ ಬೇಡವಟ್ಟುಗಳ ಬೂತುಗ ಬೀರುಗಗೋಯೆಯರ್ಕಳಂ (ಕಾವ್ಯಾವ. ೨೧೨). 'ಆಜಿರಖೊಲ್ಲ' ಪರಾ. [ಆಜಿರ$_0$ + ಗೋಳ ?]

**ಆಜಿಲಂಪಟ** (ನಾ). ಯುದ್ಧದಲ್ಲಿ ಅತ್ಯಾಸಕ್ತಿಯುಳ್ಳವನು : ಚಳಿಯಿ ಸಲಮರಾಚಲಮಂ . . . ದಿನಕೃನ್ಮಂಡಳಮನಿಳೆಗಿೞಪಲೆಂದಾಜಿಲಂಪಟಂ ದೆಸೆಗೆ ಮಸಗಿದಂ ದನುಜೇಂದ್ರಂ (ಪಂರಾಮಾ. ೧೩-೧೩೩). [ಆಜಿ$_1$ + ಲಂಪಟ]

**ಆಜಿಶ್ರಾಂತ** (ನಾ). ಯುದ್ಧಮಾಡಿ ಆಯಾಸಗೊಂಡವನು : ಆಜಿಶ್ರಾಂತನಂ ಯಶೋಧನನಿಜೀಯಂ (ಶಾಂತಿಪು. ೪-೫೧). [ಆಜಿ$_1$ + ಶ್ರಾಂತ]

**ಆಜೀವ$_1$** (ನಾ). ೧. ಜೀವಿಕೆ; ವೃತ್ತಿ ; ಜೀವನೋಪಾಯ : "ಜೀವನಂ, ವೃತ್ತಿಃ, ಆಜೀವಃ, ವಾರ್ತಾ— ಈ ೪ ಬಾೞ್ಕೆ" (ಹಲಾಯು. ೯೩-೪೧೬). ೨. [ಜೈನ] ಜೈನಸಾಧು ; ಶ್ರವಣ : "ನಗ್ನಾಟಃ, . . . ಆಜೀವಃ, ಮಲಧಾರೀ, ನಿರ್ಗ್ರಂಥಃ, ಸಾಧುಃ— ಈ ೧೦ ಸವಣನ ಪೆಸರ್" (ಹಲಾಯು. ೫೭-೧೮೯). [ಸಂ.]

**ಆಜೀವ$_2$** (ಅ). ಜೀವವಿರುವವರೆಗೆ ; ಬದುಕಿರುವವರೆಗೆ : ಆಜೀವವೂ ದಾರಿದ್ರ್ಯಾವಸ್ಥೆಯಲ್ಲಿದ್ದುದು (ಪೈಮುಹ. ೧೨೭) ; ಆಜೀವವೂ ನಿಲ್ಲಬಲ್ಲ ಸ್ನೇಹಬಾಂಧವ್ಯಗಳು (ಶಿಕ್ಷದ. ೭೦). [ಸಂ. ಆಜೀವಂ]

**ಆಜೀವಕ** (ನಾ). ೧. ಎಲ್ಲಿ ಬೇಕಾದರೂ ಜೀವನವನ್ನು ಸಂಪಾದಿಸಿ ಕೊಳ್ಳುವವನು ; ಭಿಕ್ಷುಕ. ೨. ಬೆತ್ತಲೆಯಾಗಿರುವ ಪರಿವ್ರಾಜಕ : ಆಜೀವಕನೆಂದರೆ ಬೆತ್ತಲೆಪರಿವ್ರಾಜಕ ಎಂದು ಬುದ್ಧಘೋಷನು 'ಮನೋ ರಥಪೂರಣಿ'ಯಲ್ಲಿ ಹೇಳಿದ್ದಾನೆ (ತೀರ್ಥಕ. ೧೦೯). [ಸಂ.]

**ಆಜೀವಪರ್ಯಂತ** (ಅ). ಜೀವವಿರುವವರೆಗೆ : ಆಜೀವಪರ್ಯಂತ ಅವರಿಗೆ ಕೃತಜ್ಞನಾಗಿರುವುದಾಗಿ ನಾನು ಈ ನ್ಯಾಯಾಧಿಕಾರಿಗಳಿಗೆ ಆಗಾಗ್ಗೆ ಹೇಳುತ್ತಿರುತ್ತೇನೆ (ಪುನರು. ೩೧೫). [ಆಜೀವ$_2$ + ಪರ್ಯಂತ]

**ಆಜೀವಬ್ರಹ್ಮಚರ್ಯ** (ನಾ). ಬದುಕಿರುವವರೆಗೂ ನಡೆಸುವ ಬ್ರಹ್ಮಚರ್ಯವ್ರತ : ಬ್ರಹ್ಮಚರ್ಯದಲ್ಲಿ ನೈಷ್ಠಿಕಬ್ರಹ್ಮಚರ್ಯ ಅಥವಾ ಆಜೀವಬ್ರಹ್ಮಚರ್ಯ ಎಂಬ ಕಟ್ಟುನಿಟ್ಟಾದ ಒಂದು ಆಶ್ರಮವಿದೆ (ಬಂಕಿಮ. ೨೮೩). [ಆಜೀವ$_2$ + ಬ್ರಹ್ಮಚರ್ಯ]

**ಆಜೀವಸದಸ್ಯ** (ನಾ). ಬದುಕಿರುವವರೆಗೂ ಸದಸ್ಯನಾಗಿರುವವನು: ಅವರು ಪರಿಷತ್ತಿನ ಆಜೀವಸದಸ್ಯರಾಗಿದ್ದಾರೆ (ರೂಢಿ). [ಆಜೀವ$_2$ + ಸದಸ್ಯ]

**ಆಜೀವಸದಸ್ಯತ್ವ** (ನಾ). ಬದುಕಿರುವವರೆಗೂ ಸದಸ್ಯನಾಗಿರುವಿಕೆ : ಕನ್ನಡ ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯತ್ವಕ್ಕೆ ಸಲ್ಲಿಸಬೇಕಾದ ಹಣ ಒಂದುನೂರು ರೂಪಾಯಿಗಳು (ರೂಢಿ). [ಆಜೀವ$_2$ + ಸದಸ್ಯತ್ವ]

**ಆಜೀವಿಕೆ** (ನಾ). ಜೀವನೋಪಾಯ ; ವೃತ್ತಿ ; ಉದ್ಯೋಗ : ವೃತ್ತಿ ಗಳ, ವ್ಯಾಪಾರಗಳ, ಅಜೀವಿಕಾಗಳ ಅಥವಾ ನೌಕರಿಗಳ ಸಂಬಂಧದಲ್ಲಿ . . . ಅಮಾನ್ಯವಾಗತಕ್ಕುದಲ್ಲ (ಭಾಧಾನ. ೧೫೭). [ಸಂ. ಆಜೀವಿಕಾ]

**ಆಜುಬಾಜು, ಆಜೂಬಾಜು** (ನಾ). ನೆರೆಹೊರೆ ; ಅಕ್ಕಪಕ್ಕ : ಡೋಲಿಲ್ಲದೆ, ಮೆರವಣಿಗೆಗೆ ಹೋಗುವಾಗ ಆಜುಬಾಜು ಮನೆಯವರು ಎಚ್ಚರವಾಗದೆ, ಎಂಥ ಮೆರವಣಿಗೆಯೆಂದು ಅವರನ್ನೂ ಅವರಿಗೆ ಕೊಟ್ಟ ಅಡ್ವಾನ್ಸನ್ನೂ ಬಿಟ್ಟು (ಶ್ರೀಕಥೆ. ೧೧೦) ; ಆಜುಬಾಜಿನ ಮನೆಗಳ ಹೆಂಗಸರು, ಮಕ್ಕಳು, ಮದುಮಗನನ್ನು ನೋಡುವ ಆತುರದಿಂದ . . . ನೆರೆದಿದ್ದಾರೆ (ಮೂರುದಾ. ೨೧೬). **ಆಜೂಬಾಜು** : ಅಜೂಬಾಜು ಇರುವಂಥ ಭೂಮಿ (ಮಹಾವಂ. II, ೬೦) ; ಪೋಲೀಸಿನವರ ವಾಸನೆ ಕೂಡ ಇರಲಿಲ್ಲ ಆಜೂಬಾಜಿನಲ್ಲಿ (ಸಾಹೇಬ್. ೫೬೫). [← ಮರಾ. ಆಜೂಬಾಜೂ]

**ಆಜೂಜುವಾರಿ** (ನಾ). ಅನುಸರಣೆ ; ದೈನ್ಯವರ್ತನೆ : ನಮ್ಮಂಥ ಸಣ್ಣ ಸಣ್ಣ ಸರ್ಕಾರಿ ನೌಕರರಿಗೆ ದೊಡ್ಡ ದೊಡ್ಡ ಊರಿಗೆ ವರ್ಗವಾಗುವುದು ಬಹು ಕಷ್ಟ . . . ಎಷ್ಟೆಷ್ಟೋ ಸಿಫಾರಸು, ಸರಬರಾಯಿ, ಅಜೂಜುವಾರಿ ಆಗಬೇಕು (ಶ್ರೀಕಥೆ. ೧೧೨) ; ಇವರು ಇಷ್ಟೊಂದು ಕಷ್ಟಪಟ್ಟು ಮಂತ್ರಿವರ್ಯ, ಗುರುವರ್ಯರ ಆಜೂಜುವಾರಿ ಮಾಡುತ್ತಿದ್ದರೂ (ಮರ್ಯಾದೆ. ೧೩೭). [?]

**ಆಜೂಬಾಜು** 'ಆಜುಬಾಜು' ನೋ.

**ಆಜ್ಞಾಕ್ಷರ** (ನಾ). ಅಪ್ಪಣೆಯ ಮಾತು : ಪಿರಿದುಂ ಕೂರ್ಪೆಯೊ ಕಾದಂಬರಿಗೇಂ ಪೋದಪ್ಪೆ ಮುಂದೆ ಪೇೞೆನಲಾಜ್ಞಾಕ್ಷರಮನೆ ಬೆಸಗೊ [ಳ್ವೆಂ] ದೇವರೆನ್ನನಿಂತೇಕೆ ಮಗುೞೆ ಬೆಸಗೊಂಡಪಿರಿಂ (ಕಾದಂಉ. ೩೯೪). [ಸಂ. (ಆಜ್ಞಾ + ಅಕ್ಷರ)]

**ಆಜ್ಞಾಚಕ್ರ** (ನಾ). ೧. [ತಂತ್ರಶಾ] ಷಟ್ಚಕ್ರಗಳಲ್ಲಿ ಒಂದು ; ಹುಬ್ಬುಗಳ ನಡುವೆ ಇರುವುದೆಂದು ಭಾವಿಸಿರುವ ಒಂದು ಚಕ್ರ : ಭ್ರೂಮಧ್ಯಸ್ಥಾನದಲ್ಲಿ ಆಜ್ಞಾಚಕ್ರ, ಮನವೆಂಬ ಮಹಾಭೂತ, ತಮಂಥಾಕಾರ ದ್ವಿದಳಪದ್ಮ (ಅವಚಂ. ೪೪-೧೮೮). ೨. ಭೂಮಂಡಲ ಭಾಗ. ೩. ಆಜ್ಞೆಯ ವ್ಯಾಪ್ತಿ. [ಸಂ. (ಆಜ್ಞಾ + ಚಕ್ರ)]

**ಆಜ್ಞಾದೀಕ್ಷೆ** (ನಾ). ಅಪ್ಪಣೆಯನ್ನು ಬಿಡದೆ ಅನುಸರಿಸಿ ನಡೆಯಬೇಕೆಂದು ಗುರುವು ಶಿಷ್ಯನಿಗೆ ಕೊಡುವ ವ್ರತ, —ದೀಕ್ಷೆ: ಶ್ರೀಗುರು ತನ್ನಾಜ್ಞೆಯಂ ಶಿಷ್ಯನಲ್ಲಿ ಪ್ರತಿಪಾಲಿಸುವದೇ ಆಜ್ಞಾದೀಕ್ಷೆ ಎನಿಸುವುದು (ವಿವೇಕ. ೧೧೪) ; ಸದಾಚಾರಗಳನ್ನು ಬಿಟ್ಟು ಪ್ರವರ್ತಿಸ ಬೇಡವೆಂದುಪದೇಶಿಸುವುದೇ ಆಜ್ಞಾದೀಕ್ಷೆಯೆನಿಸುವುದು (ಅಷ್ಟಾವಿ. ೧). [ಸಂ. ಆಜ್ಞಾದೀಕ್ಷಾ (ಆಜ್ಞಾ + ದೀಕ್ಷಾ)]

**ಆಜ್ಞಾಧರ** (ನಾ). ಅಪ್ಪಣೆಯನ್ನು ನಡೆಸುವವನು : ವನಿತೆ ಅನುಕೂಲಿನಿಯೇ? ಮಗನು ಆಜ್ಞಾಧರನೆ? (ಕಎಪು. ೪೯). [ಸಂ.]

**ಆಜ್ಞಾಧಾರಕ** (ನಾ). ಅಪ್ಪಣೆಯನ್ನು ಶಿರಸಾವಹಿಸಿ ನಡೆಯುವವನು ; ವಿಧೇಯ : ತಮ್ಮ ಆಜ್ಞಾಧಾರಕ ಸೇವಕ (ಮುಂಬಯಿ. ೪-೧೦೫ ಕಿ). [ಸಂ.]

**ಆಜ್ಞಾಧಾರಿ** (ನಾ). = ಆಜ್ಞಾಧರ : ನನ್ನ ಬುದ್ಧಿಯೆಂದು ನಾನು ಹೇಳುವುದೂ ಅವರ ಆಜ್ಞಾಧಾರಿಯೇ ಅಲ್ಲವೆ? (ಬೆತಂಬಾ. ೨೨). [ಸಂ. ಆಜ್ಞಾಧಾರಿನ್]

**ಆಜ್ಞಾಧಾರಿಣಿ** (ನಾ). ಅಪ್ಪಣೆಯನ್ನು ಪಾಲಿಸುವವಳು : ಎಲೈ ಪೂಜ್ಯರೆ, ನಿಮ್ಮ ಆಜ್ಞಾಧಾರಿಣಿಯಾದ ಈಕೆಯನ್ನು ಗಾಂಧರ್ವವಿವಾಹದಿಂದ ಮದುವೆಯಾದೆನು (ಶಾಕುಂತ. ೧೧೩-೧೪). [ಸಂ. ಆಜ್ಞಾಧಾರಿಣೀ]

**ಅಜ್ಞಾನಿಧಿ** (ನಾ). ಅಜ್ಞೆಗಳಿಗೆ ಮೂಲಸ್ಥಾನದಂತಿರುವವನು: ಬಹುಶ್ರುತನಾಜ್ಞಾನಿಧಿ ಯಾಜ್ಞವಲ್ಕ್ಯ ಸದೃಶಂ... ಶ್ರೀಭೂಮಿದೇವೋತ್ತಮಂ (ಶಾಂತಿಪು. ೧-೪೪). [**ಸಂ.** (ಅಜ್ಞಾ + ನಿಧಿ)]

**ಅಜ್ಞಾನುರೂಪ** (ನಾ). ಅಪ್ಪಣೆಗೆ ತಕ್ಕಂತೆ ಇರುವುದು; ಅಜ್ಞೆಗೆ ಅನುಗುಣವಾಗಿರುವುದು: ಈ ಪವನತನಯನಂ ಕಳುಹೆಂದು ನಯದೊಳಾ ತಾಪಸೋತ್ತಮನೊಡಂಬಡಿಸಿ ನುಡಿದಾಜ್ಞಾನುರೂಪದಿಂ ದರಸನಿತ್ತಂ... ಅನುಮತಿಯನು (ಜೈಮಿಭಾ. ೨-೪೪). [**ಸಂ.** (ಅಜ್ಞಾ + ಅನುರೂಪ)]

**ಅಜ್ಞಾನುವರ್ತಿ** (ನಾ). ಅಜ್ಞೆಯಂತೆ ನಡೆಯುವವನು; ಅಪ್ಪಣೆಯಂತೆ ನಡೆಯುವವನು: ರುದ್ರಮೂರ್ತಿಯ ಅಜ್ಞಾನುವರ್ತಿಗಳಾದ ಸೇವಕರು (ಕವಿಕ. ೫೩). [**ಸಂ.** ಅಜ್ಞಾನುವರ್ತಿನ್]

**ಅಜ್ಞಾಪತ್ರ** (ನಾ). ಶಾಸನಮಾಡಿ ಹೊರಡಿಸುವ ಪತ್ರ; ಅಪ್ಪಣೆ ಚೀಟಿ: ರಾಜನು ಕಳುಹಿಸಿದ ಶಾಸನಗಳಿಗೆ "ಅಜ್ಞಾಪತ್ರ"ಗಳೆಂದು ಹೆಸರು (ಕಶಾಅ. ೪೫); ನೆಕ್ಲುದೋವ್ ಕಾಫಿ ಮುಗಿಸಿದನಂತರ ಅಜ್ಞಾಪತ್ರಗಳನ್ನು ನೋಡಿ (ಪುನರು. ೨೦). [**ಸಂ.** (ಅಜ್ಞಾ + ಪತ್ರ)]

**ಅಜ್ಞಾಪನ** (ನಾ). ಅಪ್ಪಣೆಕೊಡುವುದು; ಅಜ್ಞೆಮಾಡುವುದು: ಶಿವನಾಜ್ಞಾಪನದಿನೊಲವೊಂದಿಯಾತನು ಪೋಗಲು (ಬಸವು. ೧೯-೩೦). [**ಸಂ.**]

**ಅಜ್ಞಾಪರಿಸ್ಫುರಣೆ** (ನಾ). ಅಪ್ಪಣೆಯ ಪ್ರಕಟನೆ: ಸಮುದಿತ ನಿದಾಘಪತಂಗಪ್ರತಾಪಕ್ಕಂ ಪಿಂಡೀಭೂತ ದಂಡಧರಾಜ್ಞಾಪರಿಸ್ಫುರಣೆಗಂ ... ತಾನೊರ್ವನೆ ನಿರುಪಮ ಜನ್ಮಭೂಮಿಯಾಗಿ (ಶಾಂತಿಪು. ೩-೪೯ ವ). [**ಸಂ.** ಅಜ್ಞಾಪರಿಸ್ಫುರಣ (ಅಜ್ಞಾ + ಪರಿಸ್ಫುರಣ)]

**ಅಜ್ಞಾಪಿಸು** (ಕ್ರಿ). **೧.** ಅಜ್ಞೆಮಾಡು; ಅಪ್ಪಣೆಮಾಡು: ನಿಶ್ಚಳ ದೃಷ್ಟಿಯಿಂ ನಿಜಸಮಾಧಿಯೊಳ್ ಕೂಡಿರೆಂದಭವನಾಜ್ಞಾಪಿಸಿ ನಿರಾಕಾರಮಂ ತಳೆದನಾಕ್ಷಣದೊಳ್ (ಚಬಪು. ೧೬-೪); ವಿಭೀಷಣನು ... ಕೊಲೆಗಡುಕರನ್ನು ಕರೆಸಿ ಜನಕ ದಶರಥರೀರ್ವರನ್ನು ಕೊಂದು ಬರುವಂತೆ ಅಜ್ಞಾಪಿಸುವನು (ಸಾಹಿಸ. ೮೬). **೨.** (ದೊಡ್ಡವರು ಚಿಕ್ಕವರಿಗೆ) ತಿಳಿಸು; ನಿರೂಪಿಸು: ಆ ಮಹಾತ್ಮನ ಗುಣಚರಿತ್ರೋದ್ದಾಮತೆಯನಾಜ್ಞಾಪಿಸೆಂದು ಸುಧಾಮರೀಚಿಧರಂಗೆ ಬಿನ್ನೈಸಿದಳು ಗಿರಿಜಾತೆ (ತೊರರಾ. ೧-೨-೧೦); ಕೋಪವುಂಟಾದೊಡಾಜ್ಞಾಪಿಸು ಕಮನೀಯರೂಪ ನೀ ಕಣ್ದೆಱೆದೆನ್ನ ಆಪಾದಮಸ್ತಕಪರ್ಯಂತ ನೋಳ್ಪುದೆಂದೋಪಂಗೆ ಬಿನ್ನಯಿಸಿದಳು (ಮೋಹತ. ೯-೬). [ಅಜ್ಞಾಪನ + -ಇಸು$_1$]

**ಅಜ್ಞಾಬದ್ಧ** (ಗು). ಅಪ್ಪಣೆಗೆ ಒಳಗಾದ: ಏನುಮಾಡುವುದು? ತಾನು ಸ್ಯೂಸನಿಗೆ ಅಜ್ಞಾಬದ್ಧನಾಗಿ ನಡೆಯಬೇಕು (ಬದ್ಧಪ್ರ. XLIV ಪೀ). [**ಸಂ.** (ಅಜ್ಞಾ + ಬದ್ಧ)]

**ಅಜ್ಞಾಭಂಗ** (ನಾ). ಅಪ್ಪಣೆಯನ್ನು ಮೀರುವುದು: ಅಜ್ಞಾಭಂಗದಪರಾಧಿಯ ನುಡಿಗೇಳದೆ ಶೂಲಿ ಸುಮ್ಮನಿರೆ (ನಂಬಿರ. ೧೪-೧೦೧). [**ಸಂ.** (ಅಜ್ಞಾ + ಭಂಗ)]

**ಅಜ್ಞಾಲಂಘನ** (ನಾ). = ಅಜ್ಞಾಭಂಗ: ಲಂಘಿಸಿದೆಂ ನಿಮ್ಮಯ ಮಾತನೊರ್ಮೆಗಮಿದಾಜ್ಞಾಲಂಘನಂ (ಗದಾಯು. ೬-೫); ಆ ದ್ರವ್ಯಮಂ ಕೊಟ್ಟಲ್ಲದೆ ಪೋಗದಿರೆಂದರಸನಾಣೆಯಿಟ್ಟೊಡಾಜ್ಞಾಲಂಘನಂಗೆಯ್ವುದಲ್ಲದೆ (ಸುಕುಮಾ. ೬-೫೩ ವ). [**ಸಂ.** (ಅಜ್ಞಾ + ಲಂಘನ)]

**ಅಜ್ಞಾವಚನ** (ನಾ). ಅಪ್ಪಣೆಯ ಮಾತು: ಈ ವಾಲ್ಮೀಕಿಮುನಿಯ ಅಜ್ಞಾವಚನಕ್ಕೆ ಅಭಿಪ್ರಾಯವೇನೆಂದರೆ (ಕಗವಿ. ೧೨೧ ಉರಾಕ). [**ಸಂ.** (ಅಜ್ಞಾ + ವಚನ)]

**ಅಜ್ಞಾವಿಚಯ** (ನಾ). [ಜೈನ] ನಾಲ್ಕು ಬಗೆಯ ಧರ್ಮಧ್ಯಾನಗಳಲ್ಲಿ ಒಂದು; ಆಗಮಗಳ ಗುಣಗಳ ಚಿಂತನೆಮಾಡುವುದು: "ಶಾಸ್ತ್ರಪ್ರಮಾಣದಿಂದ ಅರ್ಥವಿಚಾರಮಾಡುವುದು ಅಜ್ಞಾವಿಚಯವು" (ಜೈನಪ. ೮೯); ಭಟಾರರಾಜ್ಞಾವಿಚಯಮಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬೀ ನಾಲ್ಕು ಧರ್ಮಧ್ಯಾನಂಗಳಂ ಧ್ಯಾನಿಸುತ್ತಂ (ವಡ್ಡಾರಾ. ೧೫೪-೯); ಯಥಾಗಮಾರ್ಥದ್ರವ್ಯಂಗಳನನುಕ್ರಮದಿಂದಱಿವಾಜ್ಞಾವಿಚಯಮುಮಂ (ಶಾಂತಿಪು. ೯-೧೧೮ ವ). [**ಸಂ.** (ಅಜ್ಞಾ + ವಿಚಯ)]

**ಅಜ್ಞಾವಿಧೇಯ** (ನಾ). ಅಪ್ಪಣೆಯನ್ನು ಅನುಸರಿಸಿ ನಡೆಯುವವನು: ವಿಜಯಾರ್ಧಕುಮಾರಂ ಸಾರವಸ್ತುಗಳನೋಲಗಿಸಿ ತನಗಾಜ್ಞಾವಿಧೇಯನಾಗಿ ಪೋದಂ (ಆದಿಪು. ೧೩-೧೮ ವ). [**ಸಂ.** (ಅಜ್ಞಾ + ವಿಧೇಯ)]

**ಅಜ್ಞಾಸಮುತ್ಪನ್ನೆ** (ನಾ). ಅಪ್ಪಣೆಗನುಸಾರವಾಗಿ ಹುಟ್ಟಿ ಬಂದವಳು: ಎಲೆ ಮಾಯಾದೇವಿ ಲೋಕತ್ರಯಜನನಿ ಮದಾಜ್ಞಾಸಮುತ್ಪನ್ನೆ (ಜಗವಿ. ೨-೫೮). [**ಸಂ.** ಅಜ್ಞಾಸಮುತ್ಪನ್ನಾ (ಅಜ್ಞಾ + ಸಮುತ್ಪನ್ನಾ)]

**ಅಜ್ಞಾಹಸ್ತ** (ನಾ). ಅಪ್ಪಣೆಮಾಡುವ ಕೈ: ಕರುಣರಸದಲಿ ನನೆದು ನಗೆಯಂಕುರಿಸಲಾಜ್ಞಾಹಸ್ತದಲಿ ಶಂಕರನ ಹೂಂಕರಣೆಯಲಿ ತಳಿತುರಿ ತಗ್ಗಿತಲ್ಲಲ್ಲಿ (ಕುವ್ಯಾಕ. ೭-೪೬). [**ಸಂ.** (ಅಜ್ಞಾ + ಹಸ್ತ)]

**ಅಜ್ಞೆ** (ನಾ). **೧.** ಅಪ್ಪಣೆ; ನಿರ್ದೇಶ; ನಿರೂಪ: ಅತಿಧಾರ್ಮಿಕ ಮಾಯ್ದು ವಿಕ್ರಮಾದಿತ್ಯನೃಪಂ ಪ್ರತಿಪಾಳಿಪ ರಾಷ್ಟ್ರಂ ಮುನಿಪತಿಯಾಜ್ಞೆಯೊಳೇಂ ಸುರೇಶ್ವರಂ ಕೇವಳಮೆ (ಎಇ. XXVIII, ೫-೯; 1082); ಅನಂತಂ ಅನಂತಶಯನನಾಜ್ಞೆಯಿಂ ಬಂದು ದೇವಕಿಯ ಗರ್ಭದೊಳ್ ಜನಿಯಿಸಿದಂ (ಜಗವಿ. ೨-೬೦); ನಡೆವೆನಿದೊ ನಿನ್ನಾಜ್ಞೆಯಂ (ಶ್ರೀರಾಮಾ. ೧೪-೩೬೨). **೨.** ಅವಕಾಶ; ಅನುಮತಿ. **೩.** ನ್ಯಾಯಾಸ್ಥಾನದ ತೀರ್ಪು; ವಿಧಿಸಿದ ಶಿಕ್ಷೆ (ಕ). [**ಸಂ.** ಅಜ್ಞಾ]

**ಅಜ್ಞೆಗೈ** (ಕ್ರಿ). ಅಪ್ಪಣೆಮಾಡು: ತಂದೆಯ ಮಾತಿಗೆ ಪ್ರತ್ಯುತ್ತರವೆನ್ನುವಂತೆ... ಅಜ್ಞೆಗೈವ ಧ್ವನಿಯಲ್ಲಿ ಮಾರುತ್ತರ ಕೊಟ್ಟಳು (ಹೇಮಂತ. ೨೪೪). [ಅಜ್ಞೆ + ಗೈ (< ಕೆಯ್$_1$)]

**ಅಜ್ಞೆಗೊಳ್ಳು** (ಕ್ರಿ). ಅಪ್ಪಣೆಯನ್ನು ತೆಗೆದುಕೊ (ದಕ. ಕ). [ಅಜ್ಞೆ + ಕೊಳ್ಳು (< ಕೊಳ್$_1$)]

**ಅಜ್ಞೆನಿರ್ಣಯ** (ನಾ). ನ್ಯಾಯಾಲಯದ ತೀರ್ಪು; ಶಿಕ್ಷೆಯನ್ನು ವಿಧಿಸುವ ನಿರ್ಣಯ (ಕ). [ಅಜ್ಞೆ + ನಿರ್ಣಯ]

**ಅಜ್ಞೆಪಾಲಿಸು** (ಕ್ರಿ). ಅಪ್ಪಣೆಯಂತೆ ನಡೆ (ಕ). [ಅಜ್ಞೆ + ಪಾಲಿಸು]

**ಅಜ್ಞೆಮಾಡು** (ಕ್ರಿ). **೧.** ಅಜ್ಞಾಪಿಸು. **೨.** ಶಿಕ್ಷೆವಿಧಿಸು (ದಕ. ಕ). [ಅಜ್ಞೆ + ಮಾಡು$_1$]

**ಅಜ್ಞೆಮೀರು** (ಕ್ರಿ). ಅಪ್ಪಣೆಗೆ ವಿರುದ್ಧವಾಗಿ ನಡೆ; ನಿಯಮವನ್ನು ಅತಿಕ್ರಮಿಸು (ಮುಂಬಯಿ. ೫-೨೭೯ ಕ). [ಅಜ್ಞೆ + ಮೀರು (< ಮೀಱು)]

**ಅಜ್ಪಸಾಲೆ** (ನಾ). ಅಕ್ಕಿಯಲ್ಲಿ ಒಂದು ಜಾತಿ (ಕಿಸಂಗ್ಲಾ. ೭). [?]

**ಅಜ್ಯ** (ನಾ). ತುಪ್ಪ: ಅಜೀರ್ಣಭಯದಿಂ ಪ್ರಾಜ್ಯಾಜ್ಯಮೇಂ ತ್ಯಾಜ್ಯಮೇ (ಚಂದ್ರಪು. ೧-೪೫); ನೀರಡಸಿರ್ದಹೊತ್ತಾಜ್ಯ ದೊರಕಿ ಫಲವೇನು (ಹಚಕಾ. ೭-೮). [**ಸಂ.**]

**ಅಜ್ಯಂಬೊಯ್** (ಕ್ರಿ). ತುಪ್ಪವನ್ನು ಸುರಿ: ಸತ್ಕರಿಸಲು ತತ್ಕೋಮಲೆಯ ವಿರಹವೇದನೆಯಾಜ್ಯಂಬೊಯ್ದಗ್ಗಿಯ ತೆಱನಾಯ್ತು (ಜಯಕಾ. ೪-೪೦). [ಅಜ್ಯ + ಪೊಯ್$_2$]

**ಆಜ್ಯಗಟ್ಟಿ** (ನಾ). ತುಪ್ಪವು ಗಟ್ಟಿಯಾಗುವುದು, —ಹೆತ್ತುಕೊಳ್ಳುವುದು : "ಪ್ರಸೂತಾಜ್ಯಗಟ್ಟಿಗಳೊಳು ಪೆಜು" (ಶಬ್ದಮಂ. ೧೧೮). [ಆಜ್ಯ + ಗಟ್ಟಿ]

**ಆಜ್ಯದೀಪ** (ನಾ). ತುಪ್ಪದಿಂದ ಉರಿಸುವ ದೀಪ; ತುಪ್ಪದ ದೀಪ : ಮಂತ್ರಪೂತ ಆಜ್ಯದೀಪದಾರತಿಯನು ಮುಂದೆ ಕೊಂಡು (ಪ್ರಾಂದಳಿ. ೫೪). [ಆಜ್ಯ + ದೀಪ]

**ಆಜ್ಯಧಾರೆ** (ನಾ). ತುಪ್ಪದ ಧಾರೆ; ಒಂದೇ ಧಾರೆಯಾಗಿ ಸುರಿಯುವ ತುಪ್ಪ : ಅನಿತು ಶರವನು ನುಂಗಿ ಮುಗುಳೆಚ್ಚನಿತನೊಳುಕೊಳುತಾಜ್ಯ ಧಾರೆಗೆ ನನೆದ ಹುತವಹನಂತೆ ಹೆಚ್ಚಿತು ತೀವ್ರ ಫಣಿಬಾಣ (ಕು ವ್ಯಾ ಕ. ೨೫-೨೪). [ಆಜ್ಯ + ಧಾರೆ]

**ಆಜ್ಯಪ** (ನಾ). ೧. ತುಪ್ಪವನ್ನು ಕುಡಿಯುವವನು; ದೇವತೆ; ಹವಿರ್ಭುಜ : ಆ ನೃಪಾಲಕಂ . . . ಆಜ್ಯಪವರ್ಗಾಚಾರ್ಯನಾಗಿಹ ಬೃಹಸ್ಪತಿಯ ಪೊರೆಗೆ ಬಂದಿಂತೆಂದನು (ಜೈಮಿಭಾ. ೫-೨೪). ೨. ಪಿತೃಗಳಲ್ಲಿ ಒಂದು ಗುಂಪು. [ಸಂ.]

**ಆಜ್ಯಪಾತ್ರೆ** (ನಾ). ತುಪ್ಪದ ಪಾತ್ರೆ : ಪರಿಸ್ತರಣಗಳ ಮೇಲೆ ದರ್ವಿ, ಸಮಿತ್ತು, ಆಜ್ಯಪಾತ್ರೆ, ಇವುಗಳನ್ನಿಟ್ಟು (ಶಾಂತಲಾ. ೧೦೭). [ಆಜ್ಯ + ಪಾತ್ರೆ]

**ಆಜ್ಯಭಾಂಡ** (ನಾ). = ಆಜ್ಯಪಾತ್ರೆ : ನವರಸಗಾನವನಾಲಿಸಿ ಶಿವಮಣಿ ಕಪಿಲಾಜ್ಯಭಾಂಡಮಂ ತರದಿಂದಂ ಅವನಿಪನೀಕ್ಷಿಸಿ ಬಳಿಕಂ ತವೆ ಸುಖದಿಂದಿರೆ (ಹವಿನ್ಯಾರ. ೨-೯೬). [ಆಜ್ಯ + ಭಾಂಡ]

**ಆಜ್ಯಸ್ಥಾಲಿ** (ನಾ). = ಆಜ್ಯಪಾತ್ರೆ : ಚಮಸ ದರ್ವೀ ಆಜ್ಯಸ್ಥಾಲೀ ಪ್ರೋಕ್ಷಣಪಾತ್ರ . . . ಪ್ರಮುಖಪಾತ್ರವಿಶೇಷಂಗಳಿಂ (ವಿವೇಕ. ೧೩೫). [ಆಜ್ಯ + ಸ್ಥಾಲಿ]

**ಆಜ್ಯಾಭಿಷೇಕ** (ನಾ). (ದೇವತಾ ವಿಗ್ರಹಗಳಿಗೆ) ತುಪ್ಪ ಎರೆಯುವುದು; ತುಪ್ಪದ ಅಭಿಷೇಕ : ಬನವಸೆಯ ನಾರಸಿಂಹದೇವರಿಗೆ ಆಜ್ಯಾಭಿಷೇಕ ನಂದಾದೀಪ್ತಿ (ಸೌಇಇ. XX, ೨೪೧-೯; 1547). [ಆಜ್ಯ + ಅಭಿಷೇಕ]

**ಆಜ್ಯಾಹುತಿ** (ನಾ). ತುಪ್ಪದಿಂದ ಮಾಡುವ ಹೋಮ; ಅಗ್ನಿಗೆ ತುಪ್ಪವನ್ನು ಅರ್ಪಿಸುವುದು : ಅಗ್ನಿತ್ರಯಂಗಳೊಳಂ . . . ಘೃತತಿಳಾಜ್ಯಾಹುತಿಗಳಿಂ (ಆದಿಪು. ೧೫-೧೬ ವ) ; ವಿಷಾದವಹ್ನಿಗಾಜ್ಯಾಹುತಿಗಳಾಗಿ (ಪಂರಾಮಾ. ೧೪-೯೨) ; ಅಗ್ನಿಗಾಜ್ಯಾಹುತಿಯನಿತ್ತದಂ ಮತ್ತೊಮ್ಮೆ ಪಡೆಯಲಾಸಿಪ ಗಾಂಪನಾದನಾ ರಾಕ್ಷಸಂ (ಶ್ರೀರಾಮಾ. ೧೯೧-೪೧೪). [ಆಜ್ಯ + ಆಹುತಿ]

**ಆಟ** (ನಾ). ೧. ಆಡುವುದು; ಕ್ರೀಡೆ; ವಿನೋದ; ವಿಹಾರ : ರೆವಡಿಬದ್ದರಾಟದಾಳೆ ಕೊಮರಸಿಜ್ಜನ ದೇಗುಲದ (ಇಅ. VIII, ೨೮೬-೫೮; 732) ; ಆಟಪಾಟವಿನೋದಂಗಳಿಂದಂ (ವಡ್ಡಾರಾ. ೯೮-೧೫) ; ವಿವಿಧ ದೇವಗೃಹದಾಟಪಾಟದಿಂ ಮಜುಗಿ ಬಟ್ಟೆಯ ರಸೋಟಿನ್ನೋಟದಿಂ (ಪಂಪಭಾ. ೩-೨೨) ; ಊಟದಿನಾಟದಿನೊಪ್ಪುವ ಪಾಟದಿನಾಜಿಸುವ ತೀಟದಿಂ (ಅಜಿಪು. ೨-೮೧) ; ಮಗನ ವಿನೋದಮಂ ಮಗನ ಮುದ್ದುಗಳಂ ಮಗನಾಡುವಾಟಮಂ . . . ನೋಡುತುಂ (ಧರ್ಮಾಮೃ. ೨-೧೩) ; ಖೂಳತೆಗೆ ಹೆಜಸಾರು ಶಕ್ಕಿನ ಠೌಳಿಯಾಟವೆ ಕದನ (ಕುವ್ಯಾಕ. ೧೪-೧೭). ೨. ಕುಣಿತ; ನೃತ್ಯ; ನಾಟಕ, ಯಕ್ಷಗಾನ ಮುಂತಾದುವುಗಳ ಪ್ರದರ್ಶನ : ನೀಲಾಂಜನೆ ತನ್ನಾಟಮನೊಜಲ್ದು ನೋಡುವ ನೋಟಕರಂ ತವದ ಮಾಟ್ಕೆಯಿಂ ಮೋಹಿಸಿದಳ್ (ಆದಿಪು. ೯-೩೮) ; ತೋಜಿ ಸಂಗೀತಕಮಂ . . . ಧರಣೀಭೃನ್ಮುನಿ ಪೊಜಗಾಗುಟಿದರ ಕಣ್ಣಿನ ಮೆಂಬಿವನುಗಿವುದಮರಗಣಿಕೆಯರಾಟಂ (ಶಾಂತಿಪು. ೧೧-೩೩) ; ಕಲಾಪಿಗಳಾಟಮಂ ಮನಂಗೊಳೆ ನಡೆ ನೋಡಿ ನೋಡಿ ಕುಣಿಯಲ್ಕಿಜಿಕಲ್ತು (ಕಾವ್ಯಾವ. ೨೯೦) ; ಆಟಕ್ಕೆ ತಕ್ಕ ವೇಷ, ವೇಷಕ್ಕೆ ತಕ್ಕ ಭಾಷೆ (ಗಾದೆ) ; ಆಟದವನಿಗೆ ದೀವಟಿಗೆಯ ಮೇಲೆ ಕಣ್ಣು (ಗಾದೆ) ; ಆಟವೂ ಮುಗಿಯಿತು ತಂತಿಯೂ ಹರಿಯಿತು (ಗಾದೆ). ೩. ವ್ಯವಹಾರ; ಕೆಲಸ; ಕಾರ್ಯ : ಪಾಣ್ಬರೊಳ್ ನೆರೆವ ಪಾಣ್ಬೆಯರಾಟಮನೀಕ್ಷಿಸಲ್ ಮನಂದಂದು (ಪಂಚತಂ. ೭೬-೬) ; ಅಂಗಡಿಗಳುಡುಗಿದವು ವೆವಹಾರಂಗಳಾಟಂ ಮಾದವು (ಬಸವಪು. ೨೧-೧೬). ೪. ನಟನೆ; ತೋರಿಕೆ : ನೀನು ಯಾಕೆ ಈ ಆಟ ಹೂಡಿದ್ದೀಯಾ ಎಂಬುದು ನನಗೆ ಗೊತ್ತು (ರೂಢಿ). 'ಆಟಕಟ್ಟು' ಪರಾ. ೫. ಶಕ್ತಿ; ಸಾಮರ್ಥ್ಯ : ನಾಲ್ಕಾರು ತೋಳಗಳು ಗಂಟುಬಿದ್ದರೆ ಎತ್ತು ಕುದುರೆಗಳ ಆಟ ಸಹ ನಡೆಯುವುದಿಲ್ಲ (ಮುಂಬಯಿ. ೨-೧೮) ; ನನ್ನ ಮುಂದೆ ನಿನ್ನ ಆಟ ನಡೆಯುವುದಿಲ್ಲ (ರೂಢಿ). ೬. ಚಲನೆ; ಕ್ರಿಯೆ. 'ಅಲುಗಾಟ', 'ಹೊಡೆದಾಟ' ಪರಾ.

**ಆಟವಾಡು**=ಕ್ರೀಡಿಸು; ವಿಹರಿಸು; ವಿನೋದಪಡು : ಕೋಡಗದ ಆಟವಾಡುವ ಭೃಂಗಿ (ಬಸವಪು. ೨೯-೭) ; ಮೂರು ನಾಲ್ಕು ಸಣ್ಣ ಹುಡುಗರು ಆಟವಾಡುತ್ತಿದ್ದರು (ಕಳಹು. ೧೦೮).

[< ಅಡು$_1$. / ತಮಿ. ಮಲ. ಆಟ್ಟ, ಆಟ್ಟು ; ತುಳು. ತೆಲು. ಆಟ]

**ಆಟಂಕೆ, ಆಟಂಕು** (ನಾ). ಅಡ್ಡಿ; ತಡೆ : ಮಗಧನನಾಟಂಕಕೋಟಿಕನೆಗೂ . . . ಪಾಳಕರ ತಲೆಗಳಂ ಕಿತ್ತು ಸೆಡ್ಡಾಡಿದ (ಎಕ. VII (S), ಶಿಕಾರಿ. ೩೪೨-೭ ; 1050) ; ರಾಕ್ಷಸರಾಟಂಕವಿಲ್ಲದಾ ಮಿತ್ರರ ರಾತ್ರಿ ಕಾಲದಲಿ ಬಿಂಕದಿಂದಲಿ ನೀನು ಪೊಂಕದಿಂ ಪುರವ ಪೊಕ್ಕೆ (ಹನುಮ. ೩೭). **ಆಟಂಕು** : ಕೌರವಸೇನೆಯನಾಟಂಕುಬಡಿದಡಿಗಂ ದಡಿಗ (ಎಕ. VIII, ನಗರ. ೩೫-೨೬ ; 1077). [< ಸಂ. ಆತಂಕ]

**ಆಟಂಕಪಡಿಸು** (ಕ್ರಿ). ಆತಂಕವುಂಟುಮಾಡು; ಅಡ್ಡಿಪಡಿಸು; ಪ್ರತಿಭಟಿಸು; ತಡೆ. (ದಕ. ಶ). [ಆಟಂಕ + ಪಡು$_1$ + -ಇಸು$_3$]

**ಆಟಂಕು** 'ಆಟಂಕ' ನೋ.

**ಆಟಂಗುಳಿ, ಆಟಕುಳಿ, ಆಟಗುಳಿ, ಆಟಗೂಳಿ** (ನಾ). ಆಟದಲ್ಲಿ ನಿರತನಾದ ವ್ಯಕ್ತಿ; ಕ್ರೀಡಾಶೀಲ : ಗುಳಿ ಪ್ರತ್ಯಯಕ್ಕೆ– ಆಟಂಗುಳಿ, ಸಾಲಂಗುಳಿ (ಶಮದ. ೨೦೨ ಪ್ರಯೋ); ಆಟಂಗುಳಿ, ಪಣಂಗುಳಿ (ಶಬ್ದಾನು. ೪೧೪ ಪ್ರಯೋ). **ಆಟಕುಳಿ** : ಆಟಕುಳಿ, ಅಂಜುಕುಳಿ (ಭಾಷಾಭೂ. ೧೮೪ ಉದಾ). **ಆಟಗುಳಿ** : ಮಾತುಕತೆ ನಡತೆಗಳಲ್ಲಿ ಹಿಂದಿನ ಆಟಗುಳಿ ಹುಡುಗಿ ಕಾಣುತ್ತಿರಲಿಲ್ಲ (ಮಲೆಮ. ೭೪೫). **ಆಟಗೂಳಿ** : ನಿನ್ನೆ ಹಸುಳನಿದ್ದೆ ಇಂದು ಆಟಗೂಳಿ ಹುಡುಗನಾದೆ (ಚಿಂತನ. ೨೧). [ಆಟ + -ಗುಳಿ$_3$ (< -ಕುಳಿ$_3$)]

**ಆಟಂಗೊಳ್** (ಕ್ರಿ). ಚಲಿಸು; ಓಡು; "ಸ್ಥಾನಭ್ರಷ್ಟನಾಗು" (ಶಾಪಮಂ. ಕೋಶ) ; ದಿಗಧೀಶರ್ ತಮ್ಮತಮ್ಮಿರ್ದೆಡೆಯೊಳಗಿಡಡಂಗಿಪ್ಪಿರ್ಪನಂ ಚೋಳಳಾಳಾದಿಗಳಾಟಂಗೊಂಡು ದುರ್ಗ್ಗಾಶ್ರಯದೊಳೆ ಸಕಳತ್ರಂ ಭಯಂಗೊಂಡು ಗೋಳುಂಡೆಗೊಳುತ್ತಿರ್ಪ್ಪಿರ್ಪನಂ . . . ಸರ್ವಸ್ವಮಂ ಸೂಜೆಗೊಂಡಂ (ಎಕ. V, ಬೇಲೂರು. ೧೭-೪೮ ; 1136). [ಆಟ + ಕೊಳ್$_1$]

**ಆಟಂದಲ್** (ನಾ). ಆಕ್ರಮಣ (?) : ಬಂದು ಕುಲಾಧಿದೇವತೆ ವಸನ್ತಿಕಿಯಂಘ್ರಿಸರೋಜಮಂ ಕುಭೃನ್ನಂದನನರ್ಚಿಸುತ್ತಮಿರಲುದ್ಧನಖಾಸ್ತ್ರ ನಡುತ್ತುರ್ಪಾಯೆ ಸಿದ್ಧಂ ದಯೆಯಿಂದೆ ಕೊಟ್ಟ ಸೆಳೆಯಿಂ ಪುಲಿಯಂ ಮಿಗೆ ಪೊಯ್ಸಳೆಂದೊಡಾಟಂದಲಿನಿತ್ತ ಹೊಯ್ಸಳ ಕುಳಾನ್ವಯರಾದರಿಳಾತಳಾಗ್ರದೊಳು (ಸೌಇಇ. IX-i, ೩೨೯-೧೨ ; 1209). [?]

**ಆಟೆಂದು** 'ಆಟರ್' ಪರಾ.

**ಆಟಕೆ** (ನಾ). ೧. ಆಟ; ವಿನೋದ; ತಮಾಷೆ (ಮುಂಬಯಿ. ೫-೨೩೯ ಕಿ). ೨. ಆಡುವವನು; ಪಾತ್ರಧಾರಿ: ಆಟಕ್ಕೆ ಕಥೆಯಿಲ್ಲ ಮೊದಲಿಲ್ಲ ಕಡೆಯಿಲ್ಲ ನೋಟಕರುಮಾಟಕರೆ ಮಂಕುತಿಮ್ಮ (ಮಂಕುಕ. ೨೫೪). [ಆಟ + -ಕ್ಕ$_3$]

**ಆಟಕಟ್ಟು**, ಆಟಗಟ್ಟು (ಕ್ರಿ). ನಟಿಸು; ಬೂಟಾಟಿಕೆ ಮಾಡು: ಅತನು ಸುಮ್ಮನೆ ಸುಮ್ಮನೆ ಆಟಕಟ್ಟಿ ಹಗರಣ ಮಾಡಿದ (ರೂಢಿ). **ಆಟಗಟ್ಟು**: ಹೆಣವನ್ನು ಆಸ್ಪತ್ರೆಗೊಯ್ಯಬೇಕೆಂದು ಅವರು ಆಟಗಟ್ಟಿ ದಾಗ ಎಲ್ಲರೂ ಸೇರಿ ಬಹುವಿಧವಾಗಿ ಹೇಳಿಕೊಂಡು ದಹನಕ್ರಿಯೆಯನ್ನು ಮಾಡಿದರು (ದುಸಾರ. ೩೫). [ಆಟ + ಕಟ್ಟು$_1$]

**ಆಟಕಪಟ** (ನಾ). ನಟನೆಯ ಮೋಸಗಾರ; ಸೋಗಿನ ವಂಚಕ; ಧೂರ್ತ; ಕೇಡಿಗ: ಕುಟಿಲನುಂ ವಂಚಕನುಮಾಟಕಪಟಿಗೆ ಹೋದುದು ಮೊದಲು ಭಾಗಕೆ ದಿಟಕೆ ಮುಟ್ಟಿದ ಲಿಂಗಸಂಗದ ಮೊದಲ ಸೌಭಾಗ್ಯ (ಬಸಪು. ೩೯-೧೮). [ಆಟ + ಕಪಟ]

**ಆಟಕಾರ** 'ಆಟಕಾಱ' ನೋ.

**ಆಟಕಾರ್ತಿ**, ಆಟಗಾತಿ, ಆಟಗಾರ್ತಿ (ನಾ). ೧. ಆಟವನ್ನು ಆಡುವವಳು; ನಟಿ. ೨. ಬೂಟಾಟಿಕೆಯವಳು. **ಆಟಗಾತಿ**: ೨. ಸಿಂಹಳದ ನಂ. ೧ ಆಟಗಾತಿ . . . ಸೋಲಿಸಿದರು (ಜಿಸಂಕ. ೧೦-೨-೬೫; ೩-೧); ನಗೆಕಾರ್ತಿ, ನುಡಿಕಾರ್ತಿ, ಬಗೆಕಾರ್ತಿ, ಆಟಕಾರ್ತಿ, ಬೇಟಕಾರ್ತಿ (ಶಬ್ದಾನು. ೨೦೧ ಪ್ರಯೋ). **ಆಟಗಾರ್ತಿ**: ೨. ಮಾಲೆಗಾರ್ತಿ, ಬಳೆಗಾರ್ತಿ, ಗೆಲ್ಲಗಾರ್ತಿ, ಆಟಗಾರ್ತಿ (ಭಾಷಾಭೂ. ೧೮೯ ಪ್ರಯೋ). [ಆಟಗಾಱ + -ತಿ$_1$]

**ಆಟಕಾಱ**, ಆಟಕಾರ, ಆಟಗಾರ, ಆಟಗಾಱ (ನಾ). ೧. ಆಟವನ್ನು ಆಡುವವನು: ಪೆಱರ ನುಡಿ ಪೆಱರ ಮಾರ್ಗಂ ಪೆಱರರ್ಥಂ ಪೆಱರ ದೇಸಿ ಪೆಱರೋಜೆಯೆನಲ್ ಪೆಱರ ಬೞಿಸಂದು ತನ್ನಂ ಮೆಱೆವಂ ಕವಿಯಲ್ಲ ವಾಟಕಾಱರ ಜೋಹಂ (ಮಲ್ಲಿಪು. ೧-೩೨); ನುಡಿಕಾಱಂ, ಆಟಕಾಱಂ, ಮೋಸಕಾಱಂ, ಮುಂಡುಕಾಱಂ (ಶಬ್ದಾನು. ೪೨೩ ಪ್ರಯೋ). **ಆಟಕಾರ**: ೨. ನಾಟಕಗಳಲ್ಲಿ ಪಾತ್ರವಹಿಸುವವನು; ನಟ: ಅಯಂ – ಈ, ಜೀವಃ – ಜೀವಂ, ಅಭಿನವಃ – ಅಪೂರ್ವಮಪ್ಪ, ನಟವತ್ – ಆಟಕಾರನಂತೆ, ಭ್ರಮತಿ – ತೊಳಲುಗುಂ (ಜೀವಸಂ. ೭೭ ಅಡಿಟ). **ಆಟಗಾರ**: ೧. ನೀನು ಹೀಗೆ ಆಡಿ ಅಭ್ಯಾಸಮಾಡಿಕೊಂಡರೆ ಮುಂದೆ ನೀನು ಪ್ರಸಿದ್ಧನಾದ ಆಟಗಾರನಾಗಬಹುದು (ಶಾಲಿಮ. ೬೨). ೩. ಬೂಟಾಟಿಕೆಯವನು; ಸೋಗುಹಾಕಿ ನಡೆಯುವವನು: ಅವನು ಒಳ್ಳೆಯ ಆಟಗಾರ, ಅವನ ಮಾತನ್ನು ನೆಚ್ಚುವುದಕ್ಕೇ ಆಗುವುದಿಲ್ಲ (ರೂಢಿ). **ಆಟಗಾಱ**: ೧. ಆಟಗಾಱಂ, ಗೆಲ್ಲಗಾಱಂ (ಶಬ್ದಾನು. ೩೮೩ ಪ್ರಯೋ). [ಆಟ + -ಕಾಱ]

**ಆಟಕಾಱಿಕೆ** (ನಾ). ಆಟವಾಡುವಿಕೆ; ನಟನೆ: ಆಟಕಾಱಿಕೆ, ಓಲೆಕಾಱಿಕೆ (ಶಬ್ದಾನು. ೪೩೧ ಪ್ರಯೋ). [ಆಟಕಾಱ + -ಇಕೆ]

**ಆಟಕುಳಿ** 'ಆಟಂಗುಳಿ' ನೋ.

**ಆಟಕೂಟ** (ನಾ). ೧. ನರ್ತನಗೋಷ್ಠಿ: ಶ್ರೀ ಮಹಾದೇವೇಶ್ವರದೇವರ ಅಂಗಭೋಗ ನೈವೇದ್ಯವನ್ನದಾನ ಪಾತ್ರಪಾವುಳ ಪರಿಗ್ರಹಕ್ಕಮಾಟ ಕೂಟಕ್ಕವಾಚಂದ್ರಾರ್ಕತಾರಂಬರಂ . . . ಬಿಟ್ಟ ಕುಕ್ಕನೂರ್ ಮೂವತ್ತಱ ಬಳಿಯ ಬೆಣ್ಣೆಕಲ್ಲು (ಎಇ. XIII, ೪೮-೭೦; 1112). ೨. ಕ್ರೀಡಾಕೂಟ: ಗೆಳೆಯರಲ್ಲಿ ಹೆಚ್ಚಿನವರು ಇಂದಿನವರೆಗೆ ಅವನನ್ನು ಆಟಕೂಟದಲ್ಲಿ ತಮಗಿಂತ ಕಡಮೆ ವರ್ಗದವನೆಂದು ತಿಳಿಯುತ್ತಿದ್ದರು (ಸೋಲು. ೫). [ಆಟ + ಕೂಟ]

**ಆಟಕೋಟಲೆ** (ನಾ). (ಸೃಷ್ಟಿ) ಲೀಲಾರೂಪದ ಶ್ರಮ,—ಆಯಾಸ (?): ಕೂಟದಿಂದ ಕೂಸು ಹುಟ್ಟುವಡೆ ಬ್ರಹ್ಮನ ಆಟಕೋಟಲೆಯೇಕೆ ಸ್ಥಿತಿ ಆಟದಿಂದ ನಡೆವಡೆ ವಿಷ್ಣುವಿನ ಭೂತಹಿತವೇಕಯ್ಯಾ ಘಾತಕದಿಂದ ಕೊಲುವರೆ ರುದ್ರನ ಅಸುರವೇತಕ್ಕೆ (ಮಸುಗುಂ. ೧೭); ಆಣವ ಮಲ ಮಾಯಾಮಲ ಕಾರ್ಮಿಕಮಲದೊಳಗಣ ಆಟಕೋಟಲೆ ಅಡಗದೆ . . . ಮಾಟಕೂಟ ಜಪಕೋಟಲೆಯಿಂದ ನಟಿಸಿ (ವಚಸಂ. ೩೧೩-೭೧). [ಆಟ + ಕೋಟಲೆ]

**ಆಟಗಟ್ಟು** 'ಆಟಕಟ್ಟು' ನೋ.

**ಆಟಗಾತಿ** 'ಆಟಕಾರ್ತಿ' ನೋ.

**ಆಟಗಾಯಿ** (ನಾ). ೧. ಪಗಡೆ ಮುಂತಾದ ಆಟಗಳಲ್ಲಿ ಉಪಯೋಗಿಸುವ ಕಾಯಿ (ಕಿ). ೨. ಆಟದ ಕಾಯಿಯ ಹಾಗೆ ಇತರರು ನಡೆಸಿದಂತೆ ನಡೆಯುವವನು (ಕಿ). [ಆಟ + ಕಾಯಿ$_4$ (< ಕಾಯ್$_4$)]

**ಆಟಗಾರ** 'ಆಟಕಾಱ' ನೋ.

**ಆಟಗಾರಿ** (ನಾ). ಆಟದಲ್ಲಿ ಆಸಕ್ತಿಯುಳ್ಳವಳು; ಕ್ರೀಡಾಶೀಲೆ (ಉಕ. ಕಿ) [ಆಟಗಾರ (< ಆಟಕಾಱ) + -ಇ$_2$]

**ಆಟಗಾರ್ತಿ** 'ಆಟಕಾರ್ತಿ' ನೋ.

**ಆಟಗಾಱ** 'ಆಟಕಾಱ' ನೋ.

**ಆಟಗೀತಿ** 'ಆಟಗೀತೆ' ನೋ.

**ಆಟಗೀತೆ**, ಆಟಗೀತಿ (ನಾ). [ಛಂದ] ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ ಮೂರು ಬ್ರಹ್ಮಗಣ ಮತ್ತು ಎರಡು ವಿಷ್ಣುಗಣಗಳು, ಎರಡನೆಯ ಮತ್ತು ನಾಲ್ಕನೆಯ ಪಾದಗಳಲ್ಲಿ ಐದು ಬ್ರಹ್ಮಗಣಗಳು ಬರುವ ಒಂದು ಹಾಡು; ಸೀಸಪದ್ಯದೊಡನೆ ಸೇರಿಸಿ ಹಾಡುವ ಒಂದು ಬಗೆಯ ಹಾಡು: ಆಟಗೀತೆ (ಕೈಪಿಡಿ. ೧೫೨). **ಆಟಗೀತಿ**: ಸೀಸಪದ್ಯದೊಡನೆ ಸೇರಿಸಿ ಹಾಡುವ ಗೀತಿ—ಆಟಗೀತಿ, ತೇಟಗೀತಿ ಎಂದು ಎರಡು ವಿಧ (ಕೈಪಿಡಿ. ೧೫೧). [ಆಟ + ಗೀತೆ]

**ಆಟಗುಳಿ** 'ಆಟಂಗುಳಿ' ನೋ.

**ಆಟಗುಳಿತನ** (ನಾ). ಆಟದಲ್ಲಿಯೇ ಆಸಕ್ತವಾಗಿರುವುದು; ಕ್ರೀಡಾಶೀಲತೆ: ನಿಜವಾಗಿಯೂ ಆಟಗುಳಿತನದಿಂದ ಇಹದಲ್ಲಿ ವ್ಯಕ್ತಿಗೆ ಮುಕ್ತಿ (ಗೋಯಾತ್ರ. ೧೩). [ಆಟಗುಳಿ (< ಆಟಂಗುಳಿ) + -ತನ]

**ಆಟಗೂಳಿ** 'ಆಟಂಗುಳಿ' ನೋ.

**ಆಟತಾಳ** (ನಾ). [ಸಂಗೀತ] ಒಂದು ಬಗೆಯ ತಾಳ: ಅವರು ಸಾಮಾನ್ಯವಾಗಿ ಮತ್ತೆ ಮತ್ತೆ ಅಭ್ಯಾಸಮಾಡುತ್ತಿದ್ದ ಆಟತಾಳದ ವರ್ಣಗಳು (ಸಂಗೀತ. ೯೭). [< ಅಟ್ಟತಾಳ]

**ಆಟನಾಣಿ** 'ಆಟಲಾಣಿ' ನೋ.

**ಆಟಪಾಟ** (ನಾ). ೧. ಆಡುವುದು ಮತ್ತು ಹಾಡುವುದು; ವಿಹಾರ; ವಿನೋದ: ಮನದೊಳಲಂಪು ಪೊಣ್ಮೆ ನುಡಿದುಂ ನಡೆನೋಡಿಯುಮಾಟ ಪಾಟಮುಂ ಬಿನದಮುಮಾರುಮಂ ಮಱೆಯಿಸುತ್ತಿರೆ (ಪಂಪಭಾ. ೨-೯೪); ಅರಮನೆಗಳೊಳಂ ಆಟಪಾಟದೆಡೆಗಳೊಳಂ ಪರಿಚಯದಿಂ ಗೊಟ್ಟಿಗೆಯ್ಯುತ್ತಂ (ಬಂಹರಿ. ೩-೩೧ ವ); ತಿಂಡಿ ತೀರ್ಥ ಆಟಪಾಟಾದಿಗಳಿಗೆ ಬೇಕಾದ ಸಮಸ್ತ ವಸ್ತುಗಳೂ ಅಲ್ಲಿ ಸಿದ್ಧವಾಗಿವೆ (ಜೀವಾತ್ಮ. ೨೧೨). ೨. ಆಟ ಮತ್ತು ಹಾಡು: ದ್ವಂದ್ವಕ್ಕೆ: ಆಟಪಾಟಕೂಟಂಗಳ ಕೇಳಿಗೆಯ್ದಿಸದು ಪೊಳ್ತು (ಶಮದ. ಸ. ೧೭೬ ಪ್ರಯೋ). [ಆಟ + ಪಾಟ$_1$]

**ಆಟಮಾಟ** (ನಾ). ಆಟ ಮತ್ತು ಚೇಷ್ಟೆ: ತನ್ನಾಟಮಾಟಂಗಳಿಂ ನಗೆಯಿಪ್ಪಂ ಪೆಳವರ್ಕಳಿಂ ಕುಣಿಯಿಪಂ, ಮೂಕರ್ಗಳಿಂ ಪಾಡಿಪಂ . . . ಕಬ್ಬಿಗಂ (ಸಂಸಪು. ೩೭-೧). [ಆಟ + ಮಾಟ$_1$]

**ಆಟರ್** (ಕ್ರಿ). ೧. ಮೇಲೆ ಬೀಳು; ಮುತ್ತು; ಆಟಂದು (ಭೂತಕೃ), ಆಟರ್ಪ (ಭವಿಕೃ): ಪಳಯಾಜಿಯೊಳ್ ದೇವನಾಟಂದಿಜಿದು ಮಡಿಪಿದೊಂ (ಎಕ. XI, ಚಿತ್ರದು. ೭೬–೩೬; 937); ಲೋಭಮುಕರಾನೀಕಂಗಳಾಟಂದು ಸುಣ್ಣಗೆ ನುಂಗುತ್ತಿರೆ (ಆದಿಪು. ೬–೬೦); ನಲಿನಲಿದಾಟಂದು ಕೊಂದಪಂ ಯಮರಾಜಂ (ಅಜಿಪು. ೧೦–೨೬); ರಣಾರಂಭಿಗೆ ಕಾಳಚಕ್ರಮುಜದಾಟಪ್ಪಂಗಗುರ್ಬ್ಬಪ್ಪ ದಳ್ಳುರಿ ಮಾರ್ಕ್ಕೊಳ್ವ ಭಟಂಗೆ ತಾಂ ಬಜಸಿಡಿಲ್ (ಎಕ. VII, ಶಿಕಾರಿ. ೧೫೧–೪೩; 1047); ಸಂತತಂ ತಾನೆ ಕೂರ್ತಪ್ಪಿದಳಾಟಂದಕ್ಷಯ ಶ್ರೀಯೆನೆ ಸೊಬಗರದಾರ್ ನಿನ್ನವೋಲ್ ಚಂದ್ರನಾಥಾ (ಧರ್ಮನಾ. ೫–೬೫). ೨. ಅಟ್ಟು; ಓಡಿಸು: ಅರಿಭೂಪಾಳೋಗ್ರವೀರಪ್ರಮುಖರು[ರ]ನಿಜಿದಾಟಂದಪಂ ಕೊಂದಪಂ (ಎಕ. VIII, ಸಾಗರ. ೧೮೯–೨೪; 1042); ದುಷ್ಕೃತಮೆಂಬಜಿವಗೆ ಬಿಡದವನಂ ಬೆಂಬಜಿವಿಡಿದಾಟಂದು ಕೊಂದು ಕೂಗಿಯೆ ಮಾಣ್ದಂ (ನೀತಿಮಂ. II, ೧೭೭). ೩. ಒಟ್ಟಾಗು; ಗುಂಪಾಗು: ಜನಮೆಲ್ಲಂ ನುಡಿವುದು ದಂಡ ನೃತ್ಯಮುಂಟೆಂದು ಕಾಣಲಾಟಂ[ಪಾಠಾಂ. ಯ್ದಂ] ದುದು ಶಕ್ರನ ಬಾಹುದಂಡದೊಳ್ ಚಿತ್ರನರ್ತನಂ ನೆಗಟ್ದು ಸುರಕಾಂತೆಯರಿಂ (ಅಜಿಪು. ೫–೨೧); ಭೃಂಗಾವಳಿಯ ಭಯದಿನುಳ್ಳಿಕ್ಕಿ ತದ್ವಾರ ನಾರೀಗಣಮಾಟಂದಾವಗಂ ಸಂಪಗೆದಜಿಯ ನೆಟಿಲ್ದಂಪಿನೊಳ್ ಪೋಪುದೆತ್ತಂ (ಧರ್ಮನಾ. ೨–೧೧೬). ೪. ಒದಗು; ಪ್ರಾಪ್ತವಾಗು: ತೋಟಯೆಂದಡೆ ಕೋಟಲಾಭವೆಂದುಲಿವರುಂ ಆಟಂದ ಬವರಕ್ಕೆ ನಾಟಕಂ ನಲಿವರುಂ (ಸೌಇಇ. IX–i, ೫೯೬–೨೩; 1176).

**ಆಟಂದಲೆ** = ಆಕ್ರಮಿಸಿ ಹಿಂಸಿಸು; ಮೇಲೆಬಿದ್ದು ಪೀಡಿಸು: ಸ್ಮರತಾಪಂ ಪೆಜಪಿಂಗೆ ಸೂಳೆಯರೊಳಂಗಂವೊಂದಿ ಕೂಡಿರ್ದ ಗಂಡರನಾಟಂದಲೆದಟ್ಟಿ ಪೊಯ್ದು ಕಳೆದು (ಧರ್ಮಾಮೃ. ೨–೩೮); ವಿಕ್ರಮೋತ್ಕಂಠ ಕಂಠರನಾಟಂದಲೆಯುತ್ತುಮಾನತರನೀಗಳ್ ಕಾಯುತುಂ (ಶಾಂತೀಶ್ವ. ೩–೬೨). **ಆಟಂದಿಕ್ಕು** = ಮೇಲೆಬಿದ್ದು ಹೊಡೆ, —ಕೊಲ್ಲು: ಅದಟಂದುರ್ಕ್ಕಿದ ವೈರಿ××× ಜರನಾಟಂದಿಕ್ಕಿ ಚಂಡಾಸಿಯಿಂ (ಸೌಇಇ. XX, ೨೨೧–೧೧; 1283). **ಆಟಂದಿಱು** = ಆಟಂದಿಕ್ಕು: ವೈರಿನರೇಂದ್ರವ್ಯೂಹಮನಾಟಂದಿಱಿದುತ್ಸಾಹ ಗುಣೋದಯದೆ ನೆಗಳ್ದನೀ ರಣವೀರಂ (ಶಾಸಪ. ೨೭–೨೦; 991). **ಆಟಂದೆತ್ತು** = ಮೇಲಕ್ಕೆಬ್ಬಿಸು: ಪೊಂದಾವರೆಯೆಸಜಿಪ್ಪೊರೆಯೊಳ್ ಸೊರ್ಕಿ ಸಿಲ್ಕಿರ್ದ ಭೃಂಗಂಗಳನಾಟಂದೆತ್ತಿ . . . ತೀಡಿತ್ತಪಹೃತಜನತಾಸುಪ್ತಿಭಾರಂ ಸಮೀರಂ (ಪುಷ್ಪಪು. ೯–೧೦೩). **ಆಟಂದೊತ್ತು** = ಮೇಲೆಬಿದ್ದು ನೂಕು, —ತಳ್ಳು: ಉದ್ಧತಾರಿಗಳನಾಟಂದೊತ್ತಿ ಬೆಂಕೊಂಡು ದೋರ್ಬ್ಬಳದಿಂ ಪೂಣ್ದಿರ್ಪ್ಪಿನಂ (ಎಕ. II, ೧೪೩–೪೫; 1131). [?]

**ಆಟರೂಷ** (ನಾ). ಆಡುಸೋಗೆ ಗಿಡ; ಅಡ್ಡಸರ. [ಸಂ.]

**ಆಟರೂಷಕ** (ನಾ). = ಆಟರೂಷ. [ಸಂ.]

**ಆಟಲಾಣಿ, ಆಟನಾಣಿ** (ನಾ). (ಉಕ). ಮದುವೆ ಮುಂಜಿಗಳಾದ ಎಂಟನೆಯ ದಿವಸ ಮದುಮಕ್ಕಳಿಗೆ, ವಟುವಿಗೆ ಮಂಗಳಸ್ನಾನ ಮಾಡಿಸುವ ಸಮಾರಂಭ: ಇವತ್ತಿಗೆ ಮದುವೆಯಾಗಿ ಎಂಟು ದಿನಗಳಾದವು. ಇಂದೇ ಆಟಲಾಣಿಯ ಹೋಳಿಗೆಯನ್ನು ಹೊಡೆದಿದ್ದೇನೆ (ಧರ್ಮಸಿ. ೯೮). **ಆಟನಾಣಿ** (ರೂಢಿ).

[← ಮರಾ. ಆಠನಹಾಣ್, ಆಠನ್ಹಾಣ್ < ಸಂ. ಅಷ್ಟಸ್ನಾನ]

**ಆಟಲೆ**$_1$ (ಕ್ರಿ). ಅಟ್ಟಿಕೊಂಡು ಹೋಗಿ ಹಿಂಸಿಸು: ಅರಿಷಡ್ವರ್ಗಮನವನೀಶ್ವರನಾಟಲೆಯೆ ಪೊಜಗಣರಿಗೆ ಜಯಾಂಗನೆ ಪಲ್ಮೊರೆದಳೆನೆ ಪರಿದುವು ಜೀರ್ಗರೆವುತ್ತುಂ ಚತುರಶೀತಿಲಕ್ಷ ರಥಂಗಳ್ (ಶಾಂತಿಪು. ೧೦–೧೭೯); ರಾವಣನ ರೌದ್ರತೆವೆತ್ತವತಾರವೀತನೆಂಬೊಟ್ಟಜಿ ಲೋಕಪಾಲಕರನಾಟಲೆದಿರ್ಪ ಪೊಡರ್ಪಿನಿಂದೊಡಂಬಟ್ಟುದು ನೋಡಿಮೀತನೊಳೆನಲ್ ಶಿಶುಪಾಲನಿದಿರ್ಚೆ (ಜಗನ್ನಿ. ೭–೯೫).

[ಅಟ್ಟು$_0$ + ಅಲೆ$_1$. ಔ ತಮಿ. ಅಟ್ಟು= ಬೆನ್ನಟ್ಟು, ಹಿಂಸಿಸು]

**ಆಟಲೆ**$_2$ (ನಾ). ಹಿಂಸೆ; ಕಾಟ: ತರತರದಿ ವಿಟಗಾರರಾಟಲೆಯ ಕೋಟಲೆಯ ನೆರೆನೆರೆದು ಚರಚರಿಸಿ ಗರಗರಿಸಿ ಬಿಡುಬಿಡುವಿನಿರವಿರವನಾರೈದು ಸೇರುವರ್ (ಜಿನಮು. ೪೯–೧೩). [< ಆಟಲೆ$_1$]

**ಆಟವಾಡಿಸು** (ಕ್ರಿ). ಆಡುವಂತೆ ಮಾಡು: ಅವರ ತಾಯಿ ಮನೆಯಲ್ಲಿಲ್ಲದಾಗ ಅದನ್ನು ಮನೆಯೊಳಗೇ ಕರೆದುಕೊಂಡುಹೋಗಿ ಆಟವಾಡಿಸುತ್ತಿದ್ದ (ಶಾಲೆಮ. ೧೧೬). [ಆಟವಾಡು + –ಇಸು$_1$]

**ಆಟವಾಡು** (ಕ್ರಿ). ಆಟವನ್ನು ಆಡು: ಕೋಡಗದಾಟವಾಡುವ ಭೃಂಗಿಯೈತಂದಾ (ಬಸಪು. ೫೯–೭); ಮೂರು ನಾಲ್ಕು ಸಣ್ಣ ಹುಡುಗರು ಆಟವಾಡುತ್ತಿದ್ದರು (ಕಳಹು. ೧೦೮). [ಆಟ + ಆಡು$_1$]

**ಆಟವಿಕ**$_1$ (ನಾ). ಆಟಗಾರ; ನಟ: ಆಟವಿಕನೊಂದೊಂದು ಬಹುರೂಪಮಂ ತಾಳ್ದು ನಾಟಕವನಾಡಿ (ಜೈಮಿಭಾ. ೧೫–೩೯).

[ಆಟ + –ಇಕ]

**ಆಟವಿಕ**$_2$ (ನಾ). ೧. ಅಡವಿಯಲ್ಲಿ ವಾಸಮಾಡುವವನು; ಕಿರಾತ; ಬೇಡ: ಕಪ್ಪವಿಾಯದ ಮಂಡಳಿಕರುಮಂ ಅಡಂಗದಾಟವಿಕರುಮಂ (ಆದಿಪು. ೪–೮೨ ವ); ಅಂತಃಕಂಟಕರಂ ಪಡಲ್ವಡಿಸಿ ದುರ್ಗಾಧೀಶರಂ ದುಷ್ಟ ಸಾಮಂತದ್ರೋಹರನುದ್ಧತಾಟವಿಕರಂ ನಿರ್ಮೂಳನಂಗೆಯ್ದು (ಸುಕುಮಾ. ಪರಿ. ೨೫೯–೧೧); ದೇವರ್ ದಿಗ್ವಿಜಯ ವ್ಯಸನಾವಷ್ಟಂಭದೊಳೆ ನಡೆಯದಾಟವಿಕರೊಳಾದೀ ವಿಗ್ರಹಕ್ಕೆ ನಡೆವುದಿದಾವುದೊ ಜಸಂ (ಪಂರಾಮಾ. ೪–೪೭); ಆಲಜಿ ವಿರೋಧಿಸಂನ್ನಮುಸಮಳ್ಕಿರೆಯಾಟವಿಕೋದ್ಧಕೈರವಂ ಸಲೆ ಪೊದಳ್ದೆಯ್ದೆ ಸಜ್ಜನ ಬಿಸಂ ಪ್ರವಿಕಾಸಮಂ (ಎಕ. VII, ಶಿಕಾರಿ. ೨೨೫–೮೬; 1204); ಆಟವಿಕರ ಮನ್ನೆಯ ಸಾಮಂತರ ಕೂಟವ ನೋಡಿ ಭೂವರನು ತೋಟಿಯ ಗೆಲಬಹುದಿನ್ನೆಂದು ಸಂದೇಹದಾಟವಾ ಪರಿಹರಿಸಿದನು (ಕುರಾಸಾಂ. ೧೧–೭). ೨. ಧೂರ್ತ: "ಆಟವಿಕನೆನೆ ಧೂರ್ತಂ" (ಭಾರನಿ. ೬೧); ಆಟವಿಕರಿವದಿರಲಿ ಬಲಿದೊಳ ತೋಟ ಬಜಿದೇ ಬಿಡದು (ಕುವ್ಯಾಆ. ೬–೧೭). [ಸಂ.]

**ಆಟವಿಕತನ** (ನಾ). ಧೂರ್ತತನ; ದುಷ್ಟತನ: ಕೋಟಿ ಕಮಲಭವಾಂಡಗರ್ಭನೊಳಾಟವಿಕತನ ಸಲುವುದೆ (ತೊರರಾ. ೬–೪–೫೧); ಕೋಟಿಕಾಲರ ತಜಿವ ಮಹಿಮನೊಳಾಟವಿಕತನ ಕೊಂಬುದೇ (ಕೋಗಯ. ೧೮–೩೭). [ಆಟವಿಕ$_2$ + –ತನ]

**ಆಟವಿಕಬುದ್ಧಿ** (ನಾ). ಕಾಡುಜನದ ಬುದ್ಧಿ: ನೋಟವಿಲ್ಲದ ಸುರರಪಜಿಯ ಗೋಟು ಸಾಕೆಮಗೆನುತ ಮೆಲ್ಲನೆಯಾಟವಿಕಬುದ್ಧಿಯಲಿ ಕುಳ್ಳಿದರವರು ವಿನಯದಲಿ (ಸಂಭಪು. ೫–೧೨೫).

[ಆಟವಿಕ$_2$ + ಬುದ್ಧಿ]

**ಆಟವಿಕಭೂಪತಿ** (ನಾ). ೧. ಕಾಡುಜನರ ಒಡೆಯ. ೨. ದುಷ್ಟರ ಒಡೆಯ: ಆಟವಿಕಭೂಪತಿಯ ಕೀರ್ತಿಯ ಕೂಟಣಿಗರೊಗ್ಗಾಯ್ತು ತೆಗೆ ಮರುಳಾಟವಿನ್ನೇಕೆನುತ ಪಾರ್ಥನ ತಾಗಿದನು ದ್ರೋಣ (ಕುವ್ಯಾವಿ. ೮–೨೯). [ಆಟವಿಕ$_2$ + ಭೂಪತಿ]

**ಆಟವಿಕೆ** (ನಾ). ಧೂರ್ತತನ; ದುಷ್ಟವರ್ತನೆ: ಚಂದವಾಯಿತು ತಂಗಿ ನಿನ್ನಯ ರಮಣನಾಟವಿಕೆ ಎಂದಿನಂತಿರಲೀಗ ತಮ್ಮೊಡೆಗಿಂದು ನೂತನ ತೋಜುತಿದೆ (ಕೋಗಯ. ೧೪–೨೪). [ಆಟವಿಕ$_2$ + –ಎ$_4$]

**ಆಟವಿಗ** (ನಾ). = ಆಟವಿಕ$_2$: ಕಾಟಕೊಳಗಾಗದೆ ಕರಣಕರ್ಮೇಂದ್ರಿಯ ಭ್ರಮೆಯ ಆಟವಿಗರೊಡನಾಟದಿಚ್ಛೆಯ ಕೋಟಲೆಗೆ ಮೈಗೊಡದೆ (ನಿಭಾಗ. ೪–೧೫–೭). [ಸಂ. ಆಟವಿಕ]

**ಆಟವಿಟ** (ನಾ). ಮೋಸಗಾರನಾದ ಅಥವಾ ಕಪಟಿಯಾದ ಜಾರ, — ವಿಟ (?) : ಅಮೃತದ ಕಂಡಸಕ್ಕರೆಯ ಕೂಟಮುಮೊಲ್ವಳ ಕೂಟಮುಂ ಸಮಾನಮೆ ವಲಮೊಲ್ಲದಳ್ಗೆ ವಿಟನಾ[ಪಾಠಾಂ. ನೇ]ಟವಿಟಂ ಬರೆ ಕೂಟಮಿಂಪನೀಗುಮೆ (ಕಾವ್ಯಾವ. ೧೪೪) ; ನಾಣಲಿ ನಿಟ್ಟುರಂ ಸಿತಗ ನಾಟವಿಟಂ[ಪಾಠಾಂ. ಏಟವಿಟಂ]ತುದಿಗೋಡ ಪಾಜು ನಿನ್ನಾಣೆ ಗಡಾಗಡುಂ ನಿನಗೆ ಕೂರದರೊಳ್ ಬೆರಸಿರ್ಪಂ (ಲೀಲಾವ. ೨–೧೨೩).

[ಆಟ್$_0$ + ವಿಟ. P ಸಂ. ಚಾಟ = ಮೋಸಗಾರ, ಕಪಟ]

**ಆಟವಿಟಂಬರಿಸು** (ಕ್ರಿ). ಮೋಸಗೊಳಿಸು ; ಕಪಟಕ್ಕೆ ಒಳಗಾಗಿಸು: "ಗಾಯಗೊಳಿಸು" (ಲೀಲಾವ. ಕೋಶ) ; "ಚಂಚಲಗೊಳಿಸು" (ಪ್ರಭಣ್ಣ) : ನಾಟುವ ನನೆಗಣೆ ಚಿತ್ತಮನಾಟವಿಟಂಬರಿಸೆ ನೆನೆಹದಿಂ ಪೊಸವೇಟಂ ಕೋಟಿತೆಜನಾಗೆ ಕಾಮಿನಿ ಬೇಟದ ಕಥೆಗಳನೆ ಕೇಳಲಟ್ಟಿಗೆಯಾದಳ್ (ಲೀಲಾವ. ೯–೧೨೨) ; ಮತ್ತೊರ್ವಳ್ ತನ್ನನೊಲಿಸಿಪ್ಪೈದೆಗೆದು ಬಲಿದು ಕಾಡುವ ವಿಟನ ಕಾಟಮಾಟವಿಟಂಬರಿಸೆ ಕೂಟದೊಳಿರ್ದಾಕೆಯಿಂತೆಂದಳ್ (ಅನಂಪು. ೮–೧೭ ವ).

[ಆಟವಿಟ + ಬರ್ + –ಇಸು$_3$]

**ಆಟಹೂಡು** (ಕ್ರಿ). ೧. ಆಟವನ್ನು ಆರಂಭಿಸು. ೨. ತಂತ್ರಹೂಡು ; ನಟನೆಮಾಡು : ಅವನಾದರೂ ಅದೆಷ್ಟು ಆಟಹೂಡಿ ತನ್ನನ್ನು ಬಲೆಗೆ ಬೀಳಿಸಿಕೊಳ್ಳುವ ಯತ್ನಮಾಡಿದ್ದಾನೆ (ಕುಸುಸಂ. ೨೬೫).

[ಆಟ + ಹೂಡು (< ಪೂಡು)]

**ಆಟಾರು** (ಕ್ರಿ). (ದಕ). ತೃಪ್ತಿಯಾಗು ; ಸಾಕಾಗು : ಎಷ್ಟು ತಿಂದರೂ ಅವನಿಗೆ ಆಟಾರೋದಿಲ್ಲ (ರೂಢಿ).

[ಆಟ್ಟು$_0$ + ಆರು$_2$ (< ಆರ್$_2$). / **ತೆಲು.** ಆಟು = ಸಾಕಾಗು]

**ಆಟಾಳಿ** (ನಾ). = ಆಟಗುಳಿ. 'ಆಟಾಳಿತನ' ಪರಾ. [ಆಟ + –ಆಳಿ$_4$]

**ಆಟಾಳಿತನ** (ನಾ). ಆಟದಲ್ಲಿ ಹೆಚ್ಚು ಆಸಕ್ತಿಯಿರುವುದು ; ಕ್ರೀಡಾಶೀಲತೆ : ನಿನಗೆ ಹುಚ್ಚೆದ್ದಂತೆ ಮಸಗುವ ಮನೋರಂಜನದ ಆಟಾಳಿತನಕ್ಕೆ, ನಿನ್ನ ಅಂಕೆಯೆಲ್ಲೆಗಳಿಲ್ಲದ ದಾನಧರ್ಮಗಳಿಗೆ (ಮಂತ್ರಶ. ೨೫–೧೬).

[ಆಟಾಳಿ + –ತನ]

**ಆಟಾಳು** (ನಾ). ಶಕ್ತ ; ಸಮರ್ಥ : ಆಟಾಳದಾರು ಪೋಪರು ಕೇಳು ಮಿಕ್ಕಿನ ಪೋಟಾಳುಗಳಿಗೆ ಗೋಚರವೇ (ಮೋಹತ. ೩೩–೧೮) ; ಆಟಾಳಿಗೊಂದು ಮೋಟಾಳು ಬೇಕೊ (ಗಾದೆ. ೩).

[ಆಟ್$_0$ + ಆಳು$_2$ (< ಆಳ್$_2$). / **ತಮಿ.** ಆಟ್ಟಾಳಿ = ಶಕ್ತ, ಸಾಮರ್ಥ್ಯ, ಶಕ್ತ]

**ಆಟಿ$_1$** (ನಾ). (ಸೌರಮಾನದ) ಆಷಾಢಮಾಸ; ತಮಿಳಿನ ಆಡಿ ಮಾಸ; ಕರ್ಕಾಟಕ ಮಾಸ: ಆಟಿಯ ಕಾರಿರುಳೊಳ್ ಬೀಸುವ ಮಳೆಯಲ್ಲಿ (ಗಿಳಿವಿಂ. ೯೪–೩೬) ; ತುಳುಜನರಲ್ಲಿ ವಧುವನ್ನು ಆಟಿಯಲ್ಲಿ ಒಂದು ತಿಂಗಳು ತವರಿನಲ್ಲಿ ಕುಳ್ಳಿರಿಸಿ ಆರೈಕೆ ಮಾಡುವುದು ಒಂದು ಕಟ್ಟಳೆ (ಒಡ್ಡಿಉ. ೧).

[← **ತಮಿ.** ಅಡಿ ; **ತುಳು.** ಆಟಿ. < **ಸಂ.** ಆಷಾಢ]

**ಆಟಿ$_2$** (ನಾ). ಒಂದು ಹಕ್ಕಿ ; ಸರಕುಟ ಹಕ್ಕಿ : "ಆಟಿಃ, ಶರಾರಿಃ, ಆತಿಃ — ಈ ೩ ಸರಕೂಟವಕ್ಕಿ" (ಹಲಾಯು. ೪೨–೯೬). [**ಸಂ.**]

**ಆಟಿಕೆ, ಆಟಿಗೆ** (ನಾ). ೧. ಆಟದ ಸಾಮಾನು : ರಕ್ಕಸರು ಹಿಡಿದೊಯ್ದು ಸೆರೆಯೊಳಗಿಕ್ಕಿದರು ಬಲು ಸಂಕಲೆಗಳನು ಮಕ್ಕಳಾಟಿಕೆ ಮಾಡಿದನೊ (ಕೌಶಿರಾ. ೩೯–೧೯) ; ಭಟ್ಟನಿಯನ್ನು ನಾನು ರಾಜನೀತಿಯ ಆಟಿಕೆಯಾಗಲು ಬಿಡುವುದಿಲ್ಲ (ಬಾಣಅ. ೩೩೨) ; ಈ ಬಣ್ಣದ ಆಟಿಕೆಗಳನ್ನು ಎನ್ನ ಹಾದಿಯಲ್ಲಿ ಹರವಬೇಡ (ಅಂತರಾ. ೩೩). ೨. ಆಟ ; ಲೀಲೆ : ಮಕ್ಕಳಿರ ನಿಮಗೇಕೆ ರಣವಿದು ಮಕ್ಕಳಾಟಿಕೆಯಾಯ್ತಲಾ (ಕುವ್ಯಾಶ. ೨–೩೬) ; ಸೊಕ್ಕಿ ತನಗೊರ್ವ ಮಗನಂ ಮಾಡಿಕೊಂಡವನ ಮಕ್ಕಳಾಟಿಕೆಯಿಂದೆ ದೇವತಾಲಯ ತಟಾಕಾರಾಮಕೊಡಮೆಗಳನು ಇಕ್ಕಿ ಕೆಡಿಸಿದನೆಂದು (ಜೈಮಿಭಾ. ೩೧–೨೭) ; ವೈರಿಗಳನ್ನು ಗೆಲ್ಲುವುದು ಆಟಿಕೆಯಾಯ್ತು (ಕಂಸುಹು. ೧೩೬). **ಆಟಿಗೆ : ೧.** ದೈವವು ನನ್ನ ಬಾಳುವೆಯನ್ನು ತನ್ನ ಆಟಿಗೆಯನ್ನಾಗಿ ಮಾಡಿಕೊಂಡಿದೆ (ಹಾಹುತ್ತ. ೪೬) ; ಮುತ್ತುಮಾಣಿಕಗಳಿಂದ ಮಾಡಿದ ಆಟಿಗೆಯ ಸಾಮಾನುಗಳ ಸಂಗಡ, ಆಡಿ ಹಾಡಿ (ಬ್ರಹ್ಮಜೀ. ೧೨) ; ಕಪಾಟನಲ್ಲಿ ಅವಳ ಚಿಕ್ಕಂದಿನ ಹಲವು ಆಟಿಗೆ ಗೊಂಬೆಗಳಿದ್ದವು . . . ಆ ತೆರದ ಆಟಿಗೆಗಳನ್ನು ಆ ಮಗು ಮೊದಲೆಂದೂ ನೋಡಿರಲಿಲ್ಲ (ಎರಸೆ. ೬). [ಆಟ + –ಇಕೆ]

**ಆಟಿಕೊಡಂಜಿ** (ನಾ). ತುಳುನಾಡಿನಲ್ಲಿ ಕರ್ಕಾಟಕ ಮಾಸದಲ್ಲಿ ಆಟಕ್ಕಾಗಿ ವೇಷಧರಿಸಿಕೊಂಡು ಬರುವ ವ್ಯಕ್ತಿ : ಅವನ ನಾಟಕೊಡಂಜಿ ಮಾಡಿ ತಂಬಟಿಗೆ ನಾಂ ಚಪ್ಪಳಾಡಿ (ಗಿಳಿವಿಂ. ೬೧).

[ಆಟಿ$_1$ + ಕೊಡಂಜಿ]

**ಆಟಿಗದ್ದೆ** (ನಾ). ಆಟಿ ತಿಂಗಳಲ್ಲಿ ವ್ಯವಸಾಯಕ್ಕೆ ಬರುವ ಗದ್ದೆ : ಅಲ್ಲಳದ ಬೆಟಲಿ ಬೊ[ರಿ]ಗಳಿಂದ ಸರಳ ಆಟಿಗದ್ದೆ [೫] ಮು ೩ ಕಣಾರ ಪಾಡಲಿ ಕೆರೆ (ಸೌಇಎ. ೧೯೩೦, ಉಡುಪಿ. ೫೬೫–೨೭ ; ?)

[ಆಟಿ$_1$ + ಗದ್ದೆ (< ಗಜ್ದೆ)]

**ಆಟಿಗೆ** 'ಆಟಿಕೆ' ನೋ.

**ಆಟಿಗೆಗೊಂಬೆ** (ನಾ). ಆಟದ ಗೊಂಬೆ : ಅವಳ ಕಪಾಟನಲ್ಲಿ ಅವಳ ಚಿಕ್ಕಂದಿನ ಹಲವು ಆಟಿಗೆಗೊಂಬೆಗಳಿದ್ದವು (ಎರಸೆ. ೬).

[ಆಟಿಗೆ (< ಆಟಿಕೆ) + ಗೊಂಬೆ]

**ಆಟಿಡು** (ಕ್ರಿ). (ಶತ್ರುವಿನ ಮೇಲೆ) ತೂಗಿ ಬೀಸಿ ಎಸೆ : ಭಿಣ್ಡಿವಾಳಮೆತ್ತಿದ ಕರವಾಳಮಾಟಿಡುವ ಕರ್ಕ್ಕಡೆ ಪಾಜುವ ಚಕ್ರಮೆಂದೊಡೆಂತೊದಱುವರ್ (ಎಕ. VII, ಶಿಕಾರಿ. ೧೩೬–೨೮ ; 1068).

[ಆಟು + ಇಡು]

**ಆಟಿಸು$_1$** (ಕ್ರಿ). ಬಯಸು ; ಆಸೆಪಡು ; ಅಪೇಕ್ಷಿಸು : ನರಕಂಬುಗಲಾಟಿಸಿದಪ್ಪಯ್ (ವಡ್ಡಾರಾ. ೧೩೨–೫) ; ಪೊಸಗೆಂಪಂ ಮಾಂಸಮೆಂದುಮುಂ ಕರ್ದುಕಲ್ಕಾಟಿಸಿಯುಂ (ಆದಿಪು. ೧೨–೧೨೩) ; ಅನ್ಯಕಾಂತೆಗಾಟಿಸಿದ ದುರಾತ್ಮನಂ (ಪಂರಾಮಾ. ೧೧–೫) ; ತಕ್ಕುದನುಂಡನುದಿನ ಕಾಯಜಸುಖಕಾಟಿಸುತ (ಚಂಪ್ರಸಾಂ. ೫–೪೧) ; ಪಿಡಿಯಂ ಕೆಚ್ಚಲ ಪಾಲ್ಗಮಾಟಿಸಿ ಕೆಲಂ ಸಾರ್ದೊರ್ತ್ತಿ ಶುಂಡಾಲದಿಂ (ವೈಸೂಮೆ. ೧–೩೮).

[ಆಟ ? + –ಇಸು$_3$]

**ಆಟಿಸು$_2$** (ಕ್ರಿ). ಅಲ್ಲಾಡಿಸು ; ಅತ್ತಿತ್ತ ಆಡಿಸು ; ತೂಗಾಡಿಸು : ಮುಕ್ಕೊಡೆಯೊಳಿರ್ದ ವೈಡೂರ್ಯ ಮಾಣಿಕಮಂ ನೋಡಿ . . . ಪೆಱರ್ಕೆಳದಂತಾಟಿಸಿ ಕೀಲಂ ಕಳೆದು ನೆಲಕ್ಕೆ ಬೀೞಲೀಯದೆ ಪಿಡಿದುಕೊಂಡು (ಧರ್ಮಾಮೃ. ೬–೮೦) ; ಮೀಟನ ಭಟರ ಮೇಳದೆ ತೇಜಿಯನಿರದಾಟಿಸುತಲಿ ಬಹನಾರೆ ಕೋಟೆಯ ತಿಮ್ಮೇಂದ್ರನಿವನೀಗ ವಿಜಯ ವಧೂಟೀಶ್ವರ ರಣದೊಳಗೆ (ಕಂನವಿ. ೨೫–೪೯). [ಆಟು + –ಇಸು$_3$]

**ಆಟು** (ಕ್ರಿ). ಅಲ್ಲಾಡಿಸು ; ತೂಗಾಡಿಸು. 'ಆಟಿಡು', 'ಆಟಿಸು$_2$' ಪರಾ. [ದೇ. ‖ **ತಮಿ.** ಆಟ್ಟು = ಅಲ್ಲಾಡಿಸು, ತೂಗು ; **ಮಲ.** ಆಟು]

**ಆಟುಳಿಕೆ** (ನಾ). ಹಿಂಸೆ ಮಾಡುವವನು ; ಹಿಂಸಕ. 'ಆಟುಳಿಕತನ' ಪರಾ. [ಆಟುಳಿ$_0$ (< ಆಟ್ಟುಳಿ) + –ಕ$_3$]

**ಆಟುಳಿಕತನ** (ನಾ). ಹಿಂಸೆಮಾಡುವುದು : ಆಟುಳಿಕತನದಿನನ್ಯಾಯದಿಂದಾ ಪಲವು ಕೋಟಿ ಕಾಲ ಮೊದಲ್ನಡೆದ ಫಲದಿಂದ ಬಹು ಕೀಟಕಂ ಮೊದಲಾದ ಗತಿಗಳೊಳ್ ಜನಿಸಿ (ಸಮ್ಯಕೌ. ೧೨–೨೩).

[ಆಟುಳಿಕ + –ತನ]

**ಆಟೋಪ₁** (ನಾ). ೧. ಆಡಂಬರ; ಸಂಭ್ರಮ; ಅಬ್ಬರ: ಸಮದ ಗಜಘಟಾಟೋಪಂಬೆರಸು ನೆಲನದಿರೆವಂದು ತಾಗಿದ (ಪಂಪಭಾ. ೯–೫೨ ವ); ತತ್ತ್ವಂ ಸಪ್ತಭೇದಂ ಜಿನೇಶ್ವರ ವಕ್ತ್ರಾಬ್ಜವಿನಿರ್ಗತಂ ಸಕಲ ಪಾಪಾಟೋಪತಾಪಾಪಹಂ (ಸುಕುಮಾ. ೮–೪); ಹೊಸತಾಯ್ತಲ್ಲಮ ನೂಟದಾಟೋಪ (ಪ್ರಭುಲೀ. ೨೩–೩೮); ಉಕ್ಕಿದುರಿಯಗ್ಗಳದ ಶೀತಳ ವಾಯ್ತು ಸಿಡಿಲಾಟೋಪ ನಯವಾಯ್ತು (ಕುವ್ಯಾಉ. ೬–೧೧). ೨. ದರ್ಪ; ಗರ್ವದ ಪ್ರದರ್ಶನ: ಕೋಪಾಟೋಪದಿಂ ಜಜಿದು ಝುಂಕಿಸಿದನವನಿಪನನಾಮಿಕನನು (ಹಚಕಾ. ೧೧–೧೯); ಶರಭನಾಟೋ ಪವನು ನೋಡಾ ಕಾಂತೆಯರು ಬೆದಜುತವೆ (ಅಂಜಚ. ೧೦–೩೭); ಎಲ್ಲಿ ನಿನ್ನಾಟೋಪ ಹಿಂದಣ ಹೊಳ್ಳುನುಡಿ ಹಾಜಿದವೆ (ಕುವ್ಯಾದ್ರೋ. ೧೩–೬೧); ನಡೆತರೆ ರಣಾಟೋಪದಿಂದ (ಸೌಂದಪು. ೧೬–೨೪). [ಸಂ.]

**ಆಟೋಪ₂** 'ಅಟೋಪ' ನೋ.

**ಆಟೋಪಂಬೆಜು** (ಕ್ರಿ). ಆಟೋಪವನ್ನು ಹೊಂದು; ದರ್ಪವನ್ನು ಪಡೆ: ಖೇಚರಚಯಮೆಬ್ಬಾ ಪವನಪಥದಿನಾರ್ದಾಟೋಪಂಬೆತ್ತಂದು (ನೇಮಿಪು. ೧೨–೯೦). [ಆಟೋಪ₁ + ಪೆಜು₁]

**ಆಟೋಪಿಸು** (ಕ್ರಿ). ಗರ್ಜಿಸು; ದರ್ಪವನ್ನು ಪ್ರಕಟಿಸು; ಅಬ್ಬರಿಸು: ಇವರನ್ನು ಹೇಳಹೆಸರಿಲ್ಲದಂತೆ ಮಾಡುವೆನೆಂದು ಆಟೋಪಿಸುತ್ತಿತ್ತು (ಗುರುಚ. ೩೬). [ಆಟೋಪ₁ + -ಇಸು₃]

**ಆಟೋಪು** 'ಅಟೋಪ' ನೋ.

**ಆಟ್ಟೆ** (ನಾ). ಗೋಪುರ; ಶಿಖರ(?): ಮೂವಿ ಅಟ್ಟೆಗಳ್ × × × ಬಿಪ್ಪಿ ನಲ್ಸುರರ ಸೌಖ್ಯಮು ನಿಮ್ಮೊಡಗೊಣ್ಡರಾಟ್ಟಮುವ್ (ಎಕ. II, ೧೦೭–೪; 700). [?]

**ಆಟ್ಟತನ** (ನಾ). ನರ್ತನ: ಆ ಸದ್ಗುರುವಪ್ಪ ನಂದೀಶನ ಶ್ರೀಚರಣಾರ ವಿಂದಧ್ಯಾನಾರೂಢನಾಗಿ ಅನೇಕ ಕಲ್ಪಂಬರಂ ತಪಂಬಟ್ಟಾಟ್ಟತನಮಂ ಭವಿತನಮಂ ನೀಗಿಯಾ ನಂದೀಶ್ವರನಿಂ ಗುರುಕಾರುಣ್ಯಮಂ ಪಡೆದು (ಸಾನಂಚ. ಪೀ. ೨೩ ವ). [ಆಟ್ಟ₀ + -ತನ. / ತಮಿ. ಆಟ್ಟು = ನರ್ತನ]

**ಆಟ್ಟುವೆಣ್** (ನಾ). ಕುಣಿತದ ಹೆಣ್ಣು; ನರ್ತಕಿ: ಇದಾನಟಿಿತ್ತೊನ್ನಪ್ಷ್ಟ ಮಹಾಪಾತಕನಾಗಿ ದಿಟ್ಟಗಲುಣ್ಣ ಕೊಟ್ಟತೇದು ಅಟ್ಟುವೆಣ್ಣೆತ್ತಲ ಪೂಸುವೋನಕ್ಕು ಒಕ್ಕಲುಳ್ಪೊತ್ತಿ ಮಕ್ಕಳ್ಪಟ್ಟಿದೆ ಕೆಡುಗ (ಎಕ. III, ನಂಜನ. ೨೬–೬; 810). [ಆಟ್ಟು₀ (< ಆಡು₁) + ಪೆಣ್]

**ಆಟ್ಟೆಗಳವು** (ನಾ). (?): ಕಬ್ಬಿಣಗಳ ಮಾಡುವಂತ್ಥವರು ವಂಮುಳ ೧ಕ್ಕಿಲ್ ಕಬ್ಬಿಣದ ಮುದ್ದೆ ೧ ದವಣ ೧ಕ್ಕಿಲ್ ೧ ಆಟ್ಟಗಳವುದಿ ೧ಕ್ಕೆ ವರ್ತನೆಲೆಂ॥ (ಎಕ. XI, ಹಿರಿಯೂ. ೮೮–೨೬; 1589). [?]

**ಆಠವಣೆ** 'ಅಟ್ಟವಣೆ' ನೋ.

**ಆಠವಣೆಇಲಾಖೆ** 'ಅಟ್ಟವಣೆಇಲಾಖೆ' ನೋ.

**ಆಡ** (ನಾ). ಒಬ್ಬಾತನ ಹೆಸರು.

ಆಡನ ಮಣ್ = ಆಡ ಎಂಬಾತನಿಗೆ ಸೇರಿದ ಅಥವಾ ಆತನ ಹೆಸರಿನಲ್ಲಿರುವ ಜಮೀನು: ತಾವರೆಯ ಕೆಜೆಯ ಕೆಳಗಣ ಆಡನ ಮಣ್ಣಂ ಧಾರಾಪೂರ್ವ್ವಕಂ ಕೊಟ್ಟರ್ (ಮೈಆರಿ. ೧೯೩೯, ೩೭–೩೭; 1096). [?]

**ಆಡಂಗಿ** (ನಾ). ಹೆಂಗಸು (ಶ). [← ತೆಲು. ಅಡದಿ]

**ಆಡಂಬರ** (ನಾ). ೧. ತೋರಿಕೆ; ಡಬಡ್ಡಾಳಿಕೆ; ಡಂಭ; ಮೆರೆತ; ಬಡಾಯಿ: ಸಂಬಂಧಾಕ್ಷರದೊಳೆಲ್ಲ ಮಾತ್ರೆಗಳುಂ ತಳ್ತಿಂಬಾಗೆ ಬೆರಸಿ ಶೋಭಾಡಂಬರಮಂ ಪಡೆಗುಂ (ಛಂದೋಂಬು. ೧–೫೧ ಅಡಿಟಿ); ಅತಿ ದೀರ್ಘಸಮಾಸಾಂಚಿತಗತಿ ಶಬ್ದಾಡಂಬರಾನುವಿದ್ಧಂಕ್ರೋಧಾದ್ಭುತರೌದ್ರ ವೀರರಸಂಗತಮುಂತದು ಗೌಡರೀತಿ ಪರುಷಪ್ರಾಯಂ (ಕಾವ್ಯಾವ. ೭೮೬); ತ್ರ್ಯಂಬಕಾರ್ಚನೆಗೆಂದು . . . ಒಂದುದಿನವಾಡಂಬರದ ಮಳೆಯೊಳು ಕುಸುಮತತಿಯಂ ತಿರಿದುಕೊಂಡು (ಬಸಪು. ೧೦–೯); ಭೂಮಿಜರು ತಾವಜಿಯರಾಡಂಬರದ ಭಕ್ತಿಯಲಿ (ಪ್ರಭುಲೀ. ೧–೨೮); ಆಡಂಬರದ ಲಗ್ಗೆಯಲೊದಜಿದವು ನಿಸ್ಸಾಳಕೋಟಿಗಳು (ಕುವ್ಯಾಕ. ೨–೨೮); ಡೊಂಬಿನ ಚತುರ್ಬಲಮಿದೇಕೆ ಭೂಪಾಲರಾಡಂಬರದ ಛತ್ರ ಚಮರಂಗ ಳೇತಕೆ (ಜೈಮಿಭಾ. ೧೭–೫೪); ಹೆಮ್ಮೆಯೊಡನೆ ಆಡಂಬರವೂ ಹೆಚ್ಚು (ಮಣಿಸ. ೫೨). ೨. ಕಾಳಗದಲ್ಲಿ ಬಾರಿಸುವ ತಮ್ಮಟೆ; ಯುದ್ಧ ಭೇರಿ: ವೇದಗಳಲ್ಲಿ ವೀಣೆ . . . ಭೂಮಿದುಂದುಭಿ, ಆಡಂಬರ ಮುಂತಾದ ವಾದ್ಯಗಳ ಉಲ್ಲೇಖವಿದೆ (ಭಾರದ. ೫೩೭). ೩. ಗುಡುಗು; ಮೇಘ ಗರ್ಜನೆ. ೪. ಆನೆಯ ಮರಿ. ೫. ಪ್ರಪಂಚ; ವಿಸ್ತಾರ: "ದ್ವಿಪದ ಮಜಿಯೊಳು ಪ್ರಪಂಚದೊಳು ಗರ್ಜಿತದೊಳಾಡಂಬರಾಖ್ಯಮದು" (ಮಂಗರಾ. ೧೪೪–೨೬); "ಅಭ್ರಗರ್ಜಿತಮುಂ ಡಂಬ ಮತಂಗ ಪೋತ ಕಮಿವಿಂತಾಡಂಬರಾವಾಚಕಂ" (ನಾನಾರ. ೧೩೬). [ಸಂ.]

**ಆಡಂಬುಬಳ್ಳಿ** (ನಾ). ಒಂದು ಗಿಡದ ಹೆಸರು (ಮೈಔಗಿ. ೨೩–೪೨೪). [ಆಡಂಬು₀ + ಬಳ್ಳಿ]

**ಆಡನೂರು** (ನಾ). ಒಂದು ಊರಿನ ಹೆಸರು: ಶ್ರೀಮತ್ ಕನ್ನಯ್ಯ ಆಡನೂರನಭ್ಯಂತ್ತರಸಿದ್ಧಿಯಾಗೆ ಏಳುಂ ಗೌಡಳುಂ (ಎಕ. XI, ಹೊಳಲ್ಕೆ. ೩೦–೫; 964). [ಆಡ + ಊರು₃ (< ಊರ್)]

**ಆಡನೆಲ್ಲಿಗಿಡ** (ನಾ). ಒಂದು ಜಾತಿಯ ನೆಲ್ಲಿಯ ಗಿಡ (ಶ). [ಆಡು₂ + ನೆಲ್ಲಿ + ಗಿಡ (< ಗಿಡು)]

**ಆಡಪಗಡಿ** (ನಾ). ಅಡ್ಡರುಮಾಲು: ಪರಸತಿಯರ ಬಯಸುವಗೆ ಪನ್ನಗಶಯನವೇಕೆ ಹರಿದಾಡುವನಿಗೇಕೆ ಆಡಪಗಡಿ[ಪಾಠಾಂ. ಆಡಪಡವಿಕೆ] (ಪುರಂದ. ೧–೧೦೦–೩). [← ಮರಾ. ಆಡಪಗಡೀ ?]

**ಆಡಯಾಲ** (ನಾ). ಒಂದು ಗಿಡದ ಹೆಸರು (ಮೈಔಗಿ. ೪೬–೯೨೪). [?]

**ಆಡಲಬು** (ನಾ). ನೆಲದಲ್ಲಿಯೇ ಹರಡಿಕೊಂಡು ಬೆಳೆಯುವ ಒಂದು ಗಿಡ. (ಶ). [?]

**ಆಡಲು** (ನಾ). ಒಂದು ಜಾತಿಯ ಹರಳು, —ಔಡಲ. 'ಆಡಲು ಹರಳುಗಿಡ' ಪರಾ. [?]

**ಆಡಲುಹರಳುಗಿಡ** (ನಾ). ಕಾಡುಹರಳು; ಅವುಡಲು (ಶ). [ಆಡಲು + ಹರಳು + ಗಿಡ (< ಗಿಡು)]

**ಆಡವಲ** (ನಾ). ಬಯಲು; ಸಾಗುವಳಿಮಾಡದ ನೆಲ (?): ಕೆಜಿಗೆ ಕೊಟ್ಟ ಗದ್ಯಾಣಂ ೪೦ ಆಡವಲಂ ಗದ್ಯಾಣಂ ೧ ತಪ್ಪಿದಂ ಕವಿಲೆಯ ನಳಿದಂ (ಎಕ. IX, ಕೊಡಗು. ೪೯–೧೨; 1070); ನೀರಗಾವುಣ್ಡನ ಕೆಯ್ಯ ಲ್ಪೊನ್ನಜಿಕೊಟ್ಟು ಮಣ್ಣಜಿಕೊಣ್ಡು ಪತ್ತುಖಣ್ಡುವೆಯ ಆಡವಲಂ ಕೊಟ್ಟಂ ತಪ್ಪಿದಂ ಕವಿಲೆಯನಳಿದಂ (ಎಕ. IX, ಕೊಡಗು. ೫೦–೯, 1070). [< ಅಡುವೊಲ ?]

**ಆಡಸೋಗೆ** 'ಆಡುಸೋಗೆ' ನೋ.

**ಆಡಳತೆ** 'ಆಡಳಿತ' ನೋ.

**ಆಡಳಿತ, ಆಡಳತೆ, ಆಡಳಿತೆ** (ನಾ). ಸಂಸ್ಥೆಯ ಅಥವಾ ರಾಜ್ಯದ ಮೇಲ್ವಿಚಾರಣೆ; ಅಧಿಕಾರ ನಡೆಸುವುದು; ವ್ಯವಹಾರ; ಆಳಿಕೆ: ನಿಗರ್ವರಗ್ರದಮಣಿಯು ಪೇಳಿದನೂರ್ವಿಯಾಡಳಿತವನು ಲಾಲಿಪುದೊಲವಿನೊಳಗೆಂದು (ಬಜ್ಜಪು. ೬೬–೧೪); ರಾಜ್ಯಭಾರದ ಕೆಲಸ, ಆಡಳಿತ ಹೂವಿನ ಹಾಸಿಗೆ ಅಲ್ಲ (ಚಿಕರಾ. ೨೩೨); ಗೋವಿಂದ ಮಾಸ್ತರರ ಬಿಗು ವಿಲ್ಲದ ಆಡಳಿತವೇ ಅದಕ್ಕೆ ಕಾರಣ (ಕಾವೇರಿ. ೧೧). 'ಆಡಳಿತಗಾರ', 'ಆಡಳಿತಮಂಡಳಿ' ಪರಾ. **ಆಡಳತೆ:** ದೇಶ ಬ್ರಿಟಿಷರ ಆಡಳತೆಗೆ ಬರುವ ಕಾಲದಲ್ಲಿ . . . ಸಂಪತ್ತನ್ನು ಶೇಖರಿಸಿ (ರತ್ನಗೋ. ೧).

**ಅಡಳಿತೆ :** ನಿಮ್ಮ ಸಮಯುವಿಡೀ ದೇಶೋದ್ಧಾರ ಮತ್ತು ಅಡಳಿತೆಯಲ್ಲೇ ಕಳೆಯುವುದು (ದೇಶಧು. ೯೭); ಅವನು ನಾಡಿನ ಅಡಳಿತೆಯಲ್ಲಿ ಹೆಚ್ಚು ಶ್ರದ್ಧೆ ವಹಿಸತೊಡಗಿದ (ಹಾಹುತ್ತ. ೯೯). [?]

**ಅಡಳಿತಗಾತಿ** (ನಾ). ಅಡಳಿತ ನಡೆಸುವವಳು (Administratrix. ಇಂಕಣಿ). [ಅಡಳಿತಗಾರ + -ತಿ$_1$]

**ಅಡಳಿತಗಾರ** (ನಾ). ಅಡಳಿತ ನಡೆಸುವವನು; ಮೇಲ್ವಿಚಾರಕ; ವ್ಯವಸ್ಥಾಪಕ: ಶಕ್ತರಾದ ಅಡಳಿತಗಾರರೂ ಶೂರರೂ ... ಅದ ಸೈನ್ಯಾಧಿಕಾರಿಗಳು ಸಿದ್ಧವಾಗುವುದೂ ಅವಶ್ಯಕ (ಕ್ರಿಯಾಶಿ. ೯೮). [ಅಡಳಿತ + -ಗಾರ (< -ಕಾಜ)]

**ಅಡಳಿತಮಂಡಲಿ** (ನಾ). ಅಧಿಕಾರ ಅಥವಾ ಮೇಲ್ವಿಚಾರಣೆಯನ್ನು ನಡೆಸುವ ಅಧಿಕಾರಿಗಳ ಸಂಸ್ಥೆ: ಅಡಳಿತಮಂಡಲಿಯ ಸದಸ್ಯನೂ ... ಆಗಿದ್ದುಕೊಂಡು ... ಸಲಹೆಗಳನ್ನು ಕೊಡುತ್ತಿದ್ದನು (ಸಸ್ಯಕ. ೧೩೪). [ಅಡಳಿತ + ಮಂಡಲಿ]

**ಅಡಳಿತೆ** 'ಅಡಳಿತ' ನೋ.

**ಅಡಳಿತೆದಾರ** (ನಾ). (ಉಕ) = ಅಡಳಿತಗಾರ: ಸಿದ್ದಣ್ಣ ದೇವಸ್ಥಾನದ ಅಡಳಿತೆದಾರನಾದ (ಒಡ್ಡಿಉ. ೧೩೯). [ಅಡಳಿತೆ (< ಅಡಳಿತ) + -ದಾರ$_4$]

**-ಅಡಿ$_1$** (ಪ್ರ). (ಇದರಲ್ಲಿ) ವ್ಯವಹರಿಸುವವನು ಎಂಬ ಅರ್ಥದಲ್ಲಿ ಸೇರುವ ತದ್ಧಿತ ಪ್ರತ್ಯಯ. ಉದಾ— ಉಂಡಾಡಿ, ಒಡನಾಡಿ, ಕಾಡಾಡಿ, ನಾಡಾಡಿ, ಬಾನಾಡಿ.

**ಅಡಿ$_2$** (ನಾ). ಒಂದು ಹಕ್ಕಿ. [ಸಂ.]

**ಅಡಿಕೆ** (ನಾ). ೧. ಅಡುವುದು; ಹೇಳುವುದು; ಹೇಳಿಕೆ: ಅಡಿಕೆ ಬೇಡಿಕೆ (ಶಬ್ದಾನು.೫೭೦ ಪ್ರಯೋ); ಬೇಡಿದನಿತೋವಿ ಭೇದವಿಲ್ಲದೆ ಕಂಡು ನಾಡಿತ್ತು ನಸುಮುನಿಸಿನೆಗೆ ಜೋಡಿಯನೆಣಿಪುದುಚಿತವೆ ರಂಗಾಯೆಂಬಳಾಡಿಕೆಗೆಂ ದೊಲಿದಪೆನೊ (ಶತಸಾಂ. ೩೭–೯೨); ಈಗಲೂ ಇದೆ ಎಂದು ಜನದ ಅಡಿಕೆ (ಕೆಲಸಿ. ೧೮೦). **೨.** ನಿಂದೆ; ದೂರು: ಜನರ ಅಡಿಕೆಗೂ ಮಗಳ ಬಾಳಿಕೆಗೂ ಸರಿಹೋಯಿತು (ಗಾದೆ). **೩.** ವಂಚನೆ; ನಟನೆ: ಅಡಲೇ ನದನಾ ಕುರಂಗವ ಬೇಡಿದಳು ನಮ್ಮರಸಿ ನಾವದಜಾಡಿಕೆಯಲೊಳಬೀಳ ಲಿತ್ತಲು ಸತಿಯ ಶಾಬರದ ಜೋಡಣೆಯ ಯತಿರೂಪದಲಿ ... ಮುಜಿ ಮಾಡಿ ರಾವಣ ಕೊಂಡುಹೋದನು (ತೊರರಾ. ೪–೨–೪). **೪.** ಚಲನೆ; ಸಂಚಾರ; ಸುಳಿದಾಟ: ನೋಡಿದೆನು ಸೌರಭ್ಯಶೈತ್ಯಸಗಾಢಣೆಯನಾ ಗಂಧವಾಹನನಾಡಿಕೆಯ ಸರಣಿಯನು ಕಂಡನು ಗಂಧವಾಹಸುತ (ತೊರರಾ. ೫–೩–೧೧). [ಅಡು$_1$ + -ಇಕೆ]

**ಅಡಿಕೆಮಾತು** (ನಾ). ಜನರು ಅಡಿಕೊಳ್ಳುವ ಮಾತು; ಅವರಿವರು ಅಡುವ ಮಾತು; ನಿಂದೆ: ಅಡಿಕೆ ಮಾತಿನಿಂದಾಗಿ ಎಷ್ಟೋ ಸಂಸಾರಗಳು ಹಾಳಾಗಿವೆ (ನಿಂದನೆ. ೧೭). [ಅಡಿಕೆ + ಮಾತು$_1$]

**-ಅಡಿಗ** (ಪ್ರ). (ಇದರಲ್ಲಿ) ವ್ಯವಹರಿಸುವವನು ಎಂಬ ಅರ್ಥದಲ್ಲಿ ಬರುವ ಪ್ರತ್ಯಯ: ಸ್ವಾಮಿಯೊಡನಾಡಿಗರು ಬೆರ್ಚಿ ತುದಿಯಿಂದ ಬಿರ್ದರಾ ಮರದ (ವರ್ಧಚ. ೧೧–೧೭). '-ಅಡಿಗ' ಪರಾ.

**ಅಡಿಗೆ** (ನಾ). (ಕರಾ) ರಜೆ: ಪಾಠಶಾಲೆಗೆ ಅಮಾವಾಸ್ಯೆ ಅಡಿಗೆ ದಿನ (ರೂಢಿ). [← ತುಳು.]

**ಅಡಿಟರ್,** ಅಡಿಟರು (ನಾ). ಸಂಘಸಂಸ್ಥೆಗಳ ಹಣಕಾಸುಗಳಿಗೆ ಸಂಬಂಧಪಟ್ಟ ಲೆಕ್ಕಪತ್ರಗಳನ್ನು ತನಿಖೆ ಮಾಡುವ ಅಧಿಕಾರಿ; ಲೆಕ್ಕಪರಿಶೋಧಕ: ಅಕೌಂಟೆಂಟ್ ಇಲಾಖೆಯ ಅಡಿಟರ್ ಅಥವಾ ಕಂಟ್ರೋಲರ್ (ಗ್ರಾಮಾಕ. ೭). **ಅಡಿಟರು :** ಅದರಲ್ಲಿ ಎಲೆಕ್ಟ್ರಿಕ್ ಆಫೀಸಿನ ಅಡಿಟರಾಗಿದ್ದ ವಾಸುದೇವರಾಯರು ವಾಸಿಸುತ್ತಿದ್ದರು (ತಾಯಿಕ. ೨೨). [← ಇಂ. Auditor]

**ಅಡಿಟರು** 'ಅಡಿಟರ್' ನೋ.

**ಅಡಿತ** (ನಾ). ಅಡಿದ್ದು: ಅಯ್ಯನಾಡಿತಗಳನ್ ಮಾಜಿ ನಡೆವಾರ್ಪುಂಟೆ (ಬದ್ಧಪ್ರ. ೩–೪೭). [ಅಡು$_1$ + -ತ$_2$]

**ಅಡಿತು** 'ಅಡಿತ್ತು' ನೋ.

**ಅಡಿತ್ತು,** ಅಡಿತು (ನಾ). ೧. ಮಾತನಾಡಿದುದು: ಗೊರವನಾಡಿತ್ತ [ಪಾಠಾಂ. ಕೆ] ಕಡೆಪರಿತನಕ ನಡೆಯಿತ್ತು ತಾವೊಡಲುವಿಡಿದು ಫಲವೇನು (ಸೋಮಚ. ೬–೪೪). **ಅಡಿತು :** ೧. ನೋಡು ನೋಡಿಂದೆನ್ನ ರಾಜ ಋಷಿಯೆಂದು ಕೆಟ್ಟಾಡಿತಕ್ಕಾ ಹರಿಶ್ಚಂದ್ರನನಸತ್ಯನಂ ಮಾಡಿಸುವೆನು (ಹಚರಾ. ೨–೩೪). **೨.** (ಗಾಣ) ಅಡಿದುದು: ಎಣ್ಣೆಯನು ಗಾಣಕ್ಕೆ ನಿಚ್ಚಲು ಅರ್ಧಸೊಲಿಗೆಯನು ಅಡಿತಕ್ಕೆ ಎಜೆವರು (ಸೌಇಇ. IX–i, ೩೩೬–೨೭; 1219). [ಅಡು$_1$ + -ತು$_1$]

**ಅಡಿಸು** (ಕ್ರಿ). ೧. ಅಲುಗಾಡುವಂತೆ ಮಾಡು; ಅತ್ತಿತ್ತ ಚಲಿಸುವಂತೆ ಮಾಡು: ಕೈಯಂ ಕಾಲುಮನಾಡಿ[ಪಾಠಾಂ. ಟಿ]ಸದೊಂದು ಕೆಲದಿಂದೊಂದು ಕೆಲಕ್ಕೆ ಮಗುಚಿದೆ (ವಡ್ಡಾರಾ. ೧೧೧–೧೨); ಬೆರಲನಾಡಿಸುತ್ತುಂ ಪುರ್ವಿಕ್ಕುತ್ತುಂ ಸೊಕ್ಕಿದರಂತೆ ಮರುಳ್ಗೊಂಡವರಂತೆ ದೆಸೆಯಂ ನೋಡುತ್ತುಂ ... ಎಸಗುವಾತಂ ಮೂಜನೆಯ ಶ್ರಾವಕಂ (ಧರ್ಮಾಮೃ. ೫–೧೩೬). **೨.** ನರ್ತಿಸುವಂತೆ ಮಾಡು; ಕುಣಿಸು; ಪಾತ್ರವನ್ನು ಅಭಿನಯಿಸುವಂತೆ ಮಾಡು: "ಅಡಿಸು— ನರ್ತನವಿಧೌ" (ಶಮುಧಾ); ಮಾಣದಾಡಿಸಿದಾತನಂಗಜನೆಂಬ ನಟ್ಟುವಂ (ಆದಿಪು. ೪–೧೫); ವಿರಾಟನ ಮಗಳುತ್ತರೆ ಮೊದಲಾಗೆ ಪಲವುಂ ಪಾತ್ರಂಗಳನಾಡಿಸುತ್ತುಂ (ಪಂಪಭಾ. ೮–೫೫ ವ); ತರುಣಿಯ ಬೆನ್ನೊಳಂಗಭವನಾಡಿಸಿ ದಂಡದೊಳಾಡಿ ಗೋರಿಗೊಂಡೆರಳೆವೊಲಾಗಿ ಪೋದನೊ (ಕಾದಂಪೂ. ೮೨೩); ಅಡಿಸುತೆ ಪಾಡಿಸುತಮಿರ್ದನಾ ವನದೊಳಗೆ (ನಂಬಿರ.೫–೧೧೦); ಈ ಹರಿಯಾಡಿಸಿದವೋಲಾಡಿ ಕೆಟ್ಟರಿ ಹುಳರು ನೀವೆಂದ (ಕುವ್ಯಾದ್ರೋ. ೧೪–೧೭). **೩.** ವ್ಯವಹರಿಸುವಂತೆ ಮಾಡು: ಅನಿದನಜಿಯದೆ ದುಷ್ಟಕಷ್ಟರೊಡನಾಡಿಸಿದಂ (ಧರ್ಮಾಮೃ. ೨–೮೦); ಹಾಡಿಸಬೇಡ ನಾನಾವಾದ್ಯವ ದನಿಮಾಡಿಸಬೇಡೊರ್ವರೊಡನೆ ಆಡಿಸಬೇಡ ಸ್ವಸ್ಥದಿ ನಿದ್ದೆಗೆಯ್ಯುದೆಂದಾಡಿದಳ್ ಚಿತ್ರಲೇಖೆ (ಮೋಹತ. ೨೭–೩೬). **೪.** (ಪಗಡೆ, ಚದುರಂಗ ಮುಂತಾದ) ಆಟಗಳನ್ನು ಅಡುವಂತೆ ಮಾಡು: ಅ ಯಮನಂದನನಲ್ತೆ ನೆತ್ತದೊಳ್ ಬೆಸನಿಗನಾತನಂ ಬರಿಸಿ ನೆತ್ತಮನಾಡಿಸಿ ಗೆಲ್ದುಕೊಳ್ವಮೀ ವಸುಮತಿಯಂ (ಪಂಪಭಾ. ೬–೬೮); ಜಗದುದ್ಧಾರನ ಅಡಿಸಿದಳೆಶೋದೆ (ಪುರಂದ. ೪–೧೬೬ ಪ). **೫.** ಮಾತನಾಡುವಂತೆ ಮಾಡು; ಹೇಳಿಸು; ನುಡಿಸು: ಎನ್ನನಿವರಾಡಿಸಿದಡೇನನಾಡುವೆನೆಂದು ತನ್ನ ಮನದೊಳಗೆ ತಾಂ ನೆನೆದು ನಿಶ್ಚಯಿಸಿದಳು (ಹಚರಾ. ೧೩–೪); ಆ ಸರಸ್ವತಿಯನೊಲಿಸಿಯವಳಿಂ ಕಾಳಿದಾಸೋಹಮೆಂದಾಡಿಸಿದ ಭಾಸುರ ಸಕಲ ಕಲಾಕೋವಿದ ಕಾಳಿದಾಸನಡಿಗಳಿಗೆಜಗುವೆ (ಕುರಾಸಾಂ. ೧–೪೦); ಅಡಿಸುವರಾಯೆಂದು ದಾಯೆಂದು ಬಾಯೆಂದು ... ಕುವರನಂ (ಚಿಬಪು. ೫–೨೭). **೬.** ಗಾಣದಲ್ಲಿ ನುರುಗಿಸು; ಒರಳಿನಲ್ಲಿ ತಿರುವು: ಬಿಳಿದಾಗಿ ತೊಳೆದೆಳ್ಳ ಕಪ್ಪನೆಲ್ಲವ ತೆಗೆದು ... ಗಾಣವನು ಕಣೆಯದೊಳೆಳ್ಳ ಎಳನೀರು ಸಹಿತ ಹುಯಿದಾಡಿಸುತ್ತಾ ಯೆಣ್ಣೆಯಂ ತೆಗೆದು (ಸೂಪಶಾ. ೨–೨೩); ಉದ್ದಿನಬೇಳೆಯನ್ನು ನಯವಾಗಿ ಅಡಿಸಿದ ಹೊರತು ಇಡ್ಡಲಿ ಹದವಾಗುವುದಿಲ್ಲ (ರೂಢಿ).

ಅಡಿಸ್ಯಾಡು = ೧. ಆಟವಾಡಿಸು: ಬೆಕ್ಕು ಇಲಿಗಳನ್ನು ಅಡಿಸ್ಯಾಡಿ ಕೊಲ್ಲುತ್ತವೆ (ಮುಂಬಯಿ. ೫–೩೧). **೨.** ಗೇಲಿಮಾಡು: ರಾಮನು ... ಆಕೆಯೊಂದಿಗೆ ನಕ್ಕು ನಗುತ್ತ ಅಡಿಸ್ಯಾಡುತ್ತ ಸಾಗಿದ್ದಾನೆ (ಬನಸಿ. ೧೮೭). [ಅಡು$_1$ + -ಇಸು$_3$]

**ಆಡು**₁ (ಕ್ರಿ). ೧. ಅಲುಗು; ಚಲಿಸು: ಧ್ಯಾನದೊಳಭವಂ ನೆಱೆದಿನಿಸಾನು ಮನರೆಮುಚ್ಚಿ ಕಣ್ಗಳಂ ನಿಶ್ಚಳಿತಂ ತಾನಿರ್ದು ಮಱೆದು ಕೆಂದಿದ ಮೀನಂ ತ[ಳ್ತು]ಡದಿರ್ದ ಮಡುವಂ ಪೋಲ್ತಂ (ಪಂಪಭಾ. ೮-೧೩); ತೆಱೆದುಱು ಗಲ್ಹಾಳಿಯಿಂದಾಡೆ (ಕಾದಂಪೂ. ೨೪೦); ಆಕಾಶದಲಾಡುವ ಹದ್ದನೊಂದು ಸರ್ಪ ನುಂಗಿತ್ತ ಕಂಡೆ (ಆದವ. ೧೦೦); ಕಡೆಗಣ್ಣಾಡಿತಿವದಿರ ಮೇಲೆ (ಕುವ್ಯಾಸ. ೧೬-೧೬). ೨. ಕುಣಿ; ನರ್ತಿಸು; ಪಾತ್ರವನ್ನು ಅಭಿನಯಿಸು; ಪ್ರದರ್ಶಿಸು: "ಆಡು-ನರ್ತನೇ, ಅಜೇ ಚ" (ಶಮಧಾ); ಎನಿತಾನುಂ ರೂಪುಗಳಂ ಕೈಕೊಂಡು ಮರಮೊಗಂಗಳನಿಟ್ಟು ಬಂದು ಮುಂದೆ ಆಡಿಯುಂ ಪಾಡಿಯುಂ ನಗಿಸಿಯುಂ (ವಡ್ಡಾರಾ. ೧೧೮-೧೬); ಮೀನಾವೆ ಪಂದಿಯೆಂದೆನಿತಾನುಂ ತೆಱನಾಗಿ ಡೊಂಬವಿದ್ದೆಯನಾಡಲ್ ನೀನಱಿವೆ (ಪಂಪಭಾ. ೬-೫೭); ನೀರಜೋತ್ಪಲವರ್ಣನಾಡಿದನಾಡಿದಂ ಕಮಲೇಕ್ಷಣಂ (ಜಗವಿ. ೩-೫೩); ಆಡಿದನಾಡಿದನಾಹಾ ಶಂಕರನಾಡಿದನಾ ಗುಂಡನ ಮುಂದೀಶ್ವರಂ (ಕುಂಬರ. ೬೬-೨೦); ಗಿಳಿಗಳು ಕೂಗೆ ನವಿಲುಗಳಾಡೆ (ನಳಚ. ೧-೩೭); ಆಟವಿಕನೊಂದೊಂದು ಬಹುರೂಪಮಂ ತಾಳ್ದು ನಾಟಕವನಾಡಿ (ಜೈಮಿಭಾ. ೧೫-೩೯). ೩. ಕ್ರೀಡಿಸು; ವಿಹರಿಸು: ಒಂದು ಬಟ್ಟಿನ ಮೇಗೆ ಪದಿನಾಲ್ಕು ಬಟ್ಟನೊಂದೊಂದಱ ಮೇಗೋಳಿಯೊಳಿಟ್ಟಾಡುತ್ತಿರ್ಪನ್ನೆಗಂ (ವಡ್ಡಾರಾ. ೭೩-೨೨); ಸೆಱೆಯುಮೇಱುಂ ನೆತ್ತ ಮಾಡುವರೊಳ್ (ಎಇ. XIII, ೩೩೨-೪೪; 929); ಮಧುವುಂ ಮನೋಭವನುಮಱ್ತಿಯೊಳಾಡುವ ಪೊನ್ನಬಟ್ಟಂ (ಶಾಂತಿಪು. ೧-೫೮); ಪುಲಿಯ ಮೀಸೆಯನಂಜದುಯ್ಯಲನಾಡಲಪ್ಪುದು (ಧರ್ಮಾಮೃ. ೧-೧೬೯); ಅಹಿಪನ ಫಣಾಮಂಡಳದೊಳಾಡಲುಬಹುದು (ಕುವ್ಯಾದ್ರೋ. ೪-೩೭); ಚೆನ್ನೆಯರ್ ಪಾಱುಗುಪ್ಪೆಯನಾಡುವ ಮಣಲ್ದಿಣ್ಣೆಯ ನೋಡಿ ಹಿಗ್ಗಿದರು (ಮೋಹತ. ೪-೫೪); ಆಡಿಬಾ ನನ ಕಂದ ಅಂಗಾಲ ತೊಳೆದೇನು (ಗರತಿ. ೮೬-೧೩). ೪. ಪಗಡೆ, ಜೂಜು, ಬೇಟೆ ಮುಂತಾದ ಕ್ರೀಡೆಗಳಲ್ಲಿ ಆಸಕ್ತನಾಗು: ನೆತ್ತಮನಾಡಿ ಭಾನುಮತಿ ಸೋಲ್ತೊಡೆ (ಪಂಪಭಾ. ೯-೬೯); ಆಡಿ ನಳ ಕೆಟ್ಟ ಮತ್ತಾಡಿ ಧರ್ಮಜ ಕೆಟ್ಟ (ಸರ್ವಜ್ಞ. ೧೩೧೨); ಆಡಿ ಮಗ ಕೆಟ್ಟ ಕೂಡಿ ಮಗಳು ಕೆಟ್ಟಳು (ಗಾದೆ). ೫. ನುಡಿ; ಹೇಳು: ಉಮ್ಮಳಿಸಬೇಡೆಂದು ಮಂತ್ರಿಗಾಡಿದನರಸನು (ಹಚಕಾ. ೧೦-೧೫); ಆಡದಿರಸತ್ಯವನು (ಕುವ್ಯಾದ್ರೋ. ೪-೫೫); ಆಡದಲೆ ಮಾಡುವನು ರೂಢಿಯೊಳಗುತ್ತಮನು (ಸರ್ವಜ್ಞ. ೧೪೭೯); ಮಾಡಿದವರ ಪಾಪ ಆಡಿದವರ ಬಾಯಲ್ಲಿ (ಗಾದೆ). ೬. ವಾಗ್ದಾನಮಾಡು; ಮಾತುಕೊಡು: ಚಾಳುಕ್ಯವಂಶದೊಳೆಲ್ಲಿಯುಮಿನ್ನೆವರೆಗಂ ನುಡಿದು ಪುಸಿವುದುಂ ಆಡಿ ಅಳುಪುವುದುಂ . . . ಇಲ್ಲಂ (ಗದಾಯು. ೨-೭ ವ); ಸಂದ ರೇವಣಸಿದ್ಧನಾಡಿ ತಪ್ಪುವನೆ (ಸಿದ್ಧರಾ. ೧-೪೫). ೭. ವ್ಯವಹರಿಸು: ಪುದಿದ ಸುತಮೋಹದಿಂದೋದಿದೊಡಂ ಮುನಿಜನದ ಸಾರೆ ಬಸದಿಯೊಳಿರ್ದಾಡಿದೊಡಮಿವನಲಸುಗೆಂಪಾನಿದನಱಿಯದೆ ದುಷ್ಟಕಷ್ಟರೊಡನಾಡಿಸಿದೆಂ (ಧರ್ಮಾಮೃ. ೨-೮೦); ಮಂದಮಾರುತನೊಡಗೂಡಿ ಬಂದ ಸಹಕಾರ ಪರಾಗದೊಳಾಡಿದಂತೆ . . . ಗುಣವರ್ಮನ ಸೂಕ್ತಿಸಂಚಯಂ (ಪುಷ್ಪಪು. ೧-೬೬); ಹಾಲ ಮುಂದಣ ಬೆಕ್ಕಾಡುವೊಲಾಡಿಕೊಂಡು (ಸೋಮೇಶ. ೧೦೭). ೮. ನಿಂದಿಸು; ತೆಗಳು: ಭಕ್ತರನಾಡಲೆಂತಹುದು (ಬಸಪು. ೫೭-೩೦); ಯಾತರಿಂದಲಿ ಹೋದೀತೋ ಭೂತನಾಥನ ನಂಬಿದವರನಾಡಿದ ದೋಷ (ಚಿದಾವ. ೮೨-೩). ℙ ಈ ಕ್ರಿಯೆಯನ್ನು ಆಚರಿಸು ಎಂಬ ಅರ್ಥದಲ್ಲಿ ಈ ಧಾತು ಹಲವು ಧಾತುಗಳ ಅಥವಾ ಭೂತನ್ಯೂನ ರೂಪಗಳ ಮುಂದೆ ಸೇರಿ ಬರುತ್ತದೆ. ಉದಾ: ಓಡಾಡು, ಓಲಾಡು, ಕುಣಿದಾಡು, ಕೊರಚಾಡು, ಹೊರಳಾಡು.

**ಆಡಗೊಡು** = ಆಡಲು ಅವಕಾಶಕೊಡು (ಮುಂಬಯಿ. ೩-೩೨ ಕಿ).

**ಆಡಿಕೊಳ್ಳು** = ೧. ಅಲ್ಲಗಳೆದು ಮಾತಾಡು; ಹೀಯಾಳಿಸಿ ನುಡಿ: ಆಡಹೋದಲ್ಲೆ ಮಕ್ಕಳು ಆಡಿಕೊಂಬರು (ಪುರಂದ. ೨-೧೯ ಪ); ಇದಂ ತಿಳಿಯದೆ ಮುಗ್ಧಜನರು ಮನಬಂದಂತೆ ಆಡಿಕೊಂಡಾರು (ಮುದ್ರಾಮಂ. ೩೧೧); ನಿಮ್ಮ ತಂದೆ. . .ತನ್ನನ್ನು ತಾನೇ ಹೊಗಳಿಕೊಂಡು ಕವನಗಳನ್ನು ಕಟ್ಟಿಕೊಂಡಿರುವನು ಎಂದು ಎಲ್ಲರೂ ಆಡಿಕೊಳ್ಳುವುದನ್ನು ಕಾಣೆಯಾ (ಆರ್ಯಕ. ೫೫). ೨. ಹೇಳಿಕೊಳ್ಳು: ಕೊಟ್ಟು ಕುದಿಯಲಿ ಬೇಡ ಕೊಟ್ಟಾಡಿಕೊಳಬೇಡ (ಸರ್ವಜ್ಞ. ೬೧೮).

[**ದೇ.** ‖ **ತಮಿ. ಮಲ. ತುಳು. ತೆಲು.** ಆಡು; **ಕೊಡ.** ಆಡ್; **ಕೊಲಾ.** ಆಡ್; **ನಾಯ್ಕಿ.** ಆರ್]

**ಆಡು**₂ (ನಾ). ಆಟವಾಡುವುದು. 'ಆಡುಂಗಾಱ', 'ಆಡುಂಗುಳಿ' ಪರಾ. [< ಆಡು₁]

**ಆಡು**₃, ಆಂಡು (ನಾ). ಮೇಕೆ; ಅಜ: "ಆಡು-ನರ್ತನೇ, ಅಜೇ ಚ" (ಶಮಧಾ); ಅವರೆಯುಮೆಣ್ಣೆಯುಮಾಡಿನಳೆಯುಮಂ ಬಡ್ಡಿಸಿದೊಡೆ (ವಡ್ಡಾರಾ. ೬೮-೨೬); ಸತ್ತುಗದ ಪುಡಿಯಂ ಪತ್ತುಪಣವಿಂಗೆ ಮಾಱಿ ಪತ್ತಾಡಂ ಕೊಳ್ವೆಂ (ಪಂಚತಂ. ೧೮೬-೫); ಆಡು ಮುಟ್ಟದ ಗಿಡುವಿಲ್ಲ (ಧರ್ಮಾಮೃ. ೩-೪೨); ಆಡ ಮೊಲೆಯಂತೆ ನೇಲ್ದಲ್ಲಾಡುವ ಮೊಲೆ (ಅಶ್ವಶಾ. ೧-೪೧); ವಿಶ್ವಾಸದಿಂದ ಆಡಿನ ಹಿಕ್ಕೆ ಲಿಂಗವಾದುದಿಲ್ಲವೇ (ಸಿದ್ಧೇವ. ೨೩೩). **ಆಂಡು**: ಎಮ್ಮೆ ಒಂದಕ್ಕಂ ಹಾಗ ಆಂಡು ಕುಱಿ ಕಾಲುನಡೆ ಒಂದಕ್ಕಂ (ಎಕ. V, ಬೇಲೂರು. ೭೫-೧೧೫; 1382).

[**ದೇ.** ‖ **ತಮಿ.** ಆಡು, ಯಾಡು; **ಮಲ.** ಆಡು; **ತುಳು.** ಏಡು; **ತೆಲು.** ಏಡಿಕ, ಏಟ; **ಗೊಂಡಿ.** ಏಟ = ಹೆಣ್ಣುಮೇಕೆ; **ಕುಇ.** ಓಡ; **ಕುರುಖ್.** ಏಡಾ = ಹೆಣ್ಣುಮೇಕೆ; **ಮಲ್ತೊ.** ಏಡೆ = ಹೆಣ್ಣುಮೇಕೆ; **ಬ್ರಾಹೂ.** ಹೇಟ್. / **ಸಂ.** ಏಡ, ಏಡಕ = ಒಂದು ಜಾತಿಯ ಕುರಿ]

**ಆಡುಂಗಾಯ್ತು** (ನಾ). ಕೋಟೆಯ ರಕ್ಷಣೆಮಾಡುವವನು: "ಆಡುಂಗಾಯ್ತರೆನುತ್ತಂದಾಡಲ್ ತಾಂ ಕೊಟ್ಟದವರ್ಗಳಕ್ಕುಂ" (ಕವಿಕಂ. ೧೬೦).
[< ಅಡಂಗಾಯ್ತು]

**ಆಡುಂಗಾಱ** (ನಾ). ಆಟಗಾರ; ವೇಷಧಾರಿ: ಆಡುಂಗಾಱನೆನಲ್ಕೆ ಮತ್ತೆ ಪದಿನಾಱುಂ ಸಾಸಿರಕ್ಕೊಲ್ದವಂ . . . ನೋಡಿಂ ಸರೋಜಾಕ್ಷನಾ (ವಸ್ತವಂ. ೯-೬೯). [ಆಡು₂ + -ಗಾಱ (< -ಕಾಱ)]

**ಆಡುಂಗುಳಿ**, ಆಡುಕುಳಿ (ನಾ). ಆಡುವ ಶೀಲವುಳ್ಳವನು; ಆಟದಲ್ಲಿ ತುಂಬ ಆಸಕ್ತಿಯುಳ್ಳವನು: ಗುಳಿ ಪ್ರತ್ಯಯಕ್ಕೆ-ಆಡುಂಗುಳಿ [ಪಾಠಾಂ. ಆಟಂಗುಳಿ] ಸಾಲಂಗುಳಿ, ಲಂಚಂಗುಳಿ (ಶಮದ. ೨೦೨ ಪ್ರಯೋ). **ಆಡುಕುಳಿ**: "ಆಡುವ ಸ್ವಭಾವವುಳ್ಳವನು" (ಗಂಗಾಮ. ೨೪).
[ಆಡು₂ + -ಕುಳಿ₃]

**ಆಡುಂದೊಲೆ** (ನಾ). ಮೇಲಕ್ಕೂ ಕೆಳಕ್ಕೂ ತೂಗಾಡುವ ತೊಲೆ, —ದಿಮ್ಮಿ; ಏತ: "ಆಡುಂದೊಲೆ ಎಂದು ಏತದ ಮರ" (ಶಮದ. ನ. ೧೮೧ ಅಡಿಟಿ); ಎತ್ತುಪೇತದಾಡುಂದೊಲೆಯಂತೆ ಕಣ್ಗೆಸೆದುದೇಱಿದಿಭಂ ಕದನತ್ರಿಣೇತ್ರನಾ (ಶಮದ. ನ. ೧೮೧ ಪ್ರಯೋ); ತೂಗುಂದೊಟ್ಟಿಲ್, ಆಡುಂದೊಲೆ [ಪಾಠಾಂ. ರೆ] (ಶಬ್ದಾನು. ೩೪೪ ಪ್ರಯೋ).
[ಆಡು₁ + ತೊಲೆ₁]

**ಆಡುಂಬೊಲ**, ಆಡುವೊಲ (ನಾ). ೧. ಆಟದ ಬಯಲು; ಕ್ರೀಡಾಂಗಣ: ಘೋರತರ ವನವಿದ್ದುದು . . . ಕಾಂತಾರಚರರಾಡುಂಬೊಲನು ತಾನಾಗಿ (ಸಾಳ್ವಭಾ. ೬-೩); ವಾಜಿದ್ಯೂತ ಚೆಂಡಿನಾಟದ ಮಹಾವಿಸ್ತಾರದಾಡುಂಬೊಲಂ (ವೈಸೂಮ. ೪-೭೬). ೨. ಆಶ್ರಯಸ್ಥಾನ: "ಆಡುಂಬೊಲಂ ಆಶ್ರಯಕ್ಕೆ ಪೆಸರ್" (ಕಶಸಾ. ೧೫-೨೯೦);

"ಆಡುಂಬೊಲನೆಂದಕ್ಕು ನೆಲ ತಾಣ ಗೊತ್ತುಂ . . . ಅಗರ" (ಕವಿಕಂ. ೧೩೫); ಬೀಡು ಸುಕೃತಕ್ಕೆ ಚೆಲ್ವಿಂಗಾಡುಂಬೊಲನಾಶ್ರಯಂ ಸುಖಕ್ಕೆನೆ (ಪಂರಾಪಾ. ೧–೧೦೧); ಬಹುಧರ್ಮಧೇನುನಿವಹಕ್ಕಾಡುಂಬೊಲಂ ಬೆಳ್ವಲಂ (ಎಇ. XIII, ೪೪–೩೪; 1112); ಪರಿಮಳದಾಡುಂಬೊಲನಿದು ವರವಿಟರ ವಿಶಾಲಲೋಲಲೀಲಾಸ್ಥಲಂ (ಗಿರಿಕ. ೨–೮೪). **ಆಡುವೊಲ**: ೧. ಚೆಲುವನು ತೋಳುತಿರ್ದಳು ಜಗದ ಜಂಗುಳಿಗಾಡುವೊಲನಾಗಿ [ಪಾಠಾಂ. ವೋಜೆಯಲಿ] (ಪ್ರಭುಲೀ. ೩–೩೧). ೨. ಅಲರಶರನ ಬೀಡಪ ರಂಜಿಮಿಗದಾಡುವೊಲ ಕಾಮುಪಶು ಮೇವ ಕಾಡು (ನೇಮಿಸಂ. ೧–೭೧).
[ಆಡು₁ + ಪೊಲ]

**ಆಡುಕಿವಿಗ** (ನಾ). ಆಡಿನ ಕಿವಿಯಂತೆ ಎಲೆಯಿರುವ ಒಂದು ಗಿಡ: "ಅಜಕರ್ಣಾ–ಆಡುಕಿವಿಗನು" (ಒಷಧಿ. ೭). [ಆಡು₃ + ಕಿವಿ + –ಗ₂]

**ಆಡುಕುಳಿ** 'ಆಡುಂಗುಳಿ' ನೋ.

**ಆಡುಗಬ್ಬ** (ನಾ). ನಾಟಕ; ದೃಶ್ಯಕಾವ್ಯ: ಆಡುಗಬ್ಬವು ದೃಶ್ಯವು ಹಾಡುಗಬ್ಬವು ಶ್ರಾವ್ಯವು (ಸಾಹಿವಿ. ೪೨). [ಆಡು₁ + ಕಬ್ಬ₁]

**ಆಡುಗಾಡು** (ನಾ). ಓಡಾಡುವ ಕಾಡಿನ ಪ್ರದೇಶ, —ಅರಣ್ಯ: ಕುರುಪತಿಯ ಗಾಢದ ಸಗಾಢಿಕೆಯ ನೋಡಿ ನಸಿಯಲಿ ಪಾಂಡುಸುತರವ ರಾಡುಗಾಡಿನ ಹೊಲನ ಹೊರೆಯಲಿ ಕೂಡೆ ತನುಪರಿಮಳದಲರಮನೆ ಯಂಗನಾನಿವಹ (ಕುವ್ಯಾಆ. ೧೭–೨೦). [ಆಡು₁ + ಕಾಡು₂]

**ಆಡುದೆಜಿ** (ನಾ). ಆಡುಗಳ ಮೇಲೆ ಹಾಕುವ ಸುಂಕ: ಅ ಸ್ಥಳಂಗಳಿಗೆ ಹೊಗೆದೆಜಿ ಮಗ್ಗದೆಜಿ . . . ಆಡುದೆಜಿ ಆಲೆದೆಜಿ (ಎಕ. III, ಶ್ರೀರಂಗ. ೧೦೪–೪೧; 1200); ಮದುವೆದೆಜಿ ವೊಳವಾಜು ಆಲೆದೆಜಿ ಆಡುದೆಜಿ ಮೊಟ್ಟೆಸುಂಕ ಯಿಷ್ಟು (ಎಕ. XIV, ಕೃಷ್ಣರಾ. ೮೧–೧೦; 1402).
[ಆಡು₃ + ತೆಜಿ₂]

**ಆಡುನುಡಿ** (ನಾ). ವ್ಯವಹಾರದಲ್ಲಿ ಮಾತ್ರ ಇದ್ದು ಗ್ರಂಥಸ್ಥವಲ್ಲದ ಭಾಷೆ; ಬಳಕೆಯ ಮಾತು: ಹೊಸ ವೈಚಾರಿಕತೆಯ ಮೂಲಕ . . . ಅವರು ಆಡುನುಡಿಗೆ ಸಮೀಪವಾಗಿದ್ದ ಸಾಹಿತ್ಯಭಾಷೆಯೊಂದನ್ನು ರೂಪಿಸಲು ಸಮರ್ಥರಾದರು (ಹೊಸಕ್ಷಿ. ೨೭೯). [ಆಡು₁ + ನುಡಿ₂]

**ಆಡುಬಳ್ಳಿ** (ನಾ). ಒಂದು ಜಾತಿಯ ಬಳ್ಳಿ (ಮೈಔಗಿ. ೪೭–೯೧೩).
[ಆಡು ? + ಬಳ್ಳಿ]

**ಆಡುಬೆಣೆ** (ನಾ). ಯಂತ್ರಗಳಲ್ಲಿ ಅವುಗಳ ಚಾಲನೆಗೆ ಸಾಧನವಾಗಿರುವ ಉರುಳಿಯ ಆಕಾರದ (ಉರುಟಾಗಿಯೂ ನಯವಾಗಿಯೂ ಇರುವ) ಉದ್ದವಾದ ಬೆಣೆ; "... ದುಂಡುಬಿಲ್ಲೆ ಅಥವಾ ಕಡವೆ ಯುದ್ದದ ಉರುಳೆ: ಆಡುಬೆಣೆ" (Piston. ಇಂಕಪಿ): ಉಗಿಯು ಉರುಳೆ ಕೋಶಕ್ಕೆ ಹೋಗಿ ಅದರೊಳಗಿನ ಆಡುಬೆಣೆಯನ್ನು ಚಲಿಸುವುದಾದರೂ ಹೇಗೆ (ವಿಜ್ಞಾವಿ. ೪೭). [ಆಡು₁ + ಬೆಣೆ]

**ಆಡುಭಾಷೆ** (ನಾ). = ಆಡುನುಡಿ: ಬಡಗರ ಭಾಷೆ ಕೇವಲ ಆಡುಭಾಷೆ (ರೂಢಿ). [ಆಡು₁ + ಭಾಷೆ]

**ಆಡುಮನೆ** (ನಾ). ಆಡುಗಳನ್ನು ಕೂಡುವ ಮನೆ; ಕೊಟ್ಟಿಗೆ; ರೊಪ್ಪ: ಆ ಗ್ರಾಮಕ್ಕೆ ಸಲುವ ಗದ್ದೆ ಬೆದ್ದಲು ಆಡುಮನೆ ಆಗಾಮಿ ತೋಟ ಮಡಿಕೆ ಆಣೆ ಅಚ್ಚುಕಟ್ಟು (ಎಕ. III, ಮೈಸೂರು. ೬೦–೯; 1611). 'ಆಡುಮನೆವಣ' ಪರಾ. [ಆಡು₃ + ಮನೆ]

**ಆಡುಮನೆವಣ** (ನಾ). ಆಡುಗಳ ಮನೆಗಾಗಿ ಕೊಡಬೇಕಾದ ಸುಂಕ (?): ಗ್ರಾಮಕೆ ಸಲುವ ಗದ್ದೆ ಬೆದ್ದಲು ತೋಟ ತುಡಿಕೆ ಆಡುಮನೆವಣ ವೊಳವಾಜು ಹೊಜವಾಜು ಮತೆನುಂಟಾದ ಸರ್ವಸ್ವಾಮ್ಯವನು . . . ಕೊಟ ಶಿಲಾಷಸನ (ಎಕ. XIV, ಚಾಮರಾ. ೨೬೭–೮; ?).
[ಆಡುಮನೆ + ಪಣ₁]

**ಆಡುಮಾತು** (ನಾ). ೧. ಬಾಯಿಮಾತಿನಲ್ಲಿ ಆಗಿರುವ ಒಪ್ಪಂದ; ಕೊಟ್ಟ ಮಾತು; ವಾಗ್ದಾನ. ೨. ಜನಬಳಕೆಯ ಮಾತು: ಗದ್ಯ ಶೈಲಿಯನ್ನು ಆಡುಮಾತಿನ ಹತ್ತಿರಕ್ಕೆ ತಂದು ಅದನ್ನು ಕ್ರಮಕ್ರಮವಾಗಿ ತಿದ್ದಿ (ನಿಬಂಧ. II, VIII ಮುನ್ನು). [ಆಡು₁ + ಮಾತು₁]

**ಆಡುಮುಟ್ಟದಗಿಡ** (ನಾ). ಒಂದು ಗಿಡ; ಕತ್ತೆಕಿವಿ ಗಿಡ: ಆಡು ಮುಟ್ಟದ ಗಿಡದ ಬೇರು, ಗಿರಿಕರ್ಣಿಕೆಯ ಬೇರು, ರುದ್ರಾಕ್ಷಿಬೀಜ, ಚಂದನ . . . ಮಜ್ಜಿಗೆಯಲ್ಲಿ ಅರೆದು ಕುಡಿಯ ಕೊಡಿಸಲು ಕತ್ತೆಯ ಎಲ್ಲಾ ವಿಷಗಳೂ ಪರಿಹರವಹವು (ವೈದ್ಯಸಾ. II, 218).
[ಆಡು₃ + ಮುಟ್ಟು₁ + ಗಿಡ (< ಗಿಡು)]

**ಆಡುಮೊಗ** (ನಾ). ಆಡಿನಂತಹ ಮುಖವುಳ್ಳವನು; ದಕ್ಷಬ್ರಹ್ಮ: ಆಡುಮೊಗನ ಮಗಳು (ಕಲ್ಪದ್ರು. ೨೫). [ಆಡು₃ + ಮೊಗ]

**ಆಡುರಿ** (ನಾ). (ಮರಿ ಹಾಲು ಕುಡಿಯದಂತೆ) ಆಡಿನ ಕೆಚ್ಚಲಿಗೆ ಮರೆಮಾಡಿ ಕಟ್ಟುವ ಬಟ್ಟೆ (ಕಿಸಂಗ್ಲಾ. ೮). [ಆಡು₃ + ಉರಿ ?]

**ಆಡುವಳ** (ನಾ). ಆಟವಾಡುವವನು; ಆಟಗಾರ: ಕಾಲ್ಚೆಂಡನಾಡಿದರ್ ಈ ಯುಗದ ಆಡುವಳರಿನ್ನು ಬರಲೇಬೇಕು ಚೆಂಡಾಟ (ನವ್ಯಧ್ವ. ೧೧).
[ಆಡು₁ + –ವಳ]

**ಆಡುವೊಲ** 'ಆಡುಂಬೊಲ' ನೋ.

**ಆಡುಸೋಗೆ**, ಅಡುಸೋಗೆ, ಆಡಸೋಗೆ (ನಾ). ಅಡ್ಡಸರದ ಗಿಡ; ಅಡಸಲಗಿಡ; ಅಟರೂಷಕ; ವಾಸಕ: "ಆಟರುಷ– ಅಡುಸೋಗೆ" (ಶಬ್ದಾನು. ೧೬೦ ಪ್ರಯೋ); ವಿಶ್ವಂ ದ್ರಾಕ್ಷಾಫಲಮಾಡುಸೋಗೆ ಎಂಬಿವು ಕಲಸಿಟ್ಟ ಕಷಾಯದಿಂ ಕಫಜ್ವರ ಹರಣಂ (ಕಲ್ಯಾಕಾ. ೩–೩೩); ಗೂರುಬ್ಬಸ ಬಹಳ ಪ್ರಬಲತರದ್ದಿದ್ದರೆ ಆಡುಸೋಗೆ ರಸದೊಡನೆ ಅರ್ಧ ಚುಟಿಕೆ ವಂಶಲೋಚನವನ್ನು ಮಸೆದು ಸೇರಿಸಿ ಜೇನುಸೇರಿಸಿ ಕೊಡುತ್ತಾ ಬಂದರೆ ಬೇಗನೆ ಗುಣವಾಗುವುದು (ಮನೆಮ. ೧೮). **ಅಡುಸೋಗೆ**: "ಯಾಯತ್ – ಅಡುಸೋಗೆ" (ಒಷಧಿ. ೧೩೨). **ಆಡಸೋಗೆ**: "ವಾಸಾಟರೂಷಾಹ್ವಯಮಾಡಸೋಗೆ" (ವಸ್ತುಕೋ. ೩೯–೩೭); "ಅಟರೂಷಕ – ಆಡಸೋಗೆ" (ಶಮುದ. ೨೮೮ ಪ್ರಯೋ); ಆಡಸೋಗೆಯು ಕಾಡ ನುಗ್ಗೆಯು ರೂಢಿಯಿಂದಲಿ ಬೆಳೆವ ತಗ್ಗಿಯು (ಗೋಹಾಡು. ೨–೧೦); ಇಬ್ಬದಿಯ ಆಡಸೋಗೆ ನರ್ಮಲೀ ಗಿಡಗಳ ಬೇಲಿಗಳಿಂದ (ಮೂರುದಾ. ೯೦).
[ದೇ. ‖ ತಮಿ. ಆಡಾತೊಡೈ; ಮಲ. ಆಡಲೋಡ; ತುಳು. ಅಡಲೋಡು; ತೆಲು. ಅಡ್ಡಸರಮು. / ಸಂ. ಅಟರೂಷ]

**ಆಡುಹ** (ನಾ). ಆಡುವುದು; ಚಲನೆ; ಸಂಚಾರ; ಅಲ್ಲಾಟ: ಗಜಿಯ ಆಡುಹ ತೊಲಗಿಸಿ ಹಿಡಿಯಿತ್ತು (ಅಜಿಮಾ. ೧೨೭).
[ಆಡು₁ + –ಹ₂]

**ಆಡುಳಿಚ** (ನಾ). = ಆಡುಸೋಗೆ: ಸಿರಿಸಂ ಗೋದಿ(ಣಿ) ಪಟೋಳ ಮಾಡುಳಿಚಮಾ ಸಪ್ತಚ್ಛದಂ ಬೇವು ಭಿನ್ನರುಹಂ ಪುಲ್ಗಿಲೆನಿಪ್ಪಿವಂ ತೆಗಪಿ (ಲೋಕೋಪ. ೯–೨೫); ಸೋಡವರೆಯ ಸೊರ್ಕಿಂಗಂ [ಪಾಠಾಂ. ಸೋದಿಗೆ ಅವರೆಯ ಸೊರ್ಕಿಂ]ದಾಡುಳಿಚಂ [ಪಾಠಾಂ. ಕಂ] ಮಧುಕ ಚಿತ್ರಮೂಲಮನಿಂಬಿಂದಾಡಿನ ಪಾಲೊಳ್ ಸೇವಿಸಲೋಡಿಸುಗುಂ ತದ್ವಿಷೋಗ್ರಮಂ ಗುಣನಿಳಯಾ (ಖಮದ. ೨–೧೬೭). [?]

**ಆಡೆ** (ನಾ). ಜಿಗಣೆ; ಜಿಗಳೆ (ಕಿ). [< ಅಟ್ಟೆ₃]

**ಆಢಕ** (ನಾ). ನಾಲ್ಕು ಪ್ರಸ್ಥಗಳ ಅಥವಾ ೧೯೨ ತೊಲೆಗಳ ಒಂದು ತೂಕ: ಷೋಡಶಿಕೆ ಕುಡುಬ ಪ್ರಸ್ಥ ಆಢಕ ದ್ರೋಣಮಾನಿಖರಿಗಳಿವು ಚತುರ್ಗುಣಿತಂಗಳ್ ಇವು ಮೊದಲಾದುವು ಮಾನಪ್ರಮಾಣಮಕ್ಕುಂ (ಪಸಾರ. ೧೪೯–೧೧); ಪ್ರಸ್ಥ ಎರಡಾಗೆ ವಾಹ ಅದೆರಡಾಗಲು ಒಂದು ಆಢಕ (ವಿವೇಕ. ೭). [ಸಂ.]

**ಅಢಕಿ** (ನಾ). ತೊಗರಿ: "ಅಢಕೀ, ತುವರೀ (ಸ್ತ್ರೀ)–ಈ ೨ ತೊಗರಿ" (ಹಲಾಯು. ೯೬–೩೩೦); ರಾಜಮಾಷಾಢಕೀ ನಿಷ್ಪಾವಚಣಕ ಕುಸುಂಭ . . . ವಿವಿಧ ಧಾನ್ಯಭೇದಂಗಳುಂ (ಆದಿಪು. ೬–೭೨ ವ). [ಸಂ. ಅಢಕೀ]

**ಅಢಕಿಕ** (ನಾ). ಒಂದು ಆಢಕ ಬೀಜವರಿಯಷ್ಟು ಜಮೀನು. [ಸಂ.]

**ಅಢಕೀನ** (ನಾ). ೧. = ಅಢಕಿಕ (ಕ). ೨. ತೊಗರಿಯನ್ನು ಬೆಳೆಯುವ ಭೂಮಿ. [ಸಂ.]

**ಅಢಾಪನ** (ನಾ). ಅರ್ಧಹಣ (?): ತಮ್ಮ ಕಾವಣ ಅಢಾಪನವಾಗಿ ಪೊಱ್ಕಿ ತಿಂಗಳ್ಗೆ (ಇಎ. ೧೯೪೬, ಹಾನಗಲ್. ೨೪೯–೧೪; ?). [?]

**ಅಢಾವೆ** (ನಾ). ಜಮಾಖರ್ಚಿನ ನಿರೂಪಣೆ: ವ್ಯಾಪಾರಸ್ಥರು ದಸರೆಯ ಹಬ್ಬದಲ್ಲಿ ವರ್ಷಾಂತ್ಯಕ್ಕೆ ಲಾಭಹಾನಿಗಳ ಅಢಾವೆ ತೆಗೆಯುತ್ತಾರೆ (ಪಾವಕ. ೨೦). [← ಮರಾ. ಅಢಾವ್]

**ಅಢ್ಯ** (ಗು). ೧. ಹೊಂದಿರುವ. 'ಗುಣಾಢ್ಯ', 'ಧನಾಢ್ಯ' ಪರಾ. (ನಾ). ೨. ಶ್ರೀಮಂತ; ಉಳ್ಳವನು: ಅನಘಾದಿ ತ್ರಯದಲ್ಲಿ ನಿಂದ ಕುಜನಿಂ . . . ನಿಪುಣನಾಢ್ಯಂ ಜ್ಞಾನಿ ಮಾರ್ತಂಡನಂದನನಿಂದಂ ಬಹುಪೋಷಕಂ ಬಹುಗುಣಾರಂಭಾಢ್ಯನಕ್ಕುಂ ನರಂ (ಜಾತತಿ. ೧೪–೬); ಪೂಜ್ಯ ಸೋಣದಂಡನು ಆಢ್ಯನು, ಮಹಾಧನವಂತನು, ಮಹಾಭೋಗವಂತನು (ಬುದ್ಧಪ. ೧೧೫). ೩. ಸಮರ್ಥ; ಶಕ್ತ: ಪರಮಯೋಗೀಶರಿಂ ತದ್ವ್ಯಾಸನಾಂಗರಿಂ ಭರಿತ ಸುಜ್ಞಾನರಿಂ ಹರಣಾರ್ಪಣಾಢ್ಯರಿಂ ಪರಮಾನುರಾಗಿಗಳಿನೆಸೆವ ಸಭೆಯಷ್ಟವಿಧಪೂಜೆಯೆನೆ ಕಣ್ಗೆಸೆದುದು (ಭಾವಚಿಂ. ೧–೩೧). [ಸಂ.]

**ಅಢ್ಯತೆ** (ನಾ). ೧. ಗಣ್ಯತೆ; ಸಂಪನ್ನತೆ: ಬಾಲತನದಿಂದೊಂದು ನಿಮಿಷ ಯೌವನದಿ ಸ್ತ್ರೀಲೋಲನೆಂದೆನಿಸಿರ್ಪುದರೆನಿಮಿಷ ಧನಧಾನ್ಯ ಜಾಲವಾಢ್ಯತೆವೆರೆದನೆಂದು ಪೇಳುವ ಹೆಮ್ಮೆಯೊಮ್ಮೆ (ವೆಂಕಾರಾ. ೨–೯–೨೦). ೨. ಠೀವಿ; ದರ್ಪ: ಸುರೇಂದ್ರರಾಯನನ್ನು ಎಳೆದು ತರುವುದು ಎಷ್ಟೊತ್ತಿನ ಕೆಲಸ ಎಂದು ಗೋವಿಂದರಾಯನು ಆಢ್ಯತೆಯಿಂದ ಮಾತಾಡಿದನು (ಸ್ಕೂಲವಿ. ೨೪); ಅವರು ವೇಷಭೂಷಣಗಳಿಂದ ಅಲಂಕೃತರಾಗಿ ಆಢ್ಯತೆಯಿಂದ ಅರಮನೆಗೆ ಹೋದರು (ಶ್ರೀರಾಯು. ೭೧). [ಸಂ. ಆಢ್ಯತಾ]

**ಅಢ್ಯತ್ವ** (ನಾ). = ಆಢ್ಯತೆ (ದಕ. ಕ). [ಸಂ.]

**ಅಢ್ಯೆ** (ನಾ). ಉಳ್ಳವಳು; ಸಂಪನ್ನಳು; ಹೊಂದಿದವಳು: ಸರ್ವಕ್ರಿಯಾಕುಶಲೆ ಕಷ್ಟರೂಪೆ ಧೂರ್ತಕ್ರಿಯಾಢ್ಯೆ (ಮುದತಿ. ೪–೪). [ಸಂ. ಆಢ್ಯಾ]

**ಅಣ್** 'ಅಳ್ಳ್$_3$' ನೋ.

**ಅಣ$_1$** 'ಅಣ್ಣೆ$_3$' ನೋ.

**ಅಣ$_2$** (ನಾ). (ಉಕ). ಬೆಲ್ಲದ ಪಾಕ: ಗೋದಿ ಅಳ್ಳಿಟ್ಟಗಾಣವ ಕಾಸಿದ್ದೇನ ಕಡ್ಲುಂಡಿ ಕಟ್ಟಿ ಕೇರಿ ನೆಲಿನ ಮ್ಯಾಲ ಇಟ್ಟಿದ್ದ (ಮಲ್ಲಿಗೆ. ೧೦೩). 'ಅಣವಲಕ್ಕಿ' ಪರಾ. [?]

**ಅಣ$_3$** (ನಾ). (ಉಕ) ಒಲೆಗಿಂತ ಪಾತ್ರೆಯು ಸಣ್ಣದಿರುವಾಗ ಪಾತ್ರೆ ಸರಿಯಾಗಿ ನಿಲ್ಲುವಂತೆ ಒತ್ತಿಗೆ ಕೊಡುವ ಹೆಂಚಿನ ಅಥವಾ ಲೋಹದ ತುಂಡು: ಇಷ್ಟು ಅಗಲದ ಬಾಯಿಯ ಒಲೆಯ ಮೇಲೆ ಅಣವಿಲ್ಲದೆ ಆ ಸಣ್ಣ ಪಾತ್ರೆ ನಿಲ್ಲಲಾರದು (ರೂಢಿ). [< ಸಂ. ಫಾಲ]

**ಅಣ$_4$** 'ಅಣ್ಣೆ$_5$' ನೋ.

**ಅಣ$_5$** (ನಾ). (ದಕ). ನಪುಂಸಕ; ಷಂಡ: ಅಣನಿಗೆ ಮದುವೆಯಾಕೆ (ರೂಢಿ). [ಅಣ್ (< ಅಳ್ಳ್$_3$) + -ಅ$_7$]

**ಅಣಂ** 'ಅಣಂ' ನೋ.

**ಅಣಂತಿ** 'ಅಣತ್ತಿ' ನೋ.

**ಅಣಂದೂರು** (ನಾ). ಒಂದು ಊರಿನ ಹೆಸರು: ಶ್ರೀ ಜ್ಞಾನಸಿದ್ಧದೇವರ ಕಾಲಂ ಕರ್ಚಿ ಧಾರಾಪೂರ್ವಕಂ ಸರ್ವನಮಸ್ಯವಾಗಿ ಅಣನ್ದೂರು ಮೂನೂಱಜಜ ಬಳಿಯಂಕುಲಗೆಯಯ್ವತ್ತೆಱೊಳಗಣ (ಎಇ. XXVII, ೧೫–೪೪; 1114). [< ಅನಂದ ? + ಊರು$_3$ (< ಊರ್)]

**ಅಣಂಬಿ** 'ಅಳಂಬೆ' ನೋ.

**ಅಣಂಬೆ** 'ಅಳಂಬೆ' ನೋ.

**ಅಣಕ** (ಗು). ಅಲ್ಪವಾದ; ಕೀಳಾದ; ತುಚ್ಛವಾದ; "ನೀಚ, ಕೀಳ" (ಗಂಗಾಮ. ೨೪). [ಸಂ.]

**ಅಣಗ** (ನಾ). ಒಂದು ಹೆಸರು (?): ಇದಕ್ಕೆ ಸಾಕ್ಷಿ ಮೀಕಣೂರರು ಅಯಿರಣ ಕೀಱವರು ಅಣಗರು ಕಟಿತ್ತಿಯರು ಚಂಗರಸನು ತಲೆಪರಿಯಾಕೆಯ್ಯಾಳದೋರ್ (ಸೌಇ. IX–i, ೪೬–೧೨; 900). [?]

**ಅಣಗಜ್ಜಿ** 'ಅನೆಗಜ್ಜಿ' ನೋ.

**ಅಣತಿ$_1$** 'ಅಳತಿ' ನೋ.

**ಅಣತಿ$_2$** (ನಾ). ಒಂದು ಊರಿನ ಹೆಸರು (?): ಅಣತಿಯ ಲಕ್ಕರಸ ತಂದೆಗಳಾಣಬೆಯ ಚಂದಯ್ಯನೀಶನ ಬಾಣಸಿಗ ಭೀಮಯ್ಯ ಚಣಗನ ಬೊಮ್ಮ ತಂದೆಗಳು (ಸಾನಂಚ. ೧೯–೭೫); ಅಣತಿಯ ತಿರುಮಲನಾಯಕನು (ಎಕ. V, ಚೆನ್ನರಾ. ೨೦೧–೬; 1608); ಅಣತಿ ಚೆಂನಣ × × ಪಟ್ಟದಹವಾಲಾಗಿಯಿದಲಿ ಅಣತಿ ಸೋಮೇಶ್ವರಸ್ವಾಮಿ (ಎಕ. V, ಚೆನ್ನರಾ. ೨೦೨–೧೦; 1651). [?]

**ಅಣತಿ$_3$** 'ಅಣತ್ತಿ' ನೋ.

**ಅಣತಿಗೆಯ್** (ಕ್ರಿ). ಹಾಡು; ಗಾನಮಾಡು: ಮರಲ್ದರಲ್ದ ಮಲ್ಲಿಗೆ ನನೆಗರ್ಚಿ ಕಾಕಳಿಯೊಳಾಣತಿಗೆಯ್ವ ಮದಾಳಿ (ಪಂಪಭಾ. ೫–೩೫); ಸುಗಂಧಪುಷ್ಪಸಂಕುಳದೊಳು ಬಂಡನುಂಡು ಪೊರೆದಾಣತಿ[ಗೆ]ಯ್ವ ಮದಾಳಿಗೇಯದಿಂ (ಸೌಇ. IX–i, ೩೭೧–೧೧; 1258). [ಅಣತಿ$_1$ (< ಅಳತಿ) + ಗೆಯ್ (< ಕೆಯ್$_1$)]

**ಅಣತಿಗೆಯ್ಸು** (ಕ್ರಿ). ಹಾಡಿಸು; ಗಾನಮಾಡಿಸು: ಎಸಳ್ಪಡಿಗೆತ್ತ ತಾವರೆಗಳೋವರಿಯೊಳ್ ಸುಖನಿದ್ರೆಯಿಂದೆ ಜೋಂಪಿಸುವಳಿಯಂ ಪ್ರಭಾತಶುಭಗೀತಿಯನಾಣತಿಗೆಯ್ಸು[ಪಾಠಾಂ.ಯ್ಯು]ತುಂ . . . ಪ್ರಚಾರಿಸಿದುದು ಕಾಲಭೂಪನ ನಿಯೋಗದ ಸೂಳೆವಳಂಬೊಲೊಂದೆಲರ್ (ವರ್ಧಪು. ೮–೩೩). [ಅಣತಿಗೆಯ್ + -ಸು$_1$]

**ಅಣತಿಗೇಳು** (ಕ್ರಿ). ಅಪ್ಪಣೆಯನ್ನು ಕೇಳು, —ಪಾಲಿಸು: ನಿನ್ನಾಣತಿಗೇಳಿ ನಿನ್ನ ಬಳಿಗೆ ಸಂದು ನಿನ್ನೂಳಿಗಗಳನೆಸಗಿ ನಿನ್ನವಳೆನಿಸಿ ನಿನ್ನೆಡೆವಿಡದಿರ್ಪೆನು (ಹದಿಬ. ೧–೩೭). [ಅಣತಿ$_3$ (< ಅಣತ್ತಿ) + ಕೇಳು (< ಕೇಳ್)]

**ಅಣತಿಗೈ** (ಕ್ರಿ). ೧. ಅಪ್ಪಣೆಮಾಡು: ದೊರೆ ಅಣತಿಗೈದ (ಹಾಹುತ್ತ. ೫೧). ೨. ಅಪ್ಪಣೆಯನ್ನು ನಡೆಸು: ನಿನ್ನಾಣತಿಗೈವುದೆನ್ನ ಮನೋರಥವೆನ್ನ ಭಾಗ್ಯಕೆ ಸರಿಯುಂಟೆ (ಹದಿಬ. ೧–೩೨). [ಅಣತಿ$_3$ (< ಅಣತ್ತಿ) + ಗೈ (< ಕೆಯ್$_1$)]

**ಅಣತಿಗೊಳ್** (ಕ್ರಿ). ಅಪ್ಪಣೆಯನ್ನು ಪಡೆ: ಅಡಿಗಳಿಗೆಱಗಿಯಾಣತಿಗೊಂಡು ಪೊಱಮಟ್ಟು (ಹದಿಬ. ೮–೬). [ಅಣತಿ$_3$ (< ಅಣತ್ತಿ) + ಕೊಳ್$_1$]

**ಅಣತಿಮಾಡು** (ಕ್ರಿ). ಗಾನಮಾಡು; ಹಾಡು: ಬಂಡನುರಂಬರಮುಂಡು ತಳ್ತೆಸಳ್ತೊರೆಯೊಳಡಂಗಿ ನುಣ್ಚರದಿನಾಣತಿಮಾಡಿದುದುನ್ಮದಾಳಿ (ಮಲ್ಲಿಪು. ೬–೯೮). [ಅಣತಿ$_1$ (< ಅಳತಿ) + ಮಾಡು$_1$]

**ಅಣತಿಯಿಡು** (ಕ್ರಿ). ಆಜ್ಞೆಮಾಡು ; ನಿರ್ಬಂಧವನ್ನು ವಿಧಿಸು : ಅಂತು ಋಷಿರೂಪನೂರಂ ಪೊಕ್ಕೊಡೆ ಕೊಲ್ವೆನೆಂದಾಣತಿಯಿಟ್ಟು ಪೂಜೆ ಮಡಿಸಿ ಕಳೆವುದುಂ (ಪಂರಾಮಾ. ೯–೧೦೪).

[ಅಣತ್ತಿ₃ (< ಅಣತ್ತಿ) + ಇಡು]

**ಅಣತಿವಡೆ** (ಕ್ರಿ). = ಅಣತಿಗೊಳ್ : ತುಂಬಿಗಳ ಹಂಬಲಿನ ಕಾವನಾಣತಿವಡೆದು ಏತಕೀ ಮದಗಜವು ಮಸಗುತಿಹುದು ? (ಕವಿಕಾ. ೬೯).

[ಅಣತ್ತಿ₃ (< ಅಣತ್ತಿ) + ಪಡೆ₁]

**ಅಣತ್ತಿ**, ಅಣಂತಿ, ಅಣತ್ತಿ₃, ಅಣ್ತೆ (ನಾ). **೧.** ಅಪ್ಪಣೆ ; ಆಜ್ಞೆ : ಪರಮಕೂಳಮ್ಮರ್ಗನ್ಪಿರರಕೇಸಿಗಳಾಣತ್ತಿ ಆಗಪಳ್ಳಿಬ್ಬಿಟ್ಟು ಪ್ರಸಾದಂಗೆಯ್ದಾರ್ (ಎಕ. III, ತಿರುಮ. ೧–೮ ; 726). **ಅಣಂತಿ : ೨.** [ಜೈನ] ಪ್ರತಿ ತಿಂಗಳು ಪೂರ್ಣಿಮೆಯಂದು ಒಬ್ಬೊಬ್ಬ ತೀರ್ಥಂಕರನ ಹೆಸರಿನಲ್ಲಿ ಆಪ್ತನೊಬ್ಬನು ಅಪ್ಪಣೆ ಕೊಡುವವರೆಗೂ ಊಟ ಮಾಡುವುದಿಲ್ಲ ಎಂಬ ವ್ರತ : ದೇವಾಯಪಗಳಾಣಂತಿಯ ನೋಂಪಿ ನಿಮಿತ್ತವಾಗಿ ಮಾಡಿಸಿದ ಪ್ರತಿಷ್ಠೆ (ಮೈಆರಿ. ೧೯೪೧, ೫೧–೧ ; 1200). **ಅಣತ್ತಿ₃ : ೧.** ಪುಗಿಸೆಬನಮುಂ ಪುಗಲೆಂಬೊಂದನ್ಯಭೃತಕ್ಕಾಣತಿವಂದಂತಾಯ್ತು ತನು ಬೆಸಸೆ ಕುಸುಮಾವೋದಂ (ಶಾಂತಿಪು. ೮–೩) ; [ದೇವಿಯದ್ದೇವರಾಣತಿಯಿಂ] . . . ವೈಶಂಪಾಯನನಂ [ದೇವರಡಿಯೆಡೆಗೆ ದೌವಾರಿಕೆಯೊಡನೆ ಕಳುಪಿದೆವೆಂದು ಬಿನ್ನವಿಸಿದರೆನೆ] (ಕಾದಂಪೂ. ೮೪) ; ಆತನಾಣತಿಯಿಂದಲಾಂ ತೊಡಗಿದೆಂ (ಭಾವಚಿಂ. ೧–೧೩) ; ಕೊಡನ ಕುಮಾರನಾಣತಿಯಿನೆಂದಿನವೊಲ್ ಬಳೆದತ್ತೊ ಬಿಂಜಂ (ಗೀತಗೋ. ೪೧–೩) ; ಕವಿಯ ಗಾನವು ಪರಮಾತ್ಮನ ಅಣತಿಯಿಂದ ಬರತಕ್ಕದ್ದು (ಧರ್ಮಸಾ. ೮೩). **೨.** ಉಂಬಲ್ಲಿ ನೀರಂ ಕುಡಿವಲ್ಲಿ ಕಜ್ಜಾಯಮುಂ ಕೊಳುವಲ್ಲಿ ತಾಂಬೂಲಂಗೊಳುವಲ್ಲಿ ಅಣತಿಯಂ ಹೇಳಿಸಿಕೊಂಬುದು (ನೋಂಪಿಕ. ೨೦೨–೧) ; ತಿಂಗಳು ತಿಂಗಳು ತಪ್ಪದೆ ಮುನ್ನಿನಂತೆ ಪೌರ್ಣಮಿಯೊಳು ಅಜಿತತೀರ್ಥಕರರಾಣತಿಯಂ ಕೈಕೊಂಬುದು (ನೋಂಪಿಕ. ೨೦೨–೨). **ಅಣ್ತೆ : ೧.** ಪ್ರತಿವರ್ಷಂ ತಾಂ ಬಿಡದೆ ನಡೆವ ಪದ್ಧತಿಯಂ ಬಸವನರೇಂದ್ರನಾಣ್ತೆಯಿಂ ವಿರಚಿಸಿದಂ (ಕೆಳನೃ. ೧೧–೩೨). [< ಸಂ. ಆಜ್ಞಪ್ತಿ]

**ಅಣವ** (ಗು). **೧.** ಅತ್ಯಂತ ಸೂಕ್ಷ್ಮವಾದ ; ಅಣುರೂಪವಾದ. (ನಾ). **೨.**=ಅಣವಮಲ : ತಾ ಮಾಡಿದೆನೆಂದಡೆ ತನ್ನ ಕೆಳಗಣವೆ ಆಣವ ಮಾಯಿಕ ಕಾರ್ಮಿಕ ಮಲಂಗಳು (ಮೋಳಿಮಾ. ೩೩–೧೩೬) ; ಅಣವಾದಿಯೊಳಿರಲು ಹೂಣಿ ಲಿಂಗದಿ ಮನವ ಕೇಣವಿಡದಿಹನು ವಿರತಿಯಲಿ ದೇಹದಿಹ ಪ್ರಾಣಲಿಂಗಿಯು ತಾ (ಸರ್ವಜ್ಞ. ೧೩೮). 'ಅಣವಮಲ' ಪರಾ. **[ಸಂ.]**

**ಅಣವಮಲ** (ನಾ). [ಶೈವ] ಮಲತ್ರಯಗಳಲ್ಲಿ ಒಂದು ; "ಜೀವನಲ್ಲಿ ಅಣುತ್ವಭಾವನೆಯನ್ನು ಹುಟ್ಟಿಸುವ ಮಾಯೆ" (ಶಕ್ತಿವಿ. ೪೨) : ಅಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದುಳಿದು ನಿರ್ಮಲನಾದ ಶಿಷ್ಯನು (ಅವಚಂ. ೨೭೪–೧೨೫೫) ; ಅಣವಂ ಗರ್ಭಸಂಬಂಧಂ ಸ್ತ್ರೀ ಪುರುಷರ ರೇತರಕ್ತದಿಂದುದಿಸಿದೆನೆಂಬ ಅಭಿಮಾನದ ಮಲಭಾವವೇ ಆಣವಮಲವೆನಿಸುವುದು (ಕೃಷಿಪ್ರ. ೩೩೪).

[ಅಣವ + ಮಲ₃]

**ಅಣವಲಕ್ಕಿ** (ನಾ). (ಉಕ) ಬೆಲ್ಲದ ಪಾಕದಿಂದ ಕಲಸಿದ ಅವಲಕ್ಕಿ : ಅಣವಲಕ್ಕಿ ಅಂದರೆ ಮಕ್ಕಳಿಗೆ ಪ್ರೀತಿ (ರೂಢಿ). [ಅಣ್ಣ₂ + ಅವಲಕ್ಕಿ]

**ಅಣವಿಸು** (ಕ್ರಿ). ಆಜ್ಞಾಪಿಸು : ಕ್ರಮದಿಂದಾಣವಿಸು ದೇವ ತಪ್ಪದೆ ನಡೆವೆಂ (ಬಾಲಭಾ. ೯–೫೬). [< ಆಜ್ಞಾಪಿಸು]

**ಅಣವೀನ** (ಗು). ಜೀರಿಗೆಸಂಬಾರವೆಂಬ ಒಂದು ಬಗೆಯ ಭತ್ತವನ್ನು ಬೆಳೆಯುವ. **[ಸಂ.]**

**ಅಣಿ₁** (ನಾ). ಶ್ರೇಷ್ಠವಾದುದು ; ಉತ್ಕೃಷ್ಟವಾದುದು : ಅಣಿಯಿಲ್ಲದ ಮುತ್ತು ಜಾಣಿಲ್ಲದಾ ಮಾತು ಮೇಣರ್ಥಮಿಲ್ಲದಿರುತಿಪ್ಪ × × × ನೀಕ್ಷೋಣಿಯೊಳೆಲೆಗೆ ಬೆಲೆವೆಣ್ಣೆ (ಉದ್ಧಟ. ೧೦–೯೨) ; ಮಲಯಜಮಿಕ್ಕಿ ಮುಡಿದು ಮಲ್ಲಿಗೆಯಂ ಬಿಳಿದುಟ್ಟೋರಾಣಿಯ ಮುತ್ತಂ ತೊಟ್ಟೆಳಮಿಂಚಿಂ ಕಂಡರಿಸಿದ ಕಾಂತೆಯೆನಲ್ ಕಡುಸೊಗಸಿದಳು (ಜಯಕಾ. ೨–೪೯).

**[ದೇ. ‖ ತಮಿ. ಮಲ. ಆಱಿ ; ತೆಲು. ಅಣಿ]**

**ಅಣಿ₂** 'ಅಱಿ₂' ನೋ.

**ಅಣಿ₃** (ನಾ). **೧.** ಮೊಳೆ ; ಕೀಲು ; ಗೂಟ : ಕತ್ತರಿಯಿಂ ಕೆತ್ತುವಾಣಿಯಿಂ ಬೆಟ್ಟುವ (ರಾಮಾಶ್ವ. ೧೦೩–೨೩) ; ಕೆಲಸಗಾರರು ಅವನ್ನು ಅಣಿಯಿಂದ ಜೋಡಿಸುವರು (ಬಾಲಪ್ರ. I, ೨೬೬) ; ಚಿಕ್ಕಪ್ಪ ಬೀಗದ ಗೊಂಚಲನ್ನು ಅಣಿಯಲ್ಲಿ ಸಿಕ್ಕಿಸುತ್ತಾ (ನಾಚಿಕೆ. ೯). **೨.** ಕಾಲಿನ ಮಂಡಿಯಿಂದ ಮೇಲೆ ನಾಲ್ಕು ಅಂಗುಲ ಪರಿಮಿತಿಯಲ್ಲಿನ ಭಾಗ ; ಮೊಳಕಾಲಿನ ಮೇಲ್ಭಾಗ. **೩.** ಮನೆಯ ಮೂಲೆ. **೪.** ಎಲ್ಲೆ ; ಗಡಿ. **೫.** ಕತ್ತಿಯ ಅಂಚು, —ಅಲಗು.

**[ದೇ. ‖ ತಮಿ. ಮಲ. ತುಳು. ಕೊಡ. ತೆಲು. ಅಣಿ. / ಸಂ. ಪಾಲಿ. ಅಣಿ]**

**ಅಣಿ₄**, ಆನಿ, ಆನೆ₂ (ನಾ). ಕಾಲಿನಲ್ಲಿ ಮುಳ್ಳು ಮುಂತಾದುವು ಹೊಕ್ಕಮೇಲೆ ಚರ್ಮ ಮುಚ್ಚಿಕೊಂಡು ಕೀತುಕೊಳ್ಳುವುದು,—ಕೀವು ತುಂಬಿಕೊಳ್ಳುವುದು : ಕಾಲಿನಲ್ಲಿ ಅಣಿಯಿದ್ದವನಿಗೆ ನಡೆಯಲು ಚಪ್ಪಲಿ ಬೇಕು (ರೂಢಿ). **ಆನಿ :** (ಉಕ) ಕಾಲಲ್ಲಿ ಆನಿಬೆಳೆದಿರುವುದರಿಂದ ಅವನಿಗೆ ಬೇಗ ನಡೆಯಲು ಆಗುವುದಿಲ್ಲ (ರೂಢಿ). **ಆನೆ₂ :** (ದಕ) ಅವನ ಕಾಲಿನಲ್ಲಿ ಆನೆ ಬೆಳೆದುಕೊಂಡಿದೆ (ರೂಢಿ).

[ದೇ. ‖ ತಮಿ. ಆಣಿ = ಹುಣ್ಣಿನ ಮಧ್ಯಭಾಗ ; **ತೆಲು.** ಆಣಿ = ಆಳವಾದ ಗಾಯ]

**ಅಣಿ₅** (ನಾ). ಬಲೆಗಳ ತುದಿಗೆ ಅಳವಡಿಸುವ ಬಿದಿರಿನ ದೊಣ್ಣೆ : ಅಣಿಯಿಂದ (ಕತ್ತರಿಯಂತೆ ಸೇರಿಸುವ ಬಿದಿರಿನ ದೊಣ್ಣೆಗಳು) ಬಲೆಯ ತುದಿಯನ್ನು ಮೇಲಕ್ಕೆ ಎತ್ತಿದರು (ಹುಟ್ಟಹ. ೩೫) ; ಬಲೆಗಳನ್ನೆಲ್ಲಾ ಒಂದರೊಂದಿಗೆ ಒಂದನ್ನು ಗಂಟುಹಾಕಿ ಅದರ ಎರಡು ತುದಿಗಳಿಗೂ 'ಅಣಿ' (ಬಿದಿರಿನ ದೊಣ್ಣೆ) ಯನ್ನು ಹಾಕಿ 'ಬಗ್ರಿ' ಹಗ್ಗವನ್ನು ಕಟ್ಟಿ ಆಚೆ ಈಚೆ ಗಿಡಗಳಿಗೆ ಬಿಗಿದರು (ಬೈಸರ್ವೆ. ೧೦೩). [?]

**ಅಣಿಕಲ್ಲು₁** 'ಅಲಿಕಲ್' ನೋ.

**ಅಣಿಕಲ್ಲು₂** (ನಾ). ಉತ್ತಮವಾದ ಕಲ್ಲು ; ರತ್ನ : ಮಹಾಭಾರತದ ಅಣಿಕಲ್ಲೆಂದರೆ ಕುರುಕ್ಷೇತ್ರಯುದ್ಧ (ಕಲಾವಿ. ೧೨೧).

[ಅಣಿ₁ + ಕಲ್ಲು₂ (< ಕಲ್₂)]

**ಅಣಿಕಲ್ಲು₃** (ನಾ). ಕಂಬಗಳ ಬುಡದಲ್ಲಿ ಆಧಾರವಾಗಿ ಕೊಡುವ ಅಡಿಗಲ್ಲು ; ಸುಣಪಾದದ ಕಲ್ಲು.

[ಅಣಿ₃ + ಕಲ್ಲು₂ (< ಕಲ್₂)]

**ಅಣಿಕಾರ** 'ಅಣಿಕಾಱ' ನೋ.

**ಅಣಿಕಾಱ**, ಅಣಿಕಾರ, ಅಣಿಗಾಱ (ನಾ). **೧.** ಚಿನ್ನ, ಬೆಳ್ಳಿ, ರತ್ನ ಮುಂತಾದ ಬೆಲೆಯುಳ್ಳ ವಸ್ತುಗಳ ಬಣ್ಣ, ಯೋಗ್ಯತೆ, ಬೆಲೆ ಮೊದಲಾದುವನ್ನು ತಿಳಿಯಬಲ್ಲ ನಿಪುಣ ; ಸುವರ್ಣಪರೀಕ್ಷಕ ; ರತ್ನಪರೀಕ್ಷಕ : ಮಾಣದಚ್ಚಜಲದೊಳೊಂದು ಅಣಿಯಾದ ಮುತ್ತು ಹುಟ್ಟಿ ಕೋಣೆಯೆಂಟಜಿಳಗೆ ತಾನೆ ತಿರುಗುವುದು ಅಣಿಕಾಱರು ಕಂಡು ಆ ಮುತ್ತ ಬೆಲೆಮಾಡಿ ಜಾಣತನದಲಿ ಕೊಂಡೊಯ್ದರದನು (ಶಿವಗೀ. ೭೮೨) ; ಶ್ರೀಮದಕ್ಕಸಾಲದಚ್ಚಿನ ಕಮ್ಮಟದಲು ನ[ಡೆ]ವಯಾಣಿಕಾಱಂ ಬಂಡಿಯ ಬಸವಿಸೆಟ್ಟಿಯರ ಮಗಂ (ಸೌಇಇ. XV, ೭೦–೩ ; 1186);

ಬಲ್ಲರೆ ಬಲ್ಲರ್ ಜೀವನ ಸಲ್ಲಕ್ಷಣಗತಿಯನಜ್ಞಜನರೆಂತಱಿವರ್ ಕಲ್ಲಿನೊಳಿರ್ಪ ಸುವರ್ಣಮನೆಲ್ಲರುಮೆಂತಱಿವರಾಣಿಕಾಱನ ತೆಱದಿಂ (ಶಬ್ದಾನು. ೩೩೧ ವ್ಯಾಖ್ಯಾ); ಅಣಿಕಾಱರು ವೈದ್ಯದಲಿ ಬಿನ್ನಾಣಿಗರು ಜೋಯಿಸರು ಮಿಗೆ ಪೌರಾಣಿಕರು ಶ್ರುತಿಸಿದ್ಧರೋಲಗಕ್ಕೈದಿತೊಗ್ಗಿನಲಿ (ಪ್ರಹ್ಲಾ ಚ. ೧೭–೪೯); ತಂದೆಯೊಳಲ್ಲವೇ ಮಱುಕಮೀಶನೊಳಲ್ಲದೆ ಬಾಟ್ಕೆ ಗಂಡನೊಳ್ ಪೊಂದದೆ ಕಾಮಪೂರ್ತಿ ಕಡೆಗಾಣದೆ ಬಣ್ಣಗಳಾಣಿಕಾಱನೊಳ್ ನಿಂದಿಹ ಮಟ್ಟವಾವೆಡೆಯೊಳೀಕ್ಷಿಸಲಪ್ಪುದು (ಕವಿಚ. III, ೧೨೫ ಸದಾಶ). ೨. ಯೋಗ್ಯತೆಯನ್ನು ತಿಳಿದವನು; ಸಮರ್ಥ; ನಿಪುಣ: ವೀರರಾಮನ ಭುಜದೊಳು ವೀರಲಕ್ಷ್ಮೀನಾರಿಗೆ ವಿಜಯಾಂಗನೆಗೆ ಹೋರಾಟ ತಪ್ಪದು ಸನತಿಮುತ್ಸರದಿಂದ ಬಾರಿಪರಳವೆ ರಾಮನಿಗೆ ಎಂದಾಣಿಕಾಱರಲ್ಲಲ್ಲಿ ನುಡಿವುತಿರಲು (ಕುರಾಸಾಂ. ೧೪–೫೨); ರಾಣಿಯರ ಪಂಚಶತ ವಾಮಕರಕಕ್ಷಗಳೊಳಾಣಿಕಾಱರ ದೇವ ತಾಳ್ದಿಳಿಸಿ ಭೂತಳಕೆ ಬಿಗಿದ (ಪರಶು. ೧೨–೩೧). **ಅಣಿಕಾರ: ೧.** ಸಂಕ್ರಾಂತಿಯಲು ಅಂಗಭೋಗಕ್ಕೆ ಬಿಟ್ಟ ಗ ೧ ಅಂತು ಗ ೨ ಅಣಿಕಾರ ಮಹದೇವಸೆ[ಟ್ಟಿ]ಹ ೨ ಅವನಾಗಿ × ಯುಂ (ಸೌಇ. XV, ೬೧–೧೦; 1184); ಮತ್ತವಾ ಕಂಮಟದಲು ನಡೆವಾಣಿಕಾರ ಮಹಾದೇವ ಸೆ[ಟ್ಟಿ]ಯರು ಕೊಟ್ಟ ಹಣ ೨ (ಸೌಇ. XV, ೬೨–೨; 1184); ಅಣಿಕಾರನ ಮನೆಯ ತೊತ್ತು ನಾಣ್ಯ ನೋಟವ ಬಲ್ಲಳೆ (ಗಾದೆ). **ಅಣಿಗಾಱ: ೧.** ಜಲಜನಾಭನ ಕೌಸ್ತುಭಕೆ ನೆಲೆಗಂಡು ಬೆಲೆಯ ಪೇಳುವ ಅಣಿಗಾಱರಾ ನೆಲದೊಳಗೊಪ್ಪುತಲಿಹರು (ಗೋಮಟೇ. ೧–೧೨೨).

[ಅಣಿ$_1$ + -ಕಾಱ. / ತೆಲು. ಅಣಿಕಾಡು = ಆತ್ಮೀಯ ಸ್ನೇಹಿತ, ಮರ್ಮಜ್ಞ]

**ಅಣಿಕಾಱಿಕೆ** (ನಾ). ಸುವರ್ಣ ಅಥವಾ ರತ್ನಪರೀಕ್ಷೆ: ಕಾಣದೆ ನಾ ತಿರುಗಿದೆ ಕಂಡುದುದಿಲ್ಲ ಮಾಣಿಕ್ಯದ ರಾಶಿ ಅಡಿಗೆ ಕಂಗಳಯ್ಯನು ಹೋಗಿ ಅಣಿಕಾಱಿಕೆ ಮಾಡಿದಂಥ ಈ ಕುಯುಕುತಿ (ಪುರಂದ. ೩–೬೨–೨); ಮಾಣಿಕಮೆಯ್ವಣ್ಣದ ಚಾಯಮಿಾನ ಕಂಡಾಣಿಕಾಱಿಕೆ ಜಲಗಾರ ಕ್ಷೋಣೀಶ್ವರನಾಸ್ಥಾನಕೆ ತಂದು ಕೈಗಾಣಿಕೆ ಕೊಟ್ಟ ರಕ್ಕಸಗೆ (ಮೋಹತ. ೧೧–೩೪). [ಅಣಿಕಾಱ + -ಇಕೆ]

**ಅಣಿಕೆ, ಅನಿಕ್ಕೆ** (ನಾ). ವರ್ತಕನು ರೈತನಿಗೆ ವಸ್ತುವನ್ನು ಕೊಳ್ಳುವುದಾಗಿ ಒಪ್ಪಂದ ಮಾಡಿಕೊಂಡು ಕೊಡುವಂಥ ಹಣ; ವ್ಯಾಪಾರಗಾರ ರೈತನಿಗೆ ಕೊಡುವ ಸಂಚಕಾರ (ಕಿಸಂಗ್ಲಾ. ೧೭೮). **ಅನಿಕ್ಕೆ$_2$** (ಕಿಸಂಗ್ಲಾ. ೧೭೮). [?]

**ಅಣಿಗಣ್ಡಿಕೆ** (ನಾ). (?): ಬಿರುದರಪ್ಪವರ ಬಿರುದನೊಡ್ಡಱಿವೊನ್ ಬಿದ್ದ ಬಗದತ್ತಿ ಅಣಿಗಣ್ಡಿಕದ ಗಣಿ ಪೊಕ್ಕ ಅಬ್ಬಯ ಅಟ್ಟ ಮೆಚ್ಚಿ ನಾಳ್ಗಣ್ಡನ್ (ಎಇ. XXIV, ೨೭–೧೦; 885). [?]

**ಅಣಿಗಳೆ** (ಕ್ರಿ). ರಂಧ್ರವಿಡು (?): ರೇಣುಹತ್ತಿದ ರವಿಯ ಮಸೆಯಲು ಸಾಣೆಗಿಕ್ಕಿತೊ ಭಗಣರತ್ನವನಾಣಿಗಳೆಯಲು ಕಮಲಭವ ಸೃಜಿಸಿದ ಸಲಾಕೆಗಳೊ (ಕುವ್ಯಾಭೀ. ೪–೧೭). [ಅಣಿ ? + ಕಳೆ$_1$]

**ಅಣಿಗಾಱ** 'ಅಣಿಕಾಱ' ನೋ.

**ಅಣಿಗೆ** (ನಾ). ಅಪ್ಪಣೆ; ಆಜ್ಞೆ: ಎಂತಟವಿಯಿಂ ತೊಳಲ್ದಿರಿ ತಾತ ನಾಣಿಗೆಯೊಳೆಂತನಿಬರೊಳ್ ನೇಹಮಾಯ್ತು ಮೇಣಸುರರೊಡನೆಂತು ಕೈಗೈದಿರಿ (ಶ್ರೀರಾಮ. ೪–೩೮). 'ಅಣಿಗೆಗೊಳ್' ಪರಾ.

[< ಸಂ. ಅನುಜ್ಞಾ]

**ಅಣಿಗೆಗೊಳ್** (ಕ್ರಿ). ಅಪ್ಪಣೆ ತೆಗೆದುಕೊ: ಸಂತವಿಟ್ಟಾಗಳಾಣಿಗೆಗೊಂಡು ಮಾತೆಯಿಂ ಕಾಂತೆಯೊಡನರಮನೆಗೆ . . . ಸಂತಸದೊಳೆಣೆವೆರಸು ಸರಸಿಗೈತರ್ಪಂಚೆಯಂತೆ ರಾಮಂ ಬಂದನು (ಶ್ರೀರಾಮ. ೫–೨೯).

[ಅಣಿಗೆ + ಕೊಳ್$_1$]

**ಅಣಿಚೆಲ್ವಿಕೆ** (ನಾ). ಅತ್ಯುತ್ತಮವಾದ ಸೌಂದರ್ಯ: ಅಣಿಚೆಲ್ವಿಕೆಯೊಳು ಚೂಣಿ ಶೃಂಗಾರಿ ಕಟ್ವಾಣಿ ಮಾತಿನೊಳು ಸುಪ್ಪಾಣಿ . . . ನಿಂದಿಹಳು ವಾಲಗದಿ (ಸೌಂದಕಾ. ೩–೪೮). [ಅಣಿ$_1$ + ಚೆಲ್ವಿಕೆ]

**ಅಣಿದು** 'ಅಣೆಯಿಡು' ನೋ.

**ಅಣಿತೋರಣ** (ನಾ). ಶ್ರೇಷ್ಠವಾದ ತೋರಣ: ಅಣಿತೋರಣ ಕೇತನಾಳಿಗಳಿಂದ ಅರಿಸೇನೆ ಭೀಕರವಾಗಿ ತೋಱದಲಿ (ಸೌಗಂಧಿ. ೩–೧೧).

[ಅಣಿ$_1$ + ತೋರಣ]

**ಅಣಿಪೊನ್** (ನಾ). ಶ್ರೇಷ್ಠವಾದ ಚಿನ್ನ (ಶ).

[ಅಣಿ$_1$ + ಪೊನ್. / ತಮಿ. ಅಣಿಪ್ಪೊನ್; ಮಲ. ಅಣಿಪ್ಪೊನ್ನು]

**ಅಣಿಮಣಿ** (ನಾ). ಶ್ರೇಷ್ಠವಾದ ರತ್ನ: ಲಲನೆಯರ ಮೊಗದ ಮೂಗುತಿಯಾಣಿಮಣಿಯಂತೆ (ಚಂಪ್ರಸಾಂ. ೧–೨೧೨); ನವರತ್ನದೊಳಾಣಿಮಣಿಯ ನಾಯ್ದಾಯ್ದು ಹಾರಮಂ ಬಿತ್ತರಿಸುವಂತೆ (ಸಕನೈ. ೧೦).

[ಅಣಿ$_1$ + ಮಣಿ$_2$]

**ಅಣಿಮುತ್ತು** (ನಾ). ೧. ದುಂಡಾದ ಮುತ್ತು. ೨. ಶ್ರೇಷ್ಠವಾದ ಮುತ್ತು: ಕಾಣುತ ವನಚರಿ ಮಾಣದೆ ಬಿಗಿದಪ್ಪಿ ಅಣಿಮುತ್ತುಗಳಿಂದ ತನ್ನ ಪ್ರಾಣೇಶ್ವರಗೆ ನಿವಾಳಿಸಿ ನುಡಿದಳು ಕಾಣೆ ಪಡಿಯ ನಿನಗೆಂದು (ಮೋಹತ. ೩–೨೭); ಅಣಿಮುತ್ತಿನ ಕಂಠಮಾಲೆ ಚೌಕುಳಿ ಪೊಸಮಾಣಿಕಗಳ ದಿವ್ಯಪದಕ ಜಾಣಶೇಖರನ ಸರ್ವಾಂಗದೆ ಮೆಱೆದುವು (ಕಂನವಿ. ೨೩–೮೧); ಅಣಿಮುತ್ತಿನ ಸರಗಳಿಂದೊಪ್ಪುವ ಮೇಲುಕಟ್ಟುಗಳಿಂದಲೂ (ಕೃವಾವಿ. ೧೩೦). [ಅಣಿ$_1$ + ಮುತ್ತು$_5$. / ತಮಿ. ಅಣಿಮುತ್ತು]

**ಅಣಿಮೌಕ್ತಿಕ** (ನಾ). = ಅಣಿಮುತ್ತು: ಅಣಿಮೌಕ್ತಿಕಜಾಲ ಲೋವೆಯ ಮಾಣಿಕದ ವೈಡೂರ್ಯವಜ್ರಶ್ರೇಣಿ (ಕೋಗಯು. ೩–೭).

[ಅಣಿ$_1$ + ಮೌಕ್ತಿಕ]

**ಅಣಿವೆಱು** (ಕ್ರಿ). ಶ್ರೇಷ್ಠತೆಯನ್ನು ಪಡೆ: ರಾಣಿಯರೆಲ್ಲರು ಗುಹೆಯ ದಾಂಟಿದ ಮೇಲೆ ಕ್ಷೋಣೀಶ ಹಲವು ರೂಪದಲಿ ಅಣಿವೆತ್ತೊಂದು ರೂಪನೆ ತಾಳ್ದು ನಲವಿಂದ ಕಾಣುತಿದ್ದನು ಬಪ್ಪ ಪಡೆಯಾ (ಭರಚ. ೩೪–೨೮).

[ಅಣಿ$_1$ + ಪೆಱು$_1$]

**ಅಣಿಸು** (ಕ್ರಿ). ಬಿಸಿಲಿನಿಂದ ಬಿರುಕು ಬಿಡು; ಒಡೆ; ಸೀಳು: ಅಣಿಸಿದ ಟೆಂಗು ಅತಿಬಲವತ್ತಾಗಿರುವದು (ರೀವ್); ಹಸಿಗಡಿಗೆ ಬಿಸಿಲಲ್ಲಿಟ್ಟರೆ ಅಣಿಸುವುದು (ಸ್ಯಾಂಡರ್). [ಅಣ್ಣೆ$_2$ + -ಇಸು$_3$]

**ಅಣುಂಗ** (ನಾ). ಒಂದು ಮನೆತನದ ಹೆಸರು (?): ಅಣುಂಗರ ಕಾಟಯ್ಯ ತುಱುವಿಂಗಡ್ಡಂಬನ್ದು ಇಱಿದು (ಎಕ. VIII, ಸೊರಬ. ೬೧–೧೭; 1032). [?]

**ಅಣುಂಗರಸ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಕೀಟ್ಟುಲಿಯ ಮಮ್ಮ ಅಣುಙ್ಗರಸರ ಮಗ ಕಲಿಗಜ್ಜಂ ಆಯಪ್ಪದೇವನೊಳ್ಕಾದಿ ಕಳಕಟ್ಟಿಯೊಳ್ಸತ್ತ (ಎಕ. VI, ಕಡೂರು. ೧೪೦–೧; 919). [ಅಣುಂಗ + ಅರಸ$_1$]

**ಅಣ್ಣೆ$_1$** 'ಅಲ್ಲಿ$_1$' ನೋ.

**ಅಣ್ಣೆ$_2$** (ನಾ). (ಉಕ) ಬಿರುಕು; ಸೀಳು. 'ಅಣೆಬಿಡು' ಪರಾ.

[ದೇ. ‖ ಮಲ. ಅಣಂಕೀಱುಕ = (ಬಿಸಿಲಿನ ಬೇಗೆಯಿಂದ ಹೊಲವು) ಬಿರುಕುಬಿಡು,—ಸೀಳು]

**ಅಣ್ಣೆ$_3$, ಅಣ್ಣ$_1$** (ನಾ). ೧. ಅಪ್ಪಣೆ; ನಿಯಮ; ವಿಧಿ: "ಆಜ್ಞಾ— ಆಣೆ" (ಶಬ್ದಾನು. ೧೬೦ ಪ್ರಯೋ); ಜವನಾಣೆಗಮಾಜ್ಞೆಗಮುಂಟೆ ವಕ್ರಂ (ಆದಿಪು. ೪–೬೭); ಗ್ರಾಮಬ್ರಯ ನಿಧಿ ನಿಕ್ಷೇಪ ಅಂಕೆ ಟಂಕ ಆಣೆಗೋಸನೆ ಮುದ್ರೆ (ಎಇ. XXI, ೨–೭೩; 1260); ತಾರೆಯ ತಿಂಗಳಲಿ ಆಣೆಕುಡಿ ಊರಾಣೆ (ಸೌಇಎ. ೧೯೩೧; ಕುಂದಾಪು. ೩೫೭–೧೩; 1379 ?); ನಾನಾ ಜಗದೊಳವನಾಣೆಯಾಜ್ಞೆ ಸಂದುದು (ಚಿಬಪು. ೪೭–೯).

೨. ತನ್ನ ಕೋರಿಕೆಯನ್ನು ಬಿಡದೆ ನಡೆಸಿಕೊಡಬೇಕೆಂದು ಬೇರೊಬ್ಬರನ್ನು ನಿರ್ಬಂಧಿಸಲು ಬಳಸುವ ಒಂದು ಶಬ್ದ; ಪ್ರತಿಜ್ಞಾ ಸೂಚಕ ಮಾತು: ಉಳ್ಳುದನುಳ್ಳಂತೆ ಪೇೞೆಯಪ್ಪೊಡೆ ನಿನಗೆನ್ನಾಣೆ ಯೆಂದು ತನ್ನ ಮೇಗೆ ಸೂರುಳಿಸಿ ಬೆಸಗೊಂಡೊಡೆ (ವಡ್ಡಾರಾ. ೪೬-೨೪); ಪೋದೊಡೆ ಧೂರ್ಜಟಿಯಾಣೆ ಮೀಱಿ ಪೋದೊಡೆ ಕಲಿಭೀಮನಾಣೆಯೆನೆ (ಗದಾಯು. ೪-೪೫); ಇತ್ತಲಿತ್ತಲು ಪಾರ್ಥ ಹೋಗದಿರಿತ್ತಲಶ್ವತ್ಥಾಮ ನಾಣೆ (ಕುವ್ಯಾಕ. ೧೪-೧೫). ೩. ಪ್ರಾಮಾಣಿಕತೆಯನ್ನು ಸ್ಪಷ್ಟಪಡಿ ಸಲು ಪ್ರಿಯವಾದ ಅಥವಾ ಗೌರವಕ್ಕೆ ಪಾತ್ರವಾದ ವ್ಯಕ್ತಿ ಅಥವಾ ವಸ್ತುವನ್ನು ಹೇಳಿ ಮಾಡುವ ಪ್ರಮಾಣ: ನಿನ್ನಾಣೆ ನೀನಿನ್ನುಪೇಕ್ಷಿಸಿ ದಂದೆನ್ನಯ ಜೀವಮಂ ಬಿಡದಿರೆಂ ಗಂಧರ್ವರಾಜಾತ್ಮಜೇ (ಕಾದಂಉ. ೬೨); ನೋವು ಮನದೊಳಗುಳ್ಳಡಾ ರಾಜೀವಲೋಚನನಾಣೆ (ಕುವ್ಯಾದ್ರೋ. ೧-೨೭); ಪಶುಪತಿಯ ಮೇಲಾಣೆ ಹುಸಿದಡೆ ಶಿಶು ವಿನಾಣೆಯೆನುತ್ತ ಕೆಲಬಲಕಸವಳಿದು ಬಿಱುನಗೆಯ ಸೂಸಿದ (ತೊರರಾ. ೩-೭-೪೬); ಕೊರಲಾಣೆ ಉಂಗುರದಾಣೆ ಪೇೞ್ದಲ್ಲದೆ ಬಿಡೆಂ (ರಾಮಾಶ್ವ. ೧೧೮-೪). ಆಣ$_1$: ೧. ಆವರಾಣದೆ ವೋಗೆ ಇತ್ತ ಧರ್ಮ್ಮ (ಎಕ. VIII, ಸೊರಬ. ೪೧೧-೧೯; 700).

ಆಣೆಭಾಷೆ = ಪ್ರತಿಜ್ಞಾವಚನ; ಮಾತಿಗೆ ತಪ್ಪುವುದಿಲ್ಲವೆಂಬ ಶಪಥ: ಕ್ಷಿತಿಪರನು ಕರೆಕರೆದು ಗರ್ವೋದ್ಧತ ಸುಷೇಣ ಕಪೀಂದ್ರ ಸೀತಾಪತಿಯ ಹೆಸರಲಿ ಕೊಂಡನನಿಬರಲಾಣೆಭಾಷೆ [ಪಾಠಾಂ. ಭಾರ] ಗಳ (ತೊರರಾ. ೪-೯-೩); ನನ್ನನ್ನು ಇನ್ನೂ ಹೆಚ್ಚಿನ ಸಂಕಟಕ್ಕೀಡು ಮಾಡಲು ಆಣೆಭಾಷೆಗಳನ್ನು ಇಡುತ್ತಿರುವೆ (ಶಾಂತಲಾ. ೨೭೫).

[< ಸಂ. ಆಜ್ಞಾ]

**ಆಣೆ$_4$** (ನಾ). ಹಾಡುವಿಕೆ: ಆಯತವಿಡುಪು ಸುಸ್ವರ ಷಡ್ಜಪಂಚಮ ಸ್ಥಾಯಿ ಸಂಚರ ಠಾಯೆ ನೇಮ ಬಾಯಿದೆಱೆಯಿನಾಣೆಯಾಯ ತಪ್ಪದ ಗೀತ ಗಾಯಕಿಯರುಗಳೊಪ್ಪಿದರು (ಮೋಹತ. ೧೮-೪೪). [?]

**ಆಣೆ$_5$, ಆಣ$_4$** (ನಾ). ೧. ಒಂದು ರೂಪಾಯಿಯ ಹದಿನಾರು ಅಂಶ ಗಳಲ್ಲಿ ಒಂದು; ಆ ಬೆಲೆಯ ಒಂದು ನಾಣ್ಯ: ನನ್ನ ಮೊದಲನೇ ಪುಸ್ತಕ ವಿತ್ತಲ್ಲ, ಅದನ್ನು ... ಒಂದು ಆಣೆಗೆ ಮಾರಿದೆನು (ಮುಂಬಯಿ. ೮-೪೪); ರೂಪಾಯಿಗೆ ಹದಿನಾರು ಆಣೆ (ರೂಢಿ). ೨. ಜಮೀನಿನ ವಿಸ್ತಾರ; ಗುಂಟೆಯ ಹದಿನಾರನೆಯ ಒಂದು ಭಾಗ. ೩. ಬೆಳೆಯ ಅಂದಾಜು. 'ಆಣೆವಾರಿ' ಪರಾ. ಆಣ$_4$: (ದಕ. ೬).

[← ಮರಾ. ಆಣಾ; ಹಿಂ. ಆನಾ]

**ಆಣೆಕಲ್ಲು** 'ಆಲಿಕಲ್' ನೋ.

**ಆಣೆಗಲ್ಲು** 'ಆಲಿಕಲ್' ನೋ.

**ಆಣೆಗೈ** (ಕ್ರಿ). ಅಪ್ಪಣೆಮಾಡು: ನಿಮ್ಮನ್ನು ವಿಷಪ್ರಯೋಗದಿಂದ ಕೊಲ್ಲ ಬೇಕೆಂದು ದೊರೆಗಳು ಆಣೆಗೈದಿರುವರು (ಹಾಹುತ್ತ. ೨೩).

[ಆಣೆ$_3$ + ಗೈ (< ಕೆಯ್$_1$)]

**ಆಣೆಗೋಸಣೆ** (ನಾ). ಅಪ್ಪಣೆಯನ್ನು ಸಾರಿ ಹೇಳುವುದು: ಧರಣೀಶಂ ದಯೆಗೆಯ್ದು ಮಗ್ರಮಹಿಷೀಸಂಪತ್ತಿಯಂ ಪ್ರೇಮನಿರ್ಭರ ನಿರ್ಬಂಧದಿ ನಾಣೆಗೋಸಣೆಯನಿತ್ತುಂ ಬಾೞ್ತಿಯೇ ಪುತ್ರಮೋಹರಸಾಸ್ವಾದನ ತೃಪ್ತಿ ಯಿಲ್ಲವೆನುತುಂ ತತ್ಕಾಂತೆ ಚಿಂತಾಪರಂಪರೆಯಂ ತಾಳ್ದಿದಳ್ (ಮಲ್ಲಿಪು. ೩-೧೦೭); ಆಣೆಗೋಸನೆ[ಣೆ]ಮುದ್ರೆ ನಾಗೇಶ್ವರಕ್ಕೆ ಮಲ್ಲೇಶ್ವರಕ್ಕೆ (ಎಇ. XXI, ೨-೭೩; 1260); ಗಣೆದಂಗೊಳ್ವೊಡೆ ಮಿಕ್ಕಿನಕ್ಕರದ ಮಾತಂತಿರ್ಕೆ ತನ್ನಾಣೆಗೋಸಣೆ ಸಲ್ಗುಂ ಸುಕವೀಂದ್ರವೃಂದ ಸಭೆಯೊಳ್ ತಾನೆಂದೊ ಡಮ್ಮಮ್ಮ ಧಾರಿಣಿಯೊಳ್ ಕೇಳ್ದಱಿಯಾ ಜಡಾ ಮಧುರನಂ (ಧರ್ಮನಾ. ೧-೬೯). [ಆಣೆ$_3$ + ಗೋಸಣೆ]

**ಆಣೆಘೋಷಣೆ** (ನಾ). = ಆಣೆಗೋಸಣೆ: ಇಳೆಸಹಿತ ಹದಿನಾಲ್ಕು ಲೋಕಗಳೊಳಗದಾತನಯಾಣೆಘೋಷಣೆ ಬೆಳೆಯಿತೈ (ಸಂಭಪ. ೧೦-೨).

[ಆಣೆ$_3$ + ಘೋಷಣೆ]

**ಆಣೆತಿನ್ನು** (ಕ್ರಿ). ಆಣೆಯಿಡು; ಶಪಥಮಾಡು; ವಚನಕೊಡು: ಅವಳು ತನ್ನ ಮುದ್ದುಕಂದನ ಸಂರಕ್ಷಣೆಯ ಬಗ್ಗೆ ನನ್ನಿಂದ ಆಣೆತಿಂದಿ ದ್ದಾಳೆ (ಹಳ್ಳಿಹಾ. ೯೩).

ಆಣೆತಿನಿಸಿಕೊ = ಭಾಷೆ ತೆಗೆದುಕೊ; ವಚನ ತೆಗೆದುಕೊ: ಮನೆ ಯಲ್ಲಿ ಅವರ ಮಾವ ಆಣೆತಿನಿಸಿಕೊಂಡು ಕಳಿಸಿದ್ದರಂತೆ (ಕಯಾತ್ರಿ. ೧೧).

[ಆಣೆ$_3$ + ತಿನ್ನು (< ತಿನ್)]

**ಆಣೆದೊಡು** (ಕ್ರಿ). = ಆಣೆತಿನ್ನು: ನಿಮ್ಮ ಕುರಿತ ಫಲವನ್ನು ಸಾಧಿಸಿ ಕೊಡುವೆನೆಂದು ಆಣೆದೊಟ್ಟಿರುವವಳು ನಾನು (ಮಂತ್ರಶ. ೨೭-೧೯).

[ಆಣೆ$_3$ + ತೊಡು]

**ಆಣೆಬಿಡಿಸು** (ಕ್ರಿ). ಶಪಥವನ್ನು ಹಿಂದಕ್ಕೆ ತೆಗೆದುಕೊಳ್ಳುವಂತೆ ಮಾಡು (೬). [ಆಣೆ$_3$ + ಬಿಡು$_1$ + -ಇಸು$_3$]

**ಆಣೆಬಿಡು** (ಕ್ರಿ). ಬಿರುಕುಬಿಡು; ಸೀಳಿಹೋಗು; ಬಿರಿ (೬).

[ಆಣೆ$_2$ + ಬಿಡು$_1$]

**ಆಣೆಮಾಡಿಸು** (ಕ್ರಿ). ಪ್ರತಿಜ್ಞೆಮಾಡಿಸು; ಶಪಥಮಾಡಿಸು; ಪ್ರಮಾಣಮಾಡಿಸು: ಕುರಾಣವನ್ನು ಮುಟ್ಟಿಸಿ ಅವರ ಕಡೆಯಿಂದ ಆಣೆ(ಯ)ಮಾಡಿಸಿದನು (ಮುಂಬಯಿ. ೫-೨೩೦).

[ಆಣೆಮಾಡು + -ಇಸು$_3$]

**ಆಣೆಮಾಡು** (ಕ್ರಿ). ಪ್ರತಿಜ್ಞೆಮಾಡು: ಶಪಥಮಾಡು; ಪ್ರಮಾಣ ಮಾಡು: "ಅವನು ಕೊಂದಿಲ್ಲ ಸರಕಾರ! ಆಣೆಮಾಡಿ ಹೇಳುವೆ" ಎಂದಳು (ಕೊಂದಯಾ. ೭೪); ಅಳತೆಗೆಟ್ಟು ಎಂದೂ ಸಾರಾಯಿ ಕುಡಿಯ ಲಿಕ್ಕಿಲ್ಲ ಎಂದು ಆಣಮಾಡಿದನು (ಮುಂಬಯಿ. ೫-೨೩); ಹಗೆತನಮಾಡಿ ದವರು ಇದೇ ಸತ್ಯವೆಂದು ಮಾರಮ್ಮನ ಆಣೆಮಾಡಿದರು (ಮಹಾಲ. ೮೩).

[ಆಣೆ$_3$ + ಮಾಡು$_1$]

**ಆಣೆಮೀಱು** (ಕ್ರಿ). ಪ್ರತಿಜ್ಞೆಯನ್ನು ಅತಿಕ್ರಮಿಸು; ಆಜ್ಞೆಮೀರು: ಆಣೆಯಿಡುತ ಬಹೆಲು ಆಣೆಮೀಱಿ ಬಲಮೆಯಿಂದ ಸಿವರಾಮೈಯ್ಯಗಳ ವರು ಮಾಡುತ್ತ ಬಹರು (ಸೌಇಇ. XX, ೨೩೨-೩೧; 1412).

[ಆಣೆ$_3$ + ಮೀಱು]

**ಆಣೆಯಿಕ್ಕು** (ಕ್ರಿ). = ಆಣೆಯಿಡು: ಮಾತೆತ್ತಿದರೆ ಅವನು ಆಣೆಯಿಕ್ಕು ತ್ತಾನೆ (ರೂಢಿ). [ಆಣೆ$_3$ + ಇಕ್ಕು]

**ಆಣೆಯಿಡಿಸು** (ಕ್ರಿ). = ಆಣೆಮಾಡಿಸು (ದಕ. ೬).

[ಆಣೆಯಿಡು + -ಇಸು$_3$]

**ಆಣೆಯಿಡು, ಆಣಿಡು** (ಕ್ರಿ). ಆಜ್ಞೆಮಾಡು; ಶಪಥಮಾಡು; ಪ್ರಮಾಣಮಾಡು: ಪನ್ನೆರಡುಯೋಜನಂಬೋದಲ್ಲಿ ರಥಮಾಣೆ ಯಿಟ್ಟಂತೆ ಮಾಣೆ ಕಂಡು ರಥಾಂಗಧರನುಂ (ಅಜಿಪು. ೯-೧೭ ವ); ವಾತಾಪಿ ತನ್ನಾಣೆಯಿಟ್ಟೊಡೆ ಮಾಣ್ದುರ್ಮದೆ ಮೇರು ಮತ್ಸರದೊಳಾದಂ ನೀಳ್ದ ವಿಂಧ್ಯಾಚಳಂ (ಕಾದಂಪೂ. ೧೦೩); ಬೆಲ್ಲವಂ ಮೆಲಿದೆನಾದೊಡೆಯಂ ದಧಿದೇವರಾಣೆ ಎಂದವನಿರದಾಣೆಯಿಟ್ಟು ತೋಱಿದಂ ಗುಡಮಂ ಕಡು ಮೂರ್ಖನೆಂಬವಂ (ಧರ್ಮಪ. ೪-೮); ಕಾಣಿಸಿರುವಂತವನ ಕಾಣದೇ ಕಿರುವಿರೋ ಕಾಣಲು ಬಿಡಲು ಕರ್ಮಗಳು ನಿನ್ನಿರವನಾಣೆಯಿಟ್ಟಿಹವು (ಸರ್ವಜ್ಞ. ೩೪೨). ಆಣಿಡು: ಸುರನರಖಚರೋರಗ ಸುಂದರಿಯರ್ಗ್ ತರುಣಿಯಂಗಲತಿಕೆಯ ಲಾವಣ್ಯರಸ ಪ್ರವಾಹಲವಮುಂ ದೊರೆಕೊಳ್ವೊಡೆ ನಿನ್ನ ಪಾದದಾಣಿಡಲಪ್ಪೆಂ (ಅನಂಪು. ೬-೨೮).

[ಆಣೆ$_3$ + ಇಡು]

**ಆಣೆಯೋಲೆ** (ನಾ). ಆಜ್ಞಾಪತ್ರ : ಚಟಿಕ್ಕರನ್ವಯಂ ನೆಗಳೆ ನೆಗಳ್ತೆಯಂ ತಳೆದು ತಂನಯ ತೇಜದೊಳಾಣೆಯೋಲೆಯುಂಡಿಗೆ ಸಲೆ ಸಾಧ್ಯವಾದ ನೆಲನಂ ತಳೆದಂ ನೃಪಮೇರು ತೈಲಪಂ (ಕಇಅ. ೯೫–೪–೧೦ ; 1100) ; ಕೋಶದೊಳಗಾದ ಆ ಆಣೆಯೋಲೆಯನ್ನೆಳೆದು ಲಿಂಗರಾಜನ ಸಜ್ಜನಂಜಲಿಗಿರಿಸಿ (ಮಂತ್ರಶ. ೧೭೭–೧೭). [ಆಣ್ಮೆ + ಓಲೆ]

**ಆಣೆರಕ** (ನಾ). ಗಂಡುರೂಪದ ಎರಕ. 'ಆಣೆರಕಗೊಳ್', 'ಆಣ್ಬರಿಜು' ಪರಾ. [ಆಣ್ (< ಆಳ್$_3$) + ಎರಕ$_2$]

**ಆಣೆರಕಗೊಳ್** (ಕ್ರಿ). ಗಂಡುರೂಪಾಗು : ವಾಣಿಯ ಜಾಣೆ ಆಣೆರಕಗೊಂಡುದೆ ? ಗೆಲ್ಲಿನ ಬಿಲ್ಲೆ ಮೂಡಿತೆ ? (ಗಿಳಿವಿಂ. ೫೨–೧೦). [ಆಣೆರಕ + ಕೊಳ್$_1$]

**ಆಣೆವಣಿ** 'ಆಳವಿಣೆ' ನೋ.

**ಆಣೆವತ್ತಳೆ** (ನಾ). ೧. ಆಜ್ಞೆಯ ಪತ್ರಿಕೆ. ೨. ಪ್ರತಿಜ್ಞೆಯ ಪತ್ರ : ಗದ್ದುಗೆಯಯಾಳಿಯ ಶಿರಸ್ಸಿಗೆ ಆಣೆವತ್ತಳೆಯನ್ನಿರಿಸಿಕೊಂಡು (ಮಂತ್ರಶ. ೧೭೩–೧೦). 'ಬಿನ್ನವತ್ತಳೆ' ಪರಾ. [ಆಣ್ಮೆ + ಪತ್ತಳೆ$_2$]

**ಆಣೆವಾರಿ** (ನಾ). ಹೊಲಗದ್ದೆಗಳಲ್ಲಿ ಆಗುವ ಬೆಳೆಯನ್ನು ಅಂದಾಜು ಮಾಡುವುದು : ಪೋತನು ಹೊಲಗಳ ಬೆಳೆಯ ಅಂದಾಜು ಮಾಡುತ್ತಾನೆ. ಆದಕ್ಕೆ ಆಣೇವಾರಿ ಮಾಡುವುದು ಎನ್ನುತ್ತಾರೆ (ಶ್ಯಾಮುತಾ. ೧೧) ; ಭೂಕಂದಾಯವನ್ನು ತಹಕೂಬ ಇಡಲು ಆಣೆವಾರಿಯನ್ವಯ ನಿರ್ಣಯಿಸಲಾಗುವುದು (ಕರವಿ. ೯೩). [← ಮರಾ. ಆಣೇವಾರೀ]

**ಆಣೆಹಾಕಿಸು** (ಕ್ರಿ). ಪ್ರತಿಜ್ಞೆಮಾಡಿಸು ; ಶಪಥಮಾಡಿಸು : ರಾಮಕೃಷ್ಣನೊಡನೆ ಆತ್ತು ಬೇಡಿಕೊಳ್ಳಬೇಕು, ಮುಂದೆಂದೂ ಹೀಗೆ ಮಾಡದಂತೆ ಆಣೆಹಾಕಿಸಬೇಕು ಎಂದೊಮ್ಮೆ ಮನಸ್ಸು ಯೋಚಿಸುತ್ತಿತ್ತು (ತ್ಯಾಗಮ. ೮೯). [ಆಣ್ಮೆ + ಹಾಕು (< ಪಾಯ್ಕು) + –ಇಸು$_3$]

**ಆಣ್ತೆ** 'ಆಣತ್ತಿ' ನೋ.

**ಆಣ್ಬರಿಜು** (ನಾ). ಗಂಡುವೇಷ ; ಪುರುಷನ ರೂಪ : ನಿನಗೀ ಜವ್ವನ ಮೇಕೆಯೋ ? ಆಣ್ಬರಿಜೇಕೆಯೋ ? (ರಾಮಾಶ್ವ. ೬೧–೨೩). [ಆಣ್ (< ಆಳ್$_3$) + ಪರಿಜು]

**ಆಣ್ಮ** 'ಆಳ್ಮ' ನೋ.

**ಆಣ್ಮೆ$_1$** (ನಾ). ಒಡೆತಿ ; ಯಜಮಾನಿ : ಇಂಪುಗಾರ್ತಿಯರಂದಗಾರ್ತಿಯರಾಣ್ಮೆಗೆ ಕಂಪುಗಾರ್ತಿಯರ್ ಜಾಣೆಯರ್ ಮನದಾಣ್ಮೆಗೆ ಸೊಂಪುಗಾರ್ತಿಯರ್ ಬಿಂಕಗಾರ್ತಿಯರಾಣ್ಮೆಗೆ ಸಂಪಿಗೆಯ ಹೂವ ಮುಡಿಸಿದರು (ಕವಿಚ. III, ೧೮೨ ಲಕ್ಷ್ಮೀಹಾ). [ಆಣ್ಮ (< ಆಳ್ಮ) + –ಎ$_4$]

**ಆಣ್ಮೆ$_2$** 'ಆಳ್ಮೆ' ನೋ.

**ಆತ** 'ಅದು$_1$' ಪರಾ.

**ಆತಂಕ** (ನಾ). ೧. ಭಯ ; ಹೆದರಿಕೆ : "ಆತಂಕಃ, ಭಯಂ, ಆಶಂಕಾ, ದರಃ, ತ್ರಾಸಃ, ಸಾಧ್ವಸಂ—ಈ ೬ ಭಯಂ" (ಹಲಾಯು. ೧೨೦–೪೦) ; ಜನನ ಮೃತಿ ಜರಾತಂಕ ಶೋಕಾಗ್ನಿಯಿಂದಾವನುಮಿ ಸಂಸಾರದೊಳ್ ಬೇಯದನೊಳನೆ (ಆದಿಪು. ೩–೬) ; ಮೊರಟದ ಬಂಕಿದೇವನ ಲೆಂಕನೆನಗಾತಂಕವುಂಟೇ ವೀರಭಕ್ತಂಗೆ (ಬಸಪು. ೫೨–೩೫). ೨. ಚಿಂತೆ ; ವ್ಯಥೆ ; ಶಂಕೆ ; ಸಂದೇಹ : ಆ ರಾಜರ್ಷಿಯನ್ನು ನೋಡಿದುದು ಮೊದಲಾಗಿ ಶಕುಂತಳೆ ಪರ್ಯುತ್ಸುಕಳಾಗಿರುವಂತಿದೆ. ಈಕೆಯ ಆತಂಕಕ್ಕೆ ಆತನೇ ನಿಮಿತ್ತವಾಗಿರಬಹುದೋ ಏನೋ (ಶಾಕುಂತ. ೩೪–೧೪) ; ನಾನು ತಪ್ಪಿತಸ್ಥನಾಗಿದ್ದುಕೊಂಡು ಅವಳು ಶಿಕ್ಷೆ ಅನುಭವಿಸಬೇಕಾಯಿತೆಂಬುದೇ ನನ್ನ ಆತಂಕ (ಪುನರು. ೪೨೩). ೩. ರೋಗ ; ವ್ಯಾಧಿ : "ರೋಗಃ, ರುಕ್, ವ್ಯಾಧಿಃ . . . ಆತಂಕಃ . . . –ಈ ೧೨ ವ್ಯಾಧಿ" (ಹಲಾಯು. ೯೮–೪೪೬). ೪. ಅಡ್ಡಿ ; ತಡೆ : ವಿಜ್ಞಾನಪ್ರಪಂಚದ ಇತಿಹಾಸದಲ್ಲಿ ಜೋಸೆಸರ ಹೆಸರನ್ನು ಒಬ್ಬ ಯುಗಪುರುಷನೆಂದು ಸುವರ್ಣಾಕ್ಷರಗಳಿಂದ ಬರೆಯಲು ಆತಂಕವಿಲ್ಲ (ಸಸ್ಯಕ. ೧೧೩). ೫. ಅಧೀನ ; ವಶ ; ಹಿಡಿತ : ಮನೆಯ ಯಜಮಾನರೇ ಜಡ್ಡಿನಿಂದ ಮಲಗಿದ ಬಳಿಕ, ಆ ಸೇವಕರನ್ನು ಆತಂಕದಲ್ಲಿಟ್ಟುಕೊಳ್ಳುವವರಾರು ? (ಅಂಬಿಕೆ. ೧೨೨). ೬. ದೂತ. ೭. ಗಂಟೆ, ಮೃದಂಗ ಮುಂತಾದುವುಗಳ ಧ್ವನಿ : "ದೂತಂ ಘಂಟೆ ಮೃದಂಗ ಡಿಂಡಿಮುರವಂ ರೋಗಾವಳೀ ಭೀತಿಯಿಂತಾತಂಕಾಖ್ಯ" (ನಾನಾರ. ೬೭). 'ನಿರಾತಂಕ' ಪರಾ.

**ಆತಂಕಮಾಡು** = ಅಡ್ಡಿಪಡಿಸು : ಆ ಕದವು ಭೀಮಜಟ್ಟಿಯಂತೆ ಅಡ್ಡ ನಿಂತು ಕೇಶವರಾಯನ ಪಾಪಲಾಲಸೆಗೆ ಆತಂಕಮಾಡುತ್ತಲಿತ್ತು (ಅಂಬಿಕೆ. ೩೪). [ಸಂ.]

**ಆತಂಕಕಳಂಕ** (ನಾ). ೧. ತೊಂದರೆ, ಭಯ, ಶಂಕೆ ಮುಂತಾದ ತೊಡಕು. ೨. ರೋಗಾದಿಗಳ ದೋಷ : ಅಘವ್ಯಾಪಾರದಿಂ . . . ಅಲ್ಪಾಯುಷ್ಯಮುಂ ದುರ್ಭಗತ್ವಮುಮಾತಂಕಕಳಂಕಮುಂ ಸಮನಿಕುಂ ಸಂಸಾರಿಗವ್ಯಾಕುಲಂ (ಸುಕುಮಾ. ೫–೩೬). [ಆತಂಕ + ಕಳಂಕ (= ಕಲಂಕ)]

**ಆತಂಕಗೊಳ್ಳು** (ಕ್ರಿ). ಭಯಪಡು ; ಶಂಕೆಗೆ ಒಳಗಾಗು ; ತವಕಿಸು : ನನ್ನ ಮನಸ್ಸು ಆತಂಕಗೊಳ್ಳುತ್ತಿದೆ (ರೂಢಿ). [ಆತಂಕ + ಕೊಳ್ಳು (< ಕೊಳ್$_1$)]

**ಆತಂಕಪಡು** (ಕ್ರಿ). ಹೆದರು ; ಭಯಪಡು : ವಿಧಿಯ ಮುಂದೆ ಯಾವ ಜಾಣ್ಮೆ ತಾನೆ ಕೆಲಸಕ್ಕೆ ಬಂದೀತು ಎಂದು ಮೇಳದವರು ಆತಂಕಪಡುತ್ತಾರೆ (ಬದ್ಧಪ್ರ. XXI ಪೀ). [ಆತಂಕ + ಪಡು$_1$]

**ಆತಂಕಶರೀರಿ** (ನಾ). ಭಯಸ್ಥ : "ನಪುಂಸಕಾತಂಕಶರೀರಿಯುಂ ಕೃಪಣರಿಂತಿವು ಕ್ಲೀಬಮೆನಿಕ್ಕು" (ನಾನಾರ. ೧೪೭). [ಸಂ. ಆತಂಕಶರೀರಿನ್]

**ಆತಂಕಿತ** (ಗು). ಭಯಗೊಂಡ ; ಶಂಕೆಗೊಳಗಾದ. 'ಆತಂಕಿತಹೃದಯ' ಪರಾ. [ಸಂ.]

**ಆತಂಕಿತಹೃದಯ** (ನಾ). ಭಯಕ್ಕೊಳಗಾದ ಹೃದಯವುಳ್ಳವನು : ನಿಗ್ರಹ ಶಂಕಾಭರಾತಂಕಿತ ಹೃದಯರಾದ ಅಂಗ ವಂಗ ಕಳಿಂಗ ಕೊಂಗ ಮಾಳವ ಚೋಳ . . . ಪ್ರಭೃತಿ ಭೂಪಾಲಕರಿಂ ಭಯಾನಕರಸಮುಂ . . . ನೆಗಟುತ್ತುಮಿರೆ (ಜಗವಿ. ೨–೫೯ ವ). [ಆತಂಕಿತ + ಹೃದಯ]

**ಆತಂಕಿಸು** (ಕ್ರಿ). ಅಡ್ಡಿಪಡಿಸು ; ಪ್ರತಿಭಟಿಸು (ಕಿ). [ಆತಂಕ + –ಇಸು$_3$]

**ಆತಂಚನ** (ಕ್ರಿ). ೧. ಹಾಲಿಗೆ ಹೆಪ್ಪುಹಾಕುವುದು ; ಹೆಪ್ಪುಗಟ್ಟುವಂತೆ ಮಾಡುವುದು. ೨. ಒಡೆದ ಅಥವಾ ಹೆಪ್ಪುಗಟ್ಟಿದ ಹಾಲು. ೩. ಹೆಪ್ಪುಗಟ್ಟುವಂತೆ ಮಾಡುವ ವಸ್ತು ; ಹೆಪ್ಪು. ೪. ವೇಗ. ೫. ತಂಪುಮಾಡುವುದು ; ತೃಪ್ತಿಪಡಿಸುವುದು. ೬. ಕರಗಿದ ಚಿನ್ನ ಮುಂತಾದ ಲೋಹಗಳನ್ನು ಭಸ್ಮಗೊಳಿಸಲು ಹಾಕುವ ಪುಡಿ ಮುಂತಾದುದು. ೭. ಪುಡಿಯನ್ನು ಸೇರಿಸುವುದು. [ಸಂ.]

**ಆತತ** (ಗು). ೧. ಹರಡಿದ ; ವಿಶಾಲವಾದ ; ವಿಸ್ತಾರವಾದ : ಈತೆಜದ ಬುದ್ಧಿಯಾವಂಗಾತತಮಾಗಿರ್ಕುಂ (ವಿಷ್ಣುಪು. ೬–೧೧೭). ೨. ಕೂಡಿದ ; ಹೊಂದಿಕೊಂಡ. 'ಆತತಜ್ಯ' ಪರಾ. [ಸಂ.]

**ಆತತಕೀರ್ತಿ** (ನಾ). ವಿಸ್ತಾರವಾಗಿ ಹರಡಿದ ಕೀರ್ತಿಯುಳ್ಳವನು ; ಬಹಳ ಯಶೋವಂತ : ಸತ್ಕೀರ್ತಿಯಿನಾ ಮಹೀಪ್ರಭುಕುಮಾರ ಶಿಖಾಮಣಿ ಮಲ್ಲಿಕಾರ್ಜುನಂಗಾತತಕೀರ್ತಿ ಕಟ್ಟಿಸಿದನುತ್ಸವದಿಂ ಯುವರಾಜ ಪಟ್ಟಮುಂ (ಎಇ. XXVII, ೫–೧೯ ; 1082). [ಆತತ + ಕೀರ್ತಿ]

**ಆತುಮ** (ನಾ). = ಆತ್ಮ<sub></sub>೧ : ಗಿಡುವಿನ ಮೇಲಣ ತುಂಬಿ ಕೂಡೆ ವಿಕಸಿತ ವಾಯಿತ್ತು ತುಂಬಿ ನೋಡಾ ಆತುಮ ತುಂಬಿ ತುಂಬಿ ನೋಡಾ ಪರ ಮಾತುಮ ತುಂಬಿ ತುಂಬಿ ನೋಡಾ (ಅವಚಂ. ೬೯–೩೦೬) ; ಆತುಮದ ಲಿಂಗವನು ಪ್ರೀತಿಯಲಿ ಅಱಿದಂಗೆ ಸೂತಕಗಳಿಲ್ಲ (ಸರ್ವಜ್ಞ. ೧೬೩) ; ರೇಖಾರಹಸ್ಯಗಳು ನಿನ್ನ ಹಣೆಯುವದಿರಲಿ . . . ತಾಕಿ ನಿನ್ನಾತುಮುವ ನಾಕ ನರಕಂಗಳಂ ಏಕವೆನಿಪುವು ನಿನಗೆ (ಮಂಕುಕ. ೩೪೦). [< ಸಂ. ಆತ್ಮನ್]

**ಆತುಮನಿವೇದ್ಯ** (ನಾ). (ಭಗವಂತನಲ್ಲಿ) ತನ್ನನ್ನು ತಾನು ಅರ್ಪಿಸಿ ಕೊಳ್ಳುವುದು ; ಆತ್ಮಾರ್ಪಣೆ : ಆತುಮನಿವೇದ್ಯವನು ಮಾಳ್ಪರು (ನಿಭಾಗ. ೬–೧೫–೧೦). [ಆತುಮ + ನಿವೇದ್ಯ]

**ಆತುಮವಂಚಕ** (ನಾ). ತನಗೆ ತಾನೆ ವಂಚನೆಮಾಡಿಕೊಳ್ಳು ವವನು ; ಆತ್ಮದ್ರೋಹಿ : ಮಿಂಚುವೆಳಗಿನ ಬಳಕೆಯಲಿ ಮನಮುಂಚಿ ಮೈಗೊಂಡಳಲುವಾತುಮವಂಚಕರು ನೀವು (ಕುವ್ಯಾಕ. ೬–೨೭).
[ಆತುಮ + ವಂಚಕ]

**ಆತುಮಸುಖಿ** (ನಾ). ದೇಹಸುಖಿ ; ಭೋಗಾಭಿಲಾಷಿ : ಕಂಡ ಕಂಡ ವರ ಮನೆಯಲ್ಲಿ ಉಂಡು ಕುಂಡೆಯ ಬೆಳಸಿಕೊಂಡಿಪ್ಪಾತ ಆತುಮಸುಖಿ ಯಯ್ಯ (ಘನವ. ೨೨–೧೯). [ಆತುಮ + ಸುಖಿ]

**ಆತುರ** (ನಾ). **೧.** ದೈಹಿಕ ಅಥವಾ ಮಾನಸಿಕ ಯಾತನೆಯಿಂದ ಪೀಡಿತನಾದವನು : ಮುನ್ನ ಶಾಪದಿಂದಂ ತಿರ್ಯಗ್ಜಾತಿಗೆ ಬಿಱ್ದಿಂ ಬಿಡು ದುಃಖಾತುರನೆಂ ನಿನಗೆ ಪುಣ್ಯಮಕ್ಕುಮಗಣ್ಯಂ (ಕಾದಂಉ. ೭೪೫). **೨.** ಬಲವಾದ ಆಸೆ ; ಉತ್ಕಟವಾದ ಇಚ್ಛೆ : ಮನವಱಿಯದೆ ಮೆಯ್ಯ ಱಿಯದೆ ಬುದ್ಧಿಯಱಿಯದೆ . . . ಮದನಹರನಂ ಮಱೆದು ಮೂಱು ವರುಷವಾತುರದೋೞ್ತೆಜದಿಂದಿರೆ (ನಂಬಿರ. ೧೪–೬೭) ; ಕಿಱಿದಾದ ಕೆಸರ್ನೀರಂ ಮಱಿಯಾನೆಯದೊಂದು ಕಂಡು ಕುಡಿವಾತುರದಿಂ (ಬಾಳಪು. ೪–೮೫) ; ಆತನಂ ನೋಡಿದೊಡೆ ಸಾಕು ಪುನೀತಭಕ್ತಿಗುಣತ್ವವಹುದೆಂ ಬಾತುರದೊಳೆಯ್ತಪ್ಪವರ್ಗಳು (ಬಸಪು. ೬–೧೩) ; ಲಿಂಗಾರ್ಚನಾತುರ ದೊಳಿರಲಾತನಂಗನೆ (ಪಾಸೋಪು. ೧೩–೩೨) ; ನನ್ನ ಚಕ್ಷುಗಳು ನಿನ್ನನ್ನು ಕಾಣುವುದಕ್ಕಾಗಿ ಬಹಳ ಆತುರವಾಗಿವೆ (ಸೀತಾರ. ೧). **೩.** ಅವಸರ ಪಡುವವನು : ಚರದೊಳ್ ಕೂಡಿರೆ ಚಂದ್ರನರ್ಥಚಯಮುಂ ಸಿಲ್ಲದಸ್ಥಿರ ನಕ್ಕುಂ . . . ಏತರ್ಕೆಮಾತುರನಲ್ಲಂ (ಜಾತತಿ. ೧೪–೮). **೪.** ಅವಸರ ; ತ್ವರೆ : ನೆರೆದು ನರರುಂ ಭೂಸುರರುಮಚ್ಚರಿವಡುತ್ತಂ ನಡನಡುಗಿಯಾ ತುರವಡಸಿಯಿಂತೆಂದರ್ (ಬಸಪು. ೫೭–೪೯) ; ನಿಮಗೆ ಎಷ್ಟು ಆತುರವೋ ನಮಗೂ ಹಾಗೆಯೆ ಎಂದು ತಿಳಿಯಬಾರದೆ (ಶಾಂತಲಾ. ೭). [ಸಂ.]

**ಆತುರಗಾರ** (ನಾ). ಅವಸರಪಡುವವನು ; ಗಡಿಬಿಡಿಯಿಂದ ಕೆಲಸ ಮಾಡುವವನು ; ಹಿಂದುಮುಂದು ನೋಡದೆ ನಿರ್ಧಾರ ಮಾಡು ವವನು : ಆತುರಗಾರನಿಗೆ ಬುದ್ಧಿ ಮಟ್ಟು (ಗಾದೆ) ; ಆತುರಗಾರನಿಗೆ ಎಲೆಯಲ್ಲಿ ಹಾಕಿ ನನಗೆ ನೆಲದಲ್ಲಿ ಹಾಕಿ (ಗಾದೆ).
[ಆತುರ + -ಗಾರ (< -ಕಾಱ)]

**ಆತುರತೆ** (ನಾ). ಬಲವಾದ ಆಸೆ ; ಉತ್ಕಟವಾದ ಇಚ್ಛೆ : ನಿತ್ಯಾರ್ಚ ನೋತ್ಸವದಿಂ ಸಂತಸದಿಂ ಸದಾತುರತೆಯಿಂ ಸಾನಂದದಿಂದಿರ್ಪನೆಂದು (ಗಂಕ. ೫–೪೪) ; ವೈದ್ಯಕೀಯ ಶಾಸ್ತ್ರವನ್ನಾದರೂ ಕಲಿಯಬೇಕೆಂಬ ಆತುರತೆ ಹುಟ್ಟಿತು (ಸಸ್ಯಕ. ೬೫). [ಸಂ. ಆತುರತಾ]

**ಆತುರಪಡು** (ಕ್ರಿ). **೧.** ಬಲವಾಗಿ ಆಸೆಗೊಳ್ಳು ; ಹಾತೊರೆ ; ತವಕಿಸು : ನನ್ನ ಕತ್ತಿಯು ಇವನ ರಕ್ತವನ್ನು ಕುಡಿಯಬೇಕೆಂದು ಆತುರ ಪಡುತ್ತಿದೆ (ರಾವಿಜ. ೮). **೨.** ತ್ವರೆಗೊಳ್ಳು ; ಅವಸರಪಡು : ಗಾಡಿ ಹೊಡೆಯುವವನು ಆತುರಪಟ್ಟಂತೆ ತೋರುತ್ತದೆ (ಮಣಿಸ. ೫).
[ಆತುರ + ಪಡು$_1$]

**ಆತುರಿಸು** (ಕ್ರಿ). = ಆತುರಪಡು ೧ : ಒತ್ತಂಬದಿಂ ಬರ್ಪ ಕೆಮ್ಮಿಂ ಬಿರಿ ಯಲ್ಪೆಟ್ಟಂಗಳಾ ಬಟ್ಟೆಯೊಳಿನಿತಡಗುಂ ತನ್ನ ಕೆಯ್ಸಾರದೆಂದಾತುರಿಸುತ್ತಂ ಭ್ರಾಂತಿಯಿಂದೆನ್ನಯ ಮರದಡಿಯೊಳ್ ನಿಂದನೊರ್ವಂ ಪುಳಿಂದಂ (ಕಾದಂಪೂ. ೧೬೫) ; ಆತುರಿಸುವ ತುಂಬಿಗಳೌತಣದರಮನೆಯೆನೆ ಪುಷ್ಪ ವಿಕ್ರಯಸ್ಥಲಮೆಸಗುಂ (ಗಿರಿಕ. ೨–೮೪) ; ಅನ್ನವನಾತುರಿಸಿ ಮಡಕೆಯಲಿ ವುಂಡವ ಭೃತಕನಹನು (ನಿಭಾಗ. ೫–೧೨–೭) ; ಶೀತಾಂಶುಕಳೆಗೆ ಚಕೋರ ಗಳರ್ತಿಪಂತಾತುರಿಸುವುವೆ ಕಾಗೆಗಳು (ಭರಚ. ೬೦–೭೩) ; ಭೀತಿಯಲಿ ಸಿಗ್ಗಾಗಿ ಕಣ್ಗೆಟ್ಟಾತುರಿಸಿ ಜವಗುಂದಿ ಕಳವಳಿಸುತೆ ವಿಕಾರದಲಿ (ಅಕ್ರೂಚ. ೭–೭೪). [ಆತುರ + -ಇಸು$_3$]

**ಆತುಷ್ಟಿ$_1$** (ನಾ). ಸಂಪೂರ್ಣ ತೃಪ್ತಿ (ದಕ. ೩). [ಸಂ.]

**ಆತುಷ್ಟಿ$_3$** (ಅ). ಸಂಪೂರ್ಣ ತೃಪ್ತಿಯಾಗುವವರೆಗೆ ; ತೃಪ್ತಿ ಯುಂಟಾಗುವಷ್ಟರಮಟ್ಟಿಗೆ (ದಕ. ೩). [ಸಂ.]

**ಆತೋದ್ಯ** (ಗು). **೧.** ಹೊಡೆಯಲ್ಪಡುವ ; ಬಾಜಿಸುವ (೩). (ನಾ). **೨.** ಒಂದು ವಾದ್ಯವಿಶೇಷ : "ವಾದ್ಯಂ, ಆತೋದ್ಯಂ–ಈ ೨ ವಾದ್ಯಂ" (ಹಲಾಯು. ೧೬–೯೩) ; ನೃತ್ಯವಾದ್ಯ ಗೀತಾತೋದ್ಯಂಗಳೊಳ್ ಕಿಱಿದುಂ ಬೇಗಮಿರ್ದೋಲಗಮಂ ಪರೆಯಲ್ವೇೞ್ದು (ಪಂಪಭಾ. ೩–೮೧ವ) ; ಮದೋನ್ಮತ್ತವಿಕಾರ ಕೀರಮುಖ ವಾದ್ಯಾತೋದ್ಯಮಂ ಕೇಳ್ದು ಮೆಚ್ಚಿ (ಅಜಿಪು. ೯–೩೪). [ಸಂ.]

**ಆತೋದ್ಯಘೋಷ** (ನಾ). ವಾದ್ಯಧ್ವನಿ : ಎಸೆಯೆ ಪಸರಿಪಾತೋದ್ಯ ಘೋಷಂ ವಿದೂರಾವನಿಯೊಳ್ವೈಡೂರ್ಯರತ್ನಂ ಜನಿಯಿಸೆ (ಮಲ್ಲಿಪು. ೮–೯೧). [ಆತೋದ್ಯ + ಘೋಷ]

**ಆತೋದ್ಯನಾದ** (ನಾ). = ಆತೋದ್ಯಘೋಷ : ಅನೇಕಾತೋದ್ಯನಾ ದಂಗಳೊಳ್ ನಲಿಯುತ್ತುಂ ಕುಣಿಯುತ್ತುಮಿರ್ಪ ಗಣಿಕಾಸಂದೋಹದಿಂ (ಅಜಿಪು. ೭–೧೧೨). [ಆತೋದ್ಯ + ನಾದ]

**ಆತೋದ್ಯರವ** (ನಾ). = ಆತೋದ್ಯಘೋಷ : ವಿವಿಧಾತೋದ್ಯರವಂ ಪೊದಱ್ದಖಿಳ ದಿಕ್ಚಕ್ರಮಂ ಕೂಡೆ (ಗದಾಯು. ೮–೬೭).
[ಆತೋದ್ಯ + ರವ$_1$]

**ಆತೋದ್ಯಸ್ವನ** (ನಾ). = ಆತೋದ್ಯಘೋಷ : ರಸಗೇಯಂ ನೆಲೆವೆರ್ಚ ದೇಕೆ ವಿತತಾತೋದ್ಯಸ್ವನಂ ಸೂಸದೇಕೆ ಸುಧಾಸಾರಮನೀಕ್ಷಣಾಮೃತ ಮುಯಂ ಲಾಸ್ಯಪ್ರಸಂಗಂ ಪ್ರವರ್ತಿಸದೇಕೆ (ಮಲ್ಲಿಪು. ೪–೯).
[ಆತೋದ್ಯ + ಸ್ವನ]

**ಆತೋದ್ಯಾಂಗ** (ನಾ). [ಜೈನ] ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; ಬೇಡಿದ ವಾದ್ಯವನ್ನು ಕೊಡುವ ಕಲ್ಪವೃಕ್ಷ : ವಸನಾಂಗಾ ತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗಾನ್ನಾಂಗ ಸುರಾಂಗ ಭಾಜನಾಂಗಾವಸಥಾಂಗ ವಿಭೂಷಣಾಂಗ ದಶಕಲ್ಪಕುಜಂ (ಚಂಪ್ರಪು. ೩–೩೪). [ಆತೋದ್ಯ + ಅಂಗ$_1$]

**ಆತ್ಕೂರ್** 'ಆತುಕೂರ್' ನೋ.

**ಆತ್ತ** (ಗು). **೧.** ಹಿಡಿದ ; ಪರಿಗ್ರಹಿಸಲ್ಪಟ್ಟ. **೨.** ಪಡೆದ ; ಅಂಗೀ ಕರಿಸಿದ ; ಉಂಟಾದ ; ಪ್ರಾಪ್ತವಾದ. **೩.** ಕಳೆದುಕೊಂಡ ; ನಿವಾರಿಸಿದ. 'ಆತ್ತಸಂಗರ' ಪರಾ. [ಸಂ.]

**ಆತ್ತಗರ್ವ** (ಗು). **೧.** ಅಪಮಾನಿತನಾದ. **೨.** ಗರ್ವವನ್ನು ಹೊಂದಿದ. [ಆತ್ತ + ಗರ್ವ]

**ಆತ್ತಚಿತ್ತ** (ನಾ). ಮನಸ್ಸುಳ್ಳವನು ; ಮನಸ್ಸಿನ ಏಕಾಗ್ರತೆಯನ್ನುಳ್ಳ ವನು : ಇದು ಪಿರಿದುಂ ಬುಧಾವಳಿಗೆ ಕರ್ಣರಸಾಯನಮಾತ್ತಚಿತ್ತ ಸಮ್ಮದಜನಕಂ . . . ಎಂಬಿನಂ ಪ್ರಯತ್ನದೆ ಕೃತಿವೇೞ್ದುದು (ಚಂದ್ರಪು. ೧–೪೯). [ಆತ್ತ + ಚಿತ್ತ]

**ಆತ್ತಬಳ** (ಗು). ಬಲವನ್ನು ಪಡೆದ: ಉತ್ತಮುದ ಮೇರುವಿನ ಕೂಡೆ ಪುರುಷದ ಮುಱಿ ನಗುತ್ತಾಡಹೋಹಂತೆ ಭೈರವನ ಸಂಗಡದೊಳಾತ್ತಬಳ ಚಿತ್ತಭವನ ಮತ್ತಗಜಕಂಠೀರವಂ ಸಿದ್ಧಪತಿ ಹೋದನು (ಸಿದ್ಧರಾ. ೨–೬೩). [ಆತ್ತ + ಬಳ (= ಬಲ)]

**ಆತ್ತಮನ** (ನಾ). ಸಂತೋಷಗೊಂಡ ಮನಸ್ಸುಳ್ಳವನು; ಆನಂದ ಪರವಶನಾದವನು: ಕುಮಾರಕಶ್ಯಪನು ಆತ್ತಮನನಾಗಿ ಭಗವಂತನ ಭಾಷಿತಕ್ಕೆ ಅಭಿನಂದಿಸಿದನು (ಬುದ್ಧಪ. ೭೪); ಆ ಭಿಕ್ಷುಗಳು ಭಗವಂತನ ಮಾತಿಗೆ ಆತ್ತಮನರಾಗಿ ಅಭಿನಂದಿಸಿದರು (ಬುದ್ಧಪ. ೨೦೪). [ಆತ್ತ + ಮನ]

**ಆತ್ತರಕ್ತರುಚಿ** (ನಾ). ಪಡೆದ ಅಥವಾ ಉಂಟಾದ ಕೆಂಬಣ್ಣದ ಕಾಂತಿ: ಸಂಧ್ಯಾಸಮಯಾತ್ತರಕ್ತರುಚಿ ಪಿಂಗೆ ಬೞಿಕ್ಕುದಯಾದ್ರಿಯೊಳ್ ಪದಂಗಾಸಿದ ಪೊನ್ನ ಪುಂಜಿವೊಲಿರ್ದುದು ಕಣ್ಗೆ ಹಿಮಾಂಶುಮಂಡಲಂ (ಪಂಪಭಾ. ೩–೮೧). [ಆತ್ತ + ರಕ್ತ + ರುಚಿ]

**ಆತ್ತಸಂಗರ** (ನಾ). ಪ್ರಾರಂಭಿಸಿದ ಯುದ್ಧ; ಕೈಗೊಂಡ ಕಾಳಗ: ಸ್ವೈರಿಸಚಾರದಾತ್ತಸಂಗರವಿಜಯೋರ್ಜಿತಪ್ರಮುಖರಿಲ್ಲ ವಿಚಾರಿಸೆ ವೀರ ತಾರಕಾಸುರನತುಳಪ್ರತಾಪನಿಧಿ (ಗಿರಿಕ. ೬–೧೩). [ಆತ್ತ + ಸಂಗರ]

**ಆತ್ತೋದಯ** (ನಾ). ಉಂಟಾದ (ಪಡೆದ) ಜನನ: ವಿವಾಹೋತ್ಸಾಹ ಸಾಕಲ್ಯಕಲ್ಪಂ ಪ್ರವರ ನೃಪಕುಮಾರಾತ್ತೋದಯಾವಿಪ್ರಮೋದಾಸವ ಸಮುದಿತಸೇವಾರಾತಿ ವೃತ್ತಾಂತವೃತ್ತಂ (ಕವಿರಾ. ೩–೨೧೨). [ಆತ್ತ + ಉದಯ]

**ಆತ್ಮ** (ನಾ). ೧. ಜೀವ; ಚೇತನ; ಕ್ಷೇತ್ರಜ್ಞ; ಶರೀರದಲ್ಲಿ ಅದಕ್ಕಿಂತ ಭಿನ್ನವಾಗಿದ್ದು "ನಾನು" ಎಂಬ ಭಾವಕ್ಕೆ ಕಾರಣವಾದ ವಸ್ತು ಅಥವಾ ತತ್ತ್ವ: "ಸಂಸಾರಿ ಚೇತನಂ ಕ್ಷೇತ್ರಜ್ಞ ಪುರುಷನೆನಲಾತ್ಮನಕ್ಕುಂ" (ಮಂಗರಾ. ೯–೨೯); ಏದೊರೆಯನಾತ್ಮನೆಂದೊಡನಾದಿಯನಂತಂ ನಿರತ್ಯಯಂ ಚಿನ್ಮಯ ನಿಃಪ್ರಾದೇಶಿಕನೆಂದಾ ತನುಪಾದೇಯಂ ಮುಕ್ತಿಮುಕ್ತನುಂ ಪರಮಾತ್ಮಂ (ಯಶೋಚ. ೪–೨೬). ೨. ಸ್ವಭಾವ; ಧರ್ಮ: "ಧರ್ಮಃ, ಸ್ವಭಾವಃ, ಆತ್ಮಾ—ಈ ೩ ಸ್ವಭಾವಂ" (ಹಲಾಯು. ೧೨೯–೯೭). ೩. ಪ್ರಯತ್ನ. ೪. ಧೃತಿ; ಧೈರ್ಯ. ೫. ಬುದ್ಧಿ; ಮನಸ್ಸು; ಅಂತರಂಗ: ಹಿರಿದು ಭಯಮಂ ತೋಱಿ ಭೀತಿಯನೊರೆದೊಡದಕಂಜುವೆನೆ ನಾನೀಹರೆಯವೇ ಕಿಱಿದಲ್ಲದೇ ಎನ್ನಾತ್ಮ ಕಿಱಿದಲ್ಲ (ಬಸವು. ೨೪–೧೩). ೬. ಶರೀರ. ೭. ಪರಬ್ರಹ್ಮ; ಈಶ್ವರ. ೮. ಗಾಳಿ; ವಾಯು. ೯. ಸೂರ್ಯ. ೧೦. ಅಗ್ನಿ. ೧೧. ಸ್ವಯಂ; ತಾನು. [ಸಂ. ಆತ್ಮನ್]

**ಆತ್ಮಂಭರಿ** (ನಾ). ತನ್ನ ಹೊಟ್ಟೆಯನ್ನು ತಾನು ಹೊರೆದುಕೊಳ್ಳುವವನು; ಸ್ವಾರ್ಥಪರನಾದವನು: ನಾವು ಆತ್ಮಂಭರಿಗಳು, ಆತ್ಮ ವಿಸರ್ಜನೆ ಮಾಡಲು ನಮಗೆ ಕಲಿಸಿಕೊಡಿ (ನಿಬಂಧ. I, ೧೩). [ಸಂ.]

**ಆತ್ಮಕಥೆ** (ನಾ). ತನ್ನ ಚರಿತ್ರೆ; ತಾನೇ ಬರೆದ ತನ್ನ ಚರಿತ್ರೆ: ಆತ್ಮಕಥೆಯಾತ್ಮತತ್ತ್ವವನೊರೆದು (ಶ್ರೀರಾಮಾ. ೨–೪೨); ನಿನ್ನ ಆತ್ಮಕಥೆಯನ್ನು ಕೇಳಲು ತುಂಬಾ ಆತುರನಾಗಿದ್ದೇನೆ (ಮಣಿಸ. ೨). [ಆತ್ಮ + ಕಥೆ]

**ಆತ್ಮಕೃತ** (ಗು). ತನ್ನಿಂದ ಮಾಡಲ್ಪಟ್ಟ; ತಾನು ಮಾಡಿದ: ಪಱಿಪೊರ್ದದಂತು ಪರಿಭಾವಿಪುದಾತ್ಮಕೃತೋಪಕಾರಮಂ (ಮಲ್ಲಿಪು. ೩–೩೫). [ಆತ್ಮ + ಕೃತ]

**ಆತ್ಮಕೃತ್ಯ** (ನಾ). ತನ್ನ ಕರ್ತವ್ಯ; ತಾನು ಮಾಡಬೇಕಾದ ಕೆಲಸ: ಆತ್ಮಕೃತ್ಯಪರಿಪಾಲನರಾ ದಮಿತಾರಿಯನ್ನರಾರ್ (ಶಾಂತಿಪು. ೨–೪೨). [ಆತ್ಮ + ಕೃತ್ಯ]

**ಆತ್ಮಕೃಷಿಕ** (ನಾ). = ಆತ್ಮಸಾಧಕ: ಕರಣಗಳ ಪಾತ್ರದೊಳು ರುದ್ರ ರಭಸದಿ ಹರಿದು ಬಲುಕೇಡುಗಳ ಬಳಿವ ಸಂಮೋದಧುನಿಯ ಬಾಳ ಜಡೆಯೊಳು ತಳೆದು ಪಳಗಿಸಿದ ದಾಂತರು ಆತ್ಮಕೃಷಿಕರು ಸೇರಿದರು ಬಂದ ಮನೆಯ (ಮಲೆದೇ. ೩೩–೮). [ಆತ್ಮ + ಕೃಷಿಕ]

**ಆತ್ಮಕೌಶಲ** (ನಾ). ತನ್ನ ಜಾಣತನ: ವರಕೃಷ್ಣ ಭೂಮಿಪಾಲಂ ನಿರವಿಸೆ ತಾಂ ಬಿಲ್ವವೃಕ್ಷ ಪೂಜಾವಿಧಿಯಂ ಸುರುಚಿರ ಸಂಸ್ಕೃತ ಭಾಷೆಯೊಳರಿದೆನೆ ವಿರಚಿಸಿದನಾತ್ಮಕೌಶಲದಿಂದಂ (ಶಾಕುಂತ. ೫–೬ ಅಭಿ). [ಆತ್ಮ + ಕೌಶಲ]

**ಆತ್ಮಕ್ಲೇಶ** (ನಾ). ತನ್ನ ಸುಖ,—ಸಂಕಟ,—ತೊಂದರೆ: ಈ ಊರಿನಲ್ಲಿ ಎಷ್ಟು ಬಾಡಿಗೆ ಕೊಟ್ಟರೂ ಲಕ್ಷಣವಾದ ಮನೆಯೇ ಸಿಕ್ಕುವುದಿಲ್ಲ . . . ಎಂದು ಆತ್ಮಕ್ಲೇಶವನ್ನೇ ಆತ್ಮಾನುಕಂಪವಾಗಿ ಪಲ್ಲಟಿಸಿಕೊಂಡು (ನಂಟರು. ೧೬). [ಆತ್ಮ + ಕ್ಲೇಶ]

**ಆತ್ಮಕ್ಷೇಮ** (ನಾ). ತನ್ನ ಸುಖ,—ನೆಮ್ಮದಿ: ಆತ್ಮಕ್ಷೇಮ ಮತ್ತು ಆತ್ಮಗೌರವಗಳಿಗೆ ಆಶ್ರಯ ನೀಡಿದ್ದ (ಪುನರು. ೧೯೪). [ಆತ್ಮ + ಕ್ಷೇಮ]

**ಆತ್ಮಗತ** (ಗು). ೧. ಆತ್ಮನಲ್ಲಿರುವ; ಆತ್ಮನಲ್ಲಿ ಸೇರಿದ; ಆತ್ಮಕ್ಕೆ ಅಂಟಿದ, —ಸಂಬಂಧಿಸಿದ. ೨. ತನ್ನಲ್ಲಿರುವ; ತನ್ನಲ್ಲಿ ಸೇರಿಕೊಂಡ; ತನಗೆ ಅಂಟಿದ, —ಸಂಬಂಧಿಸಿದ. (ನಾ). ೩. ತನ್ನಲ್ಲಿ ತಾನು ಹೇಳಿಕೊಳ್ಳುವುದು, —ಚಿಂತಿಸುವುದು: ಅಂತಾತ್ಮಗತದೊಳೆ ಬಗೆಯುತ್ತುಂ ಬಂದು (ಆದಿಪು. ೨–೪೫ ವ); ತಜ್ಜರದ್ವಾನರ[illegible]ತ್ಕರ್ಷಚಿತ್ತನಾಗಿ ಆತ್ಮಗತದೊಳಿಂತೆಂದಂ (ಪಂಚತಂ. ೨೮೯–೧೦). ೪. [ನಾಟ್ಯಶಾ] ರೂಪಕದಲ್ಲಿ ಪಾತ್ರವು ಇತರರಿಗೆ ಕೇಳಿಸದಂತೆ ತನಗೆ ತಾನೇ ಹೇಳಿಕೊಳ್ಳುವುದು; ಸ್ವಗತ: (ಆತ್ಮಗತಂ) ಎಲೆ ಮನಸ್ಸೆ, ಕಳವಳಿಸಬೇಡ (ಶಾಕುಂತ. ೧೦–೧೩). [ಆತ್ಮ + ಗತ]

**ಆತ್ಮಗುಣ** (ನಾ). ೧. ಆತ್ಮದ ಅಥವಾ ಜೀವದ ಗುಣ, —ಸ್ವಭಾವ: ಪರಗುಣಾಸ್ತ(ಸ)ಹನನಲ್ಲದನಾತ್ಮಗುಣೋದಯಾಂತರ ಸರೂಪನಖಿಲಾಗಮಪಾರಪರಾಯಣಂ (ಕವಿರಾ. ೩–೨೨೨). ೨. ತನ್ನ ಗುಣ ಅಥವಾ ಸ್ವಭಾವ: ಹಿರಿಯರು ಆತ್ಮಗುಣಗಳನ್ನು ಪ್ರಶಂಸಿಸಿಕೊಳ್ಳುವುದಿಲ್ಲ (ರೂಢಿ). [ಆತ್ಮ + ಗುಣ]

**ಆತ್ಮಗುತ್ತೆ** (ನಾ). = ಆತ್ಮಗುಪ್ತೆ: "ನಸುಕುನ್ನಿ ಮರ್ಕಟಿಯಾತ್ಮಗುತ್ತೆ [ಪಾಠಾಂ. ವರ್ತಿ]" (ಮಂಗರಾ. ೪೩–೪೩). [< ಸಂ. ಆತ್ಮಗುಪ್ತಾ]

**ಆತ್ಮಗುಪ್ತೆ** (ನಾ). ನಸುಗುನ್ನಿ ಗಿಡ; ಕಪಿತುರಚಿಗಿಡ, —ಬೀಜ. [ಸಂ. ಆತ್ಮಗುಪ್ತಾ]

**ಆತ್ಮಗೌರವ** (ನಾ). ಸ್ವಾಭಿಮಾನ; ಆತ್ಮಾಭಿಮಾನ: ಆತ್ಮಗೌರವ ಕುಂದಲಾಗದು ಇಂದಿನೀ ಸಮಯುಗದಲಿ (ವಿಜದ. ೧೧); ಕುಮುದಾ ನಿನ್ನ ಆತ್ಮಗೌರವವೇನಾಯಿತು (ಹೊಸಕ್ಷಿ. ೧೩). [ಆತ್ಮ + ಗೌರವ]

**ಆತ್ಮಗ್ಲಾನಿ** (ನಾ). ಚಿತ್ತಸ್ವಾಸ್ಥ್ಯವಿಲ್ಲದಿರುವುದು; ಚಿಂತೆ: ಲೋಲಾ ತನಗೆ ಯಾರೂ ಅಲ್ಲ. ಸ್ನೇಹಿತಳೆಂದು ತಿಳಿಯುವುದೂ ಆತ್ಮಗ್ಲಾನಿಯ ಕೆಲಸ (ಜಯಂತ. ೨೨೪). [ಆತ್ಮ + ಗ್ಲಾನಿ]

**ಆತ್ಮಘಾತ** (ನಾ). ೧. ಆತ್ಮಹತ್ಯೆ. ೨. ತನಗೆ ತಾನೇ ಕೇಡು ತಂದುಕೊಳ್ಳುವುದು: ಯಂತ್ರವಾದವೇ ಸತ್ಯವೆಂಬ ಶ್ರದ್ಧೆಯನ್ನು ಬೆಳಸಿದರೆ ಮಾನವನ ಆತ್ಮಘಾತವಾಗುವುದು ಖಂಡಿತ (ಐಕ್ಯಾರ. ೨೪ ಪೀ); ಯೌವನದ ಲಂಪಟತನಕ್ಕೆ ಭಕ್ತಿಯ ಲಗಾಮು ಬೀಳದೆಹೋದರೆ ನಮ್ಮ ಇಂದ್ರಿಯಗಳೆಲ್ಲ ಹುಚ್ಚು ಕುದುರೆಯಾಗಿ ಆತ್ಮಘಾತ ಅನಿವಾರ್ಯ (ದಾನಚಿಂ. ೩೮). [ಆತ್ಮ + ಘಾತ]

**ಆತ್ಮಘಾತಕ** (ನಾ). **೧.** ಆತ್ಮಹತ್ಯೆ ; ಆತ್ಮಹತ್ಯೆಯ ದೋಷ : ವನದೊಳೇತಕೆ ಮಾಡಿಕೊಳಲೀಯಾತ್ಮಘಾತಕವ (ಬಸವು. ೪೪–೮) ; ಕೊಂದು ಕೊಂಬೆನೆ ಆತ್ಮಘಾತಕ ಹಿಂದೆ ಹತ್ತದೆ ಮಾಣದೇಗುವೆನು (ಕು ವ್ಯಾ ವಿ. ೩–೩೧). **೨.** ಆತ್ಮಹತ್ಯೆ ಮಾಡಿಕೊಳ್ಳುವವನು ; ತನಗೆ ತಾನೇ ಕೇಡುತಂದುಕೊಳ್ಳುವವನು. [ಆತ್ಮ + ಘಾತಕ]

**ಆತ್ಮಘಾತಕಿ** (ನಾ). ಆತ್ಮಹತ್ಯೆ ಮಾಡಿಕೊಳ್ಳುವ ವ್ಯಕ್ತಿ (ಕ). [ಸಂ. ಆತ್ಮಘಾತಕಿನ್]

**ಆತ್ಮಘೋಷ** (ನಾ). **೧.** ಕಾಗೆ. **೨.** ಹುಂಜ. **೩.** ಆತ್ಮಸ್ತುತಿ ಮಾಡಿಕೊಳ್ಳುವವನು. [ಆತ್ಮ + ಘೋಷ]

**ಆತ್ಮಚರಿತೆ** (ನಾ). = ಆತ್ಮಕಥೆ : ನನ್ನ ಆತ್ಮಚರಿತೆ ಕಳಂಕಪ್ರಾಯವಾಗಿರುವುದೇ ನಾನು ಹಿಮ್ಮೆಟ್ಟುವುದಕ್ಕೆ ಕಾರಣ (ಬಾಣಅ. ೯). [ಆತ್ಮ + ಚರಿತೆ]

**ಆತ್ಮಚರಿತ್ರೆ** (ನಾ). = ಆತ್ಮಕಥೆ. [ಆತ್ಮ + ಚರಿತ್ರೆ]

**ಆತ್ಮಚಿಂತೆ** (ನಾ). ಆತ್ಮಧ್ಯಾನ; ಚೈತನ್ಯದ ಸ್ವರೂಪವನ್ನು ಚಿಂತಿಸುವುದು : ಮಾಂಗಲಿಕ ಕರ್ಮಾಭಿಯೋಗ ಕುಲಾಂಗನಾರತಿಯಾತ್ಮಚಿಂತೆ ಪರಾಂಗನಾ ವೈಮುಖ್ಯವಿವು ಸದ್ಧರ್ಮಗತಿಯೆಂದ (ಕುವ್ಯಾಆ. ೧೫–೧೫). [ಆತ್ಮ + ಚಿಂತೆ]

**ಆತ್ಮಚೈತನ್ಯ** (ನಾ). ಆತ್ಮಶಕ್ತಿ : ಆತ್ಮಚೈತನ್ಯ ದೀಪಾಲಂಬನವೆ ಸುಖಪ್ರಭೆಯ ರೂಪಿಂದಹೋ ಮೇಲ ವಿಕ್ರಯದಾಗಿಯಿಕ್ಕುಮಂತಾಯಾತ್ಮನಲ್ಲಿ ಸವಿಕಾರಿ ತಾನೂ (ವೀಶೈಪು. ೫–೪–೨೫). [ಆತ್ಮ + ಚೈತನ್ಯ]

**ಆತ್ಮಜ** (ನಾ). **೧.** ಮಗ : ಮನದೊಳ್ ಪಿರಿದುಮುತ್ಸಾಹಮಂ ಪಡೆದಳಾತ್ಮಜರ ಬರವಿಂದೆ (ಸುಕುಮಾ. ೨–೬೨) ; ಮಱೆ ಬೇಡಾತ್ಮಜ ಸತ್ಕಳತ್ರಸಖರೊಳ್ (ಸೋಮೇಶ. ೮೨). **೨.** ತಲೆಯ ಕೂದಲು. **೩.** ರೇತಸ್ಸು; ಶುಕ್ಲ. **೪.** ಮನ್ಮಥ. **೫.** ಬುದ್ಧಿ. **೬.** ವೇದ : "ಕಚಂ ರೇತಮನೋಜ ಬುದ್ಧಿ ನಿಗಮಂಗಳ್ ಆತ್ಮಜಾ ವಾಚಕಂ" (ನಾನಾರ. ೪೯). [ಸಂ.]

**ಆತ್ಮಜನ್ಮ** (ನಾ). = ಆತ್ಮಜ ೧ : ಗಂಗಾತ್ಮಜನ್ಮಂ ಜಯಶ್ರೀಲೋಲಂ ಜಮದಗ್ನಿರಾಮ ಮುನಿಯೊಳ್ ಕಲ್ತಂ ಧನುರ್ವಿದ್ಯೆಯಂ (ಪಂಪಭಾ. ೧–೬೮). [ಸಂ. ಆತ್ಮಜನ್ಮನ್]

**ಆತ್ಮಜಳ** (ನಾ). ತನ್ನ ಮೂತ್ರ : ಪೊಸೆದಾತ್ಮಜಳದೆ [ಪಾಠಾಂ. ರಸದೆ] ಬೇಳೆಯ ರಸಮಂ ಕಿವಿಯೊಳಗೆ ಪಿೞಿಗೆ . . . ಸೂೞ್ಜ್ವರಮೞಿಗುಂ (ಲೋಕೋಪ. ೯–೨೪) ; "ನರಮೂತ್ರ" (ಲೋಕೋಪ. ೯–೨೪ ಟೀಕು). [ಆತ್ಮ + ಜಳ (= ಜಲ)]

**ಆತ್ಮಜಾತ** (ನಾ). ಮಗ : ದುರಾತ್ಮರಂ . . . ಸೋಮಶರ್ಮಾತ್ಮಜಾತರಂ (ಸುಕುಮಾ. ೨–೧೮). [ಆತ್ಮ + ಜಾತ]

**ಆತ್ಮಜಾತೆ** (ನಾ). ಮಗಳು (ಕ). [ಸಂ. ಆತ್ಮಜಾತಾ]

**ಆತ್ಮಜೆ** (ನಾ). = ಆತ್ಮಜಾತೆ : ಈ ಪೃಥ್ವೀನಾರಾಯಣರಿಗೆ ನನ್ನ ಆತ್ಮಜೆ ಲಕ್ಷ್ಮಿಯನ್ನು ಕೊಟ್ಟು (ಶಾಂತಲಾ. ೮೯). [ಸಂ. ಆತ್ಮಜಾ]

**ಆತ್ಮಜ್ಞ** (ನಾ). **೧.** ಆತ್ಮದ ಸ್ವರೂಪವನ್ನು ತಿಳಿದವನು; ಆತ್ಮಜ್ಞಾನಿ: ಭೀಷ್ಮ, ವಿದುರ, ಕೃಪ, ಸಂಜಯ, ಎಲ್ಲರೂ ಶಮವನ್ನೇ ಬೋಧಿಸುತ್ತಾರೆ. ಇದೇ ಆತ್ಮಜ್ಞರ ನಡತೆ (ವಚಭಾ. ೧೧೯). **೨.** ಋಷಿ; ಮುನಿ. [ಸಂ.]

**ಆತ್ಮಜ್ಞತೆ** (ನಾ). ಆತ್ಮದ ಸ್ವರೂಪವನ್ನು ತಿಳಿದಿರುವಿಕೆ : ಎನಿತಿಷ್ಟಯೋಗದೊಳ್ ಸುಖಮನಿತೆ ಮನೋದುಃಖಮುದಜಗಲ್ಕೆಯೊಳೆಂದಲ್ತಿ ನಿವೃತ್ತಿಯೊಳೆಸೆವರ್ ಸಜ್ಜನರಾತ್ಮಜ್ಞತೆಗೆ ನೋೞ್ಪೊಡದು ಫಲಮೆ ವಲಂ (ಚಂದ್ರಪು. ೨–೩೮). [ಸಂ. ಆತ್ಮಜ್ಞತಾ]

**ಆತ್ಮಜ್ಞಾನ** (ನಾ). ಆತ್ಮಸ್ವರೂಪದ ಅರಿವು. [ಆತ್ಮ + ಜ್ಞಾನ]

**ಆತ್ಮಜ್ಞಾನಿ** (ನಾ). ಆತ್ಮನ ಸ್ವರೂಪವನ್ನು ಬಲ್ಲವನು : ಸಿರಿಗುಬ್ಬನೆಡಱಿಗೆ ತಗ್ಗನಾತ್ಮಜ್ಞಾನಿ (ಭರಚ. ೨–೨೬). [ಸಂ. ಆತ್ಮಜ್ಞಾನಿನ್]

**ಆತ್ಮಜ್ಯೋತಿ** (ನಾ). ಆತ್ಮದ ಪ್ರಕಾಶ: ಪರಬ್ರಹ್ಮನಾದದಿ ಮನಂ ಬೆರಸಿ ಬೇರಿಲ್ಲದೆ ತಪ್ತಕಾಂಚನಪ್ರಭಾಮಯಯಾತ್ಮಜ್ಯೋತಿಯೊಡನೇ ಸ್ಥಿರ ಸುಚಿಜ್ಯೋತಿಯ ಕೂಡಿ ಬೆಳಗುತ್ತೆ (ನವಮೋ. ೬–೨೯). [ಆತ್ಮ + ಜ್ಯೋತಿ]

**ಆತ್ಮಜ್ವಾಲೆ** (ನಾ). ಆತ್ಮದ ತೇಜಸ್ಸು : ಆತ್ಮಜ್ವಾಲೆಯ ದಳ್ಳುರಿ ಹೊತ್ತಿ ಭವ್ಯಾಕಾರದ ಜಿಹ್ವೆಯನೆತ್ತಿ ನಾಕದ ನೀಲವ ನೆಕ್ಕುತಿದೆ ಮಿಥ್ಯೆಯ ದಹಿಸುತ ಮುಕ್ಕುತಿದೆ (ಅಗ್ನಿಹಂ. ೩೩) [ಆತ್ಮ + ಜ್ವಾಲೆ]

**ಆತ್ಮತತ್ತ್ವ** (ನಾ). ಆತ್ಮನ ಅಥವಾ ಪರಮಾತ್ಮನ ಸ್ವರೂಪ: ಜಿನೇಂದ್ರನಂ ಬಗೆವ ಮನಂ ಗಡಂ ಮುಗುಳ್ದು ಜಾನಿಪ ಕಣ್ಗಡಮಾತ್ಮತತ್ತ್ವದೊಳ್ ಬಗೆ ಗಡಂ (ಆದಿಪು. ೨–೬೦). [ಆತ್ಮ + ತತ್ತ್ವ]

**ಆತ್ಮತುಷ್ಟಿ** (ನಾ). ಆತ್ಮಸಂತೋಷ, —ತೃಪ್ತಿ : ಉದಾತ್ತವಾದ ಲಕ್ಷ್ಯವೊಂದನ್ನು ಅನ್ವೇಷಿಸುವುದರಿಂದ ಲಭಿಸುವ ಆತ್ಮತುಷ್ಟಿ ಕೇವಲ ಪಾರ್ಥಿವ ಸಂಪತ್ತನ್ನು ಪಡೆಯುವುದರಿಂದ ಸಿಕ್ಕುವುದಿಲ್ಲ (ಋಕ್ಸಾರ. ೧). [ಆತ್ಮ + ತುಷ್ಟಿ]

**ಆತ್ಮತೃಪ್ತಿ** (ನಾ). = ಆತ್ಮತುಷ್ಟಿ : ಅತ್ಮಸಂಯಮ ಅತ್ಮನಂಬಿಕೆ ಅತ್ಮತೃಪ್ತಿಯ ಸಿರಿಯಲಿ ತುಂಬುಯೌವನ ಬೆಳಗಲಿ (ವಿಜದ. ೧೫೦). [ಆತ್ಮ + ತೃಪ್ತಿ]

**ಆತ್ಮತೃಷ್ಣೆ** (ನಾ). ಆತ್ಮದ ಆಸೆ : ತಿರೆಮಗಳ ಚೆಲುವಲರ ಬಂಡಿಡಿದ ಬಟ್ಟಲಂ ಪೀರ್ದನೆರ್ದೆತುಟಿಯಿಂದೆ ತಣಿವಿನಂ ತನ್ನಾತ್ಮತೃಷ್ಣೆ (ಶ್ರೀರಾಮಾ. ೫೫–೩೧). [ಆತ್ಮ + ತೃಷ್ಣೆ]

**ಆತ್ಮತೇಜ** (ನಾ). **೧.** ಆತ್ಮಪ್ರಭೆ; ಆತ್ಮದ ಜ್ಯೋತಿ : ಸಾಧನೆಗೈದರೆ ಸಹನೆಯ ನೀಗದೆ ಬೆಳಗದೆ ನಿನ್ನಾತ್ಮತೇಜ (ಇಂಚಾಪ. ೨೧೫–೬೨). **೨.** ಆತ್ಮಾಭಿಮಾನ; ಸ್ವಾಭಿಮಾನ : ಪೂರ್ವಾಶ್ರಯ, ಬಂಧುಭ್ರಮೆ, ಆತ್ಮತೇಜ, ಲೋಕದ ನಚ್ಚುಮಚ್ಚು ಇಂತಿವ ಸುಟ್ಟು (ಘನವ. ೨೦–೧೬). [ಆತ್ಮ + ತೇಜ]

**ಆತ್ಮತೇಜಸ್ಸು** (ನಾ) = ಆತ್ಮತೇಜ. [ಆತ್ಮ + ತೇಜಸ್ಸು]

**ಆತ್ಮತ್ರಯ** (ನಾ). ಜೀವಾತ್ಮ, ಅಂತರಾತ್ಮ, ಪರಮಾತ್ಮ ಎಂಬ ಮೂರು ಬಗೆಯಾದ ಆತ್ಮಗಳು : ಜೀವತ್ರಯಂಗಳ ಜೀರ್ಣೀಕರಿಸಿ ಆತ್ಮತ್ರಯಂಗಳ ಘಾತುಗೆಡಿಸಿ (ಅಖಂಡೇ. ೧೯೪–೧೪); ಅತ್ಮತ್ರಯವನು ಹೇಳ್ವೆನಾ ಜೀವಾತ್ಮ ಅಂತರಾತ್ಮ ಕೇಳ್ಪರಮಾತ್ಮ ತಾನಿವು ಆತ್ಮತ್ರಯ (ಜ್ಞಾನಸಿಂ. ೪–೧೦೦). [ಆತ್ಮ + ತ್ರಯ]

**ಆತ್ಮದಂಡನೆ** (ನಾ). ತನ್ನನ್ನು ತಾನೇ ದಂಡಿಸಿಕೊಳ್ಳುವುದು ; ದೇಹದಂಡನೆ : ಜ್ಞಾನಿಗಳಾದ ತಾವು ಹೀಗೆ ಆತ್ಮದಂಡನೆಯನ್ನು ಮಾಡಿಕೊಳ್ಳಬಾರದು (ನೀತಿಚಿಂ. IV, ೨೨). [ಆತ್ಮ + ದಂಡನೆ]

**ಆತ್ಮದರ್ಶನ** (ನಾ). ಆತ್ಮಸ್ವರೂಪದ ಸಾಕ್ಷಾತ್ಕಾರ: ಈ ಮಹಾಸ್ವಾತ್ಮಯೋಗ ಪ್ರದೀಪಾತ್ಮದರ್ಶನೋತ್ಸುಕಜನಂ (ವೀಶೈಪು. ೫–೨೦–೩೦) ; ಒರ್ದಿನಂ ತಾಂ ಕಂಡ ದೃಶ್ಯಸೌಂದರ್ಯದಿಂದಾತ್ಮದರ್ಶನಕೇರ್ದ ರಸಸಮಾಧಿಯ ಮಹಿಮೆಗಾಗಿ (ಶ್ರೀರಾಮಾ. ೧೪೯–೨೦೪). [ಆತ್ಮ + ದರ್ಶನ]

**ಆತ್ಮದರ್ಶನಿ** (ನಾ). = ಆತ್ಮಜ್ಞಾನಿ : ದ್ವೈತವೇನದ್ವೈತವೇನಾತ್ಮದರ್ಶನಿಗೆ (ಮಂಕುಕ. ೮೦೯). [ಸಂ. ಆತ್ಮದರ್ಶನಿನ್]

**ಆತ್ಮದರ್ಶಿ** (ನಾ). = ಆತ್ಮಜ್ಞಾನಿ : ರಾಜರ್ಷಿ ಜನಕ, ಆತ್ಮದರ್ಶಿ ಯಾಜ್ಞವಲ್ಕ್ಯ, ತ್ಯಾಗಮಯಿ ಮೈತ್ರೇಯಿ . . . ಭಾರತೀಯರಿಗೆ ಚಿರಪರಿಚಿತರಾಗಿದ್ದಾರೆ (ಭಾರದ. ೩೮). [ಸಂ. ಆತ್ಮದರ್ಶಿನ್]

**ಆತ್ಮದಾರಿ** (ನಾ). ಆತ್ಮಸಾಕ್ಷಾತ್ಕಾರದ ಮಾರ್ಗ: ಮಾರುತನಂತೆ ಸಂಚಲಿಪ ಚಿತ್ತವನಾತ್ಮದಾರಿಯೊಳಗೆ ನಿಲಿಸಿದರೆ (ಭರಚ. ೬೯–೧೦೫). [ಆತ್ಮ + ದಾರಿ$_1$]

**ಆತ್ಮದ್ರೋಹ** (ನಾ). ತನಗೆ ತಾನೆ ವಂಚನೆಮಾಡಿಕೊಳ್ಳುವುದು: ವಿದ್ಯಾರ್ಥಿಗಳು ರಾಜಕೀಯದಲ್ಲಿ ತಲೆಹಾಕಿ ತಮ್ಮ ವಿದ್ಯಾಭ್ಯಾಸವನ್ನು ಕಡೆಗಣಿಸುವುದು ಆತ್ಮದ್ರೋಹವೇ ಸರಿ (ರೂಢಿ). [ಆತ್ಮ + ದ್ರೋಹ]

**ಆತ್ಮದ್ರೋಹಿ** (ನಾ). ತನಗೆ ತಾನೇ ಕೇಡು ಮಾಡಿಕೊಳ್ಳುವವನು. [ಸಂ. ಆತ್ಮದ್ರೋಹಿನ್]

**ಆತ್ಮಧ್ಯಾನ** (ನಾ). **೧.** ತನ್ನ ಸ್ವರೂಪವನ್ನು ಕುರಿತು ತಾನು ಚಿಂತಿಸುವುದು: ತಮ್ಮ ದಣಿ ಆತ್ಮಧ್ಯಾನದಲ್ಲಿ ತೊಡಗಿ ಆತ್ಮೋದ್ಧಾರ ಕಾರ್ಯದಲ್ಲಿ ಪ್ರವೃತ್ತನಾಗಿದ್ದ (ಪುನರು. ೩೦೭). **೨.** ಪರಮಾತ್ಮನನ್ನು ಕುರಿತು ಚಿಂತಿಸುವುದು: ಧಾರಿಣಿಯ ದಿವಿಜರಿಗೆ ಪರಮೋದಾರ ಬುದ್ಧಿಯಲಿತ್ತ ಫಲ ಕೈಸೇರುವುದು ನಿಮಿಷಾರ್ಧವಾತ್ಮಧ್ಯಾನನಿಷ್ಠರಿಗೆ (ಅಮೃತ. ೧–೧೧). [ಆತ್ಮ + ಧ್ಯಾನ]

**ಆತ್ಮನಾಥ** (ನಾ). ತನ್ನ ಪ್ರಭು, —ಒಡೆಯ, —ಪತಿ: ಪೋದರಾತ್ಮನಾಥನ ಬಟಿಯಂ ಮಱುಕಮೊಯ್ಯೆ ಯಶಸ್ವತಿಯುಂ ಸುನಂದೆಯುಂ (ಆದಿಪು. ೯–೭೬). [ಆತ್ಮ + ನಾಥ]

**ಆತ್ಮನಿಂದೆ** (ನಾ). ತನ್ನನ್ನು ತಾನೆ ನಿಂದಿಸಿಕೊಳ್ಳುವುದು: ಆತ್ಮನಿಂದೆ, ಭಯ, ಲೋಭ ಮತ್ತು ತಾಪತ್ರಯಗಳಿಂದ ಮುಕ್ತಗೊಂಡ ಆತ್ಮ (ಪುನರು. ೨೨೨). [ಆತ್ಮ + ನಿಂದೆ]

**ಆತ್ಮನಿಕ್ಷೇಪ** (ನಾ). ಭಗವಂತನಲ್ಲಿ ತನ್ನನ್ನು ಅರ್ಪಣೆಮಾಡುವುದು; ಆತ್ಮಸಮರ್ಪಣೆ. [ಆತ್ಮ + ನಿಕ್ಷೇಪ]

**ಆತ್ಮನಿರಾಕರಣೆ** (ನಾ). ತನ್ನನ್ನು ತಾನು ನಿರಾಕರಿಸಿಕೊಳ್ಳುವುದು; ನೈಚ್ಯಾನುಸಂಧಾನ: ಅವರು ಆಯಾ ಮತೀಯರಿಗೆ ರುಚಿಸುವಂಥಾ ಅತ್ಯುಕ್ತಿಯನ್ನು ಆತ್ಮನಿರಾಕರಣೆಯನ್ನು ಉಚ್ಚರಿಸಿಬಿಡುತ್ತಿದ್ದರು (ಕಜಸಾ. X ಪೀ). [ಆತ್ಮ + ನಿರಾಕರಣೆ]

**ಆತ್ಮನಿರ್ಮಿತ** (ಗು). ತಾನು ಮಾಡಿದ, —ನಿರ್ಮಿಸಿದ; ಸ್ವಯಂ ನಿರ್ಮಿತ: ನಿಮ್ಮಯ ಪುರದಲಿರಿ ನೀವಾತ್ಮನಿರ್ಮಿತ ರಾಜಧಾನಿಯಲಿ (ಕುವ್ಯಾಅ. ೧೭–೨೭). [ಆತ್ಮ + ನಿರ್ಮಿತ]

**ಆತ್ಮನಿರ್ವಾಣ** (ನಾ). ಜೀವಾತ್ಮನ ಮೋಕ್ಷ: ಮೆಯ್ಯ ನಿರ್ವಾಣ ಮಾಳ್ಪುದು ದೇಹನಿರ್ವಾಣ ಮೆಯ್ಯೊಳಗಿರ್ದ ಹಂಸನನು ಮೆಯ್ಯೆಂಬ ಹೊದಪಿಂದ ಬೇರ್ಮಾಡಿ ನೋಳ್ಪುದೆ ಮೆಯ್ಯಿಲ್ಲದಾತ್ಮನಿರ್ವಾಣಾ (ಭರಚ. ೬೯–೬೨). [ಆತ್ಮ + ನಿರ್ವಾಣ]

**ಆತ್ಮನಿವಾಸ** (ನಾ). ತನ್ನ ವಾಸಸ್ಥಾನ: ಆತ್ಮನಿವಾಸಮಪ್ಪ ಹೇಮಕೂಟಾಚಲಕ್ಕೆ ಪೋಗುತ್ತಿರ್ದಪಳ್ (ಕಾದಂಪೂ. ೭೯೪). [ಆತ್ಮ + ನಿವಾಸ]

**ಆತ್ಮನಿವೇದನ** (ನಾ). (ಭಗವಂತನಲ್ಲಿ) ತನ್ನನ್ನು ತಾನು ಅರ್ಪಿಸಿಕೊಳ್ಳುವುದು; ಆತ್ಮಾರ್ಪಣೆ: "ಶ್ರವಣಂ, ಕೀರ್ತನಂ, ವಿಷ್ಣೋಃ ಸ್ಮರಣಂ, ಪಾದಸೇವನಂ, ಅರ್ಚನಂ, ವಂದನಂ, ದಾಸ್ಯಂ, ಸಖ್ಯಂ, ಆತ್ಮನಿವೇದನಂ" ಎಂಬ ೯ ವಿಧ ಭಕ್ತಿಯಿಂದ ಪರಮಾತ್ಮನನ್ನು ಭಜಿಸುತ್ತಾ (ಹಸಾರ. ೨೧–೫೧ ಟೀಕು). [ಆತ್ಮ + ನಿವೇದನ]

**ಆತ್ಮನೇಪದ** (ನಾ). [ವ್ಯಾಕ] ಕ್ರಿಯೆಯ ಫಲ ಕರ್ತೃವಿಗೇ ಎಂಬುದನ್ನು ತಿಳಿಸುವುದಕ್ಕಾಗಿ ಬರುವ ಪ್ರತ್ಯಯ; ಸಂಸ್ಕೃತದ ಆಖ್ಯಾತ ಪ್ರತ್ಯಯಗಳಲ್ಲಿರುವ ಎರಡು ವರ್ಗಗಳಲ್ಲೊಂದು. [ಸಂ.]

**ಆತ್ಮನೈವೇದ್ಯ** (ನಾ). = ಆತ್ಮನಿವೇದನ: ಕರ್ಮಫಲವ ಕೊಡಿ ಕೂಡಲಸಂಗಮ ದೇವಂಗೆ ಆತ್ಮನೈವೇದ್ಯವ ಮಾಡಿದವನೆ ಧನ್ಯ (ಬಸವ. ೭೭೩); ಸದ್ಭಕ್ತಿಯಿಂ . . . ಆತ್ಮನೈವೇದ್ಯಮಂ ಮಾಡಿದನಾ ಲಿಂಗಕ್ಕೆ ತಾನೇಂ ಸುಕೃತಿಯೋ (ರಾಜಶೇ. ೧೨–೧೦೭). [ಆತ್ಮ + ನೈವೇದ್ಯ]

**ಆತ್ಮಪರ** (ನಾ). ಆತ್ಮದ ಸ್ವರೂಪದಲ್ಲಿ ಆಸಕ್ತನಾದವನು; ಸ್ವಸ್ವರೂಪವನ್ನು ಕುರಿತು ಚಿಂತಿಸುವವನು: ಶಂಕರಭಾವದಲ್ಲಿ ಸಂಕ್ರಮಿಸಿ ಧರಿಸಿ ಸಮಾಧಿಯನು ತಳೆದಾತ್ಮಪರನಾದ (ಕುವ್ಯಾಅ. ೫–೫). [ಆತ್ಮ + ಪರ$_1$]

**ಆತ್ಮಪರಾಭವ** (ನಾ). ತನ್ನ ಸೋಲು; ತನಗೆ ಉಂಟಾದ ಪರಾಜಯ: ಎಂತೊ ಸೈರಿಸುವರಾತ್ಮಪರಾಭವಮಂ ಕುಲೋದ್ಭವರ್ (ಶಾಂತಿಪು. ೬–೩೭). [ಆತ್ಮ + ಪರಾಭವ]

**ಆತ್ಮಪಾಲನ** (ನಾ). ತನ್ನನ್ನು ತಾನು ಕಾಪಾಡಿಕೊಳ್ಳುವುದು; ಆತ್ಮರಕ್ಷಣೆ: ಆತ್ಮಪಾಲನಮೆಂಬುದು ಸ್ವರ್ಗಪ್ರಾಕಾರದೊಳವಾತ್ಮರಕ್ಷೆಗೆಯ್ವುದು (ಚಾವುಂಪು. ೨೩೮). [ಆತ್ಮ + ಪಾಲನ]

**ಆತ್ಮಪುಣ್ಯ** (ನಾ). ತಾನು ಮಾಡಿದ ಪುಣ್ಯ: ಕೂರ್ತಿಟ್ಟವರಾತ್ಮಪುಣ್ಯಮೆ . . . ಕಾವು (ಶಾಂತಿಪು. ೬–೧೦೬). [ಆತ್ಮ + ಪುಣ್ಯ]

**ಆತ್ಮಪುತ್ರಕ** (ನಾ). ತನ್ನಮಗ: ಆತ್ಮಪುತ್ರಕವಿವಹನಪ್ರೀತಂ ರೋಮಾಂಚಕಂಚುಕಿತಾಂಗಕಂ (ಶಾಂತಿಪು. ೫–೩೭). [ಆತ್ಮ + ಪುತ್ರಕ]

**ಆತ್ಮಪ್ರಜ್ಞೆ** (ನಾ). **೧.** ಆತ್ಮಸ್ವರೂಪದ ಅರಿವು: ಅತೀಂದ್ರಿಯದೊಂದು ದರ್ಶನಾನಂದದೊಳ್ ಮುಳುಗಿತಾತ್ಮಪ್ರಜ್ಞೆ ನಿರ್ವಿಕಲ್ಪಪ್ರಲಯಯೋಗಕ್ಕೆ (ಶ್ರೀರಾಮಾ. ೬೯೬–೫೦೭). **೨.** ತನ್ನತನದ ಅರಿವು: ಆ ಆತ್ಮಪ್ರಜ್ಞೆ ದಿಗ್ದೇಶ ಮುಟ್ಟೆ ಎಂಟೆದೆಯ ರೂಪ ತಳೆದು (ಹೃದಸ. ೫[illegible]). [ಆತ್ಮ + ಪ್ರಜ್ಞೆ]

**ಆತ್ಮಪ್ರತಿಷ್ಠೆ** (ನಾ). **೧.** ತನ್ನ ಗೌರವ, —ಘನತೆ: ಹಗಲುಗನಸುಗಳಲ್ಲಿ ಸಂಘ ಜೀವನಾಭಿಲಾಷೆ, ಆತ್ಮಪ್ರತಿಷ್ಠೆ ಈ ಎರಡು ಹುಟ್ಟುಗುಣಗಳೂ ಎದ್ದು ಕಾಣುತ್ತವೆ (ಶಿಕ್ಷದ. ೬೫೨). **೨.** ಗರ್ವ; ಅಹಂಕಾರ; ಸ್ವಪ್ರತಿಷ್ಠೆ: ಅವನದು ಬಹಳ ಆತ್ಮಪ್ರತಿಷ್ಠೆ (ರೂಢಿ). [ಆತ್ಮ + ಪ್ರತಿಷ್ಠೆ]

**ಆತ್ಮಪ್ರತ್ಯಯ** (ನಾ). ಆತ್ಮವಿಶ್ವಾಸ: ಸಾಮಾನ್ಯಸ್ಥಿತಿಯಲ್ಲಿಲ್ಲದ ಆತ್ಮಪ್ರತ್ಯಯ ಮತ್ತು ಸ್ವೇಚ್ಛಾವರ್ತನೆ ಕುಡಿದು ಅಮಲೇರಿದಾಗ ಮೈದೋರುತ್ತಿದ್ದವು (ಪುನರು. ೧೧). [ಆತ್ಮ + ಪ್ರತ್ಯಯ]

**ಆತ್ಮಪ್ರಭೆ** (ನಾ). ಆತ್ಮದ ಪ್ರಕಾಶ: ಈ ಆತ್ಮಪ್ರಭೆಯೆಂಬ ಜ್ಞಾನಕ್ಕೆ ಆವರಣವುಂಟು ಅದಕ್ಕೆ ಜ್ಞಾನಾವರಣಕರ್ಮವೆಂದು ಹೆಸರು (ಹಿಂದಸಾ. ೮೬). [ಆತ್ಮ + ಪ್ರಭೆ]

**ಆತ್ಮಪ್ರವಾದ** (ನಾ). [ಜೈನ] ಜೈನಶಾಸ್ತ್ರಗಳ 'ಪೂರ್ವ' ಎಂಬ ಹದಿನಾಲ್ಕು ವಿಭಾಗಗಳಲ್ಲಿ ಒಂದು. ℙ ಇದರಲ್ಲಿ ಆತ್ಮವನ್ನು ಕುರಿತ ವಿಸ್ತಾರವಾದ ವಿವೇಚನೆಯನ್ನು ಮಾಡಲಾಗಿದೆ: ಈ ಪೂರ್ವಗಳು ಜೈನಶಾಸ್ತ್ರಗಳ ವಿಭಾಗಗಳಾಗಿವೆ. ೧ ಉತ್ಪಾದನಪೂರ್ವ . . . ೮ ಆತ್ಮಪ್ರವಾದ (ಆತ್ಮದ ಪೂರ್ಣಕಲ್ಪನೆ) (ಜೈನಪ. ೪೯೯). [ಆತ್ಮ + ಪ್ರವಾದ]

**ಆತ್ಮಪ್ರಶಂಸೆ** (ನಾ). ತನ್ನನ್ನು ತಾನೆ ಹೊಗಳಿಕೊಳ್ಳುವುದು; ಆತ್ಮಸ್ತುತಿ: ಆತ್ಮಪ್ರಶಂಸೆ ಸಜ್ಜನರ ಲಕ್ಷಣವಲ್ಲ (ರೂಢಿ). [ಆತ್ಮ+ ಪ್ರಶಂಸೆ]

**ಆತ್ಮಬಲ** (ನಾ). **೧.** ಆತ್ಮನ ಶಕ್ತಿ. **೨.** ತನ್ನ ಶಕ್ತಿ: ದೈವಬಲವಿಲ್ಲದ ಮೇಲೆ ಆತ್ಮಬಲವೇನೂ ಸಾಗದು (ರೂಢಿ). **೩.** ತನ್ನ ಸೈನ್ಯ: ಭೀತಪರಿಗ್ರಹಂ ಕೃಪಣನಾತ್ಮಬಲವ್ಯಸನಾತಿವಿಹ್ವಲಂ (ಪಂಚತಂ. ೨೨೯–೧೦). [ಆತ್ಮ + ಬಲ]

**ಆತ್ಮಬೋಧ** (ನಾ). = ಆತ್ಮಜ್ಞಾನ: ಅಪನಿಂದಾನ್ವಿತರಾತ್ಮಬೋಧಕುಹಕರ್ ಸಾಮಿಪ್ಯಮಾತ್ರೇಷ್ಟರುಂ ನೃಪರೊಳ್ ಮಾನ್ಯರೆನಿಪ್ಪರೈ (ಸೋಮೇಶ. ೫೯). [ಆತ್ಮ + ಬೋಧ]

**ಆತ್ಮಭವ** (ನಾ). ೧. ಮಗ: ಆ ಬದ್ದೆಗಂಗೆ . . . ಮುಗ್ಧಮಲ್ಲನಿಳಾಬಹುವಿಧ [ರ]ಕ್ಷಣ ಪ್ರವೀಣ ಕೃಪಾಣಂ ಆತ್ಮಭವಂ (ಪಂಪಭಾ. ೧–೩೦, ೩೧) ; ಜಗದ ನವನಿಧಿಗೊಡೆಯನಾತ್ಮಭವನೆನಿಸಿ ಮುಟ್ಟಿಗೆಯ ಸುಂಕದ ಹಾಗ ವಿಲ್ಲಾಯ್ತೆ ಮಗನೇ (ಹಚಕಾ. ೧೨–೩೨). ೨. ತನ್ನ ಜನ್ಮಪರಂಪರೆ: ಅಂಬರೇಚರ ಪುತ್ರರ್ ಬೆಸಗೊಂಡರಾತ್ಮಭವಮಂ ಧರ್ಮಶ್ರವಣಾನಂತರಂ (ಶಾಂತಿಪು. ೯–೫೦). [ಆತ್ಮ + ಭವ]

**ಆತ್ಮಭವೆ** (ನಾ). ಮಗಳು: ಸಿಂಹಳಂ . . . ಆತ್ಮಭವೆಯೆನಿಸುವ ಪೆಣ್ಮಣಿಯಂ ನೃಪಕುಳಚೂಡಾಮಣಿ ಯುವರಾಜಂಗೆ ಮದುವೆಯಂ ಮಾಡಿದಪಂ (ರಾಜಶೇ. ೭–೯೯) ; ಇನ್ನುಳಿದ ಗೃಹಸ್ಥರಾತ್ಮಭವೆಯಂ ಕಳುಪುತ್ತ ಕಟಿಂತಳಲ್ವರೋ (ಶಾಕುಂತ. ೫೨–೮೪).

[ಸಂ. ಆತ್ಮಭವಾ]

**ಆತ್ಮಭಾವಿ** (ಗು). ಆತ್ಮಧ್ಯಾನದಿಂದ ಉಂಟಾಗತಕ್ಕ: ವೀರ್ಯಮನಂತವೀರ್ಯಮೆಱಿವಪ್ರತಿಮಂ ಸುಖಮಾತ್ಮಭಾವಿ ಗಾಂಭೀರ್ಯಮಮಾನುಷಂ ನಿನಗೆ ದೇವರ ದೇವ (ಶಾಂತಿಪು. ೧೦–೧೦೦).

[ಸಂ. ಆತ್ಮಭಾವಿನ್]

**ಆತ್ಮಭೂ** (ನಾ). ೧. ಬ್ರಹ್ಮ. ೨. ವಿಷ್ಣು: "ಅರವಿಂದನಾಭಂ . . . ಆತ್ಮಭೂನಾಮ ಗೋವಿಂದನಕ್ಕು" (ಮಂಗರಾ. ೬–೧೭). ೩. ಮನ್ಮಥ: "ಮನಸಿಜಂ . . . ಆತ್ಮಭೂ ಪಂಚೇಷು . . . ಮದನನಕ್ಕುಂ" (ಮಂಗರಾ. ೭–೨೨).

[ಸಂ.]

**ಆತ್ಮಮಲ** (ನಾ). ಆತ್ಮದ ದೋಷ: ಅವರಿಸಿದೆನ್ನಾತ್ಮಮಲಪಂಕಾವಳಿಯನೆಲ್ಲಂ ತೊಳೆದು ಕಳೆದೋವಿದಿರಿ (ಬಸವು. ೫೭–೬೩). [ಆತ್ಮ + ಮಲ₃]

**ಆತ್ಮಯೋಗ** (ನಾ). ಪರಮಾತ್ಮನ ಧ್ಯಾನಕ್ಕೋಸ್ಕರ ಮಾಡುವ ಚಿತ್ತೈಕಾಗ್ರತೆ, —ತಲ್ಲೀನತೆ: ಉಂಡು ತೇಗುವನಂತೆ ತಾನಾತ್ಮಯೋಗದೊಳುಂಡ ಸವಿಯ ಕೃತಿಮಾಳ್ಪಾ ಕಂಡುದ ತೋಱುವಂತೊಳಗೆ ತನ್ನಾತ್ಮನ ಕಂಡುದನುಸುರಿ ತೋಱುವನು (ಭರಚ. ೬೯–೩೪).

[ಆತ್ಮ + ಯೋಗ]

**ಆತ್ಮಯೋಗಿ** (ನಾ). ಆತ್ಮಯೋಗವನ್ನು ಬಲ್ಲವನು: ಕಿಲುಬು ಜಾಱಿದರೆ ಕನ್ನಡಿ ಕಾಣ್ಬ ತೆಱದಿ ನಿರ್ಮಲನಾತ್ಮಯೋಗಿ ಧ್ಯಾನದೊಳು ತೊಲಗಿಪನೊಂಭತ್ತು ಕರ್ಮವನಾಗ (ಭರಚ. ೭೨–೨೪).

[ಸಂ. ಆತ್ಮಯೋಗಿನ್]

**ಆತ್ಮರಕ್ಷಕ** (ನಾ). [ಜೈನ] ಸ್ವರ್ಗದಲ್ಲಿ ಹುಟ್ಟಿದ ಜೀವಕ್ಕೆ ಅಂಗರಕ್ಷಕರಾಗಿರುವ ದೇವತೆಗಳು: ಮತ್ತಮನಲ್ಪಕಲ್ಪಾಮರರುಂ ಇಂದ್ರ ಪ್ರತೀಂದ್ರ ಸಾಮಾನಿಕತ್ರಯಸ್ತ್ರಿಂಶಪಾರಿಷದಾತ್ಮರಕ್ಷಕ ಲೋಕಪಾಲ ಕಿಲ್ಬಿಷಾಭಿಯೋಗ್ಯಭೇದದಿಂ ನವವಿಧಮಕ್ಕುಂ (ಶಾಂತಿಪು. ೧೨–೬ ವ).

[ಆತ್ಮ + ರಕ್ಷಕ]

**ಆತ್ಮರಕ್ಷಣೆ** (ನಾ). ತನ್ನನ್ನು ಕಾಪಾಡಿಕೊಳ್ಳುವುದು ; ತನಗೆ ಉಂಟಾಗಬಹುದಾದ ಅಪಾಯವನ್ನು ತಪ್ಪಿಸಿಕೊಳ್ಳುವುದು: ಆತ್ಮರಕ್ಷಣೆಗಿಂತ ಧರ್ಮರಕ್ಷಣೆ ಪ್ರಿಯವಾಯಿತು (ಭಾರದ. ೩೭೮) ; ಆತ್ಮರಕ್ಷಣೆಗಾಗಿ ನಾನಿಲ್ಲಿ ಬಂದು ವಿಶ್ರಮಿಸುತ್ತಿದ್ದೆ (ಮಣಿಸ. ೮).

[ಆತ್ಮ + ರಕ್ಷಣೆ]

**ಆತ್ಮರಕ್ಷೆ** (ನಾ). = ಆತ್ಮರಕ್ಷಣೆ. 'ಆತ್ಮರಕ್ಷೆಗೆಯ್' ಪರಾ.

[ಆತ್ಮ + ರಕ್ಷೆ]

**ಆತ್ಮರಕ್ಷೆಗೆಯ್** (ಕ್ರಿ). ತನ್ನನ್ನು ಕಾಪಾಡಿಕೊ ; ಆತ್ಮಸಂರಕ್ಷಣೆಯನ್ನು ಮಾಡಿಕೊ: ಆತ್ಮಪಾಲನಮೆಂಬುದು ಸ್ವರ್ಗಪ್ರಾಕಾರದೊಳಮಾತ್ಮರಕ್ಷೆಗೆಯ್ವುದು (ಚಾವುಂಪು. ೨೩೮).

[ಆತ್ಮರಕ್ಷೆ + ಗೆಯ್ (< ಕೆಯ್₁)]

**ಆತ್ಮರತಿ** (ನಾ). ೧. ಆತ್ಮಸ್ವರೂಪ ಚಿಂತನೆಯಲ್ಲಿ ಪ್ರೀತಿ,—ಆಸಕ್ತಿ: ಈ ಭಾವರಸಾಯನವು ದೇಹವನ್ನು ರಕ್ತದಂತೆ ಅಭಿಸರಣಮಾಡಬೇಕಾದರೆ ಆತ್ಮರತಿಯ ಅನಿರುದ್ಧ ವಿದ್ಯುತ್‌ಪ್ರವಾಹವೇ ಬೇಕು (ವಿಚಾಮುಂ. ೮೩). ೨. ತನ್ನಲ್ಲಿ ತಾನು ಸಂತೋಷಗೊಳ್ಳುವುದು. ೩. ಆತ್ಮಧ್ಯಾನದಲ್ಲಿ ಸಂತೋಷಗೊಳ್ಳುವವನು. [ಆತ್ಮ + ರತಿ₁]

**ಆತ್ಮರಾಗ** (ನಾ). ಮನಸ್ಸಿನ ಅನುರಾಗ ಅಥವಾ ಪ್ರೀತಿ: ದೂಱಿದತ್ತು ಕಂಪನಕೃತ ಕಂಕಣಸ್ವನಮುಮಾಸ್ಯವಿಕಾಸಮುಮಾತ್ಮರಾಗಮಂ (ರಾಜಶೇ. ೮–೭೪). [ಆತ್ಮ + ರಾಗ]

**ಆತ್ಮರೂಪ** (ನಾ). ಜೀವದ ಸ್ವರೂಪ ; ಚೇತನದ ನೈಜಸ್ವಭಾವ: ಮನಸ್ತತ್ವದಲ್ಲಿ ಆತ್ಮರೂಪವನ್ನೂ ಅಹಂಕಾರತತ್ವದಲ್ಲಿ ಅಂತರಾತ್ಮರೂಪವನ್ನೂ . . . ಚಿಂತಿಸಬೇಕು (ಹಸಾರ. ೬–೨೬ ಟೀಕೆ). [ಆತ್ಮ + ರೂಪ]

**ಆತ್ಮಲಾಭ** (ನಾ). ಆತ್ಮಜ್ಞಾನದಿಂದಾಗುವ ಮೇಲ್ಮೆ; ಆತ್ಮಸ್ವರೂಪ ನಿಶ್ಚಯದಿಂದಲೂ, ಅನುಸಂಧಾನದಿಂದಲೂ ಉಂಟಾಗುವ ಲಾಭ: ತುಷ್ಟನಾದವನೇ ನರೇಂದ್ರನು ತುಷ್ಟನಾದವನೇ ಸುರೇಂದ್ರನು ತುಷ್ಟನಾದವನೇ ಚತುರ್ಮುಖನಾತ್ಮಲಾಭದಲಿ ತುಷ್ಟನಾದವನೇ ಮಹೇಶ್ವರ (ನಿಭಾಗ. ೨–೧–೩೬). [ಆತ್ಮ + ಲಾಭ]

**ಆತ್ಮವಂಚಕ** (ನಾ). ತನಗೆ ತಾನೆ ವಂಚನೆಮಾಡಿಕೊಳ್ಳುವವನು ; ಆತ್ಮದ್ರೋಹಿ: ಆತ್ಮನಂತು ಪೇೞುತ್ತಾತ್ಮವಂಚಕರ್ ಪೆಱರೊಳರೇ (ಅಜಿಪು. ೨–೩೫). [ಆತ್ಮ + ವಂಚಕ]

**ಆತ್ಮವಂಚನೆ** (ನಾ). = ಆತ್ಮದ್ರೋಹ: ಈಗ ನನ್ನ ನಿಜಸ್ಥಿತಿಯನ್ನು ಹೇಗೆ ತಿಳಿಸಲಿ, ಹೇಗೆ ಆತ್ಮವಂಚನೆಯನ್ನು ಮಾಡಲಿ (ಶಾಕುಂತ. ೧೩–೧೩). [ಆತ್ಮ + ವಂಚನೆ]

**ಆತ್ಮವಂತ** (ನಾ). ಮನಸ್ಸನ್ನು ವಶದಲ್ಲಿಟ್ಟುಕೊಳ್ಳುವವನು ; ಶುದ್ಧವಾದ ಮನಸ್ಸುಳ್ಳವನು: ಪ್ರಾಜ್ಞರೂ ಶೂರರೂ ಉತ್ಸಾಹಿಗಳೂ ಆತ್ಮವಂತರೂ ಆದ ಪಾಂಡವರೊಡನೆ ಸಂಧಿಮಾಡಿಕೋ (ವಚಭಾ. ೨೫೪).

[ಸಂ. ಆತ್ಮವತ್]

**ಆತ್ಮವಲ್ಲಭ** (ನಾ). ತನ್ನ ಗಂಡ ಅಥವಾ ಪ್ರಭು: ಆತ್ಮವಲ್ಲಭಾಂತರಿತೆಯನೆನ್ನನಣ್ಣ ಬೆಸಗೊಳ್ವುದೆ (ಕಾದಂಪೂ. ೭೦೪) ; ಆತ್ಮವಲ್ಲಭನ ಚಿತ್ತವಱಿತು ಸೇವೆಯೆಸಗುವ ಸತಿಯರ ವೃತ್ತವ ಬಿತ್ತರಿಸುವೆನು (ಹದಿಬ. ೪–೩). [ಆತ್ಮ + ವಲ್ಲಭ]

**ಆತ್ಮವಸ್ತು** (ನಾ). ೧. ತನ್ನವಸ್ತು. ೨. ಜೀವತತ್ತ್ವ: ಆತ್ಮವಸ್ತುಗಳಿಗೆ ಚೇತನತ್ವ, ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವ ಮೊದಲಾದ ವ್ಯವಹಾರಗಳಿರುವುವು (ಹಿಂದಸಾ. ೨೩೯). [ಆತ್ಮ + ವಸ್ತು]

**ಆತ್ಮವಿಕಾಸ** (ನಾ). ಆತ್ಮದ ಏಳಿಗೆ, —ಬೆಳವಣಿಗೆ: ಈ ಸನ್ನಿವೇಶ ಆತ್ಮಸಂಯಮಕ್ಕೆ ಎಷ್ಟು ಸಾಧಕವೋ ಆತ್ಮವಿಕಾಸಕ್ಕೂ ಅಷ್ಟೇ ಸಾಧಕ (ಖುಕ್ಸಾರ. ೮೮). [ಆತ್ಮ + ವಿಕಾಸ]

**ಆತ್ಮವಿಜ್ಞಾನ** (ನಾ). ಆತ್ಮವನ್ನು ತಿಳಿಯುವುದು: ನಲ್ಲಳೊಲುಮೆಗಾಗಿ ಸಖಸಖಿ ದೂತಿಯರೆಲ್ಲರ ಮನ್ನಿಪನಂತೆ ಸಲ್ಲಲಿತಾತ್ಮವಿಜ್ಞಾನಾರ್ಥಕಾಗಿ ನಮ್ಮೆಲ್ಲರ ಮನ್ನಿಪೆಯಲ್ತೆ (ಭರಚ. ೨–೪೫). [ಆತ್ಮ + ವಿಜ್ಞಾನ]

**ಆತ್ಮವಿದ** (ನಾ). = ಆತ್ಮಜ್ಞಾನಿ: ವ್ಯಾಸಮುನಿಪತಿ ಶುಕಮುನಿಗೆ ಸಂತೋಷದಿಂದಲಿ ತತ್ತ್ವಬೋಧೆಯ ಲೇಸೆನಲು ವಿಸ್ತರಿಸಿ ಪೇಳಿದನಾತ್ಮವಿದರೊಲಿಯೆ (ಅಮೃತ. ೧ ಸೂ). [ಸಂ. ಆತ್ಮವಿದ್]

**ಆತ್ಮವಿದ್ಧ** (ನಾ). ತನ್ನ ರೂಪವನ್ನು ತಾನೇ ಚಿತ್ರಿಸುವುದು: ರಸಚಿತ್ರ ಧೂಳೀಚಿತ್ರದೋಜೆಯುಮಂ ಶ್ರುತಿವಿದ್ಧಮಾತ್ಮವಿದ್ಧಂ ಪರವಿದ್ಧಮೆಂಬ ವಿದ್ಧಪದ್ಧತಿಯುಮಂ ಲಾಕ್ಷಾರಸರೇಖಾಶುದ್ಧಿಯುಮಂ (ಮಲ್ಲಿಪು. ೫–೪೨). [ಆತ್ಮ + ವಿದ್ಧ]

**ಆತ್ಮವಿದ್ಯೆ** (ನಾ). ವೇದಾಂತ ಶಾಸ್ತ್ರ; ಆತ್ಮಸ್ವರೂಪವನ್ನು ತಿಳಿಸುವ ವಿದ್ಯೆ: ಅನುಭಾವವೆಂಬುದು ಆತ್ಮವಿದ್ಯೆ (ವಚಸಂ. ೪–೮); ಆದುನಿಮಿತ್ತದಲಾತ್ಮವಿದ್ಯಾಹೃದಯವಾದೀ ಗ್ರಂಥವನು ಪೇಳಿದೆನು (ಅಮೃತ. ೧–೧೭); ಈಗ ವೇದಾಂತವೆಂಬ ಉಪನಿಷತ್ತುಗಳಿಗೆ ಆತ್ಮವಿದ್ಯೆಯೆಂದು ಪ್ರಸಿದ್ಧಿ (ಹಿಂದಸಾ. ೧೧೨). [ಆತ್ಮ + ವಿದ್ಯೆ]

**ಆತ್ಮವಿಲಾಸ** (ನಾ). ತನ್ನ ಲೀಲೆ ಅಥವಾ ವೈಭವ: ಭವದಾನನಕ್ಕೆ ಸೋಲ್ತಾತ್ಮವಿಲಾಸಮನುಚಿದ ತೇಜದೆ ರುಚಿಗೆಟ್ಟು ... ಉಡುಪನುಡುಪನಾದಂತಾದಂ (ಶಾಂತಿಪು. ೫–೮೮). [ಆತ್ಮ + ವಿಲಾಸ]

**ಆತ್ಮವಿಶ್ವಾಸ** (ನಾ). ತನ್ನಲ್ಲಿ ತನಗೆ ನಂಬಿಕೆ; ತನ್ನಬಗ್ಗೆ ಭರವಸೆ ಇರುವುದು: ಅವನಿಗೂ ಆ ವಿಷಯದಲ್ಲಿ ಆತ್ಮವಿಶ್ವಾಸವಿತ್ತು (ಪುನರು. ೩೩೩). [ಆತ್ಮ + ವಿಶ್ವಾಸ]

**ಆತ್ಮವೀರ** (ನಾ). ಆತ್ಮಸ್ವರೂಪವನ್ನು ತಿಳಿದ ಶೂರ; ಆತ್ಮಜ್ಞಾನಿ: ಸಾಕ್ರೆಟೀಸ ಆತ್ಮವೀರ ಕುಡಿದನಲ್ಲ ವಿಷದ ನೀರ (ಸೂರ್ಯಪಾ. ೧೦–೧೮). [ಆತ್ಮ + ವೀರ]

**ಆತ್ಮಶುದ್ಧಿ** (ನಾ). **೧.** ಮನಸ್ಸಿನ ನೈರ್ಮಲ್ಯ; ಅಂತಶ್ಶುದ್ಧಿ: ಅಘೋರ ತಪವ ಮಾಡಿದೊಡೇನು? ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು ನಂಬುವನಯ್ಯಾ ಕೂಡಲಸಂಗಮದೇವ (ಬಸವ. ೧೧೭); ನೆಕ್ಲುದೋವನ ಜೀವನದಲ್ಲಿ ಅನೇಕವೇಳೆ ಆತ್ಮಶುದ್ಧಿಯ ಕಾರ್ಯ ನಡೆದಿತ್ತು (ಪುನರು. ೧೩೩). **೨.** ಐದು ಬಗೆಯ ಶುದ್ಧಿಗಳಲ್ಲಿ ಒಂದು; ತನ್ನನ್ನು ಶುಚಿಗೊಳಿಸಿಕೊಳ್ಳುವುದು: ಆತ್ಮಶುದ್ಧಿ, ದ್ರವ್ಯಶುದ್ಧಿ, ಲಿಂಗಶುದ್ಧಿ, ಮಂತ್ರಶುದ್ಧಿಗಳೆಂಬ ಪಂಚಶುದ್ಧಿಗಳ್ (ವಿವೇಕ. ೧೦೩). [ಆತ್ಮ + ಶುದ್ಧಿ]

**ಆತ್ಮಶೋಧನೆ** (ನಾ). ತನ್ನನ್ನು ತಾನೇ ಪರೀಕ್ಷಿಸಿಕೊಳ್ಳುವುದು: ಆ ವ್ಯಥೆ ಇನ್ನೂ ಉಳಿದಿರಬಹುದೆ ಎಂದವನು ಆತ್ಮಶೋಧನೆ ಮಾಡಿಕೊಂಡನು (ಪುನರು. ೨೯೮). [ಆತ್ಮ + ಶೋಧನೆ]

**ಆತ್ಮಶ್ರಾದ್ಧ** (ನಾ). ತಾನೇ ತನಗೋಸ್ಕರ ಮಾಡಿಕೊಳ್ಳುವ ಶ್ರಾದ್ಧ: ನಾನು ಸಂನ್ಯಾಸವನ್ನು ಸ್ವೀಕರಿಸಿದರೆ ಆತ್ಮಶ್ರಾದ್ಧವನ್ನು ಮಾಡಿಕೊಂಡು ಎಲ್ಲ ಸಂಬಂಧವನ್ನೂ ತೊರೆಯಬೇಕಾಗುತ್ತದೆ (ಹೊಸಕ್ಷಿ. ೨೩೨). [ಆತ್ಮ + ಶ್ರಾದ್ಧ]

**ಆತ್ಮಶ್ಲಾಘನೆ** (ನಾ). = ಆತ್ಮಸ್ತುತಿ: ಇಲ್ಲಿಯತನಕ ನೆಕ್ಲುದೋವ್ ತನ್ನ ಮರುಕವನ್ನು ತಾನೆ ಮೆಚ್ಚಿಕೊಂಡು, ಆತ್ಮಶ್ಲಾಘನೆಯ ಸಂಭ್ರಮದಿಂದ ಸಂತೃಪ್ತನಾಗಿದ್ದನು (ಪುನರು. ೨೧೮). [ಆತ್ಮ + ಶ್ಲಾಘನೆ]

**ಆತ್ಮಸಂಗ** (ನಾ). ಪರಮಾತ್ಮನ ಕೂಟ: ಅಂತರಂಗ ಬಹಿರಂಗ ಆತ್ಮಸಂಗ ಒಂದೇ ಅಯ್ಯ (ಬಸವ. ೯೫೮). [ಆತ್ಮ + ಸಂಗ]

**ಆತ್ಮಸಂಗತ್ಯ** (ನಾ). = ಆತ್ಮಸಂಗ: ಅತ್ಯಾಸನ್ನಭವ್ಯರಿಗಲ್ಲದಾತ್ಮಸಂಗತ್ಯವೆಲ್ಲರಿಗೇಕೆ ಬಹುದು (ಭರಚ. ೨–೯೫). [ಆತ್ಮ + ಸಂಗತ್ಯ]

**ಆತ್ಮಸಂಗಾತ** (ನಾ). ತನಗೆ ಜೊತೆ; ಆತ್ಮಕ್ಕೆ ಜೊತೆ: ಚೆನ್ನಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನೆನಗುಂಟು (ಮಹಾದೇ. ೬೯–೧೯೯). [ಆತ್ಮ + ಸಂಗಾತ]

**ಆತ್ಮಸಂತೋಷ** (ನಾ). ತನ್ನಮನಸ್ಸಿನಲ್ಲಿ ಉಂಟಾಗುವ ಸಂತೋಷ, —ತೃಪ್ತಿ: ನೀಲನದಿಯಲ್ಲಿ ವಿಹರಿಸಿ ಆತ್ಮಸಂತೋಷವನ್ನು ಪಡೆದೆನು (ಮಣಿಸ. ೪೪). [ಆತ್ಮ + ಸಂತೋಷ]

**ಆತ್ಮಸಂಧಾನ** (ನಾ). ಆತ್ಮಧ್ಯಾನದಲ್ಲಿ ತಲ್ಲೀನನಾಗಿರುವಿಕೆ; ಆತ್ಮಯೋಗ: ನಾನಾ ಚಿಂತೆಯುಳಿದು ಮನವಾತ್ಮಸಂಧಾನದೊಳಿರಲದೆ ಧ್ಯಾನ (ಭರಚ. ೬೯–೨೩). [ಆತ್ಮ + ಸಂಧಾನ]

**ಆತ್ಮಸಂಯಮ** (ನಾ). ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳುವುದು; ಜಿತೇಂದ್ರಿಯತ್ವ: ಆತ್ಮಸಂಯಮ, ಆತ್ಮನಂಬಿಕೆ, ಆತ್ಮತೃಪ್ತಿಯ ಸಿರಿಯಲಿ ತುಂಬುಯೌವನ ಬೆಳಗಲಿ (ವಿಜದ. ೧೫–೩); ಅವರಿಗೆ ಶಕ್ತಿಸಾಮರ್ಥ್ಯಗಳನ್ನೂ ಆತ್ಮಸಂಯಮವನ್ನೂ ಕೊಡಬೇಕಾಗಿದೆ (ಶಿಕ್ಷದ. ೨೮). [ಆತ್ಮ + ಸಂಯಮ]

**ಆತ್ಮಸಂವರಣ** (ನಾ). ತನ್ನನ್ನು ತಾನೇ ಮರೆಸಿಕೊಳ್ಳುವುದು: ಮೊದಲಿಂದ ಕಡೆಯವರೆಗೂ ಅವನು ಆತ್ಮಸಂವರಣಪೂರ್ವಕವಾಗಿ ಯುಕ್ತಿಯ ಸುನಿರ್ದಿಷ್ಟ ಪಥವನ್ನು ಹಿಡಿದು ಹೋಗಿದ್ದಾನೆ (ಬಂಕಿಮ. ೨೪ ಮುನ್ನು). [ಆತ್ಮ + ಸಂವರಣ]

**ಆತ್ಮಸಂಸ್ಕಾರ** (ನಾ). ಮನಸ್ಸಿನ ಸಂಸ್ಕಾರ, —ವಿಕಾಸ: ಕನ್ನಡವನೆ ಓದಿ ಕನ್ನಡವನೆ ಬರೆದಾತ್ಮಸಂಸ್ಕಾರವ ಪಡೆದೆ (ಇಂಚಾಪ. ೬೯–೮೫). [ಆತ್ಮ + ಸಂಸ್ಕಾರ]

**ಆತ್ಮಸಮರ್ಥನ** (ನಾ). ತಾನು ಮಾಡಿದುದು ಸರಿ ಎಂದು ಸಮರ್ಥಿಸುವುದು: ಅನೇಕರು ಇಂತಹ ಸಂದರ್ಭಗಳಲ್ಲಿ ಆತ್ಮಸಮರ್ಥನಮಾಡಿಕೊಳ್ಳುವುದನ್ನು ನಾನು ... ನೋಡಿರುವೆನು (ಚೆನ್ನಬೇ. ೧೫೯). [ಆತ್ಮ + ಸಮರ್ಥನ]

**ಆತ್ಮಸಮರ್ಪಣ** (ನಾ). ತನ್ನನ್ನು ತಾನು ಅರ್ಪಿಸುವುದು: ಇಂತಹ ಆತ್ಮಸಮರ್ಪಣದ ಬಗೆಯನ್ನು ನಾನು ಎಲ್ಲಿಯೂ ನೋಡಿಲ್ಲ ಎಂದು ... ಅಭಿಜ್ಞನಂತೆ ಮಾತನಾಡಿದನು (ಚೆನ್ನಬೇ. ೧೫೯). [ಆತ್ಮ + ಸಮರ್ಪಣ]

**ಆತ್ಮಸಾಕ್ಷಾತ್ಕಾರ** (ನಾ). ಆತ್ಮವನ್ನು ಸಾಕ್ಷಾತ್ಕರಿಸಿಕೊಳ್ಳುವುದು: ಜೀವನೋದ್ದೇಶ ತಾನಾತ್ಮಸಾಕ್ಷಾತ್ಕಾರ (ಅನಿಕೇ. ೫೬–೫) ...ಅವುಗಳಿಂದ ಜ್ಞಾನವಿಕಾಸವೇರ್ಪಟ್ಟು ಆತ್ಮಸಾಕ್ಷಾತ್ಕಾರ ಪಡೆಯುತ್ತಾನೆ (ಭಾರದ. ೧೫೮). [ಆತ್ಮ + ಸಾಕ್ಷಾತ್ಕಾರ]

**ಆತ್ಮಸಾಕ್ಷಿ** (ನಾ). ಅಂತರಂಗದ ಪ್ರೇರಣೆ; ಮನಸ್ಸಾಕ್ಷಿ: ಪುರೋಹಿತ ಆತ್ಮಸಾಕ್ಷಿಯಾಗಿ ತನ್ನ ಪಾತ್ರವನ್ನು ನಟಿಸಿದ್ದನು (ಪುನರು. ೧೮೦). [ಆತ್ಮ + ಸಾಕ್ಷಿ]

**ಆತ್ಮಸಾಧಕ** (ನಾ). ಆತ್ಮಸಾಕ್ಷಾತ್ಕಾರಕ್ಕಾಗಿ ಸಾಧನೆಮಾಡುವವನು: ಇವುಗಳಲ್ಲಿ ತೊಳಗಿ ಬೆಳಗುತ್ತಿರುವುದು ಶಿವದ ಸೋಪಾನವನ್ನೇರಿ ಹೊರಟ ಆತ್ಮಸಾಧಕರ ಮಿಂಚಿನ ಹೆಜ್ಜೆಗಳ ಗುರುತು (ಪರಿಶೀ. ೪೪). [ಆತ್ಮ + ಸಾಧಕ]

**ಆತ್ಮಸಾಧನೆ** (ನಾ). ಆತ್ಮಸಾಕ್ಷಾತ್ಕಾರಕ್ಕಾಗಿ ಮಾಡುವ ಪ್ರಯತ್ನ. [ಆತ್ಮ + ಸಾಧನೆ]

**ಆತ್ಮಸಿದ್ಧಿ** (ನಾ). ಆತ್ಮನನ್ನು ಕುರಿತು ಪಡೆಯುವ ಸಿದ್ಧಿ: ಮುನ್ನ ಕಟ್ಟಿದ ಕರ್ಮ ಸೋರುತಿಹುದು ನಿಚ್ಚಲಿನ್ನು ಬಪ್ಪುದನು ತಡೆದರೆ ತನ್ನಾತ್ಮಸಿದ್ಧಿ ತನಗೆ ಸಾಧ್ಯವಹುದಾವ ಬಿನ್ನಾಣವೆಲೆ ರವಿಕೀರ್ತಿ (ಭರಚ. ೬೮–೬೮). [ಆತ್ಮ + ಸಿದ್ಧಿ]

**ಆತ್ಮಸುಖ** (ನಾ). **೧.** ತನ್ನ ಸುಖ: ಲೋಕಹಿತಸಾಧನೆಗೆ, ಆತ್ಮಸುಖವನೆ ತೊರೆದು ನಿಶಿತ ಸತ್ಯಾನ್ವೇಷಣೆಯ ಮಾರ್ಗದಲಿ ನಡೆದು (ವಿಜದ. ೩೦–೧). **೨.** ದೇಹದಿಂದ ಭಿನ್ನವಾದ ಜೀವಾತ್ಮನ ಸೌಖ್ಯ: ಕೈಕೊಳ್ವೊಡಾತ್ಮಸುಖಮನೆ ಕೈಕೊಳ್ವುದು ದೇಹಿ ನೆಗಟ್ಟೆ ಪರಹಿತಮಂ (ಶಾಂತಿಪು. ೧೧–೮೭). [ಆತ್ಮ + ಸುಖ]

**ಆತ್ಮಸುಖಿ** (ನಾ). **೧.** (ತನ್ನನ್ನು ತಾನು ಕಂಡು) ಆತ್ಮಸ್ವರೂಪದ ಅನುಸಂಧಾನದಿಂದ ಸುಖಿಸುವವನು: ವಾಲ್ಮೀಕಿ ತಾಂ ಪಡೆತಂದನಾತ್ಮಸುಖಿ (ಶ್ರೀರಾಮಾ. ೧–೪). **೨.** ದೇಹಸುಖಿ; ಭೋಗಾಭಿಲಾಷಿ (?): ಹೆಣ್ಣು ಹೊನ್ನು ಮಣ್ಣು ಬಿಟ್ಟು ಲಿಂಗಾಂಗ ಸಂಯೋಗವಜಿಯದೆ ಸದಾಚಾರದಲ್ಲಿ ತಿರಿದುಂಡು ಆತ್ಮಸುಖಿಯಾದವರೆಲ್ಲರೂ ಫಲಭೋಗಕ್ಕೊಳಗಾದರು (ಘನವ. ೩೭–೩೦). [ಸಂ. ಆತ್ಮಸುಖಿನ್]

**ಆತ್ಮಸ್ತವ** (ನಾ). = ಆತ್ಮಸ್ತುತಿ. [ಆತ್ಮ + ಸ್ತವ]

**ಆತ್ಮಸ್ತಾವಕ** (ನಾ). ಆತ್ಮಸ್ತುತಿಮಾಡಿಕೊಳ್ಳುವವನು : ನೀವು ಬಿನ್ನಹಮಾಡಬೇಹುದು ಮಾವ ರಣಸಂಗತಿಯಸಾತ್ಮಸ್ತಾವಕರು ನಾವಲ್ಲ ವೆಂದನು ಕೃಪಗೆ ಗುರುಸೂನು (ಕುವ್ಯಾಗ. ೧೦–೫). [ಆತ್ಮ + ಸ್ತಾವಕ]

**ಆತ್ಮಸ್ತುತಿ** (ನಾ). ತನ್ನನ್ನು ತಾನೇ ಹೊಗಳಿಕೊಳ್ಳುವುದು ; ಸ್ವಪ್ರಶಂಸೆ : ಅನುಭಾವನೆಲ್ಲಿಯದೋ ಆತ್ಮಸ್ತುತಿ ಪರನಿಂದೆಯ ಬಿಡದನ್ನಕ್ಕ (ಬಸವ. ೬೫೫). [ಆತ್ಮ + ಸ್ತುತಿ]

**ಆತ್ಮಸ್ವಾಮಿ** (ನಾ). = ಆತ್ಮನಾಥ : ಆತ್ಮಸ್ವಾಮಿ ಗುಣವರ್ಣನ ಮೆಮ್ಮಂದಿಗರ್ಗೆ ಪ್ರತ್ಯಕ್ಷದೊಳ್ ತಕ್ಕುದಲ್ತು (ಶಾಂತಿಪು. ೨–೭೭ ವ). [ಆತ್ಮ + ಸ್ವಾಮಿ]

**ಆತ್ಮಸ್ವೀಕೃತ** (ನಾ). ತಾನು ಸ್ವೀಕರಿಸಿದ್ದು ಅಥವಾ ಪರಿಗ್ರಹಿಸಿದ್ದು : ಇಂತು ಮೃಗಾಧಿರಾಜಪದವಿಯೊಳಾಧಿಪತ್ಯಮನಾತ್ಮಸ್ವೀಕೃತಂ ಮಾಡಿ (ಪಂಚತಂ. ೨೫–೧೨). [ಆತ್ಮ + ಸ್ವೀಕೃತ]

**ಆತ್ಮಹತ್ಯ** (ನಾ). = ಆತ್ಮಹತ್ಯೆ : ತತ್ತ್ವಜ್ಞಾನಿಯಾಗಿದ್ದರೆ ಮನುಷ್ಯನು ಸಾಯಲು ಯಾವಾಗಲೂ ಸಿದ್ಧನಾಗಿರುತ್ತಾನೆ. ಆದರೆ ಆತ್ಮಹತ್ಯವನ್ನು ಮಾಡಿಕೊಳ್ಳುವುದಿಲ್ಲ (ಸೋಕ್ರಮ. ೫೯) ; ನಿನ್ನ ಆತ್ಮಹತ್ಯಕ್ಕೆ ಕಾರಣಳಾದ ನನ್ನನ್ನು ನೀನೆ ಆಹುತಿ ತೆಗೆದುಕೊಂಡುಬಿಡು (ಪದ್ಮಸ. ೨೬೨). [ಸಂ. ಆತ್ಮಹತ್ಯಾ]

**ಆತ್ಮಹತ್ಯೆ** (ನಾ). ತನ್ನನ್ನು ತಾನೇ ಕೊಂದುಕೊಳ್ಳುವುದು ; ಪ್ರಾಣತ್ಯಾಗಮಾಡುವುದು. [ಸಂ. ಆತ್ಮಹತ್ಯಾ]

**ಆತ್ಮಹಿತ** (ನಾ). ೧. ಜೀವ ಅಥವಾ ಚೇತನನಿಗೆ ಸುಖಕರವಾದದ್ದು ; ಆತ್ಮವಸ್ತುವಿಗೆ ಒಳ್ಳೆಯದು : ಕೈಕೊಳ್ವೊಡೆ ಹಿತಮಾತ್ಮಹಿತವೊಂದೆ ವಲಂ (ಶಾಂತಿಪು. ೧೧–೮೭). ೨. ಸ್ವಂತದ ಹಿತ ; ತನಗೆ ಹಿತವಾದದ್ದು. [ಆತ್ಮ + ಹಿತ]

**ಆತ್ಮಾಜ್ಞೆ** (ನಾ). ತನ್ನ ಅಪ್ಪಣೆ : ಆತ್ಮಾಜ್ಞೆಯಿಂ ಕಾದು ಮೇದಿನಿಯಂ ವಿಶ್ವಜಗ(ನ್ನು)ತಂ (ಕಇಅ. ೩–೨–೫೫ ; 1058). [ಆತ್ಮ + ಆಜ್ಞೆ]

**ಆತ್ಮಾಧೀನ** (ಗು). ತನಗೆ ವಶವಾದ ; ತನ್ನ ಕೈಯಲ್ಲಿರುವ : ಮಾನವನು ಪರಾಧೀನವಾದ ಕರ್ಮವನ್ನು ಸಾಧ್ಯವಾದ ಮಟ್ಟಿಗೂ ತ್ಯಜಿಸಿ ಆತ್ಮಾಧೀನವಾದ ಕರ್ಮವನ್ನು ಪ್ರಯತ್ನಪೂರ್ವಕವಾಗಿ ಅನುಷ್ಠಾನ ಮಾಡಬೇಕು (ಭಾರದ. ೫೪). [ಆತ್ಮ + ಅಧೀನ]

**ಆತ್ಮಾನಂದ** (ನಾ). [ತತ್ತ್ವಶಾ] ಎಂಟು ಬಗೆಯ ಆನಂದಗಳಲ್ಲಿ ಒಂದು : ವಿಷಯಾನಂದ, ಬ್ರಹ್ಮಾನಂದ . . . ವಿದ್ಯಾನಂದವೆಂಬವೇ ಆನಂದದಷ್ಟಭೇದಂಗಳ್. . . ಪ್ರಿಯವಾದ ವನಿತಾದಿ ವಿಷಯಂಗಳ ಮಧ್ಯದೊಳು ತಾನೆ ಪ್ರಿಯತಮನೆಂದು ತೋರ್ಪುದೇ ಆತ್ಮಾನಂದಮೆನಿಪುದು (ವಿವೇಕ. ೨೩). [ಆತ್ಮ + ಆನಂದ]

**ಆತ್ಮಾನುಭವ** (ನಾ). [ತತ್ತ್ವಶಾ] ೧. ತನ್ನ ಅನುಭವ. ೨. ಆತ್ಮಸ್ವರೂಪವನ್ನು ತಿಳಿದು ಸುಖಪಡುವುದು ; ಆತ್ಮಧ್ಯಾನಸುಖ. [ಆತ್ಮ + ಅನುಭವ]

**ಆತ್ಮಾನುಭೂತ** (ನಾ). ತನಗೆ ಅನುಭವವಾದುದು ; ತನ್ನ ಅನುಭವಕ್ಕೆ ಬಂದುದು : ಒಲಿಸಿಯುಮೊಲ್ದುಮಜೀವ ಚದುರನಾತ್ಮಾನುಭೂತಮನಿಂತೆಂದಂ (ಶಾಂತಿಪು. ೮–೯೧ ವ). [ಆತ್ಮ + ಅನುಭೂತ]

**ಆತ್ಮಾನುಭೂತಿ** (ನಾ). = ಆತ್ಮಾನುಭವ : ಅಪರೋಕ್ಷವಾದ ಆತ್ಮಾನುಭೂತಿಯನ್ನು ಪರೋಕ್ಷಪ್ರಮಾಣಗಳಿಂದ ಅಳಿದು ನೋಡುವ . . . ವಿಮರ್ಶನಾಶಕ್ತಿ ಕ್ರಿಸ್ತಪೂರ್ವ ಆರನೆಯ ಶತಮಾನದ ಸುಮಾರಿಗೆ ಆರಂಭವಾಗಿರಬೇಕು (ಭಾರದ, ೧೨೧). [ಆತ್ಮ + ಅನುಭೂತಿ]

**ಆತ್ಮಾಭಿಮಾನ** (ನಾ). ೧. ತಾನು ಹಿರಿಯನೆಂಬ ಭಾವನೆ ; ಗರ್ವ : ಚಿತ್ತವಿಶೇಷಪ್ರಭವಂಗಳ್ ಪ್ರಬಂಧದಿಂದಂ ಪ್ರವರ್ತಿಸುವುವವನಜೀಯದ ಲೋಕಕ್ಕಾತ್ಮಾಭಿಮಾನಂ ಪುಟ್ಟುಗುಂ (ಶಾಂತಿಪು. ೮–೧೫೨ ವ). ೨. ಸ್ವಾಭಿಮಾನ : ಮರುಕ್ಷಣ ಆತ್ಮಾಭಿಮಾನ ಎಚ್ಚೆತ್ತು ತನ್ನಲ್ಲಿ ಅದೇನು ಕಡಿಮೆಯಾಗಿದೆ ಅನ್ನಿಸಿತು (ಮೂರುದಾ. ೧೧೫). [ಆತ್ಮ + ಅಭಿಮಾನ]

**ಆತ್ಮಾಮಿಷ** (ನಾ). ೧. ತನ್ನ ಮಾಂಸ. ೨. [ರಾಜನೀ] ಹದಿನಾರು ಬಗೆಯ ಸಂಧಿಗಳಲ್ಲಿ ಒಂದು : "ಶತ್ರು ಸಮಸ್ತ ಬಲಂಬೆರಸು ವಿಜಿಗೀಷುವಂ ಕಾಣ್ಬುದುಂ ಆತ್ಮಾಮಿಷಸಂಧಿಯೆಂಬುದಕ್ಕುಂ" (ಪಂಚತಂ. ೨೨೦–೧೯). [ಆತ್ಮ + ಆಮಿಷ]

**ಆತ್ಮಾಯತ್ತ** (ನಾ). ತನ್ನ ಅಧೀನ ಅಥವಾ ವಶ.
ಆತ್ಮಾಯತ್ತಂ ಮಾಡು = ತನ್ನ ವಶಮಾಡಿಕೊ ; ಸ್ವಾಧೀನಪಡಿಸಿಕೊ : ಮಹಿಮಾತಿಶಯದಿಂ ಮಹೇಂದ್ರಾದ್ರಿಸಾರಮನಾತ್ಮಾಯತ್ತಂ ಮಾಡಿದುರ್ವರಾಸ್ಯತಿಲಕನ ಸೈನಿಕಂ (ಶಾಂತಿಪು. ೧೦–೧೬೨ ವ). [ಆತ್ಮ + ಆಯತ್ತ]

**ಆತ್ಮಾರಾಮ** (ನಾ). ತನ್ನೊಳಗೆ ತಾನೇ ಆನಂದಪಡುತ್ತಿರುವವನು : ಪರಮಾತ್ಮನು ಪ್ರಳಯಕಾಲದಲ್ಲಿ ವಿಶ್ವವನ್ನು ತನ್ನೊಳಗೆ ಅಡಗಿಸಿಕೊಂಡು ಏಕಾಂತ ವಿಶ್ರಾಂತನಾಗಿ ಆತ್ಮಾರಾಮನಾಗಿರುವನು (ಶಕ್ತಿವಿ. ೨೪). [ಆತ್ಮ + ಆರಾಮ]

**ಆತ್ಮಾರ್ಥ** (ಅ). ೧. ತನಗಾಗಿ ; ತನಗೋಸ್ಕರ : ಮಲಹರಪ್ರೀತ್ಯರ್ಥಮಾಗಿಹ ಜಲಚರವನಾತ್ಮಾರ್ಥವಾಗಿದ ಕೊಳುವುದನುಚಿತವೆನುತ ಮನೆಗೆಯ್ತಂದು (ಬಸಪು. ೨೭–೨೪). ೨. ಆತ್ಮವಸ್ತುವಿಗೋಸ್ಕರ. [ಸಂ.]

**ಆತ್ಮಾರ್ಥಕ** (ಗು). ತಾನು ಎಂಬ ಅರ್ಥವನ್ನು ಕೊಡುವ. 'ಆತ್ಮಾರ್ಥಕ ಸರ್ವನಾಮ' ಪರಾ. [ಸಂ.]

**ಆತ್ಮಾರ್ಥಕಸರ್ವನಾಮ** (ನಾ). [ವ್ಯಾಕ] ಸರ್ವನಾಮಗಳಲ್ಲಿ ಒಂದು ಬಗೆ : ತಾನು ತಾವು ಎಂಬ ಸರ್ವನಾಮಗಳು . . . ಇವಕ್ಕೆ ಆತ್ಮಾರ್ಥಕ ಸರ್ವನಾಮಗಳೆಂದು ಹೆಸರು (ಮಧ್ಯಮ. ೩೦). [ಆತ್ಮಾರ್ಥಕ + ಸರ್ವನಾಮ]

**ಆತ್ಮಾರ್ಪಣ** (ನಾ). ೧. = ಆತ್ಮನಿವೇದನ : ಪರಮ ಶ್ರೀಗುರುವರನೊಳಗೆ ಮನವೆರಕವಾಗಿಹುದದುವೆ ಆತ್ಮಾರ್ಪಣವು (ಗಗತಾ. ೩–೫೯). ೨. ಅಂತರಾತ್ಮನಿಗೆ ಅರ್ಪಿಸುವುದು ; ಪರಮಾತ್ಮನಿಗೆ ಸಮರ್ಪಿಸುವುದು. ೩. ತನ್ನ ಬಲಿದಾನ ; ತನ್ನನ್ನೆ ಆಹುತಿ ಕೊಡುವುದು. [ಆತ್ಮ + ಅರ್ಪಣ]

**ಆತ್ಮಾರ್ಪಿತ** (ಗು). ೧. ಅಂತರಾತ್ಮನಿಗೆ ಅರ್ಪಿಸಲ್ಪಟ್ಟ ; ಪರಮಾತ್ಮನಿಗೆ ಸಮರ್ಪಿಸಿದ. (ನಾ). ೨. ತನಗೆ ತಾನೇ ಅರ್ಪಿಸಿಕೊಂಡದ್ದು : ಈ ಸಂವಿಧಾನವನ್ನು ಅಂಗೀಕರಿಸಿ ಅಧಿನಿಯಮಿತಗೊಳಿಸಿ ಆತ್ಮಾರ್ಪಿತ ಮಾಡಿಕೊಂಡಿದ್ದೇವೆ (ಭಾಧಾನ. ೧ ಪ್ರಸ್ತಾ). [ಆತ್ಮ + ಅರ್ಪಿತ]

**ಆತ್ಮಾಸ್ತಿತ್ವ** (ನಾ). ಆತ್ಮನೆಂಬ ವಸ್ತುವಿನ ಇರುಪಿಕೆ ; ಆತ್ಮನು ಇರುವನೆಂಬ ಭಾವ : ಪರಲೋಕ ಸುಖಾರ್ಥಮಾತ್ಮಾಸ್ತಿತ್ವ ಅಭಿನಿವೇಶದಿಂ ತನು ಧನ ನಿಧನಂ ಮಾಡಿ ಸೇದೆಗಿಡಲ್ವೇಡ (ಆದಿಪು. ೨–೯ ವ). [ಆತ್ಮ + ಅಸ್ತಿತ್ವ]

**ಆತ್ಮಾಹುತಿ** (ನಾ). ತನ್ನನ್ನು ತಾನು ಆಹುತಿ ಕೊಡುವುದು ; ತಾನು ಬಲಿಯಾಗುವುದು : ತನ್ನ ಆತ್ಮಾಹುತಿಯಿಂದ ಸಾವಿರ ಜನರಿಗೆ ನೀರು ಸಿಗುವಂತಾಗಲೆಂದು ನಿಶ್ಚಯಿಸಿದಳು (ರಂಗರೋ. ೩೫) ; ಪ್ರಭುಗಳು ಲೆಂಕನ ಧೈರ್ಯಕ್ಕೆ ಆತ್ಮಾಹುತಿಗೆ ಮೆಚ್ಚಿ (ಶಾಂತಲಾ. ೨೨೯). [ಆತ್ಮ + ಆಹುತಿ]

**ಆತ್ಮೀಕರಣ** (ನಾ). ತನ್ನದಾಗಿ ಮಾಡಿಕೊಳ್ಳುವುದು ; ಅಂಗೀಕರಿಸುವುದು ; ಸ್ವೀಕರಿಸುವುದು. 'ಆತ್ಮೀಕರಿಸು' ಪರಾ. [ಸಂ.]

**ಆತ್ಮೀಕರಿಸು** (ಕ್ರಿ). ೧. ಸ್ವೀಕರಿಸು ; ಪರಿಗ್ರಹಿಸು : ಮೆಚ್ಚಾವುದನಾತ್ಮೀಕರಿಪರೊ ದೇವಿಯರಿಂದೀಗಳಿವಜಿಸೊಳದುವೆ ಕೃತಾರ್ಥಂ (ಕಾದಂಬು. ೧೫೬). ೨. ತನ್ನದನ್ನಾಗಿ ಮಾಡಿಕೊ : ಇದರ ಭವ್ಯತೆಯನ್ನೂ ಸಮ್ಯಕ್ತ್ವವನ್ನೂ ಅರಿತು ಆತ್ಮೀಕರಿಸಿಕೊಂಡು ಕಾಲತ್ರಯವನ್ನು ನಿಲುಕುವ ಕಲ್ಪನೆಯ ಕುಂಚದಿಂದ ಪಂಪನು ಇದನ್ನು ಚಿತ್ರಿಸಿದ್ದಾನೆ (ಕಸಾಚ. ೮೯). [ಆತ್ಮೀಕರಣ + -ಇಸು$_3$]

**ಆತ್ಮೀಕೃತ** (ಗು). ತನ್ನದಾಗಿ ಮಾಡಿಕೊಂಡ ; ತನ್ನಲ್ಲಿ ಅಳವಡಿಸಿಕೊಂಡ: ಅಂತು . . . ನಳಕೂಬರ ಲಾವಣ್ಯಕ್ಕಂ ಆತ್ಮೀಕೃತ ದಿವಿಜೇಂದ್ರ ವಿಭವಕ್ಕಂ ತಾನೊರ್ವನೆ ನಿರುಪಮ ಜನ್ಮಭೂಮಿಯಾಗಿ (ಶಾಂತಿಪು. ೩-೪೯ ವ). [ಸಂ.]

**ಆತ್ಮೀಭಾವ** (ನಾ). ೧. = ಆತ್ಮೀಯತೆ ೧ : ದೇವೇಂದ್ರನುಮಾಗಳ್ ದೇಶಾವಧಿಯಿಂ[ಯಂ] ಚಿತ್ತದೊಳ್ ಪ್ರಯೋಗಿಸಿ ನಿಜಜನ್ಮಾವಳಿಸಮೇತಮಾತ್ಮೀಭಾವಮನಱಿದಂ ವ್ಯತೀತಭವಸಂತತಿಯಂ (ಶಾಂತಿಪು. ೫-೭). ೨. ಪರಮಾತ್ಮನಲ್ಲಿ ಐಕ್ಯವಾಗುವುದು. [ಸಂ.]

**ಆತ್ಮೀಯ** (ಗು). ೧. ತನ್ನ ; ತನಗೆ ಸೇರಿದ,—ಸಂಬಂಧಿಸಿದ : ಅವರ ವಚನದಿನಾತ್ಮೀಯ ಪಿತೃಮರಣಮುಮನಾತನ ನರಕಗತಿ ಗಮನಮುಮನಱಿದು (ಆದಿಪು. ೨-೧೪ ವ) ; ಅಂತಾತ್ಮೀಯ ಸುಕೃತಾಸಾದಿತಮುಮಂ ಅನತಿಶಯಮುಮಂ (ಚಂದ್ರಪು. ೪-೭೬). (ನಾ). ೨. ತನ್ನದು; ತನಗೆ ಸೇರಿದ್ದು. ೩. ಆಪ್ತ; ಸ್ವಜನ; ಬಂಧು : "ಆತ್ಮೀಯಃ, ಸ್ವಜನಃ, ಬಂಧುಃ, ಆಪ್ತಃ, ಜ್ಞಾತಿಃ, ಬಾಂಧವಃ—ಈ ೬ ನಂಟರ್" (ಹಲಾಯು. ೮೪-೩೫೫) ; ಆದರೆ ಮುಸಲ್ಮಾನನಾದನೆಂದು ಆತ್ಮೀಯರೆಲ್ಲರೂ ಅವನಿಗೆ ಬಹಿಷ್ಕಾರಕೊಟ್ಟು ಶುದ್ಧವಾಗಿ ತ್ಯಜಿಸಿಬಿಟ್ಟರು (ಕಪಾಕುಂ. ೩೪). ೪. ಆತ್ಮವಸ್ತುವಿಗೆ ಸಂಬಂಧಿಸಿದ್ದು (ಕಿ).

**ಆತ್ಮೀಯಂಮಾಡು** = ತನ್ನದಾಗಿಸಿಕೊ ; ವಶಪಡಿಸಿಕೊ : ಷಟ್‌ಖಂಡ ಮಂಡಳಕ್ಷಿತಿಯುಮನಾತ್ಮೀಯಂ ಮಾಡುವೆನೆಂಬ ನಿಜಾಯತಿಯಿಂದಂ (ಆದಿಪು. ೧೩-೧). [ಸಂ.]

**ಆತ್ಮೀಯತೆ** (ನಾ). ೧. ತನ್ನದೆಂಬ ಭಾವನೆ ; ಸ್ವಕೀಯವೆಂಬ ಅಭಿಮಾನ : ದಿನಗಳು ಉರುಳಿದಂತೆ ನಮ್ಮಿಬ್ಬರ ಗೆಳೆತನ ಆತ್ಮೀಯತೆಯಲ್ಲಿ ಪರಿಣಮಿಸಿತು (ಕುಂಕುಮ. ೨೮) ; ಗೋವಿಂದನೇ ಎಷ್ಟೋ ಬಾರಿ ಹೇಳಿರುವಂತೆ ಅವನು ನನ್ನಲ್ಲಿಟ್ಟಿರುವ ಆತ್ಮೀಯತೆ ಕೇವಲ ನನ್ನ ಸದ್ಗುಣಕ್ಕಾಗಿರಬಹುದು (ನಿಶಿಉ. ೪೪). ೨. ನಿಕಟ ಸಂಬಂಧ.
[ಸಂ. ಆತ್ಮೀಯತಾ]

**ಆತ್ಮೀಯಪ್ರಪಂಚ** (ನಾ). ತನ್ನ ವೃತ್ತಾಂತ; ತನಗೆ ಸಂಬಂಧಪಟ್ಟ ಎಲ್ಲಾ ವಿಷಯ : ವಿದ್ಯಾಭ್ಯಾಸನಿಮಿತ್ತದಿಂ ಭವದಂಘ್ರಿಸ್ಮರಣಪರಿಣತಾಂತಃಕರಣರಾಗಿ ಬಂದೆವೆಂದಾತ್ಮೀಯಪ್ರಪಂಚಮನಱಿಪಿ (ಸುಕುಮಾ. ೨-೪೮ ವ). [ಆತ್ಮೀಯ + ಪ್ರಪಂಚ]

**ಆತ್ಮೀಯಬಲ** (ನಾ). ತನಗೆ ಸೇರಿದ ಸೈನ್ಯ; ತನ್ನದಾದ ಪರಿವಾರ : ವಿಪುಳಾರ್ಥಮಂತ್ರಮುಂ ಯಾನಪಾತ್ರಮುಂ ಭಿನ್ನಮಾದೊಡಱಿವರ್ ವಸುಧಾಧಿಪಕರ್ಣಧಾರರಿರ್ವರುಮಪರಿಮಿತಾತ್ಮೀಯಬಲಸಮೇತಂ ಕ್ಷಣದಿಂ (ಪಂಚತಂ. ೨೧೩-೯). [ಆತ್ಮೀಯ + ಬಲ]

**ಆತ್ಮೀಯಭಾವನೆ** (ನಾ). ತನಗೆ ಸೇರಿದ್ದು ಎನ್ನುವ ಭಾವನೆ ; ಮಮತೆ : ಎದೆಹಾಲನ್ನು ಕೊಡುವ ಮತ್ತು ಕುಡಿಯುವ ಅನುಭವದಿಂದ ಒಂದು ಆತ್ಮೀಯಭಾವನೆ ಬೆಳೆದು ಇಬ್ಬರಿಗೂ ಸುಖ ಮತ್ತು ತೃಪ್ತಿಯನ್ನು ಕೊಡುತ್ತದೆ (ಗೃಹವಿ. ೧೦೫). [ಆತ್ಮೀಯ + ಭಾವನೆ]

**ಆತ್ಮೇಶ** (ನಾ). ೧. = ಆತ್ಮನಾಥ : ಕೊಡೆಯೆಲೆಗಳ ತಿಂತಿಣಿಯಿಟ್ಟೆಡೆಗಳ ಕಟ್ಟಲೆಯನಿರುಳೆಗೆತ್ತಾತ್ಮೇಶಂ ತಡೆದೊಡೆ ನರೇಂದ್ರ, ನೋಡೀ ನಡುವಗಲೊಳ್ ಚಕ್ರವಾಕವಧು ವಿರಹಿಸುವಳ್ (ಆದಿಪು. ೧೧-೬೩) ; ಇನ್ನುಳಿದೀ ಲೋಕದ ಪೆಂಡಿರೇನುಱಿವರೇ ತಳ್ತಪ್ಪದಾತ್ಮೇಶರಂ (ರಾಜಶೇ. ೯-೧೭). ೨. ಆತ್ಮಕ್ಕೆ ಒಡೆಯ ; ಪರಮಾತ್ಮ (ಕಿ). [ಆತ್ಮ + ಈಶ]

**ಆತ್ಮೈಶ್ವರ್ಯ** (ನಾ). ಆತ್ಮದ ಐಶ್ವರ್ಯ : ಆತ್ಮೈಶ್ವರ್ಯದಿಂ . . . ಏಂ ಪಿರಿಯಯೋ ತ್ರೈಲೋಕ್ಯರಕ್ಷಾಮಣೀ (ಶಾಂತಿಪು. ೧-೮೫).
[ಆತ್ಮ + ಐಶ್ವರ್ಯ]

**ಆತ್ಮೋದಯ** (ನಾ). ೧. ಆತ್ಮದ ಏಳಿಗೆ ; ಶ್ರೇಯಸ್ಸು : ಉಜ್ವಳರುಂ ನಿಶ್ಚಳರುಂ ಪ್ರಣೂತ ಬಲರುಂ ತಾಮಾಗಿ ಲೋಕಾಗ್ರದೊಳ್ ತೊಳಗುತ್ತಿರ್ಪ ವಿಶುದ್ಧಸಿದ್ಧರೆಮಗೀಗಾತ್ಮೋದಯಪ್ರಾಪ್ತಿಯಂ (ಜೀವಸಂ. ೨-೨). ೨. ತನ್ನ ಏಳಿಗೆ,—ಅಭಿವೃದ್ಧಿ. [ಆತ್ಮ + ಉದಯ]

**ಆತ್ಮೋದ್ಧಾರ** (ನಾ). ೧. ಆತ್ಮವಸ್ತುವಿನ ಉದ್ಧಾರ ; ಸಂಸಾರಕ್ಲೇಶದಿಂದ ಆತ್ಮಕ್ಕೆ ಬಿಡುಗಡೆಯನ್ನು ಒದಗಿಸುವುದು : ನಿನ್ನ ಕುಮಾರನಾತ್ಮೋದ್ಧಾರಕೋಸುಗಮೆ ಹರಕೆಗೈ (ಶ್ರೀರಾಮಾ. ೮೪-೧೫೯). ೨. ತನ್ನ ಉದ್ಧಾರ : ಆತ್ಮೋದ್ಧಾರಕ್ಕಾಗಿ ಇಷ್ಟು ಯುಕ್ತಿಯನ್ನು ಅವಲಂಬಿಸಿದವನು ನಿಜವಾಗಿಯೂ ಹುಚ್ಚನಿರಬಹುದೆ ? (ಬೆನ್ನಬೇ. ೧೩೪).
[ಆತ್ಮ + ಉದ್ಧಾರ]

**ಆತ್ಮೋದ್ಭವ** (ನಾ). ೧. ಮನಸಿಜ; ಮನ್ಮಥ : ಆತ್ಮೋದ್ಭವಮೂಲಚ್ಛೇದನೋಪಾಯವನೆಣಿಸದು ಮದ್ಬುದ್ಧಿಯಂ ಶಂ[illegible] ಸಂತಂಮಾಡಿ . . . ರಕ್ಷಿಪ್ಪುದೆನ್ನಂ (ರಕ್ಷಾಶ. ೧೫). ೨. ತನ್ನಿಂದ ಹುಟ್ಟಿದವನು ; ಮಗ : ಅಂತಾದೊಡಾತ್ಮೋದ್ಭವನನೊಲಿವೆನದಲ್ಲದೊಡೆ ನಾನೊಲ್ಲೆನೀ ವರವ (ಬಸಪು. ೨-೩). [ಆತ್ಮ + ಉದ್ಭವ]

**ಆತ್ಮೋದ್ಯೋಗ** (ನಾ). ತನ್ನ ಉದ್ಯೋಗ; ತಾನು ಮಾಡುವ ಕೆಲಸ : ಜನನಾಥಂ ಗೋತ್ರಮಿತ್ರಾಧಿಕೃತ ಸಚಿವ . . . ಜನಕಾತ್ಮೋದ್ಯೋಗವಮಂ ಪೇೞ್ದು (ಚಂದ್ರಪು. ೪-೬೦). [ಆತ್ಮ + ಉದ್ಯೋಗ]

**ಆತ್ಮೋನ್ನತಿ** (ನಾ). = ಆತ್ಮೋದಯ : ಆತ್ಮೋನ್ನತಿಯ ಗುರಿ ಒಳ್ಳೆಯ ಗುಣದ ಸಂಪೂರ್ಣತೆಯಾದುದರಿಂದ ನಾವು ಆತನ ಒಳ್ಳೆಯ ಗುಣಗಳನ್ನು ಮಾತ್ರ ಆರಾಧಿಸಬೇಕು (ನಿಶಿಉ. ೨೩೭) ; ಆತ್ಮೋನ್ನತಿಯ ಮಾರ್ಗವನ್ನೂ ಸಂಸಾರದಲ್ಲಿರುವಂಥ ಸತಿಯರಿಗೆ ತೋರಿಸಿಕೊಡುವುದೇ ಹೊನ್ನಮ್ಮನ ಉದ್ದೇಶವಾಗಿದೆ (ಕರ್ನಾಕ. ೧೯೪). [ಆತ್ಮ + ಉನ್ನತಿ]

**ಆತ್ಮೋಪಾಸನೆ** (ನಾ). ಪರಮಾತ್ಮನ ಉಪಾಸನೆ ; ಪರಮಾತ್ಮನನ್ನು ಧ್ಯಾನಿಸಿ ಅನುಸಂಧಾನಮಾಡುವುದು : ಜ್ಞಾನವೆಂದರೆ ಇಂತಹ ಕರ್ಮಗಳನ್ನು ಮಾಡುತ್ತ ಆತ್ಮೋಪಾಸನೆ ಎಂಬ ಸ್ವಾತ್ಮಶರೀರಕ ಪರಮಾತ್ಮೋಪಾಸನಾರೂಪವಾದ ಪರಬ್ರಹ್ಮವಿದ್ಯೆ (ಹಿಂದಸಾ. ೧೭೪).
[ಆತ್ಮ + ಉಪಾಸನೆ]

**ಆತ್ಯಂತಿಕ** (ಗು). ಅತ್ಯಂತ ಕೊನೆಯದಾದ ; ಪರಮಾವಧಿಯ : ಈ ಕಾವ್ಯಮಂ ಪೇೞ್ವ ಕೇಳ್ವರೊಳಜ್ಞಾನಭರಂ ಕಿಡಲ್ ಸುಖಭರಂ ಕೈಕೊಳ್ಳುಮಾತ್ಯಂತಿಕಂ (ಜಗವಿ. ೧೮-೧೧೨). [ಸಂ.]

**ಆತ್ಯಂತಿಕಸುಖ** (ನಾ). ಪರಮಾವಧಿಯಾದ ಸುಖ ; ಮೋಕ್ಷ : ಗಣನಾತೀತರಾಗಿರ್ದ ಮುಕ್ತಿಶ್ರೀನಾಥರ್ ಸಿದ್ಧರಾತ್ಯಂತಿಕಸುಖಪದವೀಸಿದ್ಧಿಯಂ ಮಾೞ್ಕೆ ನಮ್ಮೊಳ್ (ಪಂರಾಮಾ. ೧-೨).
[ಆತ್ಯಂತಿಕ + ಸುಖ]

**ಆತ್ರೇಯ** (ನಾ). ೧. ಅತ್ರಿ ಋಷಿಯ ಗೋತ್ರದವನು. ೨. ಅತ್ರಿಯ ಮಗನಾದ ದೂರ್ವಾಸ. ೩. ಚಂದ್ರ. 'ಆತ್ರೇಯಬಿಂಬ' ಪರಾ.
[ಸಂ.]

**ಆತ್ರೇಯದ್ಯುತಿ** (ನಾ). ಚಂದ್ರನ ಕಾಂತಿ; ಬೆಳುದಿಂಗಳು: ಆತ್ರೇಯದ್ಯುತಿಯಂ ಪಳಂಚಲೆದು ಕುಂದಚ್ಛಾಯೆಯಂ ಮಿಕ್ಕು ನಕ್ಷತ್ರ ಜ್ಯೋತಿಯನ್ನೈದೆ ತೂಳ್ದಿ... ದಿಗ್ಧಾತ್ರಿವ್ಯೋಮವಿಭಾಗಗಾಮಿಯೆನಿಸಿತ್ತುಜ್ಜೃಂಭಿಳಂ ದಾಮನಂದಿ ತ್ರೈವಿದ್ಯಮುನೀಂದ್ರ ನಿರ್ಮಳ ಯಶಶ್ರೀಶುಭ್ರತಾವಿಭ್ರಮಂ (ಚಂದ್ರಪು. ೧–೩೩).
[ಆತ್ರೇಯ + ದ್ಯುತಿ]

**ಆತ್ರೇಯಬಿಂಬ** (ನಾ). ಚಂದ್ರಮಂಡಲ; ಇಂದುಬಿಂಬ: ವಿಯನ್ನೀರಜಿನೀ ಮಧ್ಯೋಲ್ಲಸತ್ಪಾಂಡುರತರಶತಪತ್ರಂ ಬೆಡಂಗಾಯ್ತು ಯುಕ್ತವ್ರಜಗರ್ವೋರ್ವೀಧೃಶಂಬಂ ನಯನಸುಖಲತಾಸ್ತಂಬಮಾತ್ರೇಯ ಬಿಂಬಂ (ಚಂದ್ರಪು. ೮–೩೪). [ಆತ್ರೇಯ + ಬಿಂಬ]

**ಆತ್ರೇಯಿ** (ನಾ). ರಜಸ್ವಲೆಯಾದ ಅಥವಾ ಮುಟ್ಟಿನಲ್ಲಿರುವ ಹೆಂಗಸು; ಬಹಿಷ್ಠೆ. [ಸಂ. ಆತ್ರೇಯೀ]

**ಆತ್ರೇಯಿಕೆ** (ನಾ). = ಆತ್ರೇಯಿ: "ಅವೀಃ, ಉದಕ್ಯಾ, ರಜಸ್ವಲಾ, ಆತ್ರೇಯಿಕಾ, ಪುಷ್ಪವತೀ— ಈ ೫ ಮುಟ್ಟುವೆಗಂಡವಳ್" (ಹಲಾಯು. ೮೦–೩೩೪). [ಸಂ. ಆತ್ರೇಯಿಕಾ]

**ಆತ್ವ** (ನಾ). [ವ್ಯಾಕ] 'ಆ' ಎಂಬ ವರ್ಣ; 'ಆ' ಕಾರ: ಆತ್ವದಿ ನಿವರ್ಣದಿಂ ಮತ್ತೋತ್ವದಿನೈತ್ವದಿನೆವರ್ಣದಿಂ ಮುಂದಕ್ಕುಂ ಯತ್ವಂ (ಶಮುದ. ೫೩). [ಸಂ.]

**ಆಥರ್ವಣ** (ಗು). ೧. ಅಥರ್ವಣಕ್ಕೆ ಸಂಬಂಧಿಸಿದ; ಅಥರ್ವ ಋಷಿಗೆ ಸಂಬಂಧಪಟ್ಟ. (ನಾ). ೨. ಅಥರ್ವಣ ಮಂತ್ರಗಳ ಗುಂಪು. [ಸಂ.]

**ಆದ$_1$** 'ಆಗು$_1$' ಪರಾ.

**ಆದ$_2$** 'ಆಯ್$_1$' ಪರಾ.

**ಆದಂ** (ಅ). ವಿಶೇಷವಾಗಿ; ಅತಿಶಯವಾಗಿ: "ಆದಮತ್ಯರ್ಥೇ" (ಭಾಷಾಭೂ. ೨೪೨); "ಆದಮೆಯ್ದೆ ... ಅಧಿಕಾರ್ಥಂ" (ಶಮುದ. ೩೦೪); ವಿರುದ್ಧಾರ್ಥಮೆಂಬುದಾದಂ ದೋಷಂ (ಕವಿರಾ. ೧–೮೧); ಅಮರೀ ಮಧುರಗೀತನಿನಾದಕ್ಕಾದಮೊಜಲ್ದಿರ್ದ ಶಿರಃಕಂಪದೊಳ್ (ಆದಿಪು. ೪–೯ ವ); ನಡೆತರ್ಪ ನೀಲಮಣಿಪುತ್ರಿಕೆಯಂದದಿನಾದಮೊಪ್ಪಿದಳ್ (ಕಾದಂಪೂ. ೩೮); ಆದಮೆಡಬಲಮಿರ್ದ ಚಮರೀರುಹಂಗಳಂ ಸೋದರರ್ ಬೀಸೆ (ಶ್ರೀರಾಮಾ. ೪೫–೫೬).

**ಆದಮೆ, ಆದವೆ** = ವಿಶೇಷವಾಗಿಯೆ; ಅತಿಶಯವಾಗಿಯೆ: ಆವಸ್ತುಭೂತನೆಂದಾದಮೆ ಭೂತಳಂ ಪಟಿಯೆ ತೇಜಮೆ ಕೆಟ್ಟಪುದಿಂತಿದರ್ಕೆ ಪದ್ಮೋದರ ನೀನೆ ಪೇೞ್ (ಪಂಪಭಾ. ೯–೧೮); ಎನ್ನವೊಲಾದಮೆ ನೋಂತಳಾವಳಿನ್ನುಸುರ್ವುದು ನನ್ನಿಯಂ (ಕಾದಂಪೂ. ೭೯೬); ಕೊಲೆಗಾದಮೆ ಪೇಸಿಯುಪವಾಸಮಿರ್ಪುದುಂ (ಸಮುಪ. ೨–೭೯); ಸಂತಪ್ತನಾಗಿರ್ದನೊಳಾನುಂ ಕಾಯೆನೆಂದಾದವೆ ಕರುಣಿಸಿದಂತೆಯ್ದೆ (ಕಾದಂಉ. ೩೭೪); ಪರದನ ಬೋಧಿಸುತ್ತಾದವೆ ವಿಜಯಾರ್ಧಗಿರಿಗೆ ಕರೆದುಕೊಂಡು ಹೋಗಿ (ಜೀವಂಸಾಂ. ೯–೧೧).

**ಆದಕಾರಣ** (ಅ). ಸಂಭವಿಸಿದುದರಿಂದ; ಉಂಟಾದುದರಿಂದ: ಮಂತ್ರಮೂರ್ತಿಯೆ ಗುರುವಾದಕಾರಣ ಷಡಕ್ಷರಿಯೆ ಷಡ್ರುಚಿಯಾಗಿ ತೋಱುಹುದಾಗಿ (ಆದವ. ೧೩); ಅಲ್ಲಿ ಅವನನ್ನು ಯಾರೂ ಲಕ್ಷಿಸಲಿಲ್ಲ; ಆದಕಾರಣ ಅವನಿಗೆ ತುಂಬ ಕೋಪ ಬಂದಿತು (ಮಧ್ಯಮ. ೧೬೨); ಅವನು ಹೇಗಾದರೂ ಮತ್ತೊಬ್ಬ ಗುಮಾಸ್ತನನ್ನು ಇಟ್ಟುಕೊಳ್ಳತಕ್ಕವನೇಇದ್ದನು. ಆದಕಾರಣ ಜಗನ್ನಾಥನನ್ನೇ... ಇಟ್ಟುಕೊಂಡನು (ಮುಂಬಯಿ. ೪–೫೦).
[ಆದ$_1$ (<ಆಗು$_1$) + ಕಾರಣ]

**ಆದಡೆ$_1$** 'ಆದೊಡೆ' ನೋ.

**ಆದಡೆ$_2$** 'ಆಗು$_1$' ಪರಾ.

**ಆದತ್ತು** 'ಆಗು$_1$' ಪರಾ.

**ಆದಮಾನುಂ** (ಅ). ವಿಶೇಷವಾಗಿ; ಬಹಳವಾಗಿ: ಸಂಸಾರ ವೈರಾಗ್ಯಮಾದಮಾನುಂ ಪೆರ್ಚೆ (ವಡ್ಡಾರಾ. ೭೫–೨೮); ಮುನಿಪತಿ ನಿಜಚರಣಾಲೋಕನಮಾತ್ರದೆ ಮನದೊಳ್ ಆದಮಾನುಂ ಸ್ನೇಹಂ ಜನಿಯಿಸಿದಪುದೇ ಕಾರಣಮೆನಗೆ (ಸುಕುಮಾ. ೮–೪೮). ☞ ಆದಂ ಆನುಂ ಎಂಬೆರಡು ಅವ್ಯಯಗಳು ಸೇರಿ ಆಗಿರುವ ರೂಪ. [ಆದಂ + ಆನುಂ]

**ಆದಮಿ** 'ಆದ್ಮಿ' ನೋ.

**ಆದಮೆ** 'ಆದಂ' ಪರಾ.

**ಆದಯ್ಯ** (ನಾ). ೧. ಒಬ್ಬಾತನ ಹೆಸರು: ಅಡಿಪದ ಆದಯ್ಯಂ ಮಾಡಿಸಿದ (ಎಕ. III, ನಾಗಮಂ. ೫೧–೨೬; 972). ೨. ಒಬ್ಬ ಶಿವಶರಣ: ಸೌರಾಷ್ಟ್ರಪತಿ ಸೋಮನಾಥ ಶರಣೆನುತಿರ್ದನಾದಯ್ಯನೂ (ಸೋಮಚ. ೪–೧೬). [ಆದ ? + ಅಯ್ಯ$_1$]

**ಆದರ** (ನಾ). ೧. ಗೌರವ; ಮರ್ಯಾದೆ: ಆದಿಬ್ರಹ್ಮಂ ತೀವ್ರಾಷ್ಟಾದಶವಿಧ ದೋಷರಹಿತನಾಪ್ತಂ ತಾನೆಂದಾದರದಿಂದೋಲಗಿಪುದು (ಸಮುಪ. ೧–೨೧). ೨. ಆಸಕ್ತಿ: ಮರುದೇವಿಯೆಂಬಳಂಬರಚರನರಸುರಯುವತಿರೂಪ ಸರ್ವಸ್ವಮನಾದರದೆ ಬಿದಿ ನೆರಪಿ ಲಲನಾಸ್ವರೂಪದಿಂ ನಿಱಿಸಿತೆನ್ನದಿನ್ನೇವೊಗಳ್ವೆಂ (ಆದಿಪು. ೬–೮೦); ಪಿರಿದಪ್ಪಾದರದಿಂದಂ ಪುರಾಣಮಂ ಕೇಳ್ವರೆಲ್ಲರ್ (ಸಮುಪ. ೬–೨೪). ೩. ಅಕ್ಕರೆ; ಪ್ರೀತಿ; ವಾತ್ಸಲ್ಯ: ಆದರದಿಂದೆ ಕೊಂಡನವಜಸೊಳ್ ಪತ್ತೆಂಟು ರತ್ನಂಗಳಂ (ಆದಿಪು. ೧೨–೧೨೦); ಆದರಿಲ್ಲದ ಊಟ ಅಮೃತಾನ್ನವಿದ್ದೇನು (ಪುರಂದ. ೧–೧೩೯–೫). ೪. ಸತ್ಕಾರ; ಉಪಚಾರ: ಏನು ಆದರ ಅವರದು (ರೂಢಿ). 'ಆದರಿಸು' ಪರಾ. ೫. ಆಸೆ; ಉತ್ಕಟವಾದ ಇಚ್ಛೆ: ಭೇದಿಸಿ ಸಹದೇವಿಗೆ ಮಗನಾದುದನೊರ್ವಂ ಧನಾರ್ಥಿ ಮೆಚ್ಚಂ ಪಡೆವೊಂದಾದರದಿನಱಿಪೆ ಭೂಪತಿಗಾದುದು ಬಗೆತೀರ್ದುದೀಗಳೆಂಬನುರಾಗಂ (ಪಂರಾಮಾ. ೨–೩೫). ೬. ಸಂತೋಷ; ಉತ್ಸಾಹ: ಬಸವರಾಜಂ ಪುಸಿಯ ತಾಯ್ತಂದೆಗಳ್ ಪೋದುದಂ ಕಂಡಾದರಂಮಿಕ್ಕು ಸಂಸಾರದ ಭಾರವಿಳಿದು ನಲಿನಲಿದಾಡಿ (ಬಸರ. ೨–೮). ೭. ಲಕ್ಷ್ಯ; ಗಮನ. 'ಆದರಣೀಯ' ಪರಾ.

**ಆದರಮಾಡು** = ಸತ್ಕರಿಸು; ಉಪಚರಿಸು: ದ್ರುಪದನು ಅವರನ್ನೆಲ್ಲಾ ಗೌರವಿಸಿ ಆದರಮಾಡಿದನು (ವಚಭಾ. ೫೦). [ಸಂ.]

**ಆದರಂಗೆಯ್** (ಕ್ರಿ). ಸತ್ಕರಿಸು; ಉಪಚಾರಮಾಡು: ಮೊದಲೊಳ್ ಸಂಭಾಷಣಂಗೆಯ್ವುದೆ ವಲಮಿಳಿಕೆಯ್ವಂದಮೆಂದಾದರಂಗೆಯ್ವುದಹಂಕಾರಂ... ಬಿನ್ನಪಂಗೆಯ್ವುದೆ ಧಾರ್ಷ್ಟ್ಯಂ (ಕಾದಂಉ. ೧೧೨).
[ಆದರ + ಗೆಯ್ (< ಕೆಯ್$_1$)]

**ಆದರಂಗೊಳ್** (ಕ್ರಿ). ಆಸಕ್ತಿಯನ್ನು ಹೊಂದು: ನಾಲ್ವರುಮನಾದರಂಗೊಂಡಾ ನಾಲ್ಕುಂ ದೆಸೆಗೆ ಬೆಸಸಿಂ ಬೆಳ್ಕುಱುವಿನಂ (ಪಂಪಭಾ. ೬–೨೮).
[ಆದರ + ಕೊಳ್$_1$]

**ಆದರಣೀಯ** (ಗು). ೧. ಆದರಿಸತಕ್ಕ; ಆದರಕ್ಕೆ ಯೋಗ್ಯವಾದ. (ನಾ). ೨. ಲಕ್ಷ್ಯವಿಡತಕ್ಕದ್ದು; ಗಮನಿಸಬೇಕಾದ್ದು: ಕರಣೀಯಮಿಷ್ಟಕರಣಮಕರಣೀಯಮನಿಷ್ಟಕರಣಮೆಂಬೀ ನಯಮಾದರಣೀಯಮಲ್ಲದುದು ಪರಿಹರಣೀಯಂ ಭೂಮಿಪಂಗಿಳಾಧಿಪತಿಳಕಾ (ರಾಜಶೇ. ೧೩–೧೩). [ಸಂ.]

**ಆದರಣೆ** (ನಾ). ಉಪಚಾರ; ಸತ್ಕಾರ: ವನವಾಸಕ್ಕೆ ಯೋಗ್ಯವಾದ ನಾವು ನಿಮ್ಮ ಆದರಣೆಯಿಂದ ನಿಮ್ಮಲ್ಲಿ ಮೌನಮಂ ತ್ಯಜಿಸಿ ನಿಮ್ಮನ್ನಗಲಲಾರದೆ... ಇದ್ದೇವೆ (ಮುದ್ರಾಮಂ. ೮೧). [ಸಂ. ಆದರಣ]

**ಆದರಿಸು** (ಕ್ರಿ). ೧. ಗೌರವಿಸು; ಮರ್ಯಾದೆಮಾಡು : ಗುರುಗಿದಿರೇಳ್ವರೆ ಪೊಡವಡುವರೆ ದೇವರನರ್ಚಿಸುವರೆ ಪಾರ್ವರನಱಿದಾದರಿಪರೆ ಮಾನ್ಯರ ಮನ್ನಿಸುವರೆ ಪೂಜ್ಯರ ಪಿರಿದೆನಿಸುವ ಗರ್ವದೆ ಭೂಪರ್ (ಕಾದಂಪೂ. ೫೭೦) ; ನಿಜಾಗ್ರಜಂಗೆ ಮೊದಲಾಗಿಯುಮೇಜಲಿಕ್ಕದೆಯುಮಾದರಿಸದೆಯುಂ ಮೂಗಂ ಮೇಲೆತ್ತಿಕೊಂಡಿರ್ಪುದುಂ (ಸುಕುಮಾ. ೪-೨೪ ವ) ; ವೈದಿಕಮಲ್ಲದೆ ಧರ್ಮಮನಾದರಿಸುವನಲ್ಲೆಂ (ಸಮಪ. ೪-೧೩೨) ; ಆ ಯುವತಿಯ ಮಾತುಗಳನ್ನು ಆದರಿಸುವುದು ಒಳ್ಳೆಯದೆಂದು ಅವನಿಗನಿಸಿತು (ಮಣಿಸ. ೬೬). ೨. ಪ್ರೀತಿಸು; ವಾತ್ಸಲ್ಯವನ್ನು ತೋರಿಸು : ಪರಮ ಜಿನೇಂದ್ರವಾಣಿಯೆ ಸರಸ್ವತಿ . . . ಅದುವೆ ಭಾವಿಸಿಯೋದುವ ಕೇಳ್ವ ಪೂಜಿಪಾದರಿಸುವ ಭವ್ಯಕೋಟಿಗೆ ನಿರಂತರಂ ಸೌಖ್ಯಮನೀವುದು (ಆದಿಪು. ೧-೯) ; ಮನುಜರ್ ಪ್ರಭುಗಳ್ದಯೆಯಿಂದೆ ತಮ್ಮನಾದರಿಸಿದೊಡಾಗಳಂತೆ ಗಟಿಪಲ್ಪಗೆದಿರ್ಪುದಿದಾವ ವಿಸ್ಮಯಂ (ಕಾದಂಪೂ. ೬೯೬) ; ಇನ್ನಾದರೆಯು ಕೌಂತೇಯರನು ಕರೆದಾದರಿಸಿ ಕೊಡು ಧರೆಯನು (ಕುವ್ಯಾಅ. ೧-೧೩). ೩. ಸತ್ಕರಿಸು; ಉಪಚರಿಸು : ಅತಿಥಿಯನಾದರಿಪ್ಪ ಪಿತೃದೈವಮನರ್ಚಿಪ (ಕಾದಂಪೂ. ೨೨೫) ; ಭರಿತ ಭೋಜನ ದಕ್ಷಿಣೆಯಲಾದರಿಸಿದನು ಗುರು ಬಂಧುಜನ ಭೂಸುರರ (ತೊರರಾ. ೧-೮-೧೧). ೪. ಅಪೇಕ್ಷೆಪಡು; ಬಯಸು : ಚಾದಗೆ ನವೋದಬಿಂದುವನಾದರಿಪ ಪೊಲುಱಿದ ಕೆಱೆಯ ತೊಱೆಯುದಕಮನೇನಾದರಿಕುಮೆ (ಆದಿಪು. ೯-೧೦೯) ; ನೃತ್ಯಕೇಳಿಯೊಳು ಸಂಗೀತಕೇಳಿಯೊಳು ಸಾಹಿತ್ಯಕೇಳಿಯೊಳಾತ್ಮಕಲೆಯಾ ಅತ್ಯಂತ ಮಮತೆಯೊಳಾದರಿಸುವ ಕೃತಕೃತ್ಯರಾರರಸನಿನ್ನಂತೆ (ಭರಚ. ೨-೫೯). ೫. ಅಂಗೀಕರಿಸು; ಸ್ವೀಕರಿಸು : ಪಾರ್ವತಿಯೊಡನ ವೃತಾನ್ತಮನಾರೋಗಿಸಿ ಕೈಘಟ್ಟಿಯಂ ಕೊಂಡು ತಾಂಬೂಲಮನಾದ ಸುತ್ತಂ (ಗಿರಿಕ. ೧೧-೯೬). ೬. ಆಸಕ್ತಿಯನ್ನು ಹೊಂದು; ಶ್ರದ್ಧೆಯಿಡು : ಆದರಿಸಿ ಪರಿಚಾರಕರು ಸಂಪಾದಿಸಿದ ಘೃತ ಚರುಪುರೋಡಾಶಾದಿ ಸಂಭಾರೌಘವನುವಾಯಿತ್ತು ನಿಮಿಷದಲಿ (ಕುವ್ಯಾಸ. ೭-೨೨) ; ಪರಮಪುಣ್ಯಚರಿತ್ರವಿದನಾದರಿಸಿ ಕೇಳುವ ನರರ ಜನ್ಮಾಂತರದ ಘನತರ ದುರಿತವಳಿದು (ನಳಚ. ೧-೭). [ಆದರ + -ಇಸು$_3$]

**ಆದರೆ$_1$** 'ಆದೊಡೆ' ನೋ.

**ಆದರೆ$_2$** 'ಅಗು$_1$' ಪರಾ.

**ಆದರ್ಶಿಸು** (ಕ್ರಿ). ೧. ಕಡೆಗಣಿಸು; ತಿರಸ್ಕರಿಸು; "ಪ್ರತಿಭಟಿಸು" (ಪಂರಾಮಾ. ಕೋಶ) ; "ಪೀಡಿಸು, ಪರಾಕ್ರಮಿಸು" (ಆಯ್ಯಾಶಾ) : ನಯನಂ ನೀಲಸರೋಜಮಂ ಸೆಣಸುಗುಂ ವಕ್ಷಸ್ಥಳಂ ವಜ್ರವೇದಿಯನಾದ [ಪಾಠಾಂ. ೪]ರ್ಶಿಸುಗುಂ ಮುಖಂ ಕಮಲಮಂ ಕೀೞ್ಮಾಡುಗುಂ (ಪಂರಾಮಾ. ೧-೯೫) ; ನೀರದಪಥಕ್ಕೆ ಭೋಂಕನೆ ನಾರದನೊಗೆದೆಯ್ದಿ ಲಂಕೆಯಂ ತನುರುಚಿ ನೀಹಾರಮನಾದರ್ಶಿಸೆ ಬಲನಾರಾಯಣದೇವರಿರ್ದ ಸಭೆಯಂ ಪೊಕ್ಕಂ (ಪಂರಾಮಾ. ೧೫-೧೫) ; ಸಂಹರಿಪೆಂ ಮಾಯಾಪ್ರಪಂಚಂಗಳನದಟಲೆವೆಂ ಲೋಭಮಮಂ ಕಾಮನಂ ಪೋ ಬರವೇಱೆಂದೆನ್ನನಾದ[ಪಾಠಾಂ. ೪]ರ್ಶಿಸಿ ಪರಮತಪೋಗರ್ವದಿಂದೊರ್ವನಿರ್ದಂ (ಮಲ್ಲಿಪು. ೧೪-೩೦) ; ತಲೆದೋಱಲ್ ಮಿಾಱಲಾನಲ್ ಪೊಡಱಲೆಡಱಲಾದರ್ಶ್ಪಿಸಲ್ ಆರಾ ರಾಚಮ ನೃಪನಿದಿರೊಳ್ ಮಿಾಱಿ ಮಾಱಾಂಪಗಂಡರ್ (ಮುಂಬರಾ. XI, ೨೪೮-೧೪ ; 1121) ; ಯಶಸ್ಸಾಧನಂ ಸಾಧನಂ ಮುನ್ನೀರಂ ನೀರಂಧ್ರವಾದರ್ಶಿಸೆ ನಡೆದದಟಂ ದಾನವಂ ದಾನವಂ (ಜಗವಿ. ೧೫-೫೬) ; ಅವನ್ನಾಚರಿಸಲೇಬೇಕೆಂಬ ಬಲಾತ್ಕಾರದ ವೇಗದಲ್ಲಿ ಗನಹರನ್ನೂ ಗೌರವಗಿಡಿಸಿ ಆದರ್ಶಿಸಿ . . . ಕುಣಿದಾಡುತ್ತಿರುವನು (ಮಂತ್ರಶ. ೬೮-೧). ೨. ನೋಯಿಸು; ನೋವನ್ನುಂಟುಮಾಡು; ಅವಮಾನಿಸು (ಶಿ). [ಆದರ್ಶ ? + -ಇಸು$_3$]

**ಆದರ್ಶ** (ನಾ). ೧. ಕನ್ನಡಿ; ದರ್ಪಣ : ಕರಿಯಿಂ ಭದ್ರಯುತಂ . . . ಕಮುಳಾ ಪ್ತನಿಂ ಪ್ರಬಲತೇಜೋಯುಕ್ತನಾದರ್ಶದಿಂ ಪರಸಂಪ್ರೀತಿದನಬ್ಧಿಯಿಂದತಿಗಂಭೀರಂ (ರಾಜಶೇ. ೪-೨೯). ೨. ಧ್ಯೇಯ; ಗುರಿ; ಮಾದರಿ : ಆದರ್ಶವನ್ನು ಬಿಡದೆ ಕಾಲವಿಳಂಬವಾದರೂ ಸರಿಯಾಗಿ ಅಭ್ಯಾಸಮಾಡಬೇಕು (ಶಿಕ್ಷದ. ೨೪೫). [ಸಂ.]

**ಆದರ್ಶನ** (ನಾ). ೧. = ಆದರ್ಶ ೧ : "ಆದರ್ಶನಂ ದರ್ಪಣಂ ಮುಕುರಮೆಂದೆನಲ್ ಕನ್ನಡಿಗೆ ನಾಮಮುಕ್ಕುಂ" (ಮಂಗರಾ. ೬೧-೧೮). ೨. ಪ್ರಕಟನೆ; ತೋರಿಸುವುದು. [ಸಂ.]

**ಆದರ್ಶಪ್ರಾಯ** (ನಾ). ಮಾದರಿ; ಮೇಲ್ಪಂಕ್ತಿ : ಗಾಂಧೀಜಿ ಅವರು ಎಲ್ಲರಿಗೂ ಆದರ್ಶಪ್ರಾಯರಾಗಿದ್ದರು (ರೂಢಿ). [ಸಂ.]

**ಆದರ್ಶವಾದ** (ನಾ). ಉತ್ತಮ ಧ್ಯೇಯಸಾಧನೆಯನ್ನು ಪ್ರತಿಪಾದಿಸುವ ವಾದ : ಪ್ರತೀಕವಾದವೇ . . . ಆದರ್ಶವಾದ ಎಂಬ ಮಾತನ್ನು ತಂದೆ ನನ್ನೆದುರು ಚರ್ಚಿಸಿದ್ದಾರೆ (ಇಪ್ಪಕ. ೪೭೪). [ಆದರ್ಶ + ವಾದ$_3$]

**ಆದರ್ಶವಾದಿ** (ನಾ). ಉತ್ತಮ ಧ್ಯೇಯಸಾಧನೆಯಲ್ಲಿ ನಿರತನಾದವನು : ಆತನು ಆದರ್ಶವಾದಿಯೆಂದು ಒಪ್ಪಿಕೊಂಡನು (ಪಂಜಪಂ. ೧೩೨) ; ಕೆಲವು ಮಟ್ಟಿಗೆ ಆದರ್ಶವಾದಿಯಾದ ಶೀನೂನ ಐ. ಸಿ. ಎಸ್. ಸ್ನೇಹಿತ ಎಂಡರಸನ್ (ಸಮಜೀ. ೧೪ ಪೀ). [ಸಂ. ಆದರ್ಶವಾದಿನ್]

**ಆದರ್ಶೀಕರಣ** (ನಾ). ಆದರ್ಶವನ್ನಾಗಿ ಮಾಡಿಕೊಳ್ಳುವುದು : ಶ್ರೇಷ್ಠಗುಣಗಳು ಇವನಲ್ಲಿ ಮಿಲಿತವಾಗಿದ್ದು ದಂತಕಥೆಯ ಆದರ್ಶೀಕರಣವು ಪೂರ್ಣಗೊಂಡಂತಿದೆ (ತವನಿ. ೪೯). [ಸಂ.]

**ಆದಲಜ** (ನಾ). ಒಂದು ಮನೆತನದ ಹೆಸರು (?) : ಮಲೆಯಾಳರ್ಪ್ಪಳ್ಳಿ ಕಾಜರ್ ಕಡಗುವರಸುಮಕ್ಕಳ್ ಹಯಾಧೀಶರಪ್ಪಾದಲಜರ್ ಸಾಮಂತದಂಡಾಧಿಪರೊದವಿ ಭರಂಗೆಯ್ದು ನಿಂದಲ್ಲಿ ಅಮ್ಮುಂ ಚಲಮುಂ ಪೆರ್ಚುತ್ತಿರಲ್ (ಎಕ. V, ಹಾಸನ. ೬೫-೩೩ ; 1149). [?]

**ಆದಲೆ$_1$** (ನಾ). ೧. ಅತ್ತ; ಅತ್ತಕಡೆ : ಸಮಂತೆಯ್ದೆ ಸುತ್ತಲುಮಿರ್ದಪ್ಪುದು ಮಧ್ಯಲೋಕಮೆಸೆದಿರ್ದಾ ಚೂಳಿಕಾಭಾಗದಾದಲೆಯೊಳ್ಪಿಂದಪ್ಪುದೂರ್ಧ್ವಲೋಕಂ (ಆದಿಪು. ೧-೫೦) ; ಆದಲೆ ನೀರ್ ಗುಂಡಿತ್ತೆಂದೀದಲೆಯೊಳ್ ನಿಂದು ಸತಿಗೆ ಹರಿಗಂ ತೋಱುತ್ತ (ಪಂಪಭಾ. ೫-೬೨) ; ಜಳಧಿದ್ವೀಪಚಯಂಗಳುಂ ಪೆಱವುಮಂ ನೋಡುತ್ತದೇನಾವುದಾದಲೆಯಾ ತೋರ್ಪುದದಾವುದೆಂದು ಬೆಸಗೊಂಡುತ್ಸಾಹಮಂ ತಾಳ್ದಿದಂ (ಬಂಹರಿ. ೨-೫೩) ; ದೇವಕುಲಂಗಳಾದಲೆಯೊಳೊತ್ತುಂಗೊಂಡಿರ್ದ ಕಟ್ಟಲೆಗೆ ಮಿಟ್ಟುವಾಗಿಯುಂ . . . ಚಂದ್ರಾತಪದೊಳ್ (ಚಂದ್ರಪು. ೮-೩೩ ವ) ; ಸಡಗರದಿನಾದಲೆಯೊಳ್ ಮನವೆಳಸಿ ಪರಸಿ ಸುಕುಮಾರಾಂಗಮನೆಳದಳಿಗ್ರ್ಯಯಿಂದೆ ತಡವಿ ಕೊಂಡಾಡಿದಳಾ ದಂಪತಿಗಳನು (ಜಯಕಾ. ೯-೩೭). ೨. ಮುಂದುಗಡೆ; ಮುಂಭಾಗ : ಕೆಲಕೆಲದೊಳ್ ರಾಜಸುತರ್ ಕೆಲಬರ್ ಬರೆ ರಾಜಚಿಹ್ನ ಪಾಳಿಧ್ವಜ ಸಂಕುಲಮುಂ ಭಟಕಟಕಮುಮಾದಲೆಯೊಳ್ ಬರೆ ವಜ್ರಬಾಹು ಪಯಣಂ ಬಂದಂ (ಪಂರಾಮಾ. ೨-೧೨). [ಆ$_2$ (< ಅದು$_1$) + -ತಲೆ$_2$)]

**ಆದಲೆ$_2$** (ನಾ). ಉಂಟಾಗುವಿಕೆ; ಉತ್ಪತ್ತಿ : ಪಯೋರಸದಿಂ ಪಂಹಂಸಂಗುಪದೇಶಮಿಾವ ಗಾಂಪನುಮೊಳನೇ ಅದೊಡಮಱಿಪಿದಪೆಂ ನಯದಾದಲೆಯಂ ನಿನಗೆ ನಳಿನವಿಕಸನದೊಳ್ ಸೂರ್ಯೋದಯಕೆ ಸಹಾಯತ್ವಮನೂಡುವ ತಣ್ಣೆಲರುಮಲಸದೇಂ ಪುದುವುಗದೇ (ಲೀಲಾವ. ೪-೩೭). [ಆ$_0$ (< ಆಗು$_1$) + -ದಲೆ]

**ಆದವನಿ** 'ಆದವಾನಿ' ನೋ.

**ಆದವಾನಿ, ಆದವನಿ** (ನಾ). ಒಂದು ಊರಿನ ಹೆಸರು: ದೋರ ಸಮುದ್ರ ಗುತ್ತಿ ಪೆನಗುಂಡಿ ಆದವಾನಿ ಉದಯಗಿರಿ (ಎಕ. V, ಬೇಲೂರು. ೭೫–೫೮ ; 1382). **ಆದವನಿ**: ಆದವನಿಯ ನರಹರಿ ಕಂಪರಾಯನ ಕಾದಲೆ ಕೇಳು ರತ್ನಾಜಿ (ಕುರಾಸಾಂ. ೨೧–೮೨).

ಆದವಾನಿಹೊನ್ನು = ಒಂದು ಬಗೆಯ ನಾಣ್ಯ. ℙ ಮ ದ ಕ ರಿ ನಾ ಯ ಕ ನ ಬೊಕ್ಕಸದಲ್ಲಿದ್ದು ಹೈದರನ ಕೈಗೆ ಸಿಕ್ಕಿದ ಚಿನ್ನದ ನಾಣ್ಯ: ಆದವಾನಿಹೊನ್ನು ತಾಡಪತ್ರಿಹೊನ್ನು (ಚಿತ್ರಪಾ. ೧೦೪). [?]

**ಆದವೆ** 'ಆದಂ' ಪರಾ.

**ಆದಳಿಕೆ** (ನಾ). ರವಿಕೆ ; ಕುಪ್ಪಸ; ಚೋಲಿ: ಕನಕಮಣಿಗಳ ತೊಟ್ಟು ಜಾಜಿಯ ನನೆಯ ಆದಳಿಕೆ [ಪಾಠಾಂ. ಕಂಚುಳಿಕೆ, ಕಂಚುಕಿ] ಯಲಿ ಮದನನ ಮೊನೆಯ ಖಾಡಾಖಾಡಿ ಖಾತಿಯರ್ರೈದೆ (ಕುವ್ಯಾವಿ. ೧೦–೮೨).
[< ಸಂ. ಅರ್ಧೋರುಕ]

**ಆದಾಗ್ಯೂ** (ಅ). ಆದರೂ: ಯೀ ಗ್ರಾಮುಗಳಲ್ಲಿಯೆಷ್ಟು ಹೆಚ್ಚು ಹುಟ್ಟುವಳಿಯಾದಾಗ್ಯೂ ನಿರುಪಾಧಿಕ ಸರ್ವಮಾನ್ಯವಾಗಿ (ಎಕ. III, ಮೈಸೂರು. ೨–೮೧ ; 1877) ; ಆದಾಗ್ಯೂ ಗತಿಯಾವುದಾಯುಧ ವಮಾಣಲ್ ತೀಕ್ಷ್ಣ ತೇಜಸ್ವಿಯಲ್ಲಾ (ಉರಾಚ. ೯೪).
[ಆದ$_1$ (< ಆಗು$_1$) + ಅಗ್ಗೆ (< ಅಗಡು) + -ಊ$_2$]

**ಆದಾನ** (ನಾ). ೧. ತೆಗೆದುಕೊಳ್ಳುವುದು ; ಸ್ವೀಕರಿಸುವುದು: ಅನೇಕ ರೂಪಪರಾವರ್ತನ ರಸಾದಾನವರುಮೆಂಬ ದಾನವರುಮಂ . . . ಬೆಸಸಿದಂ (ಜಗವಿ. ೩–೨೨ ವ). ೨. [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು: ಆದಾನಮುಂ ಪ್ರೀತಿಯುಂ ಧೃತಿಯುಂ . . . ಎಂದಾದಾನಾದಿ ನಿ ರ್ವಾ ಣ ಪರ್ಯಂತಮಪ್ಪಯ್ವತ್ತುಮೂಱು ಗರ್ಭಾನ್ವಯ ಕ್ರಿಯೆಯೊಳ್ (ಚಾವುಂಪು. ೨೨೯). [ಸಂ.]

**ಆದಾನನಮ್ರ** (ನಾ). ಪರಿಗ್ರಹದ ದೆಸೆಯಿಂದ ನಮ್ರವಾಗಿರುವುದು: ಹಣ್ಣಿನಿಂ ತರು ನಮ್ರ ಮೋಡ ಹನಿಯಿಂ ನಮ್ರ . . . ಎಲ್ಲರಹಮನು ಕಳೆದು ವೃದ್ಧಮಾದೀ ಗುಡಿಯು ಸ ಕ ಲ ಜ ನ ಕಾ ಯಿ ತಾ ದಾ ನ ನ ಮ್ರ (ಮಲೆದೇ. ೧೧–೮). [ಆದಾನ + ನಮ್ರ]

**ಆದಾನನಿಕ್ಷೇಪಣ** (ನಾ). [ಜೈನ] ಐದು ಬಗೆಯ ಸ ಮಿ ತಿ ಗ ಳ ಲ್ಲಿ ಒಂದು ; ಪ್ರಾಣಿಹಿಂಸೆಯಾಗದಂತೆ ಶಾಸ್ತ್ರ, ಪಿಂಛ, ಕಮಂಡಲು ಮೊದಲಾದ ವಸ್ತುಗಳನ್ನು ಭೂಮಿಯ ಮೇಲೆ ನೋಡಿ ಜಾಗರೂಕತೆಯಿಂದ ಇಡುವುದು ಮತ್ತು ತೆಗೆದುಕೊಳ್ಳುವುದು: ಜ್ಞಾನ ಸಂಯಮ ಶೌಚೋಪಕರಣಂಗಳಂ ನೋಡಿ ಪ್ರ ತಿ ಲೇ ಖಿ ಸಿ ಕಳೆದು ಕೊಳ್ವುದು ಮ ಡ ಗು ವು ದು ಆದಾನನಿಕ್ಷೇಪಣಾಸಮಿತಿಯೆಂಬಾಜಿನೆಯ ಮೂಲಗುಣಂ (ಶ್ರಾವಕಾ. ೮೨–೧). [ಆದಾನ + ನಿಕ್ಷೇಪಣ]

**ಆದಾನು** 'ಆಗು$_1$' ಪರಾ.

**ಆದಾಪುರ** (ನಾ). ಒಂದು ಊರಿನ ಹೆಸರು: ಬೆನೂರ ಕಂಪಣದಲ್ಲು ಸಾಂಬಪುರೇ ವೃತ್ತಿ ೧೩ . . . ಆದಾಪುರ ವೃತ್ತಿ ೨ ನಾಗಮುದ್ರಾ (ಎಕ. VII, ಶಿವಮೊ. ೭೯–೬೦ ; 1154). [? + ಪುರ]

**ಆದಾಬು** (ನಾ). ಗೌರವ; ನಮಸ್ಕಾರ ; ಸಲಾಮು (ದಕ.೩).
[← ಅರ. ಪಾರ. ಹಿಂ. ಅದಬ್, ಆದಾಬ್]

**ಆದಾಯ** (ನಾ). ವರಮಾನ; ಲಾಭ ; ಸಂಪಾದನೆ; ಹುಟ್ಟುವಳಿ: ಸುಂಕ ವಿಶೇಷಆದಾಯ ಬಿಟ್ಟ ಬಿರಾಡ (ಎಕ. IX, ಮಾಗಡಿ. ೬–೧೨ ; 1524); ನನ್ನನ್ನು ಕೈದಿಯಾಗಿಟ್ಟು ಆದಾಯ ಪಡೆಯಬೇಕೋ (ದೇವೀಚೌ. ೮೪). [ಸಂ.]

**ಆದಾಯಕರ$_1$** (ಗು). ಲಾಭಕರವಾದ; ಗಳಿಕೆಗೆ ಸಹಾಯವಾದ: ವ್ಯವಸಾಯಕ್ಕಿಂತ ಆದಾಯಕರವಾದ ಉದ್ಯೋಗವಿಲ್ಲ (ರೂಢಿ). [ಸಂ.]

**ಆದಾಯಕರ$_2$** (ನಾ). ಆದಾಯ ತೆರಿಗೆ; ವರಮಾನ ತೆರಿಗೆ: ಹತ್ತಿಯ ಮೇಲಣ ಆದಾಯಕರ (ಹುಸಂಕ. ೧೩–೧೧–೫೯). [ಆದಾಯ + ಕರ$_1$]

**ಆದಾವತಿ** (ನಾ). (ಉಕ) ದ್ವೇಷ ; ಹಗೆತನ; ಆಗದಿರುವಿಕೆ: ನನ್ನ ಮ್ಯಾಲಿನ ಆದಾವತಿಯಿಂದ ಕಾರಣವಿಲ್ಲದ ಖಟ್ಲೆಹಾಕಿಸಿ . . . ಅನ್ಯಾನ್ನ ಗತಿಕೆಮಾಡಿದ ಈ ಮೋಸಗಾರ (ನಾಧಾರಿ. ೧೦೩) ; ಅವರದು ನಮ್ಮದು ಆರುತಲೆ ಆದಾವತಿ (ನಡೆದಾ. I, ೨೬೧).

ಆದಾವತಿಜನ = ಆಗದವರು ; ಹಗೆಗಳು: ಆದಾವತಿ ಜನ ನನ್ನ ವಿರುದ್ಧ ಆರೋಪ ಮಾಡ್ಯಾರ (ಗ್ರಾಮಾಯ. ೧೨೫).
[← ಮರಾ. ಅರ. ಪಾರ. ಅದಾವತ್]

**ಆದಿ$_1$** (ನಾ). ೧. ಪೀಡೆ ; ಹಿಂಸೆ ; ತೊಂದರೆ (?): ಯೀ ಹೆಂಣಿಗೆ ಆದಿ ಅಡಮು ಅಡ್ಡಿ ಸಡ್ಡಿಯೇನು ಉಂಟಾದಂನು ನಾನೆ ನೋಡಿಕೊಂಡೇನು (ಮೈಆರಿ. ೧೯೨೮, ೬೭–೧೧ ; 1808). ೨. ಚಿಂತೆ ; ಮನೋರೋಗ: ಆದಿ ಹಿಡಿದವನಿಗೆ ಆದೇ ಮುಪ್ಪು (ಗಾದೆ). [< ಸಂ. ಆಧಿ]

**ಆದಿ$_2$** (ನಾ). ೧. ಮೊದಲು ; ಪ್ರಾರಂಭ. ೨. ಕಾರಣ; ಮೂಲ. ೩. ಪೂರ್ವಕಾಲ. ೪. (ಸಮಾಸಗಳ ಕಡೆಯಲ್ಲಿ) ಮುಂತಾದುದು: ಸ್ವಾಮ್ಯಾದಿಯೊಳಂ ಷಷ್ಠಿ ತಾನದಕ್ಕುಂ (ಕಾವ್ಯಾವ. ೧೨೦) ; ಗೋಭೂಮಿ ಹೇಮವಸ್ತ್ರಾದಿಗಳಂ (ಎಇ. XXI, ೨–೧೫ ; 1266). ೫. [ಸಂಗೀತ] ತಾಳಗಳಲ್ಲಿ ಒಂದು ಪ್ರಭೇದ ; ಆದಿತಾಳ: ನಮ್ಮ ದೇಶದ ಸಂಗೀತ ದಲ್ಲಿ ರೂಪಕ (ದಾದರಾ), ಆದಿ (ತ್ರಿವಟ) . . . ಎಂಬ ಹಲವು ತಾಳ ಪದ್ಧತಿಗಳಿರುವುವು (ಬಾಲಪ್ರ. II, 1040) ; ಆದಿ, ದೇಶಾದಿರೂಪಕ . . . ತಾಳಗಳಲ್ಲಿ ಬಹಳ ಹಾಡುಗಳನ್ನು ರಚಿಸಿದ್ದಾರೆ (ಸಂಗೀತ. ೨೯). ೬. [ವ್ಯಾಕ] ಪ್ರಥಮಾವಿಭಕ್ತಿ: ಗುಣದಿಂ ಕ್ರಿಯೆಯಿಂ ನಿರ್ಧಾರಣೆಯೊಳ್ ಸಪ್ತಮಿಯುಮಕ್ಕುಮಾದಿಯದಾಮಂತ್ರಣದೊಳ್ ನೆ ಗ ೞ್ಗುಂ (ಕಾವ್ಯಾವ. ೧೨೫).

ಆದಿತೊಡಗಿ = ಆರಂಭದಿಂದ ; ಮೊದಲಿನಿಂದ: ಆ ದಿ ತೊ ಡ ಗಿ ಬೇಟಗೊಂಡಿದ್ದು ಕೂಟದಿಂದಾದುದಿನ್ನೆಂತೊ ವಿಲಾಸ (ಭರಚ. ೪೧–೧೬೬).
[ಸಂ.]

**ಆದಿಅಯನ** (ನಾ). ಪ್ರಥಮಪೂಜೆ, —ಉತ್ಸವ: ಉಭಯಮಾರ್ಗದ ಹಾದಿ ದೇವಿಯ ಹಬ್ಬದ ಆದಿಅಯನಕೆ ಕುಱಿಯನು ಅಡಕೆಯ ಮರನು ಮೂ ಡ ಕೇ ರಿ ಹಲರು ಆ ಹಾದಿಯಲು ಮೆಱಸಿಕೊಂಡು ಹೋಹರು (ಸೌಇಇ. IX–ii, ೪೫೭–೩೩ ; 1455). [ಆದಿ$_2$ + ಅಯನ]

**ಆದಿಕಥೆ** (ನಾ). ಹಿಂದಿನ ಕಥೆ ; ಪುರಾಣ: "ಆದಿಕಥೆಯೊಳು . . . ಪುರಾಣಂ" (ಮಂಗರಾ. ೧೫೧–೫೫). [ಆದಿ$_2$ + ಕಥೆ]

**ಆದಿಕಮಠ** (ನಾ). ಮೊಟ್ಟಮೊದಲನೆಯ ಆಮೆ ; ಭೂಮಿಯನ್ನು ಹೊತ್ತಿರುವನೆಂದು ಪು ರಾ ಣ ಗ ಳ ಲ್ಲಿ ಪ್ರಸಿದ್ಧನಾದ ಕೂರ್ಮ: ಆದಿಕಮಠಂಬರಮಾಳಮನಾಳ್ವಗಳ್ (ಶಬಶಂ. ೧–೫೪).
[ಆದಿ$_2$ + ಕಮಠ]

**ಆದಿಕರ್ಣಾಟಕ** (ನಾ). ಹಿಂದುಗಳಲ್ಲಿ ಒಂದು ಪಂಗಡದ ಹೆಸರು: ಆದಿ ಕರ್ಣಾಟಕರೂ ನಾಳೆ ಕೌನ್ಸಿಲರು, ದಿವಾನರು ಆಗುತ್ತಾರೆ (ರಂಗಕ. ೭೬).
[ಆದಿ$_2$ + ಕರ್ನಾಟಕ]

**ಆದಿಕಲ್ಯಾಣ** (ನಾ). ೧. ಮೊದಲನೆಯ ಮಂಗಳಕಾರ್ಯ; ಪ್ರತಿಷ್ಠಾ ವಿಧಾನದಲ್ಲಿ ಮಾಡುವ ಧ್ವಜಾರೋಹಣವೆಂಬ ಮೊ ದ ಲಿ ನ ಶು ಭ ಕಾ ರ್ಯ: ಧ್ವಜಾರೋಹಣವೆಂಬ ಉತ್ಕೃಷ್ಟವಿಧಾನಂ ಆದಿ ಕಲ್ಯಾಣಂ ಪ್ರತಿಷ್ಠಾವಿಧಾನದೊಳಾದಿಕಲ್ಯಾಣವೆಂದು . . . ಪೇಳ್ವರು (ಪ್ರತಿಷ್ಠಾ. ೩–೨). ೨. [ಜೈನ] ಪಂಚಕಲ್ಯಾಣಗಳಲ್ಲಿ ಮೊದಲನೆಯದು. 'ಗರ್ಭಾವತರಣ ಕಲ್ಯಾಣ' ಪರಾ. [ಆದಿ$_2$+ ಕಲ್ಯಾಣ]

**ಆದಿಕವಿ** (ನಾ). **೧.** ಮೊದಲನೆಯ ಕವಿ. **೨.** (ಸಂಸ್ಕೃತದಲ್ಲಿ) ವಾಲ್ಮೀಕಿ: ಸಂಸ್ಕೃತದಲ್ಲಿ ರಾಮಾಯಣ ಮಹಾಕಾವ್ಯವನ್ನು ಬರೆದು ವಾಲ್ಮೀಕಿ ಆದಿಕವಿಯಾದ (ಸಾಹಿಸ. ೨೧). **೩.** (ಕನ್ನಡದಲ್ಲಿ) ಪಂಪ: ಆದಿಕವಿ ಪಂಪನೆಂದನುವಾದಿಸಿ ವಾದಿಸಿ ವಿರೋಧಿ ವಿಪರೀತತೆಯಿಂದೋದೆ ವಿಲೋಮದೆ ಪೆಸರಂ ಮೇದಿನಿಯೊಳವನ ಪೆಸರೆ ಪೆಸರ್ವಡೆದೆಸೆಗುಂ (ಧರ್ಮನಾ. ೧–೩೬). [ಆದಿ$_2$ + ಕವಿ$_6$]

**ಆದಿಕಾರಣ** (ನಾ). ಮೊಟ್ಟಮೊದಲನೆಯ ಕಾರಣ; ಮೂಲಕಾರಣ: ಶ್ರೀಯುವತೀಶನಖಿಲಗುಣನಿಧಿ ನಾರಾಯಣನಾದಿಕಾರಣನು (ಹದಿಬ. ೧–೧೨). [ಆದಿ$_2$ + ಕಾರಣ]

**ಆದಿಕಾವ್ಯ** (ನಾ). ಮೊಟ್ಟಮೊದಲನೆಯ ಕಾವ್ಯ; ರಾಮಾಯಣ: ಶ್ರೀಮದ್ರಾಮಾಯಣವೇ 'ಆದಿಕಾವ್ಯ'ವೆಂದು ವಾಡಿಕೆಯಾಗಿದೆ (ಕೈಪಿಡಿ. ೧೬೨). [ಆದಿ$_2$ + ಕಾವ್ಯ]

**ಆದಿಕೆ** (ನಾ). ವೇದಿಕೆ: "ಆದಿಕೆ ವೇದಿಕೆಯೊಳ್" (ಕರ್ಣಾನಿ. ೮೫). [?]

**ಆದಿಕ್ರೋಡ** (ನಾ). ಆದಿವರಾಹ: ಆದಿಕ್ರೋಡನಂತೆ ಕಾಡಿಗೆವೆಟ್ಟನಂತೆ ಕಾರಮೇಘದಂತೆ ಜವನ ಜಕ್ಕಂದೊಳಲಿಯಂತಿರ್ದ ಗಜಸಮಾಜದಿಂ (ಹಮ್ಮಿರ. ೩–೩೩ ವ). [ಆದಿ$_2$ + ಕ್ರೋಡ]

**ಆದಿಗ** (ನಾ). ಮೊದಲಿಗ: ಭೇದಿಸಿ ಸತ್ಕಥನವನು ಕನ್ನಡಕೆ ತಾನಾದಿಗನೆನಿಸಿ ಲೋಕದೊಳು ಆದಿತೀರ್ಥೇಶನ ಕಥೆಯ ವಿಸ್ತರಮಾಡಿದಾದಿಪಂಪನ ಪೊಗಳುವೆನು (ನಾಗಕು. ೧–೨೩). [ಆದಿ$_2$ + –ಗ$_3$]

**ಆದಿಗರ್ಭೇಶ್ವರ** (ನಾ). ಹುಟ್ಟನಿಂದಲೂ ರಾಜವಂಶಕ್ಕೆ ಸೇರಿದವನು: ತಾವಾದಿಗರ್ಭೇಶ್ವರರಪ್ಪುದಱಿಂ ತಳರ್ದೆಡೆಯೆಡೆಯ ಮರಂಗಳ ತೊಱೆಗಳ ಬಾಡಂಗಳ ಪೆಸರ್ಗಳಂ ಬೆಸಗೊಳುತ್ತುಂ (ಪಂಪಭಾ. ೨–೯೬ವ). [ಆದಿ$_2$ + ಗರ್ಭ + ಈಶ್ವರ]

**ಆದಿಗವುಡ** (ನಾ). ಒಬ್ಬಾತನ ಹೆಸರು: ಕಂಬ ೧೫೦ ಆದಿಗಉ[ವು]ಡನ ಹಳಿಯ ಆದಿಗಉ[ವು]ಡನ (ಎಕ. XVI, ಚಿಕ್ಕನಾ. ೬೯–೪೪ ; 1117). [ಆದಿ$_2$ + ಗವುಡ (< ಗಾಮುಂಡ)]

**ಆದಿಗಿರಿ** (ನಾ). ಉದಯಾದ್ರಿ; ಮೂಡಲಗಿರಿ: ಬಸವಮೊದಲಾಗೆಲ್ಲರೆದ್ದೊಂದಿಸುವ ಸಮಯದೊಳರಸುಪೀಠದಿ ಸಸಿನವಾದಿನನಾದಿಗಿರಿ ಏರಿದನೊ ಎಂಬಂತೆ (ಬಿಜ್ಜಪು. ೮೦–೨೦). [ಆದಿ$_2$ + ಗಿರಿ$_1$]

**ಆದಿಚಕ್ರಿ** (ನಾ). [ಜೈನ] ಮೊದಲನೆಯ ಚಕ್ರವರ್ತಿ; ಭರತ ಚಕ್ರವರ್ತಿ: ಆದಿತೀರ್ಥಂಕರರ ಕಾಲದಿ ಆದಿಚಕ್ರಿಯೆ ಭರತರಾಜನಿಗಾದ (ಬಿಜ್ಜಪು. ೧೧೨–೯೫). [ಆದಿ$_2$ + ಚಕ್ರಿ]

**ಆದಿಜ** (ನಾ). ಮೊದಲು ಹುಟ್ಟಿದವನು: ಅಮಳರಾದಿಜರಭವರವ್ಯಯರ್ (ಬಸಪು. ೮–೪೬). [ಸಂ.]

**ಆದಿಜಿನ** (ನಾ). [ಜೈನ] ಪ್ರಥಮ ತೀರ್ಥಂಕರ; ವೃಷಭ ದೇವ: ಅನತಿಶಯ ಕೇವಲಜ್ಞಾನನಿರೀಕ್ಷಿತ ವಿಶ್ವನಾಥನಾದಿಜಿನಂ . . . ಕೈವಲ್ಯಲಕ್ಷ್ಮಿಯಂ ಪಡೆದಂ (ಆದಿಪು. ೧೦–೧೫). [ಆದಿ$_2$ + ಜಿನ]

**ಆದಿಜಿನೇಂದ್ರ** (ನಾ). = ಆದಿಜಿನ: ದೇವಾಸುರ ಮಕುಟಮಣಿದ್ಯುತಿ ಭಾಸುರ ಚರಣಾರವಿಂದನಾದಿಜಿನೇಂದ್ರಂ (ಆದಿಪು. ೧೦–೩೮). [ಆದಿ$_2$ + ಜಿನೇಂದ್ರ]

**ಆದಿಜಿನೇಶ್ವರ** (ನಾ). = ಆದಿಜಿನ: ಆದಿಜಿನೇಶ್ವರಂ ಮೊದಲಚಕ್ರಿಗೆ . . . ಬೆಸಸೆ (ಶಾಂತಿಪು. ೧೦–೭೯). [ಆದಿಜಿನ + ಈಶ್ವರ]

**ಆದಿತಾಳ** (ನಾ). = ಆದಿ$_2$ ೫. [ಆದಿ$_2$ + ತಾಳ$_4$ (= ತಾಲ$_4$)]

**ಆದಿತೀರ್ಥಂಕರ** (ನಾ). = ಆದಿಜಿನ: ಆದಿತೀರ್ಥಂಕರರ ಕಾಲದಿ ಆದಿಚಕ್ರಿಯೆ ಭರತರಾಜನಿಗಾದ ಕುವರ (ಬಿಜ್ಜಪು. ೧೧೨–೯೫). [ಆದಿ$_2$ + ತೀರ್ಥಂಕರ]

**ಆದಿತೀರ್ಥಪ್ರವರ್ತಕ** (ನಾ). = ಆದಿಜಿನ: ಈ ಭವಕ್ಕೆಂಟನೆಯ ಭವದೊಳ್ ಭರತದೊಳ್ ನೀನಾದಿತೀರ್ಥಪ್ರವರ್ತಕನಾದಂದೀ ಶ್ರೀಮತಿ ದಾನತೀರ್ಥಪ್ರವರ್ತಕಂ ಶ್ರೇಯಾಂಸನಕ್ಕುಂ (ಆದಿಪು. ೫–೧೩ ವ). [ಆದಿ$_2$ + ತೀರ್ಥ + ಪ್ರವರ್ತಕ]

**ಆದಿತೀರ್ಥೇಶ** (ನಾ). = ಆದಿಜಿನ: "ನಮಸ್ಸಿದ್ಧೇಭ್ಯ" ಎಂದಾದಿತೀರ್ಥೇಶರರ್ ವಂದಿಸಿ ದೀಕ್ಷೆಗೆಯ್ದರ್ (ಶಾಂತಿಪು. ೧–೨); ಆದಿ ತೀರ್ಥೇಶನ ಕಥೆಯ ವಿಸ್ತರಮಾಡಿದಾದಿಪಂಪನ ಪೊಗಳುವೆನು (ನಾಗಕು. ೧–೨೩). [ಆದಿ$_2$ + ತೀರ್ಥೇಶ]

**ಆದಿತೀರ್ಥೇಶ್ವರ** (ನಾ). = ಆದಿಜಿನ: ವಾಗ್ವಧೂಮುದ್ರೆಯೊಳ್ ಮುದ್ರಿಸಿ ನಿಂದತ್ತಾದಿತೀರ್ಥೇಶ್ವರನ ಚರಿತದೊಳ್ ವಾಕ್ಯಮಾಣಿಕ್ಯಕೋಶಂ (ಆದಿಪು. ೧೬–೭೯). [ಆದಿ$_2$ + ತೀರ್ಥೇಶ್ವರ]

**ಆದಿತೇಯ** (ನಾ). ಅದಿತಿಯ ಮಗ; ದೇವತೆ; ಸುರ. [ಸಂ.]

**ಆದಿತ್ಯ** (ನಾ). **೧.** = ಆದಿತೇಯ: "ಆದಿತ್ಯಃ . . . ಅನಿಮಿಷಃ . . . ದೈವತವರ್–ಈ ೨೧ ದೇವರ್ಕಳ ಪೆಸರ್" (ಹಲಾಯು. ೧–೪); ಆದಿತ್ಯನ ಪಿತೃ ಮಾತೃಗಳಾದಾ ಕಶ್ಯಪನುಮದಿತಿಯುಂ . . . ಯದುವಂಶಜರಾದರ್ (ಜಗವಿ. ೧–೭೫). **೨.** ಸೂರ್ಯ: "ಆದಿತ್ಯಃ . . . ರವಿಃ . . . ತ್ರಯೀತನುಃ— ಈ ೪೭ ಆದಿತ್ಯನ ಪೆಸರ್" (ಹಲಾಯು. ೭–೩೫); ನವಗ್ರಹದ ನಡುವೆ ಚಂದ್ರಾದಿತ್ಯರುರ್ವಿಯಂ ಪರ್ವಿ ಪಸರಿಸಿದ . . . ತೇಜದಿ (ಹಚಕಾ. ೨–೫); ಪುರದ ನೆಲೆವನೆಗಳಂ ದಾಂಟಲಾಱದಾದಿತ್ಯಂ ತೆಂಕು ಬಡಗು ಬಳಿಯೊಳಿ ಬಾನೊಳ್ ಪೋಪನಪ್ಪಂ (ಅದ್ಭುತ. ೪೦–೨೩). **೩.** [illegible]ದಶಾದಿತ್ಯರಲ್ಲಿ ಒಬ್ಬನ ಹೆಸರು. **೪.** [ಜೈನ] ಎಂಟು ಜನ ಲೋಕಾಂತಿಕ ದೇವರಲ್ಲಿ ಒಬ್ಬ: ಸಾರಸ್ವತಾದಿತ್ಯ ವಹ್ನ್ಯರುಣಗರ್ದತೋಯ ತುಷಿತಾವ್ಯಾಬಾಧಾರಿಷ್ಟರೆಂಬೆಣ್ಬರುಂ ಲೋಕಾಂತಿಕ ದೇವರ್ ಬಂದು (ಆದಿಪು. ೯–೬೦ ವ). **೫.** [ಛಂದ] ಜಗಣ (U – U) ಎಂಬ ಅಕ್ಷರ ಗಣ: ಆಶೀರ್ವಾದದೊಳುರ್ವಿಯುಂ . . . ಧೈರ್ಯಕನಲಂ ಭೀತಂಗಮಾದಿತ್ಯಂ [ಪಾಠಾಂ. ಧೀರೋನ್ನತಂಗಗ್ನಿ] . . . ಭಾಸ್ವದ್ದೇವಗಣಂಗಳೆಂದಱಿಪಿದಂ (ಛಂದೋಂಬು. ೧–೩೬ ಕ). **೬.** ದೇವತೆಗಳಲ್ಲಿ ಒಂದು ಗುಂಪು, —ಗುಂಪಿಗೆ ಸೇರಿದವನು.

ಆದಿತ್ಯನಕಲ್ = ಸೂರ್ಯನ ಚಿಹ್ನೆಯಿರುವ ಗಡಿಗಲ್ಲು: ಆಗ್ನೇಯದೊಳ್ ಆದಿತ್ಯನ ಕಲ್ (ಎಇ. XVI, ೫೬–೩೨; 1053). [ಸಂ.]

**ಆದಿತ್ಯಪ್ರಭ** (ನಾ). ಸೂರ್ಯನ ಪ್ರಭೆಯಂತೆ ತೇಜಸ್ಸುಳ್ಳವನು: ಬೆಸಸುವುದೆನಗಾದಿತ್ಯಪ್ರಭ ನಿಮ್ಮ ಬಂದ ಕಾರ್ಯಾಂತರಮಂ (ಜಗವಿ. ೨–೪೨). [ಸಂ. (ಆದಿತ್ಯ + ಪ್ರಭಾ + –)]

**ಆದಿತ್ಯಬಲ** (ನಾ). ಸೂರ್ಯಬಲ: ಯಾದವ ನಾರಾಯಣನ ಅವತಾರಕ್ಕೆ ತಾರಾಬಲಂ ಆಯಿಶ್ವರ್ಯಕ್ಕೆಯಾದಿತ್ಯಬಲಂ ಚತುರೋಪಾಯಕ್ಕೆ ಚಂದ್ರಬಲಂ (ಸೌಇಇ. XX, ೨೦೨–೧೦; 1244). [ಆದಿತ್ಯ + ಬಲ]

**ಆದಿತ್ಯಭಕ್ತ** (ನಾ). ಒಂದು ಗಿಡದ ಹೆಸರು: "ಮಂಡೂಕೀ—ಆದಿತ್ಯಭಕ್ತ" (ಓಷಧಿ. ೧೧೫); ಆದಿತ್ಯಭಕ್ತ—ಈ ಸಮೂಲವನ್ನು ಅಕ್ಕಿಗಚ್ಚಿನಲ್ಲಿ ಕುಡಿಯಲು ಹೊಟ್ಟೆಗಟ್ಟು ಮಾಣ್ಗುಂ (ವಿವೈವಿ. ೧). [ಸಂ. ಆದಿತ್ಯಭಕ್ತಾ]

**ಆದಿತ್ಯವಾರ** (ನಾ). ಸೂರ್ಯನ ಹೆಸರಿನ ವಾರ; ಭಾನುವಾರ: ಸರ್ವ್ವಧಾರಿ ಸಂವತ್ಸರದ ಜ್ಯೇಷ್ಠ ಶುದ್ಧ ತ್ರಯೋದಶಿ ಆದಿತ್ಯವಾರದನ್ದು (ಇಆ. IV, ೧೮೦–೧೩ ; 1048).

ಆದಿತ್ಯವಾರದವರು = ಆದಿತ್ಯವಾರದ ದಿನ ತಮ್ಮ ಕುಲದೈವವನ್ನು ಪೂಜಿಸುವವರು; ಹಾಲುಕುರುಬರಲ್ಲಿ ಒಂದು ಪಂಗಡ (ಎಸವ್ಯೆ. I, ೪). [ಆದಿತ್ಯ + ವಾರ$_3$]

**ಆದಿತ್ಯಸುತ** (ನಾ). ೧. ಸೂರ್ಯನ ಮಗ; ಕರ್ಣ: ಆದಿತ್ಯಸುತಸುತನ ಶೌರ್ಯಮಂ . . . ಏವೇಳ್ವೆನಾಹವದೊಳು (ಜೈ ಮಿ ಭಾ. ೮–೩೪). ೨. ಸುಗ್ರೀವ. ೩. ಶನಿ. ೪. ಯಮ. [ಆದಿತ್ಯ + ಸುತ]

**ಆದಿತ್ಯಾಲಯ** (ನಾ). ಸೂರ್ಯದೇವಸ್ಥಾನ: ನೆಗಬ್ದುತ್ತುಂಗ ಶಿವಾಲಯ ಪ್ರತತಿಯಾದಿತ್ಯಾಲಯಂ ಸಾಲೆ ವಿಷ್ಣುಗೃಹಂ ಬುದ್ಧವಿಹಾರ ಮಹಾಭವನಂ (ಸೌಇಇ. XX, ೪೯–೩೯ ; 1076). [ಆದಿತ್ಯ + ಆಲಯ]

**ಆದಿದೇವ** (ನಾ). ೧. ಮೊಟ್ಟಮೊದಲಿನ ಪ್ರಭು ; ಪರಮ ಪ್ರಭು. ೨. ವಿಷ್ಣು. ೩. ಶಿವ. ೪. ಬ್ರಹ್ಮ. ೫. = ಆದಿಜಿನ : ಇದಿರ್ಗೊಳ್ವಂತಾಯ್ತು . . . ಇಂದ್ರಶೈಲಕ್ಕತಿಶಯಮಹಿಮಂ ಬಂದೊಡಂದಾದಿದೇವಂ (ಆದಿಪು. ೭–೬೦). [ಆದಿ$_{2}$ + ದೇವ]

**ಆದಿದ್ರಾವಿಡ** (ನಾ). ಹಿಂದುಗಳಲ್ಲಿ ಒಂದು ಪಂಗಡದ ಹೆಸರು. [ಆದಿ$_{2}$ + ದ್ರಾವಿಡ]

**ಆದಿಧೌರ್ಯ** (ನಾ). ಸಮರ್ಥರಲ್ಲಿ ಅಗ್ರಗಣ್ಯ; ಅಗ್ರೇಸರ: ಮಾಯೆಯಂ ಕೋಳಾಹಳಂಗೆಯ್ದು ಹಲಗೆಯಾರ್ಯ ಶಂಭುಕಾರ್ಯವಿನುತಾದಿಧೌರ್ಯಂ (ವೀಶೈಪು. ೩–೧೪–೩). [ಸಂ.]

**ಆದಿನಾಥ** (ನಾ). = ಆದಿಜಿನ.

ಆದಿನಾಥಮತ = ಜೈನಮತ ; ತೀರ್ಥಂಕರ ಮತ (?) : ತತ್ತ್ವಮನಾದಿನಾಥಮತದಿಂ ಸಿರಿಯಂ ನೃಪರಿಂ ಮಹಾಪ್ರಸಿದ್ಧತ್ವಮನಗ್ಗದಕ್ಕರಿಗರಿಂ . . . ಪಡೆದೊಂ (ಶಾಂತಿಪು. ೧೨–೮೦). [ಆದಿ$_{3}$ + ನಾಥ]

**ಆದಿನಾರಾಯಣ** (ನಾ). ಮೊದಲನೆಯ ನಾರಾಯಣ; ವಿಷ್ಣು : ಆದಿನಾರಾಯಣನಾ ಶೇಷನೊಡಗೂಡಿಯಾದರದಿಂದವತರಿಸೆ (ಹದಿಬ. ೧–೩). [ಆದಿ$_{3}$ + ನಾರಾಯಣ]

**ಆದಿನಾರಾಯಣಿ** (ನಾ). ಆದಿನಾರಾಯಣನ ಪತ್ನಿ ; ಲಕ್ಷ್ಮಿ : ಆದಿನಾರಾಯಣಿ ಪರಾಯಣಿ ನಾದಮಯಿ ಗಜಲಕ್ಷ್ಮಿ ಸತ್ತ್ವಗುಣಾಧಿದೇವತೆ (ಕುವ್ಯಾಅ. ೧–೬). [ಸಂ. ಆದಿನಾರಾಯಣೀ]

**ಆದಿಪರ್ವ** (ನಾ). ೧. ಮಹಾಭಾರತದಲ್ಲಿ ಮೊದಲನೆಯ ಪರ್ವ : ಕರ್ಣಾಟ ಭಾರತ ಕಥಾಮಂಜರಿಯೊಳ್ ಆದಿಪರ್ವಂ ಸಮಾಪ್ತಮಾದುದು (ಕುವ್ಯಾಅ. ೨೦–೬೯ ವ). ೨. ಮೊದಲನೆಯ ಹಬ್ಬ; ಯುಗಾದಿ ಹಬ್ಬ (ದಕ. ೬). [ಆದಿ$_{3}$ + ಪರ್ವ]

**ಆದಿಪುರಾಣ** (ನಾ). ೧. ವ್ಯಾಸರು ಬರೆದ ಮೊದಲನೆಯ ಪುರಾಣ. ೨. [ಜೈನ] ಮೊದಲನೆಯ ತೀರ್ಥಂಕರನಾದ ವೃಷಭದೇವನ ಚರಿತ್ರೆಯನ್ನು ತಿಳಿಸುವ ಪುರಾಣ; ಪಂಪನು ರಚಿಸಿದ ಒಂದು ಗ್ರಂಥ : ಸ್ವರ್ಗಾಪವರ್ಗಕ್ಕಮಾಸ್ಪದಮಪ್ಪಾದಿಪುರಾಣ ವಸ್ತುಕೃತಿಯಂ ಪೇಟ್ದಂ . . . ಸಂಸಾರಸಾರೋದಯಂ (ಆದಿಪು. ೧೬–೭೮). [ಆದಿ$_{2}$ + ಪುರಾಣ]

**ಆದಿಪುರುಷ** (ನಾ). ೧. = ಆದಿಜಿನ : ಪುರಮುಮಂತಃಪುರಮುಮಾದಿಪುರುಷಜನ್ಮೋತ್ಸವ ಸುಧಾಂಬುರಾಶಿಯೊಳ್ ಕೂಡಿ ಮೂಡಿ (ಆದಿಪು. ೭–೧೧೪ ವ). ೨. = ಆದಿನಾರಾಯಣ: ಅಬ್ಜಾಯತನೇತ್ರನಾದಿಪುರುಷಂ ಪುರುಷೋತ್ತಮನೀ ಚಳುಕ್ಯನಾರಾಯಣದೇವಂ (ಗದಾಯು. ೧–೧) ; ದೇವರ ದೇವನಾದಿಪುರುಷಂ ಜಲಶಯ್ಯೆಯೊಳಿರ್ದಪಂ (ಜಗವಿ. ೧–೩೨). ೩. ಶಿವ: ಆದಿಪುರುಷನೊಬ್ಬ ಪುರುಷನು ನಮ್ಮ ಕೂಡಲಸಂಗಯ್ಯ (ಬಸವ. ೯೫೫). [ಆದಿ$_{2}$ + ಪುರುಷ]

**ಆದಿಪ್ರಸಾದಿ** (ನಾ). [ವೀಶೈ] ಚಿತ್ತದ ಐಕ್ಯದಿಂದ ಶಿವನ ಪ್ರಸನ್ನತೆಗೆ ಪಾತ್ರನಾದವನು : "ಚಿತ್ತದ ಕೂಟದಿಂದ ಶಿವನು ಪ್ರಸನ್ನನಾಗುತಿಹನು ಆದೂ ಕಾರಣದಿಂದ ಆವಾತಂಗೆ ಶಿವತ್ತ್ವವುಂಟು ಆತನು ಆದಿಪ್ರಸಾದಿಯೆಂದು ಹೇಳಲ್ಪಡುತ್ತಿಹನು" (ಕೈವಟೀ. ೫೨). [ಆದಿ$_{2}$ + ಪ್ರಸಾದಿ]

**ಆದಿಪ್ರಾಸ** (ನಾ). [ಛಂದ] ಪದ್ಯದ ಪ್ರತಿಪಾದದ ಆದಿಯಲ್ಲಿ ಒಂದೆರಡನೆಯ ಸ್ವರಗಳ ನಡುವೆ ಒಂದೇ ವಿಧವಾದ ವ್ಯಂಜನವಿರುವಂತಹ ರಚನೆ ; ದ್ವಿತೀಯಾಕ್ಷರ ಪ್ರಾಸ : ಆದಿಪ್ರಾಸವನ್ನು ಬಿಟ್ಟು ಅಂತ್ಯಪ್ರಾಸವನ್ನು ಹೇಳಿರುವುದೂ ಉಂಟು (ಕೈಪಿಡಿ. ೭೫). [ಆದಿ$_{2}$ + ಪ್ರಾಸ]

**ಆದಿಬ್ರಹ್ಮ** (ನಾ). = ಆದಿಜಿನ : ಶ್ರೀದೇವೇಂದ್ರಮುನೀಂದ್ರವಂದಿತಗುಣವ್ರಾತಂ ಜಗತ್ಸ್ವಾಮಿ ಸಂದಾದಿಬ್ರಹ್ಮನಗಾಧಬೋಧನಿಳಯಂ (ಆದಿಪು. ೧–೧). [ಆದಿ$_{2}$ + ಬ್ರಹ್ಮ]

**ಆದಿಭಟ್ಟಾರಕ** (ನಾ). = ಆದಿಜಿನ : ಇಂದ್ರನಂತೆನಗೆ ಸಾಲವಿನ್ನೆರಡೆ ಕೈಯೆರಟ್ಟಿಕಣ್ಗಳೊಂದೆ ನಾಲಗೆಯುಮೆಂದೆ ಚಿಂತಿಸುವೆನಾದಿಭಟ್ಟಾರಕಾ (ಆದಿಪು. ೧೩–೮೯). [ಆದಿ$_{3}$ + ಭಟ್ಟಾರಕ]

**ಆದಿಭೈರವ** (ನಾ). ರುದ್ರ : ಭೋಂಕನೇಕಾರ್ಣವದೊಳಾಡುತಿಹ ಕೂರ್ಮಾಂಕನಂಕನದ್ವೇಗದಿಂ ತೆಗೆದಾದಿಭೈರವಂ ಸಂಹಾರಮಂ ಮಾಡಿದಂ (ವೀಶೈಪು. ೩–೧೧–೧೧). [ಆದಿ$_{2}$ + ಭೈರವ]

**ಆದಿಮ** (ಗು). ೧. ಮೊದಲಿನ ; ಮೂಲದ. (ನಾ). ೨. ಮೊದಲಿನವನು ; ಪ್ರಥಮ : ಪ್ರೇಮನೈರ್ಮಲ್ಯ ನಮ್ರತಾ ಸಂತೋಷ ಸಂಭೂತಮಿದು ಜೀವಾತ್ಮಸಂದೋಹ ಅಜಮನಸ್ಸಂಜಾತರಾದಿಮರ ತೆರವೆಸೆವುದು (ಮಲೆದೇ. ೩೬–೧೦). ೩. (?) : ಕೃಷ್ಣನ ಭಾಗಿಯ ನವಗೆ ಆದಿಮ ಮಾಡಿದ ಬಾಳ ವಿವರ (ಕಇ. III–i, ೧೧–೩೯ ; 1542). [ಸಂ.]

**ಆದಿಮಾರ್ಗ** (ನಾ). ಪ್ರಾಚೀನರ ಮಾರ್ಗ ; ಹಿಂದಿನವರ ಮಾರ್ಗ; ಮೊದಲಿನ ಮಾರ್ಗ : ಮನಂ ಸಂತಸಂಬಡೆ ಪರಿಪುಷ್ಟ ಹರ್ಷೋತ್ಕರ್ಷಚಿತ್ತನಾಗಿಯಾದಿಮಾರ್ಗ ಪ್ರಹಿತಮತಿಯಾಗಿ ಪಾಂಡುಕಶಿಳಾತಳಮೆ ರಂಗಭೂಮಿಯಾಗೆ (ಶಾಂತಿಪು. ೧೦–೬೦ ವ) ; ಕನ್ನಡಕ್ಕಂ ಸಂಸ್ಕೃತಕ್ಕಂ ಸಮಾಸವಿಲ್ಲ ಆದಿಮಾರ್ಗದಿನೆಂತರ್ಕೆ ಕೆಲವಂ ಸಂದುವನಱಿದಿರ್ಪುದು (ಶಮದ. ೧೭೪ ವೃತ್ತಿ). [ಆದಿ$_{3}$ + ಮಾರ್ಗ]

**ಆದಿಮುಕ್ತ** (ನಾ). [ಶೈವ] ಬಂಧನದಲ್ಲಿದ್ದು ಮೋಕ್ಷವನ್ನು ಪಡೆದವನು : ಪರಮಶಿವನ ಉಪಾಸನೆಯಿಂದ ವೀತಮಲರಾದ ಪುರುಷರು ಪರಮಶಿವನ ಪರಮಸಾಮ್ಯವೆಂಬ ಮುಕ್ತಿಯನ್ನು ಹೊಂದಿ ಶಾಶ್ವತಶಿವರಾಗಿರುವರು. ಆದರೆ ಇವರು ಆದಿಮುಕ್ತರು, ಪರಮಶಿವನು ಅನಾದಿಮುಕ್ತನು ಆದುದರಿಂದಲೇ ಪರಮಪದ ವಿಶೇಷಣವು (ಹಿಂದಸಾ. ೩೦೧). [ಆದಿ$_{3}$ + ಮುಕ್ತ]

**ಆದಿಮುನಿಪತಿ** (ನಾ). = ಆದಿಜಿನ : ಕಚ್ಛ ಮಹಾಕಚ್ಛ ಮರೀಚ್ಯಾದಿಗಳಾದಿಮುನಿಪತಿಯ ಮೊಗಮಂ ನೋಡಿ (ಆದಿಪು. ೯–೮೮ ವ). [ಆದಿ$_{2}$ + ಮುನಿ$_{3}$ + ಪತಿ$_{3}$]

**ಆದಿಮೂಲ** (ನಾ). ೧. ಮೊಟ್ಟಮೊದಲು ; ಉಗಮಸ್ಥಾನ. ೨. ಎಲ್ಲಕ್ಕೂ ಮೂಲವಾದ ಭಗವಂತ : ಕರಿರಾಜ ಕಷ್ಟದಲಿ ಆದಿಮೂಲ ಎಂದು ಕರೆಯಲಾಕ್ಷಣ ಬಂದು ಒದಗಿದೆಯೊ ನರಹರಿಯೆ (ಕನಕ. ೧೨೧–೧). [ಆದಿ$_{2}$ + ಮೂಲ]

**ಆದಿಯಮಕ** (ನಾ). [ಕಾವ್ಯಮೀ] ಪದ್ಯದ ಪಾದಗಳ ಮೊದಲಲ್ಲಿ ಬರುವ ಯಮಕ. ಉದಾ : ಮಂತಣಕಂ ಚದುರರ್ ಗಡ ಮಂತಣಕಂ ನೆಗಟಿ ಬಂದರೆನಿಸಿರ್ದುಂ ತಾಂ ಮಂತಣಮುಸಿರದೆ ಕೆಲರಾಮಂತಣ ಮುಂಡಂತೆ ಪೆಜರ ನಯದೊಳೆ ತಣಿವರ್ (ಕಾವ್ಯಾವ. ೫೩೫). [ಆದಿ$_{2}$ + ಯಮಕ]

**ಆದಿಯುಗ** (ನಾ). ಮೊದಲನೆಯ ಯುಗ ; ಕೃತಯುಗ : ನಡೆವುದಾದಿಯುಗಂಗಳೊಳು ನಾಲ್ಕಡಿಯೊಳುನ್ನತ ಧರ್ಮವು (ಬಸವು. ೨–೫). [ಆದಿ$_{3}$ + ಯುಗ]

**ಆದಿರಂಗ** (ನಾ). **೧.** (ಕಾವೇರಿಯಲ್ಲಿ) ಮೊದಲನೆಯ ದ್ವೀಪದಲ್ಲಿ ನೆಲಸಿರುವ ರಂಗನಾಥ. **೨.** ರಂಗನಾಥನ ಸ್ಥಾನವಾದ ಶ್ರೀರಂಗ ಪಟ್ಟಣ (ದಕ. ೬). [ಆದಿ₂ + ರಂಗ]

**ಆದಿರಾಜ** (ನಾ). **೧.** ಮೊದಲನೆಯ ರಾಜ : ನೀನಾದಿರಾಜನೈ ನಿನಗಾ ನಾಲ್ಕುಂ ರಾಜವಿದ್ಯೆ ಪುಟ್ಟಿದುದಱಿಂ ನೀನೆ ಬೆಸಸುವುದು ನಯಮಂ (ಆದಿಪು. ೧೪-೧೦); ಆದಿರಾಜಪರಂಪರಾಪುತ್ರ ಪೌತ್ರನಕಳಂಕಾಚಾರ ಸಾರಂ ಸುಖದೊಳರಸುಗೆಯ್ಕೆ (ಶಾಂತಿಪು. ೬-೬೧ ವ). **೨.** ಮನು ಚಕ್ರವರ್ತಿ. **೩.** [ಜೈನ] ಭರತಚಕ್ರವರ್ತಿಯ ಮಗನೊಬ್ಬನ ಹೆಸರು : ಆ ದಿನದೊಳು ಜಾತಕರ್ಮವ ಮಾಡಿಸಿ ದ್ವಾದಶದಿನದೊಳು ನೃಪತಿ ಆದಿಜಿನನ ಪೆಸರವನಾದಿರಾಜನೆಂದಾದರಮಿಗೆ ನಾಮವಿಟ್ಟ (ಭರತ. ೨೫-೯೮). **೪.** ಒಂದು ಗಿಡದ ಹೆಸರು (ಮೈಔಗಿ. ೨೫-೪೬೬).
[ಆದಿ₂ + ರಾಜ]

**ಆದಿರಾಜಮಾವು** (ನಾ). ಒಂದು ಜಾತಿಯ ಮಾವು : "ಮನ್ಮಥಾ ನಂದಃ— ಆದಿರಾಜಮಾವು, ಮದನೇಚ್ಛಾಫಲಃ— ಆದಿರಾಜಮಾವು, ವನೇಜ್ಯಃ— ಆದಿರಾಜಮಾವು, ರಸಾಲಃ— ಆದಿರಾಜಮಾವು" (ಓಷಧಿ. ೧೨೨; ೧೨೩; ೧೩೩; ೧೪೬). [ಆದಿರಾಜ + ಮಾವು]

**ಆದಿರುದ್ರ** (ನಾ). [ವೀಶೈ] ತ್ರಿಮೂರ್ತಿಗಳಿಗೂ ಮೂಲನಾದ ಪರಮೇಶ್ವರ : ಆದಿರುದ್ರನ ಮಗಳು ಆದಿಶಕ್ತಿ (ಬಸವ. ೮೩೦).
[ಆದಿ₂ + ರುದ್ರ]

**ಆದಿಲಕ್ಷ್ಮೀ** (ನಾ). = ಆದಿನಾರಾಯಣಿ : ಆದಿಲಕ್ಷ್ಮಿಯ ಗಂಡನೆಸೆದನು . . . ಕೌಸಲೆಯ ಗರ್ಭದಲಿ (ತೊರರಾ. ೧-೮-೧). [ಸಂ. ಆದಿಲಕ್ಷ್ಮೀ]

**ಆದಿಲಿಂಗ** (ನಾ). [ವೀಶೈ] ಜಗತ್ತಿಗೆ ಮೂಲಭೂತವಾದ ಲಿಂಗ; ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವಾದ ಆದಿ ಶಿವತತ್ತ್ವ; ಮೂಲ ಲಿಂಗ : ಆದಿಲಿಂಗವೆಂಬುದು ಬೇಱಿಲ್ಲ ಕಾಣಿರೊ . . . ಮುಂದಿರ್ದ ಘನವ ನೀವಱಿಯಿಂ ಭೋ (ಅವಚಂ. ೨೮೨-೧೨೫).
[ಆದಿ₂ + ಲಿಂಗ]

**ಆದಿವಸ್ತು** (ನಾ). ಪರವಸ್ತು : ವೇದ ಸಿದ್ಧಾಂತ ಪುರಾಣ ತರ್ಕಾಗಮ ದೋದಿಗೆ ಸಿಲ್ಕಿ ಸಿಲ್ಕದನಾ ಆದಿಗನಾದಿಯಿಂದತ್ತತ್ತಲಱಿವೇಱಿದಾದಿ ವಸ್ತುವ ಕಂಡರವರು (ಭರತ. ೬೬-೩೧). [ಆದಿ₂ + ವಸ್ತು]

**ಆದಿವಾರ** (ನಾ). ವಾರದ ಮೊದಲನೆಯ ದಿನ; ಭಾನುವಾರ: ಪಂಚಮಿ ಆದಿವಾರ ಧಾರೇಸ್ವರ ದೇವರ (ಇಎ. ೧೯೪೬, ಭಟ್ಕಲ್. ೩೪೨-೫; 1005); ವೈಶಾಖ ಸುಧ ಆದಿವಾರದಂದು (ಎಕ. VI, ತರೀಕೆ. ೪-೩; 1265).
[ಆದಿ₂ + ವಾರ₃]

**ಆದಿವಾಸರ** (ನಾ). = ಆದಿವಾರ : ಶುಕ್ಲಪಕ್ಷದೊಳ್ ಬಿದಿಗೆಯೊಳಾದಿ ವಾಸರದೊಳುತ್ತರೆಯೊಳ್ . . . ಅದುದು ಕವಿರತ್ನನಂದನನ ರಾಯನ ಜಾತಕಂ (ಅಜಿಪು. ೧೨-೫೧). [ಆದಿ₂ + ವಾಸರ]

**ಆದಿವಾಸಿ** (ನಾ). ಒಂದು ದೇಶದ ಮೂಲನಿವಾಸಿ : ಆದಿವಾಸಿ ಗಳಾದ ಬಡಗರು ಬೆಟ್ಟದ ಮೇಲೆ ಸಾಲುಸಾಲಾಗಿ ಕಟ್ಟಿದ ಗುಡಿಸಲುಗಳಲ್ಲಿ ವಾಸಿಸುವರು (ದ್ರಾವಿವಿ. ೧೯೫). [ಸಂ. ಆದಿವಾಸಿನ್]

**ಆದಿವಿಭಕ್ತಿ** (ನಾ). [ವ್ಯಾಕ] ಮೊದಲನೆಯ ವಿಭಕ್ತಿ; ಪ್ರಥಮಾ ವಿಭಕ್ತಿ : ಆದಿವಿಭಕ್ತಿಯೊಳಂ ಸ್ವಾಮ್ಯಾದಿಯೊಳಂ ಷಷ್ಠಿ ತಾನದಕ್ಕುಂ (ಕಾವ್ಯಾವ. ೧೨೦). [ಆದಿ₂ + ವಿಭಕ್ತಿ]

**ಆದಿಶಕ್ತಿ** (ನಾ). ಮೂಲಶಕ್ತಿ; ಮಹೇಶ್ವರಿ : ಮೋದದಿಂದಾಕುಂಚನಂ ಗೆಯ್ವಾದಿಶಕ್ತಿಯನಾಂತು (ಬಸವು. ೫೫-೪೯); ಆಂ ಮಹೇಶನಾಶ್ರಯಂ ಗೆಯ್ದಿರ್ಪವಳ್ ಎನ್ನಂ ಮಹೇಶ್ವರಿಯೆಂದುಂ ಆದಿಶಕ್ತಿಯೆಂದುಂ ಕರೆವರ್ (ಅದ್ಭುತ. ೫೩-೧೭). [ಆದಿ₂ + ಶಕ್ತಿ]

**ಆದಿಶೇಷ** (ನಾ). ಮಹಾವಿಷ್ಣುವಿನ ಹಾಸಿಗೆಯಾದ ಸರ್ಪರಾಜ.
[ಆದಿ₂ + ಶೇಷ]

**ಆದಿಶೈವ** (ನಾ). **೧.** [ವೀಶೈ] ಏಳು ಬಗೆಯ ಶೈವಪ್ರಭೇದಗಳಲ್ಲಿ ಒಂದು : ಆದಿಶೈವವನನುಕರಿಸದೆ (ಪೋಳಮಾ. ೧೨೬-೪೯೧); ಆದಿಶೈವ, ಮಹಾಶೈವ, ಅನುಶೈವ, ಅಂತರ (ಅವಾಂತರ) ಶೈವ, ಪ್ರವರಶೈವ, ಅಂತ್ಯ ಶೈವ ಎಂಬ ಈ ಆಱು ಶೈವದ ನೀತಿಯಲ್ಲ (ಸಿದ್ದೇವ. ೯); ಆ ದೀಕ್ಷಾ ಯುಕ್ತಮಾದ ಅನಾದಿಶೈವ, ಆದಿಶೈವ . . . ಅಂತರಶೈವವೆಂಬವೇ ಸಪ್ತ ಶೈವಂಗಳು (ವಿವೇಕ. ೬೨). **೨.** ಆದಿಶೈವ ದೀಕ್ಷೆಯನ್ನು ಹೊಂದಿದ ವನು : ಅವುಗಳಲ್ಲಿ ಶಿವನ ಪಂಚವಕ್ತ್ರದಿಂ ದೀಕ್ಷಿತರಾದ ಕೌಶಿಕಾದಿ ಋಷೀಶ್ವರರೇ ಆದಿಶೈವರು (ವಿವೇಕ. ೬೨). [ಆದಿ₂ + ಶೈವ]

**ಆದಿಷ್ಟ** (ಗು). **೧.** ಉಪದೇಶ ಹೊಂದಿದ; ಅಪ್ಪಣೆ ಪಡೆದ. **೨.** [ವ್ಯಾಕ] ಆದೇಶವಾದ. [ಸಂ.]

**ಆದಿಷ್ಟಣ** (ನಾ). ಅಸ್ತಿಭಾರ : ಸೋವಂಣನು ಮಾಡಿಸಿದ ಧರ್ಮ ದೇವಲ್ಯದ ಮುಂದಣ ಆದಿಷ್ಟಣ (ಮೈಆರಿ. ೧೯೨೯, ೪-೫; 1355).
[< ಸಂ. ಅಧಿಷ್ಠಾನ]

**ಆದೀಕೆ** (ನಾ). ಲಾಭ; ಆದಾಯ : ಆದೀಕವಿದ್ದೋನು ಉಂಡು ಸಾಯ ಲಿಲ್ಲ, ಸಾಲವಿದ್ದೋನು ತೀರಿಸಿ ಸಾಯಲಿಲ್ಲ (ಗಾದೆ). [< ಸಂ. ಆಧಿಕ್ಯ]

**ಆದೀಕೆರೆ** (ನಾ). ಒಂದು ಊರಿನ ಹೆಸರು : ಆದೀಕೆರೆ ಮಾಧವಭಟ್ಟರ ಮಕ್ಕಳು (ಎಕ. VII, ಶಿವಮೊ. ೨-೧೦೫; 1641).
[ಆದಿ₂ + ಕೆರೆ₂ (< ಕೆಱೆ)]

**ಆದೀನವ** (ನಾ). **೧.** ಕ್ಲೇಶ; ವ್ಯಥೆ; ವೇದನೆ. **೨.** ದೋಷ: "ದೋಷಃ, ಆದೀನವಃ— ಈ ೨ ದೋಷಂ" (ಹಲಾಯು. ೧೨೭-೮೬). [ಸಂ.]

**ಆದೀಶ್ವರ** (ನಾ). =ಆದಿಜಿನ: ತ್ರಿಪುರವನು ಜಾತರೂಪನು ತಳೆದಾದೀಶ್ವರ ಸುಟ್ಟ ಕೌತುಕವನು ಪೇಳುವೆನು (ತ್ರಿಪುಸಾಂ. ೩-೩೫). [ಸಂ.]

**ಆದು** 'ಆಯ್₁' ಪರಾ.

**ಆದುಣಿಗ** 'ಆಯ್₁' ಪರಾ.

**ಆದುದರಿಂದ, ಆದ್ದರಿಂದ** (ಅ). ಆ ಕಾರಣದಿಂದ; ಅದರಿಂದ; ಆ ನಿಮಿತ್ತವಾಗಿ : ಆದರೆ, ಆದರೂ, ಆದ್ದರಿಂದ (ಆದುದರಿಂದ) ಆದ ಕಾರಣ —ಇವು ಮುಖ್ಯವಾಗಿ ವಾಕ್ಯಗಳಿಗೆ ಸಂಬಂಧವನ್ನು ಕಲ್ಪಿಸತಕ್ಕ ಅವ್ಯಯಗಳು (ಮಧ್ಯಮ. ೧೬೧). **ಆದ್ದರಿಂದ** : ನೀರು ನಿಂತ ಕಡೆ ಸೊಳ್ಳೆಗಳು ಹೆಚ್ಚುತ್ತವೆ. ಆದ್ದರಿಂದ ಜೌಗುನೆಲದಲ್ಲಿ ಮನೆ ಕಟ್ಟಬಾರದು (ಮಧ್ಯಮ. ೧೬೧). [< ಆಗು₁]

**ಆದೃತ** (ಗು). **೧.** ಆದರಿಸಲ್ಪಟ್ಟ; ಗೌರವಿಸಲ್ಪಟ್ಟ. **೨.** ಆದರವುಳ್ಳ; ಆಸಕ್ತಿಯುಳ್ಳ. [ಸಂ.]

**ಆದೃಪ್ತ** (ಗು). ಸೊಕ್ಕಿದ; ಕೊಬ್ಬಿದ : ಮುದಿತ ಸುರಾನೀಕನಾದೃಪ್ತ [ಪಾಠಾಂ. ಮುದ್ವೃತ್ತ] ವಿಶ್ವಾವನಿಭೃದ್ವ್ಯಾಹಾಬಲೋನ್ಮೂಲನ ಪಟುತರ ದೋರ್ವಿಕ್ರಮಂ (ಆದಿಪು. ೮-೪೯). [ಸಂ.]

**ಆದೆ₁** (ನಾ). ಗೂಬೆಯ ಜಾತಿಗೆ ಸೇರಿದ ಪಕ್ಷಿ; ಹಂದಿಗೀರನ ಹಕ್ಕಿ : ಕಾಗೆ ಕುಟುಕ ಕೊಂಬಾಗ ಗೂಗೆ ಕಣ್ಣ ತೆಗೆಯಿತ್ತು, ಗೂಗೆ ಕಣ್ಣ ತೆಗೆದಾಗ ಆದೆಯ ಹಕ್ಕಿ ಬಾಯ ಬಿಟ್ಟತ್ತು ಆದೆಯ ಹಕ್ಕಿ ಬಾಯಬಿಡುವಾಗ ಮಾದೇವ ಹೆಡೆಯ ಮಾದೇವನಾದ (ನಗವಾ. ೬೮). [< ಅಂದೆ]

**-ಆದೆ₂** (ಪ್ರ). ಧಾತುಗಳಿಗೆ ನಿಷೇಧಾರ್ಥದಲ್ಲಿ ಸೇರುವ ಪ್ರತ್ಯಯ : ವಿತ್ತಿದಲ್ಲಿ ವೆಳೆಯಾದೆ ಕೆಡುಗೆ (ಎಕ. VII, ಶಿಕಾರಿ. ೧೫೪-೧೫; 685); ತಪ್ಪಾದೆ ನೋನ್ತು (ಎಕ. II, ೨೭-೨; 700); ಇದನ್ ವಕ್ರಮಿಲ್ಲಾದೆ ಕಾದು (ಎಇ. IX, ೨೧-೧೩; 800). ℙ ಇದು ಪೂರ್ವದ ಹಳಗನ್ನಡ ದಲ್ಲಿ ವಿಶೇಷವಾಗಿ ಬಳಕೆಯಲ್ಲಿತ್ತು.

**ಆದೆಪ** (ನಾ). ಒಬ್ಬಾತನ ಹೆಸರು: ಶ್ರೀ ಆದೆಪ ಮುದಪ್ಪರಾ ಮಗನ ಎಟಿಕೇಸಿಗಳಾ ಪೆಣ್ಣರ್ ಮದಕೆ ಗೌತುಮೇಶ್ವರಕೆ ಕೊಟ್ಟದು (ಎಕ. VII, ಶಿಕಾರಿ. ೪೫-೨೧; 890). [?]

**ಆದೇಯ** (ಗು). **೧.** ಸ್ವೀಕರಿಸಬಹುದಾದ; ತೆಗೆದುಕೊಳ್ಳಬಹುದಾದ: ವಿವೇಕಿಗಮರತ್ವಂ ಹೇಯಮಾದೇಯಮೇ (ಮಲ್ಲಿಪು. ೧೩-೧೨೨). (ನಾ). **೨.** ದಾನ (ಕ). **೩.** [ಜೈನ] ಒಂದು ಬಗೆಯ ನಾಮಕರ್ಮ: ಸುಭಗ ದುರ್ಭಗ ಸುಸ್ವರ ದುಸ್ಸ್ವರಾದೇಯಾನಾದೇಯ ...ಎಂಬೇಟ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ (ಪಂರಾಮಾ. ೧೬-೮೦ ವ). [ಸಂ.]

**ಆದೇಯನಾಮಕರ್ಮ** (ನಾ). [ಜೈನ] ತೊಂಬತ್ತು ಮೂರು ಬಗೆಯ ಕರ್ಮಗಳಲ್ಲಿ ಒಂದು: "ಆದೇಯನಾಮಕರ್ಮ: ದೇಹಕ್ಕೆ ಕಾಂತಿಯನ್ನುಂಟುಮಾಡುವ ಕರ್ಮಪ್ರಕೃತಿಯಿದು" (ಜೈನಪ. ೩೭೬). [ಆದೇಯ + ನಾಮ + ಕರ್ಮ]

**ಆದೇಯರೂಪ** (ನಾ). ಮೆಚ್ಚಿಕೆಗೆ ಅರ್ಹವಾದ ರೂಪವುಳ್ಳವನು: ಅದೊಂದು ಗೃಹಮಂ ಪುಗುವುದುಂ ಆಗಳಾ ಗೃಹದ ವಿಪ್ರವಧು ಆದೇಯ ರೂಪರಂ ಕಂಡಾದರಿಸಿದಳೇಱಲಿಕ್ಕಿದಳ್ (ಪಂರಾಮಾ. ೭-೧೨೫). [ಆದೇಯ + ರೂಪ]

**ಆದೇಶ** (ನಾ). **೧.** ಆಜ್ಞೆ; ಅಪ್ಪಣೆ; ನಿರೂಪ; ನಿರ್ದೇಶ: ಎಂಬುದುಂ ಮಹಾಪ್ರಸಾದಮೆಂದಾ ದ್ವಿತೀಯಮುನೀಶ್ವರನಗ್ರಮುನೀಶ್ವರಾದೇಶದಿಂ ... ಜನ್ಮಾಂಧಕಿಯಲ್ಲಿಗೆ ಬಂದು (ಸುಕುಮಾ. ೫-೨೩ ವ); ಇಂದ್ವಿನರ್ ಬೆಳಪರಾರಾದೇಶದಿಂ ತದ್ರಮಾಸ್ಪದನೆನ್ನಂ ತಳೆದಿರ್ಪಂ (ಜಗವಿ. ೪-೫೬). **೨.** ಭವಿಷ್ಯವಾಣಿ: ಆ ಬಿಲ್ಲನೇಱಿಸಿ ಆ ಸರಲ್ಗಳಿಂದೆ ... ಜಂತ್ರದ ಮೀನನೆಚ್ಚನುಮಾಕೆಗೆ ಗಂಡನಕ್ಕುಮೆಂದಾದೇಶಂ (ಪಂಪಭಾ. ೩-೩೨ ವ); ದೇವನಿರ್ಮಿತಮಪ್ಪ ದ್ವಾರಾವತಿಯೆಂಬ ಪೊೞಲುಂ ಪನ್ನೆರಡು ವರ್ಷದಂದಿಗೆ ದೀಪಾಯನಮುನಿಯಿಂದೆ ಕಳ್ಳಿಂದೞಿಗುಮೆಂಬಾದೇಶಂ ಕಾರಣಮಾಗಿಯಾ ದೇಶಮಂ ಬಿಸುಟು ದೀಪಾಯನಂ ತಪಂಬಟ್ಟು ಪೋದಂ (ಜೀವಸಂ. ೧೪೪-೨೧ ವ). **೩.** ಉಪದೇಶ. **೪.** [ವ್ಯಾಕ] ಒಂದು ವರ್ಣಕ್ಕೆ ಪ್ರತಿಯಾಗಿ ಮತ್ತೊಂದು ವರ್ಣವು ಬರುವುದು: "ಪಗೆಯಂತಿರಿರ್ಪುದಂ ಕಿಡಿಸಿ ಬರ್ಪುದದಾದೇಶಂ" (ಶಮದ. ೧೭೪); ಡಕಾರಕ್ಕಾದೇಶಮಾದ ೞಕ್ಕೆ (ಶಮುದ. ೧೯ ಪ್ರಯೋ). [ಸಂ.]

**ಆದೇಶಂಗೆಯ್** (ಕ್ರಿ). **೧.** ಆಜ್ಞೆಮಾಡು. **೨.** ಭವಿಷ್ಯವನ್ನುಹೇಳು: ದಾಡೆವೆರಸು ಪುಟ್ಟಿದನೆಂಬುದಂ ನೈಮಿತ್ತಿಕಂ ಶ್ರಾವಕಂ ವಸಂತಕನೆಂಬೊಂ ಕೇಳ್ದಿಂತೆಂದಾದೇಶಂಗೆಯ್ದಂ ... ಎಂದಾದೇಶಂಗೆಯ್ದುದಂ ಚಾಣಾಕ್ಯನ ತಂದೆ ಕೇಳ್ದು (ವಡ್ಡಾರಾ. ೧೮೩-೧೦); ಮುನೀಶನಾದೇಶಂಗೆಯ್ದು ಪೋಗೆಂದು ಕಳುಪಿದೊಸಗೆಗೆ (ಜಗವಿ ೧೧-೨೯).
[ಆದೇಶ + ಗೆಯ್ (< ಕೆಯ್$_1$)]

**ಆದೇಶತೆ** (ನಾ). [ವ್ಯಾಕ] ಆದೇಶವಾಗಿ ಬರುವಿಕೆ: ಪಿತೃಶಬ್ದದೆಡೆಗರಾದೇಶತೆ (ಶಮುದ. ೮೫). [ಸಂ. ಆದೇಶತಾ]

**ಆದೇಶತ್ವ** (ನಾ). = ಆದೇಶತೆ: ಅರಾದೇಶತೆ= ಅರ ಎಂಬಾದೇಶತ್ವಂ (ಶಮುದ. ೮೫ ಟೀಕೆ). [ಸಂ.]

**ಆದೇಶನ** (ನಾ). **೧.** ಅಪ್ಪಣೆಮಾಡುವುದು. **೨.** "ಆದೇಶನ ಎಂದರೆ ಪರರ ಚಿತ್ತವನ್ನು ತಿಳಿದು ತೋರಿಸುವುದು" (ತೀರ್ಥಕ. ೧೨೧). [ಸಂ.]

**ಆದೇಶಪತ್ರ** (ನಾ). **೧.** ಆಜ್ಞಾಪತ್ರ. **೨.** ಕೋರಿಕೆ ಪತ್ರ: ಈ ವರೆಗೆ ಮಾಡಿದ ವಿವೇಚನೆಯ ಮೇರೆಗೆ ಗ್ರಂಥಗಳ ಆಯ್ಕೆಮಾಡಿ ... ಗ್ರಂಥಾಲಯಕ್ಕೆ ಪೂರೈಕೆಮಾಡಬೇಕೆಂದು ಆದೇಶಪತ್ರವನ್ನು (Order) ಕಳಿಸಬೇಕು (ಗ್ರಂಥಾಲ. ೧೩). [ಆದೇಶ + ಪತ್ರ]

**ಆದೇಶಪುರುಷ** (ನಾ). ಭವಿಷ್ಯವಾಣಿಯಲ್ಲಿ ಉಕ್ತನಾದ ವ್ಯಕ್ತಿ: ತತ್ಪುರದ ಜನಮೆಲ್ಲಂ ನೇಸಱ್ ಮೂಡಿದಾಗಳ್ ಆದೇಶಪುರುಷಂ ಬಂದನೆಂದು ಅಷ್ಟಶೋಭೆಯಿಂದಿದಿರ್ಗೊಳೆ (ಚಾವುಂಪು. ೬೯-೧೩).
[ಆದೇಶ + ಪುರುಷ]

**ಆದೇಶವಚನ** (ನಾ). ಮುಂದಾಗುವುದನ್ನು ತಿಳಿಸುವ ಮಾತು; ಭವಿಷ್ಯದ ನುಡಿ: ಈ ವಚನಮಾದೇಶವಚನಂ (ಶಾಂತಿಪು. ೫-೨೭ ವ).
[ಆದೇಶ + ವಚನ]

**ಆದೇಶಸಂಧಿ** (ನಾ). [ವ್ಯಾಕ] "ಒಂದು ವ್ಯಂಜನದ ಸ್ಥಾನದಲ್ಲಿ ಮತ್ತೊಂದು ವ್ಯಂಜನ ಬರುವುದಕ್ಕೆ ಆದೇಶವೆಂದೂ, ಈ ಸಂಧಿಯನ್ನು ಆದೇಶಸಂಧಿಯೆಂದೂ ಕರೆಯುವರು" (ಮಧ್ಯಮ. ೨೦).
[ಆದೇಶ + ಸಂಧಿ]

**ಆದೇಶಿ** (ನಾ). **೧.** ಅಪ್ಪಣೆ ಮಾಡತಕ್ಕವನು. **೨.** ಸೂಚನೆ ಮಾಡತಕ್ಕವನು; ಸಲಹೆಗಾರ. **೩.** ಜೋಯಿಸ; ಭವಿಷ್ಯವನ್ನು ಹೇಳುವವನು: "ಸಾಂವತ್ಸರಃ ... ಆದೇಶೀ, ಗಣಕಃ- ಈ ೮ ಜೋಯಿಸಿಗಂ" (ಹಲಾಯು. ೬೭-೨೪೯). [ಸಂ. ಆದೇಶಿನ್]

**ಆದೇಶಿಕೆ** (ನಾ). ನಿರೂಪ; ಆಜ್ಞೆ: ರಾಷ್ಟ್ರಪತಿಯವರನ್ನು ... ಅವರ ಪದಾವಧಿಯಲ್ಲಿ ಬಂದಿಯಾಗಿ ಹಿಡಿಯಲು ಯಾವುದೇ ನ್ಯಾಯಾಲಯದಿಂದ ಆದೇಶಿಕೆ ಹೊರಡತಕ್ಕುದಲ್ಲ (ಭಾಧಾನ. ೨೧೪).
[ಸಂ. ಆದೇಶಿಕಾ]

**ಆದೇಶಿಸು** (ಕ್ರಿ). ಅಪ್ಪಣೆಮಾಡು; ಆಜ್ಞಾಪಿಸು; ನಿರೂಪಿಸು: ನೀಂ ಪೋಣರ್ದೆಂತಾದೊಡಮೆನ್ನ ಶತ್ರುಗಳನಾರ್ಪಿಂ ಕೊಂದೊಡೀ ರಾಜ್ಯ ಕುಲ್ಬಣಮಾಗಿರ್ಪೆಡರಳ್ಗಿ ಸೌಖ್ಯಮೊಗೆಗುಂ ಸಂದೇಹಮಿಲ್ಲೆಂದು ತಕ್ಷಣ ಮಾದೇಶಿಸಿ (ವಿಷ್ಣುಪು. ೫-೧೭-೧೯); ದಕ್ಷಿಣ ಭಾರತದಿಂದ ಯವನರನ್ನಟ್ಟಿ ರಾಮಸೇತುವಿನ ಮೇಲೆ ವಿಜಯಸ್ತಂಭವನ್ನು ನಿಲ್ಲಿಸು ಎಂದು ಆದೇಶಿಸುವಳು (ಸಂಕವ. ೫೧). [ಆದೇಶನ + -ಇಸು$_3$]

**ಆದೇಷ್ಟೃ** (ನಾ). **೧.** ಆದೇಶಕೊಡತಕ್ಕವನು; ನಿರ್ದೇಶಕ; ಸಲಹೆಗಾರ. **೨.** ಯಾಗಮಾಡುವವನು; ಯಜ್ಞದೀಕ್ಷಿತ: "ಯಷ್ಟಾ, ಯಜಮಾನಃ, ಆದೇಷ್ಟಾ ... ಯಾಸುತೀವಳಃ— ಈ ೯ ಯಾಗಮಾಡುವಾತಂ" (ಹಲಾಯು. ೬೯-೨೬೬). [ಸಂ.]

**ಆದೊಡೆ**, ಆದಡೆ$_1$, ಆದರೆ$_1$ (ಅ). **೧.** ಮೊದಲು ಹೇಳಿದೊಂದು ಅರ್ಥಕ್ಕೆ ವಿರೋಧವಾದ ಬೇರೊಂದು ಅರ್ಥವು ಮುಂದೆ ಬರುವುದೆಂಬುದನ್ನು ಸೂಚಿಸುವ ಅವ್ಯಯ; ವಿರೋಧಸೂಚಕಾವ್ಯಯ: ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾರತ ಮನಪೂರ್ವಮಾಗೆ ಸಲೆ ಪೇೞ್ದ ಕವೀಶ್ವರರಿಲ್ಲ (ಪಂಪಭಾ. ೧-೧೧); ಕಱಿವು ಗೋಸಹಸ್ರಮೊಳವಾದೊಡದೊರ್ವಳ [ಪಾಠಾಂ. ಮೊಬ್ಬಳ] ಪಾಲ ಲೆಕ್ಕಮಂ ನೆಱೆದಿರೆ (ಸಮುಪ. ೫-೭೬); ಕಥಾನಾಯಕಂ ದುರ್ವ್ಯಸನಿಯಾದೊಡಂ ನಿಷ್ಕಾಮನೆಂದೆಂದು ದುರ್ನೀತನಾದೊಡಂ ನೀತಿವಿದನೆಂದಜ್ಞನಾದೊಡಂ ಸಲೆ ಶಿವಜ್ಞಾನಿಯೆಂದು (ಸಿದ್ಧರಾ. ೧-೬). **೨.** ಪಕ್ಷಾರ್ಥಕ ಅವ್ಯಯ; ಆ ಪಕ್ಷಕ್ಕೆ; ಹಾಗಾದರೆ; ಹಾಗೆ ನಡೆದರೆ: ಪವನಜನಿಂದೆ ಕೌರವಕುಲಂ ಪಡಲಿಟ್ಟವೊಲಕ್ಕುಮಾದೊಡಿನ್ನವರವರಾರುಮಿಲ್ಲಣಮೆ ಸಂತತಿ ಕೆಟ್ಟಪುದು (ಪಂಪಭಾ. ೧೦-೬೩); ನಾವು ಪೊಸಲಾಂಛನಧಾರಿಗಳಪ್ಪುದಱಿಂ ನಿಮ್ಮೊಡನಿರ್ಪ ಜಾಯಿಲಂಗಳ್ ಕಂಡು ತಗುಳ್ದುಬಂದೆಮ್ಮಂ ಕಡಿದುವಾದೊಡಾದೋಷಂ ನಿಮಗಪ್ಪುದು (ಪಂಚತಂ. ೨೦-೨). **೩.** ಕೊನೆಯಪಕ್ಷ; ಕೂಡ ಎಂಬ ಅರ್ಥದಲ್ಲಿ ಬರುವ ಅವ್ಯಯ: ಪತ್ತುವಿಧಮುಂಟು ಸುತರದಱೊಳ್ ... ಒಂದು ತೆಱದ ಮಗನಾದೊಡಂ ಬೇಳಲಾ ಮಾನವರ್ಗೆ (ಜೈಮಿಭಾ. ೨೮-೫೭).

**ಆದಡೆ**$_1$: **೨.** ಭವಿಗಳು ಲಿಂಗವಂತರ ಹೊಸಮಡಿಯ ವಸ್ತ್ರಂಗಳಂ ಸಂದಿಸಿದರಾದಡೆಯಿಱಿದು ಕೆಡಹುವೆನು (ಬಸವು. ೨೧–೯). **೩.** ಎಲವೊ ಕೇಳಿನ್ನಾದಡೆಯು ಬಿಡು ಛಲವ (ತೊರರಾ. ೬–೫೦–೧೪). **ಆದರೆ**$_1$: **೨.** ಆದರಾ ಮೃತ್ಯುವಿನ ಕೈವಶವಾದವರನೆನೆಗಜುಹಬೇಹುದು (ಕುವ್ಯಾದ್ರೊ. ೬–೩೭); ಅರಸ ಕೇಳಾದರೆ ತಪೋಧನರರಸು ಕಶ್ಯಪ ಮುನಿಯ ಬಲ್ಲೈ (ತೊರರಾ. ೧–೫–೧೧). [< ಅಗು$_1$ + –ಒಡೆ$_2$]

**ಆದೊರೆತು** (ನಾ). ಅದಕ್ಕೆ ಸಮಾನವಾದುದು; ಅಂಥದು: ನಾನಾ ದೇಶ ನರೇಂದ್ರರುಂ ಘಟೋದ್ಭವನ ಧನುರ್ವೇದಮನೆ ಕಲಲ್ ಬಂದಾ ಳಾದರ್ ವಿದ್ಯಾಪ್ರಭಾವಮಾದೊರೆತೆ ವಲಂ (ಪಂಪಭಾ. ೨–೫೬). [ಆ$_2$ (< ಅದು$_1$) + ದೊರೆತು$_0$ (< ದೊರೆ$_3$)]

**ಆದೊರೆಯ** (ನಾ). **೧.** ಅಂಥವನು; ಆ ಗುಣವುಳ್ಳವನು: ಆದಿಕವೀಶ್ವರರ್ ನಡೆದ ಪದ್ಧತಿಯಿಂ ತನಗರ್ಥಶುದ್ಧಿವೆತ್ತಾದೊರೆಯಂಗಮೇಂ ನಡೆವುದಚ್ಚರಿಯೇ ಕವಿರಾಜವೀಥಿಯೊಳ್ (ಪಂರಾಮಾ ೧–೩೬). (ಗು). **೨.** ಅಂತಹ; ಅಂಥ: ಆ ದೊರೆಯ ವಿಭವದೊಳ್ ಪರಮಾದರದಿಂ (ಆದಿಪು. ೬–೧೧೧). [ಆ$_2$ (< ಅದು$_1$) + ದೊರೆಯ$_0$ (< ದೊರೆ$_3$)]

**ಆದೋಹಳ** (ನಾ). ಹೆಚ್ಚಾದ ಬಯಕೆ; ಅಪೇಕ್ಷೆ: ಓಹಿಳನನವರತ ಸುಗುಣಾದೋಹಳನನವಿಚಲಿತಭಕ್ತಿಕುತೂಹಳನಂ (ಬಸವು. ४४–३೧). [ಸಂ. ಆದೋಹಲ]

**ಆದ್ದರಿಂ** (ಅ). = ಆದುದರಿಂದ: ಸಿರಿ ನೊಗದೆ ಗುಡಿಗಟ್ಟಿತಾದ್ದರಿಂ ಪುಂಡರೀಕಮಿದೆಂಬ ಬೆಡಗಿನಿಂ (ಪರಶು. ३–४೭). [< ಅಗು$_1$]

**ಆದ್ಮಿ**, ಆದಮಿ (ನಾ). ಮನುಷ್ಯ. **ಆದಮಿ**: ಕುಪ್ಪಯ್ಯನಾದರೂ ಸಣ್ಣ ಆದಮಿಯಲ್ಲ (ಕೈಮಾಂಸ. ೬); ವಯಸ್ಸು ಹೆಚ್ಚಾದಂತೆ ತಾರುಣ್ಯ ಉಕ್ಕೇರುವ ಆದಮಿಯೆಂದೇ ಅವರ ಬಗ್ಗೆ ಟೀಕೆ (ಹಳ್ಳಿಹಾ. ೧४). [← **ಅರ. ಪಾರ. ಹಿಂ.** ಆದ್ಮೀ; **ಮರಾ.** ಆದಮಿ]

**ಆದ್ಯ** (ಗು). **೧.** ಮೊದಲನೆಯ; ಆದಿಯ: ವಿದ್ಯಾಪಾರಪರಾಯಣ ಮಾದ್ಯಂ ಸದ್ವೃತ್ತಿವೃತ್ತಜಾತ್ಯಾಯತ್ತಂ (ಕವಿರಾ. ೧–೩೦). (ನಾ). **೨.** ಮೊದಲನೆಯವನು; ಹಿಂದಿನವನು; ಪೂರ್ವಿಕನು: ಆದ್ಯರದ್ಯತನರೇಕಾರಾದೊಡಂ ಪೇಟಿರೇ (ಪಂರಾಮಾ. ೧–೩೩); ಅದ್ಯತನನಾಗಿಯುಂ ನೆಗಱ್ದಾದ್ಯರ ದೊರೆಯೆನಿಸಿ ನೆಱೆದು ಸಾಹಿತ್ಯಕಳಾಹೃದ್ಯತೆಯಿನೆಸೆದನಾ . . . ನಾಗಚಂದ್ರಕವೀಂದ್ರಂ (ನೇಮಿಪು. ೧–೨೨); ಆದ್ಯರ ವಚನ ಪರುಷ ಕಂಡಯ್ಯಾ (ಬಸವ. ೧೭೧). **೩.** (ಸಮಾಸಗಳಲ್ಲಿ, ಬಹುವಚನಗಳಲ್ಲಿ ಮಾತ್ರ) ಮುಂತಾದವರು; ಮುಂತಾದುವು: ಶೃಂಗಾರಲಾವಣ್ಯಾದ್ಯ ರೂಪುಗುಣಾವಳಿಗಳಂ (ಬಸವು. ೨೬–೭); ಹರಿಹರಾದ್ಯರ ಹವಣಲ್ಲ (ಹರಿಬ. ೨–४३); ಗುರುವಸಿಷ್ಠಾದ್ಯರಂ ಬೆಸಗೊಂಡು ತಿಳಿ (ಶ್ರೀರಾಮಾ. ೨೯–೨೬). [ಸಂ.]

**ಆದ್ಯಂತ** (ನಾ). **೧.** ಮೊದಲು ಮತ್ತು ಕೊನೆ. 'ಆದ್ಯಂತಪ್ರಾಸ' ಪರಾ. **೨.** ಸಮಸ್ತ; ಒಟ್ಟು; ಸಮಗ್ರ: ದೇಹಮಂ ಕಡಿದೀಯೆಂದೆನೆ ಪಕ್ಕಿಗೀಯನೆ ನೃಪಂ ತನ್ನಂಗದಾದ್ಯಂತಮಂ (ಸೋಮೇಶ. ೮४). [ಆದಿ$_2$ + ಅಂತ$_2$]

**ಆದ್ಯಂತಪ್ರಾಸ** (ನಾ). [ಛಂದ] ಪದ್ಯದ ಪಾದದ ಮೊದಲು ಮತ್ತು ಕಡೆಯಲ್ಲಿ ಇರುವ ಪ್ರಾಸ. ಉದಾ: ಶ್ರೀಗೆ ಕುಳಸದನಮೆನೆ ತೊಳಪಮಣಿಭವನದೊಳ್ ರಾಗರಸಮೊದವೆ ಸರಸಿರುಹಸಮ ವದನದೊಳ್ (ಆದಿಪು. ೬–೨೭ ರ); ಸಂಗಮನ ಕರುಣವೇ ತನಗೆ ಬೆಂಬಲವಾಗಿ ಸಂಗಮಧ್ಯಾನವೇ ತನಗೆ ಸಂಗಡವಾಗಿ (ಬಸರ. ೫–೫). [ಆದ್ಯಂತ + ಪ್ರಾಸ]

**ಆದ್ಯಂತರಹಿತ** (ನಾ). ಮೊದಲು ಕೊನೆಗಳಿಲ್ಲದವನು; ಪರಮಾತ್ಮ; ಆತ್ಮ. [ಆದ್ಯಂತ + ರಹಿತ]

**ಆದ್ಯಕರ್ತವ್ಯ** (ನಾ). ಮೊದಲು ಮಾಡಬೇಕಾದ ಕಾರ್ಯ: ತನ್ನ ವ್ಯಾಸಂಗ ಸಂಶೋಧನೆಗಳ ಫಲಿತಾಂಶ ಏನಾಗಬಹುದೆಂಬ ವಿಚಾರ ಅವನಿಗೆ ಗೊತ್ತಿರಲಿಲ್ಲ. ಆದರೆ ಅದೆಲ್ಲ ತನ್ನ ಆದ್ಯಕರ್ತವ್ಯವೆಂದು ತಿಳಿದುಕೊಂಡಿದ್ದನು (ಪುನರು. ೨೯೯). [ಆದ್ಯ + ಕರ್ತವ್ಯ]

**ಆದ್ಯಕವಿ** (ನಾ). = ಆದಿಕವಿ (ದಕ. ೩). [ಆದ್ಯ + ಕವಿ$_6$]

**ಆದ್ಯಕಾವ್ಯ** (ನಾ). ಮೊದಲಿನ ಕಾವ್ಯ; ಶ್ರೇಷ್ಠ ಕಾವ್ಯ: ಪರಮ ಶ್ರೀವಿಜಯ ಕವೀಶ್ವರ ಪಂಡಿತಚಂದ್ರ ಲೋಕಪಾಲಾದಿಗಳಾ ನಿರತಿಶಯ ವಸ್ತುವಿಸ್ತರ ವಿರಚನೆ ಲಕ್ಷ್ಯಂ ತದಾದ್ಯಕಾವ್ಯಕ್ಕೆಂದುಂ (ಕವಿರಾ. ೧–೩೩). [ಆದ್ಯ + ಕಾವ್ಯ]

**ಆದ್ಯತೆ** (ನಾ). ಮೊದಲಿನ ಸ್ಥಾನ; ಪ್ರಾಧಾನ್ಯ; ಪ್ರಮುಖತೆ: ಪ್ರಾಥಮಿಕ ಶಿಕ್ಷಣದ ಗುರಿಗಳಲ್ಲಿ ಗುಣಶೀಲಗಳ ಬೆಳವಣಿಗೆಗೆ ಆದ್ಯತೆಯನ್ನು ಕೊಟ್ಟಿರುವುದು (ಶಿಕ್ಷದ. ४३४). [ಸಂ. ಆದ್ಯತಾ]

**ಆದ್ಯನುಪ್ರಾಸ** (ನಾ). [ಛಂದ] ಅನುಪ್ರಾಸದಲ್ಲಿ ಒಂದು ಬಗೆ; ಪದ್ಯದ ಸಾಲುಗಳ ಮೊದಲಲ್ಲಿ ಬರುವ ಅನುಪ್ರಾಸ. ಉದಾ: ಸೋಡಂಬಾಡಂ ಕರಿಯ ಮುಗಿಲಂ ದಂತಿಗಳ್ಗೆತ್ತು ಮಿಂಚಂ ನೋಡಲ್ ನೀಡುಂ . . . ಕಾಡುಂ ಕೋಡುಂ . . . ವ್ರೀಡಾಪೀಡಂ ವಿರಹಿಜನ ಮಂದಳ್ಕಿಬೆಳ್ಕುತ್ತುದೆತ್ತಂ (ಕಾವ್ಯಾವ. ೫೫೭). [ಆದಿ$_2$ + ಅನುಪ್ರಾಸ]

**ಆದ್ಯಪುರುಷ** (ನಾ). **೧.** ಆದಿಪುರುಷ; ಭಗವಂತ. **೨.** ಮೊದಲ ಮಾನವ; ಆದಿಪ್ರವರ್ತಕ: ಬುದ್ಧಿಯ ಬಲವನ್ನು ಭಾರತದಲ್ಲಿ ಬೆಳೆಸಿದ ಆದ್ಯಪುರುಷ ಬುದ್ಧನೇ (ಭಾರದ. ೧೨೦). [ಆದ್ಯ + ಪುರುಷ]

**ಆದ್ಯಮನುಷ್ಯ** (ನಾ). ಮೊದಲನೆಯ ಮನುಷ್ಯ: ಆದ್ಯಮನುಷ್ಯನಾದ ಆದಾಮನನ್ನು ದುರ್ಯೋಧಿಸಿ (ಗೋಲ್ಗೊಥಾ. ೧೬–೧೮). [ಆದ್ಯ + ಮನುಷ್ಯ]

**ಆದ್ಯಮಾಷಕ** (ನಾ). ಒಂದು ತೂಕದ ಪರಿಮಾಣ; ಐದು ಗುಂಜಿಗಳ ತೂಕ (೩). [ಆದ್ಯ + ಮಾಷಕ]

**ಆದ್ಯೂನ** (ನಾ). ಹೊಟ್ಟೆಬಾಕ; ಉದರಂಭರಿ: "ಆದ್ಯೂನಃ, ಔದರಿಕಃ — ಈ ೨ ತನ್ನ ಬಸಿಱ ಹೊರೆವವಂ" (ಹಲಾಯು. ೫೮–೧೯೫). [ಸಂ.]

**ಆದ್ಯೆ** (ನಾ). **೧.** ಮೊದಲಿನವಳು; ಆದಿಶಕ್ತಿ; ಪಾರ್ವತಿ (ದಕ. ೩). **೨.** ಭೂಮಿ (೩). [ಸಂ. ಆದ್ಯಾ]

**ಆದ್ಯೋತ** (ನಾ). ಕಾಂತಿ; ಪ್ರಕಾಶ; ಪ್ರಭೆ. [ಸಂ.]

**ಆದ್ಯೋಪಾಂತ** (ನಾ). ಮೊದಲಿನಿಂದ ತುದಿಯವರೆಗಿನದು; ಎಲ್ಲಾ; ಸಮಗ್ರ; ಪೂರ್ಣ: ಶ್ರೀದೇವಿಯ ವಿವಾಹವಿಷಯಮಾತ್ರ ಆದ್ಯೋಪಾಂತವಾಗಿ ತಿಳಿದಿರಲಿಲ್ಲ (ಶ್ರೀರಾಯ. ೭೦). [ಆದ್ಯ + ಉಪಾಂತ]

**ಆದ್ರಿ** (ನಾ). ಒಂದು ಜಾತಿಯ ಗಿಡ. 'ಆದ್ರಿಹೂ' ಪರಾ. [?]

**ಆದ್ರಿಹೂ** (ನಾ). ಒಂದು ಬಗೆಯ ಹೂ: ಕೊಳದಲ್ಲಿ ಮುಖ ಕೈಕಾಲು ತೊಳೆದುಕೊಂಡು ಬಂದು ಅಲ್ಲೇ ಬಳಿಯಲ್ಲಿರುವ ಆದ್ರಿಹೂವಿನ ಮರದಡಿಯಲ್ಲಿ ಕುಳಿತಿದ್ದರು (ಹಂಗೀತೆ. ೧४೦). [ಆದ್ರಿ + ಹೂ$_2$ (< ಪೂ)]

**ಆದ್ರೆ**$_1$ 'ಆರಿದ್ರೆ' ನೋ.

**ಆದ್ರೆ**$_2$ 'ಆಗು$_1$' ಪರಾ.

**ಆಧರ** (ನಾ). ತನ್ನ ಸೋಲನ್ನು ತಾನೇ ಹೇಳಿಕೊಳ್ಳುವವನು: "ತನ್ನ ಸೋಲವ ನುಡಿದುಕೊಂಬನಾಧರನಕ್ಕು" (ಮಂಗರಾ. ೭೦–೧೫). [?]

**ಆಧರಣೆ** (ನಾ). = ಆಧಾರ **೧**: ಪೃಥ್ವಿಯ ಪೃಥ್ವಿ ಎಲ್ಲಿಪ್ಪುದು? ಅಪ್ಪುವಿನ ಅಪ್ಪು ಎಲ್ಲಿಪ್ಪುದು . . . ಆತ್ಮಕ್ಕೆ ಆತ್ಮನ ಪ್ರತಿರೂಪ ಕಂಡಲ್ಲಿ ಇಂತಿವಕ್ಕೆ ಉಭಯನಾಮ ಉಂಟು ಪೃಥ್ವಿಗೆ ಆಧರಣೆ ಒಂದೇ ಮಯ (ಮೋಳಿಮಾ. ೮–೨೮). [ಸಂ. ಆಧರಣ]

**ಆಧರಿಸು** (ಕ್ರಿ). **೧.** ಆಧಾರವಾಗಿ ಮಾಡಿಕೊ: ಆವಾವ ಸ್ಥಲಂಗಳನಾಧರಿಸಿ ನಡೆವಲ್ಲಿ ಘಟವೇ. ಬೀಗವಾಗಿ ಎಸಳೇ ಆತ್ಮನಾಗಿ ಅಜೀವೇ ಕೈಯಾಗಿ... ತುಡುಕಿದಡೆ ಬಿಟ್ಟುದುಂಟೇ ಆ ಸಿಕ್ಕು? (ಮೋಳಿಮಾ. ೯–೩೦); ಕಾಡಿನಿಂದೊಂದು ನೀಳವಾದ ಬಾಗಿದ ವ್ಯಕ್ತಿ ನಡೆಗೋಲನ್ನು ಆಧರಿಸಿ ಬಂತು (ತಾಯಿ. ೩೦೩); ಆಸೆ ಭಯಲೋಭಗಳನಾಧರಿಸುವೆರೆಕೆಗಳ ಆಯ್ದಾಯ್ದು ತೋರ್ವುದರೊಳೇ ನಿನ್ನ ಸಿಲವೆ (ಮಲೆದೇ. ೩೧–೩). **೨.** ಆಧಾರವಾಗು; ಧರಿಸು: ನೀರಿನಲ್ಲಿ ಬದುಕುವ ಪ್ರಾಣಿಯ ದೇಹವನ್ನು ಸುತ್ತಲೂ ನೀರು ಆಧರಿಸಿರುವುದರಿಂದ ಈ ದೇಹವು ಮೆದುವಾಗಿಯೂ ಕೋಮಲವಾಗಿಯೂ ಇರಬೇಕಾಗಿದೆ (ಪ್ರಾಣಿಶಾ. ೧).

[ಆಧರಣ$_0$ + –ಇಸು$_3$]

**ಆಧಾನ** (ನಾ). **೧.** ಇಡುವುದು; ಮಾಡುವುದು. **೨.** ತೆಗೆದುಕೊಳ್ಳುವುದು; ಸ್ವೀಕರಿಸುವುದು: ಶರಾಧಾನ ಸಂಧಾನ ಮೋಕ್ಷಂಗಳ ವೇಗಂ ಲೋಚನಾಗೋಚರಮೆನಿಸೆ (ಜಗವಿ. ೧೨–೩೬). **೩.** ಒಳಕೊಳ್ಳುವುದು; ಹೊಂದಿರುವುದು. **೪.** ಇಟ್ಟಿರುವುದಕ್ಕಾಗಿ ಕೊಟ್ಟ ವಸ್ತು; ನ್ಯಾಸ: ಪುರಾಣದ ನಾಯಕಿಯಂತೆ ತಾನು ಈ ಮಗನನ್ನು ದೇವರಿಂದ ಆಧಾನ ಮಾಡಿಸಿಕೊಂಡೆನೆಂದೇ? (ಸಣ್ಣಕ. ೮–೨೩). **೫.** ಹೊಣೆ; ಜಾಮೀನು. **೬.** ನಿಯೋಗ; ನಿಯಮಿಸುವುದು; ನೇಮಕ. **೭.** ಆಧಾರವಾದ ಪಾತ್ರೆ. **೮.** ಧಾರಣೆ; ಧರಿಸುವುದು. [ಸಂ.]

**ಆಧಾರ** (ನಾ). **೧.** ಆಶ್ರಯ; ಆಸರೆ; ನೆಲೆ: ಗಗನಕುಸುಮಂ ಕುಸುಮಕ್ಕೆ ಗಗನಮಿಲ್ಲದಲ್ಲದೆ ನಿಜಾಧಾರಾಧೇಯ ಸ್ಥಿತಿಯೊಳಲ್ಲದಿರ್ಕುಮೆ (ಶಾಂತಿಪು. ೮–೧೩೮ ವ). **೨.** ಅವಲಂಬನ; ಸಹಾಯ. **೩.** ಸಮರ್ಥನೆ ಮಾಡುವ ಪ್ರಮಾಣ; ಸಾಧಕವಾದ ವಸ್ತು: ಈ ಪ್ರಮಾಣವೇ ಪುನರ್ಜನ್ಮವಿದೆಯೆಂಬುದಕ್ಕೆ ಆಧಾರ (ಜೀವಾತ್ಮ. ೧೮೩); ನಾಡನ್ನು ಕಟ್ಟಬಯಸಿ ದುಡಿಯುವವರಿಗೆ... ಬೇಕಾದ ಅಗತ್ಯದ ಆಧಾರಗಳೆಲ್ಲ ಇಲ್ಲಿ ಸಿಕ್ಕುತ್ತವೆ (ಕಜಸಾ. ೧೫೪). **೪.** ತಳಹದಿ; ಅಸ್ತಿಭಾರ. **೫.** ಸೃಷ್ಟಿಯ ಮೂಲ (?): ಸಚರಾಚರವೆಲ್ಲ ರಚನೆಗೆ ಬಾರದಂದು ಆಧಾರದೊಳಗಣ ವಿಭೂತಿಯನೆ ತೆಗೆದು ಭೂಮಿಯ ನೆಲೆಗೊಳಿಸಿ ಪಂಚಾಶತ್ಕೋಟಿ ವಿಸ್ತೀರ್ಣ ಭೂಮಂಡಲಕ್ಕೆ ಸುತ್ತಿಹರಿದವು ಸಪ್ತಸಾಗರಂಗಳು (ಅವಚಂ. ೨–೮); "ಆತ್ಮಾಂತರ್ಗತಸ್ಥಾನ" (ಪ್ರಭುಪ. ಟೀಕು). **೬.** ಪ್ರವಾಹ; ಹರಿವು: "ಆಧಾರವೆಂಬುದು ಹರಿಯುವುದು" (ಹಲಾಯು. ೧೧೧–೪೯). **೭.** ನೀರಿನ ಆಸರೆ; ಕೆರೆ: "ಆಧಾರಃ, ತಟಾಕಃ—ಈ ೨ ಕೆಱೆ" (ಹಲಾಯು. ೧೧೧–೫೪). **೮.** [ವ್ಯಾಕ] ಅಧಿಕರಣ ವಿಭಕ್ತಿ; ಸಪ್ತಮಿ ವಿಭಕ್ತಿ: ಧೀರರಿನಾವುದು ತಾನಾಧಾರಮುದಧಿಕರಣಮಲ್ಲಿ ಸಪ್ತಮಿ ತಿಳಿ (ಶಮದ. ೧೩೩). **೯.** [ಯೋಗಶಾ] ಪ್ರಸಿದ್ಧವಾದ ಒಂದು ನಾಡೀಚಕ್ರ: ಆಧಾರದಲ್ಲಿ ಬ್ರಹ್ಮಸ್ವಾಯತವಾದ... ಮಣಿಪೂರಕದಲ್ಲಿ ರುದ್ರಸ್ವಾಯತವಾದ (ಅವಚಂ. ೪೭–೨೦೧); ಆದಿಯನುಳ್ಳುದೆ ಆಧಾರ ಅನಾಹತವ ಕೂಡಿಪ್ಪುದೆ ಸ್ವಾಧಿಷ್ಠಾನ ಮಣಿಯ ಬೆಳಗಿನಲ್ಲಿಪ್ಪುದೆ ಮಣಿಪೂರಕ (ಪದಗೋ. ೫೯). **೧೦.** ಇತರರಿಂದ ಹಣವನ್ನು ಸಾಲವಾಗಿ ತೆಗೆದುಕೊಳ್ಳುವಾಗ, ಹಣಕ್ಕೆ ಹೊಣೆಯಾಗಿಡುವ ಹೊಲ, ಗದ್ದೆ ಮುಂತಾದುದು: ಭ್ರಮರೆಯು ಅವಳ ಆಸ್ತಿಯನ್ನು ಅವನಿಗೆ ಆಧಾರಮಾಡುವವಳಾಗಿದ್ದಾಳೆ (ಬಂಕಿಮ. ೭೨); ಸ್ಥಿರಸ್ವತ್ತಿನ ಆಧಾರದ ಮೇಲೆ ಸಾಲಕೊಡುವುದು (ಯೋಧಪು. ೩೧). [ಸಂ.]

**ಆಧಾರಕ** (ನಾ). ಅಸ್ತಿಭಾರ; ತಳಹದಿ; ಆಧಾರವಾಗಿರುವ ವಸ್ತು: ಮಿಸುನಿಮೇಲಣ ಮಣಿಯವೋಲ್ ರಾಜಿಸುವ ಬ್ರಹ್ಮಾದಿಗಳ ಮನದಲಿ ಬಿಸಜಜಾಂಡಾಧಾರಕನು ಆಧೇಯನೆಂದೆನಿಸಿ (ಹಸಾರ. ೭–೧೩).

[ಸಂ.]

**ಆಧಾರಗೆಯ್** (ಕ್ರಿ). ಆಧಾರವಾಗಿ ಮಾಡಿಕೊಡು; ಕುಳಿತುಕೊಳ್ಳಲು ಪೀಠವನ್ನು ಒದಗಿಸು: ಬೋಧಾರ್ಹ ಬೃಹಸ್ಪತಿಯಾಶೀರ್ವಾದವನಾದರದಿಂ ಕುಡಲೊಡನೆ ಆಧಾರಗೆಯ್ದು ಕುಳ್ಳಿರಗೊಟ್ಟು ಕೇಳ್ದ ರತೀಧವ ಬಂದ ಸುದ್ದಿಯನು (ಮೋಹತ. ೫–೪೪).

[ಆಧಾರ + ಗೆಯ್ (< ಕೆಯ್$_1$)]

**ಆಧಾರಚಕ್ರ** (ನಾ). [ಯೋಗಶಾ] ಪ್ರಸಿದ್ಧವಾದ ಒಂದು ನಾಡೀಚಕ್ರ: ಗುದಸ್ಥಾನದಲ್ಲಿ ಆಧಾರಚಕ್ರ (ಅವಚಂ. ೪೪–೧೮೮); ಸ್ವಾಧಿಷ್ಠಾನ ಚಕ್ರದಲ್ಲಿ ಗುರುಲಿಂಗ, ಆಧಾರಚಕ್ರದಲ್ಲಿ ಆಚಾರಲಿಂಗಗಳು ವಿರಾಜಿಸುತ್ತಿರುವುವು (ಭಾರದ. ೨೫೩). [ಆಧಾರ + ಚಕ್ರ]

**ಆಧಾರಪತ್ರ** (ನಾ). ಆಧಾರಮಾಡಿ ಬರೆದುಕೊಡುವ ಪತ್ರ; ಇತರರಿಂದ ಹಣವನ್ನು ಸಾಲವಾಗಿ ತೆಗೆದುಕೊಳ್ಳುವಾಗ, ಹಣಕ್ಕೆ ಹೊಣೆಯಾಗಿಡುವ ಹೊಲ, ಗದ್ದೆ ಮುಂತಾದುವುಗಳ ವಿಷಯಗಳನ್ನುಳ್ಳ ಓಲೆ, —ಕಾಗದ. [ಆಧಾರ + ಪತ್ರ]

**ಆಧಾರಭೂತ** (ಗು). ಆಧಾರವಾದ. [ಸಂ.]

**ಆಧಾರರಹಿತ** (ಗು). ನಿರಾಧಾರವಾದ; ಪ್ರಮಾಣವಿಲ್ಲದ: ಪ್ರಸಿದ್ಧಾನಮಂ ಪಡೆದ ಪರಾರ್ಥಮಂ ಶಾಶ್ವತಮೆಂಬುದನುಕ್ತಸಿದ್ಧಮಲ್ಲದಂದಭಿಧಾನಂ ನಿರರ್ಥಕರಮುಮಾಧಾರರಹಿತಮುಮಕ್ಕುಂ (ಶಾಂತಿಪು. ೮–೧೩೮ ವ). [ಆಧಾರ + ರಹಿತ]

**ಆಧಾರಲಿಂಗ** (ನಾ). [ವೀಶೈ] ಆಧಾರಚಕ್ರಸ್ಥಾನ (?): ಆಧಾರಲಿಂಗ ನಾಭಿ ಹೃದಯ ಕಂಠ ಭ್ರೂಮಧ್ಯದ ಮೇಲೆ ನಿಂದುದದೇನೋ... ಗುಹೇಶ್ವರನೆಂಬುದದೇನೋ (ಅವಚಂ. ೪೫–೧೯೦). [ಆಧಾರ + ಲಿಂಗ]

**ಆಧಾರಸ್ತಂಭ** (ನಾ). ಆನಿಕೆಗಂಬ; ಊರೆಗಂಬ: ಕಲ್ಯಾಣದ ಪಶ್ಚಿಮ ಚಾಲುಕ್ಯರ ಸಾಮ್ರಾಜ್ಯವು ರಸಾತಳಕ್ಕಿಳಿದಿತ್ತು. ಆ ಸಾಮ್ರಾಜ್ಯಕ್ಕೆ ಕೆಲಕಾಲ ಆಧಾರಸ್ತಂಭಗಳಾಗಿ ನಿಂತ ಕಲಚೂರ್ಯರೂ ಕಣ್ಮರೆಯಾಗಿದ್ದರು (ಸಾಹಿಸ. ೧೩೪). [ಆಧಾರ + ಸ್ತಂಭ]

**ಆಧಾರಸ್ಥ** (ನಾ). ಆಸ್ತಿಯುಳ್ಳವನು; ತಕ್ಕಷ್ಟು ಉಪಪತ್ತಿಯಿರುವವನು (ಕಿ). [ಸಂ.]

**ಆಧಾರಾಧೇಯಭಾವ** (ನಾ). ವಸ್ತುಗಳಲ್ಲಿ ಒಂದು ವಸ್ತು ಆಧಾರವಾಗಿಯೂ ಮತ್ತೊಂದು ಆಧೇಯವಾಗಿಯೂ ಇರುವ ಪರಸ್ಪರ ಸಂಬಂಧ: ಈ ಸಂಬಂಧವು ಕಾರ್ಯಕಾರಣಭಾವ, ಸಾಮಾನ್ಯ ವಿಶೇಷಭಾವ, ಆಧಾರಾಧೇಯ ಭಾವ... ಮೊದಲಾದ ಸಂಬಂಧದ ಮೂಲಕ ನಿರ್ಣಯಿಸಲ್ಪಡಬೇಕು (ಹಿಂದಸಾ. ೧೪೦).

[ಆಧಾರ + ಆಧೇಯ + ಭಾವ$_2$]

**ಆಧಾರಿ** (ನಾ). = ಆಧಾರಸ್ಥ (ದಕ.ಕಿ). [ಸಂ. ಆಧಾರಿನ್]

**ಆಧಿ** (ನಾ). **೧.** ಮಾನಸಿಕವಾದ ತೊಂದರೆ, —ಪೀಡೆ ಅಥವಾ ಹಿಂಸೆ: "ಆಧಿಯೆಂಬುದು ಮನೋದುಃಖಂ" (ಹಲಾಯು. ೮೮–೮೧); ಆಧಿಗಳುಮನೇಕವಿಧ ವ್ಯಾಧಿಗಳುಂ ಬಾಧಿಸುತ್ತುಮಿರೆ (ಅಜಿಪು. ೨–೮೩); ಆಧಿ ತೀರಲಿ ನಮ್ಮ ಸೇನಾವ್ಯಾಧಿಗಿದೆ ಮದ್ದೆನುತ ಪರಬಲಸಾಧಕನು ಬ್ರಹ್ಮಾಸ್ತ್ರವನು ತೊಟ್ಟೆಚ್ಚನಾ ಪಾರ್ಥ (ಕುವ್ಯಾಕ. ೨೩–೪೫); ದೇಹವ್ಯಾಧಿಗಳನ್ನು ಔಷಧಿಯಿಂದ ವಾಸಿಮಾಡಿಕೊಳ್ಳುವಂತೆ ಮನಸ್ಸಿನ ಆಧಿಗಳನ್ನು ವಿವೇಕದಿಂದ ವಾಸಿಮಾಡಿಕೊಳ್ಳಬೇಕು (ವಚಭಾ. ೩೨೨). **೨.** ಆಸ್ತಿಗಳ ವಿಷಯದಲ್ಲಿ ಆಧಾರ, ಭೋಗ್ಯ ಮುಂತಾದ ಪರಾಧೀನತೆ: ಆಧಿ ಕ್ರಯ ದಾನಪರಿವರ್ತನೆಗಳಿಗೆ ಸಲಿಸಿಕೊಂಡು ಅನುಭವಿಸಿ ಬಹಿರಿ (ಮೈಆರಿ. ೧೯೪೩, ೩೧–೪೦; 1660). 'ಪೂರ್ವಾಧಿ', 'ಭೋಗ್ಯಾಧಿ' ಪರಾ. **೩.** ಜೂಜು ಮುಂತಾದ ದುರ್ವ್ಯಸನ. **೪.** ಆಶ್ರಯ; ಆಸರೆ; ನೆಲೆ. [ಸಂ.]

**ಆಧಿಕಾರಿಕೆ** (ಗು). ೧. ಅಧಿಕಾರಕ್ಕೆ ಸಂಬಂಧಪಟ್ಟ. (ನಾ). ೨. [ಕಾವ್ಯಮೀ] : "ಆಧಿಕಾರಿಕವೆಂದರೆ ಕಾವ್ಯದ ಉದ್ದಕ್ಕೂ ಬರುವ ಮುಖ್ಯವಾದ ಕಥೆ" (ಕೈಪಿಡಿ. ೨೦೫). [ಸಂ.]

**ಆಧಿಕ್ಯ** (ನಾ). ೧. ಹೆಚ್ಚಿಗೆ; ಅಧಿಕವಾಗಿರುವುದು. ೨. ಹಿರಿಮೆ; ಮೇಲ್ಮೆ; ದೊಡ್ಡಸ್ತಿಕೆ: ಎಲೆ ಕೃಷ್ಣ ನಿನ್ನ ರೂಪಮುಂ . . . ವಿಕ್ರಮಾಧಿಕ್ಯಮುಂ ವಿವೇಕಾತಿರೇಕಮುಂ ನೋಡಲ್ ನೀಂ ಪರದೈವತಕಳಾಸ್ವರೂಪನಾಗಿ ತೋರ್ಪೆ (ಜಗವಿ. ೪–೭೯ ವ). ೩. ಹಿರಿಯವನು; ಮೇಲಾದವನು: ಅದುಭುತಚರಿತ ನಮಿತೋದ್ಧಾರಿ ಜಂಗಮ ಭಕ್ತರೊಳಗಾಧಿಕ್ಯನೆನಲೊಪ್ಪಿ (ಬಸಪು. ೩೧–೨). [ಸಂ.]

**ಆಧಿದೈವಿಕ** (ನಾ). ತಾಪತ್ರಯಗಳಲ್ಲಿ ಒಂದು; ದೈವಿಕವಾಗಿ ಉಂಟಾಗುವ ತೊಂದರೆ: "ಆಧಿದೈವಿಕವೆಂದರೆ ಯಕ್ಷ, ರಾಕ್ಷಸ, ಪಿಶಾಚ, ಭೂತ, ಪ್ರೇತ ಮೊದಲಾದುವುಗಳ ಆವೇಶದಿಂದುಂಟಾಗುವ ತೊಂದರೆ" (ಹಿಂದಸಾ. ೬೬); ಅವರುಪೇಕ್ಷೆಯ ಉಳಿವಿನಲಿ ನಮ್ಮವರ ಬೇಹಿನ ಸುಳಿವಿನಲಿ ಮೇಣವರನಳುಕಿಸುವಾಧಿದೈವಿಕ ಕರ್ಮಗತಿಗಳಲಿ (ಕುವ್ಯಾಅ. ೧೨–೯). [ಸಂ.]

**ಆಧಿಪತ್ಯ** (ನಾ). ೧. ಪ್ರಭುತ್ವ; ಅಧಿಕಾರ: ಹಿರಿಯ ಭಂಡಾರಾಧಿಪತ್ಯದೊಳಿರಲನುಮತಿಸಿ ಸಕಲ ರಾಜ್ಯೋದ್ಧರಣಕರಣಮನಿತ್ತು (ಬಸಪು. ೫–೧೯); ಅವೆಲ್ಲ ಅವಳ ಆಧಿಪತ್ಯದಲ್ಲಿದ್ದವು (ಪ್ರಣಸ. ೪). ೨. ಪ್ರಭುತ್ವಕ್ಕೆ ಒಳಪಟ್ಟ ಪ್ರದೇಶ; ಅಧಿಕಾರದ ವ್ಯಾಪ್ತಿಗೆ ಸೇರಿದ ಭಾಗ ಅಥವಾ ಸೀಮೆ: ಬೊಂಬಾಯಿ ಆಧಿಪತ್ಯ (ರೂಢಿ). [ಸಂ.]

**ಆಧಿಭೌತಿಕ** (ಗು). ೧. ಪ್ರಾಣಿಗಳ ದೆಸೆಯಿಂದ ಸಂಭವಿಸುವ ವಿಪತ್ತು,—ಅಪಘಾತ: "ಆಧಿಭೌತಿಕವೆಂದರೆ ಶತ್ರು, ವ್ಯಾಘ್ರ, ಸರ್ಪ, ವೃಶ್ಚಿಕ ಮೊದಲಾದ ದುಷ್ಟ ಜಂತುಗಳಿಂದ ಬರುವ ಹಿಂಸೆ" (ಹಿಂದಸಾ. ೬೬). ೨. ಪಂಚಭೂತಗಳ ದೆಸೆಯಿಂದ ಉಂಟಾಗುವ ತೊಂದರೆ,—ವಿಪತ್ತು: ಆಧಿಭೌತಿಕದಿಂದ ನೊಂದು ವಿರೋಧಿ ಷಡ್ವರ್ಗದ ವಿಕಾರ ವ್ಯಾಧಿಯಲಿ ಬೆಂಡಾಗಿ (ಕುವ್ಯಾಕ. ೬–೨೯). [ಸಂ.]

**ಆಧಿರಾಜ್ಯ** (ನಾ). ಅಧಿರಾಜ ಪದವಿ; ಎಲ್ಲಕ್ಕಿಂತಲೂ ಮೇಲಾದ ಪ್ರಭುತ್ವ: ಶ್ರೀರಮಣೀರಮಣೀಯಂ ಸೀರಾಸ್ತ್ರಂ ನಿಂದನಾಧಿರಾಜ್ಯದೊಳ್ (ಶಾಂತಿಪು. ೨–೧). [ಸಂ.]

**ಆಧಿವ್ಯಾಧಿ** (ನಾ). ಮಾನಸಿಕ ವ್ಯಥೆ ಮತ್ತು ರೋಗ: ಎಲುವಿನ ಪಂಜರ . . . ಆಧಿವ್ಯಾಧಿಯ ತವರುಮನೆ (ವಚಸಂ. ೪೫–೬೨ ಚಂದಿವ); ಎನ್ನ ಆಧಿವ್ಯಾಧಿಗಳೆಲ್ಲ ಪ್ರಸಾದವಯ್ಯ (ಅಖಂಡೇ. ೧೮೩–೬೯); ಜೀವನು ತನ್ನ ಆಧಿವ್ಯಾಧಿಗಳನ್ನೆಲ್ಲಾ ಕಳೆದುಕೊಂಡು ನಿರಾಮಯನಾಗುವನು (ಶಕ್ತಿವಿ. ೬೩). [ಆಧಿ + ವ್ಯಾಧಿ]

**ಆಧಿವ್ಯಾಧಿಪ್ರದ** (ನಾ). ಮಾನಸಿಕ ವ್ಯಥೆಯನ್ನೂ ರೋಗಬಾಧೆಯನ್ನೂ ಉಂಟುಮಾಡುವಂಥದು: ಸಾಧಿತಸಮ್ಯಗ್ದರ್ಶನ ಬೋಧ ಚರಿತ್ರಂಗಳೆಂಬ ಧರ್ಮಮಿದವ್ಯಾಬಾಧಂ ಧರ್ಮಮಿದಲ್ಲದುದಾಧಿವ್ಯಾಧಿಪ್ರದಂ ಶರೀರಿಗಪಥ್ಯಂ (ಶಾಂತಿಪು. ೬–೪೫). [ಸಂ.]

**ಆಧಿವ್ಯಾಧಿಹರ** (ನಾ). ಮಾನಸಿಕವ್ಯಥೆಯನ್ನೂ ರೋಗಾದಿ ಉಪದ್ರವಗಳನ್ನೂ ಹೋಗಲಾಡಿಸತಕ್ಕುದು: ಇದು ಮಹಾಧಿವ್ಯಾಧಿಹರವಿಂತಿದನು ನೀಕೊಳ್ಳೆಂದರ್ಜುನಂಗೊರೆವುದು ರಹಸ್ಯದೊಳು (ಕುವ್ಯಾಅ. ೪–೧೬). [ಸಂ.]

**ಆಧಿಹೇತು** (ನಾ). ಮನಸ್ಸಿನ ದುಃಖದ ಕಾರಣ: ಸಮಸುಖದುಃಖಮಾದ ಜನವೀಕೆಯನೀಪರಿಯಿಂದ ಕೇಳಲೀ ರಮಣಿಯಿವರ್ಗೆ ಪೇಳದಿರಲಾರ್ಪಳೆ ಮಾನಸದಾಧಿಹೇತುವಂ (ಶಾಕುಂತ. ೩೫–೬೩). [ಆಧಿ + ಹೇತು]

**ಆಧೀನ** (ನಾ). ಅಧೀನ; ವಶ: ಆ ನಿಜಫಲಪ್ರಾಪ್ತಿಯಲಿಯನುಮಾನವಿಲ್ಲವೆ ಫಲಿಸಿ ನಿನ್ನಾಧೀನವಾಯಿತ್ತೀಗಳೀ ದೇವೇಂದ್ರಪಟ್ಟವಿದು (ಬಸಪು. ೪೧–೧೧); ಎನ್ನ ಪೊರೆದವರು ನಿನ್ನ ಸೇವಕರಯ್ಯಾ ಎನ್ನ ಬಳಿಕ ಎಲ್ಲಾ ನಿನ್ನ ಆಧೀನವಯ್ಯ (ಮೋಕ್ಷದೀ. ೫೪). [ಸಂ.]

**ಆಧೀನಚಿತ್ತ** (ಗು). ವಶವಾದ ಮನಸ್ಸುಳ್ಳ: ಅರ್ಹ[ದ್ಬೀ]ಜಮಂ ಹೃತ್ಪದ್ಮಸದ್ಮದೊಳ್ ನಿಶ್ಚಳಮಿರಿಸಿ ಯೋಗಸಮಾಧಾನಾಧೀನಚಿತ್ತರಾಗಿ (ಸೌಇಇ. XX, ೫೨–೩೭; 1077). [ಆಧೀನ + ಚಿತ್ತ]

**ಆಧುನಿಕ** (ಗು). ಈಗಿನ; ಈ ಕಾಲದ; ನವೀನ; ಇತ್ತೀಚಿನ: ಆಧುನಿಕ ವಿಚಾರಗಳಲ್ಲಿ ಲೋಕಕಲ್ಯಾಣಸಾಧಕವಾಗಿ ಸಮರ್ಪಕವಾಗಿರತಕ್ಕವುಗಳನ್ನು ಭಾರತವು ಅಂಗೀಕರಿಸಬೇಕು (ಕ್ರಿಯಾಶಿ. ೧೯). [ಸಂ.]

**ಆಧುನಿಕತೆ** (ನಾ). ಈ ಕಾಲಕ್ಕೆ ತಕ್ಕಂತಿರುವುದು; ನವೀನತೆ; ನವ್ಯತೆ: ಬೊಜ್ಜು ಬೆಳೆದು ವಿಕಾರಗೊಂಡಿದ್ದ ದೇಹದಲ್ಲೂ ಆಧುನಿಕತೆಯ ಬೆಡಗು ಬೇರೆ (ವಾತ್ಸಲ್ಯ. ೧೩೬). [ಸಂ. ಆಧುನಿಕತಾ]

**ಆಧೂತ** (ಗು). ೧. ಅಲ್ಲಾಡಿಸಿದ; ಕುಲುಕಿದ; ಒದರಿದ. (ನಾ). ೨. [ನಾಟ್ಯ] ಶಿರಸ್ಸಿನ ಹತ್ತೊಂಬತ್ತು ಭಂಗಿಗಳಲ್ಲಿ ಒಂದು: ಶಿರಮೊರ್ಮೆ ಯೆಡನು ಮಾಗುತ್ತಿರದೂರ್ಧ್ವಕ್ಕೆಯ್ದಲಂತದಾಧೂತಾಖ್ಯಂ (ಲಾಸ್ಯರಂ. ೧–೮೦). [ಸಂ.]

**ಆಧೃತ** (ಗು). ಇಡಲ್ಪಟ್ಟ; ತರಲ್ಪಟ್ಟ; ತಂದ; ಆಧಾರವಾಗಿರಿಸಿದ. [ಸಂ.]

**ಆಧೇಯ** (ಗು). ೧. ಆಧಾರದಲ್ಲಿ ಇಡಲ್ಪಟ್ಟ; ಆಧಾರವನ್ನು ಆಶ್ರಯಿಸಿಕೊಂಡಿರುವ. (ನಾ). ೨. "ಆಶ್ರಯ" (ಪಂಪಭಾ. ಕೋಶ); ಚಲದ ಜಾಗದ ಕುಲದ ನನ್ನಿಯನಾವರ್ಜಿಸಿ ರಾಧೇಯನೊಳ್ಪಿಂಗಾಧೇಯಮಾಗಿರ್ದಂ (ಪಂಪಭಾ. ೯–೮೭ ವ); ಶರೀರವೆಂದರೆ ಶರೀರಿಯಾದ ಆತ್ಮನಿಗೆ ಆಧೇಯವಾಗಿಯೂ ವಿಧೇಯವಾಗಿಯೂ ಶೇಷವಾಗಿಯೂ ಇರುವುದು ನಮ್ಮ ಅನುಭವಸಿದ್ಧವು. ಆಧೇಯವೆಂದರೆ ಆತ್ಮನನ್ನು ಬಿಟ್ಟು ಕ್ಷಣಮಾತ್ರವೂ ನಿಲ್ಲುವಂತಹುದಲ್ಲ (ಹಿಂದಸಾ. ೨೫೦). ೩. ಆಧಾರವಾಗಿ ಇಡುವ ಜಮೀನು ಮುಂತಾದುದು. [ಸಂ.]

**ಆಧೇಯವಚನ** (ನಾ). ಮಾತುಗಳಿಗೆ ಆಧಾರನಾದವನು; ಮಾತಿನಲ್ಲಿ ಚತುರನಾದವನು; ವಶ್ಯವಾಣಿ: ವಕ್ರೋಕ್ತಿ ನಿಪುಣನುಂ ಆಧೇಯವಚನನುಂ . . . ಪ್ರಸಿದ್ಧನುಮಪ್ಪ ಮಹತ್ತರನ ಕೈಯೊಳ್ ಸನ್ಮಾನಪುರಸ್ಸರಂ ಕೊಟ್ಟು (ಆದಿಪು. ೧೪–೪೩ ವ). [ಆಧೇಯ + ವಚನ]

**ಆಧೋರಣ** (ನಾ). ೧. ಆನೆಯ ಸವಾರ; ಮಾವುತ; ಮಾವಟಿಗ: ರಾವಣಂ ನಿಜವಾರಣದಿನಿಂದ್ರನೈರಾವಣದ ಮೇಲೆ ಪಾಯ್ದು ಮುಂದಣಾಧೋರಣನಂ ಚರಣಪ್ರಹಾರದಿಂ ನೆಲಕಿಕ್ಕಿ (ಪಂರಾಮಾ. ೧೦–೨೧೯ ವ). ೨. ಸಲಗ: "ಆಧೋರಣಮೆಂಬುದು ನಾಯಕವಪ್ಪಾನೆ" (ಹಲಾಯು. ೩೮–೭೨). [ಸಂ.]

**ಆಧ್ಮಾನ** (ನಾ). [ವೈದ್ಯಶಾ] ಹೊಟ್ಟೆ ಉಬ್ಬರಿಸಿಕೊಳ್ಳುವುದು: ಉದರದಲ್ಲಿ ಬಹಳ ಧ್ವನಿಯುಂಟಾಗಿ ಬಹಳ ನೋವುಂಟಾಗಿ ವೆಗ್ಗಳವಾಗಿ ಹೊಟ್ಟೆಯುಬ್ಬರಿಸಿಕೊಂಡು ವಾಯು ಅಧೋಮುಖ ಊರ್ಧ್ವಮುಖವೂ ಇಲ್ಲದೆ ಬಂಧಿಸಿಕೊಂಡು ಇಹುದು ಅದನು ವೈದ್ಯರು ಆಧ್ಮಾನ [ಪಾಠಾಂ. ಆನಾಹ] ವೆಂಬರು (ವೈದ್ಯಸಾ. I, ೩೨೪). [ಸಂ.]

**ಆಧ್ಮಾನಿಸು** (ಕ್ರಿ). ಹೊಟ್ಟೆ ಉಬ್ಬರಿಸಿಕೊ: ಬಸಿಱೊದವಿ ತೊಟ್ಟನಾಧ್ಮಾನಿಸಿ ವಾಜಿಗೆ ಶೂಲೆ ತೋಱೆ ಪೆಜತೇಂ ತಿಳತೈಲ ಸಮನ್ವಿತದಿಂ ಬೊಮ್ಮಿಯ ರಸಮಂ ಕೊಟ್ಟಂತದಂದುಮುಪಶಮಮಕ್ಕುಂ (ಲೋಕೋಪ. ೯–೨೩೦). [ಆಧ್ಮಾನ + –ಇಸು$_3$]

**ಆಧ್ಯಾತ್ಮಿಕ** (ಗು). **೧.** ಆತ್ಮವಸ್ತುವಿಗೆ ಅಥವಾ ಅಧ್ಯಾತ್ಮಕ್ಕೆ ಸಂಬಂಧಿಸಿದ; ತತ್ತ್ವಶಾಸ್ತ್ರಕ್ಕೆ ಅನ್ವಯಿಸುವ; ವೇದಾಂತದ: ಬ್ರಿಟಿಷರ ಅಧೀನಕ್ಕೆ ಸಿಕ್ಕಿ ನಮ್ಮ ದೇಶಕ್ಕೆ ನಾಲ್ಕುಪಟ್ಟಿನ ನಷ್ಟ ಸಂಭವಿಸಿದೆ . . . ಆಧ್ಯಾತ್ಮಿಕವಾದ ನಷ್ಟ (ರಾಮುರಾ. ೩೭). (ನಾ). **೨.** ತಾಪತ್ರಯಗಳಲ್ಲಿ ಒಂದು: "ರಜಸ್ಸಿನಿಂದ ಬರುವ ದುಃಖವು ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂದು ಮೂರುವಿಧ. ಆಧ್ಯಾತ್ಮಿಕವೆಂದರೆ ಶರೀರದಲ್ಲಿರುವ ವಾತ ಪಿತ್ತ ಶ್ಲೇಷ್ಮಗಳ ವ್ಯತ್ಯಾಸದಿಂದ ಬರುವ ಜ್ವರ ಜರೆ ಮರಣ ಮೊದಲಾದುದು" (ಹಿಂದಸಾ. ೬೬); ದುಃಖತ್ರಯಂಗಳು (ಶರೀರದಲ್ಲಿ ಹುಟ್ಟಿದ ಆಧ್ಯಾತ್ಮಿಕ, ಇತರ ಪ್ರಾಣಿಗಳಿಂದುಂಟಾಗುವ ಆಧಿಭೌತಿಕ, ಪಂಚಭೂತಗಳಿಂದಾಗುವ ಆಧಿದೈವಿಕ) (ಅಮೃತ. ೬–೮೮ ಟೀಕು). [ಸಂ.]

**ಆಧ್ಯಾನ** (ನಾ). **೧.** ಪಶ್ಚಾತ್ತಾಪದಿಂದ ಕೂಡಿದ ಸ್ಮರಣೆ; ವ್ಯಸನಕರವಾದ ನೆನಪು. **೨.** ಕಳವಳ; ಆತಂಕ. [ಸಂ.]

**ಆನ್$_1$, ಆನು$_1$** (ಕ್ರಿ). **೧.** ಇದಿರಾಗು; ಎದುರಿಸು; ಪ್ರತಿಭಟಿಸು; ಅಡ್ಡಲಾಗು; ತಡೆದು ನಿಲ್ಲು; ಆಂತ, ಆಂತು, ಆತು (ಭೂತಕೃ); ಆಂಪ (ಭವಿಕೃ): ಆನೆಯೊಳಾಂತಿಱಿದು (ಎಇ. I, ೩೫೦–೫ ; 900); ಕದನದೊಳಿದಿರಂ ಮೀಱಿ ಮಾಱಾಂತು ನಿಂದಾಂತರಿಭೂಪರ್ ಭಸ್ಮಮಾದರ್ (ಕಾವ್ಯಸಾ. ೨೧೫ ಶೂದ್ರಕ); ಒರ್ವರಪ್ಪೊಡಮಿದಿರ್ಚುವ ಗಣ್ಡರನಾಪ್ಪೆವೆಂದು ಪೊಟ್ಟಳಿಸುವ ಬೀರರಂ ನೆಱೆಯೆ ಕಾಣೆಮೆ (ಎಕ. III, ಮಂಡ್ಯ. ೪೧–೧೬ ; 950); ಆಂತವನಿಪನಿಕರಂ ಕೈಯಾಂತವನಿಪನಿಕರಮೊಂದು ಕೋಟಿಗೆ ಮಿಗಿಲೆಂಬಂತಾದೊಡಂ (ಗದಾಯು. ೧–೧೫); ಇದಿರಲಾಂಪವರಾರ್ ಜಯಸಿಂಹದೇವನಾ (ಇಆ. V, ೧೬–೧೮ ; 1019); ರಿಪುಬಲಜಲಧಿವಡಬನೊಳಾಂತು ತಾಗಿದರಂದು ಷಡುರಥರು (ಕುವ್ಯಾದ್ರೋ. ೬–೩೮). **೨.** ಧರಿಸು; ವಹಿಸು; ಕೈಕೊಳ್ಳು; ಹೊಂದು; ಪಡೆ: "ಆನ್ – ಧಾರಣೇ" (ಶಮಧಾ); ಲಕ್ಷ್ಮೀಲಲನೆಯನಾಂತು ವಕ್ಷಃಸ್ಥಲದೊಳ್ (ಕವಿರಾ. ೩–೧೬೧); ರಕ್ತಪಂಕರುಹಮನಾಂತ ಪಂಕಜಿನಿಯಂತೆ ನವೋದಿತ ಚಂದ್ರಬಿಂಬಮಂ ಧರಿಯಿಸಿದಿಂದ್ರದಿಗ್ವನಿತೆಯಂತೆಸೆದಳ್ (ಕಾವ್ಯಸಾ. ೯೬೨ ಶೂದ್ರಕ); ಪೊಂಗೊಡನಂ ತವರಾಳಪಲ್ಲವದೊಳೆ ಮುಚ್ಚಿದಂದದೊಳೆ ಚೂಚುಕಮಾಂತುದು ಕರ್ಪನಾಕೆಯಾ (ಪಂಪಭಾ. ೧–೧೨೫); ಬಿಸುಪಮರ್ದ ನೊಸಲ ಕಣ್ಣಂ ತಿಸುಳಂಗಳನಾಂತ ಕೈಗಳುಂ ನೋಱ್ಪರ ನಂಜಿಸೆ (ಕಬ್ಬಿಕಾ. ೨೫೪); ಶಪಥವನಾಂತೊಡಲ್ಲದೆ ಬಿಡೆನು (ಬಸವು. ೨೭–೬೪); ನಿನ್ನಡಿಯಾಣತಿಯನೆನ್ನ ಮುಡಿಯೊಳಾಂತೆನು ಮತ್ತೇನು (ಹದಿಬ. ೧–೪೪). **೩.** ಹಿಡಿ; ಒಡ್ಡು: ಪಲರುಂ ಬಣ್ಣಿಸೆ ಕಿವಿಯನಾಂತು ಕೇಳುತ್ತುಂ (ಪಂಪಭಾ. ೧೧–೨); ಆನೀವ ಧನಕ್ಕೇಂ ಕಯ್ಯಾನದೆಯುಂ ಕೊಳ್ಳದನಿಬರುಂ . . . ಪೋಗಲೇನಾರ್ಪಿರೆ (ನೇಮಿಪು. ೫–೧೮); ಕನಸಿನ ಭತ್ತಕ್ಕೆ ಗೋಣಿಯಾಂಪರೆ ನೃಪತೀ (ಲೀಲಾವ. ೪–೭೦); ಮಧುಕರನಿಕರ ಪರೋಕ್ಷಹತಿಗಂ ಸುರಿವ ನವಮಕರಂದಧಾರೆಗೆ ಶಿರವನಾನುತ್ತ (ಬಸವು. ೨೬–೪೪); ನಿನಗೆ ಕಿಂಕರವೆರಡು ಸಂತತಿಯೆನಿಸಲೊಲ್ಲದೆ ನೀನು ದುರಿಯೋಧನನ ಬಾಯ್ದಂಬುಲಕೆ ಕೈಯಾನುವರೆ (ಕುವ್ಯಾಉ. ೧೦–೮). **೪.** ತಡೆ; ನಿಲ್ಲು; ಸೈರಿಸು; ತಡೆದುಕೊ; ತಾಳು; ಆಶ್ರಯಿಸು: ಪಾಂಡವರ ಬಲವೆಂದು ಆತು ಮರಳಿದು ಹಿಂದೆ ನೋಡಿ ಪರೇತ ವಿಭವವಲಾ ಎನುತ ಛಲಚೇತನನು ಸಲೆ ಚಂಡಿಯಾದನು (ಕುವ್ಯಾಗ. ೩–೧೫); ಆನುತಾನುತ ಗಜ ಪೋಪಾಗ ಲೇಸೆಂದರಾನದೆ ಮುಂದೆಯ್ದುವಾಗ ಆನೆಗೆ ಮುಂದಗಮನವೆಂಬರಿದು ಬೇಗದಾನೆ ಲೇಸಲ್ಲೆಂದರೊಡನೆ (ಭರಚ. ೩೭–೨೩); ಕಾಂತೆ ಕೇಳಿಕ್ಷ್ವಾಕು ವಂಶಮೆನ್ನಲ್ಲಿ ಬಂದಾಂತುದಿಲ್ಲಿಂದೆ ಸಂತತಿ ನಡೆಯದಿರ್ದೊಡೆ ಕುಲಾಂತಕಂ ತಾನಾದಪೆಂ (ಜೈಮಿಭಾ. ೧೮–೧೬).

**ಆನು$_1$: ೧.** ತಿವಿಯೆ ಕಳಚುವ ಕಳಚಲೊತ್ತುವ ಕವಿದೊಡಾನುವ ನಿಂದಡೆತ್ತುವ . . . ನವಮದೇಭದ ಸಮರ ಸೋಲಿಸಿತಮರರಾಲಿಗಳ (ಕುವ್ಯಾಭೀ. ೪–೭೬); ಕಾನನವ ಬಳಸಿದರು ಮೃಗತತಿಯಾನಲಾಪುದೆ ತೆಗೆದು ಹಾಯ್ದುದು ಭಟರ ಘುಲ್ಲಣೆಗೆ (ನಳಚ. ೨–೧೨); ಕುಂತ ನೇಜೆಯ ಕೈಯಿಟ್ಟಯಾಯುಧಗಳನಂತರಿಕ್ಷಗಳಿಗಿಟ್ಟಾಗ ಪಂಥದಿಂದಾನುವ ಕಾಲಾಳ ರಾವುತರ ತಿಂಥಿಣಿಯೊಪ್ಪಿತು (ಕಂನವಿ. ೧೧–೨೧). **೨.** ಕದಳಿಯಂ ಪೊಕ್ಕು ನಿರ್ವಾಣಪದವಿಯನಾಂತ ಮಾದೇವಿಯಕ್ಕನ ಪದಕ್ಕೆ ಶರಣು (ಚಬಪು. ೧–೧೫); ಅಗ್ರಜನ ನೇಮವನಾಂತು ನಮ್ಮಯ ಬಲದ ಮೇಲುಚ್ಚಳಿಸುತಿಹರು (ಕೋಗಯ. ೨೦–೧೨). **೩.** ನಡೆವ ಕಾಲು ಆನುವ ಕೈ ಬೇಡುವ ಬಾಯಿ (ನಗವೂ. ೧೩); ಮುಯ್ವನಾನುವುದವರ್ಗೆ ಭುವನವು ಬೈವುದೈ ನಿಮ್ಮನಿಬರನು (ಕುವ್ಯಾಭೀ. ೧–೨೩). **೪.** ಒಡೆಯರ ಮಂದಿಯನು ಹಿಂದಕ್ಕೆ ನೀಉ ಆತು ಬಂನಿಯೆಂದು ಮಂಗಪ್ಪ ದಣಾಯಕರೂ ನಿರೂಪವ ಕೊಟ್ಟು (ಕಇ. I, ೩೬–೫ ; 1398). **೫.** ಆಶ್ರಯವಾಗು; ಊರೆಯಾಗು: ಮಂದರಗಿರಿಯನೇ ಕಡೆಗೋಲ ಮಾಡುತ ಧರಣಿಗಾತಿಹ ಸರ್ಪವಾತನ ತಂದು ತೆಗೆನೇಣ (ಸಂಭಪ. ೫–೯೫). **೬.** ಆಶ್ರಯ ಹೊಂದು; ಒರಗು: ಆತನೋದದ ವೇದ ಶಾಸ್ತ್ರಸಮೇತವಾತನ ನಾಲಗೆಯ ತುದಿಗಾತು ಬೆಸನನು ಬೇಡುತಿಹವು (ಪ್ರಭುಲೀ. ೬–೩೩); ಆನೆಯೊಳೊಮ್ಮೆ ತೇಜಿಯೊಳೊಮ್ಮೆ ಶಿಬಿಕಾವಿಮಾನರಥಗಳೊಳೊಮ್ಮೊಮ್ಮೆ ಆನುತೇಳುತ ಬಂದು ಹಲವು ಪಯಣದಲ್ಲಿ ಭೂನಾಥ ಸಾರ್ದನಾ ಗಿರಿಯಾ (ಭರಚ. ೩೬–೭೯); ಗಂಗವ್ವ ಬಿರಬಿರನೆ ನೀಟಾಗಿ ದೇಸಾಯರ ಕೋಣೆಯ ಹೊರಕ್ಕೇ ಗೋಡೆಗೆ ಆತು ಕುಳಿತಳು (ಗಂಮಾಯಿ. ೧೦೮).

**ಆತುಉಣ್ಣು** = ತಡೆದು ಊಟಮಾಡು; ನಿಧಾನವಾಗಿ ಊಟಮಾಡು (ಕಿ). **ಆತುಕೊ** = ಕೈಯೊಡ್ಡಿ ಹಿಡಿದುಕೊ: ಚೆಂಡನ್ನು ಎಸೆಯುತ್ತೇನೆ ಆತುಕೊ (ರೂಢಿ). **ಆತುಕೊಳ್ಳು** = ಪ್ರತಿಭಟಿಸು; ನಿಲ್ಲು: ಈತನೊಡ್ಡಿನ ಸಾರೆ ಸಂಗರಕಾತುಕೊಂಡದೆ ಕೃಪನ ದಳಸಂಘಾತ (ಕುವ್ಯಾಭೀ. ೩–೧೨). **ಆತುಹೋಗು** = ಸಾವಕಾಶವಾಗಿ ಹೋಗು: (ಜಾನಕೋ. ೧೫). **ಆತುಕುಡಿ** = ಸಾವಕಾಶವಾಗಿ ಕುಡಿ: (ಏಕಲವ್ಯನಿಗೆ ನೀರು ಕುಡಿಸುತ್ತ) ಆತುಕುಡಿ! (ಹೆಬ್ಬೆರ. ೩೫–೧೧).

[**ದೇ.** ‖ **ತುಳು.** ಅನಿ; **ತೆಲು.** ಅನು; **ಕುರುಖ್.** ಅನ್ನಾ = ಚರ್ಮಹಿಸುಕಿ ಕಾಡು; **ಮಲ್ತೊ.** ಆನ್ರೆಟೆ = ದಿಂಬಿನಲ್ಲಿ ಒರಗು]

**ಆನ್$_2$, ಆ$_3$, ಆಂ, ಆನು$_2$** (ಸ). ಉತ್ತಮಪುರುಷ ಏಕವಚನ ಸರ್ವನಾಮ; ಮಾತಾಡುವವನು ತನ್ನನ್ನು ನಿರ್ದೇಶಿಸುವುದಕ್ಕಾಗಿ ಬಳಸುವ ಮಾತು; ನಾನು. ℙ ಕ್ರಮವಾಗಿ ಏಳು ವಿಭಕ್ತಿಗಳು; ಆನ್, ಎನ್ನಂ, ಎನ್ನಿಂ, ಎನಗೆ, ಎನ್ನತ್ತಣಿಂ, ಎನ್ನ, ಎನ್ನೊಳ್; (ಬಹುವ) ಆಮ್, ಎಮ್ಮಂ, ಎಮ್ಮಿಂ, ಎಮಗೆ, ಎಮ್ಮತ್ತಣಿಂ, ಎಮ್ಮ, ಎಮ್ಮೊಳ್: ಎನ್ನಱಿವುದುಮಂ ತಱಿಸ[ಲೆ] ಬುಧಜನಕ್ಕೆ ಕೆಲವಂ ಪೇೞ್ವೆಂ (ಕವಿರಾ. ೧–೪೭); ವಿಜಯನನೆ ಮುನ್ನೆ ಕಂಡುದಱಿಂದಾನೆನ್ನಂ ಕೊಟ್ಟೆಂ (ಪಂಪಭಾ. ೯–೧೨); ಆನಱಿವೆಂ ಪೃಥೆಯಱಿವಳ್ದಾನವರಿಪುವಱಿವನರ್ಕನಱಿವಂ (ಗದಾಯು. ೫–೧೮). **ಆ$_3$**: ತಂದೆ ನಿಮಗಾ ಮುನಿಯಲಾಪೆನೆ (ಕುವ್ಯಾದ್ರೋ. ೯–೫೧); ಎನ್ನನು ಕರೆದು ಮಿಗೆ ಪತಿಕರಿಸೆ ಬಳಿಕಾ ಬಱಿದೆ ಹೋಹೆನೆ (ಕುವ್ಯಾದ್ರೋ. ೧–೩೯). **ಆಂ**: ನಿನ್ನನಾಮೊಡಗೊಂಡು ಬಂದುದರ್ಕೆ (ವಡ್ಡಾರಾ. ೭೪–೧೫); ಆಂ ತನಗೆ ಪರಮ ವಿಶ್ವಾಸಭೂಮಿಯೆನಾಗಿ (ಆದಿಪು. ೪–೨೧ವ); ಆಂ ಪೋಗದೆ ಬಾರಂ ವೈಶಂಪಾಯನಂ (ಕಾದಂಉ. ೪೯೦); ಕೃಷ್ಣರಾಯನ ಕರುಣಕವಚವನೊಡೆಯಲಾಪವೆ ಎಮ್ಮಕೈದುಗಳು (ಕುವ್ಯಾದ್ರೋ. ೪–೮).

**ಆನ್ನು₂** : ಆನು ನೀನು ಇಲ್ಲದಂದು ಅಂದೇನೊ ಇಂದೇನೊ (ಅದವ. ೧) ; ಆನು ಗುರುವಾಜ್ಞೆಯಂ ಮೀಱಿದುದಱಿಂದೆನಗೆ ಹಾನಿ ಹೊಗದಿರದು (ಹಚಕಾ. ೬-೪೭); ಹಿಂದೆ ಕಂಬದೊಳಾನು ಜನಿಸಿದ ಶುಭ ಮಾಸ (ಕಂಸವಿ. ೪-೪೪). **ಆಮ್, ಆವು (ಬಹುವ)** : ಕಿತ್ತ್ಯಂಗಳನಿಂದೆಮಗೆ ಕಾರುಣ್ಯಂಗೆಯ್ವುದಾವು ನಿಱಿಸಿ ಪಾನಿಗಟ್ಟಿ ಪುಣ್ಯಮಂ ನೆರಪಿಕೊಳ್ವಮೆಂದೊಡೆ (ವಡ್ಡಾರಾ. ೭೯-೧೯) ; ಆಮೆ ಬಂದು ಕಾಲ್ವಿಡಿದಪೆವು (ಪಂಪಭಾ. ೭-೯೩) ; ಆಮೆ ಕಣ್ಡೆವು (ಎಕ. III, ಮಂಡ್ಯ. ೪೧-೧೬ ; 950) ; ವಿಲಾಸ ದುರ್ಮೆಗಳೊಳಾವೆವಗಾಗಿಪೆವೆಂದು ಬಂದ ಚೆನ್ನಿಗರುಮಂ (ಪಂಪ ಭಾ. ೧-೧೦೬) ; ಸಂಜೀವಕನ ಗುಣಂಗಳುಮಂ ಪ್ರತ್ಯಕ್ಷ ಪ್ರಮಾಣಂಗಳಿನಾವಱಿದಿರ್ದುಂ (ಪಂಚತಂ. ೯೪-೨೦) ; ಕಾದುವವರಾವಲ್ಲ ಸಾರಥಿತನವೆ ಸಾಕೆಮಗೆ (ಕುವ್ಯಾದ್ರೋ. ೩-೬೪) ; ನಗೆಯ ಸೂಸುವಡಾವು ಲೋಕದ ಹಗರಣೆಗರೇ (ತೊರರಾ. ೧-೯-೩೦).

[ದೇ ‖ ತಮಿ. ಯಾನ್, ನಾನ್ ; ಮಲ. ನಾನ್ ; ತುಳು. ಯಾನು, ಏನು ; ಕೊಡ. ನಾನಿ, ನಾ ; ತೆಲು. ಏನು, ನೇನು ; ಕೋಲಾ. ನಾಯ್ಕಿ. ಪರ್ಜಿ. ಗಡಬ. ಆನ್; ಗೊಂಡಿ. ಅನಾ ; ಕುಇ. ಆನು ; ಕುವಿ. ನಾನು ; ಕುರುಖ್. ಮಲ್ತೊ. ಎನ್ ; ಬ್ರಾಹೂ. ಐ]

**ಆನ್₃** 'ಆನುಂ' ನೋ.

**ಆನಂತ್ಯ** (ನಾ). ೧. ಕೊನೆಯಿಲ್ಲದಿರುವಿಕೆ : ಪರಸ್ಪರ ಸಂಬಂಧಗಳನ್ನು ಲೆಕ್ಕಹಾಕುತ್ತಾ ಹೊರಟರೆ ಆನಂತ್ಯವೇ ಬಂದುಹೋಗುತ್ತದೆ (ಧ್ವನ್ಯಾಲೋ. ೬೪) ; ಆನಂತ್ಯದೊಂದು ನವಜಲಧಿಯಲ್ಲಿ ಹೊರಟಿಹುದು ನನ್ನ ನಾವೆ (ಅರಳು. ೧೮೪-೧). ೨. ಕೊನೆಯಿಲ್ಲದ ವಸ್ತು : ಆನಂತ್ಯವೀ ಜಗಚ್ಚಕ್ರ ನಾಭಿಕ್ರಮತೆ ತಾನೊಂದೆ ಸತ್ತ್ವವದು (ಮಂಕುಕ. ೧೩೭). [ಸಂ.]

**ಆನಂದ** (ನಾ). ೧. ಸಂತೋಷ. ೨. ಪರಮಾವಧಿಯಾದ ಸಂತೋಷ; ಲೋಕೋತ್ತರವಾದ ಆಹ್ಲಾದ ; ರಸಾಸ್ವಾದ ಸಮಯದಲ್ಲಿ ಬೇರೊಂದರ ಅರಿವೇ ಉಳಿಯದಂತೆ ಒದಗುವ ಅಪರಿಮಿತವಾದ ಸುಖ : ಎಲ್ಲಾ ಕುಶಲಕಲೆಯಲ್ಲಿಯೂ ಆನಂದವೇ ಮುಖ್ಯಫಲವೆಂದು ಹೇಳಬಹುದಾಗಿದೆ(ಕೈಪಿಡಿ. ೧೭೫). 'ಕಾವ್ಯಾನಂದ', 'ಬ್ರಹ್ಮಾನಂದ' ಪರಾ. ೩. [ವೀಶೈ] ಆರು ವಿಧವಾದ ಭಕ್ತಿಗಳಲ್ಲಿ ಒಂದು : ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ, ಸಮರಸ (ಇವು ಆರು ಷಡ್ವಿಧ ಭಕ್ತಿಗಳು) (ಶಿವಾಸೂ. ೨ ಅಡಿಟಿ). 'ಆನಂದ ಭಕ್ತಿ' ಪರಾ. ೪. ಅರವತ್ತು ಸಂವತ್ಸರಗಳಲ್ಲಿ ಒಂದು : ಪ್ರಭವ . . . ಆನಂದ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೧).

**ಆನಂದವಾಡು** = ಸಂತೋಷಪಡು ; ನಲಿದಾಡು : ತೊಟ್ಟಿಲ ಚಪ್ಪರದಲಿ ಸುಮ್ಮಾನದ ಬಿಬ್ಬಿಯರೊಡನೆ ಆನಂದವಾಡುತ ಬರುವ ಖಾನರುಗಳನೇನ ಬಣ್ಣಿಸುವೆನಚ್ಚರಿಯ (ಕಂಸವಿ. ೧೧-೩೧). **ಆನಂದವಿಡಿ** = ಸಂತೋಷ ತುಂಬು ; ಹರ್ಷಪೂರ್ಣವಾಗು : ಮಾನಿನಿಯಾಸ್ಯೇಂದು ಮಂಡಲವನು ಕಂಡಾನಂದವಿಡಿದು ನುಡಿದರು (ಕಂಸವಿ. ೯-೮೯). [ಸಂ.]

**ಆನಂದಂಗಿಡು** (ಕ್ರಿ). ಸಂತೋಷವು ನಾಶವಾಗು; ಸುಖವು ಹಾಳಾಗು : ಕೊಟ್ಟಡೆಯದೆ ಮಱುಗುತ್ತಿರ್ಪುದುಂ ಲೋಗರಿಂದೊಂದಾನಂದಂಗೆಟ್ಟು ಚಿಂತಿಪ್ಪುದುಂ (ಧರ್ಮಾಮೃ. ೪-೬೬).

[ಆನಂದ + ಕಿಡು (< ಕೆಡು)]

**ಆನಂದಂಬಡು**, ಆನಂದಪಡು (ಕ್ರಿ). ಸಂತೋಷ ಹೊಂದು; ಸುಖಪಡು : ಸರ್ವಜನವಾನಂದಂಬಡಲಾ ರಾಜ್ಯ ಜೇಂಗೊಡದೊಲ್ತುಂಬಿ ತುಳುಂಕೆ (ಸೋಮೇಶ. ೯೬). **ಆನಂದಪಡು** : (ಮುಂಬಯಿ. ೩-೮೧ ; ೪-೨೦೭ ಕಿ). [ಆನಂದ + ಪಡು₁]

**ಆನಂದಂಬೆಱು** (ಕ್ರಿ). ಆನಂದವನ್ನು ಪಡೆ : ಮರಕತಮಣಿಮಯ ದಂಡಮನತ್ಯಾನಂದಂಬೆತ್ತು ಅಮರಿ ಪಿಡಿಯಲ್ (ಜಯಕಾ. ೨-೧೩).

[ಆನಂದ + ಪೆಱು₁]

**ಆನಂದಕರ** (ಗು). ಸಂತೋಷವನ್ನುಂಟುಮಾಡುವ ; ಸುಖವನ್ನು ತರುವ : ಅತುಳಿತಮಹಾದಾನಿ ಪಶುಪತಿ ಯತಿಜನಾನಂದಕರನಭವಂ (ಬಸವು. ೧೩-೩೦). [ಸಂ.]

**ಆನಂದಕಾರಕ** (ಗು). = ಆನಂದಕರ. [ಸಂ.]

**ಆನಂದಗೊಳಿಸು** (ಕ್ರಿ). ಸಂತೋಷಪಡಿಸು ; ಸಂತೋಷವನ್ನುಂಟುಮಾಡು : ದಿನಕೊಂದು ಹೊಸ ಹೊಸ ಮೂಳಿಯನೆಸೆಯುತ ನಾಯಿಯ ನಾನಂದಗೊಳಿಸು (ಇಂಚಾಪ. ೧೯೦-೪೦).

[ಆನಂದ + ಕೊಳ್₁ + -ಇಸು₃]

**ಆನಂದಜಲ**, ಆನಂದಜಳ (ನಾ). ಸಂತೋಷದ ಕಣ್ಣೀರು; ಆನಂದ ಬಾಷ್ಪ : "ಅಶ್ರು ಬಾಷ್ಪಂ ಅಕ್ಷಿಯಾನಂದಜಲಮುಕ್ಕು" (ಮಂಗರಾ. ೯೩-೨) ; ಆನಂದಜಲಪರಿಲುಳಿತ ನಯನಸ್ಪಂದ ಪರಿತೋಷದಲಿ ತೆಗೆದಪ್ಪಿದರವರು ಪಾಂಡವರ (ಕುವ್ಯಾಅ. ೧೭-೩೦). **ಆನಂದಜಳ** : ಮಗನ ಮೊಗಮನಾನಂದಜಳಲುಳಿತ ಲೋಚನನಾಗಿ ನೋಡಿ (ಮಲ್ಲಿಪು. ೯-೮೫).

[ಆನಂದ + ಜಲ₂]

**ಆನಂದಜಳ** 'ಆನಂದಜಲ' ನೋ.

**ಆನಂದತುಂದಿಲ** (ಗು). ಆನಂದದಿಂದ ತುಂಬಿದ; ಸಂತೋಷ ತುಂಬಿ ತುಳುಕಾಡುವ : ಆನಂದತುಂದಿಲಸ್ವಾಂತರಾದ[illegible]ಪತಿಗಳ್ (ಅದ್ಭುತ. ೫-೭) ; ತಾವು ಪರೀಕ್ಷೆಯಲ್ಲಿ ಹೆಚ್ಚು ಯಶಸ್ಸನ್ನು ಪಡೆದ ಸುದ್ದಿಯನ್ನು ಕೇಳಿ ವಿದ್ಯಾರ್ಥಿಗಳು ಆನಂದತುಂದಿಲರಾಗುತ್ತಾರೆ (ಧರ್ಮಸಾ. ೧೩೧). [ಆನಂದ + ತುಂದಿಲ]

**ಆನಂದನ** (ಗು). ೧. ಸಂತೋಷವನ್ನುಂಟುಮಾಡುವ; ಸುಖವನ್ನು ತರುವ. (ನಾ). ೨. ಸಂತೋಷ : ಅನಿಮಿತ್ತ ದರಸ್ಮಿತದಿಂ . . . ಅಕಾರಣಾನಂದನದಿಂದುತ್ತಾನಶಯನದಿಂ ಹರಿಯೆಸೆದಂ (ಜಗವಿ. ೩-೨೮). ೩. ಇಷ್ಟಮಿತ್ರರು, ಬಂಧುಗಳು ಮುಂತಾದವರನ್ನು ಉಪಚರಿಸಿ ಯೋಗಕ್ಷೇಮಗಳನ್ನು ಕೇಳಿ ಸಂತೋಷಪಡಿಸುವುದು. [ಸಂ.]

**ಆನಂದನಾಟಕ** (ನಾ). ೧. ಸಂತೋಷದಿಂದ ಮೈಮರೆತು ಆಡುವ ನೃತ್ಯ; ಹರ್ಷಸಂಭ್ರಮದಿಂದ ಆಡುವ ನೃತ್ಯ. ೨. ಆನಂದವನ್ನುಂಟುಮಾಡುವ ನಾಟಕ : ಆನಂದನಾಟಕಂ ಪರಮಾನಂದಮನಂದುಮಾಡೆ ದಿವಿಜಾಧೀಶರ್ ನಾನಾಪ್ರಕಾರದಿಂದಮದೇನೆಂಬುತ್ಸವಮನಟ್ಟಿಯಿಂ ಮಾಡಿದರೋ (ಆದಿಪು. ೧೬-೫೪).

[ಆನಂದ + ನಾಟಕ]

**ಆನಂದನಾಡಿ** (ನಾ). ಸಂತೋಷವು ತುಂಬಿರುವ ನಾಡಿ; ಆನಂದವುಂಟಾದಾಗ ಪ್ರತಿಕ್ರಿಯೆಯನ್ನು ಸೂಚಿಸುವ ನಾಡಿ : ಸ್ಪಂದಿಸುವುದು ಹೃದ್ಬಂಧ ತುಂಬಿದಾನಂದನಾಡಿಯಿಂದ (ಹಾಡುಪಾ. ೧೩-೧೨).

[ಆನಂದ + ನಾಡಿ]

**ಆನಂದನೃತ್ಯ** (ನಾ). ಸಂತೋಷದಿಂದ ಮೈಮರೆತು ಕುಣಿಯುವ ಕುಣಿತ: ಎಸೆದತ್ತಿಂದ್ರನಾನಂದನೃತ್ಯಂ (ಆದಿಪು. ೭-೧೨೦); ಅಂತುಮೂವತ್ತಿರ್ವರಿಂದ್ರರುಮಾನಂದನೃತ್ಯಮನಾಡೆಯುಂ (ಶಾಂತಿಪು. ೧೨-೩೭ವ) ;

[ಆನಂದ + ನೃತ್ಯ]

**ಆನಂದಪಡು** 'ಆನಂದಂಬಡು' ನೋ.

**ಆನಂದಪುರ** (ನಾ). ಆನಂದದ ಪಟ್ಟಣ ; ವೈಕುಂಠ : ನವಭಕುತಿ ಮನ[illegible]ಗಂಡು ಸವೆಯದಾನಂದಪುರ ಪಥವನು ತೋರಿಸಿದಂಥ ಬಹು ಕೃಪಾಕರನ (ಪ್ರಸಕೀ. ೨-೪). [ಆನಂದ + ಪುರ₁]

**ಆನಂದಬಾಷ್ಪ** (ನಾ). = ಆನಂದಜಲ: ನೇತ್ರಯುಗದಿಂ ಆನಂದ ಬಾಷ್ಪಾಂಬು ಝುಮ್ಮನುಗಲ್ (ಪುಷ್ಪಪು. ೪–೬೨); ಕಣ್ಣಿರು ಆನಂದ ಬಾಷ್ಪಪ್ರವಾಹದಿಂದ . . . ನಿನ್ನನ್ನು ನೋಡುತ್ತಾ ಸಮೀಪದಲ್ಲೇ ನಿಂತಿರುವರು (ಶಾಕುಂತ. ೫೨–೯). [ಆನಂದ + ಬಾಷ್ಪ]

**ಆನಂದಭಕ್ತಿ** (ನಾ). [ವೀಶೈ] ಆರುಬಗೆಯ ಭಕ್ತಿಗಳಲ್ಲಿ ಒಂದು: ಪ್ರಾಣಲಿಂಗಸ್ಥಲದಲ್ಲಿರುವ ಅನುಭವ ಭಕ್ತಿಯೇ ಆನಂದಯೋಗದಿಂದ (ಶಿವಾನುಭವದಿಂದುಂಟಾದ ಅಂತರಾನಂದಪ್ರಾಪ್ತಿಯಿಂದ) ಆನಂದಭಕ್ತಿಯೆನಿಸಿಕೊಂಡಿತು (ಶಿವಾಸೂ. ೬೮); ಈ ಆರು ಭಕ್ತಿಯ ಮೆಟ್ಟಿಲುಗಳನ್ನೇ ವೀರಶೈವರು: (೧) ಶ್ರದ್ಧಾಭಕ್ತಿ, (೨) ನಿಷ್ಠಾಭಕ್ತಿ, (೩) ಅವಧಾನಭಕ್ತಿ, (೪) ಅನುಭವಭಕ್ತಿ, (೫) ಆನಂದಭಕ್ತಿ ಮತ್ತು (೬) ಸಮರಸಭಕ್ತಿ ಎಂದು ಕರೆಯುತ್ತಾರೆ (ಮಹಾಸಾ. ೫೨ ಪ್ರಸ್ತಾ). [ಆನಂದ + ಭಕ್ತಿ]

**ಆನಂದಭೇರಿ** (ನಾ). ಸಂತೋಷವನ್ನು ಸೂಚಿಸಲು ರಾಜನು ಹೊಡೆಯಿಸುವ ಭೇರಿ,—ನಗಾರಿ: ಚರಾಚರ ಗುರುವಿರ್ದ ದೆಸೆಗೇಟಡಿಯಂ ನಡೆದೆಱಗಿ ಪೊಡೆವಟ್ಟಿರಡೊಸಗೆಯೊಳಂ ಮುಖ್ಯಂ ಗುರುವೆಂಬುದಂ ಬಗೆದು ಆನಂದಭೇರಿಯಂ ಪೊಯ್ಸಲ್ವೇಟ್ಟು (ಶಾಂತಿಪು. ೮–೧೫೪ ವ); ಆನಂದದಿನಾನಂದಭೇರಿಯಂ ಪೊಯ್ಸಿದಾಗಳ್ (ಸುಕುಮಾ. ೮–೪೬ವ). [ಆನಂದ + ಭೇರಿ]

**ಆನಂದಭೈರವಿ** (ನಾ). [ಸಂಗೀತ] ಒಂದು ರಾಗ: ಆ ಕಳಾವತಿಯರಾನಂದಭೈರವಿಯಂ ಆಲಾಪಿಸುತ ನಿಂತಿರಲು (ಸೌಗಂಧಿ. ೫೦೩–೨); ಹಾಡುಗಳಿಗೆ ಕಾಂಬೋಧಿ . . . ಆನಂದಭೈರವಿರಾಗಗಳೂ, ಆದಿ, ಅಟತಾಳಗಳೂ ಸೂಚಿತವಾಗಿವೆ (ಯಕ್ಷಗಾ. ೩೮). [ಸಂ.]

**ಆನಂದಮಣಿ** (ನಾ). ಒಂದು ಬಗೆಯ ಮಣಿ: ಪುತ್ತಂ ತನ್ನಂ ಸೇವಿಸಿದಮಾತ್ರದಿಂ ದುಃಖನಿವೃತ್ತಿಯಪ್ಪ ಆನಂದಮಣಿ . . . ಅಲ್ಲಿಯಣ ಶಿವಭಕ್ತರಿಗೆ ಸುಕೃತಾನುರೂಪದಿಂದಾನಂದಕರಗಳಾಗಿರ್ಕುಂ (ವಿವೇಕ. ೨೧೦). [ಆನಂದ + ಮಣಿ$_3$]

**ಆನಂದಮಯ** (ಗು). ೧. ಆನಂದದಿಂದ ತುಂಬಿದ,—ಮಾಡಿದ. (ನಾ). ೨. [ತತ್ತ್ವಶಾ] = ಆನಂದಮಯ ಕೋಶ: ಐದು ಕೋಶಾತ್ಮಕ = ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಐದು ಕೋಶ ಸ್ವರೂಪನಾಗಿ (ಹಸಾರ. ೪–೧೬ ಟೀಕು). [ಸಂ.]

**ಆನಂದಮಯಕೋಶ** (ನಾ). [ತತ್ತ್ವಶಾ] ಪಂಚಕೋಶಗಳಲ್ಲಿ ಒಂದು; ಕೇವಲ ಆನಂದವೇ ಮುಖ್ಯಲಕ್ಷಣವಾದ ಕೋಶ: ವನಿತೆ ಮೊದಲಾಗಿರುವ ವಿಷಯದ ನೆನಹು ಪ್ರಿಯಮೋದವು ಪ್ರಮೋದಂದಳೆದು ಮೂರೊಂದಾದುದಾನಂದಮಯಕೋಶವದು (ಗಗತಾ.೧೮–೧೩); ಅವಿದ್ಯೆ ಎಂಬ ಅಜ್ಞಾನವೇ ವ್ಯಷ್ಟಿದೃಷ್ಟಿಯಿಂದ ಜೀವಾತ್ಮನಿಗೆ ಕಾರಣ ಶರೀರವಾಗಿಯೂ ಕೋಶದಂತೆ ಆವರಣರೂಪವಾಗಿಯೂ ಆನಂದ ಪ್ರಚುರವಾಗಿಯೂ ಇರುವುದರಿಂದ ಆನಂದಮಯಕೋಶವಾಗಿರುವುದು (ಹಿಂದಸಾ. ೧೯೬). [ಆನಂದಮಯ + ಕೋಶ]

**ಆನಂದಮೂರ್ತಿ** (ನಾ). ಆನಂದವೇ ಸ್ವರೂಪವಾದವನು: ಆನಂದಮೂರ್ತಿ . . . ನೀರಜನೇತ್ರನ ಬಾಲಕೇಳಿ ಬಣ್ಣಿಪರಳವೆ (ಜಗವಿ. ೩–೫೬). [ಆನಂದ + ಮೂರ್ತಿ]

**ಆನಂದವಡೆ** (ಕ್ರಿ). ಸಂತೋಷವನ್ನು ಪಡೆ; ಹರ್ಷವನ್ನು ಹೊಂದು: ನೊಂದವರು ಸತ್ಸಂಗತಿಯಲಾನಂದವಡೆವುದೆನುತ್ತ ಮುನಿಪತಿ ಕಂದು ಮೋಱೆಯ ಮಹಿಪತಿಯ ನೆಗಹಿದನು ಕರುಣದಲಿ (ಕುವ್ಯಾದ್ರೋ. ೬–೨೧); ಅವಳಾಡಿದ ನುಡಿಗೆ ಮನದೊಳಾನಂದವಡೆದು ಲಲಿತಾಂಗಿ ಅಂದಿನ ದಿನವ ಕಳೆಯಲು (ಕಂನವಿ. ೯–೫೮). [ಆನಂದ + ಪಡೆ$_1$]

**ಆನಂದವರಣ** (ನಾ). ಆನಂದವನ್ನು ಆರಿಸುವುದು: ಆನಂದವರಣದೊಳು ಸುಖಯಜ್ಞ ಕಲ್ಪವೇ (ಮಲೆದೇ. ೧೨–೩). [ಆನಂದ + ವರಣ]

**ಆನಂದವಸ್ತ್ರ** (ನಾ). ಮುಟ್ಟಾದ ಸ್ತ್ರೀಯ ರಕ್ತದಿಂದ ಕೆಂಪಾದವಸ್ತ್ರ: ದೇವಕಿಯಾನಂದವಸ್ತ್ರಮಂ ಪಡಲಗೆಯೊಳ್ ಪಿಡಿದೊಸಗೆ ಮರುಳ್ಗೊಂಡಾಡುವ ಜೀವಂಜಸೆ (ಅರ್ಧನೇ. ೬–೫ ವ); ನಿಮ್ಮ ತಂಗೆಯುಡಲಟ್ಟಿದ ಳೆಂದೆತ್ತಿದಳವಂಗೆ ಮೊಗಮುರಿವುತ್ತಿರಲಾನಂದವಸ್ತ್ರಮಂ ದೇವಕಿಯಾ (ಅರ್ಧನೇ. ೬–೭). ‘ರಕ್ತವಸ್ತ್ರ’ ಪರಾ. [ಆನಂದ ? + ವಸ್ತ್ರ]

**ಆನಂದವಾದ** (ನಾ). ಜೀವನದ ಎಲ್ಲ ಚಟುವಟಿಕೆಗಳೂ ಆನಂದೋನ್ಮುಖವಾಗಿರುತ್ತವೆ ಎನ್ನುವ ಸಿದ್ಧಾಂತ: ಆತ್ಮದ ಈ ಆನಂದಮಯ ಪ್ರವೃತ್ತಿಯೇ ಕರುಣರಸ ಆಸ್ವಾದ್ಯವಾಗಲು ಕಾರಣವಾಗುತ್ತದೆ. ಈ ಸಮಾಧಾನ ಪರಿಪೂರ್ಣವಾಗಿ ಭಾರತೀಯ ಆನಂದವಾದವನ್ನೇ ಆಶ್ರಯಿಸಿದೆ (ಶ್ರೇಷ್ಠಪ್ರ. ೩೭). [ಆನಂದ + ವಾದ$_3$]

**ಆನಂದವಾದಿ** (ನಾ). ಆನಂದವೇ ಪರಮಾರ್ಥವೆಂದು ತಿಳಿದವನು: ಜೀವನದಲ್ಲಿ ಎಲ್ಲ ಚಟುವಟಿಕೆಗಳೂ ಆನಂದೋನ್ಮುಖವಾಗಿರುತ್ತವೆ. ಈ ಸಂಪ್ರದಾಯವನ್ನು ಆನಂದವಾದಿ (Hadonist) ಸಂಪ್ರದಾಯವೆಂದು ಕರೆಯುತ್ತಾರೆ (ಶ್ರೇಷ್ಠಪ್ರ. ೧೫). [ಸಂ. ಆನಂದವಾದಿನ್]

**ಆನಂದವೃಕ್ಷ** (ನಾ). ಅಶೋಕವೃಕ್ಷ; ಅಸುಗೆಗಿಡ: “ಅಶೋಕಃ— ಅಶೋಕವೃಕ್ಷ, ಕೆಂಪುಚಿನ್ನದ ಎಲೇಗಿಡ, ಆನಂದವೃಕ್ಷ, ಕಷ್ಟಹರವೃಕ್ಷ” (ಸಿದ್ಧಾಂತಿ. ೧೧೧). [ಆನಂದ + ವೃಕ್ಷ]

**ಆನಂದವೇಱು** (ಕ್ರಿ). ಸಂತೋಷ ಹೆಚ್ಚಾಗು: ಇಹಃಪಗೆಯಾಂಡರಾನಂದವೇಱುತಂ ತಂಡತಂಡದ ಪುಳಕವೃಂದಮಂ ಹೇಱುತಂ (ಇಹರ. ೩೦–೧೭). [ಆನಂದ + ಏಱು$_1$]

**ಆನಂದಸ್ವರೂಪ** (ನಾ). ಆನಂದವೇ ಮೂರ್ತಿವೆತ್ತವನು: ಜಯಜಯಾನಂದಸ್ವರೂಪ (ಶತಸಾಂ. ೬೨–೮). [ಆನಂದ + ಸ್ವರೂಪ]

**ಆನಂದಾಗರ** (ನಾ). ಸಂತೋಷದ ಆಶ್ರಯ,—ಸ್ಥಳ: ತನ್ನ ಜೀವನ ಸರ್ವಸ್ವವೂ ಆನಂದಾಗರವೆಂಬಂತೆ ಕಾಣುತ್ತಿತ್ತು (ಪುನರು. ೫೭). [ಆನಂದ + ಆಗರ$_2$]

**ಆನಂದಾಶ್ರು** (ನಾ). = ಆನಂದಜಲ: ಕಣ್ಮಲರೊಳಾನಂದಾಶ್ರು . . . ಎಸೆಯುತ್ತಿರ್ಪನ್ನಂ (ಜಗವಿ. ೩–೫). [ಆನಂದ + ಅಶ್ರು]

**ಆನಂದಾಶ್ರುಜಲ** (ನಾ). = ಆನಂದಜಲ: ಶೋಕಬಾಷ್ಪಂಗಳುಮನಾನಂದಾಶ್ರುಜಲಂಗಳುಮಂ ತೊಳೆದು (ಶಾಂತಿಪು. ೪–೧೦೪). [ಆನಂದಾಶ್ರು + ಜಲ$_2$]

**ಆನಂದಿ** (ನಾ). ಸಂತೋಷದಿಂದ ಕೂಡಿರುವವನು; ಸುಖಪಡುವವನು: ಆನಂದಿಯಾಗಿರುವುದೇ ಕವಿಯ ಲಕ್ಷಣ (ಸಾಹಿವಿ. ೫). [ಸಂ. ಆನಂದಿನ್]

**ಆನಂದಿತ** (ಗು). ಸಂತೋಷಗೊಂಡ; ಹರ್ಷಹೊಂದಿದ: ಆನಂದಿತಾಮಳಭಕ್ತಿಯುಕ್ತಾನಂದಸರಸದೊಳಾಡುವಂತೆ (ಬಸಪು. ೧–೫೯). [ಸಂ.]

**ಆನಂದಿನಿ** (ನಾ). [ತತ್ತ್ವಶಾ] ಯೋಗಶಾಸ್ತ್ರದ ಧ್ಯೇಯವಾದ ಸಮಾಧಿಯನ್ನು ಪಡೆಯುವ ಅಥವಾ ಪರವಸ್ತುವನ್ನು ಪಡೆಯುವ ಏಳು ಮೆಟ್ಟಿಲುಗಳಲ್ಲಿ ಐದನೆಯದು: ಸಪ್ತಭೂಮಿಕೆಗಳನು ತಿಳಿ ಪರವಸ್ತುವನು ಹೊಂದುವೊಡೆ ಮನಸಿಗೆ ಸ್ವಸ್ಥವಹ ಸೋಪಾನವಾಗಿರ್ಪವನು ಕ್ರಮದಿಂದ . . . ಒದವಿದಾನಂದಿನಿಯೆ ಐದನೆಯದು (ಅಮೃತ. ೬–೫,೬); ಜೀವಪರಮೈಕ್ಯವನು ಪಡೆದವಗಾವ ಸಂಗವುಮಿಲ್ಲ ನೆಱೆ ಸದ್ಭಾವವೇ ಒಡಲಾಗಿ ನಿರ್ವಾಸನೆಯೆ ನೆಲೆಯಾಗಿ ಕೇವಲಾನಂದಾನುಭವವೇ ಸಾವಧಾನದಿ ಹೊಱಗೊಳಗೆ ನೆಱೆ ತೀವಿರುವುದದ ತಿಳಿಯಲಾನಂದಿನಿಯೆನಿಪ ಭೂಮಿ (ಅಮೃತ. ೬–೩೪). [ಸಂ. ಆನಂದಿನೀ]

**ಆನಂದಿಸು** (ಕ್ರಿ). ಸಂತೋಷಪಡು; ಸುಖಿಸು: ಗಂಧರ್ವರಾಜನಂದನೆಯನಾನಂದಿಸುತ್ತಮಿರ್ಪುದುಂ (ಕಾದಂಉ. ೭೯೩); ಆಮೋದಕಾನಂದಿಸುತ ದುರ್ಗಂಧದ ಸೀಮೆಗೆಜಗದಳಿಯಂತೆ (ಕುರಾಸಾಂ. ೧–೪೫); ಬಂದು ಹೊಕ್ಕನು ಮಂದಿರವ ನೃಪವೃಂದವಾನಂದಿಸಲು (ನಳಚ. ೩–೪೭). [ಆನಂದ + –ಇಸು$_3$]

**ಆನಂದೂರು** (ನಾ). ಒಂದು ಊರಿನ ಹೆಸರು: ಆನನ್ದೂರ ಶ್ರೀಕೋಟ ಆಚ್ಚಾರಿ ಮಾಡಿದನ್ (ಎಕ. X, ಶ್ರೀನಿವಾ. ೧೯–೧೧; 800); ಶ್ರೀ ಆನನ್ದೂರ ಮೂದಾಚ್ಚಾರಿ ಮಾಡಿದನ್ (ಎಕ. X, ಶಿಡ್ಲಘ. ೩೧–೧೩; 870). [ಆನಂದ + ಊರು$_3$ (< ಊರ್)]

**ಆನಂದೋನ್ಮತ್ತ** (ನಾ). ಸಂತೋಷದಿಂದ ಅಮಲೇರಿದವನು: ಕವಿ ಉನ್ಮತ್ತ, ಭಾವೋನ್ಮತ್ತ, ಆನಂದೋನ್ಮತ್ತ (ಆನಿಕೇ. ೪೯–೧೨). [ಆನಂದ + ಉನ್ಮತ್ತ]

**ಆನಕ** (ನಾ). **೧.** ಭೇರಿ; ದುಂದುಭಿ; ನಗಾರಿ; ತಮಟೆ: "ಆನಕಃ, ಪಟಹಃ – ಈ ೨ ಪಡಡಕ್ಕೆ" (ಹಲಾಯು. ೧೭–೯೭); ಕೆದನಾನಕ ರಾವಮಗುರ್ವಿಸುರ್ವಿಪರ್ವುತ್ತಿರೆ (ಪಂಪಭಾ. ೮–೯೨); ಲಕ್ಕ ತೆಱದಿಂದೆ ಪೊಯ್ವ ನಾನಾನಕ ಧ್ವನಿಯಿಂ (ಸುಕುಮಾ. ೯–೫೯); ವಿವಿಧಾನಕಮೆಸೆದಿರೆ ಪುಂಸವನೋತ್ಸವಮೆನಗದೆಂದು ಸಮನಿಸಿದಪುದೋ (ಮಲ್ಲಿಪು. ೩–೧೧೧). **೨.** ಗುಡುಗು; ಸಿಡಿಲು. [**ಸಂ.**]

**ಆನಕದುಂದುಭಿ** (ನಾ). ಶ್ರೀ ಕೃಷ್ಣನ ತಂದೆಯಾದ ವಸುದೇವ: ಗೋಕುಲಮನಾನಕದುಂದುಭಿ ಪೊಕ್ಕು (ಜಗವಿ. ೩–೧೧). [**ಸಂ.**]

**ಆನಕಧ್ವನಿ** (ನಾ). ಭೇರಿಯ ಧ್ವನಿ; ತಮಟೆ ಮೊದಲಾದ ಚರ್ಮವಾದ್ಯಗಳ ಸದ್ದು: ಆನಕಧ್ವನಿ ವಿಹಂಗಧ್ವಾನಮಂ ಪೋಲೆ ವಿಭ್ರಮದಿಂ ಬಂದನದೊಂದು ನಂದನವನಂ ಬರ್ಪಂತೆ ಸಂಕ್ರಂದನಂ (ಪುಷ್ಪಪು. ೧೪–೪೫). [ಆನಕ + ಧ್ವನಿ]

**ಆನಕಧ್ವಾನ** (ನಾ). = ಆನಕಧ್ವನಿ: ಚೆಲ್ವಾಯ್ತು ಸಂಧ್ಯಾಪ್ರಭವದಭವಗೇಹಾನಕಧ್ವಾನಮೆತ್ತಂ (ಚಂದ್ರಪು. ೮–೧೮). [ಆನಕ + ಧ್ವಾನ]

**ಆನಕರವ** (ನಾ). = ಆನಕಧ್ವನಿ: ಆಗಳನೇಕಮೂರ್ಧಾಭಿಷಿಕ್ತಮಂಡಳಿಕಮಂಡಳೀಪರಿವೃತನಾಗಿ ಪದ್ಮರಾಜನಾ ರಾಜವಿದ್ಯಾವಿಳಾಸನಂ ಮಂಗಳಾನಕರವಂಗಳೆಸೆಯೆ ಕಮನೀಯ ಕಲ್ಯಾಣ ಪೀಠನಿಷ್ಠಿತನಂ ಮಾಡಿ (ಪುಷ್ಪಪು. ೮–೮೦ ವ). [ಆನಕ + ರವ]

**ಆನಗಳಿ** 'ಆನೆಗಳಿ' ನೋ.

**ಆನತ** (ಗು). **೧.** ಬಗ್ಗಿದ; ಬಾಗಿದ; ನಮಸ್ಕರಿಸಿದ; ವಿಧೇಯವಾದ: ಮಾನಿಯುಮುದಾರಚರಿತನುಮಾನತರಿಪುನಿಕರನುಂ (ಕವಿರಾ. ೩–೧೭೧); ಭಕ್ತಜನಪ್ರೇಮಿಯಾನತಕಲ್ಪಕುಜ (ಪ್ರಾ ಥ ರಾ. ೧–೧). (ನಾ). **೨.** ನಮಸ್ಕರಿಸಿದವನು; ಶರಣಾಗತನಾದವನು; ವಿಧೇಯನಾದವನು: ಆನತರ ತೇಜೋಭಿಮಾನವ ನೀನೊಲಿದು ಸಲಹೆಂದು ಮುದದಲಿ ಭಾನುಮತಿ ಮೈಯಿಕ್ಕಿದಳು ಮುರಹರನ ಚರಣದಲಿ (ಕುವ್ಯಾಉ. ೯–೬೭); ಚರಣದ್ವಂದ್ವಕಾನತರಾಗಿ ಹರುಷದ ಸಂದಣಿಯ ಸೌರಂಭದಲಿ ಬೀಳ್ಕೊಂಡರಾ ಹರಿಯ (ತೊರರಾ. ೧–೮–೬೭). **೩.** [ಜೈನ] ಸೌಧರ್ಮ, ಈಶಾನ ಮುಂತಾದ ಕಲ್ಪಗಳಂತೆ ಒಂದು ಕಲ್ಪ; ಅರವತ್ತುಮೂ ಇಂದ್ರಕಗಳಲ್ಲಿ ಒಂದು: ಆನತ ಪ್ರಾಣತ ಕಲ್ಪಮೆಂಬೆರಡಱೊಳಂ (ತತ್ತ್ವಪ್ರ. ೨೦೬); ಆನತಪ್ರಾಣತ ಆರಣಾಚ್ಯುತಕಲ್ಪನಿವಾಸಿಗಳ್ಗೆ ದೈವದ್ಧಿರ್ದರ್ಶನಂ ಪೊಱಗಾಗಿ ಉಟಿದ ಮೂಱುಮಕ್ಕುಂ (ತತ್ತ್ವಪ್ರ. ೧೩). **೪.** [ಕಾಮಶಾ] ರತಿಯಲ್ಲಿ ಒಂದು ಬಗೆಯ ಕ್ರೀಡಾಬಂಧ: ವನಿತೆ ಬಾಗಿರಲ್ಕೆ ಪುರುಷನನುಭವಿಸುವುದಾನತಾಖ್ಯಂ (ಜನವ. ೭–೭). [**ಸಂ.**]

**ಆನತಜನ** (ನಾ). ನಮಸ್ಕರಿಸಿದ ಅಥವಾ ಶರಣಾಗತರಾದ ಜನ: ಆನತಜನಕ್ಕಾನಂದಮಂ ಮಾಟ್ಕೆ (ಗದಾಯು. ೧–೪); ಕಾವುದಾನತಜನವ ಗದುಗಿನ ವೀರನಾರಯಣ (ಕುವ್ಯಾಆ. ೧–೧). [ಆನತ + ಜನ]

**ಆನತಭುವನ** (ನಾ). ಲೋಕದಿಂದ ನಮಸ್ಕರಿಸಲ್ಪಟ್ಟವನು; ಎಲ್ಲ ಜನರಿಂದಲೂ ವಂದಿಸಲ್ಪಟ್ಟವನು: ಆಱಿಪಿದನುದ್ಯಾನಮಹತ್ತರನರಸಂಗಾನತಭುವನನ ಸಮಾಗಮ ಪ್ರಸ್ತುತಮಂ (ಚಂದ್ರಪು. ೭–೧೦೫). [ಆನತ + ಭುವನ]

**ಆನತಮಸ್ತಕ** (ನಾ). ತಲೆಯನ್ನು ಬಾಗಿದವನು; ನಮಸ್ಕಾರ ಮಾಡಿದವನು: ಸೌಧರ್ಮೇಂದ್ರಂ... ತಡೆದಿರದೆೞ್ದು ವಿಷ್ಟರದಿನಾನತಮಸ್ತಕನಾಗಿ ಮೂಱುಸೂೞ್ ಪೊಡೆಮಡುವಲ್ಲಿ (ಪುಷ್ಪಪು. ೧೦–೫). [ಆನತ + ಮಸ್ತಕ]

**ಆನತಮುಖಿ** (ನಾ). ಮುಖವನ್ನು ತಗ್ಗಿಸಿದವಳು: ಮೇನಕೆಯುಂ ರಂಭೆಯುಮಿನಿಸಾನತಮುಖಿಯರ್ಕಳಾಗಿ ಬೆಱಗಾಗಿರ್ದರ್ (ಅಜಿಪು. ೫–೧೬). [**ಸಂ.** ಆನತಮುಖೀ (ಆನತ + ಮುಖ + –)]

**ಆನತಮೂರ್ಧ** (ನಾ). = ಆನತಮಸ್ತಕ: ಇಂತೆಂದರ್ ಆನತಮೂರ್ಧರ್ ಪಿತೃಮಾತೃಗಳ್ ದಯೆಯಿನಸ್ಮದ್ಗರ್ಭದೊಳ್ ಗೋಮಿನೀಪತಿ ನೀಂ ಪುಟ್ಟಿದೆ ಧನ್ಯರೆಮ್ಮವೊಲದಾರ್ (ಜಗವಿ. ೩–೫). [**ಸಂ.** ಆನತಮೂರ್ಧನ್ (ಆನತ + ಮೂರ್ಧನ್)]

**ಆನತವದನೆ** (ನಾ). = ಆನತಮುಖಿ: ಮತ್ತಮಾಕಾಂತೆ ಲಜ್ಜಾನತವದನೆಯಾಗಿ... ತಂಬುಲಂಗೊಡಲುಜ್ಜುಗಂಗೆಯ್ವಲ್ಲಿ (ಕಾದಂಉ. ೯೦). [**ಸಂ.** ಆನತವದನಾ (ಆನತ + ವದನ + –)]

**ಆನತಾರ್ತಿಹರ** (ನಾ). ನಮಸ್ಕರಿಸಿದವರ ಕಷ್ಟವನ್ನು ಹೋಗಲಾಡಿಸುವವನು; ಶರಣಾಗತರಾದವರ ಕಷ್ಟವನ್ನು ಬಿಡಿಸುವವನು: ಆನತಾರ್ತಿಹರ ದೀಪ್ತಿರೂಪನ ವಿಶ್ವಕರ್ತನಂ... ಕೂರ್ತು ವಂದಿಸುವೆನು (ವೀಶೈಪು. ೬–೧–೩೬). [**ಸಂ.**]

**ಆನತೆ** (ನಾ). ಬಾಗಿದವಳು; ನಮಸ್ಕರಿಸಿದವಳು: ಹಾ ಎಂದು ಆತನ ಪಾದಕಾನತೆಯಾದಳ್ (ರಾಮಾಶ್ವ. ೪೨–೪). [**ಸಂ.** ಆನತಾ]

**ಆನದ್ಧ** (ಗು). **೧.** ಕಟ್ಟಲ್ಪಟ್ಟ. (ನಾ). **೨.** ಮದ್ದಲೆ ಮುಂತಾದ ಚರ್ಮವಾದ್ಯ: "ಚರ್ಮವಂ ಕಟ್ಟಿ ನುಡಿಸುವ ಮುರಜಾದಿಕವೇ ಆನದ್ಧವೆನಿಸುವುದು" (ವಿವೇಕ. ೨೩೬); ತತಗಳಾನದ್ಧಗಳು ಸುಷಿರಗಳು (ಸೌನಂದ. ೧೦–೨೫). [**ಸಂ.**]

**ಆನನ** (ನಾ). **೧.** ಮುಖ: ಪ್ರಿಯಾತ್ಮಜಾನನಾರವಿಂದ ನಿರೀಕ್ಷಣಾನಂತರಂ (ಶಾಂತಿಪು. ೮–೬೭ ವ); ಅಸುರರಿಪುವಿನ ಮಂಗಳಾನನಕಮಲದಲಿ (ಕುವ್ಯಾಭೀ. ೬–೨೫). **೨.** ಬಾಯಿ: ಪೋದ ಭವಂಗಳೊಳ್ ನೆರಪಿದೊಂದು ತಪಂ ಫಲಮಾಯ್ತು ನಿನ್ನೊಳಿಂದಾ ದನುಜಾರಿ ಬಂದು ಭವದಾನನದೊಳ್ ಪುಗೆ (ಜಗವಿ. ೨–೮೪). [**ಸಂ.**]

**ಆನನಾಗ್ರ** (ನಾ). ಮುಖದ ತುದಿ: ಅದೊಂದು ಮಹೋರಗಮಾನನಾಗ್ರಮಂ ಪಿಡಿದಡರ್ದಲ್ಲಿ ನೇಲುತಿರೆ ಸುಂಡಿಲವೋಲ್ (ರಾಜಶೇ. ೫–೭೯). [ಆನನ + ಅಗ್ರ$_1$]

**ಆನಮಿಸು** (ಕ್ರಿ). ವಿನಯದಿಂದ ವಂದಿಸು; ನಮಸ್ಕರಿಸು: ಪರಮಮಹೇಶ್ವರರು ನೀವೆಂದಾನಮಿಸೆ (ಬಸವು. ೪೬–೧೦). [ಆನಮನ$_0$ + –ಇಸು$_3$]

**ಆನಮ್ರಾಮರ** (ನಾ). ದೇವತೆಗಳಿಂದ ನಮಸ್ಕರಿಸಲ್ಪಟ್ಟವನು: ಆನಮ್ರಾಮರನಗ್ನಿಭೂತಿಮುನಿರಾಜೇಂದ್ರಂ (ಸುಕುಮಾ. ೯–೪). [ಆನಮ್ರ + ಅಮರ$_3$]

**ಆನಯ** (ನಾ). = ಆನಯನ. [**ಸಂ.**]

**ಆನಯನ** (ನಾ). ತೆಗೆದುಕೊಂಡು ಬರುವುದು ; ತರಿಸುವುದು ; ಬರಮಾಡಿಕೊಳ್ಳುವುದು : ಸಂಕಲ್ಪಿತಕ್ಷೇತ್ರ ಬಹಿಃಸ್ಥಿತವಸನಾದಿ ವಸ್ತುವಂ ತರಿಸುವಾನಯನಮುಂ (ತತ್ತ್ವಪ್ರ. ೨೮೨); ಹೀಗೆ ಪದಾರ್ಥ ಸಾಗಿಸುವಿಕೆಗೆ ನಯನ, ಆನಯನ ಎಂದು . . . ಹೆಸರು (ಭೂವಿವ. ೨೦೧). [ಸಂ.]

**ಆನರ್ತ** (ನಾ). ೧. ರಂಗಸ್ಥಳ; ನಾಟ್ಯರಂಗ ಅಥವಾ ಶಾಲೆ: ವದನಂ ವಾಗ್ವನಿತಾವಿಳಾಸಸದನಂ ವಕ್ಷಂ ರಮಾನರ್ತ್ತಕೀವಿದಿತಾನರ್ತ್ತವುದಾರವರ್ತ್ತಿಜನತಾಸಂತರ್ಪ್ಪಣಂ (ಎಕ. V, ಅರಸೀ. ೭೭–೨೭ ; 1219). ೨. ಯುದ್ಧ. ೩. ಒಂದು ದೇಶದ ಹೆಸರು. ೪. ಆನರ್ತದೇಶದವನು. [ಸಂ.]

**ಆನರ್ಥಕ್ಯ** (ನಾ). ಅರ್ಥವಿಲ್ಲದಿರುವಿಕೆ ; ಪ್ರಯೋಜನವಿಲ್ಲದಿರುವಿಕೆ. [ಸಂ.]

**ಆನವಂಗೆಱೆ** (ನಾ). ಒಂದು ಊರಿನ ಹೆಸರು: ಬೆಳ್ಗಲ್ಲ ಸರಡೆ ಆನವಂಗೆಱೆಯ ಉತ್ತರ ಶೃಂಘ(ಗ)ದ ಪಾಷಾಣ ಪ್ರಕೃತಿಎ(ಯೆ) (ಇಆ. VIII, ೫೪–೨೭ ; 10ನೆಯ ಶತ). [ಆನವ್$_0$ + ಕೆಱೆ]

**ಆನವು** (ನಾ). ಒಂದು ಗಿಡದ ಹೆಸರು. (ಮೈಔಗಿ. ೫೬–೧೧೨೩). [?]

**ಆನವೇರಿ, ಆನುವೇರಿ** (ನಾ). ಒಂದು ಊರಿನ ಹೆಸರು: ಹಿಂದೆ ಆನವೇರಿ ಹನುಮಂತ ದೇವರು ಹೊರಟು (ಎಕ. VII, ಶಿವಮೊ. ೧೦೭–೨೩ ; 1576). **ಆನುವೇರಿ**: ಹೊಂನೂರ ಸೀಮೆವಳಗಣ ಆನುವೇರಿ ಪಾಲಿಗೆ ಸಲುವ ಕನಸಿನಕಟೆ ಗ್ರಾಮದಲಿ (ಎಕ. VII, ಶಿವಮೊ. ೮೨–೧೯ ; 1683). [?]

**ಆನಾಯ** (ನಾ). ಬಲೆ: "ಆನಾಯಃ, ಜಾಳಃ, ಕುವೇಣೀ, ಮತ್ಸ್ಯಬಂಧಿನೀ—ಈ ೪ ಬಲೆ" (ಹಲಾಯು. ೯೭–೪೪೦). [ಸಂ.]

**ಆನಾಯ್ಯ** (ಗು). ೧. ತರಿಸಬೇಕಾದ ; ತೆಗೆದುಕೊಂಡು ಬರಬೇಕಾದ. (ನಾ). ೨. ಸಂಸ್ಕರಿಸುವ ಅಗ್ನಿ : "ಗಾರ್ಹಪತ್ಯದ ದೆಶೆಯಿಂದ ತೆಗಿಯಲ್ಪಟ್ಟು ದಕ್ಷಿಣಾಗ್ನಿಯಲ್ಲಿಡಲ್ಪಟ್ಟ ಅಗ್ನಿಯಲ್ಲಿ ಅನ್ನಾಯ್ಯ ಶಬ್ದವು ವರ್ತಿಸುವುದು" (ಗುರುಬಾ. ೨೫೦). [ಸಂ.]

**ಆನಾಹ** (ನಾ). ೧. ಕಟ್ಟಿಕೊಳ್ಳುವುದು ; ಬದ್ಧವಾಗುವುದು. ೨. ಮಲ ಮೂತ್ರಗಳು ಕಟ್ಟಿಕೊಳ್ಳುವ ಒಂದು ರೋಗ. ೩. ಉದ್ದ : "ಆಯಾಮಃ, ಆನಾಯಃ — ಈ ೨ ಉದ್ದಂ" (ಹಲಾಯು. ೧೩೦–೧೦೧). [ಸಂ.]

**ಆನಿ** 'ಆಣಿ$_4$' ನೋ.

**ಆನಿಕೆ$_1$** (ನಾ). ೧. ಪ್ರತಿಭಟನೆ ; ಎದುರಾಗುವುದು ; ಸೈನ್ಯವು ಒಡ್ಡಿ ನಿಲ್ಲುವಿಕೆ : ಆನಿಕೆಯ ಭಟರುಳ್ಳರಿಱಿತಕೆ ಜಾನಿಸದೆ ಕಳುಹೆಂದು ಜಱಿದನು ರಾವಣಾಸುರನ (ತೊರರಾ. ೫–೫–೫). ೨. ಎದುರು; ಸಮಾನ: ಆನೆಯ ಬಲವೊಂದೆಸೆ ಕುದುರೆಯ ಪೌಜಿನಾನಿಕೆಯೊಂದೆಸೆಗಾಗೆ ಏನೆಂಬೆ ಕಾಲಾಳು ದಿಕ್ಕು ದಿಕ್ಕಿಗೆ ದುಮ್ಮಾನದೆ ತೆಗೆದೋಡಿದುದು (ಕಂನವಿ. ೧೭–೭೮) ; ಕೇಸರಿಗೆ ನರಿ ಪಾಸಟಿಯೆ ಸುರಭೂಧರಕೆ ಮೊಜಡಿಗಳಾನಿಕೆಯೆ ಭೂತ್ಕರಿಪ ಫಣಿಪತಿಗೆ ಸರಿಯೆ ನೀರೊಳ್ಳೆಗಳು (ಅನಂರಾ. ೬–೨–೭). ೩. ಧರಿಸುವುದು ; ಧಾರಣೆ : ಏನನೆನಗೆ ನಿರೂಪಿಸಿದಿರದಱಾನಿಕೆಯುಲೇ ಹೋಗಿ ಕಂಡೆನು ಜಾನಕಿಯ ಬಳಿಕಿತ್ತೆನವರಿಗೆ ರಾಮಮುದ್ರಿಕೆಯ (ತೊರರಾ. ೫–೯–೧೦). ೪. ಆಧಾರ ; ಆಸರೆ ; ಊರೆ ; ಒರಗು : ಪುರದಾನಿಕೆಯುಳ್ಳದೀಪಂ (ಬೊಂಕಶಾ. ೧೯೩೭, ಲಕ್ಷ್ಮೇಶ್ವ. ೨೯–೩೧; 996) ; ಧ್ಯಾನಪರನಾಗೈದೆ ಮಂಡಿಸಿರಲೆಡಬಲದೊಳಾನಿಕೆಯೊಳುಂ ಜ್ಯೇಷ್ಠರ ಧ್ಯಾತ್ಮ (ಪರಶು. ೪೨–೪೪); ಮಾನವ ಜನಾಂಗದ ವಿಚಾರಕ್ರಾಂತಿಯ ಆಯಕಟ್ಟಿನ ಸಂಚಾಲನೆಯ ಸೊನ್ನೆಗೆ ಮಾರ್ಕ್ಸ್‌ನು ಒಂದು ಆನಿಕೆಯ ಬಿಂದುವಾದನು (ಮಾವಾದ. ೩೬). [ಆನ್$_1$ + -ಇಕೆ]

**ಆನಿಕೆ$_2$** 'ಆಣಿಕೆ' ನೋ.

**ಆನಿಕೆಗಂಭ** (ನಾ). ಆಸರೆಯ ಕಂಬ ; ಊರೆಗಂಭ. [ಆನಿಕೆ$_1$+ ಕಂಭ]

**ಆನಿಲ** (ಗು). ೧. ಅನಿಲಕ್ಕೆ ಸಂಬಂಧಿಸಿದ. (ನಾ). ೨. ಆಂಜನೇಯ. ೩. ಭೀಮಸೇನ [ಸಂ.]

**ಆನಿಲಿ** (ನಾ). ೧. ಸುಂಡಿಲಿ ; ಮೂಗಿಲಿ (ಸ್ಯಾಂಡರ್). ೨. "ಕಸ್ತೂರೀ ಮೃಗ" (ಕಲ್ಪದ್ರು). [?]

**ಆನಿಸು** (ಕ್ರಿ). ೧. ಒರಗಿಸು ; ಜೋಡಿಸು ; ಸೇರಿಸು : ನಟ್ಟಾನಿಸಿದಂತೆ ಕಾಲ್ಗಳಿರೆ ಕಾಡಱಿದೇವರ [ಪಾಠಾಂ. ದೇವತೆ] ನೋಂಪಿಗಿಟ್ಟ ಮಣ್ಣಾನೆಯ ಮಾಱ್ಕೆಯಿಂ ಮಿಡುಕದಿರ್ದುದು ದಂತಿ ನಿದಾಘಕಾಲದೊಳ್ (ಸೂಕ್ತಿಸು. ೧೦–೧೦೮) ; ಖಡ್ಗಧಾರೆಯಂ ಲಲನೆಯ ಕಂಧರಕ್ಕೆ ಜಡಿದಾನಿಸಿದರ್ (ದಶಕು. ೧೩–೧೩) ; ಹೆಡತಲೆಯಲಾನಿಸಿದ ಕಾಲನ ಖಡುಗವಿದೆಲಾ ಕಾಣರಾರಿದನು (ನಿಭಾಗ. ೭–೬–೪) ; ಆನೆಗಳನು ಕೊಂಬುಗತ್ತಿ ಸಹಿತ ತಂದಾನಿಸಿ ಕೆಡಹಿ ಬಾಗಿಲನು ಭೂನಾಥನ ದಳಪತಿ ನಂಜರಾಜೇಂದ್ರ ತಾನೊಳಹೊಕ್ಕನುಬ್ಬಿನಲಿ (ಕಂನವಿ. ೧೮–೧೬೦) ; ಕೈಯ ಕೋಲನ್ನು ನೆಲಕ್ಕೆ ಊರಿ ಅದಕ್ಕೆ ಮುಖವನ್ನು ಆನಿಸಿ ಕುಳಿತನು (ನಿಷ್ಕಾಮ. ೬೩). ೨. ಊರೆಕೊಡು ; ಒಡ್ಡು : ವಾನರ ಸಂಚಯಂ . . . ಅಗ್ನಿಯೆಂದು ಸನ್ಮಾನಿಸಿ ಪತ್ತೆಸಾರ್ದದಱ ಸುತ್ತಲುಮೊಯ್ಯನೆ ಕುಳ್ಳಿದಿರ್ದು ಮತ್ತಾನಿಸಿ ಪೊಟ್ಟೆಯಂ ತುಱಿಸುತುಂ ಸಲೆ ಕಾಯ್ದುದು ಕಿಚ್ಚನಾಕ್ಷಣಂ (ಬಾಧಪು. ೪–೭೪) ; ಇವನ ಮಸ್ತಕವನೊಯ್ವೆನೆನುತ ಖಂಡೆಯವ ಕೊರಳಿಗಾನಿಸು ವನಿತಱಿಯೊಳು (ತೊರರಾ. ೬–೨೪–೨೫).

**ಆನಿಸಿಕೊಳ್** = ತಗುಲಿಸಿಕೊ ; ಮುಟ್ಟಿಸಿಕೊ ; ತಾಗಿಸಿಕೊ : ಅಳುಕದಂಜದೆ ತನ್ನ ಕೊರಲಿಂಗಲಗನಾನಿಸಿಕೊಳಲೊಡನೆ ಹಾ ನಿಲುನಿಲೆನುತಾಗಳು. . . ಶಂಕರನು (ಬಸವು. ೧೭–೧೧). **ಆನಿಸಿಡು** = ಒರಗಿಸಿಡು : ಒಮ್ಮೆ ಗೋಡೆಗೆ ಆನಿಸಿಟ್ಟ ಸಣ್ಣ ನೀರಿನ ಡೋಣಿಯನ್ನು ಜೀಕ ಹೊಡೆದು ಮೈಮೇಲೆ ಹಾಕಿಕೊಂಡು (ಮೇದಿಮ. ೨). [ಆನ್$_1$ + -ಇಸು$_3$]

**ಆನೀಕ** (ನಾ). ೧. ಸೈನ್ಯ. ೨. ಸಮೂಹ : "ಸಂಕುಳಂ ಪ್ರಕರಮಾನೀಕಂ ಗಣಂ ಸಮಿತಿ ಸಮುದಯಂ" (ಮಂಗರಾ. ೧೨೬–೧) ; ಇದನು ತ್ರಿಗುಣಿಸೆ ಪು[ಪೃ]ತನೆಯೆನಿಸಿಂತಿದನು ತ್ರಿಗುಣಿಸಲಕ್ಕು ಚಮುವಂತದನು ತ್ರಿಗುಣಿಸಲಾಹವಾನೀಕೆನಿಸು (ಜಿರಾಮಾ. ೨೩೯–೧೭). 'ಆನೀಕಿನಿ' ಪರಾ. [ಸಂ. ಅನೀಕ]

**ಆನೀಕಿನಿ** (ನಾ). ಒಂದು ಅಕ್ಷೌಹಿಣಿಯಲ್ಲಿ ಹತ್ತನೆಯ ಒಂದು ಅಂಶದಷ್ಟು ಸೈನ್ಯ ; ೨,೧೮೭ ಆನೆ, ೨,೧೮೭ ರಥ, ೬,೫೬೧ ಕುದುರೆ, ೧೦,೯೩೫ ಕಾಲಾಳು ಇರುವ ಸೈನದ ಪ್ರಮಾಣ : ತದಕ್ಷೌಹಿಣೀ ಪ್ರಮಾಣಮೆಂತೆನೆ ಪತ್ತಿಯೆಂದುಂ ಸೇನೆಯೆಂದುಂ ಸೇನಾಮುಖಮೆಂದುಂ ಗುಲ್ಮಮೆಂದುಂ ವಾಹಿನಿಯೆಂದುಂ ಪೃತನೆಯೆಂದುಂ ಚಮುವೆಂದು ಮಾನೀಕಿನಿಯೆಂದುಮಿಂತೆಂಟುತೆಱದಿಂ ಪಡೆಗೆ ಪೆಸರಕ್ಕುಂ . . . ಈ ನೆಗಬ್ದ ಚಮೂತ್ರಿತಯಮದಾನೀಕಿನಿಯಕ್ಕುಮದು ಪದಿರ್ಮಡಿಸಲೊಡಂ ತಾನಕ್ಷೌಹಿಣಿಯಕ್ಕುಂ ಜೈನೋಕ್ತಂ (ಪಂರಾಮಾ. ೧೩–೪ ವ, ೮). [ಸಂ. ಅನೀಕಿನೀ]

**ಆನೀತ** (ಗು). ತರಲ್ಪಟ್ಟ ; ತಂದ. [ಸಂ.]

**ಆನೀತಬಿರಾಡ** (ನಾ). (?) : ರಾಜಪಾಲು ಕುಳಬಿರಾಡ ಆನೀತಬಿರಾಡ ಸಹವಾಗಿ (ಸೌಇಇ. IX–ii, ೬೪೨–೧೮ ; 1551). [?]

**ಆನೀಳ್** (ಕ್ರಿ). ಅದೋ ಉದ್ದವಾಗು : ಆನತರಾಗದ ರಿಪುನೃಪರಾನನ ಸರಸೀರುಹನಾಳಮಂ ಖಂಡಿಸಲೆಂದಾನಿಳುಕುಮದಾನಿಳುಕುಮದಾನಿಳುಕು ಮದೇಗ ನೃಪನ ಭುಜದಸಿಹಂಸಂ (ಎಕ. V, ಅರಸೀ. ೧೪೧–೧೦ ; 1158). [ಆ$_8$ + ನೀಳ್]

**ಆನು$_1$** ‘ಆನ್$_1$’ ನೋ.
**ಆನು$_2$** ‘ಆನ್$_2$’ ನೋ.
**ಆನು$_3$** ‘ಆನುಂ’ ನೋ.
**ಆನುಂ, ಆನ್$_3$, ಆನು$_3$** (ಅ). ಅನಿಶ್ಚಿತತೆ, ಸಂಭಾವನೆ, ಆಯ್ಕೆ ಮುಂತಾದುವನ್ನು ಸೂಚಿಸುವ, ‘ಆದರೂ’ ಎಂಬರ್ಥದಲ್ಲಿ ಸರ್ವನಾಮ, ಸ್ಥಾನವಾಚಕ, ಕಾಲವಾಚಕ, ದಿಗ್ವಾಚಕ, ಸಂಖ್ಯಾವಾಚಕ ಮುಂತಾದವುಗಳ ಕಡೆಗೆ ಸೇರಿ ಬರುವ ಅವ್ಯಯ : ಆನುಮೆನಿಪ್ಪವ್ಯಯಮಂ ಸ್ಥಾನ ದಿಶಾ ಕಾಲ ಸಂಖ್ಯೆಯೊಳುಸಿರ್ವರ್, ಸ್ಥಾನಕ್ಕೆ ಎಲ್ಲಿಯಾನುಂ, ದೆಸೆಗೆ – ಎತ್ತಾನುಂ, ಕಾಲಕ್ಕೆ – ಎಂದಾನುಂ, ಸಂಖ್ಯೆಗೆ– ಒಂದಾನುಂ, ಎರಡಾನುಂ, ಪತ್ತಾನುಂ, ನೂಱಾನುಂ (ಶಮದ. ೩೦೩ ಪ್ರಯೋ) ; ಆವೊನಾನುಂ ಕಿಡಿಪೊನುಳ್ಳೊಡೆ (ಇಅ. VIII, ೨೮೬–೫ ; 732) ; ಇದಾನಾಡಾಳ್ವೊನಾನುಂ ಊರಾಳ್ವೋನಾನುಂ ಊರಾ ಒಕ್ಕಲನುಂ ಅೞಿದೋರ್ (ಎಕ. VI, ಚಿಕ್ಕಮ. ೯೨–೬ ; 750) ; ಅವುದಾನುಂ ಮಾತುಗಳ್ (ಕವಿರಾ. ೨–೯೯) ; ಆದಮಾನುಂ ಸಂತೋಷಂಬಟ್ಟಂ (ವಡ್ಡಾರಾ. ೪–೧೨); ಏನಾನುಮೊಂದು ಕಾರಣಮಂ ಕುಱಿತ್ತು ಪೋಪುದು (ತತ್ತ್ವಪ್ರ. ೧). **ಆನ್$_3$**: ಅವುದಾನೊಂದು ಭಾವಮುಂ ತಳೆದಿರ್ಪವನೊಳ್ ಕ ಪ್ರತ್ಯಯಮಕ್ಕುಂ (ಶಮದ. ೨೦೫ ವೃತ್ತಿ). **ಆನು$_3$** : ಒಂದಾನೊಂದು ಊರಿನಲ್ಲಿ ಒಬ್ಬ ವರ್ತಕನಿದ್ದನು (ರೂಢಿ).
**ಆನುಂಪಾಸಱಿ** (ನಾ). ಒರಗಿಕೊಳ್ಳುವ ಕಲ್ಲು : ಬಳ್ಳಿಮಾಡಂಗಳಲ್ಲಾನುಂಪಾಸಱಿ ನೆಮ್ಮಿ ಪಟ್ಟಬಲೆಯರ್ಗಾ ತೋಂಟಮೇ ಬೀಡೆನಲ್ಕೇನೆಂಬೆಂ ಮನೆವಾೞ್ತೆಯಂ (ಮೈಸೂಮೆ. ೩–೪೫).
[ಆನು$_1$ (< ಆನ್$_1$) + ಪಾಸಱಿ]
**ಆನುಕೂಲಿಕ** (ಗು). **೧.** ಅನುಕೂಲವಾದ. (ನಾ). **೨.** [ಜೈನ] ಅನುಕೂಲಸನ್ನಿವೇಶದಲ್ಲಿರುವವನು : ಆನುಕೂಲಿಕನೆಂಬೊಂ ಹಿಂಸಾನೃತಸ್ತೇಯಾಬ್ರಹ್ಮಪರಿಗ್ರಹ ಕ್ರೋಧಮಾನ ಮಾಯಾ ಲೋಭ ದ್ವೇಷ ರಹಿತಂ (ಚಾವುಂಪು. ೬). [**ಸಂ.**]
**ಆನುಕೂಲ್ಯ** (ನಾ). **೧.** ಅನುಕೂಲತೆ ; ಸೌಕರ್ಯ. **೨.** ಹಿತವಾಗಿರುವುದು ; ಹೊಂದಿಕೊಂಡಿರುವುದು : ಆ ದಂಪತಿಗಳು ಪರಸ್ಪರ ಆನುಕೂಲ್ಯದಿಂದ ಕೂಡಿ ಆದರ್ಶವಾಗಿದ್ದರು (ರೂಢಿ). [**ಸಂ.**]
**ಆನುಕ್ರಮಿಕ** (ಗು). ಕ್ರಮವಾಗಿ ಬರುವ ; ಕ್ರಮವನ್ನು ಅನುಸರಿಸಿರುವ : ಅನುಗೂಡಿ ಬರದ ; ಆನುಕ್ರಮಿಕವಲ್ಲದ ; ಕ್ರಮತಪ್ಪಿದ (Inconsecutive. ಇಂಕನಿ). [**ಸಂ.**]
**ಆನುಗುಣ್ಯ** (ನಾ.) ಅನುಗುಣವಾಗಿರುವಿಕೆ ; ಹೊಂದಿಕೊಂಡಿರುವುದು. [**ಸಂ.**]
**ಆನುಗೋಲು** (ನಾ). ಊರೆಗೋಲು : ಎಡ ಬಗಲ ಆನುಗೋಲ ಆಧರಿಸಿ ಬಲಗೈಯಿಂದ ಆ ಭಾವಚಿತ್ರಕ್ಕೆ ಮಲ್ಲಿಗೆಯ ಹೂಮಾಲೆಯನ್ನು ಏರಿಸಲು ತಲ್ಲೀನನಾದ (ಚೆನ್ನಹಿಂ. ೨೦) ; ಈಗ ಜೀವನಪಥಕ್ಕೆ ಗಟ್ಟಿಯಾದ ಆನುಗೋಲು ದೊರೆತಿದೆಯೆಂದು ತಿಳಿದುಕೊಳ್ಳಬೇಕಾಗಿದೆ (ಕನ್ನನು. XXI, ೧೨) ; ಆನುಗೋಲೇ ಇಲ್ಲದಾ ಹೆಳವ ಸಾಗಿದಂತೆಯೇ (ಪಯಣ. ೫೬–೨).
[ಆನು$_1$ (< ಆನ್$_1$) + ಕೋಲು (< ಕೋಲ್)]
**ಆನುಚ್ಛಾಯೆ** (ನಾ). ಅನುಭೋಗ ; ಅನುಭವ (?) : ತಮ್ಮಿಬ್ಬರಾನುಚ್ಛಾಯೆಯ ವೃತ್ತಿಸ್ಥಲದೊಳಗೆ ಹಿರಿಯ ಕೋಲು ಮತ್ತರು (ಎಇ. V, ೨೫–೨೪ ; 1165) ; ಚಿಕ್ಕಗೋವಿಂದರಸ ಕೈಯಲವರಾನುಚ್ಛಾಯದ ಗುಡ್ಡೆಮಾನ್ಯದೊಳಗೆ ಧಾರೆಗೊಂಡು ಬಿಟ್ಟ ಕೈಯ್ಯ (ಸೌಇಇ. XV, ೧೧೧–೩೪ ; 1165). [?]
**ಆನುತ್ಸಾಯ** (ನಾ). = ಆನುಚ್ಛಾಯೆ : ಆಯಣಾನುತ್ಸಾಯಿಗೆ ಬಂದ ಮೂಡಣಗುಡ್ಡೆ ಮಾನ್ಯದೊಳಗೆ . . . ಅವರಾನುತ್ಸಾಯದ ಮೂಡಣ ಗುಡ್ಡೆ ಮಾನ್ಯದೊಳಗೆ (ಸೌಇಇ. XV, ೨೪–೩೪, ೩೮ ; 1165). [?]
**ಆನುಪು** ‘ಅನುಪು$_2$’ ನೋ.
**ಆನುಪೂರ್ವಕ** (ನಾ.) = ಆನುಪೂರ್ವಿ (೩). [**ಸಂ.**]
**ಆನುಪೂರ್ವಿ** (ನಾ). **೧.** ಅನುಕ್ರಮ ; ಯಥಾಕ್ರಮವಾದ ರೀತಿ ; ಪರಿವಿಡಿ : ಆಕಾಂಕ್ಷೆ ಅಂದರೆ ಪದಗಳು ಯಾವ ಆನುಪೂರ್ವಿಯಲ್ಲಿದ್ದರೆ ಶಾಬ್ದಬೋಧವಾಗುವುದೋ ಅಂತಹ ಆನುಪೂರ್ವಿ (ಹಿಂದಸಾ. ೧೪೫). **೨.** ಪೂರ್ವಾಪರ ಸಂಬಂಧ : ಮೊಕದ್ದಮೆಯ ಸಂಗತಿಯೇನೋ ತೊಡಕಾದ್ದು. ಆದರೆ ಆನುಪೂರ್ವಿಯನ್ನು ತಿಳಿದ ಒಬ್ಬನಿಗೆ ಮಾತ್ರ ಅದನ್ನು ನೋಡಿ ನಡಿಸುವುದು ಸಾಧ್ಯ (ಮುಸುಗ. ೧೨೭).
[**ಸಂ.** ಆನುಪೂರ್ವೀ]
**ಆನುಪೂರ್ವ್ಯ** (ನಾ). ಅನುಕ್ರಮತೆ ; ಹಿಂದಿನಿಂದ ಬಂದದ್ದು : ಮಾನುಷ್ಯ ಚರಿತೆಯಚ್ಛಿನ್ನವಾಹಿನಿ ಸಾಗಲಾನುಪೂರ್ವ್ಯದ ಕರ್ಮಋಣಶೇಷವಿನಿತು (ಮಂಕುಕ. ೧೬೩). [**ಸಂ.**]
**ಆನುಭವವೇದ** (ನಾ). ಅನುಭವದಿಂದ ಉಂಟಾದ ಜ್ಞಾನ : ಮಾನುಷದ ಚರಿತೆ ಪರಸತ್ತ್ವಸಾಕ್ಷಾತ್ಕವಿತೆ ಕಾಣಿಪುದದಾತ್ಮಸ್ವಭಾವದುದ್ಗಮವ ಏನಾಶೆ! ಯೇನುಸಾಹಸವೇನು ಭಂಗಗಳು! ಆನುಭವವೇದವದು (ಮಂಕುಕ. ೪೦೯). [ಆನುಭವ$_0$ + ವೇದ]
**ಆನುಮಾನಿಕ** (ಗು). ಅನುಮಾನಸೂಚಕ ; ಊಹಿಸಿ ತಿಳಿಯಬಹುದಾದ : ಆನುಮಾನಿಕವೂ ಎಂದರೆ ಅನುಮಾನದಿಂದ ಗೊತ್ತುಮಾಡಿರುವ ಪ್ರಧಾನವೂ ಕೆಲವುಶಾಖೆಯವರ ಶಬ್ದ(ಪ್ರಮಾಣ)ವುಳ್ಳದ್ದೆಂದು ಕಂಡುಬರುತ್ತದೆ (ಬ್ರಹ್ಮಭಾ. ೫೪೯). [**ಸಂ.**]
**ಆನುವಂಶ** (ಗು). ವಂಶಪರಂಪರೆಯಿಂದ ಬಂದ ; ಅನುಸರಿಸಿ ಬಂದ : ಸ್ನಿಗ್ಧಪೂರ್ವ ಶ್ವೇತಶ್ಲಕ್ಷ್ಣೋರ್ಧ್ವಚಂದ್ರ ಸದೃಶ ಸುಸನ್ನಿವಿಷ್ಟಾನುವಂಶವೃತ್ತಾಂತರ ವಿಂಶತಿನಖನಂ (ಶಾಂತಿಪು. ೧೦–೧೪೩ ವ). [**ಸಂ.**]
**ಆನುವಂಶಿಕ** (ಗು). ವಂಶಪರಂಪರೆಯಿಂದ ಬಂದ : ಆನುವಂಶಿಕವಾಗಿ ಮುಂದಿನ ಪೀಳಿಗೆಯ ರಚನೆಗೆ ಅವಶ್ಯಕವಾದ ಸಹಾಯವನ್ನು ಮಾಡುತ್ತದೆ (ಮನೋನಂ. ೧೬೭). [**ಸಂ.**]
**ಆನುವಂಶಿಕತೆ** (ನಾ). ವಂಶಪರಂಪರೆ : ಮಕ್ಕಳು ಹುಟ್ಟಿದಾಗ ಆನುವಂಶಿಕತೆ(Heredity)ಯಿಂದ ಕೆಲವು ಗುಣಗಳನ್ನು ಪಡೆದುಕೊಂಡೇ ಬಂದಿರುತ್ತವೆ (ಗೃಹವಿ. ೧೨೮). [**ಸಂ.** ಆನುವಂತಿಕತಾ]
**ಆನುವಂಶಿಕೆ** (ನಾ). ವಂಶಪರಂಪರೆಯಿಂದ ಬಂದದ್ದು : ಆನುವಂಶಿಕೆ ಒಂದು ದೊಡ್ಡ ಗುಣ ಅಥವಾ ಕಾರಣ (ಸಸ್ಯಕ. ೩೦). [**ಸಂ.** ಆನುವಂಶಿಕ]
**ಆನುವೇರಿ** ‘ಆನವೇರಿ’ ನೋ.
**ಆನುಶ್ರಾವಿಕಕರ್ಮಿ** (ನಾ). ವೇದಗಳಿಗೆ ಸಂಬಂಧಿಸಿದ ಕರ್ಮ ಮಾಡುವವನು ; ವೇದೋಕ್ತವಾದ ಕರ್ಮಗಳನ್ನು ನಡೆಸುವವನು : “ವೇದೋಕ್ತಕರ್ಮಗಳನ್ನು ಮೀರದೆ ಅನುಷ್ಠಾನಮಾಡುವವನೇ ಆನುಸ್ರಾ[ಶ್ರಾ]ವಿಕಕರ್ಮಿ ಎಂದು ಹೇಳಿರುವರು” (ಹಸಾರ. ೧೦–೮ ಟೀಕೆ). [**ಸಂ.** ಆನುಶ್ರಾವಿಕಕರ್ಮಿನ್]
**ಆನುಷಂಗಿಕ** (ಗು). ಮುಖ್ಯ ವಿಷಯಕ್ಕೆ ಸಂಬಂಧಿಸಿದಂತೆ ಒದಗಿ ಬರುವ ; ಜತೆಗೆ ಒದಗುವ ; ಪ್ರಾಸಂಗಿಕವಾದ : ಸತ್ಯವಾದಿ ಕಥಾನಾಯಕನಾಗೆ ತಚ್ಚರಿತಮಂ ಪೇೞ್ದಂಗೆ ಕೈಸಾರ್ಗುಮೈಹಿಕಮಾಮುತ್ರಿಕಮಾನುಷಂಗಿಕಮೆನಲ್ ನಿಶ್ರೇಯಸ ಶ್ರೀಪದಂ (ಮಲ್ಲಿಪು. ೧–೪೮) ; ಅವುಗಳಿಗಿದ್ದ ಅರ್ಥವು ಆನುಷಂಗಿಕ(Incidental)ವಾದುದು (ನವ್ಯಕಾ. ೬೨). [**ಸಂ.**]

**ಅನುಷಂಗಿಕಫಲ** (ನಾ). ಉದ್ದೇಶಪಟ್ಟ ಮುಖ್ಯ ಫಲವಲ್ಲದೆ ನಡುವೆ ಅದರ ಜತೆಗೆ ತಾನಾಗಿ ಒದಗುವ ಪ್ರಯೋಜನ: ಧರ್ಮಮೆ ವಲಂ ಪೊತ್ತಿತ್ತುಗುಂ ಮುಕ್ತಿಪರ್ಯವಸಾನಂಬರಮಾನುಷಂಗಿಕಫಲಂ ಭೂಪೇಂದ್ರದೇವೇಂದ್ರರಾಜ್ಯವಿಳಾಸಂ (ಆದಿಪು. ೨-೭); "ಸರ್ವರಿಗೂ ಕಾವ್ಯದಲ್ಲಿ ಉಂಟಾಗುವುದು ರಸಾಸ್ವಾದವೇ ಹೊರತು ತಿಳಿವಳಿಕೆಯಲ್ಲವಲ್ಲ ನಿಯೋಗ" ಎಂದು ಘೋಷಿಸಿ, ಈ ಮಿಕ್ಕವನ್ನು ಆನುಷಂಗಿಕ ಪ್ರಯೋಜನವಾಗಿಯಾದರೂ ಗಣಿಸದಷ್ಟು ದೂರಕ್ಕೆ ಅವನು ಹೋಗುತ್ತಾನೆ (ಭಾರಮಿಾ. ೭೩). [ಅನುಷಂಗಿಕ + ಫಲ]

**ಅನುಷಂಗಿಕಲಾಭ** (ನಾ). ಜೊತೆಗೆ ಬರುವ ಲಾಭ; ಮೇಲಿನ ಸಂಪಾದನೆ: ಅನುಷಂಗಿಕಲಾಭ . . . ಮೇಲುಸಂಪಾದನೆ (Perquisite. ಇಂಕನಿ). [ಅನುಷಂಗಿಕ + ಲಾಭ]

**ಅನೂಪಕ್ಷೇತ್ರ** (ನಾ). ಸುತ್ತು ಮುತ್ತು ನೀರು ಹೇರಳವಾಗಿರುವ ಪ್ರದೇಶ: ಸೊಗಯಿಪಾನೂಪಕ್ಷೇತ್ರದೊಳ್ ಕುಜಿಪಂ ನೋಡಿಯಗುಟ್ಟಿಗೆ ಬಾವಿಯಂ (ಜಟ್ಟಮ. ೧೧-೫೪). [ಸಂ. ಅನೂಪಕ್ಷೇತ್ರ]

**ಅನೃಣ್ಯ** (ನಾ). ೧. ಋಣವಿಲ್ಲದಿರುವಿಕೆ; ಅನೃಣತೆ: ಪಂಚನಿರ್ವಾಣಗಳು ಹೋದಮೇಲೆ ಆನೃಣ್ಯ, ಆರೋಗ್ಯಭೂಮಿಗಳಲ್ಲಿ ಇದ್ದಂತೆ ಕಾಣುವನು (ಬುದ್ಧಪ. ೧೯೩). ೨. ಋಣದಿಂದ ಮುಕ್ತವಾಗಿರುವಿಕೆ. [ಸಂ.]

**ಅನೃಶಂಸ್ಯ** (ನಾ). ಕ್ರೌರ್ಯವಿಲ್ಲದಿರುವಿಕೆ; ದಯಾಪರತ್ವ: ಅನೃಶಂಸ್ಯವೇ (ದಯಾಶೀಲತೆಯೇ) ಪರಮಧರ್ಮ, ಪರಮಾರ್ಥ ಎಂದು ನಾನು ತಿಳಿದುಕೊಂಡಿದ್ದೇನೆ (ವಚಭಾ. ೧೮೨). [ಸಂ.]

**ಆನೆ**$_1$ (ನಾ). ೧. ಪ್ರಾಣಿವರ್ಗದಲ್ಲೆಲ್ಲಾ ಬಹು ದೊಡ್ಡದಾದ, ಸೊಂಡಿಲಿರುವ ಪ್ರಾಣಿ; ಗಜ; ಕರಿ: ಆನೆಗಳೀ ಪ್ರದೇಶದೊಳ್ ಸಿಂದುದಿದೆಂಬುದುಂ ವಚನದೋಷವಿಶೇಷಂ (ಕವಿರಾ. ೧-೧೧೮); ಆನೆಯ ಕೋಡು ಬಾಗದೆಂಬಂತೆ ದುರ್ಯೋಧನನುದ್ವೃತ್ತತೆಯುಮಂ . . . ಆರ್ಗಂ ಬಾರಿಸಲ್ಬಾರದು (ಪಂಪಭಾ. ೭-೧೬ ವ); ತಾವರೆಗೊಳನಂ ಸೊಕ್ಕಿದಾನೆ ಪೊಕ್ಕಂತೆ (ಧರ್ಮಾಮೃ. ೭-೯೫); ಆನೆಯ ನಡು ಬಡವೆ (ಶಮದ. ನ. ೩೩೮); ಮಸಗಿ ಮದದಾನೆಗಳು ಸಿಂಹದ ಶಿಶುವ ಮುತ್ತುವವೋಲು (ಕುವ್ಯಾದ್ರೌ. ೬-೧೨); ಆನೆ ಬೀದಿಲಿ ಬರಲು ಶ್ವಾನ ತಾ ಬೊಗಳುವದು ಶ್ವಾನನಂತಾನೆ ಬೊಗಳಿದರೆ ಆನೆಯ ಮಾನವೇ ಹಾನಿ (ಸರ್ವಜ್ಞ. ೧೫೪೯); ಆನೆ ತಿಂಬೋದು ಸೊಪ್ಪು ಇರುವೆ ತಿಂಬೋದು ಸಕ್ಕರೆ (ಗಾದೆ); ಆನೆ ಮಲಗಿದರೆ ಆಡಿನಷ್ಟು ಉದ್ದವಿಲ್ಲವೇ (ಗಾದೆ). ೨. (ವಿಶೇಷಾರ್ಥದಲ್ಲಿ) ದೊಡ್ಡದು. 'ಆನೆಗಜ್ಜಿ' ಪರಾ. ೩. ಮೊರಸು ಒಕ್ಕಲಿಗರಲ್ಲಿ ಒಂದು ಪಂಗಡ (ಎಸಮೈ. XV, ೪೩).

[ದೇ. ॥ ತಮಿ. ಯಾನೈ, ಆನೈ; ಮಲ. ಆನ; ತುಳು. ಕೊಡ. ಆನೆ; ತೆಲು. ಏನುಂಗು, ಏನಿಕ; ಕೊಲಾ. ಎನಾಗಿ, ಏನ್ನಿ; ಪರ್ಜಿ. ಏನು; ಗಡ. ಏನಿಗ್; ಗೊಂಡಿ. ಏನಿ, ಐನಿ, ಎನ್]

**ಆನೆ**$_2$ 'ಆಣೆ$_4$' ನೋ.

**-ಆನೆ**$_3$ '-ಅನೆಯ್ಯ$_2$' ನೋ.

**ಆನೆಊರು** (ನಾ). ಒಂದು ಊರಿನ ಹೆಸರು: ಕನ್ನಮ್ಮ ಭಟ್ಟರಾನೆ ಊರಾಳೆ ಆನೆಊರಬೆವಿನೊಳ್ (ಎಕ. X, ಶಿಡ್ಲಘ. ೩೪-೧; 900). [ಆನೆ$_1$ + ಊರು$_3$ (< ಊರ್)]

**ಆನೆಕಂಭ** (ನಾ). ಗೋಡೆ ಬೀಳದಂತೆ ಕಟ್ಟುವ ಈಡುಗಂಭ (ಕಿಸಂಗ್ರಾ. ೮೧). [ಆನೆ$_0$ (< ಆನ್$_1$) + ಕಂಭ]

**ಆನೆಕತ್ತಾಳೆ** (ನಾ). ದೊಡ್ಡ ಕತ್ತಾಳೆ ಗಿಡ; ಹೆಗ್ಗತ್ತಾಳೆ (ಮೈಔಗಿ. ೪-೩೫). [ಆನೆ$_1$ + ಕತ್ತಾಳೆ]

**ಆನೆಕಲ್**, ಆನೆಕಲ್ಲು$_1$, ಆನೆಗಲ್ಲು (ನಾ). = ಆಲಿಕಲ್: ಮಳೆಯೊಪ್ಪಿ ತಾನೆಕಲ್ವೆರಸಿ (ಜೀವಂಸಾಂ. ೨-೪೨). **ಆನೆಕಲ್ಲು**$_1$: ಸಂಧಿಸುವ ಸಿಡಿಲಿನ ಸಡಿಲಿ ನೆಲಕೊಗುವಾನೆ [ಪಾಠಾಂ. ಆಲಿ]ಕಲ್ಲುಗಳ (ತೊರರಾ. ೪-೬-೬). **ಆನೆಗಲ್ಲು**: ಚಿದ್ಬಿಂದಾನೆಗಲ್ಲು ಸುರಿಯೆ (ಚಿದಾವ. ೧೫೮-೧೨). [< ಆಲಿಕಲ್]

**ಆನೆಕಲ್ಲು**$_1$ 'ಆನೆಕಲ್' ನೋ.

**ಆನೆಕಲ್ಲು**$_2$ (ನಾ). ಆಟವಾಡುವಾಗ ಮೇಲಕ್ಕೆ ಹಾರಿಸಿ ಕೈಯೊಡ್ಡಿ ಹಿಡಿದುಕೊಳ್ಳುವ ಸಣ್ಣ ಕಲ್ಲು; "ತಿಱುಕಲ್ಲು": ಆರಿಗಳಂ ಶಿರಗಳಂ ಪರಿಹರಿಸಿ ಪರಶುರಾಮುಂ ಆನೆಕಲ್ಲಾಡುತಂ (ಪರಶು. ೨೮-೧೧). [< ಅಣ್ಣೆಕಲ್$_1$]

**ಆನೆಕಾಲು** (ನಾ). ಮನುಷ್ಯರ ಕಾಲು ಆನೆಯ ಕಾಲಿನಂತೆ ಊದಿಕೊಳ್ಳುವ ಒಂದು ರೋಗ: ನಮ್ಮ ನೆರೆಕರೆಯವರಿಗೆಲ್ಲಾ ಆನೆಕಾಲು (ಜಳಕು. ೭೯); ಆನೆಯ ಚರ್ಮದಂತೆ ಬಹಳ ದಟ್ಟವಾಗಿ ಊದುವ ಒಂದು ಚರ್ಮರೋಗ; ಆನೆಕಾಲುರೋಗ (Elephantiasis. ಇಂಕನಿ). [ಆನೆ$_1$ + ಕಾಲು$_1$ (< ಕಾಲ್$_1$)]

**ಆನೆಕಾಲುಗಿಡ** (ನಾ). ಒಂದು ಗಿಡದ ಹೆಸರು (ಮೈಔಗಿ. ೩೩-೬೪೧). [ಆನೆಕಾಲು ? + ಗಿಡ (< ಗಿಡು)]

**ಆನೆಕಾಸು** (ನಾ). ಆನೆಯ ಗುರುತುಳ್ಳ ತಾಮ್ರದ ಕಾಸು (ಉಕ. ೬). [ಆನೆ$_1$ + ಕಾಸು$_2$]

**ಆನೆಕಿವಿ** (ನಾ). ಆನೆಯ ಕಿವಿಯಂತೆ ಎಲೆಯುಳ್ಳ ಒಂದು ಗಿಡ; ನೊಗವಾಳೆ ಗಿಡ (ಮೈಔಗಿ. ೧೨-೨೧೬). [ಆನೆ$_1$ + ಕಿವಿ]

**ಆನೆಕೆರೆ** (ನಾ). ಒಂದು ಊರಿನ ಹೆಸರು: ಆನೆಕೆರೆ ಕೃಷ್ಣದೇವರ ಪ್ರತಿಷ್ಠೆ (ಎಕ. V, ಅರಸೀ. ೧೨೦-೧; ?). [ಆನೆ$_1$ + ಕೆರೆ$_2$ (< ಕೆಱೆ)]

**ಆನೆಕೊಂಬು** (ನಾ). ಒಂದು ಬಗೆಯ ಬತ್ತ: ಬತ್ತದ ಧಾರಣೆ – ಆನೆಕೊಂಬು ಐವತ್ತು ರೂಪಾಯಿ (ರೂಢಿ). [?. / ತೆಲು. ಏನುಂಗುಕೊಮ್ಮುಲು = ಒಂದು ಬಗೆಯ ಧಾನ್ಯ]

**ಆನೆಗ** (ನಾ). ಒಂದು ಗಿಡದ ಹೆಸರು: "ಗಜಾಖ್ಯೆಯಾನೆಗಮೆನಿಕ್ಕುಂ" (ಮಂಗರಾ. ೩೫-೧೫). [?]

**ಆನೆಗಂಬ**, ಆನೆಗಂಭ (ನಾ). ಆನೆಯನ್ನು ಕಟ್ಟುವ ಕಂಬ; ಆಲಾನಸ್ತಂಭ: ದಂಡಿಗೆಗೆ ವೇಣುವನಂಗಳುಮಾನೆಗಂಬಕ್ಕೆ ಪೆರ್ಮರಂಗಳುಮಾ ಪಡೆಗೆ ನೆಱೆಯವೆನಿಸಿ (ಪಂಪಭಾ. ೯-೧೦೪ ವ). **ಆನೆಗಂಭ**: ಸಾಹಣಾಘದೊಳ್ ನಿಚ್ಚಮೋಲಗಿಸುವ ಪಂಚಕಲ್ಯಾಣಂಗಳುಮಂ ಕಟ್ಟುವಾನೆಗಂಭಂಗಳುಮಂ (ಶಾಂತಿಪು. ೩-೧೯ವ). [ಆನೆ$_1$ + ಕಂಬ]

**ಆನೆಗಂಭ** 'ಆನೆಗಂಬ' ನೋ.

**ಆನೆಗಜ್ಜಿ**, ಆಣಗಜ್ಜಿ (ನಾ). ದೊಡ್ಡಕಜ್ಜಿ (೬). **ಆಣಗಜ್ಜಿ**: ಮೇಲೋಕದಿಂದಾವೆ ಇಳಿದರು ಸ್ವಾಮಿಗಳು ಆಣಗಜ್ಜಿ ಸಣಗಜ್ಜಿ ಬೇಗದಲಿ ಎದ್ದವು (ನಾಪದ. ೧೬೦). [ಆನೆ$_1$ + ಕಜ್ಜಿ]

**ಆನೆಗಜ್ಜಿಗಿಡ** (ನಾ). ಒಂದು ಗಿಡ (ಮೈಔಗಿ. ೭೬-೧೫೬೫). [ಆನೆಗಜ್ಜಿ ? + ಗಿಡ (< ಗಿಡು)]

**ಆನೆಗದಗು** 'ಆನೆಗದುಗು' ನೋ.

**ಆನೆಗದುಗ** 'ಆನೆಗದುಗು' ನೋ.

**ಆನೆಗದುಗು**, ಆನೆಗದಗು, ಆನೆಗದುಗ (ನಾ). ದೊಡ್ಡ ಗಜ್ಜುಗದ ಗಿಡ: "ಏಡಗಜಃ–ಚಗತೆ, ಆನೆಗದುಗು" (ಒಷಧಿ. ೧೮). **ಆನೆಗದಗು**: "ಕಾಲಃ–ಎಲಹುರಿ, ಕೆಂಪಿನ ಚಿತ್ರಮೂಲ, ಆನೆಗದಗು, ಚಗತೆ" (ಒಷಧಿ. ೨೮). **ಆನೆಗದುಗ**: "ಮೇಷಾಕ್ಷಿ–ಕುಸುರು, ಆನೆಗದುಗ, ತಗಚೆ" (ಒಷಧಿ. ೧೨೯). [ಆನೆ$_1$ + ಗದುಗು]

**ಆನೆಗದುಪು** (ನಾ). ಆನೆಗಳ ಗುಂಪು : ಮೃಗರಾಜಂಗಗಿದೋಡುವಾನೆ ಗಡು[ದು]ಪಂ ಕೈಕೊಂಡು ಯೂಥಾಧಿಪಂ ಮಗುಱ್ಬಂ ಸಿಂಹದ ಮೇಲೆ ಪಾಯ್ವ ತೆಱದಿಂ ಹೇಮಪ್ರಭಂ ರಾಜಸೂನುಗಳಂ ತನ್ನೊಡಗೂಡಿಕೊಂಡು ಕಱೆದಂ (ಪಂ ರಾ ಮಾ. ೩-೫೭); ಬಲಿದಳು ಬಲುರಾವುತರನವರು ನೊಂದು ತೊಲಗೆ ತೊಲಗದಾನೆಗದುಪ ನಿಲಿಸಿ ನಿಂದಳು ರಾಯಮೋಹರ ದೊಳಗೆ (ಕುರಾಸಾಂ. ೪೩-೩೩). [ಆನೆ$_1$ + ಕದುಪು]

**ಆನೆಗಲ್** (ನಾ). ದೊಡ್ಡ ಬಂಡೆ : ಮೂಡಾಯ್ನೋಡಿ ನೀರಿೞಿವ ತಾಱೆಎ ತೆತಾವಿನ್ನೊಲ್ಲಿಎ ಪೋಗಿ ಕುಣ್ಣು ಸೋಮೆಎ ಕಗ್ಗರಲ್ಲಾಱದೆ ಆನೆಗಲ್ಲೆ ಕಮ್ಮಾರ್ ಕೊಟ್ಟಲೆಯೆ ಮುದುವುಣುಸೆಮಾಳ್ದಿಯುಳ್ ಕೂಡಿತ್ತು ಸೀಮೆ (ಎಕ. XVI, ಗುಬ್ಬಿ. ೭೫-೫೩ ; 733). [ಆನೆ$_1$ + ಕಲ್$_2$]

**ಆನೆಗಲ್ಲಿ** (ನಾ). ಒಂದು ಊರಿನ ಹೆಸರು : ಆನೆಗಲ್ಲಿ ಗ್ರಾಮೇ ದ್ವಿವರ್ತ್ತನೀ (ಮೈಆರಿ. ೧೯೪೩, ೧-೬ ; 500). [ಆನೆ$_1$ + ಗಲ್ಲಿ ?]

**ಆನೆಗಲ್ಲು** 'ಆನೆಕಲ್' ನೋ.

**ಆನೆಗವರ್ತೆ** (ನಾ). ೧. ಆನೆಯ ಸೂರೆ. ೨. ದೊಡ್ಡ ಸೂರೆ; ಸರ್ವಸ್ವಾಪಹರಣ. 'ಆನೆಗವರ್ತೆಗೊಳ್' ಪರಾ. [ಆನೆ$_1$ + ಕವರ್ತೆ]

**ಆನೆಗವರ್ತೆಗೊಳ್** (ಕ್ರಿ). ೧. ಆನೆಗಳನ್ನು ಹಿಡಿಯುವ ಹಾಗೆ ಹಿಡಿ. ೨. ದೊಡ್ಡ ಸೂರೆಯನ್ನು ಮಾಡು; ಸರ್ವಸ್ವಾಪಹರಣಮಾಡು : ಹೊಯ್ಸಳನನದಿರ್ಪ್ಪಿ ತೇಜದೆಸಕಂ ಮಿಗಲಾನೆಗವರ್ತೆಗೊಂಡನಾರಳವೊ ಭುಜಪ್ರತಾಪವಿಭವಂ ಜಗದೊಳ್ ಜಗದೇಕಮಲ್ಲನಾ (ಎಕ. XI, ದಾವಣ. ೮೫-೧೪ ; 1143). [ಆನೆಗವರ್ತೆ + ಕೊಳ್$_1$]

**ಆನೆಗಳಿ, ಆನಗಳಿ** (ನಾ). ಒಂದು ಊರಿನ ಹೆಸರು : ದೇವರ ನಂದಾ ಬೆಳಕಿಗೆ ಕೊಟದು ಆನೆಗಳಿಯ ಒಳಗಣ ಕಳಿಂಜಿಯ ಹಿರಿಯ ಮನೆಯ ಕಳು (ಸೌಇಇ. IX-ii, ೪೨೪-೪೫ ; 1401). **ಆನಗಳಿ** : ಯೀ ಮಠಕ್ಕೆ ಬರಸಿದ ಬಾಳು ಆನಗಳಿಯ ವೊಳಗೆ ಆ ಬಾಳು ಚತುಸೀಮೆಯ ವಿವರ (ಸೌಇಇ. IX-ii, ೪೫೨-೧೦ ; 1450). [ಆನೆ$_1$ + ಗಳಿ ?]

**ಆನೆಗಾಜ** (ನಾ). ಮಾವಟಿಗ: ತುಳಿಯಿಸಬೇಕೆಂದೆಂಬಾನೆಗಾಜರ ಬಳಗದ ಬೊಬ್ಬೆ ಮಸಗಿತು (ಚಂಪ್ರಸಾಂ. ೮-೬೮) ; ಆನಂದದಿಂದೆಸಗುವರಾರಿಳೆಯೊಳಗೆಂದಾನೆಗಾಜರು ಪೊಗಳಿದರು (ಚಂಪ್ರಸಾಂ. ೨೦-೪೧).
[ಆನೆ$_1$ + -ಕಾಜ]

**ಆನೆಗುಂದಿ, ಆನೆಗೊಂದಿ, ಆನೆಯಗೊಂದಿ, ಆನೇಗೊಂದಿ** (ನಾ). (ತುಂಗಭದ್ರಾ ನದಿಯ ದಡದ ಮೇಲಿರುವ) ಒಂದು ಊರಿನ ಹೆಸರು; ಆ ಹೆಸರಿನ ಒಂದು ಸಂಸ್ಥಾನ : ಆತನು ತಿರುಗಿ ಆನೆಗುಂದಿಗೆ ಹೋದನು (ಮುಂಬಯಿ. ೩-೧೭). **ಆನೆಗೊಂದಿ** : ಆನೆಗೊಂದಿ ಯುದ್ಧವಾದ ಮೇಲೆ ದೇಶದಲ್ಲಿ ಶಾಂತಿ ಸಮಾಧಾನಗಳೇ ಇರಲಿಲ್ಲ (ಶ್ರೀವಿದ್ಯಾ. ೯೪). **ಆನೆಯಗೊಂದಿ** : ಅಂದೆಲ್ಲ ಕಿಷ್ಕಿಂಧಪುರವೆಂಬರಾನೆಯಗೊಂದಿಯೆಂಬರು ಕಲಿಯುಗದಿ (ಭರಜ. ೫೫-೯) ; ಆನೆಯಗೊಂದಿಯಲ್ಲಿರುತೆ ಹರಿಹರನೃಪಾಲವಂಶೋದ್ಭವಂ . . . ವಿದ್ಯಾನಗರಿಯೆಂಬ ನಗರವ ರಚಿಪನಿತ್ತ (ಚಿಬಪು. ೬೩-೩). **ಆನೇಗೊಂದಿ** : ಶಾಂಡಿಲ್ಯಗೋತ್ರಭೂರಾನೇಗೊಂದೀ ಗಂಗರಸಾತ್ಮಜಃ (ಎಕ. VII, ಶಿವಮೊ. ೨೬-೧೯೬ ; 1524).
[ಆನೆ$_1$ + ಕುಂದಿ (< ಕುಂದ$_1$)]

**ಆನೆಗುಂದು** (ನಾ). ಒಂದು ಬೆಟ್ಟದ ಹೆಸರು : ಅನ್ತೆ ಮೂಡ ಆನೆಗುನ್ದು (ಎಇ. X, ೬೭-೮೮ ; 892). [ಆನೆ$_1$ + ಕುಂದು$_3$ (< ಕುಂದ$_1$)]

**ಆನೆಗುಲಗಂಜಿ** (ನಾ). ದೊಡ್ಡ ಗುಲಗಂಜಿಯ ಗಿಡ : ಇದರ ಆಕಾರವು ಆನೆಗುಲಗಂಜಿಯ ಹಾಗಿರುತ್ತದೆ (ಮುಂಬಯಿ. ೫-೧೪೩) ; ಮಂಜತ್ರಿ, ಮಂಜಡಿ, ಮಂಜಿಟ್ಟಿ, ದೊಡ್ಡಗುಲಗಂಜಿ, ಆನೆಗುಲಗಂಜಿ (ಮೈಔಗಿ. ೩-೩೮). [ಆನೆ$_1$ + ಗುಲಗಂಜಿ]

**ಆನೆಗುಲಿ** (ನಾ). ಆನೆಯನ್ನು ಕೊಲ್ಲತಕ್ಕ ಪ್ರಾಣಿ; ಸಿಂಹ : "ಆನೆಗುಲಿ, ಸಿಂಹಃ" (ಶಬ್ದಾನು. ೫೪೭ ವ್ಯಾಖ್ಯಾ). [ಆನೆ$_1$ + -ಕುಲಿ$_3$]

**ಆನೆಗೈ** (ನಾ). ಆನೆಯ ಸೊಂಡಿಲು. 'ಆನೆಗೈದೊಡೆ' ಪರಾ.
[ಆನೆ$_1$ + ಕೈ$_2$ (< ಕೆಯ್$_2$)]

**ಆನೆಗೈದೊಡೆ** (ನಾ). ಆನೆಯ ಸೊಂಡಿಲಿನಂತಿರುವ ತೊಡೆ : ಪೊಳೆವ ಸುಣ್ಣೊಡೆಯ ಪೊಸ ಪೊಂಬಾಳೆದೊಡೆಯಾನೆಗೈದೊಡೆಯ ಬಾಲಕಿಯರು (ಚಿಬಪು. ೩೭-೪೧). [ಆನೆಗೈ + ತೊಡೆ$_2$]

**ಆನೆಗೊಂಡಗುಣಿ** (ನಾ). ಒಂದು ಊರಿನ ಹೆಸರು : ಹೊಸಕೇತಾತಿಯ ಮೊಂಮಗ ಆನೆಗೊಂಡಗುಣಿಯ ಹಳಿಯ ಚಿಕ್ಕಕೇತಗೊಂಡನ ಮೊಂಮಗ (ಎಕ. XII, ಶಿರಾ. ೮೪-೬ ; 1112). [ಆನೆ$_1$ + ಕೊಂಡ + ಕುಣಿ$_2$]

**ಆನೆಗೊಂದಿ** 'ಆನೆಗುಂದಿ' ನೋ.

**ಆನೆಗೊಬ್ಬರ** (ನಾ). ಒಂದು ಬಗೆಯ ಚರ್ಮರೋಗ (ಕಿಸಂಗ್ಲಾ. ೧೦೧). [ಆನೆ$_1$ + ಗೊಬ್ಬರ]

**ಆನೆಗೊಬ್ಬಳಿ** (ನಾ). ದೊಡ್ಡ ಗೊಬ್ಬಳಿ ಗಿಡ (ಮೈಔಗಿ. ೧-೧೫).
[ಆನೆ$_1$ + ಗೊಬ್ಬಳಿ]

**ಆನೆಗೊಲೆ** (ನಾ). ೧. ಆನೆಗಳನ್ನು ಕೊಲ್ಲುವುದು. ೨. ದೊಡ್ಡ ಕೊಲೆ; ಬಲ್ಗೊಲೆ; ಹೆಗ್ಗೊಲೆ : ಮನ್ಮಥಮಹೀಭುಜನೋವದೆ ತೋಱೆ ಕೊಟ್ಟುದೊಂದಾನೆಯೆ ತನ್ನನಾನೆಗೊಲೆಗೊಂದಪುದೆಂದು ಲತಾಂಗಿ ಬೆರ್ಚಿದಳ್ (ಪಂಪಭಾ. ೪-೫೮) ; ಈ ಪರಿಯಾನೆಗೊಲೆಯ ಕೊಲುತೆಯಿತ್ತಪ್ಪ ಚಾಪಾಗಮಾಚಾರ್ಯನನು ಕೋಪದಿನಂದು ತಾಗಿದನು ಪಾಂಚಾಳಮಹೀಪತಿಯತಿಭರದಿಂದ (ನೇಮಿಸಂ. ೨೯-೧೩೯). [ಆನೆ$_1$ + ಕೊಲೆ]

**ಆನೆಗೊಳ್ಳ** (ನಾ). "ಆನೆಯನ್ನು ಹಿಡಿಯುವುದಕ್ಕೆ ಮಾಡಿದ ದೊಡ್ಡ ಹೊಂಡ; ಕೆರ್ಪು" (ಮುಚ್ಚಿಮು). [ಆನೆ$_1$ + ಕೊಳ್ಳ]

**ಆನೆಜಂತು** (ನಾ). ಆನೆಯ ದಂತ : ತಲೆಯೊಳಗಿನ ಕರೀಕೂದಲುಗಳೊಳಗೆ ಆನೆಜಂತಿನ ಬಿಳೀ ಹಣಿಗೆಯನ್ನು ಸಿಗಿಸಿಕೊಂಡದ್ದರಿಂದ (ಮುಂಬಯಿ. ೫-೩೦೦). [ಆನೆ$_1$ + ಜಂತು$_1$]

**ಆನೆಜೊಂಡು** (ನಾ). ಒಂದುಬಗೆಯ ಜೊಂಡು (ಮೈಔಗಿ. ೭೬-೧೫೫೭).
[ಆನೆ$_1$ + ಜೊಂಡು]

**ಆನೆತೂಬು** (ನಾ). (ಕೆರೆಯ) ದೊಡ್ಡ ತೂಬು : ಕೊಂಡಪನು ಆನೆತೂಬಿನಲು ಹಾಕಿಸಿದ ಶಿಲಾಶಾಸನ (ಸೌಇಇ. IX-ii, ೫೬೧-೩೪ ; 1538).
[ಆನೆ$_1$ + ತೂಬು (< ತೂಂಬು)]

**ಆನೆತೊಂಡ** (ನಾ). ಹೆಬ್ಬಾವುಗಳಲ್ಲಿ ಒಂದು ಜಾತಿ : ದಕ್ಷಿಣ ಅಮೇರಿಕಕ್ಕೆ ವಿಶೇಷವೆನಿಸಿದ 'ಆನೆತೊಂಡ' ಎಂಬ ಬೇರೊಂದು ಜಾತಿಯ ಹೆಬ್ಬಾವಿದೆ (ಬಾಲಪ್ರ. I, ೧೯). [ಆನೆ$_1$ + ತೊಂಡ$_2$]

**ಆನೆದಲೆ** (ನಾ). ಆನೆಯ ತಲೆ : ಆನೆದಲೆನುಣ್ಪಂ ಪೆಂಪನಾಳ್ದಂದು . . . ಬಣ್ಣಿಪ್ಪುದಾ ಕಾಂತೆಯಂ (ಕಾವ್ಯಸಾ. ೨೭೭) ; ಕೆಲದೊಳಿಕ್ಕಿರ್ದಾನೆದಲೆಯ ನೆತ್ತರ್ಪುದಿದ ಮುತ್ತಂ ದಾಳಿಂಬದ ಬೀಜಂಗೆತ್ತೆತ್ತಿ . . . ಮುಕ್ಕಲೊಡನೆ (ರಾಜಶೇ. ೫-೫೫ ವ) ; ಅಲರುವಿಲ್ಲಿನ ಮೂಡುವೆಟ್ಟದೊಲವನಾನೆದಲೆಯಂತಿರೆಸೆಗು ಚೆಲ್ವಿಂದಾ (ವರ್ಧಚ. ೨-೨೩). [ಆನೆ$_1$ + ತಲೆ$_1$]

**ಆನೆದಲೆಗ** (ನಾ). ಆನೆಯ ತಲೆಯಂತೆ ತಲೆಯುಳ್ಳವನು ; ಗಜಮುಖ ; ವಿನಾಯಕ: ಇಕ್ಕಡಿವಡೆದ ಕಾರ್ಮುಕವ ನಿವಾರಿಸಿ ತೆಕ್ಕೊಂಡು ಭಾರಿಯ ಹಲವ ಒಕ್ಕಯ್ಯೊಳಾಂತ ಪೇರೊನಕೆಯಿಂದಿಕ್ಕಿದ ಸೊಕ್ಕಾನೆದಲೆಗನ ಮೇಲೆ (ಮೋಹತ. ೩೮-೨೯). [ಆನೆದಲೆ + -ಗ$_3$]

**ಆನೆದಳೊಗೆಱೆ** (ನಾ). ಒಂದು ಕೆರೆಯ ಹೆಸರು (?) : ಪಳಮ್ಬೇ ಪುಣುಸೆಯೇ ಆನೆದಳೊಗೆಱೆಏ ಪುಲ್ಪಡಿಯೇ ಎಱಗಲ್ಲೇ (ಇಆ. XII, ೧೬-೧೯ ; 735). [?]

**ಆನೆದಿಂಬ** (ನಾ). ಆನೆಯನ್ನು ತಿನ್ನುವವನು : ಆನೆದಿಂಬಂಗಾಡಾವರಿ ದೆಂಬವೋಲ್ ಪೊಸೆದು ಮುಕ್ಕಲ್ ಸಾಲನೇ ಶಾರ್ಙ್ಗಿ ನಮ್ಮಂ (ಜಗವಿ. ೮-೯೫). [ಆನೆದಿನ್ + -ಅ$_7$]

**ಆನೆದಿಡ್ಡಿ** (ನಾ). ಅರಮನೆಯ ಹೆಬ್ಬಾಗಿಲು. [ಆನೆ$_1$ + ದಿಡ್ಡಿ]

**ಆನೆದಿನ್** (ಕ್ರಿ). ಆನೆಯನ್ನು ತಿನ್ನು. 'ಆನೆದಿಂಬ' ಪರಾ. [ಆನೆ$_1$ + ತಿನ್]

**ಆನೆದುಗ್ಗಾಣಿ** (ನಾ). ಆನೆಯ ಗುರುತುಳ್ಳ ಒಂದು ದುಗ್ಗಾಣಿಯ ನಾಣ್ಯ (ಕಿ). 'ದುಗ್ಗಾಣಿ' ಪರಾ. [ಆನೆ$_1$ + ದುಗ್ಗಾಣಿ]

**ಆನೆದುಡ್ಡು**, ಆನೇದುಡ್ಡು (ನಾ). (ವಿಜಯನಗರದ) ಒಂದು ನಾಣ್ಯ ; ಆನೆಯ ಗುರುತುಳ್ಳ ಒಂದು ದುಡ್ಡಿನ ನಾಣ್ಯ (ಕಿ). **ಆನೇದುಡ್ಡು** : ಆನೀ[ನೇ]ದುಡ್ಡು ವಿಜಯನಗರದ ಅರಸರ ನಾಣ್ಯವು. ಇದಾದರೊ ಗಟ್ಟಿ ದುಡ್ಡು ಎಂದೆಣಿಸಲ್ಪಡುವುದು. ಈ ದುಡ್ಡಿಗೆ ಎರಡು ಕಾಸುಗಳೆಂಬ ನಾಣ್ಯಗಳಿದ್ದುವು (ಕಭಾಗೆ. ೨೮೧) ; ವಿಜಾಪುರ ಜಿಲ್ಲೆಯಲ್ಲಿ ಆನೇದುಡ್ಡಿನ ತೂಕವು ಒಂದು ತೊಲಿಯೆಂದು ಎಣಿಸಲ್ಪಡುತ್ತದೆ (ಕಭಾಗೆ. ೨೮೮). 'ದುಡ್ಡು' ಪರಾ. [ಆನೆ$_1$ + ದುಡ್ಡು]

**ಆನೆನೂಂಕು** (ನಾ). ೧. ಆನೆಯಿಂದ ನೂಕಿಸುವುದು. ೨. ಬಲವಾಗಿ ನುಗ್ಗುವಿಕೆ; ದೊಡ್ಡ ನೂಕಾಟ : ಆ ಕಾಣುವ ಮೂಡಲ ಗೋಡೆಯು . . . ಇನ್ನೂ ನೂರಾರು ವರುಷಗಳ ಕಾಲ ಎಷ್ಟೋ ಆನೆನೂಂಕು ಫಿರಂಗಿಯ ಗುಂಡುಗಳನ್ನಾದರೂ ಲೆಕ್ಕಿಸದೆ ಹಿಂದಕ್ಕೆ ಪುಟ ಹಾರಿಸಿಬಿಟ್ಟು ಹಾಸ್ಯಮಾಡಬಲ್ಲುದೆಂದು ತೋರಬಹುದು (ಬೆಟ್ಟಅ. ೬೮೯೨). [ಆನೆ$_1$ + ನೂಂಕು$_2$]

**ಆನೆನೆಗ್ಗಲು** 'ಆನೆನೆಗ್ಗಿಲ್' ನೋ.

**ಆನೆನೆಗ್ಗಿಲ್**, ಆನೆನೆಗ್ಗಲು, ಆನೆನೆಗ್ಗಿಲು (ನಾ). ದೊಡ್ಡ ನೆಗ್ಗಿಲು. **ಆನೆನೆಗ್ಗಲು** : "ವನಶೃಂಗಾಟ-ನೆಗ್ಗಲಮುಳ್ಳು, ಆನೆನೆಗ್ಗಲ ಮುಳ್ಳು" (ಗಂಗಾಮ. ೨೮೧). **ಆನೆನೆಗ್ಗಿಲು** : ತವಸದ ಎಲೆ ಆನೆನೆಗ್ಗಿಲು ಹಾವು ಮೆಕ್ಕೆ . . . ನೀರಿನಲ್ಲಿ ಕಲಸಿ ಪ್ರಯೋಗಿಸಲು ಗುಲ್ಮಕ್ಕುಂ ಬಸುರಿಗುಂ ಉತ್ತಮಂ (ವಿವೈವಿ. ೨೧). [ಆನೆ$_1$ + ನೆಗ್ಗಿಲ್]

**ಆನೆನೆಗ್ಗಿಲು** 'ಆನೆನೆಗ್ಗಿಲ್' ನೋ.

**ಆನೆಪಾದ** (ನಾ). ಒಂದು ಗಿಡದ ಹೆಸರು (ವೈಔಗಿ. ೧೨-೨೧೩). [ಆನೆ$_1$ + ಪಾದ]

**ಆನೆಬಾಗಿಲು** (ನಾ). ಅರಮನೆಯ ಹೆಬ್ಬಾಗಿಲು. [ಆನೆ$_1$ + ಬಾಗಿಲು (< ಬಾಗಿಲ್). / **ತುಳು.** ಆನೆಬಾಗಲು]

**ಆನೆಬಾಳ್** (ನಾ). ಒಂದು ಊರಿನ ಹೆಸರು : ನಿಡುಗುಂದಿಯ ಸಮಸ್ತ ಪ್ರಜೆ ಪಿ(ಹಿ)ಟ್ಟುಕಾರರುಂ ಆನೆಬಾಳ ಪ್ರಜೆ ಪಿ(ಹಿ)ಟ್ಟುಕಾರರುಂ ಇನ್ತಿವರ ಸಮಕ್ಷದಲ್ಲಿ ಆನೆಬಾಳ (ಆಸೆಪೊಳಲ ?) ಗೌಡಿಕೆಯ ವೃತ್ತಿಯ ಅಷ್ಟ ಭೋಗಕೆ (ಕಶುಲ. ೧೭-೧೭; 1050). [ಆನೆ$_1$ + ಬಾಳ್$_2$ (< ಬಾೞ್$_2$)]

**ಆನೆಬಿದ[ದ್ದ]ಜಱಿ** 'ಆನೆಬಿದ[ದ್ದ]ಸಱಿ' ನೋ.

**ಆನೆಬಿದ[ದ್ದ]ಸಱಿ**, ಆನೆಬಿದ[ದ್ದ]ಜಱಿ, ಆನೆವಿದ್ದಸಱಿ, ಆನೇಬಿದ್ದಜಱಿ (ನಾ). ಆನೆ ಬಿದ್ದ ಬಂಡೆ. ℙ ಈಗಿನ ದೇವರಾಯನ ದುರ್ಗಕ್ಕೆ ಹಿಂದೆ ಇದ್ದ ಹೆಸರು : ದೇವಪ ದಂಣಾಯಕರ ಮಯಿದುನ ಬಿಮುಳಪನವರು ಆನೆಬಿದ[ದ್ದ]ಸಜಿುಯೆ ಏಳುನಾಡನಾಥ ಮಾಹೆನಸಿಗೆಜಿ (ಎಕ. XVI, ತುಮಕೂ. ೭೯-೯, ೧೦ ; 1314). **ಆನೆಬಿದ[ದ್ದ]ಜಱಿ** : ಪೆನುಗುಂಡೆಯ ರಾಜ್ಯದ ಆನೆಬಿದ[ದ್ದ]ಜಜಿುಯ ಸಿವಗಂಗೆಯ ಸ್ತಳದ ಬಿದರೆಯ ಸೀಮೆಯೊಳಗಣ (ಎಕ. XII, ಗುಬ್ಬಿ. ೫೯-೧೮ ; 1573). **ಆನೆವಿದ್ದಸಱಿ** : ನಿಡುಗಲ್ಲು ಚಿಮುಂತನಕಲ್ಲು ತಜಿುಯಕಲ್ಲು ಆನೆವಿದ್ದಸಜಿು ಕಲ್ಲೆಯ ತೆಲಕಲಂಬಿ ಸಿಂಗಪಟ್ಟಣ (ಎಕ. V, ಬೇಲೂರು. ೭೫-೬೩; 1382). **ಆನೇಬಿದ್ದಜಱಿ** : ಗೂಳೂರ ಸೀಮ್ನಿಚ ಆನೇಬಿದ್ದಜರಿ[ಜಱಿ] ಸ್ಥಾನೇ ಪ್ರಖ್ಯಾತಿಮಧಿಕಾಂಶ್ರಿತಂ (ಎಕ. XII, ತುಮಕೂ. ೧-೧೨೩ ; 1571). [ಆನೆ$_1$ + ಬಿದ್ದ$_0$ (< ಬೀೞ್$_1$) + ಸಱಿ$_2$]

**ಆನೆಬೇಲ** (ನಾ). ತದುಕಿನ ಗಿಡ ; ಸಲ್ಲಕೀ (ಅಮರ. ಟೀಕೆ). [ಆನೆ$_1$ + ಬೇಲ]

**ಆನೆಬೊಬ್ಬುಲಿ** (ನಾ). ಒಂದು ಬಗೆಯ ದೊಡ್ಡ ಗೊಬ್ಬಳಿ ಗಿಡ : ಕರಿಬೇವಿನಂಬಟೆಯ ತಾಱಿಯ ತಂಡಸಿನಾಸಿನಾನೆಬೊಬ್ಬುಲಿಯರನೇಱಿ ಲಂಕೊಲೆಯ (ಲೀಲಾವ. ೬-೨೬). [ಆನೆ$_1$ + ಬೊಬ್ಬುಲಿ]

**ಆನೆಮಯ್ಲಿ** (ನಾ). ದೊಡ್ಡದಾಗಿ ಬೊಕ್ಕೆಯೇಳುವ ಒಂದು ಬಗೆಯ ಸಿಡುಬು ; ದೊಡ್ಡಸಿಡುಬು (ಕಿ). [ಆನೆ$_1$ + ಮಯ್ಲಿ]

**ಆನೆಮಲೆ** (ನಾ). ಒಂದು ಬೆಟ್ಟದ ಹೆಸರು. ℙ ಪಾಲಘಾಟ್ ಬಳಿ ಇರುವ ಬೆಟ್ಟಗಳ ಸಾಲು (ದಕ. ಕಿ). [ಆನೆ$_1$ + ಮಲೆ$_2$. / ತಮಿ. ಆನೈಮಲೈ]

**ಆನೆಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ. [ಆನೆ$_1$ + ಮಲ್ಲಿಗೆ]

**ಆನೆಮಱಿ** 'ಆನೆವಱಿ' ನೋ.

**ಆನೆಮೀನು** (ನಾ). ಒಂದು ಬಗೆಯ ದೊಡ್ಡ ಮೀನು : ಸರೋವರದಿಂದೊಂದಾನೆಯೆದ್ದುದು ಆ ವನಧಿಯಿಂದಾನೆಮೀನೊಂದೆದ್ದವೊಲು ಭರದಿ (ಸಾಳ್ವಭಾ. ೬-೧೦). [ಆನೆ$_1$ + ಮೀನು (< ಮೀನ್$_1$)]

**ಆನೆಮುಂಗು** (ನಾ). ಒಂದು ಗಿಡದ ಹೆಸರು ; ದೊಡ್ಡ ನುಗ್ಗೆ ; ಆಳಂಗಿಮರ (?) (ವೈಔಗಿ. ೫೯-೧೧೮೩). [ಆನೆ$_1$ + ಮುಂಗು]

**ಆನೆಮುಸುಡು** (ನಾ). ಆನೆಯ ಮೂತಿ; ಆನೆಯ ಮುಖ. ಆನೆಮುಸುಡಿನ ನೆಗಟು = ಉದ್ದವಾದ ಮೂತಿಯುಳ್ಳ ಒಂದು ಬಗೆಯ ಮೊಸಳೆ : "ನಕ್ರ, ಕುಂಭೀರ — ಆನೆಮುಸುಡಿನ ನೆಗಟು" (ನಾಚಿರಾ. ಕಿ). [ಆನೆ$_1$ + ಮುಸುಡು]

**ಆನೆಮೂಗ** (ನಾ). ಒಂದು ಬಗೆಯ ಮೀನು : ಆನೆಮೂಗ ಮದಲೆಂಬಗಣಿತ ಶಫರಾಳಿಗಳನೆ ತೆಗೆದರ್ ಬೇಡರ್ (ತ್ರಿಪುವಿ. ೨೭-೯೧). [ಆನೆ$_1$ + ಮೂಗು + -ಅ$_7$]

**ಆನೆಮೆಟ್ಟು** (ನಾ). ಆನೆಯ ಹೆಜ್ಜೆ. ಆನೆಮೆಟ್ಟಿನ ತಬಕು = ಆನೆಯ ಹೆಜ್ಜೆಯ ಆಕಾರದ ತಟ್ಟೆ (ದಕ. ಕಿ). [ಆನೆ$_1$ + ಮೆಟ್ಟು$_2$]

**ಆನೆಮೊಗ** (ನಾ). ೧. ಆನೆಯ ಮುಖದಂತೆ ಮುಖವುಳ್ಳವನು ; ಗಜಮುಖ. ೨. ಒಂದು ಬಗೆಯ ಮೀನು : ಹಂದೆಗನಾನೆಮೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದರು (ಹಚಕಾ. ೫-೪೫). [ಆನೆ$_1$ + ಮೊಗ]

**ಆನೆಮೊಘೆ** (ನಾ). ಒಂದು ಊರಿನ ಹೆಸರು : ಆನೆಮೊಘೆಯ ಜೋಕಿ ಹೆಗಡೆಯ ಮಗ ಕೋಜಯ (ಮೈಆರಿ. ೧೯೩೪, ೧೪-೧ ; 1516). [ಆನೆ$_1$ + ಮೊಘೆ (< ಮೊಗ್ಗೆ$_2$)]

**ಆನೆಮೊಸಳೆ** (ನಾ). ದೊಡ್ಡಮೊಸಳೆ (?) : "ಕುಂಭಿ—ಆನೆಮೊಸಳೆ" (ಒಷಧಿ. ೩೪). [ಆನೆ$_1$ + ಮೊಸಳೆ]

**ಆನೆಯ** (ನಾ). ೧. ಮಾವಟಿಗ : ಗೊಟ್ಟಿವಡ್ಡಿಯ ಗೋವುಣ್ಣುಗಳಂ ಸೆಲಾಂಭೈಯರುಂ ಆನೆಯರು ಕೂಡಿ ಗೋವುಣ್ಣುಂಗೆಯ್ದು (ಎಕ. III, ನಂಜನ. ೧೯೯-೮ ; 189 ?). ೨. "ಬಲೆ" (ರಮಾಕಾಂ). [?]

**ಆನೆಯಖೇಡೆ** (ನಾ). ಒಂದು ಊರಿನ ಹೆಸರು : ದೇವರಾಯಪುರದ ಗ್ರಾಮವನೂ ಆನೆಯಖೇಡೆಯ ನಂಜರಾಯಗಳು ಸರ್ವಮಾನ್ಯವಾಗಿ ಕೊಟ್ಟನು (ಮೈಆರಿ. ೧೯೪೬, ೧೮-೭; 1488). [ಆನೆಯ + ಖೇಡೆ]

**ಆನೆಯಗೊಂದಿ** 'ಆನೆಗುಂದಿ' ನೋ.

**ಆನೆಯಪೊನ್** (ನಾ). ಆನೆಯ ಮುದ್ರೆಯ ಒಂದು ಚಿನ್ನದ ನಾಣ್ಯ: ವರ್ಷಂ ಪ್ರತಿವರ್ಷ ಆನೆಯಪೊನ್ನಾಱುಗದ್ಯಾಣಮುಂ ಧರಣಪೊನ್ನ ಆದಿತ್ಯ ದೇವರ್ಗೆ ಇಕ್ಕುವ (ಸೌಇಇ. IX–i, ೭೫–೧೦ ; 987). [ಆನೆ$_1$ + ಪೊನ್]

**ಆನೆಯಮದ** (ನಾ). ಒಂದು ಗಿಡದ ಹೆಸರು: "ಗಜಭಕ್ಷಃ — ಆನೆಯ ಮದ" (ಓಷಧಿ. ೪೫). [?]

**ಆನೆಯಸೇಸೆ** (ನಾ). ಆನೆಗಾಗಿ ಹಾಕುವ ಒಂದು ತೆರಿಗೆ: ತೊದರು ಗಳ ಆನೆಯಸೆ[ೇಸೆ]ಗ ೬ ಪ ೧ ಹಾ ೨ ಕುದುರೆಯ ಸೇಸೆ ಗ ೫ ಪ ೯ ಹಾ ೩ (ಎಕ. V, ಹಾಸನ. ೭೪–೬೪ ; 1230) ; ಕುಳುನೂಲೊಳಗಾದವು ಕಟ್ಟುಗೂಳು ಕಟಕಸೇಸೆ ವೀರಸೇಸೆ ಆನೆಯಸೇಸೆ ಕುದುರೆಯಸೇಸೆ ಬಾಸಿಗದೆಱೆ ಹೊಗೆದೆಱೆ ಮಗದೇ.ೆ ಪಂಚಕಾರುಕ (ಎಕ. XVI, ಚಿಕ್ಕನಾ. ೭೧–೨೭ ; ?). [ಆನೆ$_1$ + ಸೇಸೆ]

**ಆನೆಯಾಳ್** (ನಾ). ಆನೆಯ ಬಲವುಳ್ಳ ಮನುಷ್ಯ: ಗುರು ದೀಕ್ಷಾವಿಧಿಗಳ್ಗೆ ಮಂತ್ರಿ ಹಿತಕಾರ್ಯಾಲೋಚನಕ್ಕಾಳ್ದನುರ್ವರೆಯಂ ಕಾವಗುಣಕ್ಕೆ ನರ್ಮಸಚಿವಂ ಕ್ರೀಡಾರಸಕ್ಕಾನೆ[ಪಾಠಾಂ. ಸೆ]ಯಾಳ್ ಗುರುಭಾರಕ್ಕಿಱಿವಾಳ್ (ಗದಾಯು. ೫–೩೫). [ಆನೆ$_1$ + ಆಳ್$_2$]

**ಆನೆಯುಂಡಿಗೆ** (ನಾ). ಆನೆಯ ಮುದ್ರೆ, —ಲಾಂಛನ: ಅಂತು ಶ್ರೀದತ್ತನಿಂದಿತ್ತಲಾನೆಯುಂಡಿಗೆ ಸಲುತ್ತುಮಿರೆ (ಎಕ. VII, ಶಿವಮೊ. ೪–೧೭ ; 1122). [ಆನೆ$_1$ + ಉಂಡಿಗೆ$_3$]

**ಆನೆಯೂರ್** (ನಾ). ಒಂದು ಊರಿನ ಹೆಸರು: ಅರಸನ್ನನ್ನಿ ಪೋಪಲ್ಲಿ ತನ್ನಾಳ್ ಪೊಪಲ್ಲೆ ವಿಸಸೆ ಆನೆಯೂರ್ ತಾಗಿ ಎಚ್ಚು ಎಱಿದು ಆನೆಯ ಎಱಿದಟ್ಟ ಕಾದು ಸತ್ತ (ಎಕ. X, ಶ್ರೀನಿವಾ. ೩೦–೧೧ ; 800) ; ದ್ವಿಸನ್ನಿ ಸತ್ತಿವಂಗಲದ ಆನೆಯೂರ್ ಉತ್ತರಸ್ಯಾಂ (ಮೈಆರಿ. ೧೯೧೯, ೧೧–೧೨ ; ?). [ಆನೆ$_1$ + ಊರ್]

**ಆನೆರಕ್ಕಸ** (ನಾ). "ಗಜಾಸುರ" (ಪ್ರಭಣ್ಣ). [ಆನೆ$_1$ + ರಕ್ಕಸ]

**ಆನೆರದ** (ನಾ). ಆನೆಯ ಹಲ್ಲು: ಮುತು ಹವಳ ಅನಿ[ನೆ]ರದ ಕೊಂಡು ಮಾಡಿದು ಧರ್ಮ (ಎಕ. XIV, ಶ್ರೀರಂಗ. ೧೮೮–೯ ; ?). [ಆನೆ$_1$ + ರದ]

**ಆನೆಲೋಳಿಸರ** (ನಾ). ಒಂದು ಬಗೆಯ ದೊಡ್ಡ ಲೋಳಿಸರದ ಗಿಡ (ಕಿ). [ಆನೆ$_1$ + ಲೋಳಿಸರ. / ತುಳು. ಆನೆಇಲೋಳಿಸರ]

**ಆನೆವರಿ$_1$** (ನಾ). ಆನೆ ನುಗ್ಗುವಂತೆ ಮುಂದೆ ನುಗ್ಗುವಿಕೆ; ಆನೆಯ ನುಗ್ಗಾಟ. 'ಆನೆವರಿವರಿ' ಪರಾ. [ಆನೆ$_1$ + ಪರಿ$_2$]

**ಆನೆವರಿ$_2$** (ನಾ). ಒಂದು ಊರಿನ ಹೆಸರು; ಪಂಢರಾಪುರಕ್ಕೆ ಸುಮಾರು ನಾಲ್ಕು ಮೈಲಿಗಳ ದೂರವಿರುವ ಆನೆವಳಿ (?): ಮಹಾದೇವಗಿರೇಃ ಪೂರ್ವತ ಅನೇ[ಆನೆ]ವರಿ (ಮೈಆರಿ. ೧೯೨೮, ೧೧೭–೧೬ ; 516). [ಆನೆ$_1$ + ಪರಿ$_0$ (< ಪುರಿ ?)]

**ಆನೆವರಿ$_3$** (ನಾ). ಒಂದು ಬಗೆಯ ಸುಂಕ: ಕೂಡಲ ಸಂಗವದ ರಾಮ ತೀರ್ಥಕ್ಕೆ ಆನೆವರಿಯಂ ಕೊಟ್ಟರಲ್ಲಿ (ಬೊಂಕಶಾ. ೧೯೩೫, ರಾಣಿಬೆ. ೨೭–೭ ; 970). [ಆನೆ$_1$ + ವರಿ$_1$]

**ಆನೆವರಿವರಿ** (ಕ್ರಿ). ಆನೆ ನುಗ್ಗುವಂತೆ ಮುಂದೆ ನುಗ್ಗು: ವಿರೋಧಿ ಸೇನೆಯೊಳಾನೆವರಿವರಿದು (ಕುವ್ಯಾದ್ರೋ. ೭–೩೨) ; ತಾಳಫಲಗಳನಲುಗಿ ಕೆಡಹಿದನಾನೆವರಿವರಿದು (ನಿಭಾಗ. ೧೦–೧೫–೨೬). [ಆನೆವರಿ$_1$ + ಪರಿ$_1$]

**ಆನೆವಸದನ** (ನಾ). ಆನೆಯ ಅಲಂಕಾರ; ಆನೆಯಂತೆ ಅಲಂಕಾರ. 'ಆನೆವಸದನಂಗೊಳ್' ಪರಾ. [ಆನೆ$_1$ + ಪಸದನ]

**ಆನೆವಸದನಂಗೊಳ್** (ಕ್ರಿ). ಆನೆಯಂತೆ ಸಿಂಗರಿಸಿಕೊ, —ಅಲಂಕಾರಮಾಡಿಕೊ: ಕುಮಾರಂ . . . ಗಜಮದದಿಂ ತಿಳಕವಿಕ್ಕಿ ಸಿಂದುರದ ಬಿರುಮುಗುಳಂ ಕಱುಂಬಿ ಕಮಳಪತ್ರಮಂ ರಾಗವಟ್ಟ ಕಟ್ಟಿ ಕಾವುವೆರಸಿರ್ದ ಕರಿಯನೆಯ್ದಿಲನಂಕುಶಂ ಮಾಡಿ ಪಿಡಿದು ವಿನೋದದಿನಾನೆವಸದನಂಗೊಂಡು (ಅರ್ಧನೇ. ೫–೧೧೧ ವ). [ಆನೆವಸದನ + ಕೊಳ್$_1$]

**ಆನೆವಳಿ** (ನಾ). ಒಂದು ಊರಿನ ಹೆಸರು: ಆ ಮಹೀವಲ್ಲಭನ ಮೋಹದ ಭಂಟನಾಗಿ ಸಂ[ದ] ಆನೆವಳಿಯ ಸಿರಿಯಣ ನಾಯಕನು ತಂನ ಹುಟ್ಟು ಕಟ್ಟಳೆಗೆ (ಕಇ. I, ೬೦–೭ ; ?). [ಆನೆ$_1$ + ಪಳಿ$_0$ (< ಪಳ್ಳಿ)]

**ಆನೆವಱಿ, ಆನೆಮಱಿ** (ನಾ). ಆನೆಯ ಮರಿ: "ಚಿಲ್ವ ಪಲ್ಲಮುಱಿಯೆನಲ್ಕಾನೆವಱಿ" (ಶಬ್ದಮಂ. ೪೨). ಆನೆಮಱಿ: ಏನನೆಂಬೆನು ಬಸವ ನೀನೀವಾನೆಮಱಿಗಳು ಬಡಕುದುರೆಗಳು . . . ತಾನಿವೆಲ್ಲಂ ಶರಕೆ ಶರಣನಿತಾನಕಿತ್ತಲು ನೋಡು (ಬಸಪು. ೨೨–೫೫). [ಆನೆ$_1$ + ಮಱಿ]

**ಆನೆವಱೆ** (ನಾ). ಒಂದು ಬಗೆಯ ದೊಡ್ಡ ಚರ್ಮವಾದ್ಯ; ಆನೆಯ ಮೇಲಿಟ್ಟುಕೊಂಡು ಬಾರಿಸುವ ಒಂದು ಬಗೆಯ ದೊಡ್ಡ ನಗಾರಿ: ಮೊಳಗಿದವಾನೆವಱೆ ಗಜಱಿದವು ಡೌಡೆಗಳು (ಕುವ್ಯಾಭೀ. ೫–೨೮). [ಆನೆ$_1$ + ಪಱೆ$_1$]

**ಆನೆವಱೆಘೋಷಣ** (ನಾ). 'ಆನೆವಱೆ'ಯ ಮೂಲಕ ಬಿರುದನ್ನು ಘೋಷಿಸುವವನು: ಚಮರೀ ಧ್ವಜವಿರಾಜಿತರಾನೆವಱೆಘೋಷಣರ್ ಸತ್ಯಮಣಿಭೂಷಣರ್ (ಸೌಇಇ. IX–i, ೧೦೪–೧೧ ; 1046). [ಆನೆವಱೆ + ಘೋಷಣ]

**ಆನೆವಾಂಗು** (ನಾ). ಆನೆಯನ್ನು ವಶಪಡಿಸಿಕೊಳ್ಳುವ ವಿದ್ಯೆ; ಗಜವಿದ್ಯೆ: ಕಲ್ತಾನೆವಾಂಗು ಗೆಲೆ ಸಲೆ ಸೋಲ್ತಾನೆಗೆ ಲೆಕ್ಕಮಿಲ್ಲ ಬಿನ್ನಣಮೆನ್ನೊಳ್ ನಿಲ್ತಳವಳವಿಗಱಿಯಲೆ ಕವಲ್ತುದು ಬಿಡಿಸುವುದಿಭೇಂದ್ರಮಂ ಖಚರೇಂದ್ರಾ (ಶಾಂತಿಪು. ೩–೨೪) ; ಇಕ್ಕೆಲದಾನೆವಾಂಗಿನ ನಿಶಾದಿಗಳಂ ದೊಡನೇಱಿ ಕಾದೆ ಕಾಲ್ವಕ್ಕದ ಕೊಂತಧಾರಿಣಿ ಕೃತಾಂತನ ಪೆರ್ವಡೆಯಂತೆ ಮಿಱಿ ಬಂದೆಕ್ಕತುಳಂಗಳಿಂದಿಱಿಯೆ (ಪುಣ್ಯಾಸ್ರ. ೭–೭೬). [ಆನೆ$_1$ + ಪಾಂಗು]

**ಆನೆವಾರು** (ನಾ). = ಆನೆವಾಂಗು (?): ತಮ್ಮ ತಕ್ಕಿನ ಮೂಱುಂ ತಕ್ಕುಗಳುಮನಡರಿಯುಂ ತೊಡರಿಯುಂ ನುಡಿದಂತೆ ತಂತಮ್ಮಾನೆಯೊಳ್ತನಮುಮಂ ಬಿನ್ನಣಮುಮಂ ಮೆಱೆದಾನೆವಾರು [ಪಾಠಾಂ. ದಾನೆವಾತು]ಗಳೊಳಮುಂಡಿಗೆವಾದರೊಳಂ ಪುಗದೆ ಸಲೆ ಬರ್ದ ಗಜವಿಜಯಿಗಳಿಂ (ಶಾಂತಿಪು. ೩–೨೭ ವ). [ಆನೆ$_1$ + ಪಾರು ?]

**ಆನೆವಾಲು** (ನಾ). ಆನೆಯ ಹಾಲು: ಆನೆವಾಲು, ಪನ್ನೋಲೆ (ಭಾಷಾಭೂ. ೧೨೬ ಉದಾ). [ಆನೆ$_1$ + ಪಾಲು$_1$ (< ಪಾಲ್$_1$)]

**ಆನೆವಿದ್ದಸಱಿ** 'ಆನೆಬಿದ[ದ್ದ]ಸಱಿ' ನೋ.

**ಆನೆವಿನ್ನಾಣಿ** (ನಾ). ಗಜಶಾಸ್ತ್ರನಿಪುಣ: ಕುಮಾರಂ ಕಂಡೀ ಕಟ್ಟಾನೆಯನೇಱಿದೊಡಾನೆಯಾನೆವಿನ್ನಾಣಿಯೆಂದು ಸರಂದೋಱಿದ ಸರದ ಬೞಿಯನೆ ಗೞಿವೞಿಯ ಪಾವಿನಂತೆ . . . ಚಪ್ಪರಿಸಿ (ಅರ್ಧನೇ. ೫–೧೧೩ ವ) ; ಈ ನವಮದಮಾತಂಗಮನೇಱಿದೊಡಾನೆವಿನ್ನಾಣಿ ನಾನಹೆನು (ನೇಮಿಪು. ೯–೯). [ಆನೆ$_1$ + ಬಿನ್ನಾಣಿ]

**ಆನೆವೆಡಂಗ** (ನಾ). ಆನೆಯಂತೆ ಬೆಡಗುಳ್ಳವನು; ಒಂದು ಬಿರುದು: ಅಮೋಘವರಿಷದೇವ . . . ಅಂಕತ್ರಿಣೇತ್ರನಾನೆವೆಡಙ್ಗಂ ವನಗಜಮಲ್ಲಂ ಕಚ್ಚೆಗ ಕೃಷ್ಣರಾಜ ಶ್ರೀಮತ್ ಕನ್ನರ ದೇವ (ಎಕ. III, ಮಂಡ್ಯ. ೪೧–೩ ; 950) ; ಆನೆವೆಡೆ(ಡ)ಙ್ಗಂ ಮದಗಜಮಲ್ಲಂ (ಇಆ. XII, ೨೫೭–೧ ; 951) ; ಮದಗಜಮಲ್ಲನಾನೆವೆಡಂಗ ಶ್ರೀ ಕನ್ನರ ದೇವ (ಸೌಇಇ. IX–i, ೭೬–೫ ; 991). [ಆನೆ$_1$ + ಬೆಡಂಗು + –ಅ$_7$]

**ಆನೆವೆಣ** (ನಾ). ಆನೆಯ ಹೆಣ: ಆನೆವೆಣಗಳು ತೇಲಿದವು ಕುದುರೆಯಟ್ಟೆ ಮಾನವ ಸಬದೊಡಗೂಡಿಯೇನೆಂಬೆ ರಕುತದ ಪೆರ್ದೊಱೆಱಿ ಪರಿಯಲು ತಾನೆದ್ದು ಕುಣಿದ ನಾರದನೂ (ವರ್ಧಚ. ೬-೧೨೦).
[ಆನೆ$_1$ + ಪೆಣ]

**ಆನೆವೇರಿ** (ನಾ). ಒಂದು ಊರಿನ ಹೆಸರು: ಶ್ರೀಮತು[ಜೊ]ಂಮಂಣ ಒಡೆಯರ ನಿರೂಪದಿಂ ದೇವರಾಯ ಒಡೆಯರ ಆನೆವೇರಿಯದ ಉಭಯ ಮಾರ್ಗ್ಗದ ಸುಂಕದ ಮಾನಿಕಪ್ಪ ಮೂಗವಾಡಿಯ ಪುರದ (ಸೌಇಇ. IX-ii, ೪೨೮-೧೧ ; 1405) ; ಆ ರಾಯಂಣ ಒಡೆಯರು ಅಗರದ ರಾಜ್ಯ ಆನೆವೇರಿಯ ಹನಗವಾಡಿಯ ಭಾಗದ ನಾಡು ಹೊಳೆಯ ಹೊಂನೂರ ನಾಡನು (ಎಕ. VII, ಶಿವಮೊ. ೭೧-೧೭ ; 1431). [ಆನೆ$_1$ + ಪೇರಿ ?]

**ಆನೆಸತ್ತೆ** (ನಾ). ಒಂದು ಗಿಡ (ವೈಔಗಿ. ೨೮-೫೪೬).
[ಆನೆ$_1$ + ಸತ್ತೆ$_1$]

**ಆನೆಸವಾರಿ** (ನಾ). ೧. ಆನೆಯನ್ನು ಹತ್ತಿಕೊಂಡು ಹೋಗುವುದು. ೨. ಒಂದು ಬಗೆಯ ಆಟ: ಆನೆಸವಾರಿ ತಾತೆಹುಳ್ —ಇತ್ಯಾದಿ ಹಲವು ರೀತಿಯಲ್ಲಿ ಆಡಿಸುತ್ತಾ (ಮುನಿಮಾ. ೧೭೫). [ಆನೆ$_1$ + ಸವಾರಿ]

**ಆನೆಸಾಲೆ** (ನಾ). ಆನೆಗಳನ್ನು ಕಟ್ಟುವ ಸ್ಥಳ; ಗಜಶಾಲೆ: ಸೊದೆವಱಿದರಮನೆಯಂ ಬಳಸಿದಾನೆಸಾಲೆಗಳೆಸೆಗುಂ (ಮಲ್ಲಿಪು. ೨-೬೫).
[ಆನೆ$_1$ + ಸಾಲೆ$_2$]

**ಆನೆಸುಂಡೆಗಿಡ** (ನಾ). ಒಂದು ಬಗೆಯ ದೊಡ್ಡ ಸುಂಡೇಗಿಡ (ವೈಔಗಿ. ೭೦-೧೪೪೦). [ಆನೆ$_1$ + ಸುಂಡೆ + ಗಿಡ (< ಗಿಡು)]

**ಆನೆಸೂಜಿ** (ನಾ). ದೊಡ್ಡಸೂಜಿ; ದಬ್ಬಳ (ಸ್ಯಾಂಡರ್).
[ಆನೆ$_1$ + ಸೂಜಿ]

**ಆನೆಸೆಟ್ಟಿ** (ನಾ). ಒಬ್ಬಾತನ ಹೆಸರು: ಬನವಾಸಿಯ ಆನೆಸೆಟ್ಟಿ[ಟ್ಟಿ]ಯ ಅಳಿಯ ಬಸನ್ತಕುಮಾರ (ಎಕ. VIII, ಸೊರಬ. ೫೭೧-೨೭ ; 692).
[ಆನೆ$_1$ + ಸೆಟ್ಟಿ]

**ಆನೆಸೊಗಟೆ** (ನಾ). ಒಂದು ಗಿಡ (ವೈಔಗಿ. ೧೯-೩೩೬).
[ಆನೆ$_1$ + ಸೊಗಟೆ]

**ಆನೆಸೊಳ್ಳೆ** (ನಾ). ದೊಡ್ಡ ಸೊಳ್ಳೆ (ಕಿ). [ಆನೆ$_1$ + ಸೊಳ್ಳೆ]

**ಆನೆಹಲ್ಲು** (ನಾ). ಆನೆಯ ಹಲ್ಲು; ದಂತ.
[ಆನೆ$_1$ + ಹಲ್ಲು (< ಪಲ್). / **ತಮಿ.** ಆನೈಪಲ್ ; **ತೆಲು.** ಏನುಗಪಲ್ಲು]

**ಆನೆಹುಣಿಸೆ** (ನಾ). ಒಂದು ಜಾತಿಯ ದೊಡ್ಡ ಹುಣಿಸೆ (ವೈಔಗಿ. ೩-೩೭). [ಆನೆ$_1$ + ಹುಣಿಸೆ (< ಪುಣಿಸೆ)]

**ಆನೆಹುಲ್ಲು** (ನಾ). ಒಂದು ಜಾತಿಯ ದೊಡ್ಡ ಹುಲ್ಲು: ಗಿನಿಹುಲ್ಲು, ಆನೆಹುಲ್ಲು ಮೊದಲಾದುವನ್ನು ಕೃಷಿಕನು ಇತರ ಬೆಳೆ ಬೆಳೆಯುವಂತೆ ಬೆಳೆಯಬೇಕು (ಬಾಲಪ್ರ. I, ೭೭೬). [ಆನೆ$_1$ + ಹುಲ್ಲು (< ಪುಲ್)]

**ಆನೆಹೆಜ್ಜೆ** (ನಾ). ೧. ಆನೆಯ ಪಾದ. ೨. ಆನೆಯು ಹೆಜ್ಜೆಹಾಕುವ ಕ್ರಮದಲ್ಲಿ ಹಾಕುವ ಹೆಜ್ಜೆ: ಆನೆಹೆಜ್ಜೆಯನಿಟ್ಟು ಹೊಸಕಿದೆಯ ಹೊರಳಿಸುತ ಪಾರಸಿಕ ಜನರನ್ (ಪಾರಸಿ. ೧೯-೯).
[ಆನೆ$_1$ + ಹೆಜ್ಜೆ (< ಪಜ್ಜೆ)]

**ಆನೇಕಾಲಹರಕೆ** (ನಾ). ಒಂದು ಬಗೆಯ ಹರಕೆ; ಆನೆಯ ಕಾಲಿಗೆ ಕಟ್ಟಿಸಿಕೊಂಡು ಎಳೆಸಿಕೊಳ್ಳುತ್ತೇನೆಂದು ಮಾಡಿಕೊಳ್ಳುವ ಹರಕೆ: ಕನ್ನಡ ರಮಣಿಯರು ಧಾರಾಳವಾಗಿ ಅನುಸರಿಸಿದ ಸಿಡಿ, ಸಹಗಮನ, ಆನೇಕಾಲ ಹರಕೆ, ಜೋಹಾರ ಮುಂತಾದ ಕಠೋರವಾದ ಪದ್ಧತಿಗಳು ಅವರ ವೀರಜೀವನದ ಉಜ್ವಲತೆಯನ್ನು ಬೀರುತ್ತವೆ (ಕಮಿಂಚಿ. ೨೯). [ಆನೆ$_1$ + ಕಾಲು$_1$ (< ಕಾಲ್$_1$) + ಹರಕೆ (< ಪರಕೆ$_1$)]

**ಆನೇಕೆರೆ** (ನಾ). ಒಂದು ಊರಿನ ಹೆಸರು: ಚೆಂನಿಗರಾಯಸ್ವಾಮಿ ಸೇವೆಗೆ ಆನೇಕೆರೆ ಭಾರದ್ವಾಜ ಗೋತ್ರದ . . . ಗಿರಿಯಪ್ಪ ಹೆಬ್ಬಾರ ಮಗ ವೆಂಕೈಯನು (ಎಕ. V, ಬೇಲೂರು. ೨೭-೩ ; 1767).
[ಆನೆ$_1$ + ಕೆರೆ$_2$ (< ಕೆಱೆ)]

**ಆನೇಗೊಂದಿ** ‘ಆನೆಗುಂದಿ’ ನೋ.

**ಆನೇದುಡ್ಡು** ‘ಆನೆದುಡ್ಡು’ ನೋ.

**ಆನೇಬಿದ್ದಜಱಿ** ‘ಆನೆಬಿದ[ದ್ದ]ಸಱಿ’ ನೋ.

**ಆನ್ಮೆ** (ನಾ). ಅಹಂಭಾವ; ತನ್ನತನ: ನನ್ನೆದೆಯಾನ್ಮೆಯ ಮಲ್ಲನ ತರಿಯದೆ (ಗಿಳಿವಿಂ. ೪೪-೬). [ಅನ್$_2$ + -ಮೆ$_1$]

**ಆನ್ವೀಕ್ಷಿಕಿ** (ನಾ). ತರ್ಕವಿದ್ಯೆ; ನ್ಯಾಯಶಾಸ್ತ್ರ: ಆನ್ವೀಕ್ಷಿಕಿಯೆಂದೂ ನ್ಯಾಯಶಾಸ್ತ್ರಕ್ಕೆ ಪ್ರಸಿದ್ಧಿ ಇರುವುದು (ಹಿಂದಸಾ. ೧೧೧).
[**ಸಂ.** ಆನ್ವೀಕ್ಷಿಕೀ]

**ಆಪ$_1$** ‘ಆಱ್’ ಪರಾ.

**ಆಪ$_2$** (ನಾ). ನೀರು; ಜಲ. [**ಸಂ.**]

**ಆಪಕ್ವ** (ಗು). ೧. ಅರ್ಧಪಕ್ವವಾದ, —ಬೆಂದ, —ಬಲಿತ. (ನಾ). ೨. ಸ್ವಲ್ಪಮಾತ್ರ ಹುರಿದ ಧಾನ್ಯ. ೩. ದೋಸೆ; ರೊಟ್ಟಿ. [**ಸಂ.**]

**ಆಪಗಾವಾರಿ** (ನಾ). ನದಿಯ ನೀರು: ಅಂಬೋಧಿ ತೀರ್ಥಾಪಗಾವಾರಿ ವಿರಾಜಚ್ಚಂದ್ರಕಾಂತೋಪಲ ಕಲಶಮಂ (ಕಾದಂಪೂ. ೫೮೦).
[**ಸಂ.** (ಆಪಗಾ + ವಾರಿ)]

**ಆಪಗಾಸ್ನಾನ** (ನಾ). ನದಿಯಲ್ಲಿ ಮಾಡುವ ಸ್ನಾನ: ಆ ಪರಮಪುರುಷ ಲಕ್ಷ್ಮಣ ಸೀತೆ ಸಹಿತ ಬಳಿಕಾಪಗಾಸ್ನಾನಮಂ ರಚಿಸಿ ಸಂಧ್ಯಾ ಕೃತ್ಯಗಳ ಮಾಡಿ (ವೆಂಕಾರಾ. ೩-೮-೧೮).
[**ಸಂ.** (ಆಪಗಾ + ಸ್ನಾನ)]

**ಆಪಗೆ** (ನಾ). ನದಿ; ಹೊಳೆ: ಶುಭಕರದಾಪಗೆಗಳ್ ಮಹಿಮೆಯಿಂದೆ ಪರಿರಾಜಿರ್ಕುಂ (ಹವ್ಮಿಾರ. ೧-೫೪); ಒಗುಮಿಗೆಯ ಸೊಗದಗೆಯ ನಾಪಗೆಯ ತಾಳ್ದಿದನೊಸಗೆಯ (ಉದ್ಭದೇ. ೬-೪). ‘ಅಮರಾಪಗೆ’, ‘ದೇವಾಪಗೆ’, ‘ಸುರಾಪಗೆ’ ಪರಾ. [**ಸಂ.** ಆಪಗಾ]

**ಆಪಡಿ** (ನಾ). ಆ ರೀತಿ; ಹಾಗೆ: ಆ ಪುರದುತ್ತರಭಾಗದೊಳಾಪಡಿಯೆನೆ ನೆಗಳ್ದಯೆಳೆಹಯೆಂಬುದು ಲಕ್ಷ್ಮೀಪರಿವ್ರಿ[ವೃ]ತನಗಸ್ತ್ರೀಶನುಮಾಪತಿ ದೇವಾಧಿ[ದೇವ]ನೆಸೆದಿಪ್ಪುದಜಿಂ (ಸೌಇಇ. IX-i, ೨೬೪-೩೦ ; 1154).
[< ಅಪ್ಪಡಿ$_1$]

**ಆಪಣ** (ನಾ). ಅಂಗಡಿ; ಪೇಟೆ: “ಪಣ್ಯಂ, ವಿಕ್ರಯಶಾಲಾ, ಆಪಣಃ, ವಿಪಣಃ –ಈ ೪ ಅಂಗಡಿ” (ಹಲಾಯು. ೫೦-೧೪೧); ಧನದ ಭವನ ಮೆನಿಪ ಸಿರಿಯ ಬಚ್ಚರಾಪಣಂಗಳಿಂ (ಪಂಪಭಾ. ೧-೫೮ ರ); ಬಿಡುವಿಲ್ಲದೀ ಜೀವಿತಾಪಣದ ಸರಕೆಣಿಸೆ ಕಡೆಯೇನು (ಮಂಕುಕ. ೫೯೪). [**ಸಂ.**]

**ಆಪಣಿಕ** (ಗು). ೧. ಅಂಗಡಿಯಲ್ಲಿನ; ವ್ಯಾಪಾರಕ್ಕೆ ಸಂಬಂಧಿಸಿದ. (ನಾ). ೨. ವರ್ತಕ; ವ್ಯಾಪಾರಿ. [**ಸಂ.**]

**ಆಪತು** ‘ಆಪತ್ತು’ ನೋ.

**ಆಪತ್ಕಾಲ** (ನಾ). ತೊಂದರೆಯ ಕಾಲ; ಕಷ್ಟದ ವೇಳೆ: ಭಯಂಕರವಾದ ಆಪತ್ಕಾಲದಲ್ಲೂ ಧೃತಿಯಿಂದ ಪಾಲಿಸಬೇಕಾದ ಸಮಚಿತ್ತತೆಯನ್ನು . . . ವ್ಯಾಸರು ಗೀತೆಯ ಮೂಲಕ ತಿಳಿಸಿದರು (ಋಕ್ಸಾರ. ೧೨೪ ಪೀ); ಆಪತ್ಕಾಲಕ್ಕೆ ಆದವನೇ ನೆಂಟ (ಗಾದೆ). [**ಸಂ.** (ಆಪದ್ + ಕಾಲ$_1$)]

**ಆಪತ್ತಿ** (ನಾ). ೧. ಬರುವುದು; ಉಂಟಾಗುವುದು; ಪ್ರಾಪ್ತಿ. ೨. ಕಷ್ಟ; ಆಪತ್ತು. ೩. ಸಂಕೋಚ: ನಮ್ಮೊಂದಿಗೆ ಕುಳಿತುಕೊಳ್ಳಲು ಇಷ್ಟು ಆಪತ್ತಿಯೆ? ಮಡಿ ಮೈಲಿಗೆಯ ವಿಷಯವಲ್ಲವಷ್ಟೆ (ಪ್ರೇಮಾಶ್ರ. ೮೦). [**ಸಂ.**]

**ಆಪತ್ತಿಗ** (ನಾ). ಕಷ್ಟದ ಸಮಯಕ್ಕೆ ಆದವನು : ಪವನಜ ಪಾರ್ಥರುಬ್ಬಟೆಯ ನಿಲಿಸುವಾಪತ್ತಿಗರು ನಮಗಿಲ್ಲ (ಕುವ್ಯಾದ್ರೋ. ೪–೭); ನಿನ್ನಂತೆ ಕೇವಲಾಪತ್ತಿಗರು ಯಿನ್ನಾವ ಲೋಕದೊಳಗಿಹರು (ನವಮೋ. ೨೭–೫೬). [ಆಪತ್ತು + –ಇಗ]

**ಆಪತ್ತು**, ಆಪತು (ನಾ). ಕಷ್ಟ; ಅಪಾಯ; ತೊಂದರೆ; ಬಾಧೆ: ಅಪತ್ಪಯೋಧಿಯೊಳಗತ್ಯಾಪತ್ತಿಂದುಳ್ಳಿಮುಟ್ಟಿ (ಪಂಪಭಾ. ೭–೬೧); ಅಂಜಿ ಕೆಲಸವನು ಮಾಡುತಿಪ್ಪ ವನಿತೆಗಾದಾಪತ್ತನಾಲಿಸದೆ . . . ಕೆಟ್ಟು ದಿಟ್ಟಿಸುವರದನೇನೆಂಬೆನು (ಹಚಕಾ. ೧೨–೧೧); ಆಪತ್ತು ಸುಖವು ಸರಿಯೆಂದು ಪೋಪಗೆ ಪಾಪವೆಲ್ಲಿಹುದು (ಸರ್ವಜ್ಞ. ೨೭೯). **ಆಪತು** : ಹಸಿವಿಗಾಪತಿಗುಳ್ಳಡದೆ ದೈವ (ಬಸವು. ೯–೯); ಆಪತಿಗೆ ಬಂದೊದಗಿದ್ದೆ ತಂದ್ಯೆ ಪಣವ (ಬಸವು. ೨೩–೩೨). [ಸಂ. ಆಪದ್]

**ಆಪತ್ತುವಡು** (ಕ್ರಿ). ಕಷ್ಟಪಡು; ಪ್ರಯಾಸಪಡು; ತೊಂದರೆ ತೆಗೆದುಕೊ: ಕುಸ್ತಿತನಪ್ಪೀ ನಿನಗೆನಿತಾಪತ್ತುವಟ್ಟೊಡಂ ದುಃಖಮೆ ಕೈಸಾರ್ಗುಮಲ್ಲದೆ ರತ್ನಂ ಕೈಸಾರಲಱಿಯದು (ಧರ್ಮಾಮೃ. ೬–೧೨೮); ಇಂತೇಕಾಪತ್ತುವಟ್ಟೆಯೆನೆ ಎನಗೊಂದೆಟ್ಟುಂಟು ಅದರ್ಕೆಣೆಯಂ ಮಾಡುವೆನೆಂದು ಆಪತ್ತುವಟ್ಟಪಂ ಎಂದೊಡರಸಂ ಕರುಣಿಸಿ (ಜೀವಸಂ. ೧೪೯–೩೦ ವ). [ಆಪತ್ತು + ಪಡು$_1$]

**ಆಪತ್ಪ್ರತೀಕಾರ** (ನಾ). ಆಪತ್ತಿಗೆ ಪರಿಹಾರ; ಕಷ್ಟವನ್ನು ನಿವಾರಿಸುವ ಪರಿಹಾರ: ಎಮಗಾಪತ್ಪ್ರತೀಕಾರಮಾವುದೀಗಳೆ ಬೆಸಸಿಂ (ಪಂಪಭಾ. ೭–೬೧). [ಸಂ. (ಆಪದ್ + ಪ್ರತೀಕಾರ)]

**ಆಪತ್ಸಂನ್ಯಾಸ** (ನಾ). ಆಪತ್ಕಾಲದಲ್ಲಿ ತೆಗೆದುಕೊಳ್ಳುವ ಸಂನ್ಯಾಸ: ಆಪತ್ಸನ್ಯಾಸವನ್ನು ಕೊಡಿಸುವ ಕಾಲ ಮೀರಿತು (ಮಾಮುರಾ. ೧೧೧). [ಸಂ. (ಆಪದ್ + ಸಂನ್ಯಾಸ)]

**ಆಪತ್ಸಖ** (ನಾ). ಕಷ್ಟಕಾಲದಲ್ಲಿ ಸಹಾಯಮಾಡುವ ಗೆಳೆಯ: ಈತನೆ ಆಪತ್ಸಖಿಂ (ವಸ್ತವಂ. ೬–೩೯). [ಸಂ. (ಆಪದ್ + ಸಖ)]

**ಆಪದ** (ನಾ). = ಆಪತ್ತು : ಆಪದ ಸುಖಸಾಧನಗಳಿಲ್ಲಿಯವು (ವಿಸೀಗೀ. ೧೧–೮). [< ಸಂ. ಆಪದ್]

**ಆಪದ್ಧನ** (ನಾ). ಆಪತ್ತಿನ ಕಾಲಕ್ಕೆ ಒದಗಲೆಂದು ಕೂಡಿಡುವ ಧನ, —ಹಣ: ಆಪದ್ಧನವನ್ನು ಸಂಗ್ರಹಿಸಿಡುವ ಬಯಕೆ (ಶಿಕ್ಷದ. ೪೫೨); ಉಳಿತಾಯವೇ ಆಪದ್ಧನ (ರೂಢಿ). [ಸಂ. (ಆಪದ್ + ಧನ)]

**ಆಪದ್ಧರ್ಮ** (ನಾ). (ಸಾಮಾನ್ಯವಾಗಿ ನಿಷಿದ್ಧವಾದರೂ) ಕಷ್ಟಕಾಲದಲ್ಲಿ ಆಚರಿಸಬಹುದಾದ ಧರ್ಮ: "... ನನ್ನ ಸಲುವಾಗಿ ನೀನು ಮಾಡಿದ ಪ್ರತಿಜ್ಞೆಯನ್ನೂ ಬಲ್ಲೆ; ಆದರೆ ಇದನ್ನು ಆಪದ್ಧರ್ಮವಾಗಿ ಎಣಿಸು. . ." ಎಂದು ವಿಧವಿಧವಾಗಿ ಕೇಳಿಕೊಂಡಳು (ವಚಭಾ.೭); ಧರ್ಮ ಶಬ್ದವನ್ನು ಸಾಮಾನ್ಯವಾದ ಅರ್ಥಕ್ಕೆ ವಿರುದ್ಧವಾದ ಅರ್ಥದಲ್ಲಿಯೂ ಪ್ರಯೋಗಿಸುವುದುಂಟು. ಆಪದ್ಧರ್ಮವೆಂಬುದೊಂದಂಥಾ ಪ್ರಯೋಗವು. ಅನಾಪತ್ತಿಯಲ್ಲಿ ಅಧರ್ಮವೇ ಆದರೂ ವಿಪತ್ಕಾಲದಲ್ಲಿ ಧರ್ಮವೆಂದು ಪರಿಗಣಿಸಲ್ಪಡಬೇಕಾದುದು ಆಪದ್ಧರ್ಮವು (ಆರ್ಯಧ. ೧೩). [ಸಂ. (ಆಪದ್ + ಧರ್ಮ)]

**ಆಪದ್ಬಂಧು** (ನಾ). ಕಷ್ಟಕಾಲಕ್ಕೆ ಒದಗುವ ಸಹಾಯಕ: ಆಪದ್ಬಂಧುವೆಂದು ಈ ನಮ್ಮ ಪ್ರಮಿಥ್ಯೂಸ್ ಏಕೆ ನಿಲ್ಲುತ್ತಾನೆ? (ಬದ್ಧಪ್ರ. ಪೀ. XXXI). [ಸಂ. (ಆಪದ್ + ಬಂಧು)]

**ಆಪದ್ಬಾಂಧವ** (ನಾ). = ಆಪದ್ಬಂಧು : ಈ ಆಪದ್ಬಾಂಧವರ ಮಹಿಮೆಯಿಂದ ಈಗಲೂ ಶೋಭಿಸುತ್ತಿರುವುದು (ಆರ್ಯಕೀ. ೫೫); ನಿನ್ನಂಥ ಆಪದ್ಬಾಂಧವ ಅವಳಿಗೆ ದೊರೆತದ್ದೇ ನನಗೆ ಪರಮಸಂತೋಷ (ಪುನರು. ೫೪೨). [ಸಂ. (ಆಪದ್ + ಬಾಂಧವ)]

**ಆಪದ್ವಾರ್ತೆ** (ನಾ). ಆಪತ್ತಿನ ಸುದ್ದಿ, —ಸಮಾಚಾರ: ನಿಮಗೆ ಸಂಭವಿಸಿದಾಪದ್ವಾರ್ತೆಯನ್ನು ನಿನ್ನ ಬಂಧುಜಾಲಕ್ಕೆ ತಿಳಿಯಪಡಿಸುವುದು ನಿಮಗೆ ವಿಧಿಯಲ್ಲವೇನಮ್ಮಾ? (ಲಕ್ಷ್ಮೀಪ್ರ. ೧೧೦). [ಸಂ. ಆಪದ್ವಾರ್ತಾ (ಆಪದ್ + ವಾರ್ತಾ)]

**ಆಪದ್ವಿನೀತ** (ಗು). ಆಪತ್ತಿನ ಕಾಲದಲ್ಲಿ ಮಾತ್ರ ವಿನಯವನ್ನು ತೋರಿಸುವ: ಆಪದ್ವಿನೀತನಂ ಧೃತಕೋಪನನಜ್ಞಾನಿಯಂ ಕೃತಘ್ನನನೆಂದುಂ . . . ಅಶೇಷ ದೋಷಾವಿಳನಂ (ಪಂಚತಂ. ೯೫–೧೪). [ಸಂ. (ಆಪದ್ + ವಿನೀತ)]

**ಆಪನ** (ನಾ). ೧. ಪ್ರಾಪ್ತಿ; ಹೊಂದುವಿಕೆ. ೨. ಮುಟ್ಟುವುದು; ಸೇರುವುದು. ೩. ಮೆಣಸು. [ಸಂ.]

**ಆಪನ್ನ** (ಗು). ೧. ಆಪತ್ತಿಗೆ ಗುರಿಯಾದ: ಶ್ರೀಪಾದಕಲ್ಪಪಾದಪಮಾಪನ್ನಾಶ್ರಿತಸುಖಪ್ರದಂ . . . ಎನೆ (ಜಗವಿ. ೧೦–೧); ಆಪನ್ನರಾದ ಜ್ಞಾತಿಗಳಂ ನಂಟರುಂ ನೇಹಿಗರುಂ ಚನ್ನಾಗಿ ಪರಿಪಾಲನೆಗೆಯ್ದು (ಭಾರಶಾಂ. ೬೭–೪೧೧). ೨. ಪಡೆದ; ಹೊಂದಿದ: ಆಕೆಯ ಕೆಳದಿ ಕಂಡು ವಿಸ್ಮಯಾಪನ್ನಮಾನಸೆಯಾಗಿ (ಸುಕುಮಾ. ೧೧–೧೮ ವ); ಕನ್ನಡದ ಕೃತಿಯೆಂದವ ಜ್ಞಾಪನ್ನರಾಗದಿರಿ (ನಿಭಾಗ. ೧–೧–೪). [ಸಂ.]

**ಆಪನ್ನಸತ್ತ್ವೆ** (ನಾ). ಗರ್ಭಿಣಿಯಾದ ಹೆಂಗಸು; ಬಸುರಿ: "ಆಪನ್ನಸತ್ತ್ವಾ, ಗುರ್ವಿಣೀ, ಅಂತರ್ವತ್ನೀ, ಗರ್ಭಿಣೀ – ಈ ೪ ಬಸಿಱಹೆಂಡಿತಿ" (ಹಲಾಯು. ೮೨–೩೪೪). [ಸಂ. ಆಪನ್ನಸತ್ತ್ವಾ (ಆಪನ್ನ + ಸತ್ತ್ವ + –)]

**ಆಪಮಿತ್ಯಕ** (ಗು). ವಿನಿಮಯದಿಂದ ಪಡೆದ; ಪರಸ್ಪರ ಬದಲಾಯಿಸಿ ತೆಗೆದುಕೊಂಡ. [ಸಂ.]

**ಆಪರಾಹ್ಣಿಕ** (ಗು). ಅಪರಾಹ್ಣದ; ಮಧ್ಯಾಹ್ನದ ಮೇಲಿನ. [ಸಂ.]

**ಆಪರಾಹ್ಣಿಕಕ್ರಿಯೆ** (ನಾ). ಅಪರಾಹ್ಣದಲ್ಲಿ ಮಾಡಬೇಕಾದ ಕೆಲಸ, —ಕರ್ಮ: ತತ್ಸಮಯದೊಳ್ ನಿರ್ವರ್ತಿತಾಪರಾಹ್ಣಿಕಕ್ರಿಯನಾಗಿ ಬಂದು (ಚಂದ್ರಪು. ೮–೨೪ ವ). [ಆಪರಾಹ್ಣಿಕ + ಕ್ರಿಯೆ]

**ಆಪಸಾತು**, ಆಪ್ಸಾತು (ನಾ). ೧. ಪರಸ್ಪರ. ೨. ಪರಸ್ಪರ ಮಾಡಿಕೊಳ್ಳುವ ರಾಜಿ: ಏನೊಂದೆರಡ ಕಿರಕೋಳ ಪಾಪಕೆಲಸಾ ಮಾಡಿದ್ದರೂ ದಯಮಾಡಿ ಆಪಸಾತಿನ್ಯಾಗ ಬಗಿಹರಿಸಿಗೊಂಡ ಬಿಡ್ರಿ (ನಡುಮ. ೧೪). **ಆಪ್ಸಾತು** : ೨. ಮುನಿಸಿಪಾಲಟಿಯೊಳಗ ರಿಜಿಸ್ಟ್ರೇಶನ್ ಇಲ್ಲದ ನಾಯೀ ಕಟ್ಟಲಿಕ್ಕೆ ಬರೋದಿಲ್ಲ. ಆಪ್ಸಾತಿನೊಳಗ ಬಗೀಹರಿಸಿಕೊಂಡು ಬಿಡ್ರಿ (ಪ್ರೇಮತ. ೨೭). [← ಮರಾ. ಆಪಸಾಂತ್]

**ಆಪಸ್ತ** (ನಾ). ಬಂಧು; ನೆಂಟ: ಆದರ ವಳಗೆ ಆಪಸ್ತ ಆದವರ ಕಡೆಯಿಂದಾ ಯೇನಾದರೂ ತಾಮಸ ವಿಘ್ನ ಬಂದರೆ (ರಾಜೇಂದ್ರ. ೧೧೩). [← ಹಿಂ. ಆಪಸ್]

**ಆಪಾಂಡು** (ಗು). ೧. ನಸುಬಿಳುಪಾದ: ವನಿತಾ ಮಧುರಾಧರದಿಂಪನೆಬಯಸಿ ಬೆಳರ್ತುದೆನಿಪ ಬೆಳ್ಳಿಲೆ ಬಿಡದೇಂ ನೆನೆಯಿಸಿದುದೊ ತರುಣೀಜನಘನವಿರಹಾಪಾಂಡುಗಂಡಮಂಡಳದಿರವಂ (ರಾಜಶೇ. ೨–೧೦೩). ೨. ತುಂಬ ಬಿಳುಪಾದ: ವರುಣಮಕರಹಸ್ತೋಚ್ಛೀಕರಾದ್ರ್ಯಂ ಪ್ರತೀಚೀಶರಧಿ ವಿಮಳಫೇನಾಪಾಂಡುವಸ್ತ್ರಾದ್ರಿ . . . ಶೀಡಿತ್ತಿರದೆ ಮುದಿತ ವಿಶ್ವಂ ನಾಭಸಂ ಮಾತರಿಶ್ವಂ (ಚಂದ್ರಪು. ೪–೩೦). [ಸಂ.]

**ಆಪಾಂಡುರ** (ನಾ). = ಆಪಾಂಡು. [ಸಂ.]

**ಆಪಾಟಿ** (ಗು). ೧. ಅಷ್ಟು. ೨. ಅಷ್ಟೊಂದು; ತುಂಬ: ಅವನಿಗೆ ಆಪಾಟಿ ದಿಗಿಲಿದೆಯಲ್ಲ (ಸಾಹೇಬ್. ೨೪೨). [(ಆ$_2$ (< ಅದು$_1$) + ಪಾಟ$_1$]

**ಆಪಾತ** (ನಾ). ೧. ನುಗ್ಗುವುದು; ಮೇಲೆ ಬೀಳುವುದು; ಮುತ್ತಿಗೆ. ೨. ಕೆಳಕ್ಕೆ ಬಿಸುಡುವುದು; ಇಳಿಸುವುದು. ೩. ಉಂಟಾಗುವುದು; ಸಂಭವ. ೪. ಮೇಲ್ನೋಟ; ಹೊರನೋಟ. [ಸಂ.]

**ಆಪಾತತಃ** (ಅ). ಮೇಲುನೋಟಕ್ಕೆ; ಹೊರನೋಟಕ್ಕೆ: ಇಲ್ಲಿ ವಕ್ರೋಕ್ತಿಯೆಂದರೆ ನಮಗೆ ಆಪಾತತಃ ತೋರುವಂತೆ ಕುಟಲೋಕ್ತಿಯಲ್ಲ (ಭಾರವಿಾ. ೬೬); ಆದರೆ ಆಪಾತತಃ ಆ ವನದ ಮಧ್ಯದಿಂದ ಹೊರಗೆ ಹೋಗುವುದು ಹೇಗೆ (ಕಪಾಕುಂ. ೧೬). [ಸಂ.]

**ಆಪಾತಮಧುರ** (ನಾ). ಮೇಲ್ನೋಟಕ್ಕೆ ಮಾತ್ರ ಮನೋಹರವಾದದ್ದು. [ಆಪಾತ + ಮಧುರ]

**ಆಪಾತರಮಣೀಯ** (ಗು). ಮೇಲುನೋಟಕ್ಕೆ ರಮ್ಯವಾಗಿರುವ; ವಿಚಾರಕ್ಕೆ ಮುಂಚೆ ಚೆನ್ನಾಗಿ ತೋರುವ; ಅವಿಚಾರಿತರಮಣೀಯ: ಲೋಕದಲ್ಲಿ ಆಪಾತರಮಣೀಯವಾದ ವಸ್ತುಗಳೂ ವಿಷಯಗಳೂ ಎಷ್ಟೋ ಇವೆ (ರೂಢಿ). [ಆಪಾತ + ರಮಣೀಯ]

**ಆಪಾತರೂಪ** (ನಾ). ಹೊರಗೆ ಕಾಣಿಸಿಕೊಳ್ಳುವ ಆಕಾರ; ಮೇಲುರೂಪ. [ಆಪಾತ + ರೂಪ]

**ಆಪಾದನೆ** (ನಾ). ೧. ತಪ್ಪುಹೊರಿಸುವುದು; ಆರೋಪಣೆ: ಈತನ ಮೇಲೆ ಕೋರ್ಟಿನಲ್ಲಿ ಎಂಟು ಆಪಾದನೆಗಳಿವೆ (ರೂಢಿ). ೨. (ಉಕ). ತಪ್ಪು; ಆರೋಪ. [ಸಂ. ಆಪಾದನ]

**ಆಪಾದಮಸ್ತಕ** (ಅ). ಕಾಲಿನಿಂದ ಹಿಡಿದು ತಲೆಯವರೆಗೆ; ಅಡಿಯಿಂದ ಮುಡಿಯವರೆಗೆ: ಆಪಾದಮಸ್ತಕಾಂತವಯವಂಗಳಿಗೆ ವಸುದೀಪಿತದ ಮಣಿಖಚಿತದಾಭರಣಮಳವಡಿಸಿ (ನವಮೋ. ೧೩-೪೬); ಸರ್ವಜ್ಞನು ಭೋಜಕುಮಾರನನ್ನು ಆಪಾದಮಸ್ತಕವೂ ನೋಡಿ (ಕಲಾಧ. ೬೬). [ಸಂ. ಆಪಾದಮಸ್ತಕಂ]

**ಆಪಾದಿತ** (ಗು). ೧. ಹೊಂದಿದ; ಪಡೆದ; ಸಂಪಾದಿಸಿದ: ಶ್ರೀಕಾಳಿದಾಸ[ದಣ್ಡಾ]ಧಿಪನಾಪಾದಿತ ವಿಶುದ್ಧಯಶನುತ್ಪಾದಿತ ಚಾ[ಳು]ಕ್ಯ ರಾಜರಾಜ್ಯಾಭ್ಯುದಯಂ (ಕಇಅ. ೩-೨-೬೪; 1058). ೨. ತಂದುಕೊಂಡ. ೩. ಸ್ಥಾಪಿಸಿದ. (ನಾ). ೪. ತಪ್ಪು ಆರೋಪಿಸಲ್ಪಟ್ಟವನು: ಅವನನ್ನು ಆಪಾದಿತನಂತೆ ನೋಡಿದಾಗ ಅವನಲ್ಲಿ ಕೆಡಕು ಭಾವನೆಗಳು ಉದ್ಭವಿಸುವುದು ಸ್ವಾಭಾವಿಕ (ರಂಗರೋ. ೧೨೬). [ಸಂ.]

**ಆಪಾದಿಸು** (ಕ್ರಿ). ತಪ್ಪನ್ನು ಹೊರಿಸು; ಆರೋಪಮಾಡು: ಇದನ್ನೆಲ್ಲ ಕಷ್ಟಕ್ಕೆ ತಂದವಳು ನೀನೆ ಎಂದು ಮಗಳನ್ನು ಮುದುಕ ಆಪಾದಿಸುತ್ತಿದ್ದ (ಕಮನೆ. ೧೦೦). [ಆಪಾದನ$_0$ + -ಇಸು$_3$]

**ಆಪಾನ** (ನಾ). ೧. ಹೆಂಡ ಕುಡಿಯುವುದು; ಪಾನಗೋಷ್ಠಿ: "ಆಪಾನಂ, ಪಾನಗೋಷ್ಠೀ - ಈ ೨ ಕಳ್ಗುಡಿವುದು" (ಹಲಾಯು. ೫೪-೧೭೩). ೨. ಮಿಾರಿ ಕುಡಿಯುವುದು: "ಮಿಾಱಿಕುಡಿವುದಾಪಾನಂ ಪಾನಗೋಷ್ಠಿಯದು" (ಮಂಗರಾ. ೬೬-೮). ೩. ಮದ್ಯವನ್ನು ಮಾರುವ ಅಂಗಡಿ. [ಸಂ.]

**ಆಪಾಲಿ** (ನಾ). ಹೇನು. [ಸಂ.]

**ಆಪಾಳಿತ** (ಗು). ವ್ಯಾಪ್ತವಾದ: ಅಖಿಳಕ್ಷ್ಮಾಪಾಲ ಮೌಳಿಮಣಿ ಕಿರಣಾಪಾಳಿತ [ಪಾಠಾಂ. ಪಾಟಲ] ನಖಮಯೂಖ ರಂಜಿತಚರಣಂ (ಪಂಪಭಾ. ೧-೧೮). [ಸಂ. ಆಪಾಲಿತ]

**ಆಪಿಡು** (ಕ್ರಿ). ಬೆಣೆಹಾಕು; ಸಂದುಮುಚ್ಚು (ಸ್ಯಾಂಡರ್). [ಆಪು$_2$ + ಇಡು$_1$]

**ಆಪೀಡ** (ನಾ). ೧. ಒತ್ತುವುದು. ೨. ತಲೆಯ ಮೇಲೆ ಧರಿಸುವ ಆಭರಣ; ಶಿರೋಭೂಷಣ: "ಆಪೀಡಃ, ಶೇಖರಃ-ಈ ೨ ಬಾಸಿಗಂ" (ಹಲಾಯು. ೯೧-೪೦೦); ಜನನಿಯ ವಕ್ತ್ರಾಬ್ಜದೊಳ್ ಚಂದ್ರಮಂ ಪೊಕ್ಕುದನಲ್ತೇ ಕಂಡೆ ನಾಂ ಸ್ವಪ್ನದೊಳೆನುತೆ ಮನಂಗೊಂಡು ತತ್ಸ್ವಪ್ನಸಾದೃಶ್ಯದೆ ಚಂದ್ರಾಪೀಡನೆಂಬೀ ಮೊದಲ ಪೆಸರನಿಟ್ಟಂ ತನೂಜಂಗೆ (ಕಾದಂಪೂ. ೪೩೧). [ಸಂ.]

**ಆಪೀನ** (ಗು). ೧. ದೊಡ್ಡದಾದ; ದಪ್ಪನಾದ. (ನಾ). ೨. ಕೆಚ್ಚಲು: "ಊಧಸ್, ಆಪೀನಂ - ಈ ೨ ಕೆಚ್ಚಲ್" (ಹಲಾಯು. ೪೫-೧೧೬). [ಸಂ.]

**ಆಪು$_1$** (ನಾ). ೧. ಒಂದು ಜಾತಿಯ ಜೊಂಡುಹುಲ್ಲು: ಜಲನಿಧಿಯ ತದ್ವಾರಿಶೀಕರಗಳು ಕವಿದವಿವರಳಿವಿಂಗವು ಮಿಗೆ ಬೆಳೆಯಿತಾಪುಗಳಾಗಿ ಮುಸಲಗಳಂತೆ ಮೊನೆಯಾಗಿ (ತಿಮ್ಮಮಾ. ೧-೫೯); ಈ ಜಲ್ಲಿಯಂತಹ ವಸ್ತುಗಳನಂತರ ಸಮುದ್ರದ ಆಪು (Sea-weeds), ಶಂಖದಮಿಾನು, ಏಡಿ ಮತ್ತು ಹುಳುಹುಪ್ಪಡಿಗಳು ತಲೆದೋರಿದುವು (ಮತಂಜ. ೧೮); ಸಮುದ್ರದಲ್ಲಿ ಬೆಳೆದ ಆಪಿನಿಂದ ಹೊಡೆದಾಡಿ ಅವರು ಮಡಿಯಹತ್ತಿದರು (ಭಾಮೃತ. ೪೯೫). ೨. ರಾಗಿಯ ತೆನೆಯ ಒಂದು ಎಸಳು (ದಕ. ೬). [?]

**ಆಪು$_2$** (ನಾ). ಬೆಣೆ. 'ಆಪಿಡು' ಪರಾ. [ದೇ. ‖ ತಮಿ. ಆಯ್ಪು; ಮಲ. ಆಪ್ಪು; ತೆಲು. ಆಯ್ಪು]

**ಆಪು$_3$** 'ಆರ್ಪು$_1$' ನೋ.

**ಆಪೂಪಿಕ** (ನಾ). ೧. ಕಜ್ಜಾಯ, ದೋಸೆ ಮುಂತಾದ ತಿಂಡಿಗಳನ್ನು ಮಾಡುವವನು. ೨. ಕಜ್ಜಾಯ, ದೋಸೆ ಮೊದಲಾದ ತಿಂಡಿಗಳ ರಾಶಿ. [ಸಂ.]

**ಆಪೂರ** (ಗು). ೧. ಚೆನ್ನಾಗಿ ತುಂಬಿದ: ವೀರಶೈವಾಚಾರಧರ್ಮಾಪೂರ ಸಂಗತಸಾರ ಭಕ್ತಿವಿಚಾರಭಾವನೆ ನಿನಗೆ ತಾನವಿಚಾರಿಗೇಕಹುದು (ಬಸವು. ೬೦-೬). (ನಾ). ೨. ಪ್ರವಾಹ: ಉರ್ವೀಚಕ್ರಮೆಲ್ಲಂ ಪ್ರಸರಾಪೂರದೆ ತೇಂಕಿದತ್ತು (ಕಾದಂಉ. ೧೦೩). [ಸಂ.]

**ಆಪೂರಿತ** (ಗು). = ಆಪೂರ೧: ಚಾರುಗೌರವ ಲೈಂಗ್ಯಭಕ್ತ್ಯಾಪೂರಿತತ್ರಿವಿಧ ಪ್ರಸಾದಾಹಾರ ಸಂತುಷ್ಟಾಂಗ ಬಸವನಂ (ಬಸವು. ೩೭-೩೬). [ಸಂ.]

**ಆಪೂರ್ಣತೆ** (ನಾ). ತುಂಬಿರುವುದು; ಭರ್ತಿಯಾಗಿರುವುದು. [ಸಂ.]

**ಆಪೃಚ್ಛನ** (ನಾ). ಇಷ್ಟಮಿತ್ರಾದಿಗಳನ್ನು ಉಪಚರಿಸುವಿಕೆ: "ಆಪೃಚ್ಛನಂ. . .ಯೋಗಕ್ಷೇಮಂಗಳಂ ಕೇಳಿ ಉಪಚಾರಗಳಿಂದ ಸನ್ಮಾನಗೊಳಿಸಿ ಸುಖಪಡಿಸುವಿಕೆ" (ಸಿದ್ಧಾಂತಿ. ೩೦೭). [ಸಂ.]

**ಆಪೆ** (ನಾ). ಚಿಪ್ಪಿನ ಸೌಟು; ಸಟ್ಟುಗ. [ದೇ. ‖ ತಮಿ. ಆಪ್ಪೈ; ಮಲ. ಆಪ್ಪ]

**ಆಪೆಯಸೊಪ್ಪು** (ನಾ). ಒಂದು ಬಗೆಯ ಸೊಪ್ಪು: "ಅಭಿಕಾ- ಆಪೆಯಸೊಪ್ಪು" (ಒಷಧಿ. ೪). [ಆಪೆ ? + ಸೊಪ್ಪು]

**ಆಪೇಕ್ಷಿಕ** (ಗು). ೧. ಅಪೇಕ್ಷೆಯನ್ನು ಹೊಂದಿದ; ಬಯಸಿದ. ೨. ನಿರೀಕ್ಷಿಸಿದ; ಇದಿರುನೋಡಿದ. [ಸಂ.]

**ಆಪೇಕ್ಷಿತ** (ಗು). = ಆಪೇಕ್ಷಿಕ. [ಸಂ.]

**ಆಪೇಕ್ಷೆ** (ನಾ). ಅಪೇಕ್ಷೆ: "ಡಾವುರಮೆನಲಾಪೇಕ್ಷೆಯು" (ಭಾರನಿ. ೩೨); ಕ್ರಿಯಾಪದಂ ಕರ್ತೃಪದದೊಡನೆ ಕೂಡಿದುದಾಗಿ ಎಲ್ಲಿ ಏನೆಂಬಾಪೇಕ್ಷೆಯ ಬಯಸುವುದು ಅದು ಸಕರ್ಮಕಮಕ್ಕುಂ (ಶಮದ. ಸ. ೨೬೩ ವೃತ್ತಿ). [ಸಂ. ಆಪೇಕ್ಷಾ]

**ಆಪೇಯ** (ಗು). ಕುಡಿಯತಕ್ಕ; ಕುಡಿಯಲು ಯೋಗ್ಯವಾದ. [ಸಂ.]

**ಆಪೊತ್ತು** 'ಆಪೊಟ್ತು' ನೋ.

**ಆಪೊತ್ತುಂ** 'ಆಪೊಟ್ತುಂ' ನೋ.

**ಆಪೊಟ್ತು**, ಆಪೊತ್ತು, ಆವತ್ತು, ಆವೊತ್ತು (ನಾ). ಆ ಸಮಯ; ಆ ಕಾಲ; ಆ ದಿನ: 'ಆಪೊಟ್ತುಂ' ಪರಾ. **ಆಪೊತ್ತು**: 'ಆಪೊತ್ತುಂ' ಪರಾ. **ಆವತ್ತು**: ಆವತ್ತು ನನಗೆ ತುಂಬಾ ಕೋಪ ಬಂದಿತ್ತು (ರೂಢಿ). **ಆವೊತ್ತು**: ಆವೊತ್ತು ಇನ್ನೂ ಬಹಳ ಸಿಟ್ಟುಬಂದಿತ್ತು (ಸುವಸಂ. ೨೧). [ಆ$_2$ (< ಅದು$_1$) + ಪೊಟ್ತು]

**ಆಪೊಟ್ಟುಂ**, ಆಪೊತ್ತುಂ (ಅ). ಯಾವಾಗಲೂ; ಎಲ್ಲಾ ಕಾಲದಲ್ಲಿಯೂ; ಸದಾ: ತನ್ನ ಪೊಟಿಲ ಗೋಪುರದ್ವಾರದೊಳ್ ಚತುರ್ವಿಂಶತಿ ತೀರ್ಥಂಕರರನಾಪೊಟ್ಟುಂ ಸ್ಮರಿಸಲೆಂದು (ಚಾವುಂಪು. ೭೬–೧೯); ಆಪೊಟ್ಟುಂ ಕೋಕಿಲಂಗಳುಲಿಗುಂ ಬನದೊಳ್ (ಕ ವಿ ಚ. I, ೫೧); **ಆಪೊತ್ತುಂ**: ಆಪೊತ್ತುಂ ಮಣಿದೀಪಕಳಾಪೋದ್ಯಜ್ಯೋತಿಗಳ್ ದಿಶಾಮಂಡಲಮಂ ವ್ಯಾಪಿಸುತಿರೆ (ಆದಿಪು. ೫–೪೦); ಕಿವಿ ಮೂಗನರಿದು ಬಡಿದುಂ ಬಿಡದಾಪೊತ್ತುಂ ಚಿತ್ತಕ್ಲೇಶಂಗೊಳ್ವ (ಸಸುಪ. ೫–೧೧); ಸಂವೃದ್ಧಿಯನೊಲ್ದಾಪೊತ್ತುಂ ಮಾಡುವ (ಕೊಲ್ಹಾ. ಶಾ. ೯–೧೮; 1147). [ಆಪೊಟ್ಟು + –ಉಂ₃]

**ಆಪೋಕ್ಲೀಬ** (ನಾ). [ಜ್ಯೋತಿಷ] ಲಗ್ನದಿಂದ ಮೂರು, ಆರು, ಒಂಬತ್ತು ಮತ್ತು ಹನ್ನೆರಡನೆಯ ಸ್ಥಾನಗಳು: ಫಣ ಪರಮದಜಿ ಪರಮದಾಪೋಕ್ಲೀಬಂ (ಜಾ ತ ತಿ. ೧–೩೬); ಸೌಮ್ಯೇತರರಾಪೋಕ್ಲೀಬದೊಳಿರೆ ಧರಣೀಶ್ವರನಕ್ಕುಮಾ ವಿಲಗ್ನಪ್ರಭವಂ (ಜಾ ತ ತಿ. ೧೨–೧೦); (೩, ೧೨, ೯, ೬) ಈ ನಾಲ್ಕು ಸ್ಥಾನಗಳಿಗೆ ಆಪೋಕ್ಲೀಬವೆಂದು ಸಂಜ್ಞೆ (ಜಾತತಿ. ೧–೩೬ ಟೀಕೆ). [← ಗ್ರೀಕ್. ಅಪೊಕ್ಲಿಮ]

**ಆಪೋಶನ** (ನಾ). ಊಟಕ್ಕೆ ಮೊದಲೂ ಊಟದ ನಂತರವೂ ಮಂತ್ರಪೂರ್ವಕವಾಗಿ ಅಂಗೈಯ ನೀರನ್ನು ಹೀರುವುದು; ಹಾಗೆ ಹೀರುವ ನೀರು: ಕಡಲಾಪೋಶನಮಾದುದಾ ಮುನಿಗೆನಲ್ಕೇನೆಂಬೆನಾಶ್ಚರ್ಯಮಂ (ಕಾದಂಪೂ. ೧೦೩); ಅಗಸ್ತ್ಯಂ ತನುಮುನಿ ಮುನಿದಾಪೋಶನಂಗೊಂಡೊಡೆತ್ತಂ ಪುಡಿವಿಟ್ಟತ್ತು. . . ಎಂದಗಟಿ್ ವಾರ್ಧಿಯಂ ಕೀಟ್ಪಿಡಿಕುಂ (ಜಗವಿ. ೨–೧೮).

**ಆಪೋಶನ ಹಾಕು** = **೧.** ಆಪೋಶನಕ್ಕೆ ಅವಶ್ಯವಾದ ನೀರನ್ನು ಅಂಗೈಗೆ ಉದ್ಧರಣೆಯಿಂದ ಹಾಕು: ಯಜಮಾನನು ಆಪೋಶನ ಹಾಕಿ ಕೃಷ್ಣಾರ್ಪಣವೆಂದನು (ಕ ಭ ವಿ. ೧೮೫). **೨.** ಭೋಜನಕ್ಕೆ ಹಾಕು: ನಾಲ್ಕು ಜನಕ್ಕೆ ಆಪೋಶನ ಹಾಕು (ರೂಢಿ). [ಸಂ.]

**ಆಪೋಶಿಸು** (ಕ್ರಿ). ಆಪೋಶನಮಾಡು, —ತೆಗೆದುಕೊ: ಜೀವಮೇಜುತ್ತಿಟಿಯುತ್ತಿರೆ ನೀರೊಳಿರಿಸಿ ಜೀವಶ್ರಾದ್ಧಕ್ಕುಟಿದಿರ್ದ ಮಾಜನಂಗಳ್ ಕಟಿಯುಂಡಾಪೋಶಿಪಲ್ಲಿ ನೆನೆದುದು ತನ್ನಂ (ಯಶೋಚ. ೩–೪೯). [ಆಪೋಶನ + –ಇಸು₃]

**ಆಪೋಷಣ** (ನಾ). = ಆಪೋಶನ: ಅನ್ನ ಉಂಡಾಯಿತೋ ಇಲ್ಲವೋ ಅವರೆಲ್ಲ ಆಪೋಷಣ ತಕ್ಕೊಂಡು ಎದ್ದರು (ಸ್ಮೃತಿಚಿ. ೨೨೮). [ಸಂ. ಆಪೋಶನ]

**ಆಪೋಸ** (ನಾ). (ಗೋವಾದೇಶದ) ಮಾವಿನಲ್ಲಿ ಒಂದು ಜಾತಿ: ಅವುಗಳಲ್ಲಿ. . . ಆಪೋಸ, ಮಾಲದೇಸ, ಫರ್ನಾದಿ ಎಂಬ ತರಗಳುಂಟು (ಮುಂಬಯಿ. ೨–೬೨). [← ಮರಾ. ಅಪೂಸ್, ಅಪೋಸ್]

**ಆಪ್ತ** (ಗು). ೧. ಹೊಂದಿದ; ಪಡೆದ. ೨. ಸರಿಯಾದ; ಯೋಗ್ಯವಾದ. **೩.** ನಂಬಿದ; ನಂಬಿಕೆಗೆ ಯೋಗ್ಯವಾದ. **೪.** ಸಂಬಂಧಿಸಿದ. (ನಾ). **೫.** ನಂಬಿಕೆಗೆ ಅರ್ಹನಾದವನು: ಹಲಗೆಕಾಜರನಾಪ್ತರಂ ದೇವಲಕರಂ ಪೂವಡಿಗರಂ ಬಾಗಿಲವರಂ (ಬಸವು. ೧೬–೧೩). **೬.** ಆತ್ಮೀಯ; ನಿಕಟವರ್ತಿ: ಸಾಮಾನ್ಯ ಪರಿಸ್ಥಿತಿಯಲ್ಲಿ ನೀನು ಮಲಗುತ್ತಲೇ ನಿದ್ದೆಮಾಡಿಬಿಡುತ್ತಿ. ಆಗ ನಿನಗೊಂದು ದುರ್ಘಟನೆ ಅಥವಾ ಆಪ್ತರ ಮರಣ ಇತ್ಯಾದಿಗಳೇನಾದರೂ ಕೇಳಿಬಂದರೆ ಆಗ ನಿನ್ನ ಅವಸ್ಥೆಯೇನು (ಜೀವಾತ್ಮ. ೧೭೮). **೭.** [ಜೈನ] ಅಷ್ಟಾದಶ ದೋಷರಹಿತನಾದವನು: ದೋಷವಿರಹಿತನಾಪ್ತಂ. . . ಕ್ರಮದಾಪ್ತನೆ ಪೇಟ್ದುದಾಗಮಂ (ಆದಿಪು. ೫–೪೫); ದೋಷೇತರನಾಪ್ತಂ (ಶಾಂತಿಪು. ೭–೪); ಉದ್ಧಾತದೋಷಪ್ರಕರರಹಿತನೆನಿಪನಾಪ್ತಂ (ಸುಕುಮಾ. ೫–೩೯). **೮.** [ವೀರಶೈ] ಗುರುಸೇವೆಯ ಲಕ್ಷಣಗಳಲ್ಲಿ ಒಂದು; ಗುರುವಿಗೆ ಅನುಕೂಲವಾಗಿರುವ ವೃತ್ತಿ: ಸಾಧನಸಂಪನ್ನನಾದಧಿಕಾರಿಯುಮಾಳ್ಪ ಸದ್ಗುರುಸೇವೆಯಾದೊಡೆ ಆಪ್ತ ಅಂಗ ಸ್ಥಾನ ಸದ್ಭಾವವೆಂದು ನಾಲ್ಕು ತೆಜನಾಗಿಹುದು ಗುರುವಿಗೆ ಅನುಕೂಲವೃತ್ತಿಯೇ ಆಪ್ತವೆನಿಸುವುದು (ವಿವೇಕ. ೧೬). [ಸಂ.]

**ಆಪ್ತಚರ** (ನಾ). ನಂಬಿಕೆಗೆ ಯೋಗ್ಯನಾದ ಸೇವಕ: ಉಭಯಬಲಂಗಳು ಮಲ್ಲಾಮಲ್ಲಿಯಾಗಿ ಕಾದುವಾಗಳ್ ತಕ್ಷಕನೆಂಬಾಪ್ತಚರನಲ್ಲಿ ತಲ್ಲಣಿಸಿ (ಸುಕುಮಾ. ೭–೩ ವ). [ಆಪ್ತ + ಚರ]

**ಆಪ್ತತ್ವ** (ನಾ). ಸ್ನೇಹ; ಬಂಧುತ್ವ: ಒಳಗಿನ ಆಪ್ತತ್ವ —ಹಿರಿಯರ ಉತ್ಪನ್ನಗಳ ಸಲುವಾಗಿ ಮಗಳಿಗೆ ಸರಿಯೆನಿಸದ ವರನೆಂಬುದು ಹಿರಿಯರ ಲಕ್ಷ್ಯಕ್ಕೆ ಕೂಡ ಬರಲಿಲ್ಲ (ಪ್ರಣಸ. ೩). [ಸಂ.]

**ಆಪ್ತದವಾಕ್ಕಿಲ್** (ನಾ). ಒಂದು ಊರಿನ ಹೆಸರು (?): ಏಟಾನವರ್ಷದುಳ್ ಪುಲಿ ಕಲ್ಲಡಿ ಆಪ್ತದವಾಕ್ಕಿಲುಳ್ ಸೆಗುಣ್ಣನೊಳ್ ಎಱಿದು (ಮೈಆರಿ. ೧೯೧೮, ೧೧–೨; 8ನೆಯ ಶತ). [?]

**ಆಪ್ತಬಂಧು** (ನಾ). ಹತ್ತಿರದ ಸಂಬಂಧಿ: ಆಪ್ತಬಂಧುಗಳಿಲ್ಲವೆಂದೊಡೆ ಸಕಲ ಮಾಹೇಶ್ವರರುಯೆನಗುಂಟು (ಬಸವು. ೪೦–೧೮); ಮತ್ತಿಬ್ಬರೀವೇಳೆಗೆ ಎನಗಿಲ್ಲವಾದರು ಪರಮಾಪ್ತಬಂಧುವಾದವರು (ಇಂಚಾಪ. ೪೧–೯೨). [ಆಪ್ತ + ಬಂಧು]

**ಆಪ್ತವರ್ತಿ** (ನಾ). ಹಿತಚಿಂತಕನಾಗಿ ನಡೆದುಕೊಳ್ಳುವವನು; ಆತ್ಮೀಯನಾದವನು: ರಾಜರೊಳಂ. . . ಕ[illegible]ರ್ತವ್ಯದಿಂ ನಯಮುಮನಾಪ್ತವರ್ತಿಯುಮನಾಸೆವಡುವರಲ್ಲರ್ (ಶಾಂತಿಪು. ೨–೩೫ ವ). [ಸಂ. ಆಪ್ತವರ್ತಿನ್]

**ಆಪ್ತವಾಕ್ಯ** (ನಾ). ಆಪ್ತರು ಹೇಳಿದ ಮಾತು; ಗುರುವಚನ; ವೇದ, ಶಾಸ್ತ್ರ ಮೊದಲಾದವು: ಇದನ್ನು ನಿರ್ಣಯಮಾಡಬೇಕಾದರೆ ಆಪ್ತರ ವಾಕ್ಯ ಬೇಕು. ಇದಕ್ಕೆ ಶ್ರುತಿ, ಸ್ಮೃತಿ ಮೊದಲಾದ ಪ್ರಮಾಣಗಳೇ ಆಪ್ತವಾಕ್ಯಗಳು (ಹಸಾರ. ೧–೧ ಟೀಕು); ಆಪ್ತವಾಕ್ಯಂಗೇಳ್ದು ಸಂತೃಪ್ತನಾಗಿ (ಶ್ರೀರಾಮಾ. ೩೧–೪೦). [ಆಪ್ತ + ವಾಕ್ಯ]

**ಆಪ್ತಿಕೆ** (ನಾ). = ಆಪ್ತತ್ವ: ಅಸಹಾಯನೀನೆರವಿರಿಸದಿವನಾಪ್ತಿಕೆ ಬಯಸುವುದೆಂದ ಗಾಂಡೀವೀ (ಜಿನಭಾ. ೪೩–೧೦). [ಆಪ್ತ + –ಇಕೆ]

**ಆಪ್ತಾಗಮ** (ನಾ). ವೇದ; ಶಾಸ್ತ್ರ: ಮೊದಲಿಂ ತುದಿವರಮುಚಿತಾಪ್ತಾಗಮ ಪದಾರ್ಥ ಸೂತ್ರ ಪ್ರಪಂಚಮಂ ಮುನಿ ನುಡಿದಂ (ಶಾಂತಿಪು. ೭–೩). [ಆಪ್ತ + ಆಗಮ]

**ಆಪ್ತಾಗಿರಿ**, ಆಪ್ತಾಬಗಿರಿ (ನಾ). ಉತ್ಸವಗಳಲ್ಲಿ ರಾಜರಿಗೆ ಹಿಡಿಯುವ ಅಲಂಕಾರದಿಂದ ಕೂಡಿದ ಕೊಡೆ, —ಛತ್ರಿ: ಪಲ್ಲಕ್ಕಿಯ ಹಿಂದೆ ಆಪ್ತಾಗಿರಿ ಎತ್ತಿದವರೂ ಸಾಗುವರು (ಕಪಪು. ೬–೧೭). **ಆಪ್ತಾಬಗಿರಿ** (ಸ್ಯಾಂಡರ್). [← ಮರಾ. ಅಫತಾಬಗೀರ್, ಅಬದಾಗಿರ್, ಅಬದಾಗೀರ್; ಹಿಂ. ಆಫ್ತಾಬ್‌ಗಿರೀ]

**ಆಪ್ತಾಬಗಿರಿ** 'ಆಪ್ತಾಗಿರಿ' ನೋ.

**ಆಪ್ತಾಲೋಚನೆ**, ಆಪ್ತಾಳೋಚನೆ (ನಾ). ಆಪ್ತರೊಂದಿಗೆ ಮಾಡುವ ಆಲೋಚನೆ: ಯಾರಾದರೂ ಆಪ್ತಾಲೋಚನೆಯನ್ನು ಕೇಳಬಂದರೆ. . . ಯೋಗ್ಯವಾಗಿ ಕಂಡುಬಂದುದನ್ನು ಹೇಳಬೇಕು (ಮುಂಬಯಿ. ೪–೩೪). **ಆಪ್ತಾಳೋಚನೆ**: ಮಹಾಪ್ರಧಾನಾವಳಿಯನಾಪ್ತಾಳೋಚನೆಯುಲಾ ಮಂತ್ರಿಗಿಂತೆಂದ (ತೊರರಾ. ೧–೫–೪). [ಆಪ್ತ + ಆಲೋಚನೆ]

**ಆಪ್ತಾಳೋಚನೆ** 'ಆಪ್ತಾಲೋಚನೆ' ನೋ.

**ಆಪ್ತಿ** (ನಾ). ಪ್ರಾಪ್ತಿ ; ಪಡೆಯುವುದು: ಆಪ್ತನೆಂದರೆ ಆಪ್ತಿಯುಳ್ಳವನು. ವಾಕ್ಯಾರ್ಥ ಸಾಕ್ಷಾತ್ಕಾರವೇ. ಆಪ್ತಿ ವಾಕ್ಯಾರ್ಥವನ್ನು ನೋಡದೇ ಇರುವವನು ಆಪ್ತನಲ್ಲ (ಹಿಂದಸಾ. ೧೪೪). [ಸಂ.]

**ಆಪ್ತಿಗ** (ನಾ). ಆಪ್ತ ; ಹಿತೈಷಿ : ನೆಲದೊಡೆಯನಾಪ್ತಿ [ಪಾಠಾಂ. ನಾಪತ್ತಿ] ಗರು ಬಗೆದರು ಸ್ವಾಮಿದ್ರೋಹಿಕೆಯ (ಕುವ್ಯಾದ್ರೋ. ೧೦–೭); ಆಚಾರ್ಯ ನಳಿದನದಾರು ನಮಗಾಪ್ತಿಗರು [ಪಾಠಾಂ. ನಿನಗಾಪತ್ತಿ] ದೊರೆಯಿನ್ನಾರು ಸಂಗರಕೆ (ಕುವ್ಯಾದ್ರೋ. ೧೮–೭೨) ; ಅವನ ಸೀಮೆಯೊಳು ನಾವಿದ್ದಿಂತು ನುಡಿವುದು ವಿವರವೆಯೆಂದರಾಪ್ತಿಗರು (ಭರಚ. ೩೭–೩೬).
[ಆಪ್ತ + -ಇಗ]

**ಆಪ್ಪರಸ** (ನಾ). ಒಬ್ಬಾತನ ಹೆಸರು: ಶ್ರೀ ಆಪ್ಪರಸನ್ ಅಜನ್ನಾ (ಕಇಅ. ೭೧–೪–೧ ; ಸು. 6ನೆಯ ಶತ). [?]

**ಆಪ್ಪಾರಯ್ಯ** (ನಾ). ಒಬ್ಬಾತನ ಹೆಸರು: ಯಜುಶಾಖೆ ಭಾರದ್ವಾಜ ಗೋತ್ರ ಆಪ್ಪಾರಯ್ಯ ಅಪ್ಪೊಯಗಳಿಗೆ ವೃತ್ತಿ (ಎಕ. III, ಶ್ರೀರಂಗ. ೧೩೯–೪೬ ; 1468). [?]

**ಆಪ್ಯ$_1$** (ಗು). ಪಡೆಯಬೇಕಾದ; ಹೊಂದಬಹುದಾದ: ಮುಕ್ತಿಯು ಕರ್ಮದ ಫಲದಂತೆ ಉತ್ಪಾದ್ಯಾದಿರೂಪವೆಂದು ಹೇಳುವ ವಾದಿಗಳೂ ಇದ್ದಾರೆ. ಆಪ್ಯವೆಂದು ಹೇಳುವವರು ಈಗಲೂ ಇದ್ದಾರೆ (ಬ್ರಹ್ಮಭಾ. ೫೨ ಅಡಟ). [ಸಂ.]

**ಆಪ್ಯ$_2$** (ಗು). ೧. ನೀರಿನ ; ನೀರಿನಿಂದ ಕೂಡಿದ. (ನಾ). ೨. ಒಂದು ಜಾತಿಯ ಗಿಡ ; "ಕೊಳಂಜನ" (ಗಂಗಾಮ. ೨೫). [ಸಂ.]

**ಆಪ್ಯಯ** (ನಾ). ಜೀರ್ಣ; ಲಯ: ಉಂಡುದೇನಾಯಿತ್ತೆಂಬುದು ನಿನ್ನನೀ ತಿಳಿದುನೋಡಾ ಉಂಡುದು ಆಗಳೆ ಆಪ್ಯಯವಾಗಿತ್ತು (ಬಸಪ. ೨೦೦).
[< ಸಂ. ಆಪ್ಯಾಯನ]

**ಆಪ್ಯಾನ** (ನಾ). ೧. ಸುಖ ; ತೃಪ್ತಿ ; ಹಿತ. ೨. ಹಸಿವು (?) : ಅಮೃತ ಸೇವನೆಯ ಮಾಡಿ ಆಪ್ಯಾನ [ಪಾಠಾಂ. ಆಪ್ಯಾಯನ] ಘನವಾಯಿತ್ತು ಪರುಷವೇದಿಯ ಸಾಧಿಸ ಹೋದರೆ ದಾರಿದ್ರ್ಯ ಘನವಾಯಿತ್ತು (ಅವಚಂ. ೧೦೧–೪೫೬). [< ಸಂ. ಆಪ್ಯಾಯನ]

**ಆಪ್ಯಾಯ** (ನಾ). ಸುಖ ; ಸಂತೋಷ (?) : ಕಾಣದ ದುಃಖವ ಕಾಣಿಸಿ ಉಣ್ಣದ ಆಪ್ಯಾಯವನುಣಿಸಿ ಮಾರಾರಿ ವಿನೋದಿಸೆ (ಲಿಂಗಲೀ. ೫೮–೪).
[ಸಂ.]

**ಆಪ್ಯಾಯನ** (ಗು). ೧. ಸೌಖ್ಯವನ್ನು ಹೆಚ್ಚಿಸುವ; ಸುಖಕರವಾದ; ಹಿತವಾದ; ಪ್ರೀತಿಯುಂಟುಮಾಡುವ ; ತೃಪ್ತಿಪಡಿಸುವ. (ನಾ). ೨. ಸುಖ ; ತೃಪ್ತಿ ; ಹಿತ : ಅಮೃತವರ್ಷಿ ಕರಪರಿಷೇಕದಿಂದೆ ಪುತ್ರ ಸ್ಪರ್ಶನಮಾಪ್ಯಾಯನ ಕೋಟಿಯಾಗೆ ಪುಳಕಿತಗಾತ್ರರುಮಾನಂದ ಬಾಷ್ಪವಾರಿ ಧಾರಾಪರಿಕಲಿತ ನೇತ್ರರುಮಾಗಿ (ಪಂಪಭಾ. ೧೩–೮ ವ) ; ಜಂಗಮವಾಪ್ಯಾಯನವಾದರೆ ಲಿಂಗಸಂತುಷ್ಟಿಯಹುದಯ್ಯಾ (ಬಸವ. ೧೯೭); ಭಕ್ತಿವೈರಾಗ್ಯಗಳು ತುಂಬಿ ಹರಿಯುತ್ತಿದ್ದ ಆಕೃತಿಗಳಿಂದ ಅವರ ಮನಸ್ಸಿಗೆ ಆಪ್ಯಾಯನವಾಗುತ್ತಿತ್ತು (ರಾಗಿಣಿ. ೧೬೬). [ಸಂ.]

**ಆಪ್ಯಾಯನಂಬಡೆ** (ಕ್ರಿ). ಆಪ್ಯಾಯನವನ್ನು ಹೊಂದು ; ತೃಪ್ತಿಪಡು : ಶರಹತಿಯಲುಜಿ ನೊಂದು ಧೂಪಿಸಿ ತರಹರಿಸುವಶ್ವಾಳಿ ಕೃಷ್ಣನ ವಚನಾಮೃತರಸದಿನಾಪ್ಯಾಯನಂಬಡೆದು (ಕುವ್ಯಾಕ. ೨೩–೨೯).
[ಆಪ್ಯಾಯನ + ಪಡೆ$_1$]

**ಆಪ್ಯಾಯನಕಾರಿ** (ನಾ). ತೃಪ್ತಿಪಡುವಂಥದು ; ಹಿತಕರವಾದುದು : ಸಕಲಜಗತ್ಪಾವನಾಪ್ಯಾಯನಕಾರಿಯಪ್ಪ ವೈಶಂಪಾಯನ ಸರೋವರಕ್ಕೆ ನೀರ್ಗುಡಿಯೆ ಪೋಗಿ (ಗದಾಯು. ೬–೩೭ ವ).
[ಸಂ. ಆಪ್ಯಾಯನಕಾರಿನ್]

**ಆಪ್ಯಾಯಮಾನ** (ಗು). ತೃಪ್ತಿಕರವಾದ ; ಹಿತಕರವಾದ; ಸುಖಕರವಾದ: ಪುಂಡರೀಕನ ಶರೀರಮಂ ಕಿಡದಂತು ತಂದು ಮತ್ತೀಜದಿಂ [ದಾಪ್ಯಾಯಮಾನಮಾಗೆ] . . . ಇರಿಸಿ (ಕಾದಂಉ. ೬೧೪); ಅವಳ ಹೊಟ್ಟೆ ಚುರುಕ್ ಅನ್ನಿಸಿದರೆ ನನಗೆ ಅದೇನೋ ಆಪ್ಯಾಯಮಾನ (ವೈದ್ಯವಿ. ೯೦). [ಸಂ.]

**ಆಪ್ಯಾಯಿತ** (ಗು). ಸುಖಗೊಂಡ ; ಸಂತೋಷಗೊಂಡ; ತೃಪ್ತಿ ಹೊಂದಿದ: ಹರಿಕರಾಬ್ಜಸ್ಪರ್ಶಮಾತ್ರ ಸ್ಫುರಣದಿಂದಾಪ್ಯಾಯಿತಾಂತಃಕರಣನಾದನು ನೆನದನುದ್ಗತ ಬಾಷ್ಪವಾರಿಯಲಿ (ಕುವ್ಯಾಕ. ೧೬–೧೦) ; ನಿನ್ನ ಮಾತನ್ನು ಕೇಳುತ್ತಲೆ ಶರೀರವು ಆಪ್ಯಾಯಿತವಾಗುವುದು (ಭೀಷ್ಮಚ. ೩೭). [ಸಂ.]

**ಆಪ್ಯಾಯಿನಿ** (ನಾ). ತೃಪ್ತಳು ; ಸುಖಪಡುವವಳು : ಅಂಗಸಂಗಿಯಾಗಿ ಸಂಬಂಧಿಯಲ್ಲ ಲಿಂಗದಾಪ್ಯಾಯಿನಿಯಾಗಿ ಇತರ ಸುಖಂಗಳಂ ಬಿಟ್ಟು ಕಳೆದು (ಶಿವಗೀ. ೩೮೦). [ಸಂ.]

**ಆಪ್ರಚ್ಛನ** (ನಾ). ಇಷ್ಟಮಿತ್ರಾದಿಗಳನ್ನು ಉಪಚರಿಸುವಿಕೆ.
[ಸಂ.]

**ಆಪ್ರಪದಂ** (ಅ). ಪಾದದ ತುದಿಯವರೆಗೆ; ಹೆಜ್ಜೆಯ ಕೊನೆಯವರೆಗೆ. [ಸಂ.]

**ಆಪ್ರಪದೀನ** (ಗು). (ಉಡುಪಿನಂತೆ) ಪಾದದ ಬೆರಳ ತುದಿಯವರೆಗೂ ಜೋಲಾಡುವ ; ಕಾಲಿನ ಹೆಜ್ಜೆಯ ತುದಿಯವರೆಗೂ ಬಂದಿರುವ. [ಸಂ.]

**ಆಪ್ರೇಕ್ಷಣ** (ನಾ). ಚೆನ್ನಾಗಿ ನೋಡುವುದು, —ದೃಷ್ಟಿ ಬೀರುವುದು: ಪಂಚಾಕ್ಷರೀವರಮಂತ್ರಸಿದ್ಧಂ ಪ್ರಕ್ಷಮಂ ಕರುಣಕಟಾಕ್ಷಾಪ್ರೇಕ್ಷಣಾಲೋಲ (ಬಸಪು. ೪೬–೩). [ಸಂ.]

**ಆಪ್ಲವ** (ನಾ). ೧. ಸ್ನಾನ ಮಾಡುವುದು. ೨. ಚಿಮುಕಿಸುವುದು ; ಸಿಂಪಡಿಸುವುದು : ಆಮೋದದ ಕೋಲಾಹಲದಾನಂದದ ಶೀಕರದಾಪ್ಲವವಂ ಬೆನಕನ ಬಣ್ಣನೆಯೊಳು ಬೇಡಲವಂ (ಗಣೇಶ. ೧೪–೩೬೨). [ಸಂ.]

**ಆಪ್ಲವನ** (ನಾ). = ಆಪ್ಲವ (೧). [ಸಂ.]

**ಆಪ್ಲವವ್ರತಿ** (ನಾ). ವೇದಾಧ್ಯಯನ ಮಾಡಿ ವಿವಾಹಕ್ಕೆ ಮುಂಚಿತವಾಗಿ ವ್ರತಸ್ನಾನ ಮಾಡಿದವನು ; ಸ್ನಾತಕ ಬ್ರಾಹ್ಮಣ.
[ಸಂ. ಆಪ್ಲವವ್ರತಿನ್]

**ಆಪ್ಲಾವ** (ನಾ). ೧. ನೀರಿನಲ್ಲಿ ಮುಳುಗುವುದು; ಸ್ನಾನಮಾಡುವುದು. ೨. ಪ್ರವಾಹ. [ಸಂ.]

**ಆಪ್ಲಾವಿತ** (ಗು). ಸ್ನಾನಮಾಡಿಸಿದ ; ಮುಳುಗಿಸಿದ : ಆಪ್ಲಾವಿತೋಪಾಂತ ಶಾದ್ವಲಮುಂ (ಕಾದಂಉ. ೫೩೯). [ಸಂ.]

**ಆಪ್ಲುತ** (ಗು). = ಆಪ್ಲಾವಿತ. [ಸಂ.]

**ಆಪ್ಲುತವ್ರತಿ** (ನಾ). = ಆಪ್ಲವವ್ರತಿ. [ಸಂ. ಆಪ್ಲುತವ್ರತಿನ್]

**ಆಪ್ಸಾತು** 'ಆಪಸಾತು' ನೋ.

**ಆಫಾಲ** (ಅ). ಹಣೆಯವರೆಗೆ. 'ಆಫಾಲಗುಲ್ಫಂ' ಪರಾ.
[ಸಂ. ಆಫಾಲಂ]

**ಆಫಾಲಗುಲ್ಫಂ** (ಅ). ಹಣೆಯಿಂದ ಹಿಮ್ಮಡಿಯವರೆಗೂ : ವಜ್ರದ ಹರಳೊಳಡಕವಾಗಿರುವ ದ್ರವ್ಯಾಗ್ನಿಯಂತಾಫಾಲಗುಲ್ಫಮಾ ನಿಪ್ಪಟಬ್ರಹ್ಮಚರ್ಯದ ದೀಧಿತಿಯ ನೋಡ (ಗೊಲ್ಲೊಥಾ. ೪–೭); ಮಂಡಿಸಿದರೆನಿಬರೋ ಪರ್ಯಂಕವಿದರೊಳಾ ವಿಷ್ಟ್ವಂಶ ಮಿನುಗೆ ಆಫಾಲಗುಲ್ಫಂ (ಅಮತಂ. ೪೦). [ಸಂ.]

**ಆಫೀಮು** (ನಾ). ಅಫೀಮು (ಉಕ. ೧).
[< ಅಫೀಮು. / ತುಳು. ಅಫೀಮು]

**ಆಫೀಸರು** (ನಾ). ಅಧಿಕಾರಿ : ಗ್ರಾಮದ ಆಫೀಸರುಗಳು (ಪಟೇಲ ಶಾನುಭೋಗರು ವಗೈರೇರು) (ಗ್ರಾಮಾಕ. ೪). [← ಇಂ. Officer]

**ಆಫುಖುದ್ದು** (ಗು). ಸ್ವತಃ ತಾನೇ ವಹಿಸಿಕೊಳ್ಳುವ; ತಾನೇ ವಹಿಸಿಕೊಳ್ಳುವ (ಸ್ಯಾಂಡರ್). [← ಹಿಂ. ಆಪ್‌ಖುದ್]

**ಆಫ್ತಾಬು** (ನಾ). ಇಸ್ಪೀಟಿನ ಒಂದು ಎಲೆ; ಗಂಜೀಪಿನ ಒಂದು ಎಲೆ (ದಕ. ೬). [?]

**ಆಬಂಧ** (ನಾ). ೧. ಕಟ್ಟುವುದು ; ಸೇರಿಸುವುದು ; ಕಟ್ಟು ; ಗಂಟು. ೨. ಎತ್ತುಗಳನ್ನು ನೊಗಕ್ಕೆ ಅಥವಾ ನೇಗಿಲಿಗೆ ಕಟ್ಟುವ ಹಗ್ಗ : “ಯೋಕ್ತ್ರಂ, ರಶ್ಮಿಃ, ಆಬಂಧಃ – ಈ ೩ ಹಗ್ಗಂ” (ಹಲಾಯು. ೯೪–೪೨೧). ೩. ಆಭರಣ ; ಒಡವೆ. [ಸಂ.]

**ಆಬಂಧನ** (ನಾ). ಕಟ್ಟು. [ಸಂ.]

**ಆಬಗ್ಗೆ** (ಅ). ಆ ವಿಚಾರವಾಗಿ; ಅದನ್ನು ಕುರಿತು.

[ಆ$_{3}$ (< ಅದು$_{1}$) + ಬಗ್ಗೆ]

**ಆಬದ್ಧ** (ಗು). ಕಟ್ಟಲ್ಪಟ್ಟ ; ನಿರ್ಬಂಧಕ್ಕೆ ಸಿಕ್ಕಿದ : ಅವನು ಯಾವ ಒಂದು ಸಂಸ್ಕಾರಕ್ಕೂ ಆಬದ್ಧನಾಗಿ ಇದ್ದವನಲ್ಲ (ಇಪ್ಪಕ. ೧೭೦). [ಸಂ.]

**ಆಬದ್ಧೆ** (ನಾ). ಕಟ್ಟಲ್ಪಟ್ಟವಳು ; ಬಂಧಿತೆ : ನಿತ್ಯಮಂಗಳೆಯು ಶ್ರೀಕುಮಾರನ ಬಾಹುಪಂಜರದಲ್ಲಿ ಆಬದ್ಧೆಯಾಗಿದ್ದುಕೊಂಡೇ ಆನಂದಾಶ್ರುವನ್ನು ಸುರಿಸಿ (ಚಿನ್ನಜೀ. ೧೮೯). [ಸಂ. ಆಬದ್ಧಾ]

**ಆಬರು,** ಅಬರು, ಅಬರೂ, ಅಬ್ರು, ಆಬ್ರು (ನಾ). ಗೌರವ; ಮರ್ಯಾದೆ; ಮಾನ : ಬಹಳ ಸರಫರಾಜ ಆಬರು ಉಂಟಾಯಿತು (ರಾಜೇಂದ್ರ. ೧೦೨). **ಅಬರು :** ಅವರ ಅಬರು ಹೋಗೂ ಆಟ ಬಂದೈತಿ (ನಡೆದಾ. I, ೨೬೮). **ಆಬರೂ :** ಆಬರೂದಿಂದ ಬಾಳುವ ಜನ ನೀವು (ಪ್ರಣಸ. ೪೯). **ಅಬ್ರು :** ನನ್ನ ಅಬ್ರು ಹೋತು. ಅಲ್ಲಿಂದ ಆಕೀನೂ ಹೋದ್ಲು (ಧನಂಜ.೫೩); ನಿಮ್ಮ ಮನಿತನದ ಅಬ್ರು ಉಳೀತದ (ಗಂಗಾಸಾ. ೧೧೩). **ಆಬ್ರು :** ನಮಗೆ ಬಹಳ ಆಬ್ರು ಉಂಟಾಯಿತು (ರಾಜೇಂದ್ರ ೧೦೪) ; ಅದು (ಕಿಲ್ಲತ್ತುಜೋಡಿ) ನಂಮ ಸರ್ವಾಂಗಕ್ಕೂ ಆಳವಟ್ಟಿದ್ದರಿಂದಾ ಬಹಳ ಆಬ್ರು ಆಯಿತು (ರಾಜೇಂದ್ರ. ೧೧೯).

[← ಪಾರ. ಆಬರೂ ; ಮರಾ. ಅಬ್ರು, ಅಬ್ರೂ]

**ಆಬರುಗೇಡಿ,** ಅಬರೂಗೇಡಿ, ಅಬ್ರೂಗೇಡಿ (ನಾ). “ಮಾನಮರ್ಯಾದೆಯಿಲ್ಲದವನು” (ರಮಾಕಾಂ). **ಅಬರೂಗೇಡಿ :** ಅ ಅಬರೂಗೇಡಿ. . .ಮಗನ ಬೆನ್ನಹತ್ತಿ ಹಿಂಗಮಾಡಿಕೊಂಡಿರಿ (ಪ್ರಣಸ. ೪೯). **ಅಬ್ರೂಗೇಡಿ :** ನನ್ನನ್ನು ಜನದೊಳಗೆ ಅಬ್ರೂಗೇಡಿಮಾಡಿದರೆ ಅವನಿಗೇನು ಬರುವುದು ? (ರಕ್ತಧ್ವ. ೧೧೬). [ಆಬರು + ಕೇಡಿ]

**ಆಬಲ್** ‘ಆವಲ್$_{1}$’ ನೋ.

**ಆಬಲು** ‘ಆವಲ್$_{1}$’ ನೋ.

**ಆಬಾಗೇಡಿ** (ನಾ). ೧. ತಿಳಿಗೇಡಿ. ೨. ಶಕ್ತಿಯಿಲ್ಲದವನು (೬). [?]

**ಆಬಾದು** (ನಾ). ೧. ಅಭಿವೃದ್ಧಿ ; ಉತ್ತಮಸ್ಥಿತಿ ; ಸಾಗುವಳಿ : ಕಷ್ಟಪಟ್ಟು ಗ್ರಾಮ ಆಬಾದು ಮಾಡುತ್ತೇವೆ (ಮಹಾವಂ. I, ೭೯) ; ಜಮಿನುಗಳನ್ನು ಆಬಾದು ಮಾಡುವ ರೈತರಿಗೂ . . . ಸಾಲ ಕೊಡುವುದುಂಟು (ಗ್ರಾಮಾಕ. ೧೫೯). ೨. ಜನವಸತಿ.

[← ಪಾರ. ಮರಾ. ಹಿಂ. ಆಬಾದ್]

**ಆಬಾಧಿಕೆ** (ನಾ). [ತತ್ತ್ವಶಾ] ಯೋಗದಿಂದ ಲಭ್ಯವಾಗುವ ಐದು ಬಗೆಯ ಕ್ಷುದ್ರ ಸಿದ್ಧಿಗಳಲ್ಲಿ ಒಂದು : ಕಾಲಜ್ಞಾನಸಿದ್ಧಿಯೊಂದದು ಕೇಳು ಆಬಾಧಿಕವು ಯೆರಡದು ಹೇಳೆ ಚಿತ್ತಾಭಿಜ್ಞಸಿದ್ಧಿಸಿಸುವುದು ಮೂರು (ಜ್ಞಾನಸಿಂ. ೨೧–೬೬). [ಸಂ.]

**ಆಬಾಧೆ** (ನಾ). ನೋವು. [ಸಂ. ಆಬಾಧಾ]

**ಆಬಾಲಗೋಪಾಲ** (ಅ). ಮಕ್ಕಳಿಂದ ಹಿಡಿದು ಗೊಲ್ಲರವರೆಗೆ; ಎಲ್ಲ; ಸಮಸ್ತ : ತನ್ನ ಮುನ್ನಿನ ಭವದ ಪೆಸರಂ ನೆಗಟ್ಟಿಯುಮಂ ಪೇೞ್ದುದುಮಾಬಾಲಗೋಪಾಲ ವೃದ್ಧಪ್ರಸಿದ್ಧಂ (ಶಾಂತಿಪು. ೮–೧೩೭ ವ) ; ಧರ್ಮ . . . ನಮ್ಮ ದೇಶದಲ್ಲಿ ಆಬಾಲಗೋಪಾಲರೆಲ್ಲರಿಗೂ ಪರಿಚಿತವಾಗಿರುವ ಶಬ್ದ (ರಾಜ್ಯಶಾ. ೧೪೨). ℙ ಇದನ್ನು ಕನ್ನಡದಲ್ಲಿ ನಾಮಪದವಾಗಿ ಬಳಸಿದೆ. [ಸಂ. ಆಬಾಲಗೋಪಾಲಂ]

**ಆಬಾಲವೃದ್ಧ** (ಅ). ಮಕ್ಕಳಿಂದ ಹಿಡಿದು ಮುದುಕರವರೆಗೆ; ಎಲ್ಲ; ಸಮಸ್ತ : ಪತ್ತನ ಸಮಗ್ರಮಾಬಾಲವೃದ್ಧರ್ವೆರಸಿ ಕಡೆದುದ್ವೈರೋದನ ಸಮುದ್ರಮಂ (ಶ್ರೀರಾಮಾ. ೧೦೧–೪೦). [ಸಂ. ಆಬಾಲವೃದ್ಧಂ]

**ಆಬಾಸ,** ಆಬಾಸು (ನಾ). = ಆಭಾಸ (ದಕ. ೬). **ಆಬಾಸು** (೬).

[< ಸಂ. ಆಭಾಸ]

**ಆಬಾಸು** ‘ಆಬಾಸ’ ನೋ.

**ಆಬುಕಾರಿ** ‘ಆಬ್ಕಾರಿ’ ನೋ.

**ಆಬುತ್ತ** (ನಾ). ಸೋದರಿಯ ಗಂಡ. [ಸಂ.]

**ಆಬೆ** (ನಾ). ಆಕೆ (?) : ಪಾರದ್ವಾರವ ಮಾಡಬಂದವ ಆಬೆಯ ಗಂಡಗೆ ಕೊಪನೇ (ಸಗಬೊ. ೫೫). [< ಅಬ್ಬೆ]

**ಆಬ್ಕಾರಿ,** ಅಬಕಾರಿ, ಅಬುಕಾರಿ, ಅಬ್ಕಾರಿ, ಆಬುಕಾರಿ (ನಾ). ಹೆಂಡ, ಸಾರಾಯಿ ಮುಂತಾದ ಮಾದಕವಸ್ತುಗಳ ತಯಾರಿಕೆ ಮತ್ತು ಮಾರಾಟದ ಮೇಲೆ ಹಾಕುವ ಸುಂಕ, —ತೆರಿಗೆ ; ಎಕ್ಸೈಸ್ : ಆಬ್ಕಾರಿ ಸರಕಾರದ ಈಚಲು, ಬಗನಿ, [illegible]ಳೆ, ತೆಂಗು ಮುಂತಾದ ಗಿಡಗಳಲ್ಲಿ (ಗ್ರಾಮಾಕ. ೧೫೭). **ಅಬಕಾರಿ :** ಅದು ಕ್ರಿಮಿನಲ್ ಅಲ್ಲ ಅಬಕಾರಿ ಲೆಕ್ಕದ್ದು (ಹಹಸ. ೨೭). **ಅಬುಕಾರಿ** (೬). **ಅಬ್ಕಾರಿ** (ರೈಸ್‌ಗ. ೫೪೧). **ಆಬುಕಾರಿ** (೬).

[← ಮರಾ. ಹಿಂ. ಆಬ್ಕಾರೀ]

**ಆಬ್ದಿಕ** (ಗು). ವಾರ್ಷಿಕ. ‘ವರ್ಷಾಬ್ದಿಕ’ ಪರಾ. [ಸಂ.]

**ಆಬ್ರು** ‘ಆಬರು’ ನೋ.

**ಆಭರಣ** (ನಾ). ೧. ಧರಿಸುವುದು. ೨. ಒಡವೆ : ಚಿತ್ರಾಶ್ಲೇಷಶ್ರವಣಾಭರಣ ಭೂಷಿತೆಯುಂ (ಕಾದಂಪೂ. ೪೯) ; ಕೋಟೀರಾದ್ಯಾಭರಣ ಚಕ್ರಮುಖ್ಯಾಯುಧ . . . ರಾರಾಜಿಸಿದತ್ತು ಕೌಸ್ತುಭಂ ಪೇರುರದೊಳ್ (ಜಗವಿ. ೩–೧). [ಸಂ.]

**ಆಭರಿತ** (ಗು). ಪೂರ್ಣ ತುಂಬಲ್ಪಟ್ಟ ; ತುಂಬಿದ; ಪೂರ್ಣವಾದ : ವಿಮಳತರ ಪ್ರಸಾದಾಭರಿತ ಸುಧೆಯಿಂ ತಣಿಸಿದಂ ನಿಜ ಶಿಷ್ಯನಂ ನೋಡಿ (ಬಸಪು. ೩೯–೬೩). [ಸಂ.]

**ಆಭಾರ** (ನಾ). (ಉಕ). ಉಪಕಾರ; ಔದಾರ್ಯ : ಇದನ್ನು ಪ್ರಕಟಿಸಲು ಸಮ್ಮತಿಸಿದುದಕ್ಕಾಗಿ ನಾವು ಲೇಖಕರ ಆಭಾರವನ್ನು ಮನ್ನಿಸುವೆವು (ಸ್ವಪ್ನವಾ. ೫) ; ಮಧುರಚೆನ್ನರೇ ಎಲ್ಲರ ಆಭಾರ ಮನ್ನಿಸಿದರು (ಪ್ರಬಂಧ. ೯೮). [ಸಂ.]

**ಆಭಾರಮನ್ನಣೆ** (ನಾ). (ಉಕ). ವಂದನಾರ್ಪಣೆ : ಲೇಖಕರು ಅನೇಕರ ಆಭಾರಮನ್ನಣೆಯ ಕಾರ್ಯವನ್ನು ಕೂಡ ಆ ಇತಿಹಾಸ ಹಾಗೂ ವಿವೇಚನೆಗಳ ಮೂಲಕವಾಗಿಯೇ ಮಾಡಿದ್ದಾರೆ (ಸಾಸಮಾ. ೬೮).

[ಆಭಾರ + ಮನ್ನಣೆ]

**ಆಭಾರಿ** (ನಾ). ಉಪಕೃತ ; ಋಣಿ : ಪೊಸಕೃತಿಗೆ ಮಹಿಮೆಗಳನನುಕೂಲಿಸಿದನೀತಗಾಭಾರಿಯಾಗಿರ್ಪೆನು (ಮಹಾಂತೇ. ೧–೧೨) ; ನಾನು ಅವನಿಗೆ ತುಂಬಾ ಆಭಾರಿಯಾಗಿದ್ದೇನೆ. ಆದರೆ ನಿನ್ನ ಉಪಕಾರದ ಮುಂದೆ ಅವನ ಉಪಕಾರವೇ ? (ನಿಷ್ಕಾಮ. ೮೯) ; ಈ ಸೂಚನೆಗಾಗಿ ನಿಮಗೆ ಆಭಾರಿಯಿರುವೆ (ವೈದ್ಯರಾ. ೭೧). [ಸಂ. ಆಭಾರಿನ್]

**ಆಭಾರ್ಯ** (ನಾ). = ಆಭರಣ ೨ : ಸಕಲಸಂಪದ್ವೈಭವಾಭಾರ್ಯ [ಪಾಠಾಂ. ವೈಶ್ವರ]ವೆ ದೆವಸಂ ಬಿಜ್ಜಳರಾಯನಿಂದೆ ಪಡೆದಂ (ಬಸರ. ೬–೧). [ಸಂ.]

**ಆಭಾಷಣ** (ನಾ). ೧. ಮಾತನಾಡುವುದು ; ಸಂಭಾಷಣೆ. ೨. ಕೂಗುವುದು. [ಸಂ.]

**ಆಭಾಸ** (ನಾ). ೧. ಕಾಂತಿ ; ಪ್ರಕಾಶ. ೨. ಹೊರತೋರಿಕೆ ; ನಿಜವಲ್ಲದ್ದು. 'ವಿರೋಧಾಭಾಸ' ಪರಾ. ೩. ಸಾದೃಶ್ಯ ; ಹೋಲಿಕೆ ; ಸಾಮ್ಯ. ೪. ಉದ್ದೇಶ ; ತಾತ್ಪರ್ಯ : ಹುಡಿಗೆಯನ್ನು ಒಮ್ಮೆ ನೋಡುವುದು ಆವಶ್ಯ ಎಂಬ ಆಭಾಸ ವ್ಯಕ್ತವಾಗುತ್ತಲೇ (ಇಪ್ಪಕ. ೪೬೫). ೫. ಭ್ರಾಂತಿ; ತಪ್ಪುತಿಳಿವಳಿಕೆ ; ಮಿಥ್ಯಾಜ್ಞಾನ. ೬. ಭ್ರಾಂತಿಯ ವಿಷಯ ; ತಪ್ಪಾಗಿ ತಿಳಿಯಲ್ಪಡುವ ವಸ್ತು : ಕಂತು ವಿನೋದಾರ್ಥ ವಿಚಿತ್ರ ಚಿತ್ರಿತ ಪತಾಕಾಭಾಸಮೆಂಬಂತು (ಸುಕುಮಾ. ೯–೧೦೮) ; ಸಾಹಿತ್ಯದ ಎಷ್ಟೋ ಭಾಗ ಈ ಬಗೆಯ "ಆಭಾಸ"ದ ವಿಷಯವೇ ಆಗಿದೆ (ಭಾರಮಿಾ. ೩೯೯). 'ಭಾವಾಭಾಸ', 'ರಸಾಭಾಸ' ಪರಾ.

ಆಭಾಸವಾಗು = ಎಡವಟ್ಟಾಗು ; ಕೆಟ್ಟುಹೋಗು. [ಸಂ.]

**ಆಭಾಸಾಂಗ** (ನಾ). (?) ; "ತಲ್ಲೀನ" (ಮೋಳಿಮಾ. ಕೋಶ) : ಆಡುವಂಗೆ ಅವಧಾನ ಆಭಾಸಾಂಗವಲ್ಲದೆ ನೋಡುವಂಗೆ ಚೋದ್ಯವಪ್ಪಂತೆ (ಮೋಳಿಮಾ. ೮೮–೩೫೨). [ಸಂ.]

**ಆಭಿಚಾರ** (ಗು). ೧. ಮರುಳುಗೊಳಿಸುವ ; ಅಭಿಚಾರಕ್ಕೆ ಸಂಬಂಧಿಸಿದ : ಕರ್ಣನತ್ತಲು ಕ್ರತುಗಳಾದೆಸೆಯಾಭಿಚಾರಕ್ರತುಗಳೀದೆಸೆಯಾಗಿ ನಿಂದವು (ಕುವ್ಯಾಕ. ೨೨–೫). (ನಾ). ೨. ಮಾಟ ; ಮೋಡಿ : ಆತನ ಪುರೋಹಿತಂ ಕನಕಸ್ವಾಮಿಯೆಂಬಂ ಪಾಂಡವರ್ಗಾಭಿಚಾರಮಾಗೆ ಬೇಳ್ವ ಬೇಳ್ವೆಯ (ಪಂಪಭಾ. ೮–೪೨ ವ). [ಸಂ.]

**ಆಭಿಚಾರಕವಿದ್ಯೆ** (ನಾ). ಅಭಿಚಾರಕ್ಕೆ ಸಂಬಂಧಪಟ್ಟ ವಿದ್ಯೆ ; ಮರುಳುಗೊಳಿಸುವ ವಿದ್ಯೆ ; ಮಾಟದ ವಿದ್ಯೆ ; ಮೋಡಿಯ ವಿದ್ಯೆ : ಸರಹಸ್ಯಯುಕ್ತಮಾದಾಭಿಚಾರಕವಿದ್ಯೆಯೊರೆದು ಭೃಗುಕುಲರನ್ನನಿಂತೆಂದ (ವೆಂಕರಾರಾ. ೬–೫೩–೮). [ಆಭಿಚಾರಕ + ವಿದ್ಯೆ]

**ಆಭಿಜಾತ್ಯ** (ನಾ). ಸತ್ಕುಲದಲ್ಲಿ ಹುಟ್ಟುವಿಕೆ ; ಕುಲೀನತೆ : ದೇವಿಯರಾಭಿಜಾತ್ಯಮುಮಂ ಮಹಾನುಭಾವತೆಯುಮಂ (ಕಾದಂಉ. ೩೬೧) ; ಕೊಳುಗೊಡೆಗೆ ತಪ್ಪೇನು ವಸುವಿನ ಕುಲ ವಿರಾಟನು ಇಂದುವಂಶಾವಳಿಯವರು ನೀವಾಭಿಜಾತ್ಯದೊಳಿಲ್ಲ ಹಳಿವುಗಳು (ಕುವ್ಯಾವಿ. ೧೦–೬೫). [ಸಂ.]

**ಆಭಿಯೋಗ್ಯ** (ನಾ). [ಜೈನ] ದೇವತೆಗಳಲ್ಲಿ ಒಂದು ಪಂಗಡ. ℙ ಸೌಧರ್ಮಾದಿ ಕಲ್ಪಗಳಲ್ಲಿ ಹುಟ್ಟುವ ಸುಕೃತಜೀವಿಗಳಿಗೆ ವಾಹನಾದಿ ಕರ್ಮಗಳಲ್ಲಿ ಪ್ರವೃತ್ತರಾಗಿರುವ ದಾಸತುಲ್ಯರಾದ ಸೇವಕದೇವತೆಗಳು : ಪ್ರಮುಖಲೋಕಪಾಲಾಭಿಯೋಗ್ಯದಿಗ್ಗಜೇಂದ್ರ ದೇವವಿಹಾರಪ್ರಾಸಾದಾಭಿರಾಮಮುಮುಂ (ಆದಿಪು. ೧–೪೯ ವ) ; ಆತ್ಮರಕ್ಷಕಾಭಿಯೋಗ್ಯ ಪ್ರಕೀರ್ಣ ಸಂಮಾನಿತಾಮರ ಪರಿಜನಪರೀತಂ (ಚಂದ್ರಪು. ೪–೬೮ ವ). [ಸಂ.]

**ಆಭೀರ** (ನಾ). ೧. ದನಗಾಹಿ ; ಗೋಪಾಲಕ ; ಗೊಲ್ಲ : ಖಾನದೇಶದಲ್ಲಿರುವ ಮರಾಠಿಯ 'ಅಹಿರಾಣೀ' ಭಾಷಾಪ್ರಕಾರಕ್ಕೆ ಕಾರಣರಾದ ಪರಕೀಯ 'ಆಭೀರ' ಅಥವಾ ಆಹಿರ ಗೌಳಿಗಳು (ಕರ್ಣಾಟ. ೪೯೨). ೨. ಒಕ್ಕಲಿಗ : "ಆಭೀರಃ, ಮಹಾಶೂದ್ರಃ – ಈ ೨ ಕುಡಿಯೊಕ್ಕಲಿಗಂ" (ಹಲಾಯು. ೯೬–೪೩೩). [ಸಂ.]

**ಆಭೀರಪಲ್ಲಿ** (ನಾ). ಗೊಲ್ಲರ ಹಳ್ಳಿ ; ತುರುಹಟ್ಟಿ (ಕ). [ಆಭೀರ + ಪಲ್ಲಿ]

**ಆಭೀರಿ** (ನಾ). ಗೊಲ್ಲರ ಹೆಂಗಸು ; ಗೊಲ್ಲಿತಿ. [ಸಂ. ಆಭೀರೀ]

**ಆಭೀಲ, ಆಭೀಳ** (ಗು). ಹೆದರಿಕೆಯನ್ನುಂಟುಮಾಡುವ ; ಭಯಂಕರವಾದ : ಶಾರ್ದೂಲಾಭೀಲವನಂಗಳೊಳ್ ತಿರಿಪಿದೀಯುರ್ಕೊಂದೆ ಲೆಕ್ಕಂಗೊಳಲ್ ಕಾಲಂ ಸಾಲವೆ (ಪಂಪಭಾ. ೯–೨೨) ; ಮಾಲವ ಮಾಲವಾದಿಹರಣಂ . . . ಕಳಿಂಗನೆಂಬುದಾಭೀಳ ಪರಾಕ್ರಮ ಕ್ರಮಮನೆಯ್ದೆ ಜಗಂ ಜಗದೇಕಮಲ್ಲನಂ (ಎಕ. VIII, ಶಿಕಾರಿ. ೧೨೩–೨೨ ; 1158). **ಆಭೀಳ** : ಶತ್ರುಪಕ್ಷ ಕ್ಷಯಕರ ಕರವಾಳ ದಂಷ್ಟ್ರಾಭೀಳ ಭುಜಂಗಮೂರ್ತಿ (ಪಂಪಭಾ. ೪–೧೦ ವ) ; ಸಮರಾಭೀಳ ಗದೆಯನು ತಿರುಹಿದನು ಪಯಪಾಡ ನಾರ್ೖದು (ಕುವ್ಯಾಗ. ೫–೪೨) ; ಸೇರ್ದರಾಭೀಳ ಘೋರದಾಕಾಂತಾರದಂತಮಂ (ಶ್ರೀರಾಮಾ. ೧೯೨–೪೩೪). [ಸಂ.]

**ಆಭೀಳ** 'ಆಭೀಲ' ನೋ.

**ಆಭೀಳತೆ** (ನಾ). ಭಯಂಕರತೆ ; ಉಗ್ರತೆ : ಉಗ್ರಸರ್ಪಂಗಳದ್ಭುತಕ್ಕಂ ಭೀಮರ[ಪಾಠಾಂ. ಆರಣ್ಯ]ದಾಭೀಳತೆಗಂ ಕೋಡದೆ ಕೊಂಕದೆ ಬಾಡದೆ (ಗಿರಿಕ. ೯–೫೮ ವ). [ಸಂ. ಆಭೀಲತಾ]

**ಆಭೋಗ** (ನಾ). ೧. ಸುಖ ; ಸಂತೋಷ : ಅರಿಕುಮುದಾಭೋಗ ವಿಧ್ವಂಸಿಯಾಗಿ . . . ಬೆಳಗುಗೆ ಜಗಮಂ ಗೋಪಮಾರ್ತಂಡದೇವಂ (ಜಗವಿ. ೧–೪). ೨. ಪೂರ್ಣವಾಗಿರುವಿಕೆ ; ತುಂಬಿರುವಿಕೆ : "ಆಭೋಗಃ, ಪರಿಪೂರ್ಣತಾ– ಈ ೨ ನೆಜಿವಣಿಗೆ" (ಹಲಾಯು. ೧೨೪–೭೦). ೩. ವಿಸ್ತಾರ ; ಹರಹು : ಶರರೂಪದಿಂದಸುಂಗೊಳೆ ದೊಣೆಯಿಂ ಪೊಳೆದು ಬರೆ ಕೆಯ್ಗೆ ತಾಂ ವಿಸ್ಫುಳಿಂಗಪಿಂಗಳಿತ ಭುವನ ಭವನಾಭೋ [ಪಾಠಾಂ. ಭಾ]ಗಂ (ಪಂಪಭಾ. ೧೨–೧೯೧) ; ಪಲ್ಲವಾಧರಮಂ ಚುಂಬಿಸಿ ನೀವಿ ಜಾಜಿ ಜಘನಾಭೋಗಂ ಪೊದಳ್ದುರ್ವೆಸೌಂದರಿ ನಾನಾ ಕಳೆವೆತ್ತು ಸೋಂಕಿ ನೆರೆದಳ್ಕಾದಲ್ಮೆಯಿಂ ಕಾಂತನೊಳ್ (ರಾಜಶೇ. ೧೧–೧೪೨). ೪. ಹಾವಿನ ಹೆಡೆ. ೫. ಪ್ರಯತ್ನ ; ಶ್ರಮ. [ಸಂ.]

**ಆಮ**$_1$ (ನಾ). ಮಡಕೆಗಳನ್ನು ಸುಡುವ ಒಲೆ ; ಆವಿಗೆ (ಕ). [ದೇ ‖ ತುಳು. ಆವೆ ; ತೆಲು. ಆವ. / ಮರಾ. ಆವಾ, ಅವಾ ; ಹಿಂ. ಆವಾ]

**ಆಮ**$_2$ (ಗು). ೧. ಬೇಯಿಸದ ; ಪಕ್ವವಾಗದ ; ಹಸಿಯ : ವೇದೋಕ್ತ ಧರ್ಮವನ್ನು ಎಲ್ಲರೂ ಮಾಡಬೇಕು. ಆದರೆ ಮಾಡುವ ಕ್ರಮದಲ್ಲಿ ಕಾಲ, ದೇಶ, ಶಕ್ತಿ, ಶುದ್ಧಿ, ಅಶುದ್ಧಿ, ಸಹಾಯ ಮೊದಲಾದ ಸಾಮಗ್ರಿಭೇದದಿಂದ ದ್ರವ್ಯ, ಪದಾರ್ಥ, ಆಮ, ಪಕ್ವ ಮೊದಲಾದ ಪ್ರಭೇದಗಳೆಂದು ನಿರ್ಣಯವಿರುವುದು (ಹಿಂದಸಾ. ೧೬೨). ೨. ಮಾಗಿಲ್ಲದ ; ಹಣ್ಣಾಗದ. ೩. ಮಲಬದ್ಧತೆ ; ಅಜೀರ್ಣರೋಗ. ೪. ಆಹಾರವು ಸರಿಯಾಗಿ ಪಚನವಾಗದೆ ಜೀರ್ಣಾಂಗಗಳಲ್ಲಿ ಹುಳಿಯಾಗಿ ತಿರುಗಿ ಉಂಟಾಗುವ ಒಂದು ಬಗೆಯ ದ್ರವ : ಬೆಮರ್ವೊಡಮುದರಂ ವಿಜೃಂಭಿಸುವೊಡಂ ಕರಮಾಮದೊಳೊಂದಿ ಲದ್ದಿ ಪೋಪೊಡಮದು ಶೂಲೆಯೆಂದಱಿದು (ಲೋಕೋಪ. ೯–೨೨೬) ; ಕೆರಕುಂ ತುರಿ ಕಷ್ಟಗುಲ್ಮಂ ಪಿರಿದಕ್ಕು ಪೆರ್ಚಿದಾಮದಿಂ (ಕಲ್ಯಾಕಾ. ೬–೯) ; ಅಜೀರ್ಣದಿಂದ ಕಟ್ಟ್ರಿಯಾಗಿ ಆಮಾ ಕಾಣಿಸಿಕೊಂಡು (ಶಿವದ. ೧೫೨–೧). ೫. ರೋಗ ; ವ್ಯಾಧಿ : "ರೋಗಃ . . . ಆಮಃ, ಆಮಯಃ . . . — ಈ ೧೨ ವ್ಯಾಧಿ" (ಹಲಾಯು. ೯೮–೪೪೬). ೬. ಒಂದು ಗಿಡ : "ಗಜಪ್ರಿಯಾ–ತದುಕು, ಆಮ" (ಓಷಧಿ. ೪೫). [ಸಂ.]

**ಆಮಂಡ** (ನಾ). ಹರಳುಗಿಡ ; ಔಡಲಗಿಡ. [?]

**ಆಮಂತಣ** (ನಾ). = ಆಮಂತ್ರಣ : ಮಂತಣಮುಸಿರದೆ ಕೆಲರಾ [ಪಾಠಾಂ. ಕೆಲರುಂ] ಮಂತಣಮುಂಡಂತೆ ಪೆಜಿರ ನಯದೊಳೆ ತಣಿವರ್ (ಕಾವ್ಯಾವ. ೫೩೫). [< ಸಂ. ಆಮಂತ್ರಣ]

**ಆಮಂತ್ರಕ** (ನಾ). "(ಸಭೆ ಮೊದಲಾದುವನ್ನು) ಕರೆಯುವವನು, ಸೇರಿಸುವವನು" (Convener. ಇಂಕನಿ). [ಸಂ.]

**ಆಮಂತ್ರಣ** (ನಾ). ೧. ಆಹ್ವಾನ; ಕರೆ: ರೋಹಿಣಿ ರಂಗನ ಆಮಂತ್ರಣವನ್ನು ಸಂತೋಷದಿಂದ ಸ್ವೀಕರಿಸಿದಳು (ರಂಗರೋ. ೧೯೫). ೨. ಆಹ್ವಾನ ಪತ್ರಿಕೆ; ಕರೆಯೋಲೆ: ಮದುವೆಯ ಆಮಂತ್ರಣ (ರೂಢಿ). ೩. ಮರ್ಯಾದೆ; ಉಪಚಾರ; ಅಭಿವಂದನೆ. ೪. [ವ್ಯಾಕ] ಸಂಬೋಧನ ವಿಭಕ್ತಿ: ಆಮಂತ್ರಣದೊಳಾದ ಗಳ್ಗಂ ಕಳ್ಗಂ 'ಇರ' ಎಂಬ ಆಗಮವುಂಟು (ಶಮುದ. ೧೩೬ ವೃತ್ತಿ). ೫. ಔತಣ; ಮೃಷ್ಟಾನ್ನ ಭೋಜನದ ಏರ್ಪಾಡು: "ಆಹ್ವಾನ ಮೃಷ್ಟಾನ್ನಮಾಮಂತ್ರಣ ಶಬ್ದಂ" (ನಾನಾರ. ೧೫೬). ೬. ಬೀಳ್ಕೊಳ್ಳುವುದು (ಕಿ). ೭. ಸಂಭಾಷಣೆ. 'ನಿಮಂತ್ರಣ' ಪರಾ. [ಸಂ.]

**ಆಮಂತ್ರಣಂಗೆಯ್** (ಕ್ರಿ). ಆಹ್ವಾನಿಸು; ಬರಮಾಡು: ಆತ್ಮಗತದೊಳ್ ಗರುತ್ಮಂತನನಾಮಂತ್ರಣಂಗೆಯ್ಯೆ (ಜಗವಿ. ೮–೭೯ ವ).
[ಆಮಂತ್ರಣ + ಗೆಯ್ (<ಕೆಯ್$_1$)]

**ಆಮಂತ್ರಿಸು** (ಕ್ರಿ). ಆಹ್ವಾನಿಸು; ಬರಿಸು; ಕರೆ: ವಸುಧಾದೇವರನಾಮಂತ್ರಿಸಿ ಪಿರಿದುಂ ಭಕ್ತಿಪೂರ್ವಕಂ ವಿಧಿಯಿಂ ಪೂಜಿಸಿ (ಪಂಚತಂ. ೧೫೪–೨೦); ದೇಶದೇಶಾಂತರಗಳಿಂದ ಸಂಗೀತಾಚಾರ್ಯರೆಲ್ಲ ಆಮಂತ್ರಿಸಲ್ಪಟ್ಟದ್ದರು (ಕಲನಿ. ೭); ಮುದುಕಿಗೆ ಚಹ ಕುಡಿಯಲು ಚೌಡಪ್ಪ ಆಮಂತ್ರಿಸಿದರು (ಹಳ್ಳಿಹಾ. ೪೫). [ಆಮಂತ್ರಣ + –ಇಸು$_3$]

**ಆಮಗಂಧ** (ನಾ). ಹಸಿಮಾಂಸದ ವಾಸನೆ; ದುರ್ವಾಸನೆ: ಹೇಮಕುಂಭದಿ ಕೊಳಚಿ ರೊಚ್ಚುನೀರ್ಗಳ ತುಂಬಿ ರಾಮಣೀಯಕದೊಳಿಟ್ಟಾಮಗಂಧವನು . . . ಏಂ ಮಾಡಿದನೊ ಬೊಮ್ಮ (ಮಂಕುಕ. ೪೧೭).
[ಆಮ್ಮ + ಗಂಧ]

**ಆಮಗಂಧಿ** (ನಾ). ಕೆಟ್ಟ ವಾಸನೆಯುಳ್ಳ ವಸ್ತು; "ಅಪಕ್ವವಾದ, ವಾಸನೆಯುಳ್ಳ ದ್ರವ್ಯ" (ಅಮರ. ಟೀಕೆ). [ಸಂ.]

**ಆಮಗಂಧಿಕೆ** (ನಾ). = ಆಮಗಂಧಿ. [ಸಂ.]

**ಆಮಚ್ಚ** (ನಾ). ಒಬ್ಬಾತನ ಹೆಸರು (?) : ಇದಕ್ಕೆ ಸಾಕ್ಷಿ ಆಮಚ್ಚರ್ ತೆಲಪ್ಪೆಯರ್ ಕರಾಸರ್ (ಎಕ. IV, ಗುಂಡ್ಲುಪೇ. ೮೬–೫; 750).
[< ಅಮಾತ್ಯ ?]

**ಆಮದು** (ನಾ). ೧. ಬರುವಿಕೆ; ಆದಾಯ. ೨. ಬರಮಾಡಿಕೊಂಡ ಅಥವಾ ತರಿಸಿಕೊಂಡ ವಸ್ತು; ಆಯಾತ: ಹೊರಗಿನಿಂದ ಬರುವ ಸರಕುಗಳಿಗೆ ಆಮದ [ದು] . . . ಅನ್ನುವುದುಂಟು (ವಿಜಾಭೂ. ೩೭); ಖರ್ಜೂರವು . . . ಆಮದುಮಾಡುವ ವಸ್ತುವಾದರೂ ಅದರ ಬೆಲೆ ಸಾಮಾನ್ಯವಾಗಿ ಅಗ್ಗವಾಗಿದೆ (ಅಡುಸೌ. ೭೯). 'ರಫ್ತು' ಪರಾ.
[← ಮರಾ. ಹಿಂ. ಆಮದ್]

**ಆಮದೇವ್ವೆಯ** (ನಾ). ಒಬ್ಬಾತನ ಹೆಸರು: ಆಮದೇವ್ವೆಯಾಯ ವಿಪ್ರನೋಡಮ್ಮೆಯಸುತಾಯ (ಇಎ. V, ೨೭೮–೮; 1036).
[ಆಮದೇವ$_0$ + ಅಯ್ಯ$_1$]

**ಆಮನಸ್ಯ** (ನಾ). ನೋವು; ಬಾಧೆ. [ಸಂ.]

**ಆಮನಿಯನಾಡು** (ನಾ). ಒಂದು ನಾಡಿನ ಹೆಸರು: ಆಮನಿಯನಾಡು ಮೂವತ್ತುಂ ದುಗ್ಗಮಾರಂ × × × ಆಳುತ್ತಿರೆ (ಎಕ. X, ಮುಳಬಾ. ೨೪೮–೩; 890). [?]

**ಆಮಯ** (ನಾ). ೧. ಕಾಯಿಲೆ; ರೋಗ: ನರಂಗೆ . . . ಜ್ವರಭಂಗಂಗಳೆನಾಮಯಂ ಸಮನಿಕುಂ (ಜಾತತಿ.೯–೨೨); ಪಾಲ್ಸಕ್ಕರೆಯಿಂದಾಮಯಮು ಪಶಮಿಪೊಡೆ ವಿದ್ಯಾಮಯ ಸೇವಿಸಲದೇಕೆ ಕಟುಕೌಷಧಮಂ (ಪಾರ್ಶ್ವಪು. ೨–೪೦); ಪ್ರಜೆಗಕ್ಕುಮಾಮಯಾದಿ ಭಯಂಗಳ್ (ಜಟ್ಟಮು. ೬–೧೨೯). ೨. [ಕಾವ್ಯಮೀ] ಸಂಚಾರಿ ಭಾವಗಳಲ್ಲಿ ಒಂದು: ಅಪಸ್ಮಾರ ಲಜ್ಜಾವಿಷಾದಸ್ಥಿತಿ ಚಿತ್ತಭ್ರಂಶಮೋಹಾಮಯ ಮೃತಿಗಳೆವಿಂತೆಯ್ದೆ ಸಂಚಾರಿ ಭಾವಂ (ಕಾವ್ಯಾವ. ೭೯೫); ಮತಿ . . . ವಿಷಾದ ಔತ್ಸುಕ್ಯ ಅಮರ್ಷ ಚಿಂತೆ ಅಸೂಯೆ ಅವಹಿತ್ಥೆ ಉಗ್ರ ಅಪಸ್ಮಾರಗಳೆಂಬ ಮೂವತ್ತುಮೂರು ಸಂಚಾರೀಭಾವಂಗಳಿಂ (ವಿವೇಕ. ೨೨೭). [ಸಂ.]

**ಆಮಯಮಂದಿರ** (ನಾ). ರೋಗದ ಮನೆ, —ತವರು: ಆಮಯಮಂದಿರಮಂ ಬಾಧಾಮಯಮಂ ತನುವನೆಯ್ದುದನ್ನಂ ಭೀಮಾಯಾಮಯಮಂ ಸಾಧಿಸುವೆನನಾಮಯಮಂ ಪ್ರಿಯಮನಮಳ ರತ್ನತ್ರಯಮಂ (ಮಲ್ಲಿಪು. ೯–೭೫). [ಆಮಯ + ಮಂದಿರ]

**ಆಮಯಾವಿ** (ನಾ). "ರೋಗವುಳ್ಳವನು" (ಅಮರ. ಟೀಕೆ).
[ಸಂ. ಆಮಯಾವಿನ್]

**ಆಮರಕ್ತ** (ನಾ). ಆಮ ಮತ್ತು ರಕ್ತದಿಂದ ಕೂಡಿದ ಭೇದಿ; ಆಮಶಂಕೆ. (ದಕ. ಕಿ). [ಆಮ್ಮ$_2$ + ರಕ್ತ]

**ಆಮರಣ** (ಅ). ಸಾಯುವವರೆಗೆ: ಆಮರಣ ಬ್ರಹ್ಮಚರ್ಯೆ ಅವನ ಗುರಿಯೆ (ಸ್ವಪ್ನಹೊ. ೨೩೪). [ಸಂ. ಆಮರಣಂ]

**ಆಮರ್ದ** (ನಾ). ಹಿಸುಕುವಿಕೆ; ಒತ್ತುವುದು; ಹಿಂಡುವುದು; ಕಿವಿಚುವುದು; ನೂಕಾಟ. [ಸಂ.]

**ಆಮರ್ದನ** (ನಾ). = ಆಮರ್ದ (ದಕ. ಕಿ). [ಸಂ.]

**ಆಮರ್ಷ** (ನಾ). ಸೈರಣೆಯಿಲ್ಲದಿರುವಿಕೆ; ಕೋಪ: ದೂರ್ವಾಸನಧಿಕಾಮರ್ಷದಿಂ ಶಪಿಸನೇ (ಪದ್ಮರಾ. ೧೧–೬೦); ಮಗುಳೆಚ್ಚೊಬ್ಬಿರದನಾ ನೀಲನಂ ದಶಕಂಠನಾಮರ್ಷದೆ (ವೆಂಕಾರಾ. ೬–೨೪–೯).
[ಸಂ. ಆಮರ್ಷ]

**ಆಮಲ, ಆಮಳ** (ನಾ). = ಆಮಲಕ: 'ತಲಾಮಲ' ಪರಾ. **ಆಮಳ**: 'ತಳಾಮಳ' ಪರಾ. [ಸಂ.]

**ಆಮಲಕ, ಆಮಳಕ** (ನಾ). ನೆಲ್ಲೀಗಿಡ, —ಕಾಯಿ: ಕರಸ್ಥಿತಾಮಲಕಮೆಂಬರಾ ಜಜುಣದೇವುದಿಂದ್ರಾರ್ಚಿತಾ (ಆದಿಪು. ೧೩–೮೫); ಪಲಕಾಲದೊಳೆಜತಿರ್ದಾಮಲಕದ ಪಣಿಯಂ ಕುಠಾರದಿಂ ಸೀಳ್ದದಜಿಕೊಳ್ ತಿಲಮಧುಘೃತಮಂ ಪೂರಿಸೆ (ಲೋಕೋಪ. ೬–೩೯); ಭಾರತೀಯರು ಸ್ವಚ್ಛತೆಗಾಗಿ 'ಸಪ್ತಲಾ,' 'ಆಮಲಕ,' 'ಸೀಗೆಕಾಯಿ' ಮತ್ತು 'ಫೇನಕ'ಗಳನ್ನು ಉಪಯೋಗಿಸುತ್ತಿದ್ದರು (ಭಾಷಾಶಾ. ೧೬೧). **ಆಮಳಕ**: ಅದತ್ತಾಮಳಕ ಫಳಾಸ್ವಾದನೆಯಿಂ ತೃಪ್ತಿ (ಕಾದಂಪೂ. ೮೭); ತದ್ದುರ್ಗಗಳೞಿಗುಂ ಬಜಟಯೊಳುರ್ದ್ದಿ ನೆಲಾವರೆಯ ಬೇರುಮನಾಮಳಕಮುಮಂ ಬರ್ದ್ದಿಳಿ ಮಿಂಚಿಯ ರಸದೊಳ್ ಸಿರ್ದ್ದಯೆಯಿಂದೊರಸಿ ಪೂಸೆ ದಿನಪಂಚಕದೊಳ್ (ಶಮುದ. ೨೬೧ ಪ್ರಯೋ). [ಸಂ.]

**ಆಮಲಕಪ್ರಮಾಣ** (ನಾ). ನೆಲ್ಲಿಕಾಯಿಯ ಗಾತ್ರ: ಬದರಾಕ್ಷಾಮಲಕಪ್ರಮಾಣಮಶನಂ (ಶಾಂತಿಪು. ೬–೧೦೪). [ಆಮಲಕ + ಪ್ರಮಾಣ]

**ಆಮಲಕಿ, ಆಮಳಕಿ** (ನಾ). = ಆಮಲಕ. **ಆಮಳಕಿ**: "ಧಾತ್ರೀ, ಆಮಳಕೀ, ತಿವಾ— ಈ ೩ ನೆಲ್ಲಿ" (ಹಲಾಯು. ೧೧೧–೪೬೪).
[ಸಂ. ಆಮಲಕೀ]

**ಆಮಲೆ** 'ಅಮಲ್$_1$' ನೋ.

**ಆಮವಡೆ** 'ಅಂಬೊಡೆ' ನೋ.

**ಆಮಶಂಕೆ** (ನಾ). ಆಮಕೂಡಿದ ಭೇದಿ: ಆಮಶಂಕೆ ಕ್ಷಯ ಮೊದಲಾದ ರೋಗಗಳು ರೋಗಾಣುಗಳಿಂದ ಕೂಡಿದ ಆಹಾರ ಮತ್ತು ನೀರಿನ ಮೂಲಕ ಹರಡುವ ಸಂಭವವಿದೆ (ಅಡುಸೌ. ೮೪); ಭೇದಿಯನ್ನು ಅಲಕ್ಷಿಸಿ, ಸಿಕ್ಕಾಪಟ್ಟೆ ತಿನ್ನಿಸಿದರೆ ಮಕ್ಕಳಿಗೆ ಆಮಶಂಕೆ ಬರುವುದುಂಟು (ಗೃಹವಿ. ೧೪೭). [ಆಮ್ಮ$_2$ + ಶಂಕೆ]

**ಆಮಶ್ರಾದ್ಧ** (ನಾ). ಹಸಿಯ ಪದಾರ್ಥಗಳನ್ನು ಉಪಯೋಗಿಸಿ ಮಾಡುವ ಶ್ರಾದ್ಧ: ಸಿಕ್ಕಿದ ಕಡೆ ಆಮಶ್ರಾದ್ಧಕ್ಕೆ ಹೋಗುತ್ತಿರಲಿಲ್ಲ (ಮಾಮರಾ. ೬). [ಆಮ್ಮ + ಶ್ರಾದ್ಧ]

**ಆಮಸೋಲು, ಅಮಸೋಲು, ಆಮುಸೂಲು, ಆಮುಸೋಲು** (ನಾ). ೧. ಒಂದು ಬಗೆಯ ಹುಳಿಯ ಹಣ್ಣು: "ತಿಂತಿಡಿಕ, ಆಮಸೋಲು" (ಗಂಗಾಮು. ೧೫೨). ೨. ಹುಣಸೆ ಹಣ್ಣಿಗೆ ಬದಲಾಗಿ ಒಂದು ಹುಳಿ ಹಣ್ಣಿನಿಂದ ಮಾಡಿದ ಹುಳಿಸಾರು. ೩. ಒಣಗಿಸಿದ ಮಾವಿನಕಾಯಿ ಬಾಳಕ. **ಅಮಸೋಲು** : ೧. (ಮುರುಗಲದ ಹಣ್ಣು) ಸ್ತಂಭಕ (ಅಷ್ಟಾಂಗ. ೧೪೬–೧೨೮). **ಆಮುಸೂಲು** : ೧. (ಸ್ಯಾಂಡರ್). **ಆಮುಸೋಲು** : ೧. (ಪಂಡಿತ).
[← ಮರಾ. ಆಮಸೋಲ್, ಆಮಸೂಲ್, ಅಮಸೋಲ್, ಅಮಸೂಲ್ ; ಹಿಂ. ತೆಲು. ಅಂಸೋಲ್]

**ಆಮಳ** 'ಆಮಲ' ನೋ.

**ಆಮಳಕ** 'ಆಮಲಕ' ನೋ.

**ಆಮಳಕಿ** 'ಆಮಲಕಿ' ನೋ.

**ಆಮಳೆ** (ಗು). (ದಕ). ಇಡೀ; ಪೂರ್ತಿ: ಕೃಷ್ಣಗಿರಿ ಸಂಸ್ಥಾನಾಮಳೆಯಲ್ಲಿ ದೊಡ್ಡ ದೊಡ್ಡ ಸರಕಾರದ ಉದ್ಯೋಗಗಳಲ್ಲಿರುವರು (ಇಬದು. ೬೯) ; ಸಂಸ್ಥಾನಾಮಳೆ ಶಾಲೆಗಳನ್ನು ತೆರೆಯುವಂತೆ (ಕಜಸಾ. ೧೪೮) ; ಯಡ ತೊರೆ ತಾಲ್ಲೂಕು ಆಮಳೆ ಎಲ್ಲ ಬಗೆಯ ಜನಗಳು ವ್ಯಕ್ತಪಡಿಸಿದ ಪ್ರೇಮ ಮೆಚ್ಚುಗೆ . . . ಆಶ್ಚರ್ಯವನ್ನೂ ಉಂಟುಮಾಡಿದವು (ಕೆಲನೆ. ೨೮೯). [?]

**ಆಮಾತಿಸಾರ** (ನಾ). = ಆಮಶಂಕೆ: ಕೃಷ್ಣಪ್ಪನವರು ಆಮಾತಿಸಾರ ದಿಂದ ಕೆಲಕಾಲ ಬಳಲಿ ತೀರಿಕೊಂಡರು (ಪೂಜಾಫ. ೧೧೪).
[ಆಮ್ಮ + ಅತಿಸಾರ]

**ಆಮಾತ್ಯ** (ನಾ). ಮಂತ್ರಿ; ಸಚಿವ : ಶುದ್ಧಸತ್ತ್ವನಭಿರಾಮರಾಮಾತ್ಯ ನತ್ಯಘನಿಶಾದಿತ್ಯಂ (ಮಂಗರಾ. ೧–೧). [ಸಂ.]

**ಆಮಾಶಯ** (ನಾ). ೧. ಜೀರ್ಣಿಸಿದ ಆಹಾರ ಹುಳಿಯಾಗಿ ಕೂಡಿ ಕೊಳ್ಳುವ ಆಹಾರ ನಾಳದ ಭಾಗ, —ಕೋಶ. ೨. ಹೊಟ್ಟೆ; ಜಠರ : ಇದರ ಕೆಳಗಿನ ತುದಿಯು ಎದೆಮುಗುಳಿಗೆ ಮೇಲೆ ಆಮಾಶಯಕ್ಕೆ ಕೂಡಿರುತ್ತದೆ (ಮುಂಬಯಿ. ೬–೩೦೮). [ಆಮ್ಮ + ಆಶಯ]

**ಆಮಿಕ್ಷೆ** (ನಾ). ಕಾಯಿಸಿದ ಹಾಲಿಗೆ ಹಾಕಿದ ಮೊಸರಿನ ಹೆಪ್ಪು; "ಕುದಿಸಿ ಬಿಸಿಯಾದ ಹಾಲಿನಲ್ಲಿ ಮೊಸರನ್ನು ಸೇರಿಸಿ ಪಕ್ವ ಮಾಡಿದ್ದು" (ಅಮರ. ಟೀಕೆ) ; "ಕಾಯ್ದ ಹಾಲೊಳಗೆ ಮೊಸರು ಹಾಕಿ ಮಾಡಿದ ಹೆಪ್ಪು" (ಗಂಗಾಮು. ೨೬).
[ಸಂ. ಆಮಿಕ್ಷಾ]

**ಆಮಿಲಿತ, ಆಮಿಳಿತ** (ಗು). ಸೇರಿದ; ಕೂಡಿದ; ಒಂದಾದ; ಬೆರೆತ. **ಆಮಿಳಿತ** : ಚೆಲುವುಮಿಗೆ ಪೂಜಾಪ್ರಬಂಧಂಗಳನಭಿನಯಿಸುವಂ ದಶಾಂಗಾಮಿಳಿತ ಧೂಪವನಿತ್ತು (ಬಸವು. ೪೧–೨೨). [ಸಂ.]

**ಆಮಿಷ** (ನಾ). ೧. ಮಾಂಸ; ಬಾಡು : "ಪಲಲಂ . . . ಆಮಿಷಂ . . . ತರಸಂ – ಈ ೮ ಮಾಂಸಂ" (ಹಲಾಯು. ೧೦೪–೯); ಪರಸೈನ್ಯಾಮಿಷಮಂ ಪಿಶಾಚನಿವಹಕ್ಕಾಂ ಬೀಱುವೆಂ (ಜಗವಿ. ೬–೩೬) ; ಕಂಡರು ಸರಸಿಯನು ನೀರ್ಗುಡಿಯಲ್ಕೈತಂದಿರಿಸಿದರು ತೀರದಲಿ ಬಹಳಾಮಿಷದ ಕಂಬಿಗಳ (ಕುವ್ಯಾಗ. ೪–೪೨). ೨. ಭೋಗ್ಯವಸ್ತು; ಸುಖಸಾಮಗ್ರಿ. ೩. ಲಂಚ: "ಲಂಚಃ, ಉತ್ಕೋಚಃ . . . ಉಪಚಾರಃ, ಆಮಿಷಂ – ಈ ೫ ಲಂಚಂ" (ಹಲಾಯು. ೬೧–೨೮೦). ೪. ಲೋಭ ; ಬಯಕೆ : ಆಸೆಗೆ ಸತ್ತುದು ಕೋಟಿ, ಆಮಿಷಕ್ಕೆ ಸತ್ತುದು ಕೋಟಿ (ಅವಚಂ. ೨೨–೯೧) ; ಇಂದಿಗೆಬೇಕು ನಾಳೆಗೆಬೇಕೆಂಬ ಆಸೆಯಾಮಿಷವ ಜರೆಯಬೇಕು (ಅಖಂಡೇ. ೧೦೩–೩೩). ೫. ಪ್ರಲೋಭನ : ಆಸೆಯಾಮಿಷ [ಪಾಠಾಂ. ಸ] ತಾಮಸ ಹುಸಿ ವಿಷಯ ಕುಟಿಲ ಕುಹಕ ಕ್ರೋಧ ಕ್ಷುದ್ರ ಮಿಥ್ಯೆ ಇವನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯಾ (ಬಸವ. ೪೬). [ಸಂ.]

**ಆಮಿಷಾಶಿ** (ಗು). ಮಾಂಸವನ್ನು ತಿನ್ನುವ; ಮಾಂಸಾಹಾರಿಯಾದ
[ಸಂ. ಆಮಿಷಾಶಿನ್]

**ಆಮಿಸ** (ನಾ). = ಆಮಿಷ : "ಆಮಿಷ-ಆಮಿಸ" (ಶಮದ. ೨೫೩ ಪ್ರಯೋ).
[< ಸಂ. ಆಮಿಷ]

**ಆಮಿಳಿತ** 'ಆಮಿಲಿತ' ನೋ.

**ಆಮೀನ** (ನಾ). = ಅಮೀನ (೧). [< ಅಮೀನ]

**ಆಮೀನಿ** (ನಾ). ಒಂದು ಬಗೆಯ ಹುಳಿಯಾದ ಮಾವಿನ ಕಾಯಿ : (ದಕ. ೧). [?]

**ಆಮೀಲ** (ನಾ). ತಾಲ್ಲೂಕಿನ ಆಡಳಿತವನ್ನು ನೋಡಿಕೊಳ್ಳುವ ಸ್ಥಳೀಯ ಅಧಿಕಾರಿ; ತಹಸೀಲ್‌ದಾರ : ಆಮೀಲಾನೆ ವ ಕಿಲೆದಾರಾನೆ ವ ದೇವಸ್ಥಾನ ಪಾರುಪತ್ಯಗಾರಾನೆ (ಮೈಅರಿ. ೧೯೩೮, ೧೯–೨ ; 1811) ; ಆಮೀಲಾನಿ ಶಿರಸ್ತೆದಾರಾನಿ (ಮೈಅರಿ. ೧೯೨೯, ೯೪–೧; 1813); ಗಂಜೂರು ಬನಾಮೇ ಆಮೀಲಾನೆ ಸಿರಸ್ತಿದಾರಾನೆ (ಎಕ. VI, ಕೊಪ್ಪ. ೪೮–೨೧ ; 1813) ; ಚಂನಗಿರ್‍ರಿ ಆಮೀಲ ಲಕ್ಷ್ಮಣರಾಯಗೆ ಬರಶಿ ಕಳುಹ್ಸಿದ ನಿರ್‍ರುಪಾ (ಎಕ. VII (S), ಚನ್ನಗಿ. ೮೫–೬ ; 1821) ; ಮತ್ತಮಾ ಉದಯಕಾಲ ದೊಳಾಮಿಲರೆದ್ದು ನಡೆಯುವುದೆಂತೆಂದೊಡೆ (ಅರ್ಚಾವಿ. ೩೧–೩೬); ಸ್ಥಳದ ಮುಖ್ಯಾಧಿಕಾರಿಯಾದ ಆಮೀಲನ ಶ್ರದ್ಧೆ ಅವಶ್ಯಕವಷ್ಟೆ (ಮಾಮರಾ. ೧೯) ; ಆಮೀಲರನೇಕರನ್ನು ಹಿಂಸಿಸಿದರು (ಮಹಾವಂ. II, ೧೪).
[← ಅರ. ಆಮಿಲ್]

**ಆಮೀಲನ, ಆಮೀಳನ** (ನಾ). ಮುಚ್ಚುವಿಕೆ. **ಆಮೀಳನ** : ಆಮೀಳನಮಂ ಕಣ್ಗಳೊಳ್ (ಕವಿರಾ. ೩–೯). [ಸಂ.]

**ಆಮೀಲನಂಗೆಯ್** (ಕ್ರಿ). ಮುಚ್ಚು : ವದನೇಂದುಜ್ಯೋತ್ಸ್ನೆಯಿತ್ತಂ ಕವಿದಪುದೆನುತಂ ಪಾಣ್ಬನಾಸ್ಯಾಬ್ಜದೊಳ್ಮುಚ್ಚಿದಳಕ್ಕುಂ ಕಣ್ಗದಿರ್ಮಿಂ ಚುಗುಮೆನುತದನಾಮೀಲನಂಗೈದಳಕ್ಕುಂ (ರಾಜಶೇ. ೧೧–೩೪).
[ಆಮೀಲನ + ಗೆಯ್ (< ಕೆಯ್₁)]

**ಆಮೀಳನ** 'ಆಮೀಲನ' ನೋ.

**ಆಮು** (ನಾ). = ಆಮ್ಮ೪ : ಕೆಲವು ವೇಳೆಯಲ್ಲಿ ಮಲವಿಸರ್ಜನೆಯಾದರೆ ಆಮು ಮತ್ತು ರಕ್ತಮಿಶ್ರವಾಗಿರುವುದು (ಗ್ರಾಮಾಕ. ೧೨೯). [< ಆಮ್ಮ]

**ಆಮುಕ್ತ** (ಗು). ೧. ಬಿಟ್ಟ ; ಸಡಿಲಗೊಳಿಸಿದ; ಎಸೆದ. ೨. ತೊಟ್ಟ; ಧರಿಸಿದ. (ನಾ). ೩. "ಕವಚ ತೊಟ್ಟಿರುವವನು" (ಅಮರ. ಟೀಕೆ). ೪. ಯುದ್ಧಕವಚ. [ಸಂ.]

**ಆಮುಖ** (ನಾ). [ನಾಟ್ಯ] ನಾಟಕದ ಒಂದು ಅಂಗ ; ಪ್ರಸ್ತಾವನೆ: "ಸೂತ್ರಧಾರನು . . . ಕವಿ ಕಾವ್ಯವಿಚಾರ ವಸ್ತುವಿನ ಅಥವಾ ಪಾತ್ರಗಳ ಸೂಚನೆ ಮುಂತಾದುವನ್ನು ಮಾಡಿ ಹೊರಟು ಹೋಗುವನು. ಅನಂತರ ಕಥೆಯು ಆರಂಭವಾಗುವುದು. ಇಲ್ಲಿಯವರೆಗೆ 'ಆಮುಖ' ಅಥವಾ 'ಪ್ರಸ್ತಾವನೆ' ಎಂದು ಹೆಸರು" (ಕೈಪಿಡಿ. ೨೧೨). [ಸಂ.]

**ಆಮುಗುರ** (ನಾ). ಒಂದು ಊರಿನ ಹೆಸರು : ಕಸಭಿಗೌಉತಿಂಮಪ ಆಮುಗುರ ಬಸವ (ಎಕ. VII, ಶಿವಮೊ. ೧೦೮–೪೫ ; 1558). [?]

**ಆಮುತ್ರಿಕ** (ಗು). ೧. ಪರಲೋಕದ ; ಬೇರೆ ಲೋಕಕ್ಕೆ ಸಂಬಂಧಿಸಿದ. (ನಾ). ೨. ಮೋಕ್ಷ; ಪರಲೋಕದ ಗತಿ: ಅಕಲಂಕ ಚರಿತ್ರಂ ಕ್ಷತ್ರಕುಲೋದ್ಗತನೆರಡುಸಿದೊರ್ಡೈಹಿಕವಾಮುತ್ರಿಕಮಱಿಗುಂ (ಪಂಪಾಮಾ. ೬–೨೧) ; ಇವು ಮೊತ್ತಮೊದಲಣುವ್ರತಮಿವು ಮಸುಳದೆ ನಡೆವೊಡೈಹಿಕಾಮುತ್ರಿಕಮೆಂಬಿವು (ಯಶೋಚ. ೪–೩೨). [ಸಂ.]

**ಅಮುದಿತ** (ಗು). ಸಂತೋಷಪಟ್ಟ; ಹರ್ಷಗೊಂಡ; ತೃಪ್ತಿ ಹೊಂದಿದ : ಪಾಲೊಳಗೆ ಪಾಲ್ಬೆರಸಿದವೊಲಾಜ್ಯದೊಳಾಜ್ಯವೇ ತಾ ಬೆರಸಿ ದಂದದಲಿ ಸದಮಲಾತ್ಮಕ ಬಸವ ಸಶಿವಾಮುದಿತ ಸಮುದಯಹೃದಯ ಸದ್ಗುರುಪದವಿಯೊಳು ಶಿವಲಿಂಗದೊಳಿ ನೀನೈಕ್ಯವಾದೆಯಲಾ (ಬಸಪು. ೬೧–೬೧). [ಸಂ.]

**ಆಮುಷ್ಮಿಕ** (ಗು). ೧. ಪರಲೋಕಕ್ಕೆ ಸಂಬಂಧಿಸಿದ; ಪರಲೋಕದಲ್ಲಿ ಉಂಟಾದ : ಆಮುಷ್ಮಿಕ ವಿದ್ಯೆಗಳಿಗೆ ಪ್ರಕೃತಿಯ ವಾತಾವರಣವು . . . ಬೇಕಾಗಿತ್ತು (ಭಾಇಪ್ರ. ೬೬). (ನಾ). ೨. ಪರಲೋಕ : ಮಕರಕೇತನನಸ್ತ್ರನಿರ್ಬಾಧಕವೆಯಕಟಕಟ್ಟೆಹಿಕಾಮುಷ್ಮಿಕಕೆ ಸಲ್ಲದ ಮತಿಯ ಮನದಲಿ ನೆನೆದನೇ (ತೊರರಾ. ೬–೨೬–೬೩). [ಸಂ.]

**ಆಮುಷ್ಯಾಯಣ** (ನಾ). ಪ್ರಸಿದ್ಧನಾದವನ ಮಗ : "ಪ್ರಸಿದ್ಧನಪ್ಪ ತಂದೆಗೆ ಪುಟ್ಟದಾತನಂ ಆಮುಷ್ಯಾಯಣನೆಂಬುದು" (ಹಲಾಯು. ೬೫–೨೪೧). [ಸಂ.]

**ಆಮುಸೊಲು** 'ಆಮುಸೋಲು' ನೋ.

**ಆಮುಸೋಲು** 'ಅಮಸೋಲು' ನೋ.

**ಆಮೂಲ**$_1$ (ನಾ). ಹಿಪ್ಪಲಿ : "ಊಷಣಾ–ಹಿಪ್ಪಲಿ, ಆಮೂಲ, ಮೆಣಸು" (ಒಷಧಿ. ೧೬). [ಸಂ.]

**ಆಮೂಲ**$_2$ (ಅ). ಮೂಲದಿಂದ ಹಿಡಿದು; ಬುಡದಿಂದ ಹಿಡಿದು. ಆಮೂಲಚೂಲಂ = ಬುಡದಿಂದ ತುದಿಯವರೆಗೆ; ಸಂಪೂರ್ಣವಾಗಿ : ಎಲೆ ಭೂಮಿಾಶ್ವರ ನಿನಗೆ ಪಥ್ಯಮಾವುದದಂ ಮಾಡಾಮೂಲಚೂಲಮೆಮಗೆ ತಳಾಮಳಕಂ ಭವನಿಬದ್ಧಮಬಿಲಿಸಿತೆಮ್ಮಂ (ಯಶೋಚ. ೧–೬೫). [ಸಂ. ಆಮೂಲಂ]

**ಆಮೂಲಾಗ್ರ** (ಅ) = ಆಮೂಲಾಗ್ರಂ : ಆಮೂಲಾಗ್ರವಾಗಿ ಆ ಆಲದ ಮರವನ್ನು ನೋಡಿದನು (ರೂಢಿ). [ಸಂ. ಆಮೂಲಾಗ್ರಂ]

**ಆಮೂಲಾಗ್ರಂ** (ಅ). ಬುಡದಿಂದ ತುದಿಯವರೆಗೆ : ಮಲ್ಲಿಗೆ ಜಾಜಿಗಳ ಪೂಗಳಿಂ ಪೂಗಳೊಂದುಗೂಡಿ ಕಡುಗಂಪುವಡೆದುವಾಮೂಲಾಗ್ರಮಾ ಬನದ ನಡುವೆ ಪುಟ್ಟ (ಜೈಮಿಭಾ. ೩–೩೬). [ಸಂ.]

**ಆಮೆ**$_1$, **ಆವೆ**$_1$ (ನಾ). ಒಂದು ಜಲಚರಪ್ರಾಣಿ; ಕೂರ್ಮ; ಕಮಠ : ಒರ್ವ ಮಿಾಂಗುಲಿಗನೊಂದಾಮೆಯಂ ಬಾಟಿವಾಟಿ ನಾಲ್ಕು ಕಾಲಂಕಟ್ಟ (ವಡ್ಡಾರಾ. ೧೨೦–೧೬); ಪೊದಳ್ದುಗುರ್ ಶುಕ್ತಿಜದ ಬೆಡಗಿಂಗೆ ಭಂಗಮಂ ಸಂಗಳಿಸೆ ಪಾದಾಗ್ರವಾಮೆ ಚೆಲ್ವೆಂದಾಮೆಯಂ ಜಡಿದು ನೀರೊಳ್ಕೆರಪೆ (ಪದ್ಮರಾ. ೩–೨೬). **ಆವೆ**$_1$ : "ಕಚ್ಛಪಃ, ಕಮಠಃ, ಕೂರ್ಮಃ — ಈ ೩ ಆವೆ" (ಹಲಾಯು. ೧೧೮–೪೪); ಮಿಾನಾವೆ ಪಂದಿಯೆಂದೆನಿತಾನುಂ ತೆಜನಾಗಿ ಡೊಂಬವಿದ್ದೆಯನಾಡಲ್ ನೀನಜಿವೆ (ಪಂಪಭಾ. ೬–೫೬); ಈ ವನಿತೆಯ ಮೇಗಾಲಜನಾವೆಯ ಚಿಲ್ಪುಗಳನೀಯೆ ಭಯದಿಂ ವನಮಂ ತಾವಂಜಿ ಪೊಕ್ಕುವೆನೆ ಮುಂಕಾಲಿಂ ಪೊಜಗಾವೆಯೆಂಬವಡವಿಯೊಳೊಳವೇ (ಧರ್ಮಾಮೃ. ೩–೧೪೧); ನಾಡೆ ಪಗಿಲ್ತೆ ಸೆವಾವೆಯ ಜೋಡೆನೆ ಮೇಗಾಲ್ಗಳಿ ಸೆದುವಾ ಸುಂದರಿಯಾ (ಉದ್ಭಟ. ೬–೮೮).
[ದೇ.॥ ತಮಿ. ಅಮ್ಮೆ, ಯಾಮ್ಮೆ; **ಮಲ.** ಆಮ; **ತುಳು.** ಏಮೆ; **ಕೊಡ.** ಆಮೆ; **ತೆಲು.** ತಾಬೇಲು, ತಾಮೇಲು]

**ಆಮೆ**$_2$ (ನಾ). ಕಚ್ಚಾ ಆಹಾರ ಪದಾರ್ಥಗಳು; ಬೇಯಿಸದ ಪದಾರ್ಥಗಳು : ಅವರಿಗೆ ಧರೆಯ ಆಮೆಗಳೆಲ್ಲಾ ಸಲುವುದು ಅವರಿಗೆ ಕಳಸ ಕನ್ನಡಿಯೂ (ದೇವಾಂಪು. ೩–೧೩೯); ನಿರುಪಾಧಿ ಮಠ ಇನಿತು ಆಮೆಸಾಮೆಯ ಧರೆಯ ಮಹಜನದ ಹನ್ನಿಬ್ಬರಿಗೆ (ದೇವಾಂಪು. ೩–೧೩೩); ಅಕ್ಕಿ ಕಣಕ ತಳಿಗೆಯ ಗೌಡಿಕೆಗಳ ಪೊಕ್ಕಳ ಆಮೆಗಳನಿತ್ತಾ (ದೇವಾಂಪು. ೩–೧೩೯). [<ಆಮ್ಮ$_2$]

**ಆಮೆದೆಱೆ** (ನಾ). ಒಂದು ತೆರಿಗೆ, —ಸುಂಕ; ಆಮೆಯನ್ನು ಹಿಡಿಯುವ ಹಕ್ಕಿಗೆ ಕೊಡಬೇಕಾದ ಸುಂಕ (?) : ಗಾಣದೆಱೆ ಆಮೆದೆಱೆ ಮಗ್ಗಮುದ್ರೆ ಒಳವಾಱು ಹೊರವಾಱು ಮದುವೆ × ಣಗೆ ಮುಂತಾದ (ಎಕ. VII, ಶಿವನೊ. ೭೧–೩೦; 1431). [ಆಮೆ$_1$ ? + ತೆಱೆ$_2$]

**ಆಮೇಗೆ** (ಅ). ತರುವಾಯ; ಅನಂತರ : ಕಾಮಾಂಧಕಂಗಾಮೇಗೆ ಬರ್ಪಾ ಕಾರ್ಯವಂ ಕಾಣಿಸದೆನುತ ಮಱುಗಿ (ಬಸಪು. ೪೫–೩).
[ಆ$_2$ (< ಅದು$_1$) + ಮೇಗೆ]

**ಆಮೇಲೆ** (ಅ). = ಆಮೇಗೆ : "ಪುನರರ್ಥದೊಳ್ = ಆಮೇಲೆಂಬರ್ಥದಲ್ಲಿ" (ಶಮದ.ಕ. ೩೧೨ ಟೀಕು); ಆಮೇಲೆ ಅದನ್ನು ಬಿಡಿಸಿ ತಂದು ಆರಿಸಿ ಕಾಳು ಬೇರೆ ಮಾಡುತ್ತಾರೆ (ಮುಂಬಯಿ. ೪–೨೬). [ಆ$_2$ (< ಅದು$_1$) + ಮೇಲೆ]

**ಆಮೈತ್ರ** (ಗು). ಸ್ನೇಹದಿಂದ ಕೂಡಿದ; ವಿಶ್ವಾಸವುಳ್ಳ : ಶತ್ರುನಾಶ ಖನಿತ್ರ ಕರುಣಾಪಾತ್ರ ದುರಿತಾಮಿತ್ರ ಭಕ್ತಕ್ಷೇತ್ರ ಜಂಗಮ ಸುಪ್ರಸಾದಾಮೈತ್ರ (ಬಸಪು. ೫೯–೪೫). [ಸಂ.]

**ಆಮೋದ** (ಗು). ೧. ಸಂತೋಷಕರವಾದ; ಸುಖಕರವಾದ : ರಾಜಾನ್ನದ ಕೂಱುಂ ಪೆಸಱ ತೊವೆಯುಂ ಬೆಣ್ಣೆಗಾಸಿದಾಮೋದ ಸುಗಂಧ ಪರಿಮಳಂ ಸಾರ್ಪ ತುಪ್ಪಮುಂ. . . ಬಡ್ಡಿಸಿ (ವಡ್ಡಾರಾ. ೭೮–೧೫). (ನಾ). ೨. ಸಂತೋಷ; ಆನಂದ; ಸುಖ : ನೂರಾರು ಜನರ ಆ ಸಸ್ನೇಹ ಪರಿಚಯದಿಂದಲಂದಾಮೋದಗೊಂಡೆ (ಇಂಚಾಪ.೩೩–೫೨). ೩. ಸುವಾಸನೆ; ಪರಿಮಳ : "ಆಮೋದಃ, ಪರಿಮಳಃ, ಸೌರಭ್ಯಂ, ಸುಗಂಧಿತಾ –ಈ ೪ ಕಂಪು" (ಹಲಾಯು. ೧೪–೭೭); ತುಂಬಿ ಪೀರ್ವ[illegible]ಂ ಪೀರ್ದಪುದೇ ಕಂಡಂದುಱು ತೆ ನವ್ಯಾಮೋದಮಂ ಪೂಗಳೊಳ್ (ಜಗವಿ. ೧–೧೩). [ಸಂ.]

**ಆಮೋದಖೇಲ** (ನಾ). ಸಂತೋಷಕರವಾದ ಅಥವಾ ವಿನೋದದ ಆಟ : ಸುಂದರಿಯರಾಮೋದಖೇಲದಿಂದಿರಲಂದು ತೀರದೊಳ್ ನವ ಸಸಿಯಾ (ಪರಶು. ೧೭–೧೬). [ಆಮೋದ + ಖೇಲ]

**ಆಮೋದಚಿತ್ತ** (ನಾ). ಸಂತೋಷಗೊಂಡ ಮನಸ್ಸು : ಅದು . . . ಕುರಂಗದವೋಲ್ ತೂರ್ಣಗತಿಪ್ರಯುಕ್ತಮಳಿಯಂತಾಮೋದಚಿತ್ತಂ (ರಾಜಶೇ. ೧೨–೧೦೨). [ಆಮೋದ + ಚಿತ್ತ]

**ಆಮೋದಿ** (ಗು). ೧. ಸುಖದಿಂದ ಕೂಡಿದ; ಆನಂದವುಳ್ಳ. ೨. ಸುವಾಸನೆಯುಳ್ಳ. (ನಾ). ೩. ಬಾಯಿಗೆ ಹಾಕಿಕೊಳ್ಳುವ ಸುಗಂಧ.
[ಸಂ. ಆಮೋದಿನ್]

**ಆಮೋದಿತ** (ಗು). ೧. ಸಂತೋಷಗೊಳಿಸಲ್ಪಟ್ಟ. ೨. ಸುವಾಸನೆಯುಂಟುಮಾಡಲ್ಪಟ್ಟ : ನಿಜದಿವ್ಯ ಪರಿಮಳಾಮೋದಿತ ದಿಗಂಗನಾಮುಖಂಗಳಪ್ಪ ಸುಗಂಧದ್ರವ್ಯಂಗಳಂ ಪೂಸಿ (ಆದಿಪು. ೬–೧೦೫ ವ). [ಸಂ.]

**ಆಮೋದಿಸು** (ಕ್ರಿ). ೧. ಸುಖಿಸು; ಸಂತೋಷಪಡು : ಸ್ವಾಮಿಯೋಲಗವಾದ ನೀನೆಯ್ದಿದಿರವ ಕೇಳ್ದಾಮೋದಿಸಿದನು ಬಾರೆಂದು (ಭರಚ. ೪೭–೫೭). ೨. ಸುವಾಸನೆ ಕೊಡು : ಪರಿಮಳದಿಂದಾಮೋದಿಸಿದ ಗಂಧದ್ರವ್ಯದೊಳು (ಕುವ್ಯಾವಿ. ೩–೯೨); ಆಮೋದಕಾನಂದಿಸುತ ದುರ್ಗಂಧದ ಸೀಮೆಗೆಱಗದಳಿಯಂತೆ ಆಮೋದಿಸುತ ಗುಣದೊಳಗೆ ದೋಷವ ಬಿಡುವಾ ಮನುಜರಿಗೆಱಗುವೆನು (ಕುರಾಸಾಂ. ೧–೪೫). [ಆಮೋದ + –ಇಸು$_3$]

**ಆಮ್ನಾಯ** (ನಾ). ೧. ಪರಂಪರಾಗತವಾದ ಪದ್ಧತಿ; ಸಂಪ್ರದಾಯ; ವಂಶಾನುಗತ : ದಿವದೊಳ್ ಮೇಲಪ್ಪ ರತ್ನಂಗಳೆಂತನಿತಂ ಮುಂ ಮಣಿಮಾಳಿಗಿತ್ತನವು ತಮ್ಮಾಮ್ನಾಯದಿಂ ಬಂದೊಡೀತನುಮಿಾಗಳ್ ನೆಱೆ ತೊಟ್ಟು ಬಂದನಿದನೇಂ ನೀಮೆಲ್ಲರುಂ ಕಾಣಿರೇ (ಆದಿಪು. ೨–೧೮). ೨. ವಂಶ; ಪೀಳಿಗೆ. ೩. ವೇದ : ನಿಜಸ್ವರೂಪ ನಿರೂಪಣ ಚಕಿತ ಸಕಲ ಸಮಾಮ್ನಾಯತಂತ್ರ ಲಕ್ಷ್ಮೀಕಾಂತ ಶ್ರೀಪಾದಭಕ್ತಿಯುಕ್ತ . . . ರುದ್ರ ಪ್ರಣೀತ ಶ್ರೀ ಜಗನ್ನಾಥವಿಜಯ (ಜಗವಿ. ೧–೮೦ ವ). [ಸಂ.]

**ಆಮ್ನೆ** (ನಾ). ಸ್ಮೃತಿಗತಮಾಡುವಿಕೆ; ನೆನಪಿಗೆ ಒಳಪಡಿಸುವುದು: ಚಿತ್ತದ ಆಮ್ನೆಯಿಂದ ಶಾಸ್ತ್ರಭೀತಿಯಿಂದ ಕವಿತ್ವದ ಲಕ್ಷಣದಿಂದ ಅನಿತ್ಯ ನಿತ್ಯವೆಂದು ಮಿಕ್ಕಾದವರಿಗೆ ಹೇಳುವ ಕರ್ತೃವಲ್ಲದೆ (ನಗಮಾ. ೬೨). [ಸಂ. ಆಮ್ನಾ]

**ಆಮ್ಮು** (ನಾ). ಒಡೆತನ; ಸ್ವಾಮಿತ್ವ: ಪಡೆದೊಂ ಶ್ರೀಪುರುಷಯ್ಯ ಲಾಮ್ಮುಮೊದಲೊಳ್ಕಲ್ನಾಡನೊನ್ದಂ (ಎಕ. III, ಮೈಸೂರು. ೬-೬; 750). [< ಆಳ್ಮೆ / ತಮಿ. ಆಣ್ಮೈ]

**ಆಮ್ಮುಳಿಂಜ** (ನಾ). ಒಂದು ಊರಿನ ಹೆಸರು: ಭೀಮಂಣಶೇಖರು ಭೊಂಮಣ ಸೇಖರು ಸಹವಾಗಿ ಆಂಮುಳಿಂಜದಲು ಕ[ಂ]ಮ್ಮ್‌ರಂಬಳಿಯ (ಸೌಇಇ. IX-ii, ೪೬೦-೯; 1465). [?]

**ಆಮ್ರ**$_1$, ಆಂಬರ, ಆಂಬ್ರ (ನಾ). ಹುಳಿ; ಸಾರು: ಆಮ್ರಮಾಡ್ಯಾಳ ಅಟಗಾಳಿಂತಾ ಗಟವಾಣೆವ್ವ ಬೀಗುತಿ (ಲೋಕಗೀ. ೫೧); ಆಮ್ರವನ್ನು ಸುರ್‌ರನೆ ಸುರಿದುಕೊಂಡ ಶಿವನಗೌಡ (ಕರಿಹಾ. ೩೪); ನಮ್ಮ ಮನೆಯಲ್ಲಿ ಅವರೆಕಾಳ ಆಮ್ರ (ರೂಢಿ). **ಆಂಬರ** (ಶಿ). **ಆಂಬ್ರ**: ಹೊಸತೆನಲು ಕ್ಷಾರಾಂಬ್ರ ಲವಣಾದ್ಯಸಮರಸಯುತಮಾಗೆ ಸೌಗಂಧಿಸುವ ಮಾಂಸ ವನಟ್ಟು (ಬಸಪು. ೫೭-೩೫); ವಗ್ಗರಣೆಯಿತ್ತಾಂಬ್ರಮಾ ಲೇಸಿನಿಂ ಮಾಡಿ (ನವಮೋ. ೯-೬). [< ಸಂ. ಆಮ್ಲ]

**ಆಮ್ರ**$_2$ (ನಾ). ಮಾವಿನ ಮರ; ಮಾವು: ಕಣ್ಗೆ ಕರಮೊಪ್ಪಿದುವಾಮ್ರ ಮಹೀಜರಾಜಿಗಳ್ (ಸುಕುಮಾ. ೪-೪೨); ಸಿರಿ ತಂದಿಕ್ಕಿದಶೋಕೆ ವಾಗ್ವನಿತೆಯಿಟ್ಟಾಮ್ರಂ (ಗಿರಿಕ. ೧-೩೧). [ಸಂ.]

**ಆಮ್ರದಸೊಪ್ಪು** (ನಾ). ಒಂದು ಬಗೆಯ ಸೊಪ್ಪು (ಮೈ ಔ ಗ. ೨೭-೫೨೨). [ಆಮ್ರ$_1$ + ಸೊಪ್ಪು]

**ಆಮ್ರರಸ** (ನಾ). ಮಾವಿನ ಹಣ್ಣಿನ ರಸ: ಘೃತಕ್ಷೀರದಧಿನಾಳಿಕೇರ ತೋಯಾಮ್ರರಸೇಕ್ಷುರಸಗಂಧೋದಕಾದಿಗಳಿಂ ಮಾಡುವ ಸವನಮುಂ (ಆದಿಪು. ೧೫-೧೩ ವ). [ಆಮ್ರ$_2$ + ರಸ]

**ಆಮ್ರವನ** (ನಾ). ಮಾವಿನ ಮರಗಳಿರುವ ವನ; ಮಾವಿನ ತೋಪು: ಉನ್ಮದಭೃಂಗಮಾಳಿಕಾರವಮುಖರೀಕೃತಾಮ್ರವನಂ (ಆದಿಪು. ೧೩-೩೦); ಭಗವಂತನು ಇಲ್ಲಿಯೇ ನನ್ನ ಆಮ್ರವನದಲ್ಲಿ ತಂಗಿದ್ದಾನೆ (ಹತ್ತುಮ. ೮೪). [ಸಂ. ಆಮ್ರವಣ (ಆಮ್ರ + ವನ)]

**ಆಮ್ರವಲ್ಲಿ** (ನಾ). ಮಾವಿನ ಬಳ್ಳಿ: ಭಗ್ನವಾಗೆ . . . ನವಾಮ್ರವಲ್ಲಿ ವೋಲ್ (ಜಗವಿ. ೨-೫೬). [ಆಮ್ರ$_2$ + ವಲ್ಲಿ$_2$]

**ಆಮ್ರಾತಕ** (ನಾ). ಅಮಟೆಯ ಮರ,—ಕಾಯಿ: ಆಮ್ರಾತಕ ಕೇತನ ನಿಕೇತಮಳಿ ಶುಕ ಪಿಕ ವಿರಚಿತ ಪಕ್ಷಪಾತ (ಶಾಂತಿಪು. ೩-೬ ರ); ತಿಳಕಾಮ್ರಾತ(ಪ)ಕ ಬೆಲ್ಲ(ಪ)ವತ್ತ ಸಿರಿಸಾಂಕೋಲಾಖ್ಯ ಭಲ್ಲಾತ ಕಾಮುಳಕಾದ್ಯಂಘ್ರಿಪಮೂಳಮಂ ಬಳಸಿ ಪುತ್ತಾದಂದು (ಲೋಕೋಪ. ೫-೨೭). [ಸಂ.]

**ಆಮ್ರಾಯ** (ನಾ). ಒಂದು ಬಗೆಯ ಹೂವು: ಕಟ್ಟಿದನಾಮ್ರಾಯ ಲತಾಂತಮಾಲಿಕೆಯಂ (ಅನಂಪು. ೩-೯೭). [ಸಂ.]

**ಆಮ್ರೇಡಿತ** (ನಾ). ಹೇಳಿದುದನ್ನು ಮತ್ತೆ ಹೇಳುವುದು; ದ್ವಿರುಕ್ತಿ; ಪುನರುಕ್ತಿ: ಈಡಿತಮೆನಗೆ ಸಮಂತಾಮ್ರೇಡಿತಮುಂ ಮಹಿಪ ಬಗೆ ವೊಡೆಂದು ಮುಹುರ್ವಾಕ್ಕ್ರೀಡೆಯನುಱದು ಕುಮಾರಕ ಚೂಡಾಮಣಿ ತಂದೆಯೆಂದುದರ್ಕೆದರ್ದೆಗೊಂಡಂ (ಚಂದ್ರಪು. ೨-೫೫). [ಸಂ.]

**ಆಮ್ಲ** (ನಾ). ೧. ಹುಳಿ; ಹುಳಿರಸ: "ಆಮ್ಲಮೆಂದೆನಲ್ಕಾ ಹುಳಿಗ ಮಕ್ಕುಂ" (ಮಂಗರಾ. ೬೫-೫); ಕೊಡವಾಲ ಕೆಡಿಸುವೊಡಾಮ್ಲವೆನಿತಾಗ ಬೇಕೆಂದನು (ಹಚಕಾ. ೭-೨೨); ತೊವರ್ಗಿಂದ್ರೇಜ್ಯನ್ ಮಿಕ್ಕಿನಾಮ್ಲಕೆ ಸಿತಂ (ಜಟ್ಟಮ. ೮-೧೪೧). ೨. ಹುಣಿಸೆ. [ಸಂ.]

**ಆಮ್ಲಕಾರಕ** (ನಾ). ಆಮ್ಲವನ್ನುಂಟುಮಾಡುವುದು. [ಸಂ.]

**ಆಮ್ಲಜನಕ** (ನಾ). ಪ್ರಾಣವಾಯು; ಆಕ್ಸಿಜನ್: ಆಮ್ಲಜನಕ, ಸಾರಜನಕ, ಜಲಜನಕ, ಇಂಗಾಲ ಮೊದಲಾದ ನಿರವಯವ (Inorganic) ವಸ್ತುಗಳ ರಾಸಾಯನಿಕ ಸಂಕಲನದಿಂದ ರೂಪುಗೊಳ್ಳುವ ಪಿಷ್ಟ ಮೇದಸ್ಸು ಮತ್ತು ಸಸಾರಜನಕ ಪದಾರ್ಥಗಳೆ ಪ್ರಾಣಿಗಳ ಆಹಾರವಸ್ತುಗಳು (ಪ್ರಾಣಿಶಾ. ೯). [ಆಮ್ಲ + ಜನಕ]

**ಆಮ್ಲದಾಡಿಮ** (ನಾ). ದಾಳಿಂಬೆಯಲ್ಲಿ ಒಂದು ಬಗೆ; ಹುಳಿ ದಾಳಿಂಬೆ: ಮಧುರದಾಡಿಮ, ಆಮ್ಲದಾಡಿಮ . . . ಫಲಂಗಳುಳ್ಳ ತರು ನಿಕರಂಗಳುಂ (ವಿವೇಕ. ೨೧೧). [ಆಮ್ಲ + ದಾಡಿಮ]

**ಆಮ್ಲಪಿತ್ತ** (ನಾ). ಒಂದು ರೋಗ: ಆಮ್ಲಪಿತ್ತಕ್ಕೆ ಹತ್ತಿಹರಳ ಹುರಿದು ಚೂರ್ಣಂಮಾಡಿ ಏಲಕ್ಕಿ ಸಕ್ಕರೆಯಲ್ಲಿ ಕೊಳ್ಳಲು ಆಮ್ಲಪಿತ್ತ ಮಾಣ್ಬುಂ (ವಿವೈವಿ. ೭೮). [ಆಮ್ಲ + ಪಿತ್ತ]

**ಆಮ್ಲಪೀತ** (ನಾ). ಒಂದು ಗಿಡ: "ಗೆಣಸು ಗುಣಮೂಲಿದಾಗುಡಿಯ ಧೊ ೀ ಮು ಖಿ ಯ ಂ ಬೆ(ಯ)ಹಳದಿಯಾಮ್ಲ[ಪಾಠಾಂ. ಮ್ರ]ಪೀತಂ" (ಮಂಗರಾ. ೪೦-೩೩). [?]

**ಆಮ್ಲವತಿ** (ನಾ). ಒಂದು ಬಗೆಯ ಗಿಡ: "ಆಮ್ಲ[ಪಾಠಾಂ. ಮ್ರ]ವತಿ ವೋಟಿ ಜೀವಣಿಕೆ(ಗೆ) ಮಾಧುರ್ಯೆಯಕ್ಕು" (ಮಂಗರಾ. ೪೨-೩೭). [ಸಂ. ಆಮ್ಲವತೀ]

**ಆಮ್ಲವೇತಸ** (ನಾ). ಒಂದು ಬಗೆಯ ಹುಳಿ ಹಬ್ಬೆಗಿಡ. [ಆಮ್ಲ + ವೇತಸ]

**ಆಮ್ಲೀಕರಣ** (ನಾ). ಹುಳಿಮಾಡುವಿಕೆ (Acidification. ಪಾರಿಶಿ). [ಸಂ.]

**ಆಮ್ಲೀಕರಿಸು** (ಕ್ರಿ). ಹುಳಿಯಾಗಿಸು; "ಆಮ್ಲವನ್ನಾಗಿ ತಿರುಗಿಸು" (Acidify. ಇಂಕಶಿ). [ಆಮ್ಲೀಕರಣ + -ಇಸು$_3$]

**ಆಮ್ಲೀಯ** (ಗು). ಹುಳಿಯಾದ: ಬೀಜದ ರಚನೆಯಲ್ಲಿಯೇ ಆಮ್ಲೀಯ ಪ್ರತ್ಯಾಮ್ಲೀಯ ವಸ್ತುಗಳಿರುತ್ತವೆ (ಪ್ರಾಣಿಶಾ. ೩೧). [ಸಂ.]

**ಆಮ್ಲೇಟು** (ನಾ). ಮೊಟ್ಟೆಯಿಂದ ಮಾಡಿದ ದೋಸೆ: "ಯಾಕೆ ಮಾಮಾ, ಹೊರಗೆ ಆಮ್ಲೇಟು ಕಟ್ಲೇಟು ಆಗಿದೆಯೇನೋ" (ಪಹಾರ. ೧೨೦). [← ಇಂ. Omelette]

**ಆಯ್**$_1$, ಆಯಿ$_1$, ಆಯು$_1$ (ಕ್ರಿ). ೧. ವಿರಳವಾಗಿ ಅಲ್ಲಲ್ಲಿ (ಬಿದ್ದಿ) ರುವ ಪದಾರ್ಥಗಳನ್ನು ಶೇಖರಿಸು; ಆರಿಸು; ಸಂಗ್ರಹಿಸು; ಆದ್ದ (ಭೂತಕೃ), ಆದು (ಭೂತನ್ಯೂ): "ಆಯ್-ವಿರಲವಸ್ತ್ವಾಕರ್ಷಣೇ, ಆಯುಷ್ಮೇ ಚ (ವಯಸ್ಸು)" (ಶಮಧಾ); ಆನೋದ ಕುಸುಮ ಸಮಿತಿಯ ನಾಮರಗಳೊಳಾಯ್ದು ಕೊಯ್ದುಮಿಲ್ಲಿಗೆ ಬರ್ಪಂ (ಕವಿರಾ. ೩-೧೩೨); ಲಂಬಣಂ ಪಱಿಯೆ ಮುತ್ತಿನ ಕೇಡನೆ ನೋಡಿ ನೋಡಿ ಬಳ್ಕುತ್ತಿರೆ ಯೇವ ಮಿಲ್ಲದಿವನಾ[ಯ್ಬು]ದೊ ತಪ್ಪದೆ ಪೇಱಿಮೆಂಬ ಭೂಪೋತ್ತಮನಂ (ಪಂಪಭಾ. ೯-೬೯); ಒಂದು ವರುಷದಾರಂಬಕ್ಕಾಜದೆ ಸಾವನ್ನೆವರಮೆಂ ಜಲಗುಬಿನಾಯ್ದುಜ್ಜೊಕ್ಕಲಮಗನುಂ (ಧರ್ಮಾಮೃ. ೭-೧೫೩). ೨. ಮನಸ್ಸಿಗೆ ಒಪ್ಪಿದುದನ್ನು ಮಾತ್ರ ಸ್ವೀಕರಿಸು; ಚುನಾಯಿಸು: ಅಶೇಷಭಾಷಾವಿಷಯೋಕ್ತಿಯಂ ಬಗೆದುನೋಡಿ ಪುರಾಣಕವಿ ಪ್ರಭು ಪ್ರಯೋಗಾವಿಲ ಸದ್ವಿಚೋದಯಮನಾಯ್ದುವಱಿಂ ಸಮೆದೊಂದು ಕಾವ್ಯದಿಂ (ಕವಿರಾ. ೨-೧೫೫); ಬಿರುದರನದಟನೊಳುಬ್ಬರಮುರಿವರ ನಾಯ್ದುಱಿಕೊಂಡುವರಿಗನ ಕಣೆಗಳ್ (ಪಂಪಭಾ. ೧೨-೧೧೪); ಇಂತಿಂತ ನಂತಕಾಂತಲತಾಂತಂಗಳನಾಯ್ದು ಕೊಯ್ದು (ಗಿರಿಕ. ೫-೬೬); ಸರಸ ವೀಣಾಧ್ವನಿಯ ಹಂಸೆಯ ಗರುವ ಗತಿಗಳನಾಯ್ದು ಮನ್ಮಥ ವರ ವಿರಿಂಚಿಯೆ ಸೃಜಿಸಿದನು ಪಾಂಚಾಲನಂದನೆಯ (ಕುವ್ಯಾಳ. ೧೩-೧೭).

೩. (ಉತ್ತಮವಾದ ಅಥವಾ ಬೇಕಾದ ವಸ್ತುಗಳ ಜತೆಯಲ್ಲಿ ಬೆರಸಿಕೊಂಡಿರುವ ಬೇಡದ ವಸ್ತುಗಳನ್ನು) ಬೇರ್ಪಡಿಸು : "ಆಯ್ ಇತಿ ರತ್ನ ವಸ್ತು ಫಲಪುಷ್ಪಾದಿ ವಸ್ತುಸಮೂಹೇ ಸಮೀಚೀನ ವಸ್ತೂನಾಂ ಪೃಥಕ್ಕರಣಂ" (ಶಬ್ದಾನು. ೪೪೧ ವ್ಯಾಖ್ಯಾ). **ಆಯಿ$_1$: ೧.** ಅಡಗನಾಯಿದು ಕೆದಱಿ ರಕುತವ ತುಡುಕಿ ಚೆಲ್ಲುವ ಕರಿಯ ಬರಿಕೈ ಬಿಡಿಸಿದುವು ಹುಟ್ಟಾಗಿ ಯಮರಾಜನ ಪರಿಗ್ರಹಕೆ (ಕುವ್ಯಾಭೀ. ೪–೮೨). **೨.** ಜೋಯಿಸನ ಕರೆದಖಿಳ ದಿವಸದೊಳಾಯಿದರು ಶುಭದಿನವನು (ಕುವ್ಯಾಅ. ೭–೧೩). ೩. ಅಕ್ಕಿಯಲ್ಲಿರುವ ಕಲ್ಲನ್ನೆಲ್ಲಾ ಸ್ವಲ್ಪ ಆಯಿ (ರೂಢಿ). **ಆಯು$_1$ : ೧.** ಬಿದ್ದ ಬಳೀಲಿ ಬೆರಣಿ ಆಯಬೇಕು, ಇದ್ದ ಬಳೀಲಿ ಇರಬೇಕು (ಗಾದೆ); ಕೆಳಗೆ ಉದುರಿದ್ದ ಹಣ್ಣುಗಳನ್ನು ಆಯುವುದರಲ್ಲಿ ನಿರತನಾಗಿದ್ದ (ರೂಢಿ). **೨.** ಈ ಹಣ್ಣಿನ ರಾಶಿಯಲ್ಲಿ ಒಳ್ಳೆಯ ಹಣ್ಣನ್ನು ಆಯು (ರೂಢಿ). **೩.** ಅಕ್ಕಿಯಲ್ಲಿ ಕಲ್ಲನ್ನಾಯುತ್ತಿದ್ದಳು (ರೂಢಿ).

**ಆದುಣಿಗ** = ಭಿಕ್ಷೆಬೇಡಿ ಜೀವಿಸುವವನು (ದಕ. ೬). **ಆಯ್ದು ಕೊಳ್** = ಆರಿಸಿಕೊ; ಚುನಾಯಿಸಿಕೊ : ಕನಕರಜತ ವಿಚಿತ್ರಾಲಂಕೃತ ಸ್ವರೂಪಸಮನ್ವಿತಂಗಳುಮಪ್ಪ ಗದೆಗಳುಮನಿರ್ವರುಮಾಯ್ದುಕೊಂಡು (ಗದಾಯು. ೮–೧ ವ); ವಸುಭಾಗಭಟ್ಟಂ ಕೇಳ್ದಾ ಕಥಾಸಮುದ್ರದೊಳ್ ಪಂಚರತ್ನಮಪ್ಪೈದು ಕಥೆಗಳನಾಯ್ದುಕೊಂಡು ಪಂಚತಂತ್ರಮೆಂದು ಪೆಸರಿಟ್ಟು (ಪಂಚತಂ. ೧೩–೩).

[**ದೇ.** ‖ **ತಮಿ. ಮಲ.** ಆಯ್; **ತುಳು.** ಆಯು; **ಕೊಡ.** ಆಯ್; **ಪರ್ಜಿ.** ಆಚ್; **ಗೊಂಡಿ.** ಆಚಾನಾ; **ಕುಇ.** ಆಸ್ಕ; **ಕುವಿ.** ಆಚಲಿ; **ಕುರುಖ್.** ಆದಾ; **ಮಲ್ತೊ.** ಆದೆ]

**-ಆಯ್$_2$** (ಪ್ರ). ಆ ದಿಕ್ಕಿನ, ಆ ಕಡೆಯ ಎಂಬ ಅರ್ಥದಲ್ಲಿ ದಿಗ್ವಾಚಕಗಳಿಗೆ ಸೇರುವ ಒಂದು ಪ್ರತ್ಯಯ : ಅನ್ತಿಬನ್ದು ಬೆಟ್ಟದಾ ಮೂಡಾಯ್ ಪೊರೆಎ ಬನ್ದು ತುಱ್ದಿಲ್ಲಾಗಲೊಳ್ಕೂಡಿತ್ತು ಸೀಮೆ (ಮೈಆರಿ. ೧೯೩೬, ೫೩–೨೯ ; 550); ಪೊಲಮೇರೆ ಪ್ರಾಚೀದೆಸೆ ಪನೆದ್ಗುಣ್ಚೆಯಿನ್ಮೂಡಾಯ್ ಕಡೆ (ಎಕ. X (S), ಮುಳಬಾ. ೩೨೮–೪೯ ; 650); ಬೆಟ್ಟದ ಮೇಲ್ಪೊರಳೆಬನ್ದು ಮೂಡಾಯ್ ಸಿ[ಸೀ]ಮೆಯುಳ್ ಕು[ಕೂ]ಡಿತ್ತು (ಇಅ. XVIII, ೩೬೮–೨೮; 8ನೆಯ ಶತ). 'ತೆಂಕಾಯ್', 'ಮೂಡಾಯ್' ಪರಾ. [ಆಗು$_1$ ?]

**ಆಯ$_1$** (ನಾ). **೧.** ಒಳಗು; ಮರ್ಮ; ರಹಸ್ಯ : ಆ ಯಜ್ಞಸಂಗತಿಯನಾ ಬಾದರಾಯಣಂ ಪೇಳೆ ಬಳಿಕವನಿಪಂ ಧರ್ಮಸಾರಾಯಮಂ ಕೇಳ್ದನಾ ಮುನಿವರನೊಳು (ಜೈಮಿಭಾ. ೫–೪೮); ಆಯದಲಿ ನಿಜದಿನಿಂದಾಯವನು ಆಱಿಯದಲೆ ವಾಯಕ್ಕೆ ಜಪವ ಜಪಿಸುವ ಯೋಗಿಯ ಬಾಯ ನೋಡೆಂದ (ಸರ್ವಜ್ಞ. ೫೬೪). **೨.** ಐಶ್ವರ್ಯ; ಸಂಪತ್ತು : ಶ್ರೀಯುವತಿಯನಾ ವೀರಶ್ರೀಯುವತಿಗೆ ಸವತಿಮಾಱ್ಪೆನೆಂದರಿನೃಪರುಳ್ಳಾಯವೆರಸೆಱೆದುಕೊಂಡು ಧರಾಯುವತಿಗೆ ನೆಗೞ್ದ ಹರಿಗನೊರ್ವನೆ ಗಂಡಂ (ಪಂಪಭಾ. ೧೧–೧); ಸಲೆಸಂದ ಚಕ್ರಿವೃಂದದ ಚಲದಾಯದಾಯತಿಯ ಬೀರದ ಚಾಗದ ಮಾತುಗಳ್ ಪೊದೞ್ದುದವಿರೆ ತತ್ಪ್ರಶಸ್ತಿಗಳೊಳಂತವನೊಯ್ಯನೆ ನೋಡಿ ನೋಡಿ (ಆದಿಪು. ೧೩–೭೧); ನೀಮೆಮಗೆ ಪೇೞಿಂ ಸ್ವೇಚ್ಛೆಯಿಂ ಪೃಚ್ಛೆಯಂ ಎಂಬುದುಮಾ ಪಂಡಿತಂ ಕನ್ನಗಳ್ಳನಂತೆ ಬಳಪಮಂ ತೆಗೆದು ಕಬ್ಬಿಗನಂತೆ ಗೋಮೂತ್ರಕವೃತ್ತಾಳಂಕೃತನಾಗಿ ಭಂಡಾರಿಗನಂತಾಯಮಂ ಪಿಡಿದು ಜೂದುಗಾಱನಂತೆ ಕವಡಿಕೆಯಂ ತೆಗೆದು (ಸುಕುಮಾ. ೩–೬, ವ). **೩.** (ಶರೀರದ) ಮರ್ಮಸ್ಥಾನ; ಅಪಾಯದ ಸ್ಥಳ : ದುರುಳನೆಂದನು ಪಕ್ಷಿ ಸಾಯದಿರೆ ಆಯಗಳ ಮರೆಮಾಚದಂತೆ ತೋರಿಸಿ ಕಾಡುಯೆನ್ನಲಾಗರಿದು ತನ್ನ ಪ್ರಾಣವುಂಗುಷ್ಠದೊಳಗಿಹುದೆಂದು ರಾವಣಂ ಕಪಟವ ನುಡಿಯೆ (ತುರಂಗ. ೩೪–೩೪). **೪.** ಪ್ರಮಾಣ; ಪರಿಮಿತಿ; ಅಳತೆ : ತದ್ವಶಾತನಯ ವಿಮೋಹಮುಂ ಹರಿಯ ವಿಕ್ರಮದಾಯಮುಮೇನುದಾತ್ತಮೋ (ಶಾಂತಿಪು. ೨–೧೦೫); ಶ್ರೀಯುಪೇಂದ್ರನ ಚರಣಕಮಲಕದಾಯದಲಿ ಮೂಜಡಿಗೆ ನೆಱೆಯದೆ ರಾಯ ಕೇಳ್ಳೆಯಿಾ ಮಹಾಬ್ರಹ್ಮಾಂಡವೆರಡಡಿಯ (ಸಂಭಪ. ೧೦ ಸೂ); ತಾಯಿವೊಲು ನಿನಗಾತ್ಮ, ಮಡದಿವೊಲು ಕಾಯವವರಾಯವನು ಸರಿ ನೋಡು (ಮಂಕುಕ. ೩೯೯). **೫.** ಕ್ರಮ; ರೀತಿ; ನೀತಿ : ಪೆಂಡಿರ್ ಪಱಯಿಸುವಂದದೆ ಗಂಡರ್ ಪಱಯಿಸುವುದಾಯಮೋ ಛಲಮಂ ಕೊಂಡೆಸಪರಾರೊ (ಗದಾಯು. ೫–೩೩); ಪೊಸ ಮಿಂಚಿನವೊಲ್ಪಳಂಚುತಾಯದಿಂದಡಿಯಿಡುವ ತುಱಿಲಾಳ್ಗಳ್ (ಉದ್ಭಟ. ೧–೮೦ ವ); ಚಾಗಮುಂ ಪೆರ್ಚಿದ ಸೊಂಪುಂ ಪೆರ್ಮೆಯುಂ ನನ್ನಿಗೆ ನೆಲೆಯೆನಿಸಿರ್ದಾಯಮುಂ ಬೀರಮುಂ... ಕೈಮಿಗೆ (ಕಬ್ಬಿಕಾ. ೧೧೯). **೬.** ಉದ್ದೇಶ; ನಿಶ್ಚಯ; ಅಭಿಪ್ರಾಯ : ಏನು ನೃಪ ಸಂಗರವೆನ್ನೊಳಗಾನಲಾಪೆಯಾ ಸೋತೆನೆಂದನುಮಾನವಿಲ್ಲದೆ ಪೇಳ್ದಪೆಯಾ ಬಿಡೆನಲ್ಲದೊಡೆ ಬಱಿದೆ ಏನು ನಿನ್ನಾಯವನು ಹೇಳೆನೆ (ಉತ್ತರಾ. ೬–೩೪). **೭.** ರಚನೆಯ ವಿಧಾನ; ಯೋಜನೆ; ಕಟ್ಟಡದ ನೆಲಗಟ್ಟಿನ ಆಕಾರ ಮುಂತಾದುದು : ಏನೆಂಬೆನೀ ಹಸ್ತವೀಯಳತೆಯಿಾಯಧಿಷ್ಠಾನವೀರೇಖೆಯಿಾ ಖಂಡೆಯಂ ಕಡೆಗೆಯಿಾ ತಾನವೀಯಾಯವೀಗೃಹವೆಂದು ಹೆಸರಿಡುವರಿಲ್ಲೆಂದು ಹಿಂದೆ ಮುಂದೆ (ಸಿದ್ಧರಾ. ೩–೪೩); ಆಯ ಹಾಕೋವಾಗಲೆ ನ್ಯಾಯ ಬಂತು (ಗಾದೆ). **೮.** ಸೌಕರ್ಯ; ಅನುಕೂಲತೆ : ಆಂ ಬರ್ಪನ್ನವಾಯಂ ನಿನಗಿದು ವಿಗತಾಪಾಯಮಪ್ಪೊಂದುಪಾಯಂ (ಜಗವಿ. ೧೬–೧[illegible]); ತಾಯೆ ಕೇಳೀ ವಿಪ್ರಪುರದೊಳಗಾಯವುಂಟೆನಗೆಂದು ರಕ್ಕಸನಾಯಿ ನೆಲಸಿಹ ನೂರ ಹೊಱಗಣ ಶೈಲಶಿಖರದಲಿ (ಕುವ್ಯಾಅ. ೧೦–೧೧); ಆಲದಮರವ ಸೀಳಿ ನಡುವೋರುಂಟೆ ಮಾವಿಲ್ಲದ ಮನೆಗೆ ಗೌರಿಯ ಕೊಟ್ಟರೆ ಆಯಾ ಇನ್ಯಾರು ಕಲಿಸೋರು (ನಾಪದ. ೧೦೫). **೯.** ಸಮುಸ್ಥಿತಿ; ಹಿಡಿತ : ಸಣ್ಣಬಳ್ಳಿ ಕಾಲಿಗೆ ಸಿಕ್ಕಿದರೂ ಆಯ ತಪ್ಪಿ ಬೀಳುವಂತಾಗುತ್ತಿತ್ತು (ನಡೆದಾ. II, 1233); ನಿಂತಿದ್ದ ಆಯ ತಪ್ಪಿ ಮುಂದೆ ಕೊಂಚ ಮುಗ್ಗರಿಸಿದೆ (ಆಲಹೂ. ೧೪). **೧೦.** ನಿಯಮ; ದೇವಸ್ಥಾನದ ಕಟ್ಟಳೆ (೬). **೧೧.** ಶರೀರದ ಒಂದು ಭಾಗ (೬). **೧೨.** ವಿವರ; ತಪಸೀಲು (೬). **೧೩.** ಅಗಲಕ್ಕಿಂತ ಉದ್ದ ಅಧಿಕವುಳ್ಳದ್ದು; ದೀರ್ಘಚತುರಸ್ರ.

[**ದೇ.** ‖ **ತಮಿ.** ಆಯ್ವು = ಅಗಲ, ವಿಸ್ತಾರ; **ತುಳು.** ಆಯ = ಅಳತೆ, ಪ್ರಮಾಣ; **ತೆಲು.** ಆಯಿತಮು, ಆಯಿತ್ತಮು. / **ಸಂ.** ಆಯ]

**ಆಯ$_2$** (ನಾ). = ಆತ : ಆಯನ ಸತಿ ಭವನದೊಳತ್ಯಾಯತ ಪತಿಭಕ್ತೆ ನಾಗಿಕಬ್ಬೆ (ಎಇ. XVIII, ೧೮೪–೧೭ ; 1097). [ಆ$_2$ (< ಅದು$_1$) + ಅಯ್ಯ$_1$]

**ಆಯ$_3$** (ನಾ). ಪರಾಕ್ರಮ; ಸಾಮರ್ಥ್ಯ (?) : ಪುಟ್ಟದೊಡಾತನೊಳಱವೊಡವುಟ್ಟಿದುಱಱಿವಿಂಗೆ ಪೆಂಪು ಪೆಂಪಿನೊಳಾಯಂ ಕಟ್ಟಾಯದೊಳಳವಳವಿನೊಳೊಟ್ಟಜೆ ಪುಟ್ಟದುದು ಪೋಲ್ಪರಾರ್ ಬದ್ದೆಗನಂ (ಪಂಪಭಾ. ೧–೨೪); ಚಲಮಿಲ್ಲದ ಗಂಡಂ ತಂಬುಲಮಿಲ್ಲದವದನಮಾಯಮಿಲ್ಲದ ತುಱಿಲಾಳ್ (ಅಜಿಪು. ೬–೯೫); ಪದುಳಂ ಕುಳ್ಳಿರ್ದಮಗಾಯದ ಮಾತಂ ತಗುಳೆಗೞಿಪಿ ಪೋದಂ ಸಂದಿರ್ದಪಟರೊಳಿಱಿದಱಿಯಂ ತಪ್ಪದೆ ಕಮ್ಮಱಿ ಯೋಜನೆನಿಸಿದಂ ಬಿಲ್ಲೋಜಂ (ಗದಾಯು. ೨–೧೩); ಆರ್ಪು ಕುಂದಿತ್ತು ಶೌಚಂ ತೊಲಗಿತ್ತಾಯಂ ಬಳಲ್ದತ್ತು (ಸೌಇಇ. IX–i, ೧೧೭–೭ ;. 1055); ವಿದ್ವಿಷ್ಟಬ್ರಜಕ್ಕೆಯ್ದೆ ಭೀತಿಯನಿತ್ತಾಯಮನಪ್ಪುಕೆಯ್ದು ಚಲಮಂ ಕೈಕೊಂಡು (ಮೈಆರಿ. ೧೯೩೯, ೩೭–೬ ; 1096). [?]

**-ಆಯ$_4$** (ಪ್ರ). ಒಂದು ಭಾವನಾಮ ಪ್ರತ್ಯಯ. 'ಉಳಿತಾಯ', 'ಪೂರಾಯ,' 'ಬಂಡಾಯ' ಪರಾ.

**-ಆಯ$_5$** (ಪ್ರ). ಹೆಂಗಸರ ಹೆಸರುಗಳ ಜತೆಗೆ ಅಮ್ಮ ಎಂಬ ಅರ್ಥದಲ್ಲಿ ಕೆಲವು ವೇಳೆ ಸೇರುವ ಪ್ರತ್ಯಯ. ಉದಾ: ಅನಲಾಯ, ಕಮಲಾಯ.

**ಆಯ$_6$** (ನಾ). ರಾಗಾಲಾಪನೆಯ ವಿಸ್ತರಣೆ (?): ಮಿಗುವಾಯಂ ಜತಿ ತಾಳಮುಜ್ವಳಿಪ ಮಿಶ್ರಂ ತತ್ಪ್ರಮಾಣಂ ಕರಂ ಬಗೆಗೊಂಬಾಶ್ರುತಿ ಮೇಣ್ ಬಜಾವಣೆ ಲಸದ್ಗ್ರಾಮಂಗಳೌಚಿತ್ಯದಿಂ ಪುಗೆ ಪಕ್ಕಾದ ನವೀನ ತಾನತತಿಯೊಪ್ಪಲ್ ಪಾಡಿದರ್ (ಉದ್ಭಟ. ೩-೩). [?]

**ಆಯ$_7$** (ನಾ). **೧.** ಆದಾಯ; ಹುಟ್ಟುವಳಿ; ವರಮಾನ: ಪ್ರಾಯಶ್ಚಿತ್ತ ನಿಮಿತ್ತದೊಳಾಯದ ಪಣಮೆನೆತನಿತ್ತುಮೂರೊಳ್ಸಹಿರಣ್ಯಾಯದ ಪಣಮುಂ ಪೆರ್ಗ್ಗೆಱೆಗಾಯುಮಿದೆನ್ನೊಸದು(ಸೆದು)ಕೊಟ್ಟೋರೀ ದ್ವಿಜಮುಖ್ಯರ್ (ಕಇ. II, ೪-೯; 918); ಗಣಕರ್ಕಳೆಲ್ಲರುಂ ನೋಡುತಿರೆ ಆಯದೊಳು ಬೀಯಮಂ ಕಳೆದು ನಿಲವಂ ಕಂಡು (ಬಸರ. ೫-೭೫); ಆ ಮಲಿತಾಂಡ ಸೆಟ್ಟಿಯ ಕಾಣಿಕೆ ಕಡ್ಡಾಯ ಸುಂಕ ಸುವರ್ಣ ಮನೆದೆಱೆ ಮುಂತಾದ ಆಯವೆಲ್ಲಉ ಸರ್ವಮಾನ್ಯವಾಗಿ ಸಂದು ಬಹುದು (ಎಕ. IX (S), ಕಾನಕಾ. ೩೦-೭; 1332). **೨.** ಉಪಾಯ; ಮಾರ್ಗ: ಆಯದಲಿ ನಿಜದಿ ನಿಂದಾಯವನು ಅಱಿಯದಲೆ ವಾಯಕ್ಕೆ ಜಪವ ಜಪಿಸುವ ಯೋಗಿಯ ಬಾಯ ನೋಡೆಂದ (ಸರ್ವಜ್ಞ. ೫೭೪). **೩.** [ಜ್ಯೋತಿ] ಲಗ್ನದಿಂದ ಹನ್ನೊಂದನೆಯ ಸ್ಥಾನ; ಇಷ್ಟಗ್ರಹವಿರುವ ಕಡೆಯಿಂದ ಹನ್ನೊಂದನೆಯ ಸ್ಥಾನ: ಸಹಜಾಯವ್ಯಯ ಧನದಶಸುಹೃದ್ಗೃಹಸ್ಥಾಯಿಯಾಗೆ ತತ್ಕಾಲದೊಳಾಗ್ರಹಮಂತದು (ಜಾತತಿ. ೨-೧೭). **೪.** ಲಾಭ. **೫.** ದೇವಸ್ಥಾನ, ಬ್ರಾಹ್ಮಣ ಮುಂತಾದವರಿಗೆ ಕೊಟ್ಟ ಕೊಡುಗೆ: ಶ್ರೀಶ್ರುತಕೀರ್ತಿತ್ರೈವಿದ್ಯದೇವರ ಕಾಲಂ ಕರ್ಚ್ಚಿ ಧಾರಾಪೂರ್ವಕಮಾಗಿ ಕೊಟ್ಟಾಯಮೆಂತೆಂದೊಡೆ (ಎಇ. XIX, ೩೩-೨೬; 1135); ಚಂದ್ರಮೌಳಿ ದೇವರ ಕಾಲಂ ಕರ್ಚಿ ಧಾರಾಪೂರ್ವಕಂ ಮಾಡಿ ಬಿಟ್ಟಾಯವೆಂತೆಂದೊಡೆ(ಎಇ. XX, ೧೨-೪೮; 1167). **೬.** ಒಂದು ಬಗೆಯ ತೆರಿಗೆ; ಸುಂಕ: ತೆಱೆ ಕಾಣಿಕೆ ಸೇಸೆಯಾಸೆಗಳ್ ಪುಂನೆಯ ವಾಯದಾಯಮಿವು ಸಲ್ಲವು ಸರ್ವ್ವನಮಸ್ಯವೆಂದು ಬಿಟ್ಟಂ (ಎಇ. XXVII, ೧೫-೫೭; 1114); ಅಯ್ದುತ್ತಿನ ಮೂಲೆ ಸುಂಕಮಂ ಯೆಲೆ ಆಯಂ ಹೊಂಗೆ ಹಾಗ (ಎಕ. VIII, ಸೊರಬ. ೫೧೦-೫; 1154); ದೇವಿಯ ಹಬ್ಬದೊಳಗೆ ಯೇನು ಮಾಱಿದ ವಸ್ತುವಿಗೆ ಯಾಯ ಸುಂಕವಿಲ್ಲ (ಕೊಲ್ಹಾಶಾ. ೨೧೯-೩೩; 1278). **೭.** ಕಂದಾಯ: ಆತನ ಮಕ್ಕಳಿಗೆ ಶಾನುಭೋಗತನವನ್ನು ನೇಮಕಮಾಡಿ ಅವನಿಗೆ ರೈತರಿಂದ ಆಯ ಮೊದಲಾದ್ದು ಸಲ್ಲಬೇಕೆಂದು ನಿಗದಿ ಮಾಡಿಸಿದನು (ಚಿತ್ರಪಾ. ೩ ಉಪೋ). **೮.** ಹಳ್ಳಿಗಳಲ್ಲಿ ವಂಶಪರಂಪರೆಯಿಂದ ಸೇವೆ ಸಲ್ಲಿಸಿಕೊಂಡು ಬಂದಿರುವವರಿಗೆ ಕಣದಲ್ಲಿ ಅಳೆದುಕೊಡುವ ಧಾನ್ಯ, —ವರ್ಷಾಶನ (ಕಿಸಂಗ್ಲಾ. ೪೯); ರೈತರಿಂದ ದೊರೆಯುವ 'ಆಯ'ದ ಕಾಳು, ಸತ್ತ ದನಗಳ ಮಾಂಸದಿಂದಲೇ ಅವರು ಹೊಟ್ಟೆ ಹೊರೆಯಬೇಕಾಗುತ್ತಿತ್ತು (ನೀನಮು. ೩೩). **೯.** ಅಂತಃಪುರದ ಕಾವಲುಗಾರ. [ಸಂ.]

**ಆಯಂಗಿಡು** (ಕ್ರಿ). ಹುರುಳು ಕೆಟ್ಟುಹೋಗು; ಧೈರ್ಯಗೆಡು: ಆಯಂಗಿಡೆ ಕಾಮಂ ಕೈಪಾಯದೆ ನಿಂದಾರ್ದು ಕೊಂದಪಂ (ಧರ್ಮಾಮೃ. ೩-೧೭೮); ಆಯಂಗೆಟ್ಟು ಪ್ರ[ಪ]ತಿವ್ರತಿಕ್ಕೆಯವಳಂ ತಾಂ ಸುಟ್ಟು ದುರ್ಮೋಹದಿಂ ಬಾಯಂಬಿಟ್ಟು . . . ಕಳಂಕಮಾಗೆ ಕುಲಮುಂ ಪೋದಂದದೇನೊಳ್ಳಿತೇ (ಜೀವಸಂ. ೨೨೮-೩೮).

[ಆಯ$_1$ + ಕಿಡು (< ಕೆಡು)]

**ಆಯಂಗೆಱೆ** (ನಾ). ಒಂದು ಹೆಸರು (?): ಆಯಂಗೆಱೆಯ ಉತ್ತರ ಶೃಂಖ[ಗ]ಮಂ ಲಂಘಿಸಿ (ಇಅ. VIII, ೨೧೩-೨೬; 10ನೆಯ ಶತ). [?]

**ಆಯಂದಪ್ಪು** (ಕ್ರಿ). **೧.** ಕೆಚ್ಚುಗುಂದು; ಸಾಮರ್ಥ್ಯ ಕಡಮೆಯಾಗು: ಅಂತು ಶೂನ್ಯಹಸ್ತದೊಳಿರ್ವರುಂ ಪೆಣೆದು ಪಲವುಂಗಾಯದೊಳಾಯಂದಪ್ಪದೆ ಪಿರಿದುಂ ಪೊಯ್ತು ಸಂತರ್ಪಿನಂ ಪೋರೆ (ಪಂಪಭಾ. ೮-೨೧ ವ); ಪಲವುಂ ಗಾಯಂಗಳೊಳಾಯಂದಪ್ಪದೆ ತನಗವಂ ಸಮಾನಬಳನಪ್ಪುದಱಿಂ ಪಿರಿದು ಪೊಯ್ತು ಸಂತರ್ಪಿನಂ ಪೋರ್ದು (ಪಂಪಭಾ. ೮-೭೬ ವ). **೨.** ತೂಕತಪ್ಪು. [ಆಯ$_1$ + ತಪ್ಪು$_1$]

**ಆಯಂಮಾಡು** (ಕ್ರಿ). ಆದಾಯವಾಗಿ ಮಾಡು; ಹುಟ್ಟುವಳಿಯಾಗಿ ಕೊಡು, —ಬಿಡು: ಮಾಱಿದ ಸೀರೆಗಂ ಅಡಕೆಗಂ ಪೊಂಗೊಂದು ಸಲೆ ವೀಸಮಂ ಆಯಂ ಮಾಡಿಬಿಟ್ಟರು (ಕಇಅ. ೧-೧-೯; 1092).

[ಆಯ$_7$ + ಮಾಡು$_1$]

**ಆಯಃಪಾರ** (ನಾ). ಕಬ್ಬಿಣದ ಕವಚ (?): ಈಯೆಮ್ಮಯ್ಯನಿನಾದುದೊಂದು ಪಗೆಯಿಂ ಸೀಳ್ದುಗ್ರಪಾಂಚಾಳರಾಜಾಯಃ[ಪಾಠಾಂ. ಯುಃ]ಪಾರಮನನ್ಯಭೂಪಬಲಮಂ ಪರ್ದಿಂಗೆ ಬಿರ್ದಿಕ್ಕುವೆಂ (ಪಂಪಭಾ. ೧೨-೩೮). [ಸಂ.]

**ಆಯಃಶೂಲಿಕ** 'ಆಯಶ್ಶೂಲಿಕ' ನೋ.

**ಆಯಕ** (ನಾ). ಆ ಅಕ್ಕ; ಆ ಹೆಂಗಸು: ಆ ರಾಯನಾಲಿಸುತ್ತಿರೆ ಸಭಾಜನವೆಯ್ದೆ ಮಱುಗಲಾಯಕನೆಂದಳು [ಪಾಠಾಂ. ಮಲಮಱುಗಲಾಯೆಂದಳು] (ಭಾವಚಿಂ. ೮-೩೩); ವಿರಾಜಿಸುತಿರ್ಪುದೆಯ್ದೆಯಾಯಕನ ಪದಂಗಳೀಗೆಮಗೆ ಭಾಗ್ಯದ ಪೆಂಪಂ (ಉಮಾಶ. ೧೦); ಸಲೆ ಬಾಹುಬಲ್ಲಿದ ನಿನ್ನ ವಿಕ್ರಮದೇಳ್ಗೆ ಬೆಲೆಗಟ್ಟಬಲ್ಲವರಾರು ಮೊಲೆವಾಲನುಣಿಸಿದಾಯಕನ ಪ್ರಾಣವ ಕೊಂದ ಕೊಲೆಗೇಡಿ ಬಲುಹ ತೋಱೆನಗೆ (ಮೋಹತ. ೪೦-೨೬). 'ಈಯಕ' ಪರಾ.

[ಆ$_2$ (< ಅದು$_1$) + ಅಕ$_1$ (< ಅಕ್ಕ$_1$)./
ತೆಲು. ಆಯಕ = ಅಕೆ, ಪೂಜ್ಯೆ]

**ಆಯಕಟ್ಟು$_1$** (ನಾ). **೧.** ಅಚ್ಚುಕಟ್ಟು; ಅನುಕೂಲತೆ; ಸೌಕರ್ಯ; ಹೊಂದಿಕೆ: ಸಮುದ್ರವನು ಕುಡಿದರೆ ಈ ಮಹದಾಶ್ಚರ್ಯವನ್ನು ನೋಡಬೇಕಾದ್ದೇ ಸರಿ. ಅದಕ್ಕೆ ನಿನಗೆ ಏನು ಆಯಕಟ್ಟು ಮಾಡಿಸಿಕೊಡಬೇಕು (ಕಥಾಮಂ. IV, ೧೨೭); ಇದು ಹೊರಗಿನ ನೋಟಕ್ಕೆ ತೋರುವ ಆಯಕಟ್ಟು (ದೌಲತ್. ೧೨೩). **೨.** ಮರ್ಮಸ್ಥಾನ; ಮಹತ್ವದ ಪ್ರದೇಶ: ಈ ಊರಿನ ಆಯಕಟ್ಟಿನ ಸ್ಥಾನವನ್ನು ಇಲ್ಲಿ ದೊರೆತಿರುವ ಪ್ರಾಚೀನತೆಯ ಅನೇಕ ಅವಶೇಷಗಳನ್ನು ಅವಲೋಕಿಸಿದರೆ (ಕನ್ನಸು. I, ೯೨); ಆಯಕಟ್ಟಿಗೆ ಬಾಣ ತಾಕಿತು (ಜಮಿನ್ದಾ. ೨೧); ಅವಳ ಆಯಕಟ್ಟಿನ ಮೇಲೆ ಸುತ್ತಿಗೆಯ ಏಟು ಹಾಕಿದೆ. ಅವಳು ಅವಾಕ್ಕಾದಳು (ಬದುಜ. ೧೧೪); ಕೆಲವು ಸಂದರ್ಭಗಳಲ್ಲಿ ಬೇಟೆಗಾರರು ಮೃಗಗಳನ್ನು ಆಯಕಟ್ಟಿನ ಸ್ಥಳಕ್ಕೆ ಅಟ್ಟಿಸಿಕೊಂಡು ಹೋಗಿ ಅಲ್ಲಿ ಅವುಗಳನ್ನು ಕೊಲ್ಲುವ ವ್ಯವಸ್ಥೆ ಮಾಡುತ್ತಾರೆ (ಪಂಜಪಂ. ೨೨). **೩.** ರಚನೆ; ಮಾಟ; ಸೌಷ್ಠವ: ಆ ವೃದ್ಧನ ಕರಲಾಘವವನ್ನೂ ಬಾಹುಬಲವನ್ನೂ ಶರೀರದ ಆಯಕಟ್ಟನ್ನೂ ನೋಡಿ ರಾಜಒಡೆಯರು ಅಚ್ಚರಿಗೊಂಡಿದ್ದಾರೆ (ಶ್ರೀರಾಯ. ೧೨೪); ಅವರು ರಾಜಾಜಿಯ ಮುಖದ ಆಯಕಟ್ಟನ್ನು ನೋಡಿದರೆ —'ಈ ವ್ಯಕ್ತಿಯಲ್ಲಿ ವಿಶಾಲತಾಭಾವವಿರಲಾರದು; ಆದರೆ ಅಗಾಧವಾದ ಗಾಂಭೀರ್ಯವಿದೆ'—ಎಂದು ಹೇಳದಿರಲಾರರು (ರಾಜವ. ೬೫). **೪.** ಒಂದು ಗ್ರಾಮದ ಎಲ್ಲೆಕಟ್ಟಿಗೆ ಸೇರಿದ ಹೊಲಗದ್ದೆ ಮುಂತಾದ ಎಲ್ಲಾ ಕ್ಷೇತ್ರಗಳ ಸಮಗ್ರ ವಿಸ್ತೀರ್ಣ. **೫.** ಒಂದು ಕೆರೆ ಅಥವಾ ಕಾಲುವೆ ಮುಂತಾದ ಜಲಾಶಯದ ಆಸರೆಯಲ್ಲಿ ನೀರಾವರಿಯನ್ನು ಪಡೆದು ಬೆಳೆಯುವ ಜಮೀನಿನ ಒಟ್ಟು ವಿಸ್ತಾರ (ಮೈಗೆಜೆ. IV, ೭೬೩). **೬.** ಒಂದು ಜಮೀನಿನ ವಿಸ್ತಾರ (ಕಿ).

೭. (ಮೈಸೂರು ಸೀಮೆಯಲ್ಲಿ ಚಿಕ್ಕದೇವರಾಜ ಒಡೆಯರು ಏರ್ಪಡಿಸಿದ್ದ ೮ಳ ಜಿಲ್ಲೆಗಳ) ಪೂರ್ಣವಾದ ಆಯವ್ಯಯದ ಮೇಲ್ವಿಚಾರಣೆಯ ಇಲಾಖೆ : ಆಯಕಟ್ಟಿನ ಕೃಷ್ಣೈಗೆ ಬರಸಿ ಕಳುಹಿದ ನಿರೂಪ . . . ನಿತ್ಯಾರಾಧನೆ ಬಗ್ಯೆ ಸಹ ನಿಂನಹವಾಲು ಆಯಕಟ್ಟಿನ ಚಾವಡಿಯಿಂದಲ್ಲು (ಮೈಆರಿ. ೧೯೩೮, ೨೪–೧,೫ ; 1820). ೮. ದೇವಸ್ಥಾನದಲ್ಲಿ ಅನುಸರಿಸಬೇಕಾದ ನಿಯಮಾವಳಿ (ದಕ. ೬). [ಆಯ$_1$ + ಕಟ್ಟು$_2$]

**ಆಯಕಟ್ಟು₂** (ನಾ). ನಿಗದಿಯಾದ ಒಂದು ಹಣದ ಮೊಬಲಗು ; ಗೊತ್ತಾದ ಹಣದ ಮೊತ್ತ (೬). [ಆಯ$_7$ + ಕಟ್ಟು$_2$]

**ಆಯಕಟ್ಟುಗಾರ** (ನಾ). ೧. ಕೆಲಸವನ್ನು ಅಚ್ಚುಕಟ್ಟಾಗಿ ಮಾಡುವವನು. ೨. ಕೌಶಲ್ಯದಿಂದ ಕೆಲಸ ನಡೆಸುವವನು (ದಕ. ೬). [ಆಯಕಟ್ಟು$_1$ + –ಗಾರ (< –ಕಾಱ)]

**ಆಯಕಾಱ, ಆಯಗಾರ₁, ಆಯಗಾಱ₂** (ನಾ). ಕೆಲಸದ ರಹಸ್ಯವನ್ನು ತಿಳಿದವನು: ಅದಱೊಳ್ ಪುಟ್ಟಿದ ಗಂಡರೆಲ್ಲಮತಿವೀರರ್ . . . ಗಾಂಪರುಂ ಚದುರರ್ ಲೆಂಕರುಮಾಯಕಾಱ [ಪಾಠಾಂ. ಗಾಱ] ರಥಮವ್ಯಾಪಾರರುಂ ಧಾ ರ್ಮಿ ಕ ರ್ (ಅನಂಪು. ೧೧–೧೨ ; ಸೂಕ್ತಿ ಸೂ. ೪–೧೦೨ ನೋ). **ಆಯಗಾರ₁** (ದಕ. ೬). **ಆಯಗಾಱ₂** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಆಯ$_1$ + –ಕಾಱ]

**ಆಯಗ, ಆಯುಗ** (ನಾ). ಕತ್ತಿಯ ಹಿಡಿ (?) : ಮ ಗ ಧಾ ಧೀ ಶ ನ ನೆತ್ತಿಯೊಳ್ ಮುೞಿದ ಕೂರ್ವಾಳ್ ಚೋಳನೀರಳ್ಗೆ ಬಿಟ್ಟಗೆಗೋದನ್ನಿರಲುರ್ಬಿನಿಂದಸಬಳಂ ನೇಪಾಳನಾ ಬಾಯೊಳಾಯಗವಡ್ಡಂ ನಿಲೆನಟ್ಟ ಕಟ್ಟದಲಗಾದಂ ತನ್ನ ದೋರ್ಗರ್ವ್ವಮಂ ತ್ರಿಗುಣಂ ಮಾಡೆ (ಎಕ. XI, ದಾವಣ. ೩೫–೧೭ ; 1160) ; ಚೋಳನ ನೆತ್ತಿಯೊಳ್ಮುೞಿದ ಕೂರಸಿಯಾಯಗವಾಂಕೆಯಾಗೆ ಪಾಂಚಾಳನ ಬಾಯನೆಯ್ದೆ ನೆಱೆನಟ್ಟಲಗು[ರ್ಬಿ]ಗಗುಬ್ಬುರ್ವಿತ್ತ ನೇಪಾಳನ ಬೆಂನೊಳೆಯ್ದೆ ಬಳಿದಿರ್ದ್ದ ಮಹಾಸಬಳಂ ದಿಟಕ್ಕೆ ಬಲ್ಲಾಳನ ಬೀರಮುಂ ತ್ರಿಗುಣಿಸುತ್ತವೆವೇಳವೆ ಭೂತಳಾಗ್ರದೊಳು (ಕಇ. IV, ೧–೨೦ ; 1204). **ಆಯುಗ** : 'ಹೊನ್ನಾಯುಗ' ಪರಾ. [< ಸಂ. ಆಯೋಗ]

**ಆಯಗಾಣಿಸು** (ಕ್ರಿ). ಮರ್ಮಸ್ಥಾನವನ್ನು ಮುಟ್ಟುವಂತೆ ಮಾಡು, —ಗುರಿಯಾಗಿಸು ; ಲಕ್ಷ್ಯವಾಗಿಸು : ಸಿಂಗರಕೆ ಸಿಂಗರಮಾದ ಯೊಯುವತಿಯ ಕಾಣುತವೆ ಆಯಗಾಣಿಸಿ ತನ್ನಂತರಂಗವನಾ ಕಾಯಜಕಣೆಗಾಖಳನು (ಶ್ರೀಪಾಲ. ೫–೬೫). [ಆಯ$_1$ + ಕಾಣಿಸು]

**ಆಯಗಾಣು** (ಕ್ರಿ). ಸಮತೆಯನ್ನು ಕಾಣು ; ಸಮಸ್ಥಿತಿಯಲ್ಲಿರು ; ಸೌಕರ್ಯಕಾಣು : " . . . ಕಠಿಣಮನಸ್ಕಳಾಗಿ . . . ಕೈಯಾರ . . . ಸ್ವಂತಕ್ಕೆಗಳಿಂದಲೇ . . . ನನ್ನ ಒಂದೇ ಒಂದು ಹಸುಳೆಯನ್ನು ಕಳೆದುಕೊಳ್ಳುತ್ತಿರುವೆನಲ್ಲಾ . . . " ಎಂದು ಹೇಳುತ್ತ ಹೇಳುತ್ತ ಆಯಗಾಣದೆ ಬಿದ್ದೇ ಬಿಟ್ಟಳು (ರಂಗನಾ. ೧೩೬). [ಆಯ$_1$ + ಕಾಣು (< ಕಾಣ್)]

**ಆಯಗಾರ₁** 'ಆಯಕಾಱ' ನೋ.

**ಆಯಗಾರ₂** 'ಆಯಗಾಱ₁' ನೋ.

**ಆಯಗಾರ್ತಿ** (ನಾ). ಉಪಾಯಗಾರಳಾದ ಹೆಂಗಸು ; ತಂತ್ರಿ ; ಚತುರೆ (ದಕ. ೬). [ಆಯಗಾರ$_1$ (< ಆಯಕಾಱ) + –ತಿ$_1$]

**ಆಯಗಾಲು** (ನಾ). ೧. ವಿಗ್ರಹವನ್ನು ಅಳವಡಿಸುವ ಪೀಠದ ಕಾಲು (?) : ಪೊಸಮಿಸುನಿಗಳಾಯಗಾಲಂತರಾಂತರ ಜಸವಡೆದಿಹ ರನ್ನಲೋವೆ ಬಿಸಜಾಕ್ಷ ರಂಗನಾಥನ ದಿವ್ಯರಥದೊಳಗೆಸೆದುವೇನೆಂಬೆನಚ್ಚರಿಯ (ಕಂನವಿ. ೨೩–೬೭). ೨. ದೇವರನ್ನು ಬಿಜಯಮಾಡಿಸುವವರು ಆಗಾಗ್ಯೆ ವಿಶ್ರಾಂತಿಗಾಗಿ ಅಡ್ಡಣಿಗೆಗೆ ಕೊಡುವ ಊರೆಗೋಲು ; ಆಸರೆಗೋಲು. [ಆಯ$_1$ + ಕಾಲು$_1$ (< ಕಾಲ್$_1$]

**ಆಯಗಾಱ₁, ಆಯಗಾರ₂** (ನಾ). ೧. ವಂಶಪಾರಂಪರ್ಯವಾಗಿ ಗ್ರಾಮಕ್ಕೆ ಸೇವೆ ಸಲ್ಲಿಸುತ್ತಿರುವ ಸೇವಕ ; (ತನ್ನವೃತ್ತಿಗನುಸಾರವಾಗಿ ಕುಲಕ್ರಮದಿಂದ ಗ್ರಾಮದ ಕೆಲಸಗಳನ್ನು ನಡೆಸಿಕೊಂಡು ಬರುತ್ತಿರುವ ಜ ನ ಸೇ ವ ಕ ರಾ ದ) ಗೌಡ, ಶಾನುಭೋಗ, ಜೋಯಿಸ, ಕಮ್ಮಾರ, ಕುಂಬಾರ, ಬಡಗಿ, ನಾಯಿಂದ ಮೊದಲಾದವರು : ನಾಉ ನಿಮಗೆ ಸೀಮೆಯೊಳಗೆ ಹಂನೆರಡು ಆಯಗಾಱರ ಸಂಗಡ ನಿಮಗೆ ಸಲುವಂಥಾ ಸ್ವಾಮ್ಯ (ಎಕ. XII, ಶಿರಾ. ೪೧–೨೧; 1544); ಇದಕ್ಕೆ ನಿಂಮು ಬಿಟ್ಟ . . . ಬಿರಾಡ ನಂಮು ಆಯಗಾಱರಿಗೆ ಕೊಡುವ (ಎಕ. XI, ಮೊಳಕಾ. ೯–೬ ; 1549) ; ಹನ್ನೆರಡು ಆಯಗಾಱರನು ನುಡಿಸಲಿಲ್ಲ (ಇಎ. ೧೯೪೭, ರಾಣಿಬೆ. ೨೪೮–೧೨ ; ?). **ಆಯಗಾರ₂** : ೧. ಶಾನುಭೋಗರು ನಾಡಿಗರು ಹನ್ನೆರಡುಮಂದಿ ಆಯಗಾರರು (ಎಕ. XI, ಮೊಳಕಾ. ೨೫–೬೪ ; 1665) ; ಹನ್ನೆರಡು ಆಯಗಾರರು ಸ್ರಿಂಗಾರ × × × ರ ಂ ಗೈ ಯ ನ ಮಗ ಮುದುರಂಗೈಯಗೆ ಮಾಂನ್ಯ (ಎಕ. XII, ಶಿರಾ. ೭೭–೫ ; ?) ; ಅದೇ ಕಾಲದಲ್ಲಿ ಈ ದೊರೆಯು ಆಯಾ ಗ್ರಾಮಗಳಿಗೆ ಗೌಡ, ತಳವಾರ, ಬೇ[ಬೋ]ಗಾರ ಮೊದಲಾದ ಆಯಗಾರರನ್ನು ನೇಮಿಸಿದನು (ಚಿತ್ರಪಾ. ೩ ಉಪೋ). ೨. ಜೀತಗಾರ: ಆಯಗಾರನ ಹೆಂಡತಿ ಗಂಡ ಹಡೆದಾಳ ನೆತ್ತಿಗೆ ಎರಿಯಾಕ ನೀ ರಿ ಲ್ಲ (ಜಾ ನ ಗೀ. ೫–೨೦). ೩. ಊರಿನ ಮುಖ್ಯಸ್ಥರ ಮನೆಗಳಿಂದ ಅನ್ನ ಆಹಾರ ಮುಂತಾದುವುಗಳನ್ನು ಸಾಂಪ್ರದಾಯಿಕವಾಗಿ ಪಡೆದುಕೊಳ್ಳುವವರು (ಎಸಮೈ. XII, ೧೫) ; ಆದರೆ ಆಯಗಾರರು ತಿರುಪೆಗಾರ[illegible]ಟ್ಟಾರೆಯೇ? (ದಿವಾಬ. ೧). [ಆಯ$_7$ + –ಗಾಱ (< –ಕಾಱ)]

**ಆಯಗಾಱ₂** 'ಆಯಕಾಱ' ನೋ.

**ಆಯಗೊಳ್** (ಕ್ರಿ). ಆಯವನ್ನು ತೆಗೆದುಕೊ ; ಸುಂಕವನ್ನು ಸ್ವೀಕರಿಸು : ಪೊಱವೇೞಂಗೆಲೆ ನೂಱುಮಂ ಮೆಣಸುಮಂನೇಲಕ್ಕಿ ಮುಖ್ಯಂಗಳಂ ನೆಱ ತಾಂ ಸೊಲ್ಲಗೆ . . . ಈ ತೆಱದಿಂ ಬೆಂಮುಡಿಯಾಯಗೊಂಬನೆನಿಪರ್ ಶ್ರೀರಾಯನಾರಾಯಣಂ (ಎಕ. XI, ದಾವಣ. ೫೯–೮೪ ; 1280). [ಆಯ$_7$ + ಕೊಳ್$_1$]

**ಆಯತ₁** (ನಾ). ೧. ಉಚಿತವಾದ ಕ್ರಮ ; ಯೋಗ್ಯವಾದ ರೀತಿ : ಆಯತದೊಳೊಡಗೊಂಡು ಬಂದು (ಬಸಪು. ೨೫–೩೭) ; ಕಾಯದೊಳು ಗು ರು ಲಿಂ ಗ ಜಂ ಗ ಮ ದಾ ಯ ತ ವ ನ ಱಿ ಯ ಲ್ಕೆ ಸುಲಭೋಪಾಯದಿಂದಿದಿರಿಟ್ಟು (ಪ್ರಭುಲೀ. ೧–೨) ; ಹಂಸಧ್ವಜನ ಮೋಹನ ಕುಮಾರಂ ಸುಧನ್ವನಾಯತವಾಗಿ ಬಂದು ನಿಜಮಾತೆಯಡಿಗೆ . . . ಸಾಷ್ಟಾಂಗಮೆಱಗಿ (ಜೈಮಿಭಾ. ೧೧–೧). ೨. ಸಿದ್ಧ ; ಸನ್ನದ್ಧ : ಗದೆವಿಡಿದಾಯತನಾಗೆಂದು ಹಲಧರ ಸದೆಬಡಿದನು (ಮೋಹತ. ೪೦–೩೮); ಕ್ಷಿತಿಪ ತಾನೊಂದು ಮನೆಯ ಹೊಕ್ಕು ಮಜ್ಜನಾಯತನಾಗಿ ಬಸದಿಗೆಯ್ದಿದನು (ಭರಜ. ೪೨–೨) ; ರಣದೊಳ್ತೇರಗಾಲಿ ವಸುಧಾತಳದೊಳಳ್ದೊಡಾಯತಮಾಗಿ ನಿಲ್ವಿನಂ ಘಾತಿಸದಿರು (ಜೈಮಿಭಾ. ೨೩–೨೨) ; ಅಡಗೂಲಜ್ಜಿ ಮನೆಯಲ್ಲಿ ಅಟ್ಟಡಿಗೆ ಆಯತವಾಗಿರುವುದು (ಗಾದೆ. ೬). ೩. [ವೀಶೈ] "ಗುರು ಭಕ್ತನಿಗೆ ಇಷ್ಟಲಿಂಗವನ್ನು ಕೊಡುವ ದೀಕ್ಷೆ" (ಬಸವ. ಕೋಶ); ಮುನ್ನಿನ ಪುರುಷವ್ರತಿಯರು ಒಲಿಸಿದ ಆಯತವ ಪರಿಪರಿಯಲು ಬಣ್ಣಿಸಲು ಬಹುದಲ್ಲದೆ . . . ಹೊಕ್ಕು ತೋಱಲು ಬಾರದು (ಬಸವ. ೬೭೮). ೪. ಸುಲಭ ; ನಿರಾಯಾಸತೆ ; ಅನಾಯಾಸ (೬).(ಗು). ೫. ಅಗತ್ಯವಾದ ; ಉಚಿತವಾದ ; ಯೋಗ್ಯವಾದ : ಆಯತವೇಳೆಯಲ್ಲಿ ಅವರು ನಿಮ್ಮನ್ನು ಎಬ್ಬಿಸುವರು (ಮುಂಗಾಪು. ೧೧೧) ; ಎಲ್ಲವನ್ನೂ ಮಾಡುತ್ತೇನೆಂದು ಎದೆತಟ್ಟಿ ಹೇಳಿ ಆಯತ ಹೊತ್ತಿನಲ್ಲಿ ಕಣ್ಮರೆಯಾಗುತ್ತಿದ್ದರು (ನಾಡಿಗೇ. ೨). [?. / ತೆಲು. ಆಯತ]

**ಆಯತ್ತ$_2$, ಆಯತ್ತಾ$_1$** (ಅ). (ಉಕ). **೧.** ಸುಲಭವಾಗಿ; ಅನಾಯಾಸವಾಗಿ: ಆಕಿಗೆ ತನ್ನ ಪ್ರೇಮದ ಹವ್ಯಾಸ ಪೂರಯಿಸಿಕೊ ಬೇಕಾಗೇದ? ಅದಕ್ಕ ಆಯತ ಈ ಸೇಡಿನ ನೆವ ಸಿಕ್ಕಿತಷ್ಟೆ (ಜೂಜು. ೭೭); ನನಗೆ ಆಯತಾ ಹೋಗಲಿಕ್ಕೆ ಸಿಗತದ ಅದಕ್ಕಬಂದೀತು ಚಕ್ರ (ಬಾಂಡಾಯ. ೮); ನಿಮ್ಮಲ್ಲಿಗೆ ಬಂದಾನಂದಮ್ಯಾಲ ನಿನ್ನ ನೋಡಲಿಕ್ಕೆ ಬಂದಾನೇನ? ಆಯತಾ ಮನಿತನಕ ಬಂದಾನ ಮಾಡಿಕೊಂಡು ಬಿಡು ಹೋಗಲಿ (ಭಾಗ್ಯಶ್ರೀ. ೧೮).
**ಆಯತ್ತಾ$_1$**: **೧.** ಆಗ ನನ್ನ ಮಗಳ ಮದುವೆಯ ಕಾರ್ಯ ನಡೆದಿತ್ತು ಆದಕ್ಕೆ ಆಯತ್ತವಾಗಿ ರೂಪಾಯಿಗಳು ದೊರೆತವೆಂದು ನಾನು ಆ ಹಣವನ್ನು ಬಳಸಿಕೊಂಡು (ಉರಾಜ. ೪). **೨.** ಪೂರ್ವಸಿದ್ಧತೆ ಇಲ್ಲದೆ; ನೇರವಾಗಿ, ಗೊತ್ತಾದ ಕಾಲಕ್ಕೆ ಸರಿಯಾಗಿ: ಕೆಲಸದ ನೆವ ಹೇಳಿ ಆಯತ್ತ ಮದುವೆಗೆ ಬರುತ್ತೇನೆಂದು ಹೇಳಿ ಅವರನ್ನು ಕಳುಹಿಸಿದೆ (ಕಪ್ಪುಹು. ೫೧).
[← ಮರಾ. ಆಯತಾ. / ಸಂ. ಆಯತ್ನತಃ]

**-ಆಯತ್ತ$_3$** '- ಆಯ್ತು' ನೋ.

**ಆಯತ್ತ$_4$** (ಗು). **೧.** ವಿಸ್ತಾರವಾದ; ವಿಶಾಲವಾದ; ಅಗಲವಾದ: ಆಯತ ಸಮುಗ್ರೋರಸ್ಥಳಂ ದೀರ್ಘಬಾಹಾಲಂಬಂ ಭುಜವೀರ್ಯ ವಿಕ್ರಮಯುತಂ ಗಂಗಾತ್ಮಜನ್ಮಂ ಜಯಶ್ರೀಲೋಲಂ ಜಮದಗ್ನಿರಾಮ ಮುನಿಯೊಳ್ ಕಲ್ತಂ ಧನುರ್ವಿದ್ಯೆಯಂ (ಪಂಪಭಾ. ೧-೬೮); ಆಯತ ಪಳುಕಿನ ಮಂದುರಗಳೊಳಾ ರಾಯನ ಗೃಹದ ಸುತ್ತಿಹುದು (ವರ್ಧಜ. ೧-೧೨೫). **೨.** ಉದ್ದವಾದ; ನೀಳವಾದ: "ದೀರ್ಘಮಾಯತಂ ನೀಳಕ್ಕೆ ಪೆಸರೆನಿಕ್ಕುಂ" (ಮಂಗರಾ. ೧೩೨-೨೪); ಮೃದುತರ ಕಪೋಲ ಫಲಕಂ ವದನಾಂಬುಜಮಾಯತೋನ್ನತಭ್ರೂಜಾಪಂ ಮುದಮಂ ಪಡೆದತ್ತೆನಗೆ (ಕವಿರಾ. ೩-೧೭); ವಿಮಳಾಯತ ಬಾಹುವಂ ವರಾಹ ಜಘನಪರನಂ (ಶಾಂತಿಪು. ೧೦-೧೪೨ ವ). (ನಾ). **೩.** ಅತಿಶಯ; ಹೆಚ್ಚಳ; ಆಧಿಕ್ಯ: ಮಾಯೆಯಗಲಿದ ಬಳಿಕ ಭಾವಿಸೆ ಕಾಯವುಂಟೇ ... ಬಾಯನುಡಿ ಬೆವಹಾರ ಬೆಸನಗಳಾಯತವು ಬಳಿಕುಂಟೆ (ಪ್ರಭುಲೀ. ೫-೭೦); ರಾಯ ಚಿತ್ತೈಸಿವನ ವಿಕ್ರಮದಾಯತಕೆ ಸರಿಸುಭಟರ ಸುರ ನಿಕಾಯ ನಿರ್ಜರ ನರ ಭುಜಂಗರೊಳೆಣೆಸಲಿಲ್ಲ (ತೊರರಾ. ೬-೯-೨); ಈ ಅಸಮಾನವಾದ ಪರಾಕ್ರಮದ ಆಯತವನ್ನು ನೋಡಿ ರಣದುಲ್ಲಾಖಾನನ ಪಂಥ ಪಾಡುಗಳೆಲ್ಲವೂ ಹೆಸರಿಲ್ಲದೆ ಹೋದವು (ಕರತ್ನ. ೧೩೦). **೪.** ನೆಲೆ; ಆಸರೆ; ವಾಸಸ್ಥಾನ: ಗೌರಿಯರಸಂ ನಿರ್ಮಿಸಿದ ಶೃಂಗಾರ ಸಿಂಹಾಸನವೊ ಶಿವನ ವಿಹಾರ ಧವಳಾಯತವೊ ಶಂಕರರಚಿತ ಮಂಟಪವೊ ... ಎನಲ್ಕತಿರಮ್ಯವಾಗಿರ್ದ (ಬಸಪು. ೧೨-೧೫); ಜಾನಕಿಗೂಡಿ ತನ್ನ ಲೀಲಾಯತವನು ಪೊಕ್ಕನಂದು (ರಾಮವಿ. ೮-೧೩೫). **೫.** (ಮಂಗಳಕಾರ್ಯದಲ್ಲಿ) ಸಮ್ಮತವೇ ಎಂದು ಕೇಳುವುದು; ಅನುಜ್ಞೆಯನ್ನು ಕೇಳುವ ಕ್ರಮ: ಕಳಕಳಮಂ ನಿವಾರಿಸುತಮಾಯತಮೇಯೆನಲಾಯತಂ ... ನಿರಾಕುಳಿತಮನಂ ಬೃಹಸ್ಪತಿಸಮಾಯತಮೇಯೆನಲಾಯತಂ ಮನಂಗೊಳಿಪ ಮಹಾಮುಹೂರ್ತದೊಳಗಾಯತಮೇಯೆನೆ ತಪ್ಪದಾಯತಂ (ಗಿರಿಕ. ೧೦-೮೬); ನುತ ಮಂಗಳಾಷ್ಟಕಗಳ ನೋದುತೆಡೆಯೊಳಾಯತವೆಯೆಂದುಱೆ ಕೇಳ್ವರದಕೆ ಹಿತವರಾಯತವೆನೆ ಸನ್ನದ್ಧರಾಗಿಯೆಂಬತುಳ ವಾಕ್ಯಗಳು ಮೆಱೆದುವು (ಭರಚ. ೪೧-೨೦). **೬.** ಅಗಲಕ್ಕಿಂತ ಉದ್ದ ಅಧಿಕವುಳ್ಳದ್ದು; ದೀರ್ಘಚತುರಶ್ರ. [ಸಂ.]

**ಆಯತಂಗೆಯ್** (ಕ್ರಿ). ಒರಸು (?); "ಸ್ವೀಕರಿಸು" (ಚಿಬಪು. ಕೋಶ): ಹಸ್ತಂಗಳಂ ಪ್ರಕ್ಷಾಲನಂಗಳಂಮಾಡಿ ಬಳಿಕೆ ಇರದೆ ತದ್ದ್ರವಮನೊಡನಾಯತಂಗೆಯ್ಯಲತಿ ಪರಮಪರಿಣಾಮದಿಂ ಚೆನ್ನಬಸವೇಶ್ವರಂ ಸರಸ ಕರ್ಪೂರ ತಾಂಬೂಲಂಗಳಂ ಕೊಡಿಸಿದಂ ಮಹಾಭಕ್ತಿಯಿಂದೆ (ಚಿಬಪು. ೫-೬೪). [ಆಯತ್ತ$_1$ + ಗೆಯ್ (< ಕೆಯ್$_1$)]

**ಆಯತಕರ** (ನಾ). **೧.** ನೀಳವಾದ ತೋಳುಗಳುಳ್ಳವನು. **೨.** ಉದ್ದವಾದ ಸೊಂಡಿಲುಳ್ಳ ಆನೆ: **೧, ೨.** ಆಯತಕರನಾ ರಾಜಸುತಕುಂಜರಂ ರಾರಾಜಿಸಿದಂ ಗುರುವಚೋಂಕುಶೈಕಾನುವಶಂ (ಚಂದ್ರಪು. ೨-೨೧).
[ಆಯತ್ತ$_4$ + ಕರ$_2$]

**ಆಯತಕಾಲ** (ನಾ). ಸರಿಯಾದ ಸಮಯ; ನಿರ್ಣಾಯಕ ಗಳಿಗೆ; ಕೊನೆಯ ಗಳಿಗೆ: ಕೇಶವರಾಯನ ಪಾಶದಿಂದ ಆಯತಕಾಲಕ್ಕೆ ಬಿಡಿಸಿ ಬೇರೆ ಕಡೆಗೆ ಕರೆದೊಯ್ದು (ಅಂಬಿಕೆ. ೩೪). [ಆಯತ್ತ$_1$ + ಕಾಲ]

**ಆಯತಕೀರ್ತಿ** (ನಾ). ವಿಸ್ತಾರವಾಗಿ ಪಸರಿಸಿದ ಕೀರ್ತಿಯುಳ್ಳವನು: ನೃಪತೀ ಪರೋಪಕಾರೀ ವಿಪುಳಗುಣೀ ವಿಶದಶಶಧರಾಯತ ಕೀರ್ತೀ (ಕವಿರಾ. ೨-೨೨). [ಆಯತ್ತ$_4$ + ಕೀರ್ತಿ]

**ಆಯತತರ** (ಗು). ತುಂಬ ವಿಶಾಲವಾದ; ಹೆಚ್ಚು ನೀಳವಾದ: ಅರಸುಕುಮಾರನನಾಯತತರ ಕಡೆಗಣ್ಣಿಂದೆ ನೋಡಿ (ಕವಿರಾ. ೧-೫೮).
[ಸಂ.]

**ಆಯತನ** (ನಾ). **೧.** ನೆಲೆ; ಆಸರೆ; ಮನೆ; ವಾಸಸ್ಥಾನ: ಇದು ಸಿದ್ಧಾಯತನಂ ಮನಂಗೊಳಿಸಿ ತೋಱುತ್ತಿರ್ಪುದು (ಕಾದಂಪೂ. ೬೫೬). **೨.** ದೇವಾಲಯ: "ದೇಗುಲಂಗಳನೆ ಆಯತನವೆಂಬುದು" (ಹಲಾಯು. ೪೯-೧೩೮); ಅಲ್ಲಿಗಲ್ಲಿಗೊಡೆದ ಕೆಱೆಗಮುೞಿದಾಯತನಕ್ಕಂ ಧನಮನಿತ್ತು ಜೀರ್ಣೋದ್ಧಾರಮಂ ಮಾಡಿಸುತ್ತುಂ (ಪಂಪಭಾ. ೨-೯೭ ವ). **೩.** ಯಜ್ಞದಲ್ಲಿ ಪಶುವಧೆ ಮಾಡುವ ಸ್ಥಳ; ಬಲಿಕೊಡುವ ಸ್ಥಾನ. **೪.** [ಬೌದ್ಧ] ಇಂದ್ರಿಯ: ಈ ಐದು ಆಯತನಗಳೂ ನಾನಾಕರ್ಮಗಳಿಂದ ಹುಟ್ಟಿದುವು; ಒಂದೇ ಕರ್ಮದಿಂದ ಅಲ್ಲ (ಬುದ್ಧಪ. ಮಿಲಿಂದ. ೮೮). **೫.** [ವೈದ್ಯ] ವ್ಯಾಧಿಯ ಮೂಲ, —ಕಾರಣ. [ಸಂ.]

**ಆಯತಬಾಹು** (ನಾ). = ಆಯತಕರ **೧**: ವಿಪುಳಾಯತಬಾಹುವಂ (ಶಾಂತಿಪು. ೧೦-೧೫೨ ವ). [ಆಯತ್ತ$_4$ + ಬಾಹು$_2$]

**ಆಯತಲಿಂಗ** (ನಾ). "ಇಷ್ಟಲಿಂಗ" (ಶೂನ್ಯಸಂ. ಕೋಶ); ಆಯತ ಲಿಂಗವ ಹಿಡಿದು ಸ್ವಾಯತಲಿಂಗವ ಕಾಣಬೇಕು (ಅವಚಂ. ೨೨೧-೧೦೦೬).
[ಆಯತ್ತ$_1$ + ಲಿಂಗ]

**ಆಯತವಡೆ** (ಕ್ರಿ). ಅಚ್ಚುಕಟ್ಟಾಗು; ಸಿದ್ಧವಾಗು: ಆಯತವಡೆದ ಕೇರಿಗಳೊಪ್ಪಿ ಮೆಱೆವ ಸುದಾಯವನೇನ ಬಣ್ಣಿಪೆನು (ಕಂಸವಿ. ೧೧-೧೪).
[ಆಯತ್ತ$_1$ + ಪಡೆ$_1$]

**ಆಯತವಱಿ** (ಕ್ರಿ). ಕ್ರಮ ರೀತಿ ಮುಂತಾದುವುಗಳನ್ನು ತಿಳಿ: ನಾಯಕಿಯಾದೊಡೆಯದಱ ಮಾರ್ಗವು ಬೇಱೆಯಾಯತವಱಿಯದೇ ಹೋದೆ ನ್ಯಾಯವ ತಿಳಿಯದೆ ಮಾಯವ ಮಾಡಿದೆ ದಾಯವು ತಿಳಿಯಿತು ನಿನಗೆ (ಕಂಸವಿ. ೬-೧೮೧). [ಆಯತ್ತ$_1$ + ಅಱಿ]

**ಆಯತವೃತ್ತ** (ನಾ). ದೀರ್ಘವೃತ್ತ; ವಿಸ್ತಾರವೂ ದುಂಡೂ ಆದ ಗೋಳ: ಮಿಱುಗುವ ವಿದ್ರುಮಾಧರದ ಮಧ್ಯದೊಳಾಯತವೃತ್ತಮಾದ ನುಣ್ಗಱೆಯಿದು ಮನ್ಮನಕ್ಕೆ ಪಡೆದಪ್ಪುದು ... ಪೊಱಮಟ್ಟು ಪೋದಿವಳ ಲಜ್ಜೆಯ ಪಜ್ಜೆಯಿದೆಂಬ ಪೋಲ್ವೆಯಂ (ಚಂದ್ರಪು. ೮-೫೭).
[ಆಯತ್ತ$_4$ + ವೃತ್ತ]

**ಆಯತವೆಱು** (ಕ್ರಿ). = ಆಯತವಡೆ: ಅವರವರುಗಳು ತಮ್ಮಯ ಪ್ರಾಣಕಾಂತರ ನಿವಹವೊಂದಾಗಿಯಾ ಕೊಳದಿ ಬೆವಹರಿಸಿದರಾಯತವೆತ್ತು ಧರಣೀಧವನೋಕುಳಿಗೆ ನೇಮಿಸಿದ (ಮೋಹತ. ೧೪-೩೪); ಬಿಸಜಗಂಧಿಯರಾಯತವೆತ್ತು ಕಾವನ ಮಸೆದ ಕೂರ್ಗಣೆಗಳಂತೆಸೆಯೆ (ಮೋಹತ. ೧೪-೪೫); ತವಕದಿಂ ತಾನುಯಾಯತವೆತ್ತು ನಕ್ಷತ್ರ ನಿವಹಮಧ್ಯದಲಿ ವುಡುರಾಜ ರಾಜಿಸುವಂತೆ (ನವಮೋ. ೧೦-೬೬).
[ಆಯತ್ತ$_1$ + ಪೆಱು$_1$]

**ಆಯತವೇಳೆ**, ಆಯತ್ತವೇಳೆ (ನಾ). = ಆಯತಕಾಲ : ಆಯತವೇಳೆಯಲ್ಲಿ ನಿಮ್ಮನ್ನು ಅವರು ಎಬ್ಬಿಸುವರು (ಮುಂಗಾಪು. ೧೧೦). **ಆಯತ್ತವೇಳೆ** : "ನಾನು ನಾಳೆ ಬೆಳಗ್ಗೆ ದಾದರಿಗೆ ಬರುವವನಿದ್ದೇನೆ. ನಾನು ತಿಕೀಟು ತೆಗೆದು ಇಟ್ಟಿರುತ್ತೇನೆ. ಸುಮ್ಮನೆ ಆಯತ್ತವೇಳೆಗೆ ತೊಂದರೆ ಬೇಡ" (ಕಮನೆ. ೭೬). [ಆಯತ$_1$ + ವೇಳೆ]

**ಆಯತಹೆಗ್ಗಡೆ** (ನಾ). ಒಬ್ಬಾತನ ಹೆಸರು : ದೇವರ ನಂದಾದೀವಿಗೆಗೆ ನಾಗಂಣ್ಣನ ಬೆಸದಿಂ ಆಯತಹೆಗ್ಗಡೆ ಧಾರಾಪೂರ್ವ್ವಕಮಾಡಿ ಬಿಟ್ಟ ಮಗ್ಗ (ಎಕ. XIV, ಶ್ರೀರಂಗ. ೧೫೨–೨೮ ; 1189).
[ಆಯತ ? + ಹೆಗ್ಗಡೆ (< ಪೆರ್ಗಡೆ)]

**ಆಯತಾಂಬಕಿ** (ನಾ). ಅಗಲವಾದ ಕಣ್ಣುಳ್ಳವಳು : ಆಯತಾಂಬಕಿ ತೆಗೆಸಿಯೆನೆ ನುಡಿ ರಾಯಸವಿದೇಕೆನುತ . . . ಹೊಕ್ಕಳು ತಳಿರ ಮಂಟಪವ (ಕುವ್ಯಾಅ. ೨೨–೧೩) ; ಸಂಭ್ರಮಾನ್ವಿತೆಯಾದಳಾಯತಾಂಬಕಿ ತನ್ನ ಭೀಷ್ಟವಮಂ ಸಲಿಸುವಂ ಕಾಂತನೆಂಬುತ್ಸವದೊಳು (ಜೈಮಿಭಾ. ೧೮–೬೧).
[ಸಂ. ಆಯತಾಂಬಕೀ (ಆಯತ$_4$ + ಅಂಬಕ + –)]

**ಆಯತಾಕ್ಷಿ** (ನಾ). = ಆಯತಾಂಬಕಿ : ರಾಯ ಪಾಂಡವರರಸಿ ಕಮಲದಳಾಯತಾಕ್ಷಿಯ ಪರಿಭವವ ನೆಱೆ ಕಾಯಿದುದೆಲಾ ವೀರನಾರಾಯಣನ ಸಿರಿನಾಮು (ಕುವ್ಯಾಸ. ೧೪ ಸೂ) ; ಅಯತಾಕ್ಷಿಯ ಭಾವಶುದ್ಧಿಯಂ ತಿಳಿದಿರ್ದು ... ಇಂತರಸಿಯಂ ತೋಱಿಯಬೇಕೆಂಬರೇ (ಜೈಮಿಭಾ. ೧೮–೫೫).
[ಸಂ. ಆಯತಾಕ್ಷೀ (ಆಯತ + ಅಕ್ಷಿ + –)]

**ಆಯತಿ** (ನಾ). **೧.** ಮನಸ್ಸಿನ ಸಂಯಮ ; ವಿಷಯಗಳತ್ತ ಮನಸ್ಸು ಹರಿಯದಂತೆ ತಡೆಯುವುದು : ಆ ಯತಿಪತಿ ತನ್ನೊಳ್ಬಗೆದಾಯತಿಗಾಯತಿಯನುಂಟುಮಾಡಲ್ ಬಗೆದಂ (ಸುಕುಮಾ. ೧೨–೧೦). **೨.** ಸಾಮರ್ಥ್ಯ ; ಧಾರ್ಷ್ಟ್ಯ : ಅಭರಮೆತ್ತಿ ಆಯೆ[ಯ]ತಿವಿ ಕೊಳ್ಳೋರುಂ . . . ಪಂಚಮಹಾಪಾತಕ ಸಂಯುಕ್ತನಾಗಿ (ಎಕ. VI, ಕೊಪ್ಪ. ೩೭–೬ ; 675) ; ಮಾಯಾಚಮೂಸಮೂಹದೊಳಾಯತಿಯಂ ಬಗೆದು ಕಾದಿ ಯಾದವಸೈನ್ಯಂ ಛಾಯಾಯುದ್ಧಂಗೆಯ್ವವೊಲಾಯಾಸಂ ಬಟ್ಟು ಕೆಟ್ಟು ಪೆಳಱಿದುವಾಗಳ್ (ನೇಮಿಪು. ೬–೧೯೯) ; ಆ ಸೊಲ್ಲಂ ಪುಲ್ಲಂ ಬಗೆದು ಪಲ್ಲಮುಱಿಯೊಂದಾಯತಿಯಿಂ ಮಿಕ್ಕು ಮಿಾಱಿ ಪೊಕ್ಕಿಱಿದಟ್ಟಿಯಂ ಮುಟ್ಟೆ (ರಾಮಾಶ್ವ. ೧೪೪–೯). **೩.** ಮಹಿಮೆ ; ಹಿರಿಮೆ ; ಪ್ರಭಾವ : ಆರ ನೆಗೞ್ತೆಯುಂ ಬಲಮುಮಾಯತಿಯುಂ ಚಲಮುಂ ಪ್ರಭುತ್ವಮುಂ ದೂರದೊಳಿರ್ದ್ದು ನೋಡೆ ಸೊಗಯಿಪ್ಪುದು (ಕಾವ್ಯಸಾ. ೪೩೫ ಶೂದ್ರಕ) ; ತೋಯಜಷಂಡಮನಿದನಾಯತಿಯಿಂ ಕಾವೆನೆನ್ನ ಮಾತಿಂಗೆಲೆ ಕೌಂತೇಯ ಮಱುಮಾತನಿತ್ತು . . . ತೋಯಮಮಂ ಕುಡಿ (ಪಂಪಭಾ. ೮–೩೯) ; ಅಯುಂ ಶ್ರೀಯುಂ ವಿಜಯಮುಮಾಯತಿಯುಂ ನಿಮ್ಮೊಳೊದವಿ ಸುಸ್ಥಿರಮಪ್ಪಂತೀಯುತ್ತುಮಿರ್ಕೆ . . . ವಿಭು ಶಾಂತಿಜಿನಂ (ಪುಷ್ಪಪು. ೮–೬೩). **೪.** ವಿಸ್ತಾರ ; ವ್ಯಾಪ್ತಿ ; ಹರಹು : ಅರುಣೋದಯಪ್ರಭೆಯ ಗಿರಿಶೃಂಗದುನ್ನತಿಯ ವರುಣಾಲಯಾಯತಿಯ ನಿರುಕಿಸಿದೊಡಹುದೇಂ ಬೆರಗು ಬರಿಬೆರಗು ನುಡಿಗರಿದೆನಿಪ್ಪಾನಂದ ಪರಮಪೂಜೆಯುಮಂತು (ಮಂಕುತ. ೪೯೫). **೫.** ಭವಿಷ್ಯ ; ಮುಂದೆ ಆಗಬೇಕಾದುದು : "ಉತ್ತರಕಾಲಃ, ಆಯತಿಃ– ಈ ೨ ಮೇಲಪ್ಪ ಕಾಲಂ" (ಹಲಾಯು. ೨೦–೧೧೮) ; ಅಯತದ ಲೋಕಧರ್ಮಗಳ ಪಾಲಿಪುದು ಆಯತಿಗೆ ಬಾಯ್ಬಿಡದೆ ಗತವ ಚಿಂತಿಸದಿಹುದು (ಮಂಕುಕ. ೭೧೩). **೬.** ಆಯ ; ಆದಾಯ ; ಲಾಭ : ಅವನಿಗೆ ತುಂಬಾ ಆಯತಿ ಇದೆ (ರೂಢಿ). [ಸಂ.]

**ಆಯತಿಕೆ** 'ಆಯತಿಕ್ಕೆ' ನೋ.

**ಆಯತಿಕೆಗಿಡು** 'ಆಯತಿಕೆಗೆಡು' ನೋ.

**ಆಯತಿಕೆಗೆಡಿಸು** (ಕ್ರಿ). ಗೌರವಕ್ಕೆ ಹಾನಿಯನ್ನು ತರು ; ಮರ್ಯಾದೆಯನ್ನು ಕೆಡಿಸು : ಸಾಯೆ ನೋಡುವ ಕರುಣಿ ಸೋಮಯ್ಯ ಬೇಡಿದರಿಗೀಯದಳಲಿಪ ದಾನಿ ಸೋಮಯ್ಯ ನಂಬಿದರನಾಯತಿಕೆಗೆಡಿಪ ದಾಕ್ಷಿಣ್ಯಪರ ಸೋಮಯ್ಯ ಕೈಯತ್ತಿ ಕರೆದು ಕರೆದು (ಸೋಮುಚ. ೪–೨೩).
[ಆಯತಿಕೆಗೆಡು + –ಇಸು$_3$]

**ಆಯತಿಕೆಗೆಡು**, ಆಯತಿಕೆಗಿಡು (ಕ್ರಿ). ಗೌರವವನ್ನು ಕೆಡಿಸಿಕೊ ; ಸ್ವರೂಪಹಾನಿಹೊಂದು ; ಯೋಗ್ಯತೆಯನ್ನು ಹಾಳುಮಾಡಿಕೊ : ಎನ್ನವೊಲಾರೊ ನಿಕ್ಕುವಂ ಕುಲದಭಿಮಾನದಾಯತಿಕೆಗೆಟ್ಟು ನಿರಾಕುಳಮೆಯ್ದೆ ನಿನ್ನೊಳಾದೊಲವನೆ ನೋಡಿ ಬಂದವರೊ ಭಾವಿಸು ನೀಂ (ನೇಮಿಪು. ೧೪–೬೪) ; ಆಯತಿಕೆಗೆಟ್ಟೆಮ್ಮ ಬೊಪ್ಪನಪಾಯದಿಂ ಸಲೆ ನಿಮ್ಮ ಬೊಪ್ಪನ ಕೈಯೊಳೀಂ ಕೈಯಾಂತುಕೊಂಡನೆ ಹಳೆಯ ಸಾಲವನು (ಬಸವು. ೨೬–೬೧). **ಆಯತಿಕೆಗಿಡು** : ಆಯಕ್ಕೆ ಮಿಕ್ಕುದೆನೆ ಕೆಯ್ದಾಯದೆ ಬೀಯಮನೊಡರ್ಚುವಂ ಸ್ವಜನರೊಳಂ ಅಯತಿಕೆಗಿಡುವನೆತ್ತಂ ಸ್ತ್ರೀಯಿಯೆನಿಪ್ಪಂ ವಿಷಾದಭರಕೆಡೆಯಪ್ಪಂ (ನೀತಿಮಂ. I, ೭೬).
[ಆಯತಿಕೆ (< ಆಯತಿಕ್ಕೆ) + ಕೆಡು]

**ಆಯತಿಕೆವಡೆ** (ಕ್ರಿ). ಪ್ರಭಾವವನ್ನು ಪಡೆ ; ಘನತೆಯನ್ನು ಹೊಂದು : ರೂಪುರೇಖೆ ಥಾಪನೆ ಬಯ್ಸಿಕೆ ತೊಡೆ ಮುಡಕಯ್ದುನಿಯೆಂಬ ಚಡಾಯತಿಕೆಗಾಯತಿಕೆವಡೆದಾರೂಢ ವಿದ್ಯಾವಿಳಾಸ ಸಬಳದ ಸೆಲ್ಲಹದ ಕುಂತದ (ಸೌಇಇ. IX–i, ೩೪೩–೨೦ ; 1226).
[ಆಯತಿಕೆ (< ಆಯತಿಕ್ಕೆ) + ಪಡೆ$_1$]

**ಆಯತಿಕ್ಕೆ**, ಆಯತಿಕೆ (ನಾ). **೧.** ಪ್ರಭಾವ ; ಘನತೆ : ನಾಯಕುನ್ನಿಗೆ ಕೂರ್ತು ರಾಜ್ಯಮನಿತ್ತು ಪಾಪಿನ ಮೇಲೆತಂದಾಯತಿಕ್ಕೆಯಿನೊಪ್ಪವಾಗಿರಿಸಿ ಪ್ರಭೂತ್ಕರಮಿರ್ದು . . . ಓಲಗಿಸುತ್ತುಮಿರ್ಪೊಡೆ ಮತ್ತಮಾ ನಾಯಕುನ್ನಿ ಸಮುಂತು ಮಾಣ್ಬುದೆ ಪೇಲತಿಂಬುದನೆಲ್ಲಿಯುಂ (ಧರ್ಮಾವೃ. ೧೧–೧೭೪) ; ಬಧಿರನಪ್ಪನಕೇಳ್ವಿಯುಮಾಯತಿಕ್ಕೆಯುಂ[ಯಂ] ಬಿಸುಟನ ಕೀರ್ತಿಯುಂ ವಿಟನ ಶೀಲಮುಮುರ್ವಿಯೊಳೊಪ್ಪಲಾರ್ಪುವೇ (ಧರ್ಮಾವೃ. ೬–೯೭). **ಆಯತಿಕೆ** : **೧.** ಆಯತಿಕೆ ಮಿಗೆ ಸರ್ವಭಾಗ್ಯ ಶ್ರೀಯ ದ್ರಾಕ್ಷಾರಾಮದೊಳು ನಾನಾ ಯುವತಿಯುತ ಸುಖರಸದೊಳೋಲಾಡುತೆಯ್ದಂದು (ಬಸವು. ೨೫–೧೦). **೨.** ಅತಿಶಯ ; ಆಧಿಕ್ಯ ; ತೀವ್ರತೆ : ಮಾಯೆ . . . ಮಿಗೆ ಬಯಸಿ ಭಜಿಸಿದಳಾಯತಿಕೆಯಲಿ ಮಧುಕನಾಥನ ಪಾದಪಂಕಜವ (ಪ್ರಭುಲೀ. ೪ ಸೂ) ; ಆಯತಿಕೆಯಲಿ ಪಂಚಕೈಕಯರಾಯುಧದ ಬೆಳಗಳ್ಳಿಱಿಯೆ ನೂಕಿದರು ತೇರುಗಳ (ಕುವ್ಯಾದ್ರೋ. ೨–೪೮) ; ಬಾಯನೋಡಾ ಅಂಜದೆಮ್ಮೊಡನಾಯತಿಕೆಯಲಿ ಗೆಡವ ಪಾಪನಿಕಾಯವೇನಿದ್ದೇನ ಮಾಡುವನೀ ಮಹಾತ್ಮನಲಿ (ನಿಭಾಗ. ೬–೨–೭). **೩.** ಶ್ರದ್ಧೆ ; ಆಸಕ್ತಿ : ಹುಟ್ಟಿದುದು ಬಳಿಕಾಯತಿಕೆ [ಪಾಠಾಂ. ಸತಿಗೆ] ಗಜಱಿಗಟ್ಟಿತಗ್ಗದಸೂಯೆಮನ ಕವಲಿಟ್ಟುದಾಕಾಂಕ್ಷೆಯಲಿ ರಾಜ್ಯಶ್ರೀ ನಿತಂಬಿನಿಯ (ತೊರರಾ. ೨–೧–೩೭). [ಆಯತಿ + –ಇಕ್ಕೆ$_2$]

**ಆಯತಿಗಿಡು** 'ಆಯತಿಗೆಡು' ನೋ.

**ಆಯತಿಗೆಡು**, ಆಯತಿಗಿಡು (ಕ್ರಿ). ಶಕ್ತಿಗುಂದು ; ಅಸಮರ್ಥನಾಗು : ಸುತನ ರೂಪಿನ ಸೊಬಗನಂಗಸುಕುಮಾರತೋನ್ನತೆಯ ಬಾಲ್ಯದ ಚೆಲುವನು . . . ಅಧಿಕಗುಣಗಣವನಾಯತಿಗೆಟ್ಟು ನೆನೆದು ಶೋಕಿಪೆನೆಂಬಡಾಕಲ್ಪಶತವೆಯ್ದದರಸ (ಹಚಕಾ. ೧೨–೫೪) ;. ಆಯತಿಗೆಟ್ಟಳ್ಳಿರ್ದವಡೆದಱಿವಿನ ಬೀಯದವೆ ಮಱಿದೊಜಗಿದಳಲರ್ವಾಸಿನೊಳ್ (ಜಯುಕಾ. ೪–೩೭). **ಆಯತಿಗಿಡು** : ಆ ಯತಿಗಾಯತಿಗಿಡೆ ಕೌಳೇಯಕತತಿ ನೃಪತಿ ಕೆಳರ್ದು ಮುಳಿದುರ್ಚಿದ ಕೌಕ್ಷೇಯಕದೆ ಪೊಯ್ಕುಳ್ (ಯಶೋಚ. ೪–೪೪). [ಆಯತಿ + ಕೆಡು]

**ಆಯತಿವೆಱು** (ಕ್ರಿ). ೧. ವಿಸ್ತಾರವಾಗು; ಅಗಲವಾಗು: ಮನಮ ನಲರ್ಚಿದತ್ತು ಪುರುಷೋತ್ತಮನುಚ್ಚ ಲಲಾಟರೇಖೆ... ವಿಷ್ಣುವಿನ ಪೇರುರಮಾಯತಿವೆತ್ತ ವಾರಿಜಾಕ್ಷನ ಧವಳೇಕ್ಷಣಂ (ಸಂರಾಮಾ. ೩-೧೫೭). ೨. ಶ್ರದ್ಧೆಯಿಂದ ಕೂಡು; ಉತಾಹಗೊಳ್ಳು; ಆಸಕ್ತಿವಹಿಸು: ಪೀಯೂಷಜಲಧಿಜಲಮಿಾಜ್ಯಾಯನ ಸವನಕ್ಕೆ ತಕ್ಕುವಿಂ ನಿಕ್ಕುವ ಮೆಂಬಾಯತಿವೆತ್ತ ನಿಜಾಭಿಪ್ರಾಯದಿನನಿಮಿಷರಶೇಷರನುನಯದಿಂದಂ ...ಎಯ್ದಿ (ನೇಮಿಪು. ೮-೧೩೭ ವ); ಭಾವೆಯರಾಯತಿವೆತ್ತು ಪಟ್ಟಣದಿಂ ಪೊಜಮಟ್ಟು ನೆಟ್ಟನೆ ಸ್ಮರನಿರ್ದ ನಂದನದೆಡೆಗೆ ಸಾಲಿಟ್ಟುದನೇಕ ಸಂಭ್ರಮದಿ (ಮೋಹತ. ೫-೨೯). ೩. ಸಮಗ್ರವಾಗು; ಒಟ್ಟಾಗು: ಆಯತಿವೆತ್ತು ಶಬ್ದ ಭರತಾಗಮ... ಅಖಿಳಶಾಸ್ತ್ರಸಮಾಜಮನೋಜೆಯಿಂದುಪಾಧ್ಯಾಯನತಿಪ್ರಸನ್ನ ಹೃದಯಂ ಸಲೆ ಪೇೞುತಿರಲ್ಕೆ ತಾಂ ಸಹಾಧ್ಯಾಯಿ ದಲೆಂಬಿನಂ ನೃಪಸುತಂ ನೆಱೆ ಕೇಳ್ವನವೇಂ ಮನಸ್ವಿಯೋ (ಕುಸುಮಾ. ೭-೨೮). [ಆಯತಿ + ವೆಱು$_1$]

**ಆಯತುತ್ತು** (ನಾ). ಸುಲಭವಾಗಿ ಸಿಕ್ಕುವ ಆಹಾರ (?): ಹದನ ನೆಲ್ಲವ ಕೇಳಿ ತಲೆದೂಗಿದನು ಬಡತನದಾಯತುತ್ತಲ್ಲಿದು ತ್ರಿಯಂಬಕನಿಂದ ಗಿರಿಜೆಯುಲಾತ್ಮಸಂಭವನು ಉದಿಸಿದಡೆ ನಮ್ಮಿಷ್ಟವಹುದಾನಿದಕೆ ಸಾಧಕ ನಲ್ಲ ತತ್ಕರ್ಮದಲಿ ಸಂಸ್ಥಿತರಾಗಿ ಹೋಗಿಯೆನುತ್ತ ನೇಮಿಸಿದ (ನಿಭಾಗ. ೪-೫-೨೦). [ಆಯ$_1$ + ತುತ್ತು$_2$]

**ಆಯತೆ** (ನಾ). ಆಸಕ್ತಳು; ಅನುರಕ್ತೆ: ಲಲಿತ ಕಾಯಕಾಂತಿಯ ರಸಭರಿತ ಗಿಂಡಿಯು ಹಿಡಿವಾಯತೆಯಿರ್ದಳೊತ್ತಿನಲಿ (ಮೋಹತ. ೪-೯). [ಸಂ. ಆಯತಾ]

**ಆಯತ್ತ$_1$** 'ಆಯತ್ತ$_2$' ನೋ.

**ಆಯತ್ತ$_2$** (ಗು). ೧. ಅಧೀನ; ವಶ: ಆ ದಿಶಾಭಾಗಮನಾತ್ಮೀಯ ಶಾಸನಾಯತ್ತಂ ಮಾಡುತ್ತುಂ ಬಂದು (ಪಂಪಭಾ. ೪-೮೧ ವ). ೨. ಸಾಧುವಾದ; ಪಳಗಿದ; ಹೇಳಿದಂತೆ ಕೇಳುವ; ವಿಧೇಯವಾದ. (ನಾ). ೩. ಸೇರಿರುವುದು; ಸಂಬಂಧಿಸಿರುವುದು; ಕೂಡಿರುವುದು: ಕೃತ್ತಿರದೆಯುಮುತ್ವಾತ್ವಾಯತ್ತಮನುಸ್ವಾರಂ (ಶಮದ. ೧೭೨); ಎತ್ತಾನುಮದೆಲ್ಲಿಯಾನುಮೆಂಬರ್ಥದೊಳಾಯತ್ತಂಗಳರವೆ ಅರೆಗಳ್ (ಶಮದ. ೩೧೨); ಅತ್ತ ನೋಡಲು ದೃಷ್ಟಿಗೋಚರವೆತ್ತ ಜೋಳದ ರಾಶಿ ರುಚಿರಾಯತ್ತ ಮೌಕ್ತಿಕಪುಂಜವುನ್ನತವಾಗಿರಲು ನಗುತ (ಬಸವು. ೯-೨೧). ೪. [ಸಂಗೀತ]ರಾಗಾಲಾಪನೆಯಲ್ಲಿ ಒಂದು ಬಗೆಯ ಅವರೋಹಣ ರೀತಿ: ಇಳುವರಿಯ ಹಂತಗಳಿಗೆ ವಿದಾರಿ ಅಥವಾ ಆಯತ್ತಗಳೆಂದು ಹೆಸರು (ಸಂಗೀಚಂ. ೨೯). [ಸಂ.]

**ಆಯತ್ತಂಮಾಡು** (ಕ್ರಿ). ಅಧೀನಗೊಳಿಸು; ವಶಪಡಿಸಿಕೊ: ನಿರ್ಮಳ ಕೀರ್ತಿಶ್ರೀಯಂ ಗೌರೀಶಂ ಒಸೆದಾಯತ್ತಂ ಮಾಳ್ಕೆ ವಿಕ್ರಮಾಂಕ ನಿನಗನವರತಂ (ಸೌಇಇ. IX-i, ೨೭೬-೨೦; 1183). [ಆಯತ್ತ$_2$ + ಮಾಡು$_1$]

**ಆಯತ್ತವೇಳೆ** 'ಆಯತವೇಳೆ' ನೋ.

**ಆಯತ್ತಸಮಯ** (ನಾ). = ಆಯತಕಾಲ: ಹಣ ಸುಲಿದ ವಕೀಲರು ಆಯತ್ತಸಮಯದಲ್ಲಿ ಕೈಬಿಟ್ಟರು (ಭಾರಥಿ. ೧೩೫). [ಆಯತ್ತ$_1$ (< ಆಯತ್ತ$_2$) + ಸಮಯ]

**ಆಯಪಾಣಿ** (ನಾ). ಆರಿಸಿದ್ದು; ಅತಿ ಉತ್ಕೃಷ್ಟವಾದುದು: ಭೀಷ್ಮನು ಸಂತತವಾಗಿ ಬಾಣದ ಮಳೆಗರೆಯುತ್ತ ಪಾಂಡವರ ಕಡೆ ಆಯಪಾಣಿಯಾಗಿದ್ದ ಸೈನಿಕರನ್ನು ಆರಿಸಿ ಆರಿಸಿ ಕೊಲ್ಲುತ್ತಿದ್ದನು (ವಚಭಾ. ೨೭೧); ಒಂದು ದಿವಸ ಆಯಪಾಣಿಯಾದ ಕೆಲವು ನಗಗಳನ್ನು ಮಾತ್ರ ಇಟ್ಟು ಕರೆದುಕೊಂಡು ಹೋಗುವುದು... ಇದೆಲ್ಲಾ ವಾಡಿಕೆಗೆ ಬಂತು (ಅದೂಟ. ೬೮). [?]

**ಆಯಪ್ಪದೇವ** (ನಾ). ಒಬ್ಬಾತನ ಹೆಸರು: ಅಣುಜ್ಜರಸರ ಮಗ ಕಲಿಗಜ್ಜಂ ಆಯಪ್ಪದೇವನೊಳ್ಕಾದಿ ಕಳಿಕಟ್ಟಿಯೊಳ್ಸತ್ತ (ಎಕ. VI, ಕಡೂರು, ೧೪೦-೨; 919). [ಆಯಪ್ಪ$_0$ + ದೇವ]

**ಆಯಮೇರ** (ನಾ). ಕೊಯ್ಲಿನ ಒಕ್ಕಣೆಯ ಕಾಲದಲ್ಲಿ ಅಧಿಕಾರಿಗಳಿಗೆ ಮತ್ತು ಸೇವಕರಿಗೆ ಕೊಡುವ ಧಾನ್ಯದ ಭತ್ಯ (ಕಿಸಂಗ್ರಾ. ೮). [ಆಯ$_7$ + ?]

**ಆಯರ** (ನಾ). ಆದರ (?): ಒದವಿದ ಕೂರ್ಮೆಯಿಲ್ಲದಳಿಪಾಯರ [ಪಾಠಾಂ. ರಯ] ಮಿಲ್ಲದ ಪಾಳಿ ರಾಗಮಿಲ್ಲದ ಸುಸಿಲ್... ಚದುರರುಮಂ ಮನಂಗೊಳಿಪುದೇಂ ಕಡುಜಾಣೆಯರೋ ಲತಾಂಗಿಯರ್ (ಆದಿಪು. ೧೨-೪೬). ℙ ಆದರ ಎಂಬ ಸಂಸ್ಕೃತಶಬ್ದದ ಪ್ರಾಕೃತ ರೂಪವಿರಬಹುದೆ? [< ಸಂ. ಆದರ]

**ಆಯರಾಶಿ** (ನಾ). [ಜ್ಯೋತಿ]. ಪ್ರಸಕ್ತವಾದ ಲಗ್ನದಿಂದ ಹನ್ನೊಂದನೆಯ ರಾಶಿ: ತ್ರಿದಶಷಡಾಯರಾಶಿಗಳೊಳಕ್ಕೆ ವಿಲಗ್ನದೊಳಕ್ಕೆ ಮೇಣ್ ಸುಹೃತ್ ಸದನದೊಳಕ್ಕೆ ಸದ್ಗ್ರಹದ ವರ್ಗದೊಳಕ್ಕಿರೆ ಪಾಕನಾಥಂ... ಚಂದ್ರನಿರ್ದೊಡೆ ಶುಭಂ (ಜಾತತಿ. ೯-೧೫). [ಆಯ + ರಾಶಿ]

**ಆಯಲ್ಲಕ** (ನಾ). ಉತ್ಕಟವಾದ ಬಯಕೆ; ಉತ್ಸುಕತೆ; ಉತ್ಕಂಠತೆ; ವಿರಹವ್ಯಥೆ: "ಆಯಲ್ಲಕಂ, ಉತ್ಕಂಠಾ, ಉತ್ಕಳಿಕಾ... ಔತ್ಸುಕ್ಯಂ, ಹೃಲ್ಲೇಖಃ, ವಿರಹಃ, ವಿಯೋಗಃ — ಈ ೯ ವಿರಹಂ" (ಹಲಾಯು. ೧೨೨-೫೭). [ಸಂ.]

**ಆಯವರಿ** 'ಆಯವಱಿ' ನೋ.

**ಆಯವಱಿ, ಆಯವರಿ** (ಕ್ರಿ). ಪ್ರಮಾಣವನ್ನು ತಿಳಿ; ಕ್ರಮವನ್ನು ತಿಳಿ: ನೋಯಿಸಿ ನುಡಿಸದೆ ನೋಡದುಚಿತಗಳ ಬೀಯವೆಸಗಿ ಬೇಸಱಿಸದೆ ಆಯವಱಿತು ತರಲಱಿಯದ ಪತಿಯೊಳಸೂಯೆಗೊಳದೆ ಸುಖಿಸುವುದು (ಹದಿಬ. ೩-೨೬). **ಆಯವರಿ**: ಮೊಗ್ಗುಗಳನ್ನು ಆರಿಸಿ ಆಯವರಿತು ಜೋಡಿಸಿದಾಗ ಇವೆಲ್ಲಾ ಚೆನ್ನಾಗಿ ಅರಳಿ ಪೂರ್ಣಸೌರಭವನ್ನು ಬೀರಿ (ಭಾರವಿಾ. ೨೯೨). [ಆಯ$_1$ + ಅಱಿ]

**ಆಯವಿಡು** (ಕ್ರಿ). ಬರು; ಆಗಮಿಸು: ವಾಯುಸೆಡಬಲನಾಗೆ ಅಂಗ ಭಾರದ್ವಾಜದಾಯದಿಂ ತಾರ್ಕ್ಷ್ಯ ದಕ್ಷಿಣ ವಾಮಕೈದೆ ಪಾಲ್ಗಾಯಕಾಂಗನೆ ಪುಷ್ಪಫಲವೃಷಭ ಕರಿತುರಗಸಂಪತ್ಸಮಾಜಯುತರು ತೋಯ ಮಂಗಲ ವಾದ್ಯ... ಜಿನಮುನಿಯೆದುರಿಗಾಯವಿಡೆ ಲೇಸು ಲೇಸೆಂದು ನಯಂಧರನು ಆ ಕನಕಪುರದಿಂದೈದಿದ (ಜಿನಮು. ೩-೨೧). [ಆಯ ? + ಇಡು]

**ಆಯವಿದ್ಯೆ** (ನಾ). ರಹಸ್ಯವಾದ ವಿದ್ಯೆ; ಶಾರೀರ ವಿದ್ಯೆ: ಅಯವಿದ್ಯೆಗೆ ಸಿಲುಕಿ ಕಚ್ಚಿತ್ರಾಯತನಮಂ ಪಿಡಿದನೇಕವಿಪಾಯನೆಂಗಳ ಮೆಟ್ಟು ಬೊಂಮುಗೆ ಜೀವನಾಮಕದಿ (ವಿವೇಭ. ೧೩-೭೫). [ಆಯ$_1$ + ವಿದ್ಯೆ]

**ಆಯವ್ಯಯಪಟ್ಟಿ** (ನಾ). ಆದಾಯ ವೆಚ್ಚಗಳ ವಿವರವನ್ನು ತೋರಿಸುವ ಪಟ್ಟಿಕೆ, —ತಖ್ತೆ. [ಆಯ$_7$ + ವ್ಯಯ + ಪಟ್ಟಿ]

**ಆಯಶ್ಶೂಲಿಕ, ಆಯಃಶೂಲಿಕ, ಆಯಶ್ಶೂಳಿಕ** (ಗು). ೧. ಕಬ್ಬಿಣದ ಶೂಲಕ್ಕೆ ಸಂಬಂಧಿಸಿದ. (ನಾ). ೨. ಸುಲಭೋಪಾಯದಿಂದ ಸಾಧ್ಯವಾಗುವ ಕೆಲಸಕ್ಕೆ ತೀಕ್ಷ್ಣವಾದ ಉಪಾಯಗಳನ್ನು ಅವಲಂಬಿಸುವವನು. **ಆಯಃಶೂಲಿಕ** (ಕ). **ಆಯಶ್ಶೂಳಿಕ**: ೩. ಪ್ರಾಣಬಿಡುವವನು (?): "ಪ್ರಾಣಪರಿಚ್ಛೇದಂಗೆಯ್ವವನಂ ಆಯಶ್ಶೂಳಿಕನೆಂಬುದು" (ಹಲಾಯು. ೬೧-೨೧೬). [ಸಂ.]

**ಆಯಶ್ಶೂಳಿಕ** 'ಆಯಶ್ಶೂಲಿಕ' ನೋ.

**ಆಯಸ$_1$** (ನಾ). ಆಯಾಸ; ಬಳಲಿಕೆ; ಶ್ರಮ: ವೀರಸುತಜನನಿಗೀ ಗಾಂಧಾರಿಗೆ ದುಃಖಶತಜನನಿವೆಸರಾಯ್ತೀಗಳ್ ಕೌರವಪತಿ ದುಃಖಮಹಾಭಾರಮನಾಂತಾಯಸಕ್ಕೆ ಗುಜಿಯಾದುದ್ದಜಿಂ (ಗದಾಯು. ೪–೫); ಪುಟ್ಟುವುದೊಂದುಜ್ಜುಗದೊಳೆ ಮರಣಾವಸ್ಥೆಯಂ ತಾಳ್ದಿ ಬಂದಾಯಸಮಂ ಚಿತ್ತಯ್ಸಿ ಪಂಪಾಪುರದರಸ . . . ರಕ್ಷಿಪ್ಪುದೆನ್ನಂ (ರಕ್ಷಾಶ. ೩); ಇದಜಾಯಸವು ತಾನೇಸುದಿನ (ಕುವ್ಯಾಭೀ. ೧೦–೩೫); ಕಾಯ ಮನೋವಚನಗಳ ಆಯಸದಿಂದಳವಳಿಯದೆ ಪತಿಯನುಪಾಯದಿಂದುಪಚರಿಸುವುದು (ಹದಿಬ. ೩–೯). [< ಸಂ. ಆಯಾಸ]

**ಆಯಸ$_2$** 'ಆಯಿಸ' ನೋ.

**ಆಯಸ$_3$** (ಗು). ೧. ಕಬ್ಬಿಣದಿಂದ ಮಾಡಿದ; ಕಬ್ಬಿಣಕ್ಕೆ ಸಂಬಂಧಿಸಿದ. 'ಆಯಸಕವಚ' ಪರಾ. (ನಾ). ೨. ಲೋಹದಿಂದ (ಉಕ್ಕಿನಿಂದ) ಮಾಡಿದ ಆಯುಧ: "ಸಿಡಿ – ವಿಕೀರ್ಣೇ, ಸೂಕ್ಷ್ಮಾಯಸ (ಸಿಡಿಯಾಡುವುದರಲ್ಲಿ ಉಪಯೋಗಿಸುವ ಮೊನಚಾದ ಕಬ್ಬಿಣದ ಕೊಕ್ಕಿ) ದಾಹಾಂತ (ಹುರಿಯುವುದರಲ್ಲಿ ಹಾರುವುದು), ಗಜಕ್ರೋಧವಸ್ತುನೋಃ (ಆನೆಯ ಮದೋದಕ)" (ಶಮುಧಾ). [**ಸಂ.**]

**ಆಯಸಂಗಾಣಿಸು** (ಕ್ರಿ). ಆಯಾಸ ತೋರುವಂತೆ ಮಾಡು; ಬಳಲಿಕೆಯುಂಟುಮಾಡು: ವರುಣನೊಡಲೊಳಗರುಣವಾರಿಯಂ ತೋಜಿ ವಾಯುವಿಗಾಯಸಂಗಾಣಿಸಿ (ಚಿಬಪು. ೩೯–೧೬).

[ಆಯಸ$_1$ + ಕಾಣ್ + –ಇಸು$_3$]

**ಆಯಸಂಗೊಳ್**, ಆಯಸಗೊಳ್ (ಕ್ರಿ). ಬಳಲು; ಆಯಾಸಹೊಂದು: ಮಾಯೆಯೆಂಬಳ ಸೃಜಿಸಿ ತಾಯನಾಗಿಸಿ ಜಗಕೆ ಆಯಸಂಗೊಳುತ ಸಂಸಾರಿಯಾಗಿರುವ ನಾಯಕ ಬ್ರಹ್ಮನನುಯಾಯಿಗಳು ನಾವೆಲ್ಲ ಹೇಯವದರೊಳಗೇನೊ (ಮಂಕುಕ. ೬೭೨). **ಆಯಸಗೊಳ್**: ಬಾಯಬಿಡುತ ಬಲುಭೀತಿಯೊಳಗೆ ಹೊಕ್ಕರಾಯಸಗೊಂಡು ಹೆಮ್ಮಲೆಯ (ಕಂನಧಿ. ೧೧–೪೭); ಎನಿತಿತ್ತೊಡಂ ಬೊಕ್ಕಸಂ ಪೂರ್ಣಮಾಗಿರ್ದುದಿನಿಸುಮರೆಯಾಗದೆ ಪರಿಗ್ರಹಿಸಿದವರೊಯ್ಯಲಾರದಾಯಸಗೊಂಡರು (ಶೇಷರಾ. ೩೪–೧೬). [ಆಯಸ$_1$ + ಕೊಳ್$_1$]

**ಆಯಸಂಬಡಿಸು** (ಕ್ರಿ). ೧. ಆಯಾಸಪಡಿಸು; ಬಳಲಿಸು; ಕಷ್ಟಪಡಿಸು: ಬೀಯವಾಗುವ ತನುವಿನಲಿ ನಿರ್ದಾಯಕನು ನೀನಿರ್ದು ಅತಿ ಹಿರಿದಾಯಸಂಬಡಿಸುವರೆ ನೀನನುಕೂಲವಾಗಿರ್ದು (ಹಭಸಾ. ೯೪). ೨. ನೆನೆಯಿಸು; ಮುಳುಗಿಸು: ರಾಯ ದಶರಥನಸುವಿಸಂಚಿತ ಕಾಯವನು ನವತಪ್ತತೈಲದಲಾಯಸಂಬಡಿಸಿದರು ಮೇಧಿಸಿದರು ಸುಗಂಧದಲಿ (ತೊರರಾ. ೨–೬–೧). [ಆಯಸ$_1$ + ಪಡು$_1$ + –ಇಸು$_3$]

**ಆಯಸಕವಚ** (ನಾ). ಕಬ್ಬಿಣದ ಕವಚ: ಡೆಂಡಣಿಸಿ ಕಳಚಿ ಬಿದ್ದುವು ಪುರಾತನಾಯಸಕವಚ (ಚೈತ್ಯಾಲ. ೫). [ಆಯಸ$_3$ + ಕವಚ]

**ಆಯಸಗೊಳ್** 'ಆಯಸಂಗೊಳ್' ನೋ.

**ಆಯಸಪಿಂಡ** (ನಾ). ಕಬ್ಬಿಣದ ಗುಂಡು: ಸಾಹಸಗತಿ ತಪ್ತಾರಕ್ತಾಯಸಪಿಂಡಂ ನೀರೊಳಗಬ್ಬಿಂತೆ ತನ್ನ ತೇಜಂಗೆಟ್ಟಂ (ಪಂರಾಮಾ. ೧೦–೩೦).

[ಆಯಸ$_3$ + ಪಿಂಡ]

**ಆಯಸಬಡು** 'ಆಯಸವಡು' ನೋ.

**ಆಯಸವಡು**, ಆಯಸಬಡು (ಕ್ರಿ). ಆಯಾಸಪಡು; ಬಳಲು; ನೋಯು: ಹಕ್ಕಿಯನೇಜಿಯಾಯಸವಡುತೆಲ್ಲೆಲ್ಲಿ ತುಕ್ಕಿಬಂದಿರಿ ಪೇಳ್ವುದೆನಲು (ಮೋಹತ. ೧೩–೩೪). **ಆಯಸಬಡು**: ಜನಮೇಜಯ . . . ಯಜ್ಞಮಂ ಆಯಸಬಟ್ಟುಮಾಡೆ (ಕಜೆಕಂ. ೩೦). [ಆಯಸ$_1$ + ಪಡು$_1$]

**ಆಯಸಾಮ್ಯ** 'ಆಯಸ್ವಾಮ್ಯ' ನೋ.

**ಆಯಸಾಯ** 'ಆಯಸ್ವಾಮ್ಯ' ನೋ.

**ಆಯಸ್ಕರ** (ನಾ). ಅಯಸ್ಕಾಂತ; ಸೂಜಿಗಲ್ಲು: ಸೂಚಿಗಳಿಗಾಯಸ್ಕರವ ದೂರದಿ ತೋರಿಸಲ್ಕಾಚರಿಸವೇ ಆ ತೆರಮೆನಲು (ಶಂಕದಾ. ೧೪–೬೧). [?]

**ಆಯಸ್ವಾಮ್ಯ**, ಆಯಸಾಮ್ಯ, ಆಯಸಾಯ (ನಾ). ಹಳ್ಳಿಗಳಲ್ಲಿ ವಂಶಪರಂಪರೆಯಿಂದ ಸೇವೆ ಸಲ್ಲಿಸಿಕೊಂಡು ಬಂದಿರುವವರಿಗೆ ಕಣದಲ್ಲಿ ಅಳೆದು ಕೊಡುವ ಧಾನ್ಯ, —ವರ್ಷಾಶನ: ಅಂಗಡಹಳ್ಳಿ ಪಟ್ಟಡಿ ಸೇನಭೋಗತನವನ್ನು ನೇಮಿಸಿ ಆಯಸ್ವಾಮ್ಯ . . . ಮುಂತಾದುವನ್ನು ನಿರ್ಣಯಿಸಿ (ಚಿತ್ರಪಾ. ೧೦). **ಆಯಸಾಮ್ಯ** (ಕಿಸಂಗ್ಲಾ. ೧೪೦). **ಆಯಸಾಯ** (ಕಿಸಂಗ್ಲಾ. ೪೯). [ಆಯ$_1$ + ಸ್ವಾಮ್ಯ]

**ಆಯಸ್ಸು** 'ಆಯುಸ್ಸು' ನೋ.

**ಆಯಾ** (ನಾ). ದಾದಿ; ದಾಸಿ; ಸೇವಕಿ: ಅವರ ಹೆಣ್ಣುಮಕ್ಕಳು . . . ಮೇಂ ಸಾಹೇಬರ ಆಯಾಗಳಾದರು (ಸಾಹೇಬ್. ೯); ಆಸ್ಪತ್ರೆಯಿಂದ ಒಬ್ಬ ಆಯಾವನ್ನು ಜೊತೆಮಾಡಿ ರೋಗಿಯನ್ನು ಮನೆಗೆ ಕಳುಹಿಸಿಕೊಟ್ಟರು (ರೂಢಿ). [← ಹಿಂ. ಆಯಾ]

**ಆಯಾತ** (ಗು). ೧. ಬಂದು ತಲಪಿದ; ಬಂದ; ಬರುವ. (ನಾ). ೨. ಬಂದವನು: ಶರಣಾಯತರನೆಯ್ದೆ . . . ಮುನಿಸಿಂ ಮಾಜಾನ್ತರಂಕೊಂದು (ಎಇ. XIII, ೩೨೯–೫ ; 930). ೩. ಆಮದು; ಹೊರಗಿನಿಂದ ಬರುವುದು: ಆಹಾರದಿಂದ ಮೊದಲ್ಗೊಂಡು ಹೆಚ್ಚುಕಡಿಮೆ ಎಲ್ಲ ವಸ್ತುಗಳಿಗೂ ವಿದೇಶಿ ಆಯಾತವನ್ನೇ ಕಾದು ಕುಳಿತುಕೊಳ್ಳಬೇಕಾದ ಭಾರತದಲ್ಲಿ ಕೊರತೆಯ ಪಿಡುಗು ಮನೆ ಮಾಡಿತು (ಭ್ರಮಾನ. ೬೭); ಆಯಾತ ಮಾಡಿದ್ದಕ್ಕೆ ದಂಡ ವಿಧಿಸಿದ್ದಾರೆ (ಹುಸಂಕ. ೧೯–೧೧–೫೯). [**ಸಂ.**]

**ಆಯಾತಪ್ರಯಾತ** (ಗು). ಬರುವ ಮತ್ತು ಹೋಗುವ: ವಿಕಿರತ್ಪುಷ್ಪಕದಂಬತಾರಕಿತ ಮಾಯಾತಪ್ರಯಾತಾಂಗನಾನಿಕರೋದ್ಯಚ್ಚರಣಾಂಶುಪಲ್ಲವಿತಂ . . . ರಾಜಗೇಹಾಜಿರಂ (ಚಂದ್ರಪು. ೧–೧೫೧).

[ಆಯಾತ + ಪ್ರಯಾತ]

**ಆಯಾನ** (ನಾ). ೧. ಬರುವುದು; ಬಂದು ತಲುಪುವುದು. ೨. ಸ್ವಭಾವ; ಪ್ರಕೃತಿ. ೩. ಅಭೇದ್ಯವಾದುದು; ಅನಾಹತ: "ಆಯಾನಮೆನಲನಾಹತಮೆನಲಭೇದ್ಯಂ" (ಮಂಗರಾ. ೧೩೫–೩೮). [**ಸಂ.**]

**ಆಯಾಮ** (ನಾ). ೧. ಉದ್ದ; ನೀಳ; ದೀರ್ಘತೆ: ವಿಂಶತಿ ಯೋಜನವಿಸ್ತಾರಮುಂ ತ್ರಿಂಶದ್ಯೋಜನಾಯಾಮಮುಮಪ್ಪ ರಣಭೂಮಿಯಂ ಕೈಕೊಂಡಿರ್ಪುದುಂ (ಪಂರಾಮಾ. ೧೨–೬೯ ವ). ೨. ವಿಸ್ತಾರ; ಹರಹು. ೩. ಸಂಯಮ; ತಡೆದಿರುವುದು; ನಿಯಮನ. [**ಸಂ.**]

**ಆಯಾರ** (ನಾ). ಆಹಾರ; ಬಲಿ: ಅಯ್ಯಾ ಕೊಡಿ ಹೊತ್ತಾಯ್ತು ಭೂತಕ್ಕೆ ಆಯಾರ ಕೊಡಬೇಕು ಎಂದು ತಿಮ್ಮನು ಹೇಳಲು ಮಾವಯ್ಯನು ನಿಂತು ಹಿಂತಿರುಗಿ . . . ಕಠೋರವಾಗಿ ನುಡಿದನು (ಕಾನೂರು. ೨೫೭).

[< ಸಂ. ಆಹಾರ]

**ಆಯಾಲ** 'ಅಯಾಲು' ನೋ.

**ಆಯಾಸ** (ನಾ). ೧. ಬಳಲಿಕೆ; ಶ್ರಮ; ನೋವು: ಆ ಕೆಲಸ ಮುಗಿಸುವುದರಲ್ಲಿ ಬಹಳ ಆಯಾಸವಾಯಿತು (ರೂಢಿ). ೨. ಪ್ರಯತ್ನ: ಪಾಯಸವಾದರೂ ಆಯಾಸದ ಹೊರತು ಸಿಕ್ಕದು (ಗಾದೆ). [**ಸಂ.**]

**ಆಯಾಸಂಗೊಳ್**, ಆಯಾಸಗೊಳ್ (ಕ್ರಿ). ೧. ಬಳಲು; ಶ್ರಮಪಡು; ಕಷ್ಟಕ್ಕೆ ಸಿಕ್ಕು: ಈಯಂದದ ವಿರಹವೇದನೆಯಿಂದಾಯಾಸಂಗೊಂಡಲರ್ವಾಸಿನಮೇಲಾಯತನೇತ್ರೆ ಸುಲೋಚನೆ . . . ಮೆಯ್ಯಿಕ್ಕಿದಳು (ಜಯಕಾ. ೪–೩೮); ಆ ಸಕಳ ವೇದಂಗಳತ್ಯಾಯಾಸಂಗೊಂಬವು ನುತಿಸಲಾಜದೆ (ಬಸಪು. ೮–೪೬). **ಆಯಾಸಗೊಳ್**: ೧. ರತಿದೇವಿ ದುಕ್ಕದಿಂದಾಯಾಸಗೊಳುತೆ . . . ಹೊಕ್ಕಳು ಕುಸುಮಾವತಿಯ (ಮೋಹತ. ೮–೪೯). ೨. ಪ್ರಯತ್ನಿಸು (ಕಿ). [ಆಯಾಸ + ಕೊಳ್$_1$]

**ಆಯಾಸಂಬಡು**, ಆಯಾಸಪಡು (ಕ್ರಿ). ಕಷ್ಟಪಡು ; ಶ್ರಮವನ್ನು ಹೊಂದು ; ಬಳಲು : ಕ್ಷುತ್ಪಿಪಾಸೆಗಳಿನಾಯಾಸಂಬಡದೆ ಮುನಿಜನೋಚಿತಮಪ್ಪ ನವಫಲಂಗಳನುಪಭೋಗಿಸು (ಕಾದಂಊ. ೭೫೭) ; ಕಾಯಕ್ಲೇಶಂಗಳಿನಿನಿಸಾಯಾಸಂಬಡದೆ ಪೆಜರ ಮನೆಯೊಳ್ಪುಣಿಸಂ ಮಾಯಾವಿತನದಿನುಣ್ಬರ ದಾಯಮನೀ ಪರದನಱಿಯದಕ್ಕಟ ಕೆಟ್ಟಂ (ಧರ್ಮಾಮೃ. ೧–೧೦೫). **ಆಯಾಸಪಡು** : ಪ್ರಯೋಜನವಿಲ್ಲದ ಕೆಲಸವನ್ನು ಕಟ್ಟಿಕೊಂಡು ಯಾಕೆ ವೃಥಾ ಆಯಾಸಪಡುತ್ತೀರಿ (ರೂಢಿ). [ಆಯಾಸ+ಪಡು$_1$]

**ಆಯಾಸಗೊಳ್** 'ಆಯಾಸಂಗೊಳ್' ನೋ.

**ಆಯಾಸಪಡಿಸು** (ಕ್ರಿ). ಕಷ್ಟಪಡಿಸು ; ಬಳಲುವಂತೆ ಮಾಡು ; ದಣಿಸು : ಅವರನ್ನು ಆಯಾಸಪಡಿಸಬೇಡಿ (ಕೊನೆಭೇ. ೧೮೨).
[ಆಯಾಸಪಡು (< ಆಯಾಸಂಬಡು) + –ಇಸು$_3$]

**ಆಯಾಸಪಡು** 'ಆಯಾಸಂಬಡು' ನೋ.

**ಆಯಾಸಿ** (ನಾ). ಶ್ರಮಗೊಂಡವನು ; ದಣಿದವನು : ಕನಕಾಪೇಕ್ಷೆಯಿನಾವಗಂ ಖನನಮಂ ಮಾಳ್ಪುದ್ಗತಾಯಾಸಿಗಳ್ಗೆನಸುಂ ಸತ್ಕರಣಾತ್ಮೆಯಾಗಿ ಬೆಳೆದಳ್ ಭೂದೇವಿ ತಾನಿಲ್ಲಿ (ಕುಸುಮಾ. ೨–೪೨).
[ಸಂ. ಆಯಾಸಿನ್]

**ಆಯಾಳಿಸು** (ಕ್ರಿ). ಕೇಸರದಂತೆ ಮಾಡಿಕೊ : ದಿಂಬಿನಲಿ ಮೊಗದೋರಿ ಎಸಳನಾಯಾಳಿಸುತ ಸಿಂಹಾವಲೋಕನದಿ ನೋಡುವಂತೆ ಸೂರ್ಯಪಾನವ ನೋಡು ಹೇಗೆ ನಿಂತಿಹುದು (ಸೂರ್ಯಪಾ. ೧–೭).
[ಆಯಾಳ್$_0$ (< ಆಯಾಲು) + –ಇಸು$_3$]

**ಆಯಿ$_1$** 'ಆಯ್$_1$' ನೋ.

**ಆಯಿ$_2$** (ನಾ). **೧.** ತಾಯಿ : ಸೈಗರೆವದು ಸಮರಂಗವೆರಡು ಸಮ ಆಯಿಗಳಲಿಂತು ವಂಚನೆಯೇ (ಸೌಂದಕಾ. ೮–೯). **೨.** ಹೆಂಗಸರ ಹೆಸರಿನ ಕೊನೆಯಲ್ಲಿ (ಅಕ್ಕ, ಅಮ್ಮ ಎಂಬಂತೆ) ಸೇರುವ ಮಾತು. ಉದಾ : ಗಂಗಾಯಿ, ಧವಳಾಯಿ, ನಾಗಲಾಯಿ, ಮಂಗಾಯಿ. **೩.** ಅಜ್ಜಿಯ ತಾಯಿ ; ಮುತ್ತಜ್ಜಿ : ನಿಮ್ಮ ಅಜ್ಜ ಪಣಿಜ ಸತ್ತುದ ಕೇಳುತ್ತಿದ್ದಿ, ನಿಮ್ಮ ತಾಯಿ ಸತ್ತುದ ನೋಡುತ್ತಿದ್ದಿ, ನಿಮ್ಮ ತಾಯಿಯ ತಾಯಿ ಸತ್ತುದ ಕಾಣುತ್ತಿದ್ದಿ, ನಿಮ್ಮ ಆಯಿ ಪಣಿಜಿ ಸತ್ತುದ ಕೇಳುತ್ತಿದ್ದಿ (ವಚಶಾ. I, ೨೪೯).
[ದೇ. ‖ ತಮಿ. ಆಯ್, ಆಯಿ, ಯಾಯ್, ನಾಯ್ ; ಪರ್ಜಿ. ಆಯಾಲ್ = ಹೆಂಗಸು, ಹೆಂಡತಿ ; ಕುಇ. ಐಅ, ಐಅಲಿ ; ಕುವಿ. ಈಯ ; ಕುರುಖ್. ಆಯಂಗ್ ; ಮಲ್ತೊ. ಆಯ್ಯ. / ಮರಾ. ಗುಜ. ಅಸ್ಸಾ. ಬಂಗಾ. ಒರಿ. ಸಿಂಧಿ. ಆಯಿ]

**ಆಯಿ$_3$** (ನಾ). ಗೊಲ್ಲರವನು (?) : ಹಾಲುಗಲ್ಲನಾಡ ಆಯಿಗಳ ಸಂಖಿಪ್ಪ ನಾಗರಖಂಡೆಯನಾಡ ಕುಪ್ಪಟೂರ ಗೋಪಗೌಡ (ಎಕ. VII, ಶಿಕಾರಿ. ೨೮೨–೬೬ ; 1368). [ದೇ. ‖ ತಮಿ. ಆಯನ್ ; ಮಲ. ಆಯ]

**ಆಯಿಕುಳಿ** 'ಆಯ್ಕುಳಿ' ನೋ.

**ಆಯಿಕೆ** 'ಆಯ್ಕೆ' ನೋ.

**–ಆಯಿತ** '– ಆಯ್ತ' ನೋ.

**ಆಯಿದೆನೆ** (ನಾ). **೧.** ಹೊಲ ಗದ್ದೆಗಳಲ್ಲಿ ಬೆಳೆಯನ್ನು ಕೊಯ್ದ ಮೇಲೆ ಆರಿಸಿ ಶೇಖರಿಸಿಕೊಳ್ಳುವ ಉದುರಿದ ತೆನೆ ; ಹಂಕಲು (ಶಿ). **೨.** ಬೀಜಕ್ಕೋಸ್ಕರವಾಗಿ ಬೆಳೆದ ಬೆಳೆಯಲ್ಲಿ ಆರಿಸಿ ತೆಗೆದಿಡುವ ಉತ್ತಮವಾದ ಕಾಳಿನ ತೆನೆ ; "ಆರಿಸಿದ ತೆನೆ, ಬೀಜದ ತೆನೆ" (ಜಾನಕೋ. ೧೬). **೩.** "ಮೊದಲನೆಯ ಬೆಳೆ" (ರಮಾಕಾಂ.).
[ಆಯಿ$_1$ (< ಆಯ್$_1$) + ತೆನೆ]

**ಆಯಿರ್** (ಕ್ರಿ). ಅದೋ ಇರು ; ಅಲ್ಲಿ ಇರು : ಎನ್ನ ಭಾರ್ಯೆ ಕುಬೇರಶ್ರೀಮಾಡದ ಮೇಗಣಿಂದಂ ತನ್ನಂ ನೆಲಕ್ಕಿಕ್ಕಿ ಬಿಟ್ಟು ಸತ್ತಳಿನ್ನು ಮಾಯಿರ್ದ್ದಳೆಂದು ತೋಱಿದೊಡೆ (ವಡ್ಡಾರಾ. ೩೯–೯) ; ಪರಿಹಾಸನೆಂಬುದಾಯಿರ್ಪರಗಿಳಿ ಕಾಳಿಂದಿಯೆಂಬುದೀ ಸಾರಿಕೆ (ಕಾದಂಊ. ೬೪).
[ಆ$_3$ (< ಅದು$_1$) + ಇರ್$_1$]

**ಆಯಿಲ$_1$** (ನಾ). ಸೂರೆ ; ಕೊಳ್ಳೆ (?) ; "ರೋಗ" (ಆದಿಪು. ಕೋಶ) ; "ಕೆಟ್ಟ ನಡತೆ" (ಸಮ್ಯಕೌ. ಕೋಶ) : ಕಳ್ಳರಾಯಿಲಮಱಿಯೇಱು ಮಾರಿ ಪಸವಿಟ್ಟಿ ಬಱಂ ಪೆಱವುಂ ಭಯಂಗಳಾಕುಲಿತೆಗಳಿಲ್ಲ (ಆದಿಪು. ೧–೫೨) ; ಬಡವರ್ ಬಲ್ಲಿದರೆಂಬ ದೇಶಭಾಷೆಯಂ ಆಯಿಲದಳುಪಿನಿಱಿವಿಱಿಯುಂ (ಶಾಂತಿಪು. ೬–೧೦೨ ವ) ; ಪಿಡಿಕಟ್ಟಾಱಡಿ ತೊಂಡು ಬಂಡು ಮೊಱೆ ಪೊಕ್ಕೇಱಾಯಿಲಂ ಚೌರ್ಯಮೆಂಬೊಡವೆಂದುಂ ತಲೆದೋಱವು (ಧರ್ಮನಾ. ೨–೪೬) ; ಮನದೊಳುಮ್ಮಳಿಕೆಯೆನಿಸಿಲ್ಲೇಱುಮಾಱು ಸಜ್ಜನದೂಷಣತ್ವಮಾಯಿಲಮೊತ್ತು ಜೊತ್ತು (ಸಮ್ಯಕೌ. ೬–೩೩). [?]

**–ಆಯಿಲ$_2$**, –ಅಯಿಲ, –ಆಯ್ಲ (ಪ್ರ). "ದೀವ್ಯನ್" ಎಂಬ ಅರ್ಥದಲ್ಲಿ ಎಂದರೆ ಕ್ರೀಡಿಸು, ಗೆಲ್ಲು, ಮಾರು, ಪ್ರಕಾಶಿಸು, ಅಪೇಕ್ಷಿಸು ಇತ್ಯಾದಿ ಅರ್ಥಗಳಲ್ಲಿ ಬರುವ ತದ್ಧಿತ ಪ್ರತ್ಯಯ : "ಘೋಟಯಿಲಂ, ಘೋಟಾಯಿಲಂ ಅತ್ರ ಘೋಟಕಾರ್ಥಾತ್ ಘೋಟ ಶಬ್ದಾತ್ ತೃತೀಯಾ ಸಮರ್ಥಾತ್ ದಿವ್ಯನ್ನಿತ್ಯರ್ಥೇ ಅಯಿಲ, ಆಯಿಲ ಇತ್ಯೇತೌ ಪ್ರತ್ಯಯೌ ನಿಪಾತ್ಯೇತೇ ಘೋಟಕೇನ ದೀವ್ಯನ್ ಘೋಟಾಯಿಲೋ ಘೋಟಾಯಿಲಶ್ಚೇತಿ ಘಾಟಕ ಇತ್ಯರ್ಥಃ ಘೋಟಾರೋಹಣ ಪ್ರವಣ ಇತಿ ಯಾವತ್" (ಶಬ್ದಾನು. ೪೪೧ ವ್ಯಾಖ್ಯಾ) ; ಸಂಗ್ರಾಮಪ್ರಮುಖರಖಿಲ ಘೋಟಾಯಿಲರ್ ಮನೋಜವ ಜಾತ್ಯಶ್ವಂಗಳನೇಱಿ ಕದನಕ್ಷೋಣಿಗೆ ನಡೆದರ್ (ಪಂರಾಮಾ. ೧೩–೨೯ ವ) ; ಒದವಿರ್ಕುಂ ಸಂಸ್ಕೃತವೆನ್ನದೆ ಕನ್ನಡವೆನ್ನದಾಯಿಲ ಪ್ರತ್ಯಯಮಂ . . . ಪ್ರಯೋಗಂ – ಸಂಸ್ಕೃತಕ್ಕೆ, ಆಯಿಲ ಪ್ರತ್ಯಯಕ್ಕೆ – ಗಾಢಾಯಿಲಂ, ರೇಖಾಯಿಲಂ, ಕನ್ನಡಕ್ಕೆ – ಓಜಾಯಿಲಂ, ಅಡ್ಡಾಯಿಲಂ, ಗೋಟಾಯಿಲಂ, ಪುಗ್ಗಾಯಿಲಂ (ಶಮದ. ೨೧೫ ಪ್ರಯೋ) ; ತಾಯಂ ಮಗನಿಂ ಕೊಲಿಸದೆ . . . ಪುಗ್ಗಾಯಿಲನಂ ಕೊಂದು ಕೂಗಿಸದೆ ಬಿದಿ ಸತತಂ (ನಳಚಂ. ೬೪೨). **–ಅಯಿಲ** : ಪದಯಿಲಂ, ಪಚ್ಚಯಿಲಂ (ಶಬ್ದಾನು. ೪೪೧ ಪ್ರಯೋ). ℙ ಶಬ್ದಮಣಿದರ್ಪಣಕಾರನ ಅಭಿಪ್ರಾಯದಲ್ಲಿ ಇಲ್ಲಿ ಸೇರುವುದು ಇಲ ಪ್ರತ್ಯಯ : ಪೀನಂ ತದ್ವರ್ತನಗತ ಮಾನವನೊಳ್ ತಿಳಿಗೆ ಮತ್ತಿಲ ಪ್ರತ್ಯಯಮಂ . . . ಇಲ ಪ್ರತ್ಯಯಕ್ಕೆ —ಪಚ್ಚಯಿಲಂ, ಪಡೆಯಿಲಂ, ಗಾವಿಲಂ (ಶಮದ. ೨೦೫, ಪ್ರಯೋ). **–ಆಯ್ಲ** : ಘೋಟಾಯ್ಲರ್ ಪೊಳೆಯಿಸೆ ಬಿಸಿಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ (ಪಂಪಭಾ. ೧೦–೫೧ ವ) ; ಅಟಲಿಗರು ವೇಗಾಯ್ಲರುಮಪ್ಪನ್ವಯಾಗತ ನಭೋಗತಿಗಳ್ (ಶಾಂತಿಪು. ೪–೩೩ ವ) ; ಪುಗ್ಗಾಯ್ಲಂ = ಗರ್ವಿತಂ (ಶಮದ. ಪರಿ. ೨) ; ಜಾಡಲೆಗೆ ವೇಗಾಯ್ಲರನ್ನೋಡಿಸಿ (ಬೆಟ್ಟಅ. ೬೭–೮).

**ಆಯಿಲಂಗೊಳ್** (ಕ್ರಿ). ಸೂರೆಮಾಡು ; ಕೊಳ್ಳೆಹೊಡೆ ; ಕಸಿದುಕೊಳ್ಳು (?) : ಈತನಿನಿತಱಿಕೊಳಗೆ ಮಾಣ್ಬನಲ್ಲ ಎಮ್ಮೆಮ್ಮ ಜೀವಧನಂಗಳನಾಯಿಲಂಗೊಂಡಿರ್ದಪನೆಂಬುದುಂ (ಸುಕುಮಾ. ೭–೩೭ ವ).
[ಆಯಿಲ$_1$ + ಕೊಳ್$_1$]

**ಆಯಿಸ**, ಆಯಸ್ಸ, ಆಯುಸ (ನಾ). ಜೀವಿತದ ಕಾಲಾವಧಿ ; ಬದುಕಿರುವ ಕಾಲ : "ಆಯುಷ್ಯ – ಆಯಿಸ" (ಶಮದ. ೪೩ ಪ್ರಯೋ) ; ತವಿಸುವುದಾಯಿಸ (ಶಬ್ದಾನು. ೫೪೨ ಪ್ರಯೋ). **ಆಯಸ್ಸ** : "ಆಯುಷ್ಯ — ಆಯ [ಪಾಠಾಂ. ಯಿ]ಸ" (ಶಬ್ದಾನು. ೧೬೦ ಪ್ರಯೋ). **ಆಯುಸ** (ದಕ. ಶಿ). [< ಸಂ. ಆಯುಷ್ಯ]

**ಆಯಿಸು,** ಆಯ್ಸು (ಕ್ರಿ). ಆಯುವಂತೆ ಮಾಡು; (ಕಲ್ಲು, ಕಸ ಮುಂತಾದುವುಗಳನ್ನು) ಬೇರ್ಪಡಿಸುವಂತೆ ಏರ್ಪಡಿಸು: ಅವರು ಹೊಲದಲ್ಲಿ ಕಲ್ಲಾಯಿಸುತ್ತಿದ್ದಾರೆ (ರೂಢಿ). **ಆಯ್ಸು**: ದುಗುಡವೇತಕೆ ಜೀಯ ಡೊಂಬಿನ ಜಗಳವನು ತೆಗೆದರಿನೃಪರ ಸುಂಟಿಗೆಯನಾಯ್ಸುವೆನವರ ತನುವನು ಯುದ್ಧರಂಗದಲಿ (ಕುವ್ಯಾಆ. ೮–೬). [ಆಯ್$_1$ + –ಇಸು$_3$]

**ಆಯು$_1$** 'ಆಯ್$_1$' ನೋ.

**ಆಯು$_2$** (ನಾ). ಜೀವಿತದ ಅವಧಿ; ಆಯುಷ್ಯ: ಕುಂದುವುದಾಯುವೆನಲ್ಕೆ (ಸಮುಪ. ೫–೬೩); ಅಯ್ಯ ನಿಮ್ಮಲ್ಲಿ ಆಯುವ ಬೇಡುವೆನೆ (ವಚರ. ೧೧೫); ಮಹಾಶುಭಂಗಳನಾಯುವಂ ಕೊಟ್ಟು . . . ರಕ್ಷಿಪಂ (ಪದ್ಮಪು. ೧–೫೩); ಬೊಮ್ಮನನು ಭಜಿಸುತ್ತ ಆಯುವನು ಸಾಧಿಸೆಲೊ (ಮಂಕುಕ. ೬೩೬). [ಸಂ.]

**ಆಯುಃಕರ್ಮ** 'ಆಯುಷ್ಕರ್ಮ' ನೋ.

**ಆಯುಃಪರಿಮಾಣ** (ನಾ). ಬದುಕಿರುವ ಅವಧಿ; ಆಯುಸ್ಸಿನ ಪ್ರಮಾಣ, —ಅವಧಿ. [ಸಂ. (ಆಯುಸ್ + ಪರಿಮಾಣ)]

**ಆಯುಃಪರಿಮಿತಿ** (ನಾ). = ಆಯುಃಪರಿಮಾಣ: ಮನುಷ್ಯನ ಆಯುಃ ಪರಿಮಿತಿ ಸಾಧಾರಣವಾಗಿ ನೂರು ವರ್ಷಗಳು (ರೂಢಿ). [ಸಂ. (ಆಯುಸ್ + ಪರಿಮಿತಿ)]

**ಆಯುಃಪ್ರಮಾಣ** (ನಾ). = ಆಯುಃಪರಿಮಾಣ: ಕೆಡಿಸುವೆಯೊ ಕಾಡೊಳಲೆದಾಯುಃಪ್ರಯಾ[ಮಾ]ಣಮಂ (ಶ್ರೀರಾಮಾ. ೧೬೦–೪೮೮). [ಸಂ. (ಆಯುಸ್ + ಪ್ರಮಾಣ)]

**ಆಯುಕ್ತ** (ಗು). ೧. ನೊಗಕ್ಕೆ ಹೂಡಿದ, —ಜೋಡಿಸಿದ. ೨. ಕೆಲಸಕ್ಕಾಗಿ ನಿಯೋಗಿಸಲ್ಪಟ್ಟ. (ನಾ). ೩. ನಿಯೋಗಿ; ಸಚಿವ; ಪ್ರತಿನಿಧಿ. [ಸಂ.]

**ಆಯುಕ್ತಕ** (ನಾ). = ಆಯುಕ್ತ. [ಸಂ.]

**ಆಯುಗ** 'ಆಯಗ' ನೋ.

**ಆಯುಧ** (ನಾ). ೧. ಹೊಡೆಯುವುದಕ್ಕೆ ಬಳಸುವ ಸಾಧನ; ಕತ್ತಿ, ಗದೆ, ಚಕ್ರ, ಮುಸಲ, ಮುದ್ಗರ ಮೊದಲಾದವುಗಳು: "ಹೇತಿಃ, ಶಸ್ತ್ರಂ, ಪ್ರಹರಣಂ, ಆಯುಧಂ, ಅಸ್ತ್ರಂ– ಈ ೫ ಕೆಯ್ದು" (ಹಲಾಯು. ೬೬–೩೦೮); ಒಟ್ಟಿದ ಮೂವತ್ತೆರಡಾಯುಧಂಗಳುಂಬೆರಸೆಜಂಕೆವೆರಸಿದ ಕುಲಗಿರಿಗಳೆ ತಳರ್ವಂತೆ ತಳರ್ವ ಮದಾಂಧಗಂಧಸಿಂಧುರಂಗಳುಮಂ (ಪಂಪಭಾ. ೧೦–೫೧ ವ). ೨. ಕೆಲಸವನ್ನು ಮಾಡಲು ಉಪಯೋಗಿಸುವ ಹಾರೆ, ಗುದ್ದಲಿ, ಮಚ್ಚು ಮೊದಲಾದ ಸಲಕರಣೆ, —ಸಾಧನ. [ಸಂ.]

**ಆಯುಧಧಾರಿ** (ನಾ). ಆಯುಧವನ್ನು ಧರಿಸಿದವನು. [ಸಂ. ಆಯುಧಧಾರಿನ್]

**ಆಯುಧಧಾರಿಣಿ** (ನಾ). ಆಯುಧವನ್ನು ಧರಿಸಿದವಳು: ಅವಳಿಗೆ ಆಯುಧಧಾರಿಣಿಯರಾದ ವಿಕೃತ ರಾಕ್ಷಸಿಯರು ಹಗಲೂ ಇರುಳೂ ಕಾವಲಾಗಿದ್ದರು (ವಚಭಾ. ೪೦೮). [ಸಂ. ಆಯುಧಧಾರಿಣೀ]

**ಆಯುಧಪಾಣಿ** (ನಾ). ಆಯುಧವನ್ನು ಕೈಯಲ್ಲಿ ಹಿಡಿದಿರುವವನು: ಮಾವಿನ ತೋಪಿನ ಹತ್ತಿರ ಆಯುಧಪಾಣಿಗಳು ಕೂಡಿವ್ದಾರೆಂದು ವರ್ತಮಾನ ಬಂತು (ಬಂಕಿಮು. ೩೯). [ಆಯುಧ + ಪಾಣಿ]

**ಆಯುಧಪೂಜೆ** (ನಾ). ಯುದ್ಧೋಪಕರಣಗಳಿಗೂ ಕೆಲಸಮಾಡುವ ಸಲಕರಣೆಗಳಿಗೂ ಮಾಡುವ ಪೂಜೆ; ನವರಾತ್ರಿಯ ಹಬ್ಬದ ಕಾಲದಲ್ಲಿ (ಆಶ್ವಯುಜ ಮಾಸದ ಶುಕ್ಲಪಕ್ಷದ ಮಹಾನವಮಿ ದಿನ) ಮಾಡುವ ಆಯುಧಗಳ ಪೂಜೆಯ ಸಮಾರಂಭ: ಮೈಸೂರರಸರ ಅರಮನೆಯಲ್ಲಿ ಆಯುಧಪೂಜೆಯು ಬಹಳ ವಿಜೃಂಭಣೆಯಿಂದ ಜರುಗುತ್ತದೆ (ರೂಢಿ). [ಆಯುಧ + ಪೂಜೆ]

**ಆಯುಧಶಾಲೆ** (ನಾ). ಆಯುಧಗಳನ್ನು ಕೂಡಿಸಿ ಜೋಡಿಸಿಟ್ಟಿರುವ ಮನೆ ಅಥವಾ ಕಟ್ಟಡ: ಆಯುಧಶಾಲೆಯೊಳ್ ಶತಸಹಸ್ರ ರವಿಪ್ರವಿಭಾಸಿ ದೇವ ಚಕ್ರಾಯುಧಮಿಂದು ಬಂದು ನೆಲಸಿರ್ದುದು (ಶಾಂತಿಪು. ೮–೧೫೩). [ಆಯುಧ + ಶಾಲೆ]

**ಆಯುಧಾಗಾರ** (ನಾ). = ಆಯುಧಶಾಲೆ: ಆಯುಧಾಗಾರದೊಳ್ ಪುಟ್ಟಿದ ಚಕ್ರಾಸಿದಂಡಚ್ಛತ್ರರತ್ನಂಗಳುಂ (ಆದಿಪು. ೧೫–೩ ವ). [ಆಯುಧ + ಆಗಾರ]

**ಆಯುಧಾಧ್ಯಕ್ಷ** (ನಾ). ಆಯುಧಶಾಲೆಯ ಮುಖ್ಯಾಧಿಕಾರಿ; ಆಯುಧಶಾಲೆಯ ಮೇಲ್ವಿಚಾರಣೆ ನಡೆಸುವವನು: ಒಂದು ದೆವಸ ಮೋಲಗದೊಳಾಯುಧಾಧ್ಯಕ್ಷಂ ಬಂದು . . . ಇದಿರೊಳ್ ನಿಂದು (ಶಾಂತಿಪು. ೮–೧೫೨). [ಆಯುಧ + ಅಧ್ಯಕ್ಷ]

**ಆಯುಧಿಕ** (ಗು). ೧. ಆಯುಧಗಳಿಗೆ ಸಂಬಂಧಿಸಿದ. (ನಾ). ೨. ಸೈನಿಕವೃತ್ತಿಯಿಂದ ಜೀವಿಸುವವನು; ಸಿಪಾಯಿ: "ಶಸ್ತ್ರಜೀವಃ, ಕಾಂಡಪೃಷ್ಠಃ, ಆಯುಧೀಯಃ, ಆಯುಧಿಕಃ – ೪ ಆಯುಧವನ್ನು ಧರಿಸಿ ಜೀವನ ಮಾಡುವವರ ಪೆಸರುಗಳು" (ಸಿದ್ಧಾಂತಿ. ೨೨೦). [ಸಂ.]

**ಆಯುಧೀಯ** (ನಾ). = ಆಯುಧಿಕ ೨: "ಶಸ್ತ್ರಜೀವಃ, ಕಾಂಡಪೃಷ್ಠಃ, ಆಯುಧೀಯಃ, ಆಯುಧಿಕಃ – ೪ ಆಯುಧವನ್ನು ಧರಿಸಿ ಜೀವನ ಮಾಡುವವರ ಪೆಸರುಗಳು" (ಸಿದ್ಧಾಂತಿ. ೨೨೦). [ಸಂ.]

**ಆಯುರವಧಿ** (ನಾ). ಜೀವಿತದ ಕಾಲ; ಬದುಕಿರುವ ಕಾಲದ ಪರಿಮಿತಿ: ಅದರ್ಕಾಯುರವಧಿಯುಮಿಂದಿನೊಂದೆ ದಿವಸಂ (ಸುಕುಮಾ. ೫–೨೨ ವ); ನಿನಗಾಯುರವಧಿ ಮೂಱುದಿನಂ (ಸುಕುಮಾ. ೧೨–೮). [ಸಂ. (ಆಯುಸ್ + ಅವಧಿ)]

**ಆಯುರವಸಾನ** (ನಾ). ಜೀವಿತದ ಕಡೆ; ಬದುಕಿನ ಕಡೆಗಾಲ: ಸೂರ್ಯಪ್ರಭನುಮಾಯುರವಸಾನದೊಳ್ . . . ವಿದ್ಯುತ್ತ್ರಭಂಗೆ . . . ಮಗನಾದೊಂ (ಶಾಂತಿಪು. ೯–೮೪ ವ, ೮೫ ವ). [ಸಂ. (ಆಯುಸ್ + ಅವಸಾನ)]

**ಆಯುರೇಖೆ** (ನಾ). [ಸಾಮುದ್ರಿ] ಜೀವಿತಾವಧಿಯನ್ನು ಸೂಚಿಸುವ ಗೆರೆ; ಆಯುಷ್ಯಸೂಚಕವಾದ ಗೆರೆ (ದಕ. ೬). [ಸಂ. ಆಯುರೇಖಾ (ಆಯುಸ್ + ರೇಖಾ)]

**ಆಯುರ್ಜ್ಞಾನ** (ನಾ). ಜೀವಿತಾವಧಿಯ ತಿಳಿವಳಿಕೆ; ಆಯುಸ್ಸಿನ ಅರಿವು: ಆಯುರ್ಜ್ಞಾನಮಱಿವಗಂತುಮಲ್ಲದೆ ಮನುಷ್ಯರ್ ಪರಿಮಿತಾಯುಗಳಪ್ಪುದಱಿಂದ[ದೆ] ಧರ್ಮಾರ್ಥಕಾಮಂಗಳನೊಡನೊಡನೆ ದೇಶ ಕಾಲ ಬಲೋಪಾಯದಿಂ ನೇಮಿಸುಗೆ (ಮುದತಿ. ೧–೫೮ ವ). [ಸಂ. (ಆಯುಸ್ + ಜ್ಞಾನ)]

**ಆಯುರ್ದಶೆ** (ನಾ). ಆಯುಸ್ಸಿನ ಸ್ಥಿತಿ: ದಶವದನನ ಪರಮಾಯುರ್ದಶೆಯಂತಸ್ತಮಿಸೆ ಭಾನುಮಂಡಲಮಾಗಳ್ ದಶವದನನ ಪಟಿಯಂತಿರೆ ದಶದಿಗ್ವದನಮುಮನುರ್ವಿಪರ್ವಿತ್ತು ತಮಂ (ಪಂರಾಮಾ. ೧೧–೧೮೦). [ಸಂ. ಆಯುರ್ದಶಾ (ಆಯುಸ್ + ದಶಾ)]

**ಆಯುರ್ಮಾನ** (ನಾ). = ಆಯುರವಧಿ: ಇಹಜೀವಿತದ ನನ್ನ ಆಯುರ್ಮಾನ ಪೂರ್ಣವಾಗದಿದ್ದುದರಿಂದ ಹಾಗಾಯಿತೇನೋ (ಶಾಂತಲಾ. ೩೮೯). [ಸಂ. (ಆಯುಸ್ + ಮಾನ)]

**ಆಯುರ್ಮಿತಿ** (ನಾ). ಆಯುಸ್ಸಿನ ಮಿತಿ, —ಮೇರೆ: ಅತಿದೂರಂ ಕಾಲಕಲ್ಪೋಚಿತವಿಕೃತಿ . . . ಪೂರ್ವಕೋಟ್ಯಾಯತಾಯುರ್ಮಿತಿ . . . ತನ್ನೊಳೆಂಬೀ ಸ್ತುತಿವಡೆದುದು ಸೌಖ್ಯಾವಗಾಹಂ ವಿದೇಹಂ (ಚಂದ್ರಪು. ೧–೬೬). [ಸಂ. (ಆಯುಸ್ + ಮಿತಿ)]

**ಆಯುರ್ವಂತ,** ಆಯುವಂತ (ನಾ). ಬಹಳ ಕಾಲ ಬದುಕುವವನು; ದೀರ್ಘವಾದ ಆಯುಸ್ಸುಳ್ಳವನು: ಬೊಮ್ಮಿದೇವನನಂತಚರಿತವನು ಕೇಳುತಿರ್ದವರು . . . ಆಯುರ್ವಂತರಪ್ಪರು (ಬಸವು. ೩೧-೩೨). **ಆಯುವಂತ:** "ಜೈವಾತೃಕಃ, ಆಯುಷ್ಮಾನ್ – ಈ ೨ ಆಯುವಂತಂ" (ಹಲಾಯು. ೬೩-೨೨೬); ಆಯುವಂತನೆ ಬಾಳು ದನುಜನಿಕಾಯಮಸ್ತಕಶೂಲ ಬಾಳೆನುತಾಯತಾಂಬಕಿ ಹರಸೆ (ಕೌಶಿರಾ. ೪೩-೩). [ಸಂ. ಆಯುಷ್ಮತ್]

**ಆಯುರ್ವಂತೆ** (ನಾ). ಬಹಳ ಕಾಲ ಬದುಕುವವಳು; ದೀರ್ಘವಾದ ಆಯುಸ್ಸುಳ್ಳವಳು (ದಕ. ೬). [ಆಯುರ್ವಂತ + –ಎ$_4$]

**ಆಯುರ್ವರ್ಧನ** (ಗು). ಆಯುಸ್ಸನ್ನು ಹೆಚ್ಚಿಸತಕ್ಕ (ದಕ. ೬). [ಸಂ. (ಆಯುಸ್ + ವರ್ಧನ)]

**ಆಯುರ್ವೃದ್ಧಿ** (ನಾ). ಆಯುಸ್ಸಿನ ಅಭಿವೃದ್ಧಿ; ಆಯುಸ್ಸು ಹೆಚ್ಚುವುದು (ದಕ. ೬). [ಸಂ. (ಆಯುಸ್ + ವೃದ್ಧಿ)]

**ಆಯುರ್ವೇದ** (ನಾ). ಒಂದು ಉಪವೇದ; ಆಯುರ್ವೃದ್ಧಿ, ರೋಗ, ನಿದಾನ ಮತ್ತು ಚಿಕಿತ್ಸೆ ಮುಂತಾದುವುಗಳನ್ನು ತಿಳಿಸುವ ಒಂದು ವೇದಭಾಗ; ಭಾರತೀಯ ವೈದ್ಯಶಾಸ್ತ್ರ: ಉಪವೇದ ಚತುರ್ವಿಧಂಗಳಲ್ಲಿ ಆಯುರ್ವೇದವೇ ವ್ಯಾಧಿನಿದಾನ ವ್ಯಾಧಿಚಿಹ್ನೆ ಮಂತ್ರೌಷಧ ಚಿಕಿತ್ಸೆಗಳಿಂದ ಆಯುರಾರೋಗ್ಯಾದಿಗಳಂ ತೋಱುಸುವುದು (ವಿವೇಕ. ೪); ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕಾಯುರ್ವೇದ ಧನುರ್ವೇದ ಹಸ್ತ್ಯಶ್ವತಂತ್ರ ರತ್ನಪರೀಕ್ಷೆಗಳುಮಂ . . . ಉಪದೇಶಂಗೆಯ್ದು (ಆದಿಪು. ೮-೬೦ ವ). [ಸಂ. (ಆಯುಸ್ + ವೇದ)]

**ಆಯುರ್ವೇದಿ** (ನಾ). ಭಾರತೀಯ ವೈದ್ಯಶಾಸ್ತ್ರವನ್ನು ಅಭ್ಯಾಸ ಮಾಡಿದವನು; ಆಯುರ್ವೇದವನ್ನು ಬಲ್ಲವನು: "ಆಯುರ್ವೇದೀ, ಭಿಷಕ್, ವೈದ್ಯಃ, ದೋಷಜ್ಞಃ, ಚಿಕಿತ್ಸಕಃ— ಈ ೫ ವೈದ್ಯಂ" (ಹಲಾಯು. ೧೧೦-೪೫೮). [ಸಂ. ಆಯುರ್ವೇದಿನ್]

**ಆಯುರ್ಹೀನ** (ಗು). ಪೂರ್ಣಾಯುಸ್ಸಿಲ್ಲದ; ಸ್ವಲ್ಪಕಾಲ ಮಾತ್ರ ಬದುಕುವ (ದಕ. ೬). [ಸಂ. (ಆಯುಸ್ + ಹೀನ)]

**ಆಯುರ್ಹೋಮ** (ನಾ). ದೀರ್ಘಾಯುಸ್ಸಿಗಾಗಿ ಮಾಡುವ ಹೋಮ (ದಕ. ೬). [ಸಂ. (ಆಯುಸ್ + ಹೋಮ)]

**ಆಯುವಂತ** 'ಆಯುರ್ವಂತ' ನೋ.

**ಆಯುವರ್ಧನ** (ಗು). ಆಯುಸ್ಸನ್ನು ಹೆಚ್ಚಿಸತಕ್ಕ: "ಕರ್ಣಾಗ್ರದೊಳ್ ಕಾಱುವ ವ್ರಣದ ಹಯಮಾಯುವರ್ಧನನಕ್ಕಲ್ಲದಿರಲಾಯುಹೀನಂ" (ಮಂಗರಾ. ೮೪-೨೨). [ಆಯು$_1$ + ವರ್ಧನ]

**ಆಯುವೊಯ್** (ಕ್ರಿ). ಆಯುಸ್ಸನ್ನು ಕೊಡು; ಜೀವಪನ್ನು ತುಂಬು: ಸೊಗಯಿಸುತಿರ್ಪಂಗನಾ ಭಂಗಿಯಂ ಚಿತ್ರಿಸಿ ಚಿತ್ರಕ್ಕಾಯುವೊಯ್ದಂ ಮದನನೆನೆ ಮಹಾದೇವಿ ಕಣ್ಗೊಪ್ಪಿ ತೋರ್ಪಳ್ (ಅಜಿಪು. ೭-೪೫); ಕರುವಿಟ್ಟಂ ಸತ್ಯದಿಂ ಕಜ್ಜೆಱಿದನಸಮಸಾಹಿತ್ಯದಿಂ ಬಣ್ಣವಿಟ್ಟಂ ಸಿರಿಯಿಂ ಕೂರ್ತಾಯುವೊಯ್ದಂ ಪರಹಿತಚರಿತೋದ್ಯೋಗದಿಂ ಬರ್ಮನೆಂಬಂತಿರೆ . . . ಧಾತ್ರೀಗುರುವಾದಂ (ಎಕ. XI, ದಾವಣ. ೨೫-೬೧; 1224). [ಆಯು$_1$ + ಪೊಯ್$_1$]

**ಆಯುಶ್ಚ್ಯುತಿ** (ನಾ). ಆಯುಸ್ಸಿನ ನಾಶ; ಆಯುಸ್ಸು ಕಡಮೆಯಾಗುವುದು: ಅಮರಾಪ್ಸಯಸೊಂದುಂ ವ್ಯರ್ಥಮಾದೊಡೇನಚ್ಯುತೇಂದ್ರನಾಯುಶ್ಚ್ಯುತಿಯೊಳ್ ಸುಮನೋಲೋಕಸ್ವವಿಬುಧಸಮಾಖ್ಯೆಗಂ ನಾಡೆ ಮಾಡಿದಂ ಸಾರ್ಥತೆಯಂ (ಚಂದ್ರಪು. ೯-೫೮). [ಸಂ. (ಆಯುಸ್ + ಚ್ಯುತಿ)]

**ಆಯುಶ್ಶೇಷ** (ನಾ). ಕಳೆದು ಉಳಿದ ಆಯುಸ್ಸು: ನನಗೆ ಇನ್ನೂ ಸ್ವಲ್ಪ ಆಯುಶ್ಶೇಷವಿತ್ತೆಂದು ಕಾಣುತ್ತದೆ (ಶಾಂತಲಾ. ೩೯೦). [ಸಂ. (ಆಯುಸ್ + ಶೇಷ)]

**ಆಯುಷ** (ನಾ). = ಆಯುಷ್ಯ ೨: ರಾಯದಳಗಳವೆನ್ನಕೂಡೆ ನವಾಯಿಯೇ ಕಲಿಕರ್ಣನಾಯುಷ ಹೋಯಿತಿದೆಯೆಂದೊರಸಿದನು ವಾಮಾಂಘ್ರಿಯಲಿ ನೆಲನ (ಕುವ್ಯಾಕ. ೧೬-೧೫). [< ಸಂ. ಆಯುಷ್ಯ]

**ಆಯುಷ್ಕರ್ಮ,** ಆಯುಃಕರ್ಮ (ನಾ). ೧. ಕ್ಷೌರವನ್ನು ಮಾಡಿಸಿಕೊಳ್ಳುವುದು: ನಮ್ಮ ಕೆಲಸವನ್ನು ನಾವು ಮಾಡಿಕೊಳ್ಳಬೇಕು. "ಆಯುಷ್ಕರ್ಮ" ಎಂದು ಹೇಳುತ್ತಾರಲ್ಲಾ – ಆಯುಷ್ಯ ಇರುವವರೆಗೂ ನಡೆಯುವ ಕರ್ಮ ಅದು (ಗಾಳಿಪ. ೮೧). ೨. [ಜೈನ] ಆಯುಸ್ಸಿಗೆ ಕಾರಣವಾದ ಒಂದು ಕರ್ಮ: ಆಯುಷ್ಕರ್ಮಮುಂ ನರಕತಿರ್ಯಙ್ಮನುಷ್ಯದೇವಾಯುಷ್ಯಭೇದದಿಂ ನಾಲ್ಕುಂ ತೆಱನಕ್ಕುಂ (ಶಾಂತಿಪು. ೧೨-೧೧ ವ). **ಆಯುಃಕರ್ಮ:** ೨. ಅಪೂರ್ವಕರಣಕ್ಷಪಕ ಪ್ರಥಮ ಶುಕ್ಲಧ್ಯಾನ ಪರಿಣತನಾಗಿರ್ದಾಯುಃಕರ್ಮಮನುೞಿಪಿ (ಆದಿಪು. ೧೦-೧೪ ವ); ಅನಂತಗುಣಹಾನಿರೂಪ ನಿರ್ಜರಾವಿಧಿಯಿನಾಯುಃಕರ್ಮಮುೞಿಯಲ್ (ಸುಕುಮಾ. ೮-೬೨ ವ). [ಸಂ. (ಆಯುಸ್ + ಕರ್ಮ)]

**ಆಯುಷ್ಕರ್ಮಶಾಲೆ** (ನಾ). ಕ್ಷೌರದ ಅಂಗಡಿ: ನಮ್ಮ ಮನೆಯ ಮುಂದೆ ಒಂದು ಆಯುಷ್ಕರ್ಮಶಾಲೆ ಇದೆ (ರೂಢಿ). [ಆಯುಷ್ಕರ್ಮ + ಶಾಲೆ]

**ಆಯುಷ್ಕಾಮ** (ನಾ). ದೀರ್ಘಾಯುಷ್ಯವನ್ನು ಬಯಸುವವನು. 'ಆಯುಷ್ಕಾಮಹೋಮ' ಪರಾ. [ಸಂ. (ಆಯುಸ್ + ಕಾಮ)]

**ಆಯುಷ್ಕಾಮಹೋಮ** (ನಾ). ದೀರ್ಘಾಯುಷ್ಯವನ್ನು ಬಯಸುವವನು ಮಾಡುವ ಹೋಮ: ಆ ಮಹಾನುಭಾವನೀತಂಗಾಯುಷ್ಕಾಮಹೋಮಾದಿಕಮನೊಡರ್ಚಿದಪಂ (ಕಾದಂಉ. ೬೧೪). [ಆಯುಷ್ಕಾಮ + ಹೋಮ]

**ಆಯುಷ್ಮಂತ** (ನಾ). ದೀರ್ಘವಾದ ಆಯುಸ್ಸನ್ನುಳ್ಳವನು: ತೇಜಸ್ಸೂ, ಯಶಸ್ಸೂ ಉಳ್ಳ ಆಯುಷ್ಮಂತನಾದ ಪುತ್ರನು ನನಗಾಗಲಿ ಎಂದು ಅನುಗ್ರಹಿಸು (ಶಾಂತಲಾ. ೧೦೮). [ಸಂ. ಆಯುಷ್ಮತ್]

**ಆಯುಷ್ಮಂತೆ** (ನಾ). ದೀರ್ಘವಾದ ಆಯುಸ್ಸನ್ನುಳ್ಳವಳು: (ದಕ. ೬). [ಆಯುಷ್ಮಂತ + – ಎ$_4$]

**ಆಯುಷ್ಮತಿ** (ನಾ). = ಆಯುಷ್ಮಂತೆ. [ಸಂ. ಆಯುಷ್ಮತೀ]

**ಆಯುಷ್ಮಾನ್** (ನಾ). [ಜ್ಯೋತಿ] ತಿಂಗಳಲ್ಲಿ ಬರುವ ಇಪ್ಪತ್ತೇಳು ಯೋಗಗಳಲ್ಲಿ ಒಂದು: ವಿಷ್ಕಂಭ ಪ್ರೀತಿ ಆಯುಷ್ಮಾನ್ . . . ವೈಧೃತಿ ಗಳೆಂಬಿಪ್ಪತ್ತೇಳು ಯೋಗಂ (ವಿವೇಕ. ೩೨೦). [ಸಂ. ಆಯುಷ್ಮತ್]

**ಆಯುಷ್ಯ** (ಗು). ೧. ದೀರ್ಘಾಯುಸ್ಸನ್ನು ಕೊಡತಕ್ಕ; ಆಯುಸ್ಸನ್ನು ಹೆಚ್ಚಿಸುವ. (ನಾ). ೨. ಆಯುಸ್ಸು; ಬದುಕಿರುವ ಕಾಲ: ಚತುರುತ್ತರಾಶೀತಿಲಕ್ಷಪುರ್ಬಂಗಳೊಳಗೆ ಪದಿನಾಲ್ಕುದಿವಸದಾಯುಷ್ಯ [ಪಾಠಾಂ. ಷ] ಮುಂಟೆನೆ (ಆದಿಪು. ೧೬-೪೦ ವ); ಭಜಿಸಿದನು ಬಾಲೇಂದುಶೇಖರನ ಪಡೆದನಾಯುಷ್ಯವನು (ತೊರರಾ. ೧-೮-೩೩). [ಸಂ.]

**ಆಯುಷ್ಯಂಗಟ್ಟು** (ಕ್ರಿ). ಆಯುಸ್ಸನ್ನು ಕಟ್ಟಿಕೊ: ಈ ಶಾರ್ದೂಲಂ ಪ್ರಾಗ್ಜನ್ಮದೊಳ್ ಉಗ್ರಸೇನನೆಂಬೊಂ ತನೂಜನ ಪ್ರತ್ಯಾಖ್ಯಾನ ಕ್ರೋಧದಿಂ ತಿರ್ಯಗಾಯುಷ್ಯಂಗಟ್ಟಿ . . . ಈ ತೆಱದಿಂ ಪುಲಿಯಾದಂ (ಆದಿಪು. ೫-೧೪ ವ). [ಆಯುಷ್ಯ + ಕಟ್ಟು$_1$]

**ಆಯುಷ್ಯರೇಖೆ** (ನಾ). = ಆಯುರೇಖೆ: ಅರ್ಥರೇಖೆಯಿದ್ದಲ್ಲಿ ಫಲವೇನು ಆಯುಷ್ಯರೇಖೆ ಇಲ್ಲದನ್ನಕ್ಕ (ಬಸವ. ೧೦೮). [ಆಯುಷ್ಯ + ರೇಖೆ]

**ಆಯುಷ್ಯಹೋಮ** (ನಾ). = ಆಯುರ್ಹೋಮ (ದಕ. ೩).
[ಆಯುಷ್ಯ + ಹೋಮ]

**ಆಯುಷ್ಯಾಂತ** (ನಾ). ಜೀವಿತಕಾಲದ ಕೊನೆ; ಆಯುಸ್ಸಿನ ಅಂತ್ಯ: ಆಯಿರ್ದಮಾಱ್ಕೆಯೊಳ್ ಪರಮಾಯುಷ್ಯಾಂತಂಬರಂ ನಿರಾಕುಳಮಾಗಿರ್ಪ (ಆದಿಪು. ೨–೫೨). [ಆಯುಷ್ಯ + ಅಂತ್ಯ$_2$]

**ಆಯುಷ್ಯಾಭಿವೃದ್ಧಿ** (ನಾ). ಆಯುಸ್ಸು ಹೆಚ್ಚಾಗುವುದು: ಚಿಕಿತ್ಸಕನ ನಾಪರಿಸದಾತಂಗಾಗದಾಯುಷ್ಯಾಭಿವೃದ್ಧಿಗಳು (ಕುವ್ಯಾಉ. ೩–೧೮).
[ಆಯುಷ್ಯ + ಅಭಿವೃದ್ಧಿ]

**ಆಯುಸ** ‘ಆಯಿಸ’ ನೋ.

**ಆಯುಸ್ಥಾಪನ** (ನಾ). ಆಯುಸ್ಸನ್ನು ದೃಢಗೊಳಿಸುವುದು; ರಕ್ಷಿಸುವುದು: ಭಾಪು ಶರಣಾಗತಜನಾಯುಸ್ಥಾಪನಾಚಾರ್ಯ (ಬಸಪು. ೩೨–೪೬). [ಸಂ. (ಆಯುಸ್ + ಸ್ಥಾಪನ)]

**ಆಯುಸ್ಸು**, ಆಯಸ್ಸು (ನಾ). ಜೀವಿತದ ಅವಧಿ; ಬದುಕುವ ಕಾಲ: ಕುಜಾದಿ ಐದು ಗ್ರಹಗಳೂ . . . ಉಚ್ಚ ಕ್ಷೇತ್ರದಲ್ಲಿದ್ದು ಬಲಿಷ್ಠರಾಗಿದ್ದರೆ ತನುಗೆ ಉಕ್ತವಾಗಿರುವಷ್ಟು ಪರಮಾಯುಸ್ಸನ್ನು ಕೊಡುತ್ತವೆ (ಜಾತತಿ. ೮–೯ ಟೀಕು). **ಆಯಸ್ಸು**: ಆ ನೀಳಾಂಜನೆಗೆ ಆಯಸ್ಸು ಮುಗಿಯಿತು (ಕಸಾಚಿ. ೨೪). [ಸಂ. ಆಯುಸ್]

**ಆಯುಹೀನ** (ನಾ). = ಆಯುರ್ಹೀನ: “ಅರೆಗಳು ಚರಣದೊಳ್ ಕೆಂಪಾಗಿ ಕಣ್ಗಳೊಳ್ ತೋಱೆ ರಕ್ತಚ್ಛವಿಗಳಾಗೆ ಕರ್ಣಾಗ್ರದೊಳ್ ಕಾಣುವ ವ್ರಣದ ಹಯಮಾಯುವರ್ಧನನಕ್ಕದಿಲ್ಲದಿರಲ್ಕಾಯುಹೀನಂ” (ಮಂಗರಾ. ೮೪–೨೨). [ಆಯು$_2$ + ಹೀನ]

**ಆಯೋಗ** (ನಾ). ೧. ನೊಗಕ್ಕೆ ಹೂಡಿದ ಎತ್ತು, ಕುದುರೆ ಮುಂತಾದ ಪ್ರಾಣಿಗಳ ಜೊತೆ ಅಥವಾ ಸಮುದಾಯ. ೨. ನಿಯೋಗ; ಒಂದು ಕೆಲಸಕ್ಕಾಗಿ ನೇಮಿಸಿದ ಸಮಿತಿ: ಒಂದು ವೇತನ ಆಯೋಗವನ್ನು ರಚಿಸಬೇಕು (ಪ್ರಜಾವಾ. ೧–೨–೬೫; ೨–೩); ಹಣಕಾಸಿನ ಆಯೋಗ ನಮಗೆ ಅನುಕೂಲವಾಗುವಂತೆ ತೀರ್ಪು ಕೊಟ್ಟಿಲ್ಲ (ಬೆಸಂಕ. ೬–೨–೬೫; ೧–೪). ೩. ಸೇರುವೆ; ಜೋಡಣೆ: ಅತಿವಿತತಾಯೋಗರತ್ನಪ್ರಭಾಪಿಂಗಲಿತ ಸ್ವರ್ಗಾಂತರಾಳಂ ಹಿಮಗಿರಿಧವಳಂ ಬಂದುದಿಂದ್ರದ್ವಿಪೇಂದ್ರಂ (ಜಗವಿ. ೧೩–೬೩). ೪. ಆಭರಣ; ಅಲಂಕಾರ. ‘ಆಯೋಗಂಗೊಳ್’ ಪರಾ. ೫. ತೀರ; ದಡ (೩).
[ಸಂ.]

**ಆಯೋಗಂಗೊಳ್** (ಕ್ರಿ). ಸೇರುವೆಯಾಗು; ಜೋಡಣೆಯಾಗು: ಮಂಗಳಾಭರಣದೊಳ್ ನೆಱೆಯೆ ಕೆಯ್ಗೆಯ್ದು ಮುತ್ತಿನ ಮಾಣಿಕದ ಮಂಡನಾಯೋಗಂಗಳೊಳಾಯೋಗಂಗೊಂಡು ಬಂದ ಮದಾಂಧಗಂಧಸಿಂಧುರಮಪ್ಪ ಪಟ್ಟವರ್ಧನದ ಬೆಂಗೆವಾಯ್ದು (ಪಂಪಭಾ. ೧೦–೨೬ ವ).
[ಆಯೋಗ + ಕೊಳ್$_1$]

**ಆಯೋಜನ** (ನಾ). ಜೋಡಣೆ; ಸೇರುವೆ. [ಸಂ.]

**ಆಯೋಜನೆ** (ನಾ). ಪ್ರಯತ್ನ; ಸಿದ್ಧತೆ: ಶಾಕ್ಯಸಿಂಹನಿಗೆ ಬಹು ಹಿಂದೆಯೇ ಅದರ ಆಯೋಜನೆ ನಡೆಯುತಿತ್ತು (ನಿಬಂಧ. I, ೧೧೭).
[ಸಂ. ಆಯೋಜನ]

**ಆಯೋಧನ** (ನಾ). ಯುದ್ಧ; ಕಾಳಗ: ಕುಮಾರ ಕಾಲದೊಳ್ . . . ಆರೋಹಣಾಯೋಧನಾದಿ ನಾನಾ ವಿನೋದಂಗಳೊಳ್ . . . ಬಳೆಯೆ (ಆದಿಪು. ೮–೩ ವ); ಆಯೋಧನ ಪುನಸ್ಸಂಧಾನವಿಶಾರದಂ ನಾರದನಿಂತೆಂದಂ (ಜಗವಿ. ೧೩–೫೩ ವ). [ಸಂ.]

**ಆಯ್ಕಗೆ** (ಅ). = ಆಯ್ಕನೆ: ಆಯ್ಕನೆ, ಆಯ್ಕಗೆ (ಶಬ್ದಾನು. ೨೦ ಪ್ರಯೋ).

**ಆಯ್ಕನೆ** (ಅ). ನಿರ್ಭರಾರ್ಥದ ಒಂದು ಅವ್ಯಯ; ಗಾಢವಾಗಿ; ತೀವ್ರವಾಗಿ: ಆಯ್ಕನೆ, ಆಯ್ಕಗೆ . . . ಆಯ್ಕನಪ್ಪಿದಂ (ಶಬ್ದಾನು. ೨೦ ಪ್ರಯೋ).

**ಆಯ್ಕುಳಿ**, ಆಕಳಿ, ಆಕುಳ್ಳಿ$_2$, ಆಯಿಕುಳಿ (ನಾ). ೧. ಆರಿಸಿಕೊಳ್ಳುವ ಸ್ವಭಾವದವನು; ಹೊಲ, ಗದ್ದೆ, ಕಣ ಮುಂತಾದ ಸ್ಥಳಗಳಲ್ಲಿ ಉದಿರಿರುವ ಧಾನ್ಯವನ್ನು ಆರಿಸಿ ಜೀವಿಸುವ ವ್ಯಕ್ತಿ; ತಿರುಕ; ಭಿಕ್ಷುಕ: “ತಿಱಿಕೊಱೆ = ಆಯ್ಕುಳಿ” (ಶಮದ. ಪರಿ. ೨); “ಆಯ್ಕುಳಿಯೆನಲ್ ಯಾಚಕನಿಗೆ” (ಕಶರ. ೧೧); ಆವಳುಪೇಕ್ಷೆಯಿಂದೆ ಸುರಪಂಗಮಧೋಗತಿ ತಪ್ಪದಾದುದಿನ್ನಾವಳ ನಲ್ಮೆಯಿಂ ಪಡೆವನಾಯ್ಕುಳಿಯುಂ ತ್ರಿಜಗತ್ಪ್ರಭುತ್ವಮಂ . . . ಆ ದೇವಿ ನಿರೀಕ್ಷಿಕೆನ್ನಂ (ಪುರಾಚ. ೧–೨೨). ೨. ಉತ್ತಮವಾದುದನ್ನು ಆರಿಸಿಕೊಳ್ಳುವುದು. ‘ಆಯ್ಕುಳಿಗೊಳ್’ ಪರಾ. ೩. (ಆರಿಸಿಕೊಂಡ ಮೇಲೆ) ಉಳಿದದ್ದು; ಕೀಳಾದ ವಸ್ತು: “ಆಯ್ಕುಳಿ – ಆಯ್ ಇತಿ ರತ್ನ ವಸ್ತ್ರ ಫಲ ಪುಷ್ಪಾದಿವಸ್ತು ಸಮೂಹೇ ಸಮೀಚೀನ ವಸ್ತೂನಾಂ ಪೃಥಕ್ಕರಣಂ ತತೋವಶಿಷ್ಟಂ ಅಸಮೀಚೀನಂ ವಸ್ತು ಆಯ್ಕುಳಿ ಇತ್ಯುಚ್ಯತೇ” (ಶಬ್ದಾನು. ೪೪೧ ವ್ಯಾಖ್ಯಾ). (ಗು). ೪. ಆರಿಸಿಕೊಂಡ. ‘ಆಯ್ಕುಳಿವಾತು’ ಪರಾ. **ಆಕಳಿ**: ೩. ಆಕಳಿ ಮಾವಿನ ಹಣ್ಣನ್ನು ಏಕೆ ತಂದೆ? (ರೂಢಿ). **ಆಕುಳ್ಳಿ$_2$**: ೩. ‘ಆಕುಳಿಗೊಳ್’ ಪರಾ. **ಆಯಿಕುಳಿ**: ೧. “ತಿಱಿಕೊಱೆಯೆಂದೊಡಾಯಿಕುಳಿ [ಪಾಠಾಂ. ಆಯ್ಕುಳಿ]ಯುಕ್ಕು” (ಕಬ್ಬಿಕ್ಕೆ. ೮೫).
[ಆಯ್$_1$ + –ಕುಳಿ$_3$]

**ಆಯ್ಕುಳಿಗೊಳ್**, ಆಕುಳಿಗೊಳ್ (ಕ್ರಿ). ಆರಿಸಿ ತೆಗೆದುಕೊ; ಚುನಾಯಿಸಿಕೊ: ಅವು ಪಿರಿಯವು ಭಾವಿಪೊಡಿಂತಿವು ಕಿಱಿಯವೆನಿಪ್ಪುದಿದುವೆ ಭೇದಂ ನಿಮಗಾವುವು ಮನಕೇಱುವುವಱ್ಱಿನವನಾಯ್ಕುಳಿಗೊಳ್ಳಿಮೆಂದು ನವರತ್ನಮುಮಂ (ಶಮದ. ೯೫ ಪ್ರಯೋ); ದುರ್ಗಂಗಳಂ ಕುಱುಪಿಂದಂ ಪರಿಮುತ್ತುಗೊಂಡು ಪುರಮಂ ಕೆಯ್ಕೊಂಡು ನಾನಾರ್ಥಮಂ ಸೆಱೆಗೊಂಡಾಯ್ಕುಳಿಗೊಂಡನುದ್ಧ್ಯುಶಮಂ ವಿಕ್ರಾಂತ ಕಾಳಾನಳಂ (ಪುಷ್ಪಪು. ೫–೫೧). **ಆಕುಳಿಗೊಳ್**: ಇಳೆಯೊಳಗಿವಕ್ಕೆ ಬೆಲೆಯಿಡುವವರಾರೆಂಬಗ್ಗಳಿಕೆಯಶ್ವಗಳನು ಬಿಟ್ಟು ಕೆಲವು ದಿನದಿಂ ಮೇಲೆ ಗತಜೀವವಡೆದ ದುರ್ಬಲ ಕುದುರೆಗಳನಾಕುಳಿಗೊಂಬರೇ [ಪಾಠಾಂ. ನಾಯ್ದುಕೊಂಬರೇ] ಯೆನಲ್ (ಸಮ್ಯಕೌ. ೧೧–೨೦). [ಆಯ್ಕುಳಿ + ಕೊಳ್$_1$]

**ಆಯ್ಕುಳಿಮಾತು** ‘ಆಯ್ಕುಳಿವಾತು’ ನೋ.

**ಆಯ್ಕುಳಿರಾಯ** (ನಾ). ತಿರುಕದೊರೆ; ಹೀನನಾದ ದೊರೆ; ದರಿದ್ರನಾದ ರಾಜ: ಆಯ್ಕುಳಿರಾಯನಿಗೆ ಆಶ್ರಯವನ್ನಿತ್ತ ತೆಂಕನಾಡಿನ ಪ್ರಭುಗಳಿಗೆ ದೇಶಕೋಶಗಳೆಲ್ಲಾ ಬಚ್ಚಬರಿದಾಗಿ ಅವರೂ ಅವನಂತೆಯೇ ನಾಡಾಡಿಗಳಾಗುವ ದುರವಸ್ಥೆಗುರುಳ್ದಿರುವುದು ಪ್ರತ್ಯಕ್ಷ ಪ್ರಮಾಣವಾಗಿದೆ (ಮಂತ್ರಶ. ೧೦–೨೩). [ಆಯ್ಕುಳಿ + ರಾಯ]

**ಆಯ್ಕುಳಿವಾತು**, ಆಯ್ಕುಳಿಮಾತು (ನಾ). ಇತರರಿಂದ ಎತ್ತಿಕೊಂಡ ಮಾತು; ಎರವಲು ತಂದ ಮಾತು; ಎಂಜಲುಮಾತು: ಕ್ಷಳಜಟಿ ಕುಳಗಳ ತಿಳಿವಿನಿಸಿಲ್ಲದೆ ಪಳಿಯಾದೊಂದೆರಡಾಯ್ಕುಳಿವಾತಿನ ಅಳಿಗಬ್ಬಿಗ ದಳದುಳಿಗರ್ ತಿಳಿಯಲಸಾಧ್ಯಮದೀಕಾವ್ಯಂ (ಪ್ರಭುಪು. ೧–೪೮). **ಆಯ್ಕುಳಿಮಾತು**: ಒಳಗಱಿಯದೆ ಸತ್ಕಾವ್ಯದ ಕಳೆಯಱಿಯದೆ ಲಘುತರತ್ವದಿಂ ನಾಲ್ಕೆರಡಾಯ್ಕುಳಿ [ಪಾಠಾಂ. ಆಯಿಕುಳಿ] ಮಾತನಾಡಿಯುಱೆ ಹೆಕ್ಕಳಮಿಕ್ಕಿದೊಡೊಲ್ವರೇ ಕವೀಂದ್ರಾಭರಣರ್ (ಗಿರಿಕ. ೧–೨೭); ಅವಿಚಾರಿಗಳು ಅಂತೇನಿದ್ದಾರಲ್ಲಾ ಅವರು ‘ಸ್ವಯಮನ್ವಿಚ್ಛ ಭರ್ತಾರಂ’ ಇಂಥಾ ಪಾಪ ಆಯ್ಕುಳಿಮಾತ ಎತ್ತಾಡಿ (ಹೊಸಂಸಾ. ೮೧).
[ಆಯ್ಕುಳಿ + ಮಾತು$_1$]

**ಆಯ್ಕೆ**, ಆಯಿಕೆ (ನಾ). ಆರಿಸುವುದು ; ಚುನಾಯಿಸುವುದು ; ಚುನಾವಣೆ: ಆಯ್ಕೆ, ಆಯ್ಕೆಗಳ್ (ಶಬ್ದಾನು. ೫೫೬ ಪ್ರಯೋ) ; ಯಾರದು ತಪ್ಪಿದರೂ ಅವರ ಆಯ್ಕೆ ತಪ್ಪುವಹಾಗಿರಲಿಲ್ಲ (ಅಪನಾ. ೮೧) ; "ನಿಮ್ಮ ಈ ಆಯ್ಕೆಯಲ್ಲಿ ಪಲ್ಲವರ ರಾಜಾ ಗೋವಿಂದರ ಮಗಳು ಇರುವಳೇನು?" (ಸವತಿ. ४೧). **ಆಯಿಕೆ** (ದಕ.೩). [ಆಯ್$_1$ + -ಕೆ$_1$]

**ಆಯ್ಕೆಗೊಳು** 'ಆಯ್ಕೆಗೊಳ್ಳು' ನೋ.

**ಆಯ್ಕೆಗೊಳ್ಳು**, ಆಯ್ಕೆಗೊಳು (ಕ್ರಿ). ಆಯ್ಕೆಯಾಗು ; ಚುನಾಯಿತನಾಗು: ಅಧ್ಯಕ್ಷನಾಗಿ ಆಯ್ಕೆಗೊಂಡನು (ಸಸ್ಯಕ. ೬೯). **ಆಯ್ಕೆಗೊಳು** : ಹೆಡ್ಡನೆ ಅಧ್ಯಕ್ಷನೆಂದಾಯ್ಕೆಗೊಳುವನು ದೊಡ್ಡವರಿಲ್ಲದ ಸಭೆಗೆ (ಇಂಚಾಪ. ೧೭೩-೫४). [ಆಯ್ಕೆ + ಕೊಳ್ಳು (< ಕೊಳ್$_1$)]

**ಆಯ್ಚಗಾವುಂಡ** (ನಾ). ಒಬ್ಬಾತನ ಹೆಸರು: ಎಚಿಕ್ಕೋಟಿ-ತಪೋಧನರ ಸತ್ರಕ್ಕೆ ಮತ್ತರ್ಪನ್ನೆರಡು ಆಯ್ಚಗಾವುಣ್ಡನ ದೇಗುಲಕ್ಕೆ ಮತ್ತರೈದು (ಎಇ. XX, ೬-೧೮ ; 1012).
[ಆಯ್ಚ$_0$ + ಗಾವುಂಡ (< ಗಾಮುಂಡ). P ಆಯ್ಚ < ಸಂ. ಆದಿತ್ಯ]

**ಆಯ್ಚಬ್ಬೆ** (ನಾ). ಒಬ್ಬಾಕೆಯ ಹೆಸರು : ಕಾಡಬ್ಬೆ ಮಗಳ್ ಆಯ್ಚಬ್ಬೆ ಆಯ್ಚಬ್ಬೆ ಮಗಳ್ ಕಳಿಜ್ಜಬ್ಬೆ (ಎಕ. XI, ದಾವಣ. ೧೭-೭ ; 889).
[ಆಯ್ಚ + ಅಬ್ಬೆ$_1$]

**ಆಯ್ಚಯ್ಯ** (ನಾ). ಒಬ್ಬಾತನ ಹೆಸರು: ಆಯ್ಚಯ್ಯನ ಮಾಡಿಸಿದ ದೇಗುಲಕ್ಕೆ (ಎಇ. XIV, ೩೬೫-೧४ ; 945).
[ಆಯ್ಚ$_0$ + ಅಯ್ಯ$_1$]

**-ಆಯ್ತ**, -ಆಯತ್ತ$_3$, -ಆಯಿತ (ಪ್ರ). ಇದನ್ನು ನಡೆಯಿಸುವವನು, ಇವರಲ್ಲಿ ಅಧಿಕಾರವುಳ್ಳವನು ಎಂಬ ಅರ್ಥದಲ್ಲಿ ನಾಮವಾಚಕಗಳಿಗೆ ಸೇರುವ ತದ್ಧಿತ ಪ್ರತ್ಯಯ : "ನಡೆಯಿಸುವನೀತನಿದನೆಂಬೆಡೆಯೊಳ್ ವಳವಳ್ಳಮಕ್ಕುಮಾಯ್ತಮುಮಕ್ಕುಂ" (ಶಮದ. ೧೯೮) ; ಕರಗದವರಂತೆ ಸೂಚಿಾಯ್ತರಂತೆ ಕಂಚುಕಿಗಳಂತೆ (ಶಾಂತಿಪು. ೯-೧೧೯) ; ಆಯ್ತಬ್ಧಿಯಿ ಘೂರ್ಣಿಸುವಂತಾಯ್ತರಮನೆಯೊಳಗೆ ಪುಗುವ ಪೋಜಮಡುವ ಝುಳಂಬಾಯ್ತರ ಸೂಚಿಾಯ್ತರ ಕಲ್ಲಾಯ್ತರ ಡಂಗಾಯ್ತರಚ್ಚುಳಾಯ್ತರ ರಭಸಂ (ಶಮದ. ೧೯೮ ಪ್ರಯೋ). **-ಆಯತ್ತ$_3$**: 'ಪಸಾಯತ' ಪರಾ. **-ಆಯಿತ** : 'ಪಸಾಯಿತ' ಪರಾ.

**ಆಯ್ತಮಸೆಟ್ಟಿ** (ನಾ). ಒಬ್ಬಾತನ ಹೆಸರು: ಮಾರಿಸೆಟ್ಟಿ ಆಯ್ತಮಸೆಟ್ಟಿ ಪ ೨ ಮಾರಜ್ಜ ಹರಿಯಣ ಕಾಳೆಯಪ ೨ (ಎಕ. II, ೨೩೫-೩೭ ; 1185). [ಆಯ್ತ$_0$ + ಸೆಟ್ಟಿ. P ಆಯ್ತ < ಸಂ. ಆದಿತ್ಯ]

**ಆಯ್ತಸೆಟ್ಟಿ** (ನಾ). ಒಬ್ಬಾತನ ಹೆಸರು : ಗಂಗಿಸೆಟ್ಟಿ ಆಯ್ತಸೆಟ್ಟಿ ದೇವಿಸೆಟ್ಟಿ ೨ ಮಾಳಿಸೆಟ್ಟಿ ದಂಮಿಸೆಟ್ಟಿ ಪ ೨ (ಎಕ. II, ೨೩೫-೩೭ ; 1185).
[ಆಯ್ತ$_0$ + ಸೆಟ್ಟಿ]

**-ಆಯ್ತಿ** (ಪ್ರ). ಇದನ್ನು ನಡೆಯಿಸುವವಳು, ಇದರಲ್ಲಿ ಅಧಿಕಾರವುಳ್ಳವಳು ಎಂಬರ್ಥದಲ್ಲಿ ನಾಮವಾಚಕಗಳಿಗೆ ಸೇರುವ ತದ್ಧಿತ ಪ್ರತ್ಯಯ. 'ಪಸಾಯ್ತಿ' ಪರಾ. [-ಆಯ್ತ + -ಇ$_4$]

**ಆಯ್ದುಗ** (ನಾ). ಒಬ್ಬಾತನ ಹೆಸರು: ಆಯ್ದುಗನುಂ ಮಾಳನುಂ ಮಾರಗನುಂ ನಾಗ . . . ಒಡನೆ ಸಿದ್ಧಿಸಿದರ್ (ಎಕ. VII, ಶಿವಮೊ. ೨४-೬ ; 970 ?). [?]

**ಆಯ್ಪೊಯ್** (ಕ್ರಿ). ಆಯುಸ್ಸನ್ನು ತುಂಬು (?) : ಎಯ್ದದ ಬಗೆಯನೆಮೆಯ್ದಪ್ಪಂತೆನಿತುಮೆಯ್ದರೆ ವಧುವರ್ ಬಂಧರೂಪಿಂಗಾಯ್ಪೊಯ್ದನ್ನನಪ್ಪ ಪರಮನಂ (ಶಾಂತಿಪು. ೧೦-೯೧). [ಆಯು$_2$ ? + ಪೊಯ್$_1$]

**-ಆಯ್ಲ** '-ಆಯಿಲ$_2$' ನೋ.

**ಆಯ್ವಮರೊಡೆಯ** (ನಾ). ಒಬ್ಬಾತನ ಹೆಸರು : ಆಯ್ವಮರೊಡೆಯರ ಮಗಂ ಮೇಲಾರೊಡೆಯ ಮಾರಯ್ಯಂಗೆ ದಾನಸುಗೊಟ್ಟರ್ (ಮೈಆರಿ. ೧೯೩೫, ೧೭-೧೨ ; 1010 ?). [ಆಯ್ವಮ$_0$ + ಒಡೆಯ]

**ಆಯ್ವಶಾಮಿ** (ನಾ). ಒಬ್ಬಾತನ ಹೆಸರು : ಅನೇಕ ಗುಣಗಣಲಂಕೃತಧಾರಭೂತನಾಗುತ್ತಿಬ್ದ ಆಯ್ವಶಾಮಿಯ ನಿಸಿಧಿಗೆ (ಎಕ. XV, ಹೊಳೆನ. ೬೮-೯ ; 950). [ಆಯ್ವ ? + ಶಾಮಿ]

**ಆಯ್ವಳಿ** (ನಾ). ಆರಿಸಿದ್ದು ; ಶ್ರೇಷ್ಠ (?) : ಆರೂರಿಗೆ ಇಂಥ ಆಯ್ವಳಿ ಮಲ್ಲಯ್ಯ ಆದ (ನಾಪದ. ೧೨) ; "ಆಯ್ವಳಿ - ಆಯುವಳಿ, ಅತಿಶಯವಾದವನು, ಆಯ್ಕೆಯ ರೀತಿಯನ್ನು ಬಲ್ಲವನು" (ನಾಪದ. ೮).
[ಆಯ್$_1$ + -ವಳಿ]

**ಆಯ್ಸು** 'ಆಯಿಸು' ನೋ.

**ಆರ್$_1$**, ಆರು$_1$ (ಕ್ರಿ). ಗಟ್ಟಿಯಾಗಿ ಕೂಗು ; ಗರ್ಜಿಸು ; ಆರ್ಭಟಿಸು; ಆರ್ದುರ್ (ಭೂತನ್ಯೂ), ಆರ್ವರ್ (ಭವಿಕ್ಯ) : "ಆರ್-ಉಚ್ಚೈರ್ಧ್ವನೌ (ಅರಚು) ಹಲಾನ್ವಿತವೃಷಭಯುಗ್ಮೇ, ದಾರುಭೇದೇ ಚ" (ಶಮಧಾ); ಕಿಚ್ಚಿನೊಳಗಿಬ್ದು ನಿಜೇಚ್ಛೆಯಿನೊಲದಾರಿವಾರಿಮೆನ್ದುನಯದಿಂ ಬಿಚ್ಚಳಿಕೆವೆರಸಿ ಮನದೊಳ್ ಮೆಚ್ಚಿ ಮಹೇಶ್ವರನಲ್ಲಿ ಚಿಂತಿಸುತಿಬ್ದಪರ್ (ಇಅ. XX, ೬೯-೫ ; 9ನೆಯ ಶತ) ; ಆರ್ವರ್ ಪಿಶಾಚಿಯರ್ಕಳನಸುಂಗೊಳೆ ಬೇವಪೆಣಕ್ಕೆ ಕೋಪದಿಂ ಪೋರ್ವರ್ ಮರುಳ್ಗಳಂ (ಕಾವ್ಯಸಾ. ೫೩४ ಶೂದ್ರಕ) ; ನೆಲದಿನಣಮೆ ತಳರದೆ ಬಿಲ್ ನಿಲ್ತೊಡೆ ಗುಡುಗುಡುಗುಡುಗೊಳ್ಳೆಂದೊಡನಾರೆ ಸುಯೋಧನಂ ಕರಂ ಸಿಗ್ಗಾದಂ (ಪಂಪಭಾ. ೩-೫೯) ; ಪಾಮರೀಯುವತಿಯರಾರ್ದುರ್ ಚಪ್ಪರಿಸೆ ಕೋಗಿಲೆಯಿಂಚರಮೆಂದು ಬೆರ್ಚಿ ಪಾಜವುಗಿಳಿವಿಂಡು (ಅನಂಪು. ೧-೮೨). **ಆರು$_1$** : ಹಿಂಡುಭೂತಂಗಳೊಡನಂಬುಜಭವಾಂಡಮಂ ಗಂಡುಗೆಡಿಸುತ್ತಲಾರುತ ಲೆಕ್ಕಿಸದೆ ಯಜ್ಞಕುಂಡದೆಡೆಗೆಯ್ತಪ್ಪ ವೀರೇಶ್ವರನ (ಲಶಿಚಂ. ೧೮-೨೮) ; ಆರಿದನು ಜಗ ನಡುಗಲಾಜಂಭಾರಿ ಜವಗೆಡೆ (ಕುವ್ಯಾಕ. ೩-೧೮) ; ಬಳಿಕವರಾರಿ ಬೊಬ್ಬಿಱಿದಿದಿರ್ಗೈತಹ ಹಯಕುಲಂಗಳನು ಏಱುಗಾಣಿಸುತ (ಕೋಗಯ. ೨೧-೧೦).
[ದೇ.॥ ತಮಿ. ಆರ್ ; **ಮಲ.** ಆರ್ಕ್ಕು, ಆರ್ಪ್ಪು ; **ಕೊಡ.** ಆರ ; **ತುಳು.** ಆರ್ಕುನಿ, ಆರ್ತುನಿ, ಹರ್ತುನಿ ; **ತೆಲು.** ಅರ್ಚು, ಅರುಚು ; **ಪರ್ಜಿ.** ಅರ್ ; **ಕುಇ.** ಆರ್ಸ ; **ಕುವಿ.** ಅರ್ನ್ಯೈ. /**ಮರಾ.** ಅರ್ಣೆ]

**ಆರ್$_2$**, ಆರು$_2$ (ಕ್ರಿ). ೧. ತೃಪ್ತಿಪಡು ; ತಣಿ : ಅರಾತಿಯ ಮೆಯ್ಯನೆತ್ತರಂ ಕಂಡು ಸೂಱೆಸಿನೊಳಿವನ ನೆತ್ತರೊಕ್ಕೊಡಂ ತನಗೆ ಬಸಿಱಾರೆಕುಡಿಯಲುಂ ದ್ರೌಪದಿಯ ಕೇಶಪಾಶಮಂ ತೊಯ್ದು ಮುಡಿಯಲುಂನೆಱೆಯದೆಂದು (ಪಂಪಭಾ. ೧೨-೧४೮ ವ) ; ಶುಕನಾಸನಂದನನಾ ಸತಿಕಣ್ಮಲರಾರೆ ನೋಡಿದಳ್ (ಕಾದಂಪೂ. ೫೦೧) ; ಅವ ಕಾಳೆಗದೊಳಂಕಣ್ಣಾರದಂ ನಾರದಂ (ಪಂರಾಮಾ. ೩-೧೮) ; ಮನೆಯೊಳಗುಳ್ಳುದನೆಂದುಂ ಜಿನಮಹಿಮೆಗೆ ತವಿಸುತಿರ್ಪ ಮಗನಂ ಪೆತ್ತಂ ಮನಮಾರೆ ವಸ್ತುವಾಹನ ಕನಕೌಘಸಮೃದ್ಧಮಪ್ಪ ಸಿರಿಯಂ ಪೆತ್ತಂ (ಸಮಪ. ೫-೧೩೫). ೨. ತುಂಬು ; ಪೂರ್ಣವಾಗು: ತೊಳಪ ಹರಿನ್ಮಣಿಕುಟ್ಟಿಮತಳದೊಳ್ತಳಮಾರೆ ತಳಮನೂಱಿ ಬೆಡಂಗಂ ತಳೆದು ತಳರ್ನಡೆ ನಡೆವೆಡೆಯೊಳದೇಂಜನನಿಗೆ ವಿನೋದಮಂ ಮಾಡಿದನೋ (ಸುಕುಮಾ. ೧೦-೩೯) ; ಗಂಡರೊಳ್ನೀಱನೆಂಬರ ಮಾತಂ ಕಿವಿಯಾರೆ ಕೇಳ್ದು (ಪಂರಾಮಾ. ೮-೧೨). **ಆರು$_2$** : ೧. ನುಡಿಗಳ ಕಾಳಕೂಟವ ಬಡಿಸುವೆನು ಕಿವಿಯಾರೆ ಸವಿಯೆಂದ (ಕುವ್ಯಾಕ. ೨೭-೧). ೨. ಕಣ್ಣಾಲಿ ತುಂಬಲು ನೋಡುವನು . . . ಕೈಯಾರಲಪ್ಪುವನು (ಬಸಪು. ४೭-೨೯) ; ಕೈಯ್ಯಾರಲೆತ್ತಿ ಮುದ್ದಿಸುತ ಮುಂಡಾಡುತೆಮ್ಮಯ್ಯ ಬಾರೆಂದು ಬೇಗದೊಳು ಮೈಯ್ಯಾರಲಪ್ಪಿಕೊಂಡೆಂದಿಗೆಮಗನ ನಾನೊಯ್ಯನೆ ನೋಡಿ ನಲಿವೆನು (ಕುರಾಸಾಂ. ೭-೬೮).

ಆರ, ಆರೆ = ತೃಪ್ತಿಪಡಲು; ಸಂತೋಷಿಸಲು; ತಣಿಯಲು: ತನುಜಾತೋದಯಮುಪ್ಪ ಪುಣ್ಯದಿನಮಂ ಮೆಯ್ವೆರ್ಚಿ ಕಾಣಲ್ಕೆ ನೋನೆನೊ ಗೇಹಾಂಗಣದೊಳ್ ತಳರ್ನಡೆವುದಂ ಕಣ್ಣಾರ ನೋಡಲ್ಕೆ ನೋನೆನೊ (ಸುಕುಮಾ. ೯–೧೦೩); ಸುಕುಮಾರನಂ ತಕ್ಕೈರ್ಸುತಂ ಕೈಯಾರೆ ಚಂಡಿಕೆಯಂ ಹುಡುಕುತನುರಾಗಚಿತ್ತದಲಿ (ಬಸವು. ೫೦–೩); ಕಣ್ಣಾರೆ ಕಂಡೆ ನಚ್ಯುತನ ಕಂಚಿಪುಣ್ಯಕೋಟಿ ಕವಿರಾಜವದನನ (ಪುರಂದ. ೧–೮–೩೧); ತನ್ನ ಕಣ್ಣೆದಿರೊಳ್ ಮೂರ್ತಿಗೊಂಡ ಆದಿಮಾಯೆಯುಂ ಕಣ್ಣಾರೆ ಕಂಡಾನಂದಾಬ್ಧಿಯೊಳೋಲಾಡಿಯುಂ ಪಾಡಿಯುಂ (ರಾಮಾಶ್ವ. ೬೨–೯).

[ದೇ. ‖ ತಮಿ. ಆರ್; ಮಲ. ತೆಲು. ಆರು; ಕುಇ. ಸಾರ]

**ಆರ್$_3$**, ಆರು$_5$ (ನಾ). **೧.** ನೊಗವನ್ನು ಹೂಡಿ ದನಗಳನ್ನು ಕಟ್ಟಿದ ನೇಗಿಲು. **೨.** ನೊಗ, ನೇಗಿಲು ಮತ್ತು ಎತ್ತುಗಳ ಜೋಡಿ; ಇವುಗಳ ಕೂಟ: "ಆರ್ – ಉಚ್ಚೈರ್ಧ್ವನೌ (ಆರಚು) ಹಲಾನ್ವಿತವೃಷಭಯುಗ್ಮೇ, ದಾರುಭೇದೇ ಚ" (ಶಮಧಾ); ಎರಡಾರ ಬೆವಸಾಯಂ (ಪಂಚತಂ. ೬೫–೧೪). **ಆರು$_5$**: **೨.** ಬಿತ್ತುವ ಕೆಯ್ಗಳಂತಾರು ಅಳಿಮಾನಸನ ಬಗೆಯಂತೆ ಬಿಲ್ಲು (ಬಂಹರಿ. ೨–೩೮ ವ); ವಕ್ಕಲು ವಂದಕ್ಕೆ ವಂಬಾರುಯರಡು ಆರು ಯತ್ತು ಕರು ಇದೆ (ರಾಜೇಂದ್ರ. ೭೩); ಗಂಡನು ಆರು ಕಟ್ಟಿಕೊಂಡು ಹೋದಮೇಲೆ ರೈತರ ಹೆಂಗಸರು ... ಬರುತ್ತಾರೆ (ನಮ್ಮೂರ. ೪). **೩.** ಹೋರಿಗಳನ್ನು ಪಳಗಿಸುವುದಕ್ಕಾಗಿ ನೊಗದಂತೆ ಉಪಯೋಗಿಸುವ ಮರ.

[ದೇ. ‖ ತಮಿ. ಏರ್, ಸೇರ್; ಮಲ. ಏರ್; ತೆಲು. ಏರು; ಕೊಲಾ. ಸೇರ್; ಪರ್ಜಿ. ಸೆರೆಯಾಕುಲ್; ಗೊಂಡಿ. ಸೇರ್; ಕುಇ. ಸೇರು; ಕುವಿ. ಹೇರು]

**ಆರ್$_4$**, ಆರ$_1$ (ನಾ). ಒಂದು ಮರದ ಹೆಸರು; ನಿಚುಳ ವೃಕ್ಷ: "ಆರ್ – ಉಚ್ಚೈರ್ಧ್ವನೌ (ಆರಚು) ಹಲಾನ್ವಿತ ವೃಷಭಯುಗ್ಮೇ, ದಾರುಭೇದೇ ಚ" (ಶಮಧಾ). **ಆರ$_1$**: "ನಿಜುಳ ನಿಚುಳಮಾರುಂ" (ಮಂಗರಾ. ೩೪–೧೦); ಎಲವದ ಬೇಲ ಚಿನ್ನಗೆಯಪೊನ್ನೆಯ ಕಮ್ಮರದಾರ ಕೇರ ನೇಳಲ ಸಿರಿತಾಳೆಯಿಂಗುಳದ ... ಮರಂಗಳ ಕೊಂಬುಗಳಂಬರಂಬರಂ ಪುದಿದು ... ಪರ್ಬಿರೆ (ಲೀಲಾವ. ೬–೨೬).

[ದೇ. ‖ ತಮಿ. ಆರ್, ಆರ್ಕೆ; ತೆಲು. ಆರೆ. / ಸಂ. ಅಲು]

**ಆರ್$_5$** 'ಆವುದು' ನೋ.

**ಆರ$_1$** 'ಆರ್$_4$' ನೋ.

**ಆರ$_2$** (ನಾ). ಹಾರ; ಕಂಠಾಭರಣಗಳಲ್ಲಿ ಒಂದು; ಮಾಲಿಕೆ: "ಆರಮೆಂದು ಹಾರಂ" (ಕಶಸಾ. ೨೦–೪೧೦); "ಹಾರಮಾರಮೆನಲ್ಕೆ" (ಕರ್ಣಾನಿ. ೭೨); "ಹಾರ, ಆರ" (ಶಬ್ದಾನು. ೧೬೦ ಪ್ರಯೋ); ಆರಮಿಲ್ಲದೆ ಕುಚಮಂಡಳಂ ... ಒಪ್ಪಿದಪುದು (ಆದಿಪು. ೩–೪೮); ತುಂಗಸ್ತನದ್ವಂದ್ವದೊಳ್ ಪೊಳೆಯುತ್ತಾರಡವೊಲ್ ... ಇನಿಯಳಂ ಪತ್ತಿರ್ಪ ಸ್ವೈಪೇಕೆ ಸಂಗಳಿಕುಂ (ಆದಿಪು. ೧೨–೪೦); ಉಷ್ಣೀಷಪಟ್ಟಂ ಶಿಖಾಮಣಿಯಿಂ ಕಂಧರಮಾರದಿಂ ... ಅಲಂಕೃತನಾಗಿಯುಂ (ಶಾಂತಿಪು. ೧೦–೫೮ ವ); ಅದಟನಳುಕ್ಕೆರ್ಯಂ ... ತಾವೆ ಪೇಳವೆ ಬಿರೋದಿಯ ಪೆಣ್ಡಿರ ಕಂಕಣಂಗಳಿಲ್ಲದ ಕರಮಾರಮಿಲ್ಲದುರಮಂಜನಮಿಲ್ಲದ ಕಂಗೊಳೋಲೆ ಇಲ್ಲದ ಕಿವಿ (ಕಇಅ. ೭–೨–೪೮; 1058). [< ಸಂ. ಹಾರ]

**ಆರ$_3$** (ನಾ). **೧.** ಹಿತ್ತಾಳೆ. **೨.** ಲೋಹಾಮ್ಲ; ಕಬ್ಬಿಣಕ್ಕೂ, ಆಮ್ಲಜನಕಕ್ಕೂ ಉಂಟಾದ ಸಂಯೋಗದಿಂದ ದೊರೆಯುವ ವಸ್ತು. **೩.** ಅಂಗಾರಕ ಗ್ರಹ; ಕುಜ: ಆರಂಗೆ ಸಿತಾರ್ಕಜರ್...ಉದಾಸೀನಂ (ಜಾತತಿ. ೨–೧೫); ತಾರೇಶಂ ನಿಲೆ ಮೇಷದೊಳಾರಂ ಮೊದಲಾಗೆ ಷಡ್ಗ್ರಹ ನೋಡೆ ನೃಪಂ ಸೂರಿ (ಜಾತತಿ. ೨೦–೧). **೪.** ಶನಿಗ್ರಹ. [ಸಂ.]

**ಆರ$_4$** (ನಾ). **೧.** ಖಡ್ಗ; ಕಠಾರಿ. **೨.** "ಚರ್ಮವನ್ನು ಕತ್ತರಿಸುವ ಸಾಧನ" (ಅಮರ. ಟೀಕೆ). [ಸಂ. ಆರಾ]

**ಆರಂಬ$_1$** (ನಾ). **೧.** ಬೇಸಾಯ; ಒಕ್ಕಲುತನ: ಒಂದು ವರುಷದಾರಂಬಕ್ಕಾಜದೆ ಸಾವನ್ನೆವರಮೆಂಜಲಗುಟಿನಾಯ್ದುಣ್ಬೊಕ್ಕಲಮಗನುಂ (ಧರ್ಮಾಮೃ. ೭–೧೫೩); ಬೇನೆಯುಳಿವಾ ಶೀಕ್ಶ್ನೌಷಧಂ ಪಾಡುಬಿದ್ದುಳುವಾರಂಬದ ಧಾನ್ಯ ಶತ್ರುಜಯ ಪುತ್ರೋತ್ಪತ್ತಿ ... ಇಂತೆಲ್ಲಮುಂ ಪಲಕಷ್ಟಂ ಕಡೆಗೊಳ್ಳಿತ್ತೆ (ಸೋಮೇಶ. ೯೬); ಆಮೇಲೆ ಒಂದೇರಿನ ಆರಂಬ ಮಾಡಿ ಇಪ್ಪತ್ತು ಖಂಡುಗ ರಾಗಿ ಹಗೇದಲ್ಲಿ ಹಾಕಿ (ಕಥಾಮಂ. IV, ೧೯). 'ಕಾಡಾರಂಬ', 'ನೀರಾರಂಬ' ಪರಾ. **೨.** ಮೊದಲು; ಪ್ರಾರಂಭ.

[ಸಂ. ಆರಂಭ]

**ಆರಂಬಂಗೆಯ್** (ಕ್ರಿ). ಬೇಸಾಯಮಾಡು; ಒಕ್ಕಲುತನ ಮಾಡು: ಅವರ್ಕೆ ಪುಟ್ಟಿದ ಪೋರಿಗಳಂ ತಿರ್ದಿಯಾರಂಬಂಗೆಯ್ದು (ಪಂಚತಂ. ೧೮೬–೮); ಊರೇಜಲ್ ಮನೆಮಾಡಲ್ಕಾರಂಬಂಗೆಯ್ಯಲೆಟ್ಟುಗೊಳಲ್ ... ದಾರುಣ ತಾರೆಗಳನುಬಿಯೆ ಪೆಜವರೊಳುಚಿತಂ (ಕಾವ್ಯಾವ. ೨೧೫).

[ಆರಂಬ + ಗೆಯ್ (< ಕೆಯ್$_1$)]

**ಆರಂಬಗಾರ** (ನಾ). ಬೇಸಾಯ ಮಾಡುವವನು; ಒಕ್ಕಲಿಗ; ರೈತ: ಕೃಷಿಯಂ ಬಿಟ್ಟು ಪೋಗುವ ಆರಂಬಗಾರನಂತೆ (ಸೌಗಂಧಿ. ೫೬೭–೧೦); ರಂಗಸ್ವಾಮಿ ಒಳ್ಳೆ ಆರಂಬಗಾರ (ಬೈಸರ್ವೆ. ೩೬).

[ಆರಂಬ + –ಗಾರ (< –ಕಾಱ)]

**ಆರಂಬಿಗ** (ನಾ). **೧.** ಮೊದಲುಮಾಡುವವನು; ಮೊದಲಿಗ: ಕ್ರೂರಾತ್ಮಂ ದಿವ್ಯಮುನಿಗಿದಂ ಮಾಡಿ ದುರಾಚಾರಂ ನರಕಾಯುಷ್ಯಕ್ಕಾರಂಬಿಗನಾದಂ (ಪಂರಾಮಾ. ೯–೪). **೨.** = ಆರಂಬಗಾರ.

[ಆರಂಬ + –ಇಗ]

**ಆರಂಭ** (ನಾ). **೧.** ಮೊದಲು; ಆದಿ; ಉಪಕ್ರಮ: "ಉಪಕ್ರಮಮುಪಜ್ಞಮಾರಂಭಮೆನೆ ಮೊದಲು" (ಮಂಗರಾ. ೧೨೮–೧೦). **೨.** ಉದ್ಯೋಗ; ಕೆಲಸ: ಕೊಲುವಾ ಕೂಟವು ನಷ್ಟಮುಪ್ಪ ಕೆಲಸಂ ಕೈಲಾಗದಾರಂಭಮುಂ ಗೆಲವೇನಿಲ್ಲದ ಯುದ್ಧ ಪಾಳುನೆಲದೊಳ್ ಬೇಸಾಯ ... ಫಲದ ಭ್ರಾಂತಿಯ ತೋರ್ಪುದೈ (ಸೋಮೇಶ. ೨೩). **೩.** ವ್ಯವಸಾಯ; ಒಕ್ಕಲುತನ; ಬೇಸಾಯ: "ಕೃಷಿಯೆಂಬುದಾರಂಭ" (ಪಸಾರ. ೯೬೮–೭); ಸುಧಾಮುಕನೆಂಬೊಂ ... ತನ್ನಾರಂಭದ ಕೆಯ್ಗಳನೊಕ್ಕುವೆಟ್ಟುಗಳ ಬಾಯಂ ಕಟ್ಟಿಯೊಕ್ಕಿಸುಗುಂ (ವಡ್ಡಾರಾ. ೧೭೦–೧೧). **೪.** [ಜೈನ] ಹಿಂಸೆಗೆ ಕಾರಣವಾದ ಉದ್ಯೋಗ: ವಿವಿಧಾರಂಭಪರಿಗ್ರಹಂ ವಿಷಯ ಸೌಖ್ಯಾಯತ್ತನತ್ಯಂತ ಲೋಭ ವಿಷಗ್ರಸ್ತನುಪಾದ್ರಿಯೊಳ್ ದ್ರವಿಣಮಂ ಬೈತುದ್ಧತಂ ತನ್ನುಸಿರ್ ತವೆ (ಆದಿಪು. ೫–೪). [ಸಂ.]

**ಆರಂಭಂಗೆಯ್** (ಕ್ರಿ). = ಆರಂಬಂಗೆಯ್: ಬಡವರೊಡೆಯರೆಂಬಿರ್ವರೊಳಂ ಸುಖಮಿಲ್ಲದೊಡಂ ಅಸಡಿ ಸುಗ್ಗಿ ಎಂಬೆರಡುಂ ಕಾಲದೊಳಮೊಕ್ಕಲ್ಗುಣಲಿಲ್ಲದೊಡಮೇಕೆ ಸುಖಮನಜಸುವುದು ಏಕೆ ಆರಂಭಂಗೆಯ್ವುದು (ಜೀವಸಂ. ೮೩–೧೬ ವ).

[ಆರಂಭ + ಗೆಯ್ (< ಕೆಯ್$_1$)]

**ಆರಂಭಕ** (ನಾ). **೧.** ಮೊದಲುಮಾಡುವವನು. **೨.** ಒಕ್ಕಲಿಗ; ರೈತ. **೩.** [ಜೈನ] ಹನ್ನೊಂದು ಬಗೆಯ ಶ್ರಾವಕರಲ್ಲಿ ಒಬ್ಬ: ದರ್ಶನಿಕಂ ವ್ರತಿಕಂ ಸಾಮಯಿಕಂ ಪ್ರೋಷಧೋಪವಾಸಿಕಂ ಸಚಿತ್ತವಿರತಂ ರಾತ್ರಿಭಕ್ತವ್ರತಂ ಬ್ರಹ್ಮಚಾರಿ ಆರಂಭಕಂ ಪರಿಗ್ರಹವಿರತಂ ಅನುಮತಿವಿರತಂ ಉದ್ದಿಷ್ಟವಿರತನೆಂದಿಂತು ಪನ್ನೊಂದು ವಿಕಲ್ಪಮನುಳ್ಳ ಶ್ರಾವಕರೊಳ್ (ಸುಕುಮಾ. ೬–೩೬ ವ). [ಸಂ.]

**ಆರಂಭಕಾಱ, ಆ ರಂ ಭ ಗಾ ರ** (ನಾ). ಆರಂಭಮಾಡುವವನು; ಒಕ್ಕಲಿಗ; ರೈತ: ಆರಂಭಕಾಱಂ ವೋಲಗಿಕಾಱಂಗಂ ಲಾಭಮಾರಾಗ ರಾಗಕ್ಕೆ ಸಲುವಂ (ಪಸಾರ. ೭೭೨–೨೦); ಇಂತು ಸುಕಾಲದೊಳ್ ಬಿತ್ತದೆ ಕೆಟ್ಟೆನೆಂದು ಚಿಂತಿಸುವಾರಂಭಕಾಱಂ (ಶ್ರಾವಕಾ. ೮೯–೧೧). **ಆರಂಭ ಗಾರ**: ಒಕ್ಕಲಿಗ, ಕುಡುವ, ಆರಂಭಗಾರ, ರೈತ (ಕಂನುಹು. ೮೦).
[ಆರಂಭ + –ಕಾಱ]

**ಆರಂಭಗಾರ** ‘ಆರಂಭಕಾಱ’ ನೋ.

**ಆರಂಭಗಾರಿಕೆ** (ನಾ). ಬೇಸಾಯ; ಒಕ್ಕಲುತನ ಮಾಡುವುದು: ಹೊಲ ಸಾಗುವಳಿಯ ಯುಗವು (“ಆರಂಭಗಾರಿಕೆ”ಯ ಯುಗವು) ಆರಂಭವಾದದ್ದು ಇಡೀ ಸಮಾಜಕ್ಕೆ ಹಿತವೇ ಆಯಿತು (ಮಾವಾದ. ೯೬).
[ಆರಂಭಗಾರ (< ಆರಂಭಕಾಱ) + –ಇಕೆ]

**ಆರಂಭಣ** (ನಾ). **೧.** ಕೈಕೊಳ್ಳುವುದು; ಉದ್ಯೋಗ. **೨.** ಹಿಡಿದು ಕೊಳ್ಳುವುದು. **೩.** ಹಿಡಿದುಕೊಳ್ಳುವ ಸ್ಥಳ; ಹಿಡಿ. **೪.** ಉಪ ಯೋಗಿಸುವುದು; ಬಳಸುವುದು. [ಸಂ.]

**ಆರಂಭತ್ಯಾಗ** (ನಾ). [ಜೈನ] ಹಿಂಸೆಗೆ ಕಾರಣವಾದ ಸೇವೆ, ಒಕ್ಕಲ ತನ, ವ್ಯಾಪಾರ ಮೊದಲಾದುವುಗಳನ್ನು ಬಿಡುವುದು: “ಪ್ರಾಣಿಯ ಘಾತಕ್ಕೆ ಕಾರಣವಾದಂಥ ಸೇವೆ, ಒಕ್ಕಲತನ, ವ್ಯಾಪಾರ ಮೊದಲಾದ ಆರಂಭಗಳಿಂದ ಯಾವನು ವಿರಕ್ತನಾಗುವನೋ ಅವನು ಈ ಆರಂಭತ್ಯಾಗ ಪ್ರತಿಮಾಧಾರಿಯು ಎನಿಸುತ್ತಾನೆ (ಶ್ರಾವಕಾ. ೫೭೦).
[ಆರಂಭ + ತ್ಯಾಗ]

**ಆರಂಭನಿವೃತ್ತ** (ನಾ). = ಆ ರಂ ಭ ವಿ ರ ತ: ಘನತರಸಾವದ್ಯಕರಂ ನೆನೆವೊಡೆ ಷಟ್ಕರ್ಮಮೆಂದವಂ ತೊಱೆದವನೆಂಟನೆಯ ನೆಲೆಯಾತನಾರಂಭ ನಿವೃತ್ತನೆನಿಕುಂ (ಸುಕುಮಾ. ೬–೩೩). [ಆರಂಭ + ನಿವೃತ್ತ]

**ಆರಂಭಭಾಷಣ** (ನಾ). ಸಂಘದ ಕಾರ್ಯಾರಂಭ ಸಮಯದಲ್ಲಿ ನಡೆಯುವ ಮೊತ್ತಮೊದಲನೆಯ ಭಾಷಣ: ಕರ್ಣಾಟಕ ಸಂಘದ ಆರಂಭಭಾಷಣ ಇಂದು ನಡೆಯುತ್ತದೆ (ರೂಢಿ). [ಆರಂಭ + ಭಾಷಣ]

**ಆರಂಭವಿರತ** (ನಾ). **೧.** ಬೇಸಾಯವನ್ನು ಬಿಟ್ಟವನು. **೨.** [ಜೈನ] “ಶ್ರಾವಕನು ತನ್ನ ಜೀವನವನ್ನು ಸಾಗಿಸುವುದಕ್ಕಾಗಿ ಒಕ್ಕಲತನ, ವ್ಯಾಪಾರ, ನೌಕರಿ ಮೊದಲಾದುವುಗಳನ್ನು ಮಾಡುವುದಾಗಲಿ ಮಾಡಿಸುವುದನ್ನಾಗಲಿ ಯಾವಾಗ ಬಿಡುವನೋ ಆಗ ಆರಂಭವಿರತನೆನಿಸುವನು” (ಜೈನಪ. ೪೭೩).
[ಆರಂಭ + ವಿರತ]

**ಆರಂಭಶೂರ** (ನಾ). ಕೆಲಸವನ್ನು ಮೊದಲುಮಾಡುವುದರಲ್ಲಿ ಮಾತ್ರ ಗಟ್ಟಿಗ; ಕೆಲಸದ ಮೊದಲಲ್ಲಿ ಮಾತ್ರ ಶೂರ; ಕೆಲಸವನ್ನು ಕೊನೆ ಮುಟ್ಟಿಸದವನು: ದಾಕ್ಷಿಣಾತ್ಯರು ಆರಂಭಶೂರರೆಂಬುದು ಪ್ರಸಿದ್ಧ (ರೂಢಿ). [ಆರಂಭ + ಶೂರ]

**ಆರಂಭಶೂರತನ** (ನಾ). ಕೆಲಸವನ್ನು ಪ್ರಾರಂಭಿಸುವುದರಲ್ಲಿ ಮಾತ್ರ ಗಟ್ಟಿಗತನ: ಹಿಡಿದ ಕೆಲಸವನ್ನು ಕೊನೆಗಾಣಿಸುವ ಶ್ರದ್ಧೆಯಿಲ್ಲದ ಬರಿಯ ಆರಂಭಶೂರತನದಿಂದ ಫಲವೇನು? (ರೂಢಿ). [ಆರಂಭಶೂರ + –ತನ]

**ಆರಂಭಶೂರತ್ವ** (ನಾ). = ಆರಂಭಶೂರತನ: ಕೇವಲ ಆರಂಭ ಶೂರತ್ವದಿಂದ ಏನೂ ಪ್ರಯೋಜನವಿಲ್ಲ (ರೂಢಿ). [ಸಂ.]

**ಆರಂಭಿಗ** (ನಾ). **೧.** ಮೊದಲುಮಾಡುವವನು; ಮೊದಲಿಗ. **೨.** ಬೇಸಾಯಗಾರ; ಒಕ್ಕಲಿಗ; ರೈತ; ಕೆಲಸಗಾರ: ಆರಂಭಿಗ ನಾತ್ಮಂ ಸಂಸಾರಂ ಕೆಯ್ ಬಿತ್ತಿಯುಣ್ಬ ಫಲಮುಭಯಭವೋದಾರಂ ಬಿತ್ತು ಶುಭಾಶುಭಮೋರಂತಿರೆ ಬೆಳಪ ಬೆಳಸು ಸುಖದುಃಖಂಗಳ್ (ಶಾಂತಿಪು. ೮–೧೪೧); ಒಕ್ಕಲಿಗಂ ಮೊದಲಾದಾರಂಭಿಗರ್ಗೆ (ತತ್ತ್ವಪ್ರ. ೨೭೭). [ಆರಂಭ + –ಇಗ]

**ಆರಂಭಿಸು** (ಕ್ರಿ). ಮೊದಲುಮಾಡು; ಷುರುಮಾಡು; ಉದ್ಯೋಗಿಸು: ಸವನಸಾಧನದಿಂದಲಾ ಕ್ರತುಶಾಲೆ ಸೊಗಸಾಯ್ತು ಂದಿನಂಬುಜಗರ್ಭನಾರಂಭಿಸಿದ ಮಖದಂತೆ (ತೊರರಾ. ೧–೭–೩೧); ಮಾಧವನು ಮಾಲತಿಯ ಭಾವ ಚಿತ್ರವನ್ನು ಬರೆಯಲಾರಂಭಿಸಿದನು (ಕಲಾಧ. ೧೦೬). [ಆರಂಭ + –ಇಸು₃]

**ಆರಂಭೋತ್ಸವ** (ನಾ). (ಸಂಸ್ಥೆಸಂಘಗಳ ಕಾರ್ಯಗಳನ್ನು) ಪ್ರಾರಂಭಿಸುವಾಗ ನಡೆಸುವ ಸಮಾರಂಭ: ಕನ್ನಡ ಸಂಘದ ಆರಂಭೋತ್ಸವವು ಇಂದು ನಡೆಯುತ್ತದೆ (ರೂಢಿ). [ಆರಂಭ + ಉತ್ಸವ]

**ಆರಕೆ** (ನಾ). ಕಾಪಾಡುವವನು; ರಕ್ಷಕ; “ಸಂತೈಸುವವ” (ಮೋಳಿಮಾ. ಕೋಶ); ಉಂಬುದಕ್ಕೆ ಮುನ್ನವೆ ಓಗರ ಮಿಕ್ಕಿತ್ತು ಮಿಕ್ಕೋಗರವನಾರೋಗಿಸಿದವರು ಹೊಲಬುಗೆಟ್ಟರು ಎನಗಿನ್ನು ಹೊಲಬಾವುದೋ ಎನ ಗಾರಕರಿಲ್ಲ (ಮೋಳಿಮಾ. ೨೫೧–೮೦೧). [< ಸಂ. ಆರಕ್ಷಕ]

**ಆರಕುಟ್ಟೆ** (ನಾ). ಒಂದು ಊರಿನ ಹೆಸರು: ಬಲಿವಂಸೋದ್ಭವ ಘನ ರುದ್ರಸ್ವಾಮಿ ವತ್ಸಳ ಶ್ರೀಮತ್ ಆರಕುಟ್ಟೆ ಆರಕುಟ್ಟೇಶ್ವರಕೆ ಕೊಟ್ಟೆ ಗಱ್ದೆ (ಎಕ. IV, ಎಳಂದೂ. ೨೫–೩; 925 ?). [?]

**ಆರಕ್ತ** (ಗು). ಪೂರ್ಣ ಕೆಂಪಾದ: ದಳ್ಳಿಸೆ ಕೋಪಾರಕ್ತನೇತ್ರಂ ನಿಜಭುಜ ಗದೆಯಂ ತೂಗಿದಂ ಧಾರ್ತರಾಷ್ಟ್ರಂ (ಗದಾಯು. ೭–೩೦); ಆರಕ್ತಮಾಗಿ ನೇಱಿಲ ದೋರೆಯನನುಕರಿಪುದಾದುದಾಗಸಮೆನೆ (ಕಾವ್ಯಾವ. ೫೦೮); ಅವಳ ಪೊಳೆವ ರುಚಿರೋಷ್ಠಾಳಂಕೃತಿ ಪವಳದ ದಳದಂತಾರಕ್ತಾಕೃತಿ (ಸುಕುಮಾ. ೫–೫೧ ರ). [ಸಂ.]

**ಆರಕ್ತೇಕ್ಷಣ** (ನಾ). ಪೂರ್ಣಕೆಂಪಾದ ಕಣ್ಣುಳ್ಳವನು: ಗೆಲ್ದನಿಂದ ಗಿಯಂ ಸಂಹೃತಿಕಾಲ ಸಾಂಧ್ಯಜಲದಾರಕ್ತೇಕ್ಷಣಂ ಲಕ್ಷ್ಮಣಂ (ಪಂರಾಮಾ. ೧೪–೨೦). [ಆರಕ್ತ + ಈಕ್ಷಣ]

**ಆರಕ್ಷ** (ನಾ). **೧.** ರಕ್ಷಣೆ; ಕಾಪು. **೨.** ಆನೆಯ ಕುಂಭಸ್ಥಳದಕೆಳ ಭಾಗ: “ಕುಂಭಸ್ಥಳದ ಕೆಳಗು ಆರಕ್ಷಮೆಂಬುದು” (ಹಲಾಯು. ೩೭–೬೫). [ಸಂ.]

**ಆರಗ** (ನಾ). ಒಂದು ರಾಜ್ಯದ ಹೆಸರು: ರಾಜ್ಯಸ್ಯಾರಗ ವೇಂಠಸ್ಯ ಸ್ವರ್ಣಗ್ರಾಮಸ್ಥಳಸ್ಯ ಚ (ಎಕ. VII, ಶಿವಮೊ. ೫೪–೧೫; 1216); ಆರಗದ ರಾಜ್ಯಕ್ಕೆ ಸಲುವ ಗಾಜನೂರ ಸೀಮೆವಳಗೆ (ಎಕ. VII, ಶಿವಮೊ. ೨–೪೪; 1641). [?]

**ಆರಗಿ** (ನಾ). ಒಂದು ಊರು: ದೇವರಿಗಾರಗಿಯಲು ಧಾರಾಪೂರ್ವಕಂ ಮಾಡಿ ... ಕೊಟ್ಟರು (ಸೌಇಇ. XI–ii, ೧೫೪–೮೩; 1104). [?]

**ಆರಗ್ವಧ** (ನಾ). ಕಕ್ಕೆಗಿಡ: “ಆರಗ್ವಧಂ ಸ್ವರ್ಣಪುಷ್ಪ ಕೃತ ಮಾಲಮೆ ನಲಾ ರಾಜತರುವೆನಲ್ ಕಕ್ಕೆ” (ಮಂಗರಾ. ೩೫–೧೨). [ಸಂ.]

**ಆರಜ** (ನಾ). ಸಂಕೋಚ; ದಾಕ್ಷಿಣ್ಯ (?): ಅಜಗಳಸ್ತನದಂತೆಸೆವ ನಿನ್ನ ಪೌರುಷಂ ನಿಜವಾದೊಡಾಂ ಸೈರಿಸುವೆನಲ್ಲದಿದೊರ್ಡಾರಜದಿಂದೆ ಪುಸಿವೇಳ್ದನಾಲಗೆಯನರಿವೆಂ (ಜೈಮಿಭಾ. ೨೦–೫೭); ದ್ವಿಜತಿಲಕ ... ತ್ಯಜಿಸಬೇಡೊಂದುಮಂ ಪೇಳ್ದೊಡಾನೀವೆನಾರಜಮಿಲ್ಲದೆಲ್ಲಮಂ ವಾಚಿಸು (ಜೈಮಿಭಾ. ೨೬–೩೨); ಪರೋಪಕೃತಿಗಲ್ಲದ ಮನುಜನ ಬಾಳ್ಪಣಬುರಿದ ಬೂದಿಯಂತಪ್ಪುದಾರಜಮಿಲ್ಲದೀಕ್ಷಿಪುದು (ಜೈಮಿಭಾ. ೨೬–೫೪).
[?. / ತೆಲು. ಆರಜ = ಕಲಧ್ವನಿ; ಮನೋಹರವಾದುದು; ಇಂಪಾದುದು; ಸೊಗಸಾದುದು; ದುರ್ವಿಲಾಸ]

**ಆರಜಗಾವುಂಡ** (ನಾ). ಒಬ್ಬಾತನ ಹೆಸರು: ನಾಗಾರ್ಜುನಂ ನಾಗ್ಗರ್ವುಣ್ಡುಗೆಯ್ಯೆ ಆರಜಗಾವುಣ್ಡನೂರ್ಗಾವುಣ್ಡುಗೆಯ್ಯೆ (ಎಕ. VII, ಶಿಕಾರಿ. ೮೧–೧೧; 1030). [ಆರಜ ? + ಗಾವುಂಡ (< ಗಾಮುಂಡ)]

**ಅರಟೆ, ಆರಟೆ** (ನಾ). ಸೂರೆ; ಕೊಳ್ಳೆ; ದರೋಡೆ. ‘ಆರಟೆಗೊಳ್’ ಪರಾ. **ಆರಟೆ**: ‘ಆರಟೆಗೊಳ್’ ಪರಾ.
[?. / ತೆಲು. ಅರಟ, ಆರಾಟ = ಸಂತಾಪ, ಬಾಧೆ]

**ಅರಟೆಗೊಳ್**, ಅರಟೆಗೊಳ್ (ಕ್ರಿ). ದರೋಡೆಮಾಡು; ಕೊಳ್ಳೆ ಹೊಡೆ; ಸೂರೆಮಾಡು: “ಪ್ರತಿರೋಧಕನಾರಟಗೊಳ್ವ ತಕ್ಕಿನವನ ಜಿಗೆ” (ವಸ್ತುಕೋ. ೬೫–೮೨). **ಅರಟೆಗೊಳ್** : ಚೇರಕೇರಳರನಾರಟಗೊಂಡುಜಿ ತುಳ್ವರಾಯರಂ (ಬೊಂಕಶಾ. ೧೯೩೪ ; ಬಂಕಾಪು. ೧–೯ ; ?). [ಅರಟ + ಕೊಳ್$_1$]

**ಅರಟಿ** ‘ಅರಟ’ ನೋ.

**ಅರಟಿಗೊಳ್** ‘ಅರಟಗೊಳ್’ ನೋ.

**ಅರಟ್ಟ** (ನಾ). ೧. ಕುದುರೆಗಳ ತಳಿಗೆ ಪ್ರಸಿದ್ಧವಾದ ಒಂದು ದೇಶ: ಬಿಸಕಾಂಭೋಜಕ ಬಾಹ್ಲೀಕ ಸೈಂಧವಾರಟ್ಟ ತೈತಿಲಂಪಾನೇಯಂ ಪೆಸರ ಕ್ಷೇತ್ರದ ಹಯಕಾ ಪೆಸರೆ ಪೆಸರ್ (ಅಶ್ವಶಾ. ೬–೭೬). ೨. ಅರಟ್ಟದೇಶದ ಕುದುರೆ: ಧಾರಾಸಮೃದ್ಧಿಯಿಂದೆಸೆವ ಘೋಟಕಗಳನ್ನೇರಿ ನಿಜಕರಕಲಿತ ಕಶೆಗಳಿಂ ತಾಡಿಸಲ್ . . . ನೆಲಕೆ ತಾರಕೆಗಳುರುಳುವಂತಾರಟ್ಟ ವದನದಿಂ ಜಾರುತಿಹ ಬೆಳ್ನೊರೆಯ ತೋರವನಿ . . . ರಾಜಿಸಿದುದು (ವೆಂಕಾರಾ. ೧–೭–೮). ℙ ಇದು ಪಂಜಾಬಿನ ಈಶಾನ್ಯಕ್ಕಿದೆ. [ಸಂ.]

**ಅರಡಿ**$_1$ ‘ಅಜಡಿ$_1$’ ನೋ.

**ಅರಡಿ**$_2$ ‘ಅಜಡಿ$_2$’ ನೋ.

**ಅರಡಿಗೊಳ್** ‘ಅಜಡಿಗೊಳ್’ ನೋ.

**ಅರಣ** (ನಾ). ೧. ವೇದಗಳಲ್ಲಿ ಒಂದು ಭಾಗ: ಬ್ರಹ್ಮ ರುದ್ರಾದಿಗಳಿಗೆ ಜನನ ಮರಣಂಗಳುಂಟೆಂಡು ಯಜುರ್ವೇದದ ಅರಣದ ಮೂರನೆಯ ಪ್ರಶ್ನದಲ್ಲಿ . . . ಪೇಳಿಯಿದ್ದಿತು (ಸಾತ್ವಿವಿ. ೪೦); ವಿತತ ಬ್ರಾಹ್ಮಣಗಳಾರಣಗಳಂ ಪಠಿಸುತಿಹ ಯಾತುಧಾನರ ಕಾಣುತ (ವೆಂಕಾರಾ. ೫–೩–೨೮). ೨. [ಜೈನ] ಒಂದು ಸ್ವರ್ಗದ ಅಥವಾ ಕಲ್ಪದ ಹೆಸರು: ಆನತ ಪ್ರಾಣತ ಅರಣಾಚ್ಯುತ ಕಲ್ಪನಿವಾಸಿಗಳ್ಗೆ ಪೋಜಗಾಗಿ ಉಳಿದ ಮೂಜು ಮಕ್ಕುಂ (ತತ್ವಪ್ರ. ೧೩). [ಸಂ.]

**ಅರಣಅಡ್ಡ** (ನಾ). ಆರುಹಣ ಮತ್ತು ಅರ್ಧ; ಆರುವರೆ ಹಣ: ಹದಿನಾಲ್ಕು ವರಹಾಂನು ಅರಣಅಡ್ಡದ ಭೂಮಿಗೆ ಹುಜರಾದ ಊಳಿಗದ (ಎಕ. VII, ಶಿಕಾರಿ. ೨೧೦–೨೯; 1758). [ಅರಣ$_0$(<ಅಜುವಣ) + ಅಡ್ಡ$_3$]

**ಅರಣವಿಮಾನ** (ನಾ). [ಜೈನ] ಆರಣವೆಂಬ ಕಲ್ಪದ ಇಂದ್ರನ ನಿವಾಸಸ್ಥಾನವಾದ ವಿಮಾನ: ಅರಣವಿಮಾನದೊಳು ಪ್ರಾಣತೇಂದ್ರನಾಗಿ ಪುಟ್ಟ (ಚಾವುಂಉ. ೧೪೯). [ಅರಣ + ವಿಮಾನ]

**ಅರಣಿಯೂರು** (ನಾ). ಒಂದು ಊರಿನ ಹೆಸರು: ಶ್ರೀ ಮಾಂಬಲಯ್ಯಂ ಅರಣಿಯೂರ ಕೆಜಿಗೆಗಳ ಬಿತ್ತುವಟ್ಟಮಂ ಬಿಟ್ಟರ್ (ಎಕ. III, ನಾಗಮಂ. ೫೧–೨೨; 972). [ಅರಣ$_0$ + ಊರು (< ಊರ್$_2$)]

**ಅರಣೇಂದ್ರ** (ನಾ). [ಜೈನ] ಆರಣವೆಂಬ ಸ್ವರ್ಗದ ಇಂದ್ರ: ಅಷ್ಟಮ ಪೃಥ್ವೀಗತಾವಧಿಜ್ಞಾನನುಂ ಶುಕ್ಲಲೇಶ್ಯಾ ಪರಿಣಾಮನುಮಪ್ಪಾರಣೇಂದ್ರನಾಗಿ ಪುಟ್ಟ ಸುಖಮಿರ್ಪಿನಂ (ಚಾವುಂಉ. ೧೫೨). [ಅರಣ + ಇಂದ್ರ]

**ಅರಣ್ಯ** (ಗು). ೧. ಅರಣ್ಯಕ್ಕೆ ಸಂಬಂಧಿಸಿದ; ಕಾಡಿನ. (ನಾ). ೨. ಅರಣ್ಯ; ಕಾಡು: ಚರಿಪಾರಣ್ಯದ ಪಕ್ಷಿಗೊಂದು ತರು ಗೊಡ್ಡಾಗಲ್ (ಸೋಮೇಶ. ೨೬); ರಾಮಚಂದ್ರನಾರಣ್ಯಮಧ್ಯದೊಳು ಚಂದ್ರವದನೆಗೂಡಿ ನವೆದುದಿಲ್ಲವೆ (ಕುರಾಸಾಂ. ೩೬–೫೬); ಗಾರುಡದೊಳಹಿತತ್ವಮಾರಣ್ಯದೊಳ್ ದಾನವಾರಣಂ (ಜೈವಿಭಾ. ೨–೮). [ಸಂ.]

**ಅರಣ್ಯಕ** (ಗು). ೧. = ಅರಣ್ಯ ೧: ಅರಣ್ಯಕದ ಪುಷ್ಪಗಳ ಮೂಸುವರಾರು (ಮಂಕುಕ. ೫೬೬). (ನಾ). ೨. ಕಾಡಿನಲ್ಲಿ ವಾಸಮಾಡುವವನು; ಅರಣ್ಯವಾಸಿ: ಈಗ ದೇಶದಲ್ಲಿ ಅರಣ್ಯಕರು ಸಿಕ್ಕುವುದಿಲ್ಲ (ನಿಬಂಧ. I, ೨೦೧). ೩. ಬ್ರಾಹ್ಮಣಕ್ಕೆ ಸಂಬಂಧಿಸಿದ ವೇದದ ಒಂದು ಭಾಗ. ‘ಬೃಹದಾರಣ್ಯಕ’ ಪರಾ. [ಸಂ.]

**ಅರತ**$_1$ (ನಾ). ಸಂಕಟ; ವ್ಯಾಕುಲ: ಅರತವಡಗಿತ್ತೆನ್ನ ಬಯಕೆ ಸಮನಿಸಿತ್ತೆನ್ನ (ಬಸಹೆ. ೨೩೯); ಅಶನ ಕುಂದದು ವ್ಯಸನ ಮಾಣದು ಅರತವಡಗದು ವೆವಹಾರವುಡುಗದು (ಬಸವ. ೨೪೯). [< ಸಂ. ಆರ್ತ]

**ಅರತ**$_2$ (ಗು). ೧. ಸಾಧುವಾದ; ಮೃದು ಸ್ವಭಾವದ (ಕ). ೨. ಆಸಕ್ತನಾದ; ಶ್ರದ್ಧೆಯುಳ್ಳ. [ಸಂ.]

**ಅರತಕ್ಷತೆ** (ನಾ). ವಧೂವರರನ್ನು ಹಸೆಯ ಮೇಲೆ ಕೂರಿಸಿ ಅಕ್ಷತೆ ಹಾಕಿ ಆರತಿಮಾಡಿ ಆಶೀರ್ವದಿಸುವ ಸಮಾರಂಭ: ಅರತಕ್ಷತೆಗೆ ದಯುವಿಟ್ಟು ಬರಬೇಕು (ರೂಢಿ). [ಆರತಿ + ಅಕ್ಷತೆ]

**ಅರತಿ**$_1$, ಅಲತಿ (ನಾ). ೧. ಉತ್ಸವದ ವ್ಯಕ್ತಿಗಳಿಗೆ ಅರಿಸಿನ ಕುಂಕುಮ ಬೆರಸಿದ ನೀರಿನಿಂದ ಕೂಡಿದ ತಟ್ಟೆಯಿಂದ ಎತ್ತುವ ನೀರಾಜನ, —ನೀಲಾಂಜನ. ℙ ಕೆಲವು ವೇಳೆ ತಟ್ಟೆಯ ನಡುವೆ ನೀಲಾಂಜನ ದೀಪಗಳನ್ನು ಇಡುವುದುಂಟು: ಭುವನದೀಪಿಕೆಗಾರತಿಯನೆತ್ತಿ ಕೆಲಕೆಲರ್ ಕವಿನುತೆಗೆ ಬದ್ಧವಣಮಂ ಮೊಟಗಿ ಕೆಲಕೆಲರ್ (ವರ್ಧಪು. ೧೩–೫೨ ರ); ನೋಟವೇ ಬೆಳಗಿದಾರತಿ ಶಂಕರಂಗೆ (ಕಾರಿರ. ೨೪೨); ಉಗೆ ಚಾಂಗು ಬಲಯೆಂದು ನೆಗೆವ ರಭಸಂಗಳೊಳು ಮಘಮಘಿಪ ಧೂಪದೀಪಗಳಾರತಿಗಳೊಳು (ದೀಕ್ಷಾಬೋ. ೧೦೭–೭); ಅ ಜಿ ವು ಕಣ್ದೆಜೆಯದವರಲ್ಲಿ ಆರು[ರ]ತಿಯನೊಲ್ಲೆಯಯ್ಯ ನೀನು (ನುಹಾದೇ. ೧೩–೪); ಸುಳಿದವಾರತಿಯಮರಿಯರ ಹೊಂದಳಿಗೆಗಳ ದೀವಿಗೆಯ ಮುಕ್ತಾಫಳದ ಶೇಷಾಕ್ಷತೆಯ ಮಳೆ ಸಿರಿಮುಡಿಯ ಸರಿಸದಲಿ (ತೊರರಾ. ೩–೬[illegible]); ಅರತಿಗೊಂದು ಹೆಣ್ಣು ಕೀರತಿಗೊಂದು ಗಂಡು (ಗಾದೆ). ೨. ದೇವತಾ ಮೂರ್ತಿಗೆ ಕರ್ಪೂರ, ದೀಪವನ್ನು ಹತ್ತಿಸಿ ಮಾಡುವ ನೀರಾಜನ: ದೇವರಿಗೆ ಆರತಿಯಾಯಿತೆ? (ರೂಢಿ). ‘ದೀಪಾರತಿ’, ‘ಮಂಗಳಾರತಿ’ ಪರಾ. ೩. ಆರತಿಯನ್ನು ಮಾಡುವ ಉಪಕರಣ: ಶ್ರೀ ವೀರಕೃಷ್ಣರಾಯ ಮಹಾರಾಯರೂ ಶ್ರೀ ಕಾಳಹಸ್ತೀಶ್ವರದೇವರಿಗೆ ಸಮರ್ಪಿಸ್ತ . . . ಮಧ್ಯಮಾಣಿಕ್ಯವಿಕ್ಕಿದ ಸಂತರ್ಥಾರೆಯ ಚಿಂನದ ಬಟ್ಟಲು . . . ಚಿಂನದ ಪುರುಷಾಮೃಗದ ಅರತಿ ೧ ಗಿರಿಯಾರತಿ × × × . . . ಬೆಳ್ಳಿಯ ಆರತಿ ೨೫ (ಸೌ ಇ ಇ. IX–ii, ೪೮೭–೫ ; 1513); ಹೊಳೆವಾರತಿ ತಮ್ಮ ಹಸ್ತದೊಳೆಸೆಯಲು ಕುಲಸತಿಯರು ಬಂದರಾಗ (ಭರಚ. ೩–೭೬). ೪. ಆರತಿಯನ್ನು ಎತ್ತುವಾಗ ಹೇಳುವ ಹಾಡು: ಮಾಧವ ಆಡಕರ ಕೃತ ಆರತಿಯನ್ನು ಬರೆದ ಒಂದು ಪ್ರತಿ (ಸಾಲೀಲಾ. ೪); ಮಗು ಒಂದು ಆರತಿ ಹೇಳಮ್ಮ (ರೂಢಿ). **ಅಲತಿ** : ತೊಳಗುವಾಲತಿಯ ಪಲವುಂ ದೀವಿಗೆ ಗುಡಿಗಳ್ (ಚಿಕವಂ. ೧೨೩–೫). [< ಸಂ. ಆರಾತ್ರಿಕ]

**ಅರತಿ**$_2$ (ನಾ). ವಿರಾಮ; ಮುಗಿಯುವಿಕೆ: “ಅರತಿಃ . . . ಉಪರಮಃ –೪ ಮುಗಿವಿಕೆ” (ಸಿದ್ಧಾಂತಿ. ೩೧೭). [ಸಂ.]

**ಅರನಾಲ**, ಆರನಾಳ (ನಾ). ಗಂಜಿ; ಅಂಬಲಿ. **ಆರನಾಳ**: “ಧಾನ್ಯಾಮ್ಲಂ, ಆರನಾಳಂ, ಸಂಧಾನಂ, ಕಾಂಜಿಕಂ, ಸೌವೀರಂ – ಈ ೫ ಅಂಬಿಲಂ” (ಹಲಾಯು. ೫೩–೧೬೩); ಆರನಾಳ ಸಂಮಿಶ್ರಮಪ್ಪ ಕೋದ್ರವಾಹಾರಮಂ . . . ಕುಡೆ (ಚಾವುಂಪು. ೪೦೩–೨೬). [ಸಂ.]

**ಅರತಿಬೆಳಗು** (ಕ್ರಿ). ಆರತಿಯನ್ನು ಮಾಡು; ನಿವಾಳಿಸು: ಕಂಗೆ ಕೌತುಕವೆನಲು ಆರತಿಗಳಂ ಬೆಳಗಿ (ಸಿದ್ಧರಾ. ೮–೮೭). [ಆರತಿ + ಬೆಳಗು$_1$]

**ಅರತಿಯೆತ್ತು** (ಕ್ರಿ). ೧. ಆರತಿ ಬೆಳಗು: ಆನನಸ್ಮೇರಮರೀಚಿಲೋಚನ ಮರೀಚಿಲಲಾಟ ಮರೀಚಿದಂತವಿಸ್ತಾರ ಮರೀಚಿಗಳ್ ತೊಳಗುವಾರತಿ ಗಾರತಿಗೆತ್ತು ಸುತ್ತಿನಿಂದಾರತಿಯೆತ್ತಿದರ್ ಗಿರಿಜೆಗಂ ಜನಕಂಗಮನಂತ ಕಾಂತೆಯರ್ (ಗಿರಿಕ. ೩–೧೧೭). ೨. (ಅಲಂ). ಅವಮಾನ ಮಾಡು: ಅವನ ಅಹಂಭಾವಕ್ಕೆ ಆರತಿಯೆತ್ತಿದಂತಾಯಿತು (ಪುನರು. ೮೨). [ಆರತಿ + ಎತ್ತು$_1$]

**ಆರನಾಲಕ,** ಆರನಾಳಕ (ನಾ). = ಆರನಾಲ : "ಗಂಜಿ" (ಗಂಗಾಮ. ೨೭). **ಆರನಾಳಕ** (ಅಮರ). [**ಸಂ.**]

**ಆರನಾಳ** 'ಆರನಾಲ' ನೋ.

**ಆರನಾಳಕ** 'ಆರನಾಲಕ' ನೋ.

**ಆರನಾಳಾಂಬು** (ನಾ). **೧.** ಅಕ್ಕಿ ತೊಳೆದ ನೀರು ; ಅಕ್ಕಿಗಚ್ಚು. **೨.** ಗಂಜಿ ; ಅಂಬಲಿ : ಪೀಯೂಷಮನುಂಡವಂ ಬಗೆವನೇ ಪೇಳಾರನಾಳಾಂಬುವಂ (ವೃಷವಿ. ೬–೩೦). [ಆರನಾಳ (= ಆರನಾಲ) + ಅಂಬು]

**ಆರಪಾರ,** ಆರುಪಾರು (ಅ). (ಉಕ). ತುದಿಯಿಂದ ತುದಿಯವರೆಗೆ ತಡೆಯಿಲ್ಲದೆ, —ಅನಿರ್ಬಂಧಿತವಾದ, —ನೇರವಾಗಿ, —ಸ್ಪಷ್ಟವಾಗಿ : ಇದೊಂದು ಕಾಜಿನ ಕೊಳವೆಯು ಆರಪಾರ ಇರುತ್ತದೆ (ಮುಂಬಯಿ. ೫–೭೬) ; ಸೂರ್ಯಕಿರಣಗಳು ಎಲೆಯ ಸಣ್ಣ ದೊಡ್ಡ ಶಿರಗಳೊಳಗಿಂದಲೂ ತ್ವಚೆಯೊಳಗಿಂದಲೂ ಸಮವಾಗಿ ಆರಪಾರ ಹೋಗುವುದಿಲ್ಲ (ಮುಂಬಯಿ. ೫–೧೮೮) ; ಎಂದಿನಂತೆ ಅದು ಇಂದಿಗೂನು ಸಿದ್ಧಾಂತದಾರಪಾರ (ಮುಕ್ತಕಂ. ೧೪–೧೫) ; ಈ ಗಾಡಿಗೆ ಎಲ್ಲಾ ಡಬ್ಬಿಗೂ ಆರಪಾರ ಹಾದಿ ಇರತದ (ವೈನಿ. ೧). **ಆರುಪಾರು :** ನೋಡ ನೋಡುತಿರೆ ಜಡವೆ ಜಲದವೊಲು ತೆಳ್ಳನಾರುಪಾರು (ಹೃದಸ. ೭–೨) ; ಪ್ರಾಜ್ಞಾಗಿದೆ ಈ ವಿಶ್ವ ಒಂದು ಮಾರು. ತಿಳಿವ ತೇಜದ ಮುಂದೆ ನಾನು, ಬಾನೂ, ನೀನು ತುದಿಯಿಂದ ತುದಿವರೆಗೆ ಆರುಪಾರು (ಅರಳು. ೧೪೨–೨೨).
[← **ಹಿಂ. ಮರಾ.** ಆರ್‌ಪಾರ್ = ಈ ಕೊನೆಯಿಂದ ಆ ಕೊನೆಯವರೆಗೆ]

**ಆರಬ್ಧ** (ಗು). ಮೊದಲುಮಾಡಿದ ; ಆರಂಭಿಸಿದ : ಆರಬ್ಧಕ್ಕಧಿಕಮಸಾಧಾರಣಗುಣಮಧಿಕಮೆಂಬುದಕ್ಕುಂ (ಕಾವ್ಯಾವ. ೭೬೨). [**ಸಂ.**]

**ಆರಭಟಿ** (ನಾ). [ಕಾವ್ಯಮೀ] ನಾಲ್ಕು ಬಗೆಯ ವೃತ್ತಿಗಳಲ್ಲಿ ಒಂದು; ಬಿಗಿಯಾದ, ಓಜಪೂರ್ಣವಾದ ಮಾತುಗಳಿಂದ ರೌದ್ರ, ಭೀಭತ್ಸ ರಸಗಳನ್ನು ಪ್ರತಿಪಾದಿಸುವ ಅಥವಾ ಅಭಿನಯಿಸಿ ಪ್ರಕಟಿಸುವ ಕ್ರಮ : ಭಾರತಿ ಸಾತ್ವತಿ ಕೈಶಿಕೆಯಾರಭಟಿಯುಮೆಂಬ ವೃತ್ತಿಯೊಳ್ ರಸಮಂ ಸಂಚಾರಿಸುವ ಭಾವಮಂ ವಿಸ್ತಾರಿಸುವ ಬೆಡಂಗು ಬೇಱಿ ನೀಲಾಂಜನೆಯಾ (ಆದಿಪು. ೯–೨೬) ; ಆರಭಟಿಯು ಮಾಯೆ, ಇಂದ್ರಜಾಲ, ಜಗಳ, ಕೋಪ, ಕಳವಳ ಇವುಗಳಿಂದ ಕೂಡಿ ಉದ್ಧತವಾಗಿರುವುದು (ಕೈಪಿಡಿ. ೨೧೧). [**ಸಂ.** ಆರಭಟೀ]

**ಆರಭಟೀವೃತ್ತಿ** (ನಾ). = ಆರಭಟಿ : ಕ್ರೂರಾಸ್ತ್ರಪಾತ ಚಿತ್ರಮಹಾರಣಮಹೇಂದ್ರಜಾಲ ರೌದ್ರಾದಿ ರಸಂ ಚಾರುತರ ಸ್ಫುಟಬಂಧದೊಳಾರಭಟೀವೃತ್ತಿಯಿಂದಭಿವ್ಯಂಜಿಸುಗುಂ (ಕಾವ್ಯಾವ. ೮೪೧) ; ಕೇವಳಂ ತಾಳಲಯಾಶ್ರಯಮುಮಪ್ಪ ತಾಂಡವಮನಾಡಲೆಂದಾರಭಟೀವೃತ್ತಿಯಂ ಕೈಕೊಂಡು (ಚಂದ್ರಪು. ೧೨–೧೮೪ ವ). [**ಸಂ.** (ಆರಭಟೀ + ವೃತ್ತಿ)]

**ಆರಭಟಿ** 'ಆರ್ಭಟಿ' ನೋ.

**ಆರಭಾರ,** ಆರಾಭಾರ (ನಾ). **೧.** ಆಡಳಿತ; ಮೇಲ್ವಿಚಾರಣೆ : ಪಡೆದ ವಸ್ತುವನು ಮನೆಯಾರಭಾರವನು ನಂದನರ ಕೈವಶಮಾಡಿ ಕಡೆಯಲ್ಲಿ ಭೋಗೋಪಭೋಗಮಂ ಕೊಳಿವುಲ್ಲ ಬಿಡುವಂತೆ ಬಿಸುಟು (ಸಮ್ಯಕೌ. ೫–೧೨) ; ಸಂಸ್ಥಾನದ ಆರಭಾರಮಂ ನಡಸುತ್ತಮಿರಲಾ ಕಾಲದೊಳ್ (ಕೆಳನೃ. ೮–೪೧). **೨.** "ಮನೆತನದ ಎಲ್ಲ ಖರ್ಚು" (ಜಾನಕೋ. ೧೬) ; ಆಕೀ ಆರಭಾರ ಎಲ್ಲಿಂದ ಹಿಡೀಲಿನ್ನ (ಧರ್ಮಸೆ. ೧೧೬). **ಆರಾಭಾರ : ೧.** ನಿಖಿಳಕಾಲಕೆ ನಿರ್ದುಃಖಿಯೆನಿಸಿಕೊಂಬ ಭಕುತರ ಆರಾಭಾರ ವೊಹಿಸುವ ಹರಿ ಚೆನ್ನಾಗಿ (ವಿಸ್ತೋಸು. ೪೩–೧). **೨.** ಮುದುಕಿ ಆದರೂ ಆಕಿಯ ಆರಾಭಾರಾ ಹಿಡಿಯೋ ಧೈರ್ಯ ನನಗಿಲ್ಲ (ಪೂಜಾಫ. ೫).
[← **ಮರಾ.** ಆರ್‌ಭಾರ್]

**ಆರಭಿ** (ನಾ). [ಸಂಗೀತ] ಒಂದು ರಾಗದ ಹೆಸರು : ಬಳಿಕ ಸಮಸ್ತ ರಾಗಂಗಳೊಳಗೆ ರಾಮಕ್ರಿಯೆ . . . ಆರಭಿ . . . ಮಧ್ಯಮಾವತಿಯೆಂಬ ಮೂವತ್ತಾಱು ರಾಗಂಗಳ್ (ವಿವೇಕ. ೨೩೪). [**ಸಂ. ?. / ತಮಿ.** ಆರಭಿ]

**ಆರಮೆ** 'ಆರವೆ' ನೋ.

**ಆರಯ್,** ಆರಯಿ, ಆರಯು, ಆರಯ್ಯು, ಆರೈ (ಕ್ರಿ). **೧.** ಹುಡುಕು; ಪತ್ತೆಹಚ್ಚು : "ಆರಯ್ – ಅನ್ವೇಷಣೇ" (ಶಮಧಾ) ಕಸವರಮೆಲ್ಲಮಂ ಕಳ್ದೊಡಮಾರಯ್ಯದೆ ಕೆಮ್ಮಗಿರ್ಪೆ . . . ಬೇಗಂ ಕಳ್ಳನನಾರಯ್ದು ಹಾರಮಂ ಕೊಂಡು ಬಾ (ವಡ್ಡಾರಾ. ೧೨೩–೧೮) ; ಗಾಂಧಾರಿಯುಂ ಧೃತರಾಷ್ಟ್ರನುಂ ತಮ್ಮ ಮಗನನಾರಯ್ಯಲುಂ ಮನಃಕ್ಷತಮನಾಱಿಸಲುಮೆಂದಱಿಸುತ್ತುಂ ಬಂದು (ಗದಾಯು. ೩–೭೩ ವ). **೨.** ಯೋಚಿಸು ; ಚಿಂತಿಸು : ತುಡುಗೆಗಳೊಳ್ ಸರಿಗೆಯುಮಂ ಕಡುವಿಣ್ಣಿತ್ತೆನಿಸಿ ನಡೆದುಮೋರಡಿಯನಣಂ ನಡೆಯಲುಮಾಱದೆ ಕೆಮ್ಮನೆ ಬಿಡವಾರಯ್ವನಿತುಮಾಗೆ ಬಳೆದುದು ಗರ್ಭಂ (ಪಂಪಭಾ. ೧–೧೪೪). **೩.** ವಿಮರ್ಶಿಸು ; ಪರೀಕ್ಷಿಸು ; ವಿಚಾರಿಸು: ಪದನಱಿದು ನುಡಿಯಲುಂ ನುಡಿದುದನಱಿದಾರಯಲುಮಾರ್ಪರಾ ನಾಡವರ್ಗಳ್ (ಕವಿರಾ. ೧–೩೮) ; ಆರಯೆ ಧರ್ಮಮೊಂದೆ ಶರಣೆನ್ಗೆ (ವಡ್ಡಾರಾ. ೧೪೩–೨೫) ; ಆತನ ಚಿತ್ತವೃತ್ತಿಯಂ ಪ್ರಿಯಸೇನನೆಂಬ ಲೆಂಕನಿಂದಮಾರಯ್ಯಲ್ವೇೞ್ದು (ಚಾವುಂಪು. ೮೪–೧೪). **೪.** ರಕ್ಷಿಸು; ಕಾಪಾಡು; ಸಲಹು : ಕಾಡಬಸವನ ಹುಲಿ ಕೊಂಡೊಯ್ವರೆ ಆರಯ್ಯಲಾಗದೆ ಕೂಡಲಸಂಗಮದೇವಾ (ಬಸವ. ೪೫) ; ಎನ್ನನಿಂದುವರಮತಿಮೋಹದಿಂದಾರಯ್ದು ಮನ್ನಿಸಿ (ಪದ್ಮರಾ. ೧೩–೧೯). **ಆರಯಿ : ೩.** ಈವೆಡೆಯೊಳಿಂತಾರಯಿದು ಆಗೆ ಆಗೆ ಎನುತ್ತ (ಬಸಪು. ೨೩–೩೪) ; ಚಾರುವಿದ್ಯಾವಳಿಗಳಾ ಜೀವಂಧರನ ತೇಜನ ಆರಯಿದು ಬಂದಱುಹುತಿರೆ (ಜೀವಂಚ. ೧೩–೨) ; ಚಾರುದತ್ತಗೆ ಪೆಣ್ಣ ಸೌಖ್ಯದ ಸಾರವಱಿವುದಮಾಡಬೇಕೆಂದಾರಯಿದು ದೇವಿಲೆಯು ಪುತ್ರನ ಕೆಳೆಯರಿಗೆ ಹೇಳೆ (ಸಾಳ್ವಭಾ. ೭–೨೫). **೪.** ನಂದನನವರ ಪಶುಗಳಾನಾರಯಿದು ಕಾಯ್ತಪ್ಪನನುದಿನವು (ಬಸಪು. ೨೪–೨). **ಆರಯು : ೧.** ನವಶಕ್ತಿಗಳನ್ನು ಆರಯುವುದರಲ್ಲಿ ವಿನಿಯೋಗಿಸತೊಡಗಿದ (ಕಾಲಯಾ. ೪೧). **ಆರಯ್ಯು : ೧.** (ಕ). **ಆರೈ : ೧.** ತಂದೆ ಧೃತಿಗೆಡಬೇಡ ನಡೆ ನಿಜನಂದನನನಾರೈವೆವೆನುತೈತಂದು ಕೋಟೆಯ ಕಳೆದು ಬಂದರು ರಾಜಬೀದಿಯಲಿ (ಕುವ್ಯಾದ್ರೋ. ೮–೧೦) ; ಪಿತನನಾರೈ ಹೋಗು ಬೇಗೆಂದ (ತೊರರಾ. ೨–೪–೧೦). **೨.** ಮುಂದೆ ನರನುದ್ಯೋಗಕಾರೈವೆವು ಚಿಕಿತ್ಸೆಯನು (ಕುವ್ಯಾದ್ರೋ. ೧೬–೨೯) ; ಶ್ರೀರಂಗಪಟ್ಟಣವನು ಕೊಳೆ ಕರ್ಣಾಟ ಸೇರುವುದತಿ ಬೇಗವೆಂದು ಆರೈದಿವನ ಕಳುಹೆಯಪಕೀರ್ತಿಯ ಸೇರಿಸಿದನು ಖಾನನೆಮಗೆ (ಕಂನವಿ. ೧೬–೪). **೩.** ಕಕ್ಕಿನ ಪವಳದ ಮಣಿಗಳನಿಕ್ಕುವವರ್ ಪಲರೊ . . . ಆರೈದು ನೋಟಿಪ್ಪೊಡವನೀತಳದೊಳ್ (ಧರ್ಮಾಮೃ. ೧–೨೦೦) ; ಕ್ಷೀರದೊಳು ಘೃತವಡಗಿ . . . ಆರೈದು ನೋಡೆ ಬೀಜದೊಳು ವೃಕ್ಷ ಸಾರಿರ್ದು (ಶಿವಗೀ. ೪). **೪.** ಹೆಣ ಹೆಣಂ ತಾಗೆ ಸೂಲವನೊಡಗೂಡಿತ್ತು ಸೂಲಕೊಲ್ಲದೆ ಆರೈವುತ್ತದೆ (ಸಗಬೊ. ೭೦).

**ಆರೈದುಕೊಳ್ = ೧.** ಮೇಲ್ವಿಚಾರಣೆ ಮಾಡು : ಗೋಪಾಲದಂಣ್ನಾಯಕರು ತಾವೆ ಆರೈದುಕೊಂಡು ಆ ವ್ರಿತ್ತಿಯ ಉತ್ಪತ್ತಿಯಿಂದಲೆ ಆ ಧರ್ಮ್ಮವ ನಿಲಲೀಯದೆ ತಾವೆ ನಡಸುವರು (ಎಕ. XII, ಚಿಕ್ಕನಾ. ೨–೨೧ ; 1261). **೨.** ಸವರಿಕೊಳ್ಳು : ಬರತ ತುಟಿಗಳನ್ನು ಆರತ ನಾಲಿಗೆಗಳಿಂದ ಆರಯ್ದುಕೊಂಡು (ಮಂತ್ರಶ. ೬೫). **೩.** ವಿಚಾರ ಮಾಡಿಕೊ : ದೊರೆ ಆದನು ನೋಡಿ, ತನ್ನೆದುರಿನಲಿ ಹಾಡುವಂದಿವನು ಏತಕೆ ಇಂತು ಹಾಡನು, ಎಂದು ಆರಯ್ದುಕೊಂಡನು (ನವರಾ. ೫–೩).
[**ದೇ.** ‖ **ತಮಿ. ಮಲ.** ಆರಾಯ್ ; **ತುಳು.** ಅರಿಸು ; **ತೆಲು.** ಅರಯು, ರಾಚು]

**ಆರಯಿ** 'ಆರಯ್' ನೋ.

**ಆರಯಿಕೆ** 'ಆರಯ್ಕೆ' ನೋ.

**ಆರಯಿಸು, ಆರಯ್ಸು, ಆರ್ಯೈಸು$_2$ (ಕ್ರಿ). ೧.** ವಿಚಾರ ಮಾಡಿಸು; ವಿಮರ್ಶಿಸುವಂತೆ ಮಾಡು; ಪರೀಕ್ಷೆಮಾಡಿಸು: ಪಾಂಗಱಿವ ವಿಪ್ರವರರ್ಕಳಿಂ ಚರರಿಂ ವಿಚಾರಪರರ್ಕಳಿಂ . . . ಇನ್ನುಮಾರಯಿಸಿಂ ವಿದಗ್ಧರಿಂ (ಕಾವ್ಯಾವ. ೯೫). **೨.** ವಿಚಾರಿಸು; ವಿಮರ್ಶಿಸು: ಸನ್ನಿಧಿ ಮನದೊಳಾರಯಿಸಿ ಬೆಸಸಿದೊಡೆ ಬದುಕುವೆನು (ನವರಾ. ೩–೧೯). **೩.** ಆದರಿಸು; ಗೌರವಿಸು: ವಾರಿಜಾಕ್ಷನೆ ರಣದಿ ಕೌರವ ವೀರರನು ಸದೆಬಡಿದು ಭೀಷ್ಮನನಾರಯಿಸದೆಯೆ ಮಡಿಸಿ ಬಂಧುಗಳೆಲ್ಲರನು ಕೊಲಿಸಿ (ತಿಮ್ಮಸ್ತ್ರೀ. ೨–೩೯). **ಆರಯ್ಸು: ೧.** (ಕ). **ಆರ್ಯೈಸು$_3$: ೩.** ಜಾರೆಯ ಶಿಶುವಳಲು ಆರ್ಯೈಸಿ ಪತಿ ಕರೆಯೆ ಜಾರೆಯುದ ಕಂಡು ನಗುವಂತೆ ಜ್ಞಾನಿ . ಸಂಸಾರವನು ನಗುವ (ಸರ್ವಜ್ಞ. ೩೯೭). [ಆರಯ್ + –ಇಸು$_3$]

**ಆರಯು** 'ಆರಯ್' ನೋ.

**ಆರಯ್ಕೆ, ಆರಯಿಕೆ, ಆರ್ಯೈಕೆ (ನಾ). ೧.** ವಿಚಾರ ಮಾಡುವುದು; ವಿಮರ್ಶಿಸುವುದು; ಪರೀಕ್ಷೆ; ವಿಮರ್ಶೆ: "ಪರೀಕ್ಷಣಮೆನಲ್ಕಾರ್ಯೈಕೆ" (ಮಂಗರಾ. ೧೩೦–೧೫); ಮೃಗದ ಮೂಱಿರವುಮನಾಱಾರಯ್ಕೆಯುಮಂ ಗಾಳಿಯು [ಮನೆ]ಜಂಕೆಯುಮಂ ಬಲ್ಲನಾಗಿ (ಪಂಪಭಾ. ೫–೪೩ ವ); ಆರಯ್ಕೆಯುಂ ಮೆಯ್ಗಾಪಿನಾಳ್ವಲಮುಮಿಲ್ಲದೆ ಪೊಕ್ಕಿಱಿವ ಪಗೆಯುಂ ಕಾಯಲಱಿವರೆ (ಜೀವಸಂ. ೧೫೬–೧೧ ವ); ಛಡಾಳಿಸಿದ ರಾಗದಿಂ ಭೋರನಮರ್ದಪ್ಪಿ ಚೆಂದುಟಿಯಿತ್ತು ಪುಳಕವಾಂತಾರಯ್ಕೆಯಿಲ್ಲದುಲಿದು ಮೇರೆದಪ್ಪಿದ ಸೌಖ್ಯದಿಂ . . . ಒಪ್ಪಿದಳ್ ನಾರಿಯೊರ್ವಳ್ (ಪದ್ಮರಾ. ೮–೯೪). **೨.** ರಕ್ಷಣೆ; ಪೋಷಣೆ; ಶುಶ್ರೂಷೆ: ಯೆಡೆದೊಱೆ ಮಂಡಲಿನಾಡಪ್ರಭು ಗಾವುಣ್ಡುಗಳ ಕರೆಯಲಟ್ಟಿ ಧರ್ಮ × ಮಾರಯ್ಕೆಯೆಂದು . . . ಬಿಟ್ಟ ದತ್ತಿ (ಎಕ. VII, ಶಿವಮೊ. ೬೪–೯೪; 1112). **ಆರಯಿಕೆ: ೧.** ಅರನಾದರೂ ಜಾತಿಧರ್ಮದ ಸೇರುವೆಗಳೇ ಹೇಳುವುದು ನಮ್ಮಾರಯಿಕೆಗಿವರಿಂದು ಕ್ಷತ್ರಿಯರೆಂದು ಮುನಿ ನುಡಿದ (ಕುವ್ಯಾಆ. ೧೬–೨೪); ಆರಯಿಕೆಯಿಲ್ಲದೆ ಮೃಗವ್ಯಾಪಾರಚಿತ್ತನು ಶಾಂತಗುಣ ಗಂಭೀರಗರ್ವಿತನೈದಿದನು ಮಾಯಾಕುರಂಗಮವ (ತೊರರಾ. ೩–೮–೪೮). **೨.** ಪ್ರಜೆಯ ಆ[ಅ]ರಯಿಕೆ ಆ ಬಾಳ ಚತುಸ್ಸೀಮೆ (ಸೌಇಇ. IX–ii, ೪೦೫–೧೭; 1457); ಘೋರತರ ಸಂಸಾರದೊಳು ನಿಸ್ನಾರಯಿಕೆ [ಪಾಠಾ. ರೈಕೆ]ಯಿಲ್ಲದಿರೆಯೆನ್ನನದಾರುಬಲ್ಲರು (ದೇವೀಮ. ೧–೧೦–೧೧). **ಆರ್ಯೈಕೆ: ೧.** ಚಕ್ರವರ್ತಿಯ ಬಾಗಿಲಂ ಕಾವನಂತೆ ನಯಮುಂ ಬುದ್ಧಿಯ ಪೂರ್ಯೈಕೆಯುಂ ಬೆರಸು ನಡೆವಾತಂ (ಧರ್ಮಾಮೃ. ೫–೧೩೧); ಪ್ರಾರಬ್ಧ ಕರ್ಮಕ್ಕೆ ಆರಯಿಕೆ ಮುನ್ನಿಲ್ಲ ಹಾರಯಿಸಿ ಬಯಸಿ ಬಂದುದಕೆ ತಾನಳುಕನಾರೂಢಯೋಗಿ (ಸರ್ವಜ್ಞ. ೫೩೯). **೨.** ಆರ್ಯೈಕೆಯ ಮಾಡುವ ತಾಯಿ ಧಾರುಣಿಯಲ್ಲಿ ಕೊರಳ ಕೊಯ್ದಳು (ಮೋಳಿಮಾ. ೨೧೪–೭೬೮); ಎರಡು ಮೂರು ತಿಂಗಳ ಆರ್ಯೈಕೆಯಾಗದ ಹೊರತು ಪೂರ್ವಸ್ಥಿತಿಗೆ ಬರಲಾರದಷ್ಟು ಬಲವಾದ ಪೆಟ್ಟಿನ ಗಾಯ . . . ಆಗಿತ್ತು (ಕುರುಕಾ. ೧೨೧); ಮಕ್ಕಳ ಆರ್ಯೈಕೆ, ಉಪಚಾರಗಳಿಗಾಗಿ ಎಷ್ಟು ಹಣ ಕೊಟ್ಟು ಇಟ್ಟರೂ ದಾದಿಯು ತಾಯಿಗೆ ಸರಿದೊರೆಯಾಗಬಹುದೆ? (ಯಕ್ಷಪ್ರ. ೧೫೨). **೩.** ಯುದ್ಧದಲ್ಲಿ ಒಂದು ಕ್ರಮ (?): ಗತಿಭಾವಂ ಚಾರಿಸೂತ್ರಂ ನಿಱಿಸಳವಿ ಬಳಂ ಕಾಣ್ಕೆ ಬಲ್ಪೋಜೆ ಕಾಯ್ಪುನ್ನತಿ ಗಾಢಂ ಲಾಗು ಬೇಗಂ ತೆಜಪು ಪಸರವಾರ್ಯೈಕೆ ತೇರಯ್ಕೆ . . . ಎನಿಪ ಭೃಗುಪ್ರೌಢಿಯಿಂ ಕೊಲ್ವನುಗ್ರಾಹಿತನಂ ಮಾಜಂಕವಂ ಮಾರ್ಮಲೆದಡೆ ಚಲದಿಂದೆಕ್ಕಲ ಕ್ಷೋಣಿಪಾಳಂ (ಎಕ. VIII, ಸೊರಬ. ೧೪೦–೩೪; 1198); ಧೃಷ್ಟದ್ಯುಮ್ನನಾರ್ಯೈಕೆಯಲಿ ನೃಪಸೇನೆ ತವಕಮಿಗೆ ಮೋಹರಿಸಿ (ಕುವ್ಯಾಭೀ. ೪–೧).

**೪.** ಎಚ್ಚರಿಕೆ, ಪರಾಕು, ಅವಧಾರು ಎಂಬ ಅರ್ಥದಲ್ಲಿ ಬಳಕೆಯಾಗುವ ಶಬ್ದ: ಅವೆ ರತ್ನದೊಡ್ಡುಗಲ್ಲಾರೈಕೆ ದೇವ ಮುಂದದೆಕೊ ಪಾಸಱಿ ಪಾದಜತನಾ ಇದೆ ಪುಷ್ಪವಲ್ಲಿ ಎಚ್ಚರಿಕೆಯೆಂದನುಜರು ಹದಹದ ಕುಸುರುತೆಯ್ದಿದರು (ಭರಚ. ೭೬–೧೮೩).

[ಆರಯ್ + –ಕೆ$_1$. / **ತಮಿ.** ಆರ್ೖಚಿ;

**ತುಳು.** ಆರಿಕೆ, ಆರ್ಯೈಕೆ, ಆರೇಕ್ತಿ; **ತೆಲು.** ಆರಯಿಕ]

**ಆರಯ್ಯು** 'ಆರಯ್' ನೋ.

**ಆರಯ್ಸು** 'ಆರಯಿಸು' ನೋ.

**ಆರವ (ನಾ).** ಶಬ್ದ; ಧ್ವನಿ; ಕೂಗು: ರೌದ್ರಸ್ಫಾರಧೀರಾರವ ವಿಜಿತ ಘನಧ್ವಾನಮಂಭೋನಿಧಾನಂ (ಶಾಪಮಂ. ೧೦೫೫; 1189) [ಸಂ.]

**ಆರವಾರ$_1$ (ನಾ).** ಸ್ವಲ್ಪವಾದ ಆಯಾಸ, ಉಪದ್ರವ ಅಥವಾ ನೋವಿಗೆ ಬಹಳವಾಗಿ ಆರ್ಭಟಮಾಡಿ ಕೂಗಿಕೊಳ್ಳುವುದು; ಆಗತ್ಯಮಾಡುವುದು (ದಕ. ಕ). [**ದೇ.** ‖ **ತಮಿ. ಮಲ.** ಆರವಾರ]

**ಆರವಾರ$_2$** 'ಆರುವಾರ' ನೋ.

**ಆರವೆ, ಅರವೆ$_2$, ಆರವೆ$_2$, ಆರಾಮೆ, ಆರುವೆ (ನಾ).** ತೋಟ; ಉದ್ಯಾನವನ; ತೋಪು: "ಆರಾಮಃ, ಉಪವನಂ – ಈ ೨ ಅರವೆ" (ಹಲಾಯು. ೩೫–೫೯); ಪೊಱವೊಱಲೊಳಾರವೆಯೊಳ್ ಕಾಷ್ಠಕೂಟಂ ಸೇದೆಗೆಟ್ಟು ಪುಳ್ಳಿಯ ಪೊಱೆಯನಿಱಿಪಿ ಪಟ್ಟದ್ದೊಡೆ (ವಡ್ಡಾರಾ. ೭೬–೨೪); ಕಲ್ಪಾಂಘ್ರಿಪಪಾರವೆ (ಪಂಪಭಾ. ೧–೨೮); ಬೇವಿನಾರವೆಯನಿಟ್ಟು ಮಾವಿನ ಪಣ್ಣನಱಸುವ ಗಾವಿಲನುಮಂ (ಧರ್ಮಾಮೃ. ೬–೧೬೮); ಆ ಭೂಮಿಗೆ ಬಂದ ತೋಟ ಆರವೆ ಕಂಬಿ ಮನೆ ಸಹಿತವಾಗಿ (ಎಇ. XXVII, ೨೮–೬೨; 1256). **ಅರವೆ$_2$:** ಇನ್ತಿದಱಿದುಱ್ದನ್ ಗರಿಱಿಯನರಮೆಯಂದರನಲಯಂ ಕವಿಲೆಯಂನಱಿದ ಪಞ್ಚಮಹಾಪಾತಕನಕುಂ (ಎಕ. III, ನಂಜನ. ೧೪೯–೯; 1017). **ಆರವೆ$_2$:** ಕೆಱೆ ಆರಮೆ ಸಹಿತ ದೇವಣ್ಣಯ್ಯಂ ಬೆಳ್ವೊಲ ಮೂನೂಱುನಾಡಾಳೆ (ಸೌಇಇ. XI–i, ೧೫–೪; 873); ಇದನಱಿದುಣ್ಡೋನುಂ ಕೊಣ್ಡೋನುಂ ಪಸುವುಂ ಪಾರ್ವರುಂ ಕೆಱೆಯುಂ ಆರಮೆಯುಂ ಬಾರಣಾಸಿಯುಮನಱಿದೊಂ (ಎಕ. III, ಶ್ರೀರಂಗ. ೧೪೭–೧೬; 900); ತಳಿತಾರಮೆಯಿಂ ನೆಱೆ ಪೂತು ಕಾಯ್ತು ಪಣ್ತೆಳಿಗೆ ವಿಳಾಸಮಪ್ಪ ವನದಿಂ (ಸೌಇಇ. IX–i, ೨೯೭–೯; 1177). **ಆರಾಮೆ:** ಕೆಱೆಯಬಮನಾರಾಮೆಯುಮಂ ಕವಿಲೆಯುಮನಱಿದ ಪಾಪಮಕ್ಕು (ಎಇ. XXVII, ೪–೨೦; 906). **ಆರುವೆ:** ಚತುಸೀಮೆಯ ಬೆದಲು ಆರುವೆ (ಎಕ. XII, ಮದ್ದಗಿ. ೩–೨೧; 1313). [< **ಸಂ.** ಆರಾಮ]

**ಆರಾಗ್ರ (ನಾ). ೧.** ಮೋಚಿಯ ಚರ್ಮಕತ್ತರಿಸುವ ಉಳಿಯಂತೆ ಮೊನೆಯುಳ್ಳ ಬಾಣ. **೨.** ಚರ್ಮ ಕತ್ತರಿಸುವ ಉಳಿಯ ಬಾಯಿ, —ಅಲಗು. [**ಸಂ.** (ಆರಾ + ಅಗ್ರ)]

**ಆರಾಘಾತ (ನಾ).** "ಪರಸ್ಪರ ಅಭಿಮುಖಗಳಾಗಿ ಸಮೀಪದಲ್ಲಿ ಪ್ರಹರಿಸೋಣವೇ ಆರಾಘಾತವೆನಿಸುವುದು" (ಸೌಗಂಧಿ. ೨೭೬–೧೨).

[ಆರಾ ? + ಘಾತ]

**ಆರಾಜಿತ (ಗು).** ಸಿಂಗರಿಸಿದ; ಅಲಂಕರಿಸಲ್ಪಟ್ಟ (ಕ). [**ಸಂ.**]

**ಆರಾಜಿತೆ (ನಾ).** ಶೃಂಗರಿಸಲ್ಪಟ್ಟವಳು; ಅಲಂಕೃತಳಾದವಳು: ಚಾರುಪಯೋಧರೆ ಮಹಿಮಾಧಾರೆ . . . ವರಶೃಂಗಾರಾಜಿತೆಯೆನಿಸುವ ಕಾವೇರಿ ಧರಾಕಾಮಧೇನುವೆನಿಪುದು ಪುಸಿಯೇ (ರಾಜಶೇ. ೨–೮):

[**ಸಂ.** ಆರಾಜಿತಾ]

**ಆರಾಜಿಸು (ಕ್ರಿ).** ಪ್ರಕಾಶಿಸು; ರಂಜಿಸು; ಹೊಳೆ: ಸಂಪೂರ್ಣಕಲೆಗಳಿಂದಾರಾಜಿಪಿಂದುವೆನೆ (ಜೈಮಿಭಾ. ೧೩–೪೯).

[ಆರಾಜನ$_0$ + –ಇಸು$_3$]

**ಆರಾಟ$_1$** (ನಾ). ಕೂಗಾಟ; ಕಿರುಚಾಟ: ಮಳೆಗಾಲದ ಆರಾಟ ಹೋರಾಟಗಳೆಲ್ಲ ಮುಗಿದು ಚಳಿಗಾಲದ ನರ್ತನಕ್ಕೆ ನಾಂದಿಯಾಗಿತ್ತು (ವೀರಬಂ. ೬). [ಆರ್$_1$ + ಆಟ]

**ಆರಾಟ$_2$** 'ಆಱಾಟ$_2$' ನೋ.

**ಆರಾಟ$_3$** (ನಾ). ಒಂದು ತೆರಿಗೆ (?) : ಮಗ್ಗದೆಱೆ ಗಾಣದೆಱೆ ಸಮಸ್ತ ಕಿಱುಕುಳ ತೆಱೆಯಾರಾಟ ಚಂಡೇಸ್ವರ ದೇವರ ಸಂನಿಧಾನದಲು . . . ಕೊಟ್ಟರು (ಸೌಇಇ. IX–i, ೩೨೪–೬ ; 1197). [?]

**ಆರಾತಿಯ** (ಗು). = ಆರಾತೀಯ ೧ : ಆರಾತಿಯ [ಪಾಠಾಂ. ರಾದಿಯ] ಕವಿಗಳು ಪೋದ ಬಳಿಕ ನೀನಾರ ಬಳಿಗೆಯ್ದೆ ನನ್ನ ಸಾರಿ ನೋಡೊಮ್ಮೆ ಶಾರದೆ ನಿನ್ನ ಚಿತ್ತಕೆ ಸಾರಸುಖವನೊಲಿದೀವೆ (ಕುರಾಸಾಂ. ೧–೨೪). [ಸಂ. ಆರಾತೀಯ]

**ಆರಾತೀಯ** (ಗು). ೧. ದೂರದ; ಹಿಂದಿನ : ಆರಾತೀಯ ಕವೀಶ್ವರರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂಡಾರದ ಮುದ್ರೆಯನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ (ಗದಾಯು. ೧–೩೮) ; ಜೀವನೋಪಕರಣೋಪಾಯಂಗಳಂ ತೋಱಿಕೊಟ್ಟಾರಾತೀಯ ಮನುಪ್ರಧಾನರನುವಾತ್ತಂ ನಾಭಿ ಕೀಱ್ಮಾಡಿದಂ (ಪಂರಾಮಾ. ೧–೯೧). ೨. ಸಮೀಪದ; ಈಚಿನ. [ಸಂ.]

**ಆರಾತೋಂಟ** (ನಾ). ಹೊಳೆಯ ದಡದ ತೋಟ (?) : ಎಳಬ್ಬೆಯಾ ಕೊಟ್ಟ ಮಣ್ಣು ಮೊಳೆವೆಡೆ ಪದಿಕ್ಕೊರ್ಗಳಂ ಆರಾತೋಣ್ಟದಿಂ ಮೂಡಣ ತೋಣ್ಟಕಣ್ಡಮುಂ (ಎಕ. IV, ಎಳಂದೂ. ೨೫–೭ ; 925 ?). [ಆರ ? + ತೋಂಟ]

**ಆರಾತ್ರಿಕ** (ನಾ). = ಆರತಿ$_1$ : ಭೋಂಕನೆ ದೇವಸ್ತ್ರೀಯರಾರಾತ್ರಿಕಮನುಘೆಯುಘೇಯೆಂದು ತಂದೆತ್ತುತಿರ್ದ್ದರ್ (ಶಮುದ. ೫೩ ಪ್ರಯೋ) ; ಭಕ್ತಜನತತಿಯ ಮಡದಿಯರುಘೇ ಎನುತ್ತಾರಾತ್ರಿಕವ ಪಿಡಿದು ಬೆಳಗಿ (ಸಿದ್ಧೇಪು. ೧೩–೪೦). [ಸಂ.]

**ಆರಾತ್ರಿಕಕ್ರಿಯೆ** (ನಾ). ಆರತಿಯೆತ್ತುವ ಕೆಲಸ; ಆರತಿಯೆತ್ತುವುದು : "ನೀರಾಜಿಸು – ಆರಾತ್ರಿಕಕ್ರಿಯಾಯಾಂ" (ಶಮುಧಾ). [ಆರಾತ್ರಿಕ + ಕ್ರಿಯೆ]

**ಆರಾಧಕ** (ನಾ). ಪೂಜೆಮಾಡುವವನು; ಅರ್ಚಕ : ಮತ್ತಮಾ ವನಂ ಆರಾಧಕನಂತಕ್ಷಮಾಲಾಗಣಿತ ಜಪೋಪೇತಮುಂ (ಚಂದ್ರಪು. ೫–೫೨ ವ) ; ಚರಲಿಂಗ ನಿತ್ಯಾರಾಧಕರು . . . ತಾವು ಪ್ರವರ್ತಿಸಲು (ಬಸಪು. ೬೧–೨). [ಸಂ.]

**ಆರಾಧಕಿ** (ನಾ). ಪೂಜೆಮಾಡುವವಳು; ಅರ್ಚಿಸುವವಳು : ಗೌರೀಪದಾಂಬುಜಾರಾಧಕೀ (ಎಇ. XXVIII, ೫–೪೨ ; 1082). [ಸಂ. ಆರಾಧಕೀ]

**ಆರಾಧನ** (ನಾ). ೧. ಪೂಜೆ; ಉಪಾಸನೆ. ೨. ಸಂತೋಷಪಡಿಸುವುದು; ತೃಪ್ತಿಪಡಿಸುವುದು. ೩. ಸೇವೆ : "ವರಿವಸ್ಯಾ . . . ಆರಾಧನಃ, ಉಪಚಾರಃ – ಈ ೧೧ ಬೆಸಕೆಯ್ವುದರ್ಕೆ ಪೆಸರ್" (ಹಲಾಯು. ೨೧–೧೨೯); "ಆರಾಧನಂ . . . ಉಪಚಾರಂ ಪ್ರಸಾದನಮುಪಾಸ್ತಿ ಪರಿಚರ್ಯಮೆನೆ ಸೇವೆಯಕ್ಕುಂ" (ಮಂಗರಾ. ೮–೨೭). ೪. ಸಾಧನೆ. ೫. ಸಿದ್ಧಿ. [ಸಂ.]

**ಆರಾಧನೆ** (ನಾ). ೧. ಸೇವೆ; ಪೂಜೆ; ಆದರಣೆ : ಅನುನಯಂ ಮಿಗೆ ಜಂಗಮಾರಾಧನೆಗಳಂ ಭಯಭಕ್ತಿಯಲಿ ಮಾಡೆನೆ (ಬಸಪು. ೪೪–೧೪) ; ಸತ್ಯದ ಆರಾಧನೆಯಿಲ್ಲದೆ ಸೌಂದರ್ಯದ ಸವಿಯನ್ನು ಯಾರೂ ಅನುಭವಿಸಲಾರರು (ಶಕ್ತಿವಿ.೧); ದೇವತೆಗಳಿಂದಲೂ ಆರಾಧನೆಮಾಡಿಸಿಕೊಳ್ಳಬಲ್ಲಂಥ ಮನುಷ್ಯ (ಚಿತಂಬಾ. ೫೫). ೨. ಸಂನ್ಯಾಸಿಗಳ ಪುಣ್ಯತಿಥಿಯ ಆಚರಣೆ, —ಸಮಾರಂಭ : ಮುರಗಿಸ್ವಾಮಿಗಳ ಹನ್ನೆರಡನೆಯ ಆರಾಧನೆ (ರೂಢಿ). ೩. [ಜೈನ] ಸಮ್ಯಗ್ದರ್ಶನ, ಸಮ್ಯಜ್ಞಾನ, ಸಮ್ಯಕ್ಚಾರಿತ್ರ, ಸಮ್ಯಕ್ತಪಸ್ಸು ಎಂಬ ನಾಲ್ಕನ್ನು ಸಾಧಿಸುವುದು : ಶ್ರೀಗನ್ತಿಯರ್ . . . ಕಟ್ವಪ್ಪಿನುಳ್ ತೊಱದಾರಾಧನೆ ನೋನ್ತು ತೀರ್ತ್ಥಗಿರಿ ಮೇಲ್ ಸ್ವರ್ಗಾಲಯಕ್ಕೇಱಿದಾರ್ (ಎಕ. II, ೭೬–೨ ; 700) ; ಮಹಾನುಭಾವನಾ ಮಹೋಪಸರ್ಗಮನಶ್ರಮದಿಂ ಸೈರಿಸಿ ಸಮ್ಯಗ್ದರ್ಶನ ಜ್ಞಾನ ಚಾರಿತ್ರ ತಪಸಾಂ ಸ್ವೀಕರಣಮಾರಾಧನಾನಾಮಮೆಂಬ ಚತುರ್ವಿಧಾರಾಧನೆಗಳನಾರಾಧಿಸಿ (ಸುಕುಮಾ. ೧೨–೪೧). [ಸಂ. ಆರಾಧನಾ]

**ಆರಾಧಿಸು** (ಕ್ರಿ). ೧. ಪೂಜಿಸು ; ಮೆಚ್ಚಿಸು ; ಓಲೈಸು : ಮೊಗಮಂ ತಾವರೆ ಕಣ್ಣನುತ್ಪಳದಳಂ ಧಮ್ಮಿಲ್ಲಮಂ ಸೋಗೆ . . . ದಂತಾಳಿಯಂ ಮುತ್ತು ಕೈಮುಗಿದಾರಾಧಿಸಿ ಪೋಲ್ತುವೆನ್ನದೆ ಸರೋಜಾತಾದಿ ನಿಸ್ಸಾರವಸ್ತುಗಳೊಳ್ ಪೋಲಿಸುವಂತುಟೇಂ ಮರುಳನೇ ರೂಪಂ ವಿಚಿತ್ರಾಂಗಿಯಾ (ಆದಿಪು. ೬–೮೫) ; ಕುಲಾಚಾರದಿಂ ನಡೆದು ವರಮುನಿಜನವನಾರಾಧಿಸಿ (ಹಚಕಾ. ೬–೫೨) ; ವರಂಬಡೆವನ್ನಮಾರಾಧಿಸಿದಂ (ಶಮುದ. ೨೪೨ ಪ್ರಯೋ) ; ಭಕ್ತಿಯೊಳೆನ್ನನಾರಾಧಿಸಿ ನಾಲ್ವಗೆ ಮುಕ್ತಿಯ ಪಡೆದವನಲ್ಲ (ಮೋಹತ. ೩೫–೬೧). ೨. ಸಾಧಿಸು : ನಿನ್ನಲ್ಲಿ ಅಷ್ಟು ಅಭಿಮಾನವಿದ್ದರೆ ನೀನು ನಿನ್ನ ಕಲೆಯನ್ನೇ ಆರಾಧಿಸು (ರಂಗರೋ. ೧೦೦). ೩. ಕಾಪಾಡು ; ರಕ್ಷಿಸು : ಈ ದೇಹಮನತಿಪ್ರಯತ್ನದಿನಾರಾಧಿಸುತ್ತಿರ್ಪುದೆಂದು ನುಡಿದು (ಕಾದಂಉ. ೬೦೫). [ಆರಾಧನ + –ಇಸು$_3$]

**ಆರಾಧ್ಯ** (ಗು). ೧. ಪೂಜ್ಯನಾದ ; ಸೇವೆಗೆ ಅರ್ಹನಾದ ; ಓಲೈಸಬೇಕಾದ ; ಸಂತೋಷಪಡಿಸಬೇಕಾದ : ನೀನೆ ಭುವನಕ್ಕಾರಾಧ್ಯನೈ (ಆದಿಪು. ೧೧–೯೮) ; ಭುವನಕ್ಕಾರಾಧ್ಯನೆಂಬೀ ನೆಗಟ್ದ ಬಿರುದಿನಂಕಕ್ಕೆ ತಕ್ಕಂದದಿಂ (ಗದಾಯು. ೨–೩೦). (ನಾ). ೨. ಶೈವರಲ್ಲಿ ಒಂದು ಪಂಗಡ. ☞ ಇವರು ಶಿವದಾರ ಜನಿವಾರ ಎರಡನ್ನೂ ಧರಿಸುತ್ತಾರೆ. [ಸಂ.]

**ಆರಾಧ್ಯೆ** (ನಾ). ಪೂಜ್ಯಳು ; ಸೇವ್ಯಳು : ವಿಶ್ವಾರಾಧ್ಯೆ ಕಾರುಣ್ಯದ ನೆಲೆಮನೆ ಶರ್ವಾಣಿ (ಗಿರಿಕ. ೮–೧೩). [ಸಂ. ಆರಾಧ್ಯಾ]

**ಆರಾನುಂ** (ಅ). ಯಾರಾದರೂ : ಆರಾನುಂ ಬಟ್ಟೆವೋಪರ್ ಬೀಡಂ ಬಿಟ್ಟರ್ದರ್ ನಿಱಿಸುವರ್ (ವಡ್ಡಾರಾ. ೮೯–೪) ; ಇದಕ್ಕಾರಾನುಂ ಪ್ರತಿಬಂಧಕರಾಗಿ ಕಿಡಿಸಿದರಪ್ಪಡೆ (ಕಇಅ. ೩೬–೪೯–೨೦ ; 1134). [ಆರ್$_5$ (< ಆವುದು) + ಆನುಂ]

**ಆರಾಭಾರ** 'ಆರಭಾರ' ನೋ.

**ಆರಾಮ$_1$** (ನಾ). ೧. ಸುಖಕರವಾದುದು ; ರಮ್ಯವಾದುದು : ಪ್ರೋದ್ಯತ್ತರಂಗೋಚ್ಚರದಮರನದೀಶೀಕರೋದಾರತಾರಾರಾಮಂ . . . ಚಂದ್ರಂ . . . ಆನಂದಮಂ ಮಾಡುಗೆಂದುಂ (ಕಾದಂಪೂ. ೧) ; ದಳಿತಾಬ್ಜಪ್ರಸರಂ ಸರಂ ಕುಸುಮಮಾಳಾರಾಮಮಾರಾಮಂ (ಜಗವಿ. ೨–೨). ೨. ಉದ್ಯಾನವನ ; ತೋಟ : "ಆರಾಮಃ, ಉಪವನಃ – ಈ ೨ ಆರವೆ" (ಹಲಾಯು. ೩೫–೫೯) ; ಕುಸುಮಮಾಳಾರಾಮಮಾರಾಮಂ (ಜಗವಿ. ೨–೨). ೩. "ಗೋಣಿ ; ಕಾಡುಗೋಳಿಯ ಸೊಪ್ಪು" (ಔಷಧಿ. ೧೩). [ಸಂ.]

**ಆರಾಮ$_2$**, ಆರಾಮು (ನಾ). ೧. ವಿಶ್ರಾಂತಿ ; ವಿರಾಮ. 'ಆರಾಮ ಕುರ್ಚಿ' ಪರಾ. ೨. ಸ್ವಸ್ಥತೆ; ಆರೋಗ್ಯ : ಆ ದಿವಸವೇ ಜ್ವರ ಬಂದುವು. ನಿನ್ನೆಯಿಂದ ಸ್ವಲ್ಪ ಆರಾಮಾಗಿದ್ದೇನೆ (ಕೊತಕಾ. ೪೬) ; ನಿನ್ನೆ ಸಂಜೆ ತನಕ ಆರಾಮಿದ್ದ (ಗಂಗಾಸಾ. ೪) ; ನನ್ನ ಮೈಯಲ್ಲಿ ಆರಾಮಿಲ್ಲ (ರೂಢಿ). ಆರಾಮು : ೧. ಸ್ವಲ್ಪ ಆರಾಮು ತೆಗೆದುಕೊಳ್ಳಿರಿ (ನಾಪೋಲೀ. ೨೬೪). ೨. ಅನಂತನ ಮೈಯಲ್ಲಿ ಆರಾಮು ಕೂಡ ಇದ್ದಿರಲಿಲ್ಲ (ಜೀದಾನ. ೮೭). [←ಪಾರ. ಹಿಂ. ಮರಾ. ಆರಾಮ್. / ಸಂ. ಆರಾಮ]

**ಆರಾಮುಕುರ್ಚಿ** (ನಾ). ಸುಖವಾಗಿ ಒರಗಿ ಕುಳಿತುಕೊಳ್ಳಬಹುದಾದ ಕುರ್ಚಿ; ಸುಖಾಸನ; ಈಸಿ ಚೇರ್: ಸುಂದರ ರಮಣಿಯೊಬ್ಬಳು ಆಧುನಿಕ ರೀತಿಯಲ್ಲಿ ಅಲಂಕರಿಸಿಕೊಂಡವಳಾಗಿ ಆರಾಮುಕುರ್ಚಿಯೊಂದರಲ್ಲಿ ಮಂಡಿಸಿದ್ದಳು (ಸುಂದರಿ. ೧). [ಆರಾಮು$_2$+ಕುರ್ಚಿ]

**ಆರಾಮಶೀತಲ** (ಗು). ೧. ಉಪವನದಂತೆ ತಂಪಾದ. (ನಾ). ೨. ಕೊಡಸಾಲೆ ಗಿಡ; "ಕೊಡಸಾಲೆ" (ಔಷಧಿ. ೧೩).
[ಆರಾಮು$_1$ + ಶೀತಲ]

**ಆರಾಮು** 'ಆರಾಮ್ಮ$_2$' ನೋ.

**ಆರಾಮೆ** 'ಆರವೆ' ನೋ.

**ಆರಾಲಿಕ**, ಆರಾಳಿಕ (ನಾ). ಅಡಿಗೆಯವನು; ಬಾಣಸಿಗ. **ಆರಾಳಿಕ:** "ಆರಾಳಿಕಃ, ಸೂಪಕಾರಃ, ಸೂದಃ, ವಲ್ಲವಃ – ಈ ೪ ಬಾಣಸಿಗಂ" (ಹಲಾಯು. ೭೧–೨೭೭). [ಸಂ.]

**ಆರಾವ** (ನಾ). ಧ್ವನಿ; ಶಬ್ದ: ಲಯಕ್ಷುಭಿತ ಜಲನಿಧಿ ನಿನಾದಮನಭಿನಯಿಸಿದುದೊಗೆದು ನೆಗೆದ ಸಮರಾರಾವಂ (ಪಂಪಭಾ. ೧೧–೩೪); ಭಾಪುಹರಿದೇವ ಮಧುರಾರಾವ ಭಾಪು (ಪದ್ಮರಾ. ೫–೧೯). [ಸಂ.]

**ಆರಾಳಿಕ** 'ಆರಾಲಿಕ' ನೋ.

**ಆರಾಳು** (ನಾ). (?): ಆನೇ ಮೇಲ್ಬರುವಾ ಅರಸಾನಾ ನೋಡೀರಿ ಆರಾಳಿಗಿಂತಾ ಚಲುವಾನಾ (ಹುಟ್ಟಿಹ. ೧೫೦). [?]

**ಆರಿ** 'ಆಲಿ$_1$' ನೋ.

**ಆರಿಂದ**, ಆರಿದ (ನಾ). ಒಂದು ಕುಲದ ಹೆಸರು: ಇನ್ತು ನೆಗರ್ತ್ತೆಗೆ ನೆಲೆಯಾದೆಜುವಗ್ಗಾರ್ವುಣ್ಣುಗಳೊಳಗಾರಿಂದರ ಕುಲಕ್ಕೆ ತಿಲಕನೆನಿಸಿ (ಕಇ. I, ೨೪–೩೩; 1148). **ಆರಿದ:** ವಾ೯ಇಲೆಯ ಗಾಮನಾರಿದರ ಪೊಲೆಯಮ್ಮ ಗಾಮಿಗರವರಿಂ ಬಟಿಕವರ ಮಗನ್ ರಾಜಪುಲಿ ಕುಲಮುದ್ದನ್ (ಎಕ. VIII, ಸೊರಬ. ೯–೨; 800 ?). [< ಸಂ. ಹಾರೀತ]

**ಆರಿಕಲ್ಲು** 'ಅಲಿಕಲ್' ನೋ.

**ಆರಿಕೆ** (ನಾ). ಜೈನಸಂನ್ಯಾಸಿನಿ; ಕಂತಿ: ಪೃಥಿವೀತಿಳಕೆ ಸುಮತಿಯೆಂಬಾರಿಕೆಯ ಸಾರೆ ದೀಕ್ಷೆಗೊಂಡು ಪೋಗೆಯುಂ (ಶಾಂತೀಶ್ವ. ೧೨–೧೧೭ ವ); ನಾರಿಯರನು ನಂಬಿ ಹರಣದಾಶೆಯ ಬಿಟ್ಟಾರಿಕೆಯೊಡಮೆಯ ಕದ್ದು ನಾರಕಗತಿಗೆಯ್ದಬೇಡ (ನೇಮಿಸಂ. ೧೪–೭೦); ನಿರುಪಮಮಪ್ಪ ಪ್ರಸಂಗದೊಳಿರ್ದಳಾ ತರುಣಿಯಾರಿಕೆಯರ ಕೂಡೆ (ಚಂಪ್ರಸಾಂ. ೨೪–೨೪).
[< ಸಂ. ಆರ್ಯಿಕಾ]

**ಆರಿಗೊಳಿಸು** (ಕ್ರಿ). ಸಾಲಾಗಿ ಇರುವಂತೆ ಮಾಡು; ಸಾಲಾಗಿರಿಸು (?): ತಳರ್ವ ತರಳಲೋಚನೆಯ ಪಾದಪಲ್ಲವದ ಕೆಂಪಿನ ಸೊಂಪು ಪೂಗತರುನಿಕರದ ಸಾಲ್ಗಳೆಡೆಯೆಡೆಯೊಳ್ ಬಯಲ್ದಾವರೆಯ ಬನಮಂ ಪಡೆಯೆಯುಂ ನಖಮಯೂಖಪ್ರಭಾಪ್ರಸರಂ ನಾಳಿಕೇರಮಾಳಿಕಾ ಮಾರ್ಗದೊಳ್ ತಾವರೆಗಳನಾರಿಗೊಳಿಸೆಯುಂ (ಅಸಂಪು. ೭–೧೧ ವ).
[ಅರಿ$_0$ (< ಅಲಿ$_4$) + ಕೊಳ್$_1$ + –ಇಸು$_3$]

**ಆರಿದ** 'ಆರಿಂದ' ನೋ.

**ಆರಿದಗೋತ್ರಜ** (ನಾ). ಹಾರೀತಗೋತ್ರದವನು: ಸಾಸಿರ್ವರುಂ ಅಜುನೂರ್ವರುಂ ಸಹಿತಂ ತಮ್ಮ ಪ್ರಸಾದಪರನಪ್ಪೊನ್ಗೆ ಆರಿದಗೋತ್ರಜನ್ಗೆ ಸಿಂಗಿತಲೆ ಫಣ್ಣಾರನ್ಗೆ ಕಾಸಂಪಳ್ಳಿಯಾ ಸಮಭಾಗಮಾನ್ . . . ಕೊಟ್ಟರ್ (ಎಇ. XXI, ೨೯–೭; 8ನೆಯ ಶತ). [ಆರಿದ (< ಆರಿಂದ) + ಗೋತ್ರಜ]

**ಆರಿದಾಳ್ಕೆ** (ನಾ). ಒಂದು ನಾಡಿನ ಹೆಸರು: ಮುದುಕೊಜ್ಜುಣೆಯದಿಯರೆಸರ್ ಆರಿದಾಳ್ಕೆ ಎಟ್ಪಿತ್ತುಮಾಂ ತಭ್ಭೂಮಿ ವ್ರಿತ್ತಿಯಾಳುತ್ತಮಿಪ್ಪು (ಎಕ. IV, ಹೆಗ್ಗಡ. ೪–೧೭; 750). [?]

**ಆರಿದ್ರ** 'ಆರಿದ್ರೆ' ನೋ.

**ಆರಿದ್ರಪುಳು** (ನಾ). ಆರಿದ್ರೆಮಳೆಯಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುವ ಒಂದು ಬಗೆಯ ಹುಳು. [ಆರಿದ್ರ (< ಆರಿದ್ರೆ) + ಪುಳು (< ಪುೞು)]

**ಆರಿದ್ರೆ**, ಆದ್ರೆ$_1$, ಆರಿದ್ರ, ಆರ್ತಿ$_1$ (ನಾ). ೧. ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಆರನೆಯದು. ೨. ಆರಿದ್ರ ನಕ್ಷತ್ರದ ಹೆಸರಿನ ಮಳೆ: ಆರಿದ್ರೆ ಮಳೆ ಗುಡುಗಿದರೆ ಆರು ಮಳೆ ಬರುವುದಿಲ್ಲ (ಗಾದೆ); ಆರಿದ್ರೆ ಬಂದರೆ ದಾರಿದ್ರ್ಯವಿಲ್ಲ (ಗಾದೆ); ಆರಿದ್ರೆ ಮಳೆಗೆ ಆದಷ್ಟು ಬಿತ್ತು (ಗಾದೆ). **ಆದ್ರೆ$_1$:** ೧. ಪುನರ್ವಸುವಶ್ವಿನಿಯಾದ್ರೆ ವರುಣಮೆಂಬಿವಱೊಳ್ ತಾನ ಸುರೇಜ್ಯಂ ನಿಲೆ ತಾಂ ಮಾಡಿಸುವುದು ತದ್ದಿನದೊಳಖಿಳ ದೇವಾಲಯಮಂ (ಲೋಕೋಪ. ೩–೫). **ಆರಿದ್ರ:** ೨. ಆದರೆ ಆರಿದ್ರ ಇಲ್ಲದಿದ್ದರೆ ದರಿದ್ರ (ಗಾದೆ). **ಆರ್ತಿ$_1$:** ೨. ಆ[ಆ]ರ್ತಿಯ ಪೂರ್ವತ್ರಯದೊಳ್ ಹತ್ತಿಯುಮಂ ಶತವಿಶಾಖೆಯೊಳ್ (ನೀನೆಂದುಂ) ಬಿತ್ತುಗೆ ಫಲವಂ ಬೆಳಸಂ ಆ[ಆ]ರ್ತಿಯೊಳಂ ಬಿತ್ತುಯೆಲೆಯ(ನು) ಉತ್ತರೆಯೊಳಗಂ (ಅಟ್ಟಮ. ೯–೧೦). [< ಸಂ. ಆರ್ದ್ರಾ]

**ಆರಿನಿಪಟ್ಟಿ** (ನಾ). ಪ್ರತಿ ರೈತನೂ ಹೊಂದಿರುವ ನೇಗಿಲುಗಳ ಲೆಕ್ಕವನ್ನು ತಿಳಿಸುವ ಪಟ್ಟಿ (ಕಿಸಂಗ್ಲಾ. ೧೪೦). [ಆರಿನಿ ? + ಪಟ್ಟಿ]

**ಆರಿಪುರ** (ನಾ). ಒಂದು ಊರಿನ ಹೆಸರು: ಅನ್ತೆ ಬನ್ದು ತಾಯೂರ ಇಗ್ಗಲಿಯ ಆರಿಪುರ ಮೂಜೂರ ಸನ್ನಿಧಿನಲ್ಲಿ (ಎಕ. III, ನಂಜನ. ೧೩೯–೧೯; 915).
[ಆರಿ ? + ಪುರ$_1$]

**ಆರಿಯ**, ಆರ್ಯ, ಆರೆಯ (ನಾ). ೧. ಆರ್ಯ; ಯೋಗ್ಯ (ಕಬ್ಬಕ್ಕೈ. ೭೮ ಕಿ). ೨. ಒಂದು ಜಾತಿ ಅಥವಾ ಕುಲದ ಹೆಸರು: ಪಟ್ಟವಾಲರುಗಳಿಗೆ ಗ ೩ ಆರಿಯರು ತೆರುವ ಗ ೮ (ಎಕ. XV, ಬೇಲೂರು. ೨೯೮–೭೩; 1278); ಸಿಂಘಣದೇವಂ ರಾಜ್ಯಂಗೆಯ್ಯುತ್ತಿರಲಾತನ ಸರ್ವ್ವಾಧಿಕಾರಿ ಆರಿಯ ಮಲಿಸೆಟ್ಟಿ (ಮೈಆರಿ. ೧೯೨೮, ೬೯–೮; 1330); ಆರಿಯದ ದಳವಾಯ ಕೊಚರಸನು ಎತ್ತಿಬಂದು ಎಣಿಕಲನು ಇಱಿದು (ಎಕ. XII, ಪಾವುಗ. ೪೮–೧; ?). ೩. (ಕರ್ನಾಟಕದಲ್ಲಿರುವ) ಮರಾಠಾ ಜನಾಂಗ: ಲಾಳರಾವುತರಾರಿಯ ರಾವುತರು ಕೈಮೇಳದ ಕನ್ನೋಜಿಗಳು (ಕುರಾಸಾಂ. ೧೧–೨೪); "ಆರ್ಯರು ಹಟ್ಟಕಾರರ ಹೆಣ್ಣನ್ನು ಮದುವೆಯಾದುದರಿಂದಾಗಲೀ ಹಟ್ಟಕಾರರು ಆರ್ಯರ ಕನ್ಯೆಯನ್ನು ಕೈಹಿಡಿಯುವುದರಿಂದಾಗಲೀ ಹುಟ್ಟಿದ ಸಂತತಿಯಿಂದಲೇ ಮುಂದೆ ಆರಿಯರೆಂಬ ಜನವು ನಿರ್ಮಾಣವಾಯಿತು" (ಕಂನಾಡ ಕತೆ) (ತುಳುನಾ. ೪೭). **ಆರ್ಯ$_5$:** ೩. ಒಂದು ಕಡೆಯೊಳ್ ಮೊರಸರೊಂದೆಡೆಯೊಳಾರೆಯರ ಬೃಂದಮಳವಿಂ ಸಂದಣಿಸಿ ಕಾಳಗಕೆ ಮುಂದುವರಿವನ್ನಂ (ಅಪ್ರತಿ. ೧–೨೧); ಆರೆಯರ ಮೂಲಮುಮನಾ ರಾಮರಾಜನಂ ಪಿಡಿಯಲ್ಕೆದಿದ ತುರುಷ್ಕರ ಮೂಲಮುಮಂ . . . ಬಿತ್ತರಿಪೆಂ (ಕೆಳನೃ. ೯–೧೮ ವ). **ಆರೆಯ ೩.** (ಕಿ).
[ಪ್ರಾ. ಆರಿಯ < ಸಂ. ಆರ್ಯ. / ತೆಲು. ಮರಾ. ಆರೆ]

**ಆರಿಯಬಳಿ** (ನಾ). ವೈಶ್ಯವಂಶ (?): ಹರವರಿಯ ಗಡಿಯಿಂದಂ ಮೂಡಲು ... ಆರಿಯಬಳಿಯರ ಗಡಿಯಿಂದಂ ಪಡುವಲು ತೆಂಕಲು ಗೊಜರಡೆಯ ಬಳಿಯ ದೇವರು ಸೆಟಿಯ ಗಡಿಯಿಂ ಆರಿಯ ಬಳಿಯವರ ಗಡಿಯಿಂ (ಸೌಇಇ. IX–ii, ೪೨೪–೧೫; 1401). [ಆರಿಯ + ಬಳ್ಳಿ$_2$ (< ಬೞಿ$_3$)]

**ಅರಿಸು$_1$** (ಕ್ರಿ). ೧. ಆಯು; (ಒಳ್ಳೆಯದನ್ನು) ಬೇರ್ಪಡಿಸು: ಅದನ್ನು ಬಿಡಿಸಿ ತಂದು ಅರಿಸಿ ಕಾಳು ಬೇರೆ ಮಾಡುತ್ತಾರೆ (ಮುಂಬಯಿ. ೪–೨೭). ೨. ಶೇಖರಿಸು; ಸಂಗ್ರಹಿಸು; ಹುಡುಕಿ ತೆಗೆ: "ವರಿಷು – ಅರಿಸಿ ಮದುವೆಯಾಗು" (ಗಂಗಾಮ. ೨೮೨); ಅಡುಗೆಯ ಮನೆಯ ಸಲಕರಣೆಗಳನ್ನು ಅರಿಸುವಾಗ ಕೆಳಗಿನ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳುವುದು ಒಳ್ಳೆಯದು (ಅಡುಸೌ. ೩೨). ೩. (ಮತದಾನದಿಂದ) ಚುನಾಯಿಸು: ಅವರನ್ನು ವಿಧಾನಸಭೆಗೆ ಅರಿಸಿದ್ದಾರೆ (ರೂಢಿ). [ಆರ್ ? + –ಇಸು$_3$]

**ಆರಿಸು$_2$** 'ಆಱಿಸು' ನೋ.

**ಆರು$_1$** 'ಆರ್$_1$' ನೋ.

**ಆರು$_2$** 'ಆರ್$_2$' ನೋ.

**ಆರು$_3$** 'ಆಱ್' ನೋ.

**ಆರು$_4$** 'ಆಱು$_2$' ನೋ.

**ಆರು$_5$** 'ಆರ್$_4$' ನೋ.

**ಆರು$_6$** 'ಆಱು$_3$' ನೋ.

**ಆರು$_7$** (ನಾ). ೧. ಹಂದಿ. ೨. ನಳ್ಳಿ; ಏಡಿ. ೩. ಪಾತ್ರೆ; ಗಡಿಗೆ. [ಸಂ.]

**ಆರು$_8$** 'ಆವುದು' ಪರಾ.

**ಆರುಕಟ್ಟು** (ಕ್ರಿ). ಉಳುವುದಕ್ಕಾಗಿ ನೇಗಿಲಿಗೆ ಎತ್ತುಗಳನ್ನು ಹೂಡು; ಬೇಸಾಯಕ್ಕೆ ತೊಡಗು: ಪದ್ಧತಿಯಂತೆ ಪಕ್ಕದಲ್ಲಿದ್ದ ಸೋಮೇಶ್ವರಹೊಲದಲ್ಲೇ ನೇಗಿಲು ಹೂಡಿ ಆರುಕಟ್ಟಿ ವರಸೆ ವರಸೆಯಾಗಿ ನಿಂತರು (ಹುಟ್ಟಿಹ. ೬೧). [ಆರು$_5$ (< ಆರ್$_4$) + ಕಟ್ಟು$_1$]

**ಆರುಕಾರು, ಆರುಕೋರು** (ನಾ). ನೇಗಿಲು ಮತ್ತು ಅದಕ್ಕೆ ಸಂಬಂಧಪಟ್ಟ ಸಲಕರಣೆ (ಸ್ಯಾಂಡರ್). **ಆರುಕೋರು** (ಕಿಸಂಗ್ಲಾ. ೮). [ಆರು$_5$ (< ಆರ್$_4$) + ಕಾರು$_4$ (< ಕಾಱು$_3$)]

**ಆರುಕೆಲಸ** 'ಆರುಗೆಲಸ' ನೋ.

**ಆರುಕೋರು** 'ಆರುಕಾರು' ನೋ.

**ಆರುಗಾಲ** (ನಾ). ಆರು ಋತುಗಳು: ಆರುಗಾಲ ಮಳೆ ಹೊಯ್ದರೂ ಮುತ್ತುಗಕ್ಕೆ ಮೂರೇ ಎಲೆ (ಗಾದೆ). [ಆರು$_6$ (< ಆಱು$_3$) + ಕಾಲ$_1$]

**ಆರುಗೆಲಸ**, ಆರುಕೆಲಸ (ನಾ). ವ್ಯವಸಾಯದ ಕೆಲಸ; ಉಳುಮೆ; ಆರಂಬ: ರೈತರಿಗೆ ಸಂಕ್ರಾಂತಿ ವೇಳೆಗೆ ಸಾಮಾನ್ಯವಾಗಿ ಆರುಗೆಲಸ ಮುಗಿಯುತ್ತದೆ (ರೂಢಿ). **ಆರುಕೆಲಸ**: ಆ ದಿನ ಹೊತ್ತಾರೆ (ಬೆಳಿಗ್ಗೆ) ನಾವು ಆರುಕೆಲಸ (ಬೇಸಾಯ) ಮಾಡೋದಿಲ್ಲ (ಬೈಸರ್ವೆ. ೧೦೮). [ಆರು$_5$ (< ಆರ್$_4$) + ಕೆಲಸ]

**ಆರುಗೋಲು** (ನಾ). "ತೆಪ್ಪ ನಡೆಸುವ ಹುಟ್ಟು" (ನಾಪದ. ಕೋಶ); ಹಾಕೋಕೊಂದಾರುಗೋಲು ನೂಕೋಕೊಂದೂರುಗೋಲು ಬೊಬ್ಬೆ ಹೊಡೆದವೆ ಬಾಳೆಮೀನು (ನಾಪದ. ೧೮). [ಆರು ? + ಕೋಲು$_1$ (< ಕೋಲ್$_1$)]

**ಆರುಪಾರು** 'ಆರಪಾರ' ನೋ.

**ಆರುಬಟಿ** 'ಆರ್ಭಟಿ' ನೋ.

**ಆರುಬಟೆ** 'ಆರ್ಭಟೆ' ನೋ.

**ಆರುಭಟಿ** 'ಆರ್ಭಟೆ' ನೋ.

**ಆರುಭಟೆ** 'ಆರ್ಭಟೆ' ನೋ.

**ಆರುಮೊಗ** 'ಆರ್ಮೊಗ' ನೋ.

**ಆರುವನ್** (ನಾ). ನೇಗಿಲ ಮೇಲೆ ಹಾಕುವ ತೆರಿಗೆ (?): ಕುಂತುರ ಗ್ರಾಮದ ಚತುಸ್ಸೀಮೆವೊಳಗುಳ ಗದೆ ಬೆಜ್ಜಲು ತೋಟ ತುಡಿಕೆ ಕಾಲುವಳಿ ಆರುವನ್ ಮೇಲುವನ್ ಮಗ್ಗ ಮನೆವಣ ಕಾಣಿಕೆ ಬೇಡಿಗೆ... ಸುಂಕ ಮೊದಲಾದ ಸರ್ವ್ವಸ್ವಾಮ್ಯ (ಸೌಇಇ. IX–ii, ೬೦೧–೯; 1512). [ಆರು$_5$ (< ಆರ್$_4$) + ಪೊನ್ ?]

**ಆರುವಾರ**, ಆರವಾರ$_2$ (ನಾ). ಸಾಲಕ್ಕಾಗಿ ಮನೆ, ಜಮೀನು ಮುಂತಾದ ಆಸ್ತಿಯನ್ನು ಭೋಗ್ಯ ಹಾಕುವುದು; ಭೋಗ್ಯ: ಬಡ್ಡಿ ವಾಸಿ ಹೊಂನು ಭತ್ತವನು ಕಾಲಕಾಲಕೆ ನಡೆಸತೀರದೆ ಯಿರಲಾಗಿ ಆರುವಾರವ ಬಿಟ್ಟು ಮುಂದೆ ನಡಸುವಂತಾಗಿ (ಸೌಇಇ. IX–ii, ೪೬೦–೧೩; 1465); ನರಸಸೆಟ್ಟಿಯ ತಂಮನ ಮಗ ಗೋವಿಂದಸೆಟ್ಟಿ ಆರುವಾರವ ಮಾಡಿಕೊಂಡ ಗೆದೆಯಿಂದ ಬಹ (ಕಇ. III–i, ೭–೨೫; 1527); ಆರುವಾರದ ಬಾಳುಗಳ ಅರ್ಧ ಬಂದರೆ ಪಡುವ ಕೇರಿಯ ಹಲರು ಸೆಟ್ಟಿಕಾಜರೂ ತೆಗೆದುಕೊಂಡು (ಸೌಇಇ. IX–ii, ೬೩೨–೨೫; 1548). **ಆರುವಾರ$_2$** (ಕ). 'ಅರುವಾರ' ಪರಾ. [← ತುಳು. ಆರವಾರ]

**ಆರುವಾರಿ** (ನಾ). ಜಮೀನನ್ನು ಭೋಗ್ಯ ಅಥವಾ ಆಧಾರ ಮಾಡಿಕೊಂಡಿರುವವನು: ಹೊಂನ ಕೊಟ್ಟು ಆರುವಾರವ ಬರಸಿ... ಆ ಆರುವಾರಿಗಳ ಬ್ಳಾಳಿಸುವರು ನಿವೆ ಕರ್ತ್ತರಲ್ಲದ ಆ ಆರುವಾರಿಗಳ (ಸೌಇಎ. ೧೯೨೯, ಕಾರ್ಕಳ್. ೪೮೨–೧೮; 1391). [ಆರುವಾರ + –ಇ$_2$]

**ಆರುವೆ** 'ಆರವೆ' ನೋ.

**ಆರುಷಣ** (ನಾ). ಕೊತ್ತಂಬರಿ ಬೀಜ; ಧನಿಯಾ: "ಧಾನ್ಯಕವದಾರುಷಣಮೆನಲು ಕೊತ್ತೊಂಬರಿ" (ಮಂಗರಾ. ೪೧–೩೫). [ಸಂ.]

**ಆರುಷ್ಕರ** (ಗು). ಗೇರಿನ; ಗೇರುಬೀಜದ. 'ಆರುಷ್ಕರದ್ರವ' ಪರಾ. [ಸಂ.]

**ಆರುಷ್ಕರದ್ರವ** (ನಾ). ಗೇರುಬೀಜದ ಸಾರ; ಗೇರೆಣ್ಣೆ: ಆಕ್ರಂದತ್ಸ್ವರಪರಿಗತರ್ ಸೈರಿಸಲಾಱದೆ ತಡತಡಿಸಿ ಪರಿತಂದತಿದ್ರುತಪ್ರವಾಹದಿನಾರುಷ್ಕರದ್ರವಾವರ್ತಗರ್ತಗಂಭೀರೆಯಂ... ಭಯಂಕರೆಯಂ... ವೈತರಣಿಯಂ ಪೊಕ್ಕಾಗಳ್ (ಆದಿಪು. ೫–೮೭ ವ). [ಆರುಷ್ಕರ + ದ್ರವ]

**ಆರುಹ** (ನಾ). ಗಟ್ಟಿಯಾಗಿ ಕೂಗಿಕೊಳ್ಳುವುದು; ಕಿರುಚುವುದು (ಕ). 'ಬಾಯಾರುಹ' ಪರಾ. [ಆರು$_1$ (< ಆರ್$_1$) + –ಹ$_2$]

**ಆರುಹತ** (ನಾ). ೧. ಜೈನಮತ: ಆರುಹತಮಂ ಬಿಟ್ಟು ಶೈವಧರ್ಮವನೆ ದೃಢದಿಂ ಪಡೆದು (ರೇವಣ. ೪–೧೬). ೨. ಜೈನಮತದವನು; ಜೈನ: ಆರುಹತಂ ಜಿನೇಂದ್ರನಂತಿರ್ದ ಮಹಾನುಭಾವಂ (ಶಮುದ. ೨೪ ಪ್ರಯೋ); ಪ್ರಾಕಟವಿದಂ ಮುನ್ನವಱಿಯಾ ವ್ಯಾಕುಲದ ನಿನ್ನಾರುಹತರಂ ಭೀಕರದೊಳಪಹರಿಸಿದೆಮ್ಮಾದ್ಯರ ಮಹಿಮೆಗಳನು (ಬಸವು. ೪೯–೨೫). [< ಸಂ. ಆರ್ಹತ]

**ಆರೂಢ** (ಗು). ೧. ಏರಿದ; ಹತ್ತಿದ. ೨. ಹೊಂದಿದ; ಪಡೆದ: ಆರೂಢ ನಿಜಮನೋಹಂಕಾರೋತ್ಕರ್ಷಪ್ರಕಾಶಮೂರ್ಜಿತ ಸದಳಂಕಾರಂ (ಕವಿರಾ. ೩–೧೯೮); ಆರೂಢಯೌವನೆಯುಂ ಅಂತರ್ನಿಗೂಢಶೋಕೋದ್ರೇಕೆಯುಮಾಗಿರ್ದ ನಿಜತನೂಜೆಗೆ ಬಱಿಯನಟ್ಟಿದಾಗಳ್ (ಆದಿಪು. ೩–೪೬ ವ); ಇಂದ್ರಂ... ಐರಾವತಾರೂಢಂ ಲೋಕಪಾಲಪುರಸ್ಸರಂ ಮಹಾಯುದ್ಧಂಗೆಯ್ವುದುಂ (ಪಂರಾವಮ. ೧೦–೧೩೫ ವ). ೩. ಕೈಕೊಂಡ. 'ಆರೂಢತಪ', 'ಆರೂಢಪ್ರತಿಜ್ಞ' ಪರಾ. (ನಾ). ೪. [ತತ್ತ್ವಶಾ] ತತ್ತ್ವಜ್ಞಾನಿ; ಜೀವನ್ಮುಕ್ತ: "ವಿಶ್ವ ವಿಕೃತಿ ತೋಱದೆ ಸಾತ್ವ[ಪಾಠಾಂ. ಅತ್ಮ]ಜ್ಞಾನದಿಂ ಸದ್ಯೋಮುಕ್ತನಪ್ಪಾತನೇ ಆರೂಢನಪ್ಪಂ" (ವಿವೇಕ. ೧೬); ಆರೂಢನಾದ ಮತ್ತೆ ಈ ರೂಢಿಯ ಅವತಾರವ ಹೊಱಲೇಕೆ (ಮೋಳಿಮಾ. ೧೭–೬೬); ಅತೀತಜ್ಞಾನಿ ಆರೂಢ; ಆರೂಢನನಾರೂ ಅಱಿಯಬಾರದಯ್ಯ (ಅವಚಂ. ೮೧–೩೬೩). ೫. [ಜ್ಯೋತಿ] ವಿಶಿಷ್ಟಕ್ರಮದಿಂದ ಆರೋಪಿತವಾದ ಅಥವಾ ಕಲ್ಪಿತವಾದ ಲಗ್ನ: ಪಾದಚ್ಛಾಯೆಯನಿಟ್ಟು ಜೋಯಿಸದಭಿಪ್ರಾಯಂಗಳಿಂ ಹೋರೆಯಿಂದೋದಿ ಪೃಚ್ಛಕಲಗ್ನದಿಂ ಸರುತದಿಂದಾರೂಢದಿಂ ನೋಡಿದಾಬೋಧಂ ನಚ್ಚಿನ ನಮ್ಮ ಜೋಯಿಸಿಗಂ (ಸುಕುಮಾ. ೩–೨೦). ೬. ಕುದುರೆ, ಆನೆ ಮುಂತಾದ ವಾಹನಗಳನ್ನು ವಶಕ್ಕೆ ತಂದುಕೊಂಡು ಸವಾರಿ ಮಾಡುವ ಕ್ರಮ. 'ಆರೂಢಸರ್ವಜ್ಞ' ಪರಾ. [ಸಂ.]

**ಆರೂಢಕೋಪ** (ನಾ). ಕೋಪಹತ್ತಿದವನು; ರೇಗಿದವನು: ಆರೂಢಕೋಪನುಂ ಪ್ರತಿಜ್ಞಾರೂಢನುಮಾಗಿ (ಗದಾಯು. ೨–೧ ವ). [ಆರೂಢ + ಕೋಪ]

**ಆರೂಢತಪ** (ಗು). **೧.** ತಪಸ್ಸಿನ ನೆಲೆಯನ್ನು ಏರಿದ; ತಪಸ್ಸನ್ನು ಕೈಕೊಂಡ. **೨.** ಮಾಘಮಾಸವನ್ನು ಹಿಡಿದ. **೧, ೨:** ಅಜಿತಸೇನ ಮಹಾರಾಜಂ . . . ಸಾಯಂತನ ತರಣಿಯಂತೆ ಪರಿಹೃತಾಂಬರನುಂ . . . ಶಿಶಿರಸಮಯದಂತಾರೂಢತಪನುಮಾಗಲೊಡಂ (ಚಂದ್ರಪು. ೯–೪೧ ವ).
[**ಸಂ.** ಆರೂಢತಪಸ್]

**ಆರೂಢಪಥ** (ನಾ). ಜೀವನ್ಮುಕ್ತನ ದಾರಿ ; ತತ್ತ್ವಜ್ಞಾನಿಯ ಬಾಳಿನ ಕ್ರಮ: ಹಿರಿಯ ಯೋಗವೆ ವಿರತಿಪಥ ಆರೂಢಮಾರ್ಗವದು . . . ಅದು ಸುಲಭವಲ್ಲಾರೂಢಪಥವೆಂದಾ (ಜ್ಞಾನಸಿಂ ೨೩–೩).
[ಆರೂಢ + ಪಥ]

**ಆರೂಢಪದವಿ** (ನಾ). ಮುಟ್ಟಿದ ನೆಲೆ, —ಸ್ಥಿತಿ : ಕುಲಮದ ಛಲಮದ ವಿದ್ಯಾಮದದವರ ತೋಱದಿರಾ ಅವರ ಆರೂಢಪದವಿಯನೆನಗೆ ತೋಱದಿರಾ (ಅವಚಂ. ೧೦೨–೪೬೪). [ಆರೂಢ + ಪದವಿ]

**ಆರೂಢಪ್ರತಿಜ್ಞ** (ನಾ). ಶಪಥವನ್ನು ಕೈಕೊಂಡವನು : ಆರೂಢಪ್ರತಿಜ್ಞನಾಗಿ ನಾಗಪುರಕ್ಕೆ ವಂದು (ಪಂಪಭಾ. ೨–೫೦ ವ).
[**ಸಂ.** (ಆರೂಢ + ಪ್ರತಿಜ್ಞಾ + –ಅ$_7$)]

**ಆರೂಢಯೋಗಿ** (ನಾ). ಸಿದ್ಧಿಯನ್ನು ಪಡೆದ ಯೋಗಿ; ಸಿದ್ಧ ; ಜೀವನ್ಮುಕ್ತ: ಅರು ಹರಿಗುಣನಾಮಕಥನದ ಸಾರಸುಧೆಗೆಜಗದ ವಿರಕ್ತರದಾರು ಪರಮಾರೂಢಯೋಗಿಗಳಿದನು ಸೇವಿಸಲು (ನಿಭಾಗ. ೨–೧–೧೪). [**ಸಂ.** ಆರೂಢಯೋಗಿನ್]

**ಆರೂಢವಿದ್ಯೆ** (ನಾ). ಕುದುರೆ, ಆನೆ ಮೊದಲಾದ ವಾಹನಗಳನ್ನು ವಶಕ್ಕೆ ತಂದುಕೊಂಡು ಸವಾರಿಮಾಡುವ ವಿದ್ಯೆ, —ಜ್ಞಾನ: ಅನೇಕಪಂ ಭವದೀಯ ನಗರಿಯಂ ಪುಗುತಂದುದುಮಂ ದೇವರಾರೂಢವಿದ್ಯಾಪ್ರಭಾವದಿಂ ಕಂಭಕ್ಕೆ ತಂದುದುಮನಱಿದೆಂ (ಚಂದ್ರಪು. ೯–೧೦೨ ವ). [ಆರೂಢ + ವಿದ್ಯೆ]

**ಆರೂಢಸರ್ವಜ್ಞ** (ನಾ). ಕುದುರೆ, ಆನೆ ಮೊದಲಾದ ವಾಹನಗಳನ್ನು ವಶಕ್ಕೆ ತೆಗೆದುಕೊಂಡು ಸವಾರಿಮಾಡುವ ವಿದ್ಯೆಯಲ್ಲಿ ನಿಷ್ಣಾತನಾದವನು, —ಬುದ್ಧಿವಂತ ; ಒಂದು ಬಿರುದು : ಪಾಂಬರಂಕುಶನಮ್ಮನಗನ್ಧವಾರಣಂ ಗನ್ಧೇಭವಿದ್ಯಾಧರನಾರೂಢಸರ್ವಜ್ಞನುದಾತ್ತನಾರಾ[ಯ]ಣಂ . . . ಶ್ರೀಮದರಿಕೇಸರಿಯರಸರ್ (ಕಇಅ. ೨೪–೮–೭೫; 9ನೆಯಶತ) ; ಆರೂಢಸರ್ವಜ್ಞನಂ ವೈರಿನರೇಂದ್ರೋದ್ದಾಮದರ್ಪೋದ್ದಳನನನೆ ಕಥಾನಾಯಕಂ ಮಾಡಿ (ಪಂಪಭಾ. ೧–೫೧).
[ಆರೂಢ + ಸರ್ವಜ್ಞ]

**ಆರೂಢಸ್ಥಲ** (ನಾ). [ವೀಶೈ] ಜೀವನ್ಮುಕ್ತನ ಸ್ಥಿತಿ; ಸಿದ್ಧನ ಸ್ಥಾನ : ಅಜಗಣ್ಣನ ಐಕ್ಯಸ್ಥಲ ನಿಜಗುಣನ ಆರೂಢಸ್ಥಲ . . . ಇಂತಿವರ ಕರುಣಪ್ರಸಾದವೆನಗಾಯಿತ್ತು (ಮಹಾದೇ. ೭೮–೧೯೭). [ಆರೂಢ + ಸ್ಥಲ]

**ಆರೂಢಿದೋಱು** (ಕ್ರಿ). ವಿನಯವನ್ನು ತೋರು ; ಸೌಜನ್ಯವನ್ನು ಪ್ರಕಟಿಸು (?) : ನಾರಿಯರೆಲ್ಲರು ಸಿಂಧುದೇವಿಗೆ ಸರಸಾರೂಢಿದೋಱಿ ಮೌಕ್ತಿಕದ ಹಾರ ಮಾಣಿಕ್ಯದುಂಗುರ ಮೊದಲಾದುಪಚಾರವಸ್ತುವ ಕೊಟ್ಟರೊಸೆದು (ಭರಚ. ೩೫–೯೩). [ಆರೂಢಿ + ತೋಱು$_1$]

**ಆರೂಢೆ** (ನಾ). **೧.** ಏರಿದವಳು ; ಹತ್ತಿದವಳು : ಮತ್ತೊರ್ವಳತಿಗರ್ವಪರ್ವತಾರೂಢೆ (ಸುಕುಮಾ. ೧೧–೧೬ ವ). **೨.** ಸಿದ್ಧಿಯನ್ನು ಪಡೆದವಳು. [**ಸಂ.** ಆರೂಢಾ]

**ಆರೆ$_1$** ‘ಪಾರೆ$_1$’ ನೋ.

**ಆರೆ$_2$** (ನಾ). ದನಕರು, ಕುದುರೆ ಮುಂತಾದ ಪ್ರಾಣಿಗಳ ಗೊರಸಿನ ಹಿಂಭಾಗದಲ್ಲಿ ಬೆರಳಿನಂತೆ ಬೆಳೆದು ಕಾಣುವ ಭಾಗ; ಕಿರುಗೊರಸು; ಬೆಟ್ಟಗೊಳಗು; ಕೋೞಿಯ ಕಾಲಿನ ಹಿಂಭಾಗದ ಕೊಕ್ಕೆ: ಕೊರ್ಚೆಗಳಾರೆ ಕೋೞಿಯಾರೆವೊಲಿರೆ . . . ವಾಜಿ ಚಿರಾಯು ನಿಶ್ಚಯಂ (ಲೋಕೋಪ. ೧೧–೭೫) ; ಕಿಱುಗೊಳಗಿನ ಆರೆಗಳ್ ಕೂಂದಲ್ ಸಹಿತಮಾಗಿ ಕೋೞಿಯ ಅ[ಆ]ರೆಯ ಮರ್ಯಾದೆಯಲ್ಲಿ ಮೊನೆಯಾಗಿ ಇರುಹ (ಲೋಕೋಪ. ೧೧–೭೫ ಟೀಕೆ) ; ವಿಸರುಹದಂತೆ ಕೇಸರಮನಾಂತುದು ಮೆಯ್ಗಲಿಯಂತಿರಾರೆ ಕೂರ್ಪಸೆದುದು . . . ಪುಂಜನಗ್ಗದ ಸುವಸ್ತುವಿನಂತಿರೆ ತಳ್ತು ಹೇಂಟಿಯೊಳ್ (ಯಶೋಚ. ೩–೭೮).
[**ದೇ.**‖ **ತಮಿ.** ಆರ್ = ಚೂಪು ; **ಮಲ.** ಆರ್ = ಬಿದುರಿನ ಚೂಪಾದ ಕುಡಿ]

**ಆರೆ$_3$** (ನಾ). **೧.** ಚರ್ಮವನ್ನು ಕತ್ತರಿಸುವ (ಮೋಚಿಯ) ಉಳಿ. **೨.** ಸಣ್ಣ ಚೂರಿ; ಕಠಾರಿ. **೩.** ಅಂಕುಶ. ‘ಆರೆಕಾಱ’ ಪರಾ. **೪.** ಕೋೞಿ ಕಾಳಗದಲ್ಲಿ ಕೋೞಿಗಳ ಕಾಲುಗಳಿಗೆ ಕಟ್ಟುವ ಸಣ್ಣ ಕತ್ತಿ : ಗಱಿಯ ಫಕಫಕರವಂ ಬಾಯಱಿಚುವ ಕೆಕೆಕೆಂಬ ನಾದವಾರಿ[ರೆ]ಗಳೋರಂತುಱಿತಾಗಲ್ಪೆಱಕೆನುತುಮೆ ಬಿಱುದನಿಗೆಯ್ಯಲ್ಕೆ ನೆಗೆದು ತಾಗಿದುವಾಗಳ್ (ಶಾಂಶೀಶ್ವ. ೧೨–೧೧೫) ; ಮಸೆಮಸೆದಾರೆಗಳಂ ಕ[ಕು]ಡಿಯಿಸಿ ನೀರಂ ಕಿವಿಯ ಗಱಿಯ ಮಡೆಯಂ ಪೆಱಸಾರಿಸಿ ಬಿಡೆ ಕೋೞಿಗಳೆರಡುಂ . . . ಕಾದುತ್ತಿರೆಯುಂ (ಶಾಂಶೀಶ್ವ. ೧೨–೧೧೬). [**ಸಂ.** ಆರಾ]

**ಆರೆ$_4$** (ನಾ). **೧.** ಗಾಡಿಯ ಚಕ್ರದಲ್ಲಿರುವ ಮರದ ಕಾಲು, —ಕಡ್ಡಿ. **೨.** [ಗಣಿತ] ತ್ರಿಜ್ಯ : ವಕ್ರರೇಖೆಯ ಗುಣವನ್ನೂ, ಅದರ ಎರಡು ತ್ರಿಜ್ಯ ಅಥವಾ ಆರೆಗಳ (radii vectors) ನಡುವೆ ಇರುವ ಕ್ಷೇತ್ರಫಲವನ್ನೂ ಆರ್ಕಿಮಿಡೀಸನು ಕಂಡುಹಿಡಿದನು (ಗಣಿಚ. ೩೮). [**ಸಂ.** ಅರ]

**ಆರೆ$_5$** ‘ಆರಿಯ’ ನೋ.

**ಆರೆಕಾರ** (ನಾ). ಮರಾಠೆಯವನು (?).
[ಆರೆ$_5$ (< ಆರಿಯ) + –ಕಾರ (< –ಕಾಱ)]

**ಆರೆಕಾಱ, ಆರೆಗಾಱ** (ನಾ). ಆನೆಯನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವಾಗ ಮಗ್ಗುಲಲ್ಲಿ ಆರೆಯನ್ನು ಹಿಡಿದು ನಿಂತಿರುವ ಕಾವಲುಗಾರ; “ಕಾರ್ಯದಲ್ಲಿ ಸಮರ್ಥ, ಭಟಶ್ರೇಷ್ಠ, ಪರಿಕಾರ, ಕಾವಭಟ, ಅಂಗರಕ್ಷಕ” (ಪ್ರಭಣ್ಣ) : ನಡೆದೆಳ್ತಂದತ್ತು ಕಣ್ಗಿಂ ಪುಱಿ ಮೊಗವಡದಾಟೋಪಮಂ ಬೀಱಿ ಪಕ್ಕಂಬಿಡಿದಳ್ಕುತ್ತಾರೆಕಾಱರ್ ಬರೆ ಭರವಶದಿಂ ಮೇಗಣಾರೋಹಕರ್ ಬಾಯ್ವಿಡೆ (ಜಗವಿ. ೧೫–೭೯) ; ಪಟ್ಟದಾನೆ . . . ಆಳವಿಗೆ ಬಂದಾರೆಕಾಱರನರೆದು ಸಣ್ಣಿಸುತಂ (ಬಾಹುರ. ೧೮೧–೩) ; ಮಾವಂತರಂ ಮುಱಿದಿಕ್ಕುತುಂ ಅ[ಪಾಠಾಂ. ಹಾ]ರೆಕಾಱರನರೆದು ಸಣ್ಣಿಸುತ್ತುಂ (ನಂಬಿರ. ೨–೨೩) ; ಬೊಬ್ಬೆಗುಡುವಾರೆಕಾಱರ ಘುಳುಘುಳಿಸುವ ವೀರವೃಂದದ (ಗಿರಿಕ. ೬–೫೫ ವ) ; ಪಾರೈಸುವಾರೆಕಾಱರ ನೆರವಿಗಳಂ ಕೈಸನ್ನೆಯಿಂ ನಿವಾರಿಸುತ್ತುಂ (ಅನಂಪು. ೨–೨೯ ವ) ; ಮನ್ನಣೆಯ ಮಾವಂತರುಮನಾರೆಕಾಱರುಮಂ ಮಿಱಿ . . . ಗಿಱ್ನೆಯ್ದುವ ಸೊರ್ಕಾನೆಗಳ (ಕಬ್ಬಿಕಾ. ೪೪) ; ಕಟ್ಟುಪಂಜರದಿಂ ಪೊಱಮಟ್ಟು ಬರುತ್ತಬ್ಬರಿಸುವಾರೆಕಾಱರ ಬೊಬ್ಬೆಗಳಿಗೆ ಬೆಬ್ಬಳಂ ಪೊಗದೆ (ಪುಣ್ಯಾಸ್ರ. ೨–೭ ವ) ; ಆರೆಕಾಱರ ಚಿಗುಳಿದುಳಿದು ನರಸಿಂಗಮೊನೆಯರ ಪಟ್ಟದ ಭದ್ರದಂತಿ (ಸೌಂದಪು. ೩–೧೩) ; ನಿಟ್ಟೋಟದಿಂ ಬೀದಿವರಿದಾರೆಕಾಱರನರೆಯಟ್ಟಿ (ರಾಜಶೇ. ೬–೧೧ ವ) ; (ಚಂದ್ರಪು. ೯–೧೦೨ ; ಇಱಿರ. ೧೧೨–೩ ; ವೃಷವಿ. ೨–೬೦ ವ ನೋ). **ಆರೆಗಾಱ** : ಗುಳ ಬಿಗಿದ ಱಿಂಚೆಯ ಮೊಗವರಿಗೆ ಕದಳಿಕೆಯ ಗಳೆನಿಂದ ಸಬಳಿಗರು ಜೋಘ ಸಂಕುಳ ಹೀಲಿದಳೆಸುತ್ತಿದಾರೆಗಾಱ [ಪಾಠಾಂ. ಕಾರಿಕಾರ]ರು ವೀರಡಾಡೆಗಳುವೆರಸಿ ನಿಂದವು ಕರಿಗಳು (ಸೋಮಚ. ೫–೩೦) ; ಬಱಿಗಾಲೊಳಗಿರಲಾರೆಗಾಱರು ಕಂಡುಱುಬಿ ತಡೆಯಲಂತವರ (ಚಂಪ್ರಸಾಂ. ೨೦–೫೩).
[ಆರೆ$_3$ + –ಕಾಱ]

**ಆರೆಗಟ್ಟಿಗೆ** (ನಾ). ೧. ಚೂಪಾದ ಆಯುಧವನ್ನು ತುದಿಗೆ ಅಳವಡಿಸಿದ ಕೋಲು ; ಈಟಿ; ಭಲ್ಲೆಯ : ಆರೆಗಟ್ಟಿಗೆ ಮೊಳೆವಣಿ ಕೂರಂಕುಶ ಸೇರಿ ಬಾಜಿಸುವ ಡೌಡೆಗಳ ಕೂರಾನೆಗಳನೇಱಿ ಮಾವಟಿಗರು ಬಂದರಾರ ಭಟೆಯ ವೃತ್ತಿಯಿಂದ (ಕುರಾಸಾಂ. ೧೧-೨೬); ಆರೆ[ಪಾಠಾಂ.ರ]ಗಟ್ಟಿಗೆಗಳ ನಡುವೆ ಸಿಕ್ಕಿದ ಮದವಾರಣದಂತೆ ರಣದೊಳು (ಕುರಾಸಾಂ. ೪೩-೯೭). ೨. ಹಾರೆಕೋಲು. [ಆರೆ$_1$ (< ಪಾರೆ$_1$) + ಕಟ್ಟಿಗೆ]

**ಆರೆಗಾಱ** 'ಆರೆಕಾಱ' ನೋ.

**ಆರೆಗೊಂಬು** (ನಾ). = ಆರೆಗಟ್ಟಿಗೆ ೧ : ಕೋರಕಮೆರಡೆಸೆದೀ ಸಹಕಾರದ ಸೆಳೆಗೊಂಬು ಮಾನಿನೀಮಾನಸ್ತಂಬೇರಮುಮನಳಱಿಪಂಗಜವೀರನ ಪಿಡಿವಾರೆಗೊಂಬೆನಲ್ ಸೊಗಯಿಸುಗುಂ (ಮಲ್ಲಿಪು. ೬-೨೯).

[ಆರೆ$_1$ (< ಪಾರೆ$_1$) + ಕೊಂಬು$_1$]

**ಆರೆಗೋಲು** (ನಾ). ಮುಳ್ಳು, ಕುರುಚಲು ಗಿಡಗಳನ್ನು ಸೌದೆಗಾಗಿ ಬಳಸಲು ಚುಚ್ಚಿಕೊಂಡು ಹೊತ್ತು ತರುವ ಕವಲುಗೋಲು (ದಕ). [ಆರೆ$_1$ (< ಪಾರೆ$_1$) + ಕೋಲು$_1$ (< ಕೋಲ್$_1$)]

**ಆರೆಣ್ಣೆ** (ನಾ). ಕಾಯಿಸಿ ಆರಿಸಿದ ಎಣ್ಣೆ (?) : "ರಾಜ್ಯಪಾಳೋರ ಮಗನಿಗೆ ಆರೆಣ್ಣೆ ತೂರೆಣ್ಣೆ ಅರ‍್ಮಾನದ ಒಳ್ಳೆಣ್ಣೆ ಪಟ್ಣಪಾಳುವರ ಮಗನೀಗೆ ಹತ್ತೆಣ್ಣೆ ಒತ್ತೆಣ್ಣೆ ಹತ್ತುಮಾನದ ಹರಳೆಣ್ಣೆ – ಹರಳೆಣ್ಣೆ ತಂಪು – ನಿಸ್ತ್ರೀರ ಕೈಯ ಉಗುರೆಣ್ಣೆ" ಒತ್ತುತ್ತಾರೆ (ಹಳ್ಳಿಬಾ. ೭೬).

[ಆರು$_4$ + (< ಆಱು$_2$)+ ಎಣ್ಣೆ]

**ಆರೆಯ** 'ಆರಿಯ' ನೋ.

**ಆರೈ** 'ಆರಯ್' ನೋ.

**ಆರೈಕೆ** 'ಆರಯ್ಕೆ' ನೋ.

**ಆರೈಕೆಗೊಳ್** (ಕ್ರಿ). ವಿಚಾರಿಸಿಕೊ; ಮೇಲ್ವಿಚಾರಣೆ ಮಾಡು : ವಿಜಯಾರ್ಧಧಾರಿಣೀಧರದಿದಿರಿನೊಳು ಆರೈಕೆಗೊಂಡು ದುಮಾನವ ಹೊಯ್ಸಿದನಾ ರಾಜಸಿಂಹನುಬ್ಬಿನೊಳು (ಭರಚ. ೨೮-೮೬).

[ಆರೈಕೆ (< ಆರಯ್ಕೆ) + ಕೊಳ್$_1$]

**ಆರೈಸು$_1$** 'ಆರೋಗಿಸು' ನೋ.

**ಆರೈಸು$_2$** 'ಆರಯಿಸು' ನೋ.

**ಆರೊಗಿಸು** 'ಆರೋಗಿಸು' ನೋ.

**ಆರೋಗಣ** 'ಆರೋಗಣೆ' ನೋ.

**ಆರೋಗಣಂಗೆಯ್** 'ಆರೋಗಣೆಗೆಯ್' ನೋ.

**ಆರೋಗಣೆ, ಆರೋಗಣ** (ನಾ). ಊಟ; ಭೋಜನ : ಜ್ಞಾನಾಮೃತ ರಸದಲ್ಲಿ ಓಗರವ ಮಾಡಿ ಆರೋಗಣೆಯ ಮಾಡಿದೆನು (ಅವಚಂ. ೧೨೫-೫೭೦); ಲಿಂಗವಾರೋಗಣೆಯ ಮಾಡಿ ಮಿಕ್ಕುದು ಪ್ರಸಾದವೆ (ದೇದಾವ. ೫೦-೯೯) ; ಅಗ್ಘವಣಿ ಹೂಗಳಂ ಬೇಗಂ ತಂದಂತಂತೆ ಪೂಜೆಗೆಯ್ದಾರೋಗಣೆಗಿತ್ತು (ಬಸರ. ೪-೪೨) ; ಹೆಣನ ಹೋಳಿನ ಸಿಡಿದಡಗು ಡೊಂಕಣೆಯೊಳೆಸೆದುವು ಕಾಲನಾರೋಗಣೆಗೆಮಿಗೆ ಪಡಿಸಣವ ನೋಡದೆ ಮಾಣವೆಂಬಂತೆ (ಕುವ್ಯಾಭೀ. ೪-೪೪) ; ಮನೆಯೊಳು ತೀವಿದ ದಿವ್ಯವಸ್ತುಗಳ ದೇವರಾರೋಗಣೆಗೆಂದೆಲ್ಲವ ಭಕ್ತಿ ಭಾವದಿ ಪರಿಶೋಧಿಪುದು (ಹದಿಬ. ೮-೧೪). **ಆರೋಗಣ** : 'ಆರೋಗಣಂಗೆಯ್' ಪರಾ.

[?. / ತೆಲು. ಆರೋಗಿಣ. / ಪ್ರಾ. ಆರೋಗ್ಗ ;
ಹಿಂ. ಆರೋಗನಾ ; ಮರಾ. ಆರೋಗಣೇ ;
ಗುಜ. ಆರೋಗ್ವು]

**ಆರೋಗಣೆಗೆಯ್, ಆರೋಗಣಂಗೆಯ್** (ಕ್ರಿ). ಊಟಮಾಡು : ನಿಮ್ಮಡಿಗಳೆನ್ನ ಮೇಲಣ ಕಾರುಣ್ಯದಿಂ ಮದೀಯ ಗೃಹದೊಳಿಂದಾರೋಗಣೆಗೆಯ್ವುದೆಂದು ಬಿನ್ನಪಂಗೆಯ್ಯೆ (ವೃಷವಿ. ೧೪-೩೨ ವ). **ಆರೋಗಣಂಗೆಯ್** : ನೀವೀಯೋಗರವು ಶಾಕಂಗಳಾಜದ ಮುನ್ನ . . . ಆರೋಗಣಂಗೆಯ್ದಿಮ್ಮುವಂ ಪೊರೆ (ಬಸಪು. ೨೩-೩೪).

[ಆರೋಗಣೆ + ಗೆಯ್ (< ಕೆಯ್$_1$)]

**ಆರೋಗಿಸು, ಆರೈಸು$_1$, ಆರೊಗಿಸು** (ಕ್ರಿ). ಊಟಮಾಡು ; ತಿನ್ನು ; ಸೇವಿಸು : ವೇಳಾತಿಕ್ರಮಮಾದಪುದಾರೋಗಿಸಲ್ಕೇಱಿಮೆಂದು ನುಡಿದೊಡೆ (ವಡ್ಡಾರಾ. ೪೬-೨೨) ; ದಿವ್ಯಾಹಾರಂಗಳನಾರೋಗಿಸಿ ಕೆಯ್ಗಟ್ಟಿಕೊಂಡು ತಂಬುಲಂಗೊಂಡು (ಪಂಪಭಾ. ೫-೬೭ ವ) ; ಜಠರಾಗ್ನಿನಂದದಂದದಿನರ್ಥಾಹಾರಮನಾರೋಗಿಸುವಾಚಾರದಿಂ (ಸುಕುಮಾ. ೪-೫) ; ಬೀಗಿ ಬೆಳೆದು ನಭಕಡದೊರ್ಡೆ ದೇವರ್ಕಳಾರೋಗಿಪ ಸವಿಗಾಣರ್ ಪೋಗಿ ಮಾಡುವುದೇನೆನುತ ಲಜ್ಜಿಸಿ ತಲೆವಾಗಿದಂತಿಹುದು ರಾಜಾನ್ನ (ಮೋಹತ. ೨-೪೧). **ಆರೈಸು$_1$** : ಬಸವರಾಜಂ ನಲಿದು ಪುಷ್ಪಾಂಜಲಿಯನೀಯೆ . . . ಆರೈಸಲಿಕ್ಕುತ್ತುಘೇಚಾಂಗು ಬೊಲ್ಲೆಂದು ಮಾರಾರಿಯಂ ಶಂಭುವಂ ಬಣ್ಣಿಸುತ್ತಂದು ತಮ ತಮಗೆ ನೇಮದಿಂದರ್ಪಿಸಲ್ ತೊಡಗಿದರು (ಬಸರ. ೭-೧೨೧) ; ಹಾಲುಂಡೆ ಮೃದುವಾದವೆಲೆ ಲಿಂಗ ಕೊಳ್ಳೆಂದು ಹಾಲನಾರೈಸುಮತ್ತಾವುದುಂ ಬೇಡೆಂದು (ಬಸರ. ೭-೧೨೬). **ಆರೊಗಿಸು** : ಅಟ್ಟುತ್ತುಂ ಪಸಾಯಂಗಳಂ ಕೆಲಕೆಲ್ಲಂ ಭರತೇಶನಾರೊಗಿಸಿದಂ ಕಲ್ಯಾಣಕಾಹಾರಮಂ (ಆದಿಪು. ೧೧-೨೭) ; ಆರೊಗಿಸಿದಂ, ಆರೋಗಿಸಿದಂ (ಶಮದ. ೧೧೮ ಪ್ರಯೋ). [ಆರೋಗಣೆ + –ಇಸು$_3$. / ತೆಲು. ಆರಗಿಂಚು]

**ಆರೋಗ್ಯ** (ನಾ). ೧. ರೋಗವಿಲ್ಲದಿರುವುದು ; ಸ್ವಸ್ಥತೆ; ಸೌಖ್ಯ : ಆಯುರಾರೋಗ್ಯಯುತಸಂಪದಜೇಯವೃದ್ಧಿಯನು . . . ಶ್ರೀಯುಮೇಶ ಕೊಡುತಿರಲು (ಬಸಪು. ೬೧-೮೧). [ಸಂ.]

**ಆರೋಗ್ಯಕರ** (ಗು). ಆರೋಗ್ಯವನ್ನು ಕೊಡುವ : ಆರೋಗ್ಯಕರವಾದ ಬದುಕು ಸಾಗಿಸಲು ನಾವು ಈ ಜೀವಿಗಳಿಂದ ಸುರಕ್ಷಿತವಾಗಿರುವುದು ಅವಶ್ಯ (ಅಡುಸಾ. ೪೮). [ಸಂ.]

**ಆರೋಗ್ಯಕಾರಕ** (ಗು). = ಆರೋಗ್ಯಕರ : ಎಂಟು ತಾಸು ನಿದ್ದೆ ಮಾಡುವುದು ಎಲ್ಲರಿಗೂ ಆರೋಗ್ಯಕಾರಕವದೆ (ಮುಂಬಯಿ. ೪-೧೩೧). [ಸಂ.]

**ಆರೋಗ್ಯಕೇಂದ್ರ** (ನಾ). ಜನತೆಯ ಆರೋಗ್ಯವನ್ನು ನೋಡಿಕೊಳ್ಳುವ ಒಂದು ಸಂಸ್ಥೆ. [ಆರೋಗ್ಯ + ಕೇಂದ್ರ]

**ಆರೋಗ್ಯಗೃಹ** (ನಾ). ೧. ಔಷಧಿ ಅಂಗಡಿ. ೨. ಔಷಧಶಾಲೆ; ಆಸ್ಪತ್ರೆ : "ಭೇಷಜನಿವಾಸನೆನಲು ಆರೋಗ್ಯಗೃಹಮುಕ್ಕು" (ಮಂಗರಾ. ೫೯-೧೦). [ಆರೋಗ್ಯ + ಗೃಹ]

**ಆರೋಗ್ಯಗೊಳಿಸು** (ಕ್ರಿ). ಸ್ವಸ್ಥತೆಯನ್ನು ಉಂಟುಮಾಡು ; ಆರೋಗ್ಯವನ್ನು ಉಂಟುಮಾಡು ; ಆರೋಗ್ಯವನ್ನು ಒದಗಿಸು : ಶರೀರವನ್ನು ಆರೋಗ್ಯಗೊಳಿಸುವುದಕ್ಕೆ ಅದು ಅವಶ್ಯಕವದೆ (ಮುಂಬಯಿ. ೪-೧೨೯). [ಆರೋಗ್ಯ + ಕೊಳ್$_1$ + –ಇಸು$_3$]

**ಆರೋಗ್ಯಚಕ್ರ** (ನಾ). [ಮಂತ್ರಶಾ] ಆರೋಗ್ಯವನ್ನು ಬಯಸುವವರು ನಿತ್ಯವೂ ಪೂಜಿಸಿ ಧರಿಸುವ ಒಂದು ಬಗೆಯ ರೇಖಾಯಂತ್ರ, —ತಾಯಿತಿ : ಆರೋಗ್ಯಚಕ್ರಮೆಂದೀಯಂತ್ರದ ಹೆಸರು. ಈ ಯಂತ್ರಮಂ ಪ್ರತಿದಿನಂ ಆರಾಧಿಸುವುದು (ಪ್ರತಿಷ್ಠಾ. ೧೦-೪೭).

[ಆರೋಗ್ಯ + ಚಕ್ರ]

**ಆರೋಗ್ಯಧಾಮ** (ನಾ). ಆರೋಗ್ಯವನ್ನು ಪಡೆಯುವುದಕ್ಕೆ ಹಿತವಾದ ಸ್ಥಳ: ಆರೋಗ್ಯಧಾಮದಲ್ಲಿ ಅವರ ಚಿಕಿತ್ಸೆ ನಡೆಯುತ್ತಿದ್ದಾಗ (ಕ್ರಾಂತಿಕ. ೨೪೩). [ಆರೋಗ್ಯ + ಧಾಮ]

**ಆರೋಗ್ಯಭಾಗ್ಯ** (ನಾ). ಆರೋಗ್ಯದ ಸಂಪತ್ತು ; ರೋಗವಿಲ್ಲದಿರುವ ಭಾಗ್ಯ : ಭಗವಂತನು ತಮಗೆ ಆರೋಗ್ಯಭಾಗ್ಯವನ್ನು ಕರುಣಿಸಲಿ ಎಂದು ಪ್ರಾರ್ಥಿಸುತ್ತೇವೆ (ರೂಢಿ). [ಆರೋಗ್ಯ + ಭಾಗ್ಯ]

**ಆರೋಗ್ಯಮಣಿ** (ನಾ). ಅಭಿಷೇಕಮಾಡಿ, ಆ ತೀರ್ಥವನ್ನು ಸೇವಿಸುವುದರಿಂದ ರೋಗವನ್ನು ಪರಿಹಾರಮಾಡುವ ಒಂದು ಮಣಿ: ಅಭಿಷೇಕಗೊಳಿಸಿದ ತೀರ್ಥಸೇವನದಿಂ ರೋಗನಿವರ್ತಕಮಪ್ಪ ಆರೋಗ್ಯಮಣಿ (ವಿವೇಕ. ೨೧೦). [ಆರೋಗ್ಯ + ಮಣ್ಣಿ]

**ಆರೋಗ್ಯಸ್ಥಾನ** (ನಾ). = ಆರೋಗ್ಯಧಾಮ. [ಆರೋಗ್ಯ + ಸ್ಥಾನ]

**ಆರೋಚಕ** (ಗು). ಅರುಚಿಯನ್ನು ಹೋಗಲಾಡಿಸಿ ನಾಲಗೆಗೆ ರುಚಿಯನ್ನು ಹುಟ್ಟಿಸುವ. [ಸಂ.]

**ಆರೋಪ** (ನಾ). ೧. (ಒಂದು ವಸ್ತುವಿನಲ್ಲಿ ಇಲ್ಲದ ಗುಣವನ್ನು) ಹೊರಿಸಿ ಹೇಳುವುದು: ಪಾಪಪುಣ್ಯಂಗಳಾರೋಪಕ್ಕೆ ಗುರಿಯಾಗದಾ ಪರಬ್ರಹ್ಮ (ಅನುಸಾ. ೮-೪-೧೨). ೨. ತಪ್ಪು ಹೊರಿಸುವುದು: ಇದೇನು ಇಲ್ಲದುದನ್ನೂ ಆರೋಪಮಾಡುವರು? (ಶಾಕುಂತ. ೬೭-೩); ಪೋಲೀಸರ ಮೇಲೆ ಆರೋಪಮಾಡಲು ಬರುತ್ತಾನೆ (ನಾಪೋಲೀ. ೧೪೩). ೩. ಸಂಘರ್ಷಣ; ಆಕ್ರಮಣ: ನೀರುಗುಳ್ಳೆಯು ಬರಿಯ ನೀರಿನಿಂದಲೂ ಆಗಿರುವದಿಲ್ಲ; ಬರಿಯ ಗಾಳಿಯಿಂದಲೂ ಆಗಿರುವದಿಲ್ಲ; ನೀರು ಗಾಳಿಗಳಿಂದ ಪರಸ್ಪರಗಳ ಮೇಲೆ ಆಗುವ ಆರೋಪದಿಂದ ಅಂದರೆ ಸಂಘರ್ಷಣದಿಂದ ಆಗುವದು (ಭಾವ್ಯಮೃತ. ೪೦೦). [ಸಂ.]

**ಆರೋಪಣ** (ನಾ). ೧. ಮೇಲೆ ಹೊರಿಸುವುದು, —ಏರಿಸುವುದು. ೨. ತಪ್ಪುಹೊರಿಸುವುದು; ಆಪಾದನೆ. 'ಆರೋಪಣಂಗೆಯ್' ಪರಾ. ೩. ಬಿಲ್ಲಿಗೆ ಹೆದೆಯನ್ನು ಏರಿಸುವುದು. [ಸಂ.]

**ಆರೋಪಣಂಗೆಯ್** (ಕ್ರಿ). ೧. (ಅಕ್ಷತೆ ಮುಂತಾದುವನ್ನು) ಮೇಲೆ ಹಾಕು: ಮಡೆವಂಗಂ ಮಡೆವಳ್ಗಮಾದ್ರಾಕ್ಷತಾರೋಪಣಂಗೆಯ್ದರ್ (ಶಾಂತಿಪು. ೬-೧೮ ವ). ೨. ಆಪಾದಿಸು; ತಪ್ಪುಹೊರಿಸು: ಕ್ರೋಧಮೂರ್ಛಿತನಾಗುತಾರೋಪಣಂಗೆಯ್ವೆ ನೀಂ ಭ್ರಾತೃವತ್ಸಲ ಭರತನಿಗೆ ದುರಭಿಸಂಧಿಯಂ (ಶ್ರೀರಾಮಾ. ೧೫೫-೧೮೬).
[ಆರೋಪಣ + ಗೆಯ್ (< ಕೆಯ್$_1$)]

**ಆರೋಪಣೆ** (ನಾ). = ಆರೋಪಣ ೨: ನನ್ನಮೇಲೆ ಇಲ್ಲದ ಆರೋಪಣೆ ಮಾಡಬೇಡ (ರೂಢಿ). [ಸಂ. ಆರೋಪಣ]

**ಆರೋಪಿ** (ನಾ). ತಪ್ಪುಹೊರಿಸಲ್ಪಟ್ಟವನು; ಅಪವಾದಕ್ಕೆ ಗುರಿಯಾದವನು: ಆರೋಪಿಗಳೆನಿಸಿದ ಇಬ್ಬರು ತಲೆಮರೆಸಿಕೊಂಡಿದ್ದರು (ಆತ್ಮಾರ್ಪ. ೪೧). [ಸಂ. ಆರೋಪಿನ್]

**ಆರೋಪಿತ** (ಗು). ೧. ಏರಿಸಿದ. ೨. ಹೆದೆಯೇರಿಸಿದ: ಆರೋಪಿತಚಾಪಂ ಸಂಧಾರಿತ ಕವಚಂ ಧೃತೋಗ್ರಶರಧಿಯುಗಂ (ಪಂಪಭಾ. ೮-೧೨). (ನಾ). ೩. ಏರಿಸಿದ್ದು; ಹೊರಿಸಿದ್ದು: "ಆಹಿತಂ . . . ಆರೋಪಿತಂ – ಈ ೪ ಏಱಿಸಲ್ಪಟ್ಟುದು" (ಹಲಾಯು. ೧೨೩-೬೨); ಈವುದು ಕರ್ಣಂಗೆ ಸಹಜಮಾರೋಪಿತಮೇ (ಶಮದ. ೨೨೫ ಪ್ರಯೋ). ೪. [ತತ್ತ್ವಶಾ] ಒಂದನ್ನು ಮತ್ತೊಂದನ್ನಾಗಿ ತಿಳಿದಾಗ ಆ ಮತ್ತೊಂದಾಗಿ ತಿಳಿದ ವಸ್ತು: ಕಪ್ಪೆಯ ಚಿಪ್ಪನ್ನು ಬೆಳ್ಳಿಯೆಂದು ತಿಳಿಯುವಂತೆ, ಯಾವುದನ್ನು ತಪ್ಪಾಗಿ ಗ್ರಹಿಸುವೆವೋ ಅದು ಅಧಿಷ್ಠಾನವೆನಿಸುವುದು ಯಾವುದೆಂದು ಗ್ರಹಿಸುವೆವೊ ಅದು ಆರೋಪಿತ ಅಥವಾ ಅಧ್ಯಸ್ತ (ಬ್ರಹ್ಮಭಾ. ೨-೧೪). ೫. = ಆರೋಪಿ. (Accused. ಪತ್ರಿಸಿ ೨). [ಸಂ.]

**ಆರೋಪಿಸು** (ಕ್ರಿ). ಆಪಾದಿಸು; ಇಲ್ಲದ್ದನ್ನು ಹೊರಿಸು: ಇದ್ದ ಗುಣವನು ಬಿಟ್ಟು ಇಲ್ಲದಾರೋಪಿಸುವ ಗದ್ದಲವ ಮಾಡಿ ಪೊಗಳುವ ಕುನ್ನಿ ತಾ ಸದ್ದಿಲ್ಲದುರಗ (ನೀತಿಚಿಂ. XI, ೨೪); ದುರ್ಗುಣಿಗಳು ಪ್ರತಿಯೊಂದಕ್ಕೂ ದುರ್ಗುಣವನ್ನೇ ಆರೋಪಿಸುವರು (ಮಸಕೂ. ೨೩).
[ಆರೋಪಣ + -ಇಸು$_1$]

**ಆರೋಮಿ** (ನಾ). ಚಮರೀಮೃಗ: "ಆರೋಮಿ ಗೋಕರ್ಣಮೆನಲು ಚಮರಿಯಮೃಗಂ" (ಮಂಗರಾ. ೪೯-೧೧). [?]

**ಆರೋಹ** (ನಾ). ೧. ಹತ್ತುವುದು; ಏರುವುದು. ೨. ಸವಾರ. ೩. ಎತ್ತರ. ೪. ಉದ್ದ: "ಆರೋಹಃ, ಸಮುಚ್ಛ್ರಯಃ – ಈ ೨ ಮರದ ಉದ್ದಂ" (ಹಲಾಯು. ೩೦-೨೭). ೫. (ಹೆಂಗಸರ) ಸೊಂಟ, —ನಡು: "ಆರೋಹಃ, ನಿತಂಬಃ, ಕಟೀ – ಈ ೩ ಕಟಿ" (ಹಲಾಯು. ೮೪-೩೫೮). ೬. ನಿತಂಬ ಪ್ರದೇಶ; ಕುಂಡೆ; ಪಿರ್ರೆ. [ಸಂ.]

**ಆರೋಹಕ** (ನಾ). ಸವಾರ: ಆ ಪಂಡಿತಂ . . . ತುರಗಾರೋಹಕನಂತಾರೂಢಕ್ರಮಮಜಱಿದು (ಸುಕುಮಾ. ೩-೬ ವ); ಅದನೇನೆಂಬೆಂ ಗುಣವ್ರಾತಮನೆ ಪಳಿಯುತುಂ ವಿದ್ಯೆಯಂ ಖಂಡಿಸುತ್ತುಂ . . . ಕಾಯ್ದುಪುದೆನ್ನೀಮದಮಾತಂಗಂ ಮಹಾರೋಹಕ ನಿಜಚರಣಸ್ತಂಭದೊಳ್ ಕಟ್ಟಿ ಸೈತಿಟ್ಟು . . . ರಕ್ಷಿಪ್ಪುದೆನ್ನಂ (ರಕ್ಷಾಶ. ೧೦). [ಸಂ.]

**ಆರೋಹಕತನ** (ನಾ). ಸವಾರಿ; ಸವಾರನಾಗಿರುವಿಕೆ: ಸುಱಿದೋಡಿತ್ತಾಡೊಡಾರೋಹಕತನಮನೆಲೇ ಕೇಳ ನೀ ನಿನ್ನ ಕೈಗೈವಱಿಯೊಳ್ ಕಲ್ತಾತನಲ್ಲೆಂ (ಅನಂಪು. ೨-೩೦); ಆರೋಹಕತನಮೆಂಬುದಬದ್ಧಂ (ಶಮದ. ೨೧೧ ಪ್ರಯೋ). [ಆರೋಹಕ + -ತನ]

**ಆರೋಹಕೌಶಲ** (ನಾ). ವಾಹನವನ್ನು ಹತ್ತಿ ಸವಾರಿ ಮಾಡುವ ಜಾಣತನ; ಸವಾರಿ ಮಾಡುವ ಚಾತುರ್ಯ: ಆನೆವಾಂಗಿನವರೆಲ್ಲಮೊಲ್ಲನುಲಿದು ಕೊಂಡುಕೊನೆವಿನೆಗಮಾರೋಹಕೌಶಲಮಂ ವಿಧಾನಕೌಶಲಮಂ ಮೆಜ್ಚಿದುಂ (ಚಂದ್ರಪು. ೯-೯೬ ವ). [ಆರೋಹ + ಕೌಶಲ]

**ಆರೋಹಣ** (ನಾ). ೧. ಏರುವುದು; ಹತ್ತುವುದು: ಶ್ರೀರಂಗಪಟ್ಟಣದೊಳು ರತ್ನಸಿಂಹಾಸನಾರೋಹಣವನಾಚರಿಸಿ (ಹದಿಬ. ೧-೧೧). ೨. ಅವಲಂಬನ: ಧರ್ಮಚಕ್ರವಾಲಮುನಾಗಳ್ ಭೇದಿಸಿ ಸಕಳ ಶ್ರಾವಕವ್ರತಾರೋಹಣಸಮೇತಮಾ ಮುನೀಶ್ವರಂ ಕುಡೆ ಕೊಂಡು ಮನೆಗೆ ವಂದು (ಶಾಂತಿಪು. ೪-೬೭ ವ). ೩. ಮೆಟ್ಟಿಲು; ಸೋಪಾನ. ೪. ಏಣಿ; ನಿಚ್ಚಣಿಗೆ. ೫. [ಸಂಗೀತ] ಸ್ವರದಲ್ಲಿ ಏರಿಕೆ: ಈ ಸ್ವರಗಳ ಮೆಟ್ಟಲನ್ನು ಕ್ರಮವಾಗಿ ಏರುವುದಕ್ಕೆ ಆರೋಹಣವೆಂದೂ ಹೆಸರು (ಬಾಲಪ್ರ. II, 1039). [ಸಂ.]

**ಆರೋಹಣಂಗೆಯ್** (ಕ್ರಿ). ಹತ್ತು; ಏರು: ಬೞಿಯಂ ಮೋಹನೀಯಕರ್ಮೋಪಶಮದೊಳ್ ವಿಶುದ್ಧಾತಿಶಯವಿಶೇಷದಿನುಪಶಮಶ್ರೇಣ್ಯಾರೋಹಣಂಗೆಯ್ದು (ಆದಿಪು. ೬-೩೩ ವ).
[ಆರೋಹಣ + ಗೆಯ್ (< ಕೆಯ್$_1$)]

**ಆರೋಹಿ** (ನಾ). ೧. ಏರಿದವನು; ಸವಾರ: ದೇಹವೆಂಬುದು ಕುದುರೆಯಾತ್ಮನದರಾರೋಹಿ ವಾಹನವನುಪವಾಸವಿರಿಸೆ ನಡೆದೀತೆ (ಮಂಕುಕ. ೩೯೭). ೨. [ಜ್ಯೋತಿ] ನೀಚಕ್ಷೇತ್ರದಿಂದ ಉಚ್ಚಕ್ಷೇತ್ರೋನ್ಮುಖವಾದ ಗ್ರಹ: ತನ್ನೀಚದಿಂದುಚ್ಚಮುಪ್ಪಿನಮಾರೋಹಿ (ಜಾತಕ. ೯-೬); "ನೀಚಕ್ಷೇತ್ರದಿಂದ ಉಚ್ಚಕ್ಷೇತ್ರೋನ್ಮುಖವಾದ ಗ್ರಹಕ್ಕೆ ಆರೋಹಿ ಎಂದು ಹೆಸರು" (ಜಾತಕ. ೯-೬ ಟೀಕೆ). [ಸಂ. ಆರೋಹಿನ್]

**ಆರೋಹಿಗ್ರಹ** (ನಾ). = ಆರೋಹಿ ೨: ಆರೋಹಿಗ್ರಹವು ಶತ್ರು ಅಥವಾ ನೀಚಾಂಶದಲ್ಲಿದ್ದರೆ ಅಶುಭಫಲಗಳನ್ನು ಕೊಡುತ್ತದೆ (ಜಾತಕ. ೯-೬ ಟೀಕೆ). [ಆರೋಹಿ + ಗ್ರಹ]

**ಆರೋಹಿಣಿ** (ನಾ). ೧. ಹತ್ತುವವಳು. ೨. [ಜ್ಯೋತಿ] ನೀಚಕ್ಷೇತ್ರದಿಂದ ಉಚ್ಚಕ್ಷೇತ್ರಕ್ಕೆ ಅಭಿಮುಖವಾಗಿ ಸೂರ್ಯಾದಿ ಗ್ರಹಗಳು ನಡೆಯುವ ದಶೆ: ಜನಪತಿ ಸೇವೆಯಿನರಿಮರ್ದನದಿಂದಜಮೇಷಸಮಿತಿಯಿಂ ನಿಜಸಹಜಾತನಿನುರ್ವರೆಯಿನದಕ್ಕುಂ ಕನಕಂ ಕನಕಾಭಿಧಾನನಾರೋಹಿಣಿಯೊಳ್ (ಜಾತಕ. ೯-೨೧). [ಸಂ. ಆರೋಹಿಣೀ]

**ಆರೋಹಿದಶೆ** (ನಾ). [ಜ್ಯೋತಿ] ಗ್ರಹಗಳು ನೀಚಕ್ಷೇತ್ರದಿಂದ ಉಚ್ಚಕ್ಷೇತ್ರೋನ್ಮುಖವಾಗಿರುವ ಸ್ಥಿತಿ : ಆರೋಹಿದಶೆಯಲ್ಲಿ ಶುಭ ಫಲಪ್ರದರಾದರೂ ಶತ್ರು ಅಥವಾ ನೀಚಾಂಶದಲ್ಲಿದ್ದರೆ ಅಶುಭಫಲಗಳನ್ನು ಕೊಡುತ್ತಾರೆ (ಜಾತತಿ. ೯–೬ ಟೀಕೆ). [ಆರೋಹಿ + ದಶೆ]

**ಆರೋಹಿಸು** (ಕ್ರಿ). ಹತ್ತು ; ಏರು : ಮಿತವಚನಕುಮಾರಂ ಹರಿಣ ಗತಿ ಯೆಂಬೆರಡನೆಯ ತುರಂಗಮನಾರೋಹಿಸಿ (ರಾಜಶೇ. ೧೩–೭೧ ವ) ; ಸರ್ವ ಸ್ತ್ರೀಯರು ಈಕೆಯ ನಾಮಸ್ಮರಣದಿಂದಲೇ ಪಾತಿವ್ರತ್ಯರೂಪಖಡ್ಗಧಾರೆ ಯನ್ನು ಆರೋಹಿಸುವರು (ತುಳಸೀ. ೨೦). [ಆರೋಹಣ + –ಇಸು$_{3}$]

**ಆರ್ಕಾಟಿ** (ನಾ). ಹಡಗು, ವಿಮಾನ ಮುಂತಾದುವುಗಳ ಚಾಲಕ ; ಪೈಲಟ್ಟು (ಕಿಸಂಗ್ಲಾ. ೧೩೩). [?]

**ಆರ್ಕಾಲು** (ನಾ). ದುಂಬಿ; ಗುಂಗೀಹುಳ (ಕಿ).
[ಆರು$_{6}$ (< ಆಱು$_{3}$) + ಕಾಲು$_{1}$ (< ಕಾಲ್$_{1}$)]

**ಆರ್ಕಿ** (ನಾ). ೧. ಸೂರ್ಯನ ಮಗ ; ಶನಿ : ಇನಾರ್ಕಿವಕ್ರಕ್ಷೀಣೇಂದು ಗಳಶುಭಗ್ರಹಂ (ಜಾತತಿ. ೨–೨). ೨. ಯಮ : ಸಿಂಹರಥಂ ಮಾರ್ಕೊಳ್ವರೆನ್ನನಾರೆಂದಾರ್ಕಿಗೆ ಬಿರ್ದಿಕ್ಕಿ [ಪಾಠಾಂ. ದಾರ್ಕೆಗೆ ನೆಲಕಿಕ್ಕಿ] ತನಗಿದಿರ್ಚಿದ ಬಲಮಂ (ಸೇಮಿಪು. ೫–೮೫). ೩. ಸುಗ್ರೀವ. ೪. ಕರ್ಣ.
[ಸಂ. ಆರ್ಕಿನ್]

**ಆರ್ಕ್ಯ** (ಗು). ಶನಿಗೆ ಸಂಬಂಧಿಸಿದ. 'ಆರ್ಕ್ಯವಾರ' ಪರಾ. [ಸಂ.]

**ಆರ್ಕ್ಯವಾರ** (ನಾ). ಶನಿವಾರ : ಬಹುಧಾನ್ಯಮೆಂಬ ವರಿಷಂ ತ್ರಿಕಮಾಸದ ಕಾಳಪಕ್ಷದೊಳ್ ದಸಮಿಯೊಳಾರ್ಕ್ಯವಾರದುದಿತೋದಿತ ವೇಳೆಯೊಳಣ್ಮೆ ಭಕ್ತಿಯಿಂ (ಎಕ. VII, ಶಿಕಾರಿ. ೨೧೯–೨೮ ; 918). [ಆರ್ಕ್ಯ + ವಾರ$_{3}$]

**ಆರ್ಗಳ್** (ನಾ). ತುಳುನಾಡಿನವರು ; ತುಳುವರು (?) : "ಆರ್ಗಳೆ ನಲ್ ತುಳ [ಪಾಠಾಂ. ಳು]ವರ್" (ಚತುನಿ. ೧–೬೦ ಕಿ). [?]

**ಆರ್ಘ್ಯ** (ನಾ). ೧. ಪೂಜಾದ್ರವ್ಯ. ೨. ಅರ್ಘ್ಯೋದಕ. 'ಆರ್ಘ್ಯಂಬಿಡಿ' ಪರಾ. [ಸಂ.]

**ಆರ್ಘ್ಯಂಬಿಡಿ** (ಕ್ರಿ). ಪೂಜಾದ್ರವ್ಯವನ್ನು ಹಿಡಿದುಕೊ; ಅರ್ಘ್ಯೋದಕವೇ ಮುಂತಾದುವನ್ನು ಹಿಡಿದುಕೊ: ಭೀಷ್ಮನ್ವಿಟ್ಟನ್ತೆ ನೆಲಮುಟ್ಟದೆ ಬಿಟ್ಟೋದೇನಾನ್ದೇವಗಣಿಕೆಯರಾರ್ಘ್ಯಂಬಿಡಿದು ಬನ್ದಿದಿಗೊರ್ಣ್ಡಯೆ ವೀರಲೋಕಕ್ಕೆ ಸನ್ದೋನ್ (ಎಕ. VIII, ಸೊರಬ. ೧೦–೯ ; 800).
[ಆರ್ಘ್ಯ + ಪಿಡಿ$_{1}$]

**ಆರ್ಜನ** (ನಾ). = ಆರ್ಜನೆ. 'ದ್ರವ್ಯಾರ್ಜನ' ಪರಾ. [ಸಂ.]

**ಆರ್ಜನೆ** (ನಾ). ಸಂಪಾದಿಸುವುದು ; ಶೇಖರಿಸುವುದು ; ಗಳಿಕೆ : ಹಣವು ಆರ್ಜನೆಯ ಕಾಲದಲ್ಲಿಯೂ ರಕ್ಷಣೆಯ ಕಾಲದಲ್ಲಿಯೂ ನಾಶ ಕಾಲದಲ್ಲಿಯೂ ದುಃಖವನ್ನು ಮುಂದುಮಾಡಿಕೊಂಡೇ ಇರುವುದು (ನೀಗಟ್ಟು. ೭೫). [ಸಂ. ಆರ್ಜನ]

**ಆರ್ಜವ** (ನಾ). ೧. ಋಜುಸ್ವಭಾವ ; ಪ್ರಾಮಾಣಿಕತೆ ; ವಂಚನೆ ಯಿಲ್ಲದಿರುವಿಕೆ : ಕ್ಷಮಾಮಾರ್ದವಾರ್ಜವ ಸತ್ಯ ಶೌಚ ಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಾಪರ್ಯಾಪ್ತದಶಧರ್ಮಂಗಳುಮಂ ಕೈಕೊಂಡು (ಆದಿಪು. ೬–೩೦ ವ) ; ಆ ವಂಶದಲ್ಲಿ ಸತ್ಯ ಆರ್ಜವಗಳಿಗೆ ಹೆಸರಾದ ಅನೇಕ ರಾಜರಾದರು (ವಚಭಾ. ೩೯೮). ೨. ಸುಖದುಃಖ ಗಳೊದಗಿದಾಗ ಸಮಚಿತ್ತದಿಂದಿರುವುದು : "ಹರ್ಷಶೋಕಂಗಳೆಡೆ ಯಲ್ಲಿ ಬುದ್ಧಿತಡೆದಿರ್ಪುದೇ ಆರ್ಜವವೆನಿಸುವುದು" (ವಿವೇಕ. ೧೪೮). ೩. ನಿತ್ಯಕರ್ಮಾನುಷ್ಠಾನವನ್ನು ಬಿಡದೆ ಸಂತೋಷಮಯವಾಗಿ ರುವುದು : ಸ್ನಾನ, ಸಂಧ್ಯಾದಿ ಕರ್ಮಗಳನು ಬಿಡದಾನಂದಚಿತ್ತನಾಗಿರ ಲದೂ ಸ್ವಾನುಭಾವಿಗಳೆಲ್ಲರಾರ್ಜವಮೆಂಬುವ ಮಾನಿನಿ ತಿಳಿ ನಿನ ಮನ ದೊಳೂ (ವೇದಾಂಪ. ೩–೧೨). ೪. ವಿನಯ; ನಮ್ರತೆ. ೫. ಋಜು ಸ್ವಭಾವದವನು; ಸರಳಸ್ವಭಾವದವನು ; ಪ್ರಾಮಾಣಿಕ : ಪಗಲಿರು ಳೆಂಬೀ ವಿಭೇದಂಗಳಿಲ್ಲಾಳರಸೆಂಬೀ ಪಂಬಲಿಲ್ಲಾರ್ಜವರೆ ಮನುಜರೆಲ್ಲಂ (ಪಂರಾಮಾ. ೧–೬೦). ೬. ಅನುಸರಣೆ; ಉಪಸರ್ಪಣೆ : ಸ್ವತಃ ದುಡಿ ಯುವುದು ಗೊತ್ತಿಲ್ಲದ್ದರಿಂದ ಸಣ್ಣಕೆಲಸಕ್ಕೆಸಹ ಎರಡನೆಯವರ ಮೋರೆಯ ಕಡೆಗೆ ನೋಡಬೇಕಾಗುತ್ತದೆ, ಅವರ ಆರ್ಜವ ಮಾಡಬೇಕಾಗುತ್ತದೆ. ಮನುಷ್ಯತ್ವವೆಂಬುದು ನಮ್ಮಲ್ಲಿ ಉಳಿದೇ ಇಲ್ಲ (ಅಮೇಪಿ. ೨). [ಸಂ.]

**ಆರ್ಜವವೃತ್ತಿ** (ನಾ). ವಿಧೇಯವಾಗಿರುವಿಕೆ ; ನಮ್ರತೆ; ವಿನಯ : ಶಿಕ್ಷಕರು ಕೂಲಿಗಳಂತೆ ಬಾಳಕೂಡದು. ಆರ್ಜವವೃತ್ತಿಯನ್ನು ಮಾಡ ಕೂಡದು ಎಂಬುದೇ ಅವರ ಇಚ್ಛೆಯಾಗಿತ್ತು (ರಂಗರೋ. ೮೩).
[ಆರ್ಜವ + ವೃತ್ತಿ]

**ಆರ್ಜಿಕೆ** (ನಾ). ಜೈನಸಂನ್ಯಾಸಿನಿ ; ಕಂತಿ : ಅಭಿವಿನುತಭಕ್ತಿಯಿಂದಗ್ನಿ ಭೂತಿ ಮೊದಲಾದ ಮುನಿಪರುಂ ನಾಗಶ್ರೀಪ್ರಭೃತಿ ಸಮಸ್ತಾರ್ಜಿಕೆಯ ರುಮಭೀಕ್ಷ ಪರಿಣಾಮಶುದ್ಧಿಯಿಂ ವಂದಿಸಿದರ್ (ಸುಕುಮಾ. ೮–೬೯) ; ರಾಜಮತೀದೇವಿಯು ಆರ್ಜಿಕೆ (ಜೈನಸಂನ್ಯಾಸಿನಿ)ಯಾಗಿ ತಪಸ್ಸುಮಾಡಿ ಮುಡಿಪಿ ದೇವಲೋಕದಲ್ಲಿ ಹುಟ್ಟುತ್ತಾಳೆ (ಭಾರದ. ೧೭೪).
[< ಸಂ. ಆರ್ಯಿಕಾ]

**ಆರ್ಜಿತ** (ಗು). ಸಂಪಾದಿಸಿದ ; ಗಳಿಸಿದ : ಭುಜವಿಕ್ರಮಾರ್ಜಿತವಿಜಯ ದೊಡನೆ ತಾಮ್ರಧ್ವಜಂ ತುರಗಮಂ ತಂದೊಪ್ಪಿಸಿದನು (ಜೈಮಿಭಾ. ೨೫ ಸೂ). 'ಪಿತ್ರಾರ್ಜಿತ', 'ಸ್ವಯಾರ್ಜಿತ' ಪರಾ. [ಸಂ.]

**ಆರ್ಜಿಸು** (ಕ್ರಿ). ಸಂಪಾದಿಸು ; ಗಳಿಸು : ಎನಗೆನಗೆ ಸೋಲ್ತಳೆಂಬಂತೆ ನೋಡಿ ನೋಟದೊಳಲಂಪನಾರ್ಜಿಸಿ ಕಾಮಿನಿ ಕಾಮಪಾಶದಂತೆಯಿರೆ (ಸುಕುಮಾ. ೭–೧೨) ; ಸುರೇಂದ್ರರಾರ್ಜಿಸಿದ ಲಕ್ಷ್ಮಿ ಬೂದಿಯ ಬೊಟ್ಟೇ (ಸಮಪ. ೧೦–೨೩) ; ಪುರುಷಂ ಧನಮೆನಗುಂಟೆಂದಿರಲಾಗದು ದ್ರವ್ಯ ಮುಳ್ಳೊಡಂ ದ್ರವ್ಯಮನಾರ್ಜಿಪುದೇಕೆನೆ ವಿತ್ತಂ ತಾಂ ದೊರೆಕೊಳೆ ಕೇಳಿಹ ಪರಂಗಳೆರಡುಂ ಸಾಧ್ಯಂ (ಧರ್ಮಾಮ್ಮ. ೧–೯೩). [ಆರ್ಜನ + –ಇಸು$_{3}$]

**ಆರ್ತ**$_{1}$ 'ಆಱ್' ಪರಾ.

**ಆರ್ತ**$_{2}$ (ನಾ). ೧. ಕಷ್ಟಕ್ಕೆ ಸಿಕ್ಕಿದವನು ; ನೋವಿನಿಂದ ನರಳು ವವನು ; ದುಃಖಿತ : ಮನ್ಮಥಸಹಾಯನೀ ಚಂದ್ರಮಂ ಕೊಲಲ್ಬಗೆದ ನೆನ್ನನಾರ್ತನನನಾಥನಂ (ಕಾದಂಉ. ೫೭೦). ೨. ಬಯಸುವವನು : "ಆಲುಬ್ಧನಭಿಲಾಷುಕನೆನಲಾರ್ತನಕ್ಕು" (ಮಂಗರಾ. ೬೯–೧೧). ೩. ಕಷ್ಟ; ಸಂಕಟ ; ಆಪತ್ತು ; ವಿಪತ್ತು : ಉತ್ತಮಸತ್ತ್ವನಾರ್ತದೊಳ್ ಪೊರೆ ವನೆ ಪುಣ್ಯಮೂರ್ತಿಗೆಡರುಂ ದೊರೆಕೊಳ್ಳುಮೆ (ಪಂರಾಮಾ. ೬–೧೭೨) ; ಕಾಂತನೊಳಾದ ಭಕ್ತಿಯಂ ನಿಲಿಸಿ ಪೊದಟ್ಟ ದುಃಖಮುಮನಾರ್ತ [ಪಾಠಾಂ. ರ್ಥ, ರ್ಪ]ಮುಮಂ ಕಡುನೋವುಮಂ ಮಹೀವಳಯ ದೊಳಾಂತು ಬೆಬ್ಬಳಿಸದಂಜದೆ (ಧರ್ಮಾಮ್ಮ. ೧೩–೧೫೮) ; ಗುಡ್ಡನಂ ನರಕದಿಂ ತೆಗೆದು ತಂದಾ ಎಂದಡೆ . . . ಎತ್ತಣಾರ್ತದಿಂ ಬಂದೆನನುಮತಿ ಗೊಡುವುದೆಂದನಚಳಿತಸಿದ್ಧನು (ಸಿದ್ಧರಾ. ೮–೩೭) ; ಮೂರ್ತಿಯ ನೀಕ್ಷಿಸುವರ್ಥಿಗಳಾರ್ತಮನೀವಮರಭೂಜಚಯ (ತ್ರಿಪುವಿ. ೯–೮೭). ೪. = ಆರ್ತಧ್ಯಾನ : "ಆರ್ತ–ದುಃಖಸಮುದ್ಭೂತಾರ್ತಧ್ಯಾನಮುಂ" (ತತ್ತ್ವಪ್ರ. ೩೪೫) ; ಆರ್ತರೌದ್ರ ಧರ್ಮ ಶುಕ್ಲಾಭಿಧಾನಧ್ಯಾನಚತುಷ್ಟ ಯಮುಮಂ (ಸುಕುಮಾ. ೩–೩೯ ವ). ೫. ಅಪಹಾರ ; ಕಿತ್ತುಕೊಂಡು ಹೋಗುವಿಕೆ : "ಆರ್ತಮಪಹೃತಿ [ಪಾಠಾಂ. ಅರ್ಥಕಮಪಹ್ನುತಿ]" (ಮಂಗರಾ. ೬೭–೫). [ಸಂ.]

**ಆರ್ತಂಗಿಡು** (ಕ್ರಿ). ಹತಾಶವಾಗು ; ನಿರಾಶೆಯಾಗು : ಬಾಡುವಳ್ ಕುಂದುವಳಾರ್ತಂಗೆಟ್ಟು ನಿಲ್ವಳ್ ನೆನೆದುರವಣಿಪಳ್ (ಗಿರಿಕ. ೫–೮೯).
[ಆರ್ತ$_{2}$ + ಕಿಡು (< ಕೆಡು)]

**ಆರ್ತಂಗೊಳ್** (ಕ್ರಿ). ದುಃಖಿತನಾಗು : ನೆಱೆ ನೃಪತಿ ದೀಕ್ಷೆಗೊಂಡೊಡೆ ಜಱಿಗೊಂಡಂ ಗೂಡುಗೊಂಡನಾರ್ತಂಗೊಂಡಂ ಮಱೆಗೊಂಡನೊತ್ತು ಗೊಂಡಂ ಪೆಱತೇಂ ಸ್ಮರನಸ್ತ್ರಕಾಂಡನಪಕೋದಂಡಂ (ಪುಷ್ಪಪು. ೯–೯).
[ಆರ್ತ$_2$ + ಕೊಳ್$_1$]

**ಆರ್ತಗಲ, ಆರ್ತಗಳ** (ನಾ). ಕರಿಯ ಹೂವಿನ ಗೋರಂಟೆ ; "ಕರೇ ಗೊರಟೇ ಗಿಡ " (ಗಂಗಾಮು. ೨೭). **ಆರ್ತಗಳ** (ಅಮರ. ಟೀಕೆ). [ಸಂ.]

**ಆರ್ತಗಳ** 'ಆರ್ತಗಲ' ನೋ.

**ಆರ್ತಜನ** (ನಾ). ದುಃಖಿತಜನ; ಕಷ್ಟಕ್ಕೆ ಸಿಕ್ಕಿದ ಜನ: ಸಮನಿಸಿದು ದೆನಗೆ ಚಿಂತಾತಿಮಿರಂ . . . ಆರ್ತಜನವನಚ್ಚೆತ್ರಾ (ರಾಜಶೇ. ೧೩–೧೪೩).
[ಆರ್ತ$_2$ + ಜನ]

**ಆರ್ತಧ್ಯಾನ** (ನಾ). [ಜೈನ] ಇಷ್ಟವಲ್ಲದ ವಸ್ತುಗಳಿಂದ ಅಗಲ ಬೇಕೆಂಬ ಆಕಾಂಕ್ಷೆಯಿಂದಲೂ ಇಷ್ಟವಾಗಿರುವ ವಸ್ತುಗಳು ಬೇಕೆಂಬ ಆಕಾಂಕ್ಷೆಯಿಂದಲೂ ಮನಸ್ಸು ತುಂಬಿ ಅವುಗಳನ್ನೇ ಚಿಂತಿಸುತ್ತಿರುವುದು : ಅಂತಾರ್ತ್ತ [ಪಾಠಾಂ. ರ್ಥ]ಧ್ಯಾನದೊಳಜಗರ ನಾಗಿ ಪುಟ್ಟಿ (ಆ ದಿ ಪು . ೨–೧೫ ವ) ; ಎನ್ನನೊದೆದ ನಿನ್ನ ಕಾಲ್ಗಳನೆನ್ನ ಮಕ್ಕಳುಮಾನುಮೊಂದಾಗಿಯುಮೇನಾಗಿಯುಂ ಸೀಳ್ದು ಪೋೞ್ದು ತಿಂಬೆ ವೆಂದಾರ್ತಧ್ಯಾನದಿಂ ನಿದಾನಂಗೆಯ್ದು ಸತ್ತು (ಸು ಕು ಮಾ. ೫–೮ ವ) ; ಅವಱೊಳಾರ್ತಧ್ಯಾನಮಮನೋಜ್ಞದ್ರವ್ಯ ವಿಪ್ರಯೋಗಾಕಾಂಕ್ಷೆಯುಂ ಮನೋಜ್ಞದ್ರವ್ಯಸಂಯೋಗಾಕಾಂಕ್ಷೆಯುಂ ದುಸ್ಸಹವೇದನೋಪಸಮ ಚಿಂತಾಪ್ರಬಂಧಮುಂ ಹರ್ಷೋನ್ಮತ್ತಾರ್ತಲಾಭಜಮುಮೆಂದು ನಾಲ್ಕು ತೆಱಂ (ಚಂದ್ರಪು. ೧೬–೨೭ ವ). [ಆರ್ತ$_2$ + ಧ್ಯಾನ]

**ಆರ್ತಧ್ವನಿ** (ನಾ). ದೀನವಾದ ಧ್ವನಿ; ಸಂಕಟದಿಂದ ಕೂಗಿಕೊಳ್ಳುವ ಸ್ವರ : ಅದು ರಾಮನ ಸ್ವರದಿಂದ "ಹಾ ಸೀತೆ ! ಹಾ ಲಕ್ಷ್ಮಣ ! " ಎಂದು ಆರ್ತಧ್ವನಿ ಮಾಡಿತು (ವಚಭಾ. ೪೦೬). [ಆರ್ತ$_2$ + ಧ್ವನಿ]

**ಆರ್ತನಾದ** (ನಾ). = ಆರ್ತಧ್ವನಿ : ಕರ್ಣಭೇದಕ ಆರ್ತನಾದವನೊಂದು ಕೇಳಿದಂತಾಯ್ತು (ನಡೆದಾ. I, ೪೧೯). [ಆರ್ತ$_2$ + ನಾದ]

**ಆರ್ತರೌದ್ರ** (ನಾ). [ಜೈನ] ತನ್ನ ಕಷ್ಟಕ್ಕೂ ದುಃಖಕ್ಕೂ ಕಾರಣ ರಾದವರ ಮೇಲೆ ಕೋಪಗೊಂಡು ಮುಯ್ಯಿತೀರಿಸಿಕೊಳ್ಳಲು ಹಂಬಲಿಸುತ್ತಿರುವುದು ; ಆರ್ತಧ್ಯಾನ ಮತ್ತು ರೌದ್ರಧ್ಯಾನ: ಕಣ್ಬುರಿಗೆಟ್ಟು ದಿವ್ಯಮುನಿಗಿತ್ತಪಮಾನದಿನಾರ್ತರೌದ್ರದಿಂ ಪೆಣ್ಬುಲಿಯಾಗಿ ಪುಟ್ಟಿ ಸಹದೇವಿ ಬರುತ್ತಿರೆ (ಪಂರಾಮಾ. ೨–೫೩). [ಆರ್ತ$_2$ + ರೌದ್ರ]

**ಆರ್ತವ** (ಗು). ೧. ಋತುಗಳಿಗೆ ಸಂಬಂಧಿಸಿದ. ೨. ಸ್ತ್ರೀಯರ ಋತು ಕಾಲಕ್ಕೆ ಸಂಬಂಧಿಸಿದ. (ನಾ). ೩. ಮುಟ್ಟು ; ಋತುಕಾಲದಲ್ಲಿ ಸ್ರವಿಸುವ ರಕ್ತ, —ರಜಸ್ಸು ; "ಮುಟ್ಟು" (ಅಮರ. ಟೀಕೆ). [ಸಂ.]

**ಆರ್ತಸ್ವರ** (ನಾ). = ಆರ್ತಧ್ವನಿ : ಕರುಣಾರ್ತಸ್ವರವನ್ನು ಕೇಳಿದನು (ಮುಂಬಯಿ. ೪–೩೮). [ಆರ್ತ$_2$ + ಸ್ವರ]

**ಆರ್ತಿ$_1$** 'ಆರಿದ್ರೆ' ನೋ.

**ಆರ್ತಿ$_2$** (ನಾ). ೧. ವ್ಯಥೆ; ಕಷ್ಟ ; ಸಂಕಟ: ಲಲನಾಸಂಭೋಗ ರೋಗಂ ಪಸಿವನುಡುಗಿಸುತ್ತಾರ್ತಿಯಂ [ಪಾಠಾಂ. ಆರ್ತಮಂ] ಪೊಂಗಿ ಸುತ್ತುಂ . . . ಇದೆ ಯಿದಕ್ಕೌಷಧಂಗೊಟ್ಟು . . . ರಕ್ಷಿಪ್ಪುದೆನ್ನಂ (ರಕ್ಷಾಶ. ೨೭). ೨. ದೈನ್ಯ. ೩. ಬಿಲ್ಲಿನ ತುದಿ, —ಕೊಪ್ಪು. ೪. ರೋಗ ; ಜಾಡ್ಯ. ೫. ಬಯಕೆ; ಆಸೆ (ಕಿ). ೬. ನಾಶ. [ಸಂ.]

**ಆರ್ತೆ** (ನಾ). ಕಷ್ಟಕ್ಕೆ ಗುರಿಯಾದವಳು ; ದುಃಖಿತೆ : ಸೀತೆ ಕಂಬನಿ ಗಳಂ ಮಿಡಿದಾರ್ತ್ತೆಯಾಗಿರಲ್ ಸೌಮಿತ್ರಿ ನುಡಿದನು (ಜೈ ಮಿ ಭಾ. ೧೯–೨೭) ; ಭೂಮಿಜೆ . . . ಕಿಱಿದಾನುಂ ಬೇಗದಿಂ ಮುಚ್ಚೆದಿಳಿದು ದುಃಖಾರ್ತೆಯಾಗಿ (ರಾಮಾಶ್ವ. ೩೩–೩೦). [ಸಂ. ಆರ್ತಾ]

**ಆರ್ತ್ಯ** (ಗು). ಬೆಲೆಯುಳ್ಳ ; ಶ್ರೀಮಂತವಾದ ; ಇಷ್ಟವಾದ (?): ಪಟ್ಟಾಭಿರಾಮನಿಗೆ ಪಟ್ಟೆಯ ಹಚ್ಚಿದ ಮಿತ್ರೆ ಸೀತೆಗೆ ಹೊಸ ಸೀರೆಗಳು ಆರ್ತ್ಯವಾಗಿರುವ ಜೌಳಿ ಬರಬೇಕೆಂದು ಪತ್ರ ಬರೆದ (ಕಜಾಗೀ. ೯೦). [?]

**ಆರ್ತ್ವಿಜ್ಯ** (ನಾ). ಋತ್ವಿಜನಾಗಿರುವಿಕೆ; ಋತ್ವಿಜನ ಪದವಿ. [ಸಂ.]

**ಆರ್ಥಪರಿಚ್ಛೇದ** (ನಾ). ದ್ರವ್ಯರೂಪವಾದ ಪರಿಹಾರ : ಆಡಕವೆಂತೆಂ ದಱೆ ಕಿಱು ಶಿವಕೇಷವ ಹೆಬರನ ಮಂಚ್ಚೆಂಣ ಹೆಬರ ತಂಮಂ ಆಯ ಮದುಸುದನ ಕೇಶವನ ಕಯಲಿ ಆರ್ಥಪರಿಛೆ[ಚ್ಛೆ]ೀದ ಕೊಟು ಮೂಲಪರಿ ಛೇದ ಎಱಯಿಸಿಕೊಂಡ (ಕಇ. III–i, ೩–೮ ; 1336).
[ಆರ್ಥ$_0$ + ಪರಿಚ್ಛೇದ]

**ಆರ್ಥಿಕ** (ಗು) ಹಣಕಾಸಿಗೆ ಸಂಬಂಧಿಸಿದ; ಹಣಕಾಸಿನ: ಸಾಮಾ ಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯವೂ (ಭಾಧಾನ. ೧ಪ್ರಸ್ತಾ) ; ನಾಡಿನ ಆರ್ಥಿಕ ಪ್ರಗತಿಯ ಸಾಧನೆಯಾಗಬಲ್ಲದು (ಶಿಕ್ಷದ. ೨೬). [ಸಂ.]

**ಆರ್ಥಿಕಕ್ಷೋಭೆ** (ನಾ). ಹಣಕಾಸಿನ ಮುಗ್ಗಟ್ಟು, —ಬಿಕ್ಕಟ್ಟು (Economic crisis ಪಾರಿನಿ. ೩೪). [ಆರ್ಥಿಕ + ಕ್ಷೋಭೆ]

**ಆರ್ಥಿಕನ್ಯಾಯ** (ನಾ). ಹಣಕಾಸಿಗೆ ಸಂಬಂಧಿಸಿದ ನ್ಯಾಯ (Economic law ಪಾರಿನಿ. ೩೪). [ಆರ್ಥಿಕ + ನ್ಯಾಯ]

**ಆರ್ದವಳ್ಳಿ** (ನಾ). ಒಂದು ಊರಿನ ಹೆಸರು : ಮಾರಸಿಂಗ ದೇವ ಬಿಟ್ಟ ವೃತ್ತಿ ಆದ್ರ[ರ್ದ]ವಳ್ಳಿ (ಎಕ. VII, ಶಿವಮೊ. ೬–೬ ; 1060) ; ಆ ಮಾರ ಸಿಂಗ ದೇವಂ ಆದ್ರ್ರ[ರ್ದ]ವಳ್ಳಿಯೆಂಬೂರುಮಂ (ಎಕ. VII, ಶಿವಮೊ. ೪–೭೨ ; 1122). [ಆರ್ದ ? + ಪಳ್ಳಿ]

**ಆರ್ದು** 'ಆರ್$_1$' ಪರಾ.

**ಆದ್ರ್ರ** (ಗು). ೧. ತೇವವಾದ ; ಒದ್ದೆಯಾದ; ನೆನೆದ: ಮದವನ್ಮಾತಂಗ ಕುಂಭಾದ್ರ್ರಮೌಕ್ತಿಕಲಗ್ನೋಜ್ವಲ ಬಾಣನಂ (ಪಂಪ ಭಾ. ೧–೧೩೪) ; ಹರಿವಿದಳಿತ ಮದಗಜಕುಂಭರಕ್ತಸಿಕ್ತಾದ್ರ್ರಮೌಕ್ತಿಕ ಪ್ರಕರದವೋಲ್ (ಕಾದಂಪೂ. ೮೭). ೨. ಹೊಚ್ಚ ಹೊಸದಾದ ; ಇದೇ ಈಗ ಆಗಿರುವ ; ರಸವತ್ತಾದ. 'ಆದ್ರ್ರಕ್ಷತ' ಪರಾ. ೩. ಮೃದುವಾದ ; ಕೋಮಲ ವಾದ. ೪. ಆಸಕ್ತವಾದ ; ಮಗ್ನವಾದ : ವೇಳೆಯನ್ನು ಕೊಂಚವೂ ಕಳೆಯುತ್ತಿರಲಿಲ್ಲ ಹೊತ್ತಿಗೆಗಳ ಆದ್ರ್ರ ಅಭ್ಯಾಸಿಗಳು (ಮುಳ್ಳಹಾ. ೨೭). (ನಾ). ೫. ಹಸಿಯ ಶುಂಠಿ ; ಅಲ್ಲ. [ಸಂ.]

**ಆದ್ರ್ರಕ** (ನಾ). ೧. ಹಸಿಯ ಶುಂಠಿ ; ಅಲ್ಲ : "ಆದ್ರ್ರಕಂ, ಶೃಂಗ ಬೇರಂ – ಈ ೨ ಅಲ್ಲದ ಕೊಂಬು " (ಹಲಾಯು. ೧೦೧–೪೬) ; ಬಗೆ ಗೊಳ್ವುವು ಹಾರಿದ್ರಕ ಜೀರಕಾದ್ರ್ರಕೇಕ್ಷುವನಂಗಳ್ (ಪುಷ್ಪಪು. ೯–೨೨). ೨. "ಕಾಗದ, ತಲೆಚೀಟಿ ಮೊದಲಾದುವನ್ನು ತೇವಮಾಡುವ ಸಲಕರಣೆ ; ಆದ್ರ್ರಕ ; ತೇವತಡಿ " (Damper. ಇಂಕನಿ). [ಸಂ.]

**ಆದ್ರ್ರಕ್ಷತ** (ನಾ). ಹೊಸಗಾಯ ; ಆರದಿರುವ ಗಾಯ : ಬಲ್ಲೆಯ ಚಿಕಿತ್ಸೆ ಈ ಆದ್ರ್ರಕ್ಷತಕ್ಕೆ ಭಿಲ್ಲರಾಣ್ಮ ? (ಹೆಬ್ಬೆರ. ೩೭–೧೫).
[ಆದ್ರ್ರ + ಕ್ಷತ]

**ಆದ್ರ್ರಜಲ** (ನಾ). ೧. ಹೊಸನೀರು (?) : ಒದವಿತ್ತು ಘನಸುಕೃತವೀ ಪ್ರಾಣಿಗೆಂತೆನಲು ಮದನಾರಿ ಗಂಗಾದ್ರ್ರಜಲದಿಂದ ಮಜ್ಜನಕ್ಕೆಱೆದಂದ ವಾಯ್ತೆಂದನು (ವೀಶೈಪು. ೨–೧೨–೭). ೨. ತಣ್ಣೀರು ; ಶೀತೋದಕ.
[ಆದ್ರ್ರ + ಜಲ$_1$]

**ಆದ್ರ್ರತೆ** (ನಾ). ೧. ಒದ್ದೆ ; ತೇವ. ೨. ಮೃದುತ್ವ ; ಕೋಮಲತೆ : ಹೊಳೆಹೊಳೆವಸ್ತ್ರಶೈಲಗಳ ಹೊದಱು ಹೊಗಿಸಿ ದಿಗಂತವನು ಹರಿಪದಪ ಪದ್ಮಭವಾಮರೇಂದ್ರರ ಹೃದಯದಾದ್ರ್ರತೆ [ಪಾಠಾಂ. ಹಾತಕ, ದಾರ್ತತೆ, ವಾಧೃತಿ]ಯಾಱೆ ಮೊಱೆಯುವ ರಭಸದಂದದಲಿ (ತೊರರಾ. ೬–೩೫–೧೯).
[ಸಂ. ಆದ್ರ್ರತಾ]

**ಆರ್ದ್ರತ್ವ** (ನಾ). = ಆರ್ದ್ರತೆ ೧ : "ನನೆ – ಆರ್ದ್ರತ್ವೇ" (ಶಮುಧಾ). [ಸಂ.]

**ಆರ್ದ್ರಭಾವ** (ನಾ). ೧. ತೇವವಾಗಿರುವಿಕೆ; ನನೆದಿರುವುದು : "ನಾನ್ – ಆರ್ದ್ರಭಾವೇ" (ಶಮುಧಾ). ೨. ಮೃದುತ್ವ ; ಕೋಮಲತೆ. ೩. ಪ್ರೀತಿಯಿಂದ ಕೂಡಿರುವುದು : ಅವರು ನನ್ನನ್ನು ಆರ್ದ್ರಭಾವದಿಂದ ಆದರಿಸಿದರು (ರೂಢಿ). [ಆರ್ದ್ರ + ಭಾವ$_2$]

**ಆರ್ದ್ರಮತಿ** (ನಾ). ಮೃದುವಾದ ಮನಸ್ಸು; ಕೋಮಲವಾದ ಮನಸ್ಸು : ಪಗೆವಂಗಂ ಕೆಳೆಯಂಗವಾರ್ದ್ರಮತಿಯಂ ತ್ವನ್ಮೂರ್ತಿ ತೀರ್ಥೇಶ ಮಾಡುಗುಂ (ಶಾಂತಿಪು. ೮–೧೫೮). [ಆರ್ದ್ರ + ಮತಿ]

**ಆರ್ದ್ರಹೃದಯ** (ನಾ). ೧. ಮೃದುವಾದ ಹೃದಯವುಳ್ಳವನು; ಕೋಮಲವಾದ ಮನಸ್ಸುಳ್ಳವನು : ಆತ್ಮೀಯ ಪಿತೃಮರಣಮುಮಂ ಆತನ ನರಕಗತಿಗಮನಮುಮನಱಿದು ಕರುಣಾರಸಾರ್ದ್ರಹೃದಯಂ (ಆದಿಪು. ೨–೧೪ ವ) ; ಶಾಂತರಸಾತ್ಮನಾರ್ದ್ರಹೃದಯಂ ಸುದಿಗಂಬರ ವರ್ತನಂ (ಚಂದ್ರಪು. ೧–೨೬). ೨. ಮೃದುವಾದ ಹೃದಯ. [ಆರ್ದ್ರ + ಹೃದಯ]

**ಆರ್ದ್ರಾಂತರಂಗ** (ನಾ). = ಆರ್ದ್ರಹೃದಯ ೧ : ತಿಳಿದ ಮಾನಸ ಸರೋವರದಂತೆ . . . ಸುಪ್ರಸನ್ನನುಮಾರ್ದ್ರಾಂತರಂಗನುಂ . . . ಆಗಿರ್ದ ಹಲಧರನಂ (ಶಾಂತಿಪು. ೨–೨೫ ವ). [ಆರ್ದ್ರ + ಅಂತರಂಗ]

**ಆರ್ದ್ರಾಕ್ಷತ** (ನಾ). ಹೊಸದಾದ ಅಕ್ಷತೆ; ಹಸಿಯ ಅಕ್ಷತೆ : ಕನಕ ಪೀಠಸ್ಥಿತರಪ್ಪ ಮದೆವಂಗಂ ಮದೆವಳ್ಗಮಾರ್ದ್ರಾಕ್ಷತಾರೋಪಣಂ ಗೆಯ್ದರ್ (ಶಾಂತಿಪು. ೬–೧೮ ವ). [ಆರ್ದ್ರ + ಅಕ್ಷತ]

**ಆರ್ದ್ರಾಶಯ** (ನಾ). = ಆರ್ದ್ರಹೃದಯ ೧ : ತದೀಯ ಕರುಣಾರಸ ಪ್ರೇರಿತಾರ್ದ್ರಾಶಯಂ ತತ್ತ್ರಾಜೀವನೋಪಾಯಮಂ . . . ನಿಱಿಸಲ್ವೇಟ್ಕುಮೆಂದು (ಆದಿಪು. ೮–೬೨ ವ) ; ಸುಪ್ತಮೀನಾಚ್ಛೋದಮಾನಸಸರೋಪಮಾನಂ ನಿಮೀಲಿತಲೋಚನಂ ಪ್ರಸನ್ನಾರ್ದ್ರಾಶಯಂ (ಶಾಂತಿಪು. ೨–೬೩ ವ). [ಆರ್ದ್ರ + ಆಶಯ]

**ಆರ್ದ್ರೀಕರಣ** (ನಾ). ತೋಯಿಸುವುದು ; ನನೆಯಿಸುವುದು ; ತೇವ ಮಾಡುವುದು : "ನಾಱು–ದುರ್ಗಂಧೇ ಆರ್ದ್ರೀಕರಣೇ ಚ(ನನೆಯಿಸು)" (ಶಮುಧಾ). [ಸಂ.]

**ಆರ್ದ್ರೀಭೂತ** (ಗು). ೧. ನನೆದ; ತೊಯ್ದ. ೨. ಮೃದುವಾದ; ಕೋಮಲವಾದ : ಮಾಚಯ್ಯನ ದಯಾರ್ದ್ರೀಭೂತ ಭಾವದಲಿ ಬಂದುದಿದು (ಬಸಪು. ೩೬–೫೧) ; ಉಲ್ಲಸಿತ ಕರುಣಾರಸಾರ್ದ್ರೀಭೂತಚೇತಸನು (ಬಸಪು. ೪೩–೮೬)- [ಸಂ.]

**ಆರ್ದ್ರೆ** (ನಾ). ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಆರನೆಯದು : "ಆರ್ದ್ರಾ, ಲುಬ್ಧಕಃ — ಈ ೨ ಆದ್ರಾ(ನಕ್ಷತ್ರದ ಪೆಸರ್)" (ಹಲಾಯು. ೯–೪೯) ; "ಲುಬ್ಧಕಮೆನಲಾರ್ದ್ರೆ[ಪಾಠಾಂ. ದ್ರೆ]" (ಮಂಗರಾ. ೧೨–೭). [ಸಂ. ಆರ್ದ್ರಾ]

**ಆರ್ಪ** 'ಆಱ್' ಪರಾ.

**ಆರ್ಪಳಿ** (ಕ್ರಿ). ಶಕ್ತಿಗುಂದು ; ಧೈರ್ಯಗೆಡು : ಪುಳಿಂದನ ವಕ್ಷಮನುದ್ಗಮಾಸ್ತ್ರದಿಂದಿಸೆ ಕುಸುಮಾಸ್ತ್ರನಾರ್ಪಳಿದು ಕೂರ್ಪಳ ಕೈವಿಡಿದೆಯ್ದಿ . . . ಪೊಸಪೂವಸೆಯಲ್ಲಿ ಕೂಡಿದಂ (ರಾಜಶೇ. ೫–೧೦೫). [ಆರ್ಪು$_1$ + ಅಳಿ$_1$ (< ಅೞಿ$_1$)]

**ಆರ್ಪಿಗ** (ನಾ). ಸಾಮರ್ಥ್ಯವುಳ್ಳವನು ; ಸಾಹಸಿ : ತೆಮಳ್ದಿ ಮಾರುವಾರ್ಪಿಗನಿರೆ ಭೋಗಿಯುಮಿರಲ್ ದಿಟಕೆಲ್ಲಿದರೆಲ್ಲಿ ತೋರಿರೇ (ಸಂಸಪ. ೧೦–೧೨) ; ರವಿ ಕಾಣದಿರ್ದ ನೆಲೆಯಂ ಕಾಣ್ಬಾರ್ಪಿಗಂ ಕಬ್ಬಿಗಂ (ಸಂಸಪ. ೧೪–೧). [ಆರ್ಪು$_1$ + –ಇಗ]

**ಆರ್ಪು$_1$**, ಆಪ್ಪು$_3$ (ನಾ). ೧. ಸಾಮರ್ಥ್ಯ ; ಪರಾಕ್ರಮ ; ಸಾಹಸ : "ಪನ್ನತಿಕೆ . . . ಅಣ್ಮು — ಈ ೮ ಪರಾಕ್ರಮಂ" (ಕಶಸಾ. ೧೩–೨೬೩) ; "ಸಾಸ ದಪ್ಪಮದಟಾರ್ಪಣ್ಮೆಂದೆನ್ನಲ್ ಪರಾಕ್ರಮಾಖ್ಯಂ" (ಕವಿಕಂ. ೧೨೫) ; ಬ್ರಹ್ಮನಿಂದಱಿವು ಸುಶರ್ಮನಾರ್ಪಿನೊಳ್ ದೊರೆ ಧರ್ಮದೊಳ್ ಬಲಿಯ ಸಮನೆಂಬ ಜಕ್ಕಯ್ಯ (ಎಕ. VIII, ನಗರ. ೬೨–೨ ; 800) ; ಬಲ್ಪಂ ಕೂರ್ಪುಮಾರ್ಪುಂ ನಿರಂತರಮೊಪ್ಪಲ್ (ಎಇ. XIII, ೩೨೯–೫ ; 929) ; ನುಡಿದುದೆ ದೇವಾಲಿಕೆ ತಂನಡವಳಿ ಮನುಮಾರ್ಗ್ಗಮಾರ್ಪ್ಪು ಸುರಕುಜದ ಬನಂ ಎಡೆಗೊಂಡ ರೂಪು ಕಾಮನ ಹಿಡಿದಲಗ್ಗಣಿ (ಎಕ. V. ಚನ್ನರಾ. ೧೮೬–೩೧ ; 1142) ; ಇಷ್ಟ ಶಿಷ್ಟರ ಬಗೆತೀರೆ ವಂದಿಜನಮಾರೆ ಸುರದ್ರುಮದಾರ್ಪು ಸಾರೆ . . . ಅಲಂಪಿನೊಳಿತ್ತಂ (ಪುಷ್ಪಪು. ೧೨–೧೧೦) ; ತನ್ನಿಂದಧಿಕನನಾರ್ಪಿಂ ಮುನ್ನಿಱಿವುದು ಧೂರ್ತಸಚಿವನಂ ಭೂಪಾಲರ್ (ದಶಕು. ೯–೭೫). ೨. ತೀವ್ರತೆ ; ತೀಕ್ಷ್ಣತೆ ; ರಭಸ : ಜರಿದು ಪೊದಟ್ದ ನೀಳ್ಮುಡಿಯ ಪೆರ್ಮುಸುಕಿಂ ಬಿಸಿಲಾರ್ಪನಾಱಿಪರ್ (ಅಪ್ರತಿ. ೬೯–೧೭) ; ಇರದೆ ದುಗುಡದಾರ್ಪಿನಿಂದ ನರಳುವೆದೆಯ (ಕವಿಕಾ. ೧೭–೧೪). ೩. ದಯೆ ; ಮರೆಹೊಕ್ಕವರನ್ನು ರಕ್ಷಿಸುವ ಸ್ವಭಾವ : ಪರಿಕಿಸೆ . . . ದಿವಿಜೇಂದ್ರಪುತ್ರನಿಂ ಪಿರಿಯನೆನಿಪ್ಪನುದ್ಧತರ ದಾನದೊಳಾರ್ಪಿನೊಳೆಯ್ದೆ ಗಂಡಿನೊಳ್ ಧರೆ ಪೊಗಳ್ವಂತು ಬೇಡಿದ ವರ್ಗಿತ್ತು ಶರಣ್ಬುಗೆ ಕಾದು ಶತ್ರುವಂ ಧುರಧರೆಯೊಳ್ತಗುಳ್ದು (ಎಕ. VI, ಚಿಕ್ಕಮ. ೧೩೭–೯೧ ; 1130). **ಆಪ್ಪು$_3$** : ೧. ಕದಡದಿರಿ ಹೆದಱದಿರಿ ಬೆಂಬೀಳದಿರಿ ಮಱುಗದಿರಂಜದಿರಿ ಕರಗದಿರಿ ಕೊರಗದಿರೋಡದಿರಿ ಎನ್ನಾಪು ಹರನಾಪು [ಪಾಠಾಂ. ಮ ಹರನಾಮ] (ಬಸಪು. ೩೭–೩೯) ; ರಟ್ಟೆಗಳಲ್ಲಿ ಮೊದಲಿನಷ್ಟು ಆಪಿಲ್ಲ (ಬೆಳುಮ. ೨೮೧). [ಆಱ್ + –ಪು]

**ಆರ್ಪು$_2$** (ನಾ). ಗಟ್ಟಿಯಾದ ಕೂಗು ; ಗರ್ಜನೆ : ಮೇಲಾರ್ಪ್ಪನಾರ್ದನಾತಂ ಸೋಲದ ಗಣ್ಡಂ ಪ್ರತಾಪಿ ದಾನದ ಫಲದಿಂ ಮೇಲಕ್ಕು ಕೊಟ್ಟುದನನುಂ ಪಾಲಿಪ ಫಲಮೆಂದು ತನ್ನೊಳಱಿದಿಂತೆಂದ[ಂ] (ಎಇ. IV, ೬೪–೬ ; 945) ; ಹೆಲನರಿನ್ ಮೊದಲೆದ್ದುದೊಂದಾರ್ಪು — ಬುಲ್ಲುಲಿಯ, ನಲ್ಲುಲಿಯ ಪಾಡು (ಪಾರಸಿ. ೧೫–೩೫೩). [ಆರ್$_1$ + –ಪು. / **ತೆಲು.** ಆರ್ಪು]

**ಆರ್ಪುಗುಂದು** (ಕ್ರಿ). ಬಲಹೀನವಾಗು; ಸತ್ವಹೀನವಾಗು ; ಧೈರ್ಯಗೆಡು : ದರ್ಪಕಂ . . . ಆರ್ಪುಗುಂದಿ ಕಾರ್ಪಣ್ಯದಿಂ ನಗತನೂಜೆಯಂ ಪೊಗಳ್ದ (ಗಿರಿಕ. ೮–೧೪ ವ). [ಆರ್ಪು$_1$ + ಕುಂದು$_1$]

**ಆರ್ಪುಗೆಯ್ತ** (ನಾ). ಸಾಹಸಕಾರ್ಯ ; ದಿಟ್ಟತನದ ಕೆಲಸ : ರಣರಂಗದೊಳಾರ್ಪುಗೆಯ್ತಮುಂ ಭೋಂಕನೆ . . . ಪೆರ್ಚಿಸಲಕ್ಕುಂ (ಕಮಮಾ. ೧೭–೩೭). [ಆರ್ಪು$_1$ + ಗೆಯ್ತ]

**ಆರ್ಪ್ಪೊಟಿಚೆ** (ನಾ). ಒಂದು ಊರಿನ ಹೆಸರು : ಬ್ರಹ್ಮದೇಯಂ ಕೊಟ್ಟಂ ಆರ್ಪ್ಪೊಟಿಚೆ ಒಡೆಯ ಕೌಶಿಕಗೋತ್ರಂ ಪೊನ್ನಡಿಗೆ (ಎಕ. IV, ಶ್ರೀರಂಗ. ೧೬೦–೧೫ ; 800). [?]

**ಆರ್ಬಟೆ** 'ಆರ್ಭಟೆ' ನೋ.

**ಆರ್ಬಟಿಸು** 'ಆರ್ಭಟಿಸು' ನೋ.

**ಆರ್ಬಟೆ** 'ಆರ್ಭಟೆ' ನೋ.

**ಆರ್ಭಟೆ** 'ಆರ್ಭಟೆ' ನೋ.

**ಆರ್ಭಟಂಗೊಡು** (ಕ್ರಿ). ಗಟ್ಟಿಯಾಗಿ ಕೂಗು ; ಅಬ್ಬರಿಸು : ಏಳಿ ಕಂಸಾಳಂಗಳಂ ಪಿಡಿದೋಳಿಯಿಂದಂ ತಾರವಿಸುತಿರಿ ಆಳತಿಯವೇಳೆಯೊಳೆನುತಮಿಂತಾರ್ಭಟಂಗೊಟ್ಟು (ಬಸಪು. ೧೨–೪೪). [ಆರ್ಭಟ (< ಆರ್ಭಟೆ) + ಕೊಡು]

**ಆರ್ಭಟಿಸು,** ಆರ್ಬಟಿಸು, ಆರ್ಭಡಿಸು (ಕ್ರಿ). ಅಬ್ಬರಿಸು; ಗಟ್ಟಿಯಾಗಿ ಕೂಗು; ಗರ್ಜಿಸು: ಇಂತಪ್ಪ ಬಿರುದಿನ ಹೊಳಕೆಯ ಭಟರ್ಗಳು ಮುಂತಾರ್ಭಟಿಸುತ್ತೈತರಲು (ವೋಹತ. ೩೩–೩೫); ಕೋಗಿಲೆಗಳಾರ್ಭಟಿಸೆ . . . ಮನ್ಮಥನಾಗ ಪೂಗಣೆಗಳನು ಸಂಧಿಸುತೆಚ್ಚನಂಗನೆಯ (ನಳಚ. ೧–೩೭); ಆರ್ಭಟಿಸುವ ಕರ್ಮಗಳ ಸುಟ್ಟು ಮುಕ್ತಿಗೆ ನಿರ್ಭಾಗ್ಯರೆಯ್ದುವರಲ್ಲ (ಭರಚ. ೬೮–೧೫); ಆನೆ, ಹುಲಿ ಮುಂತಾದ ದುಷ್ಟಮೃಗಗಳು ಬೇರೆ ಅಲ್ಲಲ್ಲಿ ಆರ್ಭಟಿಸುತ್ತಿದ್ದುವು (ಹಿಂಕಿರು. ೧೧೯). **ಆರ್ಬಟಿಸು:** ಎಮ್ಮ ಮೇಲೆಮ್ಮ ಮಕ್ಕಳಮೇಲಿವನ ರಕ್ತವಿರಲೆಂದು ಸಂತೋಷದಿಂದಲಾರ್ಬಟಿಸಿದರು (ಗೊಲ್ಗೊಥಾ. ೮–೨೨೫). **ಆರ್ಭಡಿಸು:** ಕಲ್ಪಾಂತಕಾಲದ ಸಿಡಿಲಗರ್ಜನವುನಿರದೆ ತಾಳ್ದಾರ್ಭಡಿ[ಪಾಠಾಂ. ಟಿ]ಸುತ (ಪದ್ಮರಾ.೬–೬೧); ವಿವಿಧ ವಾದ್ಯಂಗಳ ವಿಡಾಯಿಯಿಂದಾರ್ಭಡಿಸಿ ತಿವಿ ಬಸುಜನುಗಿ ಕರುಳ ನುಗಿಯೆಸುತ್ತೆ (ಚಿಬಪು. ೩೯–೩). [ಆರ್ಭಟ (< ಆರ್ಭಟಿ) + –ಇಸು$_3$]

**ಆರ್ಭಟಿ,** ಆರಭಟಿ, ಆರುಬಟಿ, ಆರುಬಟೆ, ಆರುಭಟಿ, ಆರುಭಟೆ, ಆರ್ಬಟಿ, ಆರ್ಬಟೆ, ಆರ್ಭಟ (ನಾ). ಗಟ್ಟಿಯಾದ ಕೂಗು; ಗರ್ಜನೆ; ಅಬ್ಬರ: ಅಂತು ಶರವರ್ಷಮಂ ಕಱೆಯುತ್ತುಮಿರ್ದ ದೊಂದಭಿನವಾರ್ಭಟಿಯನಪ್ಪುಕೆಯ್ದು (ಜಗವಿ. ೮–೫೭ ವ); ದನುಜೇಂದ್ರನಾರ್ಭಟಿಯ ಕೇಳ್ದು (ಉದ್ಭಟ. ೪–೬೬ ವ); ದೇವದತ್ತದ ಬಿರಿಸಿನಾರ್ಭಟಿ ಗಾಂಡಿವದ ದುರ್ಧರ ಗುಣದ ರವ (ಕೋಗಯ. ೨೦–೨). **ಆರಭಟಿ:** ಖಂಡಪರಶುವಿನಂತುದ್ಭಟಾರಭಟಿಯಿಂದಾರ್ದು (ಜಗವಿ. ೬–೫೦ ವ); ಆರಭಟಿಯೊಳರಸ ಕಂಡು ಪೊಯ್ದುಸಿತೋರಗನಂಗವೊಪ್ಪಿದುದು (ಶ್ರೀಪಾಲ. ೧೧–೭೦). **ಆರುಬಟಿ:** ಆತನ ಕರೆಯಬೇಕೆಂದಾರುಬಟಿಯಲಿ ಮಂತ್ರಿಗಳನವಿಚಾರನಟ್ಟಲು (ಜೀವಂಚ. ೧೫–೧). **ಆರುಬಟೆ:** ಚೀರಿದನು ಬ್ರಹ್ಮಾಂಡವೊಡೆಯಲ್ಕಾರುಬಟೆಯಲಿ (ಕುವ್ಯಾಆ. ಓರಿಇ. ೨೩–೨೯); ಕಾರುಗನಹಳ್ಳಿಯವನಾರುಬಟೆಯಿಂ ನೆರೆಯೆ (ಚಿಕವಿ. ೨–೨೮). **ಆರುಭಟಿ:** ಮಿಱಿತಾ ಧನುವೇನಮಾಡಿದೊಡೋರಣಿಸಿ ಶಿಶುಪಾಲ ಭೂಮಿಪನಾರುಭಟಿಯಲ್ಲಿಱಿದು ಹೋಯಿತು ಧನುವಿನುಬ್ಬಟೆಗೆ (ಕುವ್ಯಾಆ. ಓರಿಇ. ೩೦–೧೭). **ಆರುಭಟೆ:** ಚಾಪದನಾರಿ ಬೆಸಲಾಗಲಿ ಮಹಾಸ್ತ್ರವನಾರುಭಟೆಯಲಿ ಗಜವ ಮುಱಿ ಕೆಡೆಯೆಸು ಮಹೀಸುತನ (ಕುವ್ಯಾದ್ರೋ. ೩–೬೩); ಕಪಿಭಟರಾರುಭಟೆ ತಲೆಕೆಳಗಮಾಡಿತು ಜಗದ ಜೋಡಿಗಳ (ತೊರರಾ. ೬–೧೨–೪೦). **ಆರ್ಬಟ** (ಕ). **ಆರ್ಬಟೆ:** ಕರ ಚಮತ್ಕಾರಕೆ ಚಮತ್ಕಾರಮಾರ್ಬಟೆಗೆಯಾರ್ಬಟೆ ತುಳಿಲ್ಗೆ ತುಳಿಲು (ಚಿಬಪು. ೨೬–೨೫). **ಆರ್ಭಟ:** ಮಾರನು ಮಾಡುವ ಹಟ ಆರ್ಭಟಗಳನ್ನು ನೋಡಿದಾಗ (ಮುನಿಮಾ. ೮೮).

[**ಸಂ.** ಆರಭಟ, ಆರಭಟೀ. / **ತಮಿ.** ಆರ್ಪ್ಪಾಟ; **ತುಳು.** ಅರ್ಬಟ, ಆರ್ಭಟ, ಆರ್ಭಟೆ; **ತೆಲು.** ಅರ್ಭಟ, ಆರ್ಭಟ]

**ಆರ್ಭಡಿಸು** 'ಆರ್ಭಟಿಸು' ನೋ.

**ಆರ್ಮ** (ನಾ). ೧. ಆಶ್ರಯಸ್ಥಾನ; ನೆಲೆ; ಆಧಾರ: ಜಿನಧರ್ಮಂ ಪ್ರಾಣಿಗಾರ್ಮಂ ಮಱೆಯದಿರು (ಆದಿಪು. ೨–೨೦); ಮುನಿದುಯ್ವ ಜವಂಗಂ ಮಾಯೆನಲಮ್ಮುವರಿಲ್ಲ ಬಗೆಯೆ ನಿನಗಿನ್ನಾರ್ಮಂ ಜಿನಧರ್ಮಮೊಂದೆ ಜೀವನೆ (ಅಜಿಪು. ೨–೫೭); ಕಲಿಕಾಲಧರ್ಮತನೆಯಂ ಸೌಚಕ್ಕಾರ್ಮನಿವನೆನ್ದು ಪಲರುಂ ನೆಮ್ಮುವರ್ (ಸೌ ಇ ಇ. IX–i, ೬೫–೩೧; 1028); ಸಲೆ ಸತ್ಯಕ್ಕೆ ಮೊದಲ್ ಚಲಕ್ಕೆ ನೆಲೆ ಧರ್ಮಕ್ಕಾರ್ಮ್ಮಮಾಯಕ್ಕಗುಂದಲೆ ಬೀರಕ್ಕೆ ತವರ್ . . . ಸಂಗ್ರಾಮುಕಂಠೀರವಂ (ಹೈಆರಿ. VIII, ೧೧–೭೨; 1058); ಧರ್ಮಮೆ ಸಮಸ್ತ ಸೌಖ್ಯಕ್ಕಾರ್ಮಂ (ಸುಕುಮಾ. ೬–೪೧); ಪುರುಷಾರ್ತ್ಥಕ್ಕೆಡೆ ವಿಕ್ರಮಕ್ಕೆ ನೆಲೆ ಧರ್ಮ್ಮಕ್ಕಾರ್ಮ್ಮನೌದಾರ್ಯ್ಯದಾಗರಮೊಳ್ಪಿಂಗೆಱೆವಟ್ಟು (ಸೌಇಇ. IX–i, ೨೧೩–೩೪; 1126). ೨. ಹಿತಕರವಾದುದು; ಶ್ರೇಯಸ್ಕರವಾದುದು: ಕೂರ್ಮೆಯೊಳಲಸದೆ ಜೀವಕ್ಕಾರ್ಮಂ ಪೆಱತಿಲ್ಲ ದುಃಖದಿಂದೆತ್ತುವ ಸದ್ಧರ್ಮಮೆ ಹಿತಂ (ಧರ್ಮಾಮೃ. ೪–೪೫); ತಡೆಯಲೆಡೆಯಿಲ್ಲ ಚೆಚ್ಚರಮೊಡರ್ಚು ನಿನಗಾರ್ಮಮಪ್ಪ ಧರ್ಮಮಂ (ಜೀವಸಂ. ೨೭–೫೦); ಧರ್ಮಮನೆ ಕಿಡಿಸಿ ಮೆಯ್ಗಿ[ಪಾಠಾಂ. ಮೇಗಿ] ನಿಸಾರ್ಮಮಿದೆಂದಱಿಸುಖಕ್ಕೆ ಮೋಹಿಸುವುದೆ ಪೇಱಿ (ಜೀವಸಂ. ೨೧೫–೫); ಏನಾರ್ಮಮೋ ಜೈನಧರ್ಮಂ (ಧರ್ಮನಾ. ೧–೧೩). [?]

**ಆರ್ಮೊಗ,** ಆರುಮೊಗ, ಅಱುಮೊಗ (ನಾ). ೧. ಆರು ಮುಖಗಳ ಸಮುದಾಯ: ಆರ್ಮೊಗದಿಂದೆ ಶಿವ ತನ್ನ ತಾನೆ ಜನಿಸಿದನೆನಲ್ ಸೊಗಯಿಸುತ್ತಿಹ ಕುಮಾರಸ್ವಾಮಿಯಡಿದಾವರೆಗಳಿಗಾಱಡಿಯಪ್ಪೆನು (ಚಿಬಪು. ೧–೧೦). ೨. ಆರು ಮುಖಗಳುಳ್ಳವನು; ಷಣ್ಮುಖ: ಆರ್ಮೊಗನಂ ಪೆತ್ತಯ್ಯಂ ಕೂರ್ಮೆಯಿನುಸುರಲ್ಕೆ (ಶ್ರೀಮುಹಾ. ೯–೨). **ಆರುಮೊಗ:** ೨. "ಸ್ಕಂದನೊಳಗಾರುಮೊಗನೆಂದಕ್ಕುಂ" (ಕಶರ. ೧೧); ತಗುಲಿ ಕವಚಮುಮನೊಡೆದಾರುಮೊಗನು ಭ್ರಮೆಯೊಳೊಂದಿಯಳ್ಳುರುತ್ತೇ (ನವಮೋ. ೩೧–೪೭). **ಅಱುಮೊಗ:** ೨. ಅಱುಮೊಗನಯ್ಯನೆನ್ನಯ ಕನಸಿನೊಳ್ ಬಂದು . . . ಚಿಂತಿಸದಿರೆನಲು (ಭಾವಚಿಂ. ೮–೩೭).

[ಆರು$_6$ (< ಅಱು$_3$) + ಮೊಗ]

**ಆರ್ಯ** (ನಾ). ೧. ಸಾಧು; ಸಜ್ಜನ: "ಸಾಧುಃ, ಸಜ್ಜನಃ, ಆರ್ಯಃ—ಈ ೩ ಸತ್ಪುರುಷಂ" (ಹಲಾಯು. ೬೧–೨೧೭). ೨. ಪೂಜ್ಯ; ಗೌರವಾರ್ಹ. ೩. ಉತ್ತಮ ಕುಲದಲ್ಲಿ ಹುಟ್ಟಿದವನು. ೪. ಬ್ರಾಹ್ಮಣ, ಕ್ಷತ್ರಿಯ ಅಥವಾ ವೈಶ್ಯರಲ್ಲಿ ಒಂದು ಪಂಗಡಕ್ಕೆ ಸೇರಿದವನು. ೫. ವೈಶ್ಯಕುಲದವನು: "ಆರ್ಯಾಃ, ಭೂಮಿಸ್ಪೃಶಃ, ವೈಶ್ಯಾಃ, ಊರವ್ಯಾಃ, ವಿಶಃ — ಈ ೫ ವೈಶ್ಯಂ" (ಹಲಾಯು. ೯೩–೪೧೭). ೬. ತಪಸ್ವಿ; ಋಷಿ. ೭. ಆಚಾರ್ಯ; ಗುರು. ೮. ಶೈವರಲ್ಲಿ ಒಂದು ಪಂಗಡ; ಆರಾಧ್ಯ: ಅವಸರೋಚಿತಕೆ ಬಳಲಿ ಬಂದಂತಾರ್ಯರುಗಳಂ ನಿಲಿಸಿ ಧಿಕ್ಕರಿಸಿದೆನೆ (ಬಸವು. ೪೫–೧೨). ೯. ವೃದ್ಧ; ಹಿರಿಯ: ಆರ್ಯರು ಪರಸಿ ಕಳುಹಲು (ಬಸಪು. ೩೨–೧೨). ೧೦. ಸೂರ್ಯ. ೧೧. ಗೆಳೆಯ; ಸ್ನೇಹಿತ. ೧೨. ಭೋಗಭೂಮಿಯಲ್ಲಿ ಹುಟ್ಟಿದವನು: ಆತನ ಸೇನಾನಾಯಕ ಮಂತ್ರಿಪುಂಗವ ಪುರೋಹಿತರ್ ಮೂವರುಂ ನೃಪನ ದಾನಾನುಮೋದದ ಫಲದಿಂದಮುತ್ತರಕುರುವಿನೊಳಾರ್ಯರಾಗಿ ಜೀವಿತಾಂತ್ಯದೊಳೀಶಾನಕಲ್ಪದೊಳ್ ಸೇನಾನಾಯಕನಪ್ಪಾರ್ಯಂ (ಆದಿಪು. ೫–೧೩ ವ). ೧೩. ಒಂದು ಜನಾಂಗ. ೧೪. ಅಂತಃಪುರದ ಅಧಿಕಾರಿ; ಕಾವಲುಗಾರ; ಕಂಚುಕಿ: "ಸೋವಾಸಿಯಲ್ಲಿಯುಂ ಆರ್ಯನೆಂಬುದು" (ಹಲಾಯು. ೧೩೬–೨೮). ೧೫. ಬಿಳಿಯ ಮಗ್ಗದವರಲ್ಲಿ ಒಂದು ಪಂಗಡ (ಎಸಮೈ. VIII, 8). ೧೬. ಒಂದು ಭಾಷೆ: ನಾಗರ ಕಂಡಿತಿಗುಳಾರ್ಯ್ಯವನೋದಿಸುವ ಬಾಲಶಿಕ್ಷೆ ಉಪಾಧ್ಯರ ಜೀವಿತಕ್ಕೆ (ಎಕ. III, ತಿರುಮು. ೨೭–೪೩; 1290). ೧೭. = ಆರ್ಯೆ ೪: ಆನಂದದಾಸರ ಅಖ್ಯಾನಗಳಲ್ಲಿ ನಾಲ್ಕಾರು ಪದಗಳಿಗಿಂತ, ಹತ್ತೆಂಟು ಆರ್ಯಗಳು, ಅಷ್ಟೇ ಸಂಖ್ಯೆಯ ವೃತ್ತಗಳಿಗಿಂತ ಹೆಚ್ಚಾಗಿರುವುದಿಲ್ಲ (ಕಭವಿ. II, ೩೩೨); "ಸೂರ್ಯಂ ತಾಪಸಭೋಗಭೂಮಿಭವರುಂ ಸಾವಾಸಿಯುಂ ವೃದ್ಧರಿಂತಾ[ರ್ಯಾ]ಖ್ಯಂ" (ನಾನಾರ. ೧೧೭). [**ಸಂ.**]

**ಆರ್ಯಕರ್ಮ** (ನಾ). ೧. ಉತ್ತಮರಿಗೆ ಯೋಗ್ಯವಾದ ಕೆಲಸ; ಆರ್ಯನ ಕೆಲಸ. ೨. [ಜೈನ] ಶ್ರಾವಕರು ಅನುಸರಿಸಬೇಕಾದ ಆರು ಬಗೆಯ ಕೆಲಸಗಳು: ಸ್ವಾಧ್ಯಾಯ ಸಂಯಮ ತಪಮೆಂದಾರ್ಯಕರ್ಮಮಾಱುತೆಱನಕ್ಕುಂ (ಸುಕುಮಾ. ೬–೨೫ ವ).

[ಆರ್ಯ + ಕರ್ಮ]

**ಆರ್ಯಕೆ** (ನಾ). ಜೈನ ಸಂನ್ಯಾಸಿನಿ ; ಕಂತಿ : ಪ್ರ ಭಾ ವ ತಿ ಯು ಂ ಪದ್ಮಾವತ್ಯಾರ್ಯಕಾ [ಪಾಠಾಂ. ತ್ಯಜ್ಜಿಕಾ] ಪಾದಮೂಲದೊಳುಪಾರ್ಜಿತ ರತ್ನಾವಳಿ ತಪದೊಳಚ್ಯುತಕಲ್ಪದೊಳ್ ಪ್ರತೀಂದ್ರ ಪದವಿಯಂ ಪಡೆದಳ್ (ಆದಿಪು. ೩-೫೮ ವ). [**ಸಂ.** ಆರ್ಯಕಾ]

**ಆರ್ಯಚರಿತ** (ನಾ). ಆರ್ಯರ ನಡವಳಿಕೆಯಿಂದ ಕೂಡಿದವನು ; ಉತ್ತಮವಾದ ನಡತೆಯುಳ್ಳವನು ; ಸದಾಚಾರಿ : ಅಮಾರ್ಯರಕ್ರೋಧರುಲ್ಬಣರಿಂದ್ರಾದಿಗಳಾರ್ಯರಾರ್ಯಚರಿತರ್ (ಶಾ ಂ ತಿ ಪು. ೬-೧೨೨). [ಆರ್ಯ + ಚರಿತ]

**ಆರ್ಯಪ್ರಣುತ** (ಗು). ಆರ್ಯರಿಂದ ಹೊಗಳಲ್ಪಟ್ಟ : ಜನನಿ ಸುತೆ ಭಗಿನಿ ವಯಸದೊಳೆನಗಧಿಕೆಯುಮೂನೆಯುಂ ಸಮಾನೆಯುಮೆಂದಂಗನೆಯ ನ ವ ಲೋ ೞ ಕಿ ಸು ವು ದೆ ನೆ ಮನೋಹರಂ ಬ್ರಹ್ಮಚರ್ಯಮಾರ್ಯಪ್ರಣುತಂ (ಶಾಂತಿಪು. ೬-೫೫). [ಆರ್ಯ + ಪ್ರಣುತ]

**ಆರ್ಯವಿಮುಖ** (ನಾ). ಹಿರಿಯರನ್ನು ಕಂಡರೆ ಕಡೆಗಣಿಸುವವನು, —ಉದಾಸೀನಮಾಡುವವನು: ಉದ್ಧತವೃತ್ತಂ ಗತಧೈರ್ಯನಾರ್ಯವಿಮುಖಂ ನಿದ್ರಾಳು ತಾನಾದ ಭೂಪತಿಗಾದ್ಯೈಸಿರಿ ಗಾಳಿಗೊಡ್ಡಿದ ಸೊಡರ್ (ರಾಜಶೇ. ೬-೧೨೪). [ಆರ್ಯ + ವಿಮುಖ]

**ಆರ್ಯವೇಷ** (ನಾ). ಆರ್ಯನಿಗೆ ತಕ್ಕ ವೇಷವುಳ್ಳವನು ; ಒಳ್ಳೆಯ ಉಡುಪು ಧರಿಸಿದವನು : ಧವಳವಾಸೋನ್ವಿತಂ ಮತ್ತಮೊರ್ವಂ ಬರುತಿರ್ದಂ ಬೆನ್ನೊಳಾತ್ಮೋಚಿತಮೆನಿಸಿದ ಚಾತುರ್ಯದಿಂದಾರ್ಯವೇಷಂ (ಕಾದಂಪೂ. ೩೬). [ಆರ್ಯ + ವೇಷ]

**ಆರ್ಯಷಟ್ಕರ್ಮ** (ನಾ). = ಆ ರ್ಯ ಕ ರ್ಮ ೨ : "ಇಜ್ಯೆಯುಂ ವಾರ್ತೆಯುಂ ದತ್ತಿಯುಂ ಸ್ವಾಧ್ಯಾಯಮುಂ ಸಂಯಮಮುಂ ತಪಮುಂ ಎಂದು ಗೃಹಸ್ಥಂಗೆ ಆರ್ಯಾ [ರ್ಯ] ಷಟ್ಕರ್ಮಂಗಳಪ್ಪುವು"(ತತ್ತ್ವಪ್ರ. ೨೮೭) ; ಪಂಚಾಣುವ್ರತಾದಿಪ್ರವರ್ತನ ಸ್ವಭಾವಸಂಯಮಮುಂ ಅನಶನವೃತ್ಯಾದಿ ತಪೋನುಷ್ಠಾನಮುಂ ಬೆರಸಾರ್ಯಷಟ್ಕರ್ಮಂಗಳುಂ ನಿಮಗಿವು ಕುಲಾಚಾರಂಗಳೆಂದಱಿಯೆ ಪೇೞ್ದು ಕೈಕೊಳಿಸಿ (ಆದಿಪು. ೧೫-೧೩ ವ). [ಆರ್ಯ + ಷಟ್ಕರ್ಮ]

**ಆರ್ಯಾಗೀತಿ** (ನಾ). [ಛಂದ] ಒಂದು ಮಾತ್ರಾವೃತ್ತದ ಹೆಸರು : ಕಂದಕ್ಕೆ ಸಮನಾದ ಸಂಸ್ಕೃತ ಬಂಧ ಆರ್ಯಾಗೀತಿ. 'ಆರ್ಯೆ'ಯಿಂದ ಆರ್ಯಾಗೀತಿ ರೂಪಗೊಂಡಿರಬೇಕು (ಛಂದೋವಿ. ೧೦೨). [**ಸಂ.** (ಆರ್ಯಾ + ಗೀತಿ)]

**ಆರ್ಯಾಣಿ** (ನಾ). ವೈಶ್ಯಜಾತಿಯ ಹೆಂಗಸು : "ವೈಶ್ಯಜಾತಿಯಲ್ಲಿ ಹುಟ್ಟದರೆ ಆರ್ಯಾಣಿಯೆನಿಸುಗು " (ನಾಚಿರಾ. ೧೧೭). [**ಸಂ.** ಆರ್ಯಾಣೀ]

**ಆರ್ಯಾವರ್ತ** (ನಾ). ಪ್ರಾಚೀನ ಕಾಲದಲ್ಲಿ ಆರ್ಯರು ನೆಲಸಿದ್ದ ಭೂಮಿ ; ಭಾರತದಲ್ಲಿ ಹಿಮಾಲಯ ಮತ್ತು ವಿಂಧ್ಯಪರ್ವತಗಳ ನಡುವೆ ಪೂರ್ವ ಪಶ್ಚಿಮ ಸಮುದ್ರಗಳು ಮೇರೆಯಾದ ಪ್ರದೇಶ : ಮನುಸ್ಮೃತಿಯಲ್ಲಿ ಹೇ ಳಿ ದ ಂ ತೆ ಆರ್ಯಾವರ್ತವು ವಿಂಧ್ಯದವರೆಗೆ ಮಾತ್ರ (ಕರ್ಣಾಟ. ೮೮). [**ಸಂ.**]

**ಆರ್ಯಾವೃತ್ತ** (ನಾ). = ಆರ್ಯೆ ೩ : ಆ ರ್ಯಾ ವೃ ತ್ತ ಂ ॥ ಸ್ತನಯುಗಮಶ್ರುಸ್ನಾತಂ ಸಮೀಪತರವರ್ತಿ ಹೃದಯಶೋಕಾಗ್ನೇಃ ಚರತಿ ವಿಮುಕ್ತಾಹಾರಂ ವ್ರತಮಿವ ಭವತೋ ರಿಪುಸ್ತ್ರೀಣಾಂ (ಕಾದಂಪೂ. ೬೦). **P** ಸಂಸ್ಕೃತದ ಆರ್ಯಾ ಅಥವಾ ಗಾಥಾವೃತ್ತವು ಪ್ರಾಕೃತದಲ್ಲಿ ಆರ್ಯಗೀತ ಅಥವಾ ಸ್ಕಂಧಕವೆಂಬ ೬೪ ಮಾತ್ರೆಯ ವೃತ್ತವಾಗಿ ಕನ್ನಡದಲ್ಲಿ ಮತ್ತು ತೆಲುಗಿನಲ್ಲಿ ವಿಶೇಷವಾಗಿ ಕಂದ ಎಂಬ ಹೆ ಸ ರಿ ನ ಲ್ಲಿ ಪ್ರಚಾರದಲ್ಲಿದೆ (ಕೈಪಿಡಿ. ೧೧೨). [**ಸಂ.** (ಆರ್ಯಾ + ವೃತ್ತ)]

**ಆರ್ಯಿಕೆ** (ನಾ). **೧.** ಗೌರವಾರ್ಹಳು ; ಪೂಜ್ಯೆ. **೨.** ಜೈನ ಸಂನ್ಯಾಸಿನಿ ; ಕಂತಿ : ಅತ್ತ ಸೀ ತಾ ಯಿ ರ್ ಕೆ ಪಲವುಕಾಲಂ ತಪಂಗೆಯ್ದು (ಪಂರಾಮಾ. ೧೬-೪೨ ವ) ; ಸಹಸ್ರಾರು ಜನ ಆರ್ಯಿಕೆಯರು ಕರುಣೆಯ ಸಸಿಗಳಂತೆ ಕಂಗೊಳಿಸಿದರು (ದಾನಚಿಂ. ೧೧೨). [**ಸಂ.** ಆರ್ಯಿಕಾ]

**ಆರ್ಯೀಕರಣ** (ನಾ). ಆರ್ಯರನ್ನಾಗಿ ಮಾಡುವುದು ; ಆರ್ಯರ ರೀತಿಗೆ ತಿರುಗಿಸುವುದು : ಶಾತವಾಹನರ ಪ್ರಭುತ್ವಕಾಲದಲ್ಲಿ ದಕ್ಷಿಣದ ಆರ್ಯೀಕರಣ ಹೇಗಾಗಿತ್ತೆಂದೂ . . . ನಿರೂಪಿಸಿದೆ (ತುಳುನಾ. ೮೮). [**ಸಂ.**]

**ಆರ್ಯೆ** (ನಾ). **೧.** ಪೂಜ್ಯಳಾದ ಹೆಂಗಸು : ಶ್ರೀಮತ್ಯಾರ್ಯೆಯುಂ ಸಮ್ಯಕ್ತ್ವಮಾಹಾತ್ಮ್ಯದಿಂ ಸ್ತ್ರೀರೂಪಮಂ ಪತ್ತುವಿಟ್ಟು ತತ್ಸ್ವಯಂಪ್ರಭ ವಿಮಾನದೊಳ್ . . . ದಿವಿಜನಾದಂ (ಆ ದಿ ಪು. ೫-೭೦ ವ) ; ಭಾವಶುದ್ಧಿ ವಿಶೇಷದಿಂದಮನಿಂದಿತೆಯುಮಾರ್ಯನಾಗೆ ಸ ತ್ಯ ಭಾ ಮೆ ತದಾರ್ಯೆಯಾದಳ್ (ಶಾ ಂ ತಿ ಪು. ೬-೧೨೪ ವ). **೨.** ಪಾರ್ವತಿ. **೩.** [ಛಂದ] ಪೂರ್ವಾರ್ಧದಲ್ಲಿ ೩೦ ಮಾತ್ರೆಗಳು ಮತ್ತು ಉತ್ತರಾರ್ಧದಲ್ಲಿ ೨೭ ಮಾತ್ರೆಗಳು ಹೀಗೆ ಒಟ್ಟು ೫೭ ಮಾತ್ರೆಗಳನ್ನುಳ್ಳ ಒಂದು ವೃತ್ತ : ಅಂತುಂ ಯತಿಯಂ ಪೇೞ್ವಾರ್ಪಂತಾದ್ಯದೊಳಲಸದಾರ್ಯೆಯೊಳ್ ಕಂದದೊಳಂ (ಕವಿರಾ. ೧-೭೬). [**ಸಂ.** ಆರ್ಯಾ]

**ಆರ್ಯೋಕ್ತಿ** (ನಾ). ಆರ್ಯರ ನುಡಿ ; ಹಿರಿಯರ ಮಾತು : 'ಕಾರ್ಯ ಸಾಧನೆಗಾಗಿ ಕತ್ತೆಯ ಕಾಲಾದರೂ ಕಟ್ಟಬೇಕು' ಎಂಬ ಆರ್ಯೋಕ್ತಿಯನ್ನು ನಾನು ಯಾವಾಗಲೂ ಶಿರಸಾ ಧರಿಸಿ ನಡೆದುಕೊಳ್ಳುತ್ತೇನೆ (ನಾ ಡ ಗೇ. ೨೪೬). [ಆರ್ಯ + ಉಕ್ತಿ]

**ಆರ್ಯೋತ್ತಮ** (ನಾ). ಆರ್ಯರಲ್ಲಿ ಉತ್ತಮನಾದವನು: ಆರ್ಯೋತ್ತಮನುತ್ತಮಾರ್ಯವೆಸರವ್ಯಾಬಾಧದಿಂ ಮೂಡುತುಂ ಮುಱುಗುತ್ತುಂ ತಣಿದಂ (ಶಾಂತಿಪು. ೬-೧೨೬). [ಆರ್ಯ + ಉತ್ತಮ]

**ಆರ್ಷ** (ಗು). **೧.** ಋಷಿಗಳಿಗೆ ಸಂಬಂಧಿಸಿದ ; ಋಷಿಗಳಿಂದ ಬಂದ. **೨.** ಪ್ರಾಚೀನವಾದ : ಆರ್ಷಾನಾರ್ಷಭೇದದಿಂ ದ್ವಿವಿಧಮಕ್ಕುಂ ಅವಱೊಳಾರ್ಷಮೆಂಬುದಾದಿಬ್ರಹ್ಮೋಪದಿಷ್ಟಂ (ಚಾವುಂಉ. ೨೯೬-೨೧) ; ಇನ್ನೂ ಕೆಲವು ಪೂರ್ವದಿಂದ ಬಂದ ಅರಿಸಮಾಸಪದಗಳುಂಟು . . . ಇವು ಆರ್ಷ (ನಮ್ಮನು. ೨೭೮) ; ಆರ್ಷವಾದ ತಮಿಳು ಭಾಷೆಯು ಈ ಪಂಡಿತರ ಪ್ರಕಾರ ಅಪಭ್ರಂಶದೋಷಕ್ಕೆ ಗುರಿಯಾಗಲಾರದು (ಭಾಷಾಶಾ. ೬೭). **೩.** ಪವಿತ್ರವಾದ ; ಅತಿಮಾನುಷವಾದ. (ನಾ). **೪.** ಎಂಟು ವಿಧವಾದ ವಿವಾಹಗಳಲ್ಲಿ ಒಂದು ; ತೆರತೆಗೆದುಕೊಂಡು ಕನ್ಯಾದಾನ ಮಾಡಿಕೊಡುವ ಮದುವೆ. [**ಸಂ.**]

**ಆರ್ಷತೆ** (ನಾ). **೧.** ಋಷಿಗಳಿಗೆ ಸಂಬಂಧಿಸಿರುವಿಕೆ. **೨.** ಪ್ರಾಚೀನತೆ. **೩.** ಪವಿತ್ರತೆ : ಅಧಿಕಾರ – ಸ್ವಾತಂತ್ರ್ಯಗಳು ಸರ್ವರ ಸೊತ್ತಾಗಲಿರುವಂತೆ ಆರ್ಷತೆಯನ್ನೂ ಸಾಹಿತಿಯು ಮನೆಮನೆಗೆ ಬೀರಿ ಮನುಕುಲವನ್ನು ಪಾವನಗೊಳಿಸಬೇಕಾಗಿದೆ (ನವ್ಯಕಾ. ೨೩). [**ಸಂ.** ಆರ್ಷತಾ]

**ಆರ್ಷದರ್ಶನ** (ನಾ). ಋಷಿಗಳಿಗೆ ಯೋಗಶಕ್ತಿಯಿಂದ ಆಗುವ ಸಾಕ್ಷಾತ್ಕಾರ, —ದರ್ಶನ : ವೇದದಲ್ಲಿ ಹೇಳಿರುವ ಜ್ಞಾನವು ಋಷಿಗಳಿಗೆ ಧ ಮಾ ರ್ ತಿ ಶ ಯ ದಿ ಂ ದ ಹೊಳೆಯುವದು ಆರ್ಷದರ್ಶನವು (ಬ್ರಹ್ಮಭಾ. ೨೩೨ ಅಡಿಟ). [ಆರ್ಷ + ದರ್ಶನ]

**ಆರ್ಷದೃಷ್ಟಿ** (ನಾ). = ಆರ್ಷದರ್ಶನ : ಅವನ ಕೃತಿಯ ಉನ್ನತಿಯಿಂದಲೂ ಅವನು ಆರ್ಷದೃಷ್ಟಿಯನ್ನು ಪಡೆದ ಯೋಗಿ . . . ವರಕವಿಯೆಂಬುದು ತಿಳಿಯುತ್ತದೆ (ಕಸಾಚ. ೨೬೨) ; ಅವನ ದರ್ಶನ ಭಾವನೆಯ ದರ್ಶನವಾಗಿತ್ತು. ಆರ್ಷದೃಷ್ಟಿಯ ರ ವಿ ತೇ ಜ ಅದರಲ್ಲಿರಲಿಲ್ಲ (ಸಮಜೀ. ೭೭೮). [ಆರ್ಷ + ದೃಷ್ಟಿ]

**ಆರ್ಷಭ್ಯ** (ನಾ). ಎತ್ತು ಆಗುವುದಕ್ಕೆ ತಕ್ಕ ವಯಸ್ಸಾದ ಹೋರಿ; ಬೀಜವನ್ನು ಹಿಡಿಮಾಡುವ (ಕಸಿಮಾಡುವ) ವಯಸ್ಸಿಗೆ ಬಂದ ಹೋರಿ: "ಆರ್ಷಭ್ಯಯೆಂಬುದು ಹಿಡಿಯಿಸಲ್ತಕ್ಕ ಹೋರಿ" (ಹಲಾಯು. ೪೪–೧೧೯); "ಆರ್ಷಭ್ಯಮೆನಲು ಹಿಡಿಹೋರಿಯಕ್ಕುಂ" (ಮಂಗರಾ. ೫೩–೧). [ಸಂ.]

**ಆರ್ಷಮತ** (ನಾ). ಋಷಿಗಳ ಅಭಿಪ್ರಾಯ, —ಮತ: ಪ್ರವಿಸುವುದು ಜೀವರಸ ಹೃದಯಗರ್ತದ ತಳದಿ ಕಿವಿಗಾ ರಹಸ್ಯದುಲಿ ಕಾವ್ಯಗಾನಗಳಿಂ ಭುವನದಾಚಿನ ರಹಸ್ಯದ ಕೀರ್ತಿ ವೇದಗಳ ರವದಿನೆಂದಾರ್ಷಮತ (ಮಂಕುಕ. ೪೬೪). [ಆರ್ಷ + ಮತ]

**ಆರ್ಷವಾಣಿ** (ನಾ). ಋಷಿಗಳ ವಾಣಿ, —ಮಾತು: ಆರ್ಯಕಂಠಗಳೆನಿತೊ ಆರ್ಷವಾಣಿಯೊಳಂದು ವೃಷ್ಟಿಕಾಮಿಗಳಾಗಿ ಪರ್ಜನ್ಯಸೂಕ್ತಗಳ ಹಾಡಿ ಕೊಂಡಾಡಿದರು (ಕ್ರೌಂಚಧ್ವ. ೪೬–೩). [ಆರ್ಷ + ವಾಣಿ]

**ಆರ್ಷಸಂಪತ್ತು** (ನಾ). ಋಷಿಗಳ ಸಂಪತ್ತು; ಪ್ರಾಚೀನ ಸಂಪತ್ತು: ನವ್ಯಸಂಪದವಾರ್ಷಸಂಪದುದ್ಧೃತವಿಂತು ಸವ್ಯಪೇಕ್ಷಗಳುಭಯ (ಮಂಕುಕ. ೮೬೧). [ಆರ್ಷ + ಸಂಪತ್ತು]

**ಆರ್ಷಸಂಹಿತೆ** (ನಾ). ಋಷಿಗಳು ಹೇಳಿದ ವೇದಮಂತ್ರ: ಶ್ರೀಯುತರ ದರ್ಶನಾಕಾಂಕ್ಷಿಯಾಗಿ ನಾನು ಹೋದಾಗ ಒಂದಾನೊಂದು ಆರ್ಷಸಂಹಿತೆಯ ಚಿಂತನೆಯಲ್ಲಿ ಮಗ್ನರಾಗಿದ್ದರು (ಜೀವಾತ್ಮ. XI). [ಆರ್ಷ + ಸಂಹಿತೆ]

**ಆರ್ಷೇಯ** (ಗು). ೧. ಋಷಿಗಳಿಗೆ ಸಂಬಂಧಿಸಿದ, —ಸೇರಿದ: ಸಂಸ್ಕೃತ ಆರ್ಷೇಯ ಭಾಷೆ (ಜೀವಸಾ. ೧೧). ೨. ಪ್ರಾಚೀನವಾದ; ಹಿಂದಿನಿಂದ ಬಂದ: ತಮಿಳರ ಮತ್ತು ಕನ್ನಡಿಗರ ಸಂಬಂಧವು ಆರ್ಷೇಯವಾದುದು (ಕೊನಷ್ಟ್ಯ. ೨). (ನಾ). ೩. ಹಿಂದಿನವನು; ಪ್ರಾಚೀನ: ನಮ್ಮ ಆರ್ಷೇಯರು ಭಾರತವರ್ಷದಲ್ಲಿ ತಮ್ಮ ಜ್ಞಾನ ಪರಿಪಾಕವನ್ನು ಯಾವ ತಕ್ಷಶಿಲ ನಲಂದ ಎಂಬ ಸ್ಥಳಗಳಲ್ಲಿದ್ದ ವಿಶ್ವವಿದ್ಯಾಕ್ಷೇತ್ರಗಳಲ್ಲಿ ತುಂಬಿ . . . ಅದರ ಸವಿಯನ್ನು ನೀಡುತ್ತಿದ್ದರೋ (ಜಗಚಂ. ೬೨). [ಸಂ.]

**ಆರ್ಷೇಯಾರ್ಥ** (ನಾ). ಋಷಿಗಳು ಅಥವಾ ಪ್ರಾಚೀನರು ಮಾಡಿರುವ ಅರ್ಥ: ಸಾರ್ಥಕವದಪ್ಪುದಾರ್ಷೇಯಾರ್ಥದೊಡವೆರೆಯೆ ಪಾರ್ಥನನುಭವದಂತೆ (ಮಂಕುಕ. ೫೧೮). [ಆರ್ಷೇಯ + ಅರ್ಥ]

**ಆರ್ಸಿ** (ನಾ). "ಮೋಸ" (ಗಂಗಾಮು. ೨೮). [?]

**ಆರ್ಹಂತ್ಯ** (ಗು). ೧. ಅರ್ಹಂತನಿಗೆ ಸಂಬಂಧಿಸಿದ. 'ಆರ್ಹಂತ್ಯ ಧರ್ಮ' ಪರಾ. (ನಾ). ೨.[ಜೈನ] ಮೋಕ್ಷ; ಅರ್ಹಂತನ ಪದವಿ: ತದ್ಯುಗಂಧರ ಮಹಾಯೋಗೀಶ್ವರಂ ಪೊರ್ದಿದಂ ನೆಗಟ್ದಾರ್ಹಂತ್ಯಮನೇನನೀಯದೊ ಶುಭಧ್ಯಾನೋಪಯೋಗೋದಯಂ (ಆದಿಪು. ೩–೮೦). ೩. [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು: ಯೋಗಸಂನಾಹಮುಂ ಆರ್ಹಂತ್ಯಮುಂ . . . ಅಪ್ಪುಯ್ವತ್ತುಮೂಱು ಗರ್ಭಾನ್ವಯಕ್ರಿಯೆಯೊಳು (ಚಾವುಂಉ. ೨೩೦). ೪. ಅರ್ಹತೆ. [ಸಂ.]

**ಆರ್ಹಂತ್ಯಕ್ರಿಯೆ** (ನಾ). [ಜೈನ] ತೀರ್ಥಂಕರತ್ವ: ಅಷ್ಟಮಹಾಪ್ರಾತಿಹಾರ್ಯ ಚತುಸ್ತ್ರಿಂಶದತಿಶಯಂಗಳೆಸೆಯೆ ಸಮವಸರಣಮಂಡಲದೊಳು ದ್ವಾದಶಗಣಪರಿವೇಷ್ಟಿತನಾಗಿಪ್ಪುದು ಆರ್ಹಂತ್ಯಕ್ರಿಯೆ (ಚಾವುಂಉ. ೨೪೯); ಆರ್ಹಂತ್ಯಕ್ರಿಯೆಯೆಂಬುದು ಧರ್ಮಚಕ್ರಾಧಿಪತ್ಯಮುಂ ಪುಟ್ಟಿಸುವುದು (ಚಾವುಂಉ. ೨೫೧). [ಆರ್ಹಂತ್ಯ + ಕ್ರಿಯೆ]

**ಆರ್ಹಂತ್ಯಧರ್ಮ** (ನಾ). ಜೈನಧರ್ಮ: ಆರ್ಹಂತ್ಯಧರ್ಮಂ ತನಗಾರ್ಮಂ ಭೂಷೆ ರತ್ನತ್ರಯಮೆನೆ ನೆಗಟ್ದಿಂ ಧಾತ್ರಿಯೊಳ್ ಶಾಂತಿನಾಥಂ (ಸುಕುಮಾ. ೧–೫೫). [ಆರ್ಹಂತ್ಯ + ಧರ್ಮ]

**ಆರ್ಹಂತ್ಯಲಕ್ಷ್ಮಿ** (ನಾ). [ಜೈನ] ಮೋಕ್ಷಲಕ್ಷ್ಮಿ; ತೀರ್ಥಂಕರತ್ವದ ವೈಭವ: ಪೂಜಾರ್ಹನಾರ್ಹಂತ್ಯಲಕ್ಷ್ಮೀಕಾಂತಂ ಮುನಿಸುವ್ರತಂ (ಪಂರಾಮಾ. ೧–೧). [ಸಂ. ಆರ್ಹಂತ್ಯಲಕ್ಷ್ಮೀ (ಆರ್ಹಂತ್ಯ + ಲಕ್ಷ್ಮೀ)]

**ಆರ್ಹತ** (ಗು). ೧. ಜೈನಧರ್ಮಕ್ಕೆ ಸಂಬಂಧಿಸಿದ; ಜಿನನಿಗೆ ಸಂಬಂಧಿಸಿದ. (ನಾ). ೨. ಜೈನ. [ಸಂ.]

**ಆರ್ಹತಮತ** (ನಾ). ಜೈನಮತ: ಈ ತೀರ್ಥಂಕರರಿಗೆ . . . ಪೂಜ್ಯಾರ್ಥಕವಾದ "ಅರ್ಹನ್" ಎಂದೂ, ಈ ಮತಕ್ಕೆ ಆರ್ಹತಮತವೆಂದೂ ಪ್ರಸಿದ್ಧಿಬಂದಿತು (ಹಿಂದಸಾ. ೬೨). [ಆರ್ಹತ + ಮತ]

**ಆಲ್**, ಆಲು₁ (ಕ್ರಿ). ಗಟ್ಟಿಯಾಗಿ ಕೂಗು; ಕಿರುಚು; ಅರುಚು: ವಕ್ಷದೊಳಾಲ್ದು ಬೊಬ್ಬಿಱಿವ ದೇವಕರೋಟಿಯ ದೇವನೀ ವಿರೂಪಾಕ್ಷನೆ ದೇವನೆಂದು ಮುಡಿಗಿಕ್ಕಿದೆಂ (ಮುಡಿಗೆ. ೧); ಜಟ್ಟಿಗಳುಬ್ಬಿ ಕೋಯೆಂದಾಲ್ದು ಭುಜಗಳ ತಟ್ಟಿಕೊಂಡು (ಭರಚ. ೨೦–೪೦). **ಆಲು₁**: ಆಲುತ್ತಲು ಹಱಿಯ ಹೊಯಿಸಿ ಅಂಕವ ಮಾಡಿದೆನೆಲ್ಲರ ಕಂಡು (ಬಸವ. ೪೩೬); ಸೂಲವನೇಱುವ ಕಳ್ಳನಂತೆ ಬಾಹ್ಯದಲ್ಲಿ ಬಾಯಾಲುವೆ (ಏಲೇಶ್ವ. ೪೯); ಮೊನೆಯಿಲ್ಲದೊಪ್ಪುವ ಬಾಣ ಕೊಲುವೆನೆಂದಾಲಿಯೆಸುವ ವೀರನರೆಗಂಡು (ಲಶಿಚಂ. ೧೨–೭೧); ನೀನಂಜದಿರು ಕೈಕೊಂಡು ನಿಲುವೆನೆನುತ್ತ ಫಲುಗುಣಮಂಡಿಸಿದನಾಲಿದನು ಸೆಳೆದನು ಬೋಳೆಯಂಬುಗಳ (ಕುವ್ಯಾಭೀ. ೧೦–೧); ಪರವಾದಿಯಂ ಕೊಂದೆವೆಂದಾಲಿ ಬೊಬ್ಬಿರಿವುತ್ತ (ಚಬವು. ೬೨–೨೩); ಮೆಯ್‌ಪೊಕ್ಕಾಲುವ ದೇವಿಯರನ್ (ಅಂತಿಗೊ. ೫೧–೧೦೬). **ಆಲಕರೆ** = ಕೂಗಿ ಕರೆ; ಅರಿಚಿ ಕರೆ: 'ಬರಬಾರದೆ ಬೇಗ?' ಎಂದು ಆಲಕರೆಯುತ್ತಿದ್ದಾಳೆ (ಗುಲಾಬಿ. ೬೨). **ಆಲಿಕೊಳ್** = ಕಿರಿಚಿಕೋ: ಖಂಡೆಯದ ಪೊಳಪಿನ ಭಟಾಳಿ ಭೋಯೆನುತಾಲಿಕೊಂಡು ಬೊಬ್ಬಿರಿವುತಿರ್ಪುದು (ಚಬವು. ೪೨–೨೫). 'ಅರ್₁' ಪರಾ.

[ದೇ. ‖ ತಮಿ. ಅಲು, ಅಲಿ; ಮಲ. ಅಲಿ]

**ಆಲ್‌ಅವಲಾದ್** (ನಾ). ವಂಶ; ಸಂತಾನ: ಈ ಮೇರೆ ಈ ಸಾಧನದಲ್ಲಿ ಬರದು ಇಟ್ಟಂಥಾದ್ದನ್ನು ಕಾಲಾನುಕಾಲಕ್ಕೂ ಮಹಾರಾಜರವರು ಆಲ್‌ಅವಲಾದ್ ತಿಳಿಯುವ ಬಗ್ಯೂ (ರಾಜೇಂದ್ರ. ೧೫೨).

[← ಅರ. ಅಲ್‌ಅವಲಾದ್]

**ಆಲ₁** (ನಾ). ಹಾಲುಮರಗಳಲ್ಲಿ ಒಂದು; ನ್ಯಗ್ರೋಧ; ವಟವೃಕ್ಷ: "ನ್ಯಗ್ರೋಧಃ, ಬಹುಪಾತ್, ವಟಃ – ಈ ೩ ಆಲದಮರ" (ನಾಚಿರಾ. ೧೦೭); ಕಗ್ಗಲ್ಲ್ಮರದು ಸಲ್ಲು ಪೆರಿಯ ಆಲ (ಎಕ. II, ೩೫–೬; 800); ಪಡುವಣ ಮೇರೆ ಆಲದಮರ (ಕಇ. II, ೫–೪; 859); ಮುಂದೆ ತಮ್ಮ ಪಗೆ ಪರ್ವುವಂತೆ ಪನ್ನಿರ್ಮರ್ತ್ತರ್ ಪರ್ವಿದಾಲದ ಮರದ ಮೊದಲ್ಗೆ ವಂದು (ಪಂಪಭಾ. ೨–೩೦ ವ); ಆಲದಮರದ ಮೇಲೆ ಕಾಗೆ ಬಂದು ಪಾಯ್ದುಂ ದುಸ್ವರದಿಂ ಕರೆವುದುಂ (ಪಂಚತಂ. ೨೨೪–೧೦); ಆಲದೆಲೆಯ ಮೇಲೆ ಮಲಗಿದ ಶಿಶುವೇ (ಪುರಂದ. ೧–೧೯–೩); ಆಲಕ್ಕೆ ಹೂವಿಲ್ಲ ಸಾಲಕ್ಕೆ ಕೊನೆಯಿಲ್ಲ ಜಾಲಿಯ ಮರವು ನೆರಳಲ್ಲ (ಜಗೀತ. ೮೮). **ಆಲದಬಿಬಿಲು** = ಆಲದಮರದ ಕೊಂಬೆಗಳಿಂದ ಕೆಳಕ್ಕೆ ಇಳಿಯ ಬೀಳುವ ಬೇರುಗಳು: ಆಲದಬಿಬಿಲಂತೆ ನೆಲಕ್ಕೆಱಗದೆ (ಧರ್ಮಾಮೃ. ೫–೯೯); ಸೈಂಧವದಿಂದರೆದಾಲದಬಿಬಿಲನಳೆವೆರಸಿ ಕುಡಿದಂದು ಮಾಣ್ಬ ವತಿಸಾರಂ (ಕಲ್ಯಾಕಾ. ೪–೧೩). **ಆಲದಪಣ್** = ಆಲದಮರದ ಹಣ್ಣು: ಮಿಸುಪಾಲದಪಣ್ಣನಂದಮಂ ಪೊಳೆವಧರಂ ಕರಂ ನೆಱೆಯೆ ಪೋಲ್ವುದಱಿಂ (ಧರ್ಮಾಮೃ. ೩–೧೮೦); ಮೊಡವಿ ಜನಿಸಿದುವು ಮೊಗಮೆಂಬಿಂದುವಿನೊಡಲಾಲದಪಣ್ಣನುಗುವವೊಲ್ (ಜಯಕಾ. ೨–೪೭).

[ದೇ. ‖ ತಮಿ. ಆಲ್, ಆಲ; ಮಲ. ಆಲ್; ಕೊಡ. ಆಲಿ; ಪರ್ಜಿ. ಏಲ್; ಗೊಂಡಿ. ಅಲೀ]

**ಆಲ$_2$** (ನಾ). ಒಬ್ಬಾತನ ಹೆಸರು : ಕೇಸರಿ ತೊಱುವಾಳ್ವನ್ ಮಗನ್ ಆಲನ ತೊಱು ಇಕ್ಕಿಸಿ ಬಿಟ್ಟನ್ (ಎಕ. X (S), ಮುಳಬಾ. ೧೫೬–೫ ; 8ನೆಯ ಶತ). [?]

**ಆಲ$_3$** (ಗು). ೧. ಅಗಲವಾಗಿರುವ ; ವಿಸ್ತಾರವಾಗಿರುವ. (ನಾ). ೨. ವಿಷಪ್ರಾಣಿಗಳು ಬಿಡುವ ದ್ರವ. ೩. ಹಳದಿಯ ಬಣ್ಣದ ಹೂವು ; "ಅರದಾಳ" (ಗಂಗಾವು. ೨೮). ೪. ಚೇಳಿನ ಬಾಲ, —ಕೊಂಡಿ : "ದ್ರುತಪುಚ್ಛಾಲ[ಪಾಠಾಂ. ಮಾಳ]ಮೆನೆ ಚೇಳ ಬಾಲಕ್ಕೆ ನಾಮಂ" (ಮಂಗರಾ. ೧೧೯–೫). ೫. ಕಟಪ ; ಮೋಸ. 'ಆಲಜಾಲ' ಪರಾ. [ಸಂ.]

**ಆಲಂಕಾರಿಕ** (ಗು). ೧. ಅಲಂಕಾರದಿಂದ ಕೂಡಿದ ; ಅಲಂಕೃತವಾದ. ೨. ಔಪಚಾರಿಕವಾದ ; ಲಾಕ್ಷಣಿಕವಾದ. (ನಾ). ೩. ಅಲಂಕಾರ ಶಾಸ್ತ್ರವನ್ನು ಬಲ್ಲವನು ; ಅಲಂಕಾರ ಶಾಸ್ತ್ರಜ್ಞ : ನಮ್ಮ ಆಲಂಕಾರಿಕರು ಕಾವ್ಯಕ್ಕೆ ಪ್ರತಿಭೆ ಬೀಜವೆಂದು ಹೇಳಿರುವರು (ಭಾರವಿಾ. ೭೭). [ಸಂ.]

**ಆಲಂಗಿರಿ** (ನಾ). ಒಂದು ನಾಣ್ಯ ; ಒಂದು ವರಹ : ೧೮ ಬಗೆ ವರಹ ನಾಣ್ಯಗಳು. ೧೬ ಆಲಂಗಿರಿ ಕಿಮ್ಮತ್ತು ರೂ ೩ ಆ ೪ (ಕಭಾಗೆ. ೨೮೦).
[← **ಮರಾ.** ಆಲಮ್‌ಗಿರೀ = ಅಲ್ಪಬೆಲೆಯ ಒಂದು ನಾಣ್ಯ ;
**ಅರ.** ಆಲಮ್‌ಗೀರ್ = ಜಗತ್ತನ್ನು ಜಯಿಸಿದವನು]

**ಆಲಂಗಿಸು** 'ಆಲಿಂಗಿಸು' ನೋ.

**ಆಲಂತೂರ್, ಆಲತ್ತೂರ್** (ನಾ). ಒಂದು ಊರಿನ ಹೆಸರು : ಅನ್ದರಿಯ ಆಲನ್ತೂರ ಪೊರುಳಱ (ಇಆ. V, ೧೩೯–೬ ; 513). **ಆಲತ್ತೂರ್** : ಆನ್ದರಿಯಾಲತ್ತೂರ್ಪೊರುಳಱ ಪೆಚ್ನಿಗರಾದ್ಯನೇಕ ಸಮರಮುಖಮುಖಾಹೂತಿ (ಮೈಆರಿ. ೧೯೪೪ ; ೧೫–೧೪ ; 725) ; ಆನ್ದರಿ ಆಲತ್ತೂರ್ ಪೊರುಳಱ (ಎಕ. IV, ಎಡತೊ. ೬೦–೧೪ ; 890) ; ಆನ್ದರಿ ಆಲತ್ತೂರ್ಪೊರುಳಱ ಪೆಚ್ನಿಗರಾದ್ಯನೇಕ ಸಮರಮುಖ ಮುಖಹುತ ಪ್ರಹತ ಶೂರಪುರುಷ ಪಶೂಪಹಾರ (ಎಕ. X, ಕೋಲಾರ. ೯೦–೧೯ ; 903). 'ಅಲತ್ತೂರ್' ಪರಾ. [?]

**ಆಲಂಬ, ಆಳಂಬ** (ನಾ). = ಆಲಂಬನ ೧ : ದೀರ್ಘಬಾಹಾಲಂಬಂ ಭುಜವೀರ್ಯವಿಕ್ರಮಯುತಂ . . . ಕಲ್ತಂ ಧನುರ್ವಿದ್ಯೆಯಂ (ಪಂಪಭಾ. ೧–೬೮) ; ಶ್ರೀಲೋಲನೆ ನೀ ಗತಿಯೆಂದು ತರಳನ ಆಲಂಬದಲಿರುತಿಹಳು (ಚಂದ್ರಹಾ. ೧–೨೫). **ಆಳಂಬ** : ಮೃಗಾದಿ ಕ್ರೂರ[ಪಾಠಾಂ. ಘೂಳ] ಸತ್ವಕ್ಕೆ ಸಂದಾಳಂಬಂ ಪೆಱತಿಲ್ಲೆನಿಪ್ಪ ಗಹನಂಬೊಕ್ಕಲ್ಲಿ ಕಂಡರ್ (ನೇಮಿಪು. ೯–೫೩). [ಸಂ.]

**ಆಲಂಬನ, ಆಳಂಬನ** (ನಾ). ೧. ಆಶ್ರಯ ; ಆಧಾರ : ಮದನಂ ತೋಂಟಿಗನಾದ . . . ಶೀತಾಂಶು ತೀವಿದ ನೆಯ್ದಿಲ್ಗೊಳನಲ್ಲದಿಲ್ಲೆನೆ ಬನಂ ಚಿತ್ತೋತ್ಸವಾಲಂಬನಂ (ಮಲ್ಲಿಪು. ೭–೩೭). ೨. ನೇತಾಡುವುದು ; ಮೇಲಿನಿಂದ ಕೆಳಕ್ಕೆ ಜೋಲುಬಿದ್ದಿರುವುದು. ೩. ಸಹಾಯ ; ನೆರವು. **ಆಳಂಬನ** : ೧. ಇಂಬಱವಂದು ಬೇಸಱುವ ಪೆಂಡಿರ ಮಾಱ್ಕೆಯುಮಾತ್ರಮೋಹದಾಳಂಬನಮಪ್ಪ ಮಕ್ಕಳಿಡರ್ಗಾಗದುದಂ ಧನಮುಳ್ಳಿನಂ ಕರಂಡೊಂಬಿಸಿ ತಿಂಬರಿಲ್ಲದೊಡೆ . . . ಏನೆಂದು ಪೇೞ್ವುದೋ (ಜೀವಸಂ. ೬೯–೧೪, ವ). [ಸಂ.]

**ಆಲಂಬನಂಗೆಯ್** (ಕ್ರಿ). ೧. ತೂಗುಹಾಕು ; ನೇತುಹಾಕು : ಪಾಪಿ ಕೆಟ್ಟಂ ಕೆಟ್ಟನಿನ್ನೇಕೆ ಸಂದೇಹವೀಪರಿಯೊಳಕಟ ಪತ್ರಾಲಂಬನಂಗೆಯ್ದನೇ ಪೂರ್ವದೊಳ್ ನೆಗಳ್ದ ತದ್ವ್ಯಾಸನುಂಡ ದುಃಖವನದೇಂ ಕೇಳ್ದಱಿಯನೇ (ಪದ್ಮರಾ. ೯–೨೩). ೨. ಅವಲಂಬಿಸು.
[ಆಲಂಬನ + ಗೆಯ್ (< ಕೆಯ್$_1$)]

**ಆಲಂಬನವಿಭಾವ** (ನಾ). [ಕಾವ್ಯಮಿಾ] "ಭಾವವು ಆವಿರ್ಭವಿಸುವುದಕ್ಕೆ ಮೂಲಾಶ್ರಯವಾದ ಕಾರಣವೇ ಆಲಂಬನವಿಭಾವ" (ಭಾರವಿಾ. ೩೫೦) ; "ಕಾವ್ಯನಾಟ್ಯಗಳಲ್ಲಿ ಈ ಸ್ಥಾಯಿಭಾವಗಳನ್ನು ಉಂಟುಮಾಡುವ ವಸ್ತುಗಳಿಗೆ 'ಆಲಂಬನವಿಭಾವ'ಗಳೆಂದೂ, ಆ ಭಾವಗಳು ಹುಟ್ಟಿದ ಮೇಲೆ ಅವುಗಳನ್ನು ಉದ್ರೇಕಗೊಳಿಸುವ ವಸ್ತುಗಳಿಗೆ 'ಉದ್ದೀಪನ ವಿಭಾವ'ಗಳೆಂದೂ . . . ಹೆಸರು" (ಕೈಪಿಡಿ. ೧೮೯) ; ಆಲಂಬನವಿಭಾವಗಳಿಂದಾ ಸ್ಥಾಯಿಭಾವಂಗಳಂಕುರಿಸಿ (ವಿವೇಕ. ೨೨೭). 'ಉದ್ದೀಪನವಿಭಾವ' ಪರಾ. [ಆಲಂಬನ + ವಿಭಾವ]

**ಆಲಂಬಮಾನ** (ಗು). ಜೋಲಾಡುತ್ತಿರುವ ; ನೇತಾಡುತ್ತಿರುವ : ಅನೂನಮರಕತರತ್ನಭಿತ್ತಿವಿಭ್ರಾಜದೊಳಾಲಂಬಮಾನ ಮುಕ್ತಾದಾಮಲಂಬೂಷಭೂಷಿತದೊಳ್ (ಸುಕುಮಾ. ೯–೧೭ ವ). [ಸಂ.]

**ಆಲಂಬಿತ** (ಗು). ೧. ಜೋಲುಬಿಟ್ಟ ; ಇಳಿಬಿಟ್ಟ ; ತೂಗುಹಾಕಿದ : ಆಲಂಬಿತ ಜಾಂಬೂನದ ಘಂಟಾಜಾಲ ವಿರಾಜಿತಂಗಳುಂ (ಆದಿಪು. ೪–೫೮ ವ). ೨. ಆಧರಿಸಿದ ; ರಕ್ಷಿಸಲ್ಪಟ್ಟ. [ಸಂ.]

**ಆಲಂಬಿತಕೂರ್ಚ** (ನಾ). ಜೋಲಾಡುವ ಗಡ್ಡ ಉಳ್ಳವನು : ಆಲಂಬಿತಕೂರ್ಚಂ ಸಿಂಹದಂತಿಮದ್ರೇಕ್ಕಾಣಂ (ಜಾತತಿ. ೧೯–೧೫).
[ಆಲಂಬಿತ + ಕೂರ್ಚ]

**ಆಲಂಬಿಸು** (ಕ್ರಿ). ೧. ಜೋಲುಬೀಳು ; ನೇತಾಡು : ಮಱಿದುಂಬಿಯ ನುಣ್ಪೆಮರ್ವನಿಯದಱ ಬೆಂಬಳಿಯೊಳಿಳಿದಾಲಂಬಿಪಂತೆ (ರಾಜಶೇ. ೫–೧೯ ವ). ೨. ನೇತುಹಾಕು ; ತೂಗುಬಿಡು : ಕರ್ಪೂರದ ರಂಗವಾಲಿಯಿಂ ಆಲಂಬಿಸಿದ[ಪಾಠಾಂ. ಅವಲಂಬಿಸಿದ, ಆಲಂಕರಿಸಿ ಲಂಬಿಸಿದ] ಪುಷ್ಪಮಾಲೆಯಿಂದಲಂಕರಿಸಿದ (ನಂಬಿರ. ೧೦–೫೯). ೩. ಅವಲಂಬಿಸು ; ಹಿಡಿ : ವಿಧವೆಯಾದೊಡೆ ಶೀಲಮಾಲಂಬಿಸಿ ತವರ್ಮನೆಯೊಳಿರ್ದನಿತು ಕಾಲಮಾಲಸ್ಯಮಿಲ್ಲದೆ . . . ದೇಹಮಂ ದಂಡಿಸಲ್ಪತಿಲೋಕಮಂ ಪಡೆದಳು (ಜೈಮಿಭಾ. ೫–೫೫). [ಆಲಂಬನ + –ಇಸು$_3$]

**ಆಲಂಭ, ಆಳಂಭ** (ನಾ). ೧. ಹಿಡಿದುಕೊಳ್ಳುವುದು. ೨. ಕೊಲ್ಲುವುದು. ೩. ಉತ್ಪಾಟನ ; ನಿರ್ಮೂಲನ. 'ದುರಾಲಂಭ' ಪರಾ. **ಆಳಂಭ** : ೨. "ಮಾರಣಂ . . . ಆಳಂಭಃ . . . ಈ ೨೧ ಕೊಲೆ" (ಹಲಾಯು. ೭೮–೩೨೪). [ಸಂ.]

**ಆಲಂಭನ** (ನಾ). = ಆಲಂಭ. 'ಸಮಾಲಂಭನ' ಪರಾ. [ಸಂ.]

**ಆಲಕೆಱ** 'ಆಲಗೆಱ' ನೋ.

**ಆಲಕೇರಿ** (ನಾ). ಒಂದು ಊರಿನ ಹೆಸರು : ಬಿಟ್ಟಕರಗೆಯ ಬಡ್ಡಿಯಿಂ ತೆಂಕ ಆಲಕೇರಿಯಿಂ ದೂರಾನ್ನರಂ ಪಡುವಲ್ ಬಿಟ್ಟರೆ (ಕಕುಲ. ೮–೩೦ ; 11ನೆಯ ಶತ). [ಆಲ$_0$ + ಕೇರಿ]

**ಆಲಕೊಳ** (ನಾ). ಒಂದು ಊರಿನ ಹೆಸರು : ಆಲಕೊಳದ ನಿತ್ತೋಟಕ್ಕಾಗೆ ತೆಂಕಲ್ಯೆವತ್ತೆರಡು ಗೇಣಗಳೆಯಲೆರಡು ಮತ್ತ (ಎಕ. VIII, ಸಾಗರ. ೧೦೮–೪೪ ; 1042). [ಆಲ$_0$ + ಕೊಳ (< ಕೊಬ)]

**ಆಲಕ್ಕೊವಾಡಿ** (ನಾ). ಒಂದು ಊರಿನ ಹೆಸರು : ತೊಱುಕೊಲ್ವಳಿ ಪೆರಿಯವನ್ ಕೋಲ್ಗಳಾಂತುಭಿಳ್ದನ್ ಎಳಾ ಆಲಕ್ಕೊವಾಡಿ ತಾಳೆಯೋನ್ (ಸೌಇಇ. IX–i, ೩–೧೦ ; 9ನೆಯ ಶತ). [? + ಪಾಡಿ]

**ಆಲಗಟ್ಟ** (ನಾ). ಒಂದು ಊರಿನ ಹೆಸರು : ಮಲ್ಲಿಕಾರ್ಜುನ ದೇವರ್ಗ್ಗೆ ಆಲಗಟ್ಟದ ಹಳಗಿನಲು ಬಿಟ್ಟ ಗದ್ದೆ ಕ[ಂ]ಮ್ಮ ನೂಱಮೂವತ್ತು (ಸೌಇಇ. IX–i, ೨೯೧–೨೮ ; 12ನೆಯ ಶತ). [ಆಲ$_0$ + ಗಟ್ಟ]

**ಆಲಗಾನಹಳ್ಳಿ** (ನಾ). ಒಂದು ಹಳ್ಳಿಯ ಹೆಸರು : ಅಡಿಗನಹಳ್ಳಿ ೧ ವಾದಾಂಡಹಳ್ಳಿ ೧ ಆಲಗಾನಹಳ್ಳಿ ೧ ಮಂಚಿನಹಳ್ಳಿ ೧ (ಎಕ. X, ಕೋಲಾರ. ೨೫೧–೧೪ ; 1631). [ಆಲಗಾನ$_0$ ? + ಹಳ್ಳಿ (< ಪಳ್ಳಿ)]

**ಆಲಗೇಱಿ**, ಆಲಕೇಱಿ (ನಾ). ಒಂದು ಊರಿನ ಹೆಸರು : ಸೆಟ್ಟಿಯುರ್ಮೆ ಆಲಗೇಱಿಯ ಎಱೆದ ಸರಿ ಬಂಧಂಶಿಗೇಱಿಯ ನಿರುವರಿ ಎಲ್ಲಿ ಬಿಟ್ಟ ಕಂಬಂ ೨೫ (ಕಳುಲ. ೯–೧೩ ; 11ನೆಯ ಶತ). **ಆಲಕೇಱಿ** : ಮೊದಲೇಱಿಯೊಳ್ ಇರ್ಪಣ್ಣುಗ ವೆದೆ ಗಟ್ಟಿ ಪನ್ನಿರ್ಮತ್ತಲೆಱಿ ಆಯ್ನೂಱು ಬಳ್ಳಿಯ ತೋಣ್ಟ ಆಲಕೇಱಿ (ಎಕ. XI, ದಾವಣ. ೧೭–೧೫ ; 889). [ಆಲ್$_{0}$ + ಕೇಱಿ]

**ಆಲಗ್ನ** (ಗು). **೧.** ಸೇರಿಕೊಂಡ ; ಸಿಕ್ಕಿಕೊಂಡ : ಉರಗಾಸ್ಯಾಲಗ್ನಭಗ್ನ ಪ್ರಚಲಿತಹರಿವೋಲ್ (ರಕ್ಷಾಶ. ೨೭). **೨.** ಸೇರಿಸಿ ಕಟ್ಟಿದ. [ಸಂ.]

**ಆಲಜಾಲ**, ಆಳಜಾಳ (ನಾ). ಮಿಥ್ಯೆಯ ಸಮೂಹ ; ಸುಳ್ಳಿನ ಕಂತೆ : ಎಂದಿವು ಮೊದಲಾಗಿ ಪಲವುಮಾಲಜಾಲಂಗಳಂ ದುರ್ಜೀವಿಕಾಗೃಹೀತೆ ಯೆನೆನ್ನೊಳ್ ಚಿಂತಿಸುತ್ತಮಿರ್ಪನ್ನೆಗಂ (ಕಾದಂಉ. ೫೬೭). **ಆಳಜಾಳ**: ಬಾಣಜಾಳಮದು ಭೋಂಕನೆ ನೋಡುವೊಡಾಳಜಾಳಮಾಯ್ತೆನೆ ಕಡಿದೊಟ್ಟೆ ಸುಟ್ಟುವು ಪತತ್ರಿಗಳಂ ಗುರುಪುತ್ರನಂಬುಗಳ್ (ಪಂಪಭಾ. ೧೨–೬೮).

[ಆಲ್$_{3}$ + ಜಾಲ]

**ಆಲತಿ** 'ಆರತಿ$_{1}$' ನೋ.

**ಆಲತ್ತೂರ್** 'ಆಲಂತೂರ್' ನೋ.

**ಆಲದಾವು** (ನಾ). ಒಬ್ಬಾತನ ಹೆಸರು : ಆಲದಾವುನ ಹೆಣ್ಡತಿ ಆಳ್ವಬ್ಬೆ ಕಟ್ಟಸಿದ ಕೆಱೆಯುಸ್ (ಎಕ. X, ಚಿಕ್ಕಬ. ೩–೫ ; 953). [?]

**ಆಲಪರಿ** 'ಆಲ್ಪರಿ' ನೋ.

**ಆಲಪಿಸು** 'ಆಲಾಪಿಸು' ನೋ.

**ಆಲಪ್ಪ** (ನಾ). ಒಬ್ಬಾತನ ಹೆಸರು : ಆತನ ಮಕ್ಕಳು ಆಲಪ್ಪ ಬಯಿರೆಯಂಗಳು ಎತಿಸಿದ ಬೀರಗಲ್ಲು (ಎಕ. II, ೪೦೫–೪ ; 1333 ?).

[ಆಲ್$_{0}$ + ಅಪ್ಪ$_{1}$]

**ಆಲಬೋಯ** (ನಾ). ಒಬ್ಬಾತನ ಹೆಸರು : ಆಲಬೋಯಸ್ಯ ಕೌಣ್ಡಿಲ್ಯ ಗೋತ್ರಸ್ಯ ಕಱತ್ತಿಶರ್ಮ್ಮಣ ಪುತ್ರಾಯ (ಇಆ. VII, ೧೮೭–೪೨ ; 668).

[ಆಲ್$_{0}$ + ಬೋಯ]

**ಆಲಮಂಡಲ** (ನಾ). ಒಂದು ಕ್ಷೇತ್ರದ ಹೆಸರು : ಆಲಮಂಡಲಸ್ಯ ಷಟ್ ಖಣ್ಡಿಕಮ್ (ಮೈಆರಿ. ೧೯೧೪ ; ೧೦–೧೨ ; 729). [ಆಲ್$_{0}$ + ಮಂಡಲ]

**ಆಲಮಡವೆ** (ನಾ). ಆಲದ ಮರದ ಬಳಿಯ ಕಾಲುವೆಯ ತೂಬು : ತಳಕಾಡ ಮಾದರಸ ವೊಡೆಯರ ಕಟ್ಟೆ ಕಾಲುವೆಯ ಕೆಳಗೆ ಆಲಮಡವೆಯ ವೊಳಗೆಱೆಯ ಗದ್ದೆ (ಎಕ. III, ತಿರುಮ. ೧೩–೮ ; 9ನೆಯ ಶತ). 'ಮಡವೆ' ಪರಾ. [ಆಲ್$_{1}$ + ಮಡವೆ]

**ಆಲಮರ** (ನಾ). ಆಲದಮರ ; ವಟವೃಕ್ಷ: ಅಭವಂಗಿಳೆಯೊಳ್ ತಪಮಿರ್ಪ ಭವಾನಿಗೆ ಬಂದು ಕಲ್ಪತರು ಫಳರಸದಿಂದಭಿಷೇಕಂ ಮಾಡುವನತಿ ವಿಭವದವೋಲೆಸೆದುದಾಲಮರನಾ ಮಳೆಯೊಳ್ (ಗಿರಿಕ. ೯–೫೮).

[ಆಲ್$_{1}$ + ಮರ]

**ಆಲಮಾರಾನ್** (ನಾ). ಒಬ್ಬಾತನ ಹೆಸರು : ಕುಱುಂಜಿಯುಳ ಊರಱಿ ಕೊಲ್ವಲ್ಲಿ ಪೊನ್ನೆ ಆವು ಒಡೆಯಲಕವಧಿ ಪೆಸರ ಆಲಮಾರಾನ್ ಕೆಲೆ ಮೂಟ್ಟಿನ್ ಸತ್ತನ್ (ಸೌಇಇ. IX–i, ೩–೯ ; 9ನೆಯ ಶತ). [?]

**ಆಲಯ**, ಆಳಯ (ನಾ). ವಾಸಸ್ಥಳ; ಮನೆ ; ನಿವಾಸ : "ಆವಾಸಃ . . . ನಿವಸನಂ, ಆಲಯಃ—ಈ ೩೧ ಮನೆ" (ಹಲಾಯು. ೪೯–೧೩೯) ; ಹೆಬ್ಬಾಳೆಯೌದುಂಬರಂ ತುಂಬುರಿಂಗಾಲಯುವೆನಿಪ್ಪ ನಾನಾ ಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಹಚಕಾ. ೫–೧೫) ; ಎರಡು ಕೋಣೆಗಳ ನೀಂ ಮಾಡು ಮನದಾಲಯದಿ (ಮಂಕುಕ. ೭೦೧). 'ದೇವಾಲಯ,' 'ಶಿವಾಲಯ' ಪರಾ. **ಆಳಯ** : ಖರ್ಜೂರಮೇಲೆ ಲವಂಗಂ ಕಾಳಾಗುರುಗಂಧಂಗಳ್ಗಾಳಯಮಾದಂದು ವಾಹಮುತ್ಸಾಹಕರಂ (ಅಶ್ವಶಾ. ೩–೧೮). [ಸಂ.]

**ಆಲಯಿಸು** 'ಆಲಿಸು$_{1}$' ನೋ.

**ಆಲಯ್ಯ** (ನಾ). ಒಬ್ಬಾತನ ಹೆಸರು : ಪರಾಕ್ರಮಸಿಂಗಂ ತೊಲಗದ ಗಂಡಂ ಶೌರ್ಯ್ಯಾಗಾರಂ ಶ್ರೀಮದಾಲಯ್ಯಂ (ಎಕ. VIII, ಸೊರಬ. ೧೮೪–೬ ; 1033). [ಆಲ್$_{0}$ + ಅಯ್ಯ$_{1}$]

**ಆಲಯ್ಸು** 'ಆಲಿಸು$_{1}$' ನೋ.

**ಆಲವಂಟಿಗೆ** (ನಾ). = ಆಲವಟ್ಟ : ವೇಳೆ ವೇಳೆಗೆ ನಾ ಊಳಿಗವಮಾಡುವೆ ನಾ ಆಲವಂಟಿಗೆ ಚಾಮರವ ಬೀಸುವೆ (ಕನಕ. ೯೧–೨). [< ಆಲವಟ್ಟ]

**ಆಲವಟ** 'ಆಲವಟ್ಟ' ನೋ.

**ಆಲವಟ್ಟ**, ಆಲವಟ (ನಾ). ಹುಲ್ಲು, ತಾಳೆಗರಿ ಅಥವಾ ಬಟ್ಟೆಯಿಂದ ಮಾಡಿದ ಬೀಸಣಿಗೆ; ಬಿಜ್ಜಣಿಗೆ: "ಬಿಜ್ಜಣಿಗೆ, ಆಲವಟ್ಟಂ – ಈ ೨ ತಾಲವೃಂತಂ" (ಕಶಸಾ. ೩೧–೬೬೨) ; "ತಾಲವೃಂತಾಖ್ಯಮಱಕ್ಕುಂ ಪೇಟಿಲ್ ಬಿಜ್ಜಣಿಗೆಯಾಲವಟ್ಟಮದೆಂದುಂ" (ಕವಿಕಂ. ೨೪೪) ; ವಾಯು ಬಯಲೆಂದಡೆ ತಿರುಗುವ ಆಲವಟ್ಟದಲ್ಲಿ ಸಿಕ್ಕಿ ಕುಱುಹುಗೊಂಬುತಿತ್ತು (ಅಱಿಮಾ. ೩೭) ; ಯುವತಿಯರು . . . ಬೀಸುವ ಕಮಲದಳದಾಲವಟ್ಟದೆಲರು (ಹಚಕಾ. ೩–೭೧) ; ಆಲವಟ್ಟದ ಗಾಳಿಯಲಿ ಮೇಘಾಳಿ ಮುಱಿವುದೆ (ಕುವ್ಯಾದ್ರೋ. ೧–೨೯) ; ಪಿಡಿದ ಕೆಂಡಸಂಪಗೆಯ ಬಿರಿಮುಗುಳಾಲವಟ್ಟಂ (ರಾಜಶೇ. ೪–೧೪ ವ). **ಆಲವಟ** : ಇದುವೆ ಐರಾವತದ ಕೊರಳ ಹೊಂಘಂಟೆಯೋ ಅಮರಪುರದಾಲವಟವೊ (ಸೋಮಚ. ಪರಿ. ೨೦೬); ಮಂದಮಾರುತನ ಮದನ ದಿವ್ಯಾಂಗಲತೆಗೆ ಸೂಸುವೋಲೊರ್ವ ಚದುರೆ ಬೀಸಿದಳಾಲವಟವ (ಕಂನವಿ. ೨೪–೮೦).

[< ಸಂ. ಆಲಾವರ್ತ]

**ಆಲವಟ್ಟಲು**, ಆಲಿವಟ್ಟಲು (ನಾ). **೧.** = ಆಲವಟ್ಟ : ಎಳಲತೆ ಮೆಟ್ಟುವ ಪೊದೆಯ ಕುಳಿರೆಲರಾಲವಟ್ಟಲು[ಪಾಠಾಂ. ಲೆ]ಗಳಿಂ ಮಧುರಾಜ ತಳರ್ದ ನಂದನರಾಜ್ಯಕಾಗ (ಕಂನವಿ. ೯–೬) ; ಆಲವಟ್ಟಲ ಗಾಳಿಗೆ ಮುಱಿವುದೆ ಮೇಘ (ರಾಮವಿ. ೧೮–೧೬೬). **೨.** ಒಂದು ಬಗೆಯ ಛತ್ರಿ, —ಕೊಡೆ : ಅಂಬರವಿಂಬಿಲ್ಲ ಮುಂಬಲಿ ತುಂಬಿದ ಹೊಂಬೆಸೆಯಾಲವಟ್ಟಲಿಗೆ (ಕಂನವಿ. ೧೩–೨೬) ; ರವಿರಶ್ಮಿಯ ಜರೆವಾಲವಟ್ಟಲುಗಳ ಸುವಿಲಾಸದ ನೆಳಲೊಳಗೆ ತವೆ ಮೊಳಗುವ ವಾದ್ಯದೆ (ಕಂನವಿ. ೨೧–೩೩). **ಆಲಿವಟ್ಟಲು** : **೧.** ಆಲಿವಟ್ಟಲ ತಂದಿಕ್ಕಿ ತುಪ್ಪಳವಾಸ ಸಾಲಿಹಚ್ಚಡಗಳ ನಿರಿಸಿ ಮೇಲೆ ಪುಷ್ಪಗಳ ಹಾರಗಳ ಮಂಚಕೆ ಸುತ್ತಿ ಕಾಳಾಗರುಧೂಪವಿಕ್ಕಿ (ಜಿನರಾ. ೨–೯೮) ; ಸಿಂಹಪೀಠದ ಕೆಲದಿ ಆಲಿವಟ್ಟಲು ಚಮರದ ಬಿಚ್ಚಿಲೆಯ ಗಳಿಗೆಗಳ ನೀಡುವತಿಸೌಂದರಿಯರು (ಜಿನಮು. ೩–೨).

[ಆಲವಟ್ಟ + –ಲು]

**ಆಲವಟ್ಟಿಗ** (ನಾ). ಬೀಸಣಿಗೆಯಿಂದ ಬೀಸುವವನು : ಅತ್ಯಧಿಕರು ಆಲವಟ್ಟಿಗನಟುವ ಕ್ಷಾತ್ರ ಧರ್ಮಜನನೋಲಗಿಪರೂ (ಸೌಂದಕಾ. ೨–೨೨).

[ಆಲವಟ್ಟ + –ಇಗ]

**ಆಲವಣ್** (ನಾ). ಆಲದ ಹಣ್ಣು : ಶಶಿಬಿಂಬಮನಿನಿತಗಲದೆ ಪತ್ತಿದಾಲವಣ್ಣೆಂಬಿನೆಗಂ (ಉದ್ಭಟ. ೬–೧೦೪); ಆಲವಣ್ಣೆಂದಧರಮಂ ಗಿಳಿ ಕೆರ್ದುಂಕಿದುದು (ಚಿಬಪು. ೧೦–೬೪).

**ಆಲವಣ್ಣದುಟಿ**, **ಆಲವಣ್ಣುಟಿ** = ಆಲದ ಹಣ್ಣಿನಂತೆ ಕೆಂಪಾಗಿರುವ ತುಟಿ : ಬಣ್ಣದುಟಿಯ ಬಂದುಗೆಯಲರ್ದುಟಿಯಾಲವಣ್ಣದುಟಿಯ ತೊಂಡೆದುಟಿಯ ಸಣ್ಣ ಚೆಂದಳಿರದುಟಿಯ ಹೆಱೆದುಟಿಯೆಳೆವೆಣ್ಣ ತಿಂತಿಣಿ ಬಂದುದಾಗ (ನೇಮಿಸಂ. ೨೩–೨೪೩) ; ಬಾಲಮೃಗಾಕ್ಷಿಯ ಅಮೃತನಿಭವಾಣಿಯನಾಲವಣ್ಣುಟಿಯ ಕೋಮಲೆಯಾ (ಶ್ರೀಪಾಲ. ೪–೯೧) ; ತಳಿರ್ದುಟಿಯ ತೊಂಡೆವಣ್ಣುಟಿಯ ಬಂದುಗೆದುಟಿಯ ಪೊಳೆವ ಸಸಿಗೆರೆದುಟಿಯ ಆಲವಣ್ಣುಟಿಯ (ಚಿಬಪು. ೩೭–೪೫). [ಆಲ್$_{1}$ + ಪಣ್$_{2}$]

**ಆಲವರಿ** 'ಆಲ್ಪರಿ' ನೋ.

**ಆಲವರು** 'ಆಲ್ಪರಿ' ನೋ.

**ಆಲವಾಲ, ಆಳವಾಳ** (ನಾ). ಮರದ ಬುಡದಲ್ಲಿ ನೀರು ನಿಲ್ಲುವಂತೆ ಸುತ್ತಲೂ ಕಟ್ಟುವ ಕಟ್ಟೆ; ಪಾತಿ; ಮಡಿ: "ಆಲವಾಲದೊಳ್ಕುಂಡದೋಳ್ವಂಶವೃದ್ಧತ್ವದೊಳು ಕಟ್ಟೆ" (ಶಬ್ದಮಂ. ೯೦) ; ಭಕ್ತಲೋಲ ಸುಗುಣಾಲವಾಲ ಮತ್‌ಪುತ್ರಿಯಂ . . . ಕೈಕೊಂಡು ಪಾಲಿಸೆನ್ನನು (ಪದ್ಮರಾ. ೩–೩೮) ; ಸುಲಲಿತದೋರ್ಲತೆಗಳಿಗಾಲವಾಲವನೆಳಸಿ ರಚನೆ ಮಾಡಿದಂತೆ (ಚಂಪ್ರಸಾಂ. ೧೨–೧೧೯) ; ತರುಗಳಾಲವಾಲದೊಲು (ವಿಸೀಗೀ. ೬೮–೬). **ಆಳವಾಳ**: ವನಕುಸುಮಂಗಳಂ . . . ಮೆಲ್ಲನೆ ವಕುಳಾಳವಾಳತಳದೊಳ್ ಸುರಿದು (ಪಂಪಭಾ. ೨–೧೬) ; ಏಣಶಾಬತತಿ ನೀರುಣೆ ಕಣ್ಗೊಳಿಪಾಳವಾಳ ಮಂಡಳದಿನದೊಂದು ಮುಂದೆಸೆದು ತೋಱಿದುದಾಗಳಶೋಕಭೂರುಹಂ (ಕಾದಂಪೂ. ೨೨೯). [ಸಂ.]

**ಆಲವಾಲಂಗೆಯ್** (ಕ್ರಿ). ಪಾತಿಯನ್ನು ಮಾಡು ; ಕಟ್ಟೆಕಟ್ಟು : ಎಳದೊಳಚಿಸಸಿಗಳಂ ಬಳಸಿಯಗೆದಾಲವಾಲಂಗೆಯ್ದು (ಚಿಕವಂ. ೧೦೩–೨೧).
[ಆಲವಾಲ + ಗೆಯ್ (< ಕೆಯ್$_1$)]

**ಆಲವಾಲಗಟ್ಟು** (ಕ್ರಿ). ಪಾತಿಯನ್ನು ಕಟ್ಟು; ಮಡಿ ಮಾಡು : ಮುದದ ಬೀಜಕೆ ಬ್ರಹ್ಮ ಪದೆದಾಲವಾಲಗಟ್ಟಿದನೆಂಬೊಲೆಸೆದುದಾಪರಿಧಿ (ಭೈರಸೂ. ೨೯೨–೮೬). [ಆಲವಾಲ + ಕಟ್ಟು$_1$]

**ಆಲವಾಲಜಲ** (ನಾ). ಪಾತಿಯ ನೀರು : ನಿಮ್ಮ ವಚೋಜಲಮಾಲವಾಲಜಲಕೃತ ವಿಲಾಸನೃಪಭೂರುಹಕ್ಕೆ ಹಿತಕರಮೆ ವಲಂ (ಶಾಂತಿಪು. ೧೦–೧೧೯) ; ನಿರ್ಮಲಧರ್ಮದ್ರುಮಕಾಲವಾಲಜಲಮಿರ್ಪಂತಿರ್ಪುದು ಶಾಪಮಂ. ೨೧೪; 1112) ; ಬಿಡದಾಲವಾಲಜಲದೊಳ್ ಕಡುಗೆಂಪಿಡಿದಿಡಿದ ಬೀಜ (ರಾಜಶೇ. ೨–೪೯). [ಆಲವಾಲ + ಜಲ]

**ಆಲಸ** (ಗು). ೧. ಮಂದವಾದ; ನಿಧಾನವಾದ. (ನಾ). ೨. ಸೋಮಾರಿ; ಜಡ: "ಆಲಸಂ ಜಡಂ ಮಂಥರಂ ಜಿಂಹ್ಮನೆನೆ ಸೋಂಬನಕ್ಕುಂ" (ಮಂಗರಾ. ೭೩–೨೪). ೩. ಸೋಮಾರಿತನ; ಆಲಸ್ಯ : ಆಲಸವು ನಿದ್ರೆಗಳು ಕವಿದವು (ಕೌಶಿರಾ. ೨೨–೩೨). [ಸಂ.]

**ಆಲಸಿ, ಆಳಸಿ** (ನಾ). = ಆಲಸ : ಅವನು ಆಲಸಿ ಯಾವುದೊಂದು ಕೆಲಸ ಮಾಡುವುದಿಲ್ಲ (ರೂಢಿ). **ಆಳಸಿ** (ಉಕ) : ಅವನು ಆಳಸಿ (ರೂಢಿ).
[ಆಲಸ + –ಇ$_2$]

**ಆಲಸಿಕೆ** (ನಾ). ೧. ಆಯಾಸ ; ಬಳಲಿಕೆ : ಏಳಿ ಹೊತ್ತಾಯ್ತು ಬಿಡಾರವನೊಳಪೊಕ್ಕು ಆಲಸಿಕೆಯ ಪರಿಹರಿಸಿ (ಜಿನರಾ. ೬–೧೪೧). ೨. ಜಡತೆ; ಆಲಸ್ಯ ; ಜಾಡ್ಯ : "ಜಡ್ಡು ; ಜಡ" (ಕಂನುಹು. ೮೯).
[ಆಲಸ + –ಇಕೆ]

**ಆಲಸ್ಯ** (ನಾ). ೧. ಸೋಮಾರಿತನ ; ಮೈಗಳ್ಳತನ ; ಅಲಕ್ಷ್ಯ : ಕಾವ್ಯಮಂ ನಡೆಸುವಾತಂ ರಸಾವೇಶ ಮಱಹಾಲಸ್ಯವೆಡೆಗೊಳಲು ತಪ್ಪುಗಲ್ಲದೆ ಕಾವ್ಯಕರ್ತೃ ತಪ್ಪುವನೆ (ಹಚಕಾ. ೧–೨೩) ; ಆಲಸ್ಯದವನಿಗೆ ಎರಡು ಕೆಲಸ ಲೋಭಿಗೆ ಮೂರು ಖರ್ಚು (ಗಾದೆ). ೨. ಅನಾರೋಗ್ಯ ; ಅಸ್ವಸ್ಥತೆ : ಒಬ್ಬಳ ಮೈಗೆ ಆಲಸ್ಯವಾಗಲಿ ದೇಹಾಯಾಸವಾಗಲಿ ಆದರೆ ಅದು ಇನ್ನೊಬ್ಬಳಿಗೂ ಆಲಸ್ಯವಾಯಿತು ; ಆಯಾಸವಾಯಿತು (ಶಾಂತಲಾ. ೧೧). ೩. ಸೋಮಾರಿ ; ಮೈಗಳ್ಳ : ಕರ್ಮಬಂಧಕ್ಕಂ ಮೋಕ್ಷಮುಕ್ಕುಂ (ಇದನಱಿದು) ನೀನಾಲಸ್ಯನಾಗದಿರು (ಜೀವಸಂ. ೧೮೭–೭ ವ) ; ಮತಿಹೀನನುಮಾಲಸ್ಯನುಮತಿನಿದ್ರಾಪೂರ್ಣನಯನನುಂ (ಅಶ್ವಶಾ. ೬–೯೭). ೪. ದಣಿವು ; ಬಳಲಿಕೆ (ಕ). ೫. ಬೇಜಾರು ; ಬೇಸರ : ಇಂದೆನಗೆ ನಿದ್ದೆ ಬಾರದು ಬಂದಪುದಾಲಸ್ಯಮಸದಳಂ ನೀಮೆನಗೊಂದೊಂದು ಕಥೆಗಳಂ . . . ಪೇೞ್ದು ಪೊತ್ತಂ ಕಳೆಯಿಂ (ಸುಕುಮಾ. ೩–೧೬). ೬. [ಕಾವ್ಯಮೀ] ಮೂವತ್ತುಮೂರು ಸಂಚಾರೀಭಾವಗಳಲ್ಲಿ ಒಂದು: ಧೃತಿ ನಿಪ್ರಾವೇಗ ಶಂಕಾತ್ರಸನ ಚಪಲತಾಲಸ್ಯ ಸುಪ್ತಾವಬೋಧ . . . ಸಂಚಾರಿ ಭಾವಂ (ಕಾವ್ಯಾವ. ೭೯೫) ; 'ಆಲಸ್ಯ' ಯಾವುದೂ ಬೇಡ ಎನಿಸುವ ಚಿತ್ತವೃತ್ತಿ (ಭಾರಮೀ. ೩೨೦). [ಸಂ.]

**ಆಲಸ್ಯಗಾಣ್** (ಕ್ರಿ). ಉದಾಸೀನತೆಯಿಂದ ನೋಡು ; ಅಲಕ್ಷಿಸು : ಓಲಗವಾಗದ ಮುನ್ನ ಬಂದೈ ನಸು ಜೋಲಿಯಾಯ್ತದಱಿಂದ ನಿನ್ನ ಆಲಸ್ಯಗಂಡರೆಂದೆನ್ನದಿರು (ಭರಚ. ೪೭–೫೬). [ಆಲಸ್ಯ + ಕಾಣ್]

**ಆಲಸ್ಯಗಾರ** (ನಾ). ೧. ಸೋಮಾರಿ ; ಮೈಗಳ್ಳ. ೨. ರೋಗಿ ; ಜಡ್ಡಿನವನು (ದಕ. ಕ). [ಆಲಸ್ಯ + –ಗಾರ (< –ಕಾಱ)]

**ಆಲಹಕ್ಕಿ** (ನಾ). ಒಂದು ಊರಿನ ಹೆಸರು : ಆಲಹಕ್ಕಿ ಗುಂಮ್ಮಟಸೆಟ್ಟಿಯರ ಮಕ್ಕಳು (ಎಕ. VIII, ತೀರ್ಥಹ. ೧೧೧–೬ ; ?). [?]

**ಆಲಾಅದನಾ** (ನಾ). ಮೇಲು ಕೀಳು : ಚಿಕ್ಕವರು ದೊಡ್ಡವರು ಆಲಾ ಅದನಾ ಮುಂತಾದ ಸಮಸ್ತ ರೈತರು ನಿಂಮಕ್ ಹಲಾಲಾಗಿ ಸ್ವಾಮಿಕಾರ್ಯಧುರಂಧರರಾಗಿ ನಡಕೊಳ್ಳಬೇಕು (ರಾಜೇಂದ್ರ. ೧೨೪).
[← ಹಿಂ. ಆಲ್‌ಅದನಾ]

**ಆಲಾಜೀಲಿ** 'ಆಲಾಜೋಲಿ' ನೋ.

**ಆಲಾಜೋಲಿ, ಆಲಾಜೀಲಿ** (ನಾ). ೧. ಆಲಸ್ಯ ; ಜಡತೆ: ಆಲಾಜೋಲಿಯಿಂದ ಬಸವನ ಹುಳದಂತೆ ಮುಂದಕ್ಕೂ ಹಿಂದಕ್ಕೂ ತೆವಳುತ್ತಿದ್ದು (ಕಂನಾಸಾ. ೧೩). ೨. "ಅಮಲಿನ ಗುಂಗು" (ಜಾನಕೋ. ೧೬). ೩. ಸಾವಕಾಶ (ಸ್ಯಾಂಡರ್). **ಆಲಾಜೀಲಿ** : ೩. (ದಕ) ಅವನು ಆಲಾಜೀಲಿ ಮಾಡಿ ಬಂದ (ರೂಢಿ). [?]

**ಆಲಾಟ** (ನಾ). ಕೂಗುವಿಕೆ ; ಅರಚುವಿಕೆ : "ಆಲಾಟ—ಕೂಗುವಿಕೆಯಲ್ಲಿ" (ಕರ್ಣಾಭಾ. ೧೯). [ಆಲ್$_1$ + ಅಟ]

**ಆಲಾನ, ಆಳಾನ** (ನಾ). ಆನೆಯನ್ನು ಕಟ್ಟುವ ಕಂಬ : "ಆಲಾನಮೆನೆ ಕಂಭಮಕ್ಕುಂ" (ಮಂಗರಾ. ೪೭–೫) ; ಪಾಯ್ದಾಲಾನಮಂ ತ್ವಗ್ಜಲೋಹಜ ಬಂಧಂಗಳನೆಲ್ಲಮಂ ಪಱಿವಿನಂ ಪೊಯ್ದುತ್ತಿ (ಪಂರಾಮಾ. ೧೫–೩೧). **ಆಳಾನ** : ಪದುಳವಿರ್ದಪ್ಪುದುದ್ದಾಮದೊಳ್ ಕುಂಭಿನಿಯೀಗಳ್ ವೀರಬಲ್ಲಾಳನ ವಿಜಯ ಭುಜಾಳಾನದೊಳ್ ಲೀಲೆಯಿಂದಂ (ಎಕ. IV, ನಾಗಮಂ. ೨೯–೧೨ ; 1219). [ಸಂ.]

**ಆಲಾನಸ್ತಂಭ, ಆಳಾನಸ್ತಂಭ** (ನಾ). = ಆಲಾನ : ಉದಾತ್ತನಾರಾಯಣನೂರುಯುಗ್ಮಂಗಳ್ ಮಾನಿನಿಯರ ಮನೋಗಜಂಗಳ ಕಟ್ಟಲ್ಕಾಲಾನಸ್ತಂಭಂಗಳಾದುವು (ಪಂಪಭಾ. ೨–೩೯ ವ). **ಆಳಾನಸ್ತಂಭ** : ಆನಂದಂಬೆರಸಂಕದಚ್ಚರಸೆಯರ್ ದೇವೇಂದ್ರನೈರಾವತಾಳಾನಸ್ತಂಭಸಮಂಗಳಪ್ಪ ಭುಜಸಂದೋಹಂಗಳೊಳ್ (ಆದಿಪು. ೭–೧೨೩).
[ಆಲಾನ + ಸ್ತಂಭ]

**ಆಲಾಪ, ಆಳಾಪ** (ನಾ). ೧. ಮಾತು ; ಸಂಭಾಷಣೆ ; ಸಲ್ಲಾಪ : ಸತಿಯಾಲಾಪಕೆ ಸೋಲ್ವ ಜೂಜಿಗೆ ಮತಿವಂತರ್ ಮರುಳಪ್ಪರೇ (ಸೋಮೇಶ. ೨೦) ; ವಿತತ ಸಲ್ಲಕ್ಷಣಾಲಾಪದಿಂ . . . ನಿಸೆಯಂ ನೂಂಕಿದಂ ಮಂತ್ರಲಕ್ಷಂ (ರಾಜಶೇ. ೬–೨೯). ೨. = ಆಲಾಪನೆ ೨: "ಆಲಾಪ ಎಂದರೆ ವಿಸ್ತರಿಸುವುದು ಎಂದು ಅರ್ಥ" (ಸಂಗೀಚಂ. ೨೮) ; ಆಲಾಪ . . . ವ್ಯಾಪ್ತಿ ಮುಂತಾದ ಇಪತ್ನಾಲ್ಕು ತೆರದಲ್ಲಿ . . . ಆಲಾಪಿಸಿ ಕೇಳಿಸುವ (ವಿವೇಕ. ೨೩೭) ; ಗಮಕ ಬೇರೆ, ಆಲಾಪ ಬೇರೆ (ಯಕ್ಷಬ. ೬೫). **ಆಳಾಪ** : ೧. ಪುರಜನಾಳಾಪಂಗಳ್ ನೆಗೞೆ (ಪಂಪಭಾ. ೯–೬ ವ) ; ಕೋಪದಲಿ ಗಂಭೀರತನದಾಳಾಪಕೊಂಬುದೆ (ತೊರರಾ. ೬–೪–೩೬). ೨. ತಾಳ ಮದ್ದಳೆ ಶಂಖನಾದ ಭಾಗವತರ ಮೇಳದ ಸಂಪ್ರದಾಯಗಳ ಆಳಾಪಗಳಿಂದ (ಕಂನವಿ. ೯–೬೧). [ಸಂ.]

**ಆಲಾಪನೆ** (ನಾ). **೧.** ಮಾತನಾಡುವಿಕೆ; ಸಂಭಾಷಣೆ. **೨.** [ಸಂಗೀತ] ಸಂಗೀತದ ಪ್ರಾರಂಭದಲ್ಲಿ ರಾಗದ ಛಾಯೆಯನ್ನು ವಿಸ್ತರಿಸಿ ತೋರಿಸುವುದು : ಮಂದ್ರಸ್ಥಾಯಿಯಲ್ಲಿ ಆಲಾಪನೆ ಮುಕ್ತಾಯಮಾಡುವುದೂ ಒಂದು ಕ್ರಮ (ಸಂಗೀಚಂ. ೨೯). [**ಸಂ.** ಆಲಾಪನ]

**ಆಲಾಪಿ** (ನಾ). ಮಾತನಾಡುವವನು ; ಸಂಭಾಷಣಕಾರ: ಭೂನರರು ವಿಸ್ಮಿತರಾಗಿ ಪೊಗಳಲು ಸರಸ ಸತ್ಯಾಲಾಪಿ ಕರುಣಾಮೂರ್ತಿ ಚೌಡಯ್ಯ (ಬಸಪು. ೩೨–೧೬). [**ಸಂ.** ಆಲಾಪಿನ್]

**ಆಲಾಪಿಸು**, ಆಲಪಿಸು, ಆಳವಿಸು, ಆಳಾಪಿಸು, ಆಳ್ಳೆಸು (ಕ್ರಿ). **೧.** ಮಾತಾಡು ; ಸಂಭಾಷಿಸು : ಸಾಮುದ್ರಿಕವೆಂದು ಪೇಳಿದ ಶೌಷ್ಕಲನ ಬಾಯಿ ಬೆಂದುಹೋಗದೆಯೆಂದು ಆಲಾಪಿಸುತ್ತಿರುವಾಗ (ಸೌಗಂಧಿ. ೩೫೬–೫). **೨.** ಗಾನಮಾಡು ; ರಾಗದ ಛಾಯೆಯನ್ನು ತೋರಿಸು : ಆ ಕಳಾವತಿಯರಾನಂದಭೈರವಿಯಂನಾಲಾಪಿಸುತ ನಿಂತಿರಲು (ಸೌಗಂಧಿ. ೫೦೩–೨). **ಆಲಪಿಸು : ೨.** ಮದಮುಗ್ಧಮದಾಳಿಯಂತಿರೆ ಆಲಪಿಸುವ ತನ್ನಿಂಚರಮುಮಂ ವಿಪಂಚಿಯನುಚ್ಚರಮುಮಂ (ಲೀಲಾವ. ೧೦–೧೩ ವ). **ಆಳವಿಸು : ೧.** ಉಬ್ಬಿನೊಳಾಳವಿಸಿದನು ಚಾಪಗಾನಸ್ವಾನಕವನಜಿದು (ಕುವ್ಯಾಕ. ೨೪–೪೯). **ಆಳಾಪಿಸು : ೧.** ನಿಶೆಯ ನಿಃಶಬ್ದತೆಗೆ ಭಂಗಬಾರದ ತೆರದಿ ತನ್ನೊಳಾಳಾಪಿಸುತೆ ಗುಡಿಸಲೊಳಗಾದಳಾ ಶಬರಜ್ಜಿ (ಶ್ರೀರಾಮಾ. ೨೬೮–೧೩೪). **೨.** ಪ್ರಾತಃಕಾಲದ ರಾಗವನಜಿದು ಆಳಾಪಿಸಿದರು (ಭರಚ. ೧–೭೨) ; ಸಪ್ತಸ್ವರವನಾಳಾಪಿಸಲು ಕ್ರಮದಿಂದ (ಕೌಶಿರಾ. ೨೪–೧೧). **ಆಳ್ಳೆಸು : ೧.** ಗಿಳಿಗಳ್ಗೊಳೆ ಗಟಿಪಿ ಮೊಜೆವಳಿಕುಳದೊಡನಾಳ್ಳೆಸಿ [ಪಾಠಾಂ. ಆಲಯ್ಸಿ]ಪುರುಳಿಯೊಡನೆಳಸಿ (ಆದಿಪು. ೧೧–೮೨). [ಆಲಾಪನ + – ಇಸು$_3$]

**ಆಲಾಬು** (ನಾ). ಸೋರೆಗಿಡ, —ಕಾಯಿ, —ಬುರುಡೆ. [**ಸಂ.**]

**ಆಲಾವರ್ತ** (ನಾ). = ಆಲವಟ್ಟ. [**ಸಂ.**]

**ಆಲಾಷ** (ನಾ). [ಸಂಗೀತ] ಸಪ್ತಸ್ವರಗಳನ್ನು ಆರೋಹಣ, ಅವರೋಹಣಕ್ರಮದಲ್ಲಿ ವಿವಿಧ ವಿನ್ಯಾಸಮಾಡಿ ಹಾಡುವುದು : ಆಲಾಪ ಕಾಲಾಪ ಆಲಾಷ . . . ಮುಂತಾದಿಪ್ಪತ್ನಾಲ್ಕುತೆರದಲ್ಲಿ . . . ಆಲಾಪಿಸಿ ಕೇಳಿಸುವ ಭಾಸುರಕರ ವಾರವಿಲಾಸಿನಿಯರಿಂ (ವಿವೇಕ. ೨೩೭). [**ಸಂ.**]

**ಆಲಾಸ್ಯ** (ನಾ). ಮೊಸಳೆ. [**ಸಂ.**]

**ಆಲಿ**$_1$, ಆಣಿ$_1$, ಆರಿ$_1$ (ನಾ). ಘನೀಭೂತವಾದ ನೀರಿನ ಹನಿಗಳು ; ಆಲಿಕಲ್ಲು ; ನೀರ್ಗಲ್ಲು : ಸುರಧನು ತಳಿರ್ದೋರಣವಾಲಿ ರಂಗವಲಿ ಬದ್ಧವಣಂ ಜಳಧರರವಮಾಗೆ (ಚಂದ್ರಪು. ೪–೪೨) ; ಸಿಡಿಲಸರಿ ಮೊಟಗುಗಳ ಮಱೆ ಕುಡುಮಿಂಚಿನ ಸೋನೆಯಾಲಿಗಳ ಬೆಳ್ಸರಿಗಳ್ (ಅರ್ಧನೇ. ೪–೬೧). ‘ಆಲಿಕಲ್’ ಪರಾ. **ಆಣಿ**$_1$ : ‘ಆಣಿಕಲ್ಲು$_1$’ ಪರಾ. **ಆರಿ**$_1$ : ‘ಆರಿಕಲ್ಲು’ ಪರಾ.

[**ದೇ.** ‖ **ತಮಿ. ಮಲ. ಕೊಡ. ಕುರುಖ್.** ಆಲಿ ; **ಮಲ್ತೊ.** ಆಲಿ]

**ಆಲಿ**$_2$ (ನಾ). **೧.** ಕಣ್ಣಿನ ಮಧ್ಯದಲ್ಲಿರುವ ಕರಿಯ ಗುಡ್ಡೆ ; ಕಣ್ಣುಗುಡ್ಡೆ : “ಕನೀನಿಕಾ, ನಯನಮಧ್ಯಂ, ತಾರಾ– ಈ ೩ ಕರಿಯಾಲಿ” (ಹಲಾಯು. ೮೬–೩೬೬) ; “ಕನೀನಿಕೆಯಕ್ಷಿಮಧ್ಯಂ ತಾರೆಯೆನಲಾಲಿ” (ಮಂಗರಾ. ೯೩–೨) ; ಕಣ್ಮಲರ ಬೆಳ್ಪುಗಳಾಲಿಯ ಕಟ್ಪಿನೊಳ್ ಪೊದಟ್ಟು (ಪಂಪಭಾ. ೪–೭೮) ; ನಾನು ಪುಷ್ಪದ ಹಾಗೆ ನೀವು ಪರಿಮಳದ ಹಾಗೆ ನಾನಾಲಿಯ ಹಾಗೆ ನೀವು ನೋಟದ ಹಾಗೆ (ವಚಸಂ. ೧೨೧–೮೯) ; ಮತ್ತೆಯುಂ ಮುಳಿದಾಲಿಯಂ ತಿರಿಪಿದಾಗಳ್ (ಬಂಹರಿ. ೮–೫೦ವ) ; ಕಳಹಂಸಧವಳನಗ್ರಜ ನಳಿನೀದಳಶ್ಯಾಮನನುಜನಿರ್ವರ ಗಡಣಂ ಬಿಳಿಯ ಕರಿಯಾಲಿಯಂತುಜ್ಜಳಿಸಿರೆ ಲೋಕಕ್ಕೆ ತಾಮೆ ಲೋಚನಮಾದರ್ (ಅನಂಪು. ೧೨–೮೬). **೨.** ಕಣ್ಣು : “ಅಚ್ಚಿಯಾಲಿಯೆಂದೆನೆ ದಿಟ್ಟಿ” (ಶಬ್ದಮಂ. ೭೧) ; “ಅಚ್ಚಿ, ಆಲಿ, ದಿಟ್ಟಿ – ಈ ೩ ನಯನಂ” (ಕಶಸಾ. ೨೧–೪೨೫) ; ಈಕೆಯ ರೂಪಮಳುಂಬಮಾದೊಡಂ ನಮ್ಮಮುನ್ನ ನೋಡಿದಾಲಿಗೀಗಳ್ ಕಿಂಚಿನ್ಮಾತ್ರಂ ಕುಂದಿರ್ದುದು (ಶಾಂತಿಪು. ೯–೧೦೧ವ) ; ಆಲಿ ನುಂಗಿದ ನೋಟದಂತೆ ಬಯಲ ನುಂಗಿದ ಬ್ರಹ್ಮಾಂಡದಂತೆ (ಶೂನ್ಯಸಂ. ೭೬–೧೯) ; ಆಲಿ ಕಿಡಿಯಿಡೆ ಕುಣಿವ ಮೀಸೆ ಕರಾಳವದನದ . . . ಭೀಮ ಬಂದನು ಬಿಟ್ಟ ಸೂಠಿಯಲಿ (ಕುವ್ಯಾಗ. ೨–೩೭). **೩.** ದೃಷ್ಟಿ ; ನೋಟ : ಆಲಿ ನಿಮ್ಮಲ್ಲಿ ನಟ್ಟವು ನೋಡಯ್ಯ (ಮಹಾದೇ. ೩೬–೧) ; ದ್ರುಪದ ತನುಜೆಯನಾಲಿಯಲಿ ನುಂಗಿದನು (ಕುವ್ಯಾವಿ. ೨–೧೪). **೪.** ಕಣ್ಣುರೆಪ್ಪೆ : ಒಯ್ಯಗೊಯ್ಯಗೆ ನಗೆಗಣ್ಗಳಾಲಿ ಮುಗುಟ್ದಂತಿರೆ ಮುಚ್ಚಿರೆ (ಪಂಪಭಾ. ೨–೧೯). **೫.** ಕಣ್ಣಬೇನೆ (ಉಕ. ೬). [?]

**ಆಲಿ**$_3$ (ನಾ). ನೇಯುವುದು ; ನೇಯ್ಗೆ : ಸರ್ವ ಸಾವಧಾನಿಯ ಇರವು ಅನಿಲನ ತೆಜದಂತೆ ಅಂಕುರ ಅಪ್ಪುವಿನ ತೆಜದಂತೆ ಆಲಿ ನೂಲಿನ ತೆಜದಂತೆ (ಮೋಳಿಮಾ. ೧೨೯–೪೯೯) ; “ನೂಲನ್ನು ತೆಗೆಯುವ ಯಂತ್ರ, ರಾಟೆ” (ಮೋಳಿಮಾ. ಕೋಶ). [?. / **ತೆಲು.** ಅಲ್ಲು = ನೇಯು]

**ಆಲಿ**$_4$, ಆಳಿ$_4$ (ನಾ). **೧.** ಗೆಳತಿ ; ಸ್ನೇಹಿತೆ ; ಸಖಿ. **೨.** ಆಸೆ ; ಬಯಕೆ. **೩.** ಸಾಲು ; ಪಂಕ್ತಿ. **೪.** ಸಮೂಹ ; ಗುಂಪು. **೫.** ಏರಿ ; ಸೇತುವೆ. **೬.** ದುಂಬಿ. **೭.** ಚೇಳು. **ಆಳಿ**$_4$ : **೧.** ಮೇಳಿಸಿ ಪೊರ್ದಿದಾಳಿಯರ ಮೈಬಿಸುಪೇಱೆ (ಜಗವಿ. ೧೧–೨೧) ; ಮೇಳದಾಳಿಯೊಳ್ ಆಳಿಯೊರ್ವಳ್ ನುಡಿದಳ್ (ಚಂದ್ರಪು. ೮–೭೬ ವ) ; ಮದನಾವಳಿಯೆಂಬಾಳಿಯ[illegible]ರ್ವಳ್ (ಜಯಕಾ. ೪–೨೪). **೪.** ಅಂಗನಾಳಿಯಾರೊಡನೆ ಗಜಂಗಳಾರೊಡನೆ . . . ಪೋದುವು (ಅಜಿಪು. ೨-೧೦೩) ; ಹವಿಯಜ್ಞಾಳಿಗೆ ಭೂಷಣಂ (ಸೋಮೇಶ. ೫). **೫.** “ಆಳೀ, ಪಾಳೀ — ಈ ೨ ಏಱಿ” (ಹಲಾಯು. ೧೧೧–೫೪) ; “ಆಳಿಪಾಳಿಯೆನಲೇಱಿಯಕ್ಕುಂ” (ಮಂಗರಾ. ೧೨೩–೧೪) ; “ಕೆಳದಿಯರೊಳು ಬಯಕೆಯೊಳುಂ ಸಲೆ ನೆರವಿಯೊಳು ತ್ರಿಶಬ್ದವಾಳೀ ಪಾಕ್ಕಂ” (ನಾನಾಕಂ. ೧೫೬). **೮.** ವಂಶ ; ಮನೆತನ : ಆಳಿ ಸವೆವಲ್ಲಿ ಆವಧಾನಿಯಾಗಿರ್ದರೆ ಆಳ್ದನು ನಮ್ಮ ಕೂಡಲ ಸಂಗಮದೇವ (ಬಸವ. ೭೮೮).

[**ಸಂ.** ಆಲಿ, ಆಲೀ]

**ಆಲಿಂಗ** (ನಾ). ಅಪ್ಪಿಕೊಳ್ಳುವುದು ; ತಬ್ಬಿಕೊಳ್ಳುವುದು. [**ಸಂ.**]

**ಆಲಿಂಗನ** (ನಾ). ಅಪ್ಪಿಕೊಳ್ಳುವುದು ; ತೆಕ್ಕೆ : “ತಱ್ಕೆಯಪ್ಪುಗೆಯನಲ್ಕಾಲಿಂಗನಂ” (ಕಬ್ಬಿಕೈ. ೨೯) ; ತನುಪುಳಕದುಬ್ಬುಗಳಲಾಲಿಂಗನವ ಮಾಡಿದನು (ತೊರರಾ. ೧–೧೧–೨೩). [**ಸಂ.**]

**ಆಲಿಂಗನಂಗೆಯ್** (ಕ್ರಿ). ಅಪ್ಪಿಕೊ ; ತಬ್ಬಿಕೊ : ಪಲ್ಲವಿತ ಕೋರಕಿತ ಕುಸುಮಿತ ಫಲಿತ ಪರಿಣತ ಫಲಲಲಿತ ಸಹಕಾರ ಭೂರುಹಮನತಿನಿಬಿಡಾಲಿಂಗನಂಗೆಯ್ದು (ಆದಿಪು. ೧೧–೯೭ ವ) ; ಪರಮಾಶೀರ್ವಚನ ಶತಸಹಸ್ರಂಗಳಿಂ ಪರಸಿ ಪುನಃಪುನರಾಲಿಂಗನಂಗೆಯ್ದು (ಗದಾಯು. ೩–೮೪ ವ).

[ಆಲಿಂಗನ + ಗೆಯ್ (< ಕೆಯ್$_1$)]

**ಆಲಿಂಗಿತ** (ಗು). ಅಪ್ಪಿಕೊಂಡ ; ತಬ್ಬಿಕೊಂಡ : ಚರಲಿಂಗ ಸರ್ವಾಲಿಂಗಿತ ಪ್ರಾಣ (ಬಸಪು. ೩೬–೫೫). [**ಸಂ.**]

**ಆಲಿಂಗಿಸು**, ಆಲಂಗಿಸು (ಕ್ರಿ). ಅಪ್ಪಿಕೊ ; ತಬ್ಬಿಕೊ : ನೀಳ್ದಂಬರಲಕ್ಷ್ಮಿಯುಮಂ ವಿಟನೆಂಬಿನಮಾಲಿಂಗಿಸುತ್ತೆ ಧೂಳೀಪಟಲಂ (ಅಜಿಪು. ೯–೧೫); ನಿಮ್ಮ ಕರುಣಾಪಾಂಗದಿಂ ಭಕ್ತ್ಯಂಗನೆಯನಾಲಿಂಗಿಸುವೆನೆನುತಾ (ಬಸಪು. ೪–೪೮). **ಆಲಂಗಿಸು :** ಅತಿ ಶೀತಳವಾಗಿ ಮೆಲ್ಲನೆ ಸಂಚರಿಸುವ ಮಾರುತಗಳಿಂ ಸ್ನೇಹದಿಂದಾಲಂಗಿಸಿ (ಸೌಗಂಧಿ. ೨೮೦–೧೫) ; ಎರಡೂ ಕೈಗಳಿಂದ ಮರಣವಧುವನ್ನು ಆಕೆ ಆಲಂಗಿಸಿದಳು (ಹಳ್ಳಹಾ. ೧೨೦). [ಆಲಿಂಗನ + – ಇಸು$_3$]

**ಆಲಿಂಗ್ಯ** (ಗು). ೧. ಅಪ್ಪಿಕೊಳ್ಳಲು ಯೋಗ್ಯವಾದ; ತಬ್ಬಿಕೊಳ್ಳಲು ಅರ್ಹವಾದ. (ನಾ). ೨. ಚರ್ಮವಾದ್ಯವನ್ನು ನುಡಿಸುವ ಮೂರು ಬಗೆಗಳಲ್ಲಿ ಒಂದು : ತ್ವಂಕ್ಯ ಆಲಿಂಗ್ಯ ಊರ್ಧ್ವಕವೆಂಬ ತ್ರಿವಿಧಕ್ರಮ ವಱೆತು . . . ನುಡಿಸಿ ಬಾರಿಸುವ ಜಾಣರಪ್ಪ ಮರ್ದಳಿಕಾಜಿರಿಂ (ವಿವೇಕ. ೨೩೭). [ಸಂ.]

**ಆಲಿಂದ** (ನಾ). ಮನೆಯ ಹೊರಬಾಗಿಲಿನ ಮುಂದಿನ ಪಡಸಾಲೆ; ಮೊಗಸಾಲೆ. [ಸಂ.]

**ಆಲಿಕಲ್**, ಆಣಿಕಲ್ಲು$_1$, ಆಣೆಕಲ್ಲು, ಆಣೆಗಲ್ಲು, ಆರಿಕಲ್ಲು, ಆಲಿಕಲ್ಲು, ಆಲಿಗಲ್ (ನಾ). ಘನೀಭೂತವಾದ ಮಳೆಯ ಹನಿ; ಘನೋಪಲ : "ಕರಕಃ, ಘನೋಪಳಃ — ಈ ೨ ಆಲಿಕಲ್" (ಹಲಾಯು. ೧೧-೫೯); "ಕರಕ ಆಲಿ [ಪಾಠಾಂ. ಆನಿ, ಅರಿ] ಕಲ್" (ನಾನಾರ. ೫೦); ಬಣ್ಣವುರಂ ತೀವಿದ ಮಾಟ್ಕೆಯಾಯ್ತು ನವಿಲಿಂ ಕುಂದಂಗಳಿಂದಿಂದ್ರಗೋಪವಿಳಾಸಂ ಗಳಿನಾಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ (ಪಂಪಭಾ. ೭-೨೪); ತರುವಲಿಯ ತಲೆಯ ಕಿರೀಟಮನಾಲಿಕಲ್ಲ ಮಱೆ ಕೊಂಡುದೆಂಬಂತೆ (ಧರ್ಮಾಮೃ. ೧-೧೫೮); ಜಲದ ಮಂಟಪದ ಮೇಲೆ ಉರಿಯ ಚಪ್ಪರವ ನಿಕ್ಕಿ ಆಲಿಕಲ್ಲ ಹಸೆಯ ಹಾಸಿ (ಮಹಾದೇ. ೭-೭); ಆಲಿಕಲ್ಲಾಲಿಕಲ್ಲಂ ತಾಗಿದಂತಾಗೆ (ಬಸರ. ೧೧-೧೬೫); ನೀರಾಲಿಕಲ್ಲ ನೀರೊಳಗೆ ಬೈಚಿಟ್ಟಂತೆ (ದೀಕ್ಷಾಬೋ. ೧೩೯-೮); ಆಲಿಕಲ್ಗಳ ಮಳೆಯು ರಪರಪನೆ ಹೊಡೆದಂತೆ (ಕವಿಸೋ. ೯೧). **ಆಣಿಕಲ್ಲು$_1$** : ಆಣಿಕಲ್ಲು ಕರಗಿದಷ್ಟು ವೇದನೆಯಾಯಿತು ಹೃದಯಕ್ಕೆ (ಹಾಡುಹು. ೭೩). **ಆಣೆಕಲ್ಲು** : ಮಳೆಹನಿಗಳು ಗಟ್ಟಿಯಾಗಿ ಬಿಳೀಕಲ್ಲಿನ ಹಾಗೆ ಬೀಳುತ್ತವೆ, ಅವೇ ಆಣೆಕಲ್ಲು (ಮುಂಬಯಿ. ೧-೩೪); ಆಣೆಕಲ್ಲೊಲು ಕರಗಿ ಬಿಟ್ಟ ನಿಟ್ಟುಸಿರೆ ಚಂದನದ ತಂಪು (ಗರಿ. ೮೪-೨೦). **ಆಣೆಗಲ್ಲು** : ಝುಂಝಾನಿಲನು ಅತಿಶಯ ಶೈತ್ಯವನ್ನು ತಳೆದು ಆಣೆಗಲ್ಲುಗಳನ್ನೂ ಸುರಿಸುತ್ತಿದ್ದನು (ಶ್ರೀರಾಪ. ೬೮). **ಆರಿಕಲ್ಲು** : ಉದಕದಿಂದಾರಿ [ಪಾಠಾಂ. ಲಿ] ಕಲ್ಲೊಗೆದಲ್ಲಡಗಿದಂತೆ (ಬಸಪು. ೬೧-೬೬). **ಆಲಿಕಲ್ಲು** : ಆಲಿಕಲ್ಲುಗಳು ಸಿಡಿಲಮಱುಗಳ ಮೇಲೆವಾಯ್ದುವು (ಕುವ್ಯಾಕ. ೧೧-೨೬); ಪಱದುದಿರುವ ಮಣಿನಿಚಯ ಬಿಱುವಳೆಯೊಳಗಾಲಿ ಕಲ್ಲುಗಳಂದದಿ ತುಱುಗಿರ್ದುದುಯ್ಯಲೆಯಡಿಯ (ಮೋಹತ. ೧೪-೯೦); ಎಲ್ಲರಚ್ಚರಿವಟ್ಟು ನೋಡುವಂತೊಡನಾಲಿಕಲ್ಲು ಝಲ್ಲೆಂದು ಚೆಲ್ಲಿದುವು (ಭರಚ. ೩೪-೫೫); ಸುಬ್ಬುವು ತನ್ನ ಕೈಗೆ ಬರುತ್ತಿದ್ದ ದುಡ್ಡನ್ನು ಆಲಿ ಕಲ್ಲಿಗೆ ಹೋಲಿಸುತ್ತಿದ್ದನು (ಅವತಂ. ೧೪೧); ಒಂದು ಸಾರಿ ಆಲಿಕಲ್ಲು ಬಿತ್ತು (ಪಠಾಕ್ಷಿ. ೩೭). **ಆಲಿಗಲ್** : ಮಲ್ಲಿಗೆ ಬಳ್ಳಿಮಿಂಚು ನಲ್ಲಲರ್ವಡಿಯಾಲಿಗಲ್ (ಉದ್ಭಟ. ೨-೪೭); ವ್ಯೋಮಕ್ಕೆ ತಾರಾಸಮೂಹಮನಭ್ರಾವಳಿಗಾಲಿಗಲ್ಲ ಸಿರಿಯಂ ಮೆಯ್ವೆರ್ಚಿಸಲ್ (ಪುಷ್ಪವು. ೧೧-೩೩); ಕೀರ ಪ್ರಚಯರೋಚಿ ಸುರಚಾಪಮುದಿರುವಲರಾಲಿಗಲ್ ಪಿಕ ಕದರ್ಕಿದ ಕೋರಕದಿ ಸುರಿವ ಸೊನೆವನಿ ಮಳೆಯವಾಗೆ (ನಂದಿವಾ. ೩-೧೯).

[ಆಲಿ$_1$ + ಕಲ್$_2$. / ತಮಿ. ಆಲಙ್ಗಟ್ಟಿ; ಮಲ. ಆಲಿಪ್ಪಟಿ; ತುಳು. ಆಲಿಕಲ್ಲು, ಆಲಿಪಂದ್ರ್; ಕೊಡ. ಅಲಿಕಯ್]

**ಆಲಿಕಲ್ಲು** 'ಆಲಿಕಲ್' ನೋ.

**ಆಲಿಕೋಡು** 'ಆಲಿಗೋಡು' ನೋ.

**ಆಲಿಗಣ್** (ನಾ). ಕಣ್ಣು : ಏನಿದೇನಚ್ಚರಿಯೊಳಾಲಿಗಣ್ಣರಳಿ ಮರವಟ್ಟವೋಲ್ (ಶ್ರೀರಾಮಾ. ೩೯೧-೭೯೮). [ಆಲಿ$_2$ + ಕಣ್]

**ಆಲಿಗಲ್** 'ಆಲಿಕಲ್' ನೋ.

**ಆಲಿಗುಡು** (ಕ್ರಿ). ತಂಪನ್ನುಂಟುಮಾಡು; ತಣ್ಣಗಾಗು : ಪರಿಜನಂಗಳ್ ತಳಿವ ಪೀಲಿಗರಗದಾಲಿಗುಡುವ ನೀರ ತೋರವನಿಯ ತಂದಲೊಂದು (ಚಂದ್ರಪು. ೫-೧೯ ವ). [ಆಲಿ$_1$ + ಕುಡು$_1$ (< ಕೊಡು)]

**ಆಲಿಗೊಂಡ** (ನಾ). ಒಂದು ಕೊಂಡದ ಹೆಸರು : ಆ ಗ್ರಾಮದ ಸೀಮೆಯೆಂತೆಂದೊಡೆ ಆಲಿಗೊಂಡದಿಂ ಸಿಡಿಲ ನೆಟಲಿಂ ಸಮೆಯದಾತನ ಕೆಱೆಯಿಂ (ಇಆ. XVIII, ೩೧೨-೧೮; 11ನೆಯ ಶತ). [ಆಲಿ$_1$ + ಕೊಂಡ$_1$]

**ಆಲಿಗೋಡು, ಆಲಿಕೋಡು** (ಕ್ರಿ). ಆಲಿಕಲ್ಲಿನಂತೆ ತಣ್ಣಗಾಗು; ಅತಿಶೈತ್ಯವಾಗು : ಉರದೊಳಿಕ್ಕಿದಾಲಿಗೋಡುವ ಹಾರಂಗಳೊಳಂ (ಕಾದಂಉ. ೭೭೫). **ಆಲಿಕೋಡು** : ಅಲಮನಳುರ್ವ ದವಾನಲನಾಲದ ತಣ್ಣೆಲೊಳಾಲಿಕೋಡೆ ತದೀಯ ಜ್ವಾಲೆ ಸುಡಲಾಱದಿರ್ದವೊಲಾಲದೆ ತಳತಳಿಸುತಿರ್ದುವೆಳದಳಿರ್ದುಱುಗಲ್ (ಲೀಲಾವ. ೮-೪೪).

[ಆಲಿ$_1$ + ಕೋಡು$_1$]

**ಆಲಿಡು** (ಕ್ರಿ). ಕೂಗಿಡು; ಒರಲು; ಕಿರುಚು : ಸಂಗನಂ ತಕ್ಕೈಸಿ ಪಳವಿಸಿ ಪಲುಂಬಿ ಗೋಳಿಟ್ಟು ಆಲಿ [ಪಾಠಾಂ. ಳಿ] ಟ್ಟು ಸಿವದಿಟ್ಟು ಮೊಱೆಯಿಟ್ಟು (ಬಸರ. ೪-೩೯); ಮಂದಿರಕ್ಕೆ ಮಂದಿರವೇ ಥರಗುಟ್ಟಿ ನಡುಗುವಂತೆ ಚೀರುವಳು. ಕೂಗುವಳು – ಆಲಿಟ್ಟು, ಗೋಳಿಟ್ಟು, ಸಿವದಿಟ್ಟು ಕೂಗುವಳು (ತುಂಗಭ. ೧೪೨). [ಅಲ್ + ಇಡು$_1$]

**ಆಲಿದೆಱೆ** (ಕ್ರಿ). ಕಣ್ಣು ರೆಪ್ಪೆಯನ್ನು ತೆರೆ : ಆಲಿದೆಱೆದು ನೋಳ್ಪ ಸಭೆಗೆ ಮೋಹದಿಂದ್ರಜಾಲವ ಬೀಸಿದರವರು (ಭರಚ. ೧೨-೯೩).

[ಆಲಿ$_2$ + ತೆಱೆ$_1$]

**ಆಲಿನೀರ್$_1$**, ಆಲಿನೀರು (ನಾ). ತಣ್ಣನೆಯ ನೀರು; ಮಂಜಿನ ನೀರು : ಕೆಂದಳಿರ ಪಾಸುಗ[ಳಂ] ಕುಳಿರ್ವಾಲಿನೀರ್ಗಳಿಂ ತುರಿಪದೆ ಸೂಸುತುಂ ಕೆಳದಿಯರ್ ನೆರಪುತ್ತಿರೆ (ಪಂಪಭಾ. ೫-೮); ತಣ್ಗರಗದ ತಣ್ಗೋಡುವಾಲಿನೀರಂ ಅರ್ಪನಿತಂ ಕುಡಿದು (ಧರ್ಮಾಮೃ. ೧-೧೫೨); ಬಾಳೆಯ ಬಿಜ್ಜಣಿಗೆಯಿಂ ಬೀಸಿಕೊಳುತ್ತೆ ಆಲಿನೀರ್ಗಳಂ ಚೆಲ್ಲಿಸಿಕೊಳುತ್ತೆ (ನಂಬಿರ. ೧೨-೧೧೭). **ಆಲಿನೀರು** : ಮಲಯರುಹದ ಘನಸಾರದ ಪಳುಕಿನ ಕಳಸದ ಕುಳಿರ್ವಾಲಿನೀರ (ಕುರಾಸಾಂ. ೨೪-೪). [ಆಲಿ$_1$ + ನೀರ್$_1$]

**ಆಲಿನೀರ್$_2$** (ನಾ). ಕಣ್ಣೀರು; ಕಂಬನಿ : ಗದ್ಗದಂ ಮಿಗೆಯುಗೆಯಾಲಿನೀರ್ ನೆಱೆಸೂಗಂಬಡೆಗುಂ (ಅಪ್ರತಿ. ೧೧-೯). [ಆಲಿ$_2$ + ನೀರ್$_1$]

**ಆಲಿನೀರು** 'ಆಲಿನೀರ್$_1$' ನೋ.

**ಆಲಿನೀರ್ವನಿ** (ನಾ). ತಣ್ಣಗಿರುವ ನೀರಿನ ಹನಿ : ಎಡೆವಿಡದಾಲಿನೀರ್ವನಿಗಳಂ ಸಿಂಪಿಸುವ ನೀರ್ಜೊಂಪಂಗಳೊಳಂ (ಕಾದಂಉ. ೫೯೮).

[ಆಲಿನೀರ್$_1$ + ಪನಿ$_2$]

**ಆಲಿಪರಿ** 'ಆಲ್ಪರಿ' ನೋ.

**ಆಲಿಮುಱಿ** 'ಆಲಿವಟಿ' ನೋ.

**ಆಲಿಯಕ್ದಾರು** (ನಾ). ದೊಡ್ಡ ಅಧಿಕಾರವುಳ್ಳವನು; ಉನ್ನತ ಅಧಿಕಾರಿ : ಆಲಿಯಕ್ದಾರು ಜನರಾಲ್ ಇಷ್ಪೋರಟ್ ಸಾಹೇಬ (ರಾಜೇಂದ್ರ. ೧೩೩). [← ಹಿಂ. ಆಲಾಎಖ್ದಾರ್]

**ಆಲಿವಟ್ಟೆಲು** 'ಆಲವಟ್ಟೆಲು' ನೋ.

**ಆಲಿವರಲ್, ಆಲಿವರಳು** (ನಾ). = ಆಲಿಕಲ್ : "ಆಲಿವರಲು ಮುಗಿಲ್ಗಲ್ಲೆಂದುಂ ತೋಱೆ ವರ್ಷೋಪಲಾಖ್ಯಂ" (ಕವಿಕಂ. ೯೧); ಧರಾತಳಕ್ಕೆ ಪೂವಲಿಗೆದಱಿದಂತೆ ಕೆದಱಿದ ಕರ್ಪೂರವಳಿಕುಗಳಂ ಮುಂಚೆ ಬಂದ ಜಳದಾಗಮ ಪ್ರಸೂಚಕಂಗಳಪ್ಪಾಲಿವರಲ್ಗಳೆಂದುಂ (ಸುಕುಮಾ. ೧೦-೭೮ ವ); ಭೂವನಿತೆಗೆ ಮುತ್ತಿನ ಸೇಸೆಗಳಂ ಗಗನಾಂಗನೆ ಸೂಸಿದಳೆನಿಸೆ ಬಿಳ್ದುವಾಲಿವರಲ್ಗಳ್ (ಗಿರಿಕ. ೯-೪೬); ಆಲಿವರಲ್ಗಳುಮಿಂದ್ರಗೋಪಮುಂ ಸೂಸಿದುವಭ್ರದಿಂ (ಶಮುದ. ೧೧೬ ಪ್ರಯೋ); ಗಗನಸ್ಥಳದಿಂದುಡುಗಳ್ಪಳಪಳನುದಿರ್ವವೊಲೆಡೆವಿಡದಿಳಿವಾಲಿವರಲ ಮಳೆ ಬಗೆಗೊಳಿಕುಂ (ರಾಜಶೇ. ೮-೧೧೩). **ಆಲಿವರಳು** : ಆಲಿವರಳುಗಳ ಪರಿಯಲಾತಾರಗೆವುದುರಿದುವು (ಸಾಳ್ವಭಾ. ೧೨-೩೨). [ಆಲಿ$_1$ + ಪರಲ್]

**ಆಲಿವರಳು** 'ಆಲಿವರಲ್' ನೋ.

**ಆಲಿವಱೆ**, ಆಲಿಮುಱೆ (ನಾ). ಆಲಿಕಲ್ಲು ಬೀಳುವ ಮಳೆ: ತನೂದರಿಯರಲಂಪಿನಿಂ ತುಳುಕೆ ಕೃಷ್ಣನ ಮೇಲೆ ಪೊದಱ್ದುದಂದು ಕಪ್ಪುರವಱೆಯಂತಿರಾಲಿವಱೆಯಂತಿರಲರ್ವಱೆಯಂತಿರೆತ್ತಲುಂ (ಜಗವಿ. ೧೪–೯೮). **ಆಲಿಮುಱೆ**: ಪೂರ್ವಭವ ವೈರಿಯಿರ್ದನೆಂದಱಿದು ಮುಳಿದು ಮಹಾಘೋರಮಪ್ಪಾಲಿಮುಱೆಯಂ ಮಾಡೆ (ಚಾವುಂಪು. ೩೯೩–೧).
[ಆಲಿ$_1$ + ಮುಱೆ]

**ಆಲಿವೆಳಗ** (ನಾ). ತಂಪಾದ ಕಾಂತಿಯುಳ್ಳವನು; ಚಂದ್ರ: "ಜೊನ್ನೊಡಲಂ . . . ಆಲಿವೆಳಗಂ . . . ತಿಂಗಳ್– ಈ ೨೦ ಚಂದ್ರನ ಪೆಸರ್" (ಕಶಸಾ. ೩–೨೩); "ಆಲಿವೆಳಗನುಱೆ ತಾಂ ನೆಯ್ದಿಲ್ಗೆಳೆಯ ಜೊನ್ನೊಡಲನೈಕಿಲ್ವೆಳಗಂ ತಣ್ಣದಿರ ಮಂಜುಗ್ಯೆಯಂ ಚಂದ್ರಂ" (ಕವಿಕಂ. ೪೩). [ಆಲಿ$_1$ + ಬೆಳಗು$_2$ + –ಅ$_7$]

**ಆಲಿಷಾಂ** (ಗು). ದೊಡ್ಡದರ್ಜೆಯ; ಘನವಾದ: ಆಮೇಲೆ ಆಲಿಷಾಂ ರಾಬರ್ಟ್ ಟಿಲೇರು ಸಾಹೇಬರವರು (ರಾಜೇಂದ್ರ. ೧೩೧).
[← ಪಾರ. ಅಲೀಶಾನ್]

**ಆಲಿಸು$_1$**, ಆಲಯಿಸು, ಆಲಯ್ಸು, ಆಲೈಸು (ಕ್ರಿ). **೧.** ಮನಸಿಟ್ಟು ಕೇಳು; ಕಿವಿಗೊಟ್ಟುಕೇಳು; ಗಮನಿಸು: "ಆಲಿಸು – ಪರಿಭಾವನೇ, ಆಕರ್ಣನೇ ಚ" (ಶಮಧಾ. ನ); ಮನಂ ಪೆರ್ಚಿ ಧನುರ್ಲತಾಗುಣನಿನಾದಮನಾಲಿಸಿ ಕೇಳಲುಂ (ಪಂಪಭಾ. ೧–೧೪೨); ಬೀಳ್ಕೊಂಡನಕ್ಕಱಿಂ ಲಾಲಿಸುತ್ತಾಲಿಸುತೆ (ಬಸರ. ೩–೮); ಆದೊಡಾಲಿಸುವೊಂದು ಬುದ್ಧಿಯಲಾದರಿಸಿ ಕೇಳಭವ ತನ್ನ ವಿನೋದದಿಂದಾ (ಪ್ರಭುಲೀ. ೬–೧೦); ಆರಸನಾಲಿಸಿ ಕೇಳುತಿರ್ದನು ಕೈಯ ಗಲ್ಲದಲಿ(ಕುವ್ಯಾದ್ರೋ. ೮–೬೩); ಈಚಣ್ಣನ ವಚನಗಳನ್ನು ವೀರಣ್ಣ ಕಿವಿಗೊಟ್ಟು ಆಲಿಸಿದ (ಹಾಹುತ್ತ. ೯೭). **೨.** ಚಿಂತಿಸು; ಆಲೋಚಿಸು: "ಆಲಿಸು – ಪರಿಭಾವನೇ, ಆಕರ್ಣನೇ ಚ" (ಶಮಧಾ. ನ). **ಆಲಯಿಸು**: **೧.** ಆಲಯಿಸಿ ಕೇಳ್ದಾ ಕಿರಾತರು ಪೇಳ್ದರುತ್ತರವಾ (ಅನಂರಾ. ೧–೨–೨೩). **ಆಲಯ್ಸು**: **೧.** ವೇದಪುರಾಣಾದಿಗಳನ್ನು ಆಲಯ್ಸಿದೆನು (ಸುಗುಗಂ. ೬೫–೨); ಆವನ ಬಿನ್ನಹವನ್ನು ಆಲಯ್ಸಿ (ಮುಂಬಯಿ. ೪–೨೧). **ಆಲೈಸು**: **೧.** ಮೃಗಪಕ್ಷಿಗಳನವಲೋಕಿಸುತ ಶುಕಪಿಕಾದಿ ಧ್ವನಿಗಳನಾಲೈಸುತ (ಸೌಗಂಧಿ. ೨೮೨–೯).
[ಆಲ್ ? + –ಇಸು$_3$. / **ತುಳು.** ಆಲೈಸು; **ತೆಲು.** ಆಲಗಿಂಚು, ಆಲಿಂಚು]

**ಆಲಿಸು$_2$** (ಕ್ರಿ). ಗಟ್ಟಿಯಾಗಿ ಕೂಗುವಂತೆ ಮಾಡು, —ಕೂಗು (ಕಿ).
[ಆಲ್ + –ಇಸು$_3$]

**ಆಲಿಸು$_3$** (ಕ್ರಿ). ನೋಡು; ನಿರೀಕ್ಷಿಸು: ಏಳಿ ದೇವಿಯರೆ ಯೆಮ್ಮೂರಿಗೆ ಪೋಪನೃಪಾಲರೆಲ್ಲರ ಕೂಡಿ ಮಂತ್ರಿವೇಳೆಯ ಕಾದು ಪೆರ್ಬಾಗಿಲೆಡೆಯೊಳು ನಿಂದಾಲಿಸುತಿಹನೆಂದಳವಳು (ಭರಚ. ೩೮–೧೧೩).
[ಆಲಿ$_2$ + –ಇಸು$_3$]

**ಆಲೀಢ** (ಗು). **೧.** ರುಚಿನೋಡಿದ; ತಿಂದ: ಆರಾತಿನೃಪಮಣಿಮಯಕಿರೀಟಪ್ರಭಾಲೀಢ ಚಳನ ನಳಿನಯುಗ್ಮಂ (ಸುಕುಮಾ. ೧–೭೯ ವ). **೨.** ಆವರಿಸಿದ: ಶ್ರೀರಾಮಾಲೀಢ ವಜ್ರದ್ರಢಿಮ ಘನ ಭುಜಸ್ತಂಭನಂ (ಎಕ. VII, ಶಿವಮೊ. ೭೪–೮೮; 1172). (ನಾ). **೩.** ಯುದ್ಧಮಾಡುವಾಗ ನಿಲ್ಲುವ ಕ್ರಮ: ರಥಯುದ್ಧದೊಳಮಾಲೀಢ ಪ್ರತ್ಯಾಲೀಢ . . . ವಿದ್ಯೆಗಳೊಳ್ (ಪಂಪಭಾ. ೧೩–೩೮ ವ). **೪.** [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು: ಸ್ಥಿರಹಸ್ತ . . . ಆಲೀಢ . . . ಸ್ವಸ್ತಿಕರೇಚಿತ –ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಲಾಸ್ಯರಂ. ೫–೭ ವ). [ಸಂ.]

**ಆಲೀನ** (ಗು). **೧.** ಕರಗಿಸಿದ. **೨.** ಮೇಲೆ ನೆಲೆಸಿದ; ಒರಗಿದ. [ಸಂ.]

**ಆಲು$_1$** 'ಆಲ್' ನೋ.

**ಆಲು$_2$** (ನಾ). **೧.** ನೀರನ್ನು ಇಡುವ ಸಣ್ಣ ಪಾತ್ರೆ, —ಹೂಜಿ; "ಅಕ್ಕಿ ತೊಳೆಯುವ ರವಳಿಗೆ" (ಗಂಗಾವು. ೨೮). **೨.** ಕಾಡು ಸೂರಣದ ಗಡ್ಡೆ. [ಸಂ.]

**ಆಲು$_3$** (ನಾ). ಪಲ್ಯಮಾಡಲು ಉಪಯೋಗಿಸುವ ಒಂದು ಬಗೆಯ ಗಡ್ಡೆ; ಆಲೂಗಡ್ಡೆ; ಬಟಾಟೆ. [← **ಪಾರ. ಹಿಂ. ಮರಾ.** ಆಲೂ]

**ಆಲುಕ** (ನಾ). **೧.** ನೀರನ್ನು ಇಡುವ ಸಣ್ಣಪಾತ್ರೆ; ಹೂಜಿ. **೨.** ಒಂದು ಜಾತಿಯ ಕಪ್ಪುಮರ. **೩.** ಆದಿಶೇಷ. [ಸಂ.]

**ಆಲುಕುರು** (ನಾ). ಒಂದು ಊರು: ಆಲುಕುರ ಕೆಱೆ ಕುಸುಗ ಕೆಱೆಯ ಪುಳುಂಸೆ (ಇಆ. XIV, ೨೩೩–೬೦; 9ನೆಯ ಶತ). [?]

**ಆಲುಗಡ್ಡೆ**, ಆಲೂಗಡ್ಡೆ, ಆಲೂಗೆಡ್ಡೆ (ನಾ). ನೆಲದಲ್ಲಿ ಬೆಳೆಯುವ ಗೆಣಸಿನಂತಹ ಗಡ್ಡೆ; ಉರುಳುಗಡ್ಡೆ: ಆಲುಗಡ್ಡೆ ತಿನ್ನುವುದು ಧರ್ಮವೋ ಅಧರ್ಮವೋ ? (ಜೀವಾತ್ಮ. ೨೬೭). **ಆಲೂಗಡ್ಡೆ**: ಆಲೂಗಡ್ಡೆಯನ್ನು ಅನೇಕರು ಬೇರಿನ ಭಾಗವೆಂದು ಭಾವಿಸುವರು, ಇದು ತಪ್ಪು (ಸಸ್ಯಶಾ. ೨೭). **ಆಲೂಗೆಡ್ಡೆ**: ಆಲೂಗೆಡ್ಡೆ ಬೆಳೆಗೆ ಮರಳು ಮಿಶ್ರವಾದ ನೆಲ ಅತ್ಯುತ್ತಮವಾದುದು (ತರಬೆ. ೩೭). [ಆಲು$_3$ + ಗಡ್ಡೆ]

**ಆಲುಬೆ** (ನಾ). (?): ಅಲ್ಲಿ ನಟ ಸಸಿ ಆಲುಬೆ ಸಹ ದೇವರಿಗೆ (ಸೌಇಇ. ೧೯೩೨, ಉಡುಪಿ. ೩೧೦–೧೪; 1544). [?]

**ಆಲುಹ** (ನಾ). ಗಟ್ಟಿಯಾಗಿ ಕೂಗಿಕೊಳ್ಳುವುದು, —ಕಿರುಚಿಕೊಳ್ಳುವುದು (ಕಿ). 'ಆರುಹ' ಪರಾ. [ಆಲು$_1$ (< ಆಲ್) + –ಹ]

**ಆಲೂಗಡ್ಡೆ** 'ಆಲುಗಡ್ಡೆ' ನೋ.

**ಆಲೂಗೆಡ್ಡೆ** 'ಆಲುಗಡ್ಡೆ' ನೋ.

**ಆಲೂರ್** (ನಾ). ಒಂದು ಊರಿನ ಹೆಸರು: ಆಲೂರ ಚೋಳಗಾವುಣ್ಡನುಂ ಸಣ್ಣೆನಾಡ ನಾಱ್ಗಾವುಣ್ಡಂ (ಎಕ. IX, ನೆಲಮಂ. ೧–೧೭; 1029).
[ಆಲ್ ? + ಊರ್]

**ಆಲೆ$_1$** (ನಾ). **೧.** ಕಬ್ಬಿನಿಂದ ರಸವನ್ನು ತೆಗೆಯುವ ಯಂತ್ರ; ಕಬ್ಬಿನ ಗಾಣ: "ರಸೋಲೂಖಲಮೆನಲ್ಕಾಲೆಗಾಣಮುಕ್ಕುಂ" (ಮಂಗರಾ. ೬೩–೨೭); ಆಲೆಯ ಮನೆಯಲ್ಲಿ ಅಕ್ಕಿಯ ಹೊಯಿದು ಕೋಣೆಯಲ್ಲಿ ಕೂಳನಱಸುವಂತೆ (ಮನುಗುಂ. ೭೧); ಸೀಮೆಯಲು ಬೆಳೆದ ತೋಟ ತುಡಿಕೆ ಕಬ್ಬಿನಾಲೆ × × × ಸುಂಕ (ಎಕ. VII, ಶಿವಮೊ. ೩೦–೩೮; 1413); ಬಾಲೆಯ ಕೊರಲು ಹೊನ್ನೊರಲು ಸುಸ್ವರ ಕಣೆ ಲೀಲೆಗತ್ತರಿ ಕುರುಳ್ಕೊಂಕು ಪಾಲಿರ್ದ ಕುಚ ಕೊಪ್ಪರಿಗೆ ನಿಟ್ಟೆಸಳ್ಗಣ್ಣಾಲೆಯ ಮನೆಗಳೊಪ್ಪಿದುವು (ಮೋಹತ. ೨–೫೦); ಆಲೆ ಇಲ್ಲದ ಊರಿಗೆ ಹಿಪ್ಪೆಯ ಹೂವೇ ಸಕ್ಕರೆ (ಗಾದೆ); ಆಲೆಗೆ ಕೈಕೊಟ್ಟ ಹಾಗೆ (ಗಾದೆ). **೨.** ಗಾಣ: ಸೂಲದ ಮೊನೆಯೊಳೇಱಿದ ಕಲ್ಲಾಲೆಯ ಬಸಿಱೊಳ್ ಸಿಲ್ಕಿದ (ರಾಮಾಶ್ವ. ೧೦೫–೨೪). [**ದೇ.** ‖ **ತಮಿ.** ಆಲೈ; **ಮಲ.** ಆಲ; **ತುಳು.** ಆಲೆ]

**ಆಲೆ$_2$** 'ಪಾಲೆ$_3$' ನೋ.

**ಆಲೆದೆಱೆ** (ನಾ). ಕಬ್ಬಿನ ಗಾಣದ ಮೇಲೆ ಹಾಕುವ ತೆರಿಗೆ; ಗಾಣದ ತೆರಿಗೆ: ಆ ಸ್ಥಳಂಗಳಿಗೆ ಹೊಗೆದೆಱೆ ಮಗ್ಗದೆಱೆ . . . ಆಲೆದೆಱೆ ಕಪ್ಪಿಲದೆಱೆ (ಎಕ. XIV, ಶ್ರೀರಂಗ. ೧೦೪–೪೧; 1200); ಪಂಚಕಾರುಕ ಆಲೆದೆಱೆ ಮುಕುಡಿದೆಱೆ (ಎಕ. VI, ಕಡೂರು. ೪೯–೪೨; 1291); ಎರಡೂರ ಮಗ್ಗದೆಱೆ ಮದುವೆದೆಱೆ ವೊಳವಾಱು ಆಲೆದೆಱೆ ಆಡುದೆಱೆ ಮೊಟ್ಟೆಸುಂಕ ಕಾವಲಿದೆಱೆ ಆಡಿದೆಱೆ ಯಿಷ್ಟು . . . ಸಲುಉ (ಎಕ. XIV, ಕೃಷ್ಣರಾ. ೮೧–೧೦; 1402); ಪಂಚಗಾರುಕ ಆಲ[ಲೆ]ದೆಱೆ ಮಗದೆಱೆ (ಎಕ. VIII, ತೀರ್ಥಹ. ೧೬೮–೨೨; 1420). [ಆಲೆ$_1$ + ತೆಱೆ$_3$]

**ಆಲೆಮನೆ,** ಆಲೇಮನೆ (ನಾ). ಕಬ್ಬಿನಿಂದ ರಸವನ್ನು ತೆಗೆದು ಬೆಲ್ಲಮಾಡುವ ಸ್ಥಳ : ಇಕ್ಷುವೊಲ್ ಜೀವ ಗಾಣದವೊಲ್ ಜಗನ್ಮಾಯೆ ನಿಚ್ಚವಿಳೆಯಾಲೆಮನೆ (ಮಂಕುಕ. ೧೨೫). **ಆಲೇಮನೆ :** ಆಲೇಮನೆ ಸೂಳುಂಡೆ ದಿನ ೧ಕ್ಕೆ ಕಡಿಮೆ ಬೆಲ್ಲ ೫೦೦ (ಎಕ. XI, ಹಿರಿಯೂ. ೭೮–೨೧ ; 1588) ; ಆಲೇಮನೆ ಕದುರ್ರುಮಾಡಿದ ಬಡಗಿಯಿಂದ (ಎಕ. XII, ಮದ್ದಗಿ. ೩೧–೧೨ ; 1656). [ಅಲೆ$_1$ + ಮನೆ]

**ಆಲೆಯಾಡು** (ಕ್ರಿ). ಕಬ್ಬಿನ ರಸವನ್ನು ಗಾಣದಿಂದ ಹಿಂಡಿ ತೆಗೆ; ಗಾಣವನ್ನಾಡಿಸು : ಆಲೆಯಾಡುತಿರ್ಪರಜಿಂದು ಕಬ್ಬಿನಂತೆ ಗಾಣದೊಳಗೆ ಅಂಗವಜಿಂದು ಬೀಳೆ ಹರಿಸಿ ಖಡ್ಗತಾಳ ವಿಟಪಿಯೊಳಗೆ (ಸಾನಂಚ. ೬–೪೫ ರ) ; ಆಲೆಯಾಡಿ ಬೆಲ್ಲವಾದಕೂಡಲೇ . . . ಮಾರಿಸಿ ಧನವಂತನಾಗಿದ್ದನು (ಕಥಾಮಂ. ೪೨–೭೭). [ಅಲೆ$_1$ + ಆಡು$_1$]

**ಆಲೆಹಗ್ಗ** (ನಾ). ದನಗಳು ಸುತ್ತಲೂ ತಿರುಗಿ ಮೇಯುವಂತೆ ಹುಲ್ಲುಗಾವಲಿನಲ್ಲಿ ಕಟ್ಟಿಹಾಕುವ ಉದ್ದವಾದ ಹಗ್ಗ (ಕಿಸಂಗ್ಲಾ. ೧೭೫). [ಆಲೆ ? + ಹಗ್ಗ (< ಪಗ್ಗ)]

**ಆಲೆಱೆ** (ನಾ). ಒಂದು ಊರಿನ ಹೆಸರು : ತತಪೆರ್ದಾ(?)ತು ತತ ಆಲೆಱೆ ತತ × × × ಳ ತತ ನಿತ್ತ ಕಲ್ಲು (ಇಆ. VI, ೯೩–೩೩ ; 617). [?]

**ಆಲೇಖ್ಯ** (ಗು). ೧. ಬರೆಯಬೇಕಾದ; ಚಿತ್ರಿಸಬೇಕಾದ. (ನಾ). ೨. ಬರೆಹ; ಚಿತ್ರ; ವರ್ಣಚಿತ್ರ : ದಿವಸೇಂದ್ರಂ ಕನ್ನೆಯೊಳ್ ಕೂಡಿರೆ ಲಿಪಿ ಗಣಿತಾಲೇಖ್ಯ ಕಾವ್ಯಪ್ರವೀಣಂ (ಜಾತತಿ. ೧೭–೧೬). [ಸಂ.]

**ಆಲೇಖ್ಯಗತೆ** (ನಾ). ಚಿತ್ರಿಸಲ್ಪಟ್ಟವಳು : ಅಮೂರ್ತೆಯಂತೆ ಸ್ಪರ್ಶವರ್ಜಿತೆಯುಂ ಆಲೇಖ್ಯಗತೆಯಂತೆ ದರ್ಶನಮಾತ್ರಫಲೆಯುಂ (ಕಾದಂಪೂ. ೪೯). [ಸಂ. ಆಲೇಖ್ಯಗತಾ]

**ಆಲೇಖ್ಯಪ್ರಖ್ಯ** (ನಾ). ಚಿತ್ರಕ್ಕೆ ಸದೃಶವಾದುದು, —ಸಮನಾದುದು : ಉಳಿದ ಕಡೆಗಳಲ್ಲಿ ಗೋಚರವಾಗುವ ಹೋಲಿಕೆಗಳನ್ನು ಆನಂದವರ್ಧನನು 'ಪ್ರತಿಬಿಂಬಕಲ್ಪ', 'ಆಲೇಖ್ಯಪ್ರಖ್ಯ', 'ಸಮಾನದೇಹಿಕಲ್ಪ' ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾನೆ (ಭಾರಮಿಾ. ೧೭೮). [ಸಂ.]

**ಆಲೇಖ್ಯಯಂತ್ರ** (ನಾ). [ತಂತ್ರಶಾ] (ಬೇಕಾದವರನ್ನು) ವಶಮಾಡಿಕೊಳ್ಳುವುದಕ್ಕಾಗಿ ಚಿತ್ರರೂಪವಾಗಿ ಬರೆಯುವ ತಗಡಿನ ತಾಯತದ ಯಂತ್ರ : ವಿಜಯಾಕೃಷ್ಟಿಗೆ ತೋಳಬಾಳ ಪೊಗರಾಯ್ತಾಲೇಖ್ಯಯಂತ್ರಾಕ್ಷರಂ (ಎಕ. V, ಅರಸೀ. ೧೨೭–೧೯ ; 1185). [ಆಲೇಖ್ಯ + ಯಂತ್ರ]

**ಆಲೇಪ** (ನಾ). = ಆಲೇಪನ ೧. 'ಆಲೇಪಂಗೆಯ್' ಪರಾ. [ಸಂ.]

**ಆಲೇಪಂಗೆಯ್** (ಕ್ರಿ). ಬಳಿ ; ಸವರು ; ಲೇಪಿಸು : ಬೀರಮನಲರ್ವಿಲ್ಲಂ ಗೇಱುಸುತೆ ಪಟೀರಮನಾಲೇಪಂಗೆಯ್ದು ಸ್ತಂಬೇರಮದಾಲಸಗಾಮಿನಿಯೊರ್ವಳ್ ತಡಂಬಡೆದಳ್ (ಉದ್ಭದೇ. ೪–೪೪). [ಆಲೇಪ + ಗೆಯ್ (< ಕೆಯ್$_1$)]

**ಆಲೇಪನ** (ನಾ). ೧. ಬಳಿಯುವುದು ; ಸವರುವುದು. ೨. ಲೇಪಿಸುವ ದ್ರವ್ಯ : ತರವೇಱು ದಿವ್ಯಾಂಬರಾಲೇಪನಮೃಗಮದಗಂಧಂಗಳಂ (ಅಜಿಪು. ೫–೭೯). [ಸಂ.]

**ಆಲೇಪನಂಗೆಯ್** (ಕ್ರಿ). = ಆಲೇಪಂಗೆಯ್ : ಸಂಗತೋಲ್ಲಸಿತ ತ್ರಿಪುಂಡ್ರಾಂಕಂಗಳಂ ತತ್‌ಶ್ರುತಿನಿರೂಪಿತ ಸಾಂಗದಿಂದಾಲೇಪನಂಗೆಯ್ದು (ಬಸಪು. ೪೭–೬೨). [ಆಲೇಪನ + ಗೆಯ್ (< ಕೆಯ್$_1$)]

**ಆಲೇಪಿಸು** (ಕ್ರಿ). ಬಳಿ ; ಸವರು ; ಲೇಪನಮಾಡು : ಬಿಟ್ಟ ಮುಡಿ ಕೇಶದಿಂ ತಟ್ಟಿಡುವ ಬಸಿವನಿಯವುಟ್ಟ ವಸನಂ ತೊಯ್ದುಯಂಗಕಾಲೇಪಿಸಿಯೆ ಯಿಟ್ಟೆಡೆಯ ಕುಚಮುಖ್ಯ ಸರ್ವಾವಯ[ವ] ಪೊರಮುಟ್ಟು ಜಲದೇವಿಯರೆನೆ (ನವಮೋ. ೧೦–೫೭). [ಆಲೇಪನ + –ಇಸು$_3$]

**ಆಲೇಮನೆ** 'ಆಲೆಮನೆ' ನೋ.

**ಆಲೈಸು** 'ಆಲಿಸು$_1$' ನೋ.

**ಆಲೋಕ** (ನಾ). ೧. ನೋಡುವುದು ; ನೋಟ : ಜಗತೀನಾಥನನಾ ಕುಮಾರನೊಸೆದಾಕರ್ಣಾಂತವಿಶ್ರಾಂತ ದೃಷ್ಟಿಗಳಿಂ ನೋಡುತುಮೆಯ್ದೆ ವರ್ಪುದುಮಪೂರ್ವಾಲೋಕದಿಂದಾಗಳ್ (ಸುಕುಮಾ. ೧೧–೨) ; ಈ ಕಮಲಮುಖಿಯರಿಗೆ ನಿನ್ನಾಲೋಕವಲ್ಲದೆ ಬೇಱೆ ಕಾರ್ಯವ್ಯಾಕುಳತೆ ಬೇಡ (ಕುವ್ಯಾಕ. ೧೭–೫೩). ೨. ಪ್ರಭೆ ; ಕಾಂತಿ ; ಬೆಳಕು : "ಆಲೋಕಮುದ್ಯೋತಮೆನೆ ಶಿಖಿಯ ಬೆಳಗು" (ಮಂಗರಾ. ೧೪–೮) ; ಕುವಲಯಾನಂದಕರದ ಘನಪರಿಶೋಭೆಯಿಂದೆ ಚಂದ್ರೋದಯವನಾಲೋಕಚಂಚಲೋದ್ಭಾಸದಿಂದೆ ತರುಣಿಯ ಕಟಾಕ್ಷಮಂ. . . ಪೋಲ್ತು ಕಾರೆಸೆದಿರ್ದುದು (ಜೈಮಿಭಾ. ೧೭–೩). ೩. ಜ್ಞಾನ : ವ್ಯಾಕರಣದ ಪದದಿನರ್ಥಮರ್ಥದೆ ತತ್ತ್ವಾಲೋಕಂ ತತ್ತ್ವಾಲೋಕದಿನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ (ಶಮದ. ೩) ; ಅರ್ಥದೆ – ಅರ್ಥವಿಚಾರದಿಂದೆ ತತ್ತ್ವಾಲೋಕಂ – ತತ್ತ್ವಜ್ಞಾನಂ ಅಪ್ಪುದು (ಶಮದ. ೩ ಟೀಕು). ೪. ಹೊಗಳಿಕೆ ; ಸ್ತುತಿಪಾಠಕರ ಭಾಷಣ. [ಸಂ.]

**ಆಲೋಕನ,** ಆಳೋಕನ (ನಾ). ೧. ನೋಡುವುದು ; ನೋಟ : ಜಗದಾಲೋಕನ ದರ್ಪಣಂ ಪ್ರಥಮದಿಕ್ಕಾಂತಾನನಂ . . . ಬಿಂಬಂ ಸುಧಾಸೂತಿಯಾ (ಅಜಿಪು. ೬–೪೨) ; ಅಂಗನೆಯರಾಲೋಕನಂಗಳವೇಕೆ ಭಕ್ತರಿಗೆ (ಬಸಪು. ೪೦–೭೯). ೨. ವಿಮರ್ಶೆ; ಪರಿಶೀಲನೆ. **ಆಳೋಕನ :** ೧. 'ಆಳೋಕನರುಚಿ' ಪರಾ. [ಸಂ.]

**ಆಲೋಕನಂಗೆಯ್,** ಆಲೋಕನಗೆಯ್ (ಕ್ರಿ). ನೋಡು; ಈಕ್ಷಿಸು : ಮಗಧನರಪಾಲನಂ ಶಿಶುಪಾಲನಾಲೋಕನಂಗೆಯ್ದು (ಜಗವಿ. ೮–೯೫ ವ). **ಆಲೋಕನಗೆಯ್ :** ಸೊಬಗಿಯರ್ . . . ಅಕ್ಕಱಿಂದಾಲೋಕನಗೆಯ್ದು ಮದನನ ಮೊಕ್ಕಳಕೊಳಗುಮಾಡಿದರು (ಮೋಹತ. ೨೪–೧೬). [ಆಲೋಕನ + ಗೆಯ್ (< ಕೆಯ್$_1$)]

**ಆಲೋಕನಗೆಯ್** 'ಆಲೋಕನಂಗೆಯ್' ನೋ.

**ಆಲೋಕನವೆಸಗು** (ಕ್ರಿ). = ಆಲೋಕನಂಗೆಯ್ : ಮನದಣಿಯಲಾ ಶಿಶುವನಾಲೋಕನವೆಸಗಿ ಬಿಗಿಯಪ್ಪಿಕೊಂಡು (ಜೀವಂಚ. ೫–೩೯). [ಆಲೋಕನ + ಎಸಗು$_1$]

**ಆಲೋಕಿತ** (ಗು). ೧. ನೋಡಲ್ಪಟ್ಟ; ನೋಡಿದ. (ನಾ). ೨. [ನಾಟ್ಯ] ಕಣ್ಣಿನ ಎಂಟು ಬಗೆಯ ಚಲನೆಗಳಲ್ಲಿ ಒಂದು : ಕಣ್ಣುಆಲಿಗಳ 8 ಚಲನೆಗಳಿವೆ. ಅವು ಯಾವುವೆಂದರೆ — 1 ಸಮ . . . 4 ಆಲೋಕಿತ (ಅಭಾನ್ಯ. ೪೬). [ಸಂ.]

**ಆಲೋಕಿಸು** (ಕ್ರಿ). ೧. ನೋಡು ; ಈಕ್ಷಿಸು : ಪಲವುಂ ವೀಧಿಗಳ ವಿಚಿತ್ರವಿಭ್ರಮಮನಾ ಶೈಲಪತಿಯಾಲೋಕಿಸುತುಂ ಕೇಳುತುಂ (ಗಿರಿಕ. ೪–೧೧೧ ವ) ; ಲೋಕದೊಳಗಿಂತಪ್ಪ ಮಾನವರಾಕೃತಿಯ ನಾ ಕಾಣೆನೆನುತಾಲೋಕಿಸಿದಳನಿಮಿಷತೆಯಿಂದಾ ವಿಮಳೆಯಲ್ಲಮನ (ಪ್ರಭುಲೀ. ೭–೨೯). ೨. ವಿಮರ್ಶಿಸು ; ಪರೀಕ್ಷಿಸು : ಲೋಲಂಗೀ ವಿಹಗಂಗೀ ಬಾಲೆಯನೀ ಮುಗ್ಧೆಯಂ ವಿಚಾರಿಸದೆಯುಮಿಂತಾಲೋಕಿಸದೆಯುಮಿಾವುದೆ (ಕಾದಂಉ. ೭೯) ; ನೋಕರ್ಮಗಾಣದಂತಾ ದ್ರವ್ಯಕರ್ಮವಾಲೋಕಿಸೆ ಹಿಂಡಿಯಂತಿಹುವು ಹೋಕಿನ ಭಾವಕರ್ಮಗಳೆಣ್ಣೆಯಂತೊಳಗಾಕಾಶದಂತಾತ್ಮನಿಹನು (ಭರಚ. ೭೭–೧೧೨). [ಆಲೋಕನ + – ಇಸು$_3$]

**ಆಲೋಚ,** ಆಳೋಚ (ನಾ). = ಆಲೋಚನೆ ೨ : ಆಲೋಚಂ ಸಾಲದೆ ಶಿಶುಪಾಲನನುಜದಿಕ್ಕಿ ಮಿಕ್ಕ ಭುವನಸ್ಥಿತಿಯಂ ಪಾಲಿಸು (ಕಾವ್ಯಾವ. ೫೨೯). **ಆಳೋಚ :** 'ಆಳೋಚಂಗೆಯ್', 'ಆಳೋಚಂಬೆರಸು' ಪರಾ. [ಸಂ.]

**ಆಲೋಚನ,** ಆಳೋಚನ (ನಾ). = ಆಲೋಚನೆ ೨. **ಆಳೋಚನ:** 'ಆಳೋಚನಂಗೆಯ್' ಪರಾ. [ಸಂ.]

**ಆಲೋಚನೆ,** ಆಳೋಚನೆ (ನಾ). ೧. ನೋಡುವುದು; ಕಾಣುವುದು. ೨. ಯೋಚಿಸುವುದು; ಪರೀಕ್ಷಿಸುವುದು; ಪರಾಮರ್ಶೆ: ಓಲಗಂ ಪರೆವುದುಮಾಲೋಚನೆಗೆ ಪೊಕ್ಕಂ (ಶಮುದ. ೨೪೭ ಪ್ರಯೋ). ೩. ಅಭಿಪ್ರಾಯ; ಉದ್ದೇಶ; ಸಲಹೆ (?). ೪. "ಇಂದ್ರಿಯಗಳ ವ್ಯಾಪಾರಕ್ಕೆ ಆಲೋಚನೆಯೆಂದು ಹೆಸರು" (ಹಿಂದಸಾ. ೫೫). **ಆಳೋಚನೆ:** ೨. ಹುರಿದ ಧೈರ್ಯದ ತಳ್ವವಾಜುವ ತರಳಹೃದಯದ ದೇವರಿಂದ್ರನನಜಿಸಿ ಕಂಡರು ತಮ್ಮೊಳಾಳೋಚನೆಯ ಮಾಡಿದರು (ಕುವ್ಯಾಕ. ೬–೧೨). [ಸಂ. ಆಲೋಚನ]

**ಆಲೋಚಿಸು,** ಆಳೋಚಿಸು (ಕ್ರಿ). ೧. ವಿಚಾರಿಸು; ಯೋಚಿಸು; ವಿಮರ್ಶಿಸು: ನೆಗಬ್ವ ಕಜ್ಜಮಾವುದುಮಂ ನಿಮ್ಮಜ್ಜನೊಳಾಲೋಚಿಸಿ ನೆಗಬ್ವುದು (ಗದಾಯು. ೪–೧೩ ವ); ಅರಸ ಕಟ್ಟದಿರಾಟ ಮುಗಿದಂತೆ ಮಿಕ್ಕಿನ ಪುರವೆಮ್ಮ ಕೈವಶವಹುದು ಎಂದಾಲೋಚಿಸಿ (ಕಂನವಿ. ೧೧–೬೮); ಸ್ವಲ್ಪವೂ ಹಿಂದು ಮುಂದು ಆಲೋಚಿಸದೇ ಮಾತನಾಡುವಿಯಲ್ಲೇ (ಮೊಗ್ಗು. ೪೮). **ಆಳೋಚಿಸು:** ೧. ಏನಂ ನೆಗಟ್ದೊಡಂ ಕುರುಪಿತಾಮಹನೊಳಾಳೋಚಿಸಿ ನೆಗಟ್ವುದೆಂದು (ಪಂಪಭಾ. ೧೩–೫೧ ವ); ತನ್ನ ಮನಮೆ ಮಧ್ಯಸ್ಥಮಂತ್ರಿಯಾಗಾಳೋಚಿಸಿ ನಿಶ್ಚಯಿಸಿ (ಶಾಂತಿಪು. ೨–೬೩ ವ); ಏಳಿದರ ಪುಯ್ಯಲಂ ಕರೆದಾಳೋಚಿಸಿ ತಿರ್ದಿ ಸಂತಸಂಬಡಿಸದೆ(ಧರ್ಮಾಮೃ. ೨–೮೮). ೨. [ಜೈನ] ಗುರುವಿನ ಹತ್ತಿರ ತಪ್ಪೊಪ್ಪಿಗೆ ಮಾಡು; ಅಪರಾಧವನ್ನು ತಿಳಿಸು: ಗುರುಗಳ್ಗೆ ತಮ್ಮುಕ್ಕೆವದಿಂ ತಪಂಬಟ್ವುದನಾಳೋಚಿಸಿ (ವಡ್ಡಾರಾ. ೬–೨೬). [ಆಲೋಚನ + –ಇಸು$_3$]

**ಆಲೋಡನ** (ನಾ). ೧. ಕಲಕುವುದು; ಕಡೆಯುವುದು; ಮಥನ. 'ಆಲೋಡನಂಗೆಯ್' ಪರಾ. ೨. ಆಲೋಚನೆ. [ಸಂ.]

**ಆಲೋಡನಂಗೆಯ್** (ಕ್ರಿ). ಕಡೆ; ಮಥಿಸು: ಪಾಲ್ಗಡಲನೆಯ್ದಾಲೋಡನಂಗೆಯ್ದು ಬಲ್ ಚೆನ್ನಿಂ ಪೊಂದಿದ ಬೆಣ್ಣೆಯಂ ತೆಗೆದು (ಹವಿಮ್ಮಾರ. ೨–೫೮). [ಆಲೋಡನ + ಗೆಯ್ (< ಕೆಯ್$_1$)]

**ಆಲೋಡನೆ** (ನಾ). ೧. ಬೆರಸುವುದು; ಕಲಸುವುದು; ಮಿಶ್ರಮಾಡುವುದು. ೨. ಕಲಕುವುದು; ಕಡೆಯುವುದು: "ಕಲಂಕು – ಆಲೋಡನೇ" (ಶಮುಧಾ). ೩. ಆಳವಾಗಿ ಅಭ್ಯಾಸಮಾಡುವುದು; ಮನನಮಾಡುವುದು. [ಸಂ. ಆಲೋಡನ]

**ಆಲೋಡಿತ** (ಗು). ಕದಡಿದ; ಕಲಕಿದ: ಕ್ಷಣದೊಳಗೇ ಅಚಲೆಯ ಹೃದಯ ಆಲೋಡಿತವಾಯಿತು (ಅರಗಿ. ೬೮). [ಸಂ.]

**ಆಲೋಡಿಸು** (ಕ್ರಿ). ೧. ಕಲಕು; ಕದಡು; ಚೆನ್ನಾಗಿ ಹೊಂದಿಕೊಳ್ಳುವಂತೆ ಬೆರಸು: ಹಾಲಕೆನೆ ಮೊಸರಕೆನೆ ತನಿವಾಲು ಸೊಜ್ಜಿಗೆಯ ಹಾಲು ಮೆಣಸುಪ್ಪು ತುಪ್ಪದೊಳಗಾಲೋಡಿಸಿದ ಬಳಿಕ ಕಲ್ಕವಂ ಮಾಡಿ (ಸೂಪಶಾ. ೪–೫೨); ಹೆಬ್ಬುಲಿಯ ಆರ್ಭಟೆ ಕಂದರಾದ್ರಿವಿಪಿನಗಳನ್ನೆಲ್ಲ ಆಲೋಡಿಸಿತ್ತು (ಮಲೆಮ. ೨೪೯). ೨. = ಆಲೋಚಿಸು ೧: ನೀತಿಚತುರೋಪಾಯಕೆಲ್ಲ ತಂತ್ರಾಗಾರರಾದ ನೃಪರೆಲ್ಲ ಸಭ್ಯಜನರಿದೀಗಲಾಲೋಡಿಸುವುದು (ಜಿನಮು. ೧೮–೯). [ಆಲೋಡನ + – ಇಸು$_3$]

**ಆಲೋಲ,** ಆಳೋಳ (ಗು). ೧. ಅಲುಗಾಡುವ; ಚಂಚಲವಾದ; ಕಂಪಿಸುವ: ಭವದೀಯ ವದನಮಾಲೋಲವಿಲೋಚನಂ (ಕವಿರಾ. ೩–೮೨); ಆಲೋಲಲೋಹಿತಪಟಪತಾಕನುಂ (ಕಾದಂಪೂ. ೪೧೩). ೨. ಹೊರಳುವ; ತಿರುಗುವ. ೩. ಕದಡಿದ; ಕಲಕಿದ. (ನಾ). ೪. ಆಸಕ್ತನಾದವನು: ಕೇಳವನಿಯೊಳು ಮಡಿವಾಳ ಮಾಚಯ್ಯಂ ಶಿವಗಣಾಲೋಲ ನತಿವೀರವ್ರತಾಚಾರಪ್ರಯುತಚರ್ಯ(ಬಸಪು. ೨೧–೩). ೫. ಆಸಕ್ತಿ: ಓಳಿಯಿಂ ಲಿಂಗಾರ್ಚನೆಯನಾಲೋಲದಿಂ ಮಾಡುತ್ತ (ಬಸಪು. ೩೦–೧೬). **ಆಳೋಳ:** ೧. ಲಳಿತಮಧುರಂ ಲಜ್ಜಾಳೋಳಂ ಸ್ಮರಾಕುಳಿತಂ ಮನಂ ದಳಿತಮುಪಸನ್ಮುಗ್ಧಂ ಸ್ನಿಗ್ಧಂ ವಿಳೋಕನಮೋಪಳಾ (ಪಂಪಭಾ. ೪–೭೭). [ಸಂ.]

**ಆಲೋಲಿಸು** (ಕ್ರಿ). ಕಡೆ; ಮಥಿಸು: ಹಾಲ ಹೆಪ್ಪನಿಕ್ಕಿ ಮೊಸರಾದ ಮೇಲೆ ಮತ್ತಾಲೋಲಿಸಿ ತೆಗೆದ ಬೆಣ್ಣೆ ಮೊಸರಾಗುವುದೇ (ಭಕ್ತಿಸ. ೭–೬). [ಆಲೋಲನ$_0$ + –ಇಸು$_3$]

**ಆಲೋಲೇಕ್ಷಣ** (ನಾ). ಚಂಚಲವಾದ ಕಣ್ಣು: ಆಲೋಲೇಕ್ಷಣದಿಂ ಹರುಷಾಶ್ರುಸ್ರೋತಂ ಸ್ಯೆವರಿಯೆ (ಉದ್ಭದೇ. ೭–೧೨). [ಆಲೋಲ + ಈಕ್ಷಣ]

**ಆಲ್ಗೆಱಿ** (ನಾ). ಒಂದು ಊರಿನ ಹೆಸರು: ತತಃ ಪೆಬುಗೆತ್ತು ತತ ಆಲ್ಗೆಜಿ ತತೋ ಆಲ್ಗೊಳ (ಎಕ. XI, ದಾವಣ. ೬೬–೨೩; 694). ℙ ಈ ಶಬ್ದವನ್ನು ಆಲ್ದೊರೆ ಎಂದು ಓದಿದೆ. [ಆಲ್ ? + ಕೆಱಿ]

**ಆಲ್ಗೊಳ** (ನಾ). ಒಂದು ಊರಿನ ಹೆಸರು: ತತ ಆಲ್ಗೊಳ (ಇಆ. VII, ೩೦೨–೩೩; 694); ತತೋ ಆಲ್ಗೊಳ (ಎಕ. XI, ದಾವಣ. ೬೬–೨೩; 694). [ಆಲ್ ? + ಕೊಳ$_1$]

**ಆಲ್ಪರಿ, ಆಲಪರಿ, ಆಲಪರೆ, ಆಲವರಿ, ಆಲವರು, ಆಲಿಪರಿ, ಆಲ್ಪರೆ,** ಆಲ್ವರಿ (ಕ್ರಿ). ೧. ಅಲೆದಾಡು; ಆಯಾಸಪಡು; ಕಷ್ಟಪಡು. ೨. ಅಂಗಲಾಚಿ ಬೇಡು; ಮೊರೆಯಿಡು: ನಿನ್ನ ಪ್ರಾರ್ಥಿಸಿದಂತೆ ಅನ್ಯರಿಗೆ ಆಲ್ಪರಿಯೆ ಎನ್ನ ಪಾಲಿಸು ಧೊರೆಯೆ (ಜಗದಾ. ೧[illegible]); ಆರಿಗುಸುರಲಿ ಆಲ್ಪರಿಯಲಿನ್ನಾರಿಗೆ . . . ಆರ ಮೊರೆಹೊಗಲಿ (ಶ್ರೀಕೃಪಾ. ೩೧). ೩. ಗೋಳಾಡು; ಶೋಕಿಸು: ಈ ವರುಷವೂ ಮಳೆಹೋದರೆ ಹೇಗೆ ದೇವರೇ ? ಎಂದು ಆಲ್ಪರಿಯತೊಡಗಿದರು (ಹಬ್ಬಬ. ೯೨). ೪. ನಿರೀಕ್ಷಿಸು; ಹಂಬಲಿಸು: ಜನಜಂಗುಳಿಯೆಲ್ಲಾ ನಿನಗಾಗಿ ಆಲ್ಪರಿಯುತ್ತಿದೆ. ನಿನ್ನೊಡನೆ ಮಾತನಾಡಬೇಕೆಂದಿದೆ (ಪ್ರವಾತೋ. ೧೪). **ಆಲಪರಿ:** ೨. ಪರಿಪರಿಯ ಪಕ್ವಾನ್ನಗಳನ್ನು ನೈವೇದ್ಯವಾಗಿ ಸಮರ್ಪಿಸಿ ಅವರಿಗೆ ಉಣ್ಣಲೇಬೇಕೆಂದು ಆಲಪರಿಯುವುದು (ಪೂರ್ವರಂ. ೩). **ಆಲಪರೆ:** ೧. ಆಲದ ಮರನೇರಿ ಆಲಪರದು ನಾನೆ ಬಂದ (ಮಲ್ಲಿಗೆ. ೩). **ಆಲವರಿ:** ೨. ಆರಿಗಾಲವರಿಲಿ ಆರನಾಶ್ರೈಸಲಿ (ಮೋಕ್ಷದೀ. ೬೫). **ಆಲವರು:** ೨. ಎನ್ನನು ಯಿರಾ (ಇಕ್ಕಟ್ಟು) ಕಟಕದೊಳಗೆ ಇಟ್ಟು ಯೆಳಸುವರೆ ಅಕಟಕಟಾ ನಾನಾರಿಗಾಲವರಲಿ (ತೀರ್ಥಮ. ೧೩೫). **ಆಲಿಪರಿ:** ೧. ಅದೇ ವಿಷದ ಹೊಗೆ ತಾಗಿ ಅಜನ ಸೃಷ್ಟಿಯಲ್ಲಿ ಆಲಿಪರಿದೆಯಮ್ಮ ನಿನ್ನ ಮಾತೇನು (ಶಿವಗೀ. ೧೬೩–೮೦೩); ಆಸರಿಲ್ಲದ ಬಳ್ಳಿ ಆಲಿಪರಿವಂತೆ (ಜಾನಕೊ. ೧೬). ೪. ಬಾಳ್ವ ಸುಜನರ ಕಂಡು ನನಗಿಲ್ಲವೆಂದಾಲಿಪರಿಯದಿರು (ಗುರುಚಾ. ೧೬–೫೦). **ಆಲ್ಪರೆ:** ೨. ಅಂತೆಯೆ ಹಿರಿಬಳಗದೊಳಿರಬಯಸಿ ಸಂತತ ಆಲ್ಪರೆದನು ತಳಮಳಿಸಿ (ನನಲ್ಲ. ೯೬); ಸಂಜೆಗೆ ತಂದೆ ಲಕ್ಷ್ಮಣ ರೊಟ್ಟೆ ತಂದು ತಿನ್ನಲು ಎಷ್ಟು ಆಲ್ಪರೆದರೂ ತಾನು ಕೇಳಿರಲಿಲ್ಲ (ಗ್ರಾಮಾಯ. ೧೫೩). ೫. ಕೂಗಿ ಕರೆ; ಆಹ್ವಾನಿಸು: ಅಲ್ಪಹುಳದ ಆಕೃತಿಗೂ ಗಂಭೀರ ಶಾಂತತೆಯನ್ನು ಆಲ್ಪರೆಯುತ್ತಿದ್ದವು (ರಕ್ತಧ್ವ. ೩೨೮). **ಆಲ್ವರಿ:** ೨. ವಿಶ್ವಾಮಿತ್ರನು ಎಷ್ಟು ಆಲ್ವರಿದರೂ ಹೊಲತಿಯರನ್ನು ತನ್ನ ರಾಣಿಯರನ್ನಾಗಿ ಮಾಡಿಕೊಳ್ಳಲು ಹರಿಶ್ಚಂದ್ರನು ಒಪ್ಪದೆ ಹೋದನು (ತವನಿ. ೧೧೩). ೩. ನೋವನ್ನು ತಾಳದೆ ಸೋಮನಾಥನು ಆಲ್ವರಿದನು (ರಂಗರೋ. ೯೪). [ಆಲ್ + ಪರಿ$_1$]

**ಆಲ್ಪರೆ** 'ಆಲ್ಪರಿ' ನೋ.

**ಆಲ್ವರಿ** 'ಆಲ್ಪರಿ' ನೋ.

**ಆವ** 'ಆವುದು' ಪರಾ.

**ಆವಂಚಿಗೆ** (ನಾ). ಒಂದು ಊರಿನ ಹೆಸರು : ಪರಾಭ[ವ] ಸಂ[ವ]ತ ಸರದ ಸಂಕ್ರಮಾಣದಂದು ಆವಂಚಿಗೆಯ ದ್ರೋಣಮರಸನ ತಂಮ ಬಾಚರಸ (ಕಇಅ. ೮೦–೧೪–೨ ; 1088). [?]

**ಆವಂತಿ** (ಗು).೧. ಅವಂತಿಗೆ ಸಂಬಂಧಿಸಿದ. (ನಾ). **೨.** [ಕಾವ್ಯಮಿ] ಕಾವ್ಯದ ಆರು ರೀತಿಗಳಲ್ಲಿ ಒಂದು : ಮತ್ತೆ ಕೆಲವರು 'ಲಾಟ' 'ಆವಂತಿ' 'ಮಾಗಧಿ' ಈ ಮೂರನ್ನೂ ಸೇರಿಸಿ ರೀತಿಗಳು ಆರೆಂದು ಹೇಳುತ್ತಾರೆ (ಕೈಪಿಡಿ. ೨೨೧). [**ಸಂ.**]

**ಆವಕ್** (ನಾ). ಹೊರಗಿನಿಂದ ಬಂದ ಕಾಗದಪತ್ರಗಳ ದಾಖಲೆ ಪುಸ್ತಕ; ಇಂದ ರಿಜಿಸ್ಟರ್ (ಕಿಸಂಗ್ಲಾ. ೭೪). [← **ಮರಾ.** ಆವಕ್]

**ಆವಗ** 'ಆವಗಂ' ನೋ.

**ಆವಗಂ, ಆವಗ** (ಅ). ೧. ಯಾವಾಗಲೂ; ಎಡೆಬಿಡದೆ; ಬಿಡುವಿಲ್ಲದೆ; ನಿರಂತರವಾಗಿ : ಆವಗಂ ಪುಣ್ಯಮಂ ಕೈಕೊಳ್ವಿಂ (ವಡ್ಡಾರಾ. ೮೦–೮); ಬೇಪ್ಪರ(ಬ್ಪರ)ನುತ್ಸಾಹದಿನಾವಗಂ ತಣಿಪಿ (ಎಇ. XIII, ೩೨೯–೫ ; 930) ; ಕುಂದದಾವಗಮಾ ಜಿನೇಂದ್ರಕಥಾಪ್ರಸಂಗವನೆ ಚಂದದಿಂ ಭಾವಿಸುವ (ಸಾಳ್ವಭಾ. ೧–೩೮). **೨.** ಅತಿಶಯವಾಗಿ ; ಬಹಳವಾಗಿ; ಪೂರ್ಣವಾಗಿ: "ನಾಡೆಯೆಡೆಯಾವಗಂ ನೆಱೆ ನೀಡುಂ ಕರಮಾದಮೆಯ್ದೆ. . .ಇವವ್ಯಯದೊಳಧಿಕಾರ್ಥಂ" (ಶಮುದ. ೩೦೪) ; ನಾನಾ ವಿಧದ ಪದಪಿನೊಳ್ ಹರಿಗಾವಗಮಾಱಿದುದು ಪಥಪರಿಶ್ರಮಮೆಲ್ಲಂ (ಪಂಪಭಾ. ೯–೨೮) ; ಪೂವಿನ ಬಿಲ್ಗೆ ಪುರ್ವು ಕುಸುಮೇಷುಗೆ ಕಣ್ ಝಷಕೇತನಕ್ಕೆ ಚೆಲ್ವಾವಗಮಾದ ಸೋಮರ್ಮುಡಿ (ಶಾಂತಿಪು. ೮–೮೩) ; ಪೊಳೆವೊಂದು ದಂತದೋಲೆಯ ಬೆಳಗಿಂದುಜ್ಜ್ವಳಿಪ ಕದಪಿನಿಂದಿಂದುವಮಂಡಳದಿಂದಮಾವಗಂ ಕಣ್ಗೊಳಿಪ ವಿಭಾವರಿಯನಿನಿಸನನುಕರಿಸಿರ್ದಳ್ (ಕಾದಂಪೂ. ೪೦) ; ಕಮಳಕ್ಕಾವಗಮಲ್ತು ಲಕ್ಷ್ಮಿಯಿರವು (ಅರ್ಧನೇ. ೧–೩೨). **ಆವಗ** : **೧.** ಆವಗ ದುರ್ಗೋಷ್ಠಿಯೊಳಿರ್ಪರೇಳುಬೆಸನಕ್ಕೀಡಪ್ಪರ್ (ಸೋಮೇಶ. ೪೬) ; ಆತ್ಮವಿಚಾರಪ್ರಕರವನಾವಗ ಹಸುಗೆಗೆಯ್ಯುವ ಶಿವಾರ್ಚಕರ ಚಿತ್ತೈಸಲೆ ಜೀಯ (ಮೋಹತ. ೨೦–೫೩). [?]

**ಆವಗಲು** 'ಆವಾಗಳುಂ' ನೋ.

**ಆವಗೆ, ಆವಿಗೆ, ಆವುಗೆ** (ನಾ). ೧. ಹೆಂಚು, ಮಡಕೆ ಮುಂತಾದುವುಗಳನ್ನು ಸುಡುವ ಕುಂಬಾರನ ಒಲೆ; ಕುಲಿಮೆ : ಒಗೆದ ಸುತಶೋಕದಿಂದಾವಗೆಯಂತೊಳಗುರಿಯೆ (ಪಂಪಭಾ. ೧೨–೨೮) ; ಅವಗೆಯ ಕಿಚ್ಚಿನಂತೆ ಸುಳಿಸುಳಿದು ಬೆಂದೆ (ಮಹಾದೇ. ಬ. ೧೪೩–೩೨೬) ; ಅವಗೆಯ ಕಿಚ್ಚಿನಂತೊಳಗೆ ಶೋಕಂ ಸುತ್ತಿ (ಮನುರ. ೨೧೯–೬). **ಆವಿಗೆ** : ಜನಪನುಮರಸಿಯರುಂ ಭೋಂಕನೆ ಪಾಸಱೆ ಕೊಳದ ಮೇಲೆ ಕವಿದಿರೆ ಪೊಱಗಣ್ಗೆನಸುಂ ಪೊಱಮಡಲಱಿಯದೆ ಘನವಪ್ಪಾವಿಗೆಯ ಕಿರ್ಚಿನಂತೊಳಗಿರ್ದರ್ (ಧರ್ಮಾಮೃ. ೧೪–೨೩) ; ಎಲವದಲಿ ಫಲವುಂಟೆ ಆವಿಗೆಯೊಳಗೆ ತಣ್ಪುಗಳುಂಟೆ (ಬಸಪು. ೩೦–೨೮). **ಆವುಗೆ₁** : ಕೆತ್ತುವ ಪುಣ್ಗಳ ಬಾಯ್ಗಳಿಂದೆ . . . ದಿಟ್ಟಗೊಟ್ಟದಾವು [ಪಾಠಾಂ. ವ]ಗೆಯ ಘಟಂಗಳಾನನದಿನುಣ್ಮುವ ಕೇಸುರಿಯೊಂದು ಮಾಱ್ಕೆಯಿಂ (ಜಗವಿ. ೭–೮೩) ; ಆವ ಪರಿಯಲಿ ವೈರಿಘಟಕುಲಕಾವುಗೆ[ಪಾಠಾಂ. ಆವಿಗೆ]ಯನಿಡಿಸುವಿರಿ (ಕುವ್ಯಾಆ. ಒರಿಇ. ೨೧–೬೪). ೨. ಆವಿಗೆಯ ಮೇಲೆ ಹಾಕುವ ತೆರಿಗೆ : ಅಂತು ಹದಿನಾಕು ಮೂಡೆ ಸುಗ್ಗಿಯನೂ ಕಾದ ದರ್ಮ್ಮ ಆವುಗೆ ಅನಾಯ ಹೊಡಕೆ ಸಹಿತವಾಗಿ ಏನು ಬಂದರೂ ಸರ್ವ್ವಮಾಂನ್ಯವಾಗಿ (ಕಇ. II, ೬–೪೪ ; 1348). [**ಪ್ರಾ.** ಆವಾಗ < **ಸಂ.** ಆಪಾಕ]

**ಆವಗೆಗಲ** (ನಾ). ಆವಗೆಯಲ್ಲಿ ಸುಟ್ಟ ಮಡಕೆ : ಅಯ್ಯಾವಂತರ್ ದೇವರಗ್ಘವಣಿಯ ಬಿಂದಿಗೆಗೆ ಅವಗೆಗಲನ ಕೊಟ್ಟರ್ (ಮುಂಬರಾ. X, ೨೭೦–೨೫ ; 1229). [ಆವಗೆ + ಕಲ₁]

**ಆವಗೆಗಿಚ್ಚು, ಆವಿಗೆಗಿಚ್ಚು, ಆವುಗೆಕಿಚ್ಚು, ಆವುಗೆಗಿಚ್ಚು** (ನಾ). ಆವಗೆಯ ಬೆಂಕಿ, —ಉರಿ : ಅಖಿಲಬ್ರಹ್ಮಾಂಡಭಾಂಡಕ್ಕಮಾವಗೆಗಿಚ್ಚಿಂ [ಪಾಠಾಂ. ಆವಿಗೆಗಿರ್ಚಿಂ] ಬಿನೆಗಂ ನಿಶಾಚರನ ಕೋಪೋಗ್ರಾನಲಂ ಪೊತ್ತುತುಂ (ಜಗವಿ. ೧೫–೪೦ ; ಕಾವ್ಯಸಾ. ೪೧೫). **ಆವಿಗೆಗಿಚ್ಚು** : ಸವಸಂದಾವಿಗೆಗಿಚ್ಚು ಮೆಲ್ಲೆರ್ದೆಯ ಸೂಡು (ಸೂಕ್ತಿಸು. ೧೫–೫೪) ; ವಿರಹದಾವಿಗೆಗಿಚ್ಚೊ ಎನಲಾವರಿಸಿದುದು ಸಂಧ್ಯಾರುಣವು (ಜೀವಂಚ. ೪–೧೪). **ಆವುಗೆಕಿಚ್ಚು** : ಮೊಳೆವುದೆ ಕಂಜವನಲದೊಳಾವುಗೆಕಿಚ್ಚಿನೊಳು ತಂಪು (ಮೋಳಿಪು. ೫–೧೨೦). **ಆವುಗೆಗಿಚ್ಚು** : ಆ ವಿರಹಾವಸ್ಥೆಯ ಬೇವಸದ ಬೇಗೆಯಾವುಗೆಗಿಚ್ಚಾದುದೊಳಗೆ (ನೇಮಿಸಂ. ೧೮–೮೫).
[ಆವಗೆ + ಕಿಚ್ಚು (< ಕಿರ್ಚು)]

**ಆವಗೆದೆಱೆ** (ನಾ). ಆವಗೆಯಿಂದ ತೆಗೆ : ತರುಣಿಯ ವಿರಹಾನಳನಿಂ ಕರಿಂಕು ತಗುಳ್ದಲರ ದೂಳಿದೂವೆಯ ತೆಜಮೋಸರಿಸೆ ಮಿಸುಕಿದುವು ಬೆಳುಪಿಂದೊರೆದಾವಗೆದೆಱೆದ ಕೊಡಗಳೆನೆ ಮೊಲೆಗೊಡಗಳ್ (ಲೀಲಾವ. ೧೧–೩೧). [ಆವಗೆ + ತೆಱೆ₁]

**ಆವಗೆಯುರಿ** (ನಾ). ಆವಿಗೆಯ ಜ್ವಾಲೆ, —ಬೆಂಕಿ: ಮಗನಟಲೊಂದು ಭೂಪತಿಯ ತಮ್ಮನೊಳಾದಟಲೊಂದು ನೊಂದು ಬಿನ್ನಗೆ ಮೊಗದಿಂದೆ ಕುಂದಿ ಫಣಿಕೇತನನಿರ್ದಟಲೊಂದು ತನ್ನನಾವಗೆಯುರಿಯಬ್ಬವೋಲಳುರೆ (ಪಂಪಭಾ. ೧೨–೧೭೦). [ಆವಗೆ + ಉರ್ಿ₂]

**ಆವಜ** 'ಆವುಜ' ನೋ.

**ಆವಟ₁** (ನಾ). ಅಳತೆ (?) : ಸಭಾಮುಂಟಪದಿಂ ತೆಂಕಣಗಡಿಯುಮಂ ಕೊಟಿ(ಳ)ಗದಾವಟದಲ್ಲಿ ವೀಸಂ ಕಾಣಿಯುಮಂ . . . ಬಿಟ್ಟರು (ಎಇ. XV, ೩೨೨–೬೦ ; 1172). 'ಆವಟಿಗ' ಪರಾ. [?]

**ಆವಟ₂** 'ಆವುಟ' ನೋ.

**ಆವಟಿಗ** (ನಾ). ದವಸಧಾನ್ಯವನ್ನು ಅಳೆಯುವ ಕಸುಬಿನವನು : ತಿರಿದು ತೈಲವ ತೆಗೆವ ಗಾಣಿಗರ ಸೇಣಿಗರ ಇರದೆ ದವಸವನಳೆವ ಆವಟಿಗ ಕೋವಟಿಗ ದೀವಟಿಗ ಕಲ್ಲುಕುಟಿಗ (ಗುರುಚಾ. ೧–೩೪) ; ರಾಶಿಯೊಳಗೆ ಒಂದು ಕಾಳು ಪೋಗಲು ತಿರುಗಿ ಲೇಶ ಬಿಡದೆ ಬಂದು ಆವಟಿಗನು ಅಳಿಯೆ ರಾಶಿ ಕಡಿಮೆ ಉಂಟೆ ನೋಡಲು ಕೇಳಲು (ವಿಸಾಸು. ೯೬–೨).
[ಆವಟ₁ + –ಇಗ]

**ಆವಡಿ** (ನಾ). ಕಷ್ಟ ; ತೊಂದರೆ ; ಹಿಂಸೆ. 'ಆವಡಿಗೊಳಿಸು' ಪರಾ.
[**ಪ್ರಾ.** ಆವೀಡ < **ಸಂ.** ಆಪೀಡ]

**ಆವಡಿಗೊಳ್** (ಕ್ರಿ). ಕಷ್ಟಕ್ಕೆ ಗುರಿಯಾಗು ; ಹಿಂಸೆಗೆ ಒಳಗಾಗು ; ತೊಂದರೆ ಪಡು. 'ಆವಡಿಗೊಳಿಸು' ಪರಾ.
[ಆವಡಿ + ಕೊಳ್₁]

**ಆವಡಿಗೊಳಿಸು** (ಕ್ರಿ). ಕಷ್ಟಕ್ಕೆ ಗುರಿಮಾಡು ; ಹಿಂಸೆಪಡಿಸು ; ತೊಂದರೆಮಾಡು : ಬಾವುಜಿಗೆಯನೆಳ್ಳಂ ನಿಷ್ಪಾವಮನಗಸೆಯುಮನಿಕ್ಕಿ ದಂಡೆರ್ಮೆಗೆ ಮೇಣಾವಿಂಗೆ ಬಸಿಱ ಕಱು ಸತ್ತಾವಡಿ(ದಿ)ಗೊಳಿಸುತ್ತು [ಪಾಠಾಂ. ತ್ತಾವಱಿಸಿಗೊಳುತ್ತು]ಮಿರ್ಪೊಡದು ಪೊಱಮಡುಗುಂ (ಲೋಕೋಪ. ೯–೧೯೦). [ಆವಡಿಗೊಳ್ + –ಇಸು₃]

**ಆವಣ₁** (ನಾ). ಅಂಗಡಿ : ಅಮಾವಾಸ್ಯೆಯನ್ನು ತಳಜಜ್ಗೆ ಆವಣದೊಳೊರ್ವ್ವಗಳ್ವ ಜೋಳಂ ಮನೆಯೊಳೊರ್ವ್ವಗಳ್ವಂ ಜೋಳಂ (ಹೈಆರಿ. ೧೯೩೬, ೨೬–೪೨ ; 872) ; ದೂಸಿಗರ ಕಂಚಗಾಜರ ಬಳೆಗಾಜರ ತಂಬುಲಿಗರ ಮಣಿಗಾಜರ ಗಂದಿಗರಾವಣಂಗಳೊಳ್ ನಡೆತಂದರ್ (ಜಗವಿ. ೬–೧೮).
[< **ಸಂ.** ಆಪಣ]

**ಆವಣ₂** (ನಾ). ಒಂದು ಊರಿನ ಹೆಸರು : ಆವಣ ಗ್ರಾಮ ಸಮುದ್ಭೂತಾ (ಮೈಆರಿ. ೧೯೨೮, ೭೩–೩೦ ; 1057). [?]

**ಆವಣಿ** (ನಾ). ತಮಿಳು ತಿಂಗಳುಗಳಲ್ಲಿ ಐದನೆಯ ತಿಂಗಳು; ಚಾಂದ್ರಮಾನದ ಆಷಾಢ ಶ್ರಾವಣ: "ಶಾಸ್ತ್ರಿಗಳೇ ಇದಾದರೂ ಕೊಡುತ್ತದೆಯೇ ನೋಡಿ. ಆವಣಿ (ಆಶಾಢ, ಶ್ರಾವಣ) ಮಾಸವಾದರೂ ಚಿಂತೆಯಿಲ್ಲ, ಈಗಲೇ ವಿವಾಹವನ್ನು ಮುಗಿಸಿಬಿಡ್ತೇನೆ" ಎಂದರು (ಕೊನಷ್ಟ್ಯ. ೬).

[← ತಮಿ. ಮಲ. ಆವಣಿ < ಸಂ. ಶ್ರಾವಣ]

**ಆವತಿ** (ನಾ). ಒಂದು ಸೀಮೆಯ ಹೆಸರು: ಶ್ರೀಮನ್ಮಹಾ ಆವತಿಯ ನಾಡ ಪ್ರಭು ಸೊಣಪಗಉಡ ಅಯ್ಯನವರು (ಎಕ. X, ಗೋರಿಬಿ. ೫೨–೮; 1565); ಶ್ರೀಮತು ಮಹಾ ಆವತಿ ನಾಡ ಪ್ರಭು ಮೊಲೆಯ ಬಾಯಿರಯ ಗವುಡ (ಎಕ. X, ಚಿಕ್ಕಬ. ೨೭–೬; 1575). [?]

**ಆವತ್ತು** 'ಆವೊಟ್ಟು' ನೋ.

**ಆವದಕಲ್** (ನಾ). (?): ಪಡುವ ಕಮ್ಮಜಕಲ್ ನೈರಿತಿಯೊಳೆ ಆವದ ಕಲ್ ತೆಂಕ ಪೇರೂರ ಪಳ್ಳಂ (ಎಕ. XI, ಮೊಳಕಾ. ೨೭–೫; 962). [?]

**ಆವನ್** 'ಆವುದು' ಪರಾ.

**ಆವನಿನಾಡು** (ನಾ). ಒಂದು ಸೀಮೆಯ ಹೆಸರು: ಆವನಿ ನಾಡ ಕಾಲು ತನಹಳ್ಳಿಯ ಸೋಮದೇವರ ಪ್ರತಿಷ್ಠೆಕಾಲದಲು (ಎಕ. X, ಮುಳಬಾ. ೨೯–೩; 890); ಮುಳುವಾಯ ರಾಜ್ಯದ ಆವನಿನಾಡ ಕುಂಮಾದೇವಿಯ ಹಳಿಯ ಗ್ರಾಮುವಂದನು (ಎಕ. X, ಮುಳಬಾ. ೧೧–೧೦; 1389).

[ಆವನಿ$_0$ + ನಾಡು]

**ಆವನು** 'ಆವುದು' ಪರಾ.

**ಆವನ್ಯ** (ನಾ). ಒಂದು ಸ್ಥಳದ ಹೆಸರು: ಆವನ್ಯದಿ ಕಾಮಸರ ಆಚಾರಿಯ ಮಗ ಕೇವಳಿ (ಎಕ. IX, ಹೊಸಕೋ. ೮೫–೪; 750); ದೀವಬ್ಬೆಸಮುದ್ರವಂ ಕಟ್ಟಿಸಿಯಲ್ಲಿಯ ವಿಷ್ಣುಗ್ರಿಹಮುಮ್ಮಾಡಿಸಿಯಾವನ್ಯದೊಳ್ಳೊಬಿಂಬ ನಾರಾಯಣೇಶ್ವರಮುಮ್ಮಾಡಿಸಿ (ಎಕ. X, ಮುಳಬಾ. ೩೮–೭೦; ಸು. 890).

[?]

**ಆವಪನ** (ನಾ). ೧. ಬೀಜ ಬಿತ್ತುವುದು; ಬಿತ್ತನೆ. ೨. ಪಾತ್ರೆ. [ಸಂ.]

**ಆವರ್** 'ಆವುದು' ಪರಾ.

**ಆವರ** 'ಆವರಂ' ನೋ.

**ಆವರಂ, ಆವರ** (ಅ). ಅಲ್ಲಿಯವರೆಗೆ; ಆವರೆಗೆ: ಈ ಬಯಕೆ ಏವರಂ ನೆರೆಯದಾವರಂ ನನಗಕಟಾ ಬಾರದು ನಿದ್ದೆ (ಹೆಬ್ಬೆರ. ೬–೬); ನಮ್ಮಾ ಭಾರಮೇವರಂ ಹೆಸರು ನಿನ್ನಾಚಾರ್ಯಮುನ್ನಾವರಂ (ಗಿಳಿವಿಂ. ೫೩–೧೪).

**ಆವರ** (ಸ್ಯಾಂಡರ್). [ಆ$_3$ (< ಅದು$_1$) + -ವರಂ]

**ಆವರಕ** (ನಾ). ಮುಚ್ಚುವ ಅಥವಾ ಮರೆಮಾಡುವ ವಸ್ತು: ಗಜ ತುರಂಗ ಮನುಷ್ಯಾದಿ ಸ್ಥೂಲಶರೀರಗಳನ್ನು ಜೀವರ ಲಿಂಗಶರೀರಗಳ ಮೇಲೆ ಆವರಕವನ್ನಾಗಿ ಸೃಷ್ಟಿಸುವನು (ಹಸಾರ. ೩–೨೮ ಟೀಕೆ).

[ಸಂ.]

**ಆವರಣ** (ನಾ). ೧. ಮುಚ್ಚುವುದು; ಮರೆಮಾಡುವುದು; ಮುಸುಕು ಹಾಕುವುದು. ೨. ಪ್ರಾಕಾರ; ಸುತ್ತುಗೋಡೆ; ಬೇಲಿ ಅಥವಾ ಕಂಬಿಗಳಿಂದ ಹಾಕುವ ಸುತ್ತುಗಟ್ಟು. ೩. ಹೊದಿಕೆ; ಮರೆ; ಮುಸುಕು: ಆವರಣ ವಿಕ್ಷೇಪ ಶಕ್ತಿಗಳಾವರಿಸೆ ಪರವಸ್ತುವನು ಜಗಜೀವರೂಪಾಗಿಹುದು ಸ್ವಪ್ನಪದಾರ್ಥದಂದದಲಿ (ಅಮೃತ. ೫–೫೭); ಇಂತು ಯಶೋದೆಯು ಬಾಳಿನ ಮೇಲೆ ಪ್ರಕೃತಿಯು ಮತ್ತೊಂದಾವರಣದ ವೋಲೆ (ಗಣೇಶ. ೭೬–೧೨). ೪. [ತತ್ತ್ವಶಾ] ಅಜ್ಞಾನ. 'ಆವರಣ ಭಂಗ' ಪರಾ. ೫. ಗುರಾಣಿ; ಹರಿಗೆ: "ಖೇಟಕಂ, ಫಳಕಂ, ಚರ್ಮ, ಆವರಣಂ —ಈ ೪ ಹರಿಗೆ" (ಹಲಾಯು. ೭೬–೩೦೬). ೬. (ಯುದ್ಧದಲ್ಲಿ) ಶತ್ರುವಿನ ಪೆಟ್ಟನ್ನು ತಪ್ಪಿಸಿಕೊಳ್ಳುವುದು, —ತಡೆಗಟ್ಟುವುದು. ೭. ಯುದ್ಧಕವಚ. ೮. "ಮರುಳು ಮಾಡುವಂಥಾದು" (ಗಂಗಾಮ. ೨೮). ೯. ಅಗುಳಿ; ತಾಳು. ೧೦. ಎಲ್ಲೆಕಟ್ಟು; ಪರಿಧಿ; ಪರಿಮಿತಿ: ಹರಭಕ್ತನಾದ ಜ್ಞಾನಿ ಸಂಸಾರದಾವರಣದೊಳಗಿಹನೆ (ಸರ್ವಜ್ಞ. ೩೭); ಕೆರೆ ಅಥವಾ ಬಾವಿಯ ಆವರಣವನ್ನು ಚೊಕ್ಕಟವಾಗಿರಿಸಬೇಕು (ಅಡುಸಾ. ೮೪). [ಸಂ.]

**ಆವರಣಚಿಹ್ನೆ** (ನಾ). ಬರೆವಣಿಗೆಯಲ್ಲಿ ಬಳಸುವ '( )' '[ ]' ಮುಂತಾದ ಸಂಕೇತಗಳ ಹೆಸರು: ಅಧ್ಯಾಹಾರಮಾಡಿ ಆವರಣಚಿಹ್ನೆಗಳಲ್ಲಿ ತೋರಿಸಬೇಕು (ಮಧ್ಯಮ. ೩೦೦). [ಆವರಣ + ಚಿಹ್ನೆ]

**ಆವರಣಭಂಗ** (ನಾ). ೧. ಆವರಣದ ನಿವಾರಣೆ: ಅಂತೂ ಪ್ರತಿಭೆಯ ಪ್ರಕಾಶಕ್ಕೆ ಅಡ್ಡಿಯಾಗಿರುವ ಆವರಣಭಂಗವೇ ಎಲ್ಲ ಕಡೆಗಳಲ್ಲೂ ಕವಿತೆಗೆ ಕಾರಣ (ಭಾರವಿಾ. ೧೬೧). ೨. [ತತ್ತ್ವಶಾ] ಅಜ್ಞಾನದ ನಿವೃತ್ತಿ: ಅಂತಃಕರಣವೃತ್ತಿಗೆ ಎರಡು ವಿಧವಾದ ಫಲ. ವಿಷಯಕ್ಕೂ ಚೈತನ್ಯಕ್ಕೂ ಅನಾದಿಯಾಗಿ ಆವರಣವಾಗಿರುವ ಅಜ್ಞಾನವನ್ನು ನಿವೃತ್ತಿಮಾಡುವುದು ಒಂದು; ಇದಕ್ಕೆ ಆವರಣಭಂಗವೆಂದು ಹೆಸರು (ಹಿಂದಸಾ. ೨೦೨).

[ಆವರಣ + ಭಂಗ]

**ಆವರಣಶಕ್ತಿ** (ನಾ). ೧. ಮುಚ್ಚಿಕೊಳ್ಳುವ ಶಕ್ತಿ; ಮರೆಮಾಡುವ ಸಾಮರ್ಥ್ಯ: ಆವರಿಸಿಕೊಂಡಿರ್ಪುದದು ಕೇಳಾವರಣಶಕ್ತಿಯು (ಅಮೃತ. ೪–೮); ಅವಿದ್ಯೆಗೆ ಆವರಣಶಕ್ತಿ, ವಿಕ್ಷೇಪಶಕ್ತಿ ಎಂದೆರಡು ಸ್ವಭಾವಗಳು ಇರುವುವು. ಆವರಣಶಕ್ತಿಯಿಂದ ವಸ್ತುರೂಪವು ಮುಚ್ಚಲ್ಪಡುವುದು (ಹಿಂದಸಾ. ೨೧೩). [ಆವರಣ + ಶಕ್ತಿ]

**ಆವರಣಿಸು** (ಕ್ರಿ). ಮುಚ್ಚು; ಮರೆಮಾಡು: ಕನಕಶಿಲೆ ಎನಿಸುವ ಪಾಷಾಣದಲ್ಲೆ ರತುನ ಪುಟ್ಟಲಿಕ್ಕಾಗಿ ಆ ಮಧ್ಯದಲ್ಲಿ ಸೂತ್ರ ತೋಜಲಿಕ್ಕೆ ಆ ಸೂತ್ರ ಪಾಷಾಣವ ಗ್ರಹಿಸಿ ಆವಕಡೆ ಮುಖವಾದಲ್ಲಿ ಸೂತ್ರ ಆವರಣಿಸುವಂತೆ (ಮೋಳಿಮಾ. ೨೭೩–೧೪). [ಆವರಣ + -ಇಸು$_3$]

**ಆವರಣೆ** (ನಾ). ಒಂದು ಬಗೆಯ ಯಂತ್ರ (?): "ಆವರಣೆ [ಪಾಠಾಂ. ಣೆ]ಯೆನೆ ಜಂತ್ರಮುಕ್ಕು" (ಮಂಗರಾ ೬೧–೨೦). [?]

**ಆವರವೇಂಟೆ** (ನಾ). ಮೂರು ಬಗೆಯ ಬೇಟೆಗಳಲ್ಲಿ ಒಂದು (?): ಪೆರ್ವೇಂಟೆ ಕಿಱುವೇಂಟೆಯಾವರವೇಂಟೆಯೆನಲ್ ಮೂಜುವೇಂಟೆ ಪೆಸರ್ವಡೆದಿರ್ಕುಂ (ಸೂಕ್ತಿಸು. ೩–೯೫). ℙ ಈ ಶಬ್ದವನ್ನು ಆ + ವ[ಮು]ರವೇಂಟೆ ಎಂದು ಬಿಡಿಸುವುದೂ ಸಾಧ್ಯ. [ಆವರ$_0$ + ಬೇಂಟೆ]

**ಆವರಿ$_1$** (ನಾ). (?): ಒರೆಯಾಣಿ ಕೇಣಿ ನೋಟಂ ತೂಕ ಬಡ್ಡಿಯಾವರಿ ಉಭಯುವಟ್ಟೆ ಹಿಡಿಹತಿ ಗನ್ನಗತಕ ಭಾಸುರದ ರತ್ನಪರೀಕ್ಷೆಗಳೊಳು ಪರಿಣತನ ಮಾಡಿದಂ (ಸೋಮಚ. ೧–೯೩). [?]

**ಆವರಿ$_2$** 'ಆವಿ' ನೋ.

**ಆವರಿಕೆ** (ನಾ). ತಂಗಡಿ ಗಿಡ; ಗೊಂಚಲು ಗೊಂಚಲಾಗಿ ಹಳದಿ ಹೂವುಗಳು ಬಿಡುವ ಸಣ್ಣ ಕುರುಚಲು ಗಿಡ: ತಾವರೆಗಳ ಆವರಿಕೆ ಸೊಪ್ಪು ಇವನು ಸಮಾನವಾಗಿ ತೆಗೆದುಕೊಂಡು ಅರೆದು ಸಕ್ಕರೆವೆರಸಿ ಹಸುವಿನ ಹಾಲಿಂದ ಸೇವಿಸಲು ಬೇವಿನ ವಿಷ ಹರವಹುದು (ವೈದ್ಯಸಾ. II, ೨೩೩); ಆವರಿಕೆ – ಈ ಚಿಗುರಂ ಅರೆದು ಮೂರುಗುಳಿಗೆಯುಂ ಎಮ್ಮೆ ಮೊಸರಿನಲ್ಲಿ ಮೂರು ದಿನ ತೆಗೆದುಕೊಳ್ಳೆ ನಷ್ಟೇಂದ್ರಿಯಗುಣ (ವಿವೈವಿ. ೨).

[ದೇ.॥ ತಮಿ. ಆವಾಕ್ಕೈ, ಆವಾರೈ, ಆವಿರೈ; ಮಲ. ಆವೀರಂ; ಕೊಡ. ಆವ್ರಂ]

**ಆವರಿಗಾಲ್** (ನಾ). ಒಂದು ಊರಿನ ಹೆಸರು (?): ಆ ಮಹಾಜನಂಗಳು ತಮ್ಮ ಆವರಿಗಾಲೊಳಗೆ ಕಂಬ ೪೦೦೦೦ನೂ ಆಕರವಾಗಿ ಭೋಗಿಸುವನು ಎಂದು ಕೊಟ್ಟ ಶಾಸನ (ಎಕ. XIV, ತಿರುಮ. ೨೨೩–೭; ?).

[ಆವರಿ$_0$ + ಕಾಲ್$_3$]

**ಆವರಿಸು** (ಕ್ರಿ). ೧. ಹರಡು ; ವ್ಯಾಪಿಸು: ಅವನ ಸೈನ್ಯದೊಳಾವರಿಸಿದ ಧೂಳಿ ಪೊಱ್ಱುದಂಭೋನಿಧಿಯಂ (ಆದಿಪು. ೧೩–೭೪) ; ಆವರಿಸಿತ್ತೊ ನಭೋಂತರ್ಭೂವಿವರಮನವಮರ್ದಿನೆಸಕಮೆನೆ . . . ಬೆಳಗಿದಂ ತುಹಿನಕರಂ (ಪಂಪಭಾ. ೪–೫೨) ; ಇತ್ತ ಇಂದ್ರನ ಪ್ರಭಾವ ಪೂರ್ವಾಂಕವನ್ನೆಲ್ಲಾ ಆವರಿಸುತ್ತದೆ (ಸಮಾಲೋ. ೮೦). ೨. ಸುತ್ತುಗಟ್ಟು ; ಆವರಣವಾಗು : ಮುಗಿಲ ತುಡುಕುವ ತೆನೆಗಳಾಳ್ವೇರಿಗಳು . . . ಬಳಸಿದ ಕೋಟೆ ಸುತ್ತಾವರಿಸಿದುನ್ನತ ಗಗನವೀಧಿಯ (ನಳಚ. ೧–೨೧). ೩. ಪಡೆ; ಹೊಂದು : ಪಿರಿದಪ್ಪ ಬೇವಸಮನಾವರಿಸಿರ್ದಳದೊಂದು ಬೇಗಮಂ (ಕಾದಂಉ. ೨೯೦) ; ಎಲ್ಲದೆನಿಪ್ಪಾ ವಚನಮುದೇಕತ್ವಮನಾವರಿಸಿದೊಡೆಲ್ಲಮೆಂದೆ ಆಯ್ತಾದೇಶಂ (ಶಮುದ. ೧೫೧) ; ಚಂಪಕಂ ಸೊಂಪಡರೆ ಬಕುಳಮಿರದಾವರಿಸೆ ಮುಕುಳಮಂ ಪಾದರಿಗೆ ಪದವಿ ಪೆಚ್ಚಲ್ಕೆ (ಚೆಬಪು. ೩೫–೩). ೪. ಮುಚ್ಚು ; ಮುತ್ತು ; ಕವಿ : ನೆರೆದು ಸಹಜಾಮೋದಕ್ಕೆಬ್ಬಂದು ತುಂಬಿಯ ಬಂಬಲಾವರಿಸಲೆನಸುಂ ತನ್ನಂ ನೀಲಾಂಬರಚ್ಛದೆಯಾಗಿ (ಕಾದಂಉ. ೯೭) ; ಆವರಿಸಿದುದು ಮತ್ತೆ ಹೊಸ ಮೇಳಾಪದಲಿ ಕುರುಸೇನೆ (ಕುವ್ಯಾಕ. ೧೪–೨೮). ೫. ಪ್ರಾಪ್ತವಾಗು ; ಸೇರು : ದೊರೆಕೊಳೆ ಕಾಲಲಬ್ಧಿ ಬಗೆದಂತಿರೆ ಕೂಡೆ ಗುರೂಪದೇಶಮಾವರಿಸೆ ಜಿನೇಂದ್ರಭಕ್ತಿ ಪೊಱಪೊಣ್ಮೆ ದಯಾರಸಂ (ಆದಿಪು. ೫–೫೩) ; ವಿರಹವಿಹ್ವಲತೆಯಿಂ ಚಂದನಾನುಲಿಪ್ತನಾದಂತೆ ಬೆಳರ್ಪಿನಾವರಿಸಿಯುಂ (ಕಾದಂಪೂ. ೮೯೮) ; ಪಿರಿದುಂ ಪಕ್ಷಾಂತರಮಂ ನಿರವಿಪೆಕಾರಂ ನಿಜಾಂತಮಾದೊಡೆ ಶಬ್ದಂ ಪರಿಕಿಸೆ ಧಾತ್ವಂತ್ಯದೊಳಾವರಿಸಿರ್ಕುಂ ಲಿಂಗ ವಚನ ಪುರುಷಾಯತ್ತಂ (ಶಮುದ. ೨೫೦). ೬. ವಿಮರ್ಶಿಸು ; ವಿಚಾರಿಸು : ಗಂಗಾದೇವಿಯ ಮಡುವಿನೊಳಟ್ಟಿದರಾವರಿಸದೆ ತಮ್ಮ ಕುಲವನಡಿಗಬ್ಬುವವೊಲ್ (ಪಂಪಭಾ. ೨–೩೨). [ಆವರಣ + –ಇಸು$_3$]

**ಆವರು** 'ಆವುದು' ಪರಾ.

**ಆವರೆ** (ನಾ). = ಆವರಿಕೆ : "ರಜಪುಷ್ಪಿ ಆವರವೆನಲ್ಕಾವರೆಯೆನಿಕ್ಕು" (ಮಂಗರಾ. ೪೦–೩೦) ; ಪದಾದಿಯ ದೀರ್ಘಕ್ಕೆ —ಅವುರ – ಆವರೆ [ಪಾಠಾಂ. ರಿ] (ಶಮುದ. ೨೭೭ ಪ್ರಯೋ) ; ಅರಿಸಿನದ ಕಷಾಯದೊಳಾವರೆಯೆಲೆಯಂ ಮುಗುಳನಕ್ಕಿ ಕಿಱುಸಾಲೆಯ ಬೇರ್ವೆರಸು ಕುದಿಯಿಸಿ ಬೞಿಕ್ಕದನರೆದಡುಗೆರವುರಿಯ ಬಾಡಮಂ ಮಸುಳಿಸುಗುಂ (ಲೋಕೋಪ. ೮–೨೨) ; ನೀಳ್ದಲೆದೆಡೆಗೈಯೊಳಾವರೆಯ ಪಂದಳಿಗರ್ಳ್ ನಡೆಗೇಡು ಮಾಡೆ . . . ಒಪ್ಪಿದರ್ (ಲೀಲಾವ. ೫–೧೧೬) ; ಒಳ್ಳಿದುವೆರಸಾವರೆಯುಂ ಕೊಳ್ಳರೆದು ನೃಮೂತ್ರದಿಂದೆ ಕಟ್ಟುವಿಷಘ್ನಂ (ಖಮುದ. ೧೬–೭೫).
[ದೇ. ‖ ತಮಿ. ಆವರೈ ; ಮಲ. ಆವೀರ]

**ಆವರೆಗೊಂಬು** (ನಾ). ತಂಗಡಿಗಿಡದ ರೆಂಬೆ; ಆವರಿಕೆ ಗಿಡದ ಕೊಂಬೆ : ತುಱುಗಿರ್ದಾವರೆಗೊಂಬಂ ಮುಱಿದು ನೆಟಿಲ್ಮಾಡಿಕೊಂಡು ನಡೆವರ್ ಪಥಿಕರ್ (ಜಗವಿ. ೧೭–೬೯). [ಆವರೆ + ಕೊಂಬು]

**ಆವರ್ಜನ** (ನಾ). ೧. ಬಾಗುವುದು ; ಒರಗುವುದು. ೨. ಕೊಡುವುದು. ೩. ಒಲಿಸಿಕೊಳ್ಳುವುದು. ೪. ಸಂಪಾದನೆ; ಗಳಿಕೆ. [ಸಂ.]

**ಆವರ್ಜಾ, ಆವರ್ಜಿ** (ನಾ). ಜಮೀನು ಮತ್ತು ಕಂದಾಯದ ವಿವರಗಳನ್ನು ತಿಳಿಸುವ ದಾಖಲುಪಟ್ಟಿ ; ಪಟ್ಟಿ (ಕಿ). **ಆವರ್ಜಿ** (ಕಿ).
[← ಮರಾ. ಆವರ್ಜಾ, ಆವರಜಾ ; ಪಾರ. ಅವಾರ್ಜ, ಆವರ್ಜ ; ಹಿಂ. ಅವಾರಜಾ, ಆವಾರಜಾ]

**ಆವರ್ಜಿ** 'ಆವರ್ಜಾ' ನೋ.

**ಆವರ್ಜಿಸು** (ಕ್ರಿ). ೧. ಒಲಿಸಿಕೊಳ್ಳು : ಸರ್ವರತ್ನಭಾಜನನುಂ ಚಕ್ರವರ್ತಿಯುಮಪ್ಪ ನಿನಗಲ್ಲದೆ ಯೋಗ್ಯಮಲ್ಲೆಮ್ಮಱಿವುದುಂ . . . ಎಂದು ನುಡಿದು ಖಚರೇಂದ್ರನ ಮನಮನಾವರ್ಜಿಸಿಯುಂ (ಶಾಂತಿಪು. ೨–೨೨ ವ). ೨. ಪಡೆ; ಗಳಿಸು; ಸಂಪಾದಿಸು : ರಣದೊಳಾ ವಿಕ್ರಮಮಂ ಸೊಲ್ವಿನಮಾವರ್ಜಿ (?)[ಪಾಠಾಂ. ರ್ತಿ] ಸಿದಂ ನಾಲ್ವತ್ತೆರಡಱಿಕೆಗಾಳೆಗಂಗಳೊಳೀತಂ (ಪಂಪಭಾ. ೧–೨೫) ; ಭುವನಕ್ಕಾಶ್ಚರ್ಯಮಪ್ಪಂತು ಕೀರ್ತಿಯನಾವರ್ಜಿಸುತಿರ್ಪುದಾವ ಚರಿತಪ್ರಾರಂಭದಿಂ ಚಕ್ರವರ್ತಿಯುಮಂ ಪೆರ್ಚಿಸಿದೊಳ್ಪು ನಿನ್ನೊಳೆಸೆಗುಂ (ಅಜಿಪು. ೧೨–೧೧). ೩. "ಒಳಕೊಳ್ಳು" (ಶಾಪಮಂ. ಕೋಶ) : ಗಂಡುಗೆಟ್ಟಾಳ್ವಿಸನಂ ಪೂಣ್ದತ್ತು ಶೌರ್ಯೋನ್ನತಿಗಗಿದಸುಹೃನ್ಮಂಡಳಂ ಮೆಲ್ಪನಾವರ್ಜ್ಜಿಸಿದೊಂದಾಜ್ಞಾವಿಶೇಷಕ್ಕೆಳಸಿದುದು ಸುಹೃನ್ಮಂಡಳಂ (ಎಕ. VII, ಶಿಕಾರಿ. ೧೩೬–೧೩ ; 1068). [ಆವರ್ಜನ + –ಇಸು$_3$]

**ಆವರ್ಣ** (ನಾ). ೧. = ಆವರಣ ೨ : ಒಂದು ಗುಂಡಾದ ಆವರ್ಣ (ಮುಸುಗ. ೧೦೦). ೨. = ಆವರಣ ೩ : ನಾರಾಯಣಾವರ್ಣದಲ್ಲಿ ಅವ್ಯಕ್ತ ಆವರ್ಣಗುಣತ್ರಯಾತ್ಮಕವಾಗಿದೆ (ಅಧ್ಯಾತ್ಮ. ೨೧).
[ಸಂ. ಆವರಣ]

**ಆವರ್ತ** (ನಾ). ೧. ನೀರಿನ ಸುಳಿ ; ಸುಳಿ : "ಆವರ್ತವೆಂಬುದು ಸುೞಿ" (ಹಲಾಯು. ೧೧೦–೪೬) ; ಕಲ್ಲೋಲಮಾಲೆಯಿಂ ಶೈವಾಳಗರ್ತದಾವರ್ತದಿಂ ತಿಮಿತಿಮಿಂಗಿಲ ಕಮಠದಿಂ . . . ಎಸೆವ ನೀರಾಕರಂ (ಸಿದ್ಧರಾ. ೧–೧೩). ೨. ಪ್ರಾಣಿಗಳ ಮೈಮೇಲಿನ ಕೂದಲಲ್ಲಿ ಕಾಣಿಸಿಕೊಳ್ಳುವ ಸುಳಿ. 'ಆವರ್ತಯುಕ್ತ' ಪರಾ. ೩. ತಿರುಗುವಿಕೆ ; ಸುತ್ತುವುದು.
[ಸಂ.]

**ಆವರ್ತತೇಜ** (ನಾ). ಮತ್ತೆ ಮತ್ತೆ ಕಾಣಿಸಿಕೊಳ್ಳುವ ತೇಜಸ್ಸು : ಒಲಿವಂದಮೆನ್ನೆಸಗಿ ಒಲವಕೊಳೆ ಕೈತೆರೆಯುತಾವರ್ತತೇಜದೊಳು ಬೆಳಗುವಿರುಳೇ (ಮಲೆದೇ. ೯–೮). [ಆವರ್ತ + ತೇಜ]

**ಆವರ್ತದಶಾಂಶ** (ನಾ). [ಗಣಿತ] ಪೂರ್ಣಾಂಕಕ್ಕೆ ದಶಾಂಶರೂಪ ಕೊಡುವಾಗ ಪುನಃ ಪುನಃ ಶೇಷ ಉಳಿಯುವ ಅಂಕೆ : 'ನಾಳೆ' ಮತ್ತು 'ಮುಂದಿನವಾರ' ಗಳು ಆವರ್ತದಶಾಂಶದಂತೆ . . . ಉಳಿಯುತ್ತವೆ (ಗಾಳಿಪ. ೧೫೫). [ಆವರ್ತ + ದಶಾಂಶ]

**ಆವರ್ತನ** (ನಾ). ೧. ತಿರುಗುವಿಕೆ; ಸುತ್ತುವುದು : ಚತುರಶೀತಿಲಕ್ಷಪ್ರಮಾಣಯೋನಿಮುಖಂಗಳೊಳಾವರ್ತನ ಪರಿವರ್ತನದಿಂ ದುರಿತವರ್ತಿಯಾಗಿ ನಮೆವ ಸಂಸಾರಿ ಜೀವಕ್ಕೆ (ಸುಕುಮಾ. ೫–೩೨ ವ). ೨. ಮಲ್ಲಯುದ್ಧದಲ್ಲಿ ಒಂದು ಕ್ರಮ, —ಭಂಗಿ : ಕೃಷ್ಣಂ ನಿವರ್ತನಾವರ್ತನ ಭ್ರಮಣ ವಲ್ಗನ ಪ್ಲವನಾವಸ್ಥಾನಾದಿ ಕ್ರಿಯಾಪರಿಣತಂ (ಚಾವುಂಪು. ೩೫೭–೨೬). ೩. ಸುಳಿ. 'ಆವರ್ತನಸಿದ್ಧಿ' ಪರಾ. ೪. ಲೋಹಗಳನ್ನು ಒಟ್ಟಿಗೆ ಸೇರಿಸಿ ಕರಗಿಸುವುದು. ೫. ಮತ್ತೆ ಮತ್ತೆ ಅಭ್ಯಾಸ ಮಾಡುವುದು ; ಅನುಶೀಲನೆ. [ಸಂ.]

**ಆವರ್ತನಸಿದ್ಧಿ** (ನಾ). ೧. ಸುಳಿಸುಳಿಯಾಗಿರುವಿಕೆ; ಸುಳಿಯಂತಿರುವಿಕೆ. ೨. ಸುಳಿಗಳನ್ನು ಹೊಂದಿರುವುದು. ೧, ೨ : ಗಂಭೀರ ಗುಣದೊಳಮಾವರ್ತನಸಿದ್ಧಿಯೊಳಂ ಜಳನಿಧಿಯನೆ ಪೋಲ್ವ ಶರಣಾಗತಜಳನಿಧಿಯ ನಿಮ್ನನಾಭಿ ಚೆಲ್ವಿಂಗೆ ತಾನೆ ನಾಭಿಯಾದುದು (ಪಂಪಭಾ. ೨–೩೯ ವ). [ಆವರ್ತನ + ಸಿದ್ಧಿ]

**ಆವರ್ತನಾಭಿ** (ನಾ). ೧. ಸುಳಿಯಂತಿರುವ ಹೊಕ್ಕುಳುಳ್ಳವಳು. ೨. ಸುಳಿಯೇ ನಾಭಿಯಾಗಿ ಉಳ್ಳವಳು. ೧, ೨ : ಆವರ್ತನಾಭಿ ನಸುನಕ್ಕಾವರನಿಂದತ್ತ ಪೋದಳಧಿಕೇಚ್ಛೆಯೊಳನ್ಯಾವನಿಪತಿಯೊಳ್ ತಡೆಗುಮೆ ದೇವಾಪಗೆ ತಡೆಯುದೆಡೆಯೊಳಂಭೋಧಿವರಂ (ಶಾಂತಿಪು. ೫–೧೪೬).
[ಆವರ್ತ + ನಾಭಿ]

**ಆವರ್ತನಿ** (ನಾ). ೧. ಲೋಹಗಳನ್ನು ಕರಗಿಸುವ ಮೂಸೆ. ೨. ಸೌಟು. [ಸಂ. ಆವರ್ತನೀ]

**ಆವರ್ತನೆ** (ನಾ). = ಆವರ್ತನ ೧ : ಛಂದಸ್ಸೆಂದರೆ ವಿಭಿನ್ನಮೌಲ್ಯಗಳನ್ನುಳ್ಳ ಅಕ್ಷರಗಳ ನಿಯತ ಆವರ್ತನೆಯಿಂದುಂಟಾಗುವ ವ್ಯವಸ್ಥಿತ ಲಯ (ಸಾಹಿಪ್ರ. ೧೧೪). [ಸಂ. ಆವರ್ತನ]

**ಆವರ್ತಪ್ರತಿಮಾರುತ** (ನಾ). ವಾಯುಮಂಡಲದಲ್ಲಿ ಹೆಚ್ಚು ಒತ್ತಡವಿರುವ ಪ್ರದೇಶದಿಂದ ಕಡಮೆ ಒತ್ತಡವಿರುವ ಪ್ರದೇಶಕ್ಕೆ ನುಗ್ಗಿ, ಸುತ್ತುತ್ತ ಹೋಗುವ ವಾಯುಸ್ಥಿತಿ; ಅಪಭ್ರಮಣಮಾರುತ: ಆವರ್ತಪ್ರತಿಮಾರುತಗಳಿಗೆ ಹೆಚ್ಚು ಒತ್ತಡವಿರುವ ಪ್ರದೇಶವೇ ಕೇಂದ್ರ (ಭೂವಿವ. ೬೬). [ಆವರ್ತ + ಪ್ರತಿಮಾರುತ]

**ಆವರ್ತಮಾನ** (ಗು). ಸುತ್ತುತ್ತಿರುವ ; ಸುಳಿದಾಡುತ್ತಿರುವ : ಅಗಾಧರಂಧ್ರಾವರ್ತಮಾನ ಜಳಚರ ಸಂಚರಣ ವಿಸ್ಮಯನೀಯ ಭಯಾನಕೆಯಂ (ಆದಿಪ್ರ. ೫–೮೭ ವ). [ಸಂ.]

**ಆವರ್ತಮಾರುತ** (ನಾ). ಸುಂಟರಗಾಳಿ ; ಸುಳಿಗಾಳಿ ; ನ್ಯೂನತಮ ವಾಯುಭಾರವಿರುವ ಪ್ರದೇಶದ ಕೇಂದ್ರದ ಸುತ್ತಲೂ ಸುತ್ತುವ ಮಾರುತ ಸರಣಿ: ಸಮುದ್ರದಲ್ಲಿ ಚಕ್ರ(ಆವರ್ತ)ಮಾರುತ (Cyclones) ಗಳಿಗೆ ಹೆದರುವಂತೆಯೇ (ಭೂವಿವ. ೨೫೯). [ಆವರ್ತ + ಮಾರುತ]

**ಆವರ್ತಯುಕ್ತ** (ಗು). ಸುಳಿಯಿಂದ ಕೂಡಿದ: ಅದು ಧಾರಾಧರ ಮಬ್ಬದಂತೆ ಪೊಳೆಯಂತಾವರ್ತಯುಕ್ತಂ . . . ಎನಿಸಿತ್ತಾ ರಾಜಿಪಾವಾಜಿ ಯುಗ್ಮಂ (ರಾಜಶೇ. ೧೨–೧೦೨). [ಆವರ್ತ + ಯುಕ್ತ]

**ಆವರ್ತಿ** (ನಾ). ೧. ಸುತ್ತುವುದು ; ತಿರುಗುವುದು. ೨. ಬಾರಿ ; ಸಲ ; ಸಾರಿ : ಅವನು ಎಷ್ಟಾವರ್ತಿ ಬಂದಿದ್ದ ? (ರೂಢಿ). 'ಅನೇಕಾವರ್ತಿ', 'ಒಂದಾವರ್ತಿ' ಪರಾ. [ಸಂ. ಆವೃತ್ತಿ]

**ಆವರ್ತಿನಿ** (ನಾ). [ಜೈನ] ಒಂದು ವಿದ್ಯೆ : ನಿಜರಾಜಧಾನಿಗೆ ಪೋಗಿ . . . ಸಂಕ್ರಮಣಿ ಆವರ್ತಿನಿ . . . . ಯೆಂಬಿವು ಮೊದಲಾಗಿ ಕುಲವಿದ್ಯೆ ಜಾತಿವಿದ್ಯೆಗಳೊಳ್ ಸಂಪನ್ನನಾಗಿರ್ದು (ಚಾವುಂಉ. ೨೧೦).
[ಸಂ. ಆವರ್ತಿನೀ]

**ಆವರ್ತಿಸು** (ಕ್ರಿ). ೧. ಸುತ್ತಿಕೊಳ್ಳು ; ವ್ಯಾಪಿಸು : ಮರುಳ್ ಶಂತನು ತನ್ನದೊಂದು ಸವಿಗಂ ಸೋಲಕ್ಕಮಿತ್ತಂ ನಿಜಕ್ರಮುಮಂ ತನ್ನಯ ಬೇಟದಾಕೆಯ ಮಗಂಗೆಂಬೊಂದಪಖ್ಯಾತಿ ಲೋಕಮನಾವರ್ತಿಸೆ ಬಱೊಡೆನ್ನ ಕುಲಮುಂ ತ[ಕ್ಕೊ]ರ್ಮೆಯುಂ ಮಾಸದೇ (ಪಂಪಭಾ. ೧–೭೧) ; ದಿಗ್ರಾಜಿಗಳೊಳ್ ಧೀಂಕಿಟ್ಟುದೆಂಬಂತನಿಲಪಥದೊಳಾವರ್ತಿಸುತಿರ್ದುದೆಂಬಂತೊಗೆದತ್ತುತ್ತಾ[ರ ರಾಗಂ] [ಪಾಠಾಂ. ನರಾಗಂ] ತ್ರಿಭುವನ ಭುವನೋದ್ಭೇದಿ ಶಂಖಪ್ರಣಾದಂ (ಕಾದಂಉ. ೪೨೪). ೨. ಮರಳಿ ಬರುವಂತೆ ಮಾಡು; ಪುನಃ ಕರೆಸು : ಜಯಮಂ ಬಯಸುವಡರಿಮಾರಿಯನಾವರ್ತಿಸಿದರೆಂಬ ನಾಣ್ಣುಡಿಗಮಳುರ್ಚಿಯೆ ನಿನ್ನೊಳೆಡಱಿ ತನಗಱಿಕೆಯ ಮಿಱಿತ್ತುವನಿಂತು ತಂದುಕೊಂಡರುವೊಳರೇ (ಶಾಂತಿಪು. ೩–೭೨). ೩. ಮರಳಿ ನೋಡು; ಪುನಃ ವಿಚಾರಿಸು : ಇಂತಿದೇನೆಂದು ಚಿತ್ತದೊಳಾವರ್ತಿಸಿ ನೋಡೆ (ಪಂಚತಂ. ೨೬–೫). [ಆವರ್ತನ + –ಇಸು$_3$]

**ಆವರ್ಹಿತ** (ಗು). ಕೀಳಲ್ಪಟ್ಟ ; ನಾಶಮಾಡಿದ : "ಆವ[ಪಾಠಾಂ. ಬ]ರ್ಹಿತಂ, ಉನ್ಮೂಳಿತಂ, ಉತ್ಪಾಟಿತಂ, ಉದ್ಧೃತಂ –ಈ ೪ ಕೀಱಲ್ಪಟ್ಟುದು" (ಹಲಾಯು. ೧೧೮–೨೬). [ಸಂ.]

**ಆವಲ್$_1$, ಆಬಲ್, ಆಬಲು, ಆವಲು** (ನಾ). ೧. ತಾವರೆ ಜಾತಿಯ ಒಂದು ಹೂವು ; ಕೆಂದಾವರೆ : "ಆವಲೆಂದುಂ, ಚೆಂಗಲವೆಯೆಂದುಂ ಚೆನ್ನೆಯ್ದಿಲ್" (ಕಶಸಾ. ೯–೧೬೬) ; ಅಂಬುಜಸೂತ್ರಮೆಂಬ ಪೆಣೆದಾವಣಿಯಂ ಪಱಿದಾವಲೆಂಬ ಬಾಳ್ಗಂಬಮನೊತ್ತಿ ಕಿಱು ... ಸೋವುದು ಸಮೀರಣ ವಾರಣಮಾ ಪ್ರದೇಶದೊಳ್ (ಕಾವ್ಯಾವ. ೬೮೯) ; ಕೊಳನಿಲ್ಲದ ತೋಂಟಮಾವಲಿಲ್ಲದ ಕೆಱೆ . . . ಇಲ್ಲದೆಲ್ಲಿಯುಂ (ಕಬ್ಬಿಕಾ. ೨೬). **ಆಬಲ್** : "ಮಿಗೆ ಚೆಂಗಳವೆಯಾಬಲೆಂ [ಪಾಠಾಂ. ವಲೆಂ]ದೆನಲ್ ಚೆನ್ನೈದಿಲೆಗೆ ಪೆಸರ್" (ಕಬ್ಬಿಕೈ. ೨೧). **ಆಬಲು** : "ಆಬಲು ಚೆನ್ನೈದಿಲೆಯು ಚೆಂಗಲವೆಯುಮುದೆನ್ನಲ್ ಸಲೆ ರಕ್ತೋತ್ಪಳಮಕ್ಕುಂ" (ಕವಿಕಂ. ೯೫). **ಆವಲು** : ಆ ಪುರದರಸುಗಳಿಗೆ ಜಯಸಿರಿಯ ಕೃಪಾಪರಿಪೂರ್ಣದೀಳಿಗೆಗೆ ಕಾಪಾಲಿತ್ರಿಣಯನ ತೀರ್ಥಗೊಳದೆ ಪಂಚರೂಪಿನಾವಲುಗಳೊಪ್ಪುವುವು (ಕಂನವಿ. ೨–೧೮೯) ; ಆವಲು ಹೂವ ಮುಟ್ಟಲು ಓಡುವ ತೆರೆಗಳ ನಿಟ್ಟಿಸುತಿರುವ (ಗಣೇಶ. ೩೧–೧೦).
[ದೇ. ‖ ತಮಿ. ಮಲ. ಅಮ್ಬಲ್ ; ತುಳು. ಅಂಬಲು]

**ಆವಲ್$_2$** (ನಾ). ಇನಾಮತಿ ಗ್ರಾಮಗಳ ಜಮೀನುಗಳ ಮೇರೆಯನ್ನೂ ಚಕ್ಕುಬಂದಿಯನ್ನೂ ತಿಳಿಸುವ ಲೆಕ್ಕದ ಪಟ್ಟಿ (ಮೈಗಜೆ. IV, ೭೬೩). [← ಹಿಂ. ?]

**ಆವಲಲರ್** (ನಾ). ಆವಲದ ಹೂವು ; ಕೆಂದಾವರೆ ಹೂವು : ಆವಲಲರಾಯ್ದು ಕಱಮೆಯ ಪೂವೊಡೆಯಂ ಮುಡಿಯೆ ಬಿಗಿದು ಬಿರಿಯಿಸಿ ನೆಯ್ದಿಲ್ಪೂವುಡಿಯನೆತ್ತಿ ಬೈತಲೆದೀವುವ ಪಾಮರಿಯರಂ ಮಹೀಪತಿ ಕಂಡಂ (ಲೀಲಾವ. ೫–೭೭) ; ತೆರೆಗಳ್ ನೆಗೆದೊರ್ವೊರ್ದಲುಣ್ಮಿಪೊಣ್ಮೆ ತಾವರೆಗಳ ನೈದಿಲಾವಲಲರ್ಗೊಯ್ಯನೆ ಪಾಯ್ದು ಪಲುಂಬಿ ತುಂಬಿಗಳ್ ಮೊರೆದು ಕಲಂಕಿ ತೇಂಕಿ . . . ಸೊರ್ಕಿ ಮಿಕ್ಕಿರೆ (ಸೂಕ್ತಿಸು. ೭–೪೪).
[ಆವಲ್$_1$ + ಅಲರ್$_2$]

**ಆವಲಿ, ಆವಳಿ$_1$** (ನಾ). ೧. ಸಾಲು ; ಪಂಕ್ತಿ. ೨. ಕುಲ ; ವಂಶ; ಸಂತತಿ. ೩. ಗುಂಪು ; ರಾಶಿ ; ಸಮೂಹ. ೪. [ಜೈನ] ಕಾಲದ ಸೂಕ್ಷ್ಮವಾದ ಒಂದು ಪ್ರಮಾಣ: "ಅಸಂಖ್ಯಾತ (ಜಘನ್ಯಯುಕ್ತ ಅಸಂಖ್ಯಾತ)ಸಮಯಗಳಿಂದ ಒಂದು ಆವಲಿ ಆಗುತ್ತದೆ" (ಜೈನಪ. ೩೦೫); ಕಾಲದಿಂ ಆವಲ್ಯಸಂಖ್ಯೇಯ ಭಾಗಮಾತ್ರಾತೀತಾನಾಗತಮಂ (ತತ್ತ್ವಪ್ರ. ೬೮). **ಆವಳಿ$_1$**: ೩. "ಕದಂಬಮಾವಳಿ. . .ಸ್ತೋಮಕ್ಕೆ ನಾಮಮಕ್ಕುಂ" (ಮಂಗರಾ. ೧೨೬–೧) ; ಜಾತಿವನೇಜಾತ ಪ್ರಸೂನಾವಳಿಯನಿಳಿಸಿ ಸಂಪತ್ತುವೆತ್ತಿರ್ದುದೆತ್ತಂ (ಜಗವಿ. ೪–೬೫). ೪. ಸಮಯ ಸಮೂಹಮಸಂಖ್ಯಾತಮಾದೊಡಾವಳಿಯೆನಿಕ್ಕು (ಪಂರಾಮಾ. ೧–೪೯) ; ನಿರೂಪಣದಿಂ ನಿಜವೇದಕಲಾಕಾಲಮಂ ನೋಡಲಾವಳಿಗಧಿಕಮಾಗಿ (ಕ್ಷಪಣ. ೪೫–೧೪). ೫. [ಸಂಗೀತ] ಶ್ರುತಿಗಳಲ್ಲಿ ಒಂದು ಬಗೆ: ಮಧುರೆ ಆವಳಿ ಏಕಾಕ್ಷರಿಯೆಂಬ ಮೂಱು ಶ್ರುತಿಗಳೇ ಋಷಭಸ್ವರದಿಂ ಜನಿಸಿದವು (ವಿವೇಕ. ೨೩೨). ೬. ಕಾಳಾಮುಖ ಶೈವರಲ್ಲಿ ಒಂದು ಪಂಗಡ. ☞ ಕಾಳಾಮುಖರ ಶಾಖೆಯಾದ ಶಕ್ತಿಪರ್ಷೆಯಲ್ಲಿ ಪರ್ವತಾವಳಿ ಮತ್ತು ಭುಜಂಗಾವಳಿ ಎಂಬೆರಡು ಪಂಗಡಗಳಿದ್ದುವು. [ಸಂ.]

**ಆವಲಿಕೆ, ಆವಳಿಕ** (ನಾ).= ಆವಲಿ ೪ : ಆವಲಿಕಾ ಸಂಖ್ಯೇಯ ಭಾಗಂ (ತತ್ತ್ವಪ್ರ. ೩೭). **ಆವಳಿಕೆ** : ಅದು ಸಮಯಾವಳಿ[ಪಾಠಾಂ. ಲಿ] ಕೋಚ್ಛ್ವಾಸಸ್ತೋಕ ನಿಮೇಷನಾಳಿಕಾ ಮುಹೂರ್ತ ದಿವಸ ಪಕ್ಷಮಾಸರ್ತ್ವಯನ ಸಂವತ್ಸರಾದಿಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು (ಆದಿಪು. ೬–೪೮ ವ). [ಸಂ.]

**ಆವಲಿತ** (ಗು). ಹೊರಳಿದ; ತಿರುಗಿದ: ಜಾಬಾಲಿಮುನೀಂದ್ರನಾಮಾತಂ [ಕೇಳ್ದೀಷದಾವಲಿತ] ಕಂಧರನಿದೆತ್ತಣಿಂ ಬಂದುದೆಂದು ಪುಣ್ಯಜಲದಿಂ ಪ್ರಕ್ಷಾಳಿಸುವಂತೆ ಶಾಂತದೃಷ್ಟಿಗಳಿಂದೆನ್ನಂ ಮುನ್ನಂ ಕಂಡಱಿವನಂತೆ ನೀಡುಂ ಭಾವಿಸಿ ನೋಡಿ (ಕಾದಂಪೂ. ೨೬೪). [ಸಂ.]

**ಆವಲು** 'ಆವಲ್$_1$' ನೋ.

**ಆವಲ್ಗಂಪು** (ನಾ). ಆವಲು ಹೂವಿನ ವಾಸನೆ: ಸಂಪಗೆಯಲರ್ಜೊಂಪದ ಮುಂದಾವಲ್ಗಂಪಂ ಬೀಱುವವೊಲ್ (ಉದ್ಭದೇ. ೧–೨೦).
[ಆವಲ್$_1$ + ಕಂಪು]

**ಆವಲ್ಗೊಳ** (ನಾ). ಆವಲದ ಹೂವುಗಳು ಬೆಳೆದಿರುವ ಕೊಳ: ತೀವಿದ ತಿಳಿಗೊಳದಿಂ ಪೊಂದಾವರೆಗೊಳದಿಂದರಲ್ದ ನೆಯ್ದಿಲ್ಗೊಳದಿಂದಾವಲ್ಗೊಳದಿಂ . . . ಒಪ್ಪುವಾ ನಾಡೂರ್ಗಳ್ (ಪಂರಾಮಾ. ೧–೧೦೪); ಎನಗಾವುದಱಿಂೊಳ್ ಕೊಱತೆಯಿಲ್ಲ ಪೋದಿರುಳೊಳ್ ಪೊಂದಾವರೆಗೊಳದಂಚಿ ಕನಲ್ದಾವಲ್ಗೊಳದೊಳಗೆ ನಲಿವ ಕನಸಂ ಕಂಡೆಂ (ಯಶೋಚ. ೩–೯). [ಆವಲ್$_1$ + ಕೊಳ$_2$]

**ಆವಶ್ಯ** (ಗು). **೧.** ಅಗತ್ಯವಾದ; ಕಡ್ಡಾಯವಾಗಿ ಆಗಬೇಕಾದ; ಅನಿವಾರ್ಯವಾದ. **೨.** = ಆವಶ್ಯಕ ೨: ಸಮ್ಯಗ್ದರ್ಶನ ಸಂಶುದ್ಧಿಯುಂ . . . ಚತುರ್ಭಕ್ತಿಯುಂ ಷಡ್ವಿಧಾವಶ್ಯಕ ಕ್ರಿಯಾಪರಿಪಾಳಮುಪ್ಪಾವಶ್ಯಮುಂ. . . ಎಂಬೀ ಷೋಡಶ ಭಾವನೆಗಳಂ (ಚಂದ್ರಪ್ರ. ೧೧–೨೨ ವ). [ಸಂ.]

**ಆವಶ್ಯಕ** (ಗು). **೧.** ಅಗತ್ಯವಾದ; ಕಡ್ಡಾಯವಾಗಿ ಆಗಬೇಕಾದ; ಅನಿವಾರ್ಯವಾದ: ತುಳುವ ಸಂತತಿಯ ಅರಸರ ಚರಿತ್ರೆಯನ್ನೂ ಸಂಕ್ಷೇಪವಾಗಿ ತಿಳಿದುಕೊಳ್ಳಬೇಕಾದುದು ಆವಶ್ಯಕ (ಕೃದೇವ. ೮). (ನಾ). **೨.**[ಜೈನ]ಜೈನಮುನಿ ಪ್ರತಿದಿನವೂ ಮಾಡಬೇಕಾದ ಕರ್ಮಗಳು; ಷಡಾವಶ್ಯಗಳು. ☞ (೧) ಸಾಮಯಿಕ. (೨) ಇಪ್ಪತ್ನಾಲ್ಕು ತೀರ್ಥಂಕರರ ಸ್ತುತಿ. (೩) ಪಂಚ ಪರಮೇಷ್ಠಿಗಳ ವಂದನೆ. (೪) ಪ್ರತಿಕ್ರಮಣ. (೫) ಪ್ರತ್ಯಾಖ್ಯಾನ. (೬) ಕಾಯೋತ್ಸರ್ಗ: ಬಗೆಯೊಳ್ಪೊಣ್ಮಿದ ಯಾರಸಂ ಚರಿತದೊಳ್ಕೈಗಣ್ಮೆ ಚಾರಿತ್ರಮಾವಗಮಾವಶ್ಯಕದೊಳ್ ತಗುಳ್ದು ಪಲವುಂ ಶೀಲಂಗಳಂ ತಾಳ್ದಿ . . . ಕಟಿಲ್ಗುಗೆಮ್ಮ ಮನದಿಂ ದುರ್ಮೋಹ ಸಂದೋಹಮಂ (ಆದಿಪು. ೧–೫). [ಸಂ.]

**ಆವಶ್ಯಕತೆ** (ನಾ). ಅಗತ್ಯವಾಗಿರುವಿಕೆ; ಅನಿವಾರ್ಯವಾದುದು: ನಮ್ಮ ಆಹಾರದ ಆವಶ್ಯಕತೆಗಳೇನು ಎಂದು ನಾವು ತಿಳಿದುಕೊಳ್ಳುವುದು ಅವಶ್ಯ (ಅಡುಸೌ. ೫೬). [ಸಂ. ಆವಶ್ಯಕತಾ]

**ಆವಸಥ** (ನಾ). ವಾಸಸ್ಥಾನ; ಮನೆ; ನೆಲ: "ಆವಾಸಃ, ಆವಸಥಂ . . . ಆಲಯಂ — ಈ ೩೧ ಮನೆ" (ಹಲಾಯು. ೪೯–೧೩೬); ಅತ್ತ ಸುರೇಶ್ವರಾವಸಥಮಿತ್ತ ಮಹೀತಳಮುತ್ತ ಪನ್ನಗೋದಾತ್ತ ಸಮಸ್ತಲೋಕಮಱಿದಂತಿರೆ ಪೂಣ್ದನಗೆ (ಪಂಪಭಾ. ೧–೬೫). [ಸಂ.]

**ಆವಸಥ್ಯ** (ನಾ). ಹೋಮ ಹವನಗಳಿಗಾಗಿ ಮನೆಯಲ್ಲಿ ಸಂರಕ್ಷಿಸಿಟ್ಟ ಧಾರಾಗ್ನಿ. 'ಪಂಚಾಗ್ನಿ' ಪರಾ. [ಸಂ.]

**ಆವಸಿತ** (ನಾ). ದಾಸ್ತಾನು ಮಾಡಿದ ಧಾನ್ಯ. [ಸಂ.]

**ಆವಹ** (ಗು). **೧.** ಉಂಟುಮಾಡುವ; ಒದಗಿಸುವ; ತರುವ: ಚಕ್ರವಾಕನಿವಹ ಪ್ರೇಮಾವಹಂಗಳ್ (ಗದಾಯು. ೧–೪). **೨.** ಕೂಡಿದ; ಉಳ್ಳ: ತೆಂಕಣದೆಸೆಯೊಳ್ ಮಹಿಭರತಂ ಷಟ್ಖಂಡಾವಹಮಲ್ಲಿ ಶುಭಾವಹಂ ವಿನೀತಾಖಂಡಂ (ಸುಕುಮಾ. ೧–೬೮). [ಸಂ.]

**ಆವಹನ** (ನಾ). = ಆವಾಹನ. 'ಆವಹನವಿಧಾನ' ಪರಾ. [ಸಂ.]

**ಆವಹನವಿಧಾನ** (ನಾ). ಆವಾಹನದ ಕ್ರಮ; ಬರಮಾಡಿಕೊಳ್ಳುವ ರೀತಿ: ಆ ವಿಪ್ರಘೋಷಣಂ ಸ್ಮೃತಿಗಾವಹನವಿಧಾನಮಾದಪೋಲಜಪೋತಂ ಭಾವಿಸಿದುದಾಂ ಯಶೋಧರದೇವನೆಯೆನ್ನಾತ್ಮಜಂ ಯಶೋಮತಿಯಾತಂ (ಯಶೋಚ. ೩–೫೯). [ಆವಹನ + ವಿಧಾನ]

**ಆವಹಿಸು** (ಕ್ರಿ). **೧.** ಆವಾಹನಮಾಡು; ಆಹ್ವಾನಿಸು. **೨.** ಕೂಗಿ ಕರೆ: ಕಾಡುವ ರಕ್ತಬೀಜ ಜನಡಾವರಕೆ ಬೆಚ್ಚದಿರಿ ಬೆದರದಿರಾವ ಸಂಶಯ ಬೇಡ ನಿಮಗೆಂದಾವಹಿಸಿ ದಿಗಧಿಪರು ಮೊಳಗಿತು ಬೆರಳ ಹಿಳುಕಿನಲಿ (ಅಂಬಿಕಾ. ೩೮–೯). [ಆವಹನ + –ಇಸು$_3$]

**ಆವಳ್** 'ಆವುದು' ಪರಾ.

**ಆವಳಿ$_1$** 'ಆವಲಿ' ನೋ.

**ಆವಳಿ$_2$** (ನಾ). ನೆಲ್ಲಿಯ ಕಾಯಿ, —ಗಿಡ: "ಆವಳಿಯದಾಮಳಕ ಧಾತ್ರಿ ಶಿವೆಯೆನೆ ನೆಲ್ಲಿ" (ಮಂಗರಾ. ೩೬–೨೦).

[ಪ್ರಾ. ಆಮಲಯ < ಸಂ. ಆಮಲಕ]

**ಆವಳಿಕೆ** 'ಆವಲಿಕ' ನೋ.

**ಆವಳು** 'ಆವುದು' ಪರಾ.

**ಆವಳಿಸು** 'ಆಗುಳಿಸು' ನೋ.

**ಆವಾಂಬಳ** (ನಾ). ಒಬ್ಬಾತನ ಹೆಸರು: ಕೇಶವ ಪೆರುಮಾಳಿಯ ಮಕಳು ಬಲೆಪನು ಮಣಿಯರು ಮಾರಪ ಕೇಶನ ಪೆರುಮಾಳಿಯ ತಂಮ ಆವಾಂಬಳ ತಂಮೊಳಗೆ ಏಕಸ್ತರಾಗಿ (ಎಕ. X, ಮುಳಬಾ. ೬–೪; 1146).

[< ಸಂ. ಅಹೋಬಲ]

**ಆವಾಗ** (ಅ). **೧.** ಯಾವ ಸಮಯದಲ್ಲಿ; ಯಾವ ವೇಳೆಗೆ: ಮನೆಗಾವಾಗ ಜಂಗಮವು ಬಪ್ಪರದನಱಿದಾಗಳಲ್ಲದೆಯುಪ್ಪೊರಿಸಿ ಹೋಗನು (ಬಸಪು. ೩೧–೨೫); ಕಱೆಗೊರಳವನ ರಜತಗಿರಿಗೇತೆಱದೊಳಾವಾಗೇಸು ದಿವಸಕೆ ಮೆಱೆದೆನಿಬರಂ ಕೂಡಿ ಹೋಹೆ (ಬಸಪು. ೪೪–೬೮). **೨.** ಯಾವಾಗಲೂ; ಎಂದೂ; ನಿರಂತರವಾಗಿ: ಆವಾಗ ತನ್ನೆದೆಯಡಗನೆ ಕೊಯ್ತಿಂಬ ದೇವರ್ಕಳಟ್ಟುಳಿಯಿಂದೆ ಸಾವುದೆ ಸುಖಂ (ಮೋಹತ. ೧೮–೧೦೬); ದೇವನ ಕೀರ್ತಿ ವೈಭವವ ಆವಾಗ ಪಾಡುತ ನರ್ತಿಸುತಿರ್ಪರು (ಶಾಂತೀಚ. ೧೦–೩೩). **೩.** ಆ ಸಮಯದಲ್ಲಿ; ಆ ವೇಳೆಯಲ್ಲಿ; ಅಂದು: "ತದಾ, ತದಾನೀಂ . . . ಅಗ, ಆವಾಗ" (ಸಿದ್ಧಾಂತಿ. ೩೮೦); ಆವಾಗ – ನಮ್ಮ ತಸಬೀರು ಬರೆಯುವೆಯಾ (ಮುಂಬಯಿ. ೩–೪೯).

[ಆವ (< ಆವುದು) + ಆಗ$_1$ (< ಆಗಡು)]

**ಆವಾಗಲೂ** 'ಆವಾಗಳುಂ' ನೋ.

**ಆವಾಗಳು** 'ಆವಾಗಳುಂ' ನೋ.

**ಆವಾಗಳುಂ, ಆವಗಲು, ಆವಾಗಲೂ, ಆವಾಗಳು, ಆವಾಗಳೂ** (ಅ). ಎಲ್ಲಾ ಕಾಲದಲ್ಲೂ; ಸದಾಕಾಲ; ಎಡಬಿಡದೆ: ಎಂದುಂ= ಆವಾಗಳುಂ(ಶಮದ. ೫ ಟೀಕೆ). **ಆವಗಲು**: ಆವಗಲು ತಿರುಗುತ್ತಲೀಹರು (ಜ್ಞಾನಸಿಂ. ೨–೫). **ಆವಾಗಲೂ**: ಹರಿಯ ನೆನೆಸಿದ ನಿಮಿಷ ಆವಾಗಲೂ ಹರುಷ (ವಿದಾಕ್ಯ. ೨೨–೧); ಉದ್ಗಾರ, ಮಲಬಂಧ, ಆವಾಗಲೂ ಹೊಟ್ಟೆ ತುಂಬಿದ ಹಾಗೆ ಇಹುದು (ವೈದ್ಯಸಾ. ೨೯೨–೨೧೫ ಟೀಕೆ). **ಆವಾಗಳು**: ಆವಾಗಳು ಎನ್ನ ಮನ ಉದರಕ್ಕೆ ಹರಿವುದು (ಮಹಾದೇ. ೩–೧೧). **ಆವಾಗಳೂ**: ಆವಾಗಳೂ ಅಗಲನಯ್ಯ ಶಿವನು (ಆದವ. ೨೩); ಆವಾಗಳೂ ತತ್ಸ್ವರೂಪವಾದ ಶಿವನಲ್ಲಿಯೆಯ್ದಿದ ಚಿತ್ತವುಳ್ಳ (ಕೈವಟೀ. ೫೧).

**ಆವಾಗಲೇ** = ಆ ಸಮಯದಲ್ಲೇ: ಈ ಮನೆಗೆ ಬನ್ನಿ ನಾನೂ ಆವಾಗಲೇ ಭೆಟ್ಟಿಯಾಗುವೆ (ಕೊಂದಯಾ. ೬೫).

[ಆವ (< ಆವುದು) + ಆಗಳು (< ಆಗಡು)]

**ಆವಾಗಳೂ** 'ಆವಾಗಳುಂ' ನೋ.

**ಆವಾಗ್ಗೆ, ಆವಾಗ್ಯೆ** (ಅ). **೧.** ಆ ವೇಳೆಯಲ್ಲಿ; ಆ ಸಮಯದಲ್ಲಿ: ಆವಾಗ್ಗೆ ನಮ್ಮ ದೇಶ ಸುಖದಿಂದ ಕೂಡಿತ್ತು (ರೂಢಿ). **೨.** ಆ ಸನ್ನಿವೇಶದಲ್ಲಿ; ಆ ಪಕ್ಷಕ್ಕೆ: ಅವರೂ ನಮ್ಮ ಜತೆಯಲ್ಲಿದ್ದರೆ ಆವಾಗ್ಗೆ ಏನಾಗುತ್ತಿತ್ತು ಗೊತ್ತೆ? (ರೂಢಿ). **ಆವಾಗ್ಯೆ**: **೧.** ಈ ಮೇರೆ ಇರುತ್ತಿದ್ದಲ್ಲಿ ಆವಾಗ್ಯೆ [ಪಾಠಾಂ. ಗ್ಗೆ] ಮೈಸೂರು ಸಂಸ್ಥಾನದಲ್ಲಿ ಚಿಕ್ಕದೇವರಾಜ ಒಡೆಯರು . . . ಇರುತ್ತಿದ್ದರು (ರಾಜೇಂದ್ರ. ೨); ಆವಾಗ್ಯೆ [ಪಾಠಾಂ. ಗ್ಗೆ] ನಂಜುಂಡ ಅರಸುಗಳು ಹೇಳಿದ ವಿವರ (ರಾಜೇಂದ್ರ. ೩). **೨.** ಕಷ್ಟಬಂದರೆ, ಆವಾಗ್ಯೆ ನೀನು ಏನು ಮಾಡುತ್ತಿದ್ದೆ (ರೂಢಿ).

[ಆವ (< ಆವುದು) + ಆಗ್ಗೆ (< ಆಗಡು)]

**ಆವಾಗ್ಯೆ** 'ಆವಾಗ್ಗೆ' ನೋ.

**ಆವಾಪ** (ನಾ). ೧. (ಬೀಜವನ್ನು) ಬಿತ್ತುವುದು. ೨. ಗಿಡದ ಬುಡದಲ್ಲಿ ನೀರು ಹಾಕಲು ಮಾಡಿರುವ ಪಾತಿ; ಕಟ್ಟೆ; ಮಡಿ: ಏಱಿಸಿದಂ ಮುರಾರಿ ಜನಿತಾರಿಸ್ತ್ರೀಮನಸ್ತಾಪಮಂ . . . ಸಜಯವೃಕ್ಷಾವಾಪಮಮಂ ಚಾಪಮಂ (ಜಗವಿ. ೧೨–೭); ಸಗ್ಗದ ಮರವನೆ ನಿರ್ಮಿಸಿ ಕುಳಿರ್ಗಲ್ಲೊಗ್ಗಿಂದಾವಾಪಮನಮರ್ದಿಂ ನೀರುಣಿಸಂ ಸಮೆದಂತೆ (ಉದ್ಭದೇ. ೪–೧೪). ೩. ಕೈಬಳೆ; ಕಂಕಣ; ಕೈಕಡಗ: "ಆವಾಪಃ, ಪಾರಿಹಾರ್ಯಃ, ಕಟಕಃ, ವಳಯಃ – ಈ ೪ ಕಂಕಣಂ" (ಹಲಾಯು. ೯೧–೪೦೩). [ಸಂ.]

**ಆವಾಪಕ** (ನಾ). = ಆವಾಪ ೨. [ಸಂ.]

**ಆವಾರ** (ನಾ). ೧. ಆವರಣ; ಅಂಗಳ; ಹೊರಗಿನ ಪ್ರದೇಶ: ಗುಡಿಯ ಆವಾರದಲ್ಲಿ ಅಂದು ಯಾರ ಸದ್ದೂ ಇರದಿದ್ದುದನ್ನು ನೋಡಿ (ಕಾಲಚ. ೬); ಕಣ್ಣುಹಾಯುವಷ್ಟುದೂರ ಆವಾರ ವಿಸ್ತರಿಸಿತ್ತು (ಜಾರುದಾ. ೨೧೫). [ಸಂ.]

**ಆವಾಲ, ಆವಾಳ** (ನಾ). ಮರದ ಬುಡದಲ್ಲಿ ನೀರು ನಿಲ್ಲುವಂತೆ ಸುತ್ತಲೂ ಕಟ್ಟುವ ಕಟ್ಟೆ; ಪಾತಿ; ಮಡಿ: ಪೃಥ್ವೀ ಮಹಾವಲ್ಲಿಯಂ ತಾಂ ಬಳಸಿರ್ದಾವಾಲದಂತಿರ್ಪುದು . . . ಅಂಭೋನಿಧಾನಂ (ಜಗವಿ. ೧–೨೩). **ಆವಾಳ**: "ಆವಾಳಮಾಳವಾಳಂ" (ಮಂಗರಾ. ೩೩–೬); ಕರ್ಬಿನ ಕೋಲ್ಗಳ್ ಬಿಡದೊಂದನೊಂದೊರಸೆ ಪರ್ವಾಘಾತದಿಂದುರ್ಬಿ ಘೋರನೆ ಪಾಯ್ತು ಪರ್ವ ರಸಪ್ರವಾಹಚಯಮಾವಾಳಂಗಳಂ ತೀವುತಿರ್ಪನಂ (ಜಗವಿ. ೨–೯). [ಸಂ.]

**ಆವಾಸ** (ನಾ). ವಾಸಸ್ಥಾನ; ನೆಲೆ; ಮನೆ: "ಸದ್ಮಮೋಕಸಂ . . . ಆವಾಸಂ . . . ಧಿಷ್ಣ್ಯಮೆನಲಿವು ಮನೆಗೆ ಪೆಸರಕ್ಕು" (ಮಂಗರಾ. ೫೮–೭); ದಿವಿಜೇಂದ್ರಾವಾಸ ಸೌಖ್ಯಾತಿಶಯಮೆಸೆವೀ ಸೌಖ್ಯಂ (ಆದಿಪು. ೫–೨೨); ನರೇಂದ್ರ ದೇವೇಂದ್ರರ್ ತಂತಮ್ಮಾವಾಸಂಗಳ್ಗೆ ಪರೆದು ಪೋದರ್ (ಶಾಂತಿಪು. ೮–೧೨೩ ವ). [ಸಂ.]

**ಆವಾಸಿ** (ನಾ). ೧. ವಾಸಸ್ಥಾನವನ್ನು ಉಳ್ಳವನು. ೨. ನೆಲಸುವವನು; ಹೊರಗಿನಿಂದ ಬಂದು ನೆಲೆಗೊಂಡವನು. [ಸಂ. ಆವಾಸಿನ್]

**ಆವಾಹನ** (ನಾ). ವಿಗ್ರಹದಲ್ಲಿ ಅಥವಾ ಬೇರೆಯ ಪ್ರತೀಕದಲ್ಲಿ ಬಂದು ನೆಲೆಗೊಳ್ಳುವಂತೆ ಇಷ್ಟವಾದ ದೇವತೆಯನ್ನು ಮಂತ್ರಪೂರ್ವಕವಾಗಿ ಪ್ರಾರ್ಥಿಸುವುದು, —ಆಹ್ವಾನ: ಶ್ರದ್ಧಾ ಭಕ್ತಿ ಧ್ಯಾನಜ್ಞಾನಸಮೇತನಾಗಿ ಶಿವನಂ ಭಜಿಸುತ ಆವಾಹನ ಸ್ಥಾಪನ ಸನ್ನಿಧಾನ . . . ಸಮ್ಮುಖೀಕರಣಾದಿ ಮುಖ್ಯಕ್ರಿಯೆಗಳಿಂದೊಡಗೂಡಿ (ವಿವೇಕ. ೧೦೪). 'ಆವಾಹನಂಗೆಯ್' ಪರಾ. [ಸಂ.]

**ಆವಾಹನಂಗೆಯ್** (ಕ್ರಿ). ಆವಾಹನಮಾಡು: ಆಹೂಡಿದರ್ಜುನನ ಮಾರ್ಗಣದ ಮೊದಲೊಳಾವಾಹನಂಗೆಯ್ದು ಕಮಲಜನಂ ನಿಲಿಸಿ (ಜೈಮಿಭಾ. ೧೩–೪೨); ವಿಗ್ರಹಕೆ ದೇವತಾವಾಹನಂಗೆಯ್ವವೋಲ್ (ಶ್ರೀರಾಮಾ. ೪–೧೦೭). [ಆವಾಹನ + ಗೆಯ್ (< ಕೆಯ್$_1$)]

**ಆವಾಹನಮುದ್ರೆ** (ನಾ). [ತತ್ತ್ವಶಾ] ಇಷ್ಟದೇವತೆಯನ್ನು ಮೂರ್ತಿ ಅಥವಾ ಪ್ರತೀಕದಲ್ಲಿ ಬಂದು ನೆಲಸುವಂತೆ ಪ್ರಾರ್ಥಿಸುವಾಗ ಮಾಡುವ ಹಸ್ತಮುದ್ರೆ: ವಸ್ತ್ರಮುದ್ರೆ . . . ಆವಾಹನಮುದ್ರೆಯೆಂಬಾದಿಯಾಗಿ ಸಕಲ ಮುದ್ರೋಪಮುದ್ರಾಬಂಧ ಲಕ್ಷಣಂಗಳಂ ಗುರುಮುಖದಿಂದಱಿತು (ವಿವೇಕ. ೧೦೩). [ಆವಾಹನ + ಮುದ್ರೆ]

**ಆವಾಹನೆ** (ನಾ). = ಆವಾಹನ: ಪ್ರಾಜ್ಞಶಿರೋಮಣಿಗಳು . . . ತಮ್ಮ ಜೀವಕಲೆಯ ಸರ್ವಸ್ವವನ್ನೂ ತಮ್ಮ ಗ್ರಂಥದಲ್ಲಿ ಆವಾಹನೆಮಾಡಿ ಅದರಲ್ಲಿಯೇ ಅಂತರ್ಭೂತರಾಗಿರುವರು (ನೀಗಟ್ಟು. ೭೨). [ಸಂ. ಆವಾಹನ]

**ಆವಾಹನೆಗೆಯ್, ಆವಾಹನೆಗೈ** (ಕ್ರಿ). = ಆವಾಹನಂಗೆಯ್: ಆವಾಹನೆ [ಪಾಠಾಂ. ಆಹ್ವಾನ]ಗೆಯ್ದುಶ್ಚಿನಿದೇವರನವರಿತ್ತ ವರದೊಳವರಂಶಮೆ ಸಂಭಾವಿಸೆ ಗರ್ಭದೊಳಮಳರನಾ ವನಜದಳಾಕ್ಷಿ ಪಡೆದು ಸಂತತಿವೆತ್ತಳ್ (ಪಂಪಭಾ. ೨–೩). **ಆವಾಹನೆಗೈ**: ರಾಜಪುರೋಹಿತರು ವಿಧಿಪೂರ್ವಕವಾಗಿ ಅಗ್ನಿಯನ್ನು ಆವಾಹನೆಗೈದು ಅಗ್ನಿಕುಂಡದಲ್ಲಿ ಪ್ರತಿಷ್ಠಿಸಿ (ಶಾಂತಲಾ. ೧೦೭). [ಆವಾಹನೆ + ಗೆಯ್ (< ಕೆಯ್$_1$)]

**ಆವಾಹನೆಗೈ** 'ಆವಾಹನೆಗೆಯ್' ನೋ.

**ಆವಾಹಿಸು** (ಕ್ರಿ). = ಆವಾಹನಂಗೆಯ್: ಜ್ವರಪ್ರಾಪ್ತಿಯಾದರೆ ಆ ಜ್ವರವನ್ನು ದಂಡದಲ್ಲಿ ಆವಾಹಿಸಿ ಪೂಜೆಯನ್ನು ನಡೆಸುತ್ತಿದ್ದರು (ಕಭವಿ. I, ೨೨೮); ರಾಜನ ಆ ಒಂದು ನಗೆಹನಿ ದಾಸೋಜನಲ್ಲಿ ಹೊಸ ಶಕ್ತಿಯನ್ನು ಆವಾಹಿಸಿತು (ಸವತಿ. ೪೫). [ಆವಾಹನ + –ಇಸು$_3$]

**ಆವಾಳ** 'ಆವಾಲ' ನೋ.

**ಆವಿ$_1$, ಆವರ್ಿ$_2$, ಆವಿರಿ** (ನಾ). ೧. (ನೀರಿನ) ಹಬೆ; ಉಗಿ: ಕೋಟಿದೆಸೆಯುಸಿರುಗಳು, ಕೋಟಿರಸದಾವಿಗಳು ಕೋಟಿಹೃದಯದ ಹೊಹೊಹಾಹಕಾರಗಳು ಕೂಟಿ ಕೂಡಿಹುವಂತರಿಕ್ಷದಲಿ (ಮಂಕುಕ. ೨೭೩); ಕಡಲಿನಾವಿಯನೆತ್ತಿ ತಿರೆಗದನು ಮರೆಮಾಡಿ ಮುಗಿಲ ಮೇಲೆಯೆ ಬೆಳಗುವಿನ ತೇಜದಂತೆ (ಮಲೆದೇ. ೪೮–೧). ೨. ಸೆಕೆ; ಕಾವು (ಕಿ). 'ಆವಿಗಣ್ಣು' ಪರಾ. **ಆವರ್ಿ$_2$**: ಆವರಿಕಟ್ಟು, ಆವರಿಇಟ್ಟು ಬೇಸು (ಸ್ಯಾಂಡರ್). **ಆವಿರಿ** (ಸ್ಯಾಂಡರ್).

[ದೇ. ‖ ತಮಿ. ಆವಿ; ಮಲ. ಆವಿ, ಆವತಿ; ತೆಲು. ಆವಿ, ಆವಿರಿ; ಪರ್ಜಿ. ಆಕುಬ್]

**ಆವಿ$_2$, ಆವೆ$_2$** (ನಾ). = ಆವಗೆ೧: ಕುಂಬಾರನ ಆವಿಯಲ್ಲಿ ತಾಮ್ರದ ಚಂಬು ಹುಡುಕಿದಂತೆ (ಗಾದೆ. ಕಿ). **ಆವೆ$_2$**: 'ಆವೆಮಣ್ಣು' ಪರಾ.

ಆವೆಯಕುಂಟೆ = ಒಂದು ಕುಂಟೆಯ ಹೆಸರು: ಈಂತಾಱಿಯ ಹಡಿಲಿಂ ಮೂಡ ಆವೆಯಕುಂಟೆ ಕೆಂಜಾಲದ ಮೊರಡಿ (ಎಕ. XII, ಗುಬ್ಬಿ. ೩೦–೬೮; 1331).

[ದೇ. ‖ ತುಳು. ಆವೆ; ತೆಲು. ಆವ. / ಮರಾ. ಹಿಂ. ಆವಾ]

**ಆವಿ$_3$** (ನಾ). ಚಿಕ್ಕಟ; ಚಿಕ್ಕಾಡು: "ಆವಿ ಚಿಕ್ಕಾಡು" (ಮಂಗರಾ. ೫೩–೧೧). [ಪ್ರಾ. ಆವಿಅ]

**ಆವಿಕ** (ಗು). ೧. ಕುರಿಗೆ ಸಂಬಂಧಿಸಿದ. (ನಾ). ೨. ಕಂಬಳಿ; ಜಾಡಿ: "ಆವಿಕಃ, ಔರಭ್ರಃ, ರಲ್ಲಕಃ, ಊರ್ಣಾಯುಃ, ಕಂಬಳಃ – ಈ ೫ ಕಂಬಳಿ" (ಹಲಾಯು. ೯೦–೩೯೭). ೩. ಒಂದು ನರಕ: ಮತ್ತಂ ಶುನಕ ಸೂಕರ ಅಜ ಮಹಿಷ ಆವಿಕವೆಂಬೈದು ಮಂತ್ರಿನರಕಂಗಳ ನಡುವೆ ಚಂಡಕೋಲಾಹಲವೆಂಬರಸುನರಕವಿಹುದು (ವಿವೇಕ. ೧೮೦). [ಸಂ.]

**ಆವಿಕಣ್ಣು** 'ಆವಿಗಣ್ಣು' ನೋ.

**ಆವಿಗಣ್ಣು, ಆವಿಕಣ್ಣು** (ನಾ). ಕಾವುಗಣ್ಣು; ಉಷ್ಣದಿಂದ ಕೆಂಪಾದ ಕಣ್ಣು (ದಕ. ಕಿ). **ಆವಿಕಣ್ಣು** (ಸ್ಯಾಂಡರ್).

[ಆವಿ$_1$ + ಕಣ್ಣು (< ಕಣ್)]

**ಆವಿಗೆ** 'ಆವಗೆ' ನೋ.

**ಆವಿಗೆಗಿಚ್ಚು** 'ಆವಗೆಗಿಚ್ಚು' ನೋ.

**ಆವಿದ್ಧ** (ಗು). ೧. ಕೊರೆದ; ರಂಧ್ರಮಾಡಿದ: ದಿಗ್ಭಾಗಮೆಲ್ಲಂ ಪಟಹರವದಿನಾವಿದ್ಧಮಾದತ್ತು (ಸುಕುಮಾ. ೮–೮೪). ೨. ತಿರುಗಿಸಿದ; ನೂಕಿದ: ಆವಿದ್ಧಕುಲಾಲಚಕ್ರದಂತಸಂಗತತ್ತ್ವದಿಂದೇರಂಡಬೀಜದಂತೆ . . . ಸಲ್ವುಂ (ಅಜಿಪು. ೮–೨೮ ವ); ಆವಿದ್ಧಕುಲಾಲಚಕ್ರದವೋಲ್ (ತತ್ತ್ವಪ್ರ. ೩೭೦). ೩. ಡೊಂಕಾದ; ಕೊಂಕಿದ: "ವಕ್ರಂ, ವೃಜಿನಂ . . . ಆವಿದ್ಧಂ . . . — ಈ ೧೨ ಕೊಂಕಿದುದು" (ಹಲಾಯು. ೧೧೬–೧೯).

(ನಾ). ೪. [ನಾಟ್ಯ] ರೂಪಕಗಳಲ್ಲಿ ಒಂದು ಭೇದ; ದುರಂತ ನಾಟಕಗಳಲ್ಲಿ ಒಂದು ಬಗೆ: ಇಂಗ್ಲಿಷಿನಲ್ಲಿ ಯಾವುದಕ್ಕೆ 'Tragic' ಎನ್ನುವರೋ ಅದು 'ಆವಿದ್ಧ' (ಸಾಹಿವಿ. ೧೨೭); ಅದು ಆವಿದ್ಧ ಪ್ರಯೋಗ ವಿರಬೇಕು. ನಾವೆಲ್ಲಾ ಕೂಡಿ ಅದರ ಕಥೆಯನ್ನು ತಯಾರಿಸಬೇಕು (ಜನನಾ. ೫). [ಸಂ.]

**ಆವಿದ್ಧಪ್ರಯೋಗ** (ನಾ). [ನಾಟ್ಯ] ದುರಂತನಾಟಕಗಳಲ್ಲಿ ಒಂದು ಬಗೆ; ದುಃಖಾಂತನಾಟಕ: ಸುಕುಮಾರ (Comedy) ಮತ್ತು ಆವಿದ್ಧ (Tragedy) ಪ್ರಯೋಗಗಳು (ಸಾಹಿವಿ. ೧೨೧); 'ಉದ್ಧಾರ' ಎಂಬೀ ಏಕಾಂಕ–ದೃಶ್ಯವು 'ಸಾಮಾಜಿಕ ಸಮಸ್ಯೆಯ ಆವಿದ್ಧಪ್ರಯೋಗ' ಎಂದು ಪ್ರಕಟಿಸಲಾಗಿದೆ (ಹೊಸಂಸಾ. ೩ ಮುನ್ನು). [ಆವಿದ್ಧ + ಪ್ರಯೋಗ]

**ಆವಿದ್ಧರೂಪಕ** (ನಾ). ದುಃಖಾಂತ ಅಥವಾ ದುರಂತ ನಾಟಕ: ಡಿಮ, ಸಮವಕಾರ, ವ್ಯಾಯೋಗ, ಈಹಾಮೃಗ ಈ ನಾಲ್ಕು ಆವಿದ್ಧ ರೂಪಕಗಳು (ಸಾಹಿವಿ. ೧೨೨). [ಆವಿದ್ಧ + ರೂಪಕ]

**ಆವಿರಿ** 'ಆವಿ$_1$' ನೋ.

**ಆವಿರ್ಭವಿಸು** (ಕ್ರಿ). ಹುಟ್ಟಿಬರು; ಕಾಣಿಸಿಕೊ; ಉಂಟಾಗು: ಉತ್ಸವವಳಿದು ಕೆಟ್ಟೋಡಲಾವಿರ್ಭವಿಸಿ ನಳಿನಭವಾಂಡನಿಚಯಮನುರು ಪುತುರವಣಿಸಿ ಕವಿದ ವಿಷಮಂ (ಬಸಪು. ೧೩–೨); ನವಬಳಾಹಕದೊಳಗೆ ಮಿಂಚಿನ ಗವಿಸಹಿತ ಮಱಿಮೇಘವಾವಿರ್ಭವಿಸಿತೆನೆ ದಂಡಿಗೆಯನಿಳಿದಳು ಹೊಕ್ಕಳೋಲಗವ (ಕುವ್ಯಾಉ. ೬–೧೮); ಮಹರ್ಷಿ ಪಾಣಿನಿಯ ಶಬ್ದಾನು ಶಾಸನದ ರಕ್ಷಾಬಂಧನವಿದ್ದರೂ ಭಾಷಾಗತಿ ನಿಲ್ಲಲಿಲ್ಲ. ಪ್ರಾಕೃತಗಳು ಬೆಳೆದುವು; ಅಪಭ್ರಂಶಗಳು ಆವಿರ್ಭವಿಸಿದುವು (ಸಮಾಲೋ. ೧೨೮).

[ಆವಿರ್ಭವನ$_0$ + –ಇಸು$_3$]

**ಆವಿರ್ಭಾವ** (ನಾ). ಹುಟ್ಟುವುದು; ಉಂಟಾಗುವುದು; ಪ್ರಕಟವಾಗುವುದು: ತಪಃಪ್ರಭಾವಮಹಿಮಾವಿರ್ಭಾವಮಂ ತಾಳ್ದಿದರ್ (ಸುಕುಮಾ. ೯–೯); ಹರುಷದಾವಿರ್ಭಾವ ಮಿಗೆ ನಿಜಪುರವ ಹೊಕ್ಕನು ವೀರನಾರಯಣ (ಕುವ್ಯಾಗ. ೧೩–೧೫). [ಸಂ.]

**ಆವಿರ್ಭಾವಿತ** (ಗು). = ಆವಿರ್ಭೂತ: ಕ್ರೋಶದ್ವಿಕ್ರೋಶ ಸೀಮಾಭಾಗ ಯೋಜನ ಪಂಚಶತಕುಟುಂಬಿ ಕುಲಾವಿರ್ಭಾವಿತಾಥವೋತ್ತಮ ಭೇದಂಗಳುಮಂ (ಆದಿಪು. ೮–೬೩ ವ). [ಸಂ.]

**ಆವಿರ್ಭೂತ** (ಗು). ಕಾಣಿಸಿಕೊಂಡ; ಹುಟ್ಟಿದ; ಉಂಟಾದ: ಶೌರ್ಯಾವಿರ್ಭೂತ ದವಾನಳನಾವನ ಚತುರಂಗಬಲಮನಿಂ ಸುಟ್ಟಪುದೋ (ಆದಿಪು. ೧೪–೫); ದಿವಿಜ ಮನುಜ ತಿರ್ಯಗ್ವಿನೇಯನುಮಾವಿರ್ಭೂತ ಚತುಸ್ತ್ರಿಂಶದತಿಶಯನುಂ (ಅಜಿಪು. ೭–೨೦ ವ). [ಸಂ.]

**ಆವಿಲ, ಆವಿಳ** (ಗು). ೧. ಕದಡಿದ; ಕೊಳಕಾದ; ಬಗ್ಗಡವಾದ: ತಿಳಿಗೊಳನಾದೊಡಂ ಮಱಿಯ ನೀರ್ಗಳಿನಾವಿಲಮಾಗದಿರ್ಕುಮೇ (ಕಾದಂಉ. ೪೮೬); ಬಲ್ಪಿಂದೆ ತಳ್ತಪ್ಪಿಯಾವಿಲಶೃಂಗಾರದೊಳೀಸಿ ಪೇಸಿ (ಸಂಸಪ. ೧೦–೪). ೨. ಕೂಡಿದ; ಸೇರಿದ: ಕರ್ಕಶಾಂಗಿ ಭುಜಂಗಾವಿಲೆ ಬನದೊಳೂಳುತಿರ್ಪಳ್ ಲಲನೆಯೆನಿಕ್ಕುಂ ಕುಳೀರಮಧ್ಯತ್ರ್ಯಂಶಂ (ಜಾತತಿ. ೧೯–೧೧); ತುಳುವಬ್ರಾಹ್ಮಣಭಕ್ತಿಯಿಂದೆಯುಮುದಾರಾಸ್ಮತ್ತ್ಸಾದತ್ತ್ವದೀ ಸ್ಥಳಮಂ ವರ್ಜಿಸಿ ಪೋಗಿಮಾವಿಲ ಲಸಚ್ಛ್ರೀರಂಗಕೆಂದಂತು (ದಿವ್ಯಸೂ. ೧೩–೭೧). **ಆವಿಳ:** ೨. ಪುರಾಣಕವಿ ಪ್ರಭು ಪ್ರಯೋಗಾವಿಳ ಸದ್ಗುಣೋದಯಮನಾಯ್ದು (ಕವಿರಾ. ೨–೧೫೩); ಬಾಡವಾನಳಾವಿಳಜಳಮಂ . . . ನೋಡಿದನರ್ಣವಮಂ ಗುಣಾರ್ಣವಂ (ಪಂಪಭಾ. ೪–೨೫). (ನಾ). ೩. ವ್ಯಾಕುಲಿತ; ಪಿಡಿತ: ಅಸೂಯೆಯಿಂದಾವಿಳರಾಗುತ್ತೆ ಸಗರಾರೊಳಂ ಪೊಲ್ಲಮೆಯುಂ (ನೀತಿಮಂ. II, ೧೨೪); "ಆವಿಳರ್ = ವ್ಯಾಕುಲರು" (ನೀತಿಮಂ. ಟಿಪ್ಪಣಿ). [ಸಂ.]

**ಆವಿಲೆ** (ನಾ). ಕೂಡಿದವಳು; ವ್ಯಾಪ್ತಳಾದವನು: ದೇವಿಲೆಯಂ ಲಾವಣ್ಯರಸಾವಿಲೆಯಂ . . . ಚಂದ್ರಮುಖಿಯನಿತ್ತನತೀಂದ್ರಂ (ಪಂರಾಮಾ. ೧೦–೧೯೯). [ಸಂ. ಆವಿಲಾ]

**ಆವಿಷ್ಕರಣ** (ನಾ). ೧. ಕಾಣಿಸಿಕೊಳ್ಳುವುದು; ಪ್ರತ್ಯಕ್ಷವಾಗುವುದು. ೨. ಪ್ರಕಾಶಪಡಿಸುವುದು: ಸ್ವಗುಣಪ್ರಚ್ಛಾದನಮನ್ಯಗುಣಾವಿಷ್ಕರಣಮಾತ್ಮದೂಷಣಮನ್ಯೋಪಗಮ ಪುರಸ್ಕಾರಮುಪಾರಗುಣಗಣಂ ಗುಚ್ಚಗೋತ್ರದಾಸ್ರವಮಕ್ಕುಂ (ಸುಕುಮಾ. ೮–೨೪). ೩. ಸ್ಪಷ್ಟಪಡಿಸುವ ಸಾಧನ; ಪ್ರಕಟಪಡಿಸುವ ಮಾರ್ಗ. ೪. ಶೋಧನೆ: ಇದರ ಆವಿಷ್ಕರಣವನ್ನು ಮನಸ್ಸಿನಲ್ಲಿಯೇ ಮಾಡಿಕೊಂಡು ನೀನು ಮುಗುಳುನಗೆ ನಕ್ಕೆ (ಸಮುಜೀ. ೫೩೮). [ಸಂ.]

**ಆವಿಷ್ಕಾರ** (ನಾ). ೧. = ಆವಿಷ್ಕರಣ ೧: ವಿಭೂತಿಯಾವಿಷ್ಕಾರ ಸಾಧನಾರ್ಥಂ ಬೇಗಮಾ ಕೈಕೆಯಾತ್ಮಂಬೊಕ್ಕು ರಚಿಸು ವಿನ್ಯಾಸಮಂ (ಶ್ರೀರಾಮಾ. ೭೩–೫೦೭); ಗ್ರಂಥಸ್ಥವಾದ ಭಾಷೆಯಲ್ಲಿ ಕಾಲಕ್ರಮದಿಂದ ಅವಸ್ಥಾಭೇದಗಳ ಆವಿಷ್ಕಾರವು ಸಾಮಾನ್ಯ ನಿಯಮ (ಕಸಾಚ. ೬೯). ೨. ಕಂಡುಹಿಡಿಯುವುದು; ಸಂಶೋಧನೆ: ವೈಜ್ಞಾನಿಕ ಆವಿಷ್ಕಾರಗಳ ಪ್ರಭಾವದಿಂದ ಲಾಭದಾಯಕವಾದ ಅನೇಕ ಮಹತ್ಕಾರ್ಯಗಳು ಸಾಧಿಸಲ್ಪಡುತ್ತಿವೆ (ಜೀವಾತ್ಮ. ಮುನ್ನು. i). [ಸಂ.]

**ಆವಿಷ್ಕೃತ** (ಗು). ೧. ಉಂಟಾದ; ಕೂಡಿದ; ಆವಿರ್ಭವಿಸಿದ: ನೀವೀಬಂಧನಾವಿಷ್ಕೃತಸ್ಖಳಿತಂವಿಸ್ಮೃತ ಪಕ್ಷ್ಮಪಾತನವಪೂರ್ವಾಳೋಕನಾ ಕೌತುಕಾಕುಳಿತಾಂತಃಕರಣಂ (ಆದಿಪು. ೪–೬೦); ಈವುದತಿವಿಶದವೃತ್ತಿ ಗುಣಾವಿಷ್ಕೃತನಪ್ಪ ಸುತನನೆಂದುಜ್ಜ್ವಲಮುಕ್ತಾವಳಿಯಿಂ ಜಿನಶಾಸನ ದೇವಿಯುರಂ ದೇವಿ ರಾಗದಿಂದರ್ಚಿಸಿದಳ್ (ಮಲ್ಲಿಪು. ೪–೪೨). ೨. ಪ್ರಕಟಗೊಂಡ; ಪ್ರಕಾಶವಾದ; ಸ್ಪಷ್ಟಗೊಂಡ: ಆವಿಷ್ಕೃತನಿಯಮಂ . . . ಅಗಣ್ಯಪುಣ್ಯನಿಲಯಂ . . . ರಾವಣನುಗ್ರಾಸಿರತ್ನಮಂ ಸಾಧಿಸಿದಂ (ಪಂರಾಮಾ. ೧೦–೧೪೮); ಆವಿಷ್ಕೃತ ಕುಸುಮವಿಸರಮೆನೆ ಶಿಖರಿವನಂ . . . ಕಾಣಲಾಯ್ತು ರೈವತಶೈಲಂ (ಜಗವಿ. ೧೬–೧). [ಸಂ.]

**ಆವಿಷ್ಟ** (ಗು). ೧. ಆವೇಶದಿಂದ ಕೂಡಿದ: ಶೋಕಾವಿಷ್ಟನೂ ಕಾಂತಿಹೀನನೂ ಆದ ಅರಸನು . . . ಬೇರುಸಹಿತವಾಗಿ ಕಿತ್ತ ಕಮಲದಂತೆ ತೋರಿದನು (ತುಳಸಿ. ೧೧೮). ೨. ಭೂತಗ್ರಹಾದಿಗಳು ಮೈಮೇಲೆ ಬಂದ, —ಒಳಹೊಕ್ಕ: ವಂಶಲೋಚನರಿನ್ನೂ ಕಾಲಿಯ ಮುಂದೆ ಕೈಜೋಡಿಸಿಕೊಂಡು ಆವಿಷ್ಟರಂತೆ ನಿಂತಿದ್ದರು (ಎರಸೆ. ೧೪). [ಸಂ.]

**ಆವಿಷ್ಟತೆ** (ನಾ). ಆವೇಶಕ್ಕೆ ಒಳಗಾಗಿರುವುದು: ಪುತ್ರಶೋಕಗ್ರಹಾವಿಷ್ಟತೆಯ ಕಡುಪಿನಿಂ ಲೆಕ್ಕಿಸದೆ ಬಂದು (ಹಚಕಾ. ೧೨–೩೪).

[ಸಂ. ಆವಿಷ್ಟತಾ]

**ಆವಿಷ್ಟಲಿಂಗ** (ನಾ). [ವ್ಯಾಕ] ವಿಶೇಷಣಕ್ಕೆ ಅಧೀನವಾದ ಲಿಂಗ; ವಾಚ್ಯಲಿಂಗ: ಆವಿಷ್ಟಲಿಂಗಕ್ಕಂ ಕ್ರಿಯಾವಿಶೇಷಣಕ್ಕಂ ಬಲ್ಲರಿಂದೇಕವಚನಮಕ್ಕುಂ . . . ಆವಿಷ್ಟಲಿಂಗಕ್ಕೆ – ವೇದಂಗಳ್ ಪ್ರಮಾಣಂ (ಶಮದ. ೧೪೪ ವೃತ್ತಿ, ಪ್ರಯೋ). [ಆವಿಷ್ಟ + ಲಿಂಗ]

**ಆವಿಷ್ಟೆ** (ನಾ). ಭೂತಗ್ರಹಾದಿಗಳ ಚೇಷ್ಟೆಗೆ ಒಳಗಾದವಳು: ಅದಂ ಕೇಳಲೊಡನೆನ್ನ ನೆತ್ತಿಯೊಳುರಿಮುಸಗಿದಂತಾಗೆ . . . ಕಂಬನಿಗಿಡಿಗಳಿಂದುರುಪುವಂತವನಂ ನೀಡುಂ ನೋಡುತಾವಿಷ್ಟೆಯಂತೆನ್ನನಾನಜಿಯದೆ (ಕಾದಂಉ. ೫೭೨). [ಸಂ. ಆವಿಷ್ಟಾ]

**ಆವಿಸು** (ಕ್ರಿ). ಆವಿಯಲ್ಲಿ ಅಥವಾ ಉಗಿಯಲ್ಲಿ ಬೇಯಿಸು: ಮಡಿಕೆಯ ಕಂಠಕ್ಕೆ ಹಂದರ ಕಟ್ಟಿಗೆಯ ಕಟ್ಟನಿಕ್ಕಿ ಅದರ ಮೇಲೆ ಅವರೆಯ ಚಿಗುರು ಒಂದು ಹಿಡಿಯನಿರಿಸಿ . . . ಇಡ್ಡಲಿಯ ಹಾಗೆ ಆವಿಸಿ (ವಿವೈವಿ. ೧೪೨).

[ಆವಿ$_1$ + –ಇಸು$_3$]

**ಆವಿಳೆ** 'ಆವಿಲ' ನೋ.

**ಆವೀಕ್ಷಿತ** (ಗು). ನೋಡಲ್ಪಟ್ಟ; ನೋಡಿದ: ಕೃತನಿತ್ಯದಾನನಾವೀಕ್ಷಿತ ಘೃತನಾಸ್ಪೃಷ್ಟಕಪಿಳನೊಯ್ಯನೆ ಸಾರ್ದಂ . . . ಚತುರನರಸಿಯನರಸಂ (ಯಶೋಚ. ೨-೬೬). [ಸಂ.]

**ಆವು** (ನಾ). ಹಸು; ಆಕಳು: "ಗೋವಿನೊಳಗಾವುಮಾಕಳುಂ" (ಕಶರ. ೧೧); ರುಜೆ ವೇಣು ಬಿಳಿಯ ಸಾಸಿವೆ ಬಜೆ ಬಿಟಲಿನ ಬೀಜಮೆಂಬಿವಂ ಸರಿಗೊಂಡಂತಜಮೂತ್ರದೊಳರೆದೆಚ್ಚುಗೆ ನಿಜೇಚ್ಛೆಯಿಂದೋಚಿಕೆಯಾವು ಮಟ್ಟಂ ಕಟಿಗುಂ (ಲೋಕೋಪ. ೯-೧೯೬); ಪಾಲುಂ ಶೀಲಮು ಮುಳ್ಳಾವುಂ (ಧರ್ಮಾಮೃ. ೩-೧೯); ಊಡದ ಆವಿಂಗೆ ಉಣ್ಣದ ಕಱುವ ಬಿಟ್ಟಂತೆ (ಬಸವ. ೧೦೯); ಆವು ಕಾಯಪೋಗಿ (ಪುರಂದ. ೧-೧೦೪-೧); ಬಾಡ ತಿಂಬಾತಂಗೆ ಆಡೇನು ಆವೇನು (ಸರ್ವಜ್ಞ. ೯೪೨).

ಆವಪಳ್ಳಿ = ಗೋವುಗಳ ಹಳ್ಳಿ; ತುರುಹಟ್ಟಿ: ದೇವಕಿಯ ಜಠರದಲ್ಲಿ ಬಂದನ ಆವಪಳ್ಳಿಲಿ ನಿಂದನ (ಪ್ರಸಕೀ. ೫-೨).

[ದೇ. ‖ **ತಮಿ.** ಆ; **ಮಲ.** ಆ, ಆನ್; **ತೆಲು.** ಆವು, ಆನ್; **ಕುರು.** ಓಯ್]

**ಆವುಂಡಲಗೆ** 'ಅವುಂಡಲಗೆ' ನೋ.

**ಆವುಂಡಲಿಗೆ** 'ಅವುಂಡಲಗೆ' ನೋ.

**ಆವುಂಡಿಗೆ** (ನಾ). ಕಾಲಿನ ಮಣಿಗಂಟಿಗೆ ಬರುವ ಗಂಟುರೋಗ: ಆವುಂಡಿಗೆ (ಚರಣಗ್ರಂಥಿರೋಗ) – ಸೊಗಯಿಪ ಮಣಿಬಂಧಂ ತೊಟ್ಟನೆ ಕೊಳೆ ಕೋಮಳಿಕೆಗೆಟ್ಟು ಗಂಟಾದೊಡೆ ವಾಜಿಗಳಳುಕಿ ನಡೆಯಲಾವುಂ (ಗಂ – ಟಿಂ)ಡಿಗೆಯೆಂಬುದು ಗಂಟು ಕುಂಟುಮಾಟ್ಕುಂ ಹಯಮಂ (ಅಶ್ವಶಾ. ೧೫-೧೯); ತಳಲಿಂಗ ಕೂರ್ಚಲಿಂಗಂಗಳ[ ಳಾ]ವುಂಡಿಗೆ ಗಂಟುಗಳ್ (ಅಶ್ವಶಾ. ೧೫-೨೧). [?]

**ಆವುಕ** (ನಾ). ತಂದೆ; ಜನಕ: "ತಂದೆಯುಂ ಆವುಕನೆಂಬುದು" (ಹಲಾಯು. ೧೭-೯೯); "ಜನಕನಾವುಕನಕ್ಕು" (ಮಂಗರಾ. ೨೫-೧೦); ಆವುಕನನೀ ನಿರ್ಬಂಧದಿಂ ಬಂಧದಿಂ ಬಿಡಿಕುಂ (ಜಗವಿ. ೨-೮೫). [ಸಂ.]

**ಆವುಕ್ಕ** (ನಾ). ಒಬ್ಬಾತನ ಹೆಸರು (?): ಸ್ವಸ್ತಿಶ್ರೀ ಶ್ರೀ ಪುರುಷ ಪ್ರಿಥಿವೀರಾಜ್ಯಂಗೆಯೆ ವೈಳಕಟ್ಟಾನಾಡರ ತಟ್ಟಿಯೂರಾಳ ಆವುಕ್ಕ ಇಯುರೆ ಪಣುಪುಲ್ಲು ಇದಕ್ಕೆ ಸಾಕ್ಷಿ (ಎಕ. IV, ಗುಂಡ್ಲುಪೇ. ೮೬-೧; 750). [?]

**ಆವುಗೆ** 'ಆವಗೆ' ನೋ.

**ಆವುಗೆಕಿಚ್ಚು** 'ಆವಗೆಗಿಚ್ಚು' ನೋ.

**ಆವುಗೆಗಿಚ್ಚು** 'ಆವಗೆಗಿಚ್ಚು' ನೋ.

**ಆವುಗೆಮನೆ** (ನಾ). ಕುಂಬಾರನು ಮಣ್ಣಿನ ಪಾತ್ರೆಗಳನ್ನು ಸುಡುವ ಒಲೆಯಿರುವ ಮನೆ: ನಾಜೂಕಿನ ಪಿಂಗಾಣಿ ಪಾತ್ರೆಗಳನ್ನು ಅಲಂಕರಿಸುವುದಕ್ಕೂ ಶಿಕ್ಷಣಕೊಟ್ಟು ಗ್ರಾಮಕ್ಕೊಂದರಂತೆ ಆವುಗೆಮನೆ ಮಾಡಿಕೊಟ್ಟು ಸಾಮೂಹಿಕ ಕೈಗಾರಿಕೆ ಏರ್ಪಡಿಸಿದರು (ಗೊಂಡಾರ. ೨೧೨).

[ಆವುಗೆ (< ಆವಗೆ) + ಮನೆ]

**ಆವುಜ, ಆವಜ, ಆವುಜೆ** (ನಾ). ಒಂದು ಬಗೆಯ ಚರ್ಮವಾದ್ಯ: "ಅಗ್ಗಟಿಕೆ = ಲಾಟವಿಂಡಿಗೆ, ಆವುಜದ ಮುಟ್ಟು (ಅವುಜ = ಸಂಗೀತ ವಾದ್ಯ)" (ಶಮದ. ಪರಿ. ೧); ತಾಳವಾವುಜ ಮೃದಂಗ ಕರಡೆಗಳ ರವದಿಂ (ಸಿದ್ಧೇಪು.೧ ೩-೨೪). **ಆವಜ:** ಆವಜ ಚಂಗು ಶ್ರೀಮುಖ ವೀಣೆಗಾಱರು ತಾವಾಗ ತಂತಮ್ಮ ಕಲೆಯ ಭಾವ ಬಿನ್ನಣದೋಱ ಕೇಳಿಸಿದರು (ನಾಗಕು. ೨೨-೭೧). **ಆವುಜೆ:** ನಟಟಹಕು ಫಣಫಣಕು ಛಿಣಿಲೆನಿಸುವಾವುಜೆಯ (ನಂಬಿರ. ೧೧-೧೬೩); ಭೋರ್ಗರೆವ ತಂಬಟೆ ಭೇರಿ ಡೊಳ್ಳುವಾವುಜೆ ಮುರುಜೆ ಸರಗೊಡುವ ಶಂಖ (ರಾಘಚ. ೪-೭). 'ಅಡ್ಡಾವುಜ' ಪರಾ.

[**ಪ್ರಾ.** ಆಉಜ್ಜ, ಆಒಜ್ಜ < **ಸಂ.** ಆತೋದ್ಯ]

**ಆವುಜಕಾಱ** (ನಾ). ಆವುಜವನ್ನು ಬಾರಿಸುವವನು; ಆವುಜಿಗ: ಉಲ್ಲಾಸದಂಕೆ ಝುಂಕೆಗಳಾ ಕೊಲ್ಲಣಿಗೆಯೊಳಗೆ ಕೇಳಿಸಿದನಾವುಜಕಾಱನೆಲ್ಲರ ಚಿತ್ತ ಜುಮ್ಮೆನಲು (ಭರಚ. ೧೨-೩೯); ಆವುಜಕಾಱ ಮದ್ದಳೆ ನರ್ತಕಿಯರೋವಿ ಮೆಲ್ಲನೆ ಶಿಕ್ಷಿಸುವ ಕೋವಿದಾಚಾರ್ಯ (ಅನಂಚ. ೨-೨೩). [ಆವುಜ + –ಕಾಱ]

**ಆವುಜಿಗ** (ನಾ). = ಆವುಜಕಾಱ: ಶ್ರೀ ಕಂದರ್ಪ್ಪೇಶ್ವರದೇವರ[ಆ]ಯು[ಆವು]ಜಿಗ ಮುಸಣೋಜಂಗೆ ಹಡಪವಳಂ . . . ಬಿಟ್ಟ ಮತ್ತರು (ಕಇ. II, ೧೬-೫೪; 1122); ತಾಳಧರರೊಂದೆಸೆಗೆ ಆವುಜಿಗರೊಂದೆಸೆಗೆ. . . ಚೆಲ್ಲುತಿರೆ (ಬಾಹೂರ. ೧೮೧-೨೯); ಆವುಜಿಗಂ ಕಂದವಟ್ಟಗೆಯಂ ಪೆಗಲೊಳ್ ತಗುಳ್ಚಿ ಕಯ್ಯನೇಣೊಳ್ ಕರತಳಮಂ . . . ದಿಟಪುಟಮಾಡಿ ಬಹುಲಾಕೆಯೊಳತಿಮಧುರಮಾಗೆ . . . ತೋರ್ಪುದುಂ (ಮಹಾನೇ. ೪-೫೪ ವ). [ಆವುಜ + –ಇಗ]

**ಆವುಜಿಗಿತಿ** (ನಾ). ಆವುಜವನ್ನು ಬಾರಿಸುವವಳು: ಆವುಜಿಗಿತಿ, ಕನ್ನಡಿಗಿತಿ (ಶಮದ. ೨೦೮ ಪ್ರಯೋ). [ಆವುಜಿಗ + –ಇತಿ$_1$ (< –ಇತ್ತಿ)]

**ಆವುಜೆ** 'ಆವುಜ' ನೋ.

**ಆವುಟ, ಆವಟ್ಟ$_2$** (ನಾ). ಬೂಟಾಟಿಕೆ; ನಟನೆ; ನೆಪ: ದೀಕ್ಷಿತರು ತೀರ ರಿಕ್ತರು; ಆದರೇನನೂ ಬಯಸದಿಹ ಅವರ ಆವುಟವ ಹೇಳಲಾಗದು (ಸುನೀತ. ೧೧); ಈ ಅದ್ಭುತ ವ್ಯಕ್ತಿಗಳಿಗೆ ದೈವಾಂಶವನ್ನು ಕಲ್ಪಿಸಿ ತನ್ಮೂಲಕ ಪ್ರಾಶಸ್ತ್ಯವನ್ನು ಉಂಟುಮಾಡಬೇಕೆಂದು ಹೀಗೆ ಆವುಟಗಳನ್ನು ಹುಟ್ಟಿಸುವುದು ನಮ್ಮ ಅನುಭವಸಿದ್ಧವಾಗಿದೆ (…ಪೂಚ. ೩); ಈ ಆವುಟ ಯಾರ ಹತ್ತಿರ ಎತ್ತುತ್ತೀಯೆ (ರಂಗಕ. ೪). **ಆವಟ್ಟ$_2$:** ನಾವೆಲ್ಲ ನಿಮ್ಮ ಮನೆಯ ಮದುವೆಗೆ ಬರಬಾರದೆಂದು ನಿಮ್ಮೂರಿನಲ್ಲಿ ಮಾಡಬೇಕೆಂಬ ಆವಟ ತೆಗೆದಿರುವಹಾಗೆ ಕಾಣುತ್ತೆ (ಶ್ರೀಕಥೆ. ೧೦೦). [?]

**ಆವುಟಕಟ್ಟು** (ಕ್ರಿ). ಸೋಗನ್ನು ಹಾಕು: ಮಂತ್ರ ಮರೆತುಹೋದಾಗ ಆಟಾಟೋಪದಿಂದ ಆವುಟಕಟ್ಟುವ ಹಾಗೆ ಗುದ್ದಲು ಕೈ ಸೋತುಹೋದಾಗ ಘರ್ಜಿಸಿ ಗದ್ದಲ ಮಾಡಿದ ಹಾಗೆ (ರಾಮರಾ. ೭೬).

[ಆವುಟ + ಕಟ್ಟು$_1$]

**ಆವುತಿ** (ನಾ). ಒಂದು ಬಗೆಯ ಆಯುಧ (?): ಕೃತ ವಿವಿಧಾಸ್ತ್ರ ವೀರಭಟಕೋಟಿ ಭಯಂಕರಮಾಗೆ ಬೀಸುವಾವುತಿಯು [ಪಾಠಾಂ. ಬೀಳಲಾವುತಿಯ] (ಪಂಪಭಾ. ೧೦-೫೦); ತೊಳಗುವ ಬಾಳ್ ತಟತ್ತಟಿಪ ಕಕ್ಕಡೆ ಬುಂಭುಕದೊಳ್ ತಗುಳ್ದು ಪಜ್ಜಳಿಸುವ ಪಂಚರಾಯುಧಮಗುರ್ವಿಸುವಾವುತಿ (ಪಂಪಭಾ. ೧೦-೭೬). [?]

**ಆವುದು** (ಸ). ರೂಪಗಳು (ಪುಂ. ಏಕ). ಆವಂ, ಆವನ್, ಆವನು, ಆವೊಂ, ಆವೊನ್ (ಸ್ತ್ರೀ. ಏಕ). ಆವಳ್, ಆವಳು (ಬಹುವ) ಆರ್, ಆರು$_8$, ಆವರ್, ಆವರು, ಆವುವು (ವಿಶೇ) ಆವ: **೧.** ಪ್ರಶ್ನಾರ್ಥಕ ಸರ್ವನಾಮ; ಎಂತಹುದು; ಎಲ್ಲಿಯದು; ಏನು: ಕಾಲಂ ಕಚ್ಚಿ ಕೊಟ್ಟ ಭೂಮಿ ಆವುದೆನ್ದೊಡೆ (ಎಕ. XI, ದಾವಣ. ೧೭-೧೩; 889); ನೀನಾರ್ಗೆನೆಂಬೆಯಾವುದು ಕಾರಣದಿಂದಮೆನ್ನ ದೊಣೆಯಂ ಪೊಕ್ಕಿರ್ದೆ (ಪಂಪಭಾ. ೧೨-೨೦೩ ವ); ಬರವಿದು ಚೋದ್ಯವಾರ ತನಯಂ ಪೆಸರಾವುದು (ಕಾದಂಊ. ೨೯); ಕೃಷ್ಣನೊಲಿದರಿಗಾವುದರಿದೆಂದು (ಕುವ್ಯಾದ್ರೋ. ೩-೧೦); ನೆಲನಾವುದಾಗಸವಾವುದೆಣ್ದೆಸೆಗಳ ಹೊಲಬಾವುದೆಂದು ತೋಱಸದೆ ಜಲನಿಧಿ ಜಲವ ನುಂಗಿದವೊಲು ಬಾಣಾಬ್ಧಿ ಬಲಗೂಡಿ ಹರಿಯ ನುಂಗಿದುವು (ಮೋಹತ. ೪೦-೩೬). **೨.** ಸಂಬಂಧಾರ್ಥಕ ಸರ್ವನಾಮ: ಆವುದಂತರ್ಬಹೀರೂಪದಿಂ ವಿಶದ ದರ್ಶನಾವಗಮ್ಯಂ ಅದೆಲ್ಲಮುಸತ್ಯಾವಭಾಸಿ (ಆದಿಪು. ೨-೯ ವ); ಆವುದು ಬೆಳೆಗುಂ ವೃಷ್ಟಿಯಿನಾ ವಿಷಯಂ ದೇವಮಾತೃಕಂ (ವಸ್ತುಕೋ. ೨೬-೩).

ಆವಂ: ತಾನಾವಂಗಂ ಪಡಿಚನ್ದಮಾದೆಸಕಕೆದೊಲ್ಪೆರ್ಮಾಡಿಗಂಗೊಪ್ಪರೇ (ಎಕ. IV, ನಾಗಮಂ. ೫೧–೧೧ ; 972) ; ಆವಂಗಿಂದ್ರಿಯವರ್ಗಮುಂಟು ಮನಮುಂಟಾವಂ ದಿಟಂ ಕಾಣ್ಬನಿನ್ನಾವಂ ಕೇಳ್ವಂ (ಕಾದಂಪೂ. ೮೫೦). **ಆವನ್**: ಮರುಳುಂ ಮದಿರಾಪರವಶಶರೀರನುಂ ಪೇಚ್ಚುಮಾವ ನಜೀವಂ ಪೇಚ್ಚುಂ (ಕವಿರಾ. ೧–೮೦) ; ಸಮಾನನಾವನೊ ಸಾಹಸಭೀಮ ಭೂಪನೊಳ್ (ಗದಾಯು. ೧–೨೨). **ಆವನು** : ಗುರು ಮುನಿದವಗಡಿಸಿದರೆ ನಿಲುವನಾವನು (ಕುವ್ಯಾದ್ರೌ. ೪–೨೫). **ಆವೊಂ** : ವಿಗಳಿತರಾಗನಾವೊಂ (ಕವಿರಾ. ೨–೧೫೨) ; ಆವೊಂ ವಾದಿ ಕಥಾತ್ರಯ ಪ್ರವಣದೊಳ್ ವಿದ್ವಜ್ಜನಂ ಮೆಚ್ಚೆ (ಎಕ. II, ೬೪–೮೨ ; 1163) ; ಆವೊಂ ಹರಿಹಯಂ (ಶಬ್ದಾನು. ೧೧೪–೨೮). **ಆವೊನ್** : ಇದಾನ್ ಸಲಿಸುಗೆ ಆವೊನಾನುಂ ಕಿಡಿಪೊನುಳ್ಳೊಡೆ (ಇಆ. VIII, ೨೮೬–೫ ; 732). **ಆವಳ್** : ಆವಳ ಕಯ್ಯ ಪುಸ್ತಕದೊಳಿರ್ಪುವು ಲೋಕದ ಸಾರ ಸೂಕ್ತಿ (ಸೂಕ್ತಿಸು. ೧–೬). **ಆವಳು** : ಆವಳುಮನುಟಿದು ಮುಕ್ತಿಶ್ರೀವಧುಗೆ (ಪುಷ್ಪಪು. ೧೩–೫೬). **ಆರ್** : ಒಳ್ಳಿತ್ತಕೆಯ್ವೊರಾರ್ (ಇಆ. X, ೬೧–೬ ; 700) ; ಕರ್ಮಕ್ಕೋಡಿ ಬರ್ದುಂಕಲ್ಕೆ ಕಲ್ತರಾರ್ ಬಿನ್ನಣಮಂ (ಕವಿರಾ. ೧–೬೪) ; ಬೀರಕೆ ಬೀಯಕ್ಕಿ ಜೀವಬೆಡಂಗನೊಳಾರ್ದೊರೆ (ಗದಾಯು. ೧–೧೮). **ಆರು**$_3$ : ನಿಮ್ಮ ನಿಜದೊಳಗಾರು ಬಲ್ಲರಯ್ಯ (ಆದವ. ೪) ; ಕೋದಂಡರುದ್ರನ ತೊಡಕಿ ಬದುಕುವರಾರು (ಕುವ್ಯಾದ್ರೌ. ೧–೫೬) ; ಆರೇನ ಮಾಡುವರು ಆರಿಂದ ಲೇನಹುದು (ಪುರಂದ. ೨–೬೨–೧). **ಆವರ್** : ಕೊತ್ತಕ್ಕೆಯೂರ ಪೂರ್ವ್ವದ ಬೆಸಮಕ್ಕಳಾವರುಂ (ಎಕ. III, ನಂಜನ. ೧೩೯–೧೧ ; 915). **ಆವರು** : ಆ ಸಿಂದೊಗಿಯ ಗ್ರಾಮಕೆ ಆವರೊಬ್ಬರು ತಪ್ಪಿದವರು (ಕಇಆ. ೬೨–೯–೧೩ ; 1521) ; ವಿತ್ತ ಪೋದರು ಅಂಜೆ ಸುತ್ತಲಾವರು ಮುನಿದು ಹತ್ತಿಗರಿಯಾದಿರೆ ಅಂಜೆ ಅಂಜೆ (ಮೋಕ್ಷದೀ. ೬೧) ; ಸೋತರಾವರು ನಿನಗೆ ನಿನ್ನಯ ಗುಣಗಣಂಗಳಿಗೆ (ನಿಭಾಗ. ೬–೧೫–೧೦). **ಆವುವು** : ಅವಾವು ವೆನ್ದೊಡೆ (ಎಇ. I, ೩೫೦–೬ ; 900) ; ಆವೆನಿತಗಲಮನುಳ್ಳುವಾವುವಜೀಂ ಸುತ್ತೆಪಟ್ಟುವು (ತಸೂವ್ಯ. ೬೪); ಆವುವು (ಶಬ್ದಾನು. ೨೩೫ ಪ್ರಯೋ). **ಆವ** : ಇನಿತಾವ ಶಾಪದೆ ಪಾವು ಮುಟ್ಟದೋನ್ (ಎಕ. II, ೨೧–೧ ; 700) ; ಪಸದನಮಾವುದಾವ ಖತುವಿಂಗಮದೋರ್ಪ್ಪುಗುಮಾವ ಪೊಟ್ಟದಾವೆಸಕಂ (ಪಂಪಭಾ. ೧೪–೩೪) ; ಆವ ದಿಕ್ಕಿನಲಿ ನೋಡಲು ವಾಜಿ ವಾರಣ ತೀವಿದ ಕಾಲಾಳಮೊತ್ತ (ಕಂನವಿ. ೧೧–೧೧೫). **ಆವೊನಾವೊಂ** = ಯಾವನು ಯಾವನು: ಆವೊನಾವೊನ್ ರಕ್ಷಿಕ್ಕುವ್ಸ್ ಅವಂಗೆ ಧರ್ಮ್ಮಂ ಚನ್ದ್ರಾದಿತ್ಯರುಳ್ಳಿನ ನಿಲ್ಕೆ (ಎಕ. IX (S), ಹೊಸಕೋ. ೧೯೧–೧೧ ; 800). **ಆವೊನೊರ್ಬಂ** = ಯಾವೊಬ್ಬನು : ದತ್ತಿಯನಾವೊನೊರ್ಬ್ಬನಟಿದೊಂ (ಇಆ. XIV, ೬೬–೧೬ ; 899). 'ಏವುದು', 'ಯಾವುದು' ಪರಾ.

[**ದೇ.** ‖ **ತಮಿ.** ಯಾ, ಯಾವ್ವೈ, ಯಾವದು, ಯಾದು ; **ಮಲ.** ಏ, ಏವ ; **ಕೊಡ.** ಎನ್ನ, ಏದಿ ; **ತುಳು.** ದಾ, ದಾನೇ, ಜಾನೇ, ದಾವ ; **ತೆಲು.** ಏ, ಏದಿ ; **ಕೊಲಾ.** ಏನ್, ಏನ್ದ ; **ಪರ್ಜಿ.** ಎದ್, ಏದಿ.]

**ಅವುಪನ್ನ** (ಗು). ಬೆಳೆದ ; ಉತ್ಪನ್ನವಾದ (?) : ಭೀಮೇಶ್ವರ ದೇವರ ನಂದಾದೀವಿಗೆಗಮಂಗಭೋಗ ನಿವೇದ್ಯಕ್ಕಂ ಆ ಸ್ಥಳದ ಅವುಪಂನದಡಕೆ ಲಕ್ಕ ಒಂದಕೆ ಶ್ರೀ ವೀರಪಾಂಡ್ಯದೇವರ ಮಠದಿಂ ಬಿಟ್ಟ ಹಾಗವೊಂದು (ಸೌಇಇ. IX–i, ೨೯೩–೨೫ ; 1162). ℙ ಈ ಶಬ್ದವನ್ನು ಅ + ಉಪನ್ನ ಎಂದು ಬಿಡಿಸಬಹುದು. ಅಲ್ಲಿ ಉತ್ಪನ್ನವಾದ ಎಂದರೆ ಬೆಳೆದ ಎಂದು ಅರ್ಥವಾಗುತ್ತದೆ. ಉಪನ್ನ < ಸಂ. ಉತ್ಪನ್ನ. [?]

**ಅವುವು** 'ಆವುದು' ಪರಾ.

**ಆವೃತ** (ಗು). ೧. ಹೊದಿಸಲ್ಪಟ್ಟ ; ಮುಚ್ಚಲ್ಪಟ್ಟ : ಅಂತು ವಲ್ಕಲಾವೃತ ಕಟತಟನುಮಾಗಿರ್ದ ಜಟಾಕಲಾಪನುಮಾಗಿ (ಪಂಪಭಾ. ೨–೪೫ ವ). ೨. ಸುತ್ತುವರಿದ ; ವ್ಯಾಪಿಸಿದ ; ಆವರಿಸಿದ : ಭದ್ರೆ, ನೀನು ಭಯಾವೃತಳಾಗಿದ್ದೀಯೆ (ಶಾಂತಲಾ. ೧೯೫). [**ಸಂ.**]

**ಆವೃತಿ** (ನಾ). ೧. ಹೊದಿಕೆ ; ಆವರಣ. ೨. ಸುತ್ತುವರಿಯಲ್ಪಡುವುದು ; ವ್ಯಾಪಿಸಲ್ಪಡುವುದು. [**ಸಂ.**]

**ಆವೃತ್ತ** (ಗು). ೧. ಸುತ್ತ ತಿರುಗಿದ ; ತಿರುಗಿದ. ೨. ಹಿಂದಿರುಗಿದ ; ಮತ್ತೆ ಬಂದ. (ನಾ). ೩. ಅಗೆಯುವುದರಿಂದ ನೆಲದಲ್ಲಿ ಬರುವ ನೀರು : "ಆವೃತ್ತಮೆನಲಗತೆಯಿಂದಾದ ನೀರ್ಗಕ್ಕು ನಾಮಂ" (ಮಂಗರಾ. ೧೨೦–೨). [**ಸಂ.**]

**ಆವೃತ್ತಿ** (ನಾ). ೧. ಮತ್ತೆ ಮತ್ತೆ ಬರುವುದು ; ಪುನರಾವೃತ್ತಿ. 'ವರ್ಣಾವೃತ್ತಿ' ಪರಾ. ೨. ಸುತ್ತುವುದು ; ತಿರುಗುವುದು. ೩. (ಪುಸ್ತಕಗಳ ವಿಷಯದಲ್ಲಿ) ಮುದ್ರಣ ; ಛಾಪೆ : ಮೊದಲನೆಯ ಆವೃತ್ತಿ ೫೦೦೦ ಪ್ರತಿಗಳು (ರೂಢಿ). ೪. [ಕಾವ್ಯಮೀ] ಒಂದು ಕಾವ್ಯಾಲಂಕಾರ : ಸಮಗೊಂಡರ್ಥ ಪದಾವೃತ್ತಿ ಮತ್ತದಾವೃತ್ತಿಯೆಂಬ ಪೆಸರಂ ಪಡೆಗುಂ (ಕಾವ್ಯಾವ. ೬೫೨). [**ಸಂ.**]

**ಆವೃತ್ತಿದೀಪಕ** (ನಾ). [ಕಾವ್ಯಮೀ] ಒಂದು ಕಾವ್ಯಾಲಂಕಾರ : ಹಲವು ವರ್ಣ್ಯಗಳ ಸಮಾನಧರ್ಮವು ಬೇರೆ ಬೇರೆಯಾದ ಶಬ್ದಗಳಿಂದ ಉಕ್ತವಾಗಿದ್ದಲ್ಲಿ ಆವೃತ್ತಿದೀಪಕಾಲಂಕಾರವೆನ್ನಿಸಿಕೊಳ್ಳುವುದು (ಕೈಪಿಡಿ. ೨೬೨). [ಆವೃತ್ತಿ + ದೀಪಕ]

**ಆವೆ**$_1$ 'ಆಮೆ$_1$' ನೋ.

**ಆವೆ**$_2$ 'ಆವಿ' ನೋ.

**ಆವೆ**$_3$ (ನಾ). "ಸಾಸಿವೆ" (ಕಲ್ಪದ್ರು, ಗಂಗಾಮು. ೨೯). [?. / **ತೆಲು.** ಆವ]

**ಆವೆಕಲ್ಲು** (ನಾ). ಔಷಧಿಗಾಗಿ ಉಪಯೋಗಿಸುವ ಒಂದು ಬಗೆಯ ಕಲ್ಲು. [ಆಮೆ$_1$ (< ಆವೆ$_1$) + ಕಲ್ಲು$_1$ (< ಕಲ್$_2$)]

**ಆವೆಗ** (ನಾ). ಒಂದು ಬಗೆಯ ಮೀನು : ಚಕ್ರಗೆಂಡೆಯಾವೆಗ ನವಿಲು . . . ಗಿಜಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ (ಹಚಕಾ. ೫–೪೬). [?]

**ಆವೆಚಿಪ್ಪು** (ನಾ). ಆಮೆಯ ಚಿಪ್ಪು (ಕ).

[ಆವೆ$_1$ (< ಆಮೆ$_1$) + ಚಿಪ್ಪು]

**ಆವೆಮಣ್ಣು** (ನಾ). ಜೇಡಿಮಣ್ಣು : ಅಲ್ಲಿನ ನೀಲ ಆವೆಮಣ್ಣಿನಲ್ಲಿ ಬೆರತು ನಾನಾ ಬಗೆಯ ಬೆಣಚುಕಲ್ಲುಗಳು ದೊರೆಯುವುವು (ಬಾಲಪ್ರ. II, ೧೦೩೪) ; ಆ ಮನುಷ್ಯನು ಕುಂಬಾರನಾಗಿದ್ದುದರಿಂದ ರತ್ನವನ್ನು ಅಡಗಿಸಲು ತಕ್ಕ ಸ್ಥಳವು ಆವೆಮಣ್ಣಿನ ಹೊಂಡವೇ ಆಗಿರಬೇಕಲ್ಲವೇ? (ಮಣಿಸ. ೧೫). [ಆವೆ$_2$ (< ಆವಿ$_2$) + ಮಣ್ಣು (< ಮಣ್)]

**ಆವೆವೋಡು** (ನಾ). ಆಮೆಯ ಚಿಪ್ಪು (ಕ).

[ಆವೆ$_1$ (< ಆಮೆ$_1$) + ಓಡು$_2$]

**ಆವೇಕೆ** (ನಾ). ಆಸೆ ; ತೃಷ್ಣೆ (?) : ಲೋಕಾಯತವೆನಿಸಿದ ಚಾರ್ವಾಕೋಕ್ತಿಯನಹಿತ ಶಕ್ತಿಯಂ ಭೇದಿಸುವಂತೇಕಕ್ಷಣದೊಳೆ ವಿಗತಾವೇಕಂ ಜಿನಚಂದ್ರಭೂಭುಜಂ ಭೇದಿಸಿದಂ (ಶಾಂತಿಪು. ೮–೧೩೫).

[< **ಸಂ.** ಅಪೇಕ್ಷಾ ?]

**ಆವೇಗ** (ನಾ). ೧. ಸಂಭ್ರಮ ; ಗಡಿಬಿಡಿ ; ತ್ವರೆ : ಅಗುರ್ವರ್ವೆ ಕೆಯ್ಮಿಕ್ಕು ಕಾದಲ್ ನಡೆತರ್ಪಾವೇಗದೊಳ್ ಮುಮ್ಮುಟಿಸಿದ ಪಲವುಂ ರಾಜಚಿಹ್ನಂಗಳಂ ಬೆಳ್ಗೊಡೆಗಳ್ ತಳ್ಪೊಯ್ದು (ಪಂಪಭಾ. ೧೩–೩೪) ; ವಿವಿಧ ಮಹಾಯುಧಂಗಳಂ ತನ್ನಿಮೆನುತ್ತಾವೇಗದೆ ತಮ್ಮಯ ಶಿಷ್ಯಾವಳಿಯಿಂ ತರಿಸಿದಂ ಮುನೀಶ್ವರನಾಗಳ್ (ಕುಸುಮಾ. ೬–೧೦೨). ೨. ಉದ್ವೇಗ, ದುಃಖ, ರೋಷ ಮುಂತಾದ ಭಾವನೆಗಳ ಉತ್ಕಟತೆ, —ರಭಸ : ಕ್ರೋಧದ ಆವೇಗದಿಂದ ಅವನ ಮೈ ನಡುಗುತ್ತಿತ್ತು (ರೂಢಿ).

೩. [ಕಾವ್ಯಮಿಾ] ಸಂಚಾರಿ ಭಾವಗಳಲ್ಲಿ ಒಂದು: "ಉತ್ಪಾತಾದಿಗಳನ್ನು ನೋಡಿದಾಗ ಉಂಟಾಗುವ ಸಂಭ್ರಮ ಅಥವಾ ಗಡಿಬಿಡಿಗೆ ಆವೇಗವೆಂದು ಹೆಸರು" (ಭಾರಮಿಾ. ೩೪೬); ಮತಿನಿರ್ವೇದಾವಹಿತ್ಥ ಶ್ರಮ . . . ಧೃತಿ ನಿದ್ರಾವೇಗ ಶಂಕಾ . . . ಇವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೫). [ಸಂ.]

**ಆವೇಗಿ** (ನಾ). "ಅನಂತನಗೊಂಡೇಸೊಪ್ಪು" (ಸಿದ್ಧಾಂತಿ. ೧೨೬). [ಸಂ. ಆವೇಗಿನ್]

**ಆವೇದನ** (ನಾ). ೧. ಅರಿಕೆಮಾಡಿಕೊಳ್ಳುವುದು; ನಮ್ರವಾಗಿ ತಿಳಿಸುವುದು; ವರದಿಮಾಡುವುದು. ೨. ಮನವಿ. 'ಆವೇದನಪತ್ರ' ಪರಾ. [ಸಂ.]

**ಆವೇದನಪತ್ರ** (ನಾ). ಮನವಿಪತ್ರ: ಸರಕಾರದಿಂದ ವಿಧೇಯಕವಾಗಿರುವ ನಮೂನೆಯಲ್ಲಿ ಮತ್ತು ರೀತಿಯಲ್ಲಿ ಕೊಟ್ಟಂಥ ಆವೇದನಪತ್ರ (ಭಾಧಾನ. ೫). [ಆವೇದನ + ಪತ್ರ]

**ಆವೇಶ** (ನಾ). ೧. ರೋಷ; ಆಗ್ರಹ; ಉದ್ವೇಗ: "ಆವೇಶಃ (ಸಂವೇಗಃ); ಸಂರಂಭಃ, ಸಂಭ್ರಮಃ, ಆಟೋಪಃ – ಈ ೫ ಸಂಭ್ರಮಂ" (ಹಲಾಯು. ೧೯೯–೩೭); "ಸಂವೇಗಮಾವೇಶಮಾಟೋಪಮುಂ ಸೌರಂಭಮೆಂದೆನಲು ಸಂಭ್ರಮಂ" (ಮಂಗರಾ. ೧೩೦–೧೬). ೨. ಆಕ್ರಮಣ; ಹಿಡಿತ; ಪರವಶತೆ: ದಾರುಣರೋಷಾವೇಶ ವಿಕಾರಭವಂ ರೌದ್ರಮೆಂಬ ರಸಮದು ನೆಗಟ್ಟುಂ (ಕಾವ್ಯಾವ. ೮೧೬); ಏನು ಆವೇಶದಿಂದ ಮಾತನಾಡುತ್ತಾನೆ ಅವನು (ರೂಢಿ). ೩. ಉಂಟಾಗುವಿಕೆ; ಆವಿರ್ಭಾವ: ಕುಶೇಶಯಲೋಚನನ ಮೂರ್ತಿ ಪಡೆದುದು ರಾಗಾವೇಶಮನೆಳವೆಱೆಯ ಕಳಾವೇಶಮದುತ್ಪಲಿನಿಗಳ್ಗೆ ಪಡೆವವೊಲೊಲವಂ (ಜಗವಿ. ೩–೭೧). ೪. ಭೂತ, ಗ್ರಹ ಮುಂತಾದುವುಗಳು ಮೈಯೊಳಕ್ಕೆ ಸೇರುವುದು: ಆ ಹುಡುಗನ ಮೇಲೆ ಭೂತದ ಆವೇಶ ಬಂದಿದೆ (ರೂಢಿ). ೫. ಆಂತರಿಕವಾದ ಅನುಭವ; ಅಭಿಪ್ರಾಯ (?): ಭಿಕ್ಷುಕಂ ವೇಷದೊಳುಮಾವೇಶದೊಳುಮಾಂ; ನಿತಂಬಿನಿಯೆ ಕೃಪೆಗೈದೆನಗೆ ಲಂಕೆಗೆನ್ನೊಡನೆ ಬಾ (ಶ್ರೀರಾಮಾ. ೨೪೫–೪೭೨). ೬. ಸ್ಫೂರ್ತಿ; ಪ್ರತಿಭೆ. 'ಕಾವ್ಯಾವೇಶ' ಪರಾ. [ಸಂ.]

**ಆವೇಶನ** (ನಾ). ೧. ರೋಷ; ಆಗ್ರಹ; ಉದ್ವೇಗ. ೨. ಶಿಲ್ಪಶಾಲೆ; ಕಾರ್ಖಾನೆ: "ಆವೇಶನಂ, ಶಿಲ್ಪಶಾಲೆ — ಈ ೨ ಚಿಪ್ಪಿಗರ ಮನೆ" (ಹಲಾಯು. ೧೪೧). [ಸಂ.]

**ಆವೇಶಭಕ್ತಿ** (ನಾ). ಆವೇಶವುಳ್ಳ ಭಕ್ತಿ: ಆನಂದಿಸಿ ಕಣ್ಣು ಮುಚ್ಚಿ ಆಹಾ ಎಂಬುದು ಆವೇಶಭಕ್ತಿ (ಮೋಳಿಮಾ. ೧೭–೬೩). [ಆವೇಶ + ಭಕ್ತಿ]

**ಆವೇಶಿಕ** (ನಾ). ಅಭ್ಯಾಗತ; ಅತಿಥಿ: "ಆವೇಶಿಕಃ, ಪ್ರಾ(ಘು)ಹುಣಿಕಃ, ಆಗಂತುಃ, ಅತಿಥಿಃ – ಈ ೪ ಬಿದ್ದಿನಂ" (ಹಲಾಯು. ೫೯–೨೦೩). [ಸಂ.]

**ಆವೇಶಿಕೆ** (ನಾ). ಆಗಂತುಕಳಾದ ಹೆಂಗಸು; ಅಭ್ಯಾಗತಳು (ಕಿ). [ಸಂ. ಆವೇಶಿಕೀ]

**ಆವೇಷ್ಟಕ** (ನಾ). ಬೇಲಿ, ಪ್ರಾಕಾರ, ಗೋಡೆ ಮುಂತಾದ ಆವರಣ: "ಆವೇಷ್ಟಕಃ, ವೃತ್ತಿಃ – ಈ ೨ ಬೇಲಿ" (ಹಲಾಯು. ೪೮–೧೩೫). [ಸಂ.]

**ಆವೇಷ್ಟನ** (ನಾ). ೧. ಸುತ್ತುವುದು; ಪುಸ್ತಕ ಮುಂತಾದ ವಸ್ತುಗಳನ್ನು ಕಾಗದ ಮುಂತಾದುವುಗಳಿಂದ ಸುತ್ತಿ ಭದ್ರಪಡಿಸುವುದು; ಗಾಯಕ್ಕೆ ಬಟ್ಟೆ ಸುತ್ತುವುದು. ೨. ಪುಸ್ತಕಗಳ ರಕ್ಷಾಪತ್ರ, — ಹೊದಿಕೆ. ೩. = ಆವೇಷ್ಟಕ. [ಸಂ.]

**ಆವೇಷ್ಟಿತ** (ಗು). ಸುತ್ತುವರಿದ; ಆವೃತವಾದ: ದುರ್ಯೋಧನೋರಸ್ಸ್ಥಳಾವಸಥಂ ದ್ರೋಣನದೀಜ ಕರ್ಣ ಭುಜವೀರ್ಯಾವೇಷ್ಟಿತಂ ಮಾಡೆ ಸಂತಸದಿರ್ದೆಂ (ಪಂಪಭಾ. ೧೩–೧೦೦). [ಸಂ.]

**ಆವೇಷ್ಟಿಸು** (ಕ್ರಿ). ಸುತ್ತುಗಟ್ಟಿ ನಿಲ್ಲು; ಆವರಿಸು; ಬಳಸಿ ನಿಲ್ಲು: ಭೂವರಂ ಹರಿಸಹಿತ ಪತ್ನಿಯಂ ಕೂಡಿಕೊಂಡಾವೇಷ್ಟಿಸಿದ ಸಕಲ ಬಾ[ಂಧ]ವರ ಗಡಣದಿಂ ಪಾವಕನ ಮುಂದೆ ಕುಳ್ಳಿರ್ದನು (ಜೈಮಿಭಾ. ೩೪–೧೯) [ಆವೇಷ್ಟನ + – ಇಸು₃]

**ಆವೊಂ** 'ಆವುದು' ಪರಾ.

**ಆವೊತ್ತು** 'ಆಪೊಟ್ಟು' ನೋ.

**ಆವೊನ್** 'ಆವುದು' ಪರಾ.

**ಆವೋಡು** (ನಾ). ಆಳವಾದ ನೀರಿನೊಳಗೆ ಬಿದ್ದುಹೋ[ದ] ಸಾಮಾನುಗಳನ್ನು ಮೇಲಕ್ಕೆ ತೆಗೆಯಲು ಬಳಸುವ ಕೊಕ್ಕೆಯು[ಳ್ಳ] ಒಂದು ಬಗೆಯ ಸಾಧನ; ಪಾತಾಳಗರಡಿ; ಪಾತಾಳ ಭೈ[ರವಿ] (ಸ್ಯಾಂಡರ್). [?]

**ಆವ್ಯಾನ** (ಗು). ಆವೃತವಾದ; ವ್ಯಾಪಿಸಲ್ಪಟ್ಟ: ನೀನಪ್ಪುದನಣ[ಮ]ಯುದೆ ದಾನವ ಮಾನವ ಸುರೇಂದ್ರ ಮಣಿಮಕುಟತಟಾವ್ಯಾ[ನ] ಪದ[ಂ]ಗಾ ನೆಗ[ಟ್ಟ]ದನಾನೇ[ತ]ಱೊಳೆಂತು ನೀಗುವೆಂ ನೀಂ ಬೆಸ[ಸು] (ಪಂಪಭಾ. ೮–೨೫). [ಸಂ.]

**ಆಶಂಕಿತ** (ಗು). ಶಂಕೆಗೊಂಡ; ಸಂದೇಹಕ್ಕೆ ಸಿಕ್ಕಿದ. 'ಆಶಂಕಿತಹೃದಯ' ಪರಾ. [ಸಂ.]

**ಆಶಂಕಿತಹೃದಯ** (ನಾ). ಶಂಕೆಗೆ ಗುರಿಯಾದವನು; ಸಂದೇ[ಹ]ಗೊಂಡ ಮನಸ್ಸುಳ್ಳವನು: ಅಂತು ಕಂಡು ಭೋಂಕೆನಲಾಶಂ[ಕಿತ]ಹೃದಯನಾಗಿ (ಕಾದಂಉ. ೫೪೨). [ಆಶಂಕಿತ + ಹೃದಯ]

**ಆಶಂಕೆ** (ನಾ). ೧. ಸಂದೇಹ; ಸಂಶಯ: ಬಿದಿ ಸೇತುವಂ ಸಮೆದ[ಪ]ಬಾಶಂಕೆಯಂ ಮಾಡುಗುಂ (ಶಾಂತಿಪು. ೯–೧೫೦); ಈ ದುಃಖಾಂ[ತ] ಸಂಬಂಧವಾಗಿ ಗ್ರಂಥಕರ್ತನು ಒಂದು ಆಶಂಕೆಯನ್ನು ಎತ್ತಿ ಹೀಗೆ ಸ[ಮಾ]ಧಾನ ಹೇಳಿದ್ದಾನೆ (ಬಂಕಿಮ. ೧೬೭). ೨. ಭಯ; ಆತಂಕ: "ಆತಂ[ಕಃ] ಭಯಂ, ಆಶಂಕಾ, ದರಃ, ತ್ರಾಸಃ, ಸಾಧ್ವಸಂ — ಈ ೬ ಭಯ[ಂ]" (ಹಲಾಯು. ೧೨೦–೪೦); ಮಗನಿಗೇನಾದುದೋ ಅಳಿದಿಹನೊ [ಉಳಿ]ದಿಹನೊ ಎಂಬುವಾಶಂಕೆಯಿಂ ಕುದಿಯುತಳತೊಡಗಿದಳ್ (ಶ್ರೀರಾ[ಮಾ]. ೬೧–೧೯೩). [ಸಂ. ಆಶಂಕಾ]

**ಆಶಂಕೆಗೊಳ್** (ಕ್ರಿ). ಗಾಬರಿಯಾಗು; ದಿಗಿಲುಪಡು: ತಮತ[ಮ]ಭಯುಗೊಂಡರಾಶಂಕೆಗೊಂಡರ್ (ಶಮದ. ೨೪೫ ಪ್ರಯೋ). [ಆಶಂಕೆ + ಕೊಳ್₁]

**ಆಶಂಸನ** (ನಾ). ೧. ಹಾರೈಸುವುದು; ಕೋರುವುದು. ೨. ಸ[...] ಹೇಳುವುದು; ಉದ್ಘೋಷಿಸುವುದು. [ಸಂ.]

**ಆಶಂಸಾರ್ಥ** (ನಾ). ೧. ಹೇಳಿರುವ ಅರ್ಥ; ಉದ್ಘೋಷಿಸಿ[ರುವ] ಅರ್ಥ. ೨. ಪ್ರಶಂಸೆಮಾಡುವ ಉದ್ದೇಶ. ೩. ಇಚ್ಛಾರ್ಥ. [ಸಂ.]

**ಆಶಂಸಿತೃ** (ನಾ). ಹಾರೈಸುವವನು; ಕೋರುವವನು. [ಸಂ.]

**ಆಶಂಸು** (ನಾ). = ಆಶಂಸಿತೃ. [ಸಂ.]

**ಆಶಂಸೆ** (ನಾ). ೧. ಹಾರೈಕೆ; ಕೋರಿಕೆ; ಬಯಕೆ. ೨. ಘೋಷ[ಣೆ]. 'ಶುಭಾಶಂಸೆ', 'ಹಿತಾಶಂಸೆ' ಪರಾ. [ಸಂ. ಆಶಂಸಾ]

**ಆಶಕ** (ನಾ). ಆಸೆಯನ್ನುಂಟುಮಾಡುವವನು; ಆಸೆಯಿಂ[ದ] ತುಂಬಿದವನು: ಇಷ್ಟವನಱಿಯದೆ ಕಾಬರ ಕಂಡು ನೋಡು[ವ] ಮಾಡುವರ ನೋಡಿ ಮಾಡುವ ಮಾಟ ರಾಟಾಳದ ಕುಂಭದ ಪಾಶ[ದ] ಆಶಕರನೊಲ್ಲೆನೆಂದ (ಮೋಳಿಮಾ. ೩೦–೧೨೬); ರುದ್ರ ದೈವವೆಂ[ದು] ಅರ್ಧನಾರಿಗೆ ಸಿಕ್ಕಿದ ಚಿದ್ರೂಪ ದೈವವೆಂದಡೆ ಹೊದ್ದಿಹುದಕ್ಕೆ ರೂ[...] . . . ಗುರು ನರನಾದ ಲಿಂಗ ಪಾಷಾಣವಾಯಿತ್ತು ಜಂಗಮ ಆಶಕ[...] (ಮೋಳಿಮಾ. ೫೦–೨೦೮). [ಸಂ. ?]

**ಆಶಯ** (ನಾ). **೧.** ಮನಸ್ಸಿನ ಭಾವ; ಅಭಿಪ್ರಾಯ; ಉದ್ದೇಶ: ಪರಮ ಕವಿಜ್ಯೇಷ್ಠರಾದರ್ ತದೀಯಾಂಘ್ರಿಪಯೋಜಂಗಳ್ ಮದೀಯಾಶಯಮಣಿಭವನಕ್ಕಕ್ಕೆ ಪುಷ್ಪೋಪಹಾರಂ (ಪಂರಾಮಾ. ೧–೨೮); ನೃಪನ ಆಶಯವನಜಿದಾಕೆಯುದರ ಮಧ್ಯದಲಿ ನಿಖಿಲಾಶೆಯಂ ತೀವಲ್ (ಚಬಪು. ೪–೨೩). **೨.** ಮನಸ್ಸು; ಹೃದಯ: ಸಂಶಯರಹಿತಾಶಯ ಸಮೇತರಾನಂದಯುತರ್ ಭಯಭಕ್ತಿವೆರಸು ನುತಿಸಿದರ್ (ರಾಜಶೇ. ೪–೯೯). **೩.** ಆಧಾರ; ಆಶ್ರಯ: "ಆಧಾರದಲ್ಲಿಯುಂ ಆಶಯಮೆಂಬುದು" (ಹಲಾಯು. ೧೩೩–೧೨). **೪.** ಕೋಶ; ಚೀಲ. 'ಅಂಡಾಶಯ', 'ಅನ್ನಾಶಯ', 'ಆಮಾಶಯ' ಪರಾ. **೫.** ಸಂಸ್ಕಾರ: "ಆಶಯವೆಂದರೆ ಪುಣ್ಯಪಾಪಗಳ ಪ್ರವೃತ್ತಿಗೆ ಕಾರಣವಾದ ಸಂಸ್ಕಾರ" (ಹಿಂದಸಾ. ೯೬). **೬.** ನೀರು. **೭.** ಆಸ್ತಿ; ಸ್ವತ್ತು. **೮.** ಹಲಸಿನ ಮರ. **೯.** ಲೋಭಿ; ಜಿಪುಣ: "ಅಭಿಪ್ರಾಯಂ ಶಂಬರಮಿಂತಾಶಯಮಕ್ಕು" (ನಾನಾರ. ೯೪). [ಸಂ.]

**ಆಶರ** (ನಾ). **೧.** ರಾಕ್ಷಸ. **೨.** ಅಗ್ನಿ. [ಸಂ.]

**ಆಶಾಂತ** (ನಾ). ದಿಕ್ಕಿನ ಕೊನೆ; ದಿಗಂತ: ವಿಶದೀಕೃತಾಶಾಂತದೊಳ್ ಭಾವಿ ಜಿನಜನನಿ ಸತಿ ಪವಡಿಸಿ ನಿಶಾಂತದೊಳ್ (ಆದಿಪು. ೭–೨೭ರ); ಮಾರಿಟ್ಟಾಶಾಂತಮಂ ಬಳ್ವದಲಳೆದು ದಧಿವ್ರಾತಮಂ ತೂಗೆ (ಎಕ. VII, ಶಿವಮೊ. ೬೪–೮೭; 1172). [ಸಂ. (ಆಶಾ + ಅಂತ₂)]

**ಆಶಾಂತರಾಲ,** ಆಶಾಂತರಾಳ (ನಾ). ದಿಕ್ಕುಗಳ ಮಧ್ಯಭಾಗ,—ಪ್ರದೇಶ: ಬಿರಿದುವೆ ಜಾತೀಯೂಥಿಕಾಕೇತಕೀಸಂಕುಲಮವಿರಲಗಂಧಾಮೋದಿತಾಶಾಂತರಾಲಂ (ಕಾವ್ಯಾವ. ೬೫೫). **ಆಶಾಂತರಾಳ**: ಮಂಗಳಭೇರೀರವಮಾಶಾಂತರಾಳಮಂ ತೀವುವಿನಂ (ಮಲ್ಲಿಪು. ೯–೧).
[ಸಂ. (ಆಶಾ + ಅಂತರಾಲ)]

**ಆಶಾಂತರಾಳ** 'ಆಶಾಂತರಾಲ' ನೋ.

**ಆಶಾಂತ್ಯ** (ನಾ). = ಆಶಾಂತ: ನಿನ್ನ ಯಶಮಂ ಶ್ರೀಕಾಂತೆಯಾಶಾಂತ್ಯದೊಳ್ ನೆಲಸಿರ್ದುನ್ಮದದಂತಿ ದಂತಯುಗದೊಳ್ ತನ್ನರ್ತ್ತಿಯಿಂ ಕಟ್ಟಿದುಯ್ಯಲನಾನಂದದೊಳೇಱಿ ದಿಗ್ವನಿತೆಯರ್ ತೂಗಲ್ಕೆ (ಎಕ. VIII, ಸಾಗರ. ೧೮೯–೩೯; 1042). [ಸಂ. (ಆಶಾ + ಅಂತ್ಯ)]

**ಆಶಾಂಬರ** (ನಾ). **೧.** ದಿಕ್ಕುಗಳು ಮತ್ತು ಆಕಾಶ: ಸುರವಂದಿವ್ರಜಜಯ ಜೀಯರವಂ ಪರಿಪೂರಿಸಿದತ್ತಾಶಾಂಬರವಂ (ಚಂದ್ರಪು. ೪–೬೩ ರ). **೨.** ದಿಗಂಬರ; ಜಿನ: ಆಂದರ್ಕಕೀರ್ತಿಯುಮಮಿತತೇಜನಪ್ಪನಗೆ ತನ್ನ ರಾಜ್ಯಮನಿತ್ತಭಿನಂದನ ಮುನಿಪ್ರಧಾನಪಾರ್ಶ್ವದೊಳಾಶಾಂಬರನಾದೊಂ (ಶಾಂತಿಪು. ೫–೭೩ ವ). **೩.** ಶಿವ. [ಸಂ. (ಆಶಾ + ಅಂಬರ)]

**ಆಶಾಕರಿ** (ನಾ). = ಆಶಾಗಜ **೧.** 'ಆಶಾಕರಿಕಲಭ' ಪರಾ.
[ಸಂ. ಆಶಾಕರಿನ್]

**ಆಶಾಕರಿಕಲಭ** (ನಾ). ದಿಗ್ಗಜದ ಮರಿ: ಅಂತು ಬಲದೇವ ವಾಸುದೇವರ್... ಆಶಾಕರಿಕಲಭ ಸುಕುಮಾರ ರದನಾಂಕುರದ್ವಿತಯಮುಮೆನೆ ಸೌಂದರ್ಯಕ್ಕೆ ಕುಲನಿಲಯಮುಂ ... ಆಗಿ (ಶಾಂತಿಪು. ೧–೮೦ ವ).
[ಆಶಾಕರಿ + ಕಲಭ]

**ಆಶಾಗಜ** (ನಾ). **೧.** ದಿಗ್ಗಜ: ಆಶಾಗಜವರ್ತಿಕೀರ್ತಿಯೆನಲಾರ್ ಜಗದೇವನವೋಲ್ ಯಶಸ್ವಿಗಳ್ (ಎಕ. VII, ಶಿಕಾರಿ. ೧೦೩–೨೨; 1149). **೨.** ಎಂಟು ಎಂಬ ಸಂಖ್ಯೆಗೆ ಒಂದು ಸಂಕೇತ: ಭೂತ ಗಣೇಶಂ ಭೂತ ಶರಾಶಾಗಜದೊಳ್ ಯತಿಗಣಮೆಸೆದಿರೆ . . . ಕ್ರೌಂಚಪದಂ (ಛಂದೋಂಬು. ೨–೧೪೪). [ಸಂ. (ಆಶಾ + ಗಜ)]

**ಆಶಾಚಕ್ರ** (ನಾ). ದಿಕ್ಕುಗಳ ಮಂಡಲ: ದೇವತೂರ್ಯಸ್ವರಮಾಶಾಚಕ್ರದೊಳ್ ಬಳ್ವಳ ಬಳೆದಿರೆ (ಆದಿಪು. ೮–೬೭). [ಸಂ. (ಆಶಾ + ಚಕ್ರ)]

**ಆಶಾಜನಕ** (ಗು). ಆಶೆಯನ್ನು ಉಂಟುಮಾಡುವ; ಭರವಸೆಯನ್ನು ಕೊಡುವ: ನಿರಾಶರಾದವರಿಗೆ ನಿಮ್ಮ ಮಾತು ಆಶಾಜನಕವಾಗಿದೆ (ರೂಢಿ).
[ಸಂ. (ಆಶಾ + ಜನಕ)]

**ಆಶಾಡ** (ನಾ). ಒಂದು ಹೆಸರು (?): ಮದ್ದಿಕೆಱಿಯ ಆಶಾಡದ ನಾಗರಸರ ಮಗ ನಿಡುಗಲ್ಲು ಕರಣಿಕರ ರೇಚಪ್ಪಗಳ (ಎಕ. X, ಬಾಗೇಪ. ೪೩–೩; 1774 ?). [?]

**ಆಶಾತ** (ಗು). ಮಸೆದ; ಚೆನ್ನಾಗಿ ಸಾಣೆಹಿಡಿದ; ಹರಿತವಾದ: ಉನ್ಮತ್ತರಿಪುಬ್ರಾತಾಸುವಾತಾಶನದೆ ತಣಿದುದಾಶಾತಖಳ್ಗಾಹಿ . . . ಎನಿಪಂ ಬಿಜ್ಜಲಂ ಕ್ಷೋಣಿಪಾಳಂ (ಎಕ. XI, ದಾವಣ. ೩೫–೨೩; 1160). [ಸಂ.]

**ಆಶಾದಂತಿ** (ನಾ). = ಆಶಾಗಜ **೧**: ಆಶಾದಂತಿ ಬಾಯ್ಬಿಟ್ಟುದುರ್ಕಳಿದರ್ ದಿಗ್ವರರಂಜಿದರ್ ದಿವಿಜರ್ (ರಾಜಶೇ. ೫–೩೬).
[ಸಂ. (ಆಶಾ + ದಂತಿ)]

**ಆಶಾದೇಶ** (ನಾ). ದಿಕ್ಕುಗಳ ಪ್ರದೇಶ: ಆಶೀರ್ನಿನಾದವಾಶಾದೇಶಮನೆಯ್ದಿದುದು ಮಂಗಲಾನಕರವಮಾಕಾಶಮನಡರ್ದುದು (ಪಂರಾಮಾ. ೧೪–೭೨). [ಸಂ. (ಆಶಾ + ದೇಶ)]

**ಆಶಾಧಿಪ** (ನಾ). ದಿಕ್ಕಿನ ಒಡೆಯ; ದಿಕ್ಪಾಲಕ: ದೇಶಾಧಿಪರೀಪರಿಯೊಱಗುವರೆ ಆಶಾಧಿಪರಳುಕದೆ ಬೀಳುವರೆ (ಜಚಶಾ. ೧೨–೩೦ ರ).
[ಸಂ. (ಆಶಾ + ಅಧಿಪ)]

**ಆಶಾಧೀನ** (ಗು). **೧.** ಆಸೆಗೆ ಅಧೀನವಾದ. **೨.** ದಿಕ್ಕುಗಳನ್ನು ಮುಚ್ಚಿದ; ದಿಕ್ಕುಗಳಿಗೆ ಒಳಪಟ್ಟ: ಅತಿಧವಳಮಾಯ್ತು ಗುಣಸಂತತಿಯೊಡನೆ ಯಶೋವಿತಾನಮಾಶಾಧೀನಂ (ಕವಿರಾ. ೩–೧೫೬).
[ಸಂ. (ಆಶಾ + ಅಧೀನ)]

**ಆಶಾಪತಿ** (ನಾ). = ಆಶಾಧಿಪ: ಸುರಪತಿ ಶಿಖಿ ಯಮ ನೈರುತಿ ವರುಣ ಮರುದ್ಧನದ ಪುರಹರಾಶಾಪತಿಗಳ್ (ಜಾತತಿ. ೨–೧).
[ಸಂ. (ಆಶಾ + ಪತಿ₂)]

**ಆಶಾಭಂಗ** (ನಾ). ಇಟ್ಟುಕೊಂಡ ಆಸೆಗೆ ಲೋಪವಾಗುವುದು; ನಿರೀಕ್ಷೆಗೆ ವಿರುದ್ಧವಾಗಿ ನಡೆಯುವುದು: ಈ ರೀತಿ ನೀವು ಆಶಾಭಂಗ ಮಾಡುವಿರೆಂದು ನಾನು ನಂಬಿದ್ದಿಲ್ಲ (ರೂಢಿ).
[ಸಂ. (ಆಶಾ + ಭಂಗ)]

**ಆಶಾರದನಿ** (ನಾ). = ಆಶಾಗಜ **೧.** 'ಆಶಾರದನೀಂದ್ರ' ಪರಾ.
[ಸಂ. (ಆಶಾ + ರದನಿ)]

**ಆಶಾರದನೀಂದ್ರ** (ನಾ). ಶ್ರೇಷ್ಠವಾದ ದಿಗ್ಗಜ; ದಿಗ್ಗಜೇಂದ್ರ: ಮೇರುಗಿರೀಂದ್ರದಂತೆ ವಿಬುಧಾಶ್ರಯನೀಶ್ವರನನ್ತುಮೇಶನಾಶಾರದನೀಂದ್ರನನ್ತಧಿಕದಾನಂ . . . ಆಹಮಲ್ಲವಲ್ಲಭ (ಎಕ. VII, ಶಿಕಾರಿ. ೧೧೮–೬; 1054). [ಸಂ. (ಆಶಾರದನಿ + ಇಂದ್ರ)]

**ಆಶಾರುಚಿ** (ನಾ). **೧.** ದಿಕ್ಕುಗಳಲ್ಲಿ ಹರಡುವ ಸ್ವಭಾವವುಳ್ಳದ್ದು,—ಕಾಂತಿಯುಳ್ಳದ್ದು. **೨.** ಆಸೆಯನ್ನು ಹೊಂದಿದವನು; ಅಭಿರುಚಿಯನ್ನು ಉಳ್ಳವನು: **೧, ೨.** ತನುಮನಸ್ಸಂತೋಷ ಸಂಪಾದಿಯಾಗಿಯುಮಾಶಾರುಚಿಯಾಗಿಯುಂ . . . ಇಂದುದ್ಯುತಿ ಪದ್ಮಮಂ ಕೊರಗಿಪಂತೆ (ಶಾಂತಿಪು. ೨–೨೩). [ಸಂ. (ಆಶಾ + ರುಚಿ)]

**ಆಶಾವರ್ಗ** (ನಾ). ಆಸೆಗಳ ಗುಂಪು,—ಸಮೂಹ: ಪ್ರಸನ್ನೀಕೃತ ಗುರುವರ್ಗನುಂ ತರಳೀಕೃತಾಶಾವರ್ಗನುಂ ದೂರೀಕೃತಾರಿಷಡ್ವರ್ಗನುಂ . . . ಆಗಿ (ಚಂದ್ರಪು. ೪–೨೮ ವ). [ಸಂ. (ಆಶಾ + ವರ್ಗ)]

**ಆಶಾವಸನ** (ನಾ). ದಿಗಂಬರ; ಜಿನ: ಶುಭಭಾವನೆಯುಳ್ಳೊಡದುವೆ ಮಾಡುಗುಮನೇಕಮಿನ್ನುಱಿದುವೇವುದಾಶಾವಸನಾ (ಜಿನಾಲೆ. ೨೦).
[ಸಂ. (ಆಶಾ + ವಸನ)]

**ಆಶಾವಳಯಿತ** (ಗು). ದಿಕ್ಕುಗಳಿಂದ ಸುತ್ತುವರಿದ: ಆಶಾವಳಯಿತ ಲೋಕಾಕಾಶಮಿದೇನತಿವಿಶಾಲಮೆ (ಕವಿರಾ. ೩–೯೪).
[ಸಂ. (ಆಶಾ + ವಳಯಿತ ( = ವಲಯಿತ)]

**ಆಶಾವಾದ** (ನಾ). ಯಾವುದರಲ್ಲಿಯೂ ಒಳ್ಳೆಯದಾಗುತ್ತದೆಂಬ ಭರವಸೆಯನ್ನು ತಾಳುವುದು : ತಳಬುಡವಿಲ್ಲದ ಆಶಾವಾದ (ನವ್ಯಕಾ. ೧೧). [ಸಂ. (ಆಶಾ + ವಾದ$_3$)]

**ಆಶಾವಾದಿ** (ನಾ). ಆಶಾವಾದವನ್ನು ಸಮರ್ಥಿಸುವವನು; ಯಾವುದರಲ್ಲೂ ಒಳ್ಳೆಯದಾಗುತ್ತದೆಂಬ ಭರವಸೆಯನ್ನು ಹೊಂದಿದವನು: ನಾನು ಮಾತ್ರ ಆಶಾವಾದಿಯಾಗಿಯೇ ಜೀವಿಸತೊಡಗಿದ್ದೆನು (ಹೇಮಂತ. ೨೪೧). [ಸಂ. ಆಶಾವಾದಿನ್]

**ಆಶಾವಾರಣ** (ನಾ). = ಆಶಾಗಜ **೧** : ಆಶಾವಾರಣಕ್ಕಂ ಗ್ರಾಮಸೂಕರವಿತತಿ ಸರಿಯೇ (ಬಸವು. ೫೫–೨೨). [ಸಂ. (ಆಶಾ + ವಾರಣ)]

**ಆಶಾವೇಶ** (ನಾ). ಆಸೆಯ ಉತ್ಕಟತೆ; ಆಸೆಯಿಂದ ಉಂಟಾಗುವ ಉದ್ವೇಗ; ಪರವಶತೆ : (ಆಶಾವೇಶದಿಂದ) ಓಹೋ ! (ಮಂತ್ರಶ. ೧೪–೩). [ಸಂ. (ಆಶಾ + ಆವೇಶ)]

**ಆಶಾಷ್ಟಕ** (ನಾ). ಎಂಟು ದಿಕ್ಕು, —ದೆಸೆ (ದಕ. ೬).
[ಸಂ. (ಆಶಾ + ಅಷ್ಟಕ)]

**ಆಶಾಸನ** (ನಾ). ಕೋರುವುದು; ಹಾರೈಕೆ; ಹರಸುವುದು.'ಮಂಗಳಾಶಾಸನ' ಪರಾ. [ಸಂ.]

**ಆಶಾಳಿ** (ನಾ). = ಆಶಾಚಕ್ರ : ಅಮಳಯಶೋರೋಚಿಸ್ಸಮಾವೃತಾಶಾಳಿಯೆನಿಸಿದಂ ರೆಬ್ಬರಸಂ [ಪಾಠಾಂ. ರೇಚರಸಂ] (ಎಕ. VII, ಶಿಕಾ. ೧೨೩–೩೭ ; 1158). [< ಸಂ. ಆಶಾಲಿ]

**ಆಶಿ$_1$** (ನಾ). ಹಾವಿನ ಹಲ್ಲು: "ಆಶೀ, ದಂಷ್ಟ್ರಾ –ಈ ೨ ಹಾವಿನ ದಾಡೆ" (ಹಲಾಯು. ೧೦೭–೨೦). [ಸಂ. ಆಶೀ]

**ಆಶಿ$_2$** (ನಾ). [ಕಾವ್ಯಮೀ] ಒಂದು ಅರ್ಥಾಲಂಕಾರ: ಶುಭಪ್ರಾಯಾರ್ಥಾಶಂಸಾಭಿಪ್ರಾಯಮಲಂಕಾರಮಾಶಿಯೆಂಬರ್ ಕೆಲಬರ್ (ಕಾವ್ಯಾವ. ೭೭೨). ಉದಾ : ನೆಲೆಗೊಳ್ಗೆ ನಿಜಭುಜಾಸಿಯೊಳೊಲಿದು ಜಯಾಂಗನೆ ವಿರೋಧಿವಂಶಾವಳಿಯಂ ನೆಲೆಗಿಡಿಸಿ ನಿನ್ನ ತೇಜೋಜ್ವಲನಂ ತಳ್ತಬ್ಬಿಕೊಳ್ಗೆ ವಿಕ್ರಮತುಂಗಾ (ಕಾವ್ಯಾವ. ೭೭೫). [ಸಂ. ಆಶಿಸ್]

**ಆಶಿ$_3$** (ನಾ). ತಿನ್ನುವವನು. 'ಬಹ್ವಾಶಿ' ಪರಾ. [ಸಂ. ಆಶಿನ್]

**ಆಶಿತ$_1$** (ಗು). ತಿನ್ನಲ್ಪಟ್ಟ; ತಿಂದ (೬). [ಸಂ.]

**ಆಶಿತ$_2$** (ನಾ). ಬಯಸಿದ್ದು; ಇಚ್ಛೆಪಟ್ಟದ್ದು : ತೆಂಗಿನಕಾಯಿ ಕರ್ಪೂರಗಳನ್ನು ನಿವೇದಿಸಿ ತನ್ನ ಆಶಿತವನ್ನು ಆತ ಪಡೆದುಕೊಳ್ಳುತ್ತಿದ್ದ (ಧೂಮಮ. ೭೨); ದೇವತೆಗಳಾಶಿತಮೊ? ಮತಚಿದಿಚ್ಛೆಯೊ? ವಿಧಿಯೊ? (ಶ್ರೀರಾಮಾ. ೮–೨೦೧). [ಸಂ. ಆಶಾ]

**ಆಶಿತಂಗವೀನ** (ನಾ). "ಮೊದಲು ಹಸುಗಳನ್ನು ಮೇಯಿಸಿದ ಸ್ಥಳ" (ಅಮರ. ಟೀಕೆ). [ಸಂ. (ಆಶಿತ + ಗವೀನ)]

**ಆಶಿರ** (ಗು). **೧.** ಹೊಟ್ಟೆಬಾಕನಾದ. (ನಾ). **೨.** ಅಗ್ನಿ. **೩.** ಸೂರ್ಯ. **೪.** ರಾಕ್ಷಸ. [ಸಂ.]

**ಆಶಿಷ** (ನಾ). ಆಶೀರ್ವಾದ; ಹರಕೆ. 'ಆಶಿಷಂಬೀಱು' ಪರಾ.
[ಸಂ. ಆಶಿಸ್]

**ಆಶಿಷಂಬೀಱು** (ಕ್ರಿ). ಆಶೀರ್ವಾದಮಾಡು ; ಹರಸು : ಆತಂ ಪೂಜಿಸಿ ನೀಡೆ ದಕ್ಷಿಣೆಗಳಂ ಕೊಂಡಾಶಿಷಂಬೀಱುವರ್ (ಮೈಸೂಮೆ. ೬–೧೪೪).
[ಆಶಿಷ + ಬೀಱು]

**ಆಶಿಸ, ಆಶಿಸ್ಸು** (ನಾ). = ಆಶಿಷ : ಮುಂಗೆಟ್ಟ ಜೋಡಿ ಮರಣವ ನೋಡಲಿಲ್ಲ ಕಂಗೆಟ್ಟು ಆಶಿಸವ ಬೇಡಲಿಲ್ಲ (ಸೂರ್ಯಸಾ. ೭೮–೧೮). **ಆಶಿಸ್ಸು** : "... ನಿಮ್ಮ ಆಶಿಸ್ಸಿನಿಂದ ಅದಕ್ಕೂ ಹೆಚ್ಚಿನ ಒಳ್ಳೆಯದು ಆಗಿದೆ" ಎಂದನು (ಸಣ್ಣಕ. VII, ೨೫೧). [ಸಂ. ಆಶಿಸ್]

**ಆಶಿಸು** (ಕ್ರಿ). **೧.** ಬಯಸು ; ಹಾರೈಸು ; ಕೋರು : ಕೋಡಿಗಾಶಿಸಿ ಕಾಡಿಬೇಡುವ ಪೀಡೆ ವೇಶ್ಯಾಮಾತೆ ದಿಟ್ಟಸಿ ನೋಡಿ (ಬಸವು. ೪೨–೬); ನನ್ನ ಜತೆಯಲ್ಲಿರಲು ಆಶಿಸುವವರು ಚೆನ್ನಾಗಿ ಕುದುರೆ ಸವಾರಿ ... ಕಲಿಯಬೇಕಾಗುವುದು (ಝಾರಾಣಿ. ೬೧). **೨.** ಬಯಸುವಂತೆ ಮಾಡು: ಸರ್ವಸಂಗಪರಿತ್ಯಾಗಿ ಎಂದೊಡೆ ಭೋಗಕ್ಕೆ ಮಱುಗಿಸುವೆ ಪಾಕನೇಮಿ ಎಂದೊಡೆ ಷಡ್ರಸಕ್ಕೆ ಆಶಿಸುವೆ ಮೌನವ್ರತಿ ಎಂದೊಡೆ ಸನ್ನೆಯಲ್ಲಿ ಬೇಡಿಸುವೆ ... ದೇವಾ ಎನ್ನಳವಾಡಿ ಕಾಡುವೆ (ಸಮಾವ. ೪೪).
[ಆಶೆ + –ಇಸು$_3$]

**ಆಶಿಸ್ಸು** 'ಆಶಿಸ' ನೋ.

**ಆಶೀರಲಂಕಾರ** (ನಾ). [ಕಾವ್ಯಮೀ] ಒಂದು ಬಗೆಯ ಅರ್ಥಾಲಂಕಾರ: ಆಶೀರಲಂಕಾರ ಲಕ್ಷಣಂ (ಕವಿರಾ. ೩–೨೦೭). [ಸಂ.]

**ಆಶೀರ್ನಿನಾದ** (ನಾ). ಹರಕೆಮಾಡುವ ಧ್ವನಿ, —ಶಬ್ದ : ಆಶೀರ್ನಿನಾದವಾಶಾದೇಶಮನೆಯ್ದಿದುದು (ಪಂರಾಮಾ. ೧೪–೭೨). [ಸಂ.]

**ಆಶೀರ್ವಚ** (ನಾ). ಹರಕೆಯ ಮಾತು ; ಆಶೀರ್ವಾದದ ನುಡಿ: "ಆಶೀರ್ವಚಂ ... ಸ್ವಸ್ತಿಯೆನಿಕ್ಕು" (ನಾನಾರ. ೧೩೯). [ಸಂ.]

**ಆಶೀರ್ವಚನ** (ನಾ). **೧.** ಆಶೀರ್ವಾದ: ತಮ್ಮ ಆಶೀರ್ವಚನದ ರಕ್ಷೆಯಿತ್ತರು (ಸವಶಿ. XV ಪ್ರಸ್ತಾ). **೨.** [ಕಾವ್ಯಮೀ] ಒಂದು ಅರ್ಥಾಲಂಕಾರ : ಆಶೀರ್ವಚನಮುದಭಿಲಷಿತಾಶಂಸನವಚನಮುದೆಗ ನಿನ್ನಂ ಪೊರೆಗಿಂತಾ ಶಿವಂ (ಉದಯಾ. ೧೪). [ಸಂ.]

**ಆಶೀರ್ವದಿಸು** (ಕ್ರಿ). ಹರಸು ; ಆಶೀರ್ವಾದಮಾಡು : ಹಸೆಯಮೇಲೆ ಕೂತಿರುವ ಕೃಷ್ಣನನ್ನು ಆಶೀರ್ವದಿಸು (ಮೊಗ್ಗು. ೧೭) ; ವಧೂವರರನ್ನು ಆಶೀರ್ವದಿಸಿದರು (ರೂಢಿ). [ಆಶೀರ್ವಾದ + –ಇಸು$_3$]

**ಆಶೀರ್ವಾದ** (ನಾ). ಹರಕೆ: ಅಂತು ಪೊಡಮಟ್ಟು ಪರಮಾಶೀರ್ವಾದಂಗಳನಾಂತು (ಕಾದಂಪೂ. ೫೦೩) ; ಆತನಂತಾಶೀರ್ವಾದಮಂ ಕೊಡಲೊಲ್ಲದಗಲಿರಲು (ಬಸವು. ೪೭–೭).

**ಆಶೀರ್ವಾದಮಾಡು** = ಹರಸು : ಅರಸು ಓಲಗದಲ್ಲಿ ಕುಳಿತಿರುವಾಗ ಒಬ್ಬ ಬಡಬ್ರಾಹ್ಮಣನು ಬಂದು ಆಶೀರ್ವಾದಮಾಡಿ (ಮುಂಬಯಿ. ೪–೧೨೭). [ಸಂ.]

**ಆಶೀರ್ವಾದಂಗೊಡು** (ಕ್ರಿ). ಹರಸು ; ಆಶೀರ್ವದಿಸು : ಮುಕ್ತಿಶ್ರೀ ದೊರೆಕೊಳ್ಗೆಂದಾಶೀರ್ವಾದಂಗೊಟ್ಟಂ ಸರಸ್ವತೀಮುಖತಿಲಕಂ (ಸುಕುಮಾ. ೭–೧). [ಆಶೀರ್ವಾದ + ಕೊಡು]

**ಆಶೀರ್ವಾದಪರ** (ನಾ). ಮಂಗಳವನ್ನು ಕೋರುವುದೇ ಉದ್ದೇಶವಾಗಿ ಉಳ್ಳವನು ; ಆಶೀರ್ವಾದದಲ್ಲಿ ಆಸಕ್ತನಾದವನು : ವೇದವಿದಂ ಕಾಲತ್ರಯವೇದಿ ಬಹುಶ್ರುತನಥರ್ವಕುಶಲಂ ಶುಭವಂಶೋದಯನುತ್ತಮನಾಶೀರ್ವಾದಪರಂ ಪರಹಿತಂ ಪುರೋಹಿತನಕ್ಕುಂ (ಶಮದ. ೧೦೫ ಪ್ರಯೋ). [ಸಂ. (ಆಶೀರ್ವಾದ + ಪರ)]

**ಆಶೀರ್ವಾದಪ್ರಿಯ** (ನಾ). **೧.** ಇತರರಿಗೆ ಶುಭವನ್ನು ಕೋರುವುದರಲ್ಲಿ ಪ್ರೀತಿಯುಳ್ಳವನು. **೨.** ಹಿರಿಯರ ಆಶೀರ್ವಾದವನ್ನು ಪಡೆಯುವುದರಲ್ಲಿ ಪ್ರೀತಿಯುಳ್ಳವನು : ವೇದವಿದಂ ಸಕಳ ಕಳಾವೇದಿ ಸಮಸ್ತಾಧಿಕಾರಪರಿಚಿತನಾಶೀರ್ವಾದಪ್ರಿಯಂ ... ಉದಾತ್ತಯಶಂ (ಸುಕುಮಾ. ೨–೧೨). [ಆಶೀರ್ವಾದ + ಪ್ರಿಯ]

**ಆಶೀರ್ವಾದಸೇಸೆ** (ನಾ). ಹರಕೆಯಿಂದ ಕೂಡಿದ ಅಕ್ಷತೆ : ಮುನಿಗಳವನೀಶಂಗೆ ಮಂಗಳಾಶೀರ್ವಾದ ಸೇಸೆಯಂ ಸೂಸಲು (ಹಚಕಾ. ೩–೩).
[ಆಶೀರ್ವಾದ + ಸೇಸೆ]

**ಆಶೀರ್ವಿಷ** (ನಾ). ಹಲ್ಲಿನಲ್ಲಿ ವಿಷವುಳ್ಳ ಪ್ರಾಣಿ; ಹಾವು. [ಸಂ.]

**ಆಶೀವಿಷ** (ನಾ). = ಆಶೀರ್ವಿಷ: "ಆಶೀವಿಷಃ, ದೀರ್ಘಪೃಷ್ಠಃ – ಈ ೨ ನಿಮಿರ್ದ ಪಾ[ಹಾ]ವು" (ಹಲಾಯು. ೧೦೫–೧೯); ಆಶೀವಿಷವಿಷಮೋರಗರಾಶಿಯನೊಳಕೆಯ್ದು ವಿಪುಳಪಾತಾಳ ನಿಪಾಸಾಶಂಕೆಯನೀವುದು ನಿಚಿತಾಶೇಷಾಸ್ತ್ರಾಳಿ ಜಯನಶಾಲಿಕೆಯದಜಿರೊಳ್ (ಚಂದ್ರಪ್ರ. ೧–೧೪೯). [ಸಂ.]

**ಆಶೀಸ್ತವ** (ನಾ). ಮಂಗಳವನ್ನು ಕೋರುವ ಸ್ತೋತ್ರ: ಸುರಗೀತಂ ಸುರದುಂದುಭಿಧ್ವನಿ . . . ಸುರಜಯಸ್ತೋತ್ರಂ ಸುರಾಶೀಸ್ತವಂ . . . ತರೆ ಚಿತ್ತೋತ್ಸಾಹಮಂ ತಾಳ್ದಿದಂ (ಆದಿಪು. ೧೩–೯೨). [ಸಂ. ಆಶೀಸ್ಸ್ತವ]

**ಆಶು**$_1$ (ನಾ). **೧.** ವೇಗ; ತ್ವರೆ: ತಾಂ ಸಮರಕ್ಕೆ ಆಶುವಿಂ ಪೊಜಮಡುವ ದುಂದುಭಿಯ ಸನ್ನೆಯ ಮಹಾಶಬ್ದಮಂ ಕೇಳ್ದು (ಜೈಮಿಭಾ. ೧೦–೪೬). **೨.** (ಬೇಗನೆ ಬೆಳೆಯುವ) ಒಂದು ಬಗೆಯ ಬತ್ತ; "ಕೆಂಬತ್ತ" (ಅಮರ. ಟೀಕೆ). [ಸಂ.]

**ಆಶು**$_2$ (ಅ). ಬೇಗನೆ; ಜಾಗ್ರತೆ; ವಿಲಂಬವಿಲ್ಲದೆ: "ದ್ರಾಕ್, ಚಪಳಂ, ಲಘು . . . ಆಶು, ಶೀಘ್ರಂ . . . ಝುಟಿತಿ – ಈ ೧೬ ಶೀಘ್ರಂ" (ಹಲಾಯು. ೧೧೬–೧೨); ಪ್ರಚಂಡಲಯತಾಂಡವಕ್ಷುಭಿತಯಾಶು ಯಸ್ಯಾ ನ ಯಾ (ಪಂಪಭಾ. ೪–೨೭). [ಸಂ.]

**ಆಶುಕವಿ** (ನಾ). ಸಮಯಸ್ಫೂರ್ತಿಯಿಂದ ಕವನವನ್ನು ರಚಿಸಬಲ್ಲ ಕವಿ: ಶಾಸನಮನಿದಂ ಬರೆದನಾಶುಕವಿನಿಟಿಳಾಕ್ಷಂ (ಎಕ. VII, ಶಿಕಾರಿ. ೯೮–೫೫; 1103); ಹಗಲುವೇಷಧಾರಿಗಳೂ ನಟನಟಿಯರೂ . . . ಆಶುಕವಿಗಳೂ . . . ಬಂದು ಕಿಕ್ಕಿರಿದರು (ಶಾಂತಲಾ. ೧೦೦). [ಆಶು$_1$+ ಕವಿ$_2$]

**ಆಶುಕವಿತೆ** (ನಾ). ಸಮಯಸ್ಫೂರ್ತಿಯಿಂದ ರಚಿಸಿದ ಕವಿತ್ವ, — ಕವನ: ಇವಳ ಆಶುಕವಿತೆಗೆ ಕಾರ್ಮಿಕರು ಕರತಾಡನಮಾಡುತ್ತಾರೆ (ಚಿಂದಜೀ. ೧೦೫). [ಆಶು$_1$ + ಕವಿತೆ]

**ಆಶುಕವಿತ್ವ** (ನಾ). = ಆಶುಕವಿತೆ: ಈ ಸಮಸ್ಯಾಪೂರ್ತಿಯ ಪದ್ಯಗಳು ಕಂತಿಯ ಆಶುಕವಿತ್ವಶಕ್ತಿಯ ಉದಾಹರಣೆಯಾಗಿವೆ(ಕರ್ಣಾಕ.೫೨). [ಆಶು$_1$ + ಕವಿತ್ವ]

**ಆಶುಗ** (ಗು). **೧.** ಬೇಗ ಚಲಿಸುವ; ಜಾಗ್ರತೆಯಾಗಿ ಹೋಗುವ. (ನಾ). **೨.** ಗಾಳಿ: ಒಗೆಯುತ್ತಿರ್ಪಿನಮಚ್ಯುತಂ ಸಕಲಸಂತರ್ಗಾಯ್ತು ಸಂತೋಷಮಾಶುಗಮೊಳ್ಪಿಂ ಬಲವಂದು ತೀಡಿತು (ವಿಷ್ಣುಪು. ೫–೧–೧೨೬). **೩.** ಬಾಣ; ಅಂಬು: ಆಶುಗಾಶನನಿಭಾಶುಗಮನಾಶುಗಾಸನದೊಳೋಸರಿಸದೆ ತೊಡರ್ಚಿ ಸಾರ್ಚಿ ತೆಗೆನೆಜಿದು ನಿಂದು (ರಾಜಶೇ. ೬–೯೭ ವ). **೪.** ಸೂರ್ಯ. [ಸಂ.]

**ಆಶುಗತಿ** (ನಾ). ಗಾಳಿ. 'ಆಶುಗತಿಮಿತ್ರ' ಪರಾ. [ಆಶು$_1$ + ಗತಿ]

**ಆಶುಗತಿಮಿತ್ರ** (ನಾ). ವಾಯುವಿನ ಸ್ನೇಹಿತ; ಅಗ್ನಿ: ಧೈರ್ಯಜಿತ ಸುವರ್ಣಭೂಧರ ಸುಪ್ರತಾಪ ಜಿತಾಶು [ಪಾಠಾಂ. ಸು]ಗತಿಮಿತ್ರ ಪೂರ್ಣ ತೇಜೋವಿಜಿತ ದಿನಕರ (ಬಸಪು. ೫ ೧). [ಆಶುಗತಿ + ಮಿತ್ರ]

**ಆಶುಗತ್ವ** (ನಾ). ಶೀಘ್ರತೆ; ತೀವ್ರತೆ: ಅರಿಗಳಸುಪವನನಂ ತಾನಿರದೊಳಕೈದಾಶುಗತ್ವಮಂ ಪ್ರಕಟಿಸಿದತ್ತರರೆ ಶರಮನ್ಯರೊಡನೊಂದಿರೆ ತದ್ಧರ್ಮಂ ಧರಿತ್ರಿಯೊಳ್ ದೊರೆಕೊಳದೇ (ರಾಜಶೇ. ೬–೪೯). [ಸಂ.]

**ಆಶುಗಮನ** (ನಾ). ಬೇಗ ಚಲಿಸುವುದು; ಬಾಣ: ಆಶುಗಾಶನನಿಭಾಶುಗಮನಾಶುಗಾಸನದೊಳೋಸರಿಸದೆ ತೊಡರ್ಚಿ (ರಾಜಶೇ. ೬–೯೭ ವ). [ಆಶು$_1$ + ಗಮನ]

**ಆಶುಗಸಖ** (ನಾ). = ಆಶುಗತಿಮಿತ್ರ: ಗಿರಿಶ ದಿನಕರನಾಶುಗಸಖ ತುಹಿನಕರೇಕ್ಷಣ (ಉದ್ಭದೇ. ೩–೩೫). [ಆಶುಗ + ಸಖ]

**ಆಶುಗಾಮಿ** (ನಾ). **೧.** ಜಾಗ್ರತೆ ನಡೆಯುವವನು. **೨.** ಸೂರ್ಯ. [ಸಂ. ಆಶುಗಾಮಿನ್]

**ಆಶುಗಾಶನ** (ನಾ). ಗಾಳಿಯನ್ನೇ ಆಹಾರವಾಗಿ ಉಳ್ಳದ್ದು; ಸರ್ಪ: ಆಶುಗಾಶನನಿಭಾಶುಗಮನಾಶುಗಾಸನದೊಳೋಸರಿಸದೆ ತೊಡರ್ಚಿ (ರಾಜಶೇ. ೬–೯೭ ವ). [ಆಶುಗ + ಅಶನ]

**ಆಶುಗಾಸನ** (ನಾ). ಬಾಣಾಸನ; ಬಿಲ್ಲು: ಆಶುಗಾಶನನಿಭಾಶುಗಮನಾಶುಗಾಸನದೊಳೋಸರಿಸದೆ ತೊಡರ್ಚಿ (ರಾಜಶೇ. ೬–೯೭ ವ). [ಆಶುಗ + ಅಸನ]

**ಆಶುಪತ್ರಿ** (ನಾ). ಧೂಪದ ಮರ; ಸಲ್ಲಕಿ ವೃಕ್ಷ (ಶ). [ಸಂ. ಆಶುಪತ್ರಿನ್]

**ಆಶುಭಾಷಣ** (ನಾ). ಸಮಯಸ್ಫೂರ್ತಿಯಿಂದ ಕೂಡಲೇ ಮಾಡುವ ಭಾಷಣ: ಅವರಾಡುತ್ತಿದ್ದ ಆಶುಭಾಷಣ ಭಾಗವತನು ಹಾಡುವ ಪದ್ಯಗಳ ಸರಳಾನುವಾದವಾಗಿತ್ತು (ಯಕ್ಷಬ. ೧೦). [ಆಶು$_1$ + ಭಾಷಣ]

**ಆಶುಭಾಷಣಸ್ಪರ್ಧೆ** (ನಾ). ಸಮಯಸ್ಫೂರ್ತಿಯಿಂದ ಕೂಡಲೇ ಮಾಡುವ ಭಾಷಣದ ಸ್ಪರ್ಧೆ: ಇಂದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಆಶುಭಾಷಣಸ್ಪರ್ಧೆಯನ್ನು ಏರ್ಪಡಿಸಲಾಗಿದೆ (ರೂಢಿ). [ಆಶುಭಾಷಣ + ಸ್ಪರ್ಧೆ]

**ಆಶುವಂತ** (ನಾ). "ಆಯುಷ್ಯವಂತ" (ನಾಪದ. ಟಿಪ್ಪಣಿ): ಕೂಸು ಕೊಡದಿದ್ದರೆ ಆಶುವಂತ ನೀನಾಗೊ ಕಾತರಿಕೆ ಸೀಮೆ ಕಡುಚೆಲುವ (ನಾಪದ. ೭೪). [ಸಂ. ಆಯುಷ್ಮತ್]

**ಆಶುಶುಕ್ಷಣಿ** (ನಾ). ಅಗ್ನಿ; ಬೆಂಕಿ: ಒಣಗಿದುದೊಂದು ಪೆರ್ವಿದಿರ ಪೆರ್ವೊದಜಿಂ ಮೊರೆದುರ್ವುವಾಶುಶುಕ್ಷಣಿಯವೊಲಾಂತ ಖಚಿಗನಿವಹಕ್ಕೆ . . . ಅಭಿಮನ್ಯುವ ಕೂರ್ಗಣೆ (ಪಂಪಭಾ. ೧೧–೯೪). [ಸಂ.]

**ಆಶೆ** (ನಾ). **೧.** ಆಸೆ; ಬಯಕೆ: ಜಂಗಮಲಿಂಗಪ್ರಸಾದಿಯಾದೊಡೆ ಭೋಗಭೂಷಣಂಗಳಾಶೆ ಇಲ್ಲದಿರಬೇಕು (ಆದವ. ೧೨); ವೃತ್ತಮುಮಖಿಳಕಳಾಸಂಪತ್ತಿಯುಮತಿವಿಶದಮೆನಿಕುಮಾಶೆಯನುಜಿದಂದು (ಪಾರ್ಶ್ವಪು. ೧೦–೨೪); ಆಶೆಗೆ ಅಂತ್ಯವಿಲ್ಲ, ಪಾಶಕ್ಕೆ ಕಡೆಯಿಲ್ಲ (ಗಾದೆ); ಆಶೆ ಅತಿ, ಆಯುಷ್ಯ ಮಿತಿ (ಗಾದೆ). **೨.** ಭರವಸೆ; ನಂಬಿಕೆ: ಅವನು ಬದುಕುತ್ತಾನೆಂದು ನಾವು ಆಶೆ ಇಟ್ಟುಕೊಂಡಿದ್ದೇವೆ(ರೂಢಿ). **೩.** ದಿಕ್ಕು: ಆ ರುಚಿರ ವನಧಿಪರಿವೃತಧರಾ ಮಧ್ಯದೊಳು ಮೇರುವಿಂ ದಕ್ಷಿಣಾಶೆಯೊಳು . . . ಒಪ್ಪುವುದು ಚಾರುತರ ಲಾಳದೇಶಂ (ಹಚಕಾ. ೧–೩೫). [ಸಂ. ಆಶಾ]

**ಆಶೆಗೊಳ್ಳು** (ಕ್ರಿ). ಬಯಸು; ಆಶೆಪಡು; ಅಪೇಕ್ಷೆಯನ್ನು ಹೊಂದು. [ಆಶೆ + ಕೊಳ್ಳು (< ಕೊಳ್$_1$)]

**ಆಶೆಪಡು** 'ಆಶೆವಡು' ನೋ.

**ಆಶೆಬುರುಕ** (ನಾ). ಅತ್ಯಾಸೆಯುಳ್ಳವನು; ದುರಾಸೆಗಾರ: ಆಶೆಬುರುಕನಂತೆ ನನ್ನನ್ನೇನು ಕೇಳುತ್ತೀ (ರಂಗರೋ. ೨೯). [ಆಶೆ + -ಬುರುಕ]

**ಆಶೆಮಾತು** (ನಾ). ಭರವಸೆಯ ಮಾತು: ಆಶೆಮಾತನು ಕೊಟ್ಟು ಭಾಷೆ ತಪ್ಪುವ ಹೊಲೆಯ (ನೀತಿಚಿಂ. IV, ೧೬). [ಆಶೆ + ಮಾತು$_1$]

**ಆಶೆವಂತ** (ನಾ). **೧.** ಆಸೆಯನ್ನು ಉಳ್ಳವನು. **೨.** ಆಸೆಯನ್ನು ನೆರವೇರಿಸಿಕೊಂಡವನು.

ಆಶೆವಂತಳು = ಆಸೆಯನ್ನು ಹೊಂದಿದವಳು: ಆಶೆವಂತಳಾಗು ಅಷ್ಟಬಲ್ಲಿದಳಾಗು (ಲೋಕಗೀ. ೧೨೯–೫೪). [ಸಂ. ಆಶಾವತ್]

**ಆಶೆವಡು, ಆಶೆಪಡು** (ಕ್ರಿ). ಬಯಸು; ಇಚ್ಛಿಸು: ಭವ್ಯಜನಂಗಳಾಶೆವಡುತಿರ್ಪರ್ಹರ್ಹಂತ್ಯಮುಂ ಸಾರ್ಗಂ (ಆದಿಪು. ೪–೯೯). **ಆಶೆಪಡು**: ರಾವಣನು ಈ ಸೀತೆಗೆ ಆಶೆಪಟ್ಟು ಅವಳನ್ನು ಕದ್ದುಕೊಂಡು ಹೋಗಬೇಕೆಂದು ಯತ್ನಮಾಡಿದನು (ನೀತಿಚಿಂ. V, ೨೩). [ಆಶೆ + ಪಡು$_1$]

**ಆಶೋತ್ತರ** (ನಾ). ಹೆಚ್ಚಿನ ಆಸೆ, —ಹಾರೈಕೆ: ಅದು ಕನ್ನಡಿಗರ ಆಶೋತ್ತರಗಳ ಸಂಕೇತ (ರಾಜ್ಯೋದ. ೨೧೫). [ಸಂ.]

**ಆಶೌಚ** (ನಾ). ೧. ಸೂತಕ; ಮೈಲಿಗೆ. ೨. ಅಶುದ್ಧಿ ; ಹೊಲಸು. [ಸಂ.]

**ಆಶ್ಚರಿಯ** (ನಾ). = ಆಶ್ಚರ್ಯ ೧ : ಅರಸ ಕೇಳಾಶ್ಚರಿಯವನು ನಿಮ್ಮರಸನಾಹವ ಸಫಲ ಸುರಕುಲವರಳಮಳಿಗಜಿದುದು (ಕುವ್ಯಾಗ. ೭–೩೯). [< ಸಂ. ಆಶ್ಚರ್ಯ]

**ಆಶ್ಚರ್ಯ** (ನಾ). ೧. ವಿಚಿತ್ರ ; ಚೋದ್ಯ ; ಸೋಜಿಗ : ಹಾರಾದ್ಯಾಭರಣಂಗಳಿನಾರೂಪಾಶ್ಚರ್ಯಮಾಗೆ (ಆದಿಪು. ೪–೪೨). ೨. ಅದ್ಭುತ; ವಿಸ್ಮಯ. ೩. ಬೆಕ್ಕಸ; ಬೆರಗು : "ಬೆಕ್ಕಸಮೆನಲಾಶ್ಚರ್ಯಾರ್ಥಂ" (ಕವಿಕಂ. ೧೨೯). [ಸಂ.]

**ಆಶ್ಚರ್ಯಂಬಡು**, ಆಶ್ಚರ್ಯಪಡು (ಕ್ರಿ). ಆಶ್ಚರ್ಯಗೊಳ್ಳು ; ಬೆರಗಾಗು : ಬಿನ್ನಪಕ್ಕಾಶ್ಚರ್ಯಂಬಟ್ಟು (ಸೌಇಇ. XX, ೪೯–೪೮ ; 1076) ; ವರುಣಮಹಾರಾಜಂ ಕೇಳ್ದಾಶ್ಚರ್ಯಂಬಟ್ಟದೇನೆನೆ (ಧರ್ಮಾಮೃ. ೫–೨೦೭). **ಆಶ್ಚರ್ಯಪಡು** : ನನ್ನ ಮಾತನ್ನು ಕೇಳಿ ಅವರು ಆಶ್ಚರ್ಯಪಟ್ಟರು (ರೂಢಿ). [ಆಶ್ಚರ್ಯ + ಪಡು$_1$]

**ಆಶ್ಚರ್ಯಪಡು** 'ಆಶ್ಚರ್ಯಂಬಡು' ನೋ.

**ಆಶ್ಚರ್ಯಭೂತ** (ಗು). ಆಶ್ಚರ್ಯವನ್ನು ಹುಟ್ಟಿಸುವಂಥ ; ವಿಸ್ಮಯಕರವಾದ : ಭರತೇಶ್ವರಂ . . . ಒಂದು ದಿವಸಂ . . . ಆಶ್ಚರ್ಯಭೂತಂಗಳುಂ ದುರಾರಿಷ್ಟಫಲಸೂಚಕಂಗಳುಮಪ್ಪ ಸ್ವಪ್ನಂಗಳಂ ಕಂಡು (ಆದಿಪು. ೧೫–೨೧ ವ). [ಸಂ.]

**ಆಶ್ಚ್ಯೋತನ** (ನಾ). [ವೈದ್ಯಶಾ] ಕಣ್ಣಿಗೆ ಔಷಧಿಯ ಬಿಂದುಗಳನ್ನು ಬಿಡುವುದು : ನೇತ್ರರೋಗಂಗಳಲ್ಲಿ ಆದಿಯಲ್ಲಿ ಆಶ್ಚ್ಯೋತನವ ಮಾಡಿಸುವದು ಆಶ್ಚ್ಯೋತನವೆಂಬುದು ಔಷಧಿಗಳ ಹಾಕಿ ಕಾಸಿದ ಕಷಾಯವ ಧಾರೆಯಾಗಿ ಕಣ್ಣ ಒಳಕ್ಕೆ ಹೊತ್ತುಹೊತ್ತಿಗೆ ಬಿಡುವುದು (ವೈದ್ಯಸಾ. II, ೭೫). [ಸಂ.]

**ಆಶ್ಮ** (ಗು). ಕಲ್ಲಿನಿಂದ ತಯಾರಿಸಿದ. [ಸಂ.]

**ಆಶ್ಮನ** (ಗು). = ಆಶ್ಮ. [ಸಂ.]

**ಆಶ್ರಮ** (ನಾ). ೧. ಋಷಿಗಳ ವಾಸಸ್ಥಾನ; ತಪಸ್ವಿಗಳ ನಿವಾಸಸ್ಥಳ : "ಮುನಿಗಳಿರ್ಪ ಠಾವು ಆಶ್ರಮವೆಂಬುದು" (ಹಲಾಯು. ೫೦–೧೪೩). ೨. ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸ ಎಂಬ ಜೀವನದ ನಾಲ್ಕು ಘಟ್ಟಗಳು : ಇದ್ದುದ ಹೇಳಲಿಲ್ಲ ಇದ್ದುದ ತೋಱಲಿಲ್ಲ ಹೊದ್ದಿದ ಆಶ್ರಮ [ಪಾಠಾಂ. ಆಶ್ರಿಮ, ಆಶ್ರಯ, ಆಶ್ರಿಯ] ವದ ನಾನೇನೆಂಬೆನು (ಅವಚಂ. ೧೩೦–೫೯೬) ; ಸಾಮಗಾಚಾರ್ಯರಾದ ಜೈಮಿನಿ ಶಬರಸ್ವಾಮಿ ಗೌತಮ ಮೊದಲಾದವರು ಗೃಹಸ್ಥಾಶ್ರಮವೇ ಆಶ್ರಮ, ನಾಲ್ಕು ಆಶ್ರಮಗಳಿಲ್ಲವೆಂಬ ಐಕಾಶ್ರಮ್ಯ ಪಕ್ಷವನ್ನು ಸ್ಥಾಪಿಸಿರುವರು (ಹಿಂದಸಾ. ೧೫೪). ೩. ಪಾಠಶಾಲೆ; ವಿದ್ಯಾಶಾಲೆ. ೪. ವಸತಿ ; ವಾಸಗೃಹ. 'ಅನಾಥಾಶ್ರಮ' ಪರಾ. [ಸಂ.]

**ಆಶ್ರಮಧರ್ಮ** (ನಾ). ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸಿ ಎಂಬ ನಾಲ್ಕು ಆಶ್ರಮದವರು ಪಾಲಿಸಬೇಕಾದ ಧರ್ಮ : ಆಶ್ರಮಧರ್ಮವೆಂದರೆ ಆಯಾ ಆಶ್ರಮದವರು ಅವಶ್ಯವಾಗಿ ಪರಿಪಾಲಿಸಬೇಕಾದ ನಿಯಮವೆಂದರ್ಥವು (ಆರ್ಯಧ. ೧೧). [ಆಶ್ರಮ + ಧರ್ಮ]

**ಆಶ್ರಯ** (ನಾ). ೧. ಆಸರೆ; ಅವಲಂಬನ; ಆಧಾರ : ನಿಯತಂ ವಿಸ್ಮಯಭೂವಾಶ್ರಯಮುದ್ಭುತರಸಮೆನಿಪ್ಪವೆಸರಂ ಪಡೆಗುಂ (ಕಾವ್ಯಾವ. ೮೨೧). ೨. ಮೂಲಸ್ಥಾನ ; ನಿವಾಸಸ್ಥಾನ ; ನೆಲೆ ; ಮನೆ : "ಉಪಘ್ನಃ, ಆಶ್ರಯಃ – ಈ ೨ ಇರ್ಪ ಠಾವು" (ಹಲಾಯು. ೫೦–೧೪ "ಗೊತ್ತು ನೆಲೆ . . . ಆಡುಂಬೊಲನೆನಲ್ಕೆಯಾಶ್ರಯನಾಮ" (ಶಬ್ದ ೫೯). ೩. ರಕ್ಷಣೆ ; ಸಹಾಯ. [ಸಂ.]

**ಆಶ್ರಯಕೊಡು** (ಕ್ರಿ). ಆಸರೆಯನ್ನು ಕೊಡು ; ಅವಲಂಬನವಾ ಒತ್ತಾಸೆಯಾಗು : ಶ್ರೀಯುತರು ಅನೇಕ ವಿದ್ಯಾರ್ಥಿಗಳಿಗೆ ಆಶ್ರ ಕೊಟ್ಟಿದ್ದರು (ರೂಢಿ). [ಆಶ್ರಯ + ಕೊಡು]

**ಆಶ್ರಯಗೊಳ್ಳು** (ಕ್ರಿ). ಆಸರೆಯನ್ನು ಪಡೆ ; ಆಶ್ರಯಿಸು (ದಕ. [ಆಶ್ರಯ + ಕೊಳ್ಳು (< ಕೊಳ್$_1$)]

**ಆಶ್ರಯಣ** (ನಾ). ೧. ಆಸರೆ ; ಆಶ್ರಯ : ತ್ರಿಜಗದಭಿಷ್ಟುತಂ ಶ್ರಿ ದಾಶ್ರಯಣಂ ಕಥೆ ಶಾಂತಿನಾಥನಾ (ಶಾಂತಿಪು. ೧೨–೫೫). ೨. ಆಶ್ರ ಹೊಂದುವುದು ; ಆಶ್ರಯಿಸುವುದು ; ಅವಲಂಬಿಸುವುದು. [ಸ

**ಆಶ್ರಯದಾತ** (ನಾ). ಆಸರೆಯನ್ನು ಕೊಡುವವನು ; ಅವಲಂ ವಾಗುವವನು ; ಪೋಷಿಸುವವನು. [ಸಂ. ಆಶ್ರಯದಾತೃ]

**ಆಶ್ರಯದಾತೃ** (ನಾ). = ಆಶ್ರಯದಾತ : ನಾನು ನಿನ್ನ ಆಶ್ರಯದ ವಿನ ಅಣ್ಣನ ಮಗಳಲ್ಲವೆ (ಅಂಬಿಕೆ. ೩೨). [ಸಂ.]

**ಆಶ್ರಯವೆರೆ** (ಕ್ರಿ). ಆಸರೆಯನ್ನು ಬೇಡು; ಸಹಾಯವನ್ನು ಕೋ ಉಜ್ಜೀವಿಸಲು ಬಯಸಿ ಹಾತೊರೆದು ಹೊರನಿಂತು ಗಾನ ಆಶ್ರಯ ದಿವ್ಯಸಂಮುದವೇ (ಮಲೆದೇ. ೧೭–೨). [ಆಶ್ರಯ + ಎರೆ$_1$ (< ಎ

**ಆಶ್ರಯಸ್ಥಾನ** (ನಾ). ಆಸರೆಯಾದ ಸ್ಥಳ ; ನೆಲೆಯಾದ ಜಾ ನಳಿಗೆಯು ಕ್ರಿಮಿಕೀಟಗಳಿಗೆ ಆಶ್ರಯಸ್ಥಾನವಾಗಬಹುದು (ಆಡುಸೌ. [ಆಶ್ರಯ + ಸ್ಥಾನ]

**ಆಶ್ರಯಾಶ** (ಗು). ೧. ಆಸರೆಕೊಟ್ಟ ವಸ್ತುವನ್ನು ತಿಂದುಕೊಳ್ಳ (ನಾ). ೨. ಅಗ್ನಿ. [ಸಂ.]

**ಆಶ್ರಯಿ** (ಗು). ಆಶ್ರಯಿಸತಕ್ಕ ; ಆಸರೆ ಪಡೆದಿರುವ (ದಕ. ೬). [ಸಂ. ಆಶ್ರಯಿನ್]

**ಆಶ್ರಯಿಸು**, ಆಶ್ರಯ್ಸು, ಆಶ್ರೈಸು (ಕ್ರಿ). (ಆಸರೆಗಾಗಿ) ಹ ಹೋಗಿ ಸೇರು ; ಅವಲಂಬಿಸು ; ಸಹಾಯಕ್ಕಾಗಿ ಬೇಡು ; ಅ ಸರಿಸಿ ನಡೆ : ಧೃತರಾಷ್ಟ್ರನುಂ ಗಾಂಧಾರಿಯುಂ ಪುತ್ರವಿಯೋಗದುಃ ಮುನಿವನಮನಾಶ್ರಯಿಸಿದರ್ (ಪಂಪಭಾ. ೧೪–೧೦ ವ); ತಮ್ಮ ಪ್ರಾಣ ಧಾರೆಯನೆಱೆದು ದೇಹಸ್ಥಿತಿಯಂ ಮಾಱೆ ಸತ್ಪುರುಷರ್ ಅರಸನನಾಶ್ರ ಯಿಸಿರ್ಪರ್ (ಪಂಚತಂ. ೧೬೩–೧೮) ; ತಾನ್ ನೀನ್ ಆನ್ ಎಂಬರ್ಥ ನಾಶ್ರಯಿಸಿ ಪುರುಷತ್ರಯಂಗಳಿರ್ಪುವು (ಶಮದ. ೨೨೪ ವೃತ್ತಿ) ; ಸವಿ ಯನಾಶ್ರಯಿಸಿತಲಸಿಕೆ (ಚಬಪು. ೪–೧೧). **ಆಶ್ರಯ್ಸು** : ತೊಱೆಯ ಪೋಗುತ್ತು ಮಿರ್ದಂತಡಿಯುಗಿಡುವನಾಶ್ರಯ್ಸೆ ಕಾಯಲ್ಕದೆತ್ತಾನಱ ಪೋಗೆನ್ನದೆಂತುಂ ನಿಲಿಸುಗುಮೆನೆ (ಸಮುಪ. ೭–೩೯). **ಆಶ್ರೈಸು** : ಅನಾಥೆಯೆಂ ಶರಣೆನುತ್ತಾಶ್ರೈಸಿದೆಂ ಸ್ಥಾಣುವಂ (ಕಾದಂಪೂ. ೯ ಪದವನಾಶ್ರೈಸದೆ ಫಲವನಳಿಯದೆ (ಬಸಪು. ೪೪–೨೨). [ಆಶ್ರಯ + –ಇಸು$_3$]

**ಆಶ್ರಯ್ಸು** 'ಆಶ್ರಯಿಸು' ನೋ.

**ಆಶ್ರವ** (ನಾ). ೧. ವಿಧೇಯ ; ಆಜ್ಞಾನುವರ್ತಿ ; ವಿನಿ ೨. ವಾಗ್ದಾನ. ೩. ತಪ್ಪು ; ಅಪರಾಧ. ೪. (ಪ್ರವಾಹದ ಹರಿಯುವುದು; ಓಡುವುದು. ೫. ಪ್ರವಾಹ ; ನದಿ (೬). ೬. "ಅ ಕಾರ" (ಅಮರ. ಟೀಕೆ). ೭. [ಜೈನ] ಸಪ್ತತತ್ತ್ವಗಳಲ್ಲಿ ಒಂ ಪುಣ್ಯಪಾಪ ರೂಪವಾದ ಕರ್ಮವು ಜೀವನೊಳಕ್ಕೆ ಹರಿ ವುದು : ಸಕಲಬದ್ಧಾಶ್ರವ ನಿರೋಧದಿನಯೋಗಿಕೇವಲಿ ಗುಣಸ್ಥಾ ಪೊರ್ದಿ (ಪಂರಾಮಾ. ೧೬–೭೯ ವ). [ಸಂ.]

**ಆಶ್ರಾವಿಸು** (ಕ್ರಿ). ೧. ಕಿವಿಯಿಂದ ಕೇಳು: ಈ ಮಾತುಗಳನ್ನು ಆಶ್ರಾವಿಸಿದ ಮೇಲಂತೂ ಆವಳ ಜೀವವು ಹೌಹಾರಿತು (ಅ ಮಾ ನಂ. ೧೪). ೨. ಕಿವಿಯಿಂದ ಕೇಳಿಸು. [ಆಶ್ರಾವಣ$_0$ + –ಇಸು$_3$]

**ಆಶ್ರಿತ** (ಗು). ೧. ಆಶ್ರಯಿಸಿದ; ರಕ್ಷಣೆಯಲ್ಲಿರುವ; ಪೋಷಣೆಗೆ ಒಳಪಟ್ಟ: ದ್ವಿಜವಂಶಾಂಬರ ತಿಗ್ಮರೋಚಿ . . . ಆಶ್ರಿತಜನಾಧಾರಂ ಮದಗ್ರಜಂ (ಸು ಕು ಮಾ. ೨–೩೯); ಪೋಲ್ವನ್ನನದಾವನಾಶ್ರಿತಕೃತಶ್ರೀಲೋಕನಂ ನಾಕನಂ (ಎಕ. V, ಹಾಸನ. ೭೬–೪೮; 1165); ನಿತ್ಯಾಶ್ರಿತ ಮಹೇಶ್ವರ ಭಕ್ತವರ್ಗ (ಬ ಸ ಪು. ೩೦–೩೬); ವಕೀಲಜನರ ಮನೆಗಳಲ್ಲಿ ವಾದಿ, ಪ್ರತಿವಾದಿ, ಆಶ್ರಿತ, ನೌಕರ, ಭಿಕ್ಷುಕ ಜನರು ಬರುವದು ಹೋಗುವದು ನಡೆದದೆ (ಮಂಜು ಕ. ೮). ೨. ಆಧಾರವಾಗಿ ಹೊಂದಿದ; ಮೂಲವನ್ನಾಗಿ ಉಳ್ಳ: ಅತಿಪೀಡನದಿಂ ರೇಫಾಶ್ರಿತಮಾದ ಜಕಾರಮುಂ ಸಮಂತು ಡಕಾರಾಶ್ರಿತಮಾದ ಜಟಿನುಂ (ಶಮದ. ೧೮). [ಸಂ.]

**ಆಶ್ರುತ** (ಗು). ೧. ಕೇಳಲ್ಪಟ್ಟ; ಕಿವಿಯಿಂದ ಕೇಳಿದ. ೨. ಅಂಗೀಕರಿಸಲ್ಪಟ್ಟ; ಒಪ್ಪಿಕೊಂಡ. ೩. ಪ್ರತಿಜ್ಞೆಮಾಡಿದ; ಮಾತುಕೊಟ್ಟ. [ಸಂ.]

**ಆಶ್ರೈಸು** 'ಆಶ್ರಯಿಸು' ನೋ.

**ಆಶ್ಲಿಷ್ಟ** (ಗು). ೧. ಆಲಿಂಗಿಸಲ್ಪಟ್ಟ; ಅಪ್ಪಿಕೊಳ್ಳಲ್ಪಟ್ಟ: ಗೌರೀಲತಾಶ್ಲಿಷ್ಟ ಶಂಕರಕಲ್ಪದ್ರುಮನೀಗಭೀಷ್ಟಫಲಮಂ (ಗದಾಯು. ೧–೨). ೨. ಒಡಗೂಡಿದ; ಕೂಡಿದ: ಖಳದುಶ್ಶಾಸನ ಕೃಷ್ಣಲೋಹಿತಜಲಾಶ್ಲಿಷ್ಟಂ ಕುರುಪ್ರೋದ್ಭವ ಪ್ರಳಯಜ್ವಾಲಿ... ಹಿಡಿಂಬಾಂತಕಂ (ಗದಾಯು. ೧–೫೫). [ಸಂ.]

**ಆಶ್ಲೇಷ** (ನಾ). ೧. ಆಲಿಂಗನ; ಅಪ್ಪಿಕೊಳ್ಳುವುದು; ಅಪ್ಪುಗೆ: "ಆಲಿಂಗನಂ, ಉಪಗೂಹನಂ, ಪರಿರಂಭಣಂ, ಪರಿಷ್ವಂಗಃ, ಆಶ್ಲೇಷಃ, ಅಂಕಪಾಳೀ, ಕ್ರೋಡೀಕರಣಂ – ಈ ೭ ಅಪ್ಪಿಕೊಳುಹ" (ಹಲಾಯು. ೯೩–೪೧೪); ದಿನಕರನುದಯಂಗೆಯ್ದುಂ ವಿನಿಹತತಿಮಿರಂ ವಿಶಿಷ್ಟಸಂಧ್ಯಾಶ್ಲೇಷಂ (ಕವಿರಾ. ೨–೭೨). ೨. ನಿಕಟವಾದ ಸಂಬಂಧ; ಒಡಗೂಡಿರುವುದು. ೩. ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಒಂಬತ್ತನೆಯದು. ೪. ಸಂಯೋಗ. ೩, ೪: ನಕ್ಷತ್ರಮಾಲೆಯಂತೆ ಚಿತ್ರಾಶ್ಲೇಷಶ್ರವಣಾಭರಣಭೂಷಿತೆಯುಂ (ಕಾದಂಪೂ. ೪೯) ೫. ಸೂರ್ಯನು ಆಶ್ಲೇಷೆ ನಕ್ಷತ್ರವ್ಯೂಹದಲ್ಲಿರುವಾಗ ಬರುವ ಮಳೆ: ಆಶ್ಲೇಷದಲ್ಲಿ ಹಾರೈಸಿದಷ್ಟ ಬೆಳೆ (ಗಾದೆ). [ಸಂ.]

**ಆಶ್ಲೇಷೆ** (ನಾ). = ಆಶ್ಲೇಷ ೩: ಅಜಹವು ಮೂಲವಾಶ್ಲೇಷೆ ಕೃತ್ತಿಗೆಯೊಳಾ ತಾರೆಯೆಂಟಹವು (ಮಂಗರಾ. ೧೯–೩). [ಸಂ. ಆಶ್ಲೇಷಾ]

**ಆಶ್ವ** (ಗು). ೧. ಕುದುರೆಗಳಿಗೆ ಸಂಬಂಧಿಸಿದ. (ನಾ). ೨. ಕುದುರೆಗಳ ಗುಂಪು. [ಸಂ.]

**ಆಶ್ವಯುಜ** (ನಾ). ಚಾಂದ್ರಮಾನದಲ್ಲಿ ಏಳನೆಯ ತಿಂಗಳು; ಶರದೃತುವಿನ ಮೊದಲನೆಯ ತಿಂಗಳು. [ಸಂ.]

**ಆಶ್ವಾಸ** (ನಾ). ೧. ಉಸಿರನ್ನು ತೆಗೆದುಕೊಳ್ಳುವುದು; ಉಚ್ಛ್ವಾಸ. ೨. ಸಮಾಧಾನ ಪಡಿಸುವುದು; ಭರವಸೆಕೊಡುವುದು. ೩. ಗ್ರಂಥಗಳಲ್ಲಿನ ಅಧ್ಯಾಯ, ಸಂಧಿ ಮುಂತಾದ ಭಾಗ: ವಿಕ್ರಮಾರ್ಜುನ ವಿಜಯದೊಳ್ ಪ್ರಥಮಾಶ್ವಾಸಂ (ಪಂಪಭಾ. ೧–೧೪೯ ವ). [ಸಂ.]

**ಆಶ್ವಾಸನ** (ನಾ). ೧. ದುಃಖಿತರನ್ನು ಸಮಾಧಾನಪಡಿಸುವುದು. 'ಆಶ್ವಾಸನಪರ' ಪರಾ. ೨. ಭರವಸೆ: ಒಮ್ಮೆ ನಿಮ್ಮೆಲ್ಲರನ್ನೂ ನೋಡಲು ಬರುವೆನೆಂಬ ಆಶ್ವಾಸನವನ್ನು ಕೊಟ್ಟಿರುವರು (ಚಿತೆಸ. ೧೦೫). [ಸಂ.]

**ಆಶ್ವಾಸನಪರ** (ಗು). ೧. ಸಮಾಧಾನಗೊಳಿಸುವುದರಲ್ಲಿ ನಿರತವಾದ: ಆಕ್ರಾಂತಚಿಂತಾಭರಸ್ತಿಮಿತಗಾತ್ರೆಯುಂ ಆಶ್ವಾಸನಪರಾಂತಃಪುರವೃದ್ಧಾಂಗನಾ ನಿಷೇವ್ಯಮಾಣೆಯುಂ (ಚಂದ್ರಪು. ೩–೫೦ ವ). ೨. ಭರವಸೆ ಕೊಡುವ. [ಸಂ.]

**ಆಶ್ವಾಸನೆ** (ನಾ). ಭರವಸೆ: ನಿರರ್ಥಕವಾದ ಆಶ್ವಾಸನೆಗಳನ್ನು ಕೊಡಬಾರದು (ರೂಢಿ). [ಸಂ. ಆಶ್ವಾಸನ]

**ಆಶ್ವಾಸನೆಯೀ** (ಕ್ರಿ). ಭರವಸೆಯನ್ನು ಕೊಡು: ಮಹಾರಾಣಿಗೆ ಪರಿಸ್ಥಿತಿಯನ್ನು ಸವಿಸ್ತಾರವಾಗಿ ತಿಳಿಸುವೆನೆಂದು ಆಶ್ವಾಸನೆಯಿತ್ತನು (ಯೋಧರು. ೬೫). [ಆಶ್ವಾಸನೆ + ಈ$_2$]

**ಆಶ್ವಾಸಿಸು** (ಕ್ರಿ). ಸಮಾಧಾನಗೊಳಿಸು; ಶಾಂತಿಯನ್ನುಂಟುಮಾಡು; ಉತ್ತೇಜನಗೊಳಿಸು: ಅನಾಶ್ವಾಸಿಸಿದನಿತಜಿಕೊಳೇನಾ ಚಂದ್ರಮನೆ ನಿನ್ನನಾಶ್ವಾಸಿಸಿದಂ ತಾನೆಂದೊಡದೇನೆಂಬುದೊ ಮಾನಿನಿ ತದ್ವಿಧರವಚನಮನಿತಥಮೆ ವಲಂ (ಕಾದಂಪೂ. ೯೬೪); ಪೆಡೆಯಂ ಕೊಡೆಯಂತಿರೆ ಪಿಡಿದಡಿಯೊಳ್ ನೆಜೆನಿಂದ ಮಜಿಯ ನಾನನದೆಲರಿಂ ಬಿಡದಾಶ್ವಾಸಿಸಿ ಮಜುಕಂಬಡೆದೋವುತ್ತಿರ್ದುದುರಗಿ ಪರ್ಬಿದ ಬಿಸಿಲೊಳ್ (ರಾಜಶೇ. ೫–೪೪). [ಆಶ್ವಾಸನ + –ಇಸು$_3$]

**ಆಶ್ವಿನ** (ನಾ). ೧. ಆಶ್ವಯುಜಮಾಸ: ಇದರ (ಆಕ್ರೋಡದ) ಹಣ್ಣಿನ ಸುಗ್ಗಿ ಆಶ್ವಿನ ಕಾರ್ತಿಕಗಳಲ್ಲಿ (ಮುಂಬಯಿ. ೩–೧೧೧). ೨. ಕುದುರೆಯ ಮೇಲೆ ಒಂದು ದಿನ ಪ್ರಯಾಣ ಮಾಡುವಷ್ಟು ಮಾರ್ಗ; ಕುದುರೆಯ ಒಂದು ದಿನದ ನಡಿಗೆ. [ಸಂ.]

**ಆಶ್ವಿನೇಯ** (ನಾ). ೧. ಅಶ್ವಿನಿದೇವತೆ; ದೇವವೈದ್ಯರ ಜೋಡಿ. ೨. ಪಾಂಡವರಲ್ಲಿ ನಕುಲ ಅಥವಾ ಸಹದೇವ. [ಸಂ.]

**ಆಶ್ವೀಜ** 'ಆಶ್ವೈಜ' ನೋ.

**ಆಶ್ವೀನ** (ನಾ). = ಆಶ್ವಿನ ೨. [ಸಂ.]

**ಆಶ್ವೈಜ, ಆಶ್ವೀಜ** (ನಾ). = ಆಶ್ವಯುಜ: ಆ ಜನತಾಧಿನಾಯಕನತಿಮುದದಿನಾಶ್ವೈಜಶುದ್ಧ ನವಮಿಯೊಳು ಪೂಜೆಮಾಡಿದನು (ಶ್ರೀಪಾಲ. ೧೩–೪೭). **ಆಶ್ವೀಜ**: ಆಶ್ವೀಜದಲ್ಲಿ ಹೊನ್ನುಕರಗುವ ಬಿಸಿಲು ಮಣ್ಣುಕರಗುವ ಮಳೆ (ಗಾದೆ). [< ಸಂ. ಆಶ್ವಯುಜ]

**ಆಷಕ** (ನಾ). ಪ್ರಿಯ; ನಲ್ಲ: ಗಂಡ ಹೆಂಡಿರ ಆಷಕ ಮಾಷಕರ ವಿರಹ ವ್ಯಥೆಗಳನ್ನು ಚೆನ್ನಾಗಿ ವರ್ಣಿಸಿದಳು (ಅಂಬಿಕೆ. ೯೮). [←ಹಿಂ. ಮರಾ. ಆಶಕ್]

**ಆಷಡಿ** 'ಆಸಡಿ' ನೋ.

**ಆಷಡಿಗೆಣಸು** 'ಆಸಡಿಗೆಣಸು' ನೋ.

**ಆಷಾಢ** (ನಾ). ೧. ಚಾಂದ್ರಮಾನದಲ್ಲಿ ನಾಲ್ಕನೆಯ ತಿಂಗಳು: ಗರ್ಭಾವತರಣಂ ಆಷಾಢ ಬಹುಳ ಬಿದಿಗೆಯುತ್ತರಾಷಾಢ ನಕ್ಷತ್ರದ ಬೆಳಗಪ್ಪ ಜಾವದೊಳ್ (ಆದಿಪು. ೭–೩೨ ವ). ೨. ವ್ರತಿಗಳೂ ಬ್ರಹ್ಮಚಾರಿಗಳೂ ಹಿಡಿದುಕೊಳ್ಳುವ ಮುತ್ತುಗದ ಕೋಲು; ಪಲಾಶದಂಡ: "ಆಷಾಢವೆಂಬುದು ವ್ರತಿಗಳ ಕೋಲ್" (ಹಲಾಯು. ೬೮–೨೫೭); ಸಾಷಾಢ ಸಪ್ತರ್ಷಿಸಂಕುಲ ಸಂಪೂತಮರುಂಧತೀ ಪ್ರತಿನುತಂ (ಕಾದಂಪೂ. ೨೮೩). ೩. ಮಲಯ ಪರ್ವತ. [ಸಂ.]

**ಆಷಾಢಭೂತಿ** (ನಾ). ವೇಷಧಾರಿ; ಬೂಟಾಟಿಕೆಯವನು; ಮೋಸಗಾರ; ವಂಚಕ: ಧರ್ಮಾಂಧರ ಆಷಾಢಭೂತಿ ನೀತಿಗಳಿಗೆ ಕೊನೆ ಮೊದಲೇ ಇಲ್ಲ (ಜೀವಾತ್ಮ. ೨೧೭). [ಸಂ.]

**ಆಷಾಢಭೂತಿತನ** (ನಾ). ವಂಚನೆ; ಮೋಸ; ಬೂಟಾಟಿಕೆ: 'ಆಟ'ಯ ಮಳೆಯ ಆಷಾಢಭೂತಿತನ ಮಾತ್ರ ಎಲ್ಲರಿಗೂ ಗೊತ್ತು (ಒಡ್ಡಿ ಉ. ೨). [ಆಷಾಢಭೂತಿ + –ತನ]

**ಆಷಾಢಮಾಸ** (ನಾ). ಚಾಂದ್ರಮಾನದಲ್ಲಿ ನಾಲ್ಕನೆಯ ತಿಂಗಳು : "ಆಸಡಮೆನಲಾಷಾಢಮಾಸಂ" (ಚತುನಿ. ೨೧).
[ಆಷಾಢ + ಮಾಸ$_1$]

**ಆಷಾಢಿ** (ನಾ). **೧.** ಆಷಾಢಮಾಸದ ಹುಣ್ಣಿಮೆ. **೨.** ಶತಾವರಿ ಗಿಡ; ಮಜ್ಜಿಗೆ ಗಡ್ಡೆ ; ಸೊರೆಮದ್ದಿನ ಗಿಡ: "ಶತಮೂಲೀ... ಶತಾವರೀ ...–ಈ ೧೦ ಆಷಾಢಿ" (ನಾಚಿರಾ. ೧೯೯); ಆಷಾಢಿ – ಈ ಬೇರಂ ಹಾಲಿನಲ್ಲಿ ಕದಡಿ ಕುಡಿಯೆ ಮೊಲೆಹಾಲು ಬರುವುದು (ವಿವೈವಿ. ೨).
[ಸಂ. ಅಷಾಢೀ]

**ಆಷಾಢಿಬೇರು** (ನಾ). ಶತಾವರಿ ಗೆಣಸು (ವೈಔಗಿ. ೧೦–೧೬೮).
[ಆಷಾಢಿ + ಬೇರು]

**ಆಷೂರ್‌ಖಾನಾ** (ನಾ). ಮೊಹರಂ ಹಬ್ಬದಲ್ಲಿ ಮಹಮ್ಮದೀಯರು ಪಂಜ (ಹಸ್ತ)ವನ್ನು ಪ್ರದರ್ಶಿಸಲು ಮೀಸಲಾಗಿಟ್ಟಿರುವ ಚಾವಡಿ (ರೈಸ್‌ಗೆ. II, ೫೮೨). [?]

**ಆಸಂಗ** (ನಾ). **೧.** ಆಸಕ್ತಿ; ಹವ್ಯಾಸ: ಅಂಗಿಯಾ ಮುರವೈರಿಯಂಗೋಪಾಂಗಮುಖಿಳವಿದೆಂದು ಫಲದಾಸಂಗವಿಲ್ಲದೆ ಸಕಲವಸು ತದ್ರೂಪವನೆ ಕಂಡ (ನಿಭಾಗ. ೫–೫–೬). **೨.** ಸಂಬಂಧ; ಸಹವಾಸ; ಕೂಟ. **೩.** ಅಂಟಿಕೊಳ್ಳುವ ಸ್ವಭಾವ. [ಸಂ.]

**ಆಸಂಗಿ** (ನಾ). ಅಕ್ಕಸಾಲಿಗರು ಒಡವೆ ಅಥವಾ ವಸ್ತುಗಳ ತಗ್ಗನ್ನು ಎತ್ತುವುದಕ್ಕಾಗಿ ಬಳಸುವ ಸಾಧನ (ಸ್ಯಾಂಡರ್; ಕಿಸಂಗ್ಲಾ. ೮೫).
[ಸಂ. ಆಸಂಗಿನ್]

**ಆಸಂದ** (ನಾ). ವಿಷ್ಣು. [ಸಂ.]

**ಆಸಂದಧೀರ** (ನಾ). ವಿಷ್ಣುವಿನಂತೆ ಧೀರನಾದವನು : ನುಡಿದಂತೆ ಮಾರ್ಪ್ಪಂ ಕೂರೆ ಕೂರ್ಪ್ಪಂ ಪ್ರತಿಪನ್ನಮೇರುವೇಕಾಂಗವೀರನಾ ಸಂಧು (ದ)ಧೀರಂ ವೀರಾವತಾರಂ (ಎಇ. XIX, ೧೮೧–೭; 1045).
[ಆಸಂದ + ಧೀರ]

**ಆಸಂದಿ$_1$** (ನಾ). ಒಂದು ಸೀಮೆಯ ಹೆಸರು : ಆಸನ್ದಿವಿಷಯೇ ಕರಞ್ಜ ಗ್ರಾಮೇ (ವೈಆರಿ. ೧೯೪೩, ೧–೫; 500); ಬಲಿವಂಶತಿಲಕ ಆಸನ್ದಿನಾಡಾಳುತ್ತಿರೆ (ಎಕ. V, ಅರಸೀ. ೨೧೫–೬; 890); ಆಸಂದಿನಾಡಯ್ನೂಱುಂ (ಎಕ. VI, ಕಡೂರು. ೯–೨೧; 990); ಒಂಟಿಯನಹಳ್ಳಿ ಆಸಂದಿನಾಡೆರಡುಂ (ಎಕ. V, ಬೇಲೂರು. ೭೧–೪೦; 1117). [?]

**ಆಸಂದಿ$_2$** (ನಾ). (ಬೆತ್ತದಿಂದ ಮಾಡಿದ) ಆಸನ; ಪೀಠ: "ವೇತ್ರಾಸನಂ, ಆಸಂದೀ – ಈ ೨ ಬೆತ್ತದ ಜಕ್ಕಳಂ" (ಹಲಾಯು. ೫೨–೧೫೭); "ಆಸಂದಿ ವೇತ್ರಾಸನಂ ಜಕ್ಕಳಮುಕ್ಕು"(ಮಂಗರಾ. ೬೨–೨೧); ರನ್ನಗಂಬಳಿ, ಆಸಂದಿ, ಸುಖಾಸನಗಳು (ಬಿಟ್ಟಅ. ೧೩೮–೨). [ಸಂ. ಆಸಂದೀ]

**ಆಸಕಳಂ** (ಅ). ಸಪರಿವಾರವಾಗಿ; ಸಂಬಂಧಪಟ್ಟ ಎಲ್ಲರೊಡನೆ: ಶಾಸನಮಿದಾವುದೆಲ್ಲಿಯು ಶಾಸನಮಾರಿತ್ತರೇಕೆ ಸಲಿಸುವೆ ನಾನೀಶಾಸನ ಮನೆಂಬ ಪಾತಕನಾಸಕಳಂ ರೌರವಕ್ಕೆ ಗಳಗಳನಿಳಿಗುಂ (ಎಕ. VII, ಶಿವಮೊ. ೯೭–೫೩; 1113). [ಸಂ. ಆಸಕಲಂ]

**ಆಸಕುತ** (ನಾ). ಆಸಕ್ತನಾದವನು : "ಆಸಕುತಂ = ಆಸಕ್ತಂ(ದ್ಪ) ಶ್ರದ್ಧೆಯುಳ್ಳವನು" (ಪ್ರಭಣ್ಣ). [< ಸಂ. ಆಸಕ್ತ]

**ಆಸಕುತಿ** (ನಾ). = ಆಸಕ್ತಿ **೧** : ಅಕಟ ದೈವದ್ರೋಹಿಗಳಲಾಸಕ[ಕು]ತಿಯನು ನೆಱಿಮಾಡಿ ಘನತರಸುಕೃತವನು ಹೋಗಾಡಿಕೊಂಡೆನು (ನಿಭಾಗ. ೩–೧–೨೨); ಬಹಳಾಸಕ[ಕು]ತಿಯಲಿ ಕೇಳುವ ಮಹಾತ್ಮರು ಪ್ರಕಟಸುವೊಲಿದ ತಿದ್ದಿ ಮೆಱೆವುದು (ಕೋಗಯ. ೧–೧೫; ಬಂಧುನಿಕರಮಂ ತೊರೆದಟವಿಯೊಳು ಚರಿಪ ಮೂರ್ಖನಾಸಕ[ಕು]ತಿಯಿಂದೇಂ (ವೆಂಕಾರಾ. ೫–೯–೧೫). [< ಸಂ. ಆಸಕ್ತಿ]

**ಆಸಕ್ತ** (ಗು). **೧.** ಮಗ್ನವಾದ; ತತ್ಪರವಾದ; ಶ್ರದ್ಧೆಯುಳ್ಳ; ಸಂಧ್ಯಾವಂದನಾಸಕ್ತ ಧರಾಮರಪ್ರಕರಮುಂ (ಗಿರಿಕ. ೫–೯ ವ); ಲಿಂಗಮೂರ್ತಿಯೊಳರ್ಚನಾಸಕ್ತಂಗೆ ನಿದ್ರಾಹಾರ ಮೈಥುನ ಸಂಗಭಯ ವಿಕೃತಂಗಳೆಂದುಂ ಹೊದ್ದವೆನುತಿಹರು (ಬಸವು. ೪೩–೮೨). **೨.** ಸ್ಥಿರವಾದ; ಶಾಶ್ವತವಾದ (?). [ಸಂ.]

**ಆಸಕ್ತತೆ** (ನಾ). ಆಸಕ್ತವಾಗಿರುವಿಕೆ; ಆಸಕ್ತಿ. [ಸಂ. ಆಸಕ್ತತಾ]

**ಆಸಕ್ತಿ** (ನಾ). **೧.** ಶ್ರದ್ಧೆ ; ತತ್ಪರತೆ; ಒಂದೇ ವಿಷಯದಲ್ಲಿ ಮನಸ್ಸು ನಟ್ಟಿರುವಿಕೆ: ಕಾದುವಾಸಕ್ತಿಯಿಂ ಚಕ್ರಿಗಭಿಮುಖನಾದ ಬಳಿಕಲ್ಲಿ ಮುಕ್ತಿಯಲ್ಲದೆ ಬೇಱೆ ಜಯಮುಂಟೆ (ಜೈಮಿಭಾ. ೧೧–೧೩). **೨.** ಅಂಟಿಕೊಳ್ಳುವ ಸ್ವಭಾವ. **೩.** ಮೋಹ. [ಸಂ.]

**ಆಸಗಗೆಯ್** (ನಾ). ಅಗಸನ ಗದ್ದೆ, —ಹೊಲ : ಹಿರಿಯ ಹೆಸುಡಿಯ ಮೂಡಣ ಸೀಮೆಯಿಂ ಮೂಡಲ್ ಆಸಗಗೆಯ್ಯಿಂ ಬಡಗಲ್ ಬೀರಗೌಡನ ಮಾನ್ಯದಿಂ (ಕಇ. I, ೩೩–೩೪; 1246). ℙ ಈ ಶಬ್ದ 'ಆಸಗಗೆಯ್' ಎಂಬುದರ ಅಪಲಿಖಿತ. [ಆಸಗ$_0$ (< ಅಸಗ) + ಕೆಯ್$_4$]

**ಆಸಡ,** ಆಸಾಡ (ನಾ). ಚಾಂದ್ರಮಾನದಲ್ಲಿ ನಾಲ್ಕನೆಯ ತಿಂಗಳು: "ಆಸಡಮೆನಲಾಷಾಢಮಾಸಂ" (ಚತುನಿ. ೨೧); "ಆಸಡಮುದಾಷಾಢಂ" (ಕಶರ. ೧೧). **ಅಸಾಡ** (ಸ್ಯಾಂಡರ್). [< ಸಂ. ಆಷಾಢ]

**ಆಸಡಿ,** ಅಸಡಿ, ಅಸಾಡಿ, ಆಷಡಿ, ಆಸಾಡಿ (ನಾ). **೧.** ಆಷಾಢಮಾಸ: "ಆಸಡಿಯಾಷಾಢಮಾಸಮೆನಿಪುದು" (ಕವಿಕಂ. ೨೬೩); ಆಸಡಿ ಸುಗ್ಗಿಯೆಂಬೆರಡುಂ ಕಾಲದೊಳಮೊಕ್ಕಲ್ಗುಣಿಲ್ಲದೊಡ[illegible]ಕಲ್ಲಿ ಸುಖಮು ನಾಸೆನಡುವುದೇಕಾರಣಮಾರಂಬಂಗೆಯ್ವುದು (ಜೀವಸಂ. ೮೩–೧೬ ವ); ಸುಗ್ಗಿಯೆನ್ನದೆ ಬೇಸಗೆಯೆನ್ನದಾಸಡಿಯೆನ್ನದೆ (ರಾಮಾಶ್ವ. ೫೩–೩). **೨.** ಶತಾವರಿಗಿಡ; ಸೊರೆಮದ್ದು: "ಶತಮೂಲಿಯೆನಲಾಸಡಿಯೆನಿಕ್ಕು" (ಮಂಗರಾ. ೪೦–೩೧); ಕೊಡಸಿಗದ ತಿಗುಡಿನೊಡನಾಸಡಿ ನೆಗ್ಗಿಲು ಯಷ್ಟಿ ಮಧುಕರ್ಪಟಕಂಗಳ್ (ಕಲ್ಯಾಕಾ. ೪–೯); ಅಡವಿಯೊಳುದ್ದಂಬರ್ಪಾಸಡಿಯಿಂ ಮುನ್ನಂ ಬಂದಾಸಡಿಯೊಳ್ ನಳನಳಿಸುವೆಳದಳಿರ್ಗಳ್ (ಜಗವಿ. ೪–೩); [ತಾವರೆಯಕ್ಕದಲ್ಲದೊಡ]ಮಾಸಡಿ ಮೇಣ್ ರವಿಮೂಲಮಕ್ಕದಾ ತಾವರೆ ಶರ್ಕರಾನ್ವಿತಮದಾಗಲಿ (ಖಮುದ. ೨–೪೮). **ಅಸಡಿ: ೧.** "ಆಷಾಢ – ಅಸಡಿ, ಆಸಡಿ" (ಶಮುದ. ೨೭೮ ಪ್ರಯೋ). **೨.** "ಅಧರಕಂಡಿಕಾ – ಅಸಡಿ" (ಓಷಧಿ. ೯). **ಅಸಾಡಿ : ೧.** ಅಸಾಡಿಸೋಣೆಗೆ ರುದ್ರಪೂಜೆಗೆ ಅಱುವತ್ತು ಹಾನೆ ಅಕ್ಕಿ (ಸೌಇಇ. IX–ii, ೪೩೦–೩೪; 1406). **ಆಷಡಿ : ೨.** "ಸತ್ಯಸರಣಿ – ಆಷಡಿ" (ಓಷಧಿ. ೧೬೪). **ಆಸಾಡಿ : ೧.** ಆಸಾಡಿ ತಿಂಗಳಲ್ಲಿ ಎಷ್ಟು ಬಿಸಿಲು ಬಂದೀತು (ಮರಮು. ೯); ಆಸಾಡಿ ಸೋಣಿ ತಿಂಗಳ ಕಾಲ (ಮರಮು. ೪೦). [< ಸಂ. ಆಷಾಢೀ]

**ಆಸಡಿಗೆಣಸು,** ಆಷಡಿಗೆಣಸು (ನಾ). ಶತಾವರಿಯ ಬೇರು; ಮಜ್ಜಿಗೆ ಗಡ್ಡೆ : ಆಸಡಿಗೆಣಸು, ತಾವರೆಗೆಣಸು, ವಿಷ್ಣುಕ್ರಾಂತಿಯ ಬೇರು ಇವುಗಳ ಸುಟ್ಟು ಕರಿಯ ನೀರಿಂದ ಕುಡಿಯಕೊಡಲು ಕೆಂಬಣಿಲ ವಿಷ ಪರಿಹರವಹುದು (ವೈದ್ಯಸಾ. II, ೨೧೯). **ಆಷಡಿಗೆಣಸು:** ಆಷಡಿಗೆಣಸು ... ನೆಲದೆಂಗಿನ ಗೆಣಸು ಇವಂ ಸಮಾನಂಗೊಂಡು ಚೂರ್ಣಿಸಿ ತುಪ್ಪ ಸಕ್ಕರೆಯಲ್ಲಿ ಕೊಳ್ಳೆ ಪುಷ್ಟಿವರ್ಧನವಕ್ಕು (ವಿವೈವಿ. ೭೨). [ಆಸಡಿ + ಗೆಣಸು]

**ಆಸತ್ತ** 'ಆಸಟ್$_1$' ಪರಾ.

**ಆಸತ್ತಿ** (ನಾ). [ತರ್ಕಶಾ] ಪದಗಳ ನಡುವೆ ವ್ಯವಧಾನವಿಲ್ಲದಿರುವುದು: "ವಾಕ್ಯದ ಪದಗಳು ಒಂದಕ್ಕೊಂದು ಮತ್ತೊಂದಕ್ಕೂ ನಡುವೆ ವಿಲಂಬವಾಗದಂತೆ ಉಚ್ಚರಿತವಾಗಿ ಕಿವಿಗೆ ಬೀಳಬೇಕು ಇದಕ್ಕೆ ಸನ್ನಿಧಿ ಅಥವಾ ಆಸತ್ತಿ ಎಂದು ಹೆಸರು" (ಭಾರಮಿ. ೨೫೦); ಪದಗಳ ಅವ್ಯವಧಾನವು ಆಸತ್ತಿ (ಹಿಂದಸಾ. ೧೪೫). [ಸಂ.]

**ಆಸತ್ತು** 'ಆಸಱ್$_1$' ಪರಾ.

**ಆಸನ** (ನಾ). **೧.** ಕುಳಿತುಕೊಳ್ಳುವುದು. **೨.** ಪೀಠ; ಕುಳಿತುಕೊಳ್ಳುವುದಕ್ಕಾಗಿ ನೆಲದ ಮೇಲೆ ಇಡುವ ಮಣೆ, ಚಾಪೆ, ಕೃಷ್ಣಾಜಿನ, ಕುರ್ಚಿ ಮುಂತಾದ ಸಾಧನ: ವಾಸವಂ . . . ಆಸನದಿಂದೆರ್ದು ಮೂಱುಸೂೞ್ ಪೊಡೆವಟ್ಟಂ (ಆದಿಪು. ೭-೪೧); ಅಗ ರಾಜಸುತೆಯು ನುಚ್ಚಾಸನದೊಳ್ ಕುಳ್ಳಿರಿಸಿ (ಗಿರಿಕ. ೪-೪೭). **೩.** [ಯೋಗ] ಅಷ್ಟಾಂಗ ಯೋಗದಲ್ಲಿ ಒಂದು ಅಂಗ; ಕುಳಿತುಕೊಳ್ಳುವುದರಲ್ಲಿ ಕೆಲವೊಂದು ಕ್ರಮ: ಯಮ ನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ಯೋಗನಿಷ್ಠೆ (ವಿವೇಕ. ೧೪೩); ಆಸನವೆಂದರೆ ಸುಖಕರವಾಗಿಯೂ ಸ್ಥಿರವಾಗಿಯೂ ಇರತಕ್ಕ ಸ್ಥಿತಿ (ಹಿಂದಸಾ. ೧೦೬). **೪.** ಷೋಡಶೋಪಚಾರಗಳಲ್ಲಿ ಒಂದು: "ಧರ್ಮಾದಿ ಪುರುಷಾರ್ಥಮಕ್ಕಾಸನಾದ್ಯುಪಚಾರಣಂ" (ಮಂಗರಾ. ೭೭-೧೨). **೫.** ರಾಜನ ಷಾಡ್ಗುಣ್ಯಗಳಲ್ಲಿ ಒಂದು: "ಅರಿವಿಜಿಗೀಷುಗಳೊರ್ವರೊರ್ವರ ಮೇಲೆತ್ತಿಯೆತ್ತಲಾಜಿದೆ ನಿಲ್ಲುವುದು ಆಸನಮೆಂಬುದಕ್ಕುಂ" (ಪಂಚತಂ. ೨೧೯-೧೭). **೬.** ಆನೆಯ ಹೆಗಲು: "ಸ್ಕಂಧಃ, ಆಸನಃ – ಈ ೨ ಆನೆಯ ಪೆಗಲ್" (ಹಲಾಯು. ೩೬-೬೪). **೭.** ಮಲದ್ವಾರ ಪ್ರದೇಶ; ಗುದ: "ವೂರಿ [ಪಾಠಾಂ. ಲೂಕಿ] ಯೆನಲಾಸನದ ಪುಣ್ಣಕ್ಕು" (ಮಂಗರಾ. ೧೧೪-೩). 'ಆಸನಕುರು', 'ಆಸನಾಂಕುರ' ಪರಾ. **೮.** ಹೊನ್ನೇಮರ: ಆಸನ (ಕಾಂಚಿ) ಇದರ ಕಟ್ಟಿಗೆಯಿಂದ ಪೀಲಾದ ತೊಲೆಗಳಾಗುತ್ತವೆ (ಕಭಾಗಿ. ೩೬). [**ಸಂ.**]

**ಆಸನಂದೋಱು** (ಕ್ರಿ). ಯುದ್ಧದಲ್ಲಿ ಉಪೇಕ್ಷಾಭಾವವನ್ನು ಅಥವಾ ತಾಟಸ್ಥ್ಯ ಭಾವವನ್ನು ತೋರಿಸು: ಏಱನೆ ಸೂಱೆಗೊಂಡು ನುಡಿವೀ ನುಡಿಯಲ್ಲದೆ ಮತ್ತಮಾಸನಂದೋಱುವ ಬಲ್ಪುದೋಱುವೆರ್ದೆದೋಱುವ ಕಯ್ಪೆಸರಂಗಳೆಮ್ಮನುಂತೇಱವು (ಪಂಪಭಾ. ೮-೨೦). [ಆಸನ + ತೋಱು (< ತೋಱ್)]

**ಆಸನಕಂಪ** (ನಾ). [ಜೈನ] ತೀರ್ಥಂಕರನ ಜನನವೇ ಮುಂತಾದ ವಿಶೇಷ ಪ್ರಸಂಗಗಳಲ್ಲಿ ದೇವೇಂದ್ರನಿಗೆ ಉಂಟಾಗುವ ಪೀಠದ ಅಲುಗಾಟ, —ಕಂಪನ: ವಾಸವನಾಸನಕಂಪದಿನಾಸಮಯದೊಳವಧಿಯಂ ಪ್ರಯೋಗಿಸಿ ಬೋಧಾವಾಸಪ್ರಿಯನುದಯಮನಱಿದಾಸನದಿಂದೆರ್ದು ಮೂಱುಸೂೞ್ ಪೊಡೆವಟ್ಟಂ (ಆದಿಪು. ೭-೪೧); ತನಗಾಸನಕಂಪಂ ತೊಟ್ಟನೆ ಪುಟ್ಟೆ ರಣಪ್ರಪಂಚದೊಳ್ ರಘುವೀರಂ ನೆನೆದಪನೆಂದು ಮಹಾಲೋಚನನೊರ್ವೊದಲಱಿದನವಧಿಲೋಚನದಿಂದಂ (ಪಂರಾಮಾ. ೧೩-೧೫೬). [ಆಸನ + ಕಂಪ]

**ಆಸನಕುರು** (ನಾ). ಗುದ ಅಥವಾ ಮಲದ್ವಾರದಲ್ಲಿ ಎದ್ದ ಕುರು (ಕಿಸಂಗ್ರಾ. ೧೧). [ಆಸನ + ಕುರು$_1$]

**ಆಸನಕ್ರಮ** (ನಾ). ಯೋಗಾಸನದ ರಚನೆ: ಸಮರತ ಸೌಖ್ಯದೊಳ್ ಸತಿ ದಿಗಂಬರವೇಷಮನಾಂತು ಮುಕ್ತಕೇಶಮುದೆಸೆಯಲ್ಕೆ ಕಣ್ ದರ ನಿಮೀಲಿತಮಾಗೆ ದಲಾಸನಕ್ರಮಂ ಸಮನಿಸೆ ಹೂಂಕೃತಪ್ರಣವಮೊಪ್ಪೆ ಶರೀರಮನೊಕ್ಕು ತನ್ಮನೋರಮಣನ ಹೃನ್ನಿಧಾನಮನುಪಾರ್ಜಿಪ ಯೋಗಿ ನಿಯಂತಿದೊಪ್ಪಿದಳ್ (ಕಾವ್ಯಸಾ. ೬೬೫). [ಆಸನ + ಕ್ರಮ]

**ಆಸನಗುರಗಿ** (ನಾ). ಒಂದು ವೃಕ್ಷ: ಕರಜೊ (ಆಸನಗುರಗಿ)(ಅಂಜುನ) ಸುಂದರ, ಸರಳ, ಎತ್ತರ, ಕಟ್ಟಿಗೆ ಕೆಂಗಪ್ಪು (ಕಭಾಗಿ. ೩೭). [?]

**ಆಸನತ್ಯಜತೆ** (ನಾ). ಆಸನತ್ಯಾಗ; ಕುಳಿತಿದ್ದ ಪೀಠವನ್ನು ಬಿಟ್ಟು ಏಳುವುದು: ಭಕ್ತನ ಮಠವೆಂದು ಜಂಗಮವು ನಡೆದು ಬಂದಲ್ಲಿ ಆ ಭಕ್ತನು ಕಾಣುತ್ತ ಆಸನತ್ಯಜತೆಯಮಾಡುತ್ತ ಕೊಂಕುತ್ತ ಕೈಮುಗಿದು ನಿಂದಿರ್ದು ಬಾಗಿ ಬಳುಕುತ್ತ (ಬಸವ. ೮೬೪). [**ಸಂ.** ಆಸನತ್ಯಜತಾ]

**ಆಸನದ್ವಾರ** (ನಾ). ಗುದದ್ವಾರ; ಮಲದ್ವಾರ: ಕೆಲವು ಪೇಳೆ ಮಗುವಿನ ಆಸನದ್ವಾರ (Anus)ದ ಒಳಗಡೆ ಸಾಬೂನಿನ ಕಡ್ಡಿಯನ್ನಿಟ್ಟು ಭೇದಿ ಮಾಡಿಸುವುದುಂಟು (ಗೃಹವಿ. ೧೪೬). [ಆಸನ + ದ್ವಾರ]

**ಆಸನನೂತಿಹುಣ್ಣು** (ನಾ). ಆಸನದ ಒತ್ತಿನಲ್ಲಿ ಬೊಕ್ಕೆ ಎದ್ದು ನವೆಯಿಂದ ಕೂಡಿ ಆಗುವ ಹುಣ್ಣು: ಆಸನನೂತಿಹುಣ್ಣಿಗೆ . . . ತುರುವೆ ಯೆಲೆಯನ್ನು ಎಂಟು ಹತ್ತು ಜೋಡಿಸಿ ದಿನಕ್ಕೆ ಎರಡುಹೊತ್ತು ಹದಿನೈದು ದಿನ ಕಟ್ಟುವುದು (ವಿವೈವಿ. ೯೯). [ಆಸನ + ನೂತಿ + ಹುಣ್ಣು(< ಪುಣ್)]

**ಆಸನಬಂಧನ** (ನಾ). **೧.** ಯೋಗಾಸನ. **೨.** ಯೋಗಾಸನ ಹಾಕಿದವನು: ಆಸನಬಂಧನರು ಸುಮ್ಮನಿರರು ಭಸ್ಮವ ಪೂಸಿ ಸ್ವರವ ಹಿಡಿವುತ್ತಿಪ್ಪರು (ಅಪಚಂ. ೫೨-೨೨೪). [ಆಸನ + ಬಂಧನ]

**ಆಸನಬಾವು** (ನಾ). = ಆಸನಕುರು (ಕಿಸಂಗ್ರಾ. ೧೧). [ಆಸನ + ಬಾವು]

**ಆಸನಯೋಗ** (ನಾ). [ಯೋಗಶಾ] ಅಷ್ಟಾಂಗಗಳಲ್ಲಿ ಒಂದು; ಯೋಗಾಭ್ಯಾಸಕ್ಕಾಗಿ ಅಥವಾ ಧ್ಯಾನಕ್ಕಾಗಿ ಉಚಿತವಾದ ಆಸನವನ್ನು ಹಾಕಿ ಕುಳಿತುಕೊಳ್ಳುವುದು: ಈ ದೇಹೇಂದ್ರಿಯಗಳು ದೃಶ್ಯಯೆಂಬುದಾಗಿ ತಿಳಿದು ಸುಸ್ಥಿರನಾಗಿಯಿರುವುದೆ ಆಸನಯೋಗ (ತತ್ತ್ವಚಿಂ. ೨೭-೮). [ಆಸನ + ಯೋಗ]

**ಆಸನರೋಗ** (ನಾ). ಗೂದೆ ಹಾಯುವ ರೋಗ; ಗೂದೆ ರೋಗ (ಕಿಸಂಗ್ರಾ. ೧೦೧). [ಆಸನ + ರೋಗ]

**ಆಸನವಟ್ಟಿಗೆ** (ನಾ). ಕುಳಿತುಕೊಳ್ಳುವ ಹಲಗೆ, —ಮಣೆ: (ಶೂನ್ಯಸಂ. ೫೧೧ ಕೋಶ). [ಆಸನ + ಪಟ್ಟಿಗೆ]

**ಆಸನವ್ರಣ** (ನಾ). ಮಲದ್ವಾರದ ಬಳಿಯಲ್ಲಿ ಉಂಟಾದ ಗಾಯ, —ಹುಣ್ಣು; ಭಗಂದರ: ಭಗಂದರವೆಂಬ ಪೆಸರುಳ್ಳಾಸನವ್ರಣವನ್ನು (ಬಾಹಟೀ. ೨-೫-೧೧೪). [ಆಸನ + ವ್ರಣ]

**ಆಸನಸ್ಥಾನ** (ನಾ). ಯಾವ ಪಕ್ಷಕ್ಕೂ ಸೇರದೆ ಉದಾಸೀನದಿಂದ ಇರುವಿಕೆ (?): ದೇವರ ಗುಂಡು ಗುಜಿಗುಜಿಗೊಂಡು ಪೊಗೞೆ ನ್ಯಾಯ ಪುರುಷಸಂತಾನಮಾಸನಸ್ಥಾನಂ ಬಿಲ್ಮುಟ್ಟೆ ಲಕ್ಷಣೋಪೇತಂ ಬಗೆಬಾಗವಸಮೆಂಬಿವನಱಿದು ಧನುರ್ವಿದ್ಯೆಯೇ ರೂಪುಗೊಂಡಂತಿರ್ದರುಂ ಕಾದೆ (ಶಾಂತಿಪು. ೪-೪೫ ವ). 'ಆಸನ ೫' ಪರಾ. [ಆಸನ + ಸ್ಥಾನ]

**ಆಸನಾಂಕುರ** (ನಾ). ಮೊಳೆರೋಗ; ಮೂಲವ್ಯಾಧಿ: "ಆಸನಾಂಕುರಮೆನಲು ಮೂಲವ್ಯಾಧಿಯೆನಿಕು" (ಮಂಗರಾ. ೧೧೪-೩). [ಆಸನ + ಅಂಕುರ]

**ಆಸನೋಚಿತ** (ನಾ). **೧.** ಉಚಿತವಾದ ಅಥವಾ ಸಮಯಕ್ಕೆ ತಕ್ಕುದಾದ ರೀತಿಯಲ್ಲಿ ಮಂಡಿಸುವುದು. **೨.** ಆಸನದ ಔಚಿತ್ಯ: ಅರಸನಾತನ ಮನುಷ್ಯಾತೀತಮಪ್ಪ ಪ್ರಕೃತಿಯಂ ಕಂಡಾಸನೋಚಿತದಿಂ ದೇಱಲಿಕ್ಕಿದ ಭದ್ರಾಸನದೊಳ್ ಕುಳ್ಳಿರ್ದು (ಶಾಂತಿಪು. ೮-೧೨೬ ವ). [ಆಸನ + ಉಚಿತ]

**ಆಸನ್ನ** (ಗು). **೧.** ಹತ್ತಿರವಾದ; ಸಮೀಪವಾದ: ಆಸನ್ನಂ ಮಱೆಗಾಲಂ (ಪಂರಾಮಾ. ೭-೧೩೨). (ನಾ). **೨.** ಹತ್ತಿರ; ಸಮೀಪ: "ಸಮೀಪಂ, ಸನೀಡಂ . . . ಆಸನ್ನಂ, ಸವಿಧಂ, ಪಾರ್ಶ್ವಂ . . . ಅಪದಾಂತರಂ –ಈ ೧೮ ಸಮೀಪಂ" (ಹಲಾಯು. ೧೧೫-೮). [**ಸಂ.**]

**ಆಸನ್ನಕಾಲ** (ನಾ). ಸಾವು ಸಮೀಪಿಸಿದವನು: ಅಧರೀಕೃತದಿಕ್ಪಾಲಕನುಮಾಸನ್ನಕಾಲನುಮಪ್ಪ ಶಿಶುಪಾಲಂ ಕಡುಮುಳಿದು (ಪಂಚತಂ. ೨೩೬-೧೪). [ಆಸನ್ನ + ಕಾಲ]

**ಆಸನ್ನಗತ** (ನಾ). ಹತ್ತಿರ ಬಂದವನು; ಸಮೀಪಗತನಾದವನು: ತ್ರಿವಿಷ್ಟಪಗುರುವಂ ಕಂಡತ್ಯಂತ ದೂರಾವನತಮಣಿಕಿರೀಟನಾಸನ್ನಗತನಾಗಿ (ಶಾಂತಿಪು. ೮-೬೬ ವ). [**ಸಂ.**]

**ಆಸನ್ನಗಮನ** (ನಾ). ಹತ್ತಿರಹೋಗುವುದು : "ಪೋಪು – ಆಸನ್ನ ಗಮನೇ" (ಶಮುಧಾ). [ಆಸನ್ನ + ಗಮನ]

**ಆಸನ್ನತೆ** (ನಾ). ಸಮೀಪವಾಗಿರುವಿಕೆ; ಸಾಮೀಪ್ಯ : ಮುನ್ನಿನ ಭವಮುಂ ಬಂಧುಗಳಂ ನೆಱೆ ತಿಳಿವಱಿತಮಾಯ್ತು ಭವದೀಯ ಪದಾಸನ್ನತೆ ಯಿಂದೆ (ಕಾದಂಊ. ೯೯೪). [ಸಂ. ಆಸನ್ನತಾ]

**ಆಸನ್ನಪೀಡನ** (ನಾ). ಹತ್ತಿರಬಂದು ಹಿಂಸೆಮಾಡುವುದು ; ಅಂಡಲೆ ಯುವುದು : "ಅಂಡಲೆ—ಆಸನ್ನಪೀಡನೇ (ತೊ ೦ ದ ರೆ ಪ ಡಿ ಸು)" (ಶಮುಧಾ). [ಆಸನ್ನ + ಪೀಡನ]

**ಆಸನ್ನಪ್ರದೇಶ** (ನಾ). ಹತ್ತಿರದ ಜಾಗ ; ಸಮೀಪದ ಪ್ರದೇಶ : ಯತಿಪತಿಗಳಂ ಕಂಡು ವಿನಯದಿಂ ಬಂದಿಸಿ ತದಾಸನ್ನಪ್ರದೇಶದೊಳ್ ಕುಳ್ಳಿರ್ದು (ಸುಕುಮಾ. ೭–೪೨ ವ). [ಆಸನ್ನ + ಪ್ರದೇಶ]

**ಆಸನ್ನಭವ್ಯ** (ನಾ). [ಜೈನ] ಜೈನತತ್ತ್ವೋಪದೇಶವನ್ನು ಕೇಳಿ ಶೀಘ್ರದಲ್ಲಿಯೇ ಮನಃಪರಿಪಾಕವನ್ನು ಹೊಂದುವವನು : ಆಸನ್ನ ಭವ್ಯರರ್ಹಚ್ಛಾಸನದೊಳ್ ಭಕ್ತರ್ (ಶಾಂತಿಪು. ೧೨–೩೯) ; ಸೂರ್ಯ ಮಿ ತ್ರ ನಂ ಕಂ ಡು ತದಾಕಾರೋಪಲಕ್ಷಿತದಿಂದತ್ಯಾಸನ್ನಭವ್ಯನೆಂದು ನಿಶ್ಚಯ್ಸಿ (ಸುಕುಮಾ. ೩–೮ ವ). [ಆಸನ್ನ + ಭವ್ಯ]

**ಆಸನ್ನಭವ್ಯೆ** (ನಾ). ಆಸನ್ನಭವ್ಯತೆಯನ್ನು ಪಡೆದವಳು : ಆಸನ್ನ ಭವ್ಯೆಯುಂ ಜಿನಶಾಸನದೀಪಿಕೆಯುಮೆನಿಸಿ (ಅಜಿಪು. ೧–೫೮). [ಸಂ. ಆಸನ್ನಭವ್ಯಾ]

**ಆಸನ್ನಮೃತ್ಯು** (ನಾ). ಸಮೀಪವಾಗಿರುವ ಸಾವು ; ಸಾವಿನ ಸಾಮೀಪ್ಯ : ವಿದ್ಯಾವಚನದಿನಾತನಾಸನ್ನಮೃತ್ಯುವನಱಿದು (ಆದಿಪು. ೨–೧೪ ವ). [ಆಸನ್ನ + ಮೃತ್ಯು]

**ಆಸನ್ನವರ್ತಿ** (ಗು). ಹತ್ತಿರದಲ್ಲಿರುವ ; ಸಮೀಪವರ್ತಿಯಾದ : ತನ್ನ ತಂದೆ ಪಾಗುಡಮನಾಸನ್ನವರ್ತಿಯುಮಭಿರಾಮಮೂರ್ತಿಯು ಮಪ್ಪಮಾತ್ಯೋತ್ತಮನ ಕೈಯೊಳ್ ಕುಡುವುದುಂ (ಶಾಂತಿಪು. ೨–೨೨ ವ). [ಸಂ. ಆಸನ್ನವರ್ತಿನ್]

**ಆಸನ್ನಿಸು** (ಕ್ರಿ). ಹತ್ತಿರವಾಗು ; ಸಮೀಪಿಸು : ಈಕೆಯಂನಿನ್ನು ವರಿಸುವೆನೆಂಬ ಭರಪಾ[ಪಾಠಾಂ. ತರಿಸುವೆನೆಂಬ ಭರವಸ]ಸನ್ನಿಸಲು ಕೌಶಿಕ ಮಹೀಪತಿ ಹೊಕ್ಕನರಮನೆಯ (ಪ್ರಭುಲೀ. ೧೦–೫). [ಆಸನ್ನ + –ಇಸು₃]

**ಆಸಪತ್ರಿ** 'ಆಸ್ಪತ್ರೆ' ನೋ.

**ಆಸಪಾಕ** 'ಆಸ್ಪಾಕ' ನೋ.

**ಆಸಪಾಸ** 'ಆಸಪಾಸು' ನೋ.

**ಆಸಪಾಸು**, ಆಸಪಾಸ, ಆಸುಪಾಸು (ನಾ). (ಉಕ; ಕರಾ). ಸುತ್ತು ಮುತ್ತು ; ಅಕ್ಕಪಕ್ಕ ; ನೆರೆಹೊರೆ : ಕಾಡುಪ್ರದೇಶದಲ್ಲಿ ಮರೆಮಾಡಿ ಕೊಂಡು ಆಸಪಾಸು ಗ್ರಾಮಗಳಲ್ಲಿ ಕೆಲವರನ್ನು ತಮ್ಮವರನ್ನಾಗಿ ಮಾಡಿ ಕೊಂಡು (ನಡೆವಾ. II, ೬೫೯). **ಆಸಪಾಸ** : ಅಷ್ಟರಾಗ ಆಸಪಾಸ ಹೊಲದಾಗಿನ ಮಂದಿ ಕೂಡಿ ಬಿಡಿಸಿದರಂತ (ಧನಂಜ. ೩೩) ; ಉರಿಯು ಪ್ರಬಲವಾಗಿದ್ದುದರಿಂದ ಝಳವು ಆಸಪಾಸ ಯಾರನ್ನೂ ಹಾಯಗೊಡಲಿಲ್ಲ (ಕುಂಬಳ. ೨೧). **ಆಸುಪಾಸು** : ಈ ಬೆಳ್ತಂಗಡಿ ಆಸುಪಾಸುಗಳಲ್ಲೇ ಎಷ್ಟೆಲ್ಲ ಶಾಲೆಗಳಿಲ್ಲ (ಚಿಗುಕ. ೫೭). [← ಮರಾ. ಹಿಂ. ಆಸ್‌ಪಾಸ್]

**ಆಸಪು** 'ಆಸಫ್' ನೋ.

**ಆಸಫ್**, ಆಸಪು (ನಾ). (ರೆವಿನ್ಯೂ ಅಥವಾ ಸೈನ್ಯದ) ಸರಕಾರೀ ಉನ್ನತಾಧಿಕಾರಿ : ಅಮಲ್ದಾರರು ಆಸಫರ ಅಧಿಕಾರಕ್ಕೆ ಒಳಪಟ್ಟಿದ್ದರು (ಮಹಾವಂ. II, ೨೬) ; ಕ್ರೂರದಂಡನೆಯ ಭಯದಿಂದಲೂ ಅವರು ನೇಮಿಸಿದ ಆಸಫರ ಫೌಜು ಅಲ್ಲಲ್ಲಿ ಜಾಗರೂಕವಾಗಿರುತ್ತಿದ್ದುದರಿಂದಲೂ (ಮಹಾವಂ. II, ೩೫). **ಆಸಪು** (ರೀವ್ಸ್). [← ಅರ. ಆಸಫ್]

**ಆಸಫಗಿರಿ** (ನಾ). ಸ್ಥಳೀಯ ಉನ್ನತಾಧಿಕಾರಿಯ ಅಧಿಕಾರ (ರೀವ್ಸ್). [ಆಸಫ + –ಗಿರಿ₂]

**ಆಸಬದಾರ** (ನಾ). ರಾಜದಂಡವನ್ನು ಹಿಡಿದಿರುವವನು : ಅನೇಕ ಚೋಪದಾರರೂ ಆಸಬದಾರರೂ ತಮ್ಮ ತಮ್ಮ ಯೋಗ್ಯವಾದ ಉಡುಪು ತೊಡುಗೆಗಳಿಂದ ಸಜ್ಜಿತರಾಗಿ ನಿಂತಿದ್ದಾರೆ (ದೇವೀಚೌ. ೧೧೩). [← ಅರ. ಆಸಾಬರ್‌ದಾರ್]

**ಆಸಮಾನಿ** (ನಾ). ಆಕಾಶದ ಬಣ್ಣ ; ನೀಲಿಯಬಣ್ಣ (ದಕ. ೬). [← ಹಿಂ. ಆಸಮಾನೀ]

**ಆಸರ₁** (ನಾ). ಒಂದು ಸುಗಂಧ ದ್ರವ್ಯ ; ಜಾಯಿಪತ್ರೆ : ಸಿರಿಕಂಡಂ ಕುಂಕುಮಮುಗುರು ರೇಣುಕಂ ಜಾದಿಕಾಯ್ ತವಕ್ಷೀರಂ ಕತ್ತುರಿ ಸಿತಮಾಸರಮೆಂಬಿವು ಸರಿಸಂ ನಾಲ್ವಡಿ ಶಶಾಂಕತಕ್ಕೋಲಂಗಳ್ (ಲೋಕೋಪ. ೭–೯). [?]

**ಆಸರ₂** 'ಆಸರೆ' ನೋ.

**ಆಸರಗೇಡಿ** (ನಾ). ಆಸರೆಯಿಲ್ಲದವನು ; ನಿರಾಶ್ರಿತ : ಮುಂಚಿಗಿಂತಲೂ ಎಲ್ಲ ದೃಷ್ಟಿಯಿಂದಲೂ ಒಳಿತೆನಿಸುವ ಜಾಗೆಯಲ್ಲಿರುತ್ತಾನೆ. ಆದರೂ ಆಸರಗೇಡಿ (ಪುರುಷ. ೮೦). [ಆಸರ₂ (< ಆಸರೆ) + ಕೇಡಿ]

**ಆಸರಿಕೆ** 'ಆಸಱಿಕೆ' ನೋ.

**ಆಸರಿಸು₁** (ಕ್ರಿ). ಆಶ್ರಯಕೊಡು : ಆಸತ್ತು ಪಸಿದುಬನ್ದವರ್ಗ್ಗಾಸರಿಸಲೆ ಕಿಱಿದು ಬರಿದಿದೆನ್ನದೆ ಕೇಳಿ ಸಾಸಲ ಸ್ವಯಂಭೂದೇವರ ದಾಸಂ ಸಲೆ ಮಲ್ಲಿಸೆಟ್ಟಿ ದಾನವಿನೋದ (ಸೌಇಇ. XX, ೧೧೦–೩೧ ; [illegible]). [ಆಸರ₂ (< ಆಸರೆ) + –ಇಸು₃]

**ಆಸರಿಸು₂** (ಕ್ರಿ). ಆಯಾಸಗೊಳಿಸು ; ಬಳಲಿಸು : ಘೋಷ ಗಂಟೆಯು ಜಾವವನು ತಾ ಬಯಸುವಂದದಲಿ ಈಶ ನಿಮ್ಮಯ ನಿತ್ಯಸುಖವನು ಹೇಗೆ ಮನುಜನು ತನಗೆ ಬಹುದಿನವಾಸರಿಸದೇ ನಿನ್ನ ಸೇನೇ ಒಲಿಯದಿರದನಕ (ಸುಸಾರ. ೧೦೫–೨) ; ಅಂತೆ ನೀನೆಸಗಲಿನಿತಾಸರಿಸಿ ಬೇಸರಿಸಿ ಬಿಲುವಿದ್ಯೆ ಕಲಿತಕಟ ಫಲವೇನು ? (ಹೆಬ್ಬೆರ. ೧೪–೧೬). [ಆಸರು₁ (< ಆಸಱ್₂) + –ಇಸು₃]

**ಆಸರು₁** 'ಆಸಱ್₂' ನೋ.

**ಆಸರು₂** 'ಆಸರೆ' ನೋ.

**ಆಸರೆ**, **ಆಸರ₂**, ಆಸರು₂ (ನಾ). ಅವಲಂಬನ ; ಆಶ್ರಯ ; ಆಧಾರ; ಊರೆ : ಸುತ್ತಲೂ ಯಾವುದರ ಆಸರೆಯೂ ಇಲ್ಲದೆ ಪೃಥಕ್ಕಾಗಿ ಭೂಮಿಯು ಮಹಾದೂರದಲ್ಲಿ ನೆಲೆಸಿರುವ . . . ಗೋಳ (ಜ್ಯೋತಿರ್ವಿ. ೧೯) ; ಆತನೇ ನನ್ನ ಆಸರೆಯಾಗಿದ್ದ (ನನ್ನಜೊ. ೪೩) ; ನಾನು ದೊರೆಯ ಮಗನೆಂದು ಹೇಳಿದ್ದರೆ ನಿಮ್ಮ ಮನೆಯಲ್ಲಿ ನನಗೆ ಆಸರೆ ದೊರೆಯುತ್ತಿರ ಲಿಲ್ಲ (ಹಾಹುತ್ತ. ೯೮). **ಆಸರ₂** : ನಾವು ಸುಮ್ಮನಿರುವುದೇ? ಅವರಿಗೆ ಬಾಳಿನಲ್ಲಿ ಒಂದು ಆಸರ ಬೇಡವೆ? ಸಮಾಜವೇ ಅವರ ಆಸರ (ಹಬ್ಬಿ. ೩೮). **ಆಸರು₂** : ಇದುವೆ ಆಸೆಯು ಇದುವೆ ಆಸರು ನಾಳೆಯೆಳ್ಗೆಯ ನೇಸರು (ದ್ರಾಕ್ಷಿದಾ. ೪೨). [< ಸಂ. ಆಶ್ರಯ]

**ಆಸರೆಗೊಡು** (ಕ್ರಿ). ಆಶ್ರಯವನ್ನು ಕೊಡು ; ಆಸರೆಯಾಗು: 'ಬಿಜ್ಜ'ನಿಗೆ ಆಸರೆಗೊಟ್ಟು ಅರಿಕೇಸರಿ ಅವನನ್ನು ಉದ್ಧರಿಸಿದ ವಿಷಯವನ್ನು ಭಾವಿಸಬೇಕು (ನಾಡೋಜ. ೨೦೪). [ಆಸರೆ + ಕೊಡು]

**ಆಸರೆಗೊಳ್ಳು** (ಕ್ರಿ). ಆಶ್ರಯವನ್ನು ಪಡೆ; ಆಶ್ರಯಿಸು (ದಕ. ೬). [ಆಸರೆ + ಕೊಳ್ಳು (< ಕೊಳ್₁)]

**ಆಸರ್ಗಳೆ** (ಕ್ರಿ). ಆಯಾಸವನ್ನು ಹೋಗಲಾಡಿಸಿಕೊ ; ಬಳಲಿಕೆಯನ್ನು ನೀಗು : ಸುಳಿವ ತಂಗಾಳಿಗಳ ಕಡುಗಂಪ ಸೇವಿಸುತೆ ಪಥಿಕರಾಸರ್ಗಳೆವರಾ ನಾಡೊಳು (ಜೈಮಿಭಾ. ೩–೮). [ಆಸಱ್₂ + ಕಳೆ₁]

**ಆಸಲ್** (ಗು). ಒಳ್ಳೆಯ ; ಉತ್ತಮ : ಹೀಗೆ ಇರುವಲ್ಲಿ ಹೊಸ ಸರಹದ್ದಿನ ಮೇಲೆ ಮನಸು ಮಡಗುವುದು ಆಸಲ್ ಮಾತಲ್ಲ (ರಾಜೇಂದ್ರ. ೧೦೪). [← **ಅರ.** ಅಸಲ್]

**ಆಸವ** (ನಾ). **೧.** ಭಟ್ಟಿಯಿಳಿಸಿ ತಯಾರಿಸಿದ್ದು ; ಔಷಧಿಯ ಅರ್ಕ : ವನೌಷಧಿಯಿಂದ ತಯಾರಿಸಿದ ಆಸವಗಳು (ಗೃಹವೈ. ೨) ; ಆಸವ ಅರಿಷ್ಟ ತೈಲಗಳನ್ನು ಪಂಡಿತರು ಹೇಳಿದಂತೆ ಸಿದ್ಧಪಡಿಸಿ . . . ಅನುಭವ ಪಡೆದ (ಶಾಂತಲಾ. ೨೪೭). **೨.** ಮದ್ಯ ; ಸುರೆ : "ಮಧು, ಆಸವ, ಸೀಧು, ಸುರಾ . . . – ಈ ೨೪ ಕಳ್ಳು" (ಹಲಾಯು. ೫೫–೧೭೫) ; ಬಗೆವರೇ ವಿಷಯಾಸವಮತ್ತರೇನುಮಂ (ಪಂರಾಮಾ. ೯–೩೪). **೩.** ಮಕರಂದ ; ಪುಷ್ಪರಸ : ಭಾವೋದ್ಭವನಿಂ ಪರವಶೆಯಾದೆಂ ನವಕುಸುಮಮಾಸವದೆ ಸೊರ್ಕಿದ ೞಿನಿಯ ತೆಱದಿಂ (ಕಾದಂಪೂ. ೭೪೫). [**ಸಂ.**]

**ಆಸವಾರಿ** (ನಾ). **೧.** ಕುದುರೆಯ ಸೇವಕ ; ಕಾಸ್‌ದಾರ : ಕಳಕಳನಾದಮಾದ ತೆಱನಂ ಜನಕಂ ತಿಳಿದಾಸವಾರಿಗಳ್ ತಳೆದು ಖಲೀನಮಂ ತುರಿಪದಿಂ ಬರೆ ಸಂದಿಸಿ (ಪಂರಾಮಾ. ೪–೧೧೩). **೨.** ಅಶ್ವಾರೋಹಕ ; ಸವಾರ; ರಾವುತ : ತಾಗಿ ತಳ್ತಿಱಿದು ಲೋಹಿತವೃಷ್ಟಿಯನಾಸವಾರಿಗಳ್ ಪುಟ್ಟಿಸೆ (ಪಂರಾಮಾ. ೧೩–೫೯) ; ಜಾನುದಘ್ನಮಾದುವು ತರವಾರಿಯಿಂದಿಱಿಯೆ ಲೋಹಿತವಾರಿಗಳಾಸವಾರಿಗಳ್ (ಪಂರಾಮಾ. ೧೩–೬೧).

[**ಪ್ರಾ.** ಆಸವಾರ < **ಸಂ.** ಅಶ್ವವಾರ]

**ಆಸವಾಸಕ್ತ** (ನಾ). ಮದ್ಯದ ಗೀಳುಳ್ಳವನು ; ಮದ್ಯಪಾನದಲ್ಲಿ ಆಸಕ್ತ : "ಆಸವಾಸಕ್ತನಶುದ್ಧ ವಾದ್ಯ ಪಶುತುಂಡವಿಲೇಪನ ಗೋಮು ಖಾಹ್ವಯಂ" (ನಾನಾರ. ೨೧). [ಆಸವ + ಆಸಕ್ತ]

**ಆಸವಾಸಕ್ತಿ** (ನಾ). **೧.** ಮಕರಂದದಲ್ಲಿ ಆಸಕ್ತಿ. **೨.** ಮದ್ಯದ ಗೀಳು. **೧, ೨** : ಆಸವಾಸಕ್ತಿ ಮಧುವ್ರತದೊಳ್ . . . ಗಳಗ್ರಾಹಿತ್ವಮೇಕಾವಳಿಯೊಳ್ . . . ಅಲ್ಲದಿಲ್ಲಂ (ಚಂದ್ರಪು. ೩–೯ ವ). [ಆಸವ + ಆಸಕ್ತಿ]

**ಆಸಱ್**$_1$, ಆಸಱು$_1$ (ಕ್ರಿ). ಬಳಲು ; ಆಯಾಸಪಡು ; ದಣಿ; ಆಸತ್ತ, (ಭೂತಕೃ), ಆಸತ್ತು (ಭೂತನ್ಯೂ) : ಆಸತ್ತು ತಿರಿದರಣ್ಯಾವಾಸದ ಪರಿಭವದ ಕುದಿಪಮಂ ನೀಗಿ ಸುಖವಾಸಮನೆಯ್ದಿಸಿದುದು ದುಶ್ಶಾಸನ ನಿರ್ದಿರವು ಮನದೊಳಾ ದ್ರೌಪದಿಯಾ (ಪಂಪಭಾ. ೧೨–೧೫೨) ; ಪಿರಿದು ವಾಸತ್ತ ಬಲಂ ನಿಲವೇಱ್ಕುಮೆಂದು ನೃಪಕುಲಲಲಾಮನಂತಲ್ಲಿ ಪಲವು ದಿವಸಮನಿರ್ದಂ (ಕಾದಂಪೂ. ೬೧೫). **೨.** ಬೇಸರಗೊಳ್ಳು ; ಜುಗುಪ್ಸೆಹೊಂದು : ಅಕಟಕಟಾ ಸಂಸಾರಕ್ಕಾಸತ್ತೆ ಕೂಡಲಸಂಗಮದೇವಾ (ಬಸವ. ೧೦) ; ಆತನಂ ತೋೞಲಾವಱಿಯೆವಳಬೇಡೆಂದಡೇತೆಱದೊಳಂ ಮಾಣದಿರ್ದಡಾಸತ್ತು ಬಿಟ್ಟೈತಂದರೆ (ಸಿದ್ಧರಾ. ೨–೫೮). **ಆಸಱು**$_1$ : **೧.** "ಆಸಱು – ಆಲಸ್ಯೇ" (ಶಮಧಾ) ; ಚಿತ್ರಪೆನ್ನಯ ಮುಗ್ಧತನವೀನೇತ್ರದೊಳಗಣ ಕಸವಿದೆಂಬವೊಲಾ ತ್ರಿನೇತ್ರನ ನೇತ್ರವಂ ಶೋಧಿಸುವ ನಾಸಱದೆ (ಬಸಪು. ೧೮–೫೯).

**ಆಸಱುಬೇಸಱು** = ಆಯಾಸಗೊಳ್ಳು ಮತ್ತು ಬೇಸರಪಡು : ಈ ಗತಿಯಡಗದಾಸಱದೆ ಬೇಸಱದೆ . . . ಸದ್ವ್ರತಿಯ ಸಮತೆಗೆ ಪುರಜನಂ ವಿಸ್ಮಯವಿದೆನುತಿರಲು (ಬಸಪು. ೩೯–೩೧).

[**ದೇ.** ‖ **ತಮಿ.** ಅಚರ್, ಅಯರ್ ; **ಮಲ.** ಅಯರ್]

**ಆಸಱ್**$_2$, ಆಸರು$_1$, ಆಸಱು$_2$ (ನಾ). **೧.** ದಣಿವು ; ಬಳಲಿಕೆ ; ಆಯಾಸ: ಶರಭಮಂ ಬೆಂಕೊಳ್ವ ಭೇರುಂಡವಕ್ಕಿಗಳಂ ನೋಡಿದ ನೋಟದಾಸಱುಗಿವನ್ನಂ ಕಂಡನಾಸನ್ನದೊಳ್ ಸಗರಂ ಕನ್ನೆಯುಮಂ ತದಗ್ರಜನುಮಂ ವೇತ್ರಾವತೀ ತೀರದೊಳ್ (ಪಂರಾಮಾ. ೧೦–೭೮) ; ಚಿತ್ತದಾಸಱಿವಂತೆ...ಪೂಜಿಸಿದನೋಜೆಯಿಂ ರಾಜೇಂದ್ರನು(ಹಚಕಾ.೩–೬೬); ಕೈತವಕ್ಕೆಕ್ಕೈತಳಂ ಕನಲ್ಕೆಗಿರವಾಸಱ ವಾಸಮೆಡರ್ಗೆ ಬೀಡೆನಲ್ (ಚಿಕವಿ. ೬–೭೪). **ಆಸರು**$_1$ : **೧.** ತೃಷೆಯುಡಸುತಾ ಯುವತಿಯ ಸುಲಾವಣ್ಯರಸವನಂಬಕಗಳಿಂ ತವೆ ನೀಂ[ಯೀ]ಂಟಿ ತಣಿದು ತಣ್ಣನೆ ಝುಳಮಡಂಗಿ ನಡವಾಸರಂ ಮರದನೊರ್ವ ಸವಿಗಾರನು (ರುಕ್ಮಾಂಗ. ೨–೨೧) ; ಆಸರಾಯ್ತು ನಿನಗೆ ರಂಭೆ . . . ಬಹಳ ನೊಂದೆ (ಅಹಲ್ಯೆ. ೯–೧೩). **೨.** ಬಾಯಾರಿಕೆ ; ದಾಹ : ಯಾರೋ ಮೂಡಲು ಕಡೆಯವರಂತೆ, ಉಡುಪಿಗೆ ಯಾತ್ರೆ ಹೊರಟಿರುವಂತೆ, ಆಸರೆಂದು ನೀರು ಕೇಳಿದರು (ಹಾಹುತ್ತ. ೬೯) ; ಯಾರೂ ಇಲ್ಲವೆ ? ಆಸರಿಗೆ ನೀರು ಬೇಕು ಎಂದು ಕೂಗಿದನು (ಕೋಟಿಚೆ. ೧೭). **ಆಸಱು**$_2$: **೧.** ಎಕ್ಕಲನ ಬಳಿವಿಡಿದು ಸುತ್ತಿದಾಸಱನು ಮುನಿರಕ್ಕಸನ ಬನಕೆ ಬಂದಂಜಿಕೆಯನು . . . ಮಿಕ್ಕು (ಹಚಕಾ. ೭–೭) ; ಮನದಾಸಱು ನುಡಿದಲ್ಲದೆ ಮಾಣದು ವನಿತೆ ಮೌನವಿದೇಕೆ ನಿನಗೆ (ಶ್ರೀಪಾಲ. ೨–೩೨) ; ಬೇಸಱುಗೊಂಬ ತತ್ಕುವರಿಯ ಮನದೊಳಗಾಸಱು ಬಹಳವೆಗ್ಗಳಿಸಿ (ಮೋಹತ. ೨೭–೬೫); (ನಿಭಾಗ. ೩–೨–೩೦ ನೋ). **೨.** ಲೇಸನಾಡಿದೆ ವಿದುರ ವೇದವ್ಯಾಸನಂದನ ನೀನಲಾ ನಿನ್ನಾಸಱೀ ಜಗದಘಸಮುದ್ರವನೀಂಟದಡಗದಲ (ನಿಭಾಗ. ೪–೧೧–೫). **೩.** ಆಲಸ್ಯ ; ಬೇಸರು : ಆಸಱುಳ್ಳವಳ ಮನೆವಾರ್ತೆ ತಾಯ್ಸತ್ತ ಕೂಸಿನಂತಕ್ಕು (ಸರ್ವಜ್ಞ. ೧೭೨೩). **೪.** ಆಸೆ; ಬಯಕೆ : ಬಱಲದು ಜವ್ವನಂ ತವದು ಮೆಯ್ಸಿರಿ ಖಂಡಿಸದಾಯು ಮೆಚ್ಚು ಕೆಚ್ಚಱಿಯದು ನಣ್ಪು ನಣ್ಪುಗೆಡದಾಸಱು ಪೋಗದು (ಸೂಕ್ತಿಸು. ೪–೧೨೮) ; ವರಪುಣ್ಯಕಥೆವೇಳ್ದು ನಮ್ಮ ಕಿವಿಯಾಸಱಂ ತವಿಸೆಂದನು (ನಂದಿಮಾ. ೨–೩೨).

**ಆಸಱುಬೇಸಱು** = ಆಯಾಸ ಮತ್ತು ಬೇಸರಿಕೆ : ಅಲ್ಲಮಲಿಂಗನಿದಿರಲಿ ಸೂಸಿದರು ತಮ್ಮೊಡತಿಯಾಸಱುಬೇಸಱಿಲ್ಲವನು (ಪ್ರಭುಲೀ. ೭–೪೯) ; ಕಾದು ದೀತನ ನಾಮವಾ ಪ್ರಹ್ಲಾದನಾಸಱುಬೇಸಱನು (ಕುವ್ಯಾಸ. ೧೦–೪೩).

[< ಆಸಱ್$_1$. / **ತಮಿ.** ಅಚತಿ, ಅಚಪ್ಪು, ಅಚ್ಚೈವು; **ಮಲ.** ಅಯರ್ಚ, ಅಯಪ್ಪು, ಅಶತಿ ; **ತುಳು.** ಆಸರು = ಬಾಯಾರಿಕೆ, ದಾಹ]

**ಆಸಱಿಕೆ, ಆಸರಿಕೆ** (ನಾ). ದಣಿವು ; ಆಯಾಸ: ತೊಡೆಗಳು ಸೋಂಕಿದ ಪೆಂಗಳಾಸಱಿಕೆಯ ತೊಡೆವುವು ಕದಳಿಗಳವಕೆ ಪಡಿಯೆಂಬ ಪದನುಳ್ಳರದ ತೊಡೆ ರಾಯನ ಕಡು ಚೆಲ್ವನಱಿದಿರು ವಿಹಗಾ (ಭರಚ.೬–೬೭). **ಆಸರಿಕೆ:** ಅದರ ಆಸರಿಕೆ ತೊಡಗುತ್ತಲೇ ನಿಜಕ್ಕೂ ಬಾಯಾರಿಕೆಯಾದವನಂತೆ ಸುಬ್ರಾಯನನ್ನು ಕಟ್ಟಿಕೊಂಡು (ಕರ್ಮವೀ. ೮–೧೧–೫೯).

**ಆಸರಿಕೆಬೇಸರಿಕೆ** = ಆಯಾಸ ಮತ್ತು ಬೇಸರಿಕೆ : ಅಬ್ಬಬ್ಬ ಏಸೊ ದಿನ ಸಾಗಿಯೂ ಕೂಡ ಆಸರಿಕೆ ಬೇಸರಿಕೆ ತೋರದಿತ್ತು (ನನಲ್ಲ. ೬೭).

[ಆಸಱ್$_1$ + –ಇಕೆ]

**ಆಸಱು**$_1$ 'ಆಸಱ್$_1$' ನೋ.

**ಆಸಱು**$_2$ 'ಆಸಱ್$_2$' ನೋ.

**ಆಸಱಿ** (ನಾ). (?) : ಜವನ ಮೀಸೆಯನೊಲೆದುಯ್ಯಲಾಡುವರುಂ ಮಿತ್ತುವಂ ತೊತ್ತಮಾಡಿಯಾಳುವರುಂ ಅರಳಿಯ ಹೂತರಳಿಯ ತಿಗುಡರಕ್ಕಸನ ದಾಡೆಯ ಬೆಳುದಿಂಗಳ ನೊರೆಯ ಹೆಬ್ಬುಲಿಯ ಗಿಣ್ಣು ಆಸಱಿಯ ಗೋಸನೆಯುಂ (ಎಕ. VIII, ಸೊರಬ. ೨೬೮–೩೯ ; 1245). [?]

**ಆಸಾ** (ನಾ). ಅಧಿಕಾರ ಸೂಚಕವಾದ ದಂಡ : ರತ್ನದ ಕೆಲಸ ಮಾಡಿದಂಥ ಚೋಪದಾರರ ಮುರುಕು ಆಸಾಗಳು ಸೋಟಾಗಳು . . . ಹಾಗೆಯೇ ಬಿದ್ದಿತ್ತು (ಮುಸಗ. ೨೮). [← **ಅರ. ಹಿಂ.** ಆಸಾ]

**ಆಸಾಗೊರ** (ನಾ). ಒಂದು ಊರಿನ ಹೆಸರು (?) : ಇಂತಿದಕ್ಕೆ ಕಾಕಂಬಾಳ ಕಂಭಯ್ಯನುಂ ಆಸಾಗೊರರ ಕನ್ನನುಂ ಪೊಸವೂರ ಬೇದಮ್ಮನುಂ (ಎಕ. XI, ಚಿತ್ರದು. ೭೪–೨೭ ; 968). [?]

**ಆಸಾಡ** 'ಆಸಡ' ನೋ.

**ಆಸಾಡಿ** 'ಆಸಡಿ' ನೋ.

**ಆಸಾಡಿತಿಂಗಳು** (ನಾ). ಆಷಾಢಮಾಸ: ಆಸಾಡಿ ತಿಂಗಳಿನಲ್ಲಿ ಎಷ್ಟು ಬಿಸಿಲು ಬಂದೀತು (ಮರವು. ೯); ಆಸಾಡಿ ತಿಂಗಳು ಎಂದರೆ ಬರೀ ಮಳೆಯ ತಿಂಗಳೇ (ಅನಾಥೆ. ೧೯೯).
[ಆಸಾಡಿ (< ಆಸಡಿ) + ತಿಂಗಳು (< ತಿಂಗಳ್)]

**ಆಸಾದನ** (ನಾ). ೧. ಮೇಲೆ ಬೀಳುವುದು,—ಯುದ್ಧ ಮಾಡುವುದು. ೨. ಹೊಂದುವುದು ; ಪಡೆಯುವುದು. ೩. ನೆರವೇರಿಸುವುದು.
[ಸಂ.]

**ಆಸಾದಿ** (ನಾ). ಕೆರ ಹೊಲಿಯುವವನು ; ಅಟ್ಟೆ ಚುಚ್ಚುವವನು ; ಮೋಚಿ : ಅವೂರೊಳಗಣ ಆಸಾದಿಗಳನು ಕರೆದು ನೀವು ಶಿವಭಕ್ತರಾಗಿರೆಂದು (ಬಜ್ಜರಾ. ೯–೩೮) ; ಎಸೆವ ಆಸಾದಿಗಳೀವೆಂದು ಶೀಲವ ಬಸವಣ್ಣ ನಿಟ್ಟು ಬೆರಸಿದ (ಬಜ್ಜರಾ. ೯–೪೧). [ದೇ. ‖ ತೆಲು. ಆಸಾದಿ]

**ಆಸಾದಿತ** (ಗು). ಪಡೆದ; ಹೊಂದಿದ: ಕರ್ಮಾರಿಪು ವಿಜಯದೊಳಾಸಾದಿತ ಕೇವಳಲೋಚನನಾ ದೇವಂ ಮೋಕ್ಷಲಕ್ಷ್ಮಿಗಧಿಪತಿಯಾದಂ (ಶಾಂತಿಪು. ೬–೫೨) ; ವಿಕ್ರಮಾಸಾದಿತ ವಿಶ್ವಲೋಕವಿಜಯಂ . . . ಜನಾರ್ದನಂ (ಪಂರಾಮಾ. ೧೪–೧೬೫). [ಸಂ.]

**ಆಸಾದ್ಯ** (ಗು). ಹೊಂದಬಹುದಾದ; ಹೊಂದತಕ್ಕ. [ಸಂ.]

**ಆಸಾಧಿತ** (ಗು). ಸಾಧಿಸಲ್ಪಟ್ಟ ; ಸಾಧಿಸಿದ: ಲೋಕಾಯತವಾದಿಯಂತೆ ಆಸಾಧಿತ ಗುರುಮತನುಂ ವಿರಹಿಯಂತೆ ಮುಕ್ತಾಭರಣನುಂ . . . ಅಗಲೊಡಂ (ಚಂದ್ರಪು. ೯–೪೧ ವ). [ಸಂ.]

**ಆಸಾಮಿ**, ಅಸಾಮಿ (ನಾ). ವ್ಯಕ್ತಿ ; ಮನುಷ್ಯ : ವಾರಂಟನಿಂದ ಆಸಾಮಿಯನ್ನಾಗಲಿ ಮಾಲನ್ನಾಗಲಿ ಹುಡುಕುವುದಕ್ಕೂ . . . ಸಹಾಯಗಳನ್ನು ಮಾಡಬೇಕು (ಗ್ರಾ ಪಾ ಕ. ೪೬) ; ಮರ ಹತ್ತುವುದರಲ್ಲಿ ಬಲು ಗಟ್ಟಿಗ ಆಸಾಮಿ ಕೆಂಚಣ್ಣ (ನವನೀ. ೨೧). **ಆಸಾಮಿ** : ಮೇಕೀರಾಮನೀಗ ಹದಿನೈದು ಲಕ್ಷದ 'ಅಸಾಮಿ' (ಕುರಿಹಂ. ೧೦) ; ಅವನಾದರೋ ಬಹಳ ಗಡಸು ಆಸಾಮಿ (ಬಾಳಹೊ. ೯).

**ಆಸಾಮಿ ಪಾವತಿ ಹುಂಡಿ** = ಯಾರು ತಂದರೆ ಅವರ ಹಸ್ತ ಹಣ ಕೊಡಬಹುದಾದ ಹುಂಡಿ ; ಚೆಕ್ಕು. (Bill payable to bearer. ಪಾರಿಸಿ). [← ಹಿಂ. ಮರಾ. ಆಸಾಮೀ]

**ಆಸಾರ** (ನಾ). ೧. ಮಳೆ; ಎಡೆಬಿಡದೆ ಸುರಿಯುವ ಮಳೆ; ಜಡಿಮಳೆ : "ತಾಂ ಬಿಡದೆ ಸುರಿವ ಮಳೆಯಾಸಾರಮಕ್ಕು" (ಮಂಗರಾ. ೧೩–೫) ; ಸುರಕುಸುಮಾಸಾರದ ಬೆಳ್ಸರಿ ಸುರಿದುದು (ಸುಕುಮಾ. ೯–೨೦). ೨. ಶತ್ರುವಿನ ಸುತ್ತಲೂ ಆವರಿಸಿಕೊಳ್ಳುವುದು ; ಮುತ್ತಿಗೆ ಹಾಕುವುದು. ೩. ಮಿತ್ರಪಕ್ಷಕ್ಕೆ ಸೇರಿದ ರಾಜನ ಅಥವಾ ರಾಜ್ಯದ ಸೈನ್ಯ. ೪. ಆಹಾರ ಸಾಮಗ್ರಿ ; ಆಹಾರ. [ಸಂ.]

**ಆಸಾರಚಾರಿ** (ನಾ). ಜಡಿಮಳೆಯ ನಡುವೆ ನುಸುಳಿ ನಡೆಯುವವನು; ಬಿರುಮಳೆಯಲ್ಲಿ ನಡೆಯುವವನು : ಅಂತು ಮಳಯಜರಸಶಿಶಿರ ಶೀಕರಾಸಾರಚಾರಿಯಾಗಿ ಬಂದ ಮಂದಾನಿಳನ ಬೞಿಯನೆ ಬಂದು (ಆದಿಪು. ೧೧–೫೫ ವ). [ಸಂ. ಆಸಾರಚಾರಿನ್]

**ಆಸಾರಮಹಾಲು** (ನಾ). ಒಂದು ಮಹಲಿನ ಹೆಸರು ; ವಸ್ತು ಪ್ರದರ್ಶನಾಲಯ : ಬೋಳಗುಮ್ಮಟ ಆಸಾರಮಹಾಲು . . . ಇಮಾರತುಗಳು ಅವರ ಕಾಲದಲ್ಲಿ ಆದವು (ಮುಂಬಯಿ. ೪–೧೪೨).
[← ಅರ. ಆಸಾರ್‌ಮಹಲ್]

**ಆಸಿ** (ನಾ). ಒಂದು ಬಗೆಯ ಮರ (?) : ಅಲ್ಲಿಂ ತೆಂಕಲು ಹೊಳೆಯ ದಡ ಮೇಲಣ ಆಸಿಯ ನೆಲ್ಲಿನ ಮರನ ಒತ್ತಿನಲ್ಲಿ (ಎಕ. VIII, ತೀರ್ಥಹ. ೧೯೦–೩೨ ; 1409). 'ಆಸು$_2$' ಪರಾ. [?]

**ಆಸಿನಗೊಟ್ಟೆಮುಳ್ಳು** (ನಾ). ಒಂದು ಗಿಡದ ಹೆಸರು (ವೈ ಔ ಗಿ. ೬೯–೧೯೨೬). [?]

**ಆಸಿಸು** (ಕ್ರಿ). ಕುಳ್ಳಿರು : ಭುಂಜಿಸುವಂ, ರಾಜಿಸುವಂ, ಆಸಿಸುವಂ (ಶಬ್ದಾನು. ೫೩೯ ಪ್ರಯೋ). [ಆಸನ + – ಇಸು$_3$]

**ಆಸೀನ** (ಗು). ಕುಳಿತುಕೊಂಡ ; ನೆಲಸಿದ : ಉತ್ತುಂಗ ಸಿಂಹಾಸನಾಸೀನಂ (ಆದಿಪು. ೨–೨ ವ). [ಸಂ.]

**ಆಸು$_1$** (ಕ್ರಿ). ಮೇಲಿನಿಂದ ಬಿಡು ; ಎತ್ತಿಬಿಡು : "ಅಸು – ಊರ್ಧ್ವವಿಮೋಚನೇ (ಮೇಲಿನಿಂದ ಬಿಡು), ವೃಕ್ಷಭೇದೇ ಚ (ಸಾಲವೃಕ್ಷ)" (ಶಮಧಾ) ; ಆಸುವನುಂ ಕೂಕುವನುಂ ಬೀಸುವನುಂ ಗಡಯೆ ನೆಗಬ್ದ ತಕ್ಕಡಿಯೊಳಿನುತ್ತಾಸದೆಯು[ಂ] ಕುಂಕದೆಯುಂ ಬೀಸದೆಯು[ಂ] ಬಿದ್ದಮೆಟ್ಟಿಗುಮೆಟ್ಟಿವಬೆಡೆಂಗಂ (ಎಕ. II, ೧೩೩–೧೩೧ ; 942). [?]

**ಆಸು$_2$** (ನಾ). ಆಚದ ಮರ; ಸಾಲವೃಕ್ಷ; ಸರ್ಜವೃಕ್ಷ: "ಅಸು–ಊರ್ಧ್ವವಿಮೋಚನೇ (ಮೇಲಿನಿಂದಬಿಡು) ವೃಕ್ಷಭೇದೇ ಚ (ಸಾಲವೃಕ್ಷ)" (ಶಮಧಾ) ; ತಾೞಿಯ ತಂಡಸಿನಾಸಿನಾನೆಬೊಬ್ಬುಲಿಯರನೇಱಲಂ ಕೊಲೆಯಸೆಳ್ಳ ತಮಾಳದ...ಕೊಂಬುಗಳಂಬರಂಬರಂ ಪುದಿದು (ಲೀಲಾವ. ೬–೨೬) ; ಹಲಸಾಲಂ ತಡಸಾಸು . . . ಇಮ್ಮಾವು ಕಕ್ಕೆ (ಪಾರ್ಶ್ವಪು. ೧೨–೫೮) ; ಅಶೋಕೆಯ ಆಸಿನ ಎಲವದ . . . ಶುಭವೃಕ್ಷಂಗಳುಂ (ಪ್ರತಿಷ್ಠಾ. ೩–೨೨). 'ಆಚ$_1$' ಪರಾ.
[ದೇ. ‖ ತಮಿ. ಆಚ್ಚ]

**ಆಸು$_3$** (ನಾ). ಅಷ್ಟು ; ಆ ಪ್ರಮಾಣ : ಹಿಂಡ್‌ಮಂಗ್ಯಾ ಕೂಡಿಕೊಂಡು ಹಿತ್ತಲವಾಗ ಹಾದೀಮಾಡಿ ಇದ್ದಾಸ್ಪೂರಣಗಡಬ ಎಳಕೊಂಡ್ಹೋದಾವ (ಮಲ್ಲಿಗೆ. ೧೦೩). [?]

**ಆಸು$_4$** (ನಾ). ಸಾಧ್ಯ ; ಶಕ್ಯ.

**ಆಸಲ್ಲ** = ಸಾಧ್ಯವಿಲ್ಲ ; ಶಕ್ಯವಿಲ್ಲ : ಅಗಲಾ ಮೂವರ ಗೋಳಾಟ ಹೇಳಲಾಸಲ್ಲ (ಮುಂಬಯಿ. ೪–೧೬೮) ; ಮಿಥ್ಯಾಚಾರವನ್ನು ತಿದ್ದಲಾಸಲ್ಲ (ಸಾಹಿವಿ. ೩೮). [< ಅಸ$_7$ ?]

**ಆಸು$_5$** (ಅ). = ಆಶು$_1$ : "ಆಸು – ಶೀಘ್ರಂ" (ಶಮದ. ಪರಿ ೨) ; ರೋಷದಿಂದಾ ದೈತ್ಯನ ಆಸುವೇ ಸಂಹರಿಸಿಯಾ ಸಮಸ್ತರ ಕಾಯ್ದ ಶೇಷಧರ (ಗುರುಚಾ. ೧೦–೨೪). [< ಸಂ. ಆಶು]

**ಆಸುಕರ** (ನಾ). ಆಧಿಕ್ಯ ; ತೀವ್ರತೆ ; ಅತಿಶಯ : ಸೋಮವಂಶಜರ್ ಪಲರಾಸುಕ[ಪಾಠಾಂ. ತ]ರಂಬೆರಸು ನೆಗಬ್ದ ಜಸದಿಂ ಜಗಮಂ ಬಾಸಣಿಸಿ (ಪಂಪಭಾ. ೧–೬೨) ; ಕೆಯ್ವಾಸಲೊಡಮುಱಿದು ತಾಗಿದುವಾಸುಕರಂ ಬೆರಸು ತಡೆಯದುಭಯಬಲಂಗಳ್ (ಪಂಪಭಾ. ೧೧–೫೬) ; ಕೇಸುರಿ ಸೂಸೆ ತನ್ನ ಮೊಗದಿಂ ಕಿಡಿ ಬೀೞ್ತರೆ ತನ್ನ ಕಣ್ಗಳಿಂದಾಸುರಮಾಗೆ ದಾಡೆಗಳೊಡಲ್ ಬಳೆದಂಬರಮಂ ತಱುಂಬೆ ತನ್ನಾಸುಕರಂ ಕರಂ ದೆಸೆಗಮರ್ವಿಸೆ (ಪಂರಾಮಾ. ೧೧–೧೦೬).
[ಪ್ರಾ. ಆಸುಕ್ಕಾರ < ಸಂ. ಆಶುಕರ]

**ಆಸುಕರಂ** (ಅ). ಅತಿಶಯವಾಗಿ ; ಹೆಚ್ಚಾಗಿ : ಕೇಸರದ ಸರಡಿ ಬೀಸುವ ಸೌಸವಮಂ ಕೇರಿಕೇರಿಯೊಳ್ ಮನೆ ಮನೆಯೊಳ್ ಸೂಸುವ ಸುಟ್ಟುರೆ ರಾಗದಿನಾಸುಕರಂ ಮುಬುಗಿಸಿತ್ತಯೋಧ್ಯಾಪುರಮಂ (ಅನಂಪು. ೫–೫). [< ಆಸುಕರ]

**ಆಸುಗ** (ನಾ). ಒಬ್ಬಾತನ ಹೆಸರು : ಅವರಗ್ರತನಯನಾತಂ ವಿವೇಕ × × × ಸರೋವರ ಹಂಸ ಕವಿ ಗಮಕಿ ವಾಗ್ಮಿಗಮವನೀತಳದೊಳೊಗೆದಾಸುಗಂ ಕಳ್ಪಕುಜಂ (ಸೌಇಇ. IX–i, ೮೨–೧೬ ; 1040). [?]

**ಆಸುತಿ** (ನಾ). ೧. ಸೋಮಲತೆಯನ್ನು ಹಿಂಡಿ ರಸತೆಗೆಯುವುದು. ೨. ಭಟ್ಟಿಯಿಳಿಸುವುದು. [ಸಂ.]

**ಆಸುತೀವಲ,** ಆಸುತೀವಳ (ನಾ). **೧.** ಯಾಗವನ್ನು ಮಾಡುವವನು; ಯಾಜ್ಞಿಕ. **೨.** ಸೋಮರಸವನ್ನು ತೆಗೆಯುವ ಯಾಜಕ. **೩.** ಭಟ್ಟಿಯಿಳಿಸುವವನು (?). **೪.** ಹುಣ್ಣಿಮೆ ಅಥವಾ ಅಮಾವಾಸ್ಯೆಯ ದಿನ ಯಜ್ಞವನ್ನು ಮಾಡಿಸುವವನು. **೫.** ಕನ್ಯಾಪಾಲಕ. **ಆಸುತೀವಳ**: **೧.** "ಯಷ್ಟಾ . . . ಯಾ[ಆ]ಸುತೀ[ವ]ಳಃ – ಈ ೯ ಯಾಗಮಾಡುವಾತಂ" (ಹಲಾಯು. ೬೯–೨೬೬). [ಸಂ.]

**ಆಸುತೀವಳ** 'ಆಸುತೀವಲ' ನೋ.

**ಆಸುಪಾಸು** 'ಆಸಪಾಸು' ನೋ.

**ಆಸುರ** (ಗು). **೧.** ಭಯಂಕರವಾದ; ಘೋರವಾದ: ಮುನಿಸಿಂ ಕರಮಾಸುರನಾದನಾ ಸುರಂ (ಜೀವಸಂ. ೨೨೯–೪೩); ಉರುಳ್ದ ಪಂದಲೆಯ ರಾಸಿಗಳಾಸುರಮಾಗೆ ಕಣ್ಗೆ (ಶಾಂತೀಶ್ವ. ೬–೧೨). (ನಾ). **೨.** ಬೇಸರವನ್ನು ತರುವಂಥ ಸ್ಥಿತಿ; ಜುಗುಪ್ಸೆಯುಂಟುಮಾಡುವ ರೀತಿ; ಬೇಸರ. **೩.** ರಭಸ: ವ್ಯಾಸ ಸಮಾಸಾದಿ ಪದರಚನಾವಿನ್ಯಾಸವಿಲಾಸವಱಿಯದೆ ಆಸುರದಿಂ ಕಬ್ಬಕರ್ಥವೇಳುವ ಬುಧಾಭಾಸರಿಗಾನಂಜುವೆನು (ಕು ರಾ ಸಾ ಂ. ೧–೮೦). **೪.** ಅತಿಶಯ: "ಆಸುರಮೆನಲತಿಶಯಂ" (ಭಾರನಿ. ೧೨); ಭೂಸುರರು ಮಂತ್ರಾಕ್ಷತೆಯನಿತ್ತು ಶಿವಭಕ್ತರಾಸುರದ ಭಸಿತಮಂ ಕೊಟ್ಟುಳಿದ ಜನಮೆಲ್ಲ ಲೇಸೆನಿಪ ವಸ್ತುವಂ ಕಾಣಿಕೆಯನಿತ್ತು (ಹಚಕಾ. ೩–೬೮); ಆಸುರದ ಬೆಱಗೇಕೆ ನಮ್ಮೊಡನೀಸುಮಾತೇಕೆಮ್ಮ ರಕ್ಷಿಸುವಾಶೆಯುಂಟೇ ಮಾಡಿ (ಕುವ್ಯಾಕ. ೫–೩೧). **೫.** ಸೊಕ್ಕು; ಅಹಂಕಾರ: ವೇಷ ಅವಿಚಾರದಲ್ಲಿ ನಡೆಯಿತ್ತೆಂದು ಆಸುರದಲ್ಲಿ ಬಗುಳುವ ಕುನ್ನಿ ನೀ ಕೇಳಾ (ಬಸವ. ೪೩೨); ಗುಹೆಯೊಳಗಿರ್ದ ಕೇಸರಿಯನಾಸುರದಿಂ ವನದಂತಿ ಸೊರ್ಕಿ ಬಂದಹಹ ಕೆರಳ್ಚಿ ಜೀವಿಕುಮೆ (ರಾಜಶೇ. ೬–೯೧). **೬.** ಎಂಟು ಬಗೆಯ ವಿವಾಹಗಳಲ್ಲಿ ಒಂದು; ತೆರಕೊಟ್ಟು ಮಾಡಿಕೊಳ್ಳುವ ಮದುವೆ.

**ಆಸುರಂಮಸಗು** = ಬಹಳವಾಗಿ ರೇಗು; ಅತಿಶಯವಾಗಿ ಕೋಪಿಸು: ಕೇಸರಿಯಾಸುರಂಮಸಗಿ ಕ್ಷುಧಾಗ್ನಿಯೊಡನೆ ಕೋಪಾಗ್ನಿ ಪೆರ್ಚೆ (ಪಂಚತಂ. ೯೦–೧೧). **ಆಸುರಂಮಾಡು** = ದುಷ್ಟತನವನ್ನು ನಡೆಸು; ಕ್ರೂರವಾಗಿ ನಡೆದುಕೊ: ಕೂಸಂ ಚಿವುಂಟುವೈ ತೊಟ್ಟಿಲಂ ತೂಗುವೈ ಆಸುರಂ ಮಾಡಿ ನೀನೆನ್ನೊಡನಿದೇಗುವೈ ಬೇಡಬೇಡಾನಿಂತಿದೆಲ್ಲವಂ ಬಲ್ಲೆನೈ (ನಂಬಿರ. ೧೫–೧೪೩). [ಸಂ.]

**ಆಸುರಕರ್ಮ** (ನಾ). ಕ್ರೂರಕೃತ್ಯ; ದುಷ್ಟವಾದ ಕೆಲಸ. 'ಆಸುರಕರ್ಮಂಗೆಯ್' ಪರಾ. [ಆಸುರ + ಕರ್ಮ]

**ಆಸುರಕರ್ಮಂಗೆಯ್** (ಕ್ರಿ). ಕ್ರೂರಕೃತ್ಯವನ್ನು ಮಾಡು; ಹಿಂಸೆಯನ್ನು ಮಾಡು; ಪೀಡಿಸು: ಅಕಾರಣ ಕೋಪನುಂ ಪಾಪರೂಪನಪ್ಪಾಕೇಸರಿಗಾಸುರಕರ್ಮಂಗೆಯ್ಯಲ್ವೇಡೆಂದು ಧರ್ಮೋಪದೇಶಂಗೆಯ್ದು ಪರಲೋಕಕ್ಕುತ್ತರಸಾಧಕನಾಗಿ ನಡೆವೆಂ (ಪಂಚತಂ. ೧೩೬–೨).
[ಆಸುರಕರ್ಮ + ಗೆಯ್ (< ಕೆಯ್$_1$)]

**ಆಸುರತರ** (ಗು). ಅತಿಭಯಂಕರವಾದ; ಬಹಳ ಘೋರವಾದ: ಕಹಕಹಧ್ವನಿ ಕೌಳಿಕನಾದಮಾದಮಾಸುರತರಮಾಗೆ ಬಂದು ಕವಿದತ್ತು ಘಟೋತ್ಕಚ ರೌದ್ರಸಾಧನಂ (ಪಂಪಭಾ. ೧೨–೭); ಅರೆಮುಗಿದಿರ್ದ ಕಣ್ಗಳುಮಲರ್ದ ಮೊಗಂ ಕಡಿವೋದ ಕೆಯ್ಯುಮಾಸುರತರಮಾಗೆ ಕರ್ಚಿದ ವುಡುಂಬೆರಸನ್ಯಶರಪ್ರಹಾರಜರ್ಜರಿತಶರೀರನಾಗಿ (ಗದಾಯು. ೪–೫೩).
[ಸಂ.]

**ಆಸುರಾಕ್ರಂದನ** (ನಾ). ರೋದನ; ಆಕ್ರೋಶ: ಆಸುರಾಕ್ರಂದನದ ಶೋಕಾವೇಶ ಬಹಳದ ಬಾಲೆಯರು ಪ್ರಾಣೇಶ ವೈದೋಱಿನುತ ಹೊಕ್ಕಳಸಿದರು ಕಳನೊಳಗೆ (ಕುವ್ಯಾಗ. ೧೨–೫). [ಆಸುರ + ಆಕ್ರಂದನ]

**ಆಸುರಾಸ್ತ್ರ** (ನಾ). ಮಂತ್ರಾಸ್ತ್ರದಲ್ಲಿ ಒಂದು ಬಗೆ: ಬ್ರಹ್ಮಾಸ್ತ್ರ ದಿವ್ಯಾಸ್ತ್ರ ಆಸುರಾಸ್ತ್ರ ಮುಂತಾದ ಸಕಲ ಅಸ್ತ್ರಗಳನ್ನೂ ಅವರು ಪೂರ್ತಿಯಾಗಿ ಬಲ್ಲರು (ವಚಭಾ. ೧೨೩). [ಆಸುರ + ಅಸ್ತ್ರ]

**ಆಸುರಿ** (ನಾ). **೧.** ಕರಿಯ ಸಾಸಿವೆ: "ಆ[ಆ]ಸುರೀ, ರಾಜಿಕಾ, ರಾಜಸರ್ಷಪಃ — ಈ ೩ ರಾಯಸಾಸುವೆ" (ಹಲಾಯು. ೯೫–೪೨೭). **೨.** ಈಶ್ವರೀ ಬಳ್ಳಿ: "ಆಸುರಿಯೆನಲ್ಕೆಯೀಶ್ವರೀವಲ್ಲಿಯಕ್ಕು" (ಮಂಗರಾ. ೪೫–೪೮). [ಸಂ. ಆಸುರೀ]

**ಆಸುರೀವೃತ್ತಿ** (ನಾ). ಅಸುರರ ನಡೆವಳಿಕೆ; ದುರ್ಗುಣದಿಂದ ಕೂಡಿದ ವ್ಯವಹಾರ: ಗುಣವಿಲ್ಲದ ಹಣ ಮಾನವನಲ್ಲಿ ಆಸುರೀವೃತ್ತಿಯನ್ನೇ ತರುತ್ತದೆ (ರಂಗದೋ. ೧೫೬). [ಸಂ. (ಆಸುರೀ + ವೃತ್ತಿ)]

**ಆಸುರೀಶಬ್ದ** (ನಾ). ಅಸುರ ಸಂಬಂಧವಾದ ಶಬ್ದ: ಪ್ರತಿಯೊಂದು ಅರ್ಥಕ್ಕೂ ದೈವೀಶಬ್ದವೊಂದೂ ಆಸುರೀಶಬ್ದವೊಂದೂ ಇದೆಯೆಂದು ಹೇಳಹೊರಟರು. ಉದಾಹರಣೆಗೆ ಕಿವಿಗೆ ದೈವೀಶಬ್ದ 'ಗವೋಶ' ಆಸುರೀಶಬ್ದ ಕರೆನ (ಕರ್ಣ) (ಇಸ್ಲಾಂಸಂ. ೨೩೫). [ಸಂ. (ಆಸುರೀ + ಶಬ್ದ)]

**ಆಸುರೀಸಂಪತ್ತು** (ನಾ). **೧.** ಅಸುರರಿಗೆ ಸಂಬಂಧಿಸಿದ ಗುಣ; ಅಹಂಕಾರ, ಆವೇಶ, ಕಾಮ, ಕ್ರೋಧ, ದರ್ಪ ಮುಂತಾದ ಗುಣಗಳನ್ನು ಪ್ರಕಟಿಸುವ ಸ್ವಭಾವ, —ಪ್ರವೃತ್ತಿ: ಮಾತಿನಲ್ಲಿ ದರಿದ್ರತೆಯೇಕೆ? ಅಲ್ಲದೆ ಅವನ ಕೃತಿಗಳಲ್ಲಿಯೂ ಆಸುರೀಸಂಪತ್ತು ತುಂಬಿ ತುಳುಕುತ್ತಿತ್ತು (ಸಮುಜೀ. ೬೬೮). **೨.** ರಾಕ್ಷಸೀವೃತ್ತಿಯಿಂದ ಪಡೆದ ಸಂಪತ್ತು. [ಸಂ. (ಆಸುರೀ + ಸಂಪತ್ತು)]

**ಆಸುವಪುದು ?** (ನಾ). ಒಂದು ತೆರಿಗೆ(?): ಯಿಾ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ . . . ಸೆಕುಕಡಮೆ ತಱಿಕಡಮೆ ಆಸುವಪುದು ಮಕಳಕಡಿಮೆ ಮಾವಡೆ ಮರವಡೆ ಕುಳವಡೆ . . . ಉಂಟಾದ ಹಲ ಉಪಾಧಿಗಳೂ ಸಹ ಸೇರ್ಸಿ ಕೊಟ್ಟೆವಾಗಿ (ಸೌಇಇ. IX–ii, ೪೬೩–೮; 1470). ℙ ಆಸುವರಿ ಮತ್ತು ಪುದುವರಿ ಎಂಬುದರ ಅಪಲಿಖಿತವಿರಬಹುದೇ? [?]

**ಆಸೆ$_1$** (ನಾ). **೧.** ಬಯಕೆ; ಅಪೇಕ್ಷೆ: ಆಸೆಗಮಾಸೆಯುನಾದಲಂಪಿನಿಂ ಪತ್ತಿದ ಮೆಯ್ಗೆ ಪತ್ತುಗೆಯನುಕ್ಕೆವಕುಕ್ಕೆವಗೆಯ್ತುಮುಂ ಪೊಣರ್ಚುತ್ತುಮುಪಾಯದಿಂ ಕಱಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೮೫ ಶೂದ್ರಕ); ಆಸೆಗೆ ಸತ್ತುದು ಕೋಟಿ . . . ನಿನಗಾಗಿ ಸತ್ತವರು ಯಾರನೂ ಕಾಣೆ (ಅವಚಂ. ೨೨–೯೧); ಆಸೆಯೇ ಜೀವದಲಿ ಕುರು ಧರಣೀಶ ಬಿಡು ರಾಜ್ಯವನು (ಕುವ್ಯಾಕ. ೧೫–೧೫); ರೊಕ್ಕದಾಸೆಗಳಿಲ್ಲ ಮೋಹಕ್ಕೆ ನಾ ಸಿಕ್ಕಿ ದಕ್ಕಿದೆ ನಿನಗೆಂದಳಾಗ (ಕಂನವಿ. ೨–೧೦೫); ಆಸೆಗೆ ಅಂತ್ಯವಿಲ್ಲ, ಪಾಶಕ್ಕೆ ಕಡೆಯಿಲ್ಲ (ಗಾದೆ). **೨.** ಭರವಸೆ; ನಂಬಿಕೆ; ನಿರೀಕ್ಷೆ: ನುಡಿಗಳೊಳಾಸೆಯುಂಟೆನಲೊಡಂ ತಳೆದಂತಿರೆ ನಿಲ್ವುದೆಂತು ಮಾವೆಡೆಯೊಳಮಾಸೆಗಾಣೆನೆನೆ ತೊಟ್ಟನೆ ಪೋಪುವು ನಲ್ಲರಿರ್ವರೀರೊಡಲೊಳಗಿರ್ಪ ಜೀವಂ (ಪಂಪಭಾ. ೪–೧೦೪); ಇನ್ನು ಆತ ಬದುಕುವ ಆಸೆಯಿಲ್ಲ (ರೂಢಿ). **೩.** ದಿಕ್ಕು: ಆ ವಿಭಾಕರನೆಂಬ ಕರಗಮುಂ ಪೊತ್ತುತ್ತರಾಸೆಯಿಂ ನಡೆಯಲೊಡೆದು ತೀವಿದುದಕಂ ಸುರಿದವೊಲು (ಭಾವಚಿಂ. ೬–೪). **೪.** ಆಸರೆ; ಆಶ್ರಯ; ನೆರವು: ನೆರವಾರೆನಗಿರ್ದಪರೆತ್ತವೋಪೆನೊರ್ಬರುಮೆನಗಾಸೆಯಿಲ್ಲ ದೆಸೆ ಪಾಟಿಸಗಿರ್ದಪುದು (ಕಾದಂಪೂ. ೯೦೨); ಅವನೀಶಂಗಾಸೆಯಾದಂ ಪ್ರಿಯ ಸಚಿವಸುತಂ (ಲೀಲಾವ. ೬–೪೮); ಆ ಶಿಶುತ್ವದಲೆಮ್ಮ ಬೊಪ್ಪನು ವಾಸವನ ಪುರಕೈದಿದನು ನಿಮ್ಮಾಸೆಯಲಿ (ಕುವ್ಯಾದ್ರೋ. ೯–೪೯). **೫.** ಜೀನು; ತಡಿ: ಖುರಮುಂ ನಾಸಿಕೆ ಸೂಸುವಂದದೆ ಬೆಡಂಗಂ . . . ಜಾಜುಕಲ್ಪರಿವಂತಾಸೆಯು ಪೈಸರಂ ಮೆಱೆವ (ಅನಂಪು. ೨–೩೧); "ಆಸೆ = ಹಾಸು; ತಡಿ" (ಪದ್ಯಸಾ. II, ೧೫೫ ಕೋಶ).

ಆಸೆಮಾಡು = ಬಯಸು ; ಅಪೇಕ್ಷಿಸು : ಸಿಜಾನಂದಮನಾಸೆಮಾಡಿ ಮನಮೊಲ್ದೀ ಪಂಪೆಯೊಳ್ ಭಕ್ತಿಯಿಂ ಮನೆಗಟ್ಟಿರ್ಪ ನರಂಗೆ ಮುಕ್ತಿ ಘನಮೇ (ಉದ್ಭಟ ೩-೭೭) ; ವಾಸಿಯನು ಬಿಸುಟಕಟಕಟ ಜೀವದಲಾಸೆ ಮಾಡಿದೆವೆನುತ ಮಱುಗಿತು ಕೂಡೆ ಪರಿವಾರ (ಕುವ್ಯಾಕ. ೧೩-೩).
[< ಸಂ. ಆಶಾ]

**ಆಸೆ₂** (ನಾ). ಒಂದು ತೆರಿಗೆ (?) : ತೆಱೆ ಕಾಣಿಕೆ ಸೇಸೆಯಾಸೆಗಳ್ ಮಂನೆಯ ವಾಯದಾಯುಮಿವು ಸಲ್ಲವು ಸರ್ವನಮಸ್ಯಮೆಂದು ಬಿಟ್ಟಂ (ಎಇ. XXVII. ೧೫-೫೭ ; 1114). [?]

**ಆಸೆಕದಿರು** (ನಾ). ಆಶಾಕಿರಣ ; ಆಸೆಯ ಅಥವಾ ಭರವಸೆಯ ಬೆಳಕು : ನೇಹದಿಂದ ಅವಳ ಪೊರೆದು ಉತ್ಸವದೊಳೆ ಭವಕೆ ತಂದನಾಸೆ ಕದಿರನು (ಗಣೇಶ. ೫೩-೧೨). [ಆಸೆ₁ + ಕದಿರು (< ಕದಿರ್)]

**ಆಸೆಕಾಱ**, ಆಸೆಗಾರ, ಆಸೆಗಾಱ (ನಾ). ೧. ಬಯಸುವವನು ; ಆಶೆ ಪಡುವವನು : ತಮ್ಮ ತಮ್ಮ ಚೆಲ್ವುಗಳ ವಿಲಾಸದುರ್ಮೆಗಳೊಳಗಾವೆ ವಗಾಗಿಪೆವೆಂದು ಬಂದ ಚನ್ನಿಗರುಮನಾಸೆಕಾಱರುಮನೊಲ್ಲದೆ (ಪಂಪಭಾ. ೧-೧೦೬). **ಆಸೆಗಾರ :** ೧. ಆಸೆಗಾರ ಹಾರುವಯ್ಯ ಗೋಸಿಯೊಳಗೆ ಮೂಗಳ ಕಟ್ಟಿದ (ಗಾದೆ). **ಆಸೆಗಾಱ :** ೧. ಓಸರಣೆಗೊಡದತಿಬಳರು ದಿವದಾಸೆಗಾಱರು ವೈರಿಬಲವನು ಘಾಸಿಮಾಡಿದರೊಗ್ಗಿನಲಿ (ಕುವ್ಯಾಭೀ. ೪-೬೨). ೨. ಭರವಸೆಯುಳ್ಳವನು ; ನಂಬಿಕೆಯುಳ್ಳವನು : ಧರೆ ಲೇಸೆಂಬಾಸೆಗಾಱಂ ಪರಪುರುಷಗುಣಾನ್ವೇಷದೊಳ್ ಸ್ವೈಪುಗಾಱಂ ಸಿರಿಯೊಳ್ . . . ನೇಮಿಚಂದ್ರಂ (ಅರ್ಧನೇ. ೧-೩೭).
[ಆಸೆ₁ + -ಕಾಱ]

**ಆಸೆಗ** (ನಾ). "ಆಶಿಸತಕ್ಕವನು" (ಪ್ರಭಣ್ಣ). [ಆಸೆ₁ + -ಗ₂]

**ಆಸೆಗಾಣ್** (ಕ್ರಿ). ಭರವಸೆಯನ್ನು ಕಾಣು ; ಆಸೆಯು ನೆರವೇರುವುದೆಂಬ ವಿಶ್ವಾಸವನ್ನು ಹೊಂದು : ನುಡಿಗಳೊಳಾಸೆಯುಂಟೆನಲೊಡಂ ತಳೆದಂತಿರೆ ನಿಲ್ವುದೆಂತುಮಾವೆಡೆಯೊಳಮಾಸೆಗಾಣೆನೆನೆ ತಟ್ಟನೆ ಪೋಪುವು ನಲ್ಲರಿರ್ವರೀರೊಡಲೊಳಗಿರ್ಪ ಜೀವಂ (ಪಂಪಭಾ. ೪-೧೦೪).
[ಆಸೆ₁ + ಕಾಣ್]

**ಆಸೆಗಾರ** 'ಆಸೆಕಾಱ' ನೋ.

**ಆಸೆಗಾರ್ತಿ** (ನಾ). ತುಂಬ ಆಸೆಯುಳ್ಳವಳು ; ದುರಾಸೆಯುಳ್ಳ ಹೆಂಗಸು. (೩). [ಆಸೆಗಾಱ (< ಆಸೆಕಾಱ) + -ತಿ]

**ಆಸೆಗಾಱ** 'ಆಸೆಕಾಱ' ನೋ.

**ಆಸೆಗೆಯ್** (ಕ್ರಿ). ೧. ಬಯಸು ; ಅಪೇಕ್ಷಿಸು ; ಆಸೆಪಡು : ಕವಿತೆಯೊಳಾಸೆಗೆಯ್ವ ಫಲಮಾವುದೊ (ಆದಿಪು. ೧-೩೬) ; ಬಡವನಂತೆ ಮನ್ನಣೆಗಾಸೆಗೆಯ್ಯದೆ (ಧರ್ಮಾಮೃ. ೫-೯೯). ೨. ಆಶ್ರಯಿಸು ; ಆಸರೆಗೊಳ್ಳು : ಬಳಸಂಪನ್ನರನಾಸೆಗೆಯ್ದೆ (ಪಂಪಭಾ. ೯-೯೦) ; ಕಱಿದರ್ ಕರ್ಣಾದಿಗಳಿನ್ನುಱಿದುದನಾನಾಸೆಗೆಯ್ಯೆನೆನಗಂ ನೆರಮೇ (ಗದಾಯು. ೩-೪೬). ೩. ಆಶ್ರಯಕೊಡು : ಆ ಸಿರಿಮೊಗಕ್ಕೆ ಬಿಸಿಲಾಗದಂತಾಗಸದೊಳೋಸರಿಸದಂಚೆಗಳೆಱಂಕೆಯನಗಲ್ಚಿ ನೆಳಲಾಸೆಗೈದುವು ರಾಘವನ ರಾಣಿ ದುಃಖಸಂತಪ್ತೆಯಾಗಿರುತಿರಲ್ಕೆ (ಜೈಮಿಭಾ. ೧೯-೩೪).
[ಆಸೆ₁ + ಗೆಯ್ (< ಕೆಯ್₁)]

**ಆಸೆಗೇಡು** (ನಾ). ಆಸೆ ಭಂಗವಾಗುವುದು ; ನಿರಾಸೆ : ನೀನಿಂತು ಕಳವಳಿಸುತಾಸೆಗೇಡಿನ ಕಿಚ್ಚಿಗುರುಳುವೆಯ (ಶ್ರೀರಾಮಾ. ೧೬೪-೨೮).
[ಆಸೆ₁ + ಕೇಡು]

**ಆಸೆಗೊಳಿಸು** (ಕ್ರಿ). ಆಸೆಯನ್ನುಂಟುಮಾಡು ; ಆಸೆಯನ್ನು ಹುಟ್ಟಿಸು (೩). [ಆಸೆಗೊಳು (< ಆಸೆಗೊಳ್ಳು) + - ಇಸು₃]

**ಆಸೆಗೊಳು** 'ಆಸೆಗೊಳ್ಳು' ನೋ.

**ಆಸೆಗೊಳ್ಳು**, ಆಸೆಗೊಳು (ಕ್ರಿ). ಬಯಸು ; ಅಪೇಕ್ಷಿಸು : ಹುಡುಗ ಹಣ್ಣಿಗಾಗಿ ಬಹಳ ಆಸೆಗೊಂಡಿದ್ದಾನೆ (ರೂಢಿ). **ಆಸೆಗೊಳು :** ನೀನೆತ್ತಲಾಗೊಲಿವೆ ಇದನರಿಯಲಳವೆ? ನಿನಗೆ ಪಾತ್ರಾಪಾತ್ರದರಿವಿಲ್ಲ-ಅದಕೆ ನಾನಾಸೆಗೊಳುವೆ (ಮಲೆದೇ. ೧೭-೧೦). [ಆಸೆ₁ + ಕೊಳ್ಳು (< ಕೊಳ್₁)]

**ಆಸೆತೋರಿಸು** 'ಆಸೆದೋಱಿಸು' ನೋ.

**ಆಸೆದೊಱೆ** (ಕ್ರಿ). ಆಸೆಯನ್ನು ಬಿಡು ; ನಿರಾಶನಾಗು (೩).
[ಆಸೆ₁ + ತೊಱೆ₁]

**ಆಸೆದೋಱಿಸು**, ಆಸೆತೋರಿಸು (ಕ್ರಿ). ಆಸೆಯನ್ನುಂಟುಮಾಡು ; ಬಯಕೆಯನ್ನು ಹುಟ್ಟಿಸು : ಪಿಡಿದುದದೆಯೆಂಬಾಸೆದೋಱಿಸಿ (ಸಾಳ್ವಭಾ. ೬-೧೪). **ಆಸೆತೋರಿಸು :** ನನಗೆ ಒಂದು ಕಡೆ ಶಾಪದ ಹೆದರಿಕೆ ; ಇನ್ನೊಂದು ಕಡೆ ತಂದೆಯ ಹೆದರಿಕೆ ; ಮತ್ತೊಂದುಕಡೆ ಅವನು ಆಸೆತೋರಿಸಿದ ವರಗಳ ಮೇಲೆ ಮನಸ್ಸು (ವಚಭಾ. ೭). [ಆಸೆದೋಱು + -ಇಸು₁]

**ಆಸೆದೋಱು** (ಕ್ರಿ). ೧. ಆಸೆಯನ್ನು ಹುಟ್ಟಿಸು ; ಅಪೇಕ್ಷೆಯನ್ನುಂಟುಮಾಡು : ಎನಗಾಸೆದೋಱಿ ಬಿಸಸಿತಮೆನಿಸುವ ನಿಜತಾರ ಹಾರಲತೆಯಿಂದಂ ಹಂಸನವೊಲ್ಮಾನಸಸಂಭವವೆನಿಪ ಮದೀಯಾಭಿಮಾನಮಂ ಕಟ್ಟೊಯ್ದಾ (ಕಾದಂಪೂ. ೮೦೨). ೨. ಆಸೆಯನ್ನು ತೋರು ; ಬಯಕೆಯನ್ನು ಪ್ರಕಟಪಡಿಸು : ಬಸನದೊಡಂಬಡಿಂಗಲಸಿ ಮಾಣ್ದೊಡಮಿಂತಿದನೀವೆನೆಂದ[ನ]ಂ ಪುಸಿದೊಡಮಾಸೆದೋಱೆ ಬಗೆದೋ[ಱ]ದೊಡಂ... ಆಯಮುಂ ಚಲಮುಮುಳ್ಳೊಡೆ ಪೇಸದವಳ್ಗೆ ಮತ್ತಮಾಟಿಸುವುದೆ (ಪಂಪಭಾ. ೪-೯೨). ೩. ದಾರಿ ತೋರಿಸು ; ದಿಕ್ಕುಗಾ[illegible] : ಎಮ್ಮ ಮಾತಿನಿತೆ ಗುಣಾರ್ಣವಂಗೆ ಕುಡು ಗೆಲ್ಲಮನಿಂತಿದೆ ಕಜ್ಜದುಜ್ಜುಗಂ ಎಂದು ಕಮಲಾಸನನಾಸೆದೋಱೆ ನುಡಿದುಳ್ಳುದನೆ ನುಡಿದೊಡಂತೆಗೆಯ್ವೆನೆಂದು (ಪಂಪಭಾ. ೫-೧೦೨, ವ). [ಆಸೆ₁ + ತೋಱು (< ತೋಱ್)]

**ಆಸೆಪಡು** 'ಆಸೆವಡು' ನೋ.

**ಆಸೆಪುರುಕ** 'ಆಸೆಬುರುಕ' ನೋ.

**ಆಸೆಬಡಕ** 'ಆಸೆಬಡಿಕ' ನೋ.

**ಆಸೆಬಡಕತನ** (ನಾ). ದುರಾಸೆ ; ಲೋಭ (ದಕ. ೩).
[ಆಸೆಬಡಕ (< ಆಸೆಬಡಿಕ) + -ತನ]

**ಆಸೆಬಡಿಕ**, ಆಸೆಬಡಕ (ನಾ). = ಆಸೆಬುರುಕ (೩). **ಆಸೆಬಡಕ** (೩).
[ಆಸೆ₁ + -ಬಡಿಕ]

**ಆಸೆಬಡಿಕಿ** (ನಾ). ದುರಾಸೆಯುಳ್ಳವಳು ; ಆಸೆಗಾತಿ (೩).
[ಆಸೆಬಡಿಕ + -ಇ₂]

**ಆಸೆಬಾಕ** (ನಾ). = ಆಸೆಬುರುಕ (ದಕ. ೩). [ಆಸೆ₁ + ಬಾಕ]

**ಆಸೆಬುರಕ** 'ಆಸೆಬುರುಕ' ನೋ.

**ಆಸೆಬುರಕತನ** 'ಆಸೆಬುರುಕತನ' ನೋ.

**ಆಸೆಬುರುಕ**, ಆಸೆಪುರುಕ, ಆಸೆಬುರಕ (ನಾ). ಅತಿ ಆಸೆಯುಳ್ಳವನು ; ದುರಾಸೆಗಾರ ; ಲೋಭಿ : ಈ ಬಗೆಯಲ್ಲಿ ಆಸೆಬುರುಕ ಹಾರವನಾದ ವಸುಭೂತಿ (ತವಸಿ. ೯೩). **ಆಸೆಪುರುಕ :** ಒಲವನರಿಯದಾಸೆಪುರುಕ ಇದರ ತಂದೆ (ಗಣೇಶ. ೫೩-೫). **ಆಸೆಬುರಕ :** 'ಆಸೆಬುರಕತನ' ಪರಾ. [ಆಸೆ₁ + - ಪುರುಕ]

**ಆಸೆಬುರುಕತನ**, ಆಸೆಬುರಕತನ (ನಾ). ಅತಿ ಆಸೆಯಿಂದ ಕೂಡಿರುವುದು ; ಅತಿಯಾಸೆ ; ಲೋಭಿತನ : ಕೊಡುವುದು ಹಾನಿಯಲ್ಲ . . . ಇಡುವುದು ಆಸೆಬುರುಕತನ (ಮಣ್ಣಿಮ. ೧೦೦) ; ಹಾಗೆಂದರೆ ಲೋಭ, ಆಸೆಬುರುಕತನ ಎಂದು ಅರ್ಥ (ಕಲ್ಲಿಕಾ. ೯). **ಆಸೆಬುರಕತನ :** ಮಕ್ಕಳು ಗಂಗಾಳದಲ್ಲಿರುವ ಆ ಅನ್ನವನ್ನು ಆಸೆಬುರಕತನದಿಂದ ಹಸಿದ ಕಂಗಳಿಂದ ನೋಡುತ್ತ ಹೇಳಿದುವು (ಬರಹಾ. ೧೫೯). [ಆಸೆಬುರುಕ + -ತನ]

**ಆಸೆಬುರುಕಿ** (ನಾ). ಅತಿಯಾಸೆಯುಳ್ಳವಳು: ಆಸೆಬುರುಕಿ ಎಂದೆಂದಿಗೂ ದರಿದ್ರಿಯೇ (ಹೊಸಕ್ಷಿ. ೪೫). [ಆಸೆಬುರುಕ + –ಇ$_2$]

**ಆಸೆಮಾರಿ** (ನಾ). = ಆಸೆಬುರುಕ (ದಕ. ೩). [ಆಸೆ$_1$ + ಮಾರಿ$_2$]

**ಆಸೆವಡಿಸು** (ಕ್ರಿ). ಆಸೆಪಡುವಂತೆ ಮಾಡು; ಬಯಕೆಯನ್ನು ಹುಟ್ಟಿಸು: ಪಸರಿಸಿ ಮಿಥ್ಯಾಸಂಕಲ್ಪಸಹಸ್ರದಿನಾಸೆವಡಿಸುತಿರ್ಪುದು ಕಿಱುವಾನಿಸಿಕರ್ಕ್ಕಳಲ್ಲಿ ಸಾಜದೊಳೆ ಸುಲಭಮೆನಿಸಿರ್ದ ಮದನಲಾಘವ ಮಾಗಳ್ (ಕಾದಂಉ. ೯೨); ಬೆಜ್ಜಂ ಪಂದೆಯ ಪೇೞ್ವೞಿಗಜ್ಜಂಗಳು ಮಾಸೆವಡಿಪ ಕುಹಕದ ಫಲಮುಂ ಬಿಜ್ಜೆಗಳುಮೆಮಗೆ ಕಾಪೆಂಬುಜ್ಜುಗ ಮೞಿಪೞಿಪು ಕಾಯಲಾರ್ಕುಮೆ ನರರಂ (ಜೀವಸಂ. ೩೬–೧೯). [ಆಸೆವಡು + –ಇಸು$_3$]

**ಆಸೆವಡು, ಆಸೆಪಡು** (ಕ್ರಿ). ಬಯಸು; ಅಪೇಕ್ಷಿಸು: "ಆಸೆವಡು – (ಆಸೆ + ಪಡು) ಈಪ್ಸಾಯಾಂ" (ಶಮಧಾ); ಭಾಗಮನಾಸೆವಟ್ಟೆಳಿಪಿ ಬೇೞ್ಪುದು ನಿನ್ನಯ ಕಲ್ತ ವಿದ್ದೆ (ಪಂಪಭಾ. ೯–೪೬); ಅನ್ನಪಾನಮಂ ರಾತ್ರಿಯೊಳಾಸೆವಡುವುದುಮನುೞಿದುದೆಸಗುವ ವಿವೇಕಿಯಾಜನೆಯ ರಾತ್ರಿ ಭುಕ್ತವ್ರತಿಕಂ (ಸುಕುಮಾ. ೬–೩೧); ಮನ್ನಣೆಗಾಸೆವಟ್ಟು ಮುಂದಣ ಫಲಮಂ ಕಿಡಿಸದಿರಿಂ (ಜೀವಸಂ. ೩೬–೧೮ ವ). **ಆಸೆಪಡು**: ನಿನ್ನನ್ನು ಒಂದು ಬಾರಿ ನೋಡಬೇಕೆಂದು "ಇವಳು" ತುಂಬಾ ಆಸೆಪಡುತ್ತಾಳೆ (ಅವತಂ. ೧). [ಆಸೆ$_1$ + ಪಡು$_1$]

**ಆಸೆವಾತು** (ನಾ). ಆಸೆಯನ್ನು ಹುಟ್ಟಿಸುವ ಮಾತು; ಭರವಸೆಯನ್ನುಂಟುಮಾಡುವ ಮಾತು: ಆಗಳಂತಃಪುರವೃದ್ಧರವರನಜಸಲೀಗಳೆ ಬಂದಪ್ಪರಂಜದಿರಿಮೆಂದಾಸೆವಾತುಗಳೊಳಾಱಿಸಿ ನುಡಿದೊಡಗೊಂಡು (ಆದಿಪು. ೯–೭೬ ವ); ಸುಯಲ್ ತಪ್ಪುದು ತಪ್ಪುದೆನ್ನತನು ಬೇಟದ ಕಾಟದೊಳಿಂತು ಕಂಡುಮಿನ್ನಪ್ಪೊಡಮಾಸೆವಾತನೆನಗೋಪನೆ ನೀಂ ದಯೆಗೆಯ್ಯಲಾಗದೇ (ಪಂಪಭಾ. ೪–೯೯). [ಆಸೆ$_1$ + ಮಾತು$_1$]

**ಆಸೆವಾಸಿ** (ನಾ). ಆಶ್ರಯ ಮತ್ತು ಕೀರ್ತಿ: ನಯದೊಳೇಕಾಂತದೊಳು ಸಲೆ ಕಾರಿಯುವ ನುಡಿದವನಾಸೆವಾಸಿಯ[ಪಾಠಾಂ. ನುಡಿವುದವನಾಶೆಯನು ನೀವ್] ಬಯಸಲಾಗದು ಹಿತವನೇ ಬಯಸುವುದು ಕುರುಕುಲಕೆ ನಿಯತ ವಿದು ಪಾಂಡವರೊಡನೆ ಸಂಧಿಯೇ (ಕುವ್ಯಾಉ. ಓರಿಇ. ೧೦–೫೦). [ಆಸೆ$_1$ + ವಾಸಿ$_2$]

**ಆಸೇಚನ** (ನಾ). **೧.** ಚಿಮುಕಿಸುವುದು; ಸಿಂಪಡಿಸುವುದು. **೨.** ಅತ್ಯಂತ ಪ್ರಿಯವಾದುದು; ಎಷ್ಟು ನೋಡಿದರೂ ಮನಸ್ಸನ್ನು ತೃಪ್ತಿಪಡಿಸದ ವಸ್ತು. [ಸಂ.]

**ಆಸೇಚನಕ** (ನಾ). = ಆಸೇಚನ ೨ (ಸ್ಯಾಂಡರ್). [ಸಂ.]

**ಆಸೇಚಿಸು** (ಕ್ರಿ). "ಚಿಮುಕಿಸು, ಎರಚು" (ಪ್ರಭಣ್ಣ). [ಆಸೇಚನ + –ಇಸು$_3$]

**ಆಸೇವನ** (ನಾ). **೧.** ಯಾವ ಕೆಲಸವನ್ನಾದರೂ ನಿಷ್ಠೆಯಿಂದ ಮಾಡುವುದು, —ಎಡೆಬಿಡದೆ ನಡೆಸುವುದು; ಶ್ರದ್ಧೆಯಿಂದ ಮಾಡುವ ಸೇವೆ. **೨.** (ಮತ್ತೆ ಮತ್ತೆ) ಸೇವಿಸುವುದು; ಅನುಭವಿಸುವುದು: ದೇವರಿಗೆ ಕೊಟ್ಟಾ ಪ್ರಸಾದಾಸೇವನಮೆ ಜೀವನವೆಮಗೆ ಪೆಱತಾವುದುಂಟೇ (ಬಸಪು. ೧೨–೨೮). [ಸಂ.]

**ಆಸೇವಿತ** (ಗು). ಸೇವಿಸಲ್ಪಟ್ಟ; ಎಡೆಬಿಡದೆ ಅನುಭವಿಸಲ್ಪಟ್ಟ: ವಸಿಷ್ಠಗೋತ್ರವರಿಷ್ಠನುಂ ಆಸೇವಿತ ತ್ರಿವರ್ಗವಿರುದ್ಧ ಸಮ್ರಾಜ್ಯ ಸೌಖ್ಯನುಂ (ಕಇಅ. ೫–೨–೧೫೫; 1068). [ಸಂ.]

**ಆಸೇವೆ** (ನಾ). = ಆಸೇವನ ೨: ಶಿವಪ್ರಸಾದಾಸೇವೆಯಿಂ ದಣಿದಲ್ಲದುಸಿಕನೆ ಯಾವಪರಿಯಿಂದಾದೊಡೆಮ್ಮೊಡನೊಡಬಡಿಕೆಯಲ್ಲಿ (ಬಸಪು. ೨೪–೨೮). [ಸಂ. ಆಸೇವಾ]

**ಆಸೇವೆಗೈ** (ಕ್ರಿ). ಎಡೆಬಿಡದೆ ಸೇವೆಮಾಡು; ಅನುಸರಿಸಿ ನಡೆ: ಪೂಸರಲಗೆ ಮಾಸಲಾಗಿ ಕೆಂಜಾಜಿಯ ಬಾಸಿಗವಿಡಿದೆಯ್ದುವಾಗ ಆಸೇವೆ ಗೈವಳಿವಳ್ಗೆ ಚಂಪಕಮಾಲೆ ಬೀಸುತೆಯ್ದಿದಳೊರ್ವ ಕುಶಲೆ (ಭರಚ. ೪೭–೩೯). [ಆಸೇವೆ + ಗೈ (< ಕೆಯ್$_1$)]

**ಆಸೋದ, ಆಸೋದೆ** (ನಾ). ಉಪಾಹಾರ; ಉಪಚಾರ (ಸ್ಯಾಂಡರ್). **ಆಸೋದೆ** (ಸ್ಯಾಂಡರ್).

ಆಸೋದೆಮಾಡಿಕೊಳ್ಳು = ಉಪಾಹಾರ ತೆಗೆದುಕೊಂಡು ಉಪಚರಿಸಿಕೊ; ಆಯಾಸ ಪರಿಹಾರಮಾಡಿಕೊ (ಸ್ಯಾಂಡರ್). [?]

**ಆಸೋದಿ** (ನಾ). ಪರಹಿತವನ್ನು ಮಾಡುವವನು; ಲೋಕೋಪಕಾರಿ (?): ಆಸೋದಿಗಳು ನವರತ್ನ ಸುವರ್ಣವ ಹೇಸರನಂತೆ ಹೊತ್ತಿಹರು ದೇಶದೊಳ್ ಪರಹಿತವೆಂಬುದು ವರರತ್ನಭೂಷಣ ಕೇಳು ಕಂದರ್ಪ (ಮೋಹತ. ೫–೫೭). [?]

**ಆಸೋದೆ** 'ಆಸೋದ' ನೋ.

**ಆಸ್ಕಂದ** (ನಾ). = ಆಸ್ಕಂದನ. [ಸಂ.]

**ಆಸ್ಕಂದನ** (ನಾ). ಮೇಲೆ ಬೀಳುವುದು; ಕಾಳಗ; ಯುದ್ಧ [ಸಂ.]

**ಆಸ್ಕಂದಿ** (ನಾ). ಮೇಲೆ ಬೀಳುವವನು; ಆಕ್ರಮಣ ಮಾಡುವವನು. 'ಪರಾಸ್ಕಂದಿ' ಪರಾ. [ಸಂ. ಆಸ್ಕಂದಿನ್]

**ಆಸ್ಕಂದಿತ** (ನಾ). ಕುದುರೆಯ ಐದು ಬಗೆಯ ನಡೆಗಳಲ್ಲಿ ಒಂದು: "ಆಸ್ಕಂದಿತವು ಅಂದರೆ ಸಮಗತಿ, ಎಳೆನಡಿಗೆ" (ಗುರುಬಾ. ೨೭೪); ಆಸ್ಕಂದಿತಧಾರೆಯಿಂ ಸುದೃಢಪೀವರ ಕಾಯದೊಂದು ಕಾಂತಿಯಿಂ . . . ಸನ್ತಂ ಪೋಪ ಕುದುರೆಯ ಬೆನ್ನೊಳೆ (ರಾಮಾಶ್ವ. ೪೯–೨೬). [ಸಂ.]

**ಆಸ್ಕರ** (ನಾ). **೧.** ಆಸ್ಪದ; ಆಶ್ರಯ; ರಕ್ಷಣೆ (?). 'ಆಸ್ಕರಂಗೊಳ್' ಪರಾ. **೨.** ಆಶಯ; ಅಭಿಪ್ರಾಯ (?): ಸಾಸ್ಕರ ಪ್ರವೀರನಾನೀ ರತ್ನ ಸಂಚಯವನಾಸ್ಕರಿಪೆನ್ನೈದಿ ಖಳ ಬರಲಿ ನೀಕ್ಷಿಪೆನುಯಂಬಾಸ್ಕರದಿಂ ಬೀಳ್ಕೊಟ್ಟನೆಲ್ಲರ (ಜಿನಮು. ೨೨–೧೨). [< ಸಂ. ಆಸ್ಕೃ = ಸಮಾಪಿಸುವ, ಸೇರುವ ?]

**ಆಸ್ಕರಂಗೊಳ್** (ಕ್ರಿ). ಆಸ್ಪದವನ್ನು ಪಡೆ: ಭಾಸ್ಕರೋದಯಕಾಲ ಕೆಲ್ಲೆಲ್ಲಿ ಆರಸಿ ನಯನಾಸ್ಕರಂಗೊಳದಿರಲು (ಜಿನಮು. ೨೨–೧೨). [ಆಸ್ಕರ + ಕೊಳ್$_1$]

**ಆಸ್ಕರಿಸು** (ಕ್ರಿ). ರಕ್ಷಿಸು; ಕಾಪಾಡು; ಶೇಖರಿಸು (?): ನಾನೀ ರತ್ನ ಸಂಚಯವನಾಸ್ಕರಿಪೆನ್ನೈದಿ ಖಳ ಬರಲಿ ನೀಕ್ಷಿಪೆನು (ಜಿನಮು. ೨೨–೧೨). [ಆಸ್ಕರ + –ಇಸು$_3$]

**ಆಸ್ತರ** (ನಾ). = ಆಸ್ತರಣ (ದಕ. ೩). [ಸಂ.]

**ಆಸ್ತರಣ** (ನಾ). **೧.** ಹರಡುವುದು; ಅಲಂಕಾರ ಮಾಡುವುದು (೩). **೨.** ಆಸನ; ಹಾಸಿಗೆ; ನೆಲದ ಮೇಲೆ ಕುಳಿತುಕೊಳ್ಳುವುದಕ್ಕಾಗಲಿ ಅಥವಾ ಮಲಗುವುದಕ್ಕಾಗಲಿ ಹಾಸುವ ರತ್ನಗಂಬಳಿ, ಜಮಖಾನ ಮುಂತಾದುವು: "ಆಸ್ತರಣಮಾ ಪ್ರವೇಣಿಯೆನೆ ಗವಸಣಿಗೆಯಕ್ಕು" (ಮಂಗರಾ. ೬೦–೧೬); ನಿಜವಿಜಯ ತುರಗ ರಥಂಗಳನರ್ಚಿಸಿ ಪೊಡೆಮಟ್ಟು ದರ್ಭಾಸ್ತರಣದೊಳಾಯಿರುಳಂ ಕಳೆದಾಗಳ್ (ಪಂಪಭಾ. ೧೨–೫೨ ವ). **೩.** "ಆನೆಯ ಮೇಲೆ ಹಾಸುವ ಚಿತ್ರದ ಕಂಬಳಿ" (ಅಮರ. ಟೀಕೆ). **೪.** ರಥ, ಗಾಡಿ, ಸಾರೋಟು ಮುಂತಾದ ವಾಹನಗಳ ಮೇಲೆ ಹಾಸುವ ಕಂಬಳಿ ಅಥವಾ ರತ್ನಗಂಬಳಿ (೩). **೫.** ಪದರ (೩). [ಸಂ.]

**ಆಸ್ತರಣಕ್ರಿಯೆ** (ನಾ). ಹಾಸುವುದು: "ಪಾಸು – ಆಸ್ತರಣ ಕ್ರಿಯಾಯಾಂ, ತಲ್ಪೇಚ" (ಶಮಧಾ). [ಆಸ್ತರಣ + ಕ್ರಿಯೆ]

**ಆಸ್ತರಿಸು** (ಕ್ರಿ). "ಹಾಸು" (ಪ್ರಭಣ್ಣ). [ಆಸ್ತರಣ + –ಇಸು$_3$]

ಆಸ್ತಾ 'ಆಸ್ತೆ' ನೋ.

**ಆಸ್ತಿ** (ನಾ). ಸೊತ್ತು; ಸೊಮ್ಮು; ಒಬ್ಬರಿಗೆ ಸೇರಿರುವ ಜಮೀನು, ಮನೆ ಮುಂತಾದ ಸಂಪತ್ತು: ನೀನು ನಿನ್ನ ತಂದೆ ಜಯಸಿಂಹನನ್ನು ವಧಿಸಿ, ಅವನ ಆಸ್ತಿಯನ್ನೆಲ್ಲ ದೋಚಿಕೊಂಡು ಹೋದುದಕ್ಕೆ ಪರಿಹಾರ ವನ್ನು ಕೊಡು (ಆರ್ಯಕ. ೧೪); ಅತ್ಯಂತ ಸುಂದರ ತರುಣಿ ಮತ್ತು ನಿನ್ನ ವಿಪುಲ ಸಂಪತ್ತು ಈ ಎರಡೂ ಆಸ್ತಿಗಳ ಒಡೆತನಕ್ಕೆ ಸಿದ್ಧರಾಗಿರಿ (ಬಂಗಾಹೆ. ೧೩).

ಆಸ್ತಿಪಾಸ್ತಿ = ಆಸ್ತಿ: ನೀನು ಆಸ್ತಿಪಾಸ್ತಿ ವಿಲೇವಾರಿ ಮಾಡಬಹುದು (ಪುನರು. ೨೬೬). [ದೇ. ‖ ತಮಿ. ಮಲ. ತುಳು. ತೆಲು. ಆಸ್ತಿ]

**ಆಸ್ತಿಕ**$_1$ (ನಾ). ೧. ಪರಲೋಕ, ದೈವ, ಧರ್ಮಗಳಲ್ಲಿ ನಂಬಿಕೆ ಯುಳ್ಳವನು; ಶಾಸ್ತ್ರಗಳಲ್ಲಿ ಶ್ರದ್ಧೆಯುಳ್ಳವನು: ಸತ್ಯಧರ್ಮಗಳಿಂದ ಭ್ರಷ್ಟನಾದ ಮನುಷ್ಯನನ್ನು ಕಂಡು ನಾಸ್ತಿಕನೂ ಹಾವನ್ನು ಕಂಡಂತೆ ಅಂಜುತ್ತಾನೆ; ಹೀಗಿರಲು ಆಸ್ತಿಕರ ವಿಚಾರ ಹೇಳಬೇಕಾದದ್ದೇನು (ವಚಭಾ. ೬೪); ಆಸ್ತಿಕನ ದಾನ ನಾಸ್ತಿಕನ ಭಿಕ್ಷೆ (ಗಾದೆ). ೨. ಒಬ್ಬ ಋಷಿಯ ಹೆಸರು. [ಸಂ.]

**ಆಸ್ತಿಕ**$_2$ (ನಾ). = ಆಸ್ತಿವಂತ. [?]

**ಆಸ್ತಿಕತ್ವ** (ನಾ). = ಆಸ್ತಿಕ್ಯ: ಏನೇ ಆದರೂ ಆಸ್ಥಿಗತವಾದ ಆಸ್ತಿ ಕತ್ವಕ್ಕೆ ಅತ್ಯಂತ ಲೋಪವು ಸಂಭವಿಸಿಲ್ಲ (ಆರ್ಯಧ. ೧). [ಸಂ.]

**ಆಸ್ತಿಕ್ಯ** (ನಾ). ೧. ಪರಲೋಕ, ದೈವ, ಧರ್ಮಗಳಲ್ಲಿ ನಂಬಿಕೆಯಿ ರುವಿಕೆ; ಶಾಸ್ತ್ರಗಳಲ್ಲಿ ಶ್ರದ್ಧೆಯಿರುವಿಕೆ: ತಪಸ್ಸು, ಸಂತೋಷ, ಆಸ್ತಿಕ್ಯ, ದಾನ . . . ವ್ರತಮೆಂಬ ನಿಯಮಾಂಗ ದಶಕಮುಂ (ವಿವೇಕ. ೧೪೪); "ದಿಟ, ಪುಣ್ಯವಂತ ಕೊಡಲು ಬೇಕಿಲ್ಲ ನೀನವಗೆ ಭಕ್ತಿ ಕಂತ . . . ಆಸ್ತಿಕ್ಯದಾಧಿಕ್ಯ ನಿನ್ನ ನಾಸ್ತಿಕ್ಯ ದೈವವುಳ್ಳಗೆ ದೇವರುಂಟೆನೆ ಅಶಕ್ಯ" (ಗಣೇಶ. ೭೧–೧೫). ೨. = ಆಸ್ತಿಕ$_1$ ೧. [ಸಂ.]

**ಆಸ್ತಿಗಾರ** (ನಾ). = ಆಸ್ತಿವಂತ (೬).
[ಆಸ್ತಿ + -ಗಾರ (< -ಕಾಱ)]

**ಆಸ್ತಿಮಿತ** (ಗು). ೧. ತೊಯ್ದ; ನೆನೆದ. ೨. ಅಲುಗದ; ಕದಲದ: ಸರಸ ಭಕ್ತಿಸತಿಯ ಪರವಶಾವರಣದಿಂ ನಿರುಪಾಧಿಕದ ವಿಸ್ತರಣದವಸ್ಥೆ ಯೊಳುರುಸುಖಾಸ್ತಿಮಿತೇಂದ್ರಿಯದೊಳಿಹಗೆ (ಬಸಪು. ೩೫–೩೪). ೩. ಸೊಗಸಾದ; ಕೋಮಲವಾದ. ೪. ಸಂತೋಷಗೊಂಡ; ಕೃತಾರ್ಥತೆಯನ್ನು ಪಡೆದ (೬). [ಸಂ.]

**ಆಸ್ತಿವಂತ** (ನಾ). ಆಸ್ತಿಯನ್ನು ಉಳ್ಳವನು; ಸಂಪತ್ತುಳ್ಳವನು; ಶ್ರೀಮಂತ. [ಆಸ್ತಿ + -ವಂತ]

**ಆಸ್ತೆ**$_1$, ಆಸ್ತಾ (ನಾ). ಅಕ್ಕರೆ; ಪ್ರೀತಿ; ಆಸಕ್ತಿ: ಕೂಡುವಾಸ್ತೆ ಯೆಂದುಬಂದಪುದೊ (ಶತಸಾಂ. ೨೬–೩೪); ಮುರಳೀಧರ ಕಾಣಿಸುವುದಿಲ್ಲ ಊಟಕ್ಕೆ ಎಂದು ರಾಯರು ಆಸ್ತೆಯಿಂದ ಕೇಳಿದರು (ಜೀವಪ್ರ. ೯). **ಆಸ್ತಾ**: ದೇವರ ಮುಂದೆ ದೀಪ ಹಚ್ಚಲಿಕ್ಕೆ ಆಸ್ತಾ ಇಲ್ಲ ಇವರಿಗೆ (ಹರಿಜ. ೩); ಆವನ್ನ ಎಷ್ಟೊಂದು ಆಸ್ತಾದಿಂದ ಹಾಕ್ಕೊಂಡದಂದಿ ಆ ಹುಡುಗ! (ವೈನಿ. ೧೦). [ಸಂ. ಆಸ್ಥಾ]

**ಆಸ್ತೆ**$_2$ (ಅ). ಮೆಲುನಡೆಯಿಂದ; ನಿಧಾನವಾಗಿ (ದಕ. ೬).
[← ಹಿಂ. ಆಹಿಸ್ತಾ]

**ಆಸ್ಥಾನ** (ನಾ). ೧. ಸ್ಥಳ; ಜಾಗ. ೨. ರಾಜಸಭೆ; ದರಬಾರು: "ಆಸ್ಥಾನಮೆಂಬುದು ರಾಜಸಭೆ" (ಹಲಾಯು. ೧೨೪–೯೩); ದನುಜಂ ಆಪ್ತ ಮಂತ್ರಿ ನಿವಹಕ್ಕಿಂತೆಂದನಾಸ್ಥಾನದೊಳ್ (ಜಗವಿ. ೩–೧೪); ಕವಿಯಾ ಸ್ಥಾನಕೆ ಭೂಷಣಂ (ಸೋಮೇಶ. ೫). ೩. ಸಭೆ. [ಸಂ.]

**ಆಸ್ಥಾನಕವಿ** (ನಾ). ರಾಜಸಭೆಯ ಕವಿ. [ಆಸ್ಥಾನ + ಕವಿ$_6$]

**ಆಸ್ಥಾನಗೇಹ** (ನಾ). ದರ್ಬಾರು ಮಂಟಪ; ಓಲಗಶಾಲೆ: ಪೂಣಿ ದುಗ್ಧಾರ್ಣವದೊರೆಗೆಣೆವಂದತ್ತು . . . ಆಸ್ಥಾನಗೇಹಂ (ಚಂದ್ರಪು. ೫–೩)
[ಆಸ್ಥಾನ + ಗೇಹ]

**ಆಸ್ಥಾನಪಂಡಿತ** (ನಾ). ಆಸ್ಥಾನದ ಪಂಡಿತ: ಆಸ್ಥಾನ ಪಂಡಿತನಾಗಿದ್ದು ಸಂಸ್ಕೃತ ಕರ್ಣಾಟಕ ಭಾಷೆಗಳಲ್ಲಿ ಅನೇಕ ಕಾವ್ಯಗಳನ್ನು ರಚಿಸಿ ಹಾಗೆ ತಿಳಿಯಬರುತ್ತದೆ (ಚಿಕವಿ. ೧ ಪೀ). [ಆಸ್ಥಾನ + ಪಂಡಿತ]

**ಆಸ್ಥಾನಮಂಟಪ** (ನಾ). ೧. = ಆಸ್ಥಾನಗೇಹ: ಆಸ್ಥಾನಮಂಟಪ ಮಧ್ಯಸ್ಥಿತ ಚಾರು ಚಾಮೀಕರ ಮೃಗರಿಪುವಿಷ್ಟರದೊಳ್ ತ್ರಿಪೃಷ್ಠತನಯ ಶ್ರೀವಿಜಯನಿರೆ (ಶಾಂತಿಪು. ೬–೨೩ ವ). ೨. [ಸಂಗೀತ] ಒಂದು ಬಗೆಯ ತಾಳ: ಧ್ರುವ . . . ಆಸ್ಥಾನಮಂಟಪ . . . ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೪). [ಆಸ್ಥಾನ + ಮಂಟಪ]

**ಆಸ್ಥಾನವಸ್ತುನಾಯಕ** (ನಾ). ಆಸ್ಥಾನ ಮಂಟಪದ ಎಲ್ಲ ವಸ್ತು ಗಳಿಗೂ ಏರ್ಪಾಡುಗಳಿಗೂ ಮುಖ್ಯ ವಿಚಾರಕನಾಗಿರುವವನು; ದರ್ಬಾರು ಭಕ್ಷಿ: ಮಹಾಸಾಮಾನ್ತಾಧಿಪತಿ ಮಹಾಪ್ರಚಣ್ಡದಣ್ಡನಾ ಯಕಂ ಆಸ್ಥಾನವಸ್ತುನಾಯಕಂ . . . ದಾಮಪಯಂ (ಸೌಇಇ. VI, ೫೭೧–೩೨; 1077). [ಆಸ್ಥಾನ + ವಸ್ತು + ನಾಯಕ]

**ಆಸ್ಥಾನವಿದ್ವಾಂಸ**, ಆಸ್ಥಾನವಿದ್ವಾನ್ (ನಾ). ರಾಜಾಸ್ಥಾನದ ವಿದ್ವಾಂಸ, —ಪಂಡಿತ: ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳು ಆಸ್ಥಾನ ವಿದ್ವಾಂಸರಾಗಿದ್ದರು (ರೂಢಿ). **ಆಸ್ಥಾನವಿದ್ವಾನ್**: ಶ್ರೀಯುತರು ಆಸ್ಥಾನವಿದ್ವಾನ್ ಪಂಡಿತರತ್ನಂ ಬಿರುದಾಂಕಿತರು (ರೂಢಿ).
[ಸಂ. ಆಸ್ಥಾನವಿದ್ವಸ್]

**ಆಸ್ಥಾನವಿದ್ವಾನ್** 'ಆಸ್ಥಾನವಿದ್ವಾಂಸ' ನೋ.

**ಆಸ್ಥಾನಿ** (ನಾ). ಸಭೆ; ಗೋಷ್ಠಿ; ಸಮಿತಿ. [ಸಂ. ಆಸ್ಥಾನೀ]

**ಆಸ್ಥಾನಿಕ** (ಗು). ೧. ರಾಜಸಭೆಗೆ ಸಂಬಂಧಿಸಿದ; ಆಸ್ಥಾನಕ್ಕೆ ಸೇರಿದ. (ನಾ). ೨. ರಾಜಸಭೆಯ ಸದಸ್ಯ; ಸಭಾಸದ: ಸನ್ನಿಧಾನವು ಒಡ್ಡೋಲಗಕ್ಕೆ ಬಿಜಯಮಾಡಿದೊಡನೆಯೇ ಆಸ್ಥಾನಿಕರೆಲ್ಲ ಇದಿರೆದ್ದು . . . ನಮಸ್ಕರಿಸಿ (ಚಿಟ್ಟಅ. ೩೪–೧೪). [ಸಂ.]

**ಆಸ್ಥಾಯಿ** (ಗು). ಸ್ಥಿರವಾದ; ನೆಲೆಯಾಗಿ ನಿಲ್ಲತಕ್ಕ; ಶಾಶ್ವತವಾದ: ಪ್ರತ್ಯಕ್ಷ ಪ್ರಮಾಣಮೆನಿಸಿದಾಸ್ಥಾಯಿಯಾಗಿಯುಂ ಲೋಕತ್ರಯ ಸಂಚಾರ ಯೆನಿಸಿದ ಕುವಳಯವಿಭ್ರಾಜಿಯಾಗಿಯುಂ ಕುಮುದದಳಧವಳನೆನಿಸಿ ನಿನ್ನ ಜನೋತ್ಸಾಹಕರಣಂ ಜಗಕ್ಕುದಾಹರಣಮಾದುದು (ಶಾಂತಿಪು. ೩–೭೫ ವ). [ಸಂ.]

**ಆಸ್ಥಾಯಿಕಾಜನ** (ನಾ). ಸಭೆಯ ಅಥವಾ ಆಸ್ಥಾನದ ಜನರು: ರೂಪಾತಿಶಯಕ್ಕಂ . . . ಸೌಂದರ್ಯಕ್ಕೆ ನೆಲೆಯಾದಂದಕ್ಕಂ ಚಿಕ್ಕಸು ಬಟ್ಟಾಸ್ಥಾಯಿಕಾಜನಕ್ಕೆ ಲಕ್ಕೆ ತೆಜದಿಂ ಪೊಗೞ್ದು (ಶಾಂತಿಪು. ೩–೫೩ ವ).
[ಸಂ. (ಆಸ್ಥಾಯಿಕಾ + ಜನ)]

**ಆಸ್ಥಾಯಿಕೆ** (ನಾ). ರಾಜಸಭೆ; ಆಸ್ಥಾನ: ಮಿಸುಗುವ ಮಾಣಿ ದೆಳವಿಸಿಲುಮನೊಡಗಾಣಲಾದುದಾಸ್ಥಾಯಿಕೆಯೊಳ್ (ಆದಿಪು. ೯–೫); ತತ್ತ್ವಲಯಸ್ಥಾನನೆಸೆದನಾಸ್ಥಾಯಿಕೆಯೊಳ್ (ರಾಜಶೇ. ೧೪–೧೧೧).
[ಸಂ. ಆಸ್ಥಾಯಿಕಾ]

**ಆಸ್ಥಿತ** (ಗು). ೧. ನೆಲೆಗೊಂಡ; ಅನುಸರಿಸಿ ನಿಂತುಕೊಂಡ. ೨. ಉದ್ಯುಕ್ತವಾದ; ಅಭ್ಯಾಸಮಾಡುವ. (ನಾ). ೩. ಕೈಗೊಂಡುದು; ಅಂಗೀಕರಿಸಿದುದು: "ಆಸ್ಥಿತಮೆನಲ್ ಕೈಕೊಳುಹಮುಕ್ಕು" (ಮಂಗರಾ. ೧೩೫–೩೭). ೪. ಆಕ್ರಮಿಸಲ್ಪಟ್ಟುದು: "ಆಸ್ಥಿತಂ ಆಕ್ರಾಂತಂ – ಈ ೨ ಆಕ್ರಮಿಸಲ್ಪಟ್ಟುದು" (ಹಲಾಯು. ೧೨೯–೯೬).
[ಸಂ.]

**ಆಸ್ಥೆ** (ನಾ). ೧. ಅಕ್ಕರೆ; ಅಪೇಕ್ಷೆ: ಪರಿವಿಡಿಯಿಂದಾಸ್ಥೆಯೊಳಂ ಪರೀಕ್ಷಿಸಲ್ ಬಲ್ಲೊಡವನ ಪೇಟ್ಟುದೆ ತಥ್ಯಂ (ಜಟ್ಟಮ. ೧–೨೭); ಭಕ್ತಿಯಿಂದಲತ್ಯಂತದಾಸ್ಥೆಯೊಳು ಕೇಳ್ಕೆ ಮಗನೆಯೆನುತೆ (ವೀಶೈಪು. ೧–೧–೧೭); ಅವಳಿಗೆ ಆನಂದನ ಭಾವಚಿತ್ರವನ್ನು ನೋಡಲು ಬಹಳ ಆಸ್ಥೆ (ಮುರಳಿ. ೪೭). ೨. ಆಸ್ಥಾನ; ರಾಜಸಭೆ. ೩. ಯತ್ನ; ಪ್ರಯತ್ನ. ೪. ಸ್ಥಿತಿ; ಅವಸ್ಥೆ. ೫. ಶ್ರದ್ಧೆ; ಆಸಕ್ತಿ.

**ಆಸ್ಥೆಪಡು** = ಆಸೆಪಡು; ಶ್ರದ್ಧೆಯನ್ನು ತೋರಿಸು: ಧರ್ಮ ಧರ್ಮ ಎಂದೆಲ್ಲರೂ ಅಲ್ಪಸ್ವಲ್ಪವಾದರೂ ಆಸ್ಥೆ ಪಡುತ್ತೇವೆ (ಆರ್ಯಧ. ೧). **ಆಸ್ಥೆವಹಿಸು** = ಶ್ರದ್ಧೆಯನ್ನು ವಹಿಸು; ಆಸಕ್ತಿಯನ್ನು ಹೊಂದಿರು: ಆವನ ಶುಶ್ರೂಷೆಯಲ್ಲಿ ಲಕ್ಕಣ್ಣ ಎಣಿಸಲಾರದಷ್ಟು ಆಸ್ಥೆ ವಹಿಸಿದ್ದ (ಪರಾವ. ೧೭೫); ನನ್ನ ಪರವಾಗಿ ಬಹಳ ಆಸ್ಥೆವಹಿಸಿದ್ದರು (ಬೆಂಜನ್. ೧೦೫). [ಸಂ. ಆಸ್ಥಾ]

**ಆಸ್ಥೌಲ್ಯ** (ನಾ). ಸೆಡೆತುಕೊಳ್ಳುವುದು; ಸ್ವಲ್ಪಮುಟ್ಟಿಗೆ ದಪ್ಪವಾಗುವುದು: "ಸೆಡೆ – ಆಸ್ಥೌಲ್ಯೇ (ಹೆಚ್ಚು), ರಸಧಾನ್ಯಾಕರ್ಷಣ ಪಾತ್ರೇ ಚ" (ಶಮುಧಾ). [ಸಂ.]

**ಆಸ್ಪಂದನ** (ನಾ). ಮಿಡಿಯುವಿಕೆ: ಸುಂದರತೆಯೆನುವುದೇಂ? ಜನಕೆ ಮೈಮರೆಯಿಪಾನಂದದೊಳಮರುವುವೇಂ? ವಿಶ್ವಚೇತನದಾಸ್ಪಂದನವೆ ಸೌಂದರ್ಯಮದುವೆ ಜೀವನ ಮೂಲ (ಮಂಕುಕ. ೪೪೭). [ಸಂ.]

**ಆಸ್ಪತ್ರೆ**, ಆಸಪತ್ರೆ (ನಾ). ವೈದ್ಯಶಾಲೆ; ಚಿಕಿತ್ಸಾಲಯ; ದವಾಖಾನೆ: ಆಸ್ಪತ್ರೆಯೊಂದನ್ನು ನಿರ್ಮಿಸಲು ಅವರು ಒಂದು ಲಕ್ಷ ರೂಪಾಯಿ ದಾನ ಮಾಡಿದುದರಿಂದ (ರತ್ನಗೋ. ೨); ಅವರಿಗೆ ತರಬೇತು ಕೊಡುತ್ತಿದ್ದ ಆಸ್ಪತ್ರೆಗಳು ಕೂಡ ಸುಸಂಘಟಿತವಾಗಿದ್ದುವು (ಮಾನಸಾ. ೩೩). **ಆಸಪತ್ರೆ**: ಈ ನಾಲ್ಕು ಗ್ರಾಮುಗಳಲ್ಲಿ ಸರಕಾರಿ ಆಸಪತ್ರೆಗಳುಂಟು (ಕಭಾಗೆ. ೪೧೭); ಇಲ್ಲಿಯೊಂದು ಅಸಪತ್ರೆಯದೆ (ಗ್ರೇಟಬ್ರಿ. ೨೯).

[← **ಪೋರ್ಚು.** ಎಸ್ಪಿಟಲ್, ಎಸ್ಪಿಟಿಲ್, ಎಸ್ಪಿಟಿಲ್; **ಇಂ.** ಹಾಸ್ಪಿಟಲ್. / **ತಮಿ.** ಆಸ್ಪತ್ತಿರಿ; **ತೆಲು.** ಆಶಿಪತ್ರಿ, ಹಾಸ್ಪತ್ರಿ; **ಹಿಂ.** ಅಸ್ಪತಾಲ್]

**ಆಸ್ಪದ** (ನಾ). ೧. ಅವಕಾಶ; ಸ್ಥಳ; ಕ್ಷೇತ್ರ: ಮಧ್ಯಾಸ್ಪದದಿಂ ತದಂಬರಚರಂ ನೀಚಾಹ್ವಯಸ್ಥಾನದೊಳ್ ನಿಲೆ ನೀಚಾಸ್ಪದದಿಂದೆ ಬಂದ ನವನೆಂಗಾ ನಾಲ್ಕು ಯೋಗಂಗಳೊಳ್ (ಜಾತತಿ. ೨೩–೨೭); ಮುಳ್ಳು ಮೊನೆಯಷ್ಟು ಆಸ್ಪದ ಕೊಡದವನ ತಳ್ಳಿ ಬೇಡ (ಗಾದೆ). ೨. ಆಶ್ರಯ; ನೆಲೆ: ಪರಮೈಶ್ವರ್ಯಾಸ್ಪದಂ ರಕ್ಷಿಸುಗೆ ವಸುಧೆಯಂ ಯುದ್ಧರಂಗ ತ್ರಿಣೇತ್ರಂ (ಜಗವಿ. ೧–೩); ಪೆರ್ಗಿಚ್ಚನಾರ್ ಕಂಡೊಡಂ ಶಕುನಂ ಶೋಭನಕಾಸ್ಪದಂ (ಸೋಮೇಶ. ೭೭). ೩. ವೃತ್ತಿ; ಉದ್ಯೋಗ. ೪. ಪ್ರತಿಷ್ಠೆ; ಗೌರವ: ಪತಿಯಂ ಪಿರಿಯಂನಂ ಶೌರ್ಯದೆ ಮೆಚ್ಚಿಸಿ ಪರಮಮಹಾಸ್ಪದ ಮನೆಯ್ದೆ ಪಡೆದಂ ರೇಚಂ (ಮದತಿ. ೧–೮). [ಸಂ.]

**ಆಸ್ಪಾಕ**, ಆಸಪಾಕ (ನಾ). ಬಾಯೆಲ್ಲಾ ಬೆಂದುಹೋದಂತೆ ಹುಣ್ಣಿನಿಂದ ಕೂಡಿರುವ ಒಂದು ರೋಗ; ಬಾಯಿಹುಣ್ಣು: ಆಸ್ಪಾಕವಾಗಿರುವುದರಿಂದ ಮಾತನಾಡಲು ಆಗುವುದಿಲ್ಲ (ರೂಢಿ). **ಆಸಪಾಕ** (ಕಿ).

[< ಸಂ. ಆಸ್ಯಪಾಕ]

**ಆಸ್ಪೃಷ್ಟ** (ಗು). ಮುಟ್ಟಲ್ಪಟ್ಟ; ಮುಟ್ಟಿದ. 'ಆಸ್ಪೃಷ್ಟಕಪಿಳ' ಪರಾ. [ಸಂ.]

**ಆಸ್ಪೃಷ್ಟಕಪಿಳ** (ನಾ). ಕಪಿಲ ವರ್ಣದ ಹಸುವನ್ನು ಮುಟ್ಟಿದವನು: ಕೃತನಿತ್ಯದಾನನಾವೀಕ್ಷಿತಘೃತನಾಸ್ಪೃಷ್ಟಕಪಿಳನೊಯ್ಯನೆ ಸಾರ್ದಂ ಕತಿಪಯ ಪರಿಚಿತಪರಿಜನಚತುರವಚಃಪ್ರಚಯ ಚತುರನರಸಿಯನರಸಂ (ಯಶೋಚ. ೨–೭೭). [ಸಂ. ಆಸ್ಪೃಷ್ಟಕಪಿಲ]

**ಆಸ್ಫಾಲ**, ಆಸ್ಫಾಳ (ನಾ). = ಆಸ್ಫಾಲನ. **ಆಸ್ಫಾಳ**: ಉನ್ಮದಮಾತಂಗಾಳಿಕೇಳೀಚಳಿತ ಜಳಚರಾಸ್ಫಾಳ ಕಲ್ಲೋಳಮಾಳಾನದ ನದ್ಯಂಭಃಪ್ಲವಾಲಂಕರಣನ್ನಜಗದಾವಾಸಮುದ್ರಂ ಸಮುದ್ರಂ (ಇಆ. IX, ೯೭–೪; 1161). [ಸಂ.]

**ಆಸ್ಫಾಲನ**, ಆಸ್ಫಾಳನ (ನಾ). ಬಡಿಯುವುದು; ತಟ್ಟುವುದು; ಅಪ್ಪಳಿಸುವುದು; ಹೊಡೆತ: ವಾಮದಕ್ಷಿಣಬಾಹ್ಯಾಭ್ಯಂತರಾಸ್ಫಾಲನ ವಿಭೇದಂಗಳೊಳಂ (ಗದಾಯು. ೮–೧ ವ); ಬಂದು ರಂಗಸ್ಥಲದೊಳ್ ನಿಂದರ್ ಭುಜಾಸ್ಫಾಲನರುತಿ ಮಿಗೆ ಚಾಣೂರ ಮುಖ್ಯಾದಿ ಮಲ್ಲರ್ (ಜಗವಿ. ೬–೪೭). **ಆಸ್ಫಾಳನ**: ನಾನಾಜಳಚರ ನಿಕರಾಸ್ಫಾಳನ ಪ್ರೋಜ್ಜ್ವಲತ್ಪ್ರೃಚ್ಛದನಚ್ಛನ್ನಚ್ಛಟಾಪ್ರಕ್ಷುಭಿತ ಲಹರಿಕಾಸ್ಫಾರರೌದ್ರಂ ಸಮುದ್ರಂ (ಕಾವ್ಯಸಾ. ೬೪ ಶೂದ್ರಕ); ಕರತಳಪಲ್ಲವಂಗಳ್ ಸಮದ ಗಜಕುಂಭಸ್ಥಳಾಸ್ಫಾಳನ ಕರ್ಕಶಂಗಳಾದುವು (ಪಂಪಭಾ. ೨–೩೯ ವ).

**ಆಸ್ಫಾಲನಂಮಾಡು** = ತಟ್ಟು; ತೀಡು: ಅಪವಾದಾತೋದ್ಯನಾದಂ ವಸುಂಧರೆ ನಿಲ್ವನ್ನೆವರಂ ದಿಶಾಕರಟಿ ಕರ್ಣಾಸ್ಫಾಲನಂ ಮಾಡುಗುಂ (ಪಂರಾಮಾ. ೬–೧೪೮). [ಸಂ.]

**ಆಸ್ಫಾಲನಂಗೆಯ್** (ಕ್ರಿ). ಅಪ್ಪಳಿಸು; ತಟ್ಟು; ಬಡಿ: ಕೋಪಮನೆಡೆಗೊಂಡು ಆಸ್ಫೋಟಿಸಿ ಬಾಹಾಸ್ಫಾಲನಂಗೆಯ್ದು . . . ಗರ್ಜಿಸಿ (ಗಿರಿಕ. ೬–೭೭ ವ). [ಆಸ್ಫಾಲನ + ಗೆಯ್ (< ಕೆಯ್$_1$)]

**ಆಸ್ಫಾಲಿತ** (ಗು). ತಟ್ಟಿದ; ಅಪ್ಪಳಿಸಿದ: ಕನನ್ಮಣಿವತಂಸಾಸ್ಫಾಲಿತಾಂಸಂ ಲಸದ್ದೋರಾಂದೋಳನಜಾತ ಕಂಕಣಝಣತ್ಕಾರಂ ಪುರಸ್ತ್ರೀಜನಂ (ಚಂದ್ರಪು. ೧೦–೩). [ಸಂ.]

**ಆಸ್ಫಾಲಿಸು** (ಕ್ರಿ). "ಹೊಡೆ" (ಪ್ರಭಣ್ಣ). [ಆಸ್ಫಾಲನ + –ಇಸು$_3$]

**ಆಸ್ಫಾಳ** 'ಆಸ್ಫಾಲ' ನೋ.

**ಆಸ್ಫಾಳನ** 'ಆಸ್ಫಾಲನ' ನೋ.

**ಆಸ್ಫುರಿತ** (ಗು). ೧. ಅದುರಿದ; ನಡುಗಿದ. ೨. ಮೇಲಕ್ಕೆ ನೆಗೆದ; ಉದ್ಭವಿಸಿದ. ೩. ಪ್ರಕಾಶಿಸಿದ; ಹೊಳೆದ. [ಸಂ.]

**ಆಸ್ಫೋಟ** (ನಾ). ಸಿಡಿತ; ಹಾರುವುದು: ಸರ್ವತೋಮುಖವೂ ನವನವೋನ್ಮೇಷಶಾಲಿನಿಯೂ ಕಲ್ಯಾಣಾಕಾಂಕ್ಷಿಯೂ ಆದ ಕ್ರಾಂತಿ ಆಸ್ಫೋಟಗೊಳ್ಳಲನುವಾಗುತ್ತದೆ (ಸಾಹಿಪ್ರ. IV ಪ್ರಸ್ತಾ). [ಸಂ.]

**ಆಸ್ಫೋಟಕ** (ನಾ). ೧. ಕೈಚಪ್ಪಾಳೆ ತಟ್ಟುವವನು; ಚಿಟಿಕೆ ಹಾಕುವವನು; ಭುಜವನ್ನು ತಟ್ಟುವವನು. ೨. ಸ್ಫೋಟಕವಾಗುವ ವಸ್ತು; ಸ್ಫೋಟಕದ್ರವ್ಯ: ಆಸ್ಫೋಟಕವನ್ನು ಬಾಂಬಿನ ಚಿಪ್ಪಿನೊಳಗೆ ತುಂಬಿ ಪರೀಕ್ಷಿಸುವ ಕಾರ್ಯ ಉಳಿಯಿತು (ಆತ್ಮಾರ್ಪ. ೧೩೪). [ಸಂ.]

**ಆಸ್ಫೋಟನ** (ನಾ). ೧. ಸಿಡಿತ; ಸಿಡಿದು ಹಾರುವುದು: ಹಿರಿಣ್ಯಾಕ್ಷನಂ . . . ಸಕಲಲೋಕಾಸ್ಫೋಟನಾಪೇಕ್ಷನಂ ತವೆ ಕೊಂದಾದಿವರಾಹರೂಪದೊಳ್ ನೀನಂದೆತ್ತಿದೈ (ಜಗವಿ. ೧–೫೭). ೨. = ಆಸ್ಫಾಲನ. ೩. ಜಟ್ಟಿಗಳು ತೋಳುತಟ್ಟುವುದರಿಂದ ಹುಟ್ಟುವ ಶಬ್ದ: ಅಠಣತ್ಕಾರ ರವಣಾಸ್ಫಾ[ಸ್ಫೋ]ಟನ ಶ್ರವಣದೊಳ್ (ವೀಶೈಪು. ೨–೨–೧). ೪. ಅತ್ತ ಇತ್ತ ಚಲಿಸುವುದು; ನಡುಗುವುದು; ಅದುರುವುದು (ಕಿ). [ಸಂ.]

**ಆಸ್ಫೋಟಿತ** (ಗು). ೧. ಬಡಿದ; ಅಪ್ಪಳಿಸಿದ: ತ್ರಿಭುವನ ಮೂಲಸ್ತಂಭ ಸಕಳಕಳಾಧರಲೀಲಾವಳಂಬಿತವದನೇಂದುಸಾಂದ್ರ ಚಂದ್ರಿಕಾಮೃತಚ್ಛಟಾಸ್ಫೋಟಿತ ಸುರಾಧೀಶನೆತ್ತಂದುದಂ ಕಂಡು (ಶಾಂತಿಪು. ೧೦–೯ ವ). ೨. ಗದಾಯುದ್ಧದಲ್ಲಿ ಒಂದು ವರಿಸೆ: ಆಕುಂಚಿತಮಾಸ್ಫೋಟಿತಮಾಕ್ಷಿಪ್ತಮುದ್ಭ್ರಾಮಿತಂ ಎಂಬೆಂಟುಂತೆಜದ ಪ್ರಹರಣಂಗಳೊಳಂ (ಗದಾಯು. ೮–೧ ವ). [ಸಂ.]

**ಆಸ್ಫೋಟನಿ** (ನಾ). ರಂಧ್ರಮಾಡುವ ಸಾಧನ; ಭೈರಿಗೆ. [ಸಂ. ಆಸ್ಫೋಟನೀ]

**ಆಸ್ಫೋಟಿಸು** (ಕ್ರಿ). ೧. ಬಡಿ; ಅಪ್ಪಳಿಸು; ತಟ್ಟು: ಪಿಡಿದಡಸಿಯ ಗುರ್ವುರ್ ಪರ್ವೆ ಬೀಸಿ ಗುಣಣೆಯ ಕಂಭಂಗಳೊಳಂ ಕೇರ್ಗಳೊಳವಾಸ್ಫೋಟಿಸಿ (ಪಂಪಭಾ. ೮–೭೬ ವ); ತೋಳೆರಡುಮನಾಸ್ಫೋಟಿಸಿ ನೀಳಾಬ್ದದ ಕಾವುವಿಡಿದು ಕುಣಿದಳದೊರ್ವಳ್ (ಜಗವಿ. ೫–೨೨). ೨. ಅರ್ಭಟಿಸು; ಸಿಡಿದೇಳು: ವೃಕೋದರಂ ಮುಳಿದಾಸ್ಫೋಟಿಸಿ (ಪಂಪಭಾ. ೯–೯೦ ವ); ಚತುರಂಗಬಲದ ಭಾರದುರವಣೆಯಂ ತಾರಕಾಸುರಂ ಕಂಡು ಕೋಪಮನೆಡೆಗೊಂಡು ಆಸ್ಫೋಟಿಸಿ (ಗಿರಿಕ. ೬–೬೬ ವ); ಬಸವರಾಜಂ ರುದ್ರಾವತಾರನಿಂತಾಸ್ಫೋಟಿಸೆ (ಬಸರ. ೮–೧೪೧). ೩. ಸಿಡಿದುಹೋಗುವಂತೆ ಮಾಡು: ಖಾಸಗಿ ವಿಮಾನವೊಂದನ್ನು ಬಾಂಬ್ ಇಟ್ಟು ಆಸ್ಫೋಟಿಸಲಾಗಿದೆ (ಪ್ರಜಾವಾ. ೨೧–೩–೬೩, ೧–೬). [ಆಸ್ಫೋಟನ + –ಇಸು$_3$]

**ಆಸ್ಫೋಟೆ** (ನಾ). ೧. "ಕಾಡುಮಲ್ಲಿಗೆ" (ಅಮರ. ಟೀಕೆ). ೨. "ಸಟ್ಟೆಗದ ಹಂಬು" (ಅಮರ. ಟೀಕೆ). [ಸಂ. ಆಸ್ಫೋಟಾ]

**ಆಸ್ಮಿಕ, ಆಸ್ಮೀಕ** (ನಾ). ಆಶ್ಚರ್ಯ: ನೀವು ಈ ಶೂನ್ಯಪೀಠವನಡರಿಸಿದುದಕಾಸ್ಮಿಕವ ತಾಳುತ್ತಿರ್ಪಿರಿ (ಪ್ರಭುಪು. ೯–೪೬). **ಆಸ್ಮೀಕ:** ಕಾಸ್ಮೀರೆ ಹಂಬಲಿಸಲಿತ್ತ ಕಾಶೀರಾಜನಾಸ್ಮೀಕದಿಂ ಕಾರ್ತವೀರ್ಯನೇವರನೆಂದು ಭೀಷ್ಮನೆಂಬನುಜನಂ ಕಳುಹೊಡನೆ ಕರಸಿದಂ (ಪರಶು. ೭ ಸೂ). [< ಸಂ. ಆಕಸ್ಮಿಕ]

**ಆಸ್ಮೀಕ** 'ಆಸ್ಮಿಕ' ನೋ.

**ಆಸ್ಯ** (ನಾ). ೧. ಮುಖ: "ತುಂಡಂ . . . ಆಸ್ಯಂ, ಆನನಂ – ಈ ೭ ಮೊಗಂ" (ಹಲಾಯು. ೮೫–೩೬೪); ಈ ಜಂಬೂದ್ವೀಪ ಮಹೀಭ್ರಾಜಿತ ಭರತಕ್ಕೆ ರತ್ನಪುರಮಾಸ್ಯಂ (ಶಾಂತಿಪು. ೯–೪೬); ಲಕ್ಷ್ಮೀರಮಣನಾಸ್ಯಚಂದ್ರನಾನಂದಮಂ ನಮಗೀಯಲಿ (ಜೈಮಿಭಾ. ೧–೧). ೨. ಬಾಯಿ: ಅನಿಮೇಷಾಹಿತನಾಸ್ಯಗಹ್ವರ ವಿನಿರ್ಯಲ್ಲೋಹಿತಂ . . . ಬಿಟ್ಟಂ (ಜಗವಿ. ೪–೫೮). [ಸಂ.]

**ಆಸ್ಯಪತ್ರ** (ನಾ). ತಾವರೆ; ಕಮಲ. [ಆಸ್ಯ + ಪತ್ರ]

**ಆಸ್ಯಪಾಕ** (ನಾ). ಬಾಯೆಲ್ಲಾ ಬೆಂದುಹೋದಂತೆ ಹುಣ್ಣಿನಿಂದ ಕೂಡಿರುವ ಒಂದು ರೋಗ; ಬಾಯಿಹುಣ್ಣು. [ಸಂ.]

**ಆಸ್ಯಲಾಂಗಲ** (ನಾ). ೧. ನೇಗಿಲಿನಂತೆ ಮುಖವುಳ್ಳ ಪ್ರಾಣಿ. ೨. ನಾಯಿ. ೩. ಹಂದಿ. [ಆಸ್ಯ + ಲಾಂಗಲ]

**ಆಸ್ಯಲೋಮ** (ನಾ). ಮುಖದ ಕೂದಲು; ಗಡ್ಡ. [ಆಸ್ಯ + ಲೋಮ]

**ಆಸ್ಯವಿಲಸಿತ** (ನಾ). [ನಾಟ್ಯ] ಮುಖಭಂಗಿ; ಮುಖದ ಮೂಲಕ ಭಾವಗಳನ್ನು ಪ್ರಕಟಿಸುವುದು: ಆಕೆಯರ ಚತುರ್ದಶವಿಧಾಸ್ಯವಿಳಸಿತದಿಂ ಶಶಿಬಿಂಬಕದಂಬಕಮಂ ಪಸರಿಸಿದಂತೆಯುಂ . . . ಅತಿ ಮನೋಹರಮಾಗೆ ಎತ್ತೆತ್ತಂ ನರ್ತಿಸೆ (ಚಂದ್ರಪು. ೧೨–೧೯೪ ವ). [ಆಸ್ಯ + ವಿಳಸಿತ (= ವಿಲಸಿತ)]

**ಆಸ್ಯವೈರಸ್ಯ** (ನಾ). ಬಾಯಿಗೆ ರುಚಿಯಿಲ್ಲದಿರುವುದು; ಅರುಚಿ ಎಂಬ ರೋಗ: ಸ್ವಲ್ಪ ಲವಣಬೆರಸಿ ಅಂಬಿಲವನು ಪಾಕವ ಮಾಡಿ ಅದರಿಂದ ಬಾಯ ಉಗುಳಲು ಆಸ್ಯವೈರಸ್ಯ ಶಮನವಹುದು. ಅಸ್ಯವೈರಸ್ಯವೆಂದರೆ ಉಪ್ಪು ಹುಳಿ ಕಹಿ ಮುಕ್ಕುಳಿಸಿ ಒಂದೂ ನಾಲಿಗೆಗೆ ತಿಳಿಯಬಾರದೆ ಇಹುದು (ವೈದ್ಯಸಾ. II, ೧೪೯). [ಆಸ್ಯ + ವೈರಸ್ಯ]

**ಆಸ್ಯಾನಿಳ** (ನಾ). ಉಸಿರು: ಆಸ್ಯಾನಿಳಂ ಶೀತಶೀತಳಿಕಾಸಖ್ಯಮನೊಲ್ದುದಿಲ್ಲಬಲೆಗೀ ನೋವೇತಱಿಂದಾದುದೋ (ಮಲ್ಲಿಪು. ೪–೪). [ಆಸ್ಯ + ಅನಿಳ (= ಅನಿಲ)]

**ಆಸ್ರಪ** (ನಾ). ೧. ನೆತ್ತರನ್ನು ಕುಡಿಯುವವನು; ರಾಕ್ಷಸ. ೨. ಆಸ್ರಪನು ಅಧಿದೇವತೆಯಾಗಿ ಉಳ್ಳ ನಕ್ಷತ್ರ; ಮೂಲಾನಕ್ಷತ್ರ. [ಸಂ.]

**ಆಸ್ರಯ** (ನಾ). ಆಶ್ರಯ: ಶ್ರೀಗಾಸ್ರಯಮೆನೆ ತೇಜಕ್ಕಾಗರವೆನೆ ನೆಗಬ್ದ ಗಂಗವಜ್ರನ ಲೆಂಕ (ಎಕ. II, ೧೩೮–೧; 940). [< ಸಂ. ಆಶ್ರಯ]

**ಆಸ್ರವ** (ನಾ). ೧. ಕ್ಲೇಶ; ಕಷ್ಟ. ೨. ಹರಿಯುವಿಕೆ; ಸ್ರಾವ. ೩. ಕುದಿಯುವ ಅನ್ನದ ಮೇಲೆ ಕಾಣುವ ಗಂಜಿಯ ನೊರೆ (ಶ). ೪. [ಜೈನ] ಸಪ್ತತತ್ತ್ವಗಳಲ್ಲಿ ಒಂದು; ಪುಣ್ಯಪಾಪ ರೂಪವಾದ ಕರ್ಮವು ಜೀವದೊಳಕ್ಕೆ ಹರಿಯುವುದು: "ಶುಭಾಶುಭರೂಪ ಮನೋವಾಕ್ಕಾಯ ಪರಿಸ್ಪಂದ ಹೇತುಕಮಾಗಿ ಬರ್ಪ ಕರ್ಮದ ಬರವಾಸ್ರವಮೆಂಬುದು" (ಆದಿಪು. ೧೦–೬೩ ವ); ಮೋಕ್ಷಪದಾರ್ಥಂ ಆಸ್ರವಪದಾರ್ಥಂ ಸಂವರಪದಾರ್ಥಂ ನಿರ್ಜರಪದಾರ್ಥಂ (ಸುಕುಮಾ. ೩–೩೯ ವ); ಶುಭಾಶುಭಕರ್ಮಾಗಮನ ದ್ವಾರರೂಪಂ ಆಸ್ರವಂ (ತತ್ತ್ವಪ್ರ. ೮). ೫. [ವೈದ್ಯಶಾ] ಒಂದು ಬಗೆಯ ಹೊಟ್ಟೆಯ ಶೂಲೆ: ಆಸ್ರವವೆಂಬ ಹೊಟ್ಟೆಶೂಲೆ ಹೊಟ್ಟೆಯೊಳಗೆ ಮಲಹೆಚ್ಚಿದ ಶೂಲೆ ××× ಸ್ಪನಕದ ಶೂಲೆ ಮಾಣ್ಗುಂ (ವಿವೈವಿ. ೧೭೯). [ಸಂ.]

**ಆಸ್ರವತತ್ತ್ವ** (ನಾ). = ಆಸ್ರವ ೪: ಜೀವತತ್ತ್ವಮಜೀವತತ್ತ್ವಮಾಸ್ರವತತ್ತ್ವಂ . . . ಎಂಬ ಸಪ್ತತತ್ತ್ವರೂಪಮುಮಂ (ಸುಕುಮಾ. ೩–೩೯ ವ). [ಆಸ್ರವ + ತತ್ತ್ವ]

**ಆಸ್ರವಪದಾರ್ಥ** (ನಾ). = ಆಸ್ರವ ೪: ಜೀವಪದಾರ್ಥಮಜೀವಪದಾರ್ಥಂ ಮೋಕ್ಷಪದಾರ್ಥಂ ಆಸ್ರವಪದಾರ್ಥಂ ಸಂವರಪದಾರ್ಥಂ ನಿರ್ಜರಪದಾರ್ಥಂ . . . ಎಂಬ ನವಪದಾರ್ಥಮುಮಂ (ಸುಕುಮಾ. ೩–೩೯ ವ). [ಆಸ್ರವ + ಪದಾರ್ಥ]

**ಆಸ್ವಾದ** (ನಾ). ೧. ರುಚಿನೋಡುವುದು; ಸವಿಯುವುದು; ಸುಖವನ್ನು ಅನುಭವಿಸುವುದು: ನಿನಗೆ ಕರಮಾಸ್ವಾದವೇಕೈಯೆನುತ (ಬಸಪು. ೫೯–೧೪); ಚಮತ್ಕಾರ, ಆಸ್ವಾದ, ಆನಂದ, ವಿಶ್ರಾಂತಿ ಇವೆಲ್ಲಕ್ಕೂ ಒಂದೇ ತಾತ್ಪರ್ಯ (ಭಾರವಿಮಾ. ೩೮೮). ೨. ರುಚಿ; ಸವಿ: ಮಲಮಲನೆ ಮಱುಗುತಲವನಿಯೊಳು ತೊಳಲಲೇಕಾಸ್ವಾದದೂಟವನೆಲೆ ಮಗನೆವುಣಲೇತಕೀ ಹಸುವಿಲ್ಲದೂಟದಲಿ (ಬಸಪು. ೧೫–೨೮); ಕಾವ್ಯದ ಆಸ್ವಾದವನ್ನು ಸವಿಯಲು ಯತ್ನಿಸಿದಂತಾಯಿತು (ಸಾಹಿಸ. ೧೬೮). [ಸಂ.]

**ಆಸ್ವಾದನ** (ನಾ). ಸವಿಯುವುದು; ಸುಖವನ್ನು ಅನುಭವಿಸುವುದು: ಮಗುಳ್ದು ಬಂದು ವಿಷಯಸುಖಾಸ್ವಾದನರಸಾಮೃತತತ್ಪರನಾಗಿರೆ (ಶಾಂತಿಪು. ೭–೩೬ ವ); ರಸದರ್ಶನಾಸ್ವಾದನಂಗೈವ ಸಹಜಕವಿ (ಶ್ರೀರಾಮಾ. ೫೭–೧೦೧). [ಸಂ.]

**ಆಸ್ವಾದನಂಗೈ** (ಕ್ರಿ). = ಆಸ್ವಾದಿಸು: ನಿನ್ನಧರ್ಮಂಗಿ . . . ಒಂದರಲ್ತೆಗೆದು ಗಂಧಾಸ್ವಾದನಂಗೈಯೆ (ವೃಷವಿ. ೧೪–೧೦೩). [ಆಸ್ವಾದನ + ಗೈ (< ಕೆಯ್$_1$)]

**ಆಸ್ವಾದಿಸು** (ಕ್ರಿ). ತಿನ್ನು; ರುಚಿನೋಡು; ಸವಿ; ರುಚಿಯನ್ನು ಅನುಭವಿಸು: ಅಂತು ನಿಜಮನೋನಯನ ಕಾಂತಕಾಂತಾವದನ ಸರಸಿಜ ಸೌರಭಮನಾಸ್ವಾದಿಸಿ (ಆದಿಪು. ೭–೩೪ ವ); ರಸರಸಾಯನದಿನಿದನಾಸ್ವಾದಿಸುತ (ಬಸಪು. ೩೩–೧೫); ಬೋಧಿಸಿ ಪೇಳ್ದೊಡೆನ್ನಯ ಮಾತ ವಿಷವೆಂಪಾಸ್ವಾದಿಸಲೊಲ್ಲದೆ ಬಿಸುಟು (ಮೋಹತ. ೮–೨೦); ಇದರ ಅಪೂರ್ವ ಸೌಂದರ್ಯವನ್ನು ಆಸ್ವಾದಿಸುವ ಭಾಗ್ಯ ನನಗೆ ದೊರೆಯಿತು (ಸಮಾಲೋ. ೮೫). [ಆಸ್ವಾದನ + –ಇಸು$_3$]

**ಆಹ**$_1$, ಅಹಾ, ಆಹಾ (ಅ). ಆಶ್ಚರ್ಯ, ಆಕ್ಷೇಪ, ಮೆಚ್ಚಿಗೆ ಕನಿಕರ, ದುಃಖ ಮುಂತಾದುವುಗಳನ್ನು ಸೂಚಿಸುವ ಮಾತು. (i) ಆಶ್ಚರ್ಯಕ್ಕೆ: ಆಹ ಬಸವಾ ಲೇಸು ಮಾಡಿದೆ ಸೋಹವಂ ಬಯಸಿದೆಯಲಾ (ಬಸಪು. ೩೭–೫೩). (ii) ಆಕ್ಷೇಪಕ್ಕೆ: ಆಹ ಯಿಳಿಯಿಳಿಗೊರವ ನಿನಗೀ ಚೋಹವೇಕಿನ್ನೆನಗೆ ಸಿಕ್ಕಿದೆ ಮೋಹಿಕೊಂಡಿಲ್ಲಿರ್ದೊಡಂ ನಗೆಯಲ್ಲ ಸೈರಿಸೆನು (ಬಸಪು. ೩೨–೧೫). (iii) ಮೆಚ್ಚಿಗೆಗೆ: ಮಹೇಶನಂ ಪ್ರಿಯದೊಳಪ್ಪಿದವಳ್ ಗಿರಿಜಾತೆಯಾಹ ಚೆಲ್ವೊಡರಿಸಿತಾಹ ದಂಪತಿಗಳಾಹ ಜಗತ್ತ್ರಭುಗಳ್ ಸುಭಾಗ್ಯರೆನ್ನೊಡೆಯರ್ (ಗಿರಿಕ. ೧೦–೧೦೧). (iv) ದುಃಖ ಅಥವಾ ಕನಿಕರಕ್ಕೆ: ಆಹ ಎಂತಹ ಕೆಲಸವಾಗಿ ಹೋಯಿತು (ರೂಢಿ). **ಅಹಾ**: (i) (ಮುಂಬಯಿ. ೨–೭ ಕಿ). **ಆಹಾ**: (i) ಇದು ಭೂಮಿಸ್ಥಾನದಿಂ ಮುಕ್ತಿಗೆ ನಡೆಯಿಪ ನೀಲಾಶ್ಮಸೋಪಾನ ಮಾಹಾ (ಗಿರಿಕ. ೧–೬೭); ಮುಯ್ಯಿಂದೊರ್ವರ್ಗರ್ಮೋರ್ವರ್ ಕೆಲಕೆಲ ತೆಜದಿಂ ಬಣ್ಣಿಸುತ್ತಿರ್ಪರಾಹಾ (ಮೈಸೂಮ. ೫–೧೮೭); ಆಹಾ ಈ ಬಾಳೆ ತೋಟ ಎಷ್ಟು ಚೆನ್ನಾಗಿದೆ (ರೂಢಿ). (ii) ಆಹಾ ನಿಶಾಚರಿಯರಲ್ಲವೇ ನರಕಾಸುರನ ಮನೆಯ ಬಾಲಕಿಯರು (ಜೈಮಿಭಾ. ೨–೫೯). (iv) ಆಹಾ ಎಂಥ ದುಃಸ್ಥಿತಿ ಬಂದಿತು (ರೂಢಿ).

**ಆಹಾಹ** (ದ್ವಿರುಕ್ತಿ): ಆಹಾಹ ಹಸನಾಯ್ತು ಕೊಡಿರೇಕೆ ಪಾತ್ರೆಯಂ (ತಿರುರ. ೧೩). [?]

**ಆಹ**$_2$ 'ಅಗು$_1$' ಪರಾ.

**ಆಹಂಗೆ** 'ಅಹಗೆ' ನೋ.

**ಆಹಕೆ** (ನಾ). ಮೂಗಿನಲ್ಲಿ ಉಂಟಾಗುವ ಒಂದು ರೋಗ. [ಸಂ.]

**ಆಹತ** (ಗು). ೧. ಹೊಡೆಯಲ್ಪಟ್ಟ; ಬಡಿದ. ೨. ತಿಳಿದ; ಗೊತ್ತಾದ. ೩. [ಗಣಿತ] ಗುಣಾಕಾರ ಮಾಡಿದ; ಗುಣಿಸಲ್ಪಟ್ಟ. (ನಾ). ೪. ಹೊಡೆತ; ಏಟು; ಪೆಟ್ಟು: ರಾಜ್ಯಮಂ ಕಟ್ಟಿದರು ನಮ್ಮವರು ಪರಧರ್ಮದಾಹತವ ಬಿಗಿತಡೆದರೆಮ್ಮವರು (ನಾಗರಿ. ೩೯–೩). ೫. "ಬಹು ಅಸಂಭಾವಿತವಾದ ಮಾತು" (ಅಮರ. ಟೀಕೆ). ೬. ಹೊಸಬಟ್ಟೆ; ಒಗೆಯದೆಯಿರುವ ವಸ್ತ್ರ (ಕಿ). ೭. ಮಲ್ಲಯುದ್ಧದಲ್ಲಿ ಒಂದು ವರಿಸೆ: ಡೊಕ್ಕರಂ ಪಟ್ಟಿಸಂ ವಳಯಾವೇಷ್ಟನಮಾಹತಂ ಭುಜಗಬಂಧಂ ತೋರಹತ್ತಂ ಶಿರೋವಳಯಂ ಬಾಹುತಳಂ ಚಮತ್ಕರಿಸೆ ನಾನಾಕೌಶಲಂ ದೋಱಿದರ್ (ಶಬಶಂ. ೪–೭೫). ೮. ನಗಾರಿ, ಮದ್ದಳೆ, ತಮಟೆ ಮುಂತಾದ ವಾದ್ಯ. ೯. [ಸಂಗೀತ] ದೇಶೀಗಮಕಗಳಲ್ಲಿ ಒಂದು ಬಗೆ: ಕಂಪಿತ . . . ಆಹತವೆಂಬೇಳು ದೇಶೀಗಮಕಂಗಳೆಂತಲೂ (ವಿವೇಕ. ೨೩೨); ವೀಣೆಯ ಕೈಗಿತ್ತು . . . ಜೋಕೆಯಿಂ ಜತಿ ರೀತಿ ತಾಳ ಪ್ರಮಾಣ ಕಂಪಿತ ಮೂರ್ಛೆ ರಸ ಪಾಡು ಬೆಡಗು ಬಿನ್ನಾಣ ಲಯಮಾಹತ ಪ್ರತ್ಯಾಹತ ವ್ಯಾಪ್ತಿಯಱಿದು ಕೇಳಿಸಿದರವರು (ಜೈಮಿಭಾ. ೨೧–೫೭). [ಸಂ.]

**ಆಹತಲಕ್ಷಣ** (ನಾ). "ಗುಣಗಳಿಂದ ಪ್ರಸಿದ್ಧನಾದವನು" (ಅಮರ. ಟೀಕೆ). [ಆಹತ + ಲಕ್ಷಣ]

**ಆಹತಿ** (ನಾ). ಹೊಡೆತ; ಏಟು; ಪೆಟ್ಟು: ಅನಿಲಾಹತಿಯಿಂ ಚಳಿಯಿಕುಮನೋಕಹಾನೀಕಮದ್ರಿ ಚಳಿಯಿಕುಮೇ (ಅಜಿಪು. ೧೦–೪೮). [ಸಂ.]

**ಆಹನ** (ನಾ). ಕುಲುಮೆ; ಕಮ್ಮಟ (?): ದೇವರಾಯ ಮಹಾರಾಯರು ಯಪ್ಪತ್ತು ನಾಲ್ಕು ಆಹನದ ಪಂಚಾಲಖಿ ಕೊಟ್ಟ ಸಾಹಸದ ಕ್ರಮ (ಸೌಇಇ. IX–ii, ೪೩೯–೭; 1418). [?]

**ಆಹಮಿಸು** (ಕ್ರಿ). 'ಅಹಂ' ಎಂಬ ಭಾವವನ್ನು ಹೊಂದು, —ಪಡೆ: ದೇಹವಾತ್ಮನ ಯೋಗದಿಂದುಱಿಯಾಹಮಿಸುತೆ ವಿಕಾರಿಯಾಗಿಹುದು (ಶಂಕದಾ. ೩–೬೭). [< ಅಹಮ್ಮಿಸು]

**ಆಹರ**$_1$ (ನಾ). ಅನ್ನ; ಊಟ; ಭೋಜನ: ಸಲ್ಲಲಿತ ಶಿವಲಿಂಗ ಪೂಜೆಯಂ ಮಾಡಿ ತನ್ನಲ್ಲಿರ್ದ ಕಟ್ಟೋಗರನಾಹರಂ [ಪಾಠಾ. ಸುಪಾರಂ, ಸುವಾಹ] ರಂಗೊಟ್ಟು . . . ಆನಂದದಿಂದಾಡಿ ಪಾಡಿದನು (ಸಿದ್ಧರಾ. ೨–೧೭); ಆಹರಂಬುವ ಬಯಸುವುದು ಕಾರ್ಪಣ್ಯಬಡುತಿಹುದು (ಶಂಕದಾ. ೩–೬೭). [< ಸಂ. ಆಹಾರ]

**ಆಹರ**$_2$ (ನಾ). ೧. ತರುವುದು; ತೆಗೆದುಕೊಂಡು ಬರುವುದು. ೨. ಉಚ್ಛ್ವಾಸ; ಉಸಿರನ್ನು ಒಳಕ್ಕೆ ಎಳೆದುಕೊಳ್ಳುವುದು. ೩. ಉಚ್ಛ್ವಾಸದ ಗಾಳಿ; ಒಳಕ್ಕೆ ಎಳೆದುಕೊಂಡ ಉಸಿರು. [ಸಂ.]

**ಆಹರಣ** (ನಾ). ೧. ತರುವುದು; ತೆಗೆದುಕೊಂಡು ಬರುವುದು: ಸಮುದ್ರ ಕೇವಲ ಏಳುತ್ತದೆ; ಕೂಗುತ್ತದೆ. ವ್ಯಾಪಾರದ ಹಡಗುಗಳನ್ನು ತೇಲಿಸುತ್ತದೆ; ಆಹರಣ ಮಾಡುತ್ತದೆ (ನಿಬಂಧ. II, ೪೨೦). ೨. ಅಪಹರಿಸುವುದು; ಬಲಾತ್ಕಾರದಿಂದ ಕಿತ್ತುಕೊಳ್ಳುವುದು. ೩. ಮುಂದಿಡುವದು. ೪. ಯಜ್ಞ ಮುಂತಾದವನ್ನು ನೆರವೇರಿಸುವುದು,—ಆಚರಿಸುವುದು. ೫. ಪ್ರೇರಿಸುವುದು; ಮಾಡಿಸುವುದು. ೬. ಮದುವೆ ಮುಂತಾದ ಕಾಲದಲ್ಲಿ ವಧೂವರರಿಗೆ ಕೊಡುವ ಉಪಾಯನ. [ಸಂ.]

**ಆಹರಿ** (ನಾ). [ಸಂಗೀತ] ಒಂದು ರಾಗ; ನಾಟರಾಗದಲ್ಲಿ ಒಂದು ಬಗೆ: ನಾಟ, ಆಹರಿ, ಸಾಳಗ, ಹಮೀರನಾಟ, ಘೂರ್ಜರನಾಟಯೆಂಬಿವೇ ಪಂಚವಿಧನಾಟಗಳು (ವಿವೇಕ. ೨೩೫); ಬಳಿಕ ಸಮಸ್ತರಾಗಂಗಳೊಳಗೆ ರಾಮಕ್ರಿಯೆ, ಭೂಪಾಳಿ, ವಸಂತ, ನಾಟ . . . ಆಹರಿ . . . ಮಧ್ಯಮಾವತಿಯೆಂಬ ಮೂವತ್ತಾಱು ರಾಗಂಗಳ್ (ವಿವೇಕ. ೨೩೪). [< ಸಂ. ಅಭೀರೀ ?]

**ಆಹರಿಸು** (ಕ್ರಿ). ಕದಿ; ದೋಚು (ಕಿ). [ಆಹರಣ + –ಇಸು$_3$]

**ಆಹವ** (ನಾ). ೧. ಯುದ್ಧ; ಕಾಳಗ: "ಕೊಳುಗುಳಮಾಹವಮುಳ್ಕೆಯಕ್ಕೆ" (ಚತುನಿ. ೬೫); ಮಹಾಹವ ಜಯದೊಳ್ ಗುಣೋನ್ನತಿಯೊಳಾಹವಮಲ್ಲನೊಳಾಂ ಸಮಾನಮೆಂಬವನಿಪನೇಂ ಯಯಾತಿಯೋ ಭಗೀರಥನೋ (ಎಕ. VII, ಶಿಕಾರಿ. ೧೧೮–೯; 1054); ಆಹವಯಜ್ಞದೀಕ್ಷಿತನಹೆನು ತಾನೆಂದ (ಕುವ್ಯಾಉ. ೧೦–೧೯). ೨. ಯುದ್ಧ ಅಥವಾ ಕಾಳಗಕ್ಕೆ ಕರೆಯುವುದು. ೩. ಯಾಗ; ಯಜ್ಞ.

**ಆಹವಜತ್ತಲಟ್ಟ** = ಒಂದು ಬಿರುದು: ಎಸುವರಾದಿತ್ಯನುಂ ಆಹವಜತ್ತಲಟ್ಟನುಂ ವಯಿರಿಘರಟ್ಟನುಂ ಭಯಂಕರನುಂ . . . ಬಂಮರಸದೇವರು (ಎಕ. VI, ತರೀಕೆ. ೬೧–೩೫; 1104); ಆಹವಜತ್ತಲಟ್ಟ ವೈರಿಘರಟ್ಟ ಶರಣಾಗತವಜ್ರಪಂಜರ ವೈರಿದಿಕ್ಕುಂಜರಂ (ಎಕ. VI, ತರೀಕೆ. ೬೨–೧೨; 1104); ಎಸುವರಾದಿತ್ಯನುಂ ಆಹವಜತ್ತಲಟ್ಟನುಂ (ಎಕ. VI, ಕಡೂರು. ೧೫೯–೪೫; 1190). [ಸಂ.]

**ಆಹವಂಗೊಡು** (ಕ್ರಿ). ಯುದ್ಧವನ್ನು ಆರಂಭಿಸು; ಯುದ್ಧಕ್ಕೆ ಕರೆ: ಕಟ್ಟಿರ್ದ ಕುದುರೆಯಂ ಕಂಡು ಕಾಪಿನ ಭಟರ್ ಧಟ್ಟಿಸಿದೊಡಾ ಪ್ರವೀರಂ ಕೆರಳ್ದೊಡಾಹವಂಗೊಟ್ಟೆನಾರ್ಪೊಡೆ ಬರಲಿ ತನ್ನೊಡನೆ ಕಾಳಗಕೆ ಪಡೆಸಹಿತ ಪಾರ್ಥನೆಂದು ತೊಟ್ಟಂ ಶರಾಸನದೊಳಂಬನು (ಜೈಮಿಭಾ. ೮–೨೬). [ಆಹವ + ಕೊಡು]

**ಆಹವಕ್ಷಮ** (ನಾ). ಯುದ್ಧ ಮಾಡಲು ಸಮರ್ಥ, —ದಕ್ಷ: ಪ್ರಮದೋದ್ಯಾನದೊಳಾವನಿರ್ದನವನಂ ಕೊಂದಿಕ್ಕಿಮೆಂದಾಹವಕ್ಷಮರಂ ಪೇೞ್ದ ದಶಾನನಂ (ಪಂರಾಮಾ. ೧೧–೧೧೬). [ಆಹವ + ಕ್ಷಮ]

**ಆಹವದುರ್ಜಯ** (ನಾ). ಯುದ್ಧದಲ್ಲಿ ಗೆಲ್ಲಲು ಅಸಾಧ್ಯನಾದವನು: ತಾಗಿದನಾಹವದುರ್ಜಯಂ ಮಯಂ (ಪಂರಾಮಾ. ೧೪–೧೩೩). [ಆಹವ + ದುರ್ಜಯ]

**ಆಹವಧರ್ಮ** (ನಾ). ಯುದ್ಧಧರ್ಮ. 'ಆಹವಧರ್ಮಕುಶಲ' ಪರಾ. [ಆಹವ + ಧರ್ಮ]

**ಆಹವಧರ್ಮಕುಶಲ** (ನಾ). ಯುದ್ಧಧರ್ಮವನ್ನು ಚೆನ್ನಾಗಿ ತಿಳಿದವನು: ನಿರ್ಮಳರು ನೀವೆೈವರಾಹವಧರ್ಮಕುಶಲರು (ಕುವ್ಯಾಗ. ೧೧-೫೬). [ಆಹವಧರ್ಮ + ಕುಶಲ]

**ಆಹವನೀಯ** (ಗು). ೧. ಯಜ್ಞದಲ್ಲಿ ಅರ್ಪಣೆಗೆ ಯೋಗ್ಯವಾದ; ಹೋಮಮಾಡಲು ತಕ್ಕುದಾದ. (ನಾ). ೨. ತ್ರೇತಾಗ್ನಿಗಳಲ್ಲಿ ಒಂದು; ಕ್ರಿಯಾಸಮಾಪ್ತಿ ಪರ್ಯಂತವೂ ಹೋಮ ಮಾಡತಕ್ಕ ಅಗ್ನಿ: ಗಾರ್ಹಪತ್ಯ ದಕ್ಷಿಣಾಗ್ನ್ಯಾಹವನೀಯಮೆಂಬ ಪೆಸರಂ ಪಡೆದಗ್ನಿತ್ರಯಂಗಳೊಳಂ (ಆದಿಪು. ೧೫-೧೬ ವ); ವೇದಿಯ ಯಥೋಚಿತ ಸ್ಥಾನಂಗಳೊಳ್...ಆಹವನೀಯಮುಮಂ . . . ವಿವಿಧ ಮಖಪರಿಕರಂಗಳುಮಂ ಬೇಱೆವೇಱೆ ತೋಱಿ (ಜಗನ್ನಾ. ೧೭-೭). [ಸಂ.]

**ಆಹವಭೀಮ** (ಗು). ಯುದ್ಧದಲ್ಲಿ ಭಯಂಕರನಾದ: ಶ್ರೀಮದೂರ್ಜಿತಧಾಮ ಸುದಯಾನಾಮನಾಹವಭೀಮ ರಘುಕುಲರಾಮ ರಕ್ಷಿಸು (ಕುವ್ಯಾಆ. ೧-೮). [ಆಹವ + ಭೀಮ]

**ಆಹವಭೀಷ್ಮ** (ಗು). = ಆಹವಭೀಮ: ಕುರುಕುಲ ಪಿತಾಮಹನುಮಾಹವಭೀಷ್ಮನುಮೆನಿಸಿದ ಭೀಷ್ಮನ ಶರಶಯನದೊಳ್ (ಗದಾಯು. ೨-೧೦ ವ). [ಆಹವ + ಭೀಷ್ಮ]

**ಆಹವಮಲ್ಲ** (ನಾ). ೧. ಯುದ್ಧದಲ್ಲಿ ಜಟ್ಟಿ,—ಗಟ್ಟಿಗ. ೨. ಚಾಲುಕ್ಯ ಅರಸರ ಒಂದು ಬಿರುದು: ಸಂಗರರಂಗದೊಳಿಱಿವಬೆಡಂಗವೆಸರ್ಗೆ ಗಱಿ ನೆಗೞ್ದು ಸಂಗರಮಂ ತೋರ್ಪಂ ಗಡ ನೆಗೞ್ದಾಹವಮಲ್ಲಂಗಂ ಜಾಕವ್ವೆದೇವಿಗಂ ಪುಟ್ಟಿದುದಂ (ಗದಾಯು. ೧-೬೫); ದಾನಿಗಳೊಳಗಗ್ಗಳದ ದಾನಚಿಂತಾಮಣಿ ಚಕ್ರಿಗಳೊಳಗಾಹವಮಲ್ಲಂ ಮಿಗಿಲೆನಿಕುಂ (ಅಜಿಪು. ೧-೨೦). [ಆಹವ + ಮಲ್ಲ]

**ಆಹವರಂಗ** (ನಾ). ಯುದ್ಧರಂಗ; ಕಾಳಗದ ಕಣ: ಆಹವರಂಗದೊಳ್ ನೃಪೇಶ್ವರರಱಿಗುಂ (ಜಟ್ಟಮ. ೫-೧೭). [ಆಹವ + ರಂಗ]

**ಆಹವಲಂಪಟ** (ನಾ). ಯುದ್ಧದಲ್ಲಿ ತುಂಬ ಆಸಕ್ತನಾದವನು; ಯುದ್ಧವ್ಯಸನಿ: ಆಹವಲಂಪಟಂ ಮಸಗಿದಂ ಚಾಳುಕ್ಯಕಂಠೀರವಂ (ಗದಾಯು. ೭-೬೪). [ಆಹವ + ಲಂಪಟ]

**ಆಹವವ್ಯಸನ** (ನಾ). ಯುದ್ಧಾಸಕ್ತಿ: ಮಂತ್ರನಿಷ್ಠೆಯ ಮೌನ ಹಿಂಬೆಳೆಯಾಯ್ತು ಮೋಹಿದುದಾಹವವ್ಯಸನ (ಕುವ್ಯಾಗ. ೫-೩೩). [ಆಹವ + ವ್ಯಸನ]

**ಆಹವಶೌಂಡ** (ನಾ). ರಣಧೀರ; ಯುದ್ಧಸಮರ್ಥ: ಗಾವುಣ್ಣಗೆ ನಿನ್ನನಾಹವಶೌಣ್ಡಂ ತೊಣ್ಡಂ ತದನ್ವಯಾಯನಜೇಯಂ (ಸೌಇಇ. IX-ii, ೪೭-೧೩; 980); ಈ ಗದಾದಂಡಮುಮುಗ್ರಪನ್ನಗ ವಿಭೀಷಣಮಾಹವಶೌಂಡಮಿಾ ಧನುರ್ದಂಡಮುಂ (ಗದಾಯು. ೧-೭೩). [ಆಹವ + ಶೌಂಡ]

**ಆಹವಸಿಂಹ** (ನಾ). ಯುದ್ಧದಲ್ಲಿ ಸಿಂಹದಂತೆ ಪರಾಕ್ರಮಶಾಲಿಯಾದವನು: ಉದ್ದಾಮಭುಜಂ ವಿಜಯಸಿಂಹನಾಹವಸಿಂಹಂ (ಪಂರಾಮಾ. ೧೦-೧೨೪). [ಆಹವ + ಸಿಂಹ]

**ಆಹವಾಗ್ರ** (ನಾ). ಯುದ್ಧರಂಗದ ಮುಂಭಾಗ; ಮುಂಚೂಣಿ: ಅಳಿಸಿದೆವು ದಾನವರ ಹಿಂಡಿದೆವಾಹವಾಗ್ರದಲಿ (ಕುವ್ಯಾಉ. ೧-೩೭); ಶಿರಕೆ ಶಿರವನು ರಥಕೆ ರಥವನು ಸರಿಗಡಿದು ಕಾದಿದರು ಸಮರಥರಾಹವಾಗ್ರದಲಿ (ಕುವ್ಯಾಭೀ. ೪-೯೭). [ಆಹವ + ಅಗ್ರ]

**ಆಹವಿ** (ನಾ). ಯೋಧ; ಯುದ್ಧವೀರ (ದಕ. ೩). [ಸಂ. ಆಹವಿನ್]

**ಆಹಾ** 'ಅಹ್ಹ' ನೋ.

**ಆಹಾರ** (ನಾ). ೧. ಅನ್ನ; ಕೂಳು: "ಅಂಧಃ . . . ಅಶನಂ, ಆಹಾರಃ — ಈ ೯ ಕೂೞ್" (ಹಲಾಯು. ೫೩-೧೬೪). ೨. ಊಟ; ಭೋಜನ: "ವಲ್ಭನಂ . . . ಆಹಾರಃ, ಭೋಜನಂ, ಸ್ವದನಂ – ಈ ೧೧ ಊಟಂ" (ಹಲಾಯು. ೫೪-೧೭೦); ಆಹಾರಾಚ್ಛಾದನಂಗಳಂ ನಿಮ್ಮ ಮೆಚ್ಚಿದೆಡೆಯೊಳ್ ಎಡೆಮಾಡಿಕೊಂಡು ನೀಡಿರದೋದಿಂ (ಸುಕುಮಾ. ೨-೫೫ ವ). ೩. ಸಮಿಾಪಕ್ಕೆ ತರುವುದು; ನೇಮಿಸಿಕೊಳ್ಳುವುದು. ೪. ಬೇಟೆಯಲ್ಲಿ ಶಿಕಾರಿಯ ಪ್ರಾಣಿ ಏಟಿಗೆ ಸಿಕ್ಕುವಷ್ಟು ದೂರ; ಅಳವು: ಅದು ಗುಂಡಿನ ಆಹಾರದೊಳಕ್ಕೆ ಬಂದ ಕೂಡಲೇ ಆ ಬೇಟೆಗಾರನು ಅದಕ್ಕೆ ಗುಂಡು ಹೊಡೆಯುವನು (ಕಭಾಗ. ೬೧). ೫. = ಆಹಾರಕ ೧: ಅನುತ್ಕರ್ಷನಾರಕಯುಗ್ಮಸ್ಥಾನಕ್ಕೆ ವೈಕ್ರಿಯಾಂಕಂ ತಾನಾಹಾರಂ ಪ್ರಮತ್ತಸಂಯತನೆಡೆಯೊಳ್ (ಸುಕುಮಾ. ೮-೧೧).

**ಆಹಾರತೆಗೆದುಕೊ** = ಊಟಮಾಡು: ಪೌಷ್ಟಿಕಾಂಶದ ಆಹಾರ ತೆಗೆದುಕೊಳ್ಳಬೇಕು (ರೂಢಿ). [ಸಂ.]

**ಆಹಾರಂಗೊಳ್, ಆಹಾರಗೊಳ್** (ಕ್ರಿ). ಊಟಮಾಡು; ಆಹಾರವನ್ನು ತೆಗೆದುಕೊ: ಕಾರ ದಿನಂ ಕೈಮಿಾಱಿದ ಬಳಿಕವೆ ನೀರನುಣದ ಚಾದಗೆವಱಿಯಂತಾಹಾರಂಗೊಳ್ಳದನುಳಿದಳ್ (ಜಯಕಾ. ೪-೩೩).

**ಆಹಾರಗೊಳ್**: ವನವ ಸುಡುತಲಿ ಸುಳಿಸುಳಿಯುತಾಹಾರಗೊಳುತಿರಲಲ್ಲಿ ದನಿಯಾಯ್ತು (ನಳಚ. ೬-೯). [ಆಹಾರ + ಕೊಳ್$_1$]

**ಆಹಾರಂಬಡೆ** (ಕ್ರಿ). ಆಹಾರವನ್ನು ಪಡೆ,—ದೊರಕಿಸಿಕೊ: ಪಲವು ದಿವಸಮಾಹಾರಂಬಡೆಯದೆ ಬಡವಾಗಿ ನಿನ್ನಲ್ಲಿ ಆಸೆವಟ್ಟು ಬಂದೆನೆಂಬುದುಂ (ಪಂಚತಂ. ೪೦-೨೦). [ಆಹಾರ + ಪಡೆ$_1$]

**ಆಹಾರಕ** (ನಾ). ೧. [ಜೈನ] ಜೀವರುಗಳಿಗಿರುವ ಐದು ವಿಧವಾದ ಶರೀರಗಳಲ್ಲಿ ಒಂದು: "ಜೀವರುಗಳಿಗೆ ಐದು ವಿಧ ಶರೀರಗಳಿರುವುವು — ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ, ಕಾರ್ಮಣ—ಎಂದು" (ಹಿಂದಸಾ. ೮೯); ಅಯ್ದುಭೇದದಿನೌದಾರಿಕ ವೈಕ್ರೀಯಕ[ಮಾ]ಹಾರಕ ತೈಜಸ ಕಾರ್ಮಣಂಗಳಿವು ತನುವೆನಿಕುಂ (ಸುಕುಮಾ. ೮-೧೦). ೨. ಆಹಾರಕಶರೀರವನ್ನುಳ್ಳ ಜೀವಿ: ಆಹಾರಾನುವಾದದಿನಾಹಾರಕರ್ಗೆ ಛದ್ಮಸ್ಥರಪ್ಪ ಅನಾಹಾರಕರ್ಗಂ ತ್ರಿತಯಮುಮುಕ್ಕುಂ (ತಸೂವೃ. ೧೩). 'ಅನಾಹಾರಕ' ಪರಾ. [ಸಂ.]

**ಆಹಾರಕಕಾಯ** (ನಾ). = ಆಹಾರಕ ೨: ಆಹಾರಕಕಾಯಯೋಗಿಗಳ್ ಅಯ್ವತ್ತುನಾಲ್ವರ್ (ತತ್ತ್ವಪ್ರ. ೨೩). [ಆಹಾರಕ + ಕಾಯ]

**ಆಹಾರಗೊಳ್** 'ಆಹಾರಂಗೊಳ್' ನೋ.

**ಆಹಾರದಾನ** (ನಾ). ಆಹಾರವನ್ನು ಕೊಡುವುದು: ಒಂದು ದೆವಸಂ . . . ಸುವ್ರತೆಯರೆಂಬಾರ್ಯಿಕೆಯರಂ ನಿಱಿಸಿ ನಿರತಿಶಯ ಭಕ್ತಿಪೂರ್ವಕಮಾಹಾರದಾನಮನೀಯೆ (ಶಾಂತಿಪು. ೪-೬೭ ವ); ತಪೋಧನರ ವಿದ್ಯಾರ್ಥಿಗಳಾಹಾರದಾನಕ್ಕಂ (ಕಇಅ. ೨೨-೭-೩೪; 1083). [ಆಹಾರ + ದಾನ]

**ಆಹಾರಧಾನಿ** (ನಾ). ೧. ಭೋಜನಶಾಲೆ; ಅಡಿಗೆ ಮನೆ (?): ಬಳಸಿದ ದೇವಾಲಯಮುಂ ಘಳಿಗೆಯುಮಾಹಾರಧಾನಿಯುಂ ಪ್ರಪೆಯುಂ (ಎಇ. XIII, ೩೩೧-೪೦; 920). ೨. ಆಹಾರವನ್ನು ಇಟ್ಟುಕೊಳ್ಳುವ ಪಾತ್ರೆ. [ಸಂ. ಆಹಾರಧಾನೀ]

**ಆಹಾರನಾಳ** (ನಾ). ಬಾಯಿಂದ ಜಠರಕ್ಕೆ ಆಹಾರವು ಹೋಗುವ ನಾಳ; ಅನ್ನನಾಳ: ಆಹಾರನಾಳ, ಅನ್ನಮಾರ್ಗ (Alimentary Comal ಪಾರಿಸ). [ಆಹಾರ + ನಾಳ (= ನಾಲ)]

**ಆಹಾರಪಚನ** (ನಾ). (ತಿಂದ) ಆಹಾರ ಅರಗುವುದು; ಜೀರ್ಣವಾಗುವುದು: ವಚನ ಕೇಳಿದ್ದರಿಂದ ಆಹಾರಪಚನವಾದೀತೇ (ಗಾದೆ). [ಆಹಾರ + ಪಚನ]

**ಆಹಾರಮುಖ** (ನಾ). [ವೀಶೈ] ಜಂಗಮ: ದೇಹಿಗಳೆಲ್ಲ ಅಜೀವರೆ ಗುಹೇಶ್ವರನ ಆಹಾರಮುಖವ (ಅವಚಂ. ೫೬–೨೪೧).
[ಆಹಾರ + ಮುಖ]

**ಆಹಾರಶುದ್ಧಿ** (ನಾ). ೧. ಆಹಾರದ ಸಾತ್ವಿಕತೆ, —ಪರಿಶುದ್ಧತೆ. ೨. [ಜೈನ] ಮಾಂಸ ಮುಂತಾದ ದೋಷಸಹಿತವಾದ ಆಹಾರವನ್ನು ಬಿಡುವುದು: ಆಹಾರಶುದ್ಧಿಯೆಂಬುದು ಮಾಂಸಾದಿ ಸಾವದ್ಯಾಹಾರವರ್ಜನಂ (ಚಾವುಂಳು. ೨೪೧). [ಆಹಾರ + ಶುದ್ಧಿ]

**ಆಹಾರಶೇಖರಣೆ** (ನಾ). ಆಹಾರವನ್ನು ಕೂಡಿಡುವುದು; ಆಹಾರದ ದಾಸ್ತಾನು: ಆಹಾರ ಶೇಖರಣೆ (Storage Roots) ಈ ಕಾರ್ಯವನ್ನು ತಾಯಿಬೇರುಗಳು . . . ಮಾಡುತ್ತವೆ (ಸಸ್ಯಶಾ. ೧೬).
[ಆಹಾರ + ಶೇಖರಣೆ]

**ಆಹಾರಿಸು** (ಕ್ರಿ). ಅರಿತುಕೊಳ್ಳು; ತಿಳಿ: ಪ್ರತ್ಯಾಹಾರಯೋಗಕ್ರಮಂಗಳಿಂದಾಸನಪ್ರಮಾಣವನಾಹಾರಿಸುವುದು ಪ್ರತ್ಯಾಹಾರಯೋಗ (ಆದವ. ೮೭). [ಆಹಾರ ? + –ಇಸು$_3$]

**ಆಹಾರ್ಯ** (ನಾ). [ನಾಟ್ಯ] ನಾಲ್ಕುಬಗೆಯ ಅಭಿನಯಗಳಲ್ಲಿ ಒಂದು; ವೇಷಭೂಷಣಾದಿಗಳಿಂದ ಮಾಡುವ ಅಭಿನಯ: ಅಂಗೋಪಾಂಗಂಗಳೊಳೆಸೆವಾಂಗಿಕಮಂ ಗಾನಪಾಠ್ಯದೊಳ್ ವಾಚಕಮಂ ತುಂಗಕುಚೆ ಮೆಱೆದಳಾ ದಿವಿಜಾಂಗನೆಗಾಹಾರ್ಯ ಸಾತ್ವಿಕಂ ನಿಜಮೆವಲಂ (ಆದಿಪು. ೯–೨೮); ಪ್ರಕಟಾಂಗಿಕ ವಾಚಿಕ ಸಾತ್ವಿಕಮಾಹಾರ್ಯಂಗಳೆಂಬ ನಾಲ್ಕಭಿನಯಮುಂ . . . ರಂಜಕಮಾದುವು ರಂಗಮಧ್ಯದೊಳ್ ಕೌಶಿಕನಾ (ಅಜಿಪು. ೫–೯). [ಸಂ.]

**ಆಹಾರ್ಯಕ** (ನಾ). = ಆಹಾರ್ಯ: ವಿತತಾಂಗಿಕಮಾಹಾರ್ಯಕಮತಿಶಯ ಸಾತ್ವಿಕಮುಮುಮರ್ದ ವಾಚಿಕಮೆನಿಪೀ ಚತುರಭಿನಯಮಂ (ರಾಜಶೇ. ೧೨–೭೩); ಅಭಿನಯವು 'ಆಂಗಿಕ' (ಅಂಗಚಲನೆಗಳು), 'ವಾಚಿಕ' (ಮಾತಿಗೆ ಸಂಬಂಧಪಟ್ಟುವು), 'ಆಹಾರ್ಯಕ' (ವೇಷಭೂಷಾದಿಗಳ ರಚನೆ), 'ಸಾತ್ವಿಕ' (ರೋಮಾಂಚಾದಿಗಳ ಪ್ರದರ್ಶನ) — ಎಂದು ನಾಲ್ಕು ವಿಧ (ಕೈಪಿಡಿ. ೨೦೫ ಅಡಿಟಿ). [ಸಂ.]

**ಆಹಾವ** (ನಾ). ೧. "ಪಶುಗಳು ನೀರುಕುಡಿಯುವ ನೀರುತೊಟ್ಟಿ" (ಅಮರ. ಟೀಕೆ). ೨. ಕೊಳ; ಹೊಂಡ: "ನಿಪಾನಂ, ಉದಪಾನಂ, ವಾಪೀ, ಆಹಾವಃ – ಈ ೪ ಬೆಂಚೆ" (ಹಲಾಯು. ೧೧೩–೬೨); "ಆಹಾವಮುದುದಪಾನಮೆನಿಸಿಕ್ಕುಮುಪ್ಪಾಪಿಯೆನೆ ಬೆಂಚೆಗಭಿಧಾನಮಕ್ಕುಂ" (ಮಂಗರಾ. ೧೨೪–೧೮). [ಸಂ.]

**ಆಹಿಕ** (ಗು). ೧. ದಿನದ; ದಿನಗಟ್ಟಲೆಯ; ದಿನ ಬಿಟ್ಟು ದಿನ ಬರುವ. (ನಾ). ೨. ಕೇತುಗ್ರಹ. ೩. ಪಾಣಿನಿಯೆಂಬ ಋಷಿ. [ಸಂ.]

**ಆಹಿತ** (ಗು). ಇಡಲ್ಪಟ್ಟ; ಮಡಗಿದ: "ಆಹಿತಂ, ನಿಹಿತಂ, ನ್ಯಸ್ತಂ, ಆರೋಪಿತಂ — ಈ ೪ ಏಱಿಸಲ್ಪಟ್ಟುದು" (ಹಲಾಯು. ೧೨೩–೬೨).
[ಸಂ.]

**ಆಹಿತಪ್ರತಿಮೆ** (ನಾ). ಕಲ್ಲು, ಲೋಹ, ಮರ, ಮಣ್ಣು ಮುಂತಾದುವುಗಳಿಂದ ಆದ ದೇವತಾಪ್ರತಿಮೆ, —ವಿಗ್ರಹ: ಆಹಿತಪ್ರತಿಮೆಗಳೆನಿಸುವವು ದೇಹಗೇಹಾಪತ್ಯ ಸತಿ ಧನಲೋಹಕಾಷ್ಠ ಶಿಲಾಮೃದಾತ್ಮಕವಾದ ದ್ರವ್ಯಗಳು (ಹಸಾರ. ೨೪–೧೬). [ಆಹಿತ + ಪ್ರತಿಮೆ]

**ಆಹಿತಾಗ್ನಿ** (ನಾ). ಅಗ್ನಿಹೋತ್ರಮಾಡುವ ಬ್ರಾಹ್ಮಣ: ಯಜನಾದಿ ಷಟ್ಕರ್ಮನಿರತನುಂ ಆಹಿತಾಗ್ನಿಯುಮಪ್ಪ ದೇವಶರ್ಮನೆಂಬ ಪಾರ್ವನಿರ್ಪಂ (ಪಂಚತಂ. ೧೮೪–೮). [ಆಹಿತ + ಅಗ್ನಿ]

**ಆಹಿತುಂಡಿಕ** (ನಾ). ಹಾವಾಡಿಗ: "ವ್ಯಾಳಗ್ರಾಹೀ, ಆಹಿತುಂಡಿಕ — ಈ ೨ ಹಾವಾಡಿಗಂ" (ಹಲಾಯು. ೧೦೦–೪೫೯). [ಸಂ.]

**ಆಹಿರ** (ನಾ). ಆಭೀರಪಂಗಡಕ್ಕೆ ಸೇರಿದವನು; ಗೊಲ್ಲರವನು; ಗೋಪಾಲಕ. 'ಆಹಿರರಾಯ' ಪರಾ. [< ಸಂ. ಅಭೀರ]

**ಆಹಿರಜೈತ** (ನಾ). = ಆಹಿರಜೈತುಗಿದೇವ: ಸಂಗರದೊಳತುಳಭುಜಬಳತುಂಗಂಗೆಣೆಯಾರೊ ಪರಮವಿಶ್ವಾಸಿಯೊಳಂ ಭಂಗವಿರಹಿತನು ಬಿರುದರ ಕಂಗಳ ಮುಳ್ಳೆನಿಸಿ ನೆಗಳ್ದನಾಹಿರಜೈತಂ (ಎಕ. VIII, ಸೊರಬ. ೨೭೬–೬೭; 1070). [ಆಹಿರ + ಜೈತ]

**ಆಹಿರಜೈತುಗಿದೇವ** (ನಾ). ಒಬ್ಬಾತನ ಹೆಸರು: ಅನ್ತು ನೆಗಳ್ದಾಹಿರಜೈತುಗಿದೇವ ಹಿರಿಯ ಬಳ್ಳಿಗಾವೆಯ ನೆಲೆವೀಡಿನೊಳಿರ್ದ್ದು . . . ಚಿಕ್ಕಶಕುನಮಂ ಶ್ರೀಕೋಟನಾಥಂಗೆಯಾಹಿರಜೈತುಗಿದೇವಂ ಕೊಟ್ಟು (ಎಕ. VIII, ಸೊರಬ. ೨೭೬–೬೮, ೭೦; 1070).
[ಆಹಿರ + ಜೈತುಗಿ + ದೇವ]

**ಆಹಿರರಾಯ** (ನಾ). ಆಭೀರರ ದೊರೆ: ಆಹಿರರಾಯ ಶೈಳದಂಭೋಳಿ (ಮೈಆರಿ. ೧೯೩೭, ೨೬–೧೫; 1196). [ಆಹಿರ + ರಾಯ]

**ಆಹು** (ನಾ). ೧. ಧ್ವನಿ. ೨. ಬತ್ತ; ನೆಲ್ಲು. ೩. ಸೂಕ್ಷ್ಮವಾದುದು; ಅತಿ ಸಣ್ಣದು: "ಸೂಕ್ಷ್ಮಂ ವ್ರೀಹಿರವಂಗಳಾಹುವೆನಿಕುಂ" (ನಾನಾರ. ೮೭). [ಸಂ.]

**ಆಹುಗೊಳಿಸು** (ಕ್ರಿ). ಆಗುವಂತೆ ಮಾಡು; ನೆರವೇರಿಸು: ಅಹಿತನಲ್ಲಾತನೇನಾನೊಂದು ಕಾರ್ಯವನುಗ್ರಹಿಸಿಬಂದಿಹನಾಹುಗೊಳಿಸಿರೆನಲು (ಜಿನಮು. ೯–೨೫).
[ಆಹು$_0$ (< ಆಗು$_1$) + ಕೊಳ್$_1$ + –ಇಸು$_3$]

**ಆಹುತ** (ಗು). ೧. ಹೋಮಮಾಡಲ್ಪಟ್ಟ; ಅರ್ಪಿಸಲ್ಪಟ್ಟ. (ನಾ). ೨. ಆತಿಥ್ಯ; ಸತ್ಕಾರ. ೩. ಪಂಚಮಹಾಯಜ್ಞಗಳಲ್ಲಿ ಒಂದು; ಎಲ್ಲಾ ಜೀವರಾಶಿಗಳಿಗೂ ತೃಪ್ತಿಯಾಗಲೆಂದು ಮಾಡುವ ಒಂದು ಯಜ್ಞ. [ಸಂ.]

**ಆಹುತಿ** (ನಾ). ೧. ಯಜ್ಞಯಾಗಾದಿಗಳಲ್ಲಿ ದೇವತೆಗಳಿಗಾಗಿ ಅಗ್ನಿಯಲ್ಲಿ ಅರ್ಪಿಸುವ ಹವಿಸ್ಸು: ಬೀಳುವಾಹುತಿಗಳಂ ನುಂಗಿ ನೊಣೆದೊಡನೊಡನೆ (ಶ್ರೀರಾಮಾ. ೧೩–೩೩೩). ೨. ಬಲಿ; ತುತ್ತು: "ಕಬಳಮಾಹುತಿಯೆನಲ್ ತುತ್ತೆನಿಕ್ಕುಂ" (ಮಂಗರಾ. ೬೫–೭); ರಾಹು ನೆಲಸಿದೊಡೆ ಸಪ್ತಮಗೇಹದೊಳೀಕ್ಷಿಪೊಡೆ ಸೂರ್ಯಶಶಿಗಳ್ ಶುಭಸಂದೋಹಂ ಕಾಣದೊಡನಲಂಗಾಹುತಿ ಪನ್ನೆರಡುವರ್ಷದಿಂದವನಕ್ಕುಂ (ಜಾತತಿ. ೬–೩೪). 'ಆಹುತಿಗೊಡು' ಪರಾ.

ಆಹುತಿಮಾಡು=ಬಲಿಯಾಗಿ ಮಾಡು; ಆಹುತಿಯಾಗಿಅರ್ಪಿಸು: ವಿರೋಧಿಯಂ ಕೋಪಹುತಾಶನಂಗಾಹುತಿಮಾಡಿ (ಜಗವಿ. ೯–೪೫ ವ). **ಆಹುತಿಯಾಗು** = ಬಲಿಯಾಗು; ತುತ್ತಾಗು: ಮಹಾತ್ಮ ಗಾಂಧಿಯವರು . . . ಗುಂಡಿಗಾಹುತಿಯಾದರು (ಕಂಬಹು. ೮೭). [ಸಂ.]

**ಆಹುತಿಕೊಡು** 'ಆಹುತಿಗೊಡು' ನೋ.

**ಆಹುತಿಗೆಯ್** (ಕ್ರಿ). ೧. ಅಗ್ನಿಯಲ್ಲಿ ಹವಿಸ್ಸನ್ನು ಅರ್ಪಿಸು. ೨. ಬಲಿಕೊಡು; ತುತ್ತಾಗಿ ಮಾಡು: ಅವಯವದ ಸಾರಸರ್ವಸ್ವವನಾಹುತಿಗೆಯ್ದಳಂಗಜಾಗ್ನಿಯೊಳುಱಿದತ್ತವಳೊಳಸುವೊಂದೆ ಸತಿ ಮಾಱ್ಕುವನಾಕುಳ ಕಾಮಶಿಖಿಗೆ ಪೂರ್ಣಾಹುತಿಯಂ (ಜಗವಿ. ೧೧–೨೫).
[ಆಹುತಿ + ಗೆಯ್ (< ಕೆಯ್$_1$)]

**ಆಹುತಿಗೊಡು**, ಆಹುತಿಕೊಡು (ಕ್ರಿ). = ಆಹುತಿಗೆಯ್ ೨: ಸೌಂದರಾಂಗಿ ಭವಾನಿ ಕಲುಷಿತದಿಂದೊಗೆದು ನೆಗೆದುರಿವುರಿಗೆ ಭರದಿಂದಮಾಹುತಿಗೊಟ್ಟಳಲ್ಲಾ ತನ್ನ ದೇಹವನು (ಬಸಪು. ೬೧–೧೭). **ಆಹುತಿಕೊಡು: ೨.** ಅವನ ರಾಜ್ಯದಲ್ಲಿ ಹಡಗಿನಲ್ಲಿ ಬಂದಿಳಿದ ಜನರನ್ನೆಲ್ಲಾ ಅವನು ದೇವಗಣಕ್ಕೆ ಆಹುತಿಕೊಡುತ್ತಿದ್ದನು (ಮಣಿಸ. ೮೨). [ಆಹುತಿ + ಕೊಡು]

**ಆಹುತಿಗೊಳ್** (ಕ್ರಿ). ಆಹುತಿಯಾಗಿ ತೆಗೆದುಕೊ; ಬಲಿಯಾಗಿ ಮಾಡಿಕೊ; ನುಂಗು : ಆತನ ಮಾತಾಪಿತೃಗಳೆಲ್ಲಮೆಪ್ಪತ್ತೇಳುಕೋಟಿ ವರುಸಂಬರಂ ಪುಳುಗೊಂಡದ ನರಕದಲ್ಲಿಕ್ಕಿ ನೀನಾಹುತಿಗೊಳುತ್ತಿರು ಗಂಡಾ ಎಲೆ ಪಾಪವೇ (ಎಇ. XXIII, ೩೦–೧೪ ; 1265) ; ಉಬ್ಬು ತುಪರಿಗೆ ಧಗಧಗಿಸುತಡುಗಬ್ಬುಗಳನಾಹುತಿಗೊಳುತ್ತಂ . . . ಪಿರಿಯುರಿ ಹಬ್ಬುತ (ಬಸಪು. ೪೪–೨೧) ; ಅಪ್ಪೈಸನಾಹುತಿಗೊಳಲಿ ಪಾವಕ ನಮ್ಮ ಖಾಂಡವವ (ಕುವ್ಯಾಅ. ೨೦–೩೧). [ಆಹುತಿ + ಕೊಳ್$_1$]

**ಆಹುದು** 'ಆಗು$_1$' ಪರಾ.

**ಆಹೂತ** (ಗು). ಕರೆಯಲ್ಪಟ್ಟ; ಆಹ್ವಾನಿಸಿದ : ಭಾವಿತೀರ್ಥಕರ ಪುಣ್ಯದೂತಾಹೂತಂ ಪುರುಹೂತಂ ಬಂದು (ಆದಿಪು. ೬–೭೮ ವ) ; ಆಹೂತರಾಗಿದ್ದ ಅತಿಥಿಗಳೆಲ್ಲಾ ಹೊರಟು ಹೋದರು (ಅಧಿಕಾ. ೧೩). [ಸಂ.]

**ಆಹೂತಿ** (ನಾ). ೧. ಕರೆಯುವುದು; ಆಹ್ವಾನ. 'ಆಹೂತಿಗೆಯ್' ಪರಾ. ೨. ಬಲಿ; ತುತ್ತು : ಸಪ್ತವಿಧ ಮಂತ್ರದಿನರ್ಹತ್ಪೂಜಾವಿಶಿಷ್ಟ ಮುಪ್ಪ ಶುಚಿದ್ರವ್ಯಂಗಳಿಂ ಘೃತತಿಲಾದಿಗಳನಾಹೂತಿಗಳನಿಕ್ಕುತ್ತಂ (ಚಾವುಂಉ. ೨೩೧). [ಸಂ.]

**ಆಹೂತಿಗೆಯ್** (ಕ್ರಿ). ಕರೆ; ಬರಮಾಡಿಕೊ; ಆಹ್ವಾನಿಸು : ಆಪುರಂ ಶ್ರೀಪುರುಹೂತಾಹೂತಿಗೆಯ್ವಂತಿರೆ ಸೊಗಯಿಸುಗುಂ ಕೇತುಹಸ್ತಂಗಳಿಂದಂ (ಅಜಿಪು. ೨–೨೧). [ಆಹೂತಿ + ಗೆಯ್ (< ಕೆಯ್$_1$)]

**ಆಹೃತ** (ಗು). ತರಲ್ಪಟ್ಟ; ತಂದ. 'ಉದಾಹೃತ' ಪರಾ. [ಸಂ.]

**ಆಹೃತಿ** (ನಾ). ೧. ತರುವುದು; ತೆಗೆದುಕೊಂಡು ಬರುವುದು : ಶೈತ್ಯಗಂಧಗುಣಾಹೃತಿಯಿಂ ಪೂರ್ವೋಕ್ತ ಜೀವನಿಕಾಯ ಸಮೇತಂ ಮನುಷ್ಯರ್ ಬಿಲಂಗಳಿಂ ಪೊಱಮಟ್ಟು (ತತ್ತ್ವಪ್ರ. ೧೪೩). ೨. ಅಪಹರಿಸುವುದು; ಎತ್ತಿಕೊಂಡು ಹೋಗುವುದು : ದಾನವನಿನಾದ ಸುತಾಹೃತಿಯೊಳ್ ಪೊದಟ್ದು ನಿನ್ನಾಧಿಯನಾನಭೀಕ್ಷಿಸಿ ಗುಣಪ್ರಣಯಿತ್ವದೆ ಬಂದೆನಲ್ತೆ (ಚಂದ್ರಪು. ೫–೩೦). ೩. ಶೇಖರಿಸುವುದು. [ಸಂ.]

**ಆಹೇಯ** (ಗು). ೧. ಹಾವುಗಳಿಗೆ ಸಂಬಂಧಿಸಿದ; ಹಾವಿನ. (ನಾ). ೨. "ಹಾವಿನ ವಿಷ, ಚರ್ಮ ಮುಂತಾದ್ದು" (ಅಮರ. ಟೀಕೆ). [ಸಂ.]

**ಆಹೇರ, ಆಹೇರಿ$_1$, ಆಹೇರು** (ನಾ). (ಉಕ). (ಮದುವೆ ಮುಂತಾದ ಸಮಾರಂಭಗಳಲ್ಲಿ ಕೊಡುವ) ಉಡುಗೊರೆ; ಮುಯ್ಯಿ : ಆಳೀತನಕ್ಕ ಅಂತ ಬಂದವ್ಯಾಲೆ ಹಾಂಗಾರ ಆಹೇರ ಏನು ಕೊಡುತೀರಿ (ವೈಸಿ. ೧೯೧); ಅವರಿಗೆ ಬೆಳ್ಳಿಯ ತಾಬಾಣ ವಾಟಗ ಮುಂತಾದುವುಗಳನ್ನು ಪ್ರೀತಿಯ 'ಆಹೇರ' ಎಂದು ಕೊಟ್ಟರು (ಇತಿಶ್ರೀ. ೧೬). **ಆಹೇರಿ$_1$** : ತಂದೆಯವರು ಅಳಿಯನಿಗೆ ಆಹೇರಿಯೆಂದು ಐದುನೂರುರೂಪಾಯಿ ಚೆಕ್ಕು ಕಳಿಸಿದ್ದರು (ದೀಪಸಿ. ೬೨). **ಆಹೇರು** : ಆಹೇರು ಅಂದ್ರ ಐದುಸಾವಿರಕ್ಕ ಬಂತು (ಮಿಂಚಿಹು. ೬೭) ; ಮದುವೆಯಲ್ಲಿ ಅವನು ಪಾಂಡುರಂಗನಿಗೆ ಒಂದು ಒಳ್ಳೆಯ ಆಹೇರನ್ನು ತಂದಿದ್ದ (ಸಮುಜೀ. ೯೪೮). [← ಮರಾ. ಆಹೇರ್ < ಸಂ. ಅಭಿಹಾರ]

**ಆಹೇರಿ$_1$** 'ಆಹೇರ' ನೋ.

**ಆಹೇರಿ$_2$** (ನಾ). [ಸಂಗೀತ] ಒಂದು ಬಗೆಯ ರಾಗ : ಮಾಳವಿಯಾಹೇರಿ ಕಾಂಬೋಧಿ . . . ಅವನೊಲ್ದು ಪಾಡಿದ (ತ್ರಿಭುತಿ. ೬–೩೦). [ಸಂ. ಅಭೀರೀ]

**ಆಹೇರು** 'ಆಹೇರ' ನೋ.

**ಆಹೋದು** 'ಆಗು$_1$' ಪರಾ.

**ಆಹೋಪುರುಷಿಕ** 'ಆಹೋಪುರುಷಿಕೆ' ನೋ.

**ಆಹೋಪುರುಷಿಕೆ, ಆಹೋಪುರುಷಿಕ** (ನಾ). ಒಣಜಂಭ; ದುರಹಂಕಾರ; "ತನ್ನ ಸಮಾನರಿಲ್ಲವೆಂದು ಗರ್ವದಿಂದ ಭಾವಿಸುವಿಕೆ" (ಅಮರ. ಟೀಕೆ). **ಆಹೋಪುರುಷಿಕೆ** : "ಆಹುದಹುದೆನಿಪ್ಪುದು ಮಾಹೋಪುರುಷಿಕವೆನಿಕ್ಕು" (ಮಂಗರಾ. ೧೩೬–೪೨). [ಸಂ. ಆಹೋಪುರುಷಿಕಾ]

**ಆಹ್ನಿಕ** (ಗು). ೧. ಪ್ರತಿದಿನದ; ದಿನಗಟ್ಟಲೆಯ. (ನಾ). ೨. ಪ್ರತಿದಿನವೂ ಕ್ಲುಪ್ತಕಾಲದಲ್ಲಿ ನಡೆಯಬೇಕಾದ ಸಂಧ್ಯಾವಂದನೆಯೇ ಮುಂತಾದ ನಿತ್ಯಕರ್ಮ. ೩. ನಿರಂತರವಾದ ಉದ್ಯೋಗ. ೪. ನಿತ್ಯಆಹಾರ, —ಊಟ. ೫. ಒಂದು ದಿನದಲ್ಲಿ ಓದಬಹುದಾದಷ್ಟು ಗ್ರಂಥದ ಭಾಗ. [ಸಂ.]

**ಆಹ್ಲಾದ** (ನಾ). ಸಂತೋಷ; ಆನಂದ : ಜನಚಿತ್ತಾಹ್ಲಾದಪಾದಂ ಬೆಳಗುಗೆ ಜಗಮಂ ಗೋಪನಾರ್ತಾಂಡದೇವಂ (ಜಗವಿ. ೧–೪). [ಸಂ.]

**ಆಹ್ಲಾದಕರ** (ಗು). ಸಂತೋಷವನ್ನುಂಟುಮಾಡುವ; ಆನಂದಜನಕವಾದ: ಬೆಳುದಿಂಗಳು ಎಷ್ಟು ಆಹ್ಲಾದಕರವಾಗಿದೆ (ರೂಢಿ). [ಸಂ.]

**ಆಹ್ಲಾದಕಾರಿ** (ಗು). = ಆಹ್ಲಾದಕರ : ಉಚಿತೈಕಾರ್ಥಾಂತರವಾಚಿ ಶಬ್ದಮುಮವಭಾಸರೂಪಮಾಹ್ಲಾದಕಾರಿಯುಪ್ಪುದದರ್ಥಂ (ಕಾವ್ಯಾವ. ೪೩೦). [ಸಂ. ಆಹ್ಲಾದಕಾರಿನ್]

**ಆಹ್ಲಾದನ** (ಗು). ಸಂತೋಷಗೊಳಿಸುವ : ಚಂದ್ರನಲ್ಲಿ ಆಹ್ಲಾದನಶಕ್ತಿ ಜೀವಾತ್ಮನಲ್ಲಿ ಬುದ್ಧಿಶಕ್ತಿ . . . ಕಾಣುತ್ತೇವೆ (ಶಕ್ತಿವಿ. ೩೩). [ಸಂ.]

**ಆಹ್ಲಾದಿಸು, ಅಹಲ್ಲಾದಿಸು** (ಕ್ರಿ). ಸಂತೋಷಪಡು; ಆನಂದಿಸು : ಸ್ತ್ರೀಪುಂನಪುಂಸಕ ಜಾತಿಗೊಲ್ದು ಗಣಿಂತಿಂಥಿಣಿಯನಾಹ್ಲಾದಿಸಲ್ ಕಣ್ಣನಿತ್ತಾಮುಹಂತಕಂಗಳ. . .ನೃಪತಿ (ಮದೇವು. ೨೫–೩೫). **ಅಹಲ್ಲಾದಿಸು** : ಚೀಗೆ ಬಪ್ಪುದೆನುತ್ತ ಮೆಯ್ಯಿಕ್ಕೆ ಗುರುವಹಲ್ಲಾದಿಸಿದ ಮನಬಂದೊಲು (ಷಶಿಲ. ೩–೧೩೩). [ಆಹ್ಲಾದ + –ಇಸು]

**ಆಹ್ವಯ** (ನಾ). ಹೆಸರು; ನಾಮಧೇಯ : ನಿನಗನ್ವರ್ಥಂ ಶ್ರೀಧರವಿನುತಾಹ್ವಯಮೆಂದು ಪೊಗಟ್ದುದಾ ದಿವಿಜಜನಂ (ಚಂದ್ರಪು. ೪–೭೮). [ಸಂ.]

**ಆಹ್ವಯವಿಡಿ** (ಕ್ರಿ). ಹೆಸರನ್ನು ಪಡೆ : ಕಡೆಯ ಶಿಶು ನಾರಾಯಣಾಹ್ವಯವಿಡಿದು ಬೆಳೆವುತಿರಲು (ನಿಭಾಗ. ೬–೧–೧೬). [ಆಹ್ವಯ + ಪಿಡಿ$_1$]

**ಆಹ್ವಾನ** (ನಾ). ೧. ಕರೆಯುವಿಕೆ; ಕರೆ : "ಆಕಾರಣಂ, ಆಹ್ವಾನಂ, ಅಭಿಮಂತ್ರಣಂ – ಈ ೩ ಕರೆಹ" (ಹಲಾಯು. ೨೫–೧೫೩). 'ಆಹ್ವಾನಂಗೆಯ್' ಪರಾ. ೨. (ಉಕ) ಸವಾಲು : ಆಚ್ಚಗನ್ನಡದಲ್ಲಿಯೇ ಪ್ರೌಢವಾದ ಕಾವ್ಯವನ್ನು ಬರೆದು ತೋರಿಸುವನಾಗಿ ಆಂಡಯ್ಯನು ಆಹ್ವಾನವನ್ನು ಸ್ವೀಕರಿಸಿದನು (ಸಾಹಿಸ. ೧೩೬). [ಸಂ.]

**ಆಹ್ವಾನಂಗೆಯ್** (ಕ್ರಿ). ಕರೆ; ಆಹ್ವಾನಿಸು : ಅಂತು ಕೊಟ್ಟಯ್ದು ಮಂತ್ರಾಕ್ಷರಂಗಳನಾಹ್ವಾನಂಗೆಯ್ದು (ಪಂಪಭಾ. ೧–೮೯ ವ) ; ಆಹ್ವಾನಂ [ಪಾಠಾಂ. ಆವಾಹನೆ] ಗೆಯ್ದಶ್ವಿನಿದೇವರಂ (ಪಂಪಭಾ. ೨–೩). [ಆಹ್ವಾನ + ಗೆಯ್ (< ಕೆಯ್$_1$)]

**ಆಹ್ವಾನಪುರುಷ** (ನಾ). ಕರೆಯುವುದಕ್ಕೆ ಹೋಗುವವನು; ದೂತ : "ಬಟಿ – ಸಂಮಾರ್ಜನ, ಮಾರ್ಗ, ವಂಶೇಷು, ಆಹ್ವಾನಪುರುಷೇ ಚ" (ಶಮಧಾ). [ಆಹ್ವಾನ + ಪುರುಷ]

**ಆಹ್ವಾನಿಸು** (ಕ್ರಿ). ೧. ಕರೆ; ಬರಮಾಡು : ಆದಿತ್ಯಂಗಳ್ಗಂಗುಡಲೆನುತುಂ ಮೇದಿನಿಗಿಳಿದೆಯ್ದಿದ ಸುರಪತಿ ಮೊದಲಾದರನೆಲ್ಲರನಾಹ್ವಾನಿಸುತಾದರಿಸಿ (ಜಯಕಾ. ೨–೨೬) ; ಬಾ, ಬಾ, ಎಂದು ಅಲೆಗಳಿಂದ ನದಿಯು ರವಿಯನ್ನು ಆಹ್ವಾನಿಸುತ್ತಿತ್ತು (ನವನೀ. ೭೪) ; ಚಂದ್ರನನ್ನು ಆಹ್ವಾನಿಸಿ (ಶಿಕ್ಷದ. ೫೬). ೨. (ಉಕ) ಆಮಂತ್ರಿಸು. [ಆಹ್ವಾನ + – ಇಸು]

**ಆಳ್$_1$, ಆಳು$_1$ (ಕ್ರಿ). ೧.** ಅಧಿಕಾರ ನಡೆಸು; ಪ್ರಭುತ್ವ ಮಾಡು; ನಿಯಂತ್ರಿಸು: ಶ್ರೀಮತ್ಕದಂಬಪನ್ನಾಗಸಂಪನ್ನನ್ಕಲಭೋರ[ನಾ] ಅರಿಕಕುಸ್ಥಭಟ್ಟೋರನಾಳೆ ನರಿದಾವಿ[ಳೆ] ನಾಡುಳ್ (ಮೈಆರಿ. ೧೯೩೬, ೧೬-೨; 450); ಸ್ವಸ್ತಿಶ್ರೀ ಎಱೆಯಪ್ಪೊರಾ ಪೃಥುವೀರಾಜ್ಯಂಗೆಯೆ ಶಾಚಮಣಲೆಯರುಂ ನನ್ನಿಮಬಿಲೂರುಂ ಸನ್ತೊನಮಾಳ ಕಿಱುಮೆಬ್ಬಿಗರಾ ಪನ್ನಿರ್ವ್ವರ್ಗ್ಗರ್೦ (ಎಕ. XIV, ತಿರುಮ. ೨೫೩-೧; 800); ಅದನಾಳ್ವ ನಖಿಳಖಚರಪತಿಮಕುಟಮಣಿಗಣಕಿರಣರಾಗರಂಜಿತಚರಣಯುಗಳಂ... ಅತಿಬಳನೆಂಬಂ (ಆದಿಪು. ೧-೭೧ ವ); ಆ ಪುರಮನಾಳ್ವಂ ವಿಶ್ವಸೇನನೆಂಬ ಮಹಾಮಂಡಳಿಕಂ (ಧರ್ಮಾಮೃ. ೧-೯೦). **೨.** ಪಡೆ; ಹೊಂದು: ನೆಗಬ್ದ ಮಹಾಪಟ್ಟಣಮೊಳ್ಪನಾಳ್ದ ಪುಲಿಗೆಱೆಯೆಸೆಗುಂ (ಎಇ. XIII, ೩೩೧-೨೬; 929); ವೃತ್ತಕುಚಂಗಳಿಂದುದಿರ್ದ ಚಂದನದೊಳ್ ತಳಿರ್ವಾಸು ಬೆಳ್ಪನಾಳ್ದತ್ತು (ಪಂಪಭಾ. ೫-೧೭); ಅಸುವೆ ಶಿಳಾಪಟ್ಟಕಾಭಿಧಾನಮನಾಳ್ಗುಂ (ವಸ್ತುಕೋ. ೫೦-೩೨); ಪಿತ್ತಜ್ವರನಿರತನ ಬಾಯ್ಗಿಂಪನಾಳ್ದಿರ್ದ ಪಾಲ್ ಬೇವಿನ ಕಾಯ್ವೊಲ್ ಕೈಪೆಯಪ್ಪಂತಿರೆ (ಸೂಕ್ತಿಸು. ೧-೪೪). **೩.** ಅನುಭವಿಸು; ಭೋಗಿಸು: ಓದಿಸಿ ಗುಣಶಾಸನದಿನಾಳ್ವಕ್ಕರಿಗವೃತ್ತಿ ಮತ್ತರಿಪ್ಪತ್ತೈದು ಮನೆಯೊಂದು (ಎಇ. XX, ೬-೨೮; 1012). **೪.** ರಕ್ಷಿಸು; ಇಟ್ಟುಕೊಳ್ಳು; ಕಾಪಾಡು: ಕಾಮಧೇನಿರ್ದ್ದ ಮೂಟಕೆ ಗೊಡ್ಡಾಕಳನಾಳ್ವರೇ (ಸೋಮೇಶ. ೩); ಯೀಸ್ಥಾನದುಂಬಳಿ ಸಹಿತಕ್ಕೊಡೆಯರು ಆಚಾರವಂತನಪ್ಪ ಪೂಜಾರಿಯನಾಳ್ದು ಪೂಜಿಸುವರು (ಸೌಇಇ. IX-i, ೨೭೦-೮೪; 1169); ಜಾರತ್ವ ಮಾಡೊ ಪತ್ನಿಯ ಕೂಡಿ ಆಳಬಾರದು (ಪುರಂದ. ೨-೬೦-೪). **ಆಳು$_1$: ೧.** ತುಂಬಿಯ ಮೇಳವದ ಗೀತದ ವಿನೋದದಲಾಳಿದರು ವನವಾಸ ಸಾಮ್ರಾಜ್ಯವನು ಸೊಗಸಿನಲಿ (ಕುವ್ಯಾಅ. ೧೦-೧); ಬಳಿಕ ಸುಧರ್ಮದೇವತೆ ಭೂವರನಾಳುವಿಳೆಯೊಳು ಪರಿಪೂರ್ಣವಾಗಿ... ರಾಜಿಸುವಳು (ಕಂನವಿ. ೪-೧೦೭); ಆದಿನ ಮೊದಲು ಮೈಸೂರನಾಳಿದರಾ ಯಾದವಕುಲವರ್ಧನರು (ಹದಿಬ. ೧-೮). **೨.** ಕೌರವ ಗೋಳಿಡುತ ಸುಕುಮಾರಕರ ಸಾವಿಂಗೆ ಹಂಬಲಿಸೆ ಆಳಿದನು ದುಮ್ಮಾನವನು (ಕುವ್ಯಾದ್ರೋ. ೬ ಸೂ. ಅಡಿಟ); ಕೇಳುತೊಯ್ಯನೆ ಲಲನೆಯರು ನಲವಾಳಿಧರು (ಜಿನಭಾ. ೧೫-೨೧); ದಿತಿಯು ಮಧ್ಯಾಹ್ನದೊಳ್ ಪಾಸಿ ದರ್ಭೆಯನದರ ಮೇಲೆ ನಿದ್ರೆಯನಾಳಲು (ವೆಂಕಾರಾ. ೧-೧೫-೧೦). **೪.** ನಿನ್ನನಾಳ್ವೆನೆಂದು ಬಾಣಸಿನ ಕರಣಕ್ಕೆ ನಿರೂಪಣಂಗೆಯ್ದು (ಪಂಪಭಾ. ೮-೫೪ ವ); ಗಂಡರ್ರೈವರು ಮೂಱುಲೋಕದ ಗಂಡರೊಬ್ಬಳನಾಳಲಾಱರಿ (ಕುವ್ಯಾವಿ. ೩-೪೬).

**ಆಳ್ದ, ಆಳಿದ = ೧.** ಒಡೆಯ; ಸ್ವಾಮಿ; ಪ್ರಭು: "ಈಶನೊಳಾಳ್ದಂ" (ಕರ್ಣಾನಿ. ೫೪); ಶಲ್ಯ ಶಕುನಿ ದುಶ್ಶಾಸನ ವೃಷಸೇನಾದಿಗಳಾಳ್ದನ ಮುಳಿದ ಮೊಗಮನಱಿದು (ಪಂಪಭಾ. ೧೧-೧೧೦ ವ); ಆಳ್ದಂ ಎಂತು ನಿರ್ಗುಣನಾದೊಡಂ ಗುಣವಂತನಪ್ಪ ಭೃತ್ಯನಾಳ್ದನೆಡೆಱಂ ಕಡೆಗಣಿಸಿರ್ಪುದೊಪ್ಪದು (ಪಂಚತಂ. ೩೧-೧); ಒಬಂಗಿಬರಂ ಕೊಲ್ಲುವರು ಆಳಿಗಾಳ್ದನಂ ಕೊಲ್ವರು ತಪ್ಪೆ ತಪ್ಪುವರು (ಸೌಇಇ. IX-i, ೩೮೬-೨೦; 1190); ಆಳೆಸಗಿದುದಾಳ್ದಂಗೆಂಬಾ ನಾಣ್ನುಡಿಯಿಂದ (ಜಯಕಾ. ೧೦-೩೮); ಸುರರಾಳ್ದಂ ಮೃಗೇಂದ್ರಪೀಠವನಿಳಿದು ನಡೆತಂದು (ಚೆಬಪು. ೨೦-೪). **೨.** ಪತಿ; ಗಂಡ: ಪಾರ್ವತಿಗಾದುದಂತಸ್ತಾಪವಾಳ್ದನ ಚರಣಚಿಂತೆಯಲಿ (ನಿಭಾಗ. ೪-೫-೧೮); ಆತಂಕದಿಂದಾಳ್ದನ ಪೆಸರ್ಗೊಂಡಳು ನೂತನ ಕಂದರ್ಪರೂಪ ಸೋತವಳೊಡನೆ ವಂಚನೆಬೇಡ ಮತ್ಪ್ರಾಣನಾಥ ಮೆಯ್ದೋಱೆಂದಳಬಲೆ (ಪೋಹತ. ೨೭-೪೭). **ಆಳಿದ: ೧.** ಏಳನವ ನಿನ್ನೇನಮಾಡಲಿ ಆಳಿದನೆ ಚಿತ್ತೈಸುಯೆಂದೆನೆ (ಕಾಶಿರಾ. ೨೪-೮); ಆಳಿದನ ಪದಕೆರಗಿ ನಿಂದು ಕೃಪಾಳು ಜಯಜಯತೆನುತ (ಗಗಕಾ. ೧೫-೪).

**ಆಳ್ದನಚಕ್ರ** = ಪ್ರಭುವಿನ ಕೈಯಲ್ಲಿನ ಚಕ್ರಾಯುಧದಂಥವನು; ಒಂದು ಬಿರುದು: ನನ್ನಿನಾರಾಯಣಂ...ಪತಿಮೆಚ್ಚೆಗಣ್ಡನಾಳ್ದನಚಕ್ರಂ ಕರ್ಪೂರವರ್ಷಂ (ಸೌಇಇ. XI-i, ೫೩-೩೫; 1007). **ಆಳ್ವನ್, ಆಳ್ವೊಂ** = ಪ್ರಭು; ಒಡೆಯ; ಸ್ವಾಮಿ: ಒಡನೆ ದರಿದ್ರರೆಲ್ಲಮಭಿಮಾನಿಗಳಪ್ಪೊಡಮಾಳ್ವನಿಚ್ಚೆಯಂ ನುಡಿವವರೆಲ್ಲಮಾತನೆಡೆಱೊಳ್ ನಿಲಲಾರ್ಪೊಡಂ... ಈ ಯುಗಮೇಕೆ ಕನಿಷ್ಠಮಪ್ಪುದೋ (ಕಾವ್ಯಸಾ. ೪೨೩ ಶೂದ್ರಕ); ಶ್ರೀಮತು ಕಲುಕಱೆನಾಡಾಳ್ವರು ಚೊಕ ಜಿನಾಲಯಕ್ಕೆ ಮತ್ತಿಕ್ಕೆಱೆಯ ನಟ್ಟ ಕಲ್ಲ (ಎಕ. IV, ನಾಗಮಂ. ೯೨-೨; 1000 ?); ನಮ್ಮಾಳ್ದಂ ಸ್ವಾಮಿ ನರೇಂದ್ರಂ ಮಗನೆ ಕೂರ್ಮೆಯಿಂದೆ ನಿನ್ನಂ ನೋಡಲ್ ತಾಮ್ಮನೆಗೆ ಬಂದಂ (ಸುಕುಮಾ. ೧೧-೪); ಮಗಧೆಯೆಂಬುದು ನಾಡಲ್ಲಿ ಉತ್ತರಮಧುರೆಯೆಂಬುದು ಪೊಬಲದನಾಳ್ವೊಂ ಪ್ರಜಾಪಾಳನೆಂಬೊನರಸಂ (ವಡ್ಡಾರಾ. ೭೧-೧೩); ಜಂಬೂದ್ವೀಪದ ದಕ್ಷಿಣಭರತದ ಮಳಯದೇಶದ ರತ್ನಪುರಮನಾಳ್ವೊಂ ಶ್ರೀಷೇಣಂ (ಶಾಂತಿಪು. ೬-೮೬ ವ). **ಆಳಿಬಾಳಿದವ** = ಅನುಭವಸ್ಥ; ವೃದ್ಧ (ಸ್ಯಾಂಡರ್). **ಆಳ್ದೊತ್ತು** = ಆಕ್ರಮಿಸಿ ಅದುಮು, —ಅಮುಕು: ಉತ್ತಮಸತ್ವದಿಂ ಪಿಡಿದು ಚಾಣೂರನಂ ನೆಲಕಿಕ್ಕಿ ಕೃಷ್ಣನಾಳ್ದೊತ್ತಿದೊಡೊತ್ತಿ ಧಾತ್ರಿ ರಸೆಗದ್ದುದು (ಅರ್ಧನೇ. ೮-೯೩). **ಆಳ್ದುಂಬರ್ಪರ್** = ಆಕ್ರಮಿಸಿಕೊಂಡು ಆಳುವವರು; ಅನುಭವಿಸುವವರು: ಈ ಧರ್ಮಕ್ಕಾರೊರ್ವರಾಳ್ದುಂಬಪ್ಪರವರ್ಗ್ಗೆ ವಾರಣಾಸಿಯೊಳಗೆ ಬ್ರಾಹ್ಮಣರನಳಿದ ದೋಷಮಕ್ಕುಂ (ಸೌಇಇ. XI-i, ೬೭-೧೬; 1032).

[ದೇ. ‖ ತಮಿ. ಆಳ್; ಮಲ. ಆಳು; ಕೊಡ. ಆಳ್; ತುಳು. ಆಳು; ತೆಲು. ಏಲು]

**ಆಳ್$_2$** 'ಆೞ್' ನೋ.

**ಆಳ್$_3$, ಆಣ್, ಆಳು$_3$ (ನಾ). ೧.** ಗಂಡಸು; ಮನುಷ್ಯ; ಪುರುಷ: ಇಂದವನ್, ನಾಳೆ ನಾನ್, ಏನ್ ಪಾಡೊ ಆಳಬಾೞ್, ಬೀಸುವ ಬಯಲ್ ಗಾಳಿ ಪರಿದಡಂಗುವ ನೆಬಲ್ (ಅಶ್ವತ್ಥಾ. ೭-೧೪). **೨.** ಸೇವಕ; ದೂತ: "ಆೞ್ – ಜಲನಿಮಜ್ಜನೇ (ಮುಳುಗು), ಸೇವಕೇ ಕುಳಂ (ಆಳ್)" (ಶಮಧಾ); "ಸೇವಕನಿಮಜ್ಜನಗಳೊಳಾಳು" (ಶಬ್ದಮಂ. ೧೧೬); ಸ್ವಸ್ತಿಶ್ರೀ ಶ್ರೀಪುರುಷಮಹಾರಾಜ ಪ್ರಿಥುವೀರಾಜ್ಯಂಗೆಯೆ ಅವರ ಮಗನ್ದಿರ್ ವಿಜಯಾದಿತ್ಯರ್ ಈ ನಾಡು ಅಳ್ವನ್ದು ಅವರಾಳ್ ಚೆಣ್ಣವೂರೊಳೆ ಎಱಮ್ಮನಾಸನ್ದಿ ಆಳೆ (ಎಕ. VI, ಕಡೂರು. ೧೪೫-೧; 750); ಆಕೆಯುಂ ಬೆಳ್ಕಾಡೊಳ್ ಮಸಣದೊಳ್ ಕೊಂಡು ಪೋಗಿಕ್ಕಿಮೆಂದಾಳ್ಗಳ್ಗೆ ಬೆಸನಂ ಪೇೞ್ದೊಡೆ (ವಡ್ಡಾರಾ. ೧೧೨-೪); ಅಣುಗಾಳ್ಕಾಯ್ಯದ ಶೌರ್ಯದಾಳ್ವಿಜಯದಾಳ್ಬಾಳುಕ್ಯ ರಾಜ್ಯಕ್ಕೆ ಕಾರಣಮಾದಾಳ್ತುಳಿಲಾಳ್ತನಕ್ಕೆ ನೆಱೆವಾಳ್ಕಟ್ಟಾಯದಾಳ್ (ಎಕ. VII, ಶಿಕಾರಿ. ೧೩೬-೧೯; 1068). **೩.** ಭಟ; ಯೋಧ; ಸೈನಿಕ: ಮನ್ನೆಯರಾಳಂತೆ ಕಾದಿಯಲಸದೆ (ಪಂಪಭಾ. ೫-೪೬ ವ); ಗೆಲಲಾರ್ಪೊಡಿಱಿದು ಗೆಲ್ವುದು ಗೆಲಲಾಱದೊಡಣ್ಮಿಸಾವುದಾಳ್ಗಿನಿತೆ ಗುಣಂ (ಗದಾಯು. ೨-೨೧); ಶತ್ರುಘ್ನನಂ ಜಯಿಸುವಾಳುಂಟೆ ಲೋಕದೊಳ್ (ಜೈಮಿಭಾ. ೨೦-೩೫); ಸಿಡಿಲಾಳ್ ತಡೆಯದೆಡೆಯ ನಡುವೆಟ್ಟುಗಳ್ಗೆ ಕಟ್ಟುಬ್ಬರದಿಂ ಬಂದೆಱಗುಗುಂ (ರಾಮಾಶ್ವ. ೧-೫). **೪.** (ಚತುರಂಗ ಸೈನ್ಯದಲ್ಲಿ) ಪದಾತಿ; ಕಾಲಾಳು: ಅನಿತುಂ ತುರಂಗದಬಿಮೊಂದೊಂದಕ್ಕೆ ನೂಱಾಳ್ ತಗುಳ್ದಿರೆ ಬಲ್ಲರ್ ನಡೆನೋಡಿ ಕೂಡೆ ಪಡೆದತ್ತಕ್ಷೋಹಿಣೀಸಂಖ್ಯೆಯಂ (ಪಂಪಭಾ. ೯-೯೫); ಭರದಿಂದಿಭದೊಳಿಭಂ ಹರಿ ಹರಿಯೊಳ್ ತೇರ್ ತೇರೊಳಾಳೊಳಾಳ್ ಪೊಣರ್ದುದು (ವರ್ಧಪು. ೮-೪೬); ಸಾರ್ಧಯೋಜನದೊಳಾಳ್ ಗಜತುರಂಗ ರಥವಿಟ್ಟಣಿಸಿ ನಡೆದುದುತ್ಸಾಹದಿಂ ನರನ ಮೇಲೆ (ಜೈಮಿಭಾ. ೧೨-೫).

**ಆಣ್** : ೧. ಮಱೆಯಲಾಗದಿದನ್ ನಾಮ್ ಪೆಣ್ಗಳೆಂಬುದನ್ ; ಆಣ್ಗಳೊಳ್ ಪೋರಲ್ಕೆ ಪುಟ್ಟಿದವರಲ್ಲ (ಅಂತಿಗೊ. ೩-೫೦) ; ಶ್ರೀರಘುವರನಯ್ದೆ ಕೊಂಚೆಯೆಣೆಯಾಣ್ಗೆ ಹಲುಂಬಿದಂ (ಗಿರಿವಿಂ. ೧೦೮-೯). **ಆಳ್ತು$_3$**: ೧. ಗಾಳಿ ಮಣ್ಣುಂಡೆಯೊಳಹೊಕ್ಕು ಹೊರಹೊರಳಲದು ಆಳೆನಿಪುದಂತಾಗದಿರೆ ಬರಿಯ ಹೆಂಟೆ ಬಾಳೇನು ಧೂಳು ಸುಳಿ (ಮಂಕುಕ. ೧೯) ; ಅವರು ಇಂಥ ತಿರುಗಾಟಗಳಿಗೆ ಆಳಲ್ಲ (ಒಂಟದ. ೪೬) ; ತೋಳ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲು (ಗಾದೆ). ೨. ಸ್ವಸ್ತಿಶ್ರೀ ರಣಸಾಗರನಾ ಆಳು ವಿಜ್ಞನೆ ಪ್ರಹಾರ ಭೂಷಣನಾ ಮಗನ್ ಕಾಮಕೋಡನ್ (ಎಇ. IX, ೮-೨ ; 710) ; ನೀವೊಡೆಯ ನಾನಾಳು . . . ಉತ್ತಮಂ ನೀನಧಮ ನಾನಯ್ಯ (ಬಸವು. ೨೨-೬೧) ; ಆಳಾಗಬಲ್ಲವನು ಆಳುವನು ಅರಸಾಗಿ ಆಳಾಗಿ ಬಾಳಲಱಿಯದನು ಕಡೆಯಲ್ಲಿ ಹಾಳಾಗಿ ಹೋಹ (ಸರ್ವಜ್ಞ. ೧೫೩೮) ; ಆಳಾಗಿ ದುಡಿ ಅರಸಾಗಿ ಉಣ್ಣು (ಗಾದೆ). ೩. ಕೊಙ್ಗಣಿಯರಸರಾ ಆಳು ಎಱಿದು ಸತ್ತೋನ್ (ವೈಅರಿ. ೧೯೩೯, ೨೩-೨ ; 740) ; ಪೊರೆದಂಕದಾಳಿನಂತೆ ಪತ್ತಿಸಿ ನೋೞ್ಪ ಸೂಳೆಯಂತೆ ಲೇಸಲ್ಲದ ಸುಖಕ್ಕೆ ಪಾಯಿಸಿ ನೋಯಿಸುವಿಂದ್ರಿಯಂಗಳುಮಂ (ಧರ್ಮಾಮೃ. ೯-೨೩) ; ಪದ್ಮವ್ಯೂಹದಲಿ ಹೊಕ್ಕಾಳು ಮರಳಿದಡಸ್ತ್ರವಿದ್ಯಾಭಾಳಲೋಚನನೆಂಬ ಬಿರುದನು ಬಿಟ್ಟೆ ನಾನೆಂದ (ಕುವ್ಯಾದ್ರೋ. ೪-೯) ; ಕಾಳಗಕೆ ಆಳು ಕಟ್ಟಿದವನೇ ಅರಸು ಕೂಳು ಇಕ್ಕಿದವನೇ ದಾತ (ಗಾದೆ). ೪. ಬಳಿಕೆರಡು ಥಟ್ಟನೊಳಾಳು ಕುದುರೆಯ ಗಜರಥವ ಭೂಪಾಲರಳಿದುಳಿದವರ ಲೆಕ್ಕವನೈದೆ ವಿಸ್ತರಿಸಿ ಕೇಳು (ಕುವ್ಯಾಕ. ೧-೧೭) ; ಆಳ ಕೊಂದನು ಲಕ್ಕವನು ತುರಗಾಳಿಯನು ನಾಲ್ಸಾವಿರವ ಶುಂಡಾಲಘಟೆಗಳ ತುಂಡಿಸಿದನೊಂದೆರಡು ಸಾವಿರವ (ಕುವ್ಯಾಕ. ೧೧-೧೬) ; ಆಳು ಕುದುರೆಗಳು ಸಹಿತ . . . ಬಹದಾಳಿಯನೇನ ಬಣ್ಣಿಸುವೆ (ಕಂನವಿ. ೧೧-೧೭). ೫. ಶೂರ; ದಿಟ್ಟ ; ಗಂಡಸುತನ ಉಳ್ಳವನು : ಆಳಹಿರಿ ನಿಮಗಂಜುವೆನು (ಕುವ್ಯಾದ್ರೋ. ೧೫-೭೦) ; ಆಳು ನೀನಹುದೆಲವೊ ಕರ್ಣ ವಿಶಾಲಮತಿ ನೀ ಲೇಸುಮಾಡಿದೆ (ಕುವ್ಯಾಕ. ೪-೧೪). ೬. (ಚದುರಂಗದಾಟದಲ್ಲಿ) ಪೇದೆ, —ಕಾಯಿ : ಇನ್ನು ಹಿಡಿಯದಿರು ಸಾಕಾಳ ಪನ್ನಗವೇಣಿ ಮುನ್ನಾನೆ ಸಿಕ್ಕಿದುದ ನೋಡಿದಾ ಶಶಿವದನೆ . . . ನಿನ್ನ ಚತುರಂಗಮಂ ಗೆಲ್ದೆನೆಂದೊರ್ವ ನಾಡುತೆ (ಜೈಮಿಭಾ. ೬-೩೦) ; ಪಿಡಿಯಾನೆಗಳನಾಳೊತ್ತು ರಥಕೆ ಕೈದುಡುಕು ಮಂತ್ರಿಯ ಮೇಲಕೇಱು ಕಡುಗುದುರೆಯ ಸೊಕ್ಕ ಮುಱಿಯೆಂದು ಚದುರಂಗದಡಿಯಮೇಲ್ದಾಯ ಪೇಳಿದಳು (ಕಂನವಿ. ೬-೧೨೦). ೭. ಕೆಲಸಗಾರರು; ಕೂಲಿಯವರು : ನಾಳೆ ಗಾರೆಕೆಲಸಕ್ಕೆ ಐದಾಳು ಬೇಕಾಗಿದೆ (ರೂಢಿ) ; ಗದ್ದೆಯಲ್ಲಿ ಹತ್ತಾಳು ಕೆಲಸ ಮಾಡುತ್ತಿದ್ದಾರೆ (ರೂಢಿ). ೮. ಪುರುಷಪ್ರಮಾಣ; ಸುಮಾರು ಐದರಿಂದ ಆರು ಅಡಿ : ಸರ್‍ರೆಂದು ಎರಡು ಆಳು ಕೆಳಕ್ಕೆ ನನ್ನ ದೇಹವು ಬಂದಿತು (ಮೋದಿಮು. ೧೨೩) ; ಬಾವಿ ಎಷ್ಟು ಆಳುದ್ದ ಇದೆ (ರೂಢಿ).

**ಆಳಾಗಿಸಿಕೊಳ್** = ವಶಪಡಿಸಿಕೊ ; ಅಧೀನಮಾಡಿಕೊ : ಕೇಳಿದನಾ ಲೇಖನಾರ್ಥವ ಕಂಪಭೂಪಾಲನಿದೊಂದು ನೆವದೊಳು ಆಳಾಗಿಸಿಕೊಂಬ ಬಗೆ ನಮ್ಮನಸುರನೆಂದಾಳೋಚಿಸಿದನೆದೆಯೊಳು (ಕುರಾಸಾಂ. ೧೭-೬೮). **ಆಳಾಳ್** = ಆಳಿನ ಆಳು ; ದಾಸಾನುದಾಸ : ಕಾಳನೊ ರಾವಣನೋ ಶಿಶುಪಾಳನೊ ತಾನೆನಿಸಿ ನೆಗೞ್ದ ನರಗನ ತಲೆ ತನ್ನಾಳಾಳ ಕಯ್ಗೆವಂದುದು ಹೇಳಾಸಾಧ್ಯದೊಳೆ ಗಂಗಚೂಡಾಮಣಿಯಾ (ಎಕ. II, ೫೯-೯೬ ; 974). **ಆಳಿನೇಱಿಕೆ** = ಮಕ್ಕಳು ಒಬ್ಬರ ಮೇಲೊಬ್ಬರು ಕುಳಿತು ಆಡುವ ಒಂದು ಬಗೆಯ ಆಟ : ಹೊಙವಳಯದಲಿ ಪುರದ ಆಳಿನೇಱಿಕೆ ಹಿಡಿಗವಡೆ ಗುಱಿಯಾಳು ಚೆಂಡಿನ ಹೊಣಕೆ ಚಿಣಿಕೋಲಾಳು ಗೊತ್ತಿನದಂಡೆಯೆನೆ ನಾನಾ ವಿನೋದದಲಿ (ಕುವ್ಯಾಅ. ೬-೧).

**ಆಳುಕಾಳು** = ಸೇವಕ ಮೊದಲಾದವರು : ಆಳುಕಾಳಿಂದ ಉಪದೇಶ ಪಡೆಯುವ ಹಂತಕ್ಕೆ ನಾನಿನ್ನೂ ಇಳಿದಿಲ್ಲ (ಹಾಹುತ್ತ. ೩೫) ; ಆಳುಕಾಳು ಇದ್ದವನಾದರೆ ಕಾಳಯಮ ಬಿಟ್ಟಾನೆ (ಗಾದೆ). **ಆಳುಹೋಳು** = ಆಳು ಮೊದಲಾದವರು : ಕಥೆಗಳಲ್ಲಿ ಸಂದರ್ಭಾನುಸಾರವಾಗಿ ಬರುವ ಆಳುಹೋಳುಗಳ ರೇಖಾಚಿತ್ರಗಳು ಎಳೆದ ಒಂದೆರಡು ಗೆರೆಗಳಿಂದಲೇ ಕತೆಗಾರ್ತಿಗಿದ್ದ ಜೀವನದ ಇನ್ನೊಂದು ದಿಕ್ಕನ್ನು ತೋರಿಸುತ್ತವೆ (ತೇನೋಡ. ೨ ಮುನ್ನು). **ಆಳಿಂಮುನ್ನಿಱಿವ** = ತನ್ನ ಸೈನಿಕರಿಗಿಂತ ಮುಂಚೆ ತಾನೇ ಶತ್ರುವನ್ನು ಇದಿರಿಸಿ ಕೊಲ್ಲುವವನು ; ಒಂದು ಬಿರುದು : ಆಳಿಂಮುನ್ನಿಱಿವಂ ಶೌರ್ಯಮಂ ಮೆಱೆವಂ (ಕಇ. II, ೧೧-೧೭ ; 1092); ಮನ್ನೆಯ ವಲ್ಲಭ ಭಯಲೋಭ ದುರ್ಲಭ ಆಳಿಂಮುನ್ನಿಱಿವ ಶೌರ್ಯಮಂ ಮೆಱೆವ (ಎಇ. XXVII, ೧೫-೩೫ ; 1114). **ಆಳ್ಗೆನಲ್ಲಾತ** = ಮನುಷ್ಯರಿಗೆಲ್ಲಾ ಒಳ್ಳೆಯವನು ; ಜನಪ್ರಿಯ : ಕೃತಯುಗಚರಿತ ನಾಳ್ಗೆನಲ್ಲಾತಂ ಗೋತ್ರಪವಿತ್ರ ಸಹಿತ ನಿಕ್ಷತ್ರಂ ತಡವಿಲ್ಲದೀವಂ ಮಱುವುಗೆ ಕಾವಂ (ಸೌಇಇ. IX-i, ೯೨-೭ ; 1054). **ಆಳ್ದಳ್** = ೧. ಯಜಮಾನಿ ; ಒಡತಿ : ತತ್ತಸುಖವೇ ಬಾರೆನ್ನ ಮಾತಾಮಹೇ ಬಾರೆನ್ನಾಳ್ದಳೆ ನುತ್ತುಮೊಲ್ದು ಕರೆದಂ ಶರ್ವಾಣಿಯಂ ಶೈಳಪಂ (ಗಿರಿಕ. ೩-೧೦೫). ೨. ಹೆಂಡತಿ ; ಪತ್ನಿ : ನೀಂ ಮುಗ್ಧತೆಯ ಕಳೆದಿಟ್ಟು ಹರುಷವಟ್ಟು ಈ ಮಹಾಸಾಮ್ರಾಜ್ಯದೊಡೆತನವನನುಭವಿಸಿ ಪ್ರೇಮದಿಂದೆನ್ನಾಳ್ದಳೆನಿಪ ಕೀರ್ತಿಯ ಗಳಿಸಿ (ವೆಂಕಾರಾ. ೫-೯-೧೭). **ಆಳ್ದಾನಿವೀರ** = ಸಮರ್ಥರಾದ ದಾನಿಗಳಲ್ಲಿ ಶೂರ (?) : ಆಹವ ನಿರ್ಭಯನಭಿಮಾನವಾಮನ ಮಟ್ಟನಚರಿತನಸತೀವಿದೂರನಾಳ್ದಾನಿವೀರಂ ಚಾಳುಕ್ಯಾರ್ಜುನಂ ಚಲಕೆ ಮೊದಲಿಗಂ (ಎಕ. XIV, ಮೈಸೂರು. ೧೨೭-೪ ; 900). **ಆಳಕಟ್ಟಲೆ** = ಆಳುಗಳು ನಡೆದುಕೊಳ್ಳಬೇಕಾದ ನಿಯಮಗಳು; ಆಳುಗಳಿಗೆ ಸಂಬಂಧಿಸಿದ ಕಟ್ಟಳೆಗಳು : ಆ ದಂಣಾಯಕಪುರದ ಗ್ರಾಮ ಒಂದಕ್ಕೆ ಹಿರಿಯರ ಮನೆಯವರು ಆಳಕಟ್ಟಲೆಗೆ ಬರಸಿ ಕೊಟ್ಟಹ ಪ್ರಮಾಣರೇಖೆ (ಎಕ. VII, ಶಿವಮೊ. ೭೧-೨೫ ; 1431).

[ದೇ. ‖ **ತಮಿ. ಮಲ.** ಆಳ್, ಆಣ್; **ಕೊಡ.** ಆಳಿ, ಆಣಿ ; **ತುಳು.** ಆಳು, ಆಣು ; **ಕುರುಖ್.** ಆಲ್]

**ಆಳೆ$_1$** 'ಆಟಿ' ನೋ.

**ಆಳೆ$_2$** (ನಾ). ಮೋಸ ; ವಂಚನೆ ; "ಹೆಚ್ಚಾಗಿ" (ಪಂಪಭಾ. ಕೋಶ) ; ಸುೞಿಯದು ಗಾಳಿ ಮೃಗಂ ಕೆಯ್ಪುೞಿಗಳ ಮೇತದೊಳೆ ತಣಿದಪುವು ಪಂದಿಗಳುಂ ಪಟಿನವಿರಿಕ್ಕಿದುವಾಳಂ ಪಟು ಪರಿದಾಡಲ್ ಕರಂ ಬೆಡಂಗವನಿಪತೀ (ಪಂಪಭಾ. ೫-೩೮) ; ಆಳಮಾಳಮಂತೆ ಠಮಾಳಂ (ಶಮದ. ೨೫). 'ಆಳಮಾಳ', 'ಆಳವಾಡು', 'ಆಳಂಗೊಳ್' ಪರಾ.

[< ಸಂ. ಆಲ]

**ಆಳಂಚೆ** (ನಾ). ಆಳಿನ ಮೂಲಕ ಕಳುಹಿಸುವ ಟಪ್ಪಾಲು (ರೀವ್).

[ಆಳು$_3$ (< ಆಳ್$_3$) + ಅಂಚೆ$_1$]

**ಆಳಂಬ** 'ಆಲಂಬ' ನೋ.

**ಆಳಂಬನ** 'ಆಲಂಬನ' ನೋ.

**ಆಳಂಬಿ** 'ಆಳಂಬೆ' ನೋ.

**ಆಳಂಬೆ**, ಅಣಂಬಿ, ಅಣಂಬೆ, ಅಣಬೆ, ಅಳಂಬೆ, ಆಣಂಬೆ, ಆಳಂಬಿ, ಹಣಬೆ (ನಾ). ಗೊಬ್ಬರದ ಗುಂಡಿ ಅಥವಾ ತಿಪ್ಪೆಗಳಲ್ಲಿ ಮಳೆಗಾಲದಲ್ಲಿ ಇದ್ದಕ್ಕಿದ್ದಂತೆ ಬೆಳೆಯುವ ಕೊಡೆಯಾಕಾರದ ಸಸ್ಯಜಾತಿ ; ಶಿಲೀಂಧ್ರ ; ನಾಯಿಕೊಡೆ : ಮತ್ತಂ ಮಧು ಮದ್ಯ ಮಾಂಸಂಗಳುಮಯ್ದು ಪಾಲ್ಮರದ ಪಣ್ಗಳುಮಾಳಂಬೆಯುಂ ಸಣಂಬಿನ ಪೂವುಮೆಂದಿವಂ ಸೇವಿಸುವರುಂ (ವಡ್ಡಾರಾ. ೧೨೬-೧೮).

**ಅಣಂಬಿ** : ಅಣಂಬಿಗಳ್ ಮನೆಯೊಳಗೆ ಮೂಡಣದಿಕ್ಕಿನಲ್ಲೇಟಿಲ್ ಲೇಸಂ ಪೇಳ್ವುದು (ಲೋಕೋಪ. ೧೨-೪೪ ಟೀಕೆ). **ಅಣಂಬೆ** : ಚಂದ್ರಾದಿತ್ಯಗ್ರಹಂಗಳ್ ಕಳ್ವಡಗುಂ ಜೇನುಂ ಗಿಣ್ಣಣಂಬೆ ಮೊದಲಾದುವಲ್ಲದೆ ಶುದ್ಧಮಪ್ಪಾಹುತಿಯಂ ಕೊಳ್ವವು (ಧರ್ಮಾಮೃ. ೯-೧೧೧) ; ಉಳಿದ ರಾಯರ ಕೊಡೆಗಳ್ ಗಡಣದೊಳ್ ತಳೆದಣಂಬೆಯ ಕೊಡೆವೋಲ್ ಬೆಳ್ಗೊಡೆಗಳಾದುವು (ಕಬ್ಬಿಕಾ. ೫೦) ; ಸೋರೆಯಣಂಬೆ ಸೋದಿಸದುದ ಕಾದಿಯೊಳ್ ವಿರತನವನು ದರ್ಶನಿಕ (ನಾಗಕು. ೨೮-೪೩). **ಅಣಬೆ** : ವಿಷದಣಬೆಗೆ ಮೊಸರಿಳೆಯೊಳ್ ಭಿಷಗ್ವರರ್ ಹಿಂಗು ತಗಟೆಗುಪವಿಷಮಕ್ಕುಂ (ಖಮದ. ೨-೧೧೯) ; ಹಣಜಿ ಬತ್ತವು ಅಲ್ಲ ಅಣಬೆ ಸತ್ತಿಗೆಯಲ್ಲ ಕಣಕದ ಕಲ್ಲು ಮಣಿಯಲ್ಲ (ಸರ್ವಜ್ಞ. ೧೪೧೯) ; ಅಣಬೆ ಇದು ಕೊಳೆಯುತ್ತಿರುವ ಸಸ್ಯಪದಾರ್ಥಗಳ ಮೇಲೆ ಬೆಳೆಯುತ್ತದೆ (ಸಸ್ಯಶಾ. ೧೧೦). **ಅಳಂಬೆ** : ನಾಳಿನಾಸೆಯಳಂಬೆಯಂತೆ ಅದುರುವೆದೆಯಲಿ ಮೊಳೆವುದು (ಗಿಳಿವಿಂ. ೬೬-೭೫). **ಅಣಂಬೆ** : ನೀಂ ಬೆಸಗೊಳ್ವುದದೇನಾಣಂಬಿ[ಬೆ]ಯನವಯವದೆ ಕೀಟ್ವ ತೆಱದಿಂ ಕಿಱಿಕೇಯುಂಬುಜಲೋಚನನೇಱು ದಿನಂಬರಮೆತ್ತಿರ್ದ ಗಿರಿಯಿಂದಂಬುಜವದನೇ (ಅರ್ಧನೇ. ೮-೨೪); ನಿಂಬದ ಕುಸುಮಂಗಳನೌದುಂಬರಪಂಚಕಮನಂತೆ ನವನೀತಮನಾಣಂಬೆಯ ನನಾರತಂ ಬೆಳ್ಳುಂಬಳಮುಂ ಗಿಣ್ಣನುಣ್ಣದಿರ್ಪುದಮೋಘಂ (ಸುಕುಮಾ. ೬-೪೩) ; ಬೆಣ್ಣೆ ಗಿಣ್ಣಾಣಂಬೆ ಮೊದಲಾದುದಱಿದು ತೊಱೆವುದಿಂತು (ಶಾಸ್ತ್ರಟೀ. ೫೫-೪). **ಅಳಂಬಿ** : ಅಳಂಬಿ [ಪಾಠಾಂ. ಆಣಂಬಿ] ಮೂಡೆ ವಿಭವಂ (ಲೋಕೋಪ. ೧೨-೪೪). **ಹಣಬೆ** : ಬಣಜೀಗ ಬೊಗಸ್ಯಲ್ಲ ಹಣಬೇ ಶತ್ತೇಯಲ್ಲ ಒಣಗಿದ್ದ ಮರಾ ನೆರಳಲ್ಲಾ (ಹುಟ್ಟಹ. ೧೧೧).

[ದೇ. ‖ ತಮಿ. ಅಮ್ಪಿ ; ತುಳು. ಲಾಂಬು, ನಾಂಬು. / ಮರಾ. ಅಳಂಬೆ, ಅಳಂಭೆ ; ಪ್ರಾ. ಅಲಂಬ]

**ಆಳಂಭ** 'ಅಲಂಭ' ನೋ.

**ಆಳಕಟ್ಟಲೆ** 'ಆಳ್$_3$' ಪರಾ.

**ಆಳಗನಹಳ್ಳ** (ನಾ). ಒಂದು ಊರಿನ ಹೆಸರು (?) : ಆಳಗನ ಹಳ್ಳ ಎತ್ತುರುಳಿ ನರಿಗನಕಟ್ಟೆ ಮತ್ತರನಱೆ ನಿಱಿಯಿಂಗಲು (ಎಕ. VI, ತರೀಕೆ. ೬೬-೧೧ ; 888). [ಆಳಗನ್ನ$_0$ + ಹಳ್ಳ (< ಪಳ್ಳ)]

**ಆಳಗೆ** (ನಾ). (?) : ಆಳಗೆ ಮನೆಯೊಳ್ ದೇ(ದಿ)ವಸಮ(ನೋ)ನೂಳಿಯೆ ನಿಂದಿರಿಸಿ ಕಡೆಯನೆಣಿಸುತೆ ಬಾಸಾಲೀಲೆಯೊಳೆ ನೀರನೊಕ್ಕೊಡೆಗಾಲಯ ಮೇಲಿ(ಲ)ನಿತೆ ಸಮಯದೊಳ್ ಮುಱಿಯಕ್ಕುಂ (ಜಟ್ಟಿಮ. ೩-೫). [?]

**ಆಳಜಾಳ** 'ಆಲಜಾಲ' ನೋ.

**ಆಳಟ್ಟು$_1$** (ನಾ). ಒಂದಾಳಿಗೆ ಇಷ್ಟು ಎಂದು ಹಾಕುವ ತೆರಿಗೆ (?) : ಮತ್ತವಾ ಮಣಿಗುಂದಗೆಯಯ್ಯನೂಱಜನಾಲ್ವರುಂ ಚೈತ್ರದ ಪರ್ವ್ವಕ್ಕೆ ಆಳಟ್ಟ ಹಾಗೆ ಪವಿತ್ರದ ಪರ್ವ್ವಕ್ಕೆ ಆಳಟ್ಟ ಹೊಗವನ್ತನಿತುಮಂ ಚಂದ್ರಭೂಷಣದೇವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿಕೊಟ್ಟರು (ಕಕುಲ. ೫-೫೦ ; ?). [ಆಳ್$_3$ + ಅಟ್ಟು]

**ಆಳಟ್ಟು$_2$** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀ ಪಣ್ಣಮಯ್ಯ ಆಳಟ್ಟಲ್ಲಿ ಉಳ್ಳನ್ನು (ಎಕ. X, ಚಿಂತಾಮ. ೬೭-೧ ; 1000). [?]

**ಆಳಡಿ** (ನಾ). ಆಳವಾದ ತಳಭಾಗ ; ಅತ್ಯಂತ ಆಳದ ಭಾಗ : ಪೃಥ್ವಿಯ ಗರ್ಭದ ಆಳಡಿಯಲ್ಲಿ ನಿಸ್ಪಷ್ಟದ ನಿದ್ರೆಯ ತೊಡೆಯಲ್ಲಿ (ಅರಳು. ೧೭೮-೫). [ಆಳ್$_1$ (< ಅಟಿ) + ಅಡಿ$_1$]

**ಆಳಣಿ** (ನಾ). ಪದಾತಿಗಳ ಸೈನ್ಯ : ಚೋಳನ ತಟ್ಟು ಮಾಳವನ ಬಿಲ್ಲಣಿ ಪಾಂಡ್ಯನ ವೀರಸೇನೆ ಪಾಂಚಾಳನ ಮೋಹರಂ ಮಗಧ ಭೂಭುಜನಾಳಣಿ ಬಂದು ಸಂಗರಕ್ಕೆಳಸಿವೊಡ್ಡಿದತ್ತು (ಪುಣ್ಯಾಸ್ರ. ೮-೨೨).

[ಆಳ್$_3$ + ಅಣಿ$_3$]

**ಆಳಣೆ** (ನಾ). ಆನೆಯನ್ನು ಕಟ್ಟುವ ಕಂಭ : ಅತ್ತ ನಿರಂಕುಶಂ ಮೆಡಕಿದಾಳ [ಪಾಠಾಂ. ಳೆ]ಣೆಯಂ ಮುಱಿದಂಜನನನ್ನನು(?)ನ್ಮತ್ತಮತಂಗಜಂ ಬೊಲೆಸೆವಾ ವಸುದೇವಂ (ಅರ್ಧನೇ. ೫-೫೫) ; ಆ ಕೆಚ್ಚಿನ ಕಂಭಮನಂ ಗಜಗಜಮಾಳಣೆಯಂ ಮುಱಿವಂತೆ ಮುಱಿದು ಪೊಱಮಟ್ಟು ಪೋಪ ಕೃಷ್ಣನಂ ಕಂಡು (ಅರ್ಧನೇ. ೭-೮೧ ವ). [< ಸಂ. ಆಲಾನ]

**ಆಳತಿ, ಆಣತಿ$_1$** (ನಾ). ಹಾಡುವಿಕೆ ; ಗಾಯನ : ಏಳಿ ಕಂಸಾಳಂಗಳಂ ಪಿಡಿದೋಳಿಯಿಂದಂ ತಾರವಿಸುತಿರೆ ಆಳತಿಯವೇಳೆಯೊಳೆನುತಮಿಂತಾರ್ಭಟಂಗೊಟ್ಟು (ಬಸವು. ೧೨-೪೪). **ಆಣತಿ$_1$** : "ಆಣತಿಯೆನೆ ಗಾಣಂ" (ಭಾರತಿ. ೬೩) ; ಮಲ್ಲಿಗೆನನೆಗರ್ಚಿ ಕಾಕಳಿಯೊಳಾಣತಿಗೆಯ್ವ ಮದಾಳಿ (ಪಂಪಭಾ. ೫-೩೫) ; ಬೀಣೆಯ ಸರಂ ಬಿಡದಿಲ್ಲಿಯೆನಿಪ್ಪ ಠಾಯೆಯಿಂ ದಾಣತಿಮಾಡಿ (ಚಂದ್ರಪು. ೭-೯೬) ; ಈಂಚರದಿನಾಣತಿ ಮಾಡಿದುದುನ್ಮದಾಳಿ (ಶಮದ. ೭೮ ಪ್ರಯೋ) ; ಆಣತಿಯ ತುಂಬಿಯ ಕಪೋಲದ್ರೋಣಿಯೊಱೆತೆಯ ಮದದ ಕರಿಗಳ . . . ಸಂವರಿಸಿದನು ಪಾರ್ಥ (ಕುವ್ಯಾಕ. ೨೦-೪೦). [ಸಂ. ಆಲಾಪ್ತಿ ?]

**ಆಳತಿಗೂಡು** (ಕ್ರಿ). ಆಲಾಪನೆಯನ್ನು ಸೇರಿಸು ; ಆಲಾಪನೆಯೊಡನೆ ಕೂಡು : ಬೇಡಿ ಕರುಣವನೀಯೆನುತ್ತಂ ಬೊಬ್ಬಿಡುತಾರುತಾಳತಿಗೂಡಿ ತಾರೈಸುತ್ತಲುಬ್ಬುತ ಗೀತಜತಿಗಳಿಗೆ ಹಾಡುತಂ (ಬಸವು. ೧೭-೨೧).

[ಆಳತಿ + ಕೂಡು]

**ಆಳಬಗ್ಗಿಡಿ** (ನಾ). ಒಂದು ಪ್ರದೇಶದ ಹೆಸರು (?) : ಕಂದಳ್ ಮೊರಡಿ ತೆಂಕಾಯ್ ಪೊಲ ಎಲ್ಲೆ ಆಳಬಗ್ಗಿಡಿಯಾ ಬಡಗಾಯೊಟಿಪ್ಪಿ ಗೊಳುರನ್ ಮೇ ಅಳ್ತಿಬೆ ಪುಣಿಸೆಗಾಯ್ (ಮೈಆರಿ. ೯೨೪, ೮೦-೧೧೯ ; 799). [?]

**ಆಳಮಾಳ** (ನಾ). ಮೋಸ ; ವಂಚನೆ : "ಆಳಮಾಳಮಂತೆ ಶಮಾಳಂ" (ಶಮದ. ೨೫) ; ಸೋಗೆಗಳಾಟದ ಚೇಷ್ಟೆಯಿಂದಣಂ ಕಳವಳದಾಳಮಾಳದ ವಿಟಾಳಿ ಶವಾಳದ ಸೂಳೆವೆಂಗಳಾಕುಳ ರತಿ ಕಾಮುಕೇಳಿಯ ವಿಕಾರದ ಭೋಗದೊಳಿರ್ದರಾಗಳುಂ (ಹಮ್ಮೀರ. ೨-೮೯). 'ಆಳಮಾಳವಱಿ' ಪರಾ. [ಆಳ್$_2$ + ಮಾಳ (= ಮಾಲ)]

**ಆಳಮಾಳವಱಿ** (ಕ್ರಿ). ಮೋಸ ವಂಚನೆಗಳನ್ನು ತಿಳಿ (?) : ರೂಪು ಸ್ವಭಾವಯುತೆಗೊಳ್ಳಿದ ಕಾಪಿನಾಳಂ ರೂಪಸ್ವಭಾವಯುತನಲ್ಲದ ಪಾಣ್ಬನಿಂದಂ ಕಾಪಾಳಮಾಳವಱಿಯೆಂದಿನೆಯಳ್ಗೆ ಪೇಳ್ದಂ ಕಾಪಾಳಜಟಾಪಾದ ಸರೋಜಭೃಂಗಂ (ಮದತಿ. ೮-೩೫).

[ಆಳಮಾಳ + ಅಱಿ]

**ಆಳಮೇಳ** (ನಾ). ಸಹವಾಸ ; ಒಡನಾಟ : ಭಂಡರೊಳ್ ಗೋಷ್ಠಿ ಜೂದುಂಗಾಱರೊಳ್ ಮಮತೆ ಪುಂಡರೊಳಗಾಳಮೇಳಂ ಖಳರ ಸಂಗಮಾ ಜಡಿಕಾಱರೊಡನೆ ಬಿನದಂ (ಸಮ್ಯಕೌ. ೧೦-೧೪).

[ಆಳ್$_0$ + ಮೇಳ (= ಮೇಲ)]

**ಆಳಯ** 'ಆಲಯ' ನೋ.

**ಆಳರ್ಪಿಸು** (ಕ್ರಿ). ಆಳಾಗಿ ಅರ್ಪಿಸು ; ಕಡೆಗಣಿಸು ; ತಿರಸ್ಕರಿಸು ; "ಪ್ರತಿಭಟಿಸು" (ಪಂರಾಮಾ. – ಕೋಶ) ; ನಯನಂ ನೀಲಸರೋಜಮುಂ ಸೆಣಸುಗುಂ ವಕ್ಷಸ್ಥಳಂ ವಜ್ರವೇದಿಯನಾಳ[ಪಾಠಾಂ. ದ]ರ್ಪಿಸುಗುಂ ಮುಖಂ ಕಮಲಮಂ ಕೀಱ್ಮಾಡುಗುಂ (ಪಂರಾಮಾ. ೧-೯೫) ; ಸಂಹರಿಪಂ ಮಾಯಾಪ್ರಪಂಚಂಗಳನದಟಲೆವೆಂ ಲೋಭಮುಂ ಕಾಮನಂ ಪೋ ಬರವೇಟಿಂದೆನ್ನನಾಳ[ಪಾಠಾಂ. ದ]ರ್ಪಿಸಿ ಪರಮ ತಪೋಗರ್ವದಿಂದೊರ್ವ ನಿರ್ದಂ (ಮಲ್ಲಿಪು. ೧೪-೩೦). "ಸೇವಕ ತನಕ್ಕೆ ನಿಲ್ಲಿಸು, ಆಜ್ಞೆ ಮಾಡಿ ಕಳುಹಿಸು" (ಪ್ರಭಣ್ಣ). 'ಆದರ್ಪಿಸು' ಪರಾ.

[ಆಳ್$_3$ + ಅರ್ಪಿಸು]

**ಆಳವರಿಸು** (ಕ್ರಿ). ಶತ್ರುಭಟನನ್ನು ಓಡಿಸು : ತುಜುವ ಮು ಗು ಟ್ಚಿರ್ ಆಳವರಿಸಿ ಬಿದ್ದ ಮಾರಗವಜಿ (ಎಕ. XIV, ಎಡತೊ. ೬೨–೪ ; 1163) ; ಮಾದಿಗವುಣ್ಣನ ಪಟ್ಟದ ಮಗ ಕೇತಬೋವನ ಸುಪುತ್ರ ಮಾರಸಿಂಗ ಕೋಟೆಯ ಕೊಂಡು ಆ ಳ ವ ರಿ ಸಿ ಬಿದ್ದ ಕಲ್ಲು (ಎಕ. XIV, ಎಡತೊ. ೮೦–೨ ; 1203). [ಆಳ್$_3$ + ಪರಿಸು]

**ಆಳವಾಡು** (ಕ್ರಿ). **೧.** ಮರುಳುಗೊಳಿಸು; ವಂಚಿಸು; ಮೋಸಗೊಳಿಸು : ಒಂದಾಡಂ ಬೇ ಜೂ ರಿ ೦ ಮಾಱುಗೊಂಡು ಪೆಗಲೊಳಿಕ್ಕಿ ಪೋಪನಂ ನಾಲ್ವರ್ ಧೂರ್ತರ್ ಕಂಡು ನಾವೀ ಬೆಳ್ಳನನಾಳವಾಡಿಕೊಂಡೀಯಾಡಂ ನಾಯಂಮಾಡಿ ತಿಂಬಂ ಬನ್ನಿಮೆಂದು (ಪಂಚತಂ. ೧೪೬–೧೧) ; ಚೋಳನನಾಳವಾಡುವುದು ಗುರ್ಜ್ಜರನಂ ಸಲೆತರ್ಜ್ಜಿಕುಂ (ಎಇ. XIV, ೨೬೧–೨೧ ; 1173) ; ಜಾಲಗಾಜನ ಕೈಯ ದೀಹದಂತೆ ಬಾಲೆಯರ ಮನದ ಸೋಲುವೆಯಂತೆ ಇಂತಿವರನ[ನಾ]ಳವಾಡಿ ಸಿಕ್ಕಿಸುವ ಪೋಲಿಗಾಜರಿಗೆಲ್ಲಿಯದೋ ಸತ್ಯ (ಮೋಳಿಮಾ. ೬೫–೨೬೪). **೨.** ಮಿ ಥ್ಯಾ ದ ರ ವ ನ್ನು ತೋರಿಸು; ಸುಳ್ಳು ಕಲ್ಪನೆಗಳನ್ನು ಮಾಡು : ಶಿವಚಿಂತೆ ಶಿವಜ್ಞಾನಿಗಳ ಕಂಡರೆ ಆಳವಾಡಿ ನುಡಿದವರು ಗುಹೇಶ್ವರನನಱಿಯದ ಕರ್ಮಿಗಳಯ್ಯ (ಅ ವ ಚ ೦ . ೩೧–೧೨೯) ; ಎಂತಯ್ಯಾ ಆಳವಾಡಿ ಕಳೆವೆನು ಒಂದು ಜುಗ ಮೇಲೆ ಕೆಡೆದಂತೆ (ಬಸವ. ೩೭೦) ; ಮೌನವ್ರತಿಯೆಂದೊಡೆ ಸನ್ನೆಯಲ್ಲಿ ಬೇಡಿಸುವೆ ಬ್ರಹ್ಮಚಾರಿಯೆಂದೊಡೆ ಅಂಗನೆಯರಿಗೆಜಗಿಸುವೆ ಸಕಳೇಶ್ವರದೇವಾ ಎನ್ನಳಿ[ನಾಳ]ವಾಡಿ ಕಾಡುವೆ (ಸಮಾವ. ೧೨–೪೪) ; ಕ ರ ವಾ ಳ ವಾ ಡೆ ಪಾಂಡ್ಯಂ ಕರವಾಳಿಂ ಹೊಯ್ಸಳೇಶನಿಜಱಿಯಲ್ ನೋಡಲ್ ಕರವಾಳಲ್ಲದೆ ಕಾದಲ್ಕರಪಾಳಿಲ್ಲಾಯ್ತು ನೋಡೆ ತಿಗುಳನ ಪ ಡೆ ಯೊ ಳ್ (ಎಕ. V, ಬೇಲೂರು. ೧೭೧–೨೧ ; 1160) ; ಸೂಳೆಯ ಕಣ್ಗೋಲಿಗೆ ಭೀತಿಸದ ಕಟ್ಟಾಳಾರು ಬೀಯಗತನದೆ ಆಳವಾಡಿದಿರಿ ಮತ್ಪಿತ ನಲರ್ಗೋಲಿಂದೆ ಭಾಳಾಕ್ಷ ತಪಗೆಟ್ಟನಜಱಿಯಾ (ಮೋ ೀ ಹ ತ. ೩೫–೪೩) ; ಅವದಿರ ಆಳವಾಡುವುದರಿದು ಲೋಕದ ನರರಿಗೆ (ಶಂಕವಾ. ೯–೬೪).
[ಆಳ್$_2$ + ಆಡು$_1$]

**ಆಳವಾಳ** 'ಆಲವಾಲ' ನೋ.

**ಆಳವಿಣೆ, ಆಣೆವಣೆ** (ನಾ). ಒಂದು ಬಗೆಯ ವೀಣೆ : ಆಳಿಸಿ ಕುಚಾಗ್ರದೊಳ್ ಪಿ ಡಿ ದಾ ಳ ವಿ ಣೆ ಯ ವನಜಸೂತ್ರತಂತ್ರಿಯದೆನಿಸುಂ ಗಾಳಿಯ ಕೋಳಿಂ ದನಿವಿಡೆ ಬಾಳಾರೂಪಕಮೆ ಬಾಜಿಪಂತೆವೊಲೆಸೆಗುಂ (ಲೀಲಾವ. ೧೧–೬೨). **ಆಣೆವಣೆ**: ಭಿಲ್ಲತತಿ ಬಲ್ಪೆಱಗಾಗಿರೆ ಮತ್ತೆ ಪಂಚಮುಸ್ವನ ವೊ ಗೆ ವ ಪ್ಪಿ ಲಾ ಣೆ ವ ಣೆ ಯಿಂ ಪೊಸದೇಸೆಯೆನಲ್ಕೆ ಕೋಕಿಲ ಧ್ವನಿಯನದಿರ್ಪಿಯೆನ್ನ ಮನಮುಕ್ಕಿರೆ ಪಾಡಿದೆಂ (ದಶಕು. ೫–೭೯).
[ಪ್ರಾ. ಆಲಾವಣೀ < ಸಂ. ಆಲಾಪನೀ]

**ಆಳವಿಸು** 'ಆಲಾಪಿಸು' ನೋ.

**ಆಳಸಿ** 'ಆಲಸಿ' ನೋ.

**ಆಳಾನ** 'ಆಲಾನ' ನೋ.

**ಆಳಾನಸ್ತಂಭ** 'ಆಲಾನಸ್ತಂಭ' ನೋ.

**ಆಳಾಪ** 'ಆಲಾಪ' ನೋ.

**ಆಳಾಪಂಗೆಯ್** (ಕ್ರಿ). (ಬಾಯಿಗೆಬಂದಂತೆ) ಮಾತಾಡು; ಗಳಹು; ಹರಟು : ಏಳಿದರ ಪುಯ್ಯಲಂ ಕರೆದಾಳೋಚಿಸಿ ತಿರ್ದಿ ಸಂತಸಂಬಡಿಸದೆ ಬಿಲ್ಲಾಳಪ್ಪರ ಕೊರ್ವಂ ಜಡಿದಾಳಾಪಂಗೆಯ್ದು ಕೆಡಿಸಿದಂ ನೃಪಸುತನೇ (ಧರ್ಮಾಮೃ. ೨–೮೮) ; ಏಳಿಸಿ ಪುಗಬಾರದು ವೈಶ್ಯಾಲಯಮಂ ಕೃತಕದಿಂದೆ ಮಾಯಾತಪಮಂ ಮೇಳಿಸಿ ಪೊಕ್ಕಂ ಮಿಕ್ಕಿಂತಾಳಾಪಂಗೆಯ್ದು ಪುಗುವ ಗಂಡರುಮೊಳರೇ (ಧರ್ಮಾಮೃ. ೬–೫೩).
[ಆಳಾಪ (= ಆಲಾಪ) + ಗೆಯ್ (< ಕೆಯ್$_1$]

**ಆಳಾಪಂದೋಱು** (ಕ್ರಿ). ಧ್ವನಿಮಾಡು; ಮಾತಾಡು : ಮದದೊದವು ಮಿಗಲ್ ಕೊರ್ಬಿ ಕೋ ೀ ಟ್ಕು ಟ್ಟ ರೌದ್ರಾಭೀಳಂಬೆತ್ತೊಂದುಮಾದ್ಯದ್ಗಜಪತಿ ರಜನೀಮಧ್ಯದೊಳ್ ಬರ್ಪುದಂ ಕಂಡಾಳಾಪಂದೋಱಿ ಭೈಭೈಪಡಿಪಡಿಯೆನುತಾರ್ದೇಱಿದೆಂ (ದಶಕು. ೮–೧೩೦).
[ಆಳಾಪ (= ಆಲಾಪ) + ತೋಱು (< ತೋಱ್)]

**ಆಳಾಪಾಳಿ** (ನಾ). ಮಾತುಗಳ ಸಮೂಹ, —ವೊತ್ತ : ಪಿರಿಯರ ಪೆಸರ್ವೆಱ್ದ್ದಿಮ್ಮಂ ಪೊರೆವಾಳಾಪಾಳಿಯವರೆಮೆನ್ನದೆ ಪತಿಯುಂ ಪಿರಿದುಂ ಶೌರ್ಯದೆ ಮೆಚ್ಚಿಸಿ ಪರಮಮುಹಾಸ್ಪದಮನೆಯ್ದೆ ಪ ಡೆ ದ ಂ ರೇಚಂ (ಮುದತಿ. ೧–೮). [ಆಳಾಪ (= ಆಲಾಪ) + ಆಳಿ$_4$ (= ಆಲಿ$_4$)]

**ಆಳಾಪಿಕೆ** (ನಾ). ಹಾಡುಗಾರಿಕೆ : ತುಂಬುರನಾರದರನುರಾಗಸಮೂಹದಾಳಾಪಿಕೆಗೆ ನಂದಿಮಾಕಾಳರೆಸೆವ ವಾದ್ಯವ್ಯಾಪ್ತಿಗಳವಡಿಸಿಕೊಂಡು ಬಂದ ಪೆನಂಜಬೇಡೆಂದನು (ಸೋಮುಚ. ೧–೫೪). [ಸಂ. ಆಲಾಪಿಕಾ]

**ಆಳಾಪಿಗ** (ನಾ). ಸಂಗೀತಗಾರ; ಗಾಯಕ : ತಾಳಧಾರಿಗ ಮದ್ದಳಿಗ ನಾಗಸರಮುವುರಿಯಾಳಾಪಿಗ ನಟುವಿಗರ ಹೇಳಲಳವೇ (ಕಂನವಿ. ೬–೫೬).
[ಆಳಾಪ (= ಆಲಾಪ) + -ಇಗ]

**ಆಳಾಪಿಸು** 'ಆಲಾಪಿಸು' ನೋ.

**ಆಳಾರ್ಪು** (ನಾ). ಭಟರ ಪೌರುಷ, —ಪರಾಕ್ರಮ : ಚಂದ್ರನಿಲ್ಲದಿರುಳಾಳಾರ್ಪಿಲ್ಲದ ನೃಪತಿ ಕವಿತೆಯಿಲ್ಲದ ವಿದಗ್ಧತಾಗುಣಮದೇಂ ಮನಂಗೊಳಿಸುಗುಮೆ (ಕಾವ್ಯಾವ. ೪೨೬). [ಆಳ್$_3$ + ಆರ್ಪು]

**ಆಳಾಳ** (ನಾ). ಒಂದು ಕುಲದ ಅಥವಾ ವೃತ್ತಿಯ ಹೆಸರು (?): ಆಳಾಳರ ನಾಗದೇವಯ್ಯ ಹರದರ ಶಾಂತಯ್ಯ ಮಣ್ಣೆಯರ ಮಾಕಣಯ್ಯ ಉಬ್ಬರದ ಬ ಮ್ಮ ಯ್ಯ ಇಂತೀ ನಾಲ್ವರು (ಎಇ. XVIII, ೧೯೨–೩೬ ; 1184). [?]

**ಆಳಿ$_1$** (ನಾ). ಉಪೇಕ್ಷೆ; ಅಲಕ್ಷ್ಯ; ತಿರಸ್ಕಾರ; ಮೂದಲಿಕೆ (?): ಆಳಿಗೊಳಗಾಯ್ತೆನ್ನ ಭಕ್ತಿ ಧಾರುಣಿಗೆನುತ (ತಿ ರು ರ. ೨೮–೪) ; ಮನಮನೊಂದಾಳಿಯಿಂದಭವನವರೇಳಿಗೆಯೆ ನಿನಗಾಗದೇಕೆಂದೆನೆ (ಮ ಸೋ ೀ ವಿ. ೧–೮) ; "ನೆವ" (ಮಸೋವಿ. ಟೀಕೆ) ; ಬಾಲನಂಗದನಹಿತಸುತನೆಂದಾಳಿಯನು [ಪಾಠಾಂ. ದೇಳಿಲವ] ಮಾಡದಿರು (ತೊರರಾ. ೪–೪–೬೦).
[< ಏಳಿದು]

**ಆಳಿ$_2$** 'ಆಟಿ$_1$' ನೋ.

**-ಆಳಿ$_3$** (ಪ್ರ). ಸ್ವಭಾವ, ಪ್ರವೃತ್ತಿ ಉಳ್ಳವನು ಎಂಬ ಅರ್ಥದಲ್ಲಿ ಸೇರುವ ತದ್ಧಿತ ಪ್ರತ್ಯಯ : ಆಳಿ ಪ್ರತ್ಯಯಮುಕ್ಕುಂ ಶೀಳಾದ್ಯರ್ಥಂಗಳಂ ವಿವಕ್ಷಿಸೆ (ಕಾ ವ್ಯಾ ವ. ೩೫೨) ; ಉಕ ಕುಳಿ ಯಾಳಿ ಪ್ರತ್ಯಯ ಮಿಕಮುಂ ಶೀಲಾದಿ ವಿಶ್ರುತಾರ್ಥದೊಳ್ . . . ಆಳಿಪ್ರತ್ಯಯಕ್ಕೆ–ಓದಾಳಿ, ಜೂದಾಳಿ . . . ಸಿಗ್ಗಾಳಿ (ಶಮುದ. ೨೦೩, ಪ್ರಯೋ).

**ಆಳಿ$_4$** 'ಆಲಿ$_4$' ನೋ.

**ಆಳಿಂದಕಿ** (ನಾ). ಅಳಿಲು (ದಕ. ೩). [?]

**ಆಳಿಕಾರ** 'ಆಟೀಕಾಱ' ನೋ.

**ಆಳಿಕಾಱ**, 'ಆಟೀಕಾಱ' ನೋ.

**ಆಳಿಕೆ** 'ಆಳ್ಕೆ' ನೋ.

**ಆಳಿಕೆಗೊಡು** (ಕ್ರಿ). ಅಧಿಕಾರವನ್ನು ವಹಿಸಿಕೊಡು : ಪುಟ್ಟಿದೆಡೆಯ ನೆಱೆಬಿಟ್ಟು ತನ್ನಾಳಿಕೆಗೊಟ್ಟು ಶಶಿಗೆ ಕಡೆಗೆಯ್ದು ಕೆಟ್ಟು ಬಾಳುವ ಬಾಳದೇಕೆನುತ ರವಿ ತೊಟ್ಟನೆ ಬಿದ್ದನಬ್ಧಿಯೊಳು (ಅಂಜಚ. ೫–೧೦೮).
[ಆಳಿಕೆ (< ಆಳ್ಕೆ) + ಕೊಡು]

**ಆಳಿಗ$_1$** (ನಾ). ಕುಟಿಲ; ವಂಚಕ : ಅಪರಾಧ ಕ್ಷಮಿಸು ನೃಪನೆಂದೆರಗಲಾಳಿಗರರಸು ನಗುತದಕೆ (ಬಜ್ಜಪು. ೬೬–೧೧). [ಆಳ್$_2$ + -ಇಗ]

**ಆಳೇಱ್** (ಕ್ರಿ). ಪೌರುಷ ಉಕ್ಕು; ಪರಾಕ್ರಮ ಉಬ್ಬು: ಆಳೆಱ್ದು ಗರ್ಜಿಪಾಶಾಪಾಳರ ಕಣ್ಮಲರ ಕೆಂಪು ಪರ್ವಿದುದಾ ದಿಕ್ಪಾಳರ ವೀರ ರಸಾಬ್ಧಿಯ ವೇಳಾವಿದ್ರುಮದ ಕೆಂಪೆನಲ್ ತತ್ಸಭೆಯಂ (ಜಗವಿ. ೧೩–೫೭); ವಾರ್ಧಿಗಳುಂ ದ್ವೀಪಂಗಳುಂ ಮೇರೆಯನುರವಣೆಯಿಂ ಮೀಱಲಾಳೆಱ್ದು [ಪಾಠಾಂ. ಲಾಳ್ದೆಱ್ದು]ವೋ ಧಾತ್ರಿಗಳೇಱುಂ ತಾಗಿ ತಾಳಂಗುಡಲೊಡರಿಸಿ ಜೀಱಿಱ್ದುವೋ (ವರ್ಧಪು. ೮–೪೫). [ಆಳ್$_3$ + ಏಱ್$_1$]

**ಆಳೈಸು** 'ಆಲಾಪಿಸು' ನೋ.

**ಆಳೊತ್ತು$_1$** (ಕ್ರಿ). ೧. ಆಳುಗಳನ್ನು ನೂಕು; ಕಾಲಾಳುಗಳನ್ನು ತಳ್ಳು. ೨. (ಚದುರಂಗದ) ಪೇದೆಯನ್ನು ಹಿಂದಕ್ಕೆ ಅಥವಾ ಮುಂದಕ್ಕೆ ನಡೆಸು: ಪಿಡಿಯಾನೆಗಳನಾಳೊತ್ತಿ . . . ಕಡುಗುದುರೆಯ ಸೊಕ್ಕುಮುಱಿಯೆಂದು ಚದುರಂಗದಡಿಯ ಮೇಲ್ವಾಯ ಪೇಳಿದಳು (ಕಂನವಿ. ೬–೧೨೦). [ಆಳ್$_3$ + ಒತ್ತು$_1$]

**ಆಳೊತ್ತು$_2$** (ನಾ). ಅರಸೊತ್ತಿಗೆ: ಬಿಜ್ಜಳನ ಆಳೊತ್ತಿನಲ್ಲಿ ತಾನೆ ಆಳಿರಬೇಕೆಂದು ಸ್ಪಷ್ಟವಾಗುವ ವ್ಯೈಳುಗಿಯೂ ಕಂದರನೂ . . . ಅನುಕ್ರಮವಾಗಿ ಆಳಿರಬೇಕು (ಮೂರುಉ. ೯೪). [ಆಳ್$_1$ + ಒತ್ತು$_2$]

**ಆಳೋಕನ** 'ಆಲೋಕನ' ನೋ.

**ಆಳೋಕನರುಚಿ** (ನಾ). ನೋಟದ ಕಾಂತಿ: ಆಕೆಯರಪ್ಪವಿಧಾಳೋಕನರುಚಿಯಿಂ ಕುಡುಮಿಂಚಿನೊಳ್ ಕಟ್ಟಿ ಮೆಱೆದಂತೆಯುಂ (ಚಂದ್ರಪು. ೧೨–೧೯೪ ವ). [ಆಳೋಕನ (= ಆಲೋಕನ) + ರುಚಿ]

**ಆಳೋಚ** 'ಆಲೋಚ' ನೋ.

**ಆಳೋಚಂಗೆಯ್** (ಕ್ರಿ). = ಆಲೋಚಿಸು: ನಾಳೆಯೊ ನಾಡಿದೊ ಕಾಲನ ಧಾಟಿಯವಂ ನುಂಗಿ ನೊಣೆಗುಗುಂ ಶರಣಾರೆಂದಾಳೋಚಂಗೆಯ್ಯದೆ ದಿಟ ಬಾೞಿಂದುಱೆ ಬೆಱೆತು ಬೀಗುವರ್ಗೇಗೆಯ್ವೆಂ (ಶಬ್ದಾನು. ೪೬೪ ವ್ಯಾಖ್ಯಾ). [ಆಳೋಚ (= ಆಲೋಚ) + ಗೆಯ್ (< ಕೆಯ್$_1$)]

**ಆಳೋಚಂಬೆರಸು** (ಕ್ರಿ). ಆಲೋಚನೆಯನ್ನು ಹೊಂದು; ಆಲೋಚಿಸು: ಶಾಳಿ ಹರಿನೀಲಮಣಿ ಕಿರಣಾಳಿ ಪೊದಟ್ದೆಸೆಯೆ ರಾಹುಗೆತ್ತಗಿದಿರ್ದಟ್ಟಾಳಿಕೆಗಳಲ್ಲಿ ನಾಡೆಯುಮಾಳೋಚಂಬೆರಸು ತಡೆದು ನಡೆವಂ ದಿನಪಂ (ಆದಿಪು. ೬–೧೦೫). [ಆಳೋಚ (= ಆಲೋಚ) + ಬೆರಸು]

**ಆಳೋಚನ** 'ಆಲೋಚನ' ನೋ.

**ಆಳೋಚನಂಗೆಯ್, ಆಳೋಚನೆಗೈ** (ಕ್ರಿ). = ಆಲೋಚಿಸು: ಯಾದವರ್ ತಮ್ಮೊಳಾಳೋಚನಂಗೆಯ್ದು (ಜಗವಿ. ೬–೪೪ ವ). **ಆಳೋಚನೆಗೈ:** ಪರಿಮಿತಕಾಗ ತನ್ನಾಪ್ತಜಾನರುಗಳ ಕರಸಿಯಾಳೋಚನೆಗೈದು . . . ಪಿರಿದಿಹ ಕಾರ್ಯವಿದೆಂದ (ಕಂನವಿ. ೧೩–೧೩); (ಕಂನವಿ. ೩–೨೦ ನೋ).
[ಆಳೋಚನ (= ಆಲೋಚನ) + ಗೆಯ್ (< ಕೆಯ್$_1$)]

**ಆಳೋಚನೆ** 'ಆಲೋಚನೆ' ನೋ.

**ಆಳೋಚನೆಗೈ** 'ಆಳೋಚನಂಗೆಯ್' ನೋ.

**ಆಳೋಚಿಸು** 'ಆಲೋಚಿಸು' ನೋ.

**ಆಳೋಳ** 'ಆಲೋಲ' ನೋ.

**ಆಳೋಳಿ** (ನಾ). ಆಳುಗಳ ಸಾಲು; ಸೇವಕರ ಗುಂಪು: ಪ್ರಸಿದ್ಧರಖಿಳದ್ವೀಪಾಧಿಪರ್ ಖೇಚರರ್ ನೆರೆದಾಳೋಳಿಗೆವಂದರಾರ್ಗಮಧಿಕಂ ಸೌಮಿತ್ರಿ ಸಾಮರ್ಥ್ಯದೊಳ್ (ಪಂರಾಮಾ. ೧೨–೬೯); ನಮ್ಮ ನೀವು ಈಯೋಳಿಗೆ ನಿಮ್ಮ ಪನ್ನಲೆಗಳಂ ಬರಲೀಯದೆ ಕಣ್ಣು ಬಾೞ್ವ[ದಾ]ಳೋಳಿಯುಳೆಂಬಿನಂ ನೆಗೞ್ದುದೊಟ್ಟಜಿ ಮಣ್ಡಳಿಕ ತ್ರೀಣೇತ್ರನಾ (ಎಕ. II, ೫೯–೮೯; 974); ಶ್ರೀಬಿಜ್ಜಣೋರ್ವೀಪತಿಯೆಸಕದಿನಾ . . . ಚೋಳನಾಳೋಳಿಯೊಳೆ ನಡದನಾರಂಧ್ರನಾಗಿರ್ದ್ದನಂಧ್ರಂ (ಎಕ. VII, ಶಿಕಾರಿ. ೨೩೬–೩೩; 1174). [ಆಳ್$_3$ + ಓಳಿ]

**ಆಳ್ಕುಡಿ** (ನಾ). ಮನುಷ್ಯ ಕುಲ; ಮಾನವ ವಂಶ: ಅಳ್ಕುಡಿಗೆ ತೋಱಿದನ್ ಆಳ್ ಕುತ್ತಮನಿತಱೊಳ್ ಅಱಿವಿಲ್ಮೆ ತಾನೆನಿತು ಪೆರ್ಗುತ್ತಮೆಂಬುದನ್ (ಅಂತಿಗೊ. ೫೪–೧೧೬೫); ಆಳ್ಕುಡಿಗೆ ನೆರವಾಗಿದ್ದ ಪ್ರಮಿಾತ್ಯೂಸ್ (ಬದ್ಧಪ್ರ. XV, ೩೪). [ಆಳ್$_3$ + ಕುಡಿ$_2$]

**ಆಳ್ಕೆ, ಆಳಿಕೆ, ಆಳುವಿಕೆ, ಆಳ್ವಿಕೆ** (ನಾ). ೧. ರಾಜ್ಯಭಾರ; ರಾಜ್ಯಾಡಳಿತ; ಅಧಿಕಾರ: ಸೇನ್ದ್ರಕ ಮಹಾರಾಜನಾರ್ಯಯುರ್ಖಣ್ಡಮುಂ ಜೆಳುಗೂರಾಳ್ಗೆ[ಳ್ಕೆ]ಯನಾಳುತ್ತು (ಎಕ. VII, ಶಿಕಾರಿ. ೧೫೪–೪; 685); ಅರಸಾಳ್ಕೆ . . . ಸ್ವಸ್ತಿ (ಎಇ. XIV, ೧೬೦–೪೫; 725); ಇನಿತುಂ ಪುರಮೇವುದೊ ಪೌದನಪುರಮೆನಗಾಳ್ಕೆಗಿಂತು ಪೊಱಗೆನಿಪಾಗಳ್ (ಆದಿಪು. ೧೪–೨೮); ಇನ್ತು ನೆಗೞ್ತೆವಡೆದ ಶೌಚರಸರಾಳ್ಕೆಯುಲು (ಸೌಇಇ. XI-i, ೧೦೧–೨೪; 1068); ತಲೆದೋಱಿದುದು ಜಗಮೆಱಗುವಿನಮುವಳ್ಗಿಮದನಾಳ್ಕೆಯ ಹರೆಯಂ (ವರ್ಧಪು. ೯–೨೮); ಭಾರತದೊಳೊಕ್ಕೂಟದಾಳ್ಕೆ ಬಿಡುತೆಯೊಳಗೆಲ್ಲರಿಗೆ ಬಾಳ್ಕೆ (ಹೊಂಗಳು. ೩೦–೨೨). ೨. (ರಾಜ್ಯದ) ಸೀಮೆ; ಮೇರೆ; ಗಡಿ: ಸ್ವಸ್ತಿ ಶ್ರೀಮುತ್ ಬಿನಯಾದಿತ್ಯರಸರ್ ಕೊಱುಕುನ್ದಾಳ್ಕೆ ಮೂನೂಱು ಆಳುತ್ತಿೞ್ದು (ಎಕ. IX (s), ಹೊಸಕೋ. ೧೯೧–೩; 800). **ಆಳಿಕೆ:** ೧. ಪರಕೀಯ ಆಳಿಕೆಯ ಭದ್ರತೆಗೆ ನೆರವಾಗಬಹುದಾದ, ಇಲ್ಲಿನ ಜನತೆ (ಶಿಕ್ಷದ. ೨೬೭); ಅರಸರ ಆಳಿಕೆಯ ಪರಿಣಾಮವಾಗಿ (ವೀರಬಂ. ೧); ರಾಮಿ ತನ್ನ ಹಿಡಿತ, ಗಂಡನ ಮೇಲಿನ ಮೋಹ, ಶಕ್ತವಾದ ಆಳಿಕೆ . . . ಗಂಡನನ್ನು ಒಳ್ಳೆಯ ದಾರಿಗೆ ತರುವಂತಿದ್ದರೂ (ಹೊಸಕ್ಷಿ. ೬೯). **ಆಳುವಿಕೆ:** ೧. ಬ್ರಿಟಿಷರ ಆಳುವಿಕೆಯಲ್ಲಿ ಭಾರತ ಒಂದು ಇಡಿ ರಾಷ್ಟ್ರವಾಯಿತು (ರೂಢಿ). **ಆಳ್ವಿಕೆ:** ೧. ಅರಟ್ಟಿರರ್ ಕುಡಲೂರದ ಗೊಟ್ಟಿಮಡಿ ಒಡೆಯೆಂಬರಾಳ್ವಿಕೆಯನೊಕ್ಕಱ ಒಡೆ ಆಗ್ಗದೀಕಡ (ಎಕ. III, ಮೈಸೂರು. ೨೫–೪; 750); ತಮ್ಮ ಆಳ್ವಿಕೆಯ ರಜತಮಹೋತ್ಸವವನ್ನು ಆಚರಿಸಿದಾಗ (ಕನ್ನನು. ೧–೨).
[ಆಳ್$_1$ + -ಕೆ$_1$. / ತಮಿ. ಆಳುಕೈ]

**ಆಳ್ಕೆಗಡೆ** (ನಾ). ಆಳಿಕೆಯ ಕೊನೆಯ ಭಾಗ; ಅಧಿಕಾರದ ಅಂತ್ಯಕಾಲ: ತಮ್ಮಪ್ಪಾಜಿಯವರ ಆಳ್ಕೆಗಡೆಯಿಂದ ಇಂದಿನವರೆಗೆ ನಡೆದಿರುವ ರಾಜ್ಯದಾಡಳಿತ ಆಯವ್ಯಯದ ಲೆಕ್ಕಪತ್ರಗಳು (ವಿಗಡ. ೧೮–೧).
[ಆಳ್ಕೆ + ಕಡೆ$_2$]

**ಆಳ್ಕೆವಾಡ** (ನಾ). ಆಳಿಕೆಗೆ ಸೇರಿದ ಗ್ರಾಮ; ಅಧಿಕಾರವ್ಯಾಪ್ತಿಯಲ್ಲಿರುವ ಪ್ರದೇಶ: ಶ್ರೀಮದ್ರಾಜಗುರುಗಳ್ ಮುನಿಚಂದ್ರದೇವರಾಳ್ಕೆವಾಡಂ ಸುಗಂಧವರ್ತಿ ಹಂನೆರಡುಮಂ (ಮುಂಬರಾ. X, ೧೬೯–೫೩; 1229). [ಆಳ್ಕೆ + ವಾಡ]

**ಆಳ್ಕೆವೆಱು** (ಕ್ರಿ). ಅಧಿಕಾರವನ್ನು ಪಡೆ; ಆಳಿಕೆಯನ್ನು ಹೊಂದು: ಓ ಭೂಮಿತಾಯ್ ಮಬ್ಬುನಾಡೊಳಗಾಳ್ಕೆವೆತ್ತಾ ಓ ಈಶರ್ ಮೇಲೆ ಕಳುಹಿ ಆತನನ್ (ಪಾರಸಿ. ೨೪–೧೨). [ಆಳ್ಕೆ + ಪೆಱು$_1$]

**ಆಳ್ಗೆಯ್** (ಕ್ರಿ). ಆಳ್ತನಮಾಡು; ಸೇವೆಯನ್ನು ಸಲ್ಲಿಸು; ಚಾಕರಿಮಾಡು: ತನ್ನಂ ಬಳಿಸಂದಾಳ್ಗೆಯ್ವ ಅನುಜರ್ವೆರಸು (ಚಿಕವಿ. ೩–೧೧); ಶೀಲಮೆಂದಾತಂಗಾಳ್ಗೆಯ್ವುದೇ ಒಳ್ಗಜ್ಜಂ (ಚಿಕವಂ. ೨೦–೭).
[ಆಳ್$_3$ + ಕೆಯ್$_1$]

**ಆಳ್ಗೆಯ್ತ, ಆಳುಗೆಯ್ತ** (ನಾ). ೧. ಆಳಿನ ಕೆಲಸ, —ಚಾಕರಿ, —ಸೇವೆ. ೨. ಶೂರನ ಕೆಲಸ; ಯೋಧನ ಕಾರ್ಯ: ಪಿರಿದಪ್ಪಾಳ್ತನದಿಂದೆ ಕೂರ್ಪವರ ಮಾತಂ ಮೀಱಿದಾಳ್ಗೆಯ್ತದೊಳ್ ನೆರೆದಿಂತೀಗಳೆ ಪೋಗಿ ತಳ್ತಿಱಿವೆನೆಂಬಾ ಮಾತದಂತಿರ್ಕೆ (ಕಬ್ಬಿಕಾ. ೧೫೯). **ಆಳುಗೆಯ್ತ:** ೧. ಒಡವಿಡುತ್ತವದಿಂದಲೋರ್ವಂ ಮುದದೆ ಗುಡಿವಿಡಿದಾಳುಗೆಯ್ತದಿನೆಂದನಿಂತೆಂದು (ಕುಮುರಾ. ೩–೩೬). [ಆಳ್$_3$ + ಕೆಯ್ತ]

೨. ಒದಗಿಸು; ಉಂಟುಮಾಡು: ಸುಸಿಲ ಸೊಕಕ್ಕೆ ಸೊರ್ಕಡರೆ ಮೆಯ್ಮೆಳವಾಱದ ತೋಳತಳ್ಪನಾಳಿಸುವಿರದೊಟ್ಟಮುಂ ಸವಿವ . . . ಗೆಯ್ತಂ (ಚಂದ್ರಪು. ೮–೭೭); ಕಾಮುಮುನಾರಮುನಕ್ಕಮಾಳಿಪಾಗ್ರಹಮ ನೊಡರ್ಚಲ್ (ಪುಷ್ಪಪು. ೨–೪೨); ನಿನಗೇಕಾಲಮುಂ ಶಾಶ್ವತ ಸುಖಂ ಗಳನಾಳಿಸುವೆ ನಾ ನಂಬು ನಿಶ್ಚಯವಿದೆನುತ ರಂಭೆ (ಬಸಪು. ೪೧–೧೯).
೩. ನಟನೆಮಾಡು: ಸೂಳೆ ಪಲರ್ವಿಟರೊಳ್ಳೆರೆದಿರ್ದಂ[ಪಾಠಾಂ. ದುರ್ಗಂ] ದಾಳಿಪರೊಲ್ಪವೊಲೆಲ್ಲರುಮಂ ಭೂಪಾಲನುಮಂತೆ ನಿಜಾಂಗನೆಯುರ್ಗಂ ಸೂಳೆಗನಾಗೆ ಸುಖಂ ದೊರೆಕೊಳ್ಗುಂ (ಮದತಿ. ೮–೬೦).
[ಆಳ್$_{1}$ ? + –ಇಸು$_{3}$]

**ಆಳಿಸು$_{3}$** 'ಆೞಿಸು' ನೋ.

**ಆಳೀಜನ** (ನಾ). ಸಖಿಯರು; ಗೆಳತಿಯರು: ಹರಿಣಾಕ್ಷಿಯ ತನುವಂ ದುಗುಲದಿ ತೊಡೆದಾಳೀಜನವುಡಿಸೆ (ಜಯಕಾ. ೫–೫).
[ಆಳೀ$_{0}$ (= ಆಲಿ$_{4}$) + ಜನ]

**ಆಳು$_{1}$** 'ಆಳ್$_{1}$' ನೋ.

**ಆಳು$_{2}$** 'ಆೞ್' ನೋ.

**ಆಳು$_{3}$** 'ಆಳ್$_{3}$' ನೋ.

**ಆಳುಗಾರ್ತಿ** (ನಾ). ಹೆಣ್ಣಾಳುಗಳನ್ನು ಒದಗಿಸಿಕೊಡುವವಳು; ಯಜಮಾನಿ; ಹೆಣ್ಣಾಳು; ಸೇವಕಿ: ಮಣೆಗಾರ್ತಿ, ಆಳುಗಾರ್ತಿ, ಸುಣ್ಣಗಾರ್ತಿ (ಭಾಷಾಭೂ. ೧೯೪ ಉದಾ). [ಆಳುಗಾಱ$_{0}$ + –ತಿ]

**ಆಳುಗೆಯ್ತ** 'ಆಳ್ಗೆಯ್ತ' ನೋ.

**ಆಳುಗೆಲಸ** 'ಆಳ್ಗೆಲಸ' ನೋ.

**ಆಳುಗೊಳ್** 'ಆಳ್ಗೊಳ್' ನೋ.

**ಆಳುಗೊಳಿಸು** (ಕ್ರಿ). ಸೇವೆಮಾಡಿಸಿಕೊ: ಕೇಳುವ ಕೆಲವು ವಿದ್ಯಾರ್ಥಿ ಗಳಿಗೆ ವಸ್ತ್ರ ಕೂಳು ವೀಳೆಯವಿತ್ತು ಮುದದಿ ಆಳುಗೊಳಿಸಿ ಪ್ರತಿದಿವಸದಿ ತರ್ವಾಯ ಹೇಳುವ ವಿಬುಧರೊಪ್ಪಿದರು (ಮೋಹತ. ೩–೩೭).
[ಆಳುಗೊಳ್ (< ಆಳ್ಗೊಳ್) + –ಇಸು$_{3}$]

**ಆಳುಗೊಳು** 'ಆಳ್ಗೊಳ್' ನೋ.

**ಆಳುಗೋಡು** (ನಾ). ಒಂದು ಊರಿನ ಹೆಸರು: ದತ್ತಂ ಗ್ರಾಮ ಮದಾಳುಗೋಡುರಿತಿ ವಿಖ್ಯಾತಂ ಪ್ರಜಾಭಿಃಪುರಂ (ಎಕ. III, ಮಳವ. ೧೨೧–೭೦; 1424). [?]

**ಆಳುತನ** 'ಆಳ್ತನ' ನೋ.

**ಆಳುದೋಟಿ** (ನಾ). ಸೇನಾನಾಯಕರ ಒಳಜಗಳ; ಸೈನಿಕರ ಅಂತಃ ಕಲಹ: ಖೂಳನಿವನನು ಹೊಯ್ದರೊಳಗೊಳಗಾಳುದೋಟಿ ವಿಕಾರಿವಿಪ್ರನ ಕಾಳುಶಾಪದ ಫಲವಲಾ ಸಂಪ್ರಾಪ್ತವಾಯ್ತೆಂದ (ಕುವ್ಯಾಕ. ೯–೧೨).
[ಆಳು$_{3}$ (< ಆಳ್$_{3}$) + ತೋಟಿ$_{1}$]

**ಆಳುದೋಱು** 'ಆಳ್ದೋಱು' ನೋ.

**ಆಳುದ್ದ** (ನಾ). ಒಂದು ಆಳಿನಷ್ಟು ಎತ್ತರ; ಪುರುಷಪ್ರಮಾಣ: ಅತಿವೇಗದೊಳರ್ದು ನಾಲ್ಕೆರಡಾಳುದ್ದದವೊಂದು ಕಾಣಲ್ ಬಪ್ಪ ದಿಣ್ಣೆಯುಂ ಗಳಗಳನೇಱಿ (ನಂಬಿರ. ೬–೧೦೫); ಆಳುದ್ದ ಶರೀರವನ್ನು ಗೇಣುದ್ದ ಮಾಡು (ಗಾದೆ). [ಆಳು$_{3}$ (< ಆಳ್$_{3}$) + ಉದ್ದ]

**ಆಳುಪ, ಆಳ್ಪ** (ನಾ). ಒಂದು ರಾಜಮನೆತನದ ಹೆಸರು: ಪ್ರಿಥುವಿ ಸಾಗರ ಶ್ರೀಮದಾಳುಪೇನ್ದ್ರ ದುಷ್ಟ ಭಯಂಕರಗ್ಗ್ರ ಇಷ್ಟಮಿತ್ರನಪ್ಪ (ಎಇ. IX, ೨೦–೭; 800). **ಆಳ್ಪ**: ಸ್ವಸ್ತಿಶ್ರೀಮತ್ಪಾಣ್ಡ್ಯ ಚಕ್ರವರ್ತ್ತಿ ಭುಜಬಳವೀರ ಕವಿಯಾಳ್ಪೇಂದ್ರದೇವ (ಸೌಇಇ. IX–i, ೩೯೩–೩; 1155); ಅರಿರಾಯ ಗಜಕೇಸರಿ ವೀರಪಾಂಡ್ಯದೇವಾಳ್ಪೇಂದ್ರದೇವ (ಸೌಇಇ. IX–i, ೩೯೫–೫; 1261). [?]

**ಆಳುಭಾಷೆ** (ನಾ). ಸೇವಕರ ಭಾಷೆ; ಕೀಳು ಭಾಷೆ: ಜನಭಾಷೆಯನ್ನು ಆಳುಭಾಷೆಯನ್ನಾಗಿ ಕಡೆಗಣಿಸಿ ನಡೆಯುವ (ವಿಚಾಮು. ೧೯).
[ಆಳು$_{3}$ (< ಆಳ್$_{3}$) + ಭಾಷೆ]

**ಆಳುಮಂದಿ** 'ಆಳ್ಮಂದಿ' ನೋ.

**ಆಳುಮಗ** (ನಾ). ಆಳು; ಸೇವಕ; ಜೀತದಾರ: ಆಳುಮಗನಿಗೆ ಕೇಳಲು ಸಹ ಒಬ್ಬರಿಗೂ ಧೈರ್ಯ ಸಾಲಲಿಲ್ಲ (ಹೂಬಿಸಿ. ೧೦); ಆಳು ಮಗ ಸಹಿತ ಅಂದು ಬಿಡುವು ತೆಗೆದುಕೊಂಡಿದ್ದಾನೆ (ಗಾಳಿಗು. ೧೬).
**ಆಳುಮಕ್ಕಳು** (ಬಹುವ): ಬೇಸಾಯ ಬದುಕಿಗೆಂದು ನಾಲ್ಕು ಆಳುಮಕ್ಕಳನ್ನು ಇಟ್ಟುಕೊಂಡಿದ್ದಾರೆ (ಬಿಳುಮು. ೧೪).
[ಆಳು$_{3}$ (< ಆಳ್$_{3}$) + ಮಗ. / **ತುಳು.** ಆಳ್ಮಗ]

**ಆಳುಮಟ್ಟ** (ನಾ). = ಆಳುದ್ದ: ಭಾವಿಯಲ್ಲಿ ಎರಡು ಆಳುಮಟ್ಟದ ನೀರಿದೆ (ರೂಢಿ).
[ಆಳು$_{3}$ (< ಆಳ್$_{3}$) + ಮಟ್ಟ. / **ತಮಿ.** ಆಳ್ಮಟ್ಟ]

**ಆಳುಮತ್ಸರ** (ನಾ). ಆಳಿನ ಮತ್ಸರ; ವ್ಯಕ್ತಿಗತವಾದ ದ್ವೇಷ (?): ಆಳುಮತ್ಸರದಧಿಕರೋಷದ ಮೇಲುನುಡಿಯಂಕುರಿಸೆ ಕುರುಭೂಪಾಲ ನಿಬ್ಬರ ತೆಗೆದನುಚಿತೋಕ್ತಿಯಲಿ ಸಂತೈಸಿ (ಕುವ್ಯಾವಿ. ೭–೨೦).
[ಆಳು$_{3}$ (< ಆಳ್$_{3}$) + ಮತ್ಸರ]

**ಆಳುಮನುಷ್ಯ** (ನಾ). ಸೇವಕ; ಆರಂಬಮಾಡುವ ಆಳು: ಆ ಮೂಜೂರ ಗ್ರಾಮಾನುಮತದಿಂದ ಆ ಆಳುಮನುಸ್ಯ[ಷ್ಯ]ರಿಂಗುಂ ವ್ರಿತ್ತಿಗಳನು ನಿಧಿ ನಿಕ್ಷೇಪಸಹಿತವಾಗಿ ಸಿದ್ಧಾಯಯೆಸಗೆ (ಎಇ. XXVIII, ೨೮–೬೦; 1256). [ಆಳು$_{3}$ (< ಆಳ್$_{3}$) + ಮನುಷ್ಯ]

**ಆಳುಮಾಡು** 'ಆಳ್ಮಾಡು' ನೋ.

**ಆಳುವಖೇಡ** (ನಾ). ಆಳುಪ ರಾಜರಿಗೆ ಸೇರಿದ ಸೀಮೆಯ ಹೆಸರು: ಆಳುವಖೇಡಮುಱುಸಾಸಿರನುಮಾನ್ ಚಿತ್ರವಾಹನನಾಳುತ್ತುಂ ಬಾಯ್ಕೇಳ ದಿರೆ ಮುನಿದು (ಎಕ. VIII, ಸೊರಬ. ೧೦–೩; 800).
[ಆಳುವ$_{0}$ (< ಆಳುಪ) + ಖೇಡ]

**ಆಳುವಾರು** 'ಆೞ್ವಾರ್' ನೋ.

**ಆಳುವಾಸಿ** (ನಾ). ಶೌರ್ಯದ ಪಂಥ; ಸಾಮರ್ಥ್ಯದ ಹೆಮ್ಮೆ: ಆಳು ವಾಸಿಯ ಕಡುಹು ಕರ್ಣನ ಬೀಳುಕೊಂಡುದು ಪೂತು ಮಝುರೇ ಬಾಲ ಎಂದವನೀಶ ಮೂದಲಿಸಿದನು ತನ್ನವರ (ಕುವ್ಯಾದ್ರೋ. ೬–೨೪).
**ಆಳುವಾಸಿಯ ತೋಟಿ** = ಶೂರನೆಂಬ ಕೀರ್ತಿಗಾಗಿ ಮಾಡುವ ಜಗಳ; ತಾನೇ ಮೇಲಾದ ವೀರನೆನಿಸಿಕೊಳ್ಳುವ ಕೀರ್ತಿಗಾಗಿ ಮಾಡುವ ಜಗಳ: ಕಾಳಗಕೆ ತನ್ನವನೊಡನೆ ನಿಮ್ಮಾಳುತನವನು ತೋಱಿಯೊಳಗೊಳಗಾಳುವಾಸಿಯ ತೋಟಿ ಬೇಡೆಂದರಸ ಮಾಣಿಸಿದ (ಕುವ್ಯಾವಿ. ೭–೨೦). . [ಆಳು$_{3}$ (< ಆಳ್$_{3}$) + ವಾಸಿ$_{4}$]

**ಆಳುವಿಕೆ** 'ಆಳ್ಕೆ' ನೋ.

**ಆಳುವೆ** (ನಾ). ಆಳಿಕೆಗೆ ಸೇರಿದ ಪ್ರದೇಶ: ಮುಳುಗುಂದದ ಪಂನೆರ ಡಕ್ಕಂ ತಲೆಯಾಗಿರ್ದ್ದ ವೀರನಾರಾಯಣ ದೇವಗ್ರ್ಗಾಳುವೆ ಪೊಸವೂರುಮ ಸುಖದಿನಾಳುತ್ತಿರೆ (ಸೌಇಇ. XI–ii, ೧೫೨–೨೭; 1103).
[ಆಳು$_{1}$ (< ಆಳ್$_{1}$) + –ವೆ]

**ಆಳುವೆಸ** 'ಆಳ್ವೆಸ' ನೋ.

**ಆಳುವೇರಿ** 'ಆಳ್ವೇರಿ' ನೋ.

**ಆಳಿವರಿ** (ಕ್ರಿ). ಸೈನ್ಯಸಹಿತವಾಗಿ ನುಗ್ಗು; ದಾಳಿಡು (?): ತಮ್ಮ ಕೂಸನ ಕಯ್ಯ ಮಾರ್ಕೋಲು ಮುಗುಳೆ ಆಳಿವರಿದು ಮಾರ್ಬಲಮನ್ ಕಾದಿಸಿ ತುಱುವಂ ಮಗುಳ್ಚಿರ್ ತೆಲ್ಲಿಗ ಬಮ್ಮರ್ಣ್ಣ ಸುರಲೋಕ ಪ್ರಾಪ್ತ ನಾದ (ಎಕ. VII, ಶಿವಮೊ. ೩೭–೭; 1140). [ಆಳ್$_{8}$ + ಪರಿ$_{1}$]

**-ಆಳಿಗ$_2$** (ಪ್ರ). ಇದರಲ್ಲಿ ವ್ಯವಹರಿಸುವವನು ಎಂಬ ಅರ್ಥದಲ್ಲಿ ಬರುವ ಪ್ರತ್ಯಯ (ಕ). '-ಆಡಿಗ', 'ಕಲಹಾಳಿಗ' ಪರಾ.
[-ಆೞಿ$_3$ + -ಗ$_2$]

**ಆಳಿಗಟ್ಟು** (ಕ್ರಿ). ಸಾಲಾಗಿ ನಿಲ್ಲು; ಪಂಕ್ತಿಯಾಗಿ ನಿಂತುಕೊ: ಪೊನ್ನ ಪೊಚ್ಚಪೊಸವಪ್ಪ ಕೊಡಂಬೆರಸಾಳಿಗಟ್ಟಿ ಭೋರೆರ್ ಭೋರೆನೆ ಪೋಪ ಬರ್ಪಮರಸಂಹತಿ ಪೋಲ್ತುದು. . .ಜಂಗಮಸೇತುಬಂಧಮಂ (ಶಾಂತಿಪು. ೧೦-೪೫). [ಆೞಿ$_4$ (= ಆಲಿ$_4$) + ಕಟ್ಟು$_1$]

**ಆಳಿಗಳೆ** (ಕ್ರಿ). ಉಪೇಕ್ಷಿಸು; ಅಲಕ್ಷಿಸು (?): ಹಸುಳನುಯಿನುತಲಾಳಿಗಳೆವುತಲಿರ್ದವು (ನವಮೋ. ೨೯-೩೦). [ಆೞಿ$_1$ + ಕಳೆ$_1$]

**ಆಳಿಗೆಯ್** (ಕ್ರಿ). ರಾಜ್ಯಭಾರವನ್ನು ನಡಸು; ಆಳ್ವಿಕೆ ನಡಸು: ಸ್ವಸ್ತಿಶ್ರೀ ಅಜ್ಜವರ್ಮ್ಮ ಕಾಸರೂರಾಳಿಗೆಯೆ (ಎಕ. IX, ದೇವನ. ೭೪-೨; 780). [ಆೞಿ$_0$ + ಗೆಯ್ (< ಕೆಯ್$_1$). ℙ ತಮಿ. ಆಳಿ = ಅರಸು]

**ಆಳಿಗೊಳ್$_1$** (ಕ್ರಿ). ಉಪೇಕ್ಷೆಮಾಡು; ತಿರಸ್ಕರಿಸು; ಧಿಕ್ಕರಿಸು; ಅವಮಾನಿಸು: ಆಳಿಗೊಂಡಿಹರೆಂದು ಅಂಜಲೇಕೆ ನಾಸ್ತಿಕವಾಡಿಹರೆಂದು ನಾಚಲದೇಕೆ (ಬಸವ. ೧೭೬); ಆರೂ ಇಲ್ಲದವಳೆಂದು ಆಳಿಗೊಳಲು ಬೇಡ ಕಂಡೆಯಾ (ಮಹಾದೇ. ಕ. ೪೧-೧೦೭); ಸೂಳೆಯರು ಗಡ ಸಾಮಗಾನವನಾಳಿಗೊಂಬರು ಗಡ ದಿನೇಶನ ಮೇಳವನು ಮುದುಗೂಗೆ ಮೆಚ್ಚದು (ಕುವ್ಯಾಕ. ೨೨-೨೪). [ಆೞಿ$_1$ + ಕೊಳ್$_1$]

**ಆಳಿಗೊಳ್$_2$** 'ಆಱಿಗೊಳ್' ನೋ.

**ಆಳಿಗೊಳ್$_3$** (ಕ್ರಿ). ೧. ಜೊತೆಗೂಡು; ಮಿಲನವಾಗು: ರವಿರುಚಿಯನಾಳಿ [ಪಾಠಾಂ ಚಿ]ಗೊಂಡು ಮಿಸುಪ ಮಿಂಚಿನೊಳಗೆ ಸುಳಿವ ಬಣ್ಣಮಂ ಬಳಲ್ಚಿಕೊಂಡು ಚಿತ್ರಕಾಶ ರಾಶಿಯೆನಿಪುದಭವನಿನಿಡುವುದೀ ವಿ ಭೂ ತಿ (ವಿಭೂರ. ೪-೫); ಕಟ್ತಲೆಯಂ ತಲೆವಿಡಿದು ಕಾಳಮನಾಳಿಗೊಳ್ವ ತಮಾಳಲತೆಯ (ಅನಂಪು. ೭-೧೦ವ). ೨. ಸಾಲಾಗಿ ನಿಲ್ಲು: ಇರ್ಕೆಲದ ರತ್ನವೇದಿಕೆಗಳೊಳಾಳಿಗೊಂಡು ಕುಳ್ಳಿರ್ದ ನಾನಾದೇಶಭೂಮಿಶರೊಳ್ (ವರ್ಧಪು. ೯-೪೭ ವ). [ಆೞಿ$_4$ (= ಆಲಿ$_4$) + ಕೊಳ್$_1$]

**ಆಳಿಗೊಳಿಸು$_1$** (ಕ್ರಿ). ಮೋಸಮಾಡು; ವಂಚಿಸು: ಸೀತೆಯಿಂದ ಕೆಟ್ಟ ರಾವಣ ಬಲಿಗೆ ಬಂಧನವಾಯಿತ್ತು ಪಟ್ಟಕ್ಕೇಱಿದ ವಿಭೀಷಣ ಇದು ಕಾರಣ ಕೂಡಲ ಸಂಗಮದೇವಾ ನೀ ಮಾಡಿದ ಮಾಯೆಯ ಮಾಟವ ದಾರಾರನಾಳಿಗೊಳಿಸಿತು (ಗಣಭಾ. ೪೭ ಬಸವ); ಗಗನಿದೇವಾ ಆಳಿಗೊಳಿಸಿದಿರೇಸನಾದೊಡೆ ಎಱೆದೊಡೇಂಟುವೆನು (ಬಸಪು. ೫೯-೨).
[ಆಳಿಗೊಳ್$_2$ (< ಆಱಿಗೊಳ್) + -ಇಸು$_3$]

**ಆಳಿಗೊಳಿಸು$_2$** (ಕ್ರಿ). ಕೂಡಿಸು; ಹತ್ತಿಸು: ಅರಗಿನ ಮಾಳಿಗೆಯ . . . ಬಾಳಚಿತ್ರದಿ ರಚಿಸಿ ಬಳಿಕ ನೃಪಾಳನೆಮಗೆಂದಿತ್ತು ಪಾವಕನಾಳಿಗೊಳಿಸಲಿಕಂದು ಕಾದನು ಕೃಷ್ಣ ದಯದಿಂದ (ಕೋಗಯ. ೧೨-೨೪).
[ಆಳಿಗೊಳ್$_3$ + -ಇಸು$_3$]

**ಆಳಿಗೊಳು** 'ಆಱಿಗೊಳ್' ನೋ.

**ಆಳಿಗೊಳುಹ** (ನಾ). ವಂಚಿಸುವುದು; ಮೋಸಗೊಳಿಸುವುದು: "ನ್ಯಾಳಿಕಂ ವಂಚನಂ ವಿಪ್ರತಾರಣಮೆನಲ್ಕಾಳಿಗೊಳುಹಂ" (ಮಂಗರಾ. ೧೩೦-೧೭); ಅಂತಿಂದ್ರಜಾಲಮಂ ಬೀಸಿ ನಿಮ್ಮನಾಳಿಗೊಳುಹಕ್ಕೆ ಕಾರಣವೇಕೆ ಬೇಡಾವು ಹೇಳಿದಂತಿರಬಾರದೇ (ಸಿಂಗಿರಾ. ౩೧-೧೫).
[ಆಳಿಗೊಳು (< ಆಱಿಗೊಳ್) + -ಹ$_2$]

**ಆಳಿಡು** (ಕ್ರಿ). ಆಳನ್ನು ಇಡು, —ನೇಮಿಸು: ಆ ಬಱಿಕೆ ಬ್ರಹ್ಮಾಂಡದೊಳ್ ಪುಟ್ಟಿಪ ದೇವ ಮನುಷ್ಯ ತಿರ್ಯಕ್ಸ್ಥಾವರ ಸೃಷ್ಟಿಗಳನಾಳಿಟ್ಟುಗೆಯ್ಸುವೆನೆಂದು ನಾಲ್ಮೊಗನಂ ಪಡೆದೈ (ಚಿಕಬಿ. ೨೭-೧೩).
[ಆೞ್$_3$ + ಇಡು$_1$]

**ಆಳಿತ್ತಿ** (ನಾ). ಆಳಿನ ಜೀವನಕ್ಕಾಗಿ ಕೊಡುವ ವಸ್ತು (?). 'ಆಳಿತ್ತಿಕಾಳು' ಪರಾ. [ಆೞ್$_3$ + ವೃತ್ತಿ ?]

**ಆಳಿತ್ತಿಕಾಳು** (ನಾ). ಆಳಿನ ಜೀವನಕ್ಕಾಗಿ ಕೊಡುವ ಭತ್ಯದ ದವಸ (?): ಬಾಣರಾವಿ ಕಸಬೆ ಗ್ರಾಮಾನುಗ್ರಾಮಗಳ ಆಯ ಬೆಳಿಸಿ ಮದೆ ಹೊರೆ ಸೊಪೆ ಆಳಿತ್ತಿಕಾಳು ಹಳಿಗಳ ವಳಗೆಯಿದಂತ ಮಾನ್ಯಗಳು (ಎಕ. XI, ಮೊಳಕಾ. ೨೫-೧೨೭; 1665). [ಆೞಿತ್ತಿ + ಕಾಳು$_2$]

**ಆಳಿದ** 'ಆಳ್$_1$' ಪರಾ.

**ಆಳಿಮಾಡು** (ಕ್ರಿ). ವಂಚಿಸು (?): ಚೋಳನನಾಳವಾಡುವುದು ಗುರ್ಜ್ಜರನಂ ಸಲೆ ತರ್ಜ್ಜಿಕುಂ ಕರಂ ಲಾಳನನಾಳಿಮಾಡುವುದು ಪಾಂಡ್ಯನನಂಡಲೆಗುಂ ತೆಲುಂಗಭೂಪಾಲನನೇಳಿದಿಕ್ಕೆರ್ಯನೆ ಮಾಡುವುದೀ ಕುಱುಗೋಡ ಕೋಟೆ (ಎಇ. XIV, ೨೭೧-೨೧; 1173); ಚೋಳನನಾಳುಮಾಡುವುದು ಗೂರ್ಜ್ಜರರಂ ಸಲೆ ತರ್ಜ್ಜಿಕುಂ ಕರಂ ಲಾಳನನಾಳಿಮಾಡುವುದು ಪಾಂಡ್ಯನನಂಡಲೆಗುಂ ತೆಲುಂಗಭೂಪಾಲನನೇಳಿದಿಕ್ಕೆಯನೆ ಮಾಡುವುದೀ ಕುಱುಗೋಡ ಕೋಟೆ ತಾಂ (ಸೌಇಇ. IX-i, ೨೯೬-೧೪; 1176).
[ಆೞಿ$_2$ (< ಆಱಿ$_1$) + ಮಾಡು$_1$]

**ಆಳಿವಸತಾಯ** (ನಾ). ಒಂದು ತೆರಿಗೆ: ಮಂನೆಯ ಸಾಮ್ಯದೊಳ್ ಬಿಟ್ಟ ಮನ್ನಣೆಯೆನ್ತೆನ್ದೊಡೆ ಮನ್ನೆಯದೆಱೆ ಆಳಿವಸತಾಯ ಪೊ[ಗೆ]ವೊಗೆ ತಳಾಱಗೂಲಿ (ಸೌಇಇ. IX-i, ೭೫-೨೧; 1042).
[ಆಳಿವು + ಅಸತು + ಆಯ$_7$]

**ಆಳಿವಾಱು** (ನಾ). ಒಂದು ತೆರಿಗೆ; ನಷ್ಟ (?): ಕಾಣಿಕೆ ಕಪ್ಪ ಜೋಡಿ ಬೇಡಿಗೆ ತಳವಾಱಿಕೆ ಆಳಿವಾಱನ್ಯಾಯ ಸಭೆಯ ಸಂಖ್ಯೆಯ ಚಿಲುವಾನ ಸುಂಕ ಸೋಡಿಗೆ ಇವಾ ಮೊದಲು ಸರ್ವ್ವಮಾನ್ಯವಾಗಿ (ಎಕ. V, ಹಾಸನ. ೨-೧೮; 1563). ℙ ಇದನ್ನು ಅಳಿವು ಮತ್ತು ಅನ್ಯಾಯ ಎಂದು ಭಾಷಾಂತರದಲ್ಲಿ ಬಿಡಿಸಲಾಗಿದೆ.
[?. / ತಮಿ. ಆಳ್ವಾರಂ = ಕೆಲಸದ ಆಳುಗಳಿಗೆ ಕೊಡುವ ಭಾಗ]

**ಆಳಿವೆಱು** (ಕ್ರಿ). ಒಡಗೂಡು; ಜೊತೆಗೂಡು (?): ಜನಕಂ ನಾಗರಸಂ ಪರಾಕ್ರಮಧನಂ ಪೆತ್ತಾವ್ವೆ ಸೀಗಾಳಿ ಮಂಡನ ರಾಜಯ್ಯೆ ಸಮನ್ತು × × × ಶ್ರೀಜಗದ್ದೇವ ಭೂಪನಧೀಶಂ ತನಗಾಳಿವ[ವೆ]ತ್ತೆಸುತವಿದ್ರೋರ್ಂದಾಜಿಯೊಳ್ ಪೂಣ್ದು ಮಾಮ್ಮೊನೆಯಂ ತಳ್ತಿಱಿದ (ಎಕ. VIII, ಸಾಗರ. ೯೩-೧೦; 1160). [ಆೞಿ$_4$ (= ಆಲಿ$_4$) + ಪೆಱು$_1$]

**ಆಳಿಸು$_1$** (ಕ್ರಿ). ಆಳಿಕೆಯನ್ನು ನಡಸು; ಆಳುವಂತೆ ಮಾಡು: ಈ ಕ್ರಮವನೂರಾಳಿಸುವೊನ್ ಇದನಱಿದೊವ್ವಾವಿರಕವಿಲೆಯುಮ್ವಾರಣಾಸಿಯುಮನಱಿದ ಪಞ್ಚಮಹಾಪಾತಕನಪ್ಪೊ (ಎಕ. III, ಮಂಡ್ಯ. ೧೪-೧೨; 907); ಪಟ್ಟಮುಂ ತಡೆಯದೆ ಕಟ್ಟ ಭೂತಳಮನಾಳಿಸದಿರ್ದೊಡದರ್ಕೆಸೊರ್ಕೆ ನೀಂ ನುಡಿಯದಿರಣ್ಣ (ಪಂಪಭಾ. ೪-೬).
ಆಳಿಸಿಕೊಳು = ಅಧಿಕಾರಕ್ಕೆ ಒಳಪಟ್ಟಿರು (ದಕ. ಕ).
[ಆೞ್$_1$ + -ಇಸು$_3$]

**ಆಳಿಸು$_2$** (ಕ್ರಿ). ೧. ಜೋಡಿಸು; ಅಳವಡಿಸು; ಧರಿಸು; ತೊಡು: ತಮ್ಮ ರಂಭಾಸ್ತಂಭಾಯಮಾನೂರುಸ್ತಂಭಂಗಳೊಳಾಳಿಸಿಯುಂ (ಆದಿಪು. ೮-೨೪ ವ); ವಿಷಮ ವಿಷಯ ಮದೇಭಮನಾಳಿಸಿ ಕಟ್ಟುವಂತೆ (ಸುಕುಮಾ. ೧೧-೮೩ ವ); ಕವಚಮನಾಳಿಸಿ ಪೆಗಲೊಳ್ತವದೊಣೆಯಂ ಬಿಗಿದು (ಪಂರಾಮಾ. ೯-೫೭); ನೊರೆನೆತ್ತರನೀಂಟಿ . . . ಬಲುಗಂಡದ ದಂಡೆಯ ನೊಪ್ಪೆ ಕಟ್ಟಿಕೊಂಡಾಳಿಸಿಯುಟ್ಟು ಪಂದೊವಲನಾಹವದೊಳ್ ನಲಿದಾಡಿಪಾಡಿದರ್ (ಎಕ. VIII, ಸಾಗರ. ೧೫-೫೧; 1218); ಅಭೀಳತರಂಗಳಿಸಿಪ್ಪುವನೊಪ್ಪುವನೇಕ ಕೋಟವಾಜಿಗಳಂ ಆಳಿಸಿ ಜೋಡುಂ ಹಕ್ಕರಿಕೆಗಳಂ . . . ಪೊಱಮಟ್ಟರು ಬಲ್ ರಕ್ಕಸರಾವುತರು (ಕುಮುರಾ. ೮-೨೭).

**ಆಳ್ಗೆಲಸ,** ಆಳುಗೆಲಸ (ನಾ). ಆಳು ಮಾಡಬೇಕಾದ ಕೆಲಸ, —ಸೇವೆ, —ಚಾಕರಿ : ನಿಮ್ಮಯ ಬಸಿಜಬಂದೆವೆಮಗೊರೆವುದಾಳ್ಗೆಲಸಮಂ ಮಾಳ್ಪೆವೆಂದುಸಿರಿ (ಚಬಪು. ೨೪–೨೩). **ಆಳುಗೆಲಸ :** ಆಳುಗೆಲಸಕೆ ಕೆಲಬರರಸನ ಖೇಳಮೇಳಕೆ ಕೆಲರು (ಕುವ್ಯಾಭೀ. ೩–೧೪) ; ಗಾಳಿಯಾಹಾರವಕೊಂಬೆತಿಗಳ ತಂದಾಳುಗೆಲಸಕಿಕ್ಕಿ ಕೊಡುವೆ (ಕುರಾಸಾಂ. ೨೪–೪೪) ; ಆಳುಗೆಲಸಮಾಳ್ಪದಭಿವಂದಿಸುವುದಡಿಗಡಿಗೆ (ನಿಭಾಗ. ೭–೪–೨೦). [ಆಳ್$_3$ + ಕೆಲಸ]

**ಆಳ್ಗೇಡಿ** (ಗು). ನಿರ್ಜನವಾದ ; ನಿರ್ಮಾನುಷವಾದ : ಇಳಿವಗಲ್, ಸುಡುವಿಸಿಲ್, ಆಳ್ಗೇಡಿ ಕಾಡೊಳಲೆದಿರ್ದರುಂ ಕರೆಕರೆದು ಹುಡುಕಿದರು ಸೀತೆಯಂ (ಶ್ರೀರಾಮಾ. ೨೫೭–೭೪೬). [ಆಳ್$_3$ + ಕೇಡು + –ಇ$_3$]

**ಆಳ್ಗೊಳ್,** ಆಳುಗೊಳ್, ಆಳುಗೊಳು (ಕ್ರಿ). ೧. ಆಳಾಗಿ ಮಾಡಿಕೊ; ಶರಣನನ್ನಾಗಿ ಸ್ವೀಕರಿಸು: ನರಲೋಕದೊಳಾಳಲೀಯದೆ ಚೆಂಡಿಕೆವಿಡಿದುದ್ಧರಿಸಲೆಂದಾಳ್ಗೊಂಡ ಗುರುವೆ ಪರಮ ಬಂಧುವೆ ಪ್ರಾಣವೆ (ಬಸರ. ೪–೩೨). ೨. ಅಧೀನಪಡಿಸಿಕೊ ; ಕರಗತಮಾಡಿಕೊ : ತ್ರಿಜಗವನಾಳ್ಗೊಂಡೆಸೆವಂಗಜಂ (ಉದ್ಭಟ. ೭–೧೩) ; ಕೃಷ್ಣನೊಲಿದಾಳ್ಗೊಂಡ ಇಹಪರದ ಧ್ಯೇಯಂಗಳೆಲ್ಲಂ ಬೆಳೆಯುತಿವೆ (ಹೊಂಗಳು. ೩೦–೧೬). **ಆಳುಗೊಳ್ :** ೧. ಧರ್ಮಪುತ್ರನನಾಳುಗೊಂಡನು ಮತ್ಸ್ಯ (ಕುವ್ಯಾಪಿ. ೧–೧೯) ; ಆಳುಗೊಂಡನು ಕೌರವನು ಪರರಾಳುತನವೆಮಗಾಯ್ತು (ಕುವ್ಯಾಭೀ. ೨–೨೫) ; ಈ ಸರಡುಪತ್ರದಲಾಳುಗೊಂಬ ಗಡ ನಮ್ಮನೀ ನರೆದಲೆಯ ಚಾಳಕನೆನುತ್ತ (ಸೌಂದಪು. ೫–೯). **ಆಳುಗೊಳು :** ೧. ಚೋಳರಾಯ ತನ್ನ ಕೆರೆಗೆ ಬಾಳವಾಗಿ ಮಣ್ಣ ಹೊರಿಸಿ ಆಳುಗೊಳಲು ಎನ್ನ ಕಾಡುತಿಹೆಯೊ ಕಾಣೆನು (ಸುಸಾರ. ೭೮–೨). [ಆಳ್$_3$ + ಕೊಳ್$_1$]

**ಆಳ್ತನ,** ಆಳುತನ (ನಾ). ೧. ಆಳಿನ ಕೆಲಸ, —ಸೇವೆ ; ಸೇವಕತನ ; ಭೃತ್ಯತ್ವ : ಅಂತು ದಕ್ಷಿಣದಿಕ್ಪಾಲಪುರಸ್ಸರರವನಿಪತಿಗಳೊಳಾಳ್ತನಮಂ ಪೂಣ್ದು ಸಾರಸರ್ವಸ್ವನಿವೇದನಂಗೆಯ್ದು (ಶಾಂತಿಪು. ೧೧–೬ ವ) ; ಸನ್ಮೂರ್ತಿಗಾನ್ರ್ನೆಟ್ಟನಾಳ್ತನದೊಳ್ನಿಲ್ಲದರ್ (ಕಾದಂಉ. ೧೧೦) ; ಮಹೇಂದ್ರಪ್ರಸನ್ನಕೀರ್ತಿಗಳ್ ಕಿಷ್ಕಿಂಧಪುರಕ್ಕೆ ಪೋಗಿ ಬಲನಾರಾಯಣರಂ ಕಂಡಾಳ್ತನಮಂ ಕೈಕೊಂಡು (ಪಂರಾಮಾ. ೧೧–೫೬ ವ). ೨. ಪೌರುಷ ; ಶೌರ್ಯ ; ಪರಾಕ್ರಮ : ವಿನಯೈಕಜನ್ಮಗೃಹಮಾಳ್ತನವಾಸ್ಪದಮೊಳ್ಪಿನಾಬಿಮಾರ್ಪಿನ ಕಣಿಯೆಂದನುನಯದಿಂ ಕೂರ್ತು ಜಗಜ್ಜನಜಾಲಂ ಪೊಗಟಿ ದುರ್ಗಮಯ್ಯಂ ನೆಗಟ್ದಂ (ಪಂಚತಂ. ೯–೧೦) ; ಕಾಳೆಗದೊಳ್ ತಡಂಗಡಿದು . . . ಮೆಟ್ಟಿ ತಿವಿದಾಳ್ತನವಚ್ಚರಿಯಾಯ್ತು ಧಾತ್ರಿಯೊಳ್ (ಎಕ. VI, ತರೀಕೆ. ೪೫–೨೫ ; 1196) ; ನೀಂ ಪೋಗುತು ಮೆಮ್ಮಾಳ್ತನದಗ್ಗಳಿಕೆಯನೆಮ್ಮಾ ಪಡೆಯ ಪವನನಣಿಯರ ಮೊರೆದು (ರಾಮಾಶ್ವ. ೫೭–೨೩). ೩. ಮನುಷ್ಯಾಕಾರ ; ಮನುಷ್ಯನ ರೂಪ : ಬಾನ್ಗೋಡೆಗೆದುರಿನಾ ಕಲ್ಗೋಡಿನಗ್ರದೊಳ್ ಕಂಡುದೊಂದಾಳ್ತನಂ ಮೆಯ್ಗೊಂಡ ಗೋಳೆಂಬ ತೆರದಿ (ಶ್ರೀರಾಮಾ. ೧೦೪–೧೦೬). ೪. ಯಜಮಾನಿಕೆ : ಮನೆವಾಳ್ತನದೊಳು ಬಲುಬಲು ದಕ್ಷೆ ಅವಳಾಳ್ತನದೊಳೆ ನನ್ನಯ ರಕ್ಷೆ (ಗಣೇಶ. ೬–೫೩). ೫. "ದೊಡ್ಡಸ್ತಿಕೆ" (ಗಂಗಾಮು. ೩೦). **ಆಳುತನ :** ೧. ಒಕ್ಕಲನ್ ಆಳುತನಂಗೆಯೆ ಆನೆಯ ಕೊನ್ದು ಕಾದಿ ×××× ಕೊಣ್ದು ಬಿದ್ದನ್ (ಸೌಇಇ. IX–i, ೧೨–೩ ; 9ನೆಯ ಶತ) ; ಆಳುಗೊಂಡನು ಕೌರವನು ಪರರಾಳುತನವೆಮಗಾಯ್ತು ಪರಸೇವಾಲಘುಸ್ಥಿತರೆಮ್ಮನೇತಕೆ ನುಡಿಸಿದಪೆಯೆಂದ (ಕುವ್ಯಾಭೀ. ೨–೨೫) ; ನಮ್ಮ ಊರಿನಲ್ಲಿ ಮೂರು ಅಂತಸ್ತಿನ ಜನರಿದ್ದರೆಂದು ಧಾರಾಳವಾಗಿ ಹೇಳಬಹುದು. ಒಂದು ಯಜಮಾನಿಕೆ, ಎರಡನೇದು ಆಳುತನ, ಮೂರನೇದು ಇವರಿಬ್ಬರ ದಳ್ಳಾಳಿತನ. ಆಳುತನದ ಗುಂಪೇ ಹೊಲೆಯರು (ಹುಟ್ಟಿಹ. ೬೬). ೨. ಅಲಿಕಲುಗಳು ಸಿಡಿಲಮುಜಿಗಳ ಮೇಲುವಾಯ್ದುವು ಗಡ ಯುಧಿಷ್ಠಿರನಾಳುತನದಲಿ ನಮ್ಮ ಜಜತೆದನು (ಕುವ್ಯಾಕ. ೧೧–೨೬) ; ಆಳುತನವೆನಗಿಲ್ಲ ಸಾಹಸಿಯಲ್ಲ ನಿನ್ನಂತೆ ಓಲಗಿಸಲಾನಜಿಯೆನನ್ಯರನಾಳಿಗೋಳಲೇಕೆ (ನಿಭಾಗ. ೩–೯–೧) ; ಗೌಳರಾವುತರು ಗುರ್ಜರರಾವುತರು ಬಂದರಾಳುತನದ ಮಚ್ಚರದೊಳು (ಕುರಾಸಾಂ. ೧೧–೨೪).

[ಆಳ್$_3$ + –ತನ]

**ಆಳ್ತನಗೊಳ್** (ಕ್ರಿ). ೧. ಸೇವೆಯನ್ನು ಕೈಕೊಳ್ಳು ; ಆಳುತನವನ್ನು ಮಾಡು ; ಚಾಕರಿಮಾಡು. ೨. ಮಾನವ ರೂಪವನ್ನು ಧರಿಸು ; ಆಕಾರವನ್ನು ಪಡೆ : ಶಿವನ ಚಿದ್ಧರ್ಮವೇ ಶರಣರಾಳ್ತನಗೊಂಡು ಶಿವತತ್ತ್ವದನುವ ಭೂಮಿಗೆ ಬಿತ್ತಿದ ಶಿವನೆ ಮಾನುಷ್ಯದಿಂ ಮಾಯೆಯನಿಳಿಕೈದ ಶಿವನ ರೌದ್ರಾವೇಶರಸವೊಂದೆ ಕರುವಾದ (ಕೈಕವ. ೪–೧).

[ಆಳ್ತನ + ಕೊಳ್$_1$]

**ಆಳ್ದ** 'ಆಳ್$_1$' ಪರಾ.

**ಆಳ್ದಟ್ಟು** (ನಾ). ಶೂರರ ಸಮೂಹ ; ಸೈನಿಕರ ಗುಂಪು (?) : ಭೂತಳಕ್ಕೆ ಪರಿವೇಷಂಗೊಂಡು ಬೀಟ್ತುಂದ ಭಾಸ್ಕರನಂತಿರ್ದುದು ಸಿಂಹಚೂಡನ ಶಿರಂ ಪೊಂಬಟ್ಟನಾಳ್ದಟ್ಟನೊಳ್ (ಅನಂಪು. ೧೧–೭೫).

[ಆಳ್$_3$ + ತಟ್ಟು$_4$]

**ಆಳ್ದನಿ** (ನಾ). ಮನುಷ್ಯರ ಕೂಗು : ಚೆಂಗಣಿಗಿಲ ದಿವ್ಯಪರಿಮಳಕೆಜಗುವ ಭೃಂಗವಿಂಡುಗಳ ಝೇಂಕಾರ ಅಂಗಜವನದುರ್ಗಕಟ್ಟಿ ಮೇಲ್ವಾರಿಯ ಪೊಂಗಿದಾಳ್ದನಿಗಳಂತಿಹುವು (ಕಂಸವಿ. ೫–೧೦೨). [ಆಳ್$_3$ + ದನಿ]

**ಆಳ್ದಳ** (ನಾ). ಪದಾತಿ ; ಕಾಲಾಳು ; ಸೈನ್ಯ (ಸ್ಯಾಂಡರ್).

[ಆಳ್$_3$ + ದಳ$_2$ (< ದಟಿ)]

**ಆಳ್ದಾರಿ** (ನಾ). ಕಾಲುದಾರಿ ; ಮನುಷ್ಯರು ಮಾತ್ರ ನಡೆದುಹೋಗಬಹುದಾದ ದಾರಿ (ದಕ. ೬). [ಆಳ್$_3$ + ದಾರಿ$_1$]

**ಆಳ್ದಿತಿ** (ನಾ). ಒಡತಿ ; ಯಜಮಾನಿ : ನೀನೆನಗೆ ದೊರೆಕೊಂಡೆ ನಿನ್ನನೆನ್ನಾಳ್ದಿತಿಯಲ್ಲಿಗೊಪ್ಪಿಸುವೆನಲ್ಲಿಂಮೇಲೆ ಬಿಡುಗೆ ಬಿಡದಿರ್ಕೆ ನಿನಗಾಯಬ್ಬೆಯೊಡೆಯಳೆಂಬುದಂ ಪೇಟ್ದುದುಂ (ಕಾದಂಉ. ೭೪೧).

[ಆಳ್ದ (< ಆಳ್$_1$) + –ಇತಿ]

**ಆಳ್ದೋಱು,** ಆಳುದೋಱು (ಕ್ರಿ). ಪೌರುಷವನ್ನು ತೋರಿಸು ; ಶೌರ್ಯವನ್ನು ಪ್ರಕಟಿಸು : ಆಳ್ದೋಱಿ ತಮತಮಗೆ ಭೂಪಾಲರೈದೆ (ಜೈಮಿಭಾ. ೩೨–೧). **ಆಳುದೋಱು :** ಅವನಿಪತಿಗೆಮ್ಮಾಳುದೋಱುವ ಸವೆದುಬರಲೇಳಿಂಟು ಪದ್ಮವು (ಕೌಶಿರಾ. ೯–೧೨).

[ಆಳ್$_1$ + ತೋಱು (< ತೋಱ್)]

**ಆಳ್ನೆಲ** (ನಾ). ಆಳಿಕೆಗೆ ಒಳಪಟ್ಟ ಭೂಮಿ ; ಅಧೀನವಾದ ನೆಲ : ಆಳವಿಗಳುಂಬವಪ್ಪ ಭುಜಗರ್ವದ ಚೋಳನೃಪಾಳನಂಜಿ ತಲ್ಲಳಿಸೆ ತಗುಳ್ದು ಚೋಳ್ನೆಲನನಾಳ್ನೆಲನಾಗಿರೆ ಮಾಡಿಕೊಂಡ ಹೊಯ್ಸಳನಂ (ಎಕ. XI, ದಾವಣ. ೮೫–೧೩ ; 1143). [ಆಳ್$_3$ + ನೆಲ]

**ಆಳ್ಪ** 'ಆಳುಪ' ನೋ.

**ಆಳ್ವೊತ್ತು** (ಕ್ರಿ). (ಚರ್ಮವನ್ನು) ಎತ್ತು, —ಸುಲಿ (?) : ಬಿಡದೆಡಜಿ ಸೆಣಸಿ ಚುನ್ನಂ ನುಡಿವೀ ಮನ್ನೆಯರ ಬೆನ್ನ ಬಾರಂ ಮಿಡಿಯಿಂ ಪೆಡೆತಲೆವರ ಮಾಳ್ವೊತ್ತುವ ಕಡುಗಲಿ ಶಶಿವಿಶದಕೀರ್ತಿ ಜೂಜಕುಮಾರಂ (ಎಕ. VII, ಶಿಕಾರಿ. ೩೧೧–೩೦ ; 1100 ; ಶಾಪಮುಂ. ೩೩–೧೭೨) ; "ಆಳ್ವೊತ್ತುವ = ? ಎತ್ತುವ" (ಶಾಪಮುಂ. ಕೋಶ). [ಆಳ್$_1$ + ಪೊತ್ತು]

**ಆಳ್ಬಾಳು** (ನಾ). ೧. ಮನುಷ್ಯನ ಬಾಳು, —ಜೀವನ (ಸ್ಯಾಂಡರ್) ೨. ಸೇವಕನ ಹೊಲ (ಸ್ಯಾಂಡರ್).

[ಆಳ್$_3$ + ಬಾಳು$_2$ (< ಬಾಟ್$_2$)]

**ಆಳ್ಕ, ಆಣ್ಮ, ಆಟ್ಮ** (ನಾ). ಒಡೆಯ; ಯಜಮಾನ; ಗಂಡ; ಪ್ರಭು: ವಾರಾಹರೂಪನ್ ಒಡಿಪೊಡಿಸಿ ಅರಮನೆ ಪುಗುವೊರಾ ಅಬ್ಬೆ ಆಳ್ಕನ್ (ಸೌಇಇ. IX–i, ೧೬–೧೯ ; 9ನೆಯ ಶತ) ; ಪರ್ವತಪುತ್ರಿಯಾಳ್ಕ ನೆಜಕೆ ರಕ್ಷಿಪುದೆನ್ನನು (ಉಮಾಶ. ೨೪) ; ಬಿಲ್ಲನೇಜಲು ಗುರುವು ಧನು ರಾಶಿಗೆ ಬರಲು ತಲ್ಲಣವು ಪಿರಿದಕ್ಕು ಕಲ್ಲಮೇಲೆಲ್ಲ ಬೆಳಸಕ್ಕು ಆಳ್ಕರಿಗೆ ತಲ್ಲಣವಕ್ಕು (ಸರ್ವಜ್ಞ. ೧೫೮೮). **ಆಣ್ಮ**: "ಆಣ್ಮಂ, ಎಜೆಯಂ, ಬಲ್ಲಹಂ —ಈ ೩ ಅಧಿಪತಿಗೆ ಪೆಸರ್" (ಕಶಸಾ. ೧೬–೩೨೦) ; "ಆಣ್ಮೆಜೆಯ ಬಲ್ಲಹಂ ವಲ್ಲಭ ತಾನಧಿಪತಿಗೆ ನಾಮುಮಕ್ಕುಂ" (ಕವಿಕಂ. ೧೪೮); ನಿನ್ನಾಣ್ಮ ನುಮಂ ನಿನ್ನ ಮಯ್ಯುನನುಮಂ ನೀನೊಪ್ಪುಗೊಳ್ಳೆಂಬುದುಂ (ಪಂಪಭಾ. ೬–೩೯ ವ) ; ಜಯವಧುಗಾಣ್ಮನಾಗಿಯುಮುಸೌಮ್ಯನೆ (ಶಾಂತಿಪು. ೭–೩೯ ವ) ; ನಮ್ಮಾಣ್ಮನ ಬೆಸನದೀ ವನವ ಕಾದಿಹೆವು (ಸಾಳ್ವಭಾ. ೬–೧೬); ಸೊಲ್ವೆಣ್ಣೆನಾಣ್ಮಂ . . . ಐದೆ (ಭಾವಚಿಂ. ೧–೩೦) ; ನೆಲದಾಣ್ಮನೊಳ ವೋಲಗದೊಳೊಪ್ಪಿದನಾ ಬಲವೈರಿಗೆ ಪಡಿಯೆನಿಸಿ (ಹದಿಬ. ೧–೧೦).

**ಆಟ್ಮ**: ಬಯ್ಯೊರಬ್ಬೆಯ ಆಟ್ಮ (ಎಕ. XVI, ತುಮಕೂ. ೯೩–೨೦ ; 780); ಬಿದ್ದ ಬಗದತ್ತಿ ಅಣಿಗಣ್ಢಕದಗಣಿ ಪೊಕ್ಕ ಅಬ್ಬೆಯ ಆಟ್ಮ ಮೆಚ್ಚಿ ನಾಳ್ಗಣ್ಣನ್ (ಎಇ. XXIV, ೨೬–೧೧ ; 885) ; ಶ್ರೀಮುತ್ತರ ಅತಿರಥಗಣ್ಡ ಪೊಸವೆಣ್ಣೆರಟ್ಮ [ರಾಟ್ಮ] ಬೀಸಿತಪ್ಪದೊನ್ (ಎಕ. XV, ಅರಸೀ. ೨೧೫–೪ ; 890). ℙ 'ಆಟ್ಮ' ಇದು 'ಆಳ್ಕ' ಎಂಬುದರ ಅಪಲಿಖಿತ.

[ಆಳ್$_3$+ –ಮ. / ತಮಿ. ಆಳನ್, ಆಣನ್ = ಗಂಡ; ಮಲ. ಆಣ್ಮ]

**ಆಳ್ಮಂದಿ, ಆಳುಮಂದಿ** (ನಾ). ಮನುಷ್ಯರ ಸಮೂಹ; ಜನರ ಗುಂಪು; ಸೇವಕ ಜನ: ಮುಪ್ಪುದಲೆಯಂತೆ ಕೊಡಲಿಯ ಹತಿಗೆ ಕಂಪಿಸಿದೆ ಕಾಣದೊ ಬೃಹನ್ಮಸ್ತಕಂ ಹಿಗ್ಗುತಿರಲಾಳ್ಮಂದಿ ಕುಗ್ಗುತಿರಲಾ ಮಲೆಯ ಪೆರ್ಮೆ (ಶ್ರೀರಾಮಾ. ೨೯೫–೮೨೬). **ಆಳುಮಂದಿ**: ಆಳು ಮಂದಿಯ ಕಳುಹಿ ಮನದಿ ವಿಶಾಲ ವಿರಹದ ತಾಪದಲಿ . . . ವಿಭವವ ನುಳಿದನಾ ನೃಪತಿ (ನಳಚ. ೨–೪೮). [ಆಳ್$_3$ + ಮಂದಿ]

**ಆಳ್ಮಾಡು, ಆಳುಮಾಡು** (ಕ್ರಿ). ೧. ಆಳಾಗಿ ಮಾಡು; ಸೇವಕ ನನ್ನಾಗಿ ಮಾಡು: ನಿನ್ನನಾಂ ನಂಬಿಸಿ ನುಡಿದಾಗ್ರಹದಿಂ ತಂದೆಮ್ಮರ ಸಂಗಾಳ್ಮಾಡಿದೊಡೆ (ಪಂಚತಂ. ೧೩೪–೧೬). ೨. ಸೇವೆಮಾಡು ; ಸೇವಕ ನಂತೆ ವರ್ತಿಸು: ಪೊಡರ್ವ ಮಂಡಳಿಕರ ಮನದಂತೆ ಕರಮುಸಿದಾದ ಪರಾಕ್ರಮಧವಳನ ಮಧ್ಯಪ್ರದೇಶಂ ನಾರಾಯಣಂ ತನ್ನಾಳ್ದಂಮಾಡಿ ತಾನಾಳ್ಮಾಡಿಯುಂ ತಾನಳ್ಮಾಡೆಯುಂ ಬರ್ದೆಯರ ಮನಮನಳ್ಮಾಡಿಸು ವಂತಾದುದು (ಪಂಪಭಾ. ೨–೩೯ ವ) ; ಜಿನಮುನಿಗಳಂ ಸಾರಲುಂ . . . ಸದ್ದೃಷ್ಟಿಗಳಪ್ಪರಾಳ್ಮಾಡಲುಂ ಬಯಕೆ ತಿಣ್ಣಮಾಗೆ (ಧರ್ಮಾಮೃ. ೮–೯).

**ಆಳುಮಾಡು**: ೧. ಚೋಳನನಾಳುಮಾಡುವುದು ಗೂರ್ಜ್ಜರರಂ ಸಲೆ ತದ್ದಿರ್ಕುಂ ಕರಂ ಲಾಳನನಾಳಿಮಾಡುವುದು . . . ಕೊಜುಗೋಡ ಕೋಟೆ ತಾಂ (ಸೌಇಇ. IX–i, ೨೯೬–೧೪ ; 1176). [ಆಳ್$_3$ + ಮಾಡು$_1$]

**ಆಳ್ಮೆ, ಅಣ್ಮೆ$_2$** (ನಾ). ಪೌರುಷ ; ಸಾಮರ್ಥ್ಯ; ಶಕ್ತಿ: ಕಳುಹಿದೆನು ನಾನದನರಿತೆ ನಿನ್ನನವರಿರ್ಪೆಡೆಗೆ ತಿಳಿಯಲವರಾಳ್ಮೆಯಂ ಕೈತವದೊಳವನಿ ಜಾತೆಯನೆಂತುಟಾದೊಡಂ ಕವರ್ತೆರ್ಗೊಳ್ (ಶ್ರೀರಾಮಾ. ೨೧೫–೧೨೯). **ಆಣ್ಮೆ$_2$**: "ಆಣ್ಮೆಯು ಪರಾಕ್ರಮದಿ" (ಕಶರ. ೧೧).

[ಆಳ್$_3$+ –ಮೆ. / ತಮಿ. ಆಣ್ಮೈ$_2$]

**ಆಳ್ಮೊಟ್ಟೆ** (ನಾ). ಒಬ್ಬ ಆಳು ಹೊರಬಹುದಾದ ಹೊರೆ; ಆಳಿನ ಹೊರೆ (ದಕ. ೬). [ಆಳ್$_3$ + ಮೊಟ್ಟೆ$_2$]

**ಆಳ್ಪಡೆ** (ನಾ). ಪದಾತಿಸೈನ್ಯ: ಎಡಬಲಗಡೆಗಳೊಳ್ ಆಳ್ಪಡೆ ಕೋಶಿ ವಡೆಗಳನಿಟ್ಟು ವಿಭೀಷಣನ ರಕ್ಕಸವಡೆಯದು ಪಗೆವಡೆಯಂ ಮುಂಗಡೆ ಯೊಳ್ ತಾಂಗೆ (ಅದ್ಭುತ. ೪೫–೫). [ಆಳ್$_3$ + ಪಡೆ$_2$]

**ಆಳ್ವಬ್ಬೆ** (ನಾ). ಒಬ್ಬಾಕೆಯ ಹೆಸರು: ಅಲವಾವುನ ಹೆಣ್ಡತಿ ಆಳ್ವಬ್ಬೆ ಕಟ್ಟಿಸಿದ ಕೆಜೆಯನ್ (ಎಕ. X, ಚಿಕ್ಕಬ. ೩–೬ ; 953). [ಆಳ್$_1$ + ಅಬ್ಬೆ$_1$]

**ಆಳ್ವನ್** 'ಆಳ್$_1$' ಪರಾ.

**ಆಳ್ವರ** (ನಾ). ೧. ಒಬ್ಬ ರಾಜನ ಹೆಸರು: ಚೀರನದೆ ಹವ್ವನೆ ಪಾಜಿ ದುದಂಧ್ರಸುಬ್ಬೆಗಂಬಡುತವೆ ಕಂದಿದಂ ಕುಸಿದನಾಳ್ವರನಾಲಿಸಿ ಪೊಯ್ವ ಭೇರಿಯಂ (ಎಕ. IV, ಹುಣಸೂ. ೧೩೭–೨೦ ; 1162). ೨. ಆಳುವವರು ; ರಾಜರು: ಆಳ್ವರನೆಂದೊಡಾಳ್ವರನಾಳ್ವೆಸಗೆಯ್ವಿಸದನಂನ್ಯಭೂಮಿಪರಂ ಬಾಳ್ವೆರಸೆಯ್ದೆ ಬಾಳ್ವೆರಸು ಬಾಳ್ದಲೆಗೊಂಡ . . . ಕುನ್ತಳೇಶನೊಳು (ಎಕ. XI, ದಾವಣ. ೩–೭ ; 1121). [?]

**ಆಳ್ವರಿ** 'ಆಳ್ವೇರಿ' ನೋ.

**ಆಳ್ವರೆ** 'ಆಳ್ವೇರಿ' ನೋ.

**ಆಳ್ವಲ** (ನಾ). ೧. ಸೈನಿಕರ ಅಥವಾ ಆಳುಗಳ ಬಲ: ಆಳ್ವಲದ ತೋಳ್ವಲದ ಬಾಳ್ವಲದ ಗರ್ವದಿಂದುರ್ವಿ ಮಲೆದ ಗರ್ವಿತೋರ್ವೀಶಬಳ ಮನೆಟ್ಟಿಬಿಟ್ಟ (ಪುಷ್ಪಪು. ೫–೫೧ ವ) ; ಆಳ್ವಲ, ತೋಳ್ವಲ (ಶಮದ. ೨೯೮ ಪ್ರಯೋ). ೨. ಚತುರಂಗಬಲದಲ್ಲಿ ಒಂದು ಭಾಗ; ಪದಾತಿ; ಕಾಲಾಳು: ಆಳ್ವಲಮುಳ್ಳಡಶ್ವಬಲಮಿಲ್ಲ ಭಟಾಶ್ವಬಲಂಗಳುಳ್ಳಡಂ ತೋಳ್ವಲಮಿಲ್ಲ ಭೃತ್ಯಹಯದೋರ್ಬ್ಬಲಮುಳ್ಳಡಮೇರ್ವ್ವಲಂಗಳಿಲ್ಲಾಳ್ವೆ ಸಗೆಯ್ಯದೇಕೆ (ಎಕ. VII, ಶಿಕಾರಿ. ೧೩೬–೨೬ ; 1068). [ಆಳ್$_3$ + ಬಲ]

**ಆಳ್ವಲ್ಮೆ** (ನಾ). ಮನುಷ್ಯನ ಸಾಮರ್ಥ್ಯ, —ಶಕ್ತಿ: ಆಳ್ವಲ್ಮೆ, ತೋಳ್ವಲ್ಮೆ (ಶಮದ. ೬೭ ಪ್ರಯೋ). [ಆಳ್$_3$ + ಬಲ್ಮೆ]

**ಆಳ್ವಾರ್** 'ಆಟ್ವಾರ್' ನೋ.

**ಆಳ್ವಾರು** 'ಆಟ್ವಾರ್' ನೋ.

**ಆಳ್ವಾಟ್ಕೆ** (ನಾ). ಆಳಿನ ಬಾಳು ; ಸೇವಕನ ಜೀವನ: ಆಳ್ವರಸನೆಜಕ ದಿಂದಮೆ ಆಳ್ವಾಟ್ಕೆಗೆ ಬರ್ಕುಮೆಂಬ ನಾಣ್ನುಡಿ (ಚಿಕವಿ. ೬–೨೭೩).

[ಆಳ್$_3$ + ಬಾಟ್ಕೆ]

**ಆಳ್ವಿಕೆ** 'ಆಳ್ಕೆ' ನೋ.

**ಆಳ್ವೆ** (ನಾ). ಸೇವಕತನ; ಕಿಂಕರತ್ವ: ಈ ಬೆಸಕಣ್ಣ ನೀನೆ ಯಾಂ ತಮ್ಮನೆ ನಾಳಿನಾಳ್ವೆಯನಗಪ್ಪೊಡೆ ನೀನೆನಗತ್ತಲಗ್ಗಮೆಂದಾಮ್ಮ ಗುಟ್ಟಿಂದು ನಿಮ್ಮಡಿಗೆ ಸೂಜಿದಜಿಂ ಬೆಸಸೆನ್ನನನ್ನೆಗಂ (ಶಾಂತಿಪು. ೪–೨).

[ಆಳ್$_3$ + –ವೆ]

**ಆಳ್ವೆರಿ** 'ಆಳ್ವೇರಿ' ನೋ.

**ಆಳ್ವೆರೆ** 'ಆಳ್ವೇರಿ' ನೋ.

**ಆಳ್ವೆಸ, ಆಳುವೆಸ** (ನಾ). ಆಳಿನ ಕೆಲಸ; ಊಳಿಗ; ಸೇವೆ: ವೀರನತಿ ಬಲಂ ನಿನಗಾಳ್ವೆಸಕೆಂದಿರ್ದನಲ್ತೆ ಧೃಷ್ಟದ್ಯುಮ್ನಂ (ಪಂಪಭಾ. ೧೧–೫) ; ಶತ್ರುಮಂಡಲಿಕ ಮಂಡಳಿಯಂ . . . ಆಳ್ವೆಸಕೆದಂದು (ಎಕ. XI, ದಾವಣ. ೪೨–೧೮ ; 1162). **ಆಳುವೆಸ**: ಪದಕೆಜಗಿದ ಮೋಹನನಾದೀಶ್ವರ ಬೆದಜ ದಿರೆನುತಭಯವನು ಮುದದೀವುತಥಟನು ನೀನಾಳುವೆಸಮಾಡಿ ಹೋಗೆ ನಲು (ತ್ರಿಪುಸಾಂ. ೨೩–೨೫೮). [ಆಳ್$_3$ + ಬೆಸ]

**ಆಳ್ವೆಸಂಗೆಯ್, ಆಳ್ವೆಸಕೆಯ್, ಆಳ್ವೆಸಗೆಯ್** (ಕ್ರಿ). ಸೇವೆಮಾಡು; ಊಳಿಗಮಾಡು; ಚಾಕರಿಮಾಡು: ನರರುಂ ಖೇಚರರುಂ ಸುರ ಪ್ರತತಿಯುಂ ಪೂಣ್ದಾಳ್ವೆಸಂಗೆಯ್ವರ್ (ಧರ್ಮಾಮೃ. ೩–೨೩೨) ; ಆತಂಗ ಗಿದಾವಾವಾಳ್ವೆಸಂಗೆಯ್ದಪೆನೆ (ಜಗವಿ. ೬–೩೯). **ಆಳ್ವೆಸಕೆಯ್**. 'ಆಳ್ವೆಸಕೆಯ್ಸು' ಪರಾ. **ಆಳ್ವೆಸಗೆಯ್**: ತಮಿಸ್ರಗುಹಾಕೂಟಸ್ಥಿತನಂ ನೀನೆನ್ನನಾಳ್ವುದಾಳ್ವೆಸಗೆಯ್ವೆಂ (ಆದಿಪು. ೧೩–೨೯) ; ಕೇರಳ ಕಳಿಂಗ ಸಿಂಧು ವಿಷಯಾಧಿಪರಾಳ್ವೆಸಗೆಯ್ಯೆ ಧಾತ್ರಿಯಂ ಲೀಲೆಯಿನಾಳ್ದು (ಕಇ. I, ೩೦–೧೨ ; 1222). [ಆಳ್ವೆಸ + ಕೆಯ್$_1$]

**ಆಳ್ವಿಸಂಗೊಳ್** (ಕ್ರಿ). ಸೇವೆಯನ್ನು ಕೈಕೊಳ್ಳು; ಊಳಿಗಮಾಡು : ಈ ನೇಮಂಗಂಡಾಕ್ಷಣದೆ ಬಂದಾಳ್ವಿಸಂಗೊಂಡು ಬಾೞ್ವುದೆಂದೊಡೆ ಕೇಳ್ದು ಕೆಳದರ್ (ಶಾಂತೀಶ್ವ. ೧೫–೧೧೫ ವ).
[ಆಳ್ವಿಸ + ಕೊಳ್$_1$]

**ಆಳ್ವಿಸಕೆಯ್** 'ಆಳ್ವಿಸಂಗೆಯ್' ನೋ.

**ಆಳ್ವಿಸಕೆಯ್ಸು, ಆಳ್ವಿಸಗೆಯ್ಸು** (ಕ್ರಿ). ಆಳಾಗಿ ಮಾಡಿಕೊ; ಸೇವೆಯನ್ನು ಮಾಡಿಸು: ಗುಣನಿಧಿ ನಂದಿವರ್ಧನನನಾಡುವನಾಳ್ವಿಸಕೆಯ್ಸಿ ವಿಶ್ವಧಾರಿಣಿಯನವಜ್ಞೆಗೆಯ್ಯದೆ (ಶಾಂತಿಪು. ೯–೧೦೪); ನಮ್ಮನ್ನೆವರ ನಿನ್ನಾಳ್ವಿಸಕೆಯ್ಸಿಕೊಳ್ (ಗದಾಯು. ೭–೪೪); ಅನಿಮಿಷರುಳ್ಳುದಂ ಕವರ್ದು ಭೂಪರನಾಳ್ವಿಸಕೆಯ್ಸಿಕೊಳ್ವಜೇಯನಂ . . . ತಾರಕವೀರನಂ (ಜಗವಿ.೧೮–೩೪). **ಆಳ್ವಿಸಗೆಯ್ಸು** : ಆಳ್ವರನೆಂದೊಡಾಳ್ವರ[ನ]ನಾಳ್ವಿಸಗೆಯ್ಸಿದನ್ . . . ಕುನ್ತಳೇಶನೊಳ್ (ಎಕ. XI, ದಾವಣ. ೩–೭ ; 1121).
[ಆಳ್ವಿಸ + ಕೆಯ್ಸು]

**ಆಳ್ವಿಸಗೆಯ್** 'ಆಳ್ವಿಸಂಗೆಯ್' ನೋ.

**ಆಳ್ವಿಸಗೆಯ್ಸು** 'ಆಳ್ವಿಸಕೆಯ್ಸು' ನೋ.

**ಆಳ್ವೇರಿ,** ಆಳುವೇರಿ, ಆಳ್ವರಿ, ಆಳ್ವರೆ, ಆಳ್ವೆರಿ, ಆಳ್ವೆರೆ (ನಾ). **೧.** ಕೋಟೆಯ ಸುತ್ತಣ ಗೋಡೆ; ಕೋಟೆಯ ಎತ್ತರವಾದ ಗೋಡೆ: ಇಂದ್ರಿಯಂಗಳೆಂಬ ಕೊತ್ತಲಂ ನಿರ್ಮಿಸಿ ಆಶೆಯೆಂಬಾಳ್ವೇರಿಯಂ ಸೃಜಿಸಿ (ವಚಶಾ. II, ೧೪೧); ಅಂಬರಂಬರಂ ಬೆಳೆದ ಚಿನ್ನರನ್ನದ ಕೋಟೆಯಿಂ ಪವಳದಾಳ್ವೇರಿಯಿಂ ಮಾಣಿಕ್ಯದ ತೆನೆಗಳಿಂ (ಧರ್ಮಪ. ೧–೪೮ ವ); ದೇಶಾಧಿಪ ಕೃಷ್ಣರಾಯರಿಗೆ ಖಳರಿಂದ ಮೋಸವ ಬರಗುಡೆನೆಂದು ಶೇಷ ಮಂಡಳಿಸಿದಂದದಿ ವಜ್ರದಾಳ್ವೇರಿ ಲೇಸಾದುದೇವಣ್ಣಿಸುವೆನು (ಮೋಹತ. ೩–೮); ಆಳ್ವೇರಿ ನೆಲಗಟ್ಟಗುೞ್ಗಳ್ ನಾಗಭುವನದಿಂ ನಾಕಲೋಕಂಬರಂ ಮಿಱು ಬಳೆದ ಕೋಂಟೆ(ಚಿಕವಂ.೪–೧೦). **೨.** ಕೋಟೆಯ ತೆನೆಯ ಹಿಂಬದಿಯಲ್ಲಿ ಸುತ್ತಲೂ ಓಡಾಡಲು ಮಾಡಿರುವ ದಾರಿ. **ಆಳುವೇರಿ** : **೧.** "ಜಯಃ, ವಪ್ರಃ – ಈ ೨ ಆಳುವೇರಿಯ ಹೆಸರು" (ನಾಚಿರಾ. ೬); ಅಂಗಕೋಟೆ ಭುಜ ಆಳುವೇರಿ ತಲೆ ತೆನೆ ಕಣ್ಣು ಅಂಬುಗಂಡಿ ಕಾಡುವ ಅರಸು ಅಸುರಾಜ (ಕಲ್ಯಾಶಾಂ. ೪೦); ಬೀಳುತಿರ್ದುವು ಗಿರಿಗಳಟ್ಟಳೆಯಾಳುವೇರಿಯ ಮೇಲೆ ತೆನೆಗಳ ಸಾಲ ಸರಿಸದ ಸಬಳ ನೆಗಹುತ್ತಿರ್ದವರಿಬಲವ (ತೊರರಾ. ೬–೧೭–೪); ಊರ ಹೆಬ್ಬಾಗಿಲಿಕ್ಕಿತು ತಮ್ಮ ಪಡೆಯಾಳುವೇರಿಯ ಹತ್ತಿತುಬ್ಬಿನೊಳು (ಭರಚ. ೫೬–೩೩). **ಆಳ್ವರಿ** : **೧.** ಪುರವೀಥೀಲತೆಗಳ್ ಕುಡಿವರಿದಪುವೆನೆ ಮುಂದೆ ತೆಱಪುವಡೆಯದೆ ಸುತ್ತುಂ ಪರಿವಡೆದುದು ಪುರಜನಮಾಳ್ವರಿಗಳ ಕೊತ್ತಳದ ಮದಿಲಮಾಡದ ಮೇಲಂ (ವರ್ಧಪು. ೫–೫೨); ಅರುತ್ತೆ ಕೋಟೆಯೊಳಾಳ್ವರಿಯ ಮೇಲೆ ಸೇನೆಯಂ ನೆರೆಯಿಸಿ ಬಳಸುತ (ಬಸವು. ೧೬–೧೪); ತೊಳಗಿದುದಿಂತು . . . ಇಂದ್ರಮಣಿಯಾಳ್ವರಿ ಬಜ್ಜರಗೊತ್ತಳಂಗಳಗ್ಗಳಿಸಿರೆಪೆರ್ಮೆವೆತ್ತು ಪುರವೈರಿಪುರಂ (ಶಬಶಂ. ೧–೫೪). **ಆಳ್ವರೆ** : **೧.** ಅರಿಬಳ ಪ್ರಹರಣನಿವಾರಂಗಳಪ್ಪಾಳ್ವರೆಯ ತುಱುಗಲಂ (ಪುಷ್ಪಪು. ೭–೬೯ ವ). **ಆಳ್ವೆರಿ** : **೧.** ಬಗೆಗೊಂಡುಂ ದೇಸೆವೆತ್ತಾಳ್ವೆರಿಯ ತುಱುಗಲಿಂ . . . ಕರಮೆಸೆಗುಂ ವಿಶ್ರುತೋತ್ತುಂಗ ವಪ್ರಂ (ಸುಕುಮಾ. ೧೦–೫೭); ಸೊಗಯಿಪಾಳ್ವೆ[ಪಾಠಾಂ. ಳ್ವ]ರಿ ಡೆಂಕಣಿ ಸಾರಮಾಗಿಯಗ್ಗಳಿಸುವ ಗೋಪುರಂ ಪುಲಿಮೊಗಂ ಮೆಱೆಗುಂ ಪುರದೊಳ್ (ಗಿರಿಕ. ೨–೭೯). **ಆಳ್ವೆರೆ** : **೧.** ಪುದಿದಿರ್ದಟ್ಟಳೆ ಪೆಚ್ಚಿದಾಳ್ವೆಱೆ [ರೆ] ಯಗುರ್ವಾಗಿರ್ದ ಮೇಲ್ಗೊತ್ತಳಂ (ಎಕ. V, ಅರಸೀ. ೫–೧೧ ; 1194).

[ಆಳ್$_3$ + ಪರಿ. / **ತಮಿ.** ಅಳ್ವಾರಿ = ಕೆರೆಯ ಏರಿಯ ಒಳಭಾಗದ ದಾರಿ ?]

**ಆಳ್ವೇಲಿ** (ನಾ). ಮನುಷ್ಯರೇ ನಿಂತುಕೊಂಡಿರುವುದರಿಂದ ಆಗಿರುವ ಬೇಲಿ: ಸಿದ್ಧ ಖೇಚರರೆ ತಾಮಾಳ್ವೇಲಿ[ಪಾಠಾಂ. ರಿ]ಯಾಗಿಂತು ನಿಚ್ಚಲು ಮೋರಂತಿರೆ ಕಾವರೀ ದೊರೆತು ಕಾಪೀ ನಂದನಕ್ಕಿಂದ್ರನಾ (ಪಂಪಭಾ. ೫–೮೧). [ಆಳ್$_3$ + ಬೇಲಿ]

**ಆಳ್ಯೊಂ** 'ಆಳ್$_1$' ಪರಾ.

**ಆಳ್ಸಿರಿ** (ನಾ). ಮನುಷ್ಯನ ಸಂಪತ್ತು : ಆಳ್ಸಿರಿಗೆ ಕಱುಬುವುದು ದೈವಂ (ಅಶ್ವತ್ಥಾ. ೪೧–೨೨). [ಆಳ್$_3$ + ಸಿರಿ]

**ಆಱ್**, ಆರು$_3$, ಆಱು$_2$ (ಕ್ರಿ). **೧.** ಸಮರ್ಥವಾಗು; ಶಕ್ತವಾಗು; ಆರ್ತ (ಭೂತಕೃ); ಆಪ, ಆರ್ಪ (ಭವಿಕೃ): ಪಾಸುಗಿಯುಮುಱಿಯಲಾಱದೆ ಬೇಸಱುಗುಂ ದೇಶಿ ಬೇಱೆವೇಱಪ್ಪುದಱಿಂ (ಕವಿರಾ. ೧–೪೬); ಎನ್ನ ಗೆಲಲ್ ವಜ್ರಗಿರಿಯನಾರ್ಕುಮೆ ವಜ್ರಂ (ಆದಿಪು. ೧೪–೨೯); ಇಱಿಯಲ್ಕಣ್ಮುವರೀಯುಲಾಱರರೆಬರ್ (ಎಕ. II, ೧೩೩–೧೫; 982); ಗೆಲಲಾರ್ಪೊಡಿಱಿದು ಗೆಲ್ವುದು ಗೆಲಲಾಱದೊಡಣ್ಮಿಸಾವುದಾಳ್ಗಿನಿತೆ ಗುಣಂ (ಗದಾಯು. ೨–೨೧); ಚತುರ್ದಶಿಯೊಳಿರ್ಪುದುಪವಾಸಮನಾಱದೊಡೇಕಭುಕ್ತಮಂ ಮಾೞ್ಪುದು (ಅನಂಪು. ೧೦–೭೧); ದೇವಂಗಾಱದೆ ಧರ್ಮಿಯಂ ಬಡಿದರ್ (ಪುಷ್ಪಪು. ೧೨–೮೬); ಕೃಷ್ಣರಾಯನ ಕರುಣಕವಚವನೊಡೆಯಲಾಪವೆ ಎಮ್ಮ ಕೈದುಗಳು (ಕುಮ್ಯಾದ್ರೋ. ೪–೮). **೨.** ತಾಳಿಕೊಳ್ಳು; ಸೈರಿಸು; ಸಹಿಸು : ಶೀತಕ್ಕಾಱದಳ್ಕಿ (ಕಾವ್ಯಸಾ. ೬೯೪ ಶೂದ್ರಕ); ಇಲಿಯ ಕಾಟಕ್ಕಾಱದೆ ಮಠಮಂ ಬಿಸುಟು ಪೋಗಲೇಂ (ಪಂಚತಂ. ೩೦೩–೨೩); ಮಹಾರಥರೆಸುಗೆಯನು ನೀನೆಂತು ಸೈರಿಸಲಾಪೆ (ಕುಮ್ಯಾದ್ರೋ. ೪–೩೬). **ಆರು$_3$** : **೧.** ಇವಳು ಪ್ರೀತಿಸಿದ ರೀತಿಯನ್ನಂತೂ ಹೇಳಲೇ ಆರೆ (ನಡೆದಾ. II, ೯೪೨); ನುಡಿಯಲು ಆರಳು ನಿಲ್ಲಲು ಆರಳು (ಕವಿಸೋ. ೫೫–೧೩). **ಆಱು$_2$** : **೧.** "ಆಱು – ನಿರ್ವ್ರವೇ, ಸಮರ್ಥತ್ವೇ ಚ" (ಶಮುಧಾ).

**ಆರ್ಪಶಕ್ತಿ** = ಆದಷ್ಟು ಶಕ್ತಿ; ಶಕ್ತ್ಯನುಸಾರ: ಅಲ್ಲಿಗೆತ್ತಾನುಂ ಬಂದಿರಪ್ಪೊಡೆನ್ನಾರ್ಪಶಕ್ತಿಯಿಂ ಭಕ್ತಿಗೆಯ್ವೆನೆಂದು ಗೋಲಾಂಗೂಲಂ ಪೇೞ್ದು ಪೋಪುದುಂ (ಪಂಚತಂ. ೧೧೦–೪).

[**ದೇ** ‖ **ತಮಿ. ಮಲ.** ಆಱು ; **ಕೊಡ.** ಆತ್ ; **ತೆಲು.** ಆಂತು, ಆತು]

**ಆಱಕ್ಕರ** (ನಾ). ಆರು ಅಕ್ಷರ; 'ಓಂ ನಮಃ ಶಿವಾಯ' ಎಂಬ ಮಂತ್ರ; ಷಡಕ್ಷರೀ ಮಂತ್ರ: ಭಕ್ತಿಗೆರಡಕ್ಕರವು ಮುಕ್ತಿಗೆರಡಕ್ಕರವು ಭಕ್ತಿಯಿಂ ಮುಕ್ತಿ ಪಡೆಯುವರೆ ಬಿಡದೆ ಆಱಕ್ಕರವ ಹೇಳು (ಸರ್ವಜ್ಞ. ೩೦೫). [ಆಱು$_3$ + ಅಕ್ಕರ$_2$]

**ಆಱಟ** 'ಆಱಾಟ$_2$' ನೋ.

**ಆಱಡಿ$_1$**, ಆರಡಿ$_1$ (ನಾ). **೧.** ಆರು ಕಾಲುಗಳುಳ್ಳ ಕೀಟ; ದುಂಬಿ; ಗುಂಗೀಹುಳು; ಭ್ರಮರ: "ಆಱಡಿ – ತುಂಬಿ" (ಶಮುದ. ಪರಿ. ೨); "ಅಱಡಿಯೆಂದು ಷಟ್ಪದಂ" (ಕರ್ಣಾನಿ. ೫೮೯); ಕೋಕಮುಳಕಾನೀಕಂಗಳಂ ಸೊರ್ಕಿದಾಱಡಿಗೆತ್ತಾಱಡಿ ಸುತ್ತುತುಂ ಬರೆ ಬನಂ ಬರ್ಪಂತೆ ಬಂದಾಕೆಗಳ್ (ಪಂಪಭಾ. ೭–೮೬); ಇಡಿಕಿಱಿದಿಹ ಪುಷ್ಪದೊಳು ಗಂಧವಿರಲಾಱಡಿ ತುಡುಕುವುದೆಂದು ನೆಲದೆ ನಿಡುವೇಱನೊಳು ಪರಿಮಳವೆತ್ತು ರಂಜಿಪ ಮುಡಿವಾಳವಸರವೊಪ್ಪಿದುವು (ಮೋಹತ. ೩–೧೬); ವನಜದಲರ ನುಳಿದಾಱಡಿಗೆ ಬೊಬ್ಬುಳಿಯ ಪೂವಿನೊಳ್ ಮಧುವುಂಟೆ (ಜೈಮಿಭಾ. ೧೦–೧೨); ಆಱಡಿ ಪಾದರಿಯೊಳ್ ಪಾದರಿ ಬನದೊಳಲ್ಲದಿಲ್ಲ (ರಾಮಾಶ್ವ. ೮–೨). **೨.** [ವೀಶೈ] ಆರು ಮೆಟ್ಟಿಲು; ಷಟ್‌ಸ್ಥಲಭಾವ. 'ಆಱಡಿಗೊಳ್$_2$' ಪರಾ. **ಆರಡಿ$_1$** : **೧.** "ಆರಡಿಯೆನಲ್ ಭ್ರಮರ" (ಕಶರ. ೧೧); ಝುಂಕಾರದಿಂ ಕಾದಲರ್ಗುಬ್ಬೆಗವನೊಡರಿಸುತ್ತಾರಡಿಗಳು (ಶೀಷರಾ. ೧೬–೧೭). [ಆಱು$_3$ + ಅಡಿ$_1$]

**ಆಱಡಿ₂, ಆರಡಿ₂** (ನಾ). ೧. ಸುಲಿಗೆ; ದರೋಡೆ (?) : ಬೆನ್ನಿಯುಂ ಕಳಚುವಱ[ಡಿ]ಯುಮಾಗಳಿದನೆ ಕಾದಿ ತನ್ನ ನಾಳ್ದಾತ ಸಯೆ (ಸೌಇಇ. XI-i, ೧೧-೭ ; 865) ; ಆಱಡಿ ಬಂದಿ ಠಕ್ಕು ಕಳವೊಟ್ಟಜೆ ತಾಂ ಪರಿ ಮುತ್ತು ಡಾವರಂ ಸೂಱೆ ನಿರೋಧ ನಿಗ್ರಹಮುಪದ್ರವಮಾಯಿಲ ಮೊತ್ತು ಜೊತ್ತು ಮೇಲೇಱೆಕೊಳಗೇಱು ದೂಱುಮಱವೊಳ್ನುಡಿ ವಂಚನೆಯೆಂಬುಪಾಯಮುಮಂ ಪಾಱಿಸಿ ಧರ್ಮಮಂ ನಿಱಿಸಿ ಪಾಲಿಸವೇಳ್ಪುದು ದೇಶಮುಂ ನೃಪಂ (ಸೂಕ್ತಿಸು. ೧೬-೮) ; ಬಱನಿಲ್ಲಾಱಡಿಯಿಲ್ಲ ಕಳ್ಳರ ಭಯಂ ಮುನ್ನಿಲ್ಲ (ಬಾಧಪು. ೩-೭). ೨. ಬಾಧೆ ; ಹಿಂಸೆ; ಕಾಟ; ತೊಂದರೆ: ಅಬ್ಜದೊಳಾಱಡಿ ವರಕುಚಯುಗ್ಮದೊಳಲ್ಲದೆ ಕಠಿಣ ವೃತ್ತಿಯಿಲ್ಲಾ ನಾಡೊಳ್ (ಧರ್ಮಪ. ೧-೩೮) ; ವಿರಹದೊಳೀಕೆಗಕ್ಕ ಬಿಸಜಂ ವಿಷಜಂ . . . ಹಂಸೆ ಹಿಂಸೆ ಮೊರೆವಾಱಡಿಯಾಱಡಿ ತಿಂಗಳಿಂಗಳಂ (ಗಿರಿಕ. ೪-೧೪೧) ; ಲಂಚಂ ಕವರ್ತೆ ಸೆಱೆ ಕೋಳಿಂಚೆ ಬರಂ ಪಸವು ಮಾರಿ ಬಂದೀಗ್ರಹಣಂ ಮಂಚಲ್ ಕಳವಾಱಡಿ ಭಯಸಂಚಯಮೆಂಬವಱ ಪೆಸರುಮಿಲ್ಲಾ ನಾಡೊಳ್ (ಪುಷ್ಪಪು. ೨-೫) ; ನೆತ್ತಿ ಕಣ್ಣಾಯ್ತು ಧಮುತೆಗೆ ನಗೆಯೊತ್ತಿತಾಱಡಿ ಸುಜನಮಾರ್ಗವ ಕೆತ್ತುದಟಮುಟವೀ ಸುಯೋಧನ ಸೌಮನಸ್ಯದಲಿ (ಕುವ್ಯಾಅ. ಓರಿಇ. ೨೨-೬೯) ; ಜನಪನಾಱಡಿಯನಾನೆಯ ದೊಂದು ತೊಂಡ ಗುರುವಿನ ದುರಾಚಾರಮಂ ಮಾಣಿಸಲ್ಬಲ್ಲರೇ (ಸಮ್ಯಕೌ. ೨-೭೫) ; ಆಱಡಿಗಳಳಿಯೊಳು ಜಳದಿ ಭಂಗ ಕನಿಷ್ಠವಂಗುಲಿ ಗಳೊಳಗಲ್ಲದೆ ಕುಂತಳಭೂಮಿಯೊಳು ಕಾಣಿಸವು (ಶಂಕದಾ. ೧-೪೨) ; ಅವರ ಜಾಣ್ನುಡಿ ವಿಟಜನಂಗಳಾಱಡಿ (ಭಿಕ್ಷಾಚ. ೨-೧೪). ೩. ದ್ವೇಷ ; ಹಗೆತನ. 'ಆಱಡಿಕಾಱ' ಪರಾ. **ಆರಡಿ₂** : ೧. ಹುಸಿ ಕಳವು ಡಂಭಕವು ನುಸುಳು ಆರಡಿ ತಳ್ಪಿ (ಸುಸಾರ. ೧೨) ; ಆರಡಿಗಳುಂಟು ಪಗಲಲರಿನಲ್ಲಿ (ರುಕ್ಮಾಂಗ. ೪-೧೯).

[ದೇ. ‖ ತಮಿ. ತೆಲು. ಆಱಡಿ = ನಿಂದೆ, ಹಾನಿ, ಭಂಗ, ದುಃಖ]

**ಆಱಡಿ₃** (ನಾ). ಒಂದು ಊರಿನ ಹೆಸರು (?) : ಆದಿವಾರದಲ್ಲೂ ಕಂದಳಿಯ ಹೊಂಗಗೌಡನಾಱಡಿ ದೇಸಿಗಾವುಂಡನ ಆಳು ಯುದ್ಧದಲು ಶಿವಲೋಕಕೆ ಸಂದ (ಮೈಆರಿ. ೧೯೨೮ ; ೮೪-೨ ; ?).

[ಆಱು ? + ಅಡಿ ?]

**ಆಱಡಿಕಾಱ** (ನಾ). ೧. ಹಗೆ ; ಶತ್ರು : "ಪರಿಪಂಥೀ ಖಲು ಆಱಡಿಕಾಱನಂತೆ" (ನೀತಿವಾ. ೨೨) ; ಕೊಲೆ ಹೊಲೆಯಲ್ಲದ ಧರ್ಮವ ಸಲೆ ನೆಗಳ್ಪುದು ನರಕ ಹೇತುವೆಂಬರ್ ಪಿರಿದುಂ ಕೊಲೆ ಹೊಲೆಯುಳ್ಳಱನಂ ಪೊರ್ದಲೆ ಸುಖ ಹೇತುವೆಂಬರಾಱಡಿಕಾಱರ್ (ಸಮುಪ. ೧೩-೨೯) ; ಆಱಡಿಕಾಱ ಕೌರವನ ಬಲವ ಹೊಕ್ಕು ಮೀಱಿದ ವಿಕ್ರಾಂತದಿಂದ ಮಾಱಾಂತ ಮಂಡಳಿಕರ ಕೊಂದನಾ ಹೇನುಕೂಱೆಯನೊಱಸುವಂದದೊಳು (ನೇಮಿಸಂ. ೨೯-೨೯). ೨. ದರೋಡೆಕಾರ ; ಹಿಂಸೆಮಾಡುವವನು : ಆಱಡಿಕಾಱನನಾರುಂ ದೂಱರೆ ದಲ್ ಕೊಂದು ಕುಡಿದು ಬೇಳ್ಪಂತಿರಲಿಂ ನೂಱು ವಿಗತಾತ್ಮಜನಂ ಮಾಱಿದನಾ ಸುನಕಶೇಷನೆಂಬಾ ಮುನಿಯಂ (ಸಮುಪ. ೧೦-೧೦೯) ; ಸಿರಿಯಿಲ್ಲದವನು ಕುಲಹೀನನವಿವೇಕಿ ದುಶ್ಚರಿತನಾಱಡಿಕಾಱ ಭೂಭಾರಕಂ ಪಿಸುಣನುರುತರದ್ರೋಹಿಯನ್ನಯಕಾಱನೆಂದು ನೆಲನೆಲ್ಲ ನುಡಿಯುತ್ತುಮಿಹುದು (ಸಮ್ಯಕೌ. ೨-೬೨).

[ಆಱಡಿ₂ + -ಕಾಱ]

**ಆಱಡಿಗ** (ನಾ). ಸುಲಿಗೆ ಮಾಡುವವನು ; ದರೋಡೆಕಾರ. 'ಆಱಡಿಗತನ' ಪರಾ. [ಆಱಡಿ₂ + -ಗ₂]

**ಆಱಡಿಗತನ** (ನಾ). ದರೋಡೆ ; ಸೂರೆಮಾಡುವ ಸ್ವಭಾವ : ಧೂರ್ತವೃತ್ತಿಗೆ ಮೊಗಂಗುಡದಾಱಡಿಗೊಂಡು ಕಾಡುವಾಱಡಿಗತನಂ (ಮನ್ಮವಿ. ೧೬-೧೩). [ಆಱಡಿಗ + -ತನ]

**ಆಱಡಿಗಳ್ಳ** (ನಾ). ಸುಲಿಗೆಗಾರ ; ದರೋಡೆಮಾಡುವ ಕಳ್ಳ : ಬಿದಿಯೆಂಬಾಱಡಿಗಳ್ಳನೆನ್ನನುಜನಂ ಗೋವಿಂದನಂ ನಿರ್ದರುಯ್ಯುದುಂ (ಆದಿಪು. ೩-೫೨) ; ಬಿದಿಯೆಂಬಾಱಡಿಗಳ್ಳ [ಪಾಠಾಂ. ಗಕ್ಕ]ನಿಂದಮುಱಿವಾಯ್ತು ವರ್ಗ್ಗಂ (ಕಾವ್ಯಾವ. ೮೦೫) ; ಜವನೆಂಬಾಱಡಿಗಳ್ಳಂ ತವಕದಿನಸುವೆಂಬ ವಸುವನುಯ್ಯದೆ ಮಾಣಂ (ಧರ್ಮನಾ. ೫-೮೭) ; (ಕಾವ್ಯಸಾ. ೧೧-೩೭ ನೋ). [ಆಱಡಿ₂ + ಕಳ್ಳ]

**ಆಱಡಿಗುರುಳ್** (ನಾ). ದುಂಬಿಯಂತೆ ಕಪ್ಪಗಿರುವ ಕುರುಳು ; ಭ್ರಮರಕುಂತಳ : ಆಱಡಿಗುರುಳ . . . ನೀಱೆಯ ನವಲಾವಣ್ಯದ ಸಿರಿಯನದೇನಂ ಬಣ್ಣಿಪೆನು (ಜಯಕಾ. ೩-೬೫) ; ಆಱಡಿಗುರುಳ ಮಾನಿನಿ ಕೇಳು (ಮೋಹತ. ೧೦-೪೦).

**ಆಱಡಿಗುರುಳಳ್** = ದುಂಬಿಯಂತೆ ಕಪ್ಪಾದ ಕುರುಳುಳ್ಳವಳು ; ಭ್ರಮರಕುಂತಳೆ : ಆಱಡಿಗುರುಳಳನಾಸೆವಟ್ಟೆಲ್ಲರು ಮೋಱೆಯ ಬಾತು ಕೊಂಡಿದ್ದು ನೀಱೆಯೊಬ್ಬಗೆ ಮಾಲೆಯಿಡೆ ತಮ್ಮ ಲಜ್ಜೆಯ ಮಾಱಿ ಜಾಱುವರದು ಬದುಕೆ (ಭರಚ. ೫೫-೨೬). [ಆಱಡಿ₁ + ಕುರುಳ್]

**ಆಱಡಿಗೆಯ್** (ಕ್ರಿ). ದುಂಬಿಯನ್ನಾಗಿ ಮಾಡು ; ಭ್ರಮರವಾಗಿಸು : ಬಸವಾದಿ ಪ್ರಮಥರ ಚರಣಸಾರಸಗಳಿಗೊಸೆದೆನ್ನ ಮನವನಾಱಡಿಗೆಯ್ವೆನು (ಕೈಕವ. ೪ ಪಲ್ಲವಿ). [ಆಱಡಿ₁ + ಗೆಯ್ (< ಕೆಯ್₁)]

**ಆಱಡಿಗೊಳ್₁, ಆರಡಿಗೊಳ್** (ಕ್ರಿ). ೧. ಹಿಂಸೆಮಾಡು ; ಸೂರೆಹೊಡೆ : ರಾಗದ್ವೇಷಲೋಭಂ ಕಾರಣವಾಗಿ . . . ಆಱಡಿಗೊಳ್ವರುಂ ಕಳ್ವೋರುಂ (ವಡ್ಡಾರಾ. ೧೨೬-೧೬) ; ಧೂರ್ತವೃತ್ತಿಗೆ ಮೊಗಂಗುಡದಾಱಡಿಗೊಂಡು ಕಾಡುವಾಱಡಿಗತನಂ (ಮನ್ಮವಿ. ೧೭-೧೩) ; ಮೋಕ್ಷದ ಬಟ್ಟೆಗಟ್ಟಿ ಬಿಡವಾಱಡಿಗೊಳ್ವ ದುರಂತದುಷ್ಟಕರ್ಮಕ್ಷುಭಿತೋಗ್ರ ತಸ್ಕರರ (ಜೀವಸಂ. ೨-೫). ೨. ಮೋಸಮಾಡು ; ವಂಚಿಸು : ನಿಂದ ಮುಂದಿಗೆ ತೋಱಿ ತೋಱಿ ಆಱಡಿಗೊಳುತೆ ಬಂದರ್ಗೆ ದೂಱಿ ನೆಱೆಸಾಱಿ ನೋಡಿರಿಯೆಸುತೆ (ತಿರುರ. ೧೩-೧೭) ; ವನಿತೆಯನಾಱಡಿಗೊಂಡೆಯಾ ವಿಧಿಯೇ (ಹಚಕಾ. ೧೨-೩೧ ರ). ೩. ದೂರು ; ನಿಂದಿಸು ; ಅಪಮಾನಿಸು : ಗಾವಿಲನಾಗಿ ಚೀ ಕಿಡಿಸಿ ಚಾರುಚರಿತ್ರಮಂ ತೊಱೆದೆಮ್ಮನಾಱಡಿಗೊಂಡು . . . ಪೊರ್ದಿದ್ದೈ ಜಿನದೀಕ್ಷೆಯಂ (ಧರ್ಮಾಮೃ. ೮-೩೬) ; ದೇವರಾರೋಗಣೆ ಮಾಡಿದ ಮೇಲೆ ಮುಂದಿರ್ದ ಪರಿಯಾಣಮಂ ತೆಗೆದು ಇನ್ನೊಂದು ಪರಿಯಾಣಮಂ ತನ್ನಿ ಎಂಬ ಕಷ್ಟವ ನೋಡಾ ಆ ಅಗಲನಾಱಡಿಗೊಂಬ ಪಾಪಿಯ ನೋಡಾ (ಚನ್ನವ. ೪೨-೨). ೪. ದ್ವೇಷಿಸು : ಪಾಱದ ತುಂಬಿಯುಂ ಕಱೆಯೊಳೊಂದಿರದಿಂದುವನಿಂದು ದರ್ಶನಕ್ಕಾಱಡಿಗೊಳ್ವ ದಂಬುರುಹಮಂ ಬಿಱುಸಾಗದ ರನ್ನಮಂ . . . ಜಡಜಭವಂ . . . ಒಡರ್ಚಿದನೆಂದೆನೆ (ರಾಜಶೇ. ೩-೧೫, ೧೬). ೫. ಆತಂಕಪಡು ; ಸಂಕಟಪಡು : ಆಱಿವು ಮಱವೆಯೆಲ್ಲಿಂದ ಬಂದಿತ್ತೆಂದು ಆಱಡಿಗೊಳಲೇತಕ್ಕೆ (ಅವರೇ. ೬೮). ೬. ಆರು ಕಾಲುಗಳನ್ನು ಹೊಂದು, —ಪಡೆ. ೩, ೬ : ಗ್ರಹದಂತೆ ಪುಯ್ಯಲಿಡುವರ್ ತುಂಬಿಯಂತಾಱಡಿಗೊಳ್ವರ್ (ಧರ್ಮಾನ್ಯ. ೩-೮೧). **ಆರಡಿಗೊಳ್** : ೪. ಯದುರಾಜಂ . . . ಪ್ರಜಾನುರಾಗಕ್ಕೆ ಪಾತ್ರನಾಗಿ ರಾಜ್ಯಂಗೆಯ್ಯುತುಂ ತನ್ನೊಳಾರಡಿಗೊಂಡೆಡೆಸಂದಿರ್ದ ದುರುಳರಪ್ಪ ಕೆಲಬರಂ ಪಾಳೆಯಗಾರರಂ ಪಾಳೇಳಿಸಿ (ಮರಾಚ. ೧-೩೭).

[ಆಱಡಿ₂ + ಕೊಳ್₁]

**ಆಱಡಿಗೊಳ್₂** (ಕ್ರಿ). "೧. ಜೇನುಹುಳದಂತೆ ಸಂಗ್ರಹಿಸು. ೨. ಷಟ್ಸ್ಥಲಗಳಿಂದ ಜ್ಞಾನಾನುಭವ ಸಂಪಾದಿಸಿಕೊಳ್ಳು" (ಸರ್ವಜ್ಞ. ಟೀಕೆ) : ಮೂಱಱಿಂದಲಿ ಹೊಱಗೆ ತೋಱಿರುವದನು ಗುರು ಆಱಱಿಂದೊಳಗೆ ತೋಱಿದಡೆ ಶಿಷ್ಯ ತಾನಾಱಡಿಗೊಂಬ (ಸರ್ವಜ್ಞ. ೭೧).

[ಆಱಡಿ₁ + ಕೊಳ್₁]

**ಆಱಡಿತನ** (ನಾ). "ಶತ್ರುಭಾವ" (ಕೈವಲ್ಯ. ಟೀಕು) : ಮೂಱವಸ್ಥೆಯನೊಂದುದಿನದೊಳೈದುವ ಹಂಸನಾಱಡಿತನದಚ್ಚರಿಯನು ಕಂಡು (ಕೈವಲ್ಯ. ೨–೧೯–೪). [ಆಱಡಿ₂ + – ತನ]

**ಆಱಡಿದಾಣ** (ನಾ). **೧.** ದುಂಬಿಗೆ ಸ್ಥಾನವಾದುದು : ನಿಜದಿಂ ಮದಮಳಿನಂ ಧೃತರಜನುರುಮಾತಂಗ ಧರ್ಮನಾಱಡಿದಾಣಂ . . . ಹಸ್ತಿಮೂರ್ಖನೇನೆತ್ತಱಿವಂ (ಪುಷ್ಪಪು. ೭–೬೫). **೨.** ಹಿಂಸೆಯ ನೆಲೆ : ಕಡುನಿಮಿರ್ದ ಕೊಂಬುಕೊಂಬಿನೊಳೆಡೆವಿಡದಲರ್ದಲರ ತೊಂಗಲಿಂ ಪುದಿದುಮಣಂ ಗಡಣದಿನೆಯ್ತಂದೆಱಪಾಱಡಿಗಾಱಡಿದಾಣಮಾಯ್ತು ಸಂಪಗೆಪಲವುಂ (ಕಬ್ಬಿಕಾ. ೫೯). [ಆಱಡಿ₁,₂ + ತಾಣ]

**ಆಱಡಿದುಂಬಿ** (ನಾ). ಹಿಂಸೆಮಾಡುವ ದುಂಬಿ : ಆಱಡಿದುಂಬಿಯನೋವದೇಕೆ ಪೆತ್ತನೊ ಬಿದಿಯೆಂದು . . . ಅವಳೇಂ ಬೆದಱುತ್ತುಮಿರ್ದಳೊ (ಜಗವಿ. ೧೧–೩೭). [ಆಱಡಿ₂ + ತುಂಬಿ]

**ಆಱಡಿವಣ್ಣ** (ನಾ). ದುಂಬಿಯ ಬಣ್ಣ : ಆಱಡಿವಣ್ಣದಾಗಸಕೆ (ರಾಜಶೇ. ೩–೧೦೧). [ಆಱಡಿ₁ + ಬಣ್ಣ]

**ಆಱಡಿವಸುಳೆ** (ನಾ). = ಆಱಡಿವಱಿ : ಮಿಱುಗುವ ಮೆಯ್ಯ ಸೊವಡಸೊಗಸಿಂಗೆ ಬಂದೆಱಗುವಾಱಡಿವಸುಳೆಗಳ (ಶ್ರೀಪಾಲ. ೨–೪೬) ; ಪೊಸಕಮ್ಮಂಗಳವೆಯ ತೆನೆಯ ತುದಿಯ . . . ಆಱಡಿವಸುಳೆಗಳು (ಜಯಕಾ. ೧–೩೯). [ಆಱಡಿ₁ + ಪಸುಳೆ]

**ಆಱಡಿವಱಿ** (ನಾ). ದುಂಬಿಯ ಮರಿ ; ಗುಂಗೀಹುಳುವಿನ ಮರಿ : ಪೊಂದಾವರೆಯ ಬಂಡನುಂಡುಣ್ಮುವಾನಂದದಿಂ ಮೈಮಱೆದು ಜಿನುಗುವಾಱಡಿವಱಿಗಳ ಕಳಕಳವನಾಲಿಸಿ ವಿರಹಿಗಳು ಸಲೆ ಬೆರ್ಚಿ (ಕುರಾಸಾಂ. ೪–೪೭). [ಆಱಡಿ₁ + ಮಱಿ]

**ಆಱಡಿವಱಿವೆದೆ** (ನಾ). ದುಂಬಿಯ ಮರಿಗಳಿಂದಾದ ಬಿಲ್ಲಿನ ಹಗ್ಗ ; ಎಳೆಯ ಭ್ರಮರಗಳಿಂದಾದ ಬಿಲ್ಲಿನ ಹುರಿ : ಆಱಡಿವಱಿವೆದೆಯೆನೆ ಕುರುಳ್ಗಳ್ ಪೊಸಪವಳದ ಗುಂಬದಡಿಯ ಚೆಲ್ವೆನೆಯಧರಂ (ಜಯಕಾ. ೩–೬೦). [ಆಱಡಿವಱಿ + ಹೆದೆ (< ಪೆದೆ)]

**ಆಱಡಿವಿಂಡು** (ನಾ). ದುಂಬಿಗಳ ಗುಂಪು, —ಸಮೂಹ : ಆಱಡಿವಿಂಡು ಬಿಲ್ಲವೀರರ ಪಡೆ (ಕಬ್ಬಿಕಾ. ೨೦೧). [ಆಱಡಿ₁ + ಪಿಂಡು₂]

**ಆಱಡಿವೆಣ್** (ನಾ). ಹೆಣ್ಣುದುಂಬಿ : ಅರಲ ತೊಡಂಬೆಯೊಳಿಟ್ಟುಮಱಿಯ ಮೇಲೆ ಮೊರೆವಾಱಡಿವೆಣ್ಗಳಂತೆ (ಶ್ರೀಪಾಲ. ೨–೮೦). [ಆಱಡಿ₁ + ಪೆಣ್]

**ಆಱಡಿವೆದೆ** (ನಾ). ದುಂಬಿಗಳಿಂದಾದ ಬಿಲ್ಲಿನ ಹಗ್ಗ ; ಭ್ರಮರಗಳಿಂದಾದ ಹೆದೆ : ನನೆವಿಲ್ಗಾಱಡಿವೆದೆಯೇಱುವವೊಲ್ ವನಿತಾಮಣಿಯಿಂತೊಪ್ಪುವ ರೂಪಿಗೆ ಮಿನುಗುವ ಮೀಱುಂಜವ್ವನವೇಱಿ ವಿರಾಜಿಸುತಿರೆ (ಜಯಕಾ. ೩–೬೪) ; ವಿಗ್ರಹಕೆ ನಮಗಿಕ್ಷುಚಾಪವಾಱಡಿವೆದೆ ಸಮಗ್ರಕುಸುಮಾಸ್ತ್ರಂಗಳಿಲ್ಲ ನೋಡೆಮ್ಮದೊಂದುಗ್ರಸಾಯಕವ (ಜೈಮಿಭಾ. ೭–೩೮). [ಆಱಡಿ₁ + ಹೆದೆ (< ಪೆದೆ)]

**ಆಱಡು** (ಕ್ರಿ). "ಬೊಬ್ಬಿಡು, ಒದರು" (ಬಸವ. ಕೋಶ) : ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂ ಭೋ, ನಿಮ್ಮ ಧರ್ಮ ಬೊಬ್ಬಿಡಿದಿರಿಂ ಭೋ, ನಿಮ್ಮ ಧರ್ಮ ಆಱಡ[ಪಾಠಾಂ. ಆಱಸ]ದಿರಿಂ ಭೋ (ಬಸವ. ೮೨೯). ☞ ಈ ಶಬ್ದ 'ಆರಿಡು' ಎಂಬುದರ ಅಪಲಿಖಿತ. [?]

**ಆಱಲೂರಗನ್** (ನಾ). ಒಬ್ಬಾತನ ಹೆಸರು (?) : ಇಱ್ಬು ಇತ್ತಮಣ್ಣ ಆಱಲೂರ ಗನಾವೞಿ ಗುಣಸಾಗರ ತಮ್ಮಡಿಗಳ್ಗೆ ಕೊಟ್ಟ (ಎಕ. IV, ಗುಂಡ್ಲುಪೇ. ೮೮–೭ ; 750). [?]

**ಆಱಾಟ₁** (ನಾ). ರೋಗದಿಂದ ನರಳುವವನ ವೇದನೆ, —ಕೂಗು ; ನರಳಾಟ (ಆ). [**ದೇ.** ‖ **ತಮಿ.** ಆಱಾಟ್ಟ ; **ತೆಲು.** ಅರಾಟ]

**ಆಱಾಟ₂**, ಆರಾಟ₂, ಆಱಟ (ನಾ). ನೀರಾಟ ; ಜಲಕೇಳಿ : ಗುಡುಗುಡಿಪ ಮೊೞಗಂ . . . ಸಿಂಗದ ದನಿಗೆತ್ತು ಬಿಗುರ್ತೋಡಿ ಕರ್ಮಡುವಿನ ತಡಂಗುಂಡಿಯೊಳಡಂಗುವುವೆನೆ ಆಱಾಟಕೆಂದು ಯೂಥನಾಥಂ ಮುಂದಿರೆ ಕಳಭಂ ಬೞಿವರೆ . . . ನೀರ್ದಾಣಮಂ ಪುಗುವಾನೆವಿಂಡಿನಿಂದೆಯುಂ (ರಾಮಾಶ್ವ. ೩–೧೬). **ಆರಾಟ₂** : ರಾಜ್ಯದಲ್ಲಿ ಬೇಟೆ ಗೀಟೆ, ಆಯನ ಆರಾಟ ಇರಬೇಕು. ಇವುಗಳ ಮೂಲಕ ಜನಗಳಲ್ಲಿ ಮೈಬಲವು ಬರುತ್ತದೆ (ಕೋಟಚೆ. ೫೧). **ಆಱಟ** (ರೀವ್).
[ಆಱು₀ + ಆಟ. ☞ ತಮಿ. ಆಱ್ = ನದಿ₀]

**ಆಱಿಗೊಳ್** (ಕ್ರಿ). (?) : ನೆರವಿಯನುರವಣಿಸಿ ಪಾಯ್ದು ಬೀದಿವರಿದಾಱಿ[ಪಾಠಾಂ. ವಾದಿ]ಗೊಂಡು ಸಿಕ್ಕಿದ ರೂಪಿನ ತಲೆಯೊಳ್ ನಿಳಿಲ್ ನಿಕ್ಕೆಂದು ತರ್ಗಿ ನುರ್ಗಿ ಕರ್ಚಿ ಕೊಡಹುವ ನೆಚ್ಚಿನ ಗೋವಂ (ಗಿರಿಕ. ೨–೧೦೫ ವ). "ನಾಗಾಲೋಟ ಓಡು, ರೋಷೋನ್ಮತ್ತವಾಗು, ಹುರಿಪುಗೂಡು" (ಪ್ರಭಣ್ಣ). ☞ ಆಱಿಗೊಳ್ಳು = ದಾರಿಬಿಡಿಸಿಕೊ, ಪಕ್ಕಕ್ಕೆ ಸರಿ ಎಂದರ್ಥವಾಗಬಹುದು. ತಮಿ. ಆಱು = ದಾರಿ, ಪಕ್ಕ.
[ಆಱಿ ? + ಕೊಳ್₁]

**ಆಱಿಲ್** 'ಅಱಿಲ್₁' ನೋ.

**ಆಱಿಸು**, ಆರಿಸು₂ (ಕ್ರಿ). **೧.** (ದೀಪವನ್ನು) ನಂದಿಸು ; (ಬೆಂಕಿಯನ್ನು) ಆಳಿಸು : ವಿರಹಾಗ್ನಿಯನಾಱಿಸುತೆ (ಪಂಪಭಾ. ೧–೬) ; ಸಿಡಿಲಕಿಚ್ಚಿನ ಬೇಗೆಯನಾಱಿಸಲ್ ಜಲಧರಸಂಕುಲಮಿರ್ಪ ತಾಣಂ (ಕಾದಂಬ. ೨೧೮) ; ಘನಮೋಹಪಂಕಮಂ ತೊಳೆದು ನಿರರ್ಗಳ ಶೋಕಶಿಖಿಯನಾಱಿಸಿ ಮುಖಾಂಬುಜಮಂ ಮುರಿದಿತ್ತು ತನ್ನವಂಗೆ . . . ಮುದ್ದಿಸಿ (ಉದ್ಭಟ. ೧೦–೧೦೮). **೨.** (ದುಃಖ, ಕೋಪ, ಆಯಾಸ ಮುಂತಾದುವನ್ನು) ಶಮನಮಾಡು ; ಶಾಂತಗೊಳಿಸು : ಸೇದೆಯನಾಱಿಸಿ ನಾಳೆ ಪೋಕೆಂದೊಡೆ (ವಡ್ಡಾರಾ. ೮೪–೨೭) ; ಎಂತಾನುಂ ಮೃದುವಚನಂಗಳಿಂ ಮುಳಿಸನಾಱಿಸುತ್ತಿರ್ದನ್ (ಪಂಪಭಾ. ೭–೫೮ ವ) ; ಭವದ್ವಿರಹದೊಳಿರ್ದ ವಲ್ಲಭೆಯನಾಱಿಸು (ಜಗವಿ. ೧೨–೧೧) ; ಏಱ ನೋವಿನೊಳಾದ ತೃಷ್ಣೆಯ ನಾಱಿಸುವರಿವಱಳವೆ ಸಾಕಿವ ತೋಱದಿರು ತೆಗೆ ತೊಲಗು (ಕುವ್ಯಾಭೀ. ೧೦–೨೬) ; ಬಳಲಿಕೆಯನಾಱಿಸುವ ನೆವದೊಳು (ಚೆಬಪು. ೧೧–೧೪). **೩.** (ದ್ರವವನ್ನು) ಇಂಗಿಸು ; ಒಣಗಿಸು : ಮಿಂದು ನಿಂದು ಮುಡಿಯಂ ಬಿಟ್ಟಾಱಿಸುತ್ತಿರ್ದ ಕಾಮುಕಿಯಂ (ಶಾಂತಿಪು. ೭–೧೩೪) ; ಪಸಿಯ ಕಲದೊಳಗೆ ನೆಲ್ಲಿಯ ರಸಮಂ ಮೇಣ್ ಬೆೞಲ ರಸಮನೊರಸಿ ಬೞಿಕ್ಕಾಱಿಸಿ ಪಾಲನಲ್ಲಿ ಪೊಯ್ದೊಡೆ (ಲೋಕೋಪ. ೮–೪೯) ; ತಲೆವಾಗಿಲೊಳು ಘರ್ಮಜಲವಾಱಿಪಸಿಯುಳ (ಕಂನವಿ. ೬–೧೧೫). **೪.** ತಣ್ಣಗೆ ಮಾಡು ; ತಂಪುಮಾಡು : ಬುದ್ಧಿಯೊಡೆಯೊನ್ ಬಿಸಿಯಂಬಲಿಯಂ . . . ಕಿಱಿಕಿಱಿದನೆ ಆಱಿಸುತ್ತಮುಣ್ಬಂ (ವಡ್ಡಾರಾ. ೧೮೧–೧) ; ಬಿಸಿಲೆಸಕದಿಂದೆ ಕೊರಗಿದ ದೆಸೆವೆಣ್ಗಳ ಬಿಸುಪನಾಱಿಪಂತಿರೆ ಗಿಳಿಗಳ್ ಪಸುರೆಱಕೆ ಬಾೞಿಯ ಪೊಸ ಬಿಜ್ಜಣಿಗೆಗಳೆನಿಸಗಿಪುವು ತಣ್ಣೆಲರಂ (ಕಾದಂಪೂ. ೧೩೦) ; ಕೆಂಡಮಂ ಕೀಳ್ಮೇಲೊಳಿಕ್ಕಿ ಪುಟಮಂ ಮಾಡಿಕೊಂಡಿಳಿಸಿ ತೆಗೆದಾಱಿಸುತವೆ ಮುಚ್ಚಳದೆಗೆದು (ಸೂಪಶಾ. ೧–೨೧). **೫.** ತೃಪ್ತಿಪಡಿಸು ; ಸಂತೋಷಪಡಿಸು : ಕಪ್ಪುರದ ರಜಂ ಮುಸುಕಿದುದೆನೆ ಪುದಿದೇನಾಱಿಸಿದುದೊ ಪೊಳೆವಮೃತಕಿರಣನಮೃತಕರಂಗಳ್ (ಆದಿಪು. ೧೨–೧೧) ; ಜನಪನ ಕೋಪದ ಬೞಿಯೊಳೆ ಜನಿಯಿಸಿ ಜನಮಂ ಪ್ರಸಾದರಸವಾಱಿಸುಗುಂ (ಪುಷ್ಪಪು ೯–೩೮). **ಆರಿಸು₂** : **೧.** ದೀಪವನ್ನಾರಿಸಿ ಮಲಗಿಕೊ (ರೂಢಿ). **೨.** ನೆತ್ತರ್ ಸೋರ್ವ ಗಾಯಕ್ಕೆ ಮದ್ದಿಕ್ಕಿ ನೋವನಾರಿಸಿದರ್ (ಚಂದ್ರಸ. ೩೫). **೩.** ಗಂಗೆಯು 'ಧಣೇರ' ಅರಿವೆಗಳನ್ನು ಆರಿಸಿ ಇಸ್ತ್ರಿ ಮಾಡಿಟ್ಟಳು (ದಾಸಹು. ೫). **೪.** ಕಾಫಿಯನ್ನು ಆರಿಸಿ ಕುಡಿಯಬೇಕು (ರೂಢಿ). [ಆಱು₁ + –ಇಸು₃]

**ಆಱು**$_1$, ಆರು$_4$ (ಕ್ರಿ). **೧.** (ದೀಪ ಮುಂತಾದುವು) ನಂದು ; ಅಳಿಸಿ ಹೋಗು ; ಅಡಗು : ಗುಹಾದ್ವಾರಮಂ ಪೂರ್ವೋಕ್ತಕ್ರಮದೊಳೆ ತೆಱೆದದಱ ಬೆಂಕಿಯಾಱುವನ್ನೆಗಂ . . . ಪೋಗೆ (ಆದಿಪು. ೧೩–೭೮ ವ) ; ಆಱದ ಕೋಪಪಾವಕನಿನಣ್ಣನ ನನ್ನಿಯನಿಲ್ಲಿ ಮಿಾಱುವೆಂ (ಪಂಪಭಾ. ೭–೧೧) ; (ಚಾವುಂಪು. ೬೦–೨೨೧ ; ಗದಾಯು. ೯–೩೪ ನೋ.). **೨.** (ದುಃಖ, ಕೋಪ, ಸಂತಾಪ, ಆಯಾಸ ಮುಂತಾದುವುಗಳು) ಶಮನವಾಗು ; ಶಾಂತವಾಗು : ಧರ್ಮಪುತ್ರನ ಶೋಕಮನಾಱೆ ನುಡಿದು (ಪಂಪಭಾ. ೧೧–೧೦೮ ವ) ; ಭಯಂಕರಾಟವಿಯೊಳಿನ್ನೆವರಂ ನೆಲಸಿರ್ದ ಸೇದೆ ನೀಂ ಕರುಣಿಸಿದಾಗಳಲ್ಲದವಗಾರ್ಱದು (ಪಂಪಭಾ. ೯–೪೨) ; ಎನ್ನ ಬಿಲಾಱಿದೊಡಾಗದೆಂಬೆನೆ (ಗದಾಯು. ೫–೫೧) ; ನಿನ್ನ ನಕಾರಣಬಾಂಧವನಂ ನೋಡಿಯೆ ಶೋಕವಾಱಿದುದು (ಕಾದಂಪೂ. ೯೯೩) ; ಶ್ರಮಮಾಱೆ ಬಂದಲ್ಲಿಗಲ್ಲಿಗೆ ವಿಶ್ರಮಿಸುತ್ತುಂ (ಸುಕುಮಾ. ೨–೪೪ ವ) ; ಪೊಸಮಾಗಿ ಮದವಾಱೆ [ಪಾಠಾಂ. ವೇಱೆ]ಮಾವಂಕುರಂ ದೋಱೆ (ಹಚಕಾ. ೩–೧೦). **೩.** ತಣ್ಣಗಾಗು ; ತಂಪಾಗು : ಬಾಣಸಿಗಂ ಬಂದು ಬೋನಮೆತ್ತಿಯೋಗರಮಾಱಿದಪ್ಪುದೆಂದು ಪೇೞ್ದೊಡೆ (ವಡ್ಡಾರಾ. ೪–೨೩) ; ಮುನಿಸಂಮಾಡಿದರಾತಿನಾಥರಡಗಂ ಸುಪ್ಪಲ್ಗೆ ಕೆನ್ನೆತ್ತರಂ ಕೆನೆಗೊಂಡಾಱಿದ ಪಾಲ್ಗೆ ದೊಂಡೆಗರುಳಂ ಕರ್ಬಿಂಗೆ ಲೆಕ್ಕ[ಕ್ಕೆ ತಂ]ದು (ಪಂಪಭಾ. ೧೨–೧೬೦) ; ಸುರರ ಹೂಮಳೆಯ ತಂಪಿಂ ನೆಲದ ಬಿಸಿಯಾಱಿತು (ಹಚಕಾ. ೧೦–೨೭) ; ಕೋಮಳನ ಮಸ್ತಕದುಷ್ಣವಾಱದಿರೆ (ಸಂಭಪ. ೬–೭). **೪.** ಒಣಗು ; ಬತ್ತು : “ಆಱು – ನಿರ್ದ್ರವೇ, ಸಮರ್ಥತ್ವೇ ಚ” (ಶಮಧಾ) ; ಮೆಯ್ಮೆಯ್ಯೊಳ್ ಜಿಗಿಲ್ತಾಂತ ನಾಯಕರಂ ಸುಂಟಗೆಯಾ[ಪಾಠಾಂ. ಯು]ಱಿದಂತೆ ರಥದೊಳ್ ಜೋಲ್ವನ್ನೆಗಂ [ಕೋ]ದು (ಪಂಪಭಾ. ೧೨–೨೪) ; ಮುನಿನಿವಹಮಾಱಲಿಕ್ಕಿದ ತನುತರ ಕಾಷಾಯವಲ್ಕವಸನಂಗಳಂ (ಕಾದಂಪೂ. ೨೭೫) ; ಪೊಸಮಿಡಿ ಶಲಾಟು ತಾನದು ಪಸುರಾಱಿದ ಫಳನಿಕಾಯಮಕ್ಕುಂ (ವಸ್ತುಕೋ. ೩೧–೯) ; ಆದಟಂ ಮಂಡೆಯ ಮಾಸಾ [ಪಾಠಾಂ. ನಾ] ಱದ ತರುವಲಿ ನಮುಗಮುರಿಯನಾದವನವಂ ಪೆರ್ಚಿದೊಡಾ ಭವನುಂ ಜವನುಂ ಕದನದೊಳಾನಲ್ಕೆ (ಅರ್ಧನೇ. ೮–೫) ; ವಿರಹಿಗಳ ಬಾಯಾಱೆ (ಸಿದ್ಧರಾ. ೪–೬೭) ; ನೀರ್ದೆಗೆದು ಬೆಂಚೆಗಳೊಳ್ ಕೆಸಱಾಱೆ (ಕಬ್ಬಿಕಾ. ೫೩) ; ಆಱಿಹೋಯಿತೆ ವೀರರಸ (ಕುವ್ಯಾಭೀ. ೮–೨೯) ; ಬಾಡಿತವಳ ಮೊಗ . . . ಅಧರವಾಱಿದುದು (ಭರಚ. ೪–೪೮). **೫.** ಸಮಾಧಾನಗೊಳ್ಳು ; ತಣಿ ; ತೃಪ್ತಿಹೊಂದು : ಅನೇಕ ಪ್ರಕಾರ ವಚನ ರಚನೆಗಳಿಂದಾಕೆಯ ಮನಮನಾಱೆ ನುಡಿಯುತಿರ್ಪಿನಂ (ಪಂಪಭಾ. ೪–೬೯ ವ) ; ಹಿತಮಲ್ಲೀ ಶೋಕವೇಗೋದಯಮೆನೆ ಬುಧಸತ್ಸೂಕ್ತಿಯಿಂದಾಱಿ ಭೂವಿಶ್ರುತನಾಗಳ್ ಮಾಡಿದಂ ಲೌಕಿಕಮನತಿ ನುತಂ (ನೇಮಿಪು. ೩–೧೬೭) ; ಪುಳಕಾಂಕುರಂಗಳುಬ್ಬರಿಸೆ ಮೃದೂಕ್ತಿಬಿಂದುಚಯಮಂ ಸವಿದಾಱೆ ವಿದಗ್ಧಚಾತಕಂ . . . ರಸಪ್ರವಾಹಮಂ ಸುರಿವುದು (ಲೀಲಾವ. ೧–೭೬). **೬.** (ಗಾಯ) ಮಾಯು (ಕಿ). **ಆರು**$_4$ : **೧.** ದೀಪ ಆರುತ್ತಿತ್ತು (ಪುಟ್ಟರ. ೧). **೨.** ಹೆದರಿಕೆ ಪಶ್ಚಾತ್ತಾಪ ಎಲ್ಲಾ ಆರಿಹೋದವು (ಗಂಗಾಸಾ. ೪೮) ; ಅವನ ಭಾವೋದ್ರೇಕ ಕೂಡಲೆ ಆರಿಹೋಯಿತು (ಪುನರು. ೧೭). **೩.** ಹಾಲು ತುಂಬಬಿಸಿಯಾಗಿದೆ ಕುಡಿಯಲು ಆರಬೇಕು (ರೂಢಿ). **೪.** ಪ್ರಭುವಿನ ನಾಲಿಗೆ ಆರಿಹೋಗಿತ್ತು (ಬೆಟ್ಟಹೊ. ೧೮) ; ಆರಿದ ನೀರಿಗೆ ನೆಲವೇ ಸಾಕ್ಷಿ (ಗಾದೆ). **೬.** ಗಾಯ ಆರುತ್ತಾ ಇದೆ (ರೂಢಿ).

[**ದೇ.** ‖ **ತಮಿ.** ಆಱು, ಅಱ್ಱು ; **ಮಲ.** ಆಱು ; **ತುಳು.** ಆರು, ಆಱು ; ಆಂಜಿಯು ; **ತೆಲು.** ಆಱು ; **ನಾಯ್ಕಿ.** ಆರ್ ; **ಪರ್ಜಿ.** ಏದ್ ; **ಗೊಂಡಿ.** ಆರಾನಾ ; **ಕುಇ.** ಆಜ]

**ಆಱು**$_2$ ‘ಆಱ್’ ನೋ.

**ಆಱು**$_3$, ಆರು$_6$ (ನಾ). **೧.** ಒಂದು ಸಂಖ್ಯಾವಾಚಕ ; ಐದರ ಮೇಲೊಂದು : “ಆಱು – ನಿರ್ದ್ರವೇ, ಸಮರ್ಥತ್ವೇ ಸಂಖ್ಯಾಯಾಂ ಚ” (ಶಮಧಾ. ಸ) ; ಶ್ರೀ ಪ್ರಿಥುವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟಾರರ ರಾಜ್ಯಂ ಒನ್ದುತ್ತರಮಭಿವೃದ್ಧಿಸಲೆ ಆಱನೆಯಾ ವರ್ಷಮ್ಪ್ರವರ್ತ್ತಮಾನಮಾಗೆ (ಸೌಇಇ. IX–i, ೫–೫ ; ಸು. 750) ; ನಾಲ್ಕು ವೇದಮುಮಾಱಂಗಮುಂ (ವಡ್ಡಾರಾ. ೭೨–೧೩) ; ಆಱನೆಯ ವಿಭಕ್ತಿಯೊಳಂ ಒಳವು ಗುರು ಲಘು ಭೇದಂ (ಕವಿರಾ. ೩–೧೫) ; ಸೀಮಂಧರನೆಂಬೊಂ ಆಱನೆಯ ಕುಲಧರಂ (ಚಾವುಂಪು. ೧೪–೫) ; ವೇದನಾಲ್ಕದಱಂಗವಾಱು (ಕುವ್ಯಾಆ. ೨–೧೧). **೨.** (ಆಲಂ) ಅರಿಷಡ್ವರ್ಗ : ಉಚಿತಂ ತಾನೆನಿಪಾಱ ಕಟ್ಟುತಯಿದಕ್ಕೀಡಾಗದೇ ನಾಲ್ವರಂ ರಚನಂಗೆಯ್ಯದೆ . . . ವಚನಬ್ರಹ್ಮದೆ ಮುಕ್ತಿಯೇ (ಸೋಮೇಶ. ೧೦೧) ; ಆಱಟ್ಟುಳಿಗಳನು ಮೂಱು ಕಂಟಕರನ್ನು ಏಱು ಜವ್ವನವ ತಡೆದಿಹರೆ ಶಿವ ತಾನು ಬೇಱೆ ಇಲ್ಲೆಂದ (ಸರ್ವಜ್ಞ. ೩೦೮). **ಆರು**$_6$ : **೧.** ಇಪ್ಪತ್ತಾ ಅರನೆ ವರ್ಷದು × × × ಪುಲಿನೋಡಿ (ಎಕ. X, ಕೋಲಾರ. ೭೮–೨ ; 751) ; ಪವಿತ್ರಾರೋಪಣಕ್ಕೆ ಪಣವಾರುಮಂ ಪಾರಿಖಾಯದಲು ನಡಸುತ್ತಂ ಬಪ್ಪರು (ಕೊಲ್ಹಾಶಾ. ೫–೪೧ ; 1076) ; ಆರುಹೆತ್ತವಳಿಗೆ ಮೂರು ಹೆತ್ತವಳು ಮುಲುಕು ಕಲಿಸಿದಳಂತೆ (ಗಾದೆ).

**ಆಱುಂಗುಣಂ** = [ರಾಜ್ಯಶಾ] ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಮಾಶ್ರಯ ಎಂಬ ಆರು ರಾಜನೀತಿಗಳು : ಮಱುದಿವಸಮಱವರುಮಾಱುಂಗುಣಂಗಳೆ ಮೂರ್ತಿಮಂತಂಗಳಾದಂತೆ ಮಂತ್ರಶಾಲೆಯಂ ಪೊಕ್ಕಿರ್ದಾಗಳ್ (ಪಂಪಭಾ. ೯–೧೨ ವ) ; ಆಱುಂಗುಣದೆಱೆವಟ್ಟೇಱಾಱುಂ ಮಂಡಲದ ನಾಭಿ . . . ಅತಂ (ಶಾಂತಿಪು. ೨–೬೪).

[**ದೇ.** ‖ **ತಮಿ. ಮಲ.** ಆಱು ; **ಕೊಡ.** ಆರಿ ; **ತುಳು.** ಆಜಿ ; **ತೆಲು.** ಆಱು ; **ಕೊಲಾ.** ಆರ್ ; **ಗೊಂಡಿ.** ಸಾರುಂಗ್ ; **ಕುವಿ.** ಸಜ್]

**ಆಱು**$_4$ (ನಾ). (?) : ಪಡಿಯೆ ಆಱೊಡನೂರೂರೊಳ್ (ಎಕ. I ೧–೧೯ ; 466). [?]

**ಆಱುಗಂಡುಗ** (ನಾ). ಆರು ಖಂಡುಗದ ಅಳತೆ : ಕಟನಿ ಪೆರ್ಗ್ಗೆಱೆಯಾ ಕೆಱಗೆ ಆಱುಗಣ್ಡುಗಂ (ಎಕ. IV, ನಾಗಮಂ. ೮೫–೬೮ ; 776). [ಆಱು$_3$ + ಖಂಡುಗ]

**ಆಱುದಲೆ** (ನಾ). **೧.** ಆರು ತಲೆಗಳು. **೨.** ಷಣ್ಮುಖ (ದಕ. ಕಿ). [ಆಱು$_3$ + ತಲೆ$_1$]

**ಆಱುದಳ** (ನಾ). **೧.** ಆರು ಎಸಳುಗಳು. **೨.** ಆರು ಎಸಳಿರುವ ಒಂದು ಹೂವು (ಬಸಪು. ಕಿ). [ಆಱು$_3$ + ದಳ (= ದಲ)]

**ಆಱುದೆಱೆ** (ನಾ). ಒಂದು ಬಗೆಯ ತೆರಿಗೆ : ಆ ಗಂಗನ ನಾಡು ನೆರದಲಿ ಆ ಗಂಗನ ನಾಡಿಂಗೆ ಆಱ[ಱು]ದೆಱೆ ಬಂದಲಿ ಕೂಡಲಿಯ (ಎಕ. VII, ಶಿವಮೊ. ೬೯–೨೨ ; 1320). [ಆಱು$_3$ + ತೆಱೆ$_3$]

**ಆಱುನೆಲೆ** (ನಾ). ಆರುಸ್ಥಾನ, —ಅಂತಸ್ತು : ಆಱುನೆಲೆ ಮಂಟಪದ ಮೂಱು ಕೋಣೆಗಳೊಳಗೆ ಬೇಱೊಂದು ಸ್ಥಾನದಲಿ ಲಿಂಗವಿಹುದು ಆಱುನೆಲೆಯನು ದಾಂಟೆ ಮೂಱು ಬಾಗಿಲ ಮುಚ್ಚಿ (ಚನ್ನಸಾ. ೬೩ ಮಂತ್ರಪ್ಟ). “ಆರು ಆಧಾರ ಚಕ್ರಗಳು” (ಚನ್ನಸಾ. ಕೋಶ). [ಆಱು$_3$ + ನೆಲೆ]

**ಆಱುಮುಡಿ** (ನಾ). ಆರರಷ್ಟು : ನೃಕೇಸರಿಗಾಱುಮುಡಿ ಭುಜಬಲರ ಭುವನ ಕ್ಷೋಭಕೃತಬಲರ ತೋಱಿದನು (ತೊರರಾ. ೪–೭–೧೫). [ಆಱು$_3$ + ಮಡಿ$_3$]

**ಆಱುಮುಖ** (ನಾ). ಆರು ಮುಖಗಳುಳ್ಳವನು ; ಷಣ್ಮುಖ : ಬೇಱಿನ್ನು ದೈವಮಿಲ್ಲೆಂದು ಸಾಱುವಂತಿರ್ದವು ಕೊರಲ ಮೂರೇಖೆಗಳಾಱುಮುಖದಯ್ಯಂಗೆ (ಕುರಾಸಾಂ. ೬–೧೮). [ಆಱು$_3$ + ಮುಖ]

**ಆಱುವಣ** (ನಾ). **೧.** ಆರುಹಣಗಳಷ್ಟು (?). **೨.** ಒಂದು ತೆರಿಗೆ: ಫಲವಾದ ಮಣ್ಣೆಯಾಱುವಣಂ ಎಲೆಯ ಬಳ್ಳಿ ೧೦೦೦ಂಕ್ಕೆ ಮೂಱು ಗದ್ಯಾಣಂ (ಸೌಇಇ. IX–i, ೭೭–೨೬; 992); ಮಾನ್ಯೇಷು ದೇಶಮರ್ಯಾದಾಱುವಣಾನ್ವಿತಂ (ಇಆ. XIX, ೨೪೭–೧೦೩; 1208); ಸಿದ್ದಾಯ ಸೇಸಿ ಆಱುವಣ ಮನೆವಣ ಬಿಟ್ಟ (ಎಕ. III, ತಿರುಮ. ೨೭–೪೫; 1290). 'ಅಱುವಣ' ಪರಾ. [ಆಱು₃ + ಪಣ₁]

**ಆಱಿಡೆಗೈ** (ಕ್ರಿ). ಆರು ಸ್ಥಳಗಳಲ್ಲಿ ತಂಗು, —ವಿಶ್ರಮಿಸು: ಧರಣಿಪನ ಬೀಳ್ಕೊಂಡು ಮಾರ್ಗಾಂತರದೊಳಾಱಿಡೆಗೈದು [ಪಾಠಾಂ. ಳಾಱಡಿಗೈದು] ಪೊಕ್ಕನು ಹರನ ಕರುಣಾಸಿದ್ಧಿ ಸಾಧನವೆನಿಪ ಗಿರಿವನವ (ಕುವ್ಯಾಅ. ೪–೪೧). [ಆಱು₃ + ಎಡೆ₃ + ಗೈ (< ಕೆಯ್₁)]

**ಆಱೆೞ್ತು** (ನಾ). ಆರು ಎತ್ತುಗಳು (?): ಪರಿಗೆಯ ಬನ್ದುಗಿಯರ್ ಈ ಊರ್ಗೆ ಬನ್ದು ಆರಿದರೊಳ್ ಛಲಮಿನೆ ನಾಲ್ಕೆೞ್ತಿನ ಬಳನ ಕಿಡಿಸಿ ಆಱೆೞ್ತುಮಾಡಿ (ಎಕ. VIII, ಸೊರಬ. ೧೦–೧೦; 800).

[ಆಱು₃ + ಎೞ್ತು]

**ಆೞ್**, ಆಳ್₂, ಆಳು₂ (ಕ್ರಿ). **೧.** (ನೀರಿನಲ್ಲಿ) ಮುಳುಗು; ಅೞ್ದು, ಆೞ್ದು (ಭೂತಕೃ); ಅದ್ದು, ಅರ್ದು, ಅೞ್ದು (ಭೂತನ್ಯೂ); ಆೞ್ವ (ಭವಿಕೃ): "ಆೞ್ – ಜಲನಿಮಜ್ಜನೇ (ಮುಳುಗು), ಸೇವಕೇ ಕುಳಂ (ಆಳ್)" (ಶಮಧಾ); ಕುದುರೆಯ ಖುರಂಗಳಿನಿಸಾೞದೆಯುಂ ಚಕ್ರಂಗಳರ್ದು ಬಾರದೆಯುಂ ರಥಮಿಂತು ಪರಿದುದಂಭೋನಿಧಿಯೊಳ್ (ಆದಿಪು. ೧೨–೮೨); ನವಲೋಹಿತವಾರ್ಧಿಯೊಳೞ್ದುಬಿೞ್ದನಂ ಕುರುಪತಿ ನೋಡಿ ಕಂಡನಭಿಮನ್ಯುಕುಮಾರನನಾಜಿವೀರನಂ (ಗದಾಯು. ೪–೫೩); ಚದುರನೆನಿಪ್ಪಂ . . . ಸಂಸಾರಸಮುದ್ರದೊಳರ್ದು ಕಿಡದೆ ಮನ್ನಮೆ ಪದುಳಿಗನಾಗಱಿದು ಪಿಡಿವುದೀ ದರ್ಶನಮಂ (ಧರ್ಮಾಮೃ. ೬–೨೦೬); ನರಕದೊಳಾೞ್ವುದದೇಂ ನೀತಿಯೇ (ಉದ್ಭಟ. ೧೦–೮೦). **೨.** (ದುಃಖ, ಕೋಪ, ಚಿಂತೆ, ಸಂತೋಷ ಮುಂತಾದುವುಗಳಲ್ಲಿ) ಮಗ್ನವಾಗು: ಪಿರಿದು ದುಃಖದೊಳೞ್ದಿತ್ತಾನುಮುಹಶಮಂಬೆತ್ತು (ನೇಮಿಪು. ೬–೫೬ವ). **೩.** ಹೊಳು; ಒಳಸೇರು: ಮುಡಿಯ ಕುಚಯುಗದ ಜಘನದ ಕಡುವಿಣ್ಪಿಂ ಮಣಲೊಳೞ್ದು ಬರೆ ಮೆಲ್ಲಡಿಗಳ್ (ಪಂಪಭಾ. ೭–೮೫); ಅಪಘನತತಿಯೊಳೆಯ್ದೆ ಗಱಿವರಮೞ್ದಾ ಶರನಿಕರಂ (ನೇಮಿಪು. ೧೨–೯೪); ಅವಳ ಕಡುಗುಣ್ಪನಾೞ್ದ ಪೊರ್ಕುಳೊಳಗೞ್ದ ಬಗೆಯೆನ್ನಂ ತೆಗೆಯಿಮೆಂದೆತ್ತಿದ ಕೈಯಂತಿರ್ದ ಬಾಸೆಯೊಳ್ (ಕಬ್ಬಿಕಾ. ೭೮). **೪.** ಕುಸಿಬೀಳು; ಕುಸಿ: [ಪಲ್ಲುಂ ಮೊರದಂತಪ್ಪ ಕಾಲುಗುರುಂ ಒಳಗೞ್ದ] ಬಸಿಱುಂ (ಧರ್ಮಾಮೃ. ೭–೨೨೫); ಬಱಿತಬಾಯುಮುೞ್ದರೆಗಣ್ಪೇಡುಗಳುಂ (ಜಗವಿ. ೧೭–೬೬). **ಆಳ್₂**: **೧.** ಸವಿದು ಕರಂ ನವರಸದೊಳಾಳುತ್ತುಮಿರ್ಪ ರಸಿಕರ್ ಬಲ್ಲರ್ (ಗಿರಿಕ. ೧–೩೧); ಹರ್ಷಾಂಬುಧಿಯೊಳಾಳ್ದ (ಪದ್ಮರಾ. ೪–೫). **೨.** ಕೇಳಲೊಡಂ ಕಿವಿ ಸವಿಯೊಳಗಾಳದೊಡಂ ತನ್ಮನಂ ಮುಳುಂಗದೊಡಂ . . . ಅದು ಸತ್ಕೃತಿಯೇ (ಗಿರಿಕ. ೧–೨೧); ಶರಣ ಪದಪಂಕಜರಜಂಗಳೊಳಾಳದಂತುಂ ಶಂಕರಾ (ರಾಜಶೇ. ೧೩–೧೨೫). **ಆಳು₂**: **೧.** ಶಿಶು ಬಾವಿಯೊಳಗದ್ದೆ ತೆಗೆವ ಕರುಣಿಯ ಕಾಣೆ (ದೀಕ್ಷಾಬೋ. ೮೯–೬); ಉಣ್ಮುವ ಶಿವಾನಂದ ರಸದ ಹೊನಲೊಳಗದ್ದು (ಬಸರ. ೨–೧೧೮); ಅಂಧಕಾರದ ಜಲಧಿಯುಲಿ ಜಗವದ್ದುದು (ಕುವ್ಯಾಅ. ೩೨–೧೬). **೨.** ಬೀಳಾದ ಬೇಳುವೆಯುಲಾಳಿದ ಗುರುಲಿಂಗ ಜಂಗಮದ ಪ್ರಸಾದದ ನೆನಹು (ಆದವ. ೭೦); ಭಕ್ತಿಯೊಳಾಳಿಬದುಕುವುದುಚಿತ (ಹಭಸಾ. ೭೭); ಕೋಪದೊಳಾಳಿದನಾ ಪಾತ್ಸ್ಯಾವು (ಕಂನವಿ. ೧೬–೧೦). **೩.** ಘೀಳಿಡುವ ಕರಿ ಕೆದಱಲಂಕುಶವಾಳೆ ನೆತ್ತಿಯ ನೆಗೆದು (ಕುವ್ಯಾಕ. ೨–೧೭); ಕಪಿವಡೆಯ ಪದಹತಧೂಳಿಗದ್ದುದು ಸಕಲಭುವನಚಯ (ತೊರರಾ. ೪–೭–೧೦).

**ಆೞ್ನಡು** = ಪೂರ್ಣವಾಗಿ ನಾಟು; ಸಮಗ್ರವಾಗಿ ಕೀಲಿಸು: ಈ ಕುಚಂ ಚಪ್ಪಲದಾರ್ಗಾೞ್ನಟ್ಟಿರ್ದೆಯೊಳೞ್ದಿರದೆಂಬ . . . ಲತಾಂಗಿಯೊಪ್ಪಿದಳ್ (ಲೀಲಾವ. ೧೩–೧೭). **ಆೞ್ಪುಗು, ಆೞ್ವುಗು** = ಪೂರ್ಣವಾಗಿ ಒಳಹೋಗು; ಸಮಗ್ರವಾಗಿ ಮುಳುಗಿ ಮರೆಯಾಗು: ಸೊಪ್ಪಡಗಿರ್ದ ಕಾದಲನ ತಳ್ಪಿನ ಕಾಳೆಸಗಾೞ್ಪೊಕ್ಕ ಮೆಯ್ಯೊಪ್ಪಿರೆ (ಲೀಲಾವ. ೧೩–೧೭); ಅಲಸಿಕೆ ಜಕ್ಕವಕ್ಕಿಗೆ ಜಗುಳ್ತರೆ ಪಕ್ಕದೊಳಾೞ್ವೊಕ್ಕು ಜಕ್ಕುಲಿಸಿ ಸಡಿಲ್ದು (ಚಂದ್ರಪು. ೮–೯೭).

[**ದೇ.** ॥ **ತಮಿ.** ಆೞ್; **ಮಲ.** ಆೞು]

**ಆೞ**, ಆಳ₁ (ನಾ). ಗಭೀರ; ಗಾಢತೆ: ವಿನಯೈಕಜನ್ಮಗೃಹಮಾಳ್ತನದಾಸ್ಪದಮೊಳ್ಪಿನಾೞಮಾರ್ಪಿನ ಕಣಿ (ಪಂಚತಂ. ೯–೪೩); ಸಿಂಹದವೊಲ್ ಆೞದೊಳ್ ನರಲ್ವೊಡೆ ನರಲ್ವನ್ (ಅಶ್ವತ್ಥಾ. ೧೪–೨೧). **ಆಳ₁**: ಅಂಬುನಿಧಾನದಾಳವನಱಿವುದೋ ನೊಣಂ (ಬಸಪು. ೬೦–೪೩); ರೂಪಿದೊಳ್ಳಿತು ರೇಖೆಯುಚಿತ ಕಳಾಪವತಿಹಸನಾಯ್ತು ಬಾಣಸ್ಥಾಪನಕೆ ಮೆಚ್ಚಿದೆನು ಮೇಲಣ ತೂಕದಾಳವನು (ಕುವ್ಯಾಕ. ೧೧–೪೪); ಮೀಂಗಳಾಳದೊಳ್ ಮುಳುಗಿದುವು (ಜೈಮಿಭಾ. ೩೦–೧೦); ಮಹಾಸಾಗರದ ಆಳವು ಸರ್ವತ್ರ ಒಂದೇ ಸಮನಾಗಿಲ್ಲ (ಮುಂಬಯಿ. ೪–೧೦೩); ಪರರ ಮಕ್ಕಳನ್ನು ಬಾವಿಗೆ ತಳ್ಳಿ ಆಳ ನೋಡಿದ ಹಾಗೆ (ಗಾದೆ). **೨.** (ಆಲಂ) ಒಳಗು; ಅಂತರಾಳ; ಮರ್ಮ: ಅವನ ಆಳವನ್ನೇ ತಿಳಿಯುವುದಕ್ಕಾಗುವುದಿಲ್ಲ (ರೂಢಿ).

**ಆಳವಾಗಿ ಅಭ್ಯಾಸಮಾಡು** = ಚೆನ್ನಾಗಿ ಕಲಿ; ಕೂಲಂಕಷವಾಗಿ ತಿಳಿ: ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಬಹುಆಳವಾಗಿ ಅಭ್ಯಾಸ ಮಾಡಿದ್ದರು (ಹಾಹುತ್ತ. ೫). **ಆಳವಾದ ಪಾಂಡಿತ್ಯ** = ಚೆನ್ನಾಗಿ ತಿಳಿದ ವಿದ್ವತ್ತು: ಅವರದು ಆಳವಾದ ಪಾಂಡಿತ್ಯ (ರೂಢಿ).

[**ದೇ.** ॥ **ತಮಿ. ಮಲ.** ಆೞ; **ತುಳು.** ಆಳ]

**ಆೞವಡು** (ಕ್ರಿ). ಆಳವನ್ನು ಹೊಂದು, —ಪಡೆ: ಕಮಳಕುಮುದಕುವಳಯ ಕಲ್ಹಾರ ಶೋಭಿತ ನಾಭಿದ್ವಯಸ ಪಯಸದೊಳಂ ಆೞವಟ್ಟುದಿಟ್ಟಗೊಲವನೋಲಗಿಪ ಲೀಲಾಸರೋವರಮಂ ರಾಜಹಂಸಂ ಲೀಲಾವತೀಜನ ಸಮೇತಂ ಪುಗೆ (ಚಂದ್ರಪು. ೭–೧೧೯ವ). [ಆೞ + ಪಡು₁]

**ಆೞಾೞಿ** 'ಆೞಿ₁' ಪರಾ.

**ಆೞಾೞಿಗ₁** (ನಾ). ಮಾಲೆ; ಹಾರ (?); "ಒಂದು ಬಗೆಯ ಸಾಮಾನ್ಯವಾದ ಹೂಮಾಲೆ; ಹಿಡಿದ ಪಟ್ಟನ್ನು ಬಿಡದವ" (ಶಮದ. ಮ. ಕೋಶ); "ಆೞಾೞಿಗಂ ಒಂದು ಸಾಮಾನ್ಯ ಮಾಲಾಬಂಧಂ" (ಶಮದ. ಪರಿ. ೧); "ಅೞಾೞಿಗಂ ಸಾಮಾನ್ಯದಾ ಮಾಲ್ಯಬಂಧಮದು" (ಸಂಜೀವ. ೬); ಆೞಾೞಿಗ (ಶಬ್ದಾನು. ೧೪೦ ಪ್ರಯೋ).

[ಆೞ ? + ಆೞಿಗ ?]

**ಆೞಿ₁**, ಆಳಿ₂ (ನಾ). **೧.** ಮೋಸ; ವಂಚನೆ: "ಆೞಿಯೆನಲ್ ವಂಚನೆಯೊಳ್" (ಕರ್ಣಾನಿ. ೮೧). **೨.** ಹಟಮಾರಿತನ; ಚಂಡಿ; ಮೊಂಡುತನ; ಹಿಡಿದಪಟ್ಟನ್ನು ಬಿಡದಿರುವುದು: "ಆೞಿ – ವಂಚನೆ, ಏಕಗ್ರಾಹಿತ್ವಂ (ಸಂಸ್ಕೃತದೊಳ್ ಸಖಿಯುಂ, ಸಾಲುಂ ಬರ್ಪೆಡೆ ಕ್ಷಳಂ)" (ಶಮದ. ಪರಿ. ೧); ಆೞಿಯ ಕೇೞಿಯ ನಿಮ್ಮನ್ನರೀ ಅಳ್ತನಂ ಪುಗುತೆಯಿರ್ಕುಂ (ರಾಮಾಶ್ವ. ೧೧೨–೧೭). 'ಆೞಿಗೊಳ್' ಪರಾ. **ಆಳಿ₂**. 'ಆಳಿಕಾಱ' ಪರಾ.

**ಆೞಾೞಿ** (ದ್ವಿರುಕ್ತಿ) = ಹಠಮಾರಿತನ; ಅತಿಛಲ: ಆೞಾೞಿಗೆ ಬಲ್ಲಾಳನ ದಾೞಿಯ ದಾವಣಿಯ ತುರಗದೞ ಖುರಹತಿಯಿಂ ಪೇೞೆ ಪೆಸರಿಲ್ಲದಂತಿರೆ ಪಾೞಾದುವು ವೈರಿದುರ್ಗಮೆನಿತೊಳವನಿತುಂ (ಯಶೋಚ. ೧–೧೪). [?]

**ಆೞಿ$_2$**, ಆಣಿ$_1$ (ನಾ). **೧.** ವೃತ್ತ; ದುಂಡಾಗಿರುವುದು. **೨.** ಚಕ್ರ; ಚಕ್ರಾಯುಧ. **ಆಣಿ$_1$**: **೨.** ಸೂಂಡಿಯ ಉಂಡಿಗೆಯ ಕಂ[ಮ]ಟದಾಣಿಗೆ ಸಂದ ಹೊಂನನೀ ಸ್ತಾನಿಕ ದೋ[ರು] ದಳ ಸಲುಗೆ ಹತು ದಳ ಸಲುಗೆಯೆನಿ[ತು]ದಳ ಸನ್ನಡದಳಕೆ ವೀಶವೀಶ[ಮಂ] ಲೆಕ್ಕವಿಟ್ಟು ಕೊಳ್ವುದು (ಸೌಇಇ. XI–ii, ೧೫೩–೧೬ ; 1103).

ಆಣಿಮೆಟ್ಟಿನ ಉಂಗುರ = ಕಾಲಿನ ಹೆಬ್ಬೆರಳಿನ ಉಂಗುರ (ಕಿ).
[ದೇ. ‖ ತಮಿ. ಆೞಿ]

**ಆೞಿಕಾಱ**, ಆಳಿಕಾಱ, ಆಳಿಕಾರ (ನಾ). ಮೋಸಗಾರ; ವಂಚಕ; ಕಪಟಿ: ನೀಜಸನಾತ್ಮಘಾತಕನನುತ್ಸುಕನಂ ಕ್ಷಮೆಯಿಲ್ಲದಾತನಂ ಜಾಱುವನಂ ಪಲುಂಬುವನನಸ್ಥಿರನಪ್ಪನನಾೞಿಕಾಱನಂ. . . ನೃಪನಾಳಲಕ್ಕುಮೇ (ಸೂಕ್ತಿಸು. ೧೬–೪೫). **ಆಳಿಕಾಱ**: ಆಳಿಕಾಱನೆನಗೊಬ್ಬ ಮಗ ಹುಟ್ಟಿದನೆಂದು ಆಳಿಕೆಯ ಕೆಡಲೀಸದೆ ನಡೆಸುವ ನಮ್ಮಯ್ಯ (ಬಸವ. ೭೮೮); ಹೊಗೆವಲ್ಲಿ ಹುಲ್ಲನಿಕ್ಕುವರುಂ ಆಳಿಕಾಱರುಂ ಬಂಡಾಱಕಾಱರುಂ (ಎಕ. VIII, ಸೊರಬ. ೨೬೮–೩೧ ; 1245); ಇನ್ನೇನಾಳಿಕಾಱನ ಬರವು ಹಗೆವರ ಪಾಲಿಸುವ ಭರ ಸಂಧಿಕಾರ್ಯಕೆ ಬಾರದಿರನೆಂದ (ಕುವ್ಯಾಉ. ೮–೨೬). **ಆಳಿಕಾರ** (ಸ್ಯಾಂಡರ್). [ಆೞಿ$_1$ + –ಕಾಱ]

**ಆೞಿಗುಟ್ಟು** (ಕ್ರಿ). ಹಟಮಾಡು; ಮೊಂಡುಹಿಡಿ: ಮತ್ತೊಂದು ಸಮಯದೊಳ್ ಪಾಲ್ಗುಡಿಯಲೊಲ್ಲದಾೞಿಗುಟ್ಟುವ ದಾಮೋದರನಂ ಯಶೋದೆ ಕಂಡು (ಜಗವಿ. ೩–೫೧ ವ). [ಆೞಿ$_1$ + ಕುಟ್ಟು$_1$]

**ಆೞಿಗೊಳ್**, ಆಳಿಗೊಳ್$_2$, ಆಳಿಗೊಳು (ಕ್ರಿ). **೧.** ವಂಚಿಸು; ಮೋಸಗೊಳಿಸು: "ವಂಚನಂ, ಅತಿಸಂಧಾನಂ, ವ್ಯಳೀಕಂ, ಪ್ರತಾರಣಂ – ಈ ೪ ಆೞಿಗೊಳ್ವುದು" (ಹಲಾಯು. ೧೨೩–೬೩); ಕಮಲಗರ್ಭನುಮಂ ಖಳನಾೞಿಗೊಂಡನೋ (ಲೀಲಾವ. ೧–೩೯). **೨.** ಮೋಸಹೋಗು: ಮಿಡುಕುವಿನಂ ಪ್ರಾಣಿಗಳಂ ಮಡಿಪಿದೊಡಂ ದೋಷಮಿಲ್ಲ ದೇವಾರ್ಚನೆಯುಳ್ಳೊಡೆ ಸಾಲ್ಗುಮೆಂಬ ಮುನಿಗಳ ನುಡಿಯಂ ಕೇಳ್ದಾೞಿಗೊಳ್ಳದಿರ್ಪರೆ ಚದುರರ್ (ಸಮುಪ. ೧೪–೮೧). **೩.** ಮೊಂಡುಹಿಡಿ; ಹಠಮಾಡು: ಒರ್ವಂ ತನ್ನ ಕಾಂತೆಯೊಳ್ ಕೈಕೊಂಡ ಪೊಲ್ಲಮೆಯ ಕಳೆಯಲ್ಕೆಂದು ನಲ್ಲಳ ಕಾಲ್ಗೆಱಗೆ, ಎಱಕಂ ಚಿತ್ತದೊಳಿಲ್ಲ ಕಾಲ್ಗೆಱಗಿ ನೀನೇಕಾೞಿಗೊಂಡಿರ್ಪೆ (ಜಗವಿ. ೧೬–೧೨೦ ವ, ೧೨೧); ಇಲ್ಲಿಯ ತಾಯ್ಮಕ್ಕಳ್ ತಾಮೊರ್ವರನಾೞಿಗೊಂಬುದರ್ಕೆನಿತಾನುಮಟಮಟಂಗೆಯ್ದಪರ್ (ಚಿಕವಿ. ೬–೯೫ ವ). **ಆಳಿಗೊಳ್$_2$**: **೧.** ಅಧರಾಮೃತವನಿತ್ತಾಳಿಗೊಂಡನು ತನ್ನ ನಾರಿಗೆ (ನಿಭಾಗ. ೧೦–೮೮–೨೦). **೪.** ಹಿಂಸಿಸು; ಕೋಟಲೆಯುಂಟುಮಾಡು: ಶೀಲಶೀಲವೆಂಬನಿ (೯?) ಲಿಗವಾರ್ತೆಯ ಬೇಳುವೆ ಬಾಲರಾಳಿಯಂತೆ ಆಳಿಗೊಂಡಿತ್ತು [ಪಾಠಾಂ. ಗೊಡದು, ಗೊಂಡುದು] ಹೇಳಕೇಳಲಿಲ್ಲದ ವಾಳಾವಳಿಯ ಬಱಿಯ ಶಬ್ದ ಬಯಲ ಹೋರಟೆ (ಅವಚಂ. ೭೪–೩೨೬); ಶುನಕ ಮೊಗೆವಾಲಂ ಕುಡಿದು ಪೋಗೆ ಆಳಿಗೊಳುತ ಬಡಿವರಲ್ಲದೆ ಲಾಲಿಸುವರೇ (ಬಸಪು. ೧–೨೦); ಓಲಗಿಸಲಾನಱಿಯೆನನ್ಯರನಾಳಿಗೊಳಲೇಕೆ (ನಿಭಾಗ. ೩–೯–೧). **ಆಳಿಗೊಳು**: **೧.** 'ಆಳಿಗೊಳುಹ' ಪರಾ. [ಆೞಿ$_1$ + ಕೊಳ್$_1$]

**ಆೞಿಜನ** (ನಾ). ಮೋಸಗಾರ; ವಂಚಕ: ಅರಿಸಮಾಸಂ ಮಾರ್ಗದೊಳುಳ್ಳವರ್ಕೆ – ಇರ್ಬಲಂ, ಪೆರ್ಬಲಂ, ಆೞಿ[ಪಾಠಾಂ. ಳಿ] ಜನಂ (ಶಮದ. ೧೭೪ ಪ್ರಯೋ). [ಆೞಿ$_1$ + ಜನ]

**ಆೞಿಸು**, ಆಳಿಸು$_3$ (ಕ್ರಿ). ಮುಳುಗಿಸು; ಮಗ್ನವಾಗುವಂತೆ ಮಾಡು: ಆಗಡೆ ನಾಗಲೋಕ ವಿಭವಂಗಳೊಳಾೞಿಸಿ (ಪಂಪಭಾ. ೪–೧೭); ಮರುತ್ತೇಕೊಯ್ಯದಾಯ್ತೊ ಮೋರ್ದಲ್ ಜಲಮೇ ಕಾೞಿಸದಾದುದೋ (ಕಾದಂಉ. ೫೭೪). **ಆಳಿಸು$_3$**: ಒಬ್ಬರೊಬ್ಬರನೊಬ್ಬರೊಬ್ಬರಾಳಿಸುತ ಮತ್ತೊಬ್ಬರೊಬ್ಬರ ಮೊಗದೊಳಗೆ ಒಬ್ಬರೊಬ್ಬರು ನೀರಚೆಲ್ಲುತಾಡಿದರಂದುಬ್ಬಿನಿಂ ನೀರಾಟವನು (ಕುರಾಸಾಂ. ೨೭–೧೦೯); ಕೇಳಿದೊಡೆ ಸಾಕವರ ಕಿವಿಯುಮಂ ಮನಮುಮಂ ಕೋಳಹಿಡಿದೊಡನೆ ನಿರ್ಮಲಿಸ ನವರಸಮಹಾದುಗ್ಧವಾರಾಶಿಯೊಳಗೆ ಆಳಿಸದೆ ಬಿಡದೆನ್ನ ಕೃತಿ (ಚೆಬಪು. ೧–೩೫); ಕುಳಮಂ ನೀರೊಳಾಳಿಸಿದ ದುರ್ವಾರಕಿಯ ಬಸುರೊಳು ಜಾತಮಾದುದಕಾನು ಲೋಕನಿಂದಕನಾದೆ (ವೆಂಕಾರಾ. ೨–೨೮–೩೧).
[ಆೞ್ + –ಇಸು$_3$]

**ಆೞ್ಕುಳಿ** (ನಾ). ಆಡುವುದೇ ಶೀಲವಾಗಿ ಉಳ್ಳವನು: ಮಾೞ್ಪುದು ಶೀಲಮಿಾತಂಗೆ ಮಾೞ್ಕುಳಿ. ಏವಂ ಆೞ್ಕುಳಿ, ಪೋರ್ಕುಳಿ (ಶಬ್ದಾನು. ೫೪೫ ಪ್ರಯೋ). [< ಆಡು$_1$ + –ಕುಳಿ$_3$]

**ಆೞ್ತೆ** (ನಾ). ಮುಳುಗುವಿಕೆ; ಮಗ್ನವಾಗುವಿಕೆ: ಬಾೞ್ತೆ, ಆೞ್ತೆ, ಆೞ್ತೆ (ಶಬ್ದಾನು. ೧೪೦ ವ್ಯಾಖ್ಯಾ). [ಆೞ್ + –ತೆ]

**ಆೞ್ದೂಱು** (ನಾ). ಒಂದು ಊರಿನ ಹೆಸರು: ಆೞ್ದೂಱ ತಮ್ಮಡಿಗಳ ಸನ್ಯಸನದಿನಿತಮ್ಮಜ್ಜಯಾ ನಿಸಿಧಿಗೆ (ಎಕ. II, ೧೫–೧ ; 800).
[ಆೞ್ದ ? + ಊಱು ?]

**ಆೞ್ದಿಕಲ್ನಾಡು** (ನಾ). ಒಂದು ಸೀಮೆಯ ಹೆಸರು: ಸ್ವಸ್ತಿಶ್ರೀ ಆೞ್ದಿಕಲ್ನಾಡು × × × ಪುನ್ನಾಡರಸರಾ ಮಗನ್ದಿರ್ ಸೀಮರ್ಸರ (ಎಕ. IX, ದೇವನ. ೪೧–೧ ; 900). [?]

**ಆೞ್ಮ** 'ಆಳ್ಮ' ನೋ.

**ಆೞ್ವರ್** 'ಆೞ್ವಾರ್' ನೋ.

**ಆೞ್ವಾರ್**, ಆಳುವಾರು, ಆಳ್ವಾರ್, ಆಳ್ವಾರು, ಆೞ್ವರ್ (ನಾ). ಭಗವಂತನ ಭಕ್ತಿಯಲ್ಲಿ ಮುಳುಗಿದವರು, —ಮಗ್ನರಾದವರು; ದೈವಧ್ಯಾನದಲ್ಲಿ ಲೀನರಾದವರು: ಪೇೞ್ವೆಂ ಪನ್ನಿರ್ವರುಮೆನಿಪ್ಪಾೞ್ವಾರ ಪವಿತ್ರಮಾದ ಚಾರಿತ್ರಮಂ (ದಿವ್ಯಚ. ೧–೨೯). **ಆಳುವಾರು**: ಬರೆಯಿಸಿದನದಱಿನೊರುಮುಕ್ಕಾಳುವಾರು ತದ್ಗುರು ಕುಲೋದ್ಭವ ಚಿದ್ಘನಾರ್ಯರಡಿಗಂಡೆವೈ (ಭಾವಚಿಂ. ೨–೨೫). **ಆಳ್ವಾರ್**: ಶೈವಮತದ ನಾಯನಾರರಂತೆಯೇ ವೈಷ್ಣವಮತವನ್ನು ಪ್ರಚಾರಗೊಳಿಸಿದ ಹನ್ನೆರಡು ಮಂದಿ ಆಳ್ವಾರರೆಂಬ ಭಕ್ತರು ದ್ರವಿಡದೇಶದಲ್ಲಿ ಪ್ರಸಿದ್ಧರಾಗಿದ್ದಾರೆ (ಭಾಇಪ್ರ. ೨೬೯); ಆಳ್ವಾರರಿಂದ ವೈಷ್ಣವ ಶಾಖೆಯೂ . . . ಅಭಿವೃದ್ಧಿಗೆ ಬಂದವು (ಕಭವಿ. II, ೫). **ಆಳ್ವಾರು**: ಸನ್ನುತದೆಂಬೆರುಮಾನಾರು ಹರುಷದೆ ಪನ್ನೆರಡಾಳ್ವಾರುಗಳು ಪನ್ನಗಶಯನಿಗೆ ಕರಕಮಲವ ಮುಗಿದು (ಕಂನವಿ. ೭–೯೯). **ಆೞ್ವರ್** (ಕಿ). ℙ ತಮಿಳುನಾಡಿನ ವಿಷ್ಣುಭಕ್ತಿ ಪಂಥದ ಹನ್ನೆರಡು ಮಂದಿ ಆಚಾರ್ಯರ ಹೆಸರು.

ಆೞ್ವರಾನಾರ್ = ಭಕ್ತರಾದವರು; ಭಕ್ತರು: ಸ್ವಸ್ತಿಶ್ರೀ ವನಿತಾಲಯರ ಆೞ್ವರಾನಾರದಿ[ಡಿ]ಗೆ ಕಕ್ಕಿವಳ್ಳಿಯೋನ್ ಪುಕ್ಕೊಳ್ಳಿ ಕೊಟ್ಟು (ಎಕ. VI, ಮೂಡಗೆ. ೨೬–೩ ; 950).

[←ತಮಿ. ಆೞ್ವಾರ್. / **ಮಲ.** ಆೞವಾರ್, ಆಳ್ವಾರ್; **ತೆಲು.** ಆಳುವಾರು, ಆಳ್ವಾರು]

# ಇ



**ಇ$_1$** (ನಾ). ಕನ್ನಡ ವರ್ಣಮಾಲೆಯ ಮೂರನೆಯ ವರ್ಣ; ಇಕಾರ: ಅ ಆ ಇ ಈ . . . ಎಂಬೀ ಪದಿನಾಲ್ಕುಂ ಸ್ವರಂಗಳ್ (ಶಮುದ. ೫ ವೃತ್ತಿ).

**–ಇ$_2$** (ಪ್ರ). ಸ್ತ್ರೀವಾಚಕ ಪ್ರತ್ಯಯ: ನಿಡುಗಣ್ಣಿ, ನಿಡುಮೆರಲಿ, ಸುರ್ಕುರ್ಗುಂಗುರುಳಿ, ಕರಿಕಿ, ಬಿಳಿಕಿ, ಮುದುಕಿ (ಶಬ್ದಾನು. ೧೯೪ ಪ್ರಯೋ).

**–ಇ$_3$** (ಪ್ರ). ಬಹುವ್ರೀಹಿ ಸಮಾಸದ ಕೊನೆಯಲ್ಲಿ ಸೇರುವ ಪ್ರತ್ಯಯ: ಇತ್ವಕ್ಕೆ – ಕಡುಗೆಲಸಿ, ನಿಡುಮೂಗಿ, ಚಲವಾದಿ, ಕೃತ್ತನಾಸಿ, ಕಡುಚಾಗಿ (ಶಮುದ. ೧೮೬ ಪ್ರಯೋ).

**ಇ$_4$** (ನಾ). ೧. ಕಾಮನ ಒಂದು ಹೆಸರು. ೨. ನೂರು ಎಂಬ ಸಂಖ್ಯೆಯ ಸಂಕೇತ. [ಸಂ.]

**ಇಂ** 'ಇನ್' ನೋ.

**ಇಂಕರ, ಇಂಕ್ರ** (ನಾ). ಸ್ವಲ್ಪ; ಕೊಂಚ: ಸ್ಮರವೀಥಿ ಕತ್ತುರಿಯನು ಇಂಕರ ಸೋಂಕದೆ ಕರುವಿಟ್ಟ ಪುತ್ತಳಿಗಳಿಗೆ (ಚಂಪ್ರಸಾಂ. ೬-೬೧); ಇಂಕರನಾರೂ ಬಾವಣಿಸಬೇಕಲ್ಲ ನನ್ನ ಮಾತಾ? (ಸರ್ವಮಂ. ೧೭). **ಇಂಕ್ರ**: ಔಸ್ದೀಗ್ ಇಂಕ್ರ ಬೇಕಂದ್ರೂನೆ ಔಳ್ತಾವಿಲ್ಲ ಕೋಪ (ರತ್ನಪ. ೫೪); ಇಂಕ್ರಾನೂ ಸಂದೇಹ ಬರಲಿಲ್ಲ ಸೇಠಗೆ (ಚೆಂಗೂಚೆ. ೮೬). [?]

**ಇಂಕಾರ್, ಇನ್ಕಾರ್** (ನಾ). ನಿರಾಕರಣೆ; ಅಲ್ಲಗಳೆಯುವಿಕೆ; ತಿರಸ್ಕಾರ. **ಇನ್ಕಾರ್** (ಕ).

**ಇನ್ಕಾರ್‌ಮಾಡು** = ನಿರಾಕರಿಸು; ಅಲ್ಲಗಳೆ; ತಿರಸ್ಕರಿಸು: "ವಿಪ್ರಲಂಭ, ವಿಸಂವಾದ . . . ನ್ಯಾಯವನ್ನು ಇನ್ಕಾರ್ (ಇನ್‌ಕಾರ್) ಮಾಡಿ ಮಾತಾಡುವುದರ ಹೆಸರುಗಳು" (ಸಿದ್ಧಾಂತಿ. ೬೩).

[← ಮರಾ. ಅರ. ಇನ್‌ಕಾರ್]

**ಇಂಕು** (ನಾ). ಮಸಿ; ಶಾಯಿ: ಇಂಕಿನಿಂದಲೇ ಸಹಿ ಮಾಡಬೇಕು (ರೂಢಿ). [← ಇಂ. Ink]

**ಇಂಕೆ** (ನಾ). ಇಂಗುವಿಕೆ; ಆರುವಿಕೆ; ಬತ್ತುವಿಕೆ: "ಇಂಗುವುದಕ್ಕಿಂಕೆ" (ಕವಿಕಂ. ೨೫೩). [ಇಂಗು$_1$ + –ಕೆ$_1$]

**ಇಂಕೆಂಡಿಕುಂಟೆ** (ನಾ). ಒಂದು ಊರಿನ ಹೆಸರು: ಆಹಾರದಾನಕ್ಕಂ ಸಿಂಘಪರಿಶೆ ಬ್ರಹ್ಮೇಶ್ವರ ಕಾಲ[ಂ] ಕರ್ಚ್ಚಿ ಇಂ[ಕೆಂಡಿ]ಕುಂಟೆಯಂ ಧಾರಾಪೂರ್ವಕಂ ಮಾಡಿಕೊಟ್ಟರ್ (ಕಇಅ. ೨೦-೫-೧೪ ; 1031).

[ಇಂಕೆಂಡಿ$_0$ + ಕುಂಟೆ$_2$]

**ಇಂಕೆವರ್** (ಕ್ರಿ). ಇಂಗಿ ಬರು; ಆರಿಕೆ ಬರು; ಬತ್ತು: ಇಂಕೆವಂದೆಯ್ದೆ ಕಂಪಳ್ ಮುಸಗುತ್ತುಂ ಬತ್ತೆ ತೆರ್ಪಂಬಡೆದಱುಗೆಱೆಗಳ್ (ಜಗವಿ. ೧೭-೬೨). [ಇಂಕೆ + ಬರ್$_1$]

**ಇಂಕ್ರ** 'ಇಂಕರ' ನೋ.

**ಇಂಗಡ** (ನಾ). ಪ್ರತ್ಯೇಕವಾಗಿರುವಿಕೆ: ಆಕೆ ಜನಾನಿಹೆಂಗಸು, ಮರೆಯಾಗಿ ಕೂತುಕೊಳ್ಳಬೇಕು, ಆದಕ್ಕೆ ಬೇರೆ ಇಂಗಡವಾದ ಒಂದು ಕೊಠಡಿಯನ್ನು ಬಿಡಿಸಿದ್ದರೆ ಸಾಕು (ಮುಸುಗ. ೭೨). [< ವಿಂಗಡ]

**ಇಂಗಡಲ್, ಇಂಗಡಲು, ಈಂಗಡಲ್** (ನಾ). ಕ್ಷೀರಸಾಗರ; ಹಾಲ್ಗಡಲು: "ಇಂಗಡಲೆಂದು ಪಾಲ್ಗಡಲೊಳಾಯ್ತು" (ಕರ್ಣಾನಿ. ೨೧); ಮಂದರದಿಂ ಕಡೆದಿಂಗಡಲಿಂದುಣ್ಮಿದ ಸುಱಿಯಿದೆನೆ (ಕಾದಂಪೂ. ೫೯೧); ಭಾನುವನಿಂಗಡಲಂ ಮದದಾನೆಯನದಟಲೆವದೊಂದು ಕೇಸರಿಯಂ (ಅರ್ಧನೇ. ೨-೧೮); ಇಂಗಡಲ ಬಿಡದೆ ಕಡೆವಂದು ಪುಟ್ಟಿದ ಪದಾರ್ಥಂಗಳಂ (ಹಚಕಾ. ೩-೨೮); ಇಂಗಡಲೊಡನಾಡಿಯೊ (ರಾಜಶೇ. ೧-೭೧). **ಇಂಗಡಲು**: ಸಿಂಗರದ ಕರುವೊ ಮುಕ್ತಿಯ ಗುರುವೊ ಮೋಹರಸದಿಂಗಡಲೊ ಸುಕೃತದೊಡಲೋ (ಚೆಬಪು. ೧೯-೬); ಇಂಗಡಲಿನ ಮೇಲೆ ಮಲಗಿದ ಕೃಷ್ಣನ ಸಂಗಕೆ ಬಹ ಲಕ್ಷ್ಮಿಯಂತೆ (ಜೀವಂಸಾಂ ೨-೮೪); ಇಂಗಡಲಿಂ ಸೊದೆ ಮೂಡುವ ತೆರದಿ (ಗಣೇಶ. ೧೬-೪೧೩). **ಈಂಗಡಲ್**: ಈಂಗಡಲೊಳಗೋಲಾಡುವ ಮೀಂಗಳ ಬಳಗಂಗಳೆಂಬಿನಂ (ಪಂರಾಮಾ. ೭-೧೬೩); ಈಂಚರಂ, ಈಂಗಡಲ್, ಈಂಬುಳಿ (ಭಾಷಾಭೂ. ೧೩೮ ಪ್ರಯೋ); ಈಂಗಡಲ್ಗೆ ಫೇನಪಿಂಡಂ (ಉದ್ಭಟ. ೧೦-೩೭ವ); ಈಂಚರಂ, ಈಂಬುಳಿ, ಈಂಗಡಲ್ (ಶಮುದ. ೧೮೦ ಪ್ರಯೋ).

**ಇಂಗಡಲಕುವರ, ಇಂಗಡಲಗುವರ** = ಕ್ಷೀರಸಾಗರದಲ್ಲಿ ಹುಟ್ಟಿದವನು; ಚಂದ್ರ: "ಇರುಳರಸನಿಂಗಡಲಕುವರನೈದಿಲ್ಗೆಳೆಯ . . . ಶಶಿಯ ನಾಮಂ" (ಕಬ್ಬಕೈ. ೪೩); "ಇಂಗಡಲಗುವರಂ ಚಂದ್ರನಕ್ಕು" (ಕಶರ. ೧೪). **ಇಂಗಡಲಕುವರಿ** = ಕ್ಷೀರಸಾಗರದಲ್ಲಿ ಹುಟ್ಟಿದವಳು; ಲಕ್ಷ್ಮಿ: ಇಂಗಡಲಕುವರಿಯರಸಂ (ಶಬ್ದಾನು. ೩೮೩ ಪ್ರಯೋ); ಇಂಗಡಲಕುವರಿ ತಾಂ ಪಡೆದಂಗಜಶಿಶುಗೆಱೆಯಲಿಟ್ಟ ಪಾಲ್ಬೆಣ್ಣೆಯವೊಲ್ (ಚಿಕವಿ. ೬-೨೫). **ಇಂಗಡಲಕುವರಿಯರಸ, ಇಂಗಡಲಕುವರಿಯೆಱೆಯ** = ವಿಷ್ಣು: "ರಕ್ಕಸವಗೆಯಂ ಮುನ್ನೀರ್ವಕ್ಕೆಗನಿಂಗಡಲಕುವರಿಯೆಱೆಯಂ . . . ಹರಿಯಕ್ಕುಂ" (ಚತುನಿ. ೭). **ಇಂಗಡಲಣುಗ** = ಚಂದ್ರ: ಇಂಗಡಲಣುಗನ ಕೂಡಿದ ಪತಂಗನು ತಾಮಸದಿವಸವ ಮೆಱೆದಂತೆ (ಚೆನ್ನವ. ಕ. ೧೦೭೫). **ಇಂಗಡಲಣುಗಿ** = ಕ್ಷೀರಸಾಗರದಲ್ಲಿ ಹುಟ್ಟಿದವಳು; ಲಕ್ಷ್ಮಿ: "ಇಂಗಡಲಣುಗಿಯು ಸಿರಿ ತಾಂ ಸಂಗತಿಯಿಂ ನೋಡೆ ಲಕುಮಿ ಲಕ್ಷ್ಮಿಯೆನಿಕ್ಕುಂ" (ಕವಿಕಂ. ೨೬); ಇಂಗಡಲಣುಗಿಗಿಂದಿರೆಗೆ . . . ಎಱಗುವೆನು (ಹದಿಬ. ೨-೨). **ಇಂಗಡಲಸುತೆ** = ಇಂಗಡಲಕುವರಿ: ಇಂಗಡಲ ಸುತೆಯ ಪೆಂಪಂ ಭಂಗಿಸುವ ವಿಳಾಸಂ (ಎಕ. V, ಅರಸೀ. ೬೨-೩೩ ; 1277). **ಇಂಗಡಲಳಿಯ, ಈಂಗಡಲಳಿಯ** = ಕ್ಷೀರಸಾಗರದ ಅಳಿಯ; ವಿಷ್ಣು: "ಇಂಗಡಲಳಿಯನೆನಲದುವುಪೇಂದ್ರಂಗೆ ಪೆಸರ್" (ಕಶರ. ೧೩); "ಆರಲ್ವೊಡೆಯಂ . . . ಈಂಗಡಲಳಿಯಂ, ಸಿರಿಯರಸಂ . . . ಈ ೧೨ವಿಷ್ಣುಗೆ ಪೆಸರ್" (ಕಶಸಾ. ೧-೯). [< ಇನಿದು + ಕಡಲ್$_2$]

**ಇಂಗಡಲು** 'ಇಂಗಡಲ್' ನೋ.

**ಇಂಗಣ$_1$** 'ಇಂಗಳ$_1$' ನೋ.

**ಇಂಗಣ$_2$** (ನಾ). (?): ಇನ್ನುಂ ನರಗನನೆನಾಳುವುದೆನ್ದು ಅನ್ತೆಗೆಯ್ವೆನೆನ್ದು ಪ್ರಸಾದಮೆನ್ದು ಇಙ್ಗಣಮುೞಿಯೆ ನರಗನಿೞಿಯೆ ತನ್ನಱಿಯನುಂ ತನ್ನ ಮಕ್ಕಳುಂ . . . ಪೆರ್ಮ್ಮಾಡಿಯ ಬೆಸದೊಳಿಱಿದು ನರಗನೊಳಿಱಿದು ಕಾದಿ ಸತ್ತರ್ (ಎಕ. VI, ಕಡೂರು. ೧೪೭-೬ ; 972). [?]

**ಇಂಗಣೆಯ** (ನಾ). ಸವಿಯಾದ (ಮೃದುವಾದ) ಬಾಣಗಳನ್ನುಳ್ಳವನು; ಮನ್ಮಥ: "ಅನಂಗನಿಂಗಣೆಯನೆಂದು" (ಕರ್ಣಾನಿ. ೯೩).

[< ಇನಿದು + ಕಣೆ$_1$ + –ಅ$_7$]

**ಇಂಗದಿರ್** (ನಾ). ಅಮೃತಕಿರಣ; ಚಂದ್ರನ ಕಿರಣ: ಇಂಗದಿರಿಂದೆ ನೆಯ್ದುದೆನಲಪ್ಪ ದುಕೂಲದ ಕಮ್ಮನಪ್ಪ ಬೆಳ್ದಿಂಗಳೆನಲ್ಕೆ ಬರ್ಪ (ವರ್ಧಪು. ೬-೪೯); ನೆಱೆದಿಂಗಳಿಂಗದಿರ ಸೊಂಪತಿನೂತನಂ (ಪುಷ್ಪಪು. ೧-೪೦); ಬಂದು ಇಂಗದಿರ್ಗಳಂ ಕಾಣ್ಕೆಗೊಟ್ಟು (ಕಬ್ಬಿಕಾ. ೧೪೩); ನೆಱೆದಿಂಗಳಿಂಗದಿರನು ಹರುಷದಲಿ ಹಾರೈಸಿ ಸವಿಯುಲೆಯ್ತಪ್ಪ ಬಂಧುರ ಚಕೋರನಂತೆ (ಸೌಂದಪು. ೮-೮೭). [< ಇನಿದು + ಕದಿರ್]

**ಇಂಗದಿರ** (ನಾ). ಅಮೃತಕಿರಣಗಳುಳ್ಳವನು; ಚಂದ್ರ: ನುಂಗಲೊಡರ್ಚಿದ ರಾಹುವನಿಂಗದಿರಂ ನುಂಗೆ (ಚಿಕವಿ. ೬-೨೯); ಇಂಗೋಲನ ತಾಯಿಗಿಂಗದಿರನ ತಂಗಿಗಿಂಗಡಲಣುಗಿಗಿಂದಿರೆಗೆ . . . ಎಱಗುವೆನು (ಹದಿಬ. ೨-೨). [ಇಂಗದಿರ್ + -ಅ₇]

**ಇಂಗದಿರುಣಿ** (ನಾ). ಬೆಳುದಿಂಗಳನ್ನು ಉಣ್ಣುವ ಹಕ್ಕಿ; ಚಕೋರ. 'ಇಂಗದಿರುಣಿವಱಿ' ಪರಾ. [ಇಂಗದಿರ್ + -ಉಣಿ]

**ಇಂಗದಿರುಣಿವಱಿ** (ನಾ). ಚಕೋರ ಪಕ್ಷಿಯ ಮರಿ: ಇಂಗದಿರುಣಿವಱಿವಿಂಡಿಂಗೆ ತಾಂ ಘೃಷ್ಟಿ (ಚಿಕವಿ. ೬-೨೭). [ಇಂಗದಿರುಣಿ + ಮಱಿ]

**ಇಂಗದಿರ್ಗಲ್** (ನಾ). ಚಂದ್ರಕಾಂತ ಶಿಲೆ. 'ಇಂಗದಿರ್ಗಲ್ವಳಿಕು' ಪರಾ. [ಇಂಗದಿರ್ + ಕಲ್₂]

**ಇಂಗದಿರ್ಗಲ್ವಳಿಕು** (ನಾ). ಚಂದ್ರಕಾಂತ ಶಿಲೆಯ ಹಳುಕು: ದರಹಸಿತ ಜ್ಯೋತ್ಸ್ನೆಯಿಂ ಈಕ್ಷಿಪ ನೃಪವರರೆರ್ದೆಯೆಂಬ ಇಂಗದಿರ್ಗಲ್ವಳಿಕಂ ಕರಗಿಸಿ (ಜಯಕಾ. ೫-೪೯). [ಇಂಗದಿರ್ಗಲ್ + ಪಳಿಕು]

**ಇಂಗದಿರ್ವಕ್ಕಿ** (ನಾ). ಚಕೋರಪಕ್ಷಿ: ಇಂದುವಿನ ಲೇಖೆಯಂ ಕಂಡಿಂಗದಿರ್ವಕ್ಕಿಯಂತೆ (ಉದ್ಭಟ. ೩-೪೨ ವ). [ಇಂಗದಿರ್ + ಪಕ್ಕಿ]

**ಇಂಗದಿರ್ವಟ್ಟು** (ನಾ). ಚಂದ್ರಮಂಡಲ: ಇಂಗದಿರ್ವಟ್ಟಂ ಕಂಡಿಂಗದಿರ್ವಕ್ಕಿಯಂತೆ (ಉದ್ಭಟ. ೧೧-೫೫ ವ). [ಇಂಗದಿರ್ + ಬಟ್ಟು₁]

**ಇಂಗರೀಜ** 'ಇಂಗ್ರಜ' ನೋ.

**ಇಂಗರೆಜಿ** 'ಇಂಗ್ರೇಜಿ' ನೋ.

**ಇಂಗರೆಜಿತಿಂಗಳು** (ನಾ). ಇಂಗ್ಲೆಂಡ್ ದೇಶದವರ ಕಾಲಗಣನೆಯ ಪ್ರಕಾರದ ತಿಂಗಳು; ಜನವರಿ, ಫೆಬ್ರವರಿ ಮೊದಲಾದ ತಿಂಗಳು: ಬಹುಧಾನ್ಯ ಸಂವತ್ಸರದ ಪುಷ್ಯ ಶುದ್ಧ ೫ ಶುಕ್ರವಾರ ಗುರ್ರೆ ಜನವರಿ ಅರಭ್ಯಾ ಯಿಂಗರೆಜಿತ್ತಿಂಗಳ ಕಾಯದೆ ಮೇರೆಗೆ (ಮೈ ಆರಿ. ೧೯೩೪, ೨೩-೨೯; 1819). [ಇಂಗರೆಜಿ (< ಇಂಗ್ರೇಜಿ) + ತಿಂಗಳು (< ತಿಂಗಳ್)]

**ಇಂಗಲ** 'ಇಂಗಳ್₁' ನೋ.

**ಇಂಗಲಿಕೆ** 'ಇಂಗುಲಿಕ' ನೋ.

**ಇಂಗಲೀಕ** 'ಇಂಗುಲಿಕ' ನೋ.

**ಇಂಗಲೀಷು** 'ಇಂಗ್ಲೀಷು' ನೋ.

**ಇಂಗಲು₁** 'ಇಂಗಳ್₁' ನೋ.

**ಇಂಗಲು₂** (ನಾ). ರಸವು ಬತ್ತಿ ಹೋಗಿರುವ ವಸ್ತು; ಒಣಕಲು: ಈರುಳ್ಳಿ ಇಂಗಲಾಗಿ ಹೋಗಿದೆ (ರೂಢಿ). [ಇಂಗು₁ + -ಅಲು (< -ಅಲ್₂)]

**ಇಂಗಳ್₁**, ಇಂಗಣ₁, ಇಂಗಲ, ಇಂಗಲು₁, ಇಂಗಟಿ (ನಾ). ೧. ಬೆಂಕಿ; ಕೆಂಡ: ಲಲಾಟದಿನಿಂಗಳಗಣ್ಣದೆತ್ತವೋದುದೊ (ಗದಾಯು. ೪-೫೦); ಅತ್ವಕ್ಕಿತ್ತಂ – ಅಂಗಾರ – ಇಂಗಳ (ಶಮುದ. ೨೬೯ ಪ್ರಯೋ); ಮಂಗಳದ ಬೆಳಿಗಿಂಗಳದ ಮಳೆ ಸುರಿದುದೆ ಮಹಾದೇವ (ಕುವ್ಯಾ ಆ. ೭-೩೭); ಮಂಗಳದ ಬೆಳಿಗ್ಯೆಯಲಕಟಕಟಂಗಳದ ಮಳೆಗಱೆದ ತೇಜನಾಯ್ತು (ನಿಭಾಗ. ೧೦-೨-೯). ೨. (ಆಲಂ) ಸಂತಾಪ; ಸಂಕಟ: ಸಚರಾಚರಕೆ ಮಂಗಳವಾಯ್ತು ಯಿಂಗಳವಾಯ್ತು ಸುರಪತಿಗೆ (ನಿಭಾಗ. ೫-೩-೧೭). **ಇಂಗಣ₁**: ೧. ಕುಣಿದುವಾ ಕುಡಿಮಿಾಸೆ ಬಿಡದಿಂಗಣವನು ಗುಳಿದುವಕ್ಷಿ (ತೊರಂ. ೧-೧೭-೯). **ಇಂಗಲ**: ೧. ಕಂಗಳಲಿ ಕೆಂಗಿಡಿಯು ಮುಖದಲಿ ಯಿಂಗಲಗಳುದುರಿದುವು (ಕೋಗಯ. ೧೦-೨೨). **ಇಂಗಲು₁**: ೧. ಪೆಚ್ಚಿದಡವಿಗೆ ಯಿಂಗಲಾವರಿಸಿ ಕಡುಕಾಡುಗಿಚ್ಚು ಕವಿವಂದದೊಳು (ತುರಂಗ. ೭೨-೪). **ಇಂಗಟಿ**: ೧. ಅಂಗಾರಂ, ಇಂಗಟಿಂ (ಶಬ್ದಾನು. ೧೪೦ ವ್ಯಾಖ್ಯಾ). [ಪ್ರಾ. ಇಂಗಾರ, ಇಂಗಾಳ, / ಸಂ. ಅಂಗಾರ]

**ಇಂಗಳ್₂** (ನಾ). ಗಾರೆಗಿಡ; ಇಂಗುದೀವೃಕ್ಷ: ಬಿಲ್ಪಲ್ಲತ್ತಿ ಮುಳ್ಮುತ್ತ ವಂಕೊಲೆ ಕಾಚ್ಮೆಣಸಿಂಗಳಂ ಕೊಸಗು ಗೇರ್ ಕಕ್ಕೆ ಬಿದಿರ್ಕಮ್ಮರಂ (ಸೂಕ್ತಿಸು. ೩-೨೩); ಮಾವಿಂಗಳಂ ಬೇಲ ಬೊಬ್ಬುಲಿ (ಯಾದಮಾ. ೪-೫೨); ಇಂಗಳದ ಮುಳ್ಳನ್ನು . . . ಹಚ್ಚಿ ಬಂದೋಬಸ್ತು ಮಾಡಬೇಕು (ಕೃಷಿಪ್ರ. ೧೩೨); ಇಂಗಳದ ಹಣ್ಣು ಮತ್ತು ಮಯಣಗಳನ್ನು ಅರೆದು ಕುಡಿಯಲು ರಕ್ತಕಾಸ ಗುಣವಾಗುವುದು (ಸಕವೈ. ೪೩೪). [< ಸಂ. ಇಂಗುಲ]

**ಇಂಗಳಂಗೊಳ್** (ಕ್ರಿ). ಬೆಂಕಿ ಹತ್ತಿಕೊಳ್ಳು; ಉರಿಯತೊಡಗು: ಮುನ್ನಿನ ಹಾಂಗಿರದೆ ಹೊಗೆ ಛಾಯೆಗೆಟ್ಟೊಡೆ ಇಂಗಳಂಗೊ[ಪಾಠಾಂ.ಕೊ]ಳದಿರ್ದೊಡಂ ಮಿಕ್ಕುರಿವುತಿರ್ದೊಡೆಯು (ಬಸಪು. ೪೪-೨೭). [ಇಂಗಳ್₁ + ಕೊಳ್₁]

**ಇಂಗಳಗಣ್**, ಇಂಗಳಗಣ್ಣು (ನಾ). ಬೆಂಕಿಯನ್ನು ಕಾರುವ ಕಣ್ಣು; ಅಗ್ನಿನೇತ್ರ: ದ್ರುಪದಾತ್ಮಜಾತನೋವದೆ ಪುಡಿಯೊಳ್ಪೊರಳ್ಚಿ ತಲೆಯಂ ತೆಗೆವಲ್ಲಿ... ಲಲಾಟದಿನಿಂಗಳಗಣ್ಣದೆತ್ತವೋದುದೊ (ಗದಾಯು. ೪-೫೦). **ಇಂಗಳಗಣ್ಣು**: ಧೂರ್ಜಟಿಯ ಪಣೆಯೊಳ್ ಎರಕವೆನೆ ತೋರುವಿಂಗಳಗಣ್ಣೊ (ವೆಂಕಾರಾ. ೫-೨-೧೮). [ಇಂಗಳ್₁ + ಕಣ್]

**ಇಂಗಳಗಣ್ಣ** (ನಾ). ಬೆಂಕಿಯ ಕಣ್ಣುಳ್ಳವನು; ಉರಿಗಣ್ಣ; ಕೆಂಡಗಣ್ಣ; ಶಿವ: "ಗೊರವಂ . . . ಮಾದೇವ ಗನಹನಿಂಗಳಗಣ್ಣ ಕಿಡಿಗಣ್ಣನು" (ಕಬ್ಬಿಕೈ. ೪); "ಇಂಗಳಗಣ್ಣ ಸಾಂತ ಪಂದಲೆವಚ್ಚ ಗಂದರಗಿವಿಯನೀಸರಂ" (ಶಬ್ದಮಂ. ೩). [ಇಂಗಳಗಣ್ + -ಅ₇]

**ಇಂಗಳಗಣ್ಣು** 'ಇಂಗಳಗಣ್' ನೋ.

**ಇಂಗಳಗಾಣ್** (ಕ್ರಿ). ಬೆಂಕಿಯನ್ನು ಕಾಣು, —ಸೋಕು: ಅಘಂಗಳ ಪತ್ತಿ ರಾಸಿಗಳು ಇಂಗಳಗಂಡವೊಲಳಿವುದೆನಲ್ಕದೆನ್ನಂಗದೊಳಿರ್ದೆಯೊಳೊಲ್ದಿರ್ಕೆ (ಶತಸಾಂ. ೨-೭). [ಇಂಗಳ್₁ + ಕಾಣ್]

**ಇಂಗಳಗುವರ** (ನಾ). ಬೆಂಕಿಯ ಮಗ; ಷಣ್ಮುಖ: "ಆ ಗುಹಂಗಕ್ಕುಮಿಂಗಳಗುವರನೆಂದು ಪೆಸರ್" (ಕಶರ. ೧೨). [ಇಂಗಳ್₁ + ಕುವರ್₂]

**ಇಂಗಳಮಗ** (ನಾ). = ಇಂಗಳಗುವರ: "ನವಿಲ್ದೇರನಿಂಗಳಮಗಂ . . . ಗುಹನ ಪೆಸರಪ್ಪುದು" (ಶಬ್ದಮಂ. ೫). [ಇಂಗಳ್₁ + ಮಗ]

**ಇಂಗಳಾಂಬಕ** (ನಾ). ೧. ಬೆಂಕಿಗಣ್ಣು; ಶಿವನ ಹಣೆಗಣ್ಣು: ಉನ್ನತಮಹಾಕೋಪದಿಂದಿಂಗಳಾಂಬಕವ ತೆರೆಯಲುರಿದಾ ಮಾರನು (ನವಮೋ. ೭-೩೫). ೨. ಬೆಂಕಿಗಣ್ಣು ಉಳ್ಳವನು; ಶಿವ. [ಇಂಗಳ್₁ + ಅಂಬಕ]

**ಇಂಗಳಿಸರ** 'ಇಂಗಳೇಶ್ವರ' ನೋ.

**ಇಂಗಳೀಕ** 'ಇಂಗುಲಿಕ' ನೋ.

**ಇಂಗಳೇಶ್ವರ**, ಇಂಗಳಿಸರ (ನಾ). ಒಂದು ಊರಿನ ಹೆಸರು: ಸುರರಾಜಾರ್ಚಿತನಿಂಗಳೇಶ್ವರಪುರ ಶ್ರೀತೀರ್ಥಚಂದ್ರಪ್ರಭಂ (ಚಂದ್ರಪು. ೧-೫೨). **ಇಂಗಳಿಸರ**: ಕೃಷ್ಣಬೆಣ್ಣೋಱೆತ್ತರ ಪಥೇ ಬಾಸುರಿಕೋಡು ಇಂಗಳಿಸರ ಬಾಗೆವಾಡಿ ಸಾವುಳವಾಡಿಗೆ (ಸೌಇಇ. XI–i, ೮-೧೭; 862). [ಇಂಗಳ್₁ + ಈಶ್ವರ]

**ಇಂಗಟಿ** 'ಇಂಗಳ್₁' ನೋ.

**ಇಂಗಾಲ** (ನಾ). ೧. ಇದ್ದಲು. ೨. 'ಕಾರ್ಬನ್' ಎಂಬ ಅಲೋಹ ಮೂಲಧಾತು: ಆಮ್ಲಜನಕದ ಒಂದು ಪರಮಾಣು ಜಲಜನಕ, ಇಂಗಾಲ, ಸಾರಜನಕ ಮುಂತಾದ ಮತ್ತೊಂದು ಪರಮಾಣುವಿನ ಮೇಲೆ ಬಗೆಬಗೆಯಾಗಿ ಪ್ರಭಾವವನ್ನುಂಟುಮಾಡುವುದು ಸಹ ಒಂದು ಮೂಲ ರಹಸ್ಯ ಅಥವಾ ಸಂಬಂಧ (ಜೀವಾತ್ಮ. ೧೦೩). [ಪ್ರಾ. ಇಂಗಾಲ, / ಸಂ. ಅಂಗಾರ]

**ಇಂಗಾಲಾಮ್ಲ** (ನಾ). ಒಂದು ಸಂಯುಕ್ತ ಅನಿಲ; "ಒಂದು ಪ್ರಮಾಣದ ಇಂಗಾಲವೂ ಎರಡು ಪ್ರಮಾಣದ ಆಮ್ಲಜನಕವೂ ಕೂಡಿ ಆದ ಸಂಯುಕ್ತ ಅನಿಲ" (Carbon dioxide. ಇಂಕನಿ); ಭೂಮಿಯ ಮೇಲಿರುವ ಸಸ್ಯಗಳು ಗಾಳಿಯಲ್ಲಿರುವ ಇಂಗಾಲಾಮ್ಲವನ್ನೂ ನೀರಿನಲ್ಲಿರುವ ಸಸ್ಯಗಳು ನೀರಿನಲ್ಲಿ ಬೆರೆತುಕೊಂಡಿರುವ ಇಂಗಾಲಾಮ್ಲವನ್ನೂ ಉಪಯೋಗಿಸಿಕೊಳ್ಳುತ್ತವೆ (ಸಸ್ಯಶಾ. ೧೦೪).
[ಇಂಗಾಲ + ಆಮ್ಲ]

**ಇಂಗಾಲಾಮ್ಲವಾಯು** (ನಾ). ಇಂಗಾಲಾಮ್ಲವೆಂಬ ಅನಿಲ: (Carbonic acid. ಇಂಕನಿ); (Carbonic acid gas. ಪಾರಿನಿ. ೧೨).
[ಇಂಗಾಲಾಮ್ಲ + ವಾಯು]

**ಇಂಗಿ** (ನಾ). ಬೆರಗು; ಗಾಬರಿ (?): ದೇವ ಪಯಣಂಗಳಾವೆಡೆ ಮತ್ತೆ ದಾರಮೇಲ್ ಮನವಾಯ್ತೆನುತ ಶ[ಸೆ]ರಗಂ ಪಿಡಿಯಲು ಇಂಗಿಯಾದನು ಪಾರ್ಥ ನಾರಿ ಕೇಳ್ ಮತ್ತಾವ ಹೆಂಗಳಲಿ ಮನವಿಲ್ಲ ಬಿಡು ಶ[ಸೆ]ರಗೆನುತ (ತುರಂಗ. ೧೫-೨೪).
[< **ಸಂ.** ಇಂಗ = ಬೆರಗು, ಗಾಬರಿ, ಇಂಗಿತ. ℙ **ತುಳು.** ಇಂಗಿ = ವಕ್ರ, ಕೊಂಕು]

**ಇಂಗಿಣಿಮರಣ** 'ಇಂಗಿಣೀಮರಣ' ನೋ.

**ಇಂಗಿಣೀ** (ನಾ). ಒಂದು ನದಿಯ ಹೆಸರು: ಮಾತ್ಯ ಸರಿತ ಆರಭ್ಯ ಅ ಇಂಗಿಣೀ ಸಂಗಮಾತ್ (ಮುಂಬರಾ. IX, ೧೩೭-೩; ?). [**ಸಂ.**]

**ಇಂಗಿಣೀಮರಣ**, ಇಂಗಿಣಿಮರಣ (ನಾ). [ಜೈನ] ಹತ್ತೊಂಬತ್ತು ಬಗೆಯ ಮರಣಗಳಲ್ಲಿ ಒಂದು ಬಗೆ; ಯತಿಯು ಸಂಘವನ್ನು ಬಿಟ್ಟು ಏಕಾಂತಸ್ಥಳದಲ್ಲಿ ಇದ್ದು ಆಹಾರತ್ಯಾಗಮಾಡಿ ತನ್ನ ಉಪಚಾರಗಳನ್ನು ತಾನೇ ಮಾಡಿಕೊಂಡು, ಉಪಸರ್ಗಬಂದಾಗ ಸ್ವೋಪಚಾರವನ್ನು ಬಿಟ್ಟು ಸಮತೆಯಿಂದ ಮರಣಹೊಂದುವುದು: ಚತುರ್ವಿಧಮಪ್ಪಾಹಾರ ಶರೀರಮುಮಂ ತೊಱೆದಿಂಗಿಣೀಮರಣದಿಂ ಶುಭಪರಿಣಾಮದೊಳ್ ಕೂಡಿ (ವಡ್ಡಾರಾ. ೧೯೨-೧೦); ಇಂಗಿಣೀಮರಣವೊಂದು ತಿಂಗಳಿಂ ಸಾಧಿಸಿದೊರ್ (ಕೊಪ್ಪಶಾ. ೭-೧; 1010). **ಇಂಗಿಣಿಮರಣ**: ಕ್ರಮದಿನ್ದಂ ಕಡುಪಮಿಜ್ಗಿಣಿಮರಣದೊಳೊಡಲಂ ತಾವೆ ನೋನ್ತು ಸಿಂಹಣನ್ದ್ಯಾಚಾರ್ಯರ್ ಮುಡಿಪಿದೆಡೆ [ಯೊಳ್] ಬೆಡೆಂಗಂ ಪಡೆದಿರೆ ಮಾಡಿಸಿ ಜಿನೇನ್ದ್ರಚೈತ್ಯಾಳಯಮಂ (ಕಇಆ. ೬೨-೮-೧೦; 1008).
[**ಪ್ರಾ.** ಇಂಗಿಣೀಮರಣ. / **ಸಂ.** ಇಂಗಿನೀಮರಣ]

**ಇಂಗಿತ** (ನಾ). ಆಶಯ; ಮನೋಗತ; ಅಭಿಪ್ರಾಯ: ಬಗೆದಿಂಗಿತ ಚೇಷ್ಟಾಕಾರ ಗತಂಗಳಿನಂತರಂಗದೊಳ್ಮಿಱಿದುದಂ ಮಿಗೆ ಸೂಚಿಸುವುದು (ಕವಿರಾ. ೩-೧೧೭); ಲಿಂಗದಿಂದುದಿಸಿ ಅಂಗವಿಡಿದಿಪ್ಪ ಪುರಾತನರ ಇಂಗಿತವನೇನೆಂದು ಬೆಸಗೊಂಬಿರಯ್ಯಾ (ಮಹಾದೇ. ೪೯-೧); ಉಪಾಧ್ಯಾಯರು ಮಕ್ಕಳಿಗೆ ನೀಡುವ ಸಲುಗೆ, ಅವರ ಇಂಗಿತವನ್ನು ಅರಿತ ಬೋಧನಕ್ರಮ ... ಕಲಿಯಲು ತಕ್ಕ ಸನ್ನಿವೇಶವನ್ನು ಸೃಷ್ಟಿಸುತ್ತವೆ (ಶಿಕ್ಷದ. ೪೯೧).
[**ಸಂ.**]

**ಇಂಗಿತಕೊಡು** 'ಇಂಗಿತಗುಡು' ನೋ.

**ಇಂಗಿತಗುಡು**, ಇಂಗಿತಕೊಡು (ಕ್ರಿ). ಗುಟ್ಟಾಗಿ ಅಭಿಪ್ರಾಯವನ್ನು ಕೊಡು, —ಸೂಚಿಸು: (ಹಿಂದಾಗಿ, ಇಂಗಿತಗುಡುವನು) (ಬಿಟ್ಟಆ. ೩೨-೩). **ಇಂಗಿತಕೊಡು**: ಅವಳು ತನ್ನ ಮನದೊಳಗೇ ನೆನೆದುಕೊಂಡಳು, 'ಇಂದು ಬೆಳಗಿನಿಂದಲೇ ನನ್ನ ಮನ ನನಗೆ ಇಂಗಿತಕೊಟ್ಟು ಹೇಳುತ್ತಿದೆ, ಇಂದು ನನಗೆ ಕಾಗದ ಬಂದೇ ಬರುವುದೆಂದು ...' (ಇಪ್ಪಕ. ೨೮೮). [ಇಂಗಿತ + ಕುಡು (< ಕೊಡು)]

**ಇಂಗಿತಜ್ಞ** (ನಾ). ಬೇರೆಯವರ ಅಭಿಪ್ರಾಯವನ್ನು ಊಹಿಸಿ ತಿಳಿದವನು; ಮನೋಭಿಪ್ರಾಯವನ್ನು ಅರಿತವನು: ನಿಪುಣಂ ಕೂರ್ಪರನಿಂಗಿತಜ್ಞನೆನಿಸುಂ ಕ್ಲೇಶಕ್ಷತಂ ಶೌಚಿ ... ಸಂದ ವಿದೂಷಕಂ ಸ್ಮರಕಳಾರಾರಾಜಿತಂ ಪೂಜಿತಂ (ಮದತಿ. ೧೦-೩೯). [**ಸಂ.**]

**ಇಂಗಿತಜ್ಞತೆ** (ನಾ). ಇತರರ ಅಭಿಪ್ರಾಯವನ್ನು ತಿಳಿಯುವಿಕೆ: "... ಅದು ನನಗೂ ಗೊತ್ತಿದೆ" ಎಂದು ... ಇಂಗಿತಜ್ಞತೆಯಿಂದ ಜನರ ಮನಸ್ಸನ್ನು ಮುಂದಾಗಿಯೇ ಅರಿತುಕೊಳ್ಳುವವನಂತೆ ನಕ್ಕನು (ಪುನರು. ೩೪೨). [**ಸಂ.** ಇಂಗಿತಜ್ಞತಾ]

**ಇಂಗಿತಜ್ಞಾನ** (ನಾ). ಬೇರೊಬ್ಬರ ಮನಸ್ಸಿನಲ್ಲಿರುವುದನ್ನು ಊಹಿಸಿ ತಿಳಿದುಕೊಳ್ಳುವುದು: ಇಂಗಿತಜ್ಞಾನವಿಲ್ಲದ ಬಂಧುಪರಿವಾರ ಹಂಗಿಸುವ ಛಲವುಳ್ಳ ಸತಿಪುತ್ರಸಖರು (ಮಂಕುಕ. ೧೭೬).
[ಇಂಗಿತ + ಜ್ಞಾನ]

**ಇಂಗಿತವ್ಯಂಗ್ಯ** (ನಾ). ಸೂಚ್ಯವಾದ ವ್ಯಂಗ್ಯ; ಮಾತಿನಲ್ಲಿ ಅಡಗಿರುವ ವ್ಯಂಗ್ಯ: ಪ್ರತ್ಯುತ್ತರದ ಇಂಗಿತವ್ಯಂಗ್ಯಕೊಂದಿನಿತೆ ನಕ್ಕು (ಶ್ರೀರಾಮಾ. ೫೪೯-೨೫೭). [ಇಂಗಿತ + ವ್ಯಂಗ್ಯ]

**ಇಂಗಿತಾಕಾರ** (ನಾ). "ಮನೋಭಾವ, ಮನದಿಂಗಿತವನ್ನು ಸೂಚಿಸುವ ರೂಪ" (ಶೂನ್ಯಸಂ. ಕೋಶ). [ಇಂಗಿತ + ಆಕಾರ₂]

**ಇಂಗಿಲಿಕನಕುಪ್ಪೆ** (ನಾ). ಒಂದು ಊರಿನ ಹೆಸರು: ಬಳಿಗಾರ ಕುಲಬೀವಿಸೆಟ್ಟಿಗಂ ಬೋಕಬ್ಬೆಗಂ ಪುಟ್ಟಿದಂಗಿಬಮ್ಮಣಂ ಇಂಗಿಲಿಕನಕುಪ್ಪೆಯ ಸಯಂಬು ದೇವರಿಗೆರಡು ಬಟ್ಟಾರ ದೇವಾಲ್ಯವಂ ಮಾಡಿಸಿದಂ(ಎಕ. XIV, ಶ್ರೀರಂಗ. ೩೪-೬; 1126). [?]

**ಇಂಗಿಲೀಷು** 'ಇಂಗ್ಲೀಷು' ನೋ.

**ಇಂಗಿಸು** (ಕ್ರಿ). ೧. ಇಂಗಿ ಹೋಗುವಂತೆ ಮಾಡು; ಬತ್ತಿಸು; ಒಣಗಿಸು: ಸೇನಾವಿಸರ ಪದಹತ ಧೂಳೀವಿಸರ ವಿಬುಧತರಂಗಿಣಿಯನಿಂಗಿಸಿತು (ತೊರರಾ. ೩-೬-೧೭); ಕೆಂಗೆಯ ಹನುಮಂ ಕಿಱುನೆರವಿಂಗೆಳಸದೆ ವಿಜಯಪುರದ ಶಾಹನ ದಱಮಂ ಬೆಂಗೊಂಡು ಬಳೆದ ದೂಳಿಯೊಳಿಂಗಿಸಿದಂ ಗಡಿಗಳವರ ಸಂಗರರಸಮಂ (ಚಿಕವಿ. ೨-೯೨); ಇದೆ ಇಲ್ಲೆಂಬುವ ವಾದವ ಇಂಗಿಸುವ ವಿಚಿತ್ರ (ಜೀವಲ. ೩-೮); ಅಕ್ಕಿಯನ್ನು ಒಂದೇ ಸಲ ತೊಳೆದು ಇಂಗಿಸುವ ಪದ್ಧತಿ (ಗೃಹವಿ. ೫೦). ೨. ಕಳೆ; ಹಿಂಗಿಸು; ಹೋಗಲಾಡಿಸು: ನೂರಾರು ಬುಧರು ... ತೃಷೆಯನಿಂಗಿಪರು (ಇಂಚಾಪ. ೫೩-೫೪). [ಇಂಗು₁ + -ಇಸು₃]

**ಇಂಗು₁** (ಕ್ರಿ). ೧. ಒಣಗು; ಬತ್ತು: "ತಾನಿಂಗುವುದಕಿಂಕೆ" (ಕವಿಕಂ. ೨೫೩); ಮೈಮೆ ಮಡಿಯಿತ್ತುತ್ಸಾಹಮಿಂಗಿತ್ತು (ಗಿರಿಕ. ೮-೧೬೨); ತೈಲವಿಂಗಿದ ದೀಪ್ತಿಗೆ ಉದಕವಜಿತ ಘನ ತಟಾಕಕ್ಕೆ (ಹಚಕಾ. ೯-೨೪); ಆಜದ ಸೇದೆ ಮಗ್ಗುಲಿಕ್ಕದ ಪುಳಕಂಗಳಿಂಗದ ಬೆಮರ್ (ಸೂಕ್ತಿಸು. ೮-೧೬೨); ಬೆಣ್ಣೆಯನಿಕ್ಕಿ ಕಾಸಲದು ನೀರಿಂಗಿ ಪೊಸಗಿಣ್ಣಿನ ಪರಿಯಾಗಲಂತಲ್ಲಿ (ಸೂಪಶಾ. ೪-೭). ೨. ಅಡಗು; ಹುಗಿದುಹೋಗು; ನಾಶವಾಗು: ಉರುಕೃಪೆಯೊಳಿಂಗಿರ್ದ ಕಂಗಳಂ ಕೊಟ್ಟು ಪಾಲಿಸಿದ ಕರುಣಾಸಾಗರ (ಕೊಟ್ಟೂಬ. ೩-೧೪).

**ಇಂಗಿಹೋಗು** = ಬತ್ತಿಹೋಗು: ನಿನ್ನ ಬಿಟ್ಟು ಅನ್ಯಕೆನ್ನ ಮನವೆಳಸಿದ ದಿನ ಈ ಕಣ್ಣು ಕುರುಡಾಗಿ ಹೋಗಲಿ ನಿನ್ನ ತೇಜದಿಂದ ನಿನ್ನ ದಿವ್ಯದರ್ಶನದಿಂದ ಅಲ್ಲಿಯೇ ಇಂಗಿಹೋಗಲಿ (ಜಗದಾ. ೧೨).
[**ದೇ.** ‖ **ತಮಿ.** ಇಙ್ಙು; **ತುಳು.** ಇಂಗು; **ತೆಲು.** ಇಂಕು, ಇಗುರು, ಇವುರು, ಇಮುರು, ಇನುಕು, ಈಕು]

**ಇಂಗು₂** (ಕ್ರಿ). ಕೊಡು: ಭಟ್ಟರೇ ಕ್ಷೇಮವೋ ಎಂದರೆ ಎರಡು ದುಡ್ಡು ಇಂಗಿ ಎಂದ (ಗಾದೆ. ೬). [< **ಕ್ಯ.** / **ತಮಿ.** ಇಗು; **ತೆಲು.** ಇಚ್ಚು]

**ಇಂಗು₃** (ನಾ). **೧.** ಒಂದು ಗಿಡದ ಹೆಸರು (ಓಷಧಿ. ೫; ವೈನಿಘ. ೩೮-೭೪೮). **೨.** (ಅಡಿಗೆಗೂ ಔಷಧಕ್ಕೂ ಉಪಯೋಗವಾಗುವ) ಒಂದು ಮರದ ಹಾಲಿನಿಂದ ದೊರೆಯುವ ವಸ್ತು; ಹಿಂಗು: ಉಪ್ಪಿಲ್ಲಣೆಂಗು ಸಾಸವೆ ತಪ್ಪಿಲ್ಲದ ಮೆಣಸು ಸುಂಟಿ ಪೊಸ ಸುಣ್ಣಮಿವಂ ಚಪ್ಪರಿಸಿ ಬಡಿದು ಮೆಯ್ಯಂ ಸೊಪ್ಪಾಗಿರೆ ಮೋದಿ ಪೂಸುವರ್ ನಿರ್ದಯೆಯಿಂ (ಧರ್ಮಾಮೃ. ೩-೭೧); ಇಂಗಿನ ಪೆಟ್ಟಿಗೆಗೆ ಇಂಗು ಗದ್ಯಾಣಂ ತೂಕವಾಜು (ಎಇ. XIII, ೨೨-೫೫; 1204); ಕರಿಬೇವು ಬಡಗ ಸಂಡಗೆಯಿಂಗು ಕಡಲೆವಿಟ್ಟರಿಸಿನದ ಹುಡಿ (ಸೂಪಶಾ. ೪-೧); ಗಳಿಲನೆ ಬಡಿಸಲೊಗ್ಗರಣೆಯಿಂಗಿನ ಕಂಪು ಸುಳಿದುದು (ಮೋಹತ. ೩-೫೪); ಹೊಗೇಸೊಪ್ಪು ಯಿಂಗು ಜೀರಿಗೆ (ಎಕ. VIII, ತೀರ್ಥಹ. ೭೨-೧೬; 1711); ಇಂಗು ಮೆಣಸ್ಯಾಲಕ್ಕಿ ಮೇಣ ಸಾಂಬ್ರಾಣಿಗಳನು (ಅರ್ಚಾವಿ. ೩೧-೩೪). ಇಂಗುತಿನ್ನಿಸು = ಮೋಸಮಾಡು. ಇಂಗಿನವಲೆ = "ಕಾರವಿ, ಬಾಷ್ಪಿಕೆ" (ನಾಚಿರಾ. ಕಿ); ಇಂಗಿನೆಲೆ ಮುಸ್ತೇಯುಳಿಲೆ ಲವಂಗಂ ಬಜೆ (ಅಶ್ವಶಾ. ೬-೧೪). ಇಂಗುಹಚ್ಚು = **೧.** (ಕಣ್ಣಿಗೆ) ಇಂಗನ್ನು ಬಳಿ, —ಸವರು. **೨.** ವಂಚಿಸು; ಮೋಸಮಾಡು. [< ಸಂ. ಹಿಂಗು]

**ಇಂಗುಣಮೇಡು** (ನಾ). ಒಂದು ಊರಿನ ಹೆಸರು: ಬಟಾರರು ಕೊಟ್ಟುದು ಇಙ್ಗುಣಮೇಡಿನೊಳ್ ಒಕುಳಂ ಕಟಿನಿ ಸರ್ವ್ವಪರಿಹಾರಂ (ಎಕ. X, ಶ್ರೀನಿವಾ. ೨೬-೨೬; 870). [?]

**ಇಂಗುಣಿಗೆಱೆ** (ನಾ). ಒಂದು ಕೆರೆಯ ಹೆಸರು: ಬಮ್ಮಣವಾಡ ಕುಟುಕವಾಡದ ಮುಗ್ಗುಡ್ಡೆಯ ಇಂಗುಣಿಗೆಱೆಯ ಕೆಳಗೆ ನಟ್ಟಕಲ್ (ಎಇ. XIII, ೩೦-೪೦; 1204). [ಇಂಗುಣಿ₀ + ಕೆಱೆ]

**ಇಂಗುದ** (ನಾ). = ಇಂಗುದಿ: "ಇಂಗುದ, ಇಂಗುದಿ, ತಾಪಸತರು – ಇಂಗುಳದ ಮರ" (ನಾಚಿರಾ. ಕಿ). [ಸಂ.]

**ಇಂಗುದಿ** (ನಾ). ಗಾರೇಗಿಡ; "ಇಂಗಳದ ಗಿಡ" (ಸಿದ್ಧಾಂತಿ. ೧೦೬). [ಸಂ. ಇಂಗುದೀ]

**ಇಂಗುದೀತೈಲ** (ನಾ). ಇಂಗುಳದ ಬೀಜದಿಂದ ತೆಗೆದ ಎಣ್ಣೆ: ಆಶ್ರಮವು ಇಂಗುದೀತೈಲದ ದೀಪಗಳಿಂದ ಬೆಳಗತೊಡಗಿತು (ನಾಗಕಾ. ೮); ಹಾಗಾದರೆ ಆಕೆಯನ್ನು ಜಾಗ್ರತೆಯಾಗಿ ಕಾಪಾಡಿಕೊ. ಇಂಗುದೀತೈಲದಿಂದ ಜಿಡ್ಡಾದ ತಲೆಯುಳ್ಳ ಯಾವನಾದರೂ ಒಬ್ಬ ದರಿದ್ರನಾದ ಕಾಡು ಮನುಷ್ಯನ ಕೈಗೆ ಬಿದ್ದಾಳು (ಶಾಕುಂತ. ೨೫-೧೨). [ಸಂ. (ಇಂಗುದೀ + ತೈಲ)]

**ಇಂಗುದೀಫಲ** (ನಾ). ಇಂಗುಳದ ಹಣ್ಣು: ಇಂಗುದೀಫಲವಿಭೇದದೆ ನುಣ್ಪಿಡಿದಿರ್ಪ ಕಲ್ಗಳುಂ (ಶಾಕುಂತ. ೧-೧೪). [ಸಂ. (ಇಂಗುದೀ + ಫಲ)]

**ಇಂಗುಲಿ** (ನಾ). = ಇಂಗುಲಿಕ (ಓಷಧಿ. ೧೩೬). [< ಸಂ. ಹಿಂಗುಲ]

**ಇಂಗುಲಿಕ**, ಇಂಗಲಿಕ, ಇಂಗಲೀಕ, ಇಂಗಳೀಕ, ಇಂಗುಲೀಕ, ಇಂಗುಳಿಕ, ಇಂಗುಳೀಕ (ನಾ). **೧.** ಪಾದರಸದಿಂದ ಆದ ಒಂದು ಅದಿರು; ಹಿಂಗುಳ: ಕರ್ಪೂರತೈಲಾಹ್ವಮಿಂಗುಲಿಕಂ ನಾಗರಮಿಪ್ಪೆ (ಖಮುದ. ೬-೮). **೨.** ನೀಲಿಯ ಬಣ್ಣದ ಒಂದು ಔಷಧ ದ್ರವ್ಯ (ಕಿ). **೩.** ಒಂದು ಬಣ್ಣ; ಕೆಂಪು ಬಣ್ಣ: ದ್ವಿಗುಣಿಸೆ ಪತ್ತಿದಿಂಗುಲಿಕದಿಂ ನಖದೀಧಿತಿ (ಮಲ್ಲಿಪು. ೫-೨೯). **ಇಂಗಲಿಕ: ೧.** "ಹಿಂಗೂಳಕ – ಇಂಗಲಿಕ" (ಶಬ್ದಾನು. ೧೬೦ ವ್ಯಾಖ್ಯಾ); ಇಂಗಲಿಕವು ಮಣಿಶಿಲೆಯು ಅಂಗಡಿಯೊಳು ಮಾರುತಿಹ ಬೇಹಾರಿಗರು ಕಂಗೊಳಿಸಿದರು (ಅಬ್ಬಲೂ. ೩-೭೬). **ಇಂಗಲೀಕ: ೧.** ಸೌಗಂಧಿಕಂ ಕಪ್ಪಿನೊಡವೆರದ ಕೆಂಪನ್ನು ಕೂಡಿರ್ಪುವಲತಿಗೆಯ ರಸದ ಪೊಲಿಂಗಲೀಕ ತನ್ನಿಚ್ಛೆಯೊಳ್ ಬೆಳದ ಚಿತ್ರಮೂಲದ ಪುಷ್ಪ ಕುಂಕುಮಮಂಜಿಷ್ಟೆಯಂತೆ (ರತ್ನಶಾ. ೧೦-೧೦); ಇದಕ್ಕೆ ಇಂಗಲೀಕ (Cinnabar Sulphide of Mercury) ವನ್ನು ಲಿಂಬೆಹಣ್ಣಿನ ರಸದಲ್ಲಿ ನುಣ್ಣಗೆ ಅರೆದು ಹಚ್ಚುವುದು (ಮನೆಮ. ೧೦೧). **ಇಂಗಳೀಕ: ೧.** ಪಾರಜ, ಗಂಧಕ . . . ಇವೆರಡುಗಳ ರಸಾಯನ ಮಿಶ್ರಣವಾಗಿ ಇಂಗಳೀಕವೆಂಬ ಮಿಶ್ರಪದಾರ್ಥ ಹುಟ್ಟುತ್ತದೆ (ಮುಂಬಯಿ. ೬-೮). **೩.** ಹರಿದಳ, ಇಂಗಳೀಕ, ಅಭ್ರಕ ಇವೇ ಆಗಿನವರು ಉಪಯೋಗಿಸುತ್ತಿದ್ದ ಬಣ್ಣಗಳು (ಕನ್ನನು. ೧-೯೪). **ಇಂಗುಲೀಕ: ೧.** "ಮ್ಲೇಚ್ಛಂ– ಇಂಗುಲೀಕ" (ಓಷಧಿ. ೧೨೯). **ಇಂಗುಳಿಕ: ೧.** "ಅನ್ಯಮಾರಕಂ– ಇಂಗುಳಿಕ" (ಓಷಧಿ. ೮). **೩.** ನಯುಮುಳವಟ್ಟೆ ಪಚ್ಚೆ ಸಹಕಾರದೊಳಿಂಗುಳಿಕಂ ತಳಿರ್ತಶೋಕೆಯೊಳರಿದಾಳಮುಳ್ಳಲರ್ದ ಸಂಪಗೆಯೊಳ್ (ಶಾಂತಿಪು. ೧-೬೪); ಇಂಗುಳಿಕದಣ್ಕೆಯಿಂ ನಯನಂಗಳ್ . . . ರಂಜಿಸೆ (ಮಲ್ಲಿಪು. ೫-೩೬); ಅಂತು ಬಂದಾ ಚಿತ್ರಿಕ ನಿಜಾಂಗುಳಿಯೊಳ್ ಪೊರೆದಿಂಗುಳಿಕಂ ಕೇಸರಿಯ ಕೆಂಬೊಗರಂ ದ್ವಿಗುಣಿಸೆ (ಧರ್ಮನಾ. ೩-೧೧೩). **ಇಂಗುಳೀಕ: ೧.** (ಕಿ). [< ಸಂ. ಹಿಂಗುಲಿಕಾ]

**ಇಂಗುಲೀಕ** 'ಇಂಗುಲಿಕ' ನೋ.

**ಇಂಗುಳ** (ನಾ). ಗಾರೆಗಿಡ; ಇಂಗುದೀವೃಕ್ಷ: ಆಮ್ರಂ ಬೆಳಲಿಂಗುಳಂ ಪನಸು ನಿಂಬಂ ಜಂಬು ಜಂಬೀರಕಂ (ಕಾವ್ಯಸಾ. ೧೦೪೦ ಶೂದ್ರಕ); ಕುರುಟಗೆ ಯಿಂಗುಳಂ ತವಸಿಯೆರ್ಕೆಯ ಪಾ(ಲ್ಮೆಣಸ)ಲೆಸೆವಶ್ವಗಂಧಿ ನಾಗರಮಮರೇಂದ್ರ ವಾರುಣಿಯೆನಿಪ್ಪವನೆಣ್ಣೆಯೊಳಟ್ಟು ಬಿಟ್ಟೊಡಂ (ಲೋಕೋಪ. ೯-೨೧೪); ಕಮ್ಮರ ದಾರ ಕೇರ ನೇಳಲ ಸಿರಿತಾಳೆ ಯಿಂಗುಳದ ನೆಲ್ಲಿಯ ನೀಪದ ಸೋಲೆಯಾಲದಿಂ (ಲೀಲಾವ. ೬-೨೧); ಇಂಗುಳದ ಬೇರಿನೊಳು ವಂಗವನು ಬೆರಸಿದರೆ ಅಂಗನೆಯು ತನಗೆ ವಶವಕ್ಕು ವೈರಿತಾ ಸಂಗಾತಿಯಕ್ಕು (ಸರ್ವಜ್ಞ. ೧೯೭೮); ಇಂಗುಳದ ಮೇಣವಂ ನಿಂಬೇಹುಳಿಯಲ್ಲಿ ಅರೆದು ಪೂಸಲು ಸಕಲವಿಧವಾದ ವ್ರಣ ಮಾಣ್ಗುಂ (ವಿವೈವಿ. ೨). [ಸಂ. ಇಂಗುಲ]

**ಇಂಗುಳವಡಿ** (ನಾ). ಒಂದು ಪ್ರಾಂತದ ಹೆಸರು: ಯಿಂಗುಳವಡಿಯ ಸೀಮೆ (ಎಕ. XIV, ಗುಂಡ್ಲುಪೇ. ೧೪೬-೧; ?). ℙ ಇಂದಿನ 'ಇಂಗಳವಾಡಿ' ಎಂಬ ಊರು. [ಇಂಗುಳ + ವಡಿ₀ (< ಪಾಡಿ ?)]

**ಇಂಗುಳಿಕ** 'ಇಂಗುಲಿಕ' ನೋ.

**ಇಂಗುಳೀಕ** 'ಇಂಗುಲಿಕ' ನೋ.

**ಇಂಗೂಟ** (ನಾ). ಸೊಗಸಾದ ಕೂಟ; ಸಂಭೋಗ: ಬಸಮಾದ ಗಂಡರಿಂಗೂಟಮೆ ತೋಟಿಯೆಂದು (ಲೀಲಾವ. ೧೪-೪೦); ಪೊಂಗುತ್ತಿರೆ ನಾಣ್ಚಾಣಂ ಸೂಳ್ವದದಿಂಗೂಟಂ ಗಡಿಗೆಟ್ಟರಲ್ (ಉದ್ಭದೇ. ೪-೨೮). [< ಇನಿದು + ಕೂಟ₁]

**ಇಂಗೊರಲ್**, ಇಂಗೊರಳ್, ಈಂಗೊರಲ್ (ನಾ). ಇಂಪಾದ ಧ್ವನಿ; ಮಧುರವಾದ ಕಂಠ: ಅಂತೊಂದೆ ಕೊರಲೊಳ್ ಕೊಳೆ ಪಾಡುವ ಬರ್ಬರಕಿರಾತೆಯರಿಂಗೊರಲೊಳೊದವಿ ಬಂದೆರ್ದೆಯನಳ್ಳಿವಿಳ್ಳೆಯಾಗಿ ಪಿಡಿದಲುಗುವಂತಲುಗೆ (ಶಾಂತಿಪು. ೨-೨೨ವ); ಎಂಬಿನೆಗಮಿಂಗೊರಲೊಳ್ಕೊಳೆ ಪಾಡಿಯಾಡಿ ರಂಜಿಸಿತೊ ಸಭಾಜನಂಗಳ ಮನಂಗಳನಾ ದಿವಿಜಾಂಗನಾಜನಂ (ಅಜಿಪು. ೫-೩೮); ಒಳದೊಂಡಿನ ಪಾಲ್ಗಳುಮಂ ಪೀರ್ದಿಂಗೊರಲ್ಗಳಾದ ನೀರ್ವ್ವಕ್ಕಿಗಳ ಸುಸಿಲಮುಸಕದಿಂಚರಂಗಳುಮಂ (ಕಾದಂಉ. ೫೨೬); ಮಾಂಗಾಯ ಗೊಂಚಲೊಳಗುಳಿದಿಂಗೊರಲಿಂದುಲಿವ ಗಂಡುಗೋಗಿಲೆ (ಕಾವ್ಯಾವ. ೨೫೦). **ಇಂಗೊರಳ್:** ಅಂಗನೆಯರನು ಪಡಿಯಜತಿಯರು ಸಂಗೊಳಿಸಿ ಜಡಿಕೆಯಿದು ನಿಲಿಸಿದರಿಂಗೊರಳ ನುಣ್ಚರದಿ ಹೊಹೊ ಗಲಭೆ ಬೇಡೆಂದು (ಸಾಳ್ವಭಾ. ೨೦-೨೬). **ಈಂಗೊರಲ್:** ಈಂಗೊರಲ್, ಈಂಚರಂ, ಈಂಗಡಲ್ (ಭಾಷಾಭೂ. ೬-೧೩೮ ಉದಾ). [< ಇನಿದು + ಕೊರಲ್]

**ಇಂಗೊರಳ್** 'ಇಂಗೊರಲ್' ನೋ.

**ಇಂಗೊಳ** (ನಾ). **೧.** ಸಿಹಿನೀರಿನ ಕೊಳ. **೨.** ಅಮೃತ ಸರೋವರ: ಒಗೆದುದೊ ತಿಂಗಳಿಂಗೊಳದೊಳೇನಸಿತೋತ್ಪಲಂ . . . ಎಂಬಿನಮಾಯ್ತು ಲಾಂಛನಂ (ಚಿಕವಿ. ೬-೨೮). [< ಇನಿದು + ಕೊಳ$_2$]

**ಇಂಗೋಲ್** (ನಾ). **೧.** ಸವಿಯಾದ ಕೋಲು; ಕಬ್ಬು: "ಇಂಗೋಲ್ ರಸಾಲಂ" (ಕರ್ಣಾನಿ. ೪೧); ಇಂಗೋಲಂ ನವಪಾಡಿಮಿಾಫಲಮಂ (ಉದ್ಭಟ. ೯-೧೨); ಬೆಳ್ಪುವೆತ್ತಿರ್ದಿಂಗೋಲಂ ತೋಂಟಿಗಂ ಕೊಟ್ಟ ನೊರ್ವಂ (ಕಬ್ಬಿಕಾ. ೮೮); ಪಾಲ್ಗಡಲ ತೆರೆಯ ಬಂಬಲ್ಗಳಂ ಜೇಂಗೊಡದ ಸಾಲ್ಗಳಂ ಮಿಱುಗುವಿಂಗೋಲ್ಗಳಗ್ಗಳವಾದ ಮೇಲ್ಗಳಂ ಪರಿಕಲಿಪ ಕೀಲ್ಗಳಂ (ವೀಶೈಪು. ೩-೧-೧); ಸಂಪಗೆಗೆ ಕಂಪಿ ಹುದೆ? ಇಂಗೋಲಿ ಗಿಂಪಿಹುದೆ? ಮಳೆವಿಲ್ಗೆ ಸೊಂಪಿಹುದೆ? . . . ಇಲ್ಲದಡೆ ಪೇಳು ಪೊಸಸೃಷ್ಟಿ ರಚಿಸುವ ಕವಿಗೆ (ಗಿಳಿವಿಂ. ೨೨-೩೨). **೨.** ಕಬ್ಬಿನ ಬಿಲ್ಲು; ಮನ್ಮಥನ ಚಾಪ; "ಇಕ್ಷುಚಾಪ" (ಚತುಸಿ. I, ೬ ಕಿ). **೩.** ಮನ್ಮಥ ಬಾಣ: ಇಂತಿಂಗೋಲಿಂ ಕೆತ್ತಿದ ನಂದನ ನಂತರದೊಳ್ ಮತ್ತಂ ಚಿಂತಿಸುತಂ ಇಂತಾ ಸವಣಂ ಸವಿಯಿಲ್ಲದ ಮಾತಂ ತಾನೆಂದಂ ಹಿತಮಂ ಗುಣಮಂ (ಸೌನಂದ. ೮-೨೨). [< ಇನಿದು + ಕೋಲ್$_1$]

**ಇಂಗೋಲ** (ನಾ). **೧.** ಮಧುರವಾದ ಬಾಣಗಳನ್ನು ಉಳ್ಳವನು; ಹೂವಿನ ಬಾಣಗಳನ್ನು ಉಳ್ಳವನು; ಮನ್ಮಥ: ಇಸಲೊಡರಿಸುವಿಂ ಗೋಲನ ಮಿಸುಗುವ ಪೊಸವಿಲ್ಲ ಜೇವೊಡೆಯ ದನಿಯವೊಲ್ (ಕಬ್ಬಿಕಾ. ೯೬); ಇಂಗೋಲನ ತಾಯಿಗಿಂಗಡಿರನ ತಂಗಿಗಿಂಗಡಲಣುಗಿಗಿಂದಿರೆಗೆ (ಹದಿಬ. ೨-೨). **೨.** [ಜೈನ] ಕಾಮದೇವನಾದ ಬಾಹುಬಲಿ: ಹೆಂಗಳೆಲ್ಲರು ನನ್ನ ಪಕ್ಷ ಪುರುಷರೆಲ್ಲರಿಂಗೋಲ ಕೇಳ್ ನಿನ್ನ ಪಕ್ಷ (ಭರಚ. ೫೦-೨೬). [ಇಂಗೋಲ್ + -ಅ$_7$]

**ಇಂಗೋಲವಿಲ್** 'ಇಂಗೋಲ್ವಿಲ್' ನೋ.

**ಇಂಗೋಲ್ವಿಲ್**, ಇಂಗೋಲವಿಲ್ (ನಾ). ಕಬ್ಬಿನ ಬಿಲ್ಲು; ಮನ್ಮಥನ ಬಿಲ್ಲು: ಇಂಗೋಲ್ವಿಲ್ಗಿಕ್ಕಿದ ಗವಸಣಿಗೆಯ ಭಂಗಿಯವೊಲ್ ಬಿಳಿದಂ ಪೊದೆಯುತ (ಜಯಕಾ. ೨-೪೦). **ಇಂಗೋಲವಿಲ್**: ಕೇಸಡಿ ಕೆಂದಾ ವರೆವೂಗಳಂ ಕೆದಱೆ ಪುರ್ಬಿಂಗೋಲವಿಲ್ಲಂದಮಂ ಕುಡೆ (ಕಬ್ಬಿಕಾ. ೯೩). [ಇಂಗೋಲ್ + ಬಿಲ್$_2$]

**ಇಂಗೋಲ್ವಿಲ್ಲ** (ನಾ). ಕಬ್ಬಿನ ಬಿಲ್ಲನ್ನು ಉಳ್ಳವನು; ಮನ್ಮಥ: "ಇಂಗೋಲ್ವಿಲ್ಲನೆಂದು ಕಾಮಂ" (ಶಮದ. ಪರಿ. ೨); "ಇಂಗೋಲ್ವಿಲ್ಲಂ . . . ಗಿಳಿದೇರಂ — ಇವು ೧೩ ಕಾಮದೇವಂಗೆ ಪೆಸರ್" (ಕಶಸಾ. ೨-೧೩); ಜಗಮಂ ಜಕ್ಕುಲಿಸುವಿಂಗೋಲ್ವಿಲ್ಲನ ಬಲ್ಲಾಳನ ಕೈದುಸರಲ್ಗಳೆಯ್ದು ವೆಂದು (ಅನಂಪು. ೨-೨೦ ವ); ಇಂಗೋಲ್ವಿಲ್ಲನಾರ್ದೆಚ್ಚೊಡೆ (ಉದ್ಭಟ. ೬-೬೧); ಮಿಸುಪ ಸುಲಿಪಲ್ಬೆಳಗೆಂಬ ಕಾರಮಿಂಚಿಂಗೋಲ್ವಿಲ್ಲನೆಂಬ ಸೋಗೆಯುಂ ಸೋಲಿಸೆಯುಂ (ಕಬ್ಬಿಕಾ. ೧೨೩). [ಇಂಗೋಲ್ವಿಲ್ + -ಅ$_7$]

**ಇಂಗ್ರಜ**, ಇಂಗರೀಜ, ಇಂಗ್ರೇಜ (ನಾ). ಇಂಗ್ಲೆಂಡ್ ದೇಶದವನು; ಆಂಗ್ಲ: ಆರಬರು ಸಿಂಧುದೇಶವನ್ನು ಒಳನುಗ್ಗಿದಂದಿನಿಂದ ಇಂಗ್ರಜರು ಈ ದೇಶಕ್ಕೆ ಬರುವವರೆಗೆ (ಮೋಬಾದ. ೧). **ಇಂಗರೀಜ**: ಮಂಗಲೂರು ತ್ತುಂಗ ಪರಿಸ್ತರಣಮಂ ವಶಂಗೆಯ್ದು ಬಳಿಕ್ಕಿಂಗರೀಜಾದ್ಯರಾಗಮುನಂ ಗಳುಮಂ ತವಿಸಿ ರಾಜ್ಯಮಂ ಬಾಳಿಸಿದಂ (ಕೆಳನೃ. ೭-೮). **ಇಂಗ್ರೇಜ**: (ಮುಂಬಯಿ. ೫-೬೭ ಕಿ).

[← ಪೋರ್ಚು. ಇಂಗಲೇಜ; ಮರಾ. ಇಂಗರೇಜ]

**ಇಂಗ್ರಜ** 'ಇಂಗ್ರಜ' ನೋ.

**ಇಂಗ್ರಜಿ** 'ಇಂಗ್ರೇಜಿ' ನೋ.

**ಇಂಗ್ರೆಜು** 'ಇಂಗ್ರೇಜಿ' ನೋ.

**ಇಂಗ್ರೇಜಿ**, ಇಂಗರೆಜಿ, ಇಂಗ್ರಜಿ, ಇಂಗ್ರೆಜು, ಇಂಗ್ರೇಜು (ಗು). **೧.** ಇಂಗ್ಲೆಂಡ್ ದೇಶಕ್ಕೆ ಅಥವಾ ಜನಕ್ಕೆ ಸಂಬಂಧಿಸಿದ: ಸ್ಫುಟ ಗಳಾದಿಂಗ್ರೇಜಿ ವಾದ್ಯಗಳ ಸಾಲುಗಳ್ (ಅರ್ಚಾವಿ. ೨೪-೩೧); ಮೊಹಂ ಮದಲ್ಲೀಖಾನರು ಕುಮುಕಿಗೆ ಇಂಗ್ರೇಜಿ ಬಹಾದೂರ ಸರಕಾರದ ಫೌಜು ಕರಸಿಕೊಂಡು (ರಾಜೇಂದ್ರ. ೯). (ನಾ). **೨.** ಇಂಗ್ಲೆಂಡ್ ದೇಶದ ಜನರು ಆಡುವ ಭಾಷೆ; ಆಂಗ್ಲಭಾಷೆ: ಆಕೆ ಬರೆದ ಸಂಸ್ಕೃತ ಮತ್ತು ಇಂಗ್ರೇಜಿಯ ಭಾಷಾಂತರಗಳನ್ನೂ . . . ತಿದ್ದಿಕೊಡುತ್ತಿದ್ದನು (ಉತ್ತಗ್ಯ. ೧೯); ಇಂಗ್ರೇಜಿ ವಿದ್ಯೆ ಬಂದ ಬಳಿಕ (ಯಕ್ಷಪ್ರ. ೨೩). **೩.** (ಕರಾ). ರೋಮನ್ ಕ್ಯಾಥೋಲಿಕರ ಚರ್ಚು; ಇಗರ್ಜಿ (ಕಿ). **ಇಂಗರೆಜಿ**: **೧.** 'ಇಂಗರೆಜಿ ತಿಂಗಳು' ಪರಾ. **ಇಂಗ್ರಜಿ**: **೨.** (ಮುಂಬಯಿ. ೪-೧೫೦ ಕಿ). **ಇಂಗ್ರೆಜು**: **೨.** (ದಕ. ಕಿ). **ಇಂಗ್ರೇಜು**: **೨.** (ದಕ. ಕಿ).

[← ಪೋರ್ಚು. ಇಂಗಲೇಜೀ; ಮರಾ. ಇಂಗರೇಜೀ]

**ಇಂಗ್ರೇಜಿಬಿಘೆ** (ನಾ). ಇಂಗ್ಲಿಷ್ ಪದ್ಧತಿಯಂತೆ ಅಳತೆ ಮಾಡಿದ ಭೂಮಿಯ ಭಾಗ: ಇಂಗ್ರೇಜಿಬಿಘೆಕ್ಕೆ ಎರಡು ಮಣದ ಅಜಮಾಸು ಬೀಜ ಬಿತ್ತಬೇಕು (ಕೃಷಿಪ್ರ. ೭೨).

[ಇಂಗ್ರೇಜಿ + ಬಿಘೆ$_0$. P ಹಿಂ. ಭೀಘಾ]

**ಇಂಗ್ರೇಜು** 'ಇಂಗ್ರೇಜಿ' ನೋ.

**ಇಂಗ್ಲೀಷು**, ಇಂಗಲೀಷು, ಇಂಗಿಲೀಷು (ನಾ). = ಇಂಗ್ರೇಜಿ **೧.** ಸಂದಣಿಯ ಬಾಣಭಲ್ಲಗಳ ಪಿಡಿದಿರ್ಪವರನಿಂಗ್ಲೀಷು ವಾದ್ಯದವರಾ (ಅರ್ಚಾವಿ. ೨೪-೪೭); ಪಟಹ ಡಿಂಡಿಮ ಢಕ್ಕೆ ಕಹಳೆ ನವಪತ್ತುಗಳು ಸ್ಫುಟಗಳಿಂದಿಂಗ್ಲೀಷು ವಾದ್ಯಗಳ ಸಾಲುಗಳ್ (ವರ್ಷವ. ೩-೩೧). **ಇಂಗಲೀಷು**: **೧.** ಯಿಂಗಲೀಷು ಸಂ. ೧೮೬೫ನೆಯ ಕ್ರೋಧನ (ಮೈಅಶಿ. ೧೯೩೧; ೩೦-೩; 1865). **ಇಂಗಿಲೀಷು** **೨.** (ಕಿ).

[← ಇಂ. English]

**ಇಂಘಾರಿಗೆ** (ನಾ). ಸಿಹಿಯಾದ ಘಾರಿಗೆ; ಒಂದು ಬಗೆಯ ಭಕ್ಷ್ಯ; ಕಜ್ಜಾಯ: ಇಂಘಾರಿಗೆ, ಕಂಥಾಯಂ, ಅಂಘುವಣೆ (ಶಬ್ದಾನು. ೮೦ ವ್ಯಾಖ್ಯಾ). [< ಇನಿದು + ಘಾರಿಗೆ]

**ಇಂಚರ$_1$**, ಈಂಚರ (ನಾ). **೧.** ಇಂಪಾದ ಧ್ವನಿ; ಮಧುರ ಸ್ವರ: "ಇಂಚರಮೆನೆ ಮಧುರನಾದಮಕ್ಕುಂ" (ಕವಿಕಂ. ೬೪); ಜಿನುಗುವ ತುಂಬಿಯಿಂಚರಮೆ ಗಾಣರ ಕಾಕಲಿ ಕೂಡೆ ಸೋರ್ವ ಮಾವಿನ ಸೊನೆ ಗಂಧಸಿಂಧುರಮದಂ (ಆದಿಪು. ೧೩-೬); ಅಡಿಯಿಡುವ ರಮಣಿಯರ ನೂಪುರರಣಿತಕ್ಕೆಳಸಿ ಬರ್ಪಂಚೆವಿಂಡಿನಿಂಚರದೊಳಂ (ಕಾದಂಪೂ. ೬೭); ಇಂಚರದಿ ಬಗೆಗೊಳಿಪಂಚೆಯು ನೆರವಿಗಳಂ (ಕಬ್ಬಿಕಾ. ೮೪); ಇಂಚರದ ಮಱಿದುಂಬಿಗಳ ಮೇಳವದ (ತೊರರಾ. ೩-೪-೨೦); **ಪಂಚಮದಿಂಚ** ರಮುಂ ಪಿರಿದವಗಡಿಸುವ ಮಾತು (ಜಯಕಾ. ೨-೨). **೨.** ಇಂಪಾದ ಧ್ವನಿಯುಳ್ಳದ್ದು; ಕೋಗಿಲೆ: "ಇಂಚರಂ – ಕೋಕಿಲಃ" (ಶಬ್ದಾನು. ೯೩ ವ್ಯಾಖ್ಯಾ). **ಈಂಚರ**: **೧.** "ಈಂಚರಮೆಂದೆನಲ್ಕೆ ಮಧುರಧ್ವನಿಯೊಳ್" (ಕರ್ಣಾನಿ. ೩೧); ವಿಪಂಚಿಯೊಂಚರಂ (ಮಲ್ಲಿಪು. ೧-೪೪); ಈಂಚರದಿನಾಣತಿ ಮಾಡಿದುದುನ್ಮದಾಳಿ (ಶಮದ. ೬೮ ಪ್ರಯೋ).

[< ಇನಿದು + ಸರ$_3$]

**ಇಂಚರ$_2$** (ನಾ). **೧.** ಮಧುರವಾದ ಬಾಣ: "ಇಂಚರಂ . . . ಮಧುರಾಸ್ತ್ರಂ ವಾ" (ಶಬ್ದಾನು ೯೩ ವ್ಯಾಖ್ಯಾ). **೨.** ಮಧುರವಾದ ಬಾಣಗಳನ್ನು ಉಳ್ಳವನು; ಮನ್ಮಥ: "ಇಂಚರಂ ಕೋಕಿಲೋ ಮನ್ಮಥೋ ವಾ" (ಶಬ್ದಾನು. ೯೩ ವ್ಯಾಖ್ಯಾ). [< ಇನಿದು + ಸರ$_4$]

**ಇಂಚರಂಗಱಿ** (ಕ್ರಿ). ಮಧುರವಾದ ಧ್ವನಿಯನ್ನು ಮಾಡು; ಇಂಪಾಗಿ ನುಡಿ : ನೊಳಗುವ ಮದ್ದಲೆಯ ಮೋಹಿಪಾವುಜದಿಂಚರಂಗಱಿವ ಬಂಚದ ಪಾಂಗಱಿದು ಪಾಡುವ ಸಂಗೀತದ (ರಾಜಶೇ. ೫-೧೯ ವ). [ಇಂಚರ$_1$ + ಕಱಿ$_1$]

**ಇಂಚರವೀೞ** (ಕ್ರಿ). ಮಧುರವಾದ ಧ್ವನಿಯನ್ನು ಕೊಡು; ಇಂಪಾಗಿ ಧ್ವನಿಮಾಡು : ಇಂಚರವೀೞ್ವ ನೇವುರಂ (ಕಬ್ಬಿಕಾ. ೩೪೦). [ಇಂಚರ$_1$ + ಈ$_2$]

**ಇಂಚರಿ** (ನಾ). ಇಂಪಾದ ಸೋನೆ, —ಪ್ರವಾಹ : ಮಗಮಗಿಸುತ್ತೆ ಪಾಯ್ವ ರಸದಿಂಚರಿಯಿಂ ಸನಿವನ್ನೆಗಂ (ಅಪ್ರತಿ. ೧೧-೭). [< ಇನಿದು + ಸರಿ$_6$]

**ಇಂಚಿ** (ನಾ). (ಕರಾ) ಏಣಿ; ಮರ ಹತ್ತುವ ಏಣಿ: ತಳೆ ಹಾಕಿ ಮರಹತ್ತಬೇಡಪ್ಪ ಎಲೆಬಳ್ಳಿ ಹಾಳಾಗುತ್ತದೆ. ಇಂಚಿ ಚಾಚಿಕೊಂಡು ಹತ್ತು (ರೂಢಿ). [← ತುಳು. ಎಂಚು]

**ಇಂಚಿಲ್** 'ಈಂಚಿಲ್' ನೋ.

**ಇಂಚು$_1$** (ಕ್ರಿ). ಕೆಳಕ್ಕೆ ಹಾರು, —ನೆಗೆ(?): ಮಂಚದಿಂದ ರಂಗಭೂಮಿಗಿಂಚಿದ ಕೇಸರಿಯು ಮದ ಅಂಚಿತ ಕರಿಯನು ಕೆಡಹಿದಂತೆ (ಪ್ರಸಭಾ. ೬೫-೭). [?]

**ಇಂಚು$_2$** (ನಾ). ಅಂಗುಲ : ಇಟ್ಟಂಗಿಯನ್ನು ಕಡೆಗೆ ತೆಗೆಯಲು ಅದರಲ್ಲಿ ನಾಲ್ಕು ಇಂಚು ಉದ್ದವಾದ ಮೊಳೆಯಿದ್ದಿತು (ತುಬ್ಬಣ್ಣ. ೧೬೨); ರಾತ್ರಿ ಎರಡಿಂಚು ಮಳೆಯಾಗಿದೆ (ರೂಢಿ). [← ಇಂ. Inch]

**ಇಂಚುಪಟ್ಟಿ** (ನಾ). ರೇಖೆ ಮೊದಲಾದುವನ್ನು ಇಂಚುಗಳಲ್ಲಿ ಅಳೆಯುವುದಕ್ಕೆ ಉಪಯೋಗಿಸುವ ಮಾಪಕ; ಇಂಚುಗಳನ್ನು ಗುರುತಿಸಿರುವ ಅಳತೆಯ ಪಟ್ಟಿ: ಇಂಚುಪಟ್ಟಿಯು ಹಚ್ಚಿ ನಾಡಿನುದ್ದಗಲಗಳ ಅಳೆಯುವುದು ಬೇಡ ತಮ್ಮಾ (ನೆಲಮು. ೧೮). [ಇಂಚು$_2$ + ಪಟ್ಟಿ$_2$]

**ಇಂಚೆ** (ನಾ). ಹಂಸೆ : ಇಂಚೆಯ ಪಸನಿನ ಬಜದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು (ಪಂಪಭಾ. ೮-೫೧); ಪಂಚಭೂತಂ ನೆರೆಯೆ ಕಾಯಂ ಪರೆಯೆ ವಾಯು ಇಂಚೆವೋ[ಗಿ]ರೆ[ಪಾಠಾಂ. ಇಚ್ಚೆಗೊಳ್ಳದಿರಿ]ಯೆನ್ನ ರೂಪಿದೆಲ್ಲಂ ಹೇಯ (ಕಾರಿರ. ವೇ. ೨೯೦-೧೨); ಎಡರುಂಚಲಿಂಚೆ ಮುಂಚಲು ಲಂಚಂ . . . ಇಲ್ಲಾನಾಡೊಳ್ (ಶಬ್ದಾನು. ೧೪೦ ವ್ಯಾಖ್ಯಾ). [< ಸಂ. ಹಂಸಾ]

**ಇಂಚೆವೋಗು** 'ಈಂಚುವೋಗು' ನೋ.

**ಇಂಜನಮಳೆ** (ನಾ). ಭೋರಿಡುವ ಮಳೆ; "ಬೋರಮಳೆ" (ಮಲ್ಲಿಗೆ. ಟಿಪ್ಪಣಿ); ಇಂಜನಮಳೆ[ಳೆ]ಯ ಗಂಧದ ಗೀರ ಇಂದದ್ನಮ ತಂಗೆಮನ ಗಂಡನ ಸದರ (ಮಲ್ಲಿಗೆ. ೭೬). [ಇಂಜನ$_0$ + ಮಳೆ (< ಮಱೆ)]

**ಇಂಜನೀಯರು** (ನಾ). ಎಂಜಿನುಗಳನ್ನು ರಚಿಸುವವನು; ಯಂತ್ರಶಿಲ್ಪಿ : ವಿದ್ಯುತ್ ಇಲಾಖೆಯ ಮುಖ್ಯ ಇಂಜನೀಯರು (ರೂಢಿ). [← ಇಂ. Engineer]

**ಇಂಜಿನು, ಇಂಜೀನು** (ನಾ). ಚಲನಶಕ್ತಿಯನ್ನುಂಟುಮಾಡುವ ಯಂತ್ರಸಾಧನ; ಎಂಜಿನು; ಯಂತ್ರ: ಇಂಜಿನು ಕೂಗಿದ ಕೂಡಲೆ ರೈಲು ಹೊರಡುತ್ತದೆ (ರೂಢಿ). **ಇಂಜೀನು** : ಇಂಜೀನು ಕೂಗಿತು (ಕವಪು. ೧-೨೪). [← ಇಂ. Engine]

**ಇಂಜೀನು** 'ಇಂಜಿನು' ನೋ.

**ಇಂಜೆಕ್ಷನ್** (ನಾ). ಸೂಜಿಯ ಮೂಲಕ ಶರೀರದೊಳಕ್ಕೆ ಔಷಧಿಯನ್ನು ಕೊಡುವುದು; ಸೂಜಿಮದ್ದು: ಲೇಡಿ ಡಾಕ್ಟರ್ ಬಂದು . . . ಇಂಜೆಕ್ಷನ್ ಕೊಟ್ಟಳು . . . ಹತ್ತು ನಿಮಿಷ ಬಿಟ್ಟುಕೊಂಡು ಮತ್ತೊಂದು ಇಂಜೆಕ್ಷನ್ ಕೊಟ್ಟಳು (ಮುಕ್ತಾಗ. ೯೩). [← ಇಂ. Injection]

**ಇಂಟರ್‌ವಲ್ಲು** (ನಾ). ಮಧ್ಯಂತರ; ವಿರಾಮ; ವಿಶ್ರಾಂತಿ : ಇಂಟರ್‌ವಲ್ಲಿಗೆ ಬೇಕಾದರೆ ಹೊರಟರೆ ಸರಿ (ತುಂಬಿಕೊ. ೪). [← ಇಂ. Interval]

**ಇಂಡಕಿ** (ನಾ). (ಉಕ). ಕೂರಿಗೆಯ ಒಂದು ತಾಳಿಗೆ, ಕಾಳು ಬೀಳದಂತೆ ಅದಕ್ಕೆ ಬಿತ್ತುವಾಗ ಹಾಕುವ ಬೂಚು; ಪಿಡ್ಡ : ಇಂಡಕಿ ಹಾಕಿ ಬಿತ್ತಿದೆವು (ರೂಢಿ). [?]

**ಇಂಡಲಿ** (ನಾ). ಒಂದು ಊರಿನ ಹೆಸರು (?) : ×× ಂಡಳೆಸ್ವರಂ ಮಿಂಡರಗಂಡರಿಂಡಲಿ ಹನುಮಂತ ಇವ (ಎಕ. IX (S), ಚನ್ನಪ. ೧೬೮-೫; 1300). [?]

**ಇಂಡಾರ್ಸ್, ಇಂಡಾರ್ಸು** (ನಾ). **೧.** ದಸ್ತಾವೇಜುಗಳ ಅಥವಾ ಪತ್ರಗಳ ಹಿಂಬದಿಯಲ್ಲಿ ಟಿಪ್ಪಣಿಯನ್ನು (ಷರಾ) ಬರೆದು ಸಹಿ ಮಾಡುವುದು; ಹಿಂಬರೆಹ. **೨.** ಕಾಗದ ಪತ್ರಗಳ ಮೇಲೆ ಸಂಬಂಧಪಟ್ಟ ಅಧಿಕಾರಿಯು ತನ್ನ ಅಭಿಪ್ರಾಯವನ್ನು ಸೂಚಿಸಿ ರುಜು ಹಾಕುವುದು; ಹುಂಡಿ ಮೊದಲಾದುವುಗಳಲ್ಲಿ ತನ್ನ ಹಕ್ಕನ್ನು ಮತ್ತೊಬ್ಬರಿಗೆ ಬರೆದುಕೊಟ್ಟು ರುಜುಹಾಕುವುದು : ಸಂಬಳದ ತಃಖ್ತೆಯು ತಾಲ್ಲೂಕಿನಲ್ಲಿ . . . ಪಾವತಿ ಮಾಡುವಂತೆ ಇಂಡಾರ್ಸ್ ಷರಾ ಬರೆದು ಗ್ರಾಮಗಳಿಗೆ ರವಾನಿಸಲ್ಪಡುವದು (ಗ್ರಾಮಾಕ. ೬). **ಇಂಡಾರ್ಸು** : ಇವತ್ತು ನಾಳೆ ಇಂಡಾರ್ಸು ಬರಬಹುದು ಯಜಮಾನರೆ (ಜೈಸರ್ವೆ. ೨). [← ಇಂ. Endorse]

**ಇಂಡಾರ್ಸು** 'ಇಂಡಾರ್ಸ್' ನೋ.

**ಇಂಡಿಗೆ** (ನಾ). ಹೂವಿನ ದಂಡೆ : ರೇಕನ್ವೆ ಇಂಡಿಗೆಯಂ ಕಟ್ಟುವ ಕಾಯಕದವಳು (ಕರ್ಣಾಕ. ೧೭೬). [< ಇಂಡೆ$_3$]

**ಇಂಡಿಯ** (ನಾ). ಹಿಂದೂದೇಶ; ಭಾರತ : ಇಂಡಿಯದಲ್ಲಿ ಹಲವು ಭಾಷೆಗಳನ್ನಾಡುವ ಜನರಿದ್ದಾರೆ (ರೂಢಿ). [← ಇಂ. India]

**ಇಂಡು$_1$** (ಕ್ರಿ). ಹೇಳು; ಕೂಗು : ಸೋತ ಹರಿ ಸೋತ ಶಿಶುಪಾಲನೆಂದು ನೆರೆದ ನೋಟಕರಿಂಡುತಿರಲಿತ್ತ ದೇವತತಿ ಬೆರಗಾಗೆ (ತುರಂಗ. ೨೨-೩೮). [?. / ತುಳು. ಈಂಡು = ಜೋರಾಗಿ ಹೇಳು, ಕೂಗು]

**ಇಂಡು$_2$** 'ಇಂಡೆ$_1$' ನೋ.

**ಇಂಡುಗಟ್ಟು** (ಕ್ರಿ). ತೂರಾಡು; ರಾಶಿಹಾಕು (?) : ಗಣ್ಣಗಲಿ ಸಂಗರರಂಗದೊಳು ಕೆಣ್ಣಮನಿಣ್ಡುಗಟ್ಟದನ್ತೆ ಖಣ್ಡಿಸಿದ ಪಾರೆ ಅಪ್ಪಿನೊಳು ನಿಜವೈರಿಭಟರಂ (ಎಕ. VIII, ಸೊರಬ. ೬-೧೦; 1165). [ಇಂಡು ? + ಕಟ್ಟು$_{11}$]

**ಇಂಡೆ$_1$, ಇಂಡು$_2$** (ನಾ). **೧.** ಚೂರು; ತುಣುಕು : ನಾಟಕಶಾಲೆಯೊಳೆಯ್ದೆ ರಕ್ತಪುಷ್ಪಾಂಜಳಿಗೆಯ್ದು ಮಾಱ್ಕೆಯವೊಲಿರ್ದುವು ಸೂಸಿದ ಖಂಡದಿಂಡೆಗಳ್ (ಪಂಪಭಾ. ೮-೭೮); ಜುಱುತಡಗಿನಿಂಡೆಗಳ ಮಿದುಳಿನ ನಿಱಿಗರುಳ ನೆಣವಸೆಯ ಜಿನಿಯಲಿ ಮೆಱೆದುದಾ ಮರನಲ್ಲಿ (ಕುವ್ಯಾಅ. ೨೨-೨೯); ಖಂಡದಿಂಡೆಗಳ ತೆಗೆದು ಬಾಯೊಳು ತುಂಬಿಕೊಂಡು ಚಪ್ಪಳೆಯಿಕ್ಕಿ ನಲಿದು ಕೊಂಡಾಡಿ ಭೂಪನ (ಕಂಸವಿ ೧೫-೭೨). **೨.** ಹಿಂಡು; ರಾಶಿ; ಒಟ್ಟಿಲು : ನಭಂಬರಂ ಸಿಡಿಲ್ವ ಪಂದಲೆ ಸೂಸುವ ಕಂಡದಿಂಡೆಗಳ್ (ಪಂಪಭಾ. ೧೧-೫೮); ಪೊಸಗಂಡದಿಂಡೆಯಿಂ ಕರುಳ ಪಿಣಿಲ್ಗಳಿಂ ರುಧಿರದಿಂದೆ ಮರುಳ್ವಡೆಗುದ್ಘರಾಗಮಂ (ಎಕ. VIII, ಸೊರಬ. ೧೩೮-೩೯; 1145); ನೆಗೆದುದು ಪಾಯ್ದು ಪೊಯ್ದುದೊಡಲಿರ್ಕಡಿಯಾಗಿರೆ ಖಂಡದಿಂಡೆಯಂ ತೆಗೆತೆಗೆದಿಟ್ಟುದು (ರಾಜಶೇ. ೫-೧೧೭). **೩.** ಬಿರುಕು; ಸಂದು (?). **೪.** ಚೆಂಡು. 'ಇಂಡೆಯನಾಡು' ಪರಾ. **ಇಂಡು$_2$** : **೨.** ಇನ್ನೊಂದು ಕಡೆಯೊಳಗೆ ಕಾಮಿಗಳಿಂಡು ತಾಪದಿಂದಡಿಗಡಿಗೆ ಚರಿಸೆ ಬೇಮನದಿ (ಸಾನಂಗ. ೪).

ಇಂಡೆಯನಾಡು = ಚೆಂಡಾಡು ; ಎಸೆದಾಡು : ಕೆಂಡದೊಳಿಂಡೆಯನಾಡು ಚುರ್ಚುರ್ ಮಾರ್ನುಡಿಯದೆ ಗಾಣದೊಳ್ ಪಿೞಿ (ಸುಕುಮಾ. ೬–೫೨) ; ಸಂಗರದೊಳನೇಕರಂ ತಱಿದು ಖಂಡದೊಳಿಂಡೆಯನಾಡುಗುಂ (ಧರ್ಮಾಮೃ. ೪–೩೩೬) ; ಖಂಡದೊಳಿಂಡೆಯನಾಡುತಿರ್ದ ಲಕ್ಷ್ಮಣನು (ಕುಮುರಾ. ೮–೫೦).

[ದೇ ‖ ಮಲ. ಇಂಡ = ಗುಂಪು, ಸಮುದಾಯ./ ಸಂ. ಪಿಂಡ]

**ಇಂಡ್ಕೆ$_2$** (ನಾ). ಹೂವಿನ ಹಾರ ; ಮಾಲಿಕೆ ; ದುಂಡಾದ ಹೂವಿನ ದಂಡೆ : ಸ್ವದೇಹ ಶಿವಪುರದಲ್ಲಿ ವಾಯು ಪೂಜಾರಿಯಾಗಿ ಪರಿಮಳ ದಿಂಡೆಯ ಕಟ್ಟಿ ಪೂಜಿಸುತಿರ್ಪುದು (ಅವಚಂ. ೪೫–೧೯೩೬) ; ಕೆಲಬಲ ದೊಳೆಸೆವ ಮಾಣಿಕದಿಂಡೆಯಂ ಕಟ್ಟಿ (ಮಾನರ. ದೇ. ೧೬೧–೯) ; ನಾನಾ ಬಂಧವಿಡಿದಿಂಡೆಗಳ ರಚನೆಯಿಂದಿತ್ತರಬಲೆಯರು ಭೂಪ ಮಕರಧ್ವಜನ ಶಿವಪೂಜೆಗೆ (ಹಚಕಾ. ೩–೫೬) ; ಭಕ್ತಾದಿಗಳ್ ಪೂಜೆಗೆಯ್ದಲರಿಂಡೆಯಿಂ ದೆಸೆವ ವ್ಯೋಮಕೇಶಂ (ನಂದಿಮಾ. ೫–೧೧).

ಇಂಡೆಯವ = ಹೂವಿನ ಹಾರ ದಂಡೆಗಳನ್ನು ಕಟ್ಟಿಕೊಡುವವನು ; ಹೂವಾಡಿಗ : ಆ ಬಾಣಸದ ಅಪ್ಪಣೆಯವರಿಗೆ ಗ ೨೪ ಇಣ್ಡೆಯವರು ೬ ಕ್ಕಂ ಗ ೨೪ (ಎಕ. III, ತಿರುಮ. ೧೦೧–೮೩ ; 1276). ಇಂಡೆಯುಹಬ್ಬ = ಹೂವಿನ ದಂಡೆ ಅಥವಾ ಚೆಂಡನ್ನು ಒಬ್ಬರ ಮೇಲೊಬ್ಬರು ಎಸೆದಾಡಿ ಆಡುವ ಹಬ್ಬ : ಹರಿಯ ಲೆಂಕರುಗಳಿಂಡೆಯ ಹಬ್ಬವೆಂದಾಡುವರು (ವೀಶೈಪು. ೩–೧೧–೧೬).

[ದೇ. ‖ ತಮಿ. ಇಂಡ್ಯೆ ; ತೆಲು. ಇಂಡೆ]

**ಇಂಡೆಗಟ್ಟು** (ಕ್ರಿ). ಹೂವಿನ ಮಾಲೆಯನ್ನು ಕಟ್ಟು ; ದಂಡೆಯನ್ನು ಮಾಡು : ಎಡ್ಡವೆನಲಿಂಡೆಗಟ್ಟುವ ಗಡ್ಡುಗೆಗುಡುವೆಡೆಗೆ ನೀರನಡಕುವ ಫಲಮಂ ಬಡ್ಡಿಸಿ ನಿವೇದ್ಯಮಿಾವೀ ಗೊಡ್ಡಾಟದ ಮುಸುಗಳೆಸೆವುವಾ ಮುನಿವನದೊಳ್ (ಜಗವಿ. ೧೬–೫೬) ; ಶಿವಪೂಜೆಯಿಂದಂದದಿಂ[ದಿಂ]ಡೆಗಟ್ಟುತ್ತಿರಲು ಓಜೆಯಿಂ (ಸಾಮಾರ. ೭೮–೧೯) ; ನೀಲೋತ್ಪಲ ಸಹಸ್ರಾದಿಯ . . . ಇಂಡೆಗಟ್ಟಿ ಬಳಿಕಾ ಮಹಾಪೂಜೆ ಗೋಕಲ್ಪೋಕ್ತದಿ (ಸಿಂಗಿರಾ. ೬–೧೨). [ಇಂಡ್ಕೆ$_2$ + ಕಟ್ಟು$_1$]

**ಇಂಡೆಗೊಳ್** (ಕ್ರಿ). ಮುದ್ದೆಯಾಗು ; ಉಂಡೆಯಾಗು ; ರಾಶಿಯಾಗು : ಕೂರಸಿ ಕೂರಸಿಯಂ ಪಳಂಚೆ ಘೊಪ್ಪೆನೆ ಕರುಳಿಂಡೆಗೊಂಡಡಗು ಥಿಪ್ಪೆನೆ ಭೋರೆನೆ ರಕ್ತವಾರಿ ಭಾಪ್ಪೆನೆ ಮರುಳಾರ್ದುದು (ಎಕ. VII, ಶಿಕಾರಿ. ೨೪೨–೨೪ ; 1163) ; ಸವಿಯಿಂಡೆಗೊಂಡಿರ್ಪ ಕದಳೀಫಳಂಗಳಂ (ಇಹರ. ದೇ. ೩೦–೫). [ಇಂಡ್ಕೆ$_1$ + ಕೊಳ್$_1$]

**ಇಂಡೆಗೊಳಿಸು** (ಕ್ರಿ). ರಾಶಿಹಾಕು ; ಒಟ್ಟು ; ಒಟ್ಟಿಕೊಳ್ಳು : ಬಸವರಾಜಂ ಪುಳಕದ ಹಿಂಡನಿಂಡೆಗೊಳಿಸುತಂ (ಬಸರ. ೧೨–೬೭).

[ಇಂಡೆಗೊಳ್ + –ಇಸು$_3$]

**ಇಂಡೆದಂಡೆ** (ನಾ). ಒತ್ತಾಗಿ ಕಟ್ಟಿದ ಹೂವಿನ ದಂಡೆ : ಇಂಡೆದಂಡೆಯ ಹೂವನೊದವಿಸಿ ಕೊಂಡು ಬರಲಾ ಭಕ್ತವರನಂ ಕಂಡು (ಬಸಪು. ೨೨–೩೨) ; ಪರಿಪರಿಯಲಿಂಡೆದಂಡೆಯ ಪೂಜೆ ರಾಜಿಸುತಿರಲ್ ಕಂಡನು (ಸಿಂಗಿರಾ. ೨೦–೧೨) ; ಇಂಡೆದಂಡೆಯ ಕಟ್ಟಿ (ಗುರುಚಾ. ೬–೩೦).

[ಇಂಡ್ಕೆ$_2$ + ದಂಡ್ಕೆ$_2$]

**ಇಂಡೆಯಾಡು** (ಕ್ರಿ). (ಹೂವಿನ ದಂಡೆಯನ್ನು) ತೂರಾಡು ; ಎಸೆದಾಡು ; ಎಸೆದಾಡಿ ವಿನೋದಿಸು (?) : ಆ ಸತ್ತವರೆತ್ತ ನೀರಿೞಿವರೆತ್ತ ಜನಂ ನೆರೆದಿಂಡೆಯಾಡಿ ಪಾಡುತ್ತೆಸೆದಿರ್ಪರಿಂತು ಮೃತರಾಜವಿಡಂಬನಮೇಕೆ ಕಾಣ್ಬರೇ (ಅಜಿಪು ೨–೧೦೫) ; ದೆಸೆದೇವತೆಯೆ ಕುಸುಂಬೆಯ ಕುಸುಮಂಗಳಿನಿಂಡೆಯಾಡುವಂತಿರೆ ಕೆಂಗಲ್ಮಸಗಿ ಪರಿತಂದು ಮಾಯದ ಸಿಸುಗಳನೆೞೆದಱೆಯೊಳೊಗೆದನಱಗುಲಿ ಕಂಸಂ (ಅರ್ಧನೇ. ೭–೩೨) ; ಕಂದರಂಗಳಿಡುವಿನೆಡೆಗಳೊಳ್ ಕವಲ್ತು ನಿಲ್ತು ಭೋರೆಂದು ಪಾಯ್ವಪಾಲ ಪೊನಲೆ ನೊರೆಯ ಪಿಂಡಲೊಗೆದುವಾ ಮಂದರಂ ತ್ರಿಲೋಕನಾಥನಭಿಷವೋತ್ಸವಕ್ಕೆ ಪೂರ್ಣೇಂದುಮಂಡಲಂಗಳಿಂದಮಿಂಡೆಯಾಡಿತೆಂಬಿನಂ (ಅನಂಪು. ೫–೭೦) ; ಕೆಂಡಮನುಗುಳ್ವ ಕೆಂಪಿನ ತುಟಿ ನಸುನಗೆಯಿಂಡೆಯಾಡುತ ಬಂದಳವಳು (ಭರಚ. ೧೦–೮೯). [ಇಂಡ್ಕೆ$_2$ + ಆಡು$_1$]

**ಇಂಡ್ಲಹಳ್ಳಿ** (ನಾ). ಒಂದು ಗ್ರಾಮದ ಹೆಸರು : ಮುಳುವಾಯಿ ಚಾವಡಿಗೆ ಸಲ್ಲುವ ಯಿಂಡ್ಲಹಳ್ಳಿ ಗ್ರಾಮು (ಎಕ. X, ಮುಳಬಾ. ೧೮–೧೨ ; 1234). [ಇಂಡ್ಲ$_0$ + ಹಳ್ಳಿ (< ಪಳ್ಳಿ)]

**ಇಂತ** 'ಇಂತಪ್ಪ' ನೋ.

**ಇಂತಪ್ಪ, ಇಂತ, ಇಂತಹ, ಇಂತಾ, ಇಂಥ, ಇಂಥಾ** (ಗು). ಈ ರೀತಿಯ ; ಈ ಬಗೆಯ ; ಈ ಪ್ರಕಾರವಾದ ; ಈ ಮಾದರಿಯ : ಇಂತಪ್ಪ ರೂಪಮಂ ಕೈಕೊಂಡೊಡೆ (ವಡ್ಡಾರಾ. ೭೪–೩) ; ಇಂತಪ್ಪ ವಿಪ್ರಳಾಪಂಗಳ್ ಶೌರ್ಯಶಾಲಿಗಳ್ಗನುಚಿತಂ (ಪಂಪಭಾ. ೧೩–೫೭ ವ) ; ಇಂತಪ್ಪ ಗಾವಿಲನಂ . . . ಜಡನನಾಂ ಕಾಣೆಂ (ಧರ್ಮಾಮೃ. ೧–೧೦೮) ; ಕೇಳಿದಿರೆ ಇಂತಪ್ಪ ವಿಕ್ರಮಲೋಲ ಸದ್ಭಕ್ತಿಯನವನಿಯೊಳು (ಬಸಪು. ೩೯–೫೮). **ಇಂತ** : ಆಕಟ್ಟಿಗವಿಲುಕೆ ಸಂತು ಎನೆಬರು ಇಂತ ಶಲ (ಎಕ. VIII, ಸೊರಬ. ೧೫–೧೩ ; 690). **ಇಂತಹ** : ಚೆನ್ನಮಲ್ಲಿಕಾರ್ಜುನನಿಂತಹ ಸಿತಗನವ್ವಾ (ಮಹಾದೇ. ಬ. ೫೮–೧೪೩) ; ಬಿತ್ತಲಾ ಶಿವಭಕ್ತಿಗಿಂತಹ ಚಿತ್ತವಿಂತಹ ಭೀತಿಯುನ್ನತಿವೆತ್ತ ನಿರ್ಗರ್ವತೆಯಿದಾರಿಂಗುಂಟು (ಬಸಪು. ೨೩–೩೧). **ಇಂತಾ** : ಇಂತಾ ಹೆಂಗಸರು (ಮುಂಬಯಿ. ೫–೫೫) ; ಇಂತಾ ಆವಸ್ಥೆ (ಮುಂಬಯಿ. ೫–೫೭). **ಇಂಥ** : ಇಂಥವರ ದೆಸೆಯಿಂದ ಇಂತು ಟಾದುದೆಂದು ಚಿಂತಿಸುತಿಪ್ಪ (ಸಮಾವ. ೧೨–೪೬). **ಇಂಥಾ** : ಇಂಥಾ ಹೆಣ್ಣಿನ ನಾನೆಲ್ಲೂ ಕಾಣೆನು (ಪುರಂದ. ೧–೧೩೦ ಪ).

ಇಂತಪ್ಪಂ = ಈ ಬಗೆಯವನು ; ಈ ರೀತಿಯವನು : "ಇನ್ನನುಮಿಂತಪ್ಪನಿಂತಹಂ ತಾನೆಂದು" (ಕವಿಕಂ. ೨೧೮). **ಇಂತಪ್ಪುದು** = ಈ ರೀತಿಯದು ; ಹೀಗಾಗತಕ್ಕದ್ದು : ಇಂತಪ್ಪುದಂ ತಪ್ಪಿದಂದು ವಾರಣಾಸಿಗಂ ಕವಿಲೆಗಂ ಬ್ರಾಹ್ಮಣರ್ಗಂ ತಪ್ಪಿದವ (ಸೌಇಇ. XI–i, ೪೨–೨೦ ; 970). ಇಂತವರು = ಈ ರೀತಿಯವರು : (ಮುಂಬಯಿ. ೪–೪೦, ೫–೪೨ ಕಿ). ಇಂತಹಂ = ಇಂಥವನು : ಅಂತಪ್ಪಂ ಮೊದಲಾದುವಱ ಹಕಾರಕ್ಕೆ– ಅಂತಹಂ, ಇಂತಹಂ, ಉಂತಹಂ, ಎಂತಹಂ (ಶಮದ. ೧೬೦ ಪ್ರಯೋ). ಇಂತಿಂಥದು : ಇಂತಿಂಥಾದ್ದೆಲ್ಲವು ಬರಲಿ ನಿಶ್ಚಿಂತೆಂಬುದು ನಿಜವಾಗಿರಲಿ (ಪುರಂದ. ೩–೮೫ ಪ). ಇಂಥಿಂಥ (ದ್ವಿರುಕ್ತಿ) : ಇಂಥಿಂಥ ಹೊತ್ತಿಗೆ ಇಷ್ಟಿಷ್ಟು ಕೆಲಸಗಳನ್ನು ಮಾಡಬೇಕು (ಮುಂಬಯಿ. ೩–೮೮).

[ಇಂತು + ಅಪ್ಪ$_4$ (< ಅಗು$_1$)]

**ಇಂತಹ** 'ಇಂತಪ್ಪ' ನೋ.

**ಇಂತಾ** 'ಇಂತಪ್ಪ' ನೋ.

**ಇಂತಿ** (ನಾ). ೧. ಹೆಂಗಸು. ೨. ಹೆಂಡತಿ : ಇಂತಪ್ಪ ಪ್ರೀತಿಯಲಿಯಿರಿಸಿ ಕೊಂಡಿರಲಾಗ ಯಿಂತಿಯನು ನೋಡಿಯಿಂತೆಂದುದಾ ಪಕ್ಷಿ (ಯನಳ. ೩೫).

[←ತೆಲು. ಇಂತಿ = ಸ್ತ್ರೀ, ಹೆಂಡತಿ. / ಪ್ರಾ. ಇತ್ಥೀ < ಸಂ. ಸ್ತ್ರೀ]

**ಇಂತು, ಇತ್ತು** (ಅ). ಹೀಗೆ ; ಈ ಪ್ರಕಾರವಾಗಿ ; ಈ ರೀತಿಯಾಗಿ : ಇನ್ತುಣ್ಣೋರುಂ (ಎಕ. VI, ಕೊಪ್ಪ. ೩೭–೫ ; 675) ; ನಿನಗಿಂತು ತೋರ್ಪ ಜವ್ವನದೊಳಗೀ ತಪಕ್ಕೆ ಗುಜಿಮಾಡಿಸಿದುಬ್ಬೆಗಮಾವುದು (ಕಾದಂಪೂ. ೬೮೫) ; ಬಳಿಕಿಂತೆಂದನಾ ದ್ರೋಣ (ಕುವ್ಯಾ ದ್ರೋ. ೪–೭). **ಇತ್ತು** : ಹೊತ್ತು ಹೊತ್ತಿಗೆ ತಾಪ ವೆಗ್ಗಳಿಸಿ ಕೋಪಬಂದಿತ್ತು ನುಡಿದನು ಮುನಿಪ (ತುರಂಗ. ೧೦–೨೦) ; ಗೊತ್ತುಗೊತ್ತಿಗೆ ನಿತ್ತು ಕಾದಿದರು ಶ್ರಮವಿಲ್ಲದಿತ್ತು ಪಗಲಿರುಳ್ಮೈದು (ತುರಂಗ. ೧೮–೧೯).

ಇಂತಿಂತು (ದ್ವಿರುಕ್ತಿ): ಇಂತಿಂತು ನೋಡುತುಂ ಬರೆ (ಗಿ ರಿ ಕ. ೫–೧೪). ಇಂತಿಷ್ಟು = ಈ ಪ್ರಕಾರವಾಗಿ ಇಷ್ಟು; ಈ ಪ್ರಮಾಣದ ಮೇಲೆ: ಇಂತಿಷ್ಟು ತೋಳಗಳ ತಲೆಗಳನ್ನು ತಂದು ಕೊಟ್ಟವರು ಇಂತಿಷ್ಟು ಭೂಮಿಯನ್ನು ಸಾಗುಮಾಡಿಕೊಳ್ಳಬೇಕು (ಮುಂಬಯಿ. ೨–೧೯). ಇಂತುಪರಿ = ಹೀಗೆ; ಈ ರೀತಿ: ನಾರಿಯೊಂದಿಗೆ ಇಂತುಪರಿ ಮಾತಾಡ ಲೆಸಗಿದನು (ರಘುವಂ. ೧೬–೫೭).

[ದೇ. ‖ ತುಳು. ಇಂಚ; ತೆಲು. ಇಟು]

**ಇಂತುಟು$_1$** (ಗು). ಇಷ್ಟು; ಈ ಪ್ರಮಾಣದ: ಮಹಾದೇವಿಗಿಂತು ಟೊಂದು ಬಯಕೆಯಾದುದು (ವಡ್ಡಾರಾ. ೧೬೨–೧೪); ಇಂತುಟಿ ನಿಮ್ಮ ನಿಬರ ವಿಕ್ರಾಂತಮಾಡೊಡಂ ಸೈರಿಸಿಮಿನ್ನಿನಿಸಂ (ಆದಿಪು. ೧೨–೯೫); ಇಂತುಟಾನೆ, ಇಂತುಟು ಕುದುರೆ (ಶಮದ. ೧೩೮ ಪ್ರಯೋ); ಬಳಿಕಮಿಂ ತುಟು ತಾಗಿ ನ್ಯೆಮಜಕೆದಿಳೆಯೊಳಂಗನೆಯರಿಗೆಳಸಿ ಪೋಪತಿದುರಾತ್ಮರಿಗೆ (ಬಸವು. ೪೦–೭೨).

ಇಂತುಟುಂ = ಸ್ವಲ್ಪವೂ; ಒಂದಿಷ್ಟು ಕೂಡ: ಇಂತುಟುಂ ತೆಜಹಿಲ್ಲದಿರಲಾ ಕಂತುಮರ್ದನನಂತತಿಶಯಾಕ್ರಾಂತಮಾನಸನಾಗುತಂ (ಬಸವು. ೪೯–೨೨). 'ಇನಿತುಟು' ಪರಾ. [< ಇನಿತುಟು]

**ಇಂತುಟು$_2$** (ಅ). ಹೀಗೆ; ಈ ಪ್ರಕಾರವಾಗಿ: ಇಂತುಟು ಸಂಸ್ಕೃತಿ ಧರ್ಮಂ (ಪಂಪಭಾ. ೨–೨೭); ಇದನೇನೆಂದಪುದಿಂತುಟೆಂದುಸಿರ ಲಾರ್ಗಂ ಬಾರದು (ಕಾದಂಉ. ೨೫೧); ಜಿನತತ್ತ್ವಮನಿಂತುಟಿಂತುಟೆಂದು ಬಾಯ್ಗೆವಂದಂತಣಕಚಣಕಗೆಡೆದು (ಧರ್ಮಾಮೃ. ೪–೩೮); ಸರಸಮೆ ದೇವ ಕಿಂಕರನೊಳಿಂತಿದಜಿಹೊಂದಿರವಿಂತುಟೆಂದು ಬಿತ್ತರಿಪುದು (ರಾಜಶೇ. ೧೪–೫೧). [ಇಂತು + –ಟು]

**ಇಂತೆ** (ಅ). ಹೀಗೆಯೇ; ಈ ಪ್ರಕಾರವೇ: ಇಂತುಟು, ಇಂತೆ, ಇಂತು (ಶಬ್ದಾನು. ೪೩೭ ಪ್ರಯೋ). [ಇಂತು + –ಎ$_2$]

**ಇಂಥ** 'ಇಂತಪ್ಪ' ನೋ.

**ಇಂಥಾ** 'ಇಂತಪ್ಪ' ನೋ.

**ಇಂದ** (ನಾ). ಒಂದು ಹೆಸರು. 'ಇಂದಭೂಪಾಳಕ' ಪರಾ.

[ಪ್ರಾ. ಇಂದ < ಸಂ. ಇಂದ್ರ]

**ಇಂದಗೋಟೆ** (ನಾ). ಒಬ್ಬಾತನ ಹೆಸರು: ಪರಮೇಶ್ವರ ಭಟ್ಟರ ಲಿಖಿತಂ ಚಂದ್ರಾರ್ಕಧರಾರ್ಣವ[ಂ] ನಿ[ಲ್ಕೆ]ಇನ್ದಗೋಟೆಯ ಬೆಸಂ (ಸೌಇಇ. XI–i, ೧೫–೮; 872). [?]

**ಇಂದನಕಂದ** (ನಾ). ಕೋಳಿಕುಟುವನಗಡ್ಡೆ ಗಿಡ: ಇಂದನಕಂದ ಮನಾಜ್ಯದೊಳೊಂದಿಸಿ ಕಟ್ಟುವುದು ಪುಣ್ಣೊಳಲ್ಲದೊಡಂ ತಾನಂದಿಂದ್ರವಾ ರುಣಿಯುಮಂ ತಂದಿಕ್ಕಲ್ ಮುಳ್ಳುಸರಲ್ಗಳುಂ ಪೊಜಮಡುಗುಂ (ಖಮದ. ೨–೨೦೪). [ಇಂದ$_0$ + ಕಂದ$_2$]

**ಇಂದಪ್ಪರಸ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಇನ್ದಪ್ಪರಸನಾಳ ನಾಂಕ್ಕುಳ್ತಿರೆ ಪುತ್ತೂರತೊ ಭುವನಸಿಂಗಿಯರ ಮಗ (ಎಕ. X, ಕೋಲಾರ. ೨೩೨–೧; 750); ಇನ್ದಪ್ಪರಸಮುಗಳ್ ಮಾಣಿಕಬ್ಬೆಯಾ ದೇಗುಲಕ್ಕೆ ಕೊಟ್ಟೊದು (ಎಕ. X (S), ಚಿಕ್ಕಬ. ೧೦೬–೬೨; 850).

[ಇಂದ + ಅಪ್ಪ$_1$ + ಅರಸ$_1$]

**ಇಂದಭೂಪಾಳಕ** (ನಾ). ಒಬ್ಬರಾಜನ ಹೆಸರು: ಖಚರೇಂದ್ರಂ ಗಮೇಂ ಬೆರಲಿಂದಗ್ಗಳಮಾವ ಕಾವ ಗುಣಮಂ ಪೂಣ್ದೆಂದಭೂಪಾಳಕ (ಕಇ. II, ೧೨–೩೧; 1114). 'ಇಂದರಸ' ಪರಾ.

[ಇಂದ + ಭೂಪಾಳಕ]

**ಇಂದಯುರ** 'ಇಂದವೂರ' ನೋ.

**ಇಂದಯೂರ** 'ಇಂದವೂರ' ನೋ.

**ಇಂದರ,** ಇಂದಿರ (ನಾ). **೧.** = ಇಂದ್ರ **೧**: "ಇಂದ್ರ–ಇಂದರ" (ಶಮದ. ೨೫೪ ಪ್ರಯೋ). 'ಇಂದರಗಾಮುಂಡ' ಪರಾ. **ಇಂದಿರ: ೧.** "ಇಂದಿರ ಪಲಗಣ್ಣಂ... ಇಂದ್ರಾಹ್ವಯಂ" (ಕವಿಕಂ. ೩೩); ಬಿದಿಯಂ ಪೊಡೆಯಲ ರನನಿಂದಿರನನಥಟರಂ ತವಸಿಗಳಂ ನೆಲೆನಟ್ಟು ನೋಯಿಸಿದುದು (ಕಬ್ಬಿಕಾ. ೧೫೭); ಇಂದಿರನ ದೆಸೆಗೆಂಪು ಮೂಡೆ (ಚಿಬಪು. ೪–೭). **೨.** ಒಂದು ಜಾತಿಯ ಕುದುರೆ: ಇಂದಿರನಕ್ಕಂ ಮೂಷಕವ್ಯಂದಚ್ಛಾಯಾವಿರಾಜಿತಂ (ಅಶ್ವಶಾ. ೨–೨೯). [< ಸಂ. ಇಂದ್ರ]

**ಇಂದರಗಾಮುಂಡ,** ಇಂದರಗಾವುಂಡ (ನಾ). ಒಬ್ಬಾತನ ಹೆಸರು: ಮುದುಗುಂಪೆಯ ಇಂದರಗಾಮುಣ್ಡರು ಶ್ರೀದಾಮಗಮುಣ್ಡರುಂ... ಎನೆವ್ವರುಂ ನರಸಾಕ್ಷಿ (ಎಕ. IV, ಎಡತೊ. ೬೦–೭೦; 890). **ಇಂದರ ಗಾವುಂಡ:** ಇಂದರಗಾವುಣ್ಡನ ಮಗಂ ಬಮ್ಮಿಸೆಟ್ಟಿಗೆ (ಎಕ. XI, ದಾವಣ. ೧೯–೧೦; 1043). [ಇಂದರ + ಗಾಮುಂಡ]

**ಇಂದರಗಾವುಂಡ** 'ಇಂದರಗಾಮುಂಡ' ನೋ.

**ಇಂದರಬಲ್ಲಹ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಇನ್ದರಬಲ್ಲಹ ರಾಜ್ಯಂಗೆಯ್ಯುತ್ತಿರೆ (ಸೌಇಇ. XX, ೧೬–೨; 920).

[ಇಂದರ + ಬಲ್ಲಹ]

**ಇಂದರಸ** (ನಾ). ಒಬ್ಬಾತನ ಹೆಸರು: ಇನ್ದರಸಂ ಜೋಡೂರಾಳ್ಗೆ ಆಳೆ ಪೇಸಲ್ಕೊನ್ದಾನ್ (ಎಕ. VII, ಶಿಕಾರಿ. ೨೧೮–೧೧; 1080).

[ಇಂದ + ಅರಸ$_1$]

**ಇಂದವೂರ,** ಇಂದಯುರ, ಇಂದಯೂರ (ನಾ). ಒಂದು ಊರಿನ ಹೆಸರು: ಇನ್ದವೂರದ ವಿಟಯ್ಯನುಂ (ಎಕ. VI, ಚಿಕ್ಕಮ. ೩–೧೬; 899). **ಇಂದಯುರ:** ಇನ್ದಯುರದ ಬೂವೆಗವುಣ್ಡ (ಮೈಆರಿ. ೧೯೩೨, ೨೧–೯; 1012). **ಇಂದಯೂರ:** ಇನ್ದಯೂರದ ಬೂವೆಗಾವುಣ್ಡ ಹೊಲದ ಬಿದಿರ ಸಂಮ್ಮಂಧದಿ ಕೊಟ್ಟಡೆ (ಎಕ. VI, ಚಿಕ್ಕಮ. ೩೮–೯; 1013). [< ಇಂದ್ರಪುರ?]

**ಇಂದಾಪಾಯ್ಯ** (ನಾ). ಒಬ್ಬಾತನ ಹೆಸರು: ಇನ್ದಾಪಾಯ್ಯನಾಡಾನಾ ಳುತ್ತಿರೆ (ಸೌಇಇ. XI–i, ೨೦–೪; 883). [ಇಂದ + ಅಪ್ಪ$_1$ + ಅಯ್ಯ$_1$]

**ಇಂದಾಳೆ** (ನಾ). (?); "ಹಿಂದುಗಡೆಯಿಂದ ಮೇಲ್ಬೀಳುವುದು" (ಪದ್ಯಸಾ. II, ೧೯೮ ಟಿಪ್ಪಣಿ); ಈಯೊಡಲ್ಮಣಿತಮಿಾಯಿಂದಾಳಮಿಾ ಬೀರವಿಾಚಳಕಂ (ಚಿಕವಿ. ೪–೧೪೮). [?]

**ಇಂದಿಂದಿರ** (ನಾ). ದುಂಬಿ; ಗುಂಗೀಹುಳು; ಭ್ರಮರ: ನಂಜು ರುಳಿಯಂ ಪೋ ನುಂಗಿದಳ್ ಪೇಟಿದಬ್ಬಿನಿಯೆಂಬಂತೆವೊಲಾಯ್ತು ಕುಟ್ಮ ಳಿತಕಂಜಾತೋದರೇಂದಿಂದಿರಂ (ಚಂದ್ರಪು. ೮–೧೫); ವನಜಮುವು ಮುಗಿಯೆ ಗರ್ಭದೆ ಸಿಲ್ಕಿದಿಂದಿಂದಿರಂ ಕರಂ ಚೆಲ್ವಾದುದು (ಚಿಬಪು. ೯–೬).

[ಸಂ.]

**ಇಂದಿಂದಿರಾಳಕಿ** (ನಾ). ದುಂಬಿಯ ಬಣ್ಣದ ಕುರುಳುಳ್ಳವಳು; ಭ್ರಮರ ಕುಂತಳೆ: ಇಂದೀವರಾಂಬಕಿಯರಿಂದಿಂದಿರಾಳಕಿಯರು (ಉದ್ಭಟದೇ. ೫–೨೭).

[ಸಂ. ಇಂದಿಂದಿರಾಲಕಾ (ಇಂದಿಂದಿರ + ಅಲಕ$_3$ + –)]

**ಇಂದಿಗ** (ನಾ). ಒಬ್ಬಾತನ ಹೆಸರು: ರಾಜಲಕ್ಷ್ಮೀನಿಳಯಂ ಪ್ರತಾಪನಿಧಿ ಪುಟ್ಟಿದನಿಂದಿಗ ಮಂಡಳೇಶ್ವರ (ಕಇ. II, ೧೨–೨೯; 1114).

[ಇಂದ + –ಇಗ]

**ಇಂದಿರ** 'ಇಂದರ' ನೋ.

**ಇಂದಿರದಿಕ್ಕು** (ನಾ). ಇಂದ್ರನ ದಿಕ್ಕು; ಪೂರ್ವದಿಕ್ಕು: ಇಂದಿರ ದಿಕ್ಕೆಂಬಾಳಿ ತೋರ್ಪಾ ಮುಕುರಮನೆ ಕರಂ ಮೂಡಿತಬ್ಜಾರಿಬಿಂಬಂ (ರಾಜಶೇ. ೪–೧೩). [ಇಂದಿರ (< ಇಂದರ) + ದಿಕ್ಕು]

**ಇಂದಿರವರಲ್** (ನಾ). ಇಂದ್ರನೀಲರತ್ನ; ನೀಲಮಣಿ: ಇಂದಿರವರಲ ಬಜ್ಜರದ ಪದುಮರಾಗದ ತೊಡವಿನೊಳ್ ಮಿನುಗುತೆ (ಉದ್ಭದೇ. ೭–೪). [ಇಂದಿರ (< ಇಂದರ) + ಪರಲ್]

**ಇಂದಿರವಿಲ್** (ನಾ). ಇಂದ್ರಧನುಸ್ಸು; ಕಾಮನಬಿಲ್ಲು; ಮಳೆಬಿಲ್ಲು: "ಇಂದಿರವಿಲ್ಲೆನೆ ಶಕ್ರಚಾಪಮುಕ್ಕುಂ ನಿಜದಿಂ" (ಕವಿಕಂ. ೯೨); ಶ್ರಾವಣದೊಳೆಸೆಯೆ ವರುಣನ ದೆಸೆಯೊಳ್ ಇಂದಿರವಿಲ್ ತೋಜಲ್ ಮುಟಿ ಸಂದಿಸೆ ಮಾಸತ್ರಯಂಬರಂ ಬಜನಕ್ಕುಂ (ಲೋ ೯ ಕೋ ೯ ಪ. ೪–೨೭); ತೋರಣಮಿಂದಿರವಿಲ್ (ರಾಜಶೇ. ೮–೧೧೮). [ಇಂದಿರ (< ಇಂದರ) + ಬಿಲ್$_2$]

**ಇಂದಿರಾಜ** (ನಾ). ಲಕ್ಷ್ಮಿಯ ಮಗ; ಮನ್ಮಥ. 'ಇಂದಿರಾಜಾಸ್ತ್ರ' ಪರಾ. [ಸಂ.]

**ಇಂದಿರಾಜಾಸ್ತ್ರ** (ನಾ). **೧.** ಮನ್ಮಥನ ಬಾಣ; ಕಾಮಬಾಣ. **೨.** ಕಮಲ. 'ಇಂದಿರಾಜಾಸ್ತ್ರಾಕ್ಷಿ' ಪರಾ. [ಇಂದಿರಾಜ + ಅಸ್ತ್ರ]

**ಇಂದಿರಾಜಾಸ್ತ್ರಾಕ್ಷಿ** (ನಾ). ಕಮಲದಂತೆ ಕಣ್ಣುಳ್ಳವಳು: ಇಂದಿರಾಜಾಸ್ತ್ರಾಕ್ಷಿಯರು ಅರವಿಂದಗಂಧಿಯರು (ಬಸವು. ೫–೨೭). [**ಸಂ.** ಇಂದಿರಾಜಾಸ್ತ್ರಾಕ್ಷೀ (ಇಂದಿರಾಜಾಸ್ತ್ರ + ಅಕ್ಷಿ +–)]

**ಇಂದಿರಾಪತಿ** (ನಾ). ಲಕ್ಷ್ಮಿಯ ಪತಿ; ವಿಷ್ಣು: ಇಂದಿರಾಪತಿ ಜನಿಸಿದ ನಲಾ ತತ್ಪಿತಾಮುಹಗೆ (ಬಸವು ೫೪–೩೧). [**ಸಂ.** (ಇಂದಿರಾ + ಪತಿ$_1$)]

**ಇಂದಿರಾಭವ** (ನಾ). ಲಕ್ಷ್ಮಿಯ ಮಗ; ಮನ್ಮಥ: ಇಂದಿರಾಭವನ ವಾಹಿನಿಯಂತೆ ಬಗೆಗೊಳಿಸುವಿಂದುಮುಂಡಲಮುಖಿಯರು (ಉದ್ಭದೇ. ೫–೨೭). [**ಸಂ.** (ಇಂದಿರಾ + ಭವ)]

**ಇಂದಿರಾರಮಣ** (ನಾ). = ಇಂದಿರಾಪತಿ: ಇಂದಿರಾರಮಣ ಗೋವಿಂದ ನಿನ್ನಯ ಪಾದದ್ವಂದ್ವವೆನಗೆ ಸಾಕೆಲೊ (ಪುರಂದ. ೪–೧೭೮ ಪ). [**ಸಂ.** (ಇಂದಿರಾ + ರಮಣ)]

**ಇಂದಿರಾವರ** (ನಾ). = ಇಂದಿರಾಪತಿ: ಒಂದೆಸೆಯೊಳಿರ್ದಿಂದಿರಾವರನೊಂದೆಸೆಯೊಳರವಿಂದಸಂಭವನೊಂದೆಸೆಯೊಳಿಂದ್ರನು ಸುರಾವಳಿಯೊಂದೆಸೆಯೊಳಿರ್ದು (ಬಸವು. ೨–೨೬). [**ಸಂ.** (ಇಂದಿರಾ + ವರ)]

**ಇಂದಿರೆ** (ನಾ). ಲಕ್ಷ್ಮಿ: "ತಾವರೆವನೆಯಳೆಂಬ ಹೆಸರಿಂದಿರೆಗೆ" (ಶಬ್ದಮಂ. ೭); ಕನಕಕಮಳದಿನಿಟು ಪೊಂದಿಂದಿರೆಯೆನೆ ಮೆಜಿದಳ್ . . . ರಾಣಿಯದೊರ್ವಳ್ (ಅನಂಪು. ೭–೫); ಇಂದಿರೆಗಾನಂದರಸಂ . . . ನೆಗಳೆ (ರಾಜಶೇ. ೪–೧೧೮). [**ಸಂ.** ಇಂದಿರಾ]

**ಇಂದಿರೆಯರಸು** (ನಾ). = ಇಂದಿರಾಪತಿ: ಇಂದು ನಾನೇನು ಸುಕೃತವ ಮಾಡಿದೆನೊ ಇಂದಿರೆಯರಸು [ಪಾಠಾಂ. ಮಂಗಳಮಹಿಮ] ವೇಂಕಟ ಬಂದ ಮನೆಗೆ (ಪುರಂದ. ೨–೧೮೨ ಪ). [ಇಂದಿರೆ + ಅರಸು$_2$ (< ಅರಸ$_1$)]

**ಇಂದಿರೇಶ** (ನಾ). = ಇಂದಿರಾಪತಿ: ಗಜ ಕೂಗಲು . . . ಇಂದಿರೇಶನೆ ಚಕ್ರದಿಂದ ನೆಗಳಿನ ಬಾಯ ಸಂದಿಯನು ಸೀಳಿ ಕೃಪೆಯಿಂದ ಸಲಹಿದೆಯೊ (ಪುರಂದ. ಸು. ೧–೧೫೪–೨೭೪). [**ಸಂ.** (ಇಂದಿರಾ + ಈಶ)]

**ಇಂದೀವರ** (ನಾ). **೧.** ನೀಲಿಯ ನೈದಿಲೆ; ಕನ್ನೈದಿಲೆ: ಕುಂದ ಮುಚುಕುಂದ ಮಂದಾರೇಂದೀವರ ನಂದ್ಯಾವರ್ತ . . . ಮಲ್ಲಿಕಾದ್ಯನೇಕ ಸುರಭಿ ಕುಸುಮಂಗಳಂ (ಪಂಚತಂ. ೧೧೭–೩); ವಂದಿಸುವೆಂ . . . ವಿಮಲೇಂದೀವರ ನೀಲಮೇಘ ಸುಂದರವಪುವಂ (ವಸ್ತವಂ. ೧–೧). **೨.** ತಾವರೆ. 'ಇಂದೀವರಮಂದಿರೆ' ಪರಾ. [ಸಂ.]

**ಇಂದೀವರನಾಭ** (ನಾ). ಪದ್ಮನಾಭ; ವಿಷ್ಣು: ಇಂದೀವರನಾಭರಮ್ಯ ಸಭೆಯಂತೆ . . . ಕೊಳಂ (ಪುಷ್ಪವು. ೨–೫೩). [ಸಂ. (ಇಂದೀವರ + ನಾಭಿ + –)]

**ಇಂದೀವರಮಂದಿರೆ** (ನಾ). ತಾವರೆಯನ್ನು ಮನೆಯಾಗಿ ಉಳ್ಳವಳು ಲಕ್ಷ್ಮಿ: ಇಂದುಸೋದರಿಗಿಂದೀವರಮಂದಿರೆಗಿಂದು ವಂದಿಪೆನು (ಹದಿಬ. ೪–೨). [**ಸಂ.** ಇಂದೀವರಮಂದಿರಾ (ಇಂದೀವರ + ಮಂದಿರ + –)]

**ಇಂದೀವರವಕ್ತ್ರೆ** (ನಾ). ಕಮಲದಂತೆ ಮುಖವುಳ್ಳವಳು; ಕಮಲಮುಖಿ: ವಿಕಚೇಂದೀವರವಕ್ತ್ರೆ ಸನ್ಮರಕತಚ್ಛಾಯಾಂಗಿ (ಸುಕುಮಾ. ೧–೮). [**ಸಂ.** ಇಂದೀವರವಕ್ತ್ರಾ (ಇಂದೀವರ + ವಕ್ತ್ರ + –)]

**ಇಂದೀವರಾಕ್ಷಿ** (ನಾ). ಕನ್ನೈದಿಲೆಯಂತೆ ಕಣ್ಣುಳ್ಳವಳು: ಇಂದೀವರಾಕ್ಷಿಯರ್ ನೋಡಿದರ್ ಕೌತುಕಮಿದೆಂದು (ಜೈಮಿಭಾ. ೭–೨೭); ಇಂತೇಕಿದೊಮ್ಮಿಂಗೆ ಇಂದೀ ವಿಕಾರಚಿತ್ತಂ ನಿನಗೆ ಪೇಳೆನಗೆ, ಇಂದೀವರಾಕ್ಷಿ (ಶ್ರೀರಾಮಾ. ೭೧–೪೭೭). [**ಸಂ.** ಇಂದೀವರಾಕ್ಷೀ (ಇಂದೀವರ + ಅಕ್ಷಿ + –)]

**ಇಂದೀವರಿ** (ನಾ). "ಪಿಲ್ಲ ಪಿಚ್ಚರ" (ಅಮರ. ಟೀಕೆ); "ಮಜ್ಜಿಗೆ ಗಡ್ಡೆ (ಪಂಡಿತ. ೧೪೭). [**ಸಂ.** ಇಂದೀವರೀ]

**ಇಂದೀವರೇಕ್ಷಣೆ** (ನಾ). = ಇಂದೀವರಾಕ್ಷಿ (ದಕ. ೩). [ಸಂ. ಇಂದೀವರೇಕ್ಷಣಾ (ಇಂದೀವರ + ಈಕ್ಷಣ + –)]

**ಇಂದು$_1$** (ನಾ). **೧.** ಈ ದಿನ; ಈಹೊತ್ತು; ಈಗ: ನಮಗಿನ್ದೊಟ್ಟಿದು ಯೆನ್ದು ಏಜಿ ಗಿರಿಯಾನ್ಸನ್ಯಾಸನುಂ ಯೋಗದೊಳ್ . . . ಏಜಿದಾರ್ (ಎಕ. II, ೯೭೩; 700); ಮನೆಗಿಂದು ಬರ್ಕುಮೆಂದು (ಕವಿರಾ. ೨–೩೩); ಅಳ್ದನವದನಕಮಲಕೆನಮ್ಮ ಪೌರುಷವಿಂದು ಹಿಮವಾಯ್ತು (ಕುವ್ಯಾದ್ರೋ. ೬–೨೮); ಇಂದು ಗುಡಿಗಳಿಗೆ ಬಂದ ಈ ಅವಸ್ಥೆಯನ್ನು ನೋಡಿದರೆ ನನ್ನ ಎದೆಯೇ ಬಿರಿಯುತ್ತದೆ (ಹಬ್ಬಬ. ೨೮).

ಇಂದುತನಕ = ಈವರೆಗೆ: ನಿನ್ನೊಳು ಪುಟ್ಟಿದದು ಮೊದಲಿಂದುತನಕೊಂದಡಕೆ ಹಂಗಿನೊಳೊಂದೆನು (ಬಸವು. ೬೧–೫೭). **ಇಂದುಮೊದಲ್** = ಇವೊತ್ತಿನಿಂದ ಮುಂದೆ: ಇಲ್ಲಿ ನೀರ್ಗುಡಿದ ಜೀವಿಗಳಿನ್ನು ಪುಲಿಯಾಗಲಿಂದುಮೊದಲೆಂದು ಮುನಿ ಶಾಪಿಸಿದನು (ಜೈಮಿಭಾ. ೧೫–೩೨). **ಇಂದುಮೊದಲಾಗಿರೆ** = ಈಗಿನಿಂದ ಹಿಡಿದು; ಇಂದಿನಿಂದ ಹಿಡಿದು; ಇಂದಿನಿಂದ ಮುಂದೆ: ಪೆಂಡಿರೆಂಬರೊಳೆ ಕೂಡುವನಲ್ಲೆನಿಂದುಮೊದಲಾಗಿರೆ ನಿಕ್ಕುವಂ (ಪಂಪಭಾ. ೧–೭). **ಇಂದುವರಂ** = ಈ ದಿನದ ವರೆಗೆ; ಈ ಹೊತ್ತಿನ ವರೆಗೆ: ಇಂದುವರಂ ದೇವರ ಮನಂ ನೊಂದಪುದೆಂದು ಮನಂದೋಜದಿರ್ಪರ್ (ಕಾದಂಪೂ. ೩೪೪); ಅಂದಿಂತೊಟ್ಟು ಇಂದುವರಮೆನ್ನಂ ಕರಂ ಮನ್ನಿಸಿ ನಡಪುತ್ತಿರ್ದು (ಪಂಚತಂ. ೯೫–೧೦). **ಇಂದುವರೆ** = ಇಂದುವರಂ: ಹೇಸರು ಯಮದೂತರು ಹಸುಗೂಸುಂಗೊಲೆಗೆಂದು ಇಂದುವರೆ ತಿಳಿದಿರ್ದೆಂ (ಮುಕ್ತಕಂ. ೫೮–೧೦).

[**ದೇ.** ‖ **ತಮಿ.** ಇನ್ರು; **ಮಲ.** ಇನ್ನು; **ತುಳು.** ಇನಿ; **ಕೊಡ.** ಇಂದಿ; **ಕುರುಖ್.** ಇನ್ನಾ]

**ಇಂದು$_2$** (ನಾ). ಸಿಂಧೂನದಿ. 'ಇಂದುಪ್ಪು' ಪರಾ. [< **ಸಂ.** ಸಿಂಧು]

**ಇಂದು$_3$** (ನಾ). **೧.** ಚಂದ್ರ: ಇಂದುಕುಂದ ಸೌಂದರತರವರ್ಣಂ (ಆದಿಪು. ೧–೮); ಇಂದುಗೆ ಮೇಘಂ ಕವಿದೊಡಮಿಂದೀ ಲೋಕಕ್ಕೆ ತಣ್ಪು ತಪ್ಪದ ತೆಜದಿಂ (ಗಿರಿಕ. ೯–೯೬); ಇಂದುರವಿಜಲವಹ್ನಿಯನಿಲ ಪುರಂದರಾದಿ ಸುರೌಘ ಸಾಕ್ಷಿಗಳು (ಕುವ್ಯಾದ್ರೋ. ೨–೯). **೨.** ಒಂದು ಎಂಬ ಸಂಖ್ಯೆಯ ಸಂಕೇತ: ಶಶಿಯಿಂದು . . . ಧರೆ ಇಳೆ ರೂಪವ್ಯೆಕವೊಂದಜ ನಾಮಂ (ವ್ಯವಹಾ. ೯–೧); ಉಡುದೇವನಿಧಿ ನಯನೇಂದು ಸಂಖ್ಯೆಗ ಳೋವಿ ಶಕವರುಷಂಗಳಾಗಲು (ಬಸವು. ೬೧–೯೨). **೩.** [ಛಂದ] ಚಂದ್ರ ಗಣ; ಭಗಣ (– ∪ ∪): ಇಂದುಯುಗಂಗಳ ಮುಂದಿಂದುಧರಂ ಬರೆ ತಾನೆಂದುಮಿದರ್ಕೆ ಪೆಸರ್ ಸೌಂದರಿ ಕೇಳಮಳಂ (ಛಂದೋಂಬು. ೨–೩೩). [**ಸಂ.**]

**ಇಂದುಕರ** (ನಾ). ಚಂದ್ರನ ಕಿರಣ. 'ಇಂದುಕರಾವಳಿ' ಪರಾ. [ಇಂದು$_3$ + ಕರ$_4$]

**ಇಂದುಕರಾವಳಿ** (ನಾ). ಚಂದ್ರಕಿರಣಗಳ ಸಮೂಹ: ಹಿಮೋಪಳ ಮೊಸರ್ವವೊಲಿಂದುಕರಾವಳಿಗೆ ತೃಣಗ್ರಾಹಿ ನೀಳಮಣಿಯೊಸರ್ದಪುದೇ (ಚಂದ್ರಪು. ೧-೩೯). [ಇಂದುಕರ + ಆವಳಿ$_1$ (= ಆವಲಿ)]

**ಇಂದುಕಲಾವತಂಸ** (ನಾ). ಚಂದ್ರಕಲೆಯನ್ನು (ತಲೆಯ) ಒಡವೆಯಾಗಿ ಉಳ್ಳವನು; ಈಶ್ವರ: ಇಂದುಕಲಾವತಂಸಂ . . . ಗಂಗಾಧರಂ ಬಿಡದೆ ಸಲಹುಗೆ ನಮ್ಮನು (ಜೈಮಿಭಾ. ೧-೨). [ಸಂ. (ಇಂದುಕಲಾ + ಅವತಂಸ)]

**ಇಂದುಕಳೆ** (ನಾ). ಚಂದ್ರನ ಕಲೆ: ಇಂದುಕಳೆ ಮೆಱೆವ ತಾರಾವೃಂದದ ನಡುವೊಪ್ಪುವಂತೆ (ನಂಬಿರ. ೬-೧). [ಸಂ. ಇಂದುಕಲಾ (ಇಂದು + ಕಲಾ)]

**ಇಂದುಕಾಂತ** (ನಾ). ಚಂದ್ರಕಾಂತ ಶಿಲೆ: ಇಂದುಕಾಂತದ ಸಜ್ಜೆಯೋವರಿಯೊಳ್ (ಸೌಂದಪು. ೧೦-೨೯). [ಇಂದು$_3$ + ಕಾಂತ$_2$]

**ಇಂದುಕಾಂತಿ** (ನಾ). ಚಂದ್ರನ ಕಾಂತಿ: ಉತ್ಸವಕರಮೆನೆ ಬೆಳಪ ಶರತ್ಸಮಯದೊಳಿಂದುಕಾಂತಿ ದಳವೇಱುವ ಪೋಲ್ (ಜಗವಿ. ೧-೧೧). [ಇಂದು$_3$ + ಕಾಂತಿ]

**ಇಂದುಕಾಂತೋಪಳ** (ನಾ). = ಇಂದುಕಾಂತ: ಸಾಂದ್ರೇಂದುಕಾಂತೋಪಳೋಚ್ಚಳಿತಾಚ್ಛಾಚ್ಛಜಲಪ್ರವಾಹ ಭರದೊಳ್ (ಆದಿಪು. ೧-೬೪). [ಇಂದುಕಾಂತ + ಉಪಳ (= ಉಪಲ)]

**ಇಂದುಕಿರಣ** (ನಾ). = ಇಂದುಕರ: ಇಂದುಕಿರಣಂಗಳಿಂದಂ . . . ನಂದದು ಪರಿತಾಪಾನಳಂ (ಕವಿರಾ. ೩-೧೬೪). [ಇಂದು$_3$ + ಕಿರಣ]

**ಇಂದುಚೂಡ** (ನಾ). ಚಂದ್ರಶೇಖರ; ಶಿವ: ಮುಂದೆ ತುತ್ತಂ ಮಾಡಿ ನೀಡಲ್ಕಿಂದುಚೂಡಂ ಕೊರ್ತು ಕೈಕೈಯಿಂದೆ ನೀಡಿಕೊಳುತ್ತಮಾರೋಗಿಸಿದ ನೆಂದೆನುತ (ಬಸಪು. ೩೩-೧೯). [ಸಂ. (ಇಂದು$_3$ + ಚೂಡಾ + -)]

**ಇಂದುಜ** (ನಾ). ಚಂದ್ರನ ಮಗ; ಬುಧ: ಇಂದುಜನಿಂ ಕಡುಗಾಳಿಯಕ್ಕುಮಿಂದ್ರನ ಗುರುವಿಂದಮೊಳ್ಳಿಳಸು (ಜಟ್ಟಮು. ೮-೧೪೩). [ಸಂ.]

**ಇಂದುಜನಕ** (ನಾ). ೧. ಚಂದ್ರನ ತಂದೆ; ಸಮುದ್ರ. ೨. ಅತ್ರಿ ಮಹರ್ಷಿ. [ಇಂದು$_3$ + ಜನಕ]

**ಇಂದುಜೂಟ** (ನಾ). = ಇಂದುಚೂಡ: ಇಂದುಜೂಟಂ ಭ್ರೂಣಹತ್ಯಕೆ ಬಂದು ನಿಲುವನೆ (ಬಸಪು. ೧೮-೯೦); ಇಂದುಜೂಟಂ ಮನೋರಮೆಯ ಭಕ್ತ್ಯಾತುರವನೀಕ್ಷಿಪೆನೆನುತ್ತ (ಸೌಂದಪು. ೧೨-೨೫). [ಇಂದು$_3$ + ಜೂಟ]

**ಇಂದುಜ್ಯೋತ್ಸ್ನೆ** (ನಾ). ಚಂದ್ರನ ಬೆಳಕು; ಬೆಳುದಿಂಗಳು: ಇನನಿಂದುಜ್ಯೋತ್ಸ್ನೆಯಂ ತಾಳ್ದಿದನನಲನವಷ್ಟಂಭಮೋಡಿತ್ತು (ಸುಕುಮಾ. ೪-೧೧). [ಇಂದು$_3$ + ಜ್ಯೋತ್ಸ್ನೆ]

**ಇಂದುಟಿ, ಈಂದುಟಿ** (ನಾ). ಸವಿಯಾದ ತುಟಿ: ಪವಣಱಿದು ಚುಂಬಿಸುತೆ ಇಂದುಟಿಸುಧೆಯನೊಸೆದೀಂಟಿ (ಸಾಳ್ವಭಾ. ೪-೧೦); ಇಂದುಟಿಯ ನುಣ್ಚೊಗರಂಗದ ವಾರನಾರಿಯರ್ (ಚಿಕ್ಕದೇ. ೧೨೬). **ಈಂದುಟಿ**: ಈಂಗಡಲ್, ಈಂದೋಳ್, ಈಂದುಟಿ (ಶಮದ. ೧೮೦ ಪ್ರಯೋ). [ಇನಿದು + ತುಟಿ]

**ಇಂದುಟಿವೆಱು** (ಕ್ರಿ). ಸವಿಯಾದ ತುಟಿಯನ್ನು ಪಡೆ: ಇನಿಗಲೆಯ ಱೀವಳ ಯಿಂದುಟಿವೆತ್ತಳ ತನುವ ತಳ್ಕೈಸುವುದೆಂದು (ಶತಸಾಂ. ೨೮-೪೭). [ಇಂದುಟಿ + ಪೆಱು$_1$]

**ಇಂದುದೀಧಿತಿ** (ನಾ). = ಇಂದುದ್ಯುತಿ: ಸರಸಿರುಹಮಿಂದುದೀಧಿತಿ ಪರಾಜಿತಶ್ರೀವಿಲಾಸಂ (ಕವಿರಾ. ೩-೭೧). [ಇಂದು$_3$ + ದೀಧಿತಿ]

**ಇಂದುದ್ಯುತಿ** (ನಾ). ಚಂದ್ರನ ಕಾಂತಿ: ನಿನ್ನ ಯಶೋರಾಶಿಯನಿಂದುದ್ಯುತಿನಿಕಾಶಮಂ (ಕವಿರಾ. ೩-೯೪). [ಇಂದು$_3$ + ದ್ಯುತಿ]

**ಇಂದುಧರ** (ನಾ). ಚಂದ್ರನನ್ನು (ತಲೆಯಲ್ಲಿ) ಧರಿಸಿದವನು; ಶಿವ: "ಇಂದುಧರನಂ ಖಂಡಪರಶುವೆಂಬುದು" (ಮಂಗರಾ. ೫-೧); ಇಂದುಧರಂ ವಟುವೇಷಂದಳೆದೊಡಮಗಜೆಗಾದುದು ಹರುಷಂ (ಗಿರಿಕ. ೯-೯೬). [ಸಂ.]

**ಇಂದುನಿಭ** (ಗು). ಚಂದ್ರನಿಗೆ ಸಮಾನವಾದ. 'ಇಂದುನಿಭಾಸ್ಯೆ' ಪರಾ. [ಸಂ.]

**ಇಂದುನಿಭಾಸ್ಯೆ** (ನಾ). ಚಂದ್ರನನ್ನು ಹೋಲುವ ಮುಖ ಉಳ್ಳವಳು; ಚಂದ್ರಮುಖಿ: ಮೃದುಸುಗಂಧಮನಿಂದುನಿಭಾಸ್ಯೆ ಸೂಸೆ (ರಾಜಶೇ ೨-೨೫). [ಸಂ. ಇಂದುನಿಭಾಸ್ಯಾ (ಇಂದುನಿಭ + ಆಸ್ಯ + -)]

**ಇಂದುಪ್ಪು** (ನಾ). ಸೈಂಧವಲವಣ: ಇಂದುಪ್ಪಿನೊಡನೆ ಈ ಔಷಧಿ ಸೇವಿಸಬೇಕು (ರೂಢಿ). [ಇಂದು$_2$ + ಉಪ್ಪು]

**ಇಂದುಮಂಡಲ, ಇಂದುಮಂಡಳ** (ನಾ). ಚಂದ್ರಮಂಡಲ: "ಇಂದುಮಂಡಲಕಾ ಪೆಸರ್ಪೆಱೆಯೆನಲ್" (ಕಬ್ಬಿಕೈ. ೪೪). **ಇಂದುಮಂಡಳ**: ಸಾರೆ ಚಕೋರಮಿಂದುಮಂಡಳಗಳಿತಾಮೃತಾಸವಮನುಂಡುಸಿರುತ್ತಿರೆ ಚೆಲ್ವು ಶಾರದಂ (ಪಂಪಭಾ. ೬-೭೦). [ಇಂದು$_3$ + ಮಂಡಲ]

**ಇಂದುಮಂಡಳ** 'ಇಂದುಮಂಡಲ' ನೋ.

**ಇಂದುಮಣಿ** (ನಾ). ಚಂದ್ರಕಾಂತ ಶಿಲೆ: ಉತ್ಪಲಾವಳಿ ತಿಳಿಜೊನ್ನಮೆಂದಲರ್ಗುಮಾ ನಗದಿಂದುಮಣಿಪ್ರಕಾಶಮಂ (ಶಬಶಂ. ೧-೩೮). [ಇಂದು$_3$ + ಮಣಿ$_3$]

**ಇಂದುಮುಖಿ** (ನಾ). ಚಂದ್ರನಂತಿರುವ ಮುಖವುಳ್ಳವಳು; ಚಂದ್ರಮುಖಿ: ಇಂದುಮುಖಿ ಲಿಂಗಾರ್ಚನೆಯನೊಲವಿಂದ ಸಲಿಸಿ (ಬಸಪು. ೨೪-೩೦); ಇಂದುಮುಖಿಯರ ಗುಣವ ತಿಳಿಯಲಸಾಧ್ಯ (ನಳಚ. ೩-೨೨). [ಸಂ. ಇಂದುಮುಖೀ (ಇಂದು$_3$ + ಮುಖ + -)]

**ಇಂದುಮೌಲಿ, ಇಂದುಮೌಳಿ** (ನಾ). ಶಿವ. **ಇಂದುಮೌಳಿ**: ಇಂದುಮೌಳಿಯ ಬೆಸನದಿಂದವೆ ಬಂದ ನಂದೀಶನು (ಬಸಪು. ೨-೫೬); ಇಂದುಮೌಳಿಯ ಸೇವೆಗಿಂದು ಪುಳಿಂದ ಕಂಟಕನಾದನೇ (ಕುಮ್ಯಾಅ. ೬-೧೮). [ಇಂದು + ಮೌಲಿ]

**ಇಂದುಮೌಳಿ** 'ಇಂದುಮೌಲಿ' ನೋ.

**ಇಂದುರುಚಿ** (ನಾ). ಚಂದ್ರನ ಕಾಂತಿ, —ಕಿರಣ: ವಿಳಸಿತ ಶಾರದೇಂದುರುಚಿ ಕೋಮಳಬಾಳಮೃಣಾಳಸೂತ್ರಮಂ (ಶಾಕುಂತ. ೯೦-೧೪೯). [ಇಂದು$_3$ + ರುಚಿ]

**ಇಂದುರೇಖೆ** (ನಾ). ಚಂದ್ರನ ಕಲೆ. [ಇಂದು$_3$ + ರೇಖೆ]

**ಇಂದುರೋಚಿ** (ನಾ). = ಇಂದುರುಚಿ: ನಿಜನಾಥನ ಮಾತೆಂಬಿಂದು ರೋಚಿ ಕುಡೆ ಹೃತ್ಕುಮುದಶ್ರೀಗೆಂದುಮಿಲ್ಲದ ಮಹೋತ್ಸವಮಂ (ಪುಷ್ಪಪು. ೯-೧೧೨). [ಇಂದು$_3$ + ರೋಚಿ]

**ಇಂದುಲಕ್ಷ್ಮಿ** (ನಾ). ಚಂದ್ರನ ವೈಭವ, —ಕಾಂತಿ: ಚಂದ್ರಿಕೋಜ್ಜ್ವಳಸಾನ್ನಾಯ್ಯದಿನಿಂದುಲಕ್ಷ್ಮಿಯನುಪದಂಚದ್ದೀಪದಿಂ ಕಾಂತಿಯಂ . . . ಮಾಡುಗುಂ ಜಿನಪತಿಪದಪಂಕಜಂ (ಶಾಂತಿಪು. ೧೦-೫೫, ೫೬). [ಇಂದು$_3$ + ಲಕ್ಷ್ಮಿ]

**ಇಂದುಲಾಂಛನ** (ನಾ). ೧. ಚಂದ್ರನ ಗುರುತು, —ಕಳಂಕ: ಚಂದ್ರಿಕೆಯೆಂಬ ಪಾಲ್ಗಡಲ್ ಪುತ್ರನನಿಳಾಜನಮಿಕ್ಷಿಸೆ ದೃಷ್ಟಿಪಾತದಿಂ ನವೆದಪನೆಂದು . . . ಪಣೆಗಿಟ್ಟ ಕಜ್ಜಳದ ಬೊಟ್ಟಿನಲೊಪ್ಪಿದುದಿಂದುಲಾಂಛನಂ (ರಾಜಶೇ. ೧೧-೫೮). ೨. ಚಂದ್ರಶೇಖರ (ದಕ. ೩). [ಇಂದು$_3$ + ಲಾಂಛನ]

**ಇಂದುಲೇಖಾಚೂಡ** (ನಾ). ಚಂದ್ರನ ಕಲೆಯನ್ನು ಜಡೆಯಲ್ಲಿ ಉಳ್ಳವನು ; ಶಿವ : ಇಂದುಲೇಖಾಚೂಡ ಮಂತ್ರದ ಲೇಖೆಯಂ ಜಿನ ಮಂತ್ರಲೇಖೆಯನು ಕೂಡೆ ಕಾವೇರಿಯಲಿ ಹಾಯ್ಕಲು (ಬಸವು. ೫೦–೩೮). [ಸಂ. (ಇಂದು₃ + ಲೇಖಾ + ಚೂಡಾ + –]

**ಇಂದುಲೇಖೆ** (ನಾ). = ಇಂದುರೇಖೆ. 'ಇಂದುಲೇಖಾಚೂಡ' ಪರಾ. [ಸಂ. ಇಂದುಲೇಖಾ]

**ಇಂದುವಾರ** (ನಾ). ಚಂದ್ರನವಾರ ; ಸೋಮವಾರ (ದಕ. ೬). [ಇಂದು₃ + ವಾರ₃]

**ಇಂದುವ್ರತ** (ನಾ). ಚಾಂದ್ರಾಯಣ ವ್ರತ. [ಇಂದು₃ + ವ್ರತ]

**ಇಂದುಶೇಖರ** (ನಾ). ಚಂದ್ರಶೇಖರ ; ಶಿವ : ಇಂದುಶೇಖರನಿಂದೆ ಕದಹುಗಳಂ ತೆಗೆಸಿ ಹೊಕ್ಕು (ಬಸವು. ೪೪–೧೮). [ಇಂದು₃ + ಶೇಖರ]

**ಇಂದುಸಂತತಿ** (ನಾ). ಚಂದ್ರವಂಶ : ಇಂದುಸಂತತಿಗುಜುವರಲ್ಲಾ ಬಂದರೇನಪರಾಧವೇ (ಕುವ್ಯಾಭೀ. ೧–೨೦). [ಇಂದು₃ + ಸಂತತಿ]

**ಇಂದುಸೋದರಿ** (ನಾ). ಚಂದ್ರನ ಸೋದರಿ: ಲಕ್ಷ್ಮಿ: ಇಂದು ಸೋದರಿಗಿಂದೀವರಮಂದಿರೆಗಿಂದಿರೆಗಿಂದು ವಂದಿಪೆನು (ಹದಿಬ. ೪–೨). [ಇಂದು₃ + ಸೋದರಿ]

**ಇಂದುಹಾಸ** (ನಾ). ೧. ಚಂದ್ರನನ್ನು ನಗುವಂತಿರುವವನು. ೨. ಕುಂತಳದೇಶದ ಒಬ್ಬ ಅರಸು ; ಚಂದ್ರಹಾಸ: ಇಂದುಹಾಸನ ದೂತರುಪವಾಸವಿರಬಾರದು (ಜೈಮಿಭಾ. ೨೯–೨೫). [ಇಂದು₃ + ಹಾಸ]

**ಇಂದೂದಯ** (ನಾ). ಚಂದ್ರೋದಯ: ಇಂದೂದಯಮಂಗಜನ ಜಯಮನುತ್ಪಾದಿಪವೊಲ್ (ಶಾಂತಿಪು. ೧೦–೯೩). [ಇಂದು₃ + ಉದಯ]

**ಇಂದೂಪಲ, ಇಂದೂಪಳ** (ನಾ). ಚಂದ್ರಕಾಂತ ಶಿಲೆ: ಇದು ನಿಂದ ನವೇಂದೂಪಲಮಿದಭವನಂ ಪೂಜೆಗೆಯ್ದು ಶೀಕರತಲಂ (ಕಾದಂಉ. ೨೦೩). **ಇಂದೂಪಳ** : ಪೊಳೆವಿಂದೂಪಳಕುಟ್ಟಿಮಸ್ಥಳದೊಳೆತ್ತಂ ಸೂಸೆ ತೀವಿರ್ದ ಕರ್ಪೂರರಜಂಗಳಿಂ (ರಾಜಶೇ. ೪–೭೩). [ಇಂದು₃ + ಉಪಲ]

**ಇಂದೂಪಳ** 'ಇಂದೂಪಲ' ನೋ.

**ಇಂದೊವರ್, ಈಂದೊವರ್** (ನಾ). ಸವಿಯಾದ ಒಗರು; ಸಿಹಿ ಯಿಂದ ಕೂಡಿದ ಒಗರು : ಇಂ[ಪಾಠಾಂ. ಈಂ]ದೊವರೆನಿಸಿದ ತನಿರಸ ದಿಂದೊದವಿದ ನೀಲಪಾಟಲಚ್ಛವಿಯಿಂ ನುಣ್ಪಿಂದೆಸೆವರನೇಱಿಲ ಪಣ್ (ಪಂರಾಮಾ. ೭–೧೫೫). **ಈಂದೊವರ್** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [< ಇನಿದು + ತೊವರ್]

**ಇಂದೊಳ** 'ಇಂದೋಳ' ನೋ.

**ಇಂದೋಳ, ಇಂದೊಳ** (ನಾ). ೧. [ಸಂಗೀತ] ಒಂದು ಬಗೆಯ ಮೇಳ ರಾಗ; ಆರು ಬಗೆಯ ಪುರುಷರಾಗಗಳಲ್ಲಿ ಒಂದು. ☞ ಭೈರವ, ಶ್ರೀರಾಗ, ಕೌಶಿಕ, ದೀಪಕ, ಮೇಘರಾಗ, ಹಿಂದೋಲ, (= ಇಂದೋಳ) ಎಂಬಿವು ಆರು ಪುರುಷರಾಗಗಳು. ೨. ಮಧುರ ವಾದ ಗಾನ; ಗಾಯನದ ಇಂಪು : ಇದು ಲೀಲಾಂದೋಳಮಿಂದೋ ಳದ ದನಿ ನೆಱೆಗೊಳ್ವನ್ನೆಗಂ ಪಾಡಲೆಂದೇಱಿದಳೆಂ ತೂಗುತ್ತು ಮಿರ್ದೆನ್ನಯ ಪರಿಜಿದುವೇ (ಆದಿಪು. ೪–೯) ; ಪದ್ಮಷಂಡಂಗಳೊಳೆತ್ತಂ ಸುತ್ತುಗೊಂಡಿರ್ದಳಿಕುಳಮಳಿನೀ ಗೇಯದೊಳ್ ಕೂಡಿ ತಳ್ತಿಂದೊಳ ಮಿಂದೋಳಕ್ಕಳಂಕಾರಮನೊದವಿಸುವುತ್ಕೋಕಿಲಂ . . . ರಯ್ಯಮೆತ್ತಂ (ಸುಕುಮಾ. ೧–೭೧). **ಇಂದೊಳ** : ೨. ಇಂದೊಳದಿನುನ್ಮದಷಟ್ಪದ ವೃಂದಮಿಾಗಳೀಗಳ ಮೊರೆದತ್ತು (ಆದಿಪು. ೧೩–೫) ; ಎಳಮಾವಿನ ಚೆಲ್ವಿಂ ಪೊಂಬಳೆಗಂಪಿಂ ತೆಂಕಣೆಲರಿನೆಳನೀರ್ಗಳಿನಿಂದೊಳದಿಂ ತಣಿಯಿಪುದು ಜನಂಗಳ ಪಂಚೇಂದ್ರಿಯಮನಂದು ಬಂದ ವಸಂತಂ (ಕಾದಂಉ. ೭೭೯) ; ಬೀಱಿದುದೊಂದೆ ಬಾಯಿನಮೆ ಬಾಲಕಿ ಬಾಲಕಿಯರ್ಗೆ ಗಾಡಿಯಂ ನೀಱರ ಕಣ್ಗೆ ಸೋಲ್ತ ಸುತಿಗಿಂದೊಳಮಂ . . . ಬಾಯ ಕಂಪನೆಳದುಂಬಿಗೆ ಬೀಱುತುಮುಯ್ಯಾಲಾಡಿದಳ್ (ಲೀಲಾವ. ೨–೩೯) ; ಇಂದೊಳಂ, ಇಂದೋಳಂ (ಶಮುದ. ೧೧೮ ಪ್ರಯೋ). [< ಸಂ. ಹಿಂದೋಲ]

**ಇಂದ್ರ** (ನಾ). ೧. ದೇವತೆಗಳ ಒಡೆಯ; ಸ್ವರ್ಗದ ಅಧಿಪತಿ : "ಇಂದ್ರಃ . . . ಮೇಘವಾಹನಃ –ಈ ೩೯ ದೇವೇಂದ್ರನ ಪೆಸರ್" (ಹಲಾಯು. ೧೦–೫೨,೫೩,೫೪). ೨. ದ್ವಾದಶಾದಿತ್ಯರಲ್ಲಿ ಒಬ್ಬನು : ಧಾತಾ, ಆರ್ಯಮಾ, ಮಿತ್ರ, ವರುಣ, ಇಂದ್ರ . . . ವಿಷ್ಣುಗಳೆಂಬವರೇ ಕ್ರಮದಿಂ ದ್ವಾದಶಾದಿತ್ಯರು (ವಿವೇಕ. ೨೬೬). ೩. ಒಡೆಯ ; ಯಜಮಾನ: "ಸ್ವಾಮಿ ಪತಿ . . . ನಾಥನಿಂದ್ರಂ ಕಾಂತನೀಶ್ವರಂ . . . ಒಡೆಯಂಗೆ ನಾಮಮುಕ್ಕುಂ" (ಮಂಗರಾ. ೬೬–೬). ೪. ಶ್ರೇಷ್ಠ. 'ಕವೀಂದ್ರ', 'ಮುನೀಂದ್ರ' ಪರಾ. ೫. [ಛಂದ] ಅಕ್ಷರಗಣಗಳಲ್ಲಿ ಒಂದಾದ (UUU) ನಗಣ. ೬. [ಛಂದ] ಅಂಶಗಣದಲ್ಲಿ ಒಂದಾದ ವಿಷ್ಣುಗಣ : (ಮೂರಂಶದ ಗಣ : ವಿಷ್ಣು, ಇಂದ್ರ) (ಕೈಪಿಡಿ. ೧೧೮). ೭. ತುಳುನಾಡಿನ ಪುರೋಹಿತವರ್ಗದಲ್ಲಿ ಒಂದು ಪಂಗಡ: ಈ ಜೈನರು ಸೆಟ್ಟಿಗಳು ಮತ್ತು ಪುರೋಹಿತರಾದ ಇಂದ್ರರೊಳಗೆ ಪರಸ್ಪರ ವಿವಾಹವಾಗುತ್ತಿರಲಿಲ್ಲ (ತುಳುನಾ. ೧೮೯). ೮. [ಜೈನ] ದೇವಾಲಯದ ಅರ್ಚಕ: ರಾಜಮಾತೆ . . . ದೇವಿಯ ಆಲಯಕ್ಕೆ ಇಷ್ಟುಹೊತ್ತಿಗೆ ಬರುವೆವೆಂದು ಮೊದಲೆ ಇಂದ್ರರಿಗೆ ಹೇಳಿ ಕಳಿಸಿದ್ದರು. ವಾಸಂತಿಕಾ ದೇವಾಲಯದ ಇಂದ್ರರು ನಾಗಪಂಡಿತರು (ಶಾಂತಲಾ. ೨೩). ೯. ಒಂದು ಜಾತಿಯ ಕುದುರೆ: ಉರಮುಂ ಕಪೋಲಮುಂ ಕೇಸರಮುಂ ಮುಷ್ಕ ಪ್ರದೇಶಮುಂ ಲೋಚನಮುಂ ಖುರಮುಮುಧರೋಷ್ಠಮುಂ ಕಡುಕರಿ ದಾಗಿರೆ ಧವಲವರ್ಣನಿಂದ್ರಾಖ್ಯಹಯಂ (ಅಶ್ವಶಾ. ೨–೧೧). [ಸಂ.]

**ಇಂದ್ರಕ** (ನಾ). ೧. ಸಭಾಗೃಹ; ಸಭಾಮಂಟಪ. ೨. [ಜೈನ] ನರಕ ಬಿಲಗಳಲ್ಲಿ ಒಂದು ಬಗೆ : ಆ ಬಿಲಂಗಳುಮಿಂದ್ರಕ ಶ್ರೇಢೀಬದ್ಧ ಪ್ರಕೀರ್ಣಕಂಗಳೆಂದು ಮೂಱುತೆಱಂ (ಆದಿಪು. ೫–೮೩ವ). ೩. [ಜೈನ] ಸೌಧರ್ಮೇಂದ್ರನೇ ಮುಂತಾದವರ ವಿಮಾನಗಳಲ್ಲಿ ಒಂದು ಬಗೆ : ಅಲ್ಲಿ ಸ್ವರ್ಗಮೆಂಬಿನಂ ಸೌಧರ್ಮೇಶಾನಾದಿಗಳ ವರವಿಮಾನಂ ಗಳಿಂದ್ರಕಶ್ರೇಣಿಬದ್ಧ ಪ್ರಕೀರ್ಣಕಗಳೆಂದು ಮೂದೆಱಂ (ಚಂದ್ರಪು. ೩–೩೨ವ) ; ಇಂದ್ರಕಂಗಳ್ ಸೌಧರ್ಮೈಶಾನಕಲ್ಪದೊಳ್ ಮೂವ ತ್ತೊಂದು (ತತ್ತ್ವಪ್ರ. ೨೧೨). [ಸಂ.]

**ಇಂದ್ರಕಲೆ** (ನಾ). ಮಾಯಾವಿದ್ಯೆ: ದುಃಖವನ್ನು ಅದ್ಭುತವಾಗಿ ಪಲ್ಲಟಿಸಿ ಅದನ್ನು ನಿರಪಾಯಕರವಾಗಿಸುವ ಇಂದ್ರಕಲೆಯೊಂದು ಕುಸುಮಾನಿಗೆ ಹಸ್ತಗತವಾದಂತೆ ತೋರಿತು (ಸಮಜೀ. ೧೧೫೧). [ಇಂದ್ರ + ಕಲ್ಲೆ₂]

**ಇಂದ್ರಕೀಲ** (ನಾ). ಒಂದು ಪರ್ವತದ ಹೆಸರು : ಇಂದ್ರಕೀಲ ನಗೇಂದ್ರದ ತಪೋಧನರೆಲ್ಲಂ ನೆರೆದು ಬಂದು (ಪಂಪಭಾ. ೮–೧೦ವ). [ಸಂ.]

**ಇಂದ್ರಕೇತು** (ನಾ). ೧. ಇಂದ್ರನ ಧ್ವಜ, —ಬಾವುಟ. ೨. [ಜೈನ] ಮಹಾಮಂಡಲೇಶ್ವರರು ಮಾಡುವ ಜಿನಪೂಜೆ : ಮಹಾಮಂಡಲೇ ಶ್ವರರ್ ಮಾಟ್ಪಿಂದ್ರಕೇತುವೆಂಬ ಪೂಜೆಯುಂ (ಸುಕುಮಾ. ೬–೨೫ವ). [ಇಂದ್ರ + ಕೇತು]

**ಇಂದ್ರಕೋದಂಡ** (ನಾ). = ಇಂದ್ರಧನು : ವಿದ್ಯುಲ್ಲತೆಯ ತಿರುವು ಪೊಯ್ದಿಂದ್ರಕೋದಂಡಮುಂ ಕೊಂಡು (ಜಗವಿ. ೪–೨೧). [ಇಂದ್ರ + ಕೋದಂಡ]

**ಇಂದ್ರಕೋಶ** (ನಾ). ೧. ಸುಖಾಸನ; ಪೀಠ. ೨. ಮಂಚ; ಪಲ್ಲಂಗ. ೩. ವೇದಿಕೆ; ತವಂಗ: "ಇಂದ್ರಕೋಶಃ, ತವಂಗಃ — ಈ ೨ ತವಂಗ" (ಹಲಾಯು. ೪೯–೧೩೪). [ಇಂದ್ರ + ಕೋಶ]

**ಇಂದ್ರಗಾಯಕ** (ನಾ). ಇಂದ್ರನ ಸಂಗೀತಗಾರ: ಪಂಚಮ ಮಾಂಗಲ್ಯದೊಳಿಂದ್ರಗಾಯಕರದೇನಿಂಬಿಂ ನಯಂಬೆತ್ತರೋ (ಶಾಂತಿಪು. ೧೦–೩೫). [ಇಂದ್ರ + ಗಾಯಕ]

**ಇಂದ್ರಗಿರಿ** (ನಾ). ೧. ಒಂದು ಕುಲಪರ್ವತ: ಶಂಖಕೂಟ . . . ಇಂದ್ರಗಿರಿ . . . ಎಂಬ ಹದಿನೇಳು ಕುಲಗೋತ್ರಂಗಳೇ (ವಿವೇಕ. ೨೧೬). ೨. ಶ್ರವಣಬೆಳುಗೊಳದ ಒಂದು ಬೆಟ್ಟದ ಹೆಸರು. 'ಚಂದ್ರಗಿರಿ' ಪರಾ. [ಇಂದ್ರ + ಗಿರಿ$_1$]

**ಇಂದ್ರಗೋಪ** (ನಾ). ೧. ಮಳೆಗಾಲದಲ್ಲಿ ಕಾಣಿಸಿಕೊಳ್ಳುವ ಒಂದು ಬಗೆಯ ಕೆಂಪು ಬಣ್ಣದ ಮಿಂಚು ಹುಳು; ಹೊನ್ನೆಹುಳು: "ಅಭ್ರಜ ಮೆನಲ್ಕಿಂದ್ರಗೋಪಮಕ್ಕು" (ಮಂಗರಾ. ೪೯–೧೩); "ಇಂದ್ರಗೋಪ ಕೆಂಬುಬುವಕ್ಕುಂ" (ಕವಿಕಂ. ೯೫); ಬಣ್ಣವುರಂ ತೀವಿದ ಮಾಟ್ಕೆಯಾಯ್ತು ನವಿಲಿಂ ಕುಂಪಂಗಳಿಂದಿಂದ್ರಗೋಪವಿಳಾಸಂಗಳಿನಾಲಿಕಲ್ಲಪರ ಕಾರೊಳ್ ಮಹೀಮಂಡಲಂ (ಪಂಪಭಾ. ೭–೨೪); ಎಳದಳಿರಿಂದ್ರಗೋಪಂ. . . ಕೀರಮಂಡಳಿಯ ಮುಖಂ ಪ್ರವಾಳಮದಿರ್ಮುರ್ತ್ತಿಯ . . . ಚೈತ್ರವಾರ್ಥಿಯ ವಹಿತ್ರಮಿದೆಂದೆನಿಸಿತ್ತು ನಂದನಂ (ರಾಜಶೇ. ೧೦–೪); "ಹಡಗಿನ ಮಂಚ" (ರಾಜಶೇ. ಕೋಶ). ೨. ಕೆಂಪು ಬಣ್ಣ: ಇಂದ್ರಗೋಪದ ಬರಹದ ಹೊಂಬಣ್ಣದ . . . ಇಂದ್ರಾಣಿಯ ಸೀರೆಯನುಟ್ಟು ಮೆಚಿದರು ಚಂದ್ರಮುಖಿಯರೋಲಗದೊಳು (ರಾಮವಿ. ೯–೭೯). [ಸಂ.]

**ಇಂದ್ರಚಾಪ** (ನಾ). ಕಾಮನ ಬಿಲ್ಲು: ರತ್ನಾಭರಣಕಿರಣಜಾಲಂಗಳಿಂದಿಂದ್ರಚಾಪಂಗಳ ತಳ್ಪಿಂದೊಪ್ಪಮಂ ತಾಳ್ದಿದ ಘನಸಮಯಂ ತಾನಿದೆಂಬಂದದಿಂ (ಕಾದಂಪೂ. ೨೬); ಕಟ್ಟಿದ ಪಂಚವಣ್ಣಿಗೆಯ ಪಟ್ಟಿಯ ತೊಂಗಲೊಳಿಂದ್ರಚಾಪಮಂ ಪುಟ್ಟಿಸಿ (ಪಂರಾಮಾ. ೧೩–೫೯). [ಇಂದ್ರ + ಚಾಪ$_1$]

**ಇಂದ್ರಚಾಪಂಬೆಱು** (ಕ್ರಿ). ಕಾಮನಬಿಲ್ಲನ್ನು ಪಡೆ; ಮಳೆಬಿಲ್ಲನ್ನು ಹೊಂದು: ಭೋಂಕನೆ ನೂಂಕಿ ಬರ್ಪ ಮಣಿಮಯಮಾದ ತೇರ್ಗಳಿಂದಿಂದ್ರಚಾಪಂಬೆತ್ತ ನೀರತೇರ್ಗಳಿಳಿಗಿಳಿದು ತಳರ್ವಂತೆಯುಂ (ರಾಜಶೇ. ೧೩–೭೭ ವ). [ಇಂದ್ರಚಾಪ + ಪೆಱು$_1$]

**ಇಂದ್ರಚ್ಛಂದ** (ನಾ). ಸಾವಿರದೆಂಟು ಎಳೆಗಳಿಂದ ಕೂಡಿದ ಹಾರ: ಸಿಂಹಾಸನಮುಮನೊಡನೆ ಬೆಳಗೆ ಬೆಳಗಿಂದೆ ಜಗಂ ಬಾಸಣಿಸಿದುದೆನೆ ಸಕಳ ಸುರಾಸುರಪತಿಯುರದೊಳೆಸೆದುದಿಂದ್ರಚ್ಛಂದಂ (ಆದಿಪು. ೯–೭); ಕಂಠದೊಳ್ ಕೌಸ್ತುಭಾದಿರತ್ನಗಳಿಂದೊಡಗೂಡಿದ ಮುತ್ತಿನ ಸಾವಿರದೆಂಟು ಎಳೆಗಳಿಂದೊಡಗೂಡಿದ ಇಂದ್ರಚ್ಛಂದವೆಂಬ ಹಾರವನ್ನಿಟ್ಟು (ಪುರುಚ. ೧೩೭). [ಸಂ.]

**ಇಂದ್ರಜ** (ನಾ). ೧. ಇಂದ್ರನ ಮಗ; ಅರ್ಜುನ: "ಇಂದ್ರಜಂ . . . ಗಾಂಡೀವಿ . . . ಅರ್ಜುನನೆನಿಕ್ಕು" (ಮಂಗರಾ. ೭೮–೩). ೨. ಜಯಂತ: ತನು ಸೌಂದರ್ಯದೊಳಿಂದ್ರಜಂ (ಎಕ. VII, ಶಿಕಾರಿ. ೧೮೫–೨೨; 1157). ೩. ವಾಲಿ. ೪. ಕಾಕಾಸುರ. [ಸಂ.]

**ಇಂದ್ರಜವ, ಇಂದ್ರಜವಿ, ಇಂದ್ರಜೆವಿ** (ನಾ). = ಇಂದ್ರಯವ: "ಇಂದ್ರಜವ = ಇಂದ್ರಜವಿ, ಕುರುಟಿಗನ ಬೀಜ" (ಗಂಗಾವು. ೩೨). **ಇಂದ್ರಜವಿ**: "ಭದ್ರಯವ = ಇಂದ್ರಜವಿ" (ಗಂಗಾವು. ೨೪೦). **ಇಂದ್ರಜೆವಿ**: "ಇಂದ್ರಜೆವಿಯ ಗಿಡ, ಹೆಮ್ಮುಷ್ಟಗೇ ಗಿಡ" (ಗಂಗಾವು. ೨೮೧). [ಸಂ. ಇಂದ್ರಯವ]

**ಇಂದ್ರಜವಿ** 'ಇಂದ್ರಜವ' ನೋ.

**ಇಂದ್ರಜಾಲ** (ನಾ). ೧. ಯಕ್ಷಿಣೀ ವಿದ್ಯೆ; ಗಾರುಡಿ; ಕಣ್ಕಟ್ಟು; **ಮೋಡಿ**: ಇಂದ್ರಜಾಲದ ಸಿರಿಗೇಕೆ ಮೆಚ್ಚಿಪುದುವಿರಿ (ಗದಾಯು. ೧–೩೫); ಇಂದ್ರಜಾಲ ಮಹೇಂದ್ರಜಾಲವನ್ನರಿತವರೂ . . . ಬಂದು ಕಿಕ್ಕಿರಿದರು (ಶಾಂತಲಾ. ೧೦೦). ೨. ಕಪಟ; ವಂಚನೆ; ಮಾಯಾವಿತನ: ಇದಾರಿಗೆ ಮನವ ಕದ್ದಾಡುವಿರಿ ನಿಜಶಿಷ್ಯನಲಿ ನಾಟಕದಿಂದ್ರಜಾಲವೆ (ಕುವ್ಯಾಉ. ೧–೪೨). ೩. ಯುದ್ಧದಲ್ಲಿ ಒಂದು ತಂತ್ರ. [ಸಂ.]

**ಇಂದ್ರಜಾಲಿಕ** (ಗು). ೧. ದಿಟವಲ್ಲದ; ಅಸತ್ಯವಾದ. (ನಾ). ೨. ಇಂದ್ರಜಾಲ ಮಾಡುವವನು; ಮಾಯಾವಿ; ಯಕ್ಷಿಣಿಯವನು: ಸುಗ್ಗಿಯಲಿ ಪಡಿಮೆಯ ಮಱಗೆ ಕೆಂಜಾಜಿ ಆರಳುದೋಱದ ತೆಱದಿ[ನೃಪ ಮುನಿ]ವರರನಾ ಪರಿ ಸಮವಸರಣದೊಳಿರಿಸಿ ತೋಱದನಾ ಧನದನೆಂಬಿಂದ್ರಜಾಲಿಕನು (ಸಾಳ್ವಭಾ. ೪–೧೩); ನಾನೇ ಇಂದ್ರಜಾಲಿಕನಾಗಬೇಕು (ಶಾಲೆಮು. ೧೪೭). [ಸಂ.]

**ಇಂದ್ರಜಾಲಿಗ** (ನಾ). ೧. = ಇಂದ್ರಜಾಲಿಕ ೨: ಅದಱೊಳಗಿರ್ದ ಇಂದ್ರಜಾಲಿಗರ ಪಾಪೆಗಳುಂ (ವಡ್ಡಾರಾ. ೧೯–೧೧); ಬಂದನವನೊರ್ವನ ಪೂರ್ವಿಗನಿಂದ್ರಜಾಲಿಗಂ (ಲೀಲಾವ. ೪–೭೫); ವನಜಾಸ್ತ್ರನೆಂಬಿಂದ್ರಜಾಲಿಗ ನೋಳ್ಪರ ಮನವೆಂಬ ಚೆಂಡಿಟ್ಟು ಮುಚ್ಚಿದ ಕನಕ ಕರಂಡಗಳಂತೆ ಕಂಗೆಸೆದುವು ವನಿತೆಯ ಪೀನಕುಚಗಳು (ತ್ರಿಭುತಿ. ೨೦–೫೧). ೨. ಇಂದ್ರಜಾಲವೆಂಬ ತಂತ್ರಕ್ಕೆ ಒಳಗಾಗಿ ಗಾಯಗೊಂಡವನು: ನೆಱನಂ ನಟ್ಟುರ್ಚಿರ್ದುಗ್ರಾಯುಧಾವಲಿಯಿಂದುರ್ವಿಸುವಿಂದ್ರಜಾಲಿಗನವೋಲ್ ಜೋಲ್ದುಂ ನೆಱಲ್ದುಂ ಸಮಾಕುಲಿತರ್ ಮೋಹಿಸಿ ಮೆಚ್ಚುವೋಗೆ (ಶಾಂತಿಪು. ೭–೮೯). [ಇಂದ್ರಜಾಲ + -ಇಗ]

**ಇಂದ್ರಜಾಲಿಗತನ** (ನಾ). ಮಾಯಾವಿತನ; ಮಾಯೆ: ಬಿತ್ತರಿಸಿದನಿಂದ್ರನಿಂದ್ರಜಾಲಿಗತನಮಂ (ಅಜಿಪು. ೫–೧೮). [ಇಂದ್ರಜಾಲಿಗ + -ತನ]

**ಇಂದ್ರಜಿತು, ಇಂದ್ರಜಿತ್ತು** (ನಾ). ೧. ಇಂದ್ರನನ್ನು ಜಯಿಸಿದವನು. ೨. ರಾವಣನ ಮಗ; ಮೇಘನಾದ: ರಣಭೂಮಿಗಿಂದ್ರಜಿತು ಪೊಱಮಟ್ಟಂ (ಪಂರಾಮಾ. ೧೩–೧೫); ಎತ್ತನೋಡಿದಡಿಂದ್ರಜಿತುವಿನ ಮೊತ್ತವಿರ್ದುದು (ತೊರರಾ. ೬–೪೪–೩೭). ಇಂದ್ರಾರಿ ಹೋ. **ಇಂದ್ರಜಿತ್ತು**: ೨. ಇಂದ್ರಜಿತ್ತು ಮಹಾಮಾಯಾವಿಯಾಗಿದ್ದನು (ರೂಢಿ). [ಸಂ. ಇಂದ್ರಜಿತ್]

**ಇಂದ್ರಜಿತ್ತು** 'ಇಂದ್ರಜಿತು' ನೋ.

**ಇಂದ್ರಜೆವಿ** 'ಇಂದ್ರಜವ' ನೋ.

**ಇಂದ್ರತ್ಯಾಗ** (ನಾ). [ಜೈನ] ಅಧಿಕಾರವನ್ನು ಬಿಟ್ಟುಕೊಡುವುದು; ರಾಜ್ಯಪದವಿಯ ತ್ಯಾಗ; ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು: ಇಂದ್ರತ್ಯಾಗಮುಂ ಅವತಾರಮುಂ . . . ಅಪ್ಪುಯ್ವತ್ತುಮೂಱು ಗರ್ಭಾನ್ವಯ ಕ್ರಿಯೆಯೊಳು (ಚಾವುಂಪು. ೨೩೦); ನಮಗಾದರೋ ಭೋಗಪ್ರಾಪ್ತಿಯು ಮುಗಿಯುವಂಥಾದ್ದಾಯಿತು. ಮುಂದೆ ಜನಿಸುವ ದೇವೇಂದ್ರನಿಗೆ ನೀವು ಅಧೀನರಾಗಿರಿಯೆಂದು ಆಜ್ಞಾಪಿಸಿ ತನ್ನ ಸಾಮ್ರಾಜ್ಯಪದವಿಯಂ ತ್ಯಜಿಸುವುದೇ ಇಂದ್ರತ್ಯಾಗವೆಂಬ ಮೂವತ್ತೇಳನೇ ಕರ್ಮವು (ಪುರುಚ. ೨೧೨); (ಆದಿಪು. ೧೫–೧೫ ವ ನೋ). [ಇಂದ್ರ + ತ್ಯಾಗ]

**ಇಂದ್ರತ್ಯಾಗಕ್ರಿಯೆ** (ನಾ). = ಇಂದ್ರತ್ಯಾಗ: ನಿಜಾಯುಷ್ಯಾವಸಾನದೊಳು ಸ್ವರ್ಗಾವತರಣಮನಱದು ದೇವರ್ಕಳುಮಂತಃಪುರದೊಲ್ಲಭೆಯರುಮಂ ಕರೆದೆನ್ನ ಪರೋಕ್ಷದೊಳೆನ್ನ ಪದವಿಯೋಗದೊಳ್ ನಿಂದಾತಂಗೆ ಬೆಸಕೆಯ್ದು ಬಾಳಿಮೆಂದವರ ಸಾಕ್ಷಿಯೊಳ್ ಸಾಮ್ರಾಜ್ಯಮಂ ತೊಱೆವುದು ಇಂದ್ರತ್ಯಾಗಕ್ರಿಯೆ (ಚಾವುಂಉ. ೨೩೭). [ಇಂದ್ರತ್ಯಾಗ + ಕ್ರಿಯೆ]

**ಇಂದ್ರತ್ವ** (ನಾ). ಇಂದ್ರಪದವಿ. [ಸಂ.]

**ಇಂದ್ರದಿಕ್ಕು** (ನಾ). ಇಂದ್ರನ ದಿಕ್ಕು; ಪೂರ್ವದಿಕ್ಕು. [ಸಂ. ಇಂದ್ರದಿಶ್]

**ಇಂದ್ರದಿಕ್ತಟ** (ನಾ). ಪೂರ್ವದಿಕ್ಕಿನ ಪ್ರದೇಶ ; ಮೂಡಲಿನ ಕಡೆ : ಮರುದಿನಂ ಬೆಳಗಾದುದಿಂದ್ರದಿಕ್ತಟದಿ (ಶ್ರೀರಾಮಾ. ೩೧–೧೦೨). [ಸಂ. (ಇಂದ್ರದಿಶ್ + ತಟ)]

**ಇಂದ್ರದ್ರು** (ನಾ). "ಕೆಂಪು ಮತ್ತಿಯ ಮರ; ಅರ್ಜುನ ವೃಕ್ಷ" (ಅಮರ. ಟೀಕೆ). [ಸಂ.]

**ಇಂದ್ರದ್ರುಮ** (ನಾ). = ಇಂದ್ರದ್ರು (ಪಂಡಿತ. ೧೮೭). [ಇಂದ್ರ + ದ್ರುಮ]

**ಇಂದ್ರದ್ವಿಪ** (ನಾ). ಇಂದ್ರನ ಆನೆ; ಐರಾವತ: ದೇವರ ದಂಡ ಧಾರರೆರಡುಂ ಪಕ್ಷಂಗಳೊಳ್ ಸಾರೆ . . . ಪೋಯ್ತಾಗಳಿಂದ್ರದ್ವಿಪಂ (ಶಾಂತಿಪು. ೧೦–೨೪). [ಇಂದ್ರ + ದ್ವಿಪ]

**ಇಂದ್ರಧನು** (ನಾ). ಕಾಮನ ಬಿಲ್ಲು : ಭೀಷ್ಮ ಜಲಪಾತದೊಳು ಸ್ಥಿರ ಚಂಚಲೇಂದ್ರಧನು ಎಸೆವ ಪರಿ ಭವದ ಮೇಲಾಡುತಿರುವಂತೆ (ಮಲೆದೇ. ೪೩–೩) ; ಇಂದ್ರಧನು ಕೈದೋಟಕೊಂಕಿಗೆಟಕುವುದೇ (ಮಂಕುಕ. ೬೯೩). [ಸಂ. ಇಂದ್ರಧನುಸ್]

**ಇಂದ್ರಧನುಸ್ಸು** (ನಾ). = ಇಂದ್ರಧನು. [ಸಂ. ಇಂದ್ರಧನುಸ್]

**ಇಂದ್ರಧ್ವಜ** (ನಾ). **೧.** ಇಂದ್ರನ ಬಾವುಟ. **೨.** ಭಾದ್ರಪದ ಶುಕ್ಲ ದ್ವಾದಶಿಯಂದು ರಾಜರು ಪೂಜಿಸುವ ಧ್ವಜ. **೩.** ವಜ್ರಾಯುಧ. **೪.** [ಜೈನ] ಇಂದ್ರಾದಿಗಳು ಮಾಡುವ ಜಿನಪೂಜೆ: ಇಂದ್ರರ್ ಮಾಳ್ಪ ಇಂದ್ರಧ್ವಜಮುಂ (ಆದಿಪು. ೧೫–೧೩ವ) ; ಇಂದ್ರಧ್ವಜಮೆಂಬುದು–ಇಂದ್ರಾದಿಗಳ್ ಮಾಳ್ಪ ಪೂಜೆಯಕ್ಕುಂ (ಅಜಿಪು. ೧೨–೧ವ). [ಇಂದ್ರ + ಧ್ವಜ]

**ಇಂದ್ರನಂದನ** (ನಾ). **೧.** ಇಂದ್ರನ ಮಗ; ಅರ್ಜುನ. **೨.** ಜಯಂತ: ತೊಳಗಿದನಿಂದ್ರನಂದನನ ಮೈಸಿರಿಯಂ ಜಜೆದಾ ಮೃಗಾಂಕನುಜ್ವಳಮಣಿ ಳಿಂಕೆಗೆಯ್ದು ನಳಕೂಬರನಗ್ಗದ ಗಂಡಗಾಡಿಯಂ ಪಳಿದು (ರಾಜಶೇ. ೧೩–೬೦). **೩.** ವಾಲಿ. **೪.** ಕಾಕಾಸುರ. [ಇಂದ್ರ + ನಂದನ]

**ಇಂದ್ರನಗ** (ನಾ). ಮೇರುಪರ್ವತ. 'ಇಂದ್ರನಗೇಂದ್ರ' ಪರಾ. [ಇಂದ್ರ + ನಗ]

**ಇಂದ್ರನಗೇಂದ್ರ** (ನಾ). ಶ್ರೇಷ್ಠವಾದ ಮೇರುಪರ್ವತ: ಇಂದ್ರಾಳಿ ಸಮೆಯಿಸಿದ ಬೆಳ್ಳಿಯ ಕೋಳೆಯನಾಂತಂತಿರೆಸೆದುದಿಂದ್ರನಗೇಂದ್ರಂ (ಶಾಂತಿಪು. ೧೦–೫೦). [ಇಂದ್ರ + ನಗೇಂದ್ರ]

**ಇಂದ್ರನಿಲಯ** (ನಾ). **೧.** ಇಂದ್ರನ ವಾಸಸ್ಥಾನ ; ಅಮರಾವತಿ. **೨.** [ಛಂದ] ಅಕ್ಷರಗಳಲ್ಲಿ ಒಂದಾದ (ᑌᑌᑌ) ನಗಣ : ಧರಣಿ ಜಲಾಗ್ನಿಮರುದ್ವ್ಯೋಮ ರವಿ ಶಶಾಂಕೇಂದ್ರನಿಲಯಮಿವು ಗಣದ ಪೆಸರ್ (ಛಂದೋಂಬು. ೧–೩೭). [ಇಂದ್ರ + ನಿಲಯ]

**ಇಂದ್ರನೀಲ** (ನಾ). ನೀಲವರ್ಣದ ರತ್ನ : ಸೊಗಯಿಸುಗುಮಿಂದ್ರನೀಲಮಣಿಸನ್ನಿಭದೊಳ್ ಮಿಗೆ ಜಳನಿಧಿಯೊಳಗೆ (ಕವಿರಾ. ೨–೧೪೭) ; ಇಂದ್ರನೀಲದ ಮಣಿಸ್ತಂಭ ನಿಳಯಂಗಳಂ (ನಂಬಿರ. ೯–೯೨) ; ಬಿತ್ತರಿಪ ನಯವು ಕಾಂತಿಯು ರಂಗುಛಾಯೆಯೆಂ[ಯಿಂ] ಬಿತ್ತರದ ಮೈಯೊಳತಿ ನಯಮಾಗಿ ಕೆಲದಲುಂ ಸುತ್ತಲುಂ ಪ್ರಭೆ ತೋರ್ಪ ನೀಲಮದು ತೃಣ ಗ್ರಾಹಿಯಿಂದ್ರನೀಲಮಯಮೆನಿಪುದು (ರತ್ನಶಾ. ೧೩–೭). [ಇಂದ್ರ + ನೀಲ]

**ಇಂದ್ರಪುರ** (ನಾ). **೧.** ಇಂದ್ರನ ನಗರ; ಅಮರಾವತಿ : ಆ ನಗರಮಿಂದ್ರಪುರಕ್ಕಮುದಾತ್ತಮಗ್ಗಳಂ (ಜಗವಿ. ೨–೩೫). **೨.** [ಛಂದ] ಅಕ್ಷರಗಣಗಳಲ್ಲಿ ಒಂದಾದ (ᑌᑌᑌ) ನಗಣ : ತ್ರಿದಶಮರುದಿಂದ್ರಪುರಚಂದ್ರ ಸಲಿಲಂಗಳ್ ತುದಿಯೊಳಿರೆ ತಳ್ತು . . . ವಿದಿತಮಿದು . . . ವಿಚಿತ್ರ ಲಲಿತಂ (ಛಂದೋಂಬು. ೨–೧೦೮). [ಇಂದ್ರ + ಪುರ$_1$]

**ಇಂದ್ರಪುರೋಹಿತ** (ನಾ). ಬೃಹಸ್ಪತಿ ; ಗುರು : ಇಂದ್ರಪುರೋಹಿತಂ ಧನುರ್ಧರ ಗೃಹದೊಳ್ . . . ಇರೆ . . . ಸಕಲ ಭೂವಲಯಾಧಿಪನಕ್ಕುಮಾ ನರಂ (ಜಾತತಿ. ೧೨–೧೮). [ಇಂದ್ರ + ಪುರೋಹಿತ]

**ಇಂದ್ರಪುಷ್ಪಬಳ್ಳಿ** (ನಾ). ಒಂದು ಗಿಡದ ಹೆಸರು (ಮೈಔಗಿ. ೭೪–೧೫೨೩). [ಇಂದ್ರ + ಪುಷ್ಪ + ಬಳ್ಳಿ]

**ಇಂದ್ರಪ್ರಹರಣ** (ನಾ). ಇಂದ್ರನ ಆಯುಧ; ವಜ್ರಾಯುಧ: "ಪವಿಃ, ಅಶನಿಃ, . . . ಇಂದ್ರಪ್ರಹರಣಂ (ತಥಾ), ಶಂಖಃ — ಈ ೧೨ ಇಂದ್ರನ ವಜ್ರಾಯುಧದ ಪೆಸರ್" (ಹಲಾಯು. ೧೧–೫೬). [ಇಂದ್ರ + ಪ್ರಹರಣ]

**ಇಂದ್ರಮಂತ್ರಿ** (ನಾ). ಇಂದ್ರನ ಮಂತ್ರಿ; ಬೃಹಸ್ಪತಿ ; ಗುರು : ಅಸ್ತದೊಳಿಂದ್ರಮಂತ್ರಿ ಶುಭದಂ (ಜಾತತಿ. ೧೦–೧೧). [ಇಂದ್ರ + ಮಂತ್ರಿ]

**ಇಂದ್ರಮಣಿ** (ನಾ). = ಇಂದ್ರನೀಲ : ಇಂದ್ರಮಣಿಯಾಳ್ವರಿ ಬಜ್ಜರ ಗೊತ್ತಳಂಗಳಗ್ಗಳಿಸಿರೆ (ಶಬಶಂ. ೧–೫೪). [ಇಂದ್ರ + ಮಣಿ$_3$]

**ಇಂದ್ರಯವ** (ನಾ). "ಕೊಡಸಿಗೆ ಬೀಜ" (ಅಮರ. ಟೀಕೆ) ; "ಕೊಂಡಿರ ಫಾಲಗಿಡ" (ಪಂಡಿತ. ೧೮೭). [ಸಂ.]

**ಇಂದ್ರಲುಪ್ತ** (ನಾ). (ತಲೆಯ) ಕೂದಲು ಉದುರಿ ಹೋಗಿ ಚರ್ಮ ಕಾಣುವಂತಾಗುವ ಒಂದು ಬಗೆಯ ರೋಗ ; ತೆಗಳಿ ; ತೆವಳೆ ; ಪ್ರತಿಮುಂಡೆ ರೋಗ : "ಕೇಶಘ್ನಂ, ಇಂದ್ರಲುಪ್ತಂ — ಈ ೨ ತೇವುಳು" (ಹಲಾಯು. ೯೯–೪೫೧) ; ಇಂದ್ರಲುಪ್ತ ಎಂಬುದೊಂದು ಮಂಡೆಯ ಚರ್ಮ ಕಾಣಲ್ಪಡುವುದು, ಅದನೇ ಹೇನಕರೆ ಎಂಬರು (ವೈದ್ಯಸಾ. II, ೧೩೦). [ಇಂದ್ರ + ಲುಪ್ತ]

**ಇಂದ್ರಲುಪ್ತಕ** (ನಾ). **೧.** (ತಲೆಯ) ಕೂದಲು ಉದುರಿ ಹೋದವನು ; ಬೋಳುದಲೆಯವನು : "ಕಟರಂ ಖಳವ ಶಿಪಿವಿಷ್ಟನಿಂದ್ರ ಲುಪ್ತಕನಕ್ಕು" (ಮಂಗರಾ. ೧೧೪–೫). **೨.** = ಇಂದ್ರಲುಪ್ತ : "ಇಂದ್ರ ಲುಪ್ತಕ = ತಲೆಯ ಮೇಲಿನ ಕೂದಲುಗಳು ಇಲ್ಲದ ಹಾಗಾಗುವ ಬೇನೆ, ತೆಗಳಿ ನೆಕ್ಕೊಣ" (ಗಂಗಾಮ. ೩೨). [ಸಂ.]

**ಇಂದ್ರಲೋಕ** (ನಾ). ಸ್ವರ್ಗ. [ಇಂದ್ರ + ಲೋಕ]

**ಇಂದ್ರವಂಶ** (ನಾ). [ಛಂದ] (ಅಕ್ಷರ ವೃತ್ತಗಳಲ್ಲಿ) ಒಂದು ಸಮ ವೃತ್ತದ ಹೆಸರು : ವ್ಯೋಮದ್ವಯಂ ಮುಂತೆ ದಿವಾಕರಾಗ್ನಿಗಳ್ ತಾಮೊಂದೆ ದಿಗ್ದಂತಿಯೊಳಾಗೆ ವಿಶ್ರಮಂ ಶ್ರೀಮಾನಿನೀ ಸಯ್ತಿಡಿಯಾತ ನಿಂತಿದೀ ನಾಮೋಪಮಂ ಮಾಡಿದನಿಂದ್ರವಂಶಮಂ (ಛಂದೋಂಬು. ೨–೭೯). [ಸಂ.]

**ಇಂದ್ರವಜ್ರ** (ನಾ). [ಛಂದ] (ಅಕ್ಷರ ವೃತ್ತಗಳಲ್ಲಿ) ಒಂದು ಸಮ ವೃತ್ತದ ಹೆಸರು : ವ್ಯೋಮದ್ವಯಂ ಭಾನುಕಪರ್ದಿಯುಗ್ಮಂ ತಾಮಾಗಿರಲ್ಕೆಂಟಜೊಳಾ ವಿರಾಮಂ ಈ ಮಾಟ್ಕೆಯಿಂದೋದಿದೊಡಿಂದ್ರವಜ್ರಂ (ಛಂದೋಂಬು. ೨–೬೩) ; ೧೧ನೆಯ ತ್ರಿಷ್ಟುಪ್ಪಿವಿನಲ್ಲಿ . . . ತಾನಿಂದ್ರವಜ್ರಂ ತತಜಂಗಯುಗ್ಮಂ (ಕೈಪಿಡಿ. ೮೦). [ಸಂ.]

**ಇಂದ್ರವಧು** (ನಾ). **೧.** ಇಂದ್ರನಿಂದ ನಿಯಮಿತಳಾದ ದೇವತಾಸ್ತ್ರೀ ; ಅಪ್ಸರೆ ; ಅಮರಿ : ತಂಬುಲಂದೀವಿದ ಪೊಂಗವಳಿಗೆಯಂ ಪಿಡಿದಂಬಿಕೆ ಗವಟಯ್ಸಿದಳೊರ್ವಳಿಂದ್ರವಧು ತಂಬುಲಮಂ (ಶಾಂತಿಪು. ೮–೧೮೦). **೨.** ಶಚೀದೇವಿ. [ಸಂ. ಇಂದ್ರವಧೂ (ಇಂದ್ರ + ವಧೂ)]

**ಇಂದ್ರವರ್ತುಲ** (ನಾ). ಮಾಯಾವಲಯ ; ಮೋಹದ ಆವರಣ : ಶೀನೂ ಕ್ರಮೇಣ ಆ ನಾಗಿಣಿಯ ಇಂದ್ರವರ್ತುಲದಲ್ಲಿ ಸಿಲುಕಿ ಸುಶೀಲೆಯನ್ನು ಮರೆತುಬಿಟ್ಟಿದ್ದ (ಸಮುಜೀ. ೮೭). [ಇಂದ್ರ + ವರ್ತುಲ]

**ಇಂದ್ರವಾರುಣಿ** (ನಾ). ಕಾಡುಕವಡೆಕಾಯಿ ಗಿಡ; "ಹಾವುಮೆಕ್ಕೆ" (ಅಮರ. ಟೀಕೆ). [ಸಂ. ಇಂದ್ರವಾರುಣೀ (ಇಂದ್ರ + ವಾರುಣೀ)]

**ಇಂದ್ರವಿದ್ವಿಷ** (ನಾ). ಇಂದ್ರನ ಹಗೆ ; ರಾವಣ : ಪುಷ್ಪಕವಿಮಾನ ವನೇಱಿದನಿಂದ್ರವಿದ್ವಿಷಂ (ಪಂರಾಮಾ. ೯-೭೪). [ಸಂ. ಇಂದ್ರವಿದ್ವಿಷ್]

**ಇಂದ್ರಶೂದ್ರ** (ನಾ). ಕುರುಬ ಜಾತಿಗೆ ಸೇರಿದವನು (ಎಸಮೈ. I, ೧). [ಇಂದ್ರ + ಶೂದ್ರ]

**ಇಂದ್ರಸಂಜ್ಞಕೆ** (ನಾ). ಇಂದ್ರನ ಹೆಸರನ್ನುಳ್ಳುದು : ಸುತ್ರಾಮನಿತ್ತನು ದಿವ್ಯಬಾಣಮನಿಂದ್ರಸಂಜ್ಞಕವ (ಕುವ್ಯಾಆ. ೭-೭). [ಸಂ.]

**ಇಂದ್ರಸರಿತ್ತನಯ** (ನಾ). ಗಂಗಾಪುತ್ರ ; ಭೀಷ್ಮ : ತತ್ತನಯಂ. . . ಶೌಚಗುಣೇಂದ್ರಸರಿತ್ತನಯಂ ಬೊಪ್ಪದೇವ ಭೂಪಂ ನೆಗಳ್ದಂ (ಎಕ. XI, ದಾವಣ. ೩೫-೫೮ ; 1100). [ಸಂ. (ಇಂದ್ರಸರಿತ್ + ತನಯ)]

**ಇಂದ್ರಸರಿತ್ತು** (ನಾ). ದೇವಗಂಗೆ ; ಗಂಗಾನದಿ. 'ಇಂದ್ರಸರಿತ್ತನಯ' ಪರಾ. [ಸಂ. ಇಂದ್ರಸರಿತ್]

**ಇಂದ್ರಸಾವರ್ಣಿ** (ನಾ). ಹದಿನಾಲ್ಕನೆಯ ಮನು. 'ಇಂದ್ರಸಾವರ್ಣಿಕ' ಪರಾ. [ಇಂದ್ರ + ಸಾವರ್ಣಿ]

**ಇಂದ್ರಸಾವರ್ಣಿಕೆ** (ನಾ). ಹದಿನಾಲ್ಕನೆಯ ಮನು : ಸ್ವಾಯಂಭುವ . . . ರುದ್ರಸಾವರ್ಣಿಕ . . . ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳೊಳಗೆ (ವಿವೇಕ. ೨೦೪). [ಸಂ.]

**ಇಂದ್ರಸಿಂಧು** (ನಾ). ದೇವಗಂಗೆ ; ಗಂಗಾನದಿ : ಅಕೂಪಾರಮನಿಂದ್ರಸಿಂಧು ಪುಗುವಂತೆ (ಶಾಂತಿಪು. ೬-೨). [ಇಂದ್ರ + ಸಿಂಧು]

**ಇಂದ್ರಸಿಂಧುರ** (ನಾ). ಇಂದ್ರನ ಆನೆ ; ಐರಾವತ : ಮಂತಣಸಾಲೆಗೆ ಬಂದನಿಂದ್ರಸಿಂಧುರಗತಿ ರೇವತೀಧವನುಂ (ಜಗವಿ. ೧೫-೪೬). [ಇಂದ್ರ + ಸಿಂಧುರ]

**ಇಂದ್ರಸುರಸ** (ನಾ). "ಲಕ್ಕೀಗಿಡ ; ನಿರ್ಗುಂಡೀ ಗಿಡ" (ಅಮರ. ಟೀಕೆ). [ಸಂ. ಇಂದ್ರಸುರಸಾ]

**ಇಂದ್ರಾಂಗನೆ** (ನಾ). ಇಂದ್ರನ ಹೆಂಡತಿ ; ಶಚೀದೇವಿ : ಇಂದ್ರಾಂಗನೆ ನೋಡಿದಳ್ . . . ಜಿನೇಂದ್ರದಾರಕ ರವಿಯಂ (ಶಾಂತಿಪು. ೧೦-೬). [ಸಂ. ಇಂದ್ರಾಂಗನಾ]

**ಇಂದ್ರಾಣಿ** (ನಾ). **೧.** ಇಂದ್ರನ ಹೆಂಡತಿ ; ಶಚೀದೇವಿ. **೨.** ರತಿದೇವಿ. **೩.** ಸರಸ್ವತಿ. **೪.** ದುರ್ಗಾದೇವಿ ; ಭೈರವಿ. **೫.** ಐದು ಇಂದ್ರಿಯಗಳು. **೬.** ಕಿರಣ ; ಕಾಂತಿ. **೭.** ಲಕ್ಕೀಗಿಡ ; ನಿರ್ಗುಂಡೀಗಿಡ : "ಲೋಕ್ಕಿಯೊಳು ಶಚಿಯೊಳ್ಪೆದಿಂದ್ರಿಯದೊಳಾರತಿಯೊಳಿಂದ್ರಾಣಿಯಕ್ಕು" (ಮಂಗರಾ. ೧೪೯-೪೭) ; "ರತಿ ನಿರ್ಗುಂಡಿ ಪುಲೋಮಜಾತೆ ಕಿರಣಂ ಪಂಚೇಂದ್ರಿಯಂ ಚರ್ಚೆ ಭಾರತಿಯಿಂದ್ರಾಣಿಯೆನಿಕ್ಕು" (ನಾನಾರ. ೨೯). [ಸಂ. ಇಂದ್ರಾಣೀ]

**ಇಂದ್ರಾಣಿಕೆ** (ನಾ). "ಲಕ್ಕೀಗಿಡಿ ; ನಿರ್ಗುಂಡಿಗಿಡ" (ಅಮರ. ಟೀಕೆ). [ಸಂ. ಇಂದ್ರಾಣಿಕಾ]

**ಇಂದ್ರಾತ್ಮಜ** (ನಾ). ಇಂದ್ರನ ಮಗ ; ಅರ್ಜುನ : ಇಂದ್ರಾತ್ಮಜನಪಟದಟು (ಎಕ. IV, ನಾಗಮಂ. ೭೦-೨೭ ; 1177). [ಇಂದ್ರ + ಆತ್ಮಜ]

**ಇಂದ್ರಾತ್ಮಜಾತ** (ನಾ). = ಇಂದ್ರಾತ್ಮಜ : ಬಿಲ್ಲೊಳ್ ಮುನ್ನಂ . . . ಬಲ್ಲನಿಂದ್ರಾತ್ಮಜಾತಂ (ಎಕ. VI, ಚಿಕ್ಕಮ. ೭೭-೩೩ ; 1180). [ಇಂದ್ರ + ಆತ್ಮಜಾತ]

**ಇಂದ್ರಾನುಜ** (ನಾ). ಇಂದ್ರನ ತಮ್ಮ ; ಉಪೇಂದ್ರ ; ವಿಷ್ಣು : ಇಂದ್ರಾನುಜನೆನಲು ಪುಟ್ಟಿದನದಿತಿಗಂಭೋಜಲೋಚನನು (ಬಸವು. ೫೪-೩೨). [ಇಂದ್ರ + ಅನುಜ]

**ಇಂದ್ರಾನೇಕಪ** (ನಾ). ಇಂದ್ರನ ಆನೆ ; ಐರಾವತ : ಪೊದಟ್ಟಿಂದ್ರಾನೇಕಪಂ . . . ಈಗರಿಗಂಗೆ ಮಂಗಳ ಮಹಾಶ್ರೀಯಂ (ಪಂಪಭಾ. ೩-೭೯). [ಇಂದ್ರ + ಅನೇಕಪ]

**ಇಂದ್ರಾನೋಕಹ** (ನಾ). ಕಲ್ಪವೃಕ್ಷ ; ಸುರಭೂಜ : ಇಂದ್ರಾನೋಕಹಂ . . . ಈಗರಿಗಂಗೆ ಮಂಗಳಮಹಾಶ್ರೀಯಂ ಜಯಶ್ರೀಯುಮಂ (ಪಂಪಭಾ. ೩-೭೯). [ಇಂದ್ರ + ಅನೋಕಹ]

**ಇಂದ್ರಾಭಿಷೇಕ** (ನಾ). **೧.** ಇಂದ್ರನಿಗೆ ನಡೆಯುವ ಅಭಿಷೇಕ. **೨.** [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು : ಇಂದ್ರೋಪಪಾದವಂ ಪಡೆದವನು ಜನ್ಮಾಂತರವಂ ತಿಳಿದು ಸಿಂಹಾಸನಾರೂಢನಾಗಿ ದಿವ್ಯಗಾನವಂ ಕೇಳುತ . . . ಅಭಿಷೇಕವಂ ಪಡೆದು ಕಿರೀಟವಂ ಧರಿಸಿಕೊಂಡು ದೇವಸಮೂಹಗಳಿಂ ಸೇವೆಗೊಳುತಲಿರುವದೇ ಇಂದ್ರಾಭಿಷೇಕವೆಂಬ ೩೪ನೆಯ ಕರ್ಮವು (ಪುರುಚ. ೨೧೨). 'ಇಂದ್ರಾಭಿಷೇಕಕ್ರಿಯೆ' ಪರಾ. [ಇಂದ್ರ + ಅಭಿಷೇಕ]

**ಇಂದ್ರಾಭಿಷೇಕಕ್ರಿಯೆ** (ನಾ). = ಇಂದ್ರಾಭಿಷೇಕ ೨ : ಯೋಗದೊಳ್ ಸಮಾಹಿತನಾಗಿ ಪ್ರಾಣಪರಿತ್ಯಾಗಂಗೆಯ್ದು ತಪೋಬಲದಿನಿಂದ್ರನಾಗಿ ದಿವ್ಯಶಯ್ಯೆಯೊಳ್ಪುಟ್ಟಿ ದಿವ್ಯಗೀತವಾದ್ಯನೃತ್ಯಂಗಳೆಸೆವಿನಮಭಿಷಿಕ್ತನಾಗಿ ದಿವ್ಯಕಿರೀಟಮಂ ತಾಳ್ದಿ ದಿವ್ಯವಿಷ್ಟರಾರೂಢಂ ದೇವರ್ಕಳಿಂ ಪೂಜೆಯನೆಯ್ದುವುದಿಂದ್ರಾಭಿಷೇಕಕ್ರಿಯೆ (ಚಾವುಂಉ. ೨೩೬). [ಇಂದ್ರಾಭಿಷೇಕ + ಕ್ರಿಯೆ]

**ಇಂದ್ರಾಯಣಫಲ** (ನಾ). ಸುಂದರವಾದ ಒಂದು ಬಗೆಯ ಕಹಿಹಣ್ಣು : ಇದು ಅಮೃತಫಲವಲ್ಲ, ಇಂದ್ರಾಯಣಫಲವೆಂದು ಅವರಿಗೆ ಎಚ್ಚರಿಕೆ ಕೊಡಬೇಕು (ಶೀಪ್ರಶ್ನೆ. ೪೨). [ಸಂ.]

**ಇಂದ್ರಾಯುಧ** (ನಾ). **೧.** ಇಂದ್ರನ ಆಯುಧ ; ವಜ್ರಾಯುಧ ; ಸಿಡಿಲು : "ಶಂಬಮಿಂದ್ರಾಯುಧಂ ದಂಭೋಳಿಯಶನಿ. . . ವಜ್ರಮೆಂಬುದಕ್ಕು" (ಮಂಗರಾ. ೧೩-೫) ; ಅಂತು . . . ಬಿಟ್ಟಿಂದ್ರಾಯುಧಮಂ ಕಂಡು ಬೆಕ್ಕಸಂಬಟ್ಟು (ಶಾಂತಿಪು. ೬-೨೯ ವ). **೨.** ಕಾಮನಬಿಲ್ಲು ; ಮಳೆಬಿಲ್ಲು: ಅರ್ಗಿವು ನಿಲ್ಕುಂ ನವಸಾಂಧ್ಯರಾಗಹಿಮರುಂದ್ರೇಂದ್ರಾಯುಧಾಭಾಸಿಗಳ್ (ಶಾಂತಿಪು. ೭-೮). **೩.** ಕಣ್ಣಿನ ಸುತ್ತ ಕಪ್ಪಾಗಿರುವ ಕುದುರೆ : "ಕರಿಯ ಕಣ್ಣಾಗಲಿಂದ್ರಾಯುಧಂ" (ಮಂಗರಾ. ೮೨-೧೫). **೪.** ಒಂದು ಕುದುರೆಯ ಹೆಸರು : ಮುಂಗಾಲ್ಗಳಿಂದಂ ಮುಗಿಲಂ ಮುಟ್ಟಿಪ್ಪುದೆಂಬಂತತಿಜವಮಿದಿರೊಳ್ ಬಂದುದಿಂದ್ರಾಯುಧಾಶ್ವಂ (ಕಾದಂಪೂ. ೪೫೬). [ಇಂದ್ರ + ಆಯುಧ]

**ಇಂದ್ರಾರಿ** (ನಾ). **೧.** ಇಂದ್ರನ ಶತ್ರು ; ಗರುಡ : ಇಂದ್ರಾರಿಯಂ ಪಡೆದವಳು ವಿನತೆಯಕ್ಕುರಗಸಂದೋಹಮುಂ ಪಡೆದವಳು ಕದ್ರುವಕ್ಕು" (ಮಂಗರಾ. ೮-೨೪). **೨.** ಅಸುರ ; ದೈತ್ಯ. **೩.** ಇಂದ್ರಜಿತು : ಆಹವದೊಳ್ ಚಾಳುಕ್ಯರಾಮುಂ ಬೆಸಸೆ ರಿಪುಬಳಕ್ಕೆನ್ನನಿಂದ್ರಾರಿಯನ್ನಂ ಭವನನ್ನಂ ಭದ್ರನನ್ನಂ ಸಿಡಿಲ ಬಳಗದನ್ನಂ (ಎಕ. VII, ಶಿಕಾರಿ. ೧೩೬-೨೭ ; 1068). [ಇಂದ್ರ + ಅರಿ$_6$]

**ಇಂದ್ರಾವಣಿ** (ನಾ). = ಇಂದ್ರಾಯಣಫಲ : ಮನೆಯ ಶೃಂಗರಿಸುವರು ಮಕ್ಕಳವಿನಿಯಲಿ ಸಂತೈಸುವರು ಬಹು ದನಕರುವ ಬೋಳೈಸುವರು ಧನಧಾನ್ಯ ಬೈಚಿಟ್ಟು ಅನವರತ ಪತಿಸೇವೆ ಸಂಪ್ರತಿ ವಿನಯ ತಾನಿದು ರೂಪು ಮಿಕ್ಕಿನ ವನಿತೆಯರ ಸ್ವರೂಪುಯಿಂದ್ರಾವಣಿಯ ತೆರದಿಂದ (ಕಕ್ಕೋಕ. ೪-೧೦). [< ಇಂದ್ರಾಯಣ]

**ಇಂದ್ರಾವತಾರ** (ನಾ). [ಜೈನ] ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು : ಇಂದ್ರತ್ಯಾಗವುಳ್ಳವನು ಆಯುರಂತ್ಯದೊಳ್ . . . ಷೋಡಶಸ್ವಪ್ನಪೂರ್ವಕ ಭೂಮಿಯೊಳ್ ಅವತರಿಸುವುದೇ ಇಂದ್ರಾವತಾರವೆಂಬ ೩೬ನೇ ಕರ್ಮವು (ಪುರುಚ. ೨೧೨). [ಇಂದ್ರ + ಅವತಾರ]

**ಇಂದ್ರಾವರಜ** (ನಾ). ಇಂದ್ರನ ತಮ್ಮ ; ಉಪೇಂದ್ರ ; ವಿಷ್ಣು. [ಇಂದ್ರ + ಅವರಜ]

**ಇಂದ್ರಾಶೆ** (ನಾ). ಇಂದ್ರನ ದಿಕ್ಕು; ಪೂರ್ವದಿಕ್ಕು : ಇಂದ್ರಾಶೆಯೊಳೆಸೆಯೆಸೆ ಚೆಲ್ವಾಯ್ತು ಶೀತಾಂಶು ಬಿಂಬಂ (ಶಾಂತಿಪು. ೮–೭೧). [ಸಂ. ಇಂದ್ರಾಶಾ]

**ಇಂದ್ರಿ** (ನಾ). ಇಂದ್ರಿಯ (?): ಅವಾ ಜೀವದ ಮೇಲೆ ಅವಾ ಜೀವದ ಇಂದ್ರಿ ಅವಾ ಜೀವದ ಕರ್ಮ ಅವಾ ಜೀವದ ಕ್ರೀಡೆ ಅವಾಜೀವದಿಂದ ಲಾವಾ ಜೀವಕೆ ಬಂದು (ಮೋಕ್ಷದೀ. ೪೦). [?]

**ಇಂದ್ರಿಯ** (ಗು). ೧. ಇಂದ್ರನಿಗೆ ಸಂಬಂಧಿಸಿದ. ೨. ಇಂದ್ರನಿಗೆ ಯೋಗ್ಯವಾದ. (ನಾ). ೩. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳನ್ನು ಗ್ರಹಿಸಲು ಸಹಕಾರಿಯಾಗಿ ಶರೀರದಲ್ಲಿರುವ ಅವಯವ; ನಡೆನುಡಿಗಳಿಗೆ ಸಾಧನವಾಗಿ ಶರೀರದಲ್ಲಿರುವ ಅಂಗವಿಶೇಷ. 'ಕರ್ಮೇಂದ್ರಿಯ', 'ಜ್ಞಾನೇಂದ್ರಿಯ' ಪರಾ. ೪. ಶುಕ್ಲ; ಧಾತು; ವೀರ್ಯ: ಶುಕ್ಲಂ, ವೀರ್ಯಂ, ಬಲಂ, ಬೀಜಂ, ಇಂದ್ರಿಯಂ ರೇತಃ – ಈ ೬ ಇಂದ್ರಿಯಂ" (ಹಲಾಯು. ೧೦೫–೧೬). ೫. ಶಕ್ತಿ; ಓಜಸ್ಸು (ಕ). ೬. ಐದು ಎಂಬ ಸಂಖ್ಯೆಯ ಸಂಕೇತ: ಪುರಹರವಕ್ತ್ರಂ ಪಂಚಂ ಪರಮ ವ್ರತಭೂತಮಿಂದ್ರಿಯಂ ಇಷುಪತ್ರಂ . . . ಐದಜಿನಾಮಂ (ವ್ಯವಹಾ. ೯–೫). [ಸಂ.]

**ಇಂದ್ರಿಯಗ್ರಾಮ** (ನಾ). ಇಂದ್ರಿಯಗಳ ಸಮೂಹ (ಕ). [ಇಂದ್ರಿಯ + ಗ್ರಾಮ]

**ಇಂದ್ರಿಯಚಾಪಲ್ಯ** (ನಾ). ಇಂದ್ರಿಯಗಳ ಚಾಪಲ್ಯ, —ಲೋಲತೆ: ಅವರೆಗೆ ನನಗೆ ಅನುಭವವಾಗಿದ್ದ ಇಂದ್ರಿಯ ಚಾಪಲ್ಯದ ಪ್ರೇಮವೂ ಇಲ್ಲ (ಮಲೆನಾ. ೧೭೫). [ಇಂದ್ರಿಯ + ಚಾಪಲ್ಯ]

**ಇಂದ್ರಿಯಜೀವಿ** (ನಾ). ಇಂದ್ರಿಯಗಳ ತೃಪ್ತಿಗಾಗಿ ಜೀವಿಸುವವನು: ಇಂದ್ರಿಯಜೀವಿಯದು ಪ್ರಾಣಾನುಭವ; ಭಾವಜೀವಿಯದು ಕಾವ್ಯಾನುಭವ; ತೇಜೋಜೀವಿಯದು ಶಿವಾನುಭವ (ಸಾಸಮಾ. ೩೯). [ಸಂ. ಇಂದ್ರಿಯಜೀವಿನ್]

**ಇಂದ್ರಿಯದರ್ಪ** (ನಾ). ಇಂದ್ರಿಯಗಳ ಸೊಕ್ಕು, —ಪ್ರಾಬಲ್ಯ: ಧನಮೊಂದಿಂದ್ರಿಯದರ್ಪಮೊಂದು . . . ಬೆಳ್ತನಮೊಂದಿನಿತೆಲ್ಲಮೆನ್ನನೞಿಯಲ್ಕೆಂದಿರ್ಪುವು (ಜೀವಸಂ. ೪೬–೧೦). [ಇಂದ್ರಿಯ + ದರ್ಪ]

**ಇಂದ್ರಿಯದೃಢ** (ನಾ). ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಂಡವನು; ಜಿತೇಂದ್ರಿಯ; ಸಂಯಮಿ: "ಇಂದ್ರಿಯದೃಢನು ಶಾಂತಂ ಶ್ರಾಂತನೆನಿಸಿಕ್ಕು" (ಮಂಗರಾ. ೭೪–೪). [ಇಂದ್ರಿಯ + ದೃಢ]

**ಇಂದ್ರಿಯದೋಷ** (ನಾ). ಇಂದ್ರಿಯಗಳ ದೋಷ, —ಲೋಪ: ಕಾಚ, ಕಾಮಲಾ ಮೊದಲಾದ ಇಂದ್ರಿಯ ದೋಷಗಳು ದೂರ, ಸೂಕ್ಷ್ಮ ಮೊದಲಾದ ವಸ್ತುದೋಷಗಳು ಅನವಧಾನ, ಶ್ರಮ, ಆಲಸ್ಯ ಮೊದಲಾದ ಮನೋದೋಷಗಳು (ಹಿಂದಸಾ. ೧೩೭). [ಇಂದ್ರಿಯ + ದೋಷ]

**ಇಂದ್ರಿಯನಿಗ್ರಹ** (ನಾ). ಇಂದ್ರಿಯಗಳನ್ನು ಸ್ವೇಚ್ಛೆಯಾಗಿ ಬಿಡದೆ ತಡೆದಿಡುವುದು, —ವಶದಲ್ಲಿಟ್ಟುಕೊಳ್ಳುವುದು: ಇಂದ್ರಿಯನಿಗ್ರಹವೆಂದರೆ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳುವುದು (ಆರ್ಯಧ. ೨೨೨). [ಇಂದ್ರಿಯ + ನಿಗ್ರಹ]

**ಇಂದ್ರಿಯನಿಗ್ರಹಿ** (ನಾ). ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಂಡವನು; ಜಿತೇಂದ್ರಿಯ; ಸಂಯಮಿ (ದಕ. ಕ). [ಸಂ. ಇಂದ್ರಿಯನಿಗ್ರಹಿನ್]

**ಇಂದ್ರಿಯಲೌಲ್ಯ** (ನಾ). = ಇಂದ್ರಿಯ ಚಾಪಲ್ಯ (ಪಾರಿನಿ. ೨೦). [ಇಂದ್ರಿಯ + ಲೌಲ್ಯ]

**ಇಂದ್ರಿಯವ್ಯಾಪಾರ** (ನಾ). ಇಂದ್ರಿಯಗಳ ಕೆಲಸ, —ವ್ಯವಹಾರ (ಪಾರಿನಿ. ೨೦). [ಇಂದ್ರಿಯ + ವ್ಯಾಪಾರ]

**ಇಂದ್ರಿಯಸಂಯಮ** (ನಾ). ಇಂದ್ರಿಯಗಳನ್ನು ಸ್ವೇಚ್ಛೆಯಾಗಿ ಬಿಡದೆ ತಡೆದಿಡುವುದು, —ವಶದಲ್ಲಿಟ್ಟುಕೊಳ್ಳುವುದು: ಸಂಯಮಗಳಲ್ಲಿ ಎರಡು ಪ್ರಕಾರಗಳಿವೆ: ಒಂದು ಪ್ರಾಣ ಸಂಯಮ, ಇನ್ನೊಂದು ಇಂದ್ರಿಯ ಸಂಯಮ (ಜೈನಪ. ೪೭೧). [ಇಂದ್ರಿಯ + ಸಂಯಮ]

**ಇಂದ್ರಿಯಸುಪ್ತಿ** (ನಾ). ಇಂದ್ರಿಯಗಳು ಸ್ತಬ್ಧವಾಗಿರುವಿಕೆ, —ಮಲಗಿರುವಿಕೆ: "ಸೋಕಿನ ತಿಳಿವಿಲ್ಲದಿರುವುದು, ಇಂದ್ರಿಯಸುಪ್ತಿ" (Anaesthesia. ಇಂಕನಿ). [ಇಂದ್ರಿಯ + ಸುಪ್ತಿ]

**ಇಂದ್ರಿಯಸೌಖ್ಯ** (ನಾ). ಇಂದ್ರಿಯಗಳ ಸುಖ: ತವಿಲುಳ್ಳಿಂದ್ರಿಯಸೌಖ್ಯದಿಂ ತಣಿವೊಡೀ ಭೂಲೋಕಮೇಂ ನಾಕಮೇಂ (ಮಲ್ಲಿಪು. ೧೩–೧೨೪). [ಇಂದ್ರಿಯ + ಸೌಖ್ಯ]

**ಇಂದ್ರಿಯಾರ್ಥ** (ನಾ). "ಇಂದ್ರಿಯಗಳಿಗೆ ಸಂಬಂಧಿಸಿದ ವಿಷಯ" (ಅಮರ. ಟೀಕೆ). [ಇಂದ್ರಿಯ + ಅರ್ಥ]

**ಇಂದ್ರಿಯಾನುಗ್ರಹಸ್ಥಲ** (ನಾ). [ವೀಶೈ] ಒಂಬತ್ತು ಬಗೆಯ ಶಿವಲಿಂಗಸ್ಥಲಗಳಲ್ಲಿ ಒಂದು: ಕಾಯಾನುಗ್ರಹಸ್ಥಲ . . . ಸೇವ್ಯಸ್ಥಲ– ಈ ೯ ಶಿವಲಿಂಗಸ್ಥಲಗಳು (ಅಖಂಡೇ. ೨೫೧–೭). [ಇಂದ್ರಿಯ + ಅನುಗ್ರಹ + ಸ್ಥಲ]

**ಇಂದ್ರೇಜ್ಯ** (ನಾ). ದೇವತೆಗಳ ಗುರು; ಬೃಹಸ್ಪತ್ಯಾಚಾರ್ಯ: ಭಾಪ್ಪುರೆ ಪಾರ್ತ್ಥೇನ್ದ್ರೇಜ್ಯಭೀಮಾಂತಕ ಬಲಿ ಮನು ತಾನೆಂದೊಡಿಂಧನ್ಯನಾವಂ (ಎಕ. VII, ಶಿಕಾರಿ. ೨೯೭–೨೭; 1080). [ಇಂದ್ರ + ಇಜ್ಯ]

**ಇಂದ್ರೇಭ** (ನಾ). ಇಂದ್ರನ ಆನೆ; ಐರಾವತ: ಇಂದ್ರೇಭದಿಂದವನೀಭರ್ತೃ . . . ಪುರುಷಸಿಂಹಂ ಪುಟ್ಟುಗುಂ ನಂದನಂ (ಜಗವಿ. ೨–೮೩). [ಇಂದ್ರ + ಇಭ]

**ಇಂದ್ರೋಪಪಾತ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು: ಸಹಜ ಸ್ರಗ್ವಸ್ತ್ರಾಭರಣಗಳಿಂದಲಂಕೃತನಾಗಿ ಪ್ರಭುತ್ವವಂ ಪಡೆದು ಅವಧಿಜ್ಞಾನವಂ ಧರಿಸಿ ತಾನೇ ಆ ಲೋಕಕ್ಕೆ ಇಂದ್ರನಾಗಿರುವೆನೆಂದು ತಿಳಿದುಕೊಳ್ಳುವುದೇ ಇಂದ್ರೋಪಪಾದ[ತ]ವೆಂಬ ಮೂವತ್ಮೂರನೆಯ ಕರ್ಮವು (ಪುರುಚ. ೨೧೧). 'ಇಂದ್ರೋಪಪಾತ ಕ್ರಿಯೆ' ಪರಾ. [ಇಂದ್ರ + ಉಪಪಾತ]

**ಇಂದ್ರೋಪಪಾತಕ್ರಿಯೆ** (ನಾ). = ಇಂದ್ರೋಪಪಾತ: ಪರಿಪೂರ್ಣಯವ್ವನನುಂ . . . ಅಣಿಮಾದ್ಯಷ್ಟಗುಣಸಂಪನ್ನನುಂ ಆಗಿ ನಿಜಾವಧಿಯಿಂ ತನ್ನಂದಮಱಿವುದಿಂದ್ರೋಪಪಾತಕ್ರಿಯೆ (ಚಾವುಂಉ. ೨೩೬). [ಇಂದ್ರೋಪಪಾತ + ಕ್ರಿಯೆ]

**ಇಂದ್ರೋರ್ವೀಜ** (ನಾ). ಇಂದ್ರಲೋಕದ ಮರ; ಕಲ್ಪವೃಕ್ಷ: ಕೈಯಾನ್ತ ದೀನಾವಳಿಗಿಂದ್ರೋರ್ವ್ವಿಜನನ್ಯಾಂಗ[ನೆ]ಗೆ ಪವನಜಂ (ಸೌಇಇ. XX, ೨೧–೩೨; 1018). [ಇಂದ್ರ + ಉರ್ವೀಜ]

**ಇಂದ್ವಂಕ** (ನಾ). ಚಂದ್ರಬಿಂಬದಲ್ಲಿರುವ ಕಪ್ಪು ಕಲೆ: ಇರ್ದುದಿಂದ್ವಂಕ ಕರ್ಬುರಕಾಯಂ ಶಬರೀಚಯಂ ನೆರೆದು ಪಾನಕ್ರೀಡೆಯೊಳ್ ನಾಡೆಯುಂ (ಚಂದ್ರಪು. ೫–೫೬). [ಇಂದು$_3$ + ಅಂಕ$_2$]

**ಇಂದ್ವರ್ಧ** (ನಾ). ಅರ್ಧಚಂದ್ರ: ಜಾನಿಸಿದನಿನಘನದ್ಯೋತಿಯಂ ಸಾಂಬನಂ ಶಂಭುವನಿಂದ್ವರ್ಧಾಂಕಕೋಟೀರನನಘನಾನಂದದಿಂ ತನ್ನೃಪಾಲಂ (ರಾಜಶೇ. ೧೩–೪೭). [ಇಂದು$_3$ + ಅರ್ಧ]

**ಇಂದ್ವಿನಗ್ರಹಣ** (ನಾ). ಚಂದ್ರಗ್ರಹಣ ಮತ್ತು ಸೂರ್ಯಗ್ರಹಣ: ಮತ್ತಂ ತೀರ್ಥಂಗಳೊಳಿಂದ್ವಿನಗ್ರಹಣ ತತ್ಕಾಲಂಗಳೊಳ್ ಭಕ್ತಿಯಿಂದಂ ತಾಂ ಕೊಟ್ಟ ಫಲಂ ಮಹಾದ್ವಿಜರ್ಗೆ ಭಾಸ್ವದ್ಗೋಸಹಸ್ರಂಗಳಂ (ಎಕ. VI, ಕಡೂರು. ೯೬–೯೩; 1141). [ಇಂದು$_3$ + ಇನ + ಗ್ರಹಣ]

**ಇಂಧನ** (ನಾ). ೧. ಹತ್ತಿಸುವುದು ; ಉರಿಸುವುದು. ೨. ಸೌದೆ ; ಕಟ್ಟಿಗೆ ; ಉರವಲು : "ಏಧಸ್, ತರ್ಪಣಂ, ಇಂಧನಂ, ಏಧಃ, ಸಮಿತ್, ಇಧ್ಮ—ಈ ೬ ಪುಳ್ಳಿ" (ಹಲಾಯು. ೧೩–೬೯) ; ಎಂತಾನುಂ ನಿಲೆ ಪಿಡಿ [ಯಸು] ಸಂತತಿಯಂ ಸ್ಮರಣಶೋಕ ಶಿಖಿಗಿಂಧನವಪ್ಪಂತೆಸಗಲಾಗದವಂ (ಕಾದಂಪೂ. ೯೩೧) ; ಹರಿಶ್ಚಂದ್ರರಾಯನ ಕುಮಾರನಿಂಧನಕೆ ಹೋದಲ್ಲಿ ಕಾಳೋರಗಂ ಪಿಡಿಯಲು (ಹಚಕಾ. ೧೨ ಸೂ).

ಇಂಧನಮಾಡಿಸು = ಚಿತೆಯನ್ನು ಏರ್ಪಡಿಸು : ತನಗಿನ್ನಿಂಧನವ ಮಾಡಿಸುವದೈಸಲೆಯೆಂದನಾ ಭೀಮ (ಕುವ್ಯಾಅ. ೨೨–೩೬). [ಸಂ.]

**ಇಂಧನಿ** (ನಾ). ಉರುವಲನ್ನು ಒದಗಿಸುವವನು : ಸುರಪನಾಯಕ ನಗ್ನಿಯಿಂಧನಿ ಮರುತ ಬೋವನು ಯಮನು ಗೋವನು . . . ಮನುಜ ರೆನಗಿದಿರೆ (ಕೌಶಿರಾ. ೧೦–೬೬). [ಸಂ. ಇಂಧನಿನ್]

**ಇಂಪಡರ್**, ಇಂಪಡರು (ಕ್ರಿ). ರುಚಿಯಾಗು ; ಸೊಗಸಾಗು : ಒಡನೊಡನೆ ಉಣಲುಣಕಲಿತೆನಿಂಪಡರೆ ವಸ್ತ್ರವನುಡಿಸೆ ದಾಸನೊಳುಡಕಲಿತೆ (ಬಸಪು. ೨೫–೮) ; ಇಂಪಡರೆ ತೋಳ್ಗೆ ಪೌರುಷಕ್ಕಿಕದಿಂ ಪುದಿದುರುಬಾಹು ಪೂರಮುಂ ಪದೆದಿತ್ತಳ್ (ರಾಜಶೇ. ೮–೨೩). **ಇಂಪಡರು** : ಸೊಗಯಿಸಿದನಾ ಸೌಂದರೇಂದ್ರನಿಂಪಡರಿದೊಡ್ಡೋಲಗದೊಳು (ಸೌಂದಪು. ೬–೫೯).

[ಇಂಪು + ಅಡರ್]

**ಇಂಪಡರು** 'ಇಂಪಡರ್' ನೋ.

**ಇಂಪಣ** (ನಾ). (ದಕ). ರುಚಿ ; ಇಂಪು ; ಹಿತ : ಪಾನಕ ತುಂಬಾ ಇಂಪಣವಾಗಿತ್ತು (ರೂಢಿ); ಕಣ್ಣಿಗಿಂಪಣವೋ ಕರುಳಿಗಿಂಪಣವೋ (ಗಾದೆ).

ಇಂಪಣಮಾಡು = ರುಚಿಯಾಗುವಂತೆ ಮಾಡು ; ಹಿತಕರವಾಗುವಂತೆ ಮಾಡು : ಮಡದಿ ಶಿರೋಮಣಿ ಮೆಚ್ಚಿಕೆ ಶಾಕವ ಇಡುವಳು ಇಂಪಣಮಾಡಿ ಭಕ್ತಿಯ ಭಕ್ಷ್ಯವು . . . ಯುಕ್ತಿಯ ಅನ್ನ ಶೋಭಿಸಲಿ (ಶ್ರೀಕೃಪಾ. ೬೬). [ಇಂಪು + –ಅಣ]

**ಇಂಪಾಣ** (ನಾ). ಇಂಪಾಗಿ ಹಾಡುವವನು : ದೇಸಿಯ ಗೀತಮನಂದು ಪಾಡುವಿಂಪಾಣನನುರ್ವರಾಧಿಪತಿ ಲೀಲೆಯಿನೆಕ್ಕಲಗಾಣನೋರ್ವನಂ ಕೇಳುತ್ತುಮಿರ್ದಂ (ಚಂದ್ರಪು. ೬–೯೬). [< ಇನಿದು + ಪಾಣ]

**ಇಂಪಿಗಿಡ** (ನಾ). ಚೀನಾಕಬ್ಬು (ಕ). [ಇಂಪ್ಪಿ + ಗಿಡ (< ಗಿಡು)]

**ಇಂಪು** (ನಾ). ೧. ಸವಿ ; ರುಚಿ ; ಸೊಗಸು; ಮಾಧುರ್ಯ : "ಇಂಪು ಸೊಗಸಿನೊಳಕ್ಕುಂ... ಮಾಧುರ್ಯಮಿಂಪೆಂದೆನಲ್" (ಕರ್ಣಾನಿ. ೬೨) ; ಕಬ್ಬದ ಗೇಯದೊಂದು ಸುಸಿಲೊಂದಿಂಪೆಂಬುದೇಗೆಯ್ಯುದೋ (ಆದಿಪು. ೧೨–೨೪); ಇನಿಯನೊಡಗೂಡಲೆಂದಿಂಪಿನ ರಮ್ಯಸ್ಥಳಮನಱಸಿ ಬರುತುಂ (ಗಿರಿಕ. ೧–೧೨೬) ; ಬಗೆಭಾವಧಾತುಮಾತುಗಳಿಂಪು ಸೊಂಪಿನ ಪೊಗಿತೆಯನೆಳ್ಳನಿತಱಿಯೆ (ಅಂಜಚ. ೧–೧೦೬) ; ಕಡುರೂಪು ಕಣ್ಗೆ ಮೈಗಂಪು ಮೂಗಿಗೆ ಮೆಲ್ನುಡಿ ಕೊಡಕೆಗೆ ಹೆಂಗಳಿಱಿವ ಕುಡಿನೀರಿನಿಂಪು ಜಿಹ್ವೆಗೆ ಶೈತ್ಯ ತನುವಿಂಗಿಡಿದು ಬಳಲಿ ಬಂದರಿಗೆ (ಮೋಹತ. ೨–೪೧). ೨. ಹಿತ ; ಆನಂದ : ಸೊಂಪುಗೆಟ್ಟುದು ಸಿರಿವದನ ಮನದಿಂಪು ಬೀತುದು ಭಕ್ತ ಮೋಹದಲಂಪು ಮಸುಳಿತು ಬಿಸುಟು ಕಳೆದನು ಹಯದ ವಾಘೆಗಳ (ಕುವ್ಯಾಭೀ. ೬–೨೬) ; ಸಾಹಿತ್ಯರಸ ಮನಸ್ಸಿಗೆ ಇಂಪಾದಂತೆ ಜೀವಕ್ಕೆ ಸಂಸ್ಕಾರಕಾರಿಯೂ ಆಗುತ್ತದೆ (ಸಾಹಿಶ. ೯).

[ಇನಿದು + –ಪ್ಪು. / ತಮಿ. ಇನ್ಪು, ಇನಿಪ್ಪು; ಮಲ. ಇನ್ಪ, ಇನಿಪ್ಪ ; ತುಳು. ತೆಲು. ಇಂಪು]

**ಇಂಪುಗರ್ಪೂರ** (ನಾ). ಸುವಾಸನೆಯಿಂದ ಕೂಡಿದ ಕರ್ಪೂರ ; ಪಚ್ಚ ಕರ್ಪೂರ : ಮೃಗನಾಭಿಯಂ ಕುಂಕುಮವನಿಂಪುಗರ್ಪೂರವನಗುರುಮಂ ಸಾದಂ ಜವಾದಿಯಂ (ಪದ್ಮರಾ. ೮–೭೯).

[ಇಂಪು + ಕರ್ಪೂರ]

**ಇಂಪುಗಾಣ್** (ಕ್ರಿ). ರುಚಿಯನ್ನು ಕಾಣು, —ಸವಿ : ಕಂಡಂಗಳ ನರ್ವಿಸೆ ಮೆಲ್ದು ಮೆಲ್ದು ಕರ್ಬಿನ ರಸಕ್ಕಮಿನಿಸಿಂಪುಗಾಣೆನೆಂದನಿಲಸುತಂ (ಪಂಪಭಾ. ೧೨–೧೫೭). [ಇಂಪು + ಕಾಣ್]

**ಇಂಪುಗು** (ಕ್ರಿ). ಸೊಗಸನ್ನು ಸೂಸು ; ಸಂತೋಷವನ್ನು ಉಂಟುಮಾಡು : ವಾದ್ಯ ಪ್ರತಿಮಿಳಿತ ಷಡ್ಜಾದಿ ಸಪ್ತಶ್ರುತಿಗಳಿಂಪುಗೆ . . . ಉನ್ನತತರಸದೊಳೊಡಗೂಡಿ ಪಾಡುತ (ಬಸಪು. ೧–೪೮).

[ಇಂಪು + ಉಗ್ಗು$_1$]

**ಇಂಪುಗೊಳು** (ಕ್ರಿ). ಸಂತೋಷವನ್ನು ಹೊಂದು ; ಸುಖಪಡು : ನೆನೆವಳವನ ನೆಱೆ ಸೊಗಸೊಳುವಗೆಗಳ ನೆನೆವಳವನ ಮೈಸಿರಿಯ ನೆನೆವಳವನ ನೇಹದೆಸಕದಿರವನಿಂತು ನೆನೆನೆನೆದಿಂಪುಗೊಳುವಳು (ಹದಿಬ. ೬–೫).

[ಇಂಪು + ಕೊಳು (< ಕೊಳ್$_1$)]

**ಇಂಪುದಂಬುಲ** (ನಾ). ಸೊಗಸಾದ ತಾಂಬೂಲ ; ರುಚಿಕರವಾದ ತಾಂಬೂಲ : ನಿರುಪಹತಿಸ್ಥಲಂ ಮೃದುತರಾಸನಮೊಳ್ಳುಣಿಸಿಂಪುದಂಬುಲಂ . . . ನಿರಂತರ ಗೃಹನಿಶ್ಚಿತಸ್ಥಿತಿ ವಿಚಾರಕ ಸಂಗತಿ ಸತ್ಕಳತ್ರ ಸಾದರತೆಯನುಳ್ಳ ಸತ್ಕವಿಯುಮಿಾಸುವೊಡಾಗದೆ ಕಾವ್ಯವಾರ್ಧಿಯಂ (ಸೂಕ್ತಿಸು. ೧–೬೦). [ಇಂಪು + ತಂಬುಲ]

**ಇಂಪುದೋಱು** (ಕ್ರಿ). ಸುಖವನ್ನು ಕಾಣಿಸು ; ಸವಿದೋರು : ಕೂಟದೊಳಿಂಪುದೋರ್ಪ ಬಿತ್ತಿಗನೆನಿಸಿರ್ಪ . . . ಚೆನ್ನಿಗನೊಲವೆಂಬುದಂತದು ಪುರಾಕೃತ ಪುಣ್ಯವೆನಿಪ್ಪುದು (ವೀರವಿ. ೬–೧೩೦).

[ಇಂಪು + ತೋಱು (< ತೋಱುಂ)]

**ಇಂಪುನೋಟ** (ನಾ). ಸೊಗಸಾದ ನೋಟ ; ಮಧುರವಾದ ದೃಶ್ಯ : ಪಶುಗಳೊಳ್ ಪಶುವಾಗಿ ಪಶುಪತಿಗೆ ನೋಟಂ ಕಣ್ಗಿಂಪುನೋಟಂ (ಅಶ್ವತ್ಥಾ. ೨೪–೩೪೬). [ಇಂಪು + ನೋಟ]

**ಇಂಪುವಡೆ** (ಕ್ರಿ). ಇಂಪನ್ನು ಪಡೆ ; ಸೊಗಸಾಗು : ಸೊಂಪೊದವಿದವಯವದೊಳಿಂಪುವಡೆದ ಪೂವೆಸೆವ ಕೋಮಲೆಗದೇಕೆ ಕುಸುಮದ ಮಾಲೆ (ಜೈಮಿಭಾ. ೩೧–೭). [ಇಂಪು + ಪಡೆ$_1$]

**ಇಂಪುವತಿ** (ನಾ). ಒಂದು ಗಿಡದ ಹೆಸರು : "ಇಂಪುವತಿ ಶಂಪೆಯಕ್ಕು" (ಮಂಗರಾ. ೩೫–೧೪). [?]

**ಇಂಪುವಾತು** (ನಾ). ಇಂಪಾದ ಮಾತು ; ಹಿತವಾದ ಮಾತು : ಆಯತಾಕ್ಷಿಯಿಂಪುವಾತು ಕೇಳುತುಂ (ಉದ್ಭಟ. ೧೨–೬೧).

[ಇಂಪು + ಮಾತು$_1$]

**ಇಂಪುವಾಳೆ** (ನಾ). ಸೊಗಸಾದ ಬಾಳೆ; ರಸಬಾಳೆ : ತಾಳೆಯ ಹೂವಿನೆಸಳೊಯೆನೆ ಸುಲಿದಿಂಪುವಾಳೆಯ ಹಣ್ಣು ನಾರಾಯ ಲಾಲಿತ ಪ್ರತಿಮೆಯ ಭುಜಮುಟ್ಟ ಮೆದೆಗಟ್ಟ ಧಾಳಿಪಂತಭಿಷೇಕಗೈದಾ (ಭರಚ. ೧೬–೭೪). [ಇಂಪು + ಬಾಳೆ (< ಬಾೞೆ$_2$)]

**ಇಂಪುವೆಱು** (ಕ್ರಿ). ೧. ಇಂಪನ್ನು ಪಡೆ ; ಹಿತವನ್ನುಂಟುಮಾಡು : ಇಂಪುವೆತ್ತ ಮಾತುಗಳೊಡನೋದುಗುಂ ಸ್ಮರಧನುರ್ಗುಣಟಂಕೃತಿಗಳ್ (ವರ್ಧಪು. ೯–೩೨) ; ಮನೋಜ್ಞಮಾದ ಮತ್ತ್ರೀಯಸಿಯಿಂಪುವೆತ್ತ ತುಟಿಯಂ (ಶಾಕುಂತ. ೯೧–೧೫೧). ೨. ಸಂತೋಷಹೊಂದು ; ಸುಖಿಸು : ಸತಿಯಾದ ಮಂಗಳೆದೇವಿಯುಂ ತಾನುಮನ್ಯೋನ್ಯರಾಗದಿಂದಿಂಪುವೆತ್ತು (ಪದ್ಮರಾ. ೨–೩೩). [ಇಂಪು + ಪೆಱು$_1$]

**ಇಂಪೆಸೆ** (ಕ್ರಿ). ರಮ್ಯವಾಗು ; ಸೊಗಸಾಗು : ಬಹಳ ಘಂಟಾಸಮೇಳನ ಕಂಸತಾಳರವಂಗಳಿಂಪೆಸೆಯೆ (ಬಸಪು. ೪೬–೫೪). [ಇಂಪು + ಎಸೆ$_1$]

**ಇಂಪೇಱು** (ಕ್ರಿ). ಆನಂದ ಹೊಮ್ಮು ; ಹಿತವಾಗು : ಒಲೆಯುತ್ತು ಮರ್ಚಿಸಿಂಪೇಱುತುಮರ್ಚಿಸುನ್ನತಿಯೊಳರ್ಚಿಸು (ಪಂಪಾಶ. ೭೬).

[ಇಂಪು + ಏಱು$_1$]

**ಇಂಪೇೞ್** (ಕ್ರಿ). ಆಪ್ಯಾಯನವಾಗು : ಇಂಪೇೞದೆ ನಿಲೆ ಹೃದಯದೊಳಿಂಪೇೞದೆ ಪೋಕುಮೆಂದೆ ಪೇೞ್ವೆಂ (ಲೀಲಾವ. ೫–೧೨). [ಇಂಪು + ಏೞು$_1$ (< ಏೞ್)]

**ಇಂಬಣ್, ಇಂಬಣ್ಣು** (ನಾ). ರುಚಿಯಾದ ಹಣ್ಣು ; ಮಧುರವಾದ ಫಲ : ತುಂಬಿಗಳೆಳಸದರಳ್ ಗಿಳಿ ಚುಂಬಿಸದಿಂಬಣ್ ಪಿಕಸ್ವನಂ ದೆಸೆದೆಸೆಯಂ ತುಂಬದ ನಂದನಮಿಲ್ಲ (ಮಹಾನೇ. ೧–೬೧). **ಇಂಬಣ್ಣು** : ಪೞಜೋಗಿಗಳ ಸಂಕಲ್ಪಕಲ್ಪದ್ರುಮದೊಳು ಮೆಯ್ವೋಱುವಿಂಬಣ್ಣ . . . ಬಯಸಿ ಬಾಯಿಡುವೆನು (ಕರ್ಣವೃ. ೧–೯) ; ಸಣ್ಣ ಬಣ್ಣದ ಸೀರೆಯ ಪೂಸರವ ಇಂಬಣ್ಣ ಪಲವು ಭಕ್ಷ್ಯಗಳ ಕಣ್ಣುವಿಡಿದುದನು ಕಳುಹಿಸುವುದು ತನ್ನ ಪೆಣ್ಣಿದ್ದ ಮನೆಗೆ ಬೇಸಱದೆ (ಹದಿಬ. ೫–೨೭). [< ಇನಿದು + ಪಣ್$_2$]

**ಇಂಬಣ್ಣು** 'ಇಂಬಣ್' ನೋ.

**ಇಂಬದವಣ್** (ನಾ). ಸೊಗಸಾದ, ಹದಕ್ಕೆ ಬಂದ ಹಣ್ಣು ; ಮಾಗಿದ ಹಣ್ಣು : ಕೆಂಬರಲ್ಗೆಣೆಮಾಡುವರೇಕೆಂಬ ರಸಂಬಡೆದು ರಂಜಿಪೊಳ್ಪಿತ್ತಿನ ದಾಳಿಂಬದ ಬನದ ಶುಕಾಳಿಗಳಿಂಬದವಣ್ಗೆಱಗಿ ತುಱುಗಿದುವು ನೋಡಬಲೇ (ಧರ್ಮನಾ. ೪–೫೦). [< ಇನಿದು + ಪದ$_1$ + ಪಣ್$_2$]

**ಇಂಬನಿ** (ನಾ). ಸವಿಯಾದ ಹನಿ ; ಮಧುರವಾದ ಹನಿ : ಕಿಱುನೊೞನ ಸವಿಜೇನ ಸಜ್ಜನಿಂಬನಿಯನೆಱೆದು (ರಾಮಾಶ್ವ. ೧೦೦–೩೦). [< ಇನಿದು + ಪನಿ$_2$]

**ಇಂಬಲಸು** (ನಾ). ಸವಿಯಾದ ಹಲಸು ; ರುಚಿಕರವಾದ ಹಲಸು : ಫಲವಾಗಲ್ ಪದನಾದ ಕೌಂಗಿನ ಮರಂ ನಾಲ್ಸಾಸಿರಂ ಮತ್ತಮಿಂಬಲಸಿಮ್ಮಾವೆಳೆವಾಳೆ ತೆಂಗು ಮೊದಲಾಗಿರ್ದೊಳ್ಮರಂ ಸುತ್ತಲುಂ (ಎಕ. VI, ಕಡೂರು. ೫೧–೬೦ ; 1169). [< ಇನಿದು + ಪಲಸು]

**ಇಂಬವಳ** (ನಾ). ಸೊಗಸಾದ ಹವಳ : ವಿಧುಬಿಂಬಮಿಂಬವಳಮಂ ಪಡೆದಂದು ತದಗ್ರದಲ್ಲಿ ಭೃಂಗಾವಳಿ ಮೂಡಿದಂದು ಸತಿಯಂಗಮನಾಂ ಪೊಗಳಲ್ಕೆ ಸಾಲ್ದಪೆಂ (ರಾಜಶೇ. ೭–೨೬). [< ಇನಿದು + ಪವಳ]

**ಇಂಬಳ** 'ಇಂಬುಳ' ನೋ.

**ಇಂಬಳು** 'ಇಂಬುಳ' ನೋ.

**ಇಂಬಱಿ** (ಕ್ರಿ). **೧.** ಅವಕಾಶ, ಸಮಯ, ಸಂದರ್ಭಗಳನ್ನು ತಿಳಿ ; ಇಂಗಿತವನ್ನು ತಿಳಿ ; ಮರ್ಮವನ್ನು ತಿಳಿ : ಸಮೀರಣೋತ್ಥಿತ ವಿಶಾಳ ವಿಳೋಳ ತರಂಗರೇಖೆ ಪದ್ಮಾಂತರದಿಂದಮಿಂಬಱಿದು ಮಾನಸ ಹಂಸಿಯನುಯ್ವ ಮಾರ್ಗದಿಂ (ಪಂಪಭಾ. ೩–೫೭) ; ನಂಬಿಯಣ್ಣನಿಂಬಱಿವ ಮಂತ್ರಿಯಪ್ಪ ತುಂಬರನಂ ಕರೆದು (ನಂಬಿರ. ೧೨–೫) ; ಸುಗತಿದಾಣವನಿಂಬಱಿದು ತಾನೇಱುವಂತೇಱಿದನು ಬಲುಗಂಡ (ಸಾಳ್ವಭಾ. ೫–೪೧) ; ಶಂಭುವಿನ ಮಹಿಮೆ ಸತಿಯರ ಹೃದಯವನಿಂಬಱಿದರಾರು (ಸರ್ವಜ್ಞ. ೧೬೪೯). **೨.** ಆಶ್ರಯವನ್ನು ಕಂಡುಹಿಡಿ; ನೆಲೆಗಾಣು: ಕೆಱೆಯಾರವೆ ವಾಪಿಕೂಪದಿಂಬಱಿದಳವಟ್ಟು (ಸೌಇಇ. XX, ೭೦–೪ ; 1108) ; ಪಾಣ್ಬ ನೆಳೆದುಯ್ಕೆ ನಿನ್ನ ಕುಟುಂಬಿನಿಯಂ ಕಾದೆಯಿಲ್ಲ ರಾಮಾಕೃತಿಯಂ ನೀಂ ಬೞಿಕ ವಾಯುಪುತ್ರಕನಿಂಬಱಿಯಲ್ಕೈದೆ ಪಗೆಯನಿಕ್ಕುವುದರಿದೇ (ಜಗವಿ. ೧೭–೪೦). [ಇಂಬು$_1$ + ಅಱಿ]

**ಇಂಬೞಿ** (ಕ್ರಿ). ಹದಗೆಡು ; ಅನುಕೂಲತಪ್ಪು; ನೆಲೆಗೆಟ್ಟು ಹೋಗು ; ಸೋಲು : ಕಾಳೆಗಮಿಮ್ಬೞಿದೊಡೆ (ಎಇ. I, ೩೫೦–೫ ; 700) ; ನಾಗತ್ತರನಂ ದಣ್ಡುವೇೞ್ದೊಡೆ ತುಮ್ಬೆಪಾದಿಯೊಳ್ಕಾದಿ ಕಾಳೆಗಮಿಮ್ಬೞಿದೊಡೆ ಆನೆಯೊಳಾನ್ತಿಱಿದು ಸತ್ತೊಡೆ (ಎಕ. IX, ಬೆಂಗಳೂ. ೮೩–೪ ; 890) ; ಬಾಂಬಾವು ನುಂಗಿ ಮಗುೞ್ದನಬಿಂಬಮನಿಳೆಗಿೞಿದೊಡ್ಡೈದೆ ಪಸುರೇೞ ಮಗುೞ್ದಿಂಬೞಿದು ಬೀೞ್ವ ತೆಱದಿಂದಂಬರದಿಂದಿೞಿದುದಿಳೆಗೆ ಗಿಳಿವಿಂಡರಸಾ (ಉದ್ಭಟ. ೬–೧೪). [ಇಂಬು$_1$ + ಅೞಿ$_1$]

**ಇಂಬಾಗಿಸು** (ಕ್ರಿ). ಆಶ್ರಯ ಕೊಡು ; ಅವಕಾಶ ಉಂಟುಮಾಡು : ಉರ್ಬುವಾಶಾವ್ಯೂಹಕ್ಕಿಂಬಾಗಿಸುತ್ತುಂ ನೆನೆದು ಮಱುಗಿಸುತ್ತುಂ . . . ನುಡಿಗೆಡೆಗುಡದಿರ್ದಪ್ಪುದೊತ್ತಂಬದಿಂದೀ ಮೋಹಂ (ರಕ್ಷಾಶ. ೯). [ಇಂಬಾಗು$_1$ + –ಇಸು$_3$]

**ಇಂಬಾಗು$_1$** (ಕ್ರಿ). **೧.** ಆಶ್ರಯವಾಗು ; ಆಸ್ಪದವಾಗು ; ಅವಕಾಶವಾಗು : ತೊಳಪ ತೋರಮೊಲೆಗಳೆಂಬ ಪೂಗೊಂಚಲ್ ಪೂಸರಲನೆಂಬ ತುಂಬಿಗಿಂಬಾಗಿಯುಂ (ಕಬ್ಬಕಾ. ೧೨೩) ; ಅಭಿನವ ಚಿತ್ರರೂಪಿನೊಳಸುವ ಪುತ್ಥಳಿಯೊಳಗೆ ಜೀವಂ ಒಸೆದೊಗೆದವೊಲು ವೊಗೆದೆ ಮಗನೇ ಭಕ್ತಿಗಿಂಬಾಗಿ (ಬಸಪು. ೮–೧೮) ; ಮಧುಕರನ ಝೇಂಕಾರ ಕೋಲಾಹಲಕ್ಕಿಂಬಾಗಿ (ಪದ್ಮರಾ. ೩–೩೨). **೨.** ಉಚಿತವಾಗು ; ಸರಿಯಾಗು ; ಚೆನ್ನಾಗು : ಸಂಬೋಧನೆ ದೀರ್ಘೋಕ್ತಿಯೊಳಿಂಬಾಗಿರೆ ಬರ್ಕುಂ (ಕವಿರಾ. ೨–೨೩) ; ತನಗೆ ಸೊಗಯಿಸದ ವಸ್ತುಗಳನಿತುಮನಿಂಬಾಗೆ ತೊರೆದು ಪುರುಡಿಸಿ ಪೆಱನಾವನೊ ಪೊಲ್ಲಮೆಂದೊಡಂತಾತನುಮಂ ಕೈಕೊಳ್ಳದಾತನುಂ ಮುನಿಯಲ್ಲಂ (ಧರ್ಮಾಮೃ. ೫–೮೯). **೩.** ಹರವಾಗಿರು ; ವಿಶಾಲವಾಗಿರು ; ಅನುಕೂಲವಾಗಿರು : ಇಂಬಾದೆಡೆಯೊಳ್ ಕಟ್ಟುವುದು ಕಲಿತಯೋಗ್ಯಾಲಯದೊಳ್ (ಅಶ್ವಶಾ. ೭–೭). [ಇಂಬು$_1$ + ಆಗು$_1$]

**ಇಂಬಾಗು$_2$** (ಕ್ರಿ). **೧.** ಸೊಗಸಾಗು; ಮನೋಹರವಾಗು; ಚೆನ್ನಾಗು: ರಂಗವಲ್ಲಿಗಳೆ ಬಿಡುಮುತ್ತುಗಳಿನಿಂಬಾಗೆ (ಅಜಿಪು. ೪–೬ ರ) ; ಅತ್ಯನುರಕ್ತೆಯಾದೆನಗೆರಡಿಲ್ಲದೆ ಕೂಡಿರ್ಪೆಯೆಂಬುದನಿಂಬಾಗಱಿದೆಂ (ಕಾದಂಉ. ೩೧೨) ; ನಾನಾವರ್ಣದಿಂ ಮುತ್ತೆ ಚಿತ್ತಮನೇಂ ಚಿತ್ತಜ ಚಿತ್ರಶಾಲೆಯೆನೆ ಜಂಬೂದ್ವೀಪಮಿಂಬಾದುದೋ (ಮಲ್ಲಿಪು. ೧–೬೭) ; ಸಕಳ ಮೃಗರಾಜ ರಾಜ್ಯಲಕ್ಷ್ಮೀವಿಳಾಸ ಭವನ ಮೂಲಸ್ತಂಭಮೆಂಬಿನೆಗಮಿಂಬಾಗಿ . . . ಬೆಡಂಗನಂಗೀಕರಿಸಿ (ವರ್ಧಪು. ೧೦–೫ ವ) ; ತುಂಬುರವಿಡಿದು ಗಾನಾಮೃತವನು ಕಿವಿಗಿಂಬಾಗಿ ಸವಿದೋಱಿಸುತ . . . ಗಾಯಕರು ಪಾಡುವ ಸಂರಂಭವನೇನ ಬಣ್ಣಿಪೆನು (ಕಂನವಿ. ೮–೩೩). **೨.** ಅನುಕೂಲವಾಗು ; ಅವಕಾಶವಾಗು : ಬಲ್ಲಾಳ್ತನದಿಂದೆೞೆದುಕೊಳ್ವಂಗೆ ಕಡಂಗೊಟ್ಟರೆಂಬಂತೆ ಪ್ರಾಣಮನಿಕ್ಕಿಯುಂ ಸೆರಗುಮಂ ಬೆರಗುಮಂ ಬಗೆಯದೆ ಸದ್ರತ್ನಮಂ ಕೊಳ್ವೆನೆಂದಿರ್ದನಗೆ ಸೆಟ್ಟಿಯ ಪೋಗಿನೊಳಿಂಬಾದುದು (ಧರ್ಮಾಮೃ. ೬–೬೮). [ಇಂಬು$_2$ + ಆಗು$_1$]

**ಇಂಬಿ** 'ನಿಂಬೆ' ನೋ.

**ಇಂಬಿಡಿ** (ಕ್ರಿ). ಸೊಗಸಾಗಿ ತುಂಬಿರು ; ಸಮೃದ್ಧವಾಗಿರು : ದಿನಲಕ್ಷ್ಮಿ ನಡೆಯೊಂದು ಸೇದೆಯಿಂ ಬೞಲ್ದು ಪಯಣಂಬರ್ಪ ತನ್ನಿನಿಯನ ನೀರೞ್ಕೆಗೆಂದೇಱಿತ್ತಿ ನೀಡಿದ ತಣ್ಣೀರ ಪೊಸಪೊಂಗಳಸಮಿದೆನೆ ಇಂಬಿಡಿದ ತೆಂಗಾಯಿಂ ಬಾನುದ್ದಂ ಬೆಳೆದೋರಣಮಾಗಿ ತೋರ್ಪ ತೆಂಗಿಂ (ರಾಮಾಶ್ವ. ೫೩–೯). [ಇಂಬು$_2$ + ಇಡಿ$_1$]

**ಇಂಬಿಡಿಸು** (ಕ್ರಿ). ಕ್ರಮವಾಗಿ ಇರಿಸು ; ಅಚ್ಚುಕಟ್ಟಾಗಿ ಮಡಗಿಸು : ವರವಸ್ತ್ರಭಸಿತ ರುದ್ರಾಕ್ಷೆ ನಾನಾಕುಸುಮ ಪರಿಮಳ ಸುಗಂಧ ನವಧೂಪ ದೀಪಂಗಳಂ ತರಿಸಿ ತರತರದೊಳಿಂಬಿಡಿಸಿದಳ್ ರಂಭೆ ಶಂಭುವಿನಿದಿರೊಳು (ಚೆಬಪು. ೫೧–೨೦). [ಇಂಬಿಡು$_2$ + –ಇಸು$_3$]

**ಇಂಬಿಡು$_1$** (ಕ್ರಿ). **೧.** ಹೊರಚಾಚು; ಉದ್ದವಾಗಿ ನೀಡು; ಪ್ರಸರಿಸು: ಪೊರೆದರೊನೆತ್ತರಿಂದೆನಿಪ ನಾಲಗೆಯಿಂಬಿಡೆ ಕೀೞ್ತ ಸಿಂಹಕೇಸರದ ವೊಲಿರ್ಪ ದಾಡೆಗಳ ಕಾಂತಿಯನಾಂತ ವರಾಹಘಾತಜರ್ಝರ ತನುಗಳ್ ನಿಜಶ್ರಮವನೊಯ್ಕನೆ ನಾಲಗೆಯಿಂದೆ ತೋಱುವಂತಿರೆ ಬೞಿಸಂದುವಾ ಶಬರನಾಯಕನಂ ಕಿಱುನಾಯ ಕುನ್ನಿಗಳ್ (ಕಾದಂಪೂ. ೧೬೭); ಕೆಂಬೆಳಗನಿಂಬಿಡುವುನ್ನತದ ಮಾಣಿಕದ ಕಳಸಾಳಿಯಂ (ಸಾಳ್ವಭಾ. ೪–೪೦).

೨. ಆಶ್ರಯ ಕೊಡು ; ನೆಲೆಗೊಡು : ಗಣನಾಥತ್ವಮನುದ್ಘಟಂಗೆ ಪದೆದಿತ್ತಾತಂ ವಲಂ ತಂದ ಪಟ್ಟಣಮಂ ತಚ್ಛಿವಲೋಕದಲ್ಲಿ ಬಿಡದೊಲ್ದಿಂಬಿಟ್ಟು . . . ಒಪ್ಪಿದಂ ಗುರು ವಿರೂಪಾಕ್ಷಂ (ಉದ್ಭಟ. ೧೨–೧೪೦) ; ಪ್ರಹ್ಲಾದನ್ನ . . . ಇಂಬಿಟ್ಟು ಪೊರೆದದ್ದು ಎಲ್ಲಿ ಕಲಿತೆಯ್ಯಾ (ಪುರಂದ. ೧–೯೬–೯). [ಇಂಬು₁ + ಇಡು₁]

ಇಂಬಿಡು₂ (ಕ್ರಿ). ೧. ಕ್ರಮವಾಗಿ ಇಡು ; ನೆಲೆಗೊಳಿಸು : ಬೀರವ ನುಡಿದ ಮೂವರ ವಾಕ್ಯವ ಕೇಳಿ ಮಾರ ಮನ್ನಣೆಗೈದನವರ ಓರಂತೆ ಮುಂಚೂಣಿಯಲಿಂಬಿಟ್ಟು ವಿಸ್ತಾರದಿ ತೆರಳ್ದ ಮುಂದೆಸೆಗೆ (ಮೋಹತ. ೬–೨೪) ; ಅಱಿದನಾಗಳೆ ಹೆಣ್ಣೊನೊಸಗೆಯೆಂದದನಱಿದಱಿಯದಂತವನನಿಂಬಿಟ್ಟು ಹೊಱಸಭೆಯಿಂದೊಳಚಾವಡಿಗೆಯ್ದಿ ಚೆಲ್ವೆಱಕದೊಳೋಲಗವಾದ (ಭರತ. ೩೭–೬೪) ; ಇಂದೀವರಾಕ್ಷಿಯ ಕುರುಳ ನೇವರಿಸುತಾನಂದದೆ ತೊಡೆಯೊಳಿಂಬಿಟ್ಟು (ಕಂಸವ. ೧೦–೩೬) ; ಮಿಗೆ ತಪೋವನದ ಋಷಿಗಳ್ಗೆ ಮುನಿಪತ್ನಿಯರ್ಗಗುರು ಚಂದನ ಕುಂಕುಮಾನುಲೇಪನಗಳಂ ಬಗೆಬಗೆಯ ದಿವ್ಯಾಂಬರಂಗಳಂ ವಿವಿಧ ಮಣಿಭೂಷಣ ಸುವಸ್ತುಗಳನು ತೆಗೆದು ಕಟ್ಟಿಸಿ ರಥದೊಳಿಂಬಿಟ್ಟು (ಜೈಮಿಭಾ. ೧೯–೬೩). ೨. ಒದಗಿಸಿಡು ; ಒಪ್ಪಿಸು : ಮುದದೊಳಾ ಬಸವದಂಡೇಶ್ವರಂ ತದ್ರಾಜಸದನಕ್ಕೆ ಧನಧಾನ್ಯಮೊದಲಾದ ಸಂಪದವನಿಂಬಿಟ್ಟನಾಕ್ಷಣದೊಳು (ಚೆಬಪು. ೫–೫೫). ೩. ಹಿತವಾಗು ; ನೆಮ್ಮದಿಯನ್ನು ಕೊಡು : ಅಂತಾ ವಣಿಗ್ವರಂ ತನ್ನ ಮನಕ್ಕೆ ಶಕುನಮಿಂಬಿಡೆ ಬಂಧುಜನಂಗಳೊಡಂಬಡೆ ಶುಭಮುಹೂರ್ತದೊಳ್ ಪೊಬಿಲಂ ಪೊಱಮಟ್ಟು (ಪಂಚತಂ. ೨೩–೮) ; (ಆರಾಚ. ೬–೧೩ ; ಭಿಕ್ಷಾಚ. ೧–೧೨; ಚೆಬಪು. ೬–೧೬ ; ವಿಷ್ಣುಪು. ೧–೧೪೯ ; ಸರ್ವಜ್ಞ. ೯ ನೋ).

ಇಂಬಿಟ್ಟುಕೊಳ್= ಚೆನ್ನಾಗಿ ಇಟ್ಟುಕೊ, —ಕಾಪಾಡು: ಕೂಡಲ ಸಂಗಮದೇವಾ ನಿಮ್ಮ ಚರಣಕಮಲದೊಳಗೆನ್ನನಿಂಬಿಟ್ಟುಕೊಳ್ಳಯ್ಯಾ (ಬಸವ.ಕ. ೧೩೯೦). [ಇಂಬು₂ + ಇಡು₁]

ಇಂಬಿತ್ತು (ನಾ). ಚೆಲುವಾದ ಬೀಜ ; ಸೊಗಸಾದ ಬೀಜ ; ಸವಿಯಾದ ಕಾಳು : ದಶನಂ ದಾಳಿಂಬದಿಂಬಿತ್ತುಗಳನಿಳಿಸುಗುಂ (ಲೀಲಾವ. ೭–೯೫). [< ಇನಿದು + ಬಿತ್ತು₂]

ಇಂಬಿಸು (ಕ್ರಿ). ಆಶ್ರಯಿಸು ; ನೆಲಸು : ಕೋಟಿಕ್ಕಿಸಱಿಕೊಕ್ಕಿಸಱಾಟವಾಡಿ ಸೊರ್ಕಿನ ಸೊವಡಿಂಗೆ ಮುತ್ತಿ ಮಱಿದುಂಬಿಗಳಿಂಬಿಸೆ (ಅರ್ಧನೇ. ೩–೬೫). ℙ ಇದು 'ಅಂಬಿಸು' ಎಂಬ ಶಬ್ದದ ಅಪಲಿಖಿತವಿರಬಹುದು. ಅಂಬಿಸು < ಅಬ್ಬಿಸು < ಅರ್ವಿಸು₃ = ಹೆದರಿಸು. [ಇಂಬು₁ + –ಇಸು₃]

ಇಂಬೀ (ಕ್ರಿ). ಆಸ್ಪದ ಕೊಡು ; ನೆಲೆಗೊಡು : ಈರಾಜುಂ ತಪೋಮಾರ್ಗವಿಂಬಿರದಿಂಬಿತ್ತುದು ಶೀಲಮಾಲೆ ಪದುಳಂ ನಿಂದತ್ತು ಮೆಯ್ವೆರ್ಚಿ ಶಾಂತರಸಂ ಕಾಪ್ಪುರಮಾಯ್ತು (ಮಲ್ಲಿಪು. ೧–೫) ; ನಂಬಿದವರ್ಗಿಂಬೀವನೆಂಬ ಅಚ್ಯುತನ ಅಚ್ಚರಿಯೆನಿಪೀ ಪೆಂಪನಿಚ್ಚೆಗೊಂಡು (ಅದ್ಭುತ. ೪–೧೬). [ಇಂಬು₁ + ಈ₂]

ಇಂಬು₁ (ನಾ). ೧. ಎಡೆ; ಆಶ್ರಯ; ನೆಲೆ; ಅವಕಾಶ : "ಇಕ್ಕೆ, ಇಂಬು . . . ಆಗರಂ – ಈ ೧೫ ಆಶ್ರಯಕ್ಕೆ ಪೆಸರ್" (ಕಶಸಾ. ೧೫–೨೯೦) ; "ಇಕ್ಕೆ ಪೊಬಿಲಿಂಬು ತಾಯ್ವನೆ . . . ಎಂದಕ್ಕು ನೆಲೆದಾಣ ಗೊತ್ತು" (ಕವಿಕಂ. ೧೩೫) ; ಸವಿಗಿಂಬಾಗಿ ರತರಾಗದುರುಳಿವೊಲಾಗೆ ಕರಂ ಬೀಗಿ ಬಾಯ್ಗಳಂ ಚುಂಬಿಸಿದರ್ (ಕಾವ್ಯಸಾ. ೬೭೭ ಶೂದ್ರಕ) ; ನಮಗಿನ್ನುಂ ಪೊಕ್ಕಿರಲ್ಕಿಂಬು ಮತ್ಸ್ಯಪುರಂ (ಪಂಪಭಾ. ೮–೫೦); ಮೋಹಕ್ಕೆ ತೆಱಹಿಲ್ಲ . . . ಮತ್ಸರಕ್ಕಿಂಬಿಲ್ಲ (ಬಸರ. ೮–೫೪) ; ಶಾಲೆ – ಕಾಲೇಜುಗಳಲ್ಲಿ . . . ರಾಷ್ಟ್ರೀಯಭಾವನಾ ಪೋಷಕ ಯಾವ ಚಟುವಟಿಕೆಗಳಿಗೂ ಇಂಬು ಇರಲಿಲ್ಲ (ಯಕ್ಷಪ್ರ. ೨೩). ೨. ಅಳತೆ ; ಮಿತಿ ; ಮಟ್ಟ : ನಿನ್ನಿಂಬನಱಿಯದಾಜಿಯೊಳೆನ್ನೊಡನೆ ಪೊಣರ್ಕೆಗೆಂದು ಬಂದಪೆ (ಪಂರಾಮಾ. ೧೩–೧೩೮) ; ಕಂಬಳಿಯ ಹೊದೆವ ತನ್ನಿಂಬಿನೊಳಗಿರಬೇಕು (ಸರ್ವಜ್ಞ. ೪೫೪). ೩. ವಿಶಾಲತೆ ; ಅತಿಶಯ : ಪಾದರಿ ಪೂತುವು ತೋರಿದುವಾದುವು ಮಲ್ಲಿಗೆಗಳೆಯ್ದೆ ಪಣ್ತುವು ಮಾವಿಂಬಾದುದು ನಿದಾಘ ಮಧುವಿನ ಭೇದಮದೇ ಬನದೊಳಾ ತಪಕ್ಕೆಡೆಯುಂಟೆ (ಆದಿಪು. ೧೧–೮೭) ; ಅಖಿಳವೇದ ಸ್ಮೃತಿ ತತ್ಪುರಾಣಮೆನಿಪ್ಪವಱೊಳ್ ಸಾರಮನಿಂಬಾಗಿ ಬ್ರಹ್ಮಶಿವಂ ತಾಂ ಬಲ್ಲಂ (ಸಮಪ. ೧–೫೪) ; ಅಂಬು ಬಿಲ್ಲಿಗೆ ಲೇಸು ಇಂಬು ಕೋಣೆಗೆ ಲೇಸು ಸಂಬಾರ ಲೇಸು ಸಾರಿಗೆ (ಸರ್ವಜ್ಞ. ೧೧೪೧) ; ನೀರು ನೆಳಲಿಲ್ಲ ತನುತಾಪವಿಂಬಾದುದಿದ ಸಹಿಸಲಳವಲ್ಲ (ವೆಂಕಾರಾ. ೫–೨–೧೫). ೪. ಪ್ರದೇಶ ; ಸ್ಥಳ : ವಾಮಾಂಗಿಯ ಮುಡಿಯರಳಂ ಹೇಮಾಚಲದಿಂಬಿನಲ್ಲಿ ಶಂಕರನಿತ್ತಂ (ಹಮ್ಮಿರ. ೨–೧೫).

[ದೇ. ‖ ತುಳು. ಇಂಬು ; ತೆಲು. ಇಮ್ಮು]

ಇಂಬು₂, ಇನ್ಬು (ನಾ). ೧. ಇಂಪು ; ಸುಖ ; ಸಂತೋಷ : ಮಾಸೇನರ್ ಪರಮಪ್ರಭಾವ ರಿಷಿಯರ್ ಕಟ್ವಪ್ಪಿನಾ ವೆಟ್ಟದುಳ್ ಶ್ರೀಸಂಗಂಗಳ ಪೇಟ್ದ ಸಿದ್ಧಸಮಯಂ ತಪ್ಪಾದೆ ನೋನ್ತಿಮ್ಬಿನಿನ್ . . . ಸ್ವರ್ಗಾಗ್ರಮಾನೇಱಿದಾರ್ (ಎಕ.II, ೨೭–೧; 700) ; ತುಱುಗಿದ ಪೂಗೊಂಚಲ ಕಾಯ್ತೆಱಗಿದ ಮಾವುಗಳ ಬೆಳೆದ ಕೌಂಗಿನ ಗೊನೆ ತಳ್ತೆಱಗಿರೆ ಮಾಡದೊಳಲ್ಲಿಯೆ ತಿಱಿದುಕೊಳಲ್ಕಿಂಬಿನೆಸಕಮೆಸೆದುದು ಪವನಂ (ಪಂಪಭಾ. ૩–೪೧). ೨. ಪ್ರೀತಿ : ಇದನೋದುವುದಿಂಬಿನೆ [ಪಾಠಾ. ನಿಜನಾಮದೆ] ಪದ್ಮಮುಖೀ (ಛಂದೋಂಬು. ೩. ೧೮೪) ; ಪರವೆನಾಚಿಯರೊಳು ಪರಮಸುಖದಿಂ ಮನದಿಂಬು ಬೆಂಬಳಿಗೊಂಡು ನಂಬಿಯಣ್ಣನೊಲವಿಂ ಪಲಕೆಲವು ದಿನಮಿರಲ್ (ನಂಬಿರ. ೧೨–೨). ೩. ಸೌಕರ್ಯ ; ಅನುಕೂಲತೆ ; ಹಿತ : ಅರಿಗಿಂಬಾಯ್ತೆಱವಾದುದು ಮರುತ್ಸುತಂಗೆ . . . ಎಂದು ಧರ್ಮಜಂ ಚಿಂತಿಸಿದಂ (ಗದಾಯು. ೮–೨೯) ; ವನಿತೆಯರುಂ ತಾಯುಂ ಬಂಧುನಿಕಾಯಮುಮಾತ್ಮಜಾತರುಂ ತಂತಮ್ಮಿಂಬನೆ ಬಗೆವರಲ್ಲದೆಂತುಂ ತನಗಪ್ಪರೆ ನರಕಗತಿಗೆ ಪೋಪವಸರದೊಳ್ (ಧರ್ಮಾಮೃ. ೬–೧೪೬). ೪. ಕ್ರಮ ; ಸೌಂದರ್ಯ ; ಸೊಗಸು ; ಲೇಸು : ಮಕ್ಕಳನಿಂಬಿಂ ಋಷಿಯರ ಪಕ್ಕದೊಳೋದಿಪುದು ಯೋಗ್ಯರಪ್ಪರ್ (ಸಮಪ. ೫–೧೧೭); ಕೇಶವನಿಂಬಿನೆ ಮಾಡಿಸಿದಂ ಬಿಸಿಷ್ಟಮನೆ (ಸೌಇಇ. XX, ೭೦–೨೯ ; 1108) ; ನೀಂ ದೇವಕೀಗರ್ಭದ ಶಿಶುವನನಂತಾಂಶಮಂ ಕರ್ಷಣಂಗೆಯ್ದದನಿಂಬಿಂ ತತ್ಸಪತ್ನೀ ಜಠರದೊಳಿರಿಸು (ಜಗವಿ. ೨–೪೯); ವೀಣೆಯ ಧರಿಸಿ ತಂತ್ರಿಯನಿಂಬಿನಿಂದಳವಡಿಸಿ (ಜೀವಂಚ. ೯–೧೩). ಇನ್ಬು : ೧. ಸುರಲೋಕದ ಮಾರ್ಗ್ಗದೊಳಿಟ್ದಿರಿನ್ಬಿನಿಂ (ಎಕ. II, ೧೦೮–೪ ; 700).

[ದೇ. ‖ ತಮಿ. ಇನ್ಬು, ಇನಿಪ್ಪು ; ಮಲ. ಇನ್ಬ, ಇನಿಪ್ಪ ; ತುಳು. ಇಂಬು ; ತೆಲು. ಇಂಪು, ಇಂಬು]

ಇಂಬುಕೆಯ್₁, ಇಂಬುಗೆಯ್, ಇಂಬುಗೈ (ಕ್ರಿ). ೧. ಅಂಗೀಕರಿಸು ; ಒಪ್ಪಿಕೊ ; ಸಮ್ಮತಿಸು : "ಅಪ್ಪುಕೆಯ್ಯೆಂದುಂ, ಇಂಬುಕೆಯ್ಯೆಂದುಂ, ಅಂಗೀಕಾರಂ" (ಕಶಸಾ. ೨೫–೫೨೭) ; "ಇಂಬುಕೆಯ್ದನೆನ್ನಲ್ ಮುದದಿಂದೊಪ್ಪಿದನೆಂಬರ್ಥಂ" (ಕವಿಕಂ. ೨೧೧) ; ಇವರೆಂಬುದನಿಂಬುಕೆಯ್ವುಮೆಂದಿರ್ದೊಡೆ (ವಡ್ಡಾರಾ. ೯೧–೨) ; ಎಮ್ಮಯ್ವರುಂ ಬೆಸಕೆಯ್ಯುತ್ತಿರೆ ನೀನೆ ಮೇಣ ರಸುಗೆಯ್ ಸೋದರ್ಯದಿಂದೊಳ್ಳಿತೇ ವಸುಧಾಮಂಡಳಮಿಂಬುಕೆಯ್ಯುದಿದನಾಂ ಕೆಯ್ಯೊಡ್ಡಿದೆಂ ಬೇಡಿದೆಂ (ಪಂಪಭಾ. ೧೩–೮೫) ; ಇನ್ನಾನೆಂದುದನಿಂಬುಕೆಯ್ವೆಯಪ್ಪೊಡೆ ಪಾಂಡವರ ನೊಡಂಬಡಿಸಿ ಸಂಧಿಯಂ ಮಾಡಿ ಪೂರ್ವಕ್ರಮದೊಳ್ ನಡೆವಂತು ಮಾೞ್ಪಿಂ (ಗದಾಯು. ೫–೪೪ ವ) ; ದೇವರ ಸಮ್ಮಾವುಗೆಗಳಂ ಪಿಡಿದೆಂಬುದನಿಂಬುಕೆಯ್ವ ಸದ್ಭಾವಮೆ ಸಾಲ್ಗುಂ (ಪಂರಾಮಾ. ೭–೬೮).

೨. ಎಡೆಮಾಡಿಕೊ ; ಅವಕಾಶ ಮಾಡಿಕೊ ; ಒಂದು ಸ್ಥಳವನ್ನು ಆಕ್ರಮಿಸಿ ವಶಪಡಿಸಿಕೊ (?) : "ಇಂಬುಕೆಯ್ —ಸ್ಥಾನಸಂಗ್ರಹೇ (ಸ್ಥಳಮಾಡಿಕೊಳ್ಳು)" (ಶಮಧಾ). ೩. ಅನುಕೂಲವಾಗಿ ನಡೆದುಕೊ; ವಿಧೇಯನಾಗು ; ಹಿತವನ್ನು ಆಚರಿಸು : ಮುತ್ತರುಂ ಕುರುಡರು ಮೆನ್ನದೆಮ್ಮ ನುಡಿಗೇಳ್ ಮಗನೇ ಬಗೆ ತಂದೆಗಿಂಬುಕೆಯ್ (ಪಂಪಭಾ. ೧೩–೧೨) ; ಅರಲಸರಲ್ಲದಾರ ಮನಮಂ ಗುಜಿಮಾಡದೊ . . . ಒಲ್ವ ಗೆಲ್ವ ಬಸದಾಗಿಪ . . . ಇಂಬುಕೆಯ್ಯುವೊಳಪೊಯ್ಯುವನೇಕ ವಿ ಚಿ ತ್ರ ಚೇಷ್ಟೆಗಳ್ (ಪುಷ್ಪಪು. ೨–೨೭). **ಇಂಬುಗೆಯ್** : ೪. ಹೊಂದಿಸಿಕೊ; ಅಚ್ಚುಕಟ್ಟು ಮಾಡಿಕೊ : ಕಪ್ಪುರವೀಳೆಯವನಿಂಬುಗೆಯ್ದು ತಮ್ಮಾ ಚಲ್ಲಗಣ್ಣಡೆಯ ಕುರುಳೆಂಬುರುಳ್ಗಣ್ಣಿಯಲ್ಲಿ ಪಥಿಕಮನೋಮೃಗವನೆಯ್ದೆ ಬೀಜಿ ತಂದಲ್ಲಿ ತಡೆವರ್ (ಪದ್ಮರಾ. ೮–೯) ; ಪುಣುಗುಮಂ ಸೊಗಯಿಸುವ ಪನಿನೀರ್ಗಳಂ ದಶಾಂಗಮುಮನಿಂಬುಗೆಯ್ದುವಜ ಯೋಗವಜಿದು ಮಿಗೆ ಕೂಡಿ . . . ಘಟ್ಟಿವಳ್ಳಿಯರರೆದರಾ ಯಕ್ಷಕರ್ದಮಾದಿಗಳನೊಲವಿಂ (ಪದ್ಮರಾ. ೮–೭೯). **ಇಂಬುಗೈ** : ೫. ಆಧಾರವಾಗಿ ಮಾಡಿಕೊ : ಪರಿಶ್ರಾಂತನಾಗಿ ಕರ್ಣನ ತೊಡೆಯಂ ತಲೆಗಿಂಬುಗೈದು ಸುಖದಲ್ಲಿ ನಿದ್ರೆಗೆಯ್ಯುತಿರ್ಪ ಸಮಯದೊಳ್ (ಭಾರಶಾಂ. ೨).

[ಇಂಬು₁ + ಕೆಯ್₁]

**ಇಂಬುಕೆಯ್₂**, ಇಂಬುಕೈ (ಕ್ರಿ). ಸಂತೋಷಪಡಿಸು ; ಪ್ರೀತಿಯನ್ನುಂಟುಮಾಡು ; ರುಚಿಸು ; ಹಿತವಾಗು : ಇಚ್ಛೆಯಂ ಸಲಿಸಿ ಮೆಚ್ಚಜಿದೋಲಗಿಸುತ್ತುಮಿರ್ಪರಚ್ಚರಸೆಯರಿಂಬುಕೆಯ್ದೊಲಿಸಿ ಚಿತ್ತದೊಳಗ್ಗಲಿಸುತ್ತುಂ (ಸು ಕು ಮಾ. ೯–೩೭) ; ವನಿತಾಸಂಕುಳಮಿಂಬುಕೆಯ್ಯೆ ನಿಜತೇಜಂ ದಿಗ್ವಯಂಗೆಯ್ಯೆ ಭೃತ್ಯನಿಕಾಯಂ ಬೆಸಕೆಯ್ಯೆ . . . ಅರಸುಗೆಯ್ದಂ ಲೀಲೆಯಿಂದಾಹುಕಂ(ಜಗವಿ. ೭–೨); ಧರ್ಮಪರರ್ಗಲ್ಲದೆಮ್ಮಯ ನಿರ್ಮಲಚರಿತ್ರಮಿಂಬುಕೆಯ್ಯದು (ಯಶೋಚ. ೧–೭೪). **ಇಂಬುಕೈ** : 'ಇಂಬುಕೈಸು' ಪರಾ. [ಇಂಬು₂ + ಕೆಯ್₁]

**ಇಂಬುಕೆಯ್ಸು** (ಕ್ರಿ). ಸ್ಥಳಮಾಡಿಕೊಡು ; ಅವಕಾಶಮಾಡಿಕೊಡು : ಕಳಕಳಮಂ ಪೊಂಬೆತ್ತಮುನೆತ್ತಿ . . . ನಿವಾರಿಸಿ ಸಮುಚಿತ ಸ್ಥಾನದೊಳಿಂಬುಕೆಯ್ಸುವ ಭೀಮ ಕಂಕಾಳಿಗಳೆಂಬ ವೇತ್ರಧರರಿಂ (ಶಬಶಂ. ೧–೭೯ ವ). [ಇಂಬುಕೆಯ್₁ + –ಸು₁]

**ಇಂಬುಕೈ** 'ಇಂಬುಕೆಯ್₂' ನೋ.

**ಇಂಬುಕೈಸು** (ಕ್ರಿ). ಮನಸ್ಸು ಒಪ್ಪುವಂತೆ ಮಾಡು ; ಸಂತೋಷಪಡಿಸು ; ಹಿತವಾಗಿಸು : ಬೇಟದ ಲಲ್ಲೆಯ ಬಲ್ಮೆ ಪತ್ತಿ ಸುತ್ತಿಸೆ ಪುರುಡಿಂಬುಕೈಸೆ ಬಿಯಮಾಜಿಸಿ ಪೊಂದದವಂ ಬೊಜಂಗನೇ (ಆದಿಪು. ೧೨–೧೮). [ಇಂಬುಕೈ (< ಇಂಬುಕೆಯ್₂) + –ಸು₁]

**ಇಂಬುಕೊಡು₁** 'ಇಂಬುಗೊಡು₁' ನೋ.

**ಇಂಬುಕೊಡು₂** 'ಇಂಬುಗೊಡು₂' ನೋ.

**ಇಂಬುಗಟ್ಟು** (ಕ್ರಿ). ಆಶ್ರಯಿಸು ; ಅವಲಂಬಿಸು : ಧರ್ಮಜ್ಞಪುತ್ರನ ಬಯಸಿ ಸತಿ ಯಮುನ ಇಂಬುಗಟ್ಟಿದಳೊಂದು ಮಂತ್ರವನು (ಸಂಭಪ. ೧೫–೩೮). [ಇಂಬು₁ + ಕಟ್ಟು₁]

**ಇಂಬುಗಾಣ್** (ಕ್ರಿ). ನೆಲೆಯನ್ನು ಕಾಣು ; ಆಶ್ರಯವನ್ನು ಪಡೆ : ಹೆಂದವ ಜನ್ಮದೊಳ್ ತೊಳಲಿ ಬಂದುದಜಿಂದವೆ ಮುಂದುಗೆಟ್ಟು ನಾಂ ನಿಂದಿರಲಿಂಬುಗಾಣದಜಸುತ್ತನೆ ದೈವದ ವೃಂದಮಧ್ಯದೊಳ್ . . . ಮುಜಿವೊಕ್ಕೆನು ನಿಮ್ಮನು ದೇವ (ದೀಕ್ಷಾಬೋ. ೮೩–೮).

[ಇಂಬು₁ + ಕಾಣ್]

**ಇಂಬುಗಿಡು** 'ಇಂಬುಗೆಡು' ನೋ.

**ಇಂಬುಗುಡು** 'ಇಂಬುಗೊಡು₁' ನೋ.

**ಇಂಬುಗೆಡು**, ಇಂಬುಗಿಡು (ಕ್ರಿ). ೧. ಅಂದಕೆಡು ; ಸೌಂದರ್ಯ ಕುಂದು ; ಸೊಗಸುಗುಂದು. ೨. ಹದಗೆಡು ; ಅಹಿತವಾಗು : ಬೆಂಬಲಕೆ ತಾನೆಂದು ಬಯಲ ವಿಡಂಬದಲಿ ಕಾಳೆಗವ ಮಸೆದರೆ ನಂಬಿ ಕೆಟ್ಟರಿ ಕೃಷ್ಣನನು . . . ಇಂಬುಗೆಟ್ಟುದು ರೀತಿ ರಣಕೆ ತ್ರಿಯಂಬಕನನಮರಾಧಿಪನ ಕೈಕೊಂಬನೇ ಕೌರವನು (ಕುವ್ಯಾ ಭೀ. ೧–೫೯). **ಇಂಬುಗಿಡು** : ೧. ಇದು ಸುಜಿಗಾಳಿಯಿಂ ನೆಗೆದು ತೋಜುವ ಕಿಂಶುಕಶುಷ್ಕಪತ್ರಂ . . . ಎಂಬಿನಮಿಂಬುಗೆಟ್ಟು ಕಂದಿದ ಪಟಿಗಂಜುಗನ್ನಡಿವೊಲೇನಿಳಿದಾದುದೊ ಚಂದ್ರಮಂಡಲಂ (ಚಂದ್ರಪ್ರ. ೯–೫). [ಇಂಬು₂ + ಕೆಡು]

**ಇಂಬುಗೆಯ್** 'ಇಂಬುಕೆಯ್₁' ನೋ.

**ಇಂಬುಗೈ** 'ಇಂಬುಕೆಯ್₁' ನೋ.

**ಇಂಬುಗೊಡು₁**, ಇಂಬುಕೊಡು₁, ಇಂಬುಗುಡು (ಕ್ರಿ). ಆಶ್ರಯ ಕೊಡು ; ಅವಕಾಶಕೊಡು ; ಜಾಗಕೊಡು : ಇರ್ವರುಂ ಪರ್ವಿದ ಹರ್ಷಕ್ಕಿಂಬುಗೊಟ್ಟು ನಲಿನಲಿದು (ಗಿರಿಕ. ೨–೧೦೪ ವ) ; ದೋರ್ದಂಡಮನನಘಜಯಶ್ರೀಗೆ ತಾನಿಂಬುಗೊಟ್ಟು (ಕುಸುಮಾ. ೧–೧೯) ; ಹಲವು ಶಬ್ದಕಿಂಬುಗೊಡದ ಸುಳುಹು ಸೂಕ್ಷ್ಮದೊಳಗಣ ಬೆಳಗಿನಿಂದ ನಿಜದ ನಿಲವ ಸ್ಥಲವ ತೋಜಬಪ್ಪುದೆ (ಶಿವಗೀ. ೫೦–೨೪೦) ; ಇನ್ನು ನೀನು ದುಃಖಕ್ಕೆ ಇಂಬುಗೊಡಬೇಡ ; ಶಾಂತಚಿತ್ತಳಾಗು (ಪದ್ಮನ. ೧೦೯). **ಇಂಬುಕೊಡು₁** : ಎನಗೆ ನೀನಿಂಬುಕೊಡುವಲ್ಲಿ ಸಕಲ ಪ್ರಮಾಣಿಸುವುದ ಬಿಟ್ಟು ನಿಃಕಲವಸ್ತುವಾಗು (ಮೋಳಿಮಾ. ೨೭೨–೧೨). **ಇಂಬುಗುಡು** : ವನಜಲಕೇಳಿಗಿಂಬುಗುಡುವಂತೆ ಪಗಲ್ ಪಿರಿದಾದುದು (ಅನಂಪು. ೬–೮೯). [ಇಂಬು₁ + ಕೊಡು]

**ಇಂಬುಗೊಡು₂**, ಇಂಬುಕೊಡು₂ (ಕ್ರಿ). ಸೊಗಸನ್ನು ಉಂಟುಮಾಡು ; ಹಿತವಾಗು : ತುಂಬುಹೊಲವೆಲ್ಲ ಇಂಬುಗೊಡುತಿಹುದು ನೇಹ ರೂಪ ತಳೆದಂತೆ (ವಿಜದ. ೨೦–೫). **ಇಂಬುಕೊಡು₂** : ಆಕೆಯ ಮನೋಹರ ಮುಖಮಂಡಲದತ್ತ ನೋಡಿದೆ. ಆದು ಪಾಟಲಪ್ರಸೂನದಂತೆ ಕೆಂಪಾಗಿತ್ತು. ಆದರೆ ಆ ಕೆಂಪು ಆಕೆಯ ಸೌಂದರ್ಯಕ್ಕೆ ಇಂಬುಕೊಟ್ಟಿತ್ತು (ಬಾಣಅ. ೧೫೦). [ಇಂಬು₂ + ಕೊಡು]

**ಇಂಬುಗೊಳ್₁** (ಕ್ರಿ). ೧. ಆಶ್ರಯಿಸು ; ನೆಲಸು ; ವ್ಯಾಪಿಸು : ಎನ್ನಲ್ಲಿ ಏನುಂಟೆಂದು ಕರಸ್ಥಲವನಿಂಬುಗೊಂಡೆ ಹೇಳಾ (ಮಹಾದೇ. ಬ. ೧೩–೯) ; ನಂಬಿದವರನು ಕೊಂದನೆಂಬಪಹಾಸ್ಯ ಜಗದೊಳಗೆ ಇಂಬುಗೊಂಬುದು (ತೊರರಾ. ೪–೩–೨೭) ; ಎಲ್ಲ ಪೆಂಗಳೆದೆಯೊಳೀತನಿಂಬುಗೊಂಡಿಹ ಪರಿಯೇನು (ಭರಚ. ೬–೩೭) ; ಕಿಕ್ಕಿಜಿದಡರ್ದುರವನಿಂಬುಗೊಂಡುರೆ ಬೆಳೆದ ಕಕ್ಕಸದ . . . ಬಲ್ಮೊಲೆ (ಜೈಮಿಭಾ. ೨೭–೧೧). ೨. ಹಿಡಿಸು ; ಒಳಗೊಳ್ಳು : ಏಸನೀಂಟಿದೊಡಿಂಬುಗೊಂಡುದು ಶರಣನುದರಕೆ ತುಷ್ಟಿಯಿಲ್ಲೆನುತ (ಬಸವಪು. ೫೯–೧೭). ೩. ಪಡೆ ; ಹೊಂದು : ಪರಮ ಶ್ರೀಶಂಕರಾಚಾರ್ಯರಿಂ ಪಾಶಚ್ಛೇದಮುನಿಂಬುಗೊಂಡು ಮೆಜಿದಂ ಶ್ರೀ ಮಾದಿರಾಜಾಹ್ವಯಂ (ಗಿರಿಕ. ೧–೩೭). [ಇಂಬು₁ + ಕೊಳ್₁]

**ಇಂಬುಗೊಳ್₂** (ಕ್ರಿ). ೧. ಸೊಗಸಾಗು ; ಚೆಲುವಾಗು : ಇಂಬುಗೊಂಡಿಟ್ಟೆಡೆಯ ಬಲ್ಮೊಲೆಯ (ಜೈಮಿಭಾ. ೧೧–೯) ; ಇಂಬುಗೊಂಡುತ್ತಮ ನೀಲಪುತ್ರಿಕೆ (ರಾಜಶೇ. ೮–೨). ೨. ಸಂತೋಷಪಡು ; ಮೆಚ್ಚು : ನಂಬಿದೀತನ ಭಕ್ತಿಯುಂ ಮನದಿಂಬುಗೊಂಡಾತಂಗೆ ಕೂರ್ಪ ತ್ರಿಯಂಬಕನ ಕೂರ್ಮೆಗಳನೀಗಳೆ ನೋಡಿದಹೆನೆನುತ (ಬಸವಪು. ೨೬–೨೨); ಅಂಬರಕ್ಕೆ ನೂಜು ಪ್ರಜೆಗಳು ಇಂಬುಗೊಂಡೈದಿದರು ಪಾರ್ಥನ ಅಂಬು ಕಾದುದದೆನುತ ಹೊಗಳಿದರಂದು ಹರುಷದಲಿ (ಕುವ್ಯಾಅ. ೬೦೩. ೩೭–೩೦) ; ಇಂಬುಗೊಂಡು ಜಳಮಂ ರಂಭಾದಿಗಳ್ ಸೇವಿಸುತ್ತಿರೆ (ರಾಜಶೇ. ೨–೪).

[ಇಂಬು₂ + ಕೊಳ್₁]

**ಇಂಬುಗೊಳಿಸು** (ಕ್ರಿ). ೧. ಹಿಡಿಯಿಸು ; ಹೊಂದಿಸು ; ಅಳವಡಿಸು : ಬ್ರಹ್ಮಕಪಾಲಮಂ ನಿಲಲೀಯದೆ ಪುಣ್ಯಪವಿತ್ರಮನಿಟ್ಟು ಖಟ್ವಾಂಗಮಂ ಬಿಡಿಸಿ ಮಾದುಘಲಮನಿಂಬುಗೊಳಿಸಿ (ಗಿರಿಕ. ೧೦-೭೦ ವ) ; ಬಿರುದ ನಚ್ಚಣಿಯರೆದೆದಲ್ಲಣವೆನಿಪ್ಪ ಭಾಸುರದ ಚಲ್ಲಣವುಡಿಸಿ ಕಾಸೆಯಂ ದೇಶಿ ಮಿಗಲೋಜೆಯಿಂದಿಂಬುಗೊಳಿಸಿ (ಸೌಂದಪು. ೬-೩೦) ; ತುಂಬಿದ ಕರಿಯ ಮದ್ದಿನ ಪೊಟ್ಟಣಗಳನಿಂಬುಗೊಳಿಸು ಶರಾಗ್ರದಲಿ ತುಂಬಿಪ್ಪ ಬಲು ಸುರಂಗಗಳ ದ್ವಾರಗಳಿಗೆಂದೆಂಬ ರಭಸವೊಪ್ಪಿತಾಗ (ಕಂನವಿ. ೧೪-೭). ೨. ಒದಗಿಸು ; ಕೊಡು ; ನೀಡು : ಕೃಪಾಂಬುನಿಧಿ ನೀಲಕಂಠಂ ಮೆಚ್ಚಿ ಹಸ್ತಮಂ ಸೃಜಿಸಿ ಕಾಮಿತ ಫಲವನು ಇಂಬುಗೊಳಿಸಿದನು (ಸೌಂದಪು. ೧೪-೨೫). [ಇಂಬುಗೊಳ್$_1$ + -ಇಸು$_3$]

**ಇಂಬುದಳೆ** (ಕ್ರಿ). ಅವಕಾಶವನ್ನು ಪಡೆ ; ವಿಸ್ತಾರವಾಗು : ಕೆಂಬರಲ ನೀಲದ ಪಳುಕಿನೊಪ್ಪಂಬಡೆದ ಮುಖವೊಂದುಯೋಜನದಿಂಬುದಳೆದೊಡ ಲೆಂಟುಯೋಜನಮಾದುವೆಡೆಬಿಡದೆ (ಸಾಳ್ವಭಾ. ೨೧-೫೯).
[ಇಂಬು$_1$ + ತಳೆ$_1$]

**ಇಂಬುದುಂಬು** (ಕ್ರಿ). ಚೆನ್ನಾಗಿ ತುಂಬು ; ನಿಬಿಡವಾಗಿ ನೆಲಸು ; ಕಿಕ್ಕಿರಿದು ತುಂಬು : ಭರದಿ ಮೊಳಗುವ ವಾದ್ಯಗಳ ಸುಭಟರ ನೆರವಿಯಂ ದಳದ ಸಂದಳಿ ತರತರದೆ ತತ್ಪುರದ ಬೀದಿಯೊಳಿಂಬುದುಂಬಿಹುದು (ಸಾಳ್ವಭಾ. ೨-೭). [ಇಂಬು$_2$ + ತುಂಬು$_1$]

**ಇಂಬುಮಾಡು$_1$** (ಕ್ರಿ). ೧. ಎಡೆಕೊಡು ; ಅವಕಾಶ ಕಲ್ಪಿಸು : ಲೇಸಾಯಿತ್ತು ಮನೆ ಲೇಸಾಯಿತ್ತು ಮೇಲುವೊದಿಕೆ ಮಗುಳೆ ಆ ಅಂಗಕ್ಕೆ ಕಿಚ್ಚನಿಕ್ಕಿ ಮನೆಯನಿಂಬುಮಾಡಿದೆ ಲಿಂಗ ಜಂಗಮಕ್ಕೆ (ಅವಚಂ.೨೪-೯೯); ಪೊಸವಣ್ಣ ಪಸರದಿನೆಸೆವಸಿಯಕೊಂಬನಿಂಬುಮಾಡಿ ಸುಟಿದು ಗಟಪು ವೆಳಗಿಳಿಯ ಬಳಗಕ್ಕೆ (ಕಬ್ಬಿಕಾ. ೩೦) ; ನಂಬಿಕೆಯ ಕೊಟ್ಟರೂ ನಂಬದಿರು ಸೂಳೆಯನು ನಂಬಿಸಿ ಒಬ್ಬಗೆ ತಿಳಿಯದಿನ್ನೊಬ್ಬಗೆ ಇಂಬುಮಾಡಿಹಳು (ಸರ್ವಜ್ಞ. ೧೯೪೨) ; ಅಂತರ್ಜಾತೀಯ ವಿವಾಹಕ್ಕೂ ಇಂಬುಮಾಡಿ ಕೊಡಬೇಕು (ಎಡಹೆ. ೧೪೪) ೨. ವಿಸ್ತಾರಗೊಳಿಸು ; ವಿಶಾಲವೆನಿಸು : ಈ ನಿಖಿಳಾಮರರ್ಗೆ ಜಿನಯಾತ್ರೆಯೊಳಾಗದು ಪಾಜುಗೆಯ್ತುಮಧ್ವಾನಮ ನಿಂಬುಮಾಡಿ ನಡೆಯಿಪ್ಪೆನೆನುತ್ತುಮೆ ಶಕ್ರವಿಕ್ರಿತಂ (ಪುಷ್ಪಪು. ೧೦-೩೩).
[ಇಂಬು$_1$ + ಮಾಡು$_1$]

**ಇಂಬುಮಾಡು$_2$** (ಕ್ರಿ). ಹದಗೊಳಿಸು ; ಕ್ರಮಪಡಿಸು : ವಸುದೇವಂ ಕನ್ನೆಯ ಮುಂದಣಿಂದೆ ವೀಣೆಯಂ ತರಿಸಿ ತಂತ್ರಿಯನಿಂಬುಮಾಡಿ . . . ಚತುರ್ದರ್ಶಗುಣಂಗಳೊಳ್ ಕೂಡಿ ಬಾಜಿಸಿದಾಗಳ್ (ಬಂಹರಿ. ೫-೩ ವ).
[ಇಂಬು$_2$ + ಮಾಡು$_1$]

**ಇಂಬುವಡೆ$_1$** (ಕ್ರಿ). ಅತಿಶಯವಾಗು ; ಮಿಗಿಲಾಗು ; ಹಬ್ಬು : ಪದ್ಮಜಾಂಡಘಟಮಂ ತುಂಬಿತ್ತು ಕಲ್ಪಾಂತದುಗ್ಗಡದಂಭೋಧರವಂ ಬೊಲಿಂಬುವಡೆದಾ ಗಂಭೀರಭೇರೀರವಂ (ರಾಜಶೇ. ೬-೧೧).
[ಇಂಬು$_1$ + ಪಡೆ$_1$]

**ಇಂಬುವಡೆ$_2$** (ಕ್ರಿ). ಚೆಲುವನ್ನು ಪಡೆ ; ಮನೋಹರವಾಗು ; ರಮ್ಯವಾಗು : ತುಱುಗೆಮೆ ನೀಳ್ದ ಪುರ್ವು ನಿಡುಗಣ್ . . . ತೆಳ್ವಸಿಱ್ ಕರಂ ನೆಱೆದ ನಿತಂಬಮಿಂಬುವಡೆದೊಳ್ಪೊಡೆ . . . ಎಂದು ಧಾತ್ರಿ ಪೊಗೞ್ದು (ಪಂಪಭಾ. ೧-೧೦೮) ; ತಿಂತಿಣಿವಣ್ಣನಾಂತ ಸಣ್ಣಗೊಂಬಿಂದಿಂಬುವಡೆದ ದಾಳಿಂಬಂಗಳೊಳಂ (ಕಬ್ಬಿಕಾ. ೩೦) ; ಇಂಬುವಡೆದಾ ರಜತವಾಳುಕಿಯೆಂಬ ನದಿಯುಪವನದ ಕುಸುಮತೊಡಂಬೆಗಳನಾಯ್ದು (ಸಾಳ್ವಭಾ. ೬-೧೧) ; ಶಂಬರಹರ ಕರಿವರ ಕುಂಭಮಿಂಬುವಡೆದುದಿಲ್ಲೇಕೆ . . . ಮಣಿಗಣ ಸುರುಚಿರತರ ಮೇಖಲಾಶಿರೋಮಾಲಿಕೆಯಿಂ (ರಾಜಶೇ. ೩-೫೮). [ಇಂಬು$_2$ + ಪಡೆ$_1$]

**ಇಂಬುವರ್** (ಕ್ರಿ). ಅನುಕೂಲವಾಗು ; ಹಿತವೆನಿಸು : ಸುಯೋಧನ ನೆಂಬ ಪಾಪಕರ್ಮನ ಮಾಡಿದನುವರಂ ನಿಮ್ಮನುಬಲದೊಳಮರಿಕೇಸರಿಯ ಭುಜಬಲದೊಳಮೆಮಗಿಂಬುವಂದುದು (ಪಂಪಭಾ. ೯-೧೭ ವ) ; ಇವ ನಪ್ಪೊಡೆ ಮಹಾಪಾತಕಂ ವಿಶ್ವಾಸಘಾತುಕಂ ತನಗಿಂಬುವರೆ ನಿನಗಂ ತಪ್ಪದಿರ್ಪನಲ್ಲಿವನನದಱಿಂ ಕೆಡೆನೂಂಕು (ಪಂಚತಂ. ೧೦೮-೩).
[ಇಂಬು$_2$ + ಬರ್$_1$]

**ಇಂಬುವೆರಸು** (ಕ್ರಿ). ಹಿತದಿಂದ ಕೂಡು ; ಸುಖವಾಗು ; ಸೊಗಸಾಗು : ಆಲಂಪುವೆರಸಿದ ನೋಟಕ್ಕಮಿಂಬುವೆರಸಿದ ಕೂಟಕ್ಕಂ (ಪಂಪಭಾ. ೪-೧೭ ವ). [ಇಂಬು$_2$ + ಬೆರಸು$_1$]

**ಇಂಬುವೆಱು** (ಕ್ರಿ). ಇಂಪಿನಿಂದ ಕೂಡು ; ಸೊಗಸಾಗು : ಮನಂ ನೊಸಲಲ್ಲಿರೆ ಲೋಚನಂಗಳುಳ್ಳರೆಮುಗುಚ್ಚಿಂಬುವೆತ್ತಿರೆ . . . ಸಮ ಸಂದುದಾ ಪರಮಯೋಗಿಗೆ ಯೋಗನಿಯೋಗಭಾವನಂ (ಆದಿಪು. ೧೦-೧೪) ; ಕೋಮಲಾಂಗುಳಿಗಳದೇಂ ಬಗೆಯಂ ಬೆದಱಿಪುವೊ ಪುಱುಂಬುಗಳೆಂಬಂತಿಂಬುವೆತ್ತು ವಿಷಮಾಯುಧನಾ (ಪುಷ್ಪಪು. ೩-೨೭).
[ಇಂಬು$_2$ + ಪೆಱು$_1$]

**ಇಂಬುಳ, ಇಂಬಳ, ಇಂಬಳು** (ನಾ). ಜಿಗಳೆ ; ಜಿಗಣೆ ; ಅಟ್ಟೆ : ಮುಂಗಾರು ಮಳೆಯ ಕಾಲವಾದ್ದರಿಂದ ಕಾಡಿನ ಮಧ್ಯೆ ಹೋಗುತ್ತಿದ್ದಾಗ ಇಂಬುಳಗಳು ನಡೆಯುತ್ತಿದ್ದ ಮಕ್ಕಳ ಕಾಲುಗಳಿಗೆ ಪದೇ ಪದೇ ಹತ್ತಿ ರಕ್ತವನ್ನು ಹೀರುತ್ತಿದ್ದವು (ಪಂಜಪಂ. ೧೫). **ಇಂಬಳೆ** : ಮಳೆಯ ನೀರು ಹನಿಯಿತೆಂದರೆ, ಕಾಡಿನ ದಾರಿ ಇಂಬಳದಿಂದ ತುಂಬಿ ನರಕವಾಗುತ್ತದೆ (ಕುಡಿಕೂ. ೧೨) ; ಅಲ್ಲಿಯ ಇಂಬಳ (ಜಿಗಣೆ)ಗಳಿಗೆ ಚಿರಂಜೀವತ್ವ ಲಭಿಸಿತ್ತು (ಕಾನೂರು. ೧೩೮). **ಇಂಬಳು** : (ಕರಾ). "ಇಂಬಳು-ನೆಲ ಜಿಗಣೆ" (ಸಿರಿಕೋ) ; ಆ ಶಿಶುವಾದರೂ ಆ ಅರಣ್ಯದಲ್ಲಿ ಇಂಬುಳು ತುಂಬಿದ ದಾರಿಯಲ್ಲಿ . . . ಐವಾರು ದಿನಗಳು ರಾತ್ರಿಹಗಲುಗಳನ್ನು ಹೇಗೆ ಕಳೆಯಿತೋ ಏನೋ (ನಂಬಿನಾ. ೧೮೨).
[ಇರ್ಪು + ಪುಳ (< ಪುೞು). / **ತುಳು**. ಉಂಬುರು, ಉಂಬ್ರು]

**ಇಂಬುಳಿ, ಈಂಬುಳಿ** (ನಾ). ೧. ಇನಿದಾದ ಹುಳಿ ; ಮಧುರವಾದ ಹುಳಿ : ಶೋಧಿಸಿದಿಂಬುಳಿಯಂ ಸಂಶೋಧಿಸಿ ಪುಣೊ[ಣ್ಣೊ]ಳಗೆ ಬಿಡುಗೆ ಮಧುಘೃತಮುಂ ನಿರ್ವ್ಯಾಧಿ ಹಯಕ್ಕಕ್ಕುಂ (ಅಶ್ವಶಾ. ೧೪-೨೪). **ಈಂಬುಳಿ** : ೧. ಈಂಚರಂ, ಈಂಗಡಲ್, ಈಂಬುಳಿ (ಭಾಷಾಭೂ. ೧೩೮ ಉದಾ) ; ಪದಾದಿಯ ಹ್ರಸ್ವಕ್ಕೆ ದೀರ್ಘ – ಈಂಚರಂ, ಈಂಬುಳಿ, ಈಂಗಡಲ್ (ಶಮುದ. ೧೮೦ ಪ್ರಯೋ). ೨. ಸಿಹಿಯಾದ ಕಿತ್ತಲೆ (ಕ).
[< ಇನಿದು + ಪುಳಿ]

**ಇಂಬೆಳಸು** (ನಾ). ಸೊಗಸಾದ ಬೆಳಸು ; ಸೊಂಪಾದ ಬೆಳೆ : ನಾಡ ಕಾಡ ಬೆಳಸಿಂಬೆಳಸಾ ವಿಷಯಾಂತರಾಳದೊಳ್ (ಪಂಪಭಾ. ೧-೫೪).
[< ಇನಿದು + ಬೆಳಸು$_2$]

**ಇಂಬೊಸರ್** (ನಾ). ಸೊಗಸಾದ ಒಸರು, —ಒರತೆ : ಮುಂಗಾರೆನ್ನದೆ ಸುಗ್ಗಿಯೆನ್ನದೆ ಬೇಸಗೆಯೆನ್ನದಾಸಡಿಯೆನ್ನದಿಂಬೊಸರಿಂ ತುಂಬಿ ಪೊನಲ್ವರಿವ ಪೊಕ್ಕರಣೆಯಂ (ರಾಮಾಶ್ವ. ೫೩-೪). [ಇಂಬು$_2$ + ಒಸರ್$_2$]

**-ಇಕೆ** (ಪ್ರ). ಇದು ಈ ವ್ಯಕ್ತಿಯ ಶೀಲ ಮುಂತಾದ ಅರ್ಥದಲ್ಲಿ ನಾಮವಾಚಕಗಳಿಗೆ ಸೇರುವ ಒಂದು ತದ್ಧಿತ ಪ್ರತ್ಯಯ : ಉಕಕುಳಿಯಾಳಿ ಪ್ರತ್ಯಯಮಿಕಮುಂ ಶೀಲಾದಿ ವಿಶ್ರುತಾರ್ಥದೊಳ್ . . . ಅಕ್ಕುಂ (ಶಮುದ. ೨೦೩) ; ಇಕ ಪ್ರತ್ಯಯಕ್ಕೆ— ಕರಿಕಂ, ಅಸಿಕಂ, ದಸಿಕಂ, ಬಾರಿಕಂ (ಶಮುದ. ೨೦೩ ಪ್ರಯೋ).

**ಇಕಾರ** (ನಾ). = ಇ$_1$ : ಇಕಾರಕ್ಕೆ: ಕಲಿಯಾರ್ (ಶಮುದ. ನ. ೬೩ ಪ್ರಯೋ).
[**ಸಂ.**]

**ಇಕಾರಾಂತ** (ಗು). [ವ್ಯಾಕ] 'ಇ' ಎಂಬ ವರ್ಣದಿಂದ ಕೊನೆಗೊಳ್ಳುವ (ಶಬ್ದ): ಇಕಾರಾಂತ ವ್ಯಂಜನಾಂತಂಗಳ್ಗೆ ಇದಾಗಮಮಿಲ್ಲದುದರ್ಕೆ (ಶಮದ. ೨೨೧ ಪ್ರಯೋ); ಇತ್ವಾಂತಮುಂ– ಇಕಾರಾಂತ ಶಬ್ದಮುಂ (ಶಮದ. ೮೪ ಟೀಕೆ). [ಇಕಾರ + ಅಂತ$_2$]

**ಇಕಿಸು** 'ಇಕ್ಕಿಸು$_1$' ನೋ.

**ಇಕುಳ** 'ಇರ್ಕುಳ$_2$' ನೋ.

**–ಇಕೆ, –ಇಕ್ಕೆ$_2$** (ಪ್ರ). **೧.** ಭಾವನಾಮಗಳನ್ನು ಸಾಧಿಸುವ ಒಂದು ತದ್ಧಿತ ಪ್ರತ್ಯಯ: "ಪ್ರಕಟಂ ಚೇತನಭಾವದೊಳಿಕೆ ತನ ಮೆಯಕ್ಕುಂ" (ಶಮದ. ೨೧೧); ಅದಮಾನುಮಜಿತಮುಂ ಕುಶಲಿಕೆಯುಂ ನಂಬುಗೆಯುಮಾಗಿ (ವಡ್ಡಾರಾ. ೬–೨೦); ಆದುದೊಂದು ಮಾನಸಿಕೆ ಮನಂಗೊಳಲ್ಕೆನಗಂ (ಆದಿಪು. ೧೨–೩೯); ಪೆಜರ ವಿಭವಕ್ಕೆ ಬಯಸುವ ಮಜುಗುವ ಗಾವಿಲಿಕೆಯೇಕೆ (ಅಜಿಪು. ೧೧–೪೨); ಇಕೆಗೆ —ಉನ್ನತಿಕೆ, ಉದ್ಧತಿಕೆ, ಆಯತಿಕೆ (ಶಮದ. ೨೧೧ ಪ್ರಯೋ). **೨.** ಕೃದಂತಭಾವನಾಮ ಪ್ರತ್ಯಯಗಳಲ್ಲಿ ಒಂದು: ಪೆರ್ಚಿದೆಣಿಕೆಯೊಳ್ ಕೂಡಿದುದು (ಆದಿಪು. ೬–೪೮ ವ); ಬಿಡು ನೀನಂಜಿಕೆಯುಂ ಕಪಿಂಜಲಕ ದೋಷಂ ನಿನ್ನದಲ್ತು (ಕಾದಂಉ. ೭೨೪). **–ಇಕ್ಕೆ$_2$: ೧.** ಕ್ರಿಯಾಕಾರಕ ಸಂಬಂಧದಿಂದಂ ವಖ್ಯಾಣಿಸಿ ತಮ್ಮ ಪಂಡಿತಿಕ್ಕೆಯನಜಿಪಿದೊಡೆ (ವಡ್ಡಾರಾ. ೪–೨೫); ಇಕೆಗೆ ದ್ವಿತ್ವಮುಂಟು—ಉನ್ನತಿಕ್ಕೆ, ಉದ್ಧತಿಕ್ಕೆ (ಶಮದ. ೨೧೧ ಪ್ರಯೋ).

**ಇಕ್ಕೈಯಿಮನೆ** (ನಾ). ಎರಡು ಪಾರ್ಶ್ವಗಳಲ್ಲಿರುವ ಮನೆ; ಎರಡು ಕೈ ಅಳತೆಯುಳ್ಳ ಮನೆ (?): ಸ್ಥಳದ ಮುಗಿಲೊಳಗೆ ಅಟುಗಯಿವರ ಮನೆ ಮುಗಿಲ ಹೊಜಗೆ ಇಕ್ಕೈಯಿಮನೆ ಅಕ್ಷೀಣಿ ಆಗಾಮಿ ಸಹಿತ ಸಮಸ್ತ ಬಡ್ಡಿ ಸಹಿತ (ಕಕುಲ. ೫–೭೧; ?). [ಇಕ್ಕೈ$_0$ (< ಇರ್ಕೆಯ್) + ಮನೆ]

**ಇಕೊ** 'ಇದೆಕೊಳ್' ನೋ.

**ಇಕೋ** 'ಇದೆಕೊಳ್' ನೋ.

**ಇಕ್ಕಂಡುಗ** 'ಇರ್ಕಂಡುಗ' ನೋ.

**ಇಕ್ಕಂತಿ** (ನಾ). ಇಬ್ಬರು ಜೈನ ಸಂನ್ಯಾಸಿನಿಯರು; ಕಂತಿದ್ವಯರು; (?): ಇಬ್ಬರ್ಬ್ರಾಹ್ಮಣನ್ ಇಕ್ಕಂತಿ ಉಣ್ಣ ಧರ್ಮ್ಮ ನೆಲನು ಚಂದ್ರನುವುಳ್ಳಿನ (ಎಕ. X, ಕೋಲಾರ. ೯–೮; 925).
[ಇರ್$_2$ (< ಎರಡು) + ಕಂತಿ]

**ಇಕ್ಕಟ** (ಗು). ಇಕ್ಕಟ್ಟಾದ; ನಿಬಿಡವಾದ (?): ಅಕ್ಕಜವಿಡಿದಾಡುವಿಕ್ಕಟ ಪೊಗರಿಂದ ಕಕ್ಕದಿಸುವ ಪೆರ್ಮೊಲೆಗಳು (ಭೈರಸೂ. ೩೦೪–೧೨೪).
[?]

**ಇಕ್ಕಟ್ಟು** 'ಇರ್ಕಟ್ಟು' ನೋ.

**ಇಕ್ಕಡಿ** 'ಇರ್ಕಡಿ' ನೋ.

**ಇಕ್ಕಡಿಗಡಿ** (ಕ್ರಿ). ಎರಡು ತುಂಡಾಗಿ ಕತ್ತರಿಸು: ಭಗದತ್ತನ ಧನುವನಿಕ್ಕಡಿಗಡಿಯೆ ಕಂಗನೆ ಕನಲಿ ಗವಸಣಿಗೆಯಿಂದುಗಿದನು ನಿಜಾಯುಧವ (ಕುವ್ಯಾದ್ರೋ. ೩–೫೫); ಒಗ್ಗೊಡೆಯದಿರಿ ಆರ್ದೇಸಿಯಿಜಿಯಿಕ್ಕಡಿಗಡಿಯಿಮೆನುತ (ಸಾಳ್ವಭಾ. ೫–೩೩); ಇಕ್ಕಡಿಗಡಿದ ತೊಡೆ (ಉತ್ತರಾ. ೫–೨೫).
[ಇಕ್ಕಡಿ (< ಇರ್ಕಡಿ) + ಕಡಿ$_1$]

**ಇಕ್ಕಡಿಗಳೆ** (ಕ್ರಿ). **೧.** ಎರಡು ತುಂಡು ಮಾಡಿ ಎಸೆ: ಕರವಾಳನಿಕ್ಕಡಿಗಳೆದು ಹಲಗೆಯನೆಂಟುಕಡಿ ಮಾಡಿದನು ಕಲಿಭೀಮ (ಕುವ್ಯಾದ್ರೋ. ೧೩–೩೭); ಧನುವನಿಕ್ಕಡಿಗಳೆದು ರಿಪುಸೂತನ ಶಿರವ ಹಜಿಯೆಸಲು (ಕುವ್ಯಾದ್ರೋ. ೧೩–೪೪). **೨.** ಎರಡು ತುಂಡಾಗಿ ಕಳಚಿ ಬೀಳು; ಎರಡು ತುಂಡಾಗು: ಸೆಳೆದನಾಕರ್ಣಾಂತಪರಿಯಂತಲಘುಬಲ ರಘುನಾಥನಿಕ್ಕಡಿಗಳೆದುದಾ ಬಲುಬಿಲ್ಲು (ತೊರರಾ. ೧–೧೫–೪೧).
[ಇಕ್ಕಡಿ (< ಇರ್ಕಡಿ) + ಕಳೆ$_1$]

**ಇಕ್ಕಡಿಗೈ** 'ಇರ್ಕಡಿಗೆಯ್' ನೋ.

**ಇಕ್ಕಡಿವಡೆ** (ಕ್ರಿ). ಎರಡು ತುಂಡಾಗು, —ಭಾಗವಾಗು: ಇಕ್ಕಡಿವಡೆದ ಕಾರ್ಮುಕವ ನಿವಾರಿಸಿ ತೆಕ್ಕೊಂಡು ಭಾರಿಯ ಹಲವ . . . ಪೇರೊನಕೆಯಿಂದಿಕ್ಕಿದ (ಮೋಹತ. ೩೮–೫೯).
[ಇಕ್ಕಡಿ (< ಇರ್ಕಡಿ) + ಪಡೆ$_1$]

**ಇಕ್ಕಡಿಸು** (ಕ್ರಿ). ಎರಡು ತುಂಡಾಗು, — ಭಾಗವಾಗು: ಮುರಿವ ರಥಮಿಕ್ಕಡಿಸುವ ಕೇತನಮುರುಳ್ವ ಭಟರ್ (ಮಹಾನೇ. ೧೨–೬೫); ಕೊರಳ್ ನಡುಗಳಿಕ್ಕಡಿಸಲೆಚ್ಚಾಡಿದರ್ ಬಿಲ್ಲ ಬಿನ್ನಣಿಗರಂದು (ಚಿಬಪು. ೪೮–೪೯). [ಇಕ್ಕಡಿ (< ಇರ್ಕಡಿ) + –ಇಸು$_3$]

**ಇಕ್ಕಡೆ** 'ಇರ್ಕಡೆ' ನೋ.

**ಇಕ್ಕಣ್** 'ಇರ್ಕಣ್' ನೋ.

**ಇಕ್ಕಣ್ಣಿ** (ನಾ). ಎರಡು ಕಣ್ಣಿಗಳು; ಎರಡು ಹುರಿ ಅಥವಾ ಹಗ್ಗ. 'ಇಕ್ಕಣ್ಣಿವಲೆ' ಪರಾ. [ಇರ್$_2$ (< ಎರಡು) + ಕಣ್ಣಿ]

**ಇಕ್ಕಣ್ಣಿವಲೆ** (ನಾ). ಎರಡು ಹುರಿಗಳಿಂದ ಹೊಸೆದು ಮಾಡಿದ ಬಲೆ: ತಿಣ್ಣವಲೆ ಜೋಡುವಲೆ ಹೊಸೆದಿಕ್ಕಣ್ಣಿವಲೆ ಚಕ್ರವಲೆ ಮಿಗೆ ಮುಕ್ಕಣ್ಣಿವಲೆ (ಸಾಳ್ವಭಾ. ೫–೧೮). [ಇಕ್ಕಣ್ಣಿ + ಬಲೆ$_1$]

**ಇಕ್ಕತ್ತಿಗೆ** (ನಾ). ಉಭಯಮುಖಿ ಹಸು; ಆಗತಾನೆ ಕರು ಹಾಕುತ್ತಾ ಇದ್ದು ಹಿಂದೊಂದು ಕೊರಳು, ಮುಂದೊಂದು ಕೊರಳು ಕಾಣುವ ಹಸು: ಇ ಧರ್ಮ್ಮವ ಕಿಡಿಸಿದ ಲಿಂಗಭೇದಿ ಇಕ್ಕತ್ತಿಗೆಯ ಕವಿಲೆಯ ಕೊಂದ (ಎಕ. V, ಹಾಸನ. ೧೩೪–೧೩; 1115).
[ಇರ್$_2$ (< ಎರಡು) + ಕತ್ತು + –ಇಗೆ$_0$]

**ಇಕ್ಕಪಯ್ಯ** (ನಾ). ಒಬ್ಬಾತನ ಹೆಸರು: ದಂಡನಾಯಕನಿಕ್ಕಪಯ್ಯನ ಮಗಂ ಕೊನ್ತದ ಗೊಗ್ಗಿ ಊರಜಿವಿನೊಳ್ ಸತ್ತಂ (ಎಕ. XI, ಚಳ್ಳಕೆ. ೬–೬; 925). [?]

**ಇಕ್ಕಯ್** 'ಇರ್ಕೆಯ್' ನೋ.

**ಇಕ್ಕರ$_1$** (ನಾ). ಎರಡು ಕೈ. [ಇರ್$_2$ (< ಎರಡು) + ಕರ$_4$]

**ಇಕ್ಕರ$_2$** (ನಾ). (?): ಹೆಗ್ಗಡೆ ಬಾಸಯ್ಯ ಇಕ್ಕರಂ ಮಜ್ಜಳಂ (ಮೈಆರಿ. ೧೯೩೫, ೨೬–೧೮; 1029). ℙ 'ಅಕ್ಕರ' ಎಂಬುದಕ್ಕೆ ಅಪಲಿಖಿತವಿರಬಹುದು. [?]

**ಇಕ್ಕರಿಸು$_1$**, ಇಕ್ಕಲಿಸು (ಕ್ರಿ). **೧.** ಎರಡು ಕಡೆಯಲ್ಲಿಯೂ ಸಾಲುಗೊಂಡು ಬರು; ಎರಡು ಸಾಲಾಗು: ಇನಕುಲನ ತೇರನಿಕ್ಕರಿ[ಪಾಠಾಂ. ಲಿ]ಸಿ ಬೆಂಬಳಿವಿಡಿದು ಬನಕೆ ಬರುತಿಹ ರಥದ ಮೇಲೆ (ಹಚಕಾ. ೩–೨೫); ಹೊಕ್ಕನಸುರಾರಾತಿ ಸುರವರರಿಕ್ಕರಿ[ಪಾಠಾಂ. ಲಿ]ಸಲಮರೇಂದ್ರಭವನವನು (ನಿಭಾಗ. ೧೦–೭೦–೯); ಇಕ್ಕರಿಸಿ ಬೆಳದಖಿಳ ವೃಕ್ಷದ ತೆಕ್ಕೆಯಲಿ ಪಂಗಡಿಸಿ ಜಾಜುವ ಸೊಕ್ಕಿದಾನೆಯ (ಅಕ್ರೂಚ. ೫–೧೧). **೨.** ಎರಡು ಭಾಗವಾಗು; ಎರಡು ಪಾಲಾಗು, —ಹೋಳಾಗು: ತೆಕ್ಕೆ ಸಡಿಲಿತು ತಜಗೆಲೆಯ ಹೊದಜಿಕ್ಕರಿ [ಪಾಠಾಂ. ಲಿ]ಸಿ ಮೈಮುಜಿಯಲನಿಲಜನೆಕ್ಕತುಳದಲಿ ಮೇಲೆ ಹಾಯ್ದನು ಕಾಣದಹಿಪತಿಯ (ಕುವ್ಯಾಆ. ೧೩–೩೩). **ಇಕ್ಕಲಿಸು: ೧.** ನೆಲನಿಕ್ಕಲಿಸೆ ಬಿಜುವರಿಗಳಲಿ ತೇರ್ರೈಸಿದವು ತೇರುಗಳು (ತೊರರಾ. ೬–೧೩–೨೨). **೨.** ಪಟುಭಟರಿಕ್ಕಲಿಸಿ ಬರೆ ಕಂಡು (ನಳಚ. ೯–೨೪). **೩.** ಅಗಲಿಸು; ವಿಸ್ತಾರವಾಗಿಸು: ಬಲಿದು ಮಕುಟಾವಳಿಯ ಶೋಣಿತ ಪಳಿಯ ರಕ್ಕಸ ದೇಸಿಯಲಿ ಬಿಗಿದೆಳೆವ ಹಾಹೆಯನೋಜಿಗೊಳಿಸಿಕ್ಕಲಿಸಿ ಪದಯುಗವ ಆಳುಕದಂದು ಹರಾದ್ರಿಯನು ಕಿತ್ತಿಳೆಯನಗಲಿಸುವಂತೆ ಬಾಹಾಲುಳಿತ ಬಲನೆತ್ತಿದನು ನೆಲನೊಲೆದಾಡಲೆಡಬಲಕೆ (ತೊರರಾ. ೧–೧೫–೧೯).
[ಇಕ್ಕರೆ$_1$ + –ಇಸು$_3$]

**ಇಕ್ಕರಿಸು$_2$** (ಕ್ರಿ). ರಭಸದಿಂದ ಇಕ್ಕು; ಹೊಡೆ; ಅಪ್ಪಳಿಸು: ಹೆಂಗಸು ಬಗ್ಗಿನಿಂತು ಗುರಿಯಿಟ್ಟು... ಚೆಂಡಿಗೆ ಗೋಲ್ಫ಼ಕೋಲಿನಿಂದ ಇಕ್ಕರಿಸಿದಳು (ರಕ್ತಧ್ವ. ೧೩೦); ಪೋಲೀಸರು ಜಗ್ಗಾನನ್ನು ಸುತ್ತುವರಿದು ಕೈಬಡಿಗೆ ಬಂದೂಕುಗಳಿಂದ ಇಕ್ಕರಿಸತೊಡಗಿದರು(ಕಸ್ತೂರಿ. ೧–೩–೧೯೬೫, ೧೨೧); ಡಬ್ಬಿಯನ್ನು ತಂದು ತಾಯಿಯೆದುರು ಇಕ್ಕರಿಸಿದನು (ಗಂವಾಾಯಿ. ೪೯). [?]

**ಇಕ್ಕರೆ$_1$** (ನಾ). ಎರಡು ಕರೆ, —ದಡ, —ಅಂಚು: ಗರಗರನೆಯ್ದುವ ಗಂಗಾದೇವಿಗೆ ಧರಣೀದಯಿತೆ ಧವಲಚಾಮರಮಂ ಹರಿಸಮೊದವೆ ಹಲವಂ ಡಾಳಿಸುವಂದದೆ... ಕಾಶಪ್ರಸವಂ... ಬೆಳೆದೊಪ್ಪಿದುದಾವಿಕ್ಕರೆಗಳೊಳು (ಜಯಕಾ. ೯–೮). [ಇರ್$_2$ (< ಎರಡು) + ಕರೆ$_4$]

**ಇಕ್ಕರೆ$_2$** (ನಾ). ಈಚೆಯ ದಡ; ಹತ್ತಿರದ ದಡ (ಕ್ಯಾಂಡರ್). [ಈ$_5$ (< ಇದು) + ಕರೆ$_4$. / ತಮಿ. ಇಕ್ಕರೈ]

**ಇಕ್ಕರ್ತರು** 'ಇರ್ಕರ್ತರು' ನೋ.

**ಇಕ್ಕಲ** 'ಇಕ್ಕಲು$_1$' ನೋ.

**ಇಕ್ಕಲಿಸು** 'ಇಕ್ಕರಿಸು$_1$' ನೋ.

**ಇಕ್ಕಲು$_1$, ಇಕ್ಕಲ** (ನಾ). ರಾಶಿ; ಬಣವೆ; ಮೆದೆ: ಗೋದಿಯ ಹುಲ್ಲಿನ ಇಕ್ಕಲನ್ನು ಕಾಯ್ದು (ಬೆಳುಮ. ೧೯೯); ಜೋಳವನ್ನು ಕಿತ್ತಿ ಇಕ್ಕಲು ಹಾಕಿದ್ದನು (ಗ್ರಾಮಾಯ. ೨೧೪). **ಇಕ್ಕಲ**: "ಒಟ್ಟು, ಗುಂಪು, ಗೂಡು, ಇಕ್ಕಲ, ಬಣಬೆ [ಬಣವೆ]" (ಕಂನುಹು. ೮೦): ಭೂಮಿಯಲ್ಲಿ ಒಟ್ಟಿದ್ದ ಇಕ್ಕಲಗಳಿಗೆ (ಮನೆಬೆ. ೩೧). [ಇಕ್ಕು + -ಅಲು ?]

**ಇಕ್ಕಲು$_2$** 'ಇರ್ಕುಟ್ಟು$_2$' ನೋ.

**ಇಕ್ಕಲ್ಸು** (ಕ್ರಿ). ಇಕ್ಕು; ಕೂರಿಸು (?): ತುಳುವನು ಮರಳ್ವಿಯಂ ಮಿರವಿ ಸತ್ತ ಕಲಿ×× ದೇವಕಂನಿಕೆಯರು ಪೊಯ್ದು ದೇವರ ವರಾಸನದಲ್ಲಿ ಇಕ್ಕಲ್ಸಿದರು (ಎಕ. XVI, ಚಿಕ್ಕನಾ. ೯೧-೪; 1301). [?]

**ಇಕ್ಕವಲು** (ನಾ). ಎರಡು ಕವಲು, —ಶಾಖೆ: ಒಂದೇ ರಾಗದಲ್ಲಿ ಇಕ್ಕವಲನ್ನು ನೋಡಿರಿ (ನಾಡೋಜ. ೨೩೧); ಇಕ್ಕವಲಾದ ಸೊನ್ನೆಯ ಬೀದಿಯಲ್ಲಿ ಹರಿದರೂ ಒಂದಾದ ಬಿತ್ತಿನಲ್ಲೇ ಬಂದು ಬಿತ್ತುವುದು (ನಡೆವಾ. I, ೪೩೯). [ಇರ್$_2$ (< ಎರಡು) + ಕವಲ್$_2$]

**ಇಕ್ಕಳ$_1$** 'ಇರ್ಕುಟ್ಟು$_2$' ನೋ.

**ಇಕ್ಕಳ$_2$** 'ಇರ್ಕುಳ$_2$' ನೋ.

**ಇಕ್ಕಳು** 'ಇರ್ಕುಟ್ಟು$_1$' ನೋ.

**ಇಕ್ಕಾಟ** (ನಾ). ಬಡಿದಾಟ; "ಹಾಕಾಟ; ವಾದ; ವೈರತ್ವ" (ಜಾನಕೋ. ೧೬). [ಇಕ್ಕು$_1$ + ಆಟ]

**ಇಕ್ಕಾಲು** 'ಇರ್ಕಾಲು' ನೋ.

**ಇಕ್ಕಿಡು** (ಕ್ರಿ). ಬಿಟ್ಟುಹೋಗು; ಬಿಸಾಡು; ವಿಸರ್ಜಿಸು: ಭೋಜನವ ಮಾಡಿ ಭಾಜನವನಿಕ್ಕಿಟ್ಟು [ಪಾಠಾಂ. ಇಟ್ಟು] ಹೋಹ ಹಿರಿಯಂಗೆ ಭಂಗ ನೋಡಾ (ಅವಚಂ. ೩೯–೧೬೯); ನಳರಾಜ ಬಲ್ಲಿದನೆಂದಡೆ ತನ್ನ ಸತಿಯನಿಕ್ಕಿಟ್ಟು ಹೋಗಲದೇನು (ಚನ್ನವ. ಕ. ೪೮೧). [ಇಕ್ಕು$_1$ + ಇಡು$_1$]

**ಇಕ್ಕಿವಿ** (ನಾ). ಎರಡು ಕಿವಿಗಳು: ಹೊಂಗಳುವೂವಿನೆಸಳುಗಳ ಪೋಲೆಗಳನಿಕ್ಕಿವಿಯೊಳಿಕ್ಕಿ (ಸಾಳ್ವಭಾ. ೫–೮). [ಇರ್$_2$ (< ಎರಡು) + ಕಿವಿ]

**ಇಕ್ಕಿಸು$_1$, ಇಕಿಸು** (ಕ್ರಿ). ೧. ಹಾಕಿಸು; ಇರಿಸು; ಇಡಿಸು; ಸ್ಥಾಪಿಸು: ಅವರಣ್ಣಂ ಕುನ್ದಿಗನಿಕ್ಕಿಸಿದನೀ ಕಲ್ಲಮ್ (ಸೌಇಇ. IX–i, ೨೯೯–೬; 10ನೆಯ ಶತ); ಇವಂ ಪಿಡಿ ಕಂಸ ನಿನ್ನ ಭಂಡಾರದೊಳಿಕ್ಕಿಸೆಂದು ಬಿಸುಟರ್ ನಿಜಹಸ್ತದ ದಂತಯುಗ್ಮಮಂ (ಜಗವಿ. ೬–೬೧); ಗಗನತಲದಿಂ ನೆಲಕ್ಕೆ ಪರ್ಣಲಘುವಿದ್ಯೆಯಿಂ ಯುಧಿಷ್ಠಿರನ ಪಾದೋಪಕಂಠದೊಳಿಕ್ಕಿಸುವುದುಂ (ಮಹಾನೇ. ೧೮–೫೧ ವ); ಕಂಬಳಿಯನಿಕ್ಕಿಸಿಯದಱ ಮೇಲೀಶ್ವರಸಮಾರಾಧನೆಗೆ ಕುಳ್ಳಿರ್ದು (ಬಸವು. ೧೨–೧೬); ಸಲ್ಲದ ಮಾತನಾಡಿದೆನೆಂದು ಕೋಪಿಸಿ ಕಲ್ಲಗಾಣದೊಳಿಕ್ಕಿಸೆನ್ನ (ನೋಹತ. ೩೬–೨೧). ೨. ಕಟ್ಟಿಸು; ಮಾಡಿಸು: ಹೊಸಕೆರೆಯ ಕಟ್ಟಿಸಿ ತೂಂಬನಿಕ್ಕಿಸಿ ಭೂಮಿಯಂ ತಿಟ್ಟಿ ಸೋಮೇಶ್ವರದೇವರ ದೇಗುಲವ ಅಳಿವಂ ಸೋದಿಸಿ (ಎಕ. X, ಚಿಂತಾಮ. ೩೦–೧೦; 1047); ಶಿವಭವನವಮುಂ ಮಂಟಪವನಭಿನವವೆಸೆಯೆ ಮಾಡಿಸಿಯದಱ ಸುತ್ತಿವರೆ ಕೋಂಟೆಯನಿಕ್ಕಿಸಿದನಗಳುಗಳನಗುಳಿಸಿದನು (ಬಸವು. ೧೬–೯); ಬಾದಾವಿಯ ದುರ್ಗದ ಕೋಟೆಯನೂಯಿಕ್ಕಿಸಿ... ವೃದ್ಧಿಯಾಗಬೇಕೂಯೆಂದು (ಇಅ. V, ೨೦–೧೪; 1533). ೩. ಮುಚ್ಚಿಸು; ಭದ್ರಪಡಿಸು: ನೀಂ ನಗರಿಯಂ ಪುಗಲುಬೇಡಾ ನಾಳಿನುದಯಕ್ಕೆ ಕೋಂಟೆಯನಿಕ್ಕಿಸಿದ ಬಳಿಕ ಪಾಳೆಯಂ ಸಹಿತ ಬಿಜಯಂಗೆಯ್ವುದು (ಸಮ್ಯಕೌ. ೨–೫೨). ೪. ಊಟಹಾಕಿಸು; ಬಡಿಸು: ತಾಂ ಕುಡುವುದು... ತಾನುಂಬುದು ಮಗುಟ್ಟವಗಿಕ್ಕಿಸುವುದು ಎಂದಿಂತು ಪ್ರೀತಿಯೂಜುತೆಜನಕ್ಕುಂ (ಪಂಚತಂ. ೧೨೫–೧೬); ಸತ್ಯಭಾಮೆ ಸಮುಕ್ಷದೊಳಿರ್ದು... ಸಮಸ್ತ ಭಕ್ಷ್ಯಶಾಲ್ಯೋದನ ಸಂಭಾರೋಪದಂಶಸಮನ್ವಿತಮಿಕ್ಕಿಸುವುದುಂ (ಮಹಾನೇ. ೭–೧೩೧ ವ); ಪಾಲು ಪೊಂಗಲಿಕ್ಕಿಸಯ್ಯ (ಗೋಹಾಡು. ೧೧೦). **ಇಕಿಸು**: ೨. ಕೆಱೆಯ ಕಟ್ಟ ಕಲ್ಲತುಂಬನಿಕಿಸಿದ ಮಂಗಳ (ಮೈಆರಿ. ೧೯೩೨, ೧೧–೫; 886).

**ಇಕ್ಕಿಸಿಕೊಳ್** = ಕೈಕೊಳ್ಳು; ಸ್ವೀಕರಿಸು: ಯತಿಗಳಿಂದೆಜಗಿಸಿಕೊಳುತೆ ಕಾಣ್ಕೆಗಳುಮಂ ವ್ರತಿಗಳಿಂದಿಕ್ಕಿಸಿಕೊಳುತ್ತೆ (ಚಬವು. ೩೫–೧೬). [ಇಕ್ಕು$_1$ + -ಇಸು$_3$]

**ಇಕ್ಕಿಸು$_2$** (ಕ್ರಿ). ಮರಳಿಸು; ಹಿಂತಿರುಗುವಂತೆ ಮಾಡು: ಕೇಸರಿ ತೊಱಜವಾಳ್ವನಾ ಮಗನ್ ಆಲನ ತೊಱು ಇಕ್ಕಿಸಿ ಬಿಟ್ಟೊನ್ (ಎಕ. X (S), ಮುಳಬಾ. ೧೫೬–೬; 8ನೆಯ ಶತ); ನೆಲ್ಲಿಗೆಱೆಯ ತುಱುಗೊಣ್ಡಲ್ಲಿ ತುಱುವನಿಕ್ಕಿಸಿ ಬೊಸಗರಲಯನ್ ಪೊಸಮೇಣ್ಡಿ ಸಗಮೇಱಿದನ್ (ಎಕ. IX (S), ಹೊಸಕೋ. ೯–೩; 875); ಪೆರ್ವಯಲ ಕೊಙ್ಗಣಿ ಪುಯ್ಯಲ್ಪರಿದು ಬಯಲ್ನಾಡಿನುಳ್ ಕಾದಿ ತುಱುವನಿಕ್ಕಿಸಿ ಬಯಲ್ನಾಡನನೊಡೆ ಕಾದಿ (ಎಕ. IV, ಹೆಗ್ಗಡ. ೧೦೩–೯; 910). [ಇಕ್ಕು ? + -ಇಸು$_3$]

**ಇಕ್ಕಿಸು$_3$** (ಕ್ರಿ). "ಒತ್ತಾಯದಿಂದ ತುಂಬು; ಹಾಕು; ತೋಡಿ ಹಾಕು" (ಜಾನಕೋ. ೧೬). [ಇಕ್ಕು$_1$ + -ಇಸು$_3$]

**ಇಕ್ಕು** (ಕ್ರಿ). ೧. ಇರಿಸು; ಮಡಗು; ಇಡು; ಹಾಕು: ರಾಹುಗೆ ವಾಯುಪಥಾಗ್ರಮೆಂಬ ಪೆರ್ಮಡಕೆಯೊಳಿಕ್ಕಿಕೊಟ್ಟ ಪೊಸಬೆಣ್ಣೆ ಪೋಲಿರ್ದುದು ಚಂದ್ರಮಂಡಲಂ (ಕಾವ್ಯಸಾ. ೯೩೪ ಶೂದ್ರಕ); ಒಂಬತ್ತು ತಿಂಗಳ ಗರ್ಭಿಣಿಯಂ ಪೊತ್ತು ಪೋಗಿಯಾಕೆಯನಲ್ಲಿಕ್ಕಿ ಇಂತೆಂದರ್... ಕ್ಷಮಿಯಿಸಿಮರಸನ ಬೆಸದೊಳ್ ತಂದಿಕ್ಕಿದೆಮೆಂದು ನುಡಿದು ಪೋದರ್ (ವಡ್ಡಾರಾ. ೧೧೨–೭); ಅವರವರ ಪಡೆದ ಪ್ರತಿಪತ್ತಿಗಳನಱಿದಿಕ್ಕಿದ ಲೋಹಾಸನಂಗಳೊಳಂ (ಪಂಪಭಾ. ೯–೨೮ ವ); ಒದವಿದ ಚಿಂತಾಭಾರದೆ ಕದಪಿನೊಳಿಕ್ಕಿರ್ದ ಮುನಿಯ ಕರನಖರುಚಿಗಳ್... ಬೆಳಗಿದುವು (ಕಾದಂಪೂ. ೮೩೨); ತೆಗೆವೆರಳುಗೋಲಿನ ಕೊಬ್ಬಿನಾಳೆಚ್ಚಾಡಿತಿಕ್ಕಿದ ಮುಂಡಿ ಚಂಡಿಸದೆ (ಕುವ್ಯಾಭೀ. ೪–೧೨); ಪುರುಷಪ್ರಮಾಣ ಕೇಶವನಡಗಿಸಿ ಸಿರಿದುಱುಬಿಕ್ಕಿ (ಭರಚ. ೬–೪೨). ೨. ಧರಿಸು; ತೊಡು: ತುಱುಂಬಿದ ನವಮೂಲಿಕಾಕುಸುಮಮಿಕ್ಕಿದ ಮುತ್ತಿನ ಲಂಬಣಂ (ಕಾದಂಪೂ. ೫೮೨); ಕೊರಲೊಳಿಕ್ಕಿದೆಕ್ಕಸರದ ಕೆಂಬಟ್ಟೆಯ ತೊಂಗಲ್ (ಮಲ್ಲಿಪು. ೪–೯೬); ಅಜಾಂಡಕುಳಜಾಳಮಂ ಮಣಿಮಾಡಿ ಕೊರಲೊಳಿಕ್ಕುವ (ಸಿದ್ಧರಾ. ೧–೨೦). ೩. ಲೇಪಿಸು; ಬಳಿ; ತೊಡೆ: ನೊಸಲೊಳಿಕ್ಕಿದ ನುಂದವಪ್ಪ ಚಂದನದಣ್ಪಿನಿಂ ಪತ್ತಿ ಪಗಿಲ್ತು ಬೆಳ್ಕರಿಸಿದಳಕ ನಿಕರಮುಂ (ಕಾದಂಪೂ. ೪೯೦); ಪಟಿಘ = ನರೆಗಿಕ್ಕುವ ಕರ್ಪುರ (ಶಮುದ. ಪರಿ. ೨).

೪. ಮುಡಿಸು ; ತೊಡಿಸು : ಜಯಂಗೆ ಜನ್ಮಾಂತರ ಪ್ರೇಮಪ್ರೇರಣೆಯಿಂ ಸ್ವಯಂವರಮಾಲೆಯನಿಕ್ಕಿದಳ್ (ಚಾವುಂಪು. ೭೯–೨೦) ; ಕರಮೆಸೆದಿರ್ದುದು ಚಪಳೆಗೆ ಸಿರಿಗಿಕ್ಕಿದ ನಿಯಮನಿಗಳಮೆನೆ ಭುಜಗಯುಗಂ (ಕಾದಂಪೂ. ೩೧) ; ಗಗನಸ್ತಂಬೇರಮಕ್ಕಿಕ್ಕಿದ ಮೊಗವಡಮಂ ಪೋಲ್ತು ಫೇನಪ್ರತಾನಂ ಮುಗಿಲಂ ತಳ್ಪೊಯ್ಯೆ (ಮಲ್ಲಿಪು. ೨–೧೦) ; ಸೆಳ್ಳುಗುರ್ವೆರಲಿಂಗೆ ಮಾಣಿಕದುಂಗುರಗಳನಿಕ್ಕಿದರು (ಮೋಹತ. ೨೩–೪೨) ; ಮಕ್ಕಳಿಲ್ಲದ ಸಕಲಸಿರಿ ಶವಕಿಕ್ಕಿದಮಳಾಭರಣವಿಭ್ರಮ (ತೊರರಾ. ೧–೪–೩). **೫.** ಸುರಿ ; ಸುರಿಸು ; ಚೆಲ್ಲು : ಮಗುಟ್ದಾ ಸತಿಯಿಕ್ಕಿದ ಕಣ್ಣನೀರ ಧಾರೆಗಳೊಳೆ ನಾಂದು (ಪಂಪಭಾ. ೫–೧೦) ; ಚಿಂತಾಬ್ಧಿ ನಿಮಗ್ನರಾಗಿ ಕಣ್ಣೀರನಿಕ್ಕುತಿರೆ (ಸುಕುಮಾ. ೨–೨೯) ; ವನಿತಾಕದಂಬಮಿಕ್ಕುವ ಧವಳಾಕ್ಷತಂ ಕುಡುವ ಚಂದನಂ (ಜಗವಿ. ೮–೨). **೬.** ತೊರೆ ; ಬಿಟ್ಟುಹೋಗು : "ಇಕ್ಕು–ತ್ಯಾಗ, ಹನನಯೋಃ (ಹೊಡೆ)" (ಶಮುಧಾ) ; ನೋನ್ತು ತನ್ದೇಹಮಿಕ್ಕಿ . . . ಶಿವನಿಲೆ ಪಡೆದಾನ್ (ಎಕ. II, ೮೪–೩ ; 700) ; ಭೀರುಗಳಂ . . . ಭಯದುಟ್ಟುದನಿಕ್ಕಿ ನಿಲುವರಂ (ಎಇ. XX, ೧೨–೨೩ ; 1167) ; ಸಿಕ್ಕಿದೆಯಲಾ ಸ್ವಾಮಿದ್ರೋಹಿಗಳಿಕ್ಕಿ ಹೋದರೆ ಭೀಮ ಫಲುಗುಣರು (ಕುವ್ಯಾಕ. ೧೧–೫೭). **೭.** ಕೆಡಹು ; ಒಗೆ ; ಬಿಸಾಡು ; ಬಿಸಾಕು : ಪರಿದಡರ್ದಂತದಲ್ಲಿಂದಂ ತನ್ನನಿಕ್ಕಿ ಮಲಯಾವತಿ ಶತಖಂಡಮಾಗಿ ಬಿಬ್ದು ಸತ್ತತ್ತು (ವಡ್ಡಾರಾ. ೩೮–೩) ; ಭುಜಬಲಿ ಸಕಳಾವನಿತಳವಲ್ಲಭನಂ ಭೋಂಕನೆತ್ತಿ ಪೊತ್ತಿರ್ದನಿಕ್ಕಲೊಲ್ಲದೆ ನೆಲದೊಳ್ (ಆದಿಪು. ೧೪–೧೧೧) ; ಅಂತು ನೆಲಕ್ಕಿಕ್ಕಿ ಗಂಟಲಂ ಮೆಟ್ಟಿದಾಗಳ್ (ಪಂಪಭಾ. ೮–೨೨ ವ). **೮.** (ಚಾಮರ, ಬೀಸಣಿಗೆ ಮುಂತಾದುವುಗಳಿಂದ) ಬೀಸು ; ಉಪಚರಿಸು : ಸುದತಿಯರಿಕ್ಕೆ ಚಾಮರಮಂ (ಪಂಪಭಾ. ೫–೧೦೫) ; ಇಕ್ಕುವ ಚೆಂಬೊನ್ನ ಕಾವ ಚಮರೀರುಹಂಗಳೊಳಂ (ಶಾಂತಿಪು. ೩–೫೧) ; ಸೂಳಱಿದಿಕ್ಕುವ ಚಾಮರಗ್ರಾಹಿಣಿಯರೊಳಂ (ಗಿರಿಕ. ೨–೧೦೫ ವ) ; ಚಾಮರವ ಸನತ್ಕುಮಾರ ಮಾಹೇಂದ್ರರಿಕ್ಕುವರು (ಶಾಂತೀಚ. ೭–೫೪). **೯.** (ಪಗಡೆ ಹಾಸು, ಬಲೆ, ಬಟ್ಟೆ ಮುಂತಾದುವುಗಳನ್ನು) ಹಾಸು ; ಹರಡು ; ಹರಹು : ಅಂತು ಪೂಡಿಕೊಂಡು ನಾಟಿವಾಸಗೆಯನಿಕ್ಕಲ್ವೇೞ್ದುದುಂ (ಪಂಪಭಾ. ೬–೭೧ ವ) ; ಮುನಿನಿವಹಮಾಜಲಿಕ್ಕಿದ ತನುತರ ಕಾಷಾಯ ವಲ್ಕವಸನಂಗಳಂ (ಕಾದಂಪೂ. ೨೭೫) ; ಎಲೆ ನೀನಾರೇಕಿಕ್ಕಿದೆ ಬಲೆಯಂ ಪೇೞಣ್ಣ (ಕಾದಂಉ. ೭೩೯). **೧೦.** ಪ್ರಯೋಗಿಸು ; ಉಪಯೋಗಿಸು ; ಬಳಸು ; ನಿಯೋಜಿಸು : ನೀವೆತ್ತಾನುಂ ಮರುಳ್ಗೊಂಡಿರೋ ಮರುಳಿಕ್ಕಿ ಅಟ್ಟುದನುಂಡಿರೋ ಪೇೞಿಂ (ಪಂಚತಂ. ೧೪೬–೧೯) ; ಕುತ್ತಕ್ಕೆ ಮದ್ದನಿಕ್ಕದೆ ಕುತ್ತಂ ಪೋಗೆಂದೊಡಂತೆ ಪೋಕುಮೆ (ಸಮಪ. ೧೧–೯೪) ; ಪೊಸಕನ್ನಡದಿಂ ವ್ಯಾವರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂತಿಸಿ ಕೂಡಲಾಱದಕ್ಕಟ ಮಿಸುಕದ ಸಕ್ಕದವನಿಕ್ಕುವವನುಂ ಕವಿಯೇ (ಧರ್ಮಾಮೃ. ೧–೪೧) ; ಕರಗಸ ಗಾಳ ನಿಚ್ಚಣಿಗೆ ದಬ್ಬುಕಮೆಂಬಿವನಿಕ್ಕಿ ಕಾದಿ ನಿತ್ತರಿಸದೆಯೋಡಿಹೋದ ಬೆಳ್ಳಿರಳೆಯ (ಸೌಇಇ. IX–i, ೨೭೬–೩೩ ; 1183) ; ಬಗೆಯದೆ ಸತ್ಕೃಶಾಭ್ಯವಹಾರಿಗಳುಸಿರ್ವರ್ ಗದ್ಯಕಾವ್ಯದೊಳ್ ನಿರ್ಬಂಧಂ ಪುಗದೆಂದರೋಚಿಗಳದಂ ತೆಗೞ್ದಿಂದಾ ಗದ್ಯಪದ್ಯಕಾವ್ಯದೊಳಿಕ್ಕರ್ (ಶಮುದ. ೬೦) ; ವರಿಸವೈದಱೊಳೋದ ಕುಳ್ಳಿರಿಸಿಯೋದಿಸದೆ ಎರಡಾಱು ಸಂವತ್ಸರದ ಮೇಲೆ ನಮಗುಳ್ಳ ಹರದಿಕೆಯ ಪೆವಹಾರದುದ್ಯೋಗಕಿಕ್ಕದೇ (ಸಮ್ಯಕೌ. ೧೦–೭). **೧೧.** (ಬಾಗಿಲು, ಪೆಟ್ಟಿಗೆ ಮುಂತಾದುವುಗಳನ್ನು) ಮುಚ್ಚು ; ಹಚ್ಚು : ಸಲ್ಲಲಿತಾಂಗಿ ಬಾಗಿಲನಿಕ್ಕಿಕೊಂಡಾಣ್ಮನಲ್ಲಿಗೈದಿದಳೋಜೆಯಿಂದ (ಭರಚ. ೧೦–೨೨) ; ಪೊಳಲಪೆರ್ಬಾಗಿಲ್ಗಳಿಕ್ಕಿದುವು ಕೋಟೆಕೊತ್ತಳದ ಕಾವಲ್ಗಳಂ ಬಲಿದರಲ್ಲಲ್ಲಿ (ಜೈಮಿಭಾ. ೯–೧೭) ; ಬಾಗಿಲು ಇಕ್ಕಿ ಚಿಲಕವನ್ನು ಹಾಕಿ (ಷೋಡಶ.೧೯೮). **೧೨.** ಇರಿಸು ; ನಿಕ್ಷೇಪಮಾಡು ; ಕಾದಿಡು : ಅನ್ಯಾಯದೊಳ್ ಪಡೆದರ್ಥಂ ನಡುನೀರೊಳಿಕ್ಕಿದೊಡಂ ಕಿಡುಗುಂ (ಧರ್ಮಾಮೃ. ೬–೧೨೮). **೧೩.** ನೀಡು ; ಕೊಡು ; ಉಣಿಸು ; ಬಡಿಸು : ಮೆಪ್ಪಿಕ್ಕಿ ಪೊರದ ಪನ್ದಿಗಳ ನಿಱಿಯಲ್ಬನ್ದಲ್ಲೀ (ಇಆ. XI, ೧೨೭–೯ ; 808) ; ಪರ್ವಮೆಂದು ತಣಿಯೆ ಉಣಲಿಕ್ಕಿದೆನೆಂದೊಡೆ (ವಡ್ಡಾರಾ. ೭೧–೧೩) ; ಎಂತಪ್ಪೊಡಮೆನಗೆ ಪುರುಷಭಿಕ್ಷಮನಿಕ್ಕಿಂ (ಪಂಪಭಾ. ೭–೩೪) ; ತಾನುಣ್ಣದ ಪೆಱರ್ಗಿಕ್ಕದ . . . ಲೋಭಿಯ ಪೊನ್ನಂ (ಧರ್ಮಾಮೃ. ೨–೩೪) ; ಕೆನೆಮೊಸರ ಒಲವಿಂದಯಿಕ್ಕಿ (ಇಹರ. ದೇ. ೩೦–೮) ; ಇಕ್ಕುವುದು ಸುಂಕಮಂ ನೀಂ (ಬಂಹರಿ. ೯–೧೫) ; ಬೊಪ್ಪ ನಿಮ್ಮಡಿಯಾಲಿಗಳಿಗೌತಣವನಿಕ್ಕುವೆ ನೊರಸಿ ರಿಪುಬಲವ (ಕುವ್ಯಾದ್ರೋ. ೪–೪೧) ; ಇಕ್ಕಲಾಜದ ಕೈಯೆಂಜಲು (ಪುರಂದ. ೧–೧೩೧–೧) ; ಇಕ್ಕಿದಾತನು ಉಂಡು ನಕ್ಕು ಸ್ವರ್ಗಕೆ ಹೋಹ ಇಕ್ಕದವ ಹೋಹ ನರಕಕ್ಕೆ ಲೋಕದೊಳಗಿಕ್ಕಲೇಬೇಕು (ಸರ್ವಜ್ಞ. ೬೨೦). **೧೪.** ಹೊಡೆ ; ಬಡಿ ; ಕೊಲ್ಲು : "ಇಕ್ಕು — ತ್ಯಾಗ, ಹನನಯೋಃ (ಹೊಡೆ)" (ಶಮುಧಾ) ; ಪತಿಯ ಬೆಸದಿಂದ ಮಹಿತರನತಿ ಕೋಪದಿನಿಕ್ಕಿ (ಎಇ. X, ೧೫೦–೨ ; 915) ; ಪಲರುಂ ತುಱಿಲಾಳ್ಗಳನಿಕ್ಕಿ (ಎಕ. II, ೧೩೮–೧೨ ; 940) ; ಸಂಗರದೊಳ್ ಶಲ್ಯನನಿಕ್ಕಿ ಗೆಲ್ದದಟನಾ ಭೀಮಂ ಗಡಂ (ಪಂಪಭಾ. ೪–೨) ; ಎನ್ನಣುಗದಮ್ಮನನಿಕ್ಕಿದನಂ ಪೊರಳ್ಚಿ ಕೊಂದು (ಗದಾಯು. ೧–೧೯) ; ಬೆದಱಿ ಪುಲಿ ಬಾವಿಯೊಳ್ ಬಿರ್ದುದನಱಿದೊಡೆ ಗುಂಡುಗೊಂಡು [ಕೊಂದಿ] [ಪಾಠಾಂ. ಯಿ]ಕ್ಕ[ಕ್ಕು]ಗುಂ (ಸುಕುಮಾ. ೭–೩೭) ; ಇಕ್ಕಿದರು ಸುರಗಿಯಲಿ ಕರಿಗಳ (ನಳಚ. ೯–೨೪). **೧೫.** ಬಲಿಕೊಡು ; ತಳ್ಳು ; ನೂಕು : ಹೆಜರ ಮಕ್ಕಳನಿಕ್ಕಿ ನೆಲೆಯನಱಿವುದನಿಳೆಯೊಳಗೆನ್ನಲ್ಲಿ ಮಾಳ್ಪರೇ (ಗಿರಿಕ. ೨–೩೦) ; ಇಕ್ಕಿದರಲಾ ರಾಜಪುತ್ರರ ನಕ್ಕಟಕಟಾ ಸ್ವಾಮಿದ್ರೋಹರು ಹೊಕ್ಕ ಮನೆ ಹಾಳಹುದಲಾ (ಕುವ್ಯಾದ್ರೋ. ೫–೮೦) ; ನೂಱುಮಕ್ಕಳನಿಕ್ಕಿ ಸಾಧಿಸಲಾಱನೇ ಜಯಸಿರಿಯನು (ಕುವ್ಯಾಕ. ೧–೮)

**ಇಕ್ಕಿಕೊಳ್, ಇಕ್ಕಿಕೊಳ್ಳು** = **೧.** ಇರಿಸಿಕೊ ; ಇಟ್ಟುಕೊ ; ಮಡಗಿಕೊ : ಬಲದೇವಂ ದುರ್ಯೋಧನಂಗಾಯು ಬರ್ಪಂತೆ ಪೆಗಲೊಳ್ ಹಲಾಯುಧಮನಿಕ್ಕಿಕೊಂಡು ಜಂಗಮ ಪರ್ವತಮೆ ಬರ್ಪಂತೆ ಬಂದು (ಪಂಪಭಾ. ೧೩–೮೮ ವ) ; ತದೀಯ ಚರಣಂಗಳಂ ತೊಡೆಯ ಮೇಲಿಕ್ಕಿಕೊಂಡು (ಕಾದಂಉ. ೬೩೧) ; ಕೀಲಂ ಕಳೆದು ನೆಲಕ್ಕೆ ಬೀೞಲೀಯದೆ ಪಿಡಿದುಕೊಂಡು ತಳದೊಳಿಕ್ಕಿಕೊಂಡು ನೋಡಿ (ಧರ್ಮಾಮೃ. ೬–೮೦). **೨.** ಧರಿಸು : ಲಲಿತಾಕೃತಿ ವಿಜಿತಮಕರಧ್ವಜಂ ಮರಕತಕುಂತಳಮನಿಕ್ಕಿಕೊಂಡು (ಪಾರ್ಶ್ವಪು. ೮–೩೦ ವ). **೩.** ಮುಚ್ಚಿಕೊ ; ಹಾಕಿಕೊ : ಕೇಶವನು ತನ್ನ ಕೋಣೆಯನ್ನು ಹೊಕ್ಕು ಬಾಗಿಲನ್ನು ಇಕ್ಕಿಕೊಂಡನು (ಸಮಜೀ. ೧೨೭). **ಇಕ್ಕಿಮೆಟ್ಟು** = ಕೆಡಹಿ ತುಳಿ ; ಹೊಡೆದು ತುಳಿ ; ಆಚೆಗೆ ತಳ್ಳು ; ಅಡಗಿಸು : ಸೆಣಸಿಂ ಮಿಕ್ಕೇವದಿಂದಿಕ್ಕಿಮೆಟ್ಟಿದರೀ ಕಾಂತೆಯರೀ ಸರೋರುಹದಳವ್ರಾತಂಗಳಂ (ಆದಿಪು. ೭–೫೫) ; ಮುನ್ನಿನ ಕಬ್ಬಮನೆಲ್ಲಮಿಕ್ಕಿಮೆಟ್ಟಿದುವು ಸಮಸ್ತಭಾರತಮುಮಾದಿಪುರಾಣ ಮಹಾಪ್ರಬಂಧಮುಂ (ಪಂಪಭಾ. ೧೪–೫೯) ; ಮಗಧೇಶನನಿಕ್ಕಿಮೆಟ್ಟಿಪೆಂ ಲಾಳನ ಗಂಟಲಂ ಮುಱಿದಪೆಂ (ಸೌಇಇ. XI–i, ೫೨–೧೫ ; 1007) ; ಮುಕ್ಕಣ್ಣನನಿಕ್ಕಿಮೆಟ್ಟಿ ಬಿಡೆ ತೊಟ್ಟನೆ ಜಡೆಯಂ ಕಿಬ್ತು ಬಱಿಯ ಪೆಱೆಯುಂ ತರ್ಪೆಂ (ಕಬ್ಬಕಾ. ೧೫೫). **ಇಕ್ಕಿರ್** = ಧರಿಸಿರು ; ಹಾಕಿಕೊಂಡಿರು : ಮುನ್ನಮೆ ಕೊರಲೊಳಿಕ್ಕಿರ್ದಕ್ಷಾವಳಿಯುಂ ಕಿವಿಯೊಳಿಕ್ಕಿರ್ದ ಪಾರಿಜಾತ ಕುಸುಮಮಂಜರಿಯುಂ (ಕಾದಂಪೂ. ೮೯೦).

[**ದೇ.** ‖ **ತಮಿ.** ಇಕು ; **ಮಲ.** ಇಕಲ್ ; **ತುಳು.** ಇಕ್ಕ್ಯಾವು, ಇಕ್ಕು ; **ತೆಲು.** ಇಚ್ಚು]

**ಇಕ್ಕುಂಗೂೞ್** (ನಾ). (ಇತರರು) ಹಾಕುವ ಅನ್ನ; ಭಿಕ್ಷಾನ್ನ: ಪೆಜನಿಕ್ಕುಂಗೂೞೊಳಂ ಕೀೞೊಲೊಳವುಳವಿಗೆಟ್ಟಿರ್ಪ ನಿಮ್ಮಿರ್ಪುದರ್ಕಂ ಮಱುಗುತ್ತಿರ್ಪಳ್ಗೆ ನೋಡಾದಬಲಂ (ಪಂಪಭಾ. ೮–೭೧); ಸಪತ್ನಿಯ ರಿಕ್ಕುಂಗೂೞಿಂಗೆ ಬಯಸಿ ಪಾರ್ದಿರ್ಪ ವಿಷಾದಕ್ಕೆ ಗುಱಿಯಪ್ಪ ದುರ್ಯಶಮಕ್ಕುಂ (ಪಂರಾಮಾ. ೬–೯೧). [ಇಕ್ಕು + ಕೂೞ್]

**ಇಕ್ಕುಗುತ್ತ** (ನಾ). ಇಕ್ಕುಮದ್ದಿನ ಪ್ರಯೋಗದಿಂದ ಉಂಟಾಗುವ ರೋಗ; ಕೈಮುಸಕಿನ ರೋಗ: ತತ್ಸಾಮರ್ಥ್ಯದೊಳಿಕ್ಕುಗುತ್ತಮೆಲ್ಲಂ ಕಿಡುಗುಂ (ಖಮದ. ೧೪–೧೬); ಆದಱಿಂ ಕಳ್ಳಿಯರಿಂ ಪುಟ್ಟಿದಿಕ್ಕು ಗುತ್ತಂ ಕಿಡುಗುಂ (ಖಮದ. ೧೪–೫೫). [ಇಕ್ಕು + ಕುತ್ತ]

**ಇಕ್ಕುಗೋಳು** (ನಾ). ಹಾಕುವ ಕೈಕೋಳ, —ಬೇಡಿ (?): ಕರ್ತಾರನ ಕಮ್ಮಟದಲ್ಲಿ ಚಿಕ್ಕಮಕ್ಕಳ ಕೈಯ ಇಕ್ಕುಗೋಳಿನೊಳಗಾಯಿತ್ತು ನೋಡಾ ನಿತ್ಯತೃಪ್ತನೆಂಬ ಲಿಂಗ ಸಿಕ್ಕಿತ್ತಯ್ಯ ಭವದಾಸೆಗೊಡಲಾಗಿ (ಮೋಳಿಮಾ. ೧೨೩–೪೯). [ಇಕ್ಕು + ಕೋಳ ?]

**ಇಕ್ಕುತೆಕ್ಕೆ** (ನಾ). ಸರಿದೊರೆ; ಸರಿಸಮಾನ; ಈಡುಜೋಡು: ವರಭೋಗದಿಂದ ಶಚಿಯಲ್ಲಿ . . . ರೋಹಿಣೀದೇವಿಯಲ್ಲಿ ಸುರುಚಿರ ಕಾಂತಿಯಿಂದಿಕ್ಕುತೆಕ್ಕೆಯಾಗಿರ್ಪಳಾ ಪುರಚರಿತ್ರೋದ್ದಾಮೆ . . . ಸೋಮೆ (ಸಮ್ಯಕೌ. ೬–೧೦). [ಇಕ್ಕು + ತೆಕ್ಕೆ (< ತಟ್ಕೆ)]

**ಇಕ್ಕುಪಡು** ‘ಇಕ್ಕುವಡು’ ನೋ.

**ಇಕ್ಕುಮದ್ದು** (ನಾ). (ಇತರರಿಗೆ ಕೆಡುಕುಂಟುಮಾಡಲು) ಆಹಾರದಲ್ಲಿ ಸೇರಿಸಿ ಹಾಕುವ ವಿಷ; ಕೈಮುಸಕು: ಎನಗಿಕ್ಕುಮದ್ದಾದುದಾಸಕ್ತಿ ದಿನದಿನಕೆ ಕೃಶಿಯಾದೆನು (ಪರಶು. ೨೪–೧೫).
[ಇಕ್ಕು + ಮದ್ದು (< ಮರ್ದು)]

**ಇಕ್ಕುಮುಡಿಗೆ** (ನಾ). ಒಂದು ಬಗೆಯ ಸವಾಲು: ಅವನಂಗಸಂಗದಲ್ಲಿರ್ದಕಾರಣ ಗೆಲವು ಸೋಲಕ್ಕೆ ಇಕ್ಕುಮುಡಿಗೆ ಏಱುಮುಡಿಗೆ ಎಂಬ ಮತ್ಸರಕ್ಕೆ ಮುಂದುವಿಡಿದು ಮುಡುಹಿಕ್ಕಿ ಕೆಲೆದಾಡುವರನ್ನೆಲ್ಲ ತಮ್ಮ ಮನದಲ್ಲಿ ತಾವಱಿದು ಒಯ್ಯನೆ ತೊಲಗುವರು (ವಚಶಾ. I, ೧೭೪–೧೯). ‘ಏಱುಮುಡಿಗೆ’ ಪರಾ. [ಇಕ್ಕು + ಮುಡಿಗೆ]

**ಇಕ್ಕುವಡು**, ಇಕ್ಕುಪಡು (ಕ್ರಿ). ಹೊಡೆಯಲ್ಪಡು; ಸೋಲು; ಪರಾಜಿತವಾಗು: ಸೆಜ್ಜೆವನೆಯೊಳ್ ಮೆಯ್ಯನೀಡಾಡಿ ದಾರುಣಮೆನಿಪ ದಾಹಜ್ವರದಿನಿಕ್ಕುವಟ್ಟಂತೇನಾನುಂ . . . ಆರೊಳುಂ ನುಡಿಯದೆ (ಕಾದಂಉ ೨೦೬); ಮೂರ್ಛಾವೇಗದಿಂದಿಕ್ಕುವಟ್ಟನವೋಲ್ ಝೊಂಪಿಸಿ ಜೋಲ್ದು (ಕಾದಂಉ. ೪೪೪). **ಇಕ್ಕುಪಡು**: ಮೂರ್ತಿಬಲಮಿದಲ್ಲ ಮಲ್ಲನಂತಿಕ್ಕುಪಟ್ಟು ಬಾಹುಬಲವಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು (ಶಾಂತಿಪು.೪–೩೦ವ); ರಾಜಸಿಂಹನೆಂಬರಸನಾತನುಂ . . . ಸುಮಿತ್ರನೊಳ್ ಪೋರಲೆಂದಾತನ ಪೊೞಲ್ಗೆವಂದು ರಂಗದೊಳ್ ಗೆಲ್ದೊಡಿಕ್ಕುಪಟ್ಟ ಸುಮಿತ್ರಂ ಸಿಗ್ಗಾಗಿರ್ದು (ಚಾವುಂಪು. ೪೬–೪). [ಇಕ್ಕು + ಪಡು$_1$]

**ಇಕ್ಕುಹ** (ನಾ). ಇಕ್ಕುವಿಕೆ; ಹಾಕುವುದು: ಭ್ರೂಕುಟಿಃ – ಹುಬ್ಬುಗಂಟಿಕ್ಕುಹ, ಮಿಥ್ಯಾಭಿಯೋಗಃ – ಇಲ್ಲದ ಹೊಲ್ಲೆಹನಿಕ್ಕುಹ (ನಾಚಿರಾ. ೬). [ಇಕ್ಕು + –ಹ$_2$]

**ಇಕ್ಕುಳ$_1$** ‘ಇರ್ಕುೞ್$_2$’ ನೋ.

**ಇಕ್ಕುಳ$_2$** ‘ಇರ್ಕುಳ$_2$’ ನೋ.

**ಇಕ್ಕುಳವಾಯ್** (ನಾ). ಇಕ್ಕಳದ ಬಾಯಿ: ಎಳ್ಳರದ ತರುಣ ಅರಸು . . . ಸ್ವಪ್ನದ ಸತ್ಯಲೋಕದಲ್ಲಿ ತೇಲುತ್ತಿದ್ದ ಧರ್ಮೋನ್ಮತ್ತನೊಬ್ಬ ದಳವಾಯಿ; ಈ ನಡುವೆ ಇಕ್ಕುಳವಾಯ್ಗೆ ಸಿಲ್ಕಿ ಜಜ್ಜರಿವೋಗುತ್ತಿದ್ದ ಪೆಂಡವಾಸ, ಅರಮನೆ, ಪ್ರಜಾವಳಿ (ಬೆಟ್ಟಅ. ೨೧೩–೫).
[ಇಕ್ಕುಳ$_1$ (< ಇರ್ಕುೞ್$_2$) + ಬಾಯ್]

**ಇಕ್ಕುೞಿ** ‘ಇರ್ಕುೞ್$_2$’ ನೋ.

**ಇಕ್ಕುಳಿಕೆ** (ನಾ). ಒಂದು ಗಿಡದ ಹೆಸರು: “ಇಕ್ಕುಳಿಕೆ ಹಣಜಿಯಕ್ಕು” (ಮಂಗರಾ. ೩೩–೮); “ಇಕ್ಕುಳಿಕೆ – ಇಕ್ಷ್ವಾಲಿಕಾ” (ತದ್ಭಕೋ. ೩).
[< ಸಂ. ಇಕ್ಷ್ವಾಲಿಕ]

**ಇಕ್ಕುೞಿಗೊಳ್** ‘ಇಟ್ಟುೞಿಗೊಳ್’ ನೋ.

**ಇಕ್ಕುಳು** ‘ಇರ್ಕುಟ್$_2$’ ನೋ.

**ಇಕ್ಕುಟ್$_1$** ‘ಇರ್ಕುಟ್$_1$’ ನೋ.

**ಇಕ್ಕುಟ್$_2$** ‘ಇರ್ಕುಟ್$_2$’ ನೋ.

**ಇಕ್ಕುಟಿಸು** ‘ಇರ್ಕುಟಿಸು’ ನೋ.

**ಇಕ್ಕೆ$_1$** ‘ಇರ್ಕೆ’ ನೋ.

**–ಇಕ್ಕೆ$_2$** ‘–ಇಕೆ’ ನೋ.

**ಇಕ್ಕೆಗೊಳ್** (ಕ್ರಿ). ನೆಲೆಯನ್ನು ಸೇರು; ಗೂಡುಸೇರು: ಜಕ್ಕವಕ್ಕಿಗಳಿಕ್ಕೆಗೊಂಡವು ಪಕ್ಕಿಗಳು ಗಗನಕ್ಕೆ ನೆಗೆದವು ಸಿಕ್ಕಿದಳಿ ಹೊಱವಂಟವಜ್ಜಂಗಳ ಬಸುಱಿಕೊಳಿರ್ದು (ಬಸವು. ೧೨–೪೮).
[ಇಕ್ಕೆ$_1$ (< ಇರ್ಕೆ) + ಕೊಳ್$_1$]

**ಇಕ್ಕೆಡ** (ನಾ). ಇಕ್ಕಟ್ಟಾದ ಪ್ರದೇಶ: ಬೆಟ್ಟಗಳ ಸಂದುಗಳಲ್ಲಿ ಇಕ್ಕೆಡದಲ್ಲಿ ಭಾಟಿಮಾರ್ಗಕ್ಕೆ ಪಾರ್ಶ್ವದಲ್ಲಿ . . . ನಿದ್ರೆ ಹೋಗುತ್ತಿದ್ದನು (ಕೋಹಿನೂ. ೨೩). [ಇಕ್ಕು ? (< ಇಱುಕು) + ಎಡ$_1$ (< ಎಡೆ$_3$)]

**ಇಕ್ಕೆದಾಣ** ‘ಇರ್ಕೆದಾಣ’ ನೋ.

**ಇಕ್ಕೆಯ್** ‘ಇರ್ಕೆಯ್’ ನೋ.

**ಇಕ್ಕೆಲ** ‘ಇರ್ಕೆಲ’ ನೋ.

**ಇಕ್ಕೆವನೆ** ‘ಇರ್ಕೆವನೆ’ ನೋ.

**ಇಕ್ಕೆಹಕ್ಕೆ** (ನಾ). ಇರುವ ನೆಲೆ; ವಾಸಸ್ಥಾನ: ಆತ್ಮತೇಜಕ್ಕೆ ತರ್ಕದ ಗೆಲ್ಲ ಸೋಲಕ್ಕೆ ಇಕ್ಕೆಹಕ್ಕಿ[ಕ್ಕೆ]ಗೆ ಹಿಕ್ಕುಗೊಡದಿರ್ಪುದೇ ಅಱಿವು (ಮೋಳಿಮಾ. ೭೫–೩೩೬); ಜಕ್ಕುಲಿಸಿದನು ಜಲಚರೌಘವನೊಕ್ಕಲಿಕ್ಕಿದನಾ ತಿಮಿಂಗಿಲನಿಕ್ಕೆಹಕ್ಕೆಯನಳಿದನಳಿಸಿದನಾ ಮಹಾಂಬುಧಿಯ (ನಿಭಾಗ. ೩–೮–೨೦). [ಇಕ್ಕೆ$_1$ (< ಇರ್ಕೆ) + ಹಕ್ಕೆ (< ಪಟ್ಕೆ)]

**ಇಕ್ಕೇರಿವರ** ‘ಇಕ್ಕೇರಿವರಹ’ ನೋ.

**ಇಕ್ಕೇರಿವರಹ**, ಇಕ್ಕೇರಿವರ (ನಾ). ಇಕ್ಕೇರಿಯ ನಾಡಿನಲ್ಲಿ ಬಳಕೆಯಿದ್ದ ಒಂದು ನಾಣ್ಯ. ℙ ಈಗಿನ ಐದು ರೂಪಾಯಿಗಳಷ್ಟು ಬೆಲೆಯುಳ್ಳ ನಾಣ್ಯ (೬). **ಇಕ್ಕೇರಿವರ**: ದೇವಿಯಿಂದ ಇಕ್ಕೇರಿವರಗಳನ್ನು ಪಡೆದೆರೆಂದೂ ಹೇಳಲಾಗುತ್ತಿದೆ (ಶರೀಫ. ೭೧).
[ಇಕ್ಕೇರಿ$_0$ + ವರಹ]

**ಇಕ್ಕೈ** ‘ಇರ್ಕೆಯ್ ನೋ.

**ಇಕ್ಕೈವರೆ** (ನಾ). ಎರಡೂವರೆ ಹಸ್ತದಷ್ಟು: ಬಟ್ಟೆಗೆಂದು ರಾಜಹಸ್ತದ ಯಿಕ್ಕೈವರೆಯಂ ಕಳೆದು ವುಳಿದ ನಿವೇಶನವಂ (ಎಇ. XIV, ೨೫–೫೧; 1245). [ಇಕ್ಕೈ (< ಇರ್ಕೆಯ್) + ಅರೆ$_3$]

**ಇಕ್ಕೊ** ‘ಇದೆಕೊಳ್’ ನೋ.

**ಇಕ್ಕೋ** ‘ಇದೆಕೊಳ್’ ನೋ.

**ಇಕ್ಕೊಳಗ** (ನಾ). ಎರಡು ಕೊಳಗ: ದಿನವೊಂದಕ್ಕಿಕ್ಕೊಳಗಿಮ್ಮನ ಜೋಳಂ ಬೀಯಮಾಗಲ್ (ವ್ಯವಹಾ. ೨೧–೩೦).
[ಇರ್$_2$ (< ಎರಡು)+ ಕೊಳಗ$_1$]

**ಇಕ್ಷು** (ನಾ). ಕಬ್ಬು: ಕ್ರಿಯಾಮಥನವಿಲ್ಲದೆ ಕಾಣಬಂದುದೆ ಇಕ್ಷುವಿನೊಳಗಣ ಮಧುರ (ವಚರ. ೮೯); ಸಚ್ಚಿದಾನಂದಂಗಳಾತ್ಮಸ್ವಭಾವರಸ ಬಚ್ಚಿಡುವುದದನು ಜೀವಿತೆಯ ಮಾಯಿಕತೆ ಇಕ್ಷುವೋಲ್ ಜೀವ, ಗಾಣದವೋಲ್ ಜಗನ್ಮಾಯೆ ನಿಚ್ಚವಿಳಿಯಾಲೆಮನೆ (ಮಂಕುಕ. ೧೨೫). [ಸಂ.]

**ಇಕ್ಷುಕಾಂಡ** (ನಾ). ಕಬ್ಬಿನ ಕೋಲು, —ಜಲ್ಲೆ : ಕಂಡರಿಸಿದೊ ಡಿಕ್ಷುಕಾಂಡಮೆನೆ ಸೀಯನೆ ಸದ್ರಸಮುಣ್ಮಿದಿರ್ದೊಡಂ... ಮನೋಜ್ಞಮೆ ಕಾವ್ಯಂ (ರಾಜಶೇ. ೧-೫೧). [ಇಕ್ಷು + ಕಾಂಡ]

**ಇಕ್ಷುಕಾರ್ಮುಕ** (ನಾ). = ಇಕ್ಷುಕೋದಂಡ ೨ : ಇಕ್ಷುಕಾರ್ಮುಕಾರಿಯ ಗೋಪುರದೆ ತೋರ್ಪ ಭರ್ಮಕಳಶ ಕಾಣುತ (ತ್ರಿಭುತಿ. ೩-೧೨). [ಇಕ್ಷು + ಕಾರ್ಮುಕ]

**ಇಕ್ಷುಕೋದಂಡ** (ನಾ). ೧. ಕಬ್ಬಿನ ಬಿಲ್ಲು. ೨. ಕಬ್ಬಿನ ಕೋಲನ್ನೇ ಬಿಲ್ಲಾಗಿ ಉಳ್ಳವನು ; ಮನ್ಮಥ : ಇಕ್ಷುಕೋದಂಡ ಬಂದ ಸುರುಚಿರ ನವಗ್ರಹಂಗಳು ಬಂದರು (ಹಚಕಾ. ೧೪-೨). [ಇಕ್ಷು + ಕೋದಂಡ]

**ಇಕ್ಷುಖಂಡ** (ನಾ). ಕಬ್ಬಿನ ತುಂಡು, —ಚೂರು. [ಇಕ್ಷು + ಖಂಡ]

**ಇಕ್ಷುಗಂಧೆ** (ನಾ). ೧. ಸಣ್ಣ ನೆಗ್ಗಿಲು ಗಿಡ. ೨. ಕೊಳವಳಿಕೆ ಗಿಡ. ೩. ಬಿಳಿಯ ನೆಲಗುಂಬಳ ಗಿಡ. ೪. "ಕೋಟಸಾಲೆಗಿಡ" (ಅಮರ ಟೀಕೆ). [ಸಂ. ಇಕ್ಷುಗಂಧಾ]

**ಇಕ್ಷುಚಾಪ** (ನಾ). ೧. ಕಬ್ಬಿನ ಕೋಲಿನಿಂದಾದ ಬಿಲ್ಲು : ಇದು ನಿನ್ನರ್ಚಿಸುವಿಕ್ಷುಚಾಪಂ (ಆದಿಪು. ೧೧-೧೨) ; ಅಂಗಜನಿಕ್ಷುಚಾಪಮಂ ಪೂಜಿಸಿ (ಶಾಂತಿಪು. ೬-೧೩೨). ೨. ಕಬ್ಬಿನ ಕೋಲಿನಿಂದಾದ ಬಿಲ್ಲುಳ್ಳವನು; ಮನ್ಮಥ: ಅನುದಿನಮಿಕ್ಷುಚಾಪನೆಳೆವೆಂಡಿರ ಪೆರ್ಮೊಲೆವೆಟ್ಟನಲ್ಲಿ ನೆಟ್ಟನೆ ನೆಲೆಗೊಂಡು (ರಾಜಶೇ. ೮-೩೯). [ಇಕ್ಷು + ಚಾಪ$_1$]

**ಇಕ್ಷುಜಂತ್ರ** (ನಾ). = ಇಕ್ಷುಯಂತ್ರ : ಕ್ರಮ ತಪ್ಪದಿನಿದುಂಡು ಭ್ರಮೆಯೇಕೆಮಗೆಂಬೊಲ್ ನಿಮಿರ್ದಿಕ್ಷುಜಂತ್ರ ಕೂಗುವವೂ (ಭೈರವೇ. ೧-೭೦). [ಇಕ್ಷು + ಜಂತ್ರ]

**ಇಕ್ಷುದಂಡ** (ನಾ). ಕಬ್ಬಿನ ಕೋಲು, —ಜಲ್ಲೆ : ಧನು ಕಾಮುಗಿಕ್ಷುದಂಡಂ (ಆದಿಪು. ೩-೯೪); ತೆಳುಗಾಳಿಗೊಲೆವ ಮೇಲುದು ಗುಡಿ... ಪುರ್ಬಿಕ್ಷುದಂಡ ... ಎಸೆದರಂತಾ ಸತಿಯರು (ಹಚಕಾ. ೪-೭) ; ದುಗ್ಗಳಾದೇವಿ ಹೊಲಬನೆಲ್ಲವ ತಿಳಿದು ಮಳಲಕ್ಕಿ ಪಿಡಿಯೆ ಕಯ್ಯಲಿ ಇಕ್ಷುದಂಡವೊಂದೇ ಕೊಡಲು (ಪ್ರೌಢರಾ. ೪-೬); ದ್ರಾಕ್ಷೆಕ್ಷುರಸವೇನಲ್ಲ ಜೀವನದ ತಿರುಳಾರ್ಗಮಿಕ್ಷುದಂಡದವೋಲದು ಕಷ್ಟ ಭೋಜನವೆ (ಮಂಕುಕ. ೨೬೦). [ಇಕ್ಷು + ದಂಡ]

**ಇಕ್ಷುಧನ್ವ** (ನಾ). ಕಬ್ಬಿನ ಕೋಲನ್ನು ಬಿಲ್ಲಾಗಿ ಉಳ್ಳವನು ; ಮನ್ಮಥ. [ಸಂ. ಇಕ್ಷುಧನ್ವನ್]

**ಇಕ್ಷುಪಯ** (ನಾ). ಕಬ್ಬಿನ ಹಾಲು, —ರಸ. 'ಇಕ್ಷುಪಯೋವಿಕಾರ' ಪರಾ. [ಸಂ. ಇಕ್ಷುಪಯಸ್ (ಇಕ್ಷು + ಪಯಸ್)]

**ಇಕ್ಷುಪಯೋವಿಕಾರ** (ನಾ). ಕಬ್ಬಿನ ಹಾಲಿನಿಂದಾದ ವಸ್ತು; ಬೆಲ್ಲ ; ಸಕ್ಕರೆ ; ಕಲ್ಲುಸಕ್ಕರೆ ; ಕಾಕಂಬಿ : ಇಕ್ಷುಪಯೋವಿಕಾರದಿಂ ... ಫಳಮುಕ್ಕುಂ ... ಮನುಜಂಗೆ ಚಂದ್ರದಶೆಯಪ್ಪಾರೋಹಿಗೇಹಂಗಳೊಳ್ (ಜಾತತಿ. ೯-೧೯). [ಸಂ. (ಇಕ್ಷುಪಯಸ್ + ವಿಕಾರ)]

**ಇಕ್ಷುಪುಷ್ಪ** (ನಾ). ಕಬ್ಬಿನ ಹೂ ; ಸೂಲಂಗಿ : ಇಕ್ಷುಪುಷ್ಪದವೊಲೆನ್ನಯ ನಿಷ್ಫಲಪುಷ್ಪದರ್ಶನಂ (ಪಂಪಭಾ. ೧-೧೧೭). [ಇಕ್ಷು + ಪುಷ್ಪ]

**ಇಕ್ಷುಯಂತ್ರ** (ನಾ). ಕಬ್ಬಿನಿಂದ ರಸವನ್ನು ತೆಗೆಯುವ ಯಂತ್ರ ; ಕಬ್ಬಿನ ಗಾಣ : ಓರೋರ್ವರೋರೊರ್ವರನಿಕ್ಷುಯಂತ್ರಂಗಳೊಳ್ ಕಬ್ಬಂ ಪಿಱಿವಂತೆ ಪಿಱಿವರುಂ (ಆದಿಪು. ೫-೮೫ ವ) ; ಇಕ್ಷುಯಂತ್ರ ನಿವಹಂ ಮೊರೆವಬ್ಬರಮೆಂದುಮುಬ್ಬರಂ (ಪುಷ್ಪಪು. ೨-೪೯). [ಇಕ್ಷು + ಯಂತ್ರ]

**ಇಕ್ಷುರ** (ನಾ). ಕೊಳಗುಳಿಕೆ ; "ಕೊಳವಳಿಕೆ" (ಅಮರ. ಟೀಕೆ). [ಸಂ.]

**ಇಕ್ಷುರಕ** (ನಾ). = ಇಕ್ಷುರ : "ಕೊಳಗುಳಿಕೆ ಯಿಕ್ಷುರಕವಕ್ಕು" (ಮಂಗರಾ. ೪೦-೩೦). [ಸಂ.]

**ಇಕ್ಷುರಸ** (ನಾ). ಕಬ್ಬಿನ ರಸ, —ಹಾಲು : ಘೃತ ಕ್ಷೀರ ... ಇಕ್ಷುರಸ ಗಂಧೋದಕಾದಿಗಳಿಂ ಮಾಡುವ ಸವನಮುಂ (ಆದಿಪು. ೧೫-೧೩ ವ) ; ನವನಾಳಿಕೇರ ಜಲಪೂರ ಸಿತೇಕ್ಷುರಸಪ್ರವಾಹ ಮಾತೃಕಮೆನೆ ಸಂತತಂ ಬೆಳೆಯೆ (ಮಲ್ಲಿಪು. ೨-೧೬). [ಇಕ್ಷು + ರಸ]

**ಇಕ್ಷುವಾಟ** (ನಾ). ಕಬ್ಬಿನ ತೋಟ, —ಗದ್ದೆ, —ಕ್ಷೇತ್ರ : ಇಕ್ಷುವಾಟಂಗಳೆಲ್ಲಂ ಪುಂಡ್ರೇಕ್ಷುವಾಟಂಗಳೆನಿಸೆಯುಂ (ಅಜಿಪು. ೪-೬೬ ವ) ; ಮೊರೆವುವು ಗಾಣಂಗಳಿಕ್ಷುವಾಟಾಂತರದೊಳ್ (ಸುಕುಮಾ. ೯-೫೬). [ಇಕ್ಷು + ವಾಟ$_1$]

**ಇಕ್ಷುವಾಟಿ** (ನಾ). = ಇಕ್ಷುವಾಟ : ಇರ್ದತ್ತಮೃತಾಕರಾವನಿಯವೋಲ್ ಪುಂಡ್ರೇಕ್ಷುವಾಟೀಕುಲಂ (ಜಗನಿ. ೨-೯). [ಸಂ. ಇಕ್ಷುವಾಟೀ]

**ಇಕ್ಷುವಿಶಿಖಾಸನ** (ನಾ). ೧. ಕಬ್ಬಿನ ಬಿಲ್ಲು : ಇಕ್ಷುವಿಶಿಖಾಸನಕ್ಕೆ ಯಳಿಯೌಘವೌರ್ವಿಯವುಭಯ ಕೋಪಿಂ[ಕೊಪ್ಪಿಂ]ಗೆಯಳವಡಿಸಿ (ನವಮೋ. ೬-೪೮). ೨. ಕಬ್ಬಿನ ಬಿಲ್ಲುಳ್ಳವನು ; ಮನ್ಮಥ : ಈಶನರ್ಧಾಂಗಿ ತಾ ಮಱೆಯಾಗೆ ಇಕ್ಷುವಿಶಿಖಾಸನನ [ಪಾಠಾಂ. ಮಧುಕರಶರಾಸನನ] ಆರು ಕಾಣದ ತೆಱದಿ ಕಳುಹೆ ಸರ್ವೇಶ ತಪಗೆಯ್ವುದನು ಕಂದರ್ಪ ಕಂಡು ಕಾರ್ಮುಕಕಂಬನನುಗೆಯ್ದನು (ಪ್ರೌಢರಾ. ೧೧-೧೬). [ಇಕ್ಷು + ವಿಶಿಖಾಸನ]

**ಇಕ್ಷುಶರಾಸನ** (ನಾ). = ಇಕ್ಷುವಿಶಿಖಾಸನ. [ಇಕ್ಷು + ಶರಾಸನ]

**ಇಕ್ಷುಸಮುದ್ರ** (ನಾ). ಸಪ್ತಸಮುದ್ರಗಳಲ್ಲಿ ಒಂದು ; ಕಬ್ಬಿನ ರಸದ ಸಮುದ್ರ. [ಇಕ್ಷು + ಸಮುದ್ರ]

**ಇಕ್ಷುಸಾಗರ** (ನಾ). = ಇಕ್ಷುಸಮುದ್ರ (ಸ್ಯಾಂಡರ್). [ಇಕ್ಷು + ಸಾಗರ]

**ಇಕ್ಷ್ವಾಕು** (ನಾ). ೧. ಸೂರ್ಯವಂಶದಲ್ಲಿ ಮೂಲಪುರುಷನಾದ ಒಬ್ಬ ದೊರೆ : ಇಕ್ಷುಖಂಡಿಕಾವಿಮರ್ದನಸಮುದ್ಭೂತ ರಸಸಂಗ್ರಹಣ ಪ್ರಯೋಗಮಂ ಪ್ರಜೆಗೆ ತೋಱಿದುದಱಿನಿಕ್ಷ್ವಾಕುವುಂ (ಚಾವುಂಪು. ೩೪) ; ಆದಿಯುಗದಲ್ಲಿ ವಿಮಲಾದಿತ್ಯವಂಶದೊಳ್ ಮೆಱೆದರಿಕ್ಷ್ವಾಕು ಮೊದಲಾದವರ್ (ಜೈಮಿಭಾ. ೫-೨೨). ೨. ಕಹಿಸೋರೆ ಗಿಡ. [ಸಂ.]

**ಇಕ್ಷ್ವಾಲಿಕೆ** (ನಾ). ಲಾಳದ ಗಿಡ. [ಸಂ. ಇಕ್ಷ್ವಾಲಿಕ]

**ಇಖ್ಖಂಡುಗ** 'ಇರ್ಕಂಡುಗ' ನೋ.

**-ಇಗ** (ಪ್ರ). ಇದನ್ನು ಮಾರುವವನು, ಇದು ಇವನ ಶಿಲ್ಪ, ಇದು ಇವನ ನಿಯೋಗ, ಇದನ್ನು ತಿಳಿದವನು, ಇದನ್ನು ಆಚರಿಸುವವನು, ಇಲ್ಲಿ ಹುಟ್ಟಿದವನು ಅಥವಾ ಬಹಳ ಕಾಲ ಇಲ್ಲಿ ಇದ್ದವನು, ಇದರಲ್ಲಿ ವರ್ತಿಸುವವನು ಎಂಬ ಅರ್ಥಗಳಲ್ಲಿ ಬರುವ ಒಂದು ತದ್ಧಿತ ಪ್ರತ್ಯಯ : ಇವು ಪಣ್ಯಮಿವರ್ಗೆ ಮೇಣಂತಿವು ಶಿಲ್ಪಂ ಮೇಣ್ ನಿಯೋಗಮಿವನಱಿವಂ ಮೇಣಿವನಾಚರಿಸುವನೆಂದಿಂತಿವಱೊಳಿಗ ಪ್ರತ್ಯಯಂ ಯಥೋಕ್ತಿಯಿನಕ್ಕುಂ (ಕಾವ್ಯಾವ. ೩೨೨) ; ಅಣ್ಣುಗಿಯಾಗಾಮಿಗರುಂ (ಎಕ. VII, ಶಿಕಾರಿ. ೧೫೪-೧೦ ; 685) ; ಕೇಳ್ವಾನಾಡೊಕ್ಕಲಿಗರೆಲ್ಲಂ ಮಣ್ಣ ಪೇಱಂ ತಂದು (ವಡ್ಡಾರಾ. ೧೪೮-೧) ; ಯುದ್ಧಕೇಳಿಯಂ ಬಗೆಗೊಳೆ ನೋಡಲುಂ ನೆಗೞ್ದ ಮಲ್ಲರುಮಂ ಪಿಡಿದೊತ್ತಿ ಗೆಲ್ದ ಜಟ್ಟಿಗರೆನೆ ಸಂದ ಮಲ್ಲರನೆ (ಆದಿಪು. ೮-೪೮) ; ಅಲ್ಲಿ ಬೇಟದ ತೆತ್ತಿಗನುಂ (ಶಾಂತಿಪು. ೮-೯೪ ವ) ; ಪಣ್ಯೇ – ತಂಬುಲಿಗಂ, ಗಂದಿಗಂ, ದವಸಿಗಂ. ಶಿಲ್ಪೇ – ಸರವಂದಿಗಂ, ಪಟ್ಟಸಾಲಿಗಂ, ಚಿಪ್ಪಿಗಂ. ನಿಯೋಗೇ – ಭಂಡಾರಿಗಂ, ಬಾಣಸಿಗಂ, ಕೊಟ್ಟಾರಿಗಂ ... ಜೋಯಿಸಿಗಂ, ಗಣಿತಿಗಂ, ಸಿದ್ಧಾಂತಿಗಂ ... ಪಡಿಸಣಿಗಂ, ಸುಂಕಿಗಂ (ಭಾಷಾಭೂ. ೧೬೬, ೧೬೭, ೧೬೮ ಉದಾ);

ಪರಿನಿರ್ಮಿಪ ಮಾಜಾಡುವ ದೊರೆವಡೆದ ನಿಯೋಗದನ್ಯತದಜಿತದ ಋಣದಾಚರಣದ ಶಿಲ್ಪದ ಮೂಲದ ನರನಂ ಪೇಳ್ವಲ್ಲಿ ಮಾಟ್ಕಿಗಪ್ರತ್ಯಯಮಂ . . . ಮಾಡುವಂಗೆ – ಕಬ್ಬಿಗಂ, ಸರವಂದಿಗಂ, ಸಿಂಗರಿಗಂ, ತೋಂಟಿಗಂ . . . ಮಾಜುವಂಗೆ – ಗಂದಿಗಂ ದೂಸಿಗಂ, ತಂಬುಲಿಗಂ. . . ನಿಯೋಗಕ್ಕೆ – ಅಡಪಿಗಂ, ಚಾಮರಿಗಂ, ಕರಹಟಿಗಂ. ಅನ್ಯತಕ್ಕೆ – ಅಟಮಟಿಗಂ, ಮಾಳಿಗಂ, ಪುಸಿಗಂ. ಅಜಿತಕ್ಕೆ – ಜೋಯಿಸಿಗಂ, ಲೆಕ್ಕಿಗಂ, ಪೊಲಂಬಿಗಂ. ಋಣಕ್ಕೆ – ಸಾಲಿಗಂ, ಹಂಗಿಗಂ, ಆಚರಣಕ್ಕೆ – ದೇಗುಲಿಗಂ, ಅಕ್ಕರಿಗಂ, ಚಂದಸಿಗಂ. ಶಿಲ್ಪಕ್ಕೆ – ಚಿಪ್ಪಿಗಂ, ಮೂಲಕ್ಕೆ – ಮೂಲಿಗಂ (ಶಮುದ. ೧೯೭, ಪ್ರಯೋ).

**ಇಗರು$_1$** (ಕ್ರಿ). = ಇಮರು (ಕಿ). [← **ತೆಲು.** ಇಗುರು]

**ಇಗರು$_2$**, ಇಗುರು (ನಾ). ಹಲ್ಲಿನ ಒಸಡು (ದಕ. ಕಿ). **ಇಗುರು** (ದಕ). [?. / **ತಮಿ.** ಈಜು]

**ಇಗರ್ಜಿ, ಈಗರ್ಜಿ** (ನಾ).(ಕರಾ). ಕ್ರೈಸ್ತರದೇವಾಲಯ; ಚರ್ಚು: ಇಗರ್ಜಿಯ ಗಡಿಯಾರದಲ್ಲಿ ಒಂದು ಗಂಟೆ ಬಾರಿಸಿತ್ತು (ಇಪ್ಪಕ. ೩೩೧); ಇಗರ್ಜಿಯ ಪೂಜೆಯನ್ನು ಆದೇ ಮುಗಿಸಿಕೊಂಡು ಮೇರಿ ಮನೆ ಸೇರಿದಳು (ತೇವೋಡ. ೧೭); ದೇಗುಲ, ಗುಡಿ – ಗುಂಡಾರ, ಮಸೀದಿ ಇಗರ್ಜಿ, . . . ನಮಗೆ ಅಡ್ಡ ನಿಂತಿಲ್ಲ (ಧೂಮುಮು. ೧೧). **ಈಗರ್ಜಿ**: ನೆಗೆಡೆದ್ದು ಚಿಮ್ಮುತಿದೆಹಳ್ಳಿ ಪಟ್ಟಣದಲ್ಲಿ, ಗುಡಿ ಮಠ ಮಸೀದಿ ಈಗರ್ಜಿಯಲ್ಲಿ (ಚಂಡೆಮ. ೧೯).

[← **ಹಿಂ.** ಇಗರ್ಜಿ, ಇಗಾರ್ಜಿ; **ಬಂಗಾಳಿ.** ಗಿರ್ಜಾ. / **ತುಳು.** ಇಗ್ರೆಜಿ; **ಮಲ.** ಇಗ್ರೇಷಿಯಾ. / **ಜರ್ಮನ್.** ಕಿರ್ಕೊಸ್]

**ಇಗಾ** 'ಇದೆಕೊಳ್' ನೋ.

**ಇಗುತ್ತಿ** (ನಾ). "ಇಗುತ್ತಿವೀಳೆಬಳ್ಳಿ" (ವ್ಯೆಔಗಿ. ೧೯–೩೪೫). [?]

**ಇಗುರು** 'ಇಗರು$_2$' ನೋ.

**ಇಗೊ** 'ಇದೆಕೊಳ್' ನೋ.

**ಇಗೋ** 'ಇದೆಕೊಳ್' ನೋ.

**ಇಗ್ಗಡೆ** 'ಇರ್ಕಡೆ' ನೋ.

**ಇಗ್ಗರ**, ಇಗ್ಗರಿ (ನಾ). (ಉಕ). ಉಪದ್ರವ; ಕಾಟ; ಹಿಂಸೆ: "ಕಾಟ; ಉಪದ್ರ" (ಜಾನಕೋ. ೧೬); ಅತ್ತೆಯ ಮನೆಯ ಇಗ್ಗರ ಬಹಳವಾಗಿದೆ (ಗರಬಾ. ೫೦); ಮನೆಯ ಇಗ್ಗರದಲ್ಲಿ ಮೆದುಳೆಲ್ಲಾ ಸಾವಿರಾರು ಸೂಜಿಗಳಿಂದ ಚುಚ್ಚಿ ಚುಚ್ಚಿ ನೋವು ಮಾಡಿದಂತಾಗುತ್ತಿತ್ತು (ಬಿಟ್ಟಹೊ. ೭೫). **ಇಗ್ಗರಿ**: ತಾಯಿ ಹಡೆದೌವನ ಬರಹೇಳ ಅತ್ತಿಮನಿ ಇಗ್ಗರಿ ಭಾಳ ಇರಲಾರೆ (ಗರತಿ. ೨೭). [< ನಿಗ್ರಹ]

**ಇಗ್ಗರಿ** 'ಇಗ್ಗರ' ನೋ.

**ಇಗ್ಗಲಿ** (ನಾ). ಒಂದು ಊರಿನ ಹೆಸರು: ಪೆರ್ಮ್ಮಾಡಿಯು ಎಜೆಯಪ್ಪನು ವಿಟ್ಟು ಇಗ್ಗಲಿನುಂದುದುಗೆಜೆಯುಮಂ ಕಲ್ನಾಡುವಡೆದ ಸ್ತಿತಿಯಾವುದೆನ್ದೊಡೆ (ಎಕ. III, ನಂಜನ. ೧೩೯–೩; 915). 'ಇಗ್ಗಾಲಿ$_1$' ಪರಾ. [?]

**ಇಗ್ಗಲಿಯೂರ್** (ನಾ).= ಇಗ್ಗಲಿ: ಶಿವಯುಗವುಣ್ಣನು ಮುವರುಮಿಟ್ಟು ಇಗ್ಗಲಿಯೂರಾ ಗವತೆಯುವಿಡಿಸಿದರ್ (ಮೈಆರಿ. ೧೯೩೦, ೪೦–೭; 9ನೆಯ ಶತ). [ಇಗ್ಗಲಿ + ಊರ್]

**ಇಗ್ಗಲೂರು** (ನಾ). ಒಂದು ಊರಿನ ಹೆಸರು: ನಲ್ಲೂರು ಕೊಮರಜ್ಜನ್ದು ಇಗ್ಗಲೂರು (ಎಕ. IX, ಬೆಂಗಳೂ. ೮೩–೮; 890). [?]

**ಇಗ್ಗಾಲಿ$_1$** (ನಾ). ಒಂದು ಊರಿನ ಹೆಸರು: ಇಗ್ಗಾಲಿಯ ಪಾಲಪಿರೆಯ ಮೇರೆ ಅರೆಬನ್ದು ತಾಯೂರ ಪಡುವಣದೆಸೆಯ ಕೊರಕೊರೆಯ ಪಳ್ಳ (ಎಕ. III, ನಂಜನ. ೧೩೯–೧೧; 915). 'ಇಗ್ಗಲಿ' ಪರಾ. [?]

**ಇಗ್ಗಾಲಿ$_2$** (ನಾ). ಎರಡು ಚಕ್ರಗಳುಳ್ಳದ್ದು; ಬೈಸಿಕಲ್ಲು: "ಕಾಲೊತ್ತಿನಿಂದ ನಡೆಸಲಾಗುವ ಎರಡು ಚಕ್ರಗಳ ವಾಹನ, ಇಗ್ಗಾಲಿ, ಕಾಲ್ಗಾಡಿ, ಬೈಸಿಕಲ್ಲು" (Bicycle. ಇಂಕನಿ); ಹೊರಗೆ ಇಗ್ಗಾಲಿಯ ಸಪ್ಪಳವಾಗಿ ಒಬ್ಬ ಹದಿನಾಲ್ಕು ಹದಿನೈದು ವರುಷದ ತರುಣನು ಬಂದು ನೆಲಮುಟ್ಟಿ ನಮಸ್ಕರಿಸಿ ದೂರದಲ್ಲಿ ಕುಳಿತುಕೊಂಡನು (ಸಿವಭಾ. ೮). 'ಒಗ್ಗಾಲಿ' ಪರಾ. [ಇರ್$_2$ (< ಎರಡು) + ಗಾಲಿ]

**ಇಗ್ಗಿಲೀಕಲ್ಲು** (ನಾ). ಗ್ರಾಮದ ಗಡಿಕಲ್ಲು (?): ವಿನಾಯಕನ ಕಟ್ಟೆ ನಡುವೆ ಹಾದು ಇಗ್ಗಿಲೀಕಲ್ಲ ತಾಗಿ ಬಡಗ ನಡದು (ಎಕ. III, ನಂಜನ. ೧೯೮–೧೫೨; 1639). 'ಇಗ್ಗಲಿ' ಪರಾ. [ಇಗ್ಗಲಿ + ಕಲ್ಲು$_1$ (< ಕಲ್$_2$)]

**ಇಗ್ಗುಂಡು** (ನಾ). "ಅಂಗಸಾಧನೆಗಾಗಿ ಕೈಯಲ್ಲಿ ಹಿಡಿದು ಉಪಯೋಗಿಸುವ, ಕೊನೆಗಳಲ್ಲಿ ಭಾರವಾದ ಗುಂಡುಗಳುಳ್ಳ ವೋಟಾದ ಕಬ್ಬಿಣದ ದಂಡ" (Dumbells. ಇಂಕನಿ); ಗೋಡೆಯ ಬೀರುವಿನಲ್ಲಿದ್ದ ಒಂದು ಜೊತೆ ಇಗ್ಗುಂಡಿನ ದಂಡವನ್ನು ತೆಗೆದುಕೊಂಡು (ಪುನರು. ೨೬). [ಇರ್$_2$ (< ಎರಡು) + ಗುಂಡು]

**ಇಗ್ಗೆಲಸ** (ನಾ). **೧.** ಎರಡು ಕೆಲಸ. **೨.** ಇಮ್ಮಡಿ ಕೆಲಸ: ಇಗ್ಗೆಲಸ ಮಾಡಿ ಸುಗ್ಗಾದೆ ಮಗಳೇ (ಗಾದೆ). **೩.** (ಉಕ). ಕೆಟ್ಟುಹೋದ ಕೆಲಸ: ನೀ ಮಾಡೋದೆಲ್ಲಾ ಇಗ್ಗೆಲಸ (ರೂಢಿ). [ಇರ್$_2$ (< ಎರಡು) + ಕೆಲಸ]

**ಇಗ್ಗೇಣ್** 'ಇರ್ಗೇಣ್' ನೋ.

**–ಇಚ** (ಪ್ರ). ಅಲ್ಲಿ ಹುಟ್ಟಿದವನು ಅಥವಾ ಬೆಳೆದವನು, ಅದರಲ್ಲಿ ವರ್ತಿಸುವವನು ಎಂಬ ಅರ್ಥದಲ್ಲಿ ಬರುವ ಒಂದು ತದ್ಧಿತ ಪ್ರತ್ಯಯ: "ಅಲ್ಲಿಯೆ ಪುಟ್ಟಿದನಿಂತವನಲ್ಲಿಯೆ ತಾಂ ಬೆಳೆದನೆಂದು ಪೇಳ್ವರ್ಥದೊಳಂತೆಲ್ಲಮಿಚಪ್ರತ್ಯಯಂ" (ಕಾವ್ಯಾವ. ೩೩೪); **ಪೊಟಲಿಚಂ, ಅಲರಿಚಂ, ಕರಹಡಿಚಂ, ಕಾಲುರಿಚಂ** (ಭಾಷಾಭೂ. ೧೬೯ ಪ್ರಯೋ); ಒರೆವರಿಚಪ್ರತ್ಯಯಮಂ ಪಿರಿದುಂ ತದ್ಭವನೊಳ್; ಇಚ ಪ್ರತ್ಯಯಕ್ಕೆ — ಅಲರಿಚಂ ಪೊಟಲಿಚಂ (ಶಮುದ. ೨೦೦ ಪ್ರಯೋ); ಕಾಲೂರೊಳಾದಂ ಪುಟ್ಟಿದಂ ಮೇಣ್ ಕಾಲುರಿಚಂ. ಏವಂ ಒಳ್ಳುರಿಚಂ, ಬನಿಚಂ, ಕಲಿಚಂ (ಶಬ್ದಾನು. ೪೨೦ ಪ್ರಯೋ).

**ಇಚಕೆ** (ನಾ). ಒಂದು ಜಾತಿಯ ಗಿಡ: ಬರಗಾಲದ ಆಹಾರ: ಎಲೆ, ಬೇರು, ಗಿಡ – ರತ್ನಪುರುಷ, ಇಚಕ, ಗಣಜಲಿ (ಕಭಾಗ. ೧೧). [?]

**ಇಚಕಿಲ** (ನಾ). **೧.** ಕೆಸರು. **೨.** ಹೊಂಡ. [ಸಂ.]

**ಇಚ್ಚಂಕೆ** (ನಾ). **೧.** ಮನಸ್ಸಿಗೆ ತೋರಿದ ಸಂಖ್ಯೆ (ಉಕ. ಕಿ). **೨.** [ಗಣಿತ] ತ್ರೈರಾಶಿಕದಲ್ಲಿ ಮೂರನೆಯ ರಾಶಿ. [ಇಚ್ಚೆ + ಅಂಕೆ$_4$. / **ಮರಾ.** ಇಚ್ಛಾಂಕ < **ಸಂ.** ಇಚ್ಛಾಂಕ]

**ಇಚ್ಚಕ** (ನಾ). **೧.** ಇತರರ ಇಚ್ಛೆಗನುಸಾರವಾಗಿ ಮಾತನಾಡುವುದು; ಪುಸಲಾಯಿಸುವುದು; ಮುಖಸ್ತುತಿ: ಈ ಯೆಡೆಯಿನೀತಾವಿಂದೆ ಸಂದಿಚ್ಚಕಂ ಪದುಳಂಬೆತ್ತುದು ಮತ್ತಮೇಂ ಭವಸುಖಂ ಪೆಂಪಾದುದೀ ಬೀದಿಯಂ (ಚಿಕವಿ. ೬–೬೫); ಈ ನುಡಿಗಳೊಳೇನಾನುಂ ಇಚ್ಚಕಂ ಬೆರಸಿರ್ಪುದೆಂದು ತಿಳಿಯಲ್ತಕ್ಕುದಲ್ತು (ಚಿಕವಂ. ೧೬೫–೯); ಸಚ್ಚರಿತನಹುದಿಲ್ಲಿ ಬಾರೈ ಇಚ್ಚಕದ ಮಾತಲ್ಲ ನಮ್ಮದು ಮುಚ್ಚರವೆ ಗುಣಕೆ (ಕೋಗಯ. ೨೭–೩೪). **೨.** ವಿಧೇಯನಾದವನು; ಸೇವಕನಂತೆ ಇಚ್ಛೆಗನುಸಾರವಾಗಿ ನಡೆಯುವವನು: ನಮ್ಮ ಮನೆಯವರ ಕೈಕೆಳಗೆ ಒಬ್ಬ ಇಚ್ಚಕಳಾದ ಹೆಣ್ಣುಮಗಳು ಬೇಕಾಗಿದ್ದಾಳೆ (ತೊಳಿಮು. ೭೬). **೩.** ಪುಸಲಾಯಿಸುವ ಸ್ವಭಾವದವನು; ಮುಖಸ್ತುತಿಗಾರ (ಕಿ). ಇಚ್ಚಕನು ಚಿಕ್ಕವನಲ್ಲ (ಗಾದೆ).

ಇಚ್ಚಕವಾಡು = ಮುಖಸ್ತುತಿಮಾಡು : ಇಚ್ಚಕವಾಡದಿರಡಿಗೆಜಿಗುವೆ ಚಿತ್ತವಿಸು (ಗೀತಗೋ. ೨೫-೪೪); ಇಚ್ಚಕವಾಡಿ ಮುಖಸ್ತುತಿಯಿಂದ ಉಬ್ಬಿಸುವ ಸ್ವಭಾವವುಳ್ಳ, ಅಘಜುಲನು ಕೈಮುಗಿದುಕೊಂಡು ಹೇಳಿದನು (ಕೋಹಿನೂ. ೩೪). [< ಸಂ. ಇಚ್ಛಕ]

**ಇಚ್ಚಕತನ** (ನಾ). ಪುಸಲಾಯಿಸುವ ಅಥವಾ ಮುಖಸ್ತುತಿ ಮಾಡುವ ಸ್ವಭಾವ (ದಕ. ೬). [ಇಚ್ಚಕ + -ತನ]

**ಇಚ್ಚಕಾಱ** 'ಇಚ್ಚೆಕಾಱ' ನೋ.

**ಇಚ್ಚಕಾಱತನ** 'ಇಚ್ಚೆಕಾಱತನ' ನೋ.

**ಇಚ್ಚಗಾರ್ತಿ** 'ಇಚ್ಚೆಕಾರ್ತಿ' ನೋ.

**ಇಚ್ಚಟ** (ನಾ). ಧೀರ; ಶೂರ; ಗಟ್ಟಿಗ: ಎಚ್ಚರಿಜಿದರು ಹೊಯ್ದರಿಟ್ಟರು ಚುಚ್ಚಿದರು ಸೀಳಿದರು ನೂಕಿದರಿ[ಪಾಠಾಂ. ನಿ]ಚ್ಚಟರ ಸೇದಿದರು ದಡಿವಲೆ ಕಣ್ಣಿವಲೆಗಳಲಿ (ಕುವ್ಯಾ. ೮-೪೬). [< ನಿಚ್ಚಟ?]

**ಇಚ್ಚಟವಣೆ** 'ಇಚ್ಚೆಟವಣೆ' ನೋ.

**ಇಚ್ಚಡಿ** 'ಇರ್ಚವಡಿ' ನೋ.

**ಇಚ್ಚಡಿಬಟ್ಟೆ** (ನಾ). ಎರಡು ಪದರಗಳುಳ್ಳ ಬಟ್ಟೆ; ಕೌದಿ; "ಕೌದಿ; ಹಚ್ಚಡ; ಪದರರವಿ" (ಜಾನಕೋ. ೧೬).

[ಇಚ್ಚಡಿ (< ಇರ್ಚವಡಿ) + ಬಟ್ಟೆ$_2$]

**ಇಚ್ಚಣಿಗೆ** (ನಾ). ಏಣಿ; ನಿಚ್ಚಣಿಗೆ: ಭವವೆಂಬ ವಾರಿಧಿಯ ದಾಂಟಿಸಲು ಹಡಗು ಸಗ್ಗವನಡರಲಿಚ್ಚಣಿಗೆ ಬದ್ಧರಂ ಮುಕ್ತರೆನಿಸುವ ಮಂತ್ರ . . . ಚತುರಾಕ್ಷರಂ (ವೀಶೈಪು. ೨-೬-೩೩); ಇಚ್ಚಣಿಗೆಯನೇಱಿತಲೆವರಿಗೆಯ ನಿಕ್ಕಿ ನಚ್ಚಿನ ಭಟರೆಯ್ದಿ ಬರಲು (ಅನಂಚ. ೧೮-೬೨).

[< ನಿಚ್ಚಣಿಗೆ ?]

**ಇಚ್ಚಯ್ಸು** 'ಇಚ್ಚಿಸು' ನೋ.

**ಇಚ್ಚರ** (ನಾ). ಎರಡು ಎಳೆಯ ಹಾರ, —ಸರ: ಬೆಚ್ಚದೆಳೆ ಪುಲ್ಲೆಗಣ್ಬೊಳೆಯೆ ನುಣ್ಮುತ್ತುಗಳ ಇಚ್ಚರಂ ಕುಚದಿಟ್ಟೆಡೆಗಳೊಳಿಟ್ಟಣಿಸುತಿರೆ (ರಾಘಚ. ೬-೩೩). [ಇರ್$_2$ (< ಎರಡು) + ಸರ$_6$]

**ಇಚ್ಚವಡಿ** 'ಇರ್ಚವಡಿ' ನೋ.

**ಇಚ್ಚಳ** (ನಾ). (?): ಬಲುಭಂಡನೀ ಬೃಹನ್ನಳೆಯಂತೆ ಗೆಜ್ಜೆಯಿಚ್ಚಳದೆ ಬ್ರಾಹ್ಮಣರೋಜೆ ನಿಳಯದೊಳಗಿರಲಾಗದಿರಲವಲಕ್ಷಣವಾದರೂ (ಜಗದಾ. ೧೪೮). [?]

**ಇಚ್ಚಳಗಾತಿ** (ನಾ). ಪ್ರೀತಿಪಾತ್ರಳು (?): ಅಚ್ಚಕ್ಕಿ ಇದ್ದಾಗ ನುಚ್ಚಕ್ಕಿ ಹಂಗೇನು ಇಚ್ಚಾ[ಚ್ಚ]ಳಗಾತಿ ತಾಯಮ್ಮ ಇದ್ದಾಗೆ ಉಚ್ಚವರ ಸಂಗ ನಮಗೇನು (ಹಳ್ಳಿಯ. ೯೬). [ಇಚ್ಚಳಗಾಱ$_0$ + -ತಿ$_1$ (< -ಇತ್ತಿ)]

**ಇಚ್ಚಾರಿ** (ನಾ). ೧. ಎರಡು ಚಾರಿ; ಎರಡು ಕೈಗಳನ್ನೂ ಉಪಯೋಗಿಸುವಿಕೆ; ಸವ್ಯಸಾಚಿತ್ವ: ಹಲಜನರವರಾಗೆ ಅವರೊಳು ತಾಗೆ ಕಾದುವೆನಾನಿಚ್ಚಾರಿಯಲಿ (ಹಬ್ಬೆರ. ೨೮-೧೦). 'ಇಚ್ಚಾರಿಗೊಳ್' ಪರಾ. ೨. ಎರಡು ಪಕ್ಕ, —ಮಗ್ಗುಲು: ಇಚ್ಚಾರಿ ಮಕರತೋರಣ ರತ್ನಕೀಲಿತನಿಚ್ಚಳ ಹೊನ್ನ ತೋರಣದಿ ಸ್ವಚ್ಛದಿ ಪೊಱಮಟ್ಟಳು ಪುರ ಲಕ್ಷ್ಮಿಯ ಉಚ್ಚವಮೂರು ತಿಯಂತೆ (ಮೋಹತ. ೨೪-೨೮).

[ಇರ್$_2$ (< ಎರಡು) + ಚಾರಿ]

**ಇಚ್ಚಾರಿಗೊಳ್** (ಕ್ರಿ). ಎರಡು ಬಗೆಯ ಚಾರಿಯನ್ನು ಅನುಸರಿಸು; ಎಡಗೈ ಮತ್ತು ಬಲಗೈ ಎರಡನ್ನೂ ಬಳಸಿ ಶರಸಂಧಾನ ಮಾಡು: ಇಚ್ಚಾರಿಗೊಂಡು ನರನೆಚ್ಚ ಕೆಂಗಱಿಗೋಲ . . . ನಿಚ್ಚಳದ ನಿಡುಸರಳ್ ಪೆಚ್ಚಿದವು ನಿಮಿಷದೊಳ್ ಮುಚ್ಚಿದವು ಗಗನಮಂ (ಜೈಮಿಭಾ. ೧೩-೧೮); ಏನಿದಿಚ್ಚಾರಿಗೊಂಡೆಸೆದಪನೆ? – ಈ ಗಹನವಿದ್ಯೆಯಂ ನಾನನಿತೆ ಬಲ್ಲೆನೆಂದೆಣಿಸಿದ್ದೆ! (ಹಬ್ಬೆರ. ೨೮-೯೫). [ಇಚ್ಚಾರಿ + ಕೊಳ್$_1$]

**ಇಚ್ಚಾಲು** (ನಾ). (ಕರಾ). ಎರಡು ಸಾಲು: ಇಚ್ಚಾಲು ಮಾಡಿದ ಗದ್ದೆಯಲ್ಲಿ ಹಿಡಿವೆನೆಂದರೆ ಮಣ್ಣಿಲ್ಲ (ರೂಢಿ).

[ಇರ್$_2$ (< ಎರಡು) + ಸಾಲು$_2$ (< ಸಾಲ್$_2$)]

**ಇಚ್ಚಿಗ** 'ಇಚ್ಚೆಗ' ನೋ.

**ಇಚ್ಚಿಡಿ** 'ಇರ್ಚವಡಿ' ನೋ.

**ಇಚ್ಚಿಸು, ಇಚ್ಚಯ್ಸು, ಇಚ್ಚೈಸು** (ಕ್ರಿ). ಆಸೆಪಡು; ಅಪೇಕ್ಷಿಸು: ಆಯ್ದುಳ ಬೆದೆ ಮಣ್ಣು ಇದನಿಚ್ಚಿಸುವಗೆ ಸಲ್ಲದು ಅಕ್ಷಯ (ಮೈಆರ್. ೧೯೪೬, ೧೫-೨೪; 897). **ಇಚ್ಚಯ್ಸು:** ಮುನ್ನಮೆ ತನ್ನಂ ಬರಿಸಿ ಕನ್ನೆಯಂದವಮಂ ವಿಸ್ತರಮುಱೆಯಲಿಚ್ಚಯ್ಸು [ಪಾಠಾಂ. ಚ್ಛೈಸು]ತಿರ್ದ ಜನಾರ್ದನನಂ ಮೆಲ್ಲನೆ ಸಾರ್ದು (ವರ್ಧಪು. ೪-೭೨). **ಇಚ್ಚೈಸು:** ಸಾವ ಪದದೊಳು ಧರ್ಮಕ್ಕಿಚ್ಚೈಸುವೆನೆಂಬಾತಂ ಕಿಚ್ಚಿದ್ದಡೆ ಬಾವಿ ತೋಡುವವನಂ ಪೋಲ್ಕುಂ (ಸಮಪ. ೬-೪೦); ಭವಸಂತಾಪವಿಲೋಪಮಂ ನಿಯಮದಿಂದಿಚ್ಚೈಪವಂ ನಿಚ್ಚಮುತ್ಸವದಿಂ . . . ಭಕ್ತಿರಮೆಯಾ ಪರ್ಚಿಂ ಚಿರಂ ನಚ್ಚಿ ಮೆಚ್ಚಿ ವಲಂ ವರ್ತಿಕೆ (ವರ್ಧಪು. ೧೬-೮೨); ಮುನಿಗಳ ಬರವನಿಚ್ಚೈಸುತ ತಾನೊಬ್ಬ ಮುನಿಯಂತೆ ಜಾನಿಸುತಿದ್ದಾ (ಭರಚ. ೩-೨೬).

[ಇಚ್ಚೆ + – ಇಸು$_3$]

**ಇಚ್ಚುಮೀನು** (ನಾ). (ಕರಾ) ಒಂದು ಜಾತಿಯ ಮೀನು.

[ಇಚ್ಚು$_0$ + ಮೀನು (< ಮೀನ್)]

**ಇಚ್ಚೆ** (ನಾ). ೧. ಅಪೇಕ್ಷೆ; ಆಸೆ; ಇಷ್ಟ: ಕಾಮಕಾಂತೆ ಬೞಿಯಂ ತನ್ನಿಚ್ಚೆಯಿಂ ಮೆಚ್ಚಿ ಬಣ್ಣವುರಂ ತೀವಿದ ಮಾೞ್ಕೆಯಾಯ್ತು . . . ಕಾರೊಳ್ ಮಹೀಮಂಡಲಂ (ಪಂಪಭಾ. ೭-೨೪); ಎರ್ದೆಯೊಳ್ ಬೈತಿಚ್ಚೆಯೊಳ್ ಕೂರ್ಮೆ ತಳ್ತಿರವಿಂ (ಶಾಂತಿಪು. ೬-೧೨೩); ನೋಡುವೊಂದಿಚ್ಚೆ ಪೆರ್ಚೆ (ಸುಕುಮಾ. ೭-४೧); ಅಕ್ಷಣದೊಳಿಚ್ಚೆಯ ಕೆಲ್ಲೆಯಲಿ ಕಾದಿದನು (ಕುವ್ಯಾಕ. ೧೫-೩೪); ಬೆಚ್ಚನಾ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ ಇಚ್ಚೆಯನು ಅಱಿವ ಸತಿಯಾಗಿ ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ (ಸರ್ವಜ್ಞ. ೧೭೧೧); ತನ್ನಿಚ್ಚೆಗೂ ಸಾಕೆತಲೆಗೂ ಮದ್ದಿಲ್ಲ (ಗಾದೆ). ೨. ಬಯಸಿದ ವಸ್ತು; ಪ್ರೀತಿಪಾತ್ರವಾದ ವಸ್ತು, —ವಿಷಯ: ಶ್ರೀ ಪ್ರಭುಮಾಣಿ ಪರಮ ಸುಭಗನ್ ಪಗೆವರ ಗನ್ಧಾಸ್ತಿ ಪಾರ್ವ್ವರ ಇಚ್ಚೆ (ಎಕ. XVI, ಮುದ್ದಗಿ. ೧೧೮-೨; 8ನೆಯ ಶತ); ಸಂತತಂ ಬಂದವಾ ನೃಪನ ಮನದಿಚ್ಚೆಗಳು ಬರುತಮಿರ್ದವು ದೇಶದೇಶದ ಸುವಸ್ತುಗಳು (ನಂಬಿರ. ೫-೧೬); ಅಕ್ಕರಿಗರಾಭರಣಂ ಬುಧರಿಚ್ಚೆಯಚ್ಚು (ಸೂಕ್ತಿಸು. ೧-೨೫). ೩. ಅಂಕೆಯಲ್ಲಿರುವ ಅಥವಾ ಅಧೀನವಾದ ವಸ್ತು ಅಥವಾ ವಿಷಯ: ಸಾವೆನಿಮಿತ್ತಿಚ್ಚೆಯೆನೆ ಪೊಣರ್ದಾವಂ ತಳ್ತಿಱಿದು ಗೆಲ್ವಂ (ಪಂಪಭಾ. ೧೧-೩೧); ಅರಸುಮಾನೆಯುಂ ತಿರಿಪುವರಿಚ್ಚೆ (ಪಂಚತಂ. ೯೫-೮); ಮರಣವದು ನಿನ್ನಿಚ್ಚೆ ಹೋಗೆಂದ (ಸಂಭಪ. ೧೩-೨೮); ಮದಸೊಕ್ಕಿದಾನೆ ಮಾವುತನಿಚ್ಚೆಯಿದ್ದಂತೆ (ಮೋಹತ. ೨೬-೩೬). ೪. ಮನ ಬಂದ ರೀತಿ; ಸ್ವಾತಂತ್ರ್ಯ; ಸ್ವೇಚ್ಛೆ: ಪುಚ್ಚವಣಂ ನೋಡುವೆನೆನ್ನಿಚ್ಚೆಯೊಳೀ ಮುನಿಯವರದ ಮಹಿಮೆಯನೆನುತಂ (ಪಂಪಭಾ. ೧-೯೦); ಇರದೊಯ್ಯುವುದು ತನ್ನಿಚ್ಚೆಗೆ ವರಯೌವನದಂದು ಪುರುಷನಂ ಪ್ರಕೃತಿ ರಜಂಬೊರೆದು ತಿರುಪುತ್ತೆ (ಕಾದಂಪೂ. ೫೩೫); ತೆಂಗಾಳಿ ತನ್ನಿಚ್ಚೆಯಿಂ ನಡೆತಂದಪ್ಪುದು (ಕಬ್ಬಕಾ. ೫೫). ೫. ಅಭಿಪ್ರಾಯ; ಸಮ್ಮತಿ: ಇಚ್ಚೆಯಣಮಿಲ್ಲದೊಡಂ ತೆಗೆದಳ್ ಕರಂ ಮನಂ ಕಿಡೆ ಪೊಸತಪ್ಪದೊಂದು ಪಿಡಿಗಂಕುಶಮಿಟ್ಟು ಮರಳ್ಚುವಂದದಿಂ (ಕಾದಂಪೂ. ೭೭೨); ಅರಸುಗಳ್ . . . ಮಂತ್ರಿಗಳಿಚ್ಚೆಯಿಂ ಪ್ರತಿಪಾಲಿಸರ್ (ಪಂಚತಂ. ೧೩೮-೫); ಒಡೆಯರಿಚ್ಚೆಯನಱಿದುಚಿತದೊಳು ನಡೆಯಲಱಿಯದ ಭಕ್ತಿಹೀನಂ ಕೊಡಲಿಯಂದದ ಪಾತಕನೊಳೇಂ ಗುಣವಱಿಸಲುಂಟೇ (ಸಾನಂಚ. ೭-೪೬).

೬. [ಗಣಿತ] ತ್ರೈರಾಶಿಕದಲ್ಲಿ ಬಲಗಡೆಯಿಂದ ಒಂದನೆಯ ರಾಶಿ : ಇಚ್ಛೆ ಫಲಂ ಪ್ರಮಾಣಮೆಂಬಿವು ನಿಚ್ಚಲು ತಾಂ ಮೂಱು ರಾಶಿ (ವ್ಯವಹಾ. ಅನು. I, ೧೧–೧೩).

ಇಚ್ಛೆಯರ್ (ಬಹುವ) : ಮತ್ತಮೊಂದೆಡೆಯೊಳೊರ್ವರ ತೊಟ್ಟು ಲಲಿತಾಂಗಂ ಬಂದನಿನ್ನಾವಾತನ ತೋಟ ಪಿಂಗುವಿನಂ ನೆರೆವನೆಯೊಳಿರ್ದುರ್ ಬರ್ಪಮೇೞಿಮೆಂದು ತನ್ನಾಳ್ದಿಚ್ಛೆಯರಪ್ಪ ಬಧಿರೆಯರ್ಗಂ ಮೆಲ್ಲನೆ ಪೇೞ್ವುದುಂ (ಧರ್ಮಾಮೃ. ೨–೪೯). [ಸಂ. ಇಚ್ಛಾ]

**ಇಚ್ಛೆಕಾರ್ತಿ**, ಇಚ್ಚಗಾರ್ತಿ, ಇಚ್ಚೆಗಾತಿ, ಇಚ್ಚೆಗಾರ್ತಿ, ಇಚ್ಛೆಕಾರ್ತಿ, ಇಚ್ಛೆಗಾರ್ತಿ (ನಾ). ೧. ಇಷ್ಟಾನುಸಾರ ನಡೆಯುವವಳು; ಪ್ರಿಯೆ ; ಮನದನ್ನೆ : ತನ್ನಿಚ್ಛೆಕಾರ್ತಿ ಗಡ ಕಡುಚೆನ್ನಿರ್ದಡೆ ಪಿಡಿದೊಡೆಳಸಿ ಪೇೞ್ದುದು ಗೆಯ್ದಪರ್ನನ್ನಳ್ [ಪಾಠಾಂ. ಚೆನ್ನೆಗಡಂ ಪಿಡಿದೊಡೆಳಸಿ ತಾಂ ಪೇೞ್ದುಡೆ ಗೆಯ್ವನ್ನಳ್ ಗಡ] ದೊರೆಕೊಂಡೊಡೆ ಮನ್ನಿಸದಿರ್ಪನೆ ವಿಚಿತ್ರದೂರಂ ಜಾರಂ (ಸಮಪ. ೫–೫೬). **ಇಚ್ಚಗಾರ್ತಿ** : ೨. ಮನಸ್ಸಿಗೆ ಬಂದಂತೆ ನಡೆಯುವವಳು ; ಸ್ವೈರಿಣಿ : ಉಗಿದು ತಿಂಬಾ ರಕ್ಕಸಿಯರಾಶಾಪಿಶಾಚಿಯರಿಚ್ಚಗಾರ್ತಿಯರು [ಪಾಠಾಂ. ಚ್ಛೆಗಾತಿ]ಯರು (ಬಸವು. ೪೦–೫೨). **ಇಚ್ಚೆಗಾತಿ** : ೨. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಇಚ್ಚೆಗಾರ್ತಿ** : ೧. ಬಿಚ್ಚತಮಾಡುವಿಚ್ಚಗಾರ್ತಿಯರೊಳ್ (ಅನಂಪು. ೭–೨೮ ವ). ೩. ಮನ್ಮಥನ ಹೆಂಡತಿ ; ರತಿದೇವಿ : "ಇಚ್ಛೆಗಾರ್ತಿಯೆಂದು ರತಿ" (ಕಶಸಾ. ೨–೧೪) ; "ಏಱುಂಜವ್ವನೆಯುಮಿಚ್ಛೆಗಾರ್ತಿಯು ರತಿಯೊಳ್" (ಕವಿಕಂ. ೨೮); ನೆಲೆವೀಡಿನೊಳಿರ್ದಿಚ್ಚೆಗಾರ್ತಿ ಕೇಳ್ದು (ಕಬ್ಬಿಕಾ. ೩೧೨). ೪. ಗೆಳತಿ (ದಕ. ಕ). **ಇಚ್ಛೆಕಾರ್ತಿ** : ೨. ಲಿಂಗಿಯುಂ ತನ್ನಿಚ್ಛೆಕಾರ್ತಿಯುಂ ಸೂಳೆಯುಂ ಮೊದಲಾದವರ್ಗಳಂ ಪೊರ್ದಲಾಗದು (ಶಾಸ್ತ್ರಟೀ. ೯೫–೭). **ಇಚ್ಛೆಗಾರ್ತಿ**: ೩. ನನೆಯಂಬನು ಶಿವಶಾಪದಿಂದ ಇಚ್ಛೆಗಾರ್ತಿಯನ್ನಗಲಿ (ತವನಿ. ೧೪೨).

[ಇಚ್ಛೆಕಾಱ + –ತಿ$_1$]

**ಇಚ್ಛೆಕಾಱ**, ಇಚ್ಚಕಾಱ, ಇಚ್ಚೆಗಾರ, ಇಚ್ಚೆಗಾಱ (ನಾ). ೧. ಇಷ್ಟದಂತೆ ನಡೆಯುವವನು; ಪ್ರಿಯ; ವಿಧೇಯ : "ಯಥಾಕಾಮೀ, ಸ್ವರುಚಿಃ, ಸ್ವಚ್ಛಂದಃ, ನಿರವಗ್ರಹಃ–ಈ ೪ ತನ್ನಿಚ್ಛೆಕಾಱಂ" (ಹಲಾಯು. ೬೨–೨೨೪) ; ಇಚ್ಛೆಕಾಱರೊಳ್ ಕೂಡೆನೆ ತೋಳ್ಗೆ ಕೊಕ್ಕರಿಕೆ (ಅನಂಪು. ೮–೨೭); ವಿಳಾಸಿನಿಯರುಂ ನಗೆಕಾಱರುಮಿಚ್ಛೆಕಾಱರುಂ . . . ನಡೆತಂದರ್ (ಪುಷ್ಪಪು. ೮–೪೨) ; ನಡೆವಳಿಕಾಱಂ, ಇಚ್ಛೆಕಾಱಂ (ಶಮದ. ೧೯೯ ಪ್ರಯೋ). **ಇಚ್ಚಕಾಱ** : ೧. 'ಇಚ್ಚಕಾಱತನ' ಪರಾ. **ಇಚ್ಚೆಗಾರ**: ೧. ಭಕುತರಿಗಿದ್ದ ಸ್ವಾತಂತ್ರ್ಯ ನಿನಗಿಲ್ಲ ಭಕುತರಿಚ್ಛೆ[ಚ್ಚೆ]ಗಾರ (ತೀರ್ಥಮ. ೧೩೮–೪). **ಇಚ್ಚೆಗಾಱ** : ೨. ಮನ್ಮಥ ; ಕಾಮ : ಎನ್ನ ಇಚ್ಛೆಗಾಱನ ಬೆಚ್ಚಪಚ್ಚೆಯ ಕೈಗನ್ನಡಿ (ರಾಮಾಶ್ವ. ೫೧–೯). ೩. ಗೆಳೆಯ (ದಕ. ಕ).

[ಇಚ್ಛೆ + –ಕಾಱ]

**ಇಚ್ಛೆಕಾಱತನ**, ಇಚ್ಚಕಾಱತನ, ಇಚ್ಚೆಕಾರ್ತನ (ನಾ). ೧. ಸ್ವಚ್ಛಂದವೃತ್ತಿ. ೨. ಮುಖದಾಕ್ಷಿಣ್ಯಕ್ಕೆ ಮಾತನಾಡುವುದು : ಮಂತ್ರಿಗಮಿಚ್ಛೆ[ಪಾಠಾಂ. ಚ್ಚ]ಕಾಱತನಮೇ (ಗದಾಯು. ೫–೪೬ ; ಕಾವ್ಯಸಾ. ೪೩೯). **ಇಚ್ಚಕಾಱತನ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಇಚ್ಚೆಕಾರ್ತನ** : ೩. ಪ್ರಣಯ ; ಪ್ರೀಣನ ; ಅನುನಯ : ನಗೆ ಸಬ್ಬವಂ ಬಿನದಮೆಂಬಿವಱಿಂ ಲಲಿತಾಂಗನಂ ಮನಂಗೊಳಿಸುವರಿಚ್ಛೆಕಾರ್ತನದ ಲಲ್ಲೆಯ ಸಗ್ಗದ ದೇಸೆಕಾರ್ತಿಯರ್ (ಆದಿಪು. ೨–೭೧) ; ಪದಯಿಸೆ ಸೊಂಕಿ ಸಂಕೆಗಿಡೆ ಮೇಳಿಸಿ . . . ನಾಣನೊಕ್ಕುದನಱಿದಿಚ್ಛೆಕಾರ್ತನದ ಲಲ್ಲೆಗಳಂ ನುಡಿದಂತಲಂಪಿನುಬ್ಬದಿಗಮನಾಲತಾಂಗಿಗೆ ನೃಪಂ ಪಡೆದಂ (ಕಾವ್ಯಾವ. ೮೦೦). [ಇಚ್ಛೆಕಾಱ + –ತನ]

**ಇಚ್ಚೆಗ**, ಇಚ್ಚಗ (ನಾ). ೧. ಇಷ್ಟವನ್ನು ಅನುಸರಿಸಿ ನಡೆಯುವವನು ; ವಿಧೇಯ : ನಾನು ವಿಪ್ರನು ಮಿತ್ರರರಸನಿಚ್ಚೆಗರು ಸಂಧಾನಿಪೆ ವಿಷ್ಣು ತೇಜವನು ಮಾನಿಗಳಲ್ತೆ ರಾಜರು ವ್ಯಂತರೇಂದ್ರರು ನೀನದನುಸುರಬೇಕೆಂದ (ಭರಚ. ೩೮–೬); ಮಡದಿಯರನಳಲಿಸದಿರಿಚ್ಚೆಗನಾಗಿರವರೊಡನೆ (ಶಂಕದಾ. ೧೩–೬). ೨. ಮನಸ್ಸನ್ನು ಅರಿತು ಮಾತನಾಡುವವನು ; ಹೊಗಳಿ ನುಡಿಯುವವನು : ರಾಜಾಂಗವನೆ ತೋಱಿ ನುಡಿದೆಯಲ್ಲದೆ ನೀನು ವ್ಯಾಜ್ಯಾಂಗವೊಂದನಾಡಿದೆಯಾ ತೇಜಸ್ವಿಯೇ ಕೊಬ್ಬಗೆಱಗುವನದು ರಾಜರೋಜೆ ತಾನೆಂದನಿಚ್ಚೆಗನು (ಭರಚ. ೪೮–೯೮). **ಇಚ್ಚಿಗ** : ೧. ನರೋತ್ತಮಪತಿ ನರಪರಿಯಂಕ ನರನ ಕೂಡ ಇಚ್ಚಿಗನೆ ನರನಾಥ ನಾರಾಯಣ (ಮೋಕ್ಷದೀ. ೫೦). ೨. ನನ್ನ ಇಚ್ಚಿಗರು ನನ್ನನ್ನು ಅಳತೆಗೆಟ್ಟು ಹೊಗಳಿ ಜನರಲ್ಲಿ ತಪ್ಪು ತಿಳಿವಳಿಕೆಯನ್ನು ಹುಟ್ಟಿಸತೊಡಗಿದ್ದಾರೆ (ಬೀರಬ. ೧೪೫).

[ಇಚ್ಛೆ + –ಗ$_3$. / ತೆಲು. ಇಚ್ಚಕ]

**ಇಚ್ಚೆಗತನ** (ನಾ). ಹೊಗಳಿ ಮಾತನಾಡುವುದು ; ಮುಖಸ್ತುತಿಯ ಸ್ವಭಾವ : ನಿನ್ನಿಚ್ಚೆಗತನದ ಬಣ್ಣವಣ್ಣೆಗೆಯ ಮಾತನಾಡುವುದು ನನಗಾದುದಿಲ್ಲ (ಸಮ್ಯಕಾ. ೧–೪೫) ; ಇಲ್ಲದ ಗುಣಗಳ ಬಲ್ಲರಿಚ್ಚೆಗತನದಲ್ಲಿ ಪೊಗಳಿ ಪೊಂಗಿ ನಲಿವ ಕಲ್ಲೆರ್ದೆಗರು ಕಡುಗಾಂಪರವನಿಯೊಳಗಿಲ್ಲನ್ಯರರಸುಗಳಿಂದ (ಕುರಾಸಾಂ. ೩೫–೮೫). [ಇಚ್ಚೆಗ + –ತನ]

**ಇಚ್ಚೆಗಾತಿ** 'ಇಚ್ಛೆಕಾರ್ತಿ' ನೋ.

**ಇಚ್ಚೆಗಾರ** 'ಇಚ್ಛೆಕಾಱ' ನೋ.

**ಇಚ್ಚೆಗಾರ್ತಿ** 'ಇಚ್ಛೆಕಾರ್ತಿ' ನೋ.

**ಇಚ್ಚೆಗಾಱ** 'ಇಚ್ಛೆಕಾಱ' ನೋ.

**ಇಚ್ಚೆಗೆಡು** (ಕ್ರಿ). ೧. ಆಸೆಗೆ ಭಂಗವಾಗು ; ಬಯಕೆಗೆ ಕೇಡೊದಗು : ನಗೆ ಪೊಗೆ ಮೊಗಮಂ ಪೊದಟ್ದಲರ್ದ ತಾವರೆಯೆಂಬ ವಿಮೋಹದಿಂ ಮೊಗಂಬುಗಲೊಡಮಾ ತಳೋದರಿಯ ಸುಯ್ಗಳ ಬೆಂಕೆಯೊಳಿಚ್ಚೆಗೆಟ್ಟು [ಪಾಠಾಂ. ಳಿಟ್ಟುಕೊಟ್ಟು] ತೊಟ್ಟಗೆ ಕೊಳೆ ಮುಂದೆ ಬಿಟ್ದು . . . ಪಾಱದುವುನ್ಮದಾಳಿಗಳ್ (ಪಂಪಭಾ. ೫–೧೦). ೨. ಅಪೇಕ್ಷೆ ಕಡಮೆಯಾಗು; ರುಚಿಯಿಲ್ಲವಾಗು: ಕಣ್ಣುಗಳು ಕೆಂಪಾಗೆ. . . ಅನ್ನಪಾನದಲಿಚ್ಚೆಗೆಟ್ಟುಱಿ ಕೋಪತಾಪದಲಿ ಉಣ್ಣದುರಿಯುತ್ತ (ಅಮೃತ. ೨–೬೬). ೩. ಎಚ್ಚರ ತಪ್ಪು ; ಸ್ವಾಧೀನ ತಪ್ಪು : ಒಡಲುರಿಗುಂ . . . ನುಡಿ ತಡವಕ್ಕುಮಿಚ್ಚೆಗೆಡುಗುಂ ಗಡ ನಲ್ಲರಗಲ್ಕೆಗೆ (ಆದಿಪು. ೧೨–೪೦) ; ಬೀರರಿರ್ವರುಮಿಚ್ಚೆಗೆಟ್ಟು ಮರವಟ್ಟರೆನೆ ಕುಳ್ತರದೆ ತಣ್ಣು (ಶ್ರೀರಾಮಾ. ೧೨೮–೮೬).

[ಇಚ್ಛೆ + ಕೆಡು]

**ಇಚ್ಚೆಗೆಯ್**, ಇಚ್ಚೆಗೈ (ಕ್ರಿ). ೧. ಇಷ್ಟವನ್ನು ನೆರವೇರಿಸು ; ಆಸೆಯನ್ನು ಪೂರ್ತಿಗೊಳಿಸು : ಪರಿವಾರಿಸಿ ಪಾಟಮೋದಲಚ್ಚರಸಿಯರಾಡಲಚ್ಚರಸಿಯರ್ ಮನದಿಚ್ಚೆಯನಿಚ್ಚೆಗೆಯ್ಯಲಚ್ಚರಸಿಯರೆಂದೊಡೇವೊಗಱ್ವುದೋ ಜಿನಚಂದ್ರವಿಭೂತಿಲೀಲೆಯಂ (ಶಾಂತಿಪು. ೭–೭೫). **ಇಚ್ಚೆಗೈ**: ೨. ಇಷ್ಟಪಡು ; ಸಂಕಲ್ಪಿಸು : ಸಕಲದೇವಾತ್ಮಕಂ ನೀನಿಚ್ಚೆಗೈದುದತಿಸುಕರದಿಂದಪ್ಪುದು (ವೆಂಕಾರಾ. ೫–೧–೪೨).

[ಇಚ್ಛೆ + ಕೆಯ್$_1$]

**ಇಚ್ಚೆಗೈ** 'ಇಚ್ಚೆಗೆಯ್' ನೋ.

**ಇಚ್ಚೆಗೊಳಿಸು** (ಕ್ರಿ). ೧. ಬಯಕೆಯನ್ನು ನೆರವೇರಿಸು; ಪ್ರೀತಿಯನ್ನು ತೋರಿಸು. ೨. ಮರುಳುಗೊಳಿಸು ; ಆಕರ್ಷಿಸು : ಆಬಳೆಯರು ಇಚ್ಚೆಗೊಳಿಸುವರೆಂದು ಗುಂಪಂ ಬಿಚ್ಚಿ ಗುಂಪಿಸಲಿಲ್ಲ ಬಿಟ್ಟೊಡೆ ಹೆಚ್ಚಿ ಪಾಱುವರಾಗಳೇ ಸಾಳುವನ ಪರಿಯಿಂದ (ಬಸವು. ೪೦–೭೬). [ಇಚ್ಛೆ + ಕೊಳ್$_1$ + –ಇಸು$_3$]

**ಇಚ್ಚೆಟಿವಣಿ,** ಇಚ್ಚಟವಣಿ (ನಾ). [ಗಣಿತ] ಮನಸ್ಸಿಗೆ ತೋರಿದ ಸಂಖ್ಯೆಗಳನ್ನು ಹಾಕಿಕೊಂಡು ಮೊತ್ತವನ್ನು ಕಂಡುಹಿಡಿಯುವ ಕ್ರಮ: ಉದಯರಾಗಾ ಹೇಳಿಸುವುದು, ಹಲಗೆ ಬರೆಯಿಸುವುದು, ಕೊಟ್ಟ ಕಾಗದ ಓದಿಸುವುದು, ಇಚ್ಚೆಟವಣಿ ಹಾಕಿಸುವುದು ಇದೇ ಸಾಧಾರಣವಾಗಿ ವಿದ್ಯಾಭ್ಯಾಸ ಕ್ರಮವಾಗಿತ್ತು (ಮುಸುಗ. ೪). **ಇಚ್ಚೆಟವಣಿ** (ದಕ. ೫). [ಇಚ್ಚೆ + ಟವಣಿ]

**ಇಚ್ಚೆಬೋನ** (ನಾ). ಇಷ್ಟವಾದ ಭೋಜನ; ಬಯಸಿದ ಊಟ: ನೇಮದ ಮಹಂತರಿಗೆ ಇಚ್ಚೆಬೋನವ ನೀಡಿ ಮಿಂಡಜಂಗಮರೆಲ್ಲ ಬೇಡಿ ದರ್ಥಗಳ ಕೊಡುತ (ಮಡಿಕ್ಕಾ. IV, ೮೨೩ ಬಸಸ್ತೋ). [ಇಚ್ಚೆ + ಬೋನ]

**ಇಚ್ಚೆಯಱಿ** (ಕ್ರಿ). ಅಪೇಕ್ಷೆಯನ್ನು ತಿಳಿ; ಇಂಗಿತವನ್ನು ಅರಿ: ಮನವೆಳಸಿದ ಮೋಹವ ತೋಱದೆ ಕಣ್ಗೊನೆಯೊಳಿಟ್ಟಸುತಿಚ್ಚೆಯಱಿತು ಇನಿವಾತಿನಿಂದ ಸೋಲಿಸಿ ಕೂಡಿಯವನಿಂದ ಘನಸುಖವಡೆಯಬೇಕಬಲೆ (ಕಂನವಿ. ೯–೧೫೫). [ಇಚ್ಚೆ + ಅಱಿ]

**ಇಚ್ಚೆಯಾಣ್ಮ** (ನಾ). ಪ್ರಿಯತಮ; ಪ್ರೀತಿಪಾತ್ರನಾದವನು; ಮನದನ್ನ: ಎಲ್ಲಿದಂ ಸೊಬಗಿನಾಗರಮೆಲ್ಲಿದನಿಚ್ಚೆಯಾಣ್ಮಂ (ಆದಿಪು. ೩–೧೫); ಅಗಳೊರ್ವರ್ಳಿಚ್ಚೆಯಾಣ್ಮನೊಳ್ ಬೆಚ್ಚಮನದಾಕೆ (ಜಗವಿ. ೧೬–೧೧೯ ವ). [ಇಚ್ಚೆ + ಆಣ್ಮ (< ಆಳ್ಮ)]

**ಇಚ್ಚೆವಡು** (ಕ್ರಿ). ಬಯಸು; ಅಪೇಕ್ಷಿಸು: ಇಚ್ಚೆವಟ್ಟೊಡವೆಗಳ ನಿತ್ತಪೆಂ (ಉದ್ಭಟ. ೧೦–೮೬ ವ). [ಇಚ್ಚೆ + ಪಡು$_1$]

**ಇಚ್ಚೆಸಾವು** (ನಾ). ತನಗೆ ಮನಸ್ಸು ಬಂದಾಗ ಪಡೆಯುವ ಸಾವು; ಸ್ವೇಚ್ಛಾಮರಣ: ಮಾರಾಣಿಯುಂ ಪತಿಪಾದಮೂಲದೊಳ್ ಪಟ್ಟು ಪೊಂದಿದಳಿರುಳೆ ಇಚ್ಚೆಸಾವಂ (ಶ್ರೀರಾಮಾ. ೮೧೬–೧೩೦). [ಇಚ್ಚೆ + ಸಾವು]

**ಇಚ್ಚೆಱಗು** 'ಇರ್ಚೆಱಂಗು' ನೋ.

**ಇಚ್ಚೈಸು** 'ಇಚ್ಚೆಸು' ನೋ.

**ಇಚ್ಛಕ** (ನಾ). ೧. = ಇಚ್ಚಕ (?). ೨. [ಗಣಿತ] ಅಪೇಕ್ಷಿತವಾದ ಮೊತ್ತ, —ಲಬ್ಧ. [ಸಂ.]

**ಇಚ್ಛಯಿಸು** 'ಇಚ್ಛೆಸು' ನೋ.

**ಇಚ್ಛಯ್ಸು** 'ಇಚ್ಛೆಸು' ನೋ.

**ಇಚ್ಛಾಕಾರ** (ನಾ). ಆದರ; ಸತ್ಕಾರ: ಗಂಧೋದಕಮನುಯ್ದು ಕೊಟ್ಟು ರಘುವೀರಂಗಿಚ್ಛಾಕಾರಪೂರ್ವಕಂ ಸರ್ವಾಂಗಪ್ರಣತನಾಗಿ ಕಾಣ್ಬುದುಂ (ಪಂರಾಮಾ. ೭–೧೩೭ ವ); ಪುರಮಂ ಪೊಕ್ಕು ಲವಾಂಕುಶರಂ ಕಾಣ್ಬುದು ಮವರಿಚ್ಛಾಕಾರಂಗೆಯ್ದು ಮಣಿಮಯಾಸನಮಂ ಕುಡುವುದುಂ (ಪಂರಾಮಾ. ೧೬–೬ ವ). [ಸಂ.]

**ಇಚ್ಛಾಕಾರಂಗೆಯ್,** ಇಚ್ಛಾಕಾರಗೈ (ಕ್ರಿ). ಸತ್ಕರಿಸು; ಆದರಿಸು; ಗೌರವಿಸು: ಅಂತು ಬರ್ಪುದನಪರಾಜಿತಾಮಹಾದೇವಿ ಕಂಡಿದಿರೆೞ್ದೀಱ ಲಿಕ್ಕಿ ಬೞಿಯುಮಿಚ್ಛಾಕಾರಂಗೆಯ್ವುದುಂ (ಪಂರಾಮಾ. ೧೫–೧೩ ವ). **ಇಚ್ಛಾಕಾರಗೈ:** ಏಕೆ ಕಾಡುವಿರಿ ನಿಮ್ಮಣ್ಣನೊಳ್ನಿಮ್ಮೊಡನೀ ಕನ್ನೆ ನುಡಿದು ಗೆಲ್ವಳೆ ಸಾಕು ಸೈರಿಸಿರೆಂದು ವಿನಯದಿಂದವರಿಗಿಚ್ಛಾಕಾರ ಗೈದಳಾ ತಾಯಿ (ಭರಚ. ೪೦–೭೮). [ಇಚ್ಛಾಕಾರ + ಕೆಯ್$_1$]

**ಇಚ್ಛಾಕಾರಗೈ** 'ಇಚ್ಛಾಕಾರಂಗೆಯ್' ನೋ.

**ಇಚ್ಛಾದಾಸ್ಯ** (ನಾ). ಇಚ್ಛೆಗಳಿಗೆ ದಾಸನಾಗುವುದು; ಸ್ವಂತ ಇಷ್ಟ ದಿಂದ ದಾಸನಾಗುವುದು: ಸಂಪ್ರದಾಯ ದಾಸ್ಯ, ಇಚ್ಛಾದಾಸ್ಯಕ್ಕಿಂತ ಶ್ರೇಷ್ಠವಾದದ್ದು (ಪ್ರೇಮಶಾಸ್ತ್ರ. ೧೨೩). [ಸಂ. (ಇಚ್ಛಾ + ದಾಸ್ಯ)]

**ಇಚ್ಛಾನುಡಿ** (ನಾ). ಇಚ್ಛೆಗನುಸಾರವಾದ ಮಾತು; ತಡೆಯಿಲ್ಲದೆ ಸ್ವೇಚ್ಛೆಯಿಂದ ಹೇಳುವ ಮಾತು (ಉಕ. ೫). [ಇಚ್ಛಾ$_0$ + ನುಡಿ$_2$]

**ಇಚ್ಛಾನುಸಾರ** (ಅ). ಇಷ್ಟಕ್ಕೆ ಅನುಸಾರವಾಗಿ; ಅಪೇಕ್ಷೆಪಟ್ಟಂತೆ (೫). [ಸಂ. ಇಚ್ಛಾನುಸಾರಂ]

**ಇಚ್ಛಾಪತ್ರ** (ನಾ). ತನ್ನ ಇಚ್ಛೆಯಂತೆ ಬರೆದಿಟ್ಟ ಪತ್ರ; ಉಯಿಲು: ಉಯಿಲುಗಳು, ಇಚ್ಛಾಪತ್ರ (ಭಾಧಾನ. ೨೯೩). [ಸಂ.]

**ಇಚ್ಛಾಪೂರ್ತಿ** (ನಾ). ಬಯಕೆ ಪೂರ್ಣವಾಗಿ ನೆರವೇರುವಿಕೆ; ಇಷ್ಟಸಿದ್ಧಿ. [ಸಂ. (ಇಚ್ಛಾ + ಪೂರ್ತಿ)]

**ಇಚ್ಛಾಪ್ರಸವ** (ನಾ). ಬಯಕೆ ಹುಟ್ಟುವಿಕೆ; ಆಸೆಯಾಗುವಿಕೆ. [ಸಂ. (ಇಚ್ಛಾ + ಪ್ರಸವ)]

**ಇಚ್ಛಾಬಲ** (ನಾ). ದೃಢಸಂಕಲ್ಪದ ಶಕ್ತಿ; ಸಂಕಲ್ಪಶಕ್ತಿ: ಇದನ್ನು ಸಾಧಿಸಲು ಇಚ್ಛಾಬಲವುಬೇಕು (ವಿಚಾಮಂ.೧೯). [ಸಂ. (ಇಚ್ಛಾ + ಬಲ)]

**ಇಚ್ಛಾಭೋಜನ** (ನಾ). ಇಷ್ಟವಾದ ಊಟ; ಸಮೃದ್ಧವಾದ ಊಟ: ನಮ್ಮ ಕೂಡಲ ಸಂಗನ ಶರಣರಿಗಲ್ಲದೆ ಬೇಱೆ ಇಚ್ಛಾಭೋಜನ ವನಿಕ್ಕಿದರೆ ಕಿಚ್ಚಿನೊಳಗೆ ಉಚ್ಚೆಯ ಹೊಯಿದು ಹವಿಯ ಬೇಳ್ದಂತಾಯಿತ್ತು (ಬಸವ. ೫೯೫); ಚರಮೂರ್ತಿಗಳಿಗೆ . . . ಇಚ್ಛಾಭೋಜನವ ನೀಡಿಸುತ್ತ (ಭೈರಸೂ. ೧೮೪). [ಸಂ. (ಇಚ್ಛಾ + ಭೋಜನ)]

**ಇಚ್ಛಾಮರಣ** (ನಾ). = ಇಚ್ಚೆಸಾವು. [ಸಂ. (ಇಚ್ಛಾ + ಮರಣ)]

**ಇಚ್ಛಾಮರಣಿ** (ನಾ). ತನಗೆ ಮನಸ್ಸು ಬಂದಾಗ ಸಾವನ್ನು ಪಡೆಯುವವನು. ಉದಾ: ಭೀಷ್ಮ. [ಸಂ. ಇಚ್ಛಾಮರಣಿನ್]

**ಇಚ್ಛಾಮಾತ್ರ** (ನಾ). ಸಂಕಲ್ಪಿಸುವಷ್ಟು ಮಾತ್ರ; ಸಂಕಲ್ಪಮಾತ್ರ: ಕೂಡಲಸಂಗನ ಮಹಾಮನೆಯಲು ಅಸ್ತಿಗ್ರಾಹಕನೆಂಬ ಗಣೇಶ್ವರನ ಇಚ್ಛಾಮಾತ್ರದಿಂದೆ ಜಗಜುಗವಯ್ಯಾ (ಬಸವ. ೫೩೫). [ಸಂ. (ಇಚ್ಛಾ + ಮಾತ್ರ)]

**ಇಚ್ಛಾಯಿತ** (ಗು). ಬಯಸಿದ; ಆಸೆಪಟ್ಟ (ಸಿದ್ಧಾಂತಿ. ೫). ℙ "ಆಶಾ ತೃಷ್ಣಾ ಪಿಚಾಯತಾ" ಎಂಬುದನ್ನು ಕಿಟೆಲ್ ಅವರು 'ಇಚ್ಛಾಯಿತ' ಎಂದು ತಪ್ಪಾಗಿ ಪದವಿಭಾಗಮಾಡಿಕೊಂಡಂತಿದೆ. [?]

**ಇಚ್ಛಾರೂಪಿ** (ನಾ). ಬೇಕಾದ ರೂಪವನ್ನು ಧರಿಸಬಲ್ಲವನು; ಕಾಮರೂಪಿ: ಅವರು ಇಚ್ಛಾರೂಪಿಗಳೂ ಅತ್ಯಂತ ಮಾಯಾವಿಗಳೂ ದಯಾಶೂನ್ಯರೂ ಆಗಿದ್ದರು (ತುಳಸಿ. ೫೦); ಸುಳಿಸುಳಿದನಿಚ್ಛಾರೂಪಿ ಸೌಧದಿಂ ಸೌಧಕ್ಕೆ (ಶ್ರೀರಾಮಾ. ೪೪೮–೧೦೬). [ಸಂ. ಇಚ್ಛಾರೂಪಿನ್]

**ಇಚ್ಛಾವಂತ** (ನಾ). ಹಲವು ಆಸೆಗಳುಳ್ಳವನು (ದಕ. ೫). [ಸಂ. ಇಚ್ಛಾವತ್]

**ಇಚ್ಛಾವತಿ** (ನಾ). ಆಸೆಯುಳ್ಳವಳು; ಬಯಕೆಗಾತಿ: "ಇಚ್ಛಾವತೀ ಕಾಮುಕಾ–ವಿಸ್ರಕ್ಷಂದನ ಪುರುಷಧನಾದಿಗಳಲ್ಲಿ ಬಹಳ ಆಸೆಯುಳ್ಳವಳು" (ಸಿದ್ಧಾಂತಿ. ೧೪೮). [ಸಂ. ಇಚ್ಛಾವತೀ]

**ಇಚ್ಛಾವಿಘಾತಿ** (ನಾ). ಇಷ್ಟಕ್ಕೆ ಹಾನಿ, —ಕೇಡು: ಸೀತೆಯಂ ರಾಮಂಗೊಪ್ಪಿಸುವುದೆ ನೀತಿಯುಂ ನಿರ್ವಾಹಮುಮೆಂದು . . . ವಿಭೀಷಣಂ ಸುಭಾಷಿತಂಗಳಂ ನುಡಿಯೆ ತನಗಿಚ್ಛಾವಿಘಾತಿಯಂ ಮಾಡಿದನೆಂಬನಿತಱೊಳಾ ದನುಜಂ (ಪಂಚತಂ. ೧೬೫–೧೦). [ಸಂ. (ಇಚ್ಛಾ + ವಿಘಾತಿ)]

**ಇಚ್ಛಾಶಕ್ತಿ** (ನಾ). [ತತ್ತ್ವಶಾ] (ಪರಮೇಶ್ವರನ ಅಥವಾ ವ್ಯಕ್ತಿಯ) ಸಂಕಲ್ಪರೂಪವಾದ ಶಕ್ತಿ: ಪರಮೇಶ್ವರನ ಇಚ್ಛಾಶಕ್ತಿಯಿಂದಲೇ ಮನುಷ್ಯಪ್ರವೃತ್ತಿಯು ಕ್ಷೀರಪ್ರವೃತ್ತಿಯು ಎಂದು ಈಶ್ವರವಾದಿಗಳು ಹೇಳುವರು (ಹಿಂದಸಾ. ೬೨); ಶಕ್ತಿಗಳು —ಇವು ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿ ಮತ್ತು ಚಿತ್‌ಶಕ್ತಿ ಎಂದು ಆರು ಇರುತ್ತವೆ (ಶಿವಾಕೋ. ೩೭); ಫುಟ್‌ಬಾಲ್ ಆಡಲು ಹೊರಟರೂ ಹಾಗೆಯೇ ಆಟವನ್ನು ನಿಲ್ಲಿಸಿ ಹೊರಕ್ಕೆ ಬರುವ ಇಚ್ಛಾಶಕ್ತಿಯೇ ಇರಲಿಲ್ಲ (ಶಾಲೆಮ. ೬೩). [ಸಂ. (ಇಚ್ಛಾ + ಶಕ್ತಿ)]

ಇಚ್ಛಾಸಿರ 'ಇರ್ಛಾಸಿರ' ನೋ.

**ಇಚ್ಛಾಸ್ವಾತಂತ್ರ್ಯ** (ನಾ). [ತತ್ತ್ವಶಾ] ತನ್ನ ಇಷ್ಟಕ್ಕೆ ಅನುಸಾರವಾಗಿ ನಡೆಯುವ ಸ್ವಾತಂತ್ರ್ಯ; ಸಂಕಲ್ಪಿಸಿ ನಡೆಯುವ ಸ್ವಾತಂತ್ರ್ಯ: ಜೀವನಿಗೆ ಸಂಪೂರ್ಣವಾದ ಇಚ್ಛಾಸ್ವಾತಂತ್ರ್ಯವಿರುತ್ತದೆಂದೂ ಸನಾತನಧರ್ಮವು ಅನ್ನುವುದಿಲ್ಲ (ಗೀತಾಸಂ. ೧೨೦). [ಸಂ. (ಇಚ್ಛಾ + ಸ್ವಾತಂತ್ರ್ಯ)]

**ಇಚ್ಛಿತ** (ಗು). ೧. ಬಯಸಿದ; ಅಪೇಕ್ಷೆಪಟ್ಟ. (ನಾ). ೨. ಬಯಕೆ; ಅಪೇಕ್ಷೆ: ನನ್ನ ಇಚ್ಛಿತವು ಮನೋರಾಜ್ಯದಂತೆ ಕ್ಷಣದಲ್ಲಿ ಭಸ್ಮವಾಗಿದೆ (ಜೀವಮು. ೨). [ಸಂ.]

**ಇಚ್ಛಿಸು, ಇಚ್ಛಯಿಸು, ಇಚ್ಛೈಸು** (ಕ್ರಿ). ಅಪೇಕ್ಷಿಸು; ಬಯಸು; ಕೋರು: ಶಿರವಾಗಿ[ಗ]ಲಿಚ್ಛಿಸಿ (ಜೀವಂಸಾಂ. ೩-೪೨); ಇಂತಹ ಹತ್ತಿರದ ಹೂ ತನ್ನ ಮನೆಯನ್ನು ಬೆಳಗಬೇಕೆಂದು ಕೇಶವ ಇಚ್ಛಿಸುವುದು ಸ್ವಾಭಾವಿಕ (ಮುಂಗಾಮು. ೬೫); ಮುತ್ತೈದೆಯ ಸಾವಿಚ್ಛಿಪೆನು (ಕವಿಸೋ. ೫೬). **ಇಚ್ಛಯಿಸು**: ಮೆಚ್ಚಿ ವಸುದೇವನ ಕೊರಳ್ಗೆ ತೊಡರ್ಚಿದಳು ನವರತ್ನಮಾಲೆಯನಿಚ್ಛಯಿಸಿ ಗಂಧರ್ವದತ್ತೆ ವಿವಾಹವಿಧಿಯಿಂದ (ಸಾಳ್ವಭಾ. ೮-೩೬). **ಇಚ್ಛೈಸು**: ಅಮಳನಭಃಶ್ರೀಗಲಂಕಾರಮಂ ಮಾಳ್ಪೆನೆನುತ್ತಿಚ್ಛೈಸಿ (ರಾಜಶೇ. ೧೧-೧೯); ಅಂಕಾರೋಹಕಿಚ್ಛೈಪ ಮಕ್ಕಳನಿಕ್ಕೆಗಳಿನೆತ್ತಿಕೊಂಡು (ಶಾಕುಂತ. ೧೦೫-೧೮೦). [ಇಚ್ಛೆ + -ಇಸು₁]

**ಇಚ್ಛುಕ** (ನಾ). ೧. ಬಯಸುವವನು; ಅಪೇಕ್ಷಿಸುವವನು; ಅಭ್ಯರ್ಥಿ; ಉಮೇದುವಾರ. ೨. ಬಯಕೆಯುಳ್ಳದು; ಅಪೇಕ್ಷಿಸುವುದು: ಆ ಆಕಾಂಕ್ಷೆಗಳೂ ಕಾಮನೆಗಳೂ ಪೂರ್ಣವಾಗುವುದಕ್ಕಾಗಿ ಇರಲಿಲ್ಲ, ತಳಮಳಕ್ಕಾಗಿ ಮಾತ್ರ ಇದ್ದವು. ಆ ದಾಹ, ಆ ಸಂತೋಷ ಶಾಂತಿಯ ಇಚ್ಛುಕವಾಗಿರಲಿಲ್ಲ (ಪ್ರೇಮಾಶ್ರ. ೮೧). [ಸಂ.]

**ಇಚ್ಛೆ** (ನಾ). ೧. ಅಪೇಕ್ಷೆ; ಬಯಕೆ: "ಇಚ್ಛಾ, ಕಾಂಕ್ಷಾ, ಸ್ಪೃಹಾ, ವಾಂಛಾ, ಕಾಮಃ, ಈಪ್ಸಾ (ಕಾಮನಾ), ರುಚಿಃ, ಆಶಂಸಾ- ಈ ೮ ಇಚ್ಛೆ" (ಹಲಾಯು. ೧೧೮-೨೫); ಮೇಲೊಂದು ಗರುಡ ಹಾರುತಿಹುದು ಕೆಳಗದರ ನೆರಳು ಓಡುತಿಹುದು ಅದಕೊ-ಅದರಿಚ್ಛೆ ಹಾದಿ ಇದಕೊ ಹರಿದತ್ತ ಬೀದಿ (ಗಣೇಶ. ೩೯-೩). ೨. [ಗಣಿತ] ಬಯಸಿದ ಸಂಖ್ಯೆ; ಮೊತ್ತ; ಲಬ್ಧ. [ಸಂ. ಇಚ್ಛಾ]

**ಇಚ್ಛೆಕಾರ್ತಿ** 'ಇಚ್ಚೆಕಾರ್ತಿ' ನೋ.

**ಇಚ್ಛೆಗ** (ನಾ). ಮನಸ್ಸನ್ನು ಅರಿತು ಮಾತನಾಡುವವನು; ಹೊಗಳಿ ನುಡಿಯುವವನು: ದನಿ ಲೇಸು ಮೇಳದ ಜೋಕೆ ಲೇಸಾಳಾಪವನುಭವ ಲೇಸು ಮತ್ತಲ್ಲಿ ಜಿನನಾಮ ಕೂಡಿತು ಲೇಸು ಲೇಸೆಂದು ರಾಯನ ಮುಂದೆ ನುಡಿದರಿಚ್ಛೆಗರು (ಭರಚ. ೧-೮೬). [ಇಚ್ಛೆ + -ಗ₂]

**ಇಚ್ಛೆಗಾರ್ತಿ** 'ಇಚ್ಚೆಕಾರ್ತಿ' ನೋ.

**ಇಚ್ಛೈಸು** 'ಇಚ್ಛಿಸು' ನೋ.

**ಇಛ್ಛಾಸಿರ** 'ಇರ್ಛಾಸಿರ' ನೋ.

**ಇಜಹರನಾಮೆ** 'ಇಜಾರನಾಮು' ನೋ.

**ಇಜಾ** (ನಾ). ಅಪಾಯ; ತೊಂದರೆ; ಗಾಯ; ಪೆಟ್ಟು. **ಇಜಾಆಗು** = ಗಾಯಗೊಳ್ಳು: ಜಾರಿಬಿದ್ದು ಕದ್ದಿಗಳು ಸರಿದು ಎತ್ತುಗಳು ಮನುಷ್ಯರುಗಳು ಇಜಾಆಗುತ್ತಾರೆ (ಕೃಷಿಪ್ರ. ೧೦೮). [← ಮರಾ. ಹಿಂ. ಪಾರ. ಈಜಾ]

**ಇಜಾಫೆ** (ನಾ). ಬಡತಿ; ವೃದ್ಧಿ: ಅನೇಕರಿಗೆ ಕಾಲೋಚಿತವಾಗಿ ಇಜಾಫೆಯನ್ನು ಸಹ ಅಪ್ಪಣೆ ದಯಪಾಲಿಸಿದರು (ಮಹಾವಂ. II, ೫೬). [← ಅರ. ಇಜಾಫಾ]

**ಇಜಾರ₁, ಇಜಾರೆ₁** (ನಾ). ಗುತ್ತಿಗೆ ಕರಾರು; ಕಂದಾಯದ ಅಥವಾ ಗುತ್ತಿಗೆಯ ಒಪ್ಪಂದ (ರೈಸ್‌ಗೆ. II, ೫೫೦). **ಇಜಾರೆ₁**: ಅದಲ್ಲದೆ ದೇವೀಸಿಂಹನ ಇಜಾರೆ! ಅವನು ಸರ್ಕಾರದ ಹಣವನ್ನು ವಸೂಲ್ಮಾಡಿಕೊಳ್ಳುವುದಕ್ಕೆ ಇಜಾರೆ ಮಾಡಿಕೊಂಡಿದ್ದನು (ದೇವೀಚಾ. ೩೧). [← ಅರ. ಇಜಾರಹ್, ಇಜಾರತ್, ಇಜಾರಾ = ಗುತ್ತಿಗೆ]

**ಇಜಾರ₂, ಇಜಾರು** (ನಾ). ಷರಾಯಿ; ಚಣ್ಣ; ಪಾಯಿಜಾಮಾ: ಜಾತಿನವರತ್ನದಾಭರಣ ಪೈಠಣಿಯಾಗಿ ಖ್ಯಾತಿವೆತ್ತಂ ಸೂರ್ಯಪುಟವಿಜಾರದ ಮೇಲೆ ಶ್ರೀತಕನಕದ ಕಮರುಬಂಡವದರುಪರಿಯೊಳು ಜವದಾಡೆಯೊಪ್ಪಿ ಮತ್ತಂ (ಪ್ರಭುಪು. ೯-೨೦೬); ಥಾನುಗಟ್ಟಲೆ ಬಟ್ಟೆಯಿಂದ ಇಜಾರ ಹೊಲಿಸಿಕೊಳ್ಳಬೇಕೆಂದರೆ ಎಷ್ಟು ಹಣವಾಗುತ್ತೆ (ನಾಡಿಗೇ. ೬); ಬಿಜಾಪುರದಲ್ಲಿ ಇಜಾರದವರು ಹಜಾರ್ ಮಂದಿ (ಗಾದೆ). **ಇಜಾರು**: ನಿಮ್ಮ ಕಿಟ್ಟು ಶಾಲೆಗೆ ಹೋಗುವಾಗ ಇಜಾರು ಹಾಕುತ್ತಾನಲ್ಲ (ಕದಂಬ.೧); ಬಹುಜನರು ಇಜಾರವನ್ನೂ ಉದ್ದಂಗಿಯನ್ನೂ ಹಾಕುವರು (ವಿಜಾಭೂ. ೪೯). [← ಮರಾ. ಇಜಾರ್; ಪಾರ. ಇಝಾರ್, ಇಜಾರ್]

**ಇಜಾರನಾಮು, ಇಜಹರನಾಮೆ** (ನಾ). ಸರಹದ್ದಿನ ತಕರಾರು; ಗಡಿ ವಿವಾದ; ಜಾಹೀರನಾಮೆ; ಪ್ರಕಟನೆ (?): ಆ ಪೂರ್ವೋತ್ತರ ಯಾವತ್ತೂ ವಿವರವಾಗಿ ಬರದು ಇಜಾರನಾಮುಯಂತಾ ಅದರ ಹೆಸರು ಮಡಗಿ, ಆ ಇಜಾರನಾಮೆಯಂನು ತಂಮು ಬಳಿಗೆ ರವಾನೆ ಮಾಡಿ ಇದ್ದೇವೆ (ರಾಜೇಂದ್ರ. ೧೨೯). **ಇಜಹರನಾಮೆ**: ಇದರ ಸಂಗಡ ಪೀಲ್ ಸಾಹೇಬರಿಗೆ ಬರದು ಕೊಟ್ಟ ಇಜಹರನಾಮೆ ವಿವರ (ರಾಜೇಂದ್ರ. ೧೩೦). [← ಅರ. ಇಜಹಾರ್‌ನಾಮಾ]

**ಇಜಾರಾದಾರ** 'ಇಜಾರ್ದಾರ್' ನೋ.

**ಇಜಾರು** 'ಇಜಾರ₂' ನೋ.

**ಇಜಾರೆ₁** 'ಇಜಾರ₁' ನೋ.

**ಇಜಾರೆ₂** (ನಾ). ಕಾಯಿಲೆ (?): ವ್ರಜೇಶ್ವರನಿಗೆ ಕೆಲವು ದಿನ ಅವಳೊಂದಿಗೆ ಹೋರಾಡುವುದು ಬಹಳ ಕಷ್ಟವಾಯಿತು. ಆದರೆ ಸಾಗರಿಗೆ ಅಗ ಪೂರಾ ಇಜಾರೆಯಾಗಿದ್ದಿತು (ದೇವೀಚಾ. ೧೧೬). [?]

**ಇಜಾರ್ದಾರ್, ಇಜಾರಾದಾರ** (ನಾ). ೧. ಜಮೀನನ್ನು ಏಕಾಧಿಕಾರವಾಗಿ ಗುತ್ತಿಗೆಗೆ ಒಪ್ಪಿಕೊಳ್ಳುವವನು; ಒಟ್ಟು ಗುತ್ತಿಗೆದಾರ. ೨. ಹೆಂಡ, ಸಾರಾಯಿ ಮುಂತಾದ ಮಾದಕದ್ರವ್ಯಗಳ ಅಂಗಡಿಯ ಗುತ್ತಿಗೆದಾರ; ಕಂಟ್ರಾಕ್ಟ್‌ದಾರ (ರೈಸ್‌ಗೆ. II, ೫೫೦). **ಇಜಾರಾದಾರ** (ದಕ. ೬). [← ಅರ. ಇಜಾರಾದಾರ್]

**ಇಜ್ಜತ್, ಇಜ್ಜತು** (ನಾ). ಮರ್ಯಾದೆ; ಗೌರವ: ತಮ್ಮ ಇಜ್ಜತ್ ಒಡೆದ ವಿಗ್ರಹದಂತೆ ಬೊಕ್ಕಬೋರಲು ಬಿದ್ದುಹೋಯಿತೆಂದು ಅವರು . . . ಭಾವಿಸಿದ್ದರು (ದಿವಾಬ. ೫೯). **ಇಜ್ಜತು**: ನಿಮ್ಮ ಪ್ರಾಣ, ಮಾನ, ದೌಲತ್ತು, ಇಜ್ಜತು(ಮರ್ಯಾದೆ)ಮುಂತಾದುವು ಹೆಚ್ಚಾಗಲಿ (ದೇವೀಚಾ. ೮೪). [← ಅರ. ಇಜ್ಜತ್]

**ಇಜ್ಜತು** 'ಇಜ್ಜತ್' ನೋ.

**ಇಜ್ಜತೆ** 'ಇಜ್ಜೊತೆ' ನೋ.

**ಇಜ್ಜಮರ** (ನಾ). ಒಂದು ಮರ: "ಅಷ್ಟಪದಃ – ಚಿನ್ನಉಳ್ಳಿ; ಇಜ್ಜಮರನು" (ಓಷಧಿ. ೬). [?]

**ಇಜ್ಜಲ** (ನಾ). "ನೀರು ಹಲಸಿನ ಗಿಡ" (ಅಮರ. ಟೀಕೆ). [ಸಂ.]

**ಇಜ್ಜಲು** 'ಇರ್ದಲ್' ನೋ.

**ಇಜ್ಜಾಡಿಸು** (ಕ್ರಿ). ಎರಡು ಕಡೆಗೂ ಜಾಡಿಸು, —ಚಾಚು (?): ವೈರಿಜಜ್ಜಾರನಾ ಕವಾಟವನು ಜಜ್ಜರಿಮಾಡಲಾಗಳೆ ಕಿಚ್ಚು ಜಿಹ್ವೆಯನಿಜ್ಜಾಡಿಸುತ ಹಬ್ಬಿತೊಡನೆ (ಭರಚ. ೨೯-೭೬). [ಇರ್₂ (< ಎರಡು) + ಜಾಡಿಸು]

**ಇಜ್ಜೋತೆ,** ಇಜ್ಜತೆ (ನಾ). ಹೊಂದಿಕೆಯಿಲ್ಲದ ಜೋಡಿ; ಇಜ್ಜೋಡಿ: ಈ ಇಜ್ಜೋತೆಯ ದೆಸೆಯಿಂದ ಅವಾಂತರವಾಯಿತು (ಕ್ರಿಯಾಶಿ. ೧೧೩). **ಇಜ್ಜತೆ** (ದಕ. ೩). [ಇರ್$_2$ (< ಎರಡು) + ಜೊತೆ]

**ಇಜ್ಜೋಡಿ** (ನಾ). = ಇಜ್ಜೋತೆ: ಅವನ ನಾಗರಿಕತೆಯಲ್ಲಿ ಇಜ್ಜೋಡಿ ಪ್ರಗತಿ ಕಾಣಹತ್ತಿದೆ (ಶಿಕ್ಷದ. ೬೨೩). [ಇರ್$_2$ (< ಎರಡು) + ಜೋಡಿ]

**ಇಜ್ಜೋಡು** (ನಾ). = ಇಜ್ಜೋತೆ: ಎಲ್ಲ ಅನುಕೂಲತೆಯಿದ್ದರೂ ಇಜ್ಜೋಡು ದಾಂಪತ್ಯಸುಖವನ್ನು ಹಾಳುಮಾಡುತ್ತದೆ (ರೂಢಿ). [ಇರ್$_2$ (< ಎರಡು) + ಜೋಡು]

**ಇಜ್ಯಾಕಾಲ** (ನಾ). ದೇವರ ಪೂಜೆಯ ಸಮಯ: ಇಜ್ಯಾಕಾಲದೊಳ್ ಪ್ರಸಾದಪ್ರತಿಪತ್ತಿಗೆಯ್ಯುತ್ತೆ ಸವಿ ಭಾವಿಪುದು ವಿಷಯಾಭಿಲಾಷೆಯೆನಿಪುದು (ಚಿಕವಂ. ೧೦೭-೫). [ಸಂ. (ಇಜ್ಯಾ + ಕಾಲ)]

**ಇಜ್ಯಾಪುರಸ್ಸರಂ** (ಅ). ದಾನಪೂರ್ವಕವಾಗಿ; ಮೊದಲು ದಾನ ಧರ್ಮಗಳನ್ನು ಮಾಡಿ: ರಾಜ್ಯಕ್ಕಂ ತ್ರಿಭುವನಸಾಮ್ರಾಜ್ಯಕ್ಕಂ ಬಗೆಯೆ ಹಸ್ತಿಮಶಕಾಂತರಮೆಂದಿಜ್ಯಾಪುರಸ್ಸರಂ ಪ್ರವ್ರಜ್ಯಮನವಯವನೆ ಹಲಧರಂ ಧರಿಯಿಪುದುಂ (ಶಾಂತಿಪು. ೫-೭೨). [ಸಂ.]

**ಇಜ್ಯಾಶೀಲ** (ನಾ). (ಹಲವಾರು) ಯಾಗಗಳನ್ನು ನಡೆಸುವವನು; ಯಾಗಮಾಡುವವನು: ಯಷ್ಟಾ, ಯಜಮಾನಃ ... ಇಜ್ಯಾಶೀಲಃ, ಯಾಯಜೂಕಃ, ಯಜ್ವಾ, ಯಾಸುತೀವಳಃ – ಈ ೯ ಯಾಗಮಾಡುವಾತಂ" (ಹಲಾಯು. ೬೯-೨೬೬). [ಸಂ. (ಇಜ್ಯಾ + ಶೀಲ)]

**ಇಜ್ಯೆ** (ನಾ). **೧.** ಯಜ್ಞ; ಯಾಗ. **೨.** ದತ್ತಿ; ದಾನ. **೩.** ದೇವತಾ ಪೂಜೆ. **೪.** [ಜೈನ] ಅರ್ಹಂತಪೂಜೆ: ಇಜ್ಯೆಯುಂ ವಾರ್ತೆಯುಂ ದತ್ತಿಯುಂ ಸ್ವಾಧ್ಯಾಯಮುಂ ಸಂಯಮಮುಂ ತಪಮುಮೆಂಬೀ ಆರ್ಯಷಟ್ಕರ್ಮಂಗಳುಂ ಶ್ರಾವಕಜನಕ್ಕೆ ಕುಲಧರ್ಮಂಗಳ್ (ಚಾವುಂಪು. ೨೨೪). [ಸಂ. ಇಜ್ಯಾ]

**–ಇಟ** (ಪ್ರ). ಒಂದು ತದ್ಧಿತ ಪ್ರತ್ಯಯ: ಉದಾ:— ಪೆಂಡಿರ ಬೇಟ ಮನೇಳಿದಿಟಂಮಾಡದೆ ನುಡಿಯೆ (ಶಾಂತಿಪು. ೮-೯೬ ವ). [?. P ತೆಲುಗು ಕೃತ್ಪ್ರತ್ಯಯ –ಟ ಅನ್ನು ಹೋಲಿಸಿ. ಇಚ್ಚುಟ ಇತ್ಯಾದಿ]

**ಇಟಕರ** 'ಇಡುಕುಱು' ನೋ.

**ಇಟುಕು** 'ಇಡಂಕು' ನೋ.

**ಇಟುಕುಮನೆ** (ನಾ). ಇಕ್ಕಟ್ಟಾದ ಮನೆ: ಇಟುಕುಮನೆಯ ವಾಮನನು ಬೆಳೆದ ಹೇಗೋ ವಿಶ್ವಯೋಗಿ ಈ ಪ್ರಪಂಚದೊಡನೊಡನೆ ಸಾಗಿ ವಿಶ್ವಾಕಾರನಾಗಿ (ಅರಳು. ೧೮೪-೧೩). [ಇಟುಕು (< ಇಡಂಕು) + ಮನೆ]

**ಇಟ್ವರ** (ನಾ). **೧.** ಸ್ವೇಚ್ಛೆಯಿಂದ ಸಂಚರಿಸುವಂತಹದು. **೨.** ಬಸವ; "ಗೂಳಿ" (ಅಮರ. ಟೀಕೆ). [ಸಂ.]

**ಇಟ್ಟ$_1$** (ನಾ). ಇಷ್ಟ: ಧಿಟ್ಟರಂಮಾಡಿ ಭೂಭಾರಮಂ ನಿಳುಹಿ ಕಡೆಗಿಟ್ಟವನಿತ್ತೆ ಕುಂತೀಸುತರಿಗೆ (ತುರಂಗ. ೬೬-೧೨). [< ಸಂ. ಇಷ್ಟ]

**ಇಟ್ಟ$_2$** 'ಇಡು$_1$' ಪರಾ.

**ಇಟ್ಟಂಗಿ$_1$** 'ಇಟ್ಟಗೆ$_1$' ನೋ.

**ಇಟ್ಟಂಗಿ$_2$** (ನಾ). = ಇಟ್ಟಿಮರ (ದಕ. ೩). [ದೇ. ॥ ತಮಿ. ಅಟ್ಟಿ, ಎಟ್ಟಿ]

**ಇಟ್ಟಗೆ$_1$,** ಇಟ್ಟಂಗಿ$_1$, ಇಟ್ಟಿಗೆ (ನಾ). **೧.** ಗೋಡುಮಣ್ಣಿನಿಂದ ತಯಾರಿಸಿದ ಹಸಿಯ ಅಥವಾ ಸುಟ್ಟಮಣ್ಣಿನ ಆಯಾಕಾರದ ಹೆಂಟೆ: ಪೊಳೆವ ಸಂಜೆಯ ಕೆಂಪದು ಸಾಣೆಗೊಡ್ಡಿದಿಟ್ಟಗೆಯ ರಜಂಬೊಲೆಂಬಿನೆಗಮಸ್ತಮಯಕ್ಕಿಱಿದಂ ದಿವಾಕರಂ (ಪಂಪಭಾ. ೧೦-೩೫); ಉಣಂದೇಗುಲವಂ ಮಾಡಿದಡೆ ಯಿಟ್ಟಗೆಯ ದೇಗುಲಮಂ ಕಳೆದು (ಎಕ. XI, ಮೊಳಕಾ. ೨೭-೩; 962); ಸಾಣೆಯ ಮೇಲೆ ಶ್ರೀಗಂಧಮಂ ತೇವರಲ್ಲದೆ ಇಟ್ಟ [ಪಾಠಾಂ. ಟ್ಟ]ಗೆಯ ಮೇಲೆ ತೇವರೆ (ಅವಚಂ. ೭೧-೩೧೫); ಹೂಸಿದಿಟ್ಟಗೆಯ ಹುಡಿಯ ಕೆಂಗಣ್ಣ (ಸಿದ್ಧರಾ. ೭-೨೬); ಜಡನಂ ಗಟ್ಟಿಸಿದೆನಾಗಳಿಟ್ಟಗೆಯಿಂದ (ದಶಕು. ೧೩-೫೨). **ಇಟ್ಟಂಗಿ$_1$:** (ಉಕ) **೧.** ಮನೇ ಕಟ್ಟಲಿಕ್ಕೆ ... ಇಟ್ಟಂಗಿ, ತೊಲೆ, ಕಂಬ ... ಮುಂತಾದುವುಗಳು ಬೇಕು (ಮುಂಬಯಿ. ೪-೧೧೬); ದೈವವುಳ್ಳವರು ಸುಟ್ಟ ಇಟ್ಟಂಗಿಗಚ್ಚುಕಲ್ಲು ಇವುಗಳ ಮನೆಗಳನ್ನು ಕಟ್ಟಿಸುವರು (ಕಭಾಗ. ೨೫೬); ಇಟ್ಟಂಗಿ ಗೋಡೆ ಹೋಗಿ ಕಲ್ಲಿನ ಗೋಡೆಯಾಯಿತು (ಫಲಸಂ. ೩೬). **೨.** ಒಂದು ಬಗೆಯ ಮೃದುವಾದ ಕೆಂಪು ಕಲ್ಲು; ಜಂಬಿಟ್ಟಿಗೆ: ಬೆಳಗಾವಿಯ ಹತ್ತರ ನೆಲದೊಳಗೆ ಜಂಬೂರಿ ಇಟ್ಟಂಗಿಯೆಂಬ ಮಿದುವಾದ ಕಲ್ಲಿನಂಥ ಥರವಿರುತ್ತದೆ. ಈ ಇಟ್ಟಂಗಿಗಳನ್ನು ಅಗಿದು, ಕೆತ್ತಿ, ಕೊರೆದು, ಮನೆಯ ಗೋಡೆಗಳನ್ನು ಕಟ್ಟುತ್ತಾರೆ (ಬೆಳವ. ೩೫). **೩.** ಒಂದು ಬಗೆಯ ಸಸ್ಯರೋಗ: ಕುಂಕುಮ, ಇಟ್ಟಂಗಿ ಮೊದಲಾದ ರೋಗಗಳು ಹಾಯದೆ (ಕೃಷಿಪ್ರ. ೫೩). **ಇಟ್ಟಿಗೆ: ೧.** "ಇಷ್ಟಕಾ – ಇಟ್ಟಿಗೆ" (ಶಮುದ. ೨೮೩ ಪ್ರಯೋ); ಪುರವರೇಶನ ಮಾಡಿದ ಚೈತ್ರಕ್ಕಿಟ್ಟಿಗೆಗಳ್ ಬರೆ ನೋಡಿ ... ಒಂದವಱೊಳ್ ಪೊನ್ನಿಟ್ಟಗೆಯಾದೊಡೆ (ಆದಿಪು. ೫-೧೯); ದೇಗುಲದ ಶಿಖರಮನಡರ್ದೇಱಿ ಒಟ್ಟಿರ್ದಿಟ್ಟಗೆಯಂ ಕೆದಱಿಯುಂ (ಪಂಚತಂ. ೩೦-೧); ಇಟ್ಟಗೆಗೆಂದಗಟ್ಟ ಕುೞಿಗಳ್ ಕೆಱೆಯಾದುವು (ಎಕ. II, ೧೪೩-೧೦; 1131); ಸಾಣೆಗೊಡ್ಡಿದ ಹಣ್ಣಿಟ್ಟಗೆಯ ರಜಮೆನಿಸೆ ಸಂಜೆಯ ಮುಗಿಲರ್ಕಂ ಭೋಂಕೆನಲಪರಜಳನಿಧಿಗಿೞಿದಂ (ಮಹಾನೇ. ೧೧-೧೩೨); ಮುಕ್ತಿಗೆ ಮಾರ್ಗವೆಂಬುದ ತೋಱಿಸುವಂತೆ ಭವ್ಯರಿಗೆ ಮೂಱಿಟ್ಟಗೆಯ ಮೇಲೆ ಪವಡಿಸುವನು ಮಲಧಾರಿ ... ಲಲಿತಕೀರ್ತಿ ಮುನಿಪ (ಗೋಮಟೇ. ೧-೨೦); ವೇದಗಳ ಕಾಲದಲ್ಲಿ ಯಜ್ಞಗಳಿಗಾಗಿ ಶಾಲೆಗಳನ್ನೂ ವೇದಿಕೆಗಳನ್ನೂ ಇಟ್ಟಿಗೆ, ಮರ, ಬೊಂಬುಗಳಿಂದ ನಿರ್ಮಿಸುತ್ತಿದ್ದರು (ಮೈವಾಸ್ತು. ೨೨). [< ಸಂ. ಇಷ್ಟಕಾ]

**ಇಟ್ಟಗೆ$_2$** (ನಾ). ಒಂದು ಊರಿನ ಹೆಸರು: ಅಣ್ಣೀಗೆಱೆ ಇಟ್ಟಗೆ ಪಸುಣ್ಡ ಮುಗುಳಿ ... ಏತೇಷಾಂ ... ಮಧ್ಯಸ್ಥಿತೇ (ಇಆ. VII, ೨೨೦-೪೫; 658); ಹೆದರಿಗಟ್ಟವುಂ ಕಾರಿಂಗೆಱೆಯುಂ ಸಿರಿಂಗೆಱೆಯುಂ ಇಟ್ಟಗೆಯು ಮುಂತು ನಾಲ್ಕುಂ ಬಾಡವುಮಂ (ಎಕ. XI, ಚಿತ್ರದು. ೭೬-೨೩; 937); ಈಶಾನ್ಯದ ದೆಸೆಯೊಳಿಟ್ಟಗೆಯ ಬಟ್ಟೆಯಿಂ ಬಡಗಲು (ಸೌಇಇ. XI-i, ೮೧-೧೭; 1049); ಇಟ್ಟಗೆಯ ಮಾರ್ತಂಡಗೌಡ ವುಡುವದ ಚಿಕ್ಕಗವುಡ (ಎಕ. VII, ಚನ್ನಗಿ. ೩೨-೧೫೦; 1050 ?); ಕಣ್ಣೆಸೆವ ಮಹಾಗ್ರಹಾರ ಮೆನಿಪಿಟ್ಟಗೆಯೊಳ್ವರ ಕಶ್ಯಪಾನ್ವಯಂ ಪಸರಿಸೆ (ಸೌಇಇ. IX-i, ೩೩೩-೩೫; 1215). [?]

**ಇಟ್ಟಗೆಸೊಣೆ** (ನಾ). ಒಂದು ಊರಿನ ಹೆಸರು (?): ಕಾರ ಅಱಿಎ ಇಟ್ಟಗೆಸೊಣೆಎ ಬಡಗ್ಗೆ (ಮೈಆರಿ. ೧೯೧೪, ೧೨-೨೦; 810); ಬಲಗ್ಗೆ ನಡದು ಕಲ್ಮಲರುಳಿ ಕೊಲಿಗನ್ಮೇಲ ಕಾರಱಿಎ ಇಟ್ಟಗೆಸೊಣೆಎ ಬಡಗ್ಗೆನಿಟ್ಟರುಳಿಎ (ಎಕ. IX (S), ಚಿಕ್ಕಬ. ೬೬-೨೦; 850). [ಇಟ್ಟಗೆ$_2$ + ಸೊಣೆ]

**ಇಟ್ಟಡೆ** 'ಇಟ್ಟೆಡೆ' ನೋ.

**ಇಟ್ಟಣ$_1$** 'ಇಟ್ಟಳ$_2$' ನೋ.

**ಇಟ್ಟಣ$_2$** (ನಾ). ಗುಂಪು; ಸಂದಣಿ; ಸಾಂದ್ರತೆ: ಗಿಡಗಳ ಸರುವಿನ ದರುವಿನ ನಿಡುಗಲ್ಗಳ ಬೆಟ್ಟ ಘಟ್ಟದಿಟ್ಟಣದೊಳ್ ಮುಳ್ಗಡಣದ ಮೆಳೆಗಳ ಪುಲ್ಪೊದಱಿಡೆಯೊಳ್ ನಡೆತಂದನೋಹಿಲಂ (ವೃಷವಿ. ೨೯-೧೧೬). [?]

**ಇಟ್ಟಣ$_3$** 'ಇಟ್ಟಳ$_1$' ನೋ.

**ಇಟ್ಟಣ$_4$** (ನಾ). ಒದೆಯುವ ಹಸುಗಳನ್ನು ಕರೆಯಲು ಅನುಕೂಲವಾಗುವಂತೆ ಏರ್ಪಡಿಸುವ ಒಂದು ಬಗೆಯ ಮರದ ಉಪಕರಣ; ಒದೆಮರ: ಇಟ್ಟಣದೆಳೆವಗ್ಗಯಿದಿರಾದ ಗೋಗಳನಿಟ್ಟು ಮುಳ್ಳನು ... ಕಱಿವ ಗೊಲ್ಲರ ಪಡೆ ಇಟ್ಟಣಿಸಿಹವಲ್ಲಲ್ಲಿ (ಅಬ್ಬಲೂ. ೩-೪೧). [?]

**ಇಟ್ಟಣಂಬಡೆ** (ಕ್ರಿ). ಅತಿಶಯವಾಗು; ಸೊಗಸಾಗು: ಮತ್ತಮಾ ಪಟ್ಟಣಮಿಟ್ಟಣಂಬಡೆದು ಮೆಱೆವ ಪೊಂಬೆಸದುಪ್ಪರಿಗೆಯ (ಕಬ್ಬಿಕಾ. ೪೪).
[ಇಟ್ಟಣ$_1$ (< ಇಟ್ಟಳ$_2$) + ಪಡೆ$_1$]

**ಇಟ್ಟಣಿ** 'ಇಟ್ಟಳ$_1$' ನೋ.

**ಇಟ್ಟಣಿಕೆ** (ನಾ). ನಿರೀಕ್ಷೆ; ಬಯಕೆ: ಅವರ ಇಟ್ಟಣಿಕೆಗಳವಡದಂಗ ಚಿತ್ತಮಂ ಕೊಟ್ಟು (ಉದ್ಭಟ. ೩-೩ ವ). [?]

**ಇಟ್ಟಣಿಸು$_1$** (ಕ್ರಿ). ಮನೋಹರವಾಗು; ಸುಂದರವಾಗು: ದುರ್ಜನರಂ ಪುಟ್ಟಿಸಿದಂ . . . ಸುಜನರೊಳಿಟ್ಟಣಿಸಿದ ಗುಣಮನಱಿಪಲ್ (ಪುಷ್ಪಪು. ೧-೫೧); ಇಟ್ಟಣಿಸಿದಲರ್ಗಳೆಸೆದಿರೆ (ಕಬ್ಬಿಕಾ. ೧೦೭).
[ಇಟ್ಟಣ$_1$ (< ಇಟ್ಟಳ$_2$) + -ಇಸು$_3$]

**ಇಟ್ಟಣಿಸು$_2$** 'ಇಟ್ಟಳಿಸು' ನೋ.

**ಇಟ್ಟಣೆ** 'ಇಟ್ಟಳ$_1$' ನೋ.

**ಇಟ್ಟಲ** (ನಾ). ಸುಂಕ; ದೂರು; ನಿಂದೆ (?): ಇಟ್ಟಲಮಿಲ್ಲ ಅಭಿರಾಗಮಿಲ್ಲ (ಹೈಆರಿ. ೧೯೩೭, ೨೬-೪೦; 872); ಮಿಣಕ್ಕಡೆ ಇಪ್ಪರ್ತ ನಾಲ್ಕು[ದ್ರ]ಮ್ಮ ಇಟ್ಟಲಮಿಲ್ಲ ಅಭಿ ಅಗಮಿಲ್ಲ ಅಮಾವಾಸ್ಯೆಯಂದು (ಕಇಅ. ೮೬-೧೮-೪೦; 932). [?]

**ಇಟ್ಟವಟ್ಟಲ್** (ನಾ). ಸಟ್ಟುಗ; ಸೌಟು: "ದರ್ವಿ - ಸಟ್ಟುಗಂ, ಇಟ್ಟವಟ್ಟಲ್ ಎಂದೂ ಎಂಬರು" (ನಾಚಿರಾ. ೬).
[ಇಟ್ಟು$_1$ + ಬಟ್ಟಲ್]

**ಇಟ್ಟಳ$_1$, ಇಟ್ಟಣ$_3$, ಇಟ್ಟಣಿ, ಇಟ್ಟಣೆ** (ನಾ). **೧.** ರಾಶಿ; ಮೊತ್ತ; ಸಮೂಹ; ಗುಂಪು: "ಬಂಬಲ್, ತುಱುಗಲ್ . . . ಇಟ್ಟಳಂ . . . ಗೊಂದಣ (ಉಂದಲ್) - ಈ ೪೦ ಸಮೂಹಂ" (ಕಶಸಾ. ೧೧-೨೨೨); "ಸಂದಣಿಗೆಯಿಟ್ಟಳಮೇಣಿಱುಬೆಯೆಂದಕ್ಕುಂ" (ಶಬ್ದಮಂ. ೫೪); "ಮೊತ್ತಮೊಬ್ಬುಳಿಯುಮೊಗ್ಗರಮುತ್ತಿಟ್ಟಳ" (ಕವಿಕಂ. ೧೦೭); ಪುಟ್ಟಲೊಡಂ ನಿನ್ನಯ ಪೆಸರ್ಱ[ರಿ]ಟ್ಟಪರೀ ಜಗದ ಮನುಜರೆಂದೊಡೆ ಪೆಸರೊಂದಿಟ್ಟಳಮಾದಡೆ ಕೊಲ್ಲು ಪಟ್ಟಳಿಗೆಯ ಚಿಣ್ಣನೆಂಬ ಭಯರಸದಿಂದಂ (ಮೈಆರಿ. ೧೯೩೯, ೩೭-೨೦; 1096); ಒಱಗಿರ್ಪಾ ಕಣಿಶಂಗಳಿಟ್ಟಳದೊಳಿಲ್ಲಾ ಕಾರಮೋರಂದದಿಂ ಮಿಱುಗುತ್ತೊಪ್ಪುವುವಪ್ರತರ್ಕ್ಯ ಕಳಮಕ್ಷೇತ್ರಂಗಳಾ ಧಾತ್ರಿಯೊಳ್ (ಶಾಂತೀಶ್ವ. ೧-೯೨). **೨.** ಆಶ್ರಯ; ವಾಸಸ್ಥಾನ: ಸುರರಿಟ್ಟಳಕೆ ಸುರರಮಣಂ ಸುರಪುರಂ ನೆಱೆಯದುದನಱೆದಾದರದೆ ಹೊಚಕ್ಕೇರಿಯನೆ ಮಾಡಿಸಿ (ಕುಮುರಾ. ೨-೭). **೩.** ಸಂಭ್ರಮ; ಸಡಗರ; ಅತಿಶಯ: ಸಾಮುದ್ರವಿಜಯ ನೃಪ ನೆಟ್ಟನಿದಿರ್ಗೊಂಡೆಯ್ದಿ ವರೆ ಕಂಡಿಟ್ಟಳದಿ ವಸುದೇವನೆಱಗಲು . . . ಪರಸಿದನು ಭೂಪ (ಸಾಳ್ವಭಾ. ೮-೯೪). **೪.** ಅಪವಾದ; ಕಲಂಕ; ನಿಂದೆ; ಬಯ್ಗುಳು; ಪರಹಿಂಸಾಕರವಾದ ಮಾತು: ಎನಿತಾನುಮಿಟ್ಟಳಂಗಳುಮಂ ಪುಸಿಯ ಪೊಟ್ಟಣಂಗಳುಮಂ ನುಡಿಯೆ (ಬಂಹರಿ. ೮-೭೦ ವ). 'ಇಟ್ಟಳಮಿಡು' ಪರಾ. **೫.** ಹಿಂಸೆ; ಅಘಾತ: ಅಹಿತನಿಟ್ಟಳಕಳುಕಿ ಕೆಲದಲಿ ಮಿಹಿರನಂದನ ನೆಚ್ಚಡೆ (ಕುವ್ಯಾದ್ರೋ. ೧೬-೪೬) **೬.** ರಚನೆ; ಕ್ರಮ: ಅದರ ಅಷ್ಟಾಂಗದ ಇಟ್ಟಳವು ಹೇಗಿದೆ ಅದನ್ನು ಬಿಡಿಸಿ ನೋಡಬೇಕಾಗಿದೆ (ಸಾಹಿಸಂ. ೧೬). **ಇಟ್ಟಣ$_3$**: **೫.** ಬಸವಟ್ಟುದು ಚೆನ್ನಪಟ್ಟಣಂ ಪೊಸತಾಂಧ್ರಂಗೆ ಪೊದಟ್ಟುದಿಟ್ಟಣಂ (ಚಿಕವಿ. ೨-೭೭). **ಇಟ್ಟಣಿ**: **೧.** ಇಟ್ಟಣಿಯ [ಪಾಠಾಂ. ಇಟ್ಟಣಿಸಿ] ಬೀದಿಗಳಲುಱೆ ಕಂಗೆಟ್ಟು (ತೊರರಾ. ೫-೮-೭೮); ಕ್ಲೇಶಗಳಿಟ್ಟಣಿಯ ನೆಱೆ ಮುಱಿದು (ಅಮೃತ. ೧-೨೨). **ಇಟ್ಟಣೆ**: **೨.** ಧೂರ್ತತೆಯ ಹುತ್ತುವಾಸೆಯ ಗೊತ್ತು ಪಿಸುಣನಿಟ್ಟಣೆ ಲಜ್ಜೆಯಡವು ನಿಂದೆಯ ತವರು (ಕೈಕವ. ೧೮-೨).
**[ದೇ.॥ ತಮಿ. ಇಟ್ಟಳ; ತೆಲು. ಇಟ್ಟಲ]**

**ಇಟ್ಟಳ$_2$, ಇಟ್ಟಣ$_1$** (ಗು). ಮನೋಹರವಾದ; ಸುಂದರವಾದ; ಅತಿಶಯವಾದ: ಮೈಳಲದೇವಿಯುಮಂತೆ ರೂಪಿನಿಂದಿಟ್ಟಳವಾಗಿ (ಎಇ. XVIII, ೨೦೩-೧೮; 1076); ಇಟ್ಟಳಮಿಟ್ಟಱಿಮುಳಿಸಿಂದಿಟ್ಟಳ್ ಕವಿರಾಜಮಲ್ಲನಂ ಕಡೆಗಣ್ಣಳ್ ನಟ್ಟ ಬಱವಿಡಿದು ನನೆಗಣೆ ನಟ್ಟವೊಲಿರೆ ತಳದೊಳಡಸಿ ತೀವಿದ ನನೆಯಿಂ (ಲೀಲಾವ. ೧೩-೧೫೮); ಕುಂಕುಮದಿಂ ಕೆಂಕಮಾದಂಗವಟ್ಟದೊಳ್ ಬಿಂದುವಿಟ್ಟು ಕಿಱುವುಲಿಯ ಜೋಡಂ ತೊಟ್ಟಂತಿರಿಟ್ಟಳಮಾಗೆಯುಂ (ಅನಂಪು. ೨-೨೯); ಕಣ್ಗಿಟ್ಟಳವೆನಿಸಿದ ಬೆಳ್ಳಿಯ ಬೆಟ್ಟ (ಕಬ್ಬಿಕಾ. ೨೯೫). **ಇಟ್ಟಣ$_1$**: ಕಟ್ಟಿದ ಗುಡಿಗಳ ಮುಗಿಲಂ ಮುಟ್ಟಿದ ತೋರಣದ ನೆರೆದು ನೋಳ್ಪಬಲೆಯರೊಂದೊಟ್ಟಜೆಗಳ ಲಾವಣ್ಯಮದಿಟ್ಟಣಮೆನಿಸಿತ್ತು ಶಿವನ ಕಣ್ಗಂ ಮನಕಂ (ಗಿರಿಕ. ೧೦-೯೯); ತಿರುನಾವಲೂರೆಂಬುದದು ಪೊಗಳ್ವೊಡಿಟ್ಟಣಂ (ನಂಬಿರ. ೧-೯೪).

**ಇಟ್ಟಳಮಾಗು** = ಮನೋಹರವಾಗು; ಅತಿಶಯವಾಗು: ಅತಿಶಯಮಾಯ್ತು ಕಾಲ್ದುಱುಗಲಿಟ್ಟಳಮಾಯ್ತುರಚಲ್ಲಿ ಕೊಂದು ಕೂಗಿತು ಕಟಿಚಲ್ಲಿ ಸೂಸಕದ ನೂಪುರದಬ್ಬರಮಾದುದುಬ್ಬರಂ (ಕಾವ್ಯಾವ. ೬೧).
[?]

**ಇಟ್ಟಳಂ** (ಅ). ಅತಿಶಯವಾಗಿ; ವಿಶೇಷವಾಗಿ: ಸಂಚಳಿಸುವ ಚಾಮರಂ ಕನಕಪದ್ಮದ ಸೀಗುರಿ ತೊಟ್ಟ ಮಾಣಿಕಂಗಳ ಬೆಳಗಿಟ್ಟಳಂ ತನಗೊಡಂಬಡೆ (ಪಂಪಭಾ. ೪-೪೦); ಒಳ್ಪಿಟ್ಟಳಮಾಗಿರೆ ದಿವಿಜರ ದಿಟ್ಟಿಗೆ ಸೊಗಯಿಸಿತು ಮುಂದೆ ಮಂದರಶೈಳಂ (ಕಾವ್ಯಾವ. ೩೯೫); ದಾನಗುಣಮಿಟ್ಟಳಮಾಯ್ತು (ಎಕ. VI, ತರೀಕೆ. ೪೫-೫೫; 1196). [< ಇಟ್ಟಳ$_2$]

**ಇಟ್ಟಳಂಗಟ್ಟು** (ಕ್ರಿ). ಒತ್ತಾಗಿ ಕಟ್ಟು; ಗುಂಪಾಗು; ಸಂದಣಿಸು: ಸಂಪಗೆಯ ಕುಟ್ಮಳದಿನಿಟ್ಟಳಂಗಟ್ಟ ದಿಟ್ಟಗೆಸೆಯೆ ದಂಡೆಗಟ್ಟಿದ ಮಾಲತಿಯ ಮುಗುಳ ವನಮಾಲೆಗಳುಮಂ (ಜಗವಿ. ೬-೧೬ ವ).
[ಇಟ್ಟಳ$_1$ + ಕಟ್ಟು$_1$]

**ಇಟ್ಟಳಂಗೊಳ್** (ಕ್ರಿ). ನಿಬಿಡವಾಗು; ತುಂಬಿಹೋಗು: ಸುರಪತ್ತನಂ ಪಲಬರಿಂ ವೀರಭಟರಿಂದಿಟ್ಟಳಂಗೊಂಡುದೇನೆಂಬೆನು (ಶೀಷರಾ. ೧೭೧-೧೮). [ಇಟ್ಟಳ$_1$ + ಕೊಳ್$_1$]

**ಇಟ್ಟಳಮಿಡು** (ಕ್ರಿ). ಅಪವಾದ ಹೊರಿಸು; ಆಕ್ಷೇಪಿಸು: ರಾಮಸ್ವಾಮಿಯ ಭಾರ್ಯೆ ಸೀತಾದೇವಿಯೆಂಬೆನೆನ್ನಮೇಲೆ ಜನಪದಜನಂ ಪೊಲ್ಲನಪ್ಪ ರಾವಣನುಯ್ದುಳಂ ತಂದು ವಿಚಾರಿಸದೆ ಮಹಾದೇವೀಪಟ್ಟಂಗಟ್ಟುವುದಾವುಚಿತಮೆಂದಿಟ್ಟಳಮಿಟ್ಟು [ಪಾಠಾಂ. ಐಟ್ಟು] ನುಡಿಯೆ (ಪಂರಾಮಾ. ೧೫-೮೧ ವ). [ಇಟ್ಟಳ$_1$ + ಇಡು$_1$]

**ಇಟ್ಟಳಿಸು, ಇಟ್ಟಣಿಸು$_2$** (ಕ್ರಿ). **೧.** ಗುಂಪಾಗು; ಸಂದಣಿಸು; ಒತ್ತಾಗಿ ಸೇರು: ಬಲುಮ್ಮೆಮೆವಡೆದಿರ್ದ ಮತ್ತಮಾತಂಗನಿಟ್ಟಳಿಸಿದ ಜನಂಗಳಂ ತೂಳ್ದು (ಸೌಂದಪು. ೩-೧೪); ಭಟರು ನಡೆದಿಟ್ಟಳಿಸಿ ನಿಂದರು ಸರಿಸದಲಿ ರಘುರಾಜ ಸೈನಿಕದ (ತೊರರಾ. ೬-೧೩-೨೧); ಜೀವಲಹರಿಯ ಭೇದ ಒಡೆದು ಕಾಣಲಿ, ಅಭೇದದ ಕಟ್ಟಡವು ಇಟ್ಟಳಿಸಿ ಬರಲಿ (ಉಯ್ಯಾಲೆ. ೧೫-೧೧). **೨.** ಆಕ್ರಮಿಸು; ಮುತ್ತು: ಹಗೆ ಬಂದಿಟ್ಟಳಿಸಿದ ಪಂದೆಯವೊಲ್ಕೊಟ್ಟು ಕಜಂಗಿದುವು ಲೋಭಿಯಂತಿರೆ ಮೊಲೆಗಳ್ (ಅನಂಪು. ೧೨-೬೫); ಕಟ್ಟಳವಿಯಲಿ ವೈರಿರಾಯನನಿಟ್ಟಳಿಸಿ ಮುಱಿಯೆಸುತ ಬರಲಡಗಟ್ಟತಡೆದರು (ಕುವ್ಯಾಕ. ೧೧-೩೪). **ಇಟ್ಟಣಿಸು$_2$**: **೧.** ಕಲಿಗಳಿಟ್ಟಣಿಸಲುಳಿದಾಳುಗಳು ಹೇರಿಟ್ಟಯಂ ಪಿಡಿದು (ಹಚಕಾ. ೬-೭); ಸಂದಣಿಸುತಿಟ್ಟಣಿಸಿ ನೆರೆದಿಹ ಮಂದಿಯಲಿ (ಪ್ರಭುಲೀ. ೭-೨೮); ಕೊಲ್ಹಾರ ಬಂಡಿಗಳ ಮೇಲೆ ಸರಕಿಟ್ಟಣಿಸಿ ನೂಕಿದುದು (ಜೈಮಿಭಾ. ೭-೫); ಲಾವಣ್ಯಲತೆ ಬೆಳೆವಂತೆ ನರುಹರಿಯವಿಟ್ಟಣಿಸಿ ದಿನದಿನಕೆ ಬೆಳೆದು (ಕೊಟ್ಟೂಬ.೪-೧೧೨); ಶ್ರುತಿರುಹಂಗಳಿಂದಿಟ್ಟಣಿಸಿ ವನಮದೇನೊಪ್ಪಿರ್ದುದೋ (ಶೀಷರಾ. ೧೯೧-೬);

ನಕ್ಷತ್ರಗಳಿಂದ ಇಟ್ಟಣಿಸಿದ ತಾರಾಪುಂಜಗಳ ವಿಶಾಲಕ್ಷೇತ್ರಗಳನ್ನು ಈಕ್ಷಿಸುತ್ತಿರಲು (ಜ್ಯೋತಿರ್ವಿ. ೧೪೪). **೨.** ಇಟ್ಟಣಿಸಿದನು ಹಿಂದೆ ಕೃಪನಡಗಟ್ಟಿದನು ಸಮಸಪ್ತಕರು ಸಲೆ ಮುಟ್ಟಿ ಬಂದರು (ಕುವ್ಯಾಕ. ೧೪-೨೨); ತೊಟ್ಟನನಿಲಜ ಕೇಳ್ದು ಕೋಪದ ದಿಟ್ಟಿಯಲಿ ಕಿಡಿಗೆದಱಿ ಹರಿತಂದಿಟ್ಟಣಿಸಿ ಬೊಬ್ಬಿಱಿದು ತಿವಿದನು ತಿಣುಕಲಸುರೇಂದ್ರ (ತೊ ರ ರಾ. ೬-೨೭-೩೯) **೩.** ಒತ್ತಾಗಿ ಇಡು; ಮುದ್ದೆಮಾಡಿ ಇಡು; ಜೋಡಿಸು: ಹಂಚಿನೊಳಿಕ್ಕಿ ಸುಟ್ಟು ಪರಿಯಣಕೆ ತೆಗೆದು ಇಟ್ಟಣಿಸಿ ಸಲಗೆಯಿಂ ಚುಚ್ಚಿ . . . ಸಕ್ಕರೆಯುಮಂ ತಳಿದು ತೆಗೆದೊಡೆ ಚುಚ್ಚುರೊಟ್ಟಿಯೆಂಬೊಳ್ಳಿಸರವಡೆದು (ಸೂಪಶಾ. ೧-೧೦); ಒಲೆಯ ಮೇಲೆ ಹಸಿರಾದ ಬಿದಿರ ಹಗಱ[ವ]ನಿಟ್ಟಣಿಸಿ ಹಸರಿಸಿದ ಬಳಿಕವಱ ಮೇಲೆ ಚೆನ್ನಾಗಿ ಪಸರಂ ಮಾಳ್ಪುದು (ಸೂ ಪ ಶಾ. ೪-೮೨). **೪.** ತುಂಬಿ ಹೋಗು: ತಬ್ಬಿದ ವೇಳೆಯೊಳವಳುಬ್ಬಿದಳು ಮುಂದು ಹೆಬ್ಬಾಗಿಲಿಟ್ಟಣಿಪಂತೆ (ಭರಚ. ೧೪-೧೬೧). **೫.** ಹಿಗ್ಗು: ಮಣಿಮೂರ್ತಿಗಳೆನೆ ವರ ಸತ್ಯಭಾಮೆ ರುಕ್ಮಿಣಿ ವಸಂತಾಪೇಕ್ಷೆಯಲಿ ಫಣಿತಲ್ಪಂಗೆ ಬಿನ್ನೈಸಲು ಮನದೊಳಿಟ್ಟಣಿಸಿದ ಕೇಳಾಯತಾಕ್ಷಿ (ಮೋಹತ. ೧೪-೧೭). **೬.** ಮೀರು; ಅತಿಶಯವಾಗು: ಪವನನಂ ಪರಿಭವಿಸುವ ಮನಮನನುಗೆಡಿಸುವ ದಿಟ್ಟಗಳನಿಟ್ಟಣಿಸಿ ದಾಂಟುವ ಕಡುವೇಗದಿಂ ಮೆಱೆದು (೧ಂಕ. ೬-೫೫ವ); ಅಳವಿಗಿಟ್ಟಣಿಸಲು ಶರಾಳಿಯ ತುಳುಕಿಹೊಕ್ಕನು(ಕುವ್ಯಾದ್ರೋ. ೨-೪೩). **೭.** ಇಡು; ಹೊಂದಿಸು; ಸೇರಿಸು: ಹೊಂಗೈಪಿಡಿ ಗಲ್ಲದೊಳು ಚಂದಳಿಗೆ ಕೈಯನಂಗನೆ ಇಟ್ಟಣಿಸಿದಳು (ಶ್ರೀಪಾಲ. ೨-೨೯).

[ಇಟ್ಟಳ$_1$ + – ಇಸು$_3$]

**ಇಟ್ಟಾಟ$_1$** (ನಾ). ಎಸೆದಾಟ; ಈಡಾಡುವಿಕೆ; (ಟೋಪಿ ಮೊದಲಾದುವುಗಳನ್ನು ಒಬ್ಬರಿಂದೊಬ್ಬರಿಗೆ ಎಸೆದು ಆಡುವ) ಒಂದು ಬಗೆಯ ಆಟ: ಸಮರವು ಕಡುಬಿನಿಟ್ಟಾಟವೇ (ಕೋಗಯ. ೨೨-೬೧).

[ಇಟ್ಟಾಡು + -ಟ$_2$]

**ಇಟ್ಟಾಟ$_2$** (ನಾ). (ದಕ). ಕಷ್ಟ; ತೊಂದರೆ: ಜೀವನ ಇಟ್ಟಾಟವಾಗಿ ಹೋಯ್ತು (ರೂಢಿ). [ಇಟ್ಟು$_1$ + ಆಟ]

**ಇಟ್ಟಾಡು** (ಕ್ರಿ). ಎಸೆದಾಡು; ಚೆಲ್ಲು: ತುಳ್ಕಾಡಿದರಿಟ್ಟಾಡಿದರೀಸಾಡಿದರಮುರ್ದಾಡಿದರ್ ಸರೋಜಾನನೆಯರ್ (೧ಂಕ. ೪-೩೨); ಮಂದಗಾಮಿನಿಯರೀರ್ವರ್ ಕಂಠಗತಜಲದೊಳೊಂದಿ ತಿಳಿನೀರನಿಟ್ಟಾಡುತ (ಪದ್ಮರಾ. ೮-೪೮); ಕರಸಂಧಾನಗಳ ಶೈಲಗಳ ಸುಭಟನಿಧಾನರಿಟ್ಟಾಡಿದರು ಹರಿಹರಿದಶ್ವರಬ್ಬರಿಸೆ (ತೊರರಾ. ೩-೪-೧೬); ಥಟ್ಟಪಟ್ಟನೆ ತಿವಿದೊಬ್ಬರೊಬ್ಬರ ತೆಗೆದಿಟ್ಟಾಡಿ ಕೆಡೆದರತ್ತಿತ್ತ (ಭ ರ ಚ. ೨೦-೪೦); ಹೆಡ್ಗೇಲ್ಹಣ್ಣೂ ಬಂದೊ ಗಡ್ಗೇಲ್ತುಪ್ಪಾ ಬಂದೊ ಇಟ್ಟಾಡಿ ಬಂದೊ ಇಡಗಾಯಿ (ಹುಟ್ಟಿಹ. ೫೮); ಹಣ್ಣುಹಂಪಲು ಹೂವು ಮೊದಲಾದ ಕಾಣಿಕೆಗಳು ಇಟ್ಟಾಡಿ ಹೋಗುತ್ತಿದ್ದವು (ದಿನಾಂ. ೨). [ಇಟ್ಟು$_2$ (< ಇಡು$_1$) + ಆಡು$_1$]

**ಇಟ್ಟಾಣಿ** (ನಾ). ಇಕ್ಕಟ್ಟು: ನಾನಾ ಬೆಟ್ಟಗಳಲ್ಲಿ ಇಟ್ಟಾಣಿ ಫಣಿಯಲ್ಲಿ ಇಕ್ಕಿತು ಜೇನು ತನ್ನ ಸುಖಕಾಗಿ (ಪುರಂದ. ೩-೬೭-೩).

[< ಇಟ್ಟಣಿ ?]

**ಇಟ್ಟಿ$_1$, ಇಟ್ಟೆ$_1$** (ನಾ). ಹಳದಿ ಬಣ್ಣದ ಕಹಿಕಾಯಿ ಬಿಡುವ ಒಂದು ಜಾತಿಯ ಮರ; ಕಾಜಿವಾರದ ಮರ: ಇಟ್ಟಿಯ ಹಣ್ಣಿನಂತೆ ಹೊಱಗೆ ಬಟ್ಟತ್ತಾದರೇನಯ್ಯಾ ಒಳಗಣ ಕಹಿ ಕಳೆಯದನ್ನಕ್ಕ (ಆ ದ ವ. ೧೭೯); ಅಡವಿಯಲಿ ನಯವೆತ್ತು ಬೆಳೆದಿಟ್ಟಿಯಮರಂಗಳು ಪಿರಿದು ಫಲಮಾಗಿ (ಬಸಪು. ೩೨-೬); ಮುಷ್ಟಿಚೌಡಯ್ಯಗಳು . . . ನಟ್ಟಡವಿಯೊಳ್ ಬರುತಯಿಟ್ಟಿಪಣ್ಣುಗಳಿರಲು ಮುಟ್ಟಿಸಲು ಸುರಗಿಯಿಂದಮೃತಫಲಮಂ ಮಾಡಿಸಲಿಸಿದನು ಶಿವಲಿಂಗಕೆ (ಲಶಿಚಿಂ. ೩೭-೬೭); ಪೊಂಗಿದಿಟ್ಟಿಯ ಬೀಜದ ಹೇಱು ನಡೆದವಾ ಭಂಗನೇಮಿಯ ದಂಡಿನೊಡನೆ (ಕುರಾಸಾಂ. ೧೯-೧೦); ಕಣ್ಣುದೃಷ್ಟಿ ಕೆಟ್ಟರೆ – ಅಂಕೋಲೆಯ ಬೇರು, ಇಟ್ಟಿಯ ಬೀಜ, ಈ ೨ ತಂದು ತೇದು ಕಣ್ಣಿಗಿಕ್ಕಲು ಚಳುಕು ತೀರ್ಗುಂ (ವಿವೈವಿ. ೧೫೧); ನಡುವೂರೊಳಗಿರ್ಪಿಟ್ಟಿಯೊಳಡಕಿಲ್ಗೊಂಡೆಸೆವ ಪಣ್ಗೆ ಪಾಸಟಿಯಕ್ಕುಂ (ನೀತಿಮಂ. II, ೩೪೮). **ಇಟ್ಟೆ$_1$**: ಇಟ್ಟೆಯ ಹಣ್ಣ ನರಿ ತಿಂದು ಸೃಷ್ಟಿ ತಿರುಗಿತ್ತೆಂಬಂತೆ (ಬಸವ. ೫೭೮); ಮಾವಣ್ಗಳಂ ಪೀರ್ವ ಕೀರವಿಟ್ಟೆಯ ಪಣ್ಗೆ ಚಿತ್ತಂ ಹಾರಿದಪುದೇ (ಬಸಪು. ೧೧-೧೧); ವಿಸ ಹೊಲ್ಲ ಇಟ್ಟೆಯಾ ಕುಸಿ ಹೊಲ್ಲ ಕಟ್ಟಡದ (ಸರ್ವಜ್ಞ. ೧೧೫೫).

**ಇಟ್ಟಿಯಮರ** = ಕಾಜಿವಾರದ ಮರ: ಬಟ್ಟೆಯೊತ್ತಿನೊಳಗಿಟ್ಟಿಯ ಮರಂಗಂಡವಱ ಫಲಕೆ ಚಿತ್ತವಿಟ್ಟವು (ಸಿದ್ಧೇಪು. ೧೧-೪೭); ಫಲಭರಿತ ಮಾಗಿದಿರೊಳಿಟ್ಟಿಯಮರಂಗಳಿಗೆ (ಪಾ ಸೋ ಪು. ೪-೭೭). **ಇಟ್ಟಿಯ ಹಣ್ಣು** = ಇಟ್ಟಿಮರದ ಹಣ್ಣು: ಸೊಡ್ಡಳ ದೇವನ ಶುಭವಪ್ಪ ನೋಟದಿಂದ ಇಟ್ಟಿಯ ಹಣ್ಣುಗಳು ಸಿಹಿಯಾದುವು (ಚೆನ್ನವ. ಕ. ೪೬೭); ಕಲ್ಪತರುವಿನಗ್ರದಲ್ಲಿ ಇಟ್ಟಿಯ ಹಣ್ಣಾಯಿತ್ತು ಯಿಟ್ಟಿಯ ಹಣ್ಣು ತೊಟ್ಟುಬಿಟ್ಟು ಬಿದ್ದಲ್ಲಿ ಅಮೃತಮಯವಾಯಿತ್ತು (ಅಱಿಮಾ. ೯೯).

[ದೇ. ‖ ತಮಿ. ಅಟ್ಟಿ; ಎಟ್ಟಿ]

**ಇಟ್ಟಿ$_2$, ಈಂಟಿ, ಈಟಿ** (ನಾ). ಮೊನೆಯಾದ ಸಲಾಕೆಯಂತಿರುವ ಒಂದು ಆಯುಧ; ಶಲ್ಯ; ಬರ್ಚಿ; ಬರ್ಜಿ: "ಇಟ್ಟಿ ಮೊದಲಾದುದು ಮುಕ್ತಾಮುಕ್ತಮೆಂಬುದು" (ಹಲಾಯು. ೭೬-೩೦೯); ಕೊಂತಂಗಳಿಂದಮಿಟ್ಟಿಗಳಿಂದಂ ಕರುಳ್ಗಳಂ ಸೋರೆ ಕುತ್ತುವುದುಂ (ವಡ್ಡಾರಾ. ೯೬-೨೮); ನಡುವ ಸರಲ್ಗೆ ಮೆಯ್ಯೊಳಗಡಂಗುವ ಸಂಕುಗೆ ದಿಂಕುಗೊಳ್ವ ಕಕ್ಕಡೆಗಿದಿರುರ್ಚುವಿಟ್ಟಿಗೆ . . . ನೊಂದು ಬಾಯ್ವಿಡದಿನಿಸಪ್ಪೊಡಂ ಪೆಳಱದಳ್ಕದೆ (ಪಂಪಭಾ. ೧೦-೯೪); ಕೊಂತಗಾಱರ ತಿಂತಿಣಿಯ ನಡುವೆ ಪಿಡಿದ ವಜ್ರಮುಷ್ಟಿಯ ಮಸೆದಿಟ್ಟಿಯೆಸೆವ ಗಂಡಗತ್ತಿಯ (೧ಂಕ. ೬-೫೫ ವ); ತೆತ್ತಿಸಿದ ರಿಟ್ಟಿಯಲಿ ಭೀಮನ ಮುತ್ತಿ ಕೈಮಾಡಿದರು (ಕುವ್ಯಾಕ. ೧೩-೧೬); ಮುಸಲ ಮುದ್ಗರತತಿಗಳಿಟ್ಟಿಗಳ್ ನುಚ್ಚುನೂಱಾದುವು (ಚಿ ಬ ಪು. ೪೪-೧೩). **ಈಂಟಿ**: ಎಮ್ಮಯ್ಯಂ . . . ಪೇಳ್ದಂತೆ ನೆಗೞ್ವೆನೆಂದು ಕಿಱಿಯ ಬಿಲ್ಲುಮಿಾಂಟಿಯುಮಂ [ಪಾಠಾಂ. ಬಿಲ್ಲಂ ಮಿಾಂಟಿಯುಮಂ] ಕೊಂಡು ಪೋಗಿ (ಜೀವಸಂ. ೧೩೪-೩೧ ವ). **ಈಟಿ**: ಇಟ್ಟಿರೀಟ [ಪಾಠಾಂ. ರಿಟ್ಟಿ]ಯಲೆತ್ತಿದರು (ತೊ ರ ರಾ. ೫-೪-೨೦); ಇರಾವಂತನು ರಕ್ತಸಿಕ್ತಾಂಗನಾಗಿಯೂ ವ್ಯಥೆಪಡದೆ ಈಟಿಗಳಿಂದ ತಿವಿಯಲ್ಪಟ್ಟು ಕೆರಳುವ ಮದ್ದಾನೆಯ ತೆರದಿಂದ (ಕೃವಾಭೀ. ೧೩೯); ಹೃದಯಕ್ಕೆ ಈಟಿಯಿಟ್ಟಂತಾಯಿತು (ಆಲಹೂ. ೧೧೩).

[< ಸಂ. ಯಷ್ಟಿ. / ತಮಿ. ಮಲ. ಇಟ್ಟಿ]

**ಇಟ್ಟಿ$_3$** (ನಾ). ಯಾಗ; ಯಜ್ಞ; ಹೋಮ: "ಇಷ್ಟಿಃ – ಇಟ್ಟಿ" (ಕಾಶಕ್ಕ. ೫೭). [< ಸಂ. ಇಷ್ಟಿ]

**ಇಟ್ಟಿಗೆ** 'ಇಟ್ಟಗೆ$_1$' ನೋ.

**ಇಟ್ಟಿಗೆಗೂಡು** (ನಾ). ಇಟ್ಟಿಗೆಗಳನ್ನು ಸುಡುವ ಗೂಡು: ಇಟ್ಟಿಗೆ ಗೂಡಿನಿಂದ ಇಟ್ಟಿಗೆ ಹೇರಿಸು (ರೂಢಿ).

[ಇಟ್ಟಿಗೆ (< ಇಟ್ಟಗೆ$_1$) + ಗೂಡು]

**ಇಟ್ಟಿಗೆಗೊಳ್** (ಕ್ರಿ). **೧.** ಇಟ್ಟಿಗೆಯನ್ನು ಶೇಖರಿಸು. **೨.** ಇಟ್ಟಿಗೆಯನ್ನು ಕೊಂಡುಕೊ: ಪುರವರೇಶನ ಮಾಡಿದ ಚೈತ್ಯಕ್ಕಿಟ್ಟಿಗೆಗಳ್ ಬರೆ ನೋಡಿ ಕಲ್ಲುರಿಗನೊಯ್ಯನೆ ಪೂರಿಗೆಗೊಟ್ಟೈದಾಱನೆ ಕೊಂಡವನಱಿಯಿಂದೊರಸಿ ನೋೞ್ಪುದುಮೊಂದವಱೊಳ್ ಪೊನ್ನಿಟ್ಟಿಗೆಯಾದೊಡೆ ರಾಗದಿಂ ಪಿರಿದು ಬಿಟ್ಟಿಯವಂದಿರ ಕೈಯಿಂದಿಟ್ಟಿಗೆಗೊಂಡವನೊಟ್ಟಿದಂ (ಆದಿಪು. ೫-೧೯); ಮತ್ತೊಂದು ದಿವಸಂ ತನ್ನ ಮಗಳ ಕೆಲದೂರ್ಗೆ ಪೋಗುತ್ತುಂ ತನ್ನ ಮಗಂಗಿಟ್ಟಿಗೆಗೊಳ್ವ ಬೆಸನಂ ಪೇೞ್ದೊಡೆ (ಚಾವುಂಪು. ೩೮-೫). [ಇಟ್ಟಿಗೆ (< ಇಟ್ಟಗೆ$_1$) + ಕೊಳ್$_1$]

**ಇಟ್ಟಿಗೊಳ್** (ಕ್ರಿ). ಈಟಿಯಿಂದ ಚುಚ್ಚು, —ತಿವಿ : ಬಳಿಕ ಬಲ್ಲಾಳಿಟ್ಟಿಗೊಂಡಂತೆ ಯಮದಂಡನುಳಿವು ತನಗಿನ್ನಿಲ್ಲ ಕಟ್ಟೊಡೆಯನೇ ಪಿರಿದು ಮುಳಿದನೆನುತಿರಲು ಮಱುದಿನದೊಳವನಂ ಕರಸಿ (ಸಮ್ಯಕೌ. ೨–೪೯).
[ಇಟ್ಟಿ$_2$ + ಕೊಳ್$_1$]

**ಇಟ್ಟಿಗೋಲು** (ನಾ). ಈಟಿಯ ಕೋಲು ; ಬರ್ಚಿಕೋಲು : ನೀಲಗಿರೀಂದ್ರನ ತಡೆದರು ಪೊಳೆವಿಟ್ಟಿಗೋಲ ಮೊನೆಯ ಮುಂದು ಮಾಡಿ (ನಾಗಕು. ೭–೧೧) ; ಆ ಹುಡುಗಿಯ ಅಂತರ್ಗೃಹಕ್ಕೆ ಅವನ ಗುರಿತನದ ಆ ನಿಡಿದಾದ ಇಟ್ಟಿಗೋಲನ್ನುಯ್ಯುದಾಗದು (ಬೆಟ್ಟಅ. ೧೫–೧೭).
[ಇಟ್ಟಿ$_2$ + ಕೋಲು$_1$ (< ಕೋಲ್$_1$)]

**ಇಟ್ಟಿದಿರು** (ನಾ). ತೀರ ಸಮೀಪ ; ಸಮ್ಮುಖ.
**ಇಟ್ಟದಿರಾಗು** = ತೀರ ಸಮೀಪವಾಗು; ಸಮ್ಮುಖವಾಗು: ಇಟ್ಟದಿರಾಗಿ ತಂದರು ಹೊನ್ನ ಹರಿವಾಣದಿಟ್ಟ ನೈವೇದ್ಯಸಂಕುಲವ (ಮೋಹತ. ೪೨–೪೬). [< ಇಡಿದು + ಇದಿರು (< ಇದಿರ್)]

**ಇಟ್ಟಿಯಾಳು** (ನಾ). ಈಟಿಯಿಂದ ಯುದ್ಧಮಾಡುವ ಆಳು ; ಈಟಿಯನ್ನು ಹಿಡಿದಿರುವ ಬಂಟ : ಅಟ್ಟಕ್ಕುವಾಕೆಯೊಳು ಬೆಟ್ಟತ್ತು ಹಗೆ ಬೇಡ ಸಟ್ಟುಗದಿ ಗೋಣ ಮುಱಿಯುವಳು ಅಲಗಿಲ್ಲದಿಟ್ಟಿಯಾಳವಳು (ಸರ್ವಜ್ಞ. ೧೫೬೧). [ಇಟ್ಟಿ$_2$ + ಆಳು$_3$ (< ಆಳ್$_3$)]

**ಇಟ್ಟಿವೀಸು** (ಕ್ರಿ). ಈಟಿಯನ್ನು ಬೀಸು : ಲಿಂಗಣ್ಣ :— (ಇಟ್ಟಿವೀಸುವನು) ಎಲ್ಲರೂ :— (ಕುಳ್ಳಿರುವರು) (ಬೆಟ್ಟಅ. ೨೦೦–೧೩).
[ಇಟ್ಟಿ$_2$ + ಬೀಸು$_1$]

**ಇಟ್ಟಿಸು** (ಕ್ರಿ). ದೃಷ್ಟಿಸಿ ನೋಡು ; ದಿಟ್ಟಿಸು (?) : ಮುನದಣಿವನ್ನ ದಾನವಮನಿತ್ತು ಭೂಸುರಜನಕೆ ಜನಪ ಪುಳಕಗಳೇಳ್ಗೆ ತನುವನಡರೆ ನಡೆತಂದಿಟ್ಟಿಸಿದನು ತನಯನ ಕಣ್ಮನಕಿನಿಯನಾ (ಸೊಬಸೋ. ೪–೨೦) ; ಕಣ್ಗೊನೆಯೊಳಿಟ್ಟಿಸುತಿಚ್ಚೆಯಱಿತು ಇನಿವಾತಿನಿಂದ ಸೋಲಿಸಿ ಕೂಡಿಯವನಿಂದ ಘನಸುಖವಡೆಯಬೇಕಬಲೆ (ಕಂನವಿ. ೯–೧೫೫) ; ಕಟ್ಟೆ ಕೆಡಪುವೆನೆನುತ್ತಿಟ್ಟಿಸುತೆ ಬರಲಕ್ಕಿ ನೆಟ್ಟಗವನಿಯೊಳೆ ಕುಂಬಿಟ್ಟು ಬಲವಂದು (ಕೊಟ್ಟೂಬ. ೧೭–೧೮) ; ಪಥಿಕ ಬೆರಗಿಂದಲಿ[ಪಾಠಾಂ. ದಿ]ಟ್ಟಿಸಿದನು (ವೆಂಕಾರಾ. ೧–೪–೫೬) ; ಕಷ್ಟಕನುಸರಿಯಾದ ಪಾಂಡವರಿಟ್ಟಿಸಲಿ ನಿಜಸಿರಿಯನೆಂದಡಿಯಿಟ್ಟ . . . ಕುರುರಾಯ (ಜಿನಭಾ. ೪೭–೨೧).
[< ನಿಟ್ಟಿಸು ?]

**ಇಟ್ಟು$_1$** (ನಾ). ನಿಬಿಡತೆ ; ಸಾಂದ್ರತೆ (ಕ).
[?. / ತಮಿ. ಇಟ್ಟಿಮೈ = ಚಿಕ್ಕದು, ಇಕ್ಕಟ್ಟಾದುದು]

**ಇಟ್ಟು$_2$** 'ಇಡು$_1$' ಪರಾ.

**ಇಟ್ಟುಗಣೆ** (ನಾ). (?) : ತಿರುಮಣಿಯನಿಡದವನ ಮುಖವನಾ ಮಿಕಚೆಲ್ವ ತಿರುಮಣಿಯನಿಡದವನ ಹಣೆಯಿಟ್ಟುಗಣೆ ತಿರುಮಣಿಲ್ಲದ ಆಸ್ಯ ಅಪಹಾಸ್ಯವೂ (ತಿರುಶ. ೭–೧೩). [ಇಟ್ಟು ? + ಕಣೆ]

**ಇಟ್ಟುಬೀಸು** (ಕ್ರಿ). ಒಂದು ಬಗೆಯ ಕತ್ತಿವರಸೆ (?) : ಸ್ಥಾನದಲ್ಲಿ ಪೂರ್ವದಹಾಗೆ ನಿಂತು ಶೀಘ್ರಗಮನದ ಮೊದಲಲ್ಲಿ ಬಂಡಿಕೋಲನ್ನು ಮೂರು ಬಾರಿ ತಿರುಗಿಸಿ ತಾನು ತಿರುಗಿ ಮುಂದುಗಡೆಯಲ್ಲಿ ಬಂಡಿಕೋಲನ್ನು ಮೊನೆ ಕೆಳಗಾಗಿ ಮಾಡಿ ಬಲದ ಹಸ್ತದ ಕೆಳಗೆ ದೃಷ್ಟಿಬೀಳುವುದು ಅವದು ಮಾಡಲು ತಕ್ಕಂಥಾದು ಅದರ ಹೆಸರು ಇಟ್ಟುಬೀಸುವುದು (ಖಡ್ಗಟೀ. ೫–೨೫). [< ಇಡು$_1$ + ಬೀಸು$_1$]

**ಇಟ್ಟೆ$_1$** 'ಇಟ್ಟಿ$_1$' ನೋ.

**ಇಟ್ಟೆ$_3$** (ನಾ). ಬೇಕಾದವಳು ; ಇಷ್ಟಳಾದ ಹೆಂಗಸು : ರೊಟ್ಟಿಯಿಲ್ಲದ ಊಟ ಹೊಟ್ಟೆಗಿಲ್ಲದ ಕೂಟ ಇಟ್ಟೆಯರಿಲ್ಲದರಮನೆಯು ಚಂದನವ ಕುಟ್ಟಿ ಕುಡಿದಂತೆ (ಸರ್ವಜ್ಞ. ೭೪೯). [< ಸಂ. ಇಷ್ಟಾ]

**ಇಟ್ಟೆಡೆ, ಇಟ್ಟಡೆ** (ನಾ). ೧. ಇಕ್ಕಟ್ಟು ; ಸ್ಥಳ ಸಾಲದ ಸ್ಥಿತಿ ; ಸಂದು : ಪೊಯ್ವ ಪೊಯ್ಗಳಿಂ ನೆಗೆದು ಮುಗಿಲ್ಗಳಿಟ್ಟೆಡೆಗಳೊಳ್ ತಲೆಗಳ್ ತೊಡರ್ದಿರ್ದ ಜೀನ ಪುಟ್ಟಿಗಳನೆ ಪೋಲ್ತುವು (ಪಂಪಭಾ. ೧೦–೮೦) ; ಅಟ್ಟಿಯ ಬೆಟ್ಟಘಟ್ಟದಿಟ್ಟೆಡೆಗಳೊಳ್ ನಿಟ್ಟಿಸಿಯುಂ (ಗದಾಯು. ೬–೨೮ ವ) ; ಗುಡಿ ಗೂಡಾರಂಗಳೊಳಂ ಬೆಟ್ಟಾಗೊಟ್ಟಿರ್ದ ಪೇಱಿನಿಟ್ಟೆಡೆಗಳೊಳಂ (ಧರ್ಮಾಮೃ. ೬–೧೦೪) ; ಎಡೆಗಿಱಿದಬಲೆಯ ಮೊಲೆಯಿಟ್ಟೆಡೆಯೊಳ್ ಕೆಳೆ[ಪಾಠಾಂ. ಕೊಳ]ಗೊಂಡು ನಿಂದುವಲ್ಲದೆ ನುಸುಳಲ್ ಪಡೆಯವು ಮದನಾಸ್ತ್ರಗಳ್ (ಅರ್ಧನೇ. ೩–೨೩) ; ನಡು ಸಣ್ಣ ಮುಡಿ ತೋರ ತೊಡೆ ನುಣ್ಪು ಮೊಲೆಗಳಿಟ್ಟೆಡೆಯೆಂದರರೆ ಬಾಯಬಿಟ್ಟು (ಭರಚ. ೨–೫೦) ; ದೀಪಮಾಲಿಕೆ . . . ಈ ಕಗ್ಗಾಡಿನ ಇಟ್ಟೆಡೆಯಲ್ಲಿ ಅರಿಹೋದುದೆಂದರೆ ಸ್ವಾಭಾವಿಕವಲ್ಲ (ವೀರಬಂ. ೨೧). ೨. ಅನಿವಾರ್ಯತೆ ; ಕಷ್ಟ ; ಬಾಧೆ ; ಬಿಕ್ಕಟ್ಟು : ಅನ್ವಯಾಗತ ನಭೋಗತಿಗಳ್ ಬಿಲ್ಲಂ ಸರಳ್ಗಮಣ್ಮುಗೆಟ್ಟುಮಿಟ್ಟೆಡೆಯುಮಾಗಿ ತೊಟ್ಟನೆ ನೆರೆದುರುಳೆ (ಶಾಂತಿಪು. ೪–೩೩ ವ) ; ಬೞಿಕೆ ಗಂಟಲಂ ಮೆಟ್ಟಿದೊಡಿಟ್ಟೆಡೆಯೊಳ್ ಕೊಟ್ಟಂ ಗೆಲ್ಲಂಗುಡುವಂತೆ ನರಂಗೆ ಪಾಶುಪತಮಂ ರುದ್ರಂ (ಗದಾಯು. ೩–೩೯) ; ಶರಣರಿಟ್ಟೆಡೆಗಳನು ಶರಣರಾಪತ್ತುವನು ಶರಣರಿಗೆ ಮುನಿವ ಕಡುಪಾತಕರನು ಒರಸುವುದು ಕಡಿದು ಕತ್ತರಿಸುವುದು . . . ಶ್ರೀ ಪಂಚಾಕ್ಷರಿ (ಶಿವಗೀ. ೧೫–೫೫). ೩. ಗುಂಪು ; ಸಂದಣಿ ; ಸಾಂದ್ರತೆ : ವಿಭ್ರಮಂಬಡೆದ ನಿಜಾಸ್ಯಪಂಕ್ತಿಗಳಿನಿಟ್ಟೆಡೆಯಾಗಿರೆ ಪಣ್ಯವೀಥಿಯೊಳ್ ನಡೆದುದು ಪೆಂಡವಾಸಂ (ವರ್ಧಪು. ೫–೩೯) ; ತೆಂಗಿನತಿಂತಿಣಿಯುಂ ಕದಳಿಯ ಕಂಟಿಯುಂ ದಾಡಿಮದೊತ್ತರಮುಂ ಈಳೆಯಿಟ್ಟೆಡೆಯುಂ . . . ಅಸುಗೆಯ ಕುತ್ತುಱುಂ ಕ್ರಮುಕದ ಸಮೃದ್ಧಿಯುಂ . . . ಎನಿಸಿದ ದೇವರಮಣೋದ್ಯಾನಮಂ (ಶಾಂತೀಶ್ವ. ೧೦–೭೮ ವ) ; ಪವನಜನಿಟ್ಟೆ[ಪಾಠಾಂ. ಟ್ಟ]ಡೆಯ ಭಕ್ತಿಯಲಿ ಭಾಳವ ಚಾಚಿದನು ಪದಕೆ (ತೊರರಾ. ೪–೮–೧೬) ; ಅಬಲೆ ಕಂಡಳು ಮುಂದೆ ಹೊಳೆಹೊಳೆವ ದೃಷ್ಟಿಗಳು ಕೋರೆವಿಸಲೆಡಬಲದಿಟ್ಟೆಡೆ [ಪಾಠಾಂ. ಟ್ಟಡೆ]ಯ ಕಮಲಜ ಸುರೇಂದ್ರರ ಬಿಟ್ಟ ಬೀದಿಯ ಬಹಳ ತೇಜದ ತೆರಳಿಗೆಯ ಶಿವನ (ನಿಭಾಗ. ೪–೫–೬೨) ; ಮೆಟ್ಟಾಸೆ ಕಾಲಿಂಗೆ ಹೊಟ್ಟಾಸೆ ಅವಿಂಗೆ ಬೆಟ್ಟಗಳ ಆಸೆ ಮೃಗಗಳಿಗೆ ಹರದಂಗೆ ಇಟ್ಟೆಡೆಗಳಾಸೆ (ಸರ್ವಜ್ಞ. ೧೪೨೨). ೪. ಸಮೀಪ ; ಹತ್ತಿರ : ಒರ್ಮೆ ನನೆಯಂಬಂ ತನ್ನ ಮೇಳದ ಕೆಳೆಯನಪ್ಪ ನಗೆಗಾಱನಂ ಬೞಿಯಟ್ಟ ಬರಿಸಿ ಪಸಾಯ್ತರೆಲ್ಲರುಂ ಬಗೆಯಱಿದಿಟ್ಟೆಡೆಯಂ ತೊಲಗಿ ಪೋಗೆ ಕೆಲಕ್ಕೆ ಕರೆದು (ಕಬ್ಬಿಕಾ. ೬೨) ; ಇಂತು ಕರಮೊಪ್ಪುವ . . . ಕರ್ಗಲ್ಲ ಕರ್ವಟ್ಟಮನಿಟ್ಟೆಡೆಯೊಳ್ ದಿಟ್ಟಿಸಿ ಸುಮಿತ್ರಾತ್ಮಜಂ (ರಾಮಾಶ್ವ. ೭೩–೨೩). **ಇಟ್ಟೆಡೆ** : ೧. ಯಾನಮೇಂ ಕೀಱಿದುದೋ ನಭಃಪ್ರಸೃತಿಗಿಟ್ಟೆಡೆಯಿಟ್ಟಡೆಯಾದುದೆಂಬಿನಂ (ಶಾಂತಿಪು. ೨–೮೨). ೨. ತನಗಿಟ್ಟಡೆ [ಪಾಠಾಂ. ಗಿರ್ದಡೆ]ಯಾದಡೆ ಸುರಮುನಿಯೊರ್ವಂ ನಾಯಮಾಂಸಮಂ ಪೇಸದೆ ಸೇವನೆ ಮಾಡಿ ತಪಂಗೆಯ್ದಾತನೆ ಪೋದಂ ಮುಕ್ತಿಗೆಂಬರ್ (ಸಮುಪ. ೧೦–೧೧೫) ; ಸರ್ವಾಂಗವಿಟ್ಟೆಡೆಯ ಹೃತ್ಕುಂಭದಿ ಘನಮಾತೆಯವಯವದ ಜಠರಾಗ್ನಿಯಿಂ ಬೇವುತನುಭವಿಪ ದುಃಖಕೋಟಿಗಳ ಸಂತಾಪದಿಂ (ಲಶಿಚಂ. ೩೯–೩೯).

**ಇಟ್ಟೆಡೆಯಾಗು** = ೧. ಕಿಕ್ಕಿರಿ ; ತುಂಬಿಹೋಗು : ನಿಲುಕಲಿಟ್ಟೆಡೆಯಾದ ಹೆಣನನು ತುಳಿದು ರಣದಲಿ ಕುಣಿವ ಮುಂಡವನೆಳೆದು (ಕುವ್ಯಾಭೀ. ೪–೩೧). ೨. ಇಕ್ಕಟ್ಟಾಗು ; ಸ್ಥಳ ಸಾಲದೆ ಹೋಗು : ಅರಿರಾಯರಿಗೆ ದಿಗುವಳಯವಿಟ್ಟೆಡೆಯಾಗೆ ರಥಹಯ ದಳವುಳಕೆ ಕುರುಸೇನೆ ನಡೆದುದು (ಕುವ್ಯಾದ್ರೋ. ೧–೪೫).

[< ಇಡಿದು$_3$ + ಎಡೆ. / ತಮಿ. ಇಟ್ಟಡೈ = ಚಿಕ್ಕದಾಗಿರುವಿಕೆ, ವಿಘ್ನ]

**ಇಟ್ಟೆಡೆಗೊಳ್** (ಕ್ರಿ). ಒತ್ತೊತ್ತಾಗಿರು ; ಸಂದಣಿಸು : ತಳರ್ನುಡಿಯಡಿಗಡಿಗೊಡನೊಡನಿಟ್ಟೆಡೆಗೊಂಡಿರೆ ನುಡಿದನಾಗಳಾ ಚರಮುಖ್ಯಂ (ರಾಜಶೇ. ೬-೩೩). [ಇಟ್ಟೆಡೆ + ಕೊಳ್$_1$]

**ಇಟ್ಟೇವು** (ನಾ). ಒಂದು ಬಗೆಯ ಗಿಡ : ಇಬ್ಬನೆ, ಪರಲೆ, ಇಟ್ಟೇವು, ಇಸಗ, ಮದರಾಸ್ ಮಲ್ಲಿಗೆ (ಮೈಔಗಿ. ೨೩-೪೧೮). [?]

**ಇಟ್ಲೆ** (ನಾ). (ಉಕ). ಗೂಳಿಯ ಅಥವಾ ಹೋರಿಯ ಗುಟುರು : ಮುದಿಯೆತ್ತು ಇಟ್ಲೆಹೊಡೆಯುವುದನ್ನು ಬಿಟ್ಟಿಲ್ಲ (ರೂಢಿ). [?]

**ಇಡಂಕು, ಇಟುಕು, ಇಡುಕ್ಕು, ಇಡುಗ್ಗು** (ನಾ). ೧. ಸಂದು ; ಬಿರುಕು ; ಇಕ್ಕಟ್ಟಾದ ಪ್ರದೇಶ (ಕ). **ಇಟುಕು** : ೧. 'ಇಟುಕು ಮನೆ' ಪರಾ. **ಇಡುಕ್ಕು** : ೧. ರಥಸಂದೋಹದಿಡುಕಿನೊಳ್ ಬೆದಕಿನೋಡಿ (ಚಬವು. ೪೦-೨೮); ಅಂದಿನಂತೆಯೇ ಇಂದೂ ಒಂದು ಹೊಳೆ ಪರ್ವತದ ಇಡುಕಿನಲ್ಲಿ ಕಣ್ಮರೆಯಾಗುತ್ತಿತ್ತು (ಕಾನೂರು. ೩). ೨. ಇಡುವಿಕೆ : ಮುಖದಿ ಬೆಮರಿಡುಕನಾರಿಸುತ (ವೆಂಕಾರಾ. ೫-೬-೪೮). ೩. ದನಕರುಗಳ ಒಂದು ರೋಗ (ಉಕ. ಕ). **ಇಡುಗ್ಗು$_2$** : ೧. 'ಇಡುಗುತೊಡಗು' ಪರಾ.

**ಇಡಂಕುತೊಡಂಕು, ಇಡುಕುತೊಡಕು** = ಕ್ಲೇಶಮಯತೆ ; ಕಷ್ಟ ಕಾರ್ಪಣ್ಯ ತುಂಬಿರುವುದು (ದಕ. ಕ). **ಇಡುಗುಮುಡುಗು** = ಕಷ್ಟಕರ : ಆ ಕೆಲಸ ತುಂಬ ಇಡುಗುಮುಡುಗು (ರೂಢಿ).

[← ತಮಿ. ಇಡುಕ್ಕು]

**ಇಡಗಂಟು** 'ಇಡುಗಂಟು' ನೋ.

**ಇಡಗು** 'ಇಡುಗು$_1$' ನೋ.

**ಇಡಪಿಡು** (ಕ್ರಿ). ಠೇವಣಿಯನ್ನಿಡು ; ಇಡುಗಂಟನ್ನು ಮಡಗು : ಜನರು ಬಾಂಕುಗಳಲ್ಲಿ ಹಣವನ್ನು ಇಡಪಿಡುವರು (ಮತಂಪ. ೫೯).

[ಇಡಪು + ಇಡು$_1$]

**ಇಡಪು** (ನಾ). ಠೇವಣಿ ; ಇಡುಗಂಟು. 'ಇಡಪಿಡು' ಪರಾ.

[< ಇಡು$_1$ + -ಪು]

**ಇಡರು$_1$** (ಕ್ರಿ). ಎಡಹು ; ಮುಗ್ಗರಿಸು (ಕ). 'ಎಡರ್$_1$' ಪರಾ.

[ದೇ. ॥ ತಮಿ. ಮಲ. ಇಡಱು]

**ಇಡರು$_2$** (ನಾ). ೧. ಅಡ್ಡಿ ; ತಡೆ ; ವಿಘ್ನ ; ಪ್ರತಿಬಂಧಕ (ಕ). ೨. ತೊಂದರೆ ; ಕ್ಲೇಶ (ಕ). ೩. ಹಗೆತನ ; ದ್ವೇಷ (ಉಕ. ಕ). 'ಎಡರ್$_2$' ಪರಾ. [ದೇ. ॥ ತಮಿ. ಮಲ. ಇಡರ್ ; ತೆಲು. ಎಡರು]

**ಇಡರೆತ್ತು** (ಕ್ರಿ). (ಬಾಗಿಲನ್ನು) ಮೇಲಕ್ಕೆತ್ತಿ ತೆಗೆ : ಬೆಳಗಿನ ಎಂಟು ಘಂಟೆಯಾದರೂ ಅಳಿಯ ಏಳಲಿಲ್ಲ. ಅದನ್ನು ಕಂಡು ಮಾವನ ಮನೆಯವರು ಕೊಟ್ಟಡಿಯ ಬಾಗಿಲನ್ನು ಇಡರೆತ್ತಿದರು (ನೀತಿಚಿಂ. II, ೭).

[ಇಡರು$_2$ + ಎತ್ತು$_1$]

**ಇಡಾವತ್ಸರ** (ನಾ). "ಅಶ್ವಿನ್ಯಾದಿ ನಕ್ಷತ್ರಗಳಲ್ಲಿ ಅಶ್ವಿನೀ ನಕ್ಷತ್ರವಾಗಲಿ ಮತ್ತಾವ ನಕ್ಷತ್ರವಾಗಲಿ ೧೨ ಆವರ್ತಿ ಆದರೆ ಒಂದು ವರ್ಷವಾಗುವುದು. ಆ ವರ್ಷಕ್ಕೆ ಇಡಾವತ್ಸರವೆಂದು ಹೆಸರು" (ಹಸಾರ. ೫-೪೦ ಟೀಕು) ; ಇಡಾವತ್ಸರ, ಅನುವತ್ಸರ, ಪರಿವತ್ಸರ (ಜೀದಾನ. ೭೨).

[ಸಂ. (ಇಡಾ + ವತ್ಸರ)]

**ಇಡಿ$_1$** (ಕ್ರಿ). ೧. ಕುಟ್ಟು ; ಪುಡಿಮಾಡು : "ಇಡಿ-ಚೂರ್ಣೇ, ಸಂಕೀರ್ಣೇಚ" (ಶಮುಧಾ) ; ಶುಂಠಿ ಹಿಂಗು ಮುಸ್ತೆಗಳಂ ಕೂಡಿಡಿದಿಟ್ಟದಱ ಕಷಾಯಂ ಕುಡಿದೊಡೆ (ಕಲ್ಯಾಕಾ. ४-೧೦); ಕಲ್ಲಿನೊರಳೊಳಿಕ್ಕಿಯಿಕ್ಕಿ ಒನಕೆವಿಡಿದು ಇಡಿವರಯ್ಯೋ (ಸಾನಂಚ. ೯೨ ರ) ; ನೂಱುಮಂದಿಯನಿಡಿವನಾ ಚೂರ್ಣಿಗನ ತೆಱದೊಳಗೆ (ಜಿನಭಾ. ೭-೧೩). ೨. ತಿವಿ ; ಕಚ್ಚು ; ಹಾಯು ; ಚುಚ್ಚು ; ಇರಿ : ತುಡೆ ನೂಱಿಸೆ ಸಾಸಿರಮಾ ಪಡೆಯಂ ಕೊಳೆ ಲಕ್ಕೆಲೆಕ್ಕಮಾಗುರ್ಚದುವಟ್ಟಿಡಿದುವು ಕುಱಿದಱಿದಱಿದುವು ಕಡುಪಿಂದಿಸೆ ವಿಬುಧವನಜವನಕಳಹಂಸಂ (ಶಾಂತಿಪು. ४-೨೭) ; ಕುಸುಂಬೆಯ ಪೂವರಿದಾಳಮರ್ಕಕೀಟದ ಗೃಹಗೋಧೆಯೆಚ್ಚ ಮಿವನೊಯ್ಯನೆ ತೀಟಿಡಿ(ಱಿ)ದಲ್ಲಿ ಪೂಸೆ ನಿಲ್ಲದು ವಿಷಂ (ಲೋಕೋಪ. ೧೦-೨೭) ; ಕಡಿದನು ಖಳರೆಚ್ಚ ಕೋಲ್ಗಳ ವಕ್ಷದೊಳಿಡಿದನೆಲ್ಲರಿಗೆ ಕೂರ್ಗಣೆಯ (ಮೋಹತ. ३४-೧೧) ; ಹೊಳೆಗಳುದಕದೆ ತುಂಬಿತುಳುಕುವಾಗಳ್ ದಡದ ನೆಲವನಿಡಿವಂದದಿಂ (ಶ್ರೀರಾಚ. ೨-೫೮) ; ಇದೇನೋ ನಿಂಗು, ಎತ್ತಿನ ತೊಡೆಯ ಮೇಲೆ ಗಾಯ? ಯಾವುದೋ ಎತ್ತು ಇಡಿದದ್ದು (ಕಾನೂರು. ೧೮).

[ದೇ. ॥ ತಮಿ. ಮಲ. ಇಡಿ]

**ಇಡಿ$_2$** (ಕ್ರಿ). ೧. ತುಂಬಿರು ; ನಿಬಿಡವಾಗು ; ವ್ಯಾಪಿಸು : "ಇಡಿ-ಚೂರ್ಣೇ, ಸಂಕೀರ್ಣೇಚ" (ಶಮುಧಾ) ; ಪುದಿದು ಕವಿದಿಡಿದ ತಮದೊಡ್ಡ ದಿರ್ವಿನಂ (ಕಾವ್ಯಸಾ. ೮೭೦ ಶೂದ್ರಕ) ; ಇಡಿದಿರೆ ಮಂಜಿನೊಳ್ ತುಱುಗಿ ತೆಂಕಣಗಾಳಿಯೊಳಾದ ಸೋಂಕಿನೊಳ್ ನಡುಗುವಶೋಕವಲ್ಲರಿಯ ಪಲ್ಲವದೊಳ್ (ಪಂಪಭಾ. ३-೭೫) ; ಇಡಿದಿರೆ ಗುಹಾಂಧಕಾರಂ (ಅಜಿಪು. ೯-೨೧); ಇಂತಿಡಿದ ಕತ್ತಲೆಯೊಳಭವನೂರಂ ಪೊಕ್ಕು (ಇಳೆರ. ದೇ. ೫೨-೫) ; ಇಡಿದ ಮೋಡದ ಮುತ್ತಿಗೆಯ ಮೇಲೊಡೆದು ಮೂಡುವ ರವಿಯವೊಲು (ಕುವ್ಯಾಉ. ೯-೨೫) ; ಕುಡಿನೀರಿನಿಂಪು ಜಿಹ್ವೆಗೆ ಶೈತ್ಯ ತನುವಿಂಗಿಡಿದುದು ಬಳಲಿ ಬಂದರಿಗೆ (ಮೋಹತ. ೨-೩೧) ; ಮುಳ್ಳಿಡಿದ ಮರನೇಱಿದಂತಾದುದು (ಜೈಮಿಭಾ. ೧೦-೨೪). ೨. ಅದುಮಿ ತುಂಬು ; ಒತ್ತೊತ್ತಿ ತುಂಬು ; ಗಿಡಿ : ನವಯೌವನಂ ನೆಱೆಯೆ ನೆಱೆಯೆ ನಿಱಿನಿಱಿಗೊಂಡ ಗುಣಾರ್ಣವನ ತಲೆನವಿರ್ಗಳ್ ಲಾವಣ್ಯರಸಮನಿಡಿದಿಡಿದು ತೀವಿದ ಕಮಲಾಸನನ ಬೆರಲಚ್ಚುಗಳನ್ನವಾದುವು (ಪಂಪಭಾ. ೨-೩೯ ವ).

**ಇಡಿದಿಡಿ** (ದ್ವಿರುಕ್ತಿ) : ರಾಜೀವದಲರಲರ ತುಳಿತುಳಿದಿಡಿದಿಡಿದ ಬಂಡ . . . ಸವಿದು ಸವಿದು (ಜೈಮಿಭಾ. ३-೩೭) ; ಕಡುಗೆಂಪಿಡಿದಿಡಿದ ಬೀಜರದನದ ಚೆಲ್ವಂ (ರಾಜಶೇ. ೨-೪೯). [ದೇ ?. / ತಮಿ. ಇಟ್ಟೈ, ಇಜ್ಜೈ, ಇಯ್ಯೈ]

**ಇಡಿ$_3$** 'ಇಡಿದು' ನೋ.

**ಇಡಿ$_4$, ಇಡೀ** (ಗು). ಸಮಗ್ರ ; ಪೂರ್ಣ ; ಎಲ್ಲ : ಅರ್ಧಮುದ್ದಳೆಯ ತಲೆಯ ಮೇಗಡೆ ನಿಲಿಸಿದಿಡಿಮುದ್ದಳೆಯದೆನಲ್ (ಸಾಳ್ವಭಾ. ೧-೫೧) ; ಒಡನೊಡನೆ ನೆರೆ ಬೆರೆತು ಹೊಸತಾಯ್ತು ಯುಕ್ತಿ ಹೀಗೆ ಇಡಿಯಾಗೋಣ ಸೀಮೆಯನು ದಾಟ (ಗರಿ. ४೨-೧೨) ; ಲಿಪಿಕಾರರು ಸಮಾಜದ ಅಚ್ಛೇದ್ಯ ಅಂಗವಾಗಿದ್ದು ತಮ್ಮ ಪಾಲಿನ ಕೆಲಸವನ್ನು ಇಡಿ ಸಮಾಜದ ಶ್ರೇಯಸ್ಸಿಗಾಗಿ ಮಾಡುತ್ತಿದ್ದರು (ಕನ್ನಸಂ. ೫೮) ; ಅರಸಿಗೆ ಅರ್ಧ ರಾಜ್ಯವಾದರೆ ತಿರಿದುಂಬುವಗೆ ಇಡಿ ರಾಜ್ಯ (ಗಾದೆ). **ಇಡೀ** : ದಿವ್ಯವ್ಯಕ್ತಿಯ ಕಣ್ಮರೆಯಿಂದ ಇಡೀ ಜಗತ್ತೇ ಒಬ್ಬ ಶ್ರೇಷ್ಠವಿಜ್ಞಾನಿಯನ್ನು ಕಳೆದುಕೊಂಡಂತಾಯಿತು (ಸಸ್ಯಕ. ೧೧೦) ; ರಾಯರಿಗೆ ಇರುವ ಇಡೀ ಆಕಾಂಕ್ಷೆ ಈ ಪ್ರಪಂಚದಲ್ಲಿ ಹೆಸರುಗಳಿಸುವುದು (ರಾಯಕ. ३೬) ; ಒಂದೆರಡು ಪ್ರಶ್ನೆಗಳಿಂದ ಇಡೀ ಪಾಠವೇ ಪುನರಾವರ್ತನೆಯಾಗುವಂತಿರಬೇಕು (ಶಿಕ್ಷದ. ೨೭೮) ; ಇಡೀ ನಗರವೇ ಆ ಬೆಳದಿಂಗಳ ತಕ್ಕೆಯಲ್ಲಿ ಮಲಗಿದಂತಿತ್ತು (ಚೆಂದುಟಿ. ೧೬).

**ಇಡಿಯಾಗು** = ಸಮಗ್ರವಾಗು ; ಅಖಂಡವಾಗು : ಸ್ವಾನುಭವವು ಬಿಡಿಯಾಗಿ ಅಲ್ಲ, ಇಡಿಯಾಗಿ ಅವನ ಕೃತಿಗಳಲ್ಲಿ ಇಂಗಿದ್ದರಿಂದಲೇ ಅವು ಜೀವಂತಸಾಹಿತ್ಯವಾಗಿವೆ (ತವನಿ. ೨೯) ; ಅಮೋಘ ವಿಚಾರಸರಣಿಯನ್ನು ಇಡಿಯಾಗಿ ಕೊಡಬೇಕೆಂದು ಯತ್ನಿಸಲಾಗಿದೆ (ಧ್ವನ್ಯಾಲೋ. ೧೪ ಅರಿಕೆ). **ಇಡೀಧಾನ್ಯ** = ತೌಡು ಕಳೆಯದ ಧಾನ್ಯ : ಇಡೀ ಧಾನ್ಯಗಳಿಂದ ಮಾಡಿದ ರೊಟ್ಟಿ ಪದಾರ್ಥಗಳು . . . ಮುಂತಾದ ಆಹಾರ ಸಾಮಗ್ರಿಗಳನ್ನೂ ತೆಗೆದುಕೊಳ್ಳಬೇಕು (ಗೃಹವಿ. ೯೯). [ದೇ. ॥ ಕೊಡ. ತುಳು. ಇಡಿ]

**ಇಡಿಂಬ** (ನಾ). (?) : ನಾನಲುಮಂ ಬಾನಲುಮಂ ಸಡಿಂಬಮನಿಡಿಂಬಮಂ ಪರಲುಮಂ ಪುರಿವರಲುಮಂ . . . ಕಳೆದು ಪೋಗಿ (ಲೀಲಾವ. ೬–೨೦ವ). [?]

**ಇಡಿಕಾಸು** (ನಾ). ಮುರಿಸದಿರುವ ನಾಣ್ಯ ; ಇಡಿ ನಾಣ್ಯ : ಅವನು ಕಥೆ ಹೇಳಿ ಹೇಳಿ ಕೇಳುವವರಿಂದ ಪುಡಿಕಾಸು ಇಡಿಕಾಸು ಕಸೆದು ಕಸೆದು ಅವರಿಗೆ ಕಲಿಯಹಾಗೆ ಯುಗಬಂಧು ಆಗುತ್ತಾನೆ (ಕಂಬಹು. ೩೭). [ಇಡಿ$_4$ + ಕಾಸು$_2$]

**ಇಡಿಕಿಚ್ಚಡಿ** (ನಾ). ಗಟ್ಟಿಯಾಗಿ ಮಾಡಿದ ಕಿಚ್ಚಡಿ (ಉಕ. ೪). [ಇಡಿ$_3$ (< ಇಡಿದು) + ಕಿಚ್ಚಡಿ]

**ಇಡಿಕಿರಿ** 'ಇಡಿಕಿಱು' ನೋ.

**ಇಡಿಕಿಱು, ಇಡಿಕಿರಿ, ಇಡಿಗಿರಿ, ಇಡಿಗಿಱು, ಇಡುಕಿಱು** (ಕ್ರಿ). **೧.** ತುಂಬಿರು ; ಒತ್ತಾಗಿರು ; ದಟ್ಟೈಸು : ಬಾಗುತೆ ಬಲಿಯುತೆ ಪೊಳೆದಿನಿದಾಡುತೆ ದಳವೇಱುತಿಡಿಕಿಱಿದು ಹಿಗ್ಗುತೆ (ಗಿರಿಕ. ೨–೫೦) ; ಪಡಗೋಡು ನಾವೆ ದೋಣಿಗಳಿಡಿಕಿಱಿದ ಬಹಿತ್ರಂ (ಸೂಕ್ತಿಸು. ೨–೨೦) ; ಬಾಯೊಳಿಡಿಕಿಱಿವ ಹುಡಿವೊಯ್ದು ಮುಡದಿಂದ ಘಟ್ಟಿಸದೆ ಬಿಡುವುದೇ ನಮ್ಮ ಕೋಪಾ (ವೀಶೈಪು. ೩–೨೨–೧೮) ; ಇಡಿಕಿಱಿದಿಹ ಪುಷ್ಪದೊಳು ಗಂಧವಿರಲಾಱಡಿ ತುಡುಕುವುದೆಂದು (ಮೋಹತ. ೩–೧೬). **ಇಡಿಕಿರಿ : ೧.** ಇಡಿಕಿರಿದ ಫಲಪುಷ್ಪಗಳಿಂದ ಶೋಭಿಸುವ ಮರಗಳಿಂದ ಆಶ್ರಮ ರಮ್ಯವಾಗಿತ್ತು (ಬಿದುರಿ. ೪೪) ; ಜನ್ಮಾಂತರಗಳ ಜಟಿಲವಾದ ಕಥಾನಕ, ಶಬ್ದಾರ್ಥಚಮತ್ಕೃತಿಗಳಿಂದ ಇಡಿಕಿರಿದ ವರ್ಣನೆ . . .ಇವುಳ್ಳ ಕಾದಂಬರಿಯನ್ನು (ಕಸಾಚ. ೧೧೬). **ಇಡಿಗಿರಿ : ೧.** ಹರುಷವು ಇಡಿಗಿರಿವುತಲಿ ಸುಖದ ಕಣ್ಣೀರ್ ಝುಡಿವುತಲಿ (ಜ್ಞಾನಸಿಂ. ೩೨–೧). **ಇಡಿಗಿಱು : ೧.** ನಾನಾವಸ್ತುಗಳಿಡಿಗಿಱಿದೈಶ್ವರ್ಯವಡೆದ . . . ಅಂಗಡಿಗಳೊಪ್ಪಿರ್ದುವು (ಮೋಹತ. ೨೦–೧೯). **೨.** (ಹಲ್ಲು) ಗಿಟಕು ಹಾಕು, —ಕಚ್ಚಿಕೊಂಡಿರು: ದಡದಡಿಸಿ ಪದಂಗಳ್ ಪಲ್ಲಿಡಿಗಿಱಿದಿರೆ ಬಾಲವಾಲ ಬೀಳಲ ತೆಱದಿಂ ಮಿಡುಕದಿರೆ ಹರಿಣರೋಗಂ ತಡೆಯದೆ ಮಡಿಗುಂ ಚಿಕಿತ್ಸೆಗೆಯ್ಯಲ್ವೇಡಾ(ಡಂ) (ಅಶ್ವಶಾ. ೧೩–೪೨). **ಇಡುಕಿಱು : ೧.** (೪). [ಇಡಿ$_2$ + ಕಿಱು$_1$]

**ಇಡಿಕು** 'ಇಡುಂಕು' ನೋ.

**ಇಡಿಕೆ** (ನಾ). ತುಂಬಿರುವಿಕೆ; ನಿಬಿಡವಾಗಿರುವಿಕೆ. 'ಇಡಿಕೆಗೊಳ್' ಪರಾ. [ಇಡಿ$_2$ + –ಕೆ$_1$]

**ಇಡಿಕೆಗೊಳ್** (ಕ್ರಿ). ತುಂಬಿರು; ನಿಬಿಡವಾಗು : ಮುಂದೊಂದೆಡೆಯೊಳಿಡಿಕೆಗೊಂಡು ಕಣ್ಗೊಳಿಪ ಪಣ್ಗೊಂಚಲ ಸಂಚಯದಿಂದಂಚಿತಮಾಗಿರ್ದ (ಶಾಂತೀಶ್ವ. ೧೧–೬೮ ವ). [ಇಡಿಕೆ + ಕೊಳ್$_1$]

**ಇಡಿಗಂಟು$_1$** 'ಇಡುಗಂಟು' ನೋ.

**ಇಡಿಗಂಟು$_2$** (ನಾ). ಇಡಿಯ ಗಂಟು ; ಪೂರ್ತಿ ಗಂಟು : ಒಮ್ಮೆಲೆ ಇಡಿಗಂಟು ಬೇಕಾದರೆ ಹೊಲ ಮಾರದೆ ಗತ್ಯಂತರವಿರಲಿಲ್ಲ (ಗ್ರಾಮಾಯ. ೫೯). [ಇಡಿ$_4$+ ಗಂಟು]

**ಇಡಿಗಟ್ಟಿಗೆ** (ನಾ). ತಿವಿಯಲು ಉಪಯೋಗಿಸುವ ಮೊನಚಾದ ಕೋಲು (?) : ಪಿಡಿದ ಖಂಡೆಯ ಕಟ್ಟ ನೇಲ್ವ ಇಡಿಗಟ್ಟಿಗೆಯ ಬತ್ತಳಿಕೆ ರಾಜಿಸೆ ಬಂದರೊಡನೊಡ್ಡಿಯ ರಾವುತರು (ಕುರಾಸಾಂ. ೧೧–೨೩). [ಇಡಿ$_1$ + ಕಟ್ಟಿಗೆ]

**ಇಡಿಗಟ್ಟು** (ನಾ). ಪೂರ್ಣರಚನೆ, —ಸ್ವರೂಪ : ಪುಲಿಗೆರೆಯೇ ಆ ಪುಣ್ಯಭೂಮಿ ಎಂದು ತರ್ಕಿಸಲಿಕ್ಕೆ ಅಡಿಗಟ್ಟೇನೋ ಇದೆ. ಆದರೆ ಆ ಸಿದ್ಧಾಂತದ ಇಡಿಗಟ್ಟು ಇನ್ನೂ ನೆಲೆಗೊಳ್ಳಲಿಲ್ಲ (ನಾಡೋಜ. ೧೫). [ಇಡಿ$_4$ + ಕಟ್ಟು$_2$]

**ಇಡಿಗತ್ತಲೆ** (ನಾ). ನಿಬಿಡವಾದ ಕತ್ತಲೆ; ತುಂಬಿದ ಕತ್ತಲೆ; ಕಗ್ಗತ್ತಲೆ : ಹಲಬರುಂಟೇ ರವಿಗಳಿಡಿಗತ್ತಲೆಯ ಮೊತ್ತಕೆ (ತೊರರಾ. ೩–೬–೩೧) ; ಇಡು[ಡಿ]ಗತ್ತಲೆಯ ಮೊತ್ತ ರವಿಗಲ್ಪವಹುದಿದು ಸೊಡರ್ಗಳಿಲ್ಲಕೆ ಸ್ವಲ್ಪವಹುದೆ (ಭರಚ. ೨೯–೬೪). [ಇಡಿ$_3$(< ಇಡಿದು) + ಕತ್ತಲೆ (< ಕಟ್ತಲೆ)]

**ಇಡಿಗಪ್ಪು** (ನಾ). ನಿಬಿಡವಾದ ಕಪ್ಪು; ತುಂಬಿದ ಕಪ್ಪು: ಕರ್ಬೊಗೆಯೊಳೊಂದಿದಿಡಿಗಪ್ಪಿಂಗೆ ಹೆದಱಿ ನಾವಮ್ಮೆವಿದನಿಂದು ನೀವುಂಡೊಡೆಯರಾಗಿ . . . ಎಂದರು (ಸಿದ್ಧರಾ. ೫–೧೫). [ಇಡಿ$_3$ (< ಇಡಿದು) + ಕಪ್ಪು$_4$ (< ಕರ್ಪು$_1$)]

**ಇಡಿಗಾಯ್$_1$**, ಇಡಿಗಾಯಿ (ನಾ). **೧.** ಇಡಿಯಾದ ಕಾಯಿ; ತುಂಬುಕಾಯಿ ; ಮುರಿಯದ ಅಥವಾ ಒಡೆಯದ ಕಾಯಿ. **೨.** ಉಂಡೆಗಾಯಿಯ ಉಪ್ಪಿನಕಾಯಿ. **ಇಡಿಗಾಯಿ : ೨.** ಮೆಂತ್ಯದ ಚಟ್ನಿ, ಕಾರದ ತೊವ್ವೆ, ಇಡಿಗಾಯಿ ಏನೇನೋ ಮಾಡಿದ್ದಾಳೆ (ಬೆಳುಮ. ೯೧). [ಇಡಿ$_4$ + ಕಾಯ್$_4$]

**ಇಡಿಗಾಯ್$_2$** 'ಇಡುಗಾಯ್' ನೋ.

**ಇಡಿಗಾಯಿ** 'ಇಡಿಗಾಯ್$_1$' ನೋ.

**ಇಡಿಗಾಳು** (ನಾ). ಪೂರ್ಣವಾದ ಕಾಳು ; ಒಡೆದು ಬೇಳೆಯಾಗದ ಕಾಳು : ಮಾಡದಿರು ಬಾಳನ್ನು ಬೇಳೆಯಂತೆ ಕೂಡಿರಲಿ ಬಾಳು ಇಡಿಗಾಳಿನಂತೆ (ನಾದಲೀ. ೬೬–೧೩) ; ಸಂಶಯದಿಂದ ಇಡಿಗಾಳಿನಂತಹ ಬಾಳನ್ನೇ ಹೋಳಾಗಿಸಿ ಅತೃಪ್ತಿ, ಅಶಾಂತತೆ ತಲೆದೋರುವಂತೆ ಮಾಡುವನು (ಮುಡಿಹೂ. ೩೮). [ಇಡಿ$_4$ + ಕಾಳು$_2$ (< ಕಾೞ್$_2$)]

**ಇಡಿಗಿಚ್ಚು** (ನಾ). ಹರಡಿದ ಕಿಚ್ಚು ; ವ್ಯಾಪಿಸಿದ ಬೆಂಕಿ : ಮನುಮಥನಿಕ್ಕಿದಿಡಿಗಿಚ್ಚಿನಲಿ ತನು ಬೆಂದು (ನಿಭಾಗ. ೧೦–೭೦–೮) ; ಜಗದಿಡಿಗಿಚ್ಚು ಸೈರಿಸಲರಿದು ತಮಗೆಂದುದು ಸುರಸ್ತೋಮ (ನಿಭಾಗ. ೭–೨–೪೯). [ಇಡಿ$_2$ + ಕಿಚ್ಚು (< ಕಿಚ್ಚುರ್)]

**ಇಡಿಗಿರಿ** 'ಇಡಿಕಿಱು' ನೋ.

**ಇಡಿಗಿಸು** (ಕ್ರಿ). ದಟ್ಟವಾಗಿಸು ; ತುಂಬಿಸು : ಸಿಗಾರೇಟಿನ ಹೊಗೆ ಇಡಿಗಿಸಿ . . . ನನ್ನ ಸಾಹೇಬಕೀಯ ರೈಲುಗಾಡಿಯನ್ನು ಹತ್ತಿ (ಇಪ್ಪಕ. ೧೮೨). [ಇಡಿಗು (< ಇಡುಗು$_1$) + –ಇಸು$_3$]

**ಇಡಿಗಿಱು** 'ಇಡಿಕಿಱು' ನೋ.

**ಇಡಿಗು** 'ಇಡುಗು$_1$' ನೋ.

**ಇಡಿಗುಟ್ಟು$_1$** (ಕ್ರಿ). ಪೂರ್ತಿ ಪುಡಿಯಾಗುವಂತೆ ಕುಟ್ಟು : ಹಗಲ ಹಣೆಯಕ್ಕರಂದೊಡೆದು ಇಡಿಗುಟ್ಟಿ [ಪಾಠಾಂ. ಯಿಡಿಗುಟ್ಟಿ] ಕಾಡಿಗೆಯೊಳಗೆ ಕಾರಿರುಳ ತಿರುಳ ರಸಮಂ ಕಲಸಿ ಮೊಗೆದು ಬಳಿದಂತೆ ಬಳವೆತ್ತ ಕತ್ತಲೆ ಸಿದ್ಧರಾಮಂಗೆ ಬೆಳಗಾದುದು (ಸಿದ್ಧರಾ. ೩–೩೧). [ಇಡಿ$_1$ + ಕುಟ್ಟು$_1$]

**ಇಡಿಗುಟ್ಟು$_2$** (ನಾ). ಪೂರ್ಣವಾದ ರಹಸ್ಯ : ಒಳಗಿದೆ ಹೂವರಳಿದ ವೊಲು ವಿಶ್ವದ ಇಡಿಗುಟ್ಟು (ಹೃದಸ. ೨–೮). [ಇಡಿ$_4$ + ಗುಟ್ಟು]

**ಇಡಿಗೆ** 'ಇಡುಗೆ' ನೋ.

**ಇಡಿಗೋಡೆ** (ನಾ). (ಬಾಗಿಲುಗಳ ಮುಂದುಗಡೆ ಅಥವಾ ಪ್ರವೇಶ ದ್ವಾರಗಳಲ್ಲಿ) ಮರೆಗಾಗಿ ಅಡ್ಡಲಾಗಿ ಹಾಕಿರುವ ಮೋಟು ಗೋಡೆ; ಅಡ್ಡಗೋಡೆ (ಉಕ. ೪). [ಇಡಿ$_0$ + ಗೋಡೆ]

**ಇಡಿಜಡಿ** (ಅ). ಬಿಡದ ಹಾಗೆ; ಅಲ್ಲಾಡದಂತೆ: ಗುಡಿ ಇದಿರಿಗೆ ಇಡಿಜಡಿ ಕೂತು ಬಿಡಬೇಕು ಅಂತೀನಿ (ಹೊಸಂಸಾ. ೩೯). [ಇಡಿ$_4$+ ಜಡಿ$_1$]

**ಇಡಿತನ** (ನಾ). ಪೂರ್ಣವಾಗಿರುವಿಕೆ; ಇಡಿಯಾಗಿರುವಿಕೆ; ಸಮಷ್ಟಿ : ಬಿಡಿತನದ ಬಿಕ್ಕಟ್ಟಿನಲ್ಲಿ ಇಡಿತನದ ಒಕ್ಕಟ್ಟು ಹುಟ್ಟಿಸುವ ಹುಟ್ಟೇ ಬಳಗ (ವಿಚಾಮಂ. ೬೩). [ಇಡಿ$_4$ + –ತನ]

**ಇಡಿತುಂಬು** (ಕ್ರಿ). ಪೂರ್ತಿಯಾಗಿ ತುಂಬು : ಸಾಯುವರ ಚೀರಾಟ, ಗೆದ್ದವರ ಸಿಂಹನಾದಂಗಳಿಡಿತುಂಬಿ (ಪಾರಸಿ. ೧೭-೪).
[ಇಡಿ$_4$ + ತುಂಬು$_1$]

**ಇಡಿತೇಜಿ** (ನಾ). ಹಿಡಿದು ನಡಸಿಕೊಂಡುಹೋಗುವ ಕುದುರೆ : ಇದು . . . ದೇವೇಂದ್ರಸಮ್ಮುದದಿಂದಲೇರ್ವ ಬಿಳಿಯಾನೆ ನೀಂ ಕೇಳು ಮತ್ತದರ ಮುಂಗಡೆ ಪಿಡಿವ ಇಡಿತೇಜಿಯಿಚ್ಛಾಶ್ವ ಕುಪ್ಪಳಿಸಿ ಕುಣಿವುತಿರಲು (ನವಮೋ. ೨೫-೩೦). [ಇಡಿ$_0$ (< ಪಿಡಿ$_1$) + ತೇಜಿ]

**ಇಡಿದಡಕು** (ನಾ). ಹಳ್ಳತಿಟ್ಟು ; ತಗ್ಗುದಿಣ್ಣೆ : ನೆಲವೂ ಗೋಲಿಯೂ ನುಣುಪಾಗಿದ್ದಷ್ಟೂ ಗೋಲಿಯು ಹೆಚ್ಚು ದೂರ ಹೋಗುವುದು. ಇಡಿದಡಕುಗಳಿಲ್ಲದಿದ್ದರೆ ಗೋಲಿಯು ಒಂದೇ ನೇರದಲ್ಲಿಯೇ ಚಲಿಸುವುದು (ಭೌತವಿ. ೨೭). [?]

**ಇಡಿದು, ಇಡ್ಡಿ$_3$** (ಗು). ೧. ದಟ್ಟವಾದ ; ಸಾಂದ್ರವಾದ ; ಒತ್ತಾದ ; ಇಕ್ಕಟ್ಟಾದ. 'ಇಟ್ಟೆಡೆ' ಪರಾ. ಇಡ್ಡಿ$_3$ : ೧. ಇದು ಸಮಾಸದ ಪೂರ್ವಪದವಾಗಿದ್ದಾಗ ಬರುವ ರೂಪ. 'ಇಡಿಕಿಚ್ಚಡಿ' ಪರಾ. (ನಾ). ೨. ಅರಿಗಟ್ಟಿಯಾದ ಮೂಗಿನ ಸಿಂಬಳ, —ಪಾತ್ರೆಗಳಲ್ಲಿ ಅಂಟಿಕೊಂಡಿರುವ ಕಿಮುಟ ಅಥವಾ ಅವುಗಳಿಗೆ ಮೆತ್ತುವ ಮೇಣ (ಕಿ). [?]

**ಇಡಿಪುಡಿ** (ನಾ). ಕುಟ್ಟಿದ ಪುಡಿ ; ಚೂರ್ಣ : ಈರಣ್ಣ ಬರುವಾಗ ನೀರೆರಡು ಭಾಗಾದೊ ಗೋರಿಕಲ್ಲೆರಡೂ ಇಡಿಪುಡೀ (ಹುಟ್ಟಿಹ. ೪೪).
[ಇಡಿ$_1$ + ಪುಡಿ]

**ಇಡಿಯಪ್ಪ** (ನಾ). ಒತ್ತುಸೇವಗೆ; ಒಂದು ಬಗೆಯ ಭಕ್ಷ್ಯ : ಎಲ್ಲವನ್ನು ಒಟ್ಟಿಗೆ ಕಲಸಿ ಇಡಿಯಪ್ಪದ ಅಚ್ಚಿನ ಮೂಲಕ ಚಪ್ಪಟೆಯಾದ ಅಲ್ಯೂಮಿನಿಯಂ ತಟ್ಟೆಯುಲ್ಲಿ ಎರೆದು ಹಾಗೆಯೇ ಇಡ್ಲಿಬೇಯಿಸುವ ಪಾತ್ರೆಯಲ್ಲಿಟ್ಟು ಬೇಯಿಸುವುದು (ಅಡುಸೌ. ೯೪).
[ಇಡಿ$_1$ + ಅಪ್ಪ$_3$. / ತಮಿ. ಮಲ. ಇಡಿಯಪ್ಪಂ]

**ಇಡಿರ್ಗಿಱುಗಟ್ಟಿಗೆ** (ನಾ). ಕೊಕ್ಕೆಗೋಲು ; ತುದಿಯಲ್ಲಿ ಕೊಕ್ಕೆಯಿರುವ ಕಡ್ಡಿ ; ಮೀನು ಹಿಡಿಯುವ ಗಾಳದ ಕಡ್ಡಿ (ಕಿ) : ತೋಱಿ ವೇಂಟೆಯಾಡಲೆಳಸುತಿಱಿಗೂಳಿ ಹಂಜರಗೂಳಿಡುಗಾಣಂ . . . ಪೆಗ್ಗೂಳಿ ಕೊಡಂಬೆಯಿಡಿರ್ಗಿಱುಗಟ್ಟಿಗೆಯೆರೆಮಡ್ಡಿ ಸೂಸುಗೂಳ್ಗಳೆಂಬಿವಂ ಕೊಂಡು (ರಾಜಶೇ. ೫-೧೧೪ ವ). [ಇಡಿಱ್ + ಕಿಱುಗಟ್ಟಿಗೆ ?]

**ಇಡಿವು** 'ಇಡುವು' ನೋ.

**ಇಡಿಸು$_1$** (ಕ್ರಿ). ೧. ಹಾಕಿಸು ; ಕಟ್ಟಿಸು ; ಸ್ಥಾಪಿಸು : ಇಡಿಸುವ ಡೆಂಕಣಕ್ಕೆ ನೆಲವಾಳಿಗೆ ಕೊತ್ತಳದಂಬುಗಂಡಿಯಿಂದುಡುಗದೆ ಪಾಯ್ವ ಕೂರ್ಗಣೆಗೆ . . . ಅನ್ನೆಯಾಳ್ ಗಡಣಿಸೆ ಕಾದುತಿರ್ದುದು (ಚಂದ್ರಪು. ೫-೧೦೬). ೨. ತೊಡಿಸು ; ಇಟ್ಟುಕೊಳ್ಳುವಂತೆ ಮಾಡು ; ಧರಿಸುವಂತೆ ಮಾಡು : ಮೆಚ್ಚಿ ವಜ್ರಶೃಂಖಲಮೆಂಬ ಕಡಗವ ಕಾಲ್ಗಿಡಿಸಿದನು (ನೋಹತ. ३५-೬೭) ; "ದೈವದಲ್ಲಿದ್ದರೆ, ಗಂಡ-ಮೈದುನರ ಕೈಗೆ ಆಶೆ ಮಾಗಲಿ, ಹದಿನಾಲ್ಕು ತೊಲೆಗೆ ಇಪ್ಪತ್ತು ತೊಲಿ ಇಡಿಸಿಯಾರು ?" (ಬಿಟ್ಟಹೊ. ೫೨). [ಇಡು$_1$ + -ಇಸು$_3$]

**ಇಡಿಸು$_2$** (ಕ್ರಿ). ಕುಟ್ಟಿಸು ; ಪುಡಿಮಾಡಿಸು : ಈ ಔಷಧಿ ಸ್ವಲ್ಪ ಇಡಿಸಿ ಕೊಡಪ್ಪ (ರೂಢಿ). [ಇಡಿ$_1$ + -ಇಸು$_3$]

**ಇಡಿಹಾರೆ** (ನಾ). ಕುಟ್ಟುವ ಹಾರೆ ; "ಕುಟ್ಟುವ, ಮಿದಿಯುವ ಸಲಕರಣೆ" (Pounder. ಇಂಕನಿ). [ಇಡಿ$_1$ + ಹಾರೆ (< ಪಾರೆ)]

**ಇಡಿಱ್** (ನಾ). ಬಾಗಿರುವಿಕೆ ; ಕೊಕ್ಕೆಯಂತೆ ಬಗ್ಗಿರುವುದು (ಕಿ).
[< ಎಡಱು$_1$ = ವಕ್ರ]

**ಇಡೀ** 'ಇಡಿ$_4$' ನೋ.

**ಇಡೀದರ** (ನಾ). ಒಟ್ಟುವ್ಯಾಪಾರದ ಲೆಕ್ಕ ; ಸಗಟು ವ್ಯಾಪಾರದ ದರ.
**ಇಡೀದರದ ಅಂಗಡಿ** = ಸಗಟು ವ್ಯಾಪಾರದ ಅಂಗಡಿ ; ಒಟ್ಟುಗಟ್ಟಲೆ ವ್ಯಾಪಾರದ ಅಂಗಡಿ : ಈ ಇಡೀದರದ ಅಂಗಡಿಗಳೆಂದರೆ ಅದರಲ್ಲಿ ಯಾವದೊಂದು ಸಾಮಾನು ಕೊಳ್ಳುವದಿದ್ದರೂ ದೊಡ್ಡ ಮೊಬಲಗಿಗಾಗಲಿ ಇಲ್ಲವೆ ದೊಡ್ಡಪ್ರಮಾಣದಲ್ಲಾಗಲಿ ಕೊಳ್ಳಬಹುದು (ತಕ್ಕಡಿ. ೨೧). [ಇಡೀ (< ಇಡಿ$_4$) + ದರ$_3$]

**ಇಡು$_1$** (ಕ್ರಿ). ೧. ಮಡಗು ; ಇರಿಸು ; ಇಕ್ಕು ; ಇಟ್ಟ$_2$ (ಭೂತಕೃ) ; ಇಟ್ಟು$_2$ (ಭೂತನ್ಯೂ) : ಪರಿದಿರೆ ಸಂಧ್ಯಾರಾಗಂ ನಿರಂತರಂ ಗಗನವಿವರಮೊಪ್ಪಿತ್ತೆಂದಾದರದಿಂ ಪೇೞಲ್ಪಗೆದಂತಿರೆ ಸಂಧ್ಯಾಪದಮನಿಡದೆ ಪೇೞ್ದುದು ದೋಷಂ (ಕವಿರಾ. ೧-೧೦೨) ; ಪಿತೃಗಳುಪಾರ್ಜಿಸಿಟ್ಟ ಸಿರಿ ಜವ್ವನದೇೞ್ಗೆ . . . ರೂಪು ಶಕ್ತಿಗಳಿವಲ್ಲವೆ ಹಾನಿಯ ಬಳ್ಳಿವಳ್ಳಿ (ಕಾದಂಪೂ. ೫೩೪) ; ಪಾತ್ರೆಯ ಪೆಟ್ಟಿಗೆಯೊಳಿಟ್ಟು ಮುದ್ರಿಸಿ (ತಿರುರ. ದೇ. ೧೨-೫). ೨. ಹೂಡು ; ಅಣಿಗೊಳಿಸು : ತಿರಿಪಿದೊಡದನೆಳೆ ತಿಱ್ಱನೆ ತಿರಿದುದು ತಿರುವಾಯೊಳಿಡೆ ಸುರರ್ ಮೊರೆಯಿಟ್ಟರ್ (ಪಂಪಭಾ. ೧೨-೧೯೨) ; ಬಿಡು ಮರೀಚಿಯ ತೋಱಿಗೆ ಹಱಿಗೋಲಿಡುವರುಂಟೇ (ಕುವ್ಯಾದ್ರೋ. ೪-೩೪). ೩. ಧರಿಸು ; ತೊಡು ; ಉಡು : ಇಟ್ಟ ಸಿರಿಕಂಡದ ಬೊಟ್ಟು (ಕಬ್ಬಿಕಾ. ೩೧೩) ; ಹಾರಪದಕ ಚೌಕುಳಿಯನಿಟ್ಟವ ತಮ್ಮ ಕೇರಿಯೊಳಗೆ ಸುಳಿದಾಡೆ (ಕಂನಪಿ. ೨-೯೮) ; ನಡೆ ಮಜ್ಜನ ಭೋಜನಕೆ ಶೃಂಗಾರದ ತೊಡವುಗಳಿಡು ನೀ ಬೇಗ (ಕಂನವಿ. ೯-೧೬೩) ; ಇಟ್ಟರೆ ತೊಟ್ಟರೆ ಪುಟ್ಟಕ್ಕ ಚಂದ (ಗಾದೆ). ೪. ಆಯುಧವನ್ನು ಅಥವಾ ಯಾವುದಾದರೂ ವಸ್ತುವನ್ನು ಎಸೆದು ಹೊಡೆ : "ಇಡು-ಕರವಿಮೋಚನೇ" (ಶಮುಧಾ) ; ಮುಳಿದು ತನಗರ್ಘ್ಯಮೆತ್ತಿದ ತಳಿಗೆಯೊಳಿಡೆ ತಿಱಿದ ತಲೆ ಪಱಿದು (ಪಂಪಭಾ. ೬-೩೪) ; ಮಾನವರಿಂ ಮನುಜರನಿಟ್ಟು ಮೋದಿಯುಂ (ಶಾಂತಿಪು. ೪-೩೪) ; ಅವತಂಸನೀಲೋತ್ಪಲದಿನಿಡಲೊಡಂ (ಚಾವುಂಪು. ೮೨-೧೭) ; ಇಂದ್ರನಣುವನಂ ವಜ್ರದಿನಿಟ್ಟಂ ಗಡ (ಸಮುಪ. ೧೦-೧೪೭) ; ಮಹಾಯುಧದಲಾ ಕಪಟನಾಟಕ ಸೂತ್ರಧಾರನನಿಟ್ಟು ಬೊಬ್ಬಿಱಿದ (ತೊರರಾ. ೧-೧೧-೧೬). ೫. ಎಸೆ ; ದೂರ ಬಿಸಾಡು : ಕಲ್ಹಾರ ಕುಟ್ಮಲ ಶಾಲೂಕ ಮೃಣಾಳಜಾಲಮನಿಡುತ್ತೀಡಾಡುತಂ (ಕಾದಂಪೂ. ೬೩೦) ; ಮುಱಿದು ತರುಗಳನಿಡುತ (ನಳಚ. ೫-೪೫). ೬. ಅನ್ನದಾನ ಮಾಡು ; ಭಿಕ್ಷೆ ಹಾಕು : ಇಡಬೇಕಿದ್ದುಣಬೇಕೆಲ್ಲೆ (ಸೋಮೇಶ. ೭೯) ನಾನೇ ಭಿಕ್ಷವನ್ನು ಇಡುತ್ತೇನೆ (ದೌಲತ್. ೩೦೯). ☞ ಈ ಧಾತು ಹಲವು ಶಬ್ದಗಳ ಜತೆಗೆ ಸೇರಿ ವಿಶಿಷ್ಟವಾದ ಧಾತುವಾಗಿ ವಿವಿಧವಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾ : ಅಡಿಯಿಡು, ಊಳಿಡು, ಎತ್ತಿಡು, ಔತಿಡು, ಕಣ್ಣಿಡು, ಗೋಳಿಡು, ಜತೆಯಿಡು, ದನಿಯಿಡು, ದಾಳಿಯಿಡು, ನೆನಪಿಡು, ಪಡಲಿಡು, ಬಡಿದಿಡು, ಮಡಗಿಡು, ಲಗ್ಗೆಯಿಡು, ಸಾಲಿಡು, ಹೆಸರಿಡು, ಹೊಯ್ದಿಡು ಇತ್ಯಾದಿ.

**ಇಡುವರಾದಿತ್ಯ, ಈಡುವರಾದಿತ್ಯ** = ಆಯುಧ ಪ್ರಯೋಗಕುಶಲರಲ್ಲಿ ಸೂರ್ಯನಂತೆ ಇರುವವನು ; ಒಂದು ಬಿರುದು : ಇಡುವರಾದಿತ್ಯಂ (ಎಇ. XIX, ೩೨-೩ ; 1135) ; ಇಡುವರಾದಿತ್ಯಂ ರೂಪನಾರಾಯಣಂ (ಕೊಲ್ಹಾಶಾ. ೨೪-೬ ; ?) ; ಈಡುವರಾದಿತ್ಯ ಮಾರ್ಬಲಮಲ್ಲ ಮಱುವಂಕ ಭೈರವ ಅಯ್ಯಣ ಪುತ್ರ (ಎಕ. VIII, ಸೊರಬ. ೪೧೩-೧೧ ; 986). **ಇಟ್ಟುಕೊ, ಇಟ್ಟುಕೊಳ್** = ೧. ಧರಿಸು : ಕಳ್ಳೊಳ್ ಬೊಟ್ಟನಿಟ್ಟುಕೊಂಡು ಕೆಲದರ್ಗೆಲ್ಲಂ ಬೊಟ್ಟಿಟ್ಟು (ಪಂಪಭಾ. ೪-೮೭ ವ) ; ಭಕ್ತಿವಿಶೇಷದಿಂ ಶೇಷಮಾಲ್ಯಾದಾನಪೂರ್ವಕಂ ತಲೆಯೊಳಿಟ್ಟುಕೊಂಡು (ಚಾವುಂಪು. ೭೮-೧೧). ೨. ತನ್ನ ಅಧೀನದಲ್ಲಿಟ್ಟುಕೊ ; ಬಚ್ಚಿಡು ;

ಮುಚ್ಚಿಡು ; ಅವಿತಿರಿಸು : ವೇದತಸ್ಕರನ ತನ್ನೊಳಗಿಟ್ಟುಕೊಂಡಪರಾಧಕ್ಕೆ ಪೋಜಮಡಲೊಡನೆ ಮಾಧವ ಕರೆಸಲು ಮರಳಿ ಬಂದಂತಾಗಲಾದುದು ಕಡಲೋಟ ಭರಿತ (ಮೋಹತ. ೨–೯) ; ಪದಾರ್ಥ ಇಟ್ಟುಕೊಂಡೂ ಇಲ್ಲ ಅನ್ನುತ್ತೀಯಲ್ಲ, ನ್ಯಾಯವೇ ? (ರೂಢಿ). **೩.** ಉಪಪತಿಯನ್ನಾಗಿ ಅಥವಾ ಉಪಪತ್ನಿಯನ್ನಾಗಿ ಮಡಗಿಕೊ ; ಮರೆಬಾಳು ನಡೆಸು : ಒಬ್ಬಾಕಿನ್ನ ಇಟ್ಟುಕೊಂಡಿದ್ದಾನೆ (ನಾಪೋಲೀ. ೨೯೯) ; ಆಕೆ ಒಬ್ಬಾತನನ್ನು ಇಟ್ಟುಕೊಂಡಿದ್ದಾಳೆ (ರೂಢಿ). **೪.** ತನ್ನ ಕೈಕೆಳಗೆ ಕೆಲಸಕ್ಕೆ ನೇಮಿಸಿಕೊ : ನಮ್ಮ ಹುಡುಗನನ್ನು ತಮ್ಮ ಮನೆಯಲ್ಲಿ ಕೆಲಸಕ್ಕಿಟ್ಟುಕೊಂಡು ಉಪಕಾರ ಮಾಡಿ ಸ್ವಾಮಿ (ರೂಢಿ) ; ಮನೆಯಲ್ಲಿ ಹತ್ತು ಆಳು ಇಟ್ಟುಕೊಂಡಿದ್ದಾರೆ (ರೂಢಿ). **೫.** ಸ್ವಂತಕ್ಕಾಗಿ ಉಳಿಸಿಕೊ : ನೀನೂ ಸ್ವಲ್ಪ ಇಟ್ಟುಕೋ ; ಎಲ್ಲಾ ನನಗೇ ಕೊಟ್ಟು ಬಿಟ್ಟರೆ ಹೇಗೆ ? (ರೂಢಿ) ; ಅವನು ಹತ್ತು ರೂಪಾಯಿ ಇಟ್ಟುಕೊಂಡು ಮಿಕ್ಕದ್ದನ್ನೆಲ್ಲಾ ಕೊಟ್ಟುಬಿಟ್ಟ (ರೂಢಿ).

[ದೇ. ‖ **ತಮಿ. ಮಲ.** ಇಡು ; **ತುಳು.** ಇಡ್ ; **ತೆಲು.** ಇಡು ; **ಕೋಲಾ.** ಇಡ್]

**ಇಡು$_2$** (ನಾ). (ಕರಾ) ಬಿದಿರಿನ ದೆಬ್ಬೆಗಳಿಂದ ಹೆಣೆದು ಮಾಡಿದ ತಟ್ಟೆ ; ತಡಿಕೆ : ಬಡವರ ಮನೆಗೆ ಇಡುವೇ ಗೋಡೆ (ರೂಢಿ).

[< ಇಡು$_1$]

**ಇಡುಂಕು,** ಇಡಿಕು, ಇಡುಕು$_1$ (ಕ್ರಿ). **೧.** ಬಲವಾಗಿ ಎಸೆ ; ಚಿಮ್ಮಿಸು ; ದೂರ ಬಿಸುಡು ; ಬೀಸಿ ಎಸೆ : "ಇಡುಕು, ಇಡುಂಕು–ಗಾಢವಿಮೋಚನೇ" (ಶಮಧಾ) ; "ಇಡುಕೆನಲ್ ಬಿಸಾಡುವುದಪ್ಪುದು" (ಕಶರ. ೧೧೮). **೨.** ಇಡು ; ತುರುಕು ; ಸಾಂದ್ರವಾಗಿಸು. 'ಇಡುಕುಂಬನಿ' ಪರಾ. **ಇಡಿಕು : ೧.** ಪಡುವಣ ವಾರ್ಧಿಯಲ್ಲಿ ನೊಗನಂ ಕೞಿಯುಂ ಗಡ ಮೂಡಣಬ್ಧಿಯಲ್ಲಿಡಿಕಿದೊಡೊಯ್ಯನಾನೊಗದೊಳಾಕೞಿ ಮುನ್ನೆ ತಗುಳ್ದು ಛಿದ್ರದೊಂದೆಡೆಯೊಳೆ ಮತ್ತೆ ಬಂದು ಘೞಿಯಿಪ್ಪೊಡೆ ತಾಂ ಘೞಿಯಿಕ್ಕುಮೊರ್ಮೆ ಕೆಟ್ಟೊಡೆ ಬೞಿಕೆಲ್ಲಿಯುಂ ಪಡೆಯಬಾರದು ನೆಟ್ಟನೆ ಬೋಧಿರತ್ನಮಂ (ಜೀವಸಂ. ೧೯೪–೨೪). **೩.** ಮೇಲೆ ಬೀಳು ; ಬೀಳಿಸು : ಏನೋ ಮಿಾನ ಸೀನಿಡಿಕಿದಾ ಎಂದಡಿಡಿಕಿವೆಂ ವಿಭುವೆಯೆಂದು (ಸಿದ್ಧರಾ. ೪–೫೪) ; ತನ್ನ ಶಾಂತಿಯ ಹಿಮದೊಳಾೞುವ ಗುಂಡನಿಡಿಕಿದನು ಭಾವಿಸದೆ ಭ್ರಮಿತ ತಾರೆಯನು ನಭವಿಡಿಕಿತೆಂತೆಂಬುದಾ ಕ್ರಮಂ (ಸಿದ್ಧರಾ. ೭–೨೧). **ಇಡುಕು$_1$ : ೧.** ಮುನಿಯ ಕೋಪವ ಬಳಿದು ಮುರರಿಪುವನಧಿಗಿಡುಕಿದನೆನಲು ರವಿರಥವನುಕರಿಸಿ ರೌದ್ರವನು ಹಾಯ್ದುದು ಪಶ್ಚಿಮಾಂಬುಧಿಗೆ (ನಿಭಾಗ. ೧೦–೫೪–೩೦) ; ಬಸುರುಗಳ ಹೊಯ್ಲಿನೊಳ್ತ್ರಣಿಗಣ ಸರಂಗಳಂ ದೆಸೆದೆಸೆಗೆ ಪರಿದಿಡುಕಿ ಹೊರಳುತಂ (ತುರಂಗ. ೮೨–೩೦) ; ತೊಡೆದು ಬರೆಬರೆದು ಹಲಗೆಯನಿಡುಕುವ ಕುಕವಿಗ್ರಹಕ್ಕೆ ನಗದವರೊಳರೇ (ನೀತಿಸಾ. ೮೨). [?]

**ಇಡುಕಿೞಿ** 'ಇಡಿಕಿೞಿ' ನೋ.

**ಇಡುಕು$_1$** 'ಇಡುಂಕು' ನೋ.

**ಇಡುಕು$_2$** (ನಾ). ಸ್ವಯಂಪೂರ್ಣವಾದುದು. 'ಇಡುಕುಂಗಬ್ಬ' ಪರಾ. [?]

**ಇಡುಕು$_3$** 'ಇಡಂಕು' ನೋ.

**ಇಡುಕುಂಗಬ್ಬ** (ನಾ). ಅರ್ಥದ ದೃಷ್ಟಿಯಿಂದ ಸ್ವಯಂಪೂರ್ಣವಾದ ಪದ್ಯ, —ಕಾವ್ಯ ; ಮುಕ್ತಕ : "ಇಡುಕುಂಗಬ್ಬಂ ಮುಕ್ತಕಂ" (ಕಾವ್ಯಾವ. ೯೫೧) ; "ಉಕಾರಾಂತದೊಳ್ ಗಕಾರಂ ಪರಮಾದುದರ್ಕೆ–ಇಕ್ಕುಂಗೂೞ್, 'ಇಡುಕುಂಗಬ್ಬಂ" (ಶಮದ. ೧೭೦ ಪ್ರಯೋ).

[ಇಡುಕು$_2$ + ಕಬ್ಬ]

**ಇಡುಕುಂಬನಿ** (ನಾ). ದಟ್ಟವಾಗಿ ಬೀಳುವ ಹನಿ : ಘಳಘಳನಭ್ರದಿಂದಮಿಡುಕುಂಬನಿ ಸೂಸೆ (ಜಗವಿ. ೪–೧೮) ; ಮೆಲ್ಸರಿ ತುಂತುರ್ ತುಷಾರಮಿಡುಕುಂಬನಿ ತಂದಲ್ನೋನೆ ನಟ್ಟ ಬಡಪಮೆನಲ್ಸುರಿದುವು ಮೞೆಗಳಿರುಳುಂ ಪಗಲುಂ (ಜಗವಿ. ೪–೩೨) ; ಘನಕುಚಶೈಲವಗೌಳಿಗಿಡುಕುಂಬನಿಯಂ ಬಿಡುತಿರ್ಪುದೇಕೆ (ಕುಸುಮಾ. ೩–೪೦) ; ತಂದಲ್ವನಿಗಳ್ಬಿಡುವನಿಗಳ್ ಕಡುವನಿಗಳ್ ಸರಿವನಿಗಳಡಸಿದಿಡುಕುಂಬನಿಗಳ್ (ಶಾಂತೀಶ್ವ. ೧೨–೪೮) ; ಅಡಸರಿ ಬಲ್ಸರಿ ಮರಮಳೆಯಿಡುಕುಂಬನಿ ನಟ್ಟವನಿ ತುಷಾರಂ ಬಡಹಂ (ತ್ರಿಪುವಿ. ೮–೩೯). [ಇಡುಕು$_1$ (< ಇಡುಂಕು) + ಪನಿ$_2$]

**ಇಡುಕುದೆರೆ** (ನಾ). ದಟ್ಟವಾದ ಅಲೆ : ಇಡುಕುದೆರೆಯಟ್ಟುದೆರೆ . . . ಉಲಿದು ಹಳಚಲು (ಸೋಮಚ. ೧–೬೦).

[ಇಡುಕು$_1$ (< ಇಡುಂಕು) + ತೆರೆ$_4$]

**ಇಡುಕುಮುಡುಕು** (ನಾ). ಸಂಕೋಚ ; ಕುಗ್ಗು : ಅತ್ಯಂತ ಮೈತ್ರಿ ಇರುವ ಕಡೆ ಎಳ್ಳುಮೊನೆಯಷ್ಟು ಅನುಮಾನ ಹುಟ್ಟಲು ಆಸ್ಪದವಾದರೆ ಆ ಸ್ನೇಹದ ಸಮತಳವು ಕೆಟ್ಟು ಇಡುಕುಮುಡುಕಾಗುವುದು (ಅದೂಟ. ೧೬೦). [← **ತಮಿ.** ಇಡಕ್ಕುಮುಡುಕ್ಕು = ಇಕ್ಕಟ್ಟಾದ ಸ್ಥಳ]

**ಇಡುಕುರು** 'ಇಡುಕುೞು' ನೋ.

**ಇಡುಕುೞು,** ಇಟಕರ, ಇಡುಕುರು (ನಾ). **೧.** ಇಕ್ಕಟ್ಟಾದ ಎಡೆ ; ಸಂದು : ಹಡೆದ ಹಣ ಹಾಗಮೆಲ್ಲಂ ಜಡೆಯಿಡುಕುೞಮಡಗಿ ಮಿಂಡಿದೊತ್ತಿರಿಗೀವೀ ತುಡುಗುಣಿ ಗೊರವರ ಮೆಚ್ಚಂ ಪೊಡವಿಗೆ ಶಿವಶಕ್ತಿ ತಾನೆ ನೈಷ್ಠಿಕ ಮುನಿಪಂ (ಎಕ. XII, ಚಿಕ್ಕನಾ. ೩೦–೨೯ ; 1149). **೨.** ಗುಂಪು ; ಪೊದರು ; ರಾಶಿ : ಲತೆಗಳಿಡುಕುೞುವೊಕ್ಕು ಮೞುನುಡಿಯಲೞಿಯಳೋ ಮತಿಗಿಡಿಸಿದಂಜಿಕೆಯೊಳಬಲೆ ಮೆಯ್ಯೞಿಯಳೋ (ಕುಸುಮಾ. ೧೪–೧೧೯ ರ) ; ತಳಿತ ಬೆಳುಗೊಡೆಗಳಿಡುಕುೞ ನೆಳಲ (ಹಚಕಾ. ೮–೭೦) ; ತರುಲತೆಗಿಡುಗಳಿಡುಕುೞಿಂದ ಘನಮಾದ ವನಮರಣ್ಯಾನಿಯೆಂದೆನಿಸಿಕ್ಕು (ಮಂಗರಾ. ೪೫–೪೯) ; ಎೞಗಿ ಮಾಯಾಗುಣವಿಷಯದಿಡುಕುೞಿನ ಸುಖಲೇಶಕ್ಕೆ ಮತಿಯನು ತೆೞುವ ಮರ್ತ್ಯರ ಮಾತದೇಕಿನ್ನು (ನಿಭಾಗ. ೧೨–೩೫–೨೮). **ಇಟಕರ : ೧.** ಕೋಣೆ ತೀರ ಇಟಕರವಾಗಿದೆ (ಚೀನಬಾ. ೨೯೭). **ಇಡುಕುರು : ೧.** ಪ್ರಾಣವಿದ್ದುದರಿಂದ ಎಲ್ಲಿಯೋ ಗಿಡಬಳ್ಳಿಗಳ ಇಡುಕುರಿನಲ್ಲಿ ಅಡಗಿಬಿಟ್ಟಿತು (ಕಾನೂರು. ೨೦೦).

[ಇಡುಕು$_1$ + ಉೞು. / **ತಮಿ.** ಇಡಂಗರ್]

**ಇಡುಕೈದು** (ನಾ). ಎಸೆಯುವ ಆಯುಧ ; ಅಸ್ತ್ರ : ಕುಡುಗೋಲ್ಕತ್ತಿ ಕೊಡಲಿ ಮಚ್ಚು ಪೇರಿಟ್ಟಿ ಬಡಿಕೋಲಿಡುಕೈದುಗಳ (ಕುರಾಸಾಂ. ೨೭–೪೫). [ಇಡು$_1$ + ಕೈದು$_1$ (< ಕೆಯ್ದು)]

**ಇಡುಗಂಟು,** ಇಡಗಂಟು, ಇಡಿಗಂಟು$_1$ (ನಾ). **೧.** ಇಟ್ಟ ಹಣ ; ಠೇವಣಿ : ಬ್ಯಾಂಕಿನಲ್ಲಿ ಹಾಕಿಟ್ಟುಕೊಂಡಿದ್ದ ಇಡುಗಂಟಿನ ಮೇಲೆ ಸಾಲವನ್ನು ತರಹೇಳಿ ಇಡುಗಂಟಿನ ಪಾಯಿದೆ ಮುಂದಿನ ವರ್ಷ ಮುಗಿದಾಗ ಸಾಲವನ್ನು ತೀರಿಸಬಹುದೆಂದು ಸೀತಾರಾಮುವಿಗೆ ಹೇಳಿದಳು (ಮಹಾಗ. ೩೦೮). **೨.** (ಉಕ). ಬಂಡವಾಳ ; ನ್ಯಾಸ ; ನಂಬುಗೆಯಿಂದ ಇನ್ನೊಬ್ಬರ ಬಳಿ ಇಟ್ಟ ಒಡವೆ ಮುಂತಾದುದು. **ಇಡಗಂಟು : ೧.** ಬಿಲ್ಲುಗಳೇ ಅವರು ಗಳಿಸಿದ ಇಡಗಂಟು (ಮುಂಬೞು. ೫–೩೦೭) ; ನನ್ನ ಮೇಲೆ ನಿನ್ನ ವಿಶ್ವಾಸವಿದ್ದರೆ ಭೀಮಾರ್ಜುನರನ್ನು ಇಡಗಂಟಿನಂತೆ ಬೇಗನೆ ನನಗೆ ಒಪ್ಪಿಸು (ಮಭಾರ. ೩೯) ; ಮಹಾರಾಜರು ತಮಗೆ ಎರಡು ವರಗಳನ್ನು ಕೊಟ್ಟಿದ್ದು ಅವನ್ನು ನೀವು ಇಡಗಂಟಿನಂತೆ ಅವಳ ಬಳಿಯಲ್ಲಿ ಇಟ್ಟಿರುವಿರಿ (ತುಳಸಿ. ೧೧೦). **ಇಡಿಗಂಟು$_1$ : ೨.** "ಶೇವಧಿ—ನಿಧಿ, ಹೂಳಿಟ್ಟ ಹಣ, ಇಡಿಗಂಟು" (ಗಂಗಾಮ. ೩೧೦).

[ಇಡು$_1$ + ಗಂಟು]

**ಇಡುಗಟ್ಟಿಗೆ** (ನಾ). ಎಸೆಯುವ (ಹೊಡೆಯುವ) ಕೋಲು, — ಬಡಿಗೆ: ಇಡಲಿಡುಗಟ್ಟಿಗೆಯಿಂದ ರಾವುತರದಜಿೊಡನೆ ಬೀಳ್ವರು (ಕುರಾಸಾಂ. ೧೩–೯೯). [ಇಡು$_1$ + ಕಟ್ಟಿಗೆ]

**ಇಡುಗಲ್** (ನಾ). ಹೊಡೆಯುವ ಕಲ್ಲು: ಬಡಿಗೋಲ್ ತುಪಾಕಮಿಡುಗಲ್ಲೆರೆ ಪೆರ್ಬಲೆ ಕೂಳಿಗಾಳಂ (ರಾಜಶೇ. ೫–೫೨). [ಇಡು$_1$ + ಕಲ್$_2$]

**ಇಡುಗವಣೆ** (ನಾ). ಕಲ್ಲು ಮುಂತಾದುವನ್ನು ಬೀಸಿ ಎಸೆಯುವ ಸಾಧನ; ಕವಣೆ: ಸಿಡಿಗುಂಡು ಬಡಿಕೋಲ್ಗಳುಜುಬೆಯಿಂದಿಜುಬೆಯಿಂದಿಡುಗವಣೆ ನೇಣುರಲ್ಗೊಲೆಗಳಿಂ ಬಲೆಗಳಿಂ (ಜೈಮಿಭಾ. ೨೮–೪೭). [ಇಡು$_1$ + ಕವಣೆ]

**ಇಡುಗಾಣ** (ನಾ). ಬೀಸಿ ಎಸೆದು ಮೀನು ಹಿಡಿಯುವ ಕೊಕ್ಕೆ,— ಗಾಳ: ಇಡುಗಾಣಂ ... ಕೀಳ್ಗಾಳಿಗೆಯೊಳ್ ನಾಂಟುವ ಪಲವುಂ ಬಗೆಯ ಗಾಣಂಗಳಂ (ರಾಜಶೇ. ೫–೧೧೪ ವ). [ಇಡು$_1$ + ಗಾಣ$_1$ (< ಗಾಳ$_1$)]

**ಇಡುಗಾಯ್**, ಇಡಿಗಾಯ್$_2$, ಈಡುಗಾಯಿ$_2$ (ನಾ). **೧.** ದೇವತಾ ವಿಗ್ರಹದ ಅಥವಾ ಬೇರೆ ಯಾರಾದರೊಬ್ಬರ ಮುಂದೆ ನಿವಾಳಿಸಿ ನೆಲಕ್ಕೆ ಬೀಸಿ ಎಸೆಯುವ ತೆಂಗಿನ ಕಾಯಿ. ℙ ಸಾಮಾನ್ಯವಾಗಿ ಇಷ್ಟಸಿದ್ಧಿಗಾಗಿ ಹರಸಿಕೊಂಡ ಜನರು ಕೆಲಸ ಕೈಗೂಡಿದ ಮೇಲೆ ದೇವತಾ ವಿಗ್ರಹದ ಮುಂದೆ ಇಡುಗಾಯಿ ಹಾಕುತ್ತಾರೆ. **೨.** ಪಂದ್ಯಕ್ಕಾಗಿ ಒಂದರ ಮೇಲೆ ಒಂದನ್ನು ಒಡೆಯುವ ತೆಂಗಿನಕಾಯಿ: ಇಂದು ಇಡುಗಾಯ್ ಆಟದಲ್ಲಿ ಐವತ್ತು ರೂಪಾಯಿ ಗೆದ್ದೆ (ರೂಢಿ). **ಇಡಿಗಾಯ್$_2$**: **೧.** ಪುರದ ಬಾಗಿಲಿಗೈತರುವರಿತ್ತೆರದಿ ನಿಂದೂಳಿಗರು ನೀವಳಿಗರೆದುಯಿಡಿಗಾಯ್ದಾಕಿದರು ಲಕ್ಷೋಪಲಕ್ಷಗಳಾ(ಜಿನಭಾ. ೫೮–೫); ಅತ್ತೆಯ ಮಗಳ ಲೆತ್ತವು ಸರಿಬಂದರೆ ಸುತ್ತಲದೇವರಿಗೆ ಇಡಿಗಾಯನಿಡಿಸೇನೆಂದು ಗ್ಯಾನ ಅಪ್ಪಯ್ನ ಮನದಾಗೆ (ನಾಪದ. ೧೨೬–೭). **ಈಡುಗಾಯಿ$_2$**: **೧.** ದೇವರಿಗೆ ನಾವೇ ಈಡುಗಾಯಿ ಒಡೀತೀವಿ (ನಮ್ಮಳ್ಳಿ. ೫೮). [ಇಡು$_1$ + ಕಾಯ್$_4$]

**ಇಡುಗಿಚ್ಚು** (ನಾ). ಇಡುವ ಕಿಚ್ಚು; ಹಾಕುವ ಬೆಂಕಿ: ಇನಿತು ಮನ್ನಣೆಯ ಮೇಲಿಡುಗಿಚ್ಚನಿಕ್ಕಬೇಕೆನುತೆ ದಿಟದೂರದಿಂ ಬಂದಂತೆ (ಸೋಮುಚ. ೧–೩೭); ಸುಡುಗಾಡಿಡುಗಿಚ್ಚಡುಗೂಬುಡುಗೊಜೆಯುಂ (ಶಮದ. ೧೭೧); ಇಡುಗಿಚ್ಚು ಹೊಕ್ಕಂದದಲಿ ರಥವನು ಬೆಚ್ಚಿ ಬಿಸುಟನು (ಕುವ್ಯಾದ್ರೋ. ೨–೭೬). [ಇಡು$_1$ + ಕಿಚ್ಚು (< ಕಿರ್ಚು)]

**ಇಡುಗು$_1$**, ಇಡಗು, ಇಡಿಗು (ಕ್ರಿ). ವ್ಯಾಪಿಸು; ಹರಡು; ತುಂಬು: ಆದರ ಪಡಿದನಿಯು ಆ ತಪೋವನದಲ್ಲೆಲ್ಲ ಇಡುಗಿದ್ದಿತು (ಶ್ರೀರಾಪ. ೨೯); ಎಲ್ಲಿ ನೋಡಿದಲ್ಲಿ ನಿರಾಶೆಯ ವಾಸನೆಯೇ ಇಡುಗಿತ್ತು (ಅಪನಾ. ೨೨೪); ಊದಬತ್ತಿಯ ಗಮಗಮ ವಾಸನೆಯೆಲ್ಲ ಪಡುಮನೆಯ ತುಂಬ ಇಡುಗಿತ್ತು (ಸಮಜೀ. ೮೦). **ಇಡಗು**: ಹೊರಗಣ ಹವೆ ಬರಲು ಯಾವ ದಾರಿಯಿಲ್ಲದ್ದರಿಂದ ಹೊಲಸು ನಾತವು ಕೋಣೆಯಲ್ಲಿ ಇಡಗಿರುತ್ತಿತ್ತು (ಮೊಪಾಸ. ೮೩). **ಇಡಿಗು**: ವಾಸನೆಯು ಕೋಣೆಯ ತುಂಬ ಇಡಿಗಿತ್ತು (ಕನ್ನಡಿ. ೧೧೨); ತೊಗರೆ ಮತ್ತು ಸಾಸಿವೆಯ ಹೊಲಗಳು ಮತ್ತು ಮುಗಿಲೆಲ್ಲ ಇಡಿಗಿದ ಅವುಗಳ ಕೋಮಲ ಸುಮಧುರ ಗಂಧ . . . ಎಲ್ಲವೂ ನನ್ನ ಮೈಗೆ ಮುಳ್ಳು ತಂದವು (ಇಪ್ಪಕ. ೨೦೭). [< ಇಡಿಕು]

**ಇಡುಗು$_2$** 'ಇಡಂಕು' ನೋ.

**ಇಡುಗುಂಡು** (ನಾ). ಎಸೆಯುವ ಕಲ್ಲುಗುಂಡು: ಇಡುಗುಂಡು ಸಾಳಿವಿಲ್ಲಂಬು ಡೊಂಕಣಿ ಇಟ್ಟಿ ಬಿಡವೆ ಬೀಜುವ ಪಾಶ . . . ಕೈಪಾರೆಯ ಕಡುಗಲಿ ಜೋದರೆಯ್ದಿದರು (ಕುರಾಸಾಂ. ೧೯–೨೧); ರಣಾಜಿರದೊಳ್ ಶ್ರೀ ವಿಜಯಾಸ್ತ್ರದಿಂದೆ ಕಡಿಕಂಡಂಗೆಯ್ದುವೆಂ ಕಂಡದುತ್ಕರದಿಂ ಸೀಳ್ದಿಡುಗುಂಡನಾಡಿಸುವೆನೆಲ್ಲಾ ಭೂತಸಂಘಾತವುಂ (ಶಾಂತೀಶ್ವ. ೫–೨೦೪); ನೆಟ್ಟ ಸಬಳಗಳನಿಡುಗುಂಡುಗಳ ಸಂದಣಿಯ ಸನ್ನಾಹದ ಸ್ಥೂಲಮಾಗಿರ್ದ ತೆನೆಗಳ (ಚಬಪು. ೪೨–೨೨). [ಇಡು$_1$ + ಗುಂಡು]

**ಇಡುಗುಡ್ಡೆ** (ನಾ). ಒಡ್ಡಿದ ಗುಡ್ಡೆ; ಹಾಕಿದ ರಾಶಿ; ದಟ್ಟವಾದ ರಾಶಿ: ಉಂಡಲಿಗೆಗಳ ರಾಶಿ ಹೂರಿಗೆಗಳಿಡುಗುಡ್ಡೆ ಸಣ್ಣ ಸೇವಗೆಯ ಮೆದೆ (ಸಮ್ಯಕೌ. ೭–೨೫); ದಾಂಟುವುದಿಡುಗಡ್ಡೆಗಳ ಗಿರಿಗಳನಿಕ್ಕಿದಾಂಟುವ ಡಾಳೆಯುಂದದೊಳು (ಭರಚ. ೩೬–೭೫). [ಇಡು$_1$ + ಗುಡ್ಡೆ]

**ಇಡುಗುತೊಡಗು** (ನಾ). ಅಡ್ಡಿ ಆತಂಕ; ತುಂಬ ತೊಡಕು (?): ರೆಸ್ತೆ, ಕೆಲಸಗಳಂತೆ ತುಂಬ ತೊಡಕಾಗಿರುವಿಕೆ (ದಕ. ಶ). [ಇಡುಗು$_2$ (< ಇಡಂಕು) + ತೊಡಗು$_2$]

**ಇಡುಗುರು** 'ಇಡುಗೂರು' ನೋ.

**ಇಡುಗೂರು**, ಇಡುಗುರು (ನಾ). ಒಂದು ಊರಿನ ಹೆಸರು: ಅತಿ ಶುಭದಲೆನಿಪುದೀಯಿಡುಗೂರು (ಎಕ. XII, ಗುಬ್ಬಿ. ೩೪–೫; 1134). **ಇಡುಗುರು**: ಇಡುಗುರ ಗವುಣ್ಡತನದ ಕಯ್ಯ ಅದ್ದಿಯಾಪಳ್ತಿಯೊಳ್ (ಎಕ. XIV, ನಾಗಮಂ. ೧೧–೨; 961). [?]

**ಇಡುಗೆ**, ಇಡಿಗೆ (ನಾ). **೧.** ಇಡುವಿಕೆ. **೨.** "ಆಭರಣ" (ಜಾನಕೋ. ೧೭). 'ತೊಡುಗೆ' ಪರಾ. **೩.** ಇಟ್ಟದ್ದು; ಠೇವಣಿ: "ಒಂದು ಬ್ಯಾಂಕಿನಲ್ಲಿ ಇಟ್ಟಿರುವ ಹಣ; ಠೇವಣಿ; ಠೇವಣಾತಿ; ಇಡುಗೆ" (Deposit. ಇಂಕನಿ). **ಇಡಿಗೆ**: **೨.** ಈ ಧರೆಯ ಮೇಲಿರ್ದ ಇಡಿಗೆತೊಡಿಗೆಯು ಕರ್ಪುರಾದಿ ತಾಂಬೂಲ (ವಿವಾಕ್ಯ. ೯೨–೫). [ಇಡು$_1$ + –ಗೆ$_3$]

**ಇಡುತೊಡು** (ಕ್ರಿ). ಆಭರಣ ಮತ್ತು ವಸ್ತ್ರಗಳನ್ನು ಧರಿಸು (ಉಕ. ಶ). [ಇಡು$_1$ + ತೊಡು$_1$]

**ಇಡುದಡಿ** (ನಾ). = ಇಡುಗಟ್ಟಿಗೆ: ಕಣೆಕಾಲಿಡುದಡಿಯಿಂ ಸೊಣಗು[ಗಂ]ಗಳ ಸೊಣವುತ ಮರುಳ್ವಣಗುಗಳು ಒಣದಲೆಯೋಡ ಹಿಡಿದು ರಕ್ಕಸರುಂಬ ಹೆಣನ ಭಿಕ್ಷವ ಬೇಡುತಿಹರು (ಶ್ರೀಪಾಲ. ೮–೧೫). [ಇಡು$_1$ + ದಡಿ$_1$]

**ಇಡುದಿ** (ನಾ). ಇಡುವಿಕೆ; ನ್ಯಾಸ (ಸ್ಯಾಂಡರ್). 'ಇಟ್ಟಿ' ಪರಾ. [ಇಡು$_1$ + –ದಿ]

**ಇಡುಮದ್ದು** (ನಾ). (ಕರಾ). = ಇಕ್ಕುಮದ್ದು. [ಇಡು$_1$ + ಮದ್ದು (< ಮರ್ದು). / ತಮಿ. ಇಡುಮರುನ್ದು]

**ಇಡುಮುಡುಕನೆ** (ಅ). ಸಿಡಿಲಿನ ಅಬ್ಬರದಂತೆ; ಚಟಚಟೇರೆಂದು: ಎಡೆವಜದೊಳೆಜಗಿ ಬಜಸಿಡಿಲಿಡುಮುಡುಕನೆ ಪೊಡೆದುದೆನಿಸಿ ಪಾಂಡ್ಯನ ರಥದಚ್ಚುಡಿದಬ್ಗಿ ತಟ್ಗಿ (ಪಂಪಭಾ. ೧೨–೮೨). [ಇಡುಮುಡುಕು$_1$ + –ಅನೆ$_1$]

**ಇಡುಮುಡುಕು$_1$** (ನಾ). ಸಿಡಿಲಿನ ಅಬ್ಬರ; ಚಟಚಟೇರು. 'ಇಡುಮುಡುಕನೆ' ಪರಾ. [ಇಡು$_0$ + ಮುಡುಕು. / ತಮಿ. ಇಡಿಮುಟಕ್ಕಂ=ಸಿಡಿಲಿನ ಮೊಳಗು]

**ಇಡುಮುಡುಕು$_2$** (ನಾ). ಬಹಳ ಇಕ್ಕಟ್ಟಾದ ಪ್ರದೇಶ; ಸಂದಿ; ಸಂದು: ಮನೆಮನೆಯ ಹಿತ್ತಿಲುಗಳಿಡುಮುಡುಕಿನೊಳಗೊಬ್ಬನೆ ಸಾರ್ದು (ಬಸಪು. ೩೧–೫); ನಡೆತಪ್ಪಿಡೆಯೊಳಡುಮುಡುಕಿನಿಂದೊಬ್ಬ ಮುಂತೆ ಸಂಧಿಸಲೊಡನೆ (ಬಸಪು. ೨೧–೧೩); ಮಡಿವಳ ಮಾಚಿದೇವಯ್ಯನಿಡುಮುಡುಕಿನಲ್ಲಿ ಭವಿಯಂ ಕಂಡು (ಪಾಸೋಪು. ೮–೪೨); ಕಾರ್ಗತ್ತಲೆಯೊಳು ನಡೆದು ಮನೆಯ ಹಿತ್ತಲು ಇ[ಡು]ಮುಡುಕಿನೊಳಗೆ ಒಬ್ಬನೆಯಡಗಿ (ಭೈರಸೂ. ೩೫೦). [ಇಡು ? + ಮುಡುಕು]

**ಇಡುವಗೆ** (ನಾ). ಬದ್ಧದ್ವೇಷ; ಬಲವಾದ ವೈರ: ತೊಡರ್ದು ಬಿಡಿಂ ಸುಯೋಧನನನೆನ್ನುಮನಾನಿರೆ ಕೌರವಾಧಿಪಂಗಿಡುವಗೆ ಪೇಱಮಿಂ ಪೆಱರೊಳಂ ಮುಳಿಸುಂಟೆ (ಪಂಪಭಾ. ೧೩–೯೧). [ಇಡು$_1$ + ಪಗೆ$_2$]

**ಇಡುವರ್ಣ** (ನಾ). ದಟ್ಟವಾಗಿ ಬಳಿದ ಬಣ್ಣ : ತೊಡೆವ ಬೆರಸುವ ತೆರಳ್ಚುವಿಡುವರ್ಣದ ತೆಳ್ವರ್ಣದಧೊರ್ೞದಕದ ಬಹುವಿಧದ ವರ್ಣಕ್ರಮುಮುಂ (ವರ್ಧಪು. ೭–೩ ವ). [ಇಡು$_0$ (< ಇಡಿ$_2$) + ವರ್ಣ]

**ಇಡುವಲೆ** (ನಾ). ಬೀಸುವ ಬಲೆ; ಬೀಸಿ ಎಸೆಯುವ ಬಲೆ: ಎಳೆಯಳ ಕಣ್ಗದಿರೋಡುವ ಗಿಳಿಗಳ ಬೆಂಬತ್ತಿ ಸುತ್ತಿ ಮುತ್ತಿರೆ ತೋರ್ಕುಂ ಪೊಳೆವಿಡುವಲೆಯಿಡೆಯವಳವನೊಳಗಾಗಿಸಿದಂತೆ ನೋೞ್ಪ ಪಥಿಕರ್ಗಾಗಳ್ (ರಾಜಶೇ. ೨–೧೯). [ಇಡು$_1$ + ಬಲೆ]

**ಇಡುವೞಿ$_1$** (ನಾ). ಇಟ್ಟುಕೊಂಡ ಆಳು; ನೇಮಿಸಿಕೊಂಡ ಸೇವಕ: ಒಡಲಂ ದಂಡಿಸಿ ನಿಯಮದೆ ನಡೆಯದೆ ಪೋಕೆಂದು ಪಾರ್ವರೆಂದೊಡೆ ಪಾಪಂ ಬಿಡೆ ಪೋಪಂತದು ಪೇೞವರಿಡುವೞಿಯೋ [ಪಾಠಾಂ. ತುಡುಗುಣಿಯೋ]ತಿರಿವ ಬಡವನೋ ಡಿಂಗರನೋ (ಸಮಪ. ೧೧–೯೫).

[ಇಡು$_1$ + ಬೞಿ$_4$]

**ಇಡುವೞಿ$_2$** (ನಾ). ಇರಿಸಿದ ಸ್ಥಿತಿ; ನಿಯಮಿತ ಮಾರ್ಗ: ಮನದಿಡುವೞಿಯೊಳೆ ವರ್ತಿಕುಮನಿತಿಂದ್ರಿಯಗಣಮುಮುದಜಿತೊಳಧಿಕೃತಸಾತ್ಮಂ (ವಸ್ತುಕೋ. ೭೧–೨೫); ಇಡುವೞಿಯೊಳಿರ್ಪವೊಲ್ ಮೆಚ್ಚಿಡಿಸಿದ ನಿಂತೆನ್ನನೆನಗೆ ವಸುದೇವನೆನಲ್ ಪೆಡದಲೆಯ ಪಾವು ಸೋಂಕಿಲ ಕಿಡಿನಣ್ಪಿನ ಮೃತ್ಯುವಿಂಪುದೋಱುವ ಗರಳಂ (ಜಗವಿ. ೫–೬೦).

[ಇಡು$_1$ + ಬೞಿ$_2$]

**ಇಡುವು,** ಇಡಿವು (ನಾ). **೧.** ಸಂದುಗೊಂದು; ಮಧ್ಯಪ್ರದೇಶ; ಇಕ್ಕಟ್ಟು; ಸಮ್ಮರ್ದ: ಇಡಿದಿರೆ ಪೂತಮರದ್ರುಮದಿಡುವುಗಳೊಳ್ ಬದ್ಧವಣದ ಪುಡಿವೋಲ್ ಬೆನ್ನೊಳ್ ಬಿಡದಲುಗೆ ಕುಸುಮಕುಳರಜಮಡರ್ದದು ಸುರಗಿರಿಯನಿಂದ್ರರುಂದ್ರಗಜೇಂದ್ರಂ (ಆದಿಪು. ೭–೭೩); ತಾನುಂ ಹಿಡಿಂಬೆಯುಮವನ ಬರಿಯ ನರವಿನಡಗಿನಿಡುವಿನೆಡೆಯ ಕೆನ್ನೆತ್ತರೊಳೊರ್ವರೊರ್ವರಂ ತಳ್ಕಿಱಿದುಂ (ಪಂಪಭಾ. ೧೨–೧೫೮ ವ); ಅರೆದುಱುಗಿರ್ದ ಬಯಲ್ದಾವರೆಯೆಲೆಗೊಡೆಯಿಡುವಿನಲ್ಲಿ ಸುಖದಿಂ ಕಣ್ಗೆಯ್ದಿರೆ (ಕಾದಂಉ. ೨೮೨); ಒದವಿದ ಮದಜಲದಿಂ ತೀವಿದ ನಗದಿಡುವು[ಪಾಠಾಂ. ಪು]ಗಳೊಳೆಯ್ದೆ ಮುೞುಗಿರೆ ಯಮುನಾಹ್ರದದೊಳ್ ಮುೞುಗಿದವೋಲ್ ತೋರ್ಪುದು ನೋೞ್ಪಡೆ ನಾಡೆ ಚೆಲ್ವುವಡೆದು ಕರೀಂದ್ರಂ (ಪಾರ್ಶ್ವಪು. ೪–೧೨೬); ಕಂದರಂಗಳಿಡುವಿನೆಡೆಗಳೊಳ್ ಕವಲ್ತು ನಿಲ್ತು (ಅನಂಪು. ೫–೭೦). **೨.** ರಾಶಿ; ಗುಂಪು; ಮೊತ್ತ : ನೆಣದ ಪಳ್ಳಂಗಳಂ ಪಾಯ್ದುಂ . . . ಅಡಗಿನಿಡುವುಗಳಂ ದಾಂಟಿಯುಂ ಪೆಣದ ತಿಂತಿಣಿಯುಂ ನೂಂಕಿಯುಂ (ಪಂಪಭಾ. ೧೩–೫೩ ವ). **ಇಡಿವು : ೧.** ಆಗಸಮನುಗಿವ ಮನೆಗಳ ದೇಗುಲದಿಡಿವುಗಳೊಳಡಿಯನಿಡಲಱಿಯದೆ ತಾರಾಗಣಮಿಳೆಗಿೞಿದಂತೆವೊಲಾಗಿರ್ಕುಂ ಪುರದ ಕಂಚಗಾಜರ ಪಸರಂ (ಲೀಲಾವ. ೭–೧೭).

[**ದೇ.** ‖ **ತಮಿ.** ಇಡುಪ್ಪು = ನಡು, ಮಗ್ಗುಲು, ಪಕ್ಕ, ಟೊಂಕ]

**ಇಡುಸೆಂಡು** (ನಾ). ಎಸೆಯುವ ಚೆಂಡು : ಮಂದರಾಚಲವ ನಲಿದುಯಿಡುಸೆಂಡ ಮಾಡಿ ಲಗ್ಗೆಗಳ ನಗುತಾಡುತಂ (ಏಕೋಪು. ೨–೩೯).

[ಇಡು$_1$ + ಸೆಂಡು]

**ಇಡುಸೇಸೆ** (ನಾ). ಹಾಕುವ ಅಕ್ಷತೆ: ಕುಸುಮಾಕ್ಷತೆಗಳಿಂದ ಬೆರೆದಿರುವ ಮುತ್ತುಗಳಿಂದ ಇಡುಸೇಸೆಗಳನ್ನು ಚೆಲ್ಲುತ್ತ (ಕೃವಾವಿ. ೧೩೦).

[ಇಡು$_1$ + ಸೇಸೆ]

**ಇಡೆ$_1$** (ನಾ). ಎಡೆ; ಸ್ಥಳ; ಅವಕಾಶ; ಆಕರ: ಉರ್ಬ್ಬಿಯೊಳ್ಸಕಲದೊಳೊರ್ಬ್ಬನೆ ಗಣ್ಡ ಶ್ರೀ ಚನ್ತಮನೆನ್ತುಮೊಳ್ಪಿಡೆಯನ್ ಗೊನ್ತಿಸುತರಿಂ ಪರಾಕ್ರಮನ್ ಬಲ್ವಡೆ ಸುದ್ರಕನ್ ಪ್ರಳಯ ಧನಿ ಮುತ್ತಿ ಅಣಿಯೆಂ (ಎಇ. XXIV, ೨೬–೬ ; 885). 'ಎಡೆ$_3$' ಪರಾ.

[**ದೇ.** ‖ **ತಮಿ.** ಇಡೈ ; **ಮಲ. ತುಳು.** ಇಡೆ]

**ಇಡೆ$_2$** (ನಾ). **೧.** ಭೂಮಿ. **೨.** ಸ್ವರ್ಗ. **೩.** ದೇವತೆಗಾಗಲಿ ಮನುಷ್ಯನಿಗಾಗಲಿ ಅರ್ಪಿಸುವ ಆಹಾರ. **೪.** ಹಸು. **೫.** ದೇಹದ ಎಡಭಾಗದಲ್ಲಿರುವ ನಾಡಿಯ ಹೆಸರು: ಮೆಲ್ಲನಿಡೆಯಿಂ ಪ್ರಾಣವಾಯುವಂ ಪೂರಿಸುತೆ (ಪದ್ಮರಾ. ೨–೪೫); ಇಡೆಯಿಂ ಕುಡಿದು ಸಮೀರಣಜಲವನು (ಯೋಗಾಂವಿ. ೫–೨೩); ಇಡೆ ಪಿಂಗಳೆಂಬೆರಡು ನಾಡಿಗಳಿಂದೊಡಗೂಡಿ (ವಿವೇಕ. ೧೮೭); ಇಡೆಯಿಂ ರೇಚಕಮಾಡಿಯೊರ್ಮೆಯುಸಿರಂ ಮತ್ತಂತೆಯೇ ಪೂರಕಂಬಡೆದು (ಮೈಸೂಮ. ೫–೧೧೮). **೬.** ಮಾತು. **೭.** ಬುಧನ ಹೆಂಡತಿ; ಮೈತ್ರಾವರುಣಿ. [**ಸಂ.** ಇಡಾ]

**ಇಡೆಯ** (ನಾ). ಸ್ಥಾನವಾದವನು; ನೆಲೆಯಾದವನು: ಉರ್ಬ್ಬಿಯೊಳ್ ಸಕಲದೊಳೊರ್ಬ್ಬನೆ ಗಣ್ಡ ಶ್ರೀಚನ್ತಮನೆನ್ತುಮೊಳ್ಪಿಡೆಯನ್ (ಎಇ. XXIV, ೨೬–೬ ; 885) ; [ಇಡೆ$_1$ + –ಅ$_7$]

**ಇಡೆಯಗಟ** (ನಾ). ಒಂದು ಊರಿನ ಹೆಸರು: ಇಡೆಯಗಟದೊಳಗೆ ಚಡಿ ಬಾಜಿಯ ಪಡುವಲು ನನೂರು ಕಂಬ ತೋಟ ಮೂಲಸ್ತಾನಗೇರಿ ಒಳಗೆ ರುದ್ರಭಟ್ಟನ ಮನೆಇಂ (ಸೌಇಇ. IX–i, ೨೯೧–೩೦ ; 12ನೆಯ ಶತ).

[ಇಡೆ ? + ಗಟ$_0$ (< ಘಟ್ಟ)]

**ಇಡೆಯಾಡು** (ಕ್ರಿ). ಅತ್ತಿಂದಿತ್ತ ಓಡಾಡು; ಎಡೆಯಾಡು; ಎಡತಾಕು: ಇಡೆಯಾಡಿ ಮುಖ ಬಾಡಿ ನುಡಿಯಡಗಿ ಬಡವನೆಂದೊಲವ ತೋಱಿಸಿದೆನೋ ಕಡುದೈನ್ಯದಿ (ಪುರಂದ. ೧–೬೪–೫). [ಇಡೆ$_1$ + ಆಡು$_1$]

**ಇಡೆವೆಟ್ಟು** (ನಾ). ನಡುವೆ ಇರುವ ಬೆಟ್ಟ: ಮೂಡಣ್ಡಾ ಸೀಮೆ ಇಡೆವೆಟ್ಟದಾ ವಡಗಣ್ಡಾ ನೀರಿಜಗ (ಎಇ. XXI, ೨೯–೧೩ ; 4ನೆಯ ಶತ).

[ಇಡೆ$_0$ + ಬೆಟ್ಟ]

**ಇಡ್ಡಲಿ,** ಇಡ್ಲಿ (ನಾ). ಅಕ್ಕಿ ಉದ್ದಿನ ಬೇಳೆಗಳನ್ನು ನೆನೆಯಿಸಿ ಕೂಡಿಸಿ ರುಬ್ಬಿ ಸಂಬಾರದ ಪದಾರ್ಥಗಳನ್ನು ಬೆರಸಿ ಹಬೆಯಲ್ಲಿ ಬೇಯಿಸಿ ಸಿದ್ಧಗೊಳಿಸುವ ಅಥವಾ ರವೆಯನ್ನು ಮಜ್ಜಿಗೆ ಮೊಸರುಗಳಲ್ಲಿ ಕಲಸಿ ಹಬೆಯಲ್ಲಿ ಬೇಯಿಸಿ ಮಾಡುವ ಒಂದು ಬಗೆಯ ಭಕ್ಷ್ಯ: ದೋಸೆ, ಇಡ್ಡಲಿ, ಕಾಂಧಾಭಜಿ, ಉಪ್ಪಿಟ್ಟು, ಬಟಾಟಾವಡಾ . . . ಏನನ್ನೋ ಒಂದೇ ಉಸಿರಿನಲ್ಲಿ ಹೇಳಿಬಿಟ್ಟನು (ಚಿಂದುಟ. ೪೦). **ಇಡ್ಲಿ :** ನಮ್ಮ ತೇಜೋರಾಶಿ ಇಡ್ಲಿಯಂತೆ ಅಥವಾ ಬನ್ನಿನಹಾಗೆ ಇದೆ ಮಧ್ಯೆ ಉಬ್ಬಾಗಿ ಅಂಚಿನಲ್ಲಿ ತೆಳ್ಳಗೆ ಇದೆ (ಆಕಾಶ. ೬೩) ; ಮಾಣಿ: – ಏನು ಕೊಡಲಿ ಸಾರ್, ಜಾಮೂನ್, ಇಡ್ಲಿ (ಮಹಾಲ. ೪೬).

[ದೇ. ‖ ತಮಿ. ಮಲ. ಇಟ್ಟಲಿ ; ತೆಲು. ಇಡ್ಡೆನ]

**ಇಡ್ಡಲಿಗೆ,** ಇಡ್ಡಿಲಿಗೆ (ನಾ). = ಇಡ್ಡಲಿ: ತುಯ್ಯಲುಂ ಪೂರಿಗೆ ಯಿಡ್ಡಲಿಗೆ ಸೋದಿಗೆ ಲಾವಣಿಗೆ ಘೃತಪೂರಂ ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟು ತೆಱದ ಭಕ್ಷ್ಯರೂಪಂಗಳುಮಂ (ವಡ್ಡಾರಾ. ೭೮–೧೬) ; ಆರೆದುರ್ದಿನ ಬೇಳೆಯನೊಂದಿರೆ ಮೊಸರಧಿ(ಡಿ) ನೀರೊಳಿಂಗು ಜೀರಗೆ ಕೊತ್ತುಂಬರಿ ಮೆಣಸಲ್ಲಮಿವಿನಿತಂ ಬೆರಸಿಡ್ಡಲಿಗೆಯನಡಲ್ಕೆ ಕಂಪಂಕುಡುಗುಂ (ಲೋಕೋಪ. ೮–೧೧) ; ಇಡ್ಡಲಿಗೆಯನಣ್ಣೆವಾಲ ಪಾಯಸಂಗಳಂ ನಿಮಿರ್ಚಿ (ವೈಜರ. ೯೩–೧) ; ಪಾಲೋಗರ ಬೋನವಿಡ್ಡಲಿಗೆಯಂ ಜೋಗಾಯಿ . . . ಎಣ್ಣೂರಿಗೆ ಬಿಸುಪೂರಿಗೆ . . . ಭಕ್ಷ್ಯಚಯಮಂ ತಂದಿಕ್ಕಿದರ್ ಕಾಂತೆಯರ್ (ಧರ್ಮಪ. ೨–೫೪) ; ಬಡ್ಡಿಸಿದಿಡ್ಡಲಿಗೆಯ ಮುಂದೆ ಕುಳ್ಳಿರ್ದು ಗಡ್ಡಮೀಸೆಯ ನೀವಿಕೊಳುತ (ಸೇಮಿಸಂ. ೨೩–೨೭೫). **ಇಡ್ಡಿಲಿಗೆ :** ಅಡ್ಡಣಿಗೆಗಳ ಮೇಲ್ದೆಸೆಯ ಕಂಗೆಡ್ಡವಹ ಪೊಂದಟ್ಟೆಗಳೊಳಿನಿದಿಡ್ಡಿಲಿಗೆ ಮಧುನಾಳ ಮಂಡಗೆ ಫೇಣಿ (ಮದೇಪು. ೧೬–೨೪) ; ಇಡ್ಡಿಲಿಗೆ ಮುಖಾಪರಿಮಿತ ಭಕ್ಷ್ಯಾಳಿಯ ಬಡಿಸಿದಳು (ಮದೇಪು. ೨೭–೫).

[ಇಡ್ಡಲಿ + –ಗೆ ?. / → **ಪ್ರಾ.** ಇಡ್ಡರಿಯಾ = ಮಿಷ್ಟಾನ್ನ, ಮಿಠಾಯಿ]

**ಇಡ್ಡಲಿಗೆವಡೆ** (ನಾ). ಇಡ್ಡಲಿಯಿಂದ ತಯಾರಿಸುವ ಒಂದು ಬಗೆಯ ವಡೆ: ಮೃದುವಾಗಿ ಪಾಕವನಾಡಿಡ್ಡಲಿಗೆಯಂ ಮೆಲ್ಲನುದುರಿಸಿದ ಬಳಿಕ ಮೆಣಸುಳ್ಳಿ ಕೊತ್ತುಂಬುರಿಯನದಱೊಳಗೆ ಹಾಕಿ ಹೆಜಿದುಪ್ಪದಿಂದವೆ ಬೆರಸಿ ವಡೆಯಂತೆ ತಟ್ಟಿಕೊಂಡು ಅದಕೆ ಕರ್ಪೂರ ಮೊದಲಾದ ಪರಿಮಳಗಳನು ಹುದುಗಿ ಕಣಿಕದ ಬಟ್ಟಲಂ ಮುಚ್ಚಿ ತುಪ್ಪದೊಳು ಹದನಾಗಿ ಪಾಕಮಾಡಿಡ್ಡಲಿಗೆವಡೆಯೆಂದು ಪೆಸರಂ ಬುಧರು ಕರೆವುದು (ಸೂಪಶಾ. ೧–೬೮). [ಇಡ್ಡಲಿಗೆ + ವಡ್ಡೆ (< ಒಡ್ಡೆ)]

**ಇಡ್ಡಿಗೌರವ** (ನಾ). ವೃದ್ಧಿಯ ಅತಿಶಯ; ಶ್ರೀಮಂತಿಕೆಯ ಮರ್ಯಾದೆ (?): ಇಡ್ಡಿಗೌರವ ಕಾರಣವಾಗಿ ಮಾಳ್ಪುದುಂ . . . ಹಾಡುತ್ತಂ ಮಾಳ್ಪುದುಮೆಂದಿವು ಮೂವತ್ತೆಱಡು ದೋಷಂಗಳಪ್ಪುವು (ಪಸಾರ. ೬೮೬–೯೯).

[ಪ್ರಾ. ಇಡ್ಡಿಗಾರವ < ಸಂ. ಋದ್ಧಿಗೌರವ]

**ಇಡ್ಡಿಲಿಗೆ** 'ಇಡ್ಡಲಿಗೆ' ನೋ.

**ಇಡ್ಲಿ** 'ಇಡ್ಡಲಿ' ನೋ.

**ಇಡ್ವರ** (ನಾ). "ಸ್ವೇಚ್ಛೆಯಿಂದ ತಿರಿಗ್ಯಾಡುವ ಎತ್ತು, ಗೂಳಿ" (ಗಂಗಾಮು. ೩೩). [ಸಂ.]

**ಇಣಕಲು** (ನಾ). ಇಣಕಿ ನೋಡುವುದು: ಮುಚ್ಚು ಕದವಿದೆ; ಬೀಗ ತೆಗೆಯೆ ಗೊತ್ತಿಲ್ಲ; ಬಿಟ್ಟ ತೆರೆಯಾಚೆ ನನ್ನಿಣಕಲಳವಲ್ಲ (ಗಿಳಿವಿಂ. ೧೨೦–೨೩). [ಇಣಕು (< ಇಣಿಕು) + –ಅಲು (< –ಅಲ್$_2$)]

**ಇಣಕು** 'ಇಣಿಕು' ನೋ.

**ಇಣಗಾ** (ನಾ). (ಕರಾ) ಒಂದು ಜಾತಿಯ ಮೀನು. [?]

**ಇಣಚಿ** (ನಾ). **೧.** (ಉಕ) ಅಳಿಲು: ಆಡವಿಯೊಳಗಿನ ಹಕ್ಕಿ, ಇಲಿ, ಇಣಚಿ, ಮೊಲ ಮುಂತಾದ ಸಣ್ಣ ಸಣ್ಣ ಪ್ರಾಣಿಗಳನ್ನು ಕೊಂದು ತಿನ್ನುತ್ತದೆ (ಮುಂಬಯಿ. ೩–೩೧); ಗಿಳಿ, ಇಣಚಿ ಮೊದಲಾದ ಪ್ರಾಣಿಗಳು . . . ಪಕ್ವವಾದ ಫಲಗಳನ್ನು ಕಡಿಕಡಿದು ಮಧುರವಾದ ರಸವನ್ನು ಹೀರಿ ಹೀರಿ ತೃಪ್ತವಾಗುತ್ತಲಿವೆ (ಕುಮುದಿ. ೮೫); ಕೊಲ್ಲಿಸಿದೆ ಇಣಚಿಯನ್ನು ತಲ್ಲಣಿಸಿ ಜೀವನನ್ನು (ಸಪೀಗೀ. ೧೮–೧೭); ಶಾಸ್ತ್ರಿಗಳ ಸೊಸೆಯು ಮಡಿಯ ನುಸುಳಾಟದಲ್ಲಿ ಇಣಚಿಗಿಂತ ಹೆಚ್ಚಿನ ಚಪಲತೆಯನ್ನು ತೋರಿಸುತ್ತಿದ್ದಳು (ನಿರಾಭ. ೪೩). **೨.** ಬಿಳೀ ಮಗ್ಗದವರಲ್ಲಿ ಒಂದು ಪಂಗಡ (ಎಸಮೈ. VIII, ೯). [?]

**ಇಣಿ** (ನಾ). ಗೂಳಿ ಎತ್ತು ಮೊದಲಾದವುಗಳ ಹಿಣಿಲು, —ಗೋಪುರ: ಅಡಿಯಂ ಕೋದೆತ್ತುತುಂ ಮೂರ್ದನಿಗೆ ಮಸಗುತುಂ ದರ್ಪದಿಂ ಛಾಯೆಯೊಳ್ ಕೋಡಿಡುತುಂ ಪೋರ್ದಲ್ಲಿ ಪುಣ್ಪೆತ್ತಿಣಿಗೆಱಗೆ ನೊಣಂ ಶೀರ್ಣಶೃಂಗಾಗ್ರದಿಂ ಮಾರ್ದೊಡೆಯುತ್ತುಂ . . . ಬಂದುದು ಮದವಿದಳತ್ಪಿಂಗಳಾಕ್ಷಂ ಮಹೋಕ್ಷಂ (ಅರ್ಧನೇ. ೮–೧೮); ಇಣಿಗಿಡಿದಿಣಿಯಂ ಕೊಳ್ಕಣಿ[ಕೋಟ್ಕಳಿ]ನಣೆದು ನೆಲಂ ಬಿರಿಯೆ ಕೆಲೆದು ಮಲೆದೊಲೆದಿದಿರೊಳ್ . . . ಅಣಿಯರಮಾಡುವ ಗವೇಂದ್ರನಂ ಸತಿ ಕಂಡಳ್ (ಅನಂಪು. ೪–೧೧೧); ಹೋರಿಯ ಹೆಗಲ ಮೇಲೆ ಇಣಿ ಉಂಟು. ಆಕಳಿಗೆ ಇಣಿ ಇರುವುದಿಲ್ಲ (ಮುಂಬಯಿ. ೧–೩೩); ಕೊಂಬು ಕೊಳಗ ಶುದ್ಧ ಇಂಬುಳ್ಳ ಇಣಿ ಶುದ್ಧ ಬಂಗಾರದಣಿಯಾ ಬಸವಣ್ಣೋ (ಕಜಾಗೀ. ೫೨).

[< ಹಿಣಿಲು ?]

**ಇಣಿಕು**, ಇಣಕು, ಇಣುಕು (ಕ್ರಿ). ಮರೆಯಲ್ಲಿ ನಿಂತು ನೋಡು; ಹಣಿಕಿ ನೋಡು; ಕಾಣಿಸಿಕೊಳ್ಳು: ಮಕ್ಕಳ ಪದ್ಯವು ಪಠ್ಯಪುಸ್ತಕಗಳಲ್ಲೂ ಮಾಸಪತ್ರಿಕೆಗಳಲ್ಲೂ ಇಣಿಕುವುದಕ್ಕೆ ಮೊದಲಾಯಿತು (ಸಮಾಲೋ. ೬೧); ಹೊರಗೆ ಇಣಿಕಿ ನೋಡಿದೆ (ಪ್ರತಾಪ. ೫೧). **ಇಣಕು:** ಆತನು ಮೆಲ್ಲನೆ ಇಣಕಿ ನೋಡಿದ, ಆದರೆ ಏನೂ ಕಾಣಲಿಲ್ಲ (ರೂಢಿ). **ಇಣುಕು:** ಕೇವಲ ಮಹಾರಾತ್ರಿಯೇ ತನ್ನ ವಿದ್ಯುನ್ಮಯಿಯಾ ದೃಷ್ಟಿಯಿಂದ ಮಧ್ಯೆಮಧ್ಯೆ ಇಣುಕಿ ಆ ಮಹಾತಪಸ್ವಿಗೆ ಸಾಕ್ಷಿಯಾಗಿತ್ತು (ಬಾಣಿ. ೨೮೩).

**ಇಣುಕಿಕ್ಕು** = ಹಣಿಕಿ ನೋಡು: ಟೊಂಗೆಗಳ ಕಿಂಡಿಯಿಂದ ಇಣುಕಿಕ್ಕಿದೆನು (ಬಂಗಾಹೆ. ೨). **ಇಣಿಕಿಣಿಕು, ಇಣುಕಿಣುಕು** (ದ್ವಿರುಕ್ತಿ): ಬೊಂಬೆಗೂಡಿದ ತೆನೆಯ ಗೋಪುರದ ಬಾಗಿಲಿನ ಕತ್ತಲೆಯೊಳಿಣಿಕಿಣಿಕಿ ಏರಲೆನ್ನ ಬಗೆ (ಮಲೆದೇ. ೧೪–೪); ಇಣುಕಿಣುಕಿ ನೋಡಿದ ಒಣಕಲು ಗೌರೀನ (ಗಾದೆ). [?]

**ಇಣಿಕುಗಂಡಿ** (ನಾ). ಇಣಿಕಿ ನೋಡಲು ಅನುಕೂಲವಾದ ಸಂದು, —ಕಂಡಿ: ನೋಡುಗಂಡಿ; ಇಣಿಕುಗಂಡಿ (Eyehole. ಇಂಕನಿ).

[ಇಣಿಕು + ಕಂಡಿ$_1$]

**ಇಣಿಗಿಡಿ** (ಕ್ರಿ). ಹಿಣಿಲಿನಿಂದ ಅಮುಕು, —ಒತ್ತು (?): ಇಣಿಗಿಡಿ[ಪಾಠಾಂ. ನಿಡಿ]ದಿಣಿಯಂ ಕೊಳ್ಕಣಿ[ಕೋಟ್ಕಣಿ]ನಣೆದು ನೆಲಂ ಬಿರಿಯೆ ಕೆಲೆದು . . . ಅಣಿಯರಮಾಡುವ ಗವೇಂದ್ರನಂ ಸತಿ ಕಂಡಳ್ (ಅನಂಪು. ೪–೧೧೧). [ಇಣಿ + ಗಿಡಿ]

**ಇಣಿಗೊಳ್** (ಕ್ರಿ). ಹಿಣಿಲನ್ನು ಹೊಂದು; ಡುಬ್ಬವನ್ನು ಹೊಂದು: ಇಭಾಂಗದ ಕುಂಭದ ಮೆಲ್ಮಿದುಳ್ಗಳಂ ಮುಱಿದಿಣಿ[ಪಾಠಾಂ. ಣು]ಗೊಂಡು ಕೊರ್ಬಿದ ಉಲಾಯದ ಖಂಡದ ಮಾಂಸವೃಂದಮಂ ಧರಿಯಿಸಿ ಕೂಡೆ ಬೇಡವಡೆ ತಾಂ ನಡೆಗೊಂಡುದರಣ್ಯಮಾರ್ಗದೊಳ್ (ಕುಸುಮಾ. ೧೪–೫೪). [ಇಣಿ + ಕೊಳ್$_1$]

**ಇಣುಕು** 'ಇಣಿಕು' ನೋ.

**ಇಣುಕುದೀಪ** (ನಾ). ಸಣ್ಣ ಬೆಳಕನ್ನುಳ್ಳ ದೀಪ; ಮಿಣುಕುದೀಪ: ಗೋಡೆಗಳಲ್ಲಿ ಸಣ್ಣ ಸಣ್ಣ ಇಣುಕುದೀಪಗಳು – ಇವೆಲ್ಲಾ ಇರುತ್ತವೆ (ಶಿಕ್ಷದ. ೪೭೩). [ಇಣುಕು (< ಇಣಿಕು) + ದೀಪ]

**ಇತಃಪರಂ** (ಅ). ಇಲ್ಲಿಂದ ಮುಂದಕ್ಕೆ; ಇನ್ನು ಮುಂದೆ: ಇದು ಗೋಪಾಲದೇವರಾ ದತ್ತಿ ಇತಃಪರಮಿದಾನಱಿವೊರ್ ಈ ಅಱುನೂಱು ಭೂಮಿ ಅಗ್ರಹಾರಮಂ ವಾರಣಾಸಿಯುಮಾನಱಿದೊರಾ ಲೋಕಕ್ಕೆ ಸಲ್ವಾರ್ (ಎಇ. XXI, ೨೯–೧೭; 8ನೆಯ ಶತ). [ಸಂ.]

**ಇತಬಾರಿ** (ನಾ). ವಿಶ್ವಾಸದವನು; ಶ್ರದ್ಧಾಳು; ನಂಬುಗೆಯ ವ್ಯಕ್ತಿ; ಆಪ್ತನಾದವನು: ಈ ಬಗ್ಗೆ ನಿನಗೆ ಇತಬಾರಿ ಆಗಿ ಇರುವಂಥಾ ಮನುಷ್ಯನ ಕರಕೊಂಡು ಬಾ (ರಾಜೇಂದ್ರ. ೪೦); ಇತಬಾರಿ ಆಗಿ ವಳ್ಳೆ ಶಿಸ್ತುಹೊಡೆಯುವಂಥಾ ಮರಡು ಜನರಂನು . . . ಕಳುಹಿಸಿದರೆ (ರಾಜೇಂದ್ರ. ೫೫); ನಂಮು ಕದೀಂ ಇತಬಾರಿ ಕರಣೀಕ ಸುಬ್ಬಯ್ಯನಂನು (ರಾಜೇಂದ್ರ. ೧೨೨). [← ಮರಾ. ಇತಬಾರೀ; ಅರ. ಇಅತಿಬಾರೀ]

**ಇತಮಾಮು** (ನಾ). **೧.** (ಲವಾಜಮೆ, ಕಟ್ಲೆ, ದಾಸದಾಸೀಜನ, ಪಲ್ಲಕ್ಕಿ, ಕುದುರೆ, ವಾಹನಸೌಕರ್ಯ ಮುಂತಾದುವುಗಳ) ವ್ಯವಸ್ಥೆ, —ಏರ್ಪಾಡು, —ಬಂದೋಬಸ್ತು: ಲಾಗೂಯೆಂಬ ಮನೆತನದವರು ಶಿರಟ್ಟಿಯ ಶುಬೇದಾರರಾಗಿದ್ದಾಗ ಅವರು ಸ್ವತಂತ್ರ ಸಂಸ್ಥಾನಿಕನ ಹಾಗೆ ಇತಮಾಮು ಇಟ್ಟಿದ್ದರು (ಕಥಾಗೆ. ೬೩೧). **೨.** ಗೌರವ; ಠೀವಿ: ಈ ಆಹೇರಿಯ ಪದ್ಧತಿಯಲ್ಲಿ ಊರಿನ ಇತಮಾಮಿನ ಇಳ್ಳುವತ್ತಿನ ಪ್ರಶ್ನೆ ಇರುತ್ತದೆ (ದೀಪಹ. ೧೦೪); ಒಂದಾನೊಂದು ರಾಜ್ಯದ ಶ್ರೇಷ್ಠಮಂತ್ರಿಗೆ ಇರುವಷ್ಟು ಇತಮಾಮು ಆಚಾರ್ಯರ ವಿಷಯವಾಗಿ ಕಾಯಲ್ಪಟ್ಟಿತ್ತು (ಮಾಧವ. ೨೮೧); ಒಮ್ಮೊಮ್ಮೆ ಅವಳ ಪರಿಸ್ಥಿತಿಗೂ ತನ್ನ ಇತಮಾಮಿಗೂ ಇದ್ದ ಮಹದಂತರವನ್ನು ನೆನಪಿಗೆ ತಂದು ಹೆಚ್ಚಿನ ವಿಚಾರವು ತಕ್ಕದ್ದಲ್ಲವೆಂದು ಮನಸ್ಸು ಸಮಾಧಾನ ಮಾಡಿಕೊಳ್ಳುತ್ತಿದ್ದನು (ಪ್ರೇಮವಿ. ೮೦).

[← ಅರ. ಇಹತಿಮಾಮ್; ಮರಾ. ಹಿಂ. ಇತಮಾಮ್]

**ಇತರ** (ಗು). **೧.** ಬೇರೆಯ ; ಉಳಿದ : ನೃಪನವ್ಯಗ್ರತೆಯಿಂನಿತರ ವನಿತೆಯ ರಾಗ್ರಹಮಂ ಬಿಟ್ಟಂ (ಶಾಂತಿಪು. ೧–೭೩) ; ಇತರ ಚಿಂತೆಯನುಳಿದುಮಾ ಶಿವಕಥೆಯೊಳೊಂದರೆವದನ ಕೇಳಿದ (ಮದೇಪು. ೨–೬೪). (ನಾ). **೨.** ಸಾಮಾನ್ಯ ಜನ ; ನಾಡಾಡಿ ; ಚಿಲ್ಲರೆ ಜನ : "ನೀಚನು" (ಅಮರ. ಟೀಕೆ).

**ಇತರರ್** (ಬಹುವ) = ಬೇರೆಯವರು : ಈತನಂತಿರಿತರರ್ [ಪಾಠಾಂ. ತದಟರುಂ] ಪತಿಭಕ್ತರುಮಿಾಗಳಾರುಮಿಲ್ಲೆನಿಸಿದ ನಾಗದೇವಂ (ಅಜಿಪು. ೧–೪೩). [ಸಂ.]

**ಇತರತೆ** (ನಾ). ಬೇರೆಯತನ : ಪರಸತಿಗಳುಪುವಳಿಯಾಸೆ ಈ ಸಿರಿಯ ಸೋರ್ಕಿಗಲ್ಲದೆ ಸಲ್ಲದಿತರತೆಗೆ (ಶ್ರೀರಾಮಾ. ೪೨೨–೫೨). [ಸಂ. ಇತರತಾ]

**ಇತರತ್ರ** (ಅ). ಬೇರೆಯ ಕಡೆ : ದ್ರಾವಿಡ ಜನಾಂಗವು ಹಿಂದುಸ್ಥಾನವನ್ನು ಬಿಟ್ಟು ಇತರತ್ರ ಕಂಡುಬರುವುದಿಲ್ಲ (ಭಾಷಾಶಾ. ೭೬) ; ಇತರತ್ರ ದೊರೆಯದ ಅನೇಕ ಅಂಶಗಳು ಈ ಗ್ರಂಥದಲ್ಲಿ ದೊರೆಯುತ್ತವೆ (ರೂಢಿ). [ಸಂ.]

**ಇತರಾರ್ಥ** (ನಾ). **೧.** ಬೇರೊಂದು ಅರ್ಥ. **೨.** ಇತರ ಎಂಬುದರ ಅರ್ಥ. **೩.** ಬೇರೊಂದು ಪ್ರಯೋಜನ. **೪.** ಬೇರೆಯವರಿಗಾಗಿ ಆದದ್ದು. [ಇತರ + ಅರ್ಥ]

**ಇತರಾಲಯ** (ನಾ). ಬೇರೆಯ ಮನೆ. 'ಇತರಾಲಯವಿದೂರ' ಪರಾ. [ಇತರ + ಆಲಯ]

**ಇತರಾಲಯವಿದೂರ** (ನಾ). ಇನ್ನೊಂದು ಮನೆಗೆ ಹೋಗದಿರುವವನು : ಪತಿಹಿತನ ಷಡುರಸವಿಶೇಷಾನ್ವಿತನನಿತರಾಲಯವಿದೂರನ ಪತಿಕರಿಸುವುದು ಸೂಪಕಾರತೆಗೆ (ಕುವ್ಯಾಉ. ೩–೯೨). [ಇತರಾಲಯ + ವಿದೂರ]

**ಇತರೆ** (ನಾ). ಸಾಧಾರಣಳಾದ ಹೆಂಗಸು; ಸಾಮಾನ್ಯಳು; ಪಾಮರೆ: ಆರಸನತಿಸಂಭ್ರಮದಿನಿದಿರೇಟ್ವನ್ನೆಗಮಿತರೆಯಂತಲ್ಪಸಖೀಜನಪರಿವೃತೆಯುಮುಪನೀತಾಶೇಷ ರಾಜಚಿಹ್ನೆಯುಮಾಗಿ (ಕಾದಂಉ. ೧೪೯). [ಸಂ. ಇತರಾ]

**ಇತರೇತರ** (ಗು). ಪರಸ್ಪರ ; ಅನ್ಯೋನ್ಯ : ಪ್ರವಾಹ ಸಹಸ್ರಂಗಳಿಂದ ಮಿತರೇತರ ಹೇಷಾರವಾಕರ್ಣನೋದೀರ್ಣರೋಷಹಯ ಹೂಂಕಾರ ನಿಷ್ಠುರ ದಶನಗ್ರಾಹ ಖಣ ಖಣಾಯಿತ ಖಲೀನಸಂಘಟ್ಟಸ್ಯಂದಮಂ (ಆದಿಪು. ೧೪–೯೫ ವ) ; ಉಭಯಕುಲ ಸಹಾಯತ್ವಮಿತರೇತರೋಪಕಾರದಿಂ ಸಂಗತದೊಳಾದುದುಮಂ (ಶಾಂತಿಪು. ೨–೭೭ ವ). [ಇತರ + ಇತರ]

**ಇತರೇತರಕ್ರಿಯೆ** (ನಾ). ಪರಸ್ಪರವಾದ ಕ್ರಿಯೆ ; ಒಬ್ಬನು ಮಾಡಿದುದಕ್ಕೆ ಪ್ರತಿಯಾಗಿ ಮತ್ತೊಬ್ಬನು ಅದನ್ನೇ ಅವನಿಗೆ ಮಾಡುವುದು: ಇತರೇತರಕ್ರಿಯಾಸಂಹತಮದು ತಾನಾವುದಲ್ಲಿ ಮತ್ತೆ ಬಹುವ್ರೀಹಿ ತಗುಳ್ದುಮಾತ್ತವಿಧಿ ಸಂಗತಮಾದಿ ಪಪಾಂತ್ಯದಲ್ಲಿ ಚರಮಕ್ಕಿತ್ವಂ . . . ಮುಷ್ಟಾಮುಷ್ಟಿ (ಶಮುದ. ೧೮೫, ಪ್ರಯೋ). [ಇತರೇತರ + ಕ್ರಿಯೆ]

**ಇತರೇತರೋಕ್ತಿ** (ನಾ). ಅನ್ಯೋನ್ಯವಾದ ಮಾತು (?) : ಉಪಶಮಮುಂ ತೀವ್ರತೆಯುಂ ವಿಪಕ್ಷಮಿತರೇತರೋಕ್ತಿಯಿಂದವನಾ ಭೂಮಿಪನಾಂತು ಮಧ್ಯಮಂ ಲೋಕಪಾಲನಾದಂ ಗಡಂ ಮಹೀಮಂಡಲದೊಳ್ (ಶಾಂತಿಪು. ೮–೧೨೪). [ಇತರೇತರ + ಉಕ್ತಿ]

**ಇತಸ್ತತ** (ಅ). ಇತ್ತ ಅತ್ತ ; ಈಕಡೆ ಆಕಡೆ : ಆಹರಹರುಚ್ಚೈರ್ನಿರ್ಗಚ್ಛೈರ್ಮುರ್ಹುರ್ಮುರ್ಹುರಿತಸ್ತತಃ . . . ಸಹಸಾದ್ಯವ್ಯಯಂಗಳಸಹಾಯಂಗಳ್ (ಕವಿರಾ. ೧–೫೨) ; ಮಂದಾರ ಪಾರಿಜಾತಕುಸುಮವರ್ಷಮುಮಿತಸ್ತತಸ್ಸಂಚಲದಮರಕರಪರಿತಾಡ್ಯಮಾನ ಮಹನೀಯದೇವದುಂದುಭಿನಿರ್ಘೋಷ ಲೀಲೆಯುಂ (ಶಾಂತಿಪು. ೧೦–೧ ವ). [ಸಂ. ಇತಸ್ತತಃ]

–**ಇತಿ**[1] '–ಇತ್ತಿ' ನೋ.

**ಇತಿ**[2] (ಅ). **೧.** ಹೀಗೆಂದು ; ಇಂತು ; ಈ ರೀತಿಯಾಗಿ : ಸ್ಥಿತಿಯನು ಭಾಗ ಮುಂತಾಗಿ ನಾಲ್ದೆಜಸುಂಟು ವಿತತ ವಿಸ್ತರವೇಕೆ ಸಾಕು ಇತಿ ಬಂಧತತ್ತ್ವವೆಂದಜಿಂದಿರು ಮುಂದೆ ಕೇಳತುಳಸಂವರೆಯನಾತ್ಮಾರ್ಥಿ (ಭರಚ. ೬೮–೬೨). **೨.** ಆದಕಾರಣ. **೩.** ಹೆಸರಾದ. **೪.** ಮುಕ್ತಾಯ ; ಪೂರ್ತಿ : ಇತಿ . . . ನಾನಾರ್ಥಕಾಂಡಂ ಸಮಾಪ್ತಂ (ಮಂಗರಾ. ೧೫೭–೫). 'ಅಥ' ಪರಾ. ℙ ಗ್ರಂಥಾಂತ್ಯದಲ್ಲಿ ಈ ಶಬ್ದವನ್ನು ಮಂಗಳಾರ್ಥವಾಗಿ ಬಳಸುವ ವಾಡಿಕೆಯುಂಟು. **೫.** ಇವೇ ಮುಂತಾದ ಎಂಬ ಅರ್ಥದಲ್ಲಿ ಆದಿಯೆಂಬುದರ ಜೊತೆಗೆ ಕೂಡಿಕೊಂಡು ಬರುವ ಮಾತು. **೬.** ನಿಷೇಧ. **೭.** ಮಧ್ಯ ; ಅಂತರ. **೮.** ಕುತೂಹಲ. **೯.** ಪ್ರಕಟಾರ್ಥ : "ಇತಿ ಹೇತು ಸಮಾಪ್ತಿಗಳೊಳ್" (ವಸ್ತುಕೋ. ೧೩೬–೧೧೩) ; "ಇಂತೀಪ್ರಕಾರಮೆಂಬಲ್ಲಿ ಹೇತುವಿನಲ್ಲಿ ಅಂತದಲ್ಲಿ ಇತಿಶಬ್ದಮಕ್ಕುಂ" (ಮಂಗರಾ. ೧೫೫–೬೮) ; "ಕಾರಣದೊಳ್ ನಿಷೇಧದೊಳ್ ಪೂರ್ಣದೊಳಂತರದೊಳ್ ಪ್ರಕಾರದೊಳ್ ಪೂರಣೆಯೊಳ್ ಕುತೂಹಲದೊಳಂ ಪ್ರಕಟಾರ್ಥದೊಳಿತಿಯೆಂದೆನಿಕ್ಕು" (ನಾನಾರ. ೯೩). [ಸಂ.]

**ಇತಿಕರ್ತವ್ಯ** (ನಾ). ಅಗತ್ಯವಾಗಿ ಮಾಡಬೇಕಾದ ಕೆಲಸ : ಅವನು ತನ್ನದೇ ಒಲೆ ಹೂಡಿ ಪ್ರಪಂಚ ಸುರುವು ಮಾಡಿದನೆಂದರೆ ತನ್ನ ಇತಿಕರ್ತವ್ಯ ಮುಗಿಯಿತು (ಗಂಪೂಾಯಿ. ೧). [ಇತಿ[2] + ಕರ್ತವ್ಯ]

**ಇತಿಕರ್ತವ್ಯತಾಮೂಢ** (ನಾ). ಮಾಡಬೇಕಾದ ಕೆಲಸವನ್ನು ಮಾಡಲು ದಿಕ್ಕು ತೋರದವನು : ವೈದ್ಯ ವಾಗೀಶನು ಇತಿಕರ್ತವ್ಯತಾಮೂಢನಾಗಿ ಬಲುಹೊತ್ತು ಯಾವ ಮಾತನ್ನೂ ಆಡದೆ ಕುಳಿತಿದ್ದ (ಚೆನ್ನಬೀ. ೧೮೩). [ಸಂ.]

**ಇತಿಗತಿ** (ನಾ). ತೀರ್ಮಾನ ; ನಿರ್ಣಯ : ಅವಳ ಸಹವಾಸವು 'ಸಖ್ಯ' ರೂಪವಾಗಿದ್ದಿತಲ್ಲದೆ 'ಪ್ರೇಮ'ದ ಮಿಾಮಾಂಸೆಗೆ ಅಲ್ಲಿ ಸ್ಥಾನವಿದ್ದಿಲ್ಲವೆಂದು ಇತಿಗತಿಯಾಗಿತ್ತು (ಹೇಮಂತ. ೨೫೫). [ಇತಿ[2] + ಗತಿ]

**ಇತಿಮಿತಿ** (ನಾ). **೧.** ಇಷ್ಟು ಎಂಬ ಅಳತೆ ; ಸ್ವರೂಪ ಮತ್ತು ಪರಿಮಿತಿ : ನಮ್ಮ ಇತಿಮಿತಿಗಳನ್ನರಿತೂ ಚೆನ್ನಬಸವಣ್ಣನಲ್ಲಿ ಅಚಲವಿಶ್ವಾಸವನ್ನಿಟ್ಟು ಈ ಕಾರ್ಯವನ್ನು ಕೈಗೊಂಡೆವು (ಚೆನ್ನಸಾ. ೫ ಮುನ್ನುಡಿ) ; ಮನೆತನದ ಗಾತ್ರಕ್ಕೆ ತಕ್ಕಂತೆ ಖರ್ಚೂ ದೊಡ್ಡದಾಗಿರುತ್ತದೆ. ಆದಕ್ಕೊಂದು ಇತಿಮಿತಿ ಇರಬೇಡವೆ (ಮಣ್ಣಿಮ. ೪೮). **೨.** (ಉಕ). ಅನುಮಾನ ; ಸಂಶಯ ; ಸಮಸ್ಯೆ ; ಮಿಾನ ಮೇಷ ನೋಡುವುದು : ನಾನೊಂದ ನೆನೆದರ ನೀನೊಂದ ನೆನೆಯುತಿ, ನನ್ನ ನಗಿಗ್ಯಾಕ ಮುನಿಯುತಿ ಎಂದೆನಗ ಬಿದ್ದಿತು ನೋಡು ಇತಿಮಿತಿ (ನಾದಲೀ. ೫೪–೪). [ಇತಿ[2] + ಮಿತಿ]

**ಇತಿವೃತ್ತ** (ನಾ). ನಡೆದ ಸಂಗತಿ ; ಚರಿತ್ರೆ ; ಕಥೆ : ಆ ಕುಟುಂಬದ ಇತಿವೃತ್ತವನ್ನೆಲ್ಲಾ ಅರಿತಿದ್ದ ಒಂದು ಆತ್ಮೀಯ ಜೀವದ ಅನುಕಂಪದ ಕಣ್ಣೀರು (ವಾತ್ಸಲ್ಯ. ೫) ; 'ವಸ್ತು'ವೆಂದರೆ ಕಾವ್ಯದಲ್ಲಿರತಕ್ಕ ಕಥಾಭಾಗ. ಇದಕ್ಕೆ 'ಇತಿವೃತ್ತ'ವೆಂದೂ ಹೆಸರು (ಕೈಪಿಡಿ. ೨೦೫) ; ಹಿಸ್ಟೀರಿಯಾದಿಂದ ಬಳಲುತ್ತಿದ್ದವಳು, ಉನ್ಮಾದದಲ್ಲಿ ಆತ್ಮಹತ್ಯ ಮಾಡಿಕೊಂಡಿರುವಳೆಂದು ಇತಿವೃತ್ತದಲ್ಲಿ ಕಾಣಿಸಲಾಯಿತು (ಅಲ್ಪವಿ. ೮೦). [ಇತಿ[2] + ವೃತ್ತ]

**ಇತಿಶ್ರೀ** (ನಾ). **೧.** ಕೊನೆ ; ಮುಕ್ತಾಯ : ಇತಿಶ್ರೀಯಾಗಿದ್ದರೂ ಈ ಶ್ಲೋಕವು ಪೂರ್ತಿಯಾಗಲಿಲ್ಲ (ನಾಡೋಜ. ೩೪೩) ; ಜುಟ್ಟನೊಡನೆ ಸಂಧ್ಯಾವಂದನ ಹವನಾದಿಗಳಿಗೂ ಇತಿಶ್ರೀ ಒದಗಿ ಬಂತು (ಕೆಲಕ. ೯೫) ; ಸತಿ ಗಿಯಾಸಳಿಗೆ ಈಗ ಇಲ್ಲಿಂದ ಕದಲದೆ ಇದ್ದರೆ ಕಳ್ಳರು ತಮ್ಮ ಇತಿಶ್ರೀಯನ್ನು ಮುಗಿಸಿ ಬಿಡುವರೆಂಬ ಹೆದರಿಕೆ (ಸೂರಜ. ೫). **೨.** (ಉಕ). ಫಜೀತಿ. [ಇತಿ[2] + ಶ್ರೀ]

**ಇತಿಹಾಸ** (ನಾ). ಹೀಗೆ ಇತ್ತಂತೆ, ಹೀಗಂತೆ ಎಂದು ಮುಂತಾಗಿ ತಿಳಿಸುವ ಪೂರ್ವಕಥೆ; ಪ್ರಾಚೀನ ವೃತ್ತಾಂತ; ಚರಿತ್ರೆ: "ಇತಿಹಾಸಃ – ಪೂರ್ವದವರ ವರ್ತಮಾನದ ಪೆಸರು" (ನಾ ಚಿ ರಾ. ೯೪); ಕಂಡು ಕೇಳಿದ ಮಾತನ್ನು ಹಾಗೆಯೇ ಹೇಳುವುದು ಸತ್ಯವಲ್ಲ ಎಂಬುದಕ್ಕೆ ಇತಿಹಾಸವೇ ಸಾಕ್ಷಿ (ಬಾಣಅ. ೧೩೩); ಧ್ರುವಬಾಲಕನ ಇತಿಹಾಸವನ್ನು ನೀವು ಮನನ ಮಾಡಿದ್ದೀರಿ (ರಂಗರೋ. ೧೦); ರಾಮಾಯಣ ಮತ್ತು ಮಹಾಭಾರತ ಈ ಎರಡೂ ಭರತಭೂಮಿಯ ಪ್ರಸಿದ್ಧವಾದ ಇತಿಹಾಸಗಳು (ರೂಢಿ). [ಸಂ.]

**ಇತಿಹಾಸಕಾರ**, ಇತಿಹಾಸಗಾರ (ನಾ). ಇತಿಹಾಸವನ್ನು ಬರೆದವನು; ಚರಿತ್ರಲೇಖಕ: ಇತಿಹಾಸಕಾರರನು ಸತ್ಯ ಹುಡುಕುವವ (ಯಕ್ಷಬ. ೮). **ಇತಿಹಾಸಗಾರ** (ದಕ. ಕ).
[ಇತಿಹಾಸ + -ಕಾರ್$_3$ (< -ಕಾಱ)]

**ಇತಿಹಾಸಗಾರ** 'ಇತಿಹಾಸಕಾರ' ನೋ.

**ಇತಿಹಾಸಜ್ಞ** (ನಾ). ಇತಿಹಾಸವನ್ನು ಬಲ್ಲವನು. [ಸಂ.]

**ಇತಿಹಾಸೋಪಾಶ್ರಯ** (ನಾ). ಇತಿಹಾಸಗಳನ್ನು ಆಶ್ರಯಿಸಿರುವಂಥದು, —ಅವಲಂಬಿಸಿರುವದು: ಅತಿಶಯಮಿತಿಹಾಸೋಪಾಶ್ರಯಂ ಮೇಣ್ ಕಥಾವಿಶ್ರುತ ಚತುರವಿ[ಕಾ]ಶೋತ್ಪಾದಿತಾರ್ಥೋತ್ಕರಂ (ಕವಿರಾ. ೩–೨೦೯). [ಇತಿಹಾಸ + ಉಪಾಶ್ರಯ]

**ಇತುಬಾರು** (ನಾ). ವಿಶ್ವಾಸ; ಮೆಚ್ಚಿಗೆ: ದೊರೆಗಳ ಇತುಬಾರಿಗೆ ಪಾತ್ರರಾಗಿ ನಾಲ್ಕು ವರ್ಷವಿದ್ದು . . . ಬೆಂಗಳೂರಿಗೆ ಹೋದರು (ಮಹಾವಂ. II, ೧೧೩). [← ಮರಾ. ಇತಬಾರ್; ಅರ. ಇಅತಿಬಾರ್]

**ಇತೋಪ್ಯತಿಶಯ** (ನಾ). ಇದಕ್ಕಿಂತ ವಿಶೇಷ; ಇನ್ನೂ ಹೆಚ್ಚು: ಮಾತೃಋಣವನ್ನೂ ಪಿತೃಋಣವನ್ನೂ ಇತೋಪ್ಯತಿಶಯವಾಗಿ ಆರ್ಜಿಸಿ ಮುಕ್ತರಾದರು (ಜಗಜಂ. ೩). [ಸಂ.]

**ಇತ್ತ**$_1$ (ನಾ). **೧.** ಈ ಕಡೆ; ಈ ದಿಕ್ಕು; ಈ ಭಾಗ; ಇಲ್ಲಿ: ಇತ್ತ ವರ್ಧಮಾನಭಟ್ಟಾರರ್ ಮೋಕ್ಷಕ್ಕೆ ವೋದಿಂಬಟಿಕ್ಕೆ (ವಡ್ಡಾರಾ. ೭೩–೨೪); ತಾರದಿರ್ ಮೊಗಮನಿತ್ತೆನುತುಂ ಬೆಜಗಾಗೆ ಕೂಡಿದಳ್ (ಕಾವ್ಯಸಾ. ೯೯೪ ಶೂದ್ರಕ); ಅತ್ತ ಸುರೇಶ್ವರಾವಸಥಮಿತ್ತ ಮಹೀತಳಮುತ್ತ ಪನ್ನಗೋದಾತ್ತಸಮಸ್ತಲೋಕಮಜಿಂದಂತಿರೆ (ಪಂಪಭಾ. ೧–೭೫); ಕೌರವರಿತ್ತ ಸರಿದರು (ಕುವ್ಯಾದ್ರೋ. ೧–೧೧); ಅತ್ತಿತ್ತಗಲದೆ ಭಕ್ತರ ಮನೆಯಲಿ ನಿತ್ಯಮಹೋತ್ಸವ ನಿತ್ಯಸುಮಂಗಳ (ಪುರಂದ. ೧–೨೧೧–೩); ಇತ್ತ ದರಿ ಅತ್ತ ಪುಲಿ (ಗಾದೆ). **೨.** ಆ ಕಾಲದಿಂದೀಚೆಗೆ; ಆ ಸಮಯದಿಂದೀಚೆಗೆ: ಮುನಿದಿರ್ಪತ್ತೊಂದು ಸೂೞ್ ಕ್ಷತ್ರಿಯರನಜಿಸಿ ಕೊಂದಿಕ್ಕಿದಾ ರಾಮನಿಂದಿತ್ತ ನರೇಂದ್ರರ್ ಪೊಕ್ಕರಿಲ್ಲೊರ್ಬರುಂ (ಗದಾಯು. ೧–೨೮); ಶಕವರ್ಷದಿನಿತ್ತ ೧೧೧೮ಋನೆಯ ಪರಾಭವ ಸಂವತ್ಸರದ ಪುಷ್ಯ ಸುದ್ಧ ೧೩ ಬೃಹಸ್ಪತಿವಾರದಂದು (ಸೌಇಇ. IX–i, ೨೭೯–೧೭; 1186).

**ಇತ್ತಣ್** = ಈ ಕಡೆ; ಈ ದಿಕ್ಕು: ಅನನುನಯದಿಂದಮಾದರಿಸದಿತ್ತಣಿನಿತ್ತಲೆ ಪೋದೊಡೆ (ಕಾದಂಋ. ೪೫೬); ಪದಿನಾಱುಂ ಕಲ್ಪದೊಳಿರ್ಪ ದೇವರಿತ್ತಣ್ಗೆವರ್ಪರೆಜಗಲ್ಕರ್ಹತ್ಪದಪದ್ಮಕ್ಕೆ (ಅಜಿಪು. ೧೧–೩೦); ನರನಾದ ಬಳಿಕ ಎತ್ತಣದು ಇತ್ತಣ ಬರವು (ಸಂಚಿರ. ೧–೫೮); ಆಯ್ತು ಭೀಷ್ಮಂಗಿತ್ತಣವಧಾನ (ಕುವ್ಯಾದ್ರೋ. ೧–೨೨). **ಇತ್ತಣಂ** = ಈ ದಿಕ್ಕಿನವನು; ಈ ಕಡೆಯವನು: "ಅಕಾರಕ್ಕೆ . . . ಪಿಂತಣಂ, ಅತ್ತಣಂ, ಇತ್ತಣಂ" (ಶಮದ. ೧೧೧ ಪ್ರಯೋ). **ಇತ್ತಲ್**$_1$, **ಇತ್ತಲು** = ಈಕಡೆ; ಈಪಕ್ಷ: ಇತ್ತಲೆರಡು ಲಕ್ಕ ಪೂರ್ವಂ ಪರಮಾಯುಷ್ಯಮುಂ ನೂಱು ಬಿಲ್ನಿಡಿಯಮುಂ (ಚಾವುಂಪು. ೧೯–೧೯); ಅನ್ನೆಗಮಿತ್ತಲ್ ತಾಂ ಪರ್ವತದ ತಪ್ಪಲೊಳ್ ಬಿಟ್ಟಿರ್ದ . . . ಗೋಪತಿಯಂ (ಪಂಚತಂ. ೧೮೦–೮); ಇತ್ತಲು ದೇಹಂ ಬಿಟ್ಟಿಡೆ ಎತ್ತಿನ ಮಣ್ಣಿಂಬುವಾದುದಂದಿಂದಿತ್ತಲು (ವೈಆರಿ. ೧೯೨೭, ೩೪–೪; 11ನೆಯ ಶತ); ಧ್ಯಾನವಿತ್ತಲು ರಾಗವತ್ತಲು (ಕುವ್ಯಾದ್ರೋ. ೪–೧). **ಇತ್ತಲಾಗಿ** = ಈ ಕಡೆ; ಈದಿಕ್ಕಿನಲ್ಲಿ; ಈಚೆಗೆ; ಆ ಕಾಲದಿಂದೀಚೆಗೆ: ಇತ್ತಲಾಗಿ (ಈಚೆಗೆ) ಕಟ್ಟೆಯು ಬಿದ್ದುಹೋಗಬಾರದೆಂದು ಅದರ ಸುತ್ತಲು ಕಂಬಗಳನ್ನು ನೆಡಿಸಿ ಸರಪಳಿಯನ್ನು ಬಿಗಿದು, ಒಂದು ಲೇಖದ ಕಲ್ಲನ್ನು ಹುಗಿದಿರುತ್ತಾರೆ (ಅಕ್ಕರ. ೨೩). **ಇತ್ತಿತ್ತ** (ದ್ವಿರುಕ್ತಿ): ಅಯ್ಯಾ ಪಾತಾಳವಿತ್ತಿತ್ತ ಶ್ರೀಪಾದವತ್ತತ್ತ ಬ್ರಹ್ಮಾಂಡವಿತ್ತಿತ್ತ (ಮಹಾದೇ. ಬ. ೧೧–೭); ಇತ್ತಿತ್ತ ಬಾ ಅಂದರೆ ಇದ್ದ ಮನೆ ಕಿತ್ತುಕೊಂಡ (ಗಾದೆ); ಇತ್ತಿತ್ತ ಬಾ ಅಂದರೆ ಹೆಗಲಮೇಲೆ ಹತ್ತಿಕೊಂಡ (ಗಾದೆ). **ಇತ್ತೀಚೆ** = ನೆನ್ನೆಮೊನ್ನೆ; ಈ ಸ್ವಲ್ಪ ದಿನಗಳಿಂದ ಈಚೆಗೆ: "ಇತ್ತೀಚೆ –ನಿನ್ನೆ ಮೊನ್ನೆ" (ಜಾನಕೋ. ೧೭). [?]

**ಇತ್ತ**$_2$ 'ಈ$_2$' ಪರಾ.

**ಇತ್ತಂಡ** 'ಇರ್ತಂಡ' ನೋ.

**ಇತ್ತಂಡವಾದಿ** (ನಾ). ಎರಡು ಪಕ್ಷಗಳ ಕಡೆಗೂ ವಾದಿಸುವವನು: ಇಂಥ ಪ್ರಶ್ನೆಗಳು ಕೆಲವು ಇತ್ತಂಡವಾದಿಗಳನ್ನು ದಿಗಿಲುಗೊಳಿಸದೆ ಇರಲಿಲ್ಲ (ಸಮಜೀ. ೭೧೯). [ಇತ್ತಂಡ (< ಇರ್ತಂಡ) + ವಾದಿ]

**ಇತ್ತಕಡೆ** (ನಾ). ಈ ಕಡೆ; ಇಲ್ಲಿ: ಇತ್ತಕಡೆ ತಿಲೋತ್ತಮೆ ವಿಮಲೆ ಅಭಿರಾಮಸ್ವಾಮಿ ಮೂವರಿಗೂ ಸಂಬಂಧವಾದರೆ (ಬಂಕಿಮು. ೧೫೩); ಇತ್ತಕಡೆಗೂ ಅತ್ತಕಡೆಗೂ ಒಂದೆರಡುಗಳಿಗೆ ಹಾರಾಡಿ . . . ಮನೆಯ ಹತ್ತಿರ ಬರುತ್ತವೆ (ಮುಂಬಯಿ. ೩–೧೯). [ಇತ್ತ$_1$ + ಕಡೆ$_4$]

**ಇತ್ತಟ** (ನಾ). ಎರಡೂ ದಡ; ಎರಡೂ ಪಾರ್ಶ್ವ: ಮತ್ತಂ ಭಾಳಸ್ಥಳದ ರುಚಿಯಿತ್ತಟ [ಪಾಠಾಂ. ಯತ್ತಯ] ದಿನುದಿರ್ದ ಭಸಿತರಾಶಿಗಳಂ ತೆಸೆವ ಭುಜಮುಂಡಲಂಗಳ (ಬಸರ. ೨–೨೮); ಮನ ತಾನಿತ್ತಟವ [ಪಾಠಾಂ. ಡಿಯ] ಮೆಟ್ಟರಲು ಬೇಡ ಪುನಃ ಪರೀಕ್ಷೆಯಲಿ (ತೊರರಾ. ೪–೨–೪೯); ವಿಪ್ರರನಾರಿಯರೆಸೆದರಿತ್ತಟದೆ (ಕಂಸವಿ. ೫–೫೧).
[ಇರ್$_2$ (< ಎರಡು) + ತಟ]

**ಇತ್ತಟ್ಟು**$_1$ 'ಇರ್ತಟ್ಟು' ನೋ.

**ಇತ್ತಟ್ಟು**$_2$ (ಅ). ಈ ಕಡೆ: ಇತ್ತಟ್ಟು ಬಾ (ರೂಢಿ).
[ಈ$_4$ (< ಇದು) + ತಟ್ಟು$_5$]

**ಇತ್ತಡ** (ನಾ). ಎರಡು ದಡ, —ಕಡೆ: ನಡುಗಿದನು ಸೌಮಿತ್ರಿ ತಾನಾ ನುಡಿಯ ಕೇಳಿದು ಚಿತ್ತದಲಿ ಇ[ಪಾಠಾಂ. ಕಿ]ತ್ತಡಕೆ ಬಿದ್ದುದು ಬುದ್ಧಿ (ತೊರರಾ. ೩–೯–೪). [ಇರ್$_2$ (< ಎರಡು) + ತಡ$_4$]

**ಇತ್ತಡಿ** 'ಇರ್ತಡಿ' ನೋ.

**ಇತ್ತಣಿ** (ನಾ). ಒಂದು ಊರಿನ ಹೆಸರು (?): ಶ್ರೀ ಸ್ವಾಮಿ ದೇವರಂಗಭೋಗಕ್ಕೆ ಕೊಟ್ಟಿತ್ತಣಿಯುಲಿರ್ದು ಪನ್ನಾಯದ ಸುಂಕಮಂ (ಸೌಇಇ. IX–i, ೧೬೪–೪೧; 1098). [?]

**ಇತ್ತರ** 'ಇರ್ತರ' ನೋ.

**ಇತ್ತರಂಗೊಳ್** (ಕ್ರಿ). ಎರಡು ಸಾಲಾಗು: ಮುಂದಣ ರಂಗಮುಂಟಪದೊಳಿತ್ತರಂಗೊಂಡೋಲಗವಿತ್ತು ಕುಳ್ಳಿರ್ದ ಪರಮ ಭಕ್ತರ (ಮಲುರ. ೧೭–೨೧). [ಇತ್ತರ (< ಇರ್ತರ) + ಕೊಳ್$_1$]

**ಇತ್ತರಂಬಿಡಿ**, ಇತ್ತರವಿಡಿ (ಕ್ರಿ). ಎರಡು ಸಾಲಾಗಿರು: ಇತ್ತರಂಬಿಡಿದೊತ್ತರಿಸಿ ಬೆಳೆದಕ್ಷೀಣವೇಣುಕುಂಜ ಮಂಜುಳಸ್ಥಾನದಲ್ಲಿ (ರಾಜಶೇ. ೧–೧೩೩ ವ). **ಇತ್ತರವಿಡಿ**: ಇತ್ತರವಿಡಿದು ನೋಟಕಜನವಿದ್ದುದು ಮತ್ತೆ ರಾಯನ ಸಮ್ಮುಖದೊಳು (ಭರಚ. ೧೨–೩೫).
[ಇತ್ತರ (< ಇರ್ತರ) + ಪಿಡಿ$_1$]

**ಇತ್ತರವಿಡಿ** 'ಇತ್ತರಂಬಿಡಿ' ನೋ.

**ಇತ್ತಲ್**$_1$ 'ಇತ್ತ$_1$' ಪರಾ.

**ಇತ್ತಲ್**$_2$ (ನಾ). ಅಮೇಧ್ಯ; ಹೇಲು (?): ಇದಾನಬಿತ್ತೊನ್ ಪಂಚಮಹಾಪಾತಕನಾಗಿ ದಿಟ್ಟಗಲುಣ್ಡು ಕೊಟ್ಟ ತೇದು ಅಟ್ಟುವೆಣ್ಣ ತ್ತಲ ಪೂಸುವೋನಕ್ಕು (ಎಕ. III, ನಂಜನ. ೨೬–೬; 810). [?]

**ಇತ್ತಲು** 'ಇತ್ತ$_1$' ಪರಾ.

**ಇತ್ತಲೆ** 'ಇರ್ತಲೆ' ನೋ.

**ಇತ್ತಲೆಗ** (ನಾ). ಎರಡು ತಲೆಯನ್ನು ಉಳ್ಳದ್ದು: "ರಾಜಸರ್ಪಃ – ಇತ್ತಲೆಗ, ಹಸುರು ಹಾವು" (ಒಷಧಿ. ೧೩೮).
[ಇತ್ತಲೆ (< ಇರ್ತಲೆ) + –ಗ$_3$]

**ಇತ್ತಲೆಗುಂಡಿ** (ನಾ). ಎರಡು ತಲೆಗಳುಳ್ಳ ಗುಂಡಿ: ಚಿನ್ನದ ಇತ್ತಲೆ ಗುಂಡಿಗಳಿಂದ ಕಟ್ಟಿಗೊಂಡು ಗಂಜಿಮಾಡಿದ ಶರಟಿನ ತೋಳುಗಳ ದಿಯ ಪಟ್ಟಿಗಳಿಂದ ಆ ಮುಷ್ಟಿಯು ಇಣುಕುತ್ತಿತ್ತು (ಪುನರು. ೨೨೫).
[ಇತ್ತಲೆ (< ಇರ್ತಲೆ) + ಗುಂಡಿ$_2$]

**ಇತ್ತಾಪಾರ** (ನಾ). ಎಲ್ಲ ಆಸ್ತಿ; ಸರ್ವಸ್ವ: "ಎಲಾ ದುಶ್ಶಾಸನ! ಮೋಸದಿಂದ ನಮ್ಮ ಇತ್ತಾಪಾರವನ್ನು ಗೆದ್ದು ಏನು ಜಂಭ ಹೇಳಿಕೊಳ್ಳುತ್ತೀಯೆ!..." (ವಚಭಾ. ೧೦೮). [ಇತ್ತ$_0$ (< ವಿತ್ತ) + ಅಪಾರ ?]

**–ಇತ್ತಿ, –ಇತಿ$_1$, –ತಿ$_1$** (ಪ್ರ). ತದ್ಧಿತ ಪ್ರತ್ಯಯ; ಸ್ತ್ರೀವಾಚಕ: ಚಿತ್ತೂರ ಮೋಣಿಗುರವಡಿಗಳ ಶಿಷಿತ್ತಿಯರ್ ನಾಗಮತಿಗನ್ತಿಯರ್ (ಎಕ. II, ೨೦–೧; 700). **–ಇತಿ$_1$**: ನಿಷಾದಿತಿಯೆಂಬ ಬೇಡಿತಿಗಮುಯ್ವರ್ ಮಗಂದಿರ್ಗಂ ಉಣಲಿಕ್ಕಿದೊಡೆ (ಪಂಪಭಾ. ೩–೮ ವ); ಮಗ ಮಹದೇವ ನಾಯಕನು ಪದ್ಮವ್ವೆ ನಾಯಕಿತಿಯುಂ ನಿಲಿಸಿದ ವೀರಸಾಸನ (ಎಕ. VII, ಶಿಕಾರಿ. ೧೪೪–೧೪; 1181); ಚಾಮರಿಗಿತಿ, ಮದ್ದಳಿಗಿತಿ ... ಕನ್ನಡಿಗಿತಿ, ಲೇಪಾಳಿಗಿತಿ (ಶಮುದ. ೨೦೮ ಪ್ರಯೋ); –ಇತಿ, –ಇತ್ತಿ, ಮೊದಲಾದ ಸ್ತ್ರೀವಾಚಕ ಪ್ರತ್ಯಯಗಳು (ಮಧ್ಯಮ. ೧೨೮). **–ತಿ$_1$**: ಮಣಿಗಾರ್ತಿ, ಕಂಚಗಾರ್ತಿ ... ಪೊಲತಿ, ನರತಿ, ಎಡತಿ (ಶಮುದ. ೨೦೮ ಪ್ರಯೋ). [← ಪ್ರಾ. ಇತ್ಥೀ < ಸಂ. ಸ್ತ್ರೀ]

**ಇತ್ತಿಗ** 'ಇರ್ತಿಗ' ನೋ.

**ಇತ್ತಿಗೆ** 'ಇರ್ತಿಗ' ನೋ.

**ಇತ್ತಿಲ್ಲೆ** (ನಾ). ಸುದ್ದಿ; ವರದಿ; ಬರೆಹದ ಮೂಲಕ ಸರಕಾರಕ್ಕೆ ಒದಗಿಸುವ ವರದಿ: ಕಾಗದಗಳು, ಕಾಗದದಾಳು, ಇತ್ತಿಲ್ಲೆಗಳು, ರಿಕಾರ್ಡುಗಳು, ಬಾಕಿ ಕ್ರಮುಗಳು ... ಕೆಲಸ ಮಾಡುವುದಕ್ಕೇ ಟೈವುರ್ ಇಲ್ಲ (ಕೆಲಸೆ. ೨೯೮).
[← ಮರಾ. ಇತಲ್ಲಾ; ಅರ. ಇತ್ತಿಲಾ. / ತಮಿ. ಇತ್ತಿಲಾ]

**ಇತ್ತೀಚೆ** 'ಇತ್ತ$_1$' ಪರಾ.

**ಇತ್ತು**$_1$ 'ಇಂತು' ನೋ.

**ಇತ್ತು**$_2$ 'ಇರ್$_1$' ಪರಾ.

**ಇತ್ತುಂಡು** (ನಾ). ಎರಡು ತುಂಡು: ಗರ್ಜಿಸುತುಂ ಬಂದ ಜಾತಿ ಜಾಯಿಲಂಗಳನಿತ್ತುಂಡು ಮಾಡುತ್ತೆ (ನಂಬಿರ. ೧೮–೧೬).
[ಇರ್$_2$ (< ಎರಡು) + ತುಂಡು]

**ಇತ್ತೆರ** 'ಇರ್ತೆಱ' ನೋ.

**ಇತ್ತೆರಿಗೆ** (ನಾ). ಎರಡು ತೆರಿಗೆ. 'ಇತ್ತೆರಿಗೆ ಸೀಮೆ' ಪರಾ.
[ಇರ್$_2$ (< ಎರಡು) + ತೆರಿಗೆ]

**ಇತ್ತೆರಿಗೆಸೀಮೆ** (ನಾ). ತೆರಿಗೆಯನ್ನು ವಸೂಲ್ಮಾಡುವ ಸೀಮೆ ಒಂದು, ಅದು ಪಾವತಿಯಾಗುವ ಸೀಮೆ ಬೇರೊಂದು – ಹೀಗೆ ಇಬ್ಬಗೆಯಾದ ಕ್ರಮವುಳ್ಳ ಸೀಮೆ: ಆ ಹೋಬಳಿಗಳನ್ನು ಏಳುಸಾವಿರ ಸೀಮೆಗೆ ಸೇರಿಸಿಕೊಂಡು ಆ ಹೋಬಳಿಗಳಿಂದ ವಸೂಲಾದ ಹಣಗಳನ್ನು ಏಳುಸಾವಿರ ಸೀಮೆ ಪಾರುಪತ್ಯಗಾರನು ದೊಡ್ಡವೀರಪ್ಪ ಒಡೆಯರವರ ಹುಕುಂ ಪ್ರಕಾರ ಕೊಡುತ್ತ ಇದ್ದನು. ಅದ್ದರಿಂದ ಆ ಏಳೂಸಾವಿರ ಸೀಮೆಗೆ ಇತ್ತೆರಿಗೆ ಸೀಮೆ [ಪಾಠಾಂ. ಶೀಮೆ]ಯೆಂದು ಹೆಸರಾಯಿತು (ರಾಜೇಂದ್ರ. ೬). [ಇತ್ತೆರಿಗೆ + ಸೀಮೆ]

**ಇತ್ಯರ್ಥ** (ನಾ). ೧. ಸಾರಾಂಶ; ಫಲಿತಾಂಶ. ೨. ತೀರ್ಮಾನ: ತನಗರಿಯದರ್ಥದಿಂ ಕಾಣ್ಬುದೆಂತಿತ್ಯರ್ಥಮಂ (ಶ್ರೀರಾಮಾ. ೨೬೩–೨೬೮).
**ಇತ್ಯರ್ಥವಾಗು** = ತೀರ್ಮಾನವಾಗು: ನಾಳೆಯ ಸಂಜೆಯ ಒಳಗೆ ಈ ಮಾತಿನ ಇತ್ಯರ್ಥವಾಗಬೇಕು (ರಂಗರೋ. ೧೧).
[ಸಂ. (ಇತಿ + ಅರ್ಥ)]

**ಇತ್ಯರ್ಥಪಡಿಸು** (ಕ್ರಿ). ನಿಶ್ಚಯಕ್ಕೆ ತರು; ತೀರ್ಮಾನಿಸು; ನಿರ್ಣಯಿಸು: ಈ ಸಮಸ್ಯೆಗಳನ್ನೆಲ್ಲಾ ಜನಾಂಗದ ಜೀವನತತ್ತ್ವದ ಬೆಳಕಿನಲ್ಲೇ ಇತ್ಯರ್ಥಪಡಿಸಬೇಕಾಗುತ್ತದೆ (ಶಿಕ್ಷದ. ೫).
[ಇತ್ಯರ್ಥ + ಪಡು$_1$ + –ಇಸು$_3$]

**ಇತ್ಯರ್ಥಿಸು** (ಕ್ರಿ). = ಇತ್ಯರ್ಥಪಡಿಸು: ಈ ಛಂದಸ್ಸಿಗೆ ಝಂಪೆ ಎಂಬ ಅನ್ವರ್ಥನಾಮವೇ ನೇರಾಗಿ ಒಪ್ಪುತ್ತದೆ ಎಂದು ಯಥಾವತ್ತಾಗಿ ಇತ್ಯರ್ಥಿಸಬಹುದು (ಗೊಲ್ಲೋಥಾ. X ಮುನ್ನುಡಿ). [ಇತ್ಯರ್ಥ + –ಇಸು$_3$]

**ಇತ್ಯಾದಿ** (ನಾ). ಇವೇ ಮುಂತಾದುವು: ಸ್ತ್ರೀಲಿಂಗಕ್ಕೆ: ತಾಯಿ ... ಲಕ್ಷ್ಮಿ, ಗೌರಿ ಇತ್ಯಾದಿ (ಮಧ್ಯಮ. ೩೧). [ಸಂ. (ಇತಿ + ಆದಿ)]

**ಇತ್ವ** (ನಾ). = ಇಕಾರ: ತನಗತ್ವಂ ಪೆಱಗಿತ್ವಂ ತನಗರಿಪದನಿಲ್ಲ ಕರ್ಮಧಾರಯಮದುವುಂ (ಶಮುದ. ೧೬೮). [ಸಂ.]

**ಇತ್ವರ** (ನಾ). ೧. ಪ್ರಯಾಣಿಕ. ೨. ದೀನ; ದರಿದ್ರ. ೩. ನೀಚ. ೪. ಅಭಾವ; ಕೊರತೆ; ನ್ಯೂನತೆ (ದಕ. ೬). [ಸಂ.]

**ಇತ್ವರಿ** (ನಾ). ಸ್ವೈರಿಣಿ; ಜಾರೆ: "ಪಾಂಸುಳಾ, ಬಂಧಕೀ ... ಇತ್ವರೀ ... ಅಭಿಸಾರಿಕಾ – ಈ ೧೦ ಹಾದರಿಗಿತ್ತಿ" (ಹಲಾಯು. ೮೧–೩೪೨).
[ಸಂ. ಇತ್ವರೀ]

**ಇತ್ವರಿಕೆ** (ನಾ). = ಇತ್ವರಿ: "ಪರಪುರುಷಗಮನಶೀಲೆ ಇತ್ವರಿಕೆಯೆಂಬಳ್" (ತತ್ತ್ವಪ್ರ. ೨೮೧); ಇತ್ವರಿಕೆಯೆಂಬಳು ಬಿಸುಡುಗಾರ್ತಿಯೆಂತೆನೆ ಪುರುಷನುಂಟಾಗಿಯುಂ ಸ್ವೈರಚಾರಿಣಿಯುಂ ಸೂಳೆಯುಂ (ಪಸಾರ. ೬೧೭–೧೯). [ಸಂ. ಇತ್ವರಿಕಾ]

**ಇತ್ವವೃತ್ತಿ** (ನಾ). ಇಕಾರಕ್ಕೆ ತಿರುಗುವಿಕೆ; ಇಕಾರವಾಗುವಿಕೆ: ಆದಿಯೊಳಿರ್ದತ್ವಕ್ಕುತ್ವಾದೇಶಮುಮಿತ್ವವೃತ್ತಿಯುಂ ಹತ್ವಮುಮಾಪಾದಿತಮಕ್ಕುಂ (ಶಮುದ. ೨೮೯). [ಇತ್ವ + ವೃತ್ತಿ]

**ಇತ್ವಾಂತ** (ನಾ). ಇಕಾರವನ್ನು ಕೊನೆಯಲ್ಲಿ ಉಳ್ಳದ್ದು; ಇಕಾರಾಂತ: ಅತ್ವಾಂತಮುಮಿತ್ವಾಂತಮುಮುತ್ವಾಂತಮುಂ (ಶಮುದ. ೮೪).
[ಇತ್ವ + ಅಂತ$_2$]

**ಇದಂತ** (ನಾ). = ಇತ್ವಾಂತ: ಗದಬಜಕಾರಮುವಿದಿರಿರೆ ಮೊದಲ ಪದಂ ತಾಂ ಕೃದಂತಮಾಗಿರೆ ದೊರೆಕೊಳ್ವನುಸ್ವಾರಮುದಂತದೊಳಿದಂತದೊಳ್ ಕರ್ಮಧಾರಯಂ ಬರೆ ಬಹುಳಂ (ಶಮುದ. ೧೬೦). [ಸಂ.]

**ಇದಂದೇವ** (ನಾ). ಈತನೇ ದೇವ: ಇದಂದೇವ (ಇದಂದೇವನೆಂದೀತನೆ ದೇವನೆಂದರ್ಥಂ) (ಶಮುದ. ೮೧ ಪ್ರಯೋ). [ಸಂ.]

**ಇದಕೊ** 'ಇದೆಕೊಳ್' ನೋ.

**ಇದಕೋ** 'ಇದೆಕೊಳ್' ನೋ.

**ಇದಡು** (ನಾ). ಇದಿರು; ಹಗೆ; ಪ್ರತಿಭಟನೆ (?): ಇದಡಿ(ರಿ)ನ ಚೋಳಿಕಂ ಕಳಕವಾರನೆ ಲಾಳನ ಲೀಲೆ ದೂರಮಾದುದು ಮಲೆಪರ್ ಕಡಂಗಿ ತಲೆದೋಜದೆ (ಎಇ. XV, ೧೧೧–೭; 1084).
[< ಇದಿರ್ ? . / ತಮಿ. ಇದಡಿ = ಎಮ್ಮೆ]

**ಇದಮಿತ್ಥಂ** (ಅ). ಇದು ಹೀಗೆ: ಯಾವುದಾದರೂ ಒಂದು ವಿಷಯದಲ್ಲಿ ಇದಮಿತ್ಥಂ ಎಂದು ಯಾವುದೇ ನಿರ್ಣಯವನ್ನು ಕೊಡಬೇಕಾದರೂ ಪೂರ್ವಾಪರ ವಿವೇಚನೆಯನ್ನು ಮಾಡಬೇಕು (ರೂಢಿ).
[**ಸಂ.** (ಇದಂ + ಇತ್ಥಂ)]

**ಇದಾನೀಂತನ** (ಗು). ಈಗಿನ; ಈ ಕಾಲದ: ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾ ನಾಗವರ್ಮನಿದಾನೀಂತನ ಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯಂ (ಅನಂಪು. ೧-೩೪). [**ಸಂ.**]

**ಇದಿಕೊ** 'ಇದೆಕೊಳ್' ನೋ.

**ಇದಿಗೊ** 'ಇದೆಕೊಳ್' ನೋ.

**ಇದಿನಿಸು** (ನಾ). ಒಂದು ಊರಿನ ಹೆಸರು: ತೆಱಕಾಹು ಇದಿನಿಸು ಗ್ರಾಮದ (ಸೌಇಇ. ೯೪೬, ಭಟ್ಕಳ್. ೩೪೨-೧೦ ; 1005). [?]

**ಇದಿರ್**, ಇದಿರು, ಇದುರು (ನಾ). **೧.** ಅಭಿಮುಖ; ಸಮ್ಮುಖ; ಎದುರಾಗಿರುವುದು: ಅರ್ಘ್ಯಮಿಪ್ಪಿಡಿದು ಬನ್ದಿದಿರ್ಗೊಣ್ಡುಯೆ ವೀರ ಲೋಕಕ್ಕೆ ಸನ್ದೋನ್ (ಎಕ. VIII, ಸೊರಬ. ೧೦-೯ ; 800) ; ಎಸೆವುದು ಕೈಲಾಸಮೆಂಬುದಾ ನಗಮಿದಿರೊಳ್ (ಕಾದಂಪೂ. ೬೨೭) ; ಪೆರ್ಮಡು ಗಳೊಳಿದಿರುಂಬಱಿಯುಮಿಸುತ್ತುಂ (ಅಜಿಪು. ೧೧-೧೦ ವ) ; ಗಂಗಾ ನಂದನಂಗೀ ಹದನನಱುಹಲು ಬಂದನಿದಿರಾಗಿ (ಕುವ್ಯಾಭೀ. ೧-೧೬). **೨.** ಪ್ರತಿಭಟನೆ; ತಡೆ; ವಿರೋಧ: ತನಗಿದಿರನದಿರದೊಡ್ಡಿದ ವಿದ್ವಿಷ್ಟ ಬಲಂ ನೋಡೆ ನೋಡೆ ಕರಗುವುದಱಿಂ ವಿದ್ವಿಷ್ಟವಿದ್ರಾವಣನುಂ (ಪಂಪಭಾ. ೧೪-೩೭ ವ) ; ಪರಸೈನ್ಯಾರಣ್ಯದಾವನೆನಿಸಿದ ನಿನಗೊಂದಿದಿರುಂಟೆ ಪೇಳ್ (ಗಿರಿಕ. ೬-೨೭). **ಇದಿರು: ೧.** ಕೋಲಗುರುವಿನ ಮರಣವಾರ್ತೆ ಕಾಲ ಸರ್ಪನ ತಂದು ಸಂಜಯ ಹೇಳಿಗೆಯನೀಡಾಡಿದನು ಧೃತರಾಷ್ಟ್ರನಿದಿರಿನಲಿ (ಕುವ್ಯಾಕ. ೧-೧) ; ಮಂಗಲೆಯ ಕುವರಿ ನರ್ತಿಸಿದಳೆಂತಾ ಸರ್ವ ಮಂಗಳೆಯ ಪತಿಯಿದಿರಿನೊಳು (ಸೌಂದಪು. ೮-೧೩) ; ಗೋಡೆಗೆ ಇದಿರಾಗಿ ನಾಟ್ಯವನಾಡಲು ನೋಡಿ ಸುಖಿಸಬಲ್ಲುದೆ (ಪುರಂದ. ೧-೧೫೬-೩). **೨.** ನಿನ್ನಾನೆಗಳಿಗಿದಿರಾವನ್ನೆ ಧೃತರಾಷ್ಟ್ರ (ಕುವ್ಯಾದ್ರೋ. ೨-೪೫) ; ಇಱಿತ ಕಿವರಾರಿದಿರಹರು ನಿಮ್ಮರವಣಿಯನಾರಾನುವರು (ಕುವ್ಯಾಕ. ೧೧-೨೩) ; ಕರಿಗಳನು ಮುಱಿದಿಡುವ ಸಿಂಹಕೆ ನರಿಗಳಿದಿರೇ ತಾನು ನಿಮಗಂತರವೆ (ನಳಚ. ೨-೧೮). **೩.** ಎದುರಿನಲ್ಲಿರುವ ವ್ಯಕ್ತಿ ಅಥವಾ ವಸ್ತು: ತನ್ನ ವಿಚಾರಿಸಲೊಲ್ಲದು ಇದಿರ ವಿಚಾರಿಸಹೋಹುದೀ ಮನವು (ಬಸವ. ೩೮); ತನ್ನ ಬಣ್ಣಿಸಬೇಡ ಇದಿರ ಹಳಿಯಲುಬೇಡ (ಬಸವ. ೨೩೫) ; ತನ್ನಿಂ ದಱಿದೆನೆಂದಡೆ ಸ್ವತಂತ್ರಿಕೆ ಇಲ್ಲ; ಇದಿರಿಂದಱಿದೆನೆಂದಡೆ ಪರತಂತ್ರಿಯಲ್ಲ (ಮೋಳಿಮಾ. ೯-೩೧). **ಇದುರು: ೧.** 'ಇದುರುಬದುರು' ಪರಾ.

**ಇದಿರಂನಡೆ, ಇದಿರೆನಡೆ** = ಎದುರಾಗಿ ಹೋಗು; ಎದುರಿಸು; ಪ್ರತಿಭಟಿಸು: ವೈರಿ ಬಲಕ್ಕೆ ಇದಿರಂ ನಡೆದು ಸತ್ತು ಯಶವಂ ಪಡೆದಂ (ಎಕ. XI, ಚಳ್ಳಕೆ. ೬-೩; 925) ; ಬಾಳ್ ಕಿಱ್ತು ಇದಿರೆನಡೆದು ತಱ್ತು ಸತ್ತ (ಸೌಇಇ. IX-i, ೬-೧೧ ; 9ನೆಯ ಶತ). **ಇದಿರಂನೋಡು** = ನಿರೀಕ್ಷಿಸು: ಎಲ್ಲಿ ಪೊಕ್ಕೊಡಂ ಕೊಂಡುಬಂದಪನೆಂದು ಬಗೆಯದಿದಿರಂನೋಡುತ್ತಿರಿಮೆಂದು (ಪಂಪಭಾ. ೭-೩೭ ವ). **ಇದಿರಂಬಗೆ** = ವಿರೋಧವನ್ನು ಯೋಚಿಸು. **ಇದಿರಂಬರ್** = ಎದುರಾಗಿ ಬಾ: ಮರದ ಕೆಳಗೆ ಬೋನ ಮನೊಡ್ಡಿರ್ದಿದಿರಂ ಬಂದು (ವಡ್ಡಾರಾ. ೮೯-೧೭) ; ನಾಲ್ಕುಂ ಲಾವಗೆ ಗಳಗ್ನಿಸೂಕ್ತಂಗಳನೋದುತ್ತುಮಿದಿರದಿದಿರಂ ಬರೆ (ಪಂಪಭಾ. ೫-೧೦೦ ವ). **ಇದಿರಂಬಱಿಯಂ** = ಮುಂದೆ ಮತ್ತು ಹಿಂದೆ: ಕೂಟ ಶಾಲ್ಮಲಿಗಳ ನಡರವೇಟ್ದು ಇದಿರಂಬಱಿಯನುರ್ಚುವರುಂ (ಆದಿಪು. ೫-೮೫ ವ) ; ನೀಡುಮಿದಿರಂಬಱಿಯಂ ಪುದಿದಿದುರ್ದಮಂತವರ್ ಮುನಿದು ನಿಲಲ್ಕೆ ತಾಂ . . . ಎಡೆಯಾಡಿದ ಪಾಂಗಿದೊಂದು (ಜಗವಿ. ೫-೨೯).

**ಇದಿರಮನಂ** = ಎದುರಿಗಿರುವವನ ಮನಸ್ಸು, —ಅಭಿಪ್ರಾಯ: ಇದಿರ ಮನಮೇನೆಂದಱಿಯದೆಳಸದಿರ್ (ಕಾದಂಉ. ೫೬೭) ; "ಪರ ಹೃದಯ" (ಕಾದಂಉ. ಅಡಿಟಿ). **ಇದಿರಹಱಿ** = ಎದುರಿಗಿರುವುದನ್ನು ಕತ್ತರಿಸು, —ಪರಿಹರಿಸು: ತನ್ನ ಮಱಿದು ಇದಿರಹಱಿದು ಇರಬಲ್ಲರೆ ಆತ ಭಕ್ತ (ಅವಚಂ. ೨೧೬-೯೬೬). **ಇದಿರುಹಾಕಿಕೊ** = ವಿರೋಧ ಕಟ್ಟಿಕೊ: ಯಾರು ಯಾರನ್ನೋ ಇದಿರುಹಾಕಿಕೊಳ್ಳುವುದರಲ್ಲೇ ಜನ್ಮ ನೀಗಿದ ಹುಡುಗಿ ಸಾವಿನಲ್ಲೂ ಯಾರನ್ನೋ ಇದಿರುಹಾಕಿಕೊಂಡಿತ್ತು (ಮೂರುದಾ. ೩೪೪).
[**ದೇ** ॥ **ತಮಿ.** **ಮಲ.** ಎದಿರ್; **ತುಳು.** ಎದುರು; **ಕೊಡ.** ಎದಿಕೆ; **ತೆಲು.** ಎದುರು]

**ಇದಿರಪ್ಪು** (ಕ್ರಿ). ಎದುರಾಗಿ ನಡೆದು ಆಲಿಂಗಿಸು: ವಂದಿಸಿದೊಡಿದಿರಪ್ಪಿದನು ಬಳಿಕೆಂದನವನೊಡನೆ (ಕುವ್ಯಾಆ. ೧೯-೪೬).
[ಇದಿರು (< ಇದಿರ್) + ಅಪ್ಪು$_1$]

**ಇದಿರಾಗು** (ಕ್ರಿ). **೧.** ಎದುರಿಗೆ ಬರು: ದ್ರೋಣನಿದಿರಾಗಿ ಧರಣಿಪನ ಸತ್ತರಿಸಿ ನೆಲೆಯುಪ್ಪರಿಗೆಗೊಯ್ದನು (ಕುವ್ಯಾದ್ರೋ. ೮-೫೬). **೨.** ಪ್ರತಿಭಟಿಸು: ಮುನಿದಿದಿರಾಗೆ ಶರಣ್ಬುಗೆ (ಎಇ. XIII, ೩೩೦-೧೦ ; 929) ; ಆವಂಗಿದಿರಾಗಿ ಬರ್ದುಂಕುವನ್ನರಾರ್ (ಧರ್ಮಾಮೃ. ೪-೨೩೭) ; ಇದಿರಾದರರಿಭೂಪಾಲರ ಮದದಾನೆಯ ಕೊಂಬನುಡಿದು (ಎಕ. V, ಅರಸೀ. ೬೨-೨೧ ; 1177) ; ವೃಥಾ ಕಳಕಳಿಸಿ ನುಡಿವರೆ ಮಾನ್ಯರೆನುತಿದಿರಾದನಾ ದ್ರುಪದ (ಕುವ್ಯಾದ್ರೋ. ೨-೫೧) ; ಇದಿರಾಗಲೆನಿತುಂಟು ನೂರು ಯೋಜನ ಮಾತ್ರ (ವೆಂಕಾರಾ. ೫-೧-೧೮). [ಇದಿರ್ + ಆಗು$_1$]

**ಇದಿರಾಡು** (ಕ್ರಿ). ಪ್ರತಿಭಟಿಸಿ ಮಾತನಾಡು; ವಾದ ಹೂಡು: ಕಟ್ಟಳವಿಯಲಿ ನಿಂದಿದಿರಾಡುವಹಿತನ ಕೊಟ್ಟುದಿಲ್ಲೆಂದು ಚಿಂತಿಸಿದ (ಮೋಹತ. ೨೦-೪೭) ; ಆಡದಿರು ಮನದನ್ನೆ ಎನಗೆ ಇದಿರಾಡದಿರು (ನಾದಲೀ. ೬೩-೨). [ಇದಿರು (< ಇದಿರ್) + ಆಡು$_1$]

**ಇದಿರಾನ್** (ಕ್ರಿ). ವಿರೋಧವಾಗಿ ನಿಲ್ಲು; ಎದುರಿಸು: ಇದಿರಾನ್ತ ವಿರೋಧಿಗೆ ರಾಮಚಂದ್ರನೆಂಬುದು (ಇಎ. XIX, ೧೬೫-೨೮ ; 692) ; ಗಜೆಗೊಳೆ ಭೀಮಸೇನನನಿದಿರಾಂತು ಬರ್ದುಂಕುವ ವೈರಿಭೂಭುಜಧ್ವಜಿನಿಗಳಿಲ್ಲ (ಪಂಪಭಾ. ೯-೫೨) ; ತನಗದಿರದಿದಿರಾಂಪರೊರ್ವರುಮಂ ಕಾಣದೆ (ಪಂಚತಂ. ೪೬-೭) ; ಉಱದಿದಿರಾನ್ತರಂ ತಱಿದ ವೀರಭಟಾಗ್ರಣಿ ಬಿಜ್ಜಿಗಂಗೆ (ಎಕ. VIII, ಸಾಗರ. ೧೦೮-೮ ; 1042) ; ಎನಗಿದಿರಾಂಪವರಾರ್ ಮೇದಿನಿಯೊಳ್ (ಧರ್ಮಾಮೃ. ೪-೨೫೧) ; ರಿಪುಚಾತುರಂಗಕಿದಿರಾತು ರಣದೊಳ್ ಗೆಲ್ವೆನಹಿತರಂ (ಜೈಮಿಭಾ. ೨-೩೯). [ಇದಿರ್ + ಆನ್$_1$]

**ಇದಿರಿಕ್ಕು** (ಕ್ರಿ). **೧.** ಪ್ರತಿಕೂಲವಾಗು. **೨.** ಎದುರಿಗೆ ಇರು; ಸಮ್ಮುಖವಾಗು. **೧, ೨:** ನುಡಿಯೆರಡಿಲ್ಲ ಕೊಡಲು ದಾತನಲ್ಲ ನಿನ್ನೊಡನಿದಿರಿಕ್ಕಬೇಡೆಂದು ಒಡತಿಗೆ ಬುದ್ಧಿಯ ಹೇಳಿದಳಾ ನುಡಿ ಕಡುಹಿತವಾಯಿತವನಿಗೆ (ಕಂನವಿ. ೬-೧೩೩). **೩.** ಮುಂದಿಡು: ಉದುರಿದ ಕಳಿವಣ್ಣ ಪೊಟ್ಟಣಂಗಳ ತಂದು ಇದಿರಿಕ್ಕಿದರು (ಮೋಹತ. ೧೯-೭೨).
[ಇದಿರ್ + ಇಕ್ಕು$_1$]

**ಇದಿರಿಡು** (ಕ್ರಿ). **೧.** ಸಮ್ಮುಖವಾಗು; ಪ್ರತ್ಯಕ್ಷವಾಗು: ಇಂತು ತನ್ನ ಅಱಿವಿನ ಮುಂದೆ ಇದಿರಿಟ್ಟು ತೋಱುವ ಪರವಸ್ತುವಿನಲ್ಲಿ (ಶೂನ್ಯಸಂ. ೨೩-೧೪) ; ತೆಱಹಿಲ್ಲದ ನಿಜವು ತನ್ನಲ್ಲಿ ತಾನೇ ವೇದ್ಯವಾಗಿಪ್ಪುದಲ್ಲದೆ ಇದಿರಿಟ್ಟು ತೋಱದೆಂಬ ಅಜ್ಞಾನವಿದೇನೋ (ಶೂನ್ಯಸಂ. ೧೪-೧೯) ; ತನ್ನ ಸರ್ವಾಂಗದಲ್ಲಿ ನೆಲಸಿರ್ಪ ಇಷ್ಟಮಹಾಲಿಂಗದೇವಂಗೆ ಕೊಟ್ಟು ಕೊಂಬುವಂಥಾದ್ದೇ ಇದಿರಿಟ್ಟು ಜಂಗಮ ಪಾದೋದಕ ಪ್ರಸಾದವ ಕೊಂಬ ಆಚರಣೆಯ ನಿಲುಗಡೆಯು ನೋಡಾ (ಮಹಾದೇ. ೨೯-೬).

೨. ಪ್ರತಿಭಟಿಸು ; ವಿರೋಧಿಸು : ಮುಖೇಂದುವಿಂದುವಿಂಗಿದಿರಿಡೆ ಕಾಂತೆ ಮಿಂಚು ಪೊಳೆದಾಡುವವೊಲ್ ಪೊಳೆದುಯ್ಯಲಾಡಿದಳ್ (ಜಗವಿ. ೧೬-೧೧೩) ; ಇದರಿಂದ ತಪ್ಪಹುದರಸುತನಕತಿಹಾನಿಯಿದನು ನೀನೇ ಬಲ್ಲೆ ಯಿದಿರಿಟ್ಟು ಮಾತಾಡಿ ಬೆದಱಿಸುವೆ ನನ್ನನೆನಬೇಡ (ಸಮ್ಯಕೌ. ೧-೫೦).
[ಇದಿರ್ + ಇಡು$_1$]

**ಇದಿರಿಸು** (ಕ್ರಿ). ಎದುರಾಗು ; ಪ್ರತಿಭಟಿಸು : ನಿಲ್ಲದಿದಿರಿಸಿಕೊಂಡು ಚೌಪಟಮಲ್ಲ ತಿರುಗಿದ ಸೊಕ್ಕಿದೆನೆನುತ್ತಲ್ಲಿ ಕೀಲಿಸಿ ಶಸ್ತ್ರಶರದಲಿ ಬಲಿಯ ನಮರೇಂದ್ರ (ಕು ವ್ಯಾ ಆ . ಒರಿಇ. ೯-೨೭) ; ಹಿಂದೆ ರುದ್ರದೇವನನ್ನು ಇದಿರಿಸಿದರಸು ಈತನೇ (ರಾವಿಜ. ೧೨೦). [ಇದಿರ್ + –ಇಸು$_3$]

**ಇದಿರೀಸು** (ಕ್ರಿ). ಪ್ರವಾಹಕ್ಕೆ ಎದುರಾಗಿ ಈಜು : ಎಟಿವ ತೊಱೆಯ ನಿದಿರ್[ರೀ]ಸುವುದೆಲ್ಲಿಯ ಗಾಂಪು (ಆದಿಪು. ೧೨-೧೦೮) ; ಅಂತಾ ಪ್ರಭಾ ಪೂರದೊಳ್ ಭರದಿಂ ತಾನಿದಿರೀಸುವಂತೆ ನಡೆದಂ ಭೂಪಾಲವಿದ್ಯಾಧರಂ (ಕಾದಂಪೂ. ೧೦೧೧) ; ಪೆರ್ಪೊನಲಿಂಗಿದಿರೀಸುವನುರ್ವರೆಯೊಳು ಬೇಗ ಮೆಂಬ ಗಾಂಪನ ತೇಜದಿಂ (ಧರ್ಮಾಮೃ. ೫-೨೨೯).
[ಇದಿರ್ + ಈಸು$_1$]

**ಇದಿರು** 'ಇದಿರ್' ನೋ.

**ಇದಿರುಗಟ್ಟು$_1$** (ಕ್ರಿ). ೧. ಪ್ರತಿಭಟಿಸಿ ನಿಲ್ಲು. ೨. ಎದುರು ಮಾಡಿಕೊ : ಸಣ್ಣಪುಟ್ಟವರನ್ನೆಲ್ಲಾ ಇದಿರುಗಟ್ಟಿಕೊಂಡು ಹೋಗ ಬಾರದು ; ಗೌರವಕ್ಕೆ ಹಾನಿಯಾಗುತ್ತದೆ (ರೂಢಿ).
[ಇದಿರು (< ಇದಿರ್) + ಕಟ್ಟು$_1$]

**ಇದಿರುಗಟ್ಟು$_2$** (ನಾ). ೧. ಮನೆಯ ಮುಂಭಾಗದ ಕಟ್ಟಡ, ಮುಂಗಟ್ಟು, ಜಗಲಿ ಮುಂತಾದುದು : ಮುದ್ರಿಕೆಯಂ ಬೊಟ್ಟ ನೊಳಿಟ್ಟುಕೊಂಡು ಪೋಗಿ ಸತ್ಯವತಿಯಿಪ್ಪರಸನ ಮನೆಯಿದಿರುಗಟ್ಟಿನ ಭದ್ರದ ಮುಂದಣ ಜಗತಿಯ ಮೇಲಾಕೆ ಕುಳ್ಳಿರ್ದಾಗಳ್ (ಪುಣ್ಯಾಸ್ರ. ೭-೧೧ ವ). ೨. (ಕರಾ) ಅಡ್ಡಲಾಗಿರುವುದು : ಇದಿರುಗಟ್ಟಿರುವುದ ರಿಂದ ಆ ಸ್ಥಳ ಮನೆ ಕಟ್ಟಲು ಯೋಗ್ಯವಲ್ಲ (ರೂಢಿ).
[ಇದಿರು (< ಇದಿರ್) + ಕಟ್ಟು$_2$]

**ಇದಿರುಗಾಣ್**, ಇದಿರುಗಾಣು (ಕ್ರಿ). ೧. ಇದಿರಿನಲ್ಲಿ ಕಾಣು ; ಸಮ್ಮುಖದಲ್ಲಿ ನೋಡು. ೨. ಮುಂದುಗಾಣು : ನರನಿವನು ಮಗ ನಿದಿರುಗಾಣದೆ ಹಿರಿದನೇಱಿಸಿ ನುಡಿದನಿದ ಪತಿಕರಿಸಬೇಹುದು ನಿನ್ನ ಕರುಣವೆ ಹರಣವೆಮಗೆಂದ (ಕುವ್ಯಾದ್ರೋ. ೯-೩೧).
[ಇದಿರು (< ಇದಿರ್) + ಕಾಣ್]

**ಇದಿರುಗಾಣು** 'ಇದಿರುಗಾಣ್' ನೋ.

**ಇದಿರುಗಾಯ** (ನಾ). ಎದುರಾಗಿ (ಕಣ್ಣಿಗೆ) ಕಾಣುವ ಗಾಯ : ಇದಿರುಗಾಯದೆ ಪೂತ ಮುಳ್ಮುತ್ತುಗದಂತೆ ಕದನದೆ ನಂಜೇಂದ್ರ ಮೆಱೆದ (ಕಂನವಿ. ೧೯-೮೦). [ಇದಿರು (< ಇದಿರ್) + ಗಾಯ]

**ಇದಿರುಗೊಯಿಲು** (ನಾ). ಎದುರು ಪೆಟ್ಟು ; ಎದುರೇಟು : ಅನಿಮಿಷ ದಿಂದ ಬಹಿರಂಗದ[ವಧಾ]ನ ತಪ್ಪಿ ಇದಿರುಗೊಯಿಲು [ಪಾಠಾಂ. ಗೋಲು, ಗೊಯಲೆ] ತಾಗಿ ಪುರ್ಬೊಡೆದು ಕಣ್ಣು ತಱಿದು (ಬಸವ. ಕ. ೧೩೩೪).
[ಇದಿರು (< ಇದಿರ್) + ಕೊಯಿಲು (< ಕೊಯ್ಲು)]

**ಇದಿರುಗೊಳ್** 'ಇದಿರ್ಗೊಳ್' ನೋ.

**ಇದಿರುಗ್ಗಡಣೆ** (ನಾ). ಸಮ್ಮುಖದಲ್ಲಿ ಅಥವಾ ಎದುರಿಗೆ ಕೂಡಿ ಘೋಷಿಸಿ ಹೇಳುವ ಬಿರುದು ಮುಂತಾದುವುಗಳ ಘೋಷಣೆ : ವೀರರಿದಿರುಗ್ಗಡಣೆಗಳ ಕೈವಾರಿಗಳ ಮಾಣಿಸುತಲೈತಹ ನಾರಿಯರ ರತುನಾ ರತಿಯ ತಳಿಗೆಗಳ ನೂಕಿಸುತ (ಕುವ್ಯಾದ್ರೋ. ೮-೧೨).
[ಇದಿರು (< ಇದಿರ್) + ಉಗ್ಗಡಣೆ]

**ಇದಿರುತ್ತರ** (ನಾ). ಎದುರು ಮಾತು ; ಪ್ರತಿಯಾಗಿ ಹೇಳುವ ಮಾತು ; ಪ್ರತಿಭಟನೆಯ ಮಾತು ; ಪ್ರತ್ಯುತ್ತರ : ಗುರುವಿನೊಳಿ ದಿರುತ್ತರವಱಿಯದೆ ತನು ಕರಗಿ ಕೊರಗಿ (ಶಿವಗೀ. ೯೬-೪೭೪) ; ಎಂಬ ಡಿದಿರುತ್ತರವಲೇ ಗರಳಾಂಬುಜದ ಪರಿಮಳಕೆ ಗರುಡನು ತುಂಬಿಯಾದರೆ ಸೇರುವುದಲೇ ಸಾಕದಂತಿರಲಿ (ಕುವ್ಯಾದ್ರೋ. ೯-೪೪).
[ಇದಿರು (< ಇದಿರ್) + ಉತ್ತರ]

**ಇದಿರುದಂಡು** (ನಾ). ವೈರಿಸೇನೆ ; ಪ್ರತಿಸೈನ್ಯ : ಏಳಿಗೆಯ ಭುಜಶಕ್ತಿ ಯಿಂದೆ ದುರ್ಗಕೈತಂದೆ ತೂರ್ಯರವದಿಂದೆ ಇದಿರುದಂಡನು ಬಿಟ್ಟು ಒದಗಿ ಸಮನಾ[ಗಾ]ಳಗದಿ ಕದನವನು ಗೆಲಿದ ಹಮ್ಮೀರ ಭಲರೆ ಮೊನೆ ಗಾರ (ಚಿತ್ರಪಾ. ೫೦). [ಇದಿರು (< ಇದಿರ್) + ದಂಡು]

**ಇದಿರುದಲೆ** (ನಾ). ೧. ಪ್ರತಿಭಟನೆ ; ವಿರೋಧ. ೨. ಎದುರಾದ ತಲೆ. 'ಇದಿರುದಲೆವಾತು' ಪರಾ. [ಇದಿರು (< ಇದಿರ್) + ತಲೆ$_1$]

**ಇದಿರುದಲೆವಾತು** (ನಾ). ೧. ಪ್ರತಿಭಟನೆಯ ಮಾತು ; ವಿರೋಧದ ಮಾತು. ೨. ಎದುರಾದ ತಲೆ ಎಂಬ ಮಾತು : ೧,೨. ಅಱಿಮುಱಿ ಗಳೆಂಬ ನುಡಿ ನಾಡೆ ಭೂಧರಕುಲಂಗಳೊಳಿದಿರುದಲೆವಾತು ಕನ್ನಡಿಯೊ ಳಲ್ಲದಾ ನಾಡೊಳಿಲ್ಲ (ಭಾವಚಿಂ. ೨-೫).
[ಇದಿರುದಲೆ+ ಮಾತು$_1$ ; ಇದಿರು (< ಇದಿರ್) + ತಲೆ$_1$ + ಮಾತು$_1$]

**ಇದಿರುನುಡಿ** (ನಾ). (ಕರಾ). ಕರಾರು ; ಪರಸ್ಪರ ಒಪ್ಪಂದದ ಮಾತು ; ಒಡಂಬಡಿಕೆ (೬). [ಇದಿರು (< ಇದಿರ್) + ನುಡಿ$_2$]

**ಇದಿರುಪಾಯ್** (ಕ್ರಿ). ಎದುರಾಗಿ ನುಗ್ಗು : ಕೊಂಗೊಣಿ ಪೃಥುವೀ ರಾಜ್ಯಂಕೆಯೆ ದುರ್ವ್ವಿನೀತೆಱಿ ಅಪ್ಪೋರ್ ಕೊಸರು ಪುಟ್ಕಿಱಿದಿದಿರುಪ [ಪಾ]ಯ್ದುಗಿದಿಡಿದಿರುದಱಿನಾಮನ್ನಾದಿಗಳು ಪಗೊಳತ್ತೆಪ್ಪಿದಿನ್ಸರು (ಮೈಆರ್. ೧೯೩೦, ೩೬-೫ ; 800).
[ಇದಿರು (< ಇದಿರ್) + ಪಾಯ್]

**ಇದಿರುಮಲೆ** (ಕ್ರಿ). ಪ್ರತಿಭಟಿಸು : ವೀರಭಕ್ತರಿಗಿದಿರುಮಲೆವವರಾ ರೆನುತ್ತಂ ಗಹಗಹಿಸುತ ಕಠಾರಿಗಳನುದ್ದಕ್ಕೆ ಚಿಮ್ಮುತ್ತೊಡನೆ ತಿರುಹುತ್ತ (ಬಸಪು. ೬೧-೩೨). [ಇದಿರು (< ಇದಿರ್) + ಮಲೆ$_1$]

**ಇದಿರುವರ್** 'ಇದಿರ್ವರ್' ನೋ.

**ಇದಿರುಹೊಣೆ** (ನಾ). ಜಂಟಿ ಜಾಮೀನು,—ಹೊಣೆ (?) : ಒಕ್ಕಲ ಊರುಗಳೂ ಓಡಿದಡೆ ಗಲುಡಗಳುಂ ಯಿದಿರುಹೊಣೆಯ ಕೊಡಸಲ್ಲ ಹದಿನೆಂಟು ಸಮೆಯದವರೂ ಹೋಗಿ ಆ ಒಕ್ಕಲು ಊರನೂ ತಂಮ ಅವರು ಇದ ಊರಲ್ಲಿಯಿರಿಸಿ ರಾಜಾರ್ತ್ಥವನೂ ತೀಱಿಸಿ ಕೊಡುವರು (ಸೌಇಇ. IX–ii, ೪೩೩–೬೧ ; 1408).
[ಇದಿರು (< ಇದಿರ್) + ಹೊಣೆ]

**ಇದಿರೆಡೆ** (ನಾ). ೧. ಎದುರುಗಡೆ ; ಮುಂಭಾಗ : ಅವರೆಚ್ಚ ಕೂರ್ಗಣೆ ಬರಲಿದಿರೆಡೆಯಲ್ಲಿ ಸವಱಿದ ಕೂರ್ಗಣೆಯಿಂದೆ ತೆವರಿದ ಪಟುಭಟರ ಸುವನೆಲ್ಲವ ಕಟ್ಟಿ ಕವರಿ ಕಾಲಗೆ ಸುಮರ್ಪಿಸಿದ (ಮೋಹತ. ೩೪-೮). ೨. ಅವಕಾಶ ; ಪಾತ್ರ : ಇಷ್ಟವನಱಿದು ಉಭಯದ ಗುಟ್ಟು ಕೆಟ್ಟಲ್ಲಿ ಎನ್ನಯ್ಯ ಪ್ರಾಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬುದಕ್ಕೆ ಇದಿರೆಡೆ ಇಲ್ಲ (ಮುದೇಮ್ಮ. ೨೮೭-೬೭) ; ನಾಣ್ನುಡಿಗೆ ಇದಿರೆಡೆಯಾಗದೆ (ಏಲೇಶ್ವ. ೧೭೨). [ಇದಿರು (< ಇದಿರ್) + ಎಡೆ$_3$]

**ಇದಿರೆಡೆಗೆಡು** (ಕ್ರಿ). ಅವಕಾಶ ತಪ್ಪು ; ಗುರಿ ಕೆಡು : ಜೀವನೆಂಬ ದೃಷ್ಟ ದಿಂದ ಆತ್ಮನ ಭೇದಿಸಿ ಪರಮಾತ್ಮನೆಂಬ ಸಕೀಲವ ಕಂಡು ಅಱಿವು ಕುಱುಹುಗೊಂಡು ಆ ಅಱಿವು ಇದಿರೆಡೆಗೆಟ್ಟಲ್ಲಿ ಎಣ್ಣೆಬತ್ತಿ ತೀರಿದ ಮತ್ತೆ ಬೆಳಗೆಂಬುದು ನಷ್ಟ ಅದು ಸಾಕಾರದ ಮಾತಿನ ಮಾಲೆಯಲ್ಲಿ ಅದು ಮೂರ್ಛೆ ಅಮೂರ್ಛೆ (ಮೋಳಿಮಾ. ೧೧೮-೪೬೫). [ಇದಿರೆಡೆ + ಕೆಡು]

**ಇದಿರೆತ್ತು** (ಕ್ರಿ). ೧. ಎದುರಾಗಿ ಹೋಗು; ದಂಡೆತ್ತಿ ಹೋಗು: "ಬಲಮ ಪೀಡಯನ್ ಪರಾನಭಿಷೇಣಯೇತ್ – ಇದಿರೆತ್ತುಗೆ" (ನೀತಿವಾ. ೨೯–೫೧); ಆಜಿಗಿದಿರೆತ್ತಿ ಬರೆ ಮಾಯಾಜೀವಿಯನಂದು ಕಂಡು ವಾನರಚಿಹ್ನಂ (ಪಂರಾಮಾ. ೧೦–೨೦); ಇದಿರೆತ್ತಿ ಕಾದಲು ನಿನ್ನ ಲೋಕವ ಮತ್ತೆ ಗೂಳಿಯ ತೆಗೆಸುವೆನು ಕೈಲಾಸಪುರಿಗಾಗಿ (ಸಂಭಪ. ೨೦–೫೬); ಹರಿಗೆ ಮುಳಿದಿದಿರೆತ್ತಿ ಬಹ ವನಕರಿಯವೊಲು ಬರೆ (ಸಾಳ್ವಭಾ. ೧೨–೬೧). ೨. ಬೇರೆ ಸ್ಥಳದಲ್ಲಿ ಎತ್ತಿ ಪೂಜೆ ನಡಸು: "ಏಕನಾಥಮ್ಮನನ್ನು ಇದಿರೆತ್ತು – ಏಕನಾಥಮ್ಮ ದೇವರ ಹೆಸರಿನಿಂದ ಪೂಜೆಮಾಡುವುದು. (ಆ ದೇವರ ಹೆಸರ ಹೇಳಿ ಬೇರೇ ಸ್ಥಳದಲ್ಲಿ ಆ ದೇವರ ಪೂಜೆ ಮಾಡುವುದು)" (ಚಿತ್ರಪಾ. ಕೋಶ); ಮಕ್ಕಳಿಲ್ಲದ ಕಾರಣ ಉಚ್ಚಂಗಮ್ಮ ದೇವರ ಇದ[ದಿ]ರೆತ್ತಿ ಸಕಲರೂ ದರ್ಶನ ಕಟ್ಟಿಕೊಂಡು (ಚಿತ್ರಪಾ. ೨೫).
[ಇದಿರು (< ಇದಿರ್) + ಎತ್ತು$_1$]

**ಇದಿರೆಯ್ತರ್** (ಕ್ರಿ). = ಇದಿರೆಟ್ತರ್: ಬೀಸುವ ಚೆನ್ನಸೀಗುರಿಗಳಿರ್ಕೆಲದೊಳ್ ಮಿಳಿರ್ದಾಡೆ ನಾಡೆಯುಂ ಗೋಸಣೆವೆತ್ತ ರಾಯರಿದಿರೆಯ್ತರೆ [ಪಾಠಾಂ. ರೇಟ್ತರೆ] ತಳರ್ದಂ ನನೆಯಂಬಂ (ಕಬ್ಬಿಕಾ. ೯೧).
[ಇದಿರ್ + ಎಯ್ತರ್]

**ಇದಿರೆಟ್ತರ್** (ಕ್ರಿ). ಎದುರಾಗಿ ಬರು; ಅಭಿಮುಖವಾಗಿ ಬಾ: ಬೀಸುವ ಚೆನ್ನಸೀಗುರಿಗಳಿರ್ಕೆಲದೊಳ್ ಮಿಳಿರ್ದಾಡೆ ನಾಡೆಯುಂ ಗೋಸಣೆವೆತ್ತ ರಾಯರಿದಿರೇ[ರೆ]ಟ್ತರೆ [ಪಾಠಾಂ. ರೆಯ್ತರೆ] ತಳರ್ದಂ ನನೆಯಂಬಂ (ಕಬ್ಬಿಕಾ. ೯೧). [ಇದಿರ್ + ಎಟ್ತರ್]

**ಇದಿರೇಳು** 'ಇದಿರೇೞ್' ನೋ.

**ಇದಿರೇಳುಹ** (ನಾ). ಗೌರವದಿಂದ ಎದುರಾಗಿ ಎದ್ದು ನಿಲ್ಲುವುದು: "ಪ್ರತ್ಯುತ್ಕ್ರಮ, ಪ್ರಯೋಗ, ಇದಿರೇಳುಹ" (ನಾಚಿರಾ. ೬).
[ಇದಿರೇಳು (< ಇದಿರೇೞ್) + –ಹ$_2$]

**ಇದಿರೇಱಿಸು** (ಕ್ರಿ). ಎದುರಾಗಿ ನುಗ್ಗಿಸು: ನಡೆಯಿಪ ಪೊಳೆಯಿಪ ದೂವಾಳಿಪ ಪೊಜಮಡಿಪಿದಿರೇಱಿಪಡ್ಡಂಬರಿಯಿಪ . . . ವಾಹಳಿತನದೊಳ್ (ರಾಜಶೇ. ೬–೧೧ ವ); ಪರಿಯಿಪ ನೆಟ್ಟನಟ್ಟುವಿದಿರೇಱಿಪ ಪಾರಿಪ ಕೀಳ್ತು ದಾಂಟಿಪ . . . ಪಂಚಧಾರೆಯೊಳ್ ಪರಿಣತಿದೋರ್ಪ ವಾಹಳಿತನಂ (ರಾಜಶೇ. ೧೩–೮೨). [ಇದಿರೇಱು + –ಇಸು$_3$]

**ಇದಿರೇಱು** (ಕ್ರಿ). ೧. ಎದುರಾಗಿ ನುಗ್ಗು; ಅಭಿಮುಖವಾಗಿ ನುಗ್ಗು: ಆತಿಪ್ರಯತ್ನದಿನೊಯ್ದರ್ ಕೆಳದಿಯರೆಂತಾನುಂ ತೆಗೆದೆಳವಿಲ್ಲದೆ ಬಂದ ನದಿಯನಿದಿರೇಱುವವೊಲ್ (ಕಾದಂಪೂ. ೭೮೩); ವಾಹಿನೀತೀರಮಂ ಮೀಂಗಳಿದಿರೇಱಿದುವು (ಅನಂಪು. ೯–೧೬ ರ); ಹೋದಡಪಜಯವೋಡದಿದಿರೇಱಿದಡೆ ಜಯ (ಬಸಪು. ೫೦–೩೮); ಕೊಂದರಿದಿರೇಱುವ ಚತುರ್ಬಲವ (ಕುವ್ಯಾಕ. ೪–೧೭). ೨. ಎದುರಾಗಿ ಕಾಣಿಸಿಕೊ; ಪ್ರಕಟವಾಗು: ನರೆ ತಲೆದೋಱಿ ಮೆಯ್ಯ ಸಿರಿ ಪಾಱಿ ಕಳೇವರಮೆಯ್ದೆ ತಾಱಿ ಮಚ್ಚರದಿನಡರ್ತು ಕಾಳನಿದಿರೇಱಿ ತನೂದರಿ ನೋಡಿ ಕಾಱಿ ಬರ್ಪುರು ತರಮಪ್ಪ ಮುಪ್ಪಡಸದನ್ನೆಗಂ (ನೇಮಿಪು. ೨–೧೧೧); ತೆರೆಮಸಗಲ್ ಸುಖಾಶ್ರುವಿದಿರೇಱುತಿರಲ್ ಪುಳಕಂ ಬೆಮರ್ ಕರಂ ಪರಿಯಿಡೆ (ಪಂಪಾಶ. ೬); ನವನೀಳ ಕಾಂತಿಯಿಂದಿದಿರೇಱುತಿರೆ ಬಾಸೆ (ಬಸರ. ೧–೧೦೮); ಮೀಱಿ ಮುಗಿಲಿದಿರೇಱಿ ಶಿಖಿ ಹರುಷವೇಱಿ . . . ಕಾರ್ಮುಕವೇಱುತೆ (ಸಾಳ್ವಭಾ. ೧೬–೧೮). [ಇದಿರ್ + ಏಱು$_1$]

**ಇದಿರೇೞ್**, ಇದಿರೇಳು (ಕ್ರಿ). ೧. ಎದುರಾಗಿ ಎದ್ದುಬರು; ಗೌರವದಿಂದ ಅಭಿಮುಖವಾಗಿ ನಿಲ್ಲು: ತ್ರಿದಶಾಸನಂಗಳಲ್ಲಾಡಿದುವು ಜಗದ್ಗುರುಗೆ ಬೇಗಮುಚ್ಚಾಸನದಿಂದಿದಿರೇೞಿಮೆಂದು ಪೇೞ್ವವೊಲ್ (ಆದಿಪು. ೭–೪೦); ಮದಲೇಖೆಯ ಬರವಂ ಕಂಡಿದಿರೇೞ್ದುದುಂ (ಕಾದಂಉ. ೧೦೮); ಇದಿರೆೞ್ದಭ್ಯಾಗತಪೂಜೆಯನೊಡರ್ಚೆ (ಜಗವಿ. ೫–೮೨). **ಇದಿರೇಳು**: ೧. "ಅಭಿಹಾರಃ, ಅಭಿಗ್ರಹಣಂ – ಇದಿರೆದ್ದು ಈಸಿಕೊಳುಹ" (ನಾಚಿರಾ. ೬); ಅರಸನನುಜರು ಸಹಿತ ಮುನಿಮುಖ್ಯರನು ಬಸವಂ ಘನಹರುಷದಿಂ ಕಾಣುತಿದಿರೆದ್ದು ಬಂದು ಸದ್ವಿನಯಮಂ ನುಡಿದು (ಚಿಬಪು. ೪–೧೯). ೨. ಎದುರಾಗಿ ದಂಡೆತ್ತಿ ನಡೆ: "ಅಭಿಯೋಗಃ – ಇದಿರೆದ್ದು ಕಾಡುಹ" (ನಾಚಿರಾ. ೬). ೩. (ರೋಮಾಂಚದಿಂದ ನವಿರು) ನೆಟ್ಟಗೆ ನಿಲ್ಲು: ನವಿರಿದಿರೆದ್ದು ತನುವಿನೊಳು ಪರಿರಾಜಿಸಲು (ರಾಘಚ. ೧೭–೬೪).
[ಇದಿರ್ + ಏೞ್]

**ಇದಿರೊಂದು** (ಕ್ರಿ). (ಗೌರವಾದರಗಳಿಂದ) ಎದುರುಗೊಳ್ಳು; ಪ್ರೀತಿ ಗೌರವಗಳಿಂದ ಅಭಿಮುಖವಾಗಿ ಹತ್ತಿರ ಹೋಗು: ಆಕ್ಕಱಿಂದಿದಿರೊಂದಿ [ಪಾಠಾಂ. ರ್ವಂದು] ಪದಯುಗಳಕ್ಕೆಱಗೆ (ಬಸಪು. ೩೧–೨೯).
[ಇದಿರು (< ಇದಿರ್) + ಒಂದು$_1$]

**ಇದಿರೊಡ್ಡಣ** (ನಾ). ಎದುರಿಸಿದ ದಂಡು; ಶತ್ರುಸೈನ್ಯ: ಕೃತಕ ಸುಗ್ರೀವಂ ಕೇಸರಿಯಂತೆ ಗರ್ಜಿಸುತ್ತುಂ ನಿರಂಕುಶಂ ಮುಟ್ಟಿವಂದನಿದಿರೊಡ್ಡಣಮಂ (ಪಂರಾಮಾ. ೧೦–೧೯). [ಇದಿರ್ + ಒಡ್ಡಣ]

**ಇದಿರೊಡ್ಡು$_1$** (ಕ್ರಿ). ೧. ಎದುರಾಗಿ ನಿಲ್ಲಿಸು; ಪ್ರತಿಭಟಿಸಿ ನಿಲ್ಲುವಂತೆ ಮಾಡು: ಹಗೆಯನೆನಗಿದಿರೊಡ್ಡಿ ಜುಣುಗಲು ಬಗೆದರೇ (ಕುವ್ಯಾದ್ರೋ. ೧೯–೪೭). ೨. ಎದುರಾಗಿ ನಿಲ್ಲು; ಪ್ರತಿಭಟಿಸಿ ನಿಲ್ಲು; ವಿಘ್ನವನ್ನುಂಟುಮಾಡು: ಧುರದೊಳ್ ಬಂದಿದಿರೊಡ್ಡೆ ಕಂಸಹರನೊಡ್ಡಂ ತುತ್ತುವೆಂ (ಜಗವಿ. ೭–೩೭); ಉಗ್ಗಡದಿಂ ಬಂದಿದಿರೊಡ್ಡಿ ಬಾಳ್ವವರನೆಂದುಂ ಕಂಡುದಿಲ್ಲಿನ್ನೆಗಂ (ಕಬ್ಬಿಕಾ. ೧೭೨); ತಡೆಯದಿದಿರೊಡ್ಡೆ ಬಲವೆರಡೊಡನೆ ಕಾದಿದುದು (ಸಾಳ್ವಭಾ. ೧೩–೨). [ಇದಿರ್ + ಒಡ್ಡು$_1$]

**ಇದಿರೊಡ್ಡು$_2$** (ನಾ). ಪ್ರತಿಸೈನ್ಯ; ಪ್ರತಿವ್ಯೂಹ: ಬಿಲ್ಪಡೆಗೆ ಬಿಲ್ಪಡೆ ವಾಜಿಗೆ ವಾಜಿ ತೇರ್ಗೆ ತೇರಣೆಗಣೆ ಕುಂತವಾಹಿನಿಗೆ ಕುಂತದ ವಾಹಿನಿ ವಾರಣಕ್ಕೆ ವಾರಣವಿದಿರೊಡ್ಡನೊಡ್ಡಿದುದು ಯಾದವ ಮಾಗಧ ಸೈನ್ಯದಾಜಿಯೊಳ್ (ಜಗವಿ. ೭–೫೦). [ಇದಿರ್ + ಒಡ್ಡು$_2$]

**ಇದಿರೋಕರಿಕೆ** (ನಾ). ಮೇಲಿಂದ ಮೇಲೆ ಬರುವ ಓಕರಿಕೆ; ಮತ್ತೆ ಮತ್ತೆ ತಲೆದೋರುವ ವಾಂತಿ: ಇದಿರೋಕರಿಕೆಗೆ: – ನಿಂಬೆಯ ಬೀಜ, ಏಲಕ್ಕಿ, ಎಲೆಯಮುಗುಳು, ಶ್ರೀಗಂಧ, ಪಚ್ಚೆತುತ್ತ, ನೀರಲ್ಲಿ ಕೊಡಲು ಇದಿರೋಕರಿಕೆ ಮಾಣ್ಗುಂ ಇದಿರೋಕರಿಕೆಗೆ ಇನ್ನೊಂದು ಔಷಧ – ಪೋರುಳಿಯ ರಸವನ್ನೂ, ಏಲಕ್ಕಿಯನ್ನೂ, ಸಕ್ಕರೆಯನ್ನೂ ಕೊಳ್ಳಲು ಇದಿರೋಕರಿಕೆ ಮಾಣ್ಗುಂ (ವಿವೈವಿ. ೭೮). [ಇದಿರ್ + ಓಕರಿಕೆ]

**ಇದಿಗೊರ್ಳ್**, ಇದಿರುಗೊಳ್ (ಕ್ರಿ). ಸ್ವಾಗತಿಸು; ಪ್ರೀತಿ ಅಥವಾ ಗೌರವಪೂರ್ವಕವಾಗಿ ಎದುರಿಗೆ ಬರು: ದೇವಗಣಿಕ್ಕೆಯರ್ ಅರ್ಘಂಬಿಡಿದು ಬಂದಿದಿರ್ಗೊಂಡುಯೆ ವೀರಲೋಕಕ್ಕೆ ಸನ್ದೋನ್ (ಎಕ. VIII, ಸೊರಬ. ೧೦–೯ ; 800); ಇದಿಗೊರ್ಳ್ವುದು ಕಾಲ್ಗರ್ಚುವುದುದಾತ್ತಮಪ್ಪೆಡೆಯೊಳಿರಿಪುದರ್ಚಿಪುದೆಱಗಿಪುದು ಕರಣಶುದ್ಧಿವಡೆವುದು ಪದೆದನ್ನಮನೀವುದೆಂಬ ನವವಿಧಪುಣ್ಯಂ (ಆದಿಪು. ೪–೯೬); ತ್ರಿದಶಾರಾಧ್ಯನನರ್ಘ್ಯಪೂರ್ವಮಿದಿಗೊರ್ಳ್ವಂತಾಗಿ (ಪುಷ್ಪಪು. ೧೦–೫೩); ಸಕಲಸಂಭ್ರಮದಿನಿದಿಗೊರ್ಂಡು (ಪದ್ಮರಾ. ೩–೩೬). **ಇದಿರುಗೊಳ್**: ಮುಕ್ತಿಕನ್ನಿಕೆಯಿದಿರುಗೊಳುತಿದೆ ಭಕ್ತಿಕಾಂತಾಕಾಂತನೇ (ಬಸಪು. ೨೪–೪೨).
[ಇದಿರ್ + ಕೊಳ್$_1$]

**ಇದಿಗೊರ್ಳಿಸು** (ಕ್ರಿ). ಎದುರುಗೊಳ್ಳುವಂತೆ ಮಾಡು: ಪುರದ ಸಿಂಗರದ ಮಂಗಳವಾದ್ಯರವದಬಲೆಯರ ಸೊಡರ್ವೆಳಗಿನಾರತಿಗಳ ಮಹೋತ್ಸವದ ಸಿರಿಯೊಳ್ ಕುಳಿಂದಂ ಕುಮಾರನನಿದಿಗೊರ್ಳಿಸಿ ಮತ್ತೆ ಕಾಣಿಸಿಕೊಂಡನು (ಜೈಮಿಭಾ. ೨೯–೧೦). [ಇದಿಗೊರ್ಳ್ + –ಇಸು$_3$]

**ಇದಿರ್ಚು** (ಕ್ರಿ). ೧. ಎದುರಾಗು; ಪ್ರತಿಭಟಿಸು: ಬಿಲ್ಲಂ ಕೊಂಡು ಗಂಗಾಸುತಂಗದಿರದಿದಿರ್ಚಿ ನಿಂದಾಗಳ್ (ಪಂಪಭಾ. ೧೦-೫೩ ವ); ಕದನದೊಳದಿರದೆ ಪಗೆವಡೆಗಿದಿರ್ಚಿ ನಡೆವಾತನಭ್ಯಮಿತ್ರೀಣನವಂ (ವಸ್ತುಕೋ. ೮೩-೧೦); ಕರಂ ಕೆಂಗಣ್ ಮುಸಗುತ್ತುಂ ಕಡುಪಿಂದೇಱುವ ತೇಜದಿಂ ರಾವುತರೇಱಿಯಿದಿರ್ಚಿದರು (ಜಯಕಾ. ೬-೩೪); ಕುಂಜರಕಿದಿರ್ಚುವಜದಂತೆ (ಅಪ್ರತಿ. ೬೭-೮). ೨. ಪ್ರೀತಿಯಿಂದ ಅಭಿಮುಖವಾಗು; ಎದುರಿಗೆ ಬರು; ಬಳಿಸಾರು: ಸಮ್ಮುಖವಾಗು: ದೈವವಿದಿರ್ಚಿ ಬಂದುದು ಜಗಜ್ಜಯಮಂ ತಳೆ ದೇವ (ಕಾದಂಪೂ. ೪೨೬); ಉದಯದಿನರ್ಕನಿನುಡುಪನಿನಿದಿರ್ಚಿ ನಿಂದೊಂದು ನೆಲಸೆ ಮೇಣ್ ಗ್ರಹಯುಗ್ಮಂ . . . ಅರ್ಥಮೆಯ್ದುಗುಂ ಬಲವಶದಿಂ (ಜಾತತಿ. ೧೧-೮).

**ಇದಿರ್ಚಿದಿರ್ಚು** (ದ್ವಿರುಕ್ತಿ): ಮಾಣ್ ಮಾಣ್, ಇದಿರ್ಚಿದಿರ್ಚು, ಅಣ್ಮಣ್ಮು (ಭಾಷಾಭೂ. ೧೯೩ ಪ್ರಯೋ); ಎಲೆ ಎಲೆ ನೀನದಿರದೆ ನಿಲ್ ನಿಲ್ ನೀನಿಲ್ಲಿದಿರ್ಚಿದಿರ್ಚೆನೆ ಜಟಾಯು (ಕಾವ್ಯಾವ. ೨೮೮).

[ಇದಿರ್ + -ಚು]

**ಇದಿರ್ನಿಲ್** (ಕ್ರಿ). ಎದುರಾಗಿ ನಿಲ್ಲು; ಪ್ರತಿಭಟಿಸಿ ನಿಲ್ಲು: ಪ್ರತಿಜ್ಞಾಗಾಂಗೇಯಂಗದಿರದಿದಿರ್ನಿಲ್ವನ್ನರೊಳರೇ (ಪಂಪಭಾ. ೧-೮೦).

[ಇದಿರ್ + ನಿಲ್]

**ಇದಿರ್ನೋಡು** (ಕ್ರಿ). ನಿರೀಕ್ಷಿಸು: ಅಂತಿರಲ್, ಸ್ಯೂಸ್ಗೆ ಸ್ವಾಮಿಯ ಪ್ರೊರ್ವನನ್ ಇದಿರ್ನೋಡವೇಱ್ಕುಮೇನ್ (ಬದ್ಧಪ್ರ. ೪೯-೧೦೬೮).

[ಇದಿರ್ + ನೋಡು]

**ಇದಿರ್ಪೋಗು** 'ಇದಿರ್ವೋಗು' ನೋ.

**ಇದಿರ್ವನಿ** (ನಾ). ಎದುರಾಗಿ ಬೀಳುವ ಹನಿ; ಎದುರುಮುಖದಿಂದ ಬೀಳುವ ಹನಿ: ಒಱೆವನಿಗಳಿದಿರ್ವನಿ ಮಸ್ತಕವನಿ ತೊಱೆವನಿಗಳ ನಾಂತು ಬಿಡದೆ ನೆಱೆ ವಿಶ್ವರೂಪಾದಂತೆ ಸಂತತಧಾರೆ ಸುರಿದುದೀಗಳೆಯಿಳೆಯೊಳಗೆ (ಮೋಹತ. ೪-೩೯). [ಇದಿರ್ + ಪನ್ನಿ]

**ಇದಿರ್ವರ್**, ಇದಿರುವರ್ (ಕ್ರಿ). ೧. (ಪ್ರೀತಿ ಗೌರವಗಳಿಂದ) ಎದುರಿಗೆ ಬರು; ಎದುರುಗೊಳ್ಳು: ತನಗಿದಿರ್ವಂದ ಕೊಂತಿಗಸುರಾಂತಕನೆಱಗಿ (ಪಂಪಭಾ. ೯-೨೭ ವ); ಇದಿರ್ವಂದುದು ಪುಷ್ಪಸುಗಂಧಮಾರುತಂ (ಜಗವಿ. ೬-೧೨); ಮೃಡಭಕ್ತವ್ರಾತವಾನಂದದೊಳಿದಿರ್ವರೆ ಕಂಡು (ರಕ್ಷಾಶ. ೫೯). ೨. (ನದಿಯ ಪ್ರವಾಹಕ್ಕೆ) ಎದುರಾಗಿ ನಡೆ: ಪರಿವ ನದಿಗಿದಿರ್ವಂದುದೀ ಶಿವಮಂತ್ರಪತ್ರವು ಮುಂದೆ ತೊಱೆಯೊಳು ಹೋಯಿತಾ ಜಿನಮಂತ್ರಪತ್ರವದು (ಬಸವು. ೫೦-೪೦). ೩. ಪ್ರತಿಭಟಿಸು; ಎದುರಾಗಿ ನುಗ್ಗು; ಅಡ್ಡಿಯಾಗು: ಬಲಿನಂದನ ಮುಖ್ಯಖಳರೆಂಬ ಮೃಗಕುಲ ಚಲಿಸಿ ತನ್ನಿದಿರ್ವರೆ ಪಿಡಿದು ಉಲಿದು ಹೊಯ್ಯುವೆನೆಂಬ ರೌದ್ರದಿಂ ಕೋಟಿಯ ಹುಲಿಮೊಗ ಕಣ್ಗೆ ರಂಜಿಸಿತು (ಮೋಹತ. ೩-೯); ಘೋರಾಕೃತಿವೆತ್ತು ಕಾಲಾಗ್ನಿ ಮುಳಿದು ಹುಂಕಾರದಿಂದಿದಿರ್ವಂದುದಾಗ (ಮೋಹತ. ೩೭-೫೫). **ಇದಿರುವರ್**: ೧. ಆ ಮುನೀಶ್ವರನಿದಿರುವಂದೀ[ಪಾಠಾಂ. ಗೊಂಡೀ] ರಾಮುಚಂದ್ರನ . . . ಸತ್ಕರಿಸಿ (ತೊರರಾ. ೩-೧-೧೩).

[ಇದಿರ್ + ಬರ್]

**ಇದಿರ್ವೀಟ್** (ಕ್ರಿ). ಪ್ರತಿಭಟಿಸಿ ನಿಲ್ಲು: ಆದೊಡಂ ಪ್ರಭುಗೆ ಇದಿರ್ವಿಟ್ಟು ನಡೆಯಲಾಜ್ಞನ್ ಪಡೆದು ನಾನ್ ಬಂದೆನಿಲ್ಲ (ಅಂತಿಗೊ. ೪-೬೪).

[ಇದಿರ್ + ಬೀಟ್$_1$]

**ಇದಿರ್ವೋಗು**, ಇದಿರ್ಪೋಗು (ಕ್ರಿ). ೧. (ಪ್ರೀತಿ ಗೌರವಗಳಿಂದ) ಎದುರಾಗಿ ಹೋಗು; ಎದುರಾಗಿ ನಡೆ: ಧೃತರಾಷ್ಟ್ರಾದಿ ಕುಲವೃದ್ಧರೊಡನೆ ದುರ್ಯೋಧನನಿದಿರ್ವೋಗಿಧರ್ಮಪುತ್ರಂಗೆಪೊಡೆವಟ್ಟು (ಪಂಪಭಾ. ೬-೬೮ ವ); ಕೊಲಲ್ಬರ್ಪಂಗಿದಿರ್ವೋದರೆಂಬಂತೆ (ಧರ್ಮಾಮೃ. ೨-೧೪೯); ಕಾದಲನೆಡೆಗೆಯ್ದಿ ಬರ್ಪ ಖಚರೀನಿಚಯಕ್ಕಿದಿರ್ವೋಗಿ (ವರ್ಧಪು. ೪-೭೪). ೨. ಪ್ರತಿಭಟಿಸು; ವಿರೋಧಿಸು: ದೇವರಿಗಿದಿರ್ವೋಗೆ ವಂಚಕರೆ ವಂಚಿತರ್ (ಚಂದ್ರಸ. ೧೧೬). **ಇದಿರ್ಪೋಗು**: ೧. ಅಮುಮುವರ್ಗಿದಿರ್ಪೋಪ ಒಸಗೆಯ ಮಾತಂ ಕೊಂಡು ಪಂಡಿತೆಯುಮಿನಾಗಳೆ ಬರ್ಪಳ್ (ಚಾವುಂಪು. ೩೨-೧೯).

[ಇದಿರ್ + ಪೋಗು$_1$]

**ಇದೀಗ** 'ಇದು' ಪರಾ.

**ಇದು**, ಈದು$_1$ (ಸ). ರೂಪಗಳು (ಪುಂ. ಏಕ). **ಇವ**, **ಇವಂ**, **ಇವನ್**, **ಇವನು**, **ಈತ**$_1$ (ಸ್ತ್ರೀ. ಏಕ). **ಇವಳ್**, **ಇವಳು**, **ಈಕೆ** (ಪುಂ. ಸ್ತ್ರೀ. ಬಹುವ). **ಇವಂದಿರ್**, **ಇವದಿರು**, **ಇವರ್**, **ಇವರು**, **ಇವರ್ಗಳ್** (ಪುಂ. ಬಹುವ). **ಈತಂಗಳ್**, **ಈತಗಳು** (ಸ್ತ್ರೀ. ಬಹುವ). **ಇವಳ್ದಿರ್**, **ಈಕೆಗಳ್** (ನಪುಂ. ಬಹುವ). **ಇವು**, **ಇವುಗಳು** (ವಿಶೇ). **ಈ**$_5$. ಸಮೀಪದ ವಸ್ತುವನ್ನಾಗಲಿ ವಿಷಯವನ್ನಾಗಲಿ ನಿರ್ದೇಶಿಸಲು ಬಳಸುವ ಸರ್ವನಾಮ: ಇದಾನ್ ಪೆಱನೋರ್ವನ್ ಕೊಳ್ವೋನುಂ (ಎಕ. VI, ಕೊಪ್ಪ. ೩೭-೧೧; 675); ವಸನ್ತಕುಮಾರ ಇದಕ್ಕೆ ಸಕ್ಕಿ (ಎಕ. VIII, ಸೊರಬ. ೫೭೧-೩೧; 692); ಗುಣಮಿದು ದೋಷಮಿದೆಂಬೀ ಗಣಿದಮನೆತ್ತಱಿಗುಮಶ್ರುತಪ್ರಕೃತಿಜನಂ (ಕವಿರಾ. ೧-೮); ಮದುವೆಗಿದು ಪೆತ್ತ ಮಕ್ಕಳಿಗಿದು (ಸಮಪ. ೫-೯೩); ಇದು ವಿನೋದವಲೇ ಮದೀಯಾಭ್ಯುದಯವಿದಲೇ (ಕುವ್ಯಾಕ. ೨-೧೮).

**ಈದು**$_1$: ಈದನಱಿದೊಮ್ಬರಣಸಿಯುಮಕೆಯುಮಂ ಕವಿಲೆಯುಮನಱಿದಣ್ದು (ಎಕ. XIV, ಮಳವ. ೬೮-೧೦; 860); ಮತ್ತಮಲ್ಲಿಯೊಕ್ಕಲೆಲ್ಲಮಿದನಱಿಯೆ (ಎಇ. XXVI, ೪-೧೮; 906). **ಇವ**: ವೈರಿಭಟನಿವಮುಗುವಲಾ (ಕುವ್ಯಾದ್ರೋ. ೫-೩೮); ಕೌರವರ್ಗಿರ್ದ ಸುಭದ್ರೆಯನೊಯ್ದನು ಜಾರನಿವಗೆ ಮೊಱೆಯುಂಟೆ (ಕುರಾಸಾಂ. ೬-೧೧೨); ಇವ ನಮ್ಮ ಮಾತ ಕೇಳದೆ ಪುಂಡನಾದ (ಪುರಂದ. ೩-೧೯ ಪ); ಇವ ನರಶಿಶುವೇ (ಕಂನವಿ. ೪-೬೬); ಯಾರವ್ವಾ ಇವ ಚೆಲುವಾ (ಗರಿ. ೮೮-೧).

**ಇವಂ**: ಇವಂ ದೇವರ ತೊಱ್ತು (ಶಮುದ. ೮೪ ಪ್ರಯೋ); ಇವಱೊಳಿವಂ ವ್ಯವಹರಿಪನೆಂಬಲ್ಲಿ ಕಾಱಪ್ರತ್ಯಯಮುಕ್ಕುಂ (ಶಮುದ. ೧೦೦ ವೃತ್ತಿ). **ಇವನ್**: ಇವನನಿರುಳೊಳೆ ಸಂಸ್ಕರಿಸಲ್ವೇಱ್ಕುಮೆಂದು (ಪಂಪಭಾ. ೮-೭೯ ವ); ಇವನಧಿಕಪುಣ್ಯನೀತನನವಶ್ಯಮೋಲಗಿಸೆ ಶೀರ್ಗುಮಭಿಮತಮಿವನಿಂ (ಕಾವ್ಯಾವ. ೧೦೫); ನಮ್ಮ ಬೀಡೊಳ್ ನುಸುಳ್ದು ನಿದ್ದೆ ಬಿಗಿದಂದು ತುಱುಗಳನ್, ಕಾಹಲರನ್ ಇಱಿದೊನ್ ಇವನೆಂದು (ಅಶ್ವತ್ಥಾ. ೧೮-೧೩). **ಇವನು**: ನಮ್ಮ ಕೋಪವನಿದಿರುಗೊಂಡವನಿವನಲೇ (ಕುವ್ಯಾಕ. ೨-೧೮); ಗತಸೂನುವಿವನೆಂದೆನ್ನ ಹೊಗಿಸರು ಸ್ವರ್ಗವನು ಸುರರು (ತೊರರಾ. ೧-೪೨-೪); ಇವನ ಪಿಡಿದುಕೊಂಡು ಹೋಗೆಲೊ ಜೋಗಿ (ಪುರಂದ. ೩-೧೯ ಪ); ನಳನೊ ನಳಕೂಬರನೊ . . . ಇವನಾರೆಂದು ಬೆದಱಿದಳು (ನಳಚ. ೩-೩೪). **ಈತ**$_1$: ಈತಂ ಬಿರ್ದಿನನೀತಂ ಭೂತಳಪತಿಯೆನಿಸಿದರಿಗಂ (ಪಂಪಭಾ. ೪-೪೪); ಈತಂಗೆ ಪೊಱಗೆ ನಾಡಿಲ್ಲೊಳಗೆ ಭಂಡಾರಮಿಲ್ಲ (ಧರ್ಮಾಮೃ. ೨-೧೧೬); ಈತ ಸಚರಾಚರದ ಗುರು (ಕುವ್ಯಾಸ. ೦೭ಇ. ೯-೫೨); ಈತನಾಗಲಿ ಆತನಾಗಲಿ ಮಾತು ಒಂದಿರಬೇಕು (ಗಾದೆ). **ಇವಳ್**: ಇವಳೀಗಳ್ ಪೇೞ್ದ ಮಾತಾ ಕನಸನವಿತಥಂ ಮಾಱ್ಪ ಮಾತಪ್ಪುವು (ಕಾದಂಪೂ. ೩೮೯); ಇವಳೆಲ್ಲಿಗೆ ಪೋದಪಳೆಂಬುದಂ ಬೆನ್ನನೆ ಪೋಗಿ ನೋೞ್ಪೆನೆಂದು (ಸುಕುಮಾ. ೭-೨೧ ವ); ಅವಳ್, ಇವಳ್, ಉವಳ್ (ಶಮುದ. ೨೦೮ ಪ್ರಯೋ); ಇವಳ್ಗಿನ್ನು ವರನಾಗಬೇಕೆಂದು (ಜೈಮಿಭಾ. ೨೯-೩೦). **ಇವಳು**: ಅವಳಿಂದ ಸುಖವಿಲ್ಲ ಇವಳಿಂದ ಫಲವಿಲ್ಲ ಇವರಿಬ್ಬರ ಸಂಗ ಅಭಿಮಾನ ಭಂಗ (ಪುರಂದ. ೫-೨೪-೩); ಒಮ್ಮೆ ಇವಳು ಒಮ್ಮೆ ಅವಳು ಕುಣಿಸುತಿರುವಳು (ಇಂಗೀತೆ. ೧-೨೩).

**ಈಕೆ :** ಮನಸಿಜನೀಕೆಗಂಡು ರತಿಯಂ ಬಿಸುಟಂ (ಪಂಪಭಾ. ೪–೮೫) ; ಎನ್ನವಳೀಕೆಯೆಂದು ಭಾವಿಸಿ (ಕಾದಂಪೂ. ೭೯೬) ; ಆನೀಗಳೀಕೆಯಂ ಬಿಡೆ ಜಡಿದೊಡಗೊಂಡುಯ್ದನಪ್ಪೊಡೆ . . . ಎನಗೆ ಕಳವು ಪೊರ್ದುಗುಂ (ಸುಕುಮಾ. ೭–೨೧ ವ) ; ಲ ಲ ನೆ ಯಿ ಾ ಕೆ ಯ ದಾ ರೆ ನ ಲು (ತೊರರಾ. ೧–೧೨–೨೨). **ಇವಂದಿರ್ :** ಕೊಂದಪನಿವಂದಿರನೀಗಳೆ ನಿಕ್ಕುವಂ (ಕವಿರಾ. ೧–೧೩೦) ; ಶಶಿವಂಶಮದೀಗಳಿವಂದಿರಿಂದೆ ನಿ ತ್ತ ರಿ ಸು ವು ದ ಕ್ಕು ಂ (ಪಂಪಭಾ. ೭–೧೬) ; ಇನ್ನುಮಿವಂದಿರನೀಯಂದದೊಳಿರಿಸಿದೆನಪ್ಪೊಡೆ ಅವಿನೀತರಾಗಿ ಪಗೆವರ್ಗೆ ವಶಗತರಪ್ಪರ್ (ಪಂಚತಂ. ೧೬–೧೧) ; ಈ ದುಶ್ಚರಿತರನಿವಂದಿರಂ ಪರಿಹರಿಸಿಂ (ಸುಕುಮಾ. ೨–೨೭). **ಇವದಿರು :** ತಲೆಗಳ್ಳರಿವದಿರು (ಕುವ್ಯಾದ್ರೋ. ೩–೨೦) ; ಇವದಿರನೊರಸಿ ಬೆನ್ನಿನಲಿ ಕರುಳ ತೆಗೆವೆನೆನುತ್ತ (ನಳಚ. ೯–೨೮). **ಇವರ್ :** ಆವರಿವರನ್ನರಿನ್ನರೆನ ವೇಡರಿಕೇಸರಿಗಾಂಪನಿಲ್ಲ (ಪಂಪಭಾ. ೨–೮೭) ; ಇವರಾರಾನಾರ್ (ಅಜಿಪು. ೬–೫೩) ; ಅವರಿವರುವರೆನ್ನದೆ ಜಗದವರೆಲ್ಲಂ (ಸಮಪ. ೨–೬). **ಇವರು :** ಬ್ರಹ್ಮವಿಷ್ಣು ರುದ್ರರಿವರೆಲ್ಲ ಒಂದು ಬ್ರಹ್ಮಾಂಡದೊಳಗಣ ಬಾಲಕರು (ಆದವ. ೨–೪) ; ಇವರು ಥಟ್ಟನು ನಿಲಿಸಿದರು (ಕುವ್ಯಾದ್ರೋ. ೧–೪೯) ; ಇವರು ಮೂವರ ಮೇಲೆ ಕೈಕಸೆಗವತರಿಸಿದಳು . . . ಶೂರ್ಪಣಖಿಯೆಂಬ ವಳು (ತೊರರಾ. ೧–೮–೨೭). **ಇವರ್ಗಳ್ :** ಇವರ್ಗಳಂ ನೀಮೆಂತು ಪೆತ್ತಿರ್ (ವಡ್ಡಾರಾ. ೫೫–೨೭). **ಈತಂಗಳ್ :** ಆತಂಗಳ್, ಈತಂಗಳ್, ಊತಂಗಳ್ (ಶಮದ. ೧೫೦ ಪ್ರಯೋ). **ಈತಗಳು :** ಹೊಯ್ ಹೊಯ್ಯೀತಗಳನೆನುತೇಱಿದರು (ಕುವ್ಯಾಕ. ೨–೮) ; ಈತಗಳು ಕೌಂತೇಯ ಮಾದ್ರೀಜಾತರು (ಸಂಭಪ. ೧೫–೯೯). **ಇವಳ್ದಿರ್ :** ವಸುಧೆಯನೇಸಿವಳ್ದಿರರುಣಾಬ್ಜದಲಂಗಳೊಳಟ್ಟಿಯಿಂದಮರ್ಚಿಸಿದರೊ ಪೇೞಿಮೆಂಬಿನೆಗಂ (ಆದಿಪು. ೭–೨೨) ; ಇವಳ್ದಿರೊಳಿವಂದಿರಂ ವಿಕೃತರೂಪರಂ ಕೂಡುವಂತವಶ್ಯಮನುರೂಪರೂಪರನೆ ಕೂಡಲೇಂ (ಕಾವ್ಯಾವ. ೯೪) ; ಇವಳ್ದಿರ್, ಇವಂದಿರ್, ಅವಂದಿರ್ (ಶಮದ. ೯೭ ಪ್ರಯೋ). **ಈಕೆಗಳ್ :** ನೋಡೀಕೆಗಳ ಚಳಿತಲುಳಿತ ಭ್ರೂಕುಟಿಯೇ ಪರಮಸುಖದ ಕೋಟಿಯುನೀಗುಂ (ಪಂಪಭಾ. ೭–೯೪). **ಇವು :** ಇವು ತಮ್ಮುತ್ತಿಬ್ಬರ್ಗರ ಕಲ್ಗಳ್ (ಎಇ. VI, ೧೬೧–೫ ; 765) ; ಇವುಮೊದಲಾಗೊಡೆಯ ದುಃಖಂಗಳಂ (ವಡ್ಡಾರಾ. ೯೦–೩೦) ; ಎರಡು ಪೋೞುಮನಿವೇವುವೆಂದು ಬಿಸುಡೆ (ಪಂಪಭಾ. ೬–೨೬ ವ) ; ಇವು ಸುಜ್ಞಾನದ ಸಲ್ವ ಬಟ್ಟೆಗಳ್ (ಅಜಿಪು. ೧–೪) ; ಕಾತರಿಸದಿರು ಬಾಲಭಾಷೆಗಳೇತಕಿವು (ಕುವ್ಯಾದ್ರೋ. ೫–೪೫) ; ಒಳ್ಳೆಯನು ಇರದೂರು ಕಳ್ಳನೊಡನಾಟವು ಸುಳ್ಳನ ಮಾತು ಇವು ಮೂಱು ಕೆಸಱೊಳಗೆ ಮುಳ್ಳು ತುಳಿದಂತೆ (ಸರ್ವಜ್ಞ. ೧೧೮೬). **ಇವುಗಳು :** ಇವುಗಳಲ್ಲಿ ಯಾವುದಾದರೂ ಸರಿಯೆ (ರೂಢಿ). **ಈ**$_5$ **:** ಭಟ್ಟಗ್ಗಿರ್ಗೆ ಗಱಿದ್ದಿ ಒಡ್ಡಲಿ ಆ ಪತ್ತೊನ್ದಿವಿಟ್ಟಾರಕರ (ಮೈಆರಿ. ೧೯೩೬, ೧೬–೧೬ ; 450) ; ಈ ಪರ್ವ್ವತದುಳ್ಳೆ ನೋನ್ತು ತಾವರ್ (ಎಕ. II, ೧೧೪–೨ ; 700) ; ನಮ್ಮ ನನ್ನಿಗೆ ಬನ್ನಂ ಬರಲೀಯದೀ ಬನದೊಳಿರ್ದೇಂ ಕಾಲಮಂ ಪಾರೆವೇ (ಪಂಪಭಾ. ೭–೩೦) ; ನೀನೀ ಪ್ರಸಾದಮಂ ಶರಣತತಿಗೀಯೆನುತೆ (ಬಸರ. ೧–೩೩) ; ಇಂದಿನೀ ಬಲವೀ ಸಮರಜಯದಂದವೀ ಸೌರಂಭವೀ ಸರಳಂದವೀ ತೆರಳಿಕೆಯದಾವಂಗೆಂದ ನವನೀಶ (ಕುವ್ಯಾದ್ರೋ. ೫–೧೭) ; ಈ ಪರಿಯ ಸೊಬಗಾವ ದೇವರಲಿ ನಾ ಕಾಣೆ (ಪುರಂದ. ೨–೧೬೪ ಪ).

**ಇದೀಗ** = **೧.** ದಿಟವಾಗಿ ಇದು ; ಅಪೂರ್ವವಾದ ಇದು : ಇದೀಗ ಗರುಡಧ್ವಜನ ಬಿರುದು (ತೊರರಾ. ೧–೮–೧೪) ; ಇದೀಗ ಲೆಕ್ಕಾಚಾರ (ರೂಢಿ). **೨.** ಈಗ ತಾನೆ ; ಇದೇ ಈಗ ; ಈಗಷ್ಟೆ : ಈ ಯಜಮಾನರು ಇದೀಗ ಬಂದರು (ರೂಢಿ). **ಇದುಮೇರೆ, ಇದೇಮೇರೆ** = ಈ ಮೇರೆಗೆ ; ಈ ರೀತಿಯಲ್ಲಿ (ಮುಂಬಯಿ. ೨–೩೬ ; ೩–೬೦ ಕಿ). **ಇದುವರೆಗೆ, ಇದುವರೆವಿಗೆ** = ಈವರೆಗೆ ; ಇಲ್ಲಿಯ ತನಕ (ಮುಂಬಯಿ. ೪–೧೯೮ ಕಿ) ; ಇದುವರೆವಿಗೆ ನಾನು ಅದನ್ನು ನೋಡಿರಲಿಲ್ಲ (ರೂಢಿ). **ಇದೇಈಗ** = ಈಗಷ್ಟೆ ; ಈಗ ತಾನೆ (ಮುಂಬಯಿ. ೪–೧೩೬ ಕಿ). **ಇದೇತಾನೆ** = ಇದೇಈಗ : ನಾನು ಇದೇತಾನೆ ಊರಿಂದ ಬಂದೆ (ರೂಢಿ).

[**ದೇ.** ‖ **ತಮಿ. ಮಲ.** ಇದು ; **ತುಳು.** ಇಂದು ; **ಕೊಡ. ತೆಲು.** ಇದಿ]

**ಇದುಕಾರಣ** (ಅ). ಈ ಕಾರಣದಿಂದ ; ಈ ನಿಮಿತ್ತವಾಗಿ : ಇದು ಕಾರಣ ಮೂರ್ತಿಯಾದುದಕ್ಕೆ [ಪಾಠಾಂ. ಇದಕ್ಕಿದು ಮೂರ್ತಿಯಾದ ಕಾರಣ] ಪ್ರಳಯ ತಪ್ಪದು (ಅವಚಂ. ೧೨–೪೭) ; ಇದುಕಾರಣಮಹಂಕರಿಸಲಹುದೇ ಭಕ್ತಿಭಾವನೆ (ಬಸಪು. ೨೭–೭೫). [ಇದು + ಕಾರಣ]

**ಇದುಕಾರೆ** (ನಾ). ಒಂದು ಔಷಧದ್ರವ್ಯ : ಕಳ್ಳಂಗಡಲೆ, ಬೋಳಗಡಲೆ, ನಾಗಮುತ್ತು, ಪುಲ್ಲಂಗ, ಇದುಕಾರೆ, ಶುಂಠಿ . . . ಇವಂ ಸಮನಾಗಿ ಕಷಾಯವಿಟ್ಟು (ಸಕವೈ. ೧೬೧). [?]

**ಇದುಕೊ** 'ಇದೆಕೊಳ್' ನೋ.

**ಇದುಗೊ** 'ಇದೆಕೊಳ್' ನೋ.

**ಇದುನಿಮಿತ್ತಂ** (ಅ). ಈ ಕಾರಣದಿಂದ : ಇದುನಿಮಿತ್ತಂ ವಿಹಿತಭಕ್ತಿಯೊಳೊದಗಿದುತ್ತಮನಂದನನನಲ್ಲದೆ ಶಿಲಾದನು ಪೊಲ್ಲೆನೆಂದಹನು (ಬಸಪು. ೨–೯) ; ಇದುನಿಮಿತ್ತಂ ನೋಡಬಂದೆವು (ಬಸಪು. ೩–೨೯). [ಇದು + ನಿಮಿತ್ತ]

**ಇದುರು** 'ಇದಿರ್' ನೋ.

**ಇದುರುಬದುರು** (ನಾ). ಪರಸ್ಪರ ಸಮ್ಮುಖ : ಅವರಿಬ್ಬರೂ ಇದುರು ಬದುರಾಗಿ ಸರಿಯುತ್ತಿದ್ದಾಗ (ಮಹಾತ್ಮಾ. ೧೨೧). 'ಎದುರುಬದುರು' ಪರಾ. [ಇದುರು (< ಇದಿರ್) + ಬದುರು$_0$]

**ಇದುರುವಾದಿ** (ನಾ). **೧.** ವಿರೋಧಿಸಿ ಮಾತನಾಡುವವನು ; ಹೇಳಿದುದನ್ನು ವಿರೋಧಿಸುವವನು. **೨.** [ನ್ಯಾಯ] ಪ್ರತಿವಾದಿ. [ಇದುರು (< ಇದಿರ್) + ವಾದಿ]

**ಇದುರುವಾದಿಸು** (ಕ್ರಿ). **೧.** ವಿರೋಧಿಸಿ ಮಾತನಾಡು ; ಪ್ರತಿಭಟಿಸಿ ಮಾತನಾಡು (ಕಿ). **೨.** [ನ್ಯಾಯ] ಪ್ರತಿವಾದಿಯಾಗಿ ವಾದಿಸು ; ಪ್ರತಿಪಕ್ಷವನ್ನು ಹಿಡಿದು ಮಾತನಾಡು (ಕಿ). [ಇದುರು (< ಇದಿರ್) + ವಾದಿಸು]

**ಇದುಳೆ** (ನಾ). ಒಂದು ಊರಿನ ಹೆಸರು (?) : ಅರಂಭಲ್ಲವನಿದುಳೆಯ ಬಿಱ ವೃತ್ತಿ ಆಳುತ್ತಿರೆ (ಎಕ. XIV, ನಾಗಮಂ. ೧೩೭–೬ ; 900). [?]

**ಇದೆ**$_1$ 'ಇರ್$_1$' ಪರಾ.

**ಇದೆ**$_2$, ಇದೇ, ಇದೊ, ಇದೋ (ಅ). **೧.** = ಇದೆಕೊಳ್ : ಇದೆ ಹಂಸೀಬೃಂದಮಿಾಂಟಲ್ಬಗೆದಪುದು . . . ಕೀರ್ತಿಪ್ರಕಾಶಂ (ಎಕ. II, ೧೪೦–೧೨೭ ; 1145) ; ಅಭವನ ಡಿಂಗರಿಗನೈತಂದನಿದೆಯಕ್ಕಂಗಳಿರ (ಬಸಪು. ೨೯–೮) ; ಇದೆ ಕೃಪಾನಿಧಿ ಬಂದನಸುರಾಭ್ಯುದಯಘಾತಕ (ಕುವ್ಯಾಅ. ೧೪–೫) ; ಹೆಗ್ಗರಡಿಯ ಹಿಂಡಿದೆ ಕಾಳ್ಕೋಣನ ಮೊಗ್ಗರವಿದೆ ಹುಲ್ಲೆಗಳ ಒಗ್ಗಿದೆ ಪಂದಿಯ ಗೊಂದಣವಿದೆಯೆಂದು ಮುಗ್ಗಿ ಕವಿದರು ಶಬರರು (ಕುರಾಸಾಂ. ೨೭–೭೦) ; ಇದೆ ಪಂದಿ ಕೆದಱಿದ ನೆಲಂ ನೋಡಲಿದೆ ದಂತಿ ಕದಡಿದ ಕೊಳಂ (ಜೈಮಿಭಾ. ೨೮–೪೪). **೨.** ಈ ಕ್ಷಣದಲ್ಲಿ ; ಈ ನಿಮಿಷವೇ ; ಈಗಲೇ : ಇವದಿರ ತಿದ್ದಿಬಹೆನಿದೆಯೆನುತ ತೆಗೆದೆಚ್ಚ (ಕುವ್ಯಾದ್ರೋ. ೨–೪೪). **ಇದೇ : ೧.** (ಕಿ). **ಇದೊ : ೧.** ಇದೊ ಬಂದೇ ಬಂದ ನಮ್ಮ ಜಟ್ಟಿ (ರೂಢಿ). **ಇದೋ : ೧.** ಇದೋ ಉಪಾಧ್ಯಾಯರು ಬಂದೇ ಬಿಟ್ಟರು (ರೂಢಿ). [ಇದು + –ಎ$_2$]

**ಇದೆಕೊ** 'ಇದೆಕೊಳ್' ನೋ.

**ಇದೆಕೊಳ್**, ಇಕೊ, ಇಕೋ, ಇಕ್ಕೊ, ಇಕ್ಕೋ, ಇಗಾ, ಇಗೊ, ಇಗೋ, ಇದಕೊ, ಇದಕೋ, ಇದಿಕೊ, ಇದಿಗೊ, ಇದುಕೊ, ಇದುಗೊ, ಇದೆಕೊ, ಇದೆಕೋ, ಇದೆಗೋ (ಅ). ಹತ್ತಿರದ ವಸ್ತುವಿನ ಅಥವಾ ವಿಷಯದ ಕಡೆಗೆ ಗಮನ ಸೆಳೆಯಲು ಉಪಯೋಗಿಸುವ ಮಾತು: ನಿನ್ನೀಯದ್ಭುತರೂಪಮಂ ಕಾಣುತೆ ಇದೆಕೊಳ್! ಮುನಿಗಳೆಲ್ಲರುಂ ಬೆದರ್ಕೆಯಿಂ ನಡುಗುವರ್ (ಅದ್ಭುತ. ೫೨–೧೯). **ಇಕೊ:** ಇಕೊ, ನೋಡು, ಶಾಮೂ, ಈ ಹುಡುಗಿ ಎಷ್ಟು ಹೊಲಸು ಕಾಣಿಸುತ್ತದೆ (ಮುಂಬಯಿ. ೧–೭). **ಇಕೋ:** ಇಕೋ ನೆಲ–ಅಕೋ ಜಲ ಆದರ ಮೇಲೆ ಮರದ ಫಲ (ಸಖೀಗೀ. ೧೦೨–೧). **ಇಕ್ಕೊ:** ಇಕ್ಕೊ ಅಹೋಬಲ ಕಾಳಿ ವೃಷಭಾ (ಶ್ರೀಕೃಪಾ. ೭೨); ಇಕ್ಕೋ ನೋಡ್ರಿ ಇದೇ ನಮ್ಮ ಮನೆ (ರೂಢಿ). **ಇಕ್ಕೋ:** ಇಕ್ಕೋ, ಬೀಗದಕ್ಕೆ ತಗೊಳ್ಳಿ (ಸುವಸಂ. ೪೨). **ಇಗಾ:** ಇಗಾ ಪ್ರಭು! (ಬೆಟ್ಟಹೊ. ೨೫). **ಇಗೊ:** 'ಇಗೊ ಹಿಡಿ' ಯೆನ್ನುತ ಹೂಗಳನಿನಿಯನು ತನ್ನಯ ಕೈಯಲಿ ಕೊಡುವಾಗ (ಧ್ವನ್ಯಾಲೋ. ೨೧೯). **ಇಗೋ:** ಇಗೋ ನೋಡು, ನಾನು ಕೆಳಗಿಳಿದು ಬಂದೆನು (ಮುಂಬಯಿ. ೭–೧೯); ಇಗೋ ನೋಡಿರಿ, ಈ ಜನರು ಎಂಥ ತಿಳಿಗೇಡಿಗಳು (ಮುಂಬಯಿ. ೭–೨೧); ಉಷೆ ತಂದಾಳಿಕೋ, ರವಿ ಬಂದಾನಿಗೋ (ಅರಳು. ೧೩೦–೧). **ಇದಕೊ:** ವೀರಖಂಡೆಯವಿದಕೊ (ತೊರರಾ. ೬–೧೨–೨೪). **ಇದಕೋ:** ಭೀಮನೆಂಬ ಮಾನವನ ತಮ್ಮನರ್ಜುನನೀಗ ಬಂದನಿದಕೋ [ಪಾಠಾಂ. ಇದೆಕೋ] (ಜೈಮಿಭಾ. ೧೬–೨೫). **ಇದಿಕೊ:** ಖಂಡವಿದಿ [ಪಾಠಾಂ. ವಿದೆ] ಕೊ ರಕ್ತವಿದಿಕೊ (ಗೋಹಾಡು. ೯೩). **ಇದಿಗೊ:** ಇದಿಗೊ ನೋಡು ಆತನು ಇಲ್ಲೇ ಇದ್ದಾನೆ (ರೂಢಿ). **ಇದುಕೊ** (೬). **ಇದುಗೊ** (೬). **ಇದೆಕೊ:** ಪೂರ್ವ ವರಬಲಮಿದೆಕೊ ಮನದಿಷ್ಟಮಪ್ಪುದಿದನೆಸಗೆ (ವೆಂಕಾರಾ. ೨–೫–೧೫). **ಇದೆಕೋ:** ಅರ್ಜುನನೀಗ ಬಂದನಿದೆಕೋ [ಪಾಠಾಂ. ಇದಕೋ] (ಜೈಮಿಭಾ. ೧೬–೨೫). **ಇದೆಗೋ:** ಇದೆಗೋ ದೇವರೆ, ಏಳನೆಯ ಮಗುವು (ಕವಿಸೋ. ೫೩).

[ಇದ್ $_2$ + ಕೊಳ್ $_1$]

**ಇದೆಕೋ** 'ಇದೆಕೊಳ್' ನೋ.

**ಇದೆಗೋ** 'ಇದೆಕೊಳ್' ನೋ.

**ಇದೇ** 'ಇದ್ $_2$' ನೋ.

**ಇದೊ** 'ಇದ್ $_2$' ನೋ.

**ಇದೋ** 'ಇದ್ $_2$' ನೋ.

**ಇದ್ದ** 'ಇರ್ $_1$' ಪರಾ.

**ಇದ್ದಡ** (ನಾ). ಎರಡೂ ದಂಡೆ, —ತಡಿ: ಅಸಮಸಾಹಸಿ ನಗುತ ನೋಡಿದ ಶರಧಿಯಿದ್ದಡವ (ಕೌಶಿರಾ. ೧೬–೫).

[ಇರ್ $_2$ (< ಎರಡು) + ದಡ]

**ಇದ್ದಲಿ** 'ಇರ್ದಲ್' ನೋ.

**ಇದ್ದಲಿಗ** (ನಾ). ಇದ್ದಲು ಸುಡುವವನು; ಇದ್ದಲನ್ನು ತಯಾರಿಸುವವನು: "ಇದ್ದಲುಸುಡುವವನು, ಇದ್ದಲಿಗ" (Charcoal burner. ಇಂಕನ). [ಇದ್ದಲು (< ಇರ್ದಲ್) + –ಇಗ]

**ಇದ್ದಲಿಯೊಲೆ** 'ಇದ್ದಲೊಲೆ' ನೋ.

**ಇದ್ದಲು** 'ಇರ್ದಲ್' ನೋ.

**ಇದ್ದಲೊಲೆ**, ಇದ್ದಲಿಯೊಲೆ (ನಾ). ಇದ್ದಲನ್ನು ಉರಿಸಿ, ಅದರ ಕಾವಿನಿಂದ ಅಡಿಗೆ ಮುಂತಾದುವನ್ನು ಮಾಡುವ ಒಲೆ: ಇದ್ದಲೊಲೆಯ ಮೇಲೆ ಹಾಲು ಕುದಿಯುತ್ತಿದೆ, ತೆಗೆದು ಕೆಳಗಿಡು (ರೂಢಿ). **ಇದ್ದಲಿಯೊಲೆ:** ಇದ್ದಲಿಯೊಲೆಯ ಮೇಲೆ ಒಂದು ಚಹದ ಪಾತೇಲಿ ವಿರಾಜಿಸುತ್ತಿತ್ತು (ಅಪನಾ. ೨೬). [ಇದ್ದಲು (< ಇರ್ದಲ್) + ಒಲೆ $_1$]

**ಇದ್ದಳಿ** (ನಾ). ಗಜಶಿಕ್ಷೆಯಲ್ಲಿ ಒಂದು ಬಗೆ: ಮಿಗೆ ಬಿದಿಪಾಳಿದ್ದಳಿ ಕಾಳಗದೇಱಿತವೆಂಬ ನಾಲ್ಕು ಶಿಕ್ಷೆಗಳಂ ಮತ್ತಗಜಾಳಿಗೆ ಭೈ ಭೈರವ ಮೊಗೆಯಲ್ ಶಿಕ್ಷಿಸುತಮಿರ್ದರ್ (ಶ್ರೀಪುವಿ. ೧೭–೧೭). [?]

**ಇದ್ದಾನೆ** 'ಇರ್ $_1$' ಪರಾ.

**ಇದ್ದಾರೆ** 'ಇರ್ $_1$' ಪರಾ.

**ಇದ್ದಾಳೆ** 'ಇರ್ $_1$' ಪರಾ.

**ಇದ್ದಿರಿಕೆ** (ನಾ). ಇದ್ದ ಸ್ಥಿತಿ: ಬಿದ್ದುದೆತ್ತಿದ ಕೈಯ ಚಾಮರವಿದ್ದಿರಿಕೆಯಲಿ ಧರೆಗೆ (ನಿಭಾಗ. ೧೦–೮೭–೨೦).

[ಇದ್ದ (< ಇರ್ $_1$) + ಇರಿಕೆ $_1$]

**ಇದ್ದಿಲ್** 'ಇರ್ದಲ್' ನೋ.

**ಇದ್ದಿಲು** 'ಇರ್ದಲ್' ನೋ.

**ಇದ್ದು** 'ಇರ್ $_1$' ಪರಾ.

**ಇದ್ದುಗ** 'ಇರ್ದುಗ' ನೋ.

**ಇದ್ದುಗೆ** 'ಇರ್ದುಗ' ನೋ.

**ಇದ್ದೆಸೆ** 'ಇರ್ದೆಸೆ' ನೋ.

**ಇದ್ದೊರೆ** 'ಇದ್ದೊಱೆ' ನೋ.

**ಇದ್ದೊಱೆ**, ಇದ್ದೊರೆ (ನಾ). ಎರಡು ತೊರೆಗಳು, —ಹೊಳೆಗಳು: ಇದ್ದೊಱೆಯೆಂಬ [ಪಾಠಾಂ. ಇದ್ದೊಡಲೆಂಬ] ಪೆದ್ದೊಱೆ ತುಂಬಿಬರೆ (ಬಸವು. ೩೨–೩೨). **ಇದ್ದೊರೆ:** ಇದ್ದೆಸೆಯಿನಿದ್ದೊರೆಗಳೆದ್ದು ಮುಂಬೆರೆಯೆ (ಗಿಳಿವಿಂ. ೫೮–೩೭). [ಇರ್ $_2$ (< ಎರಡು) + ತೊಱೆ $_2$]

**ಇದ್ಧ** (ಗು). ವೃದ್ಧಿಹೊಂದಿದ; ಪ್ರಖರವಾದ; ಸ್ಫುಟವಾದ: ಪೋಪೋ ವಾದಿ ಪೋಗೆಂದುಲಿವುದು ಶುಭಕೀರ್ತೀದ್ಧ ಕೀರ್ತಿಪ್ರಘೋಷಂ (ಎಕ. II, ೧೪೦–೧೪೮; 1145). [ಸಂ.]

**ಇದ್ಧಾನು** 'ಇರ್ $_1$' ಪರಾ.

**ಇದ್ಧಾನೆ** 'ಇರ್ $_1$' ಪರಾ.

**ಇದ್ಧೀ** 'ಇರ್ $_1$' ಪರಾ.

**ಇಧಾನೆ** 'ಇರ್ $_1$' ಪರಾ.

**ಇಧಾರೆ** 'ಇರ್ $_1$' ಪರಾ.

**ಇಧಾಳೆ** 'ಇರ್ $_1$' ಪರಾ.

**ಇಧೆ** 'ಇರ್ $_1$' ಪರಾ.

**ಇಧೇವೆ** 'ಇರ್ $_1$' ಪರಾ.

**ಇಧ್ಮ** (ನಾ). ೧. ಸೌದೆ; ಕಟ್ಟಿಗೆ; ಉರುವಲು. ೨. ಶಾಸ್ತ್ರೋಕ್ತವಾದ ಕ್ರಮದಲ್ಲಿ ಹವ್ಯಕವ್ಯಗಳಲ್ಲಿ ಔಪಾಸನಾಗ್ನಿಯಲ್ಲಿ ಹಾಕುವ ಸಮಿತ್ತು, —ಸಮಿತ್ತುಗಳ ಕಟ್ಟು: ಚಂದನ ಕರ್ಪೂರ ಮೃಣಾಳನಾಳಮೆ ಪೊದಟ್ಟಿದ್ಧ್ಮಂಗಳಿಂತಾಗೆ ತಾನಿನಿತುಂ ಕಾಮನ ಬೇಳ್ವೆಯೆಂದು ಸುಗಿದಳ್ ತನ್ವಂಗಿ (ಪಂಪಭಾ. ೪–೫೯). [ಸಂ. ಇಧ್ಮನ್]

**ಇನ್**, ಇಂ, ಇನು, ಇನ್ನು, ಇನ್ನೂ (ಅ). ೧. ಇಲ್ಲಿಂದ ಮುಂದೆ; ಇಷ್ಟರ ಮೇಲೆ; ಇದುವರೆಗೆ: ಈ ಬಳಿಕ ಮುನ್ನೆಗಟ್ಟ ವೇಳೆವಡಿಚರು ಮಿನ್ನಪ್ಪೊರುಂ . . . ನಿನ್ನನ್ನರೆ (ಇಆ. XX, ೭೦–೧೧; 9ನೆಯ ಶತ); ನಿನ್ನಂ ಪರಿಭವಕ್ಕೆ ತಂದು ನಿನ್ನ ಯಶಮಂ ಕಿಡಿಸಿದೆವಿನ್ ಕೊಂಡೊಡೇವಂದಪುದು (ಪಂಪಭಾ. ೭–೩೨ ವ); ಇನ್ನಿರೆನೆಂದು . . . ಸಿನ್ಧುರದ ಶಿರಾಗ್ರಮಂ ಬಿರಿಯೆ ಪೊಯಿದಂ ಕದನೈಕಸೂದ್ರಕಂ (ಎಕ. III, ಮಂಡ್ಯ. ೪೧–೧೮; 950); ಪುರಕ್ಕಿನ್ ನಡೆತಂದು ದೇವ ಪಡೆ ಪೌರಜನಂಗಳ ಕಣ್ಗೆ ಪರ್ವಮಂ (ಕಾದಂಪೂ. ೪೪೭). ೨. ಬೇರೆ; ಇದಲ್ಲದೆ; ಮತ್ತೆ: ನರರಾರ್ ನಿನ್ನನ್ನರಿನ್ನೀ ಭುವನಭವನದೊಳ್ ಗಂಗಚಕ್ರಾಯುಧಾಂಕಾ (ಕಾವ್ಯಸಾ. ೨೧೫ ಶೂದ್ರಕ); ಇನ್ ಪೆಱತಾವುದು ಸಂಸಾರಸಾರಸರ್ವಸ್ವಫಲಂ (ಪಂಪಭಾ. ೧–೫೫).

**ಇಂ :** **೧.** ನಿಮ್ಮಾ ನಾಲ್ವರೊಳೊರ್ವರುಮಿಂ ಮಿಡುಕಲ್ವೇಡ (ಪಂಪಭಾ. ೩-೨೬) ; ಆದೊಡೇನಾಯ್ತು ಪೋದುದಿಂ ಪೋಗಲಿ ಪೆಱಗನೆಣಿಸಲಾಗದು ಮುಂದಣ್ಗೆ (ಧರ್ಮಾಮೃ. ೨-೪೯). **೨.** ಸಿಂಗರಂ ರೂಪು ಹರೆಯಂ ಜಾಣ್ಮೆ ನಿನಗಲ್ಲದಿಂ [ಪಾಠಾಂ. ದೇಂ]ಗಿಳಿಗಳೊಳಗೆತ್ತಲಾನುಂಟೆ (ಚಿಬಪು. ೪೬-೭). **ಇನು :** **೨.** ಅವ ಕಣ್ಣಾಲಿ ನೋಡಿದಡೆಯಿನು ಬೇವುದೈ ತ್ರೈಪುರವು (ಬಸವು. ೧೮-೮೮). **ಇನ್ನು :** **೧.** ಕೌರವೇಶ್ವರ ನೀಂ ಸಂಧಿಗೊಡಂಬಡಿನ್ನು ಕೊಳನಂ ಪೊಕ್ಕಿರ್ಪುದೇಂ ತಕ್ಕುದೇ (ಗದಾಯು. ೭-೯) ; ಇನ್ನೋದುವಿರೇ ಬಾದೇನೋ ನೀಮುಮಿನ್ನಿನ್ನೋದಿದಿರೋದಿದಿರಿಮಿನ್ನು ಸುಮ್ಮನಿರೆಂದಳ್ (ಸುಕುಮಾ. ೨-೩೭); ಇನ್ನೊರೆವೆನಾಲಿಸಾದೊಡೆ ಪಾರ್ಥ (ಜೈಮಿಭಾ. ೨೮-೧೪) ; ಇನ್ನು ನೀನು ಹೊರಡಬಹುದು (ರೂಢಿ). **೨.** ಪ್ರಿಯಮಿತ್ರಾನುಜರೞಿವಂ ವಿಧಾತ್ರ ನೀಂ ಕಾಣಿಸಿಯಿನ್ನೇನಂ ಕಾಣಿಸಲಿರ್ದಪೆ (ಗದಾಯು. ೫-೨೯) ; ನೀನುೞಿದಿನ್ನಾರುಮನಾನೇನೊಂದಂ ಕೇಳ್ದೊಡದುವೆ ನಿನಗಪಮಾನಂ (ವಸ್ತವಂ. ೧೧೦) ; ಇಂಥ ಕೆಲಸ ಇನ್ನು ಯಾರು ಮಾಡಬಲ್ಲರು ? (ರೂಢಿ). **ಇನ್ನೂ :** ಅತನ ಬರವನ್ನು ಇನ್ನೂ ನಿರೀಕ್ಷಿಸುತ್ತಿದ್ದೇವೆ (ರೂಢಿ).

**ಇನ್ನಪ್ಪರ್, ಇನ್ನಪ್ಪೊರ್** = ಇನ್ನು ಮುಂದೆ ಹುಟ್ಟುವವರು : ಸುರ ಗಂಧರ್ವ ಸುಪರ್ಣ ಕಿನ್ನರ ಖಗ ಸ್ತ್ರೀಸದ್ಮದೊಳ್ ಮುನ್ನಮಾದೊರೊಳಿನ್ನಪ್ಪರೊಳೀಗಳುಳ್ಳವರೊಳಿಲ್ಲೀ ಹಾವವೀ ಭಾವಂ (ಸುಕುಮಾ. ೫-೫೮); ಯಾದವರಾದವರೊಳ್ ಮುನ್ನಾದವರಿನ್ನಪ್ಪರಿವನ ಪಡಿಗಿಲ್ಲೆನೆ ಶೌರ್ಯೋದಯದಿಂ ಪಸರಿಸಿದಂ ಮೇದಿನಿಯಂ ವೀರ ವಿಷ್ಣುವರ್ಧನದೇವಂ (ಎಕ. VI, ಕಡೂರು. ೯೬-೧೭ ; 1141) ; ಮುನ್ನೆಗಟ್ದ ವೇಳೆವಡಿಚರುಮಿನ್ನಪ್ಪೊರುಮಿಾಗಡುಳ್ಳೊರುಂ ಬಗೆವೊಡವರ್ ನಿನ್ನನ್ನರೆ ನಿನ್ನನ್ನರೆ ನಿನ್ನನ್ನರೆ ನಿನಗೆ ನೀನೆ ದೊರೆಯಯ್ ಶಂಭೂ (ಇಅ. XX, ೭೦-೧೧ ; 900). **ಇನ್ನಷ್ಟು** = ಮತ್ತೆ ಸ್ವಲ್ಪ ; ಇದಕ್ಕಿಂತ ಸ್ವಲ್ಪ ಹೆಚ್ಚಿಗೆ : ದಯಮಾಡಿ ಇನ್ನಷ್ಟು ಔಷಧ ಕೊಟ್ಟರೆ ನಿನಗೆ ಪುಣ್ಯ ಬಂದೀತು (ಮುಂಬಯಿ. ೩-೫೯). **ಇನ್ನಾರ್, ಇನ್ನಾರು** = ಬೇರೆ ಯಾರು ; ಮತ್ತೆ ಯಾರು : ಗೆಲಲಿನ್ನಾರಾರ್ಪರ್ (ಶಮುದ. ೨೪೫ ಪ್ರಯೋ) ; ಇಂತಹ ಹೊತ್ತಿನಲ್ಲಿ ದೇವರಲ್ಲದೆ ಇನ್ನಾರು ಗತಿ (ರೂಢಿ). **ಇನ್ನಾವ** = ಬೇರೆ ಯಾವ ; ಮತ್ತೆ ಯಾವ : ಕಂದನಾಡುವ ಬಾಲಲೀಲೆಯಂ ನೋಡಿ . . . ಪಂಚೇಂದ್ರಿಯ ಪ್ರೀತಿಯಂ ಪಡೆವರಿನ್ನಾವ ಕೃತರೋ (ಜೈಮಿಭಾ. ೧೮-೨೦). **ಇನ್ನಿನಿತು** = ಇನ್ನು ಸ್ವಲ್ಪ ; ಮತ್ತಷ್ಟು : ಆದರ ದಂಡೆಯ ದೇವಾಲಯವೂ ಇನ್ನಿನಿತು ಬೆಳ್ಳಗಾಗಿ ಶೋಭಿಸಿತು (ಚಂದುಟ. ೧೭). **ಇನ್ನುಂ** = **೧.** ಈವರೆಗೂ ; ಈಗಲೂ : ಮಹಾಬಳಂ ಇನ್ನುಂ ನಿಜಭೋಗಕಾಂಕ್ಷೆಯನಣಂ ಬಿಸುಡಲ್ ಬಗೆದಾರನ್ (ಆದಿಪು. ೨-೩೪) ; ಅವರ್ ಪೋದೊಡವಂದಿರ ಕಬ್ಬಮಿನ್ನುಮಿರ್ಪುವು (ಗದಾಯು. ೧-೪೭) ; ಕನ್ನಮಯ್ಯಂಬರಮಾಗಂ ಸುಕವಿ ಬಗೆವೊಡಿನ್ನುಂ ಮುನ್ನುಂ (ಪಂಚತಂ. ೫-೮). **೨.** ಪ್ರಕೃತಸ್ಥಿತಿಯಲ್ಲಿ; ಸದ್ಯ : ನೀನಿನ್ನುಂ ಕೂಸನ್ಸೈ (ವಡ್ಡಾರಾ. ೧೧೩-೫). **೩.** ಈಗಲೂ; ಮುಂದೆಯೂ : ಪೊನ್ನುಳ್ಳವನೆ ಕುಲೀನಂ . . . ಅದಱಿಂದಿನ್ನುಂ ಪೊನ್ನನೆ ಪಡೆವುದು (ಶಮುದ. ೬೯ ಪ್ರಯೋ). **೪.** ಇದಕ್ಕಿಂತಲೂ ಹೆಚ್ಚು: ಡೊಳ್ಳುಹೊಟ್ಟೆಗೆ ಸಾಲದಿನ್ನುಂ ಕೊಂಡು ಬಾ ಎನುತ (ಬಸವು. ೫೯-೧೧). **ಇನ್ನುಮುಂದೆ** = ಇಲ್ಲಿಂದ ಮುಂದೆ; ಈ ಕಾಲದಿಂದ ಮುಂದಕ್ಕೆ ; ಈ ಹೊತ್ತಿನಿಂದಾಚೆಗೆ: ನೀವು ಇನ್ನು ಮುಂದೆ ಹೆಚ್ಚು ಶ್ರಮ ತಕ್ಕೊಂಡು ಕಲಿಯಬೇಕಾಗುವುದು (ಮುಂಬಯಿ. ೪-೧). **ಇನ್ನುಮೇಲೆ** = ಇನ್ನು ಮುಂದೆ: ಇನ್ನುಮೇಲೆ ಈ ಮಾತನ್ನು ನಾನು ಮರೆಯುವುದಿಲ್ಲ (ಮುಂಬಯಿ. ೩-೫೪). **ಇನ್ನುವರೆ, ಇನ್ನೂವರೆಗೆ** = ಈವರೆಗೆ; ಇಲ್ಲಿಯತನಕ : ಎನ್ನ ಕಣ್ಣಾಲಿ ಹುಟ್ಟಿದುದು ಮೊದಲಿನ್ನುವರೆ [ಪಾಠಾಂ. ಲಿನ್ನೆವರ]ರುಚಿಯೆಂದುಮಾಗದು (ಬಸವು. ೧೮-೭೧) ; ಇನ್ನೂವರೆಗೆ ಅಕ್ಕನ ಭೆಟ್ಟಿಯಾಗಿದ್ದಿಲ್ಲ (ಸ್ಮೃತಿಚಿ. ೨೫೭). **ಇನ್ನೆಲ್ಲಿ** = ಬೇರೆ ಯಾವ ಕಡೆ ; ಮತ್ತೆ ಯಾವ ಸ್ಥಳದಲ್ಲಿ: ನಿನ್ನಂಥವರನ್ನು ಇನ್ನೆಲ್ಲಿ ಕಾಣೋಣ (ರೂಢಿ). **ಇನ್ನೇನ್, ಇನ್ನೇನು** = ಮತ್ತೆ ಏನು : ಎನಗೆ ತಾನಿನ್ನೇನ ಬಗೆವನೊ (ಬಸವು. ೩೧-೧೫) ; ವರಗುರು ಉಪದೇಶ ನೆರವಾಯಿತೆನಗೀಗ ಇನ್ನೇನಿನ್ನೇನು (ಪುರಂದ. ಸು. ೧೦೫ ಪ). **ಇನ್ನೊಂದು** = ಬೇರೊಂದು : ಇದಕೆ ನಿಮ್ಮಂ ಮನ್ನಿಸಿದೆನಿನ್ನೊಂದನವಧರಿಸು (ಬಸವು. ೨೫-೩೩). **ಇನ್ನೊಬ್ಬ, ಇನ್ನೊರ್ವ** = ಬೇರೆ ಒಬ್ಬ : ನನಗೆ ಇನ್ನೊಬ್ಬನ ಸಹಾಯ ಬೇಕಾಗಿದೆ (ರೂಢಿ) ; ಅವನ ತನುಜರ್ ಬೃಹಸ್ಪತಿಯುಮಿನ್ನೊರ್ವ ಸಂವರ್ತನೆಂಬವಂ (ಜೈಮಿಭಾ. ೫-೨೭). **ಇನ್ನೊಮ್ಮೆ** = ಮತ್ತೊಂದು ಸಲ ; ಮತ್ತೆ ; ತಿರುಗಿ : ತಾವು ದಯವಿಟ್ಟು ಇನ್ನೊಮ್ಮೆ ಬನ್ನಿ (ರೂಢಿ).

[**ದೇ.** ‖ **ತಮಿ.** ಇನಿ, ಇನ್ನವ್, ಇನ್ನುವ್ ; **ಮಲ.** ಇನಿ ; **ತುಳು.** ನಣ, ನಾಣ ; **ಕೊಡ.** ಇನ್ನಿ, ಇನ್ನೂ ; **ತೆಲು.** ಇಕ, ಇಂಕ ; **ಕೋಲಾ.** ಇನಿ = ಮತ್ತು]

ಇನ್$_1$ 'ಇನ್ನಂ' ನೋ.

**ಇನ್$_2$ (ನಾ).** **೧.** ನೇಸರು ; ಸೂರ್ಯ : ಇನನಂ ನೋಡಿ . . . ಆಹ್ವಾನಂಗೆಯ್ಕಲೊಡಂ ಧರೆಗಿೞಿದನಂದು ದಶಶತಕಿರಣಂ (ಪಂಪಭಾ. ೧-೯೧). **೨.** ಒಡೆಯ ; ಪ್ರಭು ; ರಾಜ : "ಆಳ್ದನಲ್ಲಿಯುಂ ಇನನೆಂಬುದು" (ಹಲಾಯು. ೧೩೭-೩೮). **೩.** ಗಂಡ ; ಪತಿ : ಎನಗಿನ ಸೋಮಭೂಪನರಿಭೂಪಜಯಾಂಗನೆಯೊಳ್ ನಿರಂತರಂ ಮನವೆಳಸಿರ್ಪನಾಕೆಯಿರಲಾತನ ಸನ್ನಿಧಿಯಲ್ಲಿ ನಿಲ್ವುದಿಂತೆನಗಿದು ಧರ್ಮಮಲ್ಲದುದಱಿಂ ದೆಸೆಯಂತದೊಳಿರ್ಪೆನೆಂದು . . . ಯಶೋಂಗನೆ (ಶಾಪಮಂ. ೧೪೫-೮೧೬ ; 1172 ; ಎಇ. XV, ೩೧೫). **೪.** ಹಣವಂತ ; ಧನಿಕ : "ಆಢ್ಯಃ, ಸಮೃದ್ಧಃ, ಧನವಾನ್, ಇನಃ . . . ಈಶ್ವರಃ — ಈ ೭ ಧನವಂತಂ" (ಹಲಾಯು. ೫೯-೨೦೧). **೫.** ಪರಮಾತ್ಮ. **೬.** ತಂದೆ. **೭.** [ಛಂದ] ಜಗಣ (U-U) ಎಂಬ ಅಕ್ಷರಗಣ ; ಸೂರ್ಯಗಣ : ಇನಾನಿಲ ದಿನೇಶ ಮಾರುತ ಪಯೋಲಗಂಗಳೆ ಬೆಡಂಗನಾಳ್ದ ನಿಲೆ (ಛಂದೋಂಬು. ೨-೧೧೪) ; "ಪರಮಾತ್ಮಾ ಭಾನು ಭೂಕಾಂತರಿನಾಹ್ವಯಂ" (ನಾನಾರ. ೧೨೧) ; "ನೃಪ ರವಿ ತಾತಾತ್ಮಂ ಯಿಾ ನಾಲ್ವೆಸರೀ ತೆಜನಿನ ಶಬ್ದ" (ನಾನಾಕಂ. ೧೪೨). [**ಸಂ.**]

**ಇನಂ** 'ಇನ್ನಂ' ನೋ.

**ಇನಕರ (ನಾ).** = ಇನಕಿರಣ : ಸೋಜಿಗಮೇನೆಸಗಿಹುದೋ ಇನಕರ ಸಂಸ್ಪರ್ಶಂ (ಮಾಂದಳಿ. ೪೨). [ಇನ್$_2$ + ಕರ$_4$]

**ಇನಕಿರಣ (ನಾ).** ಸೂರ್ಯನ ಕಿರಣ ; ಸೂರ್ಯರಶ್ಮಿ : ಪಗಲಂತಿರ್ದಚ್ಚವೆಳ್ದಿಂಗಳೊಳಿನಕಿರಣದ್ಯೋತಿಗೆತ್ತಾಗಳಾಗಳ್ ಮುಗಿದಿರ್ದಂಭೋಜಮೋರೊಂದಲರ್ದುದು (ಆದಿಪು. ೧೨-೯). [ಇನ್$_2$ + ಕಿರಣ]

**ಇನಕುಮಾರ (ನಾ).** **೧.** ಸೂರ್ಯನ ಮಗ. **೨.** ಯಮ. **೩.** ಶನಿ. **೪.** ಸುಗ್ರೀವ. **೫.** ಕರ್ಣ. [ಇನ್$_2$ + ಕುಮಾರ]

**ಇನಕುಲ (ನಾ).** **೧.** ಸೂರ್ಯವಂಶ. **೨.** ಸೂರ್ಯವಂಶದಲ್ಲಿ ಹುಟ್ಟಿದವನು : ಧರ್ಮದಾಲಾನಕ್ಕೆ ಕಟ್ಟುಗೊಂಡಿನಕುಲನ ಧೈರ್ಯದೈರಾವತಂ ಹೋರಾಡುತಿರ್ಪುದಂ ಕಾಣುತೆ (ಶ್ರೀರಾಮಾ. ೧೬೯-೪೮೩).

[ಇನ್$_2$ + ಕುಲ]

**ಇನಜ (ನಾ).** **೧.** ಯಮ : ಪುಟ್ಟಿದನನಿವಾರ್ಯಸುತೇಜನೆನಿಪನಿನಜನ ತನಯಂ (ಪಂಪಭಾ. ೧-೧೨೧). **೨.** ಶನಿ : ಜನ್ಮನಾಥನಂ . . . ಇನಜಂ ನೋೞ್ಪಂದು . . . ದೀಕ್ಷಾಮಾತ್ರಮಂ ಪೊರ್ದುಗುಂ (ಜಾತಕ. ೧೬-೪). **೩.** ಕರ್ಣ : ಇನಜನೆ ದಾನಿ ದಾನಿಗಳೊಳ್ (ಎಕ. VII, ಶಿಕಾರಿ. ೧೫೧-೨೯ ; 1047). **೪.** ಸುಗ್ರೀವ. [**ಸಂ.**]

**ಇನಜನ್ಮ** (ನಾ). ಸೂರ್ಯಪುತ್ರ; ಶನಿ: ಇನಜನ್ಮಂ ಬಲಹೀನ ಜನ್ಮಪತಿಯಂ ನೋೞ್ಪಂದು . . . ದೀಕ್ಷಾಮಾತ್ರಮಂ ಪೊರ್ದುಗುಂ (ಜಾತತಿ. ೧೬–೪). [ಸಂ. ಇನಜನ್ಮನ್ (ಇನ್$_2$ + ಜನ್ಮನ್)]

**ಇನಜಾತ** (ನಾ). **೧.** ಯಮ: "ಯಮಂ . . . ಇನಜಾತಂ ಪಿತೃಪ್ರಿಯಂ ಹರಿ ದಂಡಪಾಣಿ ಕೀನಾಶಂ ಕೃತಾಂತನಕ್ಕುಂ" (ಮಂಗರಾ. ೧೫–೧೦). **೨.** ಸುಗ್ರೀವ. **೩.** ಕರ್ಣ. **೪.** ಶನಿ. [ಸಂ.]

**ಇನತನುಜ** (ನಾ). = ಇನಕುಮಾರ (ದಕ. ೬). [ಇನ್$_2$ + ತನುಜ]

**ಇನತನೂಜ** (ನಾ). ಸೂರ್ಯನ ಮಗ; ಕರ್ಣ: ಇನತನೂಜನ ಕೂಡೆ ಮೈದುನತನದ ಸರಸವನೆಸಗಿ (ಕುವ್ಯಾಉ. ೧೦–೨). [ಇನ್$_2$ + ತನೂಜ]

**ಇನಮಂಡಲ** (ನಾ). ಸೂರ್ಯಬಿಂಬ, —ಮಂಡಲ: ನೆರೆದೆೞ್ತರ್ಪಿನ ಮಂಡಲಂಗಳಿವು ಬೇೞ್ಕೆಂಬಂತೆ ಬಂದರ್ (ಪುಷ್ಪಪು. ೧೩–೬೨). [ಇನ್$_2$ + ಮಂಡಲ]

**ಇನರಶ್ಮಿ** (ನಾ). = ಇನಕಿರಣ: ಶಿರಮನಿನರಶ್ಮಿ ಪದತಳಸರೋಜಮಂ ತಪನತಪ್ತಶಿಖರಾಗ್ನಿ ತನೂದರಮಂ ಕ್ಷುಧಾನಳಂ ಸುಡೆ ಕರಿಂ[ಕು]ವರಿದಗಮನಘವಿಘಾತಂ ಪೋಲ್ತಂ (ಸುಕುಮಾ. ೪–೧೪). [ಇನ್$_2$ + ರಶ್ಮಿ]

**ಇನರಿಪು** (ನಾ). ಸೂರ್ಯನ ಶತ್ರು; ರಾಹು: "ಇನರಿಪು ವಿಧುಂತುದಂ . . . ಎನೆ ರಾಹು" (ಮಂಗರಾ. ೧೨–೭). [ಇನ್$_2$ + ರಿಪು]

**ಇನವಾರ** (ನಾ). ಭಾನುವಾರ; ಆದಿತ್ಯವಾರ: ಇನವಾರದಂದು ಬಸುರಿಯ ಕೊನೆಯಂ ಕೊಂಡೆಡದೆ ಬಳಸಿ ಕೆಸಱೊಳದಂ ಪೂೞ್ದನಿತಱೊಳಾ ನರವುಲಿಯೆ ನಿತನಿತು ಮವಿರ್ದಡೆಯನಱಿಯದಂತಿರೆ ಪೋಕುಂ (ಲೋಕೋಪ. ೯–೧೩೦). [ಇನ್$_2$ + ವಾರ$_3$]

**ಇನವಿರಹಿಣಿ** (ನಾ). **೧.** ಸೂರ್ಯನನ್ನು ಅಗಲಿದವಳು. **೨.** ಗಂಡನನ್ನು ಅಗಲಿರುವವಳು. **೧, ೨:** ಇನವಿರಹಿಣಿ ಪದ್ಮಿನಿ ಕಾಂತನಗಲ್ಕೆಯನಾಂತರಸುಗೆ ಮುಳಿವ ನಿಶಾಕಾಂತನ ಕರಕೆ ಬೆರ್ಚಿ ಮುಚ್ಚಿದಳೆನೆ ಮೊಗಮಂ ಮುಗಿವ ಪಂಕಜಂ ಕರಮೆಸೆಗುಂ (ರಾಜಶೇ. ೧೧–೧೦). [ಇನ್$_2$ + ವಿರಹಿಣಿ]

**ಇನಸುತ** (ನಾ). ಸೂರ್ಯನಮಗ; ಯಮ. 'ಇನಸುತಾಂತಕ' ಪರಾ. [ಇನ್$_2$ + ಸುತ]

**ಇನಸುತಾಂತಕ** (ನಾ). ಯಮನಿಗೆ ಯಮನಾದವನು; ಶಿವ: ಇನಸುತಾಂತಕನೊಲಿದು ಮಗುವೆ ನಿನ್ನಿಷ್ಟಾರ್ಥದನುವ ಬೇಡೆನೆ (ಪ್ರೌಢರಾ. ೨೧–೨೮). [ಇನಸುತ + ಅಂತಕ]

**ಇನಸೂನು** (ನಾ). = ಇನತನೂಜ: ಆರ್ಪಿನಸೂನು ಮತ್ತೆ ಪುಟ್ಟಿದ ನೆನಿಪಂತುಟಾಯ್ತೆಱೆಗನುನ್ನತಿಯಂ ಪೊಗೞಲ್ ಸಮರ್ಥರಾರ್ (ಎಇ. XVI, ೬೦–೧೭; 1081). [ಇನ್$_2$ + ಸೂನು]

**ಇನಸ್ಪರ್ಧಿ** (ನಾ). ಸೂರ್ಯನ ಜತೆಯಲ್ಲಿ ಸ್ಪರ್ಧೆ ಹೂಡಿದವನು, —ಹೋರಾಡುವವನು: ಇನಸ್ಪರ್ಧಿ ಆಂಜನೇಯಂ ಬೇಗ ಬೇಗನೆ ಸಾಗುತಿರೆ (ಶ್ರೀರಾಮಾ. ೪೧೬–೩೭೧). [ಸಂ. ಇನಸ್ಪರ್ಧಿನ್]

**ಇನಾಂ, ಇನಾಮ, ಇನಾಮು** (ನಾ). ಪಾರಿತೋಷಿಕ; ಬಹುಮಾನ; ಬಕ್ಷೀಸು; ಮೆಚ್ಚಿಗೆಯಿಂದ ಕೊಟ್ಟ ವಸ್ತು; ಮಾನ್ಯವಾಗಿ ಕೊಟ್ಟ ಜಮೀನು: ಅಪರಾಧಿಗಳನ್ನು ಪತ್ತೆಮಾಡಿದವರಿಗೆ ಇನಾಂ ಕೊಟ್ಟು (ನಾಪೋಲೀ. ೧೧೮). **ಇನಾಮ**: 'ಇನಾಮದಾರ' ಪರಾ. **ಇನಾಮು**: ಜಮೀನನ್ನು ಯಿನಾಮಾಗಿ ನಡಶಿಕೊಂಡು ಬರ್‍ರುವದ್ದು (ಮೈಅರಿ. ೧೯೪೨, ೩೯–೪; 1813); ಭೂಮಿಯಿನಾಮಾಗಿ ನಡಶಿಕೊಂಡು ಬರ್‍ರುವದು (ಮೈಅರಿ. ೧೯೩೦, ೪೨–೧೫; 1822); ವಂದು ಸಾವಿರ ವರಹಗಳನ್ನು ಇನಾಮು ಆಗಿ ಕೊಡುತ್ತೇವೆ (ರಾಜೇಂದ್ರ. ೩೮); ಅವನು ತನ್ನ ಸಹಾಯಕರಿಗೆ . . . ಹತ್ತು ಕರುಗಳನ್ನು ಇನಾಮಾಗಿ ಕೊಡುತ್ತೇನೆಂದು ಸಾರಿದನು (ಬಂಗಾಹೆ. ೫೯). [← **ಮರಾ.** ಇನಾವ್; **ಅರ.** ಇನ್‌ಆವ್]

**ಇನಾಂಗ್ರಾಮ** (ನಾ). ಬಹುಮಾನವಾಗಿ ಕೊಟ್ಟ ಗ್ರಾಮ; ಜಹಗೀರಿಯಾಗಿ ಬಿಟ್ಟ ಗ್ರಾಮ: ಈಚೆಗೆ ಸರ್ಕಾರದವರು ಇನಾಂಗ್ರಾಮಗಳ ಜೋಡಿ ವಗೈರೆ ಕ್ರಮವನ್ನು ರದ್ದುಮಾಡಿದ್ದಾರೆ (ರೂಢಿ). [ಇನಾಂ + ಗ್ರಾಮ]

**ಇನಾಂಜಮೀನು** (ನಾ). ಜಹಗೀರಿಯ ಜಮೀನು; ಇನಾಮತಿ ಜಮೀನು: ಪೂರಾ ಕಂದಾಯ ಬೀಳುವ ಇನಾಂಜಮೀನನ್ನು ಪಡೆದಿರಬೇಕು (ಗ್ರಾಮಾಕ. ೧೨). [ಇನಾಂ + ಜಮೀನು]

**ಇನಾಂತಿ, ಇನಾಮತಿ, ಇನಾಮತ್ತಿ** (ನಾ). ಕಂದಾಯವಿಲ್ಲದಂತೆ ಮಾನ್ಯವಾಗಿ ಕೊಟ್ಟ ಕೊಡುಗೆ, —ಕೊಡುಗೆಯ ಜಮೀನು; ಜೋಡಿ: ತೋಟ ಇನಾಂತೀಗೆ ಪಂಗನಾಮ ಹಾಕಬೇಕಾಗುತ್ತೆ ಇನ್ನು (ನಮ್ಮಳ್ಳಿ. ೯). **ಇನಾಮತಿ**: ಕೆಲವು ಇನಾಮತಿಗಳು ಬಿಡುಗಡೆಯಾದುವು (ಮಹಾವಂ. II, ೨೪); ಅದರ ಸಮೇತ ಬಿಟ್ಟೂರಿನ ಇನಾಮತಿ (ಝಾರಾಣಿ. ೯೯). **ಇನಾಮತ್ತಿ**: ಯಿನಾಮತ್ತಿಯಲ್ಲು ಜಾರಿಯಿರುವುದು (ಮೈಅರಿ. ೧೯೩೪, ೫೨–೯; 1812). [← **ಮರಾ. ಅರ.** ಇನಾಮತೀ]

**ಇನಾಂತಿಜಮೀನು** (ನಾ). ಕಂದಾಯವಿಲ್ಲದ ಅಥವಾ ಕಡಮೆ ಕಂದಾಯದ ಏರ್ಪಾಡಿನಿಂದ ಕೊಡುವ ಮಾನ್ಯದ ಜಮೀನು; ಕೊಡುಗೆಯ ಭೂಮಿ: ಇನಾಂತಿ ಜಮೀನು ಕುಲವಾಡಿಕೆಗಾಗಿ ಬಿಟ್ಟಿತ್ತು (ಹುಟ್ಟಹ. ೬೬). [ಇನಾಂತಿ + ಜಮೀನು]

**ಇನಾಂದಾರ, ಇನಾಮದಾರ, ಇನಾಮುದಾರ** (ನಾ). ಇನಾಮನ್ನು ಪಡೆದವನು; ಜಮೀನು, ಗ್ರಾಮ ಮುಂತಾದುವನ್ನು ಮಾನ್ಯವಾಗಿ ಪಡೆದವನು; ಜೋಡೀದಾರ: ಅವರು ಸರ್ಕಾರದವರಿಗೆ ಮತ್ತು ಇನಾಂದಾರರಿಗೆ ಸೌದೆ ಸೊಪ್ಪು ಒದಗಿಸುವುದು . . . ಇವುಗಳಲ್ಲೇ ಜೀವವನ್ನು ತೇದು ಬಂದಿದ್ದರು (ಹುಟ್ಟಹ. ೬೬). **ಇನಾಮದಾರ**: ನಮ್ಮ ತಂದೆಯವರು ಅಲ್ಲಿಯ ಇನಾಮದಾರರು (ಅನ್ನ. ೧೯೦); ಊರೊಳಗಿನ ಇನಾಮದಾರರು ಸರಕಾರಕ್ಕೆ ಜೂಡಿಯನ್ನು ಸಹ ಕೊಡುವದಿಲ್ಲ (ಮೋಹಿನೀ. ೧೧). **ಇನಾಮುದಾರ**: ಇನಾಮುದಾರರು ಬಾರಾಬಲೂತಿ ಜನರು ತಮಗೆ ಸರಕಾರದಿಂದ ಜಾರಿಯಾಗಿರುವ ಭೂಮಿ ಅಲ್ಲದೆ ಜಾಸ್ತಿ ಭೂಮಿ ಸ್ಥಳದವರ ಬಂದಕಟ್ಟನಿಂದ ದಾಖಲು ಮಾಡಿಕೊಂಡು ಅನುಭವಿಸುತ್ತ ಇರುವಂಥಾದ್ದು (ಮಹಾವಂ. II, ೬೦). [← **ಮರಾ. ಪಾರ.** ಇನಾವ್‌ದಾರ್]

**ಇನಾಕ್ಯುಲೇಷನ್** (ನಾ). ಪ್ಲೇಗು, ಕಾಲರಾ ಮುಂತಾದ ಸಾಂಕ್ರಾಮಿಕ ರೋಗಗಳು ಹರಡುತ್ತಿರುವ ಕಡೆ ಜನರು ಅಥವಾ ದನಕರು ಮುಂತಾದ ಪ್ರಾಣಿಗಳಿಗೆ ಅಂತಹ ರೋಗಗಳು ಅಂಟದಂತೆ ತಡೆಗಟ್ಟಲು ಶರೀರದೊಳಕ್ಕೆ ನಳಿಕೆಯ ಸೂಜಿಯ ಮೂಲಕ ರೋಗ ನಿರೋಧಕ ಔಷಧವನ್ನು ಸೇರಿಸುವಿಕೆ: ಇನಾಕ್ಯುಲೇಷನ್ ಮಾಡಿಸಿಕೊಂಡರೆ ಬದುಕುತ್ತಾರೆ, ಸಾಯುವುದಿಲ್ಲ (ಹುಟ್ಟಹ. ೭೪); ಮುನ್ನೆಚ್ಚರಿಕೆಯ ಇನಾಕ್ಯುಲೇಷನ್‌ಗಳನ್ನು ತೆಗೆದುಕೊಂಡವರು ರೋಗಗ್ರಸ್ತರಾದಾಗ ಬದುಕಿಕೊಳ್ಳುವಂತೆ (ಮಹಾಗ. ೯೪). [← **ಇಂ.** Inoculation]

**ಇನಾನ್ವಯ** (ನಾ). ಸೂರ್ಯವಂಶ: ತರುಣಿ ಭವದೀಯ ಪುಣ್ಯೋದರದೊಳ್ ಪುಟ್ಟುಗುಮಿನಾನ್ವಯಾಂಬುಧಿಚಂದ್ರಂ (ರಾಜಶೇ. ೪–೫). [ಇನ್$_2$ + ಅನ್ವಯ]

**ಇನಾಮ** 'ಇನಾಂ' ನೋ.

**ಇನಾಮತಿ** 'ಇನಾಂತಿ' ನೋ.

**ಇನಾಮತ್ತಿ** 'ಇನಾಂತಿ' ನೋ.
**ಇನಾಮದಾರ** 'ಇನಾಂದಾರ' ನೋ.
**ಇನಾಮು** 'ಇನಾಂ' ನೋ.
**ಇನಾಮುದಾರ** 'ಇನಾಂದಾರ' ನೋ.
**ಇನಾಯತ** 'ಇನಾಯತು' ನೋ.
**ಇನಾಯತನಾಮ** 'ಇನಾಯತುನಾಮೆ' ನೋ.
**ಇನಾಯತು,** ಇನಾಯತ (ನಾ). ಅನುಗ್ರಹ; ಮೆಚ್ಚಿಗೆಯ ಅಥವಾ ಔದಾರ್ಯದ ಕೊಡುಗೆ. 'ಇನಾಯತುನಾಮೆ' ಪರಾ. **ಇನಾಯತ**: ಈಗ ತಮ್ಮ ದೊಡ್ಡ ಸರಕಾರದಿಂದಾ ವಂದು ನಿಶಾನಿ ಇನಾಯತ ಆದರೆ ನಮಗೆ ಬಹುಮಾನ ಉಂಟಾದೀತು (ರಾಜೇಂದ್ರ. ೧೦೬).
[← **ಮರಾ. ಅರ.** ಇನಾಯತ್]
**ಇನಾಯತುನಾಮೆ,** ಇನಾಯತನಾಮ (ನಾ). ಶಿಫಾರಸು ಪತ್ರ; ಸನ್ನದು (?). **ಇನಾಯತನಾಮ**: ತಂಮ ಇನಾಯತನಾಮ ಬಹಳ ವಳ್ಳೇ ಹೊತ್ತಿನಲ್ಲಿ ಬಂದು ಮುಟ್ಟಿತು (ರಾಜೇಂದ್ರ. ೧೦೪).
[← **ಮರಾ. ಅರ.** ಇನಾಯತ್‌ನಾಮಾ]
**ಇನಿ** 'ಇನಿದು' ನೋ.
**ಇನಿಕೆಯ್** (ಕ್ರಿ). ರುಚಿಯಾಗು; ಸವಿಯಾಗು: ಪಸಿವು ದೊರೆಕೊಳ್ಳು ಮುಣಿಸುಗಳಿನಿಕೆಯ್ಗುಂ (ಪಂಪಭಾ. ೫-೪೬).
[ಇನಿ (< ಇನಿದು) + ಕೆಯ್$_1$]
**ಇನಿಗಂಪು** (ನಾ). ಮಧುರವಾದ ವಾಸನೆ; ಸುವಾಸನೆ: ಇನಿಗಂಪು ಸೋಲಮಂ ಘಳಿಲನೆ ಮಾಡೆ ಭೂಭುಜನ ಚಿತ್ತಮನೀಗಳೆ ಸೂಜಿಗೊಳ್ಪಿಂ (ಧರ್ಮಾಮೃ. ೬-೧೭೭); ಮಧುದೂತಿಯ ತಳ್ತಿನಿಗಂಪು ಚೂತವಲ್ಲರಿಯ ಲರಚ್ಚಗಂಪು ಬಗೆಗೊಂಡುದು (ರಾಜಶೇ. ೧೦-೧೯).
[ಇನಿ (< ಇನಿದು) + ಕಂಪು]
**ಇನಿಗಡಲ್** (ನಾ). ಕ್ಷೀರಸಾಗರ; ಹಾಲ್ಗಡಲು (ಪ್ರಭಣ್ಣ).
[ಇನಿ (< ಇನಿದು) + ಕಡಲ್$_2$]
**ಇನಿಗಣ್** (ನಾ). ಸೊಗಸಾದ ಕಣ್ಣು; ಮನೋಹರವಾದ ಕಣ್ಣು: ನಲ್ಲನಿನಿಗಂಗಳಿಗೆ ಜೇನಿಳಿವ ಕಂಗಳಿಂದಾಲಿಂಗನಂಗೆಯ್ದು (ಶ್ರೀರಾಮಾ. ೮೭-೨೪೦).
[ಇನಿ (< ಇನಿದು) + ಕಣ್]
**ಇನಿಗದಿರ್** (ನಾ). ಇಂಪಾದ ಕಿರಣ; ಹಿತವಾದ ಕಿರಣ; ಅಮೃತಮಯವಾದ ಕಿರಣ. 'ಇನಿಗದಿರ್ವಟ್ಟು' ಪರಾ.
[ಇನಿ (< ಇನಿದು) + ಕದಿರ್$_2$]
**ಇನಿಗದಿರ್ವಟ್ಟು** (ನಾ). ಚಂದ್ರಬಿಂಬ, —ಮಂಡಲ: ಇನಿಗದಿರ್ವಟ್ಟು ಚಂಡಕರಮಂಡಲವಾದುದು . . . ಕಾಮತಾಪಪರಿತಪ್ತೆಗೆ (ಉದ್ಭಟ. ೬-೫೯).
[ಇನಿಗದಿರ್ + ಬಟ್ಟು]
**ಇನಿಗನ್ನಡ** (ನಾ). ಇಂಪಾದ ಕನ್ನಡ; ಮಧುರವಾದ ಕನ್ನಡ: ಬೆಳುನುಡಿ ದೇಶಿ ಗ್ರಾಮ್ಯಮಿನಿಗನ್ನಡಮಾ ಸೊಬಗುಂ ವಿಶಾಲಮುಂ . . . ಮೊದಲಾದ ಸಾಸಿರದ ಮೇಲೆರಳ್ನೂಱುಮಿಸಾದಿಯಾದವಂ (ಕವಿಜಿ. ೪-೪).
[ಇನಿ (< ಇನಿದು) + ಕನ್ನಡ]
**ಇನಿಗಬ್ಬ** (ನಾ). ಇಂಪಾದ ಕಾವ್ಯ; ಮಧುರವಾದ ಕಾವ್ಯ: ಪಂಪಾನಗರೀಶ್ವರನೀ ಪೆಂಪಮರ್ದಿನಿಗಬ್ಬಕಾಣ್ಮಂ (ಉದ್ಭಟ. ೧-೧೫); ಹಾಸ್ಯಮಿನಿಗಬ್ಬಮೊಳ್ಪುಮಿಲ್ಲದ ಸೂಳೆವನೆಯೆ ಬಜೀವನೆಯು (ಉದ್ಭಟ. ೧೦-೯೩); ತಿಳಿಜೊನ್ನಮೆನಲೆಸೆದುದು . . . ನೀನೊಲಿದೊರೆವಿನಿಗಬ್ಬವರಸ (ತ್ರಿಭುತಿ. ೫-೨).
[ಇನಿ (< ಇನಿದು) + ಕಬ್ಬ]
**ಇನಿಗಲೆ** (ನಾ). ಮಧುರವಾದ ವಿದ್ಯೆ; ರತಿಶಾಸ್ತ್ರ; ಕಾಮಶಾಸ್ತ್ರ: ಪೆಣ್ಗಳಲ್ಲದೆ ಮೋಹನದಿನಿಗಲೆಗಳ ಬಲ್ಲರುಂಟೇ (ಕುಂರಾಸಾಂ. ೩೩-೮೧); ಓಪರ ಲೀಲೆಯನಱಿದಿನಿಗಲೆಯ ಕೀಲನಱಿದು ಕೂಡೆ ಕಾಮಸುಖಾಬ್ಧಿಯೊಳೋಲಾಡಬಹುದೆನುತಿಹರು (ಭರತೇ. ೪೭-೨೭); ಇನಿಗಲೆಯಱಿವಳ ಇಂದುಟವೆತ್ತಳ . . . ತನುವ ತಳ್ಕೈಸುವುದೆಂದೊ (ಶತಸಾಂ. ೨೮-೪೭).
[ಇನಿ (< ಇನಿದು) + ಕಲೆ$_2$]
**ಇನಿಗಾಲ** (ನಾ). ಇಷ್ಟು ಕಾಲ: ಸಂಸ್ಕೃತಿಯೇನಪಾರಮೊ! ಎನಿವಿರಿದೊ! ಇನಿಗಾಲಂ ನಮೆದೊಡಂ ಸಮೆಯದೆ (ರಾಮಾಶ್ವ. ೭೪-೨೯).
[< ಇನಿತು + ಕಾಲ$_1$]
**ಇನಿಗೆನ್ನ** (ನಾ). ಸೊಗಸಾದ ಕೆಂಪುಬಣ್ಣ; "ಸವಿಯಾದ ಕೆಂಬಣ್ಣ" (ಗಿಳಿವಿಂ. ಕೋಶ): ಮುಬ್ಬಿನಲ್ಲಿ ಮರಸಿ ಯಕ್ಷನೊಲೊಬ್ಬ ಚೆನ್ನಂ ಹೆಗಲಲ್ಲಿ ಕೊಡವೆತ್ತಿ ಬಂದನಾ ಕೊಡದಿಂ ಸವಿಯಲೆನಗಿತ್ತನೇಂ ದ್ರಾಕ್ಷೆಯಿನಿಗೆನ್ನಂ (ಗಿಳಿವಿಂ. ೧೨೧-೬೧).
[ಇನಿ (< ಇನಿದು) + ಕೆನ್ನ ?]
**ಇನಿಗೆಯ್ತ** (ನಾ). ೧. ಹಿತವಾದ ಕೆಲಸ. ೨. ಸುಖದ ಕೆಲಸ; ರತಿಕ್ರೀಡೆ; ಕಾಮಕ್ರೀಡೆ: ಇನಿಗೆಯ್ತದೆಸೆಕದೆಟ್ಟರದೆ ತನಗೊಲ್ದ ಚದುರೆಯ ತಾನೊಲ್ದು ನೆರೆದೊಡೆ (ಚಿಕವಿ. ೬-೧೫೭).
[ಇನಿ (< ಇನಿದು) + ಗೆಯ್ತ (< ಕೆಯ್ತ)]
**ಇನಿಗೊಳ** (ನಾ). ಅಮೃತಸರೋವರ: ನನೆಗಣೆಯನ ಮೆಯ್ವೆಳಗೆಂಬಿನಿಗೊಳದೋಲ್ ಮೊದಲೆ ಮಿಳಿರ್ದು (ಕಬ್ಬಿಕಾ. ೩೩೧).
[ಇನಿ (< ಇನಿದು) + ಕೊಳ$_2$]
**ಇನಿಗೋಲ್** (ನಾ). ಸವಿಯಾದ ಕೋಲು; ಕಬ್ಬು: ಇನಿಗೋಲ್ಗಳ ವಟ್ಟು ಜೇನಿಯ್ ಝುಮ್ಮನೊಸರ್ದು ಪರಿಕಾಲ್ಗೊಂಡುದೆಂಬಿನಂ ಪಾಡೆ ತುಂಬುರು ನಾರದರು (ಚೀರಮ. ೧೦-೩೮); ಕಂಗೊಳಿಸುವಿನಿಗೋಲ ರುಚಿಯು ಬೋಡನಿಗುಂಟೆ (ಕವಿಚ. III, ೧೫೭. ನಿಜಲಿಂಗಶತಕ).
[ಇನಿ (< ಇನಿದು) + ಕೋಲ್$_1$]
**ಇನಿಜೇನುತುಪ್ಪ** (ನಾ). ಸಿಹಿಯಾದ, ಸೊಗಸಾದ ಜೇನುತುಪ್ಪ: ಬಿದಿರಕ್ಕಿ ಯಿನಿಜೇನುತುಪ್ಪ ಕರ್ಜೂರ ದ್ರಾಕ್ಷೆ ಬದರಿ ಮುಂತಾದ ಸತ್ಫಲವ ಉದುರಿದ ಕಳಿವಣ್ಣ ಪೊಟ್ಟಣಂಗಳ ತಂದು ಇದಿರಿಕ್ಕಿದರು (ಮೋಹತ. ೧೯-೭೩).
[ಇನಿ (< ಇನಿದು) + ಜೇನುತುಪ್ಪ]
**ಇನಿತು** 'ಇನಿತ್ತು' ನೋ.
**ಇನಿತ್ತು,** ಇನಿತು, ಇನೆತ್ತು (ನಾ). ೧. ಪರಿಮಾಣಸೂಚಕವಾದ ಶಬ್ದ; ಈ ಅಳತೆ; ಇಷ್ಟು: ಮೂಱುಂ ಮಣ್ಣುಂ ಇನಿತ್ತುಂ ಎಱೆಯಪ್ಪ (ಎಕ. III, ತಿರುಮ. ೧೧೫-೩; 900). ೨. ಈ ಸಂಖ್ಯೆಯ ಪರಿಮಿತಿ: ಉದಗ್ರರಥಂಗಳಿನಿತ್ತಿನಿತ್ತಿವೆಂದೊದವಿದ ರಾಗದಿಂದೆ ಗಣಿಯಿಪ್ಪನದಾವಂ (ವರ್ಧಪು. ೨-೨೮). **ಇನಿತು**: ೧. "ಅನಿತಿನಿತುಯೆನಿತೆನಲ್ ತಾಂ ಘನತೆಯೊಳಿಂತಿವು ಪ್ರಮಾಣಸೂಚಕಮುಕ್ಕುಂ" (ಕವಿಕಂ. ೨೧೬); ಇನಿತುಂ ರಾಜಾ(ಜ)ಶ್ರಾವಿತಂ ಮಹಾಜನಮುಂ ನಕ(ಗ)ರಶ್ರಾವಿತಂ (ಇಆ. VIII, ೨೮೭-೫೮; 732); ತನಗಿನಿತಱ ಬೇವಸಮೇಂ (ಕವಿರಾ. ೧-೧೨); ಇನಿತಱಲುಮಿನಿತು ಮಱುಕಮುಮಿನಿತು ಮನಃಕ್ಷತಮುಮಾವನಿಂದಾದುದು (ಕಾವ್ಯಾವ. ೩೫೬); ಪ್ರಸಾದವನೇವೆಮಗಿನಿತಾದೊಡಂ ಕೊಡಲೊಲ್ಲದೀವೂರು (ಬಸವು. ೫೮-೨೦); ಶರಪಾತವಿನಿತಿಲ್ಲದಡೆ ಹೊಳ್ಳಿಸಬಹುದೆ ನೃಪಥನವ (ಕುವ್ಯಾದ್ರೋ. ೩-೪೯). ೨.'ಇನಿತನೆಯಂ' ಪರಾ. ೩. ಸ್ವಲ್ಪಮಾತ್ರ; ಕೊಂಚ: ಅವಗುಣಮಿನಿತಾದೊಡಮಾ ಕವಿತಾಬಂಧಮನಶೇಷಮುಂ ದೂಷಿಸುಗುಂ (ಕವಿರಾ. ೧-೪೩); ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮುಂ ಬಗೆಗೊಳೆ ಪೇೞಲಾಱರಿನಿತುಂ ಸಲೆ ಮುನ್ನಿನ ಪೆಂಪನಾಳ್ದ ಕಬ್ಬಿಗರ್ (ಕಬ್ಬಿಕಾ. ೧೫); ತನಯುನಕಟಾ ಕಡು ಬಳಲಿದನು ಜನನಿ ಸಾಗಿಸಿ ಸಲಹಬೇಡಾ ಮನದೊಳಿನಿತಾದಡೆ ಕರುಣವಿಲ್ಲವ್ವ (ಬಸವು. ೨೪-೬೧); ನಾ ಮಾಡಿದ ತಪ್ಪೆಂಬುದಿನಿತಿಲ್ಲ (ಮೋಹತ. ೯-೪).

೪. ಈ ಅವಸ್ಥೆ; ಈ ಸ್ಥಿತಿ; ಈ ದಶೆ: ಬಂಧುಮತ್ಸರದೊಳೆ ವೈರಮಂ ಪಡೆದು ಭೀಮನನಿನ್ನಿನಿತರ್ಕೆ ತಂದ ನೀಂ ಮರುಳನೊ . . . ತಾಂ ಮರುಳನೊ (ಗದಾಯು. ೪–೪೪). ೫. ಇಷ್ಟೊಂದು; ಇಷ್ಟು ಹೆಚ್ಚು: ಇನಿತೇಂ ಪೇಱಬ್ಬೆ ಚಿಂತಾಂತರಂ (ಪಂಪಭಾ. ೯–೮೬); ನೀನಿನಿತು ಚಿಂತಿಸಲೇಕೆ ಕಾಳೆಗಕೆನ್ನ ಕಳುಹೆಂದ (ಕುವ್ಯಾದ್ರೋ. ೪–೩೫); ಮೂಱುದಿವಸದೊಳಗಿನಿತು ಕಾರ್ಯವ ಮಾಡಿ ವೀರನಾದನು ಜಯಾಂಗನೆಗೆ (ಕಂನವಿ. ೩–೫೯). **ಇನೆತ್ತು**: ೧. ನಾಲ್ಕುಬರಿಸ ಪರಿಯಾರಮು ಐದಾನೆ ವರಿಸಪದುವಾರಮುಂ ಮೇಣ್ಕೆಯುಸತ್ತಿಗಮು ಇನೆತ್ತುಮಾ[ನ್] ಪ್ರಸಾದಂಗೆಯ್ದಾರ್ (ಸೌಇಇ. IX–i, ೫೦–೧೭; 9ನೆಯ ಶತ). ೨. ಇನೆತ್ತು ಮೂರ್ ನೆರೆ ಸಾಸನಮಾಗೆ . . . ಇಱ್ದು ಇತ್ತ ಮಣ್ಣು (ಎಕ. IV, ಗುಂಡ್ಲುಪೇ. ೮೮–೬; 750).

**ಇನಿತನೆಯ** = ಈ ಸಂಖ್ಯಾಕ್ರಮದ; ಇಷ್ಟನೆಯ (ಕ). **ಇನಿತನೆಯಂ**= ಇಷ್ಟನೆಯವನು: ಅನಿತನೆಯಂ, ಇನಿತನೆಯಂ, ಎನಿತನೆಯಂ . . . ನೂಱನೆಯಂ (ಶಮುದ. ೨೦೭ ಪ್ರಯೋ). **ಇನಿತಿನಿತು** (ದ್ವಿರುಕ್ತಿ): ಇನಿತಿನಿತು ಭಯವಿನಿತು ಲಜ್ಜೆಯದಿನಿತಿನಿತು ಮುದವಿನಿತು (ಬಸಪು. ೨–೩೪). **ಇನಿತುದಿವಸಂ** = ಈ ಸಂಖ್ಯಾಪರಿಮಿತಿಯಷ್ಟು ದಿನ; ಇಷ್ಟು ದಿನ: ಇನಿತುದಿವಸಂ . . . ಈ ಪೊಱಲಂ ಕಂಡೆಮಿಲ್ಲ (ವಡ್ಡಾರಾ. ೮೯–೨೨). **ಇನಿತಾನುಂ** = ಸ್ವಲ್ಪವಾದರೂ; ಇಷ್ಟಾದರೂ: ತರಂಗಿಣೀ ತೀರಮುನಿನಿತಾನುಮೆಯ್ದಿವರ್ಪಲ್ಲಿ (ಜಗವಿ. ೮–೯ ವ). **ಇನಿತುವರಂ** = ಇಷ್ಟರವರೆಗೂ; ಇಷ್ಟುಮಟ್ಟಿಗೆ: ಇನಿತುವರಂ ವ್ಯಾಮೋಹಂ ನಿನಗೇಕಾದಪುದು (ಆದಿಪು. ೫-೨); ಇನಿತುವರಂ ಪರಾಭವಮಿಳೇಶನಿನಿನ್ನೆನಗಾಡುದು (ಪಂಪಭಾ. ೧೩–೪೪). **ಇನಿತೊಂದು** = ೧. ಇಷ್ಟೊಂದು; ಇಷ್ಟು ಹೆಚ್ಚಿಗೆ; ಇಂಥದೊಂದು: ಅನಿತುಸುಖದನಿತುಭೋಗದ ಮನುಜಯುಗಂ ನೋಡೆ ನೋಡೆ ತಕ್ಷಣದೊಳ್ ತಾನಿನಿತೊಂದು ದೆಸೆಯನೆಯ್ದಿದುದು (ಆದಿಪು. ೫–೨೬); ಎನಗಿನಿತೊಂದವಸ್ಥೆ ವಿಧಿಯೋಗದಿನಾದುದು (ಪಂಪಭಾ. ೧೩–೧೦೫); ಇನಿತೊಂದಾಗ್ರಹಮಂ . . . ಮಾಳ್ಪನಿವಂ ನೀತಿವಿದಂ (ರಾಜಶೇ. ೧೩–೨೭). ೨. ಒಂದು ಸ್ವಲ್ಪ ಮಾತ್ರ; ಇಷ್ಟು ಮಾತ್ರ: ಬನದೊಳಗೆ ಪೋಗಿ ಪೊಸಪೂವಿನ ಗೊಂಚಲನಕ್ಕ ನಿನಗೆ ತಂದಪ್ಪೆಂ ನೀನಿನಿತೊಂದು ಬೇಗಮಂ ನಿನ್ನಿನಿಯನ ಪಕ್ಕದೊಳಿರೆಂದು ಸಖಿ ತೊಲಗುವುದುಂ (ಕಾವ್ಯಾವ. ೬೨೨); ತನುವಿನೊಳು ದುರ್ಗಂಧವೆಂಬುದನಿನಿತುವಿಲ್ಲದಹಂಗೆ (ಬಸಪು. ೪೬–೬೦). **ಇನಿಬರ್, ಇನಿಬರು, ಇನಿವರ್**= ಇಷ್ಟು ಮಂದಿ: ಇನಿಬರ ಸನ್ಮಥ ಬರದೊಂ ಶ್ರೀಧರಮ್ಮನ್ (ಎಕ. III, ಮಂಡ್ಯ. ೧೪–೧೫; 907); ನೆರೆದಿನಿಬರುಮಿಾ ಲಕ್ಷ್ಯಮನಿರದಕ್ಕಟ ಸರದೆ ತೆಗೆಯಲಾರ್ತರುಮಿಲ್ಲಾ (ಪಂಪಭಾ. ೨–೫೨); ಇನಿಬರಿಗೆ ಪತಿ ದೇವಕೀನಂದನನು (ಕುವ್ಯಾಸ. ೫–೩೫); ಯಿನ್ತಿನಿವರವುಭಯಾನ್ಮತದಿಂ ಮಂಗಳೂರ ಸಂಕಣ್ಣಸೇನಬೋವನ ಬರಹ (ಎಇ. XX, ೮–೬೦; 1556); ನೋಡುನೋಡಿನಿವರಂ ಕೊಂದುಯಿವ ಗೆದ್ದನೊರ್ವನೆ (ತುರಂಗ. ೫೧–೨೨). **ಇನಿಬರುಂ** = ಇಷ್ಟು ಮಂದಿಯೂ; ಎಲ್ಲರೂ: ನಡೆ ನಡೆಯಿನಿಬರುಂ ನೀವು (ಬಸಪು. ೫೮–೪೨).

[ದೇ. ॥ ತಮಿ. ಇತ್ತನೈ, ಇತ್ತುನೈ; ಮಲ. ಇತ್ತಿರಿ; ತುಳು. ಈತ್; ತೆಲು. ಇಂತ; ಕೊಲಾ. ಇತ್ತೆ]

**ಇನಿದು, ಇನಿ, ಇನಿಯ** (ಗು). ೧. ಸಿಹಿಯಾದ; ಪ್ರಿಯವಾದ; ಇಂಪಾದ; ಮನೋಹರವಾದ. (ನಾ). ೨. ಇಂಪು; ಸಿಹಿ; ಮಾಧುರ್ಯ; ಸವಿ; ರುಚಿ: "ಮಾಧುರ್ಯದೊಳಿನಿದು" (ಕರ್ಣಾನಿ. ೨೩); ಸವಿವೊಡೆ ಮಧುರರಸಂಬೊಲ್ ಕಿವಿಗಿನಿಪಾಗಿರ್ಪ ವಚನವಿರಚನೆ ಮಧುರಂ (ಕವಿರಾ. ೨–೬೦); ಕಿವಿಗಿನಿದುಂ ನೃಪಂಗೆ ಹಿತಮುಂ ನುಡಿಯೆಲ್ಲಿಯುಮಿಲ್ಲ ಕೇಳ್ (ಪಂಪಭಾ. ೭–೪೦); ಬಾಱೆಪಣ್ಗಿನಿದಪ್ಪುದೆಂತು ಸಹಜಂ (ಧರ್ಮಾಮೃ. ೪–೪೦); ಇನಿದುಂಬಂ ಕಯ್ಪೆಯನೊಂದಿನಿಸಾನುಂ ಬಯಸುವಂತೆ (ಸಮಪ. ೫–೪೭); ರಮಣೀಮಣಿಯಮೃತಾಧರದಿನಿದಿಗೆ ಸಮನಪ್ಪೆನೆಂದು ಚಿಂತಿಸುತ ಅಮೃತಾಬ್ಧಿಯೊಳೆಳವೆಱೆಯಾಳುತ್ತೇಳುತ ಭ್ರಮಿಸುತ್ತಿಹುದು ನಿಚ್ಚನಿಚ್ಚ (ಶ್ರೀಪಾಲ. ೩–೫೯); ಖಂಡಶರ್ಕರೆಯಿನಿದಿಗಿನಿದುಮಾಗಿ (ಚಬಪು. ೧–೩೫). ೩. ಅಮೃತ; ಸುಧೆ: "ಅಮರ್ದು, ಸೊದೆ, ಇನಿದು, ಉಣ್ಣದರಬೀಯ–ಈ ೪ ಅಮೃತಂ" (ಕಶಸಾ. ೨–೧೮); "ಇನಿದು ಸೊದೆಯಮರ್ದುವೆನುತಂದನುನಯದಿಂದಿರದೆಯುಣ್ಣದರಬೀಯಮೆನಲ್ಕೆ . . . ಅಮೃತಾಖ್ಯಂ" (ಕವಿಕಂ. ೩೧). **ಇನಿ**: ೨. ಜೇನಿನಿ[ನಿ]ಯನು ಜಱೆದು ಮಧುರ ವಚೋನುರಾಗದ ಗಿಳಿಗಳನು ಸನ್ಮಾನಿಪವು ಸಹಕಾರದಲಿ ತನಿವಣ್ಣ ಭಾರದಲಿ (ಉತ್ತರಾ. ೧೧–೨೮). **ಇನಿಯ**: ೧. ಇನಿಯ ಕವಿತೆ ಪಂಪನ ಕವಿತೇ (ಪಂಪಭಾ. ೧೪–೫೮); ನಮ್ಮೊಲುಮೆಯನಾಡು! ನಮ್ಮಿನಿಯನಾಡು (ಹೊಂಗಳು. ೧೫–೯).

**ಇನಿಯಂ**=ಪ್ರಿಯನಾದವನು; ಗಂಡ; ಪತಿ: "ಕಾದಲಂ, ನಲ್ಲಂ, ಇನಿಯಂ, ಓಪಂ, ಮನದನ್ನಂ – ಈ ೫ ಪ್ರಿಯಂಗೆ ಪೆಸರ್" (ಕಶಸಾ. ೧೯–೩೮೯); ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ (ಆದಿಪು. ೪–೪೯); ಇನಿಯನೆ ಬೆಲ್ಲದಿಂದಿನಿಯಂ (ಕಾವ್ಯಾವ. ೫೨); ಇನಿಯನಾಡಿದ ನುಡಿಗೆ ಮಾನಿನಿ ಕನಲಿ ನುಡಿದಳು (ನಳಚ. ೫–೯). **ಇನಿಯದು** = ಪ್ರಿಯವಾದದ್ದು; ಇಂಪಾದದ್ದು; ಸಿಹಿಯಾದದ್ದು: ಇನಿಯದೋ ನೋವಿನದೋ ಏನೊಂದುಮಿಲ್ಲ (ಅಂತಿಗೊ. ೧–೧೨). **ಇನಿಯರ್** (ಬಹುವ) = ಪ್ರಿಯರು: ತೊಡರ್ದರಿನಿಯ ಕೂಟದೊಳಿನಿಯರ್ (ಚಂದ್ರಪು. ೮–೩೯). **ಇನಿಯವಳ್, ಇನಿಯಳ್**=ಪ್ರಿಯಳು; ಹೆಂಡತಿ: ಇನಿಯವಳೊಲವಿನ ನುಡಿಗೇಳ್ದನಿತಱೊಳಲರ್ದತ್ತು . . . ಮುಕುಂದನ ಮನಂ (ವರ್ಧಪು. ೪–೧೩); ಇನಿಯವಳಂ ಮುನ್ನುರ್ಚಿದ ನನೆಗಣೆ (ವರ್ಧಪು. ೪–೧೪). "ಇನಿಯಳ್ ನಲ್ಲಳೆನಲ್ ಪ್ರಿಯೆ ತಾಂ" (ಕವಿಕಂ. ೧೬೨); ಇನಿಯಳನಱ್ತಿಯಿಂದೆ ಮೃಗಿಮಾಡಿ ಮನೋಜಸುಖಕ್ಕೆ ಸೋಲ್ತಲಂಪಿನೆ ನೆರೆಯಲ್ಕೆ (ಪಂಪಭಾ. ೧–೧೧೧); ಇನಿಯಳ ಸೋಂಕಿನಂತೆ . . . ರುದ್ರಭಟ್ಟನ ಕವಿತಾರಸಂ (ಜಗವಿ. ೧–೧೬); ಭಾಸ್ಕರಂ ತನ್ನಿನಿಯಳಾದ ಕಮಲಿನಿಯಾವವಸ್ಥೆಯೊಳಗಿರ್ಪಳೀಕ್ಷಿಸಿ ಬನ್ನಿಮೆನುತೆ (ಪದ್ಮರಾ. ೮–೬೬). **ಇನಿಯವು** = ಮಧುರವಾದುವು; ಪ್ರಿಯವಾದುವು: ಇನಿಯವು ವಿಷಯಸುಖಂ ನಂಜಿನ ಸವಿವೊಲ್ ತತ್ಕ್ಷಣಂ (ಕಾವ್ಯಾವ. ೧೦೨).

[ದೇ. ॥ ತಮಿ. ಇನ್, ಇನಿದು; ಮಲ. ಇನಿಯ]

**ಇನಿದುಗಱೆ** (ಕ್ರಿ). ಅಮೃತವನ್ನು ಸುರಿ; ಪ್ರಿಯವನ್ನುಂಟುಮಾಡು; ಹಿತವಾಗು: ದಿಟ್ಟಗಿನಿದುಗಱೆದು ಮೆಱೆಯೆ ಕೀಲಿಸಿದಂತೆ ತಳ್ತೆಮೆಮಿಡುಕದ ನೋಟಮುಂ (ರಾಜಶೇ. ೧೪–೧೦೬ ವ).

[ಇನಿ (< ಇನಿದು) + ಕಱೆ$_{1}$]

**ಇನಿದುಟಿ** (ನಾ). ಇಂಪಾದ ತುಟಿ; ಮಧುರವಾದ ಅಧರ: ಗಿಳಿ ತುಂಡಿಸದಾಲದ ಪಣ್ಣೆಳವೆಯನುಳಿಯದ ಚೆಂದಳಿರೆನೆಯಿನಿದುಟಿ ಸೊಗಯಿಸಿತಾ ನೃಪಸುತೆಗೆ (ಜಯಕಾ. ೩–೪೧).

[ಇನಿ (< ಇನಿದು) + ತುಟಿ]

**ಇನಿದೂಟ** (ನಾ). ರುಚಿಯಾದ ಊಟ: ಲಲಿತಶ್ರೀಗಂಧದನುಲೇಪ ತನುತಾಪವಿನಿದೂಟ ಕಟು ಕಾಲಕೂಟ (ರಾಘಚ. ೧೩–೨೯).

[ಇನಿದು + ಊಟ]

**ಇನಿನಲ್ಲ** (ನಾ). ಮೆಚ್ಚಿನ ನಲ್ಲ: ಜೀವನ ತತ್ತ್ವದ ದೇಸಿಯ ಸೌಂದರ್ಯವನಲೀಲೆಗೊರಲ್ದಿನಿನಲ್ಲಂ ಅವನೊ ಕಬ್ಬಿಗನಾತನೆ (ಸಂಸಪ. ೯–೬).

[ಇನಿ (< ಇನಿದು) + ನಲ್ಲ]

**ಇನಿನುಡಿ** (ನಾ). ಸವಿಯಾದ ಮಾತು; ಇಂಪಾದ ನುಡಿ: ಪೆಣ್ಣಿನಿನುಡಿಯಂ ನೆನೆದಪಳಲ್ಲಂ (ಸೌನಂದ. ೮–೩೪).
[ಇನಿ (< ಇನಿದು) + ನುಡಿ₂]

**ಇನಿಪರಿ** (ನಾ). ಈ ರೀತಿ; ಈ ಕ್ರಮ: ಇನಿಯ ಕೇಳೆಲವೊ ನಾ ಮಾಡಿದ ತಪ್ಪೆಂಬುದಿನಿತಿಲ್ಲವೆಂದಿನಂತೆನ್ನ ಸ್ತನವ ಪಿಡಿದು ಮುಂಡಾಡಿ ಮುದ್ದಿಸಲೊಲ್ಲದಿನಿಪರಿಯನು ಪೇಳು ಜೀಯ (ಮೋಹತ. ೯–೪).
[< ಇನಿತು + ಪರಿ₇]

**ಇನಿಬರ್** 'ಇನಿತ್ತು' ಪರಾ.

**ಇನಿಬರು** 'ಇನಿತ್ತು' ಪರಾ.

**ಇನಿಮಾವು** (ನಾ). ಸಿಹಿಯಾದ ಮಾವು: ಸವಿವಣ್ಣಿಲ್ಲಿನಿಮಾವು ಸರ್ವರಸದೊಳ್ ಶೃಂಗಾರವೇ ಬಲ್ಮೆ (ಸೋಮೇಶ. ೧೩); ಪಾಟಳಿ ಕಪಿತ್ಥಮಿನಿಮಾವು ಮೊದಲಾದ . . . ತರುಸಂತತಿ (ಉದ್ಭಟ. ೨–೪೫); ಆಗಸಕಡರ್ದಿನಿಮಾವು ಫಲ ಸಹ ಸುಮ್ಮಾನದಿಂದೊಪ್ಪಿಹುವು (ಕಂಸವಿ. ೨–೪೫).
[ಇನಿ (< ಇನಿದು) + ಮಾವು]

**ಇನಿಮೆ** (ನಾ). ಇಂಪು; ಸವಿ; ಮಾಧುರ್ಯ; ಹಿತ: ಆವರ ಬಯಕೆಯಂತೆ ನಾನು ಹಾಡೆರಡು ಹಾಡಿ ನನ್ನ ಕೊರಳ ಇನಿಮೆಯನ್ನು ಹರಿಯಿಸಬೇಕು (ಪಕಿ. ೨); ಕಜುಬಾಸೆ ಸಿಟ್ಟನಿಮೆಯಿರದ ಸೊಲ್ ನಾಲ್ಕುಮಂ ತೊಜೆದು ನಡೆದುದೆ ಅಜನ್ (ಕುಜಳ್. ೧–೪–೫).
[ಇನಿ (< ಇನಿದು) + –ಮೆ. / ತಮಿ. ಇನಿಮೈ; ಮಲ. ಇನಿಮ]

**ಇನಿಯ** 'ಇನಿದು' ನೋ.

**ಇನಿಯಂ** 'ಇನಿದು' ಪರಾ.

**ಇನಿಯದು** 'ಇನಿದು' ಪರಾ.

**ಇನಿಯರ್** 'ಇನಿದು' ಪರಾ.

**ಇನಿಯವಳ್** 'ಇನಿದು' ಪರಾ.

**ಇನಿಯವು** 'ಇನಿದು' ಪರಾ.

**ಇನಿಯಳ್** 'ಇನಿದು' ಪರಾ.

**ಇನಿಯಾಣ್ಮ** (ನಾ). ಪ್ರಿಯಪತಿ; ಪ್ರೀತಿಪಾತ್ರನಾದ ಗಂಡ: ಕೊಂಚಿವೆಣ್ . . . ಬಿಯದನ ಕೈಗೆ ಸಿಲುಕಿದಿನಿಯಾಣ್ಮನಂ ಕಂಡು ಚೀರ್ದಾರ್ದುದಯ್ (ಶ್ರೀರಾಮಾ. ೨–೨೬). [ಇನಿ (< ಇನಿದು) + ಆಣ್ಮ (< ಆಳ್ಮ)]

**ಇನಿರಸ** (ನಾ). ೧. ಸಿಹಿಯಾದ ರಸ; ಮಧುರ ರಸ: ಆಗರದೊಳು ರಸದಾಳಿ ತೆಂಗಾಳಿಯಿಂ ತಾಗಲೊಂದಜೊಳೊಂದು ಹಳಚಿ ಮೇಗೋಲ್ಲ ಒಡೆದಿನಿರಸದ ಪರಿಯೊಳಿಕ್ಷುಸಾಗರ ತುಂಬಿದಂತಾಯ್ತು (ಮೋಹತ. ೨–೪೮); ಗಿಳಿ ಕರ್ದುಂಕಲು ಸೋರ್ವಿನಿರಸವನು ಸವಿವೆಳೆವೆಂಗಳೊಲಿದು ಚಪ್ಪರಿದು (ಕಂಸವಿ. ೫–೭೯). ೨. ಅಮೃತ: ಇನಿರಸವನಿಟ್ಟಿಸಿದ ಬಿಡುಗಣ್ಣ ಕುಳಮೆಂಬೊಲ್ (ವೆಂಕಾರಾ. ೨–೮–೫೪).
[ಇನಿ (< ಇನಿದು) + ರಸ]

**ಇನಿರಸಧಾರೆ** (ನಾ). ಸಿಹಿಯಾದ ರಸದ ಪ್ರವಾಹ, —ಧಾರೆ: ಗಿಳಿ ಕರ್ದುಂಕಿದೊಡಿನಿರಸಧಾರೆ ಭೂಮಿಗೆ ಚಳೆಯವಾಗೊಪ್ಪಿದುವಾಗ (ಕಂಸವಿ. ೨೦–೩೧).
[ಇನಿರಸ + ಧಾರೆ]

**ಇನಿರಸವಾನ್** (ಕ್ರಿ). ಮಧುರವಾದ ರಸವನ್ನು ಹೊಂದಿರು: ಇನಿರಸವಾಂತ ಕರ್ವಿಲ್ಲಿಗೆ ಭ್ರಮರ ಸಿಂಜಿನಿಗೈದೆಡದ ಹಸ್ತದಲಿ ದನಿಗೆಯ್ಯುತಿರೆ (ಮೋಹತ. ೫–೩೬).
[ಇನಿರಸ + ಆನ್₁]

**ಇನಿವಂಡೀ** (ಕ್ರಿ). ಹೂವಿನ ಸಿಹಿಯಾದ ರಸವನ್ನು ಕೊಡು, —ಮಕರಂದವನ್ನು ನೀಡು: ನನ್ನಯ ಮೋಹದೆಜೆಯನ ಕರೆದು ಕಾಣಿಸಲು ಸರಸಿಜದಲರಿನಿವಂಡಿತ್ತು ನಿಮುಗತಿಹರುಷವ ಪುಟ್ಟಿಸಿ ಕೊಡುವೆ (ಕಂಸವಿ. ೯–೨೦೪).
[ಇನಿವಂಡು + ಈ₂]

**ಇನಿವಂಡು** (ನಾ). ಸಿಹಿಯಾದ ಮಕರಂದ, —ಹೂವಿನ ರಸ: ಬಕುಳಂಗಳಿನಿವಂಡಂ ಬರೆಪೀರ್ದು ದನಿಗುಡುವಾರಡಿಗಳ್ (ಮರಾಚ. ೫–೫೩ ವ).
[ಇನಿ (< ಇನಿದು) + ಬಂಡು]

**ಇನಿವಚನ** (ನಾ). ಮಧುರವಾದ ನುಡಿ; ಸವಿಮಾತು: ಚಿತ್ಕಾಂತ ನಿನ್ನ ಇನಿವಚನಾಮೃತವು ಸುರಸ (ನವಮೋ. ೩–೩).
[ಇನಿ (< ಇನಿದು) + ವಚನ]

**ಇನಿವಣ್**, **ಇನಿವಣ್ಣು** (ನಾ). ಸಿಹಿಯಾದ ಹಣ್ಣು: ಇನಿವಣ್ಣಳಚ್ಚ ರಸಮಂ ಮೇಣೀಂಟಿ ಸಲ್ಲೀಲೆಯಿಂದುಲಿವಂಚಚ್ಚುಕಜಾಲದಿಂದೆ (ಉದ್ಭಟ. ೯–೮). ಇನಿವಣ್ಣು: ಗಿಳಿ ನಸುಚುಂಬಿಸದಿನಿವಣ್ಣಿನಂತೆ (ಭರತ. ೩೭–೯೬).
[ಇನಿ (< ಇನಿದು) + ಪಣ್₃]

**ಇನಿವಣ್ಗೊಂಚಲ್** (ನಾ). ಸಿಹಿಯಾದ ಹಣ್ಣುಗಳ ಗೊಂಚಲು: ಇನಿವಣ್ಗೊಂಚಲಂ ಕಂಡರಗಿಳಿಯಂತೆ (ಉದ್ಭಟ. ೧೦–೧೦೬ ವ).
[ಇನಿವಣ್ + ಗೊಂಚಲ್]

**ಇನಿವಣ್ಗೊನೆ** (ನಾ). ಸಿಹಿಯಾದ ಹಣ್ಣುಗಳುಳ್ಳ ಗೊನೆ: ನೆಲಕ್ಕೊಕ್ಕವುದು ರಸವೆಂಬ ಮಾವಿನಿನಿವಣ್ಗೊನೆಗಳಂ (ಚಿಬಪು. ೪೫–೨೯).
[ಇನಿವಣ್ + ಗೊನೆ]

**ಇನಿವಣ್ಣು** 'ಇನಿವಣ್' ನೋ.

**ಇನಿವಣ್ಣುಣ್** (ಕ್ರಿ). ಸಿಹಿಯಾದ ಹಣ್ಣುಗಳನ್ನು ತಿನ್ನು: ಇನಿವಣ್ಣುಂಡು ಗಿಳಿವಿಂಡು ತೊಂಡುಗೆಡೆಯಲೆಳಸಿತು (ಚಿಬಪು. ೪೫–೧೦).
[ಇನಿವಣ್ + ಉಣ್]

**ಇನಿವರ್** 'ಇನಿತ್ತು' ಪರಾ.

**ಇನಿವಾತು** (ನಾ). = ಇನಿವಚನ: ಇನಿವಾತುಗಳಿಂದೆ ನೆರೆದಿರ್ದ ಸದ್ವಿಳಾಸಿನಿಯರ ಹೋಗೆಂದ ನಗುತೆ (ಮೋಹತ. ೧೬–೨೫); ಮನುಜೇಂದ್ರ ಚಂದ್ರ . . . ನಿನ್ನಿನಿವಾತೆರ್ದೆಗಿಂಪನಿತ್ತುದು (ತ್ರಿಭುತಿ. ೮–೨).
[ಇನಿ (< ಇನಿದು) + ಮಾತು₁]

**ಇನಿವಾಲ್** (ನಾ). ರುಚಿಯಾದ ಹಾಲು: ಅನುದಿನಮಿಂತಾರೋಗಿಪ ನಿನಿವಾಲಂ ಶೂಲಿ (ವೃಷವಿ. ೯–೯೦); ನೀರನಿನಿವಾಲೆಸಗಿದೆನ್ನ (ಗಿಳಿವಿಂ. ೫೮–೩೬).
[ಇನಿ (< ಇನಿದು) + ಪಾಲ್₁]

**ಇನಿವಿರಿದು** (ಗು). ೧. ಇಷ್ಟು ಹಿರಿದಾದ, —ದೊಡ್ಡದಾದ, —ಹೆಚ್ಚಿನ: ನಿಮ್ಮ ಪ್ರಸಾದದಿಂದೆನಗಿನಿವಿರಿದು ಶ್ರೀಯುಂ ಸಂಪತ್ತುಮಾದುದು (ವಡ್ಡಾರಾ. ೮೪–೨೩); ಇನಿವಿರಿದು ಸುಖಂ ಮುಜ್ಜನನೀಚರದಿವಿಜನಿಂದಮಾಯ್ತು (ಆದಿಪು. ೩–೫೮); ಪಾಪದ ಫಲದಿಂದಿನಿವಿರಿದು ದುಃಖಮಂ ನೆಟ್ಟನೆಯ್ದಿದ್ದೆ (ಸುಕುಮಾ. ೫–೨೮); (ಪಂರಾಮಾ. ೧೫–೫೯ ನೋ). (ನಾ). ೨. ಇಷ್ಟು ದೊಡ್ಡದು, —ಹಿರಿದು: ಅತನರಸಿನಿವಿರಿದಿಂ ಪಾದೊಡಮೇನೆನಗೆಂಬ ಮದೋದಯದೊಳ್ ದೇವ ಬಾಹುಬಲಿ ಬಲ್ದಿರ್ದಂ (ಆದಿಪು. ೧೪–೧೮).

**ಇನಿವಿರಿಯ** = ಇಷ್ಟು ಹಿರಿದಾದ, —ಹೆಚ್ಚಿನ: ಇನಿವಿರಿಯ ಸಿರಿಯುಮಿನಿವಿರಿಯ ನಿಚಿತ ಯೌವನಮುಮಿನಿವಿರಿಯ ಭೋಗಮುಂ (ವರ್ಧಪು. ೨–೩೮).
[< ಇನಿತು + ಪಿರಿದು]

**ಇನಿವಿರಿದುಂ** (ಅ). ಇಷ್ಟು ಹೆಚ್ಚಾಗಿ, —ಅತಿಶಯವಾಗಿ: ಅಂಬುಜದಳನೇತ್ರೆಯ ಮಧ್ಯಂ ಇನಿವಿರಿದುಂ ತಾಂ ಪಳಿಯುತ್ತಿರ್ಪುದತನುವಾಗಿಯೆ ಜನಮಂ ಸಮ್ಮೋಹಿಪ ಮನಸಿಜನಂ (ಜಯಕಾ. ೩–೩೨). [< ಇನಿವಿರಿದು]

**ಇನಿವಿಲ್**, ಇನಿವಿಲ್ಲು (ನಾ). ಸಿಹಿಯಾದ ಬಿಲ್ಲು; ಕಬ್ಬಿನ ಬಿಲ್ಲು: ಪುರಿದಂತಾದುವು ಪೂವಿನಂಬುವಿನಿವಿಲ್ ನಿಸ್ಸಾರಮಾದತ್ತು (ಪಂರಾಮಾ. ೧–೧೬); ಮನಸಿಜನೆಂಬಂಕದ ಬಿಲ್ಲಾಜಂ . . . ತನ್ನಿನಿವಿಲ್ಲಂ . . . ಇರಿಸಿದ ಕಾಂಚನವನರುಹವಿಷ್ಟರಮೆನೆ . . . ಮೊಗಮೊಪ್ಪಿದುದು (ಜಯಕಾ. ೩–೪೦).

**ಇನಿವಿಲ್ಲು :** ಇನಿವಿಲ್ಲಿಗ [ಪಾಠಾಂ. ವಿಲ್ಲನ] ರಲಂಬನು . . . ಪೂಡು ತ್ತೆಚ್ಚೊಡೆ (ಭಾವಚಿಂ. ೩–೮); ಅಭವನನ್ನೇಮದಿಂ ಪೂಜಿಸಲ್ ಕಾವನಿನಿವಿಲ್ಲಿಗಳಿವೆದೆಯನೇಱಿಸಿದನು (ಚಿಬಪು. ೩೫–೨೧).

[ಇನಿ (< ಇನಿದು) + ಬಿಲ್$_2$]

**ಇನಿವಿಲ್ಲ** (ನಾ). ಕಬ್ಬಿನ ಬಿಲ್ಲನ್ನುಳ್ಳವನು ; ಮನ್ಮಥ; ಪ್ರದ್ಯುಮ್ನ : ಇನಿವಿಲ್ಲನ ಚಿತ್ರಪಟವಿದು ನಿರ್ಜೀವ ದನಿದೋಜಲಱಿಯದೆಂದೆನುತ (ಮೋಹತ. ೯–೯) ; ಇಂದ್ರಲೋಕದಲ್ಲಿ ಇನಿವಿಲ್ಲನಯ್ಯನು ಕೇಳುಪೇಂದ್ರ ಮೂರ್ತಿಯಲಿಹನು (ಲಕ್ಷ್ಮಭಾ. ೨೦–೩). [ಇನಿವಿಲ್ + –ಅ$_7$]

**ಇನಿವಿಲ್ಲು** 'ಇನಿವಿಲ್' ನೋ.

**ಇನಿವೊೞ್ತು** (ನಾ). ಇಷ್ಟು ಹೊತ್ತು : ಇನಿವೊೞ್ತುಂ ತಡೆದೆಂ, ತೆತ್ತರೇಂ ಬೈವರೊ ಕಾಣೆನೆಂಬೊಂದು ತಳಮಳದಿಂ (ರಾಮಾಶ್ವ. ೭೭–೧೦).

[< ಇನಿತು + ಪೊೞ್ತು]

**ಇನಿಸಾನುಂ** 'ಇನಿಸು$_1$' ಪರಾ.

**ಇನಿಸಾನುಮಂ** 'ಇನಿಸು$_1$' ಪರಾ.

**ಇನಿಸಾನುವಂ** 'ಇನಿಸು$_1$' ಪರಾ.

**ಇನಿಸಿನಿಸು** 'ಇನಿಸು$_1$' ಪರಾ.

**ಇನಿಸು$_1$** (ನಾ).**೧.** ಇಷ್ಟು; ಈ ಪ್ರಮಾಣ : "ಇನಿಸೆಂದಿಷ್ಟಜಲ್ಲಾಯ್ತು" (ಕರ್ಣಾಸ. ೯೧); ಮನಕತದಿಂದೋರೊರ್ವರನಿನಿಸನಗಲ್ದಿರ್ದಿರಿನಿಸೆ ನಿಮಗಂ ತಮಗಂ (ಪಂಪಭಾ. ೯–೩೮); ಅನುಭವಿಸಿದ ಕೋಟಲೆಗಳ ನಿನಿಸೆಂದೆಣಿಸಲ್ಕೆ ಮೌಕ್ತಿಕಾಕ್ಷಾವಳಿಯಂ ವನಜದಳನಯನೆ ಸಮೆದಪಳೆನೆ ಸುರಿದುವು ತರದೆ ತೋರ ಕಣ್ಬನಿದುಱುಗಲ್ (ಕಾದಂಉ. ೨೯೨). **೨.** ಸ್ವಲ್ಪ; ಕೊಂಚ; ತುಸು : ಭದ್ರಮಾಗಿದ ಧರ್ಮ್ಮಮನ್ನುವಟಿಕ್ಕೆ ವನ್ನಿನಿಸಳ್ಕಲೋ ವಿದ್ರುಮಾಧರ ಶಾನ್ತಿಸೇನ ಮುನೀಶನಾಕ್ಕಿವಿ (ಎಕ. II, ೩೧–೨; 650); ಅವಗುಣದಾ ತಾಣಮದಿನಿಸೆಡೆವೆತ್ತೊಡೆ ಮಾಣದೆ ಪಿಡಿದದನೆ ಕೃತಿಗಳಂ ಕೆಡೆನುಡಿವರ್ (ಕವಿರಾ. ೧–೪೦); ಎರೆಟ್ಟಿಸೆಗಂ ಕಿಸುಱಿನಿಸಾಗದು ಮಗನೆ ನೀನೊಡಂಬಡವೇೞ್ಕುಂ (ಪಂಪಭಾ. ೯–೮೩); ದೇವರನು ವಂದಿಸಿ ಅಶೋಕೆಯ ಹೊದಜಲಿನಿಸಿರಲು (ಸಾಳ್ವಭಾ. ೬–೧೧).

**ಇನಿಸಂ** = ಇಷ್ಟುಮಾತ್ರವನ್ನು ; ಕೊಂಚಮಾತ್ರ : ತಾಯೆಂದೆ ಮುಂಕೊಂತಿ ಬಂದಿನಿಸಂ ಪ್ರಾರ್ಥಿಸಿ ಪೋದಳ್ (ಪಂಪಭಾ. ೧೨–೧೯೬) ; ವಿಭಾವರಿಯನಿನಿಸನನುಕರಿಸಿರ್ದಳ್ (ಕಾದಂಪೂ. ೪೦). **ಇನಿಸಪ್ಪೊಡಂ** = ಸ್ವಲ್ಪಮಟ್ಟಿಗಾದರೂ ; ಸ್ವಲ್ಪವಾದರೂ ; ಸ್ವಲ್ಪ ಹೊತ್ತಾದರೂ : ಇನಿಸಪ್ಪೊಡಂ ತಡೆಯದೆನ್ನ ನುಡಿದ ನುಡಿಯೇ ತನಗೆ ಮನಃಕಂಪಮಂ ಪಡೆಯೆ (ಆದಿಪು. ೩–೬೪ ವ) ; ಮನಮುಮುಖಿಳೇಂದ್ರಿಯಂಗಳುಮಿನಿಸಪ್ಪೊಡಮೆನ್ನವಲ್ಲಂ (ಕಾದಂಪೂ. ೮೭೩). **ಇನಿಸಾದೊಡಂ** = ಸ್ವಲ್ಪವಾದರೂ : ಇನಿಸಾದೊಡಂ ಕೇಳಿದೊಡೆ ಸಾಕು (ಚಿಬಪು. ೧–೩೫). **ಇನಿಸಾನುಂ** = **೧.** ಸ್ವಲ್ಪ; ಸ್ವಲ್ಪಮಟ್ಟಿಗೆ; ಕೊಂಚ : ಶಿರಃಕಂಪದೊಳಿನಿಸಾನುಮೆಱಗಿದ ಕರ್ಣಪೂರ ಪಾರಿಜಾತಸ್ತಬಕಮನೋಸರಿಸುವ ವಿಳಾಸಮುಮಂ (ಆದಿಪು. ೪–೯ ವ) ; ಎನಗಿನಿಸಾನುಂ ಏಕಾಂತಮಂ ದೇವರ್ ದಯೆಗೆಯ್ವುದೆಂದೆನಲ್ (ಪಂಚತಂ. ೩೫–೬) ; ಅನುಮತಿಯೆ ನಿಕುಂ ಪೂರ್ಣಿಮೆಯಿನಿಸಾನುಂ ಕುಂದಿ ತೋಱುತಿರೆ ಚಂದ್ರಂ (ವಸ್ತುಕೋ. ೧೬–೯). **೨.** ಸ್ವಲ್ಪ ಹೊತ್ತು ; ಕೊಂಚಕಾಲ : ಒಂದು ದಿವಸಂ ಕೈಲಾಸಪರ್ವತದ ಬನದೊಳ್ ಸುಲೋಚನೆಯಂ ಇನಿಸಾನುಮಗಲ್ದು ವಿಹಾರಿಸುವನ್ನೆಗಂ (ಚಾವುಂಪು. ೧೧೭–೧೨) ; ವಿದ್ಯಾಭ್ಯಾಸಂಗೆಯ್ದು ಬಂದಲ್ಲದೆ ನಿಮ್ಮ ಮೊಗಮಂ ನೋಡೆವೆಂದು ಪೊಡೆವಟ್ಟು ಪೋಪ ಮಾಣಿಗಳನಿನಿಸಾನುಂ ಮಾಣಿಮೆಂದು ಕಾಶ್ಯಪಿಯಿಂತೆಂದಳ್ (ಸುಕುಮಾ. ೨–೩೭ ವ). **೩.** ಸ್ವಲ್ಪ ಸ್ವಲ್ಪವಾಗಿ : ರಾಗದ್ವೇಷಂ ತನಗುಂಟಾಗೆ ತಪಂಬಟ್ಟು ನಮೆವನವನಿನಿಸಾನುಂ ರಾಗದ್ವೇಷಂ ತನ್ನಿಂ ಪೋಗೆ ತಪಂಬಟ್ಟು ನಮೆವನವನಿನಿಸಾನುಂ (ಧರ್ಮಾಮೃ. ೫–೧೧೭) ; ಅಂತು ಗಿರಿಸಾನುವನಿನಿಸಾನುಮಿೞಿವಲ್ಲಿ (ಜಗವಿ. ೧೬–೩೫ ವ). **ಇನಿಸಾನುಂಬೇಗ** = ಸ್ವಲ್ಪ ಹೊತ್ತು : ನಿರ್ವರ್ತಿತ ದೇವಾರ್ಚನನಾಗಿ . . . ಪೌಲಸ್ತ್ಯಜಿನಭವನಂಗಳೊಳಿನಿಸಾನುಂ ಬೇಗಮಿರ್ಪನ್ನೆಗಂ (ಆದಿಪು. ೨–೩೨ ವ). **ಇನಿಸಾನುಮಂ, ಇನಿಸಾನುವಂ** = ಸ್ವಲ್ಪವನ್ನು ; ತುಸವನ್ನು : ಅಸಿಯಳವುಂಕಿ ಕೆಂದಳದೊಳೊತ್ತುವ ನೀರ್ ಮೊಗಮುಂ ಪಳಂಚೆ ಬಂಚಿಸಲಿನಿಸಾನುಮಂ ಮುೞುಗಿದಾಗಡೆ ಭೋಂಕನೆ ಬಂದು ಬಾಳಿಮಿಾನ್ ಮುಸುಱಿ ನಿರಂತರಂ ಕರ್ದುಕೆ (ಪಂಪಭಾ. ೫–೬೪) ; ಧ್ಯಾನದೊಳಭವಂ ನೆಱೆದಿನಿಸಾನುಮನರೆಮುಚ್ಚಿ ಕಣ್ಗಳಂ ನಿಶ್ಚಳಿತಂ ತಾನಿರ್ದು ಮಱೆದು ಕೆಂದಿದ ಮಿಾನಂತ[ಶ್ಯಾ]ಡದಿರ್ದ ಮಡುವಂ ಪೋಲ್ತಂ (ಪಂಪಭಾ. ೮–೧೩) ; ತೊಡರ್ ಪಱಿದ ವನ್ಯವಾರಣದ ಮಾಱ್ಕೆಯಿಂದೇಱಿದಂ ತೊಡರ್ಪನಿನಿಸಾನುವಂ ಬಗೆಯದಾ ಕುಭೃತ್ಸಾನುವಂ (ಪಂರಾಮಾ. ೨–೨೦). **ಇನಿಸಿನಿಸಾಗಿ** = ಚೂರು ಚೂರಾಗಿ ; ಖಂಡ ಖಂಡವಾಗಿ : ಆ ಪತ್ರವಾನಿಲ್ಲದಿನಿಸಿನಿಸಾಗಿ ಸೀಳಿದೊಡೆ (ಸೌಂದಪು. ೫–೧೧). **ಇನಿಸಿನಿಸು** (ದ್ವಿರುಕ್ತಿ): ಇನಿಸಿನಿಸಾ ಗರ್ಭಂ ಪ್ರತಿದಿನಮೊಯ್ಯನೆ ಬಳೆಯೆ (ಕಾದಂಪೂ. ೩೮೦); ಇನಿಸಿನಿಸು ಚಿಂತೆಯೊರ್ಮೆಯೆ ತಿನೆ ತವುಗುಮಿದೆಂದು (ಗದಾಯು. ೪–೩೮); ಪೂಜಾಲೀಲೆಯಿಂ ಚರಿಸುತಿನಿಸಿನಿಸು ಬುದ್ಧಿದೋಱಿ (ಪದ್ಮರಾ. ೨–೭೩). **ಇನಿಸುಂ** = **೧.** ಸ್ವಲ್ಪವೂ : ಇನಿಸುಂ ಮಾಣದೆ (ಪಂಪಭಾ. ೮–೮೦) ; ದೇವಕಾರ್ಯದೊಳಿನಿಸುಂ ನೋಯದೆ ಸುಖಿಯಿಪ ಸವಣರುಪಾಯಮಂ (ಧರ್ಮಾಮೃ. ೧–೧೧೨) ; ಇನಿಸುಂ ಹೇಸದೆ (ಸೋಮೇಶ. ೫೦). **೨.** ಸ್ವಲ್ಪ ಹೊತ್ತು : ಲತಾಂಗಿನೊಂದಿನಿಸುಮಲ್ಲಿರದೆ . . . ಏಱಿದಳ್ ಮಾಡಮಂ (ಕಾದಂಉ. ೯೫). [< ಇನಿತ್ತು]

**ಇನಿಸು$_2$** (ಅ). **೧.** ಸ್ವಲ್ಪ ಮಟ್ಟಿಗೆ; ಸ್ವಲ್ಪ ಮಾತ್ರ : ಜಿನಸವನಾಂಬುವಿನೊಳ್ ಭೋಂಕನೆ ಚಂದ್ರಂ ತೇಂಕಿ ಹಂಸವೃದ್ಧನ ನಿನಿಸಂ ನೆನೆಯಿಸಿ ಕೊಳದೊಳಗಣ ಸಿತವನರುಹಲಕ್ಷ್ಮಿಯುಮನಿನಿಸು ತನಗೊಳಕೊಂಡಂ (ಆದಿಪು. ೭–೯೮) ; ನಿನ್ನಯ ಕೂರ್ಮೆಯದೆತ್ತವೋಯ್ತು ನೋಯಿಸದಿನಿಸೆೞ್ದು ನೋಡಿ ನುಡಿ (ಕಾದಂಪೂ. ೯೦೩) ; ಮನಮಱಿಗುಂ ನರೇಂದ್ರಸುತನೆಂದಿನಿಸಳ್ಕಿನೆ (ಕಾದಂಉ. ೭೭) ; ವದನ ವದನ ಸೋಂಕಿ ಮುತ್ತ ಕೊಡುವುದು ಲೋಕದೊಳುಂಟು ಭರತಚಕ್ರೇಶ ಇದು ಚಿತ್ರ ಕರಯುಗ ಸೋಂಕಿ ಮುತ್ತೀವುದೆಂದೆದೆಯೊಳಿನಿಸು ನಗಿಸಿದಳು (ಭರಚ. ೫–೫೦) ; (ಆದಿಪು. ೭–೯೮ ; ಪಂಪಭಾ. ೩–೮೩ ; ಕಾದಂಪೂ. ೪೦, ೯೨೨ ನೋ). **೨.** ಕೊಂಚ ; ಸ್ವಲ್ಪ : ನಿಲಲಾಜದಲಸಿ ಪೋದೊಡೆ ಪಲವುಂ ಚೆಂಬೊನ್ನ ಪಡೆವು ಕೆಟ್ಟಪುದು ಕರಂ ಕಲಿಯಾಗಿ ನಿಂದೆನಪ್ಪೊಡೆ ನಿಲಲಾಜದು ನೀರ ದೆಸೆಯನುೞಿದಸುವಿನಿಸುಂ (ಧರ್ಮಾಮೃ. ೧–೧೬೧). [< ಇನಿಸು$_1$]

**ಇನು** 'ಇನ್' ನೋ.

**ಇನುಂಗೂರ್** (ನಾ). ಒಂದು ಊರಿನ ಹೆಸರು : ಸ್ವಸ್ತಿ ಶ್ರೀ ಇನುಙ್ಗೂರಾಮೆಳ್ಳಗವಾಸಗುರವರ್ ಕಟ್ಟಿಪ್ಪ ಬೆಟ್ಟ ಮೇಲ್ಕಾಲಂ ಕೆಯ್ದಾರ್ (ಎಕ. II, ೨೮–೧, 700). [ಇನುಂಗ್ು$_0$ + ಊರ್]

**ಇನುಮಡಿಸು** (ಕ್ರಿ). ಎರಡರಷ್ಟಾಗು ; ದ್ವಿಗುಣವಾಗು ; ಇಮ್ಮಡಿಸು : ಇನಕುಲಜನಾ ಬಳಿಕ ತನ್ನಂಗನೆಯ ಭಾವವ ಕಂಡು ಸಂತಸವಿನುಮಡಿಸಿ ಕರೆದಪ್ಪಿ ಗಲ್ಲವನಲುಗಿ ಮುದ್ದಿಡುತ (ಅನಂರಾ. ೬–೨–೬).

[← ತೆಲು. ಇನುಮಡಿಂಚು]

**ಇನೆಗ** 'ಇನ್ನೆಗಂ' ನೋ.

**ಇನೆಗಂ** 'ಇನ್ನೆಗಂ' ನೋ.

**ಇನೆತ್ತು** 'ಇನಿತ್ತು' ನೋ.

**ಇನ್ನ** (ಗು). ಇಂತಹ; ಇಂಥ; ಈ ಪ್ರಕಾರವಾದ.

**ಇನ್ನದು** = ಇಂಥದು. **ಇನ್ನನ್**, **ಇನ್ನಂ** = ಈ ಪ್ರಕಾರದವನು; ಇಂಥವನು: ಮಚ್ಚರಿಪಧಟನಿನ್ನ [ಪಾಠಾಂ. ನನ್ನ]ನಾವನೊ ಭರತೇಶ್ವರ ಚಕ್ರವರ್ತಿಗೆ (ಆದಿಪು. ೧೪–೪); ತನುಸೌಂದರ್ಯದಿನನ್ನನಿನ್ನನೆನಲುದ್ಘಾ ಚಾರದಿಂದನ್ನನಿನ್ನನೆನಲ್ ಬೋಧದಿನನ್ನನಿನ್ನನೆನಲ್ . . . ಅಕ್ಷೋಣತ್ವ ದಿಂದನ್ನನಿನ್ನನೆನಲ್ಬಾರದು ನಿನ್ನನೇಂ ಪಿರಿಯಯೋ ತ್ರೈಲೋಕ್ಯ ರಕ್ಷಾಮಣೀ (ಶಾಂತಿಪು. ೧–೮೫); ಹತವಿಧಿ . . . ಕುಟಿಳತರಂ ಕಡೆ ಯೊಳಾರ್ಗಮಿನ್ನನೆ ಜಗದೊಳ್ (ವರ್ಧಪು. ೯–೭೪). **ಇನ್ನರ್** = ಇಂಥ ವರು: ಅವರಿವರನ್ನರಿನ್ನರೆ ನವೇಡರಿಕೇಸರಿಗಾಂಪನಿಲ್ಲ (ಪಂಪಭಾ. ೧೨–೮೭); ಇಂದಿನ ನರವನಿತೆಯರಿನ್ನರೊಳರೆ ರೂಪಿಂ ಚೆಲ್ವಿಂ (ಧರ್ಮಾಮೃ. ೩–೧೨೦); ಮನುಜರೊಳಿನ್ನರುಂಟೆ (ಚಿಕವಿ. ೪–೧೦೭). **ಇನ್ನವರು** = ಇಂಥವರು: ಅತ್ತಿಯಂತಿನ್ನವರು, ಹೂವಿಲ್ಲ ಹಣ್ಣೈಸೆ (ಹೆಬ್ಬೆರ. ೭–೧೦೭). **ಇನ್ನವು** = ಇಂಥವು: ಇನ್ನವು ಸಾಹಸಮುಂ ಸತ್ತ್ವಮುಮಾರ್ಗಮೊಳವೆ (ವಡ್ಡಾರಾ. ೮೨–೭); ಇನ್ನವಪ್ಪ ಬನ್ನವನವರಾರೊ ಸೈರಿಸುವರ್ (ಕಾದಂಉ. ೭೦). **ಇನ್ನಳ್** = ಈ ಪ್ರಕಾರದವಳು; ಇಂಥವಳು: ತತ್ಕನ್ಯೆಯಂ ಕಂಡು ಸೋತ್ಸವದಿಂದಿನ್ನಳಿಗೆನ್ನನಕ್ಕುವೊ ವರಂ ತಾನೆಂದು . . . ಪೇಟೆಂಬುದುಂ (ನೇಮಿಪು. ೬–೧೧೧).

[**ದೇ.** ‖ **ತಮಿ. ಮಲ.** ಇನ್ನ; **ತೆಲು.** ಇಟ್ಟ]

**ಇನ್ನಂ**, ಇನ್$_1$, ಇನಂ (ಅ). ೧. ಈವರೆಗೆ; ಇಲ್ಲಿಯತನಕ: “ಇನ್ನಿ [ನ್ನೆ]ವರಮಿನ್ನ ಮಿನ್ನೆಗಂ ಸೀಮಾರ್ಥದೊಳ್” (ಕಶರ ೧೪). **ಇನ್$_1$**: **೨.** [ವ್ಯಾಕ] ಸತಿಸಪ್ತಮಿಯ ಪ್ರತ್ಯಯ; ಇರಲು; ಇರುತ್ತಿರಲು: ಆದಿತ್ಯರುಳ್ಳಿನ ಸಲ್ವುದು (ಎಕ. VI, ಚಿಕ್ಕಬ. ೧೨೯–೯; 900). **ಇನಂ**: **೨.** “ಇನೆಗಂ ಉದುಂ ಅನ್ನಂ ಅನ್ನೆಗಂ ಇನಂ ಅಲೊಡಂ ಎಂಬಿವು ಸೊನ್ನೆವೆರಸಿದಲ್ಲದಿರವು” (ಶಮುದ. ನ. ೨೫೭ ವೃತ್ತಿ); ಈತಂಗೆ ಬ್ಯಾದಿಗ ಳೆಂದು ಬಗೆದಿರ್ಪಿನಂ (ವಡ್ಡಾರಾ. ೨೬–೧೭); ಕುಳಶೈಲಂಗಳ್ ಪದಾಘಾತ ದೊಳಲುಗುವಿನಂ (ಆದಿಪು. ೭–೧೨೦); ಸರಸಿಜಷಂಡದ ತೆರೆಗಳ್ ತೆರಳ್ವಿನಂ (ಕಾವ್ಯಾವ. ೮೫೯); ನೀನಿಂ ಕೇಶವನೆಂಬಭಿಧಾನದೆ ವರ್ತಿಸು ಮುರಾರಿ ಧರೆ ಕೀರ್ತಿಪಿನಂ (ಜಗವಿ. ೫–೫೧); ಚಂದ್ರಾದಿತ್ಯರುಳ್ಳಿನಂ . . . ನಿಱಿಸಿ ದಾನ್ (ಎಇ. XIII, ೧೮೩–೧೦; 869); ಬೆಳಗಪ್ಪಿನಂ ಕೇಳಿಸಿದಂ (ಶಮುದ. ೨೪೭ ಪ್ರಯೋ).

[?. ಶಬ್ದಾನು ೫೮೮ ರಲ್ಲಿ ಈ ಶಬ್ದವನ್ನು ವಿನಂ ಎಂದು ಹೇಳಲಾಗಿದೆ]

**ಇನ್ನಂಮಾವು** (ನಾ). ಸಿಹಿಮಾವು (?): ಇನ್ನಂಮಾವು, ಒಳ್ಪಂಗನ್ನಡಂ (ಶಬ್ದಾನು. ೫೫ ಪ್ರಯೋ). ‘ಇಮ್ಮಾವು’ ಪರಾ.

[< ಇನಿದು + ಮಾವು ?]

**ಇನ್ನಕ** ‘ಇನ್ನೆಗಂ’ ನೋ.

**ಇನ್ನಗೆ** (ನಾ). ಇಂಪಾದ ನಗೆ; ಮನೋಹರವಾದ ನಗು: ಇನಿದು + ನಗೆ, ಇನ್ನಗೆ (ಶಬ್ದಾನು. ೯೫ ಪ್ರಯೋ). [< ಇನಿದು + ನಗೆ]

**ಇನ್ನದು** ‘ಇನ್ನ’ ಪರಾ.

**ಇನ್ನನ್** ‘ಇನ್ನ’ ಪರಾ.

**ಇನ್ನನ್ನ** (ಅ). ಇನ್ನಾದರೂ (?): ಇನ್ನನ್ನಾ ಈ ಸ್ನೇಹಾ ಯರವು ಮಾಡಲಿ ಬೇಡ ಸತ್ಯಭಾಮೆ (ಶ್ರೀಕೃಪಾ. ೧೧೦).

[< ಇನ್ + ಅನ್ನು$_3$ (< ಅನ್ನು$_0$)]

**ಇನ್ನಬರ** ‘ಇನ್ನೆವರಂ’ ನೋ.

**ಇನ್ನರ್** ‘ಇನ್ನ’ ಪರಾ.

**ಇನ್ನವರು** ‘ಇನ್ನ’ ಪರಾ.

**ಇನ್ನವು** ‘ಇನ್ನ’ ಪರಾ.

**ಇನ್ನಷ್ಟು** ‘ಇನ್’ ಪರಾ.

**ಇನ್ನಳ್** ‘ಇನ್ನ’ ಪರಾ.

**ಇನ್ನಿನಿತು** ‘ಇನ್’ ಪರಾ.

**ಇನ್ನೀರ್** (ನಾ). ಸಿಹಿಯಾದ ನೀರು; ರುಚಿಯಾದ ನೀರು: ನಾರಿಕೇಳಮೆಸೆಗುಂ ಫಳಾಳಿಯಿಂ ನಾರಿ[ಕೇಳ] ನೆಗಟ್ಟಿಮ್ಮೊಳೊಪ್ಪ ವಿನ್ನೀರದಾವ ಸವಿ ನೋಡಿಮೆಂದಣಂ ನೀರದಾವಳಿಗೆ ನೀಡುವಂದದಿಂ (ಧರ್ಮನಾ. ೪–೫೭). [< ಇನಿದು + ನೀರ್$_1$]

**ಇನ್ನು** ‘ಇನ್’ ನೋ.

**ಇನ್ನುಡಿ** (ನಾ). ಇಂಪಾದ ಮಾತು; ಪ್ರಿಯವಾದ ಮಾತು: ತೊಡೆ ವೆಳಗಚ್ಚರದಿನ್ನುಡಿ ಮೊಳಗು ಕಣ್ಗಡೆಮಿಂಚಿನಿಂ ಕಾರಸಿರಿಗೆ ಪಡಿಯಾದ (ಶ್ರೀಪಾಲ. ೧–೫೫). [< ಇನಿದು + ನುಡಿ$_2$]

**ಇನ್ನುಣಿಸು** (ನಾ). ರುಚಿಯಾದ ಊಟ; ಮೃಷ್ಟಾನ್ನ: ಇನ್ನುಣಿಸೆನಗಟ್ಟಿ . . . ತಣಿಯುಣಲೀವೊಡೀವುದೆನೆ (ಪಂಪಭಾ. ೫–೭೧); ಇಮ್ಮಾವು, ಇನ್ನುಣಿಸು (ಭಾಷಾಭೂ. ೧೩೫ ಉದಾ); ಉಗುಳ್ವಿನ್ನುಣಿಸಾದ ದೂರ್ವೆ ಮೆರೆಯಲ್ಕಿಗೆ ಕೇಳ್ವುವು ಕಾಡಪುಲ್ಲೆಗಳ್ (ಚಂದ್ರಪ್ರಭ. ೧–೧೧೩). [< ಇನಿದು + ಉಣಿಸು$_2$]

**ಇನ್ನೂ** ‘ಇನ್’ ನೋ.

**ಇನ್ನೂರು** ‘ಇನ್ನೂಱು’ ನೋ.

**ಇನ್ನೂರ್ವರ್** ‘ಇನ್ನೂಱು’ ಪರಾ.

**ಇನ್ನೂಱು**, ಇನ್ನೂರು, ಇನೂರ್ಱು, ಇಱ್ನೂಱ್ (ನಾ). ಎರಡು ನೂರು: ಪೆಮ್ಮಾಡಿಗೊಣ್ಡಱ್ಗೆ ಕೊಟ್ಟ ನೀಱ್ಪಣ್ಯ ಇನ್ನೂಱು (ಎಕ. VI, ಚಿಕ್ಕಮ. ೩–೮; 899); ಆಹವದೊಳ್ ಕುಸಿದು ಪೆಜಪಿಂಗಿ ಪೇಱ್ ಮಾನಸರೇನಿನ್ನೂಱು ವರ್ಷಮಂ ಬಱ್ದಪರೇ (ಪಂಪಭಾ. ೧೨–೧೭೬); ರುಧಿರದೊಳದ್ದರಿನ್ನೂಱರಸುಮಕ್ಕಳು (ಕುವ್ಯಾಕ. ೧೧–೩೮). **ಇನ್ನೂರು**: ಇನ್ನೂರಾ ಅಯ್ವತ್ತು (ಮುಂಬಯಿ. ೪–೧೫೯ ಕಿ); ಅವನು ಆ ಹೊಲವನ್ನು ಇನ್ನೂರು ರೂಪಾಯಿಗಳಿಗೆ ಕೊಂಡುಕೊಂಡನು (ರೂಢಿ). **ಇನೂರ್ಱು**: ಧಿಕ್ಕರಿಸಲ್ ಸಾಲ್ದತ್ತು ನಾನಾ ಫಲ ವಿಲಸನದಿಂ ಕಾಡಿಯೂರಲ್ಲಿಯಿ[ನ್ನೂರ್]ವ್ವರ ವಿದ್ಯಾಭ್ಯಾಸಮಿ[ನ್ನೂರ್]ವ್ವರ ವಿಧಿಲಸದಾಚಾರ ಸಂಪತ್ತಿ ಯಿ[ನ್ನೂರ್]ವರ ದಾನೋದಾರಿಯಿ [ನ್ನೂರ್]ವ್ವರ ವಿಮಳಯಶಶ್ರೀ ವಿಚಿತ್ರಂ ಪವಿತ್ರಂ (ಎಇ. XIII, ೩೩೩–೫೦, ೫೨; 930). △**ಇಱ್ನೂಱ್**: ರವಿಕಯ್ಯ ಮೊದಲಾಗಿ ಇಱ್ನೂರ್ವೊ(ರ್ವ)ರುಂ ಮಹಾಜನರ ಕಾಲಂ ಕಟ್ಟಿ (ಇಆ. XII, ೨೧೯–೨೦; 814); ಇಱಿದೊಡೆ ಇಱ್ನೂಱಯ್ವತ್ತು ದ್ರಮ್ಮ . . . ಪರದಾರ ಮಾಡಿದೊಡೆ ಇಱ್ನೂಱ ಇರ್ಪತ್ತನಾಲ್ಕು ದ್ರಮ್ಮ (ಹೈಆರಿ. ೧೯೩೬, ೨೬–೩೩; 872).

**ಇನ್ನೂರ್ವರ್** = ಎರಡು ನೂರು ಮಂದಿ: ಅಂಗಭೋಗದ ಸತಿಯರಿನ್ನೂರ್ವರಾತಂಗೆ (ಇಹರ. ವೇ. ೨೮–೧೮).

[ಇರ್$_2$ (< ಎರಡು) + ನೂಱು$_1$ / **ತಮಿ. ಮಲ.** ಇರುನೂಱು; **ಕೊಡ.** ಇನ್ನೂರಿ; **ತುಳು.** ಇನೂರ್ಡು; **ತೆಲು.** ಇನ್ನೂಱು]

**ಇನ್ನೆ** (ನಾ). ಇಂದು; ಈ ದಿನ; ಈ ಹೊತ್ತು (?). ‘ಇನ್ನೆವರಂ’ ಪರಾ.

**ಇನ್ನೆಗೆ** = ಈ ದಿನಕ್ಕೆ; ಇದುವರೆಗೆ (?): ಏಸರವನೀ ಪಾರ್ಥ ನಮ್ಮೊಳು ವಾಸಿ ಪಂತವ ಮಾಡಲಿಂದಿಗೆ ಭಾಸುರದ ಚಕ್ರದೊಳು ಇನ್ನೆಗೆ ಸವರೆನೇ ಎಂದ (ಕೋಗಯ. ೧೨–೫೭). [?. / **ತಮಿ.** ಇನ್ನೆ]

**ಇನ್ನೆಗ** ‘ಇನ್ನೆಗಂ’ ನೋ.

**ಇನ್ನೆಗಂ**, ಇನೆಗ, ಇನೆಗಂ, ಇನ್ನಕ, ಇನ್ನೆಗ (ಅ). ೧. ಇಂದಿನವರೆಗೆ; ಈಗಿನವರೆಗೆ; ಇಷ್ಟುಹೊತ್ತಿನ ವರೆಗೆ : ಭರತ ಯಯಾತಿ ಕುತ್ಸ ಪುರುಕುತ್ಸ ಪುರೂರವರಿಂದಮಿನ್ನೆಗಂ ಪರಿವಿಡಿಯಿಂದೆ ಬಂದ ಶಶಿವಂಶಂ (ಪಂಪಭಾ. ೭–೧೬) ; ಕಮಲೆಯೆನಿನ್ನೆಗಂ ಕುರುಮಹೀಪತಿಯೊಳ್ ನೆಲಸಿರ್ದಂ (ಗದಾಯು. ೯–೪) ; ಆನಿನ್ನೆಗಂ ಕಂಡ ಸಂಭ್ರಮಂ ಕಡೆಗೆ ಕನಸೋ ನಿರುತವೋ (ಸಿದ್ಧರಾ. ೨–೧). **ಇನೆಗ** : ೧. ದಿವಿಜರ್ ನಡುಗಲ್ಕೊಡರಿಸುವಿನೆಗ ಜಟಾಸುರ ಹಿಡಿಂಬ ಬಕವೈರಿ ಸಿಂಹನಾದಂಗೆಯ್ದಂ (ಗದಾಯು. ೭–೧೬). **ಇನೆಗಂ** : ೨. ಆ ಕಾಲದ ವರೆಗೆ; ಆ ವರೆಗೆ; ಆ ತನಕ: ಇದಂ . . . ಪಾಲಿಸುಗೆ ವಾರ್ಧಿ ನಗಮುಳ್ಳಿನೆಗಂ (ಇಆ. XVIII, ೨೭೪–೪೦ ; 994) ; ಕರಿ . . . ಜಿನನಂ ವಿನುತಂ ಕಾಣ್ಬಿನೆಗಂ ಕೂಳನೆ ತೊಱೆದುದು (ಸೌಇಇ. XI–i, ೫೨–೨೬ ; 1007). ೩. ಅಷ್ಟರ ಮಟ್ಟಿಗೆ; ಆ ಮಟ್ಟಿಗೆ : ಗಗನಾಂತರದಲ್ಲಿ ಸೂರ್ಯಯುಗ್ಮೋದಯಮೆಂದುಮಿಲ್ಲದುದಿದಾದಪುದೆಂಬಿನೆಗಂ . . . ನಿಮಿರ್ಚಿದುದು ಕಣ್ಗೆ ವಿಯತ್ತಲ ಚಾರಣೋದಯಂ (ಆದಿಪು. ೫–೪೬) ; ಮೂಳೆಯಂ ದಬ್ಬುಕದಿಂದೆ ನುಗ್ಗುನುಱಿಯಪ್ಪಿನೆಗಂ ಬಿಡೆ ಬೀಸಿ ಪೊಯ್ದು (ಸುಕುಮಾ. ೭–೬) ; ಬಸಂತರಾಯನುರ್ಕುಂ ಸೊರ್ಕುಂ ಸೋರ್ದು ಬಯಲಪ್ಪಿನೆಗಂ ದಾಟಿಗೆಯ್ದು (ರಾಮಾಶ್ವ. ೫೧–೯೯). ೪. [ವ್ಯಾಕ] ಸತಿಸಪ್ತಮಿಯ ಪ್ರತ್ಯಯ; ಇರಲಾಗಿ; ಇರುತ್ತಿರುವಲ್ಲಿ : "ಇನೆಗಮುದುಮನ್ನಮನ್ನೆಗಮಿನಮಲೊಡಂ ಸೊನ್ನೆವೆರಸು ಸತ್ಯರ್ಥದೆ ಕಾರ ನಿಜಸ್ಥಾನದೊಳಪ್ಪುವು" (ಶಮದ. ೨೪೬) ; ವಿಷಾದವ್ಯಾಪಾದಿತಚಿತ್ತರಾಗಿರ್ಪಿನೆಗಂ . . . ಅಂಬರಚರನವನಿಗವತರಿಸಿ (ಶಾಂತಿಪು. ೬–೩೦ ವ) ; ಬೆಕ್ಕಂ ಕಂಡಿಲಿಯಂತಿರೆ . . . ಮಾರ್ಕೊಳ್ಳದೆ ಮಾರ್ನುಡಿಯದೆ ಬಿಕ್ಕೆನ್ನದೆ ಮಿಡುಕದಿರ್ದರಂತಿರ್ಪಿನೆಗಂ (ಸುಕುಮಾ. ೨–೨೦). **ಇನ್ನಕೆ** : ೧. ಮಹೋಪಕಾರಕವಾದುದಿನ್ನಕೆ ವೈಪರೀತ್ಯವಿವಾಯ್ತು ನಿಮಿಷದಲಿ (ನಿಭಾಗ. ೫–೫–೩೬). **ಇನ್ನೆಗೆ** : ೧. ಯಜ್ಞವು ಮಾಸಲಳಿಯದೆ ನಡೆದುದಿನ್ನೆಗ ನಿಮ್ಮ ಕರುಣದಲಿ (ಕುವ್ಯಾಸ. ಓರಿಇ. ೧೧–೬) ; ಅಸುರರಾಜನಂ ಮಾರ್ದ ಕಲಿಗಳನಿನ್ನೆಗರಿಯದೀ ಸೃಷ್ಟಿ ಮೇಣ್ ವಿಧಿಕಲ್ಪನಾ ದೃಷ್ಟಿ! (ಶ್ರೀರಾಮಾ. ೮೧೭–೧೭೨). [ಇನ್ನೆ + –ಗಂ]

**ಇನ್ನೆಬರ** 'ಇನ್ನೆವರಂ' ನೋ.

**ಇನ್ನೆವರಂ**, ಇನ್ನಬರ, ಇನ್ನೆಬರ, ಇನ್ನೆವರೆ (ಅ). ಇದುವರೆಗೆ; ಈವರೆಗೆ : "ಇನ್ನೆವರೆಗಮಿನ್ನೆಗಮೆಂದುಂ ಇನ್ನೆವರಮೆಂದು . . . ಕಾಲಪ್ರಮಾಣಂ" (ಕವಿಕಂ. ೨೨೦, ೨೨೧) ; ಭಯಂಕರಾಟವಿಯೊಳಿನ್ನೆವರಂ ನೆಲಸಿರ್ದ ಸೇದೆ ನೀಂ ಕರುಣಿಸಿದಾಗಳಲ್ಲದವರ್ಗಾಱದು (ಪಂಪಭಾ. ೯–೪೨) ; ಎಂದಿಂಗೆ ನಿನಗೆ ಸಾವಿಲ್ಲೆಂದಿರ್ದಯ್ ನಿನ್ನ ಮನದೊಳಿನ್ನೆವರಂ (ಗದಾಯು. ೭–೪) ; ಇವಂಗಿನ್ನೆವರಂ ಸ್ವರಜ್ಞಾನಮೇ ಪುಟ್ಟಿತಿಲ್ಲ (ಅದ್ಭುತ. ೨೬–೨೫). **ಇನ್ನಬರ** : ಕಾಳೆಗಕೆ ಕರ್ಣನ ಕೈದು ಭಂಡಾರಿಸಿದುದಿನ್ನಬರ (ಕುವ್ಯಾಕ. ೧–೨೨) ; ಇನ್ನಬರ ಸೈರಿಸಿದ ಸೈರಣೆ ಯಿನ್ನು ತಿಕೆಗಿದು ಮಾರ್ಗವೆ (ತೊರರಾ. ೫–೩–೬೯). **ಇನ್ನೆಬರ** : ಅಱಿಯೆನಾನಿನ್ನೆಬರ ನಿನ್ನಯ ತೇಜನನು (ಪ್ರಭುಲೀ. ೧೯–೩೯) ; ರಾಜ್ಯವನು ಕೌರವರು ತಾವನು ಭವಿಸುತಿದ್ದರು ನಡೆದುದಿನ್ನೆಬರ (ಕುವ್ಯಾವಿ. ಓರಿಇ. ೧೧–೪೧) ; ಸೆಱೆಯಲಿ ಸವೆದರಿನ್ನೆಬರ (ತೊರರಾ. ೬–೫೩–೨೦). **ಇನ್ನೆವರೆ** : ಸರಿಯದಾಗಿಯೇ ತೋಱುತಿಹುದಿನ್ನೆವರೆಯುಂ (ವೀಶೈಪು. ೫–೧೮–೩೮).

[ಇನ್ನೆ + ವರಂ. / ತಮಿ. ಇನ್ನೇವರೈಕ್ಕುಂ, ಇನ್ನೇವರೈಯುಂ]

**ಇನ್ನೆವರೆ** 'ಇನ್ನೆವರಂ' ನೋ.

**ಇನ್ನೆವರೆಗಂ** (ಅ). = ಇನ್ನೆವರಂ : "ಇನ್ನೆಗಂ, ಇನ್ನೆವರಂ, ಇನ್ನೆವರೆಗಂ . . . ಇವು ಸೀಮಾಪ್ರಮಾಣಶಬ್ದಂಗಳ್" (ಕಶಸಾ. ೨೬–೫೪೭) ; ಇನ್ನೆವರೆಗಂ ಯಾತವ್ಯರುಮಾಜ್ಞಾವಿಧಾನಸ್ಥಾನರುಮಪ್ಪ ನಮ್ಮೊಳ್ (ಶಾಂತಿಪು. ೨–೩೫ ವ) ; ಭರತಾನ್ವಯದೊಳಿನ್ನೆವರೆಗಂ ಗೋತ್ರಕಲಹಮೆಂಬುದಾದುದಿಲ್ಲ (ಗದಾಯು. ೫–೪೪ ವ) ; ಕಠೋರವಾಣಿಗಳಿಂ ಘಾತಿಸುತಿರ್ದೆಮಿನ್ನೆವರೆಗಂ ನಿಮ್ಮಂ (ಸುಕುಮಾ. ೨–೩೩).

[ಇನ್ನೆ + ವರೆಗಂ]

**ಇನ್ನೊಂದು** 'ಇನ್' ಪರಾ.

**ಇನ್ನೊಬ್ಬ** 'ಇನ್' ಪರಾ.

**ಇನ್ನೊಮ್ಮೆ** 'ಇನ್' ಪರಾ.

**ಇನ್ನೊರ್ವ** 'ಇನ್' ಪರಾ.

**ಇನ್ಸರ್** (ನಾ). ಇಷ್ಟುಜನರು (?) : ಕಸವಯ್ಯ ಅಳ್ದೊನ ಬೆಸದೊಳ್ ಮಱುವಕ್ಕದ ಮುಟ್ಟಾಡಿನೊಳ್ ಕಾದಿ ಇನ್ಸರಂ ಕೊಂದು ತಾನುಂ ಸಗ್ಗಿಯಾದನ್ (ಎಕ. X, ಮುಳಬಾ. ೨೨೯–೭; 909). ℙ ಈ ಶಬ್ದ 'ಇನಿಬರ್' ಎಂಬುದರ ಅಪಲಿಖಿತ. [< ಇನಿಬರ್]

**ಇನ್ಸತೂರ್** (ನಾ). ಒಂದು ಊರಿನ ಹೆಸರು : ಸಿರಿಊರ ರಾಮಾಗನು ಮಾರಸಿಜ್ಗ ಇನ್ಸತೂರ ತುಱುಗೊಳೆ ಸತನ್ (ಎಕ. IX, ಬೆಂಗಳೂ. ೩೮–೪ ; 1000). [ಇನ್ಸತ್ತು$_0$ + ಊರ್]

**ಇಸ್ಸು** 'ಇಂಬು$_2$' ನೋ.

**ಇಪಗೊಂಡ** (ನಾ). ಒಬ್ಬಾತನ ಹೆಸರು : ಇಪಗೊಣ್ಡನ ಒರೆಯ್ಗೆ ಮೆಚ್ಚಿ ಕಟ್ಟಿದ ಕೊಡಗಿ ಪಳ್ಳಗೞ್ದೆ ನಾಲ್ಗಣ್ಡುಗ (ಎಕ. IV, ಹುಣಸೂ. ೧೧–೮ ; 1020). [ಇಪ ? + ಗೊಂಡ$_0$ (< ಗಾವುಂಡ)]

**ಇಪ್ಪ** 'ಇರ್$_1$' ಪರಾ.

**ಇಪ್ಪಕ್ಷ** (ನಾ). ಎರಡೂ ಕಡೆ; ಉಭಯ ಪಕ್ಷ : ಲೀಲೆಯಿಂ ನೋಡಿ ಕರ್ಣಾರ್ಜುನರ ಜಗಳಮಂ ಮೇಲೆ ಯಿಪ್ಪಕ್ಷದೊಳಗಿಂದ್ರಸೂರ್ಯಾದಿಗಳಿಗಂ ವಾದಮಾಗಿರ್ದುದು (ತುರಂಗ. ೩೮–೮).

[ಇರ್$_2$ (< ಎರಡು) + ಪಕ್ಷ]

**ಇಪ್ಪಟ್ಟು$_1$** (ನಾ). ಇಮ್ಮಡಿ; ಎರಡರಷ್ಟು : ನಿನಗೆ ಒಂದಕ್ಕೆ ಇಪ್ಪಟ್ಟು ಕೊಡುತ್ತೇನೆ (ರೂಢಿ). [ಇರ್$_2$ (< ಎರಡು) + ಪಟ್ಟು$_3$]

**ಇಪ್ಪಟ್ಟು$_2$** (ಅ). ಈಗ : ಇಪ್ಪಟ್ಟು ಯಾಕೆ ತಡೀಬೇಕು (ಮುನಿಮಾ. ೬೧) ; ಇಪ್ಪಟ್ಟೀಗ ಚೆನ್ನಾಯಿತು (ರೂಢಿ). [< ಇದು + ಪಟ್ಟು ?]

**ಇಪ್ಪಣ** (ನಾ). ಎರಡು ಹಣ : ಕೊಳಗವಾಹಿಯಾಗಿ ಪೊಂಗೆ ವರ್ಷಕ್ಕೆ ಇಪ್ಪಣ ವೃದ್ಧಿಯಲು ಕೊಣ್ಡ ಗದ್ಯಾಣಂ ನೂಱ ಎರ್ಪತ್ತಮೂಱು (ಸೌಇಇ. IX–i, ೨೫೮–೨೩ ; 1153) ; ಮೂಱು ವರಹನೂ ಯಿಪ್ಪಣ ಹಾಗದ ಭೂಮಿಯನೂ (ಎಕ. VIII, ತೀರ್ಥಹ. ೮೫–೧೮ ; 1162) ; ನವರತ್ನಕ್ಕೆ ಬೆಲೆಯ ಗದ್ಯಾಣ ನೂಱಕ್ಕೆ ಇಪ್ಪಣ (ಎಕ. V, ಬೇಲೂರು. ೭೫–೭೯ ; 1382) ; ಅಪ್ಪಂತ ಹೆಣ್ಣಾಗಬೇಕು ಇಪ್ಪಣ ಅಡ್ಡ ತೆರವಾಗಬೇಕು (ಗಾದೆ). [ಇರ್$_2$ (< ಎರಡು) + ಪಣ$_1$]

**ಇಪ್ಪತು** 'ಇರ್ಪತ್ತು' ನೋ.

**ಇಪ್ಪತ್ತು** 'ಇರ್ಪತ್ತು' ನೋ.

**ಇಪ್ಪದರ** (ನಾ). ಎರಡು ಪದರ : ಪ್ರಾಣಿಯು ಇಪ್ಪದರದ ಜೀವಿಯೆ ? (ಪ್ರಾಣಿಶಾ. ೧೫). [ಇರ್$_2$ (< ಎರಡು) + ಪದರ]

**ಇಪ್ಪದಿಂಬರು** 'ಇರ್ಪತ್ತು' ಪರಾ.

**ಇಪ್ಪನ್ನಿಕೆ** (ನಾ). ಈ ಕಾರ್ಯನಿರ್ವಹಣೆ ; ಈ ಸಿದ್ಧತೆ (?) : ಇಲ್ಲವೈ ಯಿಪ್ಪನ್ನಿಕೆಯ ಗುಣದಲ್ಲಿ ಧರ್ಮಜಗಿಂದ ಶ್ರೇಷ್ಠರನೆಲ್ಲಿ ತಿಳಿದಿಹೆ ನೀನು (ಜಿನಭಾ. ೧೩–೨೬). [< ಇದು + ಪನ್ನಿಕೆ]

**ಇಪ್ಪಯಣ** (ನಾ). ಈ ಪ್ರಯಾಣ : ಸಾಲ್ಗೊಳಿಸುತಿಪ್ಪಯಣವನ್ನೆಸಗಿರೆನುತೊಡನೆ (ಪರಶು. ೪–೫೨). [< ಇದು + ಪಯಣ]

**ಇಪ್ಪಲ** 'ಇರ್ಪಲ' ನೋ.

**ಇಪ್ಪಸರ** (ನಾ). ಎರಡು ಕಡೆ; ಉಭಯ ಪಾರ್ಶ್ವ: ಕುಸುರಿದಜಿದನು ಕರಿಘಟೆಯನಿಪ್ಪಸರದಲಿ (ಕುವ್ಯಾದ್ರೋ. ೬-೪೦); ಇಪ್ಪಸರದೊಳಳಿವಿಂಡು ಮುಸುಕಲ್ಕೈತಪ್ಪ ಕೆಂಪೆಸೆವ ಬಂಧಕಿಯು (ನಾಗಕು. ೩೨-೧೦).
[ಇರ್$_2$ (< ಎರಡು) + ಪಸರ]

**ಇಪ್ಪಳ್ಳ** (ನಾ). ಈ ಹಳ್ಳ: ಇಪ್ಪಳ್ಳದಿಂದೆ ಕೆಳಗಣ ಪರಲಾಲ (ಎಇ. X, ೬೭-೮೪; 892). [< ಇದು + ಪಳ್ಳ]

**ಇಪ್ಪಾನೆ** (ನಾ). ಎರಡು ಹಾನೆ; ಒಂದು ಅಳತೆ: ಹಾನೆ ಯಿಪ್ಪಾನೆ ಅಕ್ಕಿಯ ನಯಿವೇದ್ಯಕೆ (ಸೌಇಎ. ಉಡುಪಿ. ೩೧೭-೯; 1422); ಒಪ್ಪಾನೆ ಅಕ್ಕಿಗೆ ಇಪ್ಪಾನೆ ಉಪ್ಪೋ (ಗಾದೆ. ೪೯೦).
[ಇರ್$_2$ (< ಎರಡು) + ಪಾನೆ]

**ಇಪ್ಪಾರು** (ನಾ). ಎರಡು ಹಾರು, —ಸೂರು: "ಇಪ್ಪಾರು ಚಾವಣಿಯ ಕೊನೆಯಲ್ಲಿರುವ ಗೋಡೆಯ ತ್ರಿಕೋನಾಕಾರದ ಭಾಗ; ಚಂದಾಯ" (Gable. ಇಂಕನಿ). [ಇರ್$_2$ (< ಎರಡು) + ಪಾರು$_5$]

**ಇಪ್ಪಾಲು** (ನಾ). ಎರಡು ಪಾಲು; ಇಮ್ಮಡಿ: ತಂದೆಯನ್ನು ಕೊಂದ ವರ ಮೇಲೆ ಮುಯ್ಯಿತೀರಿಸಿಕೊಳ್ಳುವ ಪ್ರತಿಹಿಂಸಾನಲವು ಇಪ್ಪಾಲು ಉಜ್ವಳಿಸಿದೆ (ಕೋಹಿನೂ. ೨೬).
[ಇರ್$_2$ (< ಎರಡು) + ಪಾಲು$_5$]

**ಇಪ್ಪಿಡಿ** (ನಾ). ೧. ಎರಡು ಹಿಡಿ, —ಮುಷ್ಟಿ: ಕಪ್ಪಡಿಗನಂತಾದೆ ನೆನುತಜನಿಪ್ಪಿಡಿಯಲೊತ್ತಿದನು ಬಸುಜನು ನೋಡಿ ಬಿಸುಸುಯ್ದು (ನಿಭಾಗ. ೧೦-೧೩-೪೨). ೨. ಎರಡು ಹಿಡಿ: ಮುಸುಕಿನ ಮನುಷ್ಯನ ಇಪ್ಪಿಡಿಯ ಖಡ್ಗವು ... ಮೇಲೇರಿ ಕೆಳಗಿಳಿದುದನ್ನು ಇನ್ನೊಂದು ದಡದ ಮೇಲೆ ನಿಂತವರು ಕಂಡರು (ಯೋಧರು. ೧೨೮).

**ಇಪ್ಪಿಡಿಯಕತ್ತಿ** = ಎರಡು ಹಿಡಿಯುಳ್ಳ ಕತ್ತಿ: "ಎರಡು ಕೈಯಿಂದಲೂ ಉಪಯೋಗಿಸಬೇಕಾದ ಕತ್ತಿ; ಎರಡು ಹಿಡಿಯ, ಇಪ್ಪಿಡಿಯ, – ಕತ್ತಿ" (Two handed Sword. ಇಂಕನಿ).
[ಇರ್$_2$ (< ಎರಡು) + ಪಿಡಿ$_2$]

**ಇಪ್ಪಿಡಿವಿಡಿ** (ಕ್ರಿ). ಎರಡು ಹಿಡಿಗಳಿಂದಲೂ ಹಿಡಿ; ಎರಡು ಕೈಗಳಿಂದಲೂ ಹಿಡಿ: ಅಸಿಧಾರೆಗಳನಿಪ್ಪಿಡಿವಿಡಿದು ಜೋಲುತ ದುರಂತಚರಿತ್ರ ರೊಪ್ಪಿದರು (ನಿಭಾಗ. ೧೦-೮-೧೫). [ಇಪ್ಪಿಡಿ + ಪಿಡಿ$_1$]

**ಇಪ್ಪು$_1$** (ಕ್ರಿ). ಕಳಚು; ಬಿಚ್ಚು.

**ಇಪ್ಪೆತೆಗೆ** = ಬಿಚ್ಚಿತೆಗೆ: ವಾಹಕರ ಪಾಣಿಪಲ್ಲವದಿಂ ನೇತ್ರವಟ್ಟೆಯ ನೇಣನೊಯ್ಯನಿಪ್ಪೆತೆಗೆದು ಝುಂಕಾರದ ಸುಸಿರಿಕೆಯಂ ನೋಡಿ(ಶಾಂತೀಶ್ವ. ೭-೯೩ ವ). [← ತೆಲು. ಇಪ್ಪು, ವಿಪ್ಪು]

**ಇಪ್ಪು$_2$** (ನಾ). ನೊಣ: "ಇಪ್ಪುನೊಳದೊಳ್" (ಕರ್ಣಾನಿ. ೫).
[ದೇ. ‖ ತಮಿ. ಈ; ಮಲ. ಈಚ್ಚ; ತೆಲು. ಈಗ]

**ಇಪ್ಪುದು** 'ಇರ್$_1$' ಪರಾ.

**ಇಪ್ಪುರಿ** (ನಾ). ೧. ಎರಡು ಹುರಿ, —ಎಳೆ; ಎರಡು ಹುರಿಯುಳ್ಳದ್ದು: ಚಿಪ್ಪಿಗರವೋಲವಯವಂಗಳನಿಪ್ಪುರಿಯ ನೇಣಿನಲಿ ಹೊಲಿವರು (ನಿಭಾಗ. ೫-೧೧-೪೧); ಇಪ್ಪವಳ ಬಿಟ್ಟು ತನಗೊಪ್ಪುವಳ ನೆರೆದಿಹರೆ ಇಪ್ಪುರಿನುಲಿಯು ಹಱಿದಂತೆ ತನ್ನನು ಅಪ್ಪುವಳು ಕೆಡುಗು (ಸರ್ವಜ್ಞ. ೧೬೮೪). ೨. ಎರಡು ಭಾಗ: ತಪ್ಪದಹುದಹುದೆಂದುದಕ್ಕೆ ಮಹಾಪ್ರಸಾದವೆನುತ್ತ ಹಂತಿಯನಿಪ್ಪುರಿಯ ಮಾಡಿದರು ದೇವಾಸುರರು ತಮ್ಮೊಳಗೆ (ನಿಭಾಗ. ೮-೯-೩೦). 'ಮುಪ್ಪುರಿ' ಪರಾ.
[ಇರ್$_2$ (< ಎರಡು) + ಪುರಿ$_3$]

**ಇಪ್ಪುರುಷ** 'ಇರ್ಪುರುಷ' ನೋ.

**ಇಪ್ಪೆ$_1$** 'ಇರ್ಪೆ' ನೋ.

**ಇಪ್ಪೆ$_2$** (ನಾ). ಮೆಲುಕು.

**ಇಪ್ಪೆಹಾಕು** = ಮೆಲುಕು ಹಾಕು: ರೆಪ್ಪೆ ಹಂದಿದರೆ ಇಪ್ಪೆಹಾಕುವುದು ಬಿಟ್ಟೀತೆ (ಗಾದೆ. ೩). [?]

**ಇಪ್ಪೆ$_3$** (ನಾ). ಇರುವಿಕೆ; ಅಸ್ತಿತ್ವ: ಸ್ವಪ್ನದನುಭವದಂತೆ ಸಂಸಾರವಿದು ವ್ಯಾಷೆ ಹುಚ್ಚುಮುಂಡೆ ಇಪ್ಪೆಯು ಚಂದ್ರಾರ್ಕವೆಯೆಂದು ಯೆಂಬೆಯೊ ಹುಚ್ಚುಮುಂಡೆ (ಚಿದಾವ. ೨೦-೬).
[ಇರ್$_1$ + -ಪೆ ?. / ತಮಿ. ಇರಪ್ಪು; ಮಲ. ಇರಿಪ್ಪು]

**ಇಪ್ಪೆಂಡಿರ್** 'ಇರ್ಪೆಂಡಿರ್' ನೋ.

**ಇಪ್ಪೆಗಲವೆ** (ನಾ). ಇಪ್ಪೆಹೂವಿನ ವಾಸನೆಯುಳ್ಳ ಒಂದು ಜಾತಿಯ ಭತ್ತ: ನಾನಾಶಾಲಿ ಕಲವೆ ಮೆಣಸಿಗೆ ಕೇಸರಿವೆಸರಿಪ್ಪೆಗಲವೆ ಶಾಲಿ ವಿಶೇಷಂ (ನಳಚಂ. ೬-೨೩). [ಇಪ್ಪೆ$_1$ (< ಇರ್ಪೆ) + ಕಲವೆ]

**ಇಪ್ಪೆಜಿಡ್ಡು** (ನಾ). ೧. ಇಪ್ಪೆ ಎಣ್ಣೆಯ ಜಿಡ್ಡು. ೨. (ಆಲಂ) ಇಪ್ಪೆಯ ಜಿಡ್ಡಿನಂತೆ ಅಂಟಿಕೊಳ್ಳುವ ಸ್ವಭಾವ (ಉಕ).
[ಇಪ್ಪೆ$_1$ (< ಇರ್ಪೆ) + ಜಿಡ್ಡು]

**ಇಪ್ಪೆಯೆಣ್ಣೆ** (ನಾ). ಇಪ್ಪೆಯ ಬೀಜದಿಂದ ತೆಗೆದ ಎಣ್ಣೆ: ಇಪ್ಪೆಯೆಣ್ಣೆ ಚಳಿಗಾಲದಲ್ಲಿ ಹೆತ್ತ ತುಪ್ಪಕ್ಕಿಂತಲೂ ಗಟ್ಟಿಯಾಗಿ ಹೆತ್ತುಕೊಳ್ಳುತ್ತದೆ. ಅದನ್ನು ದೀಪವುರಿಸಲು ಬಳಸುತ್ತಾರೆ (ರೂಢಿ).
[ಇಪ್ಪೆ$_1$ (< ಇರ್ಪೆ) + ಎಣ್ಣೆ]

**ಇಪ್ಪೆಹಿಂಡಿ** (ನಾ). ಇಪ್ಪೆಯ ಬೀಜದಿಂದ ಎಣ್ಣೆ ತೆಗೆದ ಮೇಲೆ ಉಳಿಯುವ ಹಿಂಡಿ: ಇಪ್ಪೆ ಹಿಂಡಿ ಒಳ್ಳೆಯ ಗೊಬ್ಬರವಾಗಿ ಉಪಯೋಗಕ್ಕೆ ಬರುತ್ತದೆ (ರೂಢಿ). [ಇಪ್ಪೆ$_1$ (< ಇರ್ಪೆ) + ಹಿಂಡಿ]

**ಇಪ್ಪೊತ್ತು** 'ಇರ್ಪೊತ್ತು' ನೋ.

**ಇಪ್ಪೋಳ್** 'ಇರ್ಪೋಟ್' ನೋ.

**ಇಪ್ಪೋಳು** 'ಇರ್ಪೋಟ್' ನೋ.

**ಇಪ್ಪೋಳುಗಳೆ** (ಕ್ರಿ). ಎರಡು ಹೋಳಾಗಿ ಸೀಳಿ ಬಿಸುಡು: ಮೇಲೆ ಬಿದ್ದರೆ ವಿಟರೆದೆಯನಿಪ್ಪೋಳುಗಳೆವುಗುರುಗಳ ಬಿಂಕದ ಬಾಲೆಯರು (ನಿಭಾಗ. ೧೦-೨೮-೫). [ಇಪ್ಪೋಳು (< ಇರ್ಪೋಟ್) + ಕಳೆ$_1$]

**ಇಬಟೆ** 'ಇಬ್ಬೇಡೆ' ನೋ.

**ಇಬಡೆ** 'ಇಬ್ಬೇಡೆ' ನೋ.

**ಇಬನ್ನೆ** (ನಾ). ಒಂದು ಜಾತಿಯ ಗಿಡ (ವೈಶಿಗಿ. ೧೫-೨೮೩). [?]

**ಇಬಿಕೆ** (ನಾ). [ಕಾಮುಶಾ] ಸ್ತ್ರೀಯ ವರ್ಗೀಕರಣದಲ್ಲಿ ಒಂದು ಬಗೆ: ಘನಮೆನಿಸಲುಂಬ ಮೂಗಿನ ಹೊಳ್ಳೆ ಹಣೆ ಗಲ್ಲಯಿನಿತಗಲಮಾದ ಗಜಮದದ ಕಂಪು ಕೊನರ್ವ ತನುಜಲದ ಸುಮ್ಮನಿಸುವೀರಾಜು ಬೆರಳಿನ ಲಜ್ಜೆ ದಾಣದವಳಿಬಿಕೆಯಬಲೆ (ಜನವ. ೩-೨೧); ವಡಬೆಯಿಬಿಕೆ ಹಯನು ಬೆರಸಿ ಕಡೆಗೆ ವೃಷನು ಯೀಯೆರಡು ನಿದಾನಿಸುವಡೆ ನೀಚರತವು ಅಧಮವೂ (ಜನವ. ೩-೨೩). [< ಸಂ. ಇಭಿಕಾ]

**ಇಬ್ಬ$_1$** (ನಾ). ಕಿರುಬ: ಹುಲಿಜಾತಿ: ಹುಲಿ, ಹೆಬ್ಬುಲಿ, ಕಿರಬ, ಇಬ್ಬಂದಿ, ದೊಡ್ಡಇಬ್ಬ (ನಮ್ಮನು. ೨೩೯). [?]

**ಇಬ್ಬ$_2$** (ನಾ). ೧. ಹಣವಂತ; ಶ್ರೀಮಂತ: ಇಭಪತಿಯನೇಱಿ ವೈಶ್ಯ ಪ್ರಭು ಪೊನ್ನಂ ರಾಶಿಮಾಡಿ ರಾಗದೆ ನೋಡುತ್ತಿಭಿನುತನಾದೆಸೆಯವರ್ಗಳ ನಭಯಂ ತಾಂ ಕಾಣದನಿತನೊಡೆಯವನಿಬ್ಬಂ (ಜೀವಸಂ. ೧೦೫-೩೧). ೨. ಒಂದು ಕುಲದ ಹೆಸರು: ಇಂತಪ್ಪ ಮೂಱುಂ ಕುಲಪದವಿಯೊಳ್ ನೆಗಟ್ದಿಬ್ಬ ಕುಲದಾತಂ [ಪಾಠಾಂ. ಮೂಱುಂ ಪದವಿಗಳೊಳ್ ಇಬ್ಬಪದವಿಯುಳ್ಳಾತಂ] ಸೂರದತ್ತನೆಂಬಂ ಪರದಂ (ಜೀವಸಂ. ೧೦೬-೩೧ ವ).
[< ಸಂ. ಇಭ್ಯ]

**ಇಬ್ಬಂದಿ** (ನಾ). ೧. ಒಮ್ಮೆ ಆ ಕಡೆ, ಮತ್ತೊಮ್ಮೆ ಈ ಕಡೆ ಇರುವ ವ್ಯಕ್ತಿ ; ಅತ್ತ ಇತ್ತ ತೂಗಾಡುವವನು : ನಂಬದಿರ್ದನು ತಂದೆ ನಂಬಿದನು ಪ್ರಹ್ಲಾದ ನಂಬಿಯುಂ ನಂಬದಿರುವಿಬ್ಬಂದಿ ನೀನು (ಮಂಕುಕ. ೪೮೫). ೨. ಉಭಯ ಲಿಂಗಿ ; ಹೆಣ್ಣು, ಗಂಡು ಎರಡೂ ಚಿಹ್ನೆಗಳಿದ್ದು ಯಾವ ಲಿಂಗಕ್ಕೂ ಸೇರದ ಪ್ರಾಣಿ. ೩. ದಡ್ಡ ; ಮಂಕ ; ಬುದ್ಧಿಗೇಡಿ. ೪. ಸಂಕರಜಾತಿ ; ಮಿಶ್ರತಳಿ ; ಭಿನ್ನವಂಶಗಳ ಕೂಟದಿಂದಾದ ಬೆರಕೆಯ ಸಂತತಿ : ಕರುಣವಿಲ್ಲದಲೆಮ್ಮವಂಶವ ನೆರಪಿದಿರಿ ನೀರಲ್ಲಿ ಆಗಿದುರ್ಧರುತರವು ಏನಾಯ್ತು ಯಿಬ್ಬಂದಿಯರಿಗುತ್ಪತ್ತಿಗರೆದಿರೋ ನೀವೇನು ಪಾಂಡವತರಳರೋ (ಜಿನಭಾ. ೮೪–೪೧) ; ಇಬ್ಬಂದಿ ಬೆಳೆಗಳನ್ನು ಯಶಸ್ವಿಯಾಗಿ ಸಾಧಿಸಿ, ರಾಕ್ಷಸತರಕಾರಿಗಳನ್ನು ಬೆಳಸಿದ್ದಾನೆ (ಮನೋನಂ. ೧೮೪). ೫. ಹುಲಿ ಜಾತಿಗೆ ಸೇರಿದ ಒಂದು ವನ್ಯಮೃಗ : ಕಿರುಬ, ಇಬ್ಬಂದಿ, ದೊಡ್ಡ ಇಬ್ಬ (ನಮ್ಮನು. ೨೩೯). ೬. ಉಭಯ ಸಂಕಟ ; ಪೇಚು : ಅವನ ಕೆಲಸ ಇಬ್ಬಂದಿಗಿಟ್ಟುಕೊಂಡಿತು (ರೂಢಿ).

[ದೇ. ‖ ತಮಿ. ಇಪ್ಪನ್ದಿ ; ತೆಲು. ಇಬ್ಬಂದಿ]

**ಇಬ್ಬಂದಿಕಾರ** (ನಾ). ಎರಡು ಕಡೆಯೂ ವರ್ತಿಸುವವನು : ಒಬ್ಬಾರ್ಗಟ್ಟಡಿಗೆ ಇಬ್ಬಾರುಣ್ಣಲುಬಹುದೆ ಇಬ್ಬಂದಿಕಾರ ಬಣಜೀಗ (ಜಗೀತೆ. ೨೭) ; ಒಬ್ಬಳನು ಅಳಿಸಿದ ಒಬ್ಬಳನು ನಗಿಸಿದ ಇಬ್ಬಂದಿಕಾರ ಜವರಾಯ (ಹಳ್ಳಿಯ. ೧೨೩). [ಇಬ್ಬಂದಿ + –ಕಾರ (< –ಕಾಱ)]

**ಇಬ್ಬಕುಲ, ಇಬ್ಬಕುಳ** (ನಾ). ವರ್ತಕ ವಂಶ ; ವರ್ತಕ ವಂಶದಲ್ಲಿ ಹುಟ್ಟಿದವನು (?) : ಇಂತಪ್ಪ ಮೂಱುಂ ಕುಲಪದವಿಯೊಳ್ನೆಗೞ್ದಿಬ್ಬ ಕುಲದಾತಂ[ಪಾಠಾಂ. ಮೂಱುಂ ಪದವಿಗಳೊಳ್ ಇಬ್ಬಪದವಿಯುಳ್ಳಾತಂ] ಸೂರದತ್ತನೆಂಬಂ ಪರದಂ (ಜೀವಸಂ. ೧೦೬–೩೧ ವ). **ಇಬ್ಬಕುಳ** : ಕಂಡಿರೆ ಮನೋಜನಿಭನಂ ಕಂಡಿರೆ ನೆಗಳ್ದಿಬ್ಬ ಕುಳನನತಿನಿರ್ಮಳನಂ (ಜೀವಸಂ. ೧೧೪–೪೭). ‘ಇಭ್ಯಕುಲ’ ಪರಾ. [< ಸಂ. ಇಭ್ಯಕುಲ]

**ಇಬ್ಬಕುಳ** ‘ಇಬ್ಬಕುಲ’ ನೋ.

**ಇಬ್ಬಗಿ**$_1$ (ಕ್ರಿ). ಎರಡಾಗಿ ಸೀಳು : ಜಗದುಪತಿಯನು ನೋಡಿ ಕೆನ್ನೆಗೆ ತೆಗೆದು ಸಂದೋಹದ ಸರಳಲಿಬ್ಬಗಿವುತಿರೆ (ನಿಭಾಗ. ೪–೫–೨೪).

[ಇರ್$_2$ (< ಎರಡು) + ಬಗಿ$_1$]

**ಇಬ್ಬಗಿ**$_2$ ‘ಇರ್ಬಗಿ’ ನೋ.

**ಇಬ್ಬಗಿಗಳೆ** (ಕ್ರಿ). ಎರಡು ಭಾಗಮಾಡಿ ಧ್ವಂಸಮಾಡು : ಜಲನಿಧಿಯನುಱೆ ಕುಡಿವ ವಡಬಾನಲನ ನುಂಗುವ ನೆಲವನಿಬ್ಬಗಿಗಳೆವ [ಪಾಠಾಂ. ಗಳಿವ] . . . ಬಲಾನ್ವಿತಭಟರ ನಳನರ್ಬುದವ ತೋಱಿಸಿದ (ತೊರರಾ. ೪–೭–೧೯). [ಇಬ್ಬಗಿ$_2$ (< ಇರ್ಬಗಿ)] + ಕಳೆ$_1$]

**ಇಬ್ಬಗಿಗೈ** (ಕ್ರಿ). ಎರಡು ಹೋಳು ಮಾಡು, —ತುಂಡಾಗಿಸು : ಅದ್ರಿವಲ್ಲಭನ ತನುವನಿಬ್ಬಗಿಗೈದು ತಾರಕನ ದೇಹಮಂ ಚಿನಕಡಿಯ ನಿರದೆ ಮಾಡಿತು ಶಾಂಭವಾಸ್ತ್ರಂ (ಚಿಬಪು. ೪೦–೩೧).

[ಇಬ್ಬಗಿ$_2$ (< ಇರ್ಬಗಿ) + ಗೈ (< ಕೆಯ್$_1$)]

**ಇಬ್ಬಗೆ**$_1$ ‘ಇರ್ಬಗೆ$_1$’ ನೋ.

**ಇಬ್ಬಗೆ**$_2$ ‘ಇರ್ಬಗೆ$_2$’ ನೋ.

**ಇಬ್ಬಗೆಗೊಳ್** (ಕ್ರಿ). ಎರಡು ಮನಸ್ಸಿನಿಂದ ಕೂಡಿರು ; ಮನಸ್ಸು ಹಂಚಿ ಹೋಗಿರು. ‘ಇಬ್ಬಗೆಗೊಳಿಸು’ ಪರಾ.

[ಇಬ್ಬಗೆ$_2$ (< ಇರ್ಬಗೆ$_2$) + ಕೊಳ್$_1$]

**ಇಬ್ಬಗೆಗೊಳಿಸು** (ಕ್ರಿ). ಎರಡು ಮನಸ್ಸಾಗುವಂತೆ ಮಾಡು : ತಾಯೊ ತಂಗಿಯೊ ಎನಿಪ ಶುಚಿಯ ಸೌಮ್ಯದ ಸೊಬಗು ಪ್ರೇಯಸಿಯ ಕರೆವೊಲಾತುರವಡಿಪ ಬೆಡಗು ಈಯೆರಡು ಸಮದ ರುಚಿ ನಿನ್ನನಿಬ್ಬಗೆಗೊಳಿಸೆ ಧ್ಯೇಯ ನಿನಗಾವುದೆಲೊ (ಮಂಕುಕ. ೪೫೩). [ಇಬ್ಬಗೆಗೊಳ್ + –ಇಸು$_3$]

**ಇಬ್ಬಟ್ಟೆ** (ನಾ). ಎರಡು ದಾರಿ : ಹರಯೋಗಮಂ ಮಾಡುವಂ ಸ್ಥೂಲ ಸೂಕ್ಷ್ಮದೊಳು ಭರಿತನಾಗಿಹ ಶಿವನನಿಬ್ಬಟ್ಟೆಯಂ [ಪಾಠಾಂ. ಶಿವನೀರ್ಬಟ್ಟೆಯಂ] ಕಟ್ಟಿ ಹರುಷದಿಂ ಧ್ಯಾನಿಸುತಿಪ್ಪಾತನೈಕ್ಯಮಂ ಕೂಡಿ ಶಿವ ತಾನಪ್ಪನು (ಸಿದ್ಧರಾ. ೭–೧೪). [ಇರ್$_2$ (< ಎರಡು) + ಬಟ್ಟೆ$_1$]

**ಇಬ್ಬಡಗ** (ನಾ). = ಇಬ್ಬಡಗಲು : ಕೋಳೂರ ಬಟ್ಟೆಯಿಂ ಪಡುವ ಮತ್ತರು ೩೦ ಚಜಗ ಪೊಲದಿಂ ತೆಂಕ ಕರುನಮೂಳದ ಇಬ್ಬಡಗದ ಹಾಳ ಮತ್ತರು ೧೧ (ಸೌಇಇ. IX–i, ೧೬೬–೨೭ ; 1099). [?]

**ಇಬ್ಬಡಗಲು** (ನಾ). ಬಡಗಲ ಎರಡೂ ಪಕ್ಕ : ಕೆಱೆಯ ಕೆಳಗೆ ಇಬ್ಬಡಗಲು ಮೊದಲೇರಿಯಲು (ಎಕ. XV, ಅರಸೀ. ೨೧೭–೫೮ ; 1232).

ಇಬ್ಬಡಗಲಾಗು = ಬಡಗಲ ಎರಡು ಪಕ್ಕಗಳಲ್ಲಿರು : ಧಾರಾಪೂರ್ಬ್ಬಕಂ ಮಾಡಿ ಕೊಟ್ಟ ಕೆಯಿ ತೆಂಕವೊಲದಲ್ಲಿ ಚಿಕ್ಕಡ್ಡದಾರಿಯಿಂ ಬಡಗಲಿಬ್ಬಡಗಲಾಗಿ ಹಿರಿಯಕೋಲ ಮ ೨ (ಸೌಇಇ. IX–i, ೩೩೪–೧೪ ; 1217). [ಇರ್$_2$ (< ಎರಡು) + ಬಡಗಲು (< ಬಡಗಲ್)]

**ಇಬ್ಬಡಿ**$_1$ (ನಾ). ಎರಡರಷ್ಟು ; ಇಮ್ಮಡಿ : ನಿಬ್ಬರದ ಪುಣ್ಯ ಇಬ್ಬಡಿ ಫಲಿಸಿತು ಒಬ್ಬರೇನಱಿವರು ಶಬ್ದಗಾಗೋಚರ ದರ್ಭಶಯನನಾದ ವಿಜಯವಿಠ್ಠಲರೇಯ (ತೀರ್ಥಮ. ೨೨೯–೧). [< ಇರ್ಮಡಿ]

**ಇಬ್ಬಡಿ**$_2$ ‘ಇಬ್ಬೀಡೆ’ ನೋ.

**ಇಬ್ಬಣ**$_1$ (ನಾ). ೧. ಎರಡು ಪಂಗಡ, —ಭಾಗ : ಅಭಿಪ್ರಾಯಗಳಲ್ಲಿ ಇಬ್ಬಣವಾದೀತು (ಕುಡಿಕೂ. ೪೦) ; ಇಬ್ಬರೂ ಅಂದ ಮೇಲೆ ಇಬ್ಬಣ ಇದ್ದದ್ದೇ ; ಇನ್ನೇನು ಆ ಇಬ್ಬಣದಲ್ಲಿಯೂ ಸಹಕಾರವಿರಬೇಕು (ಕಮನೆ. ೧೪೬) ; ಧರ್ಮದಲ್ಲಿ ಇಬ್ಬಣ ಮಾಡಿದ್ದೀರಿ (ಗಲಿಪ್ರ. ೫೨). ೨. ಉಭಯ ಸಂಕಟ ; ಪೇಚು : ಅವನು ಇಬ್ಬಣದಲ್ಲಿ ಸಿಕ್ಕಿಕೊಂಡ (ರೂಢಿ). ೩. (ಮದುವೆಯ ಗಂಡು ಹೆಣ್ಣುಗಳ ಕಡೆಯ) ಎರಡು ಪಂಗಡದವರು : ತಿರುಪತಿಯ ವೆಂಕಟೇಶನ ಸಾನ್ನಿಧ್ಯದಲ್ಲಿ ಮದುವೆ. ಇಬ್ಬಣದವರೂ ಅಲ್ಲಿಗೇ ಹೋಗುವುದಾಯಿತು (ಇತಿಶ್ರೀ. ೧೨).

[ಇರ್$_2$ (< ಎರಡು) + ಬಣ]

**ಇಬ್ಬಣ**$_2$ (ನಾ). ಎರಡು ಬಣವೆ (?) : ಕದ್ದೂ ಕಡಲೆ ತಿಂದು ಇಬ್ಬಾ[ಬ್ಬ]ಣ ಹುಲ್ತಿಂದು ಕದ್ದೂ ಹೋಗನ್ನೆ ಬಸವಯ್ಯ (ಹಳ್ಳಿಬಾ. ೨೯–೧೭). [ಇರ್$_2$ (< ಎರಡು) + ಬಣ$_0$ (< ಬಣವೆ)]

**ಇಬ್ಬತ್ತಿ** (ನಾ). ಎರಡು ಬತ್ತಿ. ‘ಇಬ್ಬತ್ತಿದೀಪ’ ಪರಾ.

[ಇರ್$_2$ (< ಎರಡು) + ಬತ್ತಿ]

**ಇಬ್ಬತ್ತಿದೀಪ** (ನಾ). “ಎರಡು ಬತ್ತಿಗಳು ಉರಿಯುವ ದೀಪ” (Duple lamp. ಇಂಕನಿ). [ಇಬ್ಬತ್ತಿ + ದೀಪ]

**ಇಬ್ಬದಿ** ‘ಇರ್ಬದಿ’ ನೋ.

**ಇಬ್ಬನಿ, ಇಬ್ಬನ್ನಿ** (ನಾ). ಮಂಜಿನ ನೀರಿನ ಹನಿ ; ಹಿಮ : ಮುಚ್ಚಿ ಮುಸುಂಕಿದಿಬ್ಬನಿಯ ನುಣ್ಪನಿಗಳ್ (ಉದ್ಭಟ. ೪–೩೧) ; ಬೆರಳುದ್ದಮಾದ ನಾರಳದಂಟ ಕತ್ತರಿಸಿ ಪಿರಿದು ಮಘುಮಘಿಪ ತಿಳಿದುಪ್ಪಮಂ ಹೊಯಿದುಕೊಂಡಿರುಳಿಬ್ಬನಿಯೊಳಿರಿಸಿ ಘಟ್ಟಿಹೆಱೆಯಾದುದಂ ತಂದುಕೊಳವೆಗಳನೊಡೆದು (ಸೂಪಶಾ. ೩–೧೨) ; ಸೂರ್ಯನನ್ನು ಕಂಡ ಇಬ್ಬನಿ ಇಂಗುವಂತೆ ನನ್ನ ದುಃಖವೆಲ್ಲಾ ಇಂಗಿಹೋಯಿತು (ಪ್ರತಾಪ. ೪೪). **ಇಬ್ಬನ್ನಿ** : ಉಗಿಯು ಮಂಜು ಮೋಡ ಇಬ್ಬನ್ನಿ ಮಳೆ ಇವುಗಳ ರೂಪದಿಂದ ದೃಷ್ಟಿಗೋಚರವಾಯಿತೆಂದರೆ (ಮುಂಬಯಿ. ೬–೬೯) ; ಚಳಿಗಾಲದಲ್ಲಿ ನಾಲ್ಕು ತಿಂಗಳು ಇಬ್ಬನ್ನಿಯ ಸಹಾಯದಿಂದ ಬೆಳೆಯುವಲ್ಲಿ (ಕೃಷಿಪ್ರ. ೧೫೬) ; ಘನವಾದ ಕಾನನದ ಭೂಭಾಗದಲ್ಲಿಬ್ಬನ್ನಿ ಸುರಿವಂತೆ (ರಘುವಂ. ೧೭೬) ; ಇಬ್ಬನ್ನಿ ತೊಳೆದರೂ ಹಾಲುಮೆತ್ತಿದಾ ಕವಳಿ ಕಂಟಿಯಾ ಹಣ್ಣು (ನಾದಲೀ. ೫೮–೧೫). [ಈರ್$_3$ (< ನೀರ್) + ಪನ್ನಿ$_3$]

**ಇಬ್ಬನೆ** (ನಾ). ಒಂದು ಜಾತಿಯ ಗಿಡ (ವೈಔಗಿ. ೨೩-೪೧೮). [?]
**ಇಬ್ಬನ್ನಿ** 'ಇಬ್ಬನಿ$_1$' ನೋ.
**ಇಬ್ಬರ್** 'ಇರ್ವರ್' ನೋ.
**ಇಬ್ಬರಿ** 'ಇರ್ಬರಿ' ನೋ.
**ಇಬ್ಬರು** 'ಇರ್ವರ್' ನೋ.
**ಇಬ್ಬಳ** (ನಾ). ಎರಡು ಬಳ್ಳದ ಒಂದು ಅಳತೆ: ತಿಲಂ ನಿಸ್ತೈಲಮಾಗಿರ್ಪೊಡೊಬ್ಬಳ ಮೇಣಿಬ್ಬಳಮೆಣ್ಣೆಯಪ್ಪೊಡೆ (ಲೋಕೋಪ. ೪-೫೭); ಎಣ್ಣೆ ಹತ್ತುಕೊಳಗದ ಇಬ್ಬಳ ಪಳವಳಿಗೆಯ ಪಕ್ವಾನ್ನಕ್ಕೆ ಕೊಳಗ ಹತ್ತು (ಎಕ. III, ತಿರುಮ. ೧೧೧-೫೮; 1276); ನಿಚ್ಚಲಾರ್ಜಿಸಿ ತಂದ ಭತ್ತವು ವೆಚ್ಚಕಿಬ್ಬಳವಾಗೆ ಕುಂದವು ಹೆಚ್ಚವದಜಂ ಜಂಗಮಾವಳಿಗೊಲಿದು ಮಾಡುತ್ತ (ಬಸವು. ೫೯-೯); ಉಪರಿಗೆಯೆಂಟುನೂಜವೇ ಪಾತ್ರವಿನಿಬ್ಬಳಂ ದ್ವಿಗುಣಿಸಲ್ಕೈವತ್ತಯೇಳು ಸಾವಿರದ ಅನರ್ಘ್ಯಜಾದೊಡಂ (ವೀಶೈವ. ೬-೧೦-೬೨). [ಇರ್$_2$ (< ಎರಡು) + ಬಳ$_1$ (< ಬಳ್ಳ)]
**ಇಬ್ಬಳಕ್ಕಿ** (ನಾ). ಎರಡು ಬಳ್ಳ ಅಕ್ಕಿ: ಪರಿಚಾರಕರುಮೊಳ್ಳಿಯಂಗಿಬ್ಬಳಕ್ಕಿಯ ಕೂಳಯಿಕ್ಕಂಡುಗ ಗದ್ದೆ (ಎಕ. V, ಹಾಸನ. ೬೬-೪೮; 1170). [ಇಬ್ಬಳ + ಅಕ್ಕಿ]
**ಇಬ್ಬಳಮೂಲೆ** (ನಾ). ಎರಡು ಬಳ್ಳದ ಮೂಲೆ (?): ನಾನಾಧಾನ್ಯಯೀರಾಯ ಪ್ರತಿಖಂಡುಗ ಒಂದಕ್ಕೆ ಇಬ್ಬಳಮೂಲೆಯ ಸ್ವಾಮ್ಯದ ವಿವರ (ಎಕ. V, ಬೇಲೂರು. ೬೫-೬೮; 1382). [ಇಬ್ಬಳ + ಮೂಲೆ ?]
**ಇಬ್ಬಳಿಗೆ** (ನಾ). (ದಕ. ಪ್ರಾದೇ) ಎರಡು ಬಳ್ಳದ ಅಳತೆ, —ಪಾತ್ರೆ: ಇಬ್ಬಳಿಗೆ ಭೂಮಿ ಒತ್ತೆ ಕೊಡು (ರೂಢಿ). [ಇಬ್ಬಳ + -ಇಗೆ]
**ಇಬ್ಭಾಗ** 'ಇರ್ಭಾಗ' ನೋ.
**ಇಬ್ಬಾಣಿ** (ನಾ). (?): ಮಧ್ಯಾಹ್ನ ಮಳೆ ಹೊಯ್ದು ಇಬ್ಬಾಣಿ ಕೆರೆ ತುಂಬಿ ಮಗ್ಗು ಕಸ್ತೂರಿ ತೆರೆ ಹೋದು (ಹುಟ್ಟಿಹ. ೪೧). [?]
**ಇಬ್ಬಾಯ್** 'ಇರ್ಬಾಯ್' ನೋ.
**ಇಬ್ಬಾಯ** 'ಇರ್ಬಾಯ' ನೋ.
**ಇಬ್ಬಾಯಿ** 'ಇರ್ಬಾಯ್' ನೋ.
**ಇಬ್ಬಾಯಿಹಕ್ಕಿ** (ನಾ). ಎರಡು ಬಾಯಿಗಳುಳ್ಳ ಹಕ್ಕಿ; ಗಂಡಭೇರುಂಡ (ಕಿ). [ಇಬ್ಬಾಯಿ (< ಇರ್ಬಾಯ್) + ಹಕ್ಕಿ (< ಪಕ್ಕಿ)]
**ಇಬ್ಬಾರ** (ನಾ). ತಿಗಳರ ಭಾಷೆ: ತಿಗಳರು -ಇವರು ... ತಮಿಳನ್ನು ಹೋಲುವಂಥ ಇಬ್ಬಾರವೆಂಬ ಭಾಷೆಯನ್ನಾಡುವರು (ಕಭಾಗೆ. ೧೪೪). [?]
**ಇಬ್ಬಾಲೆ** (ನಾ). ಒಂದು ಜಾತಿಯ ಮರ: ಸಾಲ ಬಕುಳ ಕರಂಜ ಕಮ್ಮರ ಬೇಲ ಬೇವಿಬ್ಬಾಲೆ [ಪಾಠಾಂ. ಬ್ಬಡಲೆ, ಪ್ಪೆಡೆ, ಬ್ಬೀಡೆ, ಬ್ಬಟ್ಟೆ] ತೇಗರುಟಾಳ ತಂಡಸ ತಡಸಿ ತಗ್ಗಿಲು ತದಿಕು ... ಮೊದಲಾದ ವನಭೂಜಾಳಿಯಲಿ (ತೊರರಾ. ೬-೧೮-೧೮). [?]
**ಇಬ್ಬಿಡ** (ನಾ). ಒಂದು ಮರದ ಹೆಸರು: ಇಬ್ಬಿಡದ ಮರದ ತಿಗುಡು, ಮೇಷಶೃಂಗಿಯ ಮರದ ತಿಗುಡು, ಕೆಂಬಲಿಯ ತಿಗಡೆ ... ಇಷ್ಟು ಔಷಧಿ ಸಮನಾಗಿ ಕೂಡಿ (ವಿವೈವಿ. ೧೫೨). [?]
**ಇಬ್ಬಿದಿರು** (ನಾ). ನೀರಿನಲ್ಲಿ ಬೆಳೆಯುವ ಬಿದಿರು; ಲಾಳದಕಡ್ಡಿ (?) (ವೈಔಗಿ. ೫೯-೧೧೮೨). [< ಈರ್$_4$ < ನೀರ್ + ಬಿದಿರು (< ಬಿದಿರ್$_2$)]
**ಇಬ್ಬೀಡು** (ನಾ). ಎರಡು ಬೀಡು; ಎರಡು ಸಾರಿ ಕಾಯಿ ಬಿಡುವುದು: ಕಬ್ಬಕ್ಕಿ (ನೇ) ಬಾಯ ಬಿಡುತಾವೆ ಇಬ್ಬೀಡ ಗಬ್ಬದಾ ಹೊಂಬಾಳೆ ನಡುಗ್ಯಾವೆ (ನಾಪದ. ೧೮). [ಇರ್$_2$ (< ಎರಡು) + ಬೀಡು$_2$]
**ಇಬ್ಬೀಡೆ, ಇಬಟೆ, ಇಬಡಿ, ಇಬ್ಬಡ್ಡಿ$_2$** (ನಾ). ಬೀಟೆಮರ: ಬದರಿ ಬೆಳಲಿಬ್ಬೀಡೆ [ಪಾಠಾಂ. ವಿಬ್ಬೀಡ] ಬಿಗ್ಗುಲಿ ಬಿದಿರು ಬೆಳಲರುಟಾಳವಿವು ನೋಡಿದಿರಿನಲಿ ಬೇಜಿನೆ ಮಹೀಜಗಳರಸಿ (ತೊರರಾ. ೩-೧-೨೬); ಕಿಕ್ಕಿಜಿವ ಮಾವು ಮಾದಳನಿಕರ ಬೀಳಲಿಬ್ಬೀಡೆ ಘನ ಸೋವೆವರ್ಗಾ (ರುಕ್ಮಾಂಗ. ೧೦-೩). ಇಬಟೆ: ಜಾಲಿ, ತೇಗು, ಮತ್ತಿ, ಹೊನ್ನೆ, ಇಬಟ ಮುಂತಾದ ಇಮಾರತೀಕೆಲಸಕ್ಕೆ ಬರುವ ಮರಗಳು (ಮುಂಬಯಿ.೬-೨೬೬). ಇಬಡಿ (ಕಿ). ಇಬ್ಬಡ್ಡಿ$_2$ (ಕಿ). [ದೇ. ‖ ತೆಲು. ಇಬ್ಬಡ, ಇಬ್ಬೆಡ]
**ಇಬ್ಬುಡ್ಲು** (ನಾ). ಒಂದು ಬಗೆಯ ಸೌತೆ ಅಥವಾ ಕಲ್ಲಂಗಡಿ ಬಳ್ಳಿ (ಕಿ). 'ಇಬ್ಬುಳ್ಳಿ' ಪರಾ. [← ತುಳು. ಇಬ್ಬುಡ್ಲು]
**ಇಬ್ಬುಡ್ಲುಬಳ್ಳಿ** (ನಾ). ಸೌತೆ ಅಥವಾ ಕಲ್ಲಂಗಡಿ ಬಳ್ಳಿ (ಕಿ). [ಇಬ್ಬುಡ್ಲು + ಬಳ್ಳಿ]
**ಇಬ್ಬುಳ್ಳಿ** (ನಾ). "ಸಿಹಿಸೌತೆ" (ಬಾಳಿಗ. ಕೋಶ); ಮಳೆಗಾಲಕ್ಕೆಂದು ತೆಂಗಿನ ಒಲಿಯಲ್ಲಿ ಸುತ್ತಿ ಅಡ್ಡಬಿದಿರಿಗೆ ಕಟ್ಟಿದ್ದ ಸೌತೆ, ಮುಳ್ಳುಸೌತೆ, ಇಬ್ಬುಳ್ಳಿ, ಕುಂಬಳಕಾಯಿಗಳನ್ನು ಬಿಡುವಂತಿದ್ದಿಲ್ಲ (ಬಾಳಿಗ. ೨೯). [?]
**ಇಬ್ಬೆ** (ನಾ). ಕುಟ್ಟುವಾಗ ಒರಳಿಗೆ ಒಂದು ಸಲ ಇಡಿಯುವಷ್ಟು; ಒಬ್ಬೆ: ಒಂದಿಬ್ಬೆ ಕುಟ್ಟುವಾಗ ಒಬ್ಬಣ್ಣನುಣಬಂದ ... ಎರಡಿಬ್ಬೆಮಾಡಿದರೆ ಕಡಿನುಚ್ಚು ಆದಾವು ... ಒಂದಿಬ್ಬೆ ಮಾಡಿದರೆ ಕುರುಡಕ್ಕಿ (ನಾಪದ. ೮೯). 'ಒಬ್ಬೆ' ಪರಾ. [< ಒಬ್ಬೆ ?]
**ಇಬ್ಬೆರಲ್** 'ಇರ್ಬೆರಲ್' ನೋ.
**ಇಬ್ಬೆರಳು** 'ಇರ್ಬೆರಲ್' ನೋ.
**ಇಬ್ಭಾಗ** 'ಇರ್ಭಾಗ' ನೋ.
**ಇಬ್ಭಾಗಿಸು** (ಕ್ರಿ). ಎರಡು ಭಾಗವಾಗಿಸು, —ಹೋಳಾಗಿ ಸೀಳು: ಅಡಕೆಯ ಬಾಗಿಸಿ ಪನೆ ಇಬ್ಭಾಗಿಸಿ (ಕಎವು. ೨೮); ಮೈನರಗಳೆಲ್ಲವೂ ಮಾಂಸವನ್ನು ಇಬ್ಭಾಗಿಸಿಕೊಂಡು ಹೊರಬಂದಂತಾಯ್ತು (ಕಾವೇರಿ. ೩೬). [ಇಬ್ಭಾಗ (< ಇರ್ಭಾಗ) + -ಇಸು$_3$]
**ಇಬ್ರೀಯ** (ನಾ). ಹೀಬ್ರೂ ಜನಾಂಗ, —ಭಾಷೆ. 'ಇಬ್ರೀಯ ಭಾಷೆ' ಪರಾ. [← ಇಂ. Hebrew]
**ಇಬ್ರೀಯಭಾಷೆ** (ನಾ). ಹೀಬ್ರೂ ಭಾಷೆ: ಗೊಲ್ಗೊಥಾ (Golgotha) ಎಂಬ ಇಬ್ರೀಯ ಭಾಷೆಯ ಶಬ್ದದ ಅರ್ಥ ತಲೆಬುರುಡೆಯ ಸ್ಥಳ (ಗೊಲ್ಗೊಥಾ. ೧೮). [ಇಬ್ರೀಯ + ಭಾಷೆ]
**ಇಭ** (ನಾ). **೧.** ಆನೆ; ಗಜ: "ಮಾತಂಗಃ, ದ್ವಿರದಃ, ದ್ವಿಪಃ ... ಗಜಃ ... ಇಭಃ ... ಸಿಂಧುರಃ – ಈ ೧೮ ಆನೆಯ ಪೆಸರ್" (ಹಲಾಯು. ೩೬-೬೧); ಎರಡಿಭಮನೇಜಿ ಕಾರ್ತಸ್ವರದೆರಡುಂ ಕೆಲದೊಳಿರೆ ನಿಷಾದಿಗಳ್ (ಸುಕುಮಾ. ೯-೭೭). **೨.** [ಕಾವ್ಯಮೀ] ಒಂದು ಶಬ್ದಾಲಂಕಾರ; ಚಿತ್ರಕಾವ್ಯದಲ್ಲಿ ಒಂದು ಬಗೆಯ ಬಂಧ; ಆನೆಯ ಆಕೃತಿಯನ್ನು ಬರೆದು ಅದನ್ನು ತುಂಬುವಂಥ ಪದ್ಯರಚನೆ: ಶರಶೂಲಚಾಪ ಚಕ್ರಾಸಿ ರೂಪಮಿಭರಥ ತುರಂಗ ಪದಗತಪಾಠಂ ಮುರಜಂ ಗೋಮೂತ್ರಿಕೆ ಪುಷ್ಕರ ಮರ್ಧಭ್ರಮಣ ಸರ್ವತೋಭದ್ರಂಗಳ್ (ಕಾವ್ಯಾವ. ೫೬೯). **೩.** ಒಬ್ಬ ರಾಕ್ಷಸನ ಹೆಸರು; ಗಜಾಸುರ. 'ಇಭದೈತ್ಯ' ಪರಾ. [ಸಂ.]
**ಇಭಗತಿ** (ನಾ). **೧.** ಆನೆಯ ಗತಿ, —ನಡೆ. **೨.** ಆನೆಯಂತೆ ನಡೆಯುಳ್ಳ ವ್ಯಕ್ತಿ: ನಭಭರಂಗಳವೊಂದಿರೆ ಪಾದದೊಳ್ ಶುಭಕರಂ ಯತಿ ನಿಲ್ತಿರೆ ರಂಧ್ರದೊಳ್ ... ಅದುದಿಂದಿಭಗತೀ ದ್ರುತಪೂರ್ವವಿಲಂಬಿತಂ (ಛಂದೋಂಬು. ೨-೭೫). [ಇಭ + ಗತಿ]
**ಇಭಗಮನೆ** (ನಾ). ಆನೆಯಂತೆ ನಡೆಯುಳ್ಳವಳು: ಇಭಗಮನೆ ಹರಿಣಲೋಚನೆ ಶುಭಲಕ್ಷಣೆ ... ತ್ರಿಭುವನದೊಳ್ ಪೋಲ್ಪರೊಳರೆ ಲಕ್ಷ್ಮೀಮತಿಯಂ (ಎಕ. II, ೧೨೮-೨೩; 1121). [ಸಂ. ಇಭಗಮನಾ]
**ಇಭಘಟೆ** (ನಾ). **೧.** ಆನೆಗಳ ಸಮೂಹ. **೨.** ಆನೆಗಳ ಪಡೆ; ಗಜಸೈನ್ಯ: ಉಭಯಾಬ್ಧಿರವದಿನಿಭಘಟೆಯಿಭಘಟೆಯೊಳ್ ... ಇಜಿದು (ಶಾಂತಿವು. ೬-೮೨). [ಇಭ + ಘಟೆ]

**ಇಭತತಿ** (ನಾ). = ಇಭಘಟೆ ೧ : ಅರಿಬಲವನಿಡೆ ಮುಗ್ಗಿ ಕೆಡೆದುದು ತುರಗ ವಜಿಗಿಜಿಯಾದುದಿಭತತಿಯುರುಳಿದುವು ಹೊರಳಿದುವು ಹೂಣಿಗರಟ್ಟೆ ಸಮರದಲಿ (ಕುವ್ಯಾದ್ರೋ. ೬–೫೫). [ಇಭ + ತತಿ$_1$]

**ಇಭದೈತ್ಯ** (ನಾ). ಗಜಾಸುರ: ಅರರೆ ಹರನಿಭದೈತ್ಯನಂ ಸಂಹರಿಸಿ ಸೀಳುವ ಮಾರ್ಗದಿಂದೊಡೆಸೀಳ್ದ ಸುಬ್ಬಿನಲಿ (ಬಸಪು. ೨೧–೪೩). [ಇಭ + ದೈತ್ಯ]

**ಇಭನಗರ** (ನಾ). **೧.** ಕುರುಕುಲದ ರಾಜಧಾನಿಯಾದ ಹಸ್ತಿನಾವತಿ: ಇಭನಗರದೊಳ್ ಕುಂತಿ ಪಾರ್ಥಂ ಬಿಳ್ದ ದಿನದಿರುಳ್ ಕಂಡಳತ್ಯಂತ ಭೀಕರದ ಕನಸಂ (ಜೈಮಿಭಾ. ೨೪–೪೬). **೨.** ಈಗಿನ ಆನೆಗೊಂದಿ ಎಂಬ ಊರು. [ಇಭ + ನಗರ]

**ಇಭಪತಿ** (ನಾ). ಆನೆಗಳ ಒಡೆಯ; ಶ್ರೇಷ್ಠವಾದ ಆನೆ: ಒರ್ಕೋಲ್ ಪೊರಜೆಗೆ ಬಗೆವೊಡೆದಿರ್ಕುಂ ನಟ್ಟುಗಿಯೆ ಗಣಪನಂತಿಭಪತಿ ಕುಳ್ಳಿರ್ಕುಂ (ಶಾಂತಿಪು. ೩–೨೭); ಇಭಪತಿಯನೇಱಿ ವೈಶ್ಯಪ್ರಭು ಪೊನ್ನಂ ರಾಶಿಮಾಡಿ ರಾಗದೆ ನೋಡುತ್ತೆ (ಜೀವಸಂ. ೧೦೫–೩೧). [ಇಭ + ಪತಿ$_2$]

**ಇಭಪುರ** (ನಾ). = ಇಭನಗರ ೧ : ರಾಯನಾಜ್ಞೆಯೊಳಿಭಪುರದ ಹೊಱಗಾಯತದ ಭೂಮಿಯಲಿ ವಾಸ್ತುವಿಧೇಯವೆನಲಳವಡಿಸಿದರು ಹನ್ನೆರಡು ಯೋಜನವ (ಕುವ್ಯಾಆ. ೭–೧೩). [ಇಭ + ಪುರ$_3$]

**ಇಭಮುಖ** (ನಾ). **೧.** ಆನೆಯ ಮುಖ. **೨.** ಆನೆಯ ಮುಖವುಳ್ಳವನು; ಗಜಾನನ; ವಿಘ್ನೇಶ್ವರ: ಇಭಮುಖಾರ್ಚನೆಯಂ ನವಗ್ರಹದ ಪೂಜೆಯಂ ವಿಭವದಿಂ ಮಾಡಿ (ಜೈಮಿಭಾ. ೮–೧೧). [ಇಭ + ಮುಖ]

**ಇಭರಿಪು** (ನಾ). ಆನೆಯ ಶತ್ರು; ಸಿಂಹ: ಇಭರಿಪುವಂ ತಕ್ಕಱಿವಿನೆಗಂ ನೊಂದು ನಿಂದು ಕೊಂದುದಿಭೇಂದ್ರಂ (ಶಾಂತಿಪು. ೨–೧೦೬). [ಇಭ + ರಿಪು]

**ಇಭವಕ್ತ್ರ** (ನಾ). = ಇಭಮುಖ **೨** : ಇಭವಕ್ತ್ರನೀಕೃತಿಗಜಸ್ರಂ ಮಾಳ್ಕೆ ನಿರ್ವಿಘ್ನಮಂ (ಶಬಶಂ. ೧–೭). [ಇಭ + ವಕ್ತ್ರ]

**ಇಭವಿದ್ವೇಷಿ** (ನಾ). = ಇಭರಿಪು: ಇಭವಿದ್ವೇಷಿಗೆ ವಿಕ್ರಮಂ ಪರಿದಳ ನ್ಮಂದಾರಪುಷ್ಪಕ್ಕೆ ಸೌರಭಂ . . . ಸಾಜಂ (ಶಾಂತಿಪು. ೧೧–೯೪). [ಸಂ. ಇಭವಿದ್ವೇಷಿನ್ (ಇಭ + ವಿದ್ವೇಷಿನ್)]

**ಇಭವೈರಿ** (ನಾ). = ಇಭರಿಪು: ಕರಿಗಳಂ ಗೆಲ್ದನಿತಱೊಳಿಭವೈರಿ ಶರಭಮಂ ಗೆಲ್ದಪುದೇ (ಪಂರಾಮಾ. ೧೦–೨೩೪). [ಇಭ + ವೈರಿ]

**ಇಭಶಿಕ್ಷಕ** (ನಾ). ಆನೆಗಳನ್ನು ಪಳಗಿಸುವವನು; ಮಾವಟಿಗ: ನೆರೆದಿಭಶಿಕ್ಷಕರ್ ಕಲಿಸಲೇರ್ವೆಸನಂ ಕಲುತಿರ್ಪ ಗಂಧಸಿಂಧುರಚಯಂ . . . ಒಪ್ಪುಗುಂ (ಜಗವಿ. ೨–೧೭). [ಇಭ + ಶಿಕ್ಷಕ]

**ಇಭಶಿಶು** (ನಾ). ಆನೆಯ ಮರಿ: ಸಲ್ಲಕೀಪಲ್ಲವಮಿಭಶಿಶುವಂ ಕೊರ್ವಿಸೆ (ಪುಷ್ಪಪು. ೫–೬೯). [ಇಭ + ಶಿಶು]

**ಇಭಸ್ಥೂಲತೆ** (ನಾ). ಆನೆಯಂತೆ ಸ್ಥೂಲವಾಗಿರುವಿಕೆ: ಇಭಸ್ಥೂಲತೆಯನಾಂತೊಡಂ ಚಕಿತಹರಿಣನ ಚಲಚ್ಚರಣವೈಖರಿಯಿಂದೆ . . . ಮೆರೆಯುತಿರ್ದನು ನಿಶಾಚರಂ (ಶ್ರೀರಾಮಾ. ೪೫೭–೩೩೨). [ಇಭ + ಸ್ಥೂಲತೆ]

**ಇಭಹಸ್ತ** (ನಾ). ಆನೆಯ ಸೊಂಡಿಲು: "ಇಭಹಸ್ತಂ ಭೇಕ ಶುಂಡಾಂಕಿತಂ" (ನಾನಾರ. ೧೩೨). [ಇಭ + ಹಸ್ತ]

**ಇಭಾಂತಕ** (ನಾ). ಆನೆಗಳನ್ನು ಕೊಲ್ಲುವಂಥದು; ಸಿಂಹ: ವಿಲಯ ಮೃತ್ಯುವಂತೆ ತವೆಕೊಂದುದು ತಿಂದುದಡೊಂದಿಭಾಂತಕಂ (ರಾಜಶೇ. ೫–೧೧೯). [ಇಭ + ಅಂತಕ]

**ಇಭಾಯಿತೆ** (ನಾ). ಹಸ್ತಿನಿ ಜಾತಿಯ ಹೆಂಗಸು: ಹರಿಣಿ ಅಶ್ವಿನಿ ಇಭಾಯಿತೆಯರೆಂಬ ತ್ರಿವಿಧ ಪರಿಮಾಣ ಪ್ರಮದೆಯರಿಂ (ವಿವೇಕ. ೨೨೯). 'ಇಬಿಕೆ' ಪರಾ. [ಸಂ. ಇಭಾಯಿತಾ]

**ಇಭಾರೋಹಕ** (ನಾ). ಆನೆಯನ್ನು ಹತ್ತುವವನು; ಆನೆಯ ಸವಾರ: ತಾಮುಂ ಪೊಣರ್ದರಿಭಾರೋಹಕರ್ ವಿಳಾಸದಿನಾಗಳ್ (ರಾಜಶೇ. ೧೩–೮೬). [ಇಭ + ಆರೋಹಕ]

**ಇಭಾಸುರ** (ನಾ). = ಇಭದೈತ್ಯ: ಭಾಸುರೋನ್ನತಭಾಸಯುತ ಶೋಭಾ ಸನಾತನ ನೂತನಾಂಗನಿಭಾಸುರಾಜಿನವಾಸನಾ ಕೈಲಾಸವಾಸದಲಿ (ಬಸಪು. ೧–೪೫). [ಇಭ + ಅಸುರ]

**ಇಭಿ** (ನಾ). ಹೆಣ್ಣಾನೆ; ಪಿಡಿ (ಕ). [ಸಂ. ಇಭೀ]

**ಇಭೇಂದ್ರ** (ನಾ). ಆನೆಗಳ ಒಡೆಯ; ಆನೆಯ ಹಿಂಡಿನಲ್ಲಿ ಮುಖ್ಯವಾದುದು; ಸಲಗ: ಇಭರಿಪುವಂ ತಕ್ಕಱಿವಿನೆಗಂ ನೊಂದು ನಿಂದು ಕೊಂದುದಿಭೇಂದ್ರಂ (ಶಾಂತಿಪು. ೨–೧೦೬). [ಇಭ + ಇಂದ್ರ]

**ಇಭೇಂದ್ರಶಿಕ್ಷೆ** (ನಾ). **೧.** ದೊಡ್ಡ ಆನೆಗಳನ್ನು ಪಳಗಿಸುವುದು. **೨.** ಆನೆಗಳನ್ನು ಪಳಗಿಸುವ ವಿದ್ಯೆ; ಗಜಶಾಸ್ತ್ರ: ಭರತಾಭ್ಯಾಸಮಿಭೇಂದ್ರಶಿಕ್ಷೆ . . . ಎಂಬಿನಿತಱೊಳಂ ಪಡೆದನತಿಕೌಶಲಮಂ (ಪುಷ್ಪಪು. ೪–೫೯, ೬೦). [ಇಭೇಂದ್ರ + ಶಿಕ್ಷೆ]

**ಇಭ್ಯ** (ಗು). **೧.** ಆನೆಗಳಿಗೆ ಸಂಬಂಧಿಸಿದ. (ನಾ). **೨.** ಆನೆಗಳ ಗುಂಪು: ಬಧಿರಿತ ಸಮಸ್ತದಿಕ್ತಟಮಧರಿತ ಸರ್ವೇಭ್ಯ [ಪಾಠಾಂ. ಭ] ಗರ್ಜಿತಂ ಕ್ಷುಭಿತಾಂಭೋನಿಧಿಸಲಿಲಂ ಪರೆದುದು ಧುರವಿಧಾನ ಪಟು ಪಟಹ ಕಹಳ ಭೇರೀರಭಸಂ (ಪಂಪಭಾ. ೧೨–೧೭೧). **೩.** ಐಶ್ವರ್ಯವಂತ; ಶ್ರೀಮಂತ: "ಆಢ್ಯಃ, ಸಮೃದ್ಧಃ, ಧನವಾನ್, ಇನಃ, ಇಭ್ಯಃ, ಧನೀ, ಈಶ್ವರಃ — ಈ ೭ ಧನವಂತಂ" (ಹಲಾಯು. ೫೯–೨೦೧). **೪.** ವರ್ತಕ; ವೈಶ್ಯ. 'ಇಭ್ಯಕುಲ' ಪರಾ. [ಸಂ.]

**ಇಭ್ಯಕುಲ** (ನಾ). ವೈಶ್ಯ ಕುಲ; ವರ್ತಕ ವಂಶ: ಪುಣ್ಯಭಾಜನನನ ಪೂರ್ವಮನ್ಮಥನನಿಭ್ಯಕುಲಾಂಬರತಿಗ್ಮರೋಚಿಯಂ ತನಯನನಂದೆ ಪೆತ್ತವೋಲ್ (ಸುಕುಮಾ. ೧೦–೪); ಹಾ ವಿಳಸದಿಭ್ಯಕುಲ ಪದವಿಯೊಳ್ ನಿಂದನೇ (ಜೀವಸಂ. ೧೧೯–೬೪ ರ). [ಇಭ್ಯ + ಕುಲ]

**ಇಭ್ಯಾನ್ವಯ** (ನಾ). ಇಭ್ಯಕುಲಕ್ಕೆ ಸೇರಿದವನು: ಇಭ್ಯಾನ್ವಯನಾಗಿಯುಮತ್ಯುದಾತ್ತವಂಶಪ್ರಿಯನಂತಾ ಸೂರದತ್ತಂ (ಸುಕುಮಾ. ೯–೮೧). [ಇಭ್ಯ + ಅನ್ವಯ]

**ಇಮನೆ** 'ಇಮ್ಮನೆ$_1$' ನೋ.

**ಇಮರಿಸು** (ಕ್ರಿ). ಇಮರುವಂತೆ ಮಾಡು; ಆರಿಸು; ಒಣಗಿಸು (ಕ). [ಇಮರು + –ಇಸು$_3$]

**ಇಮರು, ಇಮಿರು, ಇಮುರು** (ಕ್ರಿ). **೧.** ಒಣಗು; ಆರು; ಇಂಗು; ಬತ್ತು: ಮೊಳಉದ್ದ ನೀರು ನಿಂತು ಆ ನೀರು ಅಲ್ಲಿಯೇ ಇಮರಿಕೊಳ್ಳುವುದರಿಂದ (ಕೃಷಿಪ್ರ. ೩೮); ಬತ್ತದೆ ಉಳಿದಿದ್ದ ಸ್ವಲ್ಪ ಆಸೆಯೂ ಈ ಸುದ್ದಿಯಿಂದ ತೀರ ಇಂಗಿತು, ಇಮರಿ ಹೋಯಿತು (ಚಿಕರಾ. ೩೫೯); ಅವರ ಭಯ ಇಮರಿಹೋಯಿತು (ಪುನರು. ೬). **೨.** ಕಳೆಗುಂದು; ಕ್ಷಯಿಸು (ಉಕ). **ಇಮಿರು** : **೧.** ಕರಿಯ ಗುಡ್ಡೆ ಬೆಳ್ಳಗಾಗುವುದು ಇಲ್ಲವೇ ಒಡೆದು ಕಣ್ಣು ಇಮಿರಿ ಹೋಗುವುದು (ನಿಮ್ಮದೃ. ೧೧೧). **ಇಮುರು** : "ಒಣಗು; ಉಮರು; ಇಂಗು" (ಜಾನಕೋ. ೧೭). [ದೇ. ‖ ತೆಲು. ಇವುರು, ಇಮುರು]

**ಇಮಾನಿ** (ನಾ). **೧.** (ಉಕ). ವಿಶ್ವಾಸ; ನಿಷ್ಠೆ; ನಂಬಿಕೆ: ಈಟು ವರ್ಷ ಈ ಮನ್ಯಾಗ ಇಮಾನೀಲೆ ನೌಕರಿ ಮಾಡಿದೆ. ಕೆಳಗೆ ಬಿದ್ದ ಒಂದು ರೊಟ್ಟಿಚೂರು ಸೈತ ತಗೊಂಡಿಲ್ಲರಿ (ಧನಂಜ. ೪೫). **೨.** ವಿಶ್ವಾಸಪಾತ್ರ: ಆವನಂತಹ ಸಂಭಾವಿತ ಹಾಗೂ ಇಮಾನೀ ಸೇವಕನನ್ನು ನಾನೆಲ್ಲಿಯೂ ನೋಡಿಲ್ಲ (ಹಂಸಾ. ೭೫); ಗೋಪೀಚಂದ್ರನು ಬಹಳ ಇಮಾನಿ (ಅಂಬಿಕೆ, ೧೦೪). [← ಅರ. ಈಮಾನ್]

**ಇಮಾರತಿ** 'ಇಮಾರತು' ನೋ.

**ಇಮಾರತೀಕೆಲಸ** (ನಾ). ಕಟ್ಟಡದ ಕೆಲಸ : ಇಮಾರತೀ ಕೆಲಸಕ್ಕೆ ಬರುವ ಮರಗಳು (ಮುಂಬಯಿ. ೬-೨೭೭).

[ಇಮಾರತಿ (< ಇಮಾರತು) + ಕೆಲಸ]

**ಇಮಾರತು,** ಇಮಾರತಿ (ನಾ). ಭಾರಿ ಕಟ್ಟಡ ; ಮಹಲು : ಈ ಶಿಲೆಗಳನ್ನು ಇಮಾರತಿನಲ್ಲಿ ಇದುವರೆಗೆ ಯಾರೂ ಉಪಯೋಗಿಸಿಲ್ಲವೆಂಬುದು ಆಶ್ಚರ್ಯವು (ಕಭಾಗೆ. ೩೦) ; ವಿಜಾಪುರದೊಳಗಿನ . . . ದೊಡ್ಡ ದೊಡ್ಡ ನಾಮಾಂಕಿತ ಇಮಾರತುಗಳು ಆವರ ಕಾಲದಲ್ಲಿ ಆದವು (ಮುಂಬಯಿ. ೪-೧೪೨) ; ಖಾನಾಪುರ ತಾಲೂಕಿನಲ್ಲಿ ದೊರೆಯುವ ಬಿರುಸಾದ ಶೀಣೀ ಕಲ್ಲುಗಳು ಇಮಾರತಿನ ಕೆಲಸಕ್ಕೆ ಬರುತ್ತವೆ (ಬೆಳವ. ೩೫) ; ಅದೊಂದು ವಿಶಾಲವಾದ ಕಟ್ಟಡ, ಭವ್ಯವಾದ ಇಮಾರತು (ಮುಗಿಮ. ೨೦). **ಇಮಾರತಿ :** ವಾಗಿನಗಟ್ಲೆ ಇಟ್ಟಂಗಿ, ಸುಣ್ಣ, ಇಮಾರತಿಯ ಕಟ್ಟಿಗೆ . . . ಬರಹತ್ತಿದವು (ಮುಳ್ಳುಬೇ. ೧೭) ; ಕೆಲವು ಇಮಾರತಿಗಳು (ದೇವಾಲಯಗಳು) ಶಿಲಾಲೇಖಗಳು ಇವುಗಳ ಆಧಾರದಿಂದ . . . ಪ್ರಸಿದ್ಧವಾಗಿದ್ದಂತೆ ಕಂಡುಬರುತ್ತದೆ (ವಿವರ್ಣ. ೬). [← **ಮರಾ. ಅರ.** ಇಮಾರತ್]

**ಇಮಿರು** 'ಇಮರು' ನೋ.

**ಇಮುರು** 'ಇಮರು' ನೋ.

**ಇಮೆ** (ನಾ). ಕಣ್ಣಿನ ರೆಪ್ಪೆ : ರಜನಿ ಯಿಮೆಯಿಮೆಯಿಂ ಮಧು ದಿನಾಂತದ ಶಾಂತಿ ಕನವರಿಯುವಂತೆ (ಗಳವಿಂ. ೩೨-೭). 'ಎವೆ' ಪರಾ.

[**ದೇ.** ‖ **ತಮಿ.** ಇಮ್ಮೈ = ರೆಪ್ಪೆ, ರೆಪ್ಪೆಹೊಡೆ ; **ಮಲ.** ಇಮ ; **ತುಳು.** ಇಮೆ, ಸಿಮೆ]

**ಇಮ್ಮಗೆ** (ಅ). = ಇಮ್ಮನೆ$_2$ : ಬಾಯ ಕಂಪನಾವಗಮೆಡೆ ಸೂಜಿಗೊಂಡೆಸಗಿತಿಮ್ಮಗೆ ಕಮ್ಮಗೆ ಮಂದಮಾರುತಂ (ಲೀಲಾವ. ೧೦-೩೯).

[ಇಮ್ಮು + -ಅಗೆ$_3$]

**ಇಮ್ಮಡಲು** (ನಾ). ಎರಡು ಮಡಲು ; ಉಭಯ ಪಾರ್ಶ್ವ (?) : ಬಸದಿಯ ಮುಂತಣ ಇಮ್ಮಡಲು ಬೆದಲೆಯುಮಂ ಬಳ್ಳಿಗಟ್ಟಮುಮಂ (ಎಕ. V, ಹಾಸನ. ೧೧೨-೧೧ ; 1170 ?).

[ಇರ್$_2$ (< ಎರಡು) + ಮಡಲು (< ಮಡಲ್$_1$)]

**ಇಮ್ಮಡಿ** 'ಇರ್ಮಡಿ' ನೋ.

**ಇಮ್ಮಡಿಕೆ** 'ಇರ್ಮಡಿಕೆ' ನೋ.

**ಇಮ್ಮಡಿಸು** 'ಇರ್ಮಡಿಸು' ನೋ.

**ಇಮ್ಮಣ್ಣಿ** (ನಾ). ಸೊಂಟಕ್ಕೆ ಕಟ್ಟಿಕೊಳ್ಳುವ ಉದ್ದನೆಯ ಹಣದ ಚೀಲ ; ಥೈಲಿ : ನೆಕ್ಲುದೋವ್ ತನ್ನ ಇಮ್ಮಣ್ಣಿಯಿಂದ ಹಣ ತೆಗೆದು ಮುದುಕನಿಗೆ ನೀಡಿದನು (ಪುನರು. ೫೬೨).

[← **ಮರಾ.** ಹಮಿಣೀ, ಹಮಿನೀ]

**ಇಮ್ಮತ್ತರ್** 'ಇರ್ಮತ್ತರ್' ನೋ.

**ಇಮ್ಮತ್ತರು** 'ಇರ್ಮತ್ತರ್' ನೋ.

**ಇಮ್ಮತ್ತಲು** 'ಇರ್ಮತ್ತರ್' ನೋ.

**ಇಮ್ಮನ$_1$** (ನಾ). **೧.** ಎರಡು ಮನಸ್ಸು ; ದ್ವಿಮುಖವಾದ ಮನಸ್ಸು : ನಿಜ ಜಂಜಡದಲಿಮ್ಮನವಾಗಿ ಭಕ್ತಿಯ ಮಾಡಿ ಸಂಫಲವ ಪಡೆಯಲಿಲ್ಲದೆ ಬಂದು ನೀ . . . ತೊಡಕಿಕೊಂಡೊಡೆ ಸಿಕ್ಕನಲ್ಲಮ (ಪ್ರಭುಲೀ. ೭-೬೯) ; ಒಮ್ಮನದಿ ಶಿವಪೂಜೆ ಗುಮ್ಮನೇ ಮಾಡುವದು ಇಮ್ಮನವ ಪಿಡಿದು ಕೆಡಬೇಡ ವಿಧಿವಶವು ಸುಮ್ಮನೆ ಕೆಡುಗು (ಸರ್ವಜ್ಞ. ೧೬೬). **೨.** ಎರಡು ಅಳತೆ : **೧, ೨.** ಒಮ್ಮನವಾದರೆ ಒಡನೆ ನುಡಿವನು ಇಮ್ಮನವಾದರೆ ನುಡಿಯನು (ಬಸವ. ೧೧೫).

[ಇರ್$_2$ (< ಎರಡು) + ಮನ ; ಇರ್$_2$ (< ಎರಡು) + ಮಾನ]

**ಇಮ್ಮನ$_2$** 'ಇರ್ಮಾನ' ನೋ.

**ಇಮ್ಮನೆ$_1$,** ಇಮನೆ (ನಾ). ಎರಡನೆಯ ಮನೆ; ಎರಡನೆಯ ಸಂಬಂಧ: ಇಮ್ಮನಿ[ನೆ] ವರ ನಾ ಒಲ್ಲೆ ಅಂದುಬಿಟ್ಲು ವಚ್ಚಿ (ವೈನಿ. ೨೧೧) ; ಒಂದು ವರ ಅಂತ ಸಿಕ್ಕರ ಸಾಕು ಒಮ್ಮನಿ[ನೆ] ಇರ್ಲಿ, ಇಮ್ಮನಿ[ನೆ] ಇರ್ಲಿ, ಮುಮ್ಮನಿ[ನೆ] ಇರ್ಲಿ (ವೈನಿ. ೧೬೮). **ಇಮನೆ :** ಇಮನೇವರಾ ಅಂದರೂ ಏನಡ್ಡಿಯಿಲ್ಲ (ಪಿಡುಗು. ೫೯) ; ಇಮನೀ[ನೆ] ವರ ; ನಾವಾದರೂ ಏಕೆ ಗಟ್ಟಿ ಹಿಡಿಯಬೇಕು ? (ಸಮಜೀ. ೨೫೨).

[ಇರ್$_2$ (< ಎರಡು) + ಮನೆ]

**ಇಮ್ಮನೆ$_2$** (ಅ). ಇಂಪಾಗಿ ; ಮಧುರವಾಗಿ ; ಸಂತೋಷದಿಂದ ; ಸುಖದಿಂದ (?) ; "ಸುಮ್ಮನೆ" (ಆದಿಪು. ಕೋಶ) : ಅಮರಾಂಗನೆಯರ್ ನಿಜವದನವನಿಮ್ಮನೆ ನೋಟ್ಪಿನ[ಪಾಠಾಂ. ವದನಮನಿರ್ಮನಮಾರ್ಪಿನ]ಮಚ್ಯುತಂ ಪರಿಚ್ಯುತನಾದಂ (ಆದಿಪು. ೬-೨೦) ; ಕಂಡು ಕಂಡು ಶಿವ ಮರುಳ್ಗೊಂಡಾಲಿಂಗಮಂ ಸಡಿಲ್ಚಿ ಪುಟಂ ನೆಗದಡ್ಡಂಗೆಡದು ಹೊಮ್ಮಿ ಹೊರಳ್ದು ಇಮ್ಮನೆ [ಪಾಠಾಂ. ಜಮ್ಮನೆ] ಬೆಮರ್ತು ಝೊಮ್ಮಿಟ್ಟು ಜೋಲ್ದು (ಒಹಿರ. ೧೫೩-೩). [ಇಮ್ಮು + -ಅನೆ$_1$]

**ಇಮ್ಮಯ್** (ನಾ). ಸುಂದರವಾದ ಅಥವಾ ಚೆಲುವಾದ ಶರೀರ. 'ಇಮ್ಮಯ್ಯ' ಪರಾ.

[< ಇನಿದು + ಮಯ್ (< ಮೆಯ್)]

**ಇಮ್ಮಯ್ಯ** (ನಾ). ಸುಂದರವಾದ ಅಥವಾ ಚೆಲುವಾದ ಶರೀರವುಳ್ಳವನು (?) : ಸಮ್ಮಂಥ ಸರ್ವದಾಗಮ್ಯ ಹಮ್ಮಿನ ದೈವ ಖಮ್ಮಹಿಯೊಳಗೆ ಅಹಂಮತಿಯುವ ನಾನೆ ದಮ್ಮಯ್ಯಾ ಇಮ್ಮಯ್ಯಾ ಲಾಲಿಸು ನಮ್ಮಯ್ಯಾ ನಿಮ್ಮನವಾಗಿ ನಿನಗೆ ನಮ್ಮೊ ನಮೊ ಎಂಬೆ (ಶೀರ್ಥಮ. ೧೦೭).

[ಇಮ್ಮಯ್ + -ಆ$_7$]

**ಇಮ್ಮಾತು$_1$** (ನಾ). ಮಧುರವಾದ ಮಾತು; ಸವಿ ಮಾತು; ಇಂಪಾದ ಮಾತು : ಇಮ್ಮಾತು [ಪಾಠಾಂ. ಇನಿಮಾತು]ಗಳಿಂದಂದೋಹಿಲದೇವಂ ನಲವಿಂ . . . ಬಿಚ್ಚತದಿಂ ತುತಿಸೆ (ಉದ್ಭದೇ. ೩-೩೯).

[< ಇನಿದು + ಮಾತು$_1$]

**ಇಮ್ಮಾತು$_2$** (ನಾ). ಎರಡು ಮಾತುಗಳು.

[ಇರ್$_2$ (< ಎರಡು) + ಮಾತು$_1$]

**ಇಮ್ಮಾನ** 'ಇರ್ಮಾನ' ನೋ.

**ಇಮ್ಮಾವು** (ನಾ). ಸಿಹಿಯಾದ ಮಾವು ; ಇನಿಮಾವು : "ಮಾಕಂದವಿಮ್ಮಾವಿನೊಳ್" (ಕರ್ಣಾನಿ. ೪೫) ; "ಇಮ್ಮಾವೆನಲ್ ಶೀಮಾವಿನಲ್ಲಿ . . . ತೋರ್ಕುಂ" (ಕಶರ. ೧೪) ; ಬೀಯವಲ್ಲಿ ಮಲ್ಲಿಗೆಗಳುಮಿಮ್ಮಾವುಗಳುಮೆಂದೊಡಿಂ ಪೆಚಿತಾವುದು ಸಂಸಾರಸಾರಸರ್ವಸ್ವಫಲಂ (ಪಂಪಭಾ. ೧-೫೫) ; ಕಲ್ಲೆಲ್ಲಂ ಕಿಸುಗಲ್ ಮರನೆಲ್ಲಮುವಿಮ್ಮಾವು ಬಳ್ಳಿಯೆಲ್ಲಂ ಲತೆ ಮುಳ್ಳೆಲ್ಲಂ ಕೇದಗೆ (ಕಾವ್ಯಾವ. ೮೧) ; ಪರಿಪಕ್ವಫಳದಿಂದ ಮಿಳಿರ್ವ ಕೊನೆಗೊಂಬಿನಿಂದಿಮ್ಮಾವುಗಳ ಬಳಗ ಸೊಗಯಿಸಿದುದು (ಸೌಂದಪು. ೫-೮೮) ; ಕಜಿಿದು ಚಂದ್ರನ ಜೊನ್ನರಸದಿಂ ಬೆಳಸಿದಿಮ್ಮಾವು (ಸಾಳ್ವಭಾ. ೨-೩). [< ಇನಿದು + ಮಾವು]

**ಇಮ್ಮಿತು,** ಇಮ್ಮಿದು (ಗು). ಇನಿದಾದ ; ಚೆಲುವಾದ. 'ಇಮ್ಮಿದ' ಪರಾ. **ಇಮ್ಮಿದು :** 'ಇಮ್ಮಿದ' ಪರಾ. [?]

**ಇಮ್ಮಿದ** (ನಾ). ಚೆಲುವ ; ಸುಂದರ ; ಪ್ರಿಯ ; ಮನೋಹರ.

**ಇಮ್ಮಿದಳ್** = ಚೆಲುವೆ ; ಸುಂದರಿ ; ಪ್ರಿಯೆ ; ಮನೋಹರಿ : ಇನಿಯಳ್, ಇಮ್ಮಿದಳ್, ಕಮ್ಮಿದಳ್ (ಶಮದ. ೨೦೮ ಪ್ರಯೋ) ; ಜನ್ಮ ಸಾವಿರ ಬರಲಿ, ನಷ್ಟವದರಿಂದೇನು . . . ಇಮ್ಮಿದಳ ಸರಸವದು (ಮಂಕುಕ. ೯೧೬). [ಇಮ್ಮಿದು (< ಇಮ್ಮಿತು) + -ಅ$_7$]

**ಇಮ್ಮಿದಳ್** 'ಇಮ್ಮಿದ' ಪರಾ.

**ಇಮ್ಮಿದು** 'ಇಮ್ಮಿತು' ನೋ.

**ಇಮ್ಮು** (ನಾ). ಇಂಪು; ಸೊಗಸು: "ಅಮೃತ" (ಚತುನಿ. ಕಿ. I, ೮೨); ರಾಗಿಸದಿಮ್ಮೆನ್ನದೆ ನೆಜೆ ಬೇಗಂ ಕೇಳ್ದಾಗಳಲ್ಲಿ ಸುಖಿಸದೆ (ಕವಿಚ. II, ೧೭೬); ಭೂತಜಾತದ ವೇದ ತುದಿಕಳಿಸಿ ನಾಲಗೆಗೆ ಇಮ್ಮು ಚಿಮ್ಮಲಿ (ಉಯ್ಯಾಲೆ. ೧೫–೧೨).

**ಇಮ್ಮುಮುಮ್ಮು** = ಸವಿಯಾದ ಆಹಾರ: ಮಾನವಲೋಕವೆಲ್ಲ ಹಸಿದು ನೀರಡಿಸಿರುವುದು ಅಲ್ಲಿಯ ಇಮ್ಮುಮುಮ್ಮಿಗಾಗಿ, ಆ ಸೋಮ ರಸಕ್ಕಾಗಿ, ಆ ಅಮೃತಕ್ಕಾಗಿ (ಸಾಹಿವಿ. ೧೩).

[← **ತೆಲು.** ಇಮ್ಮು = ಸುಖ, ಪ್ರೀತಿ, ಸಂತೋಷ]

**ಇಮ್ಮೆ** 'ಇರ್ಮೆ' ನೋ.

**ಇಮ್ಮೆಯ್** 'ಇರ್ಮೆಯ್' ನೋ.

**ಇಮ್ಮೆಯ್ಗಾಣ್** 'ಇರ್ಮೆಯ್ಗಾಣ್' ನೋ.

**ಇಮ್ಮೆಯ್ಗೊಳ್** (ಕ್ರಿ). ಮೈಯಲ್ಲಿ ನಟ್ಟು ಹೊರಬರು; ಆಳವಾಗಿ ಭೇದಿಸು: ಎನ್ನ ಹೊಗಳತೆ ಎನ್ನನಿಮ್ಮೆಯ್ಗೊಂಡಿತ್ತಲ್ಲಾ (ಬಸವ. ೩೮೬); ನೂತನಾಸ್ತ್ರಂಗಳಿಮ್ಮೆಯ್ಗೊಂಡು (ಇಹರ. ದೇ. ೪೩–೬).

[ಇಮ್ಮೆಯ್ (< ಇರ್ಮೆಯ್) + ಕೊಳ್$_1$]

**ಇಮ್ಮೆಯ್ಜೋಡು, ಇಮ್ಮೈಜೋಡು** (ನಾ). ಮೈಯ ಮುಂಭಾಗ ಹಿಂಭಾಗಳಿಗೆ ಕಟ್ಟುವ ಕವಚ; ಜೋಡಿ ಪದರದ ಕವಚ (?): ಗೋಳಾಯಿಲರೆಲ್ಲ ಇಮ್ಮೆಯ್ಜೋಡನ್ನು . . . ಧರಿಸಬೇಕೆಂದೂ (ಮಂತ್ರಶ. ೯೮–೧೫). **ಇಮ್ಮೈಜೋಡು**: ಹಜಿದುದಿಮ್ಮೈಜೋಡು ನೆತ್ತರಿ ನೊಜತೆ ನೂಕಿತು (ಕುವ್ಯಾಕ. ೨೪–೬); ಪರಿದುದಿಮ್ಮೈಜೋಡುಗಳ್ ಸರಳು ಕಾಯದೋಳ್ ಮುರಿದುದು (ತುರಂಗ. ೫೨–೨೭).

[ಇಮ್ಮೆಯ್ (< ಇರ್ಮೆಯ್) + ಜೋಡು]

**ಇಮ್ಮೈ** 'ಇರ್ಮೆಯ್' ನೋ.

**ಇಮ್ಮೈಗನ್ನಡಿ** (ನಾ). ಎರಡು ಪಾರ್ಶ್ವಗಳಲ್ಲಿಯೂ ಪ್ರತಿಬಿಂಬ ಕಾಣುವ ಕನ್ನಡಿ; ಮುಮ್ಮೈ ಮತ್ತು ಹಿಮ್ಮೈ ಎರಡು ಕಡೆಯೂ ಪ್ರತಿಬಿಂಬ ಕಾಣುವ ಕನ್ನಡಿ: ಅನ್ನೆಗಂ ಪಶ್ಚಿಮಾಂಗನೆ ಲೀಲೆಯಿಂ ಪಿಡಿದ ರನ್ನದಿಮ್ಮೈಗನ್ನಡಿಯೊ . . . ಎನಲಸ್ತಗಿರಿಮಸ್ತಕದೊಳಿನಬಿಂಬ ಮೆಸೆದಿರ್ದುದು (ಚಿಬಪು. ೯–೨). [ಇಮ್ಮೈ (< ಇರ್ಮೆಯ್) + ಕನ್ನಡಿ]

**ಇಮ್ಮೈಗಾಣ್** 'ಇರ್ಮೆಯ್ಗಾಣ್' ನೋ.

**ಇಮ್ಮೈಗಾಣಿಕೆ** (ನಾ). ಎರಡು ಪಾರ್ಶ್ವಗಳಲ್ಲಿಯೂ ಕಾಣಿಸಿಕೊಳ್ಳುವಿಕೆ: ಹೂಣಿಕೆಯ ಸಬಳಿಗರೊಳಿಮ್ಮೈಗಾಣಿಕೆಯ ಬಲು ಸೂತ ರಥಿಕರ ಜಾಣತಿಯ ಬಿಲ್ಲವರ ಧಾಳಾಧೂಳಿ ಬಲುಹಾಯ್ತು (ಕುವ್ಯಾಕ. ೨–೧೪). [ಇಮ್ಮೈ (< ಇರ್ಮೆಯ್) + ಕಾಣಿಕೆ (< ಕಾಣ್)]

**ಇಮ್ಮೈಜೋಡು** 'ಇಮ್ಮೆಯ್ಜೋಡು' ನೋ.

**ಇಮ್ಮೈಸಿರಿವಂತ** (ನಾ). (ಅಂತರಂಗದ ಮತ್ತು ಬಹಿರಂಗದ) ಎರಡೂ ಬಗೆಯ ಐಶ್ವರ್ಯವುಳ್ಳವನು: ಅಂತರಂಗದ ಸಿರಿ ಬಹಿರಂಗ ಸಂಪದವಿಂತೆರಡೊಡಗೂಡಿದವನಾ ಅಂತಿಂತುಟೆಂದೆನಲಜಿಯೆನಿಮ್ಮೈಸಿರಿ ವಂತನೆಂದೆನಬಲ್ಲೆನನುಜಾ (ಭರಚ. ೬೬–೧೪೯).

[ಇಮ್ಮೈ (< ಇರ್ಮೆಯ್) + ಸಿರಿವಂತ]

**ಇಮ್ಮೊಳ** 'ಇರ್ಮೊಳ' ನೋ.

**ಇಯತ್ತೆ, ಈಯತ್ತೆ** (ನಾ). (ಉಕ) ತರಗತಿ: ನಾನು ಕನ್ನಡ ಆರನೆಯ ಇಯತ್ತೆಯವರೆಗೆ ಶಿಕ್ಷಣ ಪಡೆದಿದ್ದೆನು (ಸ್ಕೂಲಮಿ. ೧); ಇಯತ್ತೆ ಇಯತ್ತೆಗಳನ್ನು ದಾಟ ಅವನು . . . ಪರೀಕ್ಷೆಯಲ್ಲಿ ಪಾಸಾಗಿಬಿಟ್ಟನು (ತೊಳಮು. ೧೯೦); ಆತ ಕನ್ನಡ ನಾಲ್ಕನೆಯ ಇಯತ್ತೆಯಲ್ಲಿದ್ದ (ವೈನಿ. ೩೭). **ಈಯತ್ತೆ**: ಕನ್ನಡ ನಾಲ್ಕನೆಯ ಈಯತ್ತೆ ಪಾಸಾಗಿದ್ದೇನೆ! ಎಂದಬಳಿಕ ನನ್ನನ್ನು ಕೇಳುವವರಾರು (ಯಾಹೊಣೆ. ೩). [← **ಮರಾ.** ಇಯತ್ತಾ]

**ಇಯಾಂಡು** (ನಾ). ವರ್ಷ; ಸಂವತ್ಸರ: ಇಯಾಣ್ಡು ಒಂಭತ್ತಾವುದ ಜುಳ್ ನುಗುನಾಡ ಒಜೆಯ ಬೆಳತೂರ ಒಡೆದು ಬಿಟ್ಟು ಭೂಮಿಲಬ್ಬ ಮಾಗಿ ಕೆಟ್ಟ ದೇಗುಲಮಂ ಮಾಡಿಸಿ (ಎಕ. IV, ಹೆಗ್ಗಡ. ೧೬–೪; 1021); ಶ್ರೀರಾಜೇನ್ದ್ರಚೋಳದೇವರ್ಕ್ಕ ಇ[ಯಾ]ಣ್ಡು ಪತ್ತಾವುದು (ಸೌಇಇ. IX–i, ೩೦೦–೧; 11ನೆಯ ಶತ).

[← **ತಮಿ.** ಆಣ್ಡು, ಯಾಣ್ಡು; **ಕೊಡ.** ಅಂಡೀ; **ತುಳು.** ಇಯ್ಯೊಡು, ಈಯ್ಯೊಡು = ಈ ವರ್ಷ; **ತೆಲು.** ಏಡು, ಏಡದಿ; **ಪರ್ಜಿ.** ಇಯದ್; **ಗೊಂಡಿ.** ಯೇಂಡ್; **ಕೊಂಡ.** ಇಯೊಂಡ್]

**ಇರ್$_1$, ಇರು$_1$, ಇಟ್** (ಕ್ರಿ). (ಕ್ರಿಯಾರೂಪಗಳು) **ಇತ್ತು$_2$, ಇದಾನೆ, ಇದಾರೆ, ಇದಾಳೆ, ಇದೆ, ಇದ್ದಾನೆ, ಇದ್ದಾರೆ, ಇದ್ದಾಳೆ, ಇದ್ದುದು, ಇದ್ಧಾನೆ, ಇದ್ಧಾರೆ, ಇದ್ಧಾಳೆ, ಇದ್ಧೀ, ಇಧಾನೆ, ಇಧಾರೆ, ಇಧಾಳೆ, ಇಧೆ, ಇಧೇವೆ, ಇಪ್ಪುದು, ಇರ್ದತ್ತು, ಇರ್ದುದು, ಇವೆ.** (ಕೃದಂತ ರೂಪಗಳು) **ಇದ್ದ, ಇದ್ದು, ಇಪ್ಪ, ಇರುವ, ಇರ್ದ, ಇರ್ದು, ಇರ್ಪ, ಇಹ$_1$, ಇಟ್ದ, ಇಟ್ದು.** (ನಿಷೇಧ ರೂಪಗಳು) **ಇರಅದೆ, ಇರದೆ.** (ಸತಿಸಪ್ತಮೀ ರೂಪಗಳು) **ಇರಲ್, ಇರಲು, ಇರೆ.** (ಪಕ್ಷಾರ್ಥಕ ರೂಪಗಳು) **ಇದ್ದರೆ, ಇಪ್ಪಡೆ.** (ವಿಧ್ಯರ್ಥಕ ರೂಪಗಳು) **ಇರಲಿ, ಇರ್ಕೆ.** (ಸಂಭಾವನಾ ರೂಪಗಳು. ☞ ಇವು ವಿಶೇಷವಾಗಿ ಹೊಸಗನ್ನಡದಲ್ಲಿ ಬಳಕೆಯಲ್ಲಿವೆ) **ಇದ್ದಾತು, ಇದ್ದಾನು, ಇದ್ದಾರು, ಇದ್ದಾವು, ಇದ್ದಾಳು, ಇದ್ದೀತು, ಇದ್ದೀಯೆ, ಇದ್ದೀರಿ, ಇದ್ದೇನು, ಇದ್ದೇವು.** (ಕೃಲ್ಲಿಂಗ ರೂಪಗಳು) **ಇದ್ದುದು, ಇಪ್ಪುದು, ಇರ್ದುದು, ಇರ್ಪುದು, ಇಹುದು. ೧.** ನೆಲೆಗೊಳ್ಳು; ನೆಲಸು: "ಇರ್ [ಪಾಠಾಂ. ಇರು]–ಸ್ಥಾಯೀಭಾವೇ" (ಶಮುಧಾ); ಅವರ ಪೋದೊಡವಂದಿರ ಕಬ್ಬ ಮಿನ್ನುಮಿರ್ಪುವು (ಗದಾಯು. ೧–೪೭); ಶ್ರೀವಧು ರಾಗದಿಂದಗಲದಾವನ ವಕ್ಷದೊಳಿರ್ಪಳ್ (ಪಂಚತಂ. ೧–೧); ಆಯೆಡೆಯೊಳ್ ಸಂಗತಿಯಿಂ ಶ್ರೀಯೊಡೆಯರ್ ಸಲೆಯಿರ್ಪರ್ (ಭಾಷಾಭೂ. ೨೨ ಪ್ರಯೋ); ಕೆಲಸಾರ್ ಸಿಂಹಳ ಸಂತಮಿರ್ ಮಗಧ (ಕುಸುಮಾ. ೩–೯೪). **೨.** ಜೀವಿಸು; ಬದುಕು: ಒಡನಿರಲಿತ್ತುದಿಲ್ಲ ವಿಧಿ ನಮ್ಮ (ಆದಿಪು. ೧೨–೨೫); ಎನ್ನಾಳ್ದನಂ ಕಂಡು ನಿಶ್ಚಿಂತಮಿರ್ಪೆಯಾದೊಡೆ ಎನ್ನೊಡನೆ ಬರ್ಪುದು (ಪಂಚತಂ. ೫೪–೧೯). **೩.** ವಾಸಮಾಡು; ಉಳಿ: ಇನ್ನಾವ ಶೈಳದೊಳಿರ್ಪೆವಿರ್ಪೆಡೆವೇಟ ನೀಂ ತ್ರಿಪುರಾಂತಕಾ (ಪಂಪಭಾ. ೮–೧೧); ಅಂ ಪದ್ಮನಗರದೊಳಿರ್ಪೆಂ (ಪಂಚತಂ. ೧೧೦–೨೧). **೪.** ನಿಲ್ಲು; ತಾಳು; ತಡೆ: ನೀನಿರ್ ಆನೆ ರಿಪುಸೇನೆಗೆ ಸಾಲ್ವೆಂ (ಕಾವ್ಯಸಾ. ೪೧೧ ಶೂದ್ರಕ); ಇರ್ದೆವಿನ್ನೆವರಮಿನ್ನಿರಲಾಗದು ಪೋಪೆವು (ಪಂಪಭಾ. ೩–೨೧); ಇನ್ನಿರೆ ನೆನ್ನು ಸಿಜ್ಗದನ್ತಿರೆ ಹರಿ . . . ಸಿನ್ಧುರದ ಶಿರಾಗ್ರಮಂ ಬಿರಿಯೆ ಪೊಯಿದಂ ಕದನೈಕಸೂದ್ರಕಂ (ಎಕ. III, ಮಂಡ್ಯ. ೪೧–೧೮; 950). **೫.** ವರ್ತಿಸು: ಇರೆ ನವಪದ್ಮರಾಗಚಷಕಂ ನಿಜಹಸ್ತತಳಾಗ್ರದೊಳ್ (ಕಾವ್ಯಸಾ. ೯೬೨ ಶೂದ್ರಕ); ರತ್ನಪ್ರದೀಪಂಗಳಿರ್ಪವೊಲಿರ್ಪರ್ (ವಡ್ಡಾರಾ. ೧–೪); ಒದವಿದ ಪೊನ್ನಪ್ಪೊಡೆ ಜೋಳದ ರಾಶಿಯೊಲಿರ್ಪುದಿಲ್ಲಿ (ಧರ್ಮಾಮೃ. ೧–೧೨೯); ಮುಕುರಂ ಕೈಯೊಳಿರಲ್ಕೆ ನೀರ ನೆಳಲೇಕೈ (ಸೋಮೇಶ. ೩). **ಇರು**: **೧.** ವಾಗ್ದೇವಿಯೆನ್ನೊಳಗಿರು ತಾಯೆ (ಮೋಹತ. ೧–೧೧). **೨.** ಕಟ್ಲೆ ತುಂಬಿದ ಮೇಲೆ ಕ್ಷಣಮಾತ್ರ ಇರಲಿಲ್ಲ (ಪುರಂದ. ೨–೬೧–೫). **೪.** ಇರು ಮರುಳೆ ಶುಷ್ಕವೈಯಾಕರಣಂಗಂ . . . ವಿಷಯಮೆ ಕಾವ್ಯರತ್ನಂ (ಆದಿಪು. ೧–೨೪); ಇರು ಪೆಜದೇನನಿಂ ಪೊಗಟುತಿಟ್ಟಪುದು (ಎಕ. II, ೧೩೩–೨೫; 982). **೫.** ಬತ್ತಲೆಗರ ಮಾತು ಕೇಳದಿರು (ಆದಿಪು. ೨–೯).

△ **ಇಱ್ :** **೧.** ಸುರಲೋಕದ ಮಾರ್ಗದೊಳಿಬ್ದರಿನ್ಬಿನಿಂ (ಎಕ. II, ೧೦೮–೪; 700); ಕಾದಿ ಕೊಂದು ಬಿಜಯಂಗೆಯ್ಯುತಿಬ್ದು (ಎಕ. III, ಮಂಡ್ಯ. ೪೧–೪ ; 950); ಮಲೆದೋರಂತಿಬ್ದನೆಯ್ತನ್ದ (ಎಇ. XVIII, ೧೬೨–೫ ; 985). **ಇತ್ತು₂ :** ಲಡಾಯಿ ಆಗಬೇಕೆಂಬ ಅಪೇಕ್ಷೆ ನಮಗೆ ಇತ್ತಿಲ್ಲಾ (ರಾಜೇಂದ್ರ. ೭೦) ; ಆ ಸಂಶೋಧನಾ ಮಂದಿರವು ಆತನ . . . ದುಡಿತದ ಹೆಗ್ಗುರುತಾಗಿಯೂ ಇತ್ತು (ಸಸ್ಯಕ. ೧೩೦). **ಇದಾನೆ:** ಇವ್ದಾನೆ, ಇವ್ದಾಳೆ, ಇದ್ದೀಯೆ, ಇದ್ದೀರಿ, ಇದ್ದೇವೆ – ಎಂಬ ರೂಪಗಳನ್ನು ಇವಾನೆ, ಇವಾಳೆ, ಇದಾರೆ . . . ಇದೇವೆ – ಹೀಗೆ ಸಂಯುಕ್ತಾಕ್ಷರವಿಲ್ಲದೆ ಉಪಯೋಗಿಸುವುದೂ ಉಂಟು (ಮಧ್ಯಮ. ೮೦). **ಇದಾರೆ, ಇದಾಳೆ :** ಮೇಲಿನ ಪ್ರಯೋಗವನ್ನು ನೋಡಿ. **ಇದೆ :** ಪಣಿತೆಯೂ ಇದೆ ಬತ್ತಿಯೂ ಇದೆ . . . ಗುರುವಿದೆ, ಲಿಂಗವಿದೆ ಶಿಷ್ಯನ ಸುಜ್ಞಾನವಂಕುರಿಸದನ್ನಕ್ಕರ ಭಕ್ತಿಯೆಲ್ಲಿಯದೋ (ಅವಚಂ. ೧೯–೭೮) ; ಎಂಬತ್ತೆಂಟು ಕೋಟಿ ಧನ ನಿನ್ನ ಸಿಂಹಾಸನದ ಕೆಳಗಿದೆ (ಬಸವು. ೫–೫೭) ; ಇದಿರೊಳೀಶನ ಭಾಳನಯನದ ಕದಹು ತೆಗೆದಿದೆ ಹಿಂದೆ ಮರಳುವಡಿದೆ ಕೃತಾಂತನ ಕೊಂತವರಸನ ಮೂದಲೆಯ ವಚನ (ಕುವ್ಯಾದ್ರೌ. ೬–೨೫) ; ಎಳವೆಲರೆಂಬ ಸೊಕ್ಕಾನೆ ತಾನೆ ತನ್ನಿಚ್ಚೆಯಿಂ ತಿರುಗುತಿದೆ (ಜೈಮಿಭಾ. ೩–೨೪) ; ಕಾಂತಿಗುಂದುತ್ತಿದೆ ನಕ್ಷತ್ರಾಳಿ . . . ಕೆಂಪು ಮೂಡುತ್ತಿದೆ ಪೂರ್ವಾದ್ರೀಂದ್ರದೊಳ್ (ರಾಜಶೇ. ೧೩–೪೫). **ಇದ್ದಾನೆ :** ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ (ಬಸವ. ೯೭) ; ಸಿಕ್ಕಿದನಲಾ ಕಳ್ಳನೀತನೆ ಅಕ್ಕ ನೋಡಿದ್ದಾನೆಯೆನುತವೆ ನಾಚಿದಳು ತರಳೆ (ನಿಭಾಗ. ೧೦–೮೮–೨೮) ; ಈ ಸೃಷ್ಟಿಯನ್ನು ನಿರ್ಮಿಸಿದ ಕರ್ತನೊಬ್ಬನು ಇದ್ದಾನೆಂದು ನಾವು ನಂಬಬೇಕಾಗುತ್ತದೆ (ಮುಂಬಯಿ. ೪–೫೮). **ಇದ್ದಾರೆ :** ನಮ್ಮ ತಂದೆ ಈಗ ಮನೆಯಲ್ಲಿ ಇದ್ದಾರೆ (ಮಧ್ಯಮ. ೪೦). **ಇದ್ದಾಳೆ :** ಅವಳು ಮನೆಯಲ್ಲಿಯೆ ಇದ್ದಾಳೆ (ರೂಢಿ). **ಇದ್ದುದು :** ತೇರಿನ ದಳಕೆ ತಾನೊತ್ತಾಗಿ ರಣದಗ್ಗಳೆಯರಿದ್ದುದು (ಕುವ್ಯಾದ್ರೌ. ೪–೧೭) ; ಮೊದಲಲಿದ್ದುದು ಜೀವಕಳೆ ಹೃದಯದಲಿ (ಕುವ್ಯಾಕ. ೧–೪). **ಇದ್ಧಾನೆ** (ಮುಂಬಯಿ. ೨–೨೪, ೩೪ ಕಿ). **ಇದ್ಧಾರೆ** (ಕಿ). **ಇದ್ಧಾಳೆ** (ಮುಂಬಯಿ. ೨–೭ ಕಿ). **ಇದ್ಧೀ :** ಹೆಂಗಸಿನಂಥಾ ಸಾಹಸವಂತನಾಗೂಯೆಂದುಯನ್ನುತಾಯಿದ್ಧೀ (ಶುಕಸ. ೧೬). **ಇಧಾನೆ :** ಮೇಲುಗೋಟೆ ದೇವಸ್ಥಾನದಲ್ಲಿ ಪೂರ್ವಾರಭ್ಯ ನಡದು ಬರುತ್ತಾಯಿದ್ದದ್ದನ್ನು ಅಂಚೆ ಶಾಮಯ್ಯನು ಅಡ್ಡಿ ಮಾಡಿ ಯಿಧಾನಂತ್ತೆ (ಮೈಆರಿ. ೧೯೩೮, ೧೮–೫ ; 1783). **ಇಧಾರೆ :** ಬರದವಳಿಯಲ್ಲಿ ಯಿಧಾರೆಯಂತ ಗೊತ್ತುಹಾಕಿ ಹಿಡಿಯಲಿಕೆ ಬಂದಲ್ಲಿ (ಎಕ. VIII, ಸಾಗರ. ೪೬–೩೧ ; 1646) ; ಶಿವಾರ್ಪ್ಪಿತವಾಗಿ ಕೊಟ್ಟು ಯಿಧಾರೆ (ಎಕ. VII, ಶಿವಮೊ. ೯೮–೭; 1738). **ಇಧಾಳೆ :** ಬೋವಿಗಳಿಗೆ ವುಡುಗರೆ ೧ಂಹ ಕೊಟು ಯಿಧಾಳೆ (ಮೈಆರಿ. ೧೯೨೯, ೯೭–೧೦ ; 1593) ; ನಿಮ್ಮ ವಾಂಛಿತವಂ ಸಲ್ಲಿಸುವೆನೆಂದು ಪ್ರತಿಜ್ಞೆಯಂ ಮಾಡುತ್ತಾ ಇಧಾಳೆಂತೆನೆ (ಶುಕಸ. ೧೧೯). **ಇಧೆ :** ಭಕ್ಷ್ಯ ಭೋಜ್ಯ ಲೇಹ್ಯ ಚೋಷ್ಯಗಳೆಂಬ ನಾಲ್ಕು ಪ್ರಕಾರವಾದ ಅನ್ನಗಳು ಮುಸ್ತೈದೆಯಾಗಿಧೆ (ಕೃವಾಅ. ೩೪೪). **ಇಧೇವೆ :** ದಾನಧಾರಾಪೂರ್ವಕವಾಗಿ ಶಿವಾರ್ಪಣವಾಗಿ ಬಿಟ್ಟಿಧೇವೆ (ಎಕ. VII, ಶಿವಮೊ. ೮೨–೩೦ ; 1683). **ಇಪ್ಪುದು :** ಜಲದೊಳಾಗಳು ನೆನೆವುತಿರ್ದೊಡೆ ಶಿಲೆಯು ಮೃದುವಾಗಿಪ್ಪುದೇ (ಬಸವು. ೬೦–೪೮). **ಇರ್ದತ್ತು :** ಅತ್ತುಗೆ– ಇರ್ದತ್ತು ; ಪಸರಿಸಿದತ್ತು ; ಶಿರಃಕರೋಟಿ ನಗುವಂತಿರ್ದತ್ತು (ಶಮುದ. ೨೨೬ ಪ್ರಯೋ). **ಇರ್ದುದು :** ಮೂಲೋಕಕ್ಕೆ ಪೆಂಪಿಂದಗುಂದಲೆಯಾಗಿರ್ದುದು ದೇವದಂಪತಿ ರತಶ್ರೀ ಸುಂದರಂ ಮಂದರಂ (ಆದಿಪು. ೧–೫೦) ; ಆ ಗಜತಿಲಕ ಮುಂಡಾಸನದಲಿರ್ದುದು (ಕುವ್ಯಾದ್ರೌ. ೩–೫೨) ; ತರುಣಿಯರ ಗುರು ಕುಚದ ಮೇಲುದಂ ಸೆಳೆದಂತೆ ಗಿರಿನಿಕರಮೆಸೆದಿರ್ದುದು (ಜೈಮಿಭಾ. ೨೫–೩).

**ಇವೆ :** ನೀರ್ಗುಡಿಯಲೊಲ್ಲವು ಮೇಯಲೊಲ್ಲವಿವು ಕುದಿವುತಿವೆ (ಬಸವು. ೬೦–೨೪) ; ಹೇಮದ ಡೆಂಕಣಿಯ ಕೈಗಳಾಲಿಗಚ್ಚರಿಯಾಗಿ ತೋಱುತಿವೆ ತನಯ ನೋಡು (ಜೈಮಿಭಾ. ೩–೨೧) ; ಪುಯ್ಯಲಿಡುವಂತೆ ಕೂಗುತಿವೆ ಕೋಗಿಲೆಗಳು (ಜೈಮಿಭಾ. ೩–೨೪). **ಇದ್ದ :** ಧರೆಯ ಜೀವಿಗಳಸುಗಳಂ ಬಿಟ್ಟವಿದ್ದಂತೆ (ಬಸವು. ೫೮–೫೬); ಬಂದನು ಭೀಷ್ಮನಿದ್ದೆಡೆಗೆ (ಕುವ್ಯಾದ್ರೌ. ೧–೨೦); ಮೋಹನ ಬೀಜಱಿಯವನೊಳಗಿದ್ದ ಹಣವತೆಗೆ (ಕಂನವಿ. ೬–೧೫೧); ಇದ್ದವರು ಇದ್ದಹಾಗೆ ಸಿದ್ದಾದೇವಿಗೆ ಸಿಡಿಲು ಬಡೀತು (ಗಾದೆ). **ಇದ್ದು :** ಇದ್ದಂತಿದ್ದು ನಿಜವಪ್ಪುದು ನಿಜಭಕ್ತಿ (ಅದವ. ೨೦) ; ಇಡಬೇಕಿದ್ದುಣಬೇಕೆಲ್ಲೈ (ಸೋಮೇಶ. ೭೯) ; ಆರೋಗ್ಯವಿಲ್ಲದಿದ್ದರೆ ಇತರ ಸೌಖ್ಯಗಳು ಇದ್ದೂ ಇಲ್ಲದ ಹಾಗೇ ಸರಿ (ಮುಂಬಯಿ. ೪–೨೪). **ಇಪ್ಪ :** ವೃಷಭರಾಜಂ ಹರುಷದಿಂದಿಪ್ಪ ಸಮಯದೊಳು (ಬಸರ. ೧–೨೨) ; ಧನದನಿಪ್ಪಾಲಯಂ ಕೈಲಾಸಮಕ್ಕುಂ (ಮಂಗರಾ. ೧೬–೧೬) ; ತಪ್ಪ ಸಾಧಿಪ ನೃಪನೊಳಿಪ್ಪವನೆ ಕಡು ಹೆಡ್ಡ (ಸರ್ವಜ್ಞ. ೭೭೭). **ಇರುವ :** ತುರುಕರ ಪಾಳೆಯಕ್ಕೈದಿ ನೀವವರಿರುವಿರವನಱುಪಿ ತಮಗೆಂದ (ಕಂನವಿ. ೧೫–೪). **ಇರ್ದ :** ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡು (ಕವಿರಾ. ೧–೩೬) ; ಪಾಂಡುರಾಜನೆನ್ನಿರ್ದಿರವನೆನ್ನ ಮಕ್ಕಳ್ಗಱಿಪಿ . . . ಬನ್ನಿಮೆನೆ (ಪಂಪಭಾ. ೬–೧೭ ವ) ; ಯಮಪುತ್ರನಿರ್ದಿರವು ವಾಯುಜನಿರ್ದಿರವು (ಗದಾಯು. ೩–೩೦) ; ಬರೆದು ಕುಂಡಳಿಚಕ್ರಮಂ ಜನ್ಮಕಾಲದೊಳಿರ್ದ ಗ್ರಹಮುಮಂ ಲಗ್ನಸಮೂಹಮುಮಂ ತರದಿನಿರಿಸಿ (ಜಾತತಿ. ೧೦–೨). **ಇರ್ದು :** ದೂರದೊಳಿರ್ದು ನೋಡೆ ಸೊಗಯಿಪ್ಪುದು (ಕಾವ್ಯಸಾ. ೪೩೫ ಶೂದ್ರಕ) ; ಪಿರಿದುಂ ಬೇಗಂ ನೋಡುತ್ತಿರ್ದಿಂತೆಂದುದ್ದೇಶಂಗೆಯ್ದೊರ್ (ವಡ್ಡಾರಾ. ೬೮–೨) ; ಹಂದೆಯ ಕೈಯಲ್ಲಿ ಚಂದ್ರಾಯುಧವಿರ್ದು ಫಲವೇನು (ಬಸವ. ೧೦೮) ; ಸುತನಿರ್ದೇಂ ಮುಪ್ಪಿನಲ್ಲಾಗದಾ (ಸೋಮೇಶ. ೧೬) ; ಬಧಿರನಂತಂಧನಂತಿರ್ದು (ರಕ್ಷಾಶ. ೪). **ಇರ್ಪ :** ಪೊಸತಲರ್ದ ಬಿಳಿಯ ತಾವರೆಯೆಸಟ್ಗಳ ನಡುವಿರ್ಪ ಸಿರಿಯುಮಾಕೆಯ ಕೆಲದೊಳ್ ನಸುಮುಸುಳ್ದು ತೋರ್ಪರ್ಗಳ್ (ಪಂಪಭಾ. ೧–೪೦) ; ಕೋಪಾನಳನಂ ಮುನ್ನಿಸದಿನ್ನುಂ ಗಳಗಳಿತ ಸಕೋಪನಿರ್ಪ ತೆಱದಿಂದಿರ್ದೈ (ಗದಾಯು. ೧–೫೭) ; ಈಗಳ್ ನೀನಿರ್ಪಿರವಿನ ಪರಿಯೇಂ (ಕಾದಂಪೂ. ೮೪೧) ; ಒಳಪೊಕ್ಕು ತಿನುತಿರ್ಪನ್ನೆವರಂ (ಪಂಚತಂ. ೧೯–೮) ; ನಿಜಾಂಘ್ರಿಗಳ್ಗೆಱಗಿಸುತಿರ್ಪ್ಪ ದರ್ಪ್ಪದ (ಎಕ. VII, ಶಿವಮೊ. ೯೭–೨೧ ; 1113). **ಇಹ :** ಅರಸರುಂ ಅರಸಿಯರುಂ ಕೂಡಿಹ ಬನಮಂ ಪ್ರಮುದವನಮೆಂಬುದು (ಹಲಾಯು. ೩೬–೬೦) ; ಕೆಲಬಲದೊಳಿಹ ಕದನಗಲಿಗಳ ಸೀಳಿದನು (ಕುವ್ಯಾದ್ರೌ. ೫–೪); ನಿಜಕರದೊಳಿಹ ಪತ್ರಮಂ ಕೊಟ್ಟಂ (ಜೈಮಿಭಾ. ೩೦–೪೯) ; ತ್ರಿಭುವನದೊಳಗಿಹ ಭಕುತರಿಗೆ (ಕಂನವಿ. ೧–೨). △ **ಇಟ್ಬು :** ಮಂಗಳಮೆನಿಸಿಟ್ಬು (ಎಕ. VII, ಶಿವಮೊ. ೬೪–೨೮ ; 1112). △ **ಇಱ್ಬು :** ಇಲ್ಲಿಯೆ ಹಿರಣ್ಯಗರ್ಭಮಿಱ್ಬು (ಇಅ. X, ೧೦೩–೬; 696); ನಾಱ್ಗಾಮುಣ್ಡನುಮಿಱ್ಬು ಕೊಟ್ಟೊರ್ (ಎಇ. XIV, ೧೯೧–೪೯ ; 725) ; ತಳಿಯೊಳ್ ತಾಣಬೀಡುಗಳಿಱ್ಬು (ಇಅ. XI, ೧೨೭–೯ ; 803) ; ಪೊಗಱ್ತಿಗಂ ನೆಗಱ್ತಿಗಮಾಗರಮಾಗಿಱ್ಬು (ಸೌಇಇ. XI–i, ೪೧–೩೯ ; 969) ; ಮೂಕರಸನುಮಿಱ್ಬು (ಸೌಇಇ. XX, ೨೬–೧೩ ; 1040). **ಇರಅದೆ :** ಬಗೆವೊಡಮಿನಿಸಿನಿಸಿರಅದೆ (ಶಮುದ. ೬೧ ಪ್ರಯೋ). **ಇರದೆ :** ಕರುಣಾವಲೋಕನವೆನ್ನ ಮೇಲುಂಟಾದಡಿರದಿಹೆನು (ಕುವ್ಯಾದ್ರೌ. ೯–೫೦) ; ಇರಅದೆ ಪೋದಂ, ಇರದೆ ಪೋದಂ (ಶಬ್ದಾನು. ೫೮೩ ಪ್ರಯೋ). **ಇರಲ್ :** ಪ್ರಕೃತಿ ತನ್ನಂ ಬಿಡದಿರಲ್ ಅಱಿಕೆಯೇನಂ ಮಾಡುವುದು (ಪಂಚತಂ. ೧೮–೨) ; ಪಾದಪದ್ಮಂಗಳನೊತ್ತುತ್ತಿರಲ್ ಶೂದ್ರಕ ನೃಪತಿ ಸುಖಾಸೀನನಾಗಿರ್ದನಾಗಳ್ ಬಯ್ಗಿನ ಕೆಂಬಿಸಿಲೆಳಸಲೆಸೆದು ವಾಶ್ರಮತರುಗಳ್–ಎಂಬಿವು ಅಬದ್ಧಂಗಳ್ (ಶಮುದ. ೨೪೯ ಪ್ರಯೋ).

**ಇರಲು** : ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರಲು (ಎಕ. VII, ಶಿವಮೊ. ೯೯–೨೧ ; 1127) ; ಇರಲಿರಲು ಶ್ರೀ ಗರುಡದೇವರ ವರಜನನಿಯೊಳಗೊಮ್ಮೆ ನಾಗರ ನಿರುತಮಾತೆಯು (ಸಂಭಪ. ೫–೪೩). **ಇರೆ** : ಕೌಸ್ತುಭಜಾತದ್ಯುತಿ ಬಳಸಿ ಕಾಂಡಪಟದಂತಿರೆ (ಕವಿರಾ. ೧–೧) ; ತಲೆಯನುಗುರಿಸುತ್ತುಮಿರೆಯಿರೆ (ಪಂಪಭಾ. ೧–೧೦೪ ವ) ; ಸ್ವರಮಿದಿರೊಳಿರೆ ವಿಭಕ್ತಿಸ್ವರಕಂ ಪ್ರಕೃತಿ ಸ್ವರಕಂ ಲೋಪಂ (ಶಮದ. ೫೨). **ಇದ್ದರೆ**: ಆ ಕೆಲಸ ಹಾಗೇ ಇದ್ದರೆ ಇರಲಿ ಬಿಡಿ (ರೂಢಿ). **ಇಪ್ಪಡೆ** : ತಪ್ಪದಲೆ ತಾ ಬ್ರಹ್ಮನಹ ಪರಿಯಂತರಭ್ಯಾಸ ಇಪ್ಪಡೆಯು ಅವ ಬ್ರಹ್ಮನಾಹನು (ಜ್ಞಾನಸಿಂ. ೩–೩೪). **ಇರಲಿ** : ಇರಲಿ ಮೇಣ್ ದೂರದಲಿ ಹತ್ತಿರೆಯಿರಲಿ (ಕುವ್ಯಾದ್ರೋ. ೨–೬೪). **ಇರ್ಕೆ** : ಉಡುಪ ಕರಿಗಣ ತತಿಯುಂ ತಾರಕೆಯುಳ್ಳಿನಮಿರ್ಕೆಂತೋರಂತಿರೆ (ಸೌಇಇ. XI–i, ೪೨–೩೧ ; 971) ; ವಾಣಿ ಬಂದು ಸಮಂತಿರ್ಕೆ . . . ಜಿಹ್ವಾಗ್ರದೊಳ್ ರುದ್ರನಾ (ಜಗವಿ. ೧–೬) ; ಪೂಜೆ ಮೆಲ್ಲನೆ ಸಡಿಲ್ವಾನಂದಮುಳ್ಳಾಡುತಿರ್ಕೆಮು (ಪಂಪಾಶ. ೧೧) ; ಉಳಿದ ಸಮಯಿಗಳ ಮಾತಂತಿರ್ಕೆ (ಪದ್ಮರಾ. ೯–೫). **ಇಬ್ಬಾನು** (ಕ). **ಇದ್ದೀತು**: ಚಿಂತಾಭರಿತನಾಗಿ, ಆದೀತೋ ಆಗದೋ, ಇದ್ದೀತೋ ಇಲ್ಲವೋ, ಏನೋ ಎಂತೋ ಎಂದು ಚಿಂತಿಸುತ್ತಿಹನು (ವಚಶಾ. II, ೧೨೦). **ಇದ್ದುದು**: ಇದ್ದುದ ಹೇಳಲಿಲ್ಲ, ಇದ್ದುದ ತೋಜಲಿಲ್ಲ ಹೊದ್ದಿದ ಆಶ್ರಮವದ ನಾನೇನೆಂಬೆನು (ಅವಚಂ. ೧೩೦–೫೯೬) ; ಉದ್ದುರುಟು ಮಾತಾಡಿ ಇದ್ದುದನು ಹೋಗಾಡಿ . . . ತುದಿಗೇಱಿ ತಲೆಯೂಱಿ ಬಿದ್ದು ಸತ್ತಂತೆ (ಸರ್ವಜ್ಞ. ೧೨೩೩). **ಇಪ್ಪುದು**: ಶಬ್ದಮನಿತುಮಂ ಕೇಳದಿಪ್ಪುದೆ ನೇಮ (ಬಸಪು. ೫೨–೩೭). **ಇರ್ದುದು**: ಸಂಧಿ ವಿಷಯಮೆರಡಕ್ಕುಂ . . . ಪ್ರಕೃತಿ ಪ್ರತ್ಯಯ ಮೊದವಿದ ಪದಯುಗದ ಬೆರಕೆ ಬೇಡಿರ್ದುದಱಿಂ (ಶಮದ. ೫೦) ; ಇರ್ದುದನಱಿಯದೆ ನಯದಿಂ ಪೊರ್ದುವುನಾಗಮಂ (ಶಮದ. ೧೬೩). **ಇರ್ಪುದು** : ಎಮಗಿರ್ಪುದು ಸೂಚಿಲ್ತೆಂದು . . . ಕೆಲರಲ್ಲಿ ಸುಬಳನಾದುದ ನಾದರ್ (ಸುಕುಮಾ. ೮–೫೫). **ಇಹುದು** : ತಾನಿಹುದಕ್ಕೆ ಮುನ್ನವೆ ಅವು ಹುಟ್ಟಿದವಾಗಿ (ಏಲೇಶ್ವ. ೩೯).

**ಇರಗೊಡಿಸು** = ಇರಲು ಬಿಡು ; ಇರಲು ಅವಕಾಶಕೊಡು : ತನ್ನ ಒಬ್ಬನೇ ಮಗನನ್ನು ದೂರದ ಊರಿನಲ್ಲಿ ಇರಗೊಡಿಸುವುದು ಅವನಿಗೆ ಸಮ್ಮತವಿರಲಿಲ್ಲ (ಒಡ್ಡಿಉ. ೪೩) ; ಕುತೂಹಲ ಅವನನ್ನು ಸುಮ್ಮನೆ ಇರಗೊಡಿಸುವುದಿಲ್ಲ (ರೂಢಿ). **ಇರಗೊಡು** = ಇರುವುದಕ್ಕೆ ಅವಕಾಶ ಕೊಡು : ಬಟ್ಟೆಗಳಿಗೆ ಬೆಂಕಿ ಹತ್ತಿದರೆ ಅವುಗಳನ್ನು ಹಾಗೇ ಮೈಮೇಲೆ ಇರಗೊಡಬಾರದು (ಮುಂಬಯಿ. ೪–೬೦). **ಇರಮಾಡು** = ಇರುವಂತೆ ಮಾಡು : ಆಗ ಕೃಷ್ಣನು . . . ಎಲ್ಲ ಗೋಪಾಲರನ್ನು . . . ಭಾಂಡೀರಕ ಎಂಬ ಆಲದಮರದ ಬುಡದಲ್ಲಿ ಇರಮಾಡಿದನು (ಭಾಮೃತ. ೩೨೧). **ಇರಸಲ್ಲ** = ಇರುವುದು ಯೋಗ್ಯವಲ್ಲ,—ತಕ್ಕುದಲ್ಲ : ಸೋಮಶಂಭು ಸಂತಾನಮಲ್ಲದ ಪೆಜರ್ಗಿರಸಲ್ಲ (ಸೌಇಇ. IX–i, ೨೯–೨೫ ; 1100) ; ದುಸ್ಸಂಗ ದುರ್ಗೋಷ್ಠಿಯಲ್ಲಿರಸಲ್ಲಿದೊರ್ಡೆ ಹಾನಿಯ್ಯೈ (ಸೋಮೇಶ. ೨೫). **ಇರಹವಂ** = ಇರುವವನು : ಇರಹವಂಗೆ ಒಂದು ಬಿಟ್ಟು ಹೋಹವರಿಂಗೆ ಹತ್ತು ಬಟ ಇ ಮರಿಯಾದೆಯು ನಡಸುವಂತಾಗಿ (ಎಕ. IX (S), ಕನಕ. ೬೯–೧೯ ; 1319). **ಇಹ್ಯ** = ಇರುವ : ಅಲ್ಲಲ್ಲಿಯಿಹ್ಯ ವೈಷವೋತ್ತಮರು (ತೀರ್ಥಮ. ೩೭) ; ಈರೆರಡು ದಿಕ್ಕಿನಲಿ ಇಹ್ಯರು (ತೀರ್ಥಮ. ೪೮).

[ದೇ. ‖ ತಮಿ. ಇರು ; ಮಲ. ಇರಿಕ್ಕು ; ತುಳು. ಇಪ್ಪುನಿ ; ತೆಲು. ಇರವು, ಇರುವು = ಸ್ಥಳ, ನಿವಾಸ]

**ಇರ್$_2$**, ಇರು$_2$, ಈರ್$_3$ (ನಾ). ಸಮಾಸದಲ್ಲಿ ಎರಡು ಎಂಬುದಕ್ಕೆ ಬರುವ ಆದೇಶ. 'ಇರ್ಕಡಿ' ಪರಾ. **ಇರು$_2$** : 'ಇರುಗಳೆ' ಪರಾ. **ಈರ್$_3$** : 'ಈರಯ್ದು' ಪರಾ. [< ಎರಡು]

**ಇರ** 'ಇರಂ' ನೋ.

**ಇರಅದೆ** 'ಇರ್$_1$' ಪರಾ.

**ಇರಂ**, ಇರ, ಇರವು$_1$, ಇರುವು$_1$, ಇರುಹು, ಇರ್ವು (ನಾ). ೧. ಇರುವಿಕೆ; ಜೀವನ ; ಬಾಳು : ಈಗಳ್ ಪೆರ್ವಾವುಗಳೊಡನೆ ನೆರೆದಿರಮಾಯ್ತು [ಪಾಠಾಂ. ಪೆರ್ವಾವಾಗಿ ಪುಟ್ಟಿದೊಡನಿರವಾಯ್ತು] (ವಡ್ಡಾರಾ. ೧೪೦–೧). **ಇರ** : ೨. ವಾಸ; ನೆಲೆ; ಆಶ್ರಯ ; ಆಧಾರ : ಬರಿಯ ಧರೆಯಿಂ ವಾಯು ಜಲಗಳೆ ಬೆರೆಯಲಾಯಿತು ಗುಹ್ಯಪಾವಕನಿರದಲಾದುದು ಪಾದ (ಅಮೃತ. ೪–೨೩). ೩. ಸ್ಥಿತಿ ; ರೀತಿ : ಮತ್ತಮಿಂತಳವಾಂತ ಕುವರನೊಂದಿರಕ್ಕೆ ಮೆಯ್ವೆರ್ಚೆ (ರಾಮಾಶ್ವ. ೯೪–೨೬). **ಇರವು$_1$** : ೧. ಎನ್ನಿರವನಿಂಬುಗೊಂಡನಪ್ಪಾ (ಮಹಾದೇ. ೪೧–೮೮) ; ಪತಿಯಳಿದ ಸತಿಯಿರವು ನಾಯಕರತುನವಿಲ್ಲದ ಪದಕ (ಕುವ್ಯಾದ್ರೋ. ೮–೧೮) ; ತಿರುತಿರುಗಿ ತೊಳಲುವುದು ತಿರಿದನ್ನವುಣ್ಬುವುದು ಮೆರೆದು ಮೈಮರೆಯುವುದು . . . ಕೆರಳುವುದು ನರಳುವುದು ಇರವಿದೇನೊಣರಗಳೆ (ಮುಂಕುಕ. ೨೩). ೨. ಆ ದಿವಿಜೇಂದ್ರಲೋಕದಿರವುಂ ಪೆಸರುಂ ತನಗಿಲ್ಲಿ ಬಂದು ಬೇಱಾದುದೆ (ಆದಿಪು. ೩–೧೦) ; ಕಮಳಕ್ಕಾವಗಮಲ್ತು ಲಕ್ಷ್ಮಿಯಿರವಾಸ್ಯಾಬ್ಜಕ್ಕಮುಂಟು (ಅರ್ಧನೇ. ೧–೩೨). ೩. ಮೆಚ್ಚೆನಾನೀ ಧರಣಿಯುಳಿರವಾನೆಂದು . . . ನಂದಿಸೇನಪ್ರವರ ಮುನಿವರನ್ ದೇವಲೋಕಕ್ಕೆ ಸಂದಾನ್ (ಎಕ. II, ೮೮–೩ ; 700) ; ಎನ್ನಯ ದೂಸಱಿನೆನ್ನ ಕರ್ಮದಿಂ ಪಗೆವರಿನಕ್ಕಟಾ ನಿಮಗಮಿಾಯಿರವಾದುದೆ ಕುಂಭಸಂಭವಾ (ಪಂಪಭಾ. ೧೩–೫೬) ; ದೊರೆ ಯಮಪುತ್ರನಿರ್ದಿರವು ವಾಯುಜನಿರ್ದಿರವಗ್ನಿಪುತ್ರಿಯಿರ್ದಿರವಮಳರ್ಕಳಿರ್ದಿರವು ಮತ್ಸ್ಯನಿವಾಸದೊಳೆಲ್ಲಮಂತೆ ಮೆಯ್ಗರೆದಿರೆ (ಗದಾಯು. ೩–೩೦) ; ಸುರಪತಿ ಬಂದು ಕಂಡಾ ಪುರದಿರವಿಗಚ್ಚರಿವಟ್ಟು ಮೂಗಿನ ಮೇಲೆ ಬೆರಳಿಟ್ಟು (ಭರಚ. ೩–೨೩). **ಇರುವು$_1$** : ೧. "ನಡೆ, ಇರುವು, ಬಾಳು, ಬದುಕು" (ಕಂನುಹು. ೮೬). ೩. ಆತ್ಮನ ಇರುವು ಘಟಪಟದೊಳಗೆ ಗ್ರಹಿಸಿಪ್ಪ ಬಯಲಿನ ಇರುವಿನಂತೆ ರವಿಯೊಳಗೆ ಸೂಸುವ ಕಿರಣದಂತೆ (ಗಣಭಾ. ೧೩೨–೨) ; ಕರನಖಗಳಲ್ಲಿ ಗಿರಿಚರಕ್ಕಿರುವುಮಾಡಿ (ಸೌಪರಿ. ೧–೩). **ಇರುಹು** : ೨. ಸ್ವಾಮಿ ಪುಷ್ಕರಿಣಿಯ ಸ್ನಾನವನ್ನು ಮಾಡಿ ಸುತ್ರಾಮಾದಿ ತೀರ್ಥಗಳ ಇರುಹು ತಿಳಿದೂ ನಾಮದ ವಿಚಾರ ಧರಿಸಿ (ತೀರ್ಥಮ. ೯೦) ; ಮನಸು ಮಾಡಲು ಮಣ್ಣಗಾತ್ರವು ಅಗಲಲಾರದೆ ಪ್ರೇಮಪಾತ್ರೆಯು ? ಬಾಳಕಡಲಲಿ ಇದೆ ವಹಿತ್ರವು ಸಾಗಲಿರುಹಿನ ಯಾತ್ರೆಯು ಜನುಮ ಜನುಮದ ಜಾತ್ರೆಯು (ಕರುಶ್ರಾ. ೮೭). **ಇರ್ವು** : ೩. ತರ್ವಾಯ ನಾರದಮುನೀಶ ಗಣನಾಯಕನ ಯಿರ್ವ ಕಾಣದೆ ವೀರಭದ್ರಂಗೆ ಬಿನ್ನವಿಸಿ ಕರುಣಾಕ್ಷಿಯಿಂದೀಕ್ಷಿಸೆ (ಚೋರಬ. ೬–೮೪). [< ಇರ್$_1$]

**ಇರಕಳ** 'ಇಱಿಕುಳಿ' ನೋ.

**ಇರಕಳಿ** 'ಇಱಿಕುಳಿ' ನೋ.

**ಇರಕಿಸು** 'ಇರುಂಕಿಸು' ನೋ.

**ಇರಕು$_1$** 'ಇಱುಂಕು' ನೋ.

**ಇರಕು$_2$** 'ಇಱುಕು$_2$' ನೋ.

**ಇರಕುಮರ**, ಇರ್ಕುಮರ (ನಾ). ಹೊಲಗದ್ದೆಗಳ ಬೇಲಿಗಳಲ್ಲಿ ಮನುಷ್ಯರು ಮಾತ್ರ ಒಬ್ಬೊಬ್ಬರಾಗಿ ನುಸಿದು ದಾಟಿಹೋಗಲಾಗುವಂತೆಯೂ, ದನಕರುಗಳು ನುಸಿಯಲಾಗದಂತೆಯೂ ಕವೆಗೋಲು ನೆಟ್ಟು ಮಾಡಿರುವ ಪ್ರವೇಶಸ್ಥಾನ ; ಕಡಕಲು (ಸ್ಯಾಂಡರ್). **ಇರ್ಕುಮರ** (ರೀವ್). 'ಅಕ್ಕಳೆ$_2$' ಪರಾ.

[ಇರಕು$_1$ (< ಇಱುಂಕು) + ಮರ]

**ಇರಕುಳಿ** 'ಇೞಿಕುಳಿ' ನೋ.

**ಇರಕ್ಷಿಚ್ಚು** (ಕ್ರಿ). ಕಾಪಾಡು; ರಕ್ಷಿಸು: ಈ ಧರ್ಮ್ಮಮಾನ್ನಿರಕ್ಷಿಚ್ಚಿದೋನ್ನಡಿ ಎನ್ ಮಂಡೆಲೋ (ಎಕ. X, ಕೋಲಾರ. ೬–೧೦ ; 753).

[ಇರಕ್ಷಣ$_0$ + –ಇಸು$_3$. P ತಮಿ. ಇರಕ್ಷಣ + ?]

**ಇರಚಲು** 'ಇಱುಸಿಲ್$_1$' ನೋ.

**ಇರಚು** 'ಇರಸು' ನೋ.

**ಇರಬಿ** 'ಇಱುಂಪೆ' ನೋ.

**ಇರಮ್ಮದ** (ನಾ). ೧. ಮಿಂಚು; ಸಿಡಿಲು: "ಮೇಘವಹ್ನಿಃ, ಇರಂಮದಃ, —ಈ ೨ ಮುಗಿಲ ಕಿಚ್ಚು" (ಹಲಾಯು. ೧೩–೭೦) ; "ವಾರಿವಾಹದ ಕಿಚ್ಚಿರಮ್ಮದಂ" (ಮಂಗರಾ. ೧೪–೯೮). ೨. ಸಮುದ್ರದ ಒಡಲಲ್ಲಿರುವ ಅಗ್ನಿ; ಬಡಬಾಗ್ನಿ: ನಿರಾಶ್ರಯದಿಂದಿರಮ್ಮದಾನಿಳನಿರದೆಯ್ದೆ ಬಂದಿಳೆಯನಾವರಿಸಿತ್ತೆನೆ (ಕುಸುಮಾ. ೮–೧೧೬). [ಸಂ.]

**ಇರವಂತಿ**, ಇರುವಂತಿ (ನಾ). ಎರಡುಸುತ್ತು ದಳಗಳಿರುವ ಮಲ್ಲಿಗೆ ಜಾತಿಯ ಒಂದು ಹೂ; ಹೆಜ್ಜಾಜಿ; ನವಮಾಲಿಕೆ: ಇರವಂತಿಯ ಜಾಜಿಯ ಪಾದರಿಯ ಸರೋರುಹದ ಪೂಗಳಿಂದೆ (ಧರ್ಮಾಮೃ. ೧೦–೨೨) ; ಕರಮೊಪ್ಪಿದುವಲ್ಲಿ ಕರವೀರಮದಿರ್ಗಂತಿ ಮರುಗ ಮಲ್ಲಿಗೆ ಇರವಂತಿ (ನೇಮಿಸಂ. ೧–೬೯) ; ಜಾಜಿ ಶಾವಂತಿ ಯಿರವಂತಿ ಮೊದಲಾದ ಕೆಂಜಾಜಿ ಪಾದರಿ ಪಚ್ಚೆ (ರುಕ್ಮಾಂಗ. ೩–೨೮). **ಇರುವಂತಿ**: "ನವಮಾಳಿಕೆ ಸಂದಿರುವಂತಿ ವರ್ಣಪುಷ್ಪಾಭಿಧಾನಮಮಿಲಾತಂ ದಾಸವಣಂ ಜಪಾಹ್ವಯಂ" (ವಸ್ತುಕೋ. ೩೮–೩೫) ; "ಸಪ್ತಳಾ, ನವಮಾಲಿಕಾ – ಈ ೨ ಇರುವಂತಿ" (ಹಲಾಯು. ೩೫–೫೪) ; ಮಧುಸುಱಿವ ಮಧುವ್ರತಮುಮನಲೆದಪನೆಂಬೀ ಪ್ರತೀತಿಗಿರುವಂತಿಯಂತೆ ನೋಂತಲರೊಳವೇ (ಆದಿಪು. ೧೧–೧೧೧) ; ಇರುವಂತಿ ಜಾಜಿ ಪಾದರಿ ಸರಸಿರುಹಂ ಸುರಗಿ . . . ಅರಲಿಂ (ಧರ್ಮಾಮೃ. ೫–೫೭) ; ಪರಿಮಳದುರುಳಿಯೆನಿಪಿರುವಂತಿಯ ಬಿರಿ ಮುಗುಳನಿಂಬಾಗೆ ತೋರದುಱುಂಚನೊಳ್ತುಱುಂಬಿ (ಪಾರ್ಶ್ವಪು. ೧೨–೬ ವ).

[ದೇ. ‖ ತಮಿ. ಇರುವಾಡಿ, ಇರುವಾಟ್ಚಿ]

**ಇರವಂತಿಗೆ**, ಇರುವಂತಿಗೆ, ಇರುವತಿಗೆ (ನಾ). = ಇರವಂತಿ: "ಅಜ್ಜುಗವೆಂದಿರವಂತಿಗೆ" (ಕವಿಕಂ. ೭೪) ; ಸುರಗಿ ಸುರಹೊನ್ನೆ ಮಲ್ಲಿಗೆ ಇರವಂತಿಗೆ (ಉದ್ಭಟ. ೩–೧೨೧) ; ಇರವಂತಿಗೆ ಜಾಜಿ ಮೊಲ್ಲೆಗಳ್ (ದಶಕು. ೬–೨೧) ; ಇರವಳಿದಾತನ ಹೆಸರಾಂತು ವನದೊಳಗಿರಲಿರವಂತಿಗೆ ತಱಿದು ಹರತಪಧ್ವಂಸಿಯ ಮಟ್ಟಾಯುಧವೆಂದು ಸುರಗಿಯ ಮುಱಿದಿಕ್ಕಿದಳು (ಮೋಹತ. ೨೪–೬೬). **ಇರುವಂತಿಗೆ**: "ಸಪ್ತಲಾ, ನವಮಲ್ಲಿಕಾ —ಈ ೨ ಇರುವಂತಿಗೆ" (ನಾಚಿರಾ. ೧೦೮) ; "ದ್ವಿಕರ್ಣ—ಇರುವಂತಿಗೆ" (ಓಷಧಿ. ೭೬). **ಇರುವತಿಗೆ**: ಒಂದರಳು ಯಿರು [ಪಾಠಾಂ. ರ]ವತಿಗೆ ಪಡ್ಡಳಿವೊಂದರಳು ಸೇವತಿಗೆ (ಬಸಪು. ೧೯–೬೫).

[ಇರವಂತಿ + –ಗೆ ?]

**ಇರವಳಿ** (ಕ್ರಿ). ಸ್ಥಿತಿಯನ್ನು ಕಳೆದುಕೊ; ರೂಪವನ್ನು ಕಳೆದುಕೊ; ರೂಪವಿಲ್ಲವಾಗು.

**ಇರವಳಿದಾತ** = ರೂಪವನ್ನು ಕಳೆದುಕೊಂಡವನು; ಮನ್ಮಥ: ಇರವಳಿದಾತನ ಹೆಸರಾಂತು ವನದೊಳಗಿರಲಿರವಂತಿಗೆ ತಱಿದು ಹರತಪಧ್ವಂಸಿಯ ಮಟ್ಟಾಯುಧವೆಂದು ಸುರಗಿಯ ಮುಱಿದಿಕ್ಕಿದಳು (ಮೋಹತ. ೨೪–೬೬). [ಇರವು$_2$ + ಅಳಿ$_1$ (< ಅೞಿ$_1$)]

**ಇರವಱಿ** (ಕ್ರಿ). ಇರವನ್ನು ತಿಳಿ; ಸ್ಥಿತಿಯನ್ನು ಅರಿತುಕೊ: ಸುಡುದುಪ್ಪವೆಱದಿಹರೆ ಕೊಡನೆತ್ತಿ ಹೊಯ್ಯುವರೆ ಬಡವ ನಾನೆಂದು ಎನಬೇಡ ಇರವಱಿದು ಕೊಡುವುದೇ ಲೇಸು (ಸರ್ವಜ್ಞ. ೬೩೮).

[ಇರವು$_1$ + ಅಱಿ]

**ಇರವಾರ$_1$** 'ಇರ್ವಾರ' ನೋ.

**ಇರವಾರ$_2$** (ಅ). ಸಂಪೂರ್ಣವಾಗಿ; ಪೂರ್ತಿ; ತೀರ: ಕೆಲಸ ಇರವಾರ ಕೆಟ್ಟುಹೋಯಿತು (ರೂಢಿ) ; ಇರವಾರ ಕೆಟ್ಟು ಪುರವಾರ ಸೇರಿದ (ಗಾದೆ).

[ಇರವು + ಆರು$_4$ (< ಆಱು$_1$)]

**ಇರವು$_1$** 'ಇರಂ' ನೋ.

**ಇರವು$_2$** (ನಾ). ರೂಪು; ಆಕಾರ; ದೇಹ: ಉರಗನ ಹಲು ನಂಜು . . . ದುರ್ಜನರ ಇರವೆಲ್ಲ ನಂಜು (ಸರ್ವಜ್ಞ. ೮೧೫).

[< ಸಂ. ರೂಪ]

**ಇರವೆ** 'ಇಱುಂಪೆ' ನೋ.

**ಇರಸರಿಕೆ** 'ಇರುಸರಿಕೆ' ನೋ.

**ಇರಸಲು** 'ಇಱುಸಿಲ್$_2$' ನೋ.

**ಇರಸಾಲು**, ಇರುಸಾಲು, ಇಸರ್ಾಲ್, ಇಸರ್ಾಲು (ನಾ). ಸರಕಾರಕ್ಕೆ ಸಲ್ಲಬೇಕಾದ ಕಂದಾಯದ ಹಣವನ್ನು ಸಲ್ಲಿಸುವುದು, —ಹಣ ಪಾವತಿಮಾಡುವುದು; ಹಾಗೆ ಪಾವತಿ ಮಾಡುವ ಹಣ: ಸರಕಾರಕ್ಕೆ ಕೂಡಿಬರುವಂತೆಯೂ ಕ್ರಯಮಾಡಿಸಿ ಈ ಬಾಬ್ತು ಐವಜು ಇರಸಾಲುಮಾಡುತ್ತಾ ಬರುವುದು (ಮಹಾವಂ. II, ೭೪) ; ಗ್ರಾಮದ ಇರಸಾಲು ಪಟ್ಟಿಯಲ್ಲಿ ಈ ಹಣವನ್ನು ವಜಾಮಾಡಿ ಬಾಕಿ ಹಣವನ್ನು ಇರಸಾಲು ಫಾರಖಾವಣೆ ಮಾಡಬೇಕು (ಗ್ರಾಮಾಕ. ೭); ಅವರು ಇರಸಾಲಿಗಾಗಿ ಚಿಕ್ಕನಾಯಕನ ಹಳ್ಳಿಗೆ ಹೋಗಿದ್ದರು (ಅಲೆಮ. ೭೧). **ಇರುಸಾಲು** (ಕಿ). **ಇಸರ್ಾಲ್**: 'ಇಸರ್ಾಲ್ ಪಟ್ಟಿ' ಪರಾ. **ಇಸರ್ಾಲು**: ಖಜಾನೆಗೆ ಇಸರ್ಾಲಾಗಿ ಬಂದ ಹಣವನ್ನೆಲ್ಲಾ ಖಜಾನೆಯ ಸರಾಫನು ಝಡ್ತಿಮಾಡಿ . . . ಮೊಹರುಮಾಡುತ್ತಿದ್ದನು (ಮಹಾವಂ. II, ೩೨).

[← ಅರ. ಮರಾ. ಇಸರ್ಾಲ್ = ಹಣ ಅಥವಾ ಪತ್ರವನ್ನು ಕಳಿಸುವುದು, —ರವಾನೆ. / ತಮಿ. ಇರುಚಾಲ್, ಇರುಶಾಲ್ ; ತೆಲು. ಇರುಸಾಲು, ಇಸರ್ಾಲು]

**ಇರಸು**, ಇರಚು, ಇರಿಚು, ಇರುಸು, ಇರ್ಚಿ, ಇರ್ಚು (ನಾ). ಬಂಡಿಯ ಅಚ್ಚುಮರ: ಬಂಡಿಯ ಇರಸು ಮುರಿದ್ಹಂಗ (ಜಾನಕೋ. ೧೭). **ಇರಚು**: "ಚಕ್ರಸುತ್ತುವ ಅಚ್ಚು. . . ಇರಸು; ಇರಚು" (Axle. ಇಂಕನಿ). **ಇರಿಚು** (ಕಿ). **ಇರುಸು**: ಒಂದುಮೋಟರು ಯಂತ್ರದ ಇರುಸಿಗೆ ಜೋಡಿಸಲ್ಪಟ್ಟ (ವಿಜ್ಞಾವಿ. ೭೬). **ಇರ್ಚಿ** (ಕಿ). **ಇರ್ಚು** (ಉಕ. ಕಿ).

[ದೇ. ‖ ತಮಿ. ಇರುಚು ; ತೆಲು. ಇರುಸು. / ಮರಾ. ಇರಸ್ ; ಹಿಂ. ಇರಿಸ್]

**ಇರಸುಮುರಸು**, ಇರುಸುಮುರುಸು (ನಾ). ಹದಗೆಟ್ಟ ಸ್ಥಿತಿ: "ಏಕಮ್ಮಾ ಈವತ್ತು ಮಲಗಿಯೇ ಇದ್ದೀಯೆ? ಏನಾಗಿದೆ" ಎಂದರು. ಶ್ಯಾಮಲೆಯು "ಏನೋ ಇರಸುಮುರಸಾಗಿದೆ ಅಷ್ಟೆ. ನಾಳೆ ಸರಿಹೋಗಬಹುದು" ಎಂದಳು (ಚಿತ್ರಕೂ. ೭೨). **ಇರುಸುಮುರುಸು**: ಆದರೆ ನಿಧಿಯ ಅರ್ಪಣೆಯಿಂದ ಬಹು ಇರುಸುಮುರುಸಾಯಿತು (ದಾದಾನ. ೫೦).

[ಇರಸು$_0$ + ಮುರಸು$_0$]

**ಇರಸ್ತಿಕೆ** (ನಾ). (ಉಕ). ಇರುವ ಸ್ಥಿತಿ; ಇರವು (?): "ಈ ಮಕ್ಕಳ ಕಾಟದಿಂದ ಇರಸ್ತಿಕೆಯಿಲ್ಲ. ನನ್ನ ಜೀವ ತಿಂತಾವೆ" ಎಂದು ಗೊಣಗುಟ್ಟಿ ಒಳಗೆ ಹೋದಳು (ಮಧುನ. ೧೬೨) ; ನಿಮ್ಮಂತಹ ಜನರ ಇರಸ್ತಿಕೆ! ಅದರ ಮೇಲೆ ಅಪಖ್ಯಾತಿ (ಪ್ರಕಾಶ. ೧೧೪).

[ಇರ್$_1$ + ಅಸ್ತಿಕೆ ?]

**ಇರಹ** (ನಾ). ಒದ್ದೆ; ತೇವ: ಭೇರಿಯು ಇರಹವಾದಲ್ಲಿ ಅದುರಲ್ಲದೆ ಸುನಾದವಿಲ್ಲ (ಮೋಳಿಮಾ. ೬೪–೨೬೨).

[< ಇರ್ಪು ?. / ತಮಿ, ಮಲ. ಈರ ; ತೆಲು. ಈಮಿರಿ]

**ಇರಳುಗೆಲಸ** (ನಾ). ರಾತ್ರಿಕಾಲದ ಕೆಲಸ (ಕ).
[ಇರಳ್ಕು$_0$ (< ಇರುಳ್) + ಕೆಲಸ]

**ಇರಾದಿ** 'ಇರಾದೆ' ನೋ.

**ಇರಾದೆ,** ಇರಾದಿ (ನಾ). ಉದ್ದೇಶ; ಸಂಕಲ್ಪ ; ಅಭಿಪ್ರಾಯ; ಮನೋಗತ; ಇಚ್ಛೆ: ಈ ಸಲ್ತಾವಂನು ಹಿಂದುಸ್ಥಾನದಲ್ಲಿ ಮತ್ತು ಕಾಯಂ ಮಡಗಬೇಕು ಯಂಬುದು ನಮಗೆ ಇರಾದೆ ಇತ್ತು (ರಾಜೇಂದ್ರ. ೬೬); ಹಾನಿಪಡಿಸಬೇಕೆಂಬ ಇರಾದೆಯಿಂದ ಸರ್ಕಾರ್ ನೌಕರನು ತಪ್ಪು ದಸ್ತೈವಜು ಮಾಡಿದರೆ (ಗ್ರಾಮಾಕ. ೧೮೧); ನಮ್ಮ ಸ್ವಂತ ಇರಾದೆಯಿಂದ ಮಾಡೋ ಕೆಲಸ (ಸರ್ವಮಂ. ೨೮೪). **ಇರಾದಿ**: ನಾವು ಕೇಳೋದು ಕೇಳ್ಬಿಟ್ಟೋ ನಿಮ್ಮಿರಾದಿ ಇದ್ರೆ ನೋಡಿ, ಇಲ್ದೆ ಹೋದ್ರೆ ಬಿಡಿ (ರುದ್ರಿಮ. ೮೫).
[← **ಹಿಂ. ಮರಾ.** ಇರಾದಾ ; **ಅರ.** ಇರಾದಾ, ಇರಾದತ್]

**ಇರಿ$_1$** (ಕ್ರಿ). ೧. ಜಿನುಗು ; ತೊಟ್ಟಿಕ್ಕು. ೨. (ಹಾಲು) ಕರೆ ; ಹಿಂಡು : "ಇರಿಯೆಂದು ಕಱೆವುದು" (ಕಶಸಾ. ೬–೧೩೮); "ಕಱೆವುದಕ್ಕಿರಿ" (ಕಬ್ಬಿಕೈ. ೫೯); ಇರಿದೊಂದೆರಡಿರಿಯಿಂ ತೀವಿರೆ ಕೆಂದಲ್ ತನ್ನ ಬಿಳಿಯ ಕಣ್ಗಳ ಬೆಳಗಿಂ ನೊರೆವಾಲಿಂ ತೀವಿತೆಗೆತ್ತಿರದೆಬ್ದವಳಾತ್ಮಪತಿಯನೇಂ ನಗಿಸಿದಳೋ (ಲೀಲಾವ. ೫–೧೨೪). [**ದೇ. ‖ ತಮಿ.** ಇರಿ]

**ಇರಿ$_2$** 'ಇಱಿ$_1$' ನೋ.

**ಇರಿ$_3$** (ನಾ). ಕರೆಯುವ ಹಾಲಿನ ಧಾರೆ : ಇರಿದೊಂದೆರಡಿರಿಯಿಂ ತೀವಿರೆ ಕೆಂದಲ್ (ಲೀಲಾವ. ೫–೧೨೪). 'ಅಂಬಿರಿವಿಡು', 'ಇರಿವಿಡು' ಪರಾ.
[< ಇರಿ$_1$]

**ಇರಿಕಿಕೊಳ್** (ಕ್ರಿ). (?): ಪರಿಮಳವನಳಿವಗೆಯ ಬಿರಿಮುಗುಳ ಪೆತ್ತುವಂತುರುಚಮತ್ಕಾರದಿಂದಾ ಸತಿಯು ಬರಲಣುಗನಿರಿಕಿ[ಪಾಠಾಂ. ಚಿ] ಕೊಂಡೆಸೆಯಲ್ಕೆ ರೋಮಾಂಚಪುಳಕದಿಂದೈತಂದು ಜಮದಗ್ನಿಯ (ಪರಶು. ೧೬–೯). [ಇರಿಕಿ ? + ಕೊಳ್$_1$]

**ಇರಿಕಿಸು** 'ಇರುಂಕಿಸು' ನೋ.

**ಇರಿಕು** 'ಇಱುಕು$_2$' ನೋ.

**ಇರಿಕೆ$_1$** (ನಾ). ೧. ಇರುವ ಸ್ಥಿತಿ, —ರೀತಿ ; ಬಾಳು : ತಿಳಿಯಲಱಿಯದೆ ವಿಪ್ರಜಾತಿಯ ಬಳಗದಿರಿಕೆಯನಿಂದು ಕೊಲ್ಲುತ ಬಲುಹುಮಾಡದೆ ಬಂದು ಕಂಡನು ಜಗದ ವಲ್ಲಭನ (ಕುವ್ಯಾಅ. ಓರಿಇ. ೨೬–೬೧); ನಿಂದಿರಿಕೆಯಲಿ ನಿನ್ನನುರುಹುವೆನೆಂದು ನೋಡತ್ರಿಜನ ಬಲುಹನು (ನಿಭಾಗ. ೯–೩–೪೦); ಇದನ್ನು ಕಂಡ ನಮ್ಮಯಿರಿಕೆಗಳು ವ್ಯರ್ಥವೆಂದು ಭಾವಿಸುತ್ತಲಿದ್ದೇವೆ (ಶುಕಸ. ೧೨೫); ಆ ಹೆಂಗಸಿನ ಇರಿಕೆಯನ್ನು ನೋಡಿ ಜುಗುಪ್ಸೆಯಾಯಿತು (ಅನಾಮಿ.೭೧). ೨. (ಪಾತ್ರೆ ಮುಂತಾದುವನ್ನು) ಇಡುವುದಕ್ಕಾಗಿ ಅವುಗಳ ಅಡಿಯಲ್ಲಿ ಇರಿಸುವ ಸಾಧನ ; ಸಿಂಬೆ; ಸುರುಳಿ : ಪಾತ್ರೆಗಳನ್ನಿರಿಸುವ ಪೀಠ ಅಥವಾ ಇರಿಕೆ : ಮರದ್ದು, ಲೋಹದ್ದು ಅಥವಾ ತೆಂಗಿನನಾರು ಯಾ ಇತರ ನಾರಿನದು (ಅಡುಸೌ. ೩೫); ಹಾವುಗಳು ನೆಲದ ಮೇಲೆ ಇರಿಕೆ (Coil) ಹಾಕಿಕೊಂಡು . . . ಹಾದಿಯ ಮೇಲೆ ಬಿದ್ದುಕೊಂಡು (ಬಾಲಪ್ರ. II, ೧೦೨೪). [< ಇರ್$_1$ + –ಇಕೆ]

**ಇರಿಕೆ$_2$** (ನಾ). ಇರಿಯುವಿಕೆ ; ತಿವಿಯುವಿಕೆ ; ಹೊಡೆಯುವುದು (ಕ).
[ಇರಿ$_2$ (< ಇಱಿ$_1$) + –ಕೆ$_1$]

**ಇರಿಕೆಹಾಕು** (ಕ್ರಿ). ಸುರುಳಿ ಸುತ್ತು ; ಸಿಂಬೆ ಸುತ್ತು : ಸರ್ಪವು ಕೋಪಗೊಂಡು ಇರಿಕೆಹಾಕಿದಂತೆ ಮೈಗಂಟುಕಟ್ಟಿಕೊಂಡಂತೆ ಕಲ್ಪನೆ ಬರುತ್ತದೆ (ಯಕ್ಷಬ. ೧೦೧); ನಾಗನ ಶರೀರ ಕೋಪದ ಆಳತೆಗೆ ಸಮನಾಗಿ ಇರಿಕೆಹಾಕಿಕೊಳ್ಳುತ್ತದಂತೆ (ಸ್ವಪ್ನಹೊ. ೬೭).
[ಇರಿಕೆ$_1$ + ಹಾಕು (< ಪಾಯ್ಕು)]

**ಇರಿಗತ್ತಿ** (ನಾ). ಇರಿಯುವ ಕತ್ತಿ : (ಇರಿತಕ್ಕೆ ಮಾತ್ರ ಉಪಯೋಗಿಸುವ) ಹಗುರವಾದ ತೆಳುವಾದ ಇಬ್ಬಾಯಿಯ ಚುಚ್ಚುಗತ್ತಿ ; ಇರಿಗತ್ತಿ ; ಸಣ್ಣಕತ್ತಿ (Rapier. ಇಂಕನಿ). [ಇರಿ$_2$ (< ಇಱಿ$_1$) + ಕತ್ತಿ]

**ಇರಿಚು** 'ಇರಸು' ನೋ.

**ಇರಿಣ** (ನಾ). ೧. ಬಂಜರು ಭೂಮಿ ; "ಪಾಳು, ಬೆಳೆಯಾಗದ ನೆಲ" (ಅಮರ. ಟೀಕೆ). ೨. ಮರಳುಗಾಡು ; ಮರುಭೂಮಿ. [ಸಂ.]

**ಇರಿತ** 'ಇಱಿತ' ನೋ.

**ಇರಿದಿಗೆ** (ನಾ). ಒಂದು ನಾಡಿನ ಹೆಸರು : ಇರಿದಿ(? ಡಿ)ಗೆ (? ಪೆ) ವಿಷಯೇ (ಇಆ. IX, ೧೨೮–೩೩ ; 700). [?]

**ಇರಿನುಡಿ** (ನಾ). (ಮನಸ್ಸನ್ನು) ಕುಟುಕುವ ಮಾತು; ಚುಚ್ಚುಮಾತು : (ಒಬ್ಬನನ್ನು ಕುರಿತು ಮಾಡಿದ) ಕಟುಟೀಕೆ; ಇರಿನುಡಿ (Thrust. ಇಂಕನಿ). [ಇರಿ$_2$ (< ಇಱಿ$_1$) + ನುಡಿ$_2$]

**ಇರಿಮುರಿಪಳ್ಳ** (ನಾ). ನೀರಿನ ತಿರುವನ್ನು (ಸುಳಿಯನ್ನು) ಉಳ್ಳ ಹಳ್ಳ : ಇರಿಮುರಿಪಳ್ಳಂ ತಡಿಸರದೆರದಪ್ಪಿದ ಹಾವು ಪಸಿದ ಪೆಣ್ಬುಲಿಯಿಂದಾ ಕರಡಿ ಕಡುಮುಳಿದ ಸಿಂಹಂ ಸ್ಫುರದನಲನ ಜಾಲೆ ಬಾಲೆ (ಉಸಾರ. ೨೦೨). [ಇರಿ$_0$ (< ನೀರ್) + ಮುರಿ$_3$ + ಪಳ್ಳ]

**ಇರಿಮೊಲ್ಲೆ** (ನಾ). ಮೊಲ್ಲೆ ಹೂವಿನಲ್ಲಿ ಒಂದು ಬಗೆ : ಸಲಿಲೆಯಿರಿಮೊಲ್ಲೆ ಮಲ್ಲಿಗೆ ಸಹ ಪುಷ್ಪಕುಳದ ಲೋವೆಯು (ನವಮೋ. ೪–೩೬).
[ಇರಿ ? + ಮೊಲ್ಲೆ]

**ಇರಿವಿಡು** (ಕ್ರಿ). ತೊಟ್ಟಿಡು ; ಸ್ರವಿಸು ; ಸುರಿ : ತೋರ ಮೊಲೆಗಳಿನಿರಿವಿಡುತುಂ ಬಂದುವಂದು ಪಯಗಳ್ ಪಲವುಂ (ಲೀಲಾವ. ೫–೧೦೪). 'ಅಂಬಿರಿವಿಡು' ಪರಾ. [ಇರಿ$_3$ + ಬಿಡು]

**ಇರಿವೆ** 'ಇಱುಂಪೆ' ನೋ.

**ಇರಿಸಲು** 'ಇಱಿಸಿಲ್$_1$' ನೋ.

**ಇರಿಸಿಡು** (ಕ್ರಿ). ಇಡು ; ಮಡಗು : ಬೆಸಸಿಂ ಮಹಾನುಭಾವನನಿರದೊಯ್ದು ನಾವನಿರಿಸಿಟ್ಟನದೆಲ್ಲಿ ತದೀಯವಾರ್ತೆಯೇಂ (ಕಾದಂಉ. ೬೦೯); ಮಾವನುಮೆಮ್ಮತ್ತೆವಿರುಂ ದೇವನುಮಿರಿಸಿಟ್ಟು ಪೋದರಿನಿಬರುಮಂ ಶೂನ್ಯಾವಾಸದೊಳ್ (ಅಜಿಪು. ೬–೧೨೨); ಕನಕದ ಕಾಯನೊಂದು ದೆವಸಂ ತಿಱಿದಟ್ಟುಱಿ ಸುಣ್ಣದೂಜಲೊಳ್ ದಿನಮಿರಿಸಿಟ್ಟು ಕರ್ಚಿ (ಲೋಕೋಪ. ೮–೩೧). [ಇರಿಸು + ಇಡು$_1$]

**ಇರಿಸಿಸು** (ಕ್ರಿ). ಇಡಿಸು ; ಮಡಗಿಸು ; ಏರ್ಪಡಿಸು : ಧರ್ಮದ ಉದಕವನೂ ಇರಿಸಿಸಿ ದೀವಳಿಗೆ ಹಬ್ಬ ಮುಂತಾಗಿ ದೀಪ್ತಿಯನ್ನೂ ಹೊತ್ತಿಸಿ (ಸೌಇಇ. IX–ii, ೪೭೬–೩೨ ; 1506).
[ಇರಿಸು + –ಇಸು$_3$]

**ಇರಿಸು** (ಕ್ರಿ). ಇರುವಂತೆ ಮಾಡು ; ಇಡು ; ಮಡಗು ; ಉಳಿಸು ; ಕುಳ್ಳಿರಿಸು ; ಸ್ಥಾಪಿಸು : ಸಮಂತಿರಿಸುವೆನಂತನಂತಸುಖಸಂಗತಮಂಗಳಕಾರಣಂಗಳಂ (ಕವಿರಾ. ೨–೧೦೨); ಸ್ವರ್ಣಪೀಠದೊಳ್ ದಾದಿಯನಿರಿಸಿ (ವಡ್ಡಾರಾ. ೧೦೭–೧೯); ಪಡಿಗಳನಮರ್ಚಿ ಬಿಲ್ಲಂ ಕುದುರೆಯಂ ಕಾಲಾಳಂ ನಾಯ್ಗಳುಮಂ ತಿಣ್ಣಮಿರಿಸಿ (ಪಂಪಭಾ. ೫–೪೭ ವ); ಪದೆದೆನ್ನಯ ವೀಣೆಯನಿರಿಪುದು ನಿನ್ನಯ ತೊಡೆಯ ಮೇಲೆ (ಕಾದಂಉ. ೫೯೭); ಗುರುಲಿಂಗದೇವರು ತಮ್ಮ ಹಸ್ತವ ತಂದು ಎನ್ನ ಮಸ್ತಕದ ಮೇಲೆ ಇರಿಸಿದಾಗಳೇ ಎನ್ನ ಭವಂ ನಾಸ್ತಿಯಾಯಿತ್ತು (ಮಹಾದೇ. ೬–೧); ಮೂರ್ಧದೊಳ್ ಕುಸುಮವನಿರಿಸಿ ನಮಸ್ಕರಿಸಿ (ಪದ್ಮರಾ. ೭–೧೪); ಮಾವಿನಕಾಯಿಗಳನ್ನು . . . ಮಣ್ಣಿನ ಪಾತ್ರೆಗಳಲ್ಲಿ ಹಾಕಿ ಜಾಗರೂಕತೆಯಿಂದ ಇರಿಸಿದರೆ ಬೇಕಾದಾಗ ತೆಗೆದು ಉಪಯೋಗಿಸಿಕೊಳ್ಳಬಹುದು (ಅಡುಸೌ. ೧೧೪). [ಇರ್$_1$ + –ಇಸು$_3$]

**ಇರಿಸೆಟ್ಟಿ** (ನಾ). ಒಬ್ಬಾತನ ಹೆಸರು : ಮುಕಂಣ್ಣಜೀಯರು ಸೊರಣ ಜೀಯರು ಯಿರಿಸೆಟ್ಟಿಯರೊಳಗಾದ ಸಮಸ್ತ ಗವುಡಪ್ರಜೆಗಳು (ಎಕ. X, ಕೋಲಾರ. ೬೭–೧೪ ; ?). [ಇರಿ$_0$ + ಸೆಟ್ಟಿ]

**ಇರಿಸೆಡ್ಲು** (ನಾ). ೧. ಮರದ ಸೌಟು. ೨. ಮೊರಸು ಒಕ್ಕಲಿಗರಲ್ಲಿ ಒಂದು ಪಂಗಡ (ಎಸಮೈ. XV, ೪೪). [?]

**ಇರು$_1$** 'ಇರ್$_1$' ನೋ.

**ಇರು$_2$** 'ಇರ್$_2$' ನೋ.

**ಇರುಂಕಿಸು**, ಇರಕಿಸು, ಇರಿಕಿಸು, ಇರುಕಿಸು (ಕ್ರಿ). ಒತ್ತಿಹಿಡಿ ; ಒತ್ತಿಕ್ಕು ; ಹಿಡಿಸು ; ಸಿಕ್ಕಿಸು. **ಇರಕಿಸು** : "ಹಾಯು ; ಹಿಚುಕು" (ಜಾನಕೋ. ೧೭). **ಇರಿಕಿಸು** : ಘೂಕ ಘೀಕೃತಿಯಿರಿಕಿಪಯೇಡಿಗಳೆಸೆದು ವೇವೇಳ್ವಿ (ಕಂನವಿ. ೧೮–೪೨) ; ರಾಮುಪ್ಪನ್ನ ಬಲವಾಗಿ ಸಿಕ್ಕಿಸಿ ಬಿಡಬೇಕು. ಇಕ್ಕುಳದಲ್ಲಿ ಇರಿಕಿಸಿಕೊಂಡಂಗೆ (ನಮ್ಮಳ್ಳಿ. ೨೭). **ಇರುಕಿಸು** : ಬಾಣ ಪಾತಕ್ಕಗಿದಿರುಕಿಸುತುಂ ಪೃಷ್ಮಮಂ (ಶಾಕುಂತ. ೩–೭). [ಇರುಂಕು$_0$ (< ಇಱುಂಕು) + –ಇಸು$_3$]

**ಇರುಂಗುಣ** 'ಇರುಂಗೋಳ' ನೋ.

**ಇರುಂಗುಳ** 'ಇರುಂಗೋಳ' ನೋ.

**ಇರುಂಗೊಣ** 'ಇರುಂಗೋಳ' ನೋ.

**ಇರುಂಗೊಳ** 'ಇರುಂಗೋಳ' ನೋ.

**ಇರುಂಗೋಳ**, ಇರುಂಗುಣ, ಇರುಂಗುಳ, ಇರುಂಗೊಣ, ಇರುಂಗೊಳ, ಇರುಂಗೋಟಿ (ನಾ). ಹೇಮಾವತೀ ನಿಡುಗಲ್ಲು ಪ್ರದೇಶಗಳಲ್ಲಿದ್ದ ಚೋಳರ ಬುಡಕಟ್ಟಿಗೆ ಸೇರಿದ್ದ ಕೆಲವು ರಾಜರ ಹೆಸರು : ನೆಗಟ್ದಾ ಕೈಲಾಸಶೈಲಕ್ಕೆ ತಾಂ ಗುರುವಾದಂ ವಿನುತಂಗೆ ರಾಜಿಸುವಿರುಂಗೋಳಂಗೆ ಲೋಕಕ್ಕೆ ಸದ್ಗುರುವಾದಂ (ಎಕ. II, ೬೭–೯೧; 1176) ; ಇನವಂಶಸಂ[ಭವಂ] ತಾನೆನಿಸಿದಿರುಂಗೋಳ ನೃಪತಿಗೆ (ಸೌಇಇ. IX–i, ೨೯೮–೨೦ ; 1196). **ಇರುಂಗುಣ** : ಇರುಂಗುಣ ಇತಿ ಖ್ಯಾತಃ ತತೋ ಜನಿ ಜನಾಧಿಪಃ (ಎಕ. XII, ಪಾವುಗ. ೫೩–೧೪ ; 1292). **ಇರುಂಗುಳ**: ಪೊಂಗಳನಿಪ್ಪಕರಂಗಳಂ ಸಮುಸ್ತಾವನಿಭೃತ್ಸಮುಂಗಳನಿರುಂಗುಳನೀವನು ದಾತ್ತಮುಂಗಳಂ (ಎಇ. XIV, ೨೭೧–೨೭ ; 1173). **ಇರುಂಗೊಣ** : ತಮ್ಮ ತಂದೆ ಯಿರುಂಗೊಣದೇವರ ಶ್ರೀಹಸ್ತವಾಗಿ ಪುನಃಪ್ರತಿಷ್ಠೆಯಾಗಿ (ಎಕ. XII, ಶಿರಾ. ೩೪–೨೩ ; 1262). **ಇರುಂಗೊಳ** : ವಿಕ್ರಮಾಭರಣ ನಿರುಂಗೊಳದೇವನಂಕಕಾಱ ರಣರಂಗಧೀರ (ಎಕ. XII, ಶಿರಾ. ೪೦–೫೭ ; 1040) ; ಇರುಂಗೊಳ ಕುಂತಕದಳವನವಿದಳನ ಕರಾಳಶುಂಡಾಳನುಂ (ಎಕ. V, ಬೇಲೂರು. ೫೮–೫೩ ; 1117). **ಇರುಂಗೋಟಿ**: ಧಾತ್ರೀವಲ್ಲಭ ನೆನಿಸಿ ನೆಗೞ್ದಿರುಂಗೋಟಿನೃಪ (ಎಕ. XII, ಪಾವುಗ. ೪೩–೧೧ ; 1150). [← ತಮಿ. ಇರುಙ್ಕೋವೇಳ್]

**ಇರುಂಗೋಟಿ** 'ಇರುಂಗೋಳ' ನೋ.

**ಇರುಂಬೆ** 'ಇಱುಂಪೆ' ನೋ.

**ಇರುಕಳ** 'ಇಱುಕುಳಿ' ನೋ.

**ಇರುಕಿಸು** 'ಇರುಂಕಿಸು' ನೋ.

**ಇರುಕು$_1$** 'ಇಱುಂಕು' ನೋ.

**ಇರುಕು$_2$** 'ಇಱುಕ್ಕು' ನೋ.

**ಇರುಗ** (ನಾ). ಒಬ್ಬಾತನ ಹೆಸರು : ಎಱೆಯಪಂ ಮೆಚ್ಚಿ ಇರುಗಜ್ಜಿ ನಾಗತ್ತರವಟ್ಟಂಗಟ್ಟಿ (ಎಕ. IX, ಬೆಂಗಳೂ. ೮೩–೫ ; 890) ; ಇರುಗಜ್ಜಿ ನಾಗತ್ತರವಟ್ಟಂಗಟ್ಟಿ (ಎಇ. I, ೩೫೦–೫ ; 900) ; ಪೂಜ್ಯನಂ ರಿಪುನಿಕರ ಭಯಂಕರನನಿರುಗನಂ ಧರೆ ಪೊಗಳ್ಗುಂ (ಎಕ. VII, ಚೆನ್ನಗಿ. ೬೧–೩೪ ; 1125). [?]

**ಇರುಗಕಾಱ** (ನಾ). (?) : ಭೂಮಿಕಾಱ ಬೀರಗೌಡನ ಹಳ್ಳಿಯ ಆಸಗರ ಗೊರವನು ಹಂದಿಯನಿಱಿದು ಸ್ವರ್ಗಸ್ತನಾದನು ಆ ಇರುಗಕಾಱ ಮಾಡಿಸಿದ ಬೀರಗಲು (ಎಕ. III, ಮಂಡ್ಯ. ೨೨–೭ ; 1144). [ಇರುಗ ? + –ಕಾಱ ?]

**ಇರುಗಡೆ** (ನಾ). "ವಿಶ್ರಾಂತಿ" (ಜಾನಕೋ. ೧೭). 'ನಿಲುಗಡೆ' ಪರಾ. [ಇರು$_1$ (< ಇರ್$_1$) + –ಕಡೆ$_5$]

**ಇರುಗಮಯ್ಯ** 'ಇರುಗಮ್ಮಯ್ಯ' ನೋ.

**ಇರುಗಮ್ಮಯ್ಯ**, ಇರುಗಮಯ್ಯ (ನಾ). ಒಬ್ಬಾತನ ಹೆಸರು : ವಚ್ಛ ಗೋತ್ರದ ಕಣ್ಣಮ್ಮಯ್ಯನ ಮಗನಿರುಗಮ್ಮಯ್ಯನು . . . ಈ ಧರ್ಮ್ಮಂ ಇರುಗಮ್ಮಯ್ಯಗೊಸ್ಟು ಮನುಕಮ್ಮಯ್ಯಂಗಂ ಅವ್ವಬ್ಬೆಗಂ ಒಸ್ಟು ಭಾಗಂ ಸಲ್ವುದು (ಎಕ. X, ಕೋಲಾರ. ೫೭–೮, ೧೫ ; 925). **ಇರುಗಮಯ್ಯ** : ಇವ್ರುರ್ಗಲಿಯೂರೊಡೆಯ ಇರುಗಮಯ್ಯನ ಮಗಂ ಸಿರಿಯಮಯ್ಯನೆರಡು ಕೆಱೆಯಂ ತೂಂಬನಿಕ್ಕಿ ಮಾಡಣಕೆಱೆಯಂ ಕಟ್ಟಿಸಿ (ಎಕ. IX, ಬೆಂಗಳೂ. ೭೯–೪ ; 870). [ಇರುಗ + ಅಮ್ಮ$_1$ + ಅಯ್ಯ$_1$]

**ಇರುಗಳೆ** (ನಾ). ಎರಡು ಕಹಳೆ (?) : ಗಂಗಪೆರ್ಮ್ಮಾಡಿದೇವರ್ಮ್ಮೆಚ್ಚಿರುಗಳೆ ಗುಡಿ ಚಾಮರ . . . ರಾಜ್ಯಚಿಹ್ನಂಗಳನಿತ್ತು (ಎಕ. VII, ಶಿವಮೊ. ೧೦–೫೦ ; 1085). [ಇರು$_2$ (< ಇರ್$_2$) + ಕಳೆ$_0$ (< ಕಹಳೆ ?)]

**ಇರುಗುಂಡಿ** (ನಾ). ಒಂದು ಜಾತಿಯ ಮರ (ದಕ. ೬). [?. / ತೆಲು. ಇರುಗುಡು, ಇರುವುಡು]

**ಇರುಡಿ** (ನಾ). ಒಂದು ವೃಕ್ಷದ ಹೆಸರು ; ಸಂಪಿಗೆ ; ಚಂಪಕ : ವಿಕಸಿತ ಪುಷ್ಪದಂತರಳಿ ಕನ್ನಡಿಗರ್ಕರೆವಂತೆ ಬನ್ನಿ ಬಂದಕಿಯರ ನಾಮದಂತೊಗೆದ ಪಾದರಿ ರೋಗಿಗಳಂತೆ ಕಾರಿ ಪಾವಕನ ಶರೀರದಂತಿರುಡಿ [ಪಾತಾಂ. ತೆ ತರಿ] ಸುಂಕಿಗನಂತಿರೆ ಚೆಲ್ವು ಲಾವಕನ ನಿಯೋಗದಂತೊಗೆದ ಬೊಬ್ಬುಲಿ ಪರ್ವಿದಟವ್ಯಮದ್ಭುತಂ (ಪುಣ್ಯಾಸ್ರ. ೧–೯೪). [← ತಮಿ. ಇರುಂಡಿ]

**ಇರುದಿ** (ನಾ). ಮುಕ್ತಾಯ ; ಸಾವು : "ಕಾಡ, ಪೀಡೆ, ಗೋಳು, ಬಳಲಿಕೆ . . . ಇರುಕು, ಇರುದಿ" (ಕಂನುಹು. ೮೧). [← ತಮಿ. ಇಱುದಿ = ಕೊನೆ, ಸಾವು, ಮೇರೆ]

**ಇರುಪು** (ನಾ). ಒಂದು ತೆರಿಗೆ (?) : ಸುಂಕಕಾರುಕದಿಂದಿರುಪು ತಱವಾಳಿಕೆಕ್ತ ಅಂತು ೧೨ ‖ ೧ ಅಕ್ಷರದಲೂ ಹನ್ನೆರಡು ಹೊಂನು ಅಱು ಹಣವಿಗಂ ಸಲುವ ಭೂಮಿಯ (ಮೈಆರಿ. ೧೯೩೪, ೫೩–೧೩ ; 1405). [?]

**ಇರುಬು** 'ಇಱುಂಬು' ನೋ.

**ಇರುಬೆ** 'ಇಱುಂಬು' ನೋ.

**ಇರುಮುರಿಗಂಡ** (ನಾ). ಒಬ್ಬಾತನ ಹೆಸರು : ಶ್ರೀ ಸೋಮನಾಥ ದೇವರು ಶ್ರೀ ಇರುಮುರಿಗಂಡ ಶ್ರೀ ಶ್ರೀ ಶ್ರೀ ಶ್ರೀ (ಎಕ. III, ಮಳವ. ೨೦–೨೨ ; 1388). [ಇರುಮುರಿ$_0$ + ಗಂಡ]

**ಇರುವಂತಿ** 'ಇರವಂತಿ' ನೋ.

**ಇರುವಂತಿಗೆ** 'ಇರವಂತಿಗೆ' ನೋ.

**ಇರುವತಿಗೆ** 'ಇರವಂತಿಗೆ' ನೋ.

**ಇರುವತ್ತು** 'ಇರ್ಪತ್ತು' ನೋ.

**ಇರುವರ್** 'ಇರ್ವರ್' ನೋ.

**ಇರುವಳಿಕೆ** (ನಾ). ಇರುವ ರೀತಿ : ಬರೆವಣಿಗೆಯಲ್ಲಷ್ಟೇ ಅಲ್ಲ, ಇವರ ಇರುವಳಿಕೆಯಲ್ಲಿಯೂ ಅದು ಮುದ್ರಿತವಾಗಿದೆ (ವಿಚಾಮಂ. ೧೧೧). [ಇರು$_1$ (< ಇರ್$_1$) + –ವಳಿಕೆ]

**ಇರುವಾಯಿ** 'ಇರ್ಬಾಯ್' ನೋ.

**ಇರುವಾರ** 'ಇರ್ವಾರ' ನೋ.

**ಇರುವಿಕೆ** (ನಾ). ಇರುವ ಸ್ಥಿತಿ, —ರೀತಿ : ಧುರಧೀರ ರಣಧೂಳಿಖಾನನ ಪೌರುಷದಿರುವಿಕೆಯನು ನೋಡಿ ನಗುತ (ಕಂನವಿ. ೧೨–೪೧) ; ಅದರ ಇರುವಿಕೆಯೆಲ್ಲಾ ಶ್ರೀರಂಗಪಟ್ಟಣದಂತೆಯೇ (ಹುಟ್ಟಿಹ. ೬) ; ದನಗಳ ಇರುವಿಕೆಯನ್ನು ಕಂಡುಹಿಡಿಯಲು ಅತ್ತಿತ್ತ ನೋಡಿದನು (ಮಣಿಸ. ೯೮).
[ಇರು$_1$ (< ಇರ್$_1$) + -ಇಕೆ]

**ಇರುವು$_1$** 'ಇರಂ' ನೋ.

**ಇರುವು$_2$** 'ಇಱುಂಪೆ' ನೋ.

**ಇರುವೆ$_1$** 'ಇಱುಂಪೆ' ನೋ.

**ಇರುವೆ$_2$** (ನಾ). ಜೊಮ್ಮು; ಮರಗಟ್ಟುವುದು.
ಇರುವೆಬರು = ಜೊಮ್ಮುಹಿಡಿ ; ಕೈಕಾಲು ಮರಗಟ್ಟು : ನಾವು ಒಂದು ಮಗ್ಗುಲಿನಲ್ಲಿ ವಿಶ್ರಮಿಸಿದಾಗ ನಮ್ಮ ಕೈಕಾಲುಗಳು ಮರಗಟ್ಟುವುವು. ಅವುಗಳಲ್ಲಿ ಸೂಜಿ ಚುಚ್ಚಿದಂತೆ ಅನುಭವವಾಗುವುದು ; ಕೆಲವರು ಇದನ್ನು "ಇರುವೆ ಬಂತು" ಎಂದೂ ಕರೆಯುತ್ತಾರೆ (ಬಾಲಪ್ರ. II, ೧೦೬೫). [?]

**ಇರುವೆಬಾಕ** (ನಾ). ಇರುವೆಯನ್ನು ತಿನ್ನುವ ಪ್ರಾಣಿ : ಒಂದು ಜಾತಿಯ "ಇರುವೆಬಾಕ" (Ant-eater) ಇದೆ. ಇದು ನೋಟಕ್ಕೆ ನೀಳ ಮೂತಿಯುಳ್ಳ ಮುಂಗುಸಿಯಂತೆ ಕಾಣುವುದು (ಬಾಲಪ್ರ. III, ೧೩೫೪).
[ಇರುವೆ$_1$ (< ಇಱುಂಪೆ) + ಬಾಕ]

**ಇರುಸರಿಕೆ,** ಇರಸರಿಕೆ (ನಾ). ಇರುವ ರೀತಿ, —ಸ್ಥಿತಿ : ಅವರವರ ಯಿರುಸರಿಕೆಗಳಿಂದಲುಂ . . . ಮನುಷ್ಯರ ಸ್ವರೂಪವಂ ತಿಳಿದು (ಸೌಗಂಧಿ. ೫೯೫–೭). **ಇರಸರಿಕೆ :** ಅವನ ಇರಸರಿಕೆ ಹಾಗಿತ್ತು (ರುದ್ರವೀ. ೭೩).
[ಇರು$_1$ (< ಇರ್$_1$) + ಸರಿಕೆ ?]

**ಇರುಸಾಲು** 'ಇರಸಾಲು' ನೋ.

**ಇರುಸು** 'ಇರಸು' ನೋ.

**ಇರುಸುಮುರುಸು** 'ಇರಸುಮುರಸು' ನೋ.

**ಇರುಹ** (ನಾ). ಇರುವಿಕೆ : ಸಣ್ಣವಾಗಿರುಹ . . . ಉದ್ದವಾಗಿರುಹ . . . ದಟ್ಟತ್ತಾಗಿರುಹ . . . ಅಗಲವಾಗಿರುಹ (ಲೋಕೋಪ. ೧೧–೭೪ ಟೀಕೆ) ; ಮಗನಿಗೆ ತಂದೆಯಾಗಿರುಹ ತಂದೆಗೆ ಮಗನಾಗಿರುಹ ಹೆಂಡತಿಗೆ ಗಂಡನಾಗಿರುಹ . . . ಮಸಣಕ್ಕೆ ಹೆಣನಾಗಿರುಹ (ಸಮಾವ. ೧೭–೭೦).
[ಇರು$_1$ (< ಇರ್$_1$) + -ಹ$_2$ (< -ಪ$_2$)]

**ಇರುಹು** 'ಇರಂ' ನೋ.

**ಇರುಳ್,** ಇರುಳು (ನಾ). **೧.** ರಾತ್ರಿ ; ನಿಶೆ : "ವಿಭಾವರಿ ನಕ್ತಮುಷೆಯಿರುಳ್ ತಾಂ ತ್ರಿಯಾಮ್ಮೆ ಯಾಮಿನಿಯಕ್ಕುಂ" (ವಸ್ತುಕೋ. ೧೫–೫) ; ನೆನೆದಿರುಳುಂ ಪಗಲುಂ ನಿನ್ನನೆ ಪೀನಮೊಱಲ್ದು ಮಱುಗಿ ಕಾತರಿಸುತ್ತುಂ (ಕವಿರಾ. ೨–೮೧) ; ಇರುಳುಂ ಪಗಲುಂ ಜಾನಿಸಿ ಸುರತ್ವಮಂ ಕೊಟ್ಟು ಮಗುೞೆ (ಶಾಂತಿಪು. ೪–೬೯) ; ವಿಧುವಿಲ್ಲದಿರುಳ್ ಕೆಲದೊಳ್ ವಧುವಿಲ್ಲದ ಲೀಲೆ (ಕಾವ್ಯಾವ. ೪೧). **೨.** ಅಜ್ಞಾನ : ದಯೆಯಿಂ ಪೊರೆವ ನೃಪನಣ್ಣನೆನೆ ಮಚ್ಚರಿಸುವರಾರ್ ನಾಕಿಯಿರುಳೊಳೀಂ ಪುಟ್ಟಿದನೇ (ಛಂದೋಂಬು. ೧–೨೭). **ಇರುಳು : ೧.** ಬಹ್ವಾರಂಭಪರಿಗ್ರಹವಿಷ್ವಳನಿಂದ್ರಿಯಸುಖಾರ್ಥಿ ಸಂಸಾರಗುಹಾಗಹ್ವರದೊಳಗಿರುಳಿನ ಚಕ್ರಾಹ್ವದ ಪೋಲ್ ಮಱುಗದೇಂ ಸುಖಂಬಡೆದಪನೇ (ಆದಿಪು. ೩–೬೮) ; ಇರುಳು ನಾಲ್ಕುಜಾವ ಲಿಂಗದ ವಿಕಳಾವಸ್ಥೆಯಲ್ಲಿಪ್ಪೆನು (ಮಹಾದೇ. ಬ. ೩೭–೭೯) ; ಇರುಳು ಕಳೆದ ಮೇಲೆ ಹಗಲು ಬರುವುದು (ಹಾಹುತ್ತ. ೫೪) ; ಕುರುಡಗೆ ಹಗಲೇನು ಇರುಳೇನು (ಗಾದೆ) ; ಇರುಳು ಕಂಡ ಬಾವಿಯಲ್ಲಿ ಹಗಲು ಬಿದ್ದ (ಗಾದೆ). **೩.** ಮದಹಿಡಿಸಿ ಮರುಳ್ಗೊಳಿಸಿ ಇರುಳುಗವಿಸಿ ಮುಚ್ಚುವಳು ಕಣ್ಣಳಿಸಿ ಮಣ್ಣೊಳವಳು (ಪಾರಸಿ. ೭–೩).

**ಇರುಳಕಾಯಿಕ** = ರಾತ್ರಿಯ ಕೆಲಸ : ಸಂತೆಕಾಯಿಕ . . . ಕಂತೆಕಾಯಿಕ ಯಿರುಳಕಾಯಿಕವೆಂತವಕೆ ಪೆಸರಿಟ್ಟು (ಬಜ್ಜಪು. ೪೮–೫೨).
[**ದೇ.** ‖ **ತಮಿ.** ಇರವು, ಇರ, ಇರಾ, ರಾ = ರಾತ್ರಿ, ಇರುಳ್ = ಕತ್ತಲೆ, ಅಜ್ಞಾನ ; **ಮಲ.** ಇರವು, ಇರಾ, ರಾ = ರಾತ್ರಿ, ಇರುಟ್ಟು, ಇರಿಟ್ಟು = ಕತ್ತಲೆ ; **ತುಳು.** ಇರ್ಲ್, ಇರ್ಲ್ ; **ತೆಲು.** ಇರುಲು ; **ಕೊಲಾ.** ಚಿರುಮ್ = ಕಗ್ಗತ್ತಲೆ ; **ಪರ್ಜಿ.** ಚಿರುನ್ = ಇದ್ದಿಲು ; **ಕುಇ.** ಸ್ರೋಬಿ = ಕಾಡಿಗೆ ; **ಕುವಿ.** ರೋಯ = ಕಾಡಿಗೆ]

**ಇರುಳರಸ** (ನಾ). ರಾತ್ರಿಯ ಒಡೆಯ ; ಚಂದ್ರ : "ಇರುಳರಸಂ . . . ತಿಂಗಳ್ – ಈ ೨೦ ಚಂದ್ರನ ಪೆಸರ್" (ಕಶಸಾ. ೨–೨೩) ; "ಚಂದಿರನಿರುಳರಸಂ ಬಿದುವೆಂದುಂ. . . ಇಂದುವಿಗಭಿಧಾನಂಗಳ್" (ಕವಿಕಂ. ೪೪).
[ಇರುಳ್ + ಅರಸ$_1$]

**ಇರುಳಾಣ್ಮ** (ನಾ). = ಇರುಳರಸ : "ಇರುಳಾಣ್ಮನೆನೆ ಚಂದ್ರನಕ್ಕು" (ಕಶರ. ೧೧೮). [ಇರುಳ್ + ಆಣ್ಮ (< ಆಳ್)]

**ಇರುಳು** 'ಇರುಳ್' ನೋ.

**ಇರುಳುಕಳ್ಳ** 'ಇರುಳುಗಳ್ಳ' ನೋ.

**ಇರುಳುಕುರುಡು** (ನಾ). = ಇರುಳುಗಣ್ಣು : ಇರುಳುಕುರುಡು (Night blindness) ಮುಚ್ಚಂಜೆಯಲ್ಲಿ ಮತ್ತು ಕತ್ತಲೆಯಲ್ಲಿ ಕಣ್ಣು ಕಾಣುವುದಿಲ್ಲ (ಗೃಹವಿ. ೨೭). [ಇರುಳು (< ಇರುಳ್) + ಕುರುಡು]

**ಇರುಳುಗಣ್ಣ** 'ಇರುಳ್ಗಣ್ಣ' ನೋ.

**ಇರುಳುಗಣ್ಣು** (ನಾ). ಸಂಜೆಯಾದೊಡನೆ ಕಣ್ಣು ಕಾಣದಂತಾಗುವ ಒಂದು ಬಗೆಯ ನೇತ್ರರೋಗ ; ರಾತ್ರಿಯಲ್ಲಿ ಕಣ್ಣು ಕಾಣದಿರುವಿಕೆ : ಅಗಸೇಸೊಪ್ಪಿನ ರಸದಲ್ಲಿ ಗಟ್ಟಿಪೊಣಸಂ ನೆನೆಯಿಕ್ಕಿ ಬಿಸಿಲಲ್ಲಿ ಒಣಗಿಸಿ ಪುನಃ ನೆನೆಯಿಕ್ಕಿ ಒಣಗಿಸುವುದು. ಈ ರೀತಿ ಏಳು ಬಾರಿ ಒಣಗಿಸಿಕೊಂಡು ಆ ರಸದಲ್ಲಿ ತೇದು ಕಣ್ಣಗೆಚ್ಚಲು ಇರುಳುಗಣ್ಣು ಮಾಣುವುದು (ವೈದ್ಯಸಾ. II, ೮೫) ; ಇರುಳುಗಣ್ಣಿಗೆ : –ಚಿಟ್ಟವುಡಲದ ಹರಳ ತಿರುಳು ಎಮ್ಮೆಮೊಸರಲ್ಲಿ ತೇದು ಹಚ್ಚಲು ಇರುಳುಗಣ್ಣು ಮಾಣ್ಗುಂ (ವಿವೈವಿ. ೬೨). [ಇರುಳು (< ಇರುಳ್) + ಕಣ್ಣು (< ಕಣ್)]

**ಇರುಳುಗನ್ನ** (ನಾ). ರಾತ್ರಿಯಹೊತ್ತು ಮನೆಗೆ ಹಾಕುವ ಕನ್ನ, —ಕಳ್ಳತನಕ್ಕಾಗಿ ಗೋಡೆಯನ್ನು ಕೊರೆಯುವುದು : ಇರುಳುಗನ್ನದ [ಪಾಠಾಂ. ಕಳ್ಳನ] ಕೆಲಸ ದಿವದಾಚರಣೆ ಧರ್ಮದ ವಿರಸ ತತ್ಪರಿಸರದ ನಡವಳಿ ನಿನ್ನೊಳಿರೆ ಕೇಳ್ದಱಿದು ನಾವಿದನು (ತೊರರಾ. ೪–೪–೫೨).
[ಇರುಳು (< ಇರುಳ್) + ಕನ್ನ]

**ಇರುಳುಗಳ್ಳ,** ಇರುಳುಕಳ್ಳ (ನಾ). ರಾತ್ರಿಯಕಾಲದಲ್ಲಿ ಕದಿಯುವ ಕಳ್ಳ : ಇರುಳುಗಳ್ಳನ ಕೂಡೆ ಸೇರಿದ ಮರುಳಿನಂತಿರೆ ನೀವು ರಣದಲಿ ತಱಿಸಿಕೊಂಬಿರಿ (ಕುಮ್ಯಾದ್ರೋ. ೧೭–೩೨). **ಇರುಳುಕಳ್ಳ :** ಇರುಳು ಕಳ್ಳನ [ಪಾಠಾಂ. ಗನ್ನದ] ಕೆಲಸ ದಿವದಾಚರಣೆ ಧರ್ಮದ ವಿರಸ ತತ್ಪರಿಸರದ ನಡವಳಿ ನಿನ್ನೊಳಿರೆ ಕೇಳ್ದಱಿದು ನಾವಿದನು (ತೊರರಾ. ೪–೪–೫೨).
[ಇರುಳು (< ಇರುಳ್) + ಕಳ್ಳ]

**ಇರುಳುಡುಪು** (ನಾ). ರಾತ್ರಿ ಧರಿಸುವ ಉಡುಪು : ಸೋಡಾ ಮತ್ತು ಕಾಫಿ ಕುಡಿಯುವುದು, ಇರುಳುಡುಪಿನಲ್ಲಿಯೆ ಕೋಣೆಯಲ್ಲಿ ಅತ್ತಿಂದಿತ್ತ ತಿರುಗಾಡುವುದು (ಪುನರು. ೧೨).
[ಇರುಳು (< ಇರುಳ್) + ಉಡುಪು]

**ಇರುಳುದಳವಾಜಿ** (ನಾ). ರಾತ್ರಿಯಲ್ಲಿ ಕಾವಲು ಕಾಯುವ ತಳವಾರ : ಶಿವರಾತ್ರಿ ನೇಮದ ಸಂಕಿದೇವಂ ನಿಮ್ಮ ನಗರಿಯೊಳಿರುಳುದ[ಪಾಠಾಂ. ತ]ಳವಾಜಿ (ಬಸಪು. ೯–೩೯).
[ಇರುಳು (< ಇರುಳ್) + ತಳವಾಜಿ]

**ಇರುಳುಬವರ** (ನಾ). ರಾತ್ರಿಯಲ್ಲಿ ಮಾಡುವ ಯುದ್ಧ ; ರಾತ್ರಿಯ ಕಾಳಗ: ಕರಸು ಧರ್ಮಜ ಕಲಿಘಟೋತ್ಕಚನಿರುಳುಬವರಕೆ ನಿಲಲಿ (ಕುವ್ಯಾದ್ರೋ. ೧೫–೪೩). [ಇರುಳು (< ಇರುಳ್) + ಬವರ$_1$]

**ಇರುಳುಮುಂಜಾವ** (ನಾ). ರಾತ್ರಿಯ ಮೊದಲನೆಯ ಯಾಮ ; ಪ್ರದೋಷಕಾಲ : "ಇರುಳು [ಪಾಠಾಂ. ಳ] ಮುಂಜಾವಂ ಪ್ರದೋಷಮಕ್ಕುಂ" (ಮಂಗರಾ. ೨೦–೭). [ಇರುಳು (< ಇರುಳ್) + ಮುಂಜಾವ]

**ಇರುಳುಮೆಯ್** (ನಾ). ನಡುರಾತ್ರಿ ; ಕತ್ತಲು (?) : ನೀಲಶಲಾಕೆಗೆ ಜೀವಂಬೊಯ್ದಂತಿರ್ದ ಕೃಷ್ಣನ ಮೂರ್ತಿಯಂ . . . ನಿಧಾನವನೆತ್ತಿಕೊಳ್ವವೋಲಿರುಳುಮೆಯ್ಯೊಳ್ ಬೇಗಮೆತ್ತಿಕೊಂಡು . . . ವಸುದೇವಂ (ಅರ್ಧನೇ. ೭–೪೪ ವ). [ಇರುಳು (< ಇರುಳ್) + ಮೆಯ್]

**ಇರುಳೆಲೆ** (ನಾ). "ಇಂದಿನಗಡ್ಡೆ" (ಲೋಕೋಪ. ಟೀಕೆ) : ಜಲರುಹ ಕಂದಾನ್ವಿತಮಿರುಳೆಲೆಯೊಳ್ ಸಲೆ ಕಟ್ಟಿಗಿರಿಯ ಬೂದಿಯ ತಳಿದೂಜಲೊಳಿಂಬಿನೆ ಕುದಿಯಿಸೆ ನಾಂಗುಲಿಕಮನಡುಗಾಜ್ಯದಿಂ ರಸಾಯನಮಕ್ಕುಂ (ಲೋಕೋಪ. ೮–೨೯). [?]

**ಇರುಳೆಱೆಯ** (ನಾ). = ಇರುಳರಸ: ಇರುಳೆಱೆಯನಂ ಪಾಲ್ಗಡಲು ಪಗಲೆಣೆವಕ್ಕಿ ತರಣಿಯನು ಸರಸಿರುಹ ನೆನೆವಂತೆ ನೆನೆವಳಾ ತರಳೆ ನಿನ್ನಂ (ಸಾಳ್ವಭಾ. ೧೪–೨೧) ; ಅರವಿಂದದ ಸಿರಿ ಮೇಣಿರುಳಿರುಳೆಱೆಯನ ಸಿರಿಯೆ ಪಗಲೊಳಳಿಗುಂ (ರಾಜಶೇ. ೭–೪೭). [ಇರುಳ್ + ಎಱೆಯ]

**ಇರುಳೋಲಗ** (ನಾ). ರಾತ್ರಿಯ ದರ್ಬಾರು : ಬಂದುದಿರುಳೋಲಗಕೆ ರಾಯನ ಮಂದಿ ದಳಪತಿ ಶಕುನಿ ಕೃಪಗುರುನಂದನಾದಿ ಪ್ರತತಿ (ಕುವ್ಯಾಕ. ೫–೫). [ಇರುಳ್ + ಓಲಗ]

**ಇರುಳ್ಗಣ್ಣ**, ಇರುಳುಗಣ್ಣ (ನಾ). ೧. ಚಂದ್ರ. ೨. ಗೂಬೆ ; ಗೂಗೆ: ೧, ೨ : ಆ ನೀಱೆಗೆ ಇರುಳ್ಗಣ್ಣಂಗೆಂತಂತೊಪ್ಪುವ ಬಟ್ಟ ನುಣ್ಗಣ್ . . . ಇರುಳ್ಗಣ್ಣನೆಂದೊಡೆ ಆವ ಸೈಪುಳ್ಳಂ ? . . . ಇರುಳ್ಗಣ್ಣನೆಂದು ಚೆಂದವನಕ್ಕುಂ (ರಾಮಾಶ್ವ. ೮೯–೨೫). ೩. ರಾತ್ರಿಯ ಹೊತ್ತು ಕಣ್ಣು ಕಾಣದವನು. **ಇರುಳುಗಣ್ಣ** : ೩. ಆತ ಇರುಳುಗಣ್ಣ ; ಸಂಜೆಯಾಯಿತೆಂದರೆ ಆವನಿಗೆ ಕಣ್ಣು ಕಾಣುವುದಿಲ್ಲ (ರೂಢಿ). [ಇರುಳ್ + ಕಣ್ + –ಅ$_7$]

**ಇರುಳ್ಗಳಿ** (ಕ್ರಿ). ರಾತ್ರಿಯನ್ನು ಕಳೆ: ಅಸಿಯಳ ಮನದನುತಾಪವ ಸಖಿ ನಿವಾರಿಸಿ ನೊಂದಳಿರುಳ್ಗಳಿವುದಕೆ ಬಿಸುಗದಿರನ ಹುಟ್ಟುಗೆಟ್ಟುದೊ ರೋಮಶಋಷಿ ಕಲ್ಪಕೋಟಿ ತೀರ್ವನಕ (ಮೋಹತ. ೨೭–೬೩). [ಇರುಳ್ + ಕಳಿ$_1$ (< ಕೞಿ$_1$)]

**ಇರುಳ್ಗಾಪು** (ನಾ). ರಾತ್ರಿಯ ಕಾವಲು: ಅಲ್ಲಲ್ಲಿ ಪಡೆಪಡೆಗಳಾಗಿ ತಿರುಗುವ ಇರುಳ್ಗಾಪಿನಾಳ್ಗಳ ಸೊಲ್ಲ ಸುಳಿವಿಂ (ಶ್ರೀರಾಮಾ. ೪೪೭–೩). [ಇರುಳ್ + ಕಾಪು$_1$]

**ಇರುಳ್ಗಾಳೆಗ** (ನಾ). ರಾತ್ರಿಯ ಯುದ್ಧ ; ರಾತ್ರಿಯಲ್ಲಿ ನಡಸುವ ಕಾಳಗ : ಇರುಳ್ಗಾಳೆಗದೊಳ್ ಕೌಶಿಕಂಗಳೊಂದಪ್ಪೊಡಂ ಸತ್ತುವುಂ ನೊಂದುವುಮಿಲ್ಲಂ (ಪಂಚತಂ. ೨೦೬–೧). [ಇರುಳ್ + ಕಾಳೆಗ]

**ಇರೆ** (ನಾ). ೧. ಭೂಮಿ. ೨. ನೀರು. ೩. ಸರಸ್ವತಿ. ೪. ಆಹಾರ. ೫. ಮಾತು. [ಸಂ. ಇರಾ]

**ಇರೈ** (ನಾ). ಒಂದು ಗಿಡದ ಹೆಸರು (ವ್ಯೆಔಗಿ. ೧೬–೨೮೬). [?]

**ಇರ್ಕಂಡ** (ನಾ). ಎರಡು ಚೂರು, —ತುಣುಕು, —ತುಂಡು : ಮದಕರಿಗಳನೆರಡೆ ಪೊಯ್ಯೊಳಿರ್ಕಂಡಂ ಮಾಡಿದ [ಪಾಠಾಂ. ಎರಬ್ಕಡಿ ಮಾಡಲ್ಕದೆ] ಖಡ್ಗಧರರ ಭುಜಬಲಮದೇಂ ನಿಮಿರ್ಚಿದುದೊ ರಣದೊಳದ್ಭುತರಸಮಂ (ಗದಾಯು. ೪–೩೦). [ಇರ್$_2$ (< ಎರಡು) + ಕಂಡ]

**ಇರ್ಕಂಡುಗ**, ಇಕ್ಕಂಡುಗ, ಇಖ್ಖಂಡುಗ, ಇರ್ಖಂಡುಗ (ನಾ). ೧. ಎರಡು ಖಂಡುಗದ ಪ್ರಮಾಣ. ೨. ಎರಡು ಖಂಡುಗ ಬೀಜವರಿಯುಷ್ಟು : ಶ್ರೀಪುರದ ವಯಲುಳ್ಕಮ್ಮರ್ಗಟ್ಟಿನಲ್ಲಿ ಇಕ್ಕಂಡುಗಂ ಕೞನಿ (ಎಕ. IV, ನಾಗಮಂ. ೮೫–೬೭ ; 786) ; ಪಿರಿಯಕೆಱೆಯ ಕೆೞಗೆ ಕಾಲಜ್ಗದೊಳಿರ್ಕಂಡುಗಂ ಮಣ್ಣು ಕೊಟ್ಟರ್ (ಎಕ. III, ಮಂಡ್ಯ. ೪೧–೧೨ ; 950). **ಇಕ್ಕಂಡುಗ** : ೨. ಪಂಚಮಹಾಪಾತಕನಕ್ಕು ಇಕ್ಕಂಡುಗ ಆಯುಪುದ ಪೊಯ್ತೋದು (ಎಕ. X, ಕೋಲಾರ. ೬–೧೨ ; 753). **ಇಖ್ಖಂಡುಗ** : ೨. ಗಂಗಮಾರದೇವಿಯ ಹಡುವಣ ಮೆಯಲಿಖ್ಖಂಡುಗ ಗದ್ದೆ ಮತ್ತಂ . . . ಗಂಗಪೂರಲೆಯ ಹಡುವಣ ಮೆಯಲಿಖ್ಖಂಡುಗ ಗದ್ದೆಯಲುಂ (ಎಕ. V, ಹಾಸನ. ೧೦೨–೨೩ ; 1123). **ಇರ್ಖಂಡುಗ** : ತ್ರೈಲೋಕ್ಯವೀರಕೆ ಕೊಟ್ಟ ಮಣ್ಣು ಇರ್ಖಂಡುಗ (ಎಕ. IX, ಬೆಂಗಳೂ. ೪೦–೧೦ ; 830). [ಇರ್$_2$ (< ಎರಡು) + ಕಂಡುಗ]

**ಇರ್ಕಚ್ಚೆ** (ನಾ). ಎರಡು ಕಚ್ಚೆ ; ಜೋಡು ಕಚ್ಚೆ : ಕಾಮರಸಂ ಭೋಂಕನೆ ಸೂಸೆ ತಾಳ್ದಲರಿದೆಂದಿರ್ಕಚ್ಚೆಯುಂ ಕಟ್ಟಿದಳ್ (ಪಂಪಭಾ. ೪–೩೮). [ಇರ್$_2$ (< ಎರಡು) + ಕಚ್ಚೆ]

**ಇರ್ಕಟೆ** 'ಇರ್ಕಟ್ಟು' ನೋ.

**ಇರ್ಕಟ್ಟು**, ಇಕ್ಕಟ್ಟು, ಇರ್ಕಟ (ನಾ). ೧. ಎರಡು ಕಡೆಯಲ್ಲಿಯೂ ಕಟ್ಟು ; ಎರಡು ಬಂಧನ : ಇರ್ತೆರೆ, ಇರ್ಕಟ್ಟು, ಇರ್ತಡಿ (ಶಮದ. ೧೮೭ ಪ್ರಯೋ). **ಇಕ್ಕಟ್ಟು** : "ಎರಡು ತರ" (ಗಂಗಾಮ. ೩೨). ೨. ಸ್ಥಳ ಸಾಲದೆ ಹೋಗುವಿಕೆ ; ಸ್ಥಳಸಂಕೋಚ : ಸಕಲ ಸುರೌಘ ನೆರೆದುದು ನೋಡಲಾಹವವ ನಭದೊಳಿಕ್ಕಟ್ಟಾಯ್ತು (ತೊರರಾ. ೪–೪–೧೪) ; ಅವರು ಇಕ್ಕಟ್ಟಾದ ಪರ್ವತಮಾರ್ಗದಲ್ಲಿ ಸಿಕ್ಕಿದಾಗ (ಬಂಕಿಮ. ೨೧೯) ; ಇಕ್ಕಟ್ಟಾದ ಗಿಡಗಳ ಗುಂಪಿನಲ್ಲಿ ನಿಂತು (ಬಂಗಾಹೆ. ೧೮). ೩. (ಆಲಂ) ಕಠಿಣವಾದ ಪ್ರಸಂಗ ; ಸಂಕಟದ ಸ್ಥಿತಿ ; ಬಿಕ್ಕಟ್ಟು : ಇಂಥ ಇಕ್ಕಟ್ಟಿದ್ದರೆ ಕೆಲಸ ಮಾಡುವುದು ಬಹಳ ಕಷ್ಟ (ಮರಳಿ. ೧೧೩) ; ಒಂದೇ ಅಚ್ಚಿನ ಅಂಗರಚನೆ ತರುವುದರಿಂದ ಇಕ್ಕಟ್ಟು ಮಾಡಿದಂತಾಗುವುದು (ಬೆಸಂಕ. ೧೦–೨–೬೫ ; ೨–೭) ; ನಾನು ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಿದ್ದೆ (ಆಲಹೂ. ೭೩). **ಇರ್ಕಟೆ** : ೨. ಸ್ಥಳ ತುಂಬ ಇರ್ಕಟವಾಗಿದೆ ; ಇಲ್ಲಿ ಎಲ್ಲವನ್ನೂ ಹೇಗೆ ಇಡುವುದು (ರೂಢಿ). ೩. ಅವನು ತುಂಬ ಇರ್ಕಟದಲ್ಲಿ ಸಿಕ್ಕಿದ್ದಾನೆ (ರೂಢಿ). [ಇರ್$_2$ (< ಎರಡು) + ಕಟ್ಟು$_2$]

**ಇರ್ಕಟ್ಟುಗಟ್ಟು** (ಕ್ರಿ). ೧. ಎರಡು ಕಟ್ಟುಗಳನ್ನು ಕಟ್ಟು. ೨. ಇಮ್ಮಡಿಯಾಗಿ ಕಟ್ಟು : ಶರಪುಂಖಿಯುನಂಬಿಲದಿಂ ನಿರೂಹಮಂ ಮಾೞ್ಕೆ ಮೊಕ್ಕಳಂ ಕದಡಿ ಬಸಿಱ್ ಪರಿವೊಡೆ ಮೊಸರಂ ಕುಡುವುದು ಪರಿಭವಿಸಿರ್ಕಟ್ಟುಗಟ್ಟಿದಂತಿರೆ ನಿಲ್ಗುಂ (ಅಶ್ವಶಾ. ೧೧–೩೫). [ಇರ್ಕಟ್ಟು + ಕಟ್ಟು$_1$]

**ಇರ್ಕಡಿ**, ಇಕ್ಕಡಿ (ನಾ). ೧. ಎರಡು ತುಣುಕು, —ಚೂರು : ಬೆನ್ನೊಳ ಮರ್ಚಿದ ಪೊನ್ನಪಲ್ಲಣಂ ಪಕ್ಕರೆ ತೇಜಿವಾರು ಕೞಿದಿರ್ಕಡಿಯಾದುವು ಬಾಳ ಬಾಯೊಳ್ (ಕಬ್ಬಿಕಾ. ೨೮೦) ; ಪಿಡಿವನೆನ್ನನದಾವಂ ಪೊಡೆದಿರ್ಕಡಿ ಮಾೞ್ಪೆನೆನ್ನ ಖಡ್ಗದಿಂ (ದಶಕು. ೮–೨೨೫). 'ಇರ್ಕಡಿಗೆಯ್' ಪರಾ. **ಇಕ್ಕಡಿ** : ೧. ಹೊಯ್ದನಿಕ್ಕಡಿಯಾಗೆ ರಣಮೊನೆಯವರ್ಗಳಂ (ಇಹರ. ದೇ. ೪೧–೬) ; ತದ್ಧನುಜೋದ್ಯಚ್ಚಾಪಮನಿಕ್ಕಡಿಯಾಗಿರೆ . . . ಎಚ್ಚು (ಉದ್ಭಟ. ೪–೯೫) ; ಖಂಡಿಸಿದನಿಕ್ಕಡಿಗಳ್ ರಣಾಂಕಣದೊಳಡೆಗೆಡೆಯಲು (ಚೆಬಪು. ೪೦–೧೮). ೨. ಅನಿಶ್ಚಿತ ಸ್ಥಿತಿ : ಇಕ್ಕಡಿಯ ಮನದ ನೃಪಾಲ ಹೊಕ್ಕನು ನಡುವಿರುಳು ನಿಜರಾಜಮಂದಿರವ (ಕುವ್ಯಾಸ. ೧೨–೧).

ಇಕ್ಕಡಿಮಾಡು = ಇಬ್ಭಾಗಿಸು : ಹೇರಂಬುಗಳನಿಕ್ಕಡಿಮಾಡಿ ತೋಱಿದ ತೋರಹತ್ತದಲಿ (ಮೋಹತ. ೩೮–೪೭) ; ಕರದ ಕಾರ್ಮುಕವನಿಕ್ಕಡಿಮಾಡಿ (ಚೆಬಪು. ೨೫–೨೫). [ಇರ್$_2$ (< ಎರಡು) + ಕಡಿ$_2$]

**ಇರ್ಕಡಿಗೆಯ್**, ಇಕ್ಕಡಿಗೈ, ಇರ್ಕಡಿಗೈ (ಕ್ರಿ). ೧. ಎರಡು ತುಂಡು ಮಾಡು; ಎರಡಾಗಿ ಕತ್ತರಿಸು : ಖಳ ಯತಿನಾಥನಂ ನಿಜಕರಾಸಿಯಿನಿರ್ಕಡಿಗೆಯ್ದಂ (ದಶಕು. ೧೩–೧೩) ; ಪಗೆಗೋಲಂ ನಡುದಾರಿಯೊಳ್ ಇರ್ಕಡಿಗೆಯ್ವಂ (ಅದ್ಭುತ. ೪೯–೨೩). ೨. ನಾಶಮಾಡು ; ಭಂಗಿಸು ; ನೀಗು : ರಜಸ್ತಮೋಗುಣಮನಿರ್ಕಡಿಗೆಯ್ದು ಸತ್ತ್ವಮೆ ನಿಜವಿಶ್ವರೂಪಾದುದೆನಲು (ಮೋಹತ. ೩–೬೬) ; ಅಂತ್ಯಜೆಯಾದ ಕಾಂತೆಯೊಳ್ಕಲಿದೊಡಗೂಡಿ ತನ್ನ ಕುಲಧರ್ಮಮನಿರ್ಕಡಿಗೆಯ್ದಂ (ವೃಷವಿ. ೩೯–೩೫). **ಇಕ್ಕಡಿಗೈ**: ೧. ಅಗಸದೊಳರ್ಕನಂತೈತಪ್ಪ ಸರಳಂ ಸುಧನ್ವನಿಕ್ಕಡಿಗೈದನು (ಜೈಮಿಭಾ. ೧೩–೪೦). **ಇರ್ಕಡಿಗೈ** ೧ : ಮುಳಿದವನ ಕರದ ಕಾರ್ಮುಕವನಿರ್ಕಡಿಗೈದನಾ ಕುವರನು (ಜಬವು. ೪೦–೧೩).

[ಇರ್ಕಡಿ + ಕೆಯ್$_1$]

**ಇರ್ಕಡಿಗೈ** ,ಇರ್ಕಡಿಗೆಯ್ ' ನೋ.

**ಇರ್ಕಡೆ**, ಇಕ್ಕಡೆ, ಇಗ್ಗಡೆ (ನಾ). ಎರಡು ಕಡೆ (ಗಂಗಾಮು. ೩೪). **ಇಕ್ಕಡೆ** : ಇಕ್ಕಡೆಯ ಇತರರೂ . . . ನೊಂದು (ಮಲೆಮ. ೪೫೪) ; ಸಂಧಿ ಮುರಿದುಹೋದುದರಿಂದ ಇಕ್ಕಡೆಯವರೊಳಗೆ ಹೋರಾಟವುಂಟಾಗುವುದೆಂಬಲ್ಲಿ ಅಗ ನಿಃಸಂದೇಹವಾಗಿತ್ತು (ಕನ್ನ ಇ. ೧೬೬). **ಇಗ್ಗಡೆ**: ೧. ಉಗ್ಗಡಿಸುವ ರಾಜಕೀರ ಜಾಣ್ಣಕ್ಕಿಗಳಿಗ್ಗಡೆಯೊಳು ಮುಂದೆ ಮೆಱೆಯೆ (ಮೋಹತ. ೭–೨೦). [ಇರ್$_2$ (< ಎರಡು) + ಕಡೆ$_2$]

**ಇರ್ಕಣ್**, ಇಕ್ಕಣ್, ಇರ್ಕಣ್ಣು (ನಾ). ಎರಡು ಕಣ್ಣು : ಇರ್ಕೆಯರ್, ಇರ್ಕಣ್, ಮೂಲೋಕಂ (ಭಾಷಾಭೂ. ೧೨೮ ಉದಾ) ; ಕರ್ಮಪುರುಷಂಗೆ ಸೊರ್ಕುಂ ಸಿರ್ಕುಮೆಂದಿರ್ಕಣ್ಣಲ್ತೆ (ರಾ ಮಾ ಶ್ವ . ೧). **ಇಕ್ಕಣ್** : ಮುಕ್ಕಣ್ಣ ದೇವಂಗೆ ಧಾರುಣಿಯೊಳಿಕ್ಕಣ್ಣದೈವಗಳಾರು ಸರಿ (ಬಸವು. ೫೪–೨೫). **ಇರ್ಕಣ್ಣು** : ಗೆಜ್ಜೆಮೆಟ್ಟಿಂದಂಚೆವಱಿಗಳ್ಗೆ ಬಲ್ಸೋಲವೀವ ಬೆಲೆವೆಣ್ಣುಗಳ್ ಕಾವನಿರ್ಕಣ್ಣುಗಳ್ ನಡೆತಂದರು (ಉಪ್ಪಜೀ. ೫–೧೯).

[ಇರ್$_2$ (< ಎರಡು) + ಕಣ್]

**ಇರ್ಕಣ್ಣುರುಡ**, ಇಕ್ಕಣ್ಣುರುಡ (ನಾ). ಎರಡು ಕಣ್ಣುಗಳೂ ಕುರುಡಾದವನು : ಪರಿಣತವಯಸರೆಮಿರ್ಕ [ಪಾಠಾಂ. ಮಿಕ್ಕ]ಣ್ಣುರುಡರೆಮೆಮಗಿಂಬುಕೆಯ್ವುದುಚಿತಂ (ಗದಾಯು. ೪–೨). **ಇಕ್ಕಣ್ಣುರುಡ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ಇರ್ಕಣ್ + ಕುರುಡ]

**ಇರ್ಕಣ್ಣು** ' ಇರ್ಕಣ್ ' ನೋ.

**ಇರ್ಕರ್ತರು**, ಇಕ್ಕರ್ತರು (ನಾ). ಎರಡು ಪಕ್ಷಗಳ ಯಜಮಾನರು ; ಉಭಯ ಪಕ್ಷಗಳ ಮುಖಂಡರು : ಕೊಳುಕೊಡೆಗಳುತ್ತಮಂ ದೈವಜ್ಞರಿರ್ಕರ್ತರುಳಿದಿರ್ಪುದೇನಿನ್ನು ಲಗ್ನ ಸಾಮಿಪ್ಯದೊಳ್ ನೆಲಸಿರ್ಪುದು (ಪರಶು. ೮–೪). **ಇಕ್ಕರ್ತರು** : ಆ ಸುಬ್ರಹ್ಮಂಣ್ಯಭಟರು ರಾಮಂಣಗಳು ಆಯಿಕ್ಕರ್ತರ ಕೈಯಿಲಿ ಏಕಸ್ವಾಮ್ಯವಾಗಿ. . .ಕೊಂಡಕಾಲೆ (ಎಕ. VIII, ತೀರ್ಥಹ. ೨–೧೪ ; 1423) ; ಎಲೆ ರಮಣಿ ಪೇಳ್ದಂತೆ ತನಿವಣ್ಗಳಿಕ್ಕರ್ತರೊಮ್ಮನದಿ ಸವಿದಿರೆನೆ (ಪರಶು. ೧೫–೧೮) ; ಸತಿಪುರುಷರ್ ಇಕ್ಕರ್ತರಿರೆ ಮಂಚದೊಳ್ (ತುರಂಗ. ೧೪–೩೦) ; ಇಕ್ಕರ್ತರಕಡೆ ವಿಶ್ವಾಸಕ್ಕೂ ಹೆಚ್ಚು ಕಡಮೆ ಬಾರದಂತೆ ನಡದು ಬರುವಂಥಾದಕ್ಕೆ (ರಾಜೇಂದ್ರ. ೩೧).

[ಇರ್$_2$ (< ಎರಡು) + ಕರ್ತರು]

**ಇರ್ಕವೆ** (ನಾ). ಎರಡು ಕವೆ ; ಎರಡು ಕವಲು. ' ಇರ್ಕವೆಗೋಲ್ ' ಪರಾ. [ಇರ್$_2$ (< ಎರಡು) + ಕವೆ]

**ಇರ್ಕವೆಗೋಲ್** (ನಾ). ಎರಡು ಕವಲುಳ್ಳ ಕೋಲು : ನೂಂಕಿದರಿರ್ಕವೆಗೋಲಿಂದಾಂಕಿದರಿಱಿದಿಱಿದು ಕೊಂತದಿಂ (ಚಿಕವಿ. ೨–೧೧೨).

[ಇರ್ಕವೆ + ಕೋಲ್$_1$]

**ಇರ್ಕಟಿ** (ನಾ). ಎರಡು ಗದ್ದೆಗಳು : ಇದರ್ಕೆ ಕೊಟ್ಟನಿರ್ಕಟಿ ಕಣ್ಣುಗಂ ಕಲಕಣ್ಣುಗಮುಕ್ಕಣ್ಣುಗಂ (ಎಕ. X, ಕೋಲಾರ. ೮–೮ ; 753).

[ಇರ್$_2$ (< ಎರಡು) + ಕಟಿ]

**ಇರ್ಕಾಲು**, ಇಕ್ಕಾಲು (ನಾ). ಎರಡು ಕಾಲುಗಳು (ಶ). **ಇಕ್ಕಾಲು** : "ದ್ವಿಪದಂ ಚತುಷ್ಪದಂ= ಇಕ್ಕಾಲು, ನಾಲ್ಕುಕಾಲು ಜೀವಂಗಳಂ" (ತಸೂವ್ಯ. ೩೨೩) ; ಕತ್ತೆಯನು ಹೋದವನು ಮತ್ತೆ ಮಾನವನಲ್ಲ ಕತ್ತೆಗೆ ಕಾಲು ನಾಲ್ಕುಂಟು ಇಕ್ಕಾಲ ಕತ್ತೆಯಿವನೆಂದ (ಸರ್ವಜ್ಞ. ೧೮೨೦).

[ಇರ್$_2$ (< ಎರಡು) + ಕಾಲು (< ಕಾಲ್)]

**ಇರ್ಕಿವಿ** (ನಾ). ಎರಡು ಕಿವಿಗಳು ; ಕಿವಿಗಳೆರಡು (ದಕ. ಶ).

[ಇರ್$_2$ (< ಎರಡು) + ಕಿವಿ]

**ಇರ್ಕು** (ನಾ). ಹಿಂಸೆ : "ಗೋಣ್ಮುಱಿ, ಇರ್ಕು, ಒರಸು – ಈ ೩ ಹಿಂಸೆ" (ಕಶಸಾ. ೧೩–೨೬೦). [△ ಇಕ್ಕು ?]

**ಇರ್ಕುಚ** (ನಾ). ಎರಡು ಮೊಲೆಗಳು (ಶ).

[ಇರ್$_2$ (< ಎರಡು) + ಕುಚ]

**ಇರ್ಕುಮರ** ' ಇರಕುಮರ ' ನೋ.

**ಇರ್ಕುಳ್** ' ಇಟ್ಟುಟ್$_2$ ' ನೋ.

**ಇರ್ಕುಳ್**$_1$ ' ಇಟ್ಟುಟ್$_1$ ' ನೋ.

**ಇರ್ಕುಳ್**$_2$, ಇಕುಳ, ಇಕ್ಕಳ್$_2$, ಇಕ್ಕುಳ್$_2$ (ನಾ). ೧. ಎರಡು ಕೊಳಗ ಪ್ರಮಾಣ : ಒಮ್ಮರ್ತ್ತಗೆ ಇರ್ಕುಳ ಜೋಳಂ ಕುಡುವುದು (ಇಅ. X, ೧೬೭–೩ ; 7ನೆಯ ಶತ) ; ಪದಿನಯ್ಗುಳ ಪಾಟಿ ಇರ್ಕ್ಕುಳ ಈದ ಅಟಿದೋ (ಸಾಇಎ. ೧೯೩೪, ಪುಂಗನೂ. ೧೬೪–೧೪ ; ?). ೨. ಎರಡು ಕೊಳಗ ಬೀಜವರಿಯ ಜಮೀನು : ಶಾಸನದ ವರದೋಜಗೆ ವೃತ್ತಿ ಇಕ್ಕುಳ ಈ[ಧ]ರ್ಮಕೆ ತಪ್ಪಿದವರು ನರಕಕೆ ಹೋಹರು (ಎಕ. XI, ಪೊಳಕಾ. ೩೨–೧೮ ; 1434). **ಇಕುಳ** : ಅಕ್ಕಿ ಇಕುಳಂ ತುಪ್ಪ ಇದ ಪ್ರಮಾಣಂ (ಎಕ. VI, ಚಿಕ್ಕಮ. ೯೫–೧೬ ; 1025 ?). **ಇಕ್ಕಳ್**$_2$: ೧. ಒಕ್ಕುಳ ಕಾಣದ ವೈಸೂಱಿಕ್ಕಳ ಕಾಣದವು ನೂಱು ಮೂಗಳ ಕಾಣಂ (ವ್ಯವಹಾ. ಪದಪಿನಸೂತ್ರ). **ಇಕ್ಕುಳ್**$_2$ : ೧. ಇಕ್ಕುಳ ಅಕ್ಕಿ ಒಮ್ಮಾನ ತುಪ್ಪ ಐವತ್ತು ಅಡಕೆ ಇಂನುಱು ಎಲೆ ರಾಮೇಶ್ವರ ದೇವರಿಂಗೆ ನಡವುದು (ಎಕ. VII, ಶಿಕಾರಿ. ೨೯೫–೩೧ ; 1074) ; ಇಕ್ಕುಳ ನೆಲ್ಲಿಂಗಕ್ಕಿಯ ಪೊಕ್ಕಳದೊಳರವನವ ಕಳದು ಕೊಡಲುಂ (ವ್ಯವಹಾ. ೧೬–೨೨) ; ಶ್ರೀ ರಂಗನಾಥದೇವರ ತಳಿಗೆ ಒಂದು ಶ್ರೀಲಕ್ಷ್ಮೀದೇವಿಯ ಹರಿವಾಣ ಒಂದು ಉಭಯಂ ಹರಿವಾಣ ಯರಡಕ್ಕೆ ಅಕ್ಕಿ ಇಕ್ಕುಳ ಪರುಪು ಪದಾರ್ಥ ತುಪ್ಪ (ಎಕ. XIV, ಶ್ರೀರಂಗ. ೨–೧೮ ; 1529).

[ಇರ್$_2$ (< ಎರಡು) + ಕುಳ$_1$]

**ಇರ್ಕುಳಿ**$_1$ ' ಈಟ್ಟುಳಿ ' ನೋ.

**ಇರ್ಕುಳಿ**$_2$ (ನಾ). ಇರುವಿಕೆ; ಇರುವುದು : "ಇರ್ಕುಳಿಯೆನಲ್ಕಿರುವ ದಕ್ಕುಮಿಂಗಡಲೆನಲ್ಕಕ್ಕು ಪಾಲ್ಗಡಲು " (ಕಶರ. ೧೪).

[ಇರ್$_1$ + –ಕುಳಿ$_3$ ?]

**ಇರ್ಕುಳಿಗೋಲ್** ' ಈಟ್ಟುಳಿಗೋಲ್ ' ನೋ.

**ಇರ್ಕುಟ್**$_1$ ' ಇಟ್ಟುಟ್$_1$ ' ನೋ.

**ಇರ್ಕುಟ್**$_2$ ' ಇಟ್ಟುಟ್$_2$ ' ನೋ.

**ಇರ್ಕುಟಿ** ' ಇಟ್ಟುಟ್$_2$' ನೋ.

**ಇರ್ಕುಟಿಸು**, ಇಕ್ಕುಟಿಸು (ಕ್ರಿ). ೧. ಇಕ್ಕುಳದಿಂದ ಹಿಡಿ ; ತಂಡಸದಿಂದ ಹಿಡಿದುಕೊ : ಕರ್ಬುನದ ಸಲಗೆಯೊಳ್ ಬೆಟ್ಟಿ ನಿಟ್ಟೆಲ್ವುಗಳ್ ತೋಱುವಿನಂ ಕಾಯ್ದಿರ್ಕುಟಿಂದಿರ್ಕುಟಿಸಿ [ಪಾಠಾಂ. ಇಕ್ಕುಟಿಸಿ] ಕುರವದಿಂ ಕೂಡೆ ನೆತ್ತರ್ ತೆರಳ್ದುಣ್ಮುವಿನಂ (ಸುಕುಮಾ. ೭–೩೫).

೨. ಇಕ್ಕಟ್ಟಿಗೆ ಸಿಕ್ಕಿಸು; ಅತ್ತಿತ್ತ ಅಲುಗಲವಕಾಶವಿಲ್ಲದಂತೆ ಮಾಡು : ಅಳವಿಂದಂ ತಳ್ತಪೂರ್ವೋತ್ತರವೆರಡಱ ಪಕ್ಷಂಗಳೊಳ್ ಯುಕ್ತಿಜಾಲಂಗಳ ಸಾರಾಸಾರಮಂ ಸೋದಿಸಿ ಕಳೆದದಱೊಳ್ ಪೊಟ್ಟ ನೊಳ್ಗಟ್ಟಿಯಂ ಕೂರ್ತೊಳ ಕೊಂಡಿರ್ಪೊಳ್ಪಿನಿಂ ತತ್ತ್ವದ ನೆಲೆಯಱಿತಾ ಮಾರ್ಗದಿಂದತ್ತಲಿತ್ತಲ್ ಪೊಳೆದೆತ್ತಂ ಪೋಗದಂತಿರ್ಕುೞಿಸುತೆ ಬುಧರಂ ತರ್ಕಕುಂ ಚಿಕ್ಕದೇವಂ (ಅಪ್ರತಿ. ೭–೨೪). **ಇಕ್ಕುೞಿಸು** : ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ಇರ್ಕುೞ್‌$_2$ (< ಇಟ್ಕುೞ್‌$_2$) + –ಇಸು$_3$]

**ಇರ್ಕೊಡು** (ನಾ). ಎರಡು ಊರುಗಳು ಅಥವಾ ಪ್ರದೇಶಗಳು ಕೂಡುವ ಸ್ಥಳ: ಕಡಕೊಳಂ ಮರಿಯಿಸೆ ಎರಡೂರ ಇರ್ಕೊಡು ಪಡುವ ಪೋಗಿ ಕೆಱೆಯ ತೆಂಕಕಡೆ ಪಡುವ ಪೋಗಿ (ಮೈಆರಿ. ೧೯೩೪, ೩೮–೧೪ ; 1050). [ಇರ್‌$_2$ (< ಎರಡು) + ಕೂಡು$_2$]

**ಇರ್ಕೆ, ಇಕ್ಕೆ$_1$** (ನಾ). ೧. ಇರುವ ಸ್ಥಳ; ಹಕ್ಕೆ; ವಾಸಸ್ಥಾನ: ಮೃಗಮಂ ಗಾಳಿಯನಿರ್ಕೆಯಂ ಪಕ್ಕೆಯಂ ಗಣಿದಮಂ . . . ನೀಂ ಬಲ್ಲೆ (ಪಂಪಭಾ. ೫–೪೩) ; ಟಿಟ್ಟಿಭಮಿಥುನಂ ಕಿಱಿದಾನುಂ ಬೇಗದಿಂ ಬಂದು ತಮ್ಮಿರ್ಕೆಗೆ ಪೋಗಲ್ (ಪಂಚತಂ. ೧೬೦–೭). ೨. ಸ್ಥಿತಿ ; ನೆಲೆ ; ಇರವು: ಚಾಗದ ತೋರ್ಕೆಗಂ . . . ಸಿರಿಯ ಸಾರ್ಕೆಗಮಾಯತಿಯಿರ್ಕೆಗಂ ಪೆಱರ್ ಮೇಗೆನಲಿಲ್ಲದಂತು ನೆಗೞ್ದಿರ್ದುದಱಿಂ (ಶಾಂತಿಪು. ೧–೬೮) ; ಯಶೋಧ ನದಿರ್ಕೆ . . . ಎನೆ ಪೆರ್ಮೆಯಂ ತಳೆದಂ (ಎಕ. VIII, ಸಾಗರ. ೧೫೯–೧೨ ; 1159) ; ತಾವರೆಗಿರ್ಕೆಯಾದ ಕೊಳನಂ (ಕಬ್ಬಿಕಾ. ೮೫). ೩. ವಾಸ ; ನೆಲಸುವಿಕೆ: ಸುರಗಜೇಂದ್ರಮೆ ವಾರಣಂ ಪಿಡಿವಾಯುಧಂ ವರವಜ್ರಂ . . . ಇರ್ಕೆಯ ಕೋಟೆಯೊಪ್ಪಿರೆ ನೆಗೞ್ತೆಯ ಸ್ವರ್ಗಂ (ಧರ್ಮಾಮೃ. ೩–೨೩೧) ; ಹರನಿರ್ಕೆಗೊಂದು ಬೆಳ್ಳಿಯ ಗಿರಿ ಸಾಲದೆನುತ್ತನೇಕ ರಜತಾಚಲಮಂ ಶರನಿಧಿಯಟ್ಟುವ ತೆಱದಿಂ ನೊರೆವಟ್ಟಂತಪ್ಪ ತೆರೆಗಳೇನೊಪ್ಪಿದುವೋ (ಸೂಕ್ತಿಸು. ೨–೬). **ಇಕ್ಕೆ$_1$** : ೧. ಏನಿದಂಗಜಮಹೀಭುಜನಿಕ್ಕೆಯೊ [ಪಾಠಾಂ. ಇರ್ಕೆಯೊ] ಚಿತ್ರಶಾಲೆಯೊ (ಆದಿಪು. ೫–೪೫) ; ವಸಂತನ ಬೀಡುಯೆಳಲತೆಗಳಿಕ್ಕೆ (ಹಚಕಾ. ೩–೨೬) ; ಸಿಂಗರದಿಕ್ಕೆ ಮಂಗಳದ ಮೆಯ್ಸಿರಿ (ರಾಜಶೇ. ೭–೧೦೦). ೨. ಪಿಡಿಯಂ ಪಕ್ಕಿಗಳಂ ಮೃಗಕ್ಕೆ ಬಿಡಲೊಲ್ಲಂ ನಾಯ್ಗಳಂ . . . ಒಕ್ಕನಿನಿಯಂ ತನ್ನಿಕ್ಕೆಯಂ ಬಾೞ್ಕೆಯಂ (ಅರ್ಧನೇ. ೩–೭೯) ; ನಾಡೀಮಂಡಲಂಗಳ ತಾನೆ ಸಾಧಿಸಿ ಕಂಡಖಂಡ ಜ್ಞಾನದಿಕ್ಕೆಯ ಪರಿಯನಿದಿರಿಟ್ಟು (ಪ್ರಭುಲೀ. ೧೩–೩) ; ತಿಮಿರದ ತಂಡದಿಕ್ಕೆಯ ಕಿಡಿಸುತನವರತ . . . ಹರಿಯುಪವನದ ಮಧ್ಯದ ಮಂಟಪಕೆ ನಡೆದ (ಅಕ್ರೂಚ. ೬–೧೧). ೩. ಮನಸಿಜಾತ ಗಂಧದ್ವಿಪದಿಕ್ಕೆಗೆ ವಿನಯ ಭೂಮಿಯಾಗಿರ್ಪುದು ತೋರ್ಕೆಗೆ (ಸುಕುಮಾ. ೧೦–೫೫ ರ) ; ಆನೆಯ ವಾಸವು ನೆಲದಮೇಲೆ ಮೊಸಳೆಯ ಇಕ್ಕೆಯು ನೀರಿನಲ್ಲಿ (ಪ್ರಾಣಿಪ್ರ. ೯).

**ಇರ್ಕೆಮಾಡು** = ಮನೆಯಾಗಿ ಮಾಡಿಕೊ ; ಬಿಡಾರಮಾಡು ; ನೆಲಸು : ಕಿಬ್ಬರಿಗಳೊಳ್ ಬೆಳೆದಸುಗೆಯ ಬನಮನಿರ್ಕೆಮಾಡಿ ಬಿಡದೊಳ್ಪ ಪೆಣ್ಗೋಗಿಲೆಯ ಸರಂಗಳಿಂ (ಕಬ್ಬಿಕಾ. ೫೪). [ಇರ್‌$_1$ + –ಕೆ$_1$]

**ಇರ್ಕೆದಾಣ, ಇಕ್ಕೆದಾಣ** (ನಾ). ಇರುವ ಸ್ಥಳ; ಆಶ್ರಯಸ್ಥಾನ; ನೆಲೆ ; ಬಿಡಾರ: ಬಗ್ಗಿಸುವ ಕೋಗಿಲೆ ಕೋಗಿಲೆಯಿರ್ಕೆದಾಣದೊಳ್ ಜಿನುಗುವ ತುಂಬಿ (ಆದಿಪು. ೧–೬೫) ; ಶೀಳದ ತವರ್ಮ್ಮನೆ ಸದ್ಗುಣದಿರ್ಕೆದಾಣಮಾಪ್ಪಿನ ಕಣಿ (ಸೌಇಇ. XI–i, ೬೫–೩೮ ; 1029) ; ಅದು ಸಿರಿಯಿರ್ಕೆದಾಣವದು ಭಾಸುರಕೀರ್ತಿಯ ಜನ್ಮಗೇಹ (ಕಇ. IV, ೧೦–೧೫ ; 1121). **ಇಕ್ಕೆದಾಣ** : ಅರಸಂಗಿಕ್ಕೆದಾಣಮಾವುದೆಂದು ಕಾದಂಬರಿಯಂ ಬೆಸಗೊಳ್ವುದುಂ (ಕಾದಂಉ. ೭೩) ; ಶೃಂಗಾರಕ್ಕೆ ಜನ್ಮಭೂಮಿಯುಂ ವಸನ್ತಸಮಯಕ್ಕಿಕ್ಕೆದಾಣಮುಮೆನಿಸಿದುದು (ಕಇ. I, ೨೭–೫ ; 1162) ; ಪುರು[ಷಾ]ರ್ತ್ಥದ ನೆಲೆ ಸತ್ಯದ ಕರು ಪರಹಿತಲಕ್ಷ್ಮಿಗಿಕ್ಕೆದಾಣಂ (ಸೌಇಇ. XX, ೭೬–೨೭; 1118) ; ಪುಲ್ಲೆಯ ಹಿಂಡನೊಂದು ಪುಲಿ ಗೆಂಟೞೊಳೊಯ್ಯನೆ ಕಂಡು . . . ನೆತ್ತರಂ ಪದೆದು ಪೀರ್ದೆೞ್ದಿಕ್ಕಿದುದಿಕ್ಕೆದಾಣದೊಳ್ (ದಶಕು. ೨–೧೧೩). [ಇರ್ಕೆ + ತಾಣ]

**ಇರ್ಕೆಯ್, ಇಕ್ಕಯ್, ಇಕ್ಕೆಯ್, ಇಕ್ಕೈ$_1$, ಇರ್ಕೈ** (ನಾ). ೧. ಎರಡು ಕೈ ; ಹಸ್ತಯುಗ್ಮ: ಒರ್ಪಿಡಿ, ಇರ್ಕೆಯ್, ಇರ್ಕಣ್ (ಭಾಷಾಭೂ. ೧೨೮ ಪ್ರಯೋ) ; ಧನುರ್ಬಾಣಂಗಳನಿರ್ಕೆಯ್ಗಳೊಳ್ ಪಿಡಿದಿರ್ದವಂ (ಅದ್ಭುತ. ೧೩–೨೭). **ಇಕ್ಕಯ್** : ೧. ಅಗಧರನು ಸಿಡಿಲಪ್ಪಳಿಸಿದಂತೊಗೆದುಕೊಂಡಾ ಸರ್ಪನನು . . . ಇಕ್ಕಯ್ಯಲೆಳೆತಂದ (ಸಾಳ್ವಭಾ. ೧೨–೪೪) ; ಒಕ್ಕಯ್ಯೊಳಡಗದ ವಿಶಾಲಲೋಚನಯುಗಳಮಿಕ್ಕಯ್ಯೊಳಡಗದ ಕುಚದ್ವಯಂಗಳ್ (ಚಬಪು. ೩೪–೭). **ಇಕ್ಕೆಯ್** : ೧. ಇಕ್ಕೆಯ್ಯ ಮುಗಿದು ಕಾಳಗಬೇಡ ಹೋಗೆನುತೊಕ್ಕಣಿಸಿದರೊಪ್ಪುಗೊಳದೆ (ಮೋಹತ. ೩೪–೩೮). **ಇಕ್ಕೈ** : ೨. ಎರಡು ತೋಳಿನ ಪ್ರಮಾಣ: ಬಟ್ಟೆಗೆಂದು ರಾಜಹಸ್ತದ ಇಕ್ಕೈವರೆಯಂ ಕಳೆದು ವುಳಿದ ನಿವೇಶನವಂ (ಎಇ. XIV, ೨೫–೫೧ ; 1245). **ಇರ್ಕೈ** : ೧. ಬೆಟ್ಟಿರ್ದ ತಱಿಯದ ಕೀಲನಿರ್ಕೈಗಳಿಂದಂ ಪಿಡಿದು (ಪಂಚತಂ. ೩೦–೮) ; ಮಕ್ಕಳನಿರ್ಕೈಗಳಿನೆತ್ತಿಕೊಂಡು (ಶಾಕುಂತ. ೧೦೫–೧೮೦). ೨. ಇರ್ಕೈಮಂದದ ನೆರೆಹಮದಿರ್ಕೈವರೆ ನೀಳದೈದು ಕೈಯಗಲದ ತೊಲೆ (ವ್ಯವಹಾ. ೭೭–೩೪).

[ಇರ್‌$_2$ (< ಎರಡು) + ಕೆಯ್‌$_2$]

**ಇರ್ಕೆರ** (ನಾ). ಎರಡು ಕೆರ; ಎಕ್ಕಡಗಳ ಜೊತೆ (ರೀವ್).

[ಇರ್‌$_2$ (< ಎರಡು) + ಕೆರ]

**ಇರ್ಕೆಲ, ಇಕ್ಕೆಲ** (ನಾ). ಎರಡು ಪಕ್ಷ, —ಪಾರ್ಶ್ವ, —ಮಗ್ಗುಲು : ಕಲ್ಪಮಹೀಜದ ಪಕ್ಕದಿರ್ಕೆಲಂಬಿಡಿದು ಮಡಲ್ತು ತೋಱುವ ಲತಾವಳಿಗಳ್ಗಣೆಯಾಯ್ತೆರೞ್ಕೆಲಂಬಿಡಿದು ಖಗೇಂದ್ರನೋಲಗದೊಳಿರ್ದ ವಿಳಾಸವಿಳಾಸಿನೀಜನಂ (ಆದಿಪು. ೨–೪) ; ಇರ್ಕೆಲದ ರತ್ನವೇದಿಕೆಗಳೊಳೋಳಿಗೊಂಡು ಕುಳ್ಳಿರ್ದ ನಾನಾದೇಶಭೂಮಿಾಶರೊಳ್ (ವರ್ಧಪು. ೯–೪೩ ವ) ; ಆ ಭರತಕ್ಷೇತ್ರ ವಿಜಯಾಚಲದಿರ್ಕೆಲದೊಳ್ ಮಿಾನಧ್ವಜನಾಡುಂಬೊಲನೆನಲೆಸೆದುದು (ಜಯುಕಾ. ೧–೩೪). **ಇಕ್ಕೆಲ** : ಸಿಂಹಾಸನದಿಕ್ಕೆಲದೊಳಂ ಕಿರ್ಗಿದುವಾಗಿರ್ದ ಮಣಿಮಯಭದ್ರಾಸನದೊಳ್ (ಶಾಂತಿಪು. ೧೦–೨೯ ವ) ; ತಿರುವೀಧಿಯಿಕ್ಕೆಲಂಗಳ ಕರುಮಾಡಂಗಳೊಳ್ (ನಂಬಿರ. ೧೮–೧೦೧) ; ಹಿಂದೆ ಮುಂದಿಕ್ಕೆಲದ ಸತಿಯರ ಸಂದಣಿಯ ಮಧ್ಯದಲಿ (ಕುವ್ಯಾವಿ. ೨–೩). [ಇರ್‌$_2$ (< ಎರಡು) + ಕೆಲ]

**ಇರ್ಕೆವನೆ, ಇಕ್ಕೆವನೆ** (ನಾ). ವಾಸಸ್ಥಾನ ; ಇರುವ ಸ್ಥಳ; ಆಶ್ರಯಸ್ಥಾನ : ಕಾಮನ ಬಾಣದಿರ್ಕೆವನೆಯೋ ಭ್ರಮರಾಳಿಯ ಸತ್ರಸಾಲೆಯೋ (ಗಿರಿಕ. ೨–೬೦) ; ನುಡಿ ಸಲೆ ನನ್ನಿಗಿರ್ಕೆವನೆಯಾದುದು (ಕಬ್ಬಿಕಾ. ೪೭). **ಇಕ್ಕೆವನೆ** : ಘನಸಮಯಂಗಳಿಕ್ಕೆವನೆ ಮಾಗೆಯಿರುಳ್ಗಳ ಬಿಟ್ಟ ಬೀಡು ಚಂದನ ಕುಲಮಂದಿರಂ (ಕಾದಂಉ. ೨೧೭) ; ನಾನಾಭಯಂಕರಕ್ಕಿಕ್ಕೆವನೆಯಾನೆಂದು ಬೊಬ್ಬಿಟ್ಟು ಪೇಳ್ವಂತೆ ಘೀಳಿಡುತ್ತಿರ್ದುದಡವಿ (ಹಚಕಾ. ೫–೨೧) ; ಅಳಿಕುಲಗಳಿಗಿಕ್ಕೆವನೆಯಹ ಸೆಜ್ಜೆಯ ನಿಳಯದೊಳಗೆ (ಕುರಾಸಾಂ. ೨೬–೬೧). [ಇರ್ಕೆ + ಮನೆ]

**ಇರ್ಕೆವೀಡು** (ನಾ). ನೆಲೆವೀಡು : ರಾಜಧಾನಿ ಕಲ್ಯಾಣದಿರ್ಕೆವೀಡಿನೊಳ್ (ಮೈಆರಿ. ೧೯೨೮, ೬೮–೧೬ ; 1061). [ಇರ್ಕೆ + ಬೀಡು]

**ಇರ್ಕೆವೆಟ್ಟು** (ನಾ). ವಾಸಸ್ಥಾನವಾದ ಬೆಟ್ಟ ; ಇರುವ ಪರ್ವತಸ್ಥಾನ : ಪೊಗಸಿನೊಳ್ ಮೊಗಸಿ ಬ್ಬೆಗುವರೆಗಂ ಬೇಟೆವೆಸದಿನಸುವರೆಯಾಗಿ ತಮ್ಮಿರ್ಕೆವೆಟ್ಟುಗಳ ಗುಹಾಶಯ್ಯೆಯಿಂದುೞಿ ಸನ್ನೆಗೆಯ್ದು (ಚಂದ್ರಪು. ೮–೪ ವ). [ಇರ್ಕೆ + ಬೆಟ್ಟು$_2$]

ಇಱ್ಕೈ 'ಇಱ್ಕೆಯ್' ನೋ.

**ಇಱ್ಕೊಡೆ** (ನಾ). ಎರಡು ಕೊಡೆಗಳು; ಜೊತೆ ಛತ್ರಿಗಳು: "ಎಕ್ಕಸರಂ, ಒರ್ಪಡಿ, ಇಱ್ಕೊಡೆ . . . ಇವು ಸಂಖ್ಯಾನಂಗಳ್" (ಶಬಸಾ. ೨೫-೫೩೯). [ಇರ್$_2$ (< ಎರಡು) + ಕೊಡೆ]

**ಇಱ್ಕೊಳಿಸು** (ಕ್ರಿ). ಸೆಳೆ; ಆಕರ್ಷಿಸು: ಬಗೆಯಿಱ್ಕೊಳಿಪ ಸಂಗೀತದಿ ಜಿನೇಂದ್ರನ ಪೂಜಿಸಿದನಿಂದ್ರಂ (ಸಾಳ್ವಭಾ. ೨೧-೭೨). [ಇಱ್ಕೊಳ್$_0$ (< ಈರ್ಚಿಕೊಳ್) + -ಇಸು$_3$]

**ಇಱ್ಕೋಟಿ** (ನಾ). ಎರಡು ಕೋಟಿ: "ಇಱ್ಕೋಟಿ . . . ಮುಪ್ಪೊಱಿಲುಂ . . . ತಾಂ ಸಂಖ್ಯಾಪದಂಗಳ್" (ಕವಿಕಂ. ೨೧೩). [ಇರ್$_2$ (< ಎರಡು) + ಕೋಟಿ]

**ಇಱ್ಕೋಡಿ** (ನಾ). ಎರಡು ಕೋಡಿಗಳು; ಕೆರೆಯಿಂದ ಹೆಚ್ಚು ನೀರು ಹರಿದು ಹೋಗುವಂತೆ ಮಾಡಿರುವ ಜೊತೆ ಕೋಡಿಗಳು: ಇಱ್ಕೋಡಿಯಿಂ ತೀವಿ ನಾಲ್ದೆಸೆಗಂ ಸೂಸಿ (ಶಮುದ. ೬೬ ಪ್ರಯೋ). [ಇರ್$_2$ (< ಎರಡು) + ಕೋಡಿ]

**ಇಱ್ಕೋದಿ** (ನಾ). ಒಂದು ಊರಿನ ಹೆಸರು (?): ಇಪ್ಪರ್ತ್ತು ಗಣ್ಡುಗಂ ಭಕ್ತಮುಂ ಇಱ್ಕೋದಿ ಕೆಱೆಗೋಡು ಪುಟ್ಟಿಗೆಯುಂ (ಎಕ. XVI, ಗುಬ್ಬಿ. ೭೫-೪೯; 733). [?]

**ಇಱ್ಖಂಡುಗ** 'ಇಱ್ಕಂಡುಗ' ನೋ.

**ಇಱ್ಗರೆ** (ನಾ). ಒಂದು ಊರಿನ ಹೆಸರು: ಇಱ್ಗ್ಗರೆ ನದೀಂ ಗತ್ವಾ (ಎಕ. III, ಮಂಡ್ಯ. ೧೧೩-೫೮; 713); ಸಿಂಗವುರ ನಾಯಿಗರುಂ ಮಾವಾಣಿಗರುಂ ಇಱ್ಗರೆಯ ಪಾದಪ್ಪಡಿಗಳುಂ (ಎಕ. XVI, ಗುಬ್ಬಿ. ೭೫-೫೫; 733). [?]

**ಇಱ್ಗೇಣ್, ಇಗ್ಗೇಣ್** (ನಾ). ಎರಡು ಗೇಣು: ಇಱ್ಗೇಣಗಲದ ನೆರೆಹ ಮದಿಱ್ಗೇಣರೆ ನೀಳದೈದು ಗೇಣಗಲದ ತೊಲೆ (ವ್ಯವಹಾ. ೭೭-೩೫). **ಇಗ್ಗೇಣ್**: ಇರದೊಗ್ಗೇಣುದ್ದವಿಗ್ಗೇಣಗಲದೊಡನೆ ಮೂವತ್ತುಗೇಣ್ ನಿಳದೈವತ್ತೆರಡು ಕಲ್ (ಭಾಸ್ಕರ. ೪೦-೪).

ಇಱ್ಗೇಣರೆ = ಎರಡೂವರೆಗೇಣು ಅಳತೆ: ಆಗಲಂ ಗೇಣುದ್ದದಿಱ್ಗೇಣರೆಯಿನೆ ದಶಗೇಣ್ ನೀಳದೈವತ್ತು ಕಲ್ಲಿಗೆ (ವ್ಯವಹಾ. ೭೩-೧೫). [ಇರ್$_2$ (< ಎರಡು) + ಗೇಣ್$_1$]

**ಇಱ್ಚವಡಿ, ಇಚ್ಚಡಿ, ಇಚ್ಚವಡಿ, ಇಚ್ಚಿಡಿ** (ನಾ). ಎರಡು ಮಡಿಕೆ, —ಪದರ; ಎರಡೊಂದಾಗಿ ಹೊಸೆದ ಹುರಿ, —ನೂಲು: ಇಱ್ಚವಡಿ; ಇಱ್ಚಾವಡಿ (ಶಬ್ದಾನು. ೯೩ ಪ್ರಯೋ). **ಇಚ್ಚಡಿ**: ಚಳಿಯುಬ್ಬರಕೆ ನಡನಡುಗುತಿಚ್ಚಡಿಯ ಹಚ್ಚಡವ ಹೊದೆದು ಮಲಗಿದ್ದೆ (ಕವಿಕಾ. ೪೬-೩). **ಇಚ್ಚವಡಿ**: ನೊಸಲ ತುಂಬಿದ ಭಸಿತ ಥಳಥಳಿಸುವಿಚ್ಚವಡಿ ಮಿಸುನಿಯುಡಿದಾರವರಳೆಲೆ ಬಂದಿ (ಸೌಂದಪು. ೩-೯); ಪೊಸಮಿಸುನಿಯಿಚ್ಚವಡಿಯುಡಿದಾರದಿಂ (ಚೇರಮ. ೩-೪೧). **ಇಚ್ಚಿಡಿ**: ಇಚ್ಚಿಡಿ ಪಂಚೆಯನ್ನು ಇನ್ನಿಚ್ಚಿಡಿಮಾಡಿ ಮೊಣಗಂಟಗಿಂತ ಮೇಲೆ ಬಿಗಿಯುವವರೇ ಇಲ್ಲ (ಜಾರುದಾ. ೩೩); ಮಿಂಚಿನ ಬಳ್ಳಿಯಂತೆ ಎದೆಯ ಮೇಲೆ ಇಚ್ಚಿಡಿ ಜನಿವಾರ (ಸ್ವಪ್ನಹೊ. ೬೩). [ಇರ್$_2$ (< ಎರಡು) + ಸವಡಿ]

**ಇಱ್ಚಾವಡಿ** (ನಾ). ಎರಡು ಚಾವಡಿಗಳು: ಇಱ್ಚವಡಿ, ಇಱ್ಚಾವಡಿ (ಶಬ್ದಾನು. ೯೩ ಪ್ರಯೋ). [ಇರ್$_2$ (< ಎರಡು) + ಚಾವಡಿ]

**ಇಱ್ಚೆಱಂಗು, ಇಚ್ಚೆಱಗು** (ನಾ). ಎರಡು ಸೆರಗು: ಇಱ್ಚವಡಿ, ಇಱ್ಚಾವಡಿ, ಇಱ್ಚೆಱಂಗು (ಶಬ್ದಾನು. ೯೩ ಪ್ರಯೋ). **ಇಚ್ಚೆಱಗು**: ದೂವಟದಿಚ್ಚೆಱಗನು ತೊಡೆಗಳಿಗೆ ಲೀಲಾವಾಸ ಮುಂದಿಳಿವಿಟ್ಟು ಪಾವಡಗಳ ಮೆಟ್ಟಿ ವಾಘೆಗೆ ಕೈನೀಡಿ ರಾವುತರೊಡೆಯನೊಪ್ಪಿದನು (ಭರಚ. ೨೯-೧೬). [ಇರ್$_2$ (< ಎರಡು) + ಸೆಱಂಗು]

ಇಱ್ಛಾಸಿರ 'ಇಱ್ಭಾಸಿರ' ನೋ.

**ಇಱ್ಭಾಸಿರ, ಇಚ್ಛಾಸಿರ, ಇಱ್ಛಾಸಿರ, ಇಱ್ಸಾಸಿರ, ಇಚ್ಚ್ಚಾಸಿರ, ಇಚ್ಛ್ಛಾಸಿರ** (ನಾ). ಎರಡು ಸಾವಿರ; ಎರಡು ಸಹಸ್ರ: ಮಧ್ಯಮಸ್ಥಿತಿ ನಾಲ್ಛಾಸಿರಮಧಮಮಾತ್ರಮಿಱ್ಭಾಸಿರಂ ಶರಾಸನಮದು ಕ್ರಮಕ್ರಮದಿಂದಂ (ಶಾಂತಿಪು. ೬-೧೦೩); ಜಾತ್ಯಶ್ವಂಗಳಿಱ್ಭಾಸಿರಂ (ಕಾವ್ಯಾವ. ೭೭); ಹತ್ತು ಸಾವಿರ ಹಯವನಿಱ್ಭಾಸಿರ ಮಹಾರಥರ (ಕುವ್ಯಾದ್ರೋ. ೧೭-೩೬). **ಇಚ್ಛಾಸಿರ**: ನೆರೆ ಸಂಜೋಗದ ಕುದುರೆಗಳಿಚ್ಛಾಸಿರ ಗಜಘಟೆಯಿನ್ನೂಱವೆರಸಿ (ಜೀವಂಸಾಂ. ೮-೩೧); ಕೊಙ್ಗಳ್ನಾಡಿಛ್ಛಾ(ಚ್ಛಾ)ಸಿರಮು[ಂ] ಆಳೆ (ಇಆ. XIV, ೨೩೨-೫೦; 9ನೆಯ ಶತ). **ಇಱ್ಛಾಸಿರ**: ಇಱ್ಛಾಸಿರಂ, ಎಣ್ಛಾಸಿರಂ, ನೂಱ್ಛಾಸಿರಂ (ಶಮುದ. ೧೪ ಪ್ರಯೋ); ಇಱ್ಛಾಸಿರ ನಾಲಗೆಯಿರ್ದುಮಿಾ ರಾಮರಾಜ್ಯವಂ ಸೇಸಂ ಬಣ್ಣಿಸಲಾರ್ತನಿಲ್ಲಂ (ರಾಮಾಶ್ವ. ೮-೩). **ಇಱ್ಸಾಸಿರ**: ಎಳೆಯುಲಿಱ್ಸಾಸಿರ [ಪಾಠಾಂ. ಎಳಸಲಿಱ್ಭಾಸಿರ] ಘಟಾವಳಿ ನೆಲಕೆ ದಾಡೆಯ ನೂಱಿ ಘೀಳಿಟ್ಟಳಿದವು (ತೊರರಾ. ೫-೭-೪). △ **ಇಚ್ಚ್ಚಾಸಿರ**: ಪನ್ನಿಚ್ಚ್ಚಾಸಿರ ನಾಡಾಳೆ (ಎಕ. VIII, ಸೊರಬ. ೨೨-೨; 800). △ **ಇಚ್ಛ್ಛಾಸಿರ**: ಬನವಾಸಿ ಪನ್ನಿಚ್ಛ್ಛಾಸಿರಮನಾಳೆ (ಎಇ. VI, ೨೫೩-೨; 800). [ಇರ್$_2$ (< ಎರಡು) + ಸಾಸಿರ]

**ಇಱ್ತಂಡ, ಇತ್ತಂಡ** (ನಾ). ಎರಡು ತಂಡ, —ಪಕ್ಷ, —ಪಂಗಡ ಅಥವಾ ವಿಭಾಗ, —ಗುಂಪು: ಇಱ್ತಂಡದೊಳ್ ಚೂಳಿ ಪೊಯ್ದಾಡಿ ಮಡಿಯೆ (ಚಬಪು. ೨೬-೧೭); ಇಱ್ತಂಡದ ಕೆನ್ನೀರ ಮುನ್ನೀರೊಂದನೊಂದು ಕೂಡಿದುದು (ಅದ್ಭುತ. ೪೫-೧೫). **ಇತ್ತಂಡ**: ಬಿಲದೊಳಗಣ ಯಿಲಿ ಹುತ್ತದೊಳಗಣ ಹಾವು ಇತ್ತಂಡವು ಕೂಡಿ ಮನೆಯೊಳಗಣ ಬೆಕ್ಕ ಮುಱಿಯಿತ್ತು (ಬಬ್ಬಬಾ. ೨೦-೪೪); ಧರಣಿಯ ಕದನವಿತ್ತಂಡಕ್ಕೆ ಕಾಮಿತವಲ್ಲ (ಕುವ್ಯಾಉ. ೧೦-೭); ತುಂಡುಗಳೆರಡಾಗಲೊಡಲೊಂದು ನಮ್ಮಿತ್ತಂಡಕ್ಕೆ ಭೇದವೆಲ್ಲಿಯದು (ಮೋಹತ. ೩೧-೪೨). [ಇರ್$_2$ (< ಎರಡು) + ತಂಡ]

**ಇಱ್ತಟ್ಟು, ಇತ್ತಟ್ಟು$_1$** (ನಾ). ೧. ಎರಡುಕಡೆ, —ಪಕ್ಕ. ೨. ಎರಡು ಕಡೆಯ ಸೈನ್ಯವ್ಯೂಹ: ಎರಡಱ್ಕಂ ಯಿರಾದೇಶಂ ದೊರೆಕೊಳ್ಗುಂ—ಇಱ್ಕಟ್ಟು, ಇಱ್ತಟ್ಟು (ಶಮುದ. ಮ. ೧೯೮ ವೃತ್ತಿ, ಪ್ರಯೋ). **ಇತ್ತಟ್ಟು$_1$**: ೧. ಇತ್ತಟ್ಟನೊಳು ಬೆಂದುದಂ ಹಿಡಿದು ತೆಗೆದಿರಿಸಿ (ಸೂಪಶಾ. ೧-೪೯); ಇತ್ತಟ್ಟನ ಪಡೆಗಳೆರಡು ತಾಗಿದುವು (ನೇಮಿಸಂ. ೨೭-೩೭); ಇತ್ತಟ್ಟನೊಳು ಕಾಣ್ಬ ರನ್ನಗನ್ನಡಿಯಂತೆ ಸುತ್ತಲಱಿವು ಕಾಣ್ಕೆ ಜಿನಗೆ (ಭರಚ. ೬೬-೯೫). ೨. ಬಿದ್ದರು ನೆಲಕಿತ್ತಟ್ಟನ ಯುದ್ಧವಿಶಾರದರು (ಯಾದವು. ೬೦). [ಇರ್$_2$ (< ಎರಡು) + ತಟ್ಟು$_2$]

**ಇಱ್ತಡವೆ** (ನಾ). ಎರಡು ಸಲ, —ಬಾರಿ: ತಪ್ಪಿಸಯ್ . . . ಇಱ್ತಡವೆ ನಾನ್ ಪಯಣಿಸುವುದನ್ (ಬದ್ಧಪ್ರ. ೫೦-೧೯೪). [ಇರ್$_2$ (< ಎರಡು) + ತಡವೆ]

**ಇಱ್ತಡಿ, ಇತ್ತಡಿ** (ನಾ). ಎರಡು ತಡಿ, —ದಂಡೆ, —ಅಂಚು: ಸೊಗಯಿಸು ವಿಱ್ತಡಿಗಳೊಳಮೊಪ್ಪಂಬೆತ್ತ ವೇತ್ರವತಿಯೆಂಬ ನದಿಯಿಂ (ಕಾದಂಪೂ. ೧೬); ಪರಿಕಾಲಿಱ್ತಡಿಯೊಳ್ ಮಡಲ್ತು ಮುಗುಳಂ ಪೂಗೊಂಚಲಂ ಪುಷ್ಪವಲ್ಲರಿಗಳ್ಪೇಱಿದ ಬಂಡಂ (ಮಲ್ಲಿಪು. ೨-೩೬); ಅಳವಟ್ಟು ರಂಜಿಪಿಱ್ತಡಿಗಳ ಬೆಡಂಗಿನಿಂ (ಉದ್ಭಟ. ೩-೧೦೦). **ಇತ್ತಡಿ**: ಸುಖಜಲಂ ವಿಲೋಚನಂಗಳಿತ್ತಡಿಗಳಿನೊತ್ತಿ ಪರಿದು (ಮಳಿರ. ೧೨೩-೨೦); ಪಂಕಜಮುಖಿಯುರಿತ್ತಡಿಯ ಸೋಪಾನದೆ ಮುಂಕೊಂಡು ಮೆಱೆದರತಿಯಲಿ (ಕಂನವಿ. ೫-೫೨); ಒಂದೊಂದು ಮನಸ್ಸೂ ಇತ್ತಡಿಗಳನ್ನು ಸೇರಲೆತ್ನಿಸುತ್ತದೆ (ಸರಸ. ೭೬). [ಇರ್$_2$ (< ಎರಡು) + ತಡಿ$_2$]

**ಇರ್ತಡಿಗಾಲುವೆ** (ನಾ). ಎರಡು ದಡಗಳಲ್ಲಿರುವ ಕಾಲುವೆ: ಮಿಸುಪ ನದೀನಾರಿಯ ನಳಿತೋಳೆನಲೆಸೆವಿರ್ತಡಿಗಾಲುವೆಯಿಂದವೆ ನೆಱೆ ನುಸುಳಿ ಬೆಳೆದ ಚೆಂದೆಂಗು (ಜಯಕಾ. ೧–೩೮).
[ಇರ್ತಡಿ + ಕಾಲುವೆ (< ಕಾಲ್ವಾಯ್)]

**ಇರ್ತಡಿವಿಡಿ** (ಕ್ರಿ). ಎರಡು ದಡಗಳನ್ನು ಅನುಸರಿಸು, —ಹಿಡಿ: ಒಂದು ದೆಸೆಯೊಳಿರ್ತಡಿವಿಡಿದು ನಟ್ಟ ತಮಾಲದ ತಳಿರ್ಗೊಂಬುಗಳಿಂ ಸಮೆದ ಪನಲೇಖೆಗಳುಮಂ (ಕಾದಂಉ. ೨೧೪). [ಇರ್ತಡಿ + ಪಿಡಿ$_1$]

**ಇರ್ತರ**, ಇತ್ತರ (ನಾ). ಎರಡು ಸಾಲು, —ಕಡೆ, —ಪಾರ್ಶ್ವ: ಇರ್ತರದಿಂದೋಲಗದೊಳ್ ಕುಳ್ಳಿರ್ದ ಜತಿಗಳ್ (ಕಬ್ಬಿಕಾ. ೧೬೨). **ಇತ್ತರ**: ಸಮಸ್ತ ದೇವರ್ಕಳ ಶಿರಂಗಳು ಇತ್ತರದಿ ಶಿವಮಾಲೆಗೆಯ್ದುವೆ (ಗಣಭಾ. ೬೯–೪ ಸೊಡ್ಡಳ); ಇತ್ತರದೊಳೊತ್ತರದಿ ಕುಳ್ಳಿರ್ದ... ರಾಜಪುತ್ರರ್ಕಳ (ಬಸರ. ೬–೧೮); ಚಾಮರಗಳಿತ್ತರದಲಾಡಿದುವು (ಸಾಳ್ವಭಾ. ೭೦–೭೧). [ಇರ್$_2$ (< ಎರಡು) + ತರ]

**ಇರ್ತಲೆ**, ಇತ್ತಲೆ (ನಾ). ೧. ಎರಡು ತಲೆ: ಇರ್ತಲೆ, ಎರಟ್ಟಲೆ (ಶಬ್ದಾನು. ೩೫೯ ಪ್ರಯೋ). ೨. ಎರಡು ಕೊನೆ, —ತುದಿ. 'ಇರ್ತ್ತಲೆ ವೊತ್ತು' ಪರಾ. ೩. ಎರಡು ಕುಲ; ಉಭಯ ಕುಲ: ಕಱೆಮುಱೆಗಳೊಳವು ನೋಟ್ಪೊಡೆ ಪೆಱಪೆಱರ ಕುಲಕ್ಕೆ ಕೊಂಡ ಕೊಟ್ಟೆಡೆಗಳೊಳಂ ಕಱೆಯಿಲ್ಲ ತೈಲನಲ್ಲದೆ ಪೆಱನಾವೊಂ ಪಿಕ್ಕಿನೋಟ್ಪೊಡಿರ್ತ್ತಲೆಗೋಱಂ (ಕಾವ್ಯಾವ. ೨೧೧). **ಇತ್ತಲೆ**: ೧. ಇತ್ತಲೆಯ ಸರ್ಪನಂತೆ (ಮೋಳಿಮಾ. ೪೬–೧೯೦). ೪. (ಆಲಂ). ಎರಡು ತಲೆಯವನು; ಮೋಸಗಾರ: ಇತ್ತಲೆ ಹಾವಿನಂತಹ ಗೋಮುಖವ್ಯಾಘ್ರಗಳನ್ನು ಸಂಹರಿಸಿ (ಪಿಶಾಪ. ೧೪೬). [ಇರ್$_2$ (< ಎರಡು) + ತಲೆ$_1$]

**ಇರ್ತಲೆಗುಯ್ಯ** (ನಾ). ಎರಡುತಲೆಯ ಹಾವು: "ಆಹೀರಣಿಯೆಂಬುದು ಇರ್ತ್ತಲೆಗುಯ್ಯ" (ಹಲಾಯು. ೧೦೬–೨೧). [ಇರ್ತಲೆ + ಗುಯ್ಯ]

**ಇರ್ತ್ತಲೆವೊತ್ತು** (ಕ್ರಿ). ಎರಡು ಕಡೆಗಳಿಗೂ ಉರಿ ಹತ್ತಿಕೊಳ್ಳು: ಇರ್ತಲೆವೊತ್ತಿದ ಪುಳ್ಳಿಯ ಪುಟುವೊಲಿರ್ದನತಿಚಕಿತಚಿತ್ತನಪರಾದಿತ್ಯಂ (ಗದಾಯು. ೧–೨೩). [ಇರ್ತ್ತಲೆ + ಪೊತ್ತು$_1$]

**ಇರ್ತಲೆಹಾವು** (ನಾ). ೧. ಎರಡು ತಲೆ ಹಾವು. ೨. ಕೊಳಕು ಮಂಡಲ ಹಾವು (ಕಿ). [ಇರ್ತಲೆ + ಹಾವು (< ಪಾವು)]

**ಇರ್ತಳ** (ನಾ). ಎರಡು ಕೈ, —ಅಂಗೈ: ಶೀವಿದೊಳ್ರಸದ ಮಾವಿನ ಪಣ್ಗಳನಿರ್ತಳಂಗಳಿಂ ಪೊಸೆದಿರ್ದೆಯಾಱೆ ಪೀರ್ದು ಮಧುವೀರ್ದಪರಂ ನಗುಗುಂ ಜಗಜ್ಜನಂ (ಜಗವಿ. ೧೭–೮೨). [ಇರ್$_2$ (< ಎರಡು) + ತಳ$_2$]

**ಇರ್ತಿಂಗಳ್** (ನಾ). ಎರಡು ತಿಂಗಳು (ಕಾಲ): ಇರ್ತಿಂಗಳ ನೋದಿದಂ, ಅರೆಜಾವಮಂ ನಿದ್ದೆಗೆಯ್ದಂ (ಭಾಷಾಭೂ. ೭೭ ಉದಾ).
[ಇರ್$_2$ (< ಎರಡು) + ತಿಂಗಳ್]

**ಇರ್ತಿಗ**, ಇತ್ತಿಗ, ಇತ್ತಿಗೆ (ನಾ). ಪಗಡೆಯ ಆಟದಲ್ಲಿ ಒಂದು ದಾಯ; ಎರಡು ಮೂರುಗಳು: ನಿರುತದಿಂದಿರ್ತಿಗಂ ಬೀಳೆ ಲಿಂಗತ್ರಯಕೆ ತ್ರಿವಿಧಾರ್ಪಣಮನೆಸಗಲು (ಆರಾಚ. ೮–೫). **ಇತ್ತಿಗ**: ಸಾರಿಗನಂ ಪರಾಕರಿಸಿ ಸುಂಕಿಗನಂತಿರೆ ಹೂಡಿ... ಚೌಕ ದುಗನಿದ್ದುಗನಿತ್ತಿಗನೆಂಬ ದಾಯುಮಂ ಪೋರಿಸಿ... ದಾಳಮಳವಟ್ಟಿರೆ (ಪುಣ್ಯಾಸ್ರ. ೪–೧೮); ಆಡಿದರು ಖಾಡಾಖಾಡಿಯಲಿ ದುಗ ಬಾರವಿತ್ತಿಗವೆಂಬ ರಭಸದಲಿ (ನಳಚ. ೯–೪೪); ದುಗನ ಹಾಯಿಕು ತನಗೆ ಹಾಯ್ಕಿತ್ತಿಗನನೆಂಬಬ್ಬರದ ಹಾಸಂಗಿಗಳ ಬೊಬ್ಬೆಯ (ಕುವ್ಯಾಸ. ೧೩–೫೦). **ಇತ್ತಿಗೆ**: ಸರಸಲಿಂಗತ್ರಯಕೆ ಮೂಱವಸರದೊಳಂ ತ್ರಿವಿಧಾರ್ಪಣಕ್ರಿಯೆವೆರಸಲಿತ್ತಿಗೆಯೆಂಬ [ಪಾಠಾಂ. ಗವೆಂಬ]ದಾಯವನಾಡುವನು ನೋಡಿ (ಬಸವು. ೪೩–೫).
[ಇರ್$_2$ (< ಎರಡು) + ತಿಗ್ಗ$_2$]

**ಇರ್ತುಂಡಿಸು** (ಕ್ರಿ). ಎರಡಾಗಿ ಕಡಿ; ಎರಡು ಭಾಗಮಾಡು ತರಿದಿರ್ತುಂಡಿಸಿ ಸೀಳ್ದು ಬಾಣತತಿಯಿಂ (ಸಕವೈ. ೩ ಪ್ರಸ್ತಾ).
[ಇರ್$_2$ (< ಎರಡು) + ತುಂಡಿಸು]

**ಇರ್ತೆರೆ** (ನಾ). ೧. ಎರಡು ಅಲೆ, —ತೆರೆ: ಇರ್ಪೆೞನೆ, ಇರ್ತೆರೆ, ಇರ್ಕಟ್ಟು (ಶಮದ. ೧೪೭ ಪ್ರಯೋ). [ಇರ್$_2$ (< ಎರಡು) + ತೆರೆ$_2$]

**ಇರ್ತೆಱ**, ಇತ್ತೆರ, ಇತ್ತೆಱ (ನಾ). ಎರಡು ಬಗೆ, —ವಿಧ: ಸಂಸಾರಿಜೀವಂ ತ್ರಸಸ್ಥಾವರ ವಿಕಲ್ಪದಿಂದಿರ್ತೆಱನಕ್ಕುಂ (ಆದಿಪು. ೧೦–೬೩ ವ); ತೊಱೆದನಂತರಮಂದಿರ್ತೆಱದ ಪರಿಗ್ರಹಮುಮನಂತೆಱೆಯಂ ತಱೆ ಸಂದನೊಱೆಯನುರ್ಚಿದ ಬಾಳ್ವೋಲ್ (ನೇಮಿಪು. ೧೩–೭೪). **ಇತ್ತೆರ**: ಹಾದಿಯಲ್ಲೆಲ್ಲ ಇತ್ತೆರದಲ್ಲಿಯೂ ಸಾಲುಗೊಂಡು ಸುತ್ತಣ... ಉಪ್ಪರಿಗೆಗಳು (ಕರ್ಣಾಜ. ೧೬೦). **ಇತ್ತೆಱ**: ಧರ್ಮದ ಲಕ್ಷಣಮಿಂತುಟಧರ್ಮದ ಲಕ್ಷಣಮದಿಂತುಟೆಂದಿತ್ತೆಱನಂ ನಿರ್ಮಳಮಾಗಿರೆ ತಿಳಿವಡೆ (ಸಮಪ. ೭–೨೪); ಇತ್ತೆಱನನು ಬಿಟ್ಟು ಮಧ್ಯಮ ವಿಧಿಯನು ಚಿತ್ತೈಸು ಸ್ವಾಮಿ ಮಾಡುವೆವು (ಗೋವುಟೀ. ೧೭–೧೦). [ಇರ್$_2$ (< ಎರಡು) + ತೆಱ$_1$]

**ಇರ್ತೆಱೆ** (ನಾ). ಎರಡು ಪರದೆ, —ಕಾಂಡಪಟ (ಕಿ).
[ಇರ್$_2$ (< ಎರಡು) + ತೆಱೆ]

**ಇರ್ದಲ್**, ಇಜ್ಜಲು, ಇದ್ದಲಿ, ಇದ್ದಲು, ಇದ್ದಿಲ್, ಇದ್ದಿಲು, ಇರ್ದಿಲ್ (ನಾ). ಕೆಂಡವನ್ನು ಆರಿಸಿದ ಮೇಲೆ ಉಳಿಯುವ ಕರಿಕು: ವಾಸವದಿಕ್ತಟಂ ಸಮೆದ ಮೂಷೆ ತಮಂ ಸುರಿದಿರ್ದಲಬ್ಜಸಂವಾಸಿ ಸಮೀರನೇರಣಿಗನಾಗೆ (ಅಜಿಪು. ೬–೭೦); ಕೋಡು ಕೊಟಿಗೆಲ್ ತೊಗಲ್ ಕೊಱಡೋಡಿರ್ದಲ್ ಪಲ್ಲಿ ಪಾವು ನವಿಲಾವೋಡೆಂಬಿವು ಕಷ್ಟಂ ಮನೆ ಮಾಡುವ ನೆಲನನಗುಱೆ ಕಾಣ್ಬೊಡುಱಿದುವು ಶುಭದಂ (ಲೋಕೋಪ. ೩–೧೫); ಜಳನಿಧಿಯಂ ಕೆಸರ್ಮಾಸಗೆ ಕೂಡೆ ಕಲಂಕುವ ಬಾಡಬಾಗ್ನಿಯನ್ತಳದೊಳಗಿರ್ದ್ದಲಾಗೆ ಪೊಸೆದಿಕ್ಕುವ (ಮೈಆರಿ. ೧೯೩೭, ೨೮–೭೭; 1148); ಆರೆಗರಿದಿರ್ದಲಾಗಿ ಕಡುವೆಂದೊಡೆ ಬೂದಿಯುಮಾಗಿ (ಜೀವಸಂ. ೨೨೦–೧೮). **ಇಜ್ಜಲು**: ಇಜ್ಜಲಿನಿಂದ ನಡೆಯುತ್ತಿದ್ದ ಆ ಬಸ್ಸು ಘಂಟೆಗೆ ನಾಲ್ಕು ಮೈಲಿಯಂತೆ ಸಾಗುತ್ತಿತ್ತು (ಕಳಹು. ೧೦೪). **ಇದ್ದಲಿ**: ಅಗ್ನಿಯ ಮುಟ್ಟಿದ ಕಾಷ್ಠ ಇದ್ದಲಿಯಾಯಿತ್ತು (ವಚಶಾ. ೧೧೧–೭); ಇದ್ದಲಿಯನೇ ತಂದು ಹಾಲಿನೊಳದ್ದಿ ತೊಳೆಯಲು ಮಲಿನ ಹೋಹುದೆ (ಜ್ಞಾನಸಿಂ. ೧–೪೪); ತಮ್ಮಾ! ಇದ್ದಲಿಯ ಬಣ್ಣ ಹ್ಯಾಗೆ ಇರುತ್ತದೆ (ಮುಂಬಯಿ. ೧–೧೧). **ಇದ್ದಲು**: ಚಂದ್ರೋಪಳರಚಿತ ಸೋಪಾನ ರತುನಾವಳಿಯ ರಾಶಿಗಳಿದ್ದಲಾದುವು ಬಿದ್ದ ಕಿಡಿಗಳಲಿ (ಕುವ್ಯಾಅ. ೨೦–೫೪); ಕಾನಕಾನಹಳ್ಳಿಯ ಇದ್ದಲು ಡಿಪೊ (ರೂಢಿ). **ಇದ್ದಿಲ್**: ಒಟ್ಟಿರ್ದಿಟ್ಟಿಗೆಯಂ ಕೆದಱಿಯುಂ... ಇದ್ದಿಲ ರಾಶಿಯಂ ಸೂಸಿಯುಂ (ಪಂಚತಂ. ೩೦–೨); ಸಿರಿ ಸುರಚಾಪದಂತೆ ಪೊಸಜವ್ವನಮಿದ್ದಿಲ ಬೂದಿಯಂತೆ (ಧರ್ಮಾಮೃ. ೫–೧೮). **ಇದ್ದಿಲು**: ಅದು ಇದ್ದಿಲು ಶುಭ್ರವಾದ ತೆಱನಂತೆ ಹೊದ್ದದಾಗಿ ಲಕ್ಷಿಸಲುಂಟೆ (ಮೋಳಿಮಾ. ೩–೮); ತಳಿರಿನಗ್ನಿಯ ನಳಿಗಳಿದ್ದಿಲನಳವಡಿಸಿ ಮಂದಾನಿಲನ ತಿದಿಗೊಳಿಸಿ (ಜೀವಂಚ. ೧೬–೯); ತೊಳೆತೊಳೆಯಲಿದ್ದಿಲೇಂ ಸವೆಸವೆವುದಲ್ಲದದು ಬಿಳಿದಪ್ಪುದೇ (ವೀಶೈಪು. ೪–೬–೫೫). **ಇರ್ದಿಲ್**: ಬಱುಗೊಡನೆಣ್ಣೆ ಪಟ್ಟಿ ನುಲಿ ನೇಣ್ ಬಡಿಕೋಲ್ ಬಲೆಯಿರ್ದಿಲೆಲ್ವು... ಇದಿರೊಳ್ ಬರೆ ಕಾಣಲುಮಾಗದು (ಲೋಕೋಪ. ೧೨–೧೦); ವಿರಹತಾಪವ್ಯೂಹದೊಳ್... ಕಳವಳಂಗೊಂಡಿರ್ದವಳ್ಗೊರ್ವಳೀವಂದಳೆದು ಬಿಡುಗುಮೆಂದಾತಂ ಪೆಱಳ್ಗೋತ ನೆಂದಾಂ ತಿಳಿದೆನೆನೆ ಕನಲ್ದಿರ್ದಿಲಂತಿರ್ಮೆಬೆಂದಳ್ (ಚಂದ್ರಪು. ೮–೮೭).
[ದೇ. ॥ ತಮಿ. ಇರುನ್ದೈ, ಇರುನ್ದು, ಇರುನ್ದಿಲ್; ಮಲ. ಇರುನ್ನಲ್; ಪರ್ಜಿ. ಸಿರುನ್; ಕುಇ. ಸೀಗ್ನಾ; ಕುವಿ. ರೀಂಗ್ಲಾ]

**ಇರ್ದಿಲ್** 'ಇರ್ದಲ್' ನೋ.

**ಇರ್ದುಗ**, ಇದ್ದುಗ, ಇದ್ದುಗೆ (ನಾ). ಪಗಡೆಯಾಟದಲ್ಲಿ ಎರಡು ದುಗಗಳು: ನೆಗೞ್ದೀರೈದುಱಿ ನೆಟ್ಟೆಯಿರ್ದುಗಮುಮಂ ಚೌಪಂಚಿಯಿರ್ಪಂಚಿಯಿತ್ತಿಗದೊಳ್ಭದ್ರಿಕೆ ಕಟ್ಟೆ ಚೌಕ ದುಗಮುಂ ಚೌಪಂಚಿ ಬಾಯೆಂದು . . . ಲೆತ್ತಮನಲಂಪಂಬೆತ್ತು ತಾವಾಡಿದರ್ (ಉದ್ಭಟ. ೧೧–೧೪). **ಇದ್ದುಗ**: ದುಚ್ಚೌಕಮನಾಡುವ . . . ಇದ್ದುಗವಾಡುವನು (ಉದ್ಭದೇ. ೩೧೩). **ಇದ್ದುಗೆ**: ನಿರತವೀರೈದಿಂತು ಬಂದೊಡೆ ಪರವಿಹವೆನಿಪ್ಪಿದ್ದುಗೆಯೊಳೀಶ್ವರನ ಭಕ್ತಿಯುಲದುರ್ದದೆನುತಿದ್ದುಗೆಯನಾಡುವನು (ಬಸಪು. ೪೩–೫). [ಇರ್$_2$ (< ಎರಡು) + ದುಗ]

**ಇರ್ದೆಸೆ**, ಇದ್ದೆಸೆ (ನಾ). ಎರಡು ದಿಕ್ಕು, —ಕಡೆ: ಕಾಕಿಣೀಮಣಿಸ್ಕಂಧನದಿಂದಮಿರ್ದೆಸೆಯ ಕೇರ್ಗಳೊಳಂ ಬರೆದೊಂದು ಕೇರೊಳಂದಿಂದುವನೊಂದು ಕೇರೊಳಿನನಂ (ಶಾಂತಿಪು. ೧೧–೪೬); ಅಸದ್ಗ್ರಹದ್ವಿತಯಮಿರೆ ನಿಶಾನಾಥಂಗಿರ್ದೆಸೆಯೊಳ್ ಮನುಜಂ ಪ್ಲೀಹಶ್ವಸನ ಕ್ಷಯ ಗುಲ್ಮವಿದ್ರಧಿವ್ಯಾಧಿಯುತಂ (ಜಾತತಿ. ೨೧–೧೩). **ಇದ್ದೆಸೆ**: ಕಳಸಕನ್ನಡಿವಿಡಿದ ಸತಿಯರಿದ್ದೆಸೆಗಳಲಿ (ಹಚಕಾ. ೧೪–೨೪); ಮುಸುಕಿ ಬರಲಂಜಿದ್ದೆಸೆಗೆ ಖಂಡಿಸಿದವೊಲು ನೀ ಪರಿದೆಯಲ್ಲಾ (ಬಸಪು. ೩೨–೩೪); ಗೊಂದಣದ ಹೆಮ್ಮಕ್ಕಳಿದ್ದೆಸೆಯಂದಣದ ಸಂದಣಿಗಳಲಿ (ಕುವ್ಯಾಸ. ೧೨–೯೯); ಗಱಿಗಟ್ಟುವರೆ ಮೊನೆಯಂಬಿನಿದ್ದೆಸೆಗೆ (ನಿಭಾಗ. ೫–೨–೧೨).
[ಇರ್$_2$ (< ಎರಡು) + ದೆಸೆ$_2$]

**ಇರ್ನಯನ** (ನಾ). ಎರಡು ಕಣ್ಣು; ಕಣ್ಣುಗಳೆರಡು: ಇರ್ನಯನದೊಳಾನಂದಾಶ್ರುಗಳುಣ್ಮೆ ವರ್ಣಿಸಲರಿದಿಲ್ಲ ಸ್ವಯಸುಖವ (ಶಿವಗೀ. ೧೭೧–೮೩೩). [ಇರ್$_2$ (< ಎರಡು) + ನಯನ]

**ಇರ್ಪಂಚಿ** (ನಾ). ಪಗಡೆ ಆಟದಲ್ಲಿ ಒಂದು ದಾಯ; ಎರಡು ಐದುಗಳು: ಚೌಪಂಚಿಯಿರ್ಪಂಚಿಯಿತ್ತಿಗದೊಳ್ (ಉದ್ಭಟ. ೧೧–೧೪).
[ಇರ್$_2$ (< ಎರಡು) + ಪಂಚಿ]

**ಇರ್ಪತು** 'ಇರ್ಪತ್ತು' ನೋ.

**ಇರ್ಪತ್ತು**, ಇಪ್ಪತು, ಇಪ್ಪತ್ತು, ಇರುವತ್ತು, ಇರ್ಪತು, ಇರ್ಪದು, ಇಪ್ಪಿತ್ತು, ಈಪ್ಪತ್ತು (ನಾ). ಒಂದು ಸಂಖ್ಯೆ; ಎರಡು ಹತ್ತು: ಪ್ರಥಮವಿಜಯಸಂವತ್ಸರಂ ಕಾರ್ತಿಗೆ ಪುಣ್ಣಿಮೆ ಅನ್ದು ತಱಿಕ್ಕಾಡಾ ಇರ್ಪತ್ತಯ್ವರ್ಕಂ (ಎಕ. III, ತಿರುಮ. ೧–೫ ; 726); ಸ್ಮರಿಯಿಪ ನಿರ್ಪತ್ತಿರ್ಛಾಸಿರ ಬರಿಸಕ್ಕೊರ್ಮೆ ಮನದೊಳುಣಿಸಂ (ಆದಿಪು. ೬–೧೬); ಇರ್ಪತ್ತು ಕುದುರೆಗವಯ್ನೂರಾಳ್ಗಳನಿತ್ತು (ಎಕ. VII, ಶಿವಮೊ. ೧೦–೫೧ ; 1085). **ಇಪ್ಪತು**: ಖಂಡುಗಕೆ ಕೊಳಗವಿಪ್ಪತು (ವ್ಯವಹಾ. ೫–೧). **ಇಪ್ಪತ್ತು**: ಸ್ವಸ್ತಿ ಶ್ರೀಮನ್ ಕೊಂಗೊಣಿ ಮುತ್ತರಸರ್ಕ್ಕೆ ಇಪ್ಪತ್ತಾಆರನೇ ವರ್ಷದದು . . . ಪುಲಿ ನೋಡಿ ಅಪ್ಪುದ ವಾಕ್ಕಿಲುಳ್ (ಎಕ. X, ಕೋಲಾರ. ೭೮–೧ ; 751); ಇಪ್ಪತ್ತುಗಣ್ಡುಗಂ ಬ್ಬೆದೆ (ಎಕ. IV, ನಾಗಮಂ. ೮೫–೬೯ ; 776); ಗಂಭೀರಾವರ್ತನಂಗಳೆಂಬಿಪ್ಪತ್ತುನಾಲ್ಕು ಶಂಖಂಗಳಿಂದಂ (ಶಾಂತಿಪು. ೧೧–೮೪ ವ); ಇಪ್ಪತ್ತೇಳನೇ ವರಿಷದನ್ದು (ವೈಆರಿ. ೧೯೪೧, ೧೯–೮ ; 951); ಜಿನನಾಥರ್ವಿವರಿಪೊಡಿಪ್ಪತ್ತನಾಲ್ವರ್ (ಧರ್ಮಾಮೃ. ೫–೨೩೬). **ಇರುವತ್ತು**: ನೆಗಳ್ದಿಱ[ರು]ವತ್ತಾಜನಮುಂ ಮಲ್ಲಿಕಾರ್ಜುನವಾಸಾದ್ರಿಗೆ ಪೋಗಿ (ಸೌಇಇ. XX, ೨೪–೨೬ ; 1034). **ಇರ್ಪತು**: ತಮ್ಮ ಮಾತಾಪಿತೃಗಳಿರ್ಪತೊಂದು ಕುಲದ (ಎಕ. IV, ಗುಂಡ್ಲುಪೇ. ೯೩–೨೩ ; 1049); ಸ್ಮರಿಯಿಸಿದಂ ಮುಚುಕುಂದಂ . . . ಇರ್ಪತೆಂಟನೆಯ ದ್ವಾಪರದಂತ್ಯದಲ್ಲಿ ಧರೆಯೊಳ್ ಹರಿ ಪುಟ್ಟುಗುಮೆಂಬ ವೃದ್ಧವರ್ಗದ ನುಡಿಯಂ (ಜಗವಿ. ೯–೪೬); ಸ್ಥಾವರಮಿರ್ಪತಯ್ದು ತೆಱನಂ ತಧಿಕಂಗಳು ಮಲ್ಲಿಯಯ್ದು (ಖಮುದ. ೨–೨).

**ಇರ್ಪದು**: ಶ್ರೀಪುರುಷ ಪೃಥುವೀ ರಾಜ್ಯ ವಿಜಯವತ್ಸರ ಇರ್ಪದಾಎಣ್ಟನೆಯೊಳ್ (ಎಕ. X, ಕೋಲಾರ. ೬–೨ ; 753). △ **ಇಪ್ಪಿತ್ತು**: ಎಡೆನಾಡಿಪ್ಪಿತ್ತಱ ಗಾವುಣ್ಡುಗಳು ಪದಿ ಎಳಜಗಾವುಣ್ಡು× × ×ನಕರಮುಂ ಏಱುಪುರಮುಂ ಪಾದಮೂಲಮುಂ ಸಾಕ್ಷಿ (ಎಕ. IV, ಚಾಮರಾ. ೧೮–೧೯ ; 1000 ?). **ಈಪ್ಪತ್ತು**: ಈಪ್ಪತ್ತು ಕಣ್ಡುಗದೊ[ಳೆ] ಪಡಿಸಲಿಸಿ (ಸೌಇಇ. XI–i, ೩೫–೧೪ ; 933).

ಇರ್ಪತ್ತೈಗೈ = ಇಪ್ಪತ್ತಯ್ದು ಕೈ (ಪ್ರಮಾಣ): ಮನೆಗೆಣ್ಣಯ್ಗಲವಿರ್ಪತ್ತೈಗೈ ನೀಳದ ನಿವೇಶನಂ (ಎಇ. XX, ೬–೩೩ ; 1012). **ಇಪ್ಪತ್ತಅಱವುದು** = ಇಪ್ಪತ್ತಾರನೆಯದು: ಶ್ರೀಮುಮ್ಮಡಿಗೊಣ್ಡಗಙ್ಗಗೊಣ್ಡರಾಜೇನ್ದ್ರಚೋೞದೇವರಕ್ಕಿಯಾಣ್ಡು ಇಪ್ಪತ್ತಅಱವುದು ಸ್ವಸ್ತಿ (ಎಕ. IV, ಹೆಗ್ಗಡ. ೧೦೪–೪ ; 1037). **ಇರ್ಪತ್ತಯ್ಗಂಡುಗ** = ಇಪ್ಪತ್ತೈದು ಖಂಡುಗ ಪ್ರಮಾಣ: ರಾಟಣ ಪೂವಿನ್ನಿರ್ಪತ್ತಯ್ಗಣ್ಡುಗಂ ವತ್ತತೆಱವೊದು (ಎಕ. XIV, ತಿರುಮ. ೨೫೩–೬ ; 800). **ಇರ್ಪದಿಂಬರ್, ಇಪ್ಪದಿಂಬರು** = ಇಪ್ಪತ್ತು ಮಂದಿ; ಇಪ್ಪತ್ತು ಜನ: ಶ್ರೀಮದು ಜೀವಣಿಯಮಗನ್ ನಿಟ್ಟರಾಮನ್ನೀಕೆಯನ್ನಿರ್ಪದಿಂಬರ್ಗೆ ಕೊಟ್ಟನ್ (ಎಕ. XVI, ಪಾವುಗ. ೧೩–೧ ; 754); ಸ್ತ್ರೀವೇದದೊಳ್ ಪನ್ನೆರಡುಂ ಇರ್ಪದಿಂಬರುಮಪ್ಪರ್ (ತತ್ತ್ವಪ್ರ. ೨೩); ಭೀಷಣಾಕಾರರಾದ ಹದಿನಯ್ದಿಪ್ಪದಿಂಬರು ಕೂರಾಳ್ಗಳ– ಹಠಾತ್ಪ್ರವೇಶ (ಮಂತ್ರಶ. ೭೬–೧೯).

[ಇರ್$_2$ (< ಎರಡು) + ಪತ್ತು. / **ತಮಿ.** ಇರುಪತು, ಇರುವತು; **ಮಲ.** ಇರುಪತು; **ಕೊಡ.** ಇರುವರೀ; **ತುಳು.** ಇರ್ವ; **ತೆಲು.** ಇರುವೈ; **ಕೊಲಾ.** ಇರ್ವೆ]

**ಇರ್ಪದು** 'ಇರ್ಪತ್ತು' ನೋ.

**ಇರ್ಪಲ**, ಇಪ್ಪಲ (ನಾ). ಎರಡು ಪಲದಷ್ಟು ಪ್ರಮಾಣ; ಎಂಟು ಕರ್ಷದಷ್ಟು ಪ್ರಮಾಣ: ಎಣ್ಣೆಯುಮರಿಸಿನಮುಂ (ಮೇಣೊ)ರ್ಪಲಂ ಸಕ್ಕರೆ ಇರ್ಪಲಂ (ಕಇ. I, ೨–೧೨ ; 699). **ಇಪ್ಪಲ**: ಸಮುದ್ರಶೋಕೆಯ ತಿರುಳನೊಪ್ಪಲವನೆ ಕೊಂಡು ಕೊಳವಳಿಕೆಯ ಬೀಜವಿಪ್ಪಲಮೂವಲ ಬೆಳೆದ ಮರ್ಕಟಿಯಸುಬೀಜ (ಸಾಳ್ವಸಾಂ. ೧೧).
[ಇರ್$_2$ (< ಎರಡು) + ಪಲ]

**ಇರ್ಪಱಿ** (ಕ್ರಿ). ಹಸಿಯಾರು; ಒಣಗು: ತಿಂಗಳ ತಣ್ಗದಿರ್ಗಳೊಳ[ಮಿಪ್ಪಱಿಯದ] ಸಿರಿಕಂಡದಣ್ಪಿನೊಳಂ . . . ಅಱಿಸಿದಪ್ಪೆನೆಂದು (ಕಾದಂಉ. ೫೯೮); ಸುಯ್ವೆಂಕೆಯಿಂದಿರ್ಪಱಿದಧರಮವಳ್ಗಿತ್ತುದದೊಂದು ಚೆಲ್ವಂ (ಜಗವಿ. ೧೧–೬); ಇರ್ಪಱಿದು ಬಱವಱಿದ ಬಾಯ್ದೆಱೆಯುಂ (ಕುಸುಮಾ. ೧೩–೪೬ ವ). [ಇರ್ಪು + ಆಱು]

**ಇರ್ಪಾನಿ** (ನಾ). ಎರಡು ವಸ್ತ್ರಗಳು, —ವಲ್ಲಿಗಳು (?): ಇರ್ಪಾನಿ, ಕೀಱೊಪ್ಪಟ್ಟಿ (ಶಬ್ದಾನು. ೯೦ ಪ್ರಯೋ); ಇರ್ತಡಿ, ಇರ್ಪ್ಪಾನಿ (ಶಬ್ದಾನು. ೧೦೧ ಪ್ರಯೋ). [ಇರ್$_2$ (< ಎರಡು) + ಪಾನಿ]

**ಇರ್ಪು** (ನಾ). ಹಸಿ; ತೇವ; ದ್ರವ; ರಸ; ಆರ್ದ್ರತೆ: "ಇರ್ಪೇ ದ್ರವಮುಮೆಂಬರ್" (ಕವಿಕಂ ೨೦೫); ಮೂಱುತಿಂಗಳ ಬಸಿಱೀಕೆ ಪಾಯ್ವೆಯೆನಗಿರ್ಪಣಮೋಡಿದುದಿಂದು ನೋಡ ಬಾಯಱಿದುದು ತಾರದಿರ್ ಮೊಗಮನಿತ್ತೆನುತುಂ ಬೆಱಗಾಗೆ ಕೂಡಿದಳ್ (ಕಾವ್ಯಸಾ. ೯೯೪ ಶೂದ್ರಕ); ಸೂಡಿದ ಪಾರಿಜಾತದ ನಮೇರುವ ಬಾಸಿಗವೊಯ್ಯನೊಯ್ಯನಿರ್ಪೊರೀಡಿದುದು (ಆದಿಪು. ೩–೩); ಮುತ್ತಿನಾರಮುತ್ಪಳವವತಂಸಮಿರ್ಪನೊಳಕೆಯ್ದ ಕುರುಳ್ (ಕಾದಂಉ. ೪೫೯); ನಾಲಗೆಯೊಳಿಂಪ[ಳಿರ್ಪ]ರೋಪದೊಳು ಬಲ್ಪನಾರಯ್ದು ಕಾಣದೆ ನೊಂದಳು (ಹಚಕಾ. ೧೨–೨೬).
[< ಈರ್ (< ನೀರ್) + -ಪು. / ತಮಿ. ಈರ್ಪ್ಪಱ್ಮ]

**ಇರ್ಪುರ್ಗುಂದು** (ಕ್ರಿ). ೧. ಒಣಗು; ಬಾಡು; ನಿರ್ದ್ರವವಾಗು: ಬಿಸುಸುಯ್ಲ್ವೆಂಕೆಯಿನಿರ್ಪುರ್ಗುಂದಿದಧರಂ (ಜಗವಿ. ೩-೮೯); ಪೆರ್ಬುಳಿಕೆಯೊಳಿರ್ಪುರ್ಗುಂದಿ ನಸುಗೆತ್ತುವ ಮಿಾನ್ಗಳ ಸೇದೆಯಿಂದೆ (ಸೂಕ್ತಿಸು. ೩-೪೭); ಇಂದುಟ ಚೆಂದಳಿರಿರ್ಪುರ್ಗುಂದಿದತ್ತು (ರಾಜಶೇ. ೩-೫೫); ತನುವೊಣಗಿತಾನನಮಿರ್ಪುರ್ಗುಂದಿ ಮಸಿಯುರುವೆಯಂತಸಿತಮಾದುದು (ಮಹಾಂತೇ. ೨೧-೪). ೨. ಕಳೆಗೆಡು; ಸೊಗಸುಕೆಡು (ಕಿ).

[ಇರ್ಪುರ್ + ಕುಂದು$_1$]

**ಇರ್ಪುರುಷ**, ಇಪ್ಪುರುಷ (ನಾ). ಎರಡು ಪುರುಷ (ಪ್ರಮಾಣ); ಎರಡಾಳುದ್ದ: ಸೊಗಯಿಪ ನೇಱಿಲಿಂ ಬಡಗ ಮೂಱುಮೊಱಿಂ ತರದಿಂದಮಾಗಿ ನೀನಗುಱುಸೆ(ಸು) . . . ಇರ್ಪುರುಷಪ್ರಮಾಣದಿಂದೊಗೆವುದು ನೀರಧಾರೆ (ಜಟ್ಟಮ. ೧೧-೪). **ಇಪ್ಪುರುಷ**: ಅಗುಬ್ದಲ್ಲಿಲಿಕೆಯ ಕಲ್ಲಿಂ ತೆಂಕಲಕ್ಕುಮಿಪ್ಪುರುಷವರೆಗಂ ಗುಣ್ಪಾದೊಡೆ ಜಗಕ್ಕೆ ತಣಿವಿನಂ ನೀರಧಾರೆಯಕ್ಕುಂ (ಜಟ್ಟಮ. ೧೧-೧೩); ಆವುದಾದೊಡಮಕ್ಕೆ ಭೂಜಾತಮ ವಱಡಿಯೊಳೆ ಕಪ್ಪೆಯಿರ್ದೊಡೆ ಕೆಳಗೆ ಜೀವನಂ ನಾಲ್ಕುಪುರುಷವರೆಯೊಳಿರ್ಕುಮಿಪ್ಪುರುಷದಲ್ಲಿ ಕಾಣ್ಬರ್ (ಜಟ್ಟಮ. ೧೧-೧೫).

[ಇರ್$_2$ (< ಎರಡು) + ಪುರುಷ]

**ಇರ್ಪುರ್ವಡೆ** (ಕ್ರಿ). ರಸವತ್ತಾಗು; ಆರ್ದ್ರವಾಗು. 'ಇರ್ಪುರ್ವಡೆಯಿಸು' ಪರಾ.

[ಇರ್ಪುರ್ + ಪಡೆ$_1$]

**ಇರ್ಪುರ್ವಡೆಯಿಸು** (ಕ್ರಿ). ಹಸಿಗೊಳಿಸು; ರಸವನ್ನು ಒದಗಿಸು: ಪಡುವಣೆಲರಿರ್ಪುರ್ವಡೆಯಿಸಲಡವಿಯೊಳೊತ್ತಂಬದಿಂದಮುದ್ದಂಬರ್ಪಾಸಡಿಯಿಂಮುನ್ನಂ ಬಂದಾಸಡಿಯೊಳ್ ನಳನಳಿಸುವೆಳದಳಿರ್ಗಳ್ ರಯ್ಯಂ (ಜಗವಿ. ೪-೩).

[ಇರ್ಪುರ್ವಡೆ + -ಇಸು$_3$]

**ಇರ್ಪುರ್ವೆಱು** (ಕ್ರಿ). ಶೀತಳವಾಗು; ತಣ್ಣಗಿರು: ಮೆಲ್ಲುಣ್ಬರಂಗೆಯ್ವ ಹಂಸರಥಾಂಗಂಗಳಿನಿರ್ಪುರ್ವೆತ್ತೆಳವುಱಿಲ್ದಾಣಂಗಳಿಂ ಕಣ್ಗೆವಂದಿರೆ (ಕಾದಂಉ. ೩೫೯).

[ಇರ್ಪುರ್$_2$ + ಪೆಱು]

**ಇರ್ಪುರ್ವೊರೆ** (ಕ್ರಿ). ತೇವವಾಗು; ನೆನೆ; ದ್ರವದಿಂದ ವ್ಯಾಪ್ತವಾಗು: ಇರ್ಪುರ್ವೊರೆದ ತಾವರೆಯೆಲೆಗಳೊಳಂ (ಕಾದಂಉ. ೭೭೫); ಪರಿವ ಪರಿಕಾಲ ಪೊನಲ್ವರಿಯೊಳಿರ್ಪುರ್ವೊರೆದು ತಣ್ಪೇಱಲಿಕ್ಕಿದ ಮಡಿವರ್ಗದ ದುಗುಲಂಗಳುಂ (ವರ್ಧಪು. ೫-೬೩ ವ).

[ಇರ್ಪುರ್$_1$ + ಪೊರೆ$_1$]

**ಇರ್ಪೆ**, ಇಪ್ಪೆ$_1$, ಹಿಪ್ಪೆ (ನಾ). ಒಂದು ಜಾತಿಯ ಮರ; ಹಿಪ್ಪೆಯ ಮರ; ಮಧೂಕವೃಕ್ಷ: ತಸ್ಯಸೀಮಾನ್ತರಂ ಕೊಳ್ತಿನಿ ತೊಱೆಪೆರಿಪ್ಪೆಎ ಪಾಣ್ಡಿಕ್ಕೆ (ಎಕ. XVI, ಗುಬ್ಬಿ. ೭೫-೫೦; 733); ಕೊಡಲ ಮೂಡಗಕೆಲಬನ್ದು ಇರ್ಪೆಯ ಕೊಶದೆ ಪಳ್ಳದೊಳಗಣ ಉಳಿಯುಳರಿಯೇ ಕೊಡೆಯಾಳಿ ಬೆಳನೆ (ಇಆ. XII, ೧೬-೪೬; 735); ಮೂಡಗರೆಲ್ ಬನ್ದು ಇಪ್ಪೆಯ ಕೊಮುದೆ ಪಳ್ಳದೊಳಗಣ ಉಲಿ ಅಳರಿಯೆ ಕೋಟಿಯಾಲಿ ಬೆಳಗೆ (ಎಕ. XII, ಗುಬ್ಬಿ. ೬೧-೮೯; 812). **ಇಪ್ಪೆ$_1$**: "ಇಪ್ಪೆ ಮಧುಕಂ" (ಮಂಗರಾ. ೪೨-೩೮); ತರದಿಂಬಾಗೆಸೆವಿಪ್ಪೆಯಿಂ ಬಡಗ ಪುತ್ತಾದಂದು ವಾಯುವ್ಯದೊಳ್ ಕರಷಟ್ಕಾಂತರದಿಂದಮಯ್ದುಪುರುಷಂ ಗುಣ್ಪಾದೊಡಂ ತಲ್ಲಿ ನೀರ್ ದೊರೆಕೊಳ್ಗುಂ (ಲೋಕೋಪ. ೫-೨೯); ಜಾವುಟೂರಿಂ ದಕ್ಷಿಣ ಕಡವಿನ ಕೊಡಿವುಂ ಇಪ್ಪೆಯ ಬಾಗು ನೈರಿತ್ಯದೊಳು ಬಿದಿರ ಪಳವುಂ (ಸೌಇಇ. IX-i, ೧೨೧-೪೫; 1057); ಮಲ್ಲಿಗೆಯ ಮುಗುಳಂ ರಾಸಿಗೆಯ್ದಂತೆ ಪೂವನೊಟ್ಟಿದಿಪ್ಪೆಗಳಂ ಇಪ್ಪೆಯ ಕಂಪಿಂಗೆ ಕುರುಳೆದ್ದು ಕರಮುಂಡು ನೀರಂ ಕಾಱುವಂತೆ ಸಾರಂ ಕಱೆವ ತಾಳ್ಗಳುಂ (ಲೀಲಾವ. ೬-೭೬); ಇಪ್ಪೆಯ ಹಣ್ಣದಱ ಹೂ ಮಧುರ ಮಧುವುಂಟು (ಬಸಪು. ೧೮-೧೬); ಆಲೆಯಿಲ್ಲದ ಊರಿಗೆ ಇಪ್ಪೆ ಹೂವೇ ಸಕ್ಕರೆ (ಗಾದೆ). **ಹಿಪ್ಪೆ**: ಕಪ್ಪುರವಾಳೆ ಕ್ರಮುಕ ಜಂಬೀರಗಳೊಪ್ಪುವ ಪಲಸ ರಸಾಲ ಹಿಪ್ಪೆಯಿಂಗುಳ ಮೊದಲಾದ ನಾನಾ ತರು ತಪ್ಪಲೊಳೆಸೆವುವಾ ಗಿರಿಯ (ಕಂನವಿ. ೨-೩೨); ಪೋಲು ಕೋಡೇ ಹಿಪ್ಪೇಯ ತರಿಸಾವೋ ಹಿಪ್ಪೆಯ ತೋಪ ತರಿಸಣ್ಣ (ಹುಟ್ಟಹ. ೩೭).

[ದೇ. ‖ ತಮಿ. ಇಪ್ಪೈ, ಇರುಪ್ಪೈ, ಇಲುಪ್ಪೈ; ಮಲ. ಇರುಪ್ಪ, ಇರುಪ್ಪೆ, ಇಲಿಪ್ಪ; ತುಳು. ಇಪ್ಪೆ, ಇರಿಪ್ಪೆ; ತೆಲು. ಇಪ್ಪ]

**ಇರ್ಪೆಂಡಿರ್**, ಇಪ್ಪೆಂಡಿರ್ (ನಾ). ಇಬ್ಬರು ಹೆಂಡತಿಯರು: ಊರೊಳ್ ಶುದ್ಧರುಂ ಕಳ್ಳರುಂ ಮನೆಯೊಳಿರ್ಪೆಂಡಿರುಂ ತೊತ್ತಿರುಂ (ಧರ್ಮಾಮೃ. ೯-೧೦೮); ಇರ್ಪೆಂಡಿರ್, ಇರ್ಬಾಳ್ (ಶಮದ. ೧೬೪ ಪ್ರಯೋ); ಒಂದೊಡಲೊಳಿರ್ಪೆಂಡಿರಾಳ್ದ ಶಂಕರನೀವುದೆಮಗೆ ಸುಖಮಂ (ಭಿಕ್ಷಾಚ. ೭-೧). **ಇಪ್ಪೆಂಡಿರ್**: ಬಡಗಲು ಇಪ್ಪೆಂಡಿರ ವಾಸುದೇವ ಪೈಸಾಸರ ತೋಟ ಮೇರೆ (ಎಇ. XIII, ಇಟ್ಟಗಿ. ೯೧; 1178).

[ಇರ್$_2$ (< ಎರಡು) + ಪೆಂಡಿರ್]

**ಇರ್ಪೊತ್ತು**, ಇಪ್ಪೊತ್ತು (ನಾ). ಎರಡು ಹೊತ್ತು (ಹಗಲು ಮತ್ತು ರಾತ್ರಿ): ಪೊೞಲ ಜನಮೆಲ್ಲಮಿರ್ಪೊತ್ತುಮರ್ಚನೆಯುಂ ಕೊಂಡುಬಂದು ಅರ್ಚಿಸಿ (ವಡ್ಡಾರಾ. ೮೩-೬); ಉಂಬುದು ಕಱವೆಯ ಕೂೞ್ಗಡ ತಂಬುಲಮಿರ್ಪೊತ್ತಿನುಣಿಸು ಮಿಾಹಂ ಕೇಳಿಲ್ಲೆಂಬಿನಿತೆ ಗಡಂ (ಧರ್ಮಾಮೃ. ೧-೧೩೯). **ಇಪ್ಪೊತ್ತು**: ಇಪ್ಪೊತ್ತು ದೇವರನು ತಪ್ಪದಲೆ ನೆನೆದಿಹರೆ ತುಪ್ಪ ಓಗರವು ಉಣಲುಂಟು (ಸರ್ವಜ್ಞ. ೨೯೨); ಒಪ್ಪೊತ್ತಿಗಿದ್ದರೆ ಇಪ್ಪೊತ್ತಿಗಿಲ್ಲ (ಬಾಳಿಗಿ. ೧೭).

[ಇರ್$_2$ (< ಎರಡು) + ಪೊತ್ತು$_2$ (< ಪೊೞ್ತು)]

**ಇರ್ಪೋಡಿಸು** (ಕ್ರಿ). ಒಣಗಿಸು; ಶೋಷಿಸು: ಕುಮುದಾನಂದತೆಯಿಂದವೊಂದಿ ಮುನಿಚಂದ್ರಂ ಶತ್ರುಭೂಭೃನ್ಮುಖಾಬ್ಜಮನಿರ್ಪೋಡಿದ ತೇಜದಿಂದೆ ಮುನಿಚಂದ್ರಂ (ಮುಂಬರಾ. X, ೨೬೦-೭; 1229).

[ಇರ್ಪೋಡು + -ಇಸು$_3$]

**ಇರ್ಪೋಡು** (ಕ್ರಿ). ದ್ರವವು ಇಂಗಿಹೋಗು; ಒಣಗು; ಬಾಡು; ಶುಷ್ಕವಾಗು: ಪಾರಿಜಾತದ ನಮೇರುವ ಬಾಸಿಗಮೊಯ್ಯನೊಯ್ಯನಿರ್ಪೋಡಿದುದು (ಆದಿಪು. ೩-೩); ಇರ್ಪೋಡಿದ ಚಂಚುವಂ ತೆಱೆದೆಱಂಕೆ ನೆಱಲ್ದಿರೆ ಕಂಠನಾಳಮಂ ನೀಡಿ (ಪಂರಾಮಾ. ೭-೧೪೭); ಕೊರಲ ಸೆರೆ ಬೀಗಿ ಬೆಮರುತ್ತಿರೆ ಕಣ್ಕೆಚ್ಚನಾಗೆ ಬಾಯಿರ್ಪೋಡುತ್ತಿರೆ . . . ಕುರುಪತಿ ಭೀಷ್ಮಂಗೆ ಕಿನಿಸಿ ಕಿಂಕಿರಿವೋದಂ (ಬಂಹರಿ. ೧೧-೩೨); ಬಾಡಿದಂ ಬಾಯಾಱಿ ಮುಖಮಿರ್ಪೋಡಿದಂ ಯಮನಂದು ಶಿವ ಶಿವ (ಸಾನಂಚ. ೮-೭೮); ಇರ್ಪೋಡದ ವಿದ್ರುಮಂ (ನಳಚಂ. ೧೩೨).

[ಇರ್ಪುರ್$_1$ + ಓಡು$_1$]

**ಇರ್ಪೋಳ್** 'ಇರ್ಪೋೞ್' ನೋ.

**ಇರ್ಪೋೞ್**, ಇಪ್ಪೋಳ್, ಇಪ್ಪೋಳು, ಇರ್ಪೋಳ್ (ನಾ). ಎರಡು ಹೋಳು, —ಸೀಳು: ಬೇಗಂ ಮಂಡೆಯನಿರ್ಪೋೞಾಗಿರೆ ಕರ್ಬುನದ ಡಂಕೆಯಿಂ ಪೊಯ್ವುದುಂ (ಧರ್ಮಾಮೃ. ೭-೧೦೮). **ಇಪ್ಪೋಳ್**: ನಾಯಿಗಳ ಹಿಂಡ ತೂಳಿಯಿಪ್ಪೋಳ್ಮಾಡಿತು (ಸೊಬಸೋ. ೧೨-೬). **ಇಪ್ಪೋಳು**: ತೋರವಡೆದೆಳೆವದದಿನೆಸೆವ ಬದನೆಯಕಾಯನೋರಣದಿ ನಿಪ್ಪೋಳು ಮಾಡಿ ಬೇಯಿಸಿ (ಸೂಪಶಾ. ೪-೧೨). **ಇರ್ಪೋಳ್**: ಗಾಲಿಗಳಿರ್ಪೋಳೊಡೆದುಂ ಕವಚಂಗಳ್ ಪಱಿದುಂ (ಜಯಕಾ. ೨-೪೫).

[ಇರ್$_2$ (< ಎರಡು) + ಪೋೞ್$_2$]

**ಇರ್ಬಗಿ**, ಇಬ್ಬಗಿ$_2$, ಇರ್ವಗಿ (ನಾ). ಎರಡು ಹೋಳು, —ಭಾಗ: ಹರನೊಳೆಪತ್ತಿ ತೆತ್ತಿಸಿದ ಚಿತ್ತಮನಿರ್ಬಗಿಯಾಗೆ ಮೋಹಮೊತ್ತರಿಸೆ (ಪಂಪಭಾ. ೧೩-೬೩); ಉರಮನಿರ್ಬಗಿಯಾಗಿರೆ ಪೋೞ್ದು (ಗದಾಯು. ೫-೪);

ಕಾಳಿಂದಿಯ ಮಡುವನಿರ್ಬಗಿಯಾಗಿ ಪಾಯ್ದು ಕದಡುವಿನಂ ಜಲಕೇಳಿಯಾಡಿ (ಪಂಚತಂ. ೪೫–೧೯); ಆಕಾಶಮಂ ಬಗಿದತ್ತಿರ್ಬಗಿಯಾಗೆ (ಕಾವ್ಯಾವ. ೫೯); ಧರಾತಳಮಿರ್ಬಗಿಯಾಗೆ ಪೊಣ್ಮುತುತ್ಕಟಿಸಿ (ವೃಷವಿ. ೨೦–೨೨). **ಇಬ್ಬಗ್ಗಿ₂**: ಬಸಿಱನಿಬ್ಬಗಿಮಾಡಿ ಕುದಿದೆಣ್ಣೆಯಂ ಪೊಯ್ದುಂ (ಧರ್ಮಾಮೃ. ೩–೭೩); ಕೋಪದಿಂ ನಿಜಭುಜಾಸಿಯೊಳಿಬ್ಬಗಿಯಾಗೆ ಪೊಯ್ಯೆ (ಸೌಇಇ. IX–i, ೨೨೭–೩೪; 1132); ಹರಿಯ ಕುಲಿಶದ ಧಾಳಿಯಲಿ ಕುಲಗಿರಿಗಳಿಬ್ಬಗಿಯಾದವೊಲು (ಕುವ್ಯಾದ್ರೋ. ೧೨–೧೯); ಹೊಡೆದಡಿಬ್ಬಗಿಯಾಯ್ತು ಗದೆಯಲಿ ಕಡಲು ದೆಸೆಪರಿಯಂತ (ನಿಭಾಗ. ೩–೮–೨೨). **ಇರ್ವಗಿ**: ಅಗಲದಿಂದುದ್ದದಿಂ ವ್ಯೋಮದಿಂದಿರ್ವ್ವಗಿಯಾಗಲ್ ಪೆರ್ಚ್ಚಿ (ಎಕ. V, ಬೇಲೂರು. ೭೨–೨೮೫; 1185).

ಇಬ್ಬಗಿಯಾಗು = ಎರಡು ಭಾಗವಾಗು, —ಸೀಳಾಗು: ಏಱಿ ವಿಮಾನಮಂ ಕೃತಕಗಾಯಕಿಯರ್ ಧವಳಾಭ್ರಕೂಟದೊಳ್ ತೋಱುವ ಮಿಂಚಿನಂತೆ ಮುಗಿಲೊಡ್ಡೊಡೆದಿಬ್ಬಗಿಯಾಗಿ ನಿರ್ಝರಂ ಪಾಱೆ (ಶಾಂತಿಪು. ೨–೮೨); ಇಬ್ಬಗಿಯಾದುದರಿದೇಹ (ಕುವ್ಯಾದ್ರೋ. ೩–೭೫).

[ಇರ್ $_2$ (< ಎರಡು) + ಬಗಿ $_2$]

**ಇರ್ಬಗಿಮಾಡು**, ಇಬ್ಬಗಿಮಾಡು, ಇರ್ವಗಿಮಾಡು (ಕ್ರಿ). ಎರಡು ಹೋಳುಮಾಡು; ಎರಡಾಗಿ ಭಾಗಿಸು: ನಿಜವಿಕೀರ್ಣ ಟಂಕಂಗಳಿಂದಂ ತತ್ಪತಾಕಿನೀಕುಂಜರಶಿರಶ್ಶಿಳಾಪಟ್ಟಕಂಗಳನಿರ್ಬಗಿಮಾಡಲ್ಪಡೆಯದೆಯುಂ (ಆದಿಪು. ೧೪–೧೦೩ ವ); ಪೊಱಲೊಳಗಿರ್ದ ಕುಮತಿಯಂ ಕಾಲಂ ಪಿಡಿದು ತೆಗೆದು ಇರ್ಬಗಿಮಾಡಿ ಕೊಂದು ತಿಂದರ್ (ಪಂಚತಂ. ೧೫೭–೧೧); ಮಸ್ತಕಮನೊಡೆದಿರ್ಬಗಿಮಾಡೆ (ನಂಬಿರ. ೧೮–೨೧). **ಇಬ್ಬಗಿಮಾಡು**: ಬಗಿದು ಕುಂಭಸ್ಥಳವನಿಱಿವುತೆ ವಿದಾರಿಸುತೆ ಉಗಿವುತಿಬ್ಬಗಿ [ಪಾಠಾಂ. ಉಗಿಬಗಿ]ಮಾಡಿ (ಇಹರ. ದೇ. ೪೨–೮); ಆಳು ಕುದುರೆಯ ಥಟ್ಟನಿಬ್ಬಗಿ ಮಾಡಿ ದಳವುಳಿಸಿ (ಕುವ್ಯಾದ್ರೋ. ೧೬–೧). **ಇರ್ವಗಿಮಾಡು**: ಕನಲ್ದುರ್ವಿಸುವಚ್ಚಗೊಂಡದೊಳಗುರ್ವಿಸೆ ಸೀಳಿಸಿ ಮಾಣದಿಕ್ಕೆ ಪೋೞಿಸ್ದಿರ್ವಗಿ ಮಾಡಿತಾಳಿಸೆ ಸುರುಳ್ಚಿನೆಗಂ ನೆಱೆ ಸಾಯಂ (ಶಾಂತಿಪು. ೭–೯೫). [ಇರ್ $_2$ (< ಎರಡು) + ಬಗಿ $_2$ + ಮಾಡು]

**ಇರ್ಬಗೆ₁**, ಇಬ್ಬಗೆ₁ (ಕ್ರಿ). ಎರಡು ಬಗೆ; ದ್ರೋಹವೆಣಿಸು. **ಇಬ್ಬಗೆ₁**: ಉಂಡ ಮನೆಗೆ ಇಬ್ಬಗೆಯಬಾರದೆಂದು ನಾನು ಬಲ್ಲೆನು (ಚೆನ್ನಬೇ. ೨೪); ಅವರು ಉಂಡ ಮನೆಗೆ ಇಬ್ಬಗೆಯಲಾರರು (ಪಿಶಾಪ. ೧೪೫).

[ಇರ್ $_2$ (< ಎರಡು) + ಬಗೆ $_1$]

**ಇರ್ಬಗೆ₂**, ಇಬ್ಬಗೆ₂ (ನಾ). ಎರಡು ತೆರ, —ರೀತಿ. **ಇಬ್ಬಗೆ₂**: ಚತ್ತಾಣವೂ ಬೆದಂಡೆಯೂ ಎಂಬ ಇಬ್ಬಗೆಯ ಕನ್ನಡ ಕಾವ್ಯಗಳನ್ನು ... ಮುಂಚಿನ ಕನ್ನಡ ಕವಿಗಳು ರಚಿಸಿದರು (ಮೂರುಉ. ೧೦೭); ಮತ್ತೆ ಮತ್ತೆ ಇಬ್ಬಗೆಯ ಬದುಕನ್ನು ಬಲಾತ್ಕರಿಸುವ ಜಗತ್ತಿನಮೇಲೆ ... ರೇಜಿಗೆಯಾಗಿತ್ತು (ಹೊಸಕ್ಷಿ. ೧೨೨). [ಇರ್ $_2$ (< ಎರಡು) + ಬಗೆ $_2$]

**ಇರ್ಬಗೆ₃**, ಇಬ್ಬಗೆ₃ (ನಾ). ಎರಡು ಮನಸ್ಸು, —ಅಭಿಪ್ರಾಯ (ದಕ. ಕ). **ಇಬ್ಬಗೆ₃**: 'ಇಬ್ಬಗೆಗೊಳ್' ಪರಾ. [ಇರ್ $_2$ (< ಎರಡು) + ಬಗೆ $_3$]

**ಇರ್ಬದಿ**, ಇಬ್ಬದಿ (ನಾ). ಎರಡು ಪಕ್ಕ, —ಪಕ್ಕೆ, —ಮಗ್ಗುಲು: ಇರ್ಬದಿಯಂ ತುಱಿಸಿ ಕಣ್ಣನರೆಮುಚ್ಚಿ ಬಿಸಿಲ್ ಪರ್ಬಿರೆ ಕಾಯುತ್ತಿರ್ದುದು ... ಮರ್ಕಟರಾಜಂ (ದಶಕು. ೨–೮೭). **ಇಬ್ಬದಿ**: ರೋಮಾಂಚನಂ ಮೆಯ್ಯೊಳಿಬ್ಬದಿಗಂ ಮೂಡಿರೆ (ರಸರ. ೧–೫೨); ನದಿಯ ಇಬ್ಬದಿಯ ಮೇಲೂ ಲಾಳದ ಕಡ್ಡಿಗಳು ಹುಚ್ಚುಹುಚ್ಚಾಗಿ ಬೆಳೆದು ತಲೆದೂಗುತ್ತಿದ್ದುವು (ಮುಗಮೂ. ೪೪). 'ಇರ್ಬರಿ' ಪರಾ.

[ಇರ್ $_2$ (< ಎರಡು) + ಬದಿ $_2$]

**ಇರ್ಬರ್** 'ಇರ್ವರ್' ನೋ.

**ಇರ್ಬರಿ**, ಇಬ್ಬರಿ (ನಾ). ಎರಡು ಮಗ್ಗುಲು, —ಪಾರ್ಶ್ವ: ಇರ್ಬರಿಯೊಳ್ ಸುತ್ತಿಪಾಯತಿಕೆಯಿಂ ಮಿಗೆ ನರ್ತಿಪ. . .ವಾಹಳಿತನಂ (ರಾಜಶೇ. ೧೩–೮೨). **ಇಬ್ಬರಿ**: ತೋಳ್ಗಳಂ . . . ವದನವಿಬ್ಬರಿಗಳಂ ಶೀತವಿರದಂತೆ ಮೆಲ್ಲನೆ ಕಾಸಿವೊತ್ತುತಿರೆ (ಇಳಿರ. ದೇ. ೫೩–೧೩); ಶಶಿಬಿಂಬಂ ರವಿಬಿಂಬಮೆಂಬ ವರಘಂಟಾಯುಗ್ಮಮಂ . . . ಕಟ್ಟಿ ನಭಮೆಂಬುಪ್ಪಾವುಮುಪ್ಪಾನೆಗಂ ಪೊಸತಾಗಿಬ್ಬರಿಯಲ್ಲಿ ಬಿಟ್ಟ ತೆಜದಿಂದೊಂದು ಕ್ಷಣಂ ಶೋಭೆಯಂ (ಬಾಧಪು. ೫–೭). 'ಇರ್ಬದಿ' ಪರಾ. [ಇರ್ $_2$ (< ಎರಡು) + ಬರಿ $_2$]

**ಇರ್ಬಲ** 'ಇರ್ವಲ' ನೋ.

**ಇರ್ಬಾಯ್**, ಇಬ್ಬಾಯ್, ಇಬ್ಬಾಯಿ, ಇರುವಾಯಿ (ನಾ). ೧. ಎರಡು ಬಾಯಿ. ೨. ಎರಡೂ ಕಡೆಯ ಅಲಗು; ಹರಿತವಾದ ಎರಡು ಅಂಚು: ಒರೆಯಿಂದಮಿರ್ಬಾಯ ಖಡ್ಗಮನ್ ಪಿರಿದು (ಅಶ್ವತ್ಥಾ. ೩–೫); ಇರ್ಬಾಯ ಖಡ್ಗವನ್ನು ಝಳಪಿಸುತ್ತ (ಸವತಿ. ೫೭). **ಇಬ್ಬಾಯ್**: ೧. 'ಇಬ್ಬಾಯ' ಪರಾ. **ಇಬ್ಬಾಯಿ**: ೩. (ಆಲಂ) ಎರಡು ರೀತಿಯಲ್ಲಿ ಮಾತನಾಡುವ ಬಾಯಿ; ನಿರ್ಧಾರವಿಲ್ಲದ ಮಾತು: 'ಪ್ರಯತ್ನ ಮಾಡುತ್ತೇನೆ, ಆಗದೆ ಹೋದರೆ ಕ್ಷಮಿಸಬೇಕು' ಎಂಬ ಇಬ್ಬಾಯ ಕಾಗದ ಹಾಕಿದ (ಔದಾಉ. ೧೯೬); ಮೋಸ, ವಂಚನೆ, ಇಬ್ಬಾಯಿ, ಪಿಸುಣ, ಇವುಗಳಿಗೆಲ್ಲ ನನ್ನ ತಿರಸ್ಕಾರವಿತ್ತು (ನಿಷ್ಕಾಮ. ೧೦೪); ಇಬ್ಬಾಯಿ ಇದ್ದವನ ಕುಬ್ಬಾಟ ಬಹಳ (ಗಾದೆ). **ಇರುವಾಯಿ**: ೪. ಶರೀರದಲ್ಲಿ ನಡುವಿನಿಂದ (ಸೊಂಟದಿಂದ) ಕೆಳಗಿರುವ ಎರಡು ರಂಧ್ರಗಳು; ಮೂತ್ರದ್ವಾರ ಮತ್ತು ಮಲದ್ವಾರ (ಕ).

**ಇರುವಾಯಿಕಟ್ಟು** = ಮಲ ಮೂತ್ರಗಳು ನಿಂತುಹೋಗುವುದು: ಇರುವಾಯಿಕಟ್ಟಿದ್ದಕ್ಕೆ – ಬೆಳ್ಳುಳ್ಳಿ ಬೇಳೆ ಸುಟ್ಟು ಆ ಬೂದಿ ಅವುಡಲದ ಎಣ್ಣೆಯಲ್ಲಿ ಕಲಸಿ ಹೊಟ್ಟೆಗೆ ತೊಡೆಯಲು ಇರುವಾಯಿಕಟ್ಟಿದ್ದು ಮಾಣ್ಗುಂ (ವಿವೈಪಿ. ೧೭೭). [ಇರ್ $_2$ (< ಎರಡು) + ಬಾಯ್]

**ಇರ್ಬಾಯ**, ಇಬ್ಬಾಯ (ನಾ). ಎರಡು ಬಾಯುಳ್ಳ ಪ್ರಾಣಿ; ಗಂಡಭೇರುಂಡ ಪಕ್ಷಿ (?): ತೊಂಡಿಗನುರುಳಿಗನಿರ್ಬಾಯನುಂ ಚಾತಕಂ . . . ತದ್ವನಾಂತಸ್ಥಮಿರ್ಕುಂ (ಶಬಶಂ. ೩–೩೩). **ಇಬ್ಬಾಯ**: ಕಾಗೆ ನವಿಲಿಬ್ಬಾಯ ಗುಬ್ಬಿ ಪಾರಿವ . . . ಹಕ್ಕಿಗಳ ಮೞಿಗೆಜಱಿವಂತಾದುದು (ಹಚಕಾ. ೫–೪೩); ಲಾವಗೆ ಗೌಜಾಜಱಿ ಉಳ ಉಳ್ಳನಿಬ್ಬಾಯ (ಸೊಬಸೋ. ೧೮–೩೩). [ಇರ್ಬಾಯ್ + –ಅ $_7$]

**ಇರ್ಬಾಳ್** (ನಾ). ಎರಡು ಕತ್ತಿ: ಇರ್ಪೆಂಡಿರ್, ಇರ್ಬಾಳ್ (ಶಮದ. ೧೭೪ ಪ್ರಯೋ). [ಇರ್ $_2$ (< ಎರಡು) + ಬಾಳ್ $_3$]

**ಇರ್ಬಾಳೆ** 'ಇರ್ವಾಳ್' ನೋ.

**ಇರ್ಬೀಡು**, ಇರ್ವೀಡು₁ (ನಾ). ಒಂದು ವೃಕ್ಷ; ಒಂದು ಮರದ ಹೆಸರು; ಶಿಂಶುಪವೃಕ್ಷ: "ಇಂಗುದಿ ತಾಪಸಭೂಜಮದಿಂಗಳು ಮಿರ್ಬೀಡು ಶಿಂಶುಪಾಭಿಖ್ಯಂ" (ವಸ್ತುಕೋ. ೩೫–೧೭). **ಇರ್ವೀಡು₁**: ಕುಱುಕಲ್ಕಿಕ್ಕುವ ಪಯಣದಂತಿರ್ವೀಡು ನೃತ್ಯದಂತೆ ತಾಳ . . . ಮತ್ತ ಮೊನಿತಾನುಂ ತೆಜದ ಮರದುಱುಗಲ್ಗಳೊಳಗೆ (ಬಂಹರಿ. ೨–೩೪ ವ). [?]

**ಇರ್ಬೆರಲ್**, ಇಬ್ಬೆರಳ್, ಇಬ್ಬೆರಳು, ಇರ್ವೆರಳು (ನಾ). ಎರಡು ಬೆರಳು; ಎರಡು ಬೆರಳಿನಷ್ಟು: ಊರ್ಧ್ವರೇಖೆಗಳಿರ್ಬೆರಲಾಗಿ ರಂಜಿಸುತ್ತಿರೆ (ಅಶ್ವಶಾ. ೫–೨೩). **ಇಬ್ಬೆರಳ್**: ಪಱಿದಿಬ್ಬೆರಳನಿತಂ ತೊಯ್ದುಱಿ(ಱು)ವೆಯನೆ ನೃಮೂತ್ರದಿಂದೆ ನಸ್ಯಂಗೆಯ್ ಮೆಯ್ಮಱಿದಹಿದಷ್ಟಂ ತಿಳಿದೆಳ್ಚಱುಗುಂ ವಿಷಮುಳಿಗುಂ (ಖಮದ. ೭–೨೧). **ಇಬ್ಬೆರಳು**: ಸುರಿದು ದತಿವಳೆಯೆಂದು ಕುಲಗಿರಿ ಕರಗುವುದೆ ಮೇಗಱಿಯ ಶಿಲೆಯಿಬ್ಬೆರಳು ನೆನೆವುದೆ ನಾಡ ಹಂತಿಯಲಳುಕುವರ್ಜುನನೆ (ಕುವ್ಯಾಕ. ೪–೨೨); ಧರಣೀತಲದಲಿಬ್ಬೆರಳುದ್ದವೆನೆ ನೆಱೆ ದರ್ಭೆಯನು ಹರಹಿ (ನಿಭಾಗ. ೪–೧೭–೩).

**ಇರ್ವೆರಳು** : ನಾಲ್ವೆರಳು ಹಸ್ತಿನಿಗೆ ಮೂವೆರಳು ಚಿತ್ತಿನಿಗೆ ಇರ್ವೆರಳು ಕುಚಮಧ್ಯ ಶಂಖಿನಿಗೆ ಪದ್ಮಿನಿಗೆ ಒರ್ವೆರಳು ನೋಡ (ಸರ್ವಜ್ಞ. ೧೬೩೫).
[ಇರ್$_2$ (< ಎರಡು) + ಬೆರಲ್]

**ಇರ್ಬೇನೆ** (ನಾ). ಎರಡು ವೇದನೆಗಳು, ಎರಡು ಬಗೆಯ ನೋವು: ಇರ್ಬೇನೆ, ಇರ್ತೆರೆ, ಇರ್ಕಟ್ಟು (ಶಮುದ. ೧೮೬ ಪ್ರಯೋ).
[ಇರ್$_2$ (< ಎರಡು) + ಬೇನೆ]

**ಇರ್ಬೊನ್** (ನಾ). ಕರಿಯಲೋಹ; ಕಬ್ಬಿಣ: ಮಿಳಿ ಪೆಗಲೊಳ್ ಕೈಯೊಳ್ ಸಂಬಳಿಗೋಲಿರ್ಬೊನ್ನ ದಮಗೆ ಜರ್ಜರರವದಿಂ ಪೊಳಲ ಜನಂಗಳ ಕಿವಿಯೊಳ್ ಚಳಿಯಿಸುತುಂ ಬಂದು ನೋಟ್ಪು ಬಹಳಾಗ್ರಹಮಂ (ಮಹಾನೇ. ೮–೨೩).
[ದೇ. ‖ ತಮಿ. ಮಲ. ಇರುಮ್ಬು; ತೆಲು. ಇನುಮು]

**ಇರ್ಭಾಗೆ**, ಇಬ್ಬಾಗ, ಇಬ್ಭಾಗ (ನಾ). ಎರಡು ಭಾಗ, —ಹೋಳು, — ಸೀಳು: ಪೊಡವಿ ಬೆಂದಿರ್ಭಾಗಮಾಗುತಿರ್ದುದು ಸಪ್ತಜಡಧಿಗಳ್ ತಕಪಕನೆ ಕುದಿದುಕ್ಕಿ ಬತ್ತುತಿರ್ದುವು (ಚಿಬಪು. ೪೬–೨೫). **ಇಬ್ಬಾಗೆ**: ಧರಣಿತಳಮಿಬ್ಬಾಗಮಾಗಿ ಸಲೆ ಹಿಗ್ಗಿದುದು (ಜೈಮಿಭಾ. ೬–೪೬). **ಇಬ್ಬಾಗೆ**: ಅವುಗಳ ಕೊಳಗುಗಳು ಇಬ್ಬಾಗವಾಗಿರುವುದರಿಂದ ಎಂಥಾ ಬಿಕ್ಕಟ್ಟನಲ್ಲಿಯಾದರೂ ಜಾರುವುದಿಲ್ಲ (ಮುಂಬಯಿ. ೩–೧೦); (ಹಿಂದೂ ದೇಶದ) ಇಬ್ಬಾಗದಿಂದುಂಟಾದ ನಿರಾಶ್ರಿತರ ಸಮಸ್ಯೆ (ಹೊಸೂಹ. ೭೧); ಆ ಗೋಣಸು ಇಬ್ಬಾಗವಾಯಿತು (ಅಂಬಿಕೆ. ೩೯).
[ಇರ್$_2$ (< ಎರಡು) + ಭಾಗ]

**ಇರ್ಮಡಿ**, ಇಮ್ಮಡಿ, ಇರ್ವಡಿ (ನಾ). ೧. ಎರಡರಷ್ಟು; ಎರಡು ಪಟ್ಟು; ದುಪ್ಪಟ್ಟು: ಅನುವಿಸೆ ಬೇಟಕಾಜ[ನೊ]ಲವಿರ್ಮಡಿಯಪ್ಪುದು (ಪಂಪಭಾ. ೪–೧೦೩); ಕಪಿಂಜಲನ ಪೋಗಿಂಗೆ ಶೋಕವಿರ್ಮಡಿಯಾಗೆ ಕಿಂಕರ್ತವ್ಯತಾಮೂಢೆಯೆನಾಗಿ (ಕಾದಂಪೂ. ೯೪೩); ಇರ್ಮಡಿ ಮೂವಡಿ ನಾಲ್ಮಡಿಯೈವಡಿ ಸಂತಸದಿಂದೆ ತಂದೆ ಮಗಳಂ ಕರೆದಂ (ಗಿರಿಕ. ೩–೧೦೪). (ಗು). ೨. ಎರಡನೆಯ: ಯಿರ್ಮಡಿ ×××× ರಾಯ ಶ್ರೀಮನು ಮಹಾಪ್ರಧಾನಂ (ಎಕ. VII, ಶಿವಮೊ. ೭೮–೧೦; 1291). **ಇಮ್ಮಡಿ**: ೧. ನಿಮಗೆ ಮಾಡಿದ ದಾನಮುಂ ಪಾಲುಕ್ಕಿಮ್ಮಡಿಸುವಂ ತಿಮ್ಮಡಿಯಕ್ಕುಂ (ಧರ್ಮಾಮೃ. ೧–೧೨೬); ಸಾಸಿರಗಣ್ಣಗೆ ಸೊಬಗಿನೊಳಿಮ್ಮಡಿ ಸಾಸಿರ ಗದಿರಗೆ ತೇಜದೊಳಯ್ಮಡಿ (ಜಯುಕಾ. ೧೫–೧); ಮೇಘಗರ್ಜನೆ ಇಮ್ಮಡಿಯಾಯಿತು (ಮಣಿಸ. ೫೪). ೨. ಇಮ್ಮಡಿ ಜಕ್ಕ ಮನ್ನೆಯನು (ಕಂಸವಿ. ೩–೩೨); ಈ ಇಮ್ಮಡಿ ಕೃಷ್ಣರಾಜ ವಡೆಯರವರು ಸಕಲವಿದ್ಯಾಪಾರಂಗತರಾಗಿ... ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿರುವ ಸಮಯದಲ್ಲಿ (ಮಹಾವಂ. I, ೧೭೪). **ಇರ್ವಡಿ**: ೧. 'ಇರ್ವಡಿಚಾಗಿ' ಪರಾ.
[ಇರ್$_2$ (< ಎರಡು) + ಮಡಿ$_2$]

**ಇರ್ಮಡಿಕೆ**, ಇಮ್ಮಡಿಕೆ (ನಾ). ಎರಡು ಮಡಿಕೆ, —ಪದರ; ಜೋಡುಪದರ: ಸಸಿಬಾಂಬೊಳೆಯಂ ಬಾನೊಳ್ ಬಿಸುಟುಂ ಬಿಡವಾನೆ ದೊವಲನಿರ್ಮಡಿಕೆಯೊಳೊಂದಿಸಿ ಪೊದೆವ . . . ಗಿರಿಶಂ ಮೆಱೆವಂ (ರಾಜಶೇ. ೯–೧೫); ಧವಳವಸ್ತ್ರಮನಿರ್ಮಡಿಕೆಯಿಂ ಮುಸುಂಕಿ (ವೃಷವಿ. ೯–೭೧ ವ). **ಇಮ್ಮಡಿಕೆ** (ಕ).
[ಇರ್$_2$ (< ಎರಡು) + ಮಡಿಕೆ$_1$]

**ಇರ್ಮಡಿಸು**, ಇಮ್ಮಡಿಸು (ಕ್ರಿ). ೧. ಎರಡರಷ್ಟಾಗು; ದ್ವಿಗುಣವಾಗು; ಎರಡು ಪಟ್ಟಾಗು: ಮಗನಟಿಲೊಳ್ ಕರಂ ಮಱುಗುತಿರ್ಪಿನಮೆನ್ನ ತನೂಜನಾಳ್ವ ಸಾಮಿಗಮುಱಿವಾಗೆ ಶೋಕರಸಮಿರ್ಮಡಿಸಿತ್ತು (ಪಂಪಭಾ. ೧೩–೧೦೬); ದರಹಾಸೋಲ್ಲಾಸದಿಂದಿರ್ಮಡಿಸೆ ದಶನದೀಪ್ತಿವ್ರಜಂ (ಕುಸುಮಾ. ೩–೯೮); ನೇಹವಿರ್ಮಡಿಸಿ ಕಿನಿವೇಟವಗ್ಗಳಿಸಿ (ಪದ್ಮರಾ. ೫–೨೭). ೨. ಎರಡರಷ್ಟು ಮಾಡು; ಎರಡರಷ್ಟಾಗಿಸು; ಎರಡು ಪಟ್ಟಾಗಿಸು; ದ್ವಿಗುಣಿಸು: ನಿಜಮಕುಟಮಣಿಮರೀಚಿಯಿನ ಜನ ಪದಾಂಬುಜದ ಕೆಂಪನಿರ್ಮಡಿಸಿ (ಆದಿಪು. ೮–೬೩); ನಿಜೇಕ್ಷಣಾಮೃತಾಸಾರದೆ ಬೆಳ್ಪನಿರ್ಮಡಿಸಿ ನಿರ್ಮಲ ಮುಕ್ತಕೆ ಮೌಕ್ತಿಕಾಕ್ಷತಾ ಸಾರಮನಂದು ಸೂಸಿದುದುಪೇಂದ್ರನ ಮೇಲೆ ಪುರಾಂಗನಾಜನಂ (ಜಗವಿ. ೮–೭೬); ಓರೊರ್ಮೆ ಪಲ್ಲವಾಸ್ತರಣದೊಳ್ ಮೆಯ್ಯನೀಡಾಡಿ ಮನಸಿಜನ ಸರಲ ಕೆಂಗಱಿಯ ಸೋಂಕಕನಿರ್ಮಡಿಪಳ್ (ವರ್ಧಪು. ೪–೫೬ ವ). ೩. ಎರಡಾಗಿ ಮಡಿಸಿಕೊ; ಎರಡು ಮಡಿಕೆಯಾಗು: ತನುಮಧ್ಯಂ ಬಳ್ಕಿ ಬೆನ್ನಿರ್ಮಡಿಸೆ. . .ಕಂಠನಿನಾದಂಬೊಣ್ಮೆ ಸುತ್ತುಂ (ಕಾವ್ಯಸಾ. ೬೬೪). ೪. ಎರಡಾಗಿ ಮಾಡು, —ಮಡಿಸು; ಎರಡುಪದರವಾಗಿಮಾಡು: ಕುಡತಕ್ಕುದೆನಿತದನೆ ಇರ್ಮಡಿಸಿ ಕುಡಲ್ಕದುವೆ ಕೊಂಬಕೋವಿದರ್ಗಂದಂ (ಚಿಕವಿ. ೬–೫೭). **ಇಮ್ಮಡಿಸು**: ೧. ನಿಮಗೆ ಮಾಡಿದ ದಾನಮುಂ ಪಾಲುಕ್ಕಿಮ್ಮಡಿಸುವಂತಿಮ್ಮಡಿಯಕ್ಕುಂ (ಧರ್ಮಾಮೃ. ೧–೧೨೬); ಪಂಚಾಕ್ಷರಿಯಿಮ್ಮಡಿಸಿದಂತಿರ್ಪ ಹಸ್ತಾಂಗುಲಿಗಳ್ (ಬಸರ. ೨–೩೧); ಭೂಪತಿ ನಲವಿಂದಿಮ್ಮಡಿಸಿದಂ ಪುಳಕಂ ಗುಡಿಗಟ್ಟಿ (ಕುಸುಮಾ. ೫–೫೧); ರೋಷವಿಮ್ಮಡಿಸಲು . . . ನಂದೀಶನ ತಿವಿದು ಬೊಬ್ಬಿಱಿದ (ಮೋಹತ. ೩೮–೩೪); ನಮ್ಮಭಯ ಇಮ್ಮಡಿಸಿತು (ಪ್ರತಾಪ. ೧೧೬). ೨. ನೀಳ್ದ ವಿಲೋಚನಾಂಶುವಾ ತಿಲಕದ ಚೆಲ್ವನಿಮ್ಮಡಿಸೆ (ಕುಸುಮಾ. ೧೧–೧೪೨); ಹರಿವ ರಥದುರವಣೆಗೆ ನೆಱೆಯುದು ಧರಣಿಯೆಂದಂಭೋಜ ಭವನೀ ಧರೆಯನಿಮ್ಮಡಿಸಿದನೊ ಎನಲು (ಕುವ್ಯಾಭೀ. ೪–೯೪). ೩. ನೀವಿಲ್ಲಿಂದಿತ್ತ ಬಿಳಿಯ ಕಂಬಳಿಯುಂ ಪೊದೆದಿಮ್ಮಡಿಸಿರ್ದ ಸೀರೆಯನುಟ್ಟು ಕುಂಚಮಂ ಕಟಿಯೊಳಡಂಗಿಸಿ . . . ಬರ್ಪುದು (ಪುಣ್ಯಾಸ್ರ. ೯–೧೮ ವ). ೪. ಹಪ್ಪಳದಗಲದಲ್ಲಿ ಲತೆಯಿಱಿದು ಅವಕೆ ಹುರಿದೆಳ್ಳು ಸಕ್ಕರೆಯಿಕ್ಕಿಪೊಂದನಿಮ್ಮಡಿಸಿ ತುಪ್ಪದೊಳಡಲು ಅವು ಕರಂಜಿಗೆ (ಸೂಪಶಾ. ೧–೪೪).

**ಇರ್ಮಡಿಸಿಕೊಲ್ಲು** = ಎರಡು ಬಾರಿ ಕೊಲ್ಲು; ಎರಡು ಸಲ ಸಾಯಿಸು: ಅವಂ ಮುನಿದು ಇರ್ಮಡಿಸಿ ಕೊಂದಪನೋ ಭಯಮೇಕೆನಗಿಲ್ಲಿ (ಪಂಚತಂ. ೮೯–೭). **ಇಮ್ಮಡಿಸಿಬರು** = ಎರಡು ಸಾರಿ ಬರು: ಅಳಿವು ತನಗಿಮ್ಮಡಿಸಿ ಬಾರದು ನೆಲೆಯನುಸುರಿದೆ ಹಿಂಗು ಹಿಂದಕೆ (ತೊರರಾ. ೩–೮–೭).
[ಇರ್ಮಡಿ + –ಇಸು$_3$]

**ಇರ್ಮಣಿ** (ನಾ). (?): ತತ್ಪ್ರಭೆ ತನ್ನಂಗವನು ಸುತ್ತಿಹವಿರ್ಮಣಿಯು ಗುಳುವ ಹಾಂಗೆಲೆ ರಕ್ತಾಶ್ವನ ಕರಣೇಂದ್ರಿಯ ಪಥದಿಂ (ಕಲ್ಯಾಸೇ. ೧೮). [ಇರ್$_2$ (< ಎರಡು) + ಮಣಿ$_3$]

**ಇರ್ಮುತ್ತರ್**, ಇಮ್ಮೃತ್ತರ್, ಇಮ್ಮೃತ್ತರು, ಇಮ್ಮೃತ್ತಲು (ನಾ). ಎರಡು ಮತ್ತರು; ಎರಡು ಮತ್ತರಷ್ಟು ವಿಸ್ತಾರ: ಕಣ್ಣವಂಗಲದ ರಾಮೇಸ್ವರ ದೇವಗೆ ಈ[ಇ]ರ್ಮ್ಮತ್ತರ್ ಮಣ್ಣ ಬಿಟ್ಟಂ (ಎಕ. VI, ತರೀಕೆ. ೭೭–೬; 888); ಇರ್ಮತ್ತರ್ ಕೆಯ್ಯಂ ದೇವರ್ಗೆ ಬಿಟ್ಟಂ (ಎಕ. VIII, ಸೊರಬ. ೪೭೪–೨೧; 954); ರಣಜವೊಚಿಲ ಬಯಲ . . . ಮಣ್ಣೊಳಗಿಮ್ಮ್ರತ್ತರ್ ಕೆಯ್ಯುಮಂ . . . ದೇವಭೋಗಮ್ಮಡಿ ಕೊಟ್ಟನ್ (ಎಕ. XI, ಹೊಳಲ್ಕೆ. ೨೩–೪; 968). **ಇಮ್ಮತ್ತರ್**: ಮನೆ ತಾಣಮಿಮ್ಮತ್ತ ದುರ್ಗ್ಗಾದೇವಿಯ ಮನೆಯಿಂ (ಕಇ. II, ೫–೬; 859). **ಇಮ್ಮತ್ತರು**: ಖಂಡಸ್ಫುಟಿತ ಜೀರ್ಣೋದ್ಧಾರ[ಕ್ಕ]ವಾಗಿ ಮುಂನಿನಾಱು ಮತ್ತಱು ಕೆಯ್ಯೊಳಗಿಂಮತ್ತರು ಕೆಯ್ಯುಮಂ (ಸೌಇಇ. XI–i, ೫೦–೨೯; 1138). **ಇಮ್ಮತ್ತಲು**: ಕೆಱೆಯ ಕೆಳಗೆ ಮೂಗಣ್ಣಗ ಬೆದ್ದಲೆ ಇಂಮ್ಮತ್ತಲು ದೇಗುಲದ ಮೂಡಲೊನ್ದು ಕೆಱೆಯುಮಂ (ಎಕ. VI, ಕಡೂರು. ೧೦೨–೨೮; 1141). [ಇರ್$_2$ (< ಎರಡು) + ಮತ್ತರ್]

**ಇರ್ಮಾನ,** ಇಮ್ಮಾನ್ನ, ಇಮ್ಮಾನ (ನಾ). ಎರಡು ಮಾನ (ಪ್ರಮಾಣ), —ಮಾನದಷ್ಟು : ಇರ್ಮಾನ (ಮೆಣ್ಣೆಯು) ಮುಮುರಿಸಿನಮುಂ ಮೇಣೊಪ್ಪಲಂ ಸಕ್ಕರೆ (ಕಇ. I, ೨–೧೧ ; 699). **ಇಮ್ಮಾನ್ನ:** ಇಮ್ಮಾನವರೆ ಮೆಣಸಿಂಗಂ ವೊಮ್ಮೆಯು ಪಣವೊಂದು ಪಾಗವ್ಮೈವಣವಕ್ಕುಂ (ವ್ಯವಹಾ. ಅನುಬಂ. I, ೧೩–೮); ಇಮ್ಮಾನ ಸಕ್ಕರೆಗೊಪ್ಪಣವಾಗಲ್ ಘುಮ್ಮನಯ್ವತ್ತು ಖಂಡುಗದಯ್ಗೊಳಗಂ . . . ತಿಳಿಯೆ ಪೇಟಿ (ವ್ಯವಹಾ. ಅನುಬಂ. I, ೨೫–೫೯). **ಇಮ್ಮಾನ :** ತಾವು ಕೊಂಡ ಹೊಂಗೆ ಇಮ್ಮಾನೆಳ್ಳಂ ಬಿಟ್ಟರು (ಎಕ. VII (S), ಶಿಕಾರಿ. ೩೩೪–೨೮ ; 1100) ; ದವಸದ ರಾಶಿಗೆ ಯಿಂಮಾನ ಭತ್ತಂ (ಎಕ. VI, ತರೀಕೆ. ೮೦–೩೦ ; 1278) ; ಇಮ್ಮಾನ ಎಣ್ಣೆಯಲ್ಲಿ ಪಾಕವ ಮಾಡಿ (ವಿಶ್ವೈವಿ. ೧೧೧).

**ಇಮ್ಮಾನಕ್ಕಿ** = ಎರಡು ಮಾನ ಅಕ್ಕಿ : ಮಾಲೆಗಾಱಂಗೆ ಯಿಮ್ಮಾನಕ್ಕಿಯ ಪ್ರಸಾದ ಪಡಿ ಸಲುವುದು (ಎಕ. VI, ಕಡೂರು. ೪೯–೬೪ ; 1291).

[ಇರ್$_2$ (< ಎರಡು) + ಮಾನ$_1$]

**ಇರ್ಮೆ,** ಇಮ್ಮೆ (ಅ). ಎರಡು ಬಾರಿ, —ಸಲ : "ದ್ವಿವಾರದಲ್ಲಿರ್ಮೆ" (ಕರ್ಣಾನಿ. ೮೫) ; ಬೆಸನನಿರ್ಮೆ ಕೇಳದಂತು ಪೂಣಿಸಿ ಕಳುಪಿ (ಆದಿಪು. ೧೩–೮೦ ವ) ; ಇರ್ಮೆ ನೀಂ ಮರ್ತ್ಯಲೋಕದೊಳ್ ಪುಟ್ಟಿನುತ್ತೆ ಶಾಪಂಗೊಟ್ಟಂ (ಕಾದಂಬ. ೬೧೨) ; ಅವು ವರುಷಕ್ಕಿರ್ಮೆ ಮಱಿಯಂ ಪಡೆವುವು (ಪಂಚತಂ. ೧೮೬–೬) ; ಒರ್ಮೆಯೊ ಮೇಣಿರ್ಮೆಯೊ ಮೂರ್ಮೆಯೋ ಕುರುಕುಳ ಪ್ರಾರಬ್ಧ ದುರ್ವೃತ್ತಕಂ (ಕಾವ್ಯಾವ. ೩೪೪). **ಇಮ್ಮೆ :** ಕಲಿಗೆ ತಾನಿಮ್ಮೆ ಸಾವುಂಟೆ (ಸರ್ವಜ್ಞ. ೭೧೩); ಒಮ್ಮೆ ಕರೆದರೆ ಕೇಳದಿಮ್ಮೆ ಕರೆದರೆ ಕೆರಳಿ ಹಮ್ಮಿನಲಿ ಉಲಿವ ಸತಿಯಿಂದ ಹೊಡೆದೊಯ್ವ ಹೆಮ್ಮಾರಿ ಲೇಸು (ಸರ್ವಜ್ಞ. ೧೭೫೦).

**ಇಮ್ಮಿಮ್ಮೆ** (ದ್ವಿರುಕ್ತಿ) : ಯೋಚಿಸು ಬಱಿಕ್ಕಿಮ್ಮಿಮ್ಮೆ ಪೇಟ್ದಂತಿದಂ (ಖಮುದ. ೪–೩೭). [ಇರ್$_2$ (< ಎರಡು) + –ಮ್ಮೆ$_2$]

**ಇರ್ಮೆಯ್,** ಇಮ್ಮೆಯ್, ಇಮ್ಮೈ, ಇರ್ಮೈ (ನಾ). ೧. ಎರಡು ಮೈ, —ಶರೀರ, —ರೂಪ, —ಜನ್ಮ; ಇಹ ಮತ್ತು ಪರ : ಇರ್ಮೆಯ್, ಇರ್ವಕ್ಕಂ, ಈರಯ್ದು (ಭಾಷಾಭೂ. ೧೫೪ ಪ್ರಯೋ) ; ಇರ್ಮೆಯ್ಗಂ ಹಿತಮಂ ಜಿನಧರ್ಮಮನಿಂಬಾಗಿ ತಿಳಿದು ನೆಗಟ್ದಂಗಕ್ಕುಂ ಸ್ವರ್ಮೋಕ್ಷಸಿದ್ಧಿ (ಕಾವ್ಯಾವ. ೨೬೦) ; ಗೋವಿಂದನುಮುದಿಸಿವಂದನಿರ್ಮೆಯ್ಯಿಂದಂ (ಅಪ್ರತಿ. ೧–೧೨). ೨. ಎರಡು ಮಗ್ಗುಲು, —ಕಡೆ ; ಒಳಮೈ ಮತ್ತು ಹೊರಮೈ ; ಮುಂದುಗಡೆ ಮತ್ತು ಹಿಂದುಗಡೆ ; ಎದೆಯ ಕಡೆ ಮತ್ತು ಬೆನ್ನಿನ ಕಡೆ. 'ಇರ್ಮೆಯ್ಗಾಣಿಸು' ಪರಾ. **ಇಮ್ಮೆಯ್ :** ೨. ಚಿಮ್ಮುವ ಕನಕದಂಡದ ಚಮರದ ಬೀಡರಿಮ್ಮೆಯ್ಯೊಳೊದವಿತೊಗ್ಗಿನಲಿ (ಮೋಹತ. ೧೦–೧೧) ; ಇಮ್ಮೆಯ್ಯ ಕಿಟಕಿ ಬಾಗಿಲುಗಳನ್ನು ತೆರೆದು (ಪುನರು. ೧೮೨). ೩. ಎರಡು ಪದರ. 'ಇಮ್ಮೆಯ್ಯೋಡು' ಪರಾ. **ಇಮ್ಮೈ :** ೨. "ಇಮ್ಮೈ – ಎರಡು ಮಗ್ಗಲು" (ಜ್ಞಾನಕೋ. ೧೭) ; ನವನೀತಮಂ ಕೆನೆಯುಮಂ ಬೆರಸಿ ಕಣಿಕಮಂ ಸವೆವಂತೆ ಕುಟ್ಟಿ ಬಟ್ಟಲಂ ಮಾಡಿ ಹಪ್ಪಳದ ಸಮನಾಗಿ ವೊತ್ತಿ ಇಮ್ಮೈಗೆ ಬೆಣ್ಣೆಯ ತೊಡೆದು (ಸೂಪಶಾ. ೧–೧೨) ; ಆವ ಪೂಜಿಸುವ ಪೂಜೆ ಶಿವನ ಇಮ್ಮೈಗಳನು ತವೆಯಲಗಿನಿಂದ ಇಱಿದಂತೆಯಹುದು (ಗುರುಬೋ. ೧೩–೧೩೫) ; ಇಮ್ಮೈಯೊಳಿದ್ದ ಮೈದುನರ ಬೀಳ್ಕೊಟ್ಟನ್ನು ಘುಮ್ಮನೆ ಬಿಜಯಮಾಡೆಂದ (ಭರಜ. ೪೪–೧೧). 'ಇಮ್ಮೈಗನ್ನಡಿ' ಪರಾ. ೪. ಎರಡರಷ್ಟು : ಬೊಮ್ಮದ ಮನೆಯ ಕೋಣೆಯೊಳೊಬ್ಬ ಗೊರವತಿ ಇಮ್ಮೈಯ್ಯ ಸಿರಿಯ ಮಾಳಿಗೆಯೊಳಗೆ ಹಮ್ಮೈಸಿಹಳು (ಶಿವಗೀ. ೧೭೩–೮೪೪). 'ಇಮ್ಮೈಸಿರಿವಂತ' ಪರಾ. **ಇರ್ಮೈ :** ೨. "ಉಭಯತಃ – ಇರ್ಮೈಯಿಂ" (ನೀತಿವಾ. ೨೯–೬೮). [ಇರ್$_2$ (< ಎರಡು) + ಮೆಯ್]

**ಇರ್ಮೆಯ್ಗಾಣ್,** ಇಮ್ಮೆಯ್ಗಾಣ್, ಇಮ್ಮೈಗಾಣ್ (ಕ್ರಿ). ಎರಡು ಮಗ್ಗುಲನ್ನೂ ಕಾಣು ; ಮುಂದೆ ಮತ್ತು ಹಿಂದೆ ಎರಡು ಕಡೆಯೂ ಕಾಣು ; ಎದೆ ಮತ್ತು ಬೆನ್ನು ಎರಡನ್ನೂ ದಾಟಿ ಕಾಣು ; ಎದೆಯಲ್ಲಿ ನಟ್ಟು ಬೆನ್ನಲ್ಲಿ ಹೊರಬೀಳು : ಇರ್ಮೆಯ್ಗಾಣ್ಬಿನಮಾಂತರನೊರ್ಮೊದಲೊಳೆ ಕಣೆಗಳುರ್ಚಿ ಪೆಣನಂ ಬಿತ್ತಲ್ (ಪಂಪಾರಾಮಾ. ೯–೬೬). **ಇಮ್ಮೆಯ್ಗಾಣ್ :** ನೂತನಾಸ್ತ್ರಂಗಳಿಮ್ಮೆಯ್ಗಂಡು ಸೂಸುತಿರೆ (ಇಹರ. ದೇ. ೪೩–೬). **ಇಮ್ಮೈಗಾಣ್ :** ನೀಂ ಬಿಜ್ಜಳರಾಯನಿರ್ಪ ಮಂಗಳವಾಡಕ್ಕೆ ಪೋಗು ಎಂಬ ನುಡಿಯೊಡನೆ ಕನಸಿನ ಮಾತು ಮನವನಿಮ್ಮೈಗಂಡು ನಿದ್ರೆ ತಿಳಿದು ಕಣ್ದೆಱೆದು (ಬಸರ. ೪–೨೪). 'ಇಮ್ಮೈಗಾಣಿಕೆ' ಪರಾ. [ಇರ್ಮೆಯ್ + ಕಾಣ್]

**ಇರ್ಮೆಯ್ಗಾಣಿಸು** (ಕ್ರಿ). ೧. ಎದೆ ಮತ್ತು ಬೆನ್ನು ಎರಡನ್ನೂ ತೋರಿಸು ; ಎರಡು ಮಗ್ಗುಲನ್ನೂ ಕಾಣಿಸು. ೨. ಎದೆಯಲ್ಲಿ ನಾಟಿ ಬೆನ್ನಿನಲ್ಲಿ ಮೂಡುವಂತೆ ಮಾಡು : ಕಾಮನ ಬಾಣಕ್ಕೆ ಕಂಪನಿತ್ತುಂ ಕಾಮಿಗಳನಿರ್ಮೆಯ್ಗಾಣಿಸುತ್ತುಂ (ಗಿರಿಕ. ೭–೪೨ ವ). [ಇರ್ಮೆಯ್ಗಾಣ್ + –ಇಸು$_3$]

**ಇರ್ಮೆಯ್ವಡೆ** (ನಾ). ಎರಡು ಶರೀರವನ್ನು ಪಡೆ, —ರೂಪವನ್ನು ಹೊಂದು : ಆ ರಾಜಪ್ರಭುನುಂ ಚಾರುಚಕೋರವಿಲೋಚನೆ ಸೌಂದರಿಯುಂ ಪಿರಿದಾರಯಲೊಂದಸುವಿಂಗಿರ್ಮೆಯ್ವಡೆದಂದದಿನೊಪ್ಪಿದರು (ಜಯಕಾ. ೨–೯). [ಇರ್ಮೆಯ್ + ಪಡೆ$_1$]

**ಇರ್ಮೈ** 'ಇರ್ಮೆಯ್' ನೋ.

**ಇರ್ಮೊನೆ** (ನಾ). ಎರಡು ಮೊನೆ, —ತುದಿ : ಮಸೆದು ಮುಮ್ಮೊನೆಯೋದ ಲೋಹದ ದಸಿಯನಗ್ನಿಯೊಳಿಕ್ಕಿ ಕಾಯಿಸಿ ಮಸಗಿ ಪಾಪರ ಕಿವಿಯೊಳಿರ್ಮೊನೆ ಮೊಳೆಯಲುಱೆ ನಾಂಟಿ (ಸಾನಂಚ. ೮–೧೯) ; ಇರ್ಬಾಳ್, ಇರ್ಮೊನೆ (ಶಬ್ದಾನು. ೯೨ ಪ್ರಯೋ). 'ಇರ್ಮೊನೆಗಾಣ್' ಪರಾ.

[ಇರ್$_2$ (< ಎರಡು) + ಮೊನೆ$_1$]

**ಇರ್ಮೊನೆಗಾಣ್** (ಕ್ರಿ). ಎರಡು ತುದಿಯಲ್ಲೂ ಕಾಣು ; ಎರಡು ತುದಿಯೂ ಕಾಣು ; ಒಳಗೆ ನಟ್ಟು ಹೊರಹಾಯು ; ಆಳವಾಗಿ, ಬಲವಾಗಿ ನಾಟು : ಭಂಡಿವಳಕ್ಕಿರ್ಮೊನೆಗಾಣ್ಬ ಕಕ್ಕಡೆಗೆ ಬಿದ್ದಂ ಬೀಟ್ವ ಕೊಂತಕ್ಕೆ ಸುತ್ತುವ . . . ನಾಂಟುವ ಗೇಣ್ಗೆಂಬಿನಮಾಡುದದ್ಭುತಮದಶ್ವವ್ಯೂಹದುಗ್ರಾಹವಂ (ಚಂದ್ರಪು. ೧೦–೮೦). [ಇರ್ಮೊನೆ + ಕಾಣ್]

**ಇರ್ಮೊೞ,** ಇಮ್ಮೊಳ (ನಾ). ಎರಡು ಮೊಳ, —ಮೊಳದಷ್ಟು ಪ್ರಮಾಣ : ತತ್ ಕ್ಷೇತ್ರಪ್ರಮಾಣ ಬಲಪ್ರಕಾಶ ವಿಕ್ರಿಯಾಶರೀರಸುಂ ಇರ್ಮೊೞ ನಿಡಿಯನುಂ (ಚಾವುಂಪು. II, ೧೧). **ಇಮ್ಮೊಳ :** "ಹಸ್ತದ್ವಯೋದಯಾನ್–ಇಮ್ಮೊಳನುದಯುಮನುಳ್ಳ" (ಪ್ರಕಟೀ. ೧೫–೧೯) ; ಎಲೆ ಮರುಳಭೂಸುರರೆ ಯೆನ್ನಯ ಹೊಳಲಿಗೈತಂದಿಲ್ಲಿ ನೀವಿಮ್ಮೊಳನ ಭೂಮಿಯ ಬೇಡಿದಿರಿ (ಸಂಭಪ. ೧೦–೨೨) ; ಪರಧನವ ಮಣ್ಣಂತೆ ಭೂತಪ್ರಾತವನು ತನ್ನಂತೆ ಕಾಂಬೆನೆನಲ್ಕೆ ಫಲವೇಱಿದುದು ಯಿಮ್ಮೊಳನ (ಕುಮ್ಮಾಅ. ೬೦೨. ೪–೩೯). [ಇರ್$_2$ (< ಎರಡು) + ಮೊೞ]

**ಇರ್ವಕ್ಕ** (ನಾ). ೧. ಎರಡು ಪಕ್ಷ (ಶುಕ್ಲಪಕ್ಷ ಮತ್ತು ಕೃಷ್ಣಪಕ್ಷ) : ಸದನ್ಯಗ್ರಹಮಲ್ಲದಂದು ಭೃಗುಜಂಗಿರ್ವಕ್ಕ [ಪಾಠಾಂ. ಗಿರ್ಬಕ್ಕ]ದೊಳ್ ಕೊಡಿದಂದು (ಜಾತತಿ. ೨೧–೩). ೨. ಎರಡು ಮಗ್ಗುಲು, —ಪಾರ್ಶ್ವ : ಇರ್ವಕ್ಕದೊಳಂ ವಿಯಚ್ಚರ ಕುಲಪ್ರಭುಗಳ್ ಬರೆ (ಪಂಪರಾಮಾ. ೧೫–೩) ; ಸೋದರರಾ ವಿಜಯ ಜಯಂತರ್ ತನ್ನಿರ್ವಕ್ಕದೊಳೆಯ್ತರಲು (ಜಯಕಾ. ೩–೭೯). [ಇರ್$_2$ (< ಎರಡು) + ಪಕ್ಕ]

**ಇರ್ವಗಿ** 'ಇರ್ಬಗಿ' ನೋ.

**ಇರ್ವಗಿಮಾಡು** 'ಇರ್ಬಗಿಮಾಡು' ನೋ.

**ಇರ್ವಡಿ** ‘ಇರ್ಮಡಿ’ ನೋ.

**ಇರ್ವಡಿಚಾಗಿ** (ನಾ). ಎರಡರಷ್ಟು ತ್ಯಾಗಶೀಲ; ಒಂದಕ್ಕೆ ಎರಡಾಗಿ ಕೊಡತಕ್ಕವನು; ಒಂದು ಬಿರುದು: ಸೊಬಿವ್ಪುದೊಡ್ಡರುವಿರ್ವಡಿ ಚಾಗಿಗಳು ಮಹಾದೇವರ ದೇಗುಲಮಂ ಮಾಡಿಸಿ (ಸೌಇಇ. IX–i, ೧೭–೧೬ ; 850). [ಇರ್ವಡಿ (< ಇರ್ಮಡಿ) + ಚಾಗಿ]

**ಇರ್ವರ್**, ಇಬ್ಬರ್, ಇಬ್ಬರು, ಇರುವರ್, ಇರ್ಬರ್, ಇರ್ವರು, ಇರ್ವೊರ್ (ನಾ). ಎರಡು ವ್ಯಕ್ತಿಗಳು, —ಜನ: ನೃಗೇಶ ನಾಗಾಹ್ವಯರಿರ್ವರಾ . . . ಇರ್ವ್ವರುಂ ಸಬ್ಬಜ್ಞದರ್ (ಮೈಆರಿ. ೧೯೩೬, ೧೬–೫; 450); ಇರ್ವರುಂ . . . ಒರ್ವರನೊರ್ವರೆಚ್ಚು (ಪಂಪಭಾ. ೧–೭೯); ಮುಂಡಾಡಲಿರ್ವರ ಪರಿತೋಷ ಪೂರ್ವದಿಙ್ಮಂಡಲವನು ರಾಗಿಸಿತು (ಮೋಹತ. ೨೯–೫೮). **ಇಬ್ಬರ್**: ಮಾವನಂ ಕೊನ್ದವಂ ಕಣ್ಣವ ಕಾದಿ ಇಬ್ಬರಂ ಕೊನ್ದು (ಎಕ. VIII, ಸೊರಬ. ೫೨೯–೪ ; 985); ಉದಗಯುನದೊಳಿರೆ ರಜನಿಕರ ದಿವಾಕರರಿಬ್ಬರುಂ (ಜಾತತಿ. ೨–೧೦). **ಇಬ್ಬರು**: ಅವರಿಬ್ಬರಿಗಂ ನಂದನನವಯುವ ಸಂಪೂರ್ಣಮೂರ್ತ್ತಿ ಮನುಜಮನೋಜಂ (ಮೈಆರಿ. ೧೯೩೦, ೧–೩೩ ; 1173); ನರನ ತಡೆದರು ಸುಬಲಸುತರಿಬ್ಬರು (ಕುವ್ಯಾದ್ರೋ. ೩–೭೭); ಇಬ್ಬರ ಜಗಳ ಮೂರನೆ ಯವನಿಗೆ ಲಾಭ (ಗಾದೆ). **ಇರುವರ್**: ಪರಮ ಸಂತೋಷದಲಿ ಮುನಿ ಪತಿವೆರಸಿ ಸುರುಚಿರ ರಾಮಲಕ್ಷ್ಮಣರಿರುವರನು ಕೂಡುತ್ತೆ ತೆರಳಿದನರಮನೆಗೆ ತಾನು (ರಾಮಾಸಂ. ೧–೪–೩೪). **ಇರ್ಬರ್**: ಶ್ರೀ ಸೆಬ್ಬಿನಾಣ್ನಾಡ ಮೂಜನ ಮುವತ್ತಿರ್ಬ್ಬರ[ರ್ಬ]ರ ಆಳ್ದೊಡೂಗೆಯುನ್ (ಎಕ. X (S), ಮುಳಬಾ. ೧೫೬–೩ ; 8ನೆಯ ಶತ); ನಿಜಪನ ಮಗ ಅಣ್ಣಿಗ ಇಬ್ಬ್ಬರರಸುಗಳಲ್ಲಿ ಪಡೆದು ದೇವಭೋಗ (ಎಕ. IX, ಬೆಂಗಳೂ. ೪೦–೬ ; 820); ಇರ್ಬರುಂ. . . ನಿಂದು (ಆದಿಪು. ೧೪–೧೦೪ ವ); ಇರ್ಬರೊಳೊಬ್ಬ ಮುನಿ ಕುಮಾರಂ (ಕಾದಂಪೂ. ೮೧೧); ಇರ್ಬರ್ ಕರ್ತೃಗಳ್ಗೆ ನಿಮಿತ್ತಮಪ್ಪ ಸತಿಸಪ್ತಮಿಗೆ ಎಕಾರಮಕ್ಕುಂ (ಶಮುದ. ೨೪೯ ವೃತ್ತಿ). **ಇರ್ವರು**: ಭೋಗಿ ಭೂಷಣ ಕಾಲಭೈರವರಿರ್ವರು ರಾಗದೆ ಪುರವ ಕಾದಿಹರು (ಕಂನವಿ. ೨–೧೧೧). **ಇರ್ವೊರ್**: ಇನ್ತಿ ಇರ್ವ್ವೊರ್ಗ್ಗಂ ಏಕೋಭಾಗಃ (ಇಆ. XVIII, ೩೬೭–೧೬ ; 750). [ಇರ್$_2$ (< ಎರಡು) + –ಅರ್$_0$]

**ಇರ್ವರು** ‘ಇರ್ವರ್’ ನೋ.

**ಇರ್ವಲ**, ಇರ್ಬಲ (ನಾ). ಎರಡು ಕಡೆಯ ಸೈನ್ಯ; ಉಭಯ ಬಲ: ಇರ್ವ [ಪಾಠಾಂ. ರ್ಬ]ಲದ ಬಿಲ್ಲಣಿಗಳ್ (ಪಂರಾಮಾ. ೧೩–೪೮); ತಲೆಯ ಕೊಣ್ಡಂ ಇರ್ವ್ವಲಮುಂ ಮೆಚ್ಚೆ (ಎಕ. VIII, ಸೊರಬ. ೪೬೯–೧೧ ; 1112); ಇರ್ವಲದ ರಾಜಕುವರರು ಬಣ್ಣಿಸೆ ಬಿಲ್ಲ ಬಿನ್ನಣ ದೋಱಿದನು ನೃಪತಿ (ಸಾಳ್ವಭಾ. ೮–೭೧). **ಇರ್ಬಲ**: ಅರಿಸಮಾಸಂ . . . ಮಾರ್ಗದೊಳುಳ್ಳವರ್ಕೆ – ಕಡುರಾಗಂ . . . ಕೂರಸಿ, ಮಾರ್ಬಲಂ, ಇರ್ಬಲಂ (ಶಮುದ. ೧೭೪ ಪ್ರಯೋ); ಅತ್ತಲ್ ಖಳಂ ಸರ್ಪಭೂಷಣನ ಬಲಕಿದಿರಾಗಿ ನಡೆತರಲ್ ಕಾಣಿಸಿದುವಿರ್ಬಲಗಳು (ಚಬಪು. ೨೬–೧೨). [ಇರ್$_2$ (< ಎರಡು) + ಬಲ]

**ಇರ್ವಳೆ** ‘ಇರ್ವಾಳ್’ ನೋ.

**ಇರ್ವಳಿ** (ನಾ). ಎರಡು ವಂಶ: ಇರ್ವಳಿಯನುದ್ಧರಿಪ ಕಲ್ಪತರು (ಕವಿಕಾ. ೨೫–೨೨). [ಇರ್$_2$ (< ಎರಡು) + ಬಳಿ$_3$ (< ಬೞಿ$_2$)]

**ಇರ್ವಾರ**, ಇರವಾರ$_1$, ಇರುವಾರ (ನಾ). ಬಟಾಯಿ ಪದ್ಧತಿಯಂತೆ ರೈತರಿಗೆ ವ್ಯವಸಾಯಕ್ಕಾಗಿ ವಹಿಸಿದ ಜಮೀನಿನಲ್ಲಿ ಉತ್ಪತ್ತಿಯನ್ನು ವಿಭಾಗಮಾಡುವುದಕ್ಕೆ ಮುಂಚೆ ಆದ ಜಮೀನಿನ ಒಟ್ಟು ಉತ್ಪತ್ತಿ: ಅರಮನೇ ಚಾಕರರಲ್ಲದವರು ಅನೇಕರು ಸರ್ಕಾರದ ಬಟಾಯಿ ಭೂಮಿಗಳನ್ನು ವ್ಯವಸಾಯ ಮಾಡುತಾ ಇರ್ವಾರ ಬಂದ ಧವಸದಲ್ಲಿ ರಾಜಪಾಲನ್ನು ಕೊಟ್ಟು ಕುಳಪಾಲನ್ನು ತೆಗೆದುಕೊಂಡು ಸುಖವಾಗಿ ಜೀವಿಸಿಕೊಳ್ಳುತ್ತಿದ್ದರು (ಸುಮುಚ. ೨). **ಇರವಾರ$_1$** (ಕಿಸಂಗ್ಲಾ. ೧೪೦). **ಇರುವಾರ** (ಕಿ). [ಇರ್$_2$ (< ಎರಡು) + ವಾರ]

**ಇರ್ವಾಳ್**, ಇರ್ಬಾಳೆ, ಇರ್ವಳ (ನಾ). ಎರಡು ಉಳುಮೆ; ಎರಡು ಸಲ ವ್ಯವಸಾಯ: ಇರ್ವಾಳ್ ಮೂವಾಳಿಕ್ಕಿದುರ್ವರೆಯೊಳ್ ಬೆದೆಗೆ ಸಾರೆ ಕೊಳೆ ಪದವಱಿಗಳ್ ಕರ್ವಿನ ಮಡಲಂತೆ ಕವಲ್ತುರ್ವಿದ ಕೆಯ್ವೊಲ ಗಳೆಸೆಗುಮೋರೊಂದೆಡೆಯೊಳ್ (ಕಾವ್ಯಾವ. ೨೦೬). **ಇರ್ಬಾಳೆ**: “ಶಂಬಾ ಕೃತಂ, ದ್ವಿಸೀತ್ಯಂ – ಈ ೨ ಯಿರ್ಬಾಳೆ” (ಹಲಾಯು. ೯೪–೪೨೨). **ಇರ್ವಳೆ**: ಕೋಣಗಳು ನೇಗಿಲನ್ನು ಎಳೆದುಕೊಂಡು ಹೋದುವು. ಉದ್ದಕ್ಕೆ ಒರ್ವಳ ಹೂಡಿದ; ಅಡ್ಡಕ್ಕೆ ಇರ್ವಳ ಮಾಡಿದ. ಹೀಗೆ ೨–೩ ದಿನ ಮಾಡಿದಾಗ ಬೈಲುಗದ್ದೆ ಕೆಸರಿನ ರಸಾಯನವಾದಂತಾಯಿತು (ಬಾಳಿಗಿ. ೧೦೬).
[ಇರ್$_2$ (< ಎರಡು) + ಬಾಳ್$_3$. P ತಮಿ. ವಾಳ್ = ನೇಗಿಲ ಕುಳ < ಸಂ. ಪಾಳ]

**ಇರ್ವೀಡು$_1$** ‘ಇರ್ಬೀಡು’ ನೋ.

**ಇರ್ವೀಡು$_2$** (ನಾ). **೧.** ಎರಡು ಬೀಡು. **೨.** ಎರಡು ಸಲ ಫಲ ಬಿಡುವುದು. **೩.** ಎರಡು ಬಿಡಾರ. **೪.** ಶಿಂಶುಪ ಎಂಬ ಮರ. **೧, ೨**: ಒಂದು ಮಹಾರಣ್ಯಮನೆಯ್ದೆ ನೋೞ್ಪನಲ್ಲಿ ಭೂಮಿ ಪರ್ವಿದಂತೆ ಸೀಗೆ . . . ಕುಱುಕಲ್ಕಿಕ್ಕುವ ಪಯಣದಂತಿರ್ವೀಡು ನೃತ್ಯದಂತೆ ತಾಳ . . . ಮತ್ತಮೆನಿತಾನುಂ ತೆಱದ ಮರದುಱುಗಲ್ಗಳೊಳಗೆ (ಬಂಹರಿ. ೨–೩೮).
[ಇರ್$_2$ (< ಎರಡು) + ಬೀಡು]

**ಇರ್ವು** ‘ಇರಂ’ ನೋ

**ಇರ್ವುಲಿಯೂರ್** (ನಾ). ಒಂದು ಊರಿನ ಹೆಸರು: ಇರ್ವ್ವುಲಿಯೂರೊಡೆಯ ಇರುಗಮಯ್ಯನ ಮಗಂ ಸಿರಿಯಮಯ್ಯಂ (ಎಕ. IX, ಬೆಂಗಳೂ. ೭೯–೪ ; 870). [ಇರ್ವುಲಿ + ಊರ್]

**ಇರ್ವೆರಳು** ‘ಇರ್ಬೆರಲ್’ ನೋ.

**ಇರ್ವೊರ್** ‘ಇರ್ವರ್’ ನೋ.

**ಇರ್ಸಾಲ್** ‘ಇರಸಾಲು’ ನೋ.

**ಇರ್ಸಾಲ್‌ಪಟ್ಟಿ** (ನಾ). ಖಜಾನೆಗೆ ಜಮಾಕಟ್ಟಿದ ಹಣದ ವಿವರದ ತಖ್ತೆ, —ಪಟ್ಟಿ (ಮೈಗಜೆ. IV, 772).
[ಇರ್ಸಾಲ್ (< ಇರಸಾಲು) + ಪಟ್ಟಿ$_2$]

**ಇರ್ಸಾಲು** ‘ಇರಸಾಲು’ ನೋ.

**ಇರ್ಸಾಸಿರ** ‘ಇರ್ಛಾಸಿರ’ ನೋ.

**ಇಲ್$_1$** (ಕ್ರಿ). (ರೂಪಗಳು) ಇಲ್ಲ$_1$, ಇಲ್ಲಂ, ಇಲ್ಲಾಂ, ಇಲ್ಲೆ **೧.** ಇರದು, ಅಭಾವವಾಗಿದೆ ಇತ್ಯಾದಿ ನಿಷೇಧಾರ್ಥದಲ್ಲಿ ಮಾತ್ರ ಬಳಕೆಯಿರುವ ಇಲ್ಲ ಎಂಬ ಕ್ರಿಯಾತ್ಮಕಾವ್ಯಯದ ಮೂಲರೂಪ: “ಸೊಲ್ಲೊಳ್ ಕ್ರಿಯಾತ್ಮಕಾವ್ಯಯಮಿಲ್ಲೆಂಬುದು” (ಶಮುದ. ೩೦೧); ಕಱಿಇಲ್ಲಲ್ತಪ ಧರ್ಮ್ಮದಾ ಸಸಿಮತಿ ಶ್ರೀಗನ್ತಿಯರ್ (ಎಕ. II, ೭೬–೬೨ ; 700); ಅಱಿವು ಧರ್ಮ್ಮಮುಂ ಜಕ್ಕ ನಿನಗಲ್ಲದಿಲ್ಲ ಭುವನದೊಳ್ (ಎಕ. VIII, ನಗರ. ೬೨–೧ ; 800); ಕಿವಿಗಿಸಿದುಂ ನೃಪಂಗೆ ಹಿತಮುಂ ನುಡಿಯೆಲ್ಲಿಯುಮಿಲ್ಲ (ಪಂಪಭಾ. ೭–೪೦); ಅರಸಿಯರು ದೋಸವೇನುವನಿಲ್ಲಿ ಮಾಡಿದುದಿಲ್ಲ (ಬಸಪು. ೨೪–೭೮); ತಾಯಿಗಿಂತ ಹಿತವರಿಲ್ಲ, ಸಕ್ಕರೆಗಿಂತ ಸವಿಯಿಲ್ಲ (ಗಾದೆ); ಉಪ್ಪಿಗಿಂತ ರುಚಿಯಿಲ್ಲ, ತಾಯಿಗಿಂತ ಬಂಧುವಿಲ್ಲ (ಗಾದೆ). **೨.** ಅಥವಾ; ಹಾಗಲ್ಲವಾದರೆ: ಯಿ ಧರ್ಮಸ್ಥಳದಲ್ಲಿ ಬಳ್ಳಾಳರಿಗೆ ಅನಾಯ ಸನಾಯ ಸಲ್ಲದು ಇಲ್ಲ ಆ ಸ್ಥಳ(ಗ)ದಲು ಇದ್ದ ವೊಕ್ಕಲಿಗೆ ಬಿಟ್ಟ ಬಿಡಾರ ಸಲ್ಲದು (ಎಇ. XX, ೮–೫೩ ; 1556); ನೀನು, ಹೇಳಿದಂತೆ ಕೇಳಬೇಕು, ಇಲ್ಲ ಮನೆಬಿಟ್ಟು ಹೊರಡಬೇಕು (ರೂಢಿ).

**ಇಲ್ಲಂ** : ೧. ಅಲ್ಲಂ, ಇಲ್ಲಂ (ಶಬ್ದಾನು. ೨೦ ಪ್ರಯೋ) ; ಇನನಿಲ್ಲವಿಂದು ಬಾರಂ . . . ಅಕಟ ನೇಹವುದಿಲ್ಲಂ (ರಾಜಶೇ. ೧೧–೩೨) ; ಕಾಲಪುರುಷಂಗೆ ಗುಣಮಣಮಿಲ್ಲಂ ಗಡ (ರಾ ಮಾ ಶ್ವ. ೧–೧). **ಇಲ್ಲಾಂ** : ೧. ಕೂಡಲೂ ಪಾರ್ಡಿ ಒಡೆಯ ನನ್ದಿಕಾಡವಾ ಎಜನಾಗನಾ ವ್ಯವಹಾರದನ್ತರಂ ಸಾಲ ಮಿಲ್ಲಾಂ (ಎಕ. X, ಕೋಲಾರ. ೭–೪ ; 760). **ಇಲ್ಲೆ** : ಇಲ್ಲೆ[ಪಾಠಾಂ. ಲ್ಲಿ]ಯೊ ಪೇೞೆಂದು ಮಹೀವಲ್ಲಭ ದೂತಂಗೆ ನುಡಿದು (ಆದಿಪು. ೧೪–೫೦); ಮೇಣ್ ಕುಲಮಿಲ್ಲೆಯೋ ನಮಗೆ ದಾಯಿಗರಲ್ಲರೊ ಶಸ್ತ್ರವಿದ್ಯೆಯೊಳ್ ಪೂಣ್ಕೆಗಳಿಲ್ಲೆಯೋ (ಪಂಪಭಾ. ೨–೯೧) ; ಎನ್ದುಮತರ್ಕ್ಯ ವಿಕ್ರಮಂ ವೃಗಪತಿಗಲ್ಲದಿಲ್ಲೆ ಗಡ ಸನ್ದಗಭೀರತೆ ವಾರ್ಧಿಗಲ್ಲದಿಲ್ಲೆ ಗಡ (ಎಕ. II, ೧೩೩–೩೨ ; 982).

**ಇಲ್ಲದ** = ಇರದ ; ಅಭಾವವಾದ : ಮೇಗಿಲ್ಲದ ಬಲ್ಲಾಳ್ತನವಾಗರ ಮನೆ (ಪಂಪಭಾ. ೬–೬೭); ಪೞಿಯೆಡೆಯಿಲ್ಲದೊಳ್ಪು (ಎಕ. II, ೧೩೪–೩೩ ; 982) ; ಹೊಲ್ಲದ ನೃಪರಿಗಿಲ್ಲದ ಗುಣಗಳನಿಟ್ಟು ಸೊಲ್ಲಿಪ ಕೃತಿಮಾರ್ಗವಲ್ಲ (ಭರಚ. ೧–೨೨). **ಇಲ್ಲದಂತೆಮಾಡು** = ಅಭಾವವನ್ನು ತರು ; ನಾಶಮಾಡು; ಹಾಳುಮಾಡು : ಹಣವಿಲ್ಲದಂತೆ ಮಾಡಬೇಡ (ರೂಢಿ). **ಇಲ್ಲದಂದು** = ಅಭಾವದ ಪರಿಸ್ಥಿತಿಯಲ್ಲಿ : ಪರಲೋಕಮಿಲ್ಲದಂದು ತಲ್ಲೋಕಸುಖಾನುಭವಾಪೇಕ್ಷೆಯಿನೈಹಿಕ ಸುಖವಿಮುಖನಾಗಿ (ಆದಿಪು. ೨–೯ ವ). **ಇಲ್ಲದತನ** = ೧. ಇಲ್ಲದಿರುವಿಕೆ; ಅಭಾವ: ಚರಾಚರವೆಂಬೆರಡರ ಇಲ್ಲದತನವನ್ನು ಯೆಯ್ದಿದ ಭೇದವು (ಕೈವಟೀ. ೬೦). ೨. ಬಡತನ (ಕಿ). "ಹೀನತೆ – ಇಲ್ಲದತನ, ಬಡತನ" (ಗಂಗಾವು. ೩೫೦). **ಇಲ್ಲದವನು, ಇಲ್ಲದೊನ್** = ೧. ಪಡೆಯದವನು : ಜ್ಞಾನವಿಲ್ಲದವನ ಬೞಿಯೊಡಲು ಹಾಳೂರ ಸ್ಥಾನದಂತಿಕ್ಕು (ಸರ್ವಜ್ಞ. ೪೨೭) ; ಸಂಕ್ಲೇಶ ಪರಿಣಾಮುಮಿಲ್ಲದೊನಾಗಿ (ವಡ್ಡಾರಾ. ೭೬–೩) ; ಆಗಮುಮನಱಿದುಪಯೋಗಮಿಲ್ಲದೊನ್ ಆಗಮುದ್ರವ್ಯಜೀವನೆಂಬಂ (ತಸೂವೃ. ೬). ೨. ದರಿದ್ರ ; ನಿರ್ಗತಿಕ : ಇಲ್ಲದವನು ತಲ್ಲಣಿಸನು (ಗಾದೆ). **ಇಲ್ಲದ ಹಾಗೆಆಗು** = ನಾಶವಾಗು ; ಹಾಳಾಗು : ಅವರಿಗೆ ಬೇಕಾದಷ್ಟು ಆಸ್ತಿ ಇತ್ತು, ಈಗ ಏನೂ ಇಲ್ಲದ ಹಾಗೆ ಆಗಿದೆ (ರೂಢಿ). **ಇಲ್ಲದಳ್, ಇಲ್ಲದೊಳ್** (ಸ್ತ್ರೀ). **ಇಲ್ಲದರ್, ಇಲ್ಲದವರು, ಇಲ್ಲದೊರ್** (ಬಹುವ): ಜನನಿ ಸತ್ತೊಡೆ ದುಃಖವಿಲ್ಲದರಾರು ಲೋಕದಲಿ (ಬಸವು. ೧೫–೨) ; ಇಲ್ಲದವರ ಕಷ್ಟ ಇರುವವರಿಗೇನು ಗೊತ್ತು ? (ರೂಢಿ) ; ಸಪ್ತಧಾತುಗಳುಮೆಂದಿವು ಮೊದಲಾಗೊಡೆಯವಿಲ್ಲದೊರ್ (ವಡ್ಡಾರಾ. ೮–೧೧). **ಇಲ್ಲದಾಗು** = ಅಭಾವವುಂಟಾಗು ; ಇರದೆ ಹೋಗು : ರತಿಗೆ ಸೇವಕರಿಲ್ಲದಾಡುದು ಹೇಳಲೇನೆಂದ (ತೊರರಾ. ೧–೫–೪೬). **ಇಲ್ಲದಿದ್ದರೆ** = ೧. ಅಥವಾ : ನೀನೋ ಇಲ್ಲದಿದ್ದರೆ ರಾಮನೋ ಬಂದರೆ ಒಳ್ಳೆಯದು (ರೂಢಿ). ೨. ವಿರೋಧವಾಗಿ ನಡೆದ ಪಕ್ಷದಲ್ಲಿ : ನಾನು ಹೇಳಿದಂತೆ ನಡೆಯಬೇಕು ; ಇಲ್ಲದಿದ್ದರೆ ತುಂಬ ಕಷ್ಟಕ್ಕೆ ಗುರಿಯಾಗುತ್ತೀಯೆ (ರೂಢಿ). **ಇಲ್ಲದುದು, ಇಲ್ಲದ್ದು** = ೧. ರಹಿತವಾದುದು ; ಅಭಾವಕ್ಕೆ ಗುರಿಯಾದದ್ದು : ಕ್ರಿಯೆಯಂ ನುಡಿಯದುದು ವಿಭಕ್ತಿಯನಿಲ್ಲದುದರ್ಥಮುಳ್ಳುದಂತದು ಲಿಂಗಂ (ಶಮುದ. ೭೨). ೨. ಸುಳ್ಳು ; ಅಪಲಾಪ : ಉಂಟಾದ್ದು ಹೇಳಿ ಇಲ್ಲದ್ದನ್ನು ಕೇಳುವುದು (ಗಾದೆ). **ಇಲ್ಲದೆ, ಇಲ್ಲಾದೆ** = ೧. ಅಭಾವವಾಗಿ; ಇಲ್ಲದಂತೆ; ಇರದೆ: ಇದನ್ ವಕ್ರಮಿಲ್ಲಾದೆ ಕಾದು ಸಲಿಪೊನ್ (ಎಇ. IX, ೨೧–೧೩ ; 600) ; ಆಡಿ ದಿಗಂಗನಾ ನಟಿಯರೊಳ್ ತಣಿವಿಲ್ಲದೆ (ಎಕ. VII, ಶಿವಮೊ. ೯೭–೨೫ ; 1113) ; ಅವಧಿಯಿಲ್ಲದೆ ಶರವ ನೆಱೆ ತುಳುಕಿ ಮೆತ್ತಿದುವು ಶರವಿಭದ ಮೆಯ್ಯಲಿ (ಕುವ್ಯಾದ್ರೋ. ೩–೩೯). ೨. ಉಂಟಾಗದ ಹಾಗೆ : ಪೞಿಯಿಲ್ಲದೆ ಪೂಣ್ದು ಸಂದ ವೈರಿಗಳನೆ ಕೊಂದು (ಪಂಪಭಾ. ೧೩–೧೦೩). **ಇಲ್ಲಾಗು, ಇಲ್ಲವಾಗು** = ಅಭಾವವುಂಟಾಗು ; ಮರೆಯಾಗು : ಗಂಟು ಬರಿದಾಯಿತು ನಂಟು ಇಲ್ಲವಾಯಿತು (ರೂಢಿ) ; ಸಿದ್ಧರ್ಗೆ ಭೇದ ವ್ಯವಹಾರಮಿಲ್ಲಾಗಿಯುಂ ಕಥಂಚಿದ್ಭೇದಮನಱಿಪಲುವೇಡಿ (ತಸೂವೃ. ೩೩೦) ; ಗಗನಂ ಕೆಟ್ಟುದು . . . ದಿಕ್ಚಕ್ರಮಿಲ್ಲಾಯ್ತು (೧೦ಕ. ೯–೫೫) ; ಅರ್ಥಘಟನೆಯಿಲ್ಲಾಗಿಯುಂ ಯಮಕಲಕ್ಷಣಮಿಲ್ಲ (ಶಮುದ. ೧೯ ವೃತ್ತಿ). **ಇಲ್ಲವೈ$_2$** = ಬೇರೊಂದು ಪಕ್ಷದಲ್ಲಿ ; ಇಲ್ಲದಿದ್ದರೆ : ಇಲ್ಲಿಯುಭವಂ ಮೂಱುದಿನತನಕಿಲ್ಲವೇ ಸತ್ತಿರ್ದರ್ನೋ ತಾನುಳ್ಳಡಿಹಿಗೇಕಾದುದೆನುತ (ಬಸವು. ೪೯–೧೮) ; ನಿನಗೆ ಏನಾದರೂ ನೋವು ಆದಾಗ ಇಲ್ಲವೆ ಬೇನೆ ಬಂದಾಗ (ಮುಂಬಯಿ. ೧–೨೫) ; ನಾನು ನಿನ್ನ ಕಾಲು ಮುರಿದರೆ, ಇಲ್ಲವೆ ನಿನ್ನ ಕೈಯೊಳಗೆ ಒಂದು ಮೊಳೆ ಚುಚ್ಚಿದರೆ ನಿನಗೆ ನೋವು ಆದೀತೋ ಇಲ್ಲವೋ (ಮುಂಬಯಿ. ೨–೩೫) ; ಒಂದು ತೆಂಗಿನಕಾಯಿ ಇಲ್ಲವೆ ಒಂದು ಚಿಪ್ಪು ಬಾಳೆಯಹಣ್ಣು ತೆಗೆದುಕೊಂಡು ಬಾರಪ್ಪಾ (ರೂಢಿ).

[ದೇ. ‖ ತಮಿ. ಇಲ್, ಇಲ್ಲೈ ; ಮಲ. ಇಲ್ಲ; ಕೊಡ. ಇಲ್ಲೆ ; ತುಳು. ಇಜ್ಜಿ ; ತೆಲು. ಲೇ, ಲೇದು]

**ಇಲ್$_2$, ಇಲು$_1$** (ನಾ). ನೆಲೆ; ವಾಸಸ್ಥಳ; ಮನೆ: ಎಂತುಂ ಪಾತ್ರನುದಾರನೆಂದುಸುರುತುಂ ತಮ್ಮಿಲ್ಗೆ ಪೋದರ್ ಜನರ್ (ವೈಸೂಮ. ೬–೧೫೨) ; ಬಲ್ಪಿಲ್ಲವಾದ ಬೀಳ್ವಿಲ್ಗೆ ತಾಂಗುಕಂಭಂಬೊಲಾರಯೆ ಊಟಂ ಮಾಡಲ್ತಕ್ಕುದಕ್ಕುಂ ಒಡಲೂಡುವುದರ್ಕೆಯೇ (ಸೌನಂದ. ೧೪–೧೫). **ಇಲು$_1$** : ಪೂಜರಿಗಿಲುಮುಟ (ಕೊಲ್ಹಾಶಾ. ೬–೧೩ ; ?). 'ಇಲುಮುಟ' ಪರಾ. 'ಕೀೞಿಲ್', 'ಪಿಂತಿಲ್', 'ಪೊಸಂತಿಲ್' ಪರಾ.

[ದೇ. ‖ ತಮಿ. ಮಲ. ಇಲ್ ; ತುಳು. ಇಲ್ಲ್ ; ತೆಲು. ಇಲ್ಲು]

**–ಇಲ್$_3$, –ಇಲು$_2$** (ಪ್ರ). ಕೃದಂತ ಭಾವನಾಮ ಪ್ರತ್ಯಯ : ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚೆಲ್ಲಿಗಳ್ ಪೊಸವೆ (ಆದಿಪು. ೯–೨೫) ; ಯಾತ್ರೆಗವನೀತಲಪತಿಯಂ ಪ್ರೇರಿಸಿತ್ತು ಪುಗಿಲೊಳ್ ಶರದಂ (ಶಾಂತಿಪು. ೧೯–೧೪೧) ; ಇನಿತ್ತಱ ಪುಡಿಯಂ ಚೆಲ್ಲನೆ ಮೂಗಿನೊಳೂಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ (ಖಮುದ. ೭–೫೩). **–ಇಲು$_2$** : ಒಣಗಿಲುಗಿಡಿಯ ಹಬ್ಬಗೆ ಹೊಱಗೆ ಮಸಗಿತು (ಕುವ್ಯಾದ್ರೋ. ೧೯–೪೮). [ದೇ. ‖ ತಮಿ. –ಇಲ್]

**–ಇಲ** (ಪ್ರ). ೧. ಇದರಲ್ಲಿ ಈತನು ವರ್ತಿಸುತ್ತಾನೆ ಎಂಬ ಅರ್ಥವನ್ನು ಸೂಚಿಸಲು ಬರುವ ತದ್ಧಿತ ಪ್ರತ್ಯಯ : ಪೀನಂ ತದ್ವರ್ತನಗತ ಮಾನವನೊಳ್ ತಿಳಿಗೆ ಮತ್ತಿಲ ಪ್ರತ್ಯಯಮಂ . . . ಅದಱೊಳೀತಂ ವರ್ತಿಪನೆಂಬಲ್ಲಿ ಇಲ ಪ್ರತ್ಯಯಮಕ್ಕುಂ . . . ಪಡೆಯಿಲಂ ಗಾವಿಲಂ (ಶಮುದ. ೨೦೫, ವೃತ್ತಿ, ಪ್ರಯೋ). ೨. ಇಲ್ಲದವನು ಅಥವಾ ಇಲ್ಲದುದು ಎಂಬರ್ಥ ಕೊಡುವ ತದ್ಧಿತ ಪ್ರತ್ಯಯ. 'ಬರ್ದಿಲ' ಪರಾ. [?]

**ಇಲವಂಗ** (ನಾ). ಸರಸ (?) : ತಟ್ಟೇಲೀಳ್ಯಾವ ಹಿಡಿದಾಳೆ (ಹಿಡಿದು) ಏನೆಂದಳೆ ನಂಜಪ್ಪಗೂ ನಮಗು ಇಲವಂಗ – ಇಲವಂಗ ನಂಜಪ್ಪ ಚಾಮುಂಡಿ ಇಲವಂಗನಾಡುವಾಗ ದೇವೀರು ಕೇಳ್ಯಾರೆ ಶಕುನವ (ನಾಡಪ. ೧೦೨–೧೫, ೧೬). [?. / ತಮಿ. ನಲಂಗು]

**ಇಲವಿಂದ** (ನಾ). ಒಂದು ಬಗೆಯ ವನಸ್ಪತಿ : ಇಲವಿಂದದ ಚಿಗುರು, ಯಷ್ಟಿಮಧುಕ . . . ಜೀರಿಗೆ ಇವುಗಳನ್ನು ಕಷಾಯವಂ ಮಾಡಿ ಸೇವಿಸೆ ಅಂತರ್ದಾಹ ಪರಿಹಾರವಾಗುವುದು (ಸಕವೈ. ೮೪). [?]

**ಇಲಾಖಾ** 'ಇಲಾಖೆ' ನೋ.

**ಇಲಾಖೆ, ಇಲಾಖಾ** (ನಾ). ೧. ಆಡಳಿತ ಶಾಖೆ: ಇಲಾಖೆಗಳು ಸಿಬ್ಬಂದಿಗಳು ಬಡಾಯಿಸಿದುವು (ಮಹಾವಂ. II, ೧೧೧) ; ಇವರು . . . ಅಠಾರಾಕಚೇರಿಯನ್ನು ಸ್ಥಾಪಿಸಿ ಬೇರೆ ಬೇರೆ ಕೆಲಸಕ್ಕೆ ಬೇರೆ ಬೇರೆ ಇಲಾಖೆಗಳನ್ನು ನಿರ್ಮಾಣಮಾಡಿದರು (ವೈವಾಸ್ತು. ೧೭) ; ವ್ಯವಸಾಯ ಇಲಾಖೆ, ತೋಟಗಳ ಇಲಾಖೆಯೊಂದಿಗೆ ವ್ಯವಹಾರ ನಡೆಸುವುದರಿಂದ (ತರಬೆ. ೧೩).

೨. ಆಡಳಿತಕ್ಕೆ ಒಳಪಟ್ಟ ಸೀಮೆ, —ಪ್ರಾಂತ, — ಆಧಿಪತ್ಯ: ಟಿಪ್ಪೂಸುಲ್ತಾನರ ಇಲಾಖೆ ಅರಕಲಗೋಡು ಕೊಣನೂರು ಶೀಮೆ ಲೂಠಿ ಮಾಡುತ್ತಾ ಇದ್ದಲ್ಲಿ (ರಾಜೇಂದ್ರ. ೨೮); ಬ್ರಿಟಿಷ್ ಇಂಡಿಯಾದಲ್ಲಿ (೧) ಮುಂಬಯಿ ಇಲಾಖೆ (೨) ಮದ್ರಾಸ್ ಇಲಾಖೆ (೩) ಬಂಗಾಲ ಇಲಾಖೆ . . . (೭) ಆಸಾಮು ಪ್ರಾಂತ ಎಂಬವು ಏಳು ಮುಖ್ಯ ರಾಜಕೀಯ ವಿಭಾಗಗಳು (ಮುಂಬಯಿ. ೪–೧೧೩). **ಇಲಾಖಾ: ೧.** ಇದಲ್ಲದೆ ಆ ಗ್ರಾಮಕ್ಕೆ ಸಂಬಂಧಪಟ್ಟ ಇತರ ಇಲಾಖಾ ಗೌರ್ನಮೆಂಟ್ ಆಫೀಸರುಗಳಿಗೂ ಸಹಾಯಮಾಡಬೇಕು (ಗ್ರಾಮಾಕ. ೪).

[← **ಅರ.** ಇಲಾಕಾ, ಇಲಾಖಾ; **ಮರಾ.** ಇಲಾಖಾ; **ಹಿಂ.** ಇಲಾಕಾ]

**ಇಲಾಚಿ,** ಇಲಾಯಿಚಿ (ನಾ). ಏಲಕ್ಕಿ; ಯಾಲಕ್ಕಿ (ಶಿ). **ಇಲಾಯಿಚಿ** (ಶಿ). [← **ಮರಾ.** ಇಲಾಚೀ, ಇಲಾಯಚೀ; **ಹಿಂ.** ಇಲಾಯಚೀ]

**ಇಲಾಜು** (ನಾ). ಉಪಚಾರ; ಚಿಕಿತ್ಸೆ; ಹಂಚಿಕೆ; ಉಪಾಯ: ನಾಲ್ಕು ಗಂಟೆಗೆ ಡಾಕ್ಟರು ಬಂದು ನೋಡಿ, ಇನ್ನೇನು ಇಲಾಜು ಬೇಕಿಲ್ಲ . . . ಅಂದನು (ಮಲ್ಲಿ. ೨೩೨); ಆದಕ್ಕೆ ಏನೋ ಇಲಾಜು' ಮಾಡಿದ (ಅಲೆಮ. ೯೦); ಅವಯ್ಯನ ಕಾಯ್ಲೇಲಿ ಇವ್ರು ಅಗೋಹೊತ್ತಿಗೆ ಇಂಕ ರಾನು ಮ್ವಾರೆ ಸೊಟ್ಟಗೆ ಮಾಡಿಕೊಳ್ಳದೆ ಇಲಾಜು ಮಾಡಿದ್ಲು (ಸರ್ವಮಂ. ೫೦). [← **ಅರ. ಹಿಂ.** ಇಲಾಜ್]

**ಇಲಾಯಿಚಿ** 'ಇಲಾಚಿ' ನೋ.

**ಇಲಾಲ್** 'ಹಿಲಾಲು' ನೋ.

**ಇಲಾಲಿ** 'ಹಿಲಾಲು' ನೋ.

**ಇಲಾಲು** 'ಹಿಲಾಲು' ನೋ.

**ಇಲಿ**$_1$ (ನಾ). ಹೆಗ್ಗಣ ಮುಂತಾದ ಪ್ರಾಣಿಗಳ ಜಾತಿಗೆ ಸೇರಿದ ಒಂದು ಸಣ್ಣ ಪ್ರಾಣಿ; ಮೂಷಕ; ಮೂಷಿಕ: "ಖನಕೋಂದುರು ಮೂಷಿಕಮಾಖು ನಾಮುಮಿಲಿ" (ವಸ್ತುಕೋ. ೪೧–೮); ಕಪ್ಪೆಗಳು ಮೆಸಡುಗಳುಮಿಲಿಗಳುಮೊಂತಿಗಳುಂ ಮೊದಲಾಗೊಡೆಯ ಜೀವರಾಶಿಗಳಂ (ವಡ್ಡಾರಾ. ೧೪೦–೪); ಬೆಕ್ಕಂ ಕಂಡಿಲಿಯಂತಿರೆ ಉಸಿರ್ಕುಸಿದು ಕುನುಂಗಿ (ಸುಕುಮಾ. ೨–೨೦); ಕಲಿತನದಿಂದಂ ಲೋಗರ್ ಪುಲಿಯಂ ಪಿಡಿದೊಡ ಮದೇಂ ಬಿಡೆಂಬರ್ ತಾವೊಂದಿಲಿಯಂ ಪಿಡಿದೊಡಮದು ಪೆರ್ಬುಲಿಯೆಂಬರ್ ದುರ್ಜನರ್ಗೆ ತಾನಿದು ಸಹಜಂ (ಧರ್ಮಾಮೃ. ೧–೧೭೩); ಇಲಿಗೆ ಹೆದರಿ ಹುಲಿಯ ಬಾಯಲ್ಲಿ ಬಿದ್ದ (ಗಾದೆ); ಬರುವಾಗ ಹುಲಿಯ ಹಾಗೆ, ಹೋಗುವಾಗ ಇಲಿಯ ಹಾಗೆ (ಗಾದೆ); ಬೆಕ್ಕಿಗೆ ಚೆಲ್ಲಾಟ ಇಲಿಗೆ ಪ್ರಾಣಸಂಕಟ (ಗಾದೆ). 'ಚುಂಚಿಲಿ', 'ಮೂಗಿಲಿ', 'ಸುಂಡಿಲಿ' ಪರಾ.

[**ದೇ.** ‖ **ತಮಿ. ಮಲ. ಕೊಡ.** ಎಲಿ; **ತುಳು.** ಇಲಿ, ಎಲಿ; **ತೆಲು.** ಎಲಿಕ, ಎಲುಕ; **ಕೋಲಾ. ನಾಯ್ಕಿ.** ಎಲ್ಕ; **ಪರ್ಜಿ.** ಎಲ್; **ಗೊಂಡಿ.** ಅಲ್ಲೀ, ಎಲ್ಲಿ; **ಬ್ರಾಹೂಇ.** ಹಲ್]

**ಇಲಿ**$_2$ 'ಇಲ್ಲಿ' ನೋ.

**–ಇಲಿ**$_3$ (ಪ್ರ). ಇದು ಇಲ್ಲದ ವಸ್ತು, ಸ್ಥಳ ಅಥವಾ ವ್ಯಕ್ತಿ ಎಂಬುದನ್ನು ಸೂಚಿಸುವ ತದ್ಧಿತ ಪ್ರತ್ಯಯ: "ಬಹುವ್ರೀಹೌ ಇಲ್ಲಶಬ್ದಸ್ಯ ಇಲಿರಾದೇಶೋ ಭವತಿ" (ಭಾಷಾಭೂ. ೧೫೧ ವೃತ್ತಿ); ಆ ನರೆಪಂ ನರೆಬಂದ ಪೊಂಗಳಂ ಸುರಿವೊಡಮಾರೊ ಸ್ವೈರಿಸುವರಾತನ ಪಲ್ಲಿಲಿವಾಯನಾತಮಂ (ಪಂಪಭಾ. ೪–೧೦೦); ಸೊಗಯಿಸುಗುಮೆ ಪಲ್ಲಿಲಿವಾಯುಗಿಲಿಲಿಗಂಧಂ ಸಮಂತು ಕೂರಿಲಿ ಕುಡುಗೋಲ್ ಮಿಗೆ ನಾಣಿಲಿಯೆನಿಸುವ ವಧು ನಗೆಗೆಡೆಯಕ್ಕುಂ ಸಮಸ್ತ ಜಗತೀತಳದೊಳ್ (ಕಾವ್ಯಾವ. ೨೫೭).

[< ಇಲ್ಲ]

**ಇಲಿ**$_4$ (ನಾ). ಆಯುಧ; ದೊಣ್ಣೆ, ಕತ್ತಿ ಮುಂತಾದ ಆಯುಧ: "ಶಸ್ತ್ರವಿಶೇಷ" (ಗಂಗಾವು. ೩೫). [**ಸಂ.** ಇಲೀ, ಈಲಿ]

**ಇಲಿಕತ್ತರಿ** (ನಾ). ಇಲಿಗಳನ್ನು ಹಿಡಿಯಲು ಬಳಸುವ ಕತ್ತರಿಯಂತಹ ಒಂದು ಸಾಧನ; ಸಿಡಿ (ದಕ. ಶಿ). [ಇಲಿ$_1$ + ಕತ್ತರಿ]

**ಇಲಿಕಿವಿ,** ಇಲಿಗಿವಿ (ನಾ). ಇಲಿಯ ಕಿವಿಯ ಆಕಾರದ ಎಲೆಗಳುಳ್ಳ ಒಂದು ಗಿಡ; ಒಂದೆಲಗನ ಗಿಡ: "ಶಬರೀ, ಇಲಿವಾಲ, ಇಲಿಕಿವಿ, ಆಡಸೋಗೆ" (ಓಷಧಿ. ೧೫೫); "ಚಿತ್ರಾ=ಇಲಿಕಿವಿ" (ವಿವೈವಿ. ೫೯ ಟೀಕೆ); ಇಲಿಕಿವಿಯ ಸೊಪ್ಪ ತಂದು ಅಡಿಸಿ ಅಕ್ಕಿಯ ಹಿಟ್ಟು ಸಹಿತ ಅರೆದು ರೊಟ್ಟಿಯ ತಟ್ಟಿಕೊಡುವುದು (ವೈದ್ಯಸಾ. I, ४०೧). **ಇಲಿಗಿವಿ:** "ಮೂಷಿಕಶ್ರವಣ, ಮೂಷಿಕಕರ್ಣೀ, ಈ ಎರಡುಂ ಇಲಿಗಿವಿ" (ಓಷಧಿ. ೧೨೭).

[ಇಲಿ$_1$ + ಕಿವಿ. / **ತಮಿ. ಮಲ.** ಎಲಿಚ್ಚೆವಿ; **ತೆಲು.** ಎಲುಕಚೆವಿ]

**ಇಲಿಕಿವಿಗ,** ಇಲಿಗಿವಿಗ (ನಾ). = ಇಲಿಕಿವಿ: "ವೃಷ್ಯಕರ್ಣೀ – ಇಲಿಕಿಲಿವಿಗ[ಕಿವಿಗ]ನು" (ಓಷಧಿ. ೧೫೭). **ಇಲಿಗಿವಿಗ:** "ಮೂಷಿಕನಾಮಪರ್ಣೀ – ಇಲಿಗಿವಿಗ(ನು)" (ಓಷಧಿ. ೧೨೭). [ಇಲಿಕಿವಿ + –ಗ]

**ಇಲಿಕು** (ಕ್ರಿ). ಕಿವಿಚಿಹೋಗು; ಹಿಂಡಿಹೋಗು; ಇಕ್ಕಟ್ಟಿಗೆ ಸಿಕ್ಕಿಕೊ (ಉಕ. ಶಿ). 'ಇಚುಕು' ಪರಾ. [< ಇಲುಕು ?]

**ಇಲಿಕುಡಿಗ** (ನಾ). ಒಂದು ಬಗೆಯ ಔಷಧದ್ರವ್ಯ: ಜಾಯಿಕಾಯಿ, . . . ಇಲಿಕುಡಿಗ ಪಟ್ಟೆ ಸ್ವರಸ ಇವುಗಳನ್ನರೆದು ಮೊಸರಿನಲ್ಲಿ ಕೊಡುವುದರಿಂದ ಪ್ರದರರೋಗ ಗುಣವಾಗುವುದು (ಸಕವೈ. ೪೩೧ ಪರಿ). [?]

**ಇಲಿಕೆ** (ನಾ). ಒಂದು ಅಳತೆ (?): ಅಗುಟ್ಬುಲ್ಲಿಲಿಕೆಯ ಕಲ್ಲಿಂ ತೆಂಕಲಕ್ಕುಮಿಪ್ಪುರುಷವರೆಗಂ ಗುಣ್ಪಾದೊಡೆ ಜಗಕ್ಕೆ ತಣಿವಿನಂ ನೀರಧಾರೆಯಕ್ಕುಂ (ಬಟ್ಟಮು. ೧೧–೧೩). [?. / **ತಮಿ.** ಇಲೀಕ್ಕೈ = ಒಂದು ಅಳತೆ]

**ಇಲಿಗಿವಿ** 'ಇಲಿಕಿವಿ' ನೋ.

**ಇಲಿಗಿವಿಗ** 'ಇಲಿಕಿವಿಗ' ನೋ.

**ಇಲಿಗಿವಿಯ** (ನಾ). = ಇಲಿಕಿವಿ: "ಚುಂಚುಕ(ಪ)ರ್ಣೀ=ಇಲಿಗಿವಿಯ" (ಓಷಧಿ. ೫೭). [< ಇಲಿಕಿವಿ]

**ಇಲಿಗುಲಿ** (ನಾ). ಇಲಿಯನ್ನು ಕೊಲ್ಲುವ ಪ್ರಾಣಿ; ಬೆಕ್ಕು: ಮೀನಂ ಕೊಲ್ವಂ ಮೀಂಗುಲಿ ಏವಂ ಪಾವುಗುಲಿ, ಇಲಿಗುಲಿ, ಆನೆಗುಲಿ (ಶಬ್ದಾನು. ೫೪೭ ಪ್ರಯೋ). [ಇಲಿ$_1$ + –ಕುಲಿ]

**ಇಲಿದೇರ** (ನಾ). ಇಲಿಯನ್ನು ವಾಹನವನ್ನಾಗಿ ಉಳ್ಳವನು; ಗಣಪತಿ: "ಕರಿಮೊಗಂ, ಇಲಿದೇರಂ . . . –ಈ ೭ ವಿನಾಯಕಂಗೆ ಪೆಸರ್" (ಕಶಸಾ. ೧–೪); "ವಿಘ್ನೇಶಗಿಲಿದೇರನೆಂದಕ್ಕು" (ಕಶರ. ೧೨); ಮೂಗೊಂಕುಮೂಗಿನ ಪೇರೊಡಲ ಇಲಿದೇರ ಬೆನಕ (ರಾಮಾಶ್ವ. ೮೮–೨೧). [ಇಲಿ$_1$ + ತೇರ್ + –ಅ$_7$]

**ಇಲಿನಂಜು** (ನಾ). ಇಲಿಯ ವಿಷ; ಇಲಿ ಕಚ್ಚುವುದರಿಂದುಂಟಾಗುವ ವಿಷ: ವಟಕಂಗಳನಾಗಿಸಿ ಗುಂಜಿಯಂತಿರೊಂದಲ್ಲದೊಡೆರಟ್ಬಲ ಮನೀಕ್ಷಿಸಿಕೊಳ್ಳಿಲಿನಂಜು ಮುಗ್ಗುಗುಂ (ಖಮುದ. ೧೨–೨೭).

[ಇಲಿ$_1$ + ನಂಜು]

**ಇಲಿಪಾಷಾಣ** (ನಾ). ಇಲಿಗಳನ್ನು ಕೊಲ್ಲುವುದಕ್ಕಾಗಿ ಬಳಸುವ ಒಂದು ಬಗೆಯ ವಿಷ; ಶಂಖಪಾಷಾಣ: "ಆಖುಪಾಷಾಣ – ಇಲಿಪಾಷಾಣ" (ಓಷಧಿ. ೧೩); ಬಿಳುಗಾರ, ಮಸ್ತಕಿ, ಇಲಿಪಾಷಾಣ, . . . ಚಂದ್ರ, ಇಷ್ಟನ್ನೂ ಸಮಾನ ತೂಕ ವಸ್ತ್ರಗಾಳಿತವಂ ಮಾಡಿ (ವಿವೈವಿ. ೩೮). [ಇಲಿ$_1$ + ಪಾಷಾಣ. / **ತಮಿ.** ಎಲಿಪಾಷಾಣ]

**ಇಲಿಬಲೆ** (ನಾ). ಇಲಿಯನ್ನು ಹಿಡಿಯುವುದಕ್ಕಾಗಿ ಮಾಡಿದ ಬೋನು (ಶಿ). [ಇಲಿ$_1$ + ಬಲೆ]

**ಇಲಿಬೋನು** (ನಾ). ಇಲಿಯನ್ನು ಹಿಡಿಯಲು ಉಪಯೋಗಿಸುವ ಬೋನು (೬). [ಇಲಿ$_1$ + ಬೋನು. / **ತಮಿ.** ಎಲಿಪ್ಪೋನ್]

**ಇಲಿಮಿಂಚಿ,** ಇಲಿಮಿಚ್ಚಿ, ಇಲುಮುಚಿ, ಇಲುಮುಚ್ಚಿ (ನಾ). ನಿಂಬೆ ಗಿಡ; ನಿಂಬೆಹಣ್ಣು: "ಲಕುಚ – ಇಲಿಮಿಂಚಿ" (ಓಷಧಿ. ೧೪೧); ತದ್ದುರ್ಗಗಳಟಿಗುಂ ಬಜಟಿಯೊಳುದ್ದಿರ್ ನೆಲಾವರೆಯ ಬೇರನಾ ಮಳಕಮುಮಂ ಬದ್ದಿರ್ಲಿಮಿಂಚಿಯ ರಸದೊಳ್ ನಿರ್ದ್ವಯೆಯಿಂದೊರಸಿ ಪೂಸೆ ದಿನಪಂಚಕದೊಳ್ (ಶಮುದ. ೨೬೧ ಪ್ರಯೋ). **ಇಲಿಮಿಚ್ಚಿ:** ರಾಸಭ ಗೋ ಮಹಿಷ್ಯಜ ನೃಮೂತ್ರದೊಳಂತಿಲಿಮಿಚ್ಚಿ ನೆಲ್ಲಿಯೆಂಬೀ ಸುಲಭಂಗಳಪ್ಪ ಕುಜಪಕ್ವಫಲಸ್ಥ ರಸ ಪ್ರಯುಕ್ತಮಂ ಕಾಸುವುದು (ಖಮುದ. ೬–೪೦). **ಇಲುಮುಚಿ:** ಇಲುಮುಚಿಯ ಹಣ್ಣಂದದೊಳು ಮಾಡಿಯಡಲೊಂದು ತೆಜನು (ಸೂಪಶಾ. ೧–೭೭); ಬಲಿದ ಕುಂಬಳಕಾಯ ಸಿಪ್ಪೆಯಂ ಕಡಿದಿರಿಸಿಯಿಲುಮುಚಿಯ ಹಣ್ಣ ತೋರದೊಳು ಕತ್ತರಿಸಿ (ಸೂಪಶಾ. ೫–೧೨). **ಇಲುಮುಚ್ಚಿ:** ಇಂದ್ರವಾರುಣಿಯಂ ಮುಂಕೊಂಡಿಲು(ಲಿ)ಮುಚ್ಚಿಯ ರಸದಿಂ ಕೊಂಡೊಡೆ ಕಳೆಗುಂ ಝಷಂ ಕರ್ದುಂಕಿದ ವಿಷಮುಂ (ಖಮುದ. ೧೩–೯೮). 'ಎಲುಮುಂಚಿ' ಪರಾ.

[**ದೇ.** ‖ **ತಮಿ.** ಎಲುಮಿಚ್ಚೈ; **ಮಲ.** ಎಲುಮಿಚ್ಚ]

**ಇಲಿಮಿಚ್ಚಿ** 'ಇಲಿಮಿಂಚಿ' ನೋ.

**ಇಲಿಮುಖ** (ನಾ). ಒಂದು ಹಕ್ಕಿ; ಬಾವಲಿ (?): ಇಲಿಮುಖ ಕೇಕಿ ಘೂಕನು ಸಾಳ್ವ ಗಿಡುಗಂಗಳಲಿ ಗಿರಿರಾಜನೋಲಗವು (ಅಮುಸಾಂ. ೧–೪೨). [ಇಲಿ$_1$ + ಮುಖ]

**ಇಲಿಯಿಂದೆ** (ನಾ). ಒಂದು ಮರ: ಕಡವಿನ ಕೂಂಟಿಯಿಂ ಪಡುವ ಮುನ್ನಾಗಿ ಬನ್ನ ಇಲಿಯಿನ್ದೆಯ ಮರನುಂ ಪುತ್ತುಂ ಮೇರೆ (ಸೌಇಇ. IX–i, ೧೯೯–೪೮; 1057). [?]

**ಇಲಿವಾಲ,** ಇಲಿವಾಳ (ನಾ). ಒಂದು ಗಿಡ; ಇಲಿಕಿವಿಗಿಡ: "ನ್ಯಗ್ರೋಧಾಹ್ವಾ – ಇಲಿವಾಲ" (ಓಷಧಿ. ೮೫); ಇಲಿವಾಲದ ವಿಷಮಂತದು ತಿಳಿಗುಂ ದಂತಿಯುಮುನಣಿಲೆಯಂ ಕುಡೆ (ಖಮುದ. ೨–೫೦). **ಇಲಿವಾಳ:** "ಇಲಿವಾಳಮದು ಸೋಮಘಂಟಾನಾಮಮಕ್ಕು" (ಮಂಗರಾ. ೪೪–೪೬). [?]

**ಇಲಿವಾಳ** 'ಇಲಿವಾಲ' ನೋ.

**ಇಲು$_1$** 'ಇಲ್$_2$' ನೋ.

**–ಇಲು$_2$,** '– ಇಲ್$_3$' ನೋ.

**ಇಲುಕು** (ನಾ). **೧.** ಎಳೆತ; ಸೆಳೆತ; ಉಳುಕು; ನೋವು; ವಾಯುವಿನಿಂದ ಮೈಯಲ್ಲಿ ಯಾವುದಾದರೂ ಅಂಗವು ಹಿಡಿದುಕೊಳ್ಳುವುದು (೬). **೨.** ಹಿಡಿತ; ಅಧೀನತೆ: ಇಂತಹರ ಸಂಗಡ ಆಚರಿಸುವಾಗ ಇಲ್ಲವೆ ಇಂತಹರ ಇಲುಕಿನಲ್ಲಿ ಸಿಲುಕಿದಾಗ ಮಾರಾಟಗಾರನಿಗೆ ತುಂಬಾ ತಾಳ್ಮೆ ಬೇಕು (ತಕ್ಕಡಿ. ೩೩).

[**ದೇ.** ‖ **ತಮಿ.** ಇಜಿಪ್ಪು, ಇಜಿವ; **ತೆಲು.** ಇಲುಕು]

**ಇಲುಗು** (ನಾ). **೧.** ಮೂಳೆ; ಎಲುವು: "ಇಲುಗಿನ ಚೂರು ಅಂತಾ ಕಾಣ್ತದೆ" ಎಂದು ಗುತ್ತಿ ಹುಸಿನುಡಿದು (ಮಲೆಮ. ೨೩); ಇಲುಗು ತೊಗಲು ಆಗಿ ಬಿದ್ದುಕುಂಡಾನಂತೇ (ಮಲೆಮ. ೬೩೮). **೨.** ಅಂಶ; ದಳ; ಚೂರು. 'ಇಲುವು' ಪರಾ. [< ಎಲ್ವು]

**ಇಲುಮುಚಿ** 'ಇಲಿಮಿಂಚಿ' ನೋ.

**ಇಲುಮಟ** (ನಾ). ಮನೆ ಮತ್ತು ಮಠ: ದೇವರ ನಿವೇದಕ್ಕೆ ತಗ್ಗಿಯ ಮಾನ್ಯದೊಳಗೆ ಕೊಟ್ಟ ಮತ್ತರು ೧೩ ತೋಟ ಮತ್ತರು ೧ ಪೂಜರಿಗಿಲುಮಟ ೧ ಇಧಮ್ಮವ ಊರೊಡೆಯ ಪ್ರಮುಖ ಮಹಾಜನಂಗಳು ಪ್ರತಿಪಾಳಿಸುವರು (ಕೊಲ್ಹಾಶಾ. ೬–೧೩; 1127). [ಇಲು$_1$ (< ಇಲ್$_2$) + ಮಟ]

**ಇಲುಮುಚ್ಚಿ** 'ಇಲಿಮಿಂಚಿ' ನೋ.

**ಇಲುವು** (ನಾ). = ಇಲುಗು: "ನೊಸಲ ಇಲುವು (ಲಲಾಟಾಸ್ಥಿ, ಶಂಖ)" (ನಾಚಿರಾ. ೬). 'ಇಲುಗು' ಪರಾ. [< ಎಲ್ವು]

**ಇಲ್ಲ$_1$** 'ಇಲ್$_1$' ಪರಾ.

**ಇಲ್ಲ$_2$** (ನಾ). ನಾಪಿತ; ಕ್ಷೌರಿಕ (?): ರಜಕನು, ನಟನು, ಗಾರಡಿಗನು, ಇಲ್ಲನು . . . ಇವರೆಲ್ಲಾ ದಿವಾಕೀರ್ತಿ ಸಮರು (ಶುಕಸ. ೨೩).

[**ಪ್ರಾ.** ದೇ. ಇಲ್ಲೊ = ದರಿದ್ರ; ಕೋಮಲ; ಪ್ರತಿಹಾರ; ಕುಡುಗೋಲು; ಕೃಷ್ಣವರ್ಣ]

**ಇಲ್ಲಂ** 'ಇಲ್$_1$' ಪರಾ.

**ಇಲ್ಲಣ** (ನಾ). **೧.** ಜೇಡನ ಬಲೆ, —ನೂಲು. **೨.** ಹೊಗೆ (ಮಸಿ) ಹಿಡಿದ ಜೇಡರಹುಳವಿನ ನೂಲಿನ ಗುದಿ; ಗೃಹಧೂಮ: ಉಪ್ಪಿಲ್ಲಣಂಗು ಸಾಸವೆ ತಪ್ಪಿಲ್ಲದ ಮೆಣಸು ಸುಂಟಿ ಪೊಸಸುಣ್ಣಮಿವಂ ಚಪ್ಪರಿಸಿ ಬಡಿದು ಮೆಯ್ಯಂ ಸೊಪ್ಪಾಗಿರೆ ವೋದಿ ಪೂಸುವರ್ ನಿರ್ದಯೆಯಿಂ (ಧರ್ಮಾಮೃ. ೩–೭೧); ನೆಲ್ಲಿ ಬೆಳುಹೂಲಿಗಳ ಬೇರಿಲ್ಲಣ ಮುಳುಗೊಗ್ಗಿಯೆಂಬಿನಿತ್ತಱ ಪುಡಿಯಂ ಚೆಲ್ಲನೆ ಮೂಗಿನೊಳೂಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ (ಖಮುದ. ೬–೫೩); ರಾಸ್ನೆ ಇಲ್ಲಣ ಇವಿಷ್ಟನು ಸಮಾಂಶವಾಗಿ ಜೇನುತುಪ್ಪದಿಂದ ಅರೆದು ಕಲ್ಕವ ಮಾಡಿ ಕಟಿವಾಯಿಗೆ ಉಜ್ಜಿಸಲು ಗಲಶುಂಠಿ ಎಂಬ ತಾಲುರೋಗ ಶಮನವಹುದು (ವೈದ್ಯಸಾ. II, ೧೧೬); ಮೂಲೆ ಮೂಲೆಗಳಲ್ಲಿ ಇಲ್ಲಣದ ಪರದೆಯು ಅಸಹ್ಯವಾಗಿ ಹಬ್ಬಿತ್ತು (ಚಿವರಿ. ೪೩). [**ದೇ.**?. / **ತಮಿ.** ಇಲ್ಲಡೈ]

**ಇಲ್ಲತೆ** (ನಾ). ಅಭಾವ; ಇಲ್ಲದಿರುವಿಕೆ: ಬಲ್ಲಹನೆ ತೋರ್ಪ ಜಗದಿಲ್ಲತೆ [ಪಾಠಾಂ. ದುಳ್ಳತೆಯ] ಕಳೆದುಳುಮೆಯಲ್ಲಿ ತೋಱದ ನನ್ನ ಮರಳಿ ಮತ್ತೆ (ಮಸೋವಿ. ೯–೧). [ಇಲ$_1$ (< ಇಲ್$_1$) + –ತೆ]

**ಇಲ್ಲದೊನ್** 'ಇಲ್$_1$' ಪರಾ.

**ಇಲ್ಲಮೆ,** ಇಲ್ಲವೆ (ನಾ). **೧.** ಇಲ್ಲದಿರುವಿಕೆ; ಅಭಾವ: ಅನಯದಿನಪ್ಪ ಸಂಪದದಿನಿಲ್ಲಮೆ ನಾಡೆಯುಮಿಂಬುವೆತ್ತುದು (ಪಂರಾಮಾ. ೬–೧೮); ಈಶನಿಲ್ಲಮೆಯೊಳಿನ್ನಾರಿಹರಿಲ್ಲಿ (ಭರಚ. ೭೪–೪೯); ಇಲ್ಲಮೆಗಳ ಉರುಳು ನನ್ನ ಬಾಳ ಬಿಗಿಯುತಿರುವುದು (ಭಾರಂಗ. ೧೬). **೨.** ಬಡತನ; ದುಃಸ್ಥಿತಿ: "ಸದೈವ ದುಃಸ್ಥಿತಾನಾಂ ಕೋನಾಮ ಬಂಧುಃ – ಎಲ್ಲಾ ಕಾಲಮಿಲ್ಲಮೆಯಾಗಿರ್ಪಂಗಾರುಮಿಲ್ಲೆಂಬುದು ತಾತ್ಪರ್ಯಂ" (ನೀತಿವಾ. ೨೩). **ಇಲ್ಲವೆ:** **೧.** ಇಲ್ಲವೆಯ ಮೇಲೊಂದು ಉಂಟೆಂಬ ಪರಿಭಾವ (ಅವಚಂ. ೮೫–೩೭೮). **೨.** ಇಲ್ಲವೆಯ ಮೇಲೆ ಕಂಚೊಡೆದಂತೆ ಬಡಮನವೆನ್ನ ಕಾಡಿತ್ತಯ್ಯಾ (ಬಸವ. ೨೫೬); ಇಲ್ಲದ ಜಗದ ಇಲ್ಲವೆಯಿಂದ ತೋಱುವುದು ಅಡಗುವುದು (ಆದವ. ೨೫). **೩.** ಮುಗಿಯುವಿಕೆ; ನಿಶ್ಶೇಷವಾಗುವಿಕೆ: "ಕುಸುಮ ಸಂಕೋಚನಗಳಿಲ್ಲವೆಯೊಳಂ ಮುಗಿಯೆನಿಸುಗು" (ಶಬ್ದಮಂ. ೮೧). [ಇಲ್$_1$ + –ಅಮೆ]

**ಇಲ್ಲವೆ$_1$** 'ಇಲ್ಲಮೆ' ನೋ.

**ಇಲ್ಲವೆ$_2$** 'ಇಲ್$_1$' ಪರಾ.

**ಇಲ್ಲಾಂ** 'ಇಲ್$_1$' ಪರಾ.

**ಇಲ್ಲಾಮಲ್ಲಿ** (ನಾ). **೧.** ಚಾಡಿ. **೨.** ಚಾಡಿಹೇಳುವ ವ್ಯಕ್ತಿ. 'ಇಲ್ಲಾಮಲ್ಲಿತನ' ಪರಾ. [? / **ತೆಲು.** ಇಲ್ಲಾಮಲ್ಲಿ]

**ಇಲ್ಲಾಮಲ್ಲಿತನ** (ನಾ). ಚಾಡಿಕೋರತನ; ಪಿಶುನತ್ವ (೬).

[ಇಲ್ಲಾಮಲ್ಲಿ + –ತನ]

**ಇಲ್ಲಾರ** (ನಾ). = ಇಲ್ಲಣ (ಸ್ಯಾಂಡರ್, ಗ್ಯಾರಿಟ್).

ಇಲ್ಲಾರಕಟ್ಟು=ಹೊಗೆಹಿಡಿ; ಇಲ್ಲಣಕಟ್ಟು; ಇಲ್ಲಣ ತುಂಬಿಕೊ; ಕಾಡಿಗೆಕಟ್ಟು (೦ೀವ್). [?]

**ಇಲ್ಲಾರಖಂಡಿ** (ನಾ). ಹೊಗೆಕಂಡಿ ; ಚಿಮಣಿ ; ಹೊಗೆ ಹೋಗಲು ಮಾಡಿರುವ ಕೊಳವೆ ಅಥವಾ ರಂಧ್ರ (ರೀವ್). [ಇಲ್ಲಾರ + ಖಂಡಿ$_1$ (< ಕಂಡಿ$_1$)]

**ಇಲ್ಲಿ, ಇಲಿ$_2$** (ನಾ). ಈ ಸ್ಥಳ ; ಈಯೆಡೆ : ತುಂಗೋಚ್ಚಭಕ್ತಿವಶದಿಂ ತೊಱೆದಿಲ್ಲಿ ದೇಹಂ (ಎಕ. II, ೧೦೫-೨ ; 700) ; ಪುರಾಕೃತಮಿಲ್ಲಿ ಸಂಧಿಕ್ಕುಂ (ಇಅ. X, ೬೧-೮ ; 700) ; ಇಲ್ಲಿಗಿದು ತಕ್ಕುದಿಲ್ಲಿಗೆ ಪೊಲ್ಲದಿದೆಂದಱಿದು (ಕವಿರಾ. ೨-೪) ; ಇಲ್ಲಿಯ ಪುರದ ಒಕ್ಕಲಿವರು (ಎಕ. III, ನಂಜನ. ೧೩೯-೭ ; 915) ; ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ (ಬಸವ. ೧೫೫). ಇಲಿ$_2$ : ಆರಿಲಿಗೆ ಬಂದವರು ಕೇಳೆನೆ ಕಾರಣವ (ನಿಭಾಗ. ೯-೨-೧೬).

**ಇಲ್ಲಿಂಮುನ್ನಂ** = ಇದಕ್ಕಿಂತ ಹಿಂದೆ; ಇದಕ್ಕಿಂತ ಮೊದಲು : ಇಲ್ಲಿಂಮುನ್ನಮೆ ತಿಳಿಕಿಸದಿರ್ಕುಮೆ ಮನೋಜವಿಜಯ ಗಜೇಂದ್ರಂ (ಮಲ್ಲಿಪು. ೫-೧೭). **ಇಲಿತನಕ, ಇಲ್ಲಿತನಕ** = **೧.** ಈವರೆಗೆ : ಇಲಿತನಕ ಸಮಬಲರ ಕಾಣದೆ ಕಲಹ ನೆಱೆ ಭಂಡಾರಿಸಿದುರ್ದು (ತೊರರಾ. ೬-೬-೫೯) ; ಇಲ್ಲಿತನಕ ಏನುಮಾಡುತ್ತಿದ್ದೆ, ಯಾಕೆ ಸುಮ್ಮನಿದ್ದೆ ? (ರೂಢಿ); ತಾವು ದಯವಿಟ್ಟು ಇಲ್ಲಿತನಕ ಬಂದಿರಿ (ರೂಢಿ). **ಇಲ್ಲಿವರಂ** = ಇಲ್ಲಿತನಕ; ಈ ಸ್ಥಳದವರೆಗೆ ; ಈಮಟ್ಟಿಗೆ : ಬೇಡವೇಬ್ಬುದೇ ಮಜ್ಜನಕನನಿಲ್ಲಿವರಮಿಂತಿದಾವುದು ಗಹನಂ (ಪಂರಾಮಾ. ೬-೧೧೬). [?]

**ಇಲ್ಲಿದ** (ನಾ). ಈ ಸ್ಥಳದವನು ; ಇಲ್ಲಿಯವನು ; ಇಲ್ಲಿ ಹುಟ್ಟಿದವನು : ಅಲ್ಲಿದಂ, ಇಲ್ಲಿದಂ, ಎಲ್ಲಿದಂ (ಶಮದ. ೧೧೧ ಪ್ರಯೋ) ; ಇಲ್ಲಿಯಣಂ, ಇಲ್ಲಿದಂ (ಶಬ್ದಾನು. ೪೨೨ ಪ್ರಯೋ) ; ನೆನೆವರೇಂ ಮರೆವರೇನಲ್ಲಿ ಇಲ್ಲಿದರಂ (ಗಿಳಿವಿಂ. ೬೯-೧೭). [ಇಲ್ಲಿ + -ದ]

**ಇಲ್ಲಿಯಣ** (ನಾ). = ಇಲ್ಲಿದ : ಅಲ್ಲಿ ಅದಂ ಮೇಣ್ ಪುಟ್ಟಿದಂ ಅಲ್ಲಿಯಣಂ ಅಲ್ಲಿದಂ ಏವಂ ಇಲ್ಲಿಯಣಂ, ಇಲ್ಲಿದಂ (ಶಬ್ದಾನು. ೪೨೨ ಪ್ರಯೋ). [ಇಲ್ಲಿ + -ಅಣ]

**ಇಲ್ಲೆ** 'ಇಲ್$_1$' ಪರಾ.

**ಇಲ್ವಲ** (ನಾ). **೧.** ಮೃಗಶಿರಾ ನಕ್ಷತ್ರದ ಅಗ್ರಭಾಗದಲ್ಲಿರುವ ತಾರೆಗಳು : "ಮೃಗಶೀರ್ಷಮಗ್ರಹಾಯಣಿ ಮೃಗಶಿರದ ಪೆಸರ್ ತದಗ್ರದೇಶಸ್ಥಿತ ತಾರೆಗಳಿಲ್ವಲಂಗಳೆನಿಕುಂ" (ವಸ್ತುಕೋ. ೧೪-೮೦). **೨.** ಒಬ್ಬ ರಾಕ್ಷಸ; ವಾತಾಪಿಯ ಅಣ್ಣ. [ಸಂ.]

**ಇವ** 'ಇದು' ಪರಾ.

**ಇವಂ** 'ಇದು' ಪರಾ.

**ಇವಂದಿರ್** 'ಇದು' ಪರಾ.

**ಇವತ್ತು** 'ಈಪೊಟ್ತು' ನೋ.

**ಇವದಿರು** 'ಇದು' ಪರಾ.

**ಇವನ್** 'ಇದು' ಪರಾ.

**ಇವನು** 'ಇದು' ಪರಾ.

**ಇವಳ್** 'ಇದು' ಪರಾ.

**ಇವಳು** 'ಇದು' ಪರಾ.

**ಇವು** 'ಇದು' ಪರಾ.

**ಇವುಬಿ (?)** (ನಾ). ಎರಡು ಕೊಳಗ (?) : ನೇಱಲೆಯಂ ಮಾಯೊತ್ತಿಂ ನಡಪ್ಪಳ್ಳಿ ಮೂಳಾಣಂ ನಡಲು ಎಪ್ಪರ್ಳ್ಳಿದತ್ತಿಱೆ ಕಿಱಿಯ ಒರಲ್ಗೋಡು ಇವುಬಿಾ ಬತ್ತ ಇಕು ಅಕ್ಕಿ ಇಕುಳಂ ತುಪ್ಪ ಇದು ಪ್ರವಾಹಂ (ಎಕ. VI, ಚಿಕ್ಕಮ. ೯೫-೧೬ ; 1025). [< ಇರ್ವಳ್ಳ ?]

**ಇವೆ** 'ಇರ್$_1$' ಪರಾ.

**ಇವೊತ್ತು** 'ಈಪೊಟ್ತು' ನೋ.

**ಇಶಾಡೀಮಾವು** 'ಇಷಾಢೀಮಾವು' ನೋ.

**ಇಷ** (ನಾ). **೧.** ಆಶ್ವಯುಜ ಮಾಸ : ತನಗರಸುವೆರಸು ಪುರಜನಮನಿತುಮಿಷಂ ಚೈತ್ರಮೆಂಬ ತಿಂಗಳೊಳಖಿಳಾರ್ಚನೆವೆರಸು ಜಾತ್ರೆ ನೆರೆಯದೊಡನಿತುಮನೊರ್ಮೊದಲೆ ವಿಳಯದೊಳ್ ನೆರವಿಸುಗುಂ (ಯಶೋಚ. ೧-೩೫). **೨.** ರಸವುಳ್ಳದು ; ಶಕ್ತಿಯುತವಾದುದು. [ಸಂ.]

**ಇಷಾಢಿ** 'ಈಸಾಡ' ನೋ.

**ಇಷಾಢೀಮಾವು, ಇಶಾಡೀಮಾವು** (ನಾ). ಒಂದು ಜಾತಿಯ ಮಾವು : ಮನೆಯೊಳಗಿಂದ ಮೂರು ದೊಡ್ಡ ಇಷಾಢೀಮಾವಿನ ಹಣ್ಣುಗಳನ್ನು ಒಯ್ಯಲೂ ಮರೆಯಲಿಲ್ಲ (ಆಚೋಲೀ. ೮೦). **ಇಶಾಡೀಮಾವು** (ಉಕ). [ಇಷಾಢಿ (< ಈಸಾಡ) + ಮಾವು]

**ಇಷಾರೆ, ಹಿಷಾರೆ** (ನಾ). ಸಂಕೇತ ; ಸನ್ನೆ ; ಸೂಚನೆ ; ಎಚ್ಚರಿಕೆ : ಇಲ್ಲಿ ಈಗ ಎಂತಹ ಗದ್ದಲವೂ ಆಗಕೂಡದು . . . ಎಂದು ಡಾಕ್ಟರರು ಕೊಟ್ಟ ಇಷಾರೆಯನ್ನು . . . ಜನರಿಗೆ ತಿಳಿಸಿ (ಮೂರುದಾ. ೩೧೨). **ಹಿಷಾರೆ** : ಕಪಿತಾನ್ ಮಾವಿನಿ ಸಾಹೇಬರಿಗೆ ಹಿಷಾರೆ ಮಾಡಿ ಇದ್ದೇವೆ (ರಾಜೇಂದ್ರ. ೧೦೭) ; ನನಗೆ ಹಿಷಾರೆ ಕೊಡುವಂತೆ ಹೇಳಿದರು (ಕಲಸಿ. ೨೪೫) ; ಕುದುರೆಗೆ ಹಿಷಾರೆ ಕತ್ತೆಗೆ ಲತ್ತೆ ಎಂಬ ಗಾದೆ ಕೇಳಿಬಲ್ಲೆಯಾ (ವಾಗ್ದೇವಿ. ೫೧).

[← ಅರ. ಮರಾ. ಇಶಾರತ್, ಇಶಾರಾ ; ಹಿಂ. ಇಶಾರಾ]

**ಇಷೀಕಾಸ್ತ್ರ** (ನಾ). (ಅತಿಶಯ ಶಕ್ತಿಯುಳ್ಳ) ಒಂದು ಬಗೆಯ ಅಸ್ತ್ರ : ಧರ್ಮಮಂ ಕಾವುದರಿನಾನಿಷೀಕಾಸ್ತ್ರಮುದೆಂದಪೆಂ (ಸೌನಂದ. ೧೨-೩೮). [ಸಂ.]

**ಇಷೀಕೆ** (ನಾ). **೧.** ಆನೆಯ ಕಣ್ಣುಗುಡ್ಡೆ. **೨.** ಕಾಶ ಎಂಬ ಹುಲ್ಲು ; ಕಾಗಬ್ಬು : "ಇಷೀಕಾ, ಕಾಶಃ – ಈ ೨ ಕಾಗಬ್ಬು" (ಹಲಾಯು. ೩೨-೩೭). **೩.** ಚಿತ್ರಕಾರನ ಕುಂಚ. **೪.** ಚಿನಿವಾರರು (ಅಕ್ಕಸಾಲಿಗರು) ಚಿನ್ನವು ಮೂಸೆಯಲ್ಲಿ ಕರಗಿದೆಯೋ ಇಲ್ಲವೋ ಎಂದು ಪರೀಕ್ಷಿಸಲು ಬಳಸುವ ಕಬ್ಬಿಣದ ಅಥವಾ ಮರದ ಕಡ್ಡಿ. [ಸಂ. ಇಷೀಕಾ]

**ಇಷು** (ನಾ). **೧.** ಅಂಬು ; ಬಾಣ. **೨.** ಐದು ಎಂಬ ಸಂಖ್ಯೆಯ ಸಂಕೇತ : ಇಷುಪತ್ರಂ . . . ಐದಱ ನಾಮಂ (ವ್ಯವಹಾ. ೯-೫). [ಸಂ.]

**ಇಷುಗತಿ** (ನಾ). ಬಿಲ್ಲಿನಿಂದ ಬಿಟ್ಟ ಬಾಣದ ನಡೆ ; ನೇರವಾದ ನಡೆ : ನಿರ್ಮುಕ್ತ ಬಾಣದಂತೆ ಋಜುವಪ್ಪ ಇಷುಗತಿಯುಂ (ತತ್ತ್ವಪ್ರ. ೧೦೧). [ಇಷು + ಗತಿ]

**ಇಷುಧಿ** (ನಾ). ಬಾಣಗಳನ್ನಿಡುವ ಚೀಲ ; ಬತ್ತಳಿಕೆ : "ತೂಣೀರಂ, . . . ಇಷುಧಿಃ, ಬಾಣಾಶ್ರಯಃ, ಕಾಳಾಪಃ – ಈ ೮ ಮೂಡಿಗೆ" (ಹಲಾಯು. ೭೬-೩೧೧). [ಸಂ.]

**ಇಷುಯೋಗ** (ನಾ). [ಜ್ಯೋತಿ] ಜನನಕಾಲದಲ್ಲಿ ಗ್ರಹಸ್ಥಾನದಿಂದ ಉಂಟಾಗುವ ಯೋಗಗಳಲ್ಲಿ ಒಂದು : ಜನನ ಕಾಲದಲ್ಲಿ ಎಲ್ಲ ಗ್ರಹಗಳೂ ಲಗ್ನದಿಂದ . . . ನಾಲ್ಕನೆಯ ಸ್ಥಾನದಿಂದ ನಾಲ್ಕು ಸ್ಥಾನಗಳೊಳಗೆ (ಏಳನೆಯ ಸ್ಥಾನಪೂರ್ತಿ) ಇದ್ದರೆ ಇಷುಯೋಗ (ಜಾತತಿ. ೧೩-೭ ಟೀಕೆ). [ಇಷು + ಯೋಗ]

**ಇಷುವಿದ್ಯೆ** (ನಾ). ಬಾಣಗಳನ್ನು ಪ್ರಯೋಗಿಸುವ ವಿದ್ಯೆ ; ಧನುರ್ವಿದ್ಯೆ : ದ್ರೋಣಂ ಗಡಮಿಷುವಿದ್ಯೆಗೆ ಜಾಣಂ ಗಡಮೆಂದು ಕೇಳ್ದು ಕೌರವರ್ಗೆಲ್ಲಂ ಪ್ರಾಣಂಬರ್ಪಾಕೃತಿಯೊಳೆ ಬಾಣಾಸನ ಬಾಣಪಾಣಿ ಕರ್ಣಂ ಬಂದಂ (ಪಂಪಭಾ. ೨-೫೭).

**ಇಷುವಿದ್ಯಾಪಾರಗ** = ಬಾಣಪ್ರಯೋಗದಲ್ಲಿ ನಿಪುಣ : ಇಷುವಿದ್ಯಾಪಾರಗನೆನಿಸಿದುದು ಬಲ್ಮೆ ವೈಕರ್ತನನಾ (ಪಂಪಭಾ. ೧–೧೦೪).
[ಇಷು + ವಿದ್ಯೆ]

**ಇಷೂದ್ಭವ** (ನಾ). [ಜ್ಯೋತಿ] ಇಷುಯೋಗದಲ್ಲಿ ಹುಟ್ಟಿದ ವ್ಯಕ್ತಿ : ಅತಿಶಯದಾನಿ ಯೂಪಜನಿತಂ ವಧಶೀಲಮಿಷೂದ್ಭವಂ(ಜಾತತಿ.೧೩–೧೮).
[ಇಷು + ಉದ್ಭವ]

**ಇಷ್ಟ₁** (ಗು). ೧. ಅಪೇಕ್ಷಿಸಲ್ಪಟ್ಟ; ಬಯಸಲ್ಪಟ್ಟ. ೨. ಹಿತವಾದ; ಸುಖಕರವಾದ; ಪ್ರಿಯವಾದ: ಚಂದ್ರನಂತೆನ್ನ ಕಾವ್ಯದ ರಸಂ ಸುಮನಸರ್ಗೆ ಇಷ್ಟಮಾಗದೆ ಮಾಣದು (ಜೈ ಮಿ ಭಾ. ೧–೯). (ನಾ). ೩. ಪ್ರೀತಿಪಾತ್ರ; ಬೇಕಾದವನು : ನಂಟರಿಷ್ಟರೊಡನೆ ಕಲೆತು ಅವರು ಸುಖವಾಗಿ ಕಾಲಕಳೆದರು (ರೂಢಿ). ೪. ಬಯಕೆ; ಅಪೇಕ್ಷೆ: ಅನುಕೂಲಪವನನಿಂ ಜೀವನಿಷ್ಟದಿಂ. . . ಶಬ್ದದ್ರವ್ಯಂ ಜನಿಯಿಸುಗುಂ (ಶಮದ. ೨); ಇಷ್ಟಮಂ ಮಾಳ್ಪ ದೈವಂ ದಯಾಖ್ಯವೆನಿಕ್ಕು (ಮಂಗರಾ. ೮–೨೭). [ಸಂ.]

**ಇಷ್ಟ₂** (ಗು). ೧. ಹೋಮಮಾಡಲ್ಪಟ್ಟ; ಯಜ್ಞಮಾಡಲ್ಪಟ್ಟ. (ನಾ). ೨. "ಯಜ್ಞಕರ್ಮ" (ಅಮರ. ಟೀಕೆ) : "ಇಷ್ಟಂ ಯಾಗಾರ್ಥದೊಳ್" (ವಸ್ತುಕೋ. ೧೧–೪೩); ಇಷ್ಟವೆಂದರೆ ಅಗ್ನಿಹೋತ್ರಾದಿಗಳು (ಬ್ರಹ್ಮಭಾ. ೪೩). [ಸಂ.]

**ಇಷ್ಟಕಾಚಯನ** (ನಾ). ೧. ಇಟ್ಟಿಗೆಗಳನ್ನು ಸಂಗ್ರಹಿಸುವುದು, —ರಾಶಿ ಹಾಕುವುದು; ಇಟ್ಟಿಗೆಗಳಿಂದ ವೇದಿಕೆಯನ್ನು ನಿರ್ಮಿಸುವುದು. ೨. ಇಟ್ಟಿಗೆಗಳ ರಾಶಿ; ಇಟ್ಟಿಗೆಗಳಿಂದ ರಚಿತವಾದ ಆವರಣ ಅಥವಾ ವೇದಿಕೆ; ಯಜ್ಞವೇದಿಕೆ: ಅಧ್ವರೋಪಕ್ರಮಕೆ ವಿನುತ ಸಂಕಲ್ಪಮಂ ಮಾಡಿ ರಚಿಸಿದರಿಷ್ಟಕಾಚಯನಮಂ ಕ್ರಮದೊಳು (ಜೈಮಿಭಾ. ೩೩–೩೩). [ಸಂ. (ಇಷ್ಟಕಾ + ಚಯನ)]

**ಇಷ್ಟಕಾಪಥ** (ನಾ). ಲಾಮಂಚದ ಬೇರು : "ಕರೇಬಾಳದ ಬೇರು" (ಗಂಗಾಮ. ೩೫). [ಸಂ.]

**ಇಷ್ಟಕಾರಿ** (ನಾ). ಪ್ರಿಯವನ್ನುಂಟುಮಾಡುವವನು; ಬೇಕಾದದ್ದನ್ನು ನಡಸಿಕೊಡುವವನು : "ಕ್ಷೇಮಗೈವವನಿಷ್ಟಕಾರಿಯೆನಿಸಿಕ್ಕು" (ಮಂಗರಾ. ೬೮–೮). [< ಸಂ. ಇಷ್ಟಕಾರಿನ್]

**ಇಷ್ಟಕೆ** (ನಾ). ಇಟ್ಟಿಗೆ (ಕ). [ಸಂ. ಇಷ್ಟಕಾ]

**ಇಷ್ಟಗಂಧ** (ನಾ). ೧. ಹಿತವಾದ ವಾಸನೆ; ಸುಗಂಧ. ೨. ಸುವಾಸನೆಯುಳ್ಳ ವಸ್ತು. [ಇಷ್ಟ₁ + ಗಂಧ]

**ಇಷ್ಟಗಂಧಾಧಿವಾಸ** (ನಾ). ಮೈಗೆ ಸುಗಂಧವಸ್ತುವನ್ನು ಲೇಪಿಸಿಕೊಳ್ಳುವುದು : "ಅಂಗವಿಲೇಪನಂ . . . ಇಷ್ಟಗಂಧಾಧಿವಾಸಮದು ಸಂಸ್ಕಾರಂ" (ವಸ್ತುಕೋ. ೭೬–೮). [ಇಷ್ಟಗಂಧ + ಅಧಿವಾಸ]

**ಇಷ್ಟಗುಣೆ** (ನಾ). ಬಯಸುವಂಥ ಗುಣವುಳ್ಳವಳು; ಪ್ರಿಯವಾದ, ಹಿತವಾದ ಗುಣಗಳುಳ್ಳವಳು : ಇಷ್ಟಗುಣೆಯರೆಣ್ಬರು ಮತ್ತೆ ರಾಣಿಯ ರಷ್ಟೈಶ್ವರ್ಯ ಲಕ್ಷ್ಮಿಯರು (ಹದಿಬ. ೧–೧೫). [ಸಂ. ಇಷ್ಟಗುಣಾ]

**ಇಷ್ಟಗೋಷ್ಠಿ** (ನಾ). ೧. ಬೇಕಾದವರ ಸಹವಾಸ; ಪ್ರೀತಿಪಾತ್ರರ ಕೂಟ. ೨. ಪ್ರೀತಿಪಾತ್ರರ ಅಥವಾ ಬೇಕಾದವರ ಸಹವಾಸದಲ್ಲಿರುವವನು : ನಿಮ್ಮಂಥಾ ಬ್ರಾಹ್ಮಣರೊಡನೆ ಇಷ್ಟಗೋಷ್ಠಿಗಳಾಗಿರುವ ಭಾಗ್ಯವು ಎಂದಿಗಾಗುವುದೊ (ಕೃವಾವಿ. ೭). [ಇಷ್ಟ₁ + ಗೋಷ್ಠಿ]

**ಇಷ್ಟತ್ವ** (ನಾ). [ತತ್ತ್ವಶಾ] ಎಲ್ಲ ವಸ್ತುಗಳಲ್ಲಿಯೂ ಇರುವ ಐದು ಧರ್ಮಗಳಲ್ಲಿ ಒಂದು : ಲೋಕದಲ್ಲಿ ಸಮಸ್ತ ವಸ್ತುಗಳಲ್ಲೂ ಅಸ್ತಿತ್ವ, ಪ್ರಕಾಶ, ಇಷ್ಟತ್ವ, ನಾಮ, ರೂಪ – ಈ ಐದು ಅಂಶಗಳು ವ್ಯವಹರಿಸಲ್ಪಡುವುವು (ಹಿಂದಸಾ. ೨೨೫). [ಸಂ.]

**ಇಷ್ಟದಾನಿ** (ನಾ). ಬಯಸಿದ್ದನ್ನು ಕೊಡುವವನು : ಮಲ್ಲಪನಲ್ಲದೊ ನಿಷ್ಟದಾನಿಯೋ (ಶಾಂತಿಪು. ೧–೪೮). [< ಸಂ. ಇಷ್ಟದಾನಿನ್]

**ಇಷ್ಟದೇವತೆ** (ನಾ). ಇಷ್ಟವಾದ ದೇವತೆ; ತನಗೆ ಅತ್ಯಂತ ಪ್ರಿಯವಾದ ಆರಾಧ್ಯದೈವ : ಮಾನವರ್ಗೆದೆ ಸೌಖ್ಯಂ ಪೆರ್ಚಲೆಂದೊಮ್ಮೆ ತಾನಿಷ್ಟದೇವತೆಯ ಬೇಡಿಕೊಂಡಿರ್ದಡೆ (ಜೈ ಮಿ ಭಾ. ೩–೨೨); ಶ್ರೀಮಜ್ಜಗನ್ನಾಥದಾಸರಾಯರವರ ಕುಲದೈವವೂ ಇಷ್ಟದೈವವೂ ಶ್ರೀ ಲಕ್ಷ್ಮೀನೃಸಿಂಹರೂಪವು (ಹಸಾರ. ೧–೧ ಟೀಕೆ).
[ಸಂ. ಇಷ್ಟದೇವತಾ (ಇಷ್ಟ₁ + ದೇವತಾ)]

**ಇಷ್ಟದೈವ** (ನಾ). = ಇಷ್ಟದೇವತೆ : ಇಂದುಧರನಿಷ್ಟದೈವಂ ತಂದೆ ಗುಣಾಂಭೋಧಿ ಕೇಶವಂ (ಸೌಇಇ. XX, ೪೯–೪೩ ; 1076); ಉದಯಕಾಲದೊಳೆದ್ದೊಲಿದಿಷ್ಟದೈವದ ಪದಗಳ ಪಾಡುವಂದದೊಳು (ಹದಿಬ. ೨–೧೫). [ಇಷ್ಟ₁ + ದೈವ]

**ಇಷ್ಟಪಡು** (ಕ್ರಿ). ಅಪೇಕ್ಷಿಸು; ಒಪ್ಪು; ಸಮ್ಮತಿಸು : ಆತನ ಜತೆಗೆ ಹೋಗಲು ನಾನು ಇಷ್ಟಪಡುವುದಿಲ್ಲ (ರೂಢಿ); ಅವನೇಕೋ ಈ ಹೆಣ್ಣನ್ನು ಮದುವೆಯಾಗಲು ಇಷ್ಟಪಡುವುದಿಲ್ಲ (ರೂಢಿ). [ಇಷ್ಟ₁ + ಪಡು₁]

**ಇಷ್ಟಪ್ರಾಪ್ತಿ** (ನಾ). ಬಯಸಿದ್ದರ ಲಾಭ; ಬಯಸಿದ್ದು ದೊರೆಯುವಿಕೆ : ಇಷ್ಟಪ್ರಾಪ್ತಿ ಅನಿಷ್ಟನಿವೃತ್ತಿ ಈ ಎರಡೂ ಸುಖಕ್ಕೆ ಕಾರಣವಾದ ವಿಷಯಗಳು (ರೂಢಿ). [ಇಷ್ಟ + ಪ್ರಾಪ್ತಿ]

**ಇಷ್ಟಫಲ** (ನಾ). ಬಯಸಿದ ಫಲ; ಅಪೇಕ್ಷಿಸಿದ ಪ್ರಯೋಜನ; ವರ: ಕುಲದೇವತೆಯೆಂದು ಕೊಟ್ಟರ್ ತಂತಮ್ಮಿಷ್ಟಫಲವ ಪಡೆವರೆನ್ನಿಂದ (ಹದಿಬ. ೧–೪೧). [ಇಷ್ಟ₁ + ಫಲ]

**ಇಷ್ಟಮಧುಕ** (ನಾ). ಅತಿಮಧುರವೆಂಬ ಮೂಲಿಕೆ; ಜ್ಯೇಷ್ಠಮಧು (ಕ). [< ಸಂ. ಯಷ್ಟಿಮಧುಕ]

**ಇಷ್ಟಯೋಗ** (ನಾ). ಪ್ರಿಯರ ಅಥವಾ ಪ್ರಿಯವಾದ ವಸ್ತುವಿನ ಸಮಾಗಮ : ಎನಿಶಿಷ್ಟಯೋಗದೊಳ್ ಸುಖಮನಿತೆ ಮನೋದುಃಖಮದಜಗಲ್ಕೆಯೊಳಿಂದಲ್ತೆ ನಿವೃತ್ತಿಯೊಳೆಸೆವರ್ ಸಜ್ಜನರ್ (ಚಂದ್ರಪು. ೨–೩೮). [ಇಷ್ಟ₁ + ಯೋಗ]

**ಇಷ್ಟಲಿಂಗ** (ನಾ). ೧. [ವೀಶೈ] ದೇಹದ ಮೇಲೆ ಧರಿಸುವುದಕ್ಕಾಗಿ ದೀಕ್ಷಾಕಾಲದಲ್ಲಿ ಗುರು ಕೊಡುವ ಲಿಂಗ: "ಶ್ರೀ ಗುರು ಶಿವದೀಕ್ಷೆಯಿಂ ದಿತ್ತುದೇ ಯಿಷ್ಟಲಿಂಗವೆನಿಸುವದು" (ವಿವೇಕ. ೧೨೩); ಲಿಂಗವು ಸ್ಥಾವರ, ಇಷ್ಟ ಎಂದು ಎರಡು ವಿಧ (ಭಾರದ. ೨೪೯). 'ಪ್ರಾಣಲಿಂಗ', 'ಭಾವಲಿಂಗ' ಪರಾ. ೨. [ವ್ಯಾಕ] ವಿಶೇಷ್ಯ ವಿಶೇಷಣಗಳಲ್ಲಿ ಪರಸ್ಪರ ಅನುಸಾರವಾದ ಲಿಂಗ: ನೆಲಸಿರ್ದ ವಿಶೇಷಣದಿಷ್ಟಲಿಂಗಮೆನಿಪುದು ವಿಶೇಷ್ಯಂ (ಶಮದ. ೧೫೭). [ಇಷ್ಟ₁ + ಲಿಂಗ]

**ಇಷ್ಟವಯಸ್ಯೆ** (ನಾ). ನಚ್ಚಿನ ಗೆಳತಿ; ಪ್ರಿಯಸಖಿ: ಸವತಿಯರ್ಕಳೊಳಿಷ್ಟವಯಸ್ಯೆಯಂದದಿಂದಿರು (ಶಾಕುಂತ. ೫೭–೯೭).
[ಸಂ. ಇಷ್ಟವಯಸ್ಯಾ]

**ಇಷ್ಟವರಣ** (ನಾ). ತನಗೆ ಬೇಕಾದುದನ್ನು ಆಯುವಿಕೆ; ಚುನಾವಣೆ: ಅದು ಮುಖ್ಯವಾಗಿ ಪ್ರಜೆಗಳು ಸ್ವತಂತ್ರವಾಗಿ ನಡೆಸುವ ಇಷ್ಟವರಣ ಅಥವಾ ಚುನಾವಣೆ (ಎಲೆಕ್ಷನ್) (ರಾಜ್ಯಶಾ. ೫೨).
[ಇಷ್ಟ₁ + ವರಣ]

**ಇಷ್ಟವಿಯೋಗ** (ನಾ). ಪ್ರೀತಿಪಾತ್ರರಾದವರ ಅಗಲಿಕೆ; ಪ್ರಿಯವಸ್ತುವನ್ನು ಕಳೆದುಕೊಳ್ಳುವುದು : ಸಮನಿಸಿದನಿಷ್ಟಸಂಯೋಗಮನಿಷ್ಟವಿಯೋಗಮಂ ಚತುರ್ಗತಿಗಳೊಳಂ ಭ್ರಮಿಯಿಸಿ ಕೈಕೊಳ್ಗುಂ ತಾನೆ ಮತ್ತೆ ನೆರಮಿಲ್ಲ ದೇಹಿಗಿಂತೇಕತ್ವಂ (ಮಲ್ಲಿಪು. ೧೪–೬೭).
[ಇಷ್ಟ₁ + ವಿಯೋಗ]

**ಇಷ್ಟವಿರಹ** (ನಾ). = ಇಷ್ಟವಿಯೋಗ: ಇಷ್ಟವಿರಹಕೆ ಮಿಗಿಲ್ ಸಂಕಟದ ಶಿಕ್ಷೆಯಂ ಸೃಜಿಸಬಲ್ಲನೆ ನರಕಶಿಕ್ಷಾಚಾರ್ಯನಾದೊಡಂ (ಶ್ರೀರಾಮಾ. ೧೬೩-೩೧೮). [ಇಷ್ಟ$_1$ + ವಿರಹ]

**ಇಷ್ಟಸಿದ್ಧಿ** (ನಾ). ಬಯಸಿದ್ದು ಕೈಗೂಡುವಿಕೆ; ಮನೋರಥವು ನೆರವೇರುವುದು: ಜನಮಂಗೀಕರಿಪುದು ನೆಟ್ಟನೆ . . . ಇಷ್ಟಸಿದ್ಧಿಗಳ್ ನೆಲಸಿನಿಂದ ಕಾರಣದೆ ಶಬ್ದಮಣಿದರ್ಪಣಮಂ (ಶಮದ. ನ. ೭); ನಿಮ್ಮಿಷ್ಟಸಿದ್ಧಿಯ ಬೆಳಸು ಫಲವಾಯ್ತೇಕೆ ನೋವಿನ್ನು (ಕುವ್ಯಾದ್ರೋ. ೭-೧೪); ಆ ತಾಯಿ ಬಂದಿಷ್ಟಸಿದ್ಧಿಯಂ ಕೊಡೆ ಪಡೆದನು (ವೀಶೈಪು. ೮-೭-೨೭). [ಇಷ್ಟ$_1$ + ಸಿದ್ಧಿ]

**ಇಷ್ಟಾಪೂರ್ತ** (ನಾ). ಇಷ್ಟಕರ್ಮ ಮತ್ತು ಪೂರ್ತಕರ್ಮ. ℙ ಇಷ್ಟಕರ್ಮವೆಂದರೆ ಯಜ್ಞಯಾಗಾದಿಗಳು, ಪೂರ್ತಕರ್ಮವೆಂದರೆ ಕೆರೆ, ಕಟ್ಟೆ, ಬಾವಿ, ತೋಪು ಮುಂತಾದುವುಗಳ ರಚನೆಯ ರೂಪವಾದ ಧರ್ಮಕಾರ್ಯ: ಯಿಷ್ಟಾಪೂರ್ತಫಲಂ (ಎಇ. IV, ೩೧೭-೨೩ ; 1075). [ಸಂ.]

**ಇಷ್ಟಾಪೂರ್ತಿ** (ನಾ). = ಇಷ್ಟಸಿದ್ಧಿ : ಅವನಂತೂ ಇಷ್ಟಾಪೂರ್ತಿಯಾಗಿ ನಲಿಯುತ್ತಿದ್ದಾನೆ (ರೂಢಿ). [ಸಂ. (ಇಷ್ಟ + ಪೂರ್ತಿ)]

**ಇಷ್ಟಾರ್ಥ** (ನಾ). ಬೇಡಿದ ಫಲ; ಅಪೇಕ್ಷಿಸಿದ ಪ್ರಯೋಜನ; ಬಯಸಿದ್ದು: ಇಂದ್ರಾದಿಗಳನವರ್ ಮುದದೊಳಿಷ್ಟಾರ್ಥಮಂ ಸಲಿಸಿದರ್ (ಜೈಮಿಭಾ. ೫-೪೭); ಇಷ್ಟಾರ್ಥಮಂ ಸಂಪಾದಿಸಲ್ಕೆ ಪೂಣ್ದೆಡೆಯೊಳನಿಷ್ಟಮಾದರ್ಥಂ ಲಭಿಸಿತೆಂದು ಪೇೞ್ವುದುಂ ವಿಷಮಾಲಂಕಾರಂ (ಅಪ್ರತಿ. ೮೬-೧೨); ಅವನ ಇಷ್ಟಾರ್ಥ ಕೈಗೂಡಿತು (ರೂಢಿ). [ಇಷ್ಟ$_1$ + ಅರ್ಥ]

**ಇಷ್ಟಾರ್ಥಕರ** (ಗು). ಬಯಸಿದ್ದನ್ನು ಉಂಟುಮಾಡುವ, —ಕೈಗೂಡಿಸುವ: ಸಿದ್ಧಂ ನಮಾದ್ಯಕ್ಷರಂಗಳನಿಷ್ಟಾರ್ಥಕರಂಗಳಂ (ಸುಕುಮಾ. ೨-೫೭). [ಸಂ.]

**ಇಷ್ಟಾರ್ಥಗೊಡಿಸು** (ಕ್ರಿ). ಬಯಸಿದ್ದನ್ನು ಕೊಡಿಸು : ಭುವನದ ಬಡವರ ಬಿನ್ನಹವನು ತಂದವನೀಶ್ವರರಿಗೆ ಪೇಳಿ ತವಕದೆ ಕಾಣಿಸಿ ಯಿಷ್ಟಾರ್ಥಗೊಡಿಸುತಿರ್ಪವರ ಕೇರಿಗಳೊಪ್ಪುತಿಹುವು (ಕಂನವಿ. ೬-೪೬). [ಇಷ್ಟಾರ್ಥ + ಕೊಡಿಸು]

**ಇಷ್ಟಾರ್ಥಪ್ರಕಟನ** (ನಾ). ಮನಸ್ಸಿನ ಅಭಿಪ್ರಾಯವನ್ನು ಹೊರಗೆಡಹುವುದು: ಪ್ರಕರಣದಿಂ ಶಬ್ದಾಂತರದ ಕೂಟದಿಂದಭಿನಯಂಗಳಿಂದಿಷ್ಟಾರ್ಥಪ್ರಕಟನಮುಕ್ಕುಮನೇಕ ಪ್ರಕಾರಮರ್ಥಂ ಪದಕ್ಕೆ ಸಂಭವಿಸುವೊಡಂ (ಕಾವ್ಯಾವ. ೪೩೧). [ಇಷ್ಟಾರ್ಥ + ಪ್ರಕಟನ]

**ಇಷ್ಟಾರ್ಥಸಿದ್ಧಿ** (ನಾ). ಬಯಕೆ ಈಡೇರುವುದು: ಅರಸುಗಳಿಗಾದರೋ ಇಷ್ಟಾರ್ಥಸಿದ್ಧಿಯ ಸಂಗಡಲೇ ದುಃಖ ತೊಡಗಿರುವುದು (ಶಾಕುಂತ. ೬೨-೨೪). [ಇಷ್ಟಾರ್ಥ + ಸಿದ್ಧಿ]

**ಇಷ್ಟಾಲಾಪ** (ನಾ). ಪ್ರೀತಿಯ ಮಾತು, —ಸಂಭಾಷಣೆ: ದೈವವು ಅನುಕೂಲವಾದರೆ ಶ್ರೇಯಸ್ಸಿನ ಮೇಲೆ ಶ್ರೇಯಸ್ಸು ಎಂದು ಇಷ್ಟಾಲಾಪಗಳನಾಡಿಕೊಳುತ ಶುಕನಾಸನ ಕೈಯ ಹಿಡಿದುಕೊಂಡು (ವಚಕಾ ೫). [ಇಷ್ಟ + ಆಲಾಪ]

**ಇಷ್ಟಾವಾಪ್ತಿ** (ನಾ). ಇಷ್ಟಾರ್ಥವನ್ನು ಪಡೆಯುವುದು; ಬಯಕೆ ಈಡೇರುವಿಕೆ: ಮುನ್ನಂ ನೆರಪಿದ ಸುಕೃತಂ ಪಕ್ವಮಾದಲ್ಲದಂದಾವುದುಮಿಷ್ಟಾವಾಪ್ತಿಯಿಲ್ಲ (ಪುಷ್ಪಪು. ೩-೧೦೧). [ಇಷ್ಟ + ಅವಾಪ್ತಿ]

**ಇಷ್ಟಿ** (ನಾ). **೧.** ಯಾಗ; ಯಜ್ಞ. **೨.** ಪೂಜೆ: ಇಷ್ಟಿಯೆಂದರೆ ಪೂಜೆಯಾ ಪೂಜೆಯಲ್ಲಿ ಮನ ನಟ್ಟಹುದೆ ಇಷ್ಟವು (ಲಶಿಚಿ. ೪೯-೪). **೩.** ಮನಸ್ಸಿನ ಇಚ್ಛೆ; ಬಯಕೆ; ಕೋರಿಕೆ: "ಇಷ್ಟಿ ಮಖೇಚ್ಛಾವಚನಂ" (ವಸ್ತುಕೋ. ೧೩೦-೭೨). [ಸಂ.]

**ಇಷ್ಟಿಕೆ** (ನಾ). ಇಟ್ಟಿಗೆ (ದಕ. ೬). [ಸಂ. ಇಷ್ಟಿಕಾ]

**ಇಷ್ಟು, ಈಟು$_4$** (ನಾ). **೧.** ಈ ಪರಿಮಾಣ; ಈ ಅಳತೆ: ಯಿಂತೀಯಿಷ್ಟುಜ ಕ್ರಿಯಲ್ಲಿ ಸಂತತ ವ್ರತವಿರಬೇಕು (ಏಲೇಶ್ವ. ೮೧); ಧಾರೆಣ್ಣೆಗಾಣಕ್ಕರಸೊಲೆಗೆ ಮೇಟಗೊಳಗ ಇಷ್ಟುವನೂ . . . ಕೊಟ್ಟರು (ಸೌಇಇ. IX-i, ೩೮೭-೨೧ ; 1297); ಇಷ್ಟು ದೊರಕಿದರೆ ಮತ್ತಿಷ್ಟು ಬೇಕೆಂಬಾಸೆ (ಪುರಂದ. ೨-೧೫೧-೩); ಇಷ್ಟ ನೀ ಕೀರ್ತಿಸಲಾತನ ಮೇಲೊಂದು ಕಷ್ಟವ ನೆನೆದು ಪೂಸರಳ ವೃಷ್ಟಿಯು ತೋಜುವೆ (ಮೋಹತ. ೬-೧೨). (ಗು). **೨.** ಕೊಂಚ; ತುಸು; ಸ್ವಲ್ಪ: ಸಕಲ ಲಕ್ಷಣವು ವಸ್ತುಕಕೆ ವರ್ಣಕಕಿಷ್ಟು ವಿಕಳವಾದರು ದೋಷವಿಲ್ಲ (ಭರಚ. ೧-೯). **ಈಟು$_4$** : **೧.** ದೊಡ್ಡ ವಿರಲಿಲ್ಲ ಅವು ಈಟು ಈಟು (ಗಂಗಾತ. ೨೮-೧೩); ಏಳೊನ್ನಿನ ಸೀರೆ ನೆರಿಗ್ಯಾಳೆ – ಅಕ್ಕಯ್ಯ ಯಾರುಡಿಸಿದರೇಳೆ ನನಗೀಟ (ಗಾರಪ. ೧೭-೨); ಯಾರು ಎಂದು ಕೇಳಿದ್ದಕ್ಕೇ ಈಟೆಲ್ಲಾ ಸಿಟ್ಟು ಮಾಡ್ಬೇಕೆ (ದೇಶಧು. ೧೯); ಒಂದು ಈಟ ನಿಲ್ಲರಿ (ಬಾಬಲ. ೧೯).

**ಈಟೊಂದು** = ಇಷ್ಟೊಂದು : ಈಸ್ವಾಮಿ ಎದುರಿದ್ದಾಗಲೇ ಈಟೊಂದು ದಿಮಾಕು ನಡೆಸ್ತಾನಲ್ಲ (ಮರಳಿ. ೧೪). **ಈಟೀಟು** (ದ್ವಿರುಕ್ತಿ) ಕ್ರಿಮಿ – ಕೀಟ ತುಂಬಿ ಈಟೀಟು ತುಂಬಿ ದನಿಮಿಾಟು ತುಂಬಿ ತುಂಬಿ (ಗಂಗಾತ. ೧೦೮-೧೩). **ಇಷ್ಟರು** = ಇಷ್ಟು ಜನ, —ಮಂದಿ : ಪುಂಸ್ತ್ರೀ ಬಹುವಚನದಲ್ಲಿ ಅಷ್ಟರು, ಇಷ್ಟರು ಎಂಬ ಕಾರಕರೂಪಗಳನ್ನು ಉಪಯೋಗಿಸುವುದುಂಟು (ಮಧ್ಯಮ. ೪೬). **ಇಷ್ಟಿಷ್ಟು** = ಈ ಪರಿಮಾಣ, —ಆ ಪರಿಮಾಣ ಎಂದು ಹೇಳುವಷ್ಟು: ಅವನ ಕಷ್ಟ ಇಷ್ಟಷ್ಟಲ್ಲ (ರೂಢಿ). **ಇಷ್ಟಿಷ್ಟು** (ದ್ವಿರುಕ್ತಿ): ಸೃಷ್ಟೀಶ ಪುರಂದರವಿಟ್ಠಲರಾಯನೆ ಇಷ್ಟಿಷ್ಟು ಬೆಣ್ಣೆಯ ಕೊಟ್ಟೇನೊ ರಂಗಯ್ಯ (ಪುರಂದ. ೨-೧೧೦-೩); ಇಂಥಿಂಥ ಇಷ್ಟಿಷ್ಟು ಕೆಲಸಗಳನ್ನು ಮಾಡಬೇಕು (ಮುಂಬಯಿ. ೩-೮೮); ಅವರಿಗೆಲ್ಲಾ ಇಷ್ಟಿಷ್ಟು ಕೊಡಬೇಕು (ರೂಢಿ). **ಇಷ್ಟರಲ್ಲಿ** = ಇನ್ನು ಸ್ವಲ್ಪವೇ ಹೊತ್ತಿನಲ್ಲಿ : ಇಷ್ಟರಲ್ಲೇ ಅವನು ಇಲ್ಲಿ ಬರುತ್ತಾನೆ (ರೂಢಿ). [ಈಸು$_5$ + -ಟು ?]

**ಇಷ್ಟೆ** (ನಾ). ಪ್ರಿಯಳು; ಪ್ರೀತಿಪಾತ್ರಳು : "ಇಷ್ಟೆ – ಪ್ರಾಣಕಾಂತಳ್" (ಧನಂಜ. ಟೀಕೆ). [< ಸಂ. ಇಷ್ಟಾ]

**ಇಷ್ವಾಕಾರ** (ನಾ). ಬಾಣದ ಆಕಾರ; ಅಂಬಿನ ಆಕಾರ: ನಾಲ್ಕು ಇಷ್ವಾಕಾರಪರ್ವತಂಗಳುಂ ಸಹಸ್ರಯೋಜನ ವಿಸ್ತಾರಂಗಳುಂ (ತತ್ತ್ವಪ್ರ. ೧೫೦). [ಇಷು + ಆಕಾರ$_2$]

**ಇಷ್ವಾಸ** (ನಾ). **೧.** ಬಾಣವನ್ನು ಬಿಡುವ ಸಾಧನ; ಬಿಲ್ಲು : "ಅಸ್ತ್ರಂ, ಧನುಃ, ಇಷ್ವಾಸಃ . . . ದ್ರುಣಾ – ಈ ೯ ಬಿಲ್ಲು" (ಹಲಾಯು. ೭೬-೩೧೦). **೨.** ಬಾಣವನ್ನು ಬಿಡುವವನು; ಬಿಲ್ಲುಗಾರ. [ಸಂ.]

**ಇಸಂ, ಇಸಮು** (ನಾ). **೧.** ಆಸಾಮಿ; ವ್ಯಕ್ತಿ: ಪಾವೆಲ್ ಕಡೆಗೆ ಕೈ ಬೀಸುತ್ತಾ "ಈತನೇ ಆ ಇಸಂ" ಎಂದು ಹೇಳಿದ (ತಾಯಿ. ೭೨); ದಡೂತಿಯಾಗಿದ್ದಾನೆ ಇಸಂ (ರೂಢಿ). **ಇಸಮು** : **೧.** ಬೇರೆ ಆಳನ್ನು ಒದಗಿಸಿ ಇಸಮು ಭರ್ತಿಯಾಗುವಂತೆ ನಿಯಾಮಕವಾಗಿತ್ತು (ಮಹಾವಂ. II, ೩೦); ನಿನ್ನ ಭಾವ ಸಾಮಾನ್ಯ ಇಸಮು ಅಲ್ಲ (ಮಸೆಬಿ. ೪). **೨.** ಬಾಬು; ಅಂಶ; ವಿಷಯ (ವೈಗಜೆ. IV, ೭೭೨).

**ಇಸಂವಾರ್, ಇಸಂವಾರು** = **೧.** ಹೆಸರುಗಳ ಅನುಕ್ರಮದಲ್ಲಿ. **೨.** ಖಾತೆ ಅಥವಾ ಬಾಬಿನ ಮೇರೆಗೆ (ವೈಗಜೆ. IV, ೭೭೨). [← ಮರಾ. ಇಸಮ್ ; ಅರ. ಇಸ್ಮ್]

**ಇಸಂಗೋಲು** 'ಇಸಬುಗೋಲು' ನೋ.

**ಇಸಕಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ಇಸಕಯ್ಯ (ಎಕ. II, ೫೩ ; 1050). [?]

**ಇಸಕೊಳ್ಳು** 'ಈಸ್ತು$_2$' ಪರಾ.
**ಇಸಗೊಳ್ಳು** 'ಈಸ್ತು$_2$' ಪರಾ.
**ಇಸದಿ** (ನಾ). ಒಂದು ಹೆಸರು (?): ಶ್ರೀಕವಿಲರ ಮುಗಳ್ಬಿರ್ ಸರ್ವ ಸಜಿರ ಇಸದಿಗಳ್ಗೆ ಕೊಟ್ಟೊದು ಎಱೆತಿಮುಸ ಕೊಟ್ಟೊದು ಪೂರ್ವಸಾಲೆ (ಎಕ. VII, ಶಿಕಾರಿ. ೪೫-೬೩; 890). [?]
**ಇಸಬಗೋಲು** 'ಇಸಬುಗೋಲು' ನೋ.
**ಇಸಬು, ಇಸುಬು** (ನಾ). ಒಂದು ಬಗೆಯ ಚರ್ಮರೋಗ: ಸಣ್ಣ ಮಕ್ಕಳಿಗೆ ಹಲ್ಲು ಬರುವಾಗ್ಗೆ, ಜಂತಿನ ಉಪದ್ರವವಾದಾಗ್ಗೆ ಇಲ್ಲವೆ ತಾಯಿಯ ಹಾಲು ಕೆಟ್ಟಾಗ್ಗೆ ಇಸಬು ಹುಟ್ಟುವುದುಂಟು (ಗೃಹವೈ. ೬೪); ಕಜ್ಜಿ, ತಿಮರು, ಇಸಬು, ಗಜಕರ್ಣ—ಇಂಥ ರೋಗಗಳು ಆಗುವವಲ್ಲದೆ (ಕೃಷಿಪ್ರ. ೨೬೯). **ಇಸುಬು**: ಮತ್ತರಾಣಿಯಂ ಸಮೂಲವಂ ಸುಟ್ಟ ಬೂದಿ, ಬಿಳಿಯ ಸಜ್ಜರಸ, ಗೇರಹರಳ ಸುಟ್ಟ ಬೂದಿ, ಇಷ್ಟನ್ನೂ ಪುಡಿ ಮಾಡಿ, ಉಮ್ಮತ್ತದ ಸೊಪ್ಪಿನ ರಸ, ಹಾಗಲ ಸೊಪ್ಪಿನ ರಸ, ಇವುಗಳಲ್ಲಿ ಮರ್ದಿಸಿ, ನೆಳಲಲ್ಲಿ ಇಕ್ಕಿ ಒಣಗಿಸಿ, ಹಸುವಿನ ಬೆಣ್ಣೆಯಲ್ಲಿ ಮರ್ದಿಸಿ ಇಕ್ಕಲು ಇಸುಬಿನ ಹುಣ್ಣು ಮಾಣ್ಗುಂ (ವಿವೈವಿ. ೬೧).
[**ಪ್ರಾ.** ವಿಸಪ್ಪ (< **ಸಂ.** ವಿಸರ್ಪ). / **ಮರಾ.** ಇಸಪ, ಇಸಬ]
**ಇಸಬುಗೋಲು, ಇಸಂಗೋಲು, ಇಸಬಗೋಲು** (ನಾ). ಒಂದು ಬಗೆಯ ಔಷಧಿ ಗಿಡದ ಬೀಜ. ℙ ಇದು ಹಿಂದೆ ಪರ್ಷಿಯಾ ದೇಶದಲ್ಲಿ ಬೆಳೆಯುತ್ತಿದ್ದು, ಈಗ ಔಷಧಿಗಾಗಿ ಹಿಂದುಸ್ಥಾನದಲ್ಲಿ ಹೇರಳವಾಗಿ ಬೆಳೆಸಲ್ಪಡುತ್ತದೆ. ಇದು ವಾರ್ಷಿಕ ಪೈರು. **ಇಸಂಗೋಲು** (ವೈಔಗಿ. ೬೨-೧೨೬೬). **ಇಸಬಗೋಲು**: ಮಕ್ಕಳ ಆಮಶಂಖೆ (ಸಿಂಬಳ ಹೊರೆಕಡೆ)ಗೆ-... ಅರ್ಧತೊಲೆ ಇಸಬಗೋಲನ್ನು ಎರಡು ತೊಲೆ ನೀರಲ್ಲಿ ನೆನೆಹಾಕಿ ಅದು ನೆನೆದು ಕೂಡಿಕೊಂಡಮೇಲೆ ಅರ್ಧ ತೊಲೆ ಕಲ್ಲುಸಕ್ಕರೆ ಪುಡಿ ಬೆರೆಸಿ ಕೊಡುವುದು (ಮನೆಮ. ೧೪).
[**ಅನ್ಯದೇ.** **ತಮಿ.** ಇಸಬಗೋಲ್; **ತೆಲು.** ಇಸಬ್ಗೋಲು. / **ಮರಾ.** ಇಸಬ್‌ಗೋಲ್; **ಪಾರ.** ಇಸ್ಪುಷೂಲ್; **ಹಿಂ.** ಇಸಬ್‌ಗೋಲ್]
**ಇಸಮು** 'ಇಸಂ' ನೋ.
**ಇಸವಿ, ಇಸ್ವಿ** (ನಾ). ಕ್ರೈಸ್ತ ಶಕದ ವರ್ಷ: ೧೮೧೨ ನೆ ಇಸವಿ (ಮೈಆರಿ. ೧೯೩೪, ೫೨-೧೮; 1812); ಮುಖ್ಯವಾದ ಅಂಶಗಳನ್ನು, ಘಟನೆಗಳನ್ನು, ಇಸವಿಗಳನ್ನು, ... ಸೂಚಿಸಬಹುದು (ಶಿಕ್ಷದ. ೨೮೯); ೧೮೮೯ನೇ ಇಸವಿ ೧ನೇ ಆಕ್ಟ್ ಪ್ರಕಾರ (ಗ್ರಾಮಾಕ. ೨). **ಇಸ್ವಿ** (ಮೈಗಜೆ. IV, ೬೭; ರೈಸ್‌ಗೆ. ೫೫೦). [← **ಅರ.** ಈಸ್‌ವೀ]
**ಇಸವಿಸನ್** (ನಾ). (ಉಕ). = ಇಸವಿ: ಈ ಶಕಕ್ಕೆ (ಕ್ರಿಸ್ತಶಕ) ನಮ್ಮ ದೇಶದಲ್ಲಿ ಇಸವಿಸನ್ (ಯೇಸುವಿನ ವರ್ಷ ಎಂದೆನ್ನುವರು) (ಮುಂಬಯಿ. ೫-೨೭). [← **ಮರಾ.** ಇಸವೀಸನ್; **ಹಿಂ.** ಈಸವೀಸನ್]
**ಇಸಿ$_1$, ಇಸ್ಸಿ$_1$** (ನಾ). (ಮಕ್ಕಳ ಮಾತಿನಲ್ಲಿ) ಹೇಸಿಗೆ; ಮಲ: ಹುಸಿಯ ಪೇಳ್ವುದರಿಂದ ಹಸಿದು ಸಾವುದು ಲೇಸು ಹುಸಿದು ಮೆಱೆಯುವನ ಬದುಕಿಂದ ಹಂದಿಯ ಇಸಿಯು ಲೇಸೆಂದ (ಸರ್ವಜ್ಞ. ೧೧೮೧). **ಇಸ್ಸಿ$_1$**: ಮನೆಯ ಮುಂದುಗಡೆ ಯಾವುದೋ ಮಗು ಇಸ್ಸಿ ಮಾಡಿತ್ತು (ರಂಗವ. ೩೦). [< **ಸಂ.** ವಿಷಾ. / **ಮರಾ.** ಇಶೀ]
**ಇಸಿ$_2$** 'ಇಸ್ಸೀ' ನೋ.
**ಇಸಿಕೊಳ್** 'ಈಸ್ತು$_2$' ಪರಾ.
**ಇಸಿಸು** (ಕ್ರಿ). ಬಾಣಪ್ರಯೋಗಮಾಡಿಸು; ಅಂಬಿನಿಂದ ಹೊಡೆಯಿಸು: ಛಾಯಾಲಕ್ಷ್ಯಮನೊಡ್ಡಿಯುಮಾಯದ ನೀರೊಳಗೆ ತನ್ನನಡಸಿದ ನೆಗಱಿಂ ಬಾಯಱೆವಿನಮಿಸಿಸಿಯುಮುರೆ ಹೋ ಯಜ ಬಾಪೆಂದು ಹರಿಗನಂ ಗುರು ಪೊಗೞ್ದಂ (ಪಂಪಭಾ. ೨-೬೦). [ಇಸು$_1$ + -ಇಸು$_3$]

**ಇಸು$_1$** (ಕ್ರಿ). ಎಚ್ಚ (ಭೂತಕೃ) ೧. ಬಾಣಪ್ರಯೋಗಮಾಡು; ಅಂಬನ್ನು ಎಸೆ: "ಇಸು - ಶರವಿಮೋಚನೇ" (ಶಮುಧಾ); ಆನೆಯೂರ್ ತಾಗಿ ಎಚ್ಚು ಎಱೆದು ಆನೆಯಾ ... ಕಾದು ಸತ್ತ (ಎಕ. X, ಶ್ರೀನಿವಾ. ೩೦-೧೧; 800); ಇವರಾ ಬಲದಿನಗಲ್ಚರನೆಚ್ಚಾ ತ್ರಿಲೋಕಮಂ ಕಂತು ಬಸಕೆ ಬರಿಸುವಂ (ಕವಿರಾ. ೩-೧೨೨); ಪುಂಖಾನುಪುಂಖಮಿಸುತ್ತಿರ್ಪಡೆಯೊಳ್ (ಆದಿಪು. ೧೩-೬೧); ವಾನರಪತಾಕನ ರಥವ ಹಿಂದಕೆ ಮುರಿಯಲಿಸುವೆನು (ಕುವ್ಯಾಭೀ. ೧-೪೧); ಬೇಡರ ಬಿಲ್ಗೋಲಿಂದಲಿಸುವ ಕೈಪಾಡವ ಕಂಡು (ಮೋಹತ. ೧೯-೩೧). ೨. ಅದುಮು; ಒತ್ತು: ಶರಣನ ಪಾದಮಂ ಪಿಡಿದು ಸುರಧೇನುವಿನ ಪಯೋಧರಮನಿಸುವಂತೆ ಉಂಗುಟದ ಮೊನೆಯನಿಸಲೊಡಂ ... ಹಾಲಹಳ್ಳವೋಲಗದ ನಡುವೆ ಮಡುಗಟ್ಟಿ ಪರಿದು ಪೊಱಸೂಸೆ (ಬಸರ. ೧೦-೬೬). ೩. ಜೀರ್ಕೊಳವೆಯಿಂದ ಪೀಚು, —ಎಸೆ, —ಸೂಸು: ಬೆಳ್ಳಿಜೀರ್ಕೊಳವಿಯಿಂದೆಚ್ಚ ನೀರೆಂದು ಕೆಂದಳವನೊಡ್ಡೆ (ಪದ್ಮರಾ. ೮-೪೬). 'ಎಸು' ಪರಾ.
[**ದೇ.** ‖ **ತಮಿ.** ಎಯ್, ಏಚು; **ಮಲ.** **ತುಳು.** ಎಯ್ಯು; **ತೆಲು.** ಎಗುಚು]
**ಇಸು$_2$** 'ಈಸು$_2$' ನೋ.
**-ಇಸು$_3$** (ಪ್ರ). ೧. ಪ್ರೇರಣಾರ್ಥದಲ್ಲಿ ಧಾತುಗಳ ಮೇಲೆ ಹತ್ತುವ ಪ್ರತ್ಯಯ: "ಧಾತುಗಿಸು ಕನ್ನಡಕ್ಕಾ ಹೇತುವಿನೊಳ್ ಸ್ವಪರಕರ್ತೃವೊಳ್" (ಶಮುದ. ೨೩೧); ಪೊಲೆಕೇಸಿ ಅರಸರ ... ಮಾಡಿಸಿದ ದೇಗುಲ (ಎಕ. VII, ಶಿಕಾರಿ. ೧೦-೩; 640); ದೋಸಮೇನಾನುಂ ಸ್ವಲ್ಪಮಾದೊಡಂ ಮಾಸಿಸಿರ್ಕುಮಣಂ ಕೃತಿವಧುವಂ ಪೇಸದೆ ದುರ್ಜನದೊಳಾದ ಪರಿಚಯಂ ಮಾಸಿಸಿ ಕೆಡಿಸುವವೊಲೊಪ್ಪುವ ಕುಲವಧುವಂ (ಕವಿರಾ. ೧-೧೧೧); ಇನಿತಾನುಂ ವಸ್ತುವಂ ತಾಂ ತರಿಸಿದನಧಿಕ ಪ್ರೀತಿಯಿಂ ವಜ್ರದಂತಂ (ಆದಿಪು. ೪-೫೪). ೨. ಸ್ವಯಂಕರ್ತೃಕವಾದ ಕಡೆಗಳಲ್ಲಿಯೂ ಕನ್ನಡ, ತದ್ಭವ, ಸಂಸ್ಕೃತ, ಅನ್ಯದೇಶ್ಯ ಶಬ್ದಗಳ ನಾಮವಾಚಕಾದಿಗಳಿಂದ ಧಾತುಗಳನ್ನು ಸಾಧಿಸಿಕೊಳ್ಳುವುದಕ್ಕೆ ಈ ಪ್ರತ್ಯಯ ಬಳಕೆಯಾಗಿದೆ. ಉದಾ:—ಅಚ್ಚರಿಸು, ಕಳವಳಿಸು, ಕುಸುಮಿಸು, ತಡವಡಿಸು, ಭಾವಿಸು, ಭ್ರಾಂತಿಸು, ಮಚ್ಚರಿಸು: ಸಾಧಿಸಿ ಸ್ವರ್ಗಲೋಕ ಸುಖಚಿತ್ತಂ (ಎಕ. II, ೧೦೬-೪; 700); ದೇವರನರ್ಚಿಸಿ ನಂದೀಶ್ವರಂಗೆಯ್ದಿ ಬಂದಿಸಿ (ವಡ್ಡಾರಾ. ೧೧೦-೧೮); ಭರತ ತ್ರಿಖಂಡದೊಳ್ ಪಸರಿಸು ನಿನ್ನ ಗೋಸಣೆಯಂ (ಪಂರಾಮಾ. ೯-೧೬೭). [?]
**ಇಸು$_4$** (ನಾ). ಬಾಣ; ಅಂಬು: ಇಸುಗಳ ಮಳೆಗಳ ಕೋಪಾಟೋಪದಿಂದೆಸೆಯಲಂಬರ ತುಂಬುವಂತೆ (ಜ್ಞಾನಚ. ೩೭-೨೫). [< **ಸಂ.** ಇಷು]
**-ಇಸು$_5$** (ಪ್ರ). ಧಾತುಗಳಿಂದ ನಾಮವಾಚಕಗಳನ್ನು ಸಾಧಿಸಿಕೊಳ್ಳಲು ಬಳಕೆಯಾಗುವ ಒಂದು ಪ್ರತ್ಯಯ. ಉದಾ—ಉಣಿಸು, ತಿನಿಸು: ಸ್ಮರಿಯಿಪನಿರ್ಪತ್ತಿ ಚಾರ್ಬಸಿರ ಬರಿಸಕ್ಕೊರ್ಮೆ ಮನದೊಳುಣಿಸಂ (ಆದಿಪು. ೬-೧೬); ತಿನಿಸು, ತಿನಿಸುಗಳ್ (ಶಬ್ದಾನು. ೫೭೮ ಪ್ರಯೋ). [?]
**ಇಸುಕಲ್** (ನಾ). ಒಂದು ಪ್ರದೇಶದ ಹೆಸರು (?): ಪಶ್ಚಿಮಾಭಿಮುಖಮಾಗಿ ಬನ್ದ ನೆತ್ತಿದೊಱೆ ಮೇರೆಯಾಗಿ ಸುರಲೂರ ಇಸುಕಲ್ಲ ಮುಗ್ಗುಡ್ಡೆಯೊಳ್ ಭೀಮರಾಸಿ ಕಟ್ಟಿದಾ ಕೆಱೆ ಮೇರೆಯಾಗಿ (ಸೌಇಇ. IX-i, ೧೧೯-೪೬; 1057). [?]
**ಇಸುಕೊಳ್** 'ಈಸ್ತು$_2$' ಪರಾ.
**ಇಸುಕೊಳ್ಳು** 'ಈಸ್ತು$_2$' ಪರಾ.
**ಇಸುಗೆ** (ನಾ). ಎಸೆತ; ಎಸೆಯುವಿಕೆ; ಬಾಣಪ್ರಯೋಗ; ಅಂಬಿನ ಹೊಡೆತ: ಅಚಲಶಿವನಂ ಕಾಮನಿಸುಗೆ ಕೈಕೊಂಡಪುದೇ (೧ರಿಕ. ೮-೩೯). 'ಎಸುಗೆ' ಪರಾ. [ಇಸು$_1$ + -ಗೆ$_1$]

**ಇಸುಬು** 'ಇಸಬು' ನೋ.

**ಇಸುವೆಸ** (ನಾ). ಸೇವಾವೃತ್ತಿ ; ಊಳಿಗ : ಪೆಜವುಮಿಸುವೆಸಂಗಳನ ವರವರ್ಗೆ ತಕ್ಕುವಂ ತಕ್ಕಂದದಿಂ ಪೇೞ್ದಾಗಳ್ (ಆದಿಪು. ೭–೨೧ ವ) ; ಸಮಸ್ತಲೋಕಾಂಬಿಕೆ ನಿಮ್ಮೊಳಾದಿಸುವೆಸಕ್ಕೆ ಸುಮಿತ್ರೆಯೆ ಸಾಲ್ವಳ್ (ಪಂರಾಮಾ. ೬–೧೭೪); ಒಲಿಯದ ಮಲೆಪರನಿಸುವೆಸಕೆ ಬೆಸಸಿದಂ ಲಕ್ಷ್ಮನೃಪಂ (ಎಕ. VII, ಶಿಕಾರಿ. ೧೩೬–೨೫ ; 1068) ; ಮಾಲೆಗಟ್ಟುವ ಮಡಿವಳತಿವೊಲು ಸತಿಗೆ ಸಗ್ಗದ ಮಡಿಯ ನಡಯಿಸುವಿಸುವೆಸನೆಯೆವೆದೆಱೆದ ಹೆಂಗಳಲಿ (ಸಾಳ್ವಭಾ. ೨೦–೩೨). [ಇಸು$_0$ + ಬೆಸ]

**ಇಸುವೆಸಕೆಯ್**, ಇಸುವೆಸಗೆಯ್ (ಕ್ರಿ). ಸೇವೆಮಾಡು ; ಉಪಚರಿಸು ; ಊಳಿಗಮಾಡು. 'ಇಸುವೆಸಕೆಯ್ಸು' ಪರಾ. **ಇಸುವೆಸಗೆಯ್** : ಇವರಂ ನಾಕಪತಿ ನಿಯೋಜಿಸಿದಂ ವಿಷ್ಟಪತ್ರಯಾಧೀಶ ಜನನಿಗಿಸುವೆಸಗೆಯ್ಯಲ್ (ಶಾಂತಿಪು. ೯–೧೭೫). [ಇಸುವೆಸ + ಕೆಯ್$_1$]

**ಇಸುವೆಸಕೆಯ್ಸು** (ಕ್ರಿ). ಊಳಿಗಕ್ಕೆ ತೊಡಗಿಸು ; ಸೇವೆಗೆ ಇಟ್ಟುಕೊ ; ಸೇವೆ ಮಾಡಿಸಿಕೊ : ಇಸುವೆಸಕೆಯ್ಸು [ಪಾಠಾಂ. ಕೈಸು] ಖೇಚರಪುರಂಧ್ರಿಯರಂ (ಪಂರಾಮಾ. ೯–೧೬೭).

[ಇಸುವೆಸಕೆಯ್ + –ಸು$_1$]

**ಇಸುವೆಸಗೆಯ್** 'ಇಸುವೆಸಕೆಯ್' ನೋ.

**ಇಸ್ತಕಪಾಲು** 'ಇಸ್ತಕಬಾಲು' ನೋ.

**ಇಸ್ತಕಬಾಲ** 'ಇಸ್ತಕಬಾಲು' ನೋ.

**ಇಸ್ತಕಬಾಲಯಿಲಾಖೆ** (ನಾ). ದೊರೆಗಳ ಅಥವಾ ಹಿರಿಯ ಅಧಿಕಾರಿಗಳ ಭೇಟಿಗೆ ಏರ್ಪಡಿಸುವ ಅಥವಾ ಅದಕ್ಕೆ ಸಂಬಂಧಿಸಿದ ವ್ಯವಸ್ಥೆ ಮಾಡುವ ಅಧಿಕಾರ ಶಾಖೆ : ಪಾರುಪತ್ಯಗಾರಾನೆ ಹಾಲಯಿಸ್ತಕಬಾಲಯಿಲಾಖೆ ಮೂಲಕ ಮೈಸೂರ ಬರ್ಸ ಕಳುಹಿಸ್ತ ನಿರೂಪ (ಮೈಆರಿ. ೧೯೩೮, ೧೯–೩ ; 1811) ; ಹಾಲಯಿಸ್ತಕಬಾಲ ಮಕದ್ದಮಾನಿ ಮುಜಾರಿಯಾನಿ ತಾಲೂಕೆ ಮದ್ದಗಿರಿ (ಮೈಆರಿ. ೧೯೨೯, ೯೪–೧ ; 1813).

[ಇಸ್ತಕಬಾಲ (< ಇಸ್ತಕಬಾಲು) + ಇಲಾಖೆ]

**ಇಸ್ತಕಬಾಲು**, ಇಸ್ತಕಪಾಲು, ಇಸ್ತಕಬಾಲ (ನಾ). ರಾಜನ ಅಥವಾ ಹಿರಿಯ ಅಧಿಕಾರಿಯ ಭೇಟಿ; ಭೇಟಿಗಾಗಿ ಬಂದವರನ್ನು ಸ್ವಾಗತಿಸುವುದು (ಕ). **ಇಸ್ತಕಪಾಲು** : ಲಾರ್ಡ್ ವೆಲೆನಷಿಯಾ ಸಾಹೇಬರು ಮೈಸೂರಿಗೆ ಬರುವಾಗ ಮಾಮೂಲಿನಂತೆ ಇಸ್ತಕಪಾಲಿನ ಸ್ಥಳಕ್ಕೆ ಉಚಿತ ಮರ್ಯಾದೆಗಳೊಡನೆ . . . ಹೋಗಿ (ಮಹಾವಂ. II, ೩೫) ; ಅಲ್ಲಿ ಕಂಪನಿಯ ಬಹದರರವರಾದ ರೆಸಿಡೆಂಟರು ಕಲೆಕ್ಟರು ಮೊದಲಾದ ಸರದಾರರು ದೊರೆಗಳಿಗೆ ಇಸ್ತಕಪಾಲು ಬರಲು ದೊರೆಗಳವರು ಅವರೆಲ್ಲರಿಗೂ ವಸ್ತ್ರಾಭರಣಗಳನ್ನು ಕೊಟ್ಟು (ಮಹಾವಂ. II, ೧೫೦) ; ಮಹಾರಾಜರ ಸವಾರಿ ಮೈಸೂರಿಗೆ ದಯಮಾಡಿಸಿದಾಗ ಪುರಪ್ರಮುಖರು ಅವರನ್ನು ಇಸ್ತಕಪಾಲಿನ ಸ್ಥಳದಲ್ಲಿ ಕನ್ನಡಿ ಕಳಶ ಪೂರ್ಣಕುಂಭ . . . ಇದಿರ್ಗೊಂಡು (ಕೃಷ್ಣಭೂ. ೧೩೯). **ಇಸ್ತಕಬಾಲ** : 'ಇಸ್ತಕಬಾಲಯಿಲಾಖೆ' ಪರಾ. [← **ಅರಬಿ.** ಇಸ್ತಿಕ್ಬಾಲ್ ; **ಹಿಂ.** ಇಸ್ತಕ್ಬಾಲ್]

**ಇಸ್ತಿಹಾರ್** 'ಇಸ್ತಿಹಾರು' ನೋ.

**ಇಸ್ತಿಹಾರು**, ಇಸ್ತಿಹಾರ್ (ನಾ). ಪ್ರಸಿದ್ಧಪತ್ರಿಕೆ; ಘೋಷಣೆ; ಜಾಹೀರುನಾಮೆ; ಲಿಖಿತಮೂಲಕವಾದ ಪ್ರಕಟನೆ, —ನೋಟೀಸು, —ಜಾಹಿರಾತು : ಸರ್ಕಾರದವರು ಆಗಿಂದಾಗ ಸರ್ಕಾರೀ ಗೆಜೆಟ್ಟನಲ್ಲಿ ಇಸ್ತಿಹಾರನ್ನು ಪ್ರಕಟಿಸುವುದರ ಮೂಲಕ (ಗ್ರಾಮಾಕ. ೧೫) ; ಮಾರನೆಯ ದಿನ ಹರಾಜು ಎಂದು ಇಸ್ತಿಹಾರು ಆಗಿಬಿಟ್ಟದ್ದಿತು (ಸಣ್ಣಕ. VI, ೩೫). **ಇಸ್ತಿಹಾರ್** (ಕ).

[← **ಅರ.** ಇಶ್ತಿಹಾರ್ ; **ಮರಾ. ಹಿಂ.** ಇಸ್ತಿಹಾರ್]

**ಇಸ್ತಿಹಾರ್ನಾಮೆ** (ನಾ). ಪ್ರಕಟನ ಪತ್ರಿಕೆ ; ಜಾಹಿರಾತು ಪತ್ರ : ಯಾವತ್ತು ಸರಕಾರದವರಿಗೂ ವಳೈದು ಇದೆಯೆಂಬುದಾಗಿ ಮೊಕರರು ಮಾಡಿದ್ದಂಥಾ ಇಸ್ತಿಹಾರನಾಮೆ[ರ್ನಾಮೆ] ನಕಲು . . . ತಮಗೆ ತೋರಿಸುವ ಬಗ್ಯೆ (ರಾಜೇಂದ್ರ. ೭೮) ; ಒಂದು ಇಸ್ತಿಹಾರ್ನಾಮೆಯನ್ನು ಸಾದರ್ಮಾಡಿದರು (ಮಹಾವಂ. II, ೧೧೬) ; ಮೈಸೂರು ಚೀಫ್ ಕಮ್ಮಿಷನರವರಿಂದ ಕೊಡೋಣಾದ ಇಸ್ತಿಹಾರ್‌ನಾಮೆಗಳು —ಜನರಲ್ ಇಸ್ತಿಹಾರನಾ[ರ್ನಾ]ಮೆ (ಗ್ರಾಮಾಕ. ೪ ಪೀಠಿಕೆ).

[← **ಅರ.** ಇಶ್ತಿಹಾರ್ನಾಮಾ]

**ಇಸ್ತ್ರಿ**, ಇಸ್ತ್ರೀ (ನಾ). ಶಾಖವಾಗಿರುವ ಉಕ್ಕಿನ ಉಜ್ಜುಮಣೆಯಿಂದ ಬಟ್ಟೆಗಳನ್ನು ತೀಡಿ ಅಚ್ಚುಕಟ್ಟಾಗಿ ಗರಿಯಾಗಿರುವಂತೆ (ನಾಜೂಕು) ಮಾಡುವುದು ; 'ಐರನ್' ಮಾಡುವುದು : ಇವಲ್ಲದೆ ಗಂಡನ ಅರಿವೆಗಳನ್ನು ಸ್ವತಃ ಒಗೆದುಹಾಕಿ ತಾನೇ ಮನೆಯಲ್ಲಿಯೇ ಇಸ್ತ್ರಿಮಾಡುತ್ತಿದ್ದಳು (ಅಪನಾ. ೨೫೫) ; ಇಸ್ತ್ರಿಮಾಡಿದ್ದು ಮಾಡಿಟ್ಟ ಹಾಗೆಯೇ ಇದ್ದಿತು (ರಂಗಕ. ೨೨). **ಇಸ್ತ್ರೀ** : ಈಗಿನ ಸೇವಕರು ಇಸ್ತ್ರೀ ಮಾಡಿದ ಸುಂದರವಾದ ಬಿಳೀವಸ್ತ್ರಗಳನ್ನು ಹಾಕಿಕೊಂಡು(ಮೋಹೀನಿ. ೭೫).

[← **ಪೋರ್ಚು.** ಎಸ್ತಿರರ್ ; **ಮರಾ.** ಇಸ್ತರಿ, ಇಸ್ತ್ರೀ ; **ಹಿಂದಿ.** ಇಸ್ತರೀ. / **ತೆಲು.** ಇಸ್ತ್ರಿ]

**ಇಸ್ತ್ರಿಎಲೆ** (ನಾ). (ದಕ). ಊಟದ ಎಲೆ; ಆಲ, ಮುತ್ತುಗ ಮುಂತಾದ ಮರಗಳ ಬಿಡಿ ಎಲೆಗಳನ್ನು ಹಚ್ಚಿ ತಯಾರಿಸಿದ ಊಟದೆಲೆ ; ಪತ್ರಾವಳಿ.

[← **ತೆಲು.** ವಿಸ್ತರಿ, ವಿಸ್ತರ, ವಿಸ್ತರಾಕು (< **ಸಂ.** ವಿಸ್ತರ?)]

**ಇಸ್ತ್ರಿಪೆಟ್ಟಿಗೆ** (ನಾ). ಇಸ್ತ್ರಿಮಾಡುವ ಲೋಹದ ಸಾಧನ : ಸುಮಾರು ಬೆಚ್ಚಗಿರುವ ಇಸ್ತ್ರಿಪೆಟ್ಟಿಗೆಯಿಂದ ಇಸ್ತ್ರಿ ಮಾಡಬೇಕು (ಗೃಹವಿ. ೭೧).

[ಇಸ್ತ್ರಿ + ಪೆಟ್ಟಿಗೆ]

**ಇಸ್ತ್ರೀ** 'ಇಸ್ತ್ರಿ' ನೋ.

**ಇಸ್ಪಾನೆಯುಲ್** (ನಾ). ೧. ಸ್ಪೇನ್ ದೇಶೀಯ ; ಸ್ಪ್ಯಾನಿಷ್ ಜಾತಿಯವನು : ಫರಾಶೀಸರ ಸರಕಾರಕ್ಕೂ ಆದರ ಸಂಗಡ ಇರುವ ಇಸ್ಪಾನೆಯುಲ್ ಆವರ ಜಾತಿಯವರಿಗೂ (ರಾಜೇಂದ್ರ. ೧೫೦). ೨. (ಸ್ಪೇನ್ ದೇಶದ) ಒಂದು ಜಾತಿಯ ನಾಯಿ.

[← **ಇಂ.** Spaniel ?]

**ಇಸ್ಪೀಟು**, ಇಸ್ಪೇಟು (ನಾ). ೧. ವಿವಿಧಾಕಾರದ ಚಿತ್ರಗಳಿಂದ ಹಾಗೂ ಸಂಖ್ಯೆಗಳಿಂದ ಕೂಡಿದ ಕಾಗದದ ಎಲೆಗಳಿಂದ ಆಡುವ ಒಂದು ಬಗೆಯ ಆಟ ; ಗಂಜೀಫು ಆಟ : ಇಂಥ ಹೊಂದಿಕೊಳ್ಳುವಿಕೆಯ ಸ್ವಭಾವಕ್ಕೆ ಆಧಾರಗಳೂ ಇಲ್ಲದಿಲ್ಲ. ಅವುಗಳಲ್ಲಿ ಮುಖ್ಯವಾದುದು ಅವನ ಇಸ್ಪೀಟು ಆಟದ ಪ್ರೇಮ (ಭ್ರಮಾನ. ೩) ; ಇಸ್ಪೀಟು ಆಟದಲ್ಲಿಯೂ ಬಲು ನಿಪುಣ (ಸಸ್ಯಕ. ೬೨) ; ಅವರು ಕೊನೆಕೊನೆಗೆ ಹಗಲೂ ರಾತ್ರಿ ಬಿದ್ದಿರುವುದೇ ಕ್ಲಬ್ಬಿನಲ್ಲಿ ಬೆಳಗಿಂದ ಸಂಜೆಯತನಕವೂ ಇಸ್ಪೀಟು (ಸರಸ. ೨೪). ೨. ಇಸ್ಪೀಟು ಎಲೆಗಳಲ್ಲಿ ಅರಳಿಯೆಲೆಯಾಕಾರದ ಗುರುತುಳ್ಳ ಕರಿಯ ಚಿತ್ರಗಳಿಂದ ಕೂಡಿದ ಎಲೆ (Spades). ℙ ಇಸ್ಪೀಟಿನ ಎಲೆಗಳಲ್ಲಿ ಡೈಮಂಡ್, ಆಠೀನು, ಕಳಾವರ, ಇಸ್ಪೀಟು – ಎಂದು ನಾಲ್ಕು ಜಾತಿಯ ಗುರುತಿನ ಎಲೆಗಳಿವೆ. **ಇಸ್ಪೇಟು** : ೧. ಪಗಡಿ, ಇಸ್ಪೇಟು, ಚದುರಂಗ . . . ಮೊದಲಾದ ಆಟದ ಸಾಮಾನುಗಳು (ಕುರಿಹಿಂ. ೧) ; ಕೊಂಪೆಯವರೆಲ್ಲರೂ ನಿದ್ರಿಸುವತನಕ ಕೊಲೆಗಾರರು ಇಸ್ಪೇಟಿನ ನಾಟಕ ಹೂಡಿದ್ದರು (ದೇವಸಾ. ೨೩).

[← **ಮರಾ.** ಇಸ್ಪೀಟ್ < **ಇಂ.** Spades]

**ಇಸ್ಪೇಟು** 'ಇಸ್ಪೀಟು' ನೋ.

**ಇಸ್ಮಿಸಾಲು** (ನಾ). ಕೇಸನ್ನು ವಜಾಮಾಡುವುದು: ಈ ಹಾಳು ಕುಂಪಿನಿ ಕೋರ್ಟು ಕಚೇರಿಗಳಲ್ಲಿ ಮೂಲ, ಅಪೀಲು, ಇಸ್ಮಿಸಾಲು ಎಂತ ಮಾಡಿ ಮಾಡಿ ಆದೂ ಕೂಡ ಯಾರಿಗೂ ಇಲ್ಲದೆ ಹೋಯಿತು (ಪಳಮೆ. ೧೯). [← ಇಂ. Dismissal]

**ಇಸ್ರಾಜ್** (ನಾ). ಸಾರಂಗಿಯಂತಿರುವ ಒಂದು ಬಗೆಯ ವಾದ್ಯ: ಅನಂತರದ ಸ್ಥಾನವು ಸಾರಂಗ, ದಿಲ್ರುಬಾ, ಇಸ್ರಾಜ್ ಮೊದಲಾದುವುಗಳಿಗೆ ಸೇರುವುದು (ಬಾಲಪ್ರ. II, ೧೧೦೬). [← ಹಿಂ. ಇಸರಾಜ್]

**ಇಸ್ಲಾಂ** (ನಾ). ಒಂದು ಮತದ ಹೆಸರು; ಮಹಮ್ಮದೀಯ ಮತ: ಪ್ರಪಂಚದ ದೊಡ್ಡ ಸಂಸ್ಕೃತಿಗಳಲ್ಲಿ ಇಸ್ಲಾಂಸಂಸ್ಕೃತಿಯೂ ಒಂದಾಗಿದೆ (ಇಸ್ಲಾಂಸಂ. ೧). [← ಅರ. ಮರಾ. ಇಸ್ಲಾಮ್; ಹಿಂ. ಇಸಲಾಮ್]

**ಇಸ್ಸಿ** 'ಇಸವಿ' ನೋ.

**ಇಸ್ಸಿ**$_1$ 'ಇಸಿ$_1$' ನೋ.

**ಇಸ್ಸಿ**$_2$ 'ಇಸ್ಸೀ' ನೋ.

**ಇಸ್ಸೀ, ಇಸ್ಸಿ**$_2$**, ಇಸ್ಸಿ** (ಅ). ಬೇಸರ, ಅಸಮಾಧಾನ, ತಿರಸ್ಕಾರ, ಜುಗುಪ್ಸೆ ಮುಂತಾದುವನ್ನು ಸೂಚಿಸುವ ಅವ್ಯಯ: "ಚೀ ಇಸ್ಸೀಗಳ್ ತಾವೊಗೆದು ಜುಗುಪ್ಸನಾರ್ಥದೊಳ್ ವರ್ತಿಸುಗುಂ" (ಶಮುದ. ೩೧೮); ಪೆಜರೆಂಜಲ ತಿಂದೆರ್ನೆಗೊಯ್ಸಿಕೊಳ್ಳಳಿಸ್ಸೀ ಸುಡು ಸೂಳೆಯೆಂಬವಳಂ (ಕಾವ್ಯಸಾ. ೧೦೦೨); ಇಸ್ಸೀ ಸುಡು ನಾಣಿಲಿತನವಿದು (ಉದ್ಭದೇ. ೩-೭೨). **ಇಸ್ಸಿ**$_2$: ಇಸಿ ಸುಮ್ಮನೆ ಕುಳಿತುಕೊ (ರೂಢಿ). **ಇಸ್ಸಿ**: "ಇಸ್ಸಿ (ಇಸ್ಸಿಸ್ಸಿ) ಧಿಕ್ಕಾರ" (ಜಾನಕೋ. ೧೮); ಈಯದೆ ಇಜಿಯದೆ ನನ್ನಿನುಡಿಯದೆ ನಣ್ಪಿದೇವಂಗಟಿಸ್ಸಿ ಮುಯ್ಯುಮ್ಪುಡೆದೊಂಗರ ಅಲೆದೊಂ (ಎಇ. XXIV, ೨೬-೧೩; 885); ಇಸ್ಸಿ ಇವಜೊಳೆನಗೆಟ್ಟಜುಲ್ಲಂ (ರಾಮಾಶ್ವ. ೪-೨೦); ಇಸ್ಸಿ ವಾಣಿಯೇ, ನೀನು ಹುಟ್ಟುವುದಕ್ಕೆ ಪೂರ್ವದಲ್ಲಿಯೇ ತಿಮಿಂಗಿಲ ಗಿಲ ಗಿಲಗಿಲವಾಗಿ ವಿಹಾರಿಸುತ್ತಿರುವ ನಾನು ಸಪ್ತ ಸಮುದ್ರಗಳಿಗೂ ಅಧೀಶ್ವರಿ (ಮಂತ್ರಶ. ೫೬-೨೦). [ದೇ. ‖ ಮಲ. ತೆಲು. ಇಸ್ಸಿ]

**ಇಹ**$_1$ 'ಇರ್$_1$' ಪರಾ.

**ಇಹ**$_2$ (ನಾ). ಇರುವಿಕೆ; ಸ್ಥಿತಿ: "ಅರಯ್ದು ಎದ್ದಿಹ (ಪ್ರತಿಜಾಗರ, ಅಪೇಕ್ಷೆ)" (ನಾಚಿರಾ. ಕ). [< ಇರ್$_1$ + -ಹ್ಯ]

**ಇಹ**$_3$ (ನಾ). ಈ ಲೋಕ, —ಭೂಮಿ, —ಪ್ರಪಂಚ: ಕೃತಘ್ನರಾದಂದು ನಮಗಿಹಂಪರಮುಂಟೇ (ಸುಕುಮಾ. ೨-೬೭); ಮುದವನಿಹದಲಿ ಕೊಡುವುದಚ್ಯುತಪದವ ಪರದೊಳಗೀವುದಿದು ನಿಗಮದ ರಹಸ್ಯ (ತೊರರಾ. ೧-೧-೧೫); ಇಹ ನಂಬಿ ಪರ ಮರೆತ (ಗಾದೆ). [ಸಂ.]

**ಇಹಂಗೆ** 'ಇಹಗೆ' ನೋ.

**ಇಹಗೆ, ಇಹಂಗೆ, ಇಹಿಂಗೆ, ಇಹಿಗೆ, ಹೀಂಗೆ, ಹೀಗೆ** (ಅ). ಈ ರೀತಿಯಾಗಿ; ಈ ಕ್ರಮದಲ್ಲಿ; ಇಂತು: ಹಸಿದು ಮಜಿದುಣ್ಣನೇ ನೀರ್ಗುಡಿಯನೇ ಇಹಗೊಮ್ಮೆ ನೋಳ್ಪೆನೆಂದಾ ಮುದ್ದಗೌಡನು (ಸಿದ್ಧರಾ. ೨-೧೩); ಇಹಗಲ್ಲದೆ ನಿನಗೆ ಮೃಡನೊಲಿಯನೇ (ಬಸವು. ೪೪-೯). **ಇಹಂಗೆ**: ಇಹಂಗೆ [ಪಾಠಾಂ. ಗ] ಪೆಣ್ಣಳ ಕಂಗಳಿವು ಮತ್ತೆ (ಬಸವು. ೪೦-೫೯); (ಬಸವು. ೨೪-೪೯; ೨೫-೩ ನೋ). **ಇಹಿಂಗೆ**: ಈ [ಇ]ಹಿಂಗೆ ಕಂಡ ಕಂಡವರ ಹಿಂದೆ ಹರಿದಾಡುವ ಚಾಂಡಾಲತಿಯು (ಚೆನ್ನವ. ೮-೨). **ಇಹಿಗೆ**: ಕೆಲವು ದಿನಗಳು ಇಹಿ [ಪಾಠಾಂ. ಮಹ]ಗೆ ನಡೆಯಲು ಮಹಿತ ಭಕ್ತಿಯ . . . ಮೆಜೆಯಿಸುವೆನೆಂದು (ಬಸವು. ೧೫-೧೭); ಅಹುದಹುದು ಸಂಸಾರದುದ್ಯಮವಿಹಿಗಿರಲು ಬೇಡಾ (ಸದ್ಗುರು. ೧-೨೪); ನೀನಜಿವುದಿಹಿಗೆ (ವೀಶೈಪು. ೬-೨-೩೬). **ಹೀಂಗೆ**: ಹೀಂಗೆ ಅನಾದಿವಿಡಿದು ಬಂದ ಗುರು (ಸಿದ್ಧೇವ. ೮); ಹೆಂಗೆ ಹೊಗುವೆ ನೀನು ಹೀಂಗಿರು ಕಡೆಗೆ (ಶರಲೀ. ೧೦೨-೧೩); ಹೀಂಗೆ ಬಾಗಿಲ ತೆರೆದಿರಬೇಡಿ, ಅವ್ವ (ಮಂತ್ರಶ. ೩೦-೧೩). **ಹೀಗೆ**: ಹೀಗಜಿದು ಇಂತೀ ಉಭಯದಲ್ಲಿ ಚೋದ್ಯನಾಗಿ ಸದ್ಯೋಜಾತಲಿಂಗವ ಕೂಡಬೇಕು (ಅವರೇ. ೫೬); ಹೀಗಿದು ಕಪ್ಪವ ಜೋಣಿಗ (ಮದೇಪು. ೧೯-೧೨); ಹೀಗೆ ನಾನಾ ಭಾವಗೊಳುತ (ಜಿನಮು. ೬-೩೨).

ಇಹಗಿಹಗೆ (ದ್ವಿರುಕ್ತಿ): ಇಹಗಿಹಗೆ ರಾಘವಂಗೆ ಸೀತೆಯೊಳ್ ಪ್ರೀತಿಯುಂ ಲಕ್ಷ್ಮಣನೊಳ್ ಕಾರುಣ್ಯಮುಂ . . . ಇರ್ದುವು (ಅದ್ಭುತ. ೩೪-೮). [ಈ$_2$ + ಪಾಂಗು + -ಎ$_3$]

**ಇಹಣ** (ನಾ). ಇರುವಿಕೆ; ಇರುವುದು; ಅಸ್ತಿತ್ವ: ವಾದ್ಯಂಗಳಂ . . . ನುಡಿಸಿದರೂ . . . ಧ್ವನಿಯಾಗದೆ ಇಹಣ (ಶುಕಸ. ೩೧೨); ಬೆವರಿಲ್ಲದೆ ಇಹಣ ಮಲಬಂಧ ಇವು ಅಂತರ್ಗತಜ್ವರದ ಲಕ್ಷಣ (ವೈದ್ಯಸಾ. I, ೪೫); ನಾಲಿಗೆ ಗಂಟಲುಗಳು ದ್ರವವಿಲ್ಲದೇ ಇಹಣ . . . ತೃಪ್ತಿ ಇಲ್ಲದೇ ಇಹಣ (ವೈದ್ಯಸಾ. I, ೨೭೭). [ಇರು + -ಹಣ (< -ಪಣ)]

**ಇಹತನ** (ನಾ). = ಇಹಣ: ಅಹುದು ದರ್ಪಣ ಮೂಜಜಿಹತನದೊಳಂ ತಾದುದಹಗಲ್ಲ ವಿದ್ಯೆಯೊಂದಲ್ಲಿ ಜೀವಂ ಎಹಗೆ ಮೂಜಪ್ಪರದ ಸಹಿ ಮಾಡಬೇಕೆಂದು ಮಹಿಮನೊಳ್ ಬಿನ್ನೈಸಲಿಂತೆಂದನು (ಮಸೋಪಿ. ೬-೩). [ಇಹ$_1$ (< ಇರ್$_1$) + -ತನ]

**ಇಹತ್ರ**$_1$ (ನಾ). ಈ ಲೋಕ; ಇಹಲೋಕ: ಮಗನೆನಿಪಂಗೆ ಮಾತೃಪಿತೃಭಕ್ತಿಯೆ ಕೃತ್ಯಮಿಹತ್ರೆಗಂ ಪರತ್ರೆಗಮುಪಕಾರಿ (ಪಂರಾಮಾ. ೬-೧೧೨); ಗುರುವುಂ ದೈವಮುಮಾಳ್ದನೆ ಪರತ್ರೆಗಂ ತನಗಿಹತ್ರೆಗಂ ಪೆಜನೊರ್ವರ್ಂ ತನಗಿಲ್ಲ ದೈವಮಿಲ್ಲೆನೆ ಧರೆಗೆಸೆದೊಂ (ಎಕ. V, ಬೇಲೂರು. ೧೧೨-೩೯; 1228). [ಸಂ. ಇಹತ್ರ]

**ಇಹತ್ರ**$_2$ (ಅ). ಈ ಲೋಕದಲ್ಲಿ; ಈ ಜನ್ಮದಲ್ಲಿ: ನ್ಯಾಯದೊಳೆ ನಡೆಯೆ ಕೀರ್ತಿಶ್ರೀಯುಕ್ಕುಮಿಹತ್ರೆಯನ್ಯಭವದೊಳ್ ಮುಕ್ತಿಶ್ರೀಯಕ್ಕು (ಜಟ್ಟಮ. ೧-೪). [ಸಂ. ಇಹತ್ರ]

**ಇಹಪರ** (ನಾ). ಈ ಲೋಕ ಮತ್ತು ಪರಲೋಕ: ಅಲಸದೆ ಸಂಪಾದಿಪುದಿಹಪರಗಳನು (ಹದಿಬ. ೫-೪೭); ನಾಲಗೆಯಿಂದಲಿ ಇಹಪರವೆನುವರು ನಾಲಗೆ ಪುಣ್ಯದ ತವರು (ಇಂಚಾಪ. ೯೪-೬೦); ಅವನಿಗೆ ಇಹ ಪರ ಯಾವುದೂ ಇಲ್ಲ (ರೂಢಿ). [ಇಹ + ಪರ]

**ಇಹಪರಗತಿ** (ನಾ). ಈ ಲೋಕದ ಮತ್ತು ಪರಲೋಕದ ಸೌಖ್ಯ, —ಹಿತ; ಇಲ್ಲಿನ ಈಗಿನ ಶ್ರೇಯಸ್ಸು ಮತ್ತು ಮರಣಾನಂತರದ ಶ್ರೇಯಸ್ಸು: ಪತಿಯ ಪಾದಾಬ್ಜಭಕ್ತಿಯೆ ತಮಗಿಹಪರಗತಿಯೆಂದು ಕಡುವಿಡಿದಿರ್ಪ ಸತಿಯರು (ಹದಿಬ. ೨-೧೬). [ಇಹಪರ + ಗತಿ]

**ಇಹಪರಸೌಖ್ಯ** (ನಾ). ಈ ಲೋಕ ಮತ್ತು ಪರಲೋಕಗಳ ಸುಖ: ಇಹಪರಸೌಖ್ಯಮೆಂಬೆರಡುಮಿಲ್ಲದ ನಾಸ್ತಿಕಧರ್ಮದಿಂದಂ (ಪುಷ್ಪವು. ೧-೯). [ಇಹಪರ + ಸೌಖ್ಯ]

**ಇಹಭವ** (ಗು). ಇಲ್ಲಿ ಹುಟ್ಟಿದ: ಇಹಭವ ಶಿಬಿ ಕರ್ಣ ರಘೂದ್ವಹ ಶಕರಿಪು ಗುಪ್ತ ಚಾರುಗುಪ್ತಗುಣಂ ವೃತ್ರಹ ಯಶಂ . . . ಆ ಜಿನಚಂದ್ರಂ (ಶಾಂತಿಪು. ೧-೨೭). [ಇಹ$_3$ + ಭವ]

**ಇಹಲೋಕ** (ನಾ). ಈ ಲೋಕ; ಭೂಲೋಕ: ಏಕೆ ಹುಟ್ಟಿಸಿದೆ ಇಹಲೋಕದುಃಖಿಯ ಪರಲೋಕದೂರನ (ಬಸವ. ೬೪). [ಇಹ$_3$ + ಲೋಕ]

**ಇಹಸಂಸಾರ** (ನಾ). ಈ ಲೋಕದ ಸಂಸಾರ; ಈ ಲೋಕದ ಜನ್ಮಾವಳಿ: ನಮಗೆ ಇಹಸಂಸಾರದಲ್ಲಿ ಎಷ್ಟು ಸಾವಿರ ತಾಯಿತಂದೆಗಳಾಗಿ ಹೋದರೋ, ಎಷ್ಟು ನೂರು ಹೆಂಡತಿಮಕ್ಕಳಾಗಿ ಹೋದರೋ! (ವಚಭಾ. ೩೨೨). [ಇಹ$_3$ + ಸಂಸಾರ]

**ಇಹಾರ್ಥ** (ಅ). ಇಲ್ಲಿಗೋಸ್ಕರ; ಇಲ್ಲಿಯ ಸಲುವಾಗಿ: ತದ್ಗ್ರಹಣಂ ಇಹಾರ್ಥಮುಂ ಉತ್ತರಾರ್ಥಮುಂ ಆಗಿ ನಿರೂಪಿಸಪಟ್ಟುದಜಿಂ (ತತ್ತ್ವಪ್ರ. ೫೫). [ಸಂ.]

**ಇಹಿಂಗೆ** 'ಇಹಗೆ' ನೋ.
**ಇಹಿಗೆ** 'ಇಹಗೆ' ನೋ.
**ಇಹುದು** 'ಇರ್$_1$' ಪರಾ.
**ಇಳಂಜಿ** (ನಾ). ಬೋರೆಗಿಡ : ಬೋರೆ ; (ಬೋರ) ಇಳಂಜಿ ; ತೋಟದ ಬೋರೆಹಣ್ಣು ಬಹಳ ರುಚಿ (ಕಭಾಗೆ. ೪೬). 'ಎಲಚಿ' ಪರಾ. [?]
**ಇಳಕಲ** 'ಇಳಕಲು' ನೋ.
**ಇಳಕಲು,** ಇಳಕಲ, ಇಳುಕಲು (ನಾ). ೧. ಇಳಿಜಾರಾದ ಪ್ರದೇಶ : ಸಹ್ಯಾದ್ರಿಯ ನೆತ್ತಿಯಿಂದ ಪೂರ್ವದ ಇಳಕಲನ್ನು ಇಳಿಯುತ್ತಾ ಬಂದ ಹಾಗೆ ಈ ಪ್ರದೇಶವು ಪೂರ್ವಕ್ಕೆ ಇಳಕಲಾಗಿದೆ (ಕಭಾಗೆ. I, ೫) ; ದೊಡ್ಡದೊಂದು ಮಳೆ ಬಿತ್ತೆಂದರೆ ಬೀದಿಗಳಲ್ಲಿಯೂ ಇಳಕಲುಗಳಲ್ಲಿಯೂ . . . ಸಣ್ಣ ಸಣ್ಣ ಪ್ರವಾಹಗಳು ಹರಿಯಹತ್ತುತ್ತವೆ (ಮುಂಬಯಿ. ೪–೧೬೫). ೨. (ಉಕ). ಹಸುವಿನ ಬೆನ್ನಿನ ಕಡೆಯ (ಬಾಲದ ಬುಡದಲ್ಲಿನ) ಇಳಿಜಾರಾದ ಪ್ರದೇಶ. **ಇಳಕಲ : ೧.** ಕಾಡುಗುದುರೆಗಳು . . . ಇಳಕಲ ಬೈಲೊಳಗೆ ಇರುತ್ತವೆ (ಮುಂಬಯಿ. ೩–೫೬) ; ಈಗ ನಾ ತೋರಿಸಿದ ಜಾಗೇ ಸಮಮಾಡು, ಹೋಗು . . . ಈ ಬಾಜು ಇಳಕಲ ಆಗೊ ಹಾಂಗ (ಕಮ್ಮಟ. ೨೯). **ಇಳುಕಲು : ೧.** ಹಿಮಾಲಯದ ಇಳುಕಲಿನ ಸೀಮೆ (ಮುಂಬಯಿ. ೪–೧೧೧) ; ಕಷ್ಟಗಳಿಲ್ಲದ ಸುಖವೆಂಬುದೊಂದುಂಟೆ ನಷ್ಟವಿಲ್ಲದ ಲಾಭವುಂಟೆ ಇಳುಕಲು ಇಲ್ಲದ ಗುಡ್ಡವೆನ್ನುವುದುಂಟೆ (ಇಂಚಾಪ. ೨೦೭–೨೩). [ಇಳಿ$_1$ + –ಕಲ್$_4$]
**ಇಳಕು** 'ಇಳುಕು' ನೋ.
**ಇಳಕೊಳ್ಳು** 'ಇಳಿ' ಪರಾ.
**ಇಳಪ್ಪುಟುವ** (ನಾ). ಒಬ್ಬಾತನ ಹೆಸರು : ತ್ವಷ್ಟಕಾರಸ್ಯ ಇಳಪ್ಪುಟುವಸ್ಯಪುತ್ರೇಣ ಪೆರೆರನ್ನಾಮಲಿಖಿತಾಂ ಪಟ್ಟಿಕಾ (ಮೈಆರಿ. ೧೯೩೮, ೧–೩೯ ; 570). [?]
**ಇಳಲೆ** 'ಇಳಿಲೆ' ನೋ.
**ಇಳವರಿ** 'ಇಳಿವರಿ' ನೋ.
**ಇಳವಾರೆ** (ನಾ). "ಇಳಕಲು" (ಜಾನಕೋ. ೧೮). [< ಇಳಿ + ಓರೆ ?]
**ಇಳಾಕಾಂತ** (ನಾ). ಭೂಮಿಯ ಒಡೆಯ ; ರಾಜ : ಪಲವು ಬಿನದಂಗಳ ಸಂತಸದಿನಿಳಾಕಾಂತಂ ನೋಡುತ್ತುಂ (ಉದ್ಭದೇ. ೪–೪೫).
[ಸಂ. ಇಲಾಕಾಂತ (ಇಲಾ + ಕಾಂತ)]
**ಇಳಾಗ್ರ** (ನಾ). ಭೂಮಿಯ ಮೇಲ್ಭಾಗ : ಪುರಾಣಚೂಡಾಮಣಿಯಂ ನಿಮಿರ್ಚಿದಳಿಳಾಗ್ರದೊಳಿಂತು ಜಸಕ್ಕೆ ನೋಂತರಾರ್ (ಶಾಂತಿಪು. ಪರಿ. ೧–೧). [ಸಂ. ಇಲಾಗ್ರ (ಇಲಾ + ಅಗ್ರ)]
**ಇಳಾಚಕ್ರ** (ನಾ). ಭೂಮಂಡಲ : ನಿಚ್ಚಂ ಪೊಗಳಿಸಿದನಿಳಾಚಕ್ರದಿಂ ಶಕ್ರಲೀಲಂ (ಚಂದ್ರಪು. ೨–೭೧).
[ಸಂ. ಇಲಾಚಕ್ರ (ಇಲಾ + ಚಕ್ರ)]
**ಇಳಾತಳ** (ನಾ). ಭೂಮಿ ; ಭೂಮಿಯ ಮೇಲ್ಭಾಗ : ಇಳಾತಳನಾಥನ ಮಧ್ಯಸ್ಥಿತೆಯುಳವಿಯಂ . . . ಗೋಸನೆಗೊಳುಗುಂ (ಶಾಂತಿಪು. ೯–೧೫೨).
[ಸಂ. ಇಲಾತಲ (ಇಲಾ + ತಲ)]
**ಇಳಾಧಿಪ** (ನಾ). ಭೂಮಿಯ ಒಡೆಯ ; ದೊರೆ : ಅರ್ಧರಾಜ್ಯವನೊಲಿದು ಹಚ್ಚಿಕೊಟ್ಟಂ ನೃಪಂ ವರ್ಧನಪ್ರಭು ನಂಬಿಯಣ್ಣಂಗಿಳಾಧಿಪಂ (ನಂಬಿರ. ೩–೫೦) ; ಇತ್ತಂ ಕಾಣ್ಕೆಯನಿಳಾಧಿಪಂಗೆ ಪುಳಿಂದಂ (ರಾಜಶೇ. ೫–೨೫). [ಸಂ. ಇಲಾಧಿಪ (ಇಲಾ + ಅಧಿಪ)]
**ಇಳಾಧೀಶ** (ನಾ). = ಇಳಾಧಿಪ : ಬಂಧುಗಳನಾಪ್ತರುಗಳನಿಳಾಧೀಶನು ಕರೆಸಿ ತಾನವರಿಗಿಂತೆಂದ (ಬಸಪು. ೫–೪).
[ಸಂ. ಇಲಾಧೀಶ (ಇಲಾ + ಅಧೀಶ)]
**ಇಳಾಭೃತ್ತು** (ನಾ). ೧. ರಾಜ. ೨. ಪರ್ವತ ; ಬೆಟ್ಟ : ಮಹದಿಳಾಭೃದ್ರಾಜನಾಗಿ ಶಶಿಕಾಂತಕುಲದಿಂದೆ ಪಾಂಡವನುಮಾಗಿ (ಜೈಮಿಭಾ. ೧೦–೨). [ಸಂ. ಇಲಾಭೃತ್ (ಇಲಾ + ಭೃತ್)]
**ಇಳಾಭೃತ್ಸುತ** (ನಾ). ದೊರೆಯ ಮಗ ; ರಾಜಪುತ್ರ : ಮೆಚ್ಚಿದನಿಳಾಭೃತ್ಸುತಂ ಪಟ್ಟಬದ್ಧಂ (ರಾಜಶೇ. ೪–೧೧೯).
[ಸಂ. ಇಲಾಭೃತ್ಸುತ (ಇಲಾಭೃತ್ + ಸುತ)]
**ಇಳಾಮರ** (ನಾ). ಭೂಸುರ ; ಬ್ರಾಹ್ಮಣ : ಉದಿಯಿಸಿದನಿಳಾಮರಜನನಯನಕುಮುದಚಂದ್ರಂ ಚಂದಂ (ಸೌಇಇ. XI–ii, ೧೪೭–೪೭ ; 1099).
[ಸಂ. ಇಲಾಮರ (ಇಲಾ + ಅಮರ$_3$)]
**ಇಳಾಲು** (ನಾ). ಇಳಿಜಾರು (?) : ದಾರಿಯಲ್ಲಿ ಚಡಾವು, ಉತಾರು, ಇಳಾಲು ಬಹಳ ಜಾಸ್ತಿ (ಬೈಸರ್ವೆ. ೧೨೦). [< ಇಳಿ + –ಆಲು]
**ಇಳಾವರ** (ನಾ). ೧. ದೊರೆ ; ರಾಜ. ೨. ಇಳಾ ಎಂಬಾಕೆಯ ಗಂಡ ; ಬುಧ. **೧,೨ :** ಬುಧನಂತಿಳಾವರಂ ವಾರಿಧಿಯಂತೆ ವಿಕ್ಷೀಣಂ . . . ಬಲ್ಲಾಳಂ (ಎಕ. V, ಅರಸೀ. ೭೭–೧೨ ; 1219).
[ಸಂ. ಇಲಾವರ (ಇಲಾ + ವರ)]
**ಇಳಾವಲ್ಲಭ** (ನಾ). = ಇಳಾಧಿಪ : ಮೆಚ್ಚಿವ ಮಧುಪಶ್ರೇಣೀರಾವದ ಘೋಷಣೆ ಕಳೆದುದಿಳಾವಲ್ಲಭಸುತನ ಪಡೆಯ ಮದನಶ್ರೀಯುಂ (ಶಾಂತಿಪು. ೮–೬). [ಸಂ. ಇಲಾವಲ್ಲಭ (ಇಲಾ + ವಲ್ಲಭ)]
**ಇಳಾವಳಯ** (ನಾ). ಭೂಮಂಡಲ : ಇಳಾವಳಯೇಶ್ವರನಮರ್ದಿನ ಕಡಲೊಳಗಿರ್ಪಂತಿರ್ದಂ (ಆದಿಪು. ೧೧–೨೮).
[ಸಂ. ಇಲಾವಲಯ (ಇಲಾ + ವಲಯ)]
**ಇಳಾವೃಂದಾರಕ** (ನಾ). = ಇಳಾಮರ : ಸಾರಮೇಯವನೋದಿಸನೆ . . . ವೇದವನಿಳಾವೃಂದಾರಕರೊಡನೆ ವಾದಿಸಿ ಮಹಾಕಾಳಿದೇವಂ (ಬಸಪು. ೫೫–೫೪). [ಸಂ. ಇಲಾವೃಂದಾರಕ (ಇಲಾ + ವೃಂದಾರಕ)]
**ಇಳಿ$_1$** 'ಇಳಿ' ನೋ.
**ಇಳಿ$_2$** (ನಾ). ೧. ಎಣ್ಣೆ, ತುಪ್ಪ ಮುಂತಾದುವುಗಳ ಅಳತೆಯಲ್ಲಿ ಅಳತೆಯ ಪಾತ್ರೆಯ ಬಾಯಿಂದ ಕೆಳಕ್ಕೆ ಹರಿಯುವಂತೆ ಬಿಡುವಿಕೆ. ೨. ಕಾಗುಣಿತದಲ್ಲಿ ಆಕಾರವನ್ನು ಸೂಚಿಸಲು ಬಳಸುವ ಚಿಹ್ನೆ : ಇಳಿಗುಡಿಸು ಕೊಂಬು ವಟ್ಟುಸುಳಿಯುಳವಡಲೇತ್ವೈತ್ವವೋತ್ವವೌತ್ವಗಳೆಂಬೀ ದಳಸರದಿಂ ಕಾಗುಣಿತದಿ ತಿಳಿವಿಕೆಗೊಂದೆರಡು ಸೊನ್ನೆ ತೋರುವುದದರೊಳ್ (ಸಂಶೋಧ. ೨೦).
ಇಳಿಬಿಡು = ಎಣ್ಣೆ ಹರಿಯುವಂತೆ ಬಿಡು : ಸೇರು ಸರಿಯಾಗಿ ತುಂಬಿ ಇಳಿಬಿಡು, ಅಳತೆಯಲ್ಲಿ ಏಕೆ ಕಡಮೆಮಾಡುತ್ತೀಯೆ (ರೂಢಿ).
[< ಇಳಿ$_1$]
**ಇಳಿ$_3$** (ನಾ). ರವೆಯಷ್ಟು ; ಸ್ವಲ್ಪ : ಒಂದೇ ಒಂದು ಇಳಿಯಷ್ಟಾದರೂ ತಪ್ಪದೆ ಅನುಸರಿಸುವುದರಿಂದ (ಗೊಲ್ಲಥಾ. X, ಮುನ್ನುಡಿ) ; ಅದಕ್ಕೆ ನೀವು ಇಳಿಯಷ್ಟಾದರೂ ಯೋಚನೆಯನ್ನು ದಯವಿಟ್ಟು ಮಾಡಬೇಡಿ (ಮುಳ್ಳಿಹಾ. ೪೫). [< ಇಳಿದು]
**ಇಳಿ$_4$** (ಅ). ಪೂರ್ತಿಯಾಗಿ ; ಸಂಪೂರ್ಣವಾಗಿ. 'ಇಳಿಮುಳುಗು' ಪರಾ. [< ಇಡಿ]
**ಇಳಿಂಕೆ,** ಇಳಿಕೆ (ನಾ). ತಿರಸ್ಕಾರ ; ತಾತ್ಸಾರ ; ಧಿಕ್ಕಾರ. 'ಇಳಿಂಕೆಗೆಯ್' ಪರಾ. **ಇಳಿಕೆ :** "ಅವಜ್ಞಾಯಾಂ—ಇಳಿಕೆಯುಂ" (ನೀತಿವಾ. ೩೧–೪೩) ; ರಾಘವಂ ಪೋಗೆ ಕಣ್ಗಂ ಬಗೆಗಮಿಳಿಕೆಯಾದತ್ತು ಸಭಾಚಕ್ರವಾಲಂ (ಪಂರಾಮಾ. ೬–೧೫೬) ; ಉಮ್ಮಳಿಸಿ ಮಗಳಲ್ಲಿಗಟ್ಟಿದ ನಿಳಿಕೆಯ ನಿಃಸಾರಮಪ್ಪ ವಸ್ತುವನಾಗಳ್ (ಸೀಮಿಪು. ೪–೬೧) ; ತನ್ನ ಪತಿಯಲ್ಲಿ ಮನಸ್ಸು ಇಳಿಕೆಯಾಯಿತು (ಕಾವ್ಯಸ. ೬೧). [< ಇಳಿದು + –ಕೆ$_1$]

**ಇಳಿಂಕೆಗೆಯ್**, ಇಳಿಕೆಗೆಯ್, ಇಳಿಕೆಗೈ (ಕ್ರಿ). **೧.** ಕೀಳಾಗಿ ಕಾಣು; ಕಡೆಗಣಿಸು; ಮೀರು; ಧಿಕ್ಕರಿಸು: ತೊಳಗಿದಂ . . . ಆ ವೃಗಾಂಕನುಜ್ಜ್ವಳಮನಿಳಿಂಕೆಗೆಯ್ಯು್ದ (ರಾಜಶೇ. ೧೩-೬೦). **ಇಳಿಕೆಗೆಯ್**: **೧.** "ನ್ಯಕ್ಕಾರ – ಇಳಿಕೆಗೆಯ್ವುದು" (ನೀತಿವಾ. ೫-೯೧); ಮುಖಮಂಡಲಂ ಚಂದ್ರಮಂಡಲಮನಿಳಿಕೆಗೆಯ್ಯೆ (ಗಿರಿಕ. ೨-೧೦೫ ವ); ದನುಜಾಮಾತ್ಯಂ ಸ್ವಕಾರ್ಯಕ್ಷಯಸ್ಥಿತಿ ವಿಜ್ಞಾನವಿಹೀನನೆಂದಿಳಿಕೆಗೆಯ್ವಂ ತನ್ನ ತರ್ಕೋಕ್ತಿ ಚಿತ್ತತೆಯಿಂದಂ (ಶಾಂತೀಶ್ವ. ೧-೨೩); ಪೂವಿಲ್ಲ ಗುಣಧ್ವನಿಯನಿಳಿಕೆಗೆಯ್ದು (ದಶಕು. ೫-೩೦); ಮಿಕ್ಕ ಮುನೀಶ್ವರರಂತೆ ಪೊಲಕ್ಕಟ ಕಂಡೆನ್ನನಿಳಿಕೆಗೆಯ್ದ್ಯೆ (ವಿಷ್ಣುಪು. ೧-೨-೧೧೯). **೨.** ತಗ್ಗಿಸು; ಕೆಳಕ್ಕೆಮಾಡು: ಆತನುಂ ಮೋರೆಯನಿಳಿಕೆಗೆಯ್ಯೆ (ಶ್ರೀರಾಮಾ. ೧೬೬-೩೯೦). **ಇಳಿಕೆಗೈ**: **೧.** ನಾವಿಳಿಕೆಗೈಯದ ಮುನ್ನ ನಿನ್ನಿಂದಳಿದ ತಾಂಡವನ ಬಳಿಗೆ ಕೊಂಡೊಯ್ದು ರಿಸು (ತೊರರಾ. ೨-೫-೨೫); ಹರಿಹರ ವಿರಿಂಚಿ ಶಕ್ರಾದಿಗಳನಿಳಿಕೆಗೈದು ತಪನೇಂದು ಮನ್ಮಥ ವಸಂತರ್ಕಳಂ ಜಜಿತೆದನು (ಜೈಮಿಭಾ. ೯-೪); ಈ ಪುರುಷಾರ್ಥಗಳಲ್ಲಿ ಯಾವುದನ್ನೂ ಇಳಿಕೆಗೈಯುವ ಹಾಗಿಲ್ಲ (ಭಾಗ್ಯಶಿ. ೧. ಮುನ್ನುಡಿ). [ಇಳಿಂಕೆ + ಕೆಯ್$_1$]

**ಇಳಿಂಕೆಗೊಳ್**, ಇಳಿಕೆಗೊಳ್ (ಕ್ರಿ). ಕಡೆಗಣಿಸು; ಅಪಹಾಸ್ಯಮಾಡು; ಧಿಕ್ಕರಿಸು: ಗುರುವೃದ್ಧರ ಪೇಟ್ದ ಹಿತೋಪದೇಶಮಂ ಮನದೊಳಿಳಿಂಕೆಗೊಂಡನಿಲನಂದನನ್ವೈರದೆ ನಿಮ್ಮನಿಂದ್ರನಂದನನೊಡನಾನೆ ಕಾದಿಸಿದೆಂ (ಗದಾಯು. ೫-೪೦). **ಇಳಿಕೆಗೊಳ್**: ಜಲಜಸಂಭವನಾಜ್ಞೆಗಳ ತಾನಿಳಿಕೆಗೊಂಡನು (ಸಂಭಪ. ೩೩-೧೭); ಧರ್ಮಜನು ಹಿರಿತಾಯ್ಪಳಿಗೆ ಬರುತಿರೆ ಕಂಡು ಭರತಾನ್ವಯದ ನಾರಿಯರೂ ಇಳಿಕೆಗೊಂಡಾಡುತ್ತ ಶೋಕದ ಕಳವಳದಿ ಪೇಳಿದರು (ತಿಮ್ಮಸ್ತ್ರೀ. ೨-೫೯); ಅರ್ಜುನಾದಿಗಳಿಳಿಕೆಗೊಂಡಾಡಿದರ್ ತಮ್ಮ ಸಾಸಮಂ (ಜೈಮಿಭಾ. ೭-೬೩). [ಇಳಿಂಕೆ + ಕೊಳ್$_1$]

**ಇಳಿಕಯ್** 'ಇಳಿಕೆಯ್$_1$' ನೋ.

**ಇಳಿಕೆ** 'ಇಳಿಂಕೆ' ನೋ.

**ಇಳಿಕೆಗಾಣ್** (ಕ್ರಿ). ಕೀಳಾಗಿ ಕಾಣು; ಉದಾಸೀನಮಾಡು; ಧಿಕ್ಕರಿಸು; ಕಡೆಗಣಿಸು: ತಲೆಯಮೇಲಿಜಿದವನನೊಗ್ಗಿಸಿ ಸಲಹುವರು ಪುರುಷಾರ್ಥಜೀವರನಿಳಿಕೆಗಾಂಬರು ಸ್ವಾಮಿದ್ರೋಹರನೊಲಿದು ನಂಬುವರು (ಕುವ್ಯಾಸ. ಓರಿ೩. ೧-೧೧೮); ಕೆಲಸರಘುಸಂಹತಿಯ ಸುಜನರನಿಳಿಕೆಗಾಣರಸೂಯೆಯಲಿ ಮನವೆಳಸರಲ್ಲಿಯ . . . ಅಖಿಳಜನ (ತೊರರಾ. ೧-೩-೨೯); ಅಸುರನನಿಳಿಕೆಗಂ[ಪಾಠಾಂ. ಗೊಂ]ಡುದು ಚಾಪ ಚಪ್ಪರಿಸಿತು ಚಡಾಳಿಕೆಯ (ತೊರರಾ. ೧-೧೫-೨೩). [ಇಳಿಕೆ (< ಇಳಿಂಕೆ) + ಕಾಣ್]

**ಇಳಿಕೆಗೆಯ್** 'ಇಳಿಂಕೆಗೆಯ್' ನೋ.

**ಇಳಿಕೆಗೈ** 'ಇಳಿಂಕೆಗೆಯ್' ನೋ.

**ಇಳಿಕೆಗೊಳ್** 'ಇಳಿಂಕೆಗೊಳ್' ನೋ.

**ಇಳಿಕೆಯ್$_1$**, ಇಳಿಕಯ್, ಇಳಿಕೈ (ಕ್ರಿ). **೧.** ಕೀಳಾಗಿ ಕಾಣು; ಅಲಕ್ಷ್ಯಮಾಡು; ಕಡೆಗಣಿಸು; ತಿರಸ್ಕರಿಸು; ಕೀಳುಮಾಡು; ಮೀರು; ಧಿಕ್ಕರಿಸು: ಮೊದಲೊಳ್ ಸಂಭಾಷಣಂಗೆಯ್ವುದೆ ವಲಮಿಳಿಕೆಯ್ವಂದಂ (ಕಾದಂಉ. ೧೧೨); ಎನಿತೊಳ್ಪಿತಾದೊಡಂ ಕಾಜಿನ ಮಣಿಗಳ್ ಪೊನ್ನತೊಡವನಿಳಿಕೆಯ್ಗುಮೆ (ಧರ್ಮಾಮೃ. ೮-೪೪); ಇಳಿಕೆಯ್ವಳೀ ಮಹಾಸತಿ ಮಹದೇವಮಂತ್ರಿಯ ಮನಃಪ್ರಿಯೆ (ಎಕ. VIII, ಸೊರಬ. ೧೪೦-೬೯; 1198); ಮುಖಲಕ್ಷ್ಮಿ ಪೂರ್ಣಚಂದ್ರನನಿಳಿಕೆಯ್ದು ನಿಲ್ವಿನೆಗಂ (ಸೂಕ್ತಿಸು. ೮-೪೦೫); ಮನಸಿಜನನಿಳಿಕೆಯ್ವ [ಪಾಠಾಂ. ನಿಳಯಕ್ಕೆ] ಸಿಂಗರಂ ಮಾಡುತುಂ (ನಂಬಿರ. ೧೩-೧೦೭). **೨.** ಬಿಡು; ತೊರೆ: ಎಡರಡಸಿರ್ದೊಡಂ . . . ಮಹಾವ್ಯಸನದೊಳ್ ತೊಡರ್ದಿರ್ದೊಡಮನ್ಯದೇಶಮಾದೊಡಮಿಳಿಕೆಯ್ಯದೊಂದೆತನುವೆಂಬವೊಲಾಪ್ತಸಹಾಯನಂಕರಂ ಬಿಡದೊಡನಿರ್ಪವಂ ಸುಜನಮಿತ್ರನವಂ (ದಶಕು. ೧೧-೬೩); ಪಾಲಂ ಕೊಂಡು ಪಯಮನಿಳಿಕೆಯ್ವ ಮರಾಳಂಬೊಲು (ಜಯಕಾ. ೧-೨೨). **ಇಳಿಕಯ್**: **೧.** ಕೊಂಕಿದೊಡೇಂ ಸ್ಮರಚಾಪಮನಿಳಿಕಯ್ವ [ಪಾಠಾಂ. ಕೆಯ್ವ]ರೆ (ಯಶೋಚ. ೨-೪೨); ದೇವ ಕನಸಿದು ಕರಂ ದೋಷಾವಹಮಿಳಿಕ[ಪಾಠಾಂ. ಕೆ]ಯ್ಯಲಾಗ (ಯಶೋಚ. ೩-೧೨). **ಇಳಿಕೈ**: **೨.** ನಳನೃಪನ ಚೆಲ್ವು ಮುಂದಿನ್ನಿಳಿಕೈದಪುದೆಂದನಂಗತೆಯ ಮುನ್ನ ಮೆ ತಾಂ ತಳೆದನೆನೆ ಕುಸುಮಶರಂ (ದಮಯ್ವ. ೧-೧೨). [< ಇಳಿದು + ಕೆಯ್$_1$]

**ಇಳಿಕೆಯ್$_2$** (ಕ್ರಿ). ಕುಂದು; ಕುಗ್ಗು; ಕಡಮೆಯಾಗು: ಸಳನೆಂಬಯದುಕುಲಜನೊರ್ವಂ ತನಗೆ ಭಾಗ್ಯಮಿಳಿಕೆಯ್ಯೆ ದೇಶಾಂತರಪ್ರಾಪ್ತನಾಗಿ (ಪದ್ಮರಾ. ೩-೧೫). [ಇಳಿ$_1$ (< ಇೞಿ) + ಕೆಯ್$_1$]

**ಇಳಿಕೆವಡೆ** (ಕ್ರಿ). ತಿರಸ್ಕಾರವನ್ನು ಪಡೆ; ಉಪೇಕ್ಷೆಗೆ ಗುರಿಯಾಗು: ಸಿಂಗದ ಮುಪ್ಪಂ ನೆಗಟ್ದೀ ಗಾಂಗೇಯರ ಮುಪ್ಪುಮಿಳಿಕೆವಡೆಗುಮೆ (ಪಂಪಭಾ. ೧೦-೧೯). [ಇಳಿಕೆ (< ಇಳಿಂಕೆ) + ಪಡೆ$_1$]

**ಇಳಿಕೈ** 'ಇಳಿಕೆಯ್$_1$' ನೋ.

**ಇಳಿಕೋರೆ** (ನಾ). = ಇಳಿಜಾರು: ಪರ್ವತದ ಇಳಿಕೋರೆಯ ತೋಡು ದಾರಿಯಲ್ಲಿ ರೈಲು ಓಡುತ್ತಿದ್ದಾಗ (ಪುನರು. ೪೬೭). [ಇಳಿಕು (< ಇೞಿಕು) + ಓರೆ]

**ಇಳಿಗ** 'ಈಡಿಗ' ನೋ.

**ಇಳಿಗಡೆ**, ಇಳುಗಡೆ (ನಾ). **೧.** ಇಳಿಯುವ ಕಡೆ; (ನದಿಯ) ಕೆಳಗಡೆ; ನದಿ ಹರಿಯುವ ಕಡೆ, —ಇಳಿಜಾರು, —ಹಳ್ಳ: ಪವಣಿಕೆಯೊಳಿರ್ದನಂತಿಳಿಗಡೆಯ ಲಿಂಗಮಂ (ಪರಶು. ೧೪-೧೯). **೨.** ಇಳಿಯುವಿಕೆ; ಕಡಮೆಯಾಗುವಿಕೆ: ನದಿಯಲ್ಲಿ ಪ್ರವಾಹ ಇಳಿಗಡೆಯಾಗಿದೆ (ರೂಢಿ). **ಇಳುಗಡೆ**: **೧.** ಮನೆಯ ಸಾರುವೆನೆಂದು ಮುಂದಿ ತನತನಗುಲಿದೆಯ್ದಿ ತಿಳುಗಡೆಯೊಳು ಪೋಪ ಹೊನಲೆನೆ ತಡೆಯದುಚ್ಚಳಿಸಿ (ಭರಚ. ೪೪-೫೬). 'ಏರ್ಗಡೆ' ಪರಾ. [ಇಳಿ$_1$ (< ಇೞಿ) + ಕಡೆ$_3$]

**ಇಳಿಗಾಲ** (ನಾ). ಏಳಿಗೆ ತಪ್ಪಿದ ಕಾಲ; ನಷ್ಟದ ಕಾಲ; ಅವನತಿಯ ಸಮಯ: ಜೈನಸಮಾಜಕ್ಕೆ ಇಳಿಗಾಲವು ಬಂದಿತೆಂದೂ ಇತಿಹಾಸದಿಂದ ತಿಳಿಯುತ್ತದೆ (ತವನಿ. ೯೬). [ಇಳಿ$_1$ (< ಇೞಿ) + ಕಾಲ$_1$]

**ಇಳಿಗಾವು** (ನಾ). ಕಡಮೆಯಾದ ಶಾಖ; ಕಡಮೆ ಕಾವು; ತಕ್ಕಷ್ಟಿಲ್ಲದ ಶಾಖ: ಸ್ವಲ್ಪ ಹೆಚ್ಚಾದರೆ ಏರುಗಾವು ಕೊಂಚ ಕಡಿಮೆಯಾದರೆ ಇಳಿಗಾವು (ದಾಬುತ್ತಿ. ೧೪). [ಇಳಿ$_1$ (< ಇೞಿ) + ಕಾವು$_1$]

**ಇಳಿಗಾಱ** (ನಾ). ಹೀಯಾಳಿಸುವವನು; ತಿರಸ್ಕರಿಸಿ ಮಾತನಾಡುವವನು: ಪರಿಭಾವಿಸೆ ಪೂರ್ವಾಪರ ವಿರೋಧಮಿಲ್ಲದುದೆ ತಾಂ ಪುರಾಣಮದಂ ಮಾಂಕರಿಸುವೊಡೇನಿಱಿ[ಳಿ] [ಪಾಠಾಂ. ಗಿಱಿ]ಗಾಱರ ಪರಪಿದ ಮಾತುಂ ಪುರಾಣಮಕ್ಕೆಮಗೇನೋ (ಅರ್ಥನೇ. ೧-೨೯); "ಕಡೆಗಣಿಸುವವರು" (ಅರ್ಥನೇ. ಕೋಶ); "ನಿಕೃಷ್ಟನು, ಮೂಢನು, ಅಜ್ಞಾನಿ, ನಿಂದಕ" (ಪ್ರಭಣ್ಣ). [< ಇಳಿ$_0$ (ಇಳಿದು) + -ಗಾಱ (< -ಕಾಱ)]

**ಇಳಿಗಿಣ್ಪು** (ನಾ). ಕಾಲಿನ ಹರಡು; ಹಿಮ್ಮಡಿಯ ಗಿಣ್ಣು (?): ಬಳ್ಕೆ ಮಧ್ಯಂ ಕಚಂ ಬಿಟ್ಟಳಿಗಿಣ್ಪಂ [ಪಾಠಾಂ. ಟ್ಟಾಳಿಗಿಣ್ಪಂ, ಟ್ಟಾಳುಮಿಣ್ಪಂ, ಟ್ಟಳ್‌ಗಿಣ್ಪು, ಟ್ಟಳ್‌ವಿಣ್ಪು, ಟ್ಟಳುವಿಣ್ಪು] ಸಾರೆ (ಅರ್ಥನೇ. ೫-೬೩). [ಇಳಿ$_1$ (< ಇೞಿ) + ಗಿಣ್ಪು (< ಸಂ. ಗುಲ್ಫ)]

**ಇಳಿಗಿವಿ** (ನಾ). **೧.** ಕಿವಿ ಜೋಲುಬಿದ್ದಿರುವುದು; ಜೋಲುಬಿದ್ದ ಕಿವಿ. **೨.** (ಅಲಂ) ಚಾಡಿಮಾತನ್ನು ಕೇಳುವವನು: ಅವನೊಬ್ಬ ಇಳಿಗಿವಿ ಮನುಷ್ಯ (ರೂಢಿ). [ಇಳಿ$_1$ (< ಇೞಿ) + ಕಿವಿ]

**ಇಳಿಗು** 'ಇಳುಕು' ನೋ.

**ಇಳಿಗೂದಲು** (ನಾ). (ಕಟ್ಟದೆ) ಇಳಿಬಿಟ್ಟ ಕೂದಲು: ಕೈ ಮೈ ಬೀಸಾಡಿ ಇಳಿಗೂದಲೀಸಾಡಿ ಬೆವರ್ಹನಿ ಸೂಸಾಡಿ ಕುಣಿಯೋಣುಬಾರ ಕುಣಿಯೋಣು ಬಾ (ಗರಿ. ೧೨೪–೧೫).
[ಇಳಿ$_1$ (< ಇೞಿ) + ಕೂದಲು (< ಕೂಂದಲ್)]

**ಇಳಿಗೆ** (ನಾ). = ಇಳಿಗಾಲ: ಇಳಿಗೆಯಲ್ಲಿ ಎಲ್ಲವೂ ದೂರವಾಗುವುದು ಮತ್ತು ನೆರವಿಗೆ ಯಾರೂ ಬರುವುದಿಲ್ಲ (ದಾಬುತ್ತಿ. ೨೨).
[ಇಳಿ$_1$ (< ಇೞಿ) + –ಗೆ$_1$]

**ಇಳಿಗೊಂಬು** (ನಾ). ೧. ಕೆಳಕ್ಕೆ ಬಾಗಿರುವ ಕೊಂಬು. ೨. ತಗ್ಗಿರುವ, ಇಳಿಬಿದ್ದಿರುವ ಕೊಂಬೆ. [ಇಳಿ$_1$ (< ಇೞಿ) + ಕೊಂಬು$_2$]

**ಇಳಿಜಾರು**, ಇಳುಜಾರು (ನಾ). ಎತ್ತರದ ಕಡೆಯಿಂದ ಕ್ರಮವಾಗಿ ತಗ್ಗಾಗುತ್ತಾ ಬಂದ ಪ್ರದೇಶ; ಇಳಿಕಲು: ಸಿಂಧು ನದಿಯ ಮೈದಾನ–ಇದು ಉತ್ತರದಿಂದ ದಕ್ಷಿಣಕ್ಕೆ ಇಳಿಜಾರಾಗಿದೆ (ಭೂಗೋಳ. ೩೨); ಕೆರೆಯ ಕೋಡಿ ಬಳಿ ಬಂದಾಗ ರಸ್ತೆ ಬಹಳ ಇಳಿಜಾರಾಗಿದ್ದುದು ಕಂಡಿತು (ರಂಗಕ. ೨೬); ಈ ಪ್ರದೇಶ ಸಮನೆಲವಾಗಿಲ್ಲ. ಉತ್ತರದಿಂದ ದಕ್ಷಿಣದ ಕಡೆಗೆ ಇಳಿಜಾರಾಗಿದೆ (ರೂಢಿ). **ಇಳುಜಾರು**: ಇದರಲ್ಲಿ ಮೊದಲಿನದಕ್ಕಿಂತಲೂ ದೊಡ್ಡ ಪ್ರವಾಹವು ಒಂದು ಇಳುಜಾರಾದ ಸಂಕುಚಿತ ಪ್ರದೇಶದೊಳಗಿಂದ ಅಬ್ಬರಿಸುತ್ತ . . . ಕೆಳಗೆ ಬಿದ್ದು . . . ಒಂದು ಗವಿಯೊಳಗೆ ಸೇರುತ್ತದೆ (ಮುಂಬಯಿ. ೧–೬೦). [ಇಳಿ$_1$ (< ಇೞಿ) + ಜಾರು$_2$ (< ಜಾಱು$_2$)]

**ಇಳಿತ** 'ಇೞಿತ' ನೋ.

**ಇಳಿತರ್** 'ಇೞಿತರ್' ನೋ.

**ಇಳಿತರ** (ನಾ). ಕಡಮೆ; ಕೆಳಮುಖ: ಈಗ ನಿರಾಶೆಯು ಇಳಿತರವಾಗಿದೆ ತೆರೆಗಳ ಗಾಳಿಯು ಹದ ತೋರಿ (ಇಂಗೀತ. ೮೦–೪); ಈಗ ಧಾರಣೆ ವಾಸಿ ಇಳಿತರಕ್ಕೆ ಬಂದಿದೆ (ರೂಢಿ).

**ಇಳಿತರಮಾಡು** = ಅಲಕ್ಷ್ಯಮಾಡು; ಕಡೆಗಣಿಸು: ಇಳೆಯ ವಲ್ಲಭ ಕೇಳು ಎನ್ನ ಮಾತಾ ಇಳಿಥರ [ತರ] ಮಾಡದೆ (ವಿಸಾಸು. ೫೦–೩).
[ಇಳಿ$_1$ (< ಇೞಿ) + –ತರ]

**ಇಳಿತಾಯ** (ನಾ). ಇಳಿಯುವಿಕೆ; ಕಡಮೆಯಾಗುವಿಕೆ; ಕುಗ್ಗುವುದು: ರಾಷ್ಟ್ರಗಳು ವಿನಿಮಯದರ ಇಳಿತಾಯವನ್ನು (Competitive exchange depreciation) ಮಾಡುವುದರಲ್ಲಿ ಪೈಪೋಟಿ ನಡೆಸದಂತೆಯೂ ನೋಡಿಕೊಳ್ಳುವುದು (ಅಂತಸಂ. ೬೦). [ಇಳಿತ + –ಆಯ$_4$]

**ಇಳಿತೆಗೆ** 'ಇಳಿದೆಗೆ' ನೋ.

**ಇಳಿದನಿ** (ನಾ). ಕುಗ್ಗಿದ ಧ್ವನಿ; ತಗ್ಗಿದ ಸ್ವರ: "ನಾನು ಒಲ್ಲೆ"–ಕೊತವಾಲನು ಇಳಿದನಿಯಲ್ಲಿ ಹೇಳಿದ (ಕೊತಕಾ. ೨); ಸ್ವಲ್ಪ ಹೊತ್ತು ಮೌನವಾಗಿದ್ದಮೇಲೆ ಅವಳು ನಿಟ್ಟುಸಿರು ಬಿಟ್ಟು ಇಳಿದನಿಯಲ್ಲಿ ಹೇಳಿದಳು (ಬಾಣಅ. ೨೪೪); "ಜನರು ಇದನ್ನು ಮುಂದೆಮಾಡಿಕೊಂಡು ಟೀಕೆಮಾಡುತ್ತಿದ್ದಾರೆ" ಇಳಿದನಿಯಲ್ಲಿ ಎಂದಳು (ಜಮಿನ್ದಾ. ೩೧).
[ಇಳಿ$_1$ (< ಇೞಿ) + ದನಿ]

**ಇಳಿದಾಣ** (ನಾ). ೧. ವಿಮಾನಗಳು ಕೆಳಕ್ಕೆ ಇಳಿಯಲು ಅನುಕೂಲವಾಗುವಂತೆ ಏರ್ಪಡಿಸಿರುವ ಸ್ಥಳ, —ಪ್ರದೇಶ: ಹಾಸನದ ಬಳಿ ವಿಮಾನ ಇಳಿದಾಣವೊಂದನ್ನು ರಚಿಸಲಾಗುತ್ತಿದೆ (ರೂಢಿ). ೨. ಹಡಗಿನಿಂದ ಸಾಮಾನು ಹಾಗು ಜನರನ್ನು ಇಳಿಸಲು ಅನುಕೂಲವಾಗುವಂತೆ ನಿರ್ಮಿಸಿರುವ ಸ್ಥಳ: "ಕಲ್ಲಿನಿಂದ ಕಟ್ಟಿದ, ಸಮುದ್ರದಲ್ಲಿ ಜಾಚಿಕೊಂಡುಹೋಗಿರುವ, ಹಡಗಿನ ಇಳಿದಾಣ, ಅಲೆತಡೆ; ಅಥವಾ ನೀರಿನಿಂದ ಪ್ರತ್ಯೇಕಿಸಲ್ಪಟ್ಟ ಎರಡು ಭೂಭಾಗಗಳನ್ನು ಕೂಡಿಸುವ ಸೇತುವೆ; ಕೃತಕ ಬಂದರು" (Mole. ಇಂಕನಿ). [ಇಳಿ$_1$(< ಇೞಿ) + ತಾಣ]

**ಇಳಿದಾರವಾರ** 'ಇೞಿ' ಪರಾ.

**ಇಳಿದು** (ಗು). ೧. ಕಡಮೆಯಾದ; ಕೀಳಾದ; ಕಳಪೆಯಾದ; ಕ್ಷೀಣವಾದ: ಅಂದಿನಂಗರುಚಿ ಕಣ್ಗಿಳಿದಾಯ್ತು (ಆದಿಪು. ೩–೩); ರಘೂದ್ವಹ ಸನ್ನಿಧಿಯಿಂದದೃಶ್ಯಮಪ್ಪುದುಮಿಳಿದಾಯ್ತು ಚಾಪಲತೆ (ಪಂರಾಮಾ. ೫–೮೬); ಸತ್ತ್ವನಿಧಿಯ ಶೈಶವಮಿಳಿದೇ (ಜಗವಿ. ೧೬–೧೩); ಬೇವಂ ಮೆಚ್ಚಿದ ಕಾಗೆಗೆ ಮಾವಿಳಿದಪ್ಪಂತೆ ಪತಿಯೊಳಿಳಿದಾಯ್ತು ಮನಂ (ಯಶೋಚ. ೨–೪೫). ೨. ಸುಲಭವಾದ; ಸುಕರವಾದ; ಸಾಧ್ಯವಾದ: ಇದೆರಡಱೊಳಂ ನೆಗಟಲಾವುದರಿದು ನೆಗಟಲಾವುದಿಳಿದೆಂಬುದಂ ಭಾವಕರಪ್ಪವರ್ ವಿಚಾರಿಸಿ (ಧರ್ಮಾಮೃ. ೬–೮೧ ಅಡಿಟ); ಅದಲ್ಲದೊಡೆ ನಿನ್ನನೊಲಿಸುವುದಿಳಿದೇ (ಲೀಲಾವ. ೫–೮); ಇಳಿದಲ್ತು ಕೆಳಲೋಕದಿಂ ಬೆಳಕ ಮುಟ್ಟುವುದು (ಪಾರಸಿ. ೨೬–೯). ೩. ಬಡವಾದ; ಕೃಶವಾದ: ನಮೆಯುತ್ತ ಸಮೆಯುತ್ತ ಪೆಣ್ ಸೊರಗಿ ಸೊರಗಿ ಇಳಿದಾಯ್ತು ಪರ್ಸವೇ ಕರಗಿ ಕರಗಿ (ಪಾರಸಿ. ೮–೪). 'ಏಳಿದ' ಪರಾ.

**ಇಳಿದಾಗು** = ಮ್ಲಾನವಾಗು; ಕಳೆಗುಂದು: ಕಂದಿದ ಪಟಗನ್ನಡಿವೋಲೇನಿಳಿದಾದುದೊ ಚಂದ್ರಮಂಡಲಂ (ಚಂದ್ರಪು. ೯–೫).

[< ಏಳಿದು. / ತಮಿ. ಎಳಿದು; ಮಲ. ಎಳುದು; ತುಳು. ಎಳ್ಯ; ತೆಲು. ಎಲ್ಲಿದ]

**ಇಳಿದೆಗೆ**, ಇಳಿತೆಗೆ (ಕ್ರಿ). ನಿವಾಳಿಸು; ದೃಷ್ಟಿದೋಷ ಮುಂತಾದುವುಗಳ ಪರಿಹಾರಕ್ಕಾಗಿ ಪೊರಕೆಕಡ್ಡಿ ಮುಂತಾದುವುಗಳನ್ನು ಹೊತ್ತಿಸಿ ನಿವಾಳಿಸು. **ಇಳಿತೆಗೆ**: ಮಗುವಿಗೆ ದೃಷ್ಟಿಯಾಗಿದೆ; ಇಳಿತೆಗೆ (ರೂಢಿ).

**ಇಳಿಯತೆಗೆ** = ಇಳಿದೆಗೆ: ಪದುಮಾಕ್ಷಿ ಶಿರಸಿನಿಂ ಪಾದಗಳವರಿಗು ಹದದಿ ಮೂಜಾವರ್ತಿಯಿಂ ಇಳಿಯತೆಗೆದು (ಸೌಗಂಧಿ. ೪೯–೬).
[ಇಳಿ$_1$ (< ಇೞಿ) + ತೆಗೆ$_1$]

**ಇಳಿದೆರೆ** (ನಾ). ಇಳಿಬಿಟ್ಟಿರುವ ತೆರೆ.
[ಇಳಿ$_1$ (< ಇೞಿ) + ತೆರೆ$_2$ (< ತೆಱೆ$_2$)]

**ಇಳಿನೀರು** (ನಾ). ೧. "ಉಬ್ಬರ, ಹರಿವಿಲ್ಲದ ನೀರು (ಇರುವ ಕಾಲ); ಇಳಿನೀರು (ಕಾಲ)" (Slack Water. ಇಂಕನಿ). ೨. ಇಳಿಯುವ ನೀರು. ೩. ಕಡಮೆಯಾಗುತ್ತಿರುವ ನೀರು.
[ಇಳಿ$_1$ (< ಇೞಿ) + ನೀರು (< ನೀರ್$_1$)]

**ಇಳಿನೇಸರು** (ನಾ). ಇಳಿಯುವ ಸೂರ್ಯ; ಮುಳುಗುವ ಸೂರ್ಯ; ಇಳಿಹೊತ್ತಿನ ಸೂರ್ಯ: ಇಳಿನೇಸರಿಳಿಯೆ ಬೈಗಿನ ಕೆಂಪು ಪರ್ವಿ ತೆರಚಿತು ಚೆಲ್ಲಿತುರಿನೀರಿನೋಕುಳಿಯ (ಶ್ರೀರಾಮಾ. ೨೫೬–೬೫೫).
[ಇಳಿ$_1$ (< ಇೞಿ) + ನೇಸರು (< ನೇಸಱ್)

**ಇಳಿಪಾಟು** (ನಾ). = ಇಳಿತರ (ಃ). [ಇಳಿ$_1$ (< ಇೞಿ) + –ಪಾಟು]

**ಇಳಿಪಿಸು** (ಕ್ರಿ). ಇಳಿಸು; ಕಡಮೆಮಾಡು (?): ಗಳಂತಿಗೆಯಲು . . . ಪೊನ್ನವಣ ಬಿ(ಂ)ನ್ನಮನಾಯ್ಚುಕಳೆದುನಿನ್ದನ್ತಪ್ಪ ಚೂರ್ಣ್ಣಭಂಗಾರಮಂ ಪತ್ತೆಂಟನಿಳಿಪಿಸಲ್ ಕೊಟ್ಟಾಚಂದ್ರಾರ್ಕ್ಕತಾರಂಬರಂ ಸುಖಮುಣ್ಬರು (ಸೌಇಇ. IX–i, ೧೬೪–೨೯; 1098). [ಇಳಿಪು$_1$ (< ಇೞಿಪು) + –ಇಸು$_3$]

**ಇಳಿಪು$_1$** 'ಇೞಿಪು' ನೋ.

**ಇಳಿಪು$_2$**, ಇಳುಹು$_2$ (ಕ್ರಿ). ಕೀಳುಮಾಡು; ಹೀಯಾಳಿಸು; ಧಿಕ್ಕರಿಸು: ಉದಾರನಪ್ಪನಂ ಗಟಿಪನೆಂದಿಳಿಪಳ್ (ಕಾದಂಪೂ. ೫೪೯); ಆ ಹಂಸನನಿಳಿಪಿದನಾ ರಾಜಹಂಸನಬಳಾಳಿಯುತಂ (ಚಂದ್ರಪು. ೭–೧೪೭). **ಇಳುಹು$_2$**: ಹೊಳೆವಸಿ ತ್ರಿಶೂಲ . . . ಕಾಂತಿಗಳಿಳುಹಿದುವು ಖದ್ಯೋತ ದೀಧಿತಿಯ (ಕುಮ್ಯಾದ್ರೋ. ೧೨–೯). [ಇಳಿ$_0$ (< ಇಳಿದು) + –ಪು$_1$]

**ಇಳಿಪ್ರಾಯ** (ನಾ). ಪ್ರಾಯ ತಗ್ಗಿದ ಸಮಯ; ಇಳಿವಯಸ್ಸು; ಯೌವನ ಕಡಮೆಯಾಗುತ್ತಿರುವ ಕಾಲ: ಈರ ಆ ಇಳಿಪ್ರಾಯದಲ್ಲಿ ಸ್ಫೂರ್ತಿಗೊಂಡ (ಮುಂಗಾಮು. ೬೨). [ಇಳಿ$_1$ (< ಇೞಿ) + ಪ್ರಾಯ]

**ಇಳಿಬಾವಿ** (ನಾ). ಇಳಿಯಲು ಹತ್ತಲು ಆಗುವ ಬಾವಿ; ಇಳಿಯುವ ಬಾವಿ : ತೋಟದಲ್ಲಿ ಒಂದು ಇಳಿಬಾವಿ ತೆಗೆಸಿದ್ದಾರೆ (ರೂಢಿ).
[ಇಳಿ$_1$ (< ಇೞಿ) + ಬಾವಿ]

**ಇಳಿಬಿಡು** 'ಇಳಿವಿಡು' ನೋ.

**ಇಳಿಬಿಸಿಲು** (ನಾ). ಇಳಿಹೊತ್ತಿನ ಬಿಸಿಲು ; ಸಂಜೆಯ ಹೊತ್ತಿನ ಬಿಸಿಲು : ಇಳಿಬಿಸಿಲು ಮೋರೆಯನ್ನು ಆಡರುತ್ತಿತ್ತು (ಕಮನೆ. ೬).
[ಇಳಿ$_1$ (< ಇೞಿ) + ಬಿಸಿಲು (< ಬಿಸಿಲ್)]

**ಇಳಿಬೀಳು** 'ಇಳಿವೀಳ್' ನೋ.

**ಇಳಿಬೆಲೆ** (ನಾ). ಕಡಮೆಬೆಲೆ; ಅಗ್ಗದ ಬೆಲೆ : ಇಳಿಬೆಲೆಗೆ ಮಾರಿಯುಂ ಸಲೆಮಾಱುಗೊಂಡಡಂ ಯೊಲೊಮನೆಯೊಳಿರ್ದ ಸತಿಸುತಾದಿಗಳ ನೊಂದುಳಿಯದೆ ತಿಂಬ ತೆಱದಂತೆ (ಗುರುಬೋ. ೨೬–೧೦೬).
[ಇಳಿ$_1$ (< ಇೞಿ) + ಬೆಲೆ]

**ಇಳಿಬೆಳಕು** (ನಾ). ಇಳಿದು ಬರುವ ಬೆಳಕು, —ಪ್ರಭೆ : ನಿನ್ನ ಕೃಪೆಯ ಇಳಿಬೆಳಕಿನಲ್ಲಿ ಸುಳಿಯೇರಿ ಬಂತು ಪ್ರೀತಿ (ಹೃದಸ. ೬೧–೧೩).
[ಇಳಿ$_1$ (<ಇೞಿ) + ಬೆಳಕು$_2$ (< ಬೆಳಗು$_2$)]

**ಇಳಿಭೋಗ್ಯ** (ನಾ). ಲೇವಾದೇವಿಯಲ್ಲಿ ಜಮೀನನ್ನು ಭೋಗ್ಯಕ್ಕೆ ಹಾಕಿಕೊಂಡು ಅಸಲು ಬಡ್ಡಿ ಎರಡೂ ತೀರುವ ತನಕ ಉತ್ಪತ್ತಿ ಯಲ್ಲಿ ಕಟಾಯಿಸಿಕೊಂಡು ಅನುಭವಿಸುತ್ತಾ ಬರುವ ಕ್ರಮ : ಅವನು ಹೊಲವನ್ನು ಎಂಟು ವರ್ಷಕ್ಕೆ ಇಳಿಭೋಗ್ಯ ಹಾಕಿದ್ದಾನೆ (ರೂಢಿ). ☞ ಈ ಕ್ರಮದಲ್ಲಿ ಸಾಮಾನ್ಯವಾಗಿ ಜಮೀನಿನ ವಾರ್ಷಿಕ ವರಮಾನ ಭೋಗ್ಯದ ಹಣದ ಬಡ್ಡಿಗಿಂತ ಹೆಚ್ಚಾಗಿರುವುದರಿಂದ ಬಡ್ಡಿ ಕಳೆದು ಉಳಿದ ಮೊಬಲಗನ್ನು ಅಸಲಿಗಾಗಿ ಕಟಾಯಿಸಿ ಕೊಳ್ಳುತ್ತಾ ಬರುತ್ತಾರೆ. [ಇಳಿ$_1$ (< ಇೞಿ) + ಭೋಗ್ಯ]

**ಇಳಿಮಾನು** (ನಾ). ಇಳಿಯುವ ಮಾನು ; ನುಗ್ಗುವ ಮಾನು : ವಿಧಿ ವಂಚನೆಯ ಕೂಣೆಗಿಳಿಮಾನಿನೋಲಂತೆ ಮಂಥರೆಯ ಮಾತಿನಗ್ನಿಯ ಮೋಹಕೊಳಗಾಗಿ (ಶ್ರೀರಾಮಾ. ೧೧೬–೧೩೩).
[ಇಳಿ$_1$ (< ಇೞಿ) + ಮಾನು (< ಮಾನ್)]

**ಇಳಿಮುಖ** (ನಾ). ೧. ತಗ್ಗುವುದು ; ಕಡಮೆಯಾಗುವುದು ; ಇಳಿಯುವ ಸ್ಥಿತಿ : ಕಾವೇರಿಯ ಪ್ರವಾಹ ಇಳಿಮುಖವಾಗಿದೆ (ರೂಢಿ). ೨. ಜೋಲುಮುಖ ; ಉತ್ಸಾಹವಿಲ್ಲದ, ಖಿನ್ನವಾದ ಮುಖ : ದೇವರ ಜಗುಲಿಯ ಮುಂದೆ ಇಳಿಮುಖಮಾಡಿಕೊಂಡು "ಗುಮ್ಮನೆ" ಕುಳಿತಿದ್ದಳು (ಮೊಗ್ಗು. ೨೮). 'ಇಳಿಮೋಱೆ' ಪರಾ.

**ಇಳಿಮುಖವಾಗು** = ಕಡಮೆಯಾಗು ; ಅವನತಿಗೆ ಬರು ; ಏಳಿಗೆ ಕುಂದು : ಮಾನಸಿಕ ಶಕ್ತಿ . . . ಮೊದಲು ನಿಧಾನವಾಗಿಯೂ, ಆಮೇಲೆ ವೇಗವಾಗಿಯೂ, ಇಳಿಮುಖವಾಗುವುದು (ಶಿಕ್ಷದ. ೬೦೩) ; ಊರ್ಜಿತ ಸ್ಥಿತಿಯಲ್ಲಿದ್ದುದು ಈಗೆರಡು ವರ್ಷಗಳಿಂದ ತುಸು ಇಳಿಮುಖವಾಗಿದೆ (ತೇಮೋಡ. ೨) ; ಸೂರ್ಯ ಇಳಿಮುಖವಾಗುವ ಹೊತ್ತಿಗೆ ಅವನು . . . ಏದುಸುರು ಕರೆಯುತ್ತಾ ಬಿದ್ದುಕೊಂಡನು (ಯೋಧವು. ೬೯).
[ಇಳಿ$_1$ (< ಇೞಿ) + ಮುಖ]

**ಇಳಿಮುಳುಗು** (ಕ್ರಿ). ಸಂಪೂರ್ಣವಾಗಿ ಮುಳುಗು : ಇಳಿಮುಳುಗಿ ದವನಿಗೆ ಚಳಿಯೇನು ಮಳೆಯೇನು (ಗಾದೆ).
[ಇಳಿ$_3$ + ಮುಳುಗು (< ಮುೞುಂಗು)]

**ಇಳಿಮೇಜು** (ನಾ). ಇಳಿಜಾರಾದ ಮೇಜು ; ಡೆಸ್ಕು : "ಮೊಳಕಾಲೂರಿ ನಮಸ್ಕಾರ ಮಾಡುವುದಕ್ಕೆ ಉಪಯೋಗಿಸುವ ಇಳಿಮೇಜು ; 'ಲಿಟನಿ' ಎಂಬ ಪ್ರಾರ್ಥನೆಯನ್ನು ಹೇಳುವಾಗ ಉಪಯೋಗಿಸುವ ಇಳಿಮೇಜು" (Faldstool. ಇಂಕನಿ). [ಇಳಿ$_1$ (< ಇೞಿ) + ಮೇಜು]

**ಇಳಿಮೇಡು** (ನಾ). ಸಮನೆಲವಿಲ್ಲದೆ ಏರುತಗ್ಗಾಗಿರುವಿಕೆ ; ಒಂದು ಕಡೆ ಎತ್ತರ, ಒಂದು ಕಡೆ ತಗ್ಗಾಗಿರುವಿಕೆ, —ಅಂತಹ ಪ್ರದೇಶ : "ಜಲಾನಯನ ಪ್ರದೇಶ (ನದಿಗೆ ಬರುವ ಮಳೆನೀರು ಬಿದ್ದ ಪ್ರದೇಶ) ಇಳಿಮೇಡು" (Catchment. ಇಂಕನಿ). [ಇಳಿ$_1$ (< ಇೞಿ) + ಮೇಡು]

**ಇಳಿಮೊಗ** (ನಾ). = ಇಳಿಮುಖ ೧ : ಹತ್ತನೆಯ ಆಶ್ವಾಸದಲ್ಲಿ ಕತೆಯ ಕಾವು ಇಳಿಮೊಗವಾಗುತ್ತದೆ. ಇಲ್ಲಿಗೆ ಮುಕ್ತಾಯವಾಗಿದ್ದರೂ ಕಾವ್ಯದ ದೃಷ್ಟಿಯಿಂದ ಉಚಿತವಾಗಿರುತ್ತಿತ್ತು (ನಂಜುಂಡ. ೬೦).
[ಇಳಿ$_1$ (< ಇೞಿ) + ಮೊಗ]

**ಇಳಿಮೋರೆ** (ನಾ). = ಇಳಿಮುಖ ೨ : "ವಾಸಿಯೇನ್ರಿ ಜಯರಾಮುಗೆ ? ಈಗ ಹೇಗಿದೆ ?" ಎಂತ ಆಗ ಕೇಳಿದ. ಲಲಿತಾ ಇಳಿಮೋರೆಯಿಂದ "ಹಾಗೇ ಇದೇಪಾ" ಎಂದಳು (ಕಣ್ಮಣಿ. ೨೩) ; "ವರ್ಗವಾದ್ರಲ್ಲಿ ಏನಾದರೂ ಮಾಡ ಬಹುದು. ಇದೇನೋ ಸರಿ" ಕೊತವಾಲನು ಇಳಿಮೋರೆಯಿಂದ ಎಂದ (ಕೊತಕಾ. ೪೨). [ಇಳಿ$_1$ (< ಇೞಿ) + ಮೋರೆ (< ಮೋಱೆ)]

**ಇಳಿಯ** (ನಾ). ದುರ್ಬಲ ; ನಿಕೃಷ್ಟ ; ಕೆಳಮಟ್ಟದವನು ; ಅಲ್ಪ ; ಬಡವ : ಇಳಿಯನಪ್ಪನಂ ಕೊಱಚಾಡಿ ಕಾಡುವರರಿಯನಂ ಪೊರ್ದಲೀಯ ದವನೊಲ್ಲರ್ ಜಲಜವದನೆಯರ್ಪಿರಿದ ಪಿರಿದನೀವನಾತನಂ ತವೆ ಕೊಂಡು ಕಂಡಿಪರದರಿಂದಿಳಿಯನಳಿ[ರಿ]ಯನೆಂಬೆರಡು ಭೇದದೊಳಿಪ್ಪುದವಳೊಲ್ಪ ಡೆಗೆನರಿಯದಿನಿತಿನಿತಂ ಪಟ್ೞಯಲೀಯದಂತೀವುದು ಮನಮಂ ಕಾಣ್ಬುದು ವಿಟಂ (ಮದತಿ. ೧೦–೮೬). [ಇಳಿದು + –ಅ$_7$]

**ಇಳಿಯಂಬು** (ನಾ). ಒಂದು ಜಾತಿಯ ಮೀನು ; ಮೀನುಗಳಲ್ಲಿ ಒಂದು ಬಗೆ : ಬಿಳಿಚ ಚಿಪ್ಪಲು ಮಲಗು ಹೆಮ್ಮಲಗು ಬಿಳಿಯಾನೆ ಮಳಲಿ ಕೂಡಿಲು ಚಕ್ರಗೆಂಡೆಯಾವೆಗ ನವಿಲುಯಿಳಿಯಂಬು ಕುಱಿದಲೆಗ ಹೆಮ್ಮೀನು (ಹಚಕಾ. ೫–೪೬). [ಇಳಿ$_1$ (< ಇೞಿ) + ಅಂಬು$_3$ ?]

**ಇಳಿಯಿಕ್ಕು** (ಕ್ರಿ). ನೇಲುವಂತೆ ಬಿಡು : ಕೊರಳಿಂದೆ ಇಳಿಯಿಕ್ಕಿದ ಜನಿವಾರವು ನಿವೀತ (ನಾಚಿರಾ. ೭). [ಇಳಿ$_1$ (< ಇೞಿ) + ಇಕ್ಕು]

**ಇಳಿಲ್**$_1$ (ನಾ). ನೇಲುವ ವಸ್ತು ; ಜೋಲಾಡುವ ವಸ್ತು.

**ಇಳಿಲ್ ಹಾಕು** = ಜೋಲುವಂತೆ ಹಾಕು : ಜಾತ್ರೆಗೆ ತಕ್ಕ ಜೋತು ರುಟ್ಟಿದ್ದಾರೆ ಜಾತಿಮುತ್ತುಗಳನಿಳಿಲ್ಹಾಕಿ (ಕನ್ನನು. I, ೨).
[ಇಳಿ$_1$ (< ಇೞಿ) + –ಇಲ್$_3$]

**ಇಳಿಲ್**$_2$ (ನಾ). ಶೋಭೆ ; ಚೆಲುವು. 'ಇಳಿಲೆ' ಪರಾ.
[ದೇ. ‖ ತಮಿ. ಎೞಿಲ್]

**ಇಳಿಲೆ**, ಇಳಲೆ (ನಾ). ೧. ಹೆಂಗಸು ; ಸುಂದರಿ : ಆಕೆಯ ಚರಣಾಂ ಗುಳಿಗಳಮರ್ಕೆಯಿನಪ್ಪಿದ ಸುರದಂಪತಿಗಳ ಪೋಲ್ವೆಯನೊಪ್ಪಿದವಿಳಿಲೆಯ ಪದಯುಗನಖಪಾಕೃತಿಗಳ್ ಕುಳಿಶಾಭ್ರಕ ನಿಕುರುಂಬಾಕೃತಿಗಳ್ (ಸುಕುಮಾ. ೫–೫೦ ರ) ; ಧರೆಯೆಂಬಿಳಿಲೆಯ ವರಕುಚಯುಗವೆನೆ ವರ ಸುರಭೂಧರಯುಗಲಾ (ಚಂದ್ರಸಾಂ. ೧–೯೭) ; ನೀನಸ್ಮಭೃತಕ್ಕಾಮ್ರದ ಕೊನರ್ಗುಡು ಸಾನಂದದಿನೆನುತಿಳಿಲೆಯು ಬಳಸಿನ ಮಾನಿನಿಯರ್ ಜಾಣ್ನುಡಿ ದೊಯ್ಯನೆ ಮನೆಯಿಂ ಜಾಱಿದರತ್ತ (ಜಯಕಾ. ೮–೪೨). ೨. ಹೆಂಡತಿ ; ಸತಿ : "ಇಳಿಲೆ ಸತಿ" (ಶಮದ. ನ. ೩೬ ಅಡಿಟಿ). **ಇಳಲೆ : ೨.** ರಾವಣಗೆ ನೀನಿಳಲೆಯಾಗು (ರಾಮವಿ. ೧೩–೧೩) ; (ರಾಮವಿ. ೧೪–೧೩೦ ; ೧೪–೧೬೩ ; ೧೫–೮೬ ; ೧೬–೧೩ ನೋ). [ಇಳಿಲ್$_2$ + –ಎ$_4$]

**ಇಳಿವಯಸ್ಸು** (ನಾ). ಯೌವನ ಕಡಮೆಯಾದ ಕಾಲ ; ಮುಪ್ಪು : ಮಹಾರಾಜರು ಇಳಿವಯಸ್ಸಿಗೆ ಬರುವುದರೊಳಗೆ ಈ ನಾಡ ಭಾರವನ್ನು ಹೊರುವ ಒಬ್ಬ ಮಗನು ಬೇಕಲ್ಲ (ಸವತಿ. ೧೦) ; ಈ ಗ್ರಂಥ ದಾಸರ ಇಳಿವಯಸ್ಸಿನಲ್ಲಿ ರಚಿತವಾದುದು (ಜಗದಾ. ೨೫೭).
[ಇಳಿ$_1$ (< ಇೞಿ) + ವಯಸ್ಸು]

**ಇಳಿವರಿ**, ಇಳವರಿ (ನಾ). ಕಡಮೆ ಬೀಳುವಿಕೆ; ತಗ್ಗುವಿಕೆ; ಕುಗ್ಗುವಿಕೆ: ಇಳಿವರಿ ಸೇರಿ ಅಡಿಕೆ ಒಟ್ಟು ೯ ಮಣವಿತ್ತು (ಅವತಂ. ೮೫); ಆಮೇಲೆ ಆ ದಂಡ ಜೀವಾವಧಿಯ ಕಠಿನಶಿಕ್ಷೆಯಾಗಿ ಇಳಿವರಿಯಾಯಿತು (ಪುನರು. ೫೦೬). **ಇಳವರಿ**: ಕಡಲೇಕಾಯಿ ಒಣಗಿದ ಮೇಲೆ ಬಹಳ ಇಳವರಿ ಬರುತ್ತೆ (ರೂಢಿ). [ಇಳಿ$_1$ (< ಇೞಿ) + –ವರ್ರಿ$_2$]

**ಇಳಿವಾಯ್ಕು** (ಕ್ರಿ). ಇಳಿಬಿಡು; ಕೆಳಗೆ ಬಿಸಾಡು: ಉರಿವರಿವೆಣ್ಣೆ ಪಂದಿದಲೆ ಪೆರ್ದೊಲೆ . . . ಸುರಿದಿಳಿವಾಯ್ಕಿ ನೂಂಕಿ (ರಾ ಜ ಶೇ . ೬–೧೧೬). [ಇಳಿ$_1$ (< ಇೞಿ$_1$) + ಪಾಯ್ಕು]

**ಇಳಿವಿಡಿ** (ಕ್ರಿ). ಇಳಿಯ ಹಾಕು; ನೇತುಹಾಕು; ಜೋಲುವಂತೆ ಹಿಡಿ: ಕಡುಕ ನೇವಳ ಉಳಿಬಳೆ ಮೊದಲಾದಚ್ಚದೊಡಿಗೆಯನಾ ಪ್ರಜಿತಣಿಯೆ ನಡೆದಾಡಿ ಕಲ್ಪವೃಕ್ಷಗಳೆ ಮೇಲಿಂದಿಳಿವಿಡಿದಂತೆ ಸುರಿದರಾನ್ನೃಪರು (ಭರಚ. ೬೩–೧೧೬). [ಇಳಿ$_1$ (< ಇೞಿ) + ಪಿಡಿ$_1$]

**ಇಳಿವಿಡು**, ಇಳಿಬಿಡು (ಕ್ರಿ). ೧. ನೇತುಬಿಡು; ತೂಗುಹಾಕು; ಜೋಲಾಡುವಂತೆ ಬಿಡು; ಇಳಿಯುವಂತೆ ಬಿಡು, —ಸುರಿ: ತೊಟ್ಟಳೆಸೆವ ವಿಭೂಷಣವನಿಳಿವಿಟ್ಟು ಸರ್ವಾಂಗದಲಿ (ನಿಭಾಗ. ೪–೫–೨೯); ಉಟ್ಟ ಪೀತಾಂಬರದಮೇಲಿಳಿವಿಟ್ಟ ಮಣಿಮೇಖಲೆಯ (ನಿಭಾಗ. ೬–೯–೨೩); ಕೃಶಾನುವೊಳ್ ಬೆರಸಿದ ಪುಲ್ಲದೊಂದೆ ಪೆಟಲುಪ್ಪಿನ ಪೆರ್ದಿಡಿ ಮರ್ದಿವೆಂಬಿವಂ . . . ಇಳಿವಿಟ್ಟು ಸೂಸೆ ಪೊಯ್ದು (ರಾಜಶೇ. ೬–೧೧೬). **ಇಳಿಬಿಡು**: ೧. ಅವನು ಬಂದೂಕನ್ನು ಹೆಗಲಿಗೆ ಇಳಿಬಿಟ್ಟನು (ಬಂಗಾಹೆ. ೬೨). ೨. ಕಳಚಿಬಿಡು; ಸಡಿಲಬಿಡು; ದೂರನೂಕು: ಬಿಟ್ಟಜಾನೆನ್ನುವನು ತಾನಿಳಿಬಿಟ್ಟುದಿಲ್ಲೆಲೆ ಭೂಪ (ನಿಭಾಗ. ೫–೮–೩೨); ಗಾಳಿಯು ಅನುಕೂಲಿಸಿದಾಗ ಒಮ್ಮೆ ಪಟವನ್ನು ಇಳಿಬಿಟ್ಟರೆ ತೀರಿತು. ಆದು ತೀವ್ರದಿಂದ ನಡೆಯುತ್ತದೆ (ಮುಂಬಯಿ. ೪–೧೫೭). [ಇಳಿ$_1$ (< ಇೞಿ) + ಬಿಡು$_1$]

**ಇಳಿವೀಳ್**, ಇಳಿಬೀಳು, ಇಳಿವೀಳು (ಕ್ರಿ). ೧. ಗೋಡೆ ಹಾರಿ ಒಳಕ್ಕೆ ಇಳಿ: ಗುಡುಗುಡಿಸುತ್ತೆ ಕಲ್ಪಡಿಗಳಂ ತಳೆದಾರ್ದಿಳಿವೀಳ್ದು ಪೌಳಿಯಂ ನಡೆ ನಡೆ ಕೇರ್ಗಳಂ ಕೆಡೆಪು ಬಲ್ಪಡಿಯುಂ ಮುಜು . . . ಎನುತುರ್ಬಿ ಬೊಬ್ಬಿಱಿದು ಮುತ್ತಿದರಾ ಗೃಹಮಂ (ವೃಷವಿ. ೬೯–೮). **ಇಳಿಬೀಳು**: ೨. ನೇತುಬೀಳು; ತೂಗಾಡು: ರಾಯರ ಮನೆಯ ಮುಂದಿರುವ ಒಂದು ಬೋರ್ಡಿನ ಜತೆಗೆ ಇನ್ನೊಂದು ಬೋರ್ಡು ಇಳಿಬೀಳಬೇಕೆಂದು ರಾಜಮ್ಮನ ಹೆಬ್ಬಯಕೆ (ರಾಯಕ. ೮೫). **ಇಳಿವೀಳು**: ೩. ಕೆಳಕ್ಕೆ ಬೀಳು: ಚಕ್ರಗಳಾಜೀಳ ಮುಂಗಟ್ಟ ನಭಕಿಟ್ಟು ವಕ್ರಿಸದಶ್ವವೋಡುತಿರೆ ವಿಕ್ರಾಂತ ಖಂಡೆಯದೊಳು ಪೋಣಿಸಿದಸಿಳಾಚಕ್ರಕೊಂದಿಳಿವೀಳದಂತೆ (ಭರಚ. ೩೦–೭೬). [ಇಳಿ$_1$ (< ಇೞಿ) + ಬೀಳ್ (< ಬೀೞ್)]

**ಇಳಿವೀಳು** 'ಇಳಿವೀಳ್' ನೋ.

**ಇಳಿಶಿಂಗಿ** (ನಾ). ಒಂದು ಗಿಡದ ಹೆಸರು (ಮೈಔಗಿ. ೭೫–1529). [?]

**ಇಳಿಸು**$_1$ (ಕ್ರಿ). ಕೀಳುಮಾಡು; ಧಿಕ್ಕರಿಸು; ಹೀಯಾಳಿಸು; ಮೀರು: ಬೆಳಗುವ ಸೊಡರ್ಗಳ ಬೆಳಗುಮನಿಳಿಸಿ ತಟತ್ತಟಿಸಿ ಪೊಳೆಯೆ ತಮ್ಮಯ ಬೆಳಗಗ್ಗಳಿಸಿ ತಟತಟಿಸಿ ವಿದ್ಯುದ್ವಿಳಸಿತಮೆನಿಸಿದುವು ನರನ ದಿವ್ಯಾಸ್ತ್ರಂಗಳ್ (ಪಂಪಭಾ. ೧೧–೯೭); ಇಳಿಸಲಿಳಿಸಲ್ ಮಾರ್ಕೊಳ್ ಮಾರ್ಕೊಳ್ ಪುಗಲ್ ಪುಗಲೆಂದು ಸಂಗಳಿಸಿ ಶರದಿಂ ಕೊಳ್ ಕೊಳ್ಳೆಂದೆಚ್ಚೊಡೆಚ್ಚ ಶರಂಗಳಂ ಮುಳಿದು ಕಡಿದುಂ ಸೀಳ್ದುಂ (ಶಾಂತಿಪು. ೪–೨೪); ಇಳಿಸಲಕ್ಕುಮೆ ಗಾಂಡಿವಿಯಂ ಸುಯೋಧನಾ (ಗದಾಯು. ೨–೬೭); ಅವನ ತುದಿಕೋಡೊಳ್ ಸಕಲಾವನಿ ಕೇದಗೆಯ ಮುಗುಳ ತುದಿಗೆಱಗಿದ ಭೃಂಗೀವಪುವನಿಳಿಸಿ ಸೊಗಯಿಕುಮಾವಿಷ್ಣುವರಾಹಮೂರ್ತಿ ದಯೆಗೆಯ್ಗೊಳ್ಪಂ(ಎಇ.XII, ೨೭೮–೧೧೧; 1077); ಊರುದಂಡಂ ರಂಭಗಳ ಸೊಬಗನಿಳಿಸುತಿರೆ (ಬಸರ. ೧–೧೦೬). 'ಏಳಿಸು' ಪರಾ. [ಇಳಿ$_1$ (< ಇೞಿ) + –ಸು$_1$]

**ಇಳಿಸು**$_2$ 'ಇೞುಸು' ನೋ.

**ಇಳಿಹು** 'ಇೞುವು' ನೋ.

**ಇಳಿಹೊತ್ತು** (ನಾ). ನಡುಹಗಲಿನಿಂದ ಸಂಜೆಯವರೆಗೆ ಇರುವ ಕಾಲ; ಹೊತ್ತು ಮುಳುಗುವ ಸಮಯ: ಸಜ್ಜನರ ಸ್ನೇಹವು ಇಳಿಹೊತ್ತಿನ ನೆರಳಿನಂತೆ ಹೆಚ್ಚಾಗುತ್ತದೆ. ಕೀಳರ ಸ್ನೇಹವು ಏರುಹೊತ್ತಿನ ನೆರಳಿನಂತೆ ಕಡಿಮೆ ಆಗುತ್ತದೆ (ಮುಂಬಯಿ. ೨–೧೬); ಇಳಿಹೊತ್ತಿನಲ್ಲಿ ಕಂಡ ದುಃಖದ ಪ್ರತಿಮೆಯಾದ ರೂಪಾ ರಾತ್ರಿಯಲ್ಲಿ ಅನೇಕ ಖಂಡಸ್ವಪ್ನಗಳನ್ನು ಕಂಡು ಬಹಳಸಾರೆ ಬಡಬಡಿಸಿದಳು (ಜಯಂತ. ೪೦೮); ಅಯ್ಯೋ, ಅಯ್ಯೋ, ಇನ್ನೇನುಮಾಡಲಿ? ಇಳಿಹೊತ್ತಾಯಿತು. ಸಂಜೆ ಸಮಾಪಿಸಿತು (ಅಂತರಾ. ೨೪). [ಇಳಿ$_1$ (< ಇೞಿ) + ಹೊತ್ತು$_2$ (< ಪೊಱ್ತು)]

**ಇಳುಕಲು** 'ಇಳಕಲು' ನೋ.

**ಇಳುಕು**, ಇಳಕು, ಇಳಿಗು, ಇಳುಗು (ಕ್ರಿ). ೧. ಕೆಳಕ್ಕೆ ಬರುವಂತೆ ಮಾಡು; ಕೆಳಕ್ಕೆ ತರು: ಬಸ್ರೀ ಮರದ ಕೆಳಗೆ ಮೃತದೇಹವನ್ನಿಳುಕಿ ಮುಂದುಗಡೆ ಹೊರುತ್ತಿದ್ದವರು ಹಿಂದುಗಡೆಗೂ ಹಿಂದುಗಡೆಯವರು ಮುಂದುಗಡೆಗೂ ಬದಲಾಯಿಸಿಕೊಳ್ಳುತ್ತಿದ್ದರು (ಹುಟ್ಟಹ. ೬೭). **ಇಳಕು**: ಜೇನು ಇಳಕುವವನು ಕೈ ನೆಕ್ಕದೇ ಬಿಡುವನೆ (ಹುಟ್ಟಹ. ೧೧೩); ಅವರು ಮಾವಿನಮರದಿಂದ ಕಾಯಿ ಇಳಕುತ್ತಿದ್ದರು (ರೂಢಿ). **ಇಳಿಗು**: ಚಹಾ ಮಾಡಿ ಇಳಿಗಿ ರೊಟ್ಟಿಗಳನ್ನು ಸುಡಲು ಅತ ತವೆ ಹಚ್ಚಿದ್ದ (ಧೂಮಮ. ೯೮). **ಇಳುಗು**: ೨. ಕರೆ; ಕೊಡು: ಅರ್ಧ ಸಿದ್ದೆ ಹಾಲನ್ನು ಒಂದು ದನ ಇಳುಗಿಯೇ ಇಳುಗುತ್ತದೆ (ಮರವ. ೬). 'ಇಳುಹು' ಪರಾ. [< ಇೞಿ + –ಕು. / ಮಲ. ಇೞಿಕ್ಕ]

**ಇಳುಗಡೆ** 'ಇಳಿಗಡೆ' ನೋ.

**ಇಳುಗು** 'ಇಳುಕು' ನೋ.

**ಇಳುಜಾರು** 'ಇಳಿಜಾರು' ನೋ.

**ಇಳುಪು** 'ಇೞುವು' ನೋ.

**ಇಳುವು** 'ಇೞುವು' ನೋ.

**ಇಳುಹಿಸು** (ಕ್ರಿ). ಇಳಿಸುವಂತೆ ಮಾಡು: ಹೊರೆಯನ್ನು ಇಳುಹಿಸಿ ಸುಧಾರಿಸಿಕೊಳ್ಳುವಂತೆ ಹೇಳು (ರೂಢಿ). [ಇಳುಹು$_1$ (< ಇೞುವು) + –ಇಸು$_3$]

**ಇಳುಹು**$_1$ 'ಇೞುವು' ನೋ.

**ಇಳುಹು**$_2$ 'ಇಳಿಪು' ನೋ.

**ಇಳೆ** (ನಾ). ೧. ಭೂಮಿ. ೨. ಹಸು; ಗೋವು; ಆಕಳು. ೩. ವಾಕ್ಕು; ಭಾಷೆ; ಶಬ್ದ; ವಾಣಿ. ೪. ಶರೀರದ ಬಲಗಡೆಯಲ್ಲಿರುವ ಒಂದು ನಾಡಿ; ಧಮನಿ. ೫. ಮನುವಿನ ಮಗಳು; ಬುಧನ ಹೆಂಡತಿ: ಮನುಪುತ್ರಿಯಾದ ಇಳೆಯಲ್ಲಿ ಚಂದ್ರನ ಮಗನಾದ ಬುಧನಿಂದ ಪುರೂರವಸ್ಸು ಹುಟ್ಟಿದನು (ಭಾರದ. ೯೮). ೬. ವಿಷಮಾರ್ಥ. ೭. ಅನ್ನ. ೮. ನೀರು. ೯. ರಸಮಯವಾದ ವಸ್ತುಗಳ ಸಮೂಹ. ೧೦. ಉತ್ತಮ ಸ್ಥಿತಿ. ೧೧. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: "ರಸೆ ಧರೆ ಇಳೆ ರೂಪವೈಕಮೊಂದಱ ನಾಮಂ" (ವ್ಯವಹಾ. ೯–೧). **ಇಳೆ**: "ಭೂಮಿ ವಿಷಮಾರ್ಥಂ ಶಬ್ದಮನ್ನಂ ಜಲಂ ರಸವಸ್ತೂತ್ಕಾರಮಿಂತಿಳಾಹ್ವಯ" (ನಾನಾರ. ೧೫೯); "ವಿಷಮಾರ್ಥದೊಳು ಶಬ್ದದಲ್ಲಿಳಾಖ್ಯವದೆನಿಕು" (ಮಂಗರಾ. ೧೪೩–೨೪).

**ಇಳೆಯಪಿರಿಯ** = ಬ್ರಾಹ್ಮಣ: "ಇಳೆಯಪಿರಿಯರ್... ತಳೆದಿರ್ಪರಾ ದ್ವಿಜರ್ ನೆಲದಮರ್ದುಣಿವೆಸರಂ" (ಕಬ್ಬಿಕೈ. ೩೩); "ಇಳೆಯಪಿರಿಯರೆನೆ ಬ್ರಾಹ್ಮಣರ್ಗಹುದು" (ಕಶರ. ೧೩). **ಇಳೆಯಾಳ್ದ** = ಭೂಮಿಯ ಒಡೆಯ; ಅರಸ: ಇಳೆಯಾಳ್ದ ಕೇಳೊಂದು ಪಕ್ಷ ಅವಧಿಯೊಳಾನು ತಳುವದಿದಕುತ್ತರವ ತಹೆನು (ಪ್ರಾಢರಾ. ೧–೫೧). [ಸಂ. ಇಳಾ]

**ಇಳಿಗೊಯ್ಲು** (ನಾ). ಬೆಳೆದಿರುವ ಪೈರಿನ ಕೊಯ್ಲು (?): ಮಣಿಮಕುಟದಿಳಿಗೊಯ್ಲ [ಪಾಠಾಂ. ದೆಲೆಗೊಯಿಲ] ನೆಲದಾವಣಿಯೊ ಗಗನಾರ್ಣವದ ವಾಡಬ ಗಣವೊ ಕೌತುಕವೆನಿಸಲೆಚ್ಚಾಡಿದರು ಬಿಲ್ಲವರು (ಕುವ್ಯಾಭೀ. ೪–೧೬). ℙ ಈ ಶಬ್ದ 'ತಲೆಗೊಯಿಲು' ಎಂಬುದರ ಅಪಲಿಖಿತವಿರಬಹುದೆ? [ಇಳಿ ? + ಕೊಯ್ಲು]

**ಇಳಿಬೆಳ್ಗುಂದೂರು** (ನಾ). ಒಂದು ಊರಿನ ಹೆಸರು (?): ಇದಕ್ಕೆ ಸಕಿಳಿಬೆಳ್ಗುನ್ದೂರುಂ ಕಿಱುವೆಳ್ಗುನ್ದೂರುಂ ಸತ್ತಿಯೂರುಂ ಸಿಂಗೂರು ನಗರಲ ಪನ್ನಿರ್ವ್ವರು (ಎಕ. III, ನಂಜನ. ೧೫೫–೭; 970). [?]

**ಇಳೆಯಾಣ್ಮ** (ನಾ). ಭೂಪತಿ; ರಾಜ: ಇಳೆಯಾಣ್ಮಂ ತನಗಲ್ತೆ ವೆಗ್ಗಳನೆನುತ್ತಂ ಪಾರುಪತ್ಯಂಗಳಂ ಖಳಗೀಯಲ್ (ಸೋಮೇಶ. ೬೪); ಸಾಲುಗೊಂಡಿಹ ತಳತಳಿಪಾಲವಟ್ಟಗಳ ನೆಳಲೊಳು . . . ಇಳೆಯಾಣ್ಮ ನಗುತ್ತೈತಂದ (ಕಂಸವಿ. ೧೨–೨೯). [ಇಳೆ + ಅಣ್ಮ (< ಆಳ್ಮ)]

**ಇಳೆಯೆರೆಯ** (ನಾ). = ಇಳೆಯಾಣ್ಮ: ಆ ಪುವ್ವುಗಳಮದರ ಮಸ್ತಕದಿ ಬೀಳೆ ಪಿಡಿದೆಳೆದೊಯ್ದು ಯಿಳೆವೆ[ಯೆ]ರೆಯುಗೊಪ್ಪಿಸಲು ತವೆ ತಲೆಯ ಪೊಡಸಿದಂ (ನವಮೋ. ೨೩–೧೯). [ಇಳೆ + ಎರೆಯ (< ಎಱೆಯ)]

**ಇಳೆಸೋಂಕು** (ನಾ). ಭೂಮಿಯ ಸ್ಪರ್ಶ; ಭೂಸ್ಪರ್ಶ; ನೆಲದ ಸೋಂಕು: ಆ ಮುಗಿಲ ಬಿಡಿಸುತಾ ಕಿರಣಗಳಿಗಿಳೆಸೋಂಕ ತಂದು ಕತ್ತಲ ಕಳೆವ ಶುಭಕಲ್ಪಗಳನು (ಮಲೆದೇ. ೪೮–೫). [ಇಳೆ + ಸೋಂಕು$_2$]

**ಇಳೇಜ್ಯ** (ಗು). ಭೂಮಿಯಲ್ಲಿ ಪೂಜೆಗೆ ಪಾತ್ರವಾದ; ಜಗತ್ಪೂಜ್ಯವಾದ: ಜಗದ್ವಿಜಿಗೀಷುವೃತ್ತಿ ಭೂಭುವನದೊಳಿಕ್ಕಲಾಪಣಮಿವಂಗೆನೆ ನಿಂದನಿಳೇಜ್ಯ ರಾಜ್ಯದೊಳ್ (ಎಕ. XI, ದಾವಣ. ೪೨–೧೮; 1161).
[ಸಂ. ಇಲೇಜ್ಯ (ಇಲಾ + ಇಜ್ಯ)]

**ಇಳೇಶ** (ನಾ). ಭೂಮಿಯ ಒಡೆಯ; ರಾಜ: ಆ ಶಂಖುಲಿಖಿತರೆಂದ ಪೊಲಾತನಿರ್ದಪನಿಳೇಶ ಕೇಳವನದಿನ್ನೊಂದು ಕಟ್ಟಳೆಯಂ (ಜೈಮಿಭಾ. ೧೦–೪೬). [ಸಂ. ಇಲೇಶ (ಇಲಾ + ಈಶ)]

**ಇಳೇಶ್ವರ** (ನಾ). = ಇಳೇಶ: ನಾಡೆ ಮನಂಗೊಂಡನಿಳೇಶ್ವರಂ (ಆದಿಪು. ೧೧–೫೬); ವಿಷಮತಪವ ನೆಗಳ್ದನಿಳೇಶ್ವರಂ (ಹಮ್ಮೀರ. ೨–೬ ವ).
[ಸಂ. ಇಲೇಶ್ವರ (ಇಲಾ + ಈಶ್ವರ)]

**ಇಳ್ಕುಳಿ** 'ಈಟ್ಕುಳಿ' ನೋ.

**ಇಳ್ಕುಳಿಗೊಳ್** 'ಈಟ್ಕುಳಿಗೊಳ್' ನೋ.

**ಇಳ್ದುಕೊಳ್** 'ಈಟ್' ಪರಾ.

**ಇಳ್ವಿಡೆ** (ನಾ). ಒಂದು ಸ್ಥಳದ ಹೆಸರು (?): ಬೆಳ್ದೀವಂ ಬರೆದಂ ಇಳ್ವಿಡೆ ಮಲ್ಲಾಚಾರಿ (ಎಕ. XIV, ಎಡತೊ. ೮೪–೪೫; 910). [?]

**ಇಳ್ಳಿ** 'ಈಳೆ' ನೋ

**ಇಱ** 'ಇಱುಂಬು' ನೋ.

**ಇಱಸಲ್** 'ಇಱಿಸಿಲ್$_2$' ನೋ.

**ಇಱಿ$_1$**, ಇರಿ$_2$ (ಕ್ರಿ). ೧. ಹೊಡೆ; ನೋಯಿಸು; ಗಾಯಗೊಳಿಸು; ಮೊನಚಾದ ಸಾಧನದಿಂದ ತಿವಿ; ಚುಚ್ಚು; ಹಾಯಿ: "ಇಱಿ – ಘಾತನೇ" (ಶಮುಘಾ); ರಾಮಧೆವನು ಹೆ × × ಜನ್ ಇಱಿದು (ಇಆ. VII, ೧೭೩–೩೫೦; 486); ಕಿಱಿದೆಂದೇಳಿಸಿ ಪಗೆಯಂ ಪಱಿಪಡೆ ಕಿಡಿಸದೊಡೆ ಪೆತ್ತು ಕಾಲದ ಬಲಮಂ ನೆಱೆದಿಱಿಗುಂ (ಕವಿರಾ. ೩–೧೪೮); ಭಂಗುರತುಂಗ ತರಂಗಮಾಲೆಯಂ ಖರ ರದನಾಗ್ರದಿಂದಿಱಿಯೆ ಮುತ್ತುಗಳಂತಿರೆ ಸೂಸಿ ಪಾಯ್ವ ಶೀಕರದೊಳೆ (ಕಾವ್ಯಸಾ. ೭೮ ಶೂಪ್ರಕ); ಪಣ್ಗೊಲೆಯಂ ಗಿಳಿವಿಂಡು ಚಂಚುವಿಂದಿಱಿದಡೆ (ಎಇ. XIII, ೩೩೧–೨೯; 929); ನಿತ್ರಾಣನನು ನಿಬ್ಬರದ ನುಡಿಗಳಲಿಱಿದನಾ ಕರ್ಣ (ಕುವ್ಯಾಕ. ೧೩–೩೬); ತೇಱ್ ಇಱಿದಂತುಂ ಕಲಂಕುವಗೆಯೊಳ್ (ರಾಮಾಶ್ವ. ೮೫–೧೭). ೨. ಯುದ್ಧಮಾಡು; ಹೋರಾಡು: ಆರ್ ಕಡುಕೆಯ್ದು ಪಾಂಡವರೊಳಾಂತಿಱಿಯಲ್ ನೆಱೆವನ್ನರ್ (ಪಂಪಭಾ. ೯–೫೦); ಪರಿವರಿದಿಱಿಯಲಾಜದೆ ಕಳ್ದು ತುಱುಗೊಣ್ಡು (ಎಕ. IV, ಹುಣಸೂ. ೧೧–೫; 1070 ?); ಇಱಿದ ನೆಲಂಗಳಾಂತವರ ನೆತ್ತರನರ್ಕಿಸಲಾಜದೀಗಳುಂ ದುಱಿತೊಱೆ ಯುತ್ತಮಿರ್ದ್ದಪುವು (ಎಕ. V, ಬೇಲೂರು ೧೭೧–೧೫; 1160); ಇಱಿಯಲ್ ಬಲ್ಲೊಡೆ ವೀರನಾಗು (ಸೋಮೇಶ. ೭೭); ದ್ರೋಣ ಮನಗೊಂಡಿಱಿವಡಂಬುಜಪಾಣಿಯಿದಿರೇ (ಕುವ್ಯಾದ್ರೋ. ೪–೬). ೩. ಕೊಲ್ಲು; ಸಂಹರಿಸು; ನಿಗ್ರಹಿಸು: ತೀರ್ಥದ ಮೊದಲೊಳ್ ಮೆಪ್ಪಿಕ್ಕಿ ಪೊರದ ಪನ್ದಿಗಳನಿಱಿಯಲ್ ಬಂದಲ್ಲಿ (ಇಆ. XI, ೧೨೭–೧೦; 803); ಕರ್ಮವೃಕ್ಷಮಂ ಛೇದಿಸಿ ವೈರಿಮೋಹರಮನಡುರ್ತಿಱಿದುನ್ನತಿವೆತ್ತ ಮೋಕ್ಷಲಕ್ಷ್ಮೀದಯಿತೇಶನಾಗಿ (ಧರ್ಮಾಮೃ. ೫–೬೯). ೪. [ಗಣಿತ] ಗುಣಿಸು; ಗುಣಾಕಾರಮಾಡು: "ಇಱಿ, ಅಣೆ . . . ಹತಿಸು, ಗುಣಿಸು . . . ಇಂತಿನಿತುಂ ಗುಣಿಸುವುದಕ್ಕೆ ಹೆಸರು" (ವ್ಯವಹಾ. ೧೧); ಮನೆಯುಗಲದಿಂದೆ ಗುಣಿಯಿಸು ನೀಳಮಂ ಪದಮೊನಿಕ್ಕುಮದನಂತೆ ಬಱಿಕ್ಕನಲನೊಳಿಱಿದಿಭದಿಂ ತೆಗೆಯೆ ನಿಂದುವಕ್ಕುಂ ಧ್ವಜಾದಿಗ್ರಹದಾಯಂಗಳ್ (ಲೋಕೋಪ. ೩–೨೦); ಅನಿತುಂ ಪೂರ್ವಾಪರಗೃಹಮನೇಱಿಱಿಂದಿಱಿದು ಮಾಡಿ ನವದಾನವಿಶೋಧನಮಂ ಸಪ್ತಾವಿಂಶತಿಯಿನೆತ್ತು ಗವಶೇಷಮಶ್ವಿನೀಪ್ರಮುಖರ್ಕ್ಷಂ (ಜಾತತಿ. ೨೪–೨೫). ೫. ಲಿಪಿಯನ್ನು ಕೊರೆ, — ಕೆತ್ತು: ಈ ಕಲ್ಲಂ ಚಿಕ(೦)ಣ್ಣ × × × ಯಂ ಪೋದಿಯಮ್ಮ ಮಾಡಿಸಿ ದೋನ್ × × ಇದು × × ಇಱಿವಡೆ (ಸೌಇಇ. XI–i, ೧೦–೩೫; 864); ಸಂಗತಗುಣ ಗೋವಿಯಿಱಿದ ಸಾಸನಲಿಪಿಯಂ (ಎಕ. XVI, ಚಿಕ್ಕನಾ. ೯೮–೩೫; 1169). 'ಅಚ್ಚಿಱಿ' ಪರಾ. ೬. ಹಾಕು; ಎಸೆ; ಬಿಸುಡು: (ಕ). ೭. ಕತ್ತರಿಸು; ತುಂಡಾಗುವಂತೆ ಹೊಡೆ: ಅಶನಿಘೋಷಂ ಮುಳಿದು ಪೊಱಮಡೆ ಪೌದನಪುರಾಧಿಪನಾತನನೆರಡುಖಂಡಮಾಗಿಱಿವುದುಂ (ಚಾವುಂಪು. ೫೭–೩). ಇರಿ$_2$: ೧. ರಾಜಣ್ಣ ಆನಂದನನ್ನು ಇರಿಯುವಂತೆ ನೋಡುತ್ತ ಕೇಳಿದ (ಮರಳಿ. ೯೪); ಅವನ ವಾಸನೆಯನ್ನು ತಿಳಿದು ಆ ಹೋರಿಯು ಅವನಿಗೆ ಇರಿಯಲು ಓಡಿ ಬಂತು (ಮಣಿಸ. ೯೬); ಆದರೀಗ ಅದರ ತಿಳಿವು ಎದೆಯನಂತು ಇರಿವುದು! (ಮೂಂದಳಿ. ೧೫).

**ಇರಿದುಹಾಕು** = ತಿವಿದು ಕೊಲ್ಲು: ತಮ್ಮ ಕೈಯೊಳಗಿನ ಕನ್ನಗತ್ತಿಯಿಂದ ಇವರನ್ನು ಇರಿದುಹಾಕಿ (ಮುಂಬಯಿ. ೩–೯೮). **ಇಱಿದಾಡು** = ಪರಸ್ಪರವಾಗಿ ತಿವಿದಾಡು; ಗುದ್ದಾಡು; ಹೊಡೆದಾಡು: ತುಱುಪಳ್ಳಿಯ ಗೋವುಳಿಗರೊಳ್ ತೋಟಿಗೆಯ್ದಿಱಿದಾಡುವ ಬೀಡಿನೆರ್ಮೆಗಳಂ ಪಿಡಿತಂದರಸರ್ಗೊಪ್ಪಿಸುವುದುಂ (ಸುಕುಮಾ. ೭–೩೫ ವ); ಕಂಗಳನು ಕಾರಿರುಳು ರಕ್ಕಸಿ ನುಂಗಿದಳು ನಾನೇನನುಸುರುವೆನಂಗವಿಸಿ ಕಡುಗಲಿಗಳಿಱಿದಾಡಿದರು ತಮ್ಮೊಳಗೆ (ಕುವ್ಯಾದ್ರೋ. ೧೭–೩). **ಇಱಿದೋಡಿಸು** = ಹೊಡೆದೋಡಿಸು: ಕೀಚಕನೆಂಬಂ ಸುಯೋಧನನ ದಂಡೆಲ್ಲಮನಿಱಿದೋಡಿಸಿಬಂದು ವಿರಾಟನಂ ಕಂಡು (ಪಂಪಭಾ. ೮–೫೮ ವ). **ಇಱಿವಕನ್ನರ** = ಇರಿಯುವುದರಲ್ಲಿ ಕೃಷ್ಣನಂತಿರುವವನು; ಒಂದು ಬಿರುದು: ಆತನ ಮಗನಭಿವನ್ದಿತಪದನಿಱಿವಕನ್ನರಂ ಧರ್ಮಪರಂ (ಎಕ. XI, ಚಿತ್ರದು. ೪೯–೬೧; 942). **ಇಱಿವನೊಳಂಬ** = ಯುದ್ಧದಲ್ಲಿ ನೊಳಂಬನಂತಿರುವವನು; ಒಂದು ಬಿರುದು: ಸ್ವಸ್ತಿಶ್ರೀ ಇಱಿವನೊಳಂಬನಪಟ್ಟಂಗಟ್ಟಿದ ಇಪ್ಪತ್ತನೆಯ ವರಿಸದನ್ದು (ಎಕ. IX, (ಕ), ಹೊಸಕೋ. ೨೦೭–೧; 900); ಇಱಿವ ನೊಳಂಬನೇಕವಾಕ್ಯ ಶ್ರೀಮತ್ ದಿಲೀಪರಸ ಪ್ರಿತಿವೀರಾಜ್ಯಂಗೆಯ್ಯುತ್ತಿರೆ (ಸೌಇಇ. IX–i, ೨೫–೪; 948); ಕಾಞ್ಚೀಪುರಪರಮೇಶ್ವರಂ ಶ್ರೀಮದಿಱಿವನೊಳಮ್ಬನ್ (ಮೈಎಬಿ. ೧೯೩೨, ೪೮–೪; 960).

ಇಱಿವಬೆಡಂಗ = ಯುದ್ಧ ಮಾಡುವುದರಲ್ಲಿ ವಿಶಿಷ್ಟವಾದ ಬೆಡಗುಳ್ಳವನು ; ರನ್ನಕವಿಗೆ ಆಶ್ರಯದಾತನಾದ ಚಾಲುಕ್ಯಚಕ್ರವರ್ತಿಯ ಹೆಸರು ; ಒಂದು ಬಿರುದು : ನೂರ್ಮಡಿ ತೈಲನೆನಿಸಿದಾಹವಮಲ್ಲ ವಲ್ಲಭನಾತನ ಮಗನಿಱಿವಬೆಡಂಗಂ ಸಾಹಸಮಲ್ಲಂ (ಬೊಂಕಶಾ. ೧೯೩೮, ಇಂಡಿ. ೫೯–೩೦ ; 936) ; ರುದ್ರಾವತಾರನಿಱಿವ ಬೆಡಂಗಂ (ಗದಾಯು. ೧–೧೪) ; ಸತ್ಯಾಶ್ರಯಕುಳತಿಳಕನಕಳಂಕಚರಿತಂ ಶ್ರೀಮದಿಱಿವಬೆಡಂಗದೇವರ ರಾಜ್ಯಂ (ಸೌಇಇ. XI–i, ೪೮–೨ ; 1002). ಇಱಿವರ್ತಿಗಂಡ = ಯುದ್ಧ ಪ್ರಿಯನಾದ ಶೂರ; ಒಂದು ಬಿರುದು: ಬಿರುದರಗಣ್ಡನಾಳಿಮ್ಮುನ್ನಿಱಿವನಿಱಿವರ್ತಿಗಣ್ಡಂ (ಸೌಇಇ. XI–i, ೧೦೫–೬ ; 1047). ಇಱಿವಾಳ್ = ಯುದ್ಧದ ಬಂಟ : ಇಱಿವಾಳ್ ರಣಕ್ಕೆ ತುಱಿಲಾಳ್ ಕಟ್ಟಾಯದೊಳ್ (ಗದಾಯು. ೫–೩೫). ℙ ಈ ಧಾತು ಹಲವು ಶಬ್ದಗಳ ಕೊನೆಗೆ ಸೇರಿ ವಿಶಿಷ್ಟವಾದ ಅರ್ಥಗಳನ್ನು ಕೊಡುತ್ತದೆ. ಉದಾ : —ಅಚ್ಚಿಱಿ, ಅಳ್ಳಿಱಿ, ಇಡಿಕಿಱಿ, ಈಡಿಱಿ, ಕೂಕಿಱಿ, ತೂಪಿಱಿ ಇತ್ಯಾದಿ. 'ಎಱಿ' ಪರಾ.

[**ದೇ.** ‖ **ತಮಿ. ಮಲ.** ಎಱಿ ; **ತೆಲು.** ಱಿಮ್ಮು]

**ಇಱಿ$_2$** (ಕ್ರಿ). ಸಡಿಲವಾಗು ; ಬಿಚ್ಚು ; ಹರಡು ; ಚೆದುರು (?) : ಇಱಿವ ಪಿಣಿಲ್ ತೆರಳ್ದೊಱಿವ ಕಣ್ಬನಿ ಮಾಣದೆ ಮೋದೆ ಶೋಕದಚ್ಚಱಿದವೊಲಿರ್ದ ಬಾಸುಱಿನೊಳಬ್ದು (ಪಂಪಭಾ. ೧೪–೫).

[**ದೇ.** ‖ **ತಮಿ. ಮಲ.** ಎಱಿ = ಹರಡು]

**ಇಱಿ$_3$** (ನಾ). (?) : ಇಱಿಯೆಂಬುದು ಬೇಂಟದ ಸೂಳೆಯ ಮುಡುಹಿನೊಳಲ್ಲದೆ ನಾಡೊಳಗಿಲ್ಲ (ಕುಮುರಾ. ಪೀ. ೫೮). [?]

**ಇಱಿ$_4$** (ನಾ). ಇಱಿತ ; ಹೊಡೆತ ; ಕೊಲೆ ; ಯುದ್ಧ. 'ಇಱಿಗಾಱ' ಪರಾ. [< ಇಱಿ$_1$]

**ಇಱಿ$_5$** (ನಾ). ಜಿಂಕೆ ; ಮೃಗ.

**ಇಱಿಯಕತ್ತುರಿ** = ಮೃಗಮದ ; ಕಸ್ತೂರಿ : ಇನಿಯಳ ಕರ್ಣಪೂರದೊಳಿಱಿಯ ಕತ್ತುರಿರಸವ ನನೆಮೊನೆಯಿಂದ ಲೇಖಿಸಿದ (ಸಾಳ್ವಭಾ. ೬–೧). [**ದೇ.** ‖ **ತೆಲು.** ಇಱಿ, ಇಱ್ಱಿ]

**ಇಱಿಕಿಲ್** (ನಾ). ಇರುಕಿಸಲ್ಪಟ್ಟುದು ; ಅದುಮಲ್ಪಟ್ಟುದು (?) : ನಿಱಿ ನಿಱಿಲು ನಿಱಿಲೆನುತ ಹೆಮ್ಮರ ಮುಱಿದುದಾತನ ರೋಮ ಸೋಂಕಿನಲಿಱಿಕಿಲಾದುದು ಧರಣಿಯನಿಲಜ ಮುಱಿದ ಮಗ್ಗುಲಲಿ (ಕುವ್ಯಾ ಅ. ಓರಿಇ. ೧೧–೧೪). [ಇಱಿಕು (< ಇಱುಂಕು) + –ಇಲ್$_3$]

**ಇಱಿಕು** 'ಇಱುಂಕು' ನೋ.

**ಇಱಿಕುಳಿ**, ಇರಕಳ, ಇರಕಳಿ, ಇರಕುಳಿ, ಇರುಕಳ (ನಾ). ಇರಿಯುವ ಸ್ವಭಾವವುಳ್ಳುದು ; ಹೋರಿ ಮುಂತಾದ ಕೊಂಬಿನ ಪ್ರಾಣಿ : ಕುಳಿ ಪ್ರತ್ಯಯಕ್ಕೆ–ಪೋರ್ಕುಳಿ, ಓಡುಕುಳಿ . . . ಇಱು[ಱಿ] ಕುಳಿ (ಶಮುದ. ೨೦೩ ಪ್ರಯೋ). **ಇರಕಳ** : ಇರಕಳ ದನವ್ಹಾಂಗ ಅಡ್ಡ ಹಾಯತೀಯಲ್ಲಲೇ (ಗ್ರಾಮಾಯ. ೧೪೭) ; ಹೋರಿ ಇರಿವಾಡತಾವು . . . ತಂತಂ ಹೆಂಡಂದ್ರಿನ್ನ ಆಳುವಿನಾಗ ಇಟ್ಕೊಗೋಳಾರದ ಇರಕಳ ಜಾತೀ ಗಂಡಸು (ಕಮ್ಮಟ. ೧೪). **ಇರಕಳಿ** : ಒಂದು ಇರಕಳಿ ಮುಂದೆ ಹಾಯಿಸಿ[ಸ] ಗೊಡುವದಿಲ್ಲ (ದೀಪಹ. ೧೬೭). **ಇರಕುಳಿ** : ಕಾಡಾಕಳು ಕಾಡೆತ್ತು ಇರಕುಳಿ ಇರುತ್ತವೆ (ಮುಂಬಯಿ. ೩–೧೮). **ಇರುಕಳ** : "ಇರುಕಳ ದನಾ . . . ನೋಡಿರಿ" (ರಕ್ತಧ್ವ. ೩೦೯) ; ಇರುಕಳ ಅಂತ ಗೊತ್ತಿದ್ದೂ ಅದರ ಬಡ್ಯಾಗ ಯಾಕ ಹೋಗಿದ್ದಿ (ಬಾಬಲ. ೯). [ಇಱಿ$_1$ + –ಕುಳಿ$_3$]

**ಇಱಿಗಲ್ವಾಡಿ** (ನಾ). ಒಂದು ಊರಿನ ಹೆಸರು : ಸಿಗ್ಗುರ್ನ್ದನಾಡು ಮೂನೂಱು ಇಱಿಗಲ್ವಾಡಿ ಮೂನೂಱು ಗಂಗವೂರ ಮೂವತ್ತು (ಎಕ. XI, ಚಳ್ಳಕೆ. ೩೪–೧೨ ; 815). [?]

**ಇಱಿಗಾಱ** (ನಾ). ಯುದ್ಧ ಮಾಡುವವನು ; ಶೂರ : ಹಿಡಿ ಹಯವ ನಿಱಿಗಾಱ ಸಾರಥಿ ನುಡಿವವರು ನಾವ್ ಹಗೆಗಳೇ (ಕುವ್ಯಾವಿ. ೬–೧೧) ; ಮಱಿಮಱಿಯಲಿಱಿಗಾಱನಸುರರ ಮುಱಿದನೆಂಬರು (ಕುವ್ಯಾ ದ್ರೋ. ೧೪–೧೬) ; ಹಱಿಗಾಱನಲ್ಲಿವನಿಱಿಗಾಱನೆನುತವೆ ಬೆಱಗಾಗಿ ನಾಡ ಮನ್ನೆಯರು. . .ಬಿಱಿತೋಡಿದರು (ನೇಮಿಸಂ. ೧೨–೮೪). [ಇಱಿ$_1$ + –ಕಾಱ]

**ಇಱಿಗೂಳಿ$_1$** (ನಾ). ಮೀನು ಹಿಡಿಯುವುದಕ್ಕಾಗಿ ಬಳಸುವ ಒಂದು ಬಗೆಯ ಕೂಳಿ, —ಕುಕ್ಕೆ, —ಬುಟ್ಟಿ : ಸಾಳುವನ ಬೇಂಟೆಯಂ ನೋಡಿ ನಡೆವಾಗಲಿಱಿಗೂಳಿ ಹೆಗ್ಗೂಳಿ ಕಿಱುಗೂಳಿಯಿಂ ಮೂತೆಱದ ಗಾಳಂಗಳಿಂ ಗೋರಿವಲೆಗಳಿಂ . . . ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂನಾಥನು (ಹಚಕಾ. ೫–೪೪). [ಇಱಿ$_1$ + ಕೂಳಿ]

**ಇಱಿಗೂಳಿ$_2$** (ನಾ). ಇಱಿಯುವ ಗೂಳಿ (ಕಿ). [ಇಱಿ$_1$ + ಗೂಳಿ]

**ಇಱಿಗೆಲಸ** (ನಾ). ಇರಿಯುವ ಕೆಲಸ ; ಯುದ್ಧ ಮಾಡುವುದು ; ನೋಯಿಸುವುದು : ಅಱಿವು ತಲೆಕೆಳಗಾಯ್ತು . . . ಮಱವೆ ಗಱಿಗಟ್ಟಿತು ಮನೋಭವನಿಱಿಗೆಲಸ ಬಲುಹಾಯ್ತು (ಕುವ್ಯಾವಿ. ೨–೧೨) ; ಬಱಿಯ ಬೊಬ್ಬಾಟವೊ ಶರಾವಳಿಯಿಱಿಗೆಲಸವೇನುಂಟೊ (ಕುವ್ಯಾಶ. ೨–೫೬). [ಇಱಿ$_1$ + ಕೆಲಸ]

**ಇಱಿತ**, ಇರಿತ (ನಾ). **೧.** ತಿವಿತ ; ಹೊಡೆತ ; ಯುದ್ಧ : ಇಱಿತ ಮುನ್ನವೊ ಸುಭಟರಿಗೆ ಬೊಬ್ಬಿಱಿತ ಮುನ್ನವೊ (ಕುವ್ಯಾ ಕ. ೧೧–೪೬) ; ಅಱಿಸಿದನು ಹನುಮಂತನಾ ಸರಳಿಱಿತವನು ಸೈರಿಸುತ (ತೊರರಾ. ೬–೧೫–೪೬) ; ಇಱಿತ ಮುಱಿತದೊಳಿಂತುಟಿರ್ಬಲದ ಸುಭಟರೊಳ್ ಕುಱಿದಱಿಯಲುಱಿ ಜೋಲ್ವ ಖಂಡಗಳ ಮುಂಡಗಳ (ಚಬಪು. ೨೬–೧೯). **೨.** ಚುಚ್ಚುವಿಕೆ ; ಇರಿದಂತಾಗುವಿಕೆ ; ಚುಚ್ಚು ನೋವು : ಉಯ್ಯಾಲೆಯ ಹಾಗೆ ದಂತಗಳು ತೂಗಲಾಡುವವು . . . ನೋವು ಇಱಿತಂಗಳು ಉಂಟಾಗಿಹವು. ಈರೀತಿಯಲ್ಲಿದ್ದರೆ ಚಲದಂತ ಎನಿಸಿಕೊಂಬುದು (ವೈದ್ಯಸಾ. II, ೧೨೩). **ಇರಿತ** : **೨.** ನನಗೆ ಆಯ್ದಾರು ದಿನಗಳಿಂದಲೂ ಹಲ್ಲಿರಿತ (ರೂಢಿ). [ಇಱಿ$_1$ + –ತ$_2$]

**ಇಱಿತಕಾಱ**, ಇಱಿತಗಾಱ (ನಾ). **೧.** ತಿವಿಯುವವನು ; ಕೊಲ್ಲುವವನು (ಕಿ). **೨.** ಯುದ್ಧ ಮಾಡುವವನು ; ಯೋಧ ; ವೀರ : ಹರಿಗೆ ಖಡ್ಗ ಕಠಾರಿ ಕುಂತದಲಿಱಿತಕಾಱರು ಹೊಕ್ಕರನಿಬರ ಕೊರಳೊಳಾಡಿದ ವಂಬು (ತೊರರಾ. ೩–೬–೧೫). **ಇಱಿತಗಾಱ** : **೨.** ನೀ ಕಟ್ಟಿಱಿತಗಾಱನೆ ರಾಯರಿದೆಲಾ ಸಕಲಗುಣಯುತರು (ಕುವ್ಯಾಸ. ೮–೪೫) ; ಎಟ್ಟಿಱುವರಿನಿಯಂ ಇಱಿತಗಾಱರೆಱಿಯಂ ಬಲ್ಲಿದರ ಬಲ್ಲಹನೆಂಬಿವು ಮೊದಲಾದ ಪಲವುಂ ಬಿರುದಂ ಕೇಳ್ದು (ಚಕವಂ. ೬೩–೧೧).

[ಇಱಿತ + –ಕಾಱ]

**ಇಱಿತಗಾಱ** 'ಇಱಿತಕಾಱ' ನೋ.

**ಇಱಿನೋವು** (ನಾ). (ಮನಸ್ಸನ್ನು) ಚುಚ್ಚುವ ನೋವು,—ಬಾಧಿಸುವ ನೋವು : ಆ ಬರ್ದಿಲಾಳ್ವ ಪೊಸಂಬನಪ ರಾಜನೆನ್ನಿಂದೆ ಲಾಭಮನ್ ಪಡೆದು ಇಱಿನೋವಿನಿಂದಿಂತು ಬಹುಮಾನಿಸಿರ್ಪನ್ (ಬದ್ಧಪ್ರ. ೧೩–೨೬೬).

[ಇಱಿ$_1$ + ನೋವು]

**ಇಱಿಮುಱಿ** (ನಾ). ಚೂರುಚೂರು ; ಹರಿಹಂಚು ; ತುಂಡುತುಂಡು : ಧರ್ಮಜಾದಿಗಳೆಚ್ಚತ್ತೀಯಿರ್ದ ಕನ್ನೆಯಾವೊಳಾದೆಸೆಯೊಳಿಱಿಮುಱಿಯಾಗಿ ಕೆಡೆದು ಪಟ್ಟರೂಪಾವುದೇನನಿನ್ನೆಗಂ ನೆಗಟ್ದೆಯೆನೆ (ಬಂಹರಿ. ೧೧–೧೧ ವ) ; ಜವನೆಂಬ ಪಾತಕನಾಯುರವಸಾನಂಬರಮಿರಲೀಯದೆಡೆಯೊಳಿಱಿಮುಱಿಮುಱಿದುಯ್ವಂ (ಜೀವಸಂ. ೬–೩ ವ).

[ಇಱಿ$_2$ + ಮುಱಿ$_2$. ℙ ತಮಿ. ಇಱುಮುಱಿ = ಲೇವಾದೇವಿಯ ವ್ಯವಹಾರ ಮುಗಿದು ಹರಿದು ಹಾಕಿದ ಪತ್ರ[

**ಇಱಿಯಿಸು,** ಇಱಿಸು (ಕ್ರಿ). ಯುದ್ಧವನ್ನು ಮಾಡಿಸು ; ತಿವಿಸು ; ಕೊಲ್ಲಿಸು : ಇಱಿಯಿಸುವೆ ತಂದೆಮಕ್ಕಳನಿಱಿಯಿಸುವ್ಯೆ ಸೋದರರ್ಕಳಂ ತಮ್ಮೊಳ್ ತಳ್ತಿಱಿಯಿಸುವ್ಯೆ ಗುರುಶಿಷ್ಯರನಱಗುಲಿ ನಿನ್ನಿಂ ನಿಕೃಷ್ಟರಾದರು ಮೊಳರೇ (ಗದಾಯು. ೯–೭). **ಇಱಿಸು :** ನಾಡೆ ಲ್ಲ ಪಾಟಾದೊಡಂ . . . ಇಱಿಪೆನೆನ್ದುಟ್ಟಿಗೆವನ್ದಿಟ್ಟು ತುಱುವನಿಕ್ಕಿಸಿ ಸತ್ತಂ (ಎಕ. IX, ದೇವನ. ೪೨–೧೨ ; 900) ; ಬಾಂಧವರನಿಱಿಸಿ ಸರಸಿಜಬಾಂಧವತನಯನು ಮನೆನ್ನ ತಮ್ಮನುಮಂ ನಮ್ಮಂಧನರೇಂದ್ರನ ಮೊಗಮಂ ಗಾಂಧಾರಿಯ ಮೊಗಮನಾವಮೊಗದೊಳೆ ನೋೞ್ಪೆಂ (ಗದಾಯು. ೩–೭೦) ; ಛಲದಿಂ ದಿರದೊರ್ವರಿಂದಮೊರ್ವರನಿಱಿಸುತ್ತೆ ಕೂಕಿಱಿದು ಬೊಬ್ಬಿಱಿವಾಡುವಂ (ಧರ್ಮಾಮೃ. ೨–೪೨) ; ಸುರಗಿಯ ಕಿತ್ತಿಱಿಸಿಕೊಳ್ವ ತೆಜನಂ ಪೋಲ್ಕುಂ (ಸಮುಪ. ೫–೭೭). [ಇಱ್₁ + –ಇಸು₃]

**ಇಱಿವಾಳ್** (ನಾ). ಇರಿಯುವುದಕ್ಕೆ ಅವಶ್ಯವಾದ ಕತ್ತಿ ; ಇರಿಯುವ ಕತ್ತಿ : ಅಱುಮೊಗಂ ಘೂರ್ಮಿಸುತ್ತಿದಿರಾಗೆ ಕಂಡಿಂದ್ರನಿಱಿವಾಳನೇ ಬೇಹಿಗಟ್ಟಿದಂತೆಯ್ದೆ ತನಗುಱಿವ ವಜ್ರಾಯುಧವನಾಲ್ದು ತಿರುಪುತ್ತಿಟ್ಟನು (ವೀಕೈಪು. ೩–೨೧–೨೨). [ಇಱ್₁ + ಬಾಳ್₃]

**ಇಱಿವಿಟ್ಟಿ** (ನಾ). ಸೋತ ರಾಜನು ಗೆದ್ದ ರಾಜನಿಗೆ ಮಾಡಬೇಕಾದ ಮೂರು ಬಗೆಯ ಬಿಟ್ಟಿಯ ಕೆಲಸಗಳಲ್ಲಿ ಒಂದು ; ಯುದ್ಧವೊದಗಿದಾಗ ಸೇನೆಯೊಡನೆ ಸಹಾಯಕ್ಕೆ ಬಂದು ಹೋರಾಡುವುದು : ಬಿಟ್ಟಿಗನ್ನಪಾಳನೊಡನಿಱಿವಿಟ್ಟಿಗೆವಂದರಸುಗೆಳೆಗಳಂ ರಣದೊಳ್ ತಳ್ತಟ್ಟಿ ಪಿಡಿದಾನೆಯನಿತುಮನೊಟ್ಟಜೆಯಿಂ ತಂದನಸಮಸಾಹಸತುಂಗಂ (ಮುಂಬರಾ. XI, ೨೪೦–೨೩ ; 1060) ; ಗಂಡುಗೆಯ್ಯದಿಱಿವಿಟ್ಟಿಗೆ ಜಟ್ಟಿಗನಾಗಿ ಬಾೞ್ವುದತ್ಯುತ್ತಮ ಪಕ್ಷಂ (ಪಂರಾಮಾ. ೮–೨೭) ; ಕುಡುವುದು ನಿಮಗುಳ್ಳುದುಮಂ ಪಡೆವುದು ದಯಮಂ ವಿಧೇಯರಪ್ಪುದು ನಿಚ್ಚಂ ನಡೆವುದಿಱಿವಿಟ್ಟಿಗೆಂದಡೆ ಬಿಡೆ ಕೈಕೊಂಡುದು ಪಿಯಚ್ಚರಾಧಿಪರೆಲ್ಲಂ (ಪುಣ್ಯಾಸ್ರ. ೧–೮೫). [ಇಱ್₄ + ಬಿಟ್ಟಿ]

**ಇಱಿವೆ** ‘ಇಱುಂಪೆ’ ನೋ.

**ಇಱಿಸಲ್** ‘ಇಱಿಸಿಲ್₂’ ನೋ.

**ಇಱಿಸಿಲ್₁,** ಇರಚಲು, ಇರಿಸಲು (ನಾ). ೧. ಎರಚುತ್ತಾ ಬೀಳುವ ಮಳೆ : ತಂಬೆಲರ್ ಸೋಂಕೆ ಬಳ್ಕುವ ಲತಾಂಗಮದಿಱಿಸಿಲಂ ಬೇಱಿತಡೆದುಂಟೆ (ಶ್ರೀರಾಮ. ೩–೫೩) ; ಬೀಸುವಿಱಿಸ[ಿ]ಲಂ ಸೂಸುವ ಸೋನೆಯಂ ಸೈರಿಸದೆ (ರಾಮಾಶ್ವ ೩–೨೭). **೨.** ಶೈತ್ಯೋಪಚಾರಕ್ಕಾಗಿ ನೀರು ಅಥವಾ ಪನ್ನೀರನ್ನು ಚಿಮುಕಿಸುವ ಬೀಸಣಿಗೆ, —ಅದರ ಗಾಳಿ : ತಳಿರ್ಗಳ ಕಂಡಪಟಂ [ಪಾಠಾಂ. ವಡಂ] ಗಳೆ ತಳಿರ್ಗಳ ಪಾಸುಗಳೆ ತಳಿರ್ಗಲೋವರಿಗಳೆ ಕೆಂದಳಿರ್ಗಳ ಪೊಳೆವಿಱಿ[ಱಿ]ಸಿಲ್ಗಳೆ [ಪಾಠಾಂ. ಳೆಳಸಿ ಪೊಳೆವಿಱಿಲ್ಗಳೆ] ವಿಳಾಸವಂ ಮೆಱೆದರಲ್ಲಿ ಕೆಲದ [ಪಾಠಾಂ. ರ] ಬಲೆಯರೊಳ್ (ಆದಿಪು. ೧೧–೭೯) ; ಮಳಯರುಹದ ಕರ್ಪೂರದ ಪಳಿಕಿನ ಪನಿನೀರ ಕದಳಿದಳದಿಱಿಸಿಲ ತಣ್ಣಳಸದ ತಿಳಿನೀರ್ಗಳ ಶೀತಳತೆಯಿನವನಿಪನನಾಪ್ತರುಜ್ಜೀವಿಸಿದರ್ (ಅನಂಪು. ೧೧–೭೮). **ಇರಚಲು : ೧.** (ಕ). **ಇರಿಸಲು : ೧.** ಗಾಳಿಯಿಂದ ಅಡ್ಡಲಾಗಿ ಬೀರುವ ಬಿರುಮಳೆಯ ಇರಿಸ್ಲಲು ‘ಸಾನ’ದ ಜಗುಲಿಯನ್ನು ಪೂರ್ಣ ತೋಯಿಸುತ್ತಿತ್ತು (ಒಡ್ಡಿಉ. ೩). [< ಎಱಚು + –ಇಲ್₃]

**ಇಱಿಸಿಲ್₂,** ಇರಸಲು, ಇಱಸಲ್, ಇಱಿಸಲ್, ಇಱಿಸಿಲು, ಇಱುಸಲ್ (ನಾ). ಮೃಗಗಳನ್ನು ಕೆಡಹುವ ಕುಳಿ ; ಕಪ್ಪಲು ; ಕಪ್ಪು ; ತಗ್ಗು : “ಇಱಿಸಿಲ್–ಮಿಗಮಂ ಕೆಡಪುವ ಗುೞಿ” (ಶಮದ. ಪರಿ.೨) ; ಇಱಿಸಿಲ್‌ಗಟ್ಟಿ ಸಹಿತಂ ಮತ್ತರಯ್ದು (ಎಇ. XIII, ೨೧–೪೨ ; 1204). **ಇರಸಲು :** “ಇರಸಲುಮೆನಲ್ಕೆ ಮೃಗದೀಳಿಸುವ ಕಂಧಕದ ಪೆಸರ್” (ಕಶರ. ೧೩).

**ಇಱಸಲ್ :** “ಇಱಸಲೆನೆ ಮಿಗಗೆಡಪ ಎಡೆ” (ಶಬ್ದಮಂ. ೩೨). **ಇಱಿಸಲ್ :** “ಇಱಿಸಲೆನಲ್ ಮೃಗಂ ಕೆಡೆವ ತಾಣಮೆ” (ಕರ್ಣಾನಿ. ೫೯). **ಇಱಿಸಿಲು :** ಬಿಟ್ಟಿ ಭೂಮಿಯ ಸ್ಥಳವಿಱಿಸಿಲು ಗೋವಿನಾಕಾರದ ಮತ್ತರ್ ಹನ್ನೊಂದುಂ (ಸೌಇ. XI–ii, ೧೫೫–೪೭ ; 1104) ; ಇಱಿಸಿಲು ಗಾವಿನ ಮತ್ತರುಮಾಱುಮಂ (ಸೌಇ. XX, ೧೯೮–೧೯ ; 1227). **ಇಱುಸಲ್ :** “ಇಱುಸಲೆನಲೊಡನೆ ಮಿಗಮಂ ಕೆಡಪುವೆಡೆ” (ಕಬ್ಬಕೈ. ೮೦). [?]

**ಇಱಿಸಿಲು** ‘ಇಱಿಸಿಲ್’ ನೋ.

**ಇಱಿಸು** ‘ಇಱಿಯಿಸು’ ನೋ,

**ಇಱಿಹ** (ನಾ). ಹೊಡೆತ ; ಕೊಲೆ : ಇಱಿಹಂ ದಾಯ [ಪಾಠಾಂ. ದಾಯುಧ] ದೊಳುಷ್ಣವಗ್ನಿ ಮುಖದೊಳ್ ಯುದ್ಧಂ ದಿಟಂ ಮಲ್ಲರೊಳ್ . . . ಅಲ್ಲದಿಲ್ಲ (ಪುಣ್ಯಾಸ್ರ. ೧–೧೧೪). [ಇಱ್₁ + –ಹ₂]

**ಇಱು** ‘ಇಱುಂಬು’ ನೋ.

**ಇಱುಂಕು,** ಇರಕ್ಕು₁, ಇರುಂಕು, ಇರುಕು₁, ಇಱಿಕು, ಇಱುಕ್ಕು₁ (ಕ್ರಿ). **೧.** (ಕಂಕುಳು ತೊಡೆ ಮುಂತಾದ ಪ್ರದೇಶಗಳಲ್ಲಿ) ಅದುಮಿ ಭದ್ರವಾಗಿ ಹಿಸುಕಿ ಹಿಡಿ ; ಒತ್ತಿ ಹಿಡಿ ; ಅಡಕಮಾಡಿ ಹಿಡಿ : “ಇಱುಕು, ಇಱುಂಕು – ನಿಗ್ರಹಗ್ರಹಣೇ” (ಶಮಧಾ) ; ದೇಸೆಯನಾಂತು ವಿಳಾಸದಿಂದಿಱುಂಕಿದ ನಿಱಿ (ಪಂಪಭಾ. ೪–೩೫) ; ಒಂದು ಬಕಂ . . . ಬಂದು ಎಸಡಿಯಂತಿಂಬೆನೆಂದು ಕೊಂಡುಯ್ಯುತ್ತಿರಲಾಯೆಸಡಿ ತನ್ನ ಗೋಣನಿಱುಂಕಿ ಕೊಂದುದು (ಪಂಚತಂ. ೮೭–೩) ; ಸಕಲ ಸಾಮರ್ಥ್ಯಮಂ ಕಂಕುಳೊಳಿಱುಂಕುವಂತಳವಡಿಸಿ (ನಂಬಿರ. ೮–೭೫) ; ವಿಕಲ್ಪದಿಂದುಗೆ – ಕದಂಪು, ಕದಪು . . . ಇಱುಂಕಿದಂ, ಇಱುಕಿದಂ (ಶಮದ. ೩೭ ಪ್ರಯೋ) ; ಜವನ ದಾಡೆಗಳಂತಿಱುಂಕಿ ಬೇಗದಿ ಕೊಲ್ಲುವೆಂ (ನೇಮಿಸಂ. ೧೫–೧೦೦) ; ಗಱಿನೆಱೆಯದ ಕಿಱುವಱಿಗಳನಿಱುಂಕಿ ಪಕ್ಷದೊಳ್ ಪಾಱಲಾಱದೆ (ರಾಜಶೇ. ೮–೯೮) ; ಮುಗಿಲನಿಱುಂಕುವ ಪೆರ್ಮರಂಗಳ್ (ರಾಮಾಶ್ವ. ೩೦–೨೧). **ಇರಕ್ಕು₁ : ೧.** ಹೊಲಸು ಹೊಡೆಯುತೆ ರೋಹಿತದೊಳೊದಗಲಿಸಿಹುದು ಸುಟ್ಟಿರಕುವುದು ಪ್ರಜ್ವಲಿಪುದೊಂದೆರಳ್ದಿನವುಮಿರ್ದೊಡೆ ಕೆಟ್ಟು ನಾರುವುದು (ಶಂಕದಾ. ೧೪–೨೮). **ಇರುಂಕು : ೧.** ವಿಗಡರಕ್ಕಸರಿವನ ತಡೆಯಲು ಬಗಲೊಳವರನಿರುಂಕಿಯೌಂಕಿಯೆ ಬಗೆಯದಾರುಮಂ (ರಾಮಾಸಂ. ೬–೨–೫೩). **ಇರುಕು₁ : ೧.** ವಿಭ್ರಮದಿಂದಂ ತಾನೇ ಇರುಕಲ್ ಬಗೆದಂ ಕಾಯ್ಪಿನ ಪಾವಂ (ಸೌನಂದ. ೮–೧೮) ; ಬಿಂದಿಗೆಯನ್ನು ಕಂಕುಳಲ್ಲಿರುಕಿಕೊಂಡು ನೀರು ತಂದಳು (ರೂಢಿ). **೨.** ಸಣ್ಣದಾಗು ; ಕಿರಿದಾಗು ; ಇಕ್ಕಟ್ಟಾಗು : ಕಣ ವಿಭಜನೆಗೆ ಮೊದಲು ಬೀಜ ಉದ್ದನಾಗಿ ನೀಡಿ, ಕ್ರಮೇಣ ಮಧ್ಯಭಾಗದಲ್ಲಿ ಇರುಕಿ ಎರಡುಭಾಗಗಳಾಗಿ ಒಡೆಯುತ್ತದೆ (ಪ್ರಾಣಿಶಾ. ೩೪). **ಇಱಿಕು :** ನೆಱಿಯದಾಯ್ತಾಕಾಶಗಿರಿಗಳ ಹೊಱಗೆವಾಳರ ಹೆಮ್ಮರಂಗಳನಿಱಿಕಿದತಿಮನದತುಳಬಲರು ತ್ತಾಳಗಮನದಲಿ (ತೊರರಾ. ೬–೬–೧೨). **ಇಱುಕ್ಕು₁ : ೧.** “ಇಱುಕು, ಇಱುಂಕು – ನಿಗ್ರಹಗ್ರಹಣೇ” (ಶಮಧಾ) ; ಇಱುಕಿ ತೊಡೆಯೊಳೆನ್ನಂ ಪಱಿದೆಕೆಗಳಿಂದೆ ಮುಚ್ಚಿ (ಕಾದಂಪೂ. ೧೮೩) ; ಭುಜ ಹತ್ತು ದೆಸೆಗಳಂ ಕಂಕುಳೊಳಗಿಱುಕುತಿರೆ (ಕಾಠಿರ. ೨೯೨) ; ತುಱುಬ ಬಲಿದೊಳಗೌಕಿ ಮೊನೆಮುಂಜೆಜಗನಳವಡೆ ಸೆಕ್ಕಿಸುತ್ತಿನೊಳಿಱುಕಿ (ಕುವ್ಯಾದ್ರೋ. ೧೭–೧೯) ; ನಿಱಿಯನೋಸರಿಸುತ್ತೆ ಪೋಲುದನಿಱು [ಪಾಠಾಂ. ನಿಱ] ಕುತೆಡಗೈದುದಿಯಲಿ (ತೊರರಾ. ೩–೪–೮) ; ಇಱುಂಕು, ಇಱುಕು (ಶಬ್ದಾನು. ೮೦ ಪ್ರಯೋ) ; ಕೌಂಕುಳೊಳ್ ಕುಱಿಯೊಂದನ್ ಇಱುಕಿ (ಅಶ್ವತ್ಥಾ. ೩–೨೫). **೩.** ನಡುವೆ ಸಿಕ್ಕಿಸಿಕೊ : ಇಱುಕಿದರು ಗ್ರಹದಂತೆ ಮಿಗೆ ಮುಕ್ಕುಱುಕಿದರು ಮುಗಿಲಂತೆ (ಕುವ್ಯಾಗ. ೭–೩).

[**ದೇ.** ‖ **ತಮಿ, ಮಲ.** ಇಱುಗು, ಇಱುಕ್ಕು ; **ತೆಲು.** ಇಱುಕು]

**ಇಱುಂಪು** 'ಇಱುಂಪೆ' ನೋ.

**ಇಱುಂಪೆ,** ಇರವೆ, ಇರಿವೆ, ಇರುಂಬೆ, ಇರುವ್ವು₂, ಇರುವೆ₁, ಇಱಿವೆ, ಇಱುಂಪು, ಇಱುಪೆ, ಇಱುವು, ಇಱುವೆ, ಇಱುಹು, ಇಱುಹೆ (ನಾ). ಯಾವಾಗಲೂ ಗುಂಪು ಗುಂಪಾಗಿಯೇ ಇದ್ದು ಜೀವಿಸುವ, ಸಂತತವಾಗಿ ಉದ್ಯೋಗಶೀಲವಾದ ಒಂದು ಸಣ್ಣ ಪ್ರಾಣಿ; ಚೀಮೆ; ಪಿಪೀಲಿಕೆ. ☞ ಇದರಲ್ಲಿ ಹಲವು ಜಾತಿಗಳುಂಟು. ಉದಾ: ಕಟ್ಟಿರುವೆ, ಕಪ್ಪಿರುವೆ, ಕೆಂಚಿರುವೆ, ಕೆಂಪಿರುವೆ: ಬಟ್ಟೆಗಳೊಳ್ ದೇಗುಲದೊಳ್ ಪಟ್ಟಗಳೊಳ್ ಬೀದಿಯೆಡೆಯೊಳಜವಟ್ಟಗೆಯೊಳ್ ನೆಟ್ಟನೆಯಿಱುಂಪೆಯೇಱಲ್ ಕೆಟ್ಟಪುದೂರ್ (ಲೋಕೋಪ ೧೨–೪೩); ಕರಿ ಕರಿಗಲ್ಲದಿಱುಂಪೆಗೆ ಪರಿವುದೆ (ಯಶೋಚ. ೨–೫೪); ಕೆಂಡಮನಿಱುಂಪೆಗಳ್ ಬಂದಂಡಲೆವುದಿದರಿದು (ಉದ್ಭಟ. ೪–೮೪); ವಿಕಲ್ಪ ಬಿಂದುಗೆ – ಕದಂಪು, ಕದಪು... ಇಱುಂಪೆ, ಇಱುಪೆ (ಶಮುದ. ೩೬ ಪ್ರಯೋ). **ಇರವೆ:** ಬೆಲ್ಲಕ್ಕೆ ಇರವೆಗಳು ಮುತ್ತಿಕೊಂಡಿವೆ (ರೂಢಿ). **ಇರಿವೆ:** ಇರಿವೆಗಳು ತೀರ ಸಣ್ಣವಿದ್ದಾಗ್ಯೂ ಬಹಳ ಉದ್ಯೋಗಮಾಡುವ ಪ್ರಾಣಿಗಳು (ಮುಂಬಯಿ. ೨–೧೫). **ಇರುಂಬೆ:** ಗಳಿಸುವುದು ಬಿಸಿಲ ದಿನದೊಳ್ ಮಳೆಗಾಲಂ ಬರಲಿರುಂಬೆ ಭುಂಜಿಕು ಸುಖದಿಂ (ನೀತಿಚಿಂ. IX, ೨೮). **ಇರುವ್ವು₂:** ಗಜ ಇರುವು ಮಿಕ್ಕ ಜನನದೋಪಾದಿಯಲಿ ಮನುಜದೇಹತೆತ್ತು ಸಂಚರಿಸಿದೆನೋ (ವಿಸಾಸು. ೯೩–೧); ಒಂದು ಇರುವು ಒಂದು ಕಿತ್ತಲೇ ಹಣ್ಣಿನಮೇಲೆ ತಪ್ಪದೇ ಒಂದೇ ಮುಖವಾಗಿ ನಡೆದರೆ (ಭೂಗೋಳ. ೧). **ಇರುವೆ₁:** ಇರುವೆಗಳು ಕೂಡ ಸಂಚರಿಸದೆ ಇರುವುದಂ ನೋಡಿ (ಸೌಗಂಧಿ. ೨೩೧–೪); ಕೆಂಡಕ್ಕೆ ಇರುವೆ ಮುತ್ತೀತೇ (ಗಾದೆ); ಇರುವೆ ನೀನೆಲ್ಲಿಯೂ ಇರುವೆ (ರೂಢಿ). **ಇಱಿವೆ:** ಜಂಗಮಪ್ರಸಾದ ಸೋಂಕಿನಿಂದ ಇಱಿವೆಗೆ ರುದ್ರಪದವಾಯಿತ್ತು (ಗಣಭಾ. ೨೪೨–೩). **ಇಱುಂಪು:** "ಇಱುಹೆ ಇಱುಂಪೆನೆ ಪಿಪೀಲಿಕಾಹ್ವಯಮಕ್ಕುಂ" (ಕವಿಕಂ. ೧೯೪). **ಇಱುಪೆ:** ರಿಸಿಯರೊಂದಿಱುಪೆಗಪ್ಪೊಡಂ ಪೊಲ್ಲದಂ ಬಗೆಯದವರ್ (ವಡ್ಡಾರಾ. ೧೭೬–೨೫); ಇಱುಪೆಗೆಱಂಕೆ ಮೂಡಿದವೊಲಾದಪೆ ನೀಂ (ಪಾರ್ಶ್ವಪು. ೨–೭೩). **ಇಱುವು:** ದೇಶದೊಳಿದ್ದಂಥ ಕೆಱೆ ಬಾವಿ ಉದಕವಾಪೋಶನ ಮಾಡಿತೊಂದೆ ಇಱುವು (ಪುರಂದ. ೨–೧೯–೪). **ಇಱುವೆ₁:** ಇಱುವೆ ಒಂದಾನೆಯ ನುಂಗಿತ್ತು (ಆದವ. ೧೦೨); ಇಱುವೆ ಮೊದಲು ಮಾಡಿ ಆನೆ ಕಡೆಯ ಮಾಡಿ ಬಸಿಱಿನಲ್ಲಿ ಮರಳಿ ಮರಳಿ ಹುಟ್ಟಿ (ಪುರಂದ. ೧–೧೭೬–೪). **ಇಱುಹು:** ನಾಯಿಗಳಟ್ಟಿಕೊಂಡು ಬಂದವು ಇಱುಹು ಕಟ್ಟಿಕೊಂಡು ಬಿಡವು (ಲಿಂಗವ. ೧೪–೫೩); ನೃಪನ ತೆಳ್ಪಸಿಱಿನ ಕಿಱುರೋಮರಾಜಿಯ ಕಂಡು ಇಱುಹಿನ ಸಾಲೆಂದು ತೊಡೆದೆನದಕೆ ದಾಯನುರೆ ನಕ್ಕ (ಭರತೇ. ೬–೬೩); ಒಂದಗುಳ ನಿಱುಹು [ಪಾಠಾಂ. ನಿಱುವೆ] ಪೊರೆಯಕೆ ಕಟ್ಟಿಕೊಂಡು ನಡೆತಂದುದಂ ಬಸವೇಶ ಕಂಡು (ಪ್ರೌಢರಾ. ೧೯–೬). **ಇಱುಹೆ:** "ಇಱುಹೆಯಿಱುಂಪೆನೆ ಪಿಪೀಲಿಕಾಹ್ವಯಂ" (ಕವಿಕಂ. ೧೯೪); ನಾಗಿಣಿಯ ಬಯಲುಂ ಇಱುಹೆಯ ಬಯಲುಂ (ಎಕ. VIII, ನಗರ. ೪೦–೫೧; 1077); ಹದಿನಾಲ್ಕು ಲೋಕವನೊಂದಿಱುಹೆ ನುಂಗಿತ್ತ ಕಂಡೆ (ಅವಚಂ. ೯೬–೪೩೧); ಪರುಷೆಯೊಳಗೆ ಮಾತಂಗ ಮೊದಲಿಱುಹೆ ಕಡೆಯೆನೆ ನೋಯಿಸದ ದಯಾಸಂಗಿಗಳು (ಸಿದ್ಧರಾ. ೨–೪೧).

[ದೇ. ‖ **ತಮಿ.** ಇಱುಮ್ಬಿ, ಎಱುಮ್ಬಿ, ಎಱುಮ್ಬು, ಉಱವಿ; **ಮಲ.** ಇಱುಮ್ಪು, ಉಱುಮ್ಪು, ಎಱುಮ್ಪು; **ಕೊಡ.** ಉರುಪೀ]

**ಇಱುಂಬ** 'ಇಱುಂಬು' ನೋ.

**ಇಱುಂಬು,** ಇರುಬು, ಇರುಬೆ, ಇಱಿ, ಇಱು, ಇಱುಂಬ, ಇಱುಬ್ಬು, ಇಱುಬೆ (ನಾ). **೧.** ಇಕ್ಕಟ್ಟು; ಇರುಕು; ಇಕ್ಕಟ್ಟಾದ ಮಧ್ಯಪ್ರದೇಶ; ಸಂದು: ಬಲ್ಮೊಲೆಯೆಂಬೆರಡುಂ ಬೆಟ್ಟದ ತಪ್ಪಲ ನಡುವಣಿಱುಂಬಿನೊಳಡಗಿ (ಜಯಕಾ. ೪–೧೦). **೨.** ಗುಂಪು; ಸಂದಣಿ; ದಟ್ಟವಾಗಿರುವಿಕೆ: ರೋಮಲತೆ ಬಟ್ಟೆ ನಿತಂಬನಿಱುಂಬು ನಾಭಿ ಕುತ್ತುಱುಗುಳಿ . . . ಅಗೆ ಮದನಾಟವಿಯಂತೆವೊಲೊಪ್ಪಿ ತೋಱಿದಳ್ (ಕಾವ್ಯಸಾ. ೬೧೨ ಶೂದ್ರಕ); ತಳಿರ್ಗಳಿಱುಂಬಿನಲ್ಲಿ . . . ಗಿಳಿಗಳ ಪಿಂಡುಗಳ್ ನೆರೆದು ಕೂಡಿಯುಂ (ಕಾದಂಪೂ. ೧೨೬); ಕದಳೀಕದಂಬದಿಱುಂಬಿನೊಳ್ (ಜಗವಿ. ೧೬–೩೪ ವ); ಅಳ್ಳಿಗೊಂಬುಗಳ ಪತ್ರದಿಱುಂಬಿನ ನೀಡ ನೀಡದೊಳ್ (ಕುಸುಮಾ. ೯–೨೨); ಅಂತಿಱುಂಬಿನಡವಿಯ ನಿಡಿಯ ಮರಂಗಳಿಂ (ಪಾರ್ಶ್ವಪು. ೧೧–೬೨ ವ); ನವಾಮ್ರದಿಱುಂಬರನೇಱಿಲಾಗರಂ . . . ಅಲ್ಲಿ ಕರಂ ಮನೋಹರಂ (ಸೂಕ್ತಿಸು. ೪–೩೭). **೩.** ಕರ್ಕಶತೆ; ಕಾಠಿನ್ಯ: "ಇಱುಂಬೆಂದು ಕರ್ಕಶತೆ" (ಕಶಸಾ. ೨೩–೪೮೧).

**ಇರುಬು:** **೧.** ಮರೆತೆಯೇನು ನಿನ್ನ ಪಾಡ, ಮಲೆಯ ದೂರದಿರುಬಿನಲ್ಲಿ ಅಪ್ಪ ನಿನ್ನ ಕಂಡ ದೆಸೆಯ (ಇಂಗೀತೆ. ೯–೧೦). **೪.** ತೊಡಕು; ಬಿಕ್ಕಟ್ಟು: ಹಗೆಯಿಂದ ಚಿತ್ರಾಂಗಿ ಭಂಟರಂ ಕಳುಹಿ ಎಳೆದು ಹಾಕಿಸಿದಳೋ ಇರುಬು ಇಟ್ಟೆಡೆಗೆ (ಸಾರಂಗ. ೩೫). **೫.** ಹಳ್ಳ; ಕುಳಿ; ತಗ್ಗು; ಖೆಡ್ಡ: ಬಾವಿಯಿರುಬಿನೊಳು ಬಿದ್ದಾಕೆಯಂ ಕಂಡು (ತುರಂಗ. ೮–೨೪); ಇರುಬಿನೊಳು ನೀನಿಹುದನೆಣಿಸದೆ . . . ನಾಲ್ಕುಂ ಶರಧಿಯೊಳು ಮುಳುಮುಳುಗಿ (ರಾಮಾಸಂ. ೬–೨–೫೯). **ಇರುಬೆ:** **೨.** "ಸಂದಣಿಗೆಯಿಟ್ಟಳ ಮೇಣಿರುಬೆಯೆಂದಕ್ಕು" (ಶಬ್ದಮಂ. ೫೪); "ಇರುಬೆಯಿಟ್ಟಳಮೆನಲೊತ್ತಾದುದಕ್ಕುಂ" (ಕಶರ. ೧೩). **ಇಱಿ:** **೧.** "ಇಱುವೆ (ಇಱಮೆ)ಂದು ಸಂದಣಿ" (ಶಮುದ. ಸ. ೩೪೩ ಪ್ರಯೋ). **ಇಱು:** "ಇಱು ಸಂದಣಿಯೊಳ್" (ಕರ್ಣಾನಿ. ೭೦). **ಇಱುಂಬ:** **೧.** ಪಡೆಗಡ್ಡಮಿರ್ದ ಬೆಟ್ಟಬೆಟ್ಟಿಡೆ ಮಟ್ಟಮಿಱುಂಬಮೆಂಬಿವಂ ಸಣ್ಣಿಸಿ ಸಾರ್ವದೆ ನಡೆವ ದಂಡರತ್ನಂ ಪಡೆವಳ್ಳನ ಮುಂದೆ ನಡೆಯೆ ನಡೆದಂ ಭರತಂ (ಆದಿಪು. ೧೧–೪೭). **ಇಱುಬ್ಬು₂:** **೧.** ಎಡೆಗೆಟ್ಟು ಕಾಳಾಹಿ ತಳರ್ದು ಮೊಲೆವೆಟ್ಟಂಗಳಿಱುಬಿನೊಳು ಪೊಕ್ಕಪುದೊ ಎನೆ ಬಾಸೆ ದಳವೇಱಿತು (ಸೋಮಚ. ೧–೭೧); ಕುಚಜಕ್ಕದಂಗಳಿಱುಬಂ ನೆಱೆ ಪೊಕ್ಕ ತಮಿಸ್ರಮಲ್ಲಿಯಕ್ಕಾಡೆ (ಶಾಂತೀಶ್ವ. ೧೧–೩೮); ತರುಲತೆಗಳಿಱುಬಿನಲಿ ಕಂಜಾಕರದ ತಡಿಯಲಿ ನಿಂದು (ಕುವ್ಯಾಗ. ೪–೩೦). **೨.** ಇಱುಬಿನೊಳಗದೆ ಕುತ್ತು ಹೆಮ್ಮರದುಱುಗಲೊಳಗದೆ ತೊಡಚು ಬಾಣವ (ಕುವ್ಯಾಅ. ೨೩–೧೦); ಅಱಸಿದರು ತಾವಿದ್ದ ತಾಣದ ತೆಱಪುಗಳ ತರುಗುಲ್ಮಲತಿಕೆಗಳಿಱುಬಿನಲಿ (ತೊರರಾ. ೩–೧೧–೩೧). **೩.** "ಇಱುಬು ಕರ್ಕಶತೆಯಕ್ಕುಂ" (ಕವಿಕಂ. ೧೯೪); ಜವನಣಲು ಮೃತ್ಯುವಿನ ತಾಳಿಗೆ ಬವರ ಭೈರವನಪಟು ಕಂಠೀರವನ ದಾಡೆಗಳಿಱುಬು ಭುಜಗನ ನಾಲಗೆಯಬಿಱುಬು (ಕುವ್ಯಾದ್ರೋ. ಒರಿಇ. ಪರಿ. ೨೭೬). **೪.** ಹಿಂದೆ ನಾನಾಪಾಯದಿಱುಬಿನ ಬಂಧನವ ಬಿಡಿಸಿದೆಯಲೈ ಗೋವಿಂದ ಶರಣಾನಂದಕಂದ ಮುಕುಂದ (ಕುವ್ಯಾಅ. ೧೬–೨೫); ಗಟ್ಟದಲಿ ಬೆಟ್ಟದಲಿ ಇಟ್ಟೆಡೆಯ ಇಱುಬಿನಲಿ ಕೆಟ್ಟೋಳಿದು ಬಂದೆನೆನಬೇಡ ವಿಧಿ ಕಾಣದಷ್ಟದಿಕ್ಕುಂಟೆ (ಸರ್ವಜ್ಞ. ೮೭೫). **೫.** ಇಱುಬಿನಲಿ ಕೆಡಹಿದ ಕರಿಯವೋಲ್ ರಿಪುಜನಪರಭ್ಯುದಯದ ವಿನಾಶವನೆಸಗಬೇಕು (ಕುವ್ಯಾಅ. ೮–೫೩); ಮುಡಿದ ಪೂವಿನ ತುಱುಬು ಮೃಡಗಂಧಗಜದಿಱುಬು ನಡೆಯ ಸೊಬಗಿನ ಸೊಂಪು ಚಂದ್ರಚೂಡನಲಂಪು (ಚೆಬಪು. ೩೭–೨೨); ಬಲ್ಮೊಲೆಯೆಂಬ ಹೆಬ್ಬೆಟ್ಟದೆಡೆಯಿಱುಬಿನೊಳ್ ಕೆಡಪುತಿಹನಲ್ಲಿ ವಿಟರಕ್ಷಿಮೃಗಕುಲವನು (ಜೈಮಿಭಾ. ೬–೧೭). **ಇಱುಬೆ:** **೨.** ಸಕಲ ಸಂಪದದಿಱುಬೆಗಾಗರಂ ತಾನು (ಮಹಾವಿ. ೧–೫೯). **೫.** ಖಗಮೃಗವ್ರಾತಮಂ ಪಾತಮಂ ಮಾಡಿದರ್ ಕೂಡೆ ಕೂಡೆ ಸಿಡಿಗುಂಡು ಬಡಿಕೋಲ್ಗಳುಱುಬೆಯಿಂದಿಱುಬೆಯಿಂದಿಡುಗವಣೆ ನೇಣುರಲ್ಗೊಲೆಗಳಿಂ ಬಲೆಗಳಿಂ (ಜೈಮಿಭಾ. ೨೮–೪೮).

[ದೇ. ‖ **ತಮಿ.** ಇಱುಮ್ಬು; **ತೆಲು.** ಇಱುಮು]

**ಇಱುಂಬುಗೊಳ್**, ಇಱುಬುಗೊಳ್ (ಕ್ರಿ). **೧.** ಸಂದುಗೊಂದುಗಳಲ್ಲಿ ಹೋಗಿ ಸೇರು : ಸಿಲ್ಕದ ವಿರೋಧಿಕುಟುಂಬಮಿಱುಂಬುಗೊಂಡಡಂಗದ ಖಳರನ್ಯಮಂಡಲದೊಳಿಲ್ಲ ಕುಮಾರನಿದೇನುದಗ್ರನೋ (ಪುಷ್ಪಪು. ೫–೫೫). **ಇಱುಬುಗೊಳ್. ೨.** ಹಳ್ಳಕ್ಕೆ ಬೀಳು ; ಮೃಗಗಳನ್ನು ಕೆಡಹುವ ಕುಳಿಗೆ ಬೀಳು : ಸೋವೋವ ಸೋವೋವ ಎಂದೆನುತ್ತ ಎತ್ತಿದ ಮೃಗವು ಇಱುಬುಗೊಂಡಿತ್ತು ಇಱುಬಿನ ಕುಳಿಯೊಳಗೆ ಕೊಲ್ಲದೆ ಕೊಂದನಲ್ಲಾ ಮೃಗವನು (ಅವಚಂ. ೨೫೯–೧೧೮೦).
[ಇಱುಂಬು + ಕೊಳ್$_1$]

**ಇಱುಕು**$_1$ 'ಇಱುಂಕು' ನೋ.

**ಇಱುಕು**$_2$, ಇರಕು$_2$, ಇರಿಕು, ಇರುಕು$_2$ (ನಾ). ಇಕ್ಕಟ್ಟಾದ ಪ್ರದೇಶ; ಸಂದು ; ಇಕ್ಕಟ್ಟು : ಮಱಿಗಳಿಗೆ ಮೊಲೆಗೊಡುತಿಱುಕಿನಲಿ ಹುದುಗಿದುವು ಹುಲ್ಲೆಗಳು (ಕುವ್ಯಾಅ. ೧೩–೨೯). **ಇರಕು**$_2$ : ನನ್ನ ಪರಿಸ್ಥಿತಿ ಎಂಥಾ ಇರಕು ಗೊತ್ತೆ ? (ಬದುಜ. ೪೯). **ಇರಿಕು** : ಹೀಗೆ ಇರಿಕಿನಲ್ಲಿ ಬುದ್ಧಿಯನ್ನು ತುರುಕುವುದು ಹೆಚ್ಚಿನ ಸಾಯೋ ಆಟ (ಹುಚ್ಚಾಟ. ೬೩). **ಇರುಕು**$_2$: ಆತ ಈಗ ಒಂದು ಇರುಕಿನಲ್ಲಿ ಸಿಕ್ಕಿಕೊಂಡಿದ್ದಾನೆ (ರೂಢಿ).
ಇರಕುದಾರಿ = ಇಕ್ಕಟ್ಟಾದ ದಾರಿ (ಕಿ). [< ಇಱುಕು$_1$]

**ಇಱುಕುಮಾತು** (ನಾ). ಇಕ್ಕಟ್ಟಿನ ಮಾತು ; ತಕರಾರಿನ ಅಥವಾ ತೊಡಕಿನ ಮಾತು : ಕಿಱಿಯ ತನುಜೆ ಮಾದ್ರಿಯನು ಕೊಟ್ಟಲ್ಲದೆ ಬಱಿದೆ ಕೊಂತಿಯನೊಲ್ಲೆನೆಂಬ ಇಱುಕುಮಾತಾಡಲದನು ಕೇಳಿಯಾ ನಾಡೆಱಿಯನಂತೆಗೆಯ್ವೆನೆಲು (ನೇಮಿಸಂ. ೬–೭).
[ಇಱುಕು$_2$ + ಮಾತು$_1$]

**ಇಱುಕುಳಿ** (ನಾ). ನಾಲಗೆಯ ಮೊದಲು, —ಬುಡ (?): "ಇಱುಕುಳಿ – ನಾಲಗೆ ಮೊದಲು" (ಶಮುದ. ನ. ೩೭ ಅಡಿಟಿ) ; ಆಳಿಸಿದಂ ಪೇಳಿಸಿದಂ . . . ತಾಳಿಗೆಯೊಳಿಗೆಯಿಱುಕುಳಿಯಿವಾದಿಯಾಗಜಾ ಕುಳನಂ (ಶಮುದ ೨೭); ಇಱುಕುಳಿಯೋಕುಳಿಗಳುಂ ಕುಳಂ (ಸಂಜೀವ. ೨೬). [?]

**ಇಱುಪೆ** 'ಇಱುಂಪೆ' ನೋ.

**ಇಱುಬು**$_1$ (ಕ್ರಿ). ತಿವಿ ; ಚುಚ್ಚು : ಹೇರೀಟಿಯಿಂದಿಱುಬುವ ಅಂಕುಶದೊಳೆತ್ತುವಲಗಿಂದಿಱಿವ ಕತ್ತರಿಗಳಿಂ ಕತ್ತರಿಸುವ . . . ರೌರವದ ನರಕಂ ಭಯಂಕರವಾದುದು (ಸಿದ್ಧರಾ. ೮–೨೮). [< ಇಱಿ$_1$]

**ಇಱುಬು**$_2$ 'ಇಱುಂಬು' ನೋ.

**ಇಱುಬುಗೊಳ್** 'ಇಱುಂಬುಗೊಳ್' ನೋ.

**ಇಱುಬುದಲಯ** (ನಾ). ಒಬ್ಬ ವ್ಯಕ್ತಿಯ ಹೆಸರು (?): ವೀರನೊಐಮ್ಬ ಪೃಥ್ವೀರಾಜ್ಯಂಗೆಯುತ್ತಿರೆ ಇಱುಬುದಲಯ (ಎಕ. X, ಗೋರಿಬಿ. ೧೧–೨ ; 970). [?]

**ಇಱುಬೆ** 'ಇಱುಂಬು' ನೋ.

**ಇಱು[ರು]ಮುಱಿ[ರಿ]ದೊಱೆ** (ನಾ). = ಇರಿಮುರಿಪಳ್ಳ : ಅದಲ್ಲದೆಯುಮಿಱು[ರು]ಮುಱಿ[ರಿ]ದೊಱೆಗಿದಿರಿ[ರೀ]ಸಿದರೆಂಬಂತೆ ನಿನ್ನುಮಂ ಮುಳಿಯಿಸಿ ಬರ್ದುಂಕಲ್ಬಾರದಾದೊಡಂ (ಶಾಂತಿಪು. ೩–೭೨ ವ). [ಇರುಮುರ್ರಿ$_0$ (< ಇರಿಮುರಿ) + ತೊಱೆ$_2$]

**ಇಱುವಾದಳೆ** (ನಾ). (?) : ಸಾನ್ತಳಿಗೆ ಸಾಯಿರದರಸನೊಡ್ಡಮ್ಮನರನಿಱುವಾದಳೆ ಪೆಣ್ಡಿರುದೆಬ್ಬಿಯ ತುಱು ಪರಿಯೆಯು . . . ಕಟ್ಟೆ ಸತ್ತು ಸುರಲೋಕಕ್ಕೋದ (ಎಕ. VII, ಶಿಕಾರಿ. ೧೯೫–೪ ; 1007). [?]

**ಇಱುವು** 'ಇಱುಂಪೆ' ನೋ.

**ಇಱುವೆ** 'ಇಱುಂಪೆ' ನೋ.

**ಇಱುಸಲ್** 'ಇಱಿಸಿಲ್$_2$' ನೋ.

**ಇಱುಹು** 'ಇಱುಂಪೆ' ನೋ.

**ಇಱುಹೆ** 'ಇಱುಂಪೆ' ನೋ.

**ಇಱುಹೆಗ** (ನಾ). ಒಬ್ಬಾತನ ಹೆಸರು (?) : ಊರಿಂ ಪಡುವಲಿಱುಹೆಗನ ಬಾಗಿಂ ಬಡಗಲು ಕೋಗಳಿ ಗಡಿಂಬದಲುತ್ತ್ರಿಷ್ಟವಪ್ಪೆರೆಯ ಕೆಯಿ ಮತ್ತರು (ಸೌಇಇ. IX–i, ೨೪೮–೨೩ ; 1147). [ಇಱುಹೆ + –ಗ ?]

**ಇಱುಳಚೋರ** (ನಾ). ನೊಳಂಬಪಲ್ಲವರಲ್ಲಿ ಒಬ್ಬ ರಾಜನ ಹೆಸರು : ಶ್ರೀ ಪೃಥ್ವೀವಲ್ಲಭಪಲ್ಲವಕುಲತಿಲಕಂ ಶ್ರೀಮದಿಱುಳಚೋರ × × ನ್ನಿಷ್ಕಂಟಕಂ × × ರಾಜ್ಯಂಗೆಯ್ಯು[ತ್ತಿ]ರೆ (ಸೌಇಇ. IX–i, ೨೩–೪೦ ; 929).
[ಇಱುಳ್$_0$ + ಚೋರ]

**ಇೞಿಯಪ್ಪ** (ನಾ). ಒಬ್ಬಾತನ ಹೆಸರು : ಕೊಙ್ಗಲ್ನಾಡೆಣ್ಣಾಸಿರಮನಿಱಿಯಪ್ಪನಾಳುತ್ತಿರೆ (ಎಕ. IV, ಹುಣಸೂ. ೯೨–೪ ; 920). [< ಎಱಿಯಪ್ಪ]

**ಇೞ್** 'ಇರ್$_1$' ನೋ.

**ಇೞಿ**, ಇಳಿ (ಕ್ರಿ). **೧.** ಕೆಳಕ್ಕೆ ಬರು, —ಹೋಗು : "ಇೞಿ–ನಿಮ್ನಾವತರಣೇ" (ಶಮುಧಾ) ; ಇೞಿದು ಕೆನ್ನೆರೆಯೆ (ಎಕ. I, ೧–೨೯ ; 466) ; ಸತಿ ಶಶಿಯಂ ಕಚ್ಚಿ ನೆಲಕ್ಕಿೞಿದ ರಾಹುವಂ ನೆಱೆ ಪೋಲ್ತಳ್ (ಕಾವ್ಯಸಾ. ೯೬೬ ಶೂದ್ರಕ) ; ವಾಹನದಿಂದಿೞಿದು ಬಲಗೊಂಡು ಬಂದು (ವಡ್ಡಾರಾ. ೭೯–೧೪) ; ರಥದಿಂದಮಿೞಿದು ಮಣಿಮಯ ಪೀಠದೊಳ್ ಕುಳ್ಳಿರ್ದು (ಪಂಪಭಾ. ೯–೨೭ ವ) ; ಮನದೆಱಕದಿಂದೇಱಲುಮಿೞಿಯಲುಂ ನೋಡಿ (ಧರ್ಮಾಮೃ. ೭–೨೫) ; ನೀರಿೞಿಯದೆ ಗಂಟಲೊಳ್ ಕಡುಬಂ ತುಱುಕಿದಂತಾಯ್ತು (ರಾಮಾಶ್ವ. ೬–೮). **೨.** ಬೀಳು ; ದುಮುಕು : ಕಳಿಪಂ ಕಳ್ವಂ . . . ಕಳ್ಬುಣಿಯುಂ ಘುಳುಮ್ಮನಿೞಿಗುಂ ಶ್ವಭ್ರಾಂತಮಂ ತಾಪಿನಂ (ಆದಿಪು. ೫–೮೧) ; ಉರದೊಳ್ ನಟ್ಟ ಸುರಗಿ ಬೆನ್ನೊಳ್ಮೂಡಿ ಸತ್ತು ನರಕಕ್ಕಿೞಿದಂ (ಚಾವುಂಪು. ೨೧–೧) ; ಅಧರ್ಮಮಂ ಸೇವಿಸಿ ದುರ್ಗತಿಗಿೞಿದು (ಅಜಿಪು. ೨–೫೮) ; ಇೞಿದ ಕೌರವಂ ರೌರವಮಂ (ಪಂಚತಂ. ೧೭೩–೨) ; ಆಱಿಪಿ ಪರವಧುಗಥೋಗತಿಗಿೞಿವುದನಭಿನಯಿಸುವಂತೆ ಸೀತೆಯ ಸಾರಣ್ಗೆೞಿದಂ ನಭದಿಂ ಖಚರಂ (ಪಂರಾಮಾ. ೯–೧೦೦).
**೩.** ಸುರಿ ; ಸೋರು ; ಒಸರು : ಕಡುವೆಂಕೆಯಿಂ ಕಟಾಕ್ಷಂಬಿಡಿದಿೞಿವ ಲಲಾಟಕುಂಕುಮಸ್ವೇದಜಳಂ (ಆದಿಪು. ೧೧–೫೮) ; ಪೊಳೆವಲರ್ಗಂಗಳಿಂ ಮಿಳಿರ್ವ ಬೆಳ್ಪು ರಸಾತ್ಮಕಮಾಗಿ ಗಂಡಮಂಡಳತಳದಿಂದಮಂದಿೞಿಯುತಿರ್ದುದೆನಲ್ (ಕಾದಂಪೂ. ೭೯೯). **೪.** ಕಡಮೆಯಾಗು ; ಕುಂದು ; ಕುಗ್ಗು ; ಕುಸಿ ; ಕೃಶವಾಗು ; ಬಡವಾಗು ; ಸೊರಗು : "ಇೞಿದಂ – ಮೆಯ್ಗುಂದಿದಂ, ಕೆಳಗಣ್ಗೆವಂದಂ" (ಶಮುದ. ಪರಿ. ೧) ; ಪತ್ತುವರಮಾಯಂಬಿಲಮನುಂಡು ಮುನ್ನಮೇೞಿದಂದದೊಳಿೞಿಯೆ ಮುನ್ನಿನಂದದೊಳುಪವಾಸಂಗೆಯ್ದು (ಚಾವುಂಪು. ೪೮–೧೪) ; ಕೆಳಗೆಲ್ಲಂ ಪಱಿದು ಬಿರ್ದ ಶುಕಸಂತತಿಯಂ ಗಳಗಳಿಸಿ ಕಟ್ಟೆ ನಡುಬೆನ್ನಿೞಿವಿನೆಗಂ ಪೊತ್ತು ಪೋದನಾ ಮುದುಬೇಡಂ (ಕಾದಂಪೂ. ೧೮೮) ; ಕುಸಿಗೊರಲಿೞಿದೆರ್ದೆ ಪೊಱಂಟೆ ಬೆನ್ ಬಾತ ಬಸಿಱಡಂಗಿದ ಜಘನಂ (ಯಕೋಚ. ೨–೩೮) ; ಉೞಿಯದು ವಿಭವಂ, ಜವ್ವನಮಿೞಿಯದು (ಶಮುದ. ೨೪೪ ಪ್ರಯೋ) ; ತಲೆ ಬಿರಿದ, ಕೀಲ್ ಮುಱಿದ, ಕಣ್ಣಿೞಿದ, ಸೂಲದ ಮೊನೆಯೊಳೇಱಿದ ಕಲ್ಲಾಲೆಯ ಬಸುಱಿೊಳ್ ಸಿಲ್ಕಿದ . . . ಪಾಪಾತ್ಮರ ಬಾಳ್ವನೆಯೆನಿಪ್ಪ ಯಮಲೋಕಮಂ ಮುಟ್ಟೆಯಿಸಿ ಬರ್ಪುದುಂ (ರಾಮಾಶ್ವ. ೧೦೫–೨೩). **೫.** ಜೋಲಬೀಳು ; ನೇಲು ; ತೂಗಾಡು : ಬಾಹುಯುದ್ಧಸನ್ನದ್ಧನಾಗಿ ಕಲಿಗಂಟಿಕ್ಕಿ ಗಂಡುಡೆಯುಮನುಟ್ಟು ಮೇಲುದನಿೞಿಯೆ ಮುಸುಕಿಟ್ಟು ಪೋಗಿ (ಪಂಪಭಾ. ೮–೭೩ ವ) ; ಮುಯ್ಪಿಂ ಯಜ್ಞೋಪವೀತಮುದೊಯ್ಯನಿೞಿಂದಿೞಿಯೆ (ಕಾದಂಉ. ೭೧೫) ; ಜನ್ನವಿರಮಂ ಬಲಂದೊಡುವುದು ಉಪವೀತಮೆಂಬುದು . . . ಕೊರಳೊಳಗೆ ಇೞಿಯಲಿಕ್ಕುವುದು ನಿವೀತಮೆಂಬುದು (ಹಲಾಯು. ೬೭–೨೫೩).

೬. ಅವತರಿಸಿ ಬರು ; ಸಂತತಿಯಾಗಿ ಬರು: ಬ್ರಹ್ಮನಿನೀ ಬಳಗಮಿೞಿದತ್ತು (ರಾಮಾಶ್ವ. ೧೩–೧೭). ೭. (ವಿಷ, ಶಾಪ, ಅಮಲು ,ಉಷ್ಣ, ಸಂತಾಪ ಮುಂತಾದುವು) ಪರಿಹಾರವಾಗು ; ಕಡಮೆಯಾಗು : ಯುಕ್ತಮೆನೆ ಹಸ್ತಮಂ ಪೂರ್ವೋಕ್ತ ಜಲಾಂತಸ್ಥಮಾಗೆ ಮಂತ್ರಿಸಿ ಮೂಮೆ ಸದುಕ್ತಂ ಜಲಭಾಂಡದೊಳಂ ವ್ಯಕ್ತಂ ವಿಷಮಿೞಿದು ತೋರ್ಕುಮೇಂ ಪ್ರತ್ಯಕ್ಷಂ (ಖಮದ. ೧೪–೨೫). ೮. ಒಳಹೊಗು ; ಮುಳುಗು : ಅಭಿಷೇಕಕ್ಕೆ ಬಂದಿೞಿದ ಪುಳಿಂದರಾಜಸುಂದರಿಯರ ನೆಲೆಮೊಲೆಯ ಸಿರಿಕಂಡದಣ್ಪಿನಿಂ ಪೊರೆದು ಬೆಳರ್ಪನಾಂತ ತೆರೆಗಳೊಳಂ (ಕಾದಂಪೂ. ೧೧೭). ೯. ಬಾಗು ; ಬಗ್ಗು ; ವಂದಿಸು : "ಪ್ರಣಾಮುಮಿೞಿದಂ" (ಕರ್ಣಾನಿ. ೬೨). ಇಳಿ : ೧. ಆನೆಯನಿಳಿದು ತಾಂ ಲೋಕಪಾಲನು ಕಾಲ್ನಡೆಯೊಳಿದಿರ್ವಂದು (ಬಸಪು. ೫–೧೭) ; ಕೌರವನನುಜರನು ಕೆಡೆಹೊಯ್ದು ಗರ್ವದ ಗಿರಿಯನಿಳಿಯೆನುತ (ಕುವ್ಯಾದ್ರೋ. ೧೩–೮) ; ತಗ್ಗು ಸೋಪಾನದೊಳಿಳಿವಾಗ ಮುನಿಗಳ್ಗೆ ಬೊಗ್ಗನೆ ಕೈಲಾಗುಗೊಡುವ (ಭರಚ. ೩–೬೮) ; ಏರಿದವ ಇಳಿದಾನು (ಗಾದೆ). ೨. ಶಾಸನಮಿದೆಲ್ಲಿಯ ಶಾಸನಮಾರಿತ್ತರೇಕೆ ಸಲಿಸುವೆ ನಾನೀ ಶಾಸನವನೆಂಬಾ ಘಾತಕನಾಸುರತರ ರೌರವಕೆ ಗಳಗಳನಿಳಿಗುಂ (ವೈ ಆ ರಿ. ೧೯೩೫, ೪೯–೧೨೧ ; 10ನೆಯ ಶತ) ; ಪಾತಕನೞಿದೀಗಳೊಳೞಿಗುವುವನಧೋಗತಿಗಿಳಿಗು[ಂ] (ಕೊ.ಲ್ಗಾ ಶಾ. ೩–೪೭ ; 1079); ಕಂತುತಾತನಿನಧಿಕಮಿಲ್ಲೆಂದು ಮೂಢ ದುರ್ಭ್ರಾಂತಿಯಿಂದುಲಿದು ನರಕಕ್ಕಿಳಿವರೇ (ಪದ್ಮರಾ. ೧೦–೩೧) ; ಸುಣ್ಣಕಲ್ಲುಡಿಗಟ್ಟ ಮಡುವಿನೊಳಿಳಿದಂತೆ ಬಣ್ಣಗುಂದಿದೆ ಕೇಳು ತಾಯೇ (ಮೋಹತ. ೪–೯೦). ೩. ಇಳಿವಶ್ರುಜಲಕೆ ಪುರುಡಿಸುತೆ ನಡೆನೋಡುತಂ (ಬಸರ. ೩–೧೪೮); ಕಣ್ಗಳೊಳುಗಳಗಳನೆ ಬಾಷ್ಪಂಗಳಿಳಿದೊಗುತಿರೆ (ಸಾನಂಚ. ೧–೬೫) ; ಧರಣಿಯುಳತೆಯ ಹರಿಯ ನೆಗಹಿನ ಚರಣದಗ್ರದೊಳಿಳಿವ ಘನ ನಿರ್ಝರದವೊಲು (ಕುವ್ಯಾದ್ರೋ. ೩–೮) ; ಚಂದ್ರಸುರಥೇನು ಕೊರ್ತು ಚಕೋರವತ್ಸಗೆ ಮೊಲೆಗೊಡಲು ಪೂರಿಸಿ ಕಡೆವಾಯೊಳಿಳಿವ ತಣ್ಬಾಲೆನೆ ಸೋರಿತು ಬೆಳ್ದಿಂಗಳಿಳೆಗೆ (ಮೋಹತ. ೧೬–೫೫). ೪. ಬಸವರಾಜಂ . . . ಸಂಸಾರದ ಭಾರವಿಳಿದು ನಲಿನಲಿದಾಡಿ (ಬಸರ. ೨–೮) ; ಹೊಳೆಯಲ್ಲಿ ಈಗ ಪ್ರವಾಹ ಇಳಿದಿದೆ (ರೂಢಿ). ೫. ಕೊರಳಿಂದೆ ಇಳಿಯಿಕ್ಕಿದ ಜನಿವಾರವು – ನಿವೀತ (ಸಾಚಿರಾ. ೬) ; ತಳಿತ ಸೆರೆಗಳ ತಾೞಿದಾನನದಿಳಿದ ಹುಬ್ಬಿನ ಹುದಿದ ಕಣ್ಗಳ ಚಲಿತವದನದ ವೃದ್ಧರನು ತೋೞಿದನು ಮುನಿಸುತಗೆ (ಕುವ್ಯಾಅ. ೧೫–೧೦) ; ತೊಡೆಗಿಳಿವ ಕಟಸೂತ್ರಮಂ ಮುೞಿದಿಡುತ್ತಂಡುಗೆಗಳನಿಲ್ಲದೀಡಾಡಿ ಬಿಡು ಮುಡಿಯ ಕಟ್ಟದೆ . . . ಒರ್ಬಳ್ (ಚಿಬಪು. ೫–೧೪). ೬. ಶರೀಘರ ತತ್ವಪದಗಳು ಇದೇ ಮಾದರಿಯ ಪದಗಳು. ಆದರೆ ಅವು ಜನಪದ ಭಾಷೆಯಲ್ಲಿ ಇಳಿದುಬಂದಿವೆ (ಶರೀಘ. ೧). ೭. ಅವರ ಮಂತ್ರದಿಂದ ಹಾವಿನ ವಿಷ ಇಳಿದುಹೋಯಿತು (ರೂಢಿ). ೮. ಇಳಿದಂ ಭೋಧಿಯ ಬಾಳ್ದನೇ ತಮಸನಂದಾಮ್ನಾಯವಂ ಕದ್ದು (ಸೋಮೇಶ. ೪೨) ; ಉದಧಿಯುದರದೊಳಿಳಿದು ತೆರೆಗಳನೊದೆವ ಮಂದರದಂತೆ (ಕುವ್ಯಾದ್ರೋ. ೧೭–೨೫) ; ಪಶ್ಚಿಮಾಂಬುಧಿಗಿನನಂದಿಳಿದನು ತೀವ್ರದಿಂದ (ಕಂನವಿ. ೯–೧೬೫). ೧೦. (ಕಷಾಯ, ಅರ್ಕ, ಅಡಿಗೆ ಮುಂತಾದುವು) ಸಿದ್ಧವಾಗು; ಹದಕ್ಕೆ ಬರು: ಪಾಕ ಚೆನ್ನಾಗಿ ಇಳಿದಿದೆ (ರೂಢಿ). ೧೧. ತಂಗು ; ಬಿಡಾರಮಾಡು ; ಬೀಡುಮಾಡು : "ನಿವೇಶಃ, ಶಿಬಿರಂ – ಈ ೨ ಪಂಡು ಇಳಿದಿದ್ದ ಸ್ಥಳಕ್ಕೆ ಪೆಸರುಗಳು" (ಸಿದ್ಧಾಂಶಿ. ೨೧೧) ; ಆ ಮನೆಗೆ ಒಬ್ಬ ಬ್ರಾಹ್ಮಣನು ಅತಿಥಿಯಾಗಿ ಬಂದು ಇಳಿದುಕೊಂಡನು (ವಚಭಾ. ೪೮). ೧೨. (ಹಣ್ಣು)ಅತಿಪಕ್ವವಾಗಿ ಕೊಳೆಯುವ ಸ್ಥಿತಿಗೆ ಬರು : ಮಾವಿನ ಹಣ್ಣು ಇಳಿದಿದೆ (ರೂಢಿ). ೧೩. ತೇರ್ಗಡೆಯಾಗು : ನಿಮ್ಮ ಮಗ ಗೊಂವಿಂದನ . . . ಪರೀಕ್ಷೆಯು ಇಳಿಯಿತಂತೆ (ಎಂ. ಎ. ೧).

**ಇಳಿದಾಡು** = ಕೆಳಮಟ್ಟಕ್ಕೆ ಇಳಿ : ದಟ್ಟಡವಿಗೆ ಸಾರ್ವಭೌಮನಾಗಿ ಕಟ್ಟಾಳುತ್ತಿರುವ ಕಣ್ಮೀರವನು ಕಾರ್ಯತಃ . . . ಕಾರ್ಯತಃ . . . ಕಾರ್ಯತಃ ಗ್ರಾಮಸಿಂಹನ ಆಟಪಾಟವೂಟಗಳ್ಗಿಳಿದಾಡಿ . . . ಜೀವಿಸಿಕೊಳ್ಳುವುದೇನು ? (ಬೆಟ್ಟಅ. ೭೫–೪). **ಇಳಿದಾರವಾರ** = ಇಳಿಭೋಗ್ಯ (೬). **ಇಳಿದುಕೊಳ್ಳು** = ತಂಗು ; ಬೀಡುಬಿಡು : ಆಮೇಲೆ ಪಾಂಡವರೆಲ್ಲಾ . . . ತಾವಿಳಿದುಕೊಂಡಿದ್ದ ಮನೆಗೆ ಬಂದರು (ನೀತಿಚಿಂ. I, ೧೨೦). **ಇಳಿದುಬರು** = ಅವತರಿಸು : ಇಳಿದು ಬಾ ತಾಯಿ ಇಳಿದು ಬಾ ಹರನ ಜಡೆಯಿಂದ ಹರಿಯ ಅಡಿಯಿಂದ ಋಷಿಯ ತೊಡೆಯಿಂದ (ಗಂಗಾತ. ೩). **ಇಳಿಯನುಂಗು** = ಹೊಟ್ಟೆಗೆ ಇಳಿದುಹೋಗುವಂತೆ ನುಂಗು ; ಪೂರ್ತಿಯಾಗಿ ನುಂಗು : ಜಾಲಗಾರನು ಬಲೆಯ ಬೀಸಲಿಂ ಬಂದುದಾಸ್ಮರನ ಯಿಳಿಯನುಂಗಿದ ಮೀನು ಬಾಲಸೂರ್ಯನ ಪೋಲ್ವ ಮೈವೆಳಗಿನಿಂ ಪೊಳೆವುತೆ (ನವಮೋ. ೧೨–೫). **ಇಳಿಯಬಿಡು** = ೧. ಮೆಲ್ಲನೆ ಕೆಳಕ್ಕೆ ಬಿಡು ; ಸುರಿ : ತಿಳಿನೀರನದಱ ನಾಲ್ಮಡಿ ಕಱುವಿನೆಮ್ಮೆಯ ಹಾಲೊಳಗೆೞಿದೊಲೆಯೊಳಗೆತ್ತಿ ಯೆಂಟಱೊಳಗೊಂದುಮಡಿ ಬಿಳುಪಾದ ಬೆಲ್ಲಕ್ಕಿಯಂ ತಳಿಸಿ ತೊಳೆದದಱೊಳಗೆಯಿಳಿಯ ಬಿಟ್ಟು ತೊಳಸಿ (ಸೂಪಶಾ. ೩–೬) ; ಕುಟ್ಟ ಕಣಿಕವನು ಹಪ್ಪಳದಂತೆ ಲತೆಯಿೞಿದು ಬಟ್ಟವಾಲ್ಕಾದ ಸಮಯದೊಳದಂ ತಂದಿಳಿಯಬಿಟ್ಟು ಬೇಯಿಸಿ ತೆಗೆದು ಮಡಿಸಿದುದು ಹಾಲಂಗರವಳಿಗೆಯೆನಿಸಿಕೊಂಬುದು (ಸೂಪಶಾ. ೧–೧೯). ೨. ಬರಲು ಅವಕಾಶ ಕೊಡು : ಕೈದುವ ಕೊಳ್ಳಿ ನಿದ್ರೆಯನಿಳಿಯ ಬಿಡಬೇಡೆಂದು ಸೇನೆಗೆ ಸಾೞಿದನು ಪಾರ್ಥ (ಕುವ್ಯಾದ್ರೋ. ೧೭–೬). ೩. ಕೈಬಿಡು : ಮುನ್ನಿನ ಸುಕೃತ ಉಂಟಾಗಿ ನಿಮ್ಮ ಪಾದ ದೊರಕೊಂಡಿತ್ತು ಇನ್ನು ನಮ್ಮನಿಳಿಯಬಿಡದೆ ಎನ್ನವನು ಇವನೆಂದು . . . ನಿನ್ನತ್ತೆಗೆ ಕರುಣಿಸಿ (ಅವಚಂ. ೨೪೦–೧೦೮೯). **ಇಳಿಯಬೀಳು** = ೧. ಜೋತು ಬೀಳು ; ನೇಲುತ್ತಾ ಕೆಳಗಿಳಿ : ಕಳ್ಳ ಹೆಂಚೆತ್ತಿಬಿಟ್ಟು ಸೂರಿನಿಂದ ಮೆಲ್ಲಗೆ ಒಳಕ್ಕೆ ಇಳಿಯ ಬಿದ್ದಿದ್ದಾನೆ (ರೂಢಿ). ೨. ಕೆಳಕ್ಕೆ ಬೀಳು : ಅಳವಿಗೆಡೆ ಧುಮ್ಮಿಕ್ಕಿ ರಥದವರಿಳಿಯಬಿದ್ದರು ಭಯದಿ ತೇಜಿಯನಿಳಿದು ರಾವ್ತರು ಕರವ ಮುಗಿದರು ಕೊರಳ ಸಲಹೆನುತ (ಕುವ್ಯಾದ್ರೋ. ೫–೧೪). ೩. ಓಡಿಹೋಗು ; ಜಾರಿಕೊ ; ಮರೆಯಾಗು (೬). **ಇಳಿಯ ಮುಳುಗು** = ಸಂಪೂರ್ಣವಾಗಿ ಮುಳುಗು ; ತೀರ ಒಳಕ್ಕೆ ಹೋಗು : ಇಳಿಯ ಮುಳುಗಿದವನಿಗೆ ಚಳಿಯೇನು ಮಳೆಯೇನು ? (ಗಾದೆ). **ಇಳಿಯವೇಳ್** = ಕೆಳಕ್ಕೆ ಬರುವಂತೆ ಹೇಳು : ಗುರುಭಕ್ತನಂ ಮಂಚವನಿಳಿಯ ವೇಳ್ದು (ಬಸಪು. ೩೯–೪೬). **ಇಳಿಯಿಳಿ** (ದ್ವಿರುಕ್ತಿ) : ಆಹಯಿಳಿಯಿಳಿಗೊರವ ನಿನಗೀ ಚೋಹವೇಕೆ (ಬಸಪು. ೩೨–೧೫). **ಇೞಿದಾಡು**=ವಿನೋದದಿಂದ ವಿಹಾರಕ್ಕಾಗಿ ಇಳಿ ; ಇಳಿಯುತ್ತಲೂ ಹತ್ತುತ್ತಲೂ (ಮತ್ತೆ ಇಳಿಯುತ್ತಲೂ) ಆಟವಾಡು, —ವಿಹರಿಸು : ಪಿರಿದ ಪ್ರಾಶ್ಚರ್ಯ ಪರಂಪರೆ ಸಮನಿಸಲದ್ರಿಶಿಖರದಿಂದಿೞಿದಾಡುತ್ತಿರೆಯಿರೆ ನಿಜೇಚ್ಛೆಯಿಂ ಕಿನ್ನರಮಿಥುನಮನವನಿಪಾಲತನಯಂ ಕಂಡಂ (ಕಾದಂಪೂ. ೬೧೭). **ಇೞಿಯಬಿಡು** = ನೇಲುವಂತೆ ಬಿಡು ; ಜೋಲಾಡುವಂತೆ ಬಿಡು ; ತೂಗಹಾಕು : ಕುಮುದವತೀ ವಿರಹಸಂತಾಪದಿಂದಿೞಿಯವಿಟ್ಟ ಕುಮುದಿನೀಪ್ರಿಯನ ಧವಳೋತ್ತರೀಯಮೆಂಬಂತೆ ಬೆಳ್ದಿಂಗಳ ಬೆಳಗಿನ ಬಳಗಮೋಸರಿಸೆ (ಕಾದಂಉ. ೪೨೯). **ಇೞಿಯುಂಬೊಟ್ಟು** = ಇಳಿಹೊತ್ತು : ಪೂರ್ವಾಹ್ಣಂ ಮಧ್ಯಾಹ್ನಮೆಂಬೆರಡುಂ ಪೊಟ್ಟುಗಳಂ ಕಳೆದಿೞಿಯುಂಬೊಟ್ಟುಱೊಳ್ ವೈದ್ಯಕ್ರಿಯೆಯಿಂ ಬೆಜ್ಜಂ ದೋಷರಕ್ತಮಂ ಕಳೆವಂತೆ (ಜೀವಸಂ. ೧೭೩–೨೦ ವ) ; ಇಕಾರಾಂತದೊಳ್ – ಸಿಡಿಯುಂದಲೆ, ಇೞಿಯುಂಬೊಟ್ಟು (ಶಮದ. ೧೭೦ ಪ್ರಯೋ). **ಇೞಿಯೆಮಂತ್ರಿಸು** = ವಿಷವು ಇಳಿದುಹೋಗಿ ಪರಿಹಾರವಾಗುವಂತೆ ಮಂತ್ರಹಾಕು :

ಮಸ್ತಕಮಂ ಮುಟ್ಟಿ ಇಟಿಯೆಮಂತ್ರಿಸುವುದು (ಖಮುದ. ೧೪–೨೪ ವ).

**ಇಟಿಯೆಮುಸುಕಿಡು** = ಪೂರ್ಣವಾಗಿ ಮುಸುಕು ಹಾಕಿಕೊ: ಇಟಿಯೆಮುಸುಕಿಟ್ಟು ಬಾಗಿಲ ಬಟಿಯನೆ ಪರಿತಂದು . . . ಮಟಿಯಂ ಬೆಸಗೊಂಡೊಡಕ್ಕು ಮಿದು ಪೊಂದು ಮತಂ (ಜಟ್ಟಮ. ೧–೩೯).

[ದೇ. ॥ ತಮಿ. ಮಲ. ಇಟಿ; ಕೊಡ. ಇಳಿ; ತುಳು. ಇಲಿ, ಇರಿ; ಪರ್ಜಿ. ಇಜ್]

**ಇಟಿಂಪು** 'ಇಟಿಪು' ನೋ.

**ಇಟಿಗೋಡ** (ನಾ). ಇಳಿಬಿದ್ದ ಕೊಂಬುಳ್ಳ ಪ್ರಾಣಿ: ಒರ್ಕೋಡಂ ಪೊಕ್ಕೊಡೆ ರಾಜ್ಯಹಾನಿಯಿಟಿಗೋಡಂ ಸಾರೆ ಸಾವಂತರಾ ಕೇಡಕ್ಕುಂ ಕರಿಯೆಟ್ಟಿನಿಂ ಕಡೆ ಫಲಂ ಕೆಂದಂ ಪುಗಲ್ ಸತ್ಫಲಂ (ಜಟ್ಟಮ. ೪–೬). [ಇಟಿ + ಕೋಡು$_5$ + –ಅ$_7$]

**ಇಟಿತ, ಇಳಿತ** (ನಾ). ೧. ಇಳಿಯುವಿಕೆ; ಅವನತಿ. 'ಇಟಿತವಿಲಿ' ಪರಾ. **ಇಳಿತ**: ೨. ಕಡಮೆಯಾಗುವಿಕೆ; ಕುಗ್ಗುವಿಕೆ: ಇಳಿತವೇನುದ್ದವೇನಾಸನದಲ್ಲಿ ಚಕ್ಕಳವೇನು ಗದ್ದುಗೆಯೇನು (ಭರಚ. ೪೨–೬೯); ಇಳಿತದಿಂ ಭರತದಿಂದೆಸೆವ ಕಾಳೋದಕಜಳನಿಧಿ (ಚಂಪ್ರಸಾಂ. ೧–೯೬); ಬೆಲೆಗಳ ಏರಿಳಿತಕ್ಕನುಸಾರವಾಗಿ ಜೀವನಕ್ರಮವೂ ವ್ಯತ್ಯಾಸವಾಗುತ್ತದೆ (ರೂಢಿ). [ಇಟಿ + –ತ$_2$]

**ಇಟಿತರ್, ಇಳಿತರ್** (ಕ್ರಿ). ಇಳಿದುಬರು; ಕೆಳಕ್ಕೆ ಬರು: ಕುಂದೇಂದುಯಶಂ ರಥದಿಂದಿಟಿತಂದೆಜಗಿದನಗ್ರಜನ್ಮಪದಸರಸಿಜದೊಳ್ (ಪಂಪಭಾ. ೯–೨); ಮಿಸುಗುವ ಚಂದ್ರಮಂಡಲದಿನಂದಿಟಿತಂದದನ ದಿವ್ಯವಾಣಿಯುಂ ಪುಸಿಯೆನಿಸಿತ್ತು ಮಾಯ್ದೆನಗೆ ಪಾಪಿಗೆ (ಕಾದಂಉ. ೫೬೫). **ಇಳಿತರ್**: ನಭದಿಂದಿಳಿತಂದು (ಗಿರಿಕ. ೯–೮); ಮೋಡದಿಂದಿಳಿತಪ್ಪ ಸಿಡಿಲವೊಲಿಳಿದನಾ ಪುರಿಗೆ (ತೊರರಾ. ೬–೧೦–೨೫); ಗಗನಪಥದಿಂ ಭಾಸುರಪ್ರಭೆಯೊಳಾ ಮುನಿಪನಿಳಿತಂದೊಡೆ (ಜೈಮಿಭಾ. ೨೯–೧೦). [ಇಟಿ + ತರ್]

**ಇಟಿತವಿಲಿ** (ನಾ). ಕ್ಷಯವಿಲ್ಲದವನು; ಕುಂದುವಿಕೆಯಿಲ್ಲದವನು: ಅಮರ್ದುರ್ಗೊರಲೀಸರಂ ಮೆಯ್ಯಮರ್ದಮರಲ್ವಿಲ್ಲನಿಟಿತವಿಲಿ ತಣ್ಣದಿರಂ . . . ಚಿಕದೇವೇಂದ್ರಂ (ಅಪ್ರತಿ. ೪೩–೧೯). [ಇಟಿತ + –ಇಲಿ$_3$]

**ಇಟಿನೇಹ** (ನಾ). ೧. ಕಡಮೆಯಾಗುತ್ತಿರುವ ಸ್ನೇಹ ಅಥವಾ ಪ್ರೀತಿ. ೨. ಕಡಮೆಯಾಗುತ್ತಿರುವ ಎಣ್ಣೆ. ೧, ೨: ಅಱಿಗಬ್ಬಂ ಬೆಳ್ಳಕ್ಕರಿಗರೊಳ್ ಇಟಿನೇಹಂ ತಾಣದೀವಿಗೆಯೊಳ್ . . . ಅಲ್ಲದಿಲ್ಲಂ (ರಾಮಾಶ್ವ. ೬–೨೫). [ಇಟಿ + ನೇಹ]

**ಇಟಿಪು, ಇಳಿಪು$_1$, ಇಳಿಹು, ಇಳುಪು, ಇಳುವು, ಇಳುಹು$_1$, ಇಟಿಂಪು, ಇಟಿಪ್ಪು** (ಕ್ರಿ). ೧. ಕೆಳಕ್ಕೆ ತರು, —ತಂದಿರಿಸು; ಇಳಿಯುವಂತೆ ಮಾಡು; ಮಡಗು; ಇರಿಸು: "ಇಟಿಪು – ಅಧಃಸ್ಥಾನನಯನೇ" (ಶಮಧಾ); ಪುಳ್ಳಿಯ ಪೊಱೆಯನಿಟಿಪಿ (ವಡ್ಡಾರಾ. ೬೬–೨೫); ನಿನ್ನಂ ತಂದೆನ್ನ ತೊಡೆಯ ಮೇಲಿಟಿಪುವುದುಂ (ಪಂಪಭಾ. ೬–೬೦); ಕಾಯ್ದಿಟಿಪಿದ ತುಪ್ಪಂ ಕೋಡುವ ಕಟಲಲ್ಲದೆ ದಿವ್ಯಭೋಜನಂ ಪೆಱತುಂಟೇ (ಕಾವ್ಯಾವ. ೨೪೧); ಪೆಗಲೊಳಿರ್ದ ಭಾಗಲಮುಂ ಭೂಭಾಗದೊಳಿಟಿಪಿ (ಪಂಚತಂ. ೧೪೭–೧). ೨. ಕಳೆದುಕೊಳ್ಳು; ನೀಗು; ತೊರೆ: ಮಹಾಬಳ ಖಚರೇಂದ್ರಂ ಪ್ರಾಯೋಪಗಮನವಿಧಿಯಿಂದಮಾತ್ಮೀಯ ಶರೀರಭಾರಮನಿಟಿಪೆ (ಆದಿಪು. ೨–೬೧ ವ). **ಇಳಿಪು$_1$**: ೧. ಲಿಂಗ ಶರಣೆನುತಗ್ಘವಣಿಯನೊಲವಿಂದಿಳಿಪಿ ಸಂಗಮೇಶ್ವರನ ಹತ್ತಿರೆ ಹದುಳದಿಂದಿಳಿಪಿ (ಬಸರ. ೩–೪೧); ಕಾದಿಳಿಪಿಯಾಱಿದ ಬಟ್ಟವಾಲಿನಂತೆ (ಸೂಪಶಾ. ೧–೭); ಇಳಿಗಿಳಿಪಬೇಕೆಂದು ಬಾಗಿದೊಂದಂಗಮನೆ (ಜೈಮಿಭಾ. ೧೯–೬); ತಳ್ವದೆ ಘಟಮನಿಳಿಪಿ (ರಾಜಶೇ. ೧೩–೧೦೧). ೩. ಕಡಮೆಮಾಡು; ಕುಗ್ಗಿಸು; ಕುಂದಿಸು: ಭೂಭಾರಮನಿಳಿಪುವೆಂ (ಇಹರ. ದೇ. ೪೦–೨); ಬಳೆದ ಸಂತಾಪವ ಪಲವು ನೀತಿಗಳಿಂದಿಳಿಪುವೆವೆಂದೆಳಸಿದರು (ಕರ್ಣಾವ್ಯ. ೨–೯). ೪. (ಮದ, ವಿಷ, ಅಮಲು ಮುಂತಾದುವನ್ನು) ಹೋಗಲಾಡಿಸು. ೫. ಮೂಲವಸ್ತುವಿನಂತೆ ತದ್ವತ್ತಾಗಿ ಬೇರೊಂದನ್ನು ನಿರ್ಮಿಸು, —ಚಿತ್ರಿಸು. **ಇಳಿಹು**: ೧. ಆಯ್ವತ್ತು ಹೊನ್ನಂ ಅರಮನೆಯ ಸಿದ್ಧಾಯಕ್ಕೆ ಅವಲಂಬಣವಾಗಿ ಇಳಿಹಿ ಶ್ರೀ ಬೂಚೇಶ್ವರ ದೇವರಿಗೆ ಧಾರಾಪೂರ್ವಕಂ ಮಾಡಿಕೊಟ್ಟ ದತ್ತಿ (ಎಕ. V, ಹಾಸನ. ೬೧–೫೦; 1173); ಚಳಗತಿಯ ವಾಜಿಗಳು ಕೊಂಡೊಯ್ದಿಳಿ [ಪಾಠಾಂ. ಳು] ಹಿದವು ತಮಸೆಯಲಿ (ತೊರರಾ. ೨–೪–೮).

**ಇಳುಪು**: ೨. ಮಿಳಿರ್ವ ಶಿವಯೋಗಿಯಂ ಕಂಡು ಕಾವಂ ಬಿಲ್ಲನಿಳುಪೆ (ಪದ್ಮರಾ. ೫–೩೧); ಕಬ್ಬಿನ ಬಿಲ್ಲನಿಳುಪಿ ಬಂದಂಗಭವನಂ ಗೆಲಿದು ಸೌಂದರಗಣೇಶನೊಪ್ಪುತ್ತಿರ್ದನು (ಸೌಂದಪು. ೧೦–೨೫); ಬಿಟ್ಟು ಬಂದೈನಂದನರನಿಳುಪಿಟ್ಟು [ಪಾಠಾಂ. ಳಿವಿಟ್ಟು, ಳುಹಿಟ್ಟು] ಬಂದೈ ರಾಜಪುತ್ರರ ನಟ್ಟಡವಿಯಲಿ (ತೊರರಾ. ೨–೫–೪). ೬. ಕಷಾಯವನ್ನು ಇಳಿಸು; ಬಟ್ಟೆಯಿಳಿಸು: ನೆಲಬೇವು ಮುಸ್ತೆ ಪರ್ಪಾಟಕದಿಂ ಕುದಿದಿಳುಪಿ ಕಟುಕರೋಹಿಣಿಯದಱೊಳಗಿರೆ (ಕಲ್ಯಾಕಾ. ೩–೩೨). **ಇಳುವು**: ೧. ತಂದ ಗಂಟನ್ನು ಇಳುವಿ ಬೆವರು ಒರಸಿಕೊಂಡು (ಮುಂಬಯಿ. ೫–೨೭೮).

**ಇಳುಹು$_1$**: ೧. ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೆ (ಮಹಾದೇ. ೨೫–೬); ಗಜಮುಖನನೊಯ್ದು ನೇಹದಿ ಮಲ್ಲಿಕಾರ್ಜುನನ ಕೆಲದೆಡೆಯೊಳಿಳುಹೆ (ಸಿದ್ಧರಾ. ೫–೧೧); ಮೆಱೆದುದುರದಲಿ ಕೌಸ್ತುಭದ ಮಣಿಮುಱಿಯ ನಿಳುಹಿದವೋಲು ಬೆಳಗಿನ ತುಱುಗಲಲಿ ತೂಗಾಡುತಿದ್ದುದು ಕೈದು ತೊಡವಾಗಿ (ಕುವ್ಯಾದ್ರೋ. ೩–೬೧). ೨. ಕೈಯ ಕೈದುವನಿಳುಹಿ ಬಾಯಲಿ ಬೆರಳನಿಟ್ಟಿದು ವೈರಿ ಪಾಯದಳ (ಕುವ್ಯಾದ್ರೋ. ೫–೧೪); ಸಾಯಲಂಜುವೊಡಿಳುಹು ಧನುವನು ನೋಯಿಸೆನು (ಕುವ್ಯಾಕ. ೧೧–೪೭). ೫. ಹಸರ ಈ ಕಂಬಳಿಯ ಹಸನಿ ಗಂಗವ್ವ ಹಾಸ . . . ಆದರ ಮ್ಯಾಗ ಬಸವ ಹರಶಿವನ ಇಳುವಿರೆ (ಲೋಕಗೀ. ೧೬–೮). ೭. ಕೆಳಕ್ಕೆ ಹರಿಯುವಂತೆ ಮಾಡು; ಸುರಿಸು: ತ್ರಿನಿ ಹೊಳೆವ ಸಲಿಲದ ಬಹಳ ಧಾರೆಗಳ ಇಳುಹಿದನು ಸರಳಿಂದ ವದನದ ಬಳಿಗೆ (ಕುವ್ಯಾಭೀ. ೧೦–೨೭). ೮. ಜೋತು ಬಿಡು; ನೇತಾಡಿಸು; ತೂಗುಬಿಡು: ಮುದದಿ ಹಗ್ಗವನಿಳುಹಿ ನಿನ್ನನು ಸೇದಿ ತಹೆ ಬಳಿಕ (ಸಾಳ್ವಭಾ. ೭–೬೨). ೯. ಕೆಡಹು; ಬೀಳಿಸು: ಹೆಱೆಯಂಬಿಂದ ಕಡಿದಿಳುಹಿದನು ಪಾಂಚಾಲಾಧಿಪನ ಶಿರವ (ಕುವ್ಯಾದ್ರೋ. ೧೭–೩೮); ಹೊಂಬರೆಹ ದಸ್ತ್ರದಲಿಳುಹಿದನು ರಕ್ಕಸನ ಮಸ್ತಕವ (ತೊರರಾ. ೩–೧–೧೦); ಖಳನನು ಜಾತೆ ಕಾಮಮೋಹಿತಳಾಗಿ ಜನಪತಿಯ ಮೆಚ್ಚಿಸಲ್ಕೈತರಲ್ ನಾಸಿಕವನಿಳುಹಿದಂ ಸೌಮಿತ್ರಿಯು (ವೆಂಕಾರಾ. ೧–೩–೧೭). ೧೦. ಒಳಗೆ ಬಿಡು; ಹಾಕು: ಕಳಿತ ಬಾಳೆಯ ಹಣ್ಣ . . . ಹುಣಿಸೆವಣ್ಣೊಳಗೆ ಕೆಲವ ಜೇನೆಯ್ಯೊಳಗೆ ಮತ್ತೆ ಕೆಲವ ಇಳುಹುವುದು (ಸೂಪಶಾ. ೪–೮೮). ೧೧. ವಿಸರ್ಜಿಸು; ಕಳೆಚು: ಬೇಕಾದರೆ ಪೂಜೆಯನ್ನು ಇಳುವಿದ ಮೇಲೆ ಮತ್ತೆ ಬಂದು ನೋಡಬಹುದು (ಸುವಸಂ. ೩೫). **ಇಟಿಂಪು**: ೨. ಬಹಿರಂತರಂಗದ ಪರಿಗ್ರಹಶಾಖೆಯಿವೆಂದು ಕುಂತಳಾವಲಿಯನಿಟಿಂಪಿದಂ (ಅನಂಪು. ೪–೯).

**ಇಟಿಪ್ಪು**: ೧. ಇದಿರೊಳಿಟಿಪ್ಪುವಲ್ಲಿ ಕುಡುವಲ್ಲಿ ಕೆಲರ್ ಮನದಿಂದೆ ಮುಂಚುವರ್ (ಪುಷ್ಪಪು. ೧೧–೧೯).

**ಇಳುಪಿಡು** = ೧. ಇಳಿಸಿ ಮಡಗು; ಕೆಳಗೆ ಇರಿಸು. ೨. ನೂಕಿ ಬಿಡು; ಹಾಕಿಬಿಡು; ಎಸೆ: ಗಗನವನಿತೆಯೆಚ್ಚಾಡಲ್ಕೆ ಪಸರಿಸಿದ ನಕ್ಷತ್ರಕವಡಿಕೆಗಳೆಡೆಯೊಳಿಳುಪಿಟ್ಟ [ಪಾಠಾಂ. ಳಿಪಿಟ್ಟ, ಳಿಪಟಂ] ರಜತದ ಹಲ್ಲೆಯೊ (ಸೋಮಚ. ೨–೧೨). [ಇಟಿ + –ಪು$_1$]

**ಇೞಿಪ್ಪು** 'ಇೞುಪು' ನೋ.

**ಇೞಿವಿೞಿ** (ನಾ). ಕೇಡು; ನಾಶ; ಹಾನಿ (?): ಬಡವರ್ ಬಲ್ಲಿದರೆಂಬ ದೇಶಭಾಷೆಯುಂ ಆಯಿ ಲ ದ ಳು ಪಿ ನಿ ೞಿ ವಿ ೞಿ ಯುಂ ಕುತ್ತದ ಮಱುಕದ ಚಿತ್ತವೃತ್ತಿಯುಮಪಮೃತ್ಯುವಿನ ಸತ್ವಬಾಧೆಯ ಗಂಧಾಗಂಧಮುಮಿಲ್ಲ (ಶಾಂತಿಪು. ೬–೧೦೨ ವ).

[?. / ತಮಿ. ಇೞಿ = ಕೇಡು, ಹಾನಿ; ವಿೞಿ = ಜ್ಞಾನ, ಅರಿತ]

**ಇೞಿವು** (ನಾ). ಇಳಿಯುವಿಕೆ; ಸುರಿಯುವಿಕೆ; ಬೀಳುವಿಕೆ: ದಕ್ಷಿಣಾವೆಸೆಗೆಲ್ಲಂ ತೊಱೆಎ ಅನ್ತೆಬನ್ದು ಪಶ್ಚಿಮಾದೆಶೆಗೆಲ್ಲಂ ಮತ್ತಂ ತೊಱೆಎ ಅನ್ತೆಬನ್ದು ಉತ್ತರಸ್ಯಾನ್ಸಿಶಿ ಕೊಟ್ಟುಗೂಡಲೆ ಅನ್ತೆಬನ್ದು ಮೂಡಾಯಿನ್ಬೀೞ್ದನ್ದ ನೀರಿೞಿವೆ (ಮೈಅರಿ. ೧೯೩೬, ೫೩–೨೮; 550 ?); ಗಟಿಗಟಿ ಸುರಿವಶ್ರುವ ಕೊರಲೞಿವಿಗಮುಗಿವುೞ್ದಟ್ಟು ಮೊೞಗಿಂಗಂ ಪೊಂಪುೞಿಯೆನಿಸಿದಾತ್ಮನಿಂದೆಗಮುೞಲ್ಗಮಿಂದ್ರನುಮುಪೇಂದ್ರನುಂ ಪದನಾದರ್ (ಶಾಂತಿಪು. ೬–೮೯). [ಇೞಿ + –ವು. / ತಮಿ. ಇೞಿವು]

**ಇೞಿವೊಲ** (ನಾ). ಇಳಿಜಾರಾದ ಭೂಮಿ: ಬಾಲಕನಂತೆ ಪೊಲ್ಲಮಂ ಪಿಡಿಯದೆ ಹಜ್ಜೆಯ ಕಟ್ಟಗೆಯಂತೆ ಖಳರ ನುಡಿಗಳ್ಗಾಡದೆ ಇೞಿವೊಲದ ನೀರಂತೆ ಕುಪಥಕ್ಕೆೞಗದೆ (ಧರ್ಮಾಮೃ. ೫–೯೯). [ಇೞಿ + ಪೊಲ]

**ಇೞಿವೋಗು** (ಕ್ರಿ). ಇಳಿದುಹೋಗು, —ಹರಿ: ಅವಂ ಮುಳಿಯಿಸೆ ಕೆಯ್ಗುಳಿಯೆ ಮುನಿಪತಿಯ ಕಣ್ಗಳೊಳೞಿವೋದುವು ತೀವಿ ಕೋಪರಸದ ಪೊನಲ್ಗಳ್ (ಶಾಂತಿಪು. ೬–೬೧). [ಇೞಿ + ಪೋಗು₁]

**ಇೞಿಸು**, ಇಳಿಸು₂ (ಕ್ರಿ). ೧. ಕೆಳಕ್ಕೆ ಬರುವಂತೆ ಮಾಡು; ಕೆಳಕ್ಕೆ ತರು; (ಹೊತ್ತ ಹೊರೆ ಮುಂತಾದುವನ್ನು) ಮೇಲಿನಿಂದ ತೆಗೆದು ಕೆಳಗಿಡು. ೨. ತಗ್ಗಿಸು; ಕುಗ್ಗಿಸು; ಬಗ್ಗಿಸು: ಉೞಿದವರಾರಾತನ ಮಸಪ ಮಸಕದೆಸಕಮನಿೞಿಪರ್ (ಕಾವ್ಯಸಾ. ೨೩೯ ಶೂದ್ರಕ); ಈ ಜಗದೊಳ್ ಬದ್ದೆಗನನ್ನಸಾವನಿೞಿಕುಂ ಭ್ರೂಕೋಟಿಯಿಂ ಕೋಟಿಯಂ (ಪಂಪಭಾ. ೧–೨೬). **ಇಳಿಸು₂**: ೧. ತಟ್ಟನ್ನು ನಿಧಾನವಾಗಿ ಆ ಕಣಿವೆಯಲ್ಲಿ ಇಳಿಸಿಕೊಂಡು ಬರುತ್ತಿದ್ದರು (ಕಳಹು. ೧); ಗೊನೆ ಇಳಿಸಿಕೊಂಡ ಕೂಡಲೇ ಬಾಳೇಗಿಡವನ್ನು ಕಡಿದು (ಮುಂಬಯು. ೨–೩೬); ಚಂಡಾಲನು ಎತ್ತಿದ್ದ ಕೈಯನ್ನು ಇಳಿಸಿದನು (ರಾವಿಜ. ೧೧). ೨. ಸೊಕ್ಕನ್ನು ಇಳಿಸದಿದ್ದರೆ (ಮುಂಬಯಿ. ೫–೬೧). ೩. ನೀಗು; ನಿವಾರಿಸು; ಸಾಗಿಸು: ಹ್ಯಾಗೂ ಸರಿ, ಈ ವರ್ಷ ತಂಗಿಯನ್ನು ಮನೆಯಿಂದ ಇಳಿಸಲೇಬೇಕು. ಇಲ್ಲದಿದ್ದರೆ ನನಗೆ ಶಾಂತಿಯಿಲ್ಲ (ಮಸಕೂ. ೧೦). ೪. ಬೀಡು ಬಿಡುವಂತೆ ಮಾಡು; ತಂಗುವಂತೆ ಮಾಡು; ನೊಗ ಇಳಿಸು; ಕೊರಳು ಹರಿ(ಉಕ): ಎತ್ತೆಲ್ಲಿ ಇಳಿಸಿರಿ ಬುತ್ತೆಲ್ಲಿ ಉಂಡಿರಿ (ಲೋಕಗೀ. ೨೪–೮). ೫. ಹೊಡೆ; ಪೆಟ್ಟುಹಾಕು: ಬಾರುಕೋಲು ತೆಗೆದುಕೊಂಡು ಎತ್ತಿಗೆ ಒಂದೆರಡು ಇಳಿಸಬೇಕೆಂದನು (ಬಾಬಲ. ೩೭). ೬. (ಕಷಾಯ, ದ್ರಾವಕ ಮುಂತಾದವುಗಳನ್ನು) ಸಿದ್ಧಗೊಳಿಸು; ಸಾರವನ್ನು ಉದ್ಧರಿಸಿ ತೆಗೆ. 'ಕಷಾಯವಿಳಿಸು', 'ಬಟ್ಟಿಯಿಳಿಸು' ಪರಾ.

**ಇಳಿಸಿಕೊಳ್ಳು** = ತಂಗುವಂತೆ ಮಾಡು: ಇವರನಾ ಮುನಿಮುಖಪಚರಿಸಿದನು ವಿವಿಧಸತ್ಕಾರದಲಿ ತಿಂಗಳುದಿವಸಪರಿಯಂತಿಳಿಸಿಕೊಂಡಿ [ಪಾಠಾಂ. ತಿರಿಸಿ ಬಳಿಕಿ]ಲ್ಪಲನ ಸಂಗತಿಯ . . . ಕೇಳ್ದು (ತೊರರಾ. ೩–೧–೧೯); ವಿನಯಾದಿತ್ಯನು ತೊರೆಮಾರವೈಶ್ಯದ ಚಿತ್ರಸೇದುಗ್ರಾಮದಲ್ಲಿ ದಂಡನ್ನು ಇಳಿಸಿಕೊಂಡಿರುವಾಗ (ತುಳುನಾ. ೬೭). [ಇೞಿ + –ಸು₁]

**ಇೞಿಸುನೂಂಕು** (ಕ್ರಿ). ಅಡ್ಡಬರು; ಭಂಗಪಡಿಸು; ಇದಿರಪ್ಪಳಿಸು; ವಿರೋಧಿಸು (ಕಶಸಾ. ೩). [ಇೞಿಸು + ನೂಂಕು ?]

**ಇೞಿಹ** (ನಾ). ಇಳಿಯುವಿಕೆ; ಕೆಳಗೆ ಬರುವಿಕೆ. 'ನೀರಿಳಿಹ' ಪರಾ. [ಇೞಿ + –ಹ]

**ಇಱ್ಕುೞಿ** 'ಈಱ್ಕುೞಿ' ನೋ.

**ಇಱ್ಕುೞಿಗೊಳ್** 'ಈಱ್ಕುೞಿಗೊಳ್' ನೋ.

**ಇಱ್ಕುೞ್₁**, ಇಕ್ಕಳು, ಇಕ್ಕುೞ್₁, ಇರ್ಕುೞ್₁ (ನಾ). ೧. ಒಂದು ಬಗೆಯ ರೋಗ; ಬಿಕ್ಕಳಿಕೆ (?): "ರುಜೋದ್ರೇಕ ಸಂದಂಶದೊಳಮಿಱ್ಕುೞಕ್ಕುಂ" (ಸಂಜೀವ. ೧೫). **ಇಕ್ಕಳು**: ೨. ಮನಃಕ್ಲೇಶ; ಸಿಟ್ಟು; ಕೋಪ. **ಇಕ್ಕುೞ್₁**: ೧. "ಇಕ್ಕುೞ್ = ವ್ಯಾಧಿವಿಕಾರಂ; ಸಂದಂಶಂ; ತಂಡಸಂ" (ಶಮುದ. ಪರಿ. ೧). **ಇರ್ಕುೞ್₁**: ಮೋದಕದಿಂ ಮಧುಪೀಲಿಯ ಬೂದಿ ಕಣಾಚೂರ್ಣಮೆಂಬಿವಂ ತಿನೆ ರುಜೆಯಿಂದಾದಿರ್ಕುೞುಮೂರ್ಧ್ವಶ್ವಾಸೋದಯಮುಂ ಕಂಠರೋಗಮುಂ ಪ್ರಶಮಿಸುಗುಂ (ಲೋಕೋಪ. ೯–೩೨).

**ಇಕ್ಕಳುಹತ್ತಿಸು** = ರೇಗಿಸು; ಸಿಟ್ಟಿಗೆಬ್ಬಿಸು; ಮನಃಕ್ಲೇಶವನ್ನು ತರು: ನೋಡಪ್ಪ ನನಗೆ ಇಕ್ಕಳುಹತ್ತಿಸಬೇಡ ಇನ್ನು; ನಾನು ಸುಮ್ಮನಿರುವುದಿಲ್ಲ (ರೂಢಿ); ಸುಮ್ಮನೆ ಇಕ್ಕಳುಹತ್ತಿಸುತ್ತಾನೆ ನನಗೆ (ರೂಢಿ). [?]

**ಇಱ್ಕುೞ್₂**, ಇಕ್ಕಲ್ಲು₂, ಇಕ್ಕಳ್₁, ಇಕ್ಕುಳ್₁, ಇಕ್ಕುಳಿ, ಇಕ್ಕುಳು, ಇಕ್ಕುೞ್₂, ಇರ್ಕುೞ್₂, ಇರ್ಕುೞಿ, ಇರ್ಕುೞು, ಇಱ್ಕುೞು (ನಾ). ೧. ವಸ್ತುಗಳನ್ನು ಬಿಗಿಯಾಗಿ ಹಿಡಿಯಲು ಬಳಸುವ, ಕತ್ತರಿಯಂತೆ ನಡುವೆ ಕೀಲಿಸಲ್ಪಟ್ಟು, ಹಿಗ್ಗಲಿಸಲು ಅನುಕೂಲಿಸುವಂತೆ ಅಳವಡಿಸಿರುವ ಎರಡು ಕವಲುಗಳುಳ್ಳ ಲೋಹದ ಸಾಧನ; ಪಟಕಾರ; ಸಂದಂಶ; ತಂಡಸ: "ರುಜೋದ್ರೇಕ ಸಂದಂಶದೊಳಮಿಱ್ಕುೞಕ್ಕುಂ" (ಸಂಜೀವ. ೧೫). **ಇಕ್ಕಲ್ಲು₂**: ೨. (ಅಲಂ) ಸಂದಿಗ್ಧ ಪರಿಸ್ಥಿತಿ; ಇಕ್ಕಟ್ಟು: ರಕ್ಷಿಸುವರಾರು ನಮ್ಮನು ದುಃಖದಿಕ್ಕಲಿಗೆ [ಪಾಠಾಂ. ದಿಕ್ಕು ದಿಕ್ಕಿಂಗೆ] ವಶವ ಮಾಡುವರೆ (ರಾಘಜ. ೬–೧೧೨). **ಇಕ್ಕಳ್₁**: ೧. ಹದವಾಗಿ ಬೇಯಲಿಕ್ಕಳದಲ್ಲಿಯದ ತೆಗೆವುತ (ಸೂಪಶಾ. ೧–೫೨); ಪಗಡೆ ದಾಳಗಳು ಅಂಕುಶಗಳಂತೆಯೂ ಇಕ್ಕಳಗಳಂತೆಯೂ ದ್ಯೂತಕಾರನಿಗೂ ಅವನ ಸಂಸಾರಕ್ಕೂ ದುಃಖವನ್ನು ಕೊಡುತ್ತವೆ (ಋಕ್ಸಾರ. ೩೦೮). **ಇಕ್ಕುಳ್₁**: ೧. ಗರಳಧರನೇಕನಿಷ್ಠೆಯ ಘಟ್ಟಿಯಂ ಕೊಂಡು ಹರನ ಭಯಭಕ್ತಿಯೆಂಬಿಕ್ಕುಳದಿ ಪಿಡಿಕೊಂಡು (ಇಜರ. ದೇ. ೧೦೬–೨೦); ಕೆಂಗಲಿಸುವಿಕ್ಕುಳದೊಳವರ ನಾಲಿಗೆಗಳಂ ಕೀಳುವರು ಯಮದೂತರು (ವೀಶೈಪು. ೪–೧೯–೪೮). **ಇಕ್ಕುಳಿ**: ೧. ತಮ್ಮ ರೂಪ, ರೊಕ್ಕದಿಂದ ಅವರು ಇಕ್ಕುಳಿಯಿಂದ ಎಳೆಯದ ಹೆಣ್ ಕೂಸು ಇರಲಿಲ್ಲ (ಕನಕ. ೩೭). **ಇಕ್ಕುಳು**: ೧. ಪ್ರಳಯಾನಳದಿಂ ಕಾಯಿಸಿ ರಾಹುವ ಕೇತುವ ಬಲಿದಿಕ್ಕುಳಿನಿಂ ತೆಗೆದು (ವೀರೇಚ. ೨–೯); ಸೆಕ್ಕಿ ಸುರಗಿಯೊಳಿವನ ಖಂಡವನಿಕ್ಕುಳಿನೊಳೊಡೆಯವಚಿ ಕೊಯ್ (ಕುವ್ಯಾಕ. ೧೫–೨೬). **ಇಕ್ಕುೞ್₂**: ೧. "ಇಕ್ಕುೞ್ = ವ್ಯಾಧಿ ವಿಕಾರಂ; ಸಂದಂಶಂ; ತಂಡಸಂ" (ಶಮುದ. ಪರಿ. ೧); ಕೆಲಬರ್ ಕುಸಿವರ್ ನಾಲಗೆಯನಿಕ್ಕುೞೊಳ್ (ಆದಿಪು. ೫–೮೭); ಕುಡು ಕೊಂಡೊಡಮೆಯನೀಗಳೆ ಕುಡದಿರ್ದೊಡೆ ಮುಱಿವೆನಿಕ್ಕುೞೊಳ್ ಕಯ್ಯಂ (ಧರ್ಮಾಮೃ. ೧೨–೨೨೯); ಅರಿವುದು ಮೂಗನಿಕ್ಕುೞೊಳೆ ಕೀೞ್ವುದು ಪಲ್ಗಳಂ (ಸೂಕ್ತಿಸು. ೮–೩೭೮). **ಇರ್ಕುೞ್₂**: ೧. ಅಳ್ಳೆಯಂ ಕುತ್ತೆಯುಮಿರ್ಕುೞೊಳೊತ್ತೆಯುಂ (ಅಜಿಪು. ೧೧–೧೦ ವ); ನಿಟ್ಟೆಲ್ವುಗಳ್ ತೋಱುವಿನಂ ಕಾಯ್ದಿರ್ಕುೞಿಂದಿಕ್ಕುಳಿಸಿ (ಸುಕುಮಾ. ೭–೩೫). **ಇರ್ಕುೞಿ**: ೧. ಕನ್ನದೊಳ್ ಸಂಧಿಸಿದ ಕಲ್ಲಂ ತೆಗೆವಿರ್ಕುೞಿಂ ಮತ್ತಮನೇಕ ಚೌರ್ಯಸಾಧನಂಗಳಂ ಕೊಂಡು (ದಶಕು. ೮–೯೯ ವ); ಸುತ್ತಿಗೆಯಡಿಗಲ್ಲಿರ್ಕುೞಿ ಬೆಂಕಿನೀರ್ ಮೊದಲಾದುವು ಸಹಕಾರಿ ಕಾರಣಂ(ಚಿಕವಿ. ೧೦). **ಇರ್ಕುೞು**: ೧. ಕರ್ಬೊನ್ನದಂತೆ ಇರ್ಕುೞುಗೆವಂದು(ಧರ್ಮಾಮೃ. ೩–೭೭); ಇರ್ಕುೞುಯ ತಂಡಸದ ಕತ್ತರಿಯ (ರಾಮಾಶ್ವ. ೧೦೩–೧೯).

ಇಟ್ಕುಟು : ೧. ಉನ್ನತ ಮಸ್ತಕಸ್ಥಳದೊಳಂಬುಗಳಟ್ಟುಡಿದಿರ್ದೊಡತ್ತ ಮಿತ್ತನ್ನೆಱೆತಂದು ಬಲ್ಪಡಿಗರಿಟ್ಕುಟಿನೊಳ್ ಕಿಟಿ ನೊಂದೆನೆನ್ನದಃ ಎನ್ನದೆ (ಪಂಪಭಾ. ೧೧-೩).

[< ಈಟ್ + ಕುಟ್ಟ್₂. / ತುಳು. ಇಕ್ಕುಳಿ, ಇಕ್ಕುಳು]

ಇಟ್ಕುಟು 'ಇಟ್ಕುಟ್ಟ್₂' ನೋ.

ಇಟ್ಕೆಯ್ಗೊಳ್ 'ಈಟ್ಕೆಯ್ಗೊಳ್' ನೋ.

△ ಇಟ್ಟಾಸಿರ 'ಇರ್ಛಾಸಿರ' ನೋ.

△ ಇಟ್ಛಾಸಿರ 'ಇರ್ಛಾಸಿರ' ನೋ.

ಇಟ್ತಿವಯಿಲ (ನಾ). ಒಂದು ಪ್ರದೇಶದ ಹೆಸರು (?): ಮತ್ತಪ್ಪ ಒಸಗೆ ಉತ್ಸಾಹಂಗಳ್ಗೆ ಇಟ್ತಿವಯಿಲಮುಂ ಪೆತ್ತವೀ ವಯಿಲಮುಂ ಸೊವಗೆಯಾ ಮರ್ಯ್ಯಾದೆ (ಎಇ. XIV, ೧೯೧-೩೨ ; 725). [?]

ಇಟ್ಟಿ (ನಾ). ಕಸಿದು ಕೊಳ್ಳುವಿಕೆ; ಸುಲಿಗೆ; ಕೊಳ್ಳೆ: ಕಳ್ಳ ರಾಯಿಲಮಱೆಯೇೞು ಮಾರಿ ಪಸವಿಟ್ಟಿ ಬೞಂ ಪೆಱವುಂ ಭಯಂಗಳಾ ಕುಲಿತೆಗಳಿಲ್ಲ (ಆದಿಪು. ೧-೫೨); ಚೋರ ಡಾಮುರಾಕ್ರಾಂತಿಯುಮಿಟ್ಟಿಯ ಪಸವಿನ ಪೆಸರ್ವೆಸರುಂ . . . ಇಲ್ಲ (ಶಾಂತಿಪು. ೬-೧೦೨ ವ); ಎಂದು ಮಿಳಾತಳಂ ಬೆಳೆಯುತಿರ್ಕೊಳ್ಗಾಲಮುಕ್ಕಿಟ್ಟಿಯುಂ ಬೞನುಂ ಪಿಂಗುಗೆ (ಛಂದೋಂಬು. ೬-೧೩); ಪಗಲೊಳ್ ಕಟ್ಟಲೆ ಪೊಣ್ಮೆ . . . ಪುಟ್ಟುಗುಂ ಅನ್ಯಾಯಮುಮಿಟ್ಟಿಯುಂ ಕಲಹಮುಂ ದುರ್ಭಿಕ್ಷಮುಂ ಕುತ್ತಮುಂ (ಲೋಕೋಪ. ೪-೧೦); "ಈತಿಬಾಧೆಗಳ್" (ಲೋಕೋಪ. ಟೀಕೆ); ಪದವಟೆಯಾದುದಿಟ್ಟಿಯನಿತುಂ ಲಯಮಾದುದಕೃಷ್ಟಪಚ್ಯಮಾದುದು ಧರೆ (ಅನಂಪು. ೬-೬೬); ಉರಗನ ನಿಂದ ತಾರೆ ಮುಖದೊಳ್ನಿಲೆ ಮೂಱು ಸಿರಕ್ಕೆ ಮೂಱು . . . ಆವರಿಸುಗುವಿಟ್ಟಿಯೆಂದಱಿದು ಬಿತ್ತಿಸು ರಾಹುಚಕ್ರದೊಳ್ (ಜಟ್ಟಮ. ೯-೨). [ಇಟ್ಟ್₀ (< ಈಟ್) + -ದಿ]

ಇಟ್ಟಿಲ್ಗೊಲ್ಲಿ (ನಾ). ಒಂದು ಕೊಲ್ಲಿಯ ಹೆಸರು; ಒಂದು ಪ್ರದೇಶದ ಹೆಸರು: ಮೂಡಾಯ್ ನೋಡಿ ನಡೆದು ಇಟ್ಟಿಲ್ಗೊಲ್ಲಿಯೆ (ಎಕ. IV, ಹೆಗ್ಗಡ. ೪-೯ ; 750). [?]

ಇಟ್ಟುಕೊಳ್ 'ಈಟ್' ಪರಾ.

△ ಇಟ್ನೂರ್ 'ಇನ್ನೂಱು' ನೋ.

△ ಇಪ್ಪತ್ತು 'ಇರ್ಪತ್ತು' ನೋ.

△ ಇಟ್ಪಾಱು (ನಾ). ಎರಡು ಪಾಱು; ಒಂದು ಅಳತೆ: ನೊೞಂಬನ ಬೆಸದೊಳೆ ಪೆರ್ಬೆಣ್ಣೆಯ ಪೂರ್ಬಸಿದ್ಧಾಯ ಪತ್ತು ಗದ್ಯಾಣ ಪೊನ್ನು ಇಟ್ಪಾಱು ಭತ್ತವುಂ ತಿಱುವನ್ತಗೆ ಕಾದಿಯಣ್ಣಂ ಕೊಟ್ಟಂ (ಎಕ. X, ಮುಳಬಾ. ೨೦೮-೩೨ ; 1000). [ಇಟ್ಟ್₀ (< ಇರ್ಟ್₂) + ಪಾಱು₄]

△ ಇಟ್ಮೂಡು (ನಾ). ಎರಡು ಮೂರು; ಆರು ಕೊಳಗ ಬೀಜ ವರಿಯ ಗದ್ದೆ: ಎರೆಯೂರ ಕಾಡಿಗಾವುಣ್ಡ ತನ್ನೂರ ತುಱುಗೊಳೊಳ್ ತುಱುವ[ರ]ಕ್ಷಿಸಿ ಕಾದಿ ಸತ್ತ ಸಿರಿವನ್ತಗಾಳೊಳ ಇಟ್ಮೂಡು ಭತ್ತದ ಮಣ್ಣು ಮಹಾದೇವಗ್ಗೆ ಬಿಟ್ಟಂ (ಎಕ. IV, ಗುಂಡ್ಲುಪೇ. ೧೪-೮ ; 995). [ಇಟ್ಟ್₀ (< ಇರ್ಟ್₂) + ಮೂಱು₂]

**ಈ**$_1$ (ನಾ). ಕನ್ನಡ ವರ್ಣಮಾಲೆಯ ನಾಲ್ಕನೆಯ ವರ್ಣ; ಈಕಾರ: ಅ, ಆ, ಇ, ಈ . . . ಎಂಬೀ ಪದಿನಾಲ್ಕುಂ ಸ್ವರಂಗಳ್ (ಶಮದ. ೬ ವೃತ್ತಿ).

**ಈ**$_2$, ಈಯು$_1$ (ಕ್ರಿ). ಇತ್ತು$_3$ (ಭೂತಕೃ); ಇತ್ತು (ಭೂತನ್ಯೂ). **೧.** ಕೊಡು; ದಾನಮಾಡು: "ಈ—ಪ್ರದಾನೇ" (ಶಮಧಾ); ಇಟ್ಟು ಇತ್ತ ಮಣ್ಣು ಆಜಲೂಜಗನಾವಟಿ ಗುಣಸಾಗರತಮ್ಮಡಿಗಳ್ಗೆ ಕೊಟ್ಟದಾ (ಎಕ. IV, ಗುಂಡ್ಲುಪೇ. ೮೮-೭ ; 750); ಒಳಗಿರ್ದ ವೈರಿಗಳ್ ಮೊಕ್ಕಳ ಮೀಯರ್ ಪೆರ್ಚಲಧಿಕವಿಭವರ್ಕಳುಮಂ (ಕವಿರಾ. ೩-೧೫೦); ಆನುಂ ನಿಮಗೆ ಬೇಡಿದ ವರವನೀವೆನೆಂದು (ವಡ್ಡಾರಾ. ೧೦೭-೨೮); ವಿರಾಟನಂದು ಕೆಯ್ನೀರೆಱೆದೀಯೆ ಗೆಯ್ದುರಭಿಮನ್ಯುಗಮುತ್ತರೆಗಂ ವಿವಾಹಮಂ (ಪಂಪಭಾ. ೯-೯); ನಿನಗೀವುದನೇಂ ನುಡಿದನೆ ಏ ಆದು ಕಯ್ಯದು (ಎಕ. II, ೫೯-೯೭ ; 974); ಎಲ್ಲಿ ಸುಳಿದಡೆ ಅಲ್ಲಿ ಉಪಾಧಿ ಬಿಡದಯ್ಯ ಈ ಉಪಾಧಿಗೆ ಅಪಾಯುವನಿತ್ತು ನಿರುಪಾಧಿಯಲ್ಲಿ ನಿಲಿಸಯ್ಯ (ಆದವ. ೨೭); ವಿಪ್ರರ ಮಂದಿಗಿತ್ತರು ಗೋ ಹಿರಣ್ಯ ಸಮಸ್ತ ವಸ್ತುಗಳ (ಕುವ್ಯಾದ್ರೋ. ೨-೯). **೨.** ಅವಕಾಶವನ್ನು ಕೊಡು; ಎಡೆಗೊಡು: ಪರಿಯಾಲೀಯದೆ (ಮೈಎರಿ. ೧೯೩೨, ೧೯೬-೭ ; 9ನೆಯ ಶತ); ಮಣಿಮಾಳಿಯಲ್ಲದುೞಿದರಾರುಮಂ ಸಾರಲೀಯದೆ ಭಂಡಾರಮಂ ಕಾದುಕೊಂಡಿರ್ಪುದುಂ (ಆದಿಪು. ೨-೧೫ ಪ); ಅಭಿಮನ್ಯುವಿನ ವಧೆ ಬಾಳಲೀವುದೆ ನಿನ್ನನು (ಕುವ್ಯಾದ್ರೋ. ೧೪-೪೧); ನೀರ ಹರಿಯಲ್ ಈಯದೆ ಕಟ್ಟಿದ ಕಟ್ಟೆ ಆಧಾರ (ನಾಚಿರಾ. ೬). **ಈಯು**$_1$: **೧.** ನಲಿವಿನಿಂದವಗನ್ನವನೀಯುವೆನೆಂದು ಕೆಲದೊಳು ಕುಳ್ಳಿರಿಸಿದಳು (ಹದಿಬ. ೨-೩೭).

**ಈಯುಗಾಣು** = ಕೊಡಲು ಏನನ್ನಾದರೂ ಕಾಣು: ಮಧ್ಯಾಹ್ನ ಕಾಲಕ್ಕೆ ಅತಿಥಿಗಳಿಗೆ ಅನ್ನಮೆದ್ದೆನೆಂದರೆ ಈಯುಗಾಣೆ (ಕಭವಿ. II, ೩೭೯). **ಈಯಾಂ** = ಕೊಡಬೇಡ: ರಾಚಮಲ್ಲಜ್ಗಲ್ಲದೆ ರಾಜ್ಯಮಂಗೆಯಲೀಯಾಮೆನ್ದು ಭುವನಾಯ್ತನಮಾಗ್ದುಣಿಯೊಳ್ ಕಾದಿದನ್ದು (ಎಕ. IV, ಹೆಗ್ಗಡ. ೧೧೬-೮ ; 930).

[ದೇ. ‖ ತಮಿ. ಈ; ತೆಲು. ಈ, ಇಚ್ಚು; ಕೊಂಡ. ನಾಯ್ಕಿ. ಸೀ; ಪರ್ಜಿ. ಚೀ; ಗೊಂಡಿ. ಸೀಯಾನಾ; ಕುಇ. ಸೀವ]

**ಈ**$_3$ 'ಈನ್' ನೋ.

**ಈ**$_4$ (ಅ). ಇದೋ, ಇಗೋ ಎಂಬ ಅರ್ಥಗಳಲ್ಲಿ ಬರುವ ನಿರ್ದೇಶಕ ಅವ್ಯಯ: ಬಳ್ಳಿಗವುಂಗಂ ತಳ್ತಲೆವಳ್ಳಿಯ ಕಟ್ಟಲೆಯುನಲೆವ ಸೊಡರ್ಗುಡಿಗಳನೀಯುಳ್ಳಿಱಿದಲೆವುವು (ಆದಿಪು. ೧೧-೬೭); ಪರಿಯಿಟ್ಟೀಬಪ್ಪನೀಬಪ್ಪನೆ ಕಡುಮುಳಿಸಿಂ ಗಂಗಪೆರ್ಮಾಡಿರಾಯಂ ನಿರುತಂ ತಾನೆಂದು ಚೋಳಂ ಮದಮನುಡುಗಿದಂ (ಸೌಇಇ. IX-i, ೧೧೮-೧೮ ; 1057); ಚಲದಿಂದೀ ಬಂದಪಂ ಕೆಮ್ಮನಂಡಲೆಯಲ್ ಶ್ರೀಗುಣಚಂದ್ರದೇವಂ (ಎಕ. VII, ಶಿವಮೊ. ೫೭-೨೪ ; 1115); ಮೆಚ್ಚಿಸಿಕೊಡುವೆನೀಬಹೆನೆಂದು ಮುರಹರನೊಡನೆ ಮುದದಲಿ ರಥಕೆ ಬಂದನು (ಕುವ್ಯಾದ್ರೋ. ೨-೧೭).

**ಈ**$_5$ 'ಇದು' ಪರಾ.

**ಈಂಗಡಲ್** 'ಇಂಗಡಲ್' ನೋ.

**ಈಂಗೊರಲ್** 'ಇಂಗೊರಲ್' ನೋ.

**ಈಂಚರ** 'ಇಂಚರ$_1$' ನೋ.

**ಈಂಚಿಲ್**, ಇಂಚಿಲ್, ಈಚ, ಈಚಲ್$_1$, ಈಚಲ, ಈಚಲು$_1$, ಈಚಿಲ್, ಈಚೆಲ (ನಾ). ತಾಳೆಯ ಜಾತಿಗೆ ಸೇರಿದ ಮರ; ಹೆಂಡದ ಮರ: ತದೀಯ ತಟಂಗಳಲ್ಲಿಯೀಂಚಿಲ [ಪಾಠಾಂ. ಯಿಂಚಿಲ, ಯೀಚಲ] ಕಡೆಗೊಂಬುಗಳ್ ತುಱುಗಿ ಬಿರ್ದವೊಲಿರ್ದುವು . . . ಮೊಸಳೆಗಳ್ (ಕುಸುಮಾ. ೭-೧೮). **ಇಂಚಿಲ್**: ಇಂಚಿಲ [ಪಾಠಾಂ. ಈಚಿಲ] ಕರಿಬೇವಿನಂಬಟೆಯ ತಾಱೆಯ ತಂಡಸಿನಾಸಿನ (ಲೀಲಾವ. ೬-೨೬). **ಈಚ**: ಕಲ್ಲುಹಳ್ಳಿಯ ಒಳಗೆರೆಯ ಈಚದ ತಾಳೊತ್ತಿನ ನಟ್ಟ ಕಲು (ಎಕ. XIV, ಮಂಡ್ಯ. ೧೧೫-೯೬ ; 1516). **ಈಚಲ್**$_1$: "ಮಧುಪೂರಮೆನಲೀಚಲ್" (ಮಂಗರಾ. ೩೫-೧೫). **ಈಚಲ**: ಯೀ [ಈ] ಚಲ ಪೈರು (ಮೈಆರಿ. ೧೯೩೯, ೪೨-೯೪ ; 1825); ಡಾಕಿನಿಯು ಆಗ ಒಂದು ಈಚಲಗರಿಯಿಂದ ಕಟ್ಟೆಯನ್ನು ಉಡುಗುತ್ತಿದ್ದಳು (ಕುರಿಹಿಂ. ೬೮). **ಈಚಲು**$_1$: ಸುರೆ ಬಗಿನಿಯೀಚಲೋಲೆಯ ಮರಗಳ್ (ಚೆಬಪು. ೪೭-೪೫). **ಈಚಿಲ್**: ಗೋಣಿಯಾಲದೀಚಿಲ [ಪಾಠಾಂ. ಇಂಚಿಲ] ಕರಿಬೇವಿನಂಬಟೆಯ (ಸೂಕ್ತಿಸು. ೩-೨೪ ; ಲೀಲಾವ. ೬-೨೬). **ಈಚೆಲ**: ಖರ್ಜೂರ ತರುವೆಂದು ಅಱಿಯದೆ ಸಾಕಲು ಊರ್ಜಿತವಾಗಿ ಈಚೆಲವ ಪ್ರಜ್ವಲಿಪ ಹಣ್ಣು ಕಂಡು ಮರುಗುವಂತೆ (ಬಜ್ಜರಾ. ೧೧-೮).

**ಈಚಲನೀರು** = ಹೆಂಡ; ಮದ್ಯ; ಕಳ್ಳು: ನೀಚನ ಸಂಗವೂ ಈಚಲನೀರೂ ನಾಚಿಗೆಕೆಡಿಸುವುದು (ಗಾದೆ). **ಈಚಲಮರ** = ಈಂಚಿಲ್: ಅಂಣಗಳ ಕುಂಟಿವೊಳಗಣ ಯೀಚಲಮರನೂ ಬಿಟ್ಟುಕೊಟ್ಟೆಉ (ಸೌಇಇ. IX-ii, ೬೭೦-೨೯ ; 1159); ಈಚಲಮರದ ಕೆಳಗೆ ಮಜ್ಜಿಗೆ ಕುಡಿದ ಹಾಗೆ (ಗಾದೆ). **ಈಚಲಮರದಮ್ಮ** = ಮದ್ಯದ ಅಧಿದೇವತೆ: ಈಚಲಮರದಮ್ಮನ ಪರಸಾದ ಗಡದ್ದ ತಗೊಂಡ ಬಂದ್ಹಾಂಗ ಕಾಣತೈತಿ (ಹೊಸಂಸಾ. ೫೯).

[ದೇ. ‖ ತಮಿ. ಈಣ್ಟು, ಈಞ್ಜು, ಈಚ್ಚ; ಮಲ. ಈನ್ತಲ್, ಈನ್ತು, ಈತ್ತ; ತುಳು. ಈಂಚಿಲ್, ಈಚಿಲ್; ತೆಲು. ಈತ; ಪರ್ಜಿ. ಚೀಂದ್; ಗೊಂಡಿ. ಈಂಡಿ; ಕುಇ. ಸೀತ]

**ಈಂಚು**, ಈಚು$_1$ (ನಾ). ಕಂದುವಿಕೆ; ಒಣಗುವಿಕೆ; ಮಾಸುವಿಕೆ; ನೀರಸವಾಗುವಿಕೆ. 'ಈಂಚುವೋಗು' ಪರಾ. **ಈಚು**$_1$. 'ಈಚುವೋಗು' ಪರಾ.

[ದೇ. ‖ ತಮಿ. ಇಞ್ಜು = ಆರಿಹೋಗು, ಇಂಗಿಹೋಗು, ಆವಿಯಾಗಿ ಹೋಗು; ತೆಲು. ಈಚು]

**ಈಂಚುವೋಗು**, ಇಂಚೆವೋಗು, ಈಚುವೋಗು (ಕ್ರಿ). **೧.** ಕಂದು; ಕಳೆಗುಂದು; ಬಾಡು; ಒಣಗು; ರಸಹೀನವಾಗು: ಪೊಳಪೀಂಚುವೋಯ್ತು [ಪಾಠಾಂ. ಪಿಂಚೆವೋಯ್ತು, ಪಿಂಬುವೋಯ್ತು] ತಾರಗೆ ಬೆಳಗುೞಿದುವು (ಲೀಲಾವ. ೩-೫). **ಇಂಚೆವೋಗು**: **೧.** ಇಂಚೆವೋಪಾ ಕೆಯಿಗಳೊಳಗೆ ಈತಂ ಮಲಗಲು (ಅಜಿರ. ೧೭೪-೫). **ಈಚುವೋಗು**: **೨.** ನೀಗು; ಹೋಗು; ತೊಲಗು: ತೃಣಧಾನ್ಯಗಳ ಕಾವು ನಾಲ . . . ಎನಿಸುಗು, ಅದು ಈಚುವೋದ ಕಾವಾದರೆ ಪಲಾಲವೆನಿಸುಗು, ಈಚುವೋದ ಧಾನ್ಯದ ಹೆಸರೆಂದೂ ಎಂಬರು (ನಾಚಿರಾ. ೬); ಅದುಕಾರಣ ನಡೆದೆನು ಆಕೆಯ ಕರುಣದ ಬೆಳೆಯೀಚುವೋಗದವೊಲು (ಸೊಬಸೋ. ೧೮-೬೩); ಮನದ ಸಂಚಲವೀಚುವೋದುದು ಕಲಿ ಧನಂಜಯನ (ಕುವ್ಯಾಅ. ೪-೪೨). [ಈಂಚು + ಪೋಗು$_1$]

**ಈಂಟಿ** 'ಇಟ್ಟಿ$_2$' ನೋ.

**ಈಂಟಿಸು** (ಕ್ರಿ). ಕುಡಿಯುವಂತೆ ಮಾಡು; ಕುಡಿಸು : ಕಿವಿಯಿಂದೀಂಟಿಸುವರ್ ಸಮಸ್ತ ರಸಮಂ (ಲೀಲಾವ. ೧–೧೨); ಉಚಿತದಗ್ಗವಣಿಗಳನೀಂಟಿಸಲಚಲ ಭಕ್ತಿಯನಜೀವನಾತನು (ಪ್ರಭುಲೀ. ೧೬–೨೦); ಎತ್ತುಗಳ ಪೇರ್ಗಳಂ ನೂಂಕಿಬಿಡು ಸಬರಮಂ ಜೀವಧನಕೆ ನೀರ್ಗಳನೀಂಟಿಸು (ಚೆಬಪು. ೪೮–೩೦). [ಈಂಟು + –ಇಸು₃]

**ಈಂಟು** (ಕ್ರಿ). ಕುಡಿ; ಹೀರು; ಪಾನಮಾಡು : "ಈಂಟು— ಪಾನೇ" (ಶಮುಧಾ); ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮಂ ಸವಿದೀಂಟುವಲ್ಲಿ (ಕಾವ್ಯಸಾ. ೯೬೩ ಶೂದ್ರಕ); ಈಗಳೀಂಟುವೆನೊ ದಾಂಟುವೆನೋ ಲವಣಾಂಬುರಾಶಿಯಂ (ಆದಿಪು. ೧೨–೬೧); ನೀರಡಸಿ ವಿಷವನೀಂಟಬಹುದೆ (ಬಸವ. ೧೨೦); ಮೊಲೆವಾಲನೀಂಟುತಂ (ಮಾನರ. ೧೬೩–೯); ಚರಣವದನವ ತೊಳೆದು ನಿರ್ಮಳತರ ವರಾಂಬುವನೀಂಟಿದರು (ಕುವ್ಯಾಗ. ४–४३). [?]

**ಈಂಟುಜಳಧಿ** (ನಾ). (ಕುಡಿನೀರಿನ ಎಂದರೆ) ಸಿಹಿನೀರಿನ ಸಮುದ್ರ (?) : ಈಂಟುಜಳಧಿಯೆನಿಪಗಟ ನೀಳ್ಪಿನಿಂ ನೆಗೆದು ಸೊಗಯಿಸುವ ಕೋಂಟೆಯೊಳ್ಪಿನಿಂ (ಪಂಪಭಾ. ೩–೨೨). [ಈಂಟು + ಜಳಧಿ (= ಜಲಧಿ)]

**ಈಂತೆ, ಈತ್ತ** (ನಾ). ಈನುವುದು; ಮರಿಹಾಕುವುದು; ಸೂಲು : ಈಂತಂ, ಈಂತಂಗಳ್; ಈಂತಂ, ಈಂಪುದು (ಶಬ್ದಾನು. ೫೭೯ ವ್ಯಾಖ್ಯಾ; ೫೫೩ ಪ್ರಯೋ). **ಈತ್ತ** : ಇದು ಎಷ್ಟನೆಯ ಈತ? (ರೂಢಿ).

[ಈನ್ + –ತ್ತ. / ತಮಿ. ಮಲ. ಈಱ್ಱು; ತೆಲು. ಈತ]

**ಈಂದ** 'ಈನ್' ಪರಾ.

**ಈಂದನಿ** (ನಾ). ಸವಿಯಾದ ಧ್ವನಿ; ಮಧುರವಾದ ಸ್ವರ : ಈಂದನಿಯಿಂದೆ ದೇವಗಣಿಕಾತತಿಯಾತನ ಗೀತಮಂ ನಿಜಾನಂದದೆ ಪಾಡೆ (ಚಂದ್ರಪು. ೧೧–೮೭). [< ಇನಿದು + ದನಿ]

**ಈಂದು** 'ಈನ್' ಪರಾ.

**ಈಂದುಟಿ** 'ಇಂದುಟಿ' ನೋ.

**ಈಂದೋಳ್** (ನಾ). ಅಂದವಾದ ತೋಳು : ಬಹುಳದಿಂ ವ್ಯಂಜನಪರಮಾದಲ್ಲಿಯುಂ ದೀರ್ಘಮಾಯ್ತು . . . ಈಂಚರಂ, ಈಂಬುಳಿ, ಈಂಗಡಲ್, ಈಂದೋಳ್, ಈಂದುಟಿ (ಶಮುದ. ೧೮೦ ಪ್ರಯೋ).

[< ಇನಿದು + ತೋಳ್]

**ಈಂಬುಳಿ** 'ಇಂಬುಳಿ' ನೋ.

**ಈಕಾರ** (ನಾ). [ವ್ಯಾಕ] = ಈ₁ : ಅ ಆಕಾರಗಳ ಮುಂದೆ ಇ ಈ ಕಾರಗಳು ಇದ್ದರೆ ಏ ಕಾರವೂ ಉ ಊ ಕಾರಗಳಿದ್ದರೆ ಓ ಕಾರವೂ . . . ಆ ಎರಡು ಸ್ವರಗಳಿಗೂ ಆದೇಶವಾಗಿ ಬರುವುವು (ಶಬ್ದಾದ. ೬). [ಸಂ.]

**ಈಕಾರಾಂತ** (ಗು). [ವ್ಯಾಕ] 'ಈ' ಎಂಬ ವರ್ಣದಿಂದ ಕೊನೆಗೊಳ್ಳುವ (ಶಬ್ದ) : ಈಕಾರಾಂತಕ್ಕೆ—ಲಕ್ಷ್ಮೀ, ಗೌರೀ, ಸರಸ್ವತೀ (ಶಮುದ. ೮೩ ಪ್ರಯೋ). [ಈಕಾರ + ಅಂತ₂]

**ಈಕೆ** 'ಇದು' ಪರಾ.

**ಈಕೆಗಾಳ್** (ನಾ). ಒಂದು ಊರಿನ ಹೆಸರು(?) : ಮರಗಲ್ಲಗಾಮುಣ್ಡನ ಮಗ ದಮೋದೆಜ಼ ಮಣ್ಣುಲೋರಮೀಕೆಗಾಳೊಳ್ಕಾದಿ ಪುಳಗಣ್ನೊಳು ಸತ್ತು ಸಗ್ಗಿಯಾದಂ (ಎಕ. X (S), ಮುಳಬಾ. ೧೮೬–೧೧೧; 830). [?]

**ಈಕ್ಷಕ** (ನಾ). ನೋಡುವವನು; ಗಮನಿಸುವವನು. 'ಪರೀಕ್ಷಕ' ಪರಾ. [ಸಂ.]

**ಈಕ್ಷಣ** (ನಾ). ೧. ಕಣ್ಣು : ಆ ಪೀನಕುಚಂಗಳಾಕ್ಷಣದೊಳೀಕ್ಷಣಮಂ ಸೆಜ಼ಿಗೆಯ್ಯೆ ಕೃಷ್ಣನಾ ಮಾನಿನಿಗಿತ್ತು ತನ್ನ ಮನಮಂ ಮರವಾನಸನಂತೆ ತೋಱಿದಂ (ಪಂರಾಮಾ. ೭–೧೦೯); ಗರಗರಿಕೆ ಕೊರಲೊಳೀಕ್ಷಣದೊಳ್ ವಾರ್ಬಿಂದು ಮಿಡುಕೆರ್ದೆಯೊಳೊದವೆ (ಯಶೋಚ. ೨–೪೧). ೨. ನೋಡುವಿಕೆ; ನೋಟ. 'ಈಕ್ಷಣಭದ್ರ' ಪರಾ. [ಸಂ.]

**ಈಕ್ಷಣಭದ್ರ** (ಗು). ನೋಡಲು ಮಂಗಳಕರವಾದ : ಧಾತಕೀಷಂಡ ವಿನಾಕ್ಷಣಭದ್ರಂ ಸಸಮುದ್ರಮಂ ಬಳಸಿ ಜಂಬೂದ್ವೀಪ ವಿನ್ಯಾಸಮಂ (ಚಂದ್ರಪು. ೧–೬೨). [ಈಕ್ಷಣ + ಭದ್ರ]

**ಈಕ್ಷಣಾಕರ್ಷಣ** (ನಾ). ನೋಟವನ್ನು ಸೆಳೆಯುವಿಕೆ; ಕಣ್ಣನ್ನು ಆಕರ್ಷಿಸುವುದು : ಸ್ಫುರದ್ರತ್ನಕಳಾಪೋನ್ಮುಖ ಮಯೂಖಮಂಡಳಿ ಬೇಱೊಂದಕೃತಕ ಚಿತ್ರಚ್ಛತ್ರಪ್ರಕಾರದಿಂ ಮೆಱೆದುದೀಕ್ಷಣಾಕರ್ಷಣಮಂ (ಮಲ್ಲಿಪು. ೮–೧೨೨). [ಈಕ್ಷಣ + ಆಕರ್ಷಣ]

**ಈಕ್ಷಣಿಕ** (ನಾ). ಭವಿಷ್ಯವನ್ನು ಹೇಳುವವನು; ಕಣಿಹೇಳುವವನು. [ಸಂ.]

**ಈಕ್ಷಣಿಕೆ** (ನಾ). ಭವಿಷ್ಯವನ್ನು ಹೇಳುವವಳು; ಕಣಿಹೇಳುವವಳು : "ಕಣಿ ಶಕುನ ಮುಂತಾದುವನ್ನು ಹೇಳುವವಳು" (ಅಮರ. ಟೀಕ). [ಸಂ. ಈಕ್ಷಣಿಕಾ]

**ಈಕ್ಷಿತ** (ಗು). ನೋಡಲ್ಪಟ್ಟ; ಕಂಡ. [ಸಂ.]

**ಈಕ್ಷಿಸು** (ಕ್ರಿ). ೧. ನೋಡು; ಕಾಣು : ಒಂದೊಂದಱ ಸೌಂದರ್ಯಮನೊಂದೊಂದೀಕ್ಷಿಸಲೊಡರ್ಚೆ ನಾಸಿಕಮುಡ್ಡಂಬಂದಂದಮನೀಕ್ಷಿಸಿ (ಕವಿರಾ. ೩–೨೩೪); ಚಿತ್ತದೊಳು ಪೂಜೆ ಪುಟ್ಟಿರ್ದಂತೆ ಈಕ್ಷಿಸುತೆ (ಬಸರ. ೩–೬೦); ಭೀಮನ ಕೋಲ ಕೋಳಾಹಳವನೀಕ್ಷಿಸುತಲ್ಲಿಗೈತಂದ (ಕುವ್ಯಾದ್ರೋ. ೧೩–೧). ೨. ನೋಡುತ್ತಿರು; ನಿರೀಕ್ಷಿಸು : ಕನೀಯನನ್ನನನ ರಾಜ್ಯಮನೀಕ್ಷಿಸುಗಾಪ ಕಾಲಮುಂ (ಎಕ. X, ಮುಳಬಾ. ೩೮–೩೩; 890). ೩. ಭಾವಿಸಿ ನೋಡು; ಯೋಚಿಸಿ ನೋಡು : ಬೆಟ್ಟಗಳ ಚೂರ್ಣಂಮಾಡಲಕ್ಕೀಕ್ಷಿಸಲ್ ಸತಿಯಾ ಚಿತ್ತವಭೇದ್ಯವೈ (ಸೋಮೇಶ. ೮೦); ಈಕ್ಷಿಸಲ್ ದೊರೆಗಳ್ಗೆತ್ತಣ ನೀತಿಯೈ (ಸೋಮೇಶ. ೬೦); ಒಳಗೀಕ್ಷಿಸೆ ಶ್ರೀಭೃತನಾತ್ಮ ತೋಱುವನು (ಭರಚ. ೨–೬೩). [ಈಕ್ಷಣ + –ಇಸು₃]

**ಈಕ್ಷ್ಯ** (ಗು). ನೋಡಬಹುದಾದ; ಕಾಣಬಹುದಾದ. [ಸಂ.]

**ಈಕ್ಷ್ಯಕೃತಿ** (ನಾ). "ಕಾಣಬಹುದಾದ ಕೆಲಸ" (ಮಂಕುಕ. ಕೋಶ) : ವಾಯುವಂ ಕಾಣ್ಬನಾರ್? ತತ್ಕ್ರಿಯೆಯ ಕಾಣನಾರ್? ಮಾಯೆಯಂತ ಪರೀಕ್ಷ್ಯಸತ್ತ್ವದೀಕ್ಷ್ಯಕೃತಿ (ಮಂಕುಕ. ೧೪೪). [ಈಕ್ಷ್ಯ + ಕೃತಿ]

**ಈಗ** 'ಈಗಡು' ನೋ.

**ಈಗಡ** 'ಈಗಡು' ನೋ.

**ಈಗಡು,** ಈಗ, ಈಗಡ, ಈಗಲ್, ಈಗಲು, ಈಗಳ್, ಈಗಳು, ಈಗ್ಗೆ, ಈಗ್ಯೆ (ಅ). ಈ ಸಮಯದಲ್ಲಿ; ಈ ಹೊತ್ತಿನಲ್ಲಿ; ಈ ಗಳಿಗೆಯಲ್ಲಿ; ಈ ಕ್ಷಣದಲ್ಲಿ : "ತಳೆಗುಂ ಕಾಲಾರ್ಥಮನಾಗಳೀಗಳೆಂಬಾಗಡೀಗಡೆಂಬಿವು" (ಶಮುದ. ೩೨೧); ಕನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀಗಡಿನ ನೆಗೞ್ತೆಯ ಕಬ್ಬದೊಳೊಡಂಬಡಂ ಮಾಡಿದರ್ ಪುರಾತನ ಕವಿಗಳ್ (ಕವಿರಾ. ೧–೩೨); ಈಗಡೆ ಬಾರಿಸು ನೀಂ ನಿನ್ನ ಮಗನ ನಂಧನರೇಂದ್ರಾ (ಪಂಪಭಾ. ೭–೧); ಮತ್ತವರಂ ಪೆಸರ್ಗೊಣ್ಡದೆನ್ತು ಪೋಲಿಸುವುದೊ ಪೇೞಿಮಿಗಾಗಡಿನ ರಾಜತನೂಜರೊಳಿನ್ದ್ರರಾಜನಂ (ಎಕ. II, ೧೩೩–೫೧; 982). **ಈಗ** : ಗತಿಗೆಟ್ಟು ಕೇಶಿ ಸಮರಕ್ಷಿತಿಯೊಳ್ ಕೆಡೆದಿರ್ದುದೀಗ ಮುನ್ನಿಲ್ಲದುದೊಂದತಿಶಯಸುಗತಿಯನೊಳಕೊಂಡು ತರಣಿಮಂಡಲಮನೆಯ್ದಿದಂ (ಜಗವಿ. ೫–೫೦); ಈ ನಾಲಗೆಯ ಸಾಲವನೀಗ ಕೈಯಲಿ ತಿದ್ದಿ ಕೊಡುವರೆ ಹೋಗರೇ (ಕುವ್ಯಾಕ. ೨–೧೯); ಆಗ ಬಾ ಈಗ ಬಾ ಹೋಗಿ ಬಾ ಎನ್ನದಲೆ ಆಗಲೇ ಕರೆದು ಕೊಡುವವನ ಧರ್ಮ ಹೊನ್ನಾಗದೆ ಬಿಡದು (ಸರ್ವಜ್ಞ. ೬೨೨). **ಈಗಡ** : ಆಗಡ ಈಗಡ ಪೊೞ್ತಿನ . . . ಇತಿ ಅಣಮಾದಿರಾಕೃತಿಗಣಃ (ಶಬ್ದಾನು. ೨೦ ವ್ಯಾಖ್ಯಾ). **ಈಗಲ್** : "ಈಗಲ್, ಈಗಲು, ಈಗಳ್, ಈಗಳು = ಈಗ" (ಗಂಗಾಮು. ೩೬).

**ಈಗಲು** : ಈಗಲೀ ಕದನದಲಿ ವಜ್ರಕೆ ಬೇಗಡೆಯ ಮಾಡಿದನದಾವನು (ಕುವ್ಯಾದ್ರೋ. ೧–೧೦). **ಈಗಳ್** : ನೆರೆದು ಬಂದಪರವರ್ ಸಯಲಾ ಬಲಮೆಲ್ಲಮೆಟ್ಟರದೆ ಕೊಂದಪನಿವಂದಿರ ನೀಗಳೆ ನಿಕ್ಕುವಂ (ಕವಿರಾ. ೧–೧೩೦) ; ಈಗಳೆನಿಮ್ಮ ಪೋಗು ಗೆಂಟೆನಿತೆಡೆಯಂ ತಗುಳ್ದು ಬರಲಾರ್ಪಿರೆ ನಿಮ್ಮ ವಿಳಾಸಯಾನದಿಂ (ಆದಿಪು. ೧೧–೧೩೮) ; ಈ ನೆಲದೊಳ್ ಮಲ್ಲಪನ ಸಮಾನರ್ ನರರೀಗಳಿಲ್ಲ (ಶಾಂತಿಪು. ೧–೪೯). **ಈಗಳು** : ಪರಿಕಿಪೊಡೀಗಳೀಗಳಿನ ಕಾಳ್ಪತಿಯರ್ಕ್ಕಳನೆನ್ತು ಪೋೞಲಿಪೆಂ ಪರಮ ಪವಿತ್ರೆ × × × ಕಮಳನೇತ್ರೆಯ (ಎಕ. VII, ಶಿವಮೊ. ೫–೩೬ ; 1218); ಈಪರಿ ಜೀವಭಾವದೊಳೆಸಗುವರು ನೀವ್ ಪಶುಗಳೀಗಳು ನಿಮ್ಮ ರಕ್ಷಣವ ಪಸರಿಸುವ ಪರಮಾತ್ಮ ತಾನು (ಕುವ್ಯಾಕ. ೬–೩೦). **ಈಗ್ಗೆ** : ಇಷ್ಟುದಿನ ವಿಲ್ಲದೆ ಈಗ್ಗೇ ಧಾರಣೆ ಬಂದ ಹಾಗಿದೆ (ದಾಸಹು. ೬೫). **ಈಗ್ಯೆ** : ಈಗ್ಯೆ ಸುಮಾರು ೫೦ ವರ್ಷಗಳ ಹಿಂದೆ ವಾಹನಸೌಕರ್ಯ ಅಷ್ಟಾಗಿ ಇರಲಿಲ್ಲ (ರೂಢಿ).

**ಈಗಣ** = ಇಂದಿನ ; ಈಗಿನ : ಅವುಗಳನ್ನೆಲ್ಲ ವಿಚಾರಿಸಿ ಈಗಣ ಪರಿಸ್ಥಿತಿಯನ್ನು ತಿದ್ದಿ ಉತ್ತಮಪಡಿಸುವ ಮಾರ್ಗವನ್ನು ಆಲೋಚಿಸುವುದು ನಮಗೆಲ್ಲ ಕರ್ತವ್ಯವಾಗಿದೆ (ಸಾಹಿಶ. ೫೮) ; ನಮ್ಮ ನಾಡಿನ ಈಗಣ ಜೀವನದ ಜೀವಾಳವೇ ಕ್ರಾಂತಿಮಯವಾಗಿದೆ (ಸಾಹಿವಿ ೨೫). **ಈಗಳೆ, ಈಗಲೆ** = ಕೂಡಲೆ : ಉತ್ತಮ ಪಾತ್ರದಾನದಿಂ ಕನಕಲಾಭಮುಂ ಪೂಜಾಲಾಭಮುಂ ಈಗಳೆ ನಿನಗಾದಪುವು (ಚಾವುಂಪು. ೩೫–೨೧) ; ನಾನು ಈಗಲೆ ಬಂದು ಬಿಡುತ್ತೇನೆ (ರೂಢಿ). **ಈಗಳೀಗಳ್** (ದ್ವಿರುಕ್ತಿ) : ಎಳವಿಸಿಲೀಗಳೀಗಳೆ ಮುದಿರ್ದುದು ಚೂತ ಕುಜಾತಮೀಗಳೀಗಳೆ ನನೆದೋಱಿತು (ಆದಿಪು. ೧೩–೫). [?]

**ಈಗರ್ಜಿ** 'ಇಗರ್ಜಿ' ನೋ.

**ಈಗಲ್** 'ಈಗಡು' ನೋ.

**ಈಗಲು** 'ಈಗಡು' ನೋ.

**ಈಗಳ್** 'ಈಗಡು' ನೋ.

**ಈಗಳು** 'ಈಗಡು' ನೋ.

**ಈಗ್ಗೆ** 'ಈಗಡು' ನೋ.

**ಈಗ್ಯೆ** 'ಈಗಡು' ನೋ.

**ಈಚ** 'ಈಂಚಿಲ್' ನೋ.

**ಈಚಲ್$_1$** 'ಈಂಚಿಲ್' ನೋ.

**ಈಚಲ್$_2$**, ಈಚಲು$_2$ (ನಾ). ಮಳೆಗಾಲದಲ್ಲಿ ದೀಪಕ್ಕೆ ಮುತ್ತುವ ರೆಕ್ಕೆಯಿರುವ ಒಂದು ಜಾತಿಯ ಹುಳು (ಶಿ). **ಈಚಲು$_2$** : 'ಈಚಲಹುಳು' ಪರಾ.

[ದೇ. ‖ **ತಮಿ.** ಈಚಲ್, ಈಯಲ್ ; **ಮಲ.** ಈಯಲ್ ; **ತೆಲು.** ಇಸುಳ್ಳು, ಉಸುಳ್ಳು]

**ಈಚಲ** 'ಈಂಚಿಲ್' ನೋ.

**ಈಚಲದಾಳಗ್ರಾಮ** (ನಾ). ಒಂದು ಊರಿನ ಹೆಸರು : ಆತನ ಭೂಮಿ ಯಾಚಲದಾಳಗ್ರಾಮದಲಿ (ಮೈಆರಿ. ೧೯೩೧, ೧೦–೧೦ ; 1585).

[ಈಚಲದಾಳ$_0$ + ಗ್ರಾಮ]

**ಈಚಲು$_1$** 'ಈಂಚಿಲ್' ನೋ.

**ಈಚಲು$_2$** 'ಈಚಲ್$_2$' ನೋ.

**ಈಚಲುಹುಳ** 'ಈಚಲ್ಪುೞು' ನೋ.

**ಈಚಲುಹುಳು** 'ಈಚಲ್ಪುೞು' ನೋ.

**ಈಚಲ್ಪುೞು**, ಈಚಲುಹುಳ, ಈಚಲುಹುಳು (ನಾ). (ದೀಪಕ್ಕೆ ಮುತ್ತುವುದರಿಂದ ರೆಕ್ಕೆ ಉದುರಿಹೋಗುವ) ದೀಪದ ಹುಳು ; ರೆಕ್ಕೆಹುಳು : ಪುರಿದಿರಿಸಿದೀಚಲ್ಪುೞು ಕೆಂಜಿಗೆಗಳ ಲಾಜಾಕ್ಷತೆಗಳಿಂ (ಚಕವಂ. ೮–೮). **ಈಚಲುಹುಳ** : "ಪತಂಗಿಕಾ, ಪುತ್ತಿಕಾ – ಈ ೨ ಹೆಣ್ಣುಪತಂಗದ ಹುಳುವಿಗೂ ಈಚಲುಹುಳಕ್ಕೂ ದೊಡ್ಡ ಜೇನು ನೊಣಕ್ಕೂ ಹೆಸರುಗಳು" (ಸಿದ್ಧಾಂತಿ. ೧೪೧). **ಈಚಲುಹುಳು** : ದೀಪದಹುಳು, ಪತಂಗ ; ಈಚಲುಹುಳು (Moth. ಇಂಕನಿ) ; ಮಳೆ ಬಂದ ಮೇಲೆ ಈಚಲು ಹುಳುಗಳು ಏಳುತ್ತವೆ (ರೂಢಿ).

[ಈಚಲ್$_2$ + ಪುೞು. / **ಮಲ.** ಈಯಾಮ್ಪಾಟ್ಟ]

**ಈಚಿಲ್** 'ಈಂಚಿಲ್' ನೋ.

**ಈಚು$_1$** 'ಈಂಚು' ನೋ.

**ಈಚು$_2$** (ಕ್ರಿ). ೧. "ದೀಕು ; ಮುಂಗೈಯಲೆ ಸವರು" (ಜಾನಕೋ. ೧೮). ೨. (ಉಕ). ಚಿಮ್ಮು : ಚಿಣ್ಣಿಯನ್ನು ಕೋಲಿನಿಂದ ಈಚು (ರೂಢಿ).

[?. / **ತೆಲು.** ಈಚು = ಒಣಗು, ಬತ್ತು]

**ಈಚು$_3$** 'ಈಸು$_6$' ನೋ.

**ಈಚುಕೈ** (ನಾ). ಉಳುವಾಗ ಕೈಯಲ್ಲಿ ಹಿಡಿದು ಒತ್ತುವ ನೇಗಿಲಿನ ಭಾಗ ; ನೇಗಿಲಿನ ಹಿಡಿ ; ಮೇಣಿ ; ಹಿಡಿಕಾಯಿ (ಕಿಸಂಗ್ಲಾ. ೮).

[ಈಚು$_3$ (< ಈಸು$_6$) + ಕೈ$_2$ (< ಕೆಯ್$_2$)]

**ಈಚುಕೋಲು** (ನಾ). ಈಚಿಗೆ ಹಾಕುವ ಕೋಲು ; ಹಲದಂಡ : "ಹಲದಂಡ – ಈಚುಕೋಲು" (ನಾನಾರ. ೮ ಟೀಕೆ).

[ಈಚು$_3$ (< ಈಸು$_6$) + ಕೋಲು$_1$ (< ಕೋಲ್$_1$)]

**ಈಚುವೋಗು** 'ಈಂಚುವೋಗು' ನೋ.

**ಈಚೆ** (ಅ). ೧. ಈಕಡೆಯ ; ಈ ಮಗ್ಗುಲಿನ ; ಇತ್ತಕಡೆಯ : ಮತ್ತೆ ಈಚೆಯಲ್ಲಿ ಕದನ ಕೊಡಲಾಗಿ (ಮೋಳಿಮಾ. ೪೮) ; ಸುಶರ್ಮಸುಬಾಹು ಶಕುನಿಗಳುರವಣಿಸಿತೀಚೆಯಲಿ ಶಲ್ಯನ ಬೆರಳ ಸನ್ನೆಯಲಿ (ಕುವ್ಯಾಶ. ೨–೧೭) ; ಈಚೆಯೊಳೀ ಕುಶಂ ಪೋಗದಿರಿ . . . ಲವನಂ ಬಿಟ್ಟು ನಡೆಯಿ ನೀವೆನುತೆಚ್ಚನು (ಜೈಮಿಭಾ. ೨೦–೨೪) ; ಆಚೆ ಬೀದಿಯಲ್ಲಿ ಅವಮಾನ ವಾದರೆ ಈಚೆ ಬೀದಿಯಲ್ಲಿ ಹೊಸ ಆಳು (ಗಾದೆ).

**ಈಚಿಗೆ** = ೧. ಈ ಕಡೆಗೆ ; ಹೊರಗೆ ; ಈ ಮಗ್ಗಲಿಗೆ : "ವಾರ್ತಃ, ನಿರಾಮಯಃ, ಕಲ್ಯಃ, ಉಲ್ಲಾಘಃ – ಈ ೪ ರೋಗದ ದೆಸೆಯಿಂದ ಈಚಿಗೆ ಬಂದವನು" (ಸಿದ್ಧಾಂತಿ. ೧೬೧). ೨. ಅನಂತರ ; ಇತ್ತೀಚೆ : ಈ ಕಟ್ಟಡ ನೂರುವರ್ಷಗಳಿಂದ ಈಚಿಗೆ ಕಟ್ಟಿದ್ದು (ರೂಢಿ). **ಈಚೀಚಿಗೆ** (ದ್ವಿರುಕ್ತಿ): ನೂಲುವ ನೇಯುವ ಯಂತ್ರಗಳು ನಮ್ಮಲ್ಲಿ ಬಂದುದು ಈಚೀಚಿಗೆ (ರೂಢಿ). **ಈಚೆಕಡೆ** = ಈ ಕಡೆ ; ಈ ಪಕ್ಕ : ಅವಾರ = ಹೊಳೆ ಹಳ್ಳ ಮುಂತಾದವುಗಳ ಈಚೆಕಡೆಯ ದಂಡೆ (ಗಂಗಾಮ. ೧೮). **ಈಚೆಗೆ** = ಈ ಕಾಲದ ಅನಂತರ ; ಇಲ್ಲಿಂದ ತರುವಾಯ : ಈಚೆಗೆ ಎಪ್ಪತ್ತು ಎಂಬತ್ತು ವರ್ಷದಿಂದ ಇಂಗ್ಲಂಡದೇಶದಲ್ಲಿ ಯಂತ್ರಗಳಿಂದ ನೂಲಿನ ಬಟ್ಟೆಯನ್ನು ಮಾಡ ಹತ್ತಿದ್ದಾರೆ (ಮುಂಬಯಿ. ೪–೨೮). **ಈಚೆದಂಡೆ** = ಈಚೆದಡ ; ಈ ಕಡೆಯ ದಡ ; ಈ ಭಾಗದ ತೀರ (ಶಿ). [?]

**ಈಚೆಲ** 'ಈಂಚಿಲ್' ನೋ.

**ಈಚ್ಚಱಿ** (ಕ್ರಿ). ಧಾರಾಪೂರ್ವಕ ದಾನಮಾಡು (?) : ದಣ್ಣನಾಯಕ ಮಾರಮಯ್ಯನು ಸನ್ಧಿವಿಗ್ರಹಿ ಕಾಳಿದಾಸಭಟ್ಟರು ಅರಸರ್ಗ್ಗೆ ಬಿನ್ನಪಂಗೆಯ್ದುರು ರಾವಿಘಟ್ಟವಂ ಬಿಡುವದೆಂದೊಡರಸರು ಈಚ್ಚಱಿದರ್ (ಸೌಇಇ. IX–i, ೧೨೬–೩೫ ; 1064). ℙ 'ಈಚ್ಚೈಱಿ' ಎಂಬುದರ ಅಪಲಿಖಿತ ವಿರಬಹುದೇ ? [ಈಚ್ಚು$_0$ (< ಈ$_2$) + ಎಱಿ$_1$]

**ಈಜಾಟ** 'ಈಸಾಟ' ನೋ.

**ಈಜಾಡಿಸು** (ಕ್ರಿ). ಈಜುವಂತೆ ಮಾಡು (ಶಿ).

[ಈಜಾಡು (< ಈಸಾಡು) + –ಇಸು$_3$]

**ಈಜಾಡು** 'ಈಸಾಡು' ನೋ.

**ಈಜಿ** (ನಾ). ಒಂದು ಮರ ; ಬಾಚಣಿಗೆಯನ್ನು ಮಾಡುವ ಮರ : ಈಜಿಗಿಡ . . . ಬಾಚಣಿಗೆಮರ (ವೈಔಗಿ. ೬೪–೧೩೦೦). [?]

**ಈಜಿಮುಳ್ಳು** (ನಾ). ಒಂದು ಗಿಡದ ಹೆಸರು : ಕೊಮ್ಮೆ, ಗನಿಜಲೆ, ಈಜಿಮುಳ್ಳು, ಕೊಂಬೆ, ನಲ್ಲಗನ್ನೆ (ವೈಔಗಿ ೧೫–೨೬೧). [ಈಜಿ + ಮುಳ್ಳು (< ಮುಳ್$_2$)]

**ಈಜಿಸು** 'ಈಸಿಸು' ನೋ.

**ಈಜು$_1$** 'ಈಸು$_1$' ನೋ.

**ಈಜು$_2$** 'ಈಸು$_4$' ನೋ.

**ಈಜು$_3$** 'ಈಸು$_6$' ನೋ.

**ಈಜುಗಾಯಿ** 'ಈಸುಗಾಯಿ' ನೋ.

**ಈಜುಬುರುಡೆ** (ನಾ). ಈಜುವಾಗ ಮುಳುಗದಂತೆ ಕಟ್ಟಿಕೊಳ್ಳುವ ಒಣಗಿದ ಸೋರೆಕಾಯಿ (ಕಿ). [ಈಜು$_1$ (< ಈಸು$_1$) + ಬುರುಡೆ)]

**ಈಜುರೆಕ್ಕೆ** (ನಾ). ಈಜಲು ಸಹಾಯವಾದ ರೆಕ್ಕೆ : ಒಂದು ಜಾತಿಯ ಮೀನಿನ ಬೆನ್ನು ಬಳಿಯ ಈಜುರೆಕ್ಕೆ (Sail. ಇಂಕನಿ). [ಈಜು$_1$ (< ಈಸು$_1$) + ರೆಕ್ಕೆ (< ಎಱಂಕೆ)]

**ಈಜ್ಯೆ** (ನಾ). ಪೂಜೆ ; ಅರ್ಚನೆ : "ಅರ್ಹತ್ಪೂಜಾಲಕ್ಷಣಮಪ್ಪವು ಈಜ್ಯೆ ಯುಮೆಂಬುದು" (ಶ್ರಾವಕಾ. ೧೬೧–೧೪) ; ಜೈನಗೃಹಸ್ಥರು ಈಜ್ಯೆ, ವಾರ್ತೆ, ದತ್ತಿ, ಸ್ವಾಧ್ಯಾಯ, ಸಂಯಮ, ತಪಗಳೆಂಬ ಆರುಕರ್ಮಗಳನ್ನು ನಿತ್ಯವೂ ಆಚರಿಸಬೇಕಾಗುತ್ತದೆ (ಜೈನಪ. ೫೭೪). [< ಸಂ. ಇಜ್ಯಾ]

**ಈಟ್** (ನಾ). (ಕರಾ). "ಸತ್ವ" (ಬಾಳಿಗಿ. ಕೋಶ) ; "ಸಸ್ಯಸಾರ" (ಸಿರಿಕೋ) : ಎಲ್ಲ ಈ ಮಣ್ಣಿನ ಗುಣ, ಬಹಳ ಈಟ್ ಉಂಟು ಈ ಮಣ್ಣಿನಲ್ಲಿ ಬರೇ ಮಣ್ಣು ಕೆದರಿ, ಬೀಜ ಬಿತ್ತಿದ್ದಕ್ಕೆ ಇಷ್ಟಾಗಿದೆ (ಬಾಳಿಗಿ. ೮೧). [← ತುಳು. ಈಟ್ = ಗೊಬ್ಬರ]

**ಈಟಂಗಿ** (ನಾ). ಇಟ್ಟಿಮರ (ಕಿ). [?]

**ಈಟಿ** 'ಇಟ್ಟಿ$_2$' ನೋ.

**ಈಟಿಗಣೆ** (ನಾ). ಭರ್ಜಿಯ ಕೋಲು : "ಇಟ್ಟಿ – ಈಟೀಗಣೆ, ಬಾಲೆ" (ಗಂಗಾಮ. ೩೩). [ಈಟಿ (< ಇಟ್ಟಿ$_2$) + ಗಣೆ]

**ಈಟು$_1$** (ನಾ). ಕುಡಿಯುವಿಕೆ ; ಕುಡಿತ : ಊಟದೊಳ್ ಮಿಗಹದಲಿ ವೈದ್ಯನಲಿ ಕುಡಿನೀರಿನೀಟಿನಲಿ ಬಾಣಸಿನ ಮನೆಗಳಲಿ ವ್ಯವಹಾರದಾಟ ನೋಟಂಗಳಲಿ ಬೇಸರಂ ಮಾಡದಿರು ಎಚ್ಚರಿಕೆಯಿರಲಿ (ತುರಂಗ. ೯೨–೩೯). [< ಈಂಟು]

**ಈಟು$_2$** (ನಾ). ಸಮಾನ ; ಈಡು (?) : ಈಟಾದ ಗೆಣೆಯರ ಕೂಟಾ ದರೂ ಪೋಗಿ ತಿವಿದಾಟನಾ ಪಡಿಪಾಟಾನಾ (ಕರ್ಣಾಕಾ. ೧೭). [?]

**ಈಟು$_3$** (ನಾ). ಹೊಡೆತ ; ತಾಗುವಿಕೆ (?) : ರೇಣುಕಾಸುತನ ಸರ ಳೋಟಗಳನೀಟುಗಳನೇನೆಂಬೆ ಸುಭಟರನ್ನಾಟಿದವು (ಪರಶು. ೩೦–೪). [< ಈಡು$_1$ (< ಇಡು$_1$)]

**ಈಟು$_4$** 'ಇಷ್ಟು' ನೋ.

**ಈಡ** 'ಈಡೆ$_1$' ನೋ.

**ಈಡಳಿ** (ಕ್ರಿ). ಜೋಡಿಯಿಲ್ಲವಾಗು ; ಜೊತೆಯಿಲ್ಲವಾಗು (?) : ಈಡಳಿದ ನ್ಯಗ್ರೋಧಪತ್ರವ ನೋಡಿ ಮನದಲಿ ವಂದನೆಯ ತಾ ಮಾಡು ತಿಹನು (ಕುಚೇಲೋ. ೪೬–೯). [ಈಡು$_2$ + ಅಳಿ$_1$ (< ಅೞಿ$_1$)]

**ಈಡಾಡಿಸು** (ಕ್ರಿ). ಎಸೆಯುವಂತೆ ಮಾಡು ; ಬಿಸುಡುವಂತೆ ಮಾಡು : ವಿಷವೃಕ್ಷಮದಂ ಕಡಿದು ಕಳೆಯಿಮೆಂದು ಕಡಿದೀಡಾಡಿಸಿ (ಧರ್ಮಾಮೃ. ೧೨–೨೦೪) ; ಅರಿ ಹಿಮಕೂಟನನಡಗಿಸಿ ಜಾಜಿಯ ಬಿರುದನೀಡಾಡಿಸಿ ನಗುತ (ಕಂಸವಿ. ೯–೭). [ಈಡಾಡು + –ಇಸು$_1$]

**ಈಡಾಡು** (ಕ್ರಿ). ೧. (ಪ್ರಮಾದದಿಂದಾಗಲಿ ಆವೇಶದಿಂದಾಗಲಿ) ಕಿತ್ತುಒಗೆ ; ಚೆಲ್ಲಾಡು ; ತೂರಾಡು : "ಈಡಾಡು – ಪ್ರಮಾದ ತ್ಯಜನೇ" (ಶಮಧಾ) ; ಕೊಂಪಾರುಮುಱಿಯದಂತಿರೆ ಶ್ಮಶಾನದೊಳೀಡಾಡಿ ದೊರ್ [ಪಾಠಾಂ. ಡಿಸಿದೊರ್] (ವಡ್ಡಾರಾ. ೬೩–೧೩) ; ಬಿಸುಟಂ ಬಿಲ್ಲನ ದೇವುದೆಂದು ಕಡುಪಿಂದೀಡಾಡಿ (ಪಂಪಭಾ. ೧೦–೧೨೩) ; ಕೋಲಗುರು ವಿನ ಮರಣವಾರ್ತೆ ಕಾಲಸರ್ಪನ ತಂದು ಸಂಜಯ ಹೇಳಿಗೆಯನೀಡಾಡಿ ದನು ಧೃತರಾಷ್ಟ್ರನಿದಿರಿನಲಿ (ಕುವ್ಯಾಕ. ೧–೧). ೨. ಕಳೆ ; ಹೋಗಲಾ ಡಿಸು ; ನೀಗು : ಈಶ್ವರನನ್ನು ಬೇಡಿದರೆ ಎಲ್ಲ ಆಡಚಣೆಗಳನ್ನು ಆತ ಈಡಾಡುತ್ತಾನೆ (ರೂಢಿ). ೩. ವಿಸರ್ಜಿಸು. [ಈಡು$_1$ + ಆಡು$_1$]

**ಈಡಿ** (ನಾ). ಹೆಂಡ ; ಮದ್ಯ (ಕಿ). [ದೇ. ‖ ತಮಿ. ಈೞಂ]

**ಈಡಿಗ**, ಇಳಿಗ, ಈಳಿಗ (ನಾ). ೧. ಹೆಂಡ ತೆಗೆಯುವವನು, —ಮಾರುವವನು. ೨. ಒಂದು ಜಾತಿ : ಮೊಣಕಾಲು ಈಡಿಗ, ಕಣ ಕಾಲು ಸಮ್ಮಗಾರ . . . ಹದಿನೆಂಟು ಜಾತಿ (ವಚಶಾ. I, ೩೬೨). **ಇಳಿಗ** : ೧. (ಎಸಮೈ. XVIII ೧). **ಈಳಿಗ** : ೧. ಈಡಿಗನಿಗೆ ಈಳಿಗನೆಂದೇ ಕರೆಯುತ್ತಾರೆ (ರೂಢಿ). [ಈಡಿ + –ಗ$_2$. / ತಮಿ. ಮಲ. ಈೞವ, ಈೞುವ ; ತೆಲು. ಈಡಿಗ, ಈಂಡ್ರ]

**ಈಡಿಗಿತಿ** 'ಈಡಿಗಿತ್ತಿ' ನೋ.

**ಈಡಿಗಿತ್ತಿ**, ಈಡಿಗಿತಿ (ನಾ). ಈಡಿಗ ಜಾತಿಯ ಹೆಂಗಸು (ಜಾನಕೋ. ೧೮). **ಈಡಿಗಿತಿ** (ಕಿ). [ಈಡಿಗ + –ಇತ್ತಿ. / ತೆಲು. ಈಂಡ್ರದಿ]

**ಈಡಿಗೌಡ** (ನಾ). ಈಡಿಗರ ಜಾತಿಗೆ ಸೇರಿದ ಗೌಡ : ನಾಡಪ್ರಜೆಗಳಲ್ಲಿ ಗಂಗಡಿಕಾರಗೌಡ, ಈಡಿಗೌಡ, ಉಪ್ಪಾರಗೌಡ, ಕುಡೇಸಾಲು ಒಕ್ಕಲಿಗ, ಬೆಳ್ಳಾಳು ಒಕ್ಕಲಿಗ, ಸಪ್ಪೇ (ಮಾಂಸವರ್ಜಿತ) ಒಕ್ಕಲಿಗ – ಮುಂತಾದ ಒಳಭೇದಗಳಿದ್ದುವು (ಹುಟ್ಟಹ. ೨೩). [ಈಡಿಗ + ಗೌಡ (< ಗಾಮುಂಡ)]

**ಈಡಿತ** (ಗು). ಹೊಗಳಲ್ಪಟ್ಟ ; ಪ್ರಶಂಸಿಸಲ್ಪಟ್ಟ ; ಸ್ತುತ್ಯವಾದ : ಮಾಡಿಸಿದೆನಾನೆ ಸಾಲೆಯನೀಡಿತ ದನ್ತಿಪ್ರಿಯಾಯಾವನೀಶನವೋಲ್ (ಎಇ. IV, ೬೪–೧೦ ; 945) ; ದಂಪತಿಪ್ರಸರಮೆ ನಾಡೆಮೂಡಿಮುಟುಗಾಡುವು ದೀಡಿತಭೋಗಭೂಮಿಯೊಳ್ (ಚಂದ್ರಪು. ೩–೩೭). [ಸಂ.]

**ಈಡಿರಿ** 'ಈಡಿಱಿ' ನೋ.

**ಈಡಿಱಿ**, ಈಡಿರಿ (ಕ್ರಿ). ೧. ಕೊಂಬಿನಿಂದ ಉಜ್ಜು ; ಬಲವಾಗಿ ತಿವಿ ; ಹೊಡೆ : "ಈಡಿಱಿ – ಶೃಂಗಸಂಕರ್ಷಣೇ (ಕೊಂಬಿನಿಂದ ಉಜ್ಜು, ಚಿಮ್ಮು)" (ಶಮಧಾ) ; ಮೃಗಾವಳಿ ಕೋಡೆ ತೀಂಟಿಗೀಡಿಱಿವುದು (ಚಂದ್ರಪು. ೧೧–೨೦) ; ದರಿಯಂ ದಂತಾಗ್ರದಿಂದೀಡಿಱಿದು ಕೆಡಪುತಂ (ಗಿರಿಕ. ೧–೧೧೨) ; ಮೊನೆಗಣೆಗಳೀಡಿಱಿದವು ರಥಾಗ್ರದಲಿ (ಕುವ್ಯಾಗ. ೨–೨೯) ; ಈಡಿಱಿದನಂಬಿನಿಂ ಪಾರ್ಥನ ವರೂಥಮಂ (ಜೈಮಿಭಾ. ೧೪–೧೨). ೨. ಕಿಕ್ಕಿರಿ ; ನಿಬಿಡವಾಗು ; ಸಾಂದ್ರವಾಗು : ಕೋಪಂ . . . ನಿಟಿಲೇಕ್ಷಣದೊಳ್ ಕೂಡೆ ಬೆಳೆಬೆಳೆದು ಸುಳಿಸುಳಿದೀಡಿಱಿದೊಳಗೊಳಗೆ ಘುಳುಘುಳಿಸಿ (ಗಿರಿಕ. ೮–೪೬) ; ಕಂಬನಿಗಳಾಲಿಯೊಳೀಡಿಱಿದು ಸೋರಿ ದವು ಸೊಂಪಡಗಿತು ಮುಖಾಂಬುಜದ (ಕುವ್ಯಾಕ. ೧೪–೧೦) ; ಹೂಡಿದ ಬಂಡಿಗಳೊಳಗೆ ಪಿರಂಗಿಗಳೀಡಿಱಿದಗಣಿತವಾಗಿಕೂಡೆ ಖಾನನ ದಂಡಿನೊಳ ಗೈದಿ ಬರುವ ನಿರೂಢಿಯನೇನ ಬಣ್ಣಿಸುವೆ (ಕಂಸವಿ. ೧೧–೩೫) ; ಈಡಿಱಿವ ಪುಳಕದಲಿ ಮುನಿಗಳ ನೋಡಿ ಕರಗಳ ಮುಗಿದು (ಉತ್ತರಾ. ೧–೩೪). ೩. ವ್ಯಾಪಿಸು ; ತುಂಬು ; ತೀವು : ಲಗ್ಗೆಯಬ್ಬರವೀಡಿಱಿದುದು ದಿಗಂತ ವನು (ಕುವ್ಯಾಆ. ೧೫–೪೩) ; ಆದಿದಳು ಪರಿವಾರಗಣ ಸಹಿತೀಡಿಱಿವ ತೃಪ್ತಿಯಲಿ (ನಿಭಾಗ. ೫–೬–೩೪) ; ಈಡಿಱಿವ ಸಂತೋಷರಸ ತುಳುಕಾಡೆ ನಾರದನ ಭ್ರೂದಲಿ ನಲಿನಲಿದಾಡುತಿರ್ದನು (ಉತ್ತರಾ. ೧೩–೪೮).

೪. [ಗಣಿತ] ಗುಣಿಸು : ವರ್ತಿಸು, ವರ್ಗಿಸು, ಈಡಿಱಿಯೊತ್ತರದಿಂ ಸೆಳೆದು ಸೆಂದುವೋಜೆಯ ಗುಣಿಸ್ಸೆ ಮತ್ತಂ ಕಾದಿಸು ಪೂಜಿಸು ಉತ್ತಮದಿಂ ಪೇೞೆ ಮೊದಲ ಗುಣಕಾರಂಗಳ್ (ವ್ಯವಹಾ. ೧೦-೧೧). ಈಡಿಱಿ: ೩. ತಂಪಿನಿಂದೀಡಿಱಿದು ತುಳ್ಕುತಿಹ ಕೊಳಗಳಿಂ (ಪರಶು. ೨೧-೨೮); ಈಡಿಱಿವ ಹರುಷದಲಿ ತೇಜೋವತಿಯನೊಳಪೊಕ್ಕು (ಅಂಬಿಕಾ. ೮-೧೫).

**ಈಡಿಱಿದಾಡು** = ಎಳೆದಾಡು; ತಿವಿದಾಡು: ದರಿಗೊಂಡೀಡಿಱಿದಾಡುತುಂ ಕೊಣಕುತುಂ ಬಾರುತ್ತುಂ (ಜಗವಿ. ೪-೨೫); ಕುಚಾಗ್ರದೊಳ್ ಪೊರಳ್ದು ಹಾರಮನೀಡಿಱಿದಾಡಿ ಪೀರ್ದು ಬಾಯ್ದೆಱೆಯಂ (ಸೂಕ್ತಿಸು. ೪-೪೨); ಹಾಱುವ ಸಲಗನೀಡಿಱಿ [ಪಾಠಾಂ. ನಳ್ಳಿಱಿ]ದಾಡು ತಿರ್ದುವು ಹಿಂಡುಹಿಂಡಿನಲಿ (ಕುವ್ಯಾಅ. ೧೭-೩೭). [ಈಡು₁ + ಇಱಿ₁]

**ಈಡು₁** (ನಾ). ೧. ಬಾಣದ ಅಥವಾ ಗುಂಡಿನ ಪ್ರಯೋಗ; ಹೊಡೆತ; ಎಸೆತ: ದೀರ್ಘಕ್ಕೆ– ಈಡು, ಬೀಡು, ಸೂಡು (ಶಮದ. ೨೧೩ ಪ್ರಯೋ); ನೋಡದ ಪೆಣ್ಗಳನಱಿಯೆ ಹೆಣ್ಗಳ ಕಣ್ಣಿನೀಡಿಗೆ ಗುಱಿಯಾದೊಡಿವನ ಕೂಡಾಗ ಮನದನುಭವರತಿಯೊಳಗೋಲಾಡದ ನಾರಿಯರುಂಟೆ (ಕಂನವಿ. ೯-೧೩೫); ತನ್ನ ಈಡಿಗೆ ಬಂಟ್ರಪ್ಪ ಹಿಗ್ಗಿ ಹಾರಾಡಿದ (ಕುಡಿಕೂ. ೩೫೦); ಕಾಡಿನಲ್ಲಿ ಹೊಡೆದ ಈಡಿನ ಸದ್ದು ಪಟೇಲ ಸಿದ್ದಪ್ಪನವರ ಕಿವಿಯ ಮೇಲೆ ಬಿದ್ದಿತ್ತು (ಮುಗಮಾಂ. ೨೭); ಒಂದು ಈಡಿಗೆ ಸಾಕಾಗು ವಷ್ಟು ಮದ್ದು ಇದೆ (ರೂಢಿ). ೨. ಹೊಡೆಯಬೇಕಾದ ವಸ್ತು; ಗುರಿಯಿಡಬೇಕಾದ ವಸ್ತು; ಗುರಿ; ಲಕ್ಷ್ಯ: ಬೇಡನಂತೀಡಿಂಗೆವಂದು ಬಿಲ್ಗಾಱನಂತೆ ಬಿಟ್ಟೀಱಿಂಗೆವಂದು (ಧರ್ಮಾಮೃ. ೩-೭೭). ೩. ಒಂದು ಸಲ ಇಡುವಿಕೆ, —ಇಟ್ಟ ಪದಾರ್ಥ; ಒಬ್ಬೆ: ನೀಡಗಲದ ಗಗನದ ನಟ್ಟನಡುವೆ ಮುಚ್ಚೋಡಿಯ ನಿಡುಚೀಲದಂತೆ ಕೂಡಿ ಗಾಳಿಗಳು ಮೂಱು ಹುವದಱೊಳು ತುಂಬಿದೀಡಿನಂತಿಹುವಾಱು ವಸ್ತು (ಭರಚ. ೬೭-೬೯). ೪. ಕಾರಣ; ಉದ್ದೇಶ: ನಾನು ಇಲ್ಲಿಗೆ ಬಂದಿರುವುದು ಗುಣವಂತನನ್ನು ಹುಡುಕಿಕೊಂಡು. ಪ್ರತಾಪ ಕುಮಾರಿಯನ್ನು ಹೊತ್ತುಕೊಂಡು ಹೋದನಲ್ಲಾ ಅದರ ಈಡನ್ನು ಕೇಳುವುದಕ್ಕೆ (ಆರ್ಯಕ. ೬). ೫. ಇಕ್ಕಟ್ಟು; ಪೊದೆ: ಕಿಡಿಗಣ್ಣ ತೆಱೆಯುದಂದದೊಳುಱೆ ಮುದ್ರಿಸಿ ಜಡೆಯಿಾಡಿನೊಳಿದ್ದ ಹೆಱೆಯು ಬಿಡಿಸುವಂದದಿ . . . ಪುಷ್ಪಂಗಳ ಮುಡಿಸಿದ ಶಿವನ ಮಸ್ತಕದಿ (ಮೋಹತ. ೨೧-೨೯). ೬. ಹೊಣೆ; ಜಾಮೀನು; ಒತ್ತೆ: ಈಡು ಇಟ್ಟರೆ ನಾಡು ನಂಬುವುದು (ಗಾದೆ). ೭. ಲೇಪ; ಬಳಿಯುವಿಕೆ: ಬೇಡಿಕೊಳ್ಳುತ ಕಾಲ್ವಿಡಿದಿರಬೇಕೊಂದೀಡಿನಿಂದವ ಸೋತು ನಿನಗೆ (ಕುರಾಸಾಂ. ೨೫-೬೧). ೮. ಉಪಾಯ; ಹಾದಿ; ಮಾರ್ಗ: ತನುವಿನಿಂದ ಕಂಡನೆಂದಡೆ ರೂಪಿನ ಜಡ . . . ಘನದಿಂದಿರುತ್ತಿಹೆನೆಂದಡೆ ನಿರಾಳದ ಬಯಲು ಇದನಱಿದ ಅಱಿವಿನ ಈಡೆನಗೆ (ಮೋಳಿಮಾ. ೯೮-೩೮೮). ೯. ಮರಗೆಲಸ ಮಾಡುವಾಗ ಉಳಿಯಾಗಲಿ ಗರಗಸವಾಗಲಿ ನೆಲಕ್ಕೆ ತಾಗದಂತೆ ಮರದ ತುಂಡನ್ನು ಎತ್ತರಿಸಲು ಅಡಿಗೆ ಕೊಡುವ ಆನಿಕೆ.

**ಈಡಾಗು** = ಗುರಿಯಾಗು; ತುತ್ತಾಗು; ಬಲಿಯಾಗು: ತ್ರಿಜಗಾಧೀಶ್ವರನೊಳ್ ಮನೋಜಕಲಹಂದಾಳ್ದಗ್ನಿಗೀಡಾದ (ಸೋಮೇಶ. ೪೫); ತಾಱಿತಂತಃಕರಣ ಕಾಮನ ಕೂರುಗಣೆಗೀಡಾಯ್ತು (ಕುವ್ಯಾವಿ. ೬೦೩. ೨-೧೬). **ಈಡಿನಹಣ** = ಆಧಾರಮಾಡಿಕೊಂಡು ಸಾಲವಾಗಿ ಕೊಟ್ಟ ಹಣ: ಈಡಿನ ಹಣಕ್ಕೆ ಅಡವಿನ ಭೂಮಿ ಹರಾಜಾದರೆ ಅದನ್ನೇ ಅವರು ಕೊಳ್ಳುವವರು (ಕರುಕ. ೬). **ಈಡುಮಾಡು** = ೧. ಗುರಿಮಾಡು; ಒಳಪಡಿಸು: ತನ್ನಂಗದಲ್ಲಿ ಆದ ಲಿಂಗದೇಹಿಯ ಮುಂದಕ್ಕೆ ಭವಿಸಂಗಕ್ಕೆ ಈಡುಮಾಡುವ ವ್ರತಭಂಗಿತವ ಕಂಡು (ಏಲೇಶ್ವ. ೭೧); ಭುಜಂಗರಂ ಮದನಬಾಣಕ್ಕೀಡುಮಾಡುತ್ತೆ (ಚಿಕ್ಕದೇ. ೧೨೭); ನಮ್ಮ ತಂದೆಯನ್ನೂ ನನ್ನನ್ನೂ ಈ ದುರವಸ್ಥೆಗೆ ಈಡುಮಾಡಿದ ರಾಜ ಒಡೆಯರಿಗೆ ತಕ್ಕ ಶಾಸ್ತಿ ಮಾಡಿದ್ದಲ್ಲದೆ ನನ್ನ ಅಂತರಾತ್ಮವು ತೃಪ್ತಿ ಹೊಂದುವುದಿಲ್ಲ (ಶ್ರೀರಾಯ. ೧೨೭). ೨. ಅಧೀನಪಡಿಸು; ವಶವಡಿಸು: ಬಾಲೆಯೊಡಲ ಸಂತಾಪವ ತಟ್ಟನೆ ತಱಿದು . . . ನೆಟ್ಟನೆ ತನಗೀಡ[ಡು] ಮಾಡೆಂದು (ಮೋಹತ. ೧೦-೧೮).

[< ಇಡು₁. / ತಮಿ. ಮಲ. ತೆಲು. ಈಡು]

**ಈಡು₂** (ನಾ). ೧. ಒಂದಾಗುವಿಕೆ; ಒಕ್ಕೂಟ; ಸೇರುವೆ (ಕ). ೨. ಸರಿ; ಸಮಾನ; ಸಾಮ್ಯ; ಹೊಂದಿಕೆ: ಸರ್ವಾಂಗಲಿಂಗಿಗೆ ಬೇಱೆ ಐದು ಸ್ಥಾನದಲ್ಲಿ ಅರ್ಪಿತವ ಮಾಡಬೇಕೆಂಬುದಿಲ್ಲ ಇಷ್ಟಕ್ಕೂ ಪ್ರಾಣಕ್ಕೂ ಕಟ್ಟಿದ ಈಡ ನೋಡಯ್ಯಾ (ಮೋಳಿಮಾ. ೬೯-೨೭೭); ಸುಪರ್ಣಂಗೀಡೆ ಕಾಕಾಳಿ (ಸೋಮೇಶ. ೧೦); ನಾಡಾಡಿಯಂತೆಯೇ ಮಾಡಿಬಿಟ್ಟರು ಇವಗೆ ನಾಡೆಲ್ಲ ಹುಡುಕಿದರು ಈಡಾರ ಕಾಣೆ (ಪುರಂದ. ೧-೨೧೫-೧೬); ತನ್ನ ಭಾಗ್ಯಕೆ ಮೇದಿನಿಯೊಳೀಡಿಲ್ಲವೆಂದು (ರತ್ನಾಕ. ೧೯); ಆ ಹೆಣ್ಣಿಗೂ ಆ ಗಂಡಿಗೂ ಈಡೇ ಇಲ್ಲ (ಮಾಮರಾ. ೧೩೬); ಈ ಹಳ್ಳ ಆ ಕಳ್ಳಗೆ ಈಡೇ (ಗಾದೆ). ೩. ಅವಕಾಶ; ಆಸ್ಪದ: ನಿರ್ಧನಿಕರು ನಡೆನುಡಿಗಳಿಂದ ತಾಕುಸೋಂಕು ಬರಲಾಗಿ ಒಳಹೊಱಗು ಎಂಬ ಸಂದೇಹಕ್ಕೆ ಈಡನಿಕ್ಕಿ ಕಂಡರೆ ನಡೆಯದೆ ಬಂದರೆ ಕರೆಯದೆ ಇಪ್ಪವರ ನೋಡಾ (ಏಲೇಶ್ವ. ೪೦) ೪. ಗಾತ್ರ; ತೋರ; ದಪ್ಪ: ಘಳವೊಳಗೆ ಕೊಳೆತು ಹೊಱಗೆ ಈಡಾದರೆ ಮೆಲುವರಿಗೆ ಅಡಹೆ (ಸುಂಕಬಂ. ೫೯); ಈ ಮರದ ಕಾಯಿ ತುಂಬ ಈಡಾಗಿದೆ (ರೂಢಿ). ೫. ಸಮೃದ್ಧಿ; ಹೆಚ್ಚು; ಪುಷ್ಟಿ: ರೊಕ್ಕ ಈಡಾಗಿದೆ (ಕ); ಹಳೆಯ ಅಕ್ಕಿಯ ಅನ್ನ ಈಡಾಗುತ್ತದೆ (ರೂಢಿ). ೬. ತಡೆದುಕೊಳ್ಳಲು ಸಮರ್ಥವಾದುದು; ಪ್ರತಿಭಟಿಸಲು ಶಕ್ತವಾದುದು: ಎನ್ನ ಬಲ್ಲಿದತನಕ್ಕೆ ನೀನೀಡಲ್ಲವೆಂದನಾ ಕುವರನಾ ವೃದ್ಧನ (ಸೌಂದಪು. ೪-೩೯); ರೂಢಿಸಿದೀ ದ್ವಿರದವ ಕೊಂದಗೆ ಮಲ್ಲರೀಡೆಯೆಂದೆಲ್ಲರುಲಿಯಲು (ನೇಮಿಸಂ. ೧೬-೧೦೮); ಕದಾ ತಿನ್ನುವವನಿಗೆ ಹಪ್ಪಳ ಈಡೆ ? (ಗಾದೆ).

**ಈಡಾಗು** = ೧. ಸಮನಾಗು; ಸಾಕಾಗು; ಸಾಲು: ಕಿಱಿದಾಗಿ ದೊರ್ಡದೇನುಪಾಯಪರನೊರ್ವಂ ಕೋಟಿಗೀಡಕ್ಕು (ಸೋಮೇಶ. ೬೬); ಯಾವ ಹಣವೂ ಈಡಾಗಲೊಲ್ಲದು (ಬೆಟ್ಟಹೊ. ೫೯). ೨. ಆಸ್ಪದವಾಗು; ಆಶ್ರಯವಾಗು: ಎಲೆ ಮತ್ತ ನೀನಿಂತು ನಗೆಗೀಡಾದ ನುಡಿಗಳಂ ನುಡಿಯುತ್ತಂ (ಕಾದಂಉ. ೫೭೬); ಒಳ್ಪಿಂಗೀಡಾದರುಣೋತ್ಪಲೋರು ಮುಕುಳಂಗಳವೋಲ್ (ಉದ್ಭಟ. ೧೦-೨೦). ೩. ತೊಡಗು; ಉದ್ಯೋಗಿಸು: ಅತಿಭಕ್ತಿಯೊಳಂತಲ್ಲಿ ಸುಖಸ್ಥಳಮುಂಟಾದಲ್ಲಿ ವಿರೂಪಾಕ್ಷಪೂಜೆಗೀಡಾಗಿರ್ಪರ್ಳ್ (ಗಿರಿಕ. ೩-೧೦೧); ಗುರುಚೂಡಾಮಣಿಯ ಸೇವೆಗೀಡಾಗಿ ಸುಖಮಿರ್ದರ್ಳು (ಕೊಟ್ಟೂಬ. ೧೫-೬೯). **ಈಡುಜೋಡು** = ಸರಿಸಮಾನ: ಮನೆವಾಳ್ತೆಯಸು ಮಾಡುವುದವರ ಸಮ್ಮತದಿಂದ ಸತಿಯೊಳಗೀಡು ಜೋಡಿಲ್ಲೆನಿಸುವುದು (ಹದಿಬ. ೪-೧೩). **ಈಡುಪಾಡು** = ಸರಿಯಾಗಿರುವಿಕೆ; ಹೊಂದಾಣಿಕೆ (ಕ). **ಈಡುಮಾಡು** = ಸರಿಹೊಂದಿಸು; ಪೂರೈಸು; ಒದಗಿಸು: ಆಗ ಅಪ್ಪ ಹ್ಯಾಂಗ ನಮಗೆಲ್ಲಾ ಈಡು ಮಾಡ್ತಿದ್ನೋ ಅಂತನಸ್ತದ (ಕಿಡುಗು. ೨೩).

[ದೇ. ‖ ತಮಿ. ಮಲ. ತುಳು. ತೆಲು. ಈಡು]

**ಈಡು₃** (ನಾ). ಚಿತೆ: ಕಾಡಲ್ಲೆ ಸತ್ತವನ ಈಡೀಗೆ ಹಾಕದಿರಿ ಎಂದು ಕಾಗದ ಬರಸೀದ ಸುವ್ವಿ ಅಡವೀಲಿ ಸತ್ತವನ ಈಡೀಗೆ ಹಾಕದಿರಿ ಎಂದು ಓಲೇಯ ಬರಸೀದ ಸುವ್ವಿ (ಜಗೀತೆ. ೧೦೭); ಹಾರುವರ ಹೆಣ್ಣು ಈಡೀಗೆ ಬೀಳುವಳು ನೋಡಾನ ಬಾರೆ ಎಲೆ ಗೌರಿ (ಜಗೀತೆ. ೧೧೭).

[ ? . / ತಮಿ. ಈಱು = ಅಂತ್ಯ]

**ಈಡು$_4$** (ನಾ). ನೆಲೆ; ವಾಸಸ್ಥಾನ: ದುರ್ಗುಣಂಗಳ ಕೇಡು ಸೌಖ್ಯದೀಡು (ಚೇರಮ. ೨–೪); ಕಲ್ಯಾಣಪುರಕಖಿಳ ಸೌಭಾಗ್ಯಬೀಡು ಶಿವಧರ್ಮದೀಡು (ಪತಿಲ. ೪–೩೫); ಹಾಲು ಹಳ್ಳದೊಳೆನ್ನಾ ಮನೆಯುಂಟು ಅನಂತ ಶಾಲೆಯೊಳಗೆ ಈಡುವುಂಟು ಸಟೆಗಳಲ್ಲಾ (ಶ್ರೀಕೃಪಾ. ೬೩). [?]

**ಈಡುಕಾರ** 'ಈಡುಗಾರ' ನೋ.

**ಈಡುಗಡಿ** (ಕ್ರಿ). ಬುಡಮುಟ್ಟ ಕಡಿ; ಪೂರ್ತಿ ಕತ್ತರಿಸು: ಅರಿನೃಪರಂ ತಡಂಗಡಿದು ಬೇಲಿಯನಿಕ್ಕಿ ಪಟುಪ್ರತಾಪವುರ್ಬ್ಬಿರೆ ತಳಕಾಡ ನೀಡುಗಡಿದಳುಕು[ಳ್ಳು]ಜಿ ಸುಟ್ಟು ತುರಂಗದಂಘ್ರಿ ಸಂಚರಣದಿನುತ್ತು (ಎಕ. IV, ನಾಗಮಂ. ೩೨–೨೪; 1150). [ಈಡು$_1$ + ಕಡಿ$_1$]

**ಈಡುಗಾಣು** (ಕ್ರಿ). ಸಮಾನರನ್ನು ಕಾಣು: ರೂಢಿಯೊಳಗಿನ್ನೀಡುಗಾಣದ ನಾಡಸತಿಯೊಳ್ಕೂಡಿ (ಕುಮಾವಿ. ೩೦).
[ಈಡು$_2$ + ಕಾಣು (< ಕಾಣ್)]

**ಈಡುಗಾಯಿ$_1$** (ನಾ). ದಪ್ಪವಾದ ಕಾಯಿ: ಆ ಮರದ ತುಂಬಾ ಈಡುಗಾಯಿಗಳೇ ತುಂಬಿವೆ (ರೂಢಿ). [ಈಡು$_2$ + ಕಾಯಿ$_4$ (< ಕಾಯ್$_4$)]

**ಈಡುಗಾಯಿ$_2$** 'ಇಡುಗಾಯ್' ನೋ.

**ಈಡುಗಾರ**, ಈಡುಕಾರ (ನಾ). ಗುರಿಗೆ ಸರಿಯಾಗಿ ಹೊಡೆಯುವುದರಲ್ಲಿ ಗಟ್ಟಿಗನಾದವನು: ಅವನು ಒಳ್ಳೆಯ ಈಡುಗಾರನೂ ಹೌದು. ಅವನಿಟ್ಟ ಗುರಿ ತಪ್ಪದು ಎಂದು ಹಳ್ಳಿಯವರಿಗೆಲ್ಲ ತಿಳಿದುಹೋಗಿತ್ತು (ಕಾನೂರು. ೧೬); ಹುಲಿ ಈಡುಗಾರ ಐತುವನ್ನು ಕಬಳಿಸಿತ್ತು (ನಡೆದಾ. II, ೧೨೨೯). **ಈಡುಕಾರ** (ಜಾನಕೋ. ೧೮). [ಈಡು$_1$ + –ಕಾರ (<–ಕಾಜ)]

**ಈಡುಗೂರು** (ನಾ). ಒಂದು ಊರಿನ ಹೆಸರು: ಹರಿಯ ಮಾರ್ಕೊಳುವ ದಳವ ಬೆಂಕೊಳುವ ಈಡುಗೂರ ದೇವಿಲಬುಧವರಪ್ರಸಾದ (ಎಕ. XII, ತಿಪಟೂ. ೧೦೪–೨೦; 1130). [?]

**ಈಡೆ$_1$**, ಈಡ (ನಾ). ದೇಹದ ಬಲಭಾಗದಲ್ಲಿರುವ ಒಂದು ನಾಡಿ: ಈಡೆ ಪಿಂಗಳ ವರಸುಷುಮ್ನಾನಾಡಿಗಳು ಬಲಿದು (ಪ್ರಭುಲೀ. ೨೧–೧೬); ಈಡೆ ಪಿಂಗಳಗಳೆನಿಪೆರಡು ನಾಡಿಯ ತುದಿಯೊಳಾಡುತ್ತಲಿರ್ದ (ಕೈಕವ. ೨–೩). **ಈಡ**: ಈಡ ಪಿಂಗಳ ಎರಡು ಜೋಡಿಸಿ ಸುಷುಮ್ನೆನೋಡಿ ಅಜಿದೆ ನೆನಲು ಕೊಯ್ವನು ಮೂಗು ಕೂಡಲಸಂಗಮದೇವಯ್ಯನು (ಸಿದ್ಧಪು. ೩೪–೫). [< ಸಂ. ಇಡಾ]

**ಈಡೆ$_2$** (ನಾ). ಸ್ತೋತ್ರ; ಹೊಗಳಿಕೆ. [ಸಂ. ಈಡಾ]

**ಈಡೇರಿಸು** 'ಈಡೇಱಿಸು' ನೋ.

**ಈಡೇರು** 'ಈಡೇಱು' ನೋ.

**ಈಡೇಳು** (ಕ್ರಿ). ಗುರಿಯ ಕಡೆ ಹಾರು; ಗುಂಡುಹಾರು: ಬರ್ಪುದು ಪಸಿದ ಪುಲಿ, ಮುಂದೆ ಕೊರ್ವಿದೆರೆಯಂ ಕಂಡದಂ ಕೊಳ್ವಲಂಪಿಂದೆ ಹೊಂಚಿ ಮುಂಬರಿಯುತಿರಲೀಡೇಳುವುದು ಕೋವಿ (ಶ್ರೀರಾಮಾ. ೩೧೧–೨೮೫). [ಈಡು$_1$ + ಏಳು$_1$ (< ಏೞ್)]

**ಈಡೇಱಿಸು**, ಈಡೇರಿಸು (ಕ್ರಿ). ಕೈಗೂಡಿಸು; ನೆರವೇರಿಸು; ಪೂರೈಸು; ನಡಸು: ಇಬ್ಬರ ಲೇಸನೀಡೇಱಿಸಬೇಕೆಂದು ಗರ್ಭದೆ ಶಿರವ ಚಾಚಿದನು (ಮೋಹತ. ೩೧–೫೮); ಶರಣಾಗತರೊಳಗವಗುಣಗಳಂ ನೋಡದೀಡೇಱಿಸುವ ದೃಢಮೊಪ್ಪುವ ಪರಿಜನಂಗಳೊಳಮಳ ದಯೆ (ಜೆಬಪು. ೮–೧೬); **ಈಡೇರಿಸು**: ದೊರೆಯ ಆಜ್ಞೆ ಎಷ್ಟೇ ಅಪ್ರಿಯವಾಗಿದ್ದರೂ ಅದನ್ನು ಈಡೇರಿಸುವುದು ತನ್ನ ಕರ್ತವ್ಯವೆಂದು ಅವನು ಬಗೆದ (ಹಾಹುತ್ತ. ೪೫). [ಈಡೇಱು + –ಇಸು$_3$]

**ಈಡೇಱು**, ಈಡೇರು (ಕ್ರಿ). ಕೈಗೂಡು; ನೆರವೇರು; ಪೂರ್ಣವಾಗು; ಸಫಲವಾಗು: ಮಧುರೇಶಂ ಕಡುದಿಟ್ಟನಾಗಲು ಬಳಿಕ್ಕೀಡೇಱಿತೇ ದ್ವಾರಕಾಸದನಂ ವಾರ್ಧಿಯ ಕೂಡದೇ (ಸೋಮೇಶ. ೩೬); ಹತ್ತು ದಿನದೆಡೆ ಸಂದಿನ ರಾತ್ರಿ ಘನ ಜೋಪಾನದೊಳೀಡೇಱಬೇಕೆಂದು ವನಜಾಕ್ಷಿ ಮಗ್ಗುಲಿಕ್ಕಿದಳು (ಮೋಹತ. ೪–೭೭). **ಈಡೇರು**: ವಿಜಯನಗರದ ಚಕ್ರಾಧೀಶನನ್ನು ಭೇಟಿಮಾಡಿ ಮುಂದೆ ಮಹಾಯಾತ್ರೆ ಹೊರಡಬೇಕೆಂದು ಸಂಕಲ್ಪಿಸಿದನು. ಅದೂ ಈಡೇರಲಿಲ್ಲ (ಶ್ರೀರಾಮು. ೧೨೮); ಬಹುದಿನದ ಬಯಕೆ ನಾಳೆ ಈಡೇರುತ್ತದೆ (ತೇವೋಡ. ೮೬). [ಈಡು$_1$ + ಏಱು$_1$]

**ಈಡೊಡ್ಡಣೆ** (ನಾ). ಚಿತೆಯನ್ನು ಒಡ್ಡುವಿಕೆ: ಆರೂಢತೆಯ ಮಾಡ್ಡವರು ರುದ್ರಭೂಮಿಯೊಳಿಳುಹಿ ಇಂಧನವಿಧಾನಗೈವ ಈಡೊಡ್ಡಣೆಯ ಸಮಯದೊಳು (ಸಿಂಗಿರಾ. ೫–೨೦). [ಈಡು$_4$ + ಒಡ್ಡಣೆ]

**ಈಡೊರಸು** (ಕ್ರಿ). (ಕೊಂಬಿನಿಂದ) ಚೆನ್ನಾಗಿ ತಿಕ್ಕು, —ಒರಸು: ಮೈಯ ತೀನ್ ಮಸೆದೊಡೆ ಕೋಡೊಳೀಡೊರಸಿ [ಪಾಠಾಂ. ಳಿಟ್ಟೊರಸಿ] ನೀರ್ಗೆಳಸಿರ್ದೊಡೆ ತಂದು ನೀರನೂಡಿಸಿ (ಚಂದ್ರಪು. ೫–೬೪).
[ಈಡು$_1$ + ಒರಸು$_1$]

**ಈತ$_1$** 'ಇದು' ಪರಾ.

**ಈತ$_2$** (ನಾ). ಕೊಡುವಿಕೆ; ದಾನ: ಈತಂ, ಈತಂಗಳ್; ಈತಂ, ಈವುದು (ಶಬ್ದಾನು. ೫೫೩ ಪ್ರಯೋ; ೫೭೯ ವ್ಯಾಖ್ಯಾ). [ಈ$_3$ + –ತ$_2$]

**ಈತ$_3$** 'ಈಂತ' ನೋ.

**ಈತಿ$_1$** (ಅ). ೧. ಮುಕ್ತಾಯ; ಪೂರ್ತಿ. ೨. ಕಾರಣ ಮುಂತಾದ ಅರ್ಥಗಳಲ್ಲಿ ಬಳಸುವ ಅವ್ಯಯ: "ಕಡೆಯುಂ ಕಾರಣಮೀತಿಯಕ್ಕು" (ನಾನಾರ. ೧೩೯). [< ಸಂ. ಇತಿ]

**ಈತಿ$_2$** (ನಾ). = ಈತಿಬಾಧೆ: ಅವರ ಆಶ್ರಮದ ಸಮೀಪಕ್ಕೆ ಹೋಗಲು, ಈತಿ, ಭೀತಿ, ತ್ರಿವಿಧ ತಾಪ, ದುರ್ಧರ, ಗ್ರಹದೆಶೆ ಇವುಗಳಿಂದ ಪೀಡಿತರಾದ ಪ್ರಜೆಗಳು ... ಸುರಾಜ್ಯದಲ್ಲಿ ಹೋಗಿ ಸುಖಿಗಳಾಗುವಂತೆ ಭರತನ ಸ್ಥಿತಿಯಾಯಿತು (ತುಳಸಿ. ೧೮೩). [ಸಂ.]

**ಈತಿಬಾಧೆ** (ನಾ). ತೊಂದರೆ; ಬಾಧೆ: ಈತಿಬಾಧೆಯನ್ನು ಹೋಗಲಾಡಿಸವುದಕ್ಕೂ ನಿರ್ವಿಘ್ನವಾಗಿ ರಾಜಕಾರ್ಯಗಳು ನಡೆಯುವುದಕ್ಕೂ ತಕ್ಕಂತೆ ಆಲೋಚಿಸಿ ಅಪ್ಪಣೆ ಕೊಡಿಸಿದ ವ್ಯವಸ್ಥೆಯಿಂದ (ಮಹಾವಂ. II, ೩೮); ಆ ನೆನಪು ಆತನಿಗೆ ನೀಡುತ್ತಿದ್ದುದೆಲ್ಲ ಈತಿಬಾಧೆಯ ನರಳಾಟ (ಏಕಾಂಗಿ ೮೮). ☞ ಅತಿವೃಷ್ಟಿ, ಅನಾವೃಷ್ಟಿ, ಇಲಿ ಹೆಗ್ಗಣಗಳ ಕಾಟ, ಮಿಡತೆಗಳ ಹಾವಳಿ, ಗಿಳಿಗಳ ಹಾವಳಿ, ರಾಜರದಂಡಯಾತ್ರೆ ಎಂಬ ಆರು ಈತಿಬಾಧೆಗಳು ಪ್ರಸಿದ್ಧವಾದುವು.
[ಈತಿ + ಬಾಧೆ]

**ಈದ್** (ನಾ). (ಮುಸಲ್ಮಾನರ) ಹಬ್ಬ. [← ಅರ. ಈದ್]

**ಈದ್‌ಮಿಲಾದ್** (ನಾ). ಮಿಲಾದ್ ಹಬ್ಬ.
[← ಅರ. ಈದ್‌ಮಿಲಾದ್]

**ಈದ** 'ಈನ್$_1$' ಪರಾ.

**ಈದಲೆ** (ನಾ). ಇತ್ತ; ಈಕಡೆ: ಅದಲೆ ನೀರ್ ಗುಂಡಿತ್ತೀಂದೀದಲೆಯೊಳೆ ನಿಂದು (ಪಂಪಭಾ. ೫–೬೨). [ಈ$_5$ (< ಇದು) + –ತಲೆ$_2$]

**ಈದು$_1$** 'ಇದು' ನೋ.

**ಈದು$_2$** 'ಈನ್' ಪರಾ.

**ಈದೊರೆತು** (ಗು). ಇಂಥ; ಈರೀತಿಯ; ಈ ಪ್ರಕಾರದ; ಈ ಸಮಾನದ: ಚಾಗಳ[ದ] ನನ್ನಿಯ ಬೀರದನ್ದಮೀದೊರೆತೆನೆ ಬಣ್ಣಿಸಲ್ಕೆಱಿವರಾರಳವಂ ಚಲದಂಕಕಾಜನ (ಎಕ. II, ೧೩೩–೨೯; 982); ಈದೊರೆತು ಶೌರ್ಯಗುಣೋನ್ನತಿ ನಾಗದೇವನ (ಸೌಇಇ. XI–i, ೫೨–೧೬; 1007); ಸುಧಾಂಶುಲೇಖೆ ಕರ್ಪೂರಶಲಾಕೆ ನೇತ್ರಸುಖದಾಯಕಮೀದೊರೆತಲ್ಲವೀಕೆ ಶೃಂಗಾರಸಮುದ್ರಮುಂ ಕಡೆಯೆ ಪುಟ್ಟವನುದ್ಭವೆಯಾದಳ್ (ಪಂಪರಾಮಾ. ೯–೮೨). [ಈ$_5$ (< ಇದು) + ದೊರೆತು]

**ಈದೊರೆಯ** (ನಾ). ಇಂಥವನು : ಈದೊರೆಯನೆಂದು ತೋಜಲ್ ಮೇದಿನಿಯೊಳಗಾತನಲ್ಲದಿಲ್ಲ ನೆ (ಯಶೋಚ. ೨–೩೭).

[ಈದೊರೆತು + –ಅ$_7$]

**ಈನ್, ಈ$_3$, ಈನು, ಈಯ್ಯು$_2$** (ಕ್ರಿ). ಈಂದ, ಈದ$_1$ (ಭೂತಕೃ); ಈಂದು, ಈದ್ದು$_2$ (ಭೂತನ್ಯೂ). ೧. (ಪ್ರಾಣಿಗಳು) ಮರಿಹಾಕು; ಪ್ರಸವಿಸು; (ಮನುಷ್ಯರ ವಿಷಯದಲ್ಲಿ ವ್ಯಂಗ್ಯವಾಗಿ) ಹೆರು: "ಈನ್ – ತಿರ್ಯಕ್ಪ್ರಸವೇ" (ಶಮಧಾ); ಶರಸಂಧಾನದ ಬೇಗಮಂಬುಗಳನಂಬೀಂಬಂತೆ (ಪಂಪಭಾ. ೧೧–೪೦); ಈಂದಿರ್ದ ಗೋವು ಮಾಸಂ ತಿಂದೊಡೆ ಕಲಸಿಕ್ಕುಗೆ ಸೂಸಲಂ ಬೆಲ್ಲಮುಮಂ (ಲೋಕೋಪ. ೯–೧೯೩); ಅಂಬಂಬಂ ಬಿಡೆ ಕಾಱುತಿರ್ಪ ತೆಱನಾಯ್ತಂಬಂಬನೀಂಬಂತುಟಾಯ್ತು (ಜಗವಿ. ೭–೭೯); ಆಗಸಮೀಂದಂತೆಯುಂ (ಕಬ್ಬಿಕಾ. ೨೫೭); ಈಂದ ಪುಲಿಯಾವೊಲಿರ್ದಳ್ (ಶಮದ. ೧೧೮ ಪ್ರಯೋ). **ಈ$_3$** : ೧. ನಚ್ಚಿದೆಮ್ಮ ಕೋಣನನೀದತ್ತೆಂಬಂತೆ ಮಾಡಿದ್ದೈ (ಧರ್ಮಾಮೃ. ೨–೧೦೩); ಕಱಿವ ಕಾಮಧೇನುವೊಂದು ಕಱುವನೀದು ಕಱೆಯದೆ ಹೋಯಿತ್ತು (ಸಗಬೊ. ೮೧); ಬಗೆಯಲರಿದಿದು ಗರ್ಭ ಬಲಿಯದೆ ಹಗಲನೀದುದೊ ರಾತ್ರಿ ಕುಡಿಕುಡಿದುಗ್ಗುಳುತಿರ್ದುವು ತಿಮಿರವನು ಕರದೀಪ್ತಿಕಾಳಿಗಳು (ಕುವ್ಯಾದ್ರೋ. ೧೫–೩೪); ಗಗನಮೀದುದೊ ನೆಲಂ ಬೆಸಲೆಯಾದುದೊ (ಚಬಪು. ೪೭–೩೩). **ಈನು** : ೧. ಹುಟ್ಟುಬಂಜೆಯ ಮಗನೊಬ್ಬ ಈನದೆಮ್ಮೆಯ ಗಿಣ್ಣ ಬೇಡಿದನು (ಅವಚಂ. ೧೮೪–೮೨೭); ನಮ್ಮ ಪಾಲಿಗಿದುವೇ ಸುರಧೇನು ಎರಡೇ ದಿನ ಈನುವುದಿನ್ನೇನು (ಗಣೇಶ. ೭೬–೧೮). **ಈಯ್ಯು$_2$**: ೧. ಎತ್ತೀಯಿತೆಂದೊಡೆ ಮೂಲೆಯಲಿ ಕಟ್ಟಿಸುವುದೆಂಬನ ಚಾಳಿಯೇತಕೆ (ಬಸಪು. ೨೮–೩೫); ಈಯ್ಯದೆಯಿರುವ ಕಡಸು (ಸೌಗಂಧಿ. ೨೮೩–೬); ನಿನ್ನೆ ಮಧ್ಯರಾತ್ರಿಯ ಸುಮಾರಕ್ಕೆ ಅದು ಈಯಿತು (ಮುಂಬಯಿ. ೪–೫೨); ಕೋಣ ಈಯಿತು ಎಂದರೆ ಕೊಟ್ಟಿಗೆಯಲ್ಲಿ ಕಟ್ಟು ಎಂದನಂತೆ (ಗಾದೆ). ೨. ಫಲಕೊಡು : ಹಚ್ಚಿದ ವರ್ಷಕ್ಕೆ ಬಾಳೆ ಈಯುತ್ತದೆ (ಮುಂಬಯಿ. ೨–೪೬).

[ದೇ. ‖ ತಮಿ. ಮಲ. ಈನ್ ; ತೆಲು. ಈನು ; ಪರ್ಜಿ. ಈನ್ = ಬೀಜ ಮೊಳೆಯುವುದು]

**ಈನಿಸು, ಈಯಿಸು$_2$** (ಕ್ರಿ). ೧. (ಪ್ರಾಣಿಗಳ) ಪ್ರಸವಕ್ಕೆ ಸಹಾಯ ಮಾಡು : ದಯವಿಟ್ಟು ನಮ್ಮ ಎಮ್ಮೆಯನ್ನು ಈನಿಸಿಕೊಡಿ (ರೂಢಿ). ೨. ಒದಗಿಸು : ರಿಪುಬಲದ ಸಂಭ್ರಮವೀನಿಸುತ್ತಿದೆ ಕಂಗಳಲಿ [ಪಾಠಾಂ ಳಿಗೆ] ಕಾಹುರದ ಕೌತುಕವ (ತೊರರಾ. ೬–೨೦–೫೩). **ಈಯಿಸು$_2$** : ೨. (ಕಿ).

[ಈನ್ + –ಇಸು$_3$]

**ಈನು** 'ಈನ್' ನೋ.

**ಈಪರಿ** (ನಾ). ಈರೀತಿ; ಈತರಹ; ಹೀಗೆ: ಅದುದೀಪರಿ . . . ಹಯಸಪ್ತತಂತು ನಿರಂತರಾಯದಲಿ (ತೊರರಾ. ೧–೭–೫೩); ಈಪರಿಯ ಸೊಬಗಾವ ದೇವರಲಿ ನಾ ಕಾಣೆ (ಪುರಂದ ೨–೧೬೪ ಪ).

[ಈ$_5$ (< ಇದು) + ಪರಿ$_7$]

**ಈಪಾಟಿ** (ಗು). ೧. ಇಷ್ಟು; ಇಷ್ಟೊಂದು; ತುಂಬ: ಈಪೌಜ ಕಣ್ಣಿನಿಂದ ನೋಡಲಾರಿಗೆ ಶಕ್ಯಮೀಪರಿಯ ರೌದ್ರರಸವನ್ನೆಂತು ಸಹಿಸಬಹುದೀಪಾಟಯಶ್ವಗಳ ವೇಗದೊಳ್ಮೇಲೆಂತುಧೈರ್ಯದಿಂ (ವರ್ಷವ. ೩–೫೬); ಈಪಾಟ ಹಣ್ಣು ಎಲ್ಲಿಯೂ ನಾನು ನೋಡಿಲ್ಲ (ರೂಢಿ). ೨. ಈ ರೀತಿ; ಹೀಗೆ: ನಾವೀಪಾಟ ಸುಖಕೆ ಸಿಕ್ಕುವುದು ಗೋಪರ ನಡೆ (ಭರಚ. ೭೯–೫).

[ಈ$_5$ (< ಇದು) + ಪಾಟ$_1$]

**ಈಪಿ** (ನಾ). ೧. ನೊಣಗಳ ಹಿಕ್ಕೆ (ಕಿ). ೨. ಹೇನಿನ ಮೊಟ್ಟೆ (ಕಿ).

[ದೇ. ‖ ತಮಿ. ಈರ್ಪಿ ; ತೆಲು. ಈಪಿ]

**ಈಪೊೞ್ತು, ಇವತ್ತು, ಇವೊತ್ತು, ಈವತ್ತು, ಈವೊತ್ತು, ಈಹೊತ್ತು** (ನಾ). ಇಂದು ; ಈದಿನ: ಪ್ರತಿಜ್ಞೆಯಂ ನೆರಪಿದೆ ಒಳ್ಳಿತ್ತಾಯ್ತೀಪೊೞ್ತು ಪೊಲ್ಲದು (ವಡ್ಡಾರಾ. ೧೬–೨೦); ನಿನಗೀಪೊೞ್ತು ಜಓಳಿತ್ತ ಬರ್ಪದಟನಿಂತಾರಿತ್ತರ್ (ಪಂಪಭಾ. ೩–೩೪). **ಇವತ್ತು** : ಇದೇನು ನಾಳೆ ಬರುತ್ತೇನೆಂದವನು ಇವತ್ತೇ ಬಂದುಬಿಟ್ಟೆ (ರಾಮಾನ. ೧೦೭). **ಇವೊತ್ತು**: ಇವೊತ್ತು ಅದರ ಬೆಲೆ . . . ಹೆಚ್ಚಾಗಿ (ಅಕಾಶ. ೬); ಪತ್ರ ಉದ್ದವಾಯ್ತೇನೋ. ಸಾಕು ಇವೊತ್ತಿಗೆ (ಸುವಸಂ. ೧೬). **ಈವತ್ತು** : ಈವತ್ತು ಕಾಲೇಜಿಲ್ಲವೇ ? (ನಿರಾತ. ೭೭). **ಈವೊತ್ತು** : ಈವೊತ್ತಿನ ಈ ಭಾವನೆ. . .ಸಾಕ್ಷಿಯಾಗಿದೆ (ಭಾರದ. ೩೦೦). **ಈಹೊತ್ತು**: ಹೊಸಮುಸೆಯುಡಾಯ್ದುದ ಸಾಲಸಂದಣಿಯು ಸದರವೀಹೊತ್ತೆನುತ ಗೆಲವಿನ ಕುದುಕುಳಿಗಳುರವಣಿಸೆ (ಕುವ್ಯಾದ್ರೋ. ೧೦–೩೦).

[ಈ$_5$ (< ಇದು) + ಪೊೞ್ತು]

**ಈಪ್ಪತ್ತು** 'ಇರ್ಪತ್ತು' ನೋ.

**ಈಪ್ಸಿತ** (ಗು). ೧. ಆಸೆಪಟ್ಟ; ಬಯಸಿದ; ಬೇಡಿದ: ಮದೀಪ್ಸಿತ ತಪಮುಮಿಂದೆಯ್ದಿತ್ತು (ವಿಷ್ಣುಪು. ೩–೧೩೫). (ನಾ). ೨. ಆಸೆ; ಬಯಕೆ: "ಇಚ್ಛೆ ಕಾಂಕ್ಷೆ ಸ್ಪೃಹೆ ಅಶಂಸೆ ರುಚಿ ಕಾಮ ವಾಂಛೆಯೀಪ್ಸಿತಮೆನಲು ಬಯಕೆ" (ಮಂಗರಾ. ೧೨೮–೧೧); ನಿನಗೆ ವೈಭವ ಬೇಕು, ವಿಲಾಸಬೇಕು, ಮನಸ್ಸಿನ ನೂರೆಂಟು ಈಪ್ಸಿತಗಳಿಗೆ ಸಂತೃಪ್ತಿ ಬೇಕು (ಶನಿಸಂ. ೨೪೬).

[ಸಂ.]

**ಈಪ್ಸಿತಾರ್ಥ** (ನಾ). ಬಯಸಿದ ವಸ್ತು, —ದ್ರವ್ಯ: ನೃಪಂ ವನಜಳಕೇಳಿ ನಿಮಿತ್ತದಿನರ್ಥಿಗೀಪ್ಸಿತಾರ್ಥಮನಿತ್ತಂ (ಚಂದ್ರಪು. ೭–೧೫೨); ಈಪ್ಸಿತಾರ್ಥವನೀವುತಿಹ . . . ಕಲ್ಪಲತೆಯಂತೆ (ಪ್ರಭುಲೀ. ೯–೫).

[ಈಪ್ಸಿತ + ಅರ್ಥ]

**ಈಪ್ಸಿಸು** (ಕ್ರಿ). ಬಯಸು ; ಆಸೆಪಡು : ವಿಷಯಾಭಿಲಾಷೆಯ ಬಿಸಿಲ ಹೊಳೆಯೊಳಗಾಡಲೆಂದೀಪ್ಸಿಸಿ ಪರಿಭ್ರಮಿಸುವನು ಮಾಯಾಮೂಢಮತಿ (ನಿಭಾಗ. ೫–೮–೫).

[ಈಪ್ಸೆ + –ಇಸು$_3$]

**ಈಪ್ಸೆ** (ನಾ). ಆಸೆ; ಬಯಕೆ: ಪಡೆಗುಮವರ್ ನಿರಂತರಂ ಮತ್ಪ್ರಸಾದದಿಂದೀಪ್ಸೆಗಳಂ (ವಿಷ್ಣುಪು. ೫–೧–೧೦೦).

[ಸಂ. ಈಪ್ಸಾ]

**ಈಮಿತಿ** (ಅ). ೧. ಇಂದಿನವರೆಗೆ; ಇಲ್ಲಿಯವರೆಗೆ: ಈಮಿತಿಗೆ ಎಲ್ಲ ಲೆಕ್ಕವೂ ಚೊಕ್ಕಾಗಿದೆ (ರೂಢಿ). ೨. ಈ ದಿವಸ; ಈದಿನ: ಇವೂ ಅರ್ವಾಚೀನವಲ್ಲ. ಅವನಿಗೆ ಬೇಕು 'ಈಮಿತಿ'ಯ (up-to-date) ವಸ್ತುಗಳು (ದೇವದೂ. ೨೭೬).

[ಈ$_5$ (< ಇದು) + ಮಿತಿ]

**ಈಯತ** (ನಾ). (?) : ಈಯತದೊಳ್ಮೈದಿದೆಂದಾನಂದಗೊಳಲು ಸರಿರಾಯರಾಣ್ಮರ ಕಳುಹಿದಾಗ ಸಂಧ್ಯಾಕಾಲಕ್ರೀಯಕನುವಾದನು (ಜಿನಮು. ೯–೩೫).

[?]

**ಈಯತ್ತೆ** 'ಇಯತ್ತೆ' ನೋ.

**ಈಯಲು** (ನಾ). ಈನುವ ಸ್ಥಿತಿ; ಕರು ಹಾಕುವುದು: ಹೆಣ್ಣು ತೋಳವು ಈಯುಲಾದ ಕೂಡಲೆ ಅಡವಿಯೊಳಗೆ ಬೇರೆ ಒತ್ತಟ್ಟಿಗೆ ಸ್ಥಳವನ್ನು ನೋಡಿ (ಮುಂಬಯಿ. ೩–೮೪).

[ಈಯು$_3$ (< ಈನ್) + –ಅಲು (< –ಅಲ್$_2$)]

**ಈಯಿಸು$_1$** (ಕ್ರಿ). ಕೊಡಿಸು ; ಕೊಡುವಂತೆ ಮಾಡು : ಈಯಿಸಿದಂ, ತೇಯಿಸಿದಂ (ಶಮದ. ೧೩೧ ಪ್ರಯೋ).

ಈಯಿಸಿಕೊಳ್ಳು = ಈಸಿಕೊ ; ತೆಗೆದುಕೊ : "ಸಂಪ್ರದಾನವೆಂದಾವುದಾನೊಂದು ವಸ್ತುವನೀಯಿಸಿಕೊಂಬ [ಪಾಠಾಂ. ವಸ್ತುವನೀಸಿಕೊಂಬ] ಪಾತ್ರಂ" (ಶಮದ. ೧೩೦ ವೃತ್ತಿ) ; ಓಲೆಯನ್ನೀಯಿಸಿಕೊಂಡು (ಬಟ್ಟಳ. ೭೭–೨೫).

[ಈ$_2$ + –ಇಸು$_3$]

**ಈಯಿಸು₂** 'ಈನಿಸು' ನೋ.

**ಈಯ್ಯು₁** 'ಈ₂' ನೋ.

**ಈಯ್ಯು₂** 'ಈನ್' ನೋ.

**ಈರ್₁**, ಈರು₁ (ಕ್ರಿ). ೧. ಎಳೆ; ಜಗ್ಗು; ಸೆಳೆ. ೨. (ಹೇನಿನ ಮೊಟ್ಟೆಯನ್ನು) ಬಾಚು; ಸೀರು. 'ಈರಣಿಗೆ' ಪರಾ. **ಈರು₁** (ಈ).
[ದೇ. ॥ ತಮಿ. ಈರ್; ಮಲ. ಈರ್ = ಸೀರು; ತೆಲು. ಈರ್ಚು, ಈರುಚು = ಸೀರು, ಬಾಚು]

**ಈರ್₂**, ಈರು₂ (ನಾ). ಹೇನಿನ ಮೊಟ್ಟೆ; ಸೀರು (ಈ). **ಈರು₂**: 'ಈರುದಲೆ' ಪರಾ.
[ದೇ. ॥ ತಮಿ. ಮಲ. ಈರ್; ತುಳು. ತೀರ್, ಸೀರ್; ಕೊಡ. ಚೀರಿ; ತೆಲು. ಈರು; ಕೋಲಾ. ಸೀರ್; ನಾಯ್ಕಿ. ಶೀರ್; ಗೊಂಡಿ. ಸೀರ್; ಕುವಿ. ಹೀರು; ಕುರುಖ್. ಚೀರ್]

**ಈರ್₃** 'ಇರ್₂' ನೋ.

**ಈರ್₄**, ಈರ (ನಾ). ತೇವ; ಒದ್ದೆ; ಹಸಿ. 'ಈರುಳ್ಳಿ' ಪರಾ. **ಈರ**: 'ಈರಪಲಸು' ಪರಾ.
[< ನೀರ್. / ತಮಿ. ಈರ್, ಈರ; ಮಲ. ಈರ, ಈಜ; ತೆಲು. ಈಮಿರಿ]

**ಈರ** 'ಈರ್₄' ನೋ.

**ಈರಡಿ** (ನಾ). ೧. ಎರಡುಪಾದ, —ಹೆಜ್ಜೆ: ನಡೆವುದೀರಡಿಯಿಂದೆ ಧರ್ಮಂಬಿಡದೆ ತದ್ವಾಪರನಿಕರದೊಳ್ (ಬಸವು. ೨–೫). ೨. ಎರಡು ಅಡಿ. ೩. ಎರಡು ಪಾದಗಳುಳ್ಳ ಪ್ರಾಣಿ.
**ಈರಡಿಮಾಡು** = ಎರಡುಹೆಜ್ಜೆಮಾಡು: ಧರಣಿಯನು ಮೆಟ್ಟಿ ಈರಡಿಮಾಡಿದ ಕೊಲೆಗಡುಕನ (ಪುರಂದ. ೧–೧೦೧–೨); ಪೊಡವಿಯ ನೀರಡಿಮಾಡಿ ಜಡಜಭವಾಂಡ ಮೇಲ್ಭಾಗವ ಲೀಲೆಯಿಂದೊಡೆದ ತ್ರಿವಿಕ್ರಮನೀತ (ಮೋಹತ. ೩೬–೨೬). [ಈರ್₃ (< ಇರ್₂) + ಅಡಿ₁]

**ಈರಣ** (ನಾ). ೧. ಚಲನ; ಅಲುಗಾಟ; ಅಲುಗಾಡಿಸುವಿಕೆ: ಮಲಯಸಮೀರಣೇರಣ ಚಲತ್ತರುಶಾಖೆಗಳ್ (ಆದಿಪು. ೧೧–೬೬). ೨. ಚರ್ಮವಾದ್ಯಗಳಲ್ಲಿ ಒಂದು ಬಗೆ; ಮೃದಂಗ: ಸುತಿ, ಮೌರಿ, ಡೋಲು, ತಂಬಟೆ, ಈರಣ, ಡಕ್ಕೆ ... ಮದ್ದಳೆ ಮುಂತಪ್ಪ ಬದ್ದವಣಂಗಳ ಬಿಜುಸರಂ (ಅದ್ಭುತ. ೩೨–೧೦). ೩. [ಜೈನ] ಜೈನಸಂನ್ಯಾಸಿಗಳ ಪರ್ಯಟನ; ಸಂಚಾರ; ಜೀವಹಿಂಸೆಯಾಗದಂತೆ ಮುಂದೆ ನಾಲ್ಕು ಮೊಳ ನೋಡಿ ನಡೆಯುವಿಕೆ: ಈರಣಮುಂ ಈರ್ಯೆಯುಂ ಯೋಗಗತಿಯುಂ ಎಂದೊಡೆ ಏಕಾರ್ಥಂ ತದ್ವಾರಕಮಪ್ಪ ಕರ್ಮಂ ಈರ್ಯಾಪಥಂ (ತತ್ತ್ವಪ್ರ. ೨೫೫). [ಸಂ.]

**ಈರಣಿಗೆ** (ನಾ). ಸೀರನ್ನು ಬಾಚಿ ತೆಗೆಯಲು ಉಪಯೋಗಿಸುವ ಉಪಕರಣ; ಸೀರಣಿಗೆ (ದಕ. ಈ). [ಈರ್₂ + ಅಣಿಗೆ₀]

**ಈರಪಲಸು** (ನಾ). ಹಸಿಯ, ಎಳೆಯ ಹಲಸಿನ ಕಾಯಿ; ಹೊಸದಾಗಿರುವ (ಆಗತಾನೆ ಕಿತ್ತ) ಎಳೆಯ ಹಲಸಿನ ಕಾಯಿ: ಕತ್ತರಿಸಿ ದೀರಪಲಸಿನ ಕಾಯ ತುಪ್ಪದೊಳಗಿತ್ತು ತಾಳಿಸಿ (ಸೂಪಶಾ. ೫–೬೭); ಮೆತ್ತನುಕ್ಕರಿಸಿಕೊಂಡೀ [ಪಾಠಾಂ. ಡಿವಿ]ರಪಲಸಿನ ಕಾಯನೊತ್ತಿ ಹಿಳಿದದನು ಕದುಕಿಜಿದು ಕಿಜಿಕಿಜಿದಾಗಿ ಕತ್ತರಿಸಿ (ಸೂಪಶಾ. ೫–೬೩).
[ಈರ (< ಈರ್₄) + ಪಲಸು]

**ಈರಯ್ದು**, ಈರೈದು (ನಾ). ಎರಡು ಐದು; ಹತ್ತು: ಈರಯ್ದು, ಈರೊಳ್ಳಿದರ್ (ಭಾಷಾಭೂ. ೧೫೪ ಪ್ರಯೋ); ಕನ್ನಡ ಸಮಾಸಕ್ಕೆ: ತೆಂಗಾಳಿ ... ಇಮ್ಮಾವು, ಈರಯ್ದು (ಶಮದ. ಸ. ೮೨ ಪ್ರಯೋ); ಆಯ್ದ ಕ್ಷಮನೀರಯ್ದೆಲರ್ಗಳನಾರಯ್ದೊಲವಿಂ ಮೇಳಿಸುತ (ಉದ್ಭದೇ. ೩–೯).

**ಈರೈದು**: ನಡುಗಣ್ಣ ಪಂಚಾಸ್ಯದೀರೈದು ಭುಜದ (ಸಿದ್ಧರಾ. ೨–೨೬); ತೋರ್ಪಿರ್ಪೀರೈದು ತಲೆಗಳ ಬೈತಿರಿಸಿ (ತೊರರಾ. ೩–೮–೧೩); ಈರೈದು ದಿಕ್ಕನು ಮೂಜುಲೋಕವನೊಂದೆಬಾರಿ ತುಂಬುವ ಘನಮಹಿಮ (ಭರಜ. ೨೬–೧೦೬).
**ಈರೈವರು** = ಹತ್ತುಜನ: ಮತ್ತೆ ಶೂರನ ರಾಣಿ ಮಾಲಿಶೆ ಹೆತ್ತಳೀರೈವರನು ಸನ್ಮತಿಪುತ್ರರನು (ನಿಭಾಗ. ೯–೨೩–೫).
[ಈರ್₃ (< ಇರ್₂) + ಅಯ್ದು₂]

**ಈರಯ್ದುಭುಜ** (ನಾ). ೧. ಹತ್ತು ತೋಳು: ನಡುಗಣ್ಣ ಪಂಚಾಸ್ಯ ದೀರೈದು ಭುಜದ (ಸಿದ್ಧರಾ. ೨–೨೬). ೨. ಹತ್ತುತೋಳುಗಳುಳ್ಳವನು; ಶಿವ (ಈ). [ಈರಯ್ದು + ಭುಜ]

**ಈರಯ್ದುಮೊಗ**, ಈರೈದುಮೊಗ (ನಾ). ೧. ಹತ್ತು ಮುಖ. ೨. ಹತ್ತು ಮುಖಗಳುಳ್ಳವನು; ರಾವಣ. **ಈರೈದುಮೊಗ**: "ಹತ್ತುಮೋರೆಯವ; ರಾವಣ" (ಗಂಗಾಮ. ೨೨).
[ಈರಯ್ದು + ಮೊಗ]

**ಈರಯ್ಮೊಗ**, ಈರೈಮೊಗ (ನಾ). = ಈರಯ್ದುಮೊಗ ೨. (ಈ). **ಈರೈಮೊಗ**: ರಕ್ಕಸರೊಳ್ ಸಂದ ಈರೈಮೊಗಂ ರಾವಣಂ (ಅದ್ಭುತ. ೨೮–೨೩). [< ಈರಯ್ದು + ಮೊಗ]

**ಈರರಿಲ್** (ನಾ). ಎರಡು ನಕ್ಷತ್ರ: ತಳೆದು ತೋರಮುತ್ತಿನ ಕುಂಡಲ ದ್ವಯವನು ಪ್ರಕಟಮೆನಲತ್ತಿತ್ತ ಮೂಡಿದೀರರಿಲ ಪಾರ್ಶ್ವಕಚಂದ್ರನಂ ಧಿಕ್ಕರಿಸುವ ವದನನನರ್ಧವಿಕಸಿತ ಜಪಾಸುಮದ ಶೋಭೆಯಂ ಪಳಿವ ಚೆಂದುಟಿಯಂದಮುಳ್ಳವನನು (ಶೇಷರಾ. ೧೫೧–೨೨).
[ಈರ್₃ (< ಇರ್₂) + ಅರಿಲ್ (< ಅಱಿಲ್₁)]

**ಈರರೆ** (ನಾ). ಎರಡು ಅರ್ಧ: ಅನಮ್ಮೂನ್ನಿನೊನ್ನಿಯು ಕೊಟ್ಟ ಈರರೆಯುಂ ನಿನ್ನತು ಇತನೆ ಅಟಿಪ್ಪೋನ್ನಪ್ಪಾಮಹಾಪಾತಕಂ ಇತನೆ ಕಾವೋರ್ ಪಾಳತಲೆ ಮೇಗಣ (ಎಕ. IX, ಹೊಸಕೋ. ೧೨–೩; 900).
[ಈರ್₃ (< ಇರ್₂) + ಅರೆ₃]

**ಈರಲು₁** (ನಾ). ಚೀಕಲು; ಚೀಕು; ಮರದ ನೆರಳಿನಿಂದ ಬಿಸಿಲು ಬೀಳದೆ ಬೆಳೆ ಸರಿಯಾಗಿ ಬರದಿರುವಿಕೆ: ಈ ಮರದ ನೆರಳಿನಿಂದ ಹೊಲದ ಪೈರೆಲ್ಲಾ ಈರಲಾಯಿತು (ರೂಢಿ). [?]

**ಈರಲು₂**, ಈರಿಲು (ನಾ). ಮುಟ್ಟು ಅಥವಾ ಮೈಲಿಗೆಯ ಸೋಂಕಿನಿಂದ ಮಕ್ಕಳಿಗೆ ಬರುವ ಶೀತಭೇದಿ: ಮಗುವಿಗೆ ಈರಲಾಗಿದೆ (ರೂಢಿ). **ಈರಿಲು**: ಆ ಮಗುವಿಂಗೆ ಈರಿಲು ಗಾಳಿ ಭೂತ ಸೋಂಕಿತೆಂದು ಕಣಿಯರ ಭೇಷಜರ ಬೆಸಗೊಂಡು ಮಾಡುವ ಭಕ್ತಂಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ (ಚೆನ್ನವ. ಕ. ೩೯೯).
[ದೇ. ॥ ತಮಿ. ಮಲ. ಈರಲ್ = ಪಿತ್ತಜನಕಾಂಗ]

**ಈರಳ್ಳೆ** (ನಾ). ಎರಡು ಅಳ್ಳೆ, —ಪಕ್ಕೆ: ಮಗಧಾಧೀಶನ ನೆತ್ತಿಯೊಳ್ಕುಱಿದ ಕೂರ್ವಾಳ್ಪೋಳನೀರಳ್ಳೆ ಬಿಟ್ಟಗೆಗೋದಪ್ನಿರಲುಬ್ಬಿನಿಂದ ಸಬಳಂ ನೇಪಾಳನಾ ಬಾಯೊಳಾಯಗವಡ್ಡಂ ನಿಲೆ ನಟ್ಟಕಟ್ಟದಲಗಾದಂ ... ಸಮುಸ್ತಮಂ ತಳೆದನುರ್ವೀಚಕ್ರಮಂ ವಿಕ್ರಮಂ (ಎಕ. XI, ದಾವಣ. ೩೫–೧೭; 1160); ಬಟ್ಟೆತ್ತಾದ ಬರಿಯುಮೊಳಪೊಕ್ಕೀರಳ್ಳೆಯುಂ ಬಿಗಿದ ಬೆನ್ನ ಬೀವುಂ (ಲೀಲಾವ. ೬–೧೯ವ).
[ಈರ್₃ (< ಇರ್₂) + ಅಳ್ಳೆ₁]

**ಈರಾಟಿಕೆ** (ನಾ). ಹೊಡೆದಾಟ; ಹೋರಾಟ: ತಮ್ಮ ಕೈಯಲ್ಲಿ ಒಂದೊಂದು ಗಿಡದ ಟೊಂಗೆಗಳನ್ನು ಹಿಡಿದು ಕಾಜಿಯ ಜನರೊಡನೆ ಈರಾಟಿಕೆಗೆ ನಿಂತರು (ಗೌರಾಂಗ. ೧೦೦).
[< ಏಜಾಟಿಕೆ ?]

**ಈರಾಱು** (ನಾ). ಎರಡು ಆರು ; ಹನ್ನೆರಡು : ಆಱುಂಗುಣದೆಱೆವಟ್ಟೀರಾಱುಂ ಮಂಡಲದ ನಾಭಿ ಷಡ್ಬಲದ ಬಲಂ ಮೂಱುಂ ಸಿದ್ಧಿಯ ನೆಲೆ ನಿಲೆ (ಶಾಂತಿಪು. ೨–೪೬) ; ಪೊಳೆವ ಪೊಸಪೊನ್ನನೀರಾಱುಸಾವಿರಮನುಜ್ಜ್ವಳ ಹರ್ಷದಿಂ ತರಿಸಿ (ಪದ್ಮರಾ. ೫–೪೦) ; ಆ ನುಡಿಯಂ ತಾನುಂ ಕೇಳ್ದಾ ಭವಸೇನಂ ಸೋದರವಮಾವನೊಳೆಂದಂ ನಾನೀರಾಱು ಬರಿಸ ಪರಿಯಂತಂ ಪರದೇಶಕ್ಕೆಯ್ದಿ (ಜಯಕಾ. ೧೨–೫೬).

[ಈರ್$_3$ (< ಇರ್$_2$) + ಆಱು$_3$]

**ಈರಿ**$_1$ 'ಈರೆ' ನೋ.

**ಈರಿ**$_2$ (ನಾ). ಬೇಲದ ಮರ : "ಈರಿಯೆನೆ ಬೇಲಂ" (ಮಂಗರಾ. ೩೫–೧೫). [?]

**ಈರಿಣ** (ನಾ). ೧. ಚೌಳುಭೂಮಿ; ಊಷರಕ್ಷೇತ್ರ : "ಈರಿಣಮೂಷರಂ ಸೌಳನುಳ್ಳನೆಲನಕ್ಕು" (ಮಂಗರಾ. ೨೮–೨). ೨. ಮರುಭೂಮಿ. [ಸಂ.]

**ಈರಿತ** (ಗು). ೧. ಹೇಳಲ್ಪಟ್ಟ; ಹೇಳಿದ. ೨. ಎಸೆಯಲ್ಪಟ್ಟ; ಅಟ್ಟಲ್ಪಟ್ಟ; ಕಳಿಸಲ್ಪಟ್ಟ. (ನಾ). ೩. ಹೇಳಿದ ಮಾತು : ಅನುರೂಪ ಮಾದುದಶರೀರಸಹೋಕ್ತ್ರಿಗೆ ನಾರದೇರಿತಂ (ಜಗವಿ. ೨–೫೧). [ಸಂ.]

**ಈರಿಪ** (ನಾ). ಒಬ್ಬಾತನ ಹೆಸರು (?) : ಮನ್ದಮುರಸರ ಬಾಸಪೆಡೆ ××× ಈರಿಪನ್ ಆಬಿರೆ ××× ಪೊಲವ ಮಾಡಿಸಿ (ಎಕ. X, ಶ್ರೀನಿವಾ. ೫೮–೧೦ ; 930). [?]

**ಈರಿರುಳು** (ನಾ). ಎರಡು ರಾತ್ರಿ : ಕಾಮಶರಕೆ ಎದೆಗೊಡದಿರು ದೇವರ ಕೃಪೆಯಿದ್ದೊಡೆ ಚದುರನೀರಿರುಳಿಗಯ್ತಹನು (ಕಂನವಿ. ೯–೧೫೬).

[ಈರ್$_3$ (< ಇರ್$_2$) + ಇರುಳು (< ಇರುಳ್)]

**ಈರಿಲು** 'ಈರಲ್ತು$_3$' ನೋ.

**ಈರು**$_1$ 'ಈರ್$_1$' ನೋ.

**ಈರು**$_2$ 'ಈರ್$_2$' ನೋ.

**ಈರುಗಾರು** (ನಾ). ಎರಡರಷ್ಟು ಆಯಾಸ (?) : ಐವೂರ ಹೊಲದಲ್ಲಿ ಕೆಟ್ಟಪಶುವನು ಆರೂರ ಹೊಕ್ಕು ಅಱಸಿಹೆನೆಂದು ಹೋದರೆ ಮೂಱೇ ಮನೆಯಲ್ಲಿ ಈರುಗಾರಾಗಲಾಗಿ ಅಱಸಬಂದ ಅಯ್ಯಗಳು ಅಸತ್ತು ಹೋದರಲ್ಲಾ (ಸಿದ್ಧೇವ. ೩೭೧) ; "ಈರುಗಾರಾಗುವುದು ಎನಲು ವಶರಾಗುವುದು" (ಸಿದ್ಧೇವ. ಟೀಕೆ). [ಈರು$_3$ (< ಇರ್$_2$) + ಗಾರು]

**ಈರುದಲೆ** (ನಾ). ಸೀರಿನಿಂದ ತುಂಬಿದ ತಲೆ (?).

[ಈರು$_2$ (< ಈರ್$_2$) + ತಲೆ$_1$]

**ಈರುಳ್ಳಿ** (ನಾ). ಒಂದು ಬಗೆಯ ಗೆಡ್ಡೆ ; ಉಳ್ಳಿಗೆಡ್ಡೆ ; ಪಲಾಂಡು : ಹುಳಿ ಮೂಲಂಗೀರುಳ್ಳಿ ತಿಂಬುವನೆ ಖೋಡಿ (ಪುರಂದ. ೨–೩೮–೩) ; ಕೆಂಪು ಮತ್ತು ಬಿಳಿಪು ಬಣ್ಣದ ಈರುಳ್ಳಿಯಿವೆ (ತರಬೆ. ೩೧) ; ಈರುಳ್ಳಿ ಮುಂತಾದ ವಾಸನೆಯ ವಸ್ತುಗಳು ಅವನಿಗೆ ಸೇರವು (ಪೈಗಂಬ. ೧೧೩). 'ನೀರುಳ್ಳಿ' ಪರಾ. [ಈರ್$_4$ + ಉಳ್ಳಿ. / ತಮಿ. ಮಲ. ಈರುಳ್ಳಿ]

**ಈರೆ, ಈರಿ**$_1$ (ನಾ). ಪಿತ್ತಕೋಶ; ಗುಲ್ಮ (?) : ನೆಣದೊಟ್ಟದ ಪಾರೆಯು ಮಾರೆಯುಂ ತುತ್ತಿ ನುಂಗಿ ಮಿದುಳಂ ತಣಿವಿಂ ಪುಳಿದೇಗುದೇಗುತ್ತು ಮಿರ್ಪುವದಱೊಳ್ ರಜನೀಚರಕೋಟಿಗಳ್ (ಕಾವ್ಯಾವ. ೮೨೫). **ಈರಿ**$_1$ : ಮಾಳವನಳ್ಳಿದುಳ್ಗೆ ಖಚನೀರಿಗೆ ಪಾಂಡ್ಯನ ಕಾಳಿಜಕ್ಕೆ ನೇಪಾಳನ ಬೆನ್ನ ಸೂಂಟಿಗೆಗೆ (ಎಕ. IV, ಹುಣಸೂ. ೧೩೬–೧೬ ; 1162) ; ಹಳೇಕಾಲದ ಲೊಡ್ಡುಮರ ಆದು. ಮರ ಏರಿ, ಹರೆ ಮುರಿದು ಕೆಳಗೆ ಬಿದ್ದು, ಈರಿ ಒಡೆದು ಕೋಬೇಕು ; ಇಲ್ಲ, ಕೈಕಾಲು ಮುರಿದುಕೋಬೇಕು (ಬೆಳುಮ. ೧೬೩).

[ದೇ. ॥ ತಮಿ. ಮಲ. ಈರಲ್ = ಪಿತ್ತಕೋಶ, ಗುಲ್ಮ ಮುಂತಾದ ಅಂಗ]

**ಈರೆಂಟು** (ನಾ). ಎರಡು ಎಂಟು ; ಹದಿನಾರು : ನರಮಾತಂಗ ತುರಂಗ ಸೈನ್ಯಮಿದಿರಾಂತೀರೆಂಟು ಲಕ್ಕಂಬರಂ ಕರಗಿತ್ತೆನ್ನ ನಿಶಾತಹೇತಿ ಹತಿಯಿಂ (ಪಂಪಭಾ. ೧೨–೧೩೫) ; ಮಸ್ತಕಕೊಂದು . . . ಈರೆಂಟುಂ ಭುಜಬಾಹುಕರದೊಳು ಚಾರು ಶತಾರ್ಧ೦ಗಳು ಪೇರುರದೊಳು (ದೀಕ್ಷಾಬೋ. ೧೧೩–೧೬) ; ಕಳೆಗಳೀರೆಂಟು ತುಂಬಿದ ಪೂರ್ಣಚಂದ್ರ ಮಂಡಲದಂತೆ (ಸೌಂದಪು. ೪–೬). [ಈರ್$_3$ (< ಇರ್$_2$) + ಎಂಟು]

**ಈರೆರಡು** (ನಾ). ಎರಡು ಎರಡು; ನಾಲ್ಕು : ಏಗಳ್ ಬಿಡದಾರ್ ಜಾನಿಸಿ ಸಂಸ್ಮರಿಪರವರ್ಗೀರೆರಡುಂ ಸಂಪದಮುಂ ಧೂರ್ಜಟಿಯಿಂದಾವಂ (ಉದ್ಭದೇ. ೪–೪೮). [ಈರ್$_3$ (< ಇರ್$_2$) + ಎರಡು]

**ಈರೆಲೆ** (ನಾ). ಎರಡು ಎಲೆ. 'ಈರೆಲೆವೋಗು' ಪರಾ.

[ಈರ್$_3$ (< ಇರ್$_2$) + ಎಲೆ$_1$. / ತಮಿ. ಈರಿಲೈ]

**ಈರೆಲೆವೋಗು** (ಕ್ರಿ). (ಬೀಜ ಮೊಳೆಯಾಗಿ) ಎರಡು ಎಲೆ ಬಿಡು ; ಎರಡೆಲೆಯಾಗು ; ಚಿಗುರು ; ಬೆಳೆ ; ಅಭಿವೃದ್ಧಿಹೊಂದು : ಬಳಸುವ ಬೇಟದೊಳ್ ಮೊಳೆದ ಗೊಟ್ಟಿಯೊಳೀರೆಲೆವೋದ ಲುಂದಿನೊಳ್ ಬಳೆದ . . . ಬೇಟವೆಂಬೆಳಲತೆ (ಆದಿಪು. ೧೨–೨೧) ; ಈರೆಲೆವೋದತನುವ ಕೇಳೀ ರಂಭಾಕಾಂಡಮೆನಿಪ ನಾಸಾವಂಶಂ ಭ್ರೂರೇಖಾಶಾಖೆಗಳಿಂ ರಾರಾಜಿಪು ದಬಲೆ ಮನುಜ ಕಂಠೀರವನಾ (ವರ್ಧಪು. ೪–೨೦). [ಈರೆಲೆ + ಪೋಗು$_1$]

**ಈರೆಳೆ** (ನಾ). (ನೆಯ್ಗೆಯಲ್ಲಿ) ಎರಡು ಎಳೆ,— ನೂಲುಗಳು : ತಾವರೆ ಗಾವೊಳಾಗಿಸಿದ ಬಿಲ್ಲದಱೀರೆಳೆಯೇಱಸುತ್ತೆ . . . ಗೆಂಟನೊಳಿಟ್ಟು ಪಾಱ ಪರ್ (ರಾಜಶೇ. ೨–೧೬). [ಈರ್$_3$ (< ಇರ್$_2$) + ಎಳೆ$_2$ (< ಎೞೆ$_2$)]

**ಈರೆಪ್ಪತ್ತು** (ನಾ). ಎರಡು ಎಪ್ಪತ್ತು ; ಒಂದುನೂರನಲವತ್ತು : ಇವಾನ್ಕೊಳೆ ಈರೆಪ್ಪತ್ತಱುಳಂ ಒಕ್ಕಲ್ತನಂ ಕೆಯ್ವೊನಾ ವಿತ್ತಿದಲ್ಲಿ ವೆಳೆಯಾದೆ ಕೆಡುಗೆ (ಎಕ. VII, ಶಿಕಾರಿ. ೧೫೪–೧೫ ; ಸು. 685).

[ಈರ್$_3$ (< ಇರ್$_2$) + ಎಪ್ಪತ್ತು]

**ಈರೇಳು** 'ಈರೇೞ್' ನೋ.

**ಈರೇೞ್, ಈರೇಳು, ಈರೇೞು** (ನಾ). ಎರಡು ಏಳು; ಹದಿನಾಲ್ಕು: ಈರೇೞ್ಮಹೀಭಾಗಮುಂ ದೊರೆವೆತ್ತುತ್ತಮಭೋಗದೊಳ್ ತಣಿಪಿದಂ ಭೂಪೋತ್ತಮಂ (ಪಂಚತಂ. ೬–೧೨). **ಈರೇಳು** : ಸಂಗರದೊಳೀರೇಳು ಲೋಕದರಸುಗಳ ಸಪ್ತಾಂಗಮುಂ ಕೊಂಬ ನಿನ್ನ ನುಡಿಯ ತೊಡಕಿನ ಬೆಡಂಗಿನಿಂ ಸೋಲಿಸಿ (ಹಚಕಾ. ೧೧–೧೩) ; ಅವ ತಾಯಿಗೆ ಈರೇಳು ಜಗ ತೋಱಿದ (ಪುರಂದ. ೧–೧೪೦–೪). **ಈರೇೞು**: ಗುಣಖ್ಯಾಪನಕ್ಕೀರೇೞುಂ ಭುವನಂಗಳೆಯ್ದುವೆನಿಪಂ ಸಾಹಿತ್ಯವಿದ್ಯಾಧರಂ (ಮಲ್ಲಿಪು. ೨–೮೦).

**ಈರೇಳುಭುವನ, ಈರೇಳುಲೋಕ** = ಹದಿನಾಲ್ಕು ಲೋಕ. ℙ ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕ, ಪಾತಾಳ, ಮಹಾತಳ, ರಸಾತಳ, ತಳಾತಳ, ಸುತಳ, ವಿತಳ, ಅತಳ : ಕಾಂತಿಯಿಂ ಈರೇಳು ಭುವನಮಂ ಬೆಳಗುವ ದಿವ್ಯಸ್ವರೂಪನಂ ಕಂಡೆ (ಮಹಾದೇ. ೪೩–೧೩) ; ತಂದೆ ಕೇಳೀರೇಳುಲೋಕದ ತಂದೆಯಂ ಭಜಿಸದೆ . . . ನಿನ್ನೊಡಲಂ ಭವಾಳಿಗೆ ತಂದೆ (ಬಸವು. ೩–೮೧). [ಈರ್$_3$ (< ಇರ್$_2$) + ಏೞ್$_2$]

**ಈರೇೞು** 'ಈರೇೞ್' ನೋ.

**ಈರೇೞ್ಗಾಲ** (ನಾ). ಹದಿನಾಲ್ಕು ವರ್ಷ : ಮುನ್ನಮೆಳವರೆಯದೊಳೀರೇೞ್ಗಾಲಂ ವನಂಬೊಕ್ಕು (ರಾಮಾಶ್ವ. ೨೯–೧೪) ; ಎಮಗೆ ಪೂದೋಟದಂತಾಯ್ತಡವಿ . . . ಈರೇೞ್ಗಾಲಮೇೞೆರಟ್ಟಿಗೆಯೆನೆ (ಶ್ರೀರಾಮ. ೫–೧೨). [ಈರೇೞ್ + ಕಾಲ$_1$]

**ಈರ್ಕೈದು** 'ಈರಯ್ದು' ನೋ.

**ಈರ್ಕೈದುವೊಗ** 'ಈರಯ್ದುವೊಗ' ನೋ.

**ಈರೈದೋಳು** (ನಾ). ಹತ್ತು ತೋಳು ; ದಶಭುಜ : ಪುಲಿಸಮ್ಮುದುಡಿಯುನೀರೈದೋಳ್ಗಳಂ ಪಾವುದೊಡವಡಿಯ ತೊಡರುಲಿಯುಗರ್ವೆಳಗಬೆಳಗಿಪಂ ಶಿವಂ ಸಿಂಹವಿಷ್ಟರಾಗ್ರದೊಳಿರ್ದನು (ನಂದಿಮಾ. ೪-೩).
[ಈರೈದು (< ಈರಯ್ದು) + ತೋಳು (< ತೋಳ್)]

**ಈರೈನೂಱು** (ನಾ). ಎರಡು ಐನೂರು ; ಒಂದು ಸಾವಿರ : ಜಡಿವ ಕಡೆಯದ ಕಾಲ ರಭಸಕೆ ಹೆಡೆಗಳೀರೈನೂಱನಾಂತನನಂತನಳವಳಿದು (ನಿಭಾಗ. ೩-೮-೧೦). [ಈರ್$_3$ (< ಇರ್$_2$) + ಐನೂಱು (< ಅಯ್ನೂಱು)]

**ಈರೈವೊಗ** 'ಈರಯ್ಮೊಗ' ನೋ.

**ಈರೊಂಬತು** (ನಾ). ಎರಡು ಒಂಬತ್ತು ; ಹದಿನೆಂಟು : ಮಂದಾರಮಂಜರಿವಿಡಿದ ಹದಿಮೂಱು ಕಳಸವಿಂತೀರೊಂಬತಿನ್ನುಳಿದ ವಿಭವವೀಪರಿಯಿಂದ ನೇಮದಿಂ ನಡಸೆಂದಳು (ಸಿದ್ಧರಾ. ೪-೭).

ಈರೊಂಬದಿಂಬರ್ = ಹದಿನೆಂಟು ಜನರು : ಚಂದ್ರಾಸ್ಯೆಯರಂ ಮನದೊಳುಪೇಂದ್ರಂಗೀರೊಂಬದಿಂಬರಂ ನಿರ್ಜಿತದೇವೇಂದ್ರಗಣಿಕೆಯರನಂಕದ ಚಂದ್ರಧ್ವಜನಳ್ಕಿ ಕಪ್ಪವಿಾವವೊಲಿತ್ತಂ (ಪಂರಾಮಾ. ೪-೧೦೪).
[ಈರ್$_3$ (< ಇರ್$_2$) + ಒಂಬತು (< ಒಂಬತ್ತು)]

**ಈರೊಡಲ್** (ನಾ). ಎರಡು ಒಡಲು, —ಶರೀರ : ಆವೆಡೆಯೊಳವಮಾಸೆಗಾಣೆನೆನೆ ತೊಟ್ಟನೆ ಪೋಪುವು ನಲ್ಲರಿರ್ವರೀರೊಡಲೊಳಗಿರ್ಪ ಜೀವಂ (ಪಂಪಭಾ. ೪-೧೦೪). [ಈರ್$_3$ (< ಇರ್$_2$) + ಒಡಲ್]

**ಈರೊಡ್ಡು** (ನಾ). ಎರಡು ಒಡ್ಡು, —ಸೈನ್ಯ : ತೆಜಪುವಡೆದೀರೊಡ್ಡಿನ [ಪಾಠಾಂ. ದಿದಿರೊಡ್ಡಿನ] ತೇರೊಡ್ಡುಗಳ್ ಶೂರಸಾರಥಿ ಪ್ರೇರಣದಿನೋರೊಂದಂ ಪತ್ತೆ ಸಾರ್ಚಿದಾಗಳ್ (ಚಂದ್ರಪು. ೧೦-೭೪ ವ) ; ಈರೊಡ್ಡಿನಾನೆ [ಪಾಠಾಂ. ಆರ್ದೊಡ್ಡಿನಾನೆ] ಗಳೋರೊಂದಜಕೊಳೊಂದು ತಾಗಿ (ಚಂದ್ರಪು. ೧೦-೮೩). [ಈರ್$_3$ (< ಇರ್$_2$) + ಒಡ್ಡು$_2$]

**ಈರೊತ್ತೆ** (ನಾ). ಎರಡು ಒತ್ತೆ ; ಜೂಜಿನಲ್ಲಿ ಪಣವಾಗಿ ಕಟ್ಟುವ ಎರಡು ಒಡ್ಡುಗಳು, —ಬಾಜಿಗಳು : ಈರೈದು, ಈರೊತ್ತೆ (ಶಮದ. ೧೮೦ ಪ್ರಯೋ). [ಈರ್$_3$ (< ಇರ್$_2$) + ಒತ್ತೆ]

**ಈರ್ಕುಳಿ** 'ಈಟ್ಕುಳಿ' ನೋ.

**ಈರ್ಗಳ್** (ನಾ). ಇಬ್ಬರು (?) : ಇರ್ಗುರಣವದ್ಯವೀಸರ್ಗಗೊಳದಂತ್ಯವೇನಿರ್ಗುದೇಕೋಕ್ತವೀರ್ವರ್ಗುರ್ ಸಂಮತವ ನಾವೀರ್ಗಳುಂ ಯತ್ನಿಸಲದರ್ಗುಣವೆನಿಹುದೊ ಹಿತವರ್ಗದಿಂ ಕೇಳೆಂದನು (ಜನವು. ೧೮-೮).
[ಈರ್$_3$ (< ಇರ್$_2$) + -ಕಳ್$_5$]

**ಈರ್ಬಾಚಣಿಗೆ** (ನಾ). = ಈರಣಿಗೆ (ದಕ. ೬). [ಈರ್$_2$ + ಬಾಚಣಿಗೆ]

**ಈರ್ಮ** (ನಾ). ವ್ರಣ ; ಹುಣ್ಣು ; ಗಾಯ : "ಕ್ಷತಂ, ಈರ್ಮಂ – ಈವಿ ಏಱು" (ಹಲಾಯು. ೧೦೪-೮). [ಸಂ.]

**ಈರ್ಮಕಾಱ** (ನಾ). ತೊರೆಯವನು ; ಬೆಸ್ತ : "ಈರ್ಮಕಾಱಂ ಕೀಲಿಗನೆನಿಕ್ಕುಂ" (ಮಂಗರಾ. ೧೧೨-೬). [ಈರ್ಮ + -ಕಾಱ]

**ಈರ್ಯಾಪಥ** (ನಾ). [ಜೈನ] ಪರ್ಯಟನದ ದಾರಿ, —ಮಾರ್ಗ : ಈರಣಮುಂ ಈರ್ಯೆಯುಂ ಪೋಗಗತಿಯುಂ ಎಂದೊಡೆ ಏಕಾರ್ಥಂ ತದ್ವಾರಕಮಪ್ಪ ಕರ್ಮಂ ಈರ್ಯಾಪಥಂ (ತತ್ತ್ವಪ್ರ. ೨೫೪).
[ಸಂ. (ಈರ್ಯಾ + ಪಥ)]

**ಈರ್ಯಾಪಥಶುದ್ಧಿ** (ನಾ). [ಜೈನ] ನೆಲವನ್ನು ನಾಲ್ಕು ಮೊಳಗಳಷ್ಟು ಮುಂದೆ ನೋಡುತ್ತಾ ನಡೆಯುವುದು ; ಹೀಗೆ ನಡೆಯುವಲ್ಲಿ ಆಗುವ ಜೀವಹಿಂಸಾದಿ ದೋಷಗಳನ್ನು ತಪ್ಪಿಸಿಗೆಯಿಂದ ಹೋಗಲಾಡಿಸುವುದು : ವಾಸವನಕೃತ್ರಿಮಚೈತ್ಯಾಲಯಮಂ ಪುಗುವಂತೆಪೊಕ್ಕೀರ್ಯಾಪಥಶುದ್ಧಿಯಂ ಮಾಡಿ ಕ್ರಿಯಾಪೂರ್ವಕಮಭಿವಂದಿಸಿ (ಚಂದ್ರಪು. ೮-೧೦೪ ವ). [ಈರ್ಯಾಪಥ + ಶುದ್ಧಿ]

**ಈರ್ಯಾಮಾರ್ಗ** (ನಾ). = ಈರ್ಯಾಪಥ : ಈರ್ಯಾಮಾರ್ಗಪರ್ಯವಲೋಕನ ಮುಂದ ಮುಂದಗಮನ ನಿರತರ್ (ಶಾಂತಿಪು. ೬-೭೦ ವ).
[ಸಂ. (ಈರ್ಯಾ + ಮಾರ್ಗ)]

**ಈರ್ಯಾವಿಶುದ್ಧಿ** (ನಾ). = ಈರ್ಯಾಪಥಶುದ್ಧಿ : ಯುಗಮಾತ್ರಕ್ಷೇತ್ರಮಂ ಕಣ್ಬರಿಕಿಸಿ ನಡೆದೀರ್ಯಾವಿಶುದ್ಧಿಕ್ರಮಂ ಕೈಮಿಗೆ (ಮಲ್ಲಿಪು. ೧೩-೧೯೬). [ಸಂ. (ಈರ್ಯಾ + ವಿಶುದ್ಧಿ)]

**ಈರ್ಯಾಶುದ್ಧಿ** (ನಾ). = ಈರ್ಯಾಪಥಶುದ್ಧಿ : ಈರ್ಯಾಶುದ್ಧಿತಪೋಗುಣಪರ್ಯಾಯವಿಶುದ್ಧಿಯೆಂಬುವಂ ಬಗೆವೀ ತಾತ್ಪರ್ಯದಿನೇಸುಂ ಬಗೆಯದೆ (ಸುಕುಮಾ. ೧೨-೧೭). [ಸಂ. (ಈರ್ಯಾ + ಶುದ್ಧಿ)]

**ಈರ್ಯಾಸಮಿತಿ** (ನಾ). [ಜೈನ] ಪಂಚಸಮಿತಿಗಳಲ್ಲಿ ಒಂದು : "ಈರ್ಯಾಸಮಿತಿ (ಹಗಲು ಲಕ್ಷ್ಯಪೂರ್ವಕ ಮುಂದಿನ ನಾಲ್ಕುಮೊಳದಾರಿಯನ್ನು ನೋಡುತ್ತ ನಡೆಯುವುದು)" (ಜೈನಪ. ೪೯೭) ; ಪ್ರಾಸುಕಮಾರ್ಗದಲ್ಲಿ ದಿವಸದೊಳ್ ಸ್ವಕಾರ್ಯಾಪೇಕ್ಷೆಯಿಂ ಉತ್ಸುಕನುಂ ಅನ್ಯಮನಸ್ಕನುಂ ಆಗದೆ ಮುಂದಂ ನೋಡಿ ಸೂಕ್ಷ್ಮಬಾದರ ಪ್ರಾಣಿಗಳಂ ಪರಿಹರಿಸಿ ಸುಪ್ರಯತ್ನದಿಂ ನಡೆವುದು ಈರ್ಯಾಸಮಿತಿ (ತತ್ತ್ವಪ್ರ. ೩೨೪).
[ಸಂ. (ಈರ್ಯಾ + ಸಮಿತಿ)]

**ಈರ್ಯೆ** (ನಾ). [ಜೈನ] ಸಂನ್ಯಾಸಿಗಳ ಪರ್ಯಟನ, —ಸಂಚಾರ ; ಜೀವಹಿಂಸೆಯಾಗದಂತೆ ಮುಂದೆ ನಾಲ್ಕುಮೊಳ ನೋಡಿ ನಡೆಯುವಿಕೆ : ಈರಣಮುಂ ಈರ್ಯೆಯುಂ ಪೋಗಗತಿಯುಂ ಎಂದೊಡೆ ಏಕಾರ್ಥಂ ತದ್ವಾರಕಮಪ್ಪ ಕರ್ಮಂ ಈರ್ಯಾಪಥಂ (ತತ್ತ್ವಪ್ರ. ೨೫೪). [ಸಂ. ಈರ್ಯಾ]

**ಈರ್ವಾರು** (ನಾ). ಸೌತೆಕಾಯಿಯಲ್ಲಿ ಒಂದು ಬಗೆ. [ಸಂ.]

**ಈರ್ಷೆ** (ನಾ). = ಈರ್ಷ್ಯೆ : ಪದಪಿಂದಂ ತಾಳ್ದಿ ನಿಂದಳ್ ಗಗನದಿ ಮಹಾಕಾಳದೇವೋತ್ತಮಾಂಗಾಗ್ರದೊಳೆಂಬೊಂದೀರ್ಷೆಯಿಂದಂ (ಕಾದಂಪೂ. ೩೦೦).
[ಸಂ. ಈರ್ಷಾ]

**ಈರ್ಷ್ಯೆ** (ನಾ). ಹೊಟ್ಟೆಕಿಚ್ಚು ; ಅಸೂಯೆ ; ಮಾತ್ಸರ್ಯ ; ಹಗೆತನ : ರಾಮನ ಲಕ್ಷ್ಮಣನ ಭರತ ಶತ್ರುಘ್ನರ ವಿದ್ಯಾಮಹಿಮೆ ಚತುಷ್ಷಷ್ಟಿಕಲಾಮಹಿತರ ಮನದೊಳೀರ್ಷ್ಯೆಯಂ ಪುಟ್ಟಿಸುಗುಂ (ಪಂರಾಮಾ. ೩-೧೪೮).
[ಸಂ. ಈರ್ಷ್ಯಾ]

**ಈಲಾಗು**$_1$ (ಕ್ರಿ). ಗಬ್ಬವಾಗು : ಹಸು ಈಲಾಗಿದೆ (ರೂಢಿ).
[ಈಲು$_1$ + ಆಗು$_1$]

**ಈಲಾಗು**$_2$ (ಕ್ರಿ). ಒಳಗಾಗು ; ವಶವಾಗು ; ಪಳಗು ; ಸಲಿಗೆಯಾಗು : ಗಂಡಕವು ಸ್ಥೂಲ ಇದ್ದಾಗ್ಯೂ ಕಾಲಲಿ ಬಹು ಹಗುರ ಇರುತ್ತದೆ. ಅದು ಜಾತ್ಯಾ ಸಿಟ್ಟಿನದಲ್ಲ ; ಆದಾಗ್ಯೂ ಮನುಷ್ಯರ ಈಲಾಗುವುದಿಲ್ಲ (ಮುಂಬಯಿ. ೪-೪೭) ; ಆಡವೀಕುರಿಗಳು ಮನುಷ್ಯರಿಗೆ ಮೊದಲು ಹೆದರಿದರೂ ಬರುಬರುತ್ತ ಈಲಾಗುತ್ತವೆ (ಮುಂಬಯಿ. ೩-೧೧) ; ರನ್ನನು ರಾಚಮಲ್ಲನಿಗಿಂತ ಹೆಚ್ಚಾಗಿ ಚಾವುಂಡರಾಯನ ಈಲಾಗಿರಬೇಕು (ಮೂರುಉ. ೨೬) ; ಯಾವಾಗಲೂ ವಕ್ರವಾಗಿರುತ್ತಿದ್ದ ಮನೆಯ ಎರಡು ಎತ್ತು . . . ಭಾಗೀರತಿಗೆ ಈಲಾಗಿದ್ದುವು (ಕರಿಹಾ. ೩೮).
[ಈಲ್ಸು$_2$ + ಆಗು$_1$]

**ಈಲಿ, ಈಳಿ** (ನಾ). = ಈಳಿಗೆ : "ಕೃಪಾಣೀ, ಈಲೀ, ಕರ್ತರೀ — ಈ ೩ ಕಡಿವ ಕತ್ತಿಗೆ ಎಂದರ್ಥವು" (ಹಲಾಯು. ೯೭-೪೪೧ ಅಡಿಟಿ). ಈಳಿ : "ಈಳೀ [ಪಾಠಾಂ. ಈಳಿಕಃ] ಕರವಾಳಿಕಾ — ಈ ೨ ತುಳುವ ಕತ್ತಿ, ಮೊಟಕು ಕತ್ತಿ, ಗುಜ್ಜುಕತ್ತಿ, ಈಟಕತ್ತಿ, ಈಳಿಗೆಕತ್ತಿ" (ಸಿದ್ಧಾಂತಿ. ೨೨೮).
[< ಸಂ. ಈಲೀ]

**ಈಲಿಕೆ** (ನಾ). = ಈಳಿಗೆ (ದಕ. ೬). [?]

**ಈಲಿತ** (ಗು). = ಈಡಿತ (೧). [ಸಂ.]
**ಈಲು$_1$** (ನಾ). ಗಬ್ಬ. 'ಈಲಾಗು$_1$' ಪರಾ. [< ಈನ್]
**ಈಲು$_2$** (ನಾ). ಸಲಿಗೆ; ಪಳಕ; "ಸಭ್ಯತನ, ವಹಿವಾಟಿಕೆ, ಪರಿಚಯ, ವಶ" (ಜಾನಕೋ. ೧೮); ಆ ನಾಯಿ ನಿನಗೆ ಈಲು ಆದೆ (ಹೊಲವು. ೨೭); ಎತ್ತು ಕುದುರೆ ಮುಂತಾದ ಪಶುಗಳನ್ನು ಈಲುಮಾಡಿ ತಮ್ಮ ಬೇಸಾಯದ ಕೆಯ್ಮೆಗೆ ಹೂಡಿಕೊಳ್ಳುವುದೇ ಆ ಶೋಧ (ಮಾವಾದ. ೨೭). [ದೇ. ‖ ತಮಿ. ಇಯಲ್ = ಸ್ವಭಾವ, ಗುಣ ಇತ್ಯಾದಿ; ತೆಲು. ಈಲುವು ?]
**ಈವತ್ತು** 'ಈಪೊಟ್ಟು' ನೋ.
**ಈವರಂ** (ಅ). ಇದುವರೆಗೂ; ಇಲ್ಲಿಯವರೆಗೂ: ನಿನ್ನ ಸೂರ್ಯತಪಕಭಿನ್ನಮಾತ್ಮಿಕಶಕ್ತಿ ಕಾದುವೈ ನಮ್ಮನೀವರಮೇಕರೀತಿ (ಅಮತಂ. ೪೫–೮). [ಇದು + –ವರಂ]
**ಈವರು** 'ಈವಱು' ನೋ.
**ಈವಱು, ಈವರು** (ನಾ). ಇತ್ತೀಚೆ; ಸ್ವಲ್ಪ ಮುಂಚಿನಕಾಲ: ವಿವರಿಪುವೀವಱು ಮೊನೆಯೇಡವು ಕಿಂಚಿದ್ಭೂತ ಭೂತಕಾಲದ್ವಯದೊಳ್; ಈವಱೆಂಬುದು ಈಷದ್ಭೂತಕಾಲಂ (ಶಮದ. ೩೨೨, ವೃತ್ತಿ). **ಈವರು**: ನಿನ್ನ ಈವರಿನ ಸಮುಖದ ಒಳವಾಗಿಲ ಗುರಿಕಾರತನಗಳು ಸರ್ವಥಾ ತೃಪ್ತಿಕರವಾಗಿರಲಿಲ್ಲ (ಬಿಟ್ಟಅ. ೪೬–೫). [?]
**ಈವಾಗ** (ಅ). ಈಗ; ಸದ್ಯಕ್ಕೆ: "ಈವಾಗ ಕೇಳಿಸಿತೇ ? ಇವತ್ತು ನಾವು ಸಿನೇಮಾ ನೋಡುವುದಕ್ಕೆ ಹೋಗುತ್ತೇವೆ" ಎಂದಳು (ಪರಿಣೀ. ೧೫). [ಈ$_5$ (< ಇದು) + ಆಗ (< ಆಗಡು)]
**ಈವಿ** (ನಾ). ಕೊಡುಗೆ; ದಾನ: "ದಾಶನಂ, ದಾಶನೀಯಂ, ದಾಶ್ಯಂ — ಈ ೩ ಈವಿ" (ಕಾಶಕ್ಯ. ೧೫೪). [ಈ$_2$ + –ವಿ]
**ಈವೊತ್ತು** 'ಈಪೊಟ್ಟು' ನೋ.
**ಈಶ** (ನಾ). ೧. ಒಡೆಯ; ಪ್ರಭು; ಧಣಿ; ಸ್ವಾಮಿ: ಪೊಯ್ದು ಕರ್ಣಮಂ ಲೀಳೆಯಿನೀಶ ನಿನ್ನ ಗಜರಾಜಿಗಳೆಟ್ಟೆಪುವಲ್ತೆ ಸೆಜ್ಜೆಯಿಂ (ಶಾಂತಿಪು. ೫–೯೧); ಪೃಥುರೋಮೇಶ ತಿಮಿಂಗಿಲಂ ತಿಮಿಯ ನೂಂಕಲ್ ಸಿಂಧು ತಾನಕ್ಕುದೇ (ಸೋಮೇಶ. ೮೮). ೨. ಈಶ್ವರ; ಶಿವ: "ಹರನುಗ್ರನೀಶಂ ವೃಷಧ್ವಜಂ ಶಂಭು . . . ಎನಲು ರುದ್ರಂ" (ಮಂಗರಾ. ೪–೧೧); ಈಶಂಗತ್ತಲತ್ತತ್ತಲತ್ತಲು ಮತ್ತೆಯು ಸದಾಶಿವನ ಮೇಲಣ ತತ್ತ್ವ ನೀವಲ್ಲ (ಬಸವು. ೬೧–೫೩). ೩. ಏಕಾದಶ ರುದ್ರರಲ್ಲಿ ಒಬ್ಬ. ೪. ಈಶಾನ್ಯ ದಿಕ್ಕಿಗೆ ಒಡೆಯ. ೫. [ಛಂದ] ಗುರು ಅಕ್ಷರಕ್ಕೆ ಒಂದು ಸಂಕೇತ: ತೇಜಮರ್ಕನೀಶನಿಂದೋಜೆವೆತ್ತು ನಿಂದೊಡಂ (ಛಂದೋಂಬು. ೨–೩೫). [ಸಂ.]
**ಈಶತೆ** (ನಾ). ಈಶತ್ವ: ಕರುಣವೀ ದಂಡಾಂಕಿತ ಪ್ರಭುತ್ವಕೆ ಮೇಲು . . . ಪರಮೇಶನೀಶತೆಯು ಸಾಮ್ಯವದಕೆ (ಕಎಪು. ೫೩). [ಸಂ. ಈಶತಾ]
**ಈಶತ್ವ** (ನಾ). ಒಡೆತನ; ಪ್ರಭುತ್ವ; ಸ್ವಾಮಿತ್ವ: ಆ ಪರಬ್ರಹ್ಮನಲಿ ತ್ರಿಜಗದ್ವ್ಯಾಪಕತ್ವ ನಿಯಾಮಕತ್ವ ಸ್ಥಾಪಕತ್ವ ವಶತ್ವ ಈಶತ್ವಾದಿ ಗುಣಗಳಿಗೆ ಲೋಪವಿಲ್ಲ (ಹಸಾರ. ೧೬–೨೩). [ಸಂ.]
**ಈಶಶಾಸನ** (ನಾ). ಒಡೆಯನ ಅಪ್ಪಣೆ; ಪ್ರಭುವಿನ ಆಜ್ಞೆ: ಬರ್ಪುದೆಂಬೀಶಶಾಸನಮಂ ನೆತ್ತಿಯೊಳಾಂತು ಬನ್ನಿಮೆಱಗಿಂ ಚಕ್ರೇಶ ಪಾದಾಬ್ಜದೊಳ್ (ಆದಿಪು. ೧೪–೩೧). [ಈಶ + ಶಾಸನ]
**ಈಶಾನ** (ನಾ). ೧. ಈಶ್ವರ; ಶಿವ: ಒಯ್ಯನೆ [ಸುತ್ತಂ] ಸೂಸಿದೀಶಾನನ ಜಡೆಗಳವೊಲ್ವಾಯ್ದು ಪೊನ್ನೀರ್ಗವಿಲ್ಗೆಂಪಿನ [ಪೆಂಪಂ] ಸಿಂಪಿಸುತ್ತಿರ್ದ ಹಿಮರುಚಿಗಳಂ ತಿಗ್ಮರುಜ್ಜ್ವಾಲಿಬಿಂಬಂ (ಕಾದಂಉ. ೩೭೪). ೨. ಶಿವನ ಪಂಚಮುಖಗಳಲ್ಲಿ ಒಂದು. ೩. ಈಶಾನ್ಯದಿಕ್ಕಿನ ಪಾಲಕ. ೪. ಏಕಾದಶರುದ್ರರಲ್ಲಿ ಒಬ್ಬ. ೫. ಸೂರ್ಯ. ೬. [ಜೈನ] ಒಂದು ಸ್ವರ್ಗದ ಹೆಸರು. 'ಈಶಾನಕಲ್ಪ' ಪರಾ. ೭. [ಛಂದ] ರುದ್ರಗಣ: ಮುನ್ನಂ ಭೂಮಿದ್ವಂದ್ವಾಕಾಶಂ ಸುರಪುರ ಗಣಗತಿ ತತಿಯಿನಿರೆ ಬೞಿಕ್ಕಿನ್ನತ್ತಂ ವೈಕುಂಠೇಶಾನರ್ . . . ಮತ್ತಾಕ್ರೀಡಾಹ್ವಯಂ (ಛಂದೋಂಬು. ೨–೧೩೮). ೮. [ಛಂದ] ಗುರು ಅಕ್ಷರದ ಸಂಕೇತ: ಪಿಂತುರ್ವೀಯುಗ್ಮಂಗಳ್ ಬರ್ಕುಮಂತೀಶಾನದ್ವಂದ್ವಂ ನಿಲ್ಕುಂ. . . ವಿದ್ಯುನ್ಮಾಲಾವೃತ್ತಂ (ಛಂದೋಂಬು. ೨–೪೨). [ಸಂ.]
**ಈಶಾನಕಲ್ಪ** (ನಾ). [ಜೈನ] ಹದಿನಾರು ಜೈನ ಸ್ವರ್ಗಗಳಲ್ಲಿ ಎರಡನೆಯದು: ಅನ್ನೆಗಮಿಾಶಾನಕಲ್ಪದೊಳಾ ಶ್ರೀಪ್ರಭವಿಮಾನದೊಳ್ (ಆದಿಪು. ೩–೧೨ ವ); ಅಮಳ್ಗಳ್ ನೋಂತು ಮುಡಿಪಿದ ಸಮಯದೊಳೀಶಾನಕಲ್ಪದೊಳ್ ಜನಿಯಿಸಿದರ್ (ಯಶೋಚ. ४–೭೮). [ಈಶಾನ + ಕಲ್ಪ]
**ಈಶಾನಿ** (ನಾ). ದುರ್ಗೆ; ಪಾರ್ವತಿ. [ಸಂ. ಈಶಾನೀ]
**ಈಶಾನೇಂದ್ರ** (ನಾ). [ಜೈನ] ಈಶಾನಕಲ್ಪದ ಇಂದ್ರ: ಆಗಳಾ ಸೌಧರ್ಮೇಂದ್ರನುಮಿಾಶಾನೇಂದ್ರನುಂ ಸಿಂಹಾಸನದೆರಱಿಲದೊಳಂ (ಆದಿಪು. ೭–೭೬ ವ). [ಈಶಾನ + ಇಂದ್ರ]
**ಈಶಾನ್ಯ** (ನಾ). ೧. ಉತ್ತರದಿಕ್ಕಿಗೂ ಪೂರ್ವದಿಕ್ಕಿಗೂ ಮಧ್ಯೆ ಇರುವ ದಿಕ್ಕು. ೨. ಈಶಾನ್ಯದಿಕ್ಕಿನ ಒಡೆಯ. ೩. ಈಶ್ವರ. [ಸಂ.]
**ಈಶಿತೃ** (ನಾ). ಒಡೆಯ; ಪ್ರಭು. [ಸಂ.]
**ಈಶಿತ್ವ** (ನಾ). = ಈಶತ್ವ. [ಸಂ.]
**ಈಶ್ವರ** (ನಾ). ೧. ಒಡೆಯ; ಪ್ರಭು; ರಾಜ. ೨. ಶಿವ. ೩. ಏಕಾದಶ ರುದ್ರರಲ್ಲಿ ಒಬ್ಬ. ೪. ಲಿಂಗ: ಅಚ್ಯುತಂಗತ್ತತ್ತಲತ್ತಲು ರುದ್ರನಾ ರುದ್ರಂಗೆ ಈಶ್ವರನು ಅತ್ತಲು (ಬಸವು. ೬೧–೫೩). ೫. ಪ್ರಭವಾದಿ ಅರುವತ್ತು ಸಂವತ್ಸರಗಳಲ್ಲಿ ಹನ್ನೊಂದನೆಯದು. ೬. ಪರಮಾತ್ಮ: ಅಭೋಕ್ತನಿಗಿಂತ ಬೇರೆಯಾಗಿ ಸರ್ವಜ್ಞನೂ ಸರ್ವಶಕ್ತನೂ ಆಗಿರುವ ಈಶ್ವರನೊಬ್ಬನು ಇರುತ್ತಾನೆಂದು ಕೆಲವರು ಅಭಿಪ್ರಾಯಪಡುತ್ತಾರೆ (ಬ್ರಹ್ಮಭಾ. ೧೫); ಈಶ್ವರಗಿಂತ ಗಡಬಡೇಶ್ವರ ದೊಡ್ಡವನೇ (ಗಾದೆ). ೭. ಒಂದು ಔಷಧಿ ಬೇರು; ಈಶ್ವರೀಬೇರು: "ವ್ಯಾಳಗಂಧಾ–ಈಶ್ವರ" (ಔಷಧಿ. ೧೫೨). ೮. ಧನವಂತ; ಶ್ರೀಮಂತ: ಆಢ್ಯಃ, ಸಮೃದ್ಧಃ . . . ಈಶ್ವರಃ — ಈ ೭ ಧನವಂತಂ" (ಹಲಾಯು. ೫೯–೨೦೧). [ಸಂ.]
**ಈಶ್ವರಗಣ** (ನಾ). ೧. ಶಿವನ ಗಣ; ಈಶ್ವರನ ಸೇವಕರ ಸಮೂಹ; ಪ್ರಮಥಗಣ. ೨. [ಛಂದ] ರುದ್ರಗಣ: ತುದಿಯೊಳೀಶ್ವರಗಣಮೊದವಿರೆ ಪದಮೆಲ್ಲಂ ಮದಗಜಗಮನೆ . . . ಚಿತ್ರಲತೆಯಕ್ಕುಂ (ಛಂದೋಂಬು. ೫–೧೨). [ಈಶ್ವರ + ಗಣ]
**ಈಶ್ವರತ್ವ** (ನಾ). = ಈಶತ್ವ: "ಸ್ವೇಚ್ಛಾಮಾತ್ರದಿಂ ಗತ್ಯುತ್ಪತ್ತ್ಯಾದಿ ಕೃತ್ಯ ಕರಣಮಂ ಸೂರ್ಯಾದಿಗಳಂ ಪ್ರೇರಿಸುವ ತನವೇ ಈಶ್ವರತ್ವ" (ಪರಮಾ. ೫೨). [ಸಂ.]
**ಈಶ್ವರಬಳ್ಳಿ** (ನಾ). = ಈಶ್ವರಿ ೨. (೧). [ಈಶ್ವರ + ಬಳ್ಳಿ]
**ಈಶ್ವರಬೇರು** (ನಾ). = ಈಶ್ವರಿ ೨. (೧). [ಈಶ್ವರ + ಬೇರು]
**ಈಶ್ವರಯ್ಯ** (ನಾ). ಒಬ್ಬಾತನ ಹೆಸರು: ಈಶ್ವರಯ್ಯಗೆ ಕಾಲಂ ಕೞ್ಚಿ ಕೊಟ್ಟಂ (ಎಕ. VIII, ಸೊರಬ. ೭೦–೨೦ ; 938). [ಈಶ್ವರ + ಅಯ್ಯ$_1$]
**ಈಶ್ವರವಲ್ಲಿ** (ನಾ). = ಈಶ್ವರಿ ೨: "ಆಸುರಿಯೆನಲ್ಕೆಯಿಾಶ್ವರವಲ್ಲಿಯಕ್ಕು" (ಮಂಗರಾ. ೪೫–೪೮). [ಈಶ್ವರ + ವಲ್ಲಿ]
**ಈಶ್ವರವಿರಹ** (ನಾ). ಒಡೆಯನ ಅಗಲಿಕೆ; ಸ್ವಾಮಿ ವಿರಹ: ಈಶ್ವರವಿರಹದೆ ಶೋಕಾಕುಲಂ ವಿಶೇಷಾಪ್ತಜನಂ (ಕವಿರಾ. ೩–೩೧). [ಈಶ್ವರ + ವಿರಹ]

**ಈಶ್ವರಶೈಲ** (ನಾ). ಕೈಲಾಸ ಪರ್ವತ : ತರುಣೋತ್ತುಂಗ ಶಶಾಂಕ ಖಂಡಮೆ ಸು ಧಾ ಬೀ ಜ ಂ ಭುಜಂಗೇಂದ್ರಸಂಕುರಮುನ್ಮೀಲಿತಮುಟ್ಟ ಹಾಸಮೆ ದಳಾನೀಕಂ ವೃಷಂ ಪುಷ್ಪಮೀಶ್ವರಶೈಲಂ ಫಲಮಾಗೆ ಕೋಮಲ ಮುಖೀಗೌರೀಲತಾಶ್ಲಿಷ್ಟಶಂಕರಕಲ್ಪದ್ರುಮನೀಗಭೀಷ್ಟಫಲಮಂಚಾಳುಕ್ಯ ನಾರಾಯಣಂ (ಗದಾಯು. ೧–೨). [ಈಶ್ವರ + ಶೈಲ]

**ಈಶ್ವರಸದ್ಮ** (ನಾ). ಶಿವಾಲಯ; ದೇವಸ್ಥಾನ (ಕಿ). [ಸಂ. ಈಶ್ವರಸದ್ಮನ್ (ಈಶ್ವರ + ಸದ್ಮನ್)]

**ಈಶ್ವರಾಂಶಜ** (ನಾ). ಈಶ್ವರನ ಅಂಶದಿಂದ ಹುಟ್ಟಿದವನು; ವೀರ ಭದ್ರ ಮುಂತಾದವರು : ಈಶ್ವರಾಂಶಜನಲ್ಲದೇ ಇಳೆಯನ್ನಾಳಲಾರನು (ಗಾದೆ. ಕಿ). [ಸಂ.]

**ಈಶ್ವರಿ** (ನಾ). ೧. ಪಾರ್ವತಿ; ಶಿವೆ. ೨. ಹಾವಿನ ವಿಷಕ್ಕೆ ಔಷಧಿ ಯಾಗುವ ಒಂದು ಮೂಲಿಕೆ : ಬೆರಸಮುರ್ದುವಳ್ಳಿಯೊಳಗೀಶ್ವರಿಯಂ ಕಾಳ್ಪೆಸರನೀ ಕಷಾಯಂ ಕೆಡಿಕುಂ ಜ್ವರಮಂ (ಕಲ್ಯಾಕಾ. ೩–೨೮); "ಅಹಿಮಾರ—ಈಶ್ವರಿ" (ಒಷಧಿ. ೫). [ಸಂ. ಈಶ್ವರೀ]

**ಈಶ್ವರಿಬೇರು** 'ಈಶ್ವರೀಬೇರು' ನೋ.

**ಈಶ್ವರಿವಳ್ಳಿ** (ನಾ). = ಈಶ್ವರಿ ೨ (ಕಿ). [ಈಶ್ವರಿ + ಬಳ್ಳಿ]

**ಈಶ್ವರೀಬೇರು**, ಈಶ್ವರಿಬೇರು (ನಾ). = ಈಶ್ವರಿ ೨ : "ಈಶ್ವರೀಬೇರು, ತೊಪ್ಪಲು, ಗೋಪಾಲಪುಟ್ಟತೊಪ್ಪಲು" (ಮೈಔಗ. ೯–೧೫೩). **ಈಶ್ವರಿ ಬೇರು** (ಕಿ). [ಈಶ್ವರಿ + ಬೇರು]

**ಈಷಣ**$_1$, ಈಷಣೆ (ನಾ). ಆಸೆ; ಇಚ್ಛೆ; ಬಯಕೆ : ತರಿದೀಷಣಂಗಳಂ ನಿರ್ಮಮತೆಯಿಂ ತಪವ ವಿರಚಿಸುವ ಪುರುಷನೊರ್ವಂ (ವೆಂಕಾರಾ. ೨–೨೧–೨೨); ಮುಪ್ಪಿನೊಂದಿಗೆ ಈಷಣ ಬೆಳೆದು ಜಗದ್ಗುರುವಾದರೂ . . . ಹೆಣ್ಣುಮಕ್ಕಳೊಂದಿಗೆ ಎಂದಿಗಿಂತ ಹೆಚ್ಚಿನ ಸಲಿಗೆಯಿಂದ ಚೆಲ್ಲಾಟ ವಾಡಿದನು (ಸಣ್ಣಕ. VIII, ೬೫). **ಈಷಣೆ** : ಮನಸ್ಸಿ ಬಿಸುಡುವುದಶೇಷ ವಿಷಯೇಷಣೆಯಂ (ಉಸಾರ. ೧೮೦). [< ಸಂ. ಏಷಣಾ]

**ಈಷಣ**$_2$ (ನಾ). ತ್ವರೆ; ಆತುರ. [ಸಂ.]

**ಈಷಣತ್ರಯ** (ನಾ). ಮಕ್ಕಳು, ಹೆಂಡತಿ, ಹಣ ಎಂಬ ಮೂರು ವಸ್ತುಗಳ ಮೇಲಿನ ಮೋಹ : ಪುತ್ರೇಷಣ ವಿತ್ತೇಷಣ ದಾರೇಷಣಂ ಗಳೆಂಬ ಈಷಣತ್ರಯವನುಳಿದು (ಆದವ. ೧೫೧); ಈಕ್ಷಿಸು ಯೀಷಣತ್ರಯ ದೂರ ಕಲ್ಕಿಯುಪೇಕ್ಷಿಸದೊಲು ಸರ್ವೇಶ (ಶತಸಾಂ. ೬೪–೨೩); ಈಷಣ ತ್ರಯದೂರ ಕರುಣಾರ್ದ್ರಲೋಚನಂ ದೋಷಪ್ರಣಾಶನುಂ (ಗುರುಚಾ. ೩–೮೨). [ಈಷಣ$_1$ + ತ್ರಯ]

**ಈಷಣೆ** 'ಈಷಣ$_1$' ನೋ.

**ಈಷತು** 'ಈಷತ್ತು' ನೋ.

**ಈಷತ್ಖಂಡನ** (ನಾ). ಸಣ್ಣ ಚೂರಾಗಿ ಕತ್ತರಿಸುವುದು; ಸ್ವಲ್ಪ ಮುಕ್ಕು ಮುಕ್ಕು ಮಾಡುವುದು. [ಸಂ. (ಈಷತ್ + ಖಂಡನ)]

**ಈಷತ್ತು**, ಈಷತು (ಅ). ಸ್ವಲ್ಪ; ಅಲ್ಪ; ಕೊಂಚ : ಅಂಥ ಯೋಚ ನೆಯ ಕಲೆ ಈಷತ್ತು ಕಂಡರೂ ಅರಮನೆಯ ಗೌರವಸಂಪತ್ತಿಗೆ ಕುಂದಕ (ಚಿಕರಾ. ೨೨೪). **ಈಷತು** : ಸರಿಸಿಯೆಡಗಾಲನ್ನು ಹಿಂದಕ್ಕಿರಿಸಿ ಬಲಗಾ ಲನ್ನು ಮುಂದಕ್ಕೆಯುರವನೀಷತು ಮುಂದುಚಾಚಿದ (ರಘುವಂ. ೨೧೯). [< ಸಂ. ಈಷತ್]

**ಈಷತ್ಪಾಂಡು** (ನಾ). ಸ್ವಲ್ಪಮಾತ್ರ ಬಿಳಿದಾಗಿರುವುದು; ಬೂದು ಬಣ್ಣ. [ಸಂ. (ಈಷತ್ + ಪಾಂಡು)]

**ಈಷದಪಿ** (ಅ). ಸ್ವಲ್ಪವಾದರೂ : ಅವನಿಗೆ ಈಷದಪಿ ಲಜ್ಜೆಯಿಲ್ಲ (ರೂಢಿ). [ಸಂ.]

**ಈಷದಾವಲಿತ** (ಗು). ೧. ಸ್ವಲ್ಪ ತಿರುಗಿದ, —ಬಾಗಿದ. ೨. ಸ್ವಲ್ಪ ತಿರುಗಿಸಿದ, —ಬಾಗಿಸಿದ : ಜಾಬಾಲಿಮುನೀಂದ್ರನಾ ಮಾತಂ ಕೇಳ್ದೀಷ ದಾವಲಿತ [ಪಾಠಾಂ. ಶಾಕ್ವರ] ಕಂಧರನಿದೆತ್ತಣಿಂ ಬಂದುದೆಂದು ಪುಣ್ಯ ಜಲದಿಂ ಪ್ರಕ್ಷಾಳಿಸುವಂತೆ . . . ನೋಡಿ (ಕಾದಂಪೂ. ೨೬೪). [ಸಂ. (ಈಷತ್ + ಆವಲಿತ)]

**ಈಷಾವಿದೂರ** (ನಾ). ಆಸೆಯಿಂದ ದೂರವಿರುವವನು, —ಮುಕ್ತ ನಾದವನು : ಈ ಷಾ ವಿ ದೂ ರ ನೆ ಪರಬ್ರಹ್ಮವಾ ಪ್ರಣಮವೇಷಿಯೇ (ವೀಶೈಪು. ೬–೫–೩). [ಸಂ. (ಈಷಾ + ವಿದೂರ)]

**ಈಷೆ** (ನಾ). = ಈಸ್ಕು. [ಸಂ. ಈಷಾ]

**ಈಸ** (ನಾ). ಈಶ್ವರ; ಶಿವ : "ಎಣ್ಮಯ್ಯಂ . . . ಈಸಂ, ಗೊರವಂ, ಚಳಿವೆಟ್ಟಳಿಯಂ, ಸ ಸಿ ದ ಲೆ ಯ ಂ, ಗನಹಂ, ಐಮೊಗಂ – ಈ ೩೩ ಈಶ್ವರಂಗೆ ಪೆಸರ್" (ಕ ಶ ಸಾ . ೧–೧); ಪೆಜದೆಗೆಯದೀಸನೊರ್ವನೆ ನಿಂದಂ (ಕಬ್ಬಿಕಾ. ೨೯೫); ಈಸನನಾಯಸಂಬಡೆದು ಮೆಚ್ಚಿಸಿ (ಉದ್ಭಟ. ೧೧–೧೩೨). [< ಸಂ. ಈಶ]

**ಈಸಗುಂಬಳ** (ನಾ). = ಈಸುಗಾಯಿ : ಈಸಗುಂಬಳ ಜೊತೆಯು ಬೇಕು ಈಸುವರೆ, ಪಾತಾಳಕೊಯ್ಯುವಾ ಕಲ್ಲನರಸುವರೇ ? (ಉಯ್ಯಾಲೆ. ೮೩–೪). [< ಈಸು$_1$ + ಕುಂಬಳ]

**ಈಸಗುಂಬಳಕಾಯಿ** 'ಈಸುಗುಂಬಳಕಾಯಿ' ನೋ.

**ಈಸರ**, ಈಸ್ವರ (ನಾ). ೧. ಈಶ್ವರ; ಶಿವ : "ಈಶ್ವರ—ಈಸರ" (ಶ ಮು ದ . ೨೮೧ ಪ್ರಯೋ); ಅಮರ್ದುಗೊರಲೀಸರಂ ಮೆಯ್ಯಮರ್ದ ಮರಲ್ವಿಲ್ಲನಿಚಿತವಿಲಿ ತಣ್ಣದಿರಂ (ಅಪ್ರತಿ. ೪೩–೨); ಈಸರನಡಿಗೆ ಸಲೆ ಸಮರ್ಪಣವಾಗಲಿ (ಮಲ್ಲಚ. ೧–೧೦). **ಈಸ್ವರ** : ೨. ಒಡೆಯ; ಪ್ರಭು : ಶ್ರೀಮನ್ಮಹಾಮಂಡಳೇಸ್ವರಂ ದ್ವಾರಾವತೀಪುರವರಾಧೀಸ್ವರಂ (ಮೈಅಲಿ. ೧೯೩೪, ೧೨–೧ ; 1117). [< ಸಂ. ಈಶ್ವರ]

**ಈಸರಯ್ಯ** (ನಾ). ಒಬ್ಬಾತನ ಹೆಸರು : ಇದಾರ್ಕ್ಕೆ ಸಾಕ್ಷಿ ಚೆದುರಾಂ ಗರನಯ್ಗ ಮಾರಸಿಙ್ಗ ನಾಯ್ಗ ಈಸರಯ್ಯ (ಮೈಅಲಿ. ೧೯೪೨, ೪೬–೨೮ ; 790); ಶ್ರೀ ಪರವೆಣ್ಡೆರಣ್ಣನೀಸರಯ್ಯ (ಎಕ. II, ೪೪೮–೧ ; 900). [ಈಸರ + ಅಯ್ಯ$_1$]

**ಈಸವೂರು** (ನಾ). ಒಂದು ಪ್ರ ದೇ ಶ ದ ಹೆಸರು : ಶ್ರೀಮಾರಂ ಈಸವೂರಂ ಕೊಟ್ಟು (ಎಕ. VII, ಶಿಕಾರಿ. ೨೮೩–೫ ; 830). [?]

**ಈಸಾಟ**, ಈಜಾಟ (ನಾ). ಈಜು; ಈಜುವಿಕೆ (ಕಿ). **ಈಜಾಟ** : ಹೊಳೆ ಯಲ್ಲಿ ಸುಳಿಯ ಬಳಿ ಈಜಾಟ ಅಪಾಯಕರ (ರೂಢಿ). [ಈಸು$_1$ + ಆಟ]

**ಈಸಾಡ**, ಇಷಾಢಿ, ಈಸಾಡಿ (ನಾ). (ಕರಾ) (ಉಕ). ಒಂದು ಬಗೆಯ ಮಾವಿನ ಹಣ್ಣು. ℙ ಕರಾವಳಿ ಪ್ರಾಂತದಲ್ಲಿ ಬೆಳೆಯುವ ಶ್ರೇಷ್ಠ ಜಾತಿಯ, ಸ್ವಾದಿಷ್ಟವಾದ, ಹೆಚ್ಚು ರಸವುಳ್ಳ ಒಂದು ಬಗೆಯಮಾವಿನ ಹಣ್ಣಿನ ಹೆಸರು. ಈ ಮಾವನ್ನು ಮುಖ್ಯವಾಗಿ ಸೀಕರಣೆಗಾಗಿ ಉಪಯೋಗಿಸುತ್ತಾರೆ : ಈಸಾಡ ಹಣ್ಣು ಬಿಸಾಡಿದವ ರುಂಟೆ (ರೂಢಿ). **ಇಷಾಢಿ** : 'ಇಷಾಢೀಮಾವು' ಪರಾ. **ಈಸಾಡಿ** : ಅವರ ಮನೆಯಲ್ಲಿ ಈವೊತ್ತು ಈಸಾಡಿ ಹಣ್ಣಿನ ಸೀಕರಣೆ (ರೂಢಿ). [← ಮರಾ. ಇಶಾಡ್, ಇಸಾಡ್]

**ಈಸಾಡಿ** 'ಈಸಾಡ' ನೋ.

**ಈಸಾಡು**, ಈಜಾಡು (ಕ್ರಿ). ಈಜು; ಅ ಂ ಗ ಚ ಲ ನೆ ಯಿ ಂ ದ ನೀರಿನಲ್ಲಿ ತೇಲುತ್ತಾ ಚಲಿಸು : "ಈಸಾಡು — ಜಲೋತ್ತರಣೇ" (ಶಮುಧಾ); ತೊ ಜಿ ಯ ನೀ ಸಾ ಡ ಲಾ ಜ ದ ನಿಶ್ಶಕ್ತರ ಕಾಲಂ ಪಿಡಿ ದಂತಾಗೆ (ಧರ್ಮಾಮೃ. ೯–೧೨೭); ಗೀತಗೋಷ್ಠಿರಸತರಂಗಿಣಿಯೊಳು ಬೆಳಗಪ್ಪಸ್ವವೀಸಾಡಿ ಪರಿಣಾಮದ ತಡಿಗೆ ಸಾರ್ದು (ಬಸರ. ೬–೪೯);

ಈಸು ಭವಸಾಗರವನೀಸಾಡುತ್ತಿರಲಾಱೆ ಘಾಸಿಮಾಡುವ ದೇಹ ಹೇಸಿಕೆಗೆ ನಾನಾಱೆ (ದೀಕ್ಷಾಬೋ. ೮೫-೧೩) ; ಹೊಡೆಗೆಡೆದ ದಂತಿಗಳು ರಕ್ತದ ಕಡಲೊಳೀಸಾಡಿದುವು (ಕುವ್ಯಾದ್ರೋ.೧೦-೧೦); ಆರಗೆಱೆಯೊಳೀಸಾಡುತಿರ್ದ ಚ್ಚರಸಿಯರೊ ಎನೆ (ಸಾಳ್ವಭಾ. ೪-೩೮) ; ಕೈ ಮೆಯ್ ಬೀಸಾಡಿ ಇಳಿಗೂದಲೀಸಾಡಿ ಬೆವರ್ದನಿ ಸೂಸಾಡಿ (ಗರಿ. ೧೨೪-೧೪). **ಈಜಾಡು** : ರಕ್ತಸಮುದ್ರದಲ್ಲಿ ಈಜಾಡಿ. . . ಭಾರತ ಸಿಂಹಾಸನದ ಮೇಲೆ ಕುಳಿತನು(ಕೋಹಿನೂ.೫).

[ಈಸು$_1$ + ಆಡು$_1$]

**ಈಸಾಯಿ, ಈಸಾಯಿಾ** (ನಾ). ಕ್ರೈಸ್ತಮತವನ್ನು ಅನುಸರಿಸುವವನು : ರೋಮಕರ ಆಳ್ವಿಕೆಯಲ್ಲಿ ಈಸಾಯಿ (Christians)ಗಳು ಚಿತ್ರಹಿಂಸೆಗೆ ಗುರಿಯಾಗುತ್ತಿದ್ದರು (ಭಾಇಪ್ರ. ೧೮೮) ; ಅಲ್ಲಿ ನೋಡು ! . . . ಆ ಈಸಾಯಿಯೂ ಆ ಸಿಖ್ಖಪಂಥೀಯನೂ ಕೈಕುಲುಕುತಿರುವರು (ಕೈಲಾಕ.೬೫); ಕಸಿಯೆಂದು ದೇಸಾಯಿ ಹುಸಿಯೆಂದು ಈಸಾಯಿ(ಜನನಾ. ೫೮). **ಈಸಾಯಿಾ** : ಮನುಷ್ಯನಲ್ಲಿ ಮಾತ್ರ ಆತ್ಮತತ್ತ್ವವನ್ನು ಒಪ್ಪುವ ಈಸಾಯಿಾ—ಇಸ್ಲಾಮಿಾ ಮತದವರ ಯುಕ್ತಿಗಳಿವು (ಜೀವಾತ್ಮ. ೧೯೩).

[← ಪಾರ. ಹಿಂ. ಈಸಾಯಿಾ]

**ಈಸಾಯಿಾ** 'ಈಸಾಯಿ' ನೋ.

**ಈಸಿಸು, ಈಜಿಸು** (ಕ್ರಿ). ಈಜುವಂತೆ ಮಾಡು : ಅಸುರಕುಮಾರವಿಕ್ರಿಯಾಸಮುದ್ಭೂತ ವಿಯದ್ವೈತರಣೀತರಂಗಿಣಿಯ ಪೆರ್ಮಡುಗಳೊಳಿದಿರುಂ ಬೞಿಯುಮಿಾಸಿಸುತ್ತುಂ[ಪಾಠಾಂ. ಯುಂ ಮಿಸಿಸುತ್ತುಂ] (ಅಜಿಪು. ೧೧-೧೦ ವ). **ಈಜಿಸು** : (ಕ). [ಈಸು$_1$ + -ಇಸು$_3$]

**ಈಸು$_1$, ಈಜು$_1$** (ಕ್ರಿ). ನೀರಿನ ಮೇಲೆ ತೇಲುತ್ತ ಹೋಗು ; ನೀರಿನಲ್ಲಿ ಚಲಿಸು: "ಈಸು-ಜಲೋತ್ತರಣೇ, ಶಕಟಾಂಗೇಚ (ಇರ್ಚ)" (ಶಮಧಾ) ; ವ್ಯಾಸಮುನೀಂದ್ರರುಂದ್ರವಚನಾಮೃತವಾರ್ಧಿಯನೀಸುವೆಂ ಕವಿವ್ಯಾಸನೆನೆಂಬ ಗರ್ವಮೆನಗಿಲ್ಲ (ಪಂಪಭಾ. ೧-೧೩) ; ಬಯಲ್ವೊಡೆಱೆಯನೀಸುತಿರ್ದಂ ಗುರುವೆ (ವಾಗೀರ. ದೇ. ೨೬೦-೨೧) ; ಅರುಣವಾರಿಯು ತೊಱೆಯನೀಸಿದರು (ಕುವ್ಯಾಭೀ. ೯-೧೫) ; ಈಸಬೇಕು ಇದ್ದು ಜೈಸಬೇಕು (ಪುರಂದ. ೧-೧೨ ಪ) ; ಅವು ನೀರಿನೊಳಗೆ ಚನ್ನಾಗಿ ಈಸುತ್ತವೆ (ಮುಂಬಯಿ. ೨-೩೧) ; ಈಸುವವನಿಗೆ ಮಿಾಸೆ ಭಾರವೇ (ಗಾದೆ). **ಈಜು$_1$** : ಮಹಾಸಮುದ್ರವನೀಜುವನಂತೆ ಕರ ಕಾಲು ಆಡುವನ್ನಕ್ಕ ಜೀವನ ಭ್ರಮೆ (ತುಜುಗಾ. ೩೯); ಈಜಲಱಿಯದವನೊಂದಾಗಿ ಹೊಳೆಯ ಹಾಯ್ದಿಹೆನೆಂದು (ಮೋಳಿಮಾ. ೧೦೨-೪೦೬) ; ವಾರುಧಿಯನೀಜುವನಂತೆ (ಏಲೇಶ್ವ. ೩೯) ; ಯುದ್ಧಸಮುದ್ರವನ್ನು ಈಜಿ ದಡವನ್ನು ಏರುತ್ತಲಿಧೇನೆ (ಕೃವಾಭೀ. ೧೪೯) ; ಮುನ್ನ ಮಿಾನಿನ ಮರಿಗೆ ಯಿಾಜುವುದನ್ನು ಕಲಿಸುವರಾರು (ಜಿನಭಾ. ೩೨-೨೨) ; ಕಿಱುಮುಗಿಲೆಂಬಂತಿರೆ ನೆರೆದುರ್ಬಿ ಪರ್ಬಿ ಪಕ್ಷಿವಿಡಿದೀಸಿ (ರಾಮಾಶ್ವ. ೧೦೧-೧೧).

**ಈಜಬೀಳು** = ಈಜು ; ಈಜುವುದಕ್ಕಾಗಿ ಬೀಳು (ಕ). **ಈಸಗಲಿ** = ಈಜುವುದನ್ನು ಕಲಿ : ಕೆಲವು ದಿವಸ ಹೊಳೆಯಲ್ಲಿ ಈಸಗಲಿತ (ಮುಂಬಯಿ. ೪-೩೭). **ಈಸಗಲಿಸು** = ಈಜುವುದನ್ನು ಕಲಿಸು : (ಮುಂಬಯಿ. ೫-೧೩೫ ಕ). **ಈಸಗಾಯಿ, ಈಸೋಕಾಯಿ**= ಈಸುಗಾಯಿ: ತೇಲಿಸಬೇಕಾದರು ಈಸಗಾಯಿಯಲ್ಲದೆ ತೇಲಿಸುವದೇ ಕಲ್ಲು ಕಟ್ಟಿಕೊಳಲು (ವಿಸಾಸು. ೮-೧) ; ಈಸಲಾಱದೆ ಮುಳುಗೆದ್ದು ಆಹಾ ಈಸೋಕಾಯನೆ ಬಿಟ್ಟು ಬೀಸೊಕಲ್ಲನೆ ಕಟ್ಟಿ ಈಸುವ ತೆಱದಿ ಈ ಭೂಸುರರಾ ದ್ರವ್ಯ (ಪುರಂದ. ೧-೧೯-೨). **ಈಸಬೀಳು** = ಈಜಬೀಳು : ದತ್ತನೂ ಅವನೊಡನೆ ಈಸಬಿದ್ದು ಹೊಳೆಯನ್ನು ದಾಟುವನು (ಸಣ್ಣಕ. VII, ೨೨).

[ದೇ. ‖ ತಮಿ. ಮಲ. ನೀನ್ದು; ಕೊಡ. ಮಿಾಂದ್; ತುಳು. ಈಜು, ಈಜು ; ತೆಲು. ಈದು ; ಕೋಲಾ. ಈಂದ್]

**ಈಸು$_2$, ಇಸು$_2$** (ಕ್ರಿ).**೧.** ಕೊಡಿಸು; ಕೊಡುವಂತೆ ಮಾಡು: ಅಂಜದಿರು ಅಳುಕದಿರು ಪರದೈವಕ್ಕೆಱಗದಿರು ; ಕೂಡಲಸಂಗನ ಕೈಯಲು ಈಸುವುದೆನ್ನ ಭಾರ (ಬಸವ. ೬೨೨) ; ಬೀಡಾರವಂ ಬೀಸಾಗಿ ಕೊಟ್ಟಡಿಗೆ ಸೋಪಸ್ಕರಂಗಳಂನ್ನೈಸರನು ಕೊಟ್ಟು ಬೆಂಕಿಯ ಕೊಡದೆ ಪೋಲಾಳನೀಸಿಯವರೇನ ಮಾಡುತ್ತಿಹರನೆಂಬುದಕೆ ಕಾವಲಂನಿಕ್ಕಿಯಿರಲು (ತುರಂಗ. ೩೨-೧೪). **೨.** ಕೊಡು : ಕನ್ನೆಳಿ ಕಿಳ್ವಾಳಱ? ಗೆಯ್ದು ದತ್ತಮುಂ ಕೊಟ್ಟರ್ ಕಳ್ವರೆನ್ನದೆ ಈಸುವಾರೆಲ್ಲೋರುಂ (ಮೈಆರಿ. ೧೯೩೩, ೩೮-೧೫ ; 801). **೩.** ತೆಗೆದುಕೊ : ಅವರ ವಿದ್ಯಾಭ್ಯುದಯಕವಘಾತವಹನೆಂದು ಬಗೆದು ನಾನವನ ಬೆರಳೀಸಿದೆನೊ (ಹೆಬ್ಬೆರ. ೪೦-೧೦). **೪.** ಅವಕಾಶ ಕೊಡು : ಜಿನಪತಿಮತದಿಂದಂ ಯೋಗನಿರೋಧಂ ತನ್ನೊಳೆಸೆಯೆ ಕರ್ಮಾಸ್ರವಮುಂ ಜನಿಯಿಸಲೀಸದೆ ಸದ್ಗುಣದಿನಂತವಂ ತಗೆವುದದುವೆ ಸಂವರಮಕ್ಕುಂ (ಸುಕುಮಾ. ೮-೩೨) ; ಕಾಳಕೋಣನ ಮುಖದಲ್ಲಿ ಕತ್ತಲೆ ಕಾಣಲೀಸದು (ಪ್ರಭುವ. ೨೩೦) ; ಎಚ್ಚ ಕೋಲ್ಗಳ ಸೇರಲೀಸದೆ ಕಡಿದು (ಮೋಹತ. ೩೪-೨೭); ಮನೆಯಿಂದ ಹೊರಡಲೀಸುವ ಹೆಣ್ಣೆ ನಾನು (ಕಂನವಿ.೬-೧೬೭). **ಇಸು$_2$** : **೩.** ಖ ೨೦೦ . . . ಯಿಸುಕೊಂಡು ಮಾಗ ಬಹುಳ ಮಂಗಳವಾರದ ೧೦ ಯಲ್ಲು (ಎಕ. VII, ಶಿವಮೊ. ೯೩-೧೩ ; ?) ; ಮೂಱಡಿಯನಿಸ-ಕೊಂಡು ಬೆಳೆದು (ಗುರುಚಾ. ೪-೨೬).

**ಈಸಿಕೊಡು** = ತೆಗೆದುಕೊಡು ; ಕೊಡಿಸು : ವಿದ್ಯಾಧರರ್ಗೆಲ್ಲ ಮುಡಲುಂ ತುಡಲುಮಿಾಸಿಕೊಟ್ಟು ಕೆಲವು ದಿವಸಕ್ಕೆಲ್ಲರಂ ಕಳುಪಿ (ಪುಣ್ಯಾಸ್ರ. ೧-೮೯ವ) ; ನಿನಗಿಂದೀಸಿಕೊಡುವೆನು ಕನ್ನಿಕೆಯ (ಸಂಭಪ. ೧೯-೪೫) ; ತನ್ನಯ ಕೂಸಿಗಾ ತನಿವಣ್ಣ ಪತಿಯಿಂದೀಸಿಕೊಡೆ (ಮದೇಪು. ೫-೧೮) ; ನಾನು ಅರಮನೆಯಲ್ಲಿ ಅದನ್ನೆಲ್ಲ ನಿನಗೆ ಈಸಿಕೊಡುತ್ತೇನೆ (ಕಸಾಚಿ. ೮೮). **ಈಸಿಕೊಳ್, ಇಸಕೊಳ್ಳು, ಇಸಗೊಳ್ಳು, ಇಸಿಕೊಳ್, ಇಸುಕೊಳ್, ಇಸುಕೊಳ್ಳು, ಈಸಿಕೊಳ್ಳು, ಈಸುಕೊಳ್, ಈಸುಕೊಳ್ಳು**= ತೆಗೆದುಕೊ; ಸ್ವೀಕರಿಸು: "ಗೃಹೀತಾರಃ-ಈಸಿಕೊಳ್ವವರ್ಗಳ್[ಪಾಠಾಂ. ಈಸಿಕೊಂಬವರ್ಗಳ್]" (ನೀತಿವಾ. ೧೪) ; ಚಾಗಮನೀಸಿಕೊಳ್ಳದ ವನೀಪಕರಿಲ್ಲ (ಎಕ. VII, ಶಿಕಾರಿ. ೧೦೩-೨೨ ; 1149) ; ಅವರು ಒಕ್ಕುದನೀಸಿಕೊಂಡು ತನ್ನ ಕೃತ್ಯದ ನೇಮ ತಪ್ಪದೆ (ಮೋಳಿಮಾ. ೨೨-೮೮) ; ನಿಮ್ಮ ಪ್ರಮಾಣಪತ್ರಮಂ ತೋಱೆಂದೀಸಿಕೊಂಡು (ನಂಬಿರ. ೬-೧೩೮) ; ನಿಜತನೂಜನನೀಸಿಕೊಂಡು ಭೂಪತಿ ತನ್ನ ಭುಜತುಂಬಲಮರ್ದಪ್ಪಿಕೊಂಡ (ಭರಚ. ೨೬-೨೬) ; ಎಲ್ಲಿಯಾದರೂ ನಾಲ್ಕೈದು ರೂಪಾಯಿಗಳನ್ನು ಸಾಲವಾಗಿ ಈಸಿಕೊಂಡು ಬರಬೇಕೆಂದು ಮನಸ್ಸಾಯಿತು (ಮಗಮಾಂ. ೫೨) ; ಇಸಕೊಂಡ ಹಣ ಕೊಡದೆ ಗಂಟುಕಳ್ಳತನ ಮಾಡ್ತಾ ಇದ್ದಾನೆ ಅಂಜನಪ್ಪ (ಮರಳಿ. ೧೮೪) ; ಓದಿಯಾದ ಮೇಲೆ ಆ ಕಾಗದವನ್ನು ಕೈ ಸ್ವಲ್ಪ ಕೆಳಕ್ಕೆ ಒಡ್ಡಿ ರಂಗಮ್ಮ ಇಸಕೊಂಡರು (ರಂಗವ. ೧೯೫) ; ಕೆಲವು ಹಣವನ್ನು ಕೊಟ್ಟು ಪಾವತಿ ಇಸಗೊಂಡರು (ಬಿಟ್ಟಹೊ. ೬೮) ; ಆವನು ರೂಪಾಯಿಗಳನ್ನು ಇಸಗೊಳ್ಳಲಿಲ್ಲ (ಫಲಸಂ. ೩೩) ; ಬಮ್ಮಿದೇವರಸರ ಕಯ್ಯಲು ಸುಗ್ಗಲದೇವಿಯರಿಸಿಕೊಂಡು ಹಾಲಹೊಳೆಯ ಹಳ್ಳದೊಳಗೆ . . . ಕೊಟ್ಟು (ಇಆ. XII, ೯೭-೩೫ ; 1187) ; ಆಗ ಕೊಟ್ಟು ಬಿಡುವೆ ಇಸುಕೊಂಡು ಹೋಗುವಿರಂತೆ (ರೂಪಸಂ. ೪೮) ; ತಾಂ ಕುಡುವುದು ಮಗುೞ್ದವರ ಕೈಯಲೀಸುಕೊಂಬುದು (ಪಂಚತಂ. ೧೨೫-೧೫) ; ಬೀಸಣಿಗೆಯನ್ನು ಈಸುಕೊಂಡನು (ದೌಲತ್. ೧೫) ; **ಈಸುವಾರ್** = ಕೊಡುವವರು : ಕಳ್ವರೆನ್ನದೆ ಈಸುವಾರೆಲ್ಲೋರುಂ (ಮೈಆರಿ. ೧೯೩೩, ೩೮-೧೫ ; 801).

[ದೇ. ‖ ತಮಿ. ಈ ; ತೆಲು. ಇಚ್ಚು ; ಕೊಂಡ. ನಾಯ್ಕಿ. ಸೀ ; ಪರ್ಜಿ. ಚೀ ; ಗಡಬ. ಸೀ ; ಗೊಂಡಿ. ಸೀಯಾನಾ ; ಕುಇ. ಶೀವ]

**ಈಸು$_3$** (ಕ್ರಿ). ಸೆಳೆ; ಎಳೆ; ಕರೆ: ಆವಂ ಪಯಃಶ್ರೇಣೀಕಾರಣಮಾಕಳ ಸ್ತನಮುಮಂ ಮಾಣ್ದೀಸುವಂ ಶೃಂಗಮುಂ (ಬಾಧಪು. ೫–೬೩). [?]

**ಈಸು$_4$**, ಈಜು$_2$ (ನಾ). ನೀರಿನಲ್ಲಿ ತೇಲುತ್ತಾ ಚಲಿಸುವುದು; ಈಜುವುದು; ಈಜುವಿಕೆ: ಓಸು ಬರುತ್ತದೆ ಈಸು ಬರಲ್ಲವೆ (ಗಾದೆ); ನಾನು ಈಸು ಕಲಿಯುವುದಕ್ಕೆ ಹೋಗಿದ್ದೆ (ರೂಢಿ). **ಈಜು$_2$**: ಮೀನಿನ ಮರಿಗೆ ಈಜು ಕಲಿಸಬೇಕೆ? (ಗಾದೆ). [< ಈಸು$_1$]

**ಈಸು$_5$** (ನಾ). ಇಷ್ಟು; ಈ ಪ್ರಮಾಣ; ಈ ಸಂಖ್ಯೆ: ಈಸಕ್ಕಿಯ ಆಸೆ ನಿಮಗೇಕೆ ಈಶ್ವರನೊಪ್ಪ (ಶೂನ್ಯಸಂ. ೨೨೬–೧೪); ಎನಗೇಕೆ ಈಸು ಸತ್ಕಾರ ಸಂಭ್ರಮ ಗುರುವೆ (ದೀಕ್ಷಾಬೋ. ೧೪೪–೮); ಬೇಸಱಾಯಿತೆ ಧೃತಿಗೆ ಕಲಿತನಕೀಸು ಮೊಲೆಗಳು ಮೂಡಿದವಲಾ ಪಾರ್ಥ (ಕುವ್ಯಾಕ. ೨೬–೩೧); ನಾವೀಸುದಿನಂಬರ ನಿನ್ನ ಈಸು ವಿವೇಕಿಯೆಂದಱಿಯೆವು (ಕುರಾಸಾಂ. ೧–೪೪); ಈ ಸ ಱಿ ಂ ದಿ ನ್ನು ಕಾಡುವುದೊಳ್ಳಿತಲ್ಲೆಂದು (ಮೋಹತ. ೨೭–೬೫); ಈ ವನವನೀಸು ದಿನವಗಲದೆ ನಾವು ಕಾದುದು ಸಫಲವಾದುದು (ಸಾಳ್ವಭಾ. ೬–೧೬).

**ಈಸರು** = ಇಷ್ಟು ಜನರು: ಓಸರಿಸುತೈತಂದು ಬಲರಾಮ ಕೃತ ವರ್ಮರೀಸರನು ಕಂಡು (ತುರಂಗ. ೩೯–೧೭); ಈಸರೊಳಗೊರ್ವನಾದರು ನರನ ತೋರಿಸಲ್ಕೀಸೂರನಾದರುಂ ಪಾ ಲಿ ಸು ವೆ (ತುರಂಗ. ೬೧–೨). **ಈಸೀಸು** (ದ್ವಿರುಕ್ತಿ): ಈಸೀಸಗಲ ದೋಸೆ ಏಸೇಸು ಮೆದ್ದೀ (ಗಾದೆ); ಒಂದೊಂದು ದೋಸೆ ಈಸೀಸಗಲ (ಗಾದೆ). **ಈಸೈಸು** = ಇಷ್ಟು ಅಷ್ಟು: ಎಣಿಸಬಹುದೇ ಭೋಜನದ ಸಂದಣಿಯನೀಸೈಸೆಂದು (ಕುವ್ಯಾಸ. ೭–೩೫). **ಈಸೊಂದು** = ಇಷ್ಟೊಂದು; ಇಷ್ಟು ಹೆಚ್ಚು: ಇದಕೇಕೆ ಈಸೊಂದು ಕಾಲ ಬಳಲುವರೆ (ಸೋಮಾರ. ೭೯–೮). [?]

**ಈಸು$_6$**, ಈಚು$_3$, ಈಜು$_3$ (ನಾ). ೧. ಇರ್ಚಿಮರ; ಮೂಕು: “ಈಸು–ಜಲೋತ್ತರಣೇ, ಶಕಟಾಂಗೇ ಚ (ಇರ್ಚಿ)” (ಶಮಧಾ); “ಕೂಬರ ಮೆನಲ್ಕೀಸು” (ಮಂಗರಾ. ೮೪–೨೫); ಉಡಿದಿರ್ದಚ್ಚುಱಿದೀಸು ತಱಿಗ ನೊಗಂ ಜೀಱೆಟ್ಟಿ ಚಕ್ರಂ (ಪಂಪಭಾ. ೧೦–೯೧); ಕದನದೊಳಾದುರ್ಸಾರ್ದಿಸೆ ಮಹಾರಥದಚ್ಚು ಸಿಡಿಲ್ದುದೀಸು ಸೂಸಿದುದರಗೀಲ್ ಕೞಲ್ದುದು (ಪಂರಾಮಾ. ೧೩–೭೯); ಮಡಿಗೆಗೆ ಸಂದ ಕೂಱಿಗೆಯ ಭಗ್ನತೆಯಿಂ ನಿಜ ಗೋತ್ರಹಾನಿ ಯೀಸುಡಿದೊಡೆ ಕಾಂತೆಗಕ್ಕೆ ಫಲಕಕ್ಕೆ ಲಯಂ (ಜಟ್ಟಮ. ೯–೩೧); ತುರಗದಲಿ ರಥಚಕ್ರದಲಿ ಕೂಬರದೊಳೀಸಿನಲಚ್ಚಿನಲಿ ದುರ್ಧರ ಶಿಳೀಮುಖಜಾಳವನು ಜೋಡಿಸಿದನಾ ಪಾರ್ಥ (ಕುವ್ಯಾಕ. ೧೪–೧೮); ನಿರಂಜನನ ರೆಂಟೆಯ ತೋಳು ಮುರಿದಿದ್ದಿತು. ಪ್ರಭಾಕರನ ಬಂಡಿಯ ಈಸಿಗೆ ಹುಳುಹತ್ತಿದ್ದಿತು (ವಾಸನಾ. ೨೨). **ಈಚು$_3$**: ೧. “ಕೂಬರಃ, ಯುಗಂಧರಃ – ಈ ೨ ಈಚು” (ನಾಚಿರಾ. ೧೩೪); ಲವವೆಂದು ನುಡಿಸಿ ಕೊಂಬ ಆ ಕಾಲವೀಚುಗಳು ಸಿಂಗರಂಬಡೆದ ಲಸದಾಕಾಶವೇ ರ ಥ ದ ಮೇಲುಭಾಗಂ ಕಣಾ (ವೀಶೈಪು. ೨–೧೦–೧೦). ೨. ನೇಗಿಲಿಗೆ ಜೋಡಿಸುವ ಈಚು. ‘ಈಚುಕೋಲು’ ಪರಾ. **ಈಜು$_3$**: ೧. ಧರೆಯೆ ರಥವಾಯ್ತು ಮತ್ತುರುತಾರೆಯೀಜಾಯಿತು ಕನಕಾಚಲವೇ ಚಕ್ರದಿರವಾಯಿತು ಮಿಕ್ಕ ಗಿರಿಗಳೇ ಸುತ್ತುವಲಗೆ ಹಾಸಾಯಿತು ವಾರುಧಿಯೆ ವಸ್ತ್ರ (ಲಕ್ಷ್ಮೀಭಾ. ೮–೧–೩೪).

[ಪ್ರಾ. ಈಸಾ (< ಸಂ. ಈಷಾ). / ಮರಾ. ಗುಜ. ಈಸ್]

**ಈಸುಕಾಯಿ** ‘ಈಸುಗಾಯಿ’ ನೋ.

**ಈಸುಕುಂಬಳಕಾಯಿ** ‘ಈಸುಗುಂಬಳಕಾಯಿ’ ನೋ.

**ಈಸುಕೊಳ್** ‘ಈಸು$_2$’ ಪರಾ.

**ಈಸುಗಾಯಿ**, ಈಜುಗಾಯಿ, ಈಸುಕಾಯಿ (ನಾ). ಈ ಜು ವಾ ಗ ಕಟ್ಟಿಕೊಳ್ಳುವ ಒಣಗಿದ ಸೋರೆಕಾಯಿ (ಕಿ). **ಈಜುಗಾಯಿ** (ಕಿ). **ಈಸುಕಾಯಿ**: ಹರುವ ಹೆದ್ದೊರೆಯೊಳುಕ್ಕಾಸು ಈಸುಕಾಯಿ ಹರಗೋಲು ತಪ್ಪಿ ಕೈಸೋತು ಕಡಿಗೆ ಬರುವ ಮನುಜ ನಡುವೆ ಮುಣುಗುವ ಪರಿಯಂತೆ (ಮೋಕ್ಷದೀ. ೨೦–೧). [ಈಸು$_1$ + ಕಾಯಿ$_4$ (< ಕಾಯ್$_4$)]

**ಈಸುಗಾಯಿಬಳ್ಳಿ** (ನಾ). ಸೋರೆಯ ಬಳ್ಳಿ (ವೈಔಗ. ೪೯–೯೭೨).
[ಈಸುಗಾಯಿ + ಬಳ್ಳಿ]

**ಈಸುಗುಂಬಳಕಾಯಿ**, ಈಸಗುಂಬಳಕಾಯಿ, ಈಸುಕುಂಬಳಕಾಯಿ (ನಾ). = ಈಸುಗಾಯಿ: ದಾಸರಿಗೆ ಶಬ್ದಸಾಹಿತ್ಯವು, ಈಸ ಬಲ್ಲವನು ಲೀಲೆಗಾಗಿ ಕಟ್ಟಿಕೊಂಡ ಈಸುಗುಂಬಳಕಾಯಂತೆ (ಸಾ ಹಿ ಸಂ. ೬೯). **ಈಸಗುಂಬಳಕಾಯಿ**: ಒಬ್ಬ ಸಾಲೇಹುಡುಗನು ಈಸಗುಂಬಳಕಾಯಿಯ ಸಂಗಡಿಯನ್ನು ನಡುವಿಗೆ ಕಟ್ಟಿಕೊಂಡು (ಮುಂಬಯಿ. ೪–೩೭). **ಈಸುಕುಂಬಳಕಾಯಿ** (ಕಿ). [ಈಸು$_1$ + ಕುಂಬಳಕಾಯಿ]

**ಈಸುೞ್** (ನಾ). ರೆಕ್ಕೆ ಇರುವ ಗೆದ್ದಲುಹುಳು: ಸಾೞಿಗೆ, ಏೞಿಗೆ, ಈಸುೞ್, ಬಾಸುೞ್, ತಿಪ್ಪುೞ್ (ಶಬ್ದಾನು. ೧೪೦ ವ್ಯಾಖ್ಯಾ). [?]

**ಈಸೂೞ್** (ನಾ). ೧. ನಡೆಯುತ್ತಿರುವ ವರ್ಷ; ಈ ವರ್ಷ: ಈಸೂೞ್ = ವರ್ತಮಾನ ವರುಷಂ (ಶಮದ. ಪರಿ. ೧). ೨. ಈ ಬಾರಿ; ಈ ಸಾರಿ; ಈ ಸಲ. ೩. ಈ ಸರದಿ. [ಈ$_5$ (< ಇದು) + ಸೂೞ್]

**ಈಸ್ವರ** ‘ಈಸರ’ ನೋ.

**ಈಹ$_1$** (ನಾ). ಕೊಡುವಿಕೆ. ‘ಬೆನ್ನೀಹ’ ಪರಾ. [ಈ$_2$ + –ಹ$_2$]

**ಈಹ$_2$** (ನಾ). (?): ಈಶಾನ್ಯದ ಹೆಬ್ಬಳ್ಳದ ಈಹದ ತಾಳತಿಟ್ಟನಲ್ಲಿ ನಟ್ಟ ಕಲ್ಲು (ಎಕ. XIV, ಮಂಡ್ಯ. ೧೧೫–೮೭; 1516). [?]

**ಈಹಲೋಕ** (ನಾ). ಇ ಹ ಲೋ ಕ: ದೇಹ ದೇಹ ಸಂಬಂಧ ಮೋಹ ಮಮತೆಗಳೆಲ್ಲ ಈಹಲೋಕದಲ್ಲಿ ಬಂದು ಚರಿಸುವ ಪರಿಯಂತ (ಮೋಕ್ಷದೀ. ೫೬–೪). [< ಸಂ. ಇಹಲೋಕ]

**ಈಹಾಮೃಗ** (ನಾ). ೧. ತೋಳ: “ಕೋಕಮೀಹಾಮೃಗಂ ವೃಕವೆನಲು ತೋಳನಕ್ಕು” (ಮಂಗರಾ. ೪೮–೮); ಈಹಾಮೃಗ ಶೃಗಾಲಾಚ್ಛಭಲ್ಲ ಶಾರ್ದೂಲ ಗೋಲಾಂಗೂಲ ಮೃಗವರಾಹಾದಿಗಳವೋಲ್ (ತತ್ತ್ವಪ್ರ. ೧೪೩). ೨. [ನಾಟ್ಯ] ದೃಶ್ಯಕಾವ್ಯಗಳಲ್ಲಿ ಒಂದು ಬಗೆ; ಹತ್ತು ವಿಧವಾದ ರೂಪಕಗಳಲ್ಲಿ ಒಂದು; ದಿವ್ಯಸ್ತ್ರೀಯನ್ನು ಅ ವ ಳ ಇಚ್ಛೆಗೆ ವಿರುದ್ಧವಾಗಿ ಹೊತ್ತುಕೊಂಡು ಹೋಗುವ ಕಥೆಯಿಂದ ಕೂಡಿ, ಧೀರೋದ್ಧತನಾಯಕ ಪ್ರತಿನಾಯಕರನ್ನೊಳಗೊಂಡು, ನಾಲ್ಕು ಅಂಕಗಳು ಮೂರು ಸಂಧಿಗಳುಳ್ಳದ್ದಾಗಿ, ಶೃಂಗಾರಾಭಾಸ ರಸದಿಂದ ಕೂಡಿದ ಒಂದು ರೂ ಪ ಕ ಭೇ ದ: “ಜಿಂಕೆ (ಮೃಗ) ಯಂತೆ ಅಲಭ್ಯಳಾದ ನಾ ಯಿ ಕೆ ಗಾ ಗಿ ಇಚ್ಛಿಸು (ಈಹಾ) ತ್ತಾನೆ ಎಂಬ ಕಾರಣದಿಂದ ‘ಈ ಹಾ ಮೃ ಗ’ ಎಂಬ ಹೆಸರು” (ದಶರೂ. ೧೯೧); ಅಭಿನಯದ ಸಹಾಯದಿಂದ ಪ್ರದರ್ಶಿಸಲ್ಪಡಬಹುದಾದ ಕಾ ವ್ಯ ಗ ಳಿ ಗೆ ದೃಶ್ಯ (ಎಂದರೆ ನೋಡಬಹುದಾದ) ಕಾವ್ಯಗಳೆಂದೂ ರೂಪಕಗಳೆಂದೂ ಹೆಸರು. ಇವು ೧. ನಾಟಕ . . . ೯. ಅಂಕ, ೧೦. ಈಹಾಮೃಗ–ಎಂದು ಹತ್ತುವಿಧ (ಕೈಪಿಡಿ. ೨೦೫). [ಸಂ.]

**ಈಹೆ** (ನಾ). ೧. ಆಸೆ; ಹೆಚ್ಚಾದ ಬಯಕೆ: ಅವಗ್ರಹಗೃಹೀತಾರ್ಥದೊಳ್ ತದ್ವಿಶೇಷಾಕಾಂಕ್ಷಣಂ ಈಹೆ (ತತ್ತ್ವಪ್ರ. ೫೬). ೨. ಪ್ರಯತ್ನ. ೩. ಚೇಷ್ಟೆ; ವ್ಯಾಪಾರ. [ಸಂ. ಈಹಾ]

**ಈಹೊತ್ತು** ‘ಈಪೊಱ್ತು’ ನೋ.

**ಈಳ್** ‘ಈೞ್’ ನೋ.

**ಈಳ$_1$** (ನಾ). ಸಿಂಹಳದ್ವೀಪ: ಕಾಪಾಲಿವೊಲಿವ ಶರಣಂ ತನ್ನ ನಲುಮೆಯಿಂ ಈಳದೊಳು ಪುಟ್ಟ (ಏನಾರ. ದೇ. ೧೧೫–೧೧).
[← ತಮಿ. ಈೞ < ಪಾಲಿ. ಸೀಹಲ]

**ಈಳ್$_2$** (ನಾ). ಕೀಳು (?) : ಕೀಳಲಾಗದು ಅವರ ಮಾತನು ಹೇಳಿದಂಥ ಕುಱುಹು ಹುಸಿಯೆ ಕೀಳುಮನುಜರು ಕೂಗಿ ಬಾಯೊಳು ಈಳರಾಗುವರು (ಕಾಲಸಂ. ೩೫–೨೦). [?]

**ಈಳನ** (ನಾ). ಹೊಗಳಿಕೆ; ಸ್ತುತಿ : ಮಹಾತ್ಮರ ಯೀಳನಂಗಳಂ ಅಂಗವಿಸುತ್ತಲೆನ್ನ ನುತಿವೊಲ್ಲೆನೆ ವೊಲ್ವ ವೃಷಾಧಿನಾಯಕಂ (ಷತಿಲ. ೧–೧೪). [< ಸಂ. ಈಡನ]

**ಈಳಿ** ‘ಈಲಿ’ ನೋ.

**ಈಳಿಗ** ‘ಈಡಿಗ’ ನೋ.

**ಈಳಿಗೆ** (ನಾ). ತರಕಾರಿಯನ್ನು ಕತ್ತರಿಸುವ ಮಣೆಗೆ ಜೋಡಿಸಿರುವ ಕತ್ತಿ; ತರಕಾರಿಯನ್ನು ಹೆಚ್ಚುವುದಕ್ಕಾಗಿ ಬಳಸುವ ಹರಿತವಾದ ಅಲಗುಳ್ಳ ಲೋಹದ ಕತ್ತಿ; ಮೆಟ್ಟುಗತ್ತಿ : “ಈಳಿಗೆ ಕೊಯ್ಗತ್ತಿಯಕ್ಕು” (ಕವಿಕಂ. ೨೦೮) ; ಕೊನೆಕಾಱರುಂ ಅಡಕೆಯ ಸುಲಿದ ಮೊತ್ತಮುಂ ಈಳಿಗೆಗೆ ಬಿಳೆವೂಳಿಗವೀಳೆಯಂ ಬಿಟ್ಟರು (ಎಕ. VI, ಕಡೂರು. ೯೫–೬೭ ; 1224) ; ಕಳವಳಮಾ ಮೆಯ್ಮೇಳಂ ತಾಳಿಗೆಯಿೞಿಗೆಯಿಱು ಕುಳಿಯಿವಾದಿಯಾಗಱಿ ಕುಳನಂ (ಶಮದ. ೨೭) ; ಕುಡುಗೋಲು ಈಳಿಗೆ ಸುರಗಿ . . . ಮೊದಲಾಯುಧಂಗಳಂ (ಶಾಸ್ತ್ರಟೀ. ೫೬–೫) ; ಈಳಿಗೆಯಿಂದ ಹೆಚ್ಚಿ ಹೋಳುಮಾಡಿ ಅದನ್ನು ನಾವಿಬ್ಬರೂ ತಿನ್ನುವ (ಮುಂಬಯಿ. ೧–೧೬). [< ಸಂ. ಈಲಿಕಾ]

**ಈಳಿಗೆಕತ್ತಿ** (ನಾ). = ಈಳಿಗೆ : ಈಳೆ . . . ಮೊಟಕುಕತ್ತಿ, ಗುಜ್ಜುಕತ್ತಿ, ಈಟಿಕತ್ತಿ, ಈಳಿಗೆಕತ್ತಿ (ಸಿದ್ಧಾಂತಿ. ೨೨೮). [ಈಳಿಗೆ + ಕತ್ತಿ]

**ಈಳಿಗೆಮಣೆ** (ನಾ). = ಈಳಿಗೆ : ತರಕಾರಿ ಹೆಚ್ಚಲು ಈಳಿಗೆಮಣೆ ಬೇಕು (ರೂಢಿ). [ಈಳಿಗೆ + ಮಣೆ]

**ಈಳಿಲು** (ನಾ). ಕೀಳು ; ಕಡೆ : ಈ ಲಸದ್ಧರ್ಮ ಪ್ರತಿಕೂಲರೆ ಅಧಮರು ಭೂಲಲನೆಗೆ ಭಾರಕರವರು ಹೇಳಲೇನವರ ಜನ್ಮಾಳಿಗಳ್ ತರುಲತೆಗೀಳಿಲು ನಿರಯದ ಪಾಲವರು (ಪ್ರಸಭಾ. ೩೪–೧೦). [< ಏಳಿಲ]

**ಈಳಿಸು** (ಕ್ರಿ). ಸ್ತುತಿಸು ; ಹೊಗಳು : ಸ್ಮರಿಸುತ್ತೀಕ್ಷಿಸುತೀಳಿಸುತ್ತೆ ಯಜಿಸುತ್ತಾನಂದದಿಂ ಭಕ್ತಿಶಾಂಕರಿ (ಶತಕ. ೧೩೬–೯೫). [ಈಳನ + –ಇಸು$_3$]

**ಈಳು** (ಕ್ರಿ). ಸ್ತುತಿಸು ; ಹೊಗಳು ; “ಸೆಳೆ, ತೆಗೆ” (ಭಾವಚಿಂ. ಕೋಶ); ಏಳುತಲೆಗಳು ಗುಣವನೀಳುತಲೆ ಸತಿ ನಿಂದಳು (ಭಾವಚಿಂ. ೯–೩೯). [< ಸಂ. ಈಡ್]

**ಈಳೆ**, ಇಳ್ಳೆ (ನಾ). **೧.** ಕಿತ್ತಳೆ, ಹೇರಿಳೆ ಮೊದಲಾದ ವರ್ಗಕ್ಕೆ ಸೇರಿದ ಮರ: ಬಾಳೆಯ ಮಾವಿನ ಕಮ್ಮರದೀಳೆಯ ತನಿವಣ್ಗಳಿಂದಮರ್ಚಿಸಿದಂ (ಪಂರಾಮಾ. ೧೨–೬) ; ಬಾಳೆ ಸುನಿಂಬೆ ಮಾದುಫಲಮೀಳೆ ಬೆಡಂಗೆನಿಸಿರ್ದ್ದ ಮಾವು ಕಂಚೀಳೆ ಕವುಂಗು ತೆಂಗು ಪಲಸು (ಸೌಇಇ. IX–i, ೨೪೯–೨೫ ; 1147) ; ಈಳೆಯ ಬಾಳೆಯ ಬನದೊಳು (ಎಕ. VIII, ಸೊರಬ. ೧೩೫–೨೭ ; 1217) ; ಮಾಳಿಗೆಯ ಮನೆ ಲೇಸು ಗೂಳಿಪಶುವದು ಲೇಸು ಈಳೆಯ ಹಿತ್ತಲಿರಲೇಸು ಪತಿವ್ರತೆಯ ಬಾಳು ಲೇಸು (ಸರ್ವಜ್ಞ. ೧೨೧೯) ; ಸುಱಿವಾೞಿ ತಾೞಿ ಯೀಳೆಯ ಕಿಱುನಾರಂಗದ ಕಱಿವೆಯ ಪೊಸತೋಂಟಂಗಳ್ (ರಾಮಾಶ್ವ. ೩೦–೧೬) ; ಬಾಳೆ, ಈಳೆ, ನಾರಿಕೇಳ, ನಾರಂಗ, ನಿಂಬೆ ಮೊದಲಾದ ಫಲಗಳನ್ನೂ ಹಿಡಿದು ನಡೆಯುತ್ತಿದ್ದ ದಾಸಿಯರು (ಗಿರಿನ. ೧೨೪). **೨.** ಕಿತ್ತಳೆ ಹಣ್ಣು ; ನಾರಂಗ : “ಈಳೆಯೆನ್ನಲದು ನಾರಂಗಂ” (ಕವಿಕಂ. ೭೫) ; ಈಳೆಯ ಪಣ್ಣದೊಂದು ರುಚಿ ಮಾವಿನ ಪಣ್ಣೊಳಗುಂಟೆ (ಧರ್ಮಾಮೃ. ೪–೧೨೭) ; ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿನೀರನೆಱೆದವರಾರಯ್ಯ (ಮಹಾದೇ. ೧–೧) ; ಈಳೆಯಂ ತೆರಡವರು ಹೂವೆ ಹಣ್ಣುಹ ತೆರದಿ ಮಾತೊಡನೆ ಮಾಟವಿದೆ (ಹೆಬ್ಬೆರ. ೭–೮). **೩.** ನಿಂಬೆಯ ಹಣ್ಣು : “ಈಳೆ ಲಿಂಬೆ” (ಕಶರ. ೧೫) ; ಎಳಮಾವಿನ ಮಿಡಿ ಮಾಗುಳಿ ಮೆಱಿಸಿನ ಕರೆ ಬೆತ್ತಲಟ್ಟೆಯಿಾಳೆಯ ಗೊಲೆಯಂದಳ ವಟ್ಟರೆ ಲಾವಣಕಂಗಳನಿಕ್ಕಿದರ್ (ಸುಕುಮಾ. ೧೧–೩೦). ‘ಕಂಚೀಳೆ,’ ‘ಕಿತ್ತೀಳೆ,’ ‘ದೊಡ್ಡೀಳೆ,’ ‘ಪೇರೀಳೆ’ ಪರಾ. ಇಳ್ಳೆ (ಕ).

[ದೇ. ‖ ತೆಲು. ಈಡೆ = ಕಿತ್ತಲೆ. / ಮರಾ. ಈಡ್]

**ಈಳೆಸಾಂದು** (ನಾ). ಈಳೆಯ ಗಂಧ, —ಅನುಲೇಪನ : ನಱುಸುಯ್ಯ ಕಂಪುಗಳ್ ಬೆರಸುವಿನಂ ಕದಕ್ಕದಿಸಿ ಪೆರ್ಮೊಲೆಗಳ್ ಬಳಮರ್ದನಂಗಜಂಗರೆವವೊಲೀಳೆಸಾಂದರೆವರಿಂಬಳವಟ್ಟರೆ ಘಟ್ಟವಳ್ತಿಯರ್ (ಮಲ್ಲಿಪು. ೨–೬೦). [ಈಳೆ + ಸಾಂದು]

**ಈಳ್ಕುಳಿ** ‘ಈೞ್ಕುಳಿ’ ನೋ.

**ಈಳ್ಕುಳಿಗೊಳ್** ‘ಈೞ್ಕುಳಿಗೊಳ್’ ನೋ.

**ಈಳ್ಕೊಳ್** ‘ಈಱ್ಕೊಳ್’ ನೋ.

**ಈಳ್ಗಿಡಿ** (ನಾ). ಉದ್ದವಾದ ಕಿಡಿ ; ನಿಡಿದಾದ ಕಿಡಿ : ಪರಿಗಿಡಿ ತುಡುಗಿಡಿ ಬಳಲ್ಗಿಡೀಳ್ಗಿಡಿ . . . ಗುಂಡುಗಿಡಿಗಳಡರ್ದುವು ನಭದೊಳ್ (ಚಂದ್ರಪ್ರ. ೫–೮೨). [ಈಳ್$_0$ (< ನೀಳ್) + ಕಿಡಿ]

**ಈಳ್ದು** (ಕ್ರಿ). ಎಳೆ ; ಸೆಳೆ : ಒಂದು ಲಂಘನೆಯೊಳೆಡೆಗೈದಿ ಪಿಡಿದು ಘನಕೂಬರದೊಳು ಆ ಶತಾಂಗವನೀಳ್ದಿ ಚೂರ್ಣಿಸಲ್ (ಶೇಷರಾ. ೨೧೩–೧೭). [< ಈೞ್]

**ಈಳ್ದುಕೊಳ್** ‘ಈೞ್’ ಪರಾ.

**ಈಱಲ್** ‘ಈಱಿಲ್$_1$’ ನೋ.

**ಈಱಿಲ್$_1$**, ಈಱಲ್, ಈಱಿಲು (ನಾ). **೧.** ಪ್ರಸವ ; ಪ್ರಸೂತಿ ; ಹೆರಿಗೆ. **೨.** ಹೆರಿಗೆಯ ಹನ್ನೊಂದು ಅಥವಾ ಹನ್ನೆರಡನೆಯ ದಿನ ಮಾಡಿಸುವ ಮಂಗಳಸ್ನಾನ : ಒಡನೆಯ ಚಕ್ರವಾಕಿ ಪೊಸವಾಣತಿ ಕೋಗಿಲೆಯಿಾ [ಪಾಠಾಂ. ಯೆ]ಱಿಲಿಂದು ಕೇಳ್ಗಡ ಗಿಳಿವೆಣ್ಗೆ ಪೊತ್ತಿನೊಳಗೆಯ್ದೆ ನವಿಲ್ ಮನೆದೀವಿ ಮಕ್ಕಳಂ ಪಡೆದುದು (ಅರ್ಥಸೇ. ೧–೯೪) ; ಹನ್ನೆರಡ್ಡವಸಕ್ಕೆ ಪುಣ್ಯಾವಾರ್ಚನೆಯಿಂದ ಚನ್ನಾಗಿ ಯಿ[ಯಿಾ]ಱಿಲ ಮಾಡಿ (ಕುರಾಸಾಂ. ಪಾಂಚಾಳ. ೧–೫೫) ; ದಾನಧರ್ಮದಲಿ ಭೂಸುರರ ದಣಿಸಿ ಪಾನು ಆನಂದವಾಳುತೋತ್ಸವದಿ ಮಾನುನಿಯಾರು ಸಂತಸದಿ ಯಿಾಱಿಲಮಾಡಿ ನಾಮವಿಟ್ಟರು ಕಾಟನೆಂದೂ (ಕುರಾಸಾಂ. ಪಾಂಚಾಳ. ೧–೪೬) ; “ಕೂಸಿಗೆ ಹೆಸರನ್ನಿಡುವ ಕಾರ್ಯ” (ಪ್ರಭಣ್ಣ). **ಈಱಲ್** : **೨.** ಗೃಹಪುಣ್ಯವಾರ್ಚನೆಯ ಯಿಾಱಲಂ ವೈದಿಕದ ರಹಣೆಯಿಂದುರೆ ತೀರ್ಚಿ (ಪರಶು. ೧೫–೪೨). **೩.** ಮಂಗಳಸ್ನಾನ : ಪಾಲ್ಗಡಲ ನೀರ ಪರಿವ ಪೊನಲ್ಗಳ್ ಸುರಗಿರಿಯ ಪಿರಿಯ ನೇರಾಣಿಯ ತಾಱಲ್ಗಳ್ವಿಡಿದಿಳಿ(ದಂ)ದೇ[ದೀ]ಱಲ್ಗೆಱಗಿದುವಾ ಜಿನೇಂದ್ರ ಸವನೋತ್ಸವದೊಳ್ (ಶಾಂತಿಪು. ೧೦–೫೧) ; ಅಸವನೆಗಂಗಲಕ್ಕೆ ತಲೆವಾಗಿಲೆಗಚ್ಚನೆ ನೋಡಲೀಱಲಿಂಗೊಸಗೆಗೆ . . . ಪೋಪೆಸಕದೆ ಪಾಂಬರೊಳ್ ನೆರೆವರಂ ಕುಲನಾರಿಯರೆಂಬುದೇ (ಮುಂಬರಾ. X, ೨೬೫–೪೩; 1229). **ಈಱಿಲು** : **೨.** ಈಱಿಲು ಮೂವಟ್ಟಲು ಹಸೆಹಂದರ ತೊಂಡಿಲು ಬಾಸಿಂಗ . . . ಈ ಪಱಿಯ ಮಾಡುವನೆ ಶಿವಭಕ್ತ (ಚೆನ್ನವ. ಕ. ೨೩೮) ; ಬಳಿಕ ಮೂವಟ್ಟಲೀಱಿಲು ಕೈಯಲು ಸುರ್ವಿ ಬಱಿಬಾಯನ ತರ್ಪಣ ಜಪಾ . . . ಶಾಂತಿಯ ಮಾಡಿದರಾಗ (ಸೊಬಸೋ. ೪–೨೨). ಈರ್ಲಪ್ಪು, ಈರ್ಲೆಣ್ಣೆ, ಬಾರಸ ಹೋ.

[ಈಱ್$_0$ + –ಇಲ್$_3$]

**ಈಱಿಲ್$_2$** (ನಾ). ಹೆರಿಗೆಯ ಮನೆ; ಸೂತಿಕಾಗೃಹ : ಅಬ್ಬೆದಾದಿ ಪರಿಚಾರಕರೀಱಿಲ ಕಾಪು ಕಾಪೆ ಕೂರ್ತಿಟ್ಟವರಾತ್ಮಪುಣ್ಯಮೆ ವಿಪುಣ್ಯರ ನೋಳಿಯೆ ಕಾಪು ಕಾಗುಮೇ (ಶಾಂತಿಪು. ೬–೧೦೬).

[ಈಱ್$_0$ + ಇಲ್$_2$]

**ಈಱಿಲು** ‘ಈಱಿಲ್$_1$’ ನೋ.

**ಈೞ್, ಈಳ್** (ಕ್ರಿ). ಸೆಳೆ ; ಎಳೆ ; ಬಲಾತ್ಕಾರವಾಗಿ ತೆಗೆದುಕೊ ; ಕಿತ್ತುಕೊ; ಅಪಹರಿಸು : “ಈೞ್ದನೆಂದು ಸೆಳೆದಂ” (ಶಮುದ. ಪರಿ. ೧) ; “ಈೞ್ದದೆನೆ ಕವಿವರರಿಂ ಸೆಳೆದುಕೊಂಡರ್ಥಮದು” (ಕವಿಕಂ. ೧೯೭) ; ನಿನ್ನಾಜ್ಞೆ ಮಣಿಕಿರೀಟಂಗಳನೀೞ್ಕೊಂಡೆದುರುಳೆ ನೂಂಕಿ ಕುಳ್ಳಿರ್ಪುದು ನೆತ್ತಿಯಮೇಲೆ ಸಕಲಭೂಪಾಲಕರಾ(ಯಶೋಚ. ೩–೫); ದಿವ್ಯಾಶ್ವಂಗಳಂ ಪೂಡಿ ವಾಗೆಯಂ ಕಯ್ಕೊಳೀೞ್ದು ತಾನಡರದೊಯ್ಯನೆ ದೇವಿಯರ ಕನ್ನೆ ಮಾಡದ ಕಟ್ಟಿದಿರೊಳಿರಿಸಿ (ರಾಮಾಶ್ವ. ೨೭–೧೫). **ಈಳ್** : ತಚ್ಚೋಳನ ನೀಳ್ದು ತತ್ಕಟಕಮಂ ಕಡುಪಿನಿಂ ನೆಱೆಸೂಱೆಗೊಣ್ಡು ದೋಶ್ಶಾಳಿ ಕಳಿಂಗಸಂ ಮುಱಿದು ಭಂಗಿಸಿದಾತ್ಮಭುಜಪ್ರತಾಪಮುಂ (ಎಕ. VII, ಶಿವಮೊ. ೬೪–೧೨ ; 1112) ; ದಶಕಂಠನುದಯಿಸಿ ಪರಾಕ್ರಮದಿ ಲಂಕಾಪುರವನು ಆ ಕುಬೇರನ ಕೈಯಲೀಳ್ದುಕೊಂಡು (ಸೌಂದಪು. ೬–೨೨) ; ಪಾರ್ಥನ ಕರದ ಚಾಪಮುಂ ಸಸಿದಲೆಯನೀಳ್ದುಕೊಳಲರ್ಜುನನಡಾಯುಧದೆ ಮುಸಗಿತಿವಿಯಲ್ಕದಂ ಕೊಳೆ (ಚೆಬಪು. ೫೩–೫೦) ; ಹರಭಕ್ತವೇಷದಿಂ ಬಸವರಸನ ಮನೆಹೊಕ್ಕು ಧನಮುನೀಳ್ದಪೆವೆನುತಂ ಪುರದ ಪೊಸ ಚೋರರಂತಿರೆ ತಳೆದರ್ ಮಿಸುಪ ಭವಭಕ್ತಲಾಂಛನದಿರವಂ (ವೃಷವಿ. ೬–೩) ; ಉಡುಗೆಯನೆ ಭರದಿನೀಳಲ್ತೊಡಗಿದನ್ (ಬಾಲಭಾ. ೭–೭೬).

**ಈೞ್ದುಕೊಳ್, ಇಳ್ದುಕೊಳ್, ಇೞ್ದುಕೊಳ್, ಈಳ್ದುಕೊಳ್** = ಎಳೆದುಕೊ ; ಸೆಳೆದುಕೊ ; ಅಪಹರಿಸು ; ಆಕರ್ಷಿಸು : ಈೞ್ದುಕೊಂಡುವಳಿಗಳ್ ಸುಮನೋಮಕರಂದಗಂಧಮಂ(ಅಜಿಪು. ೬–೬೯); ಸಂವರಿಸಿದಲ್ಲಿಯೆ ರಾಜ್ಯಮನೀೞ್ದುಕೊಳ್ಳದಲ್ಲಿಯೆ ಬೆಸಕೆಯ್ದುವೆಂದಿರದೆ ಸಾರಧನಂಗಳನಟ್ಟೆ ಮುಟ್ಟೆ (ಸೂಕ್ತಿಸು. ೧೭–೧೯). **ಇಳ್ದುಕೊಳ್** : ತದೀಯ ಪ್ರಾಜ್ಯಸಾಮ್ರಾಜ್ಯಲಕ್ಷ್ಮಿಯಂ ಬಾಹಾವಳೇಪದಿನಿಳ್ದುಕೊಂಡು (ಎಕ. XI, ದಾವಣ. ೪೨–೧೧ ; ಸು. 1162). **ಇೞ್ದುಕೊಳ್** : ತರುಣೀರತ್ನಮನಿೞ್ದುಕೊಳ್ವಸಮುಕಟ್ಟಂದಟ್ಟಿದಂ ಖೇಚರಂ(ಪಂರಾಮಾ.೫–೭೮). **ಈಳ್ದುಕೊಳ್**: ಬಾಯೊಳೋರಂತೆಲೆಘುಳಿಗೆಯ ಕಚ್ಚಿ ಕಾಂತೆಯ ಬಾಯ್ಗೂಡಲವಳೀಳ್ದುಕೊಂಬೊಂದು ಸಂತೋಷ ದಾಂಟಿತು ಸುರರ (ಭರಚ. ೪೧–೧೭೫) ; ರಾಷ್ಟ್ರಕೂಟರಿಂದ ಅಪಹೃತವಾದ ವಿಶ್ವಧರಣೀತಳವನ್ನು ಈಳ್ದುಕೊಂಡು . . . ತೈಲಪನು ಪ್ರತಾಪಶೈಲನಾಗಿ ಮೆರೆದನು (ಕರತ್ನ. ೪೬). **ಈಳ್ದುರುಳಿಸು** = ಎಳೆದು ಬೀಳಿಸು ; ಸೆಳೆದು ಕೆಡಹು : ಈಳ್ದುರುಳಿಸಿಕೊಂಡು ಒದೆದು ಒಕ್ಕಲಿಕ್ಕಿ ರಾಜ್ಯವನ್ನು ನಿಷ್ಕಂಟಕ ಮಾಡಿ (ಬಿಟ್ಟಅ. ೩೩–೨೫).
[ದೇ. ‖ ತಮಿ. ಮಲ. ಇೞು ; ತುಳು. ಇಗ್ಗು ; ತೆಲು. ಈಡುಚು, ಈಡ್ಚು]

**ಈೞಿತ** (ನಾ). ಹೊಗಳಿಕೆ ; ಸ್ತುತಿ : “ಈಡಿತಂ – ಈೞಿತಂ” (ಶಬ್ದಾನು. ೧೪೦ ವ್ಯಾಖ್ಯಾ). [< ಸಂ. ಈಡಿತ]

**ಈೞ್ಕುಳಿ, ಇರ್ಕುಳಿ$_1$, ಇಳ್ಕುಳಿ, ಇೞ್ಕುಳಿ, ಈರ್ಕುಳಿ, ಈಳ್ಕುಳಿ,** (ನಾ). ಸೆಳೆಯುವಿಕೆ ; ಎಳೆಯುವಿಕೆ ; ಆಕರ್ಷಣ. ‘ಈೞ್ಕುಳಿಗೊಳ್’ ಪರಾ. **ಇರ್ಕುಳಿ$_1$** : “ಇರ್ಕುಳಿಗೆಯಳಕುಳಿಯಕ್ಕು” (ಶಬ್ದಮಂ. ೬೨). **ಇಳ್ಕುಳಿ** : ‘ಇಳ್ಕುಳಿಗೊಳ್’ ಪರಾ. **ಇೞ್ಕುಳಿ** : ‘ಇೞ್ಕುಳಿಗೊಳ್’ ಪರಾ. **ಈರ್ಕುಳಿ** : “ಎಳಕುಳಿಗೆ ಈರ್ಕುಳಿಯಕ್ಕು” (ಕಬ್ಬಕ್ಕೈ. ೪೮). **ಈಳ್ಕುಳಿ** : ‘ಈಳ್ಕುಳಿಗೊಳ್’ ಪರಾ.
[ಈೞ್ + –ಕುಳಿ$_3$]

**ಈೞ್ಕುಳಿಗೊಳ್, ಇರ್ಕುಳಿಗೊಳ್, ಇಳ್ಕುಳಿಗೊಳ್, ಇೞ್ಕುಳಿಗೊಳ್, ಈಳ್ಕುಳಿಗೊಳ್** (ಕ್ರಿ). ಸೆಳೆದುಕೊಳ್ಳು ; ಎಳೆದುಕೊಳ್ಳು ; ವಶಪಡಿಸಿಕೊಳ್ಳು : ಚಿತ್ರಕಮಂ ತನಿವಾಲಿನಲ್ಲಿ ಪೊಯ್ದೊಡೆ ಪೆಱತೇನೊ ಸಂಪಗೆಯ ಗಂಧಮನೀೞ್ಕುಳಿಕೊ[ಗೊ]ಳ್ಗುಮಾ ಮೊಸರ್ (ಲೋಕೋಪ. ೮–೪೮) ; ಚಾಪಳ ಹರಿಣೀವಿಲೋಕನಮನೀೞ್ಕುಳಿಗೊಂಡಳೆನಲ್ಕೆ ಗಾಳುಗಣ್ ಪೊಳೆಯೆ (ಅರ್ಧನೇ. ೩–೬೨) ; ನಿನ್ನಂಗಂ ರತಿಯಾರ್ಪನೀೞ್ಕುಳಿಗೊಳಲ್ ನೀಂ ಲೇಸನೇ ಗೆಯ್ದೆ (ದಶಕು. ೧೦–೭೬). **ಇರ್ಕುಳಿಗೊಳ್** : ಭರದಿಂದಂ ತುಳುಕಿದ ನೀರುರದೊಳ್ ಹಾರಾಂಶುರುಚಿಯನಿರ್ಕುಳಿಗೊಳೆ (ಆದಿಪು. ೧೪–೧೦೮) ; ಮನಮನಿರ್ಕುಳಿಗೊಳ್ವುದು ನೋೞ್ಪೊಡೀ ಬನಂ (ಧರ್ಮಾಮೃ. ೨–೧೪೪) ; ನಾಡುಮಂ ಮುನಿಸಿಂದಿರ್ಕುಳಿಗೊಳ್ವುದೆಂಬುದೆ ವಿನೋದಂ ತಂ(ತ)ನ್ನೊಳೆಂದಂದು(ಇಅ. IX, ೯೭–೧೫ ; 1169) ; ಬಳವದ್ಭುಜಬಲದಿಂದಿರ್ಕುಳಿಗೊಂಡಂ ನರಕನದಿತಿದೇವಿಯ ಮಣಿಕುಂಡಲಮಂ (ಜಗವಿ. ೧೧–೮೫) ; ತನ್ನ ಸುತಾಸ್ವಯಂವರಕ್ಕುರ್ವಿಯ ಭೂಪರಂ ಕರೆಸಿ ಲಜ್ಜೆಯನಿರ್ಕುಳಿಗೊಂಡಂ (ನಳಚಂ. ೪೧೭); ಕಣ್ಣು ಮನವನಿರ್ಕುಳಿಗೊಳ್ವ ಕಡುಜಾಣವೆಣ್ಣುಗಳಧಿದೇವಿ ಕೇಳು (ಮೋಹತ. ೪–೨) ; ಉಪಾಧ್ಯಾಯನತ್ತಣಿಂ ವಿದ್ಯೆಯನಿರ್ಕುಳಿಗೊಂಡಂ (ಶಬ್ದಾನು. ೨೨೧ ಪ್ರಯೋ) ; ಪೊಡೆಯೊಳೀರೇೞ್ಜಗಂ ನೋಯದಂತಿರ್ಕುಳಿಗೊಂಡು (ಚಿಕವಿ. ೩–೫೪). **ಇಳ್ಕುಳಿಗೊಳ್**: ಅಂಗಯ್ಗಳವಡಿಸಿ ಲೊಕ್ಕಿಗುಂಡಿವರಂ ದೇಶಂಗಳನಿಳ್ಕುಳಿಗೊಂಡ ನೃಸಿಂಗಂ (ಎಕ. II, ೩೮೪–೧೦ ; 1135) ; ತೋಂಟದಾರ್ಯನುಸಿರ್ದಂ ಬುಧರ ಮನವನಿಳ್ಕುಳಿಗೊಳ್ವಿನಂ (ಪಾಸೋಪು. ೧–೧೫). **ಇೞ್ಕುಳಿಗೊಳ್**: ನಗೆಮೊಗದೊಳ್ ಪರಕಲಿಸಿದ ಕಾಡಿಗೆವೆರಸರಿಕೇಸರಿ ತಾಯ ಮನಮನಿೞ್ಕುಳಿಗೊಂಡಂ (ಪಂಪಭಾ. ೨–೮); ಎನ್ನನಾರ್ಬಾರಿಪರೆಂದು ಗೋವುಮನನಾಕುಲಮಿೞ್ಕುಳಿಗೊಂಡುಪೋದನೇ ಕಾರಣದಿಂಡ ಪೇೞೆನಗೆ (ಸುಕುಮಾ. ೭–೩೬). **ಈಳ್ಕುಳಿಗೊಳ್** : “ಈಳ್ಕುಳಿಗೊಂಡುದು ಕವದರ್ುದೀೞ್ದದೆನೆ . . . ಸೆಳೆದುಕೊಂಡರ್ಥಮದು” (ಕವಿಕಂ. ೧೯೭) ; ಬಿತ್ತರದ ತೋಂಟಸಿರಿ ಬಗೆಯನೀಳ್ಕುಳಿಗೊಂಡು ಚೆಲ್ವಾಯ್ತು (ಶ್ರೀರಾಮಾ. ೯೬–೫೦೨). [ಈೞ್ಕುಳಿ + ಕೊಳ್$_1$]

**ಈೞ್ಕೊಳ್, ಇೞ್ಕೊಳ್, ಈಳ್ಕೊಳ್** (ಕ್ರಿ). ಸೆಳೆದುಕೊ ; ಎಳೆದುಕೊ ; ಅಪಹರಿಸು ; ಆಕರ್ಷಿಸು : ಖಚರೀಜನಾನನ ನವಾಂಭೋಜಂಗಳೊಳ್ ಕಂಪನೀೞ್ಕೊಳುತುಂ (ಆದಿಪು. ೧–೮೪) ; ಪರಭೂಪರಂ ಕವದರ್ು ಕಪ್ಪಮನೀೞ್ಕೊಳಲೆಂದು ನಿಂದನೆಂಬೆನೊ (ಕಾದಂಊ. ೪೬೬) ; ಒಂದುಂ ಕಾರಣಮಿಲ್ಲದೆನ್ನ ಧನಮಂ . . . ದೇವರೆಯ್ತಂದೀೞ್ಕೊಂಡುದನೆನ್ನ ಪುಯ್ಯಲನಿದಂ ನೀಂ ಭೂಧರಂಗೆಯ್ದಿ ಪೇೞ್ (ಸೂಕ್ತಿಸು. ೨–೩೬). **ಇೞ್ಕೊಳ್** : ಸುದತೀಜನ ಚಿತ್ತಮನಿಳ್ಕೊ[ೞ್ಕೊ]ಳಲ್ಕೆ ಸಾಲ್ವಪಯುವ ಶೋಭೆ (ಎಕ. IV, ನಾಗಮಂ. ೧೫–೨೭ ; 1179) ; ಪದಿನಾಲ್ಕುಂ ಲೋಕಮುಂ ದೈತ್ಯನಾಜ್ಞೆಯೊಳಿೞ್ಕೊಂಡಿರೆ (ಜಗವಿ. ೧–೬೮). **ಈಳ್ಕೊಳ್** : ಆ ದಿವ್ಯದಾಯಾದ್ಯರೆಲ್ಲರಂ ಬೆನ್ನಬಡಿದೀಳ್ಕೊಳ್ಳಲಾಱಿರೇ ನೀವು (ವೀಶೈಪು. ೩–೧೦–೧೧). [ಈೞ್ + ಕೊಳ್$_1$]

**ಈೞ್ತಲೆ** (ನಾ). ಒಂದು ಊರಿನ ಹೆಸರು (?): ಶ್ರೀಕೊಙ್ಗಣಿಮಾರಾಜರ್ ಪೃಥುವೀರಾಜ್ಯಂಕೆಯೆ ಪೆರ್ಮ್ಮನಡಿಗಳ್ ಅರಸಿಯ ಬೆಸತಿಪೆಮೊಗೆಯನಳೆದೊ ಪದುವಿನ ಈೞ್ತಲೆ ಪತ್ತೊನ್ದುವಿಟ್ಟರ್ (ಎಕ. XIV, ತಿರುಮು. ೨೩೪–೭ ; ಸು. 800). [?]

# ಉ



**ಉ$_1$** (ನಾ). ಕನ್ನಡ ವರ್ಣಮಾಲೆಯ ಐದನೆಯ ವರ್ಣ ; ಉಕಾರ : ಅಆ, ಇಈ, ಉಊ, ಋೠ . . . ಎಂಬೀ ಪದಿನಾಲ್ಕುಂ ಸ್ವರಂಗಳ್ (ಶಮದ. ೬ ವೃತ್ತಿ).

**ಉ$_2$**, ಊ$_2$ (ಅ). ಅಸಹ್ಯತೆ (ಜುಗುಪ್ಸೆ)ಯನ್ನು ಸೂಚಿಸುವ ನಿಪಾತಾವ್ಯಯ : "ಉ, ಊ – ಅಸಹ್ಯಾರ್ಥೌ" (ಶಬ್ದಾನು. ೨೧ ಪ್ರಯೋ). **ಊ$_2$** : ಮೇಲಿನ ಪ್ರಯೋಗವನ್ನು ನೋಡಿ.

**ಉ$_3$** 'ಉಂ$_1$' ನೋ.

**-ಉ$_4$** (ಪ್ರ). ಕೆಲವು ನಾಮವಾಚಕಗಳಿಂದ ಭಾವನಾಮಗಳನ್ನು ಸಾಧಿಸಿಕೊಳ್ಳಲು ಸೇರಿಸುವ ಪ್ರತ್ಯಯ. ಉದಾ:—ಕಿವುಡು, ಕುರುಡು, ತಳಾಱು, ಪರದು : ನಾನುಮಿಾ ಪೊಟಲೊಳ್ ತಳಾಱು ಗೆಯ್ವೆಂ (ವಡ್ಡಾರಾ. ೧೨೯–೧೭) ; ನಂದಿಮಿತ್ರನೆಂಬೊಂ ಸೆಟ್ಟಿ . . . ಪರದಿಂಗೆ ಪೋಗುತ್ತಿರ್ದು (ವಡ್ಡಾರಾ. ೧೬೩–೨೩) ; ಒಳ್ಳಿತ್ತುಪಾಯಮಂ ಪಿಡಿವಂದೀತನೆ ವಂದಿ ಕುರುಡು ಕುಂಟೆಂದಲಸದಱಿದು (ಪಂಪಭಾ. ೫–೪೭) ; ಉಕಾರಕ್ಕೆ – ಉಗ್ಗು, ಸಿಗ್ಗು, ಎಗ್ಗು, ಕಿವುಡು, ಕೆಂಚು (ಶಮದ. ೨೧೧ ಪ್ರಯೋ).

**ಉ$_5$** (ಅ). ಕೋಗಿಲೆಯ ಕೂಗಿನ ಅನುಕರಣ ಶಬ್ದ : ಅನುಕರಣ ವಿಸಂಧಿಗೆ – ಕವಕ್ಕವ ಎಲೆ ಎಲೆ ಉ ಊ [ಪಾಠಾಂ. ಊ, ಊ] ಪುಗಲ್ ಪುಗಲೆಂದೊಚ್ಚತಮೂಳ್ವ ಕೋಗಿಲೆಯುಂ (ಶಮದ. ೬೧ ಪ್ರಯೋ).

**ಉಂ$_1$**, ಉ$_3$, ಉನ್ನು, ಊ$_3$, ಊಂ (ಅ). ೧. ಸಮುಚ್ಚಯಾರ್ಥ ಸೂಚಕವಾದ ಒಂದು ಅವ್ಯಯ : ಅಮುಮೆಂಬಿವೆರಡುಮುಮುರ್ಗಂ ಸಮುಚ್ಚಯಾರ್ಥದೊಳ್ (ಶಮದ. ೩೧೪) ; ಪಲ್ಮಡಿ ಉಂ ಮೂಱುವಳ್ಳಿ ಉಂ ಕೊಟ್ಟಾರ್ (ಮೈಆರಿ. ೧೯೩೬, ೧೬–೧೨ ; 450) ; ಮಹಾಜನಕ್ಕುಂ ನಗರಕ್ಕುಂ ಪದಿನೆಂಟುಂ ಪ್ರಕೃತಿಗಳ್ಗುಂ ಕೊಟ್ಟ ಆಚಾರವ್ಯವಸ್ಥೆ (ಎಇ. XIV, ೧೯೦–೩ ; 725) ; ಜಲದದ ನೆಱಲುಂ ಪರಪುಂ ವಿಲಾಸಮುಂ ಬೆಳಗುವುದಿತವಿದ್ಯುಲ್ಲತೆಯುಂ (ಕವಿರಾ. ೩–೯೭) ; ಸೌಧರ್ಮೇಂದ್ರನು ಮಿಾಶಾನೇಂದ್ರನುಮೆರಡುಂ ದೆಸೆಯೊಳ್ (ಆದಿಪು. ೭–೮೧ ವ) ; ಅವ ಶಬ್ದಾರ್ಥಮುಮನಾದೊಡೆ ಭಾವಿಸಲು ನಿನಗಱಿಪಿ ನಿನ್ನಾತ್ಮದೊಳಗಲ ದಿರ್ದು ನಾವು ರಚಿಸುವೆವು (ಬಸಪು. ೧–೧೫). ೨. ಆದರೂಕೂಡ : ಅಲಘುಭುಜನಾಗಿಯುಂ ನಿಶ್ಚಲನಾಗಿಯುಮಖಿಳ ಭೂಭೃದುತ್ತಂಗತೆ ಯೊಳ್ ನೆಲಸಿಯುಮೆಯ್ದದು ನಿನ್ನಾ ವಿಲಸಿತಮಂ ಮೇರು ಕಠಿನಭೋಗಾ ಧಾರಂ (ಕವಿರಾ. ೩–೪೩) ; ಮಿಾಂಗುಲಿಗನೆನಾಗಿಯುಮುಣಮೂಂ ಗುಣ ಮನೆ ಬಿಸುಟನಿಲ್ಲ (ಪಂಪಭಾ. ೯–೮೫) ; ಪೆತ್ತುಂ ತೆಳ್ಪಱಿಯದ ನಡು ಮುತ್ತುಂಬೀಟದ ಪಯೋಧರಂ ಮುನಿದುಂ ಚೆಲ್ವೊತ್ತರಿಪ ನಗೆಮೊಗಂ ಮೆಯ್ವೆತ್ತಿರೆ ಕರಮೊಪ್ಪಿದಪ್ಪರಲ್ಲಿಯ ಪೆಂಡಿರ್ (ಕಾವ್ಯಾವ. ೭೪೪) ; ಅದು ಖರವಿಷಾಣದವೋಲ್ ಉಂಟಾಗಿಯುಂ ಅಭಾವಮೆ (ತತ್ತ್ವಪ್ರ. ೫). **ಉ$_3$** : ೧. ಎಲ್ಲಿಯು ಸ್ವೋನ್ನತೆ ಪುಗೆ (ಮೈಆರಿ. ೧೯೩೯, ೨೩–೧೩ ; 740) ; ದಶಮಿಯು ಸೋಮವಾರವುಂ ಸ್ವಾತಿನಕ್ಷತ್ರಮುಮಾಗೆ (ಮೈಆರಿ. ೧೯೩೯, ೬೫–೯ ; 975) ; ಶಿವದಾಸಯ್ಯ ದಿಕ್ಕುಂ ದೆಸೆಯು ಗತಿಯುಂ ನೀವೆ ನಮಗೆನುತ (ಬಸಪು. ೨೩–೨೯) ; ನಮಗೆಯು ನಿಮಗೆಯು ಸೊಮ್ಮು ಸಂಬಂಧವಿಲ್ಲ ನಮಗೆ ನಿಮಗೆ ಭಾವಭೇದಗಳಿಲ್ಲ (ಸಿಂಗಿರಾ. ೯–೪೪ ವ).

**ಉನ್ನು** : ೧. ಮನಕೆ ಬಂದ ವಡವೆ ವಸ್ತು ಅನುನಯದಿ ಸಖಿಗೆ ಕೊಟ್ಟು ವನಿತೆ ತಾನುನ್ನು ಅಳವಡಿಸುತ ಮನದಿ ಸಂತೋಷಪಡುತ (ಬಾಣಾಕ. ೫).

**ಊ$_3$** : ಪೂಲಿಯೂ ಕೊಱಗ್ಗಿಯೂ ಕಾಲಿಯಮ್ಮನೂ ಇಟ್ಟುಕೊಟ್ಟರ್ (ಎಕ. VIII, ಸೊರಬ. ೨೨–೧೧ ; 800) ; ಸತ್ಯನೂ ನಿತ್ಯನೂ ಕರ್ತನೂ ದೇವನೂ ತಾನೆಯಾಗಿ (ಅದವ. ೧೫). **ಊಂ** : ಸೊರ್ಕಗಾಮುಣ್ಡರೂಂ ಎಡೆಯ ಗಾಮುಣ್ಡರೂಂ ಮೊಳೆಜರಾಮಣೆಯ ಗಾಮುಣ್ಡರೂಂ ನಾವಳ್ಳಿ ಯರುಂ ಅಣ್ಣಾಗಿಯಾಗಾಮಿಗರೂಂ (ಇಆ. XIX, ೧೪೪–೮ ; 696) ; ಗಡುಗೆಯ ಬ್ರಾಹ್ಮಣರಿಗೆವೂಂ ಆಚಾರಿಯರಿಗೆ ವೂಂ (ಎಕ. III, ತಿರುಮ. ೧೧೧–೩೨ ; 1276). [ದೇ. ‖ ತಮಿ. ಉಮ್ ; ತೆಲು. ಉ]

**ಊಂಕಿ**, ಉಂಕೆ, ಊಂಕೆ, ಊಕಿ, ಊಕೆ$_1$ (ನಾ). ನೆಯ್ಗೆಯ ಮಗ್ಗ ದಲ್ಲಿ ಉದ್ದುದ್ದವಾಗಿ ಹಾಸಿದ ನೂಲಿನ ಹಾಸು : ಉಂಕಿಯ ನಿಗುಚಿ ಸರಿಗೆಯ ಸಮಗೊಳಿಸಿ ಸಮಗಾಲನಿಕ್ಕಿ ಅಣಿಯೊಳು ಏಳ ಮೆಟ್ಟದೆ ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು ಈ ಸೀರೆಯ ನೆಯ್ದವ ನಾನೋ ನೀನೋ ರಾಮನಾಥ (ದೇದಾಪ್ರ. ೫) ; ಮಗ್ಗದಲ್ಲಿ ಎಳೆ ಗಳನ್ನು ಹೊಂದಿಸಿ ಹಾಕುವದೂ, ಅದರಲ್ಲಿ ಲಾಳಿಯನ್ನು ಒಗೆಯುವದೂ, ಉಂಕಿಯನ್ನು ಎತ್ತೆತ್ತಿ ಇಳಿಸುವದೂ ಇವುಗಳಲ್ಲಿ ಸಾವಿರಾರು ವರ್ಷ ಗಳಾದರೂ ಯಾವ ಸುಧಾರಣೆಯೂ ಆದಂತೆ ತೋರುವದಿಲ್ಲ (ಬಾದಿಶಾ. ೯). **ಉಂಕೆ** : ಆಕೆಯನು ಕಂಡು ಮನೆಯಾಕೆಯನು ಮಱೆದಿಹರೆ ಹಾಕಿದ ಉಂಕೆ ಹರಿದಂತೆ ಮನೆಯೊಳಿಪ್ಪಾಕೆ ತಾ ಕೆಡುಗು (ಸರ್ವಜ್ಞ. ೧೭೮೮) ; ಜೇಡರ ಬಸವಲಿಂಗಪ್ಪನೆಂಬ ಘನಶೀಲ ತಾನೊಂದುದಿನ ವುಂಕೆಯಂ ಮಾಳ್ಪಾಗ . . . ಮೈದುನನುಂಕೆಯಂ ತೆಗೆಯಹೇಳಲಾಲಸ್ಯಮಂ ಮಾಡು ತಿರೆ (ಗುರುಚಾ. ೧೫–೬೯). **ಊಂಕೆ** : (ದಕ. ೩). **ಊಕಿ** : "ಊಕಿ, ಊಕು, ಊಕೆ = ಬೇಡರ ಊಂಕಿ" (ಗಂಗಾಮ. ೪೭). **ಊಕೆ$_1$** : "ನೆಯ್ಗೆ ಮಧ್ಯ ನಾರಿಯೊಳಗೂಕೆ ಶಬ್ದಂ" (ಶಬ್ದಮಂ. ೭೮) ; ಎಱೆತ್ತಿಂದು ಗೂಳಿಯುಂ ಅನಡುಹುಂ [ಅನಡ್ವಮುಂ] ಹೊರಸಿನ ನೆಯ್ಗೆಯ ಊಕೆಯ [ಉಂಕೆಯ]ನುಲಿಯುಮಕ್ಕುಂ (ಶಮದ. ೩. ೨೩ ವೃತ್ತಿ). [ದೇ. ‖ ತಮಿ. ಊಡೈ. ಮಲ. ಊಡ]

**ಉಂಕಿಸು** 'ಊಂಕಿಸು' ನೋ.

**ಉಂಕೆ** 'ಉಂಕಿ' ನೋ.

**ಉಂಗಟು** 'ಉಂಗುಟ' ನೋ.

**ಉಂಗರ** 'ಉಂಗುರ' ನೋ.

**ಉಂಗುಟ**, ಉಂಗಟು, ಉಂಗುಟ್ಟು, ಉಂಗುಷ್ಟು, ಉಂಗುಷ್ಠ (ನಾ). ೧. ಕಾಲಿನ ಅಥವಾ ಕೈಯ ಹೆಬ್ಬೆರಳು : ನೊಸಲಂ ಸುಟ್ಟ ತೋರ್ಪ ನ್ನವಪ್ಪುಂಗುಟಂಗಳೊಳ್ ಮಿಂಚಂ ಕೀಲಿಸಿದಂತೆ ತೊಳಗಿ ಪೊಳೆವ ಪ್ರಚಂಡಮಾರ್ತಾಂಡನ ಪಾದನಖಂಗಳ್ (ಪಂಪಭಾ. ೨–೩೯ ವ) ; ಜಳ ರಾಶಿಯನುಂಗುಟದನಿತೊಳನೊರ್ವನಗಸ್ತ್ಯನೆಯ್ದೆ ಕುಡಿದನೆನುತ್ತುಂ ಗಳ ಪುತ್ತಿರ್ಪರ ನುಡಿಯೊಳ್ (ಸಮುಪ. ೧೦–೧೦೭) ; ಗುಣದೊಳ್ ಸಲೆ ಮಾಳಿ ಯನ್ವೆಯುಂಗುಟಕೆಣೆಯಾಗರೆಂದೊಡಿತರಾಂಗನೆಯರ್ (ಮುಂಬರಾ. X, ೨೬೫–೪೨ ; 1229) ; ಮೇಜಿನ ಅಂಚಿನಲ್ಲಿ ಎರಡೂ ಉಂಗುಟ ಗಳನ್ನಿಟ್ಟು ಖುರ್ಚಿಯ ಬೆನ್ನಿಗೆ ತನ್ನ ಬೆನ್ನನ್ನು ಹತ್ತಿಕ್ಕಿ (ಪ್ರೇಮುತ. ೧). ೨. ಎಕ್ಕಡದಲ್ಲಿ ಕಾಲಿನ ಹೆಬ್ಬೆರಳನ್ನು ತೂರಿಸಿ ಅಳವಡಿಸಿ ಕೊಳ್ಳಲು ಮಾಡಿರುವ ಉಂಗುರದಂತಹ ರಚನೆ : ಕಟ್ಟದೆ ಘಟ ದಟ್ಟೆಯು ಹೊಲಿದು ಇಕ್ಕಿದೆ ಚತುರ್ವಿಧದ ನಾಲ್ಕುಂಗುಟವ ಬಲದುಂ ಗುಟದ ದ್ವಾರದಲ್ಲಿ ಉಭಯ ಸಂಚದ ಬಾರ ತೆಗೆದು (ಮಾದೂಳ. ೫೧).

**ಉಂಗಟು** : ೨. ಹಳೇಕಾಲ್ಮರಿಗೆ ಉಂಗಟು ಹಚ್ಚಿದ್ದಕ್ಕಾಗಿ ಮೂರು ಬಿಲ್ಲೆ ಮಾತ್ರ ಬಂದವು (ಪವನ. ೨). **ಉಂಗುಟ್ಟ** : ೧. "ಷಕಾರಕ್ಕೆ ಟತ್ವಂ ಅಂಗುಷ್ಠ — ಉಂಗುಟ್ಟ, ಉ ಂ ಗು ಟ" (ಶಮದ. ೨೮೩ ಪ್ರಯೋ). **ಉಂಗುಷ್ಟ** : ೧. ನಿಹಿತದಡಿಯ ಮಡಮುಟ್ಟದೆ ಉಂಗುಷ್ಟ ಊಜದೆ ದಾಟಬೇಕು (ಮೋಳಿಮಾ. ೧೫೦–೫೬೮) ; "ಅತ್ವಕ್ಕುತ್ವಂ – ಅಂಗುಷ್ಟಂ = ಉಂಗುಟಂ (ಉಂಗುಷ್ಟಂ)" (ಶಮದ. ೬. ೨೬೯ ಪ್ರಯೋ). ೨. ಉಂಗುಷ್ಟ ಕಿತ್ತ ಚಡಾವು ಬರಬರ ಎಳೆದುಕೊಂಡು ನಡೆದ (ನಡೆದಾ. II, ೧೨೩೨) ; ಎಕ್ಕಡದ ಉಂಗುಷ್ಟ ಕಿತ್ತುಹೋಗಿದೆ ಸ್ವಲ್ಪ ಹಾಕಿಕೊಡಪ್ಪ (ರೂಢಿ). **ಉಂಗುಷ್ಠ** : ೧. ಉಂಗುಷ್ಠಂಗಳೆರಡಱುಡೆಯೊರ್ಗೀಱಾಗಿರೆ (ಸುಕುಮಾ. ೮–೫೯) ; ಶಿರಸ್ಸಿನಿಂದ ಉಂಗುಷ್ಠದವರೆಗೂ ನೋಡಿದ (ಇಬದು. ೧೦೬).

[< ಸಂ. ಅಂಗುಷ್ಠ]

**ಉಂಗುಟೆದುದಿ** (ನಾ). ಹೆಬ್ಬೆರಳಿನ ತುದಿ : ತುರಗಮೇಧದ ರಾಜಸೂಯದ ವರ ಮಹಾಕ್ರತುಕಾರರೀಕೆಯ ಚರಣದುಂಗುಟೆದುದಿಯ ಕಾಂಬರೆ (ಕುವ್ಯಾಆ. ೮–೮) ; ಐಸೆ ಮತ್ತೇನೆನುತಲಾ ಭೂಮೀಶನುಂಗುಟೆದುದಿಯ ಲೆಲುಗಳು ಸೂಸಲೊದೆದನು ನಗುತ ದಶಯೋಜನಮಿತಾವನಿಗೆ (ತೊರರಾ. ೪–೨–೪೪).
[ಉಂಗುಟ + ತುದಿ]

**ಉಂಗುಟೆವಿಡಿ** (ಕ್ರಿ). ಕಾಲಿನ ಹೆಬ್ಬೆರಳನ್ನು ಹಿಡಿ, —ಹೆಬ್ಬೆರಳಿನಿಂದ ಮೊದಲಾಗು : ಉಂಗುಟೆವಿಡಿದು ಮಸ್ತಕಪರಿಯಂತ ಮನಂಗೊಳಿಸುವ ಭೂಷಣಗಳ ಹಿಂಗದಿತ್ತವನ ವಂಚಿಸಿ (ಕಂಸವಿ. ೨–೧೦೧).
[ಉಂಗುಟ + ಪಿಡಿ$_1$]

**ಉಂಗುಟೆವಿಡು** (ಕ್ರಿ). ಕಾಲಿನ ಹೆಬ್ಬೆರಳನ್ನು ಇಡು : ಬಿಟ್ಟಸೂಠಿಯೊಳೀಱು ಕುದುರೆಗಳಟ್ಟಿದುವು ಕಿವಿಗೌಂಕಿದುಂಗುಟೆವಿಟ್ಟ ಸನ್ನೆಯೊಳೊಲೆದು ಕವಿದುವು ಸೊಕ್ಕಿದಾನೆಗಳು (ಕುವ್ಯಾದ್ರೋ. ೧–೫೧).
[ಉಂಗುಟ + ಇಡು$_1$]

**ಉಂಗುಟ್ಟ** 'ಉಂಗುಟ' ನೋ.

**ಉಂಗುರ**, ಉಂಗರ, ಉಂಗ್ರ (ನಾ). ಬೆರಳಿಗೆ ಇಡುವ ಆಭರಣ ; ಅಂಗುಳೀಯಕ: "ಅಂಗುಲೀಯಕಂ, ಊರ್ಮಿಕಾ–ಈ ೨ಉಂಗುರಂ" (ಹಲಾಯು. ೯೨–೪೦೫) ; "ಉಂಗುರಮೂರ್ಮಿಕೆಯುಮಂಗುಳೀಯಕಮಕ್ಕುಂ" (ವ ಸ್ತು ಕೋ. ೭೫–೫) ; "ಊರ್ಮಿಕಮದಾವುಂಗುರಮೆನಿಕ್ಕು" (ಮಂಗರಾ. ೧೦೦–೨೬) ; ತಾಮರೆಗೆಱಿಯೊಳುಂಗುರಂ ಬಿಬ್ದತ್ತು (ವಡ್ಡಾರಾ. ೫–೪) ; ಅಂಗದಮಂ ವಿರಚನೆಯಾದುಂಗುರಮಂ ತಾಳ್ದುವಂದದಿಂ ತಾಳ್ದಿದನುತ್ತುಂಗಭುಜಂ (ಶಾಂತಿಪು. ೭–೫೧) ; ಬೆರಳಿನಿಂದುಂಗುರವು ಕೊರಳಿಂದ ಸರದ ಮುತ್ತುಗಳೋಲೆ ಕದಪಿಂದಿರದೆ ಮೆಱಿದುವು (ತೊರರಾ. ೧–೧೪–೧೬) ; ಬೆರಳುಗಳಿಗೆ ಪುಟ್ಟ ಉಂಗುರಗಳನ್ನು ಇರಿಸಿದಳು (ಹಾಹುತ್ತ. ೪೦). **ಉಂಗರ** : "ಅಂಗುಳೀಯಕಂ, ಊರ್ಮಿಕಾ — ಈ ೨ ಉಂಗರದ ಹೆಸರು" (ಸಿದ್ಧಾಂತಿ. ೧೬೪) ; ಉಂಗರ ದೊಡ್ಡದಾದರೆ ಗಂಗರವಾದೀತೆ (ಗಾದೆ. ೬). **ಉಂಗ್ರ** : ಬಸವಯ್ಯ ನಂದಿಯುಂಗ್ರಕೆ ಕೆಯ್ಯ ಮುಗಿದನು (ಶರಲೀ. ೩೧೩–೨) ; ಕಾಲುಂಗ್ರ ಕಿಱುಪಿಲ್ಲಿ ವೀರಮುದ್ರಿಕೆಗಳು (ವಾದಿಕೀ. ೧–೪೬).

[< ಸಂ. ಅಂಗುಲೀಯಕ. / **ತುಳು.** ಉಂಗಿಲೊ ; **ತೆಲು.** ಉಂಗರ, ಉಂಗ್ರ ; **ಕೋಲಾ.** ಒಂಗರ]

**ಉಂಗುರಕೊದಲು** 'ಉಂಗುರಗೂದಲು' ನೋ.

**ಉಂಗುರಗಚ್ಚು** (ಕ್ರಿ). ಉಂಗುರವನ್ನು ಹಲ್ಲಿನಿಂದ ಹಿಡಿ : ಸಿರವನುಳುಹಿ ಮೂಗರಿಯಬೇಡೀಟಿಯಲಿಱಿದು ಜೀವವ ಕೊಳ್ಳೆನುತ ಚರಣಕೆ ಮಣಿದುಂಗುರಗಚ್ಚಿದ ರಿಪುಪರಿವಾರವೆಸೆದುದಾ ರಣದೆ (ಕಂಸವಿ. ೧೫–೯೯).
[ಉಂಗುರ + ಕಚ್ಚು$_1$ (< ಕರ್ಚು$_1$)]

**ಉಂಗುರಗುರುಳ್**, ಉಂಗುರಗುರುಳು (ನಾ). ಉಂಗುರದಂತೆ ಗುಂಡು ಗುಂಡಾಗಿ ಸುರುಳಿಯಾದ ಮುಂಗೂದಲು : ಸುಳಿಗುರುಳವರುಂಗುರಗುರುಳವರು ಬಾಲಳಿಗುರುಳವರು ನುಣ್ಗುರುಳ ತಳಿತ ನೀಲದ ಕುರುಳವರಾ ಕುವರಿಯ ಬಳಿವಿಡಿದೈದಿತೊಗ್ಗಿನಲಿ (ನೋ ೆ ಹ ತ. ೨೪–೧೧).

**ಉಂಗುರಗುರುಳು** : ಕೆಲವಾತಗಳ ಮುಖಗಳಿಗೆ ಗಡ್ಡ ಬವರಿ ಮೀಸೆ ಜುಲ್ಪಿ ಹಣೆಯ ಉಂಗುರಗುರುಳು . . . ಇದ್ದರೆಯೇ ಸಲಕ್ಷಣಸೌಂದರ್ಯ (ಮಂತ್ರಶ. ೯೧–೨).
[ಉಂಗುರ + ಕುರುಳ್]

**ಉಂಗುರಗುರುಳು** 'ಉಂಗುರಗುರುಳ್' ನೋ.

**ಉಂಗುರಗೂದಲು**, ಉಂಗುರಕೊದಲು, ಉಂಗ್ರಗೂದಲು (ನಾ). = ಉಂಗುರಗುರುಳ್ : "ಅಲಕ –ಉಂಗುರಗೂದಲು" (ಗಂಗಾಮ. ೧೫). **ಉ ಂ ಗು ರ ಕೊ ದ ಲು** : "ಭ್ರಮರಕ – ಮುಂದಲೆಯ ಉಂಗುರಕೊದಲುಗಳು" (ಗಂಗಾಮ. ೨೪೫). **ಉಂಗ್ರಗೂದಲು** (೬).
[ಉಂಗುರ + ಕೂದಲು (< ಕೂಂದಲ್)]

**ಉಂಗುರಚಿನ್ನ** (ನಾ). ಉಂಗುರವನ್ನು ಮಾಡಿಸುವುದಕ್ಕೋಸ್ಕರ ಕೊಟ್ಟ ಚಿನ್ನ : ಉಂಗುರಕ್ಕೆ ಚಿನ್ನಂ, ಉಂಗುರಚಿನ್ನಂ (ಶಬ್ದಾನು. ೩೦೨ ಪ್ರಯೋ).
[ಉಂಗುರ + ಚಿನ್ನ]

**ಉಂಗುರಬೆರಳು** 'ಉಂಗುರವೆರಲ್' ನೋ.

**ಉಂಗುರವಿಡಿ** (ನಾ). ಉಂಗುರದೊಳಗೆ ಹಿಡಿಸಬಹುದಾದುದು : ಉಂಗುರವಿಡಿಯ ನಡುವಿನ ನೀಱಿ (ಕುವ್ಯಾವಿ. ೩–೯) ; ಕಂಗೊಳಿಸುತಿ ಹೊಪ್ಪಿಡಿನಡುವಿನ ಚೆಲ್ವಿನುಂಗುರವಿಡಿಯ ನಡುವಿನ ಸಿಂಗಾರದ ಸೆಳೆನಡುವಿನ ಬಲುಮೋಹನಾಂಗಿಯರೈತಂದರಾಗ (ಕಂಸವಿ. ೯–೮೧).
[ಉಂಗುರ + ಪಿಡಿ$_2$]

**ಉಂಗುರವಿಡಿನಡು** (ನಾ). ಉಂಗುರದೊಳಗೆ ಹಿಡಿಸಬಹುದಾದ ಸೊಂಟ; ಬಲು ತೆಳ್ಳಗಿರುವ ಸೊಂಟ; ಅಸಿನಡು : ಉಂಗುರವಿಡಿನಡುವೊಪ್ಪಿತಾ ಕೋಮಲೆಗೆ (ಶ್ರೀಪಾಲ. ೪–೮೩) ; ಉಂಗುರವಿಡಿನಡುವಿನ ಪೊಸಜವ್ವನೆಯರೆಯ್ದಿದರು (ಕುರಾಸಾಂ. ೨೧–೪೫) ; ಮುಡಿ ತೋರಮೊಲೆಯ ಭಾರಗಳಿಂದಲುಂಗುರವಿಡಿನಡು ಬಳುಕುವಂತಿಹರು (ನೋಹತ. ೨–೪೨).
[ಉಂಗುರವಿಡಿ + ನಡು$_1$]

**ಉಂಗುರವಿಡು** (ಕ್ರಿ). ಮದುವೆಮಾಡಿಕೊಳ್ಳಲು ನಿಶ್ಚಯಿಸಿ ಉಂಗುರವನ್ನು ತೊಡಿಸು ; ನಿಶ್ಚಿತಾರ್ಥದಲ್ಲಿ ಉಂಗುರವನ್ನು ತೊಡಿಸು : ತನಗೆ ಕಿಱಿಯಂದುಂಗುರವಿಟ್ಟ ಸಾ ಲ್ವ ಲ ನೆಂ ಬ ರ ಸ ನ ಲ್ಲಿ ಗೆ ಪೋಗಿ (ಪಂಪಭಾ. ೧–೭೫) ; ರುಕ್ಮಿ ಮಾಟ್ಪ ಕೈವಾರದೆ ಚೈದ್ಯನಾ ರಮಣಿಗುಂಗುರವಿಟ್ಟು ವಿವಾಹಲಗ್ನಮಂ ಸಾರುತುಮಿರ್ದಂ (ಜಗವಿ. ೧೦–೫೦).
[ಉಂಗುರ + ಇಡು$_1$]

**ಉಂಗುರವುಡಿಕೆ**, ಉಂಗುರುಡಿಕೆ, ಉಂಗುರುಡಿಗೆ, ಉಂಗುರುಡುಕೆ, ಉಂಗ್ರುಡಿಕೆ (ನಾ). ಮದುವೆ ನಿಶ್ಚಿತವಾದಮೇಲೆ ವರನು ಅದರ ಗುರುತಾಗಿ ವಧುವಿಗೆ ಕೊಡುವ ಉಂಗುರ, ಮಿಂಚು, ಹೊಸ ಉಡಿಗೆ, ತಾಳಿ, ಬಂದಿ ಮುಂತಾದುದು ; ಅದನ್ನು ಸಲ್ಲಿಸುವ ಸಮಾರಂಭ : ಬರಸಿರ್ದೆ ಭಾಷೆಯನು ದೇವಾಸುರರ ಸಾಕ್ಷಿಯೊಳಾಯ್ತು ಕರ್ಣನ ಕೊರಳಿಗೆನ್ನಯ ಬಾಣಕುಂಗುರವುಡಿಕೆ [ಪಾಠಾಂ. ಉಂಗುರಕುಡಿಕೆ]ಯಿಂದಿನಲಿ (ಕುವ್ಯಾಸ. ೧೫–೩೯). **ಉಂಗುರುಡಿಕೆ** : ಆ ಸಪ್ತಋಷಿವರರ್ ಗಿರಿಜೆಗಂದಾ ಘನವಿಲಾಸದಿಂದುಂಗುರುಡಿಕೆಯ ಮಾಡಿ ಬಳಿಕಾ ಮಹಾಸಭೆಗೆ ನಿಚ್ಚತಾಂಬೂಲಮಂ ಸಾ ಗಿ ಸಿ ದ ರು (ಚಿಬಪು. ೩೬–೨೩). **ಉಂಗುರುಡಿಗೆ** : ದೊಡ್ಡ ದೊಡ್ಡವರೆಯ್ದುಉಂಗುರುಡಿಗೆ ಮಾಡಿ ದೊಡ್ಡಿತಾಗಿರೆ ಹೆಣ್ಣ ಕೊಡದೆ ಅಡ್ಡಿಯ ಹೊಱಿಯಂತೆ ಕೊಂಡೆಯ್ದುಕೊ ಡು ಪಾ ಗ ಕಡ್ಡಾಯದೊಡವೆಯೆಯೆಂದಾ (ಭ ರ ಚ. ೩೮–೧೨೬).

**ಉಂಗುರುಡುಕೆ**: ಉಂಗುರುಡುಕೆ [ಪಾಠಾಂ. ಟಯ] ಮಾಳ್ಪವಂಗಡಾ ನೀನೊ ಶೈವಾಂಗರಿಂದಲೆವಿಡಿಸಿದನೊ (ಮದೇಪು. ೮-೧೬). **ಉಂಗ್ರುಡಿಕೆ**: ಅಲ್ಲಿ ವಧುವಿಗೆ ಮಂಗಳಸ್ನಾನ ಮಾಡಿಸಿ ಅಲಂಕಾರವಂ ಮಾಡಿ ಹಸೆಯಮೇಲೆ ಕುಳ್ಳಿರಿಸಿರಬೇಕು. ಬಳಿಕ ವಧುವಿಗೆ ತಕ್ಕ ವಸ್ತ್ರಾಭರಣಾದಿ ಮಂಗಳದ್ರವ್ಯದಿಂದೊಡಗೂಡಿದ ಉಂಗ್ರುಡಿಕೆಯೆಂಬ ತಟ್ಟೆಗಳಂ ವರನ ಗೃಹದಿಂ ತೆಗೆದುಕೊಂಡು ಬಂಧುವರ್ಗಗಳೊಡಗೂಡಿ ವರನಂ ಸಹಾ ಕರೆದುಕೊಂಡು ಮಂಗಳಗಾನವಾದ್ಯಪುರಸ್ಸರವಿಭವದಿಂ ಕನ್ಯಾಗೃಹವಂ ಪ್ರವೇಶಿಸಬೇಕು (ಪುರುಚ. ೨೦೬). [ಉಂಗುರ + ಉಡಿಕೆ]

**ಉಂಗುರವೆರಲ್**, ಉಂಗುರಬೆರಳು (ನಾ). ಉಂಗುರ ಹಾಕಿಕೊಳ್ಳುವ ಬೆರಳು; ಪವಿತ್ರದ ಬೆರಳು; ಕಿರುಬೆರಳ ಪಕ್ಕದ ಬೆರಳು; ಅನಾಮಿಕೆ: ಘನಕಾಂತಿವೆತ್ತ ಮಾಣಿಕ್ಯದುಂಗುರವೆರಲ್ಮಿನುಗಿನ ಸೊಡರೊಪ್ಪಿದುವು (ಮೋಹತ. ೧೫-೮). **ಉಂಗುರಬೆರಳು** (ಕ). [ಉಂಗುರ + ಬೆರಲ್]

**ಉಂಗುರಿಸು** (ಕ್ರಿ). ಉಂಗುರದಂತೆ ಗುಂಡಾಗು; ಗುಂಗುರು ಗುಂಗುರಾಗು; ಸುಳಿಸುಳಿಯಾಗು: ಪೆಣ್ದುಂಬಿಗಳಂತೆ ಲಲಾಟರಂಗದೊಳುಂಗುರಿಸಿ ಸಿಂಗರಿಸಿ ಸಂಗಡದಿಂ ಕುಣಿವ ನೀಳಾಳಕಂಗಳ (ಬಸರ. ೧೨-೮೦); ಕುರುಳ್ಗಳೊಂದೆರಡು ಮುಂದಲೆಯೊಳುಂಗುರಿಸುತಿರೆ[ಪಾಠಾಂ. ಯಲಂಕರಿಸುತಿರೆ] (ಇಹರ. ದೇ. ೩೨-೮). [ಉಂಗುರ + -ಇಸು$_3$]

**ಉಂಗುರುಡಿಕೆ** 'ಉಂಗುರವುಡಿಕೆ' ನೋ.

**ಉಂಗುರುಡಿಗೆ** 'ಉಂಗುರವುಡಿಕೆ' ನೋ.

**ಉಂಗುರುಡುಕೆ** 'ಉಂಗುರವುಡಿಕೆ' ನೋ.

**ಉಂಗುಷ್ಟ** 'ಉಂಗುಟ' ನೋ.

**ಉಂಗುಷ್ಠ** 'ಉಂಗುಟ' ನೋ.

**ಉಂಗ್ರ** 'ಉಂಗುರ' ನೋ.

**ಉಂಗ್ರಗೂದಲು** 'ಉಂಗುರಗೂದಲು' ನೋ.

**ಉಂಗ್ರುಡಿಕೆ** 'ಉಂಗುರವುಡಿಕೆ' ನೋ.

**ಉಂಚ$_1$** (ನಾ). ಕೋಳಿ, ಬಾತು ಮುಂತಾದುವುಗಳು ತಪ್ಪಿಸಿಕೊಂಡು ಹೋಗದಂತೆ ಮೇಲೆ ಕವಿಸುವ, ತೂತುಗಳಿರುವ ಬಿದಿರಿನ ಕುಕ್ಕೆ, —ತೂತುಮಂಕರಿ: "ಉಂಚ – ಕೋಳಿ ಮುಚ್ಚುವ ಬಿದಿರುಬುಟ್ಟಿ" (ಜಾನಕೋ. ೧೯). [?]

**ಉಂಚ$_2$** (ನಾ). ಒಬ್ಬಾತನ ಹೆಸರು: ಗಾಮುಣ್ಡುಗಳು × × × ಉಂಚಬೆಳ್ಯಾಳ ಮೊದಲಾಗಿ ನೂ[ಱ]ಪ್ಪರ್ದಿಂಬಮ್ಮಹಾಜನಮುಂ (ಸೌಇಇ. XI–i, ೯೭-೨೬; 1062). [?]

**ಉಂಚ$_3$**, ಊಂಚ, ಊಂಚು, ಊಚ, ಊಚು$_2$ (ಗು). ೧. ಎತ್ತರವಾದ; ಉದ್ದವಾದ; ಉನ್ನತವಾದ; ನೀಳವಾದ: "ಉಂಚಮೆಂದು ಉದ್ದಂ" (ಕಶಸಾ. ೨೫-೫೨೫); "ಉಂಚವೆಂದೊಡೆಯುದ್ದ" (ಶಬ್ದಮಂ. ೬೫); ತಣ್ಣಿಬಿಲಕೆಳಗೆ ಸಂಚಿದುಂಚಮಾದ ಮಂಚಿಕೆಗಳ ಮೇಲೆ(ಧರ್ಮನಾ. ೨-೨೯ ವ). ೨. ಉತ್ಕೃಷ್ಟವಾದ; ಶ್ರೇಷ್ಠವಾದ; ಉತ್ತಮವಾದ: ಕುಸುಮಾಸ್ತ್ರನ ಗಾಡಿ ಮನೋಜನುಂಚ ಪಟ್ಟದ ಕರಿ . . . ಕರ್ಬುವಿಲ್ಲನಭ್ಯುದಯಮೆನಲ್ಕೆ ಕಣ್ಗೆಸೆದಳಾ ಕಮಲಾನನೆ (ಉದ್ಭಟ. ೬-೧೧೫); ಕುಂಚಗಳೆಸೆದುವು ಹಸ್ತಪದ್ಮಕೆ ಬಂದುಂಚಮಧುಪಗಳೆಂಬಂತೆ (ಜ್ಞಾನಚ. ೩೪-೧೧೯). (ನಾ). ೩. ಎತ್ತರ; ಉನ್ನತಿ; ನೀಳ: "ಉಂಚಮೆನೆ ನೀಳವು" (ಕಶರ. ೧೫); ಪೊಣರ್ವ ಪುಂಖಗಳುಂಚದಿಂ ಕೆದಱಿ ಮುದದಿಂದೆ ದಣುವಿಲ್ಲದೊಲ್ದು ಕುಣಿವಚ್ಚಕೇಳಿಕೆಗಳಿಂ[ಕೇಕಿಗಳಿಂ] (ಉದ್ಭಟ. ೩-೯೮); ಅಡಕದೊಳುಂಚದೊಳೀಱಿಯಾ ಹಯವನು ತೊಡೆಮುಡಕೊಳಗುಮಾಡಿದನು (ನಾಗಕು. ೮-೩೦). ೪. ಎತ್ತರವಾದ ಧ್ವನಿ; ತಾರಸ್ವರ: ಉಂಚದಿಂದೆತ್ತುವಳಡಕದಿಂದಡಗಿಸಿ ಮಿಂಚಿನಂತೊಡನೇಳಿಸುವಳು . . . ರಾಗದ ಸಂಚುಗಾಣಿಸಿ ತೋಱುತಿಹಳು (ಭರಚ. ೧೧-೧೬); ಮಿಂಚುಕವಿಗಳ ಪಲವು ರಸಗಬ್ಬವನು ಗಮಕದಲಿ ಉಂಚದಲಿ ಮೆಱೆದೋದಿ (ಸಾಳ್ವಭಾ. ೨೦-೨೯); ಕೂಗಲುಂಚದೊಳ್ ಕೋಳಿಗಳ್ (ಜೈಮಿಭಾ. ೨೬-೨೪). ೫. ಶ್ರೇಷ್ಠನಾದವನು; ಮಹಾಜನ: ವಿಕ್ರಮಾದಿತ್ಯಕೊರ್ಟ್ಟೊದು [ಪ]ನ್ನೆಸೆ ಉಞ್ಚರು ತಾಱೆಱೆಯರ್ಗೆ ಎರೆಕಾಡು ಇಪ್ಪತ್ತೈ ಮತ್ತರು . . . ಮೂವತ್ತಮರ್ಡಿ ಕಾಡುಂ ಉಞ್ಚತ್ತರ್ವ್ವಾಕೆಱೆಯಾ ಕಿಱಿಗೆ ಮತ್ತರ್ಕೆಯ್ಯುಂ (ಸೌಇಇ. IX–i, ೪೭-೬; ?); ಸಂಚು ಸಂದೇಹ ಸಾಹಸ ಸಟೆಗಳನುಳಿದುಂಚರಪಾದವ ತೊಳೆದು (ಅಮುಸಾಂ. ೪-೩೨). **ಊಂಚ** (ಕ). **ಊಂಚು** (ಕ). **ಊಚ**: ೧. ಊಚನಾಗಿ ಬೆಳೆದು ಹರಿಯ ನೆನಸಿದರಿಲ್ಲ (ಮೋಕ್ಷದೀ. ೨೧೭-೨); ೨. ಈಚಲದ ಮರದವ್ವ ಊಚಮೊಲೆವಾಲುಣಿಸಿ ನೀಚರುಜೆಗಳನು ನೀಗಿಸಲು ನಿನ್ನಂಗಲಾಚಿ ಕರೆದಿಹಳು (ಸರ್ವಜ್ಞ. ೧೩೦೨); ಆಕಿ ನಿಮ್ಮಂಗೆ ಊಚ ಕುಲದಾಕಿ (ಗ್ರಾಮಾಯ. ೨೪೮); ಊಚವಾದದ್ದು ನೀಚವೆಂತ ಹೇಳಬಾರದು (ಗಾದೆ). **ಊಚು$_2$**: ೫. ಲಿಂಗಸಂಧಾನಿಗಳಾದ ಮಹಾನುಭಾವಿಗಳು ಊಚು, ಉಳಿದವರು ನೀಚು (ಚೆನ್ನವ. ೬೪-೫); ಊಚು ನೀಚಾಗುತ್ತದೆ, ನೀಚು ಊಚಾಗುತ್ತದೆ (ಬೀರಬ. ೨೪); ಊಚು ಸೀರೆಗಳನ್ನು ಬಿಸಿಲಿಗೆ ಹಾಕಿ ಒಣಗಿಸಿ (ವಾಗ್ದೇವಿ. ೪೮). [< ಸಂ. ಉಚ್ಚ]

**ಉಂಚ$_4$** (ನಾ). = ಉಂಛ. 'ಉಂಚಜೀವಿ' ಪರಾ. [< ಸಂ. ಉಂಛ]

**ಉಂಚಗೆಱೆ** (ನಾ). ಒಂದು ಊರಿನ ಹೆಸರು: ಕೆಱೆಗೊಟ್ಟಂ ಎ[ಮ್ಮ]ತಿಟ್ಟಯ [ದತಿ] ಸತ್ರಾಂಗಳತ್ತಂ ಒ[ಡೆ] ಗೆಱೆಯ ತೆಙ್ಕಣಂ ಕಲ್ಗು[ಣ್ಡಂ] [ಉ]ಞ್ಚಗೆಱೆಯಂ (ಸೌಇಇ. XI–i, ೯-೩೩; 962). [ಉಂಚ ? + ಕೆಱೆ]

**ಉಂಚಜೀವಿ** (ನಾ). ಉಂಛವೃತ್ತಿಯವನು; ಹಕ್ಕಲಾರಿಸಿಕೊಂಡು ಜೀವಿಸುವವನು: ದೇಗುಲ[ದ]ಸ್ತಿತಿಮನಱಿಜಗ್ಗೆ ಉಞ್ಚಜೀವಿ (ಕಇಅ. ೩೯-೫೩-೪; ?). [ಉಂಚ$_4$ + ಜೀವಿ]

**ಉಂಚತೆ** (ನಾ). ಉತ್ಕೃಷ್ಟತೆ; ಔನ್ನತ್ಯ: ಅಂಚೆದುಪ್ಪುಳಿನ ಮೆದುವಳಿವಣ್ಣ ನೀಳದೊಳ್ಮಿಂಚ ಬರ್ಹಿಯ ಬರ್ಹದುಂಚತೆಗಳೊಂದಿ ರಾಯಂಚೆಗಮನೆಯ . . . ನಿಡುಗುರುಳು ರಾಜಿಸಿದವು (ಮದೇಪು. ೧೮-೨೩). [< ಸಂ. ಉಚ್ಚತಾ]

**ಉಂಚಲ್** (ನಾ). ಸುಲಿಗೆ; ಕಸಿದುಕೊಳ್ಳುವುದು (?): ದಱವುಱವಾಜಡಿ ಸೆಱೆಯದವಱಲಱಲೆಡರುಂಚಲಿಂಚೆ ಮಂಚಲು ಲಂಚಂ ಕಳವು ಪಿಸುಣ್ ಪಸವು ಬಜಂ ಪಱಿವಱಿವಲಸೊಲಸು ಕುತ್ತುಮಿಲ್ಲಾ ನಾಡೊಳ್ (ಶಬ್ದಾನು. ೧೪೦ ವ್ಯಾಖ್ಯಾ). [ಉಂಚು (<ಉಚ್ಚು)+ -ಅಲ್$_2$./ ತೆಲು. ಉಂಚು=ನಿರೋಧಿಸು]

**ಉಂಚಾಯಿಸು** (ಕ್ರಿ). = ಉಚಾಯಿಸು (?): ಬಾಕಿ ಸೀಮೆಯಂನು ಆಕ್ರಮಿಸಿಕೊಳ್ಳತಕ್ಕ ಬಗ್ಯೆ ಉಂಚಾಯಿಸಿ [ಪಾಠಾಂ. ಲುಟಾಯಿಸಿ]ದಲ್ಲಿ (ರಾಜೇಂದ್ರ.೬). [ಉಂಚಾ$_0$+ -ಇಸು$_3$. P ಉಂಚಾ <ಹಿಂ. ಉಂಚಾನಾ]

**ಉಂಚು** (ಕ್ರಿ). ಇರಿಸು; ರಕ್ಷಿಸು; ಕಾಪಾಡು: ಇದಾ ಅಱುವರು ಗಾಮುಣ್ಡಗಳುಗಿಪ್ಪತ್ತು ಅಯ್ವುಮ್ಮಹಾಜನಮು ಉಞ್ಚೆನೀರ ಸಲಿವುದು ಇ[ದ]ನಱಿದಾತ ವಾರಣಾಸಿಯುಮ ಕವಿಲೆಯುಮನಱಿದ ಪಾತಕನಕ್ಕು (ಸೌಇಇ. IX–i, ೫೪-೧೬; 9ನೆಯ ಶತ). [?. / ತೆಲು. ಉಂಚು]

**ಉಂಛ** (ನಾ). ೧. ಹಕ್ಕಲಾರಿಸುವುದು; ಅಂಗಡಿ, ಹೊಲ, ಗದ್ದೆ, ಬೀದಿಗಳಲ್ಲಿ ಬಿದ್ದಿರುವ ಕಾಳುಗಳನ್ನು ಆರಿಸಿಕೊಳ್ಳುವುದು: 'ಉಂಛವೃತ್ತಿ', 'ಉಂಛಶಿಲ' ಪರಾ. ೨. ಹಕ್ಕಲನ್ನು ಆರಿಸಿಕೊಳ್ಳುವವರು ಕೊಡಬೇಕಾದ ತೆರಿಗೆ. [ಸಂ.]

**ಉಂಛವೃತ್ತಿ** (ನಾ). ಬಿದ್ದಿರುವ ಕಾಳುಗಳನ್ನು ಆರಿಸಿಕೊಂಡು, ಅದರಿಂದ ಜೀವನ ನಡಸುವ ಕ್ರಮ: "ಊರು ಕೇರಿಗಳಲ್ಲಿ ಬಿದ್ದಿರುವ ಕಾಳನ್ನು ಆರಿಸಿಕೊಂಡು ಬದುಕುವುದಕ್ಕೆ ಉಂಛವೃತ್ತಿಯೆಂದು ಪೆಸರು" (ಸಿದ್ಧಾಂತಿ. ೨೩೫); ಎಲೈ ರಾಜರೆ, ಈ ಯಜ್ಞವು ಹಿಂದೆ ಆ ಉಂಛವೃತ್ತಿಯ ಬ್ರಾಹ್ಮಣನು ಮಾಡಿದ ಒಂದು ಸೇರು ಹಿಟ್ಟಿನ ದಾನಕ್ಕೆ ಸಮನಲ್ಲ (ವಚಭಾ. ೩೬೫); ಉಂಛವೃತ್ತಿಯಿಂದಲೂ ಶಿಲವೃತ್ತಿಯಿಂದಲೂ ಜೀವಿಸುವುದು ಸರ್ವೋತ್ತಮವಾದುದು (ಆರ್ಯಧ. ೮೪).

[ಉಂಛ + ವೃತ್ತಿ]

**ಉಂಛಶಿಲ** (ನಾ). ೧. ಹಕ್ಕಲುಗಳಲ್ಲಿ ಬಿದ್ದಿರುವ ತೆನೆ ಹಾಗೂ ಕಾಳುಗಳನ್ನು ಆರಿಸಿಕೊಳ್ಳುವಿಕೆ. ೨. ಹೀಗೆ ಆರಿಸಿಕೊಂಡು ಜೀವಿಸುವಿಕೆ. [ಉಂಛ + ಶಿಲ]

**ಉಂಜಲು** (ನಾ). ೧. ಉಯ್ಯಾಲೆ ಮಣೆ. ೨. ಮದುವೆಯ ಸಮಾರಂಭದಲ್ಲಿ ವಧೂವರರನ್ನು ಉಯ್ಯಾಲೆಮಣೆಯಲ್ಲಿ ಕುಳ್ಳಿರಿಸಿ ತೂಗುವ ಸಮಾರಂಭ: ಉಂಜಲು ನಡೆಯುವಾಗ ಹೊಸ ದಂಪತಿಗಳಲ್ಲದೆ ಮತ್ತೊಂದು ಜತೆ ಉಂಜಲಿನಮೇಲೆ ಕುಳಿತುಕೊಳ್ಳುವುದು ವಾಡಿಕೆ (ನಮ್ಮೂರ. ೧೧೫).

ಉಂಜಲುತ್ಸವ = ದೇವತಾವಿಗ್ರಹವನ್ನು ಉಯ್ಯಾಲೆಯ ಮೇಲೆ ಕುಳ್ಳಿರಿಸಿ ನಡಸುವ ಉತ್ಸವ; ಡೋಲೋತ್ಸವ: ಈ ದಿನ ಗ್ರಾಮದೇವತೆಯ ಉಂಜಲುತ್ಸವವಿದೆ (ರೂಢಿ).

[ದೇ. ‖ ತಮಿ. ಉಞ್ಜಲ್; ಊಞ್ಜಲ್; ಮಲ. ಊಞ್ಞಲ್]

**ಉಂಟಕ್ಕುಂ** 'ಉಂಟು$_1$' ಪರಾ.

**ಉಂಟಾಗು** 'ಉಂಟು$_1$' ಪರಾ.

**ಉಂಟು$_1$**, ಉಂಡು (ಅ). ಇದೆ, ಅಸ್ತಿ ಎಂಬರ್ಥದ ಒಂದು ಅವ್ಯಯ. ☞ 'ಉಳ್' ಧಾತುವಿನ ಪ್ರಥಮ ಪುರುಷ ರೂಪವಿದು; ಎಲ್ಲ ಲಿಂಗ, ವಚನಗಳಲ್ಲೂ ಬಳಕೆಯುಂಟು: ಅರಸನ ಮುಂದೀತಂಗ ಮೆನಗಂ ಮಾತುಂಟು (ವಡ್ಡಾರಾ. ೧೨೫-೧೨); ಕುಲಮೆಂಬುದುಂಟೆ ಬೀರಮೆ ಕುಲಮಲ್ಲದೆ ಕುಲಮನಿಂತು ಪಿಕ್ಕೆದಿರಿಂ (ಪಂಪಭಾ. ೨-೮೩); ನೀನುಳ್ಳೊಡುಂಟು ರಾಜ್ಯಂ ನೀನುಳ್ಳೊಡೆ ಪಟ್ಟಮುಂಟು (ಗದಾಯು. ೫-೨೦); ಕಡಲೆಗಳಂ ತಿಂಬ ಮೊಗ್ಗು ಕಲ್ಗಳೊಳುಂಟೇ (ಧರ್ಮಾಮೃ. ೧-೧೭೫); ಪಾರ್ಥಿವ ಜಾತಿಯಲಿ ರಣದಿಟ್ಟರುಂಟೇ ನಿಮ್ಮ ಹೋಲಿಸಲು (ಕುಮಾವ್ಯಾ. ೪-೧೧); ಉರಗಗಳುಕಿ ಪೂಜಿಪರಲ್ಲದೆ ಮತ್ತೆ ಗರುಡನಿಗಂಜುವರುಂಟೆ (ಕಂಸವಿ. ೧-೧೪); ತಾನುಂಟೊ ಮೂರು ಲೋಕವುಂಟೊ (ಗಾದೆ). **ಉಂಡು:** ಉಣ್ಣು [ಚತು]ರಂಗಬಲಮೆನೆ ಗುಣ್ಣಮುಣ್ಣು ಮಹಾದುರ್ಗ್ಗಮುಣ್ಣು ಭುಜಬಲಮೆನ್ನಾರೆ[ಂ]ಟುಣ್ಣುಣಿಸಿದೊಡಂ ನಿಲೆಯಿಂ . . . ನೆಗಟ್ದ ಕನ್ನನ ಬಣ್ಣಂ (ಸೌಇಇ. XI-i, ೮೮-೨೨; 1002).

ಉಂಟುಂಟು (ದ್ವಿರುಕ್ತಿ): ಉಂಟುಂಟವರೆ ಭಕ್ತರಿವರೆ ಪಿರಿಯರ್ ಧರೆಗೆ ಉಂಟುಂಟವರೆ ಮಾನ್ಯರಾಗಿರರೆ ನಿಮ್ಮೊಳಗೆ (ಶಿರುರ. ದೇ. ೧೬-೧೦); ಬಲ್ಲೆನುಂಟುಂಟಖಿಳ ವೀರರೊಳಿಲ್ಲ ಸರಿದೊರೆ ನಿನಗೆ (ಕುಮಾವ್ಯಾ. ೫-೫೩). ಉಂಟಕ್ಕುಂ = ಇದ್ದಿರಬೇಕು; ಇರಬೇಕು: ಚಿತ್ತಕ್ಕತಿ ಪ್ರೀತಿ ತೊಟ್ಟಿಗೆ ಕೈಗಣ್ಣುವುದೇಕೆ ಪೂರ್ವಭವದೊಳ್ ಬಂಧುತ್ವಮುಂಟಕ್ಕುಂ (ಆದಿಪು. ೫-೪೭); ಪಾದರದೊಳ್ ಸಂಸಾರಸರ್ವಸ್ವಮಂ ಗೆಲೆವಂದಿಂಪಿನ ಲಂಪನಾಳ್ದ ಸವಿಯುಂಟಕ್ಕುಂ (ಪಂಪಭಾ. ೪-೮೪); ನಿಮ್ಮೊಳಿಮಗತಿ ಸ್ನೇಹಮಾಯ್ತು ಆ ಪೋದ ಭವದೊಳ್ ಬಂಧುತ್ವಮುಂಟಕ್ಕುಂ (ಚಾವುಂಪು. ೩೯-೨೪). ಉಂಟಾಗಿ = ಕಾಣುವಹಾಗೆ; ಹೆಚ್ಚಾಗಿ: ಸಂಭಾರವನಿಟ್ಟೆರಡುಣಿಸಿ ತುಂಬಿಯುಂಟಾ [ಪಾಠಾಂ. ಡಾ]ಗಿ ತುಪ್ಪಮಂ ಬಿಟ್ಟು ಪೊಡ್ಡಣಿಗೆಗೊಡೆ ತುಪ್ಪಗಾಯಾಯಿತಂತು (ಸೂಪಶಾ. ೪-೧೩).

ಉಂಟಾಗಿಸು = ಒದಗಿಸು; ಹುಟ್ಟಿಸು: ಅವರ ಮನಸ್ಸಿಗೆ ಸಂದೇಹ ಉಂಟಾಗಿಸಬೇಕು (ರೂಢಿ). **ಉಂಟಾಗು ೧.** = ಒದಗು; ಹುಟ್ಟು; ಸಂಭವಿಸು: ಸೋಮೇಶ್ವರನ ಕೃಪೆಯುಂಟಾದುದಕೆ ಫಲವು ವಿಪುಳವಾಯಿತ್ತೆನಗೆ (ಬಸವಪು. ೪೩-೫೮); ಕೃಷ್ಣನ ನೆಳಲು ದಿಟವುಂಟಾದೊಡೊಳಗಾಗರು ವಿರೋಧಿಗಳು (ಕುಮಾವ್ಯಾ. ೨-೬೨); ಪತಿವಚನಕೆ ಮಾರ್ನುಡಿವುದುಂಟಾದೊಡಾ ಸತಿಗೆ ನಿಷ್ಕೃತಿಯಿಲ್ಲ (ಮೋಹತ. ೬-೪). **೨.** ಇರು; ಇರುವುದಾಗು: ನೀ ಕಲಿತ ಬಿಲುವಿದ್ಯಾತಿಶಯ ಉಂಟಾದೊಡೆಮ್ಮೊಳು ತೋರು ಕೈಗುಣವ (ಕುಮಾವ್ಯಾ. ೫-೪೫); ಎಮ್ಮೊಳಗುಂಟಾದ ಸವಿಯ ನಿಮಿಷರು ಈಂಟುವ ಸುಧೆಯೊಳಿಲ್ಲ (ಕಂಸವಿ. ೨-೪೬). **ಉಂಟಾದವನು** = ಶ್ರೀಮಂತ; ಹಣಗಾರ: ಅವರು ಒಳ್ಳೆ ಉಂಟಾದವರು. ನೆಮ್ಮದಿಯಾಗಿದ್ದಾರೆ (ರೂಢಿ). **ಉಂಟುಮಾಡು = ೧.** ಒದಗಿಸು; ಹುಟ್ಟಿಸು; ಆಗಿಸು; ನಡಸು: ವಜ್ರನಾಭಗತಿಪ್ರೀತಿಯನುಂಟುಮಾಡಿದರವರ್ ಜನ್ಮಾಂತರ ಸ್ನೇಹದಿಂ (ಆದಿಪು. ೬-೨೨); ಗಂಡರಳ್ಳೆರ್ದೆಗಳಂ ತುಱುವೋಜೆಯನುಂಟುಮಾಡುವಂದದೆ ನಿಡುಗಣ್ಗಳೊಳ್ನಡೆ ಮನೋಭವನೊಡ್ಡಣದಂತೆ . . . ಪರಿತಂದು ಸೂಸಿದುದು ಸೇಸೆಯನಂದು ಪುರಾಂಗನಾಜನಂ (ಪಂಪಭಾ. ೪-೩೫); ಭರತಜರೊಳ್ ಮುನ್ನಿಲ್ಲದ ಪರಿಭಾಷೆಯನುಂಟುಮಾಡಿ ಪೆಱಗಡಿಯಿಟ್ಟಂ ಕುರುರಾಜಂ (ಗದಾಯು. ೬-೩೯); ಉಂಟುಮಾಡಿದ ದೇವರು ಊಟಕೊಡಲಾರನೇ (ಗಾದೆ). **೨.** ಸ್ಪಷ್ಟಪಡಿಸು; ತೋರಿಸು: ಎಳವಿದಿರಂದಮಂ ತನು. . . ಮಿಸುಪಾಲದ ಪಣ್ಣನಂದಮಂ ಪೊಳೆವಧರಂ ಕರಂ ನೆಱೆಯೆ ಪೋಲ್ವುದಱಿಂದರವಿಂದವಕ್ತ್ರೆ ಕೋಮಳೆ ಕಡುಗಾಡಿಕಾರ್ತಿ ಮರವಾನಿಸೆಯೆಂಬುದನುಂಟುಮಾಡಿದಾ (ಧರ್ಮಾಮೃ. ೩-೧೮೦). **ಉಂಟೊಡತಾಗೆ** = ಬಹಳ ದೃಢವಾಗಿ: ಕಱುಗೊರಲಾತನಾತ್ಮವಿಟತತ್ತ್ವಮನುಂಟೊಡತಾಗೆ ಮಾಡಿ (ಪಂಪಭಾ. ೭-೭೫); ಪುಸಿಯೆನೆ ಸಾಮಮಂ ನುಡಿದು ಭೇದಮನುಂಟೊಡತಾಗೆ ಮಾಡಿ ಭಿದ್ರಿಸಲೊಳಪೊಕ್ಕು . . . ಬಂಚಿಸಿ (ಪಂಪಭಾ. ೯-೪೮).

[ದೇ. ‖ ತಮಿ. ಮಲ. ತುಳು. ತೆಲು. ಉಂಡು]

**ಉಂಟು$_2$** 'ಉರುಟು$_1$' ನೋ.

**ಉಂಟುಮಾಡು** 'ಉಂಟು$_1$' ಪರಾ.

**ಉಂಟುವಳಿ** (ನಾ). ಒಂದು ಊರಿನ ಹೆಸರು (?): ಯಿಪ್ಪತ್ತನಾಲ್ಕು ತೀರ್ಥಕ[ರ]ರಿಗೆ ಬಿಟ್ಟುದು ಉಂಟುವಳಿಯ ಕಾಮಿಸೆಟ್ಟೀ ತಂಗಿ ಅಂತಕನೂ ಮನೆ ಮುಂದಣ ಭೂಮಿ ಖ ೬ (ಎಕ. VI, ಕೊಪ್ಪ. ೫೦-೩೨; 1598).

[?]

**ಉಂಡಗೆ** (ನಾ). = ಉಂಡೆ: ಆ ಜಯಶೀಲನ ಧರೆ ವಸ್ತ್ರಕಿಡುವಂದು ಜಾಜಿನ ರಸದೊಳುಂಡಗೆಯವೋಜೆಗೆ ಬಂದುದಾ ರಕ್ತರಂಜಿತ ಶಿರಾಂಭೋಜ ವಿದ್ಯಾಧರನೃಪನಾ (ವರ್ಧಚ. ೭-೩೮). [?]

**ಉಂಡಲಿಗೆ**, ಉಂಡಿಲಿಗೆ, ಉಂಡೆಲೆಗ್ಗೆ (ನಾ). ೧. ಅಕ್ಕಿಯ ಹಿಟ್ಟಿನ ಬೇಯಿಸಿದ ಮುದ್ದೆ, —ಕಡುಬು: ಬೆಣ್ಣೆಯ ಬೆನಕಂಗೆ ಕೆಂಡದುಂಡಲಿಗೆಯ ಮಾಡಿ ಚಲ್ಲವಾಡಿದರೆ ಹಲ್ಲುಹೋಹುದು (ಬಸವ. ೬೬೧); ಮುಂಡಗೆ ಮೇಣ್ ಹೂರಿಗೆ ಮೇಣುಂಡಲಿಗೆಗಳಕ್ಕಿ ಕಣಕದಿಂದ್ಯೆಮಾನಂಗೊಂಡಿಪ್ಪತ್ತೆಂಟಾಗಿರೆ ಖಂಡಿಸಿ ಕೊಡುವುದು ದೃಢವ್ರತಂಗಂತದಱೊಳ್ (ಅನಂಪು. ೧೦-೭೭); ಬೆನಕಂಗುಂಡಲಿಗೆಯಟ್ಟಿ (ಶಬ್ದಾನು. ೨೧೪ ಪ್ರಯೋ); ಉಂಡಲಿಗೆಯು ಕರಿಗಡುಬು ರಾಜಿಪ ಕಟ್ಟುಮುಂಡಿಗೆ ಬಿಸಿಯ ದೋಸೆಗಳ (ಕಂಸವಿ. ೮-೮೯); ಶಿತಿಕಂಠ ಶರಣರಿಗೆ ಎಡೆಯ ಮಾಡಿದರು ದೋಸೆಯು ಉಂಡಲಿಗೆ ಬಿಸಿಯ ಗಾರಿಗೆಯು (ಶರಲೀ. ೫೦೯-೬). **ಉಂಡಿಲಿಗೆ: ೧.** ಉದ್ದೀನ್ಸೊಲದಲ್ಲಿ ದೊಡ್ಡೋಟ್ಟೀಬೆನವಣ್ಣ ಉದ್ದೀನುಂಡಿಲಿಗೇ ಎರೆದುಪ್ಪಾ ಕೊಡುವೇವೂ (ಹುಟ್ಟಿಹ. ೧೪೬).

**ಉಂಡೆಲೆಗ್ಗೆ** : ೧. ಖಂಡಶರ್ಕರೆ ಕಬ್ಬು ಉಂಡೆಲೆಗ್ಗೆಯು ಲಾಡುವುಂಡೆಗಳೆಲ್ಲವನ್ನು ತಂಡದಿಂ ಕೊಡುವೆ (ಹಮುಚ. ೧೪೨). 'ಉಂಡೆ' ಪರಾ. [ದೇ. ?. / ತುಳು. ಉಂಡುಳುಗ, ಉಂಡ್ಲುಗ; ತೆಲು. ಉಂಡ್ರ, ಉಂಡ್ರಾಯಿ. / ಸಂ. ಉಂಡೇರಕ]

**ಉಂಡಳೆ** (ನಾ). (ಕರಾ). ಮುದ್ದೆ; ಉಂಡೆ (?) : ನಿಮ್ಮ ಶುಕ್ರಾಚಾರ್ಯರ ರಕ್ತಕುದಿದು ಉಂಡಳೆಯಾಗಿಬಿಟ್ಟದೆ (ಕೋದಂಡ. ೫೪). [?]

**ಉಂಡಾಡಿ₁** (ನಾ). ಒಂದು ಪ್ರದೇಶದ ಹೆಸರು : ಹಳ್ಳಿಸಹಿತ ಬಳ್ಳವಿನಾಡ ಹಡಿಯಜ ಪೊಳಲು ಉಣ್ಡಾಡಿ ಜಲಗರವಾನಿಗೊಡಗಜವಳಿಕೆಜಗಲೂರು (ಎಕ. V, ಬೇಲೂರು. ೭೧–೨೩೫ ; 1117). [?]

**ಉಂಡಾಡಿ₂** (ನಾ). (ಕೆಲಸಮಾಡದೆ ಸುಮ್ಮನೆ) ಉಂಡು ತಿರುಗುವವನು ; ಉಡಾಳ; ಸೋಮಾರಿ ; ನಿಷ್ಪ್ರಯೋಜಕ : ಅಲ್ಲಿರ್ಪರ್ ಸೊಗಸೊಂದನೆಂದುಮುಱಿಯರ್ ಕೂರಾಳ್ಗಳುಂಡಾಡಿಗರ್ (ಮೈಸೂಮೆ. ೫–೧೮೬) ; ಮಗ ವಿದ್ಯಾವಂತನಾಗಿ, ಬುದ್ಧಿವಂತನಾಗಿ, ಆರೋಗ್ಯವಂತನಾಗಿ, ಗುಣವಂತನಾಗಲಿ ಎಂಬ ಹರಕೆ ವಾರವಾರಕ್ಕೂ ತನ್ನ ತಲೆಗೆ ತಪ್ಪದೆ ಬೀಳುತ್ತಿದ್ದ ಎಣ್ಣೆಯ ಜತೆಗೆ ಬೀಳುತ್ತಿದ್ದರೂ ತಾನು ಉಂಡಾಡಿಯಾಗಿದ್ದ (ಏಳಜೀ. ೬೩) [ಉಂಡಾಡು + –ಇ₂]

**ಉಂಡಾಡಿಗ** (ನಾ). = ಉಂಡಾಡಿ₂ : ಓಣಿ ಓಣಿ ತಿರುಗುವ ಉಂಡಾಡಿಗನಂತಲ್ಲ (ನಿರಾಭ. ೧೬) ; ಉಪಮನ್ಯುವೆಂಬ ಉಂಡಾಡಿಗ ಶಿಷ್ಯನಿದ್ದನು (ನೀಗಟ್ಟು. ೪೧) ; ವಿದ್ಯಾರ್ಥಿಗಳೆಲ್ಲ ಉಂಡಾಡಿಗರಾಗಹತ್ತಿದ್ದಾರೆಂದು ಊರಿಗೆ ಊರೇ ಬೊಬ್ಬೆ ಇಡಹತ್ತಿದೆ (ರಂಗರೋ. ೮೦). [ಉಂಡಾಡು + –ಇಗ]

**ಉಂಡಾಡಿಗತನ** (ನಾ). (ಕೆಲಸವನ್ನು ಮಾಡದೆ) ಉಂಡು ತಿರುಗುತ್ತಿರುವುದು ; ಉಡಾಳತನ; ಸೋಮಾರಿತನ: "... ಅವರಲ್ಲಿ ನಿಮ್ಮಂತೆ ಉಂಡಾಡಿಗತನವಾಗಲಿ, ಬಂಡುಖೋರ ಮನೋವೃತ್ತಿಯಾಗಲಿ ಇರುವದಿಲ್ಲ" (ಮಣ್ಣಮ. ೨೦೦). [ಉಂಡಾಡಿಗ + –ತನ]

**ಉಂಡಾಡಿಗದ್ದೆ** (ನಾ). ಒಂದು ಗದ್ದೆಯ ಹೆಸರು (?) : ವಿಜಯ ಸಂವತ್ಸರದ ಚೈತ್ರ ಸುದ್ಧ ಏಕಾದಸಿಯಾದಿವಾರದಲು ಬಳ್ಳವಿನಾಡಂ × × ಲೆವುದುಗಿನುಂಡಾಡಿಗದ್ದೆಗೆ ದೇವಂ ಬೆಸಸಿದನಿತು ಹೊಂನಂ ಕೊಟ್ಟು (ಎಕ. V, ಬೇಲೂರು. ೨೫–೮ ; 1173). [ಉಂಡಾಡಿ₁ + ಗದ್ದೆ (< ಗಱ್ದೆ)]

**ಉಂಡಾಡಿಗುಂಡ** (ನಾ). = ಉಂಡಾಡಿ : ಹೀಗೆ ಉಂಡಾಡಿಗುಂಡನಾಗಿ ಅಲೆದರೆ ನೀನು ಪರೀಕ್ಷೆಯಲ್ಲಿ ಪಾಸಾಗುವುದು ಹೇಗೆ ? (ರೂಢಿ). [ಉಂಡಾಡಿ₂ + ಗುಂಡ]

**ಉಂಡಾಡಿಭಟ್ಟ** (ನಾ). (ಕೆಲಸಮಾಡದೆ) ಊಟದಲ್ಲಿ ಮಾತ್ರ ನಿರತನಾದ ಬ್ರಾಹ್ಮಣ ; ನಿಷ್ಪ್ರಯೋಜಕವ್ಯಕ್ತಿ : ಮುನ್ನಿನ ಜೌವನದ ಬಲ ಮುಸುಳಿತಾವುಂಡಾಡಿಭಟ್ಟರು ನೃಪತಿ ಕೇಳೆಂದ (ಕುವ್ಯಾಉ. ೧–೩೯) ; ದಂಡ ತಪ್ಪಿಸುತ ಪಿಂಡ ಗಳಿಸಿ ಉಂಡಾಡಿಭಟ್ಟನಾಗಿ (ಅರಳು. ೨೩೯–೫). [ಉಂಡಾಡಿ₂ + ಭಟ್ಟ]

**ಉಂಡಾಡು** 'ಉಣ್' ಪರಾ.

**ಉಂಡಿ** (ನಾ). (?) : ದೂಪದ ಮರ—ಬೀಜಗಳಿಂದ ಹೊರಡುವ ಯೆಣೇ ಉಂಡಿಯು ವಾತಶೂಲೆಗೆ ಮೇಲಾದ ಔಷಧ (ಕಭಾಗ .೪೨). [?]

**ಉಂಡಿಗ** (ನಾ). ಉಂಡಾಡಿ ; ತಬ್ಬಲಿ ; ತುಂಟ (?) : ಆತ್ಮಾರಾಮನು ಉಂಡಿಗನೆಂಬುವದು ನಿನಗೆ ಗೊತ್ತೇ ಇದೆ (ಮುಂಬಯಿ. ೪–೧೯೬); ಆವನು ಹೀಗೆ ಉಂಡಿಗನಾಗುವುದನ್ನು ನೋಡಿ, ನಾನಾಸಾಹೇಬ ಪೇಶ್ವೆಯ ಕಕ್ಕನ ಮಗನಾದ ಸದಾಶಿವರಾಯ (ಚರಿಸಂ. ೭೬). [ಉಂಡು ? + –ಇಗ]

**ಉಂಡಿಗೆ₁** (ನಾ). = ಉಂಡೆ : ಅಮರ್ದಿನುಂಡಿಗೆಗಳೆನಿಸುವ ಪಾಲುಂಡೆಗಳುಮಂ..., ಶವರಾಜ ಬಂಧದೊಳಂದಂಬೆತ್ತ ಲಡ್ಡುಗೆಗಳುಮಂ ... ಬಡ್ಡಿಸಿದಾಗಳ್ (ಸುಕುಮಾ. ೧೧–೨೯ ವ) ; ಒಡೆಯರಿಗೆ ಉಂಡಿಗೆ [ಪಾಠಾಂ. ಉಂಡಲಿಗೆ]ಯ ಮುಱಿದಿಕ್ಕಿದಂತೆ (ಬಸವ. ೨೨೫). [ಉಂಡೆ + –ಇಗೆ]

**ಉಂಡಿಗೆ₂** (ನಾ). "ಗಂಟಲು" (ಪಂರಾಮಾ. ಕೋಶ) : ಉದಬಿಂದುಗೆತ್ತು ಗಿರಿಸಾನುದೇಶದೊಳ್ ಕಾಯ್ದ ಬಿದಿರ ಪೊಸಮುತ್ತಂ ನುಂಗಿದ ಸೋಗೆವಿಂಡಣಂ ಮಱುಗಿದುವುಂಡಿಗೆ ಬೇಯೆ ಕೆಂಡಮಂ ನುಂಗಿದವೋಲ್ (ಪಂರಾಮಾ. ೭–೯೬). [?]

**ಉಂಡಿಗೆ₃**, ಉಂಡುಗೆ (ನಾ). ೧. ಮುದ್ರೆ ; ಮೊಹರು : ಉಂಡಿಗೆಯ ಕಂಮಟದಲು ತಿಂಗಳಿಗೆ ಸ ೧ ಬಿಡಿಗಮ್ಮಟದಲು ತಿಂಗಳಿಗೆ ಹ ೧ (ಎಕ. XII, ಸಿರಾ. ೩೭–೧೮ ; 948 ?) ; ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಿಗೆಯನೊತ್ತಯ್ಯಾ (ಬಸವ. ೪೯೯) ; ಲಿಂಗದ ಉಂಡಿಗೆಯ ಪಶುವಾನಯ್ಯಾ (ಬಸವ. ೮೫) ; ಸ್ಮರನೊತ್ತಿದನುಂಡಿಗೆಯಂ ಬಿರುದಿಂಗೀ ಧರೆಯ ಬೆನ್ನೊಳೆನಿಸಿರ್ಪುವು (ವರ್ಧಪು. ೪–೫೮) ; ನಂದಿಯುಂಡಿಗೆಯ ಮಿಸುನಿಯ ಪೊಂಗಳುಂ (ಬಸರ. ೧೨–೬೪) ; ಶ್ರೀವಿರೂಪಾಕ್ಷನ ಉಂಡಿಗೆಯ ಪಶು ನಾನು (ತುಂಗಭ. ೭). ೨. ರಹದಾರಿ; ಅಪ್ಪಣೆಚೀಟಿ ; ಪರವಾನಿಗೆ: ಕಲಿದಲಿವಂ ಜವನಲ್ಲಿಯುಂಡಿಗೆದಂದನೊ (ಶಮದ. ೬೯ ಪ್ರಯೋ) ; ದಂಡಿಗಿಲ್ಲದ ಹಾಡು ಉಂಡಿಗಿಲ್ಲದ ಸುಂಕ ಹೆಂಡರಿಲ್ಲದವನ ಮನೆವಾರ್ತೆ ತಲೆಹೋದ ಮುಂಡದಂತಿಕ್ಕು (ಸರ್ವಜ್ಞ. ೧೬೮೧); ಸುಭೆದಾರ ಮಾದೈಯನ ಸಂಗಡಹೇಳಿ ಉಂಡಿಗೆ ತೆಗೆದುಕೊಂಡು ಗರವಲೆಗೆ ಹೋದನು (ರಾಜೇಂದ್ರ. ೧೪೩). ೩. ತೆರಿಗೆ; ಸುಂಕ : ಹೊಯ್ಸಳ ಸೆಟ್ಟಿಯರು ಆಯ್ಯಾವೊಳೆಯಯುಂಡಿಗೆಯ ದಮ್ಮಿಸೆಟ್ಟಿಯ ಮಗಂ ಮಲಿಸೆಟ್ಟಿಗೆ (ಎಕ. II, ೧೫೯–೧೧; 1130) ; ಸಲುವುದು ಪಟ್ಟಣಕೇರಿಯಲ್ಲಿ ತಪುತವುಡಿದಂಡವುಂಡಿಗೆ (ಎಕ. IX, ಬೆಂಗಳೂ. ೬೧–೨೧ ; 1332) ; ಅಂತು ಗ್ರಾಮಕ್ಕೆ ಗ ೩೪೦ ಮುಂನೂರುನಾಲ್ವತ್ತು ವರಹಕ್ಕೆ ಉಂಡಿಗೆ ವಿವರ (ಎಕ. VII, ಶಿವಮೊ. ೨–೮೬ ; 1641). **ಉಂಡುಗೆ** : ಕಟ್ಟು ಮಾಡಿಕೊಣ್ಡು ಶಿದಂಡ ಉಂಡುಗೆ ಕೊ (ಎಕ. XIV, ಎಳಂದೂ. ೮೩–೬ ; ?).

ಉಂಡಿಗೆಸಾಧ್ಯ = ಆಜ್ಞೆಗೆ ಒಳಪಟ್ಟುದು; ಅಧೀನವಾದುದು : ಸಮಸಿದ್ಧಿಯೆ ಸಿದ್ಧಿಯಾಗೆ ತದ್ಭೂಪತಿ ಕೊಂಡನನ್ಯಮಹಿಕಾಂಡಮನುಂಡಿಗೆಸಾಧ್ಯಮಪ್ಪಿನಂ (ಶಾಂತಿಪು. ೧೦–೧೧೩) ; ರಾಮದೋಃಪರಿಘಕ್ಕುಂಡಿಗೆಸಾಧ್ಯಮಾದುದೆ ವಲಂ ಷಟ್ಖಂಡಭೂಮಂಡಲಂ (ಪಂರಾಮಾ. ೧೧–೩೫) ; ಈ ಭರತ ತ್ರಿಖಂಡಧರೆಯುಣ್ಡಿಗೆಸಾಧ್ಯಮಸಾಧ್ಯಮಪ್ಪ ತದ್ದೇವನಿಕಾಯ (ನೇಮಿಪು. ೧೧–೪೬). ಉಂಡಿಗೆಸಾಧ್ಯಂಮಾಡು = ಆಜ್ಞೆಗೆ ಒಳಗಾಗುವಂತೆ ಮಾಡು; ಅಧೀನಕ್ಕೊಳಪಡಿಸು : ಅಖಂಡಭೂಮಂಡಳಮಂ ನಿಜಭುಜದಣ್ಡಮಣ್ಡಿತಮಣ್ಡಳಾಗ್ರದಿನುಂಡಿಗೆಸಾಧ್ಯಂ ಮಾಡಿ (ಮೈಆರಿ. ೧೯೩೫. ೪೯–೬೪; 10ನೆಯ ಶತ) ; ಆ ನಾಡನೊಂದೆ ಬಿಲ್ಲೊಳುಂಡಿಗೆಸಾಧ್ಯಂ ಮಾಡಿ (ಪಂಪಭಾ. ೪–೩೧ ವ) ; ಭುಜಬಳದಿಂದಿಳ್ದುಕೊಂಡುಂಡಿಗೆ ಸಾಧ್ಯಂ ಮಾಡಿ (ಎಕ. VIII, ಸೊರಬ. ೧೪೦–೧೨ ; 1198) ; ಸಕಳೋಬ್ಬಿರ್ಯನುಂಡಿಗೆಸಾಧ್ಯಂ ಮಾಡಿದಂ (ಕಇ. I, ೩೦–೧೬ ; 1222) ; ಪ್ರಪಂಚವನ್ನೆಲ್ಲ ತಮ್ಮ ಉಂಡಿಗೆಸಾಧ್ಯಂಮಾಡಿದ (ನಾಡೋಜ. ೩೩೯) ; (ಆದಿಪು. ೧೫–೩ ವ; ಎಕ. II, ೨೪೦–೨೯ ; 1175 ; ಪಾರ್ಶ್ವಪು. ೧೧–೩೭ ವ ನೋ). [?]

**ಉಂಡಿಗೆ₄** (ನಾ). ಹಣ್ಣು ಹಂಪಲುಗಳಲ್ಲಿ ಪರೀಕ್ಷಾರ್ಥವಾಗಿ ಚಿಕ್ಕದಾಗಿ ಕೊರೆದು ಮಾಡುವ ರಂಧ್ರ ; ಹಾಗೆ ರಂಧ್ರಮಾಡಿ ತೆಗೆಯುವ ಬಿಲ್ಲೆ : ಹಲಸಿನ ಹಣ್ಣಿಗೆ ಉಂಡಿಗೆ ಹಾಕಿದರೆ ಅದರ ಬಣ್ಣ ಗೊತ್ತಾಗುತ್ತದೆ (ರೂಢಿ) ; ಕರಬೂಜವನ್ನು ಉಂಡಿಗೆ ಹಾಕಿ ನೋಡಿ ತೆಗೆದುಕೊಂಡು ಬಾ (ರೂಢಿ). [?]

**ಉಂಡಿಗೆಗೊಳ್** (ಕ್ರಿ). ರಹದಾರಿಯನ್ನು ಪಡೆ ; ಅಧಿಕಾರಪತ್ರವನ್ನು ಹೊಂದು : ಏಂ ಮಿಬ್ತುವಿನುಂಡಿಗೆಗೊಂಡರ್ (ರಾಮಾಶ್ವ. ೯೨-೧). [ಉಂಡಿಗೆ$_{3}$ + ಕೊಳ್$_{1}$]

**ಉಂಡಿಗೆಗೋಲ್** (ನಾ). ಮುದ್ರೆಯೊತ್ತುವ ಕೋಲು : ಕೆಯ್ಯಾಱಿ ತಾನೆತ್ತುವುಂಡಿಗೆಗೋಲಂತೆಸೆದಿರ್ದುದಾಂತಿಱಿವ ಕುಂತಂ ಧಾರಿಣೀ ಕಾಂತನಾ (ಧರ್ಮನಾ. ೩-೪). [ಉಂಡಿಗೆ$_{3}$ + ಕೋಲ್$_{1}$]

**ಉಂಡಿಗೆದರ್** (ಕ್ರಿ). ಆಜ್ಞಾಪತ್ರವನ್ನು ತೆಗೆದುಕೊಂಡು ಬಾ, —ಪರವಾನಗಿಯನ್ನು ಪಡೆದು ಬಾ : ಪುಲಿಗಳ ಮೀಸೆಯನುಯ್ಯಲಾಡಲೆ ನಂಜನೆಂಜಲಿಸಲುಮುಟ್ಟಿಯೆ ಕಾಳಕೂಟಮನೆನ್ನ ದೋರ್ವಲಮನತಿಕ್ರಮಿಸಲ್ಕಮಾಟಿಸಿ ಬಂದನೊಳ್ಗಲಿ ದಲಿವಂ ಜವನಲ್ಲಿಯುಂಡಿಗೆದಂದನೋ (ಕಾವ್ಯಾವ. ೮೨). [ಉಂಡಿಗೆ$_{3}$ + ತರ್]

**ಉಂಡಿಗೆಯೊತ್ತು** (ಕ್ರಿ). ೧. ಮುದ್ರೆಯನ್ನು ಒತ್ತು : ಮತ್ತಂ ಪೆಱರ ಪಲವುಂ ಜೀವಧನಂಗಳನರಸರ ಕಾಪಿನ ಪೊಲನಂ ಪೊಕ್ಕುವೆಂದುಂಡಿಗೆಯೊತ್ತಿಕೊಳುತ್ತುಂ (ಸುಕುಮಾ. ೭-೩೫ ವ) ; ಮೂದಲಿಸಿ ಬಂದ ಮನ್ನೆಯ ರಾವುತರಂ ಬಲ್ಲೆಯದ ಪಟ್ಟಸದೊಳುಂಡಿಗೆಯೊತ್ತಿಬಿಟ್ಟು (ಮಳಿರ. ೪೫-೧೦) ; ಉಂಡಿಗೆಯೊತ್ತಿ ತೋಱಿದನಿವಳ್ದಿರನಂಗಜಂ (ಅನಂಪು. ೭-೩೦). ೨. ಮುದ್ರೆಯನ್ನು ಒತ್ತಿಸಿಕೊ : ತಗಯಲ್ ಜೈಮಿನಿ ತಿಪ್ಪಿಕೊಣ್ಣು ಪರಿಯಲ್ ವೈಶೇಷಿಕಂ ಪೋಗದುಂಡಿಗೆಯೊತ್ತಲ್ ಸುಗತಂ ಕಡಂಗಿ ಬಳೆಗೋಯಲ್ಕಕ್ಷಪಾದಂ (ಎಕ. II, ೬೯-೪೩ ; 1093). [ಉಂಡಿಗೆ$_{3}$ + ಒತ್ತು$_{1}$]

**ಉಂಡಿಗೆವಾದರ್** (ನಾ). (?) : ಎಂದು ತಮ್ಮ ತಕ್ಕಿನ ಮೂಱುಂ ತಕ್ಕುಗಳುಮನಡರಿಯುಂ ತೊಡರಿಯುಂ ನುಡಿದಂತೆ ತಂತಮ್ಮಾನೆಯೊಳ್ತನುಮುಂ ಬಿನ್ನಣಮುಮಂ ಮೆಱೆದಾನೆವಾರುಗಳೊಳಮುಂಡಿಗೆವಾದರೊಳಂ ಪುಗದೆ ಸಲೆ ಬರ್ದ ಗಜವಿಜಯಿಗಳಿಂ (ಶಾಂತಿಪು. ೩-೨೭ ವ). [?]

**ಉಂಡಿಲಿಗೆ** ‘ಉಂಡಲಿಗೆ’ ನೋ.

**ಉಂಡಿವು** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀ ಕಾನಿಯಬ ಜಕ್ಕಗಾವುಣ್ಡನ ಮಗ ಬಿರಯ್ಯನುಂಡಿವಿನಲ್ ಸತ್ತಡೆ (ಮೈಆರಿ. ೧೯೩೨, ೫೨-೯ ; 1064). [?]

**ಉಂಡಿಸು** (ಕ್ರಿ). ಉಂಡೆಯಾಗಿ ಮಾಡು : ಉತ್ತರೀಯದ ಸೆರಗನ್ನು ಹರಿದುಕೊಂಡು ಅದನ್ನುಂಡಿಸಿ ಆತನ ಬಾಯ್ಗೆ ಗಿಡಿಯ ಹೋಗುವನು (ಬೆಟ್ಟಅ. ೧೯೫-೧೭). [ಉಂಡೆ + – ಇಸು$_{3}$]

**ಉಂಡು** ‘ಉಂಟು$_{1}$’ ನೋ.

**ಉಂಡುಕ** (ನಾ). “ಉಂಡುಕವೆಂದರೆ ರಕ್ತದ ಕಿಟ್ಟವು” (ಬಾಹಟೀ. ೨-೩-೧೩ ವ). [ಸಂ.]

**ಉಂಡುಗೆ** ‘ಉಂಡಿಗೆ$_{3}$’ ನೋ.

**ಉಂಡೆ** (ನಾ). ೧. ದುಂಡನೆಯ ಆಕಾರವುಳ್ಳ ಮುದ್ದೆ (ಯಾವುದಾದರೂ ವಸ್ತುವಿನ ಉರುಟಾದ ರೂಪದ ಸ್ಥಿತಿ) : ದಿವ್ಯೌಷಧಿಗಳಿಂದಂ ಮಾಡಿದುಂಡೆಗಳಂ ಪಿಟ್ಟನೊಳ್ . . . ಮಾರ್ದನೂಡಿದಂ ಮತ್ತಂ ಪೊಟಲೊಳಗೆಲ್ಲಂ ಉಂಡೆಯ ಪರ್ವಮಂ ಮಾಡಿಸಿದಂ (ವಡ್ಡಾರಾ. ೧೭೧-೨೪) ; ತುಱುವೆಯ ಬೇರನಿಕ್ಕಿ ತಱಿಪೆರ್ಮೆಯ ಪಾಲುಮುಮರ್ದ್ಧಮಪ್ಪಿನಂ ಮಱುಗಿಸಿ . . . ಕಮ್ಮಿತಾಗೆ ಪಾಂಗಱಿದಮೃತೋಪಮಾನಮಿದು ತಾನೆನೆ ಮಾಳ್ಪುದು ಕ್ಷೀರದುಂಡೆಯಂ (ಲೋಕೋಪ. ೮-೧೦) ; ಕಿಱುನಾಯ್ಗಳ ಬಾಯ್ಗಳಿಂದೆ ನೂಲುಂಡೆಯನಿಟ್ಟವೋಲ್ ಮಿಡುಕುತುಂ ಪರಿವಾಡಿದುದೊಂದು ಪೆರ್ಮೊಲಂ (ಸೂಕ್ತಿಸು. ೩-೧೨೧) ; ಒಂದು ದೆವಸಂ ಭೈಕ್ಷಕ್ಕೆ ಪೋದಲ್ಲಿ ಬಱಿಯ ತವುಡಂ ಪಡೆದು ಬಂದದಂ ಪುರಿದು ಸಣ್ಣಮಾಗಿ ಪಿಟ್ಟುಗುಟ್ಟಿ . . . ಮೂಱುಂಡೆಯಂ ಮಾಡಿಟ್ಟು (ಜೀವಸಂ. ೨೨೫-೩೦ ವ); ನಾರುವದನಾದ ಕಣಿಕವನು ನಿಂಬೆಯಕಾಯ ತೋರದುಂಡೆಯ ಮಾಡಿ (ಸೂಪಶಾ. ೧-೨೬) ; ಅರಿಶಿನದುಂಡೆ ಧಾನ್ಯದ ಕುಪ್ಪೆ (ವರ್ಧಸಾಂ. ೫-೪೭); ಅಫೀಮಿನ ಉಂಡೆಯು ಹೇಗೋ ಗಂಟಲಿನಿಂದ ಒಳಕ್ಕೆ ಇಳಿದುಹೋಯಿತು (ಕಮಕ. ೧೩೮). ೨. ಪೂರ್ಣವಾದ ವಸ್ತು ; ಮುರಿಯದುದು : ಸತ್ಯದಡಿಕಿಲು ನಿತ್ಯದುಂಡೆಗಳು ರುದ್ರಾಕ್ಷಿ ಆತ್ಮನುಪಮಾನಂದ ದುಂಡೆಗಳು ರುದ್ರಾಕ್ಷಿ (ರುದ್ರಾರ. ೬೦-೩) ; ಉಂಡೆಗುಂಬಳಕಾಯ ಮೇಲಣ ಹಸುರ ಕೆತ್ತಿಕೊಂಡು (ಸೂಪಶಾ. ೫-೨೩) ; ಉಂಡೆಯಾದ ಒಂದು ಕಥೆಯನ್ನು ಆತನ ಮುಂದೆ ಓದಿ ಆತನಿಗೆ ಇನ್ನೂ ಆಶ್ಚರ್ಯ ಹೆಚ್ಚಾಗುವಂತೆ ಮಾಡಬೇಕೆಂದು ಆಗ್ಗೆ ಸುಮ್ಮನಾದನು (ಸುಮಚ. ೪೨) ; ಹಲಸಿನ ಉಂಡೆಗಾಯನ್ನೇ ಕೊಟ್ಟರು (ರೂಢಿ).

ಉಂಡುಂಡೆ (ದ್ವಿರುಕ್ತಿ) : ಮಾವಿನ ಹಣ್ಣನ್ನು ಉಂಡುಂಡೆಯಾಗಿಯೇ ಊಟಕ್ಕೆ ಬಡಿಸಿದರು (ರೂಢಿ).

[ದೇ ‖ ತಮಿ. ಉರುಣ್ಡೈ, ಉಣ್ಡೈ; ಮಲ. ಉಣ್ಡ; ತುಳು. ಉಂಡೆ; ತೆಲು. ಉಂಡ ; ಗೊಂಡಿ. ಉಂದಾ]

**ಉಂಡೆಕಟ್ಟು** ‘ಉಂಡೆಗಟ್ಟು’ ನೋ.

**ಉಂಡೆಕ್ಕಳಿ** (ನಾ). ಒಂದು ತೆರನಾದ ಜೂಜಿನ ಆಟ : “ಉಂಡೆಕ್ಕಳಿ” ಯೆಂಬ ಜುಗಾರಾಟದಲ್ಲಿ ಭಾಗವಹಿಸಿ ದರ್ಪ ಠೀವಿ ತೋರಿಸಿ ಹಣ ಕಳೆಯುವುದು ಇವರ ಪ್ರಮುಖ ವ್ಯಾಪಾರ (ಭ್ರಾಂತಿಸು. ೭೦). [← ಮಲ. ಉಂಡೆಕ್ಕಳಿ]

**ಉಂಡೆಗಟ್ಟು, ಉಂಡೆಕಟ್ಟು** (ಕ್ರಿ). ೧. ಮುದ್ದೆಯಾಗು ; ಉಂಡೆಯಾಗಿ ಹೋಗು : ನೀರು ಚಿಮುಕಿಸುವಾಗ ಹಿಟ್ಟು ಉಂಡೆಗಟ್ಟಿದರೆ ಉಂಡೆಗಳನ್ನು ಸೌಟಿನಿಂದ ತಿಕ್ಕಿ ಪುಡಿಮಾಡಬೇಕು (ಅಡುಸಾ. ೯೪) ; ತಲೆಯ ಕೂದಲೆಲ್ಲಾ ಉಂಡೆಗಟ್ಟಿದೆ (ರೂಢಿ). ೨. ಉಂಡೆಯಾಗಿ ಮಾಡು ; ಗುಂಡಾಗಿಸು (ಕಿ). **ಉಂಡೆಕಟ್ಟು** : ೨. ಮನೆಯಲ್ಲಿ ಲಾಡು ಉಂಡೆಕಟ್ಟುತ್ತಿದ್ದಾರೆ (ರೂಢಿ). [ಉಂಡೆ + ಕಟ್ಟು$_{1}$]

**ಉಂಡೆಗಡುಬು** (ನಾ). ಉಂಡೆಯ ಆಕಾರಕ್ಕೆ ಮಾಡಿದ ಕಡುಬು : ಹುರಿಯಕ್ಕಿ ಹೋಳಿಗೆ ಹೂರಣಗಡುಬು ಕಡಲೀಪಚ್ಚಡಿ ಕಟ್ಟನಾಂಬರಾ ಉಂಡಿ[ಡೆ] ಗಡುಬು ಪುಂಡಿಯ ಪಲ್ಲೆ (ಶರೀಫ. ೩೭-೧) ; ಬೆಂಡಲ್ಲ ಬೆನಕಲ್ಲ ಉಂಡೆಗಡುಬು ತಂದು ಉಡಿಯಲ್ಲಿ ಹಾಕುತ್ತಿದ್ದರು (ಗಾದೆ). [ಉಂಡೆ + ಕಡುಬು]

**ಉಂಡೆದಲೆ** (ನಾ). ದುಂಡಾದ ತಲೆ ; ಬೋಳಿಸಿದ ತಲೆ. ‘ಉಂಡೆದಲೆಯೋತಿ’ ಪರಾ. [ಉಂಡೆ + ತಲೆ$_{1}$]

**ಉಂಡೆದಲೆಯೋತಿ** (ನಾ). ೧. ದುಂಡಾದ ಅಥವಾ ಬೋಳಾದ ತಲೆಯಿಂದ ಕೂಡಿದ ಓತಿಕೇತ, —ಓತಿಕಾಟ. ೨. (ಆಲಂ). ಓತಿಯಂತೆ ಬೋಳುತಲೆಯುಳ್ಳ ವ್ಯಕ್ತಿ. ೧, ೨ : ಉಂಡೆದಲೆಯೋತಿಗಳು ಬಱುವಾಯ ಬಳ್ಳುಗಳು ಗುಂಡಿಗೆಯ ಚಂಡಿಗಳು . . . ನೆಱೆದುದುನಾಡ ಮಲಧಾರಿಗಳ ಮೊತ್ತ ಸುಲಿವಡೆದಮಲ್ಲರಂತೆ (ಸೋಮಚ. ೪-೪೦). [ಉಂಡೆದಲೆ + ಓತಿ$_{1}$]

**ಉಂಡೆಲೆಗ್ಗೆ** ‘ಉಂಡಲಿಗೆ’ ನೋ.

**ಉಂಡೆಸುತ್ತು** (ಕ್ರಿ). ಉಂಡೆಯಾಗುವಂತೆ ಸುತ್ತು ; ಗುಂಡಾಗಿ ಮಾಡು : ಉಂಡೆಸುತ್ತಿ ಮೇಲುದನಾಗಳ್ ತಲೆಗಿಂಬುಮಾಡಿ ನೃಪಕುಲತಿಲಕಂ ಪಟ್ಟಿರ್ದಂ (ಕಾದಂಪೂ. ೬೫೦). [ಉಂಡೆ + ಸುತ್ತು$_{1}$]

**ಉಂಡ್ಲ** (ನಾ). ಹರಳು ; ಔಡಲ : ಉಂಡ್ಲ ಅಥವಾ ಹೊಯಿನಗೀ ಹೊಂಗೆ ಬೀಜ—ಈ ಬೀಜಗಳನ್ನು ಗಾಣದೊಳಗೆ ಹಾಕಿ ಎಣ್ಣೆ ತೆಗೆಯುವರು (ಮುಂಬಯಿ. ೫-೨೧೧). [< ಅವುಂಡಲ]

**ಉಂತಪ್ಪ**, ಉಂತಹ (ಗು). ಈ ನಡುವಣ ರೀತಿಯ: ಅಂತಪ್ಪಂ ಇಂತಪ್ಪಂ ಉಂತಪ್ಪಂ ಎಂತಪ್ಪಂ (ಶಮದ. ೧೬೦ ವೃತ್ತಿ); ಅಹುದಹುದು ಅರಸ ಕೇಳ್ಬಹುದದುಂತಪ್ಪುದೈ ಆಹುದು ನಾನಿಲ್ಲಿ ಅನುದಿನವು ಕದ್ದವನು ಅಹುದೆಂದರೇಕೆ ಬೆಸಗೊಂಬೆ (ಗುರುಬೋ. ೬೩-೨೨). **ಉಂತಹ**: ಅಂತಪ್ಪಂ ಮೊದಲಾದುವಱ ಹಕಾರಕ್ಕೆ—ಅಂತಹಂ, ಇಂತಹಂ, ಉಂತಹಂ, ಎಂತಹಂ (ಶಮದ. ೧೬೦ ಪ್ರಯೋ).

ಉಂತಪ್ಪನ್ = ಈ ನಡುವಣ ರೀತಿಯವನು: ಉನ್ನಮುಂತಪ್ಪನುಂತಹನೆನ್ನುತ್ತಂತೆಂದು ಪೋಲ್ವೊಲೆನೆ ಪೋಲ್ವೆ ವಲಂ" (ಕವಿಕಂ. ೨೧೮). [ಉಂತು + ಅಪ್ಪ$_4$ (< ಆಗು$_1$)]

**ಉಂತಹ** 'ಉಂತಪ್ಪ' ನೋ.

**ಉಂತು** (ಅ). ೧. ಈ ನಡುವಣ ಪ್ರಕಾರವಾಗಿ; ಹೀಗೆ: ಬಲ್ಲಿತ್ತಱ ಕೋಡು ಕೂರಿತದನಂತಿಂತುಂತೆ [ಪಾಠಾಂ. ತಂದೆ] ನಲ್ಬಕರ್ಣಮೇ (ಆದಿಪು. ೧-೨೫); ವಿಚಿತ್ರಮಿದನಂತಿಂತುಂತೆನಲ್ಬಕರ್ಣಮೇ (ಕಾದಂಉ. ೩೦೯); ಅದ್ಯಂತಂ ಜೈನಾಗಮಮನದಂತಿಂತುಂತೆಂದೆನಲ್ಕದೇಂ ಬಂದಪುದೇ (ಸಮುಪ. ೪-೨೩). ೨. ಸುಮ್ಮನೆ; ನಿಷ್ಕಾರಣವಾಗಿ: ಬಱಿಕ್ಕದುವೆ ಕಾರಣಮಾಗುಱಿದಿರ್ದನಂಥರಾಣ್ಣಂದನನಲ್ಲದುಂತು ತಲೆಯುಚುರ್ಗುಮೇ ರಣರಂಗಭೂಮಿಯೊಳ್ (ಪಂಪಭಾ. ೧೩-೭೫); ಸತ್ತ ಭೂಪರ ಪೆಂಡಿರ್ ಬಿಸುಸುಯ್ಯೆ ನೀಳ್ದ ಶಿಖಿ ತಂನಂ ಮುಟ್ಟೆ ನೊಂದಿಂದು ನಿತ್ತರಿಸಲ್ತಾನಣಮಾಱದೀಶ್ವರ ಜಟಾಜೂಟಾಟವೀಸಿಂಧುಸೀವರಮಂ ಸೇವಿಸಲಿರ್ದ್ದನುಂತು × ಶಿಗಂ ದೇವಂಗಮೇ ಸಂಮುದಂ (ಎಕ. VIII, ಸಾಗರ. ೧೦೯-೩೫; 1042). ೩. ಇನ್ನು: ಪ್ರಾಗ್ಜನ್ಮಕಥಾವಳಿಯೆಲ್ಲಮಂ ಬಗೆದು ನೋವೆನಗಾದುದು ನೋವಂತುಂತೆನಗಾವುದು ಬೇವಸಂ (ಆದಿಪು. ೩-೩೩); ಅಂದಿನೆಸಕಕ್ಕುಂತಾವಳುಂ ನೋಂತಳೇ (ಪುಷ್ಪಪು. ೧೧-೬೧).

ಉಂತಾಗು = ಈ ನಡುವಣ ರೀತಿಯಂತಾಗು: ಇಂತಾದರೆ ಗತಿ? ಅಂತಾದರೆ ಗತಿ? ಉಂತಾದರೆ ಗತಿ? ಎನುತಿದೆ ಮನಸು (ಸುನೀತ. ೭೦); ಅಳಿದ ಮನ ಅಂತಾಯ್ತು ಯುಗವೆ ಕ್ಷಣ ಆಹುದು; ಉಂತಾಯ್ತು ಕ್ಷಣ ಒಂದು ಯುಗ ಆಗಬಹುದು (ಸುನೀತ. ೭೯). [?]

**ಉಂತುಟು** (ಗು). ಈ (ನಡುವಣ) ಪ್ರಕಾರವಾಗಿ: ಅಂತುಟಿಂತುಟು ಮತ್ತಿನ್ನುಂತುಟದೆಂಬಂತುಟಲ್ತು ಜೈನಾಗಮಂ (ಸಮುಪ. ೩-೨೪); ಉಂತುಟು, ಉಂತೆ, ಉಂತು – ಇತ್ಥಮಿತ್ಯರ್ಥಃ (ಶಬ್ದಾನು. ೪೩೭ ವ್ಯಾಖ್ಯಾ). [ಉಂತು + –ಟು]

**ಉಂತೆ** (ಅ). ೧. ಏನೂ ಮಾಡದೆ; ಸುಮ್ಮನೆ; ನಿಷ್ಕ್ರಿಯವಾಗಿ: ಮಾನಧನಾ ಪೊಗಱಿಸಲೇಂ ದಾನಿಯೆ ನೀನುಂತೆ [ಪಾಠಾಂ. ನಿನ್ನಂತೆ] ನಿನ್ನ ಕಸವರಮೆಂತುಂ ದೀನಾನಾಥರ ಕೆಯ್ಯದು ದಾನಿಯದೆಂತೆಂಬುದಿಂತು ಹೇತ್ವಾಕ್ಷೇಪಂ (ಕವಿರಾ. ೩-೧೦೬); ನೀಮಿಲ್ಲಿ ದುರ್ಗಂತೆ ನೋಡುತ್ತುಮಿರಿಂ ಪೋಟಿಲೊಳಗೆ ಪೊಗೆಯನಿಕ್ಕಿ ಪಾವಂ ಪೊಱಮಡಿಸಿ ಕಳ್ದುಕೊಂಡೊಡವೆಯುಂ ಕುಡುವೆಂ (ಪಂಚತಂ. ೧೭೭-೧೫); ಉಂತೆ ಇತಿ ತೂಷ್ಣೀಮರ್ಥಮಖಂಡಮವ್ಯಯಮಪ್ಯಸ್ತಿ (ಶಬ್ದಾನು. ೪೩೭ ವ್ಯಾಖ್ಯಾ). ೨. ಹಾಗೆ; ಅಷ್ಟರಮಟ್ಟಿಗೆ: ನಿನಗಾಜಿರಂಗದೊಳ್ ಸಾರಥಿಯಪ್ಪೊಡಪ್ಪುದು ಶಿಖಂಡಿಯೆ ನಿನ್ನೊರೆಗುಂತೆ ಗಂಡರಾರ್ (ಪಂಪಭಾ. ೮-೯೭); ತಲೆಯಂ ಮೂಗುಮನೊತ್ತೆಯಿಟ್ಟು ನೆರೆವಂತುಂತೇನವರ್ ಗಾಂಪರೇ (ಪಂಪಭಾ. ೪-೮೪). ೩. ನಿಷ್ಕಾರಣವಾಗಿ; ಸುಮ್ಮಸುಮ್ಮನೆ: ಉಂತೆ ನಡುಗುವ ಬಡನಡುಗಳ್ಗೆ ನಡುಕಮುಮನುಂತೆ . . . ಸೊಗಯಿಸುವ ಬೆಳವಾರ್ಯ್ಗಳ್ಗೆ ತನಿಗೆತ್ತುಮನುಂತೆ ಪೊಳೆವ ನಿಡಿಯಲರ್ಗಣ್ಗಳ್ಗೆ ಮಳಮಳಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗೆ ತೊದಳುಮಂ (ಪಂಪಭಾ. ೭-೮೧ ವ); ಬಂದೆರೆದಂಗೆ ಕೊಟ್ಟು ಸಲೆ ವೈರಿಗೆ ಬೆಂಗುಡ ನೆಂದುವೆಂಬಿದಾವಂದಮೊ ತನ್ನೊಳಿಲ್ಲ ಭಯವಾಭಯಮಂ ಪಗೆಗೀವನುಂತೆ ಚಿತ್ರಂ ದಲೆನುತ್ತು ಮತ್ತಂ ಪೊಗಳ್ಗುಂ ವಸುಧಾತಳವರ್ಕಱಿಂದೆ ನಿರ್ಗುಂದದ ಚಟ್ಟನಂ (ಎಕ. VI, ಕಡೂರು. ೩೬-೨೭; 1203). [ಉಂತು + –ಎ$_2$]

**ಉಂದ**, ಉಂದಾ (ಗು). ೧. ಮರ್ಯಾದೆಗೆ ಯೋಗ್ಯನಾದ: ಯಾರೋ ದೊಡ್ಡ ಉಂದ ಮನುಷ್ಯನೆಂದು ತಿಳಿದು ಜನರು ಇವನಿಗೆ ಮರ್ಯಾದೆ ಮಾಡಿ ಹತ್ತರ ಕೂರಿಸಿಕೊಳ್ಳುತ್ತಿದ್ದರು (ಮುಸುಗ. ೬೬). (ನಾ). ೨. ಗೌರವಸ್ಥ. **ಉಂದಾ**: ಹೈದರಾಬಾದು ಸರ್ಕಾರದವರು ಕೆಲವು ಮುಸಲ್ಮಾನ್ ಉಂದಾಗಳಿಗೆ ಕೊಟ್ಟಿರುವ ಚಿಕ್ಕ ಸಂಸ್ಥಾನಗಳೂ ಜಹಗೀರುಗಳೂ ಸಹ ಇವೆ (ಪಾಳಗಾ. ೧೭). [← ಅರ. ಉಮ್ದಾ; ಮರಾ. ಉಮದಾ]

**ಉಂದಲ್** (ನಾ). ಸಮೂಹ; ಗುಂಪು: "ಬಂಬಲ್, ತುಱುಗಲ್ . . . ಗುಮ್ಮಿ, ಗೊಂದಣಿ (ಉಂದಲ್) – ಈ ೪೦ ಸಮೂಹಂ" (ಕಶಸಾ. ೧೧-೩೩೩); "ಉಂದವು[ಲೊ]ಟ್ಟೆಲು ಗುಱ್ಪು ತೋಮ ಗಡಣ ಜಾಳಿಗೆ ತೊಂಬೆಯೆನೆ ಶ್ರೇಣಿಕಾಖ್ಯಂ" (ಶಬ್ದಮಂ. ೫೪). [?]

**ಉಂದಾ** 'ಉಂದ' ನೋ.

**ಉಂದು** (ಅ). ಈ ನಡುವಿನ ದಿನ; ಈ ಮಧ್ಯಕಾಲ: ಕಾಲಾರ್ಥಂ ಪತ್ತುವುದಂದಿಂದುಂದೆಂದೆತ್ತಂ ನುಡಿವವ್ಯಯಂಗಳೊಳ್ ವಾಗ್ವಿದರಿಂ (ಶಮದ. ೩೧); ಅಂದು, ಇಂದು, ಉಂದು (ಶಬ್ದಾನು. ೪೩೮ ಪ್ರಯೋ); ಅಲೆದಿಂದಿನಂದಿನುಂದಿನ ಪಲವು ಕವಿತ್ವಗಳಿವೆಂದು ಪಿಂಜುತೆ (ಸಂಸಪ. ೬-೧೨). [?]

**ಉಂದುರ**, ಉಂದುರು (ನಾ). ಇಲಿ; ಹೆಗ್ಗಣ; ಮೂಷಿಕ: "ಉಂದುರಃ, ಖನಕಃ – ಈ ೨ ಹೆಗ್ಗಣಂ" (ಹಲಾಯು. ೩೯-೬೨); ನೀವೆಂದಂತೆ ಪವನನಿಂದಾವೆ ಬಲ್ಲಿದರಪ್ಪೆವಾದೊಡಮೆಮಗಂ ಉಂದುರಂಗಳ್ ಬಲ್ಲಿದುವೆಂದೊಡವರಂ ವಿಸರ್ಜಿಸಿ ಮುನಿಮುಖ್ಯಂ ಮೂಷಿಕಮುಖ್ಯನಂ ಬರಿಸಿ ನೀನೀ ಕನ್ನೆಯಂ ಪರಿಗ್ರಹಿಸೆಂಬುದುಂ (ಪಂಚತಂ. ೨೫೯-೧೩). **ಉಂದುರು**: "ಖನಕಮುಂದುರುವೆನಲು ಪೆಗ್ಗಣಂ" (ಮಂಗರಾ. ೪೯-೧೨); "ಉಂದುರುಃ, ಮೂಷಿಕಃ, ಆಖುಃ – ಈ ೩ ಇಲಿಯ ಹೆಸರು" (ಸಿದ್ಧಾಂತಿ. ೧೩೭). [ಸಂ.]

**ಉಂದುರು** 'ಉಂದುರ' ನೋ.

**ಉಂಬ** (ನಾ). = ಉಂಬಳಿ (?): ಕೊಟ್ಟ ಧರ್ಮಸದನ ಚತ್ತಾರು ಉಂಬವೆಂತೆಂದರೆ ಕೋಳಾಲ ಸೀಮೆಯೊಳಗಣ ಕೊತನೂರು ಪಟ್ಟಡೆಸ್ಥಳದ ಕೆಂದಟ್ಟುಗ್ರಾಮ (ಎಕ. X (S), ಕೋಲಾರ. ೩೦೪-೧೧; ಸು. 17ನೆಯ ಶತ). [?]

**ಉಂಬರ** (ನಾ). ಅತ್ತಿಮರ: ಅತ್ತಿ (ಉಂಬರ, ರುಮಡಿ) ಪ್ರಸಿದ್ಧ (ಮರ) (ಕಛಾಗಿ. ೩೫). [← ಮರಾ. ಉಂಬರ್ < ಸಂ. ಉದುಂಬರ]

**ಉಂಬಲ್ತಿ** (ನಾ). (ಕರಾ). ಒಂದು ದೆವ್ವದ ಹೆಸರು: ಅದು ನಿಜಕ್ಕೂ ಉಂಬಲ್ತಿಯ ಸೋಂಕು. ಅಷ್ಟು ಜೋರು ಜ್ವರ ಸುಮ್ಮನೆ ಬರಲಿಕ್ಕಿಲ್ಲ (ಔದಾಉ. ೪೬). [?]

**ಉಂಬಳ** (ನಾ). ಒಳಆಡಳಿತದ ವಿಶೇಷ ರೀತಿಯ ಖರ್ಚುವೆಚ್ಚಕ್ಕಾಗಿ ಪ್ರತ್ಯೇಕವಾಗಿ ತೆಗೆದಿರಿಸಿದ ದ್ರವ್ಯ: ಬಿಟ್ಟಿಬಿಯಮುಂಬಳಮುಂಬಳಿದಾಯಮಾದಿಯಾಗಿ (ಎಇ. XV, ೩೪೧-೩೯; 1071). [ಉಳ್ + ಬಳ ?]

**ಉಂಬಳಕೊಡಿಗೆ** (ನಾ). ಉಂಬಳಕ್ಕಾಗಿ ಕೊಟ್ಟ ಕೊಡುಗೆ: ಧಾರಾಪೂರ್ವಕಂ ಮಾಡಿಕೊಟ್ಟ ಸಾಸನಮೆನ್ತೆಂದೊಡೆ ಆದಕ[ಅಕಳ ೧]ಪ ೧ ಊಂ[ಉಂ]ಬಳಕೊಡಿಗೆಗೆ ಪ ೧ ಕುದುರೆಗೆ ಪ ೧ (ಕಇಅ. ೧೦೩-೮-೨೬; 1076). [ಉಂಬಳ + ಕೊಡಿಗೆ]

**ಉಂಬಳಿ**, ಉಂಬುಳಿ, ಉಮ್ಮಳಿ (ನಾ). ಮಾನ್ಯವಾಗಿ ಕೊಡುವ ಭೂಮಿ, ಗ್ರಾಮ ಮುಂತಾದುವು; ಕಂದಾಯ ಕೊಡಬೇಕಾಗಿಲ್ಲದೆ ಅನುಭವಿಸುವಂತೆ ಕೊಟ್ಟ ಭೂಮಿ, —ಕೊಡುಗೆ; ಜಹಗೀರು: ಸನ್ತೋಷಮಾಗೆ ದೇವ[ರ್ಗ್ಗೆ]ನ್ದು ಮತಿಬಲ್ಲಹನುಂಬಳಿಯಂ . . . ಕೊಟ್ಟ ನನಘ[ಧನಂ](ಸೌಇಇ. XI–i, ೪೫–೩೬; 980); ಪನ್ನಿರ್ವ್ವರ್ಗ್ಗಾರ್ಗ್ಗವುಣ್ಡ[ರ] ಗಳ್ಗೆ ದಯೆಗೆಯ್ದುಂಬಳಿಯಾಗಿ ಕೊಟ್ಟ ಮ ತ್ತ ರ್ ನೂಜಪನ್ನೊಂದು (ಇಆ. XVIII, ೪೦–೩೬; 999); ಮಾಧವ ಬಾರೈ ನಿನ್ನಣ್ಣಗುಂಬಳಿಯ ಕೊಟ್ಟೀ ಧರಣಿಯನಾಳು ನೀನು (ಭರಚ. ೩೫–೨೨); ಉಂಬಳಿಯು ಇದ್ದವರು ಕಂಬಳಿಯ ಹೊದೆಯುವರೆ (ಸರ್ವಜ್ಞ. ೨೨೩); ಆಯಾ ದೊರೆಗಳ ಆಳಿಕೆಗಳಲ್ಲಿ ಉಂಬಳಿಯಾಗಿಯೂ ಇನಾಮಾಗಿಯೂ ಹೆಚ್ಚಾದ ಭೂಪ್ರದೇಶವನ್ನು ಸಂಪಾದಿಸಿದವರು (ಪಾಳಗಾ. ೧೦); ‘ಕ ಮ್ಮ ನ’ ಗ್ರಾಮವನ್ನು ನಿಮಗೆ ಉಂಬಳಿಯಾಗಿ ಕೊಟ್ಟಿದ್ದೇವೆ (ಶಾಂತಲಾ. ೧೨೪). **ಉಂಬುಳಿ**: ಮೊದಲು ವೇಕಾಂತರಾಮಾನುಜೀಯರಿಗೆ ಉಂಬುಳಿಯ ಕೊಡುವದಕೆ ಮೊದಲು ಸಲುವಂತಾ ದೇವದಾಯ (ಎಕ. XIV, ಶ್ರೀರಂಗ. ೧೯೯–೧೫; 1563). **ಉಮ್ಮಳಿ**: ಜಕ್ಕಣಾಚಾರ್ಯರಿಗೆ ರತ್ನಭರಣಗಳಂ ತ್ರಿಸರರುದ್ರಕಂಕಣವ ದಿವ್ಯವಸನಗಳ ವಾಹನವೈದುಗ್ರಾಮುಗಳವುಮ್ಮಳಿ [ಪಾಠಾಂ. ಉಂಬಳಿಯ] ಕೊಟ್ಟು (ಪ್ರೌಢರಾ. ೨೧–೩೩); ನಡುಗದಿರು ನಿನಗುಮ್ಮಳಿಯ ನಾ ಕೊಡುವೆ (ಜಿನಭಾ. ೧೫–೩೧).

[ಪ್ರಾ. ಉಬ್ಬಲಿ <ಸಂ. ಉದ್ಬಲಿ. / ತಮಿ. ಉಮ್ಬಳ, ಉಮ್ಬಳಿಕ್ಕೈ; ತುಳು. ಉಂಬೊಲಿ; ತೆಲು. ಉಂಬಳ, ಉಂಬಳಿ, ಉಂಬಳಿಕ]

**ಉಂಬಳಿಕಾಱ** ‘ಉಂಬಳಿಗಾಱ’ ನೋ.

**ಉಂಬಳಿಗಾಱ**, ಉಂಬಳಿಕಾಱ (ನಾ). ಉಂಬಳಿಯನ್ನು ಪಡೆದವನು; ಮಾನ್ಯದಾರ; ಜಾಗೀರುದಾರ (ಕ). **ಉಂಬಳಿಕಾಱ**: ಇವರೆಲ್ಲರೂ ಆಡುವ ಅಂದಣಗಿತ್ತಿಯ ಮನೆಯ ಉಂಬಳಿಕಾಜರಾದರು (ಮೋಳಮಾ. ೧೫೯–೫೯೬). [ಉಂಬಳಿ + –ಕಾಱ]

**ಉಂಬಳಿಗೆ** (ನಾ). = ಉಂಬಳಿ: ಆ ಮಕ್ಕಳಿಗೆ ಬಗೆ ಮುಟ್ಟ ಒಪ್ಪಿಸಿ ಕೊಟ್ಟಿರುವ ಈ ಉಂಬಳಿಗೆಯನ್ನು . . . ಪಾರಂಪರ್ಯವಾಗಿ ಅನುಭವಿಸಿಕೊಂಡು ಬರುವ (ಮಂತ್ರಶ. ೧೮–೧). [ಉಂಬಳಿ + –ಗೆ]

**ಉಂಬಳಿಗೆಲಸ** (ನಾ). ಉಂಬಳಿಗಾಗಿ ಮಾಡುವ ಕೆಲಸ: ಇಷ್ಟು ಮಾಂನ್ಯ ನಂಮ ಸರುಚಿಯಿಂದ ಪೊಡಂಬಟ್ಟು ಕಲ್ಲನೆಟ್ಟು ಕೊಟ್ಟೆಉ ತೂಬು ಹೊಡೆವೊಡೆಯಾದರೆ ಗೂಳಿಯೋಜ ಮಾಡುವ ಉಂಬಳಿಗೆಲಸವ ನಾಉ ಕೊಡುವೆಉ (ಎಕ. IX, ಕಾನಕಾ. ೯೭–೩೪; 1400). [ಉಂಬಳಿ + ಕೆಲಸ]

**ಉಂಬಳಿತ** (ನಾ). = ಉಂಬಳಿ: ಮಲ್ಲರಸಯ್ಯನವರು ಆ ಮಾದರಸಯ್ಯಗೆ ಉಂಬಳಿತಕ್ಕೆ ಸೆಲವಾಗಿ ಪಾಲಿಸಿದ ಹಳಿಯ ಚತುಃಸೀಮೆಯ ವಿವರ (ಎಕ. XIV, ಎಳಂದೂ. ೧೮೭–೯; 1530). [ಉಂಬಳಿ + –ತ$_2$]

**ಉಂಬಳಿದಾರ** (ನಾ). ಉಂಬಳಿಯನ್ನು ಪಡೆದಿರುವವನು (ರೈಸ್‌ಗ. ೫೬೩). [ಉಂಬಳಿ + –ದಾರ$_4$]

**ಉಂಬಳಿಬಿಡು** (ಕ್ರಿ). ಉಂಬಳಿಯನ್ನು ಬಿಡು; ದತ್ತಿಯನ್ನು ಬಿಡು: ಕಿರುಕಾಗಾಮಾಸಿ ಗ್ರಾಮುವನ್ನು ಆಲೂಪ ಅರಸನ ಅಪೇಕ್ಷೆ ಪ್ರಕಾರ ವಿನಯಾದಿತ್ಯನು ಉಂಬಳಿಬಿಟ್ಟನೆಂದೂ ಇದೆ (ತುಳುನಾ. ೬೭). [ಉಂಬಳಿ + ಬಿಡು]

**ಉಂಬುದಾರ** (ನಾ). ಊಟ ಮಾಡುವಾಗ (ಜನಿವಾರದಂತೆ) ಕೊರಳಿಗೆ ಹಾಕಿಕೊಳ್ಳುವ ದಾರ: ಅದಕ್ಕೆ ವರ್ಸಾ ನೂಲಹುಣ್ವೇದಿನಾ ಉಪಾದ್ಮೇನ್ನ ಕರತಂದು ನಮ್ಮ ಜೀವಪ್ಪನವರ ಕೊಳ್ಳಿಗೆ ಉಂಬುದಾರಾ ತೊಡಕಸತಾಳ (ಪವಶೀ. ೧೮). [< ಉಣ್ + ದಾರ$_1$]

**ಉಂಬುರಾಡು** (ಕ್ರಿ). (?): ರತಿಯಂ ನಿಷ್ಠುರದಿಂ ಪೊಣರ್ಚಿ ಕಡುಪಿಂದಂ ಬೈದು ಮೈಯೆಲ್ಲಮಂ ಸತತಂ ಸಿಂಗರಿಸುತುಂಬುರಾಡಿ [ಪಾಠಾಂ. ಸಿಟ್ಟುಸಿರುಂ] ಗಡುವಂ ಸುರ್ಗೊಪ್ಪಿನಂ ಪೊಯ್ದು ತೀವ್ರತೆಯಿಂ ಕಿಂಕಳೆ ಮಾಡಿ ನಿರ್ದಯತೆಯಿಂದಂ ಚುಂಬನಂಗೆಯ್ದು ಮಾರುತ ಧಾತುಸ್ಥಿತಿಯಪ್ಪಳಂ ಬಸದೆ ಮಾಡಲ್ ಬಲ್ಲವಂ ಬಲ್ಲವಂ (ಮುದತಿ. ೫–೬). ℙ ಈ ಶಬ್ದವನ್ನು ಸಿಂಗರಿಸಿ ತುಂಬುರಾಡಿ ಎಂದೂ ಬಿಡಿಸಿ, ತುಂಬುರಾಡು ಎನ್ನುವುದಕ್ಕೆ ಭೋಗಿಸು ಎಂದು ಅರ್ಥಮಾಡಬಹುದು. ತಮಿ. ತುಪ್ಪುರವು = ಇಂದ್ರಿಯ ಭೋಗ, ತೃಪ್ತಿ. [?]

**ಉಂಬುಳಿ** ‘ಉಂಬಳಿ’ ನೋ.

**ಉಃ**, ಉಹು, ಉಹೂಂ, ಊಃ, ಊಹು (ಅ). **೧.** ಅವಜ್ಞೆ, ತಿರಸ್ಕಾರ ಮತ್ತು ಅಸಮ್ಮತಿಯನ್ನು ಸೂಚಿಸುವ ಅವ್ಯಯ: “ಉಃ = ಉಃ ಎಂಬ ನಿಪಾತಂ, ಅವಜ್ಞಾಯಾಂ = ಅವಜ್ಞಾರ್ಥದಲ್ಲಿ ವರ್ತಿಕುಂ” (ಭಾಷಾಭೂ. ೨೬೫ ಟೀಕೆ); ಉಃ ಪೋಕೆ ಬಾಚಿಗ್ಗಿಟ್ಟ ಮಕ್ಕಳಾರಾದೊಡಮೇಂ? ಸಾಲ್ಗುಮಿಾ ಪಾಟ್ಗಿತೆ (ರಾಮಾಶ್ವ. ೧೪೮–೧೫). **೨.** ವ್ಯಥೆಯನ್ನೂ ದುಃಖವನ್ನೂ ಸೂಚಿಸುವ ಅವ್ಯಯ: ಉಃ, ಊಃ ವ್ಯಥಾರ್ಥೌ (ಶಬ್ದಾನು. ೨೧ ವ್ಯಾಖ್ಯಾ); ಉಃ ಕಷ್ಟಮಾಯ್ತು (ಶಬ್ದಾನು. ೮೧ ಪ್ರಯೋ). **ಉಹು**: **೧.** “ಉಹ್ಲು! ಏನೂ ಬೇಡ” ಪ್ರಮಿಾಲ ತಟಕ್ಕನೆ ಹೇಳಿದಳು (ಮರಳಿ. ೧೪೩). **ಉಹೂಂ**: **೧.** ಊಟ ಅಂದರೆ ಹೂಂ, ಓಟ ಅಂದರೆ ಉಹೂಂ (ಗಾದೆ). **ಊಃ**: ಉಃ, ಊಃ; ಉ, ಊ; ಎ, ಏ; ಹೋ, ಅಹೋ . . . ಇತಿ ಎಮಾದಿರಾಕೃತಿಗಣಃ (ಶಬ್ದಾನು. ೨೧ ಪ್ರಯೋ). **ಊಹು**: **೧.** ಮಗಳೆ ಬಿಡಾತನಂ ಬಿಡೆಂ . . . ಬೇಡ ಬೇಳ್ಪುದೊತ್ತಿಗೆ ನಡೆವೂಹು (ಗಿರಿಕ. ೪–೧೫೫).

**ಉಃಪ್**, ಉಫ್ (ಅ). **೧.** ಕಷ್ಟವನ್ನೂ, ಆಯಾಸವನ್ನೂ ಸೂಚಿಸುವ ಅನುಕರಣ ಅವ್ಯಯ: ದೆಸೆವೆಣ್ಗಳ್ ಬಿಸುಪಿಸಿಲಿಂ ಬಸವಳಿದುಃಪೆಂದು [ಪಾಠಾಂ. ದುಪ್ಪೆಂದು] ಸುಯ್ದು ಬಿಸುಸುಯ್ಯೆಲರೆಂಬೆಸಕಮನೊಡರ್ಚೆ (ರಾಜಶೇ. ೫–೩೨). **೨.** ಗಾಳಿಯನ್ನು ಊದುವಾಗ ಉಂಟಾಗುವ ಶಬ್ದ: ತರಳ ಕೇಳ್ ಸಂಶಯವನುಃಪ್ಪೆಂದುರುಹಿದೊಡೆ ಮನವಿಲ್ಲವದ ಸಂಸ್ಕರಿಸಿ ಪೇಳುವೆವು (ಸ್ವರೂಪಾ. ೧–೨೬); ಉಃಪ್ ಎಂದು ಒಲೆ ಊದುತ್ತಿದ್ದನು (ರೂಢಿ). **ಉಫ್**: **೧.** (ಕ). [?]

**ಉಃಶಾಪ** (ನಾ). ಶಾಪದ ನಿವೃತ್ತಿ; ಶಾಪವನ್ನು ನಿವಾರಿಸುವ ವರ: ಸಿಡಿದು ಪೂರ್ವವೈಭವವು ಉಃಶಾಪ ಕೋರುವ ಕಲ್ಲು (ಉಯ್ಯಾಲೆ. ೨೭–೯). [< ಸಂ. ಉಚ್ಛಾಪ]

**ಉಃಸಿ** (ಅ). ಆಶ್ಚರ್ಯಸೂಚಕಾವ್ಯಯ: ಜಕ್ಕುಲಿಪಂ ಜವನಂ ನಿಚ್ಚಟಗಲಿ ಉಃಸಿ ಪೋವೊ ವೀರ ವಿಕ್ರಮಭೂಪಂ (ಎಇ. XX, ೧೨–೭; 1187). [?]

**–ಉಕ** ‘–ಉಗ’ ನೋ.

**ಉಕಾರ** (ನಾ). [ವ್ಯಾಕ] ಉ ಎಂಬ ಅಕ್ಷರ: ಒಂದೆಂಬುದರ್ಕೆ ರೇಫಂ ಸಂಧಿಸುಗುಂ ಕಡೆಯೊಳಿರಡೆನಿಪ್ಪುದಱೊಳ್ ತಾನೊಂದಿ ನೆಲಸುಗುಮಿರಾದೇಶಂ ದಲ್ ಮೇಣ್ಮೇಣುಕಾರಲೋಪಮುದಕ್ಕುಂ (ಕಾವ್ಯಾವ. ೫೭). [ಸಂ.]

**ಉಕಾರಾಂತ** (ಗು). [ವ್ಯಾಕ] ‘ಉ’ ಎಂಬ ವರ್ಣದಿಂದ ಕೊನೆಗೊಳ್ಳುವ (ಶಬ್ದ): ಅಕಾರಾಂತಮುಮಿಕಾರಾಂತಮುಮುಕಾರಾಂತಮುಂ ಋಕಾರಾಂತಮುಂ ಸ್ವಭಾವದಿಂ ಲಿಂಗಮುಪ್ಪುವು . . . ಉಕಾರಾಂತಕ್ಕೆ – ಪಶು, ಶಿಶು, ರಿಪು, ಭಾನು (ಶಮದ. ೮೪ ವೃತ್ತಿ, ಪ್ರಯೋ); ಕೆಲವು ಶಬ್ದಗಳು ಮಾತ್ರ ಮೊದಲಿನಿಂದಲೂ ಉಕಾರಾಂತಗಳಾಗಿಯೇ ಇವೆ – ಕಱು, ತುಱು, ಪುಱು ಇತ್ಯಾದಿ (ಕೈಪಿಡಿ. ೬). [ಉಕಾರ + ಅಂತ್ಯ]

**ಉಕಾಲ್** (ನಾ). ವಾಂತಿ. 'ಉಕಾಲ್ ಜುಲಾಬ್' ಪರಾ.
[← ಹಿಂ. ಉಕಲಾಈ = ವಾಂತಿ, ಓಕರಿಕೆ]

**ಉಕಾಲ್‌ಜುಲಾಬ್** (ನಾ). ವಾಂತಿಭೇದಿ; ಕಾಲರಾ (ಕ).
[ಉಕಾಲ್ + ಜುಲಾಬ್]

**ಉಕುತಿ** (ನಾ). = ಉಕ್ತಿ: ಅಲ್ಲ ನಬಹುದೆ ನಿನ್ನುಕುತಿಗಳನೆಂದನು ನಹುಷನರಸಂಗೆ (ಕುವ್ಯಾಅ. ೧೩-೬೦). [< ಸಂ. ಉಕ್ತಿ]

**ಉಕುತಿಚಾಪಳ** (ನಾ). ಮಾತನಾಡುವ ಬಯಕೆ; ಮಾತಿನ ಚಾಪಲ್ಯ: ಶಿಖಂಡಿ ನಿಲು ಸಾಯಕದ ಮೊನೆಯಲಿ ಮಾತನಾಡುವು ದುಕುತಿಚಾಪಳವೇಕೆನುತ ಕಣೆಗೆದಱಿದನು ದ್ರೋಣ (ಕುವ್ಯಾದ್ರೋ. ೨-೪೦). [ಉಕುತಿ + ಚಾಪಳ]

**ಉಕುತಿಸು** (ಕ್ರಿ). ಹೇಳು; ವರ್ಣಿಸು: ಸಕಲ ಬಲವ ಕೂಡಿಕೊಂಡು ವಿಭೀಷಣ ಕಕುಭಪತಿಗಳೊಡಗೂಡಿ ಅಕಲಂಕಚರಿತ ನಡದು ಪೋದುದ ನಿನ್ನುಯುಕುತಿಸಲೆನ್ನಳವಲ್ಲ (ಅಂಜಚ. ೬-೬೭). [ಉಕುತಿ + -ಇಸು$_3$]

**ಉಕ್ಕಂದ$_1$** (ನಾ). ೧. ತುಂಬಿ ತುಳುಕಾಡುವಂತಹ ಸ್ಥಿತಿ; ಅತಿಶಯ; ಹೆಚ್ಚಳ; ಉಕ್ಕುವಿಕೆ: ಬಂಡಮರ್ದಿನ ತಾಯ್ಗುಡಲೆಂಬಂದ ಮನುಕ್ಕಂದಮಾಗಿ ತಳೆದೆಸೆದಿರ್ಕುಂ (ಮಲ್ಲಿಪು. ೨-೭೧); ಕಂದಂಗಳ್ . . . ತನಿರಸದುಕ್ಕಂದಂಗಳ್ (ಗಿರಿಕ. ೧-೧೨); ಇಕ್ಕಿದನಾಜಿಯೊಳಾ ರಾಮನ ಶೌರ್ಯದುಕ್ಕಂದವನೇನನೆಂಬೆ (ಕುರಾಸಾಂ. ೧೬-೪೫); ಕಲಿತನದೊಳುಕ್ಕಂದದಾತ ನೀನೇಕಂದವಳಿದೆ ರಣದೊಳಗೆ ಕಂದ (ಜೈಮಿಭಾ. ೧೩-೫೫); ಉಕ್ಕಂದವಾಗಿ ತುಂಬಿದ ಗಾನರಸವನು ದಿಕ್ಕು ದಿಕ್ಕಿಗೆ ಚಿಮ್ಮುವಂತೆ (ಭರಚ. ೫-೬೨); ಈ ಯುಗದಲ್ಲಿ ಭಕ್ತಿರಸವು ಉಕ್ಕಂದವಾಗಿ ಹರಿಯಿತು (ಕಸಾಚ. ೧೪೮). ೨. ಉತ್ಸಾಹ; ಹುಮ್ಮಸ್ಸು; ಹುರುಪು: ಉಕ್ಕಂದದರಸುಗುವರರಾಸೆವಟ್ಟು ಕಣ್ಣಿಕ್ಕಿ ದಾರಿಯ ನೋಡಲೆಯ್ದಿ ಸೊಕ್ಕುಜವ್ವನೆ ಚಾಂಗು ಭಲ ಜಯಯೆನಲು ಪಲ್ಲಕ್ಕಿಯಿಂದಿಳಿದಳಾ ನೀಱೆ (ಭರಚ. ೫೫-೭೫); ಪೆಕ್ಕಳಿಸಿದುಕ್ಕಂದದ ದಟಂದೆ ಸುರಥನಜಸಿದನಚ್ಯುತಾರ್ಜುನರನು (ಜೈಮಿಭಾ. ೧೪-೬); ಕುಕ್ಕುಟಗಳ. . . ಉಕ್ಕಂದದೆ ಕಾದಿಪರಸುಮುಕ್ಕಳ ಮೊತ್ತ ಕಿಕ್ಕಿರಿದೆಸೆ ದುದರ್ತಿಯೊಳು (ಕಂಸವಿ. ೭-೧೨); ಎಲ್ಲರೂ ಅಂದಿನ ಉಕ್ಕಂದವನ್ನು ನೋಡಿ ಆಶ್ಚರ್ಯಚಕಿತರಾದರು (ಅನ್ನ. ೬೯).
[ಉಕ್ಕು$_1$ (< ಉರ್ಕು$_1$) + ಅಂದ]

**ಉಕ್ಕಂದ$_2$** (ನಾ). ಉಕ್ಕಿನ ರೀತಿ; ಬಲವುಳ್ಳುದು; ಶಕ್ತಿಯುತವಾದುದು: ಶ್ರೀಚಂನಕೇಶವನಾಥದೇವರ ಶುಕನಾಸಿಕೆಯ ಮತ್ತಕಲ್ಲುಗಳ ಜೀರ್ಣಕ್ಕೆ ಕೊಟ್ಟ ಉಕ್ಕಂದದ ನಾಲ್ಕು ಕಂಬವನು ನಿಲ್ಸಿ (ಎಕ. V, ಬೇಲೂರು. ೫೨-೧೬; 1381 ?). [ಉಕ್ಕು$_3$ (< ಉರ್ಕು$_3$) + ಅಂದ]

**ಉಕ್ಕಂದ$_3$** (ನಾ). ಎರಡು ತೊಲೆಗಳಿಗಾಗಲಿ, ಜಂತೆಗಳಿಗಾಗಲಿ ನಡುವೆ ಬಟ್ಟೆ ಹರಹಲು ಜೋಡಿಸಿದ ಗಳು ಅಥವಾ ಮರದ ಪಟ್ಟಿ, —ಬೊಂಬಿನ ತುಂಡು (ಕ). [?]

**ಉಕ್ಕಂದಿ** (ನಾ). ಉಕ್ಕಂದವನ್ನುಳ್ಳವನು; ಅತಿಶಯವನ್ನುಳ್ಳವನು; "ಆಧಾರವಸ್ತು; ಆಶ್ರಯ; ಊರೆ" (ಉದ್ಭದೇ. ಕೋಶ); ಭಜಿಸುವೆಂ ನಂದಿಯಂ ಸಂತತಾನಂದಿಯಂ ವಿನುತರುಕ್ಕಂದಿಯಂ ಶಿವ ನಂದಿಯಂ (ಉದ್ಭದೇ. ೧-೧೧). [ಉಕ್ಕಂದ$_1$ + -ಇ$_2$]

**ಉಕ್ಕಡ$_1$**, ಉಕ್ಕಳ, ಊಕಡ (ನಾ). ೧. ಊರಿನ ಅಥವಾ ನಗರದ ಗಡಿ,—ಎಲ್ಲೆ: ಗರಟಿಗೆಯುಕ್ಕಡದ ವಿಯಚ್ಚರರಂ ಪೇಸೇಱಿಕೊಂಡರೋ (ಶಾಂತಿಪು. ೩-೧೦೦); ಅಳರದಿರ್ದ ತಲೆಗಾಪಿನಾಳುಕ್ಕಡವಾಳ ಮೇಲಿಕ್ಕಿ ಉಕ್ಕಡದಾಳ್ ಪುರವಟ್ಟಗೆಯಾಳ ಮೇಲಿಕ್ಕಿ (ಗದಾಯು. ೯-೩೨ ವ); ಅಲ್ಲಲ್ಲಿ ಉಕ್ಕಡಗಳನ್ನು ಕಲ್ಪಿಸಿ ಅಲ್ಲಿ . . . ಸೈನ್ಯಗಳನ್ನಿಟ್ಟು (ಕೃವಾಲು. ೨೪೧). ೨. ಮುಂಗಾವಲು ಪಡೆಯ ನೆಲೆ; ಪಹರೆಯ ನೆಲೆ; ತಂಗುವ ಜಾಗ: ಎಸೆವ ಪಂಚಾಕ್ಷರಿಯೆ ಪರಮನರಮನೆ ನೋಡ ಪಸರಿಸುವ ಪುಣ್ಯಂಗಳೊಪ್ಪುವ ಮುಗಿಲ್ಮೋಡ ಸತ್ಯಂಗಳುಕ್ಕಡಂ ಸರ್ವನರಮನೆಯೊಳಗೆ ಸತ್ಯಂಗಳೆಚ್ಚಱಿಕೆ ಶಂಕರನ ಸಭೆಯೊಳಗೆ (ತಿರುರ. ದೇ. ೩-೬); ಹೃದಯಪ್ರಿಯರಂತೊಜಗಿದ ಪದದೊಳ್ ಗರಟಿಗೆಯ ಜಾವದುಕ್ಕಡ ದುಲಿ ಮುಟ್ಟಿದ ಪೊತ್ತು ಸೂಟ್ಗಿ ಕರುಮಾಡದ ಪಕ್ಕದೊಳಿರ್ದ ಪಟ್ಟದಾನೆಯು ಬದಗಂ (ಯಶೋಚ. ೨-೨೭); ಒಳಗೆ ತೊಳಲಿಕೆಯುಕ್ಕಡಕೆ ಕೆಳವಳಿಸಿ ಹಾಯಿದರೊಮ್ಮೆ ಮತ್ತಂ ತಲೆಮಿಡುಕದಾಲಿಸಿ ನಿಧಾನಿಸಿ ಸಾರಿದರು ಮರನ (ಕುವ್ಯಾಗ. ೯-೩); ಲಕ್ಕುಂದಿಯ ಬೊಮ್ಮ ಬೊಕ್ಕಸ ದೌಬಳ ಮಿಕ್ಕಮನದ ಚೆನ್ನ ಚಿಕ್ಕ ಉಕ್ಕಡದಲ್ಲಿ ಹರಿದಿಱಿವ ನಾಗಣನೆಂಬ ಮಿಕ್ಕ ಭಟರ ಕಳುಹಿದನು (ಕುರಾಸಾಂ. ೧೯-೯೬). ೩. ಸುಂಕದ ಕಟ್ಟೆ; ಗಡಿಯಲ್ಲಿ ತೆರಿಗೆಯನ್ನು ವಸೂಲ್ಮಾಡುವ ಸ್ಥಳ: ಸರಹದ್ದಿನ ಉಕ್ಕಡ ಮಾರ್ಗಗಳಲ್ಲು (ರಾಜೇಂದ್ರ. ೯೦); ಗುರುಗಳು ಸ್ವಲ್ಪದೂರ ಸವಾರಿ ಮಾಡಿಕೊಂಡು ಊರ ಉಕ್ಕಡದ ಹತ್ತಿರ ಬರಲು, ಅಲ್ಲಿದ್ದ ಸುಂಕದವನು ಇವರುಗಳನ್ನು ಕಂಡು ಓಡಿಬಂದು ಅಡ್ಡಹಾಕಿದನು (ನಗಗ. ೫೩); ಭಾರತದ ಮೂರು ಉಕ್ಕಡಗಳು ಪಾಕಿಸ್ಥಾನಕ್ಕೆ ಕೊಡಲ್ಪಟ್ಟುವು (ನವಭಾ. ೨೦-೧೧-೧೯೫೯). **ಉಕ್ಕಳ** : ೨. ಕಡೆಯ ಮಾತೇಕಿನ್ನು ಸರ್ವಬಲವ ಕೂಡಿ ನಡೆದು ಸಾಂಬಳ್ಳಿಯ ಮುತ್ತಿಬಿಡದೆ ಸೆಳೆದು ಭಂಗಿಸಿದಲ್ಲದೆ ನಮ್ಮ ಪೊಡವಿಗುಕ್ಕಳವಿಲ್ಲೆಂದ (ಕಂಸವಿ. ೧೬-೬೮). **ಊಕಡ** : (ರೈಸ್‌ಗೆ. ೫೭೯).
[ಊರ್ + ಕಡ./ ತಮಿ. ಮಲ. ಉಕ್ಕಳಂ = ರಾತ್ರಿಯ ಕಾವಲು; ತುಳು. ಉಕ್ಕಡ, ಉಕ್ಕುಡ; ತೆಲು. ಉಕ್ಕಳ = ಗಡಿಕಾವಲು. / ಸಂ. ಉದ್ಘಾಟ]

**ಉಕ್ಕಡ$_2$** (ನಾ). ಬಾವಿಯ ಹಗ್ಗದ ತುದಿಗೆ ಕಟ್ಟುವ ತಲೆಕಣ್ಣಿ; ಹಗ್ಗದ ಕುಣಿಕೆ: ಮೂಡಲಸೀಮಿಂದ ನೂರು ಜಂಗಮರ ಕರಸಿ ಉಕ್ಕಡ ಮೂಗ್ದಾರ ಹಾಕ್ಸೇನು ಹಗ್ಗಕೊಟ್ಟು ಕಳ್ಳ ಬಸವನ ಕಟ್ಟಸ್ಯೇನು (ಹಳ್ಳಿಬಾ. ೨೯-೧೩); ಕೊಡಕ್ಕೆ ಕಟ್ಟಬೇಕಾದ ಉಕ್ಕಡವನ್ನು ಅವಳು ತನ್ನ ಕೊರಳಿಗೆ ಕಟ್ಟಿಕೊಂಡಳು (ನಿರಾಭ. ೪೬). 'ಉಗ್ಗ$_2$' ಪರಾ.
[< ಸಂ. ಉದ್ಘಾಟಕ = ನೀರೆತ್ತುವ ಕಪಿಲೆ]

**ಉಕ್ಕಡ$_3$**, ಉಕ್ಕುಡ (ಗು). ಅತಿಶಯವಾದ; ಹೆಚ್ಚಾದ: ಎಕ್ಕಡ ಮೆಟ್ಟಿಹ ಎಕ್ಕಲ ಬಂಟರು ಉಕ್ಕಡ ಗಾತ್ರದ ಉಕ್ಕಡದವರು ಕಕ್ಕಡ ಹೊತ್ತಿಸಿ (ಗಂಗಿ. ೬೬-೩). **ಉಕ್ಕುಡ** : 'ಉಕ್ಕುಡಿಸು' ಪರಾ.
[< ಸಂ. ಉತ್ಕಟ ?]

**ಉಕ್ಕಡಗಹಳೆ**, ಉಕ್ಕಡಗಾಳೆ (ನಾ). ಉಕ್ಕಡದವರು ಊದುವ ಕಹಳೆ; ಕಾವಲಿನವರು ಎಚ್ಚರಿಕೆಗಾಗಿ ಜಾವದ ಕೊನೆಯಲ್ಲಿ ಊದುವ ಕಹಳೆ: ತಿರುಗುವ ಲಗ್ಗೆ ಉರುವ ಉಕ್ಕಡಗಹಳೆ ಬಿಡದೆ ಚೀರುವ ಹೆಗ್ಗಾಳೆ (ಕುಮಾಸಾಂ. ೩೧೮). **ಉಕ್ಕಡಗಾಳೆ**: ಮನಸಿಜನುಕ್ಕಡ ಗಾಳೆಗಳೆಂಚರವೆನೆ ಕೂಗಿದವು ಕೋಗಿಲೆಗಳು (ಸೊಬಸೋ. ೩-೧೭); ಹೆಕ್ಕಳ ದಿಂದೊದಱುವ ಕೊಂಚೆಗಳ ದನಿಯುಕ್ಕಡಗಾಳೆ ಸೊಲ್ಲಿಸುವ ಜಕ್ಕವಕ್ಕಿಗಳಿಂಚರದ ಪಿರಿಯ ನಾದ (ಮೋಹತ. ೬-೧೬).
[ಉಕ್ಕಡ$_1$ + ಕಹಳೆ]

**ಉಕ್ಕಡಗಾಳೆ** 'ಉಕ್ಕಡಗಹಳೆ' ನೋ.

**ಉಕ್ಕಡಗೊಳ್ಳ** (ನಾ). ಉಕ್ಕಡದ ಹತ್ತಿರದ ಕೊಳ್ಳ: ಉಕ್ಕಡಗೊಳ್ಳ ಇಪೂ ಆಚಂದ್ರಾರ್ಕಸ್ಥಾಇ ಮಂಗಳ ಮಹಾಶ್ರೀ (ಎಕ. XIV, ಮಳವ. ೧೩೫-೮; 1405). [ಉಕ್ಕಡ$_1$ + ಕೊಳ್ಳ]

**ಉಕ್ಕಡಬಾಗಲು** 'ಉಕ್ಕಡಬಾಗಿಲು' ನೋ.

**ಉಕ್ಕಡಬಾಗಿಲು,** ಉಕ್ಕಡಬಾಗಲು (ನಾ). ಊರಿನ ಗಡಿಯಲ್ಲಿರುವ ಬಾಗಿಲು: ಆ ಪಟ್ಟಣವು ಉಕ್ಕಡಬಾಗಿಲು ಪೇಟೆಯ ಬಾಗಿಲು ಕೋಟೆಯ ಬಾಗಿಲು (ಕೃವಾಅ. ೨೦೭). **ಉಕ್ಕಡಬಾಗಲು** (ಕ).
[ಉಕ್ಕಡ$_1$ + ಬಾಗಿಲು (< ಬಾಗಿಲ್)]

**ಉಕ್ಕಡಮನೆ** (ನಾ). ಉಕ್ಕಡದಲ್ಲಿರುವ ಮನೆ; ಸುಂಕದ ಕಟ್ಟೆ (ಉಕ. ಕ). [ಉಕ್ಕಡ$_1$ + ಮನೆ]

**ಉಕ್ಕಡಹೊಲ** (ನಾ). ಊರಿನ ಎಲ್ಲೆಕಟ್ಟಿನ ಹೊಲ (ಉಕ. ಕ).
[ಉಕ್ಕಡ$_1$ + ಹೊಲ (< ಪೊಲ)]

**ಉಕ್ಕರಿಸು** (ಕ್ರಿ). ೧. ಬಾಡಿಸು; ತಾಳಿಸು; ಹುರಿ: ಮೊದಲು ತುಪ್ಪದೊಳುಕ್ಕರಿಸಿ ಸವಿಯುಮಂ ಹಡೆದ ಬದನೆಯೆಳಗಾಯ ಹೋಳಂ ಹಾಕಿಕೊಂಡು ತುಪ್ಪದೊಳು ಪರಿಮಳವಿಕ್ಕಿ (ಸೂಪಶಾ. ೪-೬); ಉಕ್ಕರಿಸಿಕೊಂಡ ಬದನೆಯ ಕಾಯ್ಗೆ ಮೆಣಸುಪ್ಪನಿಕ್ಕಿ ಪಲಬಗೆಯ ಭಾಗೆಯ ಮಾಡಿ (ಸೂಪಶಾ. ೪-೩). ೨. ಕುದಿಸು; ಕುಚ್ಚು; ಬೇಯಿಸು: ತನಿವಾಲೊಳುಕ್ಕರಿಸಿದಕ್ಕಿ ತಣ್ಣೀರೊಳಗೆ ನನೆದಕ್ಕಿಯಿವನು ಸರಿಗೂಡಿ ಹಾಲೊಳಗರೆದದನು ಹರಿಯಣಕೆ ತಡಹಿ (ಸೂಪಶಾ. ೧-೬೧); ಉತ್ತಮದ ಸೊಜ್ಜಿಗೆಯ ನನೆಹಿ ನೀರಂ ಹಿಂಡಿ . . . ಹಾಲೊಳಗುಕ್ಕರಿಸಿದಕ್ಕಿಯವೊತ್ತಿ ಹಾಲಿಂದೆಡೆಸಿದು (ಸೂಪಶಾ. ೧-೨೨). [? + -ಇಸು$_3$]

**ಉಕ್ಕಲ್,** ಉಕ್ಕಲು (ನಾ). ಉಕ್ಕುವಿಕೆ; ಹೆಚ್ಚಿಗೆ; ಅತಿಶಯ; ವೃದ್ಧಿ. 'ಉಕ್ಕಲಿಸು$_1$' ಪರಾ. **ಉಕ್ಕಲು**: ಬೆಳೆ ಉಕ್ಕಲಾಡತಾವು (ಜಾನಕೋ. ೧೯). [ಉಕ್ಕು$_1$ (< ಉರ್ಕು$_1$) + -ಅಲ್$_2$]

**ಉಕ್ಕಲ** (ನಾ). (?): ಕಡಿಯಾಣದುಕ್ಕಲದ ಮೊಗಮುಟ್ಟು ಮುಂತಾದ ಸಂಜೋಗಕಿಕ್ಕಿರ್ದ ಕಳಿಗೆಗಳೊಳೆಡವಿಡದೆ ಕೀಲಿಸಿದ ಮುಕ್ಕಣ್ಣ ರುದ್ರಾಕ್ಷೆಯಿಂ (ಚೀರಮ. ೧೧-೪೩). [?]

**ಉಕ್ಕಲಿಕೆ** (ನಾ). ಉಕ್ಕುವಿಕೆ; ಉಬ್ಬು: ವಿಧುವನು ಕಂಡುಕ್ಕಲಿಕೆಯನಾ ಜಲನಿಧಿ ಪಡೆದಂತೆ ಪಡೆದುದು (ಗೋಮಟೇ. ೯-೧೯). [ಉಕ್ಕಲ್ + -ಇಕೆ]

**ಉಕ್ಕಲಿಸು$_1$,** ಉಕ್ಕಳಿಸು$_1$ (ಕ್ರಿ). ಉಬ್ಬು; ಕೊಬ್ಬು; ಕೈಮೀರು; ಹೆಚ್ಚು: ತಕ್ಕನ ತೇಜದಿಂ ನೀನುಜದುಕ್ಕಲಿಸಿದೆಯಕ್ಕು ಮಾಡೊಡಿನ್ನುಂ . . . ಪೊಕ್ಕಿರ್ದಮರೇಂದ್ರನ ಮಜಿವೊಕ್ಕೊಡಮಾಂ ಕೊಲಿಪೆನೆನ್ನ ಮುಳಿಸನೆ ಸಲಿಪೆಂ (ಬಂಹರಿ. ೮-೬೭); ಕೆಡಹಿಕೊಳ್ಳಿನ್ನೀತನಾಳ್ದನ ಜಡಿದು ನುಡಿದುಕ್ಕಲಿಸಿ [ಪಾಠಾಂ. ದಿಕ್ಕರಿಸಿ] ಹೋಹನೆ (ಪ್ರಭುಲೀ. ೧೩-೧೪). **ಉಕ್ಕಳಿಸು$_1$**: ರಸದಿಂದುಕ್ಕಳಿಸಿ ಪಾಯ್ವು ಪೆರ್ದೊಜಿಗಕ್ಕುಮೆ ತಡೆ ಪಳ್ಳದಿಂಟೆ ಕಿಜುದೊಜಿಗೆಜಿಗಳ್ (ಚಕವಿ. ೧-೧೫). [ಉಕ್ಕಲ್ + -ಇಸು$_3$]

**ಉಕ್ಕಲಿಸು$_2$,** ಉಕ್ಕಳಿಸು$_2$ (ಕ್ರಿ). ೧. ಸಡಿಲವಾಗು; ತಪ್ಪಿಸಿಕೊ; ಕಳಚಿಕೊ: ನಾಸಿಕದೊಳ್ ಥೊಕ್ಕನೆ ಪನಿಸುಗೆ ವಿಷದಿಂದುಕ್ಕಲಿಕುಂ ಸರ್ಪದಷ್ಟಂ (ಖಮದ. ೭-೫೨); ಅಲಕಿ ಮುಂದ್ಯೆದಡರೆ ರವಿಯುಕ್ಕಲಿಸುವನೆ . . . ಶಶಿರಾಜನೆಂಬಾನುಳುಹಿದೆನು . . . ಎಂಬವೊಲು ಕತ್ತಲೆ ಜಗಂಗಳ ತೀವಿದುದು (ಜೀವಂಜ. ೧೭-೧೫). ೨. ಮರೆಮಾಚು; ಬಚ್ಚಿಡು: ಎಲೆ ತರುವಲಿ ಬಟ್ಟಲ ಪಾಲ್ ನೆಲಕೊಕ್ಕುದೊ ನೀನೆ ಪೀರ್ದೆಯೋ ಪೇಳಿದನುಕ್ಕಲಿಸದೆ (ವೃಷವಿ. ೯-೮೮). ೩. ಸಡಿಲು; ಬಿಟ್ಟು ಹೋಗು: ಎಕ್ಕೆಯ ಪಾಲ್ಗಳ ವಿಷಮುಂದುಕ್ಕಲಿಕುಂ ತೈಲಟಂಕಣಾಂಬುಗಳಿಂದಂ (ಖಮದ. ೨-೫೨). **ಉಕ್ಕಳಿಸು$_2$**: ೧. ಹೊಲೆಯೊಡಲ ಮಮತಾಭಿಮಾನದ ಬಲೆಗೆ ಸಿಕ್ಕಿರ್ದಿಂದಿನಲಿವುಕ್ಕಳಿಸಿ ಬದುಕಿದೆನೆನುತ ಪಿಂಗಳೆ ತೂಗಿದಳು ಶಿರವ (ನಿಭಾಗ. ೧೧-೧೫-೧೯). [ಉಕ್ಕಲ? + -ಇಸು$_3$]

**ಉಕ್ಕಲು** 'ಉಕ್ಕಲ್' ನೋ.

**ಉಕ್ಕಳ** 'ಉಕ್ಕಡ$_1$' ನೋ.

**ಉಕ್ಕಳಂ** (ಅ). ಅತಿಶಯವಾಗಿ; ಹೆಚ್ಚಾಗಿ: ದಿಕ್ಕುದಿಕ್ಕಿನ ನೃಪಾಲಕರಿತ್ತ ಕರಿ ತುರಗ ಕಿಕ್ಕಿಂಥವಾಗಿರಲ್ ಗಜನಗರವೆಂಬ ಪೆಸರುಕ್ಕಳಂ ಸೊಬಗಾದುದಾ ಭೀಮಪಾರ್ಥರ ಪರಾಕ್ರಮದೊಳು (ಲಕ್ಷ್ಮಭಾ. ೧-೩೨-೫). [< ಸಂ. ಉತ್ಕಟಂ]

**ಉಕ್ಕಳಿಕೆ** (ನಾ). ಮೊಗ್ಗು: ನುಣ್ಗಿಳಿ ಕರ್ದುಂಕದ ರಸವೊಸರ್ವ ರಸಾಲದೊಳ್ ಪಿಕವು ಬಳಸದುಕ್ಕಳಿಕೆ [ಪಾಠಾಂ. ತ್ಕಳಿಕೆ]ಯೊಲು . . . ಮಿಾಸಲ್ದಳೆದ (ಮದೇಪು. ೭-೫೧). [< ಸಂ. ಉತ್ಕಲಿಕಾ]

**ಉಕ್ಕಳಿಸು$_1$** 'ಉಕ್ಕಲಿಸು$_1$' ನೋ.

**ಉಕ್ಕಳಿಸು$_2$** 'ಉಕ್ಕಲಿಸು$_2$' ನೋ.

**ಉಕ್ಕಾಡು** (ಕ್ರಿ). ಉಕ್ಕಿಹರಿ; ಪ್ರವಹಿಸು: ಊಡುತವೆ ಮೊಲೆಗಳನು ತೃಪ್ತಿಯ ಮಾಡದಾ ನಿಜಜನನಿ ಹಾಲುಕ್ಕಾಡಿ [ಪಾಠಾಂ. ಅಕ್ಕಾಡಿ] ತೊಲೆಯಲೆನುತ್ತ ಹೋಗಲು ಹರಿ ಕನಲ್ದಳುತ (ನಿಭಾಗ. ೧೦-೯-೨೭).
[ಉಕ್ಕು$_1$ (< ಉರ್ಕು$_1$) + ಆಡು$_1$]

**ಉಕ್ಕಾಸು** (ನಾ). ನೀರಿನ ಮೇಲೆ ತೇಲಿಬರುವ ಸಾಧನ; ತೆಪ್ಪ (?): ಹರುವ ಹೆದ್ದೊರೆಯೊಳುಕ್ಕಾಸು ಈಸುಕಾಯಿ ಹರಗೋಲು ತಪ್ಪಿ ಕೈಸೋತು ಕಡಿಗೆ ಬರುವ ಮನುಜ ನಡುವೆ ಮುಣುಗುವ ಪರಿಯಂತೆ (ಮೋಕ್ಷದೀ. ೨೦-೧). [?]

**ಉಕ್ಕಿಸು** (ಕ್ರಿ). ಉಕ್ಕುವಂತೆಮಾಡು; ಹೊರಸೂಸು: ನನ್ನಯ ಹರುಷಜಲಧಿಯನುಕ್ಕಿಸಲು ಬೇಕೆನಲು ಕೇಳಿದು ಭೀಷ್ಮನಿಂತೆಂದ (ಕುವ್ಯಾಭೀ. ೧-೨೨); ಅಕ್ಕನಿಲ್ಲಿ ಕರೆಯಲಿಲ್ಲ ಮಕ್ಕಳನ್ನು ಪಡೆಯಲಿಲ್ಲ ದುಃಖಗೊಂಡು ಕಣ್ಣೀರನು ಉಕ್ಕಿಸಿದರೆ ಬಿಡನು ಯಮನು (ಪುರಂದ. ೨-೯೯-೨); ಹಾಲುಕ್ಕಿಸುವ ಶಾಸ್ತ್ರ ಮಾಡಬೇಕು (ರೂಢಿ).
[ಉಕ್ಕು$_1$ (< ಉರ್ಕು$_1$) + -ಇಸು$_3$]

**ಉಕ್ಕಿಱು** (ಕ್ರಿ). ಉಕ್ಕಿ ಹರಿ; ಅತಿಶಯವಾಗು: ರಕುತದ ರಸದ ರಂಜಣಿಗೆಗಳದೊಂದೆಸೆಯ ನಿಜಗರುಳ ಹೂದಂಡೆಗಳಲುಕ್ಕಿಱುವ ಕಳುಗೊಡನೆಡೆಗಳಲಿ ಕುಕಿಲಿಱಿದು ಕುಣಿವಸುರೆಯರ ಕಂಡುಗುಳಿದನು ಕಲಿ ಹನುಮ (ತೊರರಾ. ೫-೨-೩೫); ಉಕ್ಕಿಱುವ ಕೋಪಾಗ್ನಿ ದಳ್ಳಿಸಿ ದಿಕ್ಕುಗಳನಳ್ಳಿಱಿಯೆ ಲಕ್ಷ್ಮಣನೆಕ್ಕತುಳದಲಿ ಬಂದನು (ತೊರರಾ. ೨-೩-೧೦). [ಉಕ್ಕು$_1$ (< ಉರ್ಕು$_1$) + ಇಱು$_1$]

**ಉಕ್ಕು$_1$** 'ಉರ್ಕು$_1$' ನೋ.

**ಉಕ್ಕು$_2$** 'ಉರ್ಕು$_2$' ನೋ.

**ಉಕ್ಕು$_3$** 'ಉರ್ಕು$_3$' ನೋ.

**ಉಕ್ಕುಂದೊಱೆ** 'ಉರ್ಕುಂದೊಱೆ' ನೋ.

**ಉಕ್ಕುಟೊಪ್ಪಿಗೆ** (ನಾ). ಉಕ್ಕಿನಿಂದ ಮಾಡಿದ ಟೊಪ್ಪಿಗೆ: "ಉಕ್ಕುಟೊಪ್ಪಿಗೆ; ಸೀಸಕ; ಶಿರಸ್ತ್ರಾಣ" (Helm. ಇಂಕನಿ.).
[ಉಕ್ಕು$_3$ (< ಉರ್ಕು$_3$) + ಟೊಪ್ಪಿಗೆ]

**ಉಕ್ಕುಡ** 'ಉಕ್ಕಡ$_3$' ನೋ.

**ಉಕ್ಕುಡಿಸು** (ಕ್ರಿ). ಅತಿಶಯವಾಗು; ಪ್ರಬಲವಾಗು: ಈ ಧರ್ಮವು ಅರ್ಥಕಾಮಗಳನ್ನೂ ಪುರುಷಾರ್ಥಗಳನ್ನಾಗಿ ಮಾಡಿಬಿಡುತ್ತದೆ . . . ಆದರೆ, ಧರ್ಮದಲ್ಲುಕ್ಕುಡಿಸಿ ಕಾಮದಲ್ಲಿ ಅಣೆಗಟ್ಟುವಡೆದ ಆ ತ್ರಿವರ್ಗದ ಹೊನಲು ಮತ್ತೇನಾಗಬೇಕು? (ನಾಡೋಜ. ೩೫೪); ಶ್ರೀಮಧ್ವಾಚಾರ್ಯರಿಂದ ಉಕ್ಕುಡಿಸಿದ ದ್ವೈತಮತ (ತುಳುನಾ. ೨೪೧).
[ಉಕ್ಕುಡ (< ಉಕ್ಕಡ$_3$) + -ಇಸು$_3$]

**ಉಕ್ಕುಬಾವಿ** (ನಾ). ಚಿಲುಮೆಯಂತೆ ಮೇಲೆ ನೀರು ಚಿಮ್ಮಿ ತುಂಬುವ ಬಾವಿ: ಉಕ್ಕುಬಾವಿ (Artesian Wells. ಪಾರಿನಿ. ೬).
[ಉಕ್ಕು$_1$ (< ಉರ್ಕು$_1$) + ಬಾವಿ]

**ಉಕ್ಕುಲ** (ನಾ). ಉತ್ಕೃಷ್ಟವಾದ ಕುಲ: ಕೃತಾಂತನ ಪಾಳೆಯಕೆ ಹೋಹಾಗಲುಕ್ಕುಲವುಂಟೆ (ಪ್ರಹ್ಲಾಚ. ೮–೬೦).

[< ಸಂ. ಉತ್ಕುಲ]

**ಉಕ್ಕುಸುಣ್ಣ** (ನಾ). ಕುದಿಯುವ ಸುಣ್ಣ: "ಉಕ್ಕುಸುಣ್ಣ – ಕುದಿಯುವ ಸುಣ್ಣ" (ಜಾನಕೋ. ೧೯). 'ಕುದಿಸುಣ್ಣ' ಪರಾ.

[ಉಕ್ಕು$_1$ (< ಉರ್ಕು$_1$) + ಸುಣ್ಣ]

**ಉಕ್ಕುಸೊಕ್ಕು** (ನಾ). ಅತ್ಯಧಿಕವಾದ ಗರ್ವ; ಉಕ್ಕಿ ಹರಿಯುವ ಸೊಕ್ಕು: ನಕ್ಕರೊಬ್ಬರನೊಬ್ಬರೀಕ್ಷಿಸುತಕ್ಕಟೀ ಸತಿಗೇಕೆಯುವ್ವನದುಕ್ಕುಸೊಕ್ಕಿನ ಹರೆಯವೇಕೀ ತೇಜವೀ ರೂಪು (ನಿಭಾಗ. ೧೦–೩೭–೩೧).

[ಉಕ್ಕು$_1$ (< ಉರ್ಕು$_1$) + ಸೊಕ್ಕು$_2$ (< ಸೊರ್ಕು$_2$)]

**ಉಕ್ಕುಳ್ಕು** (ಕ್ರಿ). ಸೊಕ್ಕು ಅಡಗು; ಶಕ್ತಿಗುಂದು: ಜಿನಧರ್ಮಾಂಭೋಧಿ ಪೆರ್ಚುತ್ತಿರೆ ಕುಸುಮಯು ನೀರೇಜಮುಕ್ಕುಳ್ಕೆ ವಿದ್ವಜ್ಜನಭಾಸ್ವತ್ಕೈರವಕ್ಕಭ್ಯುದಯಮೊದವೆ (ಎಕ. VIII (S), ಸೊರಬ. ೫೮೭–೪೮; 1207). ☞ ಈ ಶಬ್ದ ಉಕ್ಕಳ್ಕು ಎಂಬುದರ ಅಪಲಿಖಿತವಿರಬಹುದೆ ?

[ಉಕ್ಕು$_2$ (< ಉರ್ಕು$_2$) + ಉಳ್ಕು$_0$]

**ಉಕ್ಕೆ** 'ಉಟ್ಕೆ' ನೋ.

**ಉಕ್ಕೆಲ** (ನಾ). (?): ಉಕ್ಕೆಲರಂತೆ ಪೆಣಗುತ ತೆಕ್ಕೆಯೊಳ್ ಬಿದ್ದು ಚೂರಿ ಬಾಕುಗಳಿಂದ ಸಿಕ್ಕಸಿಕ್ಕಲ್ಲಿಱಿದಾಡಿ (ಬಿಜ್ಜರಾ. ೧೨–೫೫). [?]

**ಉಕ್ಕೆವ$_1$**, ಉರ್ಕೆವ (ನಾ). ೧. ಮೋಸ; ಕಪಟ; ಠಕ್ಕು: "ಉಕ್ಕೆವಮೆಂದು ಠಕ್ಕು" (ಶಮುದ. ನ. ೩೪೩ ಪ್ರಯೋ); ಗುರುಗಳ್ಗೆ ತಮ್ಮುಕ್ಕೆವದಿಂ ತಪಂಬಟ್ಟುದನಾಳೋಚಿಸಿ ಪ್ರಾಯಶ್ಚಿತ್ತಂಗೊಂಡು ಪಡಿಕಮಣಂಗೆಯ್ದು (ವಡ್ಡಾರಾ. ೬–೨೭); ಜೂದಿನೊಳುಕ್ಕೆವದಿಂದೆ ಗೆಲ್ದ ನಿನ್ನವನಿತಳಂ (ಪಂಪಭಾ. ೭–೪೦); ನೀನೆನಗೆ ಬುದ್ಧಿವೇೞಿದೊಡಾನಱಿಯೆನೆ ವಾಮೆಯರ್ಕಳುಕ್ಕೆವಮಂ (ಪಂಚತಂ. ೧೫೬–೧೦). ೨. ಮೋಸಗಾರ; ವಂಚಕ; ಠಕ್ಕ: ಕುಡಿಯಲೊಲ್ಲದು ಪಾಲನೆಂದೊಡೆ ಕೂಸನೊಲ್ಲದೆ ನೊಂದು ತಾಯ್ ಬಿಡುವಳೇ ಮುನಿಸಿಂ ಧರಿತ್ರಿಯೊಳಂತೆ ನೋಡ ವಿವೇಕಿಯುಂ ಜಡರನುಕ್ಕೆವರಂ ಮಹಾದುರಿತಾನ್ವಿತರ್ಕಳನೊಳ್ಪಿತಂ ನುಡಿದು ಬೇಸಱದೆಯ್ದೆ ತಿರ್ದುಗು ಧರ್ಮಮಂ ತಿಳಿವನ್ನೆಗಂ (ಧರ್ಮಾಮೃ. ೭–೧೩೦). **ಉರ್ಕೆವ**: ೧. ವಿಜಯನೆಂಬ ಮಂತ್ರಿಯುರ್ಕೆವದಿಂದವರ ಪೇೞ್ದ ಮದವಕ್ಕಳಂ ನಿರಾಕರಿಸಿ (ವಡ್ಡಾರಾ. ೪೦–೨೪); ಅದನೆಲ್ಲಂ ನೆಱೆ ಪೋಗಿ ಬಿಜ್ಜಣ ಮಹೀಪಾಲಂಗೆ ಜೈನರ್ಕಳುರ್ಕೆವದಿಂ ಪೇಳ್ದು ವಿರೋಧವಾಗೆ ಪಿರಿದುಂ ದೂಱುತ್ತಿರಲು (ಎಇ. V, ೨೪೮–೪೬; 1200).

[ದೇ. ‖ ತೆಲು. ಉಕ್ಕಿವ = ಮೋಸ; ಉಕ್ಕಿವುಡು = ಮೋಸಗಾರ]

**ಉಕ್ಕೆವ$_2$** (ನಾ). ೧. ಉತ್ಸಾಹ; ಸಡಗರ: ಅಮ್ಮನ ಭಕ್ತನುಂ ಗುಣಗಣಾಶ್ರಯನಾತನ ತಮ್ಮನಪ್ಪ ಪುನ್ನಮನುಮಱ್ತಿಯಿಂ ಗುರುಸಮಕ್ಷಪರೋಕ್ಷ ವಿನೇಯ ವೃತ್ತಿಯಿಂದಮ್ಮನದುಕ್ಕೆವಂ ತಗುಳೆ ನಿರ್ವಹಣಸ್ಥಿತಿಗುಯ್ದರ್ (ಶಾಂತಿಪು. ೧೨–೬೧); ಉರಿಯಂ ಕಾಱುವ ಕೆಂಡಮಂ ಕಱೆವ ಬಿಲ್ಲಂ ಕಂಡೆವಿಲ್ಲುಕ್ಕೆವಂ (ಪಂರಾಮಾ. ೫–೭೮); ದಿಕ್ಕುಗಳೆಲ್ಲಮಂ ನೆಱೆಯೆ ಸಾಧಿಸಿ ಕಪ್ಪಮನೆಯ್ದೆ ಕೊಂಬೆನೆಂದುಕ್ಕೆವದಿಂದೆ ಪೋಪ ನರನಾಥನ ಸೇನೆಯ (ಬಾಧಪು. ೨–೧೬); ಉಕ್ಕೆವದಿಂ ತಟಂಬಿಡಿದು ಕಾಂತೆ ಬರುತ್ತಿರೆ (ನಳಚಂ. ೧೪೫). ೨. ಉತ್ಸವ; ಸಮಾರಂಭ: ಕಾಮದೇವ[ನುಕ್ಕೆವದಲ್ಲಿ]ಮುನ್ನಮೆ ಕಟ್ಟಿದ ಮಾಂದಳಿರ ತೋರಣಂಗಳೊಳಂ (ಕಾದಂಉ. ೭೮೩); ನಿಚ್ಚದ ಜಾತ್ರೆಯುಕ್ಕೆವಂಗಳನೊಡರ್ಚಿ (ಚಿಕವಂ. ೬೦–೧೫); ಪೇರುಕ್ಕೆವದ ಅಱ್ತಿಗೆಂದು ಬೊಮ್ಮನೆತ್ತಿದ ಬಾಂದಱೆಯ ಪೊಂಗಾವನೆ . . . ಪೊಂಬೆಟ್ಟಂ . . . ಕಣ್ಗೊಳಿಕುಂ (ರಾಮಾಶ್ವ. ೭–೨). ೩. ಗರ್ವ; ಅಹಂಕಾರ; ದರ್ಪ: "ಪುಗ್ಗುಮುಕ್ಕೆವಮೆನ್ನಲ್ ಗಮ್ಮನೆ ಗರ್ವಮುದಕ್ಕುಂ" (ಕವಿಕಂ. ೧೧೩). ೪. ಸಂಶಯ; ಸಂದೇಹ: ಲೆಕ್ಕವಿಲ್ಲದ ಸೇನೆಯನು ಹೊಕ್ಕು ತಿವಿದು ಕಲಕುವನೆ ಕುವರನ ನೀನುಕ್ಕೆವನು ಬಿಟ್ಟು ಕಳುಪು (ಕುರಾಸಾಂ. ೧೭–೭೪). [?]

**ಉಕ್ಕೆವಗುದುರೆ** (ನಾ). ಮೋಸದ ಕುದುರೆ: ಪುರೋಪವನಮೆಲ್ಲಮಂ ತುೞಿದು ಪಲರ್ ಬಾಯ್ದೆಱೆದು ಪುಯ್ಯಲಿಡೆ ಕಡುಕೆಯ್ದುಕ್ಕೆವಗುದುರೆ ಪೊೞಲನಟಲಿಸಿತಾಗಳ್ (ಪಂರಾಮಾ. ೪–೧೦೬). [ಉಕ್ಕೆವ$_1$ + ಕುದುರೆ]

**ಉಕ್ಕೆವಗೆಯ್ತ** (ನಾ). ಮೋಸದ ಕೆಲಸ; ವಂಚನೆಯ ವ್ಯವಹಾರ: ಆಸೆಗಮಾಸೆಯುಂ . . . ಉಕ್ಕೆವಕುಕ್ಕೆವಗೆಯ್ತಮುಂ ಪೊಣರ್ಚುತ್ತುಮುಪಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೮೫ ಶೂದ್ರಕ); ಇನಿಯನೆ ಬೆಲ್ಲದಿಂದಿನಿಯನೀವನೆ ಅಃ ಪಿರಿದೀವನಿತ್ತುದಂ ನೆನೆವನೆ ಚಿಃ ಅದಂ ನೆನೆಯನುಕ್ಕೆವಗೆಯ್ತದ ಗಾಳುಗೆಯ್ದೆ ಕೂರ್ಪನೆ ಕಳೆ ಕೂರಂ (ಕಾವ್ಯಾವ. ೫೨); ಪಾತಕಿಯ ಉಕ್ಕೆವಗೆಯ್ತಕ್ಕಗಿಯದೆ ಯಿನಿಸುಂ ಚೊಕ್ಕಳಿಕೆಯ ದೀವಸಮೋಸರಿಸದೆ ತಕ್ಕಳಿಯದೆ ತದ್ಧೀರೋದಾತ್ತಂ ಮೇರುವಿನಂತಿರ್ದಂ (ಜಯಕಾ. ೧೬–೧೫).

[ಉಕ್ಕೆವ$_1$ + ಗೆಯ್ತ (< ಕೆಯ್ತ)]

**ಉಕ್ಕೆವಚಾಮರ** (ನಾ). ಉತ್ಸವ ಕಾಲದಲ್ಲಿ ಬೀಸುವ ಚಾಮರ: ಕುಟಿಲಾಲಕಮಂ ಪಿಡಿದೀೞ್ದು ತಂದು ಮಂಡೋದರಿಯಂ ಮದೀಯಪಿತೃಗುಕ್ಕೆವಚಾಮರಮಿಕ್ಕಲುಯ್ದಪೆಂ (ಪಂರಾಮಾ. ೧೪–೧೦೩).

[ಉಕ್ಕೆವ$_2$ + ಚಾಮರ]

**ಉಕ್ಕೆವತನ** (ನಾ). ವಂಚಕತನ; ನಿಜವನ್ನು ಮರೆಮಾಚಿದ ವರ್ತನೆ: ತನ್ನುಕ್ಕೆವತನದಿನೋದಿಸಿದ ವೃತ್ತಾಂತಮನಾದ್ಯಂತಮಱಿಯೆ ಪೇೞ್ದು (ಸುಕುಮಾ. ೨–೬೨ವ). [ಉಕ್ಕೆವ$_1$ + –ತನ]

**ಉಕ್ಕೆವತಪ** (ನಾ). ಮೋಸದ ತಪಸ್ಸು; ಕೃತಕವಾದ ತಪಸ್ಸು: ಸಂಸಾರಭೋಗ ವೈರಾಗ್ಯಪರಾಯಣನುಮಾಗಿ ಎಮ್ಮು[ಕ್ಕೆವ] [ಪಾಠಾಂ. ಯೆಂ ಮುಕ್ಕೆಯ್ವ, ಎಮ್ಮುಕಿವ] ತಪದಿಂದಮನಂತಸುಖಕ್ಕೆ ಕಾರಣಮಪ್ಪ ಸನ್ಮಾರ್ಗಮಂ ಪೆತ್ತೆನೆಂದು (ವಡ್ಡಾರಾ. ೬–೨೪). [ಉಕ್ಕೆವ$_1$ + ತಪ]

**ಉಕ್ಕೆವಿಸು** (ಕ್ರಿ). ಮೋಸಗೊಳಿಸು: ಎನ್ನನುಕ್ಕೆವಿಸಿ ನೆಲನಂ ಕೊಂಡೈ ಪುಣ್ಯಮಂ ಕೊಳಲ್ತೀರದೆಂದಣ್ಣನ ಸನ್ನಿಯಂ ಸಲಿಸಲ್ ಪೇೞ್ವುದೆಂದು ಪೊೞಲಿಂ ಪೊಱಮಟ್ಟು ಪೋದರ್ (ಬಂಹರಿ. ೧೧–೨೩ ವ).

[ಉಕ್ಕೆವ$_1$ + –ಇಸು$_3$]

**ಉಕ್ಕೆಸರಾಡು** (ಕ್ರಿ). "ಉಕ್ಕಿ ಎಸರಿಟ್ಟಂತೆ ಕುದಿ" (ಮೋಹತ. ಅಡಿಟ); ತಕ್ಕೆಗೊಂಡೆನ್ನ ಪೀಡಿಸಬೇಡ ಕಡುಶೈತ್ಯವಕ್ಕೆಯೊಳಿರಿಸು ಮೈಯ್ಯೊಳಗೆ ಉಕ್ಕೆಸರಾಡುವ ಮಹದಾದಿಜ್ವರ ಮರಣಕ್ಕೆ ಕಾರಣವೆಂದಳಳುತೆ (ಮೋಹತ. ೨೭–೫೯). [ಉಕ್ಕೆಸರು + ಆಡು$_1$]

**ಉಕ್ಕೆಸರು** (ನಾ). ಕುದಿದು ಉಕ್ಕುವ ಎಸರು,— ನೀರು. 'ಉಕ್ಕೆಸರಾಡು' ಪರಾ. [ಉಕ್ಕು$_1$ (< ಉರ್ಕು$_1$) + ಎಸರು (< ಎಸರ್)]

**ಉಕ್ಕೇರು** (ಕ್ರಿ). ಉತ್ಸಾಹ ಹೆಚ್ಚು; ಹುರುಪು ಹೊಮ್ಮು: ಮಾರಯ್ಯ ತಾ ಕಂಡ ಪ್ರತ್ಯಕ್ಷ ನಿರಂಜನ ಪರಂಜ್ಯೋತಿಯನ್ನು ಉಕ್ಕೇರಿ ಕೊಂಡಾಡಿ ತನ್ನ ತಾ ಮರೆದ (ಮೋಳಿಮಾ. ೭೫ ಪ್ರಸ್ತಾ).

[ಉಕ್ಕು$_1$ (< ಉರ್ಕು$_1$) + ಏರು$_1$ (< ಏಱು$_1$)]

**ಉಕ್ಕಾರ** (ನಾ). ಕತ್ತಿಯನ್ನು ಚಾಲಿಸುವ ಒಂದು ವಿಧಾನ; ಒರೆಯಿಂದ ಕತ್ತಿಯನ್ನು ಕಿತ್ತು ಮೇಲ್ಮುಖವಾಗಿ ಹಿಡಿಯುವುದು: ಖಡುಗದ ಪಾರಗದಲುಚ್ಚಟದಲುಳಿಯುಕ್ಕಾರದೊಡ್ಡಿನ ಹೊಯ್ಲ ಹೋರಟೆಗಳ ಸುರೇಖೆಗಳ ಸಾರತರಶ್ರಮರೊದಗಿದರು (ಕುವ್ಯಾಕ. ೧೯–೩೫).

[ಪ್ರಾ. ಉಕ್ಕಾಲ; ಹಿಂ. ಉಖಾರನಾ]

**ಉಕ್ತ** (ಗು). ೧. ಹೇಳಿದ; ಹೇಳಲ್ಪಟ್ಟ: ಇದು ಶಾಸ್ತ್ರೋಕ್ತವಾದ ಕ್ರಮವಲ್ಲ (ರೂಢಿ). (ನಾ). ೨. ಮಾತು; ವಚನ: ಈಗ ದೃಷ್ಟಪ್ರತ್ಯಯಂಗಳನಾಗಮೋಕ್ತದಿ ತೋಱುವೆಂ (ಬಸವು. ೫೧-೫೨). [ಸಂ.]

**ಉಕ್ತಪೂರ್ವಕಂ** (ಅ). ಹಿಂದೆ ಹೇಳಿದ ರೀತಿಯಲ್ಲಿ: ತದೀಯ ನಿರ್ಣೀತಿಯನೀತೆಱತ್ತು ತಱಿಸಲ್ಕೆ ಬುಧೋತ್ತಮರುಕ್ತ [ಪ್ರಾಂ. ಕ್ರಿ] ಪೂರ್ವಕಂ (ಕವಿರಾ. ೨-೯೯). [ಸಂ.]

**ಉಕ್ತಲೇಖಕ** (ನಾ). ಹೇಳಿದುದನ್ನು ಬರೆದುಕೊಳ್ಳುವವನು: "ಹೇಳುತ್ತ ಹೋಗುವುದನ್ನು ಬರೆದುಕೊಳ್ಳುತ್ತ ಹೋಗುವವನು: ಉಕ್ತಲೇಖಕ . . ." (Amanuensis. ಇಂಕನಿ).
[ಉಕ್ತ + ಲೇಖಕ]

**ಉಕ್ತಲೇಖನ** (ನಾ). ಹೇಳಿದುದನ್ನು ಬರೆದುಕೊಳ್ಳುವುದು: ಉಕ್ತಲೇಖನದಲ್ಲಿ ಅನೇಕರು ತಪ್ಪುಗಳಿಲ್ಲದೆ ಬರೆದರು (ರಂಗಕ. ೧೧೬).
[ಉಕ್ತ + ಲೇಖನ]

**ಉಕ್ತಿ** (ನಾ). ಮಾತು; ಹೇಳಿಕೆ: ವಿತರ್ಕಕ್ರಮದಿಂದರ್ಥಾಂತರಮಂ ಸಮನಿಸುವೊಂದುಕ್ತಿ ಭಾವಮೆನೆ ಪೆಸರ್ವಡೆಗುಂ (ಕಾವ್ಯಾವ. ೬೧೩); ಮಱೆದುದೀ ಯುಕ್ತಿಯೆಂದಿರದೆ ಬಲ್ಲರು ತಿದ್ದಿ ಮೆಱೆವುದೀ ಕೃತಿ ತಮ್ಮದೆಂದು (ಭೈರವೇ. ೧-೧೮); ಇಂತೊರೆದ ರಾಯನುಕ್ತಿಯಂ ಕೇಳ್ದು (ಅದ್ಭುತ. ೯-೧೦). [ಸಂ.]

**ಉಕ್ತಿಪ್ರೌಢ** (ನಾ). ಮಾತಿನಲ್ಲಿ ನಿಪುಣ; ವಾಕ್ಚತುರ: ಗೋಪವೇಷದೆ ಬಂದಂ ತದ್ರಮಣಿಯರ ಪೊರೆಗಮ್ಮುತದ್ರವನಿಭವೇಣುನಿನದನುಕ್ತಿಪ್ರೌಢಂ (ಜಗವಿ. ೪-೪೯); ಉಕ್ತಿಪ್ರೌಢರಂ ಭಾವತತ್ಪರರಂ ನೀತಿವಿದರ್ಕಳಂ ರಸಿಕರಂ ಸಾಹಿತ್ಯದೊಳ್ ಸಂದ ಜಾಣರಂ (ಕುಸುಮಾ. ೧-೭).
[ಉಕ್ತಿ + ಪ್ರೌಢ]

**ಉಕ್ತಿಭಂಗಿ** (ನಾ). ಮಾತಿನ ವಿಶಿಷ್ಟ ರೀತಿ: ಯಾವ ಭಾಷೆಗೂ ಅದರದೇ ಉಕ್ತಿಭಂಗಿ ಉಂಟು. ಒಂದು ಭಾಷೆಯ ಉಕ್ತಿಭಂಗಿ ಬೇರೆಯದರಲ್ಲಿ ಇಲ್ಲ (ನಮ್ಮನು. ೨೭೧). [ಉಕ್ತಿ + ಭಂಗಿ]

**ಉಕ್ತಿವಕ್ರಿಮ** (ನಾ). ಮಾತಿನ ಕೊಂಕು, —ಸೊಗಸು: ಅವಳುಕ್ತಿವಕ್ರಿಮಕ್ಕೆ ಸೂಕ್ತಿರತ್ನಾಕರಂ ಮನದೊಳ್ ಮೆಚ್ಚಿ (ಚಂದ್ರಪು. ೮-೭೯ ವ).
[< ಸಂ. ಉಕ್ತಿವಕ್ರಿಮನ್]

**ಉಕ್ತಿಸು** (ಕ್ರಿ). ಹೇಳು: ಆ ಬುಧರುಕ್ತಿಸಲು ಶಾಶ್ವತವೆನಿಸಿದ ನು ಪಾರ್ವತೀಶ್ವರನು (ಬಸವು. ೧೮-೯೭); ಮುಕ್ತರೆಂದೆಂದು ಮುಕ್ತಿಯೊಳೆ ಇದ್ದವರಲ್ಲ ಉಕ್ತಿಸೆ ಭವದೊಳಿದ್ದವರು . . . ಮುಕ್ತಿಗೇಱಿದರಹುದು (ಭರಚ. ೬೮-೧೦). [ಉಕ್ತಿ + -ಇಸು]

**ಉಕ್ತೆ** (ನಾ). [ಛಂದ] ಅಕ್ಷರ ಛಂದಸ್ಸಿನಲ್ಲಿ ಮೊದಲನೆಯ ಛಂದಸ್ಸು; ಒಂದು ಪಾದದಲ್ಲಿ ಒಂದು ಅಕ್ಷರವಿರುವ ಸಮವೃತ್ತಗಳ ಛಂದಸ್ಸು: ಉಕ್ತೆಯೆಂಬ ಛಂದದೊಳೊಂದಕ್ಕರಂ ಪಾದಮಾಗಿ ಪುಟ್ಟುವ ೨ ವೃತ್ತಂಗಳೊಳಗೆ-ಶ್ರೀವೃತ್ತಂ-ಶ್ರೀ I ಶಂ I ಕಾಂ I ತೇ (ಛಂದೋಂಬು. ೨-೨); ಪ್ರತಿಪಾದದ ಅಕ್ಷರಸಂಖ್ಯೆಯನ್ನನುಸರಿಸಿ ಸಮವೃತ್ತಗಳು ಸಾಮಾನ್ಯವಾಗಿ ಇಪ್ಪತ್ತಾರು ಗುಂಪುಗಳಾಗಿ ಮಾಡಲ್ಪಟ್ಟಿವೆ. ಈ ಗುಂಪಿಗೂ ಛಂದಸ್ಸು ಎಂದು ಹೆಸರು. ಈ ಛಂದಸ್ಸುಗಳಿಗೆ ಕ್ರಮವಾಗಿ ೧ ಉಕ್ತೆ ೨ ಅತ್ಯುಕ್ತೆ . . . ೨೬ ಉತ್ಕೃತಿ ಎಂಬಿವು ಸಂಜ್ಞೆಗಳು (ಕೈಪಿಡಿ. ೭೮).
[ಸಂ. ಉಕ್ತಾ]

**ಉಕ್ಷ** (ನಾ). ೧. ಎತ್ತು; ಹೋರಿ; ಗೂಳಿ: "ಉಕ್ಷಂ ವೃಷಂ ಕಕುದ್ಮಂ ಸೌರಭೇಯಂ . . . ಋಷಭವಾ ಗೋಬಾಡಬೇಯಮೆನೆಯೆತ್ತೆನಿಕ್ಕುಂ" (ಮಂಗರಾ. ೫೩-೧). ೨. [ಜ್ಯೋತಿ] ವೃಷಭರಾಶಿ. 'ಉಕ್ಷೋದ್ಭವ' ಪರಾ. [< ಸಂ. ಉಕ್ಷನ್]

**ಉಕ್ಷಕೇತ** (ನಾ). ಎತ್ತಿನ ಗುರುತನ್ನು ಬಾವುಟದಲ್ಲಿ ಉಳ್ಳವನು; ವೃಷಭಧ್ವಜ; ಶಿವ: ಭವನನುಕ್ಷಕೇತನಂ ಮಂದರನಿಕೇತನಂಗೆಯ್ದೆ ವಿಖ್ಯಾತನಂ ನತಪಾರಿಜಾತನಂ ದೇವಕುಲತಾತನಂ (ಉದ್ಭದೇ. ೭-೧೮).
[ಉಕ್ಷ + ಕೇತ]

**ಉಕ್ಷಗ** (ನಾ). ಎತ್ತಿನ ಮೇಲೆ ಹೋಗುವವನು; ಶಿವ: ಉಕ್ಷಗನ ಯಜಿಸಿಯರ್ಪಿಸಿ ತದ್ರುಚಿಯನೊಳಗೆ ಲಕ್ಷಿಸಿ ಶಿವಾವಧಾನದೆ ಕೊಂಡು ದಮೃತವು (ಪದ್ಮರಾ. ೧೧-೧೨೯). [ಸಂ.]

**ಉಕ್ಷಗಮನ** (ನಾ). = ಉಕ್ಷಗ: ಅಪೇಕ್ಷಿಸುವ ಪದವೀ ಕ್ಷಿತಿಯೊಳಹುದುಕ್ಷಗಮನಸದೃಕ್ಷನಹ ಬಸವಾಕ್ಷರತ್ರಯದಿ (ಬಸವು. ೬೧-೮೩).
[ಉಕ್ಷ + ಗಮನ]

**ಉಕ್ಷಣ** (ನಾ). ಚಿಮುಕಿಸುವುದು; ಸಿಂಪಡಿಸುವುದು; ಪ್ರೋಕ್ಷಿಸುವುದು. [ಸಂ.]

**ಉಕ್ಷತರ** (ನಾ). ದೊಡ್ಡ ಎತ್ತು ಅಥವಾ ಗೂಳಿ: "ಉಕ್ಷತರನಾ ಮಹೋಕ್ಷಂ ಬಲ್ಪಿನೆತ್ತು" (ಮಂಗರಾ. ೫೩-೧). [ಸಂ.]

**ಉಕ್ಷಧ್ವಜ** (ನಾ). = ಉಕ್ಷಕೇತ: ಆ ಕ್ಷಣದೊಳುಕ್ಷಧ್ವಜನನುಗ್ರಾಕ್ಷನಂ ಮೆಚ್ಚಿಸಿ ತದೀಯ ಸಮುಕ್ಷದೊಳು ಪಡೆದಂ ಪ್ರಸಾದವನಾದಿಚಂಡೇಶ (ಬಸವು. ೫೮-೨೬). [ಉಕ್ಷ + ಧ್ವಜ]

**ಉಕ್ಷಪತಿ** (ನಾ). ಶ್ರೇಷ್ಠವಾದ ಎತ್ತು; ವೃಷಭರಾಜ; ನಂದಿ: ಮುನಿವರೇಣ್ಯನು ನಡೆಯಲಾಯಯ್ಯನ ಸಮುಕ್ಷದೊಳುಕ್ಷಪತಿ ಭೋರನೆ ನಡೆಯೆ ಚಾವುಂಡರಾಯನು ಹೋಗುತಿರೆ ಮುಂದೆ (ಬಸವು. ೬೨-೬೧).
[ಉಕ್ಷ + ಪತಿ]

**ಉಕ್ಷರಾಜ** (ನಾ). = ಉಕ್ಷಪತಿ: ಸಾಕ್ಷಾದುಕ್ಷರಾಜಸದೃಕ್ಷ . . . ಬಸವಸೂಕ್ಷ್ಮ ಅಕ್ಷಯ ರಕ್ಷಿಸೆಮ್ಮವನು (ಬಸವು. ೬೧-೯೩).
[ಉಕ್ಷ + ರಾಜ]

**ಉಕ್ಷವಾಹನ** (ನಾ). ಎತ್ತನ್ನೇ ವಾಹನವಾಗಿ ಉಳ್ಳವನು; ಶಿವ: ಉಕ್ಷವಾಹನಭಕ್ತನೋಹಿಳನು (ಬಸವು. ೪೩-೫೩). [ಉಕ್ಷ + ವಾಹನ]

**ಉಕ್ಷಸಲಕ್ಷ** (ನಾ). (ತನ್ನ ಬಾವುಟದಲ್ಲಿ) ಎತ್ತಿನ ಗುರುತುಳ್ಳವನು; ಶಿವ: ಭೃಂಗೀಶವಾರಣವದನ ಶರಜನ್ಮಮುಖ್ಯ ಗಣಕುಲವೆರಸಿ ಪ್ರತ್ಯಕ್ಷನಾದನುಕ್ಷಸಲಕ್ಷನು (ರಾಘಚ. ೧೯-೧೮). [ಸಂ.]

**ಉಕ್ಷಾಸನ** (ನಾ). = ಉಕ್ಷವಾಹನ: ಶ್ರೀ ವಾಣೀಗಿರಿಜಾಧಿಪರ್ಗರುಡಹಂಸೋಕ್ಷಾಸನರ್ (ಎಕ. VII, ಶಿಕಾರಿ. ೧೧೮-೧; 1054).
[ಉಕ್ಷ + ಆಸನ]

**ಉಕ್ಷಿತ** (ಗು). ಚಿಮುಕಿಸಲ್ಪಟ್ಟ; ಪ್ರೋಕ್ಷಿಸಲ್ಪಟ್ಟ. [ಸಂ.]

**ಉಕ್ಷೇಶ್ವರ** (ನಾ). = ಉಕ್ಷಪತಿ: ಬಲವದುಕ್ಷೇಶ್ವರನ ರೂಪಗ್ಗಳಿಪ ಬಲ್ಲೆತ್ತುಗಳನೆ ಹೆಗಲ್ಗೊಳಿಸಿ ಬಂಡಿಯೊಳಗ್ರದಲಿ ಕೇಳಿಕೆಗಳೊಡಗೂಡಿ (ಬಸವು. ೫೬-೭). [ಉಕ್ಷ + ಈಶ್ವರ]

**ಉಕ್ಷೋದ್ಭವ** (ನಾ). [ಜ್ಯೋತಿ] ವೃಷಭರಾಶಿಯಲ್ಲಿ ಹುಟ್ಟಿದವನು: ಸ್ಥಿರಮಿತ್ರನುಚ್ಚಕಕುದಂ ಶ್ಲೇಷ್ಮಾಢ್ಯನುಕ್ಷೋದ್ಭವಂ (ಜಾತಕ. ೧೭-೨). [ಉಕ್ಷ + ಉದ್ಭವ]

**ಉಖೆ** (ನಾ). ಮಡಕೆ: "ಉಖೆ ಪಿಠರಮಾಸ್ಥಾಲಿ ಭಾಂಡಂ ಮಡಕೆಯೆಂದೆನಿಕ್ಕುಂ" (ಮಂಗರಾ. ೬೨-೨೨). 'ಉಖ್ಯ' ಪರಾ.
[ಸಂ. ಉಖಾ]

**ಉಖ್ಯ** (ನಾ). ಮಡಕೆಯಲ್ಲಿ ಬೇಯಿಸಿದ ಮಾಂಸ: "ತಾಳಿಸಿದಡಗು ಭರೂಟಕಮೆಂಬುದು ಅಟ್ಟಡಗು ಉಖ್ಯಮೆಂಬುದು" (ಹಲಾಯು. ೫೪-೧೬೮); "ಬರಿಗೆಂಡದೊಳು ಸುಟ್ಟಡಗು ಶೂಲಿಕೆಯೆನಿಕ್ಕದಂ ಭಾಂಡದೊಳಡಲ್ಕೆ ಉಖ್ಯಮೆನಿಕ್ಕು" (ಮಂಗರಾ. ೬೪-೪). [ಸಂ.]

**-ಉಗ,** -ಉಕ (ಪ್ರ). ಇದರಲ್ಲಿ ವ್ಯವಹರಿಸುವವನು, ವರ್ತಿಸುವವನು ಎಂಬ ಅರ್ಥವನ್ನು ಸೂಚಿಸುವ ಒಂದು ತದ್ಧಿತಪ್ರತ್ಯಯ: ವ್ಯವಹರಣ ತದಾಚರಣ ಪ್ರವಣನೊಳಕ್ಕುಂ ಸಮಂತು ಗ ಪ್ರತ್ಯಯಂ . . . ವ್ಯವಹರಿಸುವನೊಳಂ ಅಲ್ಲಿ ವರ್ತಿಸುವನೊಳಂ ಉಗ ಪ್ರತ್ಯಯಮಕ್ಕುಂ . . . ಉಗ ಪ್ರತ್ಯಯಕ್ಕೆ – ನಾರುಗಂ, ಬೇರುಗಂ, ಊರುಗಂ, ಕಾಱುಗಂ, ನೇಱುಗಂ, ಹೆಣ್ಣುಗಂ (ಶಮದ. ೨೦೪, ವೃತ್ತಿ, ಪ್ರಯೋ). **-ಉಕ:** ಶೀಲಾದಿ ನಿಖಿಲಾರ್ಥಂಗಳೊಳ್ ಉಕ ಪ್ರತ್ಯಯಮುಂ . . . ಉಕಪ್ರತ್ಯಯಕ್ಕೆ – ಕಟ್ಟುಕಂ . . . ಸಣ್ಣುಕಂ, ಬೊಂದುಕಂ, ದಿಂಡುಕಂ (ಶಮದ. ೨೦೩ ವೃತಿ, ಪ್ರಯೋ). [?]

**ಉಗಮ** (ನಾ). ೧. ಹುಟ್ಟುವ ಸ್ಥಳ; ಮೂಲಸ್ಥಾನ: ಇದರ ಉದ್ದಳತೆ ಉಗಮದಿಂದ ಮುಖದವರೆಗೆ ಸುಮಾರು ೧೩೦ ಮೈಲು (ಕಭಾಗೆ. ೧೧); ಉಗಮದಿಂದ ಮುಖದವರೆಗೆ ಇದರ ಉದ್ದಳತೆಯು ೭೦೦ ಮೈಲಿಗಿಂತ ಹೆಚ್ಚು ಇರುತ್ತದೆ (ಬೆಳವ. ೧೪). **೨.** ಹುಟ್ಟು; ಆವಿರ್ಭಾವ: ವಚನಸಾಹಿತ್ಯದ ಉಗಮವೂ ೧೦ನೆಯ ಶತಮಾನದಲ್ಲಿಯೇ (ಸಾಹಿಸ. ೩೬). [< **ಸಂ.** ಉದ್ಗಮ]

**ಉಗರಿಸು** (ಕ್ರಿ). ಏದು; ಕಷ್ಟಪಟ್ಟು ಉಸಿರಾಡು (ಕ).
[ದೇ. ‖ **ತೆಲು.** ಒಗರಿಂಚು]

**ಉಗಳು** 'ಉಗುಳ್$_1$' ನೋ.

**ಉಗಾದಿ** (ನಾ). ಯುಗಾದಿ; ಚಾಂದ್ರಮಾನ ಅಥವಾ ಸೌರಮಾನ ವರ್ಷದ ಪ್ರಾರಂಭದ ದಿನ; ಚೈತ್ರಮಾಸದ ಶುಕ್ಲಪಕ್ಷದ ಪಾಡ್ಯ ಅಥವಾ ಮೇಷಮಾಸದ ಪ್ರಾರಂಭದ ದಿನ: ಶ್ರೀ ವಿಠಲದೇವರು ನಂಮ ತೋಟದ ವೊಳಗಣ ಪರಾಂಕುಶ ಮಂಟಪಕೆ ಚಿತ್ತೈಸುವ ದಿನಗಳು . . . ಮಹರ್ನವಮಿ ವಿಜಯದಶಮಿ ೧೦ ಉಗಾದಿ ದಿನ ೨ ದೀಪಾವಳಿ ದಿನ ೩ (ಸೌಇಇ. IX–ii, ೬೬೮–೪; 1559); ಬಂದಪುದುಗಾದಿ ದೀವಳಿಗೆ ಸಂಕ್ರಮಣಂಗಳೆಂದು ಪಬ್ಬವನೆಸಗಿ ಮಿಂದುಂಡು ಸುಖಿಯಪ್ಪೆನೆಂದು ಬಯಸುವನಲ್ಲಮಾಯುಷ್ಯ ಪೋದಪುದೆನುತ್ತ ತಿಳಿಯಂ ಮಾನವಂ (ವೆಂಕಾರಾ. ೨–೩೩–೧೭); ಉಂಡದ್ದೇ ಉಗಾದಿ, ಮಿಂದದ್ದೇ ದೀವಳಿಗೆ, ಹೊಟ್ಟೆಗಿಲ್ಲದ್ದೇ ಏಕಾದಶಿ (ಗಾದೆ). [< **ಸಂ.** ಯುಗಾದಿ]

**ಉಗಾಭೋಗ** (ನಾ). ಎಲ್ಲ ರಾಗ ತಾಳಗಳಲ್ಲಿ ಹಾಡಬಹುದಾದ ಸ್ವರಪ್ರಧಾನವಾದ ಹಾಡು: ನಿನ್ನ ವೈತ್ರಿಯ ಉಗಾಭೋಗ ಉಸಿರು ಈ ಹಕ್ಕಿಯಲಿ (ಉಯ್ಯಾಲೆ. ೨೮–೨); ಪದ, ಸುಳಾದಿ, ಉಗಾಭೋಗ ಈ ರೂಪಗಳಲ್ಲಿ ಅದು ಹೊರಹೊಮ್ಮಿ ಕರ್ಣಾಟಕ ಸಂಗೀತವನ್ನು ಜನಪ್ರಿಯಗೊಳಿಸಿತು (ಕಸಾಚ. ೨೪೪). [ಉಗ್ಗಾ$_0$ (< ಉದ್ಗ್ರಾಹ) + ಆಭೋಗ]

**ಉಗಿ$_1$** (ಕ್ರಿ). ಹೊರಕ್ಕೆ ತೆಗೆ; ಸೆಳೆ; ಸುಲಿ: "ಉಗಿ – ಆಕರ್ಷಣೇ (ಎಳೆಯು), ನಖಕ್ಷತೇ ಚ (ಉಗುರಿನಿಂದ ಸೀಳು)" (ಶಮಧಾ); ಪಿಱಿತಿನಿಗಳ್ ಬೇಯುತ್ತುಮಿರ್ದ ಪೆಣನಂ ನಾಯುಗಿವಂತುಗಿದು ತಿಂದುವೋರೊಂದೆಡೆಯೊಳ್ (ಕಾವ್ಯಸಾ. ೫೩೬ ಶೂದ್ರಕ); ತನ್ನ ಸಹಜ ಕವಚಮಂ ನೆತ್ತರ್ ಪನಪನ ಪರಿಯೆ ತಿದಿಯುಗಿವಂತುಗಿದು ಕೊಟ್ಟೊಡೆ (ಪಂಪಭಾ. ೧–೧೦೨ ವ); ವಾಯುಜನ ಜಠರದಲಿ ತೆಗೆಯೊ ಜೀಯ ನಿನ್ನನುಜರನು ಪಾರ್ಥನ ಬಾಯಲುಗಿ ಸೂತಜನನೆಂದರು ಜಱಿದು ಕುರುಪತಿಯ (ಕುವ್ಯಾಶ.೧–೧೧). **೨.** ಹೋಗಲಾಡಿಸು; ಕಳೆ; ವಿಸರ್ಜಿಸು: ಮಗಳಂ ನಾನಿತ್ತುದೆಱಿಂ ಜಗದಧಿಪತಿಯಾದನಾ ಮರುಳ್ಗಳ ಗುರು ಬೆಳ್ನಗೆಯಿಂದೆನ್ನಯ ಲಜ್ಜೆಯನುಗಿದಿರ್ದನದಕ್ಕೆ ತಕ್ಕುದಂ ನಾಂ ಮಾಳ್ಪೆಂ (ವೀರವಿ. ೭–೫೮). **೩.** ಬಿಚ್ಚಿಹೋಗು; ಕಳಚಿಹೋಗು; ಸಡಿಲವಾಗು: ಯುಧಿಷ್ಠಿರನೃಪನ ಹರಳುಂಗುರ ವಿಘಾತಿಯಲುಗಿದು ಬಿದ್ದುದಗಾಧಕೂಪದಲಿ (ಕುವ್ಯಾಆ. ೧೭–೯೮). **೪.** ಚಿಮ್ಮು; ನೆಗೆ; ಹೊರಬೀಳು: ನೆಗೆಯೆ ಪೊದೆದ ಬೊಬ್ಬುಳಿಕೆಗಳ್ ನೆಗೆದಂತೆರಡುಂ ಕೆಲಕ್ಕೆ ನೀರುಗಿಯೆ . . . ಭೀಮಭುಜಮಂದರಘಟ್ಟನೆಯಿಂದಮಲ್ಲಿ ತೊಟ್ಟಗೆ ಕೊಳೆ ಕಾಳಕೂಟಮೊಗೆವಂತೊಗೆದಂ ಫಣಿರಾಜಕೇತನಂ (ಪಂಪಭಾ. ೧೩–೮೨); ಮಹಾಜ್ಞಾನವಪ್ಪ ಅಱಿವು ನಾನಾ ವಿಷಯಂಗಳಲ್ಲಿ ನೆನೆದು ಉಗಿದು ಹಾವಸೆಯಾಯಿತ್ತು (ಮೋಳಿಮಾ. ೫–೧೭); ಕರುಳುಗಿಯೆ ತಲೆ ಸಿಡಿಯೆ ನಿಟ್ಟೆಲು ಮುರಿಯೆ ಮೂಳೆಗಳುದಿರೆ ಶೋಣಿತ ಸುರಿಯೆ ಕಾಳಿಜ ಕೆದಱಿ ತುಂಡಿಸಿ ಖಂಡ ಬೆಂಡೇಳೆ (ಕುವ್ಯಾಭೀ. ೪–೨೮). **೫.** [ಗಣಿತ] ಭಾಗಿಸು: ತವಿಸು, ಭಾಗಿಸು, ಉಗಿ, ಎತ್ತು, ಕೊಡು, ಕೊಳು . . . ಇಂತಿನಿತುಂ ಭಾಗಂಗೊಂಬುದಕ್ಕೆ ಪೆಸರು (ವ್ಯವಹಾ. ೧೨–೨).
[ದೇ. ‖ **ತಮಿ.** ಉಗು = ಚೆಲ್ಲು, ಉದಿರು, ನುಗ್ಗಿಹರಿ; **ಮಲ.** ಊಕ್ಕ = ಚೆಲ್ಲು; **ತೆಲು.** ಊಚು = (ಕಾಯಿಲೆಯಿಂದ) ತಲೆಕೂದಲು ಉದುರು]

**ಉಗಿ$_2$** (ಕ್ರಿ). **೧.** ಉಗುಳು; (ಬಾಯಿಂದ) ಹೊರಚೆಲ್ಲು: ಉಗಿದು [ಪಾಠಾಂ. ಗುಬ್ಬಿ]ವು ಪೀರ್ದ ಕಟ್ಟಿಲೆಯನಟ್ಟುಸಲಾಜದೆ ಕಾಱುವಂತೆ ಕಾಡಿಗೆಗಳನಾಗಳೋಪವರ ಕೇಳಿಗಳಂ ತಲೆಯೆತ್ತಿ ನೋಡುವಂತೆ (ಕಾವ್ಯಾಸಾ. ೧೧೧೭); ಉಗಿದರೆ ತುಪ್ಪ ಕೆಡುತ್ತದೆ, ನುಂಗಿದರೆ ಗಂಟಲು ಸುಡುತ್ತದೆ (ಗಾದೆ). **೨.** (ಆಲಂ) ಚೆಲ್ಲು; ಸೂಸು: ವಿಗಡವಾಗಿದೆ ನಿನ್ನ ಪಯಣಕ್ಕೆಯೆನ್ನದೆ ದಿಗಿಲಾಂತುದೀ ಗಳಿಗೆಯೊಳು ಅಗಲಿದೊಡೆಂತು ಬಿಸುಸುಯ್ಯನುಗಿದಳು ದಳ್ಳುರಿವೆರಸಿ (ಮೋಹತ. ೨೮–೩೯); ಸಮುಸಾವು ಸತ್ತರ್, ನಣ್ಪುನೆತ್ತರನುಗಿದು, ಓರೊರ್ವರಾ ಕಯ್ಯೊಳ್ ನೂರ್ಪಗಲ್ ಕೊಲೆಯಿನ್ (ಅಂತಿಗೊ. ೩–೪೬).
[ದೇ. ‖ **ತಮಿ.** ಉಮಿ; **ಮಲ.** ಉಮಿ, ಉಮಿಯು; **ತುಳು.** ಉಬ್ಬಿ, ಉಗಿ; **ತೆಲು.** ಉಮಿ]

**ಉಗಿ$_3$** (ಕ್ರಿ). **೧.** ಚುಚ್ಚು; ತಿವಿ; ಇರಿ: ಮನಮೆಂಬಂಕುಸದಿಂ ದಯ್ದಿಂದ್ರಿಯಗಜಮನುಗಿದು (ಸೌಇಇ. IX–i, ೯೭–೩೪; 1062); ಕಾಮನಂಬುಗಳುಗಿದವೆದೆಯಲಿ (ಕುವ್ಯಾವಿ. ೨–೯); ಸರಲುಗಿಯಲು ಸರಿಗಣೆಯಂ ಮುಱಿಯುತ ಮರಳಿ ಮರಳಿಯಾಳಾಳೊಳೊಡರ್ಚುತ್ತ (ಜಯಕಾ. ೬–೩೨). **೨.** ಉಗುರಿನಿಂದ ಸೀಳು; ಬಗಿ: "ಉಗಿ – ಆಕರ್ಷಣೇ (ಎಳೆಯು) ನಖಕ್ಷತೇ ಚ (ಉಗುರಿನಿಂದ ಸೀಳು)" (ಶಮಧಾ); ಕುರುಧರೆಯಂ ನಿಜೋಗ್ರಗದೆಯೆರ್ಗಳಿನುತ್ತುಗಿಯುತ್ತೆ (ಗದಾಯು. ೧೦–೪); ನೆತ್ತಿಯೊಳ್ ನಟ್ಟುಗುರುಗಿಯೆ ನಿಶಾತಾಂಕುಶಶ್ರೀಯಿನುದ್ಧೃತ್ಕರಿಯಂ ಪಾಯ್ದೇಱಿ (ಲೀಲಾವ. ೮–೨೪); ಪಂದಿಯ ಬಳಿಯೊಳ್ ನೊಪ್ಪು ನೆಗೆದುರ್ಬಿ ಪಾಯುತೆ ಚಪ್ಪರಿಸುತ್ತುಗಿದು ಬಗಿದು ತೆಗೆದುವು ನಾಯ್ಗಳ್ (ಗಿರಿಕ. ೧–೧೦೩); ಉಗುರೊಳಸುರನ ಕರುಳ ದಂಡೆಯನುಗಿದು ಕೊರಳಲಿ ಹಾಯ್ಕಿ ದೈತ್ಯನ ಮಗನ ಪತಿಕರಿಸಿದನು (ಕುವ್ಯಾಸ. ೯–೪೪). [?]

**ಉಗಿ$_4$** (ಕ್ರಿ). ಕುಗ್ಗಿಸು; ಕಡಮೆ ಮಾಡು: ನೀರಂ ಸೇದಿಕೊಂಡು ಬಂದು ಕುಡಿಯಲೆಱಿಯೆ ಕುಡಿಯೆ ಕುಡಿಯೆ ಕರಗದವಾರೆಯನುಗಿದು ಕೊಂಡೊಡರಸನಾಕೆಯ ಮೊಗಮಂ ನೋಡಿ (ವಡ್ಡಾರಾ. ೧೧೧–೪). [?]

**ಉಗಿ$_5$** (ಕ್ರಿ). ಅಂಜು; ಹೆದರು; ಭಯಗೊಳ್ಳು (?): "ಸೆಡೆದನೆಂದುಂ . . . ಉಗಿದನೆಂದುಂ (ಅಗಿದನೆಂದುಂ) ಅಳ್ಕಿದನೆಂದುಂ ತೆಮರ್ದನೆಂದುಂ – ಈ ೮ ಭಯಂಗೊಂಡವಂ" (ಕಶಸಾ. ೧೨–೨೨೫); ನರರದಿರ್ದರು ದಿರ್ದರಂಬರಚರರಗಿದರ್ ದಿಗಧಿನಾಥರುಗಿದರ್ ದನುಜರ್ (ನೇಮಿಪು. ೬–೧೨೦); ಸ್ಮರನ ಸಮಾ × × × ಕಳ್ಳಭೂರುಹಂ ಧರೆಯೊಳ್ ಕಳ್ಕಿಗಂದುಗಿದು ತಾಂ ಯತಿಯಾದನೊ (ಸೌಇಇ. IX–i, ೩೪೩–೬೯; 1226).
[?]

**ಉಗಿ$_6$**, ಉಗೆ$_1$ (ನಾ). ನೀರಿನ ಹಬೆ; ಆವಿ: ಸವಿವ ಬಾಯುಗಿಯಡಗೆ ಮೈ ಮಿಗೆ ಬೆವರೆ ಸೂಳೋಸರಿಸೆ ಕೆಡಪಿದ ಜವಳಿಜಂತ್ರದ ಬೊಂಬೆಯೆನಲಿರ್ದರು ಮಱಿದರೊಡಲ (ಸಾಳ್ವಭಾ. ೮-೩೬); ಉಗಿಯಿಂದ ಬೆಂದ ಬಿಸಿ ಬಿಸಿ ಅನ್ನವೂ . . . ಹಗುರು ಇರುತ್ತದೆ (ಅಷ್ಟಾಂಗ. ೧೨೦-೨೯); ಕಾಫಿಯ ಉಗಿ ಹಾಗೆ ಹಾಗೆಯೆ ಮೇಲೆ ಮೇಲೇರಿ ಮಾಯವಾಗುತ್ತಿತ್ತು (ಫಲಸಂ. ೮೪). **ಉಗೆ$_1$** : ಸೂರ್ಯನ ಬಿಸಿಲಿಗೆ ಆ ನೀರು ಕಾದು ಉಗೆಯಾಗಿ ಮೇಲಕ್ಕೆ ಹೋಗುತ್ತದೆ (ಮುಂಬಯಿ. ೨-೫೯); ಹಣ್ಣೆಲೆಯು ಹಾರುತಿರೆ ನೀರಿನುಗೆಯಾಗುತಿರೆ (ಉಯ್ಯಾಲೆ. ೪೬-೧).

[ದೇ. ‖ ತುಳು. ಉಬ್ಬೆ, ಉಬೆ; ತೆಲು. ಉಕ್ಕ]

**ಉಗಿ$_7$** (ನಾ). **೧.** ಸೀಳಿಹೋದ ಸ್ಥಿತಿ: ಅಂತೊಂದೆ ಕೊರಲೊಳ್ ಕೊಳೆ ಪಾಡುವ ಬರ್ಬರ ಕಿರಾತೆಯರಿಂಗೊರಲೊಳೊದವಿ ಬಂದೆರ್ದೆಯನಳ್ಳೆವಿಳ್ಳೆಯಾಗಿ ಪಿಡಿದಲುಗುವಂತಲುಗೆ ತೊಳ್ತುಳಿಯುಮುಗಿಯುಂ ಬಗಿಯುಂಮಾಡಿ ಮನಮನುಱಿ ಸೆಱಿವಿಡಿದ ಸೀಯನಪ್ಪ ಗೇಯರಸಾಬ್ಧಿಪೂರದೊಳ್ (ಶಾಂತಿಪು. ೨-೨೨ ವ). 'ಉಗಿಬಗಿ' ಪರಾ. **೨.** ಇರಿತ; ತಿವಿತ. 'ಉಗಿಗೊಳ್' ಪರಾ. [< ಉಗಿ$_3$]

**ಉಗಿಕಾವು** (ನಾ). ಆವಿಯಿಂದ ಉಂಟಾಗುವ ಶಾಖ; ಹಬೆಯಿಂದ ಶಾಖಕೊಡುವುದು: "ಉಗಿಕಾವು – ಉಗಿಯಿಂದ ಬೆಚ್ಚಗೆ ಮಾಡುವುದು" (ಜಾನಕೋ. ೧೯). [ಉಗಿ$_6$ + ಕಾವು (< ಕಾಯ್ಪು)]

**ಉಗಿಕಾಸು** (ಕ್ರಿ). ಆವಿಯಿಂದ ಶಾಖವನ್ನು ಕೊಡು: "ಉಗಿಕಾಸು – ಉಗಿಯಿಂದ ಬೆಚ್ಚಗೆಮಾಡು" (ಜಾನಕೋ. ೧೯).

[ಉಗಿ$_6$ + ಕಾಸು$_1$ (< ಕಾಯಿಸು$_2$)]

**ಉಗಿಕೊಡು** (ಕ್ರಿ). "ಉಗಿಕಾಸು" (ಜಾನಕೋ. ೧೯).

[ಉಗಿ$_6$ + ಕೊಡು]

**ಉಗಿಗೊಳ್** (ನಾ). **೧.** ತಿವಿತಕ್ಕೆ ಒಳಗಾಗು. **೨.** ಉಗುರಿನಿಂದ ಗಾಯಹೊಂದು. **೧, ೨** : ಬಡಿದೊಡೆ ಪೊಂಗಿ ಪಂದೊವಲವೊಲ್ಪೊಱಿಯೇಱುವ ಸೊರ್ಕಿದಾನೆವೊಲ್ ಪಿಡಿದುಗಿಗೊಂಡೊಡಗ್ಗಳಿಪ ಬಗ್ಗಿಸಿ ಪೊಯ್ದೊಡೆ ಬೂತಿನಂತೆ ಪಾಯ್ವ . . . ಬದಂಗಿ (ಲೀಲಾವ. ೨-೬೦).

[ಉಗಿ$_7$ + ಕೊಳ್$_1$]

**ಉಗಿಪಟ** (ನಾ). ಸುಲಿಗೆ. 'ಉಗಿಪಟಂಗೊಳ್' ಪರಾ.

[ಉಗಿ$_1$ + ಪಟ]

**ಉಗಿಪಟಂಗೊಳ್** (ಕ್ರಿ). **೧.** ಸುಲಿದುಕೊ; ಸೆಳೆದುಕೊ: ಕುರುವೃಂದಮಂ . . . ಸಮ್ಮೋಹನಾಸ್ತ್ರದಿಂ ಮೋಹಿಸಿ ಮೂರ್ಧಾಭಿಷಿಕ್ತರ ಮುಡಿಗಟ್ಟಿನ ಪಟ್ಟಿಗಳನುಗಿಪಟಂಗೊಂಡು ತಲೆಗಾದು ಕಳಿಪಿ (ಜಗವಿ. ೧೫-೫ ವ). **೨.** ಹೋಗಲಾಡಿಸು; ತೊಲಗಿಸು: ಬೆಸಗೊಳೆ ದಶನದ್ಯುತಿ ದೆಸೆದೆಸೆಯ ತಮಃಪಟಮನುಗಿಪಟಂಗೊಳೆ (ಶಾಂತಿಪು. ೪-೬೫).

[ಉಗಿಪಟ + ಕೊಳ್$_1$]

**ಉಗಿಪಡ[ಡು]ಹ** (ನಾ). ಸುಲಿಗೆ: "ಉಗಿಪಡ[ಡು]ಹಮೆನಲ್ಕೆ ಸುಲಿಹದೊಳ್ ತಳೆದಿರ್ಕುಂ" (ಕರ್ಣಾನಿ. ೨೫). 'ಉಗಿಪದ' ಪರಾ.

[ಉಗಿ$_1$ + ಪಡು$_1$ + –ಹ$_2$]

**ಉಗಿಪದ** (ನಾ). ಸುಲಿಗೆ: "ಉಗಿಪದಂ [ಪಾಠಾಂ. ಕಿ. ಉಲಿಪದಂ] ಸುಲಿಹಂ" (ಶಮುದ. ಪರಿ. ೨). ℙ ಈ ಶಬ್ದ 'ಉಗಿಪಟ' ಎಂಬುದರ ಅಪಲಿಖಿತವಿರಬಹುದೇ? [< ಉಗಿಪಟ?]

**ಉಗಿಬಂಡಿ** (ನಾ). ಹಬೆಯಿಂದ ಓಡುವ ಗಾಡಿ; ರೈಲುಬಂಡಿ: ಉಗಿಬಂಡಿಯ ಜೊತೆಗೆ ಎತ್ತಿನ ಬಂಡಿ ಓಡುವುದು ಸಾಧ್ಯವುಂಟೆ (ಸ್ಕೂಲವಿ. ೧೪); ಉಗಿಬಂಡಿಯಂಥ ಮನೆಗಳ ಸಾಲುಗಳಿಲ್ಲ (ಪರಾವ. ೧೬). [ಉಗಿ$_6$ + ಬಂಡಿ]

**ಉಗಿಬಗಿ$_1$** (ಕ್ರಿ). ಹರಿದು ಚೂರು ಚೂರು ಮಾಡು: ಅಡಗಿನ ಕಡುವೆಸನಿಗತಿನ್ನಡಗಂ ನಿನ್ನಡಗನೆಂದು ಪೇಸೇೞ್ವನೆಗಂ ಸಿಡಿಖಂಡಂಗೊಂಡುಗಿಬಗಿದಿಡಿ[ದಿ]ಡಿದೆಡೆವಿಡದೆ ಕೂಱುಗೊಳ್ವರ್ ಬಾಯೊಳ್ (ಸುಕುಮಾ. ೧೧-೪೨). [ಉಗಿ$_1$ + ಬಗಿ$_1$]

**ಉಗಿಬಗಿ$_2$** (ನಾ). ಸೀಳಿಹೋಗಿ ಚೂರುಚೂರಾಗಿರುವುದು; ಶೂನ್ಯಪ್ರಾಯ: ಪಗರಣಮಣ್ಮುಮೆಚ್ಚು . . . ಗಣ್ಡವಾತುಗಿಬಗಿ ಕೀರ್ತಿಕುಪ್ಪಕುಱಿಮುತ್ತರಮೂದಲೆ ಪೆಂಪು ವಿಕ್ರಮಂ ಭಗವತಿಯೇಱು ಶೌಚಗುಣಮತ್ತಿಯ ಪಣ್ಣೆನಿಪೇಳಪುಣ್ಡರಂ ತೆಗಳ್ವುದುದಾರಚಾರುಚರಿತಪ್ರಭೆಯಿಂ ಪಡೆವಳ್ಳ ತೈಲನ (ಸೌಇಇ. XI–i, ೫೨–೩೩; 1097); ಮರ್ಬಿನುರ್ಬುಗಿಬಗಿಯಾಗೆ ಬೆಳಪ್ಪು ನೆಗೆತಂದು (ಜಗವಿ. ೧೬–೧೦೩).

ಉಗಿಬಗಿಮಾಡು = **೧.** ಸೀಳಿ ಚೂರುಮಾಡು; ಛಿದ್ರಗೊಳಿಸು; ಭೇದಿಸು: ಅರಗಿಳಿಯನೊಂದು ಗಿಡುಗನೆಡೆಗೊಂಡು ಜಗುನೆಯಂ ಪಾಯ್ವಾಗಳುಗಿಬಗಿಮಾಡಿದಾಗಳ್ (ಪಂಪಭಾ. ೧–೬೮ ವ); ಮಱಿ ಭೋರ್ಭೋರೆಂದಹೋರಾತ್ರಮುಮುಡುಗದೆ ಕೊಳ್ವಲ್ಲಿ ಪೋಬಲ್ಗಳಿಂದವ್ವಳಿಸುತ್ತುಂ ಬಂದು ಪೆರ್ವಾವುಗಳುಗಿಬಗಿಮಾೞ್ಪಲ್ಲಿ (ಸುಕುಮಾ. ೪–೯); ಮತ್ತಮದು ಮನದ ಬಿನದಕ್ಕೆ ವನಮೃಗಮನುಗಿಬಗಿಮಾಡಿಬಿಡುವೆಡೆಯೊಳ್ (ವರ್ಧಪು. ೧೦–೫ ವ); ಅಟ್ಟಿಯನಟ್ಟಿ ಗಂಡುಗೊಂಡುಗಿಬಗಿಮಾಡಿ ಮಾರ್ಮಲೆತ ವೀರಕಿರಾತರನೊಕ್ಕಲಿಕ್ಕಿ (ರಾಜಶೇ. ೫–೧೧೬). **೨.** ಕಲಕು; ಕದಡು; ಮಿಶ್ರಮಾಡು: ಮುಗಮುಗಿಸುವ ನವಮೃಗಮದದಗರುವ ಮಳಯಜದ ಕಂಪುಮಂ ಸೂಡಿದ ಬಾಸಿಗದ ಪೊಸಗಂಪುಮಂ ನೆಱಿದುಗಿಬಗಿಮಾಡಿದುವು ಚಮರರುಹಪವನಂಗಳ್ (ಆದಿಪು. ೯–೪). **೩.** ಪರವಶಗೊಳಿಸು; ಕಕ್ಕಾಬಿಕ್ಕಿಯಾಗಿಸು; ಅಸ್ತವ್ಯಸ್ತವಾಗಿಸು: ಆಳೋಕನಮಾತ್ರದೊಳ್ ಮನಮನುಗಿಬಗಿಮಾಡಿ ಮಸೆದ ಮದನನಲಗಿನಲರ್ಗಳಂತೆ ಕಣ್ಬೊಳೆಳಸಿ ಬಳಸಿ ಬಂದಿರ್ದ ಪಾಟದಾಟದ ಮುದ್ದಿನ ಬಿರ್ದಿನ ಪರಿವಾರದೇವಿಯರುಮಂ (ಆದಿಪು. ೨–೬೫ ವ); ಜಗುನೆಯ ಕಡಲೊಳ್ ತಾರಾಮೃಗಧರಮಂಡಲದ ಕಾಂತಿ ಮಾರ್ಪೊಳೆದವೊಲೇನುಗಿಬಗಿಮಾೞ್ಪವೊ ಪೆಂಡಿರ ಬಗೆಯಂ ಕೃಷ್ಣನ ವಿಲೋಲಲೋಚನರುಚಿಗಳ್ (ಅನಂಪು. ೧೨–೯೧); ಕರನಖಮುಖದಿಂ ಪರಸತಿಯರಸುಗಿಬಗಿಮಾಡಿರೆ ಕಿರೀಟಂಗಳನಾತುರದಿಂದುಗಿಬಗಿವುವು . . . ಅಸಿಪತ್ರಂಗಳ್ (ಶಾಂತೀಶ್ವ. ೯–೯೮). ಉಗಿಬಗಿಯಾಗು = **೧.** ಹೊಯ್ದಾಡು; ಅಸ್ಥಿರವಾಗು; ಕಕ್ಕಾಬಿಕ್ಕಿಯಾಗು: ಬಗೆವಂ ಪೊಗೞಲ್ ಪರಮನನಗಲ್ದು ಪೋಗಲ್ಕಮಾಜನಂತಂತೆ ಮನಕ್ಕುಗಿಬಗಿಯಾಗಿರೆ ಪೊಗೞಲ್ ಬಗೆದು ಮನಂ ಮುಗುಳ್ದು ಮುಗುಱಿ ನೋಡಿದನಿಂದ್ರಂ (ಅಜಿಪು. ೫–೫೮); ಕುಮುದಂ ನಗುತಿವೆ ಕೋಕದ್ವಯಂ ರತೀಶ್ವರನೆಸುವಿಂದುಗಿಬಗಿಯಾಗುತ್ತಿವೆ (ಗಿರಿಕ. ೪–೧೧೨); ಉಗಿಬಗಿಯಾಯ್ತಿಳೆ ನಿಖಿಲಶರನಿಧಿನಿಕರಂಬರೆಗಂ (ಮಹಾನೇ. ೧೪–೧೦೬). **೨.** ಆತುರಗೊಳ್ಳು; ತ್ವರೆಮಾಡು: ಉಗಿಬಗಿಯಾಗಿ ಬಾಗಿ ಕೊಳಲೆಂದು ಕಡಂಗುವಶೇಷ ದೇವಕೋಟಿಗಳ್ (ಅನಂಪು. ೫–೬೮). [ಉಗಿ$_7$ + ಬಗಿ$_2$]

**ಉಗಿಬಗಿಸು** (ಕ್ರಿ). ಕಲಕು; ಕದಡು; ಭೇದಿಸು: ಮೃಗಮದಗಂಧಿಯ ಮನವನು ಉಗಿಬಗಿಸಿದಂ (ಕಂದಕೊ. ೨೦೧). [ಉಗಿಬಗಿ$_2$ + –ಇಸು$_3$]

**ಉಗಿವಡಗ** (ನಾ). ಉಗುಳುವ ಪಾತ್ರೆ; ಪೀಕದಾನಿ: "ಕಾಳಂಜಿ— ಉಗಿವಡಗ (ಉಗುಳುವ ಪಾತ್ರೆ) (ಪ್ರಸಕೀ. ೨೧ ಅಡಿಟ).

[ಉಗಿ$_2$ + ಪಡಗ]

**ಉಗಿವಡೆ** (ಕ್ರಿ). ಕೆರೆಯಲ್ಪಡು; ಗಾಯಹೊಂದು: ಸಮರಕೇಸರಿಯುಗುರಿಂದುಗಿವಡೆದ ಸತಿಯ ಘನಕುಚಯುಗಳಮೆ ಮದನೇಭಕುಂಭಮಪ್ಪುದು ಪುಸಿಯೇ (ಲೀಲಾವ. ೧೩–೨೪). [ಉಗಿ$_3$ + ಪಡೆ$_1$]

**ಉಗಿಸು$_1$** (ಕ್ರಿ). ಚೆಲ್ಲಿಸು ; ಸುರಿಸು ; ಚಿಮುಕಿಸು : ಇತ್ತ ಪುರುಷೋತ್ತಮನುಮಾ ಪತ್ತನದೊಳುಳ್ಳ ಕಳ್ಳೆಲ್ಲಮಂ ನಿಶ್ಶೇಷಮೊಯ್ದು ಗಂಗಳ ಕಲ್ಲದೋಣಿಗಳೊಳುಗಿಸಿ (ನೇಮಿಪು. ೧೪–೪೬ ವ); ವೀರಾಗ್ರಣಿಯೆ ಬಳಲಿದೆಯೆಂದು ಪೊಮ್ಮನ ಹಣೆಯಮೇಲು[ಪಾಠಾಂ. ಲೊ]ಗಿಸಿದನು ಪನ್ನೀರಿನಲಿ ಮೇದಿಸಿದ ಕಣಲಿಗೆಯ ಕುಸುಮಗಳ (ತೊರರಾ. ೬–೩೦–೪೩).

[ಉಗು$_1$ + –ಇಸು$_3$]

**ಉಗಿಸು$_2$** (ಕ್ರಿ). ಹೊರಬೀಳಿಸು ; ಉಗುಳುವಂತೆ ಮಾಡು (?) : ಹುಗಿಸಿದೆನೆ ಮನೆಗಿತರ ಪಾಕವನುಗಿಸಿದೆನೆ ಲಿಂಗಪ್ರಸಾದವನಗಲಿಸಿದೆನೇ ಕಲಹವಂ ಮಾಡಿಷ್ಟ ಶಿಷ್ಟರನು (ಬಸಪು. ೪೫–೧೯). [ಉಗಿ$_2$ + –ಇಸು$_3$]

**ಉಗಿಹಡಗ** (ನಾ). ಹಬೆಯಿಂದ ನಡೆಯುವ ಹಡಗು : ಈ ಹೊಸ ಹಾದಿಯ ಹೊಸ ಉಗಿಹಡಗಕ್ಕೆ ನಿಯುಕ್ತನಾದ ವ್ಯವಸ್ಥಾಪಕ ಅಧಿಕಾರಿಯು ಅಲ್ಪವಯಸ್ಕ (ಇಪ್ಪಕ. ೧೦೦). [ಉಗಿ$_6$ + ಹಡಗ (< ಪಡಗು)]

**ಉಗು$_1$** (ಕ್ರಿ). ಒಕ್ಕ (ಭೂತಕೃ) ; ಒಕ್ಕು (ಭೂತನ್ಯೂ). **೧.** ಚೆಲ್ಲು ; ಸ್ರವಿಸು ; ತೊಟ್ಟಿಕ್ಕು ; ಉಕ್ಕು : ಫಣಿಕೇತನಂ ನೆತ್ತಿಯಿಂದೊಱಿದುಗು ನೆತ್ತರ ಧಾರೆಯಿಂ ಮೆತ್ತಿದ ಕಣ್ಗಳನೊತ್ತಂಬದಿಂ ತೆಱೆದು (ಪಂಪಭಾ. ೧೩–೧೦೪ ವ); ಮದಗಜವೆರಡಱ ಬಾಲದ ಮೊದಲಂ ಪಿಡಿದೆತ್ತಿಯೆತ್ತಿ ನುರ್ಗುತ್ತಿರೆಯಾಸ್ಯದಿನುಗುವ ರಕ್ತ ಮುರಿಯೆನೆ ತಿದಿಯೊತ್ತುವ ಕಮ್ಮಱಂಬೊಲಿರ್ದಂ ಭೀಮಂ (ಭಾಷಾಭೂ. ೧೮೭ ಉದಾ) ; ಸೊಂದಿಗೋಡಗಂಗಳ ಕಾಲಾಟದಿನಲ್ಲೊಕ್ಕಲರಿನುದಿರ್ದ ದೂಳಿಗಳನ ಮರ್ಚಿಯುಂ (ಕಬ್ಬಿಕಾ. ೫೪) ; ಮತ್ತಹಸ್ತಿಗಳ ಮಸ್ತಕದಿಂ ಬಿದಿರಿಂ ಫಣೀಂದ್ರೋತ್ತಮಾಂಗದಿನಗುರ್ವಿಪ ಪಂದಿಯ ಕೋಟ್ಕಳಿಂ ಮುತ್ತೊಕ್ಕುವು (ಶಮುದ. ೧೧೬ ಪ್ರಯೋ) ; ಪಿರಿದುಂ ಲಜ್ಜಿಸಿಯುಲ್ಲಿಂ ತೆರಳ್ದು ಪೋಪಲ್ಲಿಯೊಂದು ವಲ್ಮೀಕದ ಮೇಲಿರದಿಂದ್ರಿಯವುಗೆಯುದಱೊಳ್ ನಿರುತಂ ವಾಲ್ಮೀಕಿಯೆಂಬ ಮುನಿಯುದಯಿಸಿದಂ (ಧರ್ಮಪ. ೩–೭೧) ; ನೆಗಳ್ದ ಪೊಂಬಾಳೆಗಳ ಚವರದಿಂ ಪೂತು ಕಂಪುಗುವ ವೃಕ್ಷಾವಳಿಯ ಗುಡಿಯಿಂ (ಪದ್ಮರಾ. ೮–೨೩) ; ಮೊಲೆವಾಲು ತೊರೆದುಗುತಿವೆಕೊ (ಮೋಹತ. ೪–೮೧). **೨.** ಹೊರಬೀಳುವಂತೆ ಮಾಡು; ಬಿಸಾಡು; ಸುರಿ: "ಉಗು–ವಿಸರ್ಜನೇ" (ಶಮಧಾ) ; ಭಂಡಾರದ ಮನೆಯೊಳ್ ಕನ್ನಮಿಕ್ಕಿಸಿ ಭಂಡಾರದ ಪುಡುಕೆಗಳಂ ಪೋೞ್ದು [ದ್ರ]ವ್ಯಮುಂ ಪೊನ್ನಂ ತುಡುಗೆಗಳುಮಂ ಸಾಲಿಟ್ಟಂತಿರೆಯುಗುತ್ತಂ ಕಡುವಿರುಳ್ ಕೊಂಡುಪೋಗಿ (ವಡ್ಡಾರಾ. ೧೭೭–೫) ; ವಾರವಧೂಜನಕ್ಕೆ ಮುದುಗೂಂಟಣಿ ಹೇಮಮನಾವ ಮಾಟಿಕ್ಕೆಯಿಂ ಪ್ರೇರಿಸುತಿರ್ಪೊಡಾಗಲುಗೆಯುಂ ಕೆಡುಗುಂ ಕಡುಗೂರ್ಮೆ (ಮದತಿ. ೧೦–೬೨) ; ಲೆಕ್ಕವಿಲ್ಲದ ಹೆಣಗಳನು ಗಕ್ಕನೆ ಶುನಕ ಸೃಗಾಲಗಳೆಳೆ ತಂದೊಕ್ಕುವು ಹೊಳೆಯ ನೀರಿನಲಿ (ಕಂನವಿ. ೧೫–೧೨೨).

[ದೇ. ‖ ತಮಿ. ಉಗು ; ಮಲ. ಉಕ್ಕ ; ತೆಲು. ಊಚು]

**ಉಗು$_2$** (ನಾ). ಬಿಡಿ ಬಿಡಿಯಾಗಿರುವಿಕೆ. 'ಉಗುಬೆಲ್ಲ' ಪರಾ. [?]

**ಉಗುಚು** 'ಉಗುಳ್ಚು' ನೋ.

**ಉಗುತರ್** (ಕ್ರಿ). ಉಕ್ಕಿಬರು ; ಸ್ರವಿಸು ; ಸುರಿ : ಒಗೆದ ಶರಸ್ತಂಬದೊಳಿರ್ಬಗಿಯಾಗಿ ಮನೋಜರಾಗರಸಮುಗುತರೆ ತೊಟ್ಟಗೆ ಬಿಸುಟು ಬಿಲ್ಲನಂಬುಮನಗಲ್ದನಾಶ್ರಮದಿನುದಿತ ಲಜ್ಜಾವಶದಿಂ (ಪಂಪಭಾ. ೨–೩೩) ; ಮನೋಹರನನೀಕ್ಷಿಸಲಿತ್ತಪುವಿಲ್ಲ ಹರ್ಷದಿಂದಿರದುಗುತರ್ಪ ಬಾಷ್ಪಮೆನಗೆಂದು ಲತಾಂಗಿಯಱಿಲ್ದು ಬಾಡಿದಳ್ (ಕಾದಂಉ. ೫೨) ; ಉಗುತರೆ ಕೋಟ್ಮದುಳ್ವೆರಸು ಮಸ್ತಕಪಿಣ್ಡದ ಮೌಕ್ತಿಕೋತ್ಕರಂ (ಪಂರಾಮಾ. ೧೩–೭೪) ; ಭರದಿಂ ದೈತ್ಯರನಾರ್ದಿಸುತಿರೆ ರುದ್ರನ ಬಾಣಹತಿಯಿನುಗುತರುತಿರೆ ದೈತ್ಯರ ನೆತ್ತರ ಪನಿಯೊಳ್ (ಸಮುಪ. ೧೦–೬೮).

[ಉಗು$_1$ + ತರ್]

**ಉಗುನಿ, ಉಗುನೆ** (ನಾ). **೧.** ಒಂದು ಬಗೆಯ ಬಳ್ಳಿ : "ಮೋದಿನೀ – ಅಜಮೋದ, ಮದ್ಯ, ಉಗುನಿ, ಹಿಟ್ಟಳಿಕ" (ಒಷಧಿ. ೧೩೦) ; ಉಗುನಿಯ (Ipomea) ಹೂವಿನಲ್ಲಿ ದಳವಲಯವು ಗಂಟೆಯಂತಿದೆ (ಸಸ್ಯಶಾ. ೫೭). **೨.** ಒಂದು ಬಗೆಯ ಮರ ; ಪೀಲುವೃಕ್ಷ : ಉಗುನಿಯ [ಪಾಠಾಂ. ವೊಗುನಿಯ] ಮರನಿಂದೀಶಾನ್ಯದಿಗ್ಭಾಗದೊಳ್ ಪುತ್ತೊಗೆಯೆ ಪಡುವಲಯ್ಗೆಯ್ಯಂತರಂಬೋಗಿ ಕೆಯ್ಯೊಂಡಗುೞಿ ಪುರುಷಷಟ್ಕಾಕಾರದೊಳ್ ತೋಯಮಕ್ಕುಂ (ಲೋಕೋಪ. ೫–೩೨). **ಉಗುನೆ : ೧.** ಮಡುವಾಗಲ್ ನೀಲಿಪಾತಾಳ ಗರುಡ... ಉಗುನೆಯೊಳ್ಪತ್ರಮಿಾಪತ್ತುಮಂ ಕೂಡಿಡುಱಂ ಬೀರಾಂಬುವಿಂ ಲೇಪಿಸೆ ಬರ್ದುಕುಗುಮಾ ಕಾಲದಷ್ಟಂ (ಖಮದ. ೮–೩೭).

**ಉಗುನಿಯಹಂಬು** = ಉಗುನಿ ಬಳ್ಳಿಯ ಹಂಬು : ಕುದುರೆಯ ಬಾಲದ ಕೆಳಕ್ಕೆ ಸಿಕ್ಕಿಸುವ ಹಗ್ಗವು ಕಿತ್ತುಹೋಗಿದ್ದುದರಿಂದ ಅವರು ಅದಕ್ಕೆ ಪ್ರತಿಯಾಗಿ ಉಗುನಿಯ ಹಂಬನ್ನು ಹೊಸೆದು ಕಟ್ಟಿದರು (ನಗೆಗ. ೫೧).

[ದೇ. ‖ ತಮಿ. ಉಗಾ, ಉಪಾ, ಉವಾ, ಉಗಾಯ, ಉವಾಯ್, ಉಗೈ ; ಮಲ. ಉಗ ; ತೆಲು. ಉವ್ವ]

**ಉಗುನೆ** 'ಉಗುನಿ' ನೋ.

**ಉಗುಬೆಲ್ಲ** (ನಾ). ಪುಡಿಬೆಲ್ಲ ; ಅಡಿಗೆ ಬೆಲ್ಲ : ಬೆನವನವುಂಡೆ ದಿನವುಂಡೆ ತೂಗುವಾಗ ಉಗುಬೆಲ್ಲ ಶನಿವಾರದ ವುಂಡೆ ಬಿಂದಿಗೆ ಕಬ್ಬಿನ ಹಾಲು ಆಯದ ಬೆಲ್ಲಮುಂ ಮನೆ ವಂದಕೆ ಪ್ರತೇಕದಲು ಕೊಡಬೇಕು (ಎಕ. XI, ಹೊಳಲ್ಕೆ. ೭–೪೨ ; 1568). [ಉಗು$_2$ + ಬೆಲ್ಲ]

**ಉಗುರ್$_1$, ಉಗುರು** (ನಾ). ಬೆರಳುಗಳ ಮೇಲ್ಭಾಗದ ತುದಿಯಲ್ಲಿ ರಕ್ಷಣೆಗಾಗಿ ಇರುವ ಗಟ್ಟಿಯಾದ ಹೊದಿಕೆ ; ನಖ ; ಪಂಜ : "ಕಾಮಾಂಕುಶಾಃ, ಕರರುಹಾಃ (ಪುನರ್ನವಾಃ), ಪಾಣಿಜಾಃ, ನಖಾಃ, ನಖರಾಃ – ಈ ೫ (೬ ?) ಉಗುರ್" (ಹಲಾಯು. ೮೪–೩೫೭) ; ಇಱಿವೆಡೆಗೈಯ ಕೈಯುಗುರೆ ಸಾಲದೆ ನಚ್ಚಿನ ಕೈದುವೇಟ್ಪುದೇ (ಕಾವ್ಯಸಾ. ೪೧೧ ಶೂದ್ರಕ) ; ರಣರಂಗದೊಳುಳ್ಳರೆಲ್ಲರುಂ ಮಡಿದೊಡಮುಱ್ರುಗುಂದದುಗುರಂತೆರಡುಂ ಕಡೆ ತಪ್ಪ ಕೂರ್ಪನೋಗಡಿಸದೆ . . . ಬಂದನಿದೇಂ ಕಲಿಯೋ ಸುಯೋಧನಂ (ಪಂಪಭಾ. ೧೩–೮೩) ; ಉಗುರ್ಗಳ ಕಾಂತಿಯಿಂದಳಕವಲ್ಲಿಗೆ ನೀರ್ದಳಿವಂತೆ (ಪಂರಾಮಾ. ೫–೪೩) ; ಪೊಯ್ದುಟ್ಟಾಸುರದಿಂ ನಟ್ಟುಗುರ್ಗಳಿಂ ಮಸ್ತಕಮನೊಡೆದಿರ್ಬಗಿಮಾಡಿ (ನಂಬಿರ. ೧೮–೨೧) ; ನರಸಿಂಹನವತಾರ ಹಿರಿದಾದ ಅದ್ಭುತವು ಶರಭನುಗುರಿಂದ ಕೊಲುವಾಗ ಹರಿಯೂರನರಿಯಂದವಾದ (ಸರ್ವಜ್ಞ. ೨೧೪). **ಉಗುರು :** "ಪುನರ್ಭವಃ, ಕರರುಹಃ, ನಖಃ, ನಖರಃ – ಈ ೪ ಉಗುರು" (ನಾಚಿರಾ. ೧೨೧) ; ಅದಱೊಳಗೆರಡು ತಲೆ ಮಱದುವೊಂದು ತಲೆಯೆಚ್ಚತ್ತು ಹದ್ದಿನ ಕೊಕ್ಕ ತಪ್ಪಿ ಕಾಲುಗುರ ಹೆಜ್ಜೆಯ ಗಾಯ ತಪ್ಪಿ (ಅಱಿಮಾ. ೨೦–೫೮) ; ಕಂಬನಿಯನುಗುರಲಿ ಮಿಡಿದು ನೊಂದನು ಪಾರ್ಥ ಹೃದಯದಲಿ (ಕುವ್ಯಾಭೀ. ೭–೨೭) ; ಕಾಲುಗುರು ಕಯ್ಯುಗುರು ತಲೆನವಿರು ಹಾವಿನ ಹೆರೆ ಬಳ್ಳಿಯ ಸಾಸವೆ ಬೇವಿನೆಲೆ ಯಿವಂ ಸಮಂಗೊಂಡು ಕೂಸಿಂಗೆ ಧೂಪವಿಕ್ಕುವುದು (ಬಾಲಚಿ. ೧೨೫–೨೨) ; ಉಗುರಲ್ಲಿ ಹೋಗುವುದಕ್ಕೆ ಕೊಡಲಿಯೇ (ಗಾದೆ).

**ಉಗುರದಿಟ್ಟ** = ಉಗುರಿನ ಮೇಲಿನ ದೃಷ್ಟಿ ; ಕೆಳಗಿನ ನೋಟ ; ತಲೆಯನ್ನು ಬಗ್ಗಿಸಿ ನೋಡುವುದು : ಬಿಸಿಲು ಹಬ್ಬಿ ಗಾಳಿಯು ಹರಡಿ ಮುಗುಳುನಗೀ ಅರಳಿಸಲೊಲ್ಲಿ ಎವೆಯಿಕ್ಕದೆ ದಿಟ್ಟಿಸಿದರೂ ಉಗುರದಿಟ್ಟ ಇಟ್ಟ ನಡೆದಿ (ಮೂರ್ತಿಕಾ. ೩೭–೭).

[ದೇ. ‖ ತಮಿ. ಮಲ. ಉಗಿರ್ ; ತುಳು. ಉಗುರು ; ತೆಲು. ಗೋರು ; ಕೋಲಾ. ನಾಯ್ಕಿ. ಗೋರ್ ; ಪರ್ಜಿ. ಗೇರಿ ; ಕುಇ. ಗೋರ ; ಕುವಿ. ಗೋರೂ ; ಮಲ್ತೊ. ಒಗ್ರು ; ಬ್ರಾಹೂಈ. ಹೋರ್]

**ಉಗುರ್**$_2$ (ನಾ). ವೀಳೆಯದೆಲೆಯನ್ನು ಕೊಯ್ಯುವವನು; ಒಂದು ಕಸಬಿನವನು.

ಉಗುರಮೂನೂರ್ವರ್ = ವೀಳೆಯದೆಲೆಯನ್ನು ಕೊಯ್ಯುವವರ ಸಂಘ, —ಶ್ರೇಣಿ: ಈ ಧರ್ಮಮಂ . . . ಉಗುರಮೂನೂರ್ವ್ವರುಂ ತಂಬುಲಿಗ ಸಾ ಸಿ ರ್ವ ರು ಂ ಮೂಱುಂನಾಡ ಸುಂಕಿಗರುವಿನ್ನಿನಿಬರುಂ ದಾತಾರರಾಗಿ ಪ್ರತಿಪಾಳಿಸುವರ್ (ಎಇ. XVI, ೮೫–೩೭; 1067); ಉಗುರ ಮೂನೂರ್ವರು ಒಕ್ಕಲಲ್ಲಿ ಚೈತ್ರಕ್ಕೆ ಪಾಗ ೧ (ಇಆ. XI, ೨೭೪–೩೭; 1080); ಶ್ರೀಮದ್ಗಂಡರಾದಿತ್ಯನ ಹೊಳಲ ನೂಱುಪ್ಪದಿಂಬರ ಶ್ರೀಪಾದಾ ರಾಧಕರುಮಪ್ಪ ಉಗುರಮೂನೂರ್ವ್ವರ ಕೋಯ್ಲಾಳಿದೇವಂ (ಸೌಇಇ. IX–i, ೨೮೭–೨೪; 1190); ಉಗುರಮೂನೂರ್ವ್ವರ ನೆಗರ್ತೆ ಎಂತೆಂದೊಡೆ (ಸೌಇಇ. XI–ii, ೧೭೨–೪೨; 1121). [< ಉಗುರ್$_1$]

**ಉಗುರಂಟು** (ನಾ). ಉಗುರಿಗೆ ಬಳಿಯುವ ಲೇಪನ, —ಬಣ್ಣ; ಮದರಂಗಿ: ಬೆರಲುಗುರಿಗೆ ತುಟಿಗಳಿಗಿಡುತಿರುವಾ ಉಗುರಂಟಿ [ಟು] ಗಳಿಂದ (ದ್ರಾಕ್ಷಿದಾ. ೧–೧೭). [ಉಗುರು (< ಉಗುರ್$_1$) + ಅಂಟು$_2$]

**ಉಗುರಡ್ಡಿಗೆ** (ನಾ). ೧. ಉಗುರಿನ ಆಕಾರದಿಂದ ಕೂಡಿದ ರಚನೆಯುಳ್ಳ ಅಡ್ಡಿಗೆ ಅಥವಾ ಕಂಠಾಭರಣ (ಕ). ೨. ಹುಲಿಯುಗುರಿಗೆ ಚಿನ್ನದ ಚೌಕಟ್ಟನ್ನು ಸೇರಿಸಿ ಮಾಡಿದ ಆಭರಣ.
[ಉಗುರು (< ಉಗುರ್$_1$) + ಅಡ್ಡಿಗೆ]

**ಉಗುರಿಸು,** ಊಗುರಿಸು (ಕ್ರಿ). ಉಗುರಿನಿಂದ ಬಾಚು; ಕೆರೆ; ನೇವರಿಸು: ಅರಸನ ತಲೆಯಂ ತನ್ನ ತೊಡೆಯ ಮೇಲಿಟ್ಟುಗುರಿಸುತಿರ್ದಾಕೆ (ವಡ್ಡಾರಾ. ೧೧೭–೧೦); ಗುರುಗೆ ನಿದ್ರಾಭಿಘಾತಮಕ್ಕುಮೆಂದು ತಲೆಯನುಗುರಿಸುತ್ತುಮಿರೆಯಿರೆ (ಪ ಂ ಪ ಭಾ. ೧–೧೦೪ ವ); ಉಗುರಿಸಿ ಬೆಂಗೆ ಬಿಟ್ಟ ಪಿಣಿಲ್ (ಲೀಲಾವ. ೪–೮೫); ಬೆರಂಟುವು ಪೊಕ್ಕುಱುನುಗುರಿಸಿದುವು ತುಱುಂಬ (ಶಮದ. ೨೪೧ ಪ್ರಯೋ); ನಾರಿಯನು ಬರಸೆಳೆದು ನೃಪ . . . ಉಗುರಿಸಿದನಳಿದಳಕಪಂಕ್ತಿಗಳ (ತೊರರಾ. ೨–೨–೪); ತೊಳ ತೊಳಪೆಳಮಿಂಚಿನಮಱಿ ಕಾರ್ಮುಗಿಲೊಳಪೊಕ್ಕು ನಲಿದಾಡುವಂತೆ ಲಲನೆಯ ತಲೆಯುಗುರಿಪ ಕೋಮಲೆಯ ಕೈಯ ಪೊ ಳೆ ವು ಗು ರ್ವೆ ಳ ಗೊ ಪ್ಪಿ ದು ವು (ಶ್ರೀಪಾಲ. ೧೦–೩೨). **ಊಗುರಿಸು**: ಉಗುರ್ಗೊನೆಯಿಂದಲೂಗುರಿಸು ವೋಜೆ ತರಂತರದಿಂ ಶಿರೋಜಮಂ ನೆಗವುವ ಭಂಗಿ (ಜಗವಿ. ೧೦–೯೯).
[ಉಗುರು (< ಉಗುರ್$_1$) + –ಇಸು$_3$]

**ಉಗುರು** 'ಉಗುರ್$_1$' ನೋ.

**ಉಗುರುಕಣ್ಣು** (ನಾ). ಉಗುರಿಗೂ ಬೆರಳಿನ ತುದಿಗೂ ನಡುವೆ ಇರುವ ಮೃದುವಾದ ಭಾಗ: ಉಗುರುಕಣ್ಣಿಗೆ ಸೂಜಿ ಚುಚ್ಚಿದ ಹಾಗೆ (ರೂಢಿ). [ಉಗುರು (< ಉಗುರ್$_1$) + ಕಣ್ಣು (< ಕಣ್)]

**ಉಗುರುಗೊನೆ** 'ಉಗುರುಗೊನೆ' ನೋ.

**ಉಗುರುನಂಜು** (ನಾ). ಉ ಗು ರು ಸೋಕುವುದರಿಂದಾಗಲಿ, ಜಿಗುಟುವುದರಿಂದಾಗಲಿ ರಕ್ತದಲ್ಲಿ ಸೇರುವ ವಿಷ (ಕ).
[ಉಗುರು (< ಉಗುರ್$_1$) + ನಂಜು]

**ಉಗುರುಬಿಸಿ** 'ಉಗುರ್ಬಿಸಿ' ನೋ.

**ಉಗುರುಬೆಚ್ಚಗೆ** (ಅ).=ಉಗುರ್ಬೆಚ್ಚನೆ: ಉಗುರುಬೆಚ್ಚಗಿರುವ ನೀರಾದರೆ ಸಾಕು ಸ್ನಾನಕ್ಕೆ (ರೂಢಿ). [ಉಗುರು (< ಉಗುರ್$_1$) + ಬೆಚ್ಚಗೆ]

**ಉಗುರುವೆರಸು** (ಕ್ರಿ). ಉಗುರಿನ ಜೊತೆಗೆ ಸೇರು; ಉಗುರಿನ ಕೂಡ ಕೂಡು: ಉಗಿದ ಬಾಣವ್ಯಥೆಯ ಕರ್ಣಧ್ಯಾನಚೇತನದ ಸೊಗಸು ಮಿಗೆ ದ್ರೌಪದಿಯ ತುದಿಬೆರಳುಗುರುವೆರಸಿದ ಸಿರಿಮುಡಿಯ ಬಲುದುಗುಡ ಭರದಲಿ ಕುಸಿದ ಭೂಪನ ಕಂಡನಾ ಪಾರ್ಥ (ಕುವ್ಯಾಕ. ೧೬–೬).
[ಉಗುರು (< ಉಗುರ್$_1$) + ಬೆರಸು$_1$]

**ಉಗುರುಸುತ್ತು** (ನಾ). ಉಗುರಿನ ಸುತ್ತಲೂ ಊದಿಕೊಂಡು ನೋವುಂಟುಮಾಡುವ ಒಂದು ಬಾವು,—ಬೇನೆ: ಉಗುರುಸುತ್ತುಯೆದ್ದಾವನ ವನಿಕೆಯೊಳಗೆ ಹೊಡೆದಾ ತೆರದಿ (ಯನಳ. ೧೦೧); ಉಗುರು ಸುತ್ತಿನ ಮೇಲೆ ಒನಕೆ ಪೆಟ್ಟು (ಗಾದೆ).
[ಉಗುರು (< ಉಗುರ್$_1$) + ಸುತ್ತು$_2$]

**ಉಗುರುಸುತ್ತುಬಳ್ಳಿ** (ನಾ). ಒಂದು ಬಳ್ಳಿಯ ಹೆಸರು: ಜುಟ್ಟುವೆ ಬಳ್ಳಿ, ತಳವಾರನ ಬಳ್ಳಿ, ಉಗುರುಸುತ್ತುಬಳ್ಳಿ, ಹಾಲುಕೊರಟಿಗೆ, ಕುಂಟಗ (ಮೈಔಗಿ. ೬೦–೧೨೧೫). [ಉಗುರುಸುತ್ತು + ಬಳ್ಳಿ]

**ಉಗುರುಳಿ** (ನಾ). ೧. ವೀಳೆದೆಲೆಯನ್ನು ಬಿಡಿಸಲು ಹೆ ಬ್ಬೆ ರ ಳಿ ಗೆ ಹಾಕುವ ಉಗುರಿನ ಆಕಾರದ ಅಲಗುಳ್ಳ ಸಾಧನ. ೨. (ಕುಸುರಿ ಕೆಲಸಗಳಲ್ಲೂ ಶಸ್ತ್ರಚಿಕಿತ್ಸೆಗಳಲ್ಲೂ ಉಪಯೋಗಿಸುವ) ಒಳಗಡೆಗೆ ಬಾಗಿರುವ ಅಲುಗುಳ್ಳ ಉಳಿ: ತಿಕ್ಕಿದರದಲಗೆಲ್ಲಿ? ಕೆತ್ತಿದುಗುರುಳಿಯೊಪ್ಪನಿತ್ತ ಮಣಲೆಲ್ಲಿ? (ಗಿಳಿವಿಂ. ೩೦–೭೬).
[ಉಗುರು (< ಉಗುರ್$_1$) + ಉಳಿ$_2$]

**ಉಗುರೆಣ್ಣೆ** (ನಾ). ಉಗುರಿನಿಂದ ಎಣ್ಣೆಶಾಸ್ತ್ರ ಮಾಡುವುದು: ಇನ್ನೂ ಮಲಗನ್ನೆ ಮದುವಣ್ಣ ಎದೆಮೇಲೆ ಸನ್ನೇನಾಡಾವೇ ಉಗುರೆಣ್ಣೆ ಉಗುರೆಣ್ಣೆ ಹೋಗಿ ಗಗನಕೆ ಶೇರ್‍ಯಾವು (ಹುಟ್ಟಿಹ. ೧೪೮); ಉಗುರೆಣ್ಣೆ ಗಗನಕೆ ಸೇರಿವೆ ಮಗನ ಮಂಡೇಲಿ ಒರಗಿವೆ (ಹಳ್ಳಿಬಾ. ೫೫–೩).
[ಉಗುರು (< ಉಗುರ್$_1$) + ಎಣ್ಣೆ]

**ಉಗುರೆವಾಡಿ** (ನಾ). ಒಂದು ನಾಡಿನ ಹೆಸರು: ಒಱೆಕೋಡಿನ ಕೊಮರಮಂಗಲದ ಉಗುರೆವಾಡಿಯ ತ್ರಿಸನ್ಧಿ (ಇಆ. VIII, ೨೧೩–೫೪; 10ನೆಯ ಶತ). [ಉಗುರ್$_0$ + ಪಾಡಿ]

**ಉಗುರೊತ್ತು** (ನಾ). ೧. ಉಗುರಿನ ಒ ತ್ತು ವಿ ಕೆ; ಉಗುರಿನ ಚುಚ್ಚುವಿಕೆಯಿಂದ ಉಂಟಾದ ಗಾಯ; ನಖಕ್ಷತ: ಮೊನೆವಲ್ಲ ಕರ್ದುಕನುಗುರೊತ್ತುಗಳನು ಮಾಣ್ಮಾಣೆನಲ್ ಕೈಗೋಳಿಸಿ ಲಲ್ಲೆಗೈದು (ಜೈಮಿಭಾ. ೧೧–೨೨); ಮುಗ್ಧೆ ತಾನರಿಯಳು ನಲ್ಲ ತನ್ನೆದೆಯೊಳು ಮೂಡಿಸಿದುಗುರೊತ್ತುಗಳನು (ಗಾಥಾಸ. ೫–೩೩). ೨. ಗೋಧಿ ಅಥವಾ ಅಕ್ಕಿ ಹಿಟ್ಟನ್ನು ಕಲಸಿ ಉಗುರೊತ್ತಿ ಮಾಡಿದ ಗವುಲಿ; ಅಂತಹ ಗವುಲಿಯಲ್ಲಿ ಮಾಡಿದ ಪಾಯಸ (ಉಕ).

ಉಗುರೊತ್ತಿನಹುಗ್ಗಿ = ಉಗುರೊತ್ತಿನಿಂದ ಮಾಡಿದ ಹುಗ್ಗಿ (ಕ).
[ಉಗುರು (< ಉಗುರ್$_1$) + ಒತ್ತು$_2$]

**ಉಗುರ್ಗಲೆ** (ನಾ). ಉಗುರಿನಿಂದ ಆದ ಗುರುತು, —ಕಲೆ: ಮು ದ್ರೆ ಯ ನಿ ಡು ವ ಂ ದ ದಿ ಹರಿಸದಿನುಗುರ್ಗಲೆಯಿಟ್ಟನರಸನಂಗನೆಗಾಸುರತದೊಳು (ಜಯಕಾ. ೮–೪೯); ಹಲಬರು ವಿಟರೊಡನಾಡಿ ಮುತ್ತವರು ಗುರ್ಗಲೆ ದಂತಹತಿಗಳ ತಾಳ್ದ ಬೆಲೆವೆಣ್ಣಿನಂಗದಂತೆಸೆವುದೀ ಗಿರಿಯೆಂದು ಸಲೆ ವಿದೂಷಕ ನಗಿಸಿದನು (ಭರಜ. ೩೬–೮೩).
[ಉಗುರು (< ಉಗುರ್$_1$) + ಕಲೆ$_2$]

**ಉಗುರ್ಗೊನೆ,** ಉಗುರುಗೊನೆ (ನಾ). ಉ ಗು ರಿ ನ ಕೊನೆ; ನಖಾಗ್ರ: ಉ ಗು ರ್ಗೊ ನೆ ಯಿ ಂ ವಿಕೀರ್ಣಕಚಮಂ ಮಿಗೆ ತಿರ್ದಿ (ಉದ್ಭಟ. ೧೦–೧೧೬); ಎಳದುಪ್ಪಟಮಂ ಸೋದಿಸಲೆನುತೊರ್ವಳ್ ಕಿಱು ವೆರಲುಗುರ್ಗೊನೆಯಿಂ ಕರ್ದುಕುತಿರೆ (ಜಯಕಾ. ೧–೬೧); ಆ ಕಮಲ ಭವನಿರುತಿರುತ್ತಹಂಕರಿಸೆ ರುದ್ರಂ ನಗುತ್ತವನ ತಲೆಯಂ ಚಿವುಂಟಿದನು ಗುರ್ಗೊನೆಯೊಳ್ (ಚಿಬಪು. ೪೭–೨೫). **ಉಗುರುಗೊನೆ**: ಮೃಗರಾಜ ಪೀಠದೊಳಿರಿಸಿಯಂಗನೆಯನು ಉಗುರುಗೊನೆಯೊಳಳಕವನು ಸುಗುಣಿಯರಾರಿಸಿಯುಗುರುಧೂಪವನಿಕ್ಕಿ ವಿಗಡೆಯರಂದು ಕಟ್ಟಿದರು (ಅಂಜಚ. ೮–೫೫). [ಉಗುರು (< ಉಗುರ್$_1$) + ಕೊನೆ$_2$]

**ಉಗುರ್ಚು** (ಕ್ರಿ). = ಉಗುರಿಸು : ತರತರದ ಪುಷ್ಪಲತಿಕೋತ್ಕರವಂ ನೋಡುತ್ತವಂತಿಸೌಂದರಿ ವೇಣೀಭರವನುಗುರ್ಚಲ್ ಬಿಂಬಾಧರೆಯರ್ ಪುಷ್ಪಾಪಚಯುವನೆಸಗಿದರಾಗಳ್ (ದಶಕು. ೬–೬೬). [ಉಗುರ್$_1$ + –ಚು]

**ಉಗುರ್ವಲ್ಲಿ** (ನಾ). ಒಂದು ಗಿಡದ ಹೆಸರು : ಮಿಗಿಲೆನಿಸುವ ಪೊಸ ಸುಣ್ಣದೊಳುಗುರ್ವಲ್ಲಿಯ ಬೇರನಿಕ್ಕಿ ಗರ್ದುಗಿನ ಕೊನೆಯಂ ತೆಗಪಿ ಪುಳಿಯಡುಗೆ ಮೇಣ್ ಸಂಡಗೆಯಿಡುಗಾ ತೆಱದಿನವಱ ಬೀಜಂಗಳುಮಂ (ಲೋಕೋಪ. ೮–೨೪) ; ತೆಗಪಿ ಪೊಸಸುಣ್ಣದೊಳ್ ಮುನ್ನುಗುರ್ವಲ್ಲಿ [ಪಾಠಾಂ. ವೇಲಿ]ಯನೆಳೆಯ ಪುಣಿಸೆಯೆಲೆಗಳನಾವುಂಡಗೆಯಂ ಮುತ್ತದ ಹೂವಂ ಬಗೆದಂದಾ ಬಾಡನಡುಗೆ ಬಱಿಕಂತವಱೊಳ್ (ಲೋಕೋಪ. ೮–೨೧) ; "ಬೆಳ್ಳಡಕಿಲ" (ಲೋಕೋಪ. ಟೀಕ). [ಉಗುರ್$_1$ + ವಲ್ಲಿ]

**ಉಗುರ್ವಿಸಿ**, ಉಗುರುಬಿಸಿ (ನಾ). ಉಗುರು ತಡೆದುಕೊಳ್ಳುವಷ್ಟು ಬೆಚ್ಚಗಿರುವುದು ; ಕವೋಷ್ಣ ; ಸುಖೋಷ್ಣ : ಉಗುರ್ವಿಸಿಯುಪ್ಪು ಪೊರ್ಮೆ ಪುಗೆವಾರಿರುಹಾಕರವಾರಿ ಸುಯ್ಯು ಬೆಂಕೆಗಳೊಳೆ ಪೊಕ್ಕ ನಂದನವನಂ ಕೊಱಗಿರ್ಪವು . . . ಮದೀಯ ವಿಯೋಗದೊಳೆನ್ನ ನಲ್ಲಳಾ (ಶಾಂತಿಪು. ೮–೯೫). **ಉಗುರುಬಿಸಿ** : ನೀರು ಉಗುರುಬಿಸಿಯಾಗಿದ್ದರೆ ಸಾಕು ಸ್ನಾನಕ್ಕೆ (ರೂಢಿ). [ಉಗುರ್$_1$ + ಬಿಸಿ]

**ಉಗುರ್ವೆಚ್ಚನೆ** (ಅ). ಉಗುರು ತಡೆದುಕೊಳ್ಳುವಷ್ಟು ಬೆಚ್ಚಗೆ : ಇನಿಸುಗುರ್ವೆಚ್ಚನಪ್ಪುಣಿಸು ಕುಂಕುಮದಣ್ಕೆ ಕದಂಬದಂಬುಲಂ . . . ಅಂಚೆವಾಸುಗಳೊಳೋಪಳ ಪೆರ್ಮೊಲೆವೆಂಕೆಯಿಂದದೇಂ ತನತನಗಿಕ್ಕಿ ಮೆಟ್ಟಿದುದೊ ಭೋಗಿಜನಂ ಶಿಶಿರಾತಿರೇಕಮಂ (ಜಗವಿ. ೧೪–೧೯). [ಉಗುರ್$_1$ + ಬೆಚ್ಚನೆ]

**ಉಗುರ್ವೆಳಗು** (ನಾ). ಉಗುರಿನ ಹೊಳಪು, —ಕಾಂತಿ; ನಖಕಾಂತಿ : ಕೈಯಾರೆ ಭಿಕ್ಷವ ನೀಡಿ ಮುಖವನೀಕ್ಷಿಸದೆ ಕಣ್ಣೋರೆಯಿಂ ಪ್ರತಿಕೃತಿಯನುಗುರ್ವೆಳಗಿನೊಳ್ ಕಂಡು ಮೋಹಿಸಿದರಾಕ್ಷಣದೊಳು (ಚೆಬಪು. ೨೦–೧೭). [ಉಗುರ್$_1$ + ಬೆಳಗು$_2$]

**ಉಗುರ್ವೆಳ್ಪು** (ನಾ). ಉಗುರಿನ ಬಿಳಿಯ ಹೊಳಪು; ನಖದ ಬಿಳುಪು : ವಸುಧೆಯಂ ಪಾದಾಬ್ಜರಾಗಮುಗುರ್ವೆಳ್ಪುಗಳ್ ಪಸದನಂಗೆಯ್ಯೆ ನೂಪುರ ಕಂಕಣಸ್ವನಂ ದೆಸೆಗಳೊಳ್ ಪೊಣ್ಮೆ (ಚೆಬಪು. ೫–೧೨). [ಉಗುರ್$_1$ + ಬೆಳ್ಪು]

**ಉಗುರ್ವೊಯ್ಲು** (ನಾ). ಉಗುರಿನಿಂದಾದ ಪೆಟ್ಟು, —ಹೊಡೆತ, —ಗಾಯ ; ನಖಕ್ಷತ : ಉಗುರ್ವೊಯ್ಲಾತನ ಮೆಯ್ಯೊಳೇ ಪುಲಿಯ ಪೊಯ್ಲಿಂದಾದುದೆಂದೋಪವಳ್ ಬಗೆವಂತೆ (ಜಗವಿ. ೧೬–೨೦) ; ತಾಂಬೂಲಮಂ ನೆಱೆ ಮೆಲ್ದಿವುಗುರ್ವೊಯ್ಲನೂದುವ ಸೆಱಂಗಿಂ ಬೀಸುತ್ತಿ ರ್ಪೋಪರಟ್ಟುಜಲಂಪಂಗನೆಯರ್ಗೆ ರಾಗಮುನದೇಂ ಮಾಡಿತ್ತೊ ರತ್ಯಂತದೊಳ್ (ವರ್ಧಪು. ೬–೫೨). [ಉಗುರ್$_1$ + ಪೊಯ್ಲು]

**ಉಗುಳಿಕೆ** (ನಾ). ಉಗುಳುವಿಕೆ ; ಉಗಿಯುವಿಕೆ : ಶುದ್ಧವಾದ ಅಕ್ಕಿಯೊಡನೆ ವರ್ಣಪ್ರಮಾಣಗಳಿಂದೊಂದಿ ಕಲ್ಲುಹರಳುಗಳೂ ಸೇರಿಬಿಡುವುದುಂಟು . . . ಊಟದಲ್ಲಿ ಮಾತ್ರ ಕಟಕ್ಕೆಂದು ಉಗುಳಿಕೆಯ ಮನ್ನಣೆ ಗೊಳ್ಳುವವುಗಳೂ ಇದ್ದಾವೆ (ವೀರಬಂ. ೩೦). [ಉಗುಳು$_1$ (< ಉಗುೞ್$_1$) + –ಇಕೆ]

**ಉಗುಳಿಚು** 'ಉಗುಳ್ಚು' ನೋ.

**ಉಗುಳಿಸು** 'ಉಗುೞಿಸು' ನೋ.

**ಉಗುಳು**$_1$ 'ಉಗುೞ್$_1$' ನೋ.

**ಉಗುಳು**$_2$ 'ಉಗುೞ್$_2$' ನೋ.

**ಉಗುಳುಧೂಪ** (ನಾ). ಧೂಪದ ಮರ : (ವೈಶಿಗಿ. ೭೭–೧೫೭೬). [ಉಗುಳು$_1$ (< ಉಗುೞ್$_1$) + ಧೂಪ]

**ಉಗುಳುನೀರು** 'ಉಗುಳ್ನೀರು' ನೋ.

**ಉಗುಳುನುಂಗು** (ಕ್ರಿ). ೧. ಉಗುಳನ್ನು ನುಂಗು : ಕಣ್ಣು ಪಿಳಕಿಸಬಾರದು, ಉಗುಳು ನುಂಗಬಾರದು (ಕುರಿಹಿಂ. ೨೭). ೨. (ಆಲಂ). ಹಿಂದೆ ಮುಂದೆ ನೋಡು; ಅನುಮಾನಿಸು; ಅಧೈರ್ಯಪಡು : ಎಲ್ಲ ಸಾವುಕಾರರನ್ನೂ ಅವರವರ ಮನೆಗೆ ಕಳುಹಿಯಾದ ಮೇಲೆ, ಕೈಗಡಕೊಟ್ಟವರು ತಮ್ಮದೇನೆಂದು ಉಗುಳುನುಂಗುತ್ತ ಕೇಳಿಕೊಂಡರು (ಬೆಟ್ಟಹೊ. ೬೧). [ಉಗುಳು$_2$ (< ಉಗುೞ್$_2$) + ನುಂಗು]

**ಉಗುಳುಬಡುಕ** (ನಾ). ಉಗುಳುವ ಸ್ವಭಾವದವನು; ತುಚ್ಛೀಕಾರವಮಾಡಿ ಮಾತನಾಡುವವನು ; ಬೆದರಿಸಿ ಮಾತಾಡುವವನು : ಕಳ್ಳರನ್ನೂ ಹುಳ್ಳಹುಳ್ಳಗೆ ಮಾಡುವ ಸದೈವ–ಸಾವಧಾನಿಗಳಾದ ಉಗುಳುಬಡುಕರ ಬಗ್ಗೆಯೂ ಬರೆಯಲು ಇದು ಸ್ಥಳವಲ್ಲ (ನಿರಾಭ. ೧೫೬). [ಉಗುಳು$_2$ (< ಉಗುೞ್$_2$) + ಬಡುಕ (< ಬಡಿಕ)]

**ಉಗುಳ್ಗಪ್ಪೆ** 'ಉಗುೞ್ಗಪ್ಪೆ' ನೋ.

**ಉಗುಳ್ಚು**, ಉಗುಚು, ಉಗುಳಿಚು (ಕ್ರಿ). ೧. ಉಗುಳುವಂತೆ ಮಾಡು; ಕಕ್ಕಿಸು; ಕಾರಿಸು : ಅತಿಕ್ರಮಿತಕೋಪದಿಂ ಚಾಪದಿಂದಾಕಾಶ ಚಕ್ರಮೆಲ್ಲಂ ಪೂರ್ಣಮಪ್ಪಂತೆ ಚಿತ್ರದಿಂದಂಬಿನಂಭೋನಿಧಿಯನು ವಿಕ್ರಮದೊಳಾ ಖಳನುಗುಳ್ಚಲ್ (ಚೆಬಪು. ೪೩–೭) ; ಬಿಡುಗಣ್ಣರರಸನೆಚ್ಚಂಬುಗಳನಾ ದೈತ್ಯನೆಡೆಯೊಳೇ ಸಂಹರಿಸಿ ಪುನರಪಿ ಶರಂಗಳಂ ತೊಡಿಸಿ ತಿರುವಿಂದುಗುಳ್ಚಲ್ (ಚೆಬಪು. ೪೩–೮). **ಉಗುಚು** : ೨. ನೆಗೆ ; ಚಿಮ್ಮು ; ಹೊರಬರು : ಮಾರುತಿ ತಂದ ಮದ್ದನು ಪರಮಮಂತ್ರವ ಜಪಿಸಿ ಬೇಗದಿ ವರಸುಷೇಣನು ತೆಗೆದು ಲಕ್ಷ್ಮಣನೆಱೆಸೊಳಗೆಱೆಯೆ ಉರುವ ಶೂಲವು ಉಗುಚಿ ಬಿದ್ದುದು (ಕೌಶಿರಾ. ೩೭–೪೯) ; ಮತ್ತೊಂದು ಬಾಣವಂ ತೆಗದೆಸಲ್ ಫಲುಗುಣನ ಹಸ್ತದಿಂದುಗುಚಿ ಘೋರ್ಗರವುತಾರ್ಭಟಿಸಿ ಭಗದತ್ತನ ಶಿರಸ್ಸ ಕಡಿದುರುಳಿಸಿತು (ತುರಂಗ. ೪೯–೬೨). ೩. ಹೊರಕ್ಕೆ ಎಳೆದು ತೆಗೆ : ಹೆಣಮಯಂ ರಣಮಯಮಮ್ಮಾಗಲ್ಕೆ ನಿಂಮ ದಿನಮಣಿ ಸುತಮ್ಮೆಚ್ಚುರ್ತು ನೋಡಿದಂ ಸರ್ವಾಂಗ ಕಣೆಮಯಮಮ್ಮಾಗಿರಲ್ಮುರಿಯ ದಂತುಗ [ಗು] ಚಿ ಕೋಪಾಟೋಪಮಂ ತಾಳ್ದನು (ತುರಂಗ. ೬೯–೩೩). ೪. ಸೆಳೆ ; ಬಿಚ್ಚು ; ಕಳಚು : ಗಾರುಗೊಳುತಯ್ಯೊಯ್ಯೋಯಿದಕೇಮಾರಿ ಬಡಿಯಿತ್ತ ಕಟ ನೋಡೆಂದ್ಸೀರೆಗಳನುಗುಚುವರ ನೋಡೆಲ್ಲೆಲ್ಲಿ ನಗುತಿರಲೂ (ಜಿರಾಮಾ. ೨೧೦–೩೦) ; ಬ್ರಹ್ಮಕಟ್ಟಿದ ಕಂಕಣ ಉಗುಚೋದು ನಮ್ಮಿಂದ ಆದೀತೇ (ಬೆಳುಮು. ೨೦೦). **ಉಗುಳಿಚು** : ೩. ಶ್ರೀಕಾಂತ ಸಲಹೆನೆ ಮುನಿಕುಮಾರಕನ ಉಗುಳಿಚಿದೆಲಾ ಮೃತ್ಯುವಿನ ತಾಳಿಗೆಯೊಳಂದು (ಕುವ್ಯಾಅ. ೨–೨೯). [ಉಗುಳ್$_1$ (< ಉಗುೞ್$_1$) + –ಚು]

**ಉಗುಳ್ನೀರು**, ಉಗುಳುನೀರು (ನಾ). ೧. ಬಾಯಿ ತುಂಬುವಷ್ಟು ನೀರು ; ಗುಟುಕು ನೀರು : ಹರಿಗೆದೆಯುದ್ದ ಬೊಮ್ಮನಿಗುಗುಳ್ನೀರು ಶಂಕರನ ಮುಳುಗಿಸಿಕೊಂಡಿಹುದು ಗರುವೆ ನಿನ್ನೀ ಲಾವಣ್ಯನದಿಯನಿದನಿರದೆ ದಾಂಟುವ ವೀರನಿವನೆ (ಕುರಾಸಾಂ. ೨೪–೬೮). ೨. ಬಾಯಿಗೆ ಹೊಕ್ಕು ಉಗುಳಬೇಕಾಗುವಂತಹ ನೀರು, —ಅದರ ಮಟ್ಟ : ಆಲದೆಲೆಯೊಳ್ ಮಲಗಿಯೊಮ್ಮೆ ಮುಳುಗುತ್ತೊಡನೆ ತೇಲುತೊರ್ವನೆಯುಗುಳ್ನೀರನುಗುಳುತ್ತೆ ಕಣ್ಣಾಲಿಗಳ್ ಮರಳಲ್ (ಚೆಬಪು. ೪೬–೩೧). ೩. (ಕರಾ). ಜೊಲ್ಲು. **ಉಗುಳುನೀರು** : ೧. ಮುಂದಿನ ಪ್ರಯೋಗವನ್ನು ನೋಡಿ.

ಉಗುಳುನೀರೆನಿಸು = ಅಸಾಧ್ಯವಾಗು : ಹೊಗಳಲಱಿಯೆನು ದೇವರಾಯರಿಗುಗುಳುನೀರೆನಿಸಿರ್ದ ನಿಜ ಬಾಹುಗಳನಾಶ್ರೈಸಿದರಲೈ ಸುರಲೋಕ ಪಾಲಕರು (ನಿಭಾಗ. ೧–೧೦–೪೪). [ಉಗುಳು$_1$ (< ಉಗುೞ್$_1$) + ನೀರು (< ನೀರ್)]

**ಉಗುೞ್**$_1$, ಉಗಳು, ಉಗುಳ್ು$_1$ (ಕ್ರಿ) ೧. ಉಗಿ; ಬಾಯಿಂದ ಹೊರಕ್ಕೆ ಚೆಲ್ಲು; ಮುಕ್ಕುಳಿಸು: ಅಗಸ್ತ್ಯಂಕುಡಿಯುತುಗುೞ್ದನಿಂಕಟ್ಟು ಪಟ್ಟೞ್ದಿದಿನ್ತಪ್ಪದು ಪೆಂಪಸ್ತಾಳ್ದಿತೆನ್ದನ್ದಱಿಯರೆ ಲವಣಾಂಭೋಧಿಯಂ ಪೋಲಿಸಲ್ವೇಡಿದುವೆತ್ತಾನೆತ್ತಲೆಂಬನ್ತಿಬಹಳ ಜಳನ್ದೀವಳಬ್ಬಾ ಸಮುದ್ರಂ (ಎಕ.X, ಮುಳಬಾ. ೩೮–೧೪; 890); ಸುಕುಮಾರಸ್ವಾಮಿ ಅರ್ಧಾಹಾರಮಂ ನುಂಗುಗುಮರ್ಧಾಹಾರಮನುಗುೞ್ಗುಮದಂ ನೋಡಿ ಇದುವುಮೊಂದು ಕುತ್ತಂ ಆಹಾರದ ಮೇಗರುಚಿಯೆಂದು ಬಗೆದು (ವಡ್ಡಾರಾ. ೨೬–೨೫); ವಿಷಧರ ನೀಂ ವಿಷಧರನಾಗದೆ ಬೇಗಂ ವಿಷಯಾಮಿಷವಿಷಮನುಗುೞ್ದು ನಿರ್ವಿಷನಾಗಾ (ಆದಿಪು. ೨–೧೭); ಕರಚರಣವದನ ಪ್ರಕ್ಷಾಳನಂಗೆಯ್ದು ಮುಕ್ಕುಳಿಸಿಯುಗುೞ್ದಾಚಮನಕ್ರಿಯೆಗಳಂ ಮಾಡಿ (ಗದಾಯು. ೬–೧೩ ವ). ೨. (ಆಲಂ) ಹೊರಸೂಸು; ಚೆಲ್ಲು; ಚಿಮ್ಮಿಸು: ಕಣ್ಣನೀರೊಡನುಣ್ಮೆ ಕುಂಕುಮದೊಳರ್ದಿದ ಬಾಳೆಗಳನ್ನವಾಗಿ ಕೆಂಪಡರ್ದಲರ್ಗಣ್ಗಳಿಂದುಗುೞ್ದು ನೋಡಿದುದಂ ನೆನೆವೇಂ ಮೃಗಾಕ್ಷಿಯಾ (ಆದಿಪು. ೧೨–೫೫). **ಉಗಳು**$_1$: ೧. ಮಂಥನವ ಬೆಣ್ಣೆ ನುಂಗಿತ್ತು ಬೆಣ್ಣೆಯ ಮಡಕೆಯ ನೊಣ ನುಂಗಿತ್ತು ನುಂಗಿದ ನೊಣವ ಹಿಂದೆ ಹಿಡಿಯಲಾಗಿ ಉಗಳದು ಬೆಣ್ಣೆಯ ಕೊಡದು ಮಡಕೆಯ (ಮೋಳಿಮಾ. ೨೧೬–೭೮೦). **ಉಗುಳು**$_1$: ೧. ಎತ್ತ ಬಿಟ್ಟಿತ್ತು ಸತ್ತನೊಳಕೊಂಡಿತ್ತು ಮುತ್ತನುಗುಳಿ ಹೋಯಿತ್ತು (ಆದವ. ೧೦೧); ಸರ್ಪವು . . . ಒಂಬತ್ತು ಹೆಡೆಗಳನ್ನೆತ್ತಿ ಫೂತ್ಕಾರ ಮಾಡಿತು. ಆ ಹೆಡೆಗಳು ವಿಷವನ್ನುಗುಳುತಿದ್ದುವು (ಮಣಿಸ. ೯೦). ೨. ನೋಡುತುಂ ಬೆಱಗಾಗುತಲ್ಲಿ ಬಸವಣ್ಣಸಿರೆ ಕೂಡೆ ಲೆಕ್ಕದ ಸಂಭ್ರಮಂ ಸಿರಿಯನುಗುಳುತಿರೆ (ಬಸರ. ೫–೬೮).

[ದೇ. ‖ ತಮಿ. ಉಮಿ, ಉಮಿೞ್; ಮಲ. ಉಮಿ, ಉಮಿಕ್ಕ, ಉಮಿೞಿಕ; ತುಳು. ಉಬ್ಬಿ; ತೆಲು. ಉಮಿಯು]

**ಉಗುೞ್**$_2$, ಉಗುಳ್ು$_2$ (ನಾ). ೧. ಜೊಲ್ಲು; ಲಾಲಾರಸ; ಎಂಜಲು ನೀರು: ಭಟಾರರವರೊಡನೆ ನುಡಿವಾಗಳುಗುೞ ಸೀಕರಂಗಳ್ ತಮ್ಮ ಮುಂಗೆಯ್ಯ ಮೇಗೆ ಬಿೞ್ದೊಡೆ (ವಡ್ಡಾರಾ. ೬೯–೨೫); ಉಗುೞುಂ ಪೇಲುಂ ಸಿಂಬುಳುಮುಗಲಿರ್ದವನೆಯ್ದೆ ನೋಡಿ ಪೇಸುವರ್ (ಧರ್ಮಾಮೃ. ೭–೧೪೪); ಉಗುೞುಂ ಶ್ವಾಸಂ ಕಾಸನ್ನೆಗೞ್ಗಂ ಶ್ಲೇಷ್ಮಜ್ವರಕ್ಕೆ (ಕಲ್ಯಾಕಾ. ೩–೧೦); ವಿಶೇಷಮಾಯುಷ್ಯಮನಾರೊದವಿಪರೆಂದುಗುೞಂ ಮಾಣದೆ ಪೀರುತಿಪ್ಪರಾಸೆಯಿಂದಂ ಮೂಢರ್ (ಸಮುಪ. ೧೨–೨೧). **ಉಗುಳು**$_2$: ಲಿಂಗವಿಲ್ಲದೆ ಉಗುಳ ನುಂಗಿದಡೆ ಅಂದಂದಿಗೆ ಕಿಲ್ಬಿಷ (ಚೆನ್ನವ. ಕ. ೨೩೬–೫೧೨); ವೇದವನೋದುವಲ್ಲಿ ಚಿಮ್ಮಿದವುಗುಳು ಬ್ರಹ್ಮಬಿಂದು ಎನಿಸುಗು (ನಾಚಿರಾ. ೧೨೮); ಉಗುಳಿ ಉಗುಳಿ ರೋಗ, ಬೊಗುಳಿ ಬೊಗುಳಿ ರಾಗ (ಗಾದೆ); ಭಟ್ಟರಿಗೆ ಮಂತ್ರ ಸ್ವಲ್ಪ ಉಗುಳು ಬಹಳ (ಗಾದೆ).

ಉಗುಳದಾಂಟು = ಮಾತನ್ನು ಮೀರು; ಅವಿಧೇಯನಾಗು; ಹದ್ದುಮೀರು: ಜಗಳವಾಡುವರಲ್ಲಿ ಕೆಲರು ಮಾತೆಯರಿಕ್ಕಿದುಗುಳ ದಾಂಟದರಂದು ಕೆಲರು (ಮೋಹತ. ೧೮–೮೦). **ಉಗುಳುಹಾಕಿದಾಟು** = ಕಡೆಗಣಿಸು; ಮೀರು: ಇಂತಹ ಹುಡುಗೆ ಸಿಕ್ಕುವುದು ಕಠಿನ. ನನ್ನ ಮಾತನ್ನು ಉಗುಳುಹಾಕಿ ದಾಟುವುದಿಲ್ಲ (ಜಮಿನ್ದಾ. ೧೪೭).

[ದೇ. ‖ ತಮಿ. ಉಮಿವು; ಉಮಿೞ್ವು; ಮಲ. ಉಮಿ, ಉಮಿೞು; ತುಳು. ಉಬ್ಬಿ; ತೆಲು. ಉಮ್ಮಿ]

**ಉಗುೞಿಸು**, ಉಗುಳಿಸು (ಕ್ರಿ). ೧. ಉಗುಳುವಂತೆ ಮಾಡು; ಕಕ್ಕಿಸು; ಕಾರಿಸು: ಎನ್ನೊಡಮೆಯನುಗುೞಿಸದೆ ಮಾಣೆಂ (ಧರ್ಮಾಮೃ. ೧೨–೨೧೯); ಉಗುೞಿಪ ಮಾಗಂ ಮುಚ್ಚಿಪ ಮೊಗಮಂ ಮೂದಿರಿಕನಾಗಿ ಪುದ್ಗಾರಮನಾವಗಮೊಗೆಯಿಪ ಬೇಡರ ಪಳ್ಳಿಗಳಂ (ಲೀಲಾವ. ೬–೪೨). **ಉಗುಳಿಸು**: ೨. (ಆಲಂ) ಚಿಮ್ಮಿಸು; ಸೂಸು: ಬಿಗಿದ ಹೊದೆಗಳ ಹಱಿದು ಬಿಲ್ಲಿಂದುಗುಳಿಸಿದನಂಬುಗಳನಳವಿಗೆ ತೆಗೆದು ಪಾಂಡವ ಬಲವ ಬೆಂಬತ್ತಿದನು (ಕುಮ್ಯಾಭೀ. ೯–೭); ಜಲಬಿಂದುಗಳ ಬಿಡದುಗುಳಿಸಿದನಕ್ಷಿಯಲಿ (ತೊರರಾ. ೩–೧–೩೮). ೩. ಬಯ್ಯಿಸು; ಛೀಯೆನ್ನಿಸು: ಮತ್ಪಾಲನೆಂದು ನಿರ್ಮಿಸಿ ನಿನ್ನಂ ಬಿದಿಯನುಗುಳಿಸಿದಂ (ವಿಷ್ಣುಪು. ೩–೨೦೨); ನೆರೆಹೊರೆಯ ಅಕ್ಕಗಳು ನೆರೆದು ನ್ಯಾಯ ಹೇಳಲಿಕ್ಕೆ ಬರುವರು. ಅವರ ಕಡೆಯಿಂದ ನನಗೆ ಉಗುಳಿಸುವಳು (ಬೆಟ್ಟಹೊ. ೭೩).

ಉಗುಳಿಸಿಕೊಳ್ = ಉಗುಳುವಂತೆ ಮಾಡಿಕೊ; ಇತರರಿಂದ ಬಯ್ಯಿಸಿಕೊ: ನೀನು ದಾರೀ ಬಿಡು. ನಾನೇ ಉಗುಳಿಸಿಕೊಳ್ಳುವೆನು ಅಂದನಂತೆ (ಹುಟ್ಟಿಹ. ೧೧೬). [ಉಗುೞ್$_1$ + –ಇಸು$_3$]

**ಉಗುೞ್ಗುಪ್ಪೆ**, ಉಗುಳ್ಗುಪ್ಪೆ (ನಾ). ಉಗುಳಿನ ಕುಪ್ಪೆ; ಶ್ಲೇಷ್ಮದ ಮೊತ್ತ: ಅಡಿಗಡಿಗೆಲ್ಲರುಂ ಪೊರಳ್ವ ಮಯ್ಲಿಗೆವಾಸುಗುೞ್ಗುಪ್ಪೆಯಾದ ಮೆಯಸ್ ಬಿಡದಿರದೆಂತು ಸೂಳೆಯರ ಸಂಗಮನೊಲ್ವರೊ ಋಳ ಮಾನವರ್ (ಕಾವ್ಯಸಾ. ೧೦೦೪). **ಉಗುಳ್ಗುಪ್ಪೆ**: ನಾನು ರೂಪಾಜೀವೆ, ಸೂಳೆ, ಬೆಲೆವೆಣ್ಣು, ವಾರವಿಲಾಸಿನಿ; ಹೊನ್ನಿತ್ತರೆ, ಉಗುಳ್ವ ಪುರುಷಶ್ವಾಪದಗಳಿಗೆಲ್ಲ ಈ ನನ್ನ ಬೆಡಂಗಿನ ತನುಸಂಪತ್ತಿಯು ಸೌನ್ದರ್ಯಸೌಭಾಗ್ಯವು ಕಲಾಸಿದ್ಧಿಯು, ಯವ್ವನದ ವೇಗವು, ಪೆಣ್ತನದ ರಂಗವು – ಕಾಳಾಂಜಿ ಉಗುಳ್ಗುಪ್ಪೆಯು ಮಾತ್ರ (ಮಂತ್ರಶ. ೩೩–೨೪). [ಉಗುೞ್$_2$ + ಕುಪ್ಪೆ]

**ಉಗುೞ್ತರ್** (ಕ್ರಿ). ಹೊರಹೊಮ್ಮಿಸು, —ಸೂಸು: ಅಲರ್ವ ಪದಕ್ಕೆ ಬಂದಲೆವ ತಂಬೆಲರಿಲ್ಲದೆ ಮಾಣ್ದ ಮಲ್ಲಿಕೋಜ್ವಲಮುಕುಳಕ್ಕಮಾದ ಪೊಸಗಂಪನುಗುೞ್ತರಲಿರ್ದ ರಾಗದಿಂ ನಲಿವ ಮದಾಳಿಯಿಲ್ಲದಿನಿಸಂ ತಡೆದಂತರಿಸಿರ್ದ ಪದ್ಮಕುಟ್ಮಲವಿಭವಕ್ಕಮೇಂ ದೊರೆಗೆವಂದುದೊ ಯೌವನದೇೞಿಗ್ ಕನ್ನೆಯಾ (ಆದಿಪು. ೩–೧೯). [ಉಗುೞ್$_1$ + ತರ್]

**ಉಗೆ**$_1$ ‘ಉಗಿ$_6$’ ನೋ.

**ಉಗೆ**$_2$ ‘ಉಫೇ’ ನೋ.

**ಉಗೆವಾಡ** (ನಾ). ಮೋಡ; ಹಬೆಯ ಮಾಡ: ಬಗೆಯ ನಗೆಯಲಿ ಸುಳಿವ ಉಗೆವಾಡದಲಿ ಜಗವ ಗೆಲ್ಲಲು ನಸುಕಿನಲಿ ಅದೆ ದರದಳಿತ ಕಮಲ ಕೋರಕದಂತೆ ಬಾಯ್ದೆರೆದ ಚೆನ್ನೆ (ಗರಿ. ೨೯–೧). [ಉಗೆ$_1$ (< ಉಗಿ$_6$) + ಮಾಡ]

**ಉಗ್ಗ**$_1$ (ನಾ). ತೊದಲುವವನು; ಬಿಕ್ಕರಿಸುವವನು: ಉಗ್ಗಂ, ಉಗ್ಗಿ, ಸುಗ್ಗಂ, ಸುಗ್ಗಿ (ಶಮದ. ೩೬ ಪ್ರಯೋ); ಉಗ್ಗನಾದವನ ಮಾತು ಸ್ಪಷ್ಟವಾಗಿರುವುದಿಲ್ಲ (ರೂಢಿ). [ಉಗ್ಗು$_1$ + –ಅ$_7$]

**ಉಗ್ಗ**$_2$ (ನಾ). ಪಾತ್ರೆಗಳನ್ನು ಸುಲಭವಾಗಿ ಹಿಡಿದುಕೊಂಡು ಹೋಗಲು ಅವುಗಳ ಬಾಯಿಗೆ ಕಟ್ಟುವ ಹಗ್ಗ, —ಹುರಿ: “ಉಗ್ಗ–ಉಕ್ಕಡ” (ಜಾನಕೋ. ೧೯); ವೀಸ ಕೆಲಸವ ಮಾಡದಿರ್ದೊಡೆಯು ಕೊನೆಗೆ ಆವು ಹಗ್ಗ ಚಿತಿ ಉಗ್ಗಂಗಳನು ತರುವುವು (ಅರುಣ. ೪೯); ಎಣ್ಣೆಚೆಂಬು ಹಿಡಿದು ತರಲು ಉಗ್ಗವಿದ್ದರೆ ಚೆನ್ನ (ರೂಢಿ).

ಉಗ್ಗಹಾಕು = (ಆಲಂ) (ಕೊರಳಿಗೆ) ಉಪಾಯವಾಗಿ ಹಗ್ಗ ಹಾಕು; ಉರುಳು ಹಾಕು: ಯಾರಾರಿಗೊ ಉಗ್ಗಹಾಕಿ ಹತ್ತಿಪ್ಪತ್ತು ಸಾವಿರ ರೂಪಾಯಿ ಮಾಡಿಕೊಂಡು . . . ಸಾವ್ಕಾರ ಅಂತಾನೆ ಕರೆಯಬೇಕಂತೆ (ಬೆಳುವ. ೧೦೨).

[ದೇ. ‖ ತಮಿ. ಉಕ್ಕಂ; ತುಳು. ಒಗ್ಗಿ; ತೆಲು. ಉಗ್ಗ]

**ಉಗ್ಗಟ** ‘ಉಗ್ಗಡ$_1$’ ನೋ.

**ಉಗ್ಗಡ**$_1$, ಉಗ್ಗಟ (ಗು). ೧. ಅತಿಶಯವಾದ; ಹೆಚ್ಚಾದ; ಶ್ರೇಷ್ಠವಾದ: ಉಗ್ಗಡದ ಕಾವ್ಯದ ಕವಿಗಳಿದಿರೊಳು (ಹಚಕಾ. ೧–೨೧); ಉಗ್ಗಡದ ಬೆಡಂಗನಾಂತು ಪರಿರಂಜಿಪ ಪಾರ್ವತಿಗೈದೆ ಮೋದದಿಂ ಕಡುಮಿಱು ಪುತ್ತಮಾಂಬರವನರ್ಪಿಸಿದಂ ನೃಪರಾಜಕುಂಜರಂ (ಉದ್ಭಟ. ೩–೧೧೭).

(ನಾ). ೨. ಉತ್ಕಟತೆ ; ಹೆಚ್ಚಿಗೆ ; ಅತಿಶಯ : "ಉಗ್ಗಡಮೆನಲುತ್ಕಟದೊಳ್" (ಕರ್ಣಾನಿ. ೪೬) ; ಇದು ಮನೆಯಂದಮಲ್ತುರಿವ ದಳ್ಳುರಿಯುಗ್ಗಡದಂದಮಾಗಿ ತೋಱಿದಪುದು (ಪಂಪಭಾ. ೩-೪) ; ಸೇದೆಯೊಂದುಗ್ಗಡದಿಂದಂ ಸುಯ್ಯೊದಬ್ದುಣ್ಮಿದಪುದು ನಡುಗುತ್ತಿರ್ದುರ್ವೀ ಕಣ್ಮಲರ್ (ಕಾದಂಪೂ. ೨೧೦) ; ಉಗ್ಗಡದಿಂ ತೀಡಿದುದೊಂದು ಘೋರಪವನಂ (ದಶಕು. ೫-೭೧) ; ಪೊಡಕರಿಪ ಗಂಡಗುಣದುಗ್ಗಡಮೆಂತು [ಟೊ] ಬಿಡದೆ ಜಡಿಯೆ ಜಯವಧುವತ್ತಿತ್ತ[ಡಿ]ಯಿಡದೆ. . .ಶ್ರೀ ದೇವರಾಯ ಭೂವಲ್ಲಭನ (ಸೌಇಇ. IV, ೨೬೭-೨೯ ; 1380) ; ಉಗ್ಗಡದಲೆಱಗಿದನುಂಡ ಕೂಳಿನ ಕಡುಹ ತೋಱಿಂದು (ಕುವ್ಯಾಆ. ಓರಿಇ. ೨೩-೭೨). **ಉಗ್ಗಟ** : "ಉತ್ಕಟ—ಉಗ್ಗಟ" (ಶಮದ. ೨೬೭ ಪ್ರಯೋ). [< ಸಂ. ಉತ್ಕಟ]

**ಉಗ್ಗಡ್ಸ**, ಉಗ್ಗಡೆ (ನಾ). = ಉಗ್ಗಡಣೆ : ನೆರೆದ ವೇದಂಗಳುಗ್ಗಡವುಪನಿಷತ್ತುಗಳ ಗರವಟಿಗೆಯಣಿಮಾದಿಗಳ ಬೊಬ್ಬೆ ಧರ್ಮದಬ್ಬರ (ಹಚಕಾ. ೫-೭೧) ; ಸಾಱುವ ಡೌಡೆಯೆಂಬ ತೆಱದಿಂದಂ ಬಗ್ಗಿಸುತ್ತಿರ್ದುವುಗ್ಗಡದಿಂ ಕೋಗಿಲೆ (ಕಬ್ಬಿಕಾ. ೫೫) ; ಕಟ್ಟಿಗೆಕಾಱರುಗ್ಗಡದೆ ಹೊಗಳ್ದರು ಹರಿಯ (ಮೋಹತ. ೪೨-೪೩) ; ದೂರದಲ್ಲಿ ನಗಾರೆಯ ಉಗ್ಗಡ (ಕ್ರಾಂಚಧ್ವ. ೫೫). **ಉಗ್ಗಡೆ** : ಗಟ್ಟಿ ಚಿನ್ನದ ಬೆಳ್ಳಿಯ ಗುದಿಗೆಯ ಕೆಯ್ಯ ಜಟ್ಟಿಗಳ್ ನಿಖಿಳ ಬೋಳಕರ ಕಟ್ಟಿಗೆಗಾಱರನೇಕವುಗ್ಗಡೆ ಬೊಬ್ಬಿಟ್ಟುದು ರಾಯನೇಳ್ಗೆಯಲಿ (ಮೋಹತ. ೨೧-೫೮). [< ಸಂ. ಉದ್ಘುಷ್ಟ]

**ಉಗ್ಗಡಣಿಸು** (ಕ್ರಿ). (ಕಾಲಿನಲ್ಲಿ ನೆಲವನ್ನು ಕುಟ್ಟುತ್ತ) ಕೂಗಿ ಹೇಳು ; ಗಟ್ಟಿಯಾಗಿ ಹೇಳಿ ತಿಳಿಸು ; ಉದ್ಘೋಷಿಸು : ಬಿಡದೆ ಶಿಶಿರೋಪಚಾರಮನೊಡರ್ಚುತುಂ ತತ್ಕುಮಾರಿಕೆಯ ವಾರ್ತೆಯನುಗ್ಗಡಣಿಸುತೆ ನೃಪವಿರಹಮನಡಗಿಸಿ ನರ್ಮಸಚಿವಸುತನಂದೆಸೆದಿರ್ದಂ (ಉದ್ಭಟ. ೭-೩). [ಉಗ್ಗಡಣೆ + -ಇಸು$_3$]

**ಉಗ್ಗಡಣೆ**, ಉಗ್ಘಡಣೆ (ನಾ). ಗಟ್ಟಿಯಾದ ಕೂಗು ; ಘೋಷ ; ಬಿರುದಾವಳಿಯ ಹೊಗಳಿಕೆ ; ವಂದಿ ಮಾಗಧರ ಕೊಂಡಾಟದ ಕೂಗು : ಕವಿದ ಚಿತ್ರಾವಳಿಯ ದಡ್ಡಿಯ ವಿವಿಧ ಭಟರುಗ್ಗಡಣೆಯಲಿ ವರಯುವತಿ ಬಂದಳು (ಕುವ್ಯಾಉ. ೬-೧೮) ; ಇಡಿದಿರ್ದ ವೇದ ವೇದಾಂತ ಮಂತ್ರಂಗಳುಗ್ಗಡಣೆಯ ಮಹಾಪ್ರಣಮದಂತೆ ಹರಿ ಮೊದಲಾದ ಬಿಡುಗಣ್ಣರೋಲಗದ ನಡುವೆ ಜಸವೆತ್ತ ದೇವರದೇವನಿರೆ ಕಂಡನು (ಚಬಪು. ೩೦-೯). **ಉಗ್ಘಡಣೆ** : ತಾಳ ಸಮೇಳ ಸದ್ಗತಿಯಿಂದಲುಗ್ಘಡಣೆಯ ಗಡಾವಣೆಯಿಂದಲಲ್ಲಮನು (ಪ್ರಭುಲೀ. ೫-೯) ; ವರಸುಧಾಮನ ಕೈವಿಡಿದು ಬಳಿಕರಸನುಘ್ಘ[ಗ್ಘ]ಡಣೆಯ ನಿನಾದದಲರಸುಹಂತಿಯ ನೋಡುತವರ ವರುಚಿತವೃತ್ತಿಯಲಿ (ತೊರರಾ. ೧-೧೪-೭) ; ಪೊಡವಿಯುಮುರರ ಮಂತ್ರರವದುಗ್ಘಡಣೆಗಳ (ನಿಭಾಗ. ೪-೫-೬೫) ; ಮತ್ತೊಮ್ಮೆ ಕಟ್ಟಿಗೆಯವರಿಂದ ದೊರೆಗಳ ಬಿರುದಾವಳಿ ಉಗ್ಗಡಣೆಯಾಯಿತು (ರಾಜಯೋ. ೩೯).
[< ಸಂ. ಉದ್ಘೋಷಣ]

**ಉಗ್ಗಡರಾವುತ** (ನಾ). ಶೂರನಾದ ಸವಾರ ; ಪ್ರಬಲನಾದ ಕುದುರೆ ಸವಾರ : ಬಾವುಲಿಯ ಕಾಲ ತೊಡರ ಮಹಾವೀರರ್ ಚೂಣಿಬವರಮಂ ಕೆಣಕಲ್ ಕೋಪಾವಿಷ್ಟರಾಗಿಯುಗ್ಗಡರಾವುತರುರವಣಿಸಿ ಕುದುರೆಯಂ ಪೊಳೆಯಿಸಿದರ್ (ದಶಕು. ೨-೧೬). [ಉಗ್ಗಡ$_1$ + ರಾವುತ]

**ಉಗ್ಗಡಿಸು**, ಉಗ್ಗಳಿಸು, ಉಗ್ಘಡಿಸು, ಉಗ್ಘಳಿಸು (ಕ್ರಿ). ೧. ಗಟ್ಟಿಯಾಗಿ ಕೂಗಿಹೇಳು ; ಉದ್ಘೋಷಿಸು : ಮಾಣಿಸಿದೊಡೆ ಮಾಣದೆ ರಪಣಮಂ ತೋಱಿಯುಮೊತ್ತೆಯನುಗ್ಗಡಿಸಿಯುಮಾಡಿಮೆನೆ ಪೆಱತೇನುಮುಪಾಯಮಿಲ್ಲದೆಮ್ಮಾಳ್ವ ನೆಲನೊತ್ತೆಯೆಂದೊಡೆ (ಪಂಪಭಾ. ೭-೩ ವ) ; ಶುಕನಿಕರಂಗಳುಗ್ಗಡಿಸೆ (ಗಿರಿಕ. ೯-೪೭) ; ಭೀಷ್ಮದ್ರೋಣಕೃಪಾದಿಗಳೆದುರಾಗಿ . . . ಪಾಂಡವರು ಪಟ್ಟಂಥ ಕಷ್ಟಗಳನ್ನು ಉಗ್ಗಡಿಸಿ (ಕೃವಾಉ. ೬). ೨. ಕೊಂಡಾಡು ; ಹೊಗಳು : ಕುಲಮನೆ ಮುನ್ನಮುಗ್ಗಡಿಪಿರೇಂ ಗಳ (ಪಂಪಭಾ. ೧೦-೨೧) ; ಅದಮುಗ್ಗಡಿಸುವ ಪುಣ್ಯಪಾಠಕರ್ (ಸೂಕ್ತಿಸು. ೧೬-೯) ; ಪ್ರಬಂಧಗಳನ್ನುಗ್ಗಡಿಸುವ ವಂದಿಮಾಗಧ ಸೂತರ ಸ್ತುತಿಗಳೂ (ಕೃವಾವಿ. ೧೩೦). **ಉಗ್ಗಳಿಸು** : ೧. ವೇತ್ರಂಗಳಿಂ ಸಲುವಾಳರಾನಂದಿಮಾಕಾಳರುಗ್ಗಳಿಸುತಿರ್ದರ್ ಸಭಾಂತರದೊಳು (ಕೊಟ್ಟೂಬ. ೧-೬೪). **ಉಗ್ಘಡಿಸು** : ೧. ಓರೊರ್ವರ ನೆಱಂಗಳುಮನನ್ಯೋನ್ಯ ವೈರಕಾರಣಂಗಳುಮನುಗ್ಘಡಿಸುತ್ತುಂ (ಆದಿಪು. ೫-೮೫ ವ). ೨. ಬಸವಣ್ಣನ ಮುಂದಣೆಚ್ಚರಿಕೆಗುಂದದಂತೆ ಉಗ್ಘಡಿಸುತ್ತಿರ್ದನು (ಬಸಹೆ. ೩೩). **ಉಗ್ಘಳಿಸು** : ೧. ವಿಚಿತ್ರ ವಚನಗಳನ್ನು ಉಗ್ಘಳಿಸುತ್ತಾ . . . ಬರೀ ಮಾತುಗಳ ಕೌಶಲವನ್ನು ತೋರಿಸಿ (ಕೃವಾವಿ.೭೮). [ಉಗ್ಗಡ$_2$+-ಇಸು$_3$]

**ಉಗ್ಗಡೆ** 'ಉಗ್ಗಡ$_2$' ನೋ.

**ಉಗ್ಗರ** (ನಾ). ಉಗ್ರತೆ : ಫಣಿ ತನ್ನ ಗರಳದುಗ್ಗರ ಹಾಱಿತೆಂದೀಸೆಣಸದೆ ನೃಪನನೆಯ್ದುದುದು (ಶ್ರೀಪಾಲ. ೧೧-೬೫). [< ಸಂ. ಉಗ್ರ]

**ಉಗ್ಗಳಿಸು** 'ಉಗ್ಗಡಿಸು' ನೋ.

**ಉಗ್ಗಾರ** 'ಉದ್ಗರ' ನೋ.

**ಉಗ್ಗಾರು** 'ಉದ್ಗರ' ನೋ.

**ಉಗ್ಗಿ$_1$** 'ಉಟ್ಗಿ' ನೋ.

**ಉಗ್ಗಿ$_2$** (ನಾ). ಉಗ್ಗುವವಳು ; ಬಿಕ್ಕುವವಳು ; ತೊದಲುವವಳು : ಉಗ್ಗಂ, ಉಗ್ಗಿ (ಶಮದ. ೩೬ ಪ್ರಯೋ). [ಉಗ್ಗ$_1$ + -ಇ$_2$]

**ಉಗ್ಗು$_1$** (ಕ್ರಿ). ತೊದಲು ; ಬಿಕ್ಕು : "ಉಗ್ಗ - ವಚನವಿರೋಧೇ (ಬಿಕ್ಕಿಮಾತಾಡು)" (ಶಮುಧಾ) ; ಬಣ್ಣ ಬಳಕೊಂಡು ಹಿಂಗೆ ಉಗ್ಗಿದರೆ ಹೆಂಗಪಾ (ಮಾಮುನಿ. ೨೩) ; ಮಾತುಗೂಳಿ ಜಿಹ್ವೆಯಿದ್ದು ಇಲ್ಲದಂತೆ ಉಗ್ಗುತಿರುವನು (ಚಿಂತನ. ೩೧). [ದೇ. ‖ ತುಳು. ಉಗ್ಗು]

**ಉಗ್ಗು$_2$** (ಕ್ರಿ). ೧. (ನೀರು) ಚೆಲ್ಲು ; ಸಿಂಪಡಿಸು ; ಎರಚು : ಜಲಬಿಂದುಗಳ ರಾಶಿಯು ಮುಗಿಲಿಗೆ ಉಗ್ಗಿದ ಮುತ್ತುಗಳ ಹಾಗೆ ಹಾರುತ್ತಿವೆ (ಇಪ್ಪಕ. ೧೪೫) ; ದುರ್ಗಂಧವಾದ ನೀರು ತುಂಬಿ ತಂದು . . . ಉಗ್ಗಿಬಿಟ್ಟನು (ಮುಂಬಯಿ. ೪-೧೮೨) ; ಆವನು ಸಿಟ್ಟಿಗೆದ್ದು ಹುಸೇನನಿಗೆ ಗಟಾರದ ನೀರನ್ನು ತಂದು ಉಗ್ಗಿದನು (ರಂಗರೋ. ೪೮). ೨. ಉಕ್ಕಿಬರು ; ನುಗ್ಗಿಬರು : ಬೆಟ್ಟದೆದೆಯನು ಬಿರಿದು ಬಾಳ ಹಿಗ್ಗಿನ ಬುಗ್ಗೆ ಉಗ್ಗಿಬಹದದು (ಉಯ್ಯಾಲೆ. ೫೬-೮) ; ಅಟ್ಟಹಾಸದ ಬುಗ್ಗೆ ಉಗ್ಗಿಬರ ಹತ್ತಿತು (ಇಪ್ಪಕ. ೩೮೩). [ದೇ. ?. / ತುಳು. ಉಗ್ಗು = ಸ್ರವಿಸು]

**ಉಗ್ಗು$_3$** (ನಾ). ತೊದಲುವಿಕೆ ; ಬಿಕ್ಕುವಿಕೆ : ಉಗ್ಗು, ಸಿಗ್ಗು, ಎಗ್ಗು (ಶಮದ. ೨೧೧ ಪ್ರಯೋ) ; ರಂಗಮ್ಮ ಇದ್ದಾಳಲ್ಲಾ ಏನಾಗಿದಾಳೆ ? ಸ್ವಲ್ಪ ಬಾಯಿ ಉಗ್ಗಾದರೆ ಏನಂತೆ ? (ಕಾನೂರು. ४०೭). [< ಉಗ್ಗು$_1$]

**ಉಗ್ಗು$_4$** (ನಾ). ಹೆಚ್ಚಳ ; ಉಕ್ಕೇರುವಿಕೆ : ಹಸುಗಳ ಓಡಾಟ, ಹಕ್ಕಿಗಳ ಹಾರಾಟ, ಇವೆಲ್ಲ ಆ ಹೊಸಬಲದ ಹಿಗ್ಗಿನ ಉಗ್ಗು (ವಿಚಾಮುಂ. ೬೬).
[< ಉರ್ಕು$_1$]

**ಉಗ್ಗು$_5$** (ನಾ). (ಮಕ್ಕಳ ಮಾತಿನಲ್ಲಿ) ಹಾಲು ಅಥವಾ ನೀರು : ಉಗ್ಗುಗಳನಾಗಾಗ ಬಯಸಲು ಹಿಗ್ಗುವಳು ಮುದ್ದಾಡುವಳು ಮುಸುಡೊಡ್ಡಿ ಮುದ್ದಂ ಬೇಡುವಳು (ಬಸಪು. ೧೫-೧೪). [?]

**ಉಗ್ಗುಮಾತು** 'ಉಗ್ಗುವಾತು' ನೋ.

**ಉಗ್ಗುವಾತು**, ಉಗ್ಗುಮಾತು (ನಾ). ತೊದಲುಮಾತು ; ಬಿಕ್ಕಲು ಮಾತು : ಕಟ್ಟುಬ್ಬಸದ ಕಿಳ್ದನಿಯ ಉಗ್ಗುವಾತುಗಳಿಂದ ಬೇಹುಗುಡುವನು (ಮಂತ್ರಶ. ೧೦೭-೨೨). **ಉಗ್ಗುಮಾತು** : ಚಿಕ್ಕಪ್ಪನ ಉಗ್ಗುಮಾತನ್ನು ಅಣಕಿಸಿ ಅಣಕಿಸಿ ಇಬ್ಬರಿಗೂ ಉಗ್ಗು ಅಗಿಬಿಟ್ಟಿದ್ದಿತು (ತುಟವಿಾ. ೫೫). [ಉಗ್ಗು$_3$ + ಮಾತು$_1$]

**ಉಗ್ಘಡಣೆ** 'ಉಗ್ಗಡಣೆ' ನೋ.

**ಉಗ್ಘಡಿಯಂತ್ರ** (ನಾ). ನೀರನ್ನು ಎತ್ತುವ ಯಂತ್ರ; ಏತ; ಕಪಿಲೆ: ನಿರುತಂ ತುಂಬುವ ಕೆಡವುವ ಪಿರಿದುಗ್ಘಡಿಯಂತ್ರದಂತೆ ಭವಮಾಲೆಯೊಳಂ ತಿರುಗುತ್ತಿರ್ಪನ್ನುಮನುದ್ಧರಿಪುದು ಸದ್ಗುರುವೆ (ತ್ರಿಪುವಿ. ೩೦–೧೧). [< ಸಂ. ಉದ್ಘಟೀಯಂತ್ರ]

**ಉಗ್ಘಡಿಸು** 'ಉಗ್ಗಡಿಸು' ನೋ.

**ಉಗ್ಘಳಿಸು** 'ಉಗ್ಗಡಿಸು' ನೋ.

**ಉಗ್ರ** (ಗು). ೧. ಭಯಂಕರವಾದ; ತೀವ್ರವಾದ; ಘೋರವಾದ; ತೀಕ್ಷ್ಣವಾದ: ಉಗ್ರಸಂಗ್ರಾಮೋಗ್ರನಪ್ಪನಗೆ ಗೋಣಿಯೋಗದಂಡಧರನೊಳ್ ದಂಡವಪಹಾಸ್ಯಮಪ್ಪುದು (ಜಗವಿ. ೫–೬೧ ವ); ಕಡುನೇಮವಿಡಿದು ಕಕ್ಕಸಗೊಂಡು ಮುನಿವರರೊಡರಿಸುವುಗ್ರತಪಗಳು (ಹದಿಬ. ೨–೨೮). (ನಾ). ೨. ಪ್ರಚಂಡತೆ; ಘೋರತೆ: ಅಡವೀಸಿಂಗವತಿದ್ದಲಕ್ಕು ಕಜಿಯಲ್‌ಬಕ್ಕುಗ್ರದ ವ್ಯಾಘ್ರಮಂ (ಸೋಮೇಶ. ೪೯). ೩. ಕೋಪಿಷ್ಠ. ೪. ಕ್ರೂರನಾದನು; ನಿರ್ದಯನಾದವನು: ಬಂದಿರೆ ಕುಂಭೋದಯದೊಳ್ ತೊಟಲ್ವನಧನಂ ದುಃಖಾರ್ತನುಗ್ರಂ ಶಠಂ (ಜಾತತಿ. ೧೭–೨೦). ೫. ಶಿವ: "ಹರನುಗ್ರನೀಶಂ ವೃಷಧ್ವಜಂ" (ಮಂಗರಾ. ೪–೧೧); ದುಷ್ಟಜನಶಿಕ್ಷಕನಾಗಿರ್ಪುದರಿಂದ ಉಗ್ರನೆಂದು ಪೆಸರ್ (ಭಾರಶಾಂ. ೪೩). ೬. ಮಂತ್ರಿನರಕಗಳಲ್ಲಿ ಒಂದು: ಉಗ್ರ, ವೃಕಾಸ್ಯ, ಗ್ರಾಹ, ಕುಂಭಿ, ನಕ್ರವೆಂಬೈದು ಮಂತ್ರಿನರಕಂಗಳಿಂದೊಡಗೂಡಿ ಪ್ರಚಂಡವೆಂಬರಸುನರಕವಿಹುದು (ವಿವೇಕ. ೧೮೦). ೭. ತಂದೆ ಕ್ಷತ್ರಿಯ, ತಾಯಿ ಶೂದ್ರಳಾಗಿರುವ ಸಂಕರ ಜಾತಿಯವನು. ೮. = ಉಗ್ರತೆ ೨: ಚಂಡತ್ವಮೆ ಉಗ್ರಂ (ರಸರ. ೪–೨೩೭ ವ). [ಸಂ.]

**ಉಗ್ರಕರ** (ನಾ). ತೀಕ್ಷ್ಣವಾದ ಕಿರಣಗಳನ್ನು ಉಳ್ಳವನು; ಸೂರ್ಯ: ಉಗ್ರಕರನತುಳ ವನಸ್ಪತಿ ಸಂಕೀರ್ಣವೆನಿಪ್ಪೀ ವಿತತಾಟವಿಯಲ್ಲಿ ಸಲಿಸನೆಂದುಂ ಕರಮಂ (ಚಂದ್ರಪು. ೫–೫೧). [ಉಗ್ರ + ಕರ$_4$]

**ಉಗ್ರಕರ್ಮ** (ನಾ). ಕ್ರೂರವಾದ ಕೆಲಸ: ಉಗ್ರಕರ್ಮವ ನೆನೆಯಬೇಡ ವ್ಯಗ್ರದಲಿ ಸಾಧಿಸಿದೆವವಧಿಸಮಗ್ರವನು ಸಾಕಿನ್ನು ಬಿಡಿಸು ವಿರಾಟ ಭೂಪತಿಯ (ಕುವ್ಯಾವಿ. ೪–೫೭). [ಉಗ್ರ + ಕರ್ಮ]

**ಉಗ್ರಗಂಧ** (ನಾ). ಕಟುವಾದ ವಾಸನೆಯುಳ್ಳದ್ದು; ಬೆಳ್ಳುಳ್ಳಿ, ಬಜೆ, ಅಜವಾನ ಮೊದಲಾದುವು: "ಬಜೆ; ಅಜವಾನ" (ಗಂಗಾಮ. ೩೮). [ಸಂ.]

**ಉಗ್ರಗಂಧಿ** (ನಾ). = ಉಗ್ರಗಂಧ: "ಉಗ್ರಗಂಧಿಯೆನೆ ವಜೆ ಬಜೆಯೆನಿಕ್ಕುಂ" (ಮಂಗರಾ. ೪೧–೩೪). [< ಸಂ. ಉಗ್ರಗಂಧಿನ್]

**ಉಗ್ರಗಂಧೆ** (ನಾ). = ಉಗ್ರಗಂಧ (೬). [ಸಂ. ಉಗ್ರಗಂಧಾ]

**ಉಗ್ರಗಾಮಿ** (ನಾ). ರಭಸದಿಂದ (ಮುಂದೆ) ನುಗ್ಗುವವನು; ತೀಕ್ಷ್ಣವಾಗಿ ಮುಂದುವರಿಯುವವನು: ಮಧ್ಯಮಮಾರ್ಗಗಾಮಿಯಾದ ಅವನು ನರೋದ್ದಿಕ್ ಪಂಥದ ಉಗ್ರಗಾಮಿಯಾದನು (ಪುನರು. ೫೩೭). [< ಸಂ. ಉಗ್ರಗಾಮಿನ್]

**ಉಗ್ರಘೋಷ** (ನಾ). ಭಯಂಕರವಾದ ಧ್ವನಿ: ಆಕಾಶಮಾಶಾಂತರದಿಂದಂ ಪತ್ತುವಿಟ್ಟೀ ಧರೆಗೆ ಕೆಡೆದುದೆಂಬಂತುಮಾಶಂಕೆ ಪೊಣ್ಮುತಿರೆ ಪೆರ್ಚಿತ್ತುಗ್ರಘೋಷಂ ಪ್ರಳಯಘನಘಟಾಟೋಪಗಂಭೀರಘೋಷಂ (ಆದಿಪು. ೧೩–೩೭). [ಉಗ್ರ + ಘೋಷ]

**ಉಗ್ರಣ** 'ಉಗ್ರಾಣ' ನೋ.

**ಉಗ್ರತಿಮಿ** (ನಾ). ಸಮುದ್ರದಲ್ಲಿರುವ ಭಯಂಕರವಾದ ಅತಿದೊಡ್ಡ ಮೀನು: ಉದನ್ವದುಗ್ರತಿಮಿಯಂ ಸಲೆ ತದ್ರುಚಿಯೆಂದು ಬೆರ್ಚುವಂ (ಚಂದ್ರಪು. ೭–೩೪). [ಉಗ್ರ + ತಿಮಿ]

**ಉಗ್ರತೆ** (ನಾ). ೧. ಕ್ರೌರ್ಯ; ರೌದ್ರತೆ; ಭಯಂಕರತೆ: ಪ್ರಳಯರುದ್ರನುಗ್ರತೆಯಂತೆ (ಭಾವಚಂ. ೫–೨೦). ೨. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು: ಸಂಚಾರಿಭಾವಗಳು ಮೂವತ್ತುಮೂರು: –೧ ನಿರ್ವೇದ . . . ೨೭ ಉಗ್ರತೆ (ದುಷ್ಟರ ಅಪರಾಧಾದಿಗಳಿಂದ ರೇಗುವುದು) (ಕೈಪಿಡಿ. ೧೮೮); ಅತಿಕ್ರೌರ್ಯವೇ ಉಗ್ರತೆ (ಭಾರವಿಾ. ೩೪೭). [ಸಂ. ಉಗ್ರತಾ]

**ಉಗ್ರತೇಜ** (ನಾ). ತೀಕ್ಷ್ಣವಾದ ತೇಜಸ್ಸು: ಉಗ್ರತೇಜಂ ಕಿಡುತಿರ್ಪನಂ (ಗದಾಯು. ೯–೩೫). [ಸಂ. ಉಗ್ರತೇಜಸ್ (ಉಗ್ರ + ತೇಜಸ್)]

**ಉಗ್ರದಂಡ** (ನಾ). ೧. ಕ್ರೂರವಾದ ಶಿಕ್ಷೆ; ನಿರ್ದಯವಾದ ಶಿಕ್ಷೆ: ಕಾಲನುದ್ದಂಡೋಗ್ರದಂಡ ಕರಾಳಬಾಧೆಗೆ ಬಿದ್ದೆಯಲ್ಲಾ (ಬಸವು. ೪೯–೧೦). ೨. ಕ್ರೂರವಾಗಿ ಶಿಕ್ಷಿಸುವ ಸ್ವಭಾವದವನು. [ಉಗ್ರ + ದಂಡ]

**ಉಗ್ರಧನ್ವ** (ನಾ). ೧. ಪ್ರಬಲನಾದ ಬಿಲ್ಗಾರ. ೨. ಇಂದ್ರ: "ಪುರಂದರನುಗ್ರಧನ್ವಿ[ನ್ವ]" (ಮಂಗರಾ. ೧೨–೧). [ಸಂ. ಉಗ್ರಧನ್ವನ್]

**ಉಗ್ರನಖ** (ನಾ). ಹರಿತವಾದ ಉಗುರುಳ್ಳ ಪ್ರಾಣಿ: ಸಮದೇಭಕುಂಭಭೇದನ ಸಮಯೋಗ್ರನಖಂಗೆ ಹರಿಗೆ ಮೃಗರಿಪುವೆಸರುತ್ತಮಿಕೆಯೆ (ಗದಾಯು. ೨–೨). [ಉಗ್ರ + ನಖ]

**ಉಗ್ರನರಸಿಂಹ** (ನಾ). ೧. ರೌದ್ರರೂಪದಿಂದ ಕೂಡಿದ ನರಸಿಂಹ: ಹಂಪೆಯ ಉಗ್ರನರಸಿಂಹ (ರೂಢಿ). ೨. (ಆಲಂ) ಅತಿ ರೋಷಾವೇಶವುಳ್ಳವನು: ಅಪ್ಪ ಉಗ್ರನರಸಿಂಹನಾಗಬಹುದೆಂದು ತೋರಿದ್ದು ನನಗೆ ಮೊನ್ನೆರಾತ್ರಿ ಮಾತ್ರ (ವಾತ್ಸಲ್ಯ. ೨೯೯). [ಉಗ್ರ + ನರಸಿಂಹ]

**ಉಗ್ರಪಕ್ಷ** (ನಾ). ತೀವ್ರಗಾಮಿಯಾದ ಪಕ್ಷ: "ಅತಿಯಾಗಿ ಹೋಗುವ ಗುಣ, ಸ್ಥಿತಿ; ಅತಿಪಕ್ಷ; ಉಗ್ರಪಕ್ಷ" (Extremism. ಇಂಕನಿ). [ಉಗ್ರ + ಪಕ್ಷ]

**ಉಗ್ರಪಾಣಿ** (ನಾ). ಭಯಂಕರವಾದ ಕೈಯುಳ್ಳವನು: ನಾನಾವಿಧಾಯುಧ ವ್ಯಗ್ರಪಾಣಿಗಳುಮುದಾರವೀರರಸ ರಭಸೋಗ್ರಪಾಣಿಗಳುಮಾಗಿ ಮಗಧನ ಮುಂದೆ ಬಂದು ನಿಂದು (ಆದಿಪು. ೧೨–೯೨ ವ). [ಉಗ್ರ + ಪಾಣಿ]

**ಉಗ್ರಪ್ರತಿಗ್ರಹ** (ನಾ). ಎಳ್ಳು, ಎಮ್ಮೆ, ಮೊಸರು ಮೊದಲಾದುವುಗಳನ್ನು ಪ್ರತಿಗ್ರಹಿಸುವುದು, —ದಾನತೆಗೆದುಕೊಳ್ಳುವುದು: ಅತ್ಯಶನ, ಅತಿಪಾನ, ಉಗ್ರಪ್ರತಿಗ್ರಹ, ಉಚ್ಛಿಷ್ಟ, ಪರ್ಯುಷಿತ, ನಿಷಿದ್ಧ ದ್ರವ್ಯಂಗಳಂ ವರ್ಜಿಸುವುದು (ವಿವೇಕ. ೧೩೮). [ಉಗ್ರ + ಪ್ರತಿಗ್ರಹ]

**ಉಗ್ರಬಲ** (ನಾ). ಭಯಂಕರವಾದ ಬಲವನ್ನು ಉಳ್ಳವನು: ಬಲದೇವ ವಾಸುದೇವರೊಳಲಂಘ್ಯಬಲನೊರ್ವನುಗ್ರಬಲನೊರ್ವನವರ್ ಕೆಲದೊಳಿರೆ ಚಂದ್ರರವಿಮಂಡಲ ಮಧ್ಯದ ಕನಕಗಿರಿಗೆ ನೃಪನೆಣೆಯಾದಂ (ಶಾಂತಿಪು. ೧–೮೦). [ಉಗ್ರ + ಬಲ]

**ಉಗ್ರಲೋಚನ** (ನಾ). ತೀಕ್ಷ್ಣವಾದ ಕಣ್ಣುಗಳನ್ನು ಉಳ್ಳವನು; ಅಗ್ನಿನೇತ್ರ; ಶಿವ: ಉಗ್ರಲೋಚನನಚಳಭಕ್ತ ಗುಣಾಗ್ರಗಣ್ಯನು ಭಕ್ತಿಪುಣ್ಯನು ನಿಗ್ರಹಾನುಗ್ರಹ ಸಮುಗ್ರೋದಗ್ರಬಲಶೌರ್ಯ (ಬಸವು. ೫೩–೨). [ಉಗ್ರ + ಲೋಚನ]

**ಉಗ್ರವಾದಿ** (ನಾ). = ಉಗ್ರಗಾಮಿ: ಹಿಂಸಾಮಾರ್ಗದಿಂದ ಮಾತ್ರ ಸ್ವಾತಂತ್ರ್ಯವನ್ನು ಗಳಿಸಬಹುದೆಂದು ಉಗ್ರವಾದಿಗಳು ಭಾವಿಸಿದ್ದರು (ರೂಢಿ). [< ಸಂ. ಉಗ್ರವಾದಿನ್]

**ಉಗ್ರಶಾಸನ** (ನಾ). ೧. ಕಟ್ಟುನಿಟ್ಟಾದ ಆಜ್ಞೆಯಿಂದ ಕೂಡಿದವನು; ಅಪ್ಪಣೆ ಮೀರಿದವರನ್ನು ಕ್ರೂರವಾಗಿ ದಂಡಿಸುವವನು (೬). ೨. ಕಟ್ಟಪ್ಪಣೆ (೬). [ಉಗ್ರ + ಶಾಸನ]

**ಉಗ್ರಸತ್ವ** (ನಾ). ೧. ತೀವ್ರವಾದ ಶಕ್ತಿಯನ್ನು ಉಳ್ಳುದು; ಮಿಗಿಲಾದುದು: ಮನವುಗ್ರಸತ್ವವಾ ಹರಿಣನಿಂ ಮ ರು ತ ನಿಂ ಸರಳಿನಿಂ ದೃಷ್ಟಿಯಿಂ ಮನದಿಂ ರಥಾಶ್ವ ಮಿಗಿಲು (ಹಚಕಾ.೬–೩೩). ೨. ಭಯಂಕರವಾದ ಪ್ರಾಣಿ, —ಜೀವ : ಅತ್ಯುಗ್ರಸತ್ವಂಗಳಿಂದರ್ವಿಸುವೀ ದುರ್ವಾರ ಕಾಂತಾರಮನಬಲೆಯೆ ನಿಶ್ಶಂಕೆಯಿಂದೆಂತು ಪೊಕ್ಕೈ (ಪಂರಾಮಾ. ೯–೩೯). ೩. ತೀಕ್ಷ್ಣವಾದ ಶಕ್ತಿ. [ಉಗ್ರ + ಸತ್ವ]

**ಉಗ್ರಾಂಬಕ** (ನಾ). = ಉಗ್ರಲೋಚನ: ಅನುಜೆ ತಳುವಿದಳೆಂದು ರೋಷಸ್ತನಿತಗದ್ಗದಕಂಠನೊದೆದೆದ್ದನು ಮಹೀಮಂಡಲವನುಗ್ರಾಂಬಕನ ಡೊಂಬಿನಲಿ (ಕುವ್ಯಾಅ. ೯–೧೮); ಉಗ್ರಾಂಬಕನಂ ಗರಳಗ್ರೀವನ ದೇವ ಕುಲಾಗ್ರಣಿಯಂ (ಉದ್ಭದೇ. ೧–೫). [ಉಗ್ರ + ಅಂಬಕ]

**ಉಗ್ರಾಕ್ಷ**(ನಾ). = ಉಗ್ರಲೋಚನ: ಆಕ್ಷಣದೊಳುಕ್ಷಧ್ವಜನನುಗ್ರಾಕ್ಷನಂ ಮೆಚ್ಚಿಸಿ (ಬಸಪು. ೫೮–೨೬). [ಸಂ. (ಉಗ್ರ + ಅಕ್ಷಿ + –)]

**ಉಗ್ರಾಣ**, ಉಗ್ರಣ (ನಾ). ಧಾನ್ಯ ಮೊದಲಾದ ಸಾಮಾನುಗಳನ್ನು ತುಂಬುವ ಮನೆ; ದಾಸ್ತಾನು ಕೋಣೆ: ಅಕ್ಕಿ ಕಣಿಕವ ರಾಸಿ ಮಾಡಿದರು ಮಹಮನೆಯ ಉಗ್ರಾಣಕೆ (ಸಿದ್ಧರಾ. ೮–೫೦); ಆ ರಾಜಕ್ಕೆತಾಂತನ ಬಳಕೆಯ ಭಂಡಾರಂ ಮೃತ್ಯುಮಹಾದೇವತೆಯುಗ್ರಾಣಂ (ಜಯಕಾ. ೬–೨೦); ಅನಂತರ ಆ ಕೊಠಡಿ . . . ಉಗ್ರಾಣವಾಗಿ ಮಾರ್ಪಟ್ಟಿತು (ಏಕಾಂಗಿ. ೨೦). **ಉಗ್ರಣ**: ಉಗ್ರಣದ ಮನೆಯೊಳಗೆ ಬಹುವಿಧ ವೆಗ್ಗಳಾಗಿಯೆ ಸರುಕು ತುಂಬಿರೆ ದಿಗ್ಗನೆಲ್ಲವ ತೆರಹು ಮಾಡಲು ಬರಿಯ ಬಯಲಿಹುದು (ಜ್ಞಾನಸಿಂ. ೮–೧೪೮).

[< ಸಂ. ಉದ್ಗ್ರಹಣ. / **ತಮಿ.** ಉಕ್ಕಿರಾಣ; **ಮಲ. ತುಳು. ತೆಲು.** ಉಗ್ರಾಣ]

**ಉಗ್ರಾಣತೆ** (ನಾ). ಬಹಳವಾಗಿ ಹೊಮ್ಮಿದ್ದು : "ಉಗ್ರಾಣತೆಯೆನೆ ಬಹಳಮಾಗಿ ಪೊಣ್ಮಿದುದಕ್ಕುಂ" (ಭಾರನಿ. ೬೩). [?]

**ಉಗ್ರಾಣಿ** (ನಾ). ೧. ಉಗ್ರಾಣದ ಮೇಲ್ವಿಚಾರಕ, —ಅಧಿಕಾರಿ : ಉಗ್ರಾಣಿ ನಾರಣವೆಗ್ಗಡೆಯ ಗಿರಿಪಯ್ಯ (ಸೌಇಇ. IX–i, ೩೪೯–೪ ; 1282); ಪಡಸಾಲೆಗಳ ಮೇಲೆ ಉಗ್ರಾಣಿಗಳೂ ಕಾರಕೂನರೂ ತಮ್ಮ ತಮ್ಮ ಅಂತಸ್ತಿಗೆ ಅನುಗುಣವಾದ ಆಸನಗಳಲ್ಲಿ ಕುಳಿತು ಅಧಿಕಾರಗಳನ್ನು ಚಲಾಯಿಸುತ್ತಿದ್ದರು (ಶ್ರೀರಾಯ. ೪೪); ನಾನು ಆ ದೇವರ ಉಗ್ರಾಣಿ ಅದರ ಮೇಲ್ವಿಚಾರಣೆಯ ಭಾರ ಮಾತ್ರ ನನ್ನದು (ರಾಜ್ಯೋದ. ೫). ೨. ಉಗ್ರಾಣದ ಸೇವಕ (೩). ೩. (ಕರಾ). ಗ್ರಾಮದ ಉದ್ಯೋಗಸ್ಥರ (ಪಟೇಲ ಶಾನುಭೋಗರ) ಸೇವಕ: ರಿಕಾರ್ಡು ದಫ್ತರಗಳನ್ನು ಹೊತ್ತುಕೊಂಡು ಉಗ್ರಾಣಿ ಮತ್ತು ಭಟ್ಟರ ಈರ್ವರ ಕೂಲಿಗಳು (ಮಣ್ಣನಂ. ೧೨). [ಉಗ್ರಾಣ + –ಇ₂]

**ಉಗ್ರಾಣಿಕ** (ನಾ). = ಉಗ್ರಾಣಿ (೩). [ಉಗ್ರಾಣ + –ಇಕ]

**ಉಗ್ರಾಣಿಸು** (ಕ್ರಿ). ಉಗ್ರಾಣದಲ್ಲಿ ಕೂಡಿಡು: ಕಾಣಿಗೆ ಕಾಣಿಯ ನರ್ಚಿಪ ಕೇಣಂ ಮಾಣ್ದೀಗಳುಳ್ಳ ತನ್ನರ್ಥಮನುಗ್ರಾಣಿಸದಿತ್ತಪಳೀ ಬಿನ್ನಾಣಮುಮಾ ಚರ್ಮಭಸ್ತ್ರಿಕೆಯ ಬಲಮಲ್ತೇ (ದಶಕು. ೮–೧೯೧).

[ಉಗ್ರಾಣ + –ಇಸು₁]

**ಉಗ್ರಿ** (ನಾ). ೧. ಒಂದು ವಿಷಮೂಲಿಕೆಯ ಬೇರು (೩). ೨. ಉಗ್ರಜಾತಿಯ ಹೆಂಗಸು (೩). [ಸಂ. ಉಗ್ರಾ]

**ಉಘೆ** 'ಉಘೇ' ನೋ.

**ಉಘೇ**, ಉಗ್ಘೆ, ಉಘೆ (ಅ). ಜಯಘೋಷ; ಕೊಂಡಾಟದ ಅನುಕರಣ ಶಬ್ದ; ಭಳಿರೆ: ಕಟ್ಟಿಗೆಗಾಜರುಘೇಯುಘೇಯೆನುತ್ತಿರೆ (ಧರ್ಮಾವ್ಯ. ೬–೧೫೮); ನೆರೆದ ಜನವೆಲ್ಲುಘೇ ಚಾಂಗು ಬೊಲ್ಲೆನುತಿರಲು (ನಂಬಿರ. ೫–೭೫); ಜಗವುಘೇಯೆಂದುದು (ಕುವ್ಯಾಕ. ೬–೩೨); ಶತಸಹಸ್ರ ಕಂಠಗಳು ಏಕಕಂಠವಾಗಿ ಉಘೇ, ಹೊಯಿಸಳೇಶ್ವರ ಉಘೇ ಉಘೇ ಎಂದು ಬೊಬ್ಬಿರಿದುವು (ಶಾಂತಲಾ. ೧೦೭). **ಉಗ್ಘೆ** : ಉಗೆ ಚಾಂಗು ಬಲಯೆಂದು ನೆಗೆವ ರಭಸಂಗಳೊಳು (ದೀಕ್ಷಾಬೋ. ೧೦೭–೭). **ಉಘೆ** : ಕಾಶೀರಮಣ ವಿಶ್ವನಾಥಂ ನಿಜವ ತೋಱಿದನು ಜನರುಘೆಯೆನೆ (ಹಚಕಾ. ೧೩–೧೯); ಉಘೆಯೆಂಬ ಶಬ್ದಸಂಭ್ರಮದಿಂದೆ ಬಹಳ ನಂಬುಗೆಯ ಸೇವಕರು ಕಂಚುಕಿಯು ಉಘೆಯೆನಲುಜ್ಜು ಗದೊಳು ರತ್ನಮಯದ ಹಾವುಗೆಯ ಮೆಟ್ಟಿಸಿದರಚ್ಯುತಗೆ (ಮೋಹತ. ೪೨–೩೮). [?]

**ಉಚಕೊರಡು** 'ಉಜ್ಜುಗೊರಡು' ನೋ.

**ಉಚಟಿಗೆ** (ನಾ). ಒಂದು ಔಷಧಿಗಿಡ : "ಚಕ್ರಲಾ—ಉಚಟಗೆ (?)" (ಒಷಧಿ. ೫೩). [?]

**ಉಚಾಪತಿ**, ಉಚ್ಚಾಪತಿ (ನಾ). (ಉಕ). ಸಾಲವಾಗಿ ಸಾಮಾನುಗಳನ್ನು ತೆಗೆದುಕೊಳ್ಳುವುದು: ಕಿರಾಣಿ ಅಂಗಡಿಯವರಿಗೆ ತಮ್ಮ ಉದ್ದರಿ ಉಚಾಪತಿಯ ಹಣದ ಚಿಂತೆಯಿಲ್ಲವೆ? (ತುಬ್ಬಣ್ಣ. ೨೦೫); ನಮ್ಮದೂ ಅವರದೂ ಮೂವತ್ತು ವರ್ಷದ ಉಚಾಪತಿ (ರೂಢಿ). **ಉಚ್ಚಾಪತಿ**: (೩).

[← **ಮರಾ.** ಉಚಾಪತೀ; **ಹಿಂ.** ಉಚಾಪತ್]

**ಉಚಾಯಿಸು**, ಉಚ್ಚಾಯಿಸು, ಉಛಾಯಿಸು (ಕ್ರಿ). ಮೀರು; ಹದ್ದುಮೀರು; ಉಲ್ಲಂಘಿಸು; ಅವಿಧೇಯನಾಗು : ಸುಮ್ಮನೇ ಮಾತು ಯಾಕೆ ಉಚಾಯಿಸುತ್ತೀರಿ (ಸಾವಿಸ. ೭೬); ಮಾತುಗಳು ಉಚಾಯಿಸಿ ಮುಂದೆ ಬಂದಿದ್ದುವು (ಮುನಿಮಾ. ೩೬); ನರಸಿಂಹನೂ ಹೀಗೆ ಉಚಾಯಿಸಿ ಯಜಮಾನರ ಮುಖ ಮುರಿಯುತ್ತಿರಲಿಲ್ಲ (ಮಾಮನೆ. ೨೫). **ಉಚ್ಚಾಯಿಸು** (೩). **ಉಛಾಯಿಸು** : ತಾಳೋ, ಅಷ್ಟು ಉಛಾಯಿಸಿ ಮಾತಾಡಬಾರದು (ಚಂಗೂಚಿ. ೪೫); ರಾಘು ಮನೆಗೆ ಬಂದಾಗ ಸೊಸೆಯನ್ನು ತಪ್ಪಿಸಿ ಕೆಲವು ವೇಳೆ ಮಾತುಗಳನ್ನು ಉಛಾಯಿಸುತ್ತಿದ್ದರು. ಜೋಕೆ ಎನ್ನುತ್ತಿದ್ದರು (ಮೂಲಾನ. ೧೪೩).

[ಉಚಾ$_0$ + –ಇಸು$_3$. P ಉಚಾ ← **ಹಿಂದಿ.** ಉಚಾನಾ]

**ಉಚಿತ** (ಗು). ೧. ಸರಿಯಾದ; ಯೋಗ್ಯವಾದ; ತಕ್ಕುದಾದ: ಅತಿಶಯಧವಳೋಪನೀತಿಮಾರ್ಗೋಚಿತಗತಿ ಭಾವಿತ ಮಾರ್ಗಳಂ ಕ್ರಿಯಾರ್ತ್ಥಂ (ಕವಿರಾ. ೨–೧೫೧); ಮನದನ್ನನ ಸೇವೆಗುಚಿತ ವಸ್ತುಗಳನೆ ಚಿಂತಿಪುದು (ಹದಿಬ. ೩–೧೯). ೨. ಸುಖಕರವಾದ; ಸಂತೋಷದಾಯಕವಾದ. ೩. ಪಳಗಿದ; ಬಳಕೆಯ; ಚೆನ್ನಾಗಿ ತಿಳಿದಿರುವ. (ನಾ). ೪. ಕಾಣಿಕೆ; ಬಹುಮಾನ; ಕೊಟ್ಟವಸ್ತು : ಅರಸು ತಾಂ ಕೊಡುತಿಪ್ಪ ವರವುಚಿತಮಂ ನಿಲಿಸಿ (ಪ್ರೌಢರಾ. ೧–೫೦); ತರತರ ಉಚಿತಗಳನ್ನು ಮಹಾಕವಿಗಿತ್ತು ಮನ್ನಿಸಿದರು (ನಾಡೋಜ. ೨೧೮). ೫. ಹಣ ಕೊಡದಿರುವುದು; ಪುಕ್ಕಟೆಯಾದುದು : ಉಚಿತ ವಾಚನಾಲಯ (ರೂಢಿ); ಉಚಿತ ವಿದ್ಯಾರ್ಥಿನಿಲಯ (ರೂಢಿ). ೬. ಸಂದರ್ಭಕ್ಕೆ ತಕ್ಕ ರೀತಿ; ಕ್ರಮ; ಔಚಿತ್ಯ : ಕನ್ನಡದೊಳಗೇಕ ಬಹುತ್ವಂ ದ್ವಿವಚನಮುಚಿತದೆ ಬರ್ಕುಂ (ಶಮದ. ೯೪). [ಸಂ.]

**ಉಚಿತಜ್ಞ** (ನಾ). ಯೋಗ್ಯತೆಯನ್ನು ತಿಳಿದವನು; ತಕ್ಕುದನ್ನು ಬಲ್ಲವನು; ಔಚಿತ್ಯವನ್ನು ಅರಿತವನು: ಪ್ರಚುರತೆಯಿಂ ಬಹುವಚನಂಗಳವೇಕವಚನ ಕೃತಲಿಂಗಂಗಳ್ ನಿಚಿತವಿಸರ್ಗಮನುಟಿದಂದುಚಿತಜ್ಞರ್ತಿಳಿವುದಿವನುದಾಹೃತಿಮುಖದಿಂ (ಶಮದ. ೮೭). [ಸಂ.]

**ಉಚಿತವರ್ಣ** (ನಾ). ಸಂದರ್ಭಕ್ಕೆ ತಕ್ಕಂತೆ ಹೊಂದುವ ಅಕ್ಷರ: ತತ್ಪುರುಷಸಮಾಸದೊಳುದ್ಯತ್ಪೂರ್ವಪದಾಂತ್ಯಲೋಪಮಕ್ಕುಂ ಪ್ರಚುರಂ ವ್ಯುತ್ಪಾದಿಸಲ್ಕೆ ಪಡೆಗುಂ ತತ್ಪರದೊಳ್ಬಟಿಯಮುಚಿತವರ್ಣಾಗಮುಮುಂ (ಕಾವ್ಯಾವ. ೨೪೭). [ಉಚಿತ + ವರ್ಣ]

**ಉಚಿತವಱಿ** (ನಾ). ಯೋಗ್ಯತೆಯನ್ನು ತಿಳಿ; ಕ್ರಮವನ್ನು ತಿಳಿ: ನೆರೆದುದುದಧಿಪರೀತ ಪೃಥ್ವೀಶ್ವರರು ಬಳಿಕವರುಚಿತವಱಿದಾದರಿಸಿ ಹರಿವಿಷ್ಟರಗಳಲಿ ಸತ್ಕರಿಸಿದನು ಭೂಪ (ತೊರರಾ. ೧-೧೪-೪). [ಉಚಿತ + ಅಱಿ$_1$]

**ಉಚಿತವಿಧಿ** (ನಾ). ಸಂದರ್ಭಕ್ಕೆ ತಕ್ಕ ಕ್ರಮ; ಯೋಗ್ಯವಾದ ರೀತಿ: ದರ ದಾರ ಬಾರಮಕ್ಕುಂ ಪರದಾ ದ್ವಾರಕ್ಕೆ ಪೂರ್ವದೊಳ್ ತದ್ಭವಮಾಗಿರೆ ಸಿರಿಯ ವಂಕಪಾಣಿಯ ಮಿರೆ ಕಂಟಿಯಮುಚಿತವಿಧಿವಿಕಲ್ಪವಿಧಾನಂ (ಶಮದ. ೨೯೬). [ಸಂ.]

**ಉಚಿತವೆಡಂಗಿ** (ನಾ). ಒಬ್ಬಾಕೆಯ ಬಿರುದು: ಲಕ್ಷ್ಮೀನೊಳಂಬ ನಣುಗಿ ಉಚಿತವೆಡಂಗಿ ಶ್ರೀಮದ್ದೇವಳದೇವಿ (ಸೌಇಇ. IX–i, ೯೧–೧೬; 1036). [ಉಚಿತ + ಬೆಡಂಗಿ]

**ಉಚಿತಾಕ್ಷರ** (ನಾ). = ಉಚಿತವರ್ಣ: ಕರಮರ್ಥಾಕರಮುಚಿತಾಕ್ಷರ ಮವಲಂಬ ಪ್ರಸನ್ನಮತಿ ಮಧುರಮಲಂಕರಣಯುತಮೆನಿಸಿ(ಛಂದೋಂಬು. ೧-೯). [ಉಚಿತ + ಅಕ್ಷರ]

**ಉಚಿತೋಕ್ತಿ** (ನಾ). ಯೋಗ್ಯವಾದ ಮಾತು; ಸಂದರ್ಭಕ್ಕೆ ಸರಿಯಾದ ಮಾತು: ಇನಿತರ್ಥದೃಷ್ಟಿಯಿಲ್ಲಿನಿತುಚಿತೋಕ್ತಿಯಿಲ್ಲ (ಅಜಿಪು. ೧೨-೩೪). [ಉಚಿತ + ಉಕ್ತಿ]

**ಉಚು** (ನಾ). ಆಲೋಚನೆ ಮಾಡಲಾರದವನು (?): ಕವಿಸಂಘದ ಸದಸ್ಯರೆಲ್ಲರೂ ಆಬಾಲಬ್ರಹ್ಮಚಾರಿಗಳಾದ ಕಾರಣ ಅವರೆಲ್ಲರನ್ನೂ ಹಿಂದು ಮುಂದು ನೋಡದೆ, ಮೇಲೆ ಕೆಳಗೆ ಹಾರದೆ ಉಚುಗಳಂತೆ ಸುಮ್ಮನೆ ಮದುವೆಯಾಗಬೇಕು (ಕೋದಂಡ. ೧೨).
[?. / ಮಲ. ಉಚ್ಚು = ತಲೆಕೆಟ್ಟವನು]

**ಉಚ್ಚ** (ಗು). ೧. ಮೇಲಾದ; ಉನ್ನತವಾದ. 'ಉಚ್ಚಸ್ಥಿತಿ' ಪರಾ. (ನಾ). ೨. ಎತ್ತರ; ಮೇಲಿನ ಮಟ್ಟ: ಪಿರಿಯ ಪೊನ್ನ ತಳಿಗೆಯು ಮುಚ್ಚಮಪ್ಪಡ್ಡಣಿಗೆಯುಮನಿಟ್ಟು (ವಡ್ಡಾರಾ. ೬೮-೧೨). ೩. ಉದ್ದ: "ಉಚ್ಚಮುದ್ದಮಕ್ಕುಂ"(ಕವಿಕಂ. ೨೦೬). ೪. ಮುಖವನ್ನೆತ್ತಿ ನಡೆಯುವವನು: "ಉಚ್ಚನೆನೆ ಮುಖವೆತ್ತಿನಡೆವವಂ" (ಮಂಗರಾ. ೬೨-೨೨). ೫. ಶ್ರೇಷ್ಠತೆ; ಉನ್ನತಿ. ೬. [ಜ್ಯೋತಿ] ಏರಿಕೆಯ ಸ್ಥಾನ; ಶಿಖರ ಸ್ಥಾನ: ಉಚ್ಚದೊಳ್ ವೀಕ್ಷಿಸದೆ ಶುಭನಿವಹಂ (ಜಾತತಿ.೬-೧೧). [ಸಂ.]

**ಉಚ್ಚಂಗಿ** (ನಾ). ಒಂದು ದುರ್ಗದ ಹೆಸರು: ಪೆಂಪಿನುಚ್ಚಂಗಿಯ ಕೋಟೆಯಂ ಜಗಮುಸುಂಗೊಳೆ ಕೊಣ್ಡು ನೆಗಟ್ತಿ . . . ಗುತ್ತಿಯ ಗಂಗ ಭೂಪನಾ (ಎಕ. II, ೫೯-೯೨; 974).

ಉಚ್ಚಂಗಿಗೊಂಡ = ಉಚ್ಚಂಗಿಯನ್ನು ಗೆದ್ದುಕೊಂಡವನು; ಒಂದು ಬಿರುದು: ಬನವಾಸಿ ಹಲಸಿಗೆ ಹಾನುಂಗಲ್ಲುಚ್ಚಂಗಿಗೊಂಡ ಹೊಯ್ಸಳ ವೀರಬಲ್ಲಾಳದೇವರ ರಾಜ್ಯದ (ಎಕ. X, ಗೋರೀಬಿ. ೪೧-೩; 1180). ಉಚ್ಚಂಗಿಯಬ್ಬೆ = ಒಬ್ಬಾಕೆಯ ಹೆಸರು: ಕಲಿಯುಗದೊಳ್ ಉಚ್ಚಂಗಿಯಬ್ಬೆಯೆಂಬಳು ಮೊದಲಾಗಿ ಮೂವರು ಬ್ರಾಹ್ಮಣ ಕನ್ನಿಕೆಯರು ತಪಂಗೆಯ್ದೀಶ್ವರವರಪ್ರಸಾದದಿಂ ದೇವತ್ವಮಂ ಪಡೆದರದಱಿಂದುಚ್ಚಂಗಿಯಾ ಪರ್ವತಮೆಂಬುದು (ಸೌಇಇ. IX–i, ೧೨೬–೨೬; 1064).
[< ಸಂ. ಉಚ್ಚಶೃಂಗಿ]

**ಉಚ್ಚಂಡ** (ಗು). ೧. ತೀವ್ರವಾದ; ತೀಕ್ಷ್ಣವಾದ; ಉಗ್ರವಾದ: ಉಚ್ಚಂಡಪ್ರತಾಪೋದಯಮರಿಕುಮುದಾಭೋಗವಿಧ್ವಂಸಿಯಾಗಿರ್ದಿನಂ . . . ಬೆಳಗುಗೆ ಜಗಮಂ ಗೋಪಮಾರ್ತಾಂಡದೇವಂ (ಜಗವಿ. ೧-೪). (ನಾ). ೨. ಮೇಲೆ ಎತ್ತಿಕಟ್ಟಿದುದು: "ಉಚ್ಚಂಡಂ, ಅಪ್ರಲಂಬಂ- ಈ ೨ ಏಱಕಟ್ಟಿದುದು" (ಹಲಾಯು. ೧೨೯-೯೮); "ಉಚ್ಚಂಡಮುಮಾಪ್ರಲಂಬಮೆನಲೇಱಿಕಟ್ಟಿದುದಕೆ ನಾಮಂ" (ಮಂಗರಾ. ೧೩೫-೩೬). [ಸಂ.]

**ಉಚ್ಚಂಡಕರ** (ನಾ). ೧. ತೀಕ್ಷ್ಣವಾದ ಕಿರಣ. ೨. ಸಾಮರ್ಥ್ಯ ಉಳ್ಳ ಕೈ. ೧, ೨: ಆನತಜನಕ್ಕಾನಂದಮಂ ಮಾಚಿ಼್ಕೆ ಮಂಗಳಮುಚ್ಚಂಡಕರಂ ಮಹೀವಳಯದೊಳ್ ಚಾಳುಕ್ಯಮಾರ್ತಂಡನಾ (ಗದಾಯು. ೧-೪). [ಉಚ್ಚಂಡ + ಕರ$_4$]

**ಉಚ್ಚಂಬರಿ** (ಕ್ರಿ). ಮೇಲೆ ಬೀಳು; ಮೇಲೆ ಹಾರು: ವಸುದೇವ ನಂದನನೆನ್ನ ಮೋಘಶರೌಘಮಿಾತನಪಘನಮನುರ್ಚದುಚ್ಚಂಬರಿಯದೆ ತದೀಯ ಪದಪಕ್ಷದೊಳೆ ಪತಿತಮಾಗಿರ್ದಪುದು (ಸೇವಿಪು. ೫-೬೦ ವ).
[ಉಚ್ಚ + ಪರಿ$_1$]

**ಉಚ್ಚಕಕುದ** (ನಾ). ಎತ್ತರವಾದ ಹೆಗಲುಳ್ಳವನು: ಸ್ಥಿರಮಿತ್ರನುಚ್ಚಕಕುದಂ ಶ್ಲೇಷ್ಮಾಢ್ಯನುಕ್ಷೋದ್ಭವಂ (ಜಾತತಿ. ೧೬-೨). [ಉಚ್ಚ+ಕಕುದ]

**ಉಚ್ಚಗೋತ್ರಕರ್ಮ** (ನಾ). [ಜೈನ] ಕರ್ಮಪ್ರಕೃತಿಗಳಲ್ಲಿ ಒಂದು: "ಉಚ್ಚಗೋತ್ರಕರ್ಮ, ನೀಚಗೋತ್ರಕರ್ಮ, ಇವೆರಡು ಗೋತ್ರಕರ್ಮ ಪ್ರಕೃತಿಗಳು. ಇವುಗಳ ಉದಯದಿಂದ ಉಚ್ಚ ಹಾಗೂ ನೀಚ ಕುಲಗಳಲ್ಲಿ ಜೀವದ ಜನ್ಮವಾಗುವುದು" (ಜೈನಪ. ೩೭೬).
[ಉಚ್ಚ + ಗೋತ್ರ + ಕರ್ಮ]

**ಉಚ್ಚಘ್ರಾಣ** (ನಾ). ಎತ್ತರವಾದ ಮೂಗುಳ್ಳವನು; ಮುಂದೆ ಚಾಚಿದ ಮೂಗನ್ನು ಉಳ್ಳವನು (?): ಲಲನಾವಶ್ಯ ಸುದೃಷ್ಟಿ ಪೀನ ಶಿರನುಚ್ಚಘ್ರಾಣನುದ್ವೃತ್ತಭಾನಿಲಯಂ . . . ಮಿಾನಾಲಯಪ್ರೋದ್ಭವಂ (ಜಾತತಿ. ೧೬-೧೨). [ಸಂ.]

**ಉಚ್ಚಟಿಗೆ** (ನಾ). ಒಂದು ಔಷಧಿ ಗಿಡ: "ಚೂಡಾಲ – ನಾಗರಮುಸ್ತೆ ಉಚ್ಚಟಿಗೆ" (ಓಷಧಿ. ೫೮). [< ಸಂ. ಉಚ್ಚಟಿಕಾ]

**ಉಚ್ಚಟೆ** (ನಾ). ೧. ಒಂದು ಬಗೆಯ ಸುವಾಸನೆಯ ಹುಲ್ಲು; ಭದ್ರಮುಸ್ತೆ; ಕೊಡಸಾರಿಗೆಡ್ಡೆ. ೨. ಗುಲಗಂಜಿಯ ಗಿಡ. ೩. ಕಿರುನೆಲ್ಲಿಯ ಗಿಡ. [ಸಂ. ಉಚ್ಚಟಾ]

**ಉಚ್ಚಪುಚ್ಛ** (ನಾ). (ಪುಕ್ಕವು ಉದ್ದವಾಗಿರುವ) ಒಂದು ಬಗೆಯ ಹಕ್ಕಿ; ಉಲಿವ ಎಂಬ ಹಕ್ಕಿ: "ಉಚ್ಚಪುಚ್ಛಮಾಮ್ನಾನಮೆನಲುಲಿವಮಕ್ಕುಂ" (ಮಂಗರಾ. ೫೨-೮). [ಸಂ.]

**ಉಚ್ಚಯ** (ನಾ). ೧. ಸಮೂಹ; ರಾಶಿ; ಗುಂಪು. ೨. ಉಡಿಯನ್ನು ಬಿಗಿಗೊಳಿಸಿ ನಿರಿಯನ್ನು ಸಿಕ್ಕಿಸುವ ಗಂಟು; ಬಾಳೆಕಾಯಿ: "ನೀವೀ, ಉಚ್ಚಯಃ – ಈ ೨ ಕಣಯಂ" (ಹಲಾಯು. ೯೦-೩೯೩); "ನೀವಿಯುಚ್ಚಯಂ ಸೋಗೆಯಕ್ಕು" (ಮಂಗರಾ. ೧೧೧-೨೯). [ಸಂ.]

**ಉಚ್ಚರಣ** (ನಾ). ೧. ಉಚ್ಚಾರ ಮಾಡುವುದು; ಹೇಳುವುದು; ನುಡಿಯುವುದು. ೨. ಮೇಲೆ ಅಥವಾ ಹೊರಗೆ ಹೋಗುವುದು. [ಸಂ.]

**ಉಚ್ಚರಣೆ** (ನಾ). ೧. = ಉಚ್ಚರಣ ೧: ನೋಡುವೊಡೊಂದಕ್ಕರಮದು ಮಾಡುವೊಡುಚ್ಚರಣೆಗರಿದು ಮೂಱುಂ ತೆಱನಂ ಕೂಡೆ ಕವಿತತಿ ವಿಚಾರಿಸ ಬೇಡದಱಿಂ ಜಟಿಕುಳಕ್ಷಳಂಗಳನಿದಱೊಳ್ (ಗಿರಿಕ. ೧-೩೨); ಮಂತ್ರದುಚ್ಚರಣೆ ಸಹಿತ (ಭಾವಚಿಂ. ೯-೩೫); ಸಮ್ಮೋಹನವನಚ್ಯೊತ್ತಿದರು ತಾಳದಡಿಗಳ ಗಣಿತ ಶಬ್ದದುಚ್ಚರಣೆ ಸೊಗಸಾಗಲು (ಸೌಂದಪು. ೮-೫). ೨. = ಉಚ್ಚರಣ ೨. (ಕ). 'ಉಚ್ಚಾರಣೆ' ಪರಾ. [ಸಂ. ಉಚ್ಚರಣ]

**ಉಚ್ಚರಿತ** (ಗು). ಉಚ್ಚಾರಮಾಡಿದ; ಹೇಳಿದ (ಕ). [ಸಂ.]

**ಉಚ್ಚರಿಸು** (ಕ್ರಿ). ಉಚ್ಚಾರಮಾಡು; ನುಡಿ; ಹೇಳು: ತಾನೆ ನರಂಗೆ ಕಿರೀಟಿ ನಾಮಮುಂ ಸರಸದಿನಾಗಳುಚ್ಚರಿಸಿ ಸಾಹಸಮಂ ಪೊಗೞ್ದಂ ಸುರಾಧಿಪಂ (ಪಂಪಭಾ. ೫-೧೦೩); ಬರೆಪಂಬೊಕ್ಕುಚ್ಚರಿಸಲ್ ಬಾರದುವಕ್ಕರಮಲ್ತವು ಘನಸ್ವನಾದಿ ಧ್ವನಿಗಳ್ (ಶಮದ. ೨); ಅಂಗಚೇಷ್ಟೆಯಿಲ್ಲದೆ ಪದ್ಯದ ಅಕ್ಷರಗಳನ್ನು ಒತ್ತಿ ಉಚ್ಚರಿಸುವುದರಿಂದಲೇ ತಾಳದ ನೆಲೆಯನ್ನು ತೋರಿಸಬಹುದು (ಸಮಾಲೋ. ೧೮೧). [ಉಚ್ಚರಣ + -ಇಸು$_3$]

**ಉಚ್ಚಲ** (ಗು). ಮೇಲಕ್ಕೆ ಚಲಿಸುವ, —ಚಿಮ್ಮುವ; ಚಂಚಲ ಸ್ವಭಾವದ (ಕ). [ಸಂ.]

**ಉಚ್ಚಲಾಟ** (ನಾ). ಅತಿಸಾರ; ಭೇದಿ: ಕಾಲುಥೂಳಾಗಿ ಅವನಿಗೆ ಉಚ್ಚಲಾಟ ಹತ್ತಿದೆ (ರೂಢಿ). [ಉಚ್ಚಲು + ಅಟ]

**ಉಚ್ಚಲಿತ,** ಉಚ್ಚಳಿತ (ನಾ). ಮೇಲಕ್ಕೆ ಎದ್ದ; ಚಲಿತವಾದ (ಕ). **ಉಚ್ಚಳಿತ**: ಗಂಗೆಗೆ ಶಫರೋಚ್ಚಳಿತ ತರತ್ತರಂಗೆಗೊರ್ವಳೆ ಬಂದಳ್ (ಪಂಪಭಾ. ೧–೯೦). [ಸಂ.]

**ಉಚ್ಚಲಿಸು,** ಉಚ್ಚಳಿಸು, ಉಚ್ಛಳಿಸು (ಕ್ರಿ). **೧.** ಹೊರಹೊಮ್ಮು; ಹೊರಬೀಳು: ಆ ಬಿಂದುವಿರದೆ ಚಲಿಪಾಗ ಪಾಯುವುಚ್ಚಲಿಸಿಯುಮಳಿ ಮಕ್ಕಳರ್ಯ[ಹ]ರು (ನವಮೋ. ೧೪–೪೮); ನರ್ತಕಿ ರಂಜಿಸಿ ಕಬ್ಬಿನ ಬಿಲ್ಲಿಂದುಚ್ಚಲಿಸಿ ಬಂದ ಮಸೆದ ಮದನನ ಹೂಗಣೆ ಎನ್ನಿಸಿ ಸರ್ರನೆ ಜನಾಂತರಂಗವನ್ನೂ ರಂಗಭೂಮಿಯನ್ನೂ ಒಡನೆಯೇ ಹೊಕ್ಕಳು (ಕುಂಕುಮ. ೩೪). **ಉಚ್ಚಳಿಸು**: **೧.** "ಉಚ್ಚಳಿಸಿದುದೆನುತ್ತಂ . . . ಪೊಜಪೊಣ್ಮೆದುದಕ್ಕು" (ಕವಿಕಂ. ೨೪೫); ತಿಸುಳದೊಳುಚ್ಚಳಿಪ್ಪ ಪೊಸ ನೆತ್ತರೆ ಕೆಂದಳಿರಾಗೆ (ಪಂಪಭಾ. ೧–೬); ಬಾತುದುಂ ಮುಳ್ಳು ಸಿಗುರ್ಗಳುಂ ಪೊಜಗಮುಚ್ಚಳಿಕುಂ ವಿಭುಮಂಗಮುಕ್ತಿಯಿಂ (ಖಮದ. ೨–೨೦೦); ಸಂತಸಮೊರ್ಮೆಗೊರ್ಮೆ ತಣ್ಣನೆ ತಣಿವನ್ನಮುಚ್ಚಳಿಸು [ಪಾಠಾಂ. ಉಚ್ಚರಿಸು] ತಿರ್ದುದು ಚಿತ್ತದೊಳಾ ಮೃಗೇಂದ್ರನಾ (ವರ್ಧಪು. ೧೧–೧೦೬). **೨.** ಮೇಲೆನೆಗೆ; ಚಿಮ್ಮು; ಸಿಡಿ: ಸಿಂಹಲಂಘನದಿಂ ಮೇಲೆ ನೆಗೆದು ವಜ್ರಸಮಾನಮಪ್ಪ ಕೈಯಿಂದಂ . . . ತಿವಿದೊಡಾತನಲ್ಲಿ . . . ಮೇಗುಚ್ಚಳಿಸಿ ಬಿಜ್ಜಾಗಡೆ ಮಡಿದಂ (ವಡ್ಡಾರಾ. ೫೯–೩೦); ಕಂಧರಸಂಧಿಯನೆಯ್ದೆ ನೋಡಿ ತೊಟ್ಟನೆ ನರನೆಚ್ಚೊಡುಚ್ಚಳಿಸಿ ಬಿಜ್ದುದು ವೈರಿಶಿರಸ್ಸರೋರುಹಂ (ಪಂಪಭಾ. ೧೨–೧೬೮); ಒದೆದ ಭರದಿಂದಮುಚ್ಚಳಿಸಿದ ದುರ್ಯೋಧನನ ಮಕುಟಮಣಿಗಣವೆತ್ತಂ ಕೆದಱಿದುವಿಱಿವಬೆಡಂಗನ ಪೊದಟ್ದ ಕೋಪಾಗ್ನಿದಹನದಾಳ್ಕಿಡಿಗಳವೋಲ್ (ಗದಾಯು. ೮–೪೦); ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೆ ಎಂಬ ಷಡಾಧಾರ ಬಳಿವಿಡಿದು ನೆತ್ತಿಯಿಂದುತ್ತರಕ್ಕೆ ಉಚ್ಚಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಆದವ. ೨೧); ಘೃತಧಾರೆಗಳಿಗುಚ್ಚಳಿಸಿದುವು ಹರಹಿನಲಿ ನಾಲಗೆ ಹವ್ಯವಾಹನನ (ಕುವ್ಯಾಸ.೧೧–೨). **೩.** ಎಲ್ಲೆಮೀರು; ಆಕ್ರಮಿಸು; ಆವರಿಸು: ಮಚ್ಚರದಿನೊರ್ವರೊರ್ವರನುಚ್ಚಳಿಸಿ ತಗುಳ್ದು ಗೋವರಾರ್ದಿಸೆ ಕೀಱಂಕರ್ಚಿ ಪುಡಿಯೊಳ್ ಪೊರಳ್ದುವು ನಚ್ಚಿನ ಕಾಂಭೋಜವಾಜಿಗಳ್ ಕೆಲವಾಗಳ್ (ಪಂಪಭಾ. ೮–೯೪); ಎಚ್ಚೊಡೆ ತಪೋಮರೀಚಿಯನುಚ್ಚಳಿಸಲ್ಕಾಱದಿತ್ತ ತಿರುಗಿದ ಶರಮಂ ಚೆಚ್ಚರ ದೀಕ್ಷಿಸಿ ಛಲದಿಂದೆಚ್ಚಂ ಪಂಚೇಷು ಮದನಶರದಿಂದಾಗಳ್ (೧೦೪. ೮–೧೮); ತಟವನುಚ್ಚಳಿಸಿತು ಕಡಲು ಮಂತಿಟ್ಟರೆ ಘಟದ ಮೊಸರು ಚೆಲ್ಲುವಂತೆ (ಭರಚ. ೨೪–೩೬). **೪.** ದಾಟು: ಉಳಿದ ಜಪತಪ ನಿಯಮ ಹೋಮಂಗಳಲಿ ಸಂಸಾರಾರ್ಣವವನುಚ್ಚಳಿಸಬಹುದೇ ರಾಯ (ಕುವ್ಯಾಉ. ೩–೧೨೩). **೫.** ಕೊರೆ; ಸೀಳು; ಭೇದಿಸು: ಬಲುಬಿದಿರನುಚ್ಚಳಿಸುವಳಿ ಮುಖಿಕೆಳೆಯಕಬ್ಬಾನುವುದೆ (ಕುವ್ಯಾಕ. ೫–೨೮); ಎಚ್ಚೊಡುಚ್ಚಳಿಸಿದ ಬಾಳ ಹೆಬ್ಬಿದಿರ್ಗಳ ಕೊಚ್ಚಲು ವನಲಕ್ಷ್ಮಿ ಭಟರ್ಗೆ ಮೆಚ್ಚಿ ಕೊಟ್ಟಂತೆ ಮುತ್ತುಗಳುದುರಿತು (ಮೋಹತ. ೧೯–೨೩); ಸರಳ್ ನೆತ್ತಿಯೊಳಗುಚ್ಚಳಿಸಿದುದು (ಚಿಬಪು. ೩೨–೩೫). **೬.** ಪ್ರಕಾಶಿಸು; ಬೆಳಗು: ಎಳೆಗೆ ಗುಣರುಚಿಯಿನೊಳ್ಪಗ್ಗಳಿಸಿರೆ ಗುಣರುಚಿ ವಿಕಾಶವಾಗ್ರಶ್ಮಿಯಿನುಚ್ಚಳಿಸೆ ವದನೇಂದು ಪೆಂಪಂ ತಳೆದಂ ಗುಣನನ್ದಿದೇವ (ಎಕ. VII, ಶಿವಮೊ. ೪–೫೩; 1122); ಬಳಸಿ ತಾರಗೆಯ ನಡುವುಚ್ಚಳಿಪ ಚಂದ್ರಮನಂತೆ ಕಂಸನ ಲಲನೆ ಜೀವಂಜಸೆ ವಧೂತತಿವೆರಸು ರಂಜಿಸಲು (ಸಾಳ್ವಭಾ. ೧೨–೫೪).

**ಉಚ್ಛಳಿಸು**: **೨.** ನೀರ್ಗುಡಿದವೊಲಾದುದುಚ್ಛಳಿಸಿ ಸೂಸುವ ಕಣ್ಬನಿ ಕಂಜವಕ್ತ್ರೆಯಾ (ಆದಿಪು. ೧೨–೨೭); ಮಿಂಚು ಬೆಳಗುಚ್ಛಳಿಸದಂತೆ ದಟ್ಟೈಸ್ಸಿಬರೆ ಸಂಚಳಿಪ ಮನಕೆ ಮಿಕ್ಕಲ್ತೆಱಪನೀಯದಿರೆ (ಇಳೆರ.೫೨–೩); ಉದರದ ಗುಂಡಿಗೆಯನೊಡೆದುಚ್ಛಳಿಸಿದುದು ಕೋಪಶಿಖಿ ಮುಖದ (ತೊರರಾ. ೫–೬–೩). [ಉಚ್ಚಲನ$_0$ + –ಇಸು$_3$]

**ಉಚ್ಚಲು** (ನಾ). **೧.** ಅತಿಸಾರ; ಭೇದಿ. **೨.** ನೀರಾದ ಮಲ: ತಲೆ ಪಾಳಿಲ್ಲಾ ಉಚ್ಚಲು ಲದ್ದಿಯಿಂದ ಕಲ್ಮಶವಾಗಿರುವುದನ್ನು ನೋಡಿ . . . ರೇಗಿಕೊಂಡರು (ನಗೆಗ. ೬೫). [ಉಚ್ಚು$_1$ (< ಉಚ್ಚರ್) + –ಅಲ್$_2$]

**ಉಚ್ಚವ** (ನಾ). **೧.** ಸಡಗರ; ಸಂತೋಷ; ಉತ್ಸವ: ಭವಸಂತಾಪ ವಿಲೋಪಮಂ ನಿಯಮದಿಂದಿಚ್ಛೈಪವಂ ನಿಚ್ಚಮುಚ್ಚವ[ಪಾಠಾಂ. ತ್ಸವ] ದಿಂ ತ್ವಚ್ಚರಣೋಚ್ಚಭಕ್ತಿರಮೆಯಾ ಪೆರ್ಚಂ ಚಿರಂನಚ್ಚಿ ಮೆಚ್ಚಿ ವಲಂ ವರ್ತಿಕೆ (ವರ್ಧಪು. ೧೬–೮೨); ಅಮರ್ದುರ್ಚುವದಿಂದರ್ಘ್ಯಪಾದ್ಯಮಂ ವಿರಚಿಸಿ (ಉದ್ಭಟ. ೨–೨೩); ವಿಟರ್ಕಳೊಳ್ ಸಟೆಹೇೞಿ ನೇಮಮಂ ನೆಗಟ್ಟಿ ಮೆಚ್ಚಿದಳಂತೆ ಮೈಮಱೆದು ಮೈವೊಳೆಗೆ ಸಂದಿಚ್ಛೆಯಱಿದುಚ್ಚವದಿಂದುಳ್ಕೊಡಮೆಯಂ ಕವರ್ದುಕೊಂಡು (ಉದ್ಭಟ. ೧೦–೬೬ ವ); ತನಯ ನೊಗೆದ ಪನ್ನೆರಡುದಿನ ಮಣಿದೊಟ್ಟಿಲುಚ್ಚವದೊಳಿಸಗಿ (ಭಾವಚಿಂ. ೪–೬); ಉಚ್ಚವದೊಳಗಿತ್ತ ನವರತ್ನಭೂಷಣ ಪೆಚ್ಚಿ ಬಂದಿವೆ ನೋಡೇಳು (ಕಂಸವಿ ೨೨–೪೬); ಎಚ್ಚಂಬು ಪಟುಭಟರ ರಥಹಯಗಳನ್ನು ನಭಕುಚ್ಛ[ಚ್ಚ]ವದಿ ಪಾರಿಸಿತು (ತುರಂಗ. ೫೦–೪೫). **೨.** ಉತ್ಸವದ ಮೆರವಣಿಗೆ. 'ಉಚ್ಚವಮೂರುತಿ' ಪರಾ. [< ಸಂ. ಉತ್ಸವ]

**ಉಚ್ಚವಮೂರುತಿ** (ನಾ). ಉತ್ಸವಮೂರ್ತಿ; ಮೆರವಣಿಗೆಗೆ ಮೀಸಲಾದ ವಿಗ್ರಹ: ಇಚ್ಚಾರಿ ಮಕರತೋರಣ ರತ್ನಕೀಲಿತ ನಿಚ್ಚಳ ಹೊನ್ನ ತೋರಣದಿ ಸ್ವಚ್ಛದಿ ಪೊಱಮಟ್ಟಳು ಪುರಲಕ್ಷ್ಮಿಯ ಉಚ್ಚವ ಮೂರುತಿಯಂತೆ (ಮೋಹತ. ೨೪–೨೮). [ಉಚ್ಚವ + ಮೂರುತಿ]

**ಉಚ್ಚವವಡೆ** (ಕ್ರಿ). ಉತ್ಸಾಹವನ್ನು ಹೊಂದು; ಸಂಭ್ರಮವನ್ನು ಪಡೆ: ಪಚ್ಚೆಯ ಪಾವುಗೆಯವಧಾರು ಜೀಯಯೆಂದೆಚ್ಚಱು ಪೇಳ್ದ ಪೇಳ್ದ ನಿಗೆ ಉಚ್ಚವವಡೆದು ಬಾಣಾಸುರ ಹೊಕ್ಕನು ಸ್ವಚ್ಛದಿ ಮಣಿಸೆಜ್ಜೆವನೆಯ (ಮೋಹತ. ೨೨–೬). [ಉಚ್ಚವ + ಪಡೆ$_1$]

**ಉಚ್ಚವಿಸು,** ಉಚ್ಛವಿಸು (ಕ್ರಿ). ಉತ್ಸಾಹಗೊಳ್ಳು; ಸಂತೋಷಪಡು: ಅಚ್ಚ ಕಪಿಲವರ್ಣದ ಪಶು. . .ಬಂದಿರೆ ಪುಚ್ಛವ ನೋಡಿಯುಚ್ಚವಿಸಿದ ಬಾಣಾಸುರನು (ಮೋಹತ. ೨೨–೩೮); ಮನದೊಳುಚ್ಚವಿಸಿ . . . ಸಂತಸದಿ ಪರಮ ಗೋಪ್ಯದೊಳು (ನವಮೋ. ೨೬–೬೬). **ಉಚ್ಛವಿಸು**: ಸ್ವಚ್ಛದೊಳಿದಿರ್ಗೊಳ್ಳಬೇಕೆಂದು ಪೇಳಿದೊಡುಚ್ಛವಿಸಿದಳಂಬುಜಾಕ್ಷಿ (ಮೋಹತ. ೩೧–೩೪). [ಉಚ್ಚವ + –ಇಸು$_3$]

**ಉಚ್ಚವೇಣಿ** (ನಾ). **೧.** ಉದ್ದವಾದ ತಲೆಯ ಕೂದಲನ್ನು ಉಳ್ಳವಳು. **೨.** ಎತ್ತಿ ಕಟ್ಟಿದ ಎಣೆಗಂಟು ಉಳ್ಳವಳು: ಅಬ್ಜಸಂಭವನ ರಾಣಿಯ ಬಲಗೊಂಬೆನೊಲಿದುರುವೀಣಾಪಾಣಿಯನುಚ್ಚ [ಪಾಠಾಂ. ಉಚ್ಛವೇಣಿ]ಯನು (ಕುರಾಸಾಂ. ೧–೨೨). [ಸಂ. ಉಚ್ಚವೇಣೀ]

**ಉಚ್ಚಸ್ತನಿ** (ನಾ). ಉನ್ನತವಾದ ಮೊಲೆಗಳನ್ನು ಉಳ್ಳವಳು: [ಪು]ಚ್ಚವಣಂ ನೋಡುವೆನೆನ್ನಿಚ್ಚೆಯೊಳೀ ಮುನಿಯ ವರದ ಮಹಿಮೆಯ ನೆನುತಂದುಚ್ಚಸ್ತನಿ ಗಂಗೆಗೆ ಶಫರೋಚ್ಚಳಿತ ತರತ್ತರಂಗೆಗೊರ್ವಳೆ ಬಂದಳ್ (ಪಂಪಭಾ. ೧–೯೦). [ಸಂ. ಉಚ್ಚಸ್ತನೀ (ಉಚ್ಚ + ಸ್ತನ + –)]

**ಉಚ್ಚಸ್ಥಿತಿ** (ನಾ). ಮೇಲಿನ ಸ್ಥಾನ; ಉನ್ನತಸ್ಥಾನ: ಇಲ್ಲಿ ಅಂಡಾಶಯವು ಉಳಿದ ಎಲ್ಲ ಭಾಗಗಳಿಗಿಂತಲೂ ಉನ್ನತಸ್ಥಾನ ಪಡೆದಿರುವುದು. ಇಂಥಸ್ಥಿತಿಗೆ ಉಚ್ಚಸ್ಥಿತಿಯ ಅಂಡಾಶಯವೆಂದು (Superior Ovary) ಹೆಸರು (ಸಸ್ಯಶಾ. ೫೫). [ಉಚ್ಚ + ಸ್ಥಿತಿ]

**ಉಚ್ಚಹ, ಉಚ್ಚಾಹ, ಉಚ್ಛಾಹ** (ನಾ). ಉತ್ಸಾಹ; ಸಂತೋಷ: ಸಿರಿಯಾಯಿತ್ತೆಂದು ಉಚ್ಚಹದಿಂದುಬ್ಬದೆ (ವಚಶಾ. ೧೪೦-೧೦); ಕೆಳದಿಯರ ನಡುವೆ ಮನಂದಣಿವುಚ್ಚಹದಿಂದೆಯ್ತಂದು (ಜಯಕಾ. ೫-೪೨); ಸಂಜೆವಾರಕೆ ಮೂಡಿಯುಚ್ಚಹವನು ಬೀಱಿದುವು (ಕಂನವಿ. ೯-೧೬೬); ಎಚ್ಚತ್ತ ಬ್ರಾಹ್ಮಣ ಹೆಚ್ಚಿ ಸಂತೋಷದಿ ಉಚ್ಚಹದೇಳ್ಗೆಯನಾಂತು (ಅಬ್ಬಲೂ. ೨-೩೨). **ಉಚ್ಚಾಹ:** ಉಚ್ಚಾಹ ಶಿವಭಕ್ತಿಯುಚ್ಚಳಿಯದಿರಬೇಕು ನಿಚ್ಚಟದ ನಿಷ್ಠೆ ದೃಢ ಕೆಚ್ಚುಗೊಂಡಿರಬೇಕು (ಕವಿಚ. I, ೨೬೮ ದೀಕ್ಷಾಬೋ.). **ಉಚ್ಛಾಹ:** ಸತ್ಕಳಿಗಳೆ ಪುರುಷಾಕಾರಮಂ ತಾಳ್ದುವೋ ಭೂಸುರರುಚ್ಛಾಹಂ ಶರೀರಂ ಪಡೆದುದೋ ದಿಟಮೆಂಬಂದದಿಂ ರಾಜಿಪಂ ಸಂಗರಧೀರಂ ಚಾಮರಾಜಂ (ಎಕ. XI, ದಾವಣ. ೨೯-೨೩; 1424).
[< ಸಂ. ಉತ್ಸಾಹ]

**ಉಚ್ಚಳಿತ** 'ಉಚ್ಚಲಿತ' ನೋ.

**ಉಚ್ಚಳಿಸು** 'ಉಚ್ಚಲಿಸು' ನೋ.

**ಉಚ್ಚಾಟನ** (ನಾ). ಓಡಿಸುವಿಕೆ; ಅಟ್ಟುವುದು; ತೊಲಗಿಸುವುದು: ಓಂ ಕುರುಕುಲ್ಲೆ (ಳೆ) ಸ್ವಾಹಾಳಂಕೃತಮುರಗಾರಿವೆರಸು ಕೇರೊಳ್ ಬರೆಪಾಱುಂ ಕೋಣೆಯ ಕ್ರಮಮುರಗಯುಗಾಂಕಿತಮದು ಮಾೞ್ಕುಮಹಿಗಣೋಚ್ಚಾಟನಮಂ (ಲೋಕೋಪ. ೧೦-೧೯); ಸ್ಮೃತಿ ಪುರಾಣ ಷಡಂಗವಿಂಪ್ರನ ಸುತನ ದೆಸೆಯುಚ್ಚಾಟನಸ್ತಂಭಾದಿ ವಿದ್ಯೆಗಳು ಈ ದೆಸೆಯಾಗಿ ನಿಂದವು (ಕುವ್ಯಾಕ. ೨೨-೫); ಯಕ್ಷರಾಕ್ಷಸ ಭೂತ ಪಿಶಾಚಾದಿಗಳಿಗೆ ಉಚ್ಚಾಟನಮಕ್ಕುಂ (ಸಕವೈ. ೬೨). [ಸಂ.]

**ಉಚ್ಚಾಟನಂಗೆಯ್, ಉಚ್ಚಾಟನಂಗೈ** (ಕ್ರಿ). ಅಟ್ಟು; ಓಡಿಸು; ತೊಲಗಿಸು: ಮದವಾರಣಂ ಬರೆ . . . ಮೇಲ್ವರಿಯೆ ಹೋ ಹೋ ಬಾರದಿರು ಕೆಡೆಕೆಡೆಯೆನುತ್ತುಚ್ಚಾಟನಂಗೆಯ್ದು (ಬಸಪು. ೨೨-೩೦). **ಉಚ್ಚಾಟನಂಗೈ:** ಮೇಘಾಗಮೋಚ್ಚಾಟನಂಗೈದು ಕರಂ ಕಾಂತೌಘಸಂಮೋಹಮನೊದವಿ (ರಾಜಶೇ. ೯-೮).
[ಉಚ್ಚಾಟನ + ಗೆಯ್ (<ಕೆಯ್$_1$)]

**ಉಚ್ಚಾಟನಂಗೈ** 'ಉಚ್ಚಾಟನಂಗೆಯ್' ನೋ.

**ಉಚ್ಚಾಟನಮುದ್ರೆ** (ನಾ). [ತಂತ್ರಶಾ] ಮುದ್ರೆಗಳಲ್ಲಿ ಒಂದು: ಚಕ್ರಮುದ್ರೆ, ಮಹಾಮುದ್ರೆ . . . ಯೋನಿಮುದ್ರೆ, ಉಚ್ಚಾಟನಮುದ್ರೆ . . . ಯೆಂಬಾದಿಯಾಗಿ ಸಕಲ ಮುದ್ರೋಪಮುದ್ರಾಬಂಧ ಲಕ್ಷಣಗಳ ಗುರುಮುಖದಿಂದಱಿತು (ವಿವೇಕ. ೧೦೩). [ಉಚ್ಚಾಟನ + ಮುದ್ರೆ]

**ಉಚ್ಚಾಟನೆ** (ನಾ). ೧. = ಉಚ್ಚಾಟನ: ಕಾವ್ಯ ಸುಳ್ಳನ್ನು ಹೇಳುತ್ತದೆ; ಕೆಟ್ಟದ್ದನ್ನು ಬೋಧಿಸುತ್ತದೆ; ಅಶ್ಲೀಲವನ್ನು ವರ್ಣಿಸುತ್ತದೆ. ಇನಿಷ್ಟೂ ದಿಟವಾದರೆ ಕಾವ್ಯವನ್ನು ಉಚ್ಚಾಟನೆ ಮಾಡಬೇಕಾದ್ದೇ ಸರಿ (ಭಾರವಿಾ. ೨೧೩); ಹೋಟಲಿನಿಂದಲೂ ಉಚ್ಚಾಟನೆಯಾಯಿತು (ಮುನಿಮಾ. ೯೫). ೨. (ಉಕ) ಕಾಟ; ತೊಂದರೆ; ಉಪದ್ರವ: ನೆರೆಹೊರೆಯವರ ಉಚ್ಚಾಟನೆ ಹೆಚ್ಚಾಗಿದೆ (ರೂಢಿ). [ಸಂ. ಉಚ್ಚಾಟನ]

**ಉಚ್ಚಾಟಿತ** (ಗು). ಅಟ್ಟಿದ; ಓಡಿಸಿದ; ಬಿಟ್ಟುಹೋಗುವಂತೆ ಮಾಡಿದ: ಸೈನ್ಯದಂತಿಕರೋಚ್ಚಾಟಿತ ಸಲ್ಲಕೀ ಕಿಸಲಯಂ (ಆದಿಪು. ೧೩-೫೫). [ಸಂ.]

**ಉಚ್ಚಾಟಿಸು, ಉಚಾರ್ಟಿಸು** (ಕ್ರಿ). ಅಟ್ಟು; ಓಡಿಸು; ಬಿಟ್ಟುಹೋಗುವಂತೆ ಮಾಡು: ಕೆಲರಸುದ್ಧತಾಪ್ರತಿಮಹಿತಮಾರ್ಡಿ ಕೆಲರನುಚ್ಚಾಟಿಸಿ ಸರ್ವಹರಣಂಗೆಯ್ದು (ಪಂಪಭಾ. ೬-೩೦ ವ); ಎಳಬಿಂದುಶ್ರೀಯನುಚ್ಚಾಟಿಸಿ ರತಿರಭಸಕ್ಲಾಂತಕಾಂತಾನುಲೇಪಂಗಳ ಕಂಪಂಪೊತ್ತು (ಪುಷ್ಪಪು. ೯-೧೦೩); ಗೋವಿಂದರಾಜನ ಬೋಧನೆಗೊಳಗಾಗಿ ಆ ವಿಜಯಾದಿತ್ಯನನ್ನುಚ್ಚಾಟಿಸಬೇಕೆಂದು ಹವಣಿಸುತ್ತಿದ್ದ (ನಾಡೋಜ. ೧೬೬).
△ **ಉಚಾರ್ಟಿಸು:** ಸೆಂಡಿನ ತೆಱದಿಂ ನಿಜದೋರ್ದಂಡದಿನುಚ್ಚಾರ್ಟಿಸಿ ಪೊಳೆಯಲುಚ್ಚಂಗಿಯನಾಖಂಡಳವಿಭವಂ ಕ್ಷಣದಿಂ ಕೊಂಡಂ (ಎಕ. V, ಬೇಲೂರು. ೧೬-೫; 1136 ?). [ಉಚ್ಚಾಟನ + -ಇಸು$_3$]

**ಉಚ್ಚಾಪತಿ** 'ಉಚಾಪತಿ' ನೋ.

**ಉಚ್ಚಾಯಿಸು** 'ಉಚಾಯಿಸು' ನೋ.

**ಉಚ್ಚಾರ** (ನಾ). ೧. ಉಚ್ಚಾರಣೆ; ಹೇಳುವಿಕೆ: ವರ್ಣದ ಉಚ್ಚಾರ ಸ್ಪಷ್ಟವಾಗಿರಬೇಕು (ರೂಢಿ). ೨. ಮಲ; ಹೇಲು; ಸಗಣಿ; ಲದ್ದಿ: "ವರ್ಚಃ, ಉತ್ಸರ್ಗಃ, ಉಚ್ಚಾರಃ . . . ಮಲಂ – ಈ ೧೩ ವಿಷ್ಠೆ" (ಹಲಾಯು. ೧೦೫-೧೫). [ಸಂ.]

**ಉಚ್ಚಾರಕ** (ಗು). ೧. ಹೇಳುವ; ಶಬ್ದಮಾಡುವ; ಸಾರುವ; ಘೋಷಣೆಮಾಡುವ. (ನಾ). ೨. ಹೇಳುವವನು; ಸಾರುವವನು. ೩. ಹೊರಗೆ ಹೋಗುವಂತೆ ಮಾಡುವವನು; ಬಾಗಿಲುಕಾಯುವವನು; ಪ್ರತೀಹಾರ: "ವೇತ್ರಧರನುತ್ಸಾರಕಂ [ಪಾಠಾಂ. ಉಚ್ಚಾರಕಂ] ದಂಡಿಯುಕ್ಕು" (ಮಂಗರಾ. ೬೯-೪). [ಸಂ.]

**ಉಚ್ಚಾರಣ** (ನಾ). ಉಚ್ಚಾರಮಾಡುವುದು; ಹೇಳುವುದು; ನುಡಿಯುವುದು: ಸ್ವರಪರದೊಳಿರ್ಪ ತೆಱದಿಂದುರುಮುಖ್ಯೋಚ್ಚಾರಣಕ್ಕೆ ಬಾರದ ಕತದಿಂ (ಶಮುದ. ೧೨). [ಸಂ.]

**ಉಚ್ಚಾರಣೆ** (ನಾ). = ಉಚ್ಚಾರಣ: ಉಚ್ಚರಿಸಲ್ ಬಾರದುವು=ಉಚ್ಚಾರಣೆಗೆ ಬಾರದುವು (ಶಮುದ. ೨ ಟೀಕೆ); ಮನಸ್ಸಿನಲ್ಲೇ ಓದುವುದನ್ನು ಪರೀಕ್ಷಿಸುವಾಗ ಉಚ್ಚಾರಣೆಯನ್ನು ಪರೀಕ್ಷಿಸುವಂತಿಲ್ಲ (ಶಿಕ್ಷದ. ೩೫೯).
[ಸಂ. ಉಚ್ಚಾರಣ]

**ಉಚ್ಚಾರಿತ** (ಗು). ಉಚ್ಚರಿಸಿದ; ಹೇಳಿದ: ಕಾರಕದೋಷಮುಂ ವಚನದೋಷಮುಮಾ ಗುರುದೋಷಮುಂ ಲಘೂಚ್ಚಾರಿತ ಶಬ್ದದೋಷಮುಮದಂತೆ . . . ದೋಷಮುಮನೀ ತೆಱದಿಂ ತಱಿಸಲ್ಗೆ ಪಂಡಿತರ್ (ಕವಿರಾ. ೧-೧೧೨). [ಸಂ.]

**ಉಚ್ಚಾರಿಸು** (ಕ್ರಿ). ಹೇಳು; ನುಡಿ; ಧ್ವನಿಗೊಡು: ಪಂಚನಮಸ್ಕಾರಮನೋದುತ್ತಮುಚ್ಚಾರಿಸುವುದಂ ಕೇಳುತ್ತಮಿರಿ [ಪಾಠಾಂ. ಮನದೊಳೋದುತ್ತಿರಿ] ಮೆಂದು ಕಲ್ಪಿಸಿ (ವಡ್ಡಾರಾ. ೮೩-೨). [ಉಚ್ಚಾರಣ + -ಇಸು$_3$]

**ಉಚ್ಚಾವಚ** (ನಾ). ಮೇಲು ಮತ್ತು ಕೀಳು; ವಿವಿಧ; ಸಂಕೀರ್ಣ: ಆ ವಿಪುಲ ನಾದದೊಡನೆ ರಣಾವೇಶದಿನೊಗೆದ ಮುರಚತುರ್ವಲತುಮುಲೋಚ್ಚಾವಚನಾದದಿನಾದಂ ತೀವಿದ ಕುಪ್ಪಿಗೆವೊಲಾದುದಬ್ಜಭವಾಂಡಂ (ಜಗವಿ. ೧೨-೯). [ಉಚ್ಚ + ಅವಚ]

**ಉಚ್ಚಾಸನ** (ನಾ). ಉನ್ನತವಾದ ಆಸನ; ಎತ್ತರವಾದ ಪೀಠ: ತ್ರಿದಶಾಸನಂಗಳಲ್ಲಾಡಿದುವು ಜಗದ್ಗುರುಗೆ ಬೇಗಮುಚ್ಚಾಸನದಿಂದಿದಿರೇೞಿಮೆಂದು ಪೇೞ್ವವೊಲದೇಂ ಕರಂ ತೀರ್ಥಕರರ ಪುಣ್ಯಂ ಪಿರಿದೋ (ಆದಿಪು. ೬-೪೦). [ಉಚ್ಚ + ಆಸನ]

**ಉಚ್ಚಾಹ** 'ಉಚ್ಚಹ' ನೋ.

**ಉಚ್ಚಿ$_1$** (ಅ). ನಾಯಿಗಳನ್ನು ಕರೆಯಲು ಬಳಸುವ ಅನುಕರಣ ಶಬ್ದ; 'ಕುರ್ರೋ ಕುರ್ರೋ' ಎಂಬಂತೆ: ಜಾಯಿಲವನಾಗಳೆ ಚಿಟುಕಿಡುತ ಕರೆದು ಉಚ್ಚಿಲಿಂಗೋಚ್ಛಿಷ್ಟಭೋಗಿಯ ಉಚ್ಚಿ ಓಂಕಾರಾಂಕಯೋಗಿಯ ಉಚ್ಚಿರೇ ದಿವ್ಯಾಂಗನಪುನರ್ಜಾತನುಚ್ಚುಚ್ಚಿ ಎನುತ ಕರೆಯಲು ತಕ್ಷಣದೊಳಾ ಶುನಕವೈತಂದುದುಬ್ಬಿ ಕಲಿದೇವನವರಡಿಗಳಿಗೆಱಗಿ ನಿಲಲು (ಬಸಪು. ೫೫-೪೬). [ದೇ. ‖ ತಮಿ. ಉಚ್ಚಿ = ನಾಯಿ]

**ಉಚ್ಚಿ$_2$** (ನಾ). ತಲೆಯ ಮೇಲ್ಭಾಗ; ನೆತ್ತಿ (ಕಿ).
[ದೇ. ‖ ತಮಿ. ಮಲ. ತೆಲು. ಉಚ್ಚಿ]

**ಉಚ್ಚಿಸು** 'ಉರ್ಚಿಸು' ನೋ.

**ಉಚ್ಚಿಷ್ಟ** (ನಾ). ಎಂಜಲು ; ತಿಂದುಮಿಕ್ಕದ್ದು : ಬಡಗಿ ಮಾಚಲ ದೇವಿಯ ಕುಲಜೆಯ ಮಾಡಿಹೆನೆಂದು ಹೊನ್ನ ಕಪಿಲೆಯ ರಾವಣಶಾಖ ದುಚ್ಚಿಷ್ಟದ ಹಾಲಿನಿಂದ ಕೊಳನಟ್ಟುಂಬವರನೇನೆಂಬೆ (ಬಸವ. ೫೮೪) ; ಸ್ವಲ್ಪ ದೂರದಲ್ಲಿ ಒಂದೆರಡು ಕಾಗೆಗಳು ಉಚ್ಚಿಷ್ಟಕ್ಕಾಗಿ ಕಾದಿದ್ದವು (ಎಳೆಕ. ೩೬). [< ಸಂ. ಉಚ್ಛಿಷ್ಟ]

**ಉಚ್ಚು$_{1}$** 'ಉಚ್ಚುರ್' ನೋ.

**ಉಚ್ಚು$_{2}$** 'ಉಚ್ಚೆ' ನೋ.

**ಉಚ್ಚುಕ** (ನಾ). ೧. ಉತ್ಸುಕನಾದವನು. ೨. ಉತ್ಸುಕತೆ: ಎಜಿಗನಾಸೆಗೆ ಸಲ್ಲನಿಚ್ಚೆಗುಚ್ಚು[ಪಾಠಾಂ. ತ್ಸು]ಕನಾಗನೆಂತಪ್ಪ ಲಾಭಂಗ ಳೆಲ್ಲಿಯಿಂಪಾದೊಡಂ (ಅರಿರ. ದೇ. ೧೬೩–೧೨) ; ಮಾನದಿಂ ಲೀನದಿಂ ಮನ್ನಿಸಿಡೆ ಕುಳ್ಳಿರಿಸಲಸುರಾಂತಕುಚ್ಚುಕದಲಿ (ಜಿನಮು. ೩೦–೪೮). [< ಸಂ. ಉತ್ಸುಕ]

**ಉಚ್ಚುಕೊರಡು** 'ಉಜ್ಜುಗೊರಡು' ನೋ.

**ಉಚ್ಚುಗಂಟು** (ನಾ). ಬಿಚ್ಚಲು ಸುಲಭವಾದ ಗಂಟು (ಕಿ). [ಉಚ್ಚು$_{1}$ (< ಉಚ್ಚುರ್) + ಗಂಟು]

**ಉಚ್ಚುಗಂಟುಹೊಡೆ** (ಕ್ರಿ). ತಪ್ಪಿಸಿಕೊ (ಉಕ. ಕಿ). [ಉಚ್ಚುಗಂಟು + ಹೊಡೆ$_{1}$ (< ಪೊಡೆ$_{1}$)]

**ಉಚ್ಚೂಡ** (ನಾ). ಬಾವುಟದ ತುದಿಗೆ ಕಟ್ಟುವ ಕುಂಚ: "ಉಚ್ಚೂಡಾ, ಅವಚೂಡಾ— ಈ ೨ (ಪರಿವಿಡಿಯಿಂ) ಹಳಯಿಗೆಯ ಮೇ(ಎ)ಲೆ ಮೊಗದ ಕೆಳಗೆ ಕಟ್ಟಿದ ಕುಂಚಂ" (ಹಲಾಯು. ೬೫–೩೦೪) ; "ಕೇತನಂ ಹಳವಿಗೆಯೆನಿಕ್ಕುಮುಚ್ಚೂಡಮೆನಲಾ ತುದಿಯ ಸಡಕಮಕ್ಕು" (ಮಂಗರಾ. ೮೫–೨೬). [< ಸಂ. ಉಚ್ಚೂಡಾ]

**ಉಚ್ಚೂಲ** (ನಾ). = ಉಚ್ಚೂಡ (ಕಿ). [ಸಂ.]

**ಉಚ್ಚೆ, ಉಚ್ಚು$_{3}$** (ನಾ). ಮೂತ್ರ: ಸುರಿತಪ್ಪ ಕವಿಲೆಯುಚ್ಚೆಯನಿರ ದೊಯ್ಯನೆ ತಳಿದು ತಮ್ಮ ತಲೆಯೊಳ್ (ಸಮುಪ. ೯–೭೦) ; ಅಪ್ಪುಲವಣವ ಬಿಟ್ಟು ಸಪ್ಪೆಯ ಕೊಂಡಲ್ಲಿ ಉಚ್ಚೆಯ ಬಚ್ಚಲ ಮುಟ್ಟಲಾಗದು (ಏಲೇಶ್ವ. ೧೨) ; ಉಚ್ಚೆಯ ಕುಣಿಗೆ ಮೋಹಿಸಿ ಮುಕ್ತಿಗಾಣದೆ ಹುಚ್ಚರು ಬಾಳುವ ರೈಸೆ (ಭರಚ. ೬೫–೩೪) ; ಉಚ್ಚೆ ಕುಡಿಯಲಿಕ್ಕೆ ಉಪ್ಪು ಕೇಳಿದ (ಗಾದೆ) ; ಕನಸಿನಲ್ಲಿ ಬಾಳೆಹಣ್ಣು ತಿಂದದ್ದು ಸುಳ್ಳು ; ಉಚ್ಚೆ ಹೊಯ್ದದ್ದು ನಿಜ (ಗಾದೆ). **ಉಚ್ಚು$_{2}$** : (ಕರಾ) ಮಗು ಉಚ್ಚುಮಾಡಿದೆ (ರೂಢಿ). [ದೇ. ‖ ಕೊಡ. ಉಚ್ಚಿ ; ತೆಲು. ಉಚ್ಚ ; ಗೊಂಡಿ. ಉರ್ಕ್]

**ಉಚ್ಚೆಕಟ್ಟು** (ನಾ). ಮೂತ್ರ ವಿಸರ್ಜನೆಯಾಗದಂತೆ ತಡೆಯಾಗುವ ಒಂದು ರೋಗ; ಮೂತ್ರದ ತಡೆ (ಕಿ). [ಉಚ್ಚೆ + ಕಟ್ಟು$_{2}$]

**ಉಚ್ಚೆಕಾಯಿ** (ನಾ). ಒಂದು ಬಗೆಯ ಕಾಯಿ: ಉಚ್ಚೆಕಾಯಿ, ನೀರುಕಾಯಿ (ವೈಔಗಿ. ೬೧–೧೪೫೮). [?]

**ಉಚ್ಚೆಗುಣಿ** (ನಾ). ಮೂತ್ರದ ಗುಳಿ (ಕಿ). [ಉಚ್ಚೆ + ಕುಣಿ$_{2}$ (< ಕುೞಿ$_{2}$)]

**ಉಚ್ಚೆಚೀಲ** (ನಾ). ೧. ಮೂತ್ರಕೋಶ (ಕಿ). ೨. ಭ್ರೂಣದ ಮೇಲಿನ ಮೊದಲನೆಯ ಪೊರೆ; ಗರ್ಭವೇಷ್ಟನೆ (ಉಕ. ಕಿ). [ಉಚ್ಚೆ + ಚೀಲ]

**ಉಚ್ಚೆಪೀಡೆ** (ನಾ). ಮೂತ್ರರೋಗ (ಕಿ). [ಉಚ್ಚೆ + ಪೀಡೆ]

**ಉಚ್ಚೆಬುರುಕ** (ನಾ). ಮೂತ್ರವನ್ನು ತಡೆಯಲಾರದವನು ; ಹಲವು ಬಾರಿ ಮೂತ್ರವಿಸರ್ಜನೆ ಮಾಡುವವನು (ಕಿ). [ಉಚ್ಚೆ + –ಪುರುಕ]

**ಉಚ್ಚೆಬುರುಕಿ** (ನಾ). ಮೂತ್ರವನ್ನು ತಡೆಯಲಾರದವಳು ; ಹಲವು ಸಾರಿ ಮೂತ್ರವಿಸರ್ಜನೆ ಮಾಡುವವಳು (ಕಿ). [ಉಚ್ಚೆಬುರುಕ + –ಇ$_{2}$]

**ಉಚ್ಚೆಬುರುಡೆ** (ನಾ). ಉಚ್ಚೆಚೀಲ (ಕಿ). [ಉಚ್ಚೆ + ಬುರುಡೆ]

**ಉಚ್ಚೆಮಲ್ಲಿ** (ನಾ). = ಉಚ್ಚೆಬುರುಕಿ (ಕಿ). [ಉಚ್ಚೆ + ಮಲ್ಲಿ]

**ಉಚ್ಚೆಮೂಳಿ** (ನಾ). = ಉಚ್ಚೆಬುರುಕಿ (ಕಿ). [ಉಚ್ಚೆ + ಮೂಳಿ]

**ಉಚ್ಚೆರೋಗ** (ನಾ). ಮೂತ್ರರೋಗ (ಕಿ). [ಉಚ್ಚೆ + ರೋಗ]

**ಉಚ್ಚೈರ್ಗೋತ್ರ** (ನಾ). ೧. [ಜೈನ] ಎರಡು ವಿಧವಾದ ಗೋತ್ರಗಳಲ್ಲಿ ಒಂದು. ℙ ಈ ಕರ್ಮದಿಂದ ಉತ್ಕೃಷ್ಟ ವಂಶದಲ್ಲಿ ಜನ್ಮವಾಗುತ್ತದೆ: ಉಚ್ಚೈರ್ಗೋತ್ರ ನೀಚೈರ್ಗೋತ್ರಭೇದದಿಂ ದ್ವಿವಿಧಮಪ್ಪ ಗೋತ್ರಮುಮಂ (ಸುಕುಮಾ. ೩–೩೯ ವ). ೨. ಹದಿಮೂರು ಪ್ರಕೃತಿಗಳಲ್ಲಿ ಒಂದು : ಬಾದರಯಶಸ್ಕೀರ್ತಿರುಚ್ಚೈರ್ಗೋತ್ರ ತೀರ್ಥಕರ ನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಆದಿಪು. ೧೬–೪೯ ವ). [ಸಂ.]

**ಉಚ್ಚೈರ್ಘುಷ್ಟ** (ನಾ). ಗಟ್ಟಿಯಾದ ಕೂಗು ; ಗರ್ಜನೆ. [ಸಂ.]

**ಉಚ್ಚೈರ್ಘೋಷ** (ನಾ). = ಉಚ್ಚೈರ್ಘುಷ್ಟ. [ಸಂ.]

**ಉಚ್ಚೈರ್ಧ್ವನಿ** (ನಾ). = ಉಚ್ಚೈರ್ಘುಷ್ಟ. [ಸಂ.]

**ಉಚ್ಚೈರ್ಧ್ವಾನ** (ನಾ). = ಉಚ್ಚೈರ್ಘುಷ್ಟ : ಬಹಿರುದ್ಯಾನಾಂತರದೊಳ್ ಸಹಸೋದಿತ ಮತ್ತಕೋಕಿಲೋಚ್ಚೈರ್ಧ್ವಾನಂ ಮುಹುರಾಕರ್ಣಿಸೆ (ಕವಿರಾ. ೧–೫೫). [ಸಂ.]

**ಉಚ್ಚೈಶ್ರವ** (ನಾ). = ಉಚ್ಚೈಶ್ರವಸ್ಸು: "ಉಚ್ಚೈಶ್ರವಂ ಸುರಹಯಮೆನಲ್ಕಿಂದ್ರನಶ್ವಮೆನಿಸಿಕ್ಕುಂ" (ಮಂಗರಾ. ೧೩–೨). [< ಸಂ. ಉಚ್ಚೈಃಶ್ರವಸ್]

**ಉಚ್ಚೈಶ್ರವತ್ವ** (ನಾ). ನೆಟ್ಟಗಿರುವ ಕಿವಿಗಳಿಂದ ಕೂಡಿರುವಿಕೆ: ಆ ವಾಜಿಯ ಹೇಷಾರವಮಾ ವಾಸವನಶ್ವಕರ್ಣಮಂ ಪುಗೆ ಭಯಮುತ್ತೇವೇಳ್ವೆನಿನ್ನುಮದನೇ ಭಾವಿಸುತುಚ್ಚೈಶ್ರವತ್ವಮಾಳ್ದದು ತೋರ್ಕುಂ (ರಾಜಶೇ. ೧೩–೬೯). [ಸಂ. ಉಚ್ಚೈಃಶ್ರವತ್ವ]

**ಉಚ್ಚೈಶ್ರವಸ್ಸು** (ನಾ). ೧. ನೆಟ್ಟನೆಯ ಕಿವಿಗಳಿಂದ ಕೂಡಿದುದು. ೨. ಇಂದ್ರನ ಕುದುರೆ. [< ಸಂ. ಉಚ್ಚೈಃಶ್ರವಸ್]

**ಉಚ್ಚೈಸು** (ಕ್ರಿ). (ದೂಳಿನಂತೆ) ಮೇಲಕ್ಕೆ ಚಿಮ್ಮು, —ನೆಗೆ: ಹಸ್ತಿಹಯ ಜನ್ಮಿಸದ ಮಲೆ ಬಿಲ ನರ್ತನದಿನುಚ್ಚೈಸದಿಳೆ ಜಲ ಮುತ್ತು ಮಣಿ ಜನಿಯಿಸದ ರೋಹಾಚಳ . . . ಇಲ್ಲಾ ಪ್ರದೇಶದಲಿ (ಜೀವಂಚ. ೨–೬). [ಉಚ್ಚ + –ಇಸು$_{3}$]

**ಉಚ್ಚೈಸ್ತರ** (ಗು). ಎತ್ತರವಾದ, ಗಟ್ಟಿಯಾದ (ಧ್ವನಿ). [ಸಂ.]

**ಉಚ್ಚೈವಿಸು** 'ಉಚ್ಚವಿಸು' ನೋ.

**ಉಚ್ಚೈಳಿಸು** 'ಉಚ್ಚಲಿಸು' ನೋ.

**ಉಚ್ಛಾದನ** (ನಾ). ೧. ಸುಗಂಧದ್ರವ್ಯಗಳಿಂದ ಮೈಯನ್ನು ತೀಡಿ ಚೊಕ್ಕಟಗೊಳಿಸಿಕೊಳ್ಳುವುದು (ಕಿ). ೨. ಮರೆಯನ್ನು ತೆಗೆಯುವುದು ; ಅನಾಚ್ಛಾದನ. [ಸಂ.]

**ಉಚ್ಛಾಪ** (ನಾ). ಶಾಪ ಪರಿಹಾರ ; ವಿಶಾಪ : ಇದೇ ನನ್ನ ಕೊನೆಯ ಸಂದೇಶ, ಗಾಯಿತ್ರಿಯ ಸತೀತ್ವರಕ್ಷಣೆಯೇ ಇದಕ್ಕೆ ಉಚ್ಛಾಪ (ಪ್ರೇಮಾಶ್ರ. ೨೧೦). [ಸಂ.]

**ಉಚ್ಛಾಸಿ** (ನಾ). ತೂರುವುದು : "ಉಚ್ಛಾಸಿ [ಪಾಠಾಂ. ಉತ್ಸಾಸಿ, ಉತ್ಸಾಹಿ]ಯೆನೆ ತೂರ್ವುದಕ್ಕುಂ" (ಮಂಗರಾ. ೧೮೯–೩). [ಸಂ. ಉಚ್ಛಾಸಿನ್ ?]

**ಉಚ್ಛಾಹ** 'ಉಚ್ಚಹ' ನೋ.

**ಉಚ್ಛಾಹಿಸು** (ಕ್ರಿ). ಉತ್ಸಾಹಗೊಳ್ಳು ; ಸಂತೋಷಪಡು : ಮದುವೆಯಲ್ಲುಚ್ಛಾಹಿಸಿ (ಲಿಂಗಪು. ೧೬–೧೩). [ಉಚ್ಛಾಹ (< ಉಚ್ಚಹ) + –ಇಸು$_{3}$]

**ಉಚ್ಛಿತ್ತಿ** (ನಾ). ತುಂಡರಿಸುವುದು ; ನಾಶಮಾಡುವುದು : ಮೂಲೋತ್ತರಾದಿ ಭೇದ ಭಿನ್ನಕರ್ಮಪ್ರಕೃತಿಗಳ ನಿರ್ಮೂಳೋಚ್ಛಿತ್ತಿಮೋಕ್ಷಮೆಂಬುದು (ಆದಿಪು. ೧೦–೬೧ ವ) ; ಅಸಿಲತಾಧಾರೆಯಿಂ ಕಿಲ್ಬಿಷವ್ರಾತ ಕಳಂಕೋಚ್ಛಿತ್ತಿಯಂ ಸಂತತ ಜಿನಸವನೋದ್ಯತ್‌ಪಯೋಧಾರೆಯಿಂ ಮಾಡಿ ಕರಂ ಪ್ರಖ್ಯಾತಿವೆತ್ತಂ (ಚಂದ್ರಪು. ೪–೮೪). [ಸಂ.]

**ಉಚ್ಛಿಷ್ಟ** (ನಾ). ಎಂಜಲು ; ತಿಂದು ಮಿಕ್ಕದ್ದು : "ಭುಕ್ತೋಚ್ಛಿಷ್ಟಂ, ಫೇಳಿಕಾ – ಈ ೨ ಮಡಗೂಳು" (ಹಲಾಯು. ೫೪–೧೭೧) ; "ಭೋಜನಕ್ಕಾಗಿ ಮಿಕ್ಕದು ವಿಘಸಮುಕ್ಕುಂಡಭಾಜನದೊಳಿರೆ ಫೇಳಿಯುಚ್ಛಿಷ್ಟ ಮೆನಿಸಿಕ್ಕು" (ಮಂಗರಾ. ೬೫–೭) ; ಉಚ್ಛಿಷ್ಟಮಾಗಲು ಮೃಷ್ಟಾನ್ನವು ಸರ್ಪಕಾಯ್ದ ಧನಮುಂ . . . ಉಣ್ಣದೆ ಪೋಪುದೈ (ಸೋಮೇಶ. ೯೧) ; ಸ್ವತಂತ್ರವಾದ ರಾಜ್ಯವನ್ನು ಪಡೆದವರು ನಾವು ಅವನಿಗೆ ಕಿಂಕರರಾದರೆ, ಅಕ್ಕಿಯನ್ನು ಕೊಟ್ಟು ಉಚ್ಛಿಷ್ಟವನ್ನು ತಿಂದಂತೆ ಹೀನಾಯವಾಗುತ್ತದೆ (ಶಕಾರ. ೨೦೧). [ಸಂ.]

**ಉಚ್ಛಿಷ್ಟಪಕ್ವ** (ನಾ). ತಿಂದು ಬಿಟ್ಟ ಹಣ್ಣು ; ಎಂಜಲು ಹಣ್ಣು : ಬಟ್ಟನೇಱಿಲ ಚೆಂಗಾರೆಯ ಮೆಲ್ದುಗುಬ್ಬ ಸಹಕಾರೋಚ್ಛಿಷ್ಟಪಕ್ವಂಗಳಂ (ಸುಕುಮಾ. ೪–೫೭). [ಉಚ್ಛಿಷ್ಟ + ಪಕ್ವ]

**ಉಚ್ಛಿಷ್ಟಸೂತಕ** (ನಾ). ಎಂಜಲಿನಿಂದ ಆದ ಮೈಲಿಗೆ,—ಸೂತಕ : ಜಾತಿಸೂತಕ, ಜನನಸೂತಕ, ಪ್ರೇತಸೂತಕ, ಉಚ್ಛಿಷ್ಟ ಸೂತಕ, ರಜಃ [ಪಾಠಾಂ. ಪ್ರಜಾ] ಸೂತಕವೆಂಬ ಪಂಚಸೂತಕಗಳನಳಿದಾತನಾಗಿ (ವಿವೇಕ. ೧೧೦) ; ಎಡೆಗೊಡದೆ ಮಲಮೂತ್ರ ವರ್ಜಿಸುವ ಕಾಲದೊಳು ಷಡುರಸಾನ್ನವನುಂಬ ಉಚ್ಛಿಷ್ಟಸೂತಕದ ಗೊಡವೆಯಿಲ್ಲಂ ಸದಾ ಶುಚಿಯೆಂದು ನುಡಿವವನ ಚರಣಾಂಬುಜಕ್ಕೆ ಶರಣು (ಲಶಿಚಿಂ. ೪೩–೧೫).
[ಉಚ್ಛಿಷ್ಟ + ಸೂತಕ]

**ಉಚ್ಛೀರ್ಷಕ** (ಗು). ೧. ತಲೆ ಎತ್ತಿಕೊಂಡಿರುವ. (ನಾ). ೨. ತಲೆ ದಿಂಬು. [ಸಂ.]

**ಉಚ್ಛೃಂಖಲ,** ಉಚ್ಛೃಂಖಳ (ಗು). ಸಂಕೋಲೆ ಇಲ್ಲದ ; ಕಟ್ಟುಪಾಡಿಗೆ ಒಳಪಡದ ; ಸ್ವೈರವೃತ್ತಿಯುಳ್ಳ ; ನಿಯಮವನ್ನು ಮೀರಿದ : ದೇವ ಬಲಿಬಂಧನೋಚ್ಛೃಂಖಲಾಕಾರ ಜಯ ದೇವ ದಶಕಂಠಕಂಠದ್ರುಮಕುಠಾರಜಯ (ಜಗವಿ. ೫–೧೧೨ ರ). **ಉಚ್ಛೃಂಖಳ :** ಹಿಮವಚ್ಛೈಳಾಂಶುವಂ ಮೀಱಿ ದಿಗ್ಧಾತ್ರೀವ್ಯೋಮ ವಿಭಾಗಗಾಮಿಯೆನಿಸಿತ್ತುಚ್ಛೃಂಖಳಂ ದಾಮನಂದಿತ್ರೈವಿದ್ಯಮುನೀಂದ್ರ ನಿರ್ಮಳಯಶಶ್ಶ್ರೀ ಶುಭ್ರತಾವಿಭ್ರಮಂ (ಚಂದ್ರಪು. ೧–೩೩). [ಸಂ.]

**ಉಚ್ಛೃಂಖಲತನ** (ನಾ). ಮನ ಬಂದಂತೆ ನಡೆಯುವಿಕೆ ; ಸ್ವೈರವೃತ್ತಿ : ಒಮ್ಮೆ ವಿವಾಹವಾಯಿತೆಂದರೆ ಮುಂದೆ ಬೇಕಾದಂಥ ಉಚ್ಛೃಂಖಲತನದಿಂದ ನಡೆದರೂ ಸಾಗೀತು (ಬ್ರಹ್ಮಜೀ. ೪).
[ಉಚ್ಛೃಂಖಲ + -ತನ]

**ಉಚ್ಛೃಂಖಲೆ** (ನಾ). ಹಿಡಿತಕ್ಕೆ ಸಿಕ್ಕದವಳು, —ಮೀರಿದವಳು ; ತಪ್ಪಿಸಿಕೊಂಡವಳು : ವಧ್ಯಶಿಲೋಚ್ಛೃಂಖಲೆಯಾಗಿ ದುರ್ಗಿ ನುಡಿದಳ್ (ಜಗವಿ. ೩–೧೯). [ಸಂ. ಉಚ್ಛೃಂಖಲಾ]

**ಉಚ್ಛೃಂಖಳ** 'ಉಚ್ಛೃಂಖಲ' ನೋ.

**ಉಚ್ಛೇದ** (ನಾ). ಕತ್ತರಿಸುವಿಕೆ ; ನಾಶ : ಮಧುಕೈವರ್ತನಿಗೆ ತಾನು ಕೈಹಚ್ಚಗೊಡುವುದಿಲ್ಲ, ಅವನ ಉಚ್ಛೇದವಾಗಗೊಡುವುದಿಲ್ಲ (ಇಪ್ಪಕ. ೪೧೪). [ಸಂ.]

**ಉಚ್ಛೇದನ** (ನಾ). ಕತ್ತರಿಸಿ ಹಾಕುವುದು ; ಧ್ವಂಸಗೊಳಿಸುವುದು : ಅಂತುದೀರ್ಣೋಚ್ಛೇದನಮುಂ ನಿರಾತಂಕಮುಮಾಗಿ (ಶಾಂತಿಪು. ೧೧–೪೮ ವ). [ಸಂ.]

**ಉಚ್ಛೇದ್ಯಶತ್ರು** (ನಾ). ನಾಶಗೊಳಿಸಬಹುದಾದ ಶತ್ರು : ಬಲಂಗಳೊಂದುಮಿಲ್ಲದ ಕಾರಣದಿಂ ನಿಮ್ಮಡಿಗುತ್ಸಾಹಶಕ್ತಿ ಸಾಧಾರಣಂ ಅದಱಿಂ ನಾವುಮುಚ್ಛೇದ್ಯಶತ್ರುಗಳಾಗಿರ್ದಪೆಂದು (ಪಂಚತಂ. ೨೧೬–೯).
[ಸಂ. (ಉಚ್ಛೇದ್ಯ + ಶತ್ರು)]

**ಉಚ್ಛ್ರಯ** (ನಾ). = ಉಚ್ಛ್ರಾಯ. [ಸಂ.]

**ಉಚ್ಛ್ರಾಯ** (ನಾ). ಅಭಿವೃದ್ಧಿ ; ಏಳಿಗೆ ; ಹೆಚ್ಚಳ : ಕುಟುಂಬದ ಉಚ್ಛ್ರಾಯಕ್ಕಾಗಿ ಹಣವನ್ನು ಸಂಗ್ರಹಿಸಿಡಲೇಬೇಕೆಂಬುದು ಶ್ಯಾಮರಾಯನಿಗೆ ಭಾವನಿಂದಲೂ ತಂದೆಯವರಿಂದಲೂ ಉಪದೇಶ ಕೇಳಿ ಕೇಳಿ ಹೌದೆನ್ನಿಸಿತು (ಕುರುಕಾ. ೧೪೨) ; ಕರ್ನಾಟಕದ ಇತಿಹಾಸದಲ್ಲೇ ೧೦ನೆಯ ಶತಮಾನವು ಬಹುಮಹತ್ವದ ಕಾಲವು. ಕರ್ನಾಟಕಸಾಮ್ರಾಜ್ಯದ ಉಚ್ಛ್ರಾಯದ ಕಾಲವೆಂದು ಅದಕ್ಕೆ ಕರೆಯಬಹುದು (ಸಾಹಿಸ. ೩). [ಸಂ.]

**ಉಚ್ಛ್ರಾಯಸ್ಥಿತಿ** (ನಾ). ಅಭಿವೃದ್ಧಿಯ ಸ್ಥಿತಿ ; ಏಳಿಗೆ : ಚಿಕ್ಕದೇವರಾಜರು . . . ರಾಜ್ಯವಾಳಿದರು. ಇವರ ಕಾಲದಲ್ಲಿ ಮೈಸೂರು ರಾಜ್ಯವು ಅತ್ಯಂತ ಉಚ್ಛ್ರಾಯಸ್ಥಿತಿಯಲ್ಲಿತ್ತು (ಮೈವಾಸ್ತು. ೧೭).
[ಉಚ್ಛ್ರಾಯ + ಸ್ಥಿತಿ]

**ಉಚ್ಛ್ರಿತ** (ಗು). ೧. ಮೇಲೆತ್ತಿದ ; ಮೇಲೆ ಎತ್ತಿ ಹಿಡಿದ : ಉಚ್ಛ್ರಿತ ಸಮೀಚೀನ ಚೀನಧ್ವಜವಿತಾನವಿರಾಜಿತಮುಂ (ಚಂದ್ರಪು. ೬–೯೪ ವ). ೨. ಉನ್ನತವಾದ ; ವೃದ್ಧಿಹೊಂದಿದ ; ಬೆಳೆದ. [ಸಂ.]

**ಉಚ್ಛ್ರಿತಿ** (ನಾ). = ಉಚ್ಛ್ರಾಯ : ಅನ್ನೆವರಮರಿಯದಿಹ ತನ್ನ ದ್ಯುತಿಯುಚ್ಛೃ[ಚ್ಛ್ರಿ]ತಿಯ ರತ್ನದೊಳು ಕಾಣುತ್ತ ನಲಿವು ದಿನಕಿರಣ (ಮಲೆದೇ. ೨೮–೧). [ಸಂ.]

**ಉಚ್ಛ್ವಸಿತ** (ಗು). ೧. ಉಬ್ಬಿದ ; ಮೇಲಕ್ಕೆ ಎದ್ದ ; ಹೆಚ್ಚಾದ : ಪಾಳುಕೊರಕಲ್ ಬಂಡೆಯಿಂ ವಕ್ರಮಾಗಿರ್ಪ ಮೊರಡು ದಡದಂತಿರ್ದವಳ ಮೆಯ್ಯನುಚ್ಛ್ವಸಿತ ಹರ್ಷೋರ್ಮಿಮಾಲಾ ಸಮೂಹದಿಂದವ್ವಳಿಸಿ ಮುಚ್ಚಿ (ಶ್ರೀರಾಮಾ. ೨೭–೭೦೫). (ನಾ). ೨. ಉಸಿರಾಟ. [ಸಂ.]

**ಉಚ್ಛ್ವಾಸ** (ನಾ). ೧. ಉಸಿರನ್ನು ಹೊರಗೆ ಬಿಡುವಿಕೆ. 'ಶ್ವಾಸೋಚ್ಛ್ವಾಸ' ಪರಾ. ೨. ಹೊರಗೆ ಬಿಟ್ಟ ಉಸಿರು ; ನಿಶ್ವಾಸ : ಎನುತುಂ ಬಂದು ವಿಷಣ್ಣಾನನೆಯಂ ಮಾರ್ಗಾವಲಗ್ನನೇತ್ರೆಯನುಚ್ಛ್ವಾಸ ನಿತಪ್ತಾಧರರುಚಿಯಂ ಮನುಜೇಂದ್ರಾಂಗನೆಯನೆಯ್ದೆ ಕಂಡಿಂತೆಂದಳ್ (ಯಶೋಚ. ೨–೩೫). ೩. ಉಸಿರನ್ನು ಒಳಕ್ಕೆ ಎಳೆದುಕೊಳ್ಳುವಿಕೆ : "ಉಚ್ಛ್ವಾಸವೆಂದರೆ ಗಾಳಿಯನ್ನು ಒಳಗೆ ಸೆಳೆದುಕೊಳ್ಳುವುದು" (ಹಸಾರ. ೧–೪ಟೀಕೆ). ೪. ಗ್ರಂಥದ ಅಧ್ಯಾಯ ; ಆಶ್ವಾಸ. ೫. ಉಬ್ಬುವಿಕೆ ; ಏರುವಿಕೆ : ಜಲೋಚ್ಛ್ವಾಸದಿಂ ಪರಿವುದಾ ವಿಸ್ತೃತಜಲರಾಶಿ (ಶ್ರೀರಾಮಾ. ೭೭–೬೨೭). ೬. ಸಾವು ; ಮರಣ. ೭. [ಜೈನ] ಕಾಲವನ್ನು ಅಳೆಯುವ ಒಂದು ಪ್ರಮಾಣ : "ಒಂದು ಪರಮಾಣುವು ಮಂದಗತಿಯಿಂದ, ಒಂದು ಆಕಾಶಪ್ರದೇಶದಿಂದ ಇನ್ನೊಂದು ಆಕಾಶಪ್ರದೇಶದಲ್ಲಿ ಪ್ರವೇಶಿಸಲಿಕ್ಕೆ ಹತ್ತುವ ವೇಳೆಗೆ ಸಮಯ ಎಂದು ಹೇಳುತ್ತಾರೆ . . . ಅಸಂಖ್ಯಾತ (ಜಘನ್ಯಯುಕ್ತ ಅಸಂಖ್ಯಾತ ಪ್ರಮಾಣ) ಸಮಯಗಳಿಂದ ಒಂದು ಆವಲಿ ಆಗುತ್ತದೆ. ಸಂಖ್ಯಾತ ಆವಲಿಗಳಿಂದ ಒಂದು ಉಚ್ಛ್ವಾಸ (ಪ್ರಾಣ) ಆಗುತ್ತದೆ" (ಜೈನಪ. ೩೦೫) ; ವ್ಯವಹಾರಕಾಲಮೆಂಬುದು . . . ಸಮಯಾವಳಿಕೋಚ್ಛ್ವಾಸಸ್ತೋಕನಿಮೇಷನಾಳಿಕಾ ಮುಹೂರ್ತದಿವಸ . . . ಸಂವತ್ಸರಾದಿ ಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು (ಆದಿಪು. ೬–೪೮ ವ). [ಸಂ.]

**ಉಚ್ಛ್ವಾಸಿಸು** (ಕ್ರಿ). ಗಾಳಿಯನ್ನು ಒಳಕ್ಕೆ ತೆಗೆದುಕೋ ; ಉಸಿರಾಡು : ಪಾಪ, ಆ ನಿರ್ಭಾಗ್ಯಪ್ರಾಣಿಗಳು ಆ ಭಯಂಕರ ಗಾಳಿಯನ್ನು ತಾನೆ ಉಚ್ಛ್ವಾಸಿಸಬೇಕು (ಏಕಾಸ. ೭೪). [ಉಚ್ಛ್ವಾಸ + -ಇಸು]

**ಉಭಾಯಿಸು** 'ಉಚಾಯಿಸು' ನೋ.

**ಉಭಾಹವಿಗ್ರಹ** (ನಾ). ಉತ್ಸವ ವಿಗ್ರಹ; ಮೆರವಣಿಗೆಯ ಮೂರ್ತಿ: ನಮಶಿವಾಯನು ಯಿಗುಡಿಯನು ಕಟಿಸಿ ಕಾಶಿಲಿಂಗವ ತಂದು ಚಂದ್ರಮೌಳೀಶ್ವರದೇವರು ವಿಘ್ನೇಶ್ವರ ನಂದಿಕೇಶ್ವರ ಉಭಾಹವಿಗ್ರಹ ಈ ದೇವರುಗಳನು ಪ್ರತಿಷ್ಠೆಯನು ಮಾಡಿದ ಮಹಾಜನಂಗಳಿಗೆ ಬಿನ್ನಹಂ ಮಾಡಲಾಗಿ (ಎಕ. X (S), ಬೆಂಗಳೂ. ೩೧–೫; 1532).
[< ಸಂ. ಉತ್ಸವವಿಗ್ರಹ]

**ಉಜಕರ್ಣಿ** (ನಾ). ಒಂದು ಔಷಧಿ ಗಿಡದ ಹೆಸರು: "ಭಾಗಪರ್ಣಿ–ಉಜಕರ್ಣಿ" (ಔಷಧಿ. ೫೯). [< ಸಂ. ಅಜಕರ್ಣೀ ?]

**ಉಜರಿಡು** (ಕ್ರಿ). ಆಕ್ಷೇಪಣೆಯನ್ನು ಲೆಕ್ಕಿಸು: ಈ ಸುಬ್ಬಣ್ಣನ ಉಜರಿಡದೇ ಕಾರ್ಯಸಾಧನೆ ಮಾಡಿ ತೋರಿಸುವೆನೆಂದು ಆತ ಮನೋನಿರ್ಧರ ಮಾಡಿದನು (ತುಬ್ಬಣ್ಣ. ೨೬). [ಉಜರು + ಇಡು₁]

**ಉಜರು, ಉಜೂರು** (ನಾ). ಆಕ್ಷೇಪ; ವಿರೋಧ; ಬಾಧೆ; ಅಡ್ಡಿ. 'ಉಜರಿಡು' ಪರಾ. **ಉಜೂರು**: ವರುಷಂಪ್ರತಿಯಲ್ಲೂ ತಾಜಾ ಸನದಿನ ಉಜೂರ ಮಾಡದೆ ಯಿಾ ಸನದಿನ ನಕಲ ಲೆಖಕ್ಕೆ ಬರಶಿ ಅಸಲ ಸನದ ಹಿಂದಕ್ಕೆ ಕೊಡುವದು (ಮೈಆರಿ. ೧೯೨೯, ೯೪–೪೦; 1813).
[← ಮರಾ. ಉಜರ್, ಉಜರಾ, ಉಜೂರ್; ಅರ. ಉಝ್ರ್ = ಕಾರಣ]

**ಉಜಳಣಿ** (ನಾ). (ಉಕ). ಮತ್ತೆಮತ್ತೆ ಹೇಳುವಿಕೆ; ಪುನರಾವರ್ತನೆ; ಪುನರುಕ್ತಿ: "ಈ ಉಜಳಣಿ ಈಗೇಕೆ ಚಿನ್ನಯ್ಯನವರೇ ಅವು ಹೇಗೆ ಬಂದುವು ನೀವು ಹೇಗೆ ಕೊಟ್ಟರಿ ಎಂಬುದನ್ನು ಉಭಯತ್ರರೂ ಬಲ್ಲೆವು" (ಹೊಲಮ. ೩೪೦); ಪೋಲಿನಳು ಇಷ್ಟೊತ್ತು ಈ ಉಜಳಣಿಯನ್ನು ಕೇಳುತ್ತಲೇ ಇದ್ದಳು (ದೋಠಾಕ. ೨). [← ಮರಾ. ಉಜಳಣೀ]

**ಉಜಾಡ** (ಗು). ನಿರ್ಜನವಾದ; ಹಾಳುಬಿದ್ದ. 'ಉಜಾಡೇಳು' ಪರಾ. [← ಮರಾ. ಹಿಂ. ಉಜಾಡ್]

**ಉಜಾಡೇಳು** (ಕ್ರಿ). ಹಾಳಾಗು; ನಿರ್ಜನವಾಗಿರು: ಮಾಗಡಿಯಲ್ಲೇ ಹುಟ್ಟಿ ಬೆಳೆದು ಒಂದೇ ವರ್ಷದಲ್ಲಿ ಉಜಾಡೆದ್ದು ಹೋಗಿದ್ದ 'ಮನೋರಮಾ ನಾಟಕ ಸಭೆ'ಯಲ್ಲೂ ಅವನ ಕೈವಾಡವಿಲ್ಲದೆ ಇರಲಿಲ್ಲ (ರಾಗಿಣಿ. ೫೬). [ಉಜಾಡ + ಏಳು₁ (< ಏೞ್₁)]

**ಉಜೂರು** 'ಉಜರು' ನೋ.

**ಉಜ್ಜನಿತ** (ಗು). ಉತ್ಪನ್ನವಾದ; ಉಂಟಾದ: ವಿನುತ ಜೀವನ್ಮುಕ್ತಿಕಾರಣವೆನಿಪ ಲಿಂಗರಹಸ್ಯತತ್ತ್ವೋಜ್ಜನಿತ [ಪಾಠಾಂ. ಜ್ವಲಿತ] ಸೂಕ್ತಿಗಳಂ ತಿಳುಪಿ (ಬಸವು. ೯೯–೩೫). [ಸಂ.]

**ಉಜ್ಜಮಿಸು** 'ಉಜ್ಜವಿಸು' ನೋ.

**ಉಜ್ಜವಣೆ** (ನಾ). ೧. ವ್ರತವನ್ನು ಪೂರ್ಣಗೊಳಿಸುವ ಕರ್ಮ; ವ್ರತಸಮಾಪ್ತಿ: ಒಂದಕ್ಷೋಹಿಣಿಬಲಮೆರಡುಂ ದೆಸೆಯೊಳಮುೞಿದುವನಿತೆ ಭಾರತಮೆಮಗಿನ್ನಿಂದುಜ್ಜವಣೆ ದಲೆಂದದಟೊಂದುತ್ತರಮಾಗೆ ಕಾದಿದರ್ ಕಟ್ಟಾಳ್ಗಳ್ (ಪಂಪಭಾ. ೧೩–೩೬); ದ್ವಿತೀಯಾಕ್ಷರ ದೀರ್ಘಕ್ಕೆ ಹ್ರಸ್ವಂ–ಅಮಾವಾಸ್ಯಾ–ಅವಸೆ; ಉದ್ಯಾಪನ–ಉಜ್ಜವಣೆ (ಶಮದ. ೨೮೬ ಪ್ರಯೋ); ನೋಂಪಿಯುಜ್ಜವಣೆಯ ಕ್ರಮಮೆಂತೆಂದೊಡೆ (ನಾಗಕು. ೨೮–೧೪೧ ವ). ೨. ನೆರವೇರುವಿಕೆ; ಕೊನೆ; ಸಮಾಪ್ತಿ: ಬಲದೇವಂ ಬಲದೇವನುಜ್ಜವಣೆಯೊಳ್ ಮುಂದಾದರಂ ಕೊಂದ ಮೆಯ್ಗಲಿ ತಮ್ಮಂ ಸಯೆ (ಶಾಂತಿಪು. ೪–೧೦೮); ಮುನ್ನಮಾಂ ಬಿನ್ನವಿಸಲೆಂದಿರ್ದ ಕಜ್ಜದುಜ್ಜವಣೆಗೆ ಮೃಡಾನಿಯ ನುಡಿ ಸಹಾಯಮಾದುದು (ವೃಷವಿ. ೧–೯೧ ವ); ಗುರುದಕ್ಷಿಣೆಯ ತಮಗೆ ತೆತ್ತಿಲ್ಲವೆಂದೆ ನನ್ನಯ ವಿದ್ಯೆಯುಜ್ಜವಣೆಯಾಗಿಲ್ಲವೆಂದೆ (ಜೆಪ್ಪರ. ೩೦–೧೦). [< ಸಂ. ಉದ್ಯಾಪನ]

**ಉಜ್ಜವಣೆವಡೆ** (ಕ್ರಿ). ಮುಕ್ತಾಯಗೊಳಿಸು: ಆವಳ್ ವನಿತಾನಿಷ್ಪಾದನಕ್ಕುಜ್ಜವಣೆವಡೆದಳೋ ಪದ್ಮಜಂಗೆ (ಲೀಲಾವ. ೪–೩೧). [ಉಜ್ಜವಣೆ + ಪಡೆ₁]

**ಉಜ್ಜವಿಸು, ಉಜ್ಜಮಿಸು** (ಕ್ರಿ). ಉದ್ಯಾಪನೆಯನ್ನು ಮಾಡು; ವ್ರತವನ್ನು ಮುಕ್ತಾಯಗೊಳಿಸು: ಸುಗ್ಗಿಯ ಪುಗಿಲೊಳ್ ಮುಂಕೊಂಡುಗ್ಗಿಯನುಜ್ಜವಿಸಿದಂತೆ ಮೋನಮುನುಜಿದೇಂ ಬಗ್ಗಿಸಿದುವೊ ಕೋಗಿಲೆಗಳ್ ಮೊಗ್ಗಪ್ಪ ವಿಯೋಗಿಯಂ ಪುಗಲ್‌ಪುಗಲೆನುತುಂ (ಕಾವ್ಯಾವ. ೯೮೨). **ಉಜ್ಜಮಿಸು**: ಮನಸಿಜರಾ × × × ಗನಾ ಅರಸಿ ಜೇನೆ ಎತ್ತಿ ಮೋನಮುಜ್ಜಮಿಸುವಲ್ಲಿ ಕೊಟ್ಟದು (ಎಕ. II, ೩೫–೫; ಸು. 800). [ಉಜ್ಜವಣೆ + –ಇಸು₃]

**ಉಜ್ಜಳ** 'ಉಜ್ಜ್ವಲ' ನೋ.

**ಉಜ್ಜಳಿಕೆ, ಉಜ್ಜಳಿಕ್ಕೆ** (ನಾ). ತೀವ್ರವಾದ ಹೊಳಪು, —ತೇಜಸ್ಸು, —ಪ್ರಕಾಶ: ಅದೇಂ ಬೞಿಕೆ ಬಿಂಬದುಜ್ಜಳಿಕೆಯೋ ಸುಧಾಸೂತಿಯಾ (ಆದಿಪು. ೧೨–೬); ತೊಡವಿನೊಳುಜ್ಜಳಿಕೆ ಸಿರಿಯೊಳ್ ಮುಡಿ ಕುಲದೊಳಗ್ಗಳಿಕೆ (ಧರ್ಮಾಮೃ. ೯–೧೦೮); ಎಳವೆಳ್ದಿಂಗಳ ಬಳೆದುಜ್ಜಳಿಕೆಯಿದೇಂ ಕರಮೆ ಕೊರ್ತು ಕಣ್ಣಾಣದರ್ಗಂ ಪೊಳಪಿನೊಳತನುವನೆ ತಳಾಮಳಕಂ ಮಾಡಿದುದು (ಲೀಲಾವ. ೨–೨೫). **ಉಜ್ಜಳಿಕ್ಕೆ**: ಮನೋಜನ ಬಿಲ್ಲ ಬಲ್ಮೆ ಪೂರ್ಣೇಂದುವಿನುಜ್ಜಳಿಕ್ಕೆ ಮಧುಮಾಸದ ಗೋಸನೆ (ಕಾದಂಉ. ೫೫೬); ಉಜ್ಜಳಿಕ್ಕೆಯಿಂ ವನಜವಿರೋಧಿಯೆಂದು ನಿಜ ಕಾಂತಿ . . . ತೋಱುಗುಂ (ಧರ್ಮಾಮೃ. ೧೩–೧೧). [ಉಜ್ಜಳ₀ + –ಇಕೆ]

**ಉಜ್ಜಳಿಕೆವಡೆ** (ಕ್ರಿ). ತೀವ್ರವಾದ ಪ್ರಕಾಶವನ್ನು ಪಡೆ; ತೇಜಸ್ಸನ್ನು ಹೊಂದು: ಸಜ್ಜನ ಚೂಡಾಮಣಿ ತಮ್ಮಜ್ಜಂಗಂ ಪುಣ್ಯದಿಂದೆ ಸಾಸಿರ್ಮಡಿಯಾಗುಜ್ಜಳಿಕೆವಡೆದ ಪೆರ್ಮೆಯಿನುಜ್ಜೀನಿಯೊಳರಸುಗೆಯ್ದು ಪಾಲಿಸುತಿರ್ದಂ (ಯಶೋಚ. ೪–೮೩). [ಉಜ್ಜಳಿಕೆ + ಪಡೆ₁]

**ಉಜ್ಜಳಿಕ್ಕೆ** 'ಉಜ್ಜಳಿಕೆ' ನೋ.

**ಉಜ್ಜಳಿಸು** 'ಉಜ್ಜ್ವಲಿಸು' ನೋ.

**ಉಜ್ಜಾಣ** (ನಾ). = ಉದ್ಯಾನ: ರಾಸಿಗೆಯ್ದು ಮರ್ಬಿನಂತೆ ತೋರ್ಕುಮಾಯುಜ್ಜಾಣಂ (ಚಿತ್ರಗೋ. ೪೧). [ಪ್ರಾ. ಉಜ್ಜಾಣ < ಸಂ. ಉದ್ಯಾನ]

**ಉಜ್ಜಾಯಿ** (ನಾ). (?): ಜಾಧಿಸು ಮೊದಲೊಳು ರಸನವ ನಾಡೀ ಶೋಧನೆಯನು ತದನಂತರವನುಸರಿಸಾಧರಿಸುವುದುಜ್ಜಾಯಿಯ ಬಿಡದೆ ಕುಮಾರಕ ಭಕ್ತಿಯನು (ಕಲ್ಯಾಣೀ. ೩೨); ಬೇಗದಿ ಹರಿ ಶೀತಳಿಯಂ ಪೈತ್ಯದ ರೋಗವನುಜ್ಜಾಯಿಯ ವಜ್ರಾಸ್ತ್ರವ ಲಾಗಿಸಿ ಝಳಪಿಸಿ ಜಡಿದನುವಿಂ ಬಹುವಿಧ ವೆನಿಸುವ ವಾತ ರೋಗಾದ್ರಿಯ ಹೊಡೆ (ಕಲ್ಯಾಣೀ. ೩೩). [?]

**ಉಜ್ಜಾರಿ** (ನಾ). = ಉಜ್ಜುಗೋರಿ: ಉಜ್ಜಾರಿಯಿಂದ ಹುಲ್ಲನ್ನು ಕೆತ್ತಿ ತಂದರು (ರೂಢಿ). [ಉಜ್ಜು (< ಉರ್ದು₁) + ಆರಿ ?]

**ಉಜ್ಜಾಸನ** (ನಾ). ಕೊಲ್ಲುವಿಕೆ; ಕೊಲೆ. [ಸಂ.]

**ಉಜ್ಜೀವನ** (ನಾ). ಬದುಕಿಸುವುದು; ಚೈತನ್ಯವನ್ನು ತುಂಬುವುದು; ಚೇತರಿಸುವಂತೆ ಮಾಡುವುದು. 'ಉಜ್ಜೀವಿಸು' ಪರಾ. [ಸಂ.]

**ಉಜ್ಜೀವಿಸು** (ಕ್ರಿ). ೧. ಬದುಕುವಂತೆ ಮಾಡು; ಚೈತನ್ಯವನ್ನು ಕೊಡು: ಒಲಿದವರನುಜ್ಜೀವಿಸುವ ಬಗೆ ಬಲುಹು ಮುರಮಥನಂಗೆ (ಕುವ್ಯಾಉ. ೧೦–೧); ಈಸ್ಕ್ಯುಲೇಪಿಯಸ್ ಯಾವನೋ ಒಬ್ಬ ಮೃತನನ್ನು ತನ್ನ ದಿವ್ಯವಾದ ವಿದ್ಯೆಯಿಂದ ಉಜ್ಜೀವಿಸಿದನಂತೆ (ಕಲ್ಲಿಕಾ. ೧೪). ೨. ತಿರುಗಿ ಜೀವನವನ್ನು ಪಡೆ; ಉಳಿ; ಬದುಕು: ಸಂಸ್ಕೃತವು ಈಗ ಎಷ್ಟೋ ಮಟ್ಟಿಗೆ ದೇಶಭಾಷೆಗಳಲ್ಲೂ, ದೇಶ್ಯ ವಾಙ್ಮಯಗಳಲ್ಲೂ ಉಜ್ಜೀವಿಸಿದೆಯೆಂಬುದನ್ನು ಆಗಲೇ ಗಮನಿಸಿದೆವು (ಸಮಾಲೋ. ೧೪೨). [ಉಜ್ಜೀವನ + –ಇಸು₃]

**ಉಜ್ಜು** 'ಉದುರ್$_1$' ನೋ.

**ಉಜ್ಜುಕಂಬಳಿ** 'ಉಜ್ಜುಗಂಬಳಿ' ನೋ.

**ಉಜ್ಜುಕಲ್ಲು** 'ಉಜ್ಜುಗಲ್ಲು' ನೋ.

**ಉಜ್ಜುಗ** (ನಾ). **೧.** ಪ್ರಯತ್ನ; ಉದ್ಯೋಗ; ಕಾರ್ಯ; ಕೆಲಸ: "ದಕಾರದೊಳ್ ಬೆರಸಿದ ಯತ್ವಕ್ಕೆ ದ್ವಿತ್ವ ಜಕಾರಂ — ಉದ್ಯೋಗ — ಉಜ್ಜುಗ" (ಶಮದ. ೨೫೯ ಪ್ರಯೋ); ಪಡೆವೆಂ ಶಾಶ್ವತಶ್ರೀಯನೆಂಬುಜ್ಜುಗದೊಳ್ ಚಿತ್ತಂ ಕರಂ ಕಣ್ಮಲೆಯೆ ನೆಱೆಯೆ ನಿಶ್ಚಯಿಸಿದಂ ಸಾರ್ವಭೌಮಂ (ಆದಿಪು. ೬-೨೬); ಉದರಶಿಖಿಜ್ವಾಲೆಯಿಂದತ್ತಮಿತ್ತಂ ಕುಸಿಯುತ್ತುಂ ಪುಟ್ಟುವೊಂದುಜ್ಜುಗದೊಳೆ ಮರಣಾವಸ್ಥೆಯಂ ತಾಳ್ದಿ (ರಕ್ಷಾಶ. ೩); ಉಜ್ಜುಗದತ್ತಣಿಂ ಸಿರಿ ಕಿಚ್ಚಿನತ್ತಣಿಂ ಪೊಗೆ (ಶಬ್ದಾನು. ೨೨೦ ಪ್ರಯೋ); ಸುಂದರದ ರಸ ನೂರು; ಸಾರವದರೊಳು ಮೂರು ಹೊಂದಿಪ್ಪುವವು ಮೋಹ ಕರುಣೆ ಶಾಂತಿಗಳ ಒಂದರಿಂದೊಂದು ಬೆಳೆಯಾದಂದು ಜೀವನವು ಚೆಂದಗೊಂಡುಜ್ಜುಗವೊ (ಮಂಕುಕ. ೪೫೫). **೨.** ಆರಂಭ: "ಉಜ್ಜುಗಮುಪಕ್ರಮಮುದು" (ಕಶರ. ೧೧೮); ಸಮಸಂದೊಂದಿದ ಲಜ್ಜೆಯುಜ್ಜುಗಮೆ ಲಜ್ಜಾಭಾವಮಂ . . . ನೆಱೆಯೆ ಕಲ್ತಂತಾದುದಾ ಕನ್ನೆಯೊಳ್ (ಕಾದಂಉ. ೨೯೩). **೩.** ಉದ್ದೇಶ; ಆಲೋಚನೆ: ನಿನ್ನುಜ್ಜುಗಮೇನೋ ಪೇೞೆನೆ ಕರಂ ನಾಣ್ಚಿರ್ಪುದುಂ ದೇವಿ ಪೇೞದಿರಲ್ ಕಾರಣವೇಂ ಮಗಂಗೆ ಪಿರಿದುಂ ನೀಂ ಕೂರ್ಪುದಿಲ್ಲಾಗದೇ (ಕಾದಂಉ. ೪೧೬); ಪಂಚಿಪುಜ್ಜುಗದಿಂದಂ ಪಿಡಿದೊಂದು ಪೆರ್ಬುಲಿಯನೊರ್ವಂ (ಜಗವಿ. ೧೬-೨೦); ಏನುಜ್ಜ[ಜ್ಜು]ಗದಿಂದಲೀತನ ನೆಱೆ ಸಂಧಾನವ ಮಾಡಿ ನನ್ನೆಡೆಗೆ ನೀನೈದಿಸುವೆಯಾ ಬಗೆಯ ಪೇಳೆನಲಾ ಮಾನಿನಿ ನುಡಿದಳಿಂತೆಂದು (ಕಂನವಿ. ೯-೧೩೯). [< ಸಂ. ಉದ್ಯೋಗ]

**ಉಜ್ಜುಗಂಗೆಯ್**, ಉಜ್ಜುಗಗೈ (ಕ್ರಿ). **೧.** ಪ್ರಯತ್ನಿಸು: ಅಂತು ನುಡಿಯೆ ಮಹಾಶ್ವೇತೆ ಮತ್ತಮಾಗ್ರಹಿಸೆ ತಂಬುಲಂಗೊಡಲುಜ್ಜುಗಂಗೆಯ್ದು (ಕಾದಂಉ. ೫೬). **೨.** ಆಲೋಚಿಸು: ತಂದೆಯಿಂ ತಾನಿರದಾಮಂಗೆನ್ನನೀಯಲ್ಬಗೆದು ಮನದೊಳಂತುಜ್ಜುಗಂಗೆಯ್ದೊಡಂ ಚಿಚ್ಚರಮೆನ್ನೀ ಪ್ರಾಣಮಂ ತಾಂ ಬಿಡದಿರೆನೆನುತುಂ ನಿಶ್ಚಯಂಗೆಯ್ದಳಾಗಳ್ (ಕಾದಂಪೂ. ೯೭೮); ಲಿಂಗಪತಿ ಶರಣ ಸತಿಯೆಂಬೀ ಮಾತಂ ದಿಟಂಮಾಡಿ ತೋರ್ಪೆಂ ಮಾಯಿದೇವಿಯರನೊಲ್ಲೆನೆಂದ ಬಳಿಕ್ಕ – ಎಂದು ಬಸವರಾಜಂ ಶರಣಜನಲೀಲಾಶೀಲಂ ಮನದೊಳುಜ್ಜುಗಂಗೆಯ್ವುತ್ತಿರಲು (ಬಸರ. ೧೨-೧೨೯). **ಉಜ್ಜುಗಗೈ:** **೩.** ಕೆಲಸಮಾಡು: ಸೆಜ್ಜೆವನೆಯ ಸೇವೆಯೊಂದನುಳಿದು ಮಿಕ್ಕುಜ್ಜುಗಗೈವ ವೇಳೆಯೊಳು ಸಜ್ಜಾತಿ ಸತಿಯರಿನಿಯರ ಸನ್ನಿಧಿಯೊಳು ಲಜ್ಜೆವೆರಸಿ ರಂಜಿಪುದು (ಹದಿಬ. ೩-೩೯). [ಉಜ್ಜುಗ + ಗೆಯ್ (< ಕೆಯ್$_1$)]

**ಉಜ್ಜುಗಂದಳೆ** (ಕ್ರಿ). ಉದ್ಯೋಗಿಸು; ಪ್ರಯತ್ನಿಸು: ಶಶಾಂಕನೊಲವಿಂದಂ ರಾಜಯಕ್ಷ್ಮಕ್ಕೆ ಮಾಡಿದ ಮರ್ದಂ ಪಡೆವುಜ್ಜುಗಂದಳೆವರಂತಾ ಸೆಟ್ಟಿಗುತ್ತರ್ಕಳೊಳ್ (ದಶಕು. ೧-೩೯). [ಉಜ್ಜುಗ + ತಳೆ$_1$]

**ಉಜ್ಜುಗಂಬಳಿ**, ಉಜ್ಜುಕಂಬಳಿ (ನಾ). ಬಿಸಿನೀರಿನಲ್ಲಿ ನೆನಸಿ ಉಜ್ಜಿ ತಯಾರಿಸಿದ ಕಂಬಳಿ: ಚಿತ್ರದುರ್ಗದ ಉಜ್ಜುಗಂಬಳಿ ಬಹಳ ಪ್ರಸಿದ್ಧವಾದುದು (ರೂಢಿ). **ಉಜ್ಜುಕಂಬಳಿ:** ರಲ್ಲಕಃ, ಕಂಬಳಃ — ಈ ೨ ಕಂಬಳಿ ಹೆಸರು. ರತ್ನಕಂಬಳಿ, ಉಜ್ಜುಕಂಬಳಿ, ಸಣ್ಣಕಂಬಳಿ ಮುಂತಾದದ್ದು (ಸಿದ್ಧಾಂತಿ. ೧೨೭). [ಉಜ್ಜು (< ಉದುರ್$_1$) + ಕಂಬಳಿ]

**ಉಜ್ಜುಗಗೈ** 'ಉಜ್ಜುಗಂಗೆಯ್' ನೋ.

**ಉಜ್ಜುಗಲ್ಲು**, ಉಜ್ಜುಕಲ್ಲು (ನಾ). ಹೊಸದಾಗಿ ಗಾರೆ ಹಾಕಿದ ನೆಲವನ್ನು ಉಜ್ಜಿ ನುಣುಪುಗೊಳಿಸುವ ಕಲ್ಲು; ಗಾರೆಕಲ್ಲು. **ಉಜ್ಜುಕಲ್ಲು** (ಕಿ). [ಉಜ್ಜು (< ಉದುರ್$_1$) + ಕಲ್ಲು (< ಕಲ್$_2$)]

**ಉಜ್ಜುಗವೆಣ್** (ನಾ). ಕೆಲಸಗಾತಿ; ಸೇವಕಿ: ಬಿಜ್ಜೋದರಿಯರ ತೊಂಡಿಲು ಜವಕೆಯ ಪಜ್ಜಳದೊಡಿಗೆಯೊಳ್ ಕಿಱಿದಾ ಸೆಜ್ಜೆವನೆಯ ಪಟ್ಟಶಾಲೆಯೊಳ್ ಸೆಳೆಕೊಂಡರುಜ್ಜುಗವೆಂಗಳರ್ತಿಯೊಳು (ಭರಚ. ೩೧-೧೦೦). [ಉಜ್ಜುಗ + ಪೆಣ್]

**ಉಜ್ಜುಗವೆಱು** (ಕ್ರಿ). ಪ್ರಯತ್ನಿಸು; ತೊಡಗು: ಕಟ್ಟಲುಜ್ಜುಗವೆತ್ತ ಪೂಚೆಂಡು ಪನ್ನೀರ ಪೊಟ್ಟಣ ಯಕ್ಷಕರ್ದಮವ ಬಟ್ಟ ಕಂತುಕದಿಂದೆ ಬಲ್ಮೊಲೆ ಬಿದಿರುವಂತಿಟ್ಟಾಡಿದುದು ಸಖಿನಿವಹ (ಮೋಹತ. ೧೪-೮೭); ವಜ್ರದುಂಬಿಗಳು ಹೆಬ್ಬಿದಿರನು ಕೊಱೆವೊಡೆಯುಜ್ಜುಗವೆತ್ತ ರೀತಿಯಲಿ ನಿರ್ಜರವೈರಿಯ ನಿಡಿದೋಳ ಶಿಲೀಮುಖ ವೆಜ್ಜವಮಾಡಿತೋಱಿದುದು (ಮೋಹತ. ೩೫-೪೦). [ಉಜ್ಜುಗ + ಪೆಱು$_1$]

**ಉಜ್ಜುಗಸ್ಥ** (ನಾ). ಕೆಲಸವನ್ನು ಹೊಂದಿರುವವನು; ಉದ್ಯೋಗಸ್ಥ: ಆಕೆಯ ಆಪ್ತೇಷ್ಟರು ದೊಡ್ಡ ದೊಡ್ಡ ಉಜ್ಜುಗಸ್ಥರಾದರು (ಮೋಬಾದ. ೮೫). [< ಸಂ. ಉದ್ಯೋಗಸ್ಥ]

**ಉಜ್ಜುಗಾಯ** (ನಾ). (ಯಾವುದಾದರೂ ವಸ್ತು) ಉಜ್ಜುವುದರಿಂದ ಉಂಟಾಗುವ ಗಾಯ, — ತೀಡಿದುದರಿಂದ ಉಂಟಾದ ಗಾಯ: "ಘರ್ಷಣ; ಮಸೆತ; ಉಜ್ಜುಗಾಯ" (Chafe. ಇಂಕನಿ.). [ಉಜ್ಜು (< ಉದುರ್$_1$) + ಗಾಯ]

**ಉಜ್ಜುಗಾರ್ತ** (ನಾ). ಉದ್ಯೋಗದ ತವಕ: ಶೂರ್ಪನಖಿಯೆಂಬಸುರೆ ಬಂದಳು ವನವಿಹಾರವ್ಯಸನದಲಿ ನರಮಾಂಸಭೋಜನದುಜ್ಜುಗಾರ್ತದಲಿ (ತೊರರಾ. ೩-೪-೧). [ಉಜ್ಜುಗ + ಆರ್ತ]

**ಉಜ್ಜುಗಿಸು**, ಉಜುರ್ಗಿಸು (ಕ್ರಿ). **೧.** ಉದ್ಯೋಗಿಸು; ಪ್ರಯತ್ನಿಸು; ತೊಡಗು: ಭೂಭುಜಂ ಭೂನುತನಾಗಳುಜ್ಜುಗಿಸೆ ತದ್ವಿಜಯಾವರಜಂ ಪ್ರತಾಪಪಂಚಾನನನಿಂತು ಬಿನ್ನವಿಸಿದಂ (ವರ್ಧಪು. ೩-೩೭); ಓದಲುಜ್ಜುಗಿಸಿ ಪುಸ್ತಕವನಾಂತೊರ್ವ ತಳೋದರಿ ಕುಳಿತಳಿದಿರೊಳು (ಭರಚ. ೬-೧೦); ವಾಹನದಿಂದ ಕೆಳಗಿಳಿಯಲು ಆಚಾರ್ಯರು ಉಜ್ಜುಗಿಸುತ್ತಿದ್ದರು (ಕಾಲಯಾ. ೧೫). △ **ಉಜುರ್ಗಿಸು:** **೨.** ಪ್ರಯೋಗಿಸು; ಸಂಸ್ಕಾರ ಮಾಡು (?): ಅಚಲಗಳನೂರ್ಜಿಸಿದ ಲಕ್ಷಕೋಟಾಕೋಟಿಗರಿ ಮೂಡಿ ಹಾರುವಂತೆತ್ತೆತ್ತಲುಮಾರ್ಜಿಸಲ್ಕವನಿಚರರಲುಗಿದರ್ ಮಸ್ತಕದೊಳುಜುರ್ಗಿಪವೆನುತಲಾ ಭೀಕರಕರೇಣು ಭೀತೊಜ್ರದಿಂದಿಟ್ಟ ಕುಲಿಶಾಸ್ತ್ರದಿಂದನಲ ಶಿಖಿಯಂತೆ ವಿಸ್ಮಯಗೊಳಿಸಲು (ಜಿನಮು. ೨೯-೪೨); ಸಜುರ್ಕದ ಪಂಚಧಾರೆಯನೆಜದು ಪರಿಮಳದೊಳುಜುರ್ಗಿಸಿ ಪಚನದಿಂ ಚೆಲ್ವಾಗಿ ರಸಬಸಿವ (ಲಿಂಗಪು. ೮-೪). [ಉಜ್ಜುಗ + -ಇಸು$_3$]

**ಉಜ್ಜುಗೊರಡ** 'ಉಜ್ಜುಗೊರಡು' ನೋ.

**ಉಜ್ಜುಗೊರಡು**, ಉಚಕೊರಡು, ಉಚ್ಚುಕೊರಡು, ಉಜ್ಜುಗೊರಡ (ನಾ). ಮರವನ್ನು ಉಜ್ಜಿ ನಯಮಾಡಲು ಬಳಸುವ ಕಬ್ಬಿಣದ ಅಲಗನ್ನು ಜೋಡಿಸಿದ ಉಪಕರಣ; ಹತ್ತಾರಿ; ತೋಪಡ: ಉಜ್ಜುಗೊರಡು ಆಡಿಸಿ ಆ ಹಲಗೆಗಳನ್ನು ನುಣುಪುಮಾಡಿ ಚೌಕಟ್ಟನೊಳಗೆ ಕೂಡ್ರಿಸುವರು (ಮುಂಬಯಿ. ೩-೫೭); ಮರವನ್ನು ಉಜ್ಜುಗೊರಡಿನಿಂದ ತಿಕ್ಕುವಾಗ ಹೊರಡುವ ಹಾಳೆಯಂತೆ ಸಾಬೂನಿನ ಹಾಳೆಗಳನ್ನು ಹೊರಡಿಸಿ ಅವನ್ನು ಬಿಸಿಲಿನಲ್ಲಿ ಒಣಗಿಸುವರು (ಬಾಲಪ್ರ. III, ೧೪೯೬). **ಉಚಕೊರಡು:** ಆ ಕರೇ ಕೂದಲಿನ ಗ್ರಹಣಚಕ್ರವನ್ನು ಉಚಕೊರಡು ಹೊಡೆದು ಬಿಡಲಿಕ್ಕೆ ಹಜಾಮನಿಗೆ ಬಿನ್ನವಿಸಬೇಕೆಂದು ಯೋಚನೆ ಬಂದು ಹೋಯಿತು (ದೀಪಹ. ೭೪); "ಉಚಕೊರಡು — ಉಜ್ಜುಗೊರಡು" (ಜಾನಕೋ. ೧೯). **ಉಚ್ಚುಕೊರಡು:** (ಉಕ. ಕಿ). **ಉಜ್ಜುಗೊರಡ:** ಉಜ್ಜುಗೊರಡದಿಂದ ಹಲಗೆಗಳನ್ನು ಸಮ ಮಾಡಿದನು (ಕಪವು. ೪-೫). [ಉಜ್ಜು (< ಉದುರ್$_1$) + ಕೊರಡು]

**ಉಜ್ಜುಗೋರಿ** (ನಾ). ನೆಲದ ಹುಲ್ಲನ್ನು ಉಜ್ಜುವ ಒಂದು ಸಲಕರಣೆ; ಉಜ್ಜಾರಿ: ಉಜ್ಜುಗೋರಿಯಿಂದ ಹುಲ್ಲು ಉಜ್ಜುತ್ತಾರೆ (ರೂಢಿ). [ಉಜ್ಜು (< ಉರ್ದು$_1$) + ಗೋರಿ$_1$]

**ಉಜ್ಜುಗೋಲು** (ನಾ). (ಉಕ). = ಉಜ್ಜುಗೊರಡು. [ಉಜ್ಜು (< ಉರ್ದು$_1$) + ಕೋಲು$_1$ (< ಕೋಲ್$_1$)]

**ಉಜ್ಜುತೈಲ** (ನಾ). "ರೋಗ ಭಾಗವನ್ನು ಉಜ್ಜುವುದಕ್ಕಾಗಿ, ನೀವುವುದಕ್ಕಾಗಿ, ಉಪಯೋಗಿಸುವ ತೈಲ, ದ್ರವ: ಉಜ್ಜುತೈಲ" (Embrocation. ಇಂಕನಿ.). [ಉಜ್ಜು (< ಉರ್ದು$_1$) + ತೈಲ]

**ಉಜ್ಜೃಂಭಿತ** (ಗು). ೧. ಬಾಯನ್ನು ಅಗಲಿಸಿದ: ಆಕಳಿಸಿದ; ಆಗುಳಿಸಿದ. ೨. ಅಧಿಕವಾದ ; ತೀವ್ರಗೊಂಡ ; ಪ್ರಬಲವಾದ: ಪಶ್ಚಿಮಾಶಾನಿಳ ಪಾತೋಜ್ಜೃಂಭಿತಂ ಬಂದುದು . . . ಉಗ್ರಾನಳನೆಂಬಂ ತಬ್ಬ ಕಾಲಂ (ಚಂದ್ರಪು. ೪-೨೯). (ನಾ). ೩. ಆಗುಳಿಕೆ; ಆಕಳಿಕೆ. [ಸಂ.]

**ಉಜ್ಜೃಂಭಿಸು** (ಕ್ರಿ). ಪ್ರಬಲವಾಗು ; ಅಭಿವೃದ್ಧಿಹೊಂದು : ಪಾರಾವಾರದೊಳ್ ವೀಚಿಕಾವ್ರಜಮುಜ್ಜೃಂಭಿಸೆ ಬಂದಂ ವಿಹಂಗಾಧಿಪಂ (ಜಗವಿ. ೧೩-೩೭) ; ಧರ್ಮಕ್ಕೆ ವಿರುದ್ಧವಾದ ಪ್ರಸಂಗವೊದಗಿದರೆ ಈಗಲೂ ಬೂದಿಮುಚ್ಚಿದ ಕೆಂಡದಂತೆ ಅಡಗಿರುವ ಧರ್ಮವೀರತ್ವವು ಉಜ್ಜೃಂಭಿಸುತ್ತದೆ (ಆರ್ಯಧ ೧). [ಉಜ್ಜೃಂಭಣ$_0$ + -ಇಸು$_3$]

**ಉಜ್ಜ್ವಲ, ಉಜ್ಜಳ, ಉಜ್ಜ್ವಳ, ಉಜ್ವಲ** (ಗು). ೧. ಚೆನ್ನಾಗಿ ಉರಿಯುತ್ತಿರುವ. ೨. ಹೊಳೆಯುವ; ಪ್ರಕಾಶಮಾನವಾದ: ಸಂಮಾರ್ಜಿತೋಜ್ಜ್ವಲದಶನನಿಚಯ ತಾಂಬೂಲಚರ್ವಣಭರಿತ ಕಪೋಲರುಂ ಗೋಣಿಯೋಗದಂಡಧರರುಮಾಗಿ (ಜಗವಿ. ೪-೮೦ ವ). ೩. ಶ್ಲಾಘ್ಯ ; ಶ್ರೇಷ್ಠ ; ಸ್ವಚ್ಛ; ಶುದ್ಧ; ಭವ್ಯ. (ನಾ). ೪. ಪ್ರೇಮ. ೫. ತೇಜಸ್ಸು; ಪ್ರಕಾಶ; ಕಾಂತಿ. **ಉಜ್ಜಳ:** ೧. "ಉಜ್ಜ್ವಲ-ಉಜ್ಜಳ" (ಶಮದ. ೨೬೬ ಪ್ರಯೋ); ಉಜ್ಜಳಜಸಮಂಗಸಂಗತಲಸದ್ಭೂಷಿತಂ (ಪಂಪಭಾ. ೧-೨). **ಉಜ್ಜ್ವಳ:** ೨. 'ಉಜ್ಜ್ವಳಕೇಶ' ಪರಾ. **ಉಜ್ವಲ:** ೧. ಉಜ್ವಲ ಲಸನ್ನೇತ್ರನಂ ಸುಪ್ರಸನ್ನಾನನಂ ಶೋಭಿಸುವಮಲಗಾತ್ರನಂ ಕಂಡು (ಶ್ರೀರಾಮಾ. ೨೭೬-೩೪೬). ೫. ಕುವರರು . . . ಅವಯವ ತುಂಬಿ ಪುಳಕಪಾಂತರಜ್ಜನ ಭುವನತ್ರಯಾದ್ಭುತೋಜ್ವಲಕೆ (ಭರಚ. ೪೫-೩). ೬. [ಛಂದ] ಅಕ್ಷರ ಛಂದಸ್ಸಿನಲ್ಲಿ ಇಪ್ಪತ್ತೈದನೆಯ ಛಂದದಲ್ಲಿ ಒಂದು ವೃತ್ತ: ಭತ್ರಯಮುಂ ಮಸಸಂ ಲಗಮೊಪ್ಪಲ್ ತೋರ್ಪುದು ವೃತ್ತಮದುಜ್ವಲಂ (ಕೈಪಿಡಿ. ೮೭). [ಸಂ.]

**ಉಜ್ಜ್ವಲತೆ, ಉಜ್ವಲತೆ** (ನಾ). ೧. ಪ್ರಕಾಶಮಾನವಾಗಿರುವಿಕೆ ; ಚೆನ್ನಾಗಿ ಉರಿಯುವಿಕೆ; ದೀಪ್ತಿ: ರೌದ್ರವೇ ಮೊದಲಾದ ರಸಗಳು ಅತಿಶಯವಾದ ದೀಪ್ತಿ ಅಥವಾ ಉಜ್ಜ್ವಲತೆಯನ್ನು ಉಂಟುಮಾಡುತ್ತವೆ (ಧ್ವನ್ಯಾಲೋ. ೭೧). ೨. ಶುದ್ಧತೆ; ಶ್ರೇಷ್ಠತೆ; ಸ್ವಚ್ಛತೆ. **ಉಜ್ವಲತೆ:** ೧. 'ಉಜ್ವಲತೆಗುಂದು' ಪರಾ. [< ಸಂ. ಉಜ್ಜ್ವಲತಾ]

**ಉಜ್ಜ್ವಲಿತ, ಉಜ್ಜ್ವಳಿತ** (ಗು). ಪ್ರಕಾಶಮಾನವಾದ; ದೀಪ್ತವಾದ; ಚೆನ್ನಾಗಿ ಉರಿಯುವ: ಉಜ್ಜ್ವಲಿತ ಭಕ್ತಿಯಲಿ ಬಹಳ ವಿತರ್ಜಿಯಲಿ ಮೂಢಾತ್ಮರಿಕ್ಕಿದ ಹಜ್ಜೆಯಿದು (ಕುವ್ಯಾಉ.೪-೨೦). **ಉಜ್ಜ್ವಳಿತ:** ದಿನಕರಂ ಬಂದುದಯವಾದನೊ ಧನವರಂ ಬೈಚಿಟ್ಟ ನಿಧಿಯೋ ಕನಕಗಿರಿ ಮೂಡಿದುದೊಯೆನಲುಜ್ಜ್ವಳಿತವಾಗಿರಲು (ಬಸವು. ೫-೫೪). [ಸಂ.]

**ಉಜ್ಜ್ವಲಿಸು, ಉಜ್ಜಳಿಸು, ಉಜ್ಜ್ವಳಿಸು, ಉಜ್ವಲಿಸು, ಉಜ್ವಳಿಸು** (ಕ್ರಿ). ಪ್ರಕಾಶಿಸು; ಬೆಳಗು; ಹೊಳೆ: ಶಶಿಕಾಂತ ಶಿಲಾತಳಮೊಂದುಜ್ಜ್ವಲಿಸಿತಾ ಲತಾಮಂಟಪದೊಳ್ (ಕಾದಂಉ. ೪೪೨) ; ಉಜ್ಜ್ವಲಿಸಿ ಬೆಳೆವ ಮಣಿದೀಪದವೋಲ್ (ಅಜಿಪು. ೩-೧೯) ; ಸುಲಲಿತಾಧರರಾಗದಿಂದುಜ್ಜ್ವಲಿಸಿದುವು ಮಾಣಿಕ್ಯಚಯ (ತೊರರಾ. ೧-೧೪-೧೭). **ಉಜ್ಜಳಿಸು :** ಪೊಸವಿಸಿಲ ಪೊಳಪಿನಿಂ ನುಣ್ಣನುಜ್ಜಳಿಪ ರನ್ನದೆಳವೆಳಗಿನ ಬಳಗದಿಂ (ಕಾದಂಉ. ೫೨೬). **ಉಜ್ಜ್ವಳಿಸು :** ಬೆಳಗುವ ಸಾಂದ್ರಚಂದ್ರಕಿರಣಾಳಿಗಳೋಳಿಗಳಿಂದಮೆತ್ತಮುಜ್ಜ್ವಳಿಸುವಿರುಳ್ಗಳಂ ಕಳೆದು (ಪಂಪಭಾ. ೫-೧೯) ; ದಂತದೋಲೆಯ ಬೆಳಗಿಂದುಜ್ಜ್ವಳಿಪ ಕದಪಿನಿಂದ (ಕಾದಂಪೂ. ೪೦) ; ಒಳಗುಜ್ಜ್ವಳಿಸುವ ಸೊಡರಿಲ್ಲದೆಯ್ದೆ ನಂದಿರೆ ಮನದೊಳ್ (ಧರ್ಮಾಮೃ. ೬-೮೭). **ಉಜ್ವಲಿಸು :** ಶಿವಾಗಮ ವಿಧಾನಮುಜ್ವಲಿಸಿತೆಂದು (ಪದ್ಮರಾ. ೩-೭೫) ; ಎಲೆ ಕುಮಾರರು ಕೇಳಿರೈ ನೃಪತಿಲಕ ರಾಮನ ನೇಮದಿಂದುಜ್ವಲಿಸಿದನು ರಿಪುವಿಪುಳ ಕಾಲಗ್ರೀವ ಸುಗ್ರೀವ (ತೊರರಾ. ೪-೪-೧) ; ನೊಸಲಗಣ್ಣವನ ಸುತನೆಂಬುದಂ ಧರೆಗೆ ಸೂಚಿಸುವೊಲುಜ್ವಲಿಸುವರಳೆಲೆಯೊಪ್ಪೆ (ಚಬಪು. ೫-೩೭). **ಉಜ್ವಳಿಸು :** ಪೂಸಿದ ಸಿರಿಕಂಡಮುಜ್ವಳಿಪ ಲೋಚನಮುಟ್ಟ ಸಿತಾಂಬರಂ (ಕಾದಂಪೂ. ೫೮೨). [ಉಜ್ಜ್ವಲ + -ಇಸು$_3$]

**ಉಜ್ಜ್ವಳ** 'ಉಜ್ಜ್ವಲ' ನೋ.

**ಉಜ್ಜ್ವಳಂಮಾಡು** (ಕ್ರಿ). ಪ್ರಕಾಶಿಸುವಂತೆ ಮಾಡು; ಬೆಳಗು: ಅಮರಗಣಿಕೆಯರಂ ಪೆಸರ್ವೆಸರೊಳೆ ಕರೆದು ನಿಪುಣಿಕೆಯಂ ಜಿನ ಜನನಿಯ ಸೆಜ್ಜೆಯನುಜ್ಜ್ವಳಂಮಾಡಲುಂ ಚಂದ್ರಿಕೆಯಂ ಚಂದ್ರಕಾಂತದ ಕರಗಮಂ ತೀವಲುಂ . . . ಪೇೞ್ದಾಗಳ್ (ಆದಿಪು. ೭-೨೧ ವ). [ಉಜ್ಜ್ವಳ (= ಉಜ್ಜ್ವಲ) + ಮಾಡು$_1$]

**ಉಜ್ಜ್ವಳಕೇಶ** (ನಾ). ಹೊಳೆಯುವ ಕೂದಲನ್ನುಳ್ಳವನು: ಇಂದಿಂದಿರೋಜ್ಜ್ವಳಕೇಶಂ ಧರಣೀಶಸೂನು ತಳೆದಂ ಸಾಶ್ಚರ್ಯ ಸೌಂದರ್ಯಮಂ (ಚಂದ್ರಪು. ೪-೭). [ಉಜ್ಜ್ವಳ (=ಉಜ್ಜ್ವಲ) + ಕೇಶ]

**ಉಜ್ಜ್ವಳಬೇರ** (ನಾ). ಹೊಳೆಯುವ ಬಿಳಿಯ ಕುದುರೆ: ನವ ಪಾಟಳ ಸದೃಶಂ ಕುಂಕುಮಬೇರಂ ಬೆಳ್ಪುಮಿಕ್ಕೊಡುಜ್ಜ್ವಳಬೇರಂ ಪವಳಾಂಗ ತನುಚ್ಛವಿ ಬೆಳ್ಪವಿರಳಮಾದಂದು ನೋಡೆ ಮಂಗಳಬೇರಂ (ಅಶ್ವಶಾ. ೨-೧೩). [ಉಜ್ಜ್ವಳ (= ಉಜ್ಜ್ವಲ) + ಬೇರ]

**ಉಜ್ಜ್ವಳಿತ** 'ಉಜ್ಜ್ವಲಿತ' ನೋ.

**ಉಜ್ಜ್ವಳಿಸು** 'ಉಜ್ಜ್ವಲಿಸು' ನೋ.

**ಉಜ್ಜ್ವಳೀಕೃತ** (ಗು). ಪ್ರಕಾಶಗೊಳಿಸಲ್ಪಟ್ಟ: ಅಂಬುಕಣರಾಜಿ ಕರ್ಣಾಂತಿಕೋಜ್ಜ್ವಳೀಕೃತ ವಸಂತಮಂಜರಿಯುನೆಯ್ದೆ ಪೋಲ್ತಿರ್ಪಿನಂ (ಶಾಂತಿಪು. ೮-೩೨). [ಸಂ. ಉಜ್ಜ್ವಲೀಕೃತ]

**ಉಜ್ಝಿತ** (ಗು). ಬಿಡಲ್ಪಟ್ಟ ; ತ್ಯಜಿಸಲ್ಪಟ್ಟ. [ಸಂ.]

**ಉಜ್ಝಿತಲಕ್ಷ್ಮ** (ಗು). ಕಳಂಕರಹಿತವಾದ; ದೋಷವಿಲ್ಲದ: ಅತಿ ಶುದ್ಧಮಾಯ್ತು ಸತಿಯಾಕೃತಿ ದಿವ್ಯದ್ರವ್ಯ ಗರ್ಭಶೋಧನದಿಂದುಜ್ಝಿತ ಲಕ್ಷ್ಮಮೆನಿಸಿ (ಚಂದ್ರಪು. ೧೧-೧೪೪). [ಸಂ. ಉಜ್ಝಿತಲಕ್ಷ್ಮನ್ (ಉಜ್ಝಿತ + ಲಕ್ಷ್ಮನ್)]

**ಉಜ್ಝಿತಸುಖ** (ನಾ). ಸುಖವನ್ನು ಅನುಭವಿಸುವ ಪ್ರಾಪ್ತಿಯಿಲ್ಲದವನು : ಸಿಂಹದೊಳ್ ಕೂಡಿದಂದನಪತ್ಯಂ ಬಹುವಿತ್ತನುಜ್ಝಿತಸುಖಂ ಕಷ್ಟಾತ್ಮನಕ್ಕುಂ ನರಂ (ಜಾತಕ. ೧೭-೩೪). [ಉಜ್ಝಿತ + ಸುಖ]

**ಉಜ್ವಲ** 'ಉಜ್ಜ್ವಲ' ನೋ.

**ಉಜ್ವಲತೆ** 'ಉಜ್ಜ್ವಲತೆ' ನೋ.

**ಉಜ್ವಲತೆಗುಂದು** (ಕ್ರಿ). ಕಾಂತಿಹೀನವಾಗು; ಪ್ರಕಾಶಗುಂದು : ರಾಹುವಿನ ಎಳತಟದ ಶಶಿಲೇಖೆಯಂತುಜ್ವಲತೆಗುಂದಿದ ಮುಖದ ಕಾಂತಿಯ ಹಳಹಳಿಕೆ ಹಳುವಾದ ಕೈಕೆಯ ಕಂಡನಾ ಭೂಪ (ತೊರರಾ. ೨-೨-೨). [ಉಜ್ವಲತೆ (= ಉಜ್ಜ್ವಲತೆ) + ಕುಂದು$_1$]

**ಉಜ್ವಲವೃತ್ತ** (ನಾ). ೧. ಒಳ್ಳೆಯ ನಡತೆ; ಶ್ರೇಷ್ಠವಾದ ಚಾರಿತ್ರ: ಕುಲವಿಭ್ರಂಶೆಯರೊಳ್ ಮನೋಜ ಸುಖಮಂ ಮಾಣ್ಬಂಗೆ ಪೆಂಪೆಯ್ದು ದುಜ್ವಲವೃತ್ತಂ ಕಿಡುಗುಂ ಪರತ್ರೆಯುಱುಗುಂ ಶೌಚಂ ಕಿಲುಂಬಕ್ಕುಂ (ಮದತಿ.೯–೧). ೨. = ಉಜ್ಜ್ವಲ ೬. [ಉಜ್ವಲ (=ಉಜ್ಜ್ವಲ)+ ವೃತ್ತ]

**ಉಜ್ವಲಿಸು** 'ಉಜ್ಜ್ವಲಿಸು' ನೋ.

**ಉಜ್ವಳಾಂಗಿ** (ನಾ). ಪ್ರಕಾಶಮಾನವಾದ ಶರೀರವನ್ನು ಉಳ್ಳವಳು: ಸೊಗಯಿಸವೆಂದು ಪೃಥಿವ್ಯಾದಿಗಳೆನಿಸುವ ಪಂಚಭೂತಮಿಲ್ಲವ ನುಱಿದಾವಗಮುಜ್ವಳಾಂಗಿಯಂ ಧವಳಗುಣದೆ ನಿರ್ಮಿಸಿದನಾಗವೇಱ್ಕುಂ ಧಾತ್ರಂ (ಕಾದಂಪೂ. ೬೬೧).

[ಸಂ. ಉಜ್ಜ್ವಲಾಂಗೀ (ಉಜ್ಜ್ವಲ + ಅಂಗ + –)]

**ಉಜ್ವಳಿಕೆ** (ನಾ). ಪ್ರಕಾಶ; ಕಾಂತಿ; ಹೊಳಪು: ಖರಕಿರಣಂಗಳ ಕಾಯ್ಪಿನ ಖರತನದಿಂ ಚಂದ್ರಕಿರಣದುಜ್ವಳಿಕೆಯಿನಾ ಭರತನ ಮುಳಿಸೊಸಗೆಯುನನುಕರಿಸಿದುದೇಂ ಚಕ್ರವರ್ತಿವೃತ್ತಮೊ ಶರದಂ (ಆದಿಪು. ೧೧–೭). [ಉಜ್ವಳ (= ಉಜ್ಜ್ವಲ) + –ಇಕೆ]

**ಉಜ್ವಳಿಸು** 'ಉಜ್ಜ್ವಲಿಸು' ನೋ.

**ಉಜ್ವಾಲ** (ನಾ). ಪ್ರಜ್ವಲಿಸುವ ಅಗ್ನಿ: ಕಾಲಕರ್ಮಾರಣ್ಯದಹನೋಜ್ವಾಲ ಮಾಯಾಮೂಲ ಪಟುಕುದ್ದಾಲ ನಿಜ ಸಮುಯಾನುಪಾಲಾ ಬಸವ ಶರಣಾಗು (ಬಸಪು. ೨೧–೨). [ಸಂ.]

**ಉಟಜ** (ನಾ). ೧. ಎಲೆಗಳಿಂದ ಕಟ್ಟಿದ ಮನೆ; ಪರ್ಣಶಾಲೆ: ಉಟಜ ಕುಳ್ಳೆವಾಗ್ರಹ ಲಂಪಟನೊರ್ವಂ ತವಸಿ ಕೌಶಿಕಾಖ್ಯಂ (ಶಾಂತಿಪು. ೭–೪೩). 'ಉಟಜಾಂಗಣ' ಪರಾ. ೨. ಮನೆ: "ಉಟಜಂ, ಗೇಹಂ, ಕುಟಂ ... ಆಲಯಃ – ಈ ೩೧ ಮನೆ" (ಹಲಾಯು. ೪೯–೧೩೬); "ಉಟಜಂ ಮಂದಿರಂ ಧಾಮುಮುವಸಿತಂ ... ಮನೆಗೆ ಪೆಸರಕ್ಕು" (ಮಂಗರಾ. ೫೮–೭). [ಸಂ.]

**ಉಟಜಾಂಗಣ** (ನಾ). ಪರ್ಣಶಾಲೆಯ ಅಂಗಳ; ಮನೆಯ ಮುಂಭಾಗ: ವಿರಹದೆ ರಾಮುಬಾಣದುಟಜಾಂಗಣರಮ್ಯಶಿಲಾತಲಂಗಳೊಳ್ ಬರೆಯೆ ವಿಚಿತ್ರಮಾಗೆಸೆವ ಸೀತೆಯ ಚಿತ್ರಮಂ (ಕಾದಂಪೂ. ೧೧೪). [ಉಟಜ + ಅಂಗಣ]

**ಉಟಾಯಿಸು** (ಕ್ರಿ). ಮೇಲಕ್ಕೆ ಎತ್ತು; ಎತ್ತರಿಸು. [ಉಟ್ಯಾ + –ಇಸು. P ಉಟಾ ← ಹಿಂ. ಉಠಾನಾ]

**ಉಟಿ** (ಅ). ಸಂಭ್ರಮ ಸಡಗರ ಮುಂತಾದುವನ್ನು ಸೂಚಿಸುವ ಅವ್ಯಯ: ತರುಣಗಿತ್ತಸುವ ಭೂವರನ ಸುರರುಟ ಉಟಯೆನೆ ಭರದಿ ಪುಷ್ಪಕದೊಳಗಿರಿಸಿ ಸೋಮೇಶ ಕೈಲಾಸಪುರಕೊಯ್ದು (ಮಡಕ್ಯಾ. IV, ೧೦೫೪; ಚೋಳರಾಜನ ಸಾಂಗತ್ಯ). [?]

**ಉಟಿಹಬ್ಬ** (ನಾ). ದೇವರಿಗೆ ಶ್ರೀಗಂಧ, ಪಚ್ಚಕರ್ಪೂರ ಮುಂತಾದುವುಗಳಿಂದ ಮಾಡಿದ ಲೇಪನವನ್ನು ಬಳಿಯುವ ಹಬ್ಬ, —ಉತ್ಸವ: ಶ್ರೀರಾ[ಮ]ಚಂದ್ರದೇವರಿಗೆ ಚಇತ್ರಮಾಸದ ರಥೋತ್ಸವ ತದಂಗವಾದ ಉತ್ಸವಗಳು ಉಟಿಯುಹಬ್ಬ ಸಂಕ್ರಾಂತಿ ಖ ಕರಿಯ ಬೇಟಿ ... ಉಟಿಹ[ಬ್ಬ]ದ ಗರುಡಾರೋಹಣ (ಸೌಇಇ. IV, ೨೫೦–೭; 1521). [ಉಟ್ + ಹಬ್ಬ (< ಪರ್ಬ). / ಮರಾ. ಉಟೀ = ಸುಗಂಧದ್ರವ್ಯಗಳನ್ನು ಲೇಪಿಸುವುದು]

**ಉಟ್ಟಗೆ** 'ಉಟ್ಟಿಗೆ' ನೋ.

**ಉಟ್ಟರ**, ಉಟ್ಟರ (ನಾ). ೧. = ಉಡಿಗಂಟು; "ಸೀರೆಯನ್ನು ಬಿಗಿ ಮಾಡಿಕೊಳ್ಳುವಾಗ ಸೊಂಟದಲ್ಲಿ ಹಾಕಿಕೊಳ್ಳುವ ಗಂಟು" (ಕಸ್ತೂಕೋ. ೯೯). **ಉಟ್ಟರ**: ೨. ಉಡಿ; ಮಡಿಲು: ಸಣ್ಣ ಸಣ್ಣ ಮಕ್ಕಳು ತಮ್ಮ ತಾಯಂದಿರೂ ಅಜ್ಜಿಯರೂ ಉಟ್ಟರದಲ್ಲಿ ಕಟ್ಟಕೊಂಡು ಬಂದ ಹಲಸಂದಿ —ಹೆಸರಕಾಯಿಗೂ, ಬೋರೆಯ ಬೇಲದಹಣ್ಣಿಗೂ ಕೈಹಾಕಿ ಝಡತಿ ಮಾಡುತ್ತಿದ್ದರು (ದಿವಾಬ. ೩೭).

[ದೇ. ‖ ತಮಿ. ಉಟ್ಟುರೈ = ಒಳಮಡಿಕೆ, ನೆರಿಗೆ]

**ಉಟ್ಟರಗಂಟು** (ನಾ). (ಉಕ) = ಉಡಿಗಂಟು. [ಉಟ್ಟರ + ಗಂಟು]

**ಉಟ್ಟಸಾಮಂತದೇಱಿ** (ನಾ). ಒಂದು ವಿಧವಾದ ತೆರಿಗೆ: ಕನಕಸೇನ ಭಟರಗ್ರ್ಗೆ ತಿಪ್ಪೆಯೂರೊಳಾದ ಅಟ್ಟದೇಱಿಯುಂ ಕುಱುದೇಱಿಯುಮುಟ್ಟ ಸಾಮಂತದೇಱಿಯೆಲ್ಲವಮ್ಬಿಟ್ಟಂ (ಎಕ. III, ಮಳವ. ೩೦–೧೧; 909). [ಉಟ್ಟ + ಸಾಮಂತ + ತೆಱ]

**ಉಟ್ಟಳಿಗೆ** (ನಾ). = ಉಡುಗೊರೆ (?): ಪಟ್ಟೆ ಚೀನಾಂಬರದ ಸೀರೆ ಕಂಚುಕಿಯಾದಿಯುಟ್ಟಳಿಗೆಯಸಗಷ್ಟಮಂಗಲವ ಜಯನೃಪಗೆ ಕೊಟ್ಟ ವೀಳ್ಯಗಳವನಿನಾಯಕರಿಗಿತ್ತುಂ (ಜಿನಮು. ೩–೨೫). 'ಪುಟ್ಟಳಿಗೆ' ಪರಾ. [< ಉಡು + ಪಳಿಗೆ (< ಪಱಿಗೆ)]

**ಉಟ್ವಾಡಿ** (ನಾ). ವಸ್ತ್ರಾದಿ ಅಲಂಕಾರಗಳಲ್ಲಿ ಪ್ರೀತಿಯುಳ್ಳ ವ್ಯಕ್ತಿ; ಉಡುಗೆಯನ್ನು ಧರಿಸಿಕೊಂಡು ಮೆರೆಯುವ ವ್ಯಕ್ತಿ: ಪಟ್ಟದರಾಣಿ ರುಕ್ಮಿಣಿ ದೇವಿ ಬಲದಲ್ಲಿ ಕಟ್ವಾಯವೆತ್ತು ನಿಂದಿರಲು ಉಟ್ವಾಡಿ ಸತ್ರಾಜಿತು ಕನ್ನೆ ಸೊಬಗಳವಟ್ಟೆರ್ದಳೆಡದ ಭಾಗದಲಿ (ಮೋಹತ. ೩೬–೫). 'ಉಂಡಾಡಿ' ಪರಾ. [< ಉಡು + ಆಡು + –ಇ]

**ಉಟ್ವಾವಳಿ** (ನಾ). "ಉಡುವ ಬಟ್ಟೆ" (ನಾಪದ. ಕೋಶ): ಜೋಗಿಗಳ ಹೊದೆವೋ ಚೀಟೀದಟ್ಟ ಸಂತೇಪ್ಯಾಟೀ ಕೋಟಿ ಗೂಡಾರಗಳು ಉಟ್ವಾವಳಿಯು ಪಟ್ವಾವಳಿಯು ಪಟ್ಟೇಮಂಚಕೊಪ್ಪುವ ಶಾಲು ಸಕಲಾತಿ (ನಾಪದ. ೧೪೨). [< ಉಡು + ಪಳಿ (< ಪಱಿ)]

**ಉಟ್ಟಿ**₁ (ನಾ). ೧. ಹಗ್ಗ ಅಥವಾ ಹುರಿಗಳಿಂದ ಮಾಡಿದ ಬಲೆ, —ಕಲ್ಲಿ; "ಗಡಿಗೆ ಮಡಕೆಗಳನ್ನು ಬಿಗಿಯುವ ಕಲ್ಲಿ" (ಜಾನಕೋ. ೧೯); "ಕಾಂಚಿತಂ, ಶಿಕ್ಯತಂ –೨ ಉಟ್ಟಿಯಲ್ಲಿಡಲ್ಪಟ್ಟದ್ದು" (ಸಿದ್ಧಾಂತಿ. ೨೯೮). ೨. ತೊಟ್ಟಿಲನ್ನು ತೂಗಹಾಕಲು ಸಹಾಯವಾಗುವ ಅದರ ಚೌಕಟ್ಟಿನಲ್ಲಿರುವ ಬಳೆ (ಕ).

[ದೇ. ‖ ತಮಿ. ಮಲ. ತೆಲು. ಉಟ್ಟಿ]

**ಉಟ್ಟಿ**₂ (ನಾ). ಜೇನುಗೂಡು (?): ಲಿಂಗಕ್ಕೆ ಸಂದ ಸವಿಯ ಹಿಂದೆ ಮುಂದೆ ಇದ್ದವರು ಕೇಳುವಂತೆ ಲಿಂಗಾರ್ಪಿತ ಉಟ್ಟಿ ಭ್ರಮರಕೊಂಡ ಕುಸುಮದಂತೆ ವರ್ಣವ ಕೊಂಡ ಕಿರಣದಂತೆ ವಾರಿಕೊಂಡ ಸಾರದಂತೆ ತನ್ನಲ್ಲಿಯೇ ಲೇಪ (ಮೋಳಿಮಾ. ೬೮–೨೭೪). [< ಪುಟ್ಟಿ ?]

**ಉಟ್ಟಿಗೆ**, ಉಟ್ಟಗೆ (ನಾ). ಬಟ್ಟೆ; ವಸ್ತ್ರ: ಪೀನ ಕುಚಂ ದೆಸೆಯುಟ್ಟಗೆ ಯಾಂತುದೊ ಮಿನಾಂಕನ ಕೇಳಿಗೆ ಬಗೆಬಗೆದುದೊ (ಉದ್ಭದೇ. ೩–೧೭); ಪೆರ್ಬುಲಿದೊವಲವೃಟ್ಟಗೆಯಾ ಮರೆವಂತಿರೆ (ನಂದಿಮಾ. ೨೧–೫೭); ಬಳ್ಳಿ ಉಡಿಗೆ ಉಡುವ ಉಟ್ಟಗೆ ಪಟ್ಲಾಯಿ (ವಿಸಾಸು. ೫೮–೨). **ಉಟ್ಟಗೆ**: ತರುಣಿಯುಟ್ಟಗೆಯ ಕಳೆದೊಳಸೆರಂಗಂ ನೋಡೆ (ಕೊಟ್ಟೂಬ. ೯–೧೧). 'ಪುಟ್ಟಗೆ' ಪರಾ. [< ಉಡು + –ಗೆ]

**ಉಟ್ಟರ** 'ಉಟ್ಟರ' ನೋ.

**ಉಠಾವಣೆ** (ನಾ). ಎತ್ತುವುದು; ಎತ್ತರಿಸುವುದು: ಕೆರೆಯ ಏರಿಯ ಉಠಾವಣೆ ನಡೆದಿದೆ (ರೂಢಿ). 'ಬಡಾವಣೆ' ಪರಾ.

[← ಮರಾ. ಉಠಾವಣೀ]

**ಉಠಾವುಠಿ** (ನಾ). ರಭಸ; ತೀವ್ರತೆ: ಅರಸ ಕೇಳ್ಳೆ ಬೊಬ್ಬಿಱಿದು ಚಪ್ಪರಿಸಿ ತೇಜಿಯ ನೂಕಿದನು ಮುರಹರನು ವುಠಾವುಠಿ [ಪಾಠಾಂ. ಸೂಠಾಸೂಠಿ] ಯೆಸುಗೆಯಲಿ ಕೈದೋಱಿದನು ಪಾರ್ಥ (ಕುವ್ಯಾಕ. ೨೩–೧೨).

[← ಮರಾ. ಉಠಾವುಠೀ]

**ಉಠಾವೆ** (ನಾ). ೧. ಎತ್ತುವಿಕೆ. ೨. ಬೇಡಿಕೆ. [← ಮರಾ. ಉಠಾವ್]

**ಉಠಿ** (ಕ್ರಿ). ಏಳು : ನಂದನದಂತೋಲಗಮಿರ್ದು ದೂಠಿವುಠಿ ಮಾಗಾಬ್ಬೈಸ . . . ಪ್ರಾತಿಹಾರ್ಯಸ್ವನಂ (ಅನಂಪು. ೨–೩೨).

[← **ಮರಾ.** ಉಠ. / **ಪ್ರಾ.** ಉಟ್ಠ < **ಸಂ.** ಉತ್ಥಾ]

**ಉಡ** 'ಉಡ್ಡು$_{2}$' ನೋ.

**ಉಡಂಗ** (ನಾ). (ದಕ). (ಬಯಲಾಟದ ಕುಣಿತದಲ್ಲಿ) ಒಂದು ಬಗೆಯ ಹಾರಿಕೆ ; ನೆಗೆತ.

[← **ಹಿಂ.** ಉಡಂಕೂ. / **ಸಂ.** ಉಟ್ಟಂಕ = ಕಾಲುಗಳನ್ನು ಮೇಲಕ್ಕೆ ತೂರುವಿಕೆ]

**ಉಡವೊಗ** 'ಉಡುವೊಗ' ನೋ.

**ಉಡಯಾರ್** (ನಾ). ಒಡೆಯರು : ಸ್ವಸ್ತಿಶ್ರೀ ಗಂಗೆಯುಂ ಕಡಾರಮುಂ ಪೂರ್ವ ದೇಸಮುಂ ಕೊಣ್ಡ ಉಡಯಾರ್ ಶ್ರೀ ರಾಜೇನ್ದ್ರಚೋಳ (ಎಕ. X, ಕೋಲಾರ. ೧೪–೨ ; 1035). [← **ತಮಿ.** ಉಡೈಯಾರ್]

**ಉಡಲು** 'ಉಡಿಲು' ನೋ.

**ಉಡವಣಿ** (ನಾ). ಹಿಂದೆ ಪ್ರಚಾರದಲ್ಲಿದ್ದ ಹದಿನಾರು ಬಗೆಯ ರೂಪಾಯಿ ನಾಣ್ಯಗಳಲ್ಲಿ ಒಂದು : ಉಡವಣಿ (ಕಭಾಗೆ. ೨೮೧). [?]

**ಉಡವಾೞ್** (ಕ್ರಿ). ಜೊತೆಯಾಗಿ ಬಾಳು ; ಅನುಭವಿಸು : ಅದಾನ ೞಿಪ್ಪಾನ್ಪಞ್ಚಮಹಪತಕನಪ್ಪೋ ಅದನುಡವ[ವಾ]ೞ್ವಾನ್ಪಞ್ಚಮಹಾಪತಕನಪ್ಪೋನ್ (ಎಕ. X, ಚಿಂತಾಮ. ೧೨೬ಬಿ–೫ ; 800).

[ಉಡ್$_{0}$ (< ಒಡನೆ) + ಬಾೞ್$_{1}$. / **ತಮಿ.** ಉಡನ್‌ವಾೞ್]

**ಉಡಸಾರಣೆ** 'ಉಡುಸಾರಣೆ' ನೋ.

**ಉಡಾನ್** (ನಾ). ಧ್ವನಿಯೆತ್ತಿ ಹೇಳುವ ಲಾವಣಿಯ ಒಂದು ಮಟ್ಟು : "ಜೈ ರಾಜರಾಜೇಶ್ವರೀ" ಅಂತೇಳಿ ಎತ್ತಿದ ನೋಡು ಲಾವಣೀನ . . . ಉಡಾನ್ ಎತ್ತಿದ್ರೆ, ಕೇಚ್ರಕ್ಕೆ ಮುಟ್ಟು (ದೆಯ್ಯಮು. ೨೪).

[← **ಹಿಂ.** ಉಡಾನ್ = ಹಾರುವಿಕೆ]

**ಉಡಾಪಿಸು** (ಕ್ರಿ). = ಉಡಾಯಿಸು ೨: ಸಂಮೋದದಿಂದೊಪ್ಪಿಸುತೆ ಗುರು ಪಾದಕಂ ಜನಪನಾಗಳ್ ಟೋಪುಗಳನುಡಾಪಿಸಿದ ಬಳಿಕನುನಯಂ ಚರಣಗಣದ ತಿಂಥಿಣಿ (ಮಹಾವಿ. ೨೨–೮೨). [ಉಡಾಪು$_{0}$ + –ಇಸು$_{3}$]

**ಉಡಾಪೆ** 'ಉಡಾಫೆ' ನೋ.

**ಉಡಾಫೆ, ಉಡಾಪೆ** (ನಾ). ಅಸಡ್ಡೆ ; ಪಾಲುಮಾರಿಕೆ ; ಉದಾಸೀನತೆ ; ಬಡಾಯಿ ; ಸುಳ್ಳು ; ಧೋರಣೆ : ಲಕ್ಷ್ಮಣರಾಂ ಎರು ಮಗಳಿಗೆ ಬರಿ ೧೬ ವರ್ಷವೆಂದು ಉಡಾಫೆ ಹೊಡೆದಿದ್ದರು (ಅಸ್ಥಿಪಂ. ೧೪೪) ; ಹಾಗೆ ಮಾಡೋಣ ಎಂಬ ಉಡಾಫೆಯಲ್ಲೆ ಕಾಲ ತಳ್ಳಿಹೋಯಿತು (ನಡೆದಾ. II, ೧೦೧೦); ವಿಷಯ ಚೆನ್ನಾಗಿ ಗೊತ್ತಿದ್ದರೆ ಮಾತ್ರ ಉತ್ತರ ಸರಿಯಾಗುವುದು. ಉಡಾಫೆ ಹೊಡೆಯುವಂತೆಯೇ ಇಲ್ಲ (ಶಿಕ್ಷದ. ೩೫೩). **ಉಡಾಪೆ:** ಇದೆಲ್ಲಾ ಉಡಾಪೆ ಅನ್ಕೋಬೇಡಾಣ್ಣ (ಶಕಾರ. ೧೭೨). [← **ಮರಾ.** ಉಡಾಫೂ]

**ಉಡಾಯಿಸು** (ಕ್ರಿ). **೧.** ತಿರಸ್ಕಾರದಿಂದ ತಳ್ಳಿಬಿಡು ; ಕೈಬಿಡು (ಕಿ). **೨.** ಹಾರಿಸು ; ಎಸೆ ; ಚಿಮ್ಮುವಂತೆ ಮಾಡು : "ತುಂಬಾ ಕಷ್ಟ ಸಾರ್ ಈ ಕಲ್ಲು ಕೀಳಬೇಕಾದ್ರೆ . . . ಇದಕ್ಕೆ ಡೈನಾಮೇಟ ಇಟ್ಟು ಉಡಾಯಿಸೋ ಹಾಗಿಲ್ಲ (ಹೊಸಮೇ. ೩೨) ; ಎಲ್ಲ ಬಳಗ ಮಿತ್ರ ಸಮೂಹವೂ ಇದನ್ನು ಮರುದಿನವೇ ಸ್ವೀಕರಿಸಿ ಒಬ್ಬೊಬ್ಬರೂ ಒಂದೊಂದು ಮಾತು ಉಡಾಯಿಸಿ ಟೀಕಿಸಿದರು (ಮಾಮನೆ. ೨೦೬). **೩.** (ಆಲಂ) ದುಂದು ಮಾಡು ; ಪೋಲುಮಾಡು : ತುಂಬ ಹಣ ಸಂಪಾದಿಸಿ ಭೋಗದಲ್ಲಿ ಅದನ್ನು ಉಡಾಯಿಸಿ ಬಿಟ್ಟರೆ (ನಿಬಂಧ. II, ೨೭೮).

[ಉಡಾ$_{0}$ + –ಇಸು$_{3}$. ℙ ಉಡಾ ← **ಹಿಂ.** ಉಡಾನಾ ; **ಮರಾ.** ಉಡವಿಣೇ]

**ಉಡಾಸ್‌ಪಾವಡ** 'ಉಡಾಸಪಾವಡ' ನೋ.

**ಉಡಾಸಪಾವಡ,** ಉಡಾಸ್‌ಪಾವಡ (ನಾ). (ಉಕ) : "ಮಂಗಲ ಕಾರ್ಯದಲ್ಲಿ ಬೀಸಣಿಗೆಯಂತೆ ಉಪಯೋಗಿಸುವ ವಸ್ತ್ರ" (ಜಾನಕೋ. ೧೯). **ಉಡಾಸ್‌ಪಾವಡ :** ಸಾಧಾರಣ ಬಿರುದುಗಳು . . . ನೃಸಿಂಹ ಮುಖ, ಉಡಾಸ್‌ಪಾವಡ, ಮಾಯಾಮಸ್ತಕ, ಛತಾರ, ಜಯಘಂಟಿ (ಗುರುದ. ೧೧). [ಉಡಾಸ್$_{0}$ + ಪಾವಡ (< ಪಾವುಡ)]

**ಉಡಾಸರುಮಾಲ** (ನಾ). (ಉಕ). = ಉಡಾಸ ಪಾವಡ : "ಸೀಗುರಿ . . . ಉಡಾಸರುಮಾಲ" (ಗಂಗಾಮು. ೩೨೯). [ಉಡಾಸ$_{0}$ + ರುಮಾಲ]

**ಉಡಾಳ** (ನಾ). (ಉಕ). ಸ್ವೇಚ್ಛಾಚಾರಿ ; ಸೋಮಾರಿ ; ಉಂಡಾಡಿ ; ಹೊಣೆಗೇಡಿ : ಹುಡುಗರನ್ನು ಉಡಾಳರನ್ನಾಗಿ ಮಾಡುವುದಕ್ಕೆ ನೀವು ಶಿಕ್ಷಣವೆನ್ನುತ್ತೀರೇನು ? (ರಂಗರೋ. ೧೨೪) ; ನನ್ನ ಮಗಳ ಬಾಳನ್ನು ಹೀಗೆ ಹಿಚುಕಬೇಕೆಂದು ಬಲೆಯನ್ನು ಬೀಸಿದ ನಿನ್ನ ಮಗನು ಉಡಾಳನಾಗಿದ್ದಾನೆ (ಚಿವರಿ. ೧೪೩). [← **ಮರಾ.** ಉಡಾಳ್]

**ಉಡಾಳಟಪ್ಪು** (ನಾ). (ಉಕ). ನಿಷ್ಪ್ರಯೋಜಕ ; ಪೈಗಳ್ಳ ; ಉಂಡಾಡಿ : ಹದಿನೆಂಟು ಹತ್ತೊಂಬತ್ತು ವರ್ಷದವನಾಗುವತನಕ ಕೇಶವನು ಹೀಗೆಯೇ 'ಉಡಾಳ–ಟಪ್ಪು' ಆಗಿ ಬೆಳೆದ (ಸಮುಜೀ. ೨೫).

[← **ಮರಾ.** ಉಡಾಣಟಪ್ಪೂ]

**ಉಡಾಳತನ** (ನಾ). (ಉಕ). ಸ್ವೈರವೃತ್ತಿ ; ಬೇಜವಾಬ್ದಾರಿ ವರ್ತನೆ : ನಿಷೇಧದ ಗೆರೆದಾಟ ಉಡಾಳತನದಿಂದಲೂ ಹಟಮಾರಿತನದಿಂದಲೂ ತನ್ನ ಬಾಲಪ್ರತಾಪವನ್ನು ತೋರಿಸಿ ಗೆಲ್ಲುವ ಸುಖವನ್ನು ಅವನೆಂದೂ ಹೊಂದಿಲ್ಲ (ಇಪ್ಪಕ. ೩೦೩). [ಉಡಾಳ + –ತನ]

**ಉಡಾಳಪೋರ** (ನಾ). (ಉಕ). ಉಡಾಳನಾದ ಹುಡುಗ ; ಪೋಲಿ ; ಪೋಕರಿ : ಅಂಬಿಕೆ, ನೀನು ಆ ನಿನ್ನ ಪ್ರೀತಿಪಾತ್ರ – ಉಡಾಳಪೋರ – ಭೀಮನನ್ನು ಎಲ್ಲಿಯವರೆಗೆ ಮರೆಯುವುದಿಲ್ಲವೋ ಅಲ್ಲಿಯವರೆಗೂ ನನ್ನ ಹಿತವಚನಗಳು ರುಚಿಸಲಾರವು (ಅಂಬಿಕೆ. ೩೧). [ಉಡಾಳ + ಪೋರ]

**ಉಡಿ$_{1}$** (ಕ್ರಿ). ಮುರಿ ; ತುಂಡಾಗು ; ಒಡೆ ; ಭಂಗಹೊಂದು : "ಉಡಿ– ಮೋಟನೇ (ಮುರಿ) ರೋಗಭೇದೇ ಚ" (ಶಮಧಾ) ; ಆದಿತ್ಯನಸ್ತಮಾನಕ್ಕೆ ಸಲ್ವುದಂ . . . ಕಲ್ಪವೃಕ್ಷದ ಕೋಡುಡಿದುದುಮಂ ಕಂಡುದಱಿಂ (ವಡ್ಡಾರಾ. ೮೬–೭) ; ದುರ್ಯೋಧನಂ ದಾಡೆಗಳೆದ ಕುಳಿಕನಂತೆಯುಂ ಕೋಡುಡಿದ ಮದಹಸ್ತಿಯಂತೆಯುಂ ನಖಮುಡಿದ ಸಿಂಹದಂತೆಯುಂ ಗಳಿತಗರ್ವನಾಗಿ (ಪಂಪಭಾ. ೭–೩೯ ವ) ; ತಗುರ್ಬಿದೊಡೆಯೆ ಘುರಿಯಲ್ಲೆ ನಲ್ಕೆ ತೋಳುಡಿದು ನೆಲಕ್ಕೆವಿೞ್ದು(ಳ)ದೆಡೆವೆತ್ತು ಕಱುತ್ತಿರದಟ್ಟಿ ಮುಟ್ಟಿನಟ್ಟೊಡೆ (ಸೌಇಇ. IX–i, ೧೬೩–೧೪ ; 1093) ; ಉಡಿದಡೇಱಿದ ಕೊಂಬು ಬೀಳುತ ಹಿಡಿದರಾ ಕೊಂಬುಡಿದರಾರಿನ್ನೊಡೆಯರೀ ಶಿಶುವಿಂಗೆ (ನಿಭಾಗ. ೫–೫–೪೫). **೨.** ಭಂಗಿಸು ; ಮುರಿದು ಹಾಕು ; ತುಂಡು ಮಾಡು : ಕಡಿ ಕಟಿವಮುನುಡಿ ತೊಡೆಯುಂ ನಡನಡ ನಡುಗುವಿನಮಡಸಿ ತಡೆಯದೆ ಖಳನಂ ಪಿಡಿದುಡಿಯೆ ಕಟ್ಟು ಮಿಡಮಿಡಮಿಡುಕುವಿನಂ ಬಡಿಯೊಳೊಡೆಯೆ ಪೊಡೆ ಪೆಡತಲೆಯುಂ (ವಡ್ಡಾರಾ. ೧೨೭–೫) ; ಪೊಕ್ಕುಡಿವೆಂ ಪಿಂಗಾಕ್ಷನೂರುದ್ವಯಮುನುರುಗದಾಘಾತದಿಂ (ಪಂಪಭಾ. ೭–೧೩) ; ಒಡೆಯ ದುರಿಯೋಧನನ ತೊಡೆಗಳನುಡಿವೆ ದುಶ್ಶಾಸನನ ರಕುತವ ಕುಡಿವೆ (ಕುವ್ಯಾದ್ರೋ. ೧೩–೬೨). **೩.** ವಾಸಿಮಾಡು ; ಮಾಯಿಸು (?) : ನೊಂದ ತಮ್ಮಣುಗಾಳ್ಗಳ ಕೊಂಡಾಟದಾನೆಗಳ ನಚ್ಚಿನ ಕುದುರೆಗಳಪುಣ್ಗಳ ನುಡಿಯಲುಪೋವಲುಂ ಮರ್ದು ಬೆಜ್ಜರುಮನಟ್ಟುತ್ತುಂ (ಪಂಪಭಾ. ೧೧–೨ ವ). 'ಉಡಿಯಿಸು' ಪರಾ.

[**ದೇ.** ‖ **ತಮಿ.** ಉಡೈ, ಒಡಿ ; **ಮಲ.** ಉಡ, ಉಡೆ, ಒಡಿ ; **ತುಳು.** ಉಡೆ, ಒಡಿ, ಒಡೆ ; **ಕೊಡ.** ಒಡ, ಒಡೆ ; **ತೆಲು.** ಓಟಾಜು ; **ಕೊ.ಲಾ.** ಓಡ್ ; **ನಾಯ್ಕಿ.** ಓಟ್, ಓಡ್ ; **ಪರ್ಜಿ.** ಓಡ್]

**ಉಡಿ$_2$** (ಕ್ರಿ). ಹೊಸೆ; ಹುರಿಮಾಡು : "ಉಡಿ – ಬಿಚ್ಚಿಹೊಸೆ (ಹಗ್ಗವನ್ನುಡಿಯುವುದು) ಹುರಿಹಾಕು" (ಜಾನಕೋ. ೨೦); , ಒಂದು ಬಳ್ಳಿಯನ್ನು ಉಗಿದು ಅದರ ಎರಡು ಮೂರು ಎಳೆಯನ್ನು ಉಡಿದು ಹಗ್ಗ ಮಾಡಿದನು (ಮಲೆಮ. ೬೭). 'ಉಡಿಗಲ್ಲಿ' ಪರಾ. [?]

**ಉಡಿ$_3$** (ಕ್ರಿ). ಬೆಳಗು ; ಪ್ರಕಾಶಿಸು : ಇ[ದ]ಕಾದುಡಿದೋ[ಂ]ಗೆ ವಾರಣಾಸಿಯೊಳ್ಸಾಸಿರ ಕವಿಲೆಯ[ಂ]ಕೋಡುಂ ಕೊಳಗುಮಂ ಪೊನ್ನೊಳ್ಕಟ್ಟಿಸಿ ದಾನಂಗೊಟ್ಟ [ಫ]ಲಮಕ್ಕು (ಸೌಇಇ. XI–i, ೩೪–೧೮ ; 925).
[ದೇ. ‖ ತಮಿ. ಒಡಿ = ಪ್ರಕಾಶಿಸು ; ಮಲ. ಒಳಿ = ಪ್ರಕಾಶ]

**ಉಡಿ$_4$** (ಕ್ರಿ). ಚಿಗುರು ; ಮೊಳಕೆಯೊಡೆ : ಬೇಂಟೆಯನೊರ್ವಂ ಬಂದು ಪೊಡೆವಟ್ಟು ಕಂಡಿಂತೆಂದಂ ಪೊಲನುಡುಗಿ ಬಂದುದುಡಿದುದು ಪುಲ್ ಕಾಡುಂ ದಲೆಲೆಯಿಕ್ಕಿ ಘಳಿಲೆನೆ ನಿಂದುವು (ಪಂಪಭಾ. ೫–೩೬, ೩೭). 'ಒಡೆ$_1$' ಪರಾ. [?]

**ಉಡಿ$_5$** 'ಉಡೆ$_1$' ನೋ.

**ಉಡಿ$_6$** (ನಾ). (ಮುರಿದ) ಚೂರು ; ತುಂಡು ; ಮುರುಕು : ಎಲ್ವಂ ನಟ್ಟುಡಿದ ಬಾಳ ಕಕ್ಕಡೆಯುಡಿಗಳುಮನಯಸ್ಕಾಂತಮಂ ತೋಱಿ ತೆಗೆಯಿಸುತ್ತುಂ (ಪಂಪಭಾ. ೧೧–೨ ವ) ; ಸಿಡಿಲ ಕಿಡಿಯಂತೆಸೆವ ಕಣ್ಣು ಬ್ರಹ್ಮಾಸ್ತ್ರದೆರಡುಡಿಯ ನಿರುಕಿಸಿದ ತೆಜದ ದಾಡೆ (ಹಚಕಾ. ೬–೪). 'ಒಡೆ$_2$' ಪರಾ.
[< ಉಡಿ$_1$]

**ಉಡಿ$_7$** (ನಾ). ಒಂದು ರೋಗ; ಹುಣ್ಣು : "ಉಡಿ–ಮೋಟನೇ (ಮುರಿ), ರೋಗಭೇದೇ ಚ" (ಶಮಧಾ). "ಉಡುಚು" ಪರಾ.
[ದೇ. ‖ ತಮಿ. ಒಡು = ಕೀವು ಹುಣ್ಣು, ವ್ರಣ ; ಮಲ. ತುಳು. ಒಡಿ ; ತೆಲು. ಒಡಿಸೆಗಡ್ಡ]

**ಉಡಿ$_8$** (ನಾ). ಒಂದು ಮರದ ಹೆಸರು: ಮರಗಳು: ಹೆಸವ . . . ತುಪರ, ಉಡಿ,ಬಿಕ್ಕೆ,ಕರಾಚಿ(ನಮ್ಮನು. ೨೩೬). [ದೇ. ‖ ತಮಿ. ಮಲ. ಉದಿ, ಒದಿ]

**ಉಡಿ$_9$** (ನಾ). ಮೊಳಕೆ : ಅಡಿಕೆ ಉಡಿಯಲ್ಲಿ ಹಾಕಬಹುದು ಮರವಾದ ಮೇಲೆ ಕೂಡದು (ಗಾದೆ). [< ಉಡಿ$_4$]

**ಉಡಿಕೆ$_1$** 'ಉಡುಕೆ$_1$' ನೋ.

**ಉಡಿಕೆ$_2$** (ನಾ). (ದಕ. ಪ್ರಾದೇ). ಈಚಲು ಗರಿಯಿಂದ ಮಾಡಿದ ಚೀಲ; ಸಂಬಳಿಗೆ : ನಿನ್ನ ಉಡಿಕೆಯಲ್ಲಿ ಒಂದು ಚೂರು ಎಲೆ ಇದ್ರೆ ಕೊಡು (ರೂಢಿ). [?]

**ಉಡಿಕೆ$_3$** 'ಉಡುಗೆ$_1$' ನೋ.

**ಉಡಿಕೆ$_4$** (ನಾ). ಮಲ ; ಹೇಲು : ಮಱೆಯಿಲ್ಲದಿರೆ ಅರ್ಚಿಸಿ ನೋಡಲ್ ಶ್ವಾನಂ ಉಡಿಕೆಯಾಗಲ್ ಅಲ್ಲಾ ಮೂತ್ರಿಸಲ್ . . . ಸುವೃಷ್ಟಿಯಪ್ಪುದು (ಲೋಕೋಪ. ೧೨–೨೬ ಟೀಕೆ). 'ಉಡಿಸು$_2$' ಪರಾ. [< ಉಡಿಸು$_2$]

**ಉಡಿಕೆಗಂಡ** (ನಾ). ಉಡಿಕೆಮಾಡಿಕೊಂಡ ಗಂಡ ; ವಿಧವೆಯನ್ನು ಕೂಡುವಳಿಯಿಂದ ವಿವಾಹ ಮಾಡಿಕೊಂಡವನು : ಉಡಿಕೆಗಂಡನ ಉಪದ್ರ ಬಹಳ (ಗಾದೆ). [ಉಡಿಕೆ$_1$ (< ಉಡುಕೆ$_1$) + ಗಂಡ$_1$]

**ಉಡಿಕೆಮನೆತನ** (ನಾ). ಕೂಡುವಳಿಯಿಂದ ಬೆಳೆದ ಮನೆತನ: ನಮ್ಮ ಗಡಿಪಾಡದ 'ಉಡಿಕೆ' ಮನೆತನಗಳ ಹೆಸರೆಲ್ಲಾ ಇದೆಯಂತೆ (ಬೆಳುವು. ೨೮). [ಉಡಿಕೆ$_1$ (< ಉಡುಕೆ$_1$) + ಮನೆತನ]

**ಉಡಿಕೆಹೆಂಡತಿ** (ನಾ). ಉಡಿಕೆ ಮಾಡಿಕೊಂಡ ಹೆಂಡತಿ; ಕೂಡುವಳಿಯಾದವಳು (ಕ).
[ಉಡಿಕೆ$_1$ + (< ಉಡುಕೆ$_1$) ಹೆಂಡತಿ (< ಪೆಂಡತಿ)]

**ಉಡಿಗಂಟು** (ನಾ). (ಹೆಂಗಸರು) ಸೀರೆ ಉಡುವಾಗ ಸೊಂಟದಲ್ಲಿ ಕಟ್ಟಿಕೊಳ್ಳುವ ಗಂಟು : ಕೆಲವರು ಹುಡುಗಿಯರು ಉಡಿಗಂಟಿಲ್ಲದೆ ಸೀರೆ ಉಡುತ್ತಾರೆ (ರೂಢಿ). [ಉಡಿ$_5$ (< ಉಡೆ$_1$) + ಗಂಟು]

**ಉಡಿಗಂಟೆ** 'ಉಡೆಗಂಟೆ' ನೋ.

**ಉಡಿಗಟ್ಟು** (ಕ್ರಿ). ಜೋಡಿಸಿ ಕಟ್ಟು ; ಹೊರೆ ಕಟ್ಟು ; ಬಿಗಿದು ಕಟ್ಟು (?) : ಸೆಂಡುಗೋಲನುಡಿಗಟ್ಟುವ ಪೀಲಿಗಳಿಂ ತರಂಗಮಂ ಪೊಸೆಯಿಪ ಬೆತ್ತಗಣ್ಣಿವಲೆಯಂ ಸಮಕಟ್ಟುವ ಬೆಟ್ಟುಗೂಂಟಮಂ ಬಸಿವ ಪುಳಿಂದ ಸಂಕುಳದ ಪೆರ್ಗಣದಿಂದೆಸೆದತ್ತು ಪಕ್ಕಣಂ (ಚಂದ್ರಪು. ೫–೫೪) ; ಬೆಂಕಿಯೊಳೊಡ್ಡಿ ಕಾಸಿಕೊಂಡಾಳಿಸಿ ಸಂದು ಕೋಲನುಡಿಗಟ್ಟುವ ಕೆಂಗಱಿಯಂ ಸರಂಗಳೊಳ್ ಮೇಳಿಸಿ ಸುತ್ತುಮಿರ್ಪ ಶಬರರ್ಕಳಿನೊಪ್ಪಿದುದೊಂದು ಪಕ್ಕಣಂ (ಕುಸುಮಾ. ೧೦–೧೪೭). [ಉಡಿ ? + ಕಟ್ಟು$_1$]

**ಉಡಿಗಲ್ಲಿ** (ನಾ). ಒಂದು ತೆರನಾದ ಹೊಸೆದ ಬಲೆ ಅಥವಾ ಚೀಲ : ಇಡುವಲೆ ದೀಹದೇಣನುಡಿಗಲ್ಲಿ [ಪಾಠಾಂ. ಉಡಿಯಲ್ಲಿ] ಯಡಾಯುಧ ಮಡ್ಡಣಂ ಸೊಡರ್ ಗಿಡಗಮೆನಿಪ್ಪಿವಂ ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದಿದರ್ (ರಾಜಶೇ. ೫–೫೨). [ಉಡಿ$_2$ + ಕಲ್ಲಿ$_1$]

**ಉಡಿಗೂಸು** (ನಾ). ಸೊಂಟದಲ್ಲಿರುವ ಮಗು ; ಮಡಿಲಲ್ಲಿರುವ ಮಗು : "ಉಡಿಗೂಸು – ಬಗಲಗೂಸು" (ಜಾನಕೋ. ೨೦).
[ಉಡಿ$_5$ (< ಉಡೆ$_1$) + ಕೂಸು]

**ಉಡಿಗೆ$_1$** 'ಉಡುಗೆ' ನೋ.

**ಉಡಿಗೆ$_2$** (ನಾ). "ಭಟ್ಟೆ ; ಶರೆ" (ರುದ್ರನಿ. ೮೦). [?]

**ಉಡಿಗೆಜ್ಜೆ** (ನಾ). ಮಕ್ಕಳ ಸೊಂಟಕ್ಕೆ ಕಟ್ಟುವ ಗೆಜ್ಜೆಗಳಿಂದ ಕೂಡಿದ ಒಂದು ಆಭರಣ : ಉಟ್ಟ ಪೀತಾಂಬರ ಉಡಿಗೆಜ್ಜೆ ವಡ್ಯಾಣ ತೊಟ್ಟ ಕೌಸ್ತುಭಹಾರ ಪದಕಗಳಿಟ್ಟ ಕೊರಳೂ (ವಾದಿಕೀ. I, ೪೧).
[ಉಡಿ$_5$ (< ಉಡೆ$_1$) + ಗೆಜ್ಜೆ]

**ಉಡಿಘಂಟೆ** 'ಉಡೆಗಂಟೆ' ನೋ.

**ಉಡಿಜಲ್ಲಿ** 'ಉಡಿಝುಲ್ಲಿ' ನೋ.

**ಉಡಿಝುಲ್ಲಿ, ಉಡಿಜಲ್ಲಿ** (ನಾ). ಸೊಂಟಕ್ಕೆ ಕಟ್ಟಿಕೊಳ್ಳುವ ಗೊಂಡೆ; ಕುಚ್ಚು : ಉಡಿಝುಲ್ಲಿ ಕಟ್ಟಿದ ಸುರಗಿ ಕೈಪೊಡೆ ಪೊಂದೊಡಹದಂಬಿನ ಬತ್ತಳಿಕೆ ಪಡಿವೆದೆ ಪಿಡಿದ ಬಿಲ್ಲೆಸೆಯೆ ಬಿಲ್ಲವರಲ್ಲಿ ಬಿಡದೆ ಮೆಱೆದರೊಗ್ಗಿನಲಿ (ಕುರಾಸಾಂ. ೨೭–೨೭). **ಉಡಿಜಲ್ಲಿ** : ಪಿಡಿದ ಸಬಳ ಕೈಕತ್ತಿ ಪೂಸಿದ ಗಂಧ ನಡುವಿನ ಬಂಕು ಪೆರ್ದುಱುಬು ಉಡಿಜಲ್ಲಿಯುಟ್ಟ ಕಾಶೆಯ ಸಬಳಿಗರಂದು ನಡೆದು ಬಂದರು ನಲವಿಂದ (ಕುರಾಸಾಂ. ೧೧–೩೬).
[ಉಡಿ$_5$ (< ಉಡೆ$_1$) + ಝುಲ್ಲಿ]

**ಉಡಿತ** (ನಾ). ಭಂಗ ; ಮುರಿಯುವಿಕೆ ; ಮುರಿತ : ಜಡತೆ ವಾರಿಯೊಳುಗ್ರವೀಶನೊಳುಡಿತ ರಂಭಾವನದಿ ಸಂತತ ಹೊಡಹು ವಾದ್ಯದ ರವದೊಳಲ್ಲದೆ ನಾಡೊಳಿಲ್ಲೆಂದ (ಜೀವಂಚ. ೨–೧೩).
[ಉಡಿ$_1$ + –ತ$_2$]

**ಉಡಿತಿಬ್ಬು** (ಕ್ರಿ). (?): ಸಿಜ್ಗಪೋತರಸರು ಪೊನ್ನೇಜರಸರು ಧರ್ಮ್ಮಮಹಾದೇವಿಯರುಡಿತಿಬ್ಬು ಪೊನ್ನೇಜದೊಡ್ಡರೆನ್ದು ಕಡಗಮಿಟ್ಟರ್ (ಸೌಇಇ. IX–i, ೧೭–೧೩ ; 9ನೆಯ ಶತ). [?]

**ಉಡಿತುಂಬಿಸು** (ಕ್ರಿ). ಮಡಿಲು ತುಂಬಿಸು : "ನನ್ನ ಗೆಳತಿ ಶಾರದಾ ಇಲ್ಲಿದ್ದಾಳೆ, ಚೊಚ್ಚಲು ಬಸುರಿ, ಉಡಿತುಂಬಿಸಿ ಕಳುಹಿಸಬೇಕು ಬರ ಹೇಳುತ್ತೇನೆ" (ರೂಪಸಂ. ೧೬). [ಉಡಿತುಂಬು + –ಇಸು$_3$]

**ಉಡಿತುಂಬು** (ಕ್ರಿ). ಮಡಿಲು ತುಂಬು; ಸೋಗಿಲಿಕ್ಕು : ತಂದ ಸುಫಲಾವಳಿಯನುಡಿತುಂಬಿ (ನವಮೋ. ೧೫–೩೫) ; ಅಕ್ಕಿಯ ಹಾಸೆಯ ಮತ್ತಾರು ಹೊಯ್ದಾರ ಸತ್ಯಕ್ಕನೆಂಬ ಮುತ್ತೋದಿ ಉಡಿತುಂಬಿ ಅಕ್ಕಿ ಹಾಸೆಯ ಹೊಯ್ದಾಳ (ಲೋಕಗೀ. ೧೬–೧೦) ; ತಿಂಗಳಲ್ಲಿ ಒಂದೆರಡು ಬಾರಿಯಾದರೂ ಸುವಾಸಿನಿಯರನ್ನು ಮನೆಗೆ ಬರಮಾಡಿಕೊಂಡು ಉಡಿತುಂಬಿ ಕಳಿಸುತ್ತಿದ್ದಳು (ರಂಗರೋ. ೭೧). [ಉಡಿ$_5$ (< ಉಡೆ$_1$) + ತುಂಬು$_1$]

**ಉಡಿದಲ್ಲಿ** (ನಾ). ಒಂದು ಔಷಧಿ ಗಿಡದ ಹೆಸರು (ವೈಔಗಿ.೫೩–೧೦೬೭). [?]

**ಉಡಿದಾರ** 'ಉಡೆದಾರ' ನೋ.

**ಉಡಿದೊವಲ್** 'ಉಡೆದೊವಲ್' ನೋ.

**ಉಡಿನೂಲ್** 'ಉಡೆನೂಲ್' ನೋ.

**ಉಡಿನೂಲು** 'ಉಡೆನೂಲ್' ನೋ.

**ಉಡಿಪ** (ನಾ). ಮುರಿಯುವಿಕೆ; ಭೇದನ: ಕೇಕಿಧ್ವಜವಂದುಡಿದುದು ಸಹಸ್ರಭುಜವನದುಡಿಪಕ್ಕಿದು ಸಂಚಕರಮೆನಲ್ ಬಲಿಸುತನಾ (ಜಗವಿ. ೧೮–೮). [ಉಡಿ$_1$ + –ಪ$_2$]

**ಉಡಿಪ್ಪೆಬಳ್ಳಿ** (ನಾ). ಒಂದು ಔಷಧಿ ಗಿಡದ ಹೆಸರು: ಉಡಿಪ್ಪೆಬಳ್ಳಿ, ಕರಕಿ (ವೈಔಗಿ. ೪೧–೮೦೫). [ಉಡಿಪ್ಪೆ$_0$ + ಬಳ್ಳಿ]

**ಉಡಿಪ್ಪೆಮರ** (ನಾ). ಒಂದು ಔಷಧಿ ಗಿಡದ ಹೆಸರು: ಉಡಿಪ್ಪೆಮರ (ವೈಔಗಿ. ೪೦–೭೯೮). [ಉಡಿಪ್ಪೆ$_0$ + ಮರ]

**ಉಡಿಮಣಿ** 'ಉಡೆವಣಿ' ನೋ.

**ಉಡಿಮರ, ಉಡಿವರ** (ನಾ). ಒಂದು ಔಷಧಿ ಗಿಡದ ಹೆಸರು: ಉಡಿಮರ, ಗೊಡ್ಡ, ಊದಿಮರ, ಸಿಂಟಿಮರ, ಗೊಗಲ್, ಹೆಣ್ಣುಗೊಡ್ಡ (ವೈಔಗಿ ೫೭–೧೧೫೦). **ಉಡಿವರ**: ಪಂಚಪೃಥ್ವಿಯ ಮಧ್ಯದಲ್ಲಿ ಒಂದು ಉಡಿ [ಪಾಠಾಂ. ಡು]ವರದ ಗಿಡು ಹುಟ್ಟಿತ್ತು (ಕೋಲಶಾಂ. ೧೭). [ಉಡಿ$_8$ + ಮರ]

**ಉಡಿಯಕ್ಕಿ** (ನಾ). ಉಡಿಯಲ್ಲಿ ಹಾಕುವ ಅಕ್ಕಿ; ಮಡಿಲಕ್ಕಿ: ಖಡ ಕೀಲೆ ಉಡಿಯಕ್ಕಿ ಹಾಕಿದರವ್ವಾ ಒಳ್ಳೆ ದುಡಿಕೀಲೆ ಮುಂದಕ್ಕೆ ನೂಕಿದ ರವ್ವಾ (ಶರೀಫ. ೨೧); ಮುತ್ತೈದೆಯರು ಮರಳಿನ ಉಡಿಯಕ್ಕಿಯನ್ನು ತುಂಬಿಕೊಂಡರು (ಸುವಸಂ. ೩೦). [ಉಡಿ$_5$ (< ಉಡೆ$_1$) + ಅಕ್ಕಿ$_1$]

**ಉಡಿಯಿಸು** (ಕ್ರಿ). ನಾಶಮಾಡು; ಮಾಯಿಸು: ನೊಂದು ಬಿಟ್ಟಿರ್ದ ಕುಮಾರನುಮಂ ಕಂಡು ಒಸೆದಾತನನೆತ್ತಿಕೊಂಡು ಪುಣ್ಣನುಡಿಯಿಸಿ ಕೆಲವಾನುಂ ದೆವಸದಿಂ ಕುಮಾರಂಗಾಸೆಯಾದೊಡೆ ಬೀಡಿನ ಪ್ರಭುಗಳೆಲ್ಲರುಮಂ ನೆರೆಪಿ ಸೆಟ್ಟಿಯಿಂತೆಂದಂ (ಜೀವಸಂ. ೫೯–೪೧). [ಉಡಿ$_1$ + –ಇಸು$_3$]

**ಉಡಿಲು, ಉಡಲು** (ನಾ). ಮಡಿಲು; ಸೋಗಿಲು: ಭೇದವನಱಿಯದೆ ಲಿಂಗವ ಧರಿಸಿದರೆ ಉಡಿಲಲ್ಲಿ ಕಲ್ಲ ಕಟ್ಟಿಕೊಂಡು ಕಡಲ ಬಿದ್ದಂತಾಯಿತು (ಅಖಂಡೇ. ೧೮–೫). **ಉಡಲು**: (ಕ).

ಉಡಲುತುಂಬು = ಒಡಲು ತುಂಬು; ಮಡಿಲು ತುಂಬು: "ಶೋಭನದ ಮದುಮಗಳ ಅಥವಾ ಚೊಚ್ಚಲಬಸಿರಿಯ ಸೆರಗಿಗೆ ಅಕ್ಕಿ, ಕಾಯಿ, ಬಾಳೆಯಹಣ್ಣು, ರವಿಕೆಕಣ, ತಂಬಿಟ್ಟು, ಚಿಗಳಿ ಇತ್ಯಾದಿಗಳನ್ನು ಹಾಕು" (ಕರಾ). [ಉಡಿ$_5$ (< ಉಡೆ$_1$) + –ಇಲ್$_3$]

**ಉಡಿಲೇವಳ** (ನಾ). ನಡುವಿಗೆ ಕಟ್ಟುವ ಒಂದು ಆಭರಣ: ತೊಟ್ಟ ಮಣಿಭೂಷಣದ ಕನಕದ ಕಟ್ಟಿದುಡಿಲೇವಳದ ಹೊಸ ಹೊಂಬಟ್ಟೆಯುಡಿಗೆಯ (ನಿಭಾಗ. ೧೦–೨೧–೨೦). [ಉಡಿ$_5$ (< ಉಡೆ$_1$) + ಲೇವಳ (< ನೇವಳ)]

**ಉಡಿವಣಿ** 'ಉಡೆವಣಿ' ನೋ.

**ಉಡಿವರ** 'ಉಡಿಮರ' ನೋ.

**ಉಡಿವಸನ** (ನಾ). ನಡುವಿಗೆ ಸುತ್ತುವ ಬಟ್ಟೆ; ಸೊಂಟಕ್ಕೆ ಸುತ್ತುವ ವಸ್ತ್ರ: ಚೆಂಬಾವುಡೆಯುಡಿವಸನವು ತೋಯ್ದು ನಿತಂಬವು ದೃಶ್ಯವಡೆದು ಪೊಂಬಾಳೆದೊಡೆ ತೋಳು ನುಣ್ಗೊಳೆ ಮೆಱೆಯೆ ಪೀತಾಂಬರ ನೋಡಿ ಹಿಗ್ಗಿದನು (ಮೋಹತ. ೧೪–೫೮). [ಉಡಿ$_5$ (< ಉಡೆ$_1$) + ವಸನ]

**ಉಡಿಸು$_1$** (ಕ್ರಿ). ಉಟ್ಟುಕೊಳ್ಳುವಂತೆ ಮಾಡು; ಧರಿಸುವಂತೆ ಮಾಡು: ನುಡಿಸಿದನೆನ್ನಂ ನಲ್ಲಂ ಬಿಡಿಸಿದನೆನ್ನಂತರಂಗದನುತಾಪಮನೊಲ್ದು ಡಿಸಿದನೊಳ್ಳುಳ್ಳುಡೆಯಂ ತುಡಿಸಿದನೆನಗಱಕೆಯಪ್ಪ ಮಣಿಭೂಷಣಮಂ (ಕವಿರಾ. ೩–೨೩೪); ಉಡಿಸಿಯುಮೂಡಿಯುಮುಟ್ಟಿಯಿನಿಡೆಯುಡುಗದೆ ಸಲಿಸಿ ಪಲವು ಕಾಲಂ ಪುದುವಾಟಿಲ್ದೊಡಲಾತ್ಮನೊಡನೆ ಪೋಗದೆ ಕಡೆಗಣಿಸುವುದೆಂದೊಡುಱಿದರಂ ನಂಬುವುದೇ (ಆದಿಪು. ೩–೬೧); ನೆಲದ ಬೊಂಬೆಯ ಮಾಡಿ ಜಲದ ಬಣ್ಣವನುಡಿಸಿ ಹಲವು ಪರಿಯಾಶ್ರಮದಲ್ಲಿ ಉಲಿವ ಗೆಜ್ಜೆಯ ಕಟ್ಟಿ (ಅವಚಂ. ೫–೧೬); ಉಡಕಲಿಸಿಯುಂ ಉಡಿಸಿಯುಂ ತೊಡಿಸಿಯುಂ ತಣಿಯ (ಅನೀರ. ೮೫); ಹೊಸ ಅರಿವೆಗಳನ್ನು ಹಾಕದೆ ಸ್ವಚ್ಛವಾದುವುಗಳನ್ನು ಉಡಿಸಿ ತೊಡಿಸಿ (ಮುಂಬಯಿ. ೩–೩೨). [ಉಡು$_1$ + –ಇಸು$_3$]

**ಉಡಿಸು$_2$** (ಕ್ರಿ). ಮಲವಿಸರ್ಜನೆ ಮಾಡು: ಉಡಿಸೆ ಮೂತ್ರಿಸೆ ನಕ್ಕು ಪೊರ್ಕುೞಿ ತಾಣವಂ ಬಲಚೇಷ್ಟೆಯಂ ಕುಡೆ ಬಲಾಶ್ರಿತನಾಗೆ ಪೆಣ್ಗೊಂಡಗುಂಡೆಯೇ ಸಮರದಲ್ಲಿ ಕಾಲಿಡೆ ಪೊದಟ್ಟಿರದೇಟಿ ಸುಸ್ವರದೊಳೆ ಪೆರ್ಮುೞಿ ಕೊಳ್ಗಂ (ಲೋಕೋಪ. ೧೨–೨೬). 'ಉಡಿಕೆ' ಪರಾ. [ಉಡಿ$_0$ + –ಇಸು$_3$. / ತಮಿ. ಉಡಿ = ಮಲವಿಸರ್ಜನೆ ಮಾಡು]

**ಉಡಿಸು$_3$** (ಕ್ರಿ). ಒಡೆಯಿಸು; ತುಂಡುಮಾಡಿಸು. [ಉಡಿ$_1$ + –ಇಸು$_3$]

**ಉಡಿಸುತ್ತು** (ಕ್ರಿ). ಸೊಂಟಕ್ಕೆ ಸುತ್ತು; ನಡುವಿಗೆ ಕಟ್ಟು: ಬೆಡಗು ಬಿನ್ನಣ ಬೇಱಿ ಹೊದೆದ ದುಕೂಲವ ಉಡಿಸುತ್ತಿ ನಡೆದನಾ ರಾಯ (ಭರಜ. ೩–೫); ಶ್ರೇಷ್ಠವಾದ ಮೂಲಿಕಾವಿಶೇಷಗಳಂ ಸಹ ತೆಗೆದುಕೊಂಡು ತಂಡ ತಂಡವಾಗಿ ಬಂದು ಉಡಿಸುತ್ತಿ ವೋಲಗಶಾಲೆಯಂ ಪೊಕ್ಕು ದೂರದೊಳ್ ರಾಜೇಂದ್ರನಂ ಕಂಡು ನಮಸ್ಕರಿಸಿ (ಪುರುಚ. ೧೪೧). [ಉಡಿ$_5$ (< ಉಡೆ$_1$) + ಸುತ್ತು$_1$]

**ಉಡಿಸುರಿ** (ನಾ). ಒಂದು ಬಗೆಯ ತೆರಿಗೆ: ಮೊಟ್ಟೆಕಾಱರು ತಂದು ಮಾಱಿದ ಭತ್ತ ಧಾನ್ಯವೊಳಗಾಗಿ ಹೊಂಗೆ ಮಾನವೊಂದು ಮತ್ತವಂಗಡಿಯರೆಯಂಗಡಿ ಮಾನ್ಯದಂಗಡಿಯೆಂನದುಡಿಸುರಿಯಂ ಕೊಂಡು ಹಸರಂಗೆಯ್ದು (ಕಇ. II, ೨೧–೨೪; 1147). [?]

**ಉಡು$_1$** (ಕ್ರಿ). ಉಟ್ಟ (ಭೂತಕೃ), ಉಟ್ಟು (ಭೂತನ್ಯೂ); (ಪಂಚೆ ಸೀರೆ ಮುಂತಾದುವನ್ನು) ಧರಿಸು; ತೊಡು: "ಉಡು – ವಸ್ತ್ರ ಪ್ರವೇಷ್ಟನೇ ಮೃಗವಿಶೇಷೇ ಚ" (ಶಮಧಾ); "ಉಡು – ವಸ್ತ್ರಧಾರಣೇ ಗೋಧಾಯಾಂ ಚ" (ಶಬ್ದಾನು. ೧೨ ವ್ಯಾಖ್ಯಾ); ಮೋದದಿನುಡುವ ಸೀರೆಗಂ (ಕವಿರಾ. ೧–೧೨೭); ನಂದಿಮಿತ್ರನೆಂದನಯ್ಯಾ ಎನಗುಡಲಿಲ್ಲೇ ನುಮೊಂದು ದಮ್ಮಕ್ಕಾದೊಡಂ ಸೀರೆಯಂ ಕೊಂಡೀಯಿನುಂದೊಡೆ (ವಡ್ಡಾರಾ. ೭೭–೧೧); ನಾನು ಸೀರೆಯನುಡುವುದಕ್ಕೆ ಮುನ್ನವೇ ಜಂಗಮಕ್ಕೆ ದೇವಾಂಗವನುಡಿಸುವೆ (ಮಹಾದೇ. ೨೭–೧); ಉಡಲಿಲ್ಲ ಉಣಲಿಲ್ಲ ಮಾಡಿಲ್ಲ ಹರಿಸೇವೆ ಕೂಡಿಲ್ಲ ಸಾಧುಸಜ್ಜನರೊಡನೆ (ಪುರಂದ. ೧–೧೫೩–೩); ಉಟ್ಟಿದ್ದು ಹರಿಯದಿದ್ದರೆ ನಷ್ಟವೇನು (ಗಾದೆ).

ಉಟ್ಟಿರು = ಧರಿಸಿರು; ತೊಟ್ಟಿರು: ಪೆಣ್ಣುಡೆಯುಟ್ಟಿರೆ ಪುತ್ರನೇಱಿ ಕೊಲ್ಲದ ತುಱಿಲಾಳ್ತನಕ್ಕೆ ಸಮನಾವನೊ ಸಾಹಸಭೀಮ ಭೂಪನೊಳ್ (ಗದಾಯು. ೧–೨೨). ಉಟ್ಟುದನಿಕ್ಕು, ಉಟ್ಟುದಿಕ್ಕು = ಉಟ್ಟ ವಸ್ತ್ರವನ್ನು ಕಳಚಿ ಬಿಸುಡು; ಬತ್ತಲೆಯಾಗು: ಭೀರುಗಳಂ ಶರಣ್ಬುಗುವರಂ ಭಯದುಟ್ಟುದನಿಕ್ಕಿ ನಿಲುವರಂ ಪಾರುವಂದಿಳಾತಳಕೆವಪ್ಪರನಾಂ ತಿಱಿಯಲ್ಕೆ ಪೇಸಿ (ಎಇ. XX, ೧೨–೨೩; 1167); ಕಡುಕೆಯ್ದುಟ್ಟುದನಿಕ್ಕಿಯುಂ ಸುಭಟನೆೆ (ಲೀಲಾವ. ೩–೮೭); ತಲೆವಱಿದುಟ್ಟುದಿಕ್ಕಿ ಸುರಲೋಕ ಸುಖಂಗಳನುಣ್ಬೆವೆಂಬ ಬತ್ತಲೆಗರ ಮಾತುಗೇಳದಿರು (ಆದಿಪು. ೨–೯).

ಉಟ್ಟುದು = ಧರಿಸಿಕೊಂಡದ್ದು; ವಸ್ತ್ರ, ಸೀರೆ ಮುಂತಾದುವು: "ಪರಿಧಾನಂ ನಿವಸನನ್ತಮಂತರೀಯಮೆಂದಿಂತಿವುಟ್ಟುದರ್ಕೆ ಪೆಸರ್" (ವಸ್ತುಕೋ. ೭೮–೨೦); ಉಟ್ಟುದಂ ಕಳೆಯದಿರಿಂದು ಬೇನೆ ತಳರ್ದಪ್ಪುದು (ಕಾವ್ಯಸಾ. ೯೯೪ ಶೂದ್ರಕ); ಉಟ್ಟುದುವರಂ ಕೆಯ್ದಂದು ದುಶ್ಶಾಸನಂ ತನಗಂ ಮೆಲ್ಲನೆ ಮೃತ್ಯು ಸಾರೆ ತೆಗೆದಂ ಧಮ್ಮಿಲ್ಲಮಂ ಕೃಷ್ಣೆಯಾ (ಪಂಪಭಾ. ೭–೫); ಉಟ್ಟುದು ಚಳಿ ತೊಟ್ಟುದು ಚಳಿ ಮೆಟ್ಟಿತು ಚಳಿ ಮುಟ್ಟಿತೆಲ್ಲ ಚಳಿ ಪೊಸ ಚಳಿಯೊಳ್ (ಗಿರಿಕ. ೯–೮೨). **ಉಡಕಲ್, ಉಡಕಲಿ** = ಉಡುವುದನ್ನು ಕಲಿತುಕೋ: ಉಡೆ ಬಾಳಕಿಯರ ಪಱಿಕೈದುಡುಕಿಂದಂ ಪಱಿದ ಮುಂಜಿ ಬಾಕುಳೆಯರ ಬಾಯ್ಕುಡಿವಡೆದ ಸೆಳೆದು ಬದ್ದೆಯರುಡಿಸಿದೊಡುಡಕಲ್ತ ಕೊವರನಭಿನವ ಮದನಂ (ಅನಂಪು. ೧–೫೮); ಉಡಿಗೆಯನುಡಕಲಿತನು ರತ್ನಖಚಿತದ ತೊಡಿಗೆಯ ತೊಡಲೊಡಂಬಟ್ಟ (ಮೋಹತ. ೧೭–೭೭). **ಉಡಕೊಡಿಸು** = ಉಟ್ಟುಕೊಳ್ಳುವುದಕ್ಕೆ ಕೊಡಿಸು; ಉಡುಗೊರೆ ಕೊಡಿಸು: ಎನ್ನ ಭಂಡಾರಕ್ಕೆ ಬರೆಯಿಸುವೆನೀತನಂ ಉನ್ನತಜ್ಞಾನಯುತಗಣಕವಿಖ್ಯಾತನಂ ಎಂದು ಉಡಕೊಡಿಸಿ ಜೀವಿತವನಾಗಳೆ ಮಾಡಿ (ಬಸರ. ೫–೧೦೩). **ಉಡಕೊಡು** = ಉಟ್ಟುಕೊಳ್ಳಲು ವಸ್ತ್ರವನ್ನು ನೀಡು: ಉಣಲಿಕ್ಕುಗುಮುಡಕೊಡುಗುಂ ಗುಣಮುಳ್ಳ ವಿನೇಯನಿಕರಂ (ಸಮುಪ. ೪–೬೦); ತನ್ನ ಮಹಮನೆಗೆ ತಂದಾನೆಯಿಂದಿಳಿಪಿ ಗದ್ದುಗೆಯನಿತ್ತು ಮೈತೀವಲುಡಕೊಟ್ಟು ಮನಂ ತೀವಲಾರಾಧಿಸುತ್ತವರಂ ಕಳುಪಿ (ಬಸರ. ೧೦–೮೫); ಮಾತನೆ ಉಣಕೊಟ್ಟು ಮಾತನೆ ಉಡಕೊಟ್ಟು ಮಾತಿನ ಮುತ್ತ ತೊಡ ಕೊಟ್ಟು ಬೆಳಗೆ ಹೋದಾತನೇ ಜಾಣ (ಸರ್ವಜ್ಞ. ೧೯೩೦). **ಉಡಲಿಕ್ಕು** = **ಉಡಕೊಡು**: ತಟತಟ ತೊಳಗುವ ಕಳಧೌತ ಕಳಶಂಗಳೊಳ್ ತೆಕ್ಕನೆ ತೀವಿ ತಂದ ವಾರವನಿತಾಜನಕ್ಕಂ ಸಾಮಂತ ಚಕ್ರಕ್ಕಮುಡಲಿಕ್ಕಿ (ಪಂಪಭಾ. ೧೪–೧೭ ವ). **ಉಡಹಡೆ** = ಉಟ್ಟುಕೊಳ್ಳುವುದಕ್ಕಾಗಿ ಹೊಂದು: ಕುಲಜಾತಿಗೆಟ್ಟು ಕೂಳುಣಲುಡಹಡೆಯದೆ ಹೊಲೆಗೆಟ್ಟು (ಪ್ರಭುಂಜ. ೩–೨).

[ದೇ. ‖ ತಮಿ. ಮಲ. ಉಡು; ಕೊಡ. ಉಡಿ]

**ಉಡು$_2$, ಉತ** (ನಾ). ಹಲ್ಲಿಯ ಜಾತಿಗೆ ಸೇರಿದ ಒಂದು ದೊಡ್ಡ ಪ್ರಾಣಿ; ಗೋಧ: "ಉಡು – ವಸ್ತ್ರಪ್ರವೇಷ್ಟನೇ, ಮೃಗಭೇದೇ ಚ" (ಶಮುಧಾ); "ಗೋಧಾ ಮುಸಲಿಕಾಖ್ಯಮೆನಲುಡುವೆನಿಕ್ಕು" (ಮಂಗರಾ. ೪೮–೧೧); ಕುದುರೆ ನಾಯೊಟ್ಟೆಯುಮುಡುವುಂ ಪಾವುಮಿಲಿಯುಂ ಬೆರ್ಕುಮೊಂತಿಯುಂ ಕಪ್ಪೆಯುಂ ಮುಂಗುರಿಯುಂ ಮೊದಲಾಗೊಡೆಯ ಸ್ಥಲಚರಂಗಳುಂ (ವಡ್ಡಾರಾ. ೯೭–೫); ಉಡುವಿನ ನಾಲಗೆಯಂತಿರೆ ದೃಢವ್ರತಗೊಂದಲ್ಲದೆರಡು ನಾಲಗೆಯೊಳವೇ (ಧರ್ಮಾಮೃ. ೩–೨೭೧; ಉಡುವಿನ[ಪಾಠಾಂ ಉಡುಹಿನ] ನಾಲಗೆಯಂತೆ ಎರಡಾದರೆ ಕೂಡಲಸಂಗಯ್ಯ ಮೆಚ್ಚುವನೆ (ಬಸವ. ೧೦೨); ತುಂಬಿದ ಮನೆಗೆ ಉಡು ಸೇರಿದ ಹಾಗೆ (ಗಾದೆ). **ಉಡ**: "ನೋಡು ಪುಟ್ಟಾ, ನಾನು ಬಂದೆ; ಅಷ್ಟರಲ್ಲೇ ಒಂದು ಉಡ ನುಗ್ಗಿಬಿಡ್ತು ಈ ದೊಗರಿಗೆ . . ." (ಮುಗನೂಂ. ೩೭).

**ಉಡದಹಿಡಿತ, ಉಡುವಹಿಡಿತ** = ಉಡು ಹಿಡಿಯುವ ಹಿಡಿತ; ಭದ್ರವಾದ ಹಿಡಿತ: ಷಣ್ಮುಖನೂ ಅಷ್ಟಿಷ್ಟರವನಲ್ಲ ತುಂಬಾ ಹಟಮಾರಿ; ಉಡದ ಹಿಡಿತ ಅವನದು (ಭೂಮಿತಾ. ೪೨); ಅಮಮ ಈತನ ಛಲವೊ ಉಡುವ ಹಿಡಿತವೊ! ನೋಡ, ಮರಗುದುರೆಯಲಿ ಮರವ ಮರೆತು ಮಕ್ಕಳು ಕುದುರೆಯಾಡುವೊಲು ಕೆಲಸವಲ್ಲವೆ ನುಡಿಯನರಿಯಂ (ಹೆಬ್ಬೆರ. ೭–೨).

[ದೇ. ‖ ತಮಿ. ಮಲ. ಉಡುಮ್ಬು; ತುಳು. ಉಡು, ಒಡು, ಒಡ್ಡು; ಕೊಡ. ಉಡುಂಬಿ; ಕೋಲಾ. ಉಡುಗ್ಗೆ; ತೆಲು. ಉಡು]

**ಉಡು$_3$** (ನಾ). ಶಿರೀಷ ಪುಷ್ಪ. 'ಉಡುಮೊಗ' ಪರಾ.

[ದೇ. ‖ ತಮಿ. ಉಡು]

**ಉಡು$_4$** (ನಾ). ೧. ನಕ್ಷತ್ರ; ಚುಕ್ಕೆ; ತಾರಗೆ: "ಸಂದುದು ತಾರಗೆಯ ಜಾಲೆನಲಿಂದುಡುಸಂತತಿಗೆ ನಾಮಂ" (ಕವಿಕಂ. ೪೫); ಕಡಲ ತಡಿವಿಡಿದುಡುಗಡಣದೊಡೆಯನೊಡಲೊಡಕು ನಡನಡುಗಿ ಬಡಕರಿಸಿ ಮಿಡುಮಿಡುಕಲು (ಹಚಕಾ. ೧–೨); ಪೊಸಗಂಧರ್ವರ್ ಕಿನ್ನರಿಯರುಡುಗಳನು ಪೊಸಮುತ್ತೆಂದು ತಿವಿಯೆ ಕೈನೀಡುವರ್ (ರುಕ್ಮಾಂಗ. ೨–೬). ೨. ನೀರು.

[ಸಂ.]

**ಉಡುಕೆ$_1$** (ನಾ). ಕುಂದುವಿಕೆ; ಕ್ಷಯವಾಗುವಿಕೆ: ಪಿಂಗದೆ ಬೆಳಗುವ ಗುಣಮದು ಪಿಂಗಲೊಡಂ ಜ್ಯೋತಿರಂಗ ಭೂಜಂಗಳ ತೇಜಂಗಳ್ ಮಸುಳ್ದುವು ದಾನಗುಣಂಗಳ್ ಕಿಡೆ ತೇಜದುಡುಕಮೇಂ ಪಿರಿದಾಯ್ತೋ (ಆದಿಪು. ೬–೫೧); ಭಾವದೊಳ್ ಕಪ್ರತ್ಯಯಮುಂಟು –ಉಡುಕಂ, ನಡುಕಂ ಎಂಬಂತೆ (ಶಮುದ. ೨೧೨ ಪ್ರಯೋ). [ಉಡುಗು$_1$ + –ಕೆ$_3$]

**ಉಡುಕೆ$_2$** (ನಾ). ಒಬ್ಬಾತನ ಹೆಸರು: ಎಡವಲಗೆಱೆಯ ಮೊದಲೇರಿಯ ತೋಟಮುಂ ಯಾಜು ಸಲಗೆಗದ್ದೆಯುಂ ಉಡುಕರ ಮನೆಯ ಮುಂದಣ ಕೆಱೆಯ ಕೆಳಗಣ ಬೆದ್ದಲೆ ಕೊಳಗ ೧೦ ನಗರ ಜಿನಾಲಯದ ಬಡಗಣ ಕೇತಿಸೆಟ್ಟಿಯ ಕೇರಿ (ಎಕ. II, ೩೩೫–೫೪; 1195). [?]

**ಉಡುಕರ** (ನಾ). ನಕ್ಷತ್ರದ ಕಿರಣ: ಪುಸಿಯ ನೀಂ ಪುಸಿಗೈದು ದಿಟವ ಕಾಣ್ಬವೊಲೆಸಗೆ ಮುಸುಕ ತಳೆದಿಹನು ಪರಬೊಮ್ಮನೆನ್ನುವೊಡೆ ಒಸೆದೇತಕ ವನೀಯನೆಮಗೊಂದು ನಿಜಕುರುಹ ನಿಶೆಯೊಳುಡುಕರದವೊಲು? (ಮಂಕುಕ. ೩೯). [ಉಡು$_4$ + ಕರ$_3$]

**ಉಡುಕಿಸು** (ಕ್ರಿ). ೧. ನೇರವಮಾಡು; ನೆಟ್ಟಗೆ ಮಾಡು (ಕ). ೨. ಒತ್ತು; ಅದುಮು; ಬಿಗಿ (ಕ). ೩. ಹಿಡಿತದಲ್ಲಿಡು; ಹತೋಟಿಯಲ್ಲಿಡು (ಕ). ೪. ಕೋಟಲೆಗೊಳಿಸು; ಹಿಂಸಿಸು; ಕಾಡು (ಕ); "ತೊಡಗಿಸು; ಸಿಗಿಸು; ಸೇರಿಸು" (ಜಾನಕೋ. ೨೦).

[ಉಡುಕು$_0$ + –ಇಸು$_3$]

**ಉಡುಕು$_1$** (ಕ್ರಿ). "ಕಚ್ಚು" (ತ್ರಿಪುವಿ. ಕೋಶ): ಕದಳೀದಳಮಂ ಕಡುವೇಗದಿ ಕೊಯ್ಯಲ್ಕೆಂದು ನೀಡಿದಾ ಕರತಳಮಂ ಮದಮುಖದಹಿ ಪಿಡಿದುಡು[ಪಾಠಾಂ. ದಿಡಿ]ಕಲ್ ಮದನಾರಿಯ ಭಕ್ತನಣುಗನಿಳೆಯೊಳ್ ಕೆಡೆದಂ (ತ್ರಿಪುವಿ. ೮–೫೮).

[ದೇ. ‖ ತಮಿ. ಮುಡುಕ್ಕು = ರಭಸದಿಂದ ಕಚ್ಚು]

**ಉಡುಕು$_2$** (ನಾ). ಆಧಿಕ್ಯ; ಹೆಚ್ಚಳ (?): ಎನ್ನ ಚತುರಂಗಬಲಮನಿದನ್ನರರಾರಾಂಪನ್ನರೆಂಬ ನಿಮ್ಮರಸನ ಗರ್ವೋನ್ನತಿಯುಡುಕುಮನಿನಿಸಾನುನ್ನೋಡಿಂ ಧರ್ಮಯುದ್ಧಮಕ್ಕೆಮ ಬೞಿಯಂ (ಆದಿಪು. ೧೪–೧೦೩).

[?]

**ಉಡುಕು$_3$** (ನಾ). ಡಮರುವಿನಾಕಾರದ ಒಂದು ಬಗೆಯ ಚರ್ಮವಾದ್ಯ: ಹಸ್ತಿಪಾವುಜ ವೀಣೆ ಮದ್ದಳೆ ರಾವಣಹಸ್ತ ಕಿನ್ನರಿ ಜಂತ್ರವುಡುಕು ದುಸ್ತರ ಸ್ವರಮಂಡಲ ಮುಖ್ಯ ಸಕಲ ವಿದ್ಯಾಸ್ತ್ರೀಯರಿರ್ದರಿಕ್ಕೆಲದಿ (ಮೋಹತ. ೧೮–೪೬); ಕಡುಜಾಣೆ ರತಿಯು ನರ್ತಿಸಿ ಲಾಗತಿವಟ್ಟಗುಡುವ ಕಾಮನ ಕೆಯ್ಯ ಹೊನ್ನ ಉಡುಕಿನ ಮಧ್ಯಕಿಂದತಿಶಯಮಹ ಸಣ್ಣನಡು ವಿರಾಜಿಸುತಿರ್ದುದವಳ (ಮೋಹತ. ೨೩–೧೮); ಧಡಧಡಿಸಿ ಬಹ ಶತಾಂಗಗಳ ಕೋಳಾಹಳಗಳುಡುಕು ತಂಬಟ[ಪಾಠಾಂ. ಕೋಳಾಹಳದಿ ಗುಡುಗುತಿಹ ಭಟ] ದುಂದುಭೀರವದಲೆಣ್ದೆಸೆಗಳೊಡನೆ ಶಬ್ದಬ್ರಹ್ಮಮಯವಾಗಿ ಕೆಂಗೊಳಿಸಿತು ಗ್ಗಡಿಸಲೆಂತಪ್ಪುದೊ (ವೆಂಕಾರಾ. ೧–೨೦–೨೨). 'ಹುಡುಕ್ಕ' ಪರಾ. [< ಸಂ. ಹುಡುಕ್ಕ]

**ಉಡುಕುವಾದ್ಯ** (ನಾ). = ಉಡುಕು$_3$: (ಸಾಧಾರಣ ಬಿರುದುಗಳು)– ಉಡುಕುವಾದ್ಯ, ಭೃಂಗಿ ನರ್ತನ, ದುಂದುಭಿ, ಭೇರಿ (ಗುರುದ. ೧೧).

[ಉಡುಕು$_3$ + ವಾದ್ಯ]

**ಉಡುಕುಳಿ** (ನಾ). ೧. ಉಡಿಯುವುದೇ ಎಂದರೆ ಭಂಗಿಸುವುದೇ ಶೀಲವಾಗಿರುವವನು; ನಾಶಮಾಡುವವನು. ೨. ನೀಚ; ಹೀನ; ಕ್ಷುದ್ರ: ಉಡುಕುಳಿಗಳಂ ದಿಟಂ ಗಡ ದೈವವೆಂದಿರ್ದು (ವೀರರ. ೧೮೬); ಹರಿಗಿರಿ ಸುರಪತಿ ಗಿರಪತಿ ಮೊದಲಾದುಡುಕುಳಿದೇವರನವನೀಶರು ಮೊದಲೆನಿಸಿದ ಭವಿಗಳನು (ವೀರೇಶ. ೧-೯); ಕೊಂಡೆಯ ಮಂಚ ಹರಿಭಟ್ಟರೊಳಗಾದ ಉಡುಕುಳಿ[ಪಾಠಾಂ. ಕದುಕಳಿ, ಉಡುಕುಡಿ] ಗಳಾದ್ಯರೊಳಗಾದರಿರಲು (ಸಿಂಗಿರಾ. ೧೪-೩).

[< ಉಡಿ + -ಕುಳಿ$_3$]

**ಉಡುಕೆ$_1$**, ಉಡಿಕೆ$_1$ (ನಾ). ವಿಧವೆಯರು ಮಾಡಿಕೊಳ್ಳುವ ಪುನರ್ವಿವಾಹ; ಕೂಡಿಕೆ; ಕೂಡುವಳಿ: ಉಡುಕೆಯ ಕುರಿತು ನಾಲಿಗೆಯನ್ನೇ ಎತ್ತಿಸಕೊಡುವುದಿಲ್ಲ (ಗಂಗಾಗೌ. ೬೪). **ಉಡಿಕೆ$_1$**: ಮೊದಲು ಇಲ್ಲಿ ಶಿಕ್ಷಕಿಯಾಗಿ ಇದ್ದವಳು . . . ಗೌಡರ ಮಗನೊಂದಿಗೆ ಉಡಿಕೆಮಾಡಿಕೊಂಡದ್ದು ಖಾವಂದರಿಗೆ ಗೊತ್ತಿದ್ದ ವಿಷಯ (ಜನಜೀ. ೫೯); ಹಿಂದೆ ವಿಧವೆಯೊಬ್ಬಳನ್ನು ಉಡಿಕೆ ಮಾಡಿಕೊಂಡಿದ್ದರಂತೆ (ಬಿಳುಮ. ೨೭); ಉಡಿಕೆ ಗಂಡನಲ್ಲ, ಗುಳ್ಳವ್ವ ದೇವರಲ್ಲ (ಗಾದೆ). **'ಉಡಿಕೆಗಂಡ', 'ಉಡಿಕೆಹೆಂಡತಿ'** ಪರಾ.

**ಉಡಿಕೆಮಾಡು** = ಕೂಡುವಳಿಯಿಂದ ಮದುವೆಯಾಗು; ವಿಧವೆಯನ್ನು ಹೆಂಡತಿಯನ್ನಾಗಿ ವರಿಸು (ಕ). **ಉಡಿಕೆಯವಳು** = **ಉಡಿಕೆ** ಮಾಡಿಕೊಂಡವಳು; ಕೂಡುವಳಿಯಾದವಳು (ಕ).

[< ಉಡು$_1$ + -ಕೆ$_1$]

**ಉಡುಕೆ$_2$** 'ಉಡುಗೆ' ನೋ.

**ಉಡುಗಣ** (ನಾ). ನಕ್ಷತ್ರಗಳ ಸಮೂಹ; ತಾರಗೆಗಳ ಗುಂಪು: ನೀನು ಉಡುಗಣದ ಮಧ್ಯದಲ್ಲಿ ಮೆರೆಯುವ ಚಂದ್ರಮಂಡಲದಂತೆ ವಿರಾಜಿಸುವಿ (ತೊಳೆಮು. ೨೬೨).

**ಉಡುಗಣದೊಡೆಯ** = ಚಂದ್ರ: ಉಡುಗಣದೊಡೆಯನ ನಗೆ ಇದ ಹೋಲ್ವುದೆ? ಈ ಬಗೆ ಚಪಲತೆ ಅದಕೆಲ್ಲಿ? ಮೋಡದ ಮಿಂಚನು ಹೋಲುವುದೆನಲೆ? (ಮಾಂದಳ. ೧೬). [ಉಡು$_4$ + ಗಣ]

**ಉಡುಗರೆ** 'ಉಡುಗೊಱೆ' ನೋ.

**ಉಡುಗಱೆ** 'ಉಡುಗೊಱೆ' ನೋ.

**ಉಡುಗಿ[ಗೆ]ಗಳ್ಳ** (ನಾ). ಉಡುಗೆಗಳನ್ನು ಕದಿಯುವವನು; ಬಟ್ಟೆಬರೆಗಳನ್ನು ಕದಿಯುವವನು; ಶ್ರೀಕೃಷ್ಣ: ಮಡುವಿನೊಳಗೆ ಇದ್ದ ಮಡದೇರ . . . ಮಾನವಕೊಂಡ ಉಡುಗಿ[ಗೆ]ಗಳ್ಳನೆ ಕಂಡ ಎಡೆಯೆಂಜಲುಂಡವನೆ (ಮೋಕ್ಷದೀ. ೬೧-೩). [ಉಡುಗೆ + ಕಳ್ಳ$_1$]

**ಉಡುಗಿಸು$_1$** (ಕ್ರಿ). ತಗ್ಗಿಸು; ಕಡಮೆಮಾಡು; ಅಡಗಿಸು: ಸೀಮಾವಿವಾದದಿಂ ತದ್ಭೂಮಿಜರೋರೊರ್ವರಂ ಪಳಂಚಲೆವೆಡೆಯೊಳ್ ಸೀಮೆಗಳ ತೊಡರನುಡುಗಿಸಿ ಸೀಮಂಕರನೆಂಬುದೊಂದು ಪೆಸರಂ ಪಡೆದಂ (ಆದಿಪು. ೬-೫೭); ಕೃತಕಜಿನರೂಪನುಡುಗಿಸಿ . . . ಪೂರ್ವಸ್ವರೂಪಮಂ ಕೈಕೊಂಡು (ಧರ್ಮಾಮೃ. ೫-೨೪೮); ಕರುಣಾಕರಾ ನಿರೋಧಮನುಡುಗಿಸಲೆ [ಪಾಠಾಂ. ನುಡಿಗೆಲೆ] ಶಿವನೆ ಎಂದು ಸೌಂದರನಲ್ಲಿ ಶಿವದಿಡುತ್ತಿರೆ ಕರಂ (ನಂಬಿರ. ೧೫-೨೪); ತಡೆದನಶ್ವತ್ಥಾಮ ಭೀಮನ ಕಡುಹನಾ ಸಹದೇವ ನಕುಲರನಡಗಿಸಿದನುಡುಗಿಸಿದನಾಟೋಪವನು ಪವನಜನ (ಕುಮ್ಯಾಶ. ೩-೧೩); ಒರಸಿ ತಮಮನುಡುಗಿಸಿ ಖಳರಂ (ಅಪ್ರತಿ. ೬೮-೧೭). [ಉಡುಗು$_1$ + -ಇಸು$_3$]

**ಉಡುಗಿಸು$_2$** (ಕ್ರಿ). ಗುಡಿಸುವಂತೆ ಮಾಡು: ಬೀದಿಯೊಳಾದ ಕಸವು ಮೊದಲಾದಮೇಧ್ಯಮೆಲ್ಲಮನುಡುಗಿಸಿ ಕಳೆಯಿಸಿದಿಂಬೞಿಯಂ (ಜೀವಸಂ. ೧೩೩-೨೯ ವ). [ಉಡುಗು$_2$ + -ಇಸು$_3$]

**ಉಡುಗು$_1$** (ಕ್ರಿ). ೧. ಸಂಕೋಚಹೊಂದು; ಕಡಮೆಯಾಗು; ಕುಗ್ಗು; ತಗ್ಗು: "ಉಡುಗು – ಸಂಕೋಚನೇ" (ಶಮಧಾ); ತುಡು ಪಾಶುಪತಮನೆನೆ ನರನೆಡೆಮಡಗದೆ ತುಡೆ ದಿಶಾಳಿ ನಡುಗಿದುದು ಸುರುಳ್ದುಡುಗಿದುದು ವಿಯತ್ತಳಂ (ಪಂಪಭಾ. ೧೧-೧೫೨); ಏಗೆಟ್ಟೆತ್ತೆನ್ನದೆ ಮನಮೋಗಡಿಸದೆ ತೀರದಾಜಿನೆಂದುಡುಗದೆ ನಿರ್ವೇಗಂ ಚಿತ್ತದೊಳಣಮಿನಿಸಾಗದೆ ತಾಂ ಮಾಟ್ಪುದನ್ನದಾನಮನಜಿವಿಂ (ಧರ್ಮಾಮೃ. ೪-೫೯); ಇರ್ಪ ಭಕ್ತನ ಕೋಪದತ್ಯುಗ್ರಮಂ ಕಂಡು ಕೂರ್ಪುಡುಗಲಿಂದುಧರನಾಜ್ಞೆಯಂ ಕೈಕೊಂಡು (ತಿರುರ. ದೇ. ೨೩-೧೬); ಪುನನೊಂದುಮತಿಯುಡುಗಿ ಧೃತಿಗೆಟ್ಟು ಮರವಟ್ಟು (ಹಚಕಾ. ೧೧-೨). ೨. ಒಳಹೊಗು; ಒಳಸೇರು; ಅಡಗು: ನಾಳೆ ದಿನೇಶನಸ್ತದತ್ತುಡುಗದ ಮುನ್ನ ಸೈಂಧವನರ್ಗುವಿಸೆ ಕೊಲ್ಲದೊಡೇನೊ ಗಾಂಡಿವಂಬಿಡಿದೆನೆ (ಪಂಪಭಾ. ೧೧-೧೨೨); ನಾ ಗೋಪತಿನಾಥವಿಶ್ವೇಶ್ವರ ಲಿಂಗದಲ್ಲಿಯೆ ಉಡುಗುವೆನು (ತುಜುಗಾ. ೧೦-೪೫); ೩. ಸ್ತಬ್ಧವಾಗು; ನಿಂತುಹೋಗು: ಕಡೆಪ ಮುಡುಗಿದಂಬುಧಿಯೆಂಬಂದದಿನಡವಿ ಮೂಗುವಟ್ಟಿರ್ದುದು ಚೀಟಿಯೊಳಾದ ಕಳಕಳಂ ಪಿಂಗುವಿನಂ (ಕಾದಂಪೂ. ೧೬೨). ೪. ಬಿಡು; ತ್ಯಜಿಸು: ಬಿಡದಬ್ಬ ಬಂಧುಜನದೊಟ್ಟುಡಿಯದ ಕಣ್ಣೀರ ಪೂರಮಾ ಪ್ರೇತಮನೋಗಡಿಸದೆ ಸುಡುವುದು ಗಡಮನ್ನುಡುಗುವುದೀಶೋಕಮಂ ಸರೋಜದಳಾಕ್ಷೀ (ಪಂಪಭಾ. ೨-೨೮); ಚೋಳಂ ಮದಮನುಡುಗಿದಂ ಗೌಳನಳ್ಳಾಡಿದಂ ಬಬ್ಬರರಾಜಂ ಗರ್ಬ್ಬಮಂ ತಾನುಳಿದನಗಿದನಂಧ್ರಂ (ಸೌಇಇ. IX–i, ೧೧೮–೧೮; 1057); ತಡೆಯದೆ ವಿದ್ಯಗಳಿಂದಾಗಡೆ ತಗುಣೆಯ ನಿಜಪೆಯಂ ನೊಣಂಗಳನೊಪ್ಪಂಬಡೆದಿರ್ದ ಪಸಿಯ ಪುಲ್ಗಳನುಡುಗದೆ ತಾಂ ಪಡೆದು ಪಲವುಮಂ ತತ್‌ಕ್ಷಣದೊಳ್ (ಧರ್ಮಾಮೃ. ೫-೧೭೩). ೫. ಹಿಂದಕ್ಕೆ ತೆಗೆದುಕೊ; ಉಪಸಂಹಾರಮಾಡು: ತತ್ಕಮಳಕಾನನ ಕಂಟಕಲಗ್ನಪಾದನಾದವೊಲುಡುಗುತ್ತುಮಾತ್ಮಕರಮಂ ರವಿ ಪೊರ್ದಿದನಸ್ತಶೈಲಮಂ (ಪಂಪಭಾ. ೪-೪೬); ಉಡುಗಿಂ ಪಾದಮನಿಂದಯೋಧ್ಯ ನಿಮಗಿಂತೀ ಕ್ಷುದ್ರನೊಳ್ ರೌದ್ರಮೇಂ(ನೇಮಿಪು. ೫-೨೪); ಎಲೆ ಮುಕುಂದಾ ಉಡುಗುಡುಗು ವೈಷ್ಣವಾಸ್ತ್ರಮಂ ಎನೆ ಭುವನವ್ಯಾಪಾರನಾ ಮಹಾಸ್ತ್ರಮನುಪಸಂಹರಿಸಿ (ಜಗವಿ. ೮-೫೩ ವ). ೬. ಮಡಿಸು; ಮುದುರು; ಕುಗ್ಗಿಸು; ತಗ್ಗಿಸು: ಕೈಯುಂ ಕಾಲ್ಗಳುಮನುಡುಗದೆ ನೀಡದೆ ಬಾಳ್ವನ್ನೆಗಂ ಪಟ್ಟಿರ್ದು ಪಂಚನಮಸ್ಕಾರಮಂ ಮನದಳೋದುತ್ತಿರಿಮೆಂದು ಕಲ್ಪಿಸಿ (ವಡ್ಡಾರಾ. ೮೩-೧); ಪಡೆಯ ಪೊಱೆಗಗಿದು ಶೇಷಂ ಪೆಡೆಗಳನುಡುಗುವುದುಂ (ಪಂಪಭಾ. ೧೦-೭೦); ಆ ಸಿಂಗಂ ಮುನ್ನಿನಿರ್ಪಂದಮಲ್ಲದೆ ಶಿಲಾತಳದ ಮೇಲೆ ಕಾಲುಮಂ ಬಾಲಮುಮನುಡುಗಿಯಡಂಗಿಸಿ (ಪಂಚತಂ. ೧೬೬-೧೧); ಮೌನದಿಂ ಮೈಯುಡುಗಿ ನೊಂದೆಳೆತಟಕೆ ಬಿದ್ದ ವಾನರಶ್ರೇಷ್ಠರಂ ತಂದಿತ್ತು ಚರಣದೊಳ್ ಸೂನುಗಳ್ ಪೊಡಮಡಲ್ಕೆ (ಜೈಮಿಭಾ. ೨೧-೪೧).

**ಉಡುಗುಡುಗು** (ದ್ವಿರುಕ್ತಿ) = ತಡೆ ತಡೆ: ಆಕರ್ಣಾಂತಂ ತೆಗೆನೆಜಿದಾ ಕರ್ಣನಿಸಲ್ಕೆ ಬಗೆದೊಡುಡುಗುಡುಗಿಸಲೀ ಭೀಕರ ಬಾಣಮನಾದ ವಿವೇಕದಿನುರದೆಡೆಗೆ ತುಡದೆ ತಲೆಗೆಯೆ ತುಡುವಾ (ಪಂಪಭಾ. ೧೨-೧೯೪). **ಉಡುಗಿಹೋಗು** = ನಾಶವಾಗು; ಕ್ಷಯಿಸು: ಆ ಗರ್ಜನೆ ಕೇಳಿಯೇ ವೆಂಕಟರಮಣನ ಅರ್ಧ ಜಂಘಾಬಲ ಉಡುಗಿಹೋಯಿತು (ಮೂರುದಾ. ೧೭೭); ಮಾಸ್ತರರ ಇದ್ದ ಬಿದ್ದ ಧೈರ್ಯವೂ ಉಡುಗಿಹೋಯಿತು (ಮೂರುದಾ. ೭೫); ಅವನ ಸತ್ತ್ವವು ಉಡುಗಿಹೋಗುತ್ತದೆ(ಕಾವ್ಯಸ.೧೧).

[ದೇ. ॥ ತಮಿ. ಒಡುಙ್ಗು; **ಮಲ.** ಒಡುಙ್ಙು, ಒಡುಕ್ಕ, ಒಡುಕ್ಕಂ= ಕೊನೆಗೊಳ್ಳು, ಸಾಯಿ; **ತೆಲು.** ಉಡುಕು, ಉಡುಗ, ಉಡುವು; **ಕೋಲಾ.** ಒಡಂಗ್]

**ಉಡುಗು₂** (ಕ್ರಿ). ೧. (ಕಸವನ್ನು) ಗುಡಿಸು ; ಬಳಿ : ತಮ್ಮ ಪತ್ರದ ಚೂರ್ಣಮೆಲ್ಲಮುಮನುಡುಗುತುಂ (ನಂಬಿರ. ೭–೯೦) ; ಕಸವನುಡುಗುವಾಗ . . . ಉಡುಗಿ ತಿಪ್ಪೆಗೆ ಬಿಸುಟು (ಭೈರಸೂ. ೩೪೪) ; ವನಮಾಲಾ ಎಲ್ಲವನ್ನು ಉಡುಗಿ ಕಸವನ್ನು ಒಂದು ಮೂಲೆಯಲ್ಲಿ ಒಟ್ಟಿದಳು. (ಜಯಂತ. ೧೬೫). **೨.** (ಕಾಳು ಕಡ್ಡಿಗಳನ್ನು) ಒಂದೆಡೆ ಕೂಡಿಸು ; ರಾಶಿಹಾಕು : ತೋಱಿ ಫಳಪಾಕಾಂತಂಗಳಪ್ಪೌಷಧಿಗಳಂ ಸ್ತಂಬಕರ್ಯಾದಿ ನಾನಾವಿಧ ಧಾನ್ಯಂಗಳಂ ಪದನಱಿದುಡುಗುವ ಕಣಂ ಮಾಡುವೊಕ್ಕುವಡಕುವ ಬಯ್ತಿಡುವಕ್ಕಿಮಾಡುವ . . . ತೆಱನುಮನಱಿಯೆ ಪೇೞ್ದು (ಆದಿಪು. ೬–೭೭ ವ) ; ಕೊಡನ ತುಂಬಿದ ಹಾಲ ಕೆಡಹಿ ಉಡುಗಲೆನ್ನಳವೆ (ಬಸವ. ೨೯೭).

ಉಡುಗುಸಾರಣೆ = ಗುಡಿಸುವುದು ಮತ್ತು ಸಾರಿಸುವುದು : ಕಸ – ಮುಸುರೆ, ಉಡುಗುಸಾರಣೆ, ಪಾತ್ರೆ ತೊಳೆಯುವುದು – ಇಂತಹ ಮನೆಗೆಲಸಗಳನ್ನೆಲ್ಲ ಮಾಡಿ . . . ಬಂದಳು (ಶೇಪ್ರಶ್ನೆ. ೨೪೪).

[ದೇ. ‖ ತುಳು. ಅಡಿಪು ; ಕೊಡ. ಒಡಿಕ್, ಒಡಿಕ ; ತೆಲು. ಊಡುಚು, ಊರುಚು ; ಗೊಂಡಿ. ಊರ್ಪಾನಾ]

**ಉಡುಗು₃** (ನಾ). (ಕಸ) ಗುಡಿಸುವಿಕೆ ; ಬಳಿಯುವಿಕೆ.

[< ಉಡುಗು₂]

**ಉಡುಗು₄** (ನಾ). ಒಂದು ಗಿಡದ ಹೆಸರು : "ಮುಸಲಿಕ – ಉಡುಗು, ಕಾಡಸಾವೆ" (ಓಷಧಿ. ೧೨೬). [?]

**ಉಡುಗುಣಿ** (ನಾ). (ಉಕ). ಹೆಣ್ಣು ಮಕ್ಕಳ ಒಂದು ಆಭರಣ ; ಒಡ್ಯಾಣ : ರನ್ನದುಡುಗುಣಿ ಚಿನ್ನದ ಕೊಂಡಿ ಹೊನ್ನಿನ ಡಾಬಾ ಇಟ್ಟವಳ (ಮಲ್ಲಿಗೆ. ೭೬) ; ಜಾಡಿ ಜಮಖಾನ್ಯೊತ್ತಿ ಕಂಬಳಿಯ ಕರಿಯೊತ್ತಿ ಉಂಗುರುಡುಗೂ[ಗು]ಣಿ ಖಡೆಯೊತ್ತಿ ಸತಿಯಳ ಮುರುವೊತ್ತಿ ನಿದ್ದಿ ಬಾರದ (ಗರತಿ. ೬೯). [ಉಡು ? + ಗುಣಿ ?]

**ಉಡುಗೆ, ಉಡಿಕೆ₃, ಉಡಿಗೆ₁, ಉಡುಕ್ಕೆ₂** (ನಾ). ಉಟ್ಟುಕೊಳ್ಳುವ ಬಟ್ಟೆ ; ಧರಿಸುವ ವಸ್ತ್ರ : "ಸಾಱಿಗೆ (ಜಾಱಿಗೆ)—ಉಡುಗೆ" (ಶಮದ. ಪರಿ. ೧) ; ಪಿಡಿದ ಜವನಿಕೆಯ ಮಱಿಯೊಳ್ ತೊಡವುಮನುಡುಗೆಯುಮನಂಗದಿಂ ಪಿಂಗಿಸಿ ಮುಂ ಬಡಗಮೊಗದಿಂದೆ ಮೂಜಗದೊಡೆಯಂ ಕುಳ್ಳಿರ್ದನೆಸೆಯೆ ಸುಸ್ನಾಪನದಿಂ (ವರ್ಧಪು. ೧೫–೭) ; ಕಿವಿಯಲಿಕ್ಕಿದ ಬಳಹದೋಲೆ ಹಳದಿಯ ಉಡುಗೆ ಸವೆಯದೂದುವ ಕೊಳಲು ಮೈಯ ತವರದ ತೊಡಿಗೆ ಎಸೆವುತಿರೆ ಬಂದು ಮಹಮನೆಯ ಗೋವಳನಲ್ಲಿ . . . ಬಸವಂಗೆ ಬಿನ್ನೈಸಿದಂ (ಬಸರ. ೯–೧೦೧) ; ತೆಳುದೊಗಲ ನಿಡುಸೋಗೆಯುಡುಗೆಯುನೆಳಗರುಳ . . . ಕೊಡಗೂಸು ಪೂತನಿನಿಕರವೊಪ್ಪಿದವು (ಕುವ್ಯಾಭೀ. ೫–೩೪). **ಉಡಿಕೆ₃** : ಬಜ್ಜರ ಬಗ್ಗದೊವಲುಡಿಕೆಗೆ ರಂಜಿಸುವಚ್ಚ ಕಱಿಗೊರಲ . . . ರಕ್ಷಿಸಕ್ಕಱಿಕೊಳಿಮ್ಮುವ (ಮದೇಪು. ೧–೩) ; ಇವರ ಉಡಿಕೆತೊಡಿಕೆ ಆಚಾರವಿಚಾರಗಳೆಲ್ಲ ಬಹುತರವಾಗಿ ಚಿತಪಾವನರಂತೆ (ಕಭಾಗ. ೭೯). **ಉಡಿಗೆ₁** : "ಮತ್ತಾವೃಡಿಗೆ ಪರಿಧಾನವಂತರೀಯಮೆನಿಕ್ಕು" (ಮಂಗರಾ. ೧೦೧–೨೯) ; ನಡುವಿಂಗತಿಗಾಢದುಡಿಗೆ . . . ಸೊಗಯಿಸಿತ್ತು ಪಂಕಜಮುಖಿಯೊಳ್ (ಗಿರಿಕ. ೩–೨೨) ; ನೀವೆಲ್ಲರುಟ್ಟುಡಿಗೆಗಳನು ನೀಡೆಂದಡವನೀವಪರಿಯಾವುದೆಂದಳುಕಿ (ಹಚಕಾ. ೮–೪೯) ; ಅಕ್ಕರಂಗಳನೋದುವನುಕ್ರಮಂ ಕಡಲುಡಿಗೆ [ಪಾಠಾಂ. ಕಡಲುಡೆ] ಯಾದ ಪೊಡವಿಯೊಳ್ ಪ್ರಸಿದ್ಧಂ (ಶಮದ. ೪ ವೃತ್ತಿ) ; ಉಡಿಗೆಯನುಡ ಕಲಿತನು ರತ್ನಖಚಿತದ ತೊಡಿಗೆಯ ತೊಡಲೊಡಂಬಟ್ಟ (ಮೋಹತ. ೧೭–೭೭). **ಉಡುಕ್ಕೆ₂** : ಬಿಡುಮುತ್ತಿನ ಪೇೞುಗಳಂ ತಡೆಯದೆ ಕರ್ಪುರದ ಪಿರಿಯ ಪುಳಿಗೆಗಳಂ ತಂದಿಡು ಮಾಣಿಕಭಂಡಾರದ ಪುಡಿಕೆಗಳಂ ಮಂಗಳಕ್ಕೆ ತಕ್ಕುಡುಕೆಗಳಂ (ಸುಕುಮಾ. ೧೦–೯೧).

ಉಡಿಗೆತೊಡಿಗೆ, ಉಡುಗೆತುಡುಗೆ = ಉಡುವ ಬಟ್ಟೆ ಮತ್ತು ತೊಡುವ ಆಭರಣ ; ವಸ್ತ್ರಾಭರಣ : ಆಟಪಾಠಗಳಲ್ಲಿ, ಉಡಿಗೆತೊಡಿಗೆಗಳಲ್ಲಿ ಈತನಿಗೂ ಇತರರಿಗೂ ಯಾವ ಭೇದಭಾವನೆ ಇರುತ್ತಿರಲಿಲ್ಲ (ಸಸ್ಯಕ. ೯೪) ; "ಪರದೇಶದ ಭಯವು ಭಾಷೆಯು ಉಡುಗೆತುಡುಗೆಗಳು ಆಚಾರಪದ್ಧತಿಗಳು ಮತವು ನಾಣೆಯಕಗಳು ವಿದ್ಯಾಕ್ರಮವು ಎಲ್ಲಿ ನೆಲೆಗೊಂಡಾಳುತ್ತಿರುವುವೋ ಆ ನಿರ್ಭಾಗ್ಯದೇಶೀಯರಿಗೆ ಸ್ವತಂತ್ರತೆಯೆಂಬುದು ಅಪವಾದ ವಿಡಂಬನ ಹೃತ್ಸಂತಾಪಗಳ ಸ್ವರೂಪವು ಮಾತ್ರ . . ." ಎಂದು ಭಾಷಣ ಮಾಡಿ (ಸಂಸಕ. ೧೨೧).

[ಉಡು₁ + –ಗೆ. / ತಮಿ. ಉಡುಕ್ಕೈ]

**ಉಡುಗೆರೆ** 'ಉಡುಗೊಱೆ' ನೋ.

**ಉಡುಗೊರೆ** 'ಉಡುಗೊಱೆ' ನೋ.

**ಉಡುಗೊಱೆ, ಉಡುಗರೆ, ಉಡುಗಱೆ, ಉಡುಗೆರೆ, ಉಡುಗೊರೆ** (ನಾ). ಮದುವೆ ಮುಂತಾದ ವಿಶೇಷ ಸಂದರ್ಭಗಳಲ್ಲಿ ನೆಂಟರಿಷ್ಟರಿಗೆ ಕಾಣಿಕೆಯಾಗಿ ಪ್ರೀತಿಯಿಂದ ಕೊಡುವ ಬಟ್ಟೆಬರೆ ಮುಂತಾದುವು ; ಪ್ರೀತಿಯಿಂದ ಕೊಡುವ ಬಹುಮಾನ, —ಬಳುವಳಿ: "ಪಸಾಯಮುಮೆನಲುಡುಗೊಱೆ" (ಕವಿಕಂ. ೧೫೧) ; ಶ್ರೀವಿಜಯಂ ಸುತಾರೆಯೊಳ್ ನೆರೆದಿಂಬಱಿಕಮಳಕಂಕಾಚಾರಸಾರನನೇಕ ಪಸದನದುಡುಗೊಱೆ ಸಹಿತಂ ಕಳಿಪೆ (ಶಾಂತಿಪು. ೬–೨೩ ವ) ; ಆತನ ಸಮಸ್ತವಿತ್ತಂ ನಿನ್ನದೆಲೆ ಬಸವ ಎಂದು ಪಟ್ಟಾವಳಿಯನಲ್ಲಿ ಉಡುಗೊಱೆಯಿತ್ತು (ಬಸರ. ೫–೧೭೧) ; ಮೆಚ್ಚಿ ಕೊಟ್ಟನಾ ತಂದೆ ದೂತರಿಗುಡುಗೊಱೆಯ (ಶಾಂತೀಚ. ೩–೨೦) ; ಬರೆದವೋಲೆಗಳಖಿಳ ಭೂಮೀಶ್ವರರಿಗುಡುಗೊಱೆ ಸಹಿತ ದೂತರು ಹರಿದರುತ್ತರ . . . ಪಶ್ಚಿಮಂಗಳಿಗೆ (ಕುವ್ಯಾಆ. ೧೧–೧೫) ; ತೋರ ಹಸ್ತದೊಳುಡುಗೊಱೆಯನಿತ್ತನು (ಭರಚ. ೨–೯೮). **ಉಡುಗರೆ:** ಪ್ರತಿವೀಸೆಟ್ಟಿಗಳು ಅವ ದೇಸಕ್ಕೆ ಬಂದರೆಯೂ ಮುಂದಣ ವೀಳೆಯ ಉಡುಗರೆ ಪಡ × × × ಯಿಷ್ಟ ಕೊಟ್ಟು (ಎಕ. XII, ಶಿರಾ. ೭೬–೯ ; 1379) ; ಹೆಜ್ಜುಂಕದ ವರ್ತನೆಯು ಉಡುಗರೆಯನು ಪೂರ್ವಮರಿಯಾದೆಯ ಆಚಂದ್ರಾರ್ಕಸ್ಥಾಯಿಯಾಗಿ (ಎಕ. IX, ಬೆಂಗಳೂ. ೮–೧೯ ; 1440) ; ಬಲಂಗಳಿಗೆ ಉಡುಗರೆಯನ್ನು ಕೊಟ್ಟು (ಕೃವಾಸ. ೮). **ಉಡುಗಱೆ** : ಅವರ್ ವಜ್ರಜಂಘನಲ್ಲಿಗೆ ಪೋಗಿ ಉಡುಗಱೆಯುಮನೋಲೆಯುಮಂ ಮುಂದಿಟ್ಟು ಪೊಡಮಡೆ (ಪೂರ್ವಪು. ೩೧). **ಉಡುಗೆರೆ** : ಭೂಸುರಾದಿ ಸರ್ವಜನಂಗಳಿಗು ಉಡುಗೆರೆ ಉತ್ಸವಾದಿ ಅನೇಕ ಸನ್ಮಾನಂ ಮಾಡಿ ಕಳುಹಿಸಿದನ್ (ಸೌಗಂಧಿ. ೧೩೪–೨) ; ಹಬ್ಬದುಡುಗೆರೆಗಳನು ತಂದು ನಮ್ಮಯ ಮನೆಗತ್ತಿಗೆ ಬಂದು ಅಕ್ಕಾ ಮಗುವೆಲ್ಲಿಹುದೆಂದು ಕೇಳುವಳಾಕೆಗೆ ಪೇಳಂದು (ಗೀವಿಂ. ೧೪–೬೧). **ಉಡುಗೊರೆ** : ಶ್ರೀಕೃಷ್ಣನು ಪಾಂಡವರಿಗೆ ಮದುವೆಯ ಉಡುಗೊರೆಯಾಗಿ ಮುತ್ತು ರತ್ನ ಕೆತ್ತಿದ ಆಭರಣಗಳನ್ನೂ . . . ಕಳುಹಿಸಿಕೊಟ್ಟನು (ವಚಭಾ. ೬೧) ; ದೇಶದ ಪ್ರಜೆಗಳಿಗೆಲ್ಲ ಮಾನಮರ್ಯಾದೆಗಳನ್ನು ಮಾಡಿಸಿ, ಎಲ್ಲರಿಗೂ ಉಡುಗೊರೆಗಳನ್ನು ಕೊಟ್ಟನು (ಪಂಚಾಮ್ಯ. ೭೧). [ಉಡು₁ + ಕೊಱೆ₂. / ತುಳು. ಉಡಿಗೆರೆ, ಉಡುಗೆರೆ]

**ಉಡುಗೊಱೆದರ್** (ಕ್ರಿ). ಉಡುಗೊರೆಯನ್ನು ತೆಗೆದುಕೊಂಡು ಬಾ: ಭಾವ ಬಿಜಯಂಗೆಯ್ದಿರ್ದ್ಧೆ ಈ ದೇವಕಿಯು ಮೈನೆಱೆದಳನುಜೆಗೆ ನೀವುವುಡುಗೊಱೆದಂದುದೀ ಬೆತ್ತಲೆಯೆಯಿದನುಡಲಿ (ಸಾಳ್ವಭಾ. ೧೦–೭).

[ಉಡುಗೊಱೆ + ತರ್]

**ಉಡುಗೊಱೆಯಿಾ** (ಕ್ರಿ). ಉಡುಗೊರೆಯನ್ನು ಕೊಡು : ಸುತ್ತಣರಸರಿಗೋಲೆಯುಡುಗೊಱೆಯಿತ್ತು ದೂತರ ಕಳುಹು (ಕುವ್ಯಾಸ. ೨–೫೨) ; ಉಡುಗೊಱೆಯಿತ್ತು ಸಂತಸದಿಂದೆ ಬೀಳ್ಕೊಂಡು (ಮೋಹತ. ೧೭–೫೬).

[ಉಡುಗೊಱೆ + ಈ₃]

**ಉಡುಗೋಲು** (ನಾ). ಉಡುಗುವ ಕೋಲು ; ಕಸಪೊರಕೆ : "ಅಲ್ಲಿ ಎಲ್ಲಿಯಾದರೂ ಉಡುಗೋಲು ಬಿದ್ದಿರಬಹುದು ಹುಡುಕಿಕೊಂಡು ಬಾ!" (ಮಣ್ಣಮ. ೩೦೦). [ಉಡುಗು$_2$ + ಕೋಲು$_1$ (< ಕೋಲ್$_1$)]

**ಉಡುಚು** (ನಾ). ತೊಡೆವಾಳ : "ಒಡ್ಡೆಯ ಹುಣ್ಣು" (ಜಾನಕೋ. ೧೯) ; "ದೇಹದ ಗ್ರಂಥಿಗಳಿರುವ ಪ್ರದೇಶದಲ್ಲಿ (ಮು. ಕಂಕುಳಲ್ಲಿಯೂ ತೊಡೆಯ ಸಂದಿಯಲ್ಲಿಯೂ) ಏಳುವ ಗೆಡ್ಡೆ ; ತೊಡೆವಾಳ ; ಉಡುಚು" (Bubo. ೩೦೩೬) ; ಹಲ್ಬೇನೆ ತೆರಪಿಲ್ಲದೊಸರುವ ಭಗಂದರಗಳುಡುಚುಗಳು ಕಿರಿಯ ಸೊಸೆಗಡಸಿದವು (ಮಲ್ಲಚ. ೧೦–೨೮). 'ಉಡಿ$_7$' ಪರಾ. [< ಉಡಿ$_7$ + –ಚು ?]

**ಉಡುತ** (ನಾ). ಉಟ್ಟುಕೊಳ್ಳುವಿಕೆ (೩). [ಉಡು$_1$ + –ತ$_2$]

**ಉಡುತತಿ** (ನಾ). ನಕ್ಷತ್ರಗಳ ಸಮೂಹ : ಕೊಳನಂ ಗಗನಂ ನೀರ್ವೂಗಳನುಡುತತಿ ನೀರನಚ್ಚವೆಳ್ದಿಂಗಳ ಬೆಳ್ಪಿಳಿಸೆ (ಅಜಪು. ೬–೪೪). [ಉಡು$_4$ + ತತಿ]

**ಉಡುತೆ** (ನಾ). ಅಳಿಲು ; ಇಣಚಿ (೩). [ದೇ. ‖ ತಮಿ. ಉಜುತ್ತೈ ; ತೆಲು. ಉಜುತ, ಉಡುತ]

**ಉಡುತೊವಲ್** (ನಾ). ಉಡುವಿನ ಚರ್ಮ : ಬಿಗಿವಿಡಿದ ಬಿಲ್ಲ ಕಯ್ಯರ್ ಬಿಗಿದುಡುತೊವಲಿಂದೆ ಪುದಿದ ಕಯ್ವೆರಳುಳ್ಳರ್ (ಸೌನಂದ. ೧–೩೫). [ಉಡು$_2$ + ತೊವಲ್]

**ಉಡುದಾರ** 'ಉಡೆದಾರ' ನೋ.

**ಉಡುನಾಥ** (ನಾ). ನಕ್ಷತ್ರಗಳ ಒಡೆಯ ; ಚಂದ್ರ : ಉಡುನಾಥಂ ಪಾಪಗ್ರಹದೊಡನಿರ್ದುದಯಾಂತ್ಯ ಸಪ್ತಮಾಷ್ಟಮದೊಳ್ ನಿಂದೊಡೆ ಸೌಮ್ಯರ್ ಕೇಂದ್ರದೋಳಿರದೊಡವರ್ ಕಾಣದೊಡೆ ಕಾಣರಾ ಬಾಲಕನಂ (ಜಾತಕಿ. ೬–೪೭). [ಉಡು$_4$ + ನಾಥ]

**ಉಡುಪ$_1$**, ಉಡುಹ$_1$ (ನಾ). ೧. ಅಂಗಹೀನ ; ಕೈಕಾಲುಗಳಿಲ್ಲದವನು : ವರುಣಾನಿಯ ಬಾಯ್ದೆಜೆಗೀ ತರುಣಿಯ ಬಾಯ್ದೆಜೆಯ ಚೆಲ್ವನೆಂಬೀ ಚೆಲ್ವಂ ನೆರೆದೀಶನುಡುಪನಾದಂ ಪರಿಕಿಸುವಂದಮರರೊಳಗೆ ಕುಂಟರುಮೊಳರೇ (ಧರ್ಮಾಮೃ. ೩–೧೬೦). **ಉಡುಹ$_1$** : ೨. (ಅಲಂ) ಶಕ್ತಿಗುಂದಿದವನು : ನುಡಿದು ಫಲವೇನಿನ್ನು ಸಾರಥಿ ಮಡಿದ ನಿನ್ನಿನ ಬವರದಲಿ ನಾನುಡುಹ [ಪಾಠಾಂ. ತಾಮುಡುಹ] ನಾದೆನು ಶಿವ ಶಿವಾ (ಕುಮ್ಯಾವಿ. ೫–೨೪). [ಉಡು$_0$ (< ಉಡಿ$_1$) + –ಪ$_2$]

**ಉಡುಪ$_2$** (ನಾ). ೧. = ಉಡುನಾಥ : ಉಡುಪ ವಿರಹ ದುಸ್ಸಹವಾಸರಂಗಳಂ ಕಳಿಪಲ್ಕೆ ಕುಮುದಿನಿಯಿರ್ಪ ತಾಣಂ (ಕಾದಂಬ. ೨೧೮) ; ಉಡುಪ ತನ್ನ ಕಳೆಯ ತಾ ಕಾಣಿಸಿಕೊಂಬಂತೆ ಸೂರ್ಯ ತನ್ನ ಬೆಳಗ ತಾನಱಿವುವಂತೆ (ಮೋಳಿಮಾ. ೯–೩೧). ೨. ತೆಪ್ಪ ; ದೋಣಿ : ಉಡುಪಮಂ ತರಿಸು ನದಿಯಂತರಿಸವೇಳ್ಕುಮೆಂದೊಡೆಯ ನೇಮಂಗೈದನೆನೆ ಹಸಾದಮೆನುತ್ತ ನಡೆದು (ವೆಂಕಾರಾ. ೨–೧೬–೩೩) ; ದಕ್ಷಿಣ ತಟಂ ಮುಟ್ಟಲಾ ಉಡುಪದಿಂದಿಳಿದು ಯಮುನಾವನಂಬೊಕ್ಕರ್ (ಶ್ರೀರಾಮಾ. ೧೩೯–೩೪೯). ೩. ಹಾವು ; ಸರ್ಪ. ೪. ಚಾತಕಪಕ್ಷಿ. ೫. ವರುಣ. ೬. (ಮುಖ್ಯವಾಗಿ) ಜ್ಯೋತಿಷ್ಯವನ್ನು ಬಲ್ಲ ಒಂದು ಗುಂಪಿನ ಬ್ರಾಹ್ಮಣರ ಹೆಸರು (ಕರಾ) : ಬಾಚಂಣ ಉಡುಪರ ಮೊಂಮಗ ವಾಸುದೇವ ಉಡುಪನ ಕಯ್ಯಲು (ಸೌಇಇ. IX–ii, ೫೧೭–೮ ; 1525) ; ಕೇಶವ ಉಡುಪನ ಸಾಗುಮು ೫‖ ೦ (ಎಕ. VIII, ತೀರ್ಥಹ. ೧೮೦–೮೧ ; 1687) ; "ಉರಗ ಸುಧಾಕರಂ ತರಣಿ ಚಾತಕಿಯಿಂತುಡುಪಾಹ್ವಯಂ" (ನಾನಾರ. ೭೩). [ಸಂ.]

**ಉಡುಪಖಂಡ** (ನಾ). ಚಂದ್ರನ ಅಂಶ ; ಚಂದ್ರಕಲೆ : 'ಉಡುಪಖಂಡಶಿಖಂಡ' ಪರಾ. [ಉಡುಪ$_2$ + ಖಂಡ]

**ಉಡುಪಖಂಡಶಿಖಂಡ** (ನಾ). ಚಂದ್ರಕಲೆಯನ್ನು ತಲೆಯಲ್ಲಿ ಧರಿಸಿದವನು ; ಶಿವ : ವಿಶ್ವವಲ್ಲಭನುಡುಪಖಂಡಶಿಖಂಡನೊರ್ಬನೆಯೆಂದು ಸುರಲೊಲ್ಲ (ಬಸಪು. ೫೭–೨೬). [ಉಡುಪಖಂಡ + ಶಿಖಂಡ]

**ಉಡುಪತಿ** (ನಾ). = ಉಡುನಾಥ : ಜೆಡೆಗಳಂ ಕಪ್ಪೆಸೆವ ಪೊಸಕಂತಳಂ ಮಾಡಿ ಉಡುಪತಿ ಸುರಾಪಗೆಗಳಂ ಮುಡಿದ ಪೂಮಾಡಿ (ಇಹರ. ೩೧–೧೮). [ಉಡು$_4$ + ಪತಿ$_2$]

**ಉಡುಪತಿಜೂಟ** (ನಾ). ಚಂದ್ರನನ್ನು ಜಡೆಯಲ್ಲಿ ಹೊಂದಿರುವವನು ; ಶಿವ : ಮೇಟಿಕರ್ತೃದ ಕರ್ತನುಡುಪತಿಜೂಟನಪ್ಪನಿದಕ್ಕೆ ದೃಷ್ಟದ ಪಾಟಯಲ್ಲಾ (ಬಸಪು. ೫೪–೧೭). [ಉಡುಪತಿ + ಜೂಟ]

**ಉಡುಪತಿಸುತ** (ನಾ). ಚಂದ್ರನ ಮಗ ; ಬುಧ : ಕುಂಭದೊಳುಡುಪತಿಸುತನುಂ ಕುಂಭೇಂದ್ರಾದಿಯೊಳೆ ನೆಲಸೆ ಬೆಳೆಗುಂ ಗ್ರೀಷ್ಮಂ (ಜಟ್ಟಮ. ೮–೧೮೦). [ಉಡುಪತಿ + ಸುತ]

**ಉಡುಪಥ** (ನಾ). ನಕ್ಷತ್ರಮಾರ್ಗ ; ಆಕಾಶ : ಪೊಣ್ಮಿದುವಾಯುಡುಪಥಂಗಳಾವರಿಸಿರ್ಕುಂ (ವಿಷ್ಣುಪು. ೧–೧೧೦). [ಸಂ. ಉಡುಪಥ (ಉಡು + ಪಥಿನ್ +–)]

**ಉಡುಪಮುಖಿ** (ನಾ). ಚಂದ್ರನಂತೆ ಮುಖವುಳ್ಳವಳು : ಸುತನ ಬಯಸುತ್ತಿರ್ಪ ಉಡುಪಮುಖಿ ರುದ್ರಾಣಿ (ನವಮೋ. ೨೩–೪೬). [ಸಂ. ಉಡುಪಮುಖೀ (ಉಡುಪ + ಮುಖ + –)]

**ಉಡುವು** (ನಾ). ಉಡುವ ಬಟ್ಟೆ ಮೊದಲಾದುವು ; ಉಡಿಗೆ : ಕೂಡಲಿ ಜ್ಞಾನಾಂಬೆ ತನ್ನ ಕೋಣೆಗೆ ಗಂಡಸಿನ ಉಡುಪು ಧರಿಸಿಕೊಂಡು ಬಂದಳು (ಪ್ರತಾಪ. ೮೮) ; ಅವರ ಉಡುಪಿನಲ್ಲಿ ಒಂದು ಸಣ್ಣ, ಕೆಂಪೆಂದು ಹೇಳಲಾಗದ, ಮೈ ಮುಚ್ಚದಂತಹ ಬಟ್ಟೆಯಿದ್ದಿತು (ಬಾಣಅ. ೯೭). [ಉಡು$_1$ + – ಪು. / ತಮಿ. ಮಲ. ಉಡುಪ್ಪು ; ತೆಲು. ಉಡುಪು]

**ಉಡುಪುಗಾರ** (ನಾ). ಉಡುಪನ್ನು ಮಾಡುವವನು. [ಉಡುಪು + –ಕಾರ (< –ಕಾಱ)]

**ಉಡುಪುತೊಡಪು** (ನಾ). ಉಡಿಗೆ ಮತ್ತು ತೊಡಿಗೆ : ಆ ಮುದುಕನ ಉಡುಪು ತೊಡಪು ನೋಡಿದರೆ ಅವರೂ ಎಲ್ಲಿಯೊ ಕನ್ಯಾಶೋಧಿಸಲಿಕ್ಕೆಯೆ ಹೊರಟಾರ ಅಂತ ಕಾಣಿಸತದ (ಅಶ್ವಮೇ. ೬). [ಉಡುಪು + ತೊಡಪು]

**ಉಡುಪೆಂ[ಬೆಂ]ಚೆ** (ನಾ). ಬತ್ತಿದ ಹೊಂಡ ; ಸಣ್ಣ ಕೊಳ : ಕರಿಗೆ ಪಂದಿ ಸರಿಯೆ ಶರಧಿಗುಡುಪೆಂ[ಬೆಂ]ಚೆ ಸರಿಯೆ (ಮೋಳಿಪು. ೪–೬೪). [< ಉಡುಗು$_1$ + –ಬೆಂಚೆ ?]

**ಉಡುಬೆ** 'ಉಡುವೆ$_1$' ನೋ.

**ಉಡುಮಾರ್ಗ** (ನಾ). = ಉಡುಪಥ : ಮೃಡನುಂ . . . ಉಡುಮಾರ್ಗಂ ಬಿಡಿದೆಯ್ದಿದಂ ನಿಜನಿವಾಸಕ್ಕಾಗಳಾನಂದದಿಂ (ದಿವ್ಯಸೂ. ೩–೧೫). [ಉಡು$_4$ + ಮಾರ್ಗ]

**ಉಡುಮೊಗ**, ಉಡಮೊಗ (ನಾ). ಶಿರೀಷದ ಹೂವಿನಂತೆ ಕೋಮಲವಾಗಿರುವ ಮುಖ (?) : ನಿಡುಬೆನ್, ಉಡುಮೊಗಂ [ಪಾಠಾಂ. ಉಡುಮೊಲಂ] (ಭಾಷಾಭೂ. ೩೦೦ ಉದಾ) ; ಬಂದರ್ ನಗೆಮೊಗದುಡುಮೊಗದ ಮುದ್ದುಮೊಗದಂಗನೆಯರ್ (ಜಗನಿ. ೪–೧೨೩). **ಉಡಮೊಗ** : ಉಡಮೊಗಮೆಂಬ ಶಾವರೆಯ ನೀಳ್ದೆಸಟಿಕೊಳ್ ಮಱಿದುಂಬಿ ಪಾಯ್ದೊಡಂ ಬಡನೊಳಕೊಂಡು ಕಣ್ಮಲರ ಬೆಳ್ಪುಗಳಾಲಿಯ ಕಟ್ಟಿನೊಳ್ ಪೊದಟಿಬ್ದೊಡನೊಡನೋಡುವಟ್ಟಿನಗೆ ಸಂತಸಮಂ ಮಱುಕಕ್ಕೆ ಮಾಣ್ದೊಡೀ ನಡೆಗಿಡೆ ಸತ್ವಮಂ ತಮಮುಮಂ ಕಡೆಗಣ್ದೊಳೆ ಕಂಡೆನೋಪಳಾ (ಪಂಪಭಾ. ೪–೭೮). [ಉಡು$_3$ + ಮೊಗ]

**ಉಡುರಾಜ** (ನಾ). ಚಂದ್ರ : ಉಡುರಾಜಂ ಕಳೆಗುಂದಿ ಪೆರ್ಚದಿಹನೇ (ಸೋಮೇಶ. ೩೫). [ಉಡು$_4$ + ರಾಜ]

**ಉಡುರಾಜಧರ** (ನಾ). ಚಂದ್ರನನ್ನು ಧರಿಸಿದವನು ; ಶಿವ : ಉಡು ರಾಜಧರನೊಲಿದು ಸತಿಪತಿಗಳೀರ್ವರನು ಬಿಡದೆ ಕೈಲಾಸಕ್ಕೆ ಕೊಂಡೊಯ್ದು (ಪ್ರೌಢರಾ. ೮–೯೯). [ಸಂ.]

**ಉಡುರಾಜಾನನೆ** (ನಾ). ಚಂದ್ರನಂತೆ ಮುಖವುಳ್ಳವಳು : ಉಡುರಾಜಾನನೆ ರಾಜಶೇಖರನನೊರ್ವಳ್ ಕೂರ್ಮೆಯಿಂ ನೋಡಿದಳ್ (ರಾಜಶೇ. ೭–೧೩). [ಸಂ. ಉಡುರಾಜಾನನಾ (ಉಡುರಾಜ + ಆನನ + –)]

**ಉಡುರು** (ನಾ). (ಗೂಳಿಯ) ಗುಟುರು : "ಉಡುರು – ಡುರುಕಿ" (ಜಾನಕೋ. ೨೦).

ಉಡುರುಹಾಕು = ಗುಟುರುಹಾಕು. [?]

**ಉಡುವರ** (ನಾ). ಚಂದ್ರ : ಉಡುವರಂ ಹಿಮವುಡುಗಿದಡೆ ರವಿ ಪಡುವ ಉದಯಂಗೆಯ್ದಡಂ (ಬಸವು. ೧೧–೧೨) ; ಉಡುವರಂ ದಕ್ಷ ಸುತೆಯರ ಮದುವೆಯಾಗಿ ಬರ್ಪೆಡೆಯೊಳ್ (ಭಾವಚಿಂ. ೧–೨೫). [ಉಡು$_4$ + ವರ]

**ಉಡುವಲಿ** (ನಾ). = ಉಡುಗೊರೆ : ಇಂತು ಮದುವೆ ಮಾಡಿಯುಡುವಲಿಯನು ಕೊಟ್ಟು ಕೊಂತಿ ಮಾದ್ರೆಯರನು ಕಳುಹೆ (ನೇಮಿಸಂ. ೬–೯). [ಉಡು$_1$ + ವಲಿ$_0$ (< ಪಟ್ಟು$_5$)]

**ಉಡುವಸನ** (ನಾ). ಉಟ್ಟುಕೊಳ್ಳುವ ಬಟ್ಟೆ : ಉಡುವಸನಂಗಳು ತೋಯ್ದು ಕೆಂಬಣ್ಣಕಿಮ್ಮಡಿ ರು ಚಿ ದೋ ಱು ತ ಲಿ ರ ಲು (ಮೋಹತ. ೧೪–೯೧). [ಉಡು$_1$ + ವಸನ]

**ಉಡುವಳ್ಳಿ** (ನಾ). ಒಂದು ಬಳ್ಳಿ ; ಶಂಖಪುಷ್ಪ (?) : ರಂಜಿಸುವುಡುವಳ್ಳಿಯ ಪೂವಂಡಂ ಭುಂಜಿಸಲೆನುತೊಳಗಡೆ ನಿಂದಾ ಭೃಂಗಂ ಜಿನುಗಲ್ ಬಲ್ಲವರಂ ಬಗೆಗೊಳಿಸಿತು ನಂದನವನಿತೆ . . . ಕಂಜಾಸ್ತನ ಮುಂದೂದುವ ಶಂಖಧ್ವನಿಯೆಂಬಂದದೊಳು (ಜಯಕಾ. ೧೧–೮) ; ಬಾಗೆಯನೊತ್ತಿ ಹಿಡಿದ ಕುಂದಂ ಕೃಷ್ಣಾಗರುವಿಡಿದುಡುವಳ್ಳಿಗಳಿಂದಾ ಪೂಗಣೆಯನ ಜಯನಾಲಯಮೆನೆ ವನವತಿಪಾವನಮಾಯ್ತು (ಜಯಕಾ. ೧೫–೪೪). [ಉಡು$_0$ + ಬಳ್ಳಿ]

**ಉಡುವೆ**$_1$, ಉಡುಬೆ (ನಾ). ಪೊದೆಗಳಿಂದ ತುಂಬಿದ ಪ್ರದೇಶ : ಇಂತಪ್ಪ ಕಾನನದುಡುವೆಯೊಳಡಗಿಯೋರಂತಿಹ ಪಾಲುಪರೆಯನು ಕಂತು ಸನ್ನಿಭ ನರಸೇಂದ್ರ ಸೆಳೆದ ಬಲು ಪಂಥವನೇನ ಬಣ್ಣಿಪೆನು (ಕಂನವಿ. ೧೮–೪೮). **ಉಡುಬೆ** : ಮಾರೀ ದಂಡೂ ಬಂದೂ ಊರ್ಮುಂದೆನಿಂವಾದೆ ಸೇರಿಕೊಳ್ರಣ್ಣ ಉಡುಬೇಯ, ರಾಜ್ಯಕೆ ಕೇಡೂಗಾಲಾ ಬಂದು ಕವಿದಾವೆ (ಹುಟ್ಟಿಹ. ೫೬). [?]

**ಉಡುವೆ**$_2$ (ನಾ). ಅಳಿಲಿನ ಜಾತಿಗೆ ಸೇರಿದ ಒಂದು ಪ್ರಾಣಿ : ಅಳಿಲು, ಕೆಂದಳಿಲು, ಉಡುವೆ (ನಮ್ಮನು. ೨೩೯). [?]

**ಉಡುಸಾರಣೆ**, ಉಡಸಾರಣೆ (ನಾ). (ಸಗಣಿಯಿಂದ) ನೆಲವನ್ನು ಸಾರಿಸುವುದು : ರಮಾಬಾಯರು ಎಲ್ಲವನ್ನೂ ಮುಗಿಸಿ ಉಡುಸಾರಣೆ ಮಾಡಿ ಮಲಗಿಬಿಟ್ಟರು (ಸಮುಜೀ. ೧೧). **ಉಡಸಾರಣೆ** : ಊಟ, ಉಡಸಾರಣೆ, ಉಪಕರಣಗಳು, ಉದ್ದಕ್ಕೆ ಸಾಗಿದವು (ನಿರಾಭ. ೫೨) ; ರಮಾಬಾಯಿಯವರು ತಮ್ಮ ಊಟ ಮುಗಿಸಿ ಉಡಸಾರಣೆ ನಡೆಯಿಸಿದ್ದರು (ಧರ್ಮಸಿ. ೯೨). [< ಉಡುಗು$_2$ + ಸಾರಣೆ]

**ಉಡುಸೀರೆ** (ನಾ). ಉಟ್ಟುಕೊಳ್ಳುವ ಸೀರೆ : "ಉಡುಸೀರೆ ಕೋವಣಗಳೊಳ್ ಕಚ್ಚೆ" (ಶಬ್ದಮಂ. ೮೨) ; ಮುಡಿವು ತೊಡವು ಉಡುಸೀರೆ ಪಡಿಗಪಣಿಗೆವಸರವಾಳಿಯರೆಯ್ದಿ ನುಡಿಸಲಣ್ಮದೆ ಸಾರಿದರು (ಶ್ರೀಪಾಲ. ೨–೩೦). [ಉಡು$_1$ + ಸೀರೆ]

**ಉಡುಹ**$_1$ 'ಉಡುಪ$_1$' ನೋ.

**ಉಡುಹ**$_2$ (ನಾ). (?) "ಉಡುಪಿನಲ್ಲಿ ಪ್ರೀತಿಯುಳ್ಳವ ; ವೇಷಧಾರಿ" (?) (ಬಸವ. ಕೋಶ) : ಸುಡಲೀ ಮನವೆನ್ನನುಡುಹನ [ಪಾಠಾಂ. ನುಡಿಹೀನ, ಉಡಹನ, ಹುಡಿಗನ್ನ] ಮಾಡಿತ್ತು ನಡೆವಲ್ಲಿ ನುಡಿವಲ್ಲಿ ಅಧಿಕನೆಂದೆನಿಸಿತ್ತು (ಬಸವ. ೪೦). [?]

**ಉಡುಹು** (ಕ್ರಿ). (ಪದ) ವಿಭಾಗವಮಾಡು ; ಮುರಿ ; ಒಡೆ : ಉಕ್ಕದೆ ಬಿಕ್ಕದೆ ಲಿಪಿಯಂ ನಕ್ಕದೆ ತಡವರಿಸದೆಡಹದುಡುಹದೆ ಪದವಿಟ್ಟಕ್ಕರ ಬಣಿತೆಯೊಳೋದುವವದಕ್ಕರಿಗರ ಮಾರ್ಗವಲ್ತೆ ಚೂಡಾರತ್ನಾ (ನೀತಿಸಾ. ೩೧). [< ಉಡಿ$_1$ + –ಹು (< –ಪು)]

**ಉಡೆ**$_1$, ಉಡಿ$_5$ (ನಾ). ೧. ಸೊಂಟ ; ಟೊಂಕ ; ನಡು ; ಕಟಿ : ಅಂಜನ ಮಿಲ್ಲದ ಕಣ್ಗಳೋಲೆಯಿಲ್ಲದ ಕಿವಿ ಕಾಂಚಿಯಿಲ್ಲದುಡೆ ನೂಪುರಮಿಲ್ಲದ ಪಾದ ಪಲ್ಲವಂ (ಹೈಆಸಿ. VIII, ೧೦–೪೯ ; 1058) ; ಕನಕಕಟಿಸೂತ್ರವನಿರದಮರಿಸಿದನುಡೆಯೊಳು (ಕುರಾಸಾಂ. ೨೯–೫೬) ; ರತ್ನಾಕರ ನೆಲವೆಣ್ಣಿನುಡೆಯ ಮೇಖಲೆಯಂದದೆ ಪರಿವೇಷ್ಟಿಸಿರ್ದುದು (ಮೋಹತ. ೨–೪). **ಉಡಿ**$_5$ : ೧. ಅಡಿಯಂ ಕಿಱುದೊಡೆಯಂ ಪೆರ್ದೊಡೆಯಂ ಪೊಜವಾಜನುಡಿಯನು ರವಮಂ ಮುಯ್ಯಂ (ಗದಾಯು. ೮–೧೫) ; ಹೊಳೆಯಲ್ಲಿ ತೇಲುವನ ಉಡಿಯ ಹಿಡಿದು ಹೋಹಂತೆ (ಮೋಳಿಮಾ. ೩೫–೧೪೮) ; ಉಡಿಯ ಗೆಜ್ಜೆಯುಲಿವ ಪುಲಿಯ ಚರ್ಮಧರ ನಮಃಶಿವಾಯ (ನಮರ. ೬–೨೧) ; ಅಲರುಣಿಯ ನಳಿಯೆಂಬರು ಉಡಿಯೆಂಬರುರುನಿತಂಬೋರ್ಧ್ವಮಂ (ಚಿಬಪು. ೬–೪೪). ೨. ಮಡಿಲು ; ಸೋಗಿಲು : ನಿಮ್ಮ ಒಕ್ಕುದ ಮಿಕ್ಕುದ ಉಡಿಯಲ್ಲಿ ಕಟ್ಟಿಕೊಂಡಿಪ್ಪರು ಗುಹೇಶ್ವರ (ಅವಚಂ. ೫೮–೨೫೦) ; ಬಡವಾದಿರರಸ ಕಾಲೊಳ್ ನಡೆದಪಿರೊಡನಾರುಮಿಲ್ಲ ಕಡಲೆಗಳೇಂ ನಿಮ್ಮುಡಿಯೊಳಗೆ (ಶಮದ. ೧೦೨ ಪ್ರಯೋ) ; ಉಡಿಯಲ್ಲಿ ಕೆಂಡವ ಕಟ್ಟಿಕೊಂಡರೆ ಸುಡದಲೆ ಬಿಡುವುದೇನಣ್ಣ (ಪುರಂದ. ೧–೧೦–೨) ; ಬೆಳ್ಳಗೆ ಬೆಳಗಾಗಿ ಬೆಳ್ಳಿ ಮೂಡಲವಾಗಿ ಒಳ್ಳೊಳ್ಳೆ ಮೀನು ಗರಿತೆಗೆದು ಅಡ್ಯಾವು ಗರತಿ ಗಂಗಮ್ಮನ ಉಡಿಯಾಗೆ (ಹೆಮುಪ. ೨೨–೬). [ದೇ. ‖ ತಮಿ. ಉಡೈ ; ಮಲ. ಉಡ]

**ಉಡೆ**$_2$ (ನಾ). ಉಡುಗೆ ; ಬಟ್ಟೆ ; ವಸ್ತ್ರ : "ಉಡೆಯುಟ್ಟ ಸೀರೆ" (ಕಶರ. ೧೫) ; ಕಾಲೂರ್ಗಳ ಗಂಡರ ಪೆಂಡಿರ ನಡೆಯುಡೆಯ ನುಡಿಯ ಮುಡಿಯ ಗಾಂಪಿಂಗೆ ಮುಗುಳ್ನಗೆ ನಗುತ್ತುಂ (ಪಂಪಭಾ. ೨–೯೭ ವ) ; ತಡವರಿಸುತ್ತಿರಲ್ಕೆ ತೊಡೆ ಜೋಲೆ ಸಡಿಲ್ದುಡೆ ಬಿಟ್ಟಿ ಮೇಲುದಂ (ಕಾದಂಉ. ೧೩೬) ; ತರತರದಿನೆಸೆವ ಕರೆಗಳ್ವೆರಸಿದ ಪೊಸದುಗುಲದುಡೆಯುಮುಮರ್ದೊಪ್ಪುವ ಪೊಂಜುರಿಗೆಯುಂ (ಸುಕುಮಾ. ೧೦–೯೭) ; ತೊಳೆದು ಕೈಕಾಲು ಮೊಗಗಳ ಉಳಿದಂಗವನು ನನೆದುಡೆಯೊಳು ತೊಳೆವುದು (ಹದಿಬ. ೮–೨೨). [ದೇ. ‖ ತಮಿ. ಉಡೈ ; ಮಲ. ಉಡ]

**ಉಡೆ**$_3$ (ನಾ). ಒಡೆಯ : ಪುತ್ತೂರುಡೆ ಶಿವಮಾರಮ್ಮಂ ದುಣ್ಡಿಗೆರ್ಗ್ಗಂ ನಲ್ಲತ್ತೂರೊಡೆ ಒಗ್ಗಮನೆ ಬಳೆಗಮುಂ (ಎಕ. X, ಕೋಲಾರ. ೨೩೧–೨ ; ಸು. 800). [ದೇ. ‖ ತಮಿ. ಉಡೈಯಾನ್]

**ಉಡೆಗಂಟೆ**, ಉಡಿಗಂಟೆ, ಉಡಿಘಂಟೆ (ನಾ). (ಮಕ್ಕಳಿಗೆ) ಸೊಂಟಕ್ಕೆ ಕಟ್ಟುವ ಗಂಟೆಯ ಆಕಾರದ ಆಭರಣ : ಮತ್ತಮಾ ಹರಿಗೆಕಾಱರಕ್ಕಿಲದೊಳ್ ಕೋಡಕೆಯ್ವೊಳುಟ್ಟ ಮಲ್ಲಗಂಟನ ತೊಡರ್ಚಿದುಡೆಗಂಟೆಯ ಕಿರ್ಗಟ್ಟಿನ ಸುರಗಿಯ ಕಟ್ಟಿದ ಚಿಂದಿರಿಯ ತೊಟ್ಟ ಕಂಚುಳಿಕೆಯ (ಗಿರಿಕ. ೬–೫೫ ವ). **ಉಡಿಗಂಟೆ** : ಉಡಿಗಂಟೆ ಮುರಿವು ಮಾಗಾಯ್ ಸೊಡರ್ಗಕ್ಕಿನ ಬೊಟ್ಟು ಪೊಳೆವ ಕಿಱುಜಡೆದುಱುಂಗಲ್ ಸಡಗರದ ಗೆಜ್ಜೆಯಿಂದುಗೆ ಕಡು ಚೆಲ್ವಾಗಿಪ್ಪ ಸುತನಡಂಗಿದನರಸಾ (ದಶಕು. ೫–೬೫) ; ಉಡಿಗಂಟೆಗಳ ಗೆಜ್ಜೆಗಳ ರವಂ ದಿಕ್ತಟಮನೆಡೆವಿಡದೆ ಮಾರ್ದನಿಗಳಿಂ ಕೊಡಿಸುತಿರೆ (ಆರಾಚ. ೯–೪೦). **ಉಡಿಘಂಟೆ** : ಉಡಿಘಂಟೆ ಘುಣಘುಣ ಎಂದುಲಿವುತಿರಲು (ಬಸವು. ೧೬–೧೭) ; ಉಂಗುರ ಉಡಿದಾರ ಉಡಿಘಂಟೆ ನಾ ಕಂಡೆ (ಹೇಮುಕೂ. ೮೪). [ಉಡೆ$_1$ + ಗಂಟೆ]

**ಉಡೆದಾರ, ಉಡಿದಾರ, ಉಡುದಾರ** (ನಾ). ೧. ಸೊಂಟಕ್ಕೆ ಕಟ್ಟಿಕೊಳ್ಳುವ ದಾರ; ನಡುವಿಗೆ ಕಟ್ಟುವ ಒಂದು ತೆರನ ಆಭರಣ: ಕಾಲಂದುಗೆ ಕಿಱುಗೆಜ್ಜೆ ಪಜ್ಜಳಿಸುವ ಮೇಲು ಮಿಸುನಿಯುಡೆದಾರ ಬಾಲಶಶಾಂಕನಂದದ ಪುಲಿಯುಗುರನು ಢಾಳಿಪ ಬಂದಿ ರಂಜಿಸಿತು (ಅಂಜಚ. ೪–೪೪). **ಉಡಿದಾರ:** ೧. ಬೆಂಡೋಲೆ ಮುಱಿಹು ಮಾಗಾಯ್ಪೆಂಡೆಯ ಮರಳೆಲೆಯೆಬಿಲ್ಲ ಕಿಱುಪುಲಿಯುಗುರ್ಗಳ್ ಗೊಂಡೆಯದುಡಿದಾರಂ ಭೂಮಂಡಲಪತಿಯಾತ್ಮಜಂಗೆ ರಂಜಿಸುತಿರ್ದುಂ (ದಶಕು. ೨–೭೩) ; ಹೊನ್ನುಂಗುರುಡಿದಾರ ಹೊಳೆವ ಪೀತಾಂಬರ ಚೆನ್ನಾಗಿ ನಡುವಿಲಿಟ್ಟ ಜಾಹ್ನವಿಜನಕನ(ಪುರಂದ. ೨–೬೬–೨); ರಕ್ಕೆವಣಿ ಪುಲಿಯುಗುರ್ ಗೆಜ್ಜೆಮಾಗಾಯ್ ಮುತ್ತಿನೆಕ್ಕಸರಮುಡಿದಾರ ಕಾಲಕಡಗಂ ಪಣೆಯೊಳಿಕ್ಕಿದ ಸುಭಸಿತ ಮರಳೆಲೆಯೆನಿಪ ಪರಿಪರಿಯ ಬಾಲದೊಡಿಗೆಗಳನಾಂತು (ಚಿಬಪು. ೫–೩೬). ೨. ಒಡ್ಯಾಣ; ಡಾಬು ; ಮೇಖಲೆ : "ರಸನೆ ಮೇಖಲೆ ಕಾಂಚಿ ಸಪ್ತಕಿಕಳಾಪಿ ಸಾರಸನಮೆನಲುಡಿದಾರಮಕ್ಕು" (ಮಂಗರಾ. ೧೦೧–೩೦) ; ಮಡದಿರನ್ನೆಯರುಡಿದಾರ ಕಿಂಕಿಣಿಯಿಂದೆ ನಡೆದರು ರಾಜವೀಥಿಯಲಿ (ಮೋಹತ. ೨೪–೭) ; ಸಿರಿಯುಡಿದಾರ ನೇವುರದ ಸೊಬಗಿನಿಂದ ಸರಸಿಜಾಕ್ಷಿಯರೊಪ್ಪಿದರು (ಕಂನವಿ. ೨–೯೧) ; ಕಾಲಂದಿಗೆ ಪಿಲ್ಲಿ ಮೇಲೆ ಹೊನ್ನುಡಿದಾರ . . . ಕಡಗ ಬಳೆಗಳನಿಟ್ಟು ಸೂಳೆಯರಾಳಿನಿಂದಿಹರು (ಸೌಂದಕಾ. ೩–೩೯). **ಉಡುದಾರ** : ೧. ಉಡುಗೆ ಪೀತಾಂಬರ ನಡುಗೆ ಹೊನ್ನುಡುದಾರ ಕಡಗ ಕಂಕಣವಿಟ್ಟವನಾರಮ್ಮ (ಪುರಂದ. ೨–೭೦–೨) ; ಗೆಜ್ಜೆಯ ಉಡುದಾರವನ್ನು ಆವನು ನಿರೀಕ್ಷಿಸಿದನು (ಬಾಬಲ. ೨). [ಉಡೆ$_1$ + ದಾರ$_1$]

**ಉಡೆದೊವಲ್, ಉಡಿದೊವಲ್, ಉಡೆದೋಲ್** (ನಾ). ನಡುವಿಗೆ ಸುತ್ತುವಚರ್ಮ, —ಉಟ್ಟಿರುವಚರ್ಮ : ಮಣಿಯುಡೆದೊವಲುಂ ಪೀಲಿಯ ಪಣೆಗಟ್ಟುಂ (ಶಮದ. ೬೫ ಪ್ರಯೋ) ; ಉಡೆದೊವಲನುಟ್ಟು ಪಸುರಂಗಿಯಂ ತೊಟ್ಟು ಕಪ್ಪಿಡಿದ ಚಿಂದಿಯ ಸುತ್ತಿ (ಸೌಂದಪು. ೧೮–೩೪). **ಉಡಿದೊವಲ್** : ಕಣ್ದಿಱವಿ, ಉಡಿದೊವಲ್ (ಶಬ್ದಾನು. ೮೯ ಪ್ರಯೋ). **ಉಡೆದೋಲ್** : ಒಲವಿಂದೀವೊಡೆ ಗೋವಂಗಲಗೆ ಕೊಟಲ್ ಕೋಡ ಕಾಳೆ ಕೋಲುಡೆದೋಲ್ ಕಂಬಲ ಕಲ್ಲಿ ಚೆಲ್ಲಿ ಪೀಲಿಯ ತಲೆಸುತ್ತಲ್ಲದೆ ಮಹಾಗ್ರಪೂಜೆ ವಿರುದ್ಧಂ (ಜಗವಿ. ೧೭–೨೨). [ಉಡೆ$_1$ + ತೊವಲ್]

**ಉಡೆದೋಲ್** 'ಉಡೆದೊವಲ್' ನೋ.

**ಉಡೆನಿಱಿ** (ನಾ). ಉಟ್ಟಿರುವ ವಸ್ತ್ರದ ನಿರಿಗೆ; ಸೀರೆಯ ಒಡಲಿನ ನಿರಿ : ಉಡೆನಿಱಿಗುತ್ತಮ ಮೇಖಲೆಯಂ ಕೇಸಡಿದಳಕೊಪ್ಪುವಲಕ್ತಕರಸಮಂ ಸಡಗರದಿಂ ಸಿಂಗರಿಸುವ ಸುದತೀಜನಮೊಪ್ಪಿದುದಲ್ಲಿ (ಜಯಕಾ. ೧೪–೩೦). [ಉಡೆ$_1$ + ನಿಱಿ]

**ಉಡೆನೂಲ್, ಉಡಿನೂಲ್, ಉಡಿನೂಲು, ಉಡೆನೂಲು** (ನಾ). ಸೊಂಟಕ್ಕೆ ಕಟ್ಟಿಕೊಳ್ಳುವ ದಾರ; ನಡುವಿಗೆ ಕಟ್ಟುವ ಒಂದು ತೆರನ ಆಭರಣ : ಉಡೆನೂಲ್ ಸಡಿಲ್ದು ಮೇಗಾಲ್ದುಡಿಗೆಯ ಕುಸುರಿಯೊಳ ತೊಡರೆ(ಕಾದಂಉ. ೧೩೪); ಇಂಬಿಂ ಮಾಡಿ ಮಂಜೀರಹಾರದ ಕೇಯೂರದ ಕರ್ಣಪೂರದುಡೆನೂಲುತ್ತಂಸದೊಳ್ವಚ್ಚಮಂ ಮದನಂ ಮೋಹನ ಬಾಣಮಂ ತುಡುವಿನಂ ತೊಟ್ಟರ್ ಲತಾತನ್ವಿಯರ್ (ಜಗವಿ. ೧೪–೮೬). **ಉಡಿನೂಲ್**: ಊರುಯುಗಸ್ತಂಭೋದ್ಗತ ತೋರಣಮೆಂಬಂತೆ ಮಿಸುಗುವುಡಿನೂಲಿಂದೇಂಕಾರಣದಿಂ ಕಟ್ಟಿದು ನೀರೇರುಹದಳನಯನೆ ನಿಜ ನಿತಂಬಸ್ಥಳದೊಳ್ (ಕಾದಂಪೂ. ೩೩೪); ನುಡಿವೊಡೆ ನಾಚಿಕೆ ಗಡ ನಿನಗುಡಿನೂಲ್ಬಿಗಿವಿನೆಗಮಿಾ ವಳಿತ್ರಯಮಿಾಗಳ್ ಕಿಡುತಿರ್ಪುದು (ಕಾದಂಪೂ. ೪೦೫). **ಉಡಿನೂಲು** : ಅರಳೆಲೆ ಮಾಗಾಯಿ ಪುಲಿಯುಗುರುಡಿ [ಪಾಠಾಂ. ಡೆ] ನೂಲು ಚರಣದಂದುಗೆ ತಾತಿ ಘಂಟಿ ಬೆರಳುಂಗುರ ದಿಟ್ಟಿದಂಡೆ ಮೆಱೆಯುಲಾ ತರುಣನೆಸೆದನು ಲೀಲೆಯೊಳು (ಕುರಾಸಾಂ, ೮–೭೭). **ಉಡೆನೂಲು** : ಹರಿಯಿಪ್ಪ ಸೆಜ್ಜೆವನೆ ರತ್ನರಾಶಿಯ ಮರ್ದಿನ ನಿಧಾನ ವೆಳೆವೆಣ್ಣುಡೆನೂಲು ಎನಿಪಂಭೋನಿಧಿ ಸುತ್ತುಮೊಪ್ಪೆ[ಪ್ಪು]ತಿರೆ (ಕಇ. I, ೨೫–೯ ; 1186) ; ಕಡುಸೊಗಯಿಪುದು ಮಹಾಲವಣಾಂಬುಧಿ ಪೊಡವಿ ಪೆಣ್ಣುಡೆನೂಲಂತೆ (ಶ್ರೀಪಾಲ, ೧–೨೭) ; ಮೆರೆದುದು ನಗರಲಕ್ಷ್ಮಿಯ . . . ಉಡೆನೂಲಿನಂತೆ ಕೋಂಟೆಯ ಸುತ್ತು (ಶೇಷರಾ. ೭–೪).

[ಉಡೆ$_1$ + ನೂಲ್$_2$]

**ಉಡೆನೂಲು** 'ಉಡೆನೂಲ್' ನೋ.

**ಉಡೆನೇಣ್** (ನಾ). = ಉಡೆನೂಲ್ : ಅರೆಜಾಱಿದ ಮೇಲುದುಮಂ ಸಮಂ ನೇವರಿಸುತುಂ ಪತ್ತೆವಿಡಿದುಡೆನೇಣನೊತ್ತುಸೇರಿಸುತುಂ (ರಾಮಾಶ್ವ. ೪೮–೨೭). [ಉಡೆ$_1$ + ನೇಣ್]

**ಉಡೆಮಣಿ** 'ಉಡೆವಣಿ' ನೋ.

**ಉಡೆಯ** (ನಾ). ಪ್ರಭು ; ಯಜಮಾನ ; ಸ್ವಾಮಿ : ಈಶಾನ ಈಶ್ವರಮುಡೆಯ × × ಮೂಲಸ್ಥಾನಮುಡೆಯರ್ಗೆ ಆರುವಮುಡೆಗೆ ಕೊಟ್ಟದ್ದ ಶ್ರೀಯೂರ (ಎಕ. III, ನಂಜನ. ೧೬೪–೧೧ ; 1092). 'ಒಡೆಯ' ಪರಾ.

[ದೇ. ‖ ತಮಿ. ಉಡೈಯಾನ್ ; ಮಲ. ಉಡಯಾನ್ ; ತುಳು. ಒಡಯೆ, ಒಡೆಯೆ ; ಕೊಡ. ಒಡಯೆ, ಒಡವೆ ; ತೆಲು. ಒಡಯುಡು, ಒಡಯುಡು]

**ಉಡೆಯುಱ್ಚು** (ಕ್ರಿ). ಉಟ್ಟಿರುವುದನ್ನು ಸೆಳೆ; ಉಟ್ಟಿರುವ ಬಟ್ಟೆಯನ್ನು ಸುಲಿ: ಮಾಗರಯ್ಯಂ ಪಣ್ಣೆ ಪೆಣ್ಡಿರನುಡೆಯುಱ್ಚಲುಮೆಱ್ತಿನ ತುಱುಗೊಳೊಳುಮಱ್ಮಿಸತ್ತನ್ (ಎಕ. X, ಮುಳಬಾ. ೧೬೧–೨ ; ಸು. 950).

[ಉಡೆ$_2$ + ಉಱ್ಚು (< ಉಚರ್ಚು)]

**ಉಡೆವಣಿ, ಉಡಿಮಣಿ, ಉಡಿವಣಿ, ಉಡೆಮಣಿ** (ನಾ). ನಡುವಿಗೆ ಕಟ್ಟುವ ಗೆಜ್ಜೆಯ ದಾರ: ಉಡೆವಣಿ [ಪ]ಱಿಯದ ಮುನ್ನಮೆ ತೊಡಗಿ ಚಲಂ ನೆಗೞೆ ರಿಪುಬಲಂಗಳನೆ ಪಡಲ್ವಡಿಸಿ ಪರಬಲದನೆತ್ತರ ಕಡಲೊಳಗಣ ಜಿಗುಳೆ ಬಳೆವ ತೆಱದೊಳೆ ಬಳೆದಂ (ಪಂಪಭಾ. ೧–೪೬) ; ಮಾಗಾಯ್ಗಳ ಮಲ್ಲಳಿಗಾಱಂ ಹೊಂಗಡಗದ ಲಿಂಗವಂತಂ ಉಡೆವಣಿಯ ದಿಗಂಬರಂ ಗೆಜ್ಜೆಯ ಸಜ್ಜನನೆನಿಪ ಸಿದ್ಧರಸಂ ಬಸವಣ್ಣನ ತೊಡೆಯಮೇಲಿರ್ದು (ಬಸರ. ೧೦–೧೧೫) ; ಉಡೆವಣಿ ನಡುವಿನ ಚಿಂತಾಕು ಮೆಱೆಯಲಾ ಮಡದಿ ಸಿಂಗರಿಸಿ ಮೆಱೆದಳು (ಕುರಾಸಾಂ. ೨೯–೯೯). **ಉಡಿಮಣಿ** : ಅರಳೆಲೆ ಮಾಗಾಯಿ ಸಿಂಗಡುಗುರು ಕೈಯ ವರ ಕಂಕಣವುಡಿಮಣಿಯ ನಿರುಪಮ ಪದನೂಪುರ ಕಾಲಂದಿಗೆ ಕರಮೆಸೆದಿರೆ (ಅನಂಚ. ೬–೧೩೭). **ಉಡಿವಣಿ** : ಉಡಿವಣಿಯ ಘಂಟಿಯಾಗಿರ್ದುದಾ ಪ್ರಣವ (ಲಶಿಚಂ. ೩೦–೩೪) ; ಉಡಿಪಣಿಗೆ ತನ್ನ ಲಿಂಗವ ತಡೆಯದೆ ಯೇರಣಿಸಿ ಕಟ್ಟಿ (ಸಾಳ್ವಸಾಂ. ೧೧). **ಉಡೆಮಣಿ** : ಮಣಿಯೇಱಂ ಚೆಂಬೊನ್ನುಡೆಮಣಿಯುಲಿ ಗೆಲೆ ಗೆಲ್ದ ನಂಗರುಚಿಯಿಂದ್ಯೈರಾವಣಮಂ ಕುಮಾರಚೂಡಾಮಣಿ ಲಾಲಾಜಲದೊಳಂ ಚತುರ್ದಂತದೊಳಂ (ಪಂರಾಮಾ. ೩–೧೩೦).

[ಉಡೆ$_1$ + ಮಣಿ$_3$]

**ಉಡೆವಣಿಗಟ್ಟು** (ಕ್ರಿ). ನಡುವಿಗೆ ಗೆಜ್ಜೆಯುಡಿದಾರವನ್ನು ಕಟ್ಟು : ಮಣಿಯುದರಿನೃಪರ ಚೂಡಾಮಣಿಯುಮನಾ ನೃಪರ ಕುಂಭಿಕುಂಭೋತ್ಥಲಸನ್ಮಣಿಯುಮನಣಿಯರಮುವನುಡೆವಣಿಗಟ್ಟಲ್ ಬಗೆವನಾತ್ಮಶೈಶವ ದಶೆಯೊಳ್ (ಎಕ. VII, ಶಿಕಾರಿ. ೧೦೦–೧೮ ; 1129) ; ಉಡೆವಣಿಗಟ್ಟುವಂದೆ ರಿಪುದಂತಿಘಟಂ ಮದವೆತ್ತಿ ಕಟ್ಟೆ . . . ಜಗಕ್ಕೆ ಬಾಲ್ಯದೊಳೆ ಸೂಚಿಸಿದಂ ಶಿಶು ತೀವ್ರತೇಜಮಂ (ಪುಷ್ಪಪು. ೪–೫೧). [ಉಡೆವಣಿ + ಕಟ್ಟು$_1$]

**ಉಡೆವಣಿಗಳೆ** (ಕ್ರಿ). ಉಡಿದಾರವನ್ನು ಬಿಚ್ಚು : ಉಡೆವಣಿಗಳೆದುದೆ ಮೊದಲಾಗೆಡೆವಱಿಯದ ವಿಷ್ಣುಭಕ್ತಿಯಾರ್ಜ್ಜಿತಧನಮಂ ಕುಡುವಾಪ್ರ್ (ಎಕ. XIV, ನಾಗಮಂ. ೧೪೦–೫೬ ; 1225). [ಉಡೆವಣಿ + ಕಳೆ$_1$]

**ಉಡೆಸುತ್ತು** (ಕ್ರಿ). ಸೊಂಟಕ್ಕೆ ಸುತ್ತಿ ಬಿಗಿ: ಜಿನನ ಸಭೆಗೆ ಮುಂದೆ ದುಗುಲವನುಡೆಸುತ್ತಿ ತನುಜರುವೆರಸಿ ನಡೆದನು (ಭರಚ. ೪೪–೬೭). [ಉಡೆ₁ + ಸುತ್ತು₁]

**ಉಡೆಹೀನ** (ನಾ). ಉಡುಪಿನಲ್ಲಿ ಮಿತವಾಗಿರುವಿಕೆ: ಉಡು[ಡೆ]ಹೀನ ಮಾಡಲು ನುಡಿಹೀನ ಬಡಗಲು (ಸರ್ವಜ್ಞ. ೧೬೧೫). [ಉಡೆ₂ + ಹೀನ]

**ಉಡ್ಡಾಡಿಸು** (ಕ್ರಿ). ಉರುಳಾಡಿಸು; ಓಡಾಡಿಸು: ಆದಕ್ಕೆ ನಿನ್ನನ್ನ ಮೂರು ಮುದ್ದೆ ಮೊದ್ದು ಮದ್ದೂರಾ ಅಂತ ಉದ್ದುದ್ದವಾಗಿ ಕರೆದು ಉಡ್ಡಾಡಿ ಸೋದು ನಿಮ್ಮ ಐನೋರು (ನಮ್ಮಳ್ಳಿ. ೩೨). [ಉಡ್ಡಾಡು + -ಇಸು₃]

**ಉಡ್ಡಾಡು** (ಕ್ರಿ). ಅತ್ತ ಇತ್ತ ಚಲಿಸು; ಹೊರಳಾಡು; ಉರುಳಾಡು: ಬಿಡ್ಡರಿತು ಸಿಡಿಗಲ್ಲು ಬೋನ್ಗಳಂ ಬಲಿವುತಂ ಗುಡ್ಡಗಂ ಹರಿಗೊಳ್ಪಿಡಿ ದಂಡುಗೋಲ್ಗಳಂ ಉಡ್ಡಾಡಿ ಚಲಿಸಿತು ವ್ಯಾಥರ್ಕಳುಬ್ಬರಿದು ಬಿಲ್ಗಳಂ ಜೇಗೈವುತೆ (ಪರಶು. ೨೧–೩೦). [< ಉರುಡಾಡು]

**ಉಡ್ಡಾಣ, ಉಡ್ಯಾಣ, ಉಡ್ಯಾನ** (ನಾ). ಆಕಾಶದಲ್ಲಿ ಸಂಚರಿಸುವಿಕೆ; ಗಗನದಲ್ಲಿ ಹಾರುವಿಕೆ, —ನೆಗೆಯುವಿಕೆ: ಸಿಂಹನಾದನು ಪದ್ಮನಯನೆಯನ್ನು ಬಲಾತ್ಕಾರದಿಂದ ಹರಣಮಾಡಿ ಆಕಾಶದಲ್ಲಿ ಉಡ್ಡಾಣ ಮಾಡಿದನು (ಪದ್ಮನ. ೯೭); ಒಂದೆರಡು ಸಾರಸಮಿಥುನಗಳು ಕೊಳದ ಕಕ್ಕಡದಲ್ಲಿ ಚೇತರಿಸುತ್ತಿದ್ದವು . . . ಆ ಜೋಡಿನ ಉಡ್ಡಾಣ ನೋಡಿ ಕಮಲೆ ಗೋವಿಂದರು ಮಂದಹಾಸ ಬೀರಿದರು (ರಕ್ತಧ್ವ. ೨೫೩). **ಉಡ್ಯಾಣ**: ಇದೇ ಬಗೆಯಲ್ಲಿ 'ಹಕ್ಕಿ ಹಾರುತಿದೆ' ಎಂಬ ಅವರ ಸುಪ್ರಸಿದ್ಧವಾದ ಕವನದಲ್ಲಿ ಯಾವ ಊಹೆಯ ಉಡ್ಯಾಣ, ಕಾಲಮಾನದ ಪೃಥಕ್ಕರಣ ಇವು ಕಾಣುವುವೋ ಅವನ್ನು 'ಶಾಂತಕವಿಗಳ ಕಾಲ' 'ಇಂದಿನ ವಾಙ್ಮಯದ ಹಾದಿ' ಈ ಸಿಂಹಾವಲೋಕನದ ಲೇಖನಗಳಲ್ಲಿ ಕಾಣಬಹುದು (ಸಾಹಿಸಂ. ೬ ಮುನ್ನುಡಿ). **ಉಡ್ಯಾನ**: ವಾಯುಪಥದಲ್ಲಿ ಹಾರಿ ಉಜ್ಜೀವನದ ಉಡ್ಯಾನವನ್ನು ಅನುಭವಿಸಿದ ಕುಸುಮಾನ ದುಃಖ ಸುಶೀಲಾನ ದುಃಖಕ್ಕಿಂತ ಇಮ್ಮಡಿಯಾಗಿತ್ತು (ಸಮುಜೀ. ೮೭೬). [ಪ್ರಾ. ಉಡ್ಡಾಣ < ಸಂ. ಉಡ್ಡಯನ]

**ಉಡ್ಡಾಣಗೈ** (ಕ್ರಿ). ಹಾರು; ನೆಗೆ: ವೃಷಸೇನನು ಗದೆಯನ್ನು ತಕ್ಕೊಂಡು ರಥದಿಂದ ಕೆಳಗೆ ಉಡ್ಡಾಣಗೈದನು (ಮುಂಬಯಿ. ೬–೧೬೦). [ಉಡ್ಡಾಣ + ಗೈ (< ಕೆಯ್₁)]

**ಉಡ್ಡಾಣಮಾಡು** (ಕ್ರಿ). ಆಕಾಶದಲ್ಲಿ ಸಂಚರಿಸು, —ಹಾರಾಡು: ರಾಯಗಡದ ಹೆಬ್ಬಾಗಿಲ ಮೇಲೆ ಉಡ್ಡಾಣಮಾಡುತ್ತಿರುವ ಸ್ವರಾಜ್ಯದ ಅಭಿಮಾನದ ಹಿಂದುಗಳ ಗೌರವದ ಭಗವೀಧ್ವಜವೂ . . . ದಿಲ್ಲಿಯ ಬಾದಶಹನನ್ನು ಭಯಗೊಳಿಸಿದ್ದವು (ಅಮಾರಾ. ೧); ಅವರಿಗೆ ಇನ್ನೊಂದು ಹೊಸ ಪ್ರಯೋಗಕ್ಕೆ ಅವಕಾಶ ಸಿಕ್ಕಿದ್ದರಿಂದ ಅವರ ಕಲ್ಪನಾಶ್ವವು ಉಡ್ಡಾಣಮಾಡತೊಡಗಿತು (ರಂಗರೋ. ೧೨೦). [ಉಡ್ಡಾಣ + ಮಾಡು₁]

**ಉಡ್ಡಿ₁** (ನಾ). ರಾಶಿ; ಗುಡ್ಡೆ; ವಿಶೇಷವಾಗಿ (ಗೋಲಿ, ಬೀಜ, ಹಣ್ಣು ಮೊದಲಾದುವುಗಳ) ಮೂರರ ಗುಂಪಿನ ಮೇಲೆ ಮತ್ತೊಂದನ್ನು ಇಟ್ಟಿರುವ ಗುಡ್ಡೆ, —ಕುಪ್ಪೆ (ಕ). 'ಒಡ್ಡಿ₂' ಪರಾ. [ದೇ. ‖ ತುಳು. ಉಡ್ಡಿ; ತೆಲು. ಉಡ್ಡ]

**ಉಡ್ಡಿ₂** (ನಾ). ಒಂದು ಗಿಡದ ಹೆಸರು: ಉಡ್ಡಿ, ವುಡಿಗೆ, ಗೂಡು ಮುರ್ಕಿ, ಚಿತ್ತೋಡೆ, ಉದುರೆ (ಮೈಔಗಿ. ೩೨–೬೧೧). [?]

**ಉಡ್ಡಿಗ** (ನಾ). ಅಡಕೆಯ ಕಾಯಿ: "ಈ ಅಡಿಕೆಯ ಫಲವು ಉಡ್ಡಿಗ ವೆನಿಸುಗು" (ನಾಚಿರಾ. ೧೧೩). [?]

**ಉಡ್ಡಿಗಜುಗ** (ನಾ). ಮೂರು ಗಜ್ಜುಗಗಳ ಮೇಲೆ ನಾಲ್ಕನೆಯದನ್ನು ಪೇರಿಸಿ ಇಟ್ಟಿರುವ ಗಜ್ಜುಗದ ರಾಶಿ (ಕ). 'ಒಡ್ಡಿಗಜುಗ' ಪರಾ. [ಉಡ್ಡಿ₁ + ಗಜುಗ]

**ಉಡ್ಡಿಯಾಣ** (ನಾ). [ಯೋಗ] ಹಠಯೋಗದ ಮೂರು ಬಂಧಗಳಲ್ಲಿ ಒಂದು. 'ಉಡ್ಡಿಯಾಣಬಂಧ' ಪರಾ. [ಸಂ. ಉಡ್ಡಿಯಾನ]

**ಉಡ್ಡಿಯಾಣಬಂಧ** (ನಾ). [ಯೋಗ] ಹಠಯೋಗದಲ್ಲಿ ಒಂದು ಬಗೆಯ ಬಂಧ: ವರನಾಡಿ ಕಂದದೆಡೆಯ ನಾಭಿಚಕ್ರದುಪರಿಕೆಳಗೆಂಬೆರಡೆಡೆಯನು ಪಿರಿದು ಬಂಧಿಪುದುಡ್ಡಿಯಾಣಬಂಧವಹುದದು ಜರೆ ಮರಣವನು ಕೆಡಿಸುತಿರ್ಕು (ಕೈವಲ್ಯ. ೫–೧೫–೨). [ಉಡ್ಡಿಯಾಣ + ಬಂಧ]

**ಉಡ್ಡೀಣ** (ನಾ). ಮೇಲೆಹಾರುವುದು; ನೆಗೆಯುವುದು: ಉಡ್ಡೀಣ ಪ್ರೋಡ್ಡೀಣದಿಂದ ಹೊಳೆಹೊಳೆದು . . . ಉತ್ತುಂಗತುಂಗದ ಸತ್ವರಿದಿರಾಗಿ . . . ಘುರ್ಜಿಸುತ ಪಲ್ಮೊರೆಯಲು (ಜಿನಮು. ೨೨–೯). [ಸಂ. ಉಡ್ಡೀನ]

**ಉಡ್ಡೀನ** (ಗು). ೧. ಆಕಾಶದಲ್ಲಿ ಸಂಚರಿಸುವ, —ಹಾರುವ; ಮೇಲೇರುವ: ಉದ್ಭ್ರಾಂತಭ್ರಮರಮುಂ ಉಡ್ಡೀನ ಹಂಸಸಾರ್ಥಮುಂ (ಕಾದಂಉ. ೫೩೯). (ನಾ). ೨. ಪಕ್ಷಿಗಳ ಹಾರಾಟದ ಎಂಟು ವಿಧಗಳಲ್ಲಿ ಒಂದು: ಉಡ್ಡೀನ ಸಂಡೀನ ತಿರ್ಯಗ್ಡೀನೋಡ್ಡೀನಾವಡೀನ ಪ್ರಕೃತಿ ಗರುಡನೇಂ ವಿಸ್ಮಯಂ ಸೌಭವೇಗಂ (ಜಗವಿ. ೧೮–೯೪). [ಸಂ.]

**ಉಡ್ಡು** (ಕ್ರಿ). ಪ್ರತಿಭಟಿಸು; ಎದುರಿಸು: ಚೌಳಿಕಂ ತನ್ನ ಚಾತುರ್ಬ್ಬಲದಿಂ ಬಂದುಡ್ಡೆ ವನ್ಯದ್ವಿಪಘಟೆಯನಿಭೇಂದ್ರಾರಿ ಪೊಕ್ಕಂತೆ (ಕಇಅ. ೨–೨–೫೧; 1058). 'ಒಡ್ಡು₁' ಪರಾ. [ದೇ. ‖ ತುಳು. ತೆಲು. ಒಡ್ಡು]

**ಉಡ್ಯಾಣ** 'ಉಡ್ಡಾಣ' ನೋ.

**ಉಡ್ಯಾಣಚೇಷ್ಟೆ** (ನಾ). ಅರವತ್ತುನಾಲ್ಕು ವಿದ್ಯೆಗಳಲ್ಲಿ ಒಂದು; ಆಕಾಶದಲ್ಲಿ ಸಂಚರಿಸುವ ವಿದ್ಯೆ: ಅಕ್ಷರ ಲೆಕ್ಕ ಗಂಧರ್ವ . . . ಇಂದ್ರಜಾಲ ಮಹೇಂದ್ರಜಾಲ ಉಡ್ಯಾಣಚೇಷ್ಟೆ ಪರಕಾಯಪ್ರವೇಶ . . . ಇವೆಲ್ಲವ ಕಲಿತೊಡೇನೋ ಚೌಷಷ್ಟಿವಿದ್ಯಾಕಳಾವಿದನೆನಿಸಿಕೊಂಬನಲ್ಲದೆ ಲಿಂಗವಂತನೆನಿಸಿಕೊಂಬುದಿಲ್ಲ (ಮಡಿಮಾ. ೬೧). [ಉಡ್ಯಾಣ (< ಉಡ್ಡಾಣ) + ಚೇಷ್ಟೆ]

**ಉಡ್ಯಾನ** 'ಉಡ್ಡಾಣ' ನೋ.

**ಉಣ್, ಉಣು, ಉಣ್ಣು** (ಕ್ರಿ). ಉಂಡ (ಭೂತಕೃ); ಉಂಡು (ಭೂತನ್ಯೂ). ೧. (ಆಹಾರಪದಾರ್ಥ ಮೊದಲಾದುವನ್ನು) ತಿನ್ನು; ಊಟಮಾಡು; ಸೇವಿಸು; ಮೆಲ್ಲು: ದೇವಾನ್ದೇವನ ಪರಿಜನಮಲ್ಲಾಡೆ ಪೆಟಿನೊರ್ವನಾರುಮುಂಣ್ಡೊಮೆಣ್ಡುಕಂ (ಎಕ. VI, ಕೊಪ್ಪ ೩೭–೪; ಸು. 675); ಉಪಾಧ್ಯಾಯಂಗೆ ಕಟಮೆಯ ಕೂಟುಂ ತುಪ್ಪಮುಂ ತೊವೆಯುಮನುಣಲ್ಕೊಟ್ಟು (ವಡ್ಡಾರಾ. ೭೫–೧೫); ಎನ್ನಟ್ಟಡುಗೆಯನುಂಡೊಡೆ ಬಿನ್ನಣಮೇನರಸ ನರೆಗಳಾಗವು (ಪಂಪಭಾ. ೮–೫೪); ಉಡುವಲ್ಲಿ ಉಂಬಲ್ಲಿ ಸಂಗ ಶರಣೆಂದೆನುತೆ (ಬಸರ. ೩–೧೩೪); ಬಂಧುಗಳ ಗುರುಗಳ ಸಹೋದರರ ಕೋಲಮೊನೆಯಲಿ ಕೊಂದು ನೆತ್ತರಗೂಳನುಂಬವೊಲಖಿಳರಾಜ್ಯದ ಮೇಲೆ ಸೊಗಸುವ ಸಿರಿಯನೊಲ್ಲೆನು (ಕುವ್ಯಾಭೀ. ೩–೪೨); ದುಂಡರಳ್ಗಡಲೆ ಭಕ್ಷ್ಯಗಳ ಬಡ್ಡಿಸಿಕೊಳುತುಂಡರು ನೆಜತಿ ಸೊಕ್ಕುವನಕ (ಮೋಹತ. ೧೮–೮೭). ೨. (ಹಾಲು, ನೀರು, ಮಕರಂದ ಮೊದಲಾದ ದ್ರವಪದಾರ್ಥಗಳನ್ನು) ಕುಡಿ; ಹೀರು; ಪಾನಮಾಡು: ಅಲರಂ ನೋಯಿಸದೊಯ್ಯನೊಯ್ಯನಳಿಗಳ್ ಬಂಡುಣ್ಬುವು (ಪಂಪಭಾ. ೫–೮೧); ಎನ್ನ ಪಂಚೇಂದ್ರಿಯಂಗಳು ಕಬ್ಬುನ ಉಂಡ ನೀರಿನಂತೆ ನಿಮ್ಮಲ್ಲಿ ಬೆರಸುಗೆ ಚನ್ನಮಲ್ಲಿಕಾರ್ಜುನಯ್ಯ (ಮಹಾದೇ. ೧೮–೧); ತನಿಪಾಲನುಂಡು ಬಳೆವರಗಿಳಿಗಳುರ್ಕಿನಿಂ (ತಿರುರ. ೨–೧೧); ತುರುಕರು ಕರೆದರೆ ಉಣಬಹುದಣ್ಣ (ಪುರಂದ. ೧–೧೭೯ ಪಲ್ಲವಿ); ಉಕ್ಕುತಿಹ ಕಾಯ ಮೊಲೆಪಾಲುಣುತೆ ಸೋಗಿಲೊಳ್ ನಕ್ಕಾಡುತುಂ (ಚಿಬವು. ೫–೩೬).

೩. ಅನುಭವಿಸು: ಸಗ್ಗ್ರದ ಭೋಗಮನುಣ್ಡಪವರ್ಗ್ಗಕ್ಕಡಿಯಿಟ್ಟೊನ್ (ಎಇ. X, ೧೫೨–೫೫; 915); ಸುರಲೋಕ ಸುಖಂಗಳನುಣ್ಬೆವೆಂಬ (ಆದಿಪು. ೨–೯); ಬಾರದ ಭವಂಗಳನುಂಡೆನುಂಡೆ (ಮಹಾದೇ. ೩–೫); ಜನಪತಿ ಮನವಲ್ಲದ ಮನದೊಳೊಡಂಬಟ್ಟು ಬಂದು ತಾಯೊಡನುಣೆ ನಂಜಿನ ಲಡ್ಡುಗೆಯಂ ಮಾಡಿದುದನುಣ್ ಮಹಾರಾಜಯೆಂಬಿನಂ ಸವಿದುಂಡಂ (ಯಶೋಚ. ೩–೩೨). **ಉಣು** : ೧. ಹರುಷದಿಂದುಣುವನು ತಂಗಿ ಬಡಿಸುವರು ಭರದಿಂದಾರೋಗಿಸುವಾ ಮರಳಿ ಬಡಿಸುತಿಹಳುಣುತಿಹ ನಿಂತು ಮಂದಿರದಶನವನೆಲ್ಲ ಸವಿದಾ (ಜೀವಂಸಾಂ. ೭–೨೪); ಬೆಳಗ್ಗೆ ತಾವು ರಾಣಿಯವರನ್ನು ಕಾಣದೆ ಉಣ್ಣುವುದಿಲ್ಲವೆಂದು ಹಟಹಿಡಿದಿದ್ದರು (ಹಾಹುತ್ತ. ೩೫). ೩. ಉಣದಿರ್ಪ ಧನಮಿರ್ದೊಡೇನು ಸುತನಿರ್ದೇಂ ಮುಪ್ಪಿನಲ್ಲಾಗದಾ (ಸೋಮೇಶ. ೧೬); ದಿವದೊಳ್ದಿವ್ಯಸುಖವನುಣುತಿಂದಿನ ದಿವದೊಳ್ ನಿನ್ನನೆ ನೋಡುವೆನೆನುತತಿತವಕದಿನೆಯ್ದಿದೆಂ (ಜಯಕಾ. ೩–೬೯); ಹಾರದೆ ಸಾರದೆ ಹೊಜಹೊಜಗಾಡಿ ಸಂಸಾರ ದುಃಖವ ಸುಣು ತಿಹರು (ಭರಚ. ೧–೧೦೨). **ಉಣ್ಣು** : ೧. ಹರಂ ಕರುಣಿಸುತ್ತಾ ಪೊಬ್ಬ ರುಣ್ಬೆವೆನೆ ಹರನ ಭಕ್ತರು ಸಪಂತಿಯಲುಣ್ಣವೇಳ್ಕುಮೆನೆ (ಇಳೆರ. ದೇ. ೫೫–೫); ಎವೆಯಿಕ್ಕದುಸಿರಿಕ್ಕದುಣ್ಣದ ಜಿತೇಂದ್ರಿಯತ್ವವ ತಳೆದ (ಸಿದ್ಧರಾ. ೧–೨೬); ಉಣ್ಣುವ ಪದಾರ್ಥಗಳನ್ನು ಆಗಾಗ್ಗೆ ಬದಲು ಮಾಡುತ್ತಿರಬೇಕು (ಮುಂಬಯಿ. ೪–೨೫); ಕರೆದರೆ ಉಣ್ಣು, ತೆರೆದರೆ ಮುಚ್ಚು, ಸೇರಿದ ಒಡೆಯಗೆ ಎರಡು ಬಗೆಯ ಬೇಡ (ಗಾದೆ); ಮಾಡಿದವನುಂಡಾಸು ಮಣಿ ಯಂಥ ಕಡುಬು (ಗಾದೆ). ೩. ನೆಲನನಗೆದು ಮಡುಗದಿರಾ . . . ಉಣ್ಣದೆ ಹೋಗದಿರಾ (ಬಸವ. ೨೦೧); ತಾನು ಉಣ್ಣದ ದ್ರವ್ಯ ತಾಳ್ಯದ್ದ ಇದ್ದ ರೇನು (ಪುರಂದ. ೧–೧೩೯–೧); ಉಣ್ಣಲಾರದವ ಇಕ್ಕಲಾರ (ಗಾದೆ).

**ಉಂಡವರಮನೆಗೆರಡುಬಗೆ** = ಊಟಮಾಡಿದ ಮನೆಗೆ ದ್ರೋಹ ಮಾಡು, —**ಕೇಡುಬಗೆ**: ಉಂಡಮನೆಗೆರಡುಬಗೆದ ಮಹಾಪಾತಕ ಬರದಿದ್ದೀತೆ? (ಕುರುಕಾ. ೧೧೯). **ಉಂಡುಡು** = ಊಟಮಾಡಿ ಬಟ್ಟೆ ಯನ್ನು ಧರಿಸು; ಸುಖವಾಗಿ ಜೀವನ ನಡಸು: ಪದೆಪುಗೆಡ[ಲ]ಟ್ಟೆ ಯೊಡವುಟ್ಟಿದ ಮಾವನ ಮನೆಯೊಳುಂಡುಟ್ಟುಂ ನೀವೊದೆದೊಡೆ ಗೆಯ್ವೊಯೊ ನಾಯುಣ್ಣದ ದೋಣಿಯೊಳೂಡಿದೊಂಗೆ ಪದಯಿದನೆ ಕರಂ (ಸುಕುಮಾ. ೨–೬೯); **ಉಂಡುಟ್ಟು** ತೊಟ್ಟ ನಂಟರ ತಂಡಂ ತನಗಾಗೆ (ಸಮುಪ. ೫–೧೪೬); ಉಂಡುಟ್ಟು ಬಾಳ್ವ ನರರಂ ಕಂಡರೆ ಸೈರಿಸದ ಚಂಡವೇಗನ ಕಥೆಗೆ (ಧರ್ಮಪ. ೪–೯). **ಉಣಕಲ್** = ಊಟ ಮಾಡಲು ಕಲಿ: ಉಣಕಲ್ತಲ್ಲಿಯೆ ಹಸಿವಾದುದು (ಪಾರ್ಶ್ವಪು. ೫–೪). **ಉಣಕೊಡು** = ಊಟಮಾಡುವುದಕ್ಕೆ ಕೊಡು: ಮಾತನೆ ಉಣ ಕೊಟ್ಟು ಮಾತನೆ ಉಡಕೊಟ್ಟು ಮಾತಿನ ಮುತ್ತ ತೊಡಕೊಟ್ಟು ಬೆಳಗೆ ಹೋದಾತನೇ ಜಾಣ (ಸರ್ವಜ್ಞ. ೧೯೩೦). **ಉಣನೀಡು** = ಊಟಕ್ಕೆ ಬಡಿಸು; ಊಟಕ್ಕೆ ಇಕ್ಕು: ರಂಗಾರು ಆದಾರ ಉಂಬುಡುವ ಕುಲವಲ್ಲ ಕುಂಬಳೆಲೆಯಾಗ ಉಣನೀಡ (ಲೋಕಗೀ. ೧೫೪–೨೬). **ಉಣಬಡಿಸು** = **ಉಣನೀಡು**: ತಾಮಸನ ತಡೆಗಡಿದು ಭೂತಸ್ತೋಮಕುಣಬಡಿಸುವೆನು (ಕುವ್ಯಾಕ. ೧೨–೧೭); ಊರೆಲ್ಲ ನಂಟರು ಉಣಬಡಿಸುವರ ಕಾಣೆ (ಪುರಂದ. ೧–೭೮ ಪಲ್ಲವಿ). **ಉಣಬರು** = ಊಟಮಾಡುವುದಕ್ಕೆ ಬರು, — **ಆಗಮಿಸು**: ಉಣಬಂದ ಜಂಗಮಕೆ ಉಣಬಡಿಸಲೊಲ್ಲದಲೆ ಉಣದಿರ್ಪ ಲಿಂಗಕುಣಬಡಿಸಿ ಕೈಮುಗಿವ ಬಣಗುಗಳ ನೋಡ (ಸರ್ವಜ್ಞ. ೨೦೦). **ಉಣಲಿಕ್ಕಿಸು** = ಊಟಕ್ಕೆ ಬಡಿಸುವಂತೆ ಮಾಡು; ಊಟಹಾಕಿಸು: ತನ್ನ ಪಂತಿಯೊಳುಣಲಿಕ್ಕಿಸಿ ಕಪ್ಪುರಂಬೆರಸು ತಂಬುಲವಂ ಕೊಟ್ಟು (ಸುಕುಮಾ. ೨–೫೯ ವ). **ಉಣಲಿಕ್ಕು** = **ಉಣನೀಡು**: ಅಂಬಿನ ಮೊನೆಯಲುಣಲಿಕ್ಕುವೆನು ರಣಭೂತಕ್ಕೆ ನಿನ್ನೊಡಲ (ಕುವ್ಯಾದ್ರೋ. ೧–೫೫); ದೃಢಭಕ್ತಿಯಿಂದಲಿ ಉಣಲಿಕ್ಕಿದವರಿಗೆ ಷಡುರಸಾನ್ನವೇ ಸಾಕ್ಷಿ (ಪುರಂದ. ೨–೧೭–೧). **ಉಣಲಿಡು** = **ಉಣನೀಡು**: ಭೂಸುತೆಯು ಅವಸರವಱಿದು ತಾಂ ಸ್ನಾನವನು ಮಾಡಿಸುವಮರ್ದಿನಬೋನವನು ಸವೆವರ್ತಿಯಿಂದೆಡೆ ಮಾಡುವುಣಲಿಡುವಾ (ಸಾಳ್ವಭಾ. ೨೦–೩೧). **ಉಣಲುಳ್ಳಂ** = ಊಟ ಮಾಡಲು ಹೊಂದಿರುವವನು; ತಕ್ಕಷ್ಟು ಆಸ್ತಿ ಇರುವವನು: ಕಳ್ಳನುಣ [ಪಾಠಾಂ. ನವೊ]ಉಳ್ಳಂ ಬುದ್ಧಿವಂತಂ ಧನೇಶ್ವರನುರ್ವೀಪತಿ (ಜಾತತಿ. ೧೪–೧೩). **ಉಣಲ್ಕೀ** = **ಉಣನೀಡು**: ಮರುದಾನೀತದಳಾಂ ಬರಂಬೊದಿಸುಣಲ್ಕಿತ್ತಬ್ಜಬೀಜಂಗಳಂ ಶರದಂ ಭೋಜಿನಿ ಮಾಡಿದಳ್ ದ್ವಿಜವರಂಗಾತಿಥ್ಯಸತ್ಕಾರಮಂ (ರಾಜಶೇ. ೬–೧೦). **ಉಣಲ್ಪಡೆ** = ಊಟಮಾಡುವ ಅದೃಷ್ಟವನ್ನು ಹೊಂದಿರು: ತಡೆಯದೆ ಮುದ ದಿಂದಮೃತಂಬಡೆದುಮುಣಲ್ಪಡೆಯರೆಂಬ ನಾಣ್ನುಡಿಯೆನ್ನೊಳ್ ದೃಢ ಮಾದುದು (ಧರ್ಮಾಮೃ. ೨–೧೫೪). **ಉಣವೇಟ್ಕುಂ** = ಊಟಮಾಡ ಬೇಕು; ಅನುಭವಿಸಬೇಕು: ತಂತಮ್ಮ ಮಾಡಿದುದಂ ತಾಮುಣ ವೇಟ್ಕುಂ (ಕಾದಂಪೂ. ೬೨೮). **ಉಣಿಯೆಕೊಡು** = (ಇನ್ನೊಬ್ಬರಿಗೆ) ಅನುಭೋಗಿಸಲು ಕೊಡು: ಇನ್ತುಜ್ಝೋರುಂ ಉಣಿಯೆಕೊಡು ವೋನುವರ್ (ಎಕ. VI, ಕೊಪ್ಪ. ೩೭–೫; ಸು. 675). **ಉಣ್ಣದರ್**, **ಉಣ್ಣದವರು** = ಆಹಾರವನ್ನು ತೆಗೆದುಕೊಳ್ಳದಿರುವವರು; ದೇವತೆ ಗಳು: "ಅಮರ್ದುಣಿಸಿಗಳುಣ್ಣದರೆನೆ ದೇವವ್ರಾತಕಮರ್ದ ನಾಮುಮಿ ವಕ್ಕುಂ" (ಕವಿಕಂ. ೩೨); ಉಣ್ಣದರುಣ್ಬಮರ್ದು ಮರ್ದಮರ್ದ ಪೊಂಬಾಟಿದೋಂಟದೊತ್ತಿನ ಪೇರುಚ್ಚದಿಂ (ರಾಮಾಶ್ವ. ೭೨–೨೮); ಹಣ್ಣಾಗದೆದೆಯ ವೀರನಿಗವನಿಗೆ ನೋಡಲುಣ್ಣದವರು ಪಾಸಟಿಯೆ (ಕುರಾಸಾಂ. ೩೩–೯). **ಉಣ್ಣದರಬೀಯ** = ದೇವತೆಗಳ ಆಹಾರ; ಅಮೃತ: "ಇರದೆಯುಣ್ಣದರಬೀಯಮೆನಲ್ಕನುಕರಿಪರಿರದೆ ಕವಿಗಳ್ ಮನಮೊಲಿದಮೃತಾಖ್ಯಮೆಂದು" (ಕವಿಕಂ. ೩೧). **ಉಣ್ಣದೂರು** = ಊಟವನ್ನು ಮಾಡದ ಊರು; ಸ್ವರ್ಗ: ಬಣ್ಣವಾಯ್ದರೆಯ ಬಾಲೆ ಯರು ಬಣ್ಣಿಸಿ ಚಮರವ ಡಾಳೈಸುತ ಬಂದರುಣ್ಣದೂರಬಲೆಯರಂತೆ (ಶ್ರೀಪಾಲ. ೧೩–೧೮೭). **ಉಣ್ಣಪಡು** = ಊಟ ಮಾಡದೆ ಮಲಗು; ಉಪವಾಸ ಮಲಗು: ಪಸಿದುಣ್ಣಪಟ್ಟು ಬಿರ್ದಿರ್ದು (ಆದಿಪು. ೧೪–೬೮).

[ದೇ. ‖ ತಮಿ. **ಮಲ.** ಉಣ್; **ತುಳು.** ಉಣ್, ಉಣು; **ಕೊಡ.** ಉಣ್; **ಕೋಲಾ.** ಉಣ್ = ಕುಡಿ, ಹೀರು; **ಪರ್ಜಿ.** ಗಡಬ. ಉನ್ = ಕುಡಿ; **ಗೊಂಡಿ.** ಉಂಡಾನಾ = ಕುಡಿ; **ಕುಇ.** ಉಣ್ಬ = ಕುಡಿ; **ಕುವಿ.** ಊಂಡಲಿ = ಕುಡಿ]

**ಉಣ** (ನಾ). ಒಬ್ಬಾತನ ಹೆಸರು (?): ಸೀತೆಯಂ ರಾವಣನುಯೆ ಜಟಾಯು ಕಾದಿ ಸತ್ತಲ್ಲಿ ರಾಮಪ್ರತಿಷ್ಠೆಗೆಯ್ದಲ್ಲಿ ಉಣಂ ದೇಗುಲವಂ ಮಾಡಿದಡೆ (ಎಕ. XI, ಮೊಳಕಾ. ೨೭–೩; 962). [?]

**ಉಣಚಿ**₁ (ನಾ). ಒಂದು ಜಾತಿಯ ದೊಡ್ಡ ಮೀನು: "ಉಲೂಪೀ, ಶಿಶುಕಃ – ೨ ಶಿಶುವಿನ ಹಾಗೆ ಚಪಲವಾದ ಉಣಚಿ ಮೀನಿನ ಹೆಸರು ಗಳು" (ಸಿದ್ಧಾಂತಿ. ೬೩). ℙ ಈ ಮೀನಿಗೆ ಕಡಲುಹಂದಿ ಎಂಬ ಹೆಸರೂ ಉಂಟು. [ದೇ. ‖ ತಮಿ. ಉಳುವೈ; ತೆಲು. ಉಣುಜು]

**ಉಣಚಿ**₂ (ನಾ). (ರಾಗಿ, ಜೋಳ ಮುಂತಾದ ಧಾನ್ಯದ) ತೆನೆಗಳ ಬುಡ; ತೆನೆಯ ತೊಟ್ಟಿನಂತಹ ಕಡ್ಡಿ; "ತೆನೆಯ ಹಿಂದಿನ ಗಣೆ" (ಜಾನಕೋ. ೨೦): ತೆನೆಗಳನ್ನು ತುಳಿಸುವಾಗ ಅವು (ಉಣಚಿಗಳು) ದನಗಳ ಕಾಲೊಳಗೆ ಸಿಕ್ಕು ನೋವು ಮಾಡುವುವು (ಕಸಾಪ. I, ೧೩೧). [?]

**ಉಣಾಮಿಣಿ** (ನಾ). ಒಂದು ಬಗೆಯ ಗಿಡ: ಉಣಾಮಿಣಿ ಗಿಡ; ಕರೀಬಳ್ಳಿ (ಮೈಔಗಿ. ೬೬–೧೫೬೭). [?]

**-ಉಣಿ** (ಪ್ರ). ಇದನ್ನು ತಿನ್ನುವುದು, ತಿನ್ನುವವನು ಎಂಬ ಅರ್ಥದಲ್ಲಿ ಸೇರುವ ತದ್ಧಿತಪ್ರತ್ಯಯ: ಉಣಿ ಪ್ರತ್ಯಯಮೊದವುಗುವುನ್ವಿತದಿನುಣ್ಬನಿದನೆಂಬೆಡೆಯೊಳ್ . . . ಉಣಿಪ್ರತ್ಯಯಕ್ಕೆ – ಅ ಮ ರ್ದು ರ್ ಣಿ, ಕಳ್ಳುಣಿ, ತುಡುಗುಣಿ (ಶಮುದ. ೨೦೨, ಪ್ರಯೋ); ಅಮುರ್ದುಂಬರೆಲರುಣಿಗಳಿಗಿದಿರಾಗಿ ಮಾತಾಡೆ ರಮಣಿ ಗಂಗೆಗೆ ತನ್ನ ತೊಡವಿತ್ತನಾಣ್ಮನೆಂದುಮೆಕಿನಿಸೆ (ವೀಶೈವು. ೩–೫–೧). [ಉಣ್ + –ಇ₃]

**ಉಣಿಕ** (ನಾ). (ದನಗಳ ಮೈಯಲ್ಲಿರುವ) **ಉಣ್ಣೆ** ಎಂಬ ಕೀಟ: ಹರಿಹರ ಪಂಕಜಭವನುಂ ನರ ಸುರ ಪನ್ನಗ ಖಚರ ಮುನಿಗಳುಂ ನೆರೆಲ ನಿರ್ಜರ್ಜರಗಾಡುವ ಪಶುಗಳೊಳೊಸೆದಿರಲೇನುಣಿಕಗಳೊ [ಪಾ ಠಾ ೦. ತಾನೆಂತೊ] ತೊನಸೆಗಳೊ ನೊಣವುಗಳೊ (ಸಮುಪ. ೯–೬೦).
[ದೇ. ‖ ತುಳು. ಉಣುಂಗು]

**ಉಣಿಕೆ** (ನಾ). ಊಟವನ್ನು ಮಾಡುವಿಕೆ (೬). [ಉಣ್ + –ಇಕೆ]

**-ಉಣಿಗ** (ಪ್ರ) = -ಉಣಿ (೬). 'ಆದುಣಿಗ', 'ಎಲರುಣಿಗ' ಪರಾ.
[ಉಣ್ + –ಇಗ]

**ಉಣಿಸು₁**, ಉಣ್ಣಿಸು (ಕ್ರಿ). ೧. ಉಣ್ಣುವಂತೆ ಮಾಡು; ಊಟಮಾಡಿಸು; ತಿನ್ನಿಸು: ಬಾರದ ಭವಂಗಳಲ್ಲಿ ಬರಿಸಿ ಉಣ್ಣದ ಊಟವನುಣಿಸಿ ವಿಧಿಯೊಳಗಾಗಿಸುವ ಕೇಳಿರಣ್ಣ (ಮ ಹಾ ದೇ . ೨೪–೨); ನೇಸರ್ಪಡುವುದುಂ ರಾತ್ರಿಯೊಳ್ ಮತ್ತಮುಣಿಸಲೆಬ್ಬಿಸಿದೊಡೆ [ಪಾಠಾಂ. ಉಣಲ್ ಎಬ್ಬಿಸಲ್ಕೆ] ಅನೊಲ್ಲದಿರೆ (ಧರ್ಮಪ. ೯–೨೩ ವ); ಧನದನನು ದೊರೆಗೆಡಿಸಿದನೀಶಾನ ನನಿಳೆಯೊಳು ತಿರಿದುಣಿಸಿದನದಟಂದ (ತ್ರಿಪುಸಾಂ. ೬–೬೬); ವಿಷವಿಕ್ಕಿದವಗೆ ಷಡ್ರಸವನುಣಿಸಲುಬೇಕು (ಪುರಂದ.೨–೬೫–೧). ೨. ಕುಡಿಸು; ಪಾನಮಾಡಿಸು: ಮೊಲೆಯುನುಣಿಸಿದ ಪೂತನಿಯ ಪಿ ಡಿ ದ ಸು ವ ನ ಪ ಹ ರಿ ಸಿ (ಹಭಸಾ. ೩೦); ಉಣಿಸಿದಳ್ ಕೂಸನಬ್ಬೆ (ಶಬ್ದಾನು. ೫೩೬ ಪ್ರಯೋ). ೩. ಅನುಭವಿಸುವಂತೆ ಮಾಡು: ಉಣ್ಣು [ಚತು]ರಂಗಬಲಮನೆ ಗುಣ್ಣುಮುಣ್ಣು ಮಹಾದುರ್ಗ್ಗಮುಣ್ಣು ಭುಜಬಲಮೆನ್ದಾ ರೆ[೦]ಟುಣ್ಣುಣಿಸಿದೊಡಂ ನಿಲೆಯಿಂ × × × ನೆಗಬ್ದ ಕನ್ನನ ಬಣ್ಣಂ (ಸೌಇಇ. XI–i, ೪೮–೨೩; 1007); ಕ್ಷಿತಿಯೊಳು ಸತಿಯ ಕಾಲಿಗೆ ಪತಿಯೇಗಲಾ ಸತಿಗೆ ಮಹಾಂಧನರಕವುಂ ಪ್ರತಿ ಜನ್ಮಜನ್ಮದೊಳುಣಿಸದೆ ಬಿಡದೆಂದು ಮಡಿವಂತರೆಯ್ದೆ ಪೇಳುವರು (ಅಂಜಚ. ೮–೧೦೨). **ಉಣ್ಣಿಸು**: ೧. ನಿನಗುಣ್ಣಿಸಿದ ಬೋನವನದುಣ್ಣದೆ ಹೋದೊಡೆನ್ನಾಣೆ (ಬ ಸ ವು ೨೪–೬೫). ೨. ಮಲಹರಂಗುಣ್ಣಿಸದ ಪಾಲಂ ನಲಿದು ನಿಚ್ಚಂ ಕುಡಿದ ಪಾತಕಿ (ಬಸವು. ೧೪–೩೦). [ಉಣ್ + –ಇಸು₃]

**ಉಣಿಸು₂** (ನಾ). ಊಟ; ತಿಂಡಿ; ಆಹಾರ: ನಾ ನಾ ಪ್ರ ಕಾ ರದುಣಿಸಂ ಸುಗಂಧಪುಷ್ಪ ದಿವ್ಯಾಹಾರಮನಾಕಂಠಪ್ರಮಾಣಂಬರೆಗಂ ತಣಿಯುಂಡು (ವಡ್ಡಾರಾ. ೬೮–೨೨); ಪಸಿವು ದೊರೆಕೊಳ್ಳುಮುಣಿಸುಗಳೆನಿಕೆಯ್ಯುಂ (ಪಂಪಭಾ. ೫–೪೭); ವಿಧುವಿಲ್ಲದಿರುಳ್ ಕೆಲದೊಳ್ ವಧುವಿಲ್ಲದ ಲೀಲೆ ಮಧುರಮಧುವಿಲ್ಲದ ಪೂ ದಧಿಯಿಲ್ಲದುಣಿಸದೇವುದೊ ಬುಧರಿಲ್ಲದ ಸಭೆ ಸರಸ್ವತೀಮಣಿಹಾರಾ (ಕಾವ್ಯಾವ. ೪೧); ಅತಿವೇಳೆಯಾಯ್ತೆಂದು ನಮ್ಮ ಪಂಕ್ತಿಯೊಳೆಲ್ಲ ಸತಿಯರಿಂಗುಣಿಸಾಗಲೆಂದು ಕ್ಷಿತಿಪನೆಲ್ಲರಿಗೆ ಕುಳ್ಳಿರಲಿಡಿಸಿದನು (ಭರಚ. ೪–೧೭); ನಿನ್ನ ನಗೆಯ ಬೆಳಕಿನಲ್ಲಿ ಜಗಕೆ ಬೇರೆ ಬಣ್ಣವು ಬರಲು; ನನ್ನ ಜೀವ ನಯನ ಬೇರೆ ಉಣಿಸನುಣ್ಣುವು (ಅರಳು. ೨೩–೧೮). [ಉಣ್ + –ಇಸು₄. / ತುಳು. ಉಣಸು, ಒಣಸು]

**ಉಣು** 'ಉಣ್' ನೋ.

**ಉಣುಗು** (ನಾ). "ದನಕರುಗಳಿಗೆ ಮತ್ತು ನಾಯಿಗಳಿಗೆ ಹತ್ತಿಕೊಳ್ಳುವ ಒಂದು ಕೀಟ; ಉಣ್ಣೆ" (ಕಿಂಕೋ). '**ಉಣಿಕ**' ಪರಾ.
[← ತುಳು. ಉಣುಂಗು]

**ಉಣುಗೋಲ್**, ಉಣುಗೋಲು (ನಾ). ಮರದ ದಿಮ್ಮಿ ಅಥವಾ ಹಲಗೆಗೆ ರಂಧ್ರವನ್ನು ಮಾಡಿ ಆಕಡೆ ಈಕಡೆ ಸರಿದಾಡಿಸಲು ಬರುವಂತೆ ಸೇರಿಸಿದ ಗಳು: ತಡಿಕೆ ಗೋಡೆಯನಿಟ್ಟು, ಬೆಳಕಂಡಿಯುಂ ಬಿಟ್ಟು ಹುತ್ತದೆರೆಯಂ ಮೆತ್ತಿ, ಕಣೆನೆಯ್ದ ಬಾಗಿಲಂ ಬಲಿದು, ಸುತ್ತೆತ್ತಲುಂ ಮುಳ್ಳೊಡ್ಡನಡಕಿ, ಮೇಣ್ ತಡಬೆಯುಣುಗೋಲ್ಗಳಂಮಾಡಿ, ವಿರಚಿಸಿದರಾಶ್ರಮುವನತಿಶ್ಲಾಘ್ಯಮಂ ವನಭೋಗ್ಯಮಂ (ಶ್ರೀ ರಾ ಮಾ . ೧೯೬–೬೬). **ಉ ಣು ಗೋ ಲು**: ಬೇಲಿಯೊಡ್ಡಿಗೆ ಹಾಕಿದ್ದ ಉಣುಗೋಲನ್ನೂ ಸರಿಸಿ (ಮಲೆಮ. ೨೩೦); ಮನೆಯ ಉಣುಗೋಲು ದಾಟುವಾಗ (ಚಾಳಿವೈ. ೯೭). [ಉಣು₀ + ಕೋಲ್₁]

**ಉಣುಗೋಲು** 'ಉಣುಗೋಲ್' ನೋ.

**ಉಣುಮನೆ** (ನಾ). ಊಟದ ಮನೆ: ಬಂದನನಿತರೊಳ್ ಸಾರಣಂ ರಣವಾರ್ತೆಯಂ ತಂದ ಚಾರನಂ ತರವೇಳ್ದನುಣುಮನೆಗೆ (ಶ್ರೀ ರಾ ಮಾ . ೬೫೫–೩೪೪). [ಉಣು (< ಉಣ್) + ಮನೆ]

**ಉಣೆ** (ನಾ). ಋಣಚಿಹ್ನೆ (–).
[← ಮರಾ. ಉಣೇ < ಪ್ರಾ. ಊಣ < ಸಂ. ಊನ]

**ಉಣ್ಣಗುಳಿ** (ನಾ). ಊಟಮಾಡುವುದನ್ನೇ ಅಭ್ಯಾಸವಾಗಿ ಉಳ್ಳವನು; ಹೊಟ್ಟೆಬಾಕ: ಉಪವಾಸ ವನವಾಸಗಳಿಂದ ತೊಳಲುತ್ತ ಬಳಲುತ್ತ ಮರುಗುವ ಮಾನವ ಬಾಂಧವರನು ಧ್ಯಾನಿಸದೆ, ಮನ್ನಿಸದೆ, ಆಟ್ಟುಂಬ ಉಣ್ಣಗುಳಿ ನಾನೆತ್ತ (ಅಂತರಾ. ೪). [ಉಣ್ + –ಕುಳಿ₃]

**ಉಣ್ಣವಳಿ** (ನಾ). ನ್ಯೂನತೆಯಿಲ್ಲದಿರುವುದು; ಹಿರಿದು; ದೊಡ್ಡದು: "ಉಣ್ಣವಳಿಯೆಂದು ಪಿರಿದು" (ಶಮುದ. ನ.ಪರಿ.೨); "ನೀಡು ಸೋಡಂಬಾಡ ಮೆಂದುಣ್ಣವಳಿಯೆಂದೆನೆ ಪಿರಿದೆನಿಪ್ಪರ್ಥಮಕ್ಕುಂ" (ಕಬ್ಬಕೈ. ೮೮). [?]

**ಉಣ್ಣಿ**, ಉಣ್ಣೆ₁ (ನಾ). ದನಗಳ ಮೈಗೆ ಅಂಟಿಕೊಂಡು ರಕ್ತವನ್ನು ಹೀರಿ ಜೀವಿಸುವ ಒಂದು ಬಗೆಯ ಕೀಟ: "ವ್ರಣಾಶನಮೆನಲ್ಕುಣ್ಣಿ" (ಮಂಗರಾ. ೪೯–೧೪); ಉಣ್ಣಿ ಕೆಚ್ಚಲು ಹತ್ತಿ ಉಂಬುದೇ ನೊರೆಪಾಲ ಪುಣ್ಯಕ್ಷೇತ್ರದಲ್ಲಿ ಹುಟ್ಟಿ ಉಣ್ಣದವನು ಆ ಉಣ್ಣಿಯಿಂದ ಕ ರ ಕ ಷ್ಟ ರಾಮನಾಥ (ದೇ ವಾ ವ. ೪೧–೭೯); ಕೆಚ್ಚಲು ಕಚ್ಚಿದ ಉಣ್ಣಿ ಬಲ್ಲುದೇ ಕ್ಷೀರದ ರುಚಿಯನು (ಮಡಿಮಾ. ೧೩–೧೬). **ಉಣ್ಣೆ₁**: ಉಣ್ಣಿ [ಪಾಠಾಂ. ಉಣ್ಣೆ] ಕೆಚ್ಚಲೊಳಿರ್ದು ಉಣ್ಣದದು ನೊ ರೆ ವಾ ಲ ಪುಣ್ಯವ ಮಾಡಿ ಉಣಲ್ಲೊಲದವನಿರವು ಉಣ್ಣೆ [ಪಾಠಾಂ. ಉಣ್ಣಿ] ಗೂ ಕಷ್ಟ (ಸರ್ವಜ್ಞ. ೬೬೦); ಕರುವಿಗೆ ಮೈತುಂಬ ಉಣ್ಣೆ ಹತ್ತಿಬಿಟ್ಟಿದೆ (ರೂಢಿ).
[ದೇ. ‖ ತಮಿ. ಮಲ. ಉಣ್ಣಿ; ತೆಲು. ಉನ್ನಿ; ಕೋಲಾ. ಉಣಿ]

**ಉಣ್ಣಿಸು** 'ಉಣಿಸು₁' ನೋ.

**ಉಣ್ಣೀಮೆಳೆ** (ನಾ). ಒಂದು ಬಗೆಯ ಗಿಡ; ಲಂಟಾನ: ನಮ್ಮೂರ ಬೇಲಿಗಳಲ್ಲಿ ಉಣ್ಣೀಮೆಳೆ (ಲೆಂಟಾನ್) ವಿಶೇಷವಾಗಿದ್ದು ಅದರಲ್ಲಿ ನಾನಾ ಬಣ್ಣದ ಹೂವು ಬಿಡುತ್ತಿತ್ತು (ಹುಟ್ಟಿಹ. ೧೨೭). [ಉಣ್ಣೆ₀ + ಮೆಳೆ]

**ಉಣ್ಣು** 'ಉಣ್' ನೋ.

**ಉಣ್ಣೆ₁** 'ಉಣ್ಣಿ' ನೋ.

**ಉಣ್ಣೆ₂** (ನಾ). ಕುರಿಗಳ ಮೈಮೇಲಿನ ಕೂದಲು; ತುಪ್ಪಟ: **ಪೊಳೆ** ಪಳವಟ್ಟು ತೋರ್ಪ ಕುಱಿಯುಣ್ಣೆಯ ಪಂಡೆರವೆಂಬಿವೊಂದಿ ಗೊಂದಳೆ ಸಿರೆ ಬಾಲವಂದದ ತೆರಳ್ಕೆಯಿನಚ್ಯುತನಾದಮೊಪ್ಪಿದಂ (ಸೂಕ್ತಿಸು. ೭–೬೫); ಕುಱಿಯುಣ್ಣೆಯನುಗ್ರಾಗ್ನಿಯೊಳುಱಿ ಸುಟ್ಟಾ ಬೂ ದಿ ಯೊ ಳ ಗೆ ನವಘೃತಮಂ ತಂದೆಱೆದಿಕ್ಕೆ (ಅ ಶ್ವ ಶಾ . ೧೧–೩೯); ಹತ್ತಿಯ ಉಣ್ಣೆಯ ಹಾಗೆ ಮೆದುವಿರುತ್ತದೆ (ಮುಂಬಯಿ. ೪–೨೬); ತಾನು ಜಾರಿ ಬಿದ್ದು ಉಣ್ಣೆಯಂತಹ ನೆಲ ಅಂದ (ಗಾದೆ); ಉಣ್ಣೆಬಟ್ಟೆ ಬಣ್ಣಕ್ಕಾದೀತೆ (ಗಾದೆ).
[< ಸಂ. ಊರ್ಣಾ]

**ಉಣ್ದೇವ** (ನಾ). ಊಟದ ಅಧಿದೇವತೆ; ಆಹಾರದ ದೇವತೆ: ರಾಜಾಮಾನಸಿಂಗನು ತಟ್ಟೆಯ ಮುಂದೆ ಕುಳಿತು ಉಣ್ದೇವನಿಗೆ ಆಹುತಿಯನ್ನು ಕೊಟ್ಟು (ಅಕ್ಬರ. ೯೯). [ಉಣ್ + ದೇವ]

**ಉಣ್ಪು** (ನಾ). ಊಟಮಾಡುವುದು; ಉಣಿಸು: ನಡೆವುದು ಕುಳ್ಳು ದುವುಣ್ಪುಂ ಕುಡಿವುದು ಗೈವುದುಮತಿಯಾದೊಡೆಯುಂ ಲೋಪಿಸಿದೊಡೆಯುಂ ಮೆಯ್ಗೆ ಕೆಡುಕುಂಟಾಗುವುದರಿಯಲ್ ಪಡುಗುಂ ಮತ್ತೇ ತರ್ಕೀ ಒಡಲಲ್ಲತ್ಯಭಿಮಾನಂ ನಿನಗೆ (ಸೌನಂದ. ೯–೭); ತಿಣ್ಣಂ ಪೊರಲ್ ಬಂಡಿಯಚ್ಚಿಗೆಣ್ಣೆಯಂ ಬಳಿವಂತೆವೊಲ್ ಪ್ರಾಣಧಾರಣೆಗುಣ್ಪೆಂದು ತಿಂಗುಂ ತಿಳಿದನಾವನುಂ (ಸೌನಂದ. ೧೪–೧೨).

[ಉಣ್ + –ಪು. / ತುಳು. ಉಣ್ಪು, ಉಂಪು, ನುಪ್ಪು = ಅನ್ನ]

**ಉಣ್ಮಿಸು**, ಉಮ್ಮಿಸು (ಕ್ರಿ). ಹೊರಹೊಮ್ಮುವಂತೆ ಮಾಡು; ಹೊಮ್ಮಿಸು: ಪನಿಪುಲ್ಲಂಬುಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮುಂ ನನೆವೊಯ್ದುಣ್ಮಿಸುತುಂ ... ಓರಂತೆ ಮೆಯ್ವೆರ್ಚ ತಣ್ಣನೆ ತೀಡಿತ್ತೆನಸುಂ ಪ್ರಭಾತಸಮಯಪ್ರೋದ್ಭೂತ ಶೀತಾನಿಲಂ (ಕುಸುಮಾ. ೧–೫೨); ಮಗುದುಟಿಯಿನುಣ್ಮಿಸುವ ನುಡಿ ಚಿಗುರು (ಮಂಕುಕ. ೪೩೮). **ಉಮ್ಮಿಸು**: ಗಮ್ಮಿಸುತ ತಮ್ಮಿಸುತಲುಮ್ಮಿಸುತ ನಿಜಸ್ವಾಂತಕಿಮ್ಮೆಚ್ಚಿದಂತೆ (ಜಿನಮು. ೩೪–೫೪). [ಉಣ್ಮು + –ಇಸು$_3$]

**ಉಣ್ಮು**, ಉಮ್ಮು$_1$ (ಕ್ರಿ). ೧. ಮೇಲೇಳು; ಹೊರಸೂಸು; ಹೊಮ್ಮು; ಉಕ್ಕಿಬರು: "ಉಣ್ಮು — ಉದ್ಗತೌ" (ಶಮಧಾ); ಸೊಗಯಿಸೆ ತೊಟ್ಟ ಪೊದುಡುಗೆ ಮೆಲ್ಲೆರ್ದೆಯೊಳ್ ತಡಮಾಡೆ ಗಾಡಿ ದಿಟ್ಟಗಳೊಳನಂಗರಾಗರಸಮುಣ್ಮುವಿನಂ ನಡೆನೋಡಿ (ಪಂಪಭಾ. ೨–೧೮); ಅಗಳೊಗೆದುವು ಘಂಟೆಗಳ ಥಣಥಣತ್ಕಾರ ಅಗಳುಣ್ಮಿದವು ಕೌಸಾಳದ ಝಳತ್ಕಾರ (ಬಸರ. ೭–೧೦೪); ಕೃಕವಾಕು ನಿನದಂ ಬಿಡದುಣ್ಮುತಿರಲ್ಕೆ ಕೆಯ್ಯ ಬಾಳ್ ಬೀೞ್ತರೆ ಹೊಯ್ವುಡೆದಂತೆ ಪಂದೆಯಂ ಪಾವಡರ್ದಂತಾಗಿರೆ ಯಶೋಧರಂ ಬೆಚಗಾದಂ (ಯಶೋಚ. ೩–೨೬); ಬೀಸುವ ಮೊತ್ತದಲರ ಬೀಸಣಿಗೆಯೊಳುಣ್ಮುವ ತನಿಗಂಪಿನ ಗಾಳಿ (ಜಯಕಾ. ೪–೪೧); ಒಚ್ಚತಮುಣ್ಮುವ ಕಾಮಿನಿಯ ಕಂಠರುತಿಯ ಹೂಂಕೃತಿಯುಪಚಾರ ಮಾಗೆ (ರಾಮಾಶ್ವ. ೬೦–೧೩). ೨. ಹಿಗ್ಗು; ಉಬ್ಬು: ಸಂದ ತಿರಿಕಂಗೆ ತೊವೆ ತುಪ್ಪಂ ದೊರೆಕೊಳಲುಣ್ಮಿ ನಲಿವ ತೇಜದಿಂ (ಧರ್ಮಾಮೃ. ೯–೩೦). **ಉಮ್ಮು**$_1$: ೧. ಹಂಸನಿರೀಕ್ಷಣದಿಂದುಮ್ಮಿದಮ್ಮುತವ ಹಂಸನಂತೀಂಟಿದಣಿವನು (ಭರಚ. ೨–೨೯); ಜುಮ್ಮೆನುತಿಹುದು ಸರ್ವಾಂಗದೊಳೆಲ್ಲಿಯು ಉಮ್ಮುತಿಹುದು ಸುಖವೊಳಗೆ (ಭರಚ. ೮–೧೧೬). [?]

**ಉಣ್ಮೆ** (ನಾ). ಇರುವಿಕೆ; ಅಸ್ತಿತ್ವ: ಕರಮುರಿದಪ್ಪ ಬಾಧೆಗಳಿನೋವನೆ ಕೂಗಿರೆ ಬೆರ್ಚಿ ಕಂಪಿಸುತ್ತಿರೆ ಪಿಡಿದೊತ್ತಿ ಕಟ್ಟಿ ಬಿಡದೊಯ್ಯನೆ ಕೊಲ್ವರನೆಯ್ದೆ ಕಂಡೊಡೋಸರಿಸದೆ ಕಷ್ಟನೀ ಖಳನ ಮುನ್ನಿನ ಸಂಚಿತ ಪಾಪಮೆಂದು ಕೊಕ್ಕರಿಸುವ ಲೋಕದೊಂದುಲಿಪಿನಿಂದಱಿ ಭೂಪತಿ ಪಾಪದುಣ್ಮೆಯಂ (ಧರ್ಮಾಮೃ. ೯–೫೬).

[< ಉಳ್$_1$ + –ಮೆ$_1$. / ತಮಿ. ಉಣ್ಮೈ = ಸತ್ಯ; ಮಲ. ಉಣ್ಮ]

**ಉತ** (ಗು). ನೇಯಲ್ಪಟ್ಟ; ಹೆಣೆಯಲ್ಪಟ್ಟ; "ನೂಲಿನಿಂದ ಹೆಣೆಯಲ್ಪಟ್ಟದ್ದು" (ಗಂಗಾಮು. ೩೯). [< ಸಂ. ಊತ]

**ಉತಳಗಿ** (ನಾ). (ಉಕ) (ಕಣದಲ್ಲಿ) ಕಾಳನ್ನು ತೂರುವ ಬುಟ್ಟಿ: ಉತಳಗಿ ತುಂಬಿಕೊಡು (ರೂಢಿ). [?]

**ಉತಳಫುಲ್ಗರ** (ನಾ). ಜೋಳದಲ್ಲಿ ಒಂದು ವಿಧ: ಈ ಜಿಲ್ಲೆಯಲ್ಲಿ ಒಟ್ಟಿಗೆ ೧೮ ಜಾತಿಯ ಜೋಳ ಬೆಳೆಯುವುದು ... ೧೬ ಜಾತಿಗಳು ಮುಂಗಾರಿಯ ಪೈರುಗಳಿವೆ. ಅವುಗಳ ಹೆಸರುಗಳು ... ಉತಳಫುಲ್ಗರ, ಬಿಜಕರ, ಕಾಗಿಜೋಳ (ಕಭಾಗ. ೨೭೧). [?]

**ಉತಾರ್‌ಪತ್ರಿಕೆ** (ನಾ). ಕೆರೆಯ ಕೆಳಗಿರುವ ಒಂದು ನಿರ್ದಿಷ್ಟ ಜಮೀನು ಆ ಕೆರೆಯ ನೀರಿನಿಂದ ಅಥವಾ ಬೇರೆಯ ಮೂಲಗಳಿಂದ ವ್ಯವಸಾಯಕ್ಕೆ ಒಳಪಡಬಲ್ಲುದೇ ಇಲ್ಲವೇ ಎಂಬುದನ್ನು ಸೂಚಿಸುವ ಮೋಜಣಿ ಪತ್ರ, — ದಾಖಲೆ (ಮೈಗೆಜೆ. IV, ೭೮೮).

[ಉತಾರ್$_0$ (< ಉತಾರು) + ಪತ್ರಿಕೆ]

**ಉತಾರಿಸು** (ಕ್ರಿ). ಪ್ರತಿ ಇಳಿಸು; ನಕಲುಮಾಡು: ಪ್ರಸಿದ್ಧವಾಗಿ ಇರುವ ಕಾಗದದ ಯಥಾರ್ಥವಾಗಿ ಇರುವ ನಕಲು ನಮಗೆ ಬಂದು ಸೇರಿತು. ಆದರೆ ನಕಲು ಫಾರ್ಶಿ ಬರಹದಲ್ಲು ಉತಾರಿಸಿ, ಈ ಕಾಗದದ ಸಂಗಡ ಕಳುಹುತ್ತಾ ಇದ್ದೇವೆ (ರಾಜೇಂದ್ರ. ೧೬೦). [ಉತಾರು + –ಇಸು$_3$]

**ಉತಾರು** (ನಾ). ೧. ಇಳಿಜಾರು: ದಾರಿಯಲ್ಲಿ ಚಡಾವು ಉತಾರು ಇಳಾಲು ಬಹಳ ಜಾಸ್ತಿ (ಬೈಸರ್ವೆ. ೧೨೦). ೨. "ಕೆಳಗಿಳಿಯುವುದು; ರೋಗಕ್ಕೆ ಪ್ರತಿ ಔಷಧಿ" (ಜಾನಕೋ. ೨೦). ೩. ನಕಲು; ಪ್ರತಿ: ಆಗ ಕಮ್ಮಿಶನರ ಸಾಹೇಬರು ಆ ಪತ್ರಿಕೆಗಳ ಉತಾರುಗಳನ್ನೂ ಈ ಮನವಿಯನ್ನೂ ದ್ವಾರಕಾನಾಥನ ಕೈಯಲ್ಲಿ ಕೊಟ್ಟು "ಇದರ ಅಭಿಪ್ರಾಯ ವೇನು?" ಎಂದು ಕೇಳಿದರು (ವಿಧಿವೈ. ೧೩೬).

[← ಮರಾ. ಹಿಂ. ಉತಾರ್]

**ಉತಾವಳಿ**, ಉತಾವಿಳ (ಗು). ೧. (ಉಕ) ದುಡುಕಿನ; ಕುತೂಹಲದ; ಆತುರದ; ಗಡಿಬಿಡಿಯ: ಕೂಡಲೆ ಉತಾವಳಿ ಸ್ವಭಾವದ ತಿರುವೆಂಕಟನು ಅವರನ್ನು ಕುರಿತು (ಮಾಧವ. ೨೩೭); ಗಂಡಸರ ಮುಂಗೈ ಹಿಡಿದು ಕೇಳುವ ಉತಾವಳಿ ಸ್ವಭಾವದವರಾಗಿರಲಿಲ್ಲ (ಹಂಸಾ. ೬೪); ಸಣ್ಣ ಹುಡುಗಿ, ಉತಾವಳೀ ಸ್ವಭಾವ (ಗಂಮಾಯಿ. ೧೦೪). (ನಾ). ೨. ದುಡುಕು; ಗಡಿಬಿಡಿ; ಆತುರತೆ: ಅಲಸ್ಯವೆ ವಿಷವೊ ಅಥವಾ ಉತಾವಳಿ ಹಾಸ್ಯವೊ ಕಾಲಾನುಸಾರ ನಾ ಕಂಡು ಕಾಣದಿರಲೋ ಕಾಠಿನ್ಯವೆ ಮಾಡುತಿರಲೋ (ಶ್ರೀಕೃಪಾ. ೮); ಉತಾವಳಿಯಿಂದ ಮಾಡಿದ ಕೆಲಸವು ಎಂದೂ ಪೂರ್ಣವಾಗುವುದಿಲ್ಲ (ಮಂಜುಕ. ೧೧೮). **ಉತಾವಿಳ**: ೧. ಆದರೆ ರಾವಜೀಯವರು, ಕೂಸಿನ ಅಜ್ಜಿ, ಅರ್ಭಕನ ಪ್ರಥಮರೋದನ ಶ್ರವಣಾತುರರಾಗಿ ಬಾಣಂತಿಯ ಕೋಣೆಯ ಹೊರಬದಿಗೇ ಉತಾವಿಳರಾಗಿ ನಿಂತಿದ್ದರು (ದೀಪಹ. ೪). 'ಉತ್ತಾವಳ' ಪರಾ.

[← ಮರಾ. ಉತಾವಳಾ, ಉತಾವಿಳಾ, ಉತಾವೀಳ್; ಪ್ರಾ. ಉತ್ತಾವಲ]

**ಉತಾವಳಿತನ** (ನಾ). ದುಡುಕುವಿಕೆ; ಗಡಿಬಿಡಿಮಾಡುವಿಕೆ: "ಏನು? ಏನು? ಏನೆನ್ನುವಿರಿ, ನರಸಿಂಗರಾಯರೇ?" ಮನೋಹರನು ಉತಾವಳಿತನದಿಂದ ಮಾತನಾಡಿದನು (ತುಬ್ಬಣ್ಣ. ೪೮); ಉತಾವಳಿತನದಿಂದ ಯಾವ ಲಾಭವಿಲ್ಲೆಂಬುದು ನಿನಗರಿಯದೇ (ಮೋಜೀವ. ೭).

[ಉತಾವಳಿ + –ತನ]

**ಉತಾವಿಳ** 'ಉತಾವಳಿ' ನೋ.

**ಉತುಕೋಚ** (ನಾ). ಗಟ್ಟಿಯಾಗಿ ಕೂಗುವುದು; ಉಗ್ಗಡಣೆ: ಹಿತವ ಬಂದನು ಹಿರಿಯ ಮಂತ್ರೀಶ ಬಂದನು ... ಪರಮ ವಿಶ್ವಾಸಿ ಭಂಡಾರಿ ಬಂದನೆಂದು ಉತುಕೋಚ ಮಾತುಗಳಾಡುತ್ತಿದೇನು ನಿನ್ನತಿರೇಕ ಭಂಡಾರವನೆಯ ಕನ್ನವ ಕೊಱೆದ ಪತಿತ ತಸ್ಕರನ ಸತ್ಕರಿಸಿ ಮಗುಳೆಮ್ಮರ್ಥವಿತ್ತು ಬಿಡುವರ್ಥವೇನೈ (ಸಿಂಗಿರಾ. ೧೭–೧೫).

[< ಸಂ. ಉತ್ಕೋಚ]

**ಉತುಕೋಚಿ** (ನಾ). ವಕ್ರನಾದವನು; ಎಡವಟ್ಟಾದವನು: ಅಂತಿಂತು ಪ್ರತಿವಾದಮಂ ಮಾಡಿಕೊಂಡಿಹಾಭ್ಯಂತರವಱಿಯದಿಹಿರೊ ಉತುಕೋಚಿಗಳ ವಿಕಲ್ಪವೊ ದಂಡನಾಥಯೆಂದು ಅಂತರಾಂತರವ ಭೂಪರ ಕೇಳೆ (ಸಿಂಗಿರಾ. ೩೩–೧೧). [< ಸಂ. ಉತ್ಕೋಚಿನ್]

**ಉತುಪತಿ** (ನಾ). ೧. = ಉತ್ಪತ್ತಿ ೧ : ಆಶ್ಚರ್ಯದಾಕಾರಂಗಳಂ ಧರಿಸಿಯುತುಪತಿ ಸ್ಥಿತಿ ಲಯ ಸಮುದ್ರದೊಳ್ (ವಿಕೋಪು. ೨–೩೮). ೨. ಉತ್ಪತ್ತಿಯಾದ ವಸ್ತು : ಸುತ ವಿಶ್ವನೇ ಭೂತತತಿಗಳಿಂದುತು ಪತಿಗಳಖಿಳತನುವಾ ತನುವನೆ ಪತಿಕರಿಸುತಲ್ಲಿ ಪೂರಿತನಾಗಿ ದೇಹಹಂಕೃತಿ ವೆತ್ತನಂ ವಿಶ್ವನೆನಲಾಗದೇ (ಮನೋವಿ. ೬–೨೬).

[< ಸಂ. ಉತ್ಪತ್ತಿ]

**ಉತುಪಾತ** (ನಾ). = ಉತ್ಪಾತ ೩ : ಬಂದವೇಕುತುಪಾತ ನೀವೆನಗೊಂದು ಬಾರಿದನರಿಪಬೇಕು (ಪ್ರಹ್ಲಾಚ. ೧೩–೨೯). [< ಸಂ. ಉತ್ಪಾತ]

**ಉತ್ಕ** (ಗು). ಕುತೂಹಲದಿಂದ ಕೂಡಿದ; ಉತ್ಸುಕವಾದ : ಉತ್ಕ ಶಿಖಂಡಿತಾಂಡವ ಮನೋಹರಮುಜ್ವಲರತ್ನರಾಜಿರಾಜತ್ಕಟಕಂ (ಆದಿಪು. ೧–೬೩); ಪೊರ್ದಿದನಬ್ಜಷಂಡಸಂಛನ್ನಮನುತ್ಕ [ಪಾಠಾಂ. ಉದ್ಧ] ಹಂಸ ಮಧುರಸ್ವನಮಂ ಬನಮಂ ರಘೂದ್ವಹಂ (ಪಂರಾಮಾ. ೮–೨).

[ಸಂ.]

**ಉತ್ಕಂಠ** (ಗು). ೧. ಮೇಲಕ್ಕೆತ್ತಿದ ಕತ್ತುಳ್ಳ. ೨. ವಿಶೇಷವಾದ ಆತುರದಿಂದ ಕೂಡಿದ; ತೀವ್ರವಾದ ಬಯಕೆಯುಳ್ಳ: ಅಂತುತ್ಕಂಠ ನಾಗಿರ್ದುಂ (ಶಾಂತಿಪು. ೬–೬೧ ವ); ಅಂತು ಮೆಚ್ಚುಗೊಟ್ಟು ಚಿತ್ರಪಟಮಂ ನೋಡಲುತ್ಕಂಠರಾದ ಸಭಾಜನಕ್ಕೆ ನೀಡುವುದುಂ (ಮಲ್ಲಿಪು. ೫–೪೫). (ನಾ). ೩. ಎತ್ತರವಾದ ಧ್ವನಿ; ಗಟ್ಟಿಯಾದ ಧ್ವನಿ : ಈಚೆಗೆ ಭಾರತದಲ್ಲಿ 'ಭಾವೈಕ್ಯತೆ'ಯ ಅಗತ್ಯವನ್ನು ಕುರಿತು ನಾಯಕರು ಉತ್ಕಂಠದಲ್ಲಿ ಸಾರುತ್ತಿರುವರು (ಶಿಕ್ಷದ. ೬೪೩). [ಸಂ.]

**ಉತ್ಕಂಠತೆ** (ನಾ). ೧. ಕತ್ತನ್ನೆತ್ತುವುದು. ೨. ಗಟ್ಟಿಯಾಗಿ ಕೂಗು ವುದು. ೩. ಆತುರ; ತವಕ: ಮತ್ಕುಲ ವಿಜಯನಾಟ್ಯಚಮತ್ಕೃತಿಯಂ ನೋಡಿ ಕಣ್ಗಳಂ ತಣಿಪುವೆನೆಂಬುತ್ಕಂಠತೆಯಿಂದ . . . ಇನನುದಯಿಸಿದಂ (ಪಂರಾಮಾ. ೧೩–೧೧೨). ೨, ೩ : ಉತ್ಕಂಠತೆ ಮಯೂರಂಗಳೊಳ್ . . . ಪಂಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨–೧ ವ). [ಸಂ. ಉತ್ಕಂಠತಾ]

**ಉತ್ಕಂಠಿತ** (ಗು). ೧. ಅತಿಯಾದ ಕುತೂಹಲದಿಂದ ಕೂಡಿದ, —ಆಸಕ್ತಿಯಿಂದ ಕೂಡಿದ; ಉತ್ಸುಕ : ಬಂದ ಶರತ್ಕಾಲಶ್ರೀಯ ನುತ್ಕಂಠಿತಹೃದಯನಾಗಿ ಮೆಚ್ಚಿ ನೋಡುತ್ತುಂ (ಪಂಪಭಾ. ೬–೬೧ ವ); ಸೌಮಿತ್ರಿಯೋಲಂತೆ ರಾಮಸೀತಾಪುಣ್ಯಸಂಗಮಂಗಲ ತುಂಗ ಶೃಂಗವನ ರಂಗಮಂ ಚರಿಸಲಾನುತ್ಕಂಠಿತಂ (ಶ್ರೀರಾಮಾ. ೧೨೫–೬). ೨. ಚಿಂತೆ ಯಿಂದ ಕೂಡಿದ; ಕಳವಳದಿಂದ ಕೂಡಿದ : ಉತ್ಕಂಠಿತಳಾಗಿ ನಾಲಗೆಯನ್ನು ತಡೆಹಿಡಿಯುವುದಾಗದೆ ಪ್ರಮೀಲೆ ಕೇಳಿದಳು "ವಿಷ್ಣು ಆರೋಗ್ಯವಾಗಿದ್ದಾನೇನು ?" (ಸಮಜೀ. ೧೨೨೯). (ನಾ). ೩. ಲವ ಲವಿಕೆಯಿಂದ ಕೂಡಿದವನು : "ಉತ್ಕಂಠಿತಂ ಲವಲವಿಕೆಯುಳ್ಳವ ನಕ್ಕುಂ" (ಮಂಗರಾ. ೬೨–೨೧). [ಸಂ.]

**ಉತ್ಕಂಠೆ** (ನಾ). ೧. ಅತಿಯಾದ ಉತ್ಸುಕತೆ : ವಿಜ್ಞಾಪನೋತ್ಕಂಠೆಯಿಂ ಬರುತ್ತಿರ್ದಳ್ ಪ್ರತೀಹಾರಿ (ಕಾದಂಪೂ. ೨೩). ೨. ವಿಯೋಗದಿಂದ ಉಂಟಾಗುವ ದುಃಖ, —ಉದ್ವಿಗ್ನತೆ : "ಉತ್ಕಳಿಕೆ ರಣರಣಕಮಾ ಯಲ್ಲಕಂ ವಿರಹಮುತ್ಕಂಠೆ ರತಿವಿಯೋಗಂ ಮನೋಲೇಖನಂ ಹೃತ್ಕಂಪ ಮೆನಲಾತುರಂ" (ಮಂಗರಾ. ೧೩೨–೨೪). ೩. ಉತ್ಸುಕತೆಯುಳ್ಳವಳು : ಕಾಡುಗೋಡೆತ್ತರದೊಳಿದ್ದ ಪುಲ್ಮನೆಯೊಳಿರ್ದು ಸೀತಾದೇವಿ ತಾನುತ್ಕಂಠೆ, ನೋಡುತಿರ್ದಳ್ ತರಂಗೋಲ್ಲಾಸಮಂ (ಶ್ರೀರಾಮಾ. ೩೩೧–೬).

[ಸಂ. ಉತ್ಕಂಠಾ]

**ಉತ್ಕಂಪ** (ನಾ). ನಡುಕ; ಅಲುಗಾಟ : ಉತ್ಕಂಪ ದರಿದ್ರಮಧ್ಯಂ . . . ಗಾಡಿಯನೀಯೆ ಸೌಂದರಿಯರ್ (ಆದಿಪು. ೮–೬೦). [ಸಂ.]

**ಉತ್ಕಂಪಿತ** (ಗು). ನಡುಗುವ; ಅಲ್ಲಾಡುವ : ಮರನಂ ಕಿತ್ತು ನಗಂಗಳಂ ನೆಗಪಿ ರೌದ್ರಾಕಾರದಿಂ ಬರ್ಪ ವಾನರರಂ ಕಂಡು . . . ಶುದ್ಧಾಂತ ಕಾಂತಾಜನಂಬೆರಸುತ್ಕಂಪಿತನೋಡಿ ದಿವ್ಯ ಮುನಿ ಪಾದಾಂ ಭೋಜಮಂ ಪೊರ್ದಿದಂ (ಪಂರಾಮಾ. ೧೦–೧೧೯); ಕಳಹಂಸೀಯಾನ ಮುತ್ಕಂಪಿತಕುಚಭರಸಂವ್ಯಾನಮಾಕೇಕರತ್ವಿಡ್ವಳಿತೋದ್ಯಾನಂ (ಚಂದ್ರಪು. ೬–೯೬). [ಸಂ.]

**ಉತ್ಕಚ** (ಗು). ನೆಟ್ಟಗೆ ನಿಂತ ತಲೆಕೂದಲಿನ; ಕೆದರಿದ ಕೂದಲುಳ್ಳ : ಪೃಷತ್ಕಂಗಳ್ ಕೋಟಿಗಣಿತದಿಂದುಜುವಿನಮೂರ್ದುತ್ಕಚ ದಿತಿಜನನುಜದೆ ಘಟೋತ್ಕಚನಂ ಬಿಟ್ಟು ಮೂರ್ಛೆವೋಪಿನಮೆಚ್ಚಂ (ಪಂಪಭಾ. ೧೧–೮).

[ಸಂ.]

**ಉತ್ಕಟ** (ಗು). ೧. ಹೆಚ್ಚಾದ; ಪ್ರಬಲವಾದ: ಭವದೀಯ ರೂಪ ಲಂಪಟ ವಿಟರಂ ಮರುಳ್ಗೊಳಿಸಿತುತ್ಕಟಮೋಹತಮಃಪಟಂ ಪಟಂ (ಆದಿಪು. ೩–೯೦); ಶಾಂತಲೆಯ ಕಥೆಯನ್ನು ಬರೆಯುವ ಇಚ್ಛೆ ಉತ್ಕಟವಾಯಿತು (ಶಾಂತಲಾ. ೪ ಅಂಕಿ). ೨. ಉತ್ಕೃಷ್ಟವಾದ; ಶ್ರೇಷ್ಠವಾದ. ೩. ಅತ್ಯುಗ್ರವಾದ. ೪. ಸೊಕ್ಕಿದ; ಮದಿಸಿದ. ೫. ಉಲ್ಬಣವಾದ; ವಿಷಮವಾದ: ಕಾಯಿಲೆ ಉತ್ಕಟವಾಗಿದೆ (ರೂಢಿ). (ನಾ). ೬. ಆಧಿಕ್ಯ; ಪ್ರಾಬಲ್ಯ; ಅತಿಶಯ: ಇದೆಲ್ಲಿಯುತ್ಕಟದ ಕಂಪು (ನಂಬರ. ೧೨–೧೦೩); ಸಮಸ್ತ ಜನರುತ್ಕಟವಿದೆನುತಂ ಹೊಗಳುತ (ಬಸವು. ೫೧–೬೨); ರೋಗಾದಿಗಳು ಹೊದ್ದದ ಉತ್ಕಟದ ವರವೀಯಬೇಕೆನೆ (ಕಾಶಿರಾ. ೪೪–೩೪); ವಾದಿಕೋಳಾಹಳನು ಶಿವತತ್ವಾದಿ ಕೋವಿದ ವಕ್ತ್ರಪಾದ ಗಣಾ ಧಿನಾಯಕ ಜಯಿಸಿದಂ ಪರಸಮಯದುತ್ಕಟವ (ಶಂಕದಾ. ೧೧ ಸೂಚನೆ). ೭. ಉಗ್ರತೆ : ಆರ್ಭಟಿಸಿ ನೂಕುವ ಸಾರಥಿಯನಾ ಧ್ವಜಪತಾಕೆಗಳ ಲಟಕಟಿಸಿ ಲಳಿಯೇಱಿ ತಱಿದುತ್ಕಟವ ತೋಱಿದನು (ತೊರರಾ. ೩–೬–೪೫). ೮. "ಲವಂಗಪಟ್ಟೆ (ದಾಲ್ಚಿನ್ನಿ)" (ಅಮರ. ಟೀಕೆ). ೯. ಪ್ರಬಲವಾದ ಇಚ್ಛೆ (ಕ). ೧೦. ಹೆಚ್ಚಿನ ದುಃಖ (ಕ). [ಸಂ.]

**ಉತ್ಕಟತೆ** (ನಾ). ೧. ಹೆಚ್ಚಳಿಕೆ; ಆಧಿಕ್ಯ: 'ಮಲ್ಲಿನಾಥಪುರಾಣ'ಕ್ಕಿಂತ 'ಪಂಪರಾಮಾಯಣ'ದಲ್ಲಿ ಮಹಾಕಾವ್ಯದ ಉನ್ನತಿ—ಉತ್ಕಟತೆಗಳು ಹೆಚ್ಚು ತೋರಿವೆ (ಕಸಾಚ. ೧೩೦). ೨. ಪ್ರಬಲವಾದ ಇಚ್ಛೆ; ತೀವ್ರ ವಾದ ಆಸೆ : ಕಲಿಯಬೇಕೆಂಬ ಉತ್ಕಟತೆಯು ನಿನ್ನಲ್ಲಿ ಇಲ್ಲವೆ? ಅನುಕೂಲತೆಯ ಮೇಲೆ ನಿನ್ನ ಉತ್ಕಟತೆಯನ್ನು ಅಳೆಯಬೇಕಲ್ಲವೇ? (ಜಯಂತ. ೮೯). [ಸಂ. ಉತ್ಕಟತಾ]

**ಉತ್ಕಟತ್ವ** (ನಾ). ಅತಿಯಾದ ಪ್ರಯಾಸ, —ಕಷ್ಟ : ಲಬ್ಧಚೇತನ ನೆಂದಾತನ ಪಕ್ಕದಿಂದುಸಿರದಿರ್ದಾನಾಗಳೇನಾನುಮೊಂದು ನೆವಂ ಮಾಡಿ ಮಹೋತ್ಕಟತ್ವದೆ ದಿಟಂ ಬಂದೆಂ ಚಕೋರೇಕ್ಷಣೇ (ಕಾದಂಪೂ. ೮೬೨).

[ಸಂ.]

**ಉತ್ಕಟವೃತ್ತಿ** (ನಾ). ತೀವ್ರತೆಯನ್ನು ಪಡೆದ ಸ್ಥಿತಿ : ಮೃದುಪದ ಬಂಧಮುಂ ಸುರುಚಿರಾರ್ಥಮುಮುತ್ಕಟವೃತ್ತಿಯಾಗಿ ಕೀವಿದ ರಸಮುಂ ಮನಂಗೊಳಿಪ ಭಾವಮುಂ (ಪುಷ್ಪಪು. ೧–೪೦).

[ಉತ್ಕಟ + ವೃತ್ತಿ]

**ಉತ್ಕಟಿಸು** (ಕ್ರಿ). ೧. ತೀವ್ರತೆಯನ್ನು ಪಡೆ; ಹೆಚ್ಚಾಗು : ಪಟುತರದ ಬಾಹುಪ್ರತಾಪದ ಪುಟವನೆತ್ತದೆ ಮಾಣನೆನಲುತ್ಕಟಿಸುತಿರ್ದುದು ರೌದ್ರ ವೀರಾಭ್ಯುದಯ ಸನ್ನಾಹ (ಕುಮಾವ್ಯಾದ್ರೋ. ೧೯–೧೧); ಚಟಚಟ ನಿಸ್ವನಂ ನಿಮಿರೆ ಕೆಂಗಿಡಿ ಸೂಸೆ ಪೊದಳ್ದು ಪೊಣ್ಮುತುತ್ಕಟಿಸಿ ಕಡಂಗಿ ಪೊಂಬೆಳಗ ನಾಳ್ಪುರಿಮಾಲೆಯನಪ್ಪಿ (ವೃಷವಿ. ೧೩–೪೬). ೨. ಉದ್ರೇಕಗೊಳ್ಳು : ಸಹದೇವನುತ್ಕಟಿಸಿ (ಗದಾಯು. ೬–೩ ವ).

[ಉತ್ಕಟ + -ಇಸು]

**ಉತ್ಕರ** (ನಾ). ೧. ರಾಶಿ ; ಸಮೂಹ ; ಗುಂಪು : ಪಿರಿದುಂ ದೃಢತರ ಮುಷ್ಟಿಯ ಭರದಿಂ ಮುನ್ನುಂಡ ನೀರನುಗುಳ್ವುದೆಂಬಂತರಿಕರಿಮುಸ್ತಕ ಮುಕ್ತೋತ್ಕರದಂತುರಮೆಸೆವುದಾ ನೃಪಾಲಕೃಪಾಣಂ (ಕಾದಂಪೂ. ೧೨) ; ತಿಮಿತಿಮಿಂಗಿಳೋತ್ಕರ ಜಳೂಕವ್ಯಾಳಕೋಳಾಹಳಧ್ವಾನವೆರಸಿ ಜಲನಿಧಿ ಮೆಱೆದುದು (ಹಚಕಾ. ೧-೩೩) ; ಕದಳಿ ಸಮುದಯಂ ನಾಳಿಕೇರಾವನೀ ಭೂನಿಕರಂ ಚೂತೋತ್ಕರಂ ದಾಡಿಮತತಿ ಪನಸಶ್ರೇಣಿ ಜಂಬೀರಜಾಳಂ (ಪುಷ್ಪಪು. ೯-೧೫). ೨. ಸೀಳುವುದು ; ಗರಗಸ ಮೊದಲಾದುವು ಗಳಿಂದ ಕಟ್ಟಿಗೆ ಮೊದಲಾದುವುಗಳನ್ನು ಕತ್ತರಿಸುವುದು : ಉತ್ಕರ ಚೂರ್ಣಖಂಡ ಚೂರ್ಣಿಕಾಪ್ರತರ ಅನುಚಟನ ವಿಕಲ್ಪದಿಂ ಭೇದಂ ಷಡ್ವಿಧಂ . . . ಅಲ್ಲಿ ಕರಪತ್ರಾದಿಕೃತಕಾಷ್ಠಾದಿವಿದಾರಣಮುತ್ಕರಂ (ತತ್ತ್ವಪ್ರ. ೨೪೪). ೩. ಒಂದು ಮರದ ಹೆಸರು : ವರುಣನ ಕುಂತದುತ್ಕರದ ಕೇತುವ ಕೇಕಿ ವಿಳಾಸದರ್ಭಕೋದರೆಯ (ರಾಜಶೇ. ೫-೫೭) ; "ಉತ್ಕರದ —ದೊಡ್ಡದರ (ಮುಕ್ಷವೆಂಬ) " (ರಾಜಶೇ. ಟೀಕೆ). [ಸಂ.]

**ಉತ್ಕರಣ** (ನಾ). ಕೆತ್ತನೆ ಕೆಲಸ : ಇಂದ್ರಜಾಲಮೆಱಕಂ ಲೆಪ್ಪಂ ಶಿಲಾಕರ್ಮಮುತ್ಕರಣಂ ಚಿತ್ರವಿವಕ್ಷೆ ವಾಸ್ತು ಶಕುನಜ್ಞಾನಂ ರಥಾರೋಹಣಂ . . . ಅಖಿಲವ್ಯೂಹೋತ್ಕರಮೆಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದ ನತಿಕೌಶಲಮಂ (ಪುಷ್ಪಪು. ೪-೫೯, ೬೦). [ಸಂ.]

**ಉತ್ಕರುಷ** (ನಾ). = ಉತ್ಕರ್ಷ ೧ : ವಿರಚಿಸಿತು ಪಟ್ಟಾಭಿಷೇಕೋತ್ಕರುಷ ಮಂತ್ರಾಕ್ಷತೆಯ ಮಳೆಗಳ ಕರೆದರವನೀಸುರರು (ಕುವ್ಯಾಕ. ೧-೨೯).

[< ಸಂ. ಉತ್ಕರ್ಷ]

**ಉತ್ಕರ್ಷ** (ನಾ). ೧. ಹೆಚ್ಚಳ; ಮೇಲ್ಮೆ : ಸೂರದತ್ತನಾತ್ಮೀಯಾತ್ಮಜನ ಜನ್ಮೋತ್ಸವಾಕರ್ಣನದೊಳತ್ಯಂತ ಹರ್ಷೋತ್ಕರ್ಷಾಂತರಂಗನಾಗಿರಾಗಿಸಿ (ಸುಕುಮಾ. ೧೦-೨೭ ವ) ; ಶೀರ್ಷಾಭರಣಂ ಧರೆಗುತ್ಕರ್ಷವಿಳಾಸನದ ಭೂಮಿ . . . ರಾಜಪುರಂ (ಯಶೋಚ. ೧-೨೭) ; ಅವು ಕೇವಲ ಉತ್ಕರ್ಷವನ್ನು ಕೊಡತಕ್ಕುವು (ಭಾರವಿಾ. ೧೩೭). ೨. ಏಳಿಗೆ; ಅಭಿವೃದ್ಧಿ : ಪೃಥ್ವಿಯೇ ವಿಶ್ವದ ಕೇಂದ್ರವೆಂದೂ ಮಾನವನ ಉತ್ಕರ್ಷವೇ ಸೃಷ್ಟಿಯ ಗುರಿಯೆಂದೂ ಅವರು ಭಾವಿಸಿದರು (ಮುಕ್ತಾರ. ೫ ಪೀಠಿಕೆ) ; ಯಾಂತ್ರಿಕೋದ್ಯಮಗಳ ಉತ್ಕರ್ಷವನ್ನು ಟೀಕಿಸಿ ಸರೋವರಪ್ರಾಂತದಲ್ಲಿಯ ಕೈಗಾರಿಕೆಗಳನ್ನು ಪ್ರೋತ್ಸಾಹಿಸಲು ರಸ್ಕಿನ್ನನು ಶಕ್ತಿಮಿಾರಿ ಹವಣಿಸಿದ್ದ (ಸಮಜೀ. ೧೦೭೯). ೩. [ಯೋಗ] ಸಪ್ತಪ್ರಾಣಾಯಾಮಗಳಲ್ಲಿ ಒಂದು: ಪ್ರಾಕೃತ ವೈಕೃತವೆಂದು ದ್ವಿವಿಧಮಾದ ರೇಚಕ ಪೂರಕ ಕುಂಭಕ ಉತ್ಕರ್ಷ ಅಪಕರ್ಷ ಶೂನ್ಯ ಉತ್ಕ್ರಾಂತಿಯೆಂಬ ಸಪ್ತ ಪ್ರಾಣಾಯಾಮ ಲಕ್ಷಣಂಗಳಂ (ವಿವೇಕ. ೧೫೧). [ಸಂ.]

**ಉತ್ಕರ್ಷಣ** (ನಾ). = ಉತ್ಕರ್ಷ ೨ : ಒಮ್ಮೆ ರೂಢಿಸಿದ ಯಾವ ವರ್ತನೆಯೇ ಆಗಲಿ ಜೀವನದಲ್ಲಿ ನಿತ್ಯ ಉತ್ಕರ್ಷಣವಾಗುತ್ತ ಹೋಗಬೇಕು (ಶಿಕ್ಷದ. ೪೩೫). [ಸಂ.]

**ಉತ್ಕರ್ಷಣೆ** (ನಾ). = ಉತ್ಕರ್ಷ ೨ : ತಾಂತ್ರಿಕ ಮತ್ತು ವೈಜ್ಞಾನಿಕ ಶಿಕ್ಷಣದ ಉತ್ಕರ್ಷಣೆ . . . ಗಣನೀಯ ಪ್ರಗತಿ ಸಾಧಿಸಿದೆ (ಶಿಕ್ಷದ. VIII, ಮುನ್ನುಡಿ). [ಸಂ. ಉತ್ಕರ್ಷಣ]

**ಉತ್ಕರ್ಷತೆ** (ನಾ). ಶ್ರೇಷ್ಠತೆ; ಏಳಿಗೆ; "ಉತ್ಸಾಹ" (ಪಂಪಭಾ. ಕೋಶ) : ಸಂಕರ್ಷಣಸಾತನ ಮನದುತ್ಕರ್ಷತೆಯನಱಿದು (ಪಂಪಭಾ. ೧೩-೯೦ ವ). [ಸಂ. ಉತ್ಕರ್ಷತಾ]

**ಉತ್ಕಲ** (ನಾ). ೧. ಒರಿಸ್ಸಾದೇಶ. ೨. ಒರಿಸ್ಸಾ ದೇಶದ ನಿವಾಸಿ. ೩. ಬಾಗಿಲು ಕಾಯುವವನು. ೪. ಕೂಲಿಯ ಆಳು; ಮೂಟೆಯನ್ನು ಹೊರುವವನು. ೫. ಹಕ್ಕಿಗಳನ್ನು ಬೇಟೆಯಾಡುವವನು. [ಸಂ.]

**ಉತ್ಕಲಿ** (ನಾ). ಅತ್ತಿತ್ತ ಚೆಲ್ಲಿದ ಹುಲ್ಲನ್ನು ಶೇಖರಿಸಲು ಬಳಸುವ ಕೊಕ್ಕೆಗೋಲು ; ಮೆರೆಗೋಲು : "ಉತ್ಕಲಿಯೆನಲು ಮೆಱೆಗೋಲು" (ಮಂಗರಾ. ೧೯೯-೩). [ಸಂ.]

**ಉತ್ಕಲಿಕಾಪ್ರಾಯ** (ನಾ). [ಕಾವ್ಯಮಿಾ] ಸಮಾಸಗಳಿಂದ ತುಂಬಿ ಜಟಿಲವಾದ ಗದ್ಯಶೈಲಿ : "ಸುಲಭವಾದ ಗದ್ಯಶೈಲಿಗೆ 'ಚೂರ್ಣ'ವೆಂದು ಹೆಸರು . . . ಇದಕ್ಕೆ ವಿರುದ್ಧವಾಗಿ ಸಮಾಸಗಳಿಂದ ತುಂಬಿ ಗಂಟು ಗಂಟಾಗಿರುವುದು ಉತ್ಕಲಿಕಾಪ್ರಾಯ" (ಕೈಪಿಡಿ. ೧೭೮). [ಸಂ.]

**ಉತ್ಕಲಿಕೆ, ಉತ್ಕಳಿಕೆ** (ನಾ). ೧. ಉತ್ಕಂಠೆ. ೨. ಬಯಕೆ ; ಆಶೆ; ಉತ್ಕಟವಾದ ಇಚ್ಛೆ; ಕುತೂಹಲ : ನಿಜಹೃದಯಾಂತರದುತ್ಕಲಿಕೆಯನೆ ತೋಱುವಂತೆವೊಲೆಸೆದಳ್ (ಕಾದಂಉ. ೧೩೨) ; ಅಗಲಲಸಹ್ಯಮೆಂದು ಪೆಱಗೀ ಬಱಸಲ್ವಳೆ ಮುಂದೆ ಬಂದಳೀ ತಗೆವೊಡೆ ಚಿತ್ತದುತ್ಕಲಿಕೆಯಿಂ ನಭಕೀ ನೆಗೆತಂದಳ್ (ಕಾದಂಉ ೧೮೧). ೩. ಅಗಲುವಿಕೆಯಿಂದ ಉಂಟಾಗುವ ಉತ್ಸುಕತೆ; ವಿರಹಕಾತರತೆ. ೪. ಚಿಗುರುತ್ತಿರುವ ಕುಡಿ ; ಮೊಗ್ಗು : ೩,೪. ತಳೆದುತ್ಕಲಿಕೆಯನಾದಂ ಬೆಳರ್ತು ಕಡು ಬೇಟಗೊಂಡಳಂತೆಸೆವುದ್ಯಾನಲತೆಯನೀಕ್ಷಿಸಿ ನಾಂ ಪಾಟಲವರ್ಣಂಗೈವೆನಿಂದು ದೇವಿಯ ಮೊಗಮಂ (ಧ್ವನ್ಯಾಲೋ. ೮೩). ೫. ಭಯ ; ಆತುರ ; ಗಡಿಬಿಡಿ. ೬. ಕಮಂಡಲು. ೭. ಕಡಲೆ. ೮. ಬಳ್ಳಿ ; ಲತೆ. ೯. ಅಲೆ ; ನೀರ ತೆರೆ : "ಜಲಭಂಗಂ ವಿರಹಂ ಕಮಂಡಲು ಚಣಂಗಂ ಕೋರಕಾವಲ್ಲಿಯುತ್ಕಲಿಕಾಖ್ಯಂ" (ನಾನಾರ. ೧೦೩). **ಉತ್ಕಳಿಕೆ** : ೨. ನವವರನಂ ನೋಡುವುತ್ಕಳಿಕೆಯಿನೇಂ ಯುವತಿಯ ಕಣ್ಣುಂ ಮನಮುಂ ಜವನಿಕೆಯಂ ಕನ್ನಮಿಕ್ಕಲಡಹಡಿಸಿದುದೋ (ಅನಂಪು. ೬-೫೬). ೩. "ಉತ್ಕಳಿಕೆ ರಣರಣಕಮಾಯುಲ್ಲಕಂ ವಿರಹಮುತ್ಕಂಠೆ ರತಿವಿಯೋಗಂ" (ಮಂಗರಾ. ೧೩೨-೨೪). ೩, ೯ : ಮಿಾಂಗಳ ಬೞಗದಿನಾಗಸಮಂ ರನ್ನಂಗಳ ತುಱುಗಲಿನನುರಾಗಮನುತ್ತುಂಗೋತ್ಕಳಿಕೆಯಿನಾದಂ ಕಾಮಾರ್ತಿಯನುಱೆ ಪೋಲ್ತುಱದೆ ಕಂಗೊಳಿಪುದು ಮುನ್ನೀರ್ (ಉದ್ಭದೇ. ೨-೮). ೪. ವಸಂತದ ತರುಣ ಮಾಕಂದದಂತೆ ಬಹುಳೋತ್ಕಳಿಕೆಯಿಂದ (ಸೌಂದಪು. ೧-೨೪). ೯. ಶಮೆಯಾಂತು ಮುನಿಜನದಂತೆ ಉತ್ಕಳಿಕೆಗಳಮರಲಂಭೋನಿಧಿಯಂತೆ (ತರ್ಕಕಾ. ೩-೩೦) ; "ಭಯದೊಳಾತುರದೊಳು ತರಂಗದೊಳು ಮೊಗ್ಗೆಯೊಳು ನಿಯತದಿಂದುತ್ಕಳಿಕೆಯಕ್ಕು" (ಮಂಗರಾ. ೧೫೩-೬೩).

[ಸಂ. ಉತ್ಕಲಿಕಾ]

**ಉತ್ಕಲ್ಲೋಲ, ಉತ್ಕಲ್ಲೋಳ** (ಗು). ಮೇಲೆದ್ದ ದೊಡ್ಡತೆರೆಗಳುಳ್ಳ. **ಉತ್ಕಲ್ಲೋಳ**: ತಾಱುದ್ದಂಡರಮುತ್ಕಲ್ಲೋಳಮಸೃಕ್ಸಿಂಧು ಕಾಱುವರಂ ಬರಿವಿನೆಗಂ ತಾಳುಂ ತಟ್ಟುಂಬೊಯ್ದರ್ (ಪಂರಾಮಾ. ೧೩-೬೪). [ಸಂ.]

**ಉತ್ಕಲ್ಲೋಳ** 'ಉತ್ಕಲ್ಲೋಲ' ನೋ.

**ಉತ್ಕಳಿಕಾಪ್ರಪಂಚ** (ನಾ). ವಿರಹದ ಹೆಚ್ಚಳ ; (ಪ್ರೀತಿಪಾತ್ರರ) ಸಹವಾಸದ ಉತ್ಕಟವಾದ ಅಪೇಕ್ಷೆ: ಉದಯಿಸಿದಂ ಪ್ರತಾಪನಿಧಿ ಬಿಜ್ಜಳದೇವಧರಾಧಿನಾಥನಿಂತುದಯಿಸೆ ಯೌವನೋದ್ಧತ ವಧೂತತಿಗುತ್ಕಳಿಕಾಪ್ರಪಂಚ ಮತ್ತುದಯಿಸೆ . . . ಬಾಂಧವಕ್ಷಿತಿತಳೇಶ್ವರಸಂತತಿಗುತ್ಸವೋತ್ಸವಂ (ಎಕ. XI, ದಾವಣ. ೪೨-೨೬ ; ಸು. 1162).

[ಸಂ. ಉತ್ಕಲಿಕಾಪ್ರಪಂಚ (ಉತ್ಕಲಿಕಾ + ಪ್ರಪಂಚ)]

**ಉತ್ಕಳಿಕಾವಿಳಾಸ** (ನಾ). ೧. ಹೂವಿನ ಮೊಗ್ಗೆಗಳ ವೈಭವ. ೨. ಕಾತರತೆಯ ಹೆಚ್ಚಳ. ೧, ೨ : ಪುರುಷವೇಷದ ರಾಜತನೂಜೆ ಕಂತು ಮೋಹನ ಶರಮುರ್ಚೆ ಘರ್ಮಜಲಕುಟ್ಮಲಮುಂ ಪುಳಕೋದ್ಗಮಂಗಳುಂ ತನುಲತೆಯೊಳ್ ಪೊದಱೆೊಡವೆ ತಾಳ್ದಿದಳುತ್ಕಳಿಕಾವಿಳಾಸಮಂ (ಪಂರಾಮಾ. ೭-೧೦೬). [ಸಂ. ಉತ್ಕಲಿಕಾವಿಲಾಸ (ಉತ್ಕಲಿಕಾ + ವಿಲಾಸ)]

**ಉತ್ಕಳಿಕೆ** 'ಉತ್ಕಲಿಕೆ' ನೋ.

**ಉತ್ಕಳಿಕೆದೋಱು** (ಕ್ರಿ). ಮೊಗ್ಗು ತೋರು ; ಮೊಗ್ಗೆಯೊಡೆ : ಮೊಳೆತುದಾ ಮನುವಿಂ ವಿಕುಕ್ಷಿಯೊಳೆಳೆಸಸಿಯನ್ನೆದಿತು . . . ಅಜಪುತ್ರನಿಂದುತ್ಕಳಿಕೆದೋಱಿತು ರಾಮ ನಿನ್ನಲಿ ಫಲಿಸಿತಗ್ಗದ ಸತ್ಕತರುವೆಂದನು ವಸಿಷ್ಠಮುನಿ (ತೊರರಾ. ೨-೩-೨೪). [ಉತ್ಕಳಿಕೆ (= ಉತ್ಕಲಿಕೆ) + ತೋಱು]

**ಉತ್ಕಾರ** (ನಾ). ೧. ಕಾಳನ್ನು ತೂರುವುದು. ೨. ತೂರಿದ ಕಾಳನ್ನು ರಾಶಿಹಾಕುವುದು, —ಗುಡ್ಡೆ ಮಾಡುವುದು (ಶ). [ಸಂ.]

**ಉತ್ಕೀರ್ಣ** (ಗು). ೧. ರಾಶಿಹಾಕಿದ; ಗುಡ್ಡೆಹಾಕಿದ. ೨. ಮೇಲಕ್ಕೆ ಚೆಲ್ಲಿದ; ಹರಡಿದ; ಕೆದರಿದ : ಕುಲಗಿರಿ ಶರಣಸ್ಥಾನಮುತ್ಕೀರ್ಣಫೇನಂ ಬಳವದ್ವೀಚೀವಿತಾನಂ ಪ್ರಬಳಘುಳುಘುಳುಧ್ವಾನಮಂಭೋನಿಧಾನಂ (ಜಗನ್ನಿ. ೧-೨೩) ; ಪ್ರಬುದ್ಧಭ್ರುಕುಟಿನಿಟಲನುತ್ಕೀರ್ಣ ಘರ್ಮಾಂಬು ಭೀಷ್ಮಾನನನುದ್ವೃತ್ತಖಡ್ಗಮೊಂದಂ ಪಿಡಿದು . . . ಧೀವರರಂ ಭೋಂಕನೆ ಬಂದಂ (ರಾಜಶೇ. ೫-೧೨೦). ೩. ಕಂಡರಿಸಲ್ಪಟ್ಟ ; ಕೊರೆಯಲ್ಪಟ್ಟ ; ಕೆತ್ತಲ್ಪಟ್ಟ : ವೃಷಭಾಚಳನಿಕಟಂಗಳೊಳಂ ಅಪ್ರತಿಹತ ದಿಗ್ವಿಜಯ ಪ್ರಶಸ್ತಿಯಂ ಟಂಕೋತ್ಕೀರ್ಣಂ ಮಾಡಿ (ಆದಿಪು. ೧೪-೫೯). [ಸಂ.]

**ಉತ್ಕೀರ್ಣಿಸು** (ಕ್ರಿ). (ಅಕ್ಷರಗಳನ್ನು) ಕೆತ್ತು ; ಕೊರೆ : ತಾಮ್ರದ ಪಟ್ಟಗಳ ಮೇಲೆ ಅಕ್ಷರಗಳನ್ನು ಉತ್ಕೀರ್ಣಿಸುವ ಹಾಗೆ ಮರದ ಪಟ್ಟಗಳ ಮೇಲೂ ಕೊರೆಯಬಹುದು (ಕನ್ನಸಂ. ೩೬). [ಉತ್ಕೀರ್ಣನ$_0$ + -ಇಸು$_3$]

**ಉತ್ಕೀಲಿಸು** (ಕ್ರಿ). ಚೆನ್ನಾಗಿ ನೆಡು ; ಭದ್ರವಾಗಿ ನಾಟು : ಭಾಸುರಾಮಲ ಶೂಲಶಲ್ಯಮುತ್ಕೀಲಿಸಲು (ಮಲ್ಲಾರಿ. ೧೧-೨೭). [ಉತ್ಕೀಲನ$_0$ + -ಇಸು$_3$]

**ಉತ್ಕುಣ** (ನಾ). ೧. ತಗಣೆ; ತಿಗಣೆ. ೨. ಹೇನು. [ಸಂ.]

**ಉತ್ಕೂಟ** (ನಾ). ೧. ಉನ್ನತವಾದ ಶೃಂಗ ; ಎತ್ತರವಾದ ಶಿಖರ : ಕುರುರಾಜ ರತ್ನಮಕುಟೋತ್ಕೂಟಾಂಘ್ರಿಸಂಘಟ್ಟಸಂಗರನೆಂದೆಂದಭಿವರ್ಣಿಪೆಂ ರಣಯಶಃಶ್ರೀರಾಮನಂ ಭೀಮನಂ (ಗದಾಯು. ೧-೫೨). ೨. ಕೊಡೆ ; ಛತ್ರಿ. [ಸಂ.]

**ಉತ್ಕೃತಿ** (ನಾ). [ಛಂದ] ಅಕ್ಷರ ಛಂದಸ್ಸಿನಲ್ಲಿ ಇಪ್ಪತ್ತಾರನೆಯ ಛಂದಸ್ಸಿನ ಹೆಸರು ; ಒಂದು ಪಾದದಲ್ಲಿ ೨೬ ಅಕ್ಷರಗಳಿರುವ ಸಮವೃತ್ತಗಳ ಸಮುದಾಯ : ೧ ಉಕ್ತೆ, ೨ ಅತ್ಯುಕ್ತೆ . . . ೨೦ ಕೃತಿ, ೨೧ ಪ್ರಕೃತಿ, ೨೨ ಆಕೃತಿ, ೨೩ ವಿಕೃತಿ, ೨೪ ಸಂಕೃತಿ, ೨೫ ಅತಿಕೃತಿ, ೨೬ ಉತ್ಕೃತಿ – ಎಂದಿಪ್ಪತ್ತಾಱುಂ ಛಂದಂಗಳಕ್ಕುಂ (ಛಂದೋಂಬು. ೧-೫೫ ವ) ; ಈ ಛಂದಸ್ಸಿನಲ್ಲಿ ಉಕ್ತೆ . . . ಉತ್ಕೃತಿ ಎಂಬ ಸಂಜ್ಞೆಗಳಿವೆ (ಛಂದೋವಿ. ೪೮). [ಸಂ.]

**ಉತ್ಕೃಷ್ಟ** (ಗು). ೧. ಮೇಲಕ್ಕೆ ಸೆಳೆಯಲ್ಪಟ್ಟ ; ಹೊರಕ್ಕೆ ತೆಗೆಯಲ್ಪಟ್ಟ. ೨. ಅತ್ಯುತ್ತಮವಾದ ; ಮೇಲಾದ ; ಶ್ರೇಷ್ಠವಾದ. (ನಾ). ೩. ಬಾಣವನ್ನು ಎಳೆದು ಬಿಡುವುದು, —ಪ್ರಯೋಗ : ಹಸಮಿರ್ದುದೆಮ್ಮಕ್ಕಗಾಯಿತು ಬಲುದಿನಕಿಂದು ಕುಸುಮಶರನುತ್ಕೃಷ್ಟ ಭಾವು ಭಳಿರೆದ್ದೆದೆ ನಸುನಕ್ಕು ತಮತಮಗೆ ಕೇಳಿದರ್ ಜಾಣೆಯರ್ (ಪರಶು. ೭-೨೨). [ಸಂ.]

**ಉತ್ಕೃಷ್ಟತೆ** (ನಾ). ಉತ್ತಮವಾಗಿರುವಿಕೆ ; ಮೇಲ್ಮೆ ; ಅತಿಶಯ ; ಶ್ರೇಷ್ಠತೆ. [ಸಂ. ಉತ್ಕೃಷ್ಟತಾ]

**ಉತ್ಕೆ$_1$** (ನಾ). ಉತ್ಕಂಠತೆ ; ಹಂಬಲ ; ಹಾರೈಕೆ ; ಕುತೂಹಲ : ಉನ್ಮನಮೆ ಮಾಱ್ಕುಮುತ್ಕೆಯನುನ್ಮದಬರ್ಹಿಣಶಿಖಂಡಿ ಕೇಕಾವಿರುತಂ ತನ್ಮಧುರಧ್ವನಿಯುಂ ಜಳಭೃನ್ಮೇಘನಿನಾದಮೊದವೆ ದೆಸೆದೆಸೆಗೆಸೆಗುಂ (ಕಾವ್ಯಾವ. ೪೬೦). [ಸಂ. ಉತ್ಕ]

**ಉತ್ಕೆ$_2$** (ನಾ). ಉತ್ಕಂಠತೆಯುಳ್ಳವಳು ; ಪ್ರಿಯನಿಗಾಗಿ ಹಂಬಲಿಸುವವಳು. [ಸಂ. ಉತ್ಕಾ]

**ಉತ್ಕೇತು** (ನಾ). ಮೇಲಕ್ಕೆತ್ತಲ್ಪಟ್ಟ ಧ್ವಜ ; ಎತ್ತರವಾದ ಧ್ವಜ : ಸಾಕೇತಮುತ್ಕೇತು ಬಾಹುಗಳಿಂದಂ ಕರೆವಂತದೇನೆಸೆದುದೋ ಸರ್ವಾರ್ಥಸಿದ್ಧೀಶನಂ (ಆದಿಪು. ೭-೨). [ಸಂ.]

**ಉತ್ಕೋಚ** (ನಾ). ೧. ಮೇಲಕ್ಕೆ ಬಾಗುವುದು ; ಮೇಲೆ ವ್ಯಾಪಿಸುವುದು : ಥಳಥಳಿಸುವಾನನದೆ ಸತ್ಕೋಜ್ಜ್ವಲಿತ ಚಿತ್ತದ ಸುಪ್ರಭಾವದ ಬಳವಿಗೆಯಲುತ್ಕೋಚವಾಯಿತು ತಪ ಧನಂಜಯನ (ಕುಮಾರ. ೫-೪). ೨. ಲಂಚ : ವಿವಿಧಾಧಿಕಾರಿಗಳುತ್ಕೋಚ ವಂಚನಾದಿಗಳಿಂದೆಡೆಗೆಡೆ ಗಿರ್ಮಡಿಸುವ ತೆಱಿಗೆ . . . ಆಟ್ಟುಳಿಯಿಂ ಪ್ರಜೆಗಳಂ ಕಿಡಿಪರ್ (ಚಿಕವಂ. ೬-೪) ; ತನ್ನ ಕಾರ್ಯಗಳಿಗೆ ಪ್ರತಿಬಂಧಕವನ್ನು ಮಾಡದಿರಲೆಂದು ಅಧಿಕಾರಿಗಳಿಗೆ ಕೊಡುವುದು ಉತ್ಕೋಚ (ಅಂದರೆ ಲಂಚ)ಕ್ಕೂ . . . ಉದಾಹರಣೆಗಳು (ಆರ್ಥ. ೮೯). ೩. ವಕ್ರತೆ ; ಮೋಸ : ನೀಚತನದಿಂದರಸು ತೆರಳ್ದೆಮ್ಮ ಧನವನುತ್ಕೋಚದಿಂ ತಸ್ಕರಿಸಿ (ಸಿಂಗಿರಾ. ೨೨-೯). ೪. ಗಟ್ಟಿಯಾಗಿ ಕೂಗುವುದು ; ಉಗ್ಗಡಣೆ. [ಸಂ.]

**ಉತ್ಕೋಚಿ** (ನಾ). ೧. ಲಂಚಗುಳಿ. ೨. ವಕ್ರನಾದವನು; ಎಡವಟ್ಟ: ವಾಚಿಸದೆ ವೇದಾರ್ಥನಿಚಯವನಾಚರಿಸದಾಲಸ್ಯದಿಂದುತ್ಕೋಚಿಯಾ [ಪಾಠಾಂ. ಚನಾ]ಗಿ ಪರಾನ್ನದೊಳು ಸಂಪುಷ್ಟತನುವಾದ ನೀಚನಹ ಭೂಸುರನ ಕರುಳನು ಬಾಚುವಳಲೈ ಮೃತ್ಯು (ಕುಮಾರ. ಉ. ಓರಿ೩. ೪-೯೭). [< ಸಂ. ಉತ್ಕೋಚಿನ್]

**ಉತ್ಕ್ರಮ** (ನಾ). ೧. ಮೇಲಕ್ಕೆ ಹೋಗುವಿಕೆ; ಏರುವಿಕೆ. ೨. ಕ್ರಮತಪ್ಪಿ ನಡೆಯುವಿಕೆ; ವಿಪರೀತ ಕ್ರಮ : ಕ್ರಮದಿಂ ಬರ್ಕುಂ ವರ್ಗೋತ್ತಮಾಂಶ ನಿಜ ಪರಗೃಹಂಗಳೊಳ್ ಪುಷ್ಟಂ ಮಧ್ಯಮನಲ್ಪಂ ಶುಭಫಲಮುತ್ಕ್ರಮದಿಂದಂ ಬರ್ಕುಮಶುಭಫಲಮಂತವಱೊಳ್ (ಜಾತಕ. ೨೦-೨೫). [ಸಂ.]

**ಉತ್ಕ್ರಮಣ** (ನಾ). ಅಂತ್ಯಕಾಲ ; ಸಾಯುವ ಹೊತ್ತು : ರಣದಿ ಬಿದ್ದಾ ಸೈನ್ಯಪತಿ ಸಿದ್ಧಿಯುತ್ಕ್ರಮಣದೊಣಗುಬಾಯಿಗೆ ನೀರನೊಡ್ಡಲ್ ಅದನವನು ತನಗಿಂತ ಕೆಲದ ಭಟಗದು ಸಲ್ವುದೆಂದಿತ್ತು ತಣಿವನಾಂತುದ ನೆನೆಯೊ (ಮಂಕುಕ. ೯೧೧). [ಸಂ.]

**ಉತ್ಕ್ರಮಿಸು** (ಕ್ರಿ). ೧. ಮರಣ ಹೊಂದು ; ಸಾಯು : ವೇದಾಂತ ವಾಕ್ಯಗಳ ನಮಕಾನುವಾಕಗಳ ಕೇದಾರಗೌಳ ಮಣಿರಂಗಾರಭಿಗಳ ನಾದಂಗಳಲಿ ಮನವ ಬೆರಸಿ ನೀನುತ್ಕ್ರಮಿಸೆ ಸಾಧನವೊ ಮುಕ್ತಿಗದು (ಮಂಕುಕ. ೯೩೧). ೨. ಅತಿಕ್ರಮಿಸು ; ಮೀರು. [ಉತ್ಕ್ರಮಣ + -ಇಸು$_3$]

**ಉತ್ಕ್ರಾಂತಿ** (ನಾ). ೧. ಬಿಟ್ಟುಹೋಗುವಿಕೆ; ಹೊರಟುಹೋಗುವಿಕೆ; ನಿರ್ಗಮಿಸುವಿಕೆ : ಕೂರದ ದಾಯಾದರ ಮಿಕ್ಕ ಪಂದಲೆಗಳಂ ಕಣ್ಣಾರೆ ಕಂಡೆನ್ನ ಚಿತ್ತದೊಳೊಂದುಂ ತೊದಳಿಲ್ಲದೆನ್ನಸುಗಣಕ್ಕುತ್ಕ್ರಾಂತಿಯಂ ಮಾಡುವೆಂ (ಗದಾಯು. ೯-೨೯). ೨. [ದ್ವೈತ] ಮೋಕ್ಷದ ನಾಲ್ಕು ಪರ್ವಗಳಲ್ಲಿ ಒಂದು : ಇದರಿಂದ ಬರುವ ಮೋಕ್ಷ ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂಬ ನಾಲ್ಕು ಪರ್ವಗಳುಳ್ಳದ್ದು . . . ಉತ್ಕ್ರಾಂತಿಯೆಂದರೆ ದೇಹಾವಸಾನ ಸಮಯದಲ್ಲಿ ಬ್ರಹ್ಮನಾಡೀದ್ವಾರಾ ಬಹಿರ್ನಿರ್ಗಮನವು (ಹಿಂದಸಾ. ೨೯೨). ೩. ಕ್ರಮವಾಗಿ ಮಾರ್ಪಡುವುದು ; ಕ್ರಮವಿಕಾಸ : ಖುರಗಳನ್ನೋ . . . ಚರ್ಮವನ್ನೋ ಬೆಳೆಸಿಕೊಂಡು ಬದಲಿಸಿಕೊಂಡು ಪ್ರಾಣಿಜೀವ ಹೊರಬರುಕಿಗೆ ತಾನು ಸರಿಹೋಗುವ ಏರ್ಪಾಡು ಮಾಡಿಕೊಂಡಿತು. ಆದರೆ ಮಾನವನಲ್ಲಿ ಈ ಉತ್ಕ್ರಾಂತಿ ಒಮ್ಮೆಲೇ ಕ್ರಾಂತಿಯ ರೂಪ ತಾಳಿತು (ವಿಚಾವಾ. ೯). ೪. [ಯೋಗ] ಸಪ್ತಪ್ರಾಣಾಯಾಮಗಳಲ್ಲಿ ಒಂದು ಬಗೆ : ಪ್ರಾಕೃತ ವೈಕೃತವೆಂದು ದ್ವಿವಿಧಮಾದ ರೇಚಕ . . . ಉತ್ಕ್ರಾಂತಿ ಎಂಬ ಸಪ್ತಪ್ರಾಣಾಯಾಮ ಲಕ್ಷಣಂಗಳಂ (ವಿವೇಕ. ೧೫೧). [ಸಂ.]

**ಉತ್ಕ್ರಾಂತಿತತ್ತ್ವ** (ನಾ). ಕ್ರಮವಾಗಿ ಮಾರ್ಪಡುವ ನೀತಿ, — ವಿಕಾಸಕ್ರಮ: ಉತ್ಕ್ರಾಂತಿತತ್ತ್ವ (Evolution) ಭಾರತೀಯರಿಗೆ ಹೊಸದಲ್ಲ (ವಿಚಾಮಂ. ೯೭). [ಉತ್ಕ್ರಾಂತಿ + ತತ್ತ್ವ]

**ಉತ್ಕ್ರೋಶ** (ನಾ). ೧. ಗಟ್ಟಿಯಾದ ಕೂಗು; ಬೊಬ್ಬೆ. ೨. ಕುರರವೆಂಬ ಹಕ್ಕಿ; ಮರಕುಟಕ: "ಕುರರಮುತ್ಕ್ರೋಶಮೆನಲು ಮರಕುಟವಕ್ಕಿ" (ಮಂಗರಾ. ೫೧–೫). [ಸಂ.]

**ಉತ್ಖಾತ** (ಗು). ೧. ಅಗೆದ; ಬೇರುಸಹಿತ ಕಿತ್ತುಹಾಕಿದ; ಹಾಳುಮಾಡಿದ. ೨. ಹೊರಕ್ಕೆ ತೆಗೆದ; ಸೆಳೆದ: ಕನಕದಂಡಾಗ್ರಮಂಡಿತಮಾಗಿ ಬೆಳಗುವ ಮಂಗಳಪ್ರದೀಪಂಗಳೊಳಮುತ್ಖಾತಾಸಿಲತಾಸನಾಥಪಾಣಿಗಳಪ್ಪ ರಕ್ಷಾಪುರುಷರೊಳಂ (ಕಾದಂಪೂ. ೪೧೩); ಗಂಡಗುಣಂ ವೀರಶ್ರೀಗಾದುದು ನೃಪವೀರಭುಜೋತ್ಖಾತಖಡ್ಗಧಾರಾಶ್ರಯದಿಂ (ಮಲ್ಲಿಪು. ೩–೧೩). [ಸಂ.]

**ಉತ್ತ**₁ (ನಾ). ನಡುವಣ ಸ್ಥಳ; ಮಧ್ಯಸ್ಥಳ: ಅತ್ತ ಸುರೇಶ್ವರಾವಸಥಮಿತ್ತ ಮಹೀತಳಮುತ್ತ ಪನ್ನಗೋದಾತ್ತ ಸಮಸ್ತಲೋಕಮುಜಿದಂತಿರೆ ಪೂಣ್ದೆನಗಾಗದಂಗಜೋತ್ಪತ್ತಿಸುಖಕ್ಕೆ ಸೋಲಲ್ (ಪಂಪಭಾ. ೧–೭೫).
ಉತ್ತಣ = ನಡುವಣ: ಅತ್ತಣಿಂ, ಇತ್ತಣಿಂ, ಉತ್ತಣಿಂ (ಶಮದ. ೧೧೦ ಪ್ರಯೋ). ಉತ್ತಲ್ = ನಡುವೆ; ಇತ್ತಲೂ ಅತ್ತಲೂ ಅಲ್ಲದ ನಡುವಣ ಜಾಗದಲ್ಲಿ: ಅತ್ತಲ್ ದೇವೇಂದ್ರಂ ಮತ್ತಿತ್ತಲ್ ಭುಜಗೇಂದ್ರನುತ್ತಲಾಶಾಧಿಪರೊಳ್ ಮುತ್ತಿರೆ ಭೇರೀಧ್ವನಿ ಪರ್ವಿತ್ತೆನ್ಗಲುಮಶನಿಘೋಷಶಿಕ್ಷಾದಕ್ಷಂ (ಶಮದ. ೧೧೯ ಪ್ರಯೋ); ಅತ್ತಿತ್ತಮುತ್ತಲೆತ್ತಂ ಬಳಸಿದೆಲ್ಲಮುಂ (ಸಂಸಪ. ೩೦–೧). [ದೇ.]

**ಉತ್ತ**₂ 'ಉಱು' ಪರಾ.

**ಉತ್ತ**₃ 'ಉಬ್' ಪರಾ.

**ಉತ್ತಂ** (ಅ). ನಡುವಣ ಕಡೆಗೆ; ಮಧ್ಯದ ಕಡೆಗೆ: ಅತ್ತಿತ್ತುತ್ತಮೆತ್ತಂ ನಡೆದುದು ಕಟಕಂ (ಜಗವಿ. ೯–೨೬). [< ಉತ್ತ₁]

**ಉತ್ತಂಡ** (ನಾ). ಹೆಂಗಸರು ಧರಿಸುವ ಚಿನ್ನದ ಕಂಠಾಭರಣ (ಕ). [ದೇ. ‖ ತಮಿ. ಉತ್ತಣ್ಡಾಲ್, ಉತ್ತಣ್ಡಮಣಿ; ತೆಲು. ಉತ್ತಂಡ]

**ಉತ್ತಂಭಿತ** (ಗು). ಎತ್ತಿ ಹಿಡಿಯಲ್ಪಟ್ಟ; ಮೇಲಕ್ಕೆ ಎತ್ತಿದ: ಪೌರನಾರೀಜನಂಗಳ್ ಗೀರ್ವಾಣಶಂಕೆಯಿನುತ್ತಂಭಿತಪಕ್ಷ್ಮಪಾಳಿವದನರ್ (ಶಾಂತಿಪು. ೪–೭೨ ವ); ಅಂಭೋಜನಾಭನಿಂದುತ್ತಂಭಿತನಾದೊಂದುದಗ್ರಗೋವರ್ಧನಮುಜ್ಜೃಂಭಿಸುತಿರ್ದುದು (ಜಗವಿ. ೪–೯೫). [ಸಂ.]

**ಉತ್ತಂಸ** (ನಾ). ತಲೆಯಲ್ಲಿ ಧರಿಸುವ ಆಭರಣ; ಶಿರೋಭೂಷಣ: ಪದೆದುತ್ತಂಸವತಂಸಶೋಭೆಗೆ ಭವದ್ಬಾಳಪ್ರವಾಳೋಲ್ಲಸನ್ಮೃದುಪುಷ್ಪಸ್ತಬಕಂಗಳಂ (ಆದಿಪು. ೧೧–೧೩೪); ಸಿಂಗದವೋಲ್ ಕಾಂಚನಪೀಠದಿಂ ಖರಂ ಖಡ್ಗನಖರಸುತ್ತಂಸಕಿರಣಕೇಸರನೆಬ್ಬಿದಂ (ಪಂರಾಮಾ. ೬–೧೭೫ ವ). ೨. ಆಭರಣ; ಕಿವಿಯ ಓಲೆ; ಕರ್ಣಪೂರ. ೩. (ಆಲಂ) ಶ್ರೇಷ್ಠನಾದವನು; ಉತ್ಕೃಷ್ಟ: ಸೌಂದರಿಯರೇಕಚ್ಛತ್ರರಾಜ್ಯಾಭಿಷೇಕಮಿದೆಂಬಂತಿರೆ ಮಜ್ಜನಂಬುಗಿಸಿದರ್ ಮನ್ವನ್ವಯೋತ್ತಂಸನಂ (ಆದಿಪು. ೮–೭೦). [ಸಂ.]

**ಉತ್ತಂಸಕ** (ನಾ). ಶ್ರೇಷ್ಠನಾದವನು: ಮಂಜುಲನಾದಾಮೃತಮುಣ್ಮೆ ಬಾಜಿಸಿದನಾ ಗೋಪಾಲಕೋತ್ತಂಸಕಂ (ವಿಷ್ಣುಪು. ೫–೨–೭೪). [ಸಂ.]

**ಉತ್ತಂಸಿತ** (ಗು). ಶೋಭಿಸುವ; ಅಲಂಕರಿಸಿದ: ದಿಕ್ಕರಿಕರಾನುಕಾರಿಕರಪರಿಘೋತ್ತಂಸಿತ ತೋರಣೀಕೃತ ರೌದ್ರಗದಾದಂಡನುಂ (ಪಂಪಭಾ. ೧೩–೮೨ ವ). [ಸಂ.]

**ಉತ್ತಡ** (ನಾ). (?): "ಉತ್ಪಟ – ಉತ್ತಡ" (ಶಬ್ದಾನು. ೧೬೦ ಪ್ರಯೋ). [< ಸಂ. ಉತ್ಪಟ]

**ಉತ್ತಣ** 'ಉತ್ತ' ಪರಾ.

**ಉತ್ತತ್ತಿ** 'ಉತ್ತುತ್ತೆ' ನೋ.

**ಉತ್ತನೂರ್** (ನಾ). ಒಂದು ಊರಿನ ಹೆಸರು: ಪೂರ್ವಾಯಾನ್‌ದಿಶಿ ಕೊಳತ್ತೂರ ಉತ್ತನೂರ ಮುಕ್ಕೂಟಲ ಅರುಣೋನ್ನತಭೂಮಿ ಸಮಿಪೇ (ಮೈಆರಿ. ೧೯೨೫, ೧೦೫–೩೯; 634); ನೊಳಂಬಸೆಟ್ಟಿ ಉತ್ತನೂರ ಮಹಾಜನಂ (ಎಕ. X, ಮುಳಬಾ. ೧೨೨–೭; 969). [ಉತ್ತನ ? + ಊರ್]

**ಉತ್ತಪ್ತ** (ಗು). ಚೆನ್ನಾಗಿ ಕಾಯಿಸಲ್ಪಟ್ಟ: ಉತ್ತಪ್ತ ಜಾಂಬೂನದಕುಸುಮದಾಮಂಗಳಿಂದುದ್ದೀಪಿತ ರತ್ನಪ್ರದೀಪಂಗಳಿಂದಂ (ಆದಿಪು. ೨–೩೨ ವ). [ಸಂ.]

**ಉತ್ತಪ್ಪ**, ಊತಪ್ಪ (ನಾ). ಒಂದು ಬಗೆಯ ದೋಸೆ; ಉಬ್ಬುದೋಸೆ: ಉತ್ತಪ್ಪ ತಿನ್ನುವುದಕ್ಕೆ ಬಹಳ ರುಚಿಯಾಗಿರುತ್ತದೆ (ರೂಢಿ).
**ಊತಪ್ಪ**: ನಮ್ಮ ಮನೆಯಲ್ಲಿ ಇವತ್ತು ಊತಪ್ಪ ಮಾಡಿದ್ದರು (ರೂಢಿ). [← ತಮಿ. ಮಲ. ಊತ್ತಪ್ಪಂ]

**ಉತ್ತಮ** (ಗು). ೧. ಶ್ರೇಷ್ಠವಾದ; ಉನ್ನತವಾದ; ಮೇಲಾದ: ಉತ್ತಮದ ಲಿಂಗಪ್ರಸಾದಿಗೆ (ಬಸವು. ೬೦–೯). (ನಾ). ೨. ಒಳ್ಳೆಯವನು; ಶ್ರೇಷ್ಠನಾದವನು; ಮೇಲಾದವನು: ಉತ್ತಮರು ತಪ್ಪಿ ನಡೆದಿಹರೆ ಲೋಕ ತಾನೆತ್ತ ಸಾರುವುದು (ಸರ್ವಜ್ಞ. ೧೨೫೯); ಉತ್ತಮನು ಎತ್ತ ಹೋದರೂ ಶುಭವೇ (ಗಾದೆ). ೩. ಹದಿನಾಲ್ಕು ಮನುಗಳಲ್ಲಿ ಒಬ್ಬ: ಪ್ರಪಂಚದೊಳು ಸಕಲ ಕುಲಧರ್ಮ ಪದ್ಧತಿಪ್ರವರ್ತಕರಾಗಿ ಶಿವಪ್ರಸಾದದಿಂ ಲೋಕಾಧಿಪತ್ಯಂಗೈದು ಸ್ವಾಯಂಭುವ ಸ್ವಾರೋಚಿಷ ಉತ್ತಮ... ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳೊಳಗೆ (ವಿವೇಕ. ೨೦೪). ೪. ಬಿಳೀಮಗ್ಗದ ಜಾತಿಯಲ್ಲಿ ಒಂದು ಪಂಗಡ: (ಎಸವೈ. VIII, ೧೦).
ಉತ್ತಮೋತ್ತಮ (ದ್ವಿರುಕ್ತಿ): ಉತ್ತಮೋತ್ತಮ ಭಕ್ತಿಯ ಲಿನುತಿಪೆತ್ತ ಬಸವಚರಿತ್ರವಂ ಭಕ್ತೋತ್ತಮರ ಕೈಯಿಂದ ಕೇಳಿದ ಮಾಳ್ಕೆಯಿಂದೆನ್ನ ಚಿತ್ತದೊಲವಿಂ ತಪ್ಪದೊರೆದೆನು (ಬಸವು. ೬೧–೭೬); ಮೊನ್ನೆ ನಾನು ಓದಿದ ಗ್ರಂಥ ಉತ್ತಮೋತ್ತಮವಾಗಿತ್ತು (ರೂಢಿ). [ಸಂ.]

**ಉತ್ತಮಗಳ್ಳ**, ಉತ್ತವಗಳ್ಳ (ನಾ). ಒಂದು ಬಿರುದು: ಉತ್ತಮಗಳ್ಳ ಸ್ವಾನುರ್ವ್ವರಹಾಟಕ ಸಕಳದೇಶಸಂಭೋಕ್ತಾ (ಮೈಆರಿ. ೧೯೩೫, ೪೦–೧೫; 951 ?); ಎಱೆವೆ ಮಹಾಸಾಮನ್ತನುತ್ತಮಗಳ್ಳಗೊಪ್ಪೆ ಪುಟ್ಟೆದೊಬಿರಗ್ರಹಾರಂ (?) (ಇಆ. X, ೧೦೪–೫; ?). **ಉತ್ತವಗಳ್ಳ**: ಸ್ವಸ್ತಿ ಶ್ರೀ ಗೊಗ್ಗಿಯ ಮನೆಮಗತಿ ಬೋಟಿಗ ಧಮ್ಮಸೆಟ್ಟಿ ಉತ್ತವಗಳ್ಳಂ (ಮೈಆರಿ. ೧೯೩೬, ೪೦–೨; ಸು 900). [ಉತ್ತಮ + ಕಳ್ಳ₁]

**ಉತ್ತಮಗಾಮುಂಡ**, ಉತ್ತಮಗಾವುಂಡ (ನಾ). ಒಬ್ಬಾತನ ಹೆಸರು: ಪೆರ್ಬ್ಬಟಿ ಉತ್ತಮಗಾಮುಣ್ಡರುಂ ಕುನ್ದಗಾಮುಣ್ಡರುಂ (ಎಕ. IV, ಶ್ರೀರಂಗ. ೧೬೦–೨೦, ೨೧; 800). **ಉತ್ತಮಗಾವುಂಡ**: ಎಱೆಪ್ಪರಸರ ಗೋವಿನ್ದರಸರು ಉತ್ತಮಗಾವುಣ್ಡನ ಕೆಱೆಗೆ ಕೊಟ್ಟ ಸ್ತಿತಿ (ಎಕ. V, ಚನ್ನರಾ. ೨೫೧–೮; 925). [ಉತ್ತಮ + ಗಾಮುಂಡ]

**ಉತ್ತಮಗಾವುಂಡ** 'ಉತ್ತಮಗಾಮುಂಡ' ನೋ.

**ಉತ್ತಮತಪ** (ನಾ). ಶ್ರೇಷ್ಠವಾದ ತಪಸ್ಸು: ಉತ್ತಮತಪಂಗಳಿಂದ ತ್ಯುತ್ತಮದೇಹರ್ ವಿದೇಹರಪ್ಪುದಱಿಂ ಮೆಯ್ವೆತ್ತನ್ವರ್ಥತೆಯಂ ತಾಳ್ದಿತ್ತು ವಿದೇಹಂ ವಿದೇಹಮೆಂಬೀ ಪೆಸರಂ (ಆದಿಪು. ೧–೫೩). [ಉತ್ತಮ + ತಪ]

**ಉತ್ತಮದಾನ** (ನಾ). ಶ್ರೇಷ್ಠವಾದ ದಾನ: ಪಂಚಾಶ್ಚರ್ಯಂಗಳ್ ಸುರರಿಂಜರ ನೊಡನೆ[ಯೆ] ನೆಗೞ್ದು[ದು]ತ್ತಮದಾನಂ ಸಂಚಿತಸುಕೃತಂಗಲ್ಲದಸಂಚಿತಸುಕೃತಂಗೆ ಬಯಸೆ ಸಮನಿಸಿದಪುದೇ (ಶಾಂತಿಪು ೯–೨೨). [ಉತ್ತಮ + ದಾನ]

**ಉತ್ತಮಪಾತ್ರ** (ನಾ). ೧. ದಾನ ತೆಗೆದುಕೊಳ್ಳಲು ಯೋಗ್ಯವ್ಯಕ್ತಿ; ಶ್ರೇಷ್ಠನೆನಿಸಿದ ವ್ಯಕ್ತಿ: ಅಂತು ಪಂಚತ್ವಮನೈದಿದ ವಜ್ರಜಂಘಂಗಂ ಶ್ರೀಮತಿಗಮಾ ತಿರಿಕಂಗಳ್ಗಮುತ್ತಮಪಾತ್ರದಾನಾನುಮೋದದ ಪುಣ್ಯಫಲ ದಿಂದಂ . . . ಉತ್ತರಕುರುವೆಂಬುತ್ತಮಭೋಗಭೂಮಿಯೆ ಜನ್ಮಭೂಮಿ ಯಾದುದು (ಆದಿಪು. ೫-೨೭ ವ); ತನ್ನೊಡನೊಡನೆ ಸಮಸುಭಪರಿಣಾಮ ದೊಳ್ ನೆಗಳ್ಚಿ ಪರಮ ಪವಿತ್ರೋತ್ತಮಪಾತ್ರಕ್ಕೆ ಶ್ರೀಷೇಣಂ (ಶಾಂತಿಪು. ೬-೭೨ ವ). ೨. (ನಾಟಕದ) ಶ್ರೇಷ್ಠವಾದ ಪಾತ್ರ: ರಂಗಸ್ಥಲದಲ್ಲಿ ಅಭಿನಯಯೋಗ್ಯವಾಗಿರಬಹುದು . . . ಉತ್ತಮಪಾತ್ರಗಳನ್ನು ಕುರಿತಿರ ಬಹುದು (ಧ್ವನ್ಯಾಲೋ. ೧೩೯). [ಉತ್ತಮ + ಪಾತ್ರ]

**ಉತ್ತಮಪುರುಷ** (ನಾ). ೧. ಶ್ರೇಷ್ಠನಾದ ವ್ಯಕ್ತಿ: ಮಾನವಕುಲದ ಉದ್ಧಾರಕ್ಕೆ ಶ್ರಮಿಸುವುದೇ ಉತ್ತಮಪುರುಷರ ಜೀವನದ ಗುರಿ (ರೂಢಿ). ೨.[ವ್ಯಾಕ] ಪುರುಷವಾಚಕ ಸರ್ವನಾಮಗಳಲ್ಲಿ ಒಂದು; ತನ್ನನ್ನು ನಿರ್ದೇಶಿಸಿಕೊಳ್ಳುವಾಗ ವ್ಯಕ್ತಿ ಬಳಸುವ ಶಬ್ದ: ಉದಾ—ಆನ್, ಅವು, ನಾನು, ನಾವು: ಉತ್ತಮಪುರುಷ ಬಹುವಚನದಲ್ಲಿ ಧಾತುವಿಗೆ ಓಣವೆಂಬ ಪ್ರತ್ಯಯ ಸೇರುತ್ತದೆ (ಮಧ್ಯಮ. ೯೧). ೩. [ವ್ಯಾಕ] ನಾನು, ನಾವು ಎಂಬ ಸರ್ವನಾಮಗಳ ಸಂಬಂಧದಲ್ಲಿ ಧಾತುವಿನ ಮೇಲೆ ಬಳಸುವ (ಎನ್, ಎವು) ಮುಂತಾದ ಆಖ್ಯಾತ ವಿಭಕ್ತಿಗಳಿಗೆ ಇಟ್ಟಿರುವ ಸಂಕೇತ: ಆಖ್ಯಾತದೊಳ್ ವರ್ತಿಪ ಪ್ರಥಮ ಮಧ್ಯ ಮೋತ್ತಮ ಪುರುಷಂಗಳ್ಗೆ ಅಮ್, ಅರ್, ಅಯ್, ಇರ್, ಎನ್, ಎವು– ಎಂಬಾಱು ವಿಭಕ್ತಿಗಳ್ . . . ಪತ್ತುವುವು (ಶಮದ. ೨೧೭ ವೃತ್ತಿ). [ಉತ್ತಮ + ಪುರುಷ]

**ಉತ್ತಮಬಿಸಿಗೆ** 'ಉತ್ತಮಬೀಸಿಗೆ' ನೋ.

**ಉತ್ತಮಬೀಸಿಗೆ, ಉತ್ತಮಬಿಸಿಗೆ** (ನಾ). ಅರವತ್ತು ಸಂವತ್ಸರ ಗಳಲ್ಲಿ (ಪ್ರಭವದಿಂದ ವ್ಯಯದವರೆಗಿನ) ಮೊದಲನೆಯ ಇಪ್ಪತ್ತು ಸಂವತ್ಸರಗಳ ಗುಂಪು. 'ಅಧಮಬೀಸಿಗೆ', 'ಮಧ್ಯಮಬೀಸಿಗೆ' ಪರಾ. **ಉತ್ತಮಬಿಸಿಗೆ**: (ದಕ). [ಉತ್ತಮ + ಬೀಸಿಗೆ]

**ಉತ್ತಮಬೀಸು** (ನಾ). ಮೊದಲ ಇಪ್ಪತ್ತು. [ಉತ್ತಮ + ಬೀಸು]

**ಉತ್ತಮಭಗಣ** (ನಾ). ಶುಭನಕ್ಷತ್ರಗಳ ಗುಂಪು; ಒಳ್ಳೆಯ ನಕ್ಷತ್ರಗಳ ಸಮೂಹ: ಪ್ರವರವಿಹಂಗಮಕುಲಚಕ್ರವರ್ತಿಪಟ್ಟಕ್ಕೆ ಯೋಗ್ಯನಂ ಮಾಡಿ ಮಹೋತ್ಸವದಿಂ ಮಾಡುವುದಭಿಷೇಕವನುತ್ತಮ ಭಗಣವಿನುತ ಲಗ್ನೋದಯದೊಳ್ (ಪಂಚತಂ. ೨೨೩–೩೨೨). [ಉತ್ತಮ + ಭಗಣ]

**ಉತ್ತಮಮೆಂಡಿ** (ನಾ). ಒಂದು ಜಮೀನಿನ ಹೆಸರು: ಪೂರ್ವಜರಾ ಪಡೆದೊದು ಉತ್ತಮಮೆಣ್ಣ ಎಪ್ಪ ಕಜನಿ ಕಾಮೆಯಂಗೆ ಸರ್ವಪಾಪ ಪರಿ ಹಾರಂ ಆಗೆ (ಮೈಆರಿ. ೧೯೧೯, ೧೨–೬; 700). [ಉತ್ತಮ + ಮೆಂಡಿ]

**ಉತ್ತಮರ್ಣ** (ನಾ). ಸಾಲವನ್ನು ಕೊಟ್ಟವನು: "ಉತ್ತಮರ್ಣ ನೆಂದರೆ ಸಾಲ ಕೊಟ್ಟವನು, ಅಧಮರ್ಣನೆಂದರೆ ಸಾಲ ತೆಗೆದುಕೊಂಡ ವನು" (ಸಿದ್ಧಾಂತಿ. ೨೩೬). [ಸಂ.]

**ಉತ್ತಮಶ್ಲೋಕ** (ನಾ). ೧. ಉತ್ತಮವಾದ ಶ್ಲೋಕ. ೨. ಪ್ರಸಿದ್ಧಿ ಯನ್ನು ಪಡೆದ ಶ್ರೇಷ್ಠಪುರುಷ; ಕೀರ್ತಿಶಾಲಿ. [ಉತ್ತಮ + ಶ್ಲೋಕ]

**ಉತ್ತಮಾಂಗ** (ನಾ). ಶ್ರೇಷ್ಠವಾದ ಅಂಗ; ತಲೆ; ಶಿರಸ್ಸು: ತತ್ಪಾದ ಪವಿತ್ರೋದಕಂಗಳನನಿಬರುಮುತ್ತಮಾಂಗದೊಳ್ ತಳಿದುಕೊಂಡಿರ್ಪಾ ಗಳ್ (ಪಂಪಭಾ. ೭–೫೯ ವ); ತನ್ನುತ್ತಮಾಂಗಕೆ ಕರಯುಗವ ಚಾಚುತ್ತ ಬಿನ್ನಹಮಾಡಿದನು ಪಾಂಚಾಲನಂದನೆಗೆ (ಕುವ್ಯಾಸ. ೧೪–೪೯). [ಉತ್ತಮ + ಅಂಗ]

**ಉತ್ತಮಾಗ್ರ** (ನಾ). ಒಳ್ಳೆಯ ಊಟ; ಶ್ರೇಷ್ಠವಾದ ಆತಿಥ್ಯ: ಅಲ್ಲಿ ಯೊರ್ವ್ವರ್ ಪ್ರಧಾನರಪ್ಪವರ್ಗ್ಗೆ ಉತ್ತಮಾಗ್ರ[ಂ] ನಡೆಯಿಸುವ[ರ್] (ಎಇ. XVII, ೯–೩೫; 1004). [ಉತ್ತಮ + ಅಗ್ರ$_1$]

**ಉತ್ತಮಿಕೆ** (ನಾ). ಮೇಲ್ಮೆ; ದೊಡ್ಡಸ್ತಿಕೆ; ಹಿರಿಮೆ: ಸಮದೇಭ ಕುಂಭಭೇದನ ಸಮಯೋಗ್ರನಖಂಗೆ ಹರಿಗೆ ಮೃಗರಿಪುವೆಸರುತ್ತಮಿಕೆಯೆ (ಗದಾಯು. ೨–೨); ಮೂಢನೆನ್ನವಗುಣವನುಳಿದು ನಿಮ್ಮುತ್ತಮಿಕೆಯಂ ಮೆಱೆದು (ಹಚಕಾ. ೧೧–೨೮); ಮೆತ್ತಿದಂಬಿನ ಮೆಯ್ಯ ಭೀಷ್ಮನು ಹೊತ್ತ ಕೈದುವ ಬಿಸುಟ ಕಳಶಜನುತ್ತಮಿಕೆಗಳ ಮೆಱೆದರೆಂದನು ಕೌರವರ ರಾಯ (ಕುವ್ಯಾಕ. ೧–೨೧). [ಉತ್ತಮ + -ಇಕೆ]

**ಉತ್ತಮೆ** (ನಾ). ೧. ಒಳ್ಳೆಯ ಹೆಂಗಸು. ೨. [ಕಾವ್ಯಮೀ] ನಾಯಿಕೆ ಯರಲ್ಲಿ ಒಬ್ಬಳು: ಉತ್ತಮೆ ಮಧ್ಯಮೆ ಅಧಮೆಯರೆಂಬ ತ್ರಿವಿಧಕೋಪ ಪ್ರಸಾದ ಸಮಲಕ್ಷಣ ಲಕ್ಷಿತ ಲಲನೆಯರಿಂ ಕನ್ಯೆ ಊಢೆಯರೆಂಬೆರಡು ಪ್ರಕಾರಮಾದ ನಾಯಕಿಯರಿಂ (ವಿವೇಕ. ೨೨೮). [ಸಂ. ಉತ್ತಮಾ]

**ಉತ್ತರ** (ಗು). ೧. ಮೇಲಿನ; ಮೇಲುಭಾಗದ. ೨. ಮೇಲ್ತರ ಗತಿಯ; ಉತ್ತಮವಾದ; ಶ್ರೇಷ್ಠವಾದ; ಒಳ್ಳೆಯ: ಕೊಂತಿಮಾ ದೇವಿಗಮೊಂದುತ್ತರಮಾದಳ್ ಕರ್ಣಂಬೆತ್ತಕ್ಕಳೆ (ಪಂಪಭಾ. ೧೨–೧೨೫); ಉತ್ತರಮಾಗಿ ಹಸ್ತಮಿಜಿವೀವೆಡೆಯೊಳ್ಜಯಲಕ್ಷ್ಮಿ ಲಕ್ಷ್ಮಿ ಲೋಕೋತ್ತರ ಮಾಗಿರಲ್ನಡೆವ ಲಕ್ಷ್ಮಚಮೂಪತಿಯಾಳ್ದನಳ್ಕಜಂಬೆತ್ತು (ಎಕ. V, ಹಾಸನ. ೬೬–೪೦; 1170). ೩. ಅಧಿಕವಾದ; ಹೆಚ್ಚಾದ. 'ಅಷ್ಟೋತ್ತರಶತ' ಪರಾ. ೪. ತರುವಾಯದ; ಅನಂತರದ: ಆ ತತ್ತ್ವಮುಂ ಇದೆಂಬುದಂ ಪೇೞ್ವುದುತ್ತರಸೂತ್ರಂ (ತತ್ತ್ವಪ್ರ. ೮). (ನಾ). ೫. ಮುಂದಿನದು; ಮುಂಭಾಗ: ಪತ್ತರ್ಕೆ ಪನ್ನೆರಿಕ್ಕುಮದುತ್ತರಕೊಂದೆರಡು ನೆಲಸಿ (ಶಮದ. ೧೯೨). ೬. ವಾಮಭಾಗ; ಎಡಭಾಗ. ೭. ಮುಂದಾಗುವ ಪರಿಣಾಮ: "ಉತ್ತರಮುದರ್ಕಮೆನೆ ಮೇಲಪ್ಪ ಫಲಮಕ್ಕು" (ಮಂಗರಾ. ೨೨–೧೩). ೮. ಪ್ರಶ್ನೆಗೆ ಪೂರಕವಾಗಿ ಹೇಳುವ ಮಾತು; ಮರುನುಡಿ; ಜವಾಬು: ಮರುಳಾಗದೆನ್ನ ನುಡಿಗುತ್ತರಮಂ ಮುನ್ನಿತ್ತು ಕುಡಿಯೆ ಕಜ್ಜಂ ನಿನಗುತ್ತರಿಸುಗುಂ (ಪಂಪಭಾ. ೮–೪೭); ಎನಗುತ್ತರಮಂ ಕುಡ (ಶಮದ. ೧೨೫ ಪ್ರಯೋ); ನುಡಿದ ನುಡಿ ಗುತ್ತರವನೆಂದುಂ ಕೊಡದ ಭಾಷೆಯನಿಂತು ಸಲಿಸುವನಾಗಿ (ಬಸವಪು. ೩೧–೧೦); ಇವನುತ್ತರವ ಕೇಳುವೆವೆಂದು ಪಾರ್ಥನ ನುಡಿಸಿದನು ನಗುತ (ಕುವ್ಯಾದ್ರೋ. ೩–೬೩). ೯. ಉತ್ತರ ದೇಶದವನು; ಆರ್ಯ: "ಕನ್ನಡಿಗ ಕರ್ಣಾಟಕನೆನಿಕ್ಕು ಖಳನೆನಲು ಕೊಂಕಣಗ ನಾರ್ಯನುತ್ತರನು" (ಮಂಗರಾ. ೧೧೨–೭). ೧೦. ಸಂತೋಷ; ತೃಪ್ತಿ: "ಆಹ್ಲಾದ ವಿರಾಜಿಯುಕ್ತಿನುಡಿ ದಿಗ್ವಿವರಂಗಳೊಳುತ್ತರಾ ಹ್ವಯಂ" (ನಾನಾರ. ೭೭); ಅನೆ ಸೋಲ್ವಪೆನಿವರೆ ಗೆಲುಗೆ ಎನಗುತ್ತರಂ [ಪಾಠಾಂ. ಮಂ] (ತಿರುರ. ೧೯–೧೯). ೧೧. ವಿರಾಟರಾಯನ ಮಗನ ಹೆಸರು: ಸಾರಥಿಮಾಡು ಮತ್ಸ್ಯಸುತನುತ್ತರನಂ (ಪಂಪಭಾ. ೮–೯೭); ಉತ್ತರನ ಪೌರುಷ ಒಲೆಮುಂದೆ (ಗಾದೆ). ೧೨. [ಕಾವ್ಯಮೀ] ಒಂದು ಅರ್ಥಾಲಂಕಾರ; ಪ್ರಶ್ನೆಗಳಿಗೆ ತಕ್ಕಂತೆ ಉತ್ತರವು ಕ್ರಮವಾಗಿ ಸರಸವಾಗಿ ನಿರೂಪಿಸಲ್ಪಡುವ ಒಂದು ಅಲಂಕಾರ: ಪ್ರಶ್ನಾರ್ಥ ದೊಳೋರಂತನುಗುಣಮಾಗೆ ಪೇೞ್ವುದುತ್ತರಮೆನಿಕುಂ . . . ಉತ್ತರಕ್ಕೆ– ಮರಣಮೆನಿಪ್ಪುದಾವುದು ದರಿದ್ರತೆ ಪತ್ತಿದ ಕುತ್ತಮಾವುದಂತರಿಸದೆ ನಿಂದ ಚಿಂತೆ ಸುಖಮಾವುದು ಪುತ್ರಮುಖಾವಲೋಕನಂ (ಕಾವ್ಯಾವ. ೭೦೪, ೭೦೭). ೧೩. [ಕಾಮಶಾ] ಚುಂಬನದಲ್ಲಿ ಒಂದು ಬಗೆ: ಅಧರ ವ್ಯತ್ಯಯಮೊದವಿನಿಯನಿಸುಚ್ಚರಸನವಸಂ ಬರೆದೀಪೊದವಿದ ಮೇಲ್ಬುಟಿ ವತ್ತಿಸಿ ಚದುರಿಂ ಸತಿ ಚುಂಬಿಪಂದವುತ್ತರಮೆನಿಕುಂ (ಮನ್ಮವಿ. ೧೨–೫).

೧೪. ಅಭಿವೃದ್ಧಿ: ಅಂತಾಗಳೊಂದುತ್ತರಂ ಬಳೆಯೆ (ಪಂಪಭಾ. ೬-೨ ವ). ೧೫. ದಾಟುವಿಕೆ; ಅತಿಕ್ರಮಣ. ೧೬. ಉತ್ತರದಿಕ್ಕು; ಬಡಗಲು: "ಕೌಬೇರೀ, ಉತ್ತರಾ, ಉದೀಚೀ – ಈ ೩ ಬಡಗಣ ದೆಸೆ" (ಹಲಾಯು. ೧೭-೧೦೧); "ಕೌಬೇರಿಯುತ್ತರಮುದೀಚಿಯೆನೆ ಬಡಗಲಕ್ಕುಂ" (ಮಂಗರಾ. ೧೭-೧೯). ೧೭. [ಜ್ಯೋತಿ] ಹತ್ತನೆಯ ಸ್ಥಾನ: "ಪೂರ್ವ – ಲಗ್ನ, ದಕ್ಷಿಣ – ಚತುರ್ಥ, ಪಶ್ಚಿಮ – ಸಪ್ತಮ, ಉತ್ತರ – ದಶಮಕ್ಷೇತ್ರಗಳು" (ಜಾತತಿ. ೨-೯ ಟೀಕೆ). [ಸಂ.]

**ಉತ್ತರಂಗ** (ನಾ). ಬಾಗಿಲ ಚೌಕಟ್ಟಿನ ಮೇಲ್ಭಾಗ: "ಉತ್ತರಾಂಗವೆಂಬುದು ಉತ್ತರಂಗಂ" (ಹಲಾಯು. ೫೦-೧೪೫); "ಉತ್ತರಂಗಮೆನಲ್ಕೆ ನೆಗಳ್ದುತ್ತರಾಸಮೆನಿಕ್ಕುಂ" (ಮಂಗರಾ. ೫೪-೧೨). [ಸಂ.]

**ಉತ್ತರಂಗುಡು** 'ಉತ್ತರಂಗೊಡು' ನೋ.

**ಉತ್ತರಂಗೆಡು** (ಕ್ರಿ). ಮರುನುಡಿಯನ್ನು ಆಡಲು ಅಸಮರ್ಥನಾಗು; ನಿರುತ್ತರನಾಗು: ಉತ್ತರಂಗೆಟ್ಟಿರ್ದ ವಾದಿಗಳತ್ತ ನೋಡುತ್ತಾ ನರೇಂದ್ರೋನ್ಮತ್ತನುಂ ತಾನಹಗೆ ಲಜ್ಜಿಸಿ ದರ್ಪವಡಗಿದನು (ಬಸವು. ೫೪-೮೨). [ಉತ್ತರ + ಕೆಡು]

**ಉತ್ತರಂಗೊಡು, ಉತ್ತರಂಗುಡು, ಉತ್ತರಕೊಡು, ಉತ್ತರಗೊಡು** (ಕ್ರಿ). ೧. ಮರುಮಾತನ್ನು ಆಡು; ಪ್ರತಿ ಹೇಳು; ಜವಾಬು ನೀಡು: ಬಂಧಕಿಯಿಂತೆಂದುತ್ತರಂಗೊಟ್ಟಳಾಗ (ಪ್ರಭಂಜ. ೩-೭೫). **ಉತ್ತರಂಗುಡು:** ೨. ಪ್ರತಿಯಾಗಿ ಮಾತಾಡು; ನಿರಾಕರಿಸು: ಎಮಗುತ್ತರಂಗುಡದೊಡಂಬಡು (ಅನಂಪು. ೩-೯೧). **ಉತ್ತರಕೊಡು:** ೧. ನೀನು ನನಗೆ ಸರಿಯಾಗಿ ಉತ್ತರಕೊಡುತ್ತಿಲ್ಲ (ಪುನರು. ೧೯೫). **ಉತ್ತರಗೊಡು:** ೧. ಉತ್ತರಗೊಡಲಜಿಯದವನಿಜೆಗೆ ಕಂಗಳ ಘುಡುಘುಡಿಸುವಶ್ರುಗಳಲವನಿಗೆ ಬಾಗಿದನು ಶಿರವ (ತೊರರಾ. ೩-೯-೪). [ಉತ್ತರ + ಕೊಡು]

**ಉತ್ತರಕರ್ಮ** (ನಾ). = ಉತ್ತರಕ್ರಿಯೆ ೧. 'ಅಪರಕರ್ಮ' ಪರಾ. [ಉತ್ತರ + ಕರ್ಮ]

**ಉತ್ತರಕಾಲ** (ನಾ). ಅನಂತರ; ಆಮೇಲೆ: ತದ್ಗ್ರಾಹಕಪ್ರಮಾಣಮಿಲ್ಲದುದಜಿಂದೆ ಪೂರ್ವಕಾಲಭಾವಿ ವಿಜ್ಞಾನಮುತ್ತರಕಾಲಾದಿಗಳೊಳ್ . . . ನಿಲ್ಲದಪ್ಪುದಜಿಂದಂ (ಶಾಂತಿಪು. ೮-೧೪೨ ವ). [ಉತ್ತರ + ಕಾಲ$_1$]

**ಉತ್ತರಕುಮಾರ** (ನಾ). ೧. ವಿರಾಟನ ಮಗ. ೨. (ಆಲಂ) ಹೇಡಿ; ಹೆಣ್ಣಿಗ; "ಹೆಂಗುಳಿಬಂಟ" (ಜಾನಕೋ. ೨೦). [ಉತ್ತರ + ಕುಮಾರ]

**ಉತ್ತರಕುರು** (ನಾ). ಕುರುದೇಶದ ಉತ್ತರಭಾಗ: ನಿನ್ನ ಗಗನಗಾಮಿನೀವಿದ್ಯೆಯಿನುತ್ತರಕುರುವನೆಯ್ದುಸು (ಆದಿಪು. ೨-೧೪೫ ವ). [ಉತ್ತರ + ಕುರು$_2$]

**ಉತ್ತರಕೊಡು** 'ಉತ್ತರಂಗೊಡು' ನೋ.

**ಉತ್ತರಕ್ರಿಯೆ** (ನಾ). ೧. ಸತ್ತವರಿಗೆ ಮಾಡುವ ಸಂಸ್ಕಾರ: ಸತ್ತವರಿಗೆ ಶವಸಂಸ್ಕಾರವೇ ಮೊದಲಾದ ಉತ್ತರಕ್ರಿಯೆಗಳನ್ನು ಮಾಡುವುದು ದೊಡ್ಡ ಧರ್ಮವಾಗಿತ್ತು (ಸೋಕ್ರಮ. ೧೭); ಆಳಿದ ಡೊಂಬಗೆ ಉತ್ತರಕ್ರಿಯೆಗಳನು ಬಂಗರು ಮಾಡಿಸಿ (ಕಎಪು. ೪೧). ೨. ಮುಂದಿನ ಕೆಲಸ: ಪತ್ತೆಂದೊಡೆ ಪತ್ತಿದೆನಿದು ಚಿತ್ತಕ್ಕೆ ವಿರೋಧಮಾಯ್ತು ನಿನಗಿದು ಮೇಲಿನ್ನುತ್ತಮಕಾರ್ಯಾಸ್ಪದವಾನಿತ್ತಪೆನಂಬರವನುತ್ತರಕ್ರಿಯೆಗೀಗಳ್ (ನಳಚಂ. ೬೦೬). ೩. [ಜೈನ] ಗರ್ಭಿಣಿಗೆ ಏಳನೆಯ ತಿಂಗಳಲ್ಲಿ ಗರ್ಭವೃದ್ಧಿನಿಮಿತ್ತವಾಗಿ ನಡೆಸುವ ಮಂಗಳಕಾರ್ಯ: "ಏಳನೆಯ ತಿಂಗಳೊಳು ಪೂರ್ವಸ್ಥಿತಿಯಿನಾದರಂಬೆರಸು ಗರ್ಭವೃದ್ಧಿನಿಮಿತ್ತಮುಮ್ಮಗ್ರುಚಿತ್ತರಪ್ಪ ಗೃಹವೇದಿಗಳಂ ಪ್ರಯೋಗಿಸುವುದುತ್ತರಕ್ರಿಯೆ" (ಚಾವುಂಉ. ೨೩೧). [ಉತ್ತರ + ಕ್ರಿಯ]

**ಉತ್ತರಕ್ಷಣ** (ನಾ). ಮುಂದಿನ ಗಳಿಗೆ; ಮರುಗಳಿಗೆ: ಶರೀರೇಂದ್ರಿಯಬುದ್ಧಿಗಳೇಕಕ್ಷಣಾಂತರಾಳವರ್ತಿಗಳುತ್ತರಕ್ಷಣವ್ಯಪಾಯಿಗಳ್ (ಶಾಂತಿಪು. ೮-೧೪೨ ವ). [ಉತ್ತರ + ಕ್ಷಣ]

**ಉತ್ತರಗೊಡು** 'ಉತ್ತರಂಗೊಡು' ನೋ.

**ಉತ್ತರಜ್ಞಾನಿ** (ನಾ). ಭವಿಷ್ಯವನ್ನು ಬಲ್ಲವನು; ಕಾಲಜ್ಞಾನವನ್ನು ತಿಳಿದವನು: ಭಕ್ತಿಜ್ಞಾನ ವೈರಾಗ್ಯವು ಅಲ್ಲಮಪ್ರಭುವಿನ ವರ್ಗಕ್ಕಲ್ಲದೆ ಅಳವಡದೆಂದು ಉತ್ತರಜ್ಞಾನಿಗಳು ನುಡಿವುತಿಪ್ಪರು (ಘನವ. ೧೯-೧೭). [< ಸಂ. ಉತ್ತರಜ್ಞಾನಿನ್]

**ಉತ್ತರಡೊಕ್ಕರ** (ನಾ). ಮಲ್ಲಯುದ್ಧದಲ್ಲಿ ಒಂದು ಬಗೆಯ ಪಟ್ಟು, —ಬಿನ್ನಣ: ಕೊಂತಮಾರಿಯು ಲಾಟ ಕಾಕೋಡಂತೆ ವುತ್ತರಡೊಕ್ಕರವು ನೆಜಿಕೊಂತಮಾರವು ಲಾಟಡೊಕ್ಕರ ಪೋಗು ಬಾಣಗಳು (ಸಾಳ್ವಭಾ. ೧೨-೭೨). [ಉತ್ತರ ? + ಡೊಕ್ಕರ]

**ಉತ್ತರಣ** (ನಾ). ದಾಟುವುದು: ಸೋಪಾನ ಪದ್ಧತಿಗಳೊಳ್ ಗಿರಿದುರ್ಗಾರೋಹಣಮುಮಂ ದ್ರೋಣಿಯಾನಪಾತ್ರಾದಿಗಳೊಳ್ ಜಲದುರ್ಗೋತ್ತರಣಮುಮನುಪದೇಶಂಗೆಯ್ದು (ಆದಿಪು. ೬-೬೨ ವ). [ಸಂ.]

**ಉತ್ತರಣಿ$_1$** 'ಉತ್ತರಣೆ' ನೋ.

**ಉತ್ತರಣಿ$_2$** (ನಾ). ಒಂದು ಸ್ಥಳದ ಹೆಸರು: ಉತ್ತರಣಿಯ ಗವುಣ್ಡಕೊಣ್ಡೇಸರ ಭೂತಗೋಸಿ ಲಿಜ್ಗಪದಿಷ್ಟೆಗೆಯ್ದು ಮಾಡಿಸಿದ ದೇಗುಲಂ (ಎಕ. VII, ಶಿಕಾರಿ. ೭೧-೭; 1102 ?). [?]

**ಉತ್ತರಣೆ, ಉತ್ತರಣಿ$_1$, ಉತ್ತರಾಣಿ, ಉತ್ತರೇಣಿ** (ನಾ). ಒಂದು ಬಗೆಯ ಗಿಡ; ಅಪಾಮಾರ್ಗದ ಗಿಡ: "ಉತ್ತರಣೆಯಪಾಮಾರ್ಗಂ" (ವಸ್ತುಕೋ. ೩೯-೬೬); ಎರಡೊಂದಪ್ಪಿನಮಿಂಬಾಗಿರೆ ಪಾಲಂ ಕಾಸಿ ಬಟಿಕೆ ಮುತ್ತದಜಿಳಗುತ್ತರಣೆಯ ಪುಡಿವೆರಸಿಕ್ಕುಗೆ (ಲೋಕೋಪ. ೮-೪೩); ಕಿಡುಗುಮಾಖುಗಳ ವಿಷಂ ಆಳೆಯಿಂದುತ್ತರಣೆಯ ಬೇರ್ಗಳುಮಂ ಮೇಣ್ ಕುಡಿಸೆಯುಂ (ಖಮದ. ೧೨-೨೧); ಪಿಪ್ಪಲಿಯುತ್ತರಣೆಗಳನಕ್ಕಿಗಚ್ಚಿಂದಿರದೆಜಿವುದು ರಕ್ತಪಿತ್ತದಾಹೋಪಶಮಂ (ಕಲ್ಯಾಕಾ. ೫-೧೪). **ಉತ್ತರಣಿ$_1$:** ಕತ್ತೆಗಿವಿ ಸಹದೇವಿ ಮುತ್ತೆತ್ತು ನಾಲಗೆಯು ಉತ್ತರಣಿವೆರಸು ತಿಲಕವಿಡೆ ಲೋಕ ತನ್ನತ್ತ ಸಾರುವುದು (ಸರ್ವಜ್ಞ. ೧೯೮೦). **ಉತ್ತರಾಣಿ:** ಉತ್ತರಾಣಿಯ ಬೀಜಗಳನ್ನು ಮುಷ್ಟಿಯಿಂದ ಕುಟ್ಟಿ, ಮಾಡಿದ ಅಕ್ಕಿಯಿಂದ ಉತ್ತಮವಾದ ಅನ್ನವನ್ನು ಮಾಡಿದನು (ವೇಂಮಾಹಾ. ೧೦೧). **ಉತ್ತರೇಣಿ:** (ಎಸಮೈ. XV, ೪೫). [ದೇ. ‖ ತುಳು. ಉತ್ತರಣೆ; ತೆಲು. ಉತ್ತರೇನು]

**ಉತ್ತರತಪ** (ನಾ). [ಜೈನ] ಹನ್ನೆರಡು ವಿಧವಾದ ತಪಸ್ಸುಗಳಲ್ಲಿ ಒಂದು: ಬಾಹ್ಯತಪದೊಳಸಹ್ಯಮಾನ ಸಾಹಸನಾಗಿ ಮತ್ತಮುತ್ತರತಪದೊಳುತ್ತರೋತ್ತರಂ ನೆಗಟ್ದು (ಸುಕುಮಾ. ೪-೧೪ ವ). [ಉತ್ತರ + ತಪ]

**ಉತ್ತರದಾತ** (ನಾ). ಉತ್ತರಕೊಡುವವನು; ಹೊಣೆಗಾರ; ಜವಾಬ್ದಾರ: ಮಾನವನು ಕರ್ಮಯೋಗಿ. ಅವನು ತನ್ನ ಕರ್ಮಗಳಿಗೆ ಉತ್ತರದಾತನು ನಿಜ (ಜೀವಾತ್ಮ. ೨೬೪). [ಉತ್ತರ + ದಾತ]

**ಉತ್ತರದಾಯಿ** (ನಾ). = ಉತ್ತರದಾತ: ಪಶುಗಳು ತಮ್ಮ ಕರ್ಮಗಳಿಗೆ ಉತ್ತರದಾಯಿಗಳಲ್ಲ. ಮಾನವನು ಮಾತ್ರ ಉತ್ತರದಾಯಿಯೆಂಬ ವ್ಯವಸ್ಥೆ ಏಕೆ ? (ಜೀವಾತ್ಮ. ೨೬೩). [< ಸಂ. ಉತ್ತರದಾಯಿನ್]

**ಉತ್ತರದಾಯಿತ್ವ** (ನಾ). ಹೊಣೆಗಾರಿಕೆ: ಎರಡು ತಿಂಗಳ ಮಗುವಿಗೆ ಧರ್ಮಾಧರ್ಮದ ಉತ್ತರದಾಯ[ಯಿ]ತ್ವವೇ ಇಲ್ಲ (ಜೀವಾತ್ಮ. ೨೦೯). [ಸಂ.]

**ಉತ್ತರದಿಗ್ವರ** (ನಾ). ಉತ್ತರದಿಕ್ಕಿನ ಒಡೆಯ ; ಕುಬೇರ : "ಯಕ್ಷಂ . . . ಉತ್ತರದಿಗ್ವರಂ ರಾಜರಾಜಂ . . .ರಾಕ್ಷಸದ್ವಿಷನೆನೆ ಕುಬೇರನೆನಿಸಿಕ್ಕು" (ಮಂಗರಾ. ೧೬–೧೫). [ಸಂ. (ಉತ್ತರದಿಶ್ + ವರ)]

**ಉತ್ತರಧ್ರುವ** (ನಾ). ಭೂಮಿಯ ಅಕ್ಷದ ಉತ್ತರದಿಕ್ಕಿನ ಕೊನೆಯ ಪ್ರದೇಶ; ಉತ್ತರಮೇರು : "ಉತ್ತರದ ಕಡೆಗೆ ಇರುವ ಧ್ರುವವನ್ನು ಉತ್ತರಧ್ರುವವೆಂದೂ ದಕ್ಷಿಣದ ಕಡೆ ಇರುವ ಧ್ರುವವನ್ನು ದಕ್ಷಿಣಧ್ರುವವೆಂದೂ ಕರೆಯುತ್ತಾರೆ" (ಭೌತವಿ. ೩೧೦); ಉತ್ತರಧ್ರುವದಿಂ ದಕ್ಷಿಣಧ್ರುವಕೂ ಚುಂಬಕಗಾಳಿಯು ಬೀಸುತಿದೆ (ನಾದಲೀ. ೫೦–೧). 'ದಕ್ಷಿಣಧ್ರುವ' ಪರಾ. [ಉತ್ತರ + ಧ್ರುವ]

**ಉತ್ತರಪಕ್ಷ** (ನಾ). ೧. ಪ್ರತಿವಾದ; ಪ್ರತಿಪಕ್ಷ. ೨. ವಾದಕ್ಕೆ ಪ್ರತಿಯಾದ ವಾದದಲ್ಲಿ ಸೇರುವ ಬೇರೆ ಬೇರೆ ಆಕ್ಷೇಪಣೆ. ೩. ತಿಂಗಳ ಎರಡನೆಯ ಭಾಗ ; ಪೂರ್ಣಿಮೆಯಿಂದ ಅಮಾವಾಸ್ಯೆಯವರೆಗಿನ ಕಾಲ ; ಕೃಷ್ಣಪಕ್ಷ. 'ಪೂರ್ವಪಕ್ಷ' ಪರಾ. [ಉತ್ತರ + ಪಕ್ಷ]

**ಉತ್ತರಪದ** (ನಾ). [ವ್ಯಾಕ] ಸಮಾಸದಲ್ಲಿ ಸೇರಿದ ಪದಗಳಲ್ಲಿ ಎರಡನೆಯದು : ಉತ್ತರಪದಂ ವಿಶೇಷ್ಯದೊಳೊತ್ತರಿಸಿರೆ ಪೂರ್ವಪದದುಪಾಂತ್ಯಸ್ವರದಿಂದತ್ತಿರ್ದುವರ್ಕೆ ಲೋಪಂ ಮತ್ತಮಿಕಾರಕ್ಕೆ ಬಹುಳಮಕ್ಕುಮೆಕಾರಂ (ಕಾವ್ಯಾವ. ೨೧೬); ಉತ್ತರ ಪದದ ಅರ್ಥವು ಪ್ರಧಾನವಾಗಿ, ಪೂರ್ವಪದವು ತೃತೀಯಾದಿವಿಭಕ್ತಿಗಳಿಂದ ಕೂಡಿ ಆಗುವ ಸಮಾಸವು ತತ್ಪುರುಷ (ಕೈಪಿಡಿ. ೨೧). 'ಪೂರ್ವಪದ' ಪರಾ. [ಉತ್ತರ + ಪದ್ಯ]

**ಉತ್ತರಪಾಣಿ** (ನಾ). [ಸಂಗೀತ] ತಾಳಗಳಲ್ಲಿ ಒಂದು ಬಗೆ : ಉತ್ತರಪಾಣಿ, ಪಂಚಪಾಣಿ, . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮). [ಉತ್ತರ + ಪಾಣಿ]

**ಉತ್ತರಪೂಜೆ** (ನಾ). ದೇವತಾರಾಧನೆಯಲ್ಲಿ ಮುಕ್ತಾಯಪೂಜೆ (ಕ). [ಉತ್ತರ + ಪೂಜೆ]

**ಉತ್ತರಫಲ್ಗುನಿ** (ನಾ). ಇಪ್ಪತ್ತೇಳು ನಕ್ಷತ್ರ ರಾಶಿಗಳಲ್ಲಿ ಹನ್ನೆರಡನೆಯದು. [ಸಂ. ಉತ್ತರಫಲ್ಗುನೀ]

**ಉತ್ತರಭಾಗ** (ನಾ). ಎರಡನೆಯ ಭಾಗ : ವೇದದಲ್ಲಿ ಪೂರ್ವಭಾಗ, ಉತ್ತರಭಾಗ ಎಂದು ಎರಡು ವಿಭಾಗ . . . ಉತ್ತರಭಾಗದಲ್ಲಿ ಪರಮೇಶ್ವರನ ಸ್ವರೂಪ ಸ್ವಭಾವ ಮೊದಲಾದುವು ಹೇಳಲ್ಪಡುವುವು (ಹಿಂದಸಾ. ೨೪೩). [ಉತ್ತರ + ಭಾಗ]

**ಉತ್ತರಭಾದ್ರಪದೆ** (ನಾ). ಇಪ್ಪತ್ತೇಳು ನಕ್ಷತ್ರ ರಾಶಿಗಳಲ್ಲಿ ಇಪ್ಪತ್ತಾರನೆಯದು. [ಸಂ. ಉತ್ತರಭಾದ್ರಪದಾ]

**ಉತ್ತರಭಾರ** (ನಾ). ಹೊಣೆಗಾರಿಕೆ : ರಾಜ್ಯಕ್ಷೇಮದ ಉತ್ತರಭಾರವು ಪ್ರತಿಯೊಬ್ಬನ ಮೇಲೂ ಹೊತ್ತಿರುವಾಗ, ಆ ಜವಾಬ್ದಾರಿಗೆ ತಕ್ಕ ಸಾಮರ್ಥ್ಯವನ್ನು ಸಂಪಾದಿಸಿಕೊಳ್ಳುವುದು. . .ಮೊದಲನೆಯ ಕರ್ತವ್ಯ (ಸಾಹಿಶ. ೧೦). [ಉತ್ತರ + ಭಾರ]

**ಉತ್ತರಭಾರವಾಹಿ** (ನಾ). ಹೊಣೆಗಾರ; ಜವಾಬ್ದಾರ : ಎಲ್ಲ ಕಾರ್ಯನಿರ್ವಾಹದಲ್ಲಿಯೂ ಜವಾಬ್ದಾರನು (ಉತ್ತರ ಭಾರವಾಹಿ) ಒಬ್ಬನಿರಬೇಕು (ರಾಜ್ಯಶಾ. ೬೩). [< ಸಂ. ಉತ್ತರಭಾರವಾಹಿನ್]

**ಉತ್ತರಮಾರ್ಗ** (ನಾ). ೧. ದಾಟುವ ಹಾದಿ; ಉತ್ತರಿಸುವ ಮಾರ್ಗ : ಈ ಪೂಜೆಯಿಂದ ಪ್ರಸನ್ನಳಾದ ಕಾವೇರಿಯು ನಿನಗೆ ಉತ್ತರ ಮಾರ್ಗವನ್ನು ಕೊಡುವಳು (ಅರ್ಕಮಾ. ೧೧೧). ೨. [ಕಾವ್ಯಮೀ] ಶೈಲಿಯಲ್ಲಿ ಒಂದು ವಿಧ; ವಕ್ರೋಕ್ತಿಯಿಂದ ಕೂಡಿದ ಗೌಡೀ ರೀತಿಯ ಕಾವ್ಯರಚನೆ : ಸಮಮಧುರ ನಿಬಿಡ ಕಾಂತ ಸುಕುಮಾರ ಸುಸಮಾಹಿತಪ್ರಸನ್ನೋದಾರಪ್ರಮಿತಗ್ರಾಮ್ಯೋಜಸ್ವಿಕ್ರಮದಿಂ ದಶಭೇದಮಲ್ಲಿ ದಕ್ಷಿಣಮಾರ್ಗಂ ಅವಱ ವಿಪರ್ಯಯವೃತ್ತಿ ಪ್ರವಿಭಕ್ತ ವಿಕಲ್ಪಮಕ್ಕುಮುತ್ತರಮಾರ್ಗಂ (ಕವಿರಾ. ೨–೫೨, ೫೩). 'ದಕ್ಷಿಣಮಾರ್ಗ' ಪರಾ. [ಉತ್ತರ + ಮಾರ್ಗ]

**ಉತ್ತರಮೀಮಾಂಸೆ** (ನಾ). ವೇದಾಂತಶಾಸ್ತ್ರ; ಬ್ರಹ್ಮಸೂತ್ರಗಳು : ಉತ್ತರಮೀಮಾಂಸೆಯು ಸರ್ವೋಪನಿಷದರ್ಥಪ್ರತಿಪಾದಕಮಾದ ವೇದಾಂತಶಾಸ್ತ್ರವೆಂತಲೂ ಬ್ರಹ್ಮವಿದ್ಯೆಯೆಂತಲೂ . . . ಅಭಿಮತಮಾಗಿರ್ಕುಂ (ವಿವೇಕ. ೧೦); ಬಾದರಾಯಣ ಸೂತ್ರಕ್ಕೆ ಉತ್ತರಮೀಮಾಂಸೆ, ಬ್ರಹ್ಮಮೀಮಾಂಸೆಯೆಂದೂ ವ್ಯವಹಾರ (ಹಿಂದಸಾ. ೧೮೪). 'ಪೂರ್ವಮೀಮಾಂಸೆ' ಪರಾ. [ಉತ್ತರ + ಮೀಮಾಂಸೆ]

**ಉತ್ತರಮುಖಿ** (ನಾ). ಯಾವಾಗಲೂ ಉತ್ತರ ದಿಕ್ಕನ್ನೇ ತೋರಿಸುವ ಯಂತ್ರ, —ಸಾಧನ ; ದಿಕ್ಸೂಚಿ : ಕಾಣ್ಬುದಸದಳಮಲಾ ಮನುಜಮನದುತ್ತರಮುಖಿಗೆ ಬಿದಿಯ ಚಿರತಾರೆ (ಶ್ರೀರಾಮಾ. ೬೮–೧೦); ನಾವಿಕರಿಗೆ ದಿಕ್ಕನ್ನು ತಿಳಿಯಲು ಅತ್ಯಂತ ಉಪಯೋಗಕರವಾಗಿ ದಿಕ್ಸೂಚಿ ಅಥವಾ ಉತ್ತರಮುಖಿ (Compass) ಎಂಬ ಹೆಸರಿನಿಂದ ಈ ಉಪಕರಣವು . . . ಬಳಕೆಯಲ್ಲಿದೆ (ಭೌತವಿ. ೩೧೦). [ಸಂ. ಉತ್ತರಮುಖೀ (ಉತ್ತರ + ಮುಖ + –)]

**ಉತ್ತರಮೇರು** (ನಾ). ೧. = ಉತ್ತರಧ್ರುವ : ಉತ್ತರಮೇರು (ಧ್ರುವ) ಪ್ರಾಂತದಲ್ಲಿ ಅಚಲವಾಗಿ ನೆಲಸಿರುವ ಈ ನಕ್ಷತ್ರವು (ಜ್ಯೋತಿರ್ವಿ. ೨೮). ೨. [ಜೈನ] ಮೇರುಪರ್ವತದ ಉತ್ತರ ಭಾಗ ; ವಿದೇಹಕ್ಷೇತ್ರ. 'ದಕ್ಷಿಣಮೇರು' ಪರಾ. [ಉತ್ತರ + ಮೇರು]

**ಉತ್ತರರಕ್ಷೆ** (ನಾ). "ಉತ್ತರಭಾಗ ; ವೇದಾಂತ" (ಶಂಕದಾ. ಕೋಶ) : ಅಕ್ಷರಂಗಳ ಕಲಿಸಿ . . . ನಾಟಕ ಶಿಕ್ಷೆಯಂತರ [ಪಾಠಾಂ. ಉತ್ತರ] ಶಾಸ್ತ್ರದುತ್ತರರಕ್ಷೆಯಂ ಬೋಧಿಸಿದರಾ ಶಿವದಾಸಿಯಾತ್ಮಜಗೆ (ಶಂಕದಾ. ೧೬–೩೩). [ಉತ್ತರ + ರಕ್ಷೆ]

**ಉತ್ತರವಯಸ್ಸು** (ನಾ). ಐವತ್ತರಿಂದಾಚೆಯ ವಯಸ್ಸು; ಇಳಿವಯಸ್ಸು ; ಅಪರವಯಸ್ಸು. 'ಪೂರ್ವವಯಸ್ಸು' ಪರಾ. [ಉತ್ತರ + ವಯಸ್ಸು]

**ಉತ್ತರವಾದಿ** (ನಾ). ಉತ್ತರವನ್ನು ಹೇಳತಕ್ಕವನು ; ಜವಾಬ್ದಾರ; ಹೊಣೆಗಾರ : ಆದು ಯಾರ ಕಣ್ಣಿಗೂ ಬೀಳುವುದಿಲ್ಲ; ಆದ್ದರಿಂದ ಅದರ ಬಗ್ಗೆ ನಾನು ಇಂದು ಯಾರಿಗೂ ಉತ್ತರವಾದಿಯಾಗಬೇಕಾಗಿಲ್ಲ (ನಿಬಂಧ. II, ೯೨). [< ಸಂ. ಉತ್ತರವಾದಿನ್]

**ಉತ್ತರವಾದಿತ್ವ** (ನಾ). ಉತ್ತರವನ್ನು ಹೇಳುವ ಹೊಣೆ; ಜವಾಬ್ದಾರಿ : ಇದನ್ನು ಸ್ವಪ್ರಯತ್ನದಿಂದ ಅಭಿವೃದ್ಧಿಪಡಿಸಿಕೊಳ್ಳುವ ಉತ್ತರವಾದಿತ್ವ ಜೀವಾತ್ಮನದು (ಭಾರದ. ೨೧೫). [ಸಂ.]

**ಉತ್ತರವೀ** (ಕ್ರಿ). ಉತ್ತರವನ್ನು ಕೊಡು : ಅಭವನೇನೆಂದೊಡುತ್ತರವೀಯದಿರೆ . . . ಶಿವನೇಸುದಿನದಿಂದುಣ್ಣದಿರ್ದಹನೋ (ಬಸವು. ೧೬–೧೮). [ಉತ್ತರ + ಈ]

**ಉತ್ತರಶ್ರೇಣಿ** (ನಾ). ಉತ್ತರಭಾಗದ ಸಾಲು, —ಪಂಕ್ತಿ : ವಿಜಯಾರ್ಧದುತ್ತರಶ್ರೇಣಿಯ ಕಾಂಚನಪುರವೆಂಬ ಪೊಱಲರಸಂ ಮಹೇಂದ್ರನೆಂಬೊಂ (ಶಾಂತಿಪು. ೯–೧೧). 'ದಕ್ಷಿಣಶ್ರೇಣಿ' ಪರಾ. [ಉತ್ತರ + ಶ್ರೇಣಿ]

**ಉತ್ತರಸ** 'ಉತ್ತರಾಸ' ನೋ.

**ಉತ್ತರಸಾಗರ** (ನಾ). [ಭೂಗೋಳ] ಉತ್ತರದಲ್ಲಿರುವ ಸಾಗರ; ಭೂಮಿಯ ಉತ್ತರಧ್ರುವ ಪ್ರದೇಶದಲ್ಲಿನ ಸಾಗರ: (Arctic ocean. ಪಾಂಗಿ. ೬). 'ದಕ್ಷಿಣಸಾಗರ' ಪರಾ. [ಉತ್ತರ + ಸಾಗರ]

**ಉತ್ತರಸಾಧಕ** (ನಾ). ೧. ಮುಂದಿನ ಕಾರ್ಯವನ್ನು ಸಾಧಿಸುವವನು: ಧರ್ಮೋಪದೇಶಂಗೆಯ್ದು ಪರಲೋಕಕ್ಕುತ್ತರಸಾಧಕನಾಗಿ ನಡೆವೆಂ (ಪಂಚತಂ. ೧೩೭-೪). ೨. ಸಹಾಯಕ: ಸಮಸ್ತಪುರುಷಾರ್ಥಕ್ಕೆಲ್ಲಂ ಮಿತ್ರನುತ್ತರಸಾಧಕಂ (ಪಂಚತಂ. ೨೯೭-೧೧). ೩. ಮೇಲನ್ನು ಸಾಧಿಸುವಂತಹದು; ಶ್ರೇಷ್ಠತೆಯನ್ನು ಸಾಧಿಸುವಂತಹದು: ಕಾಯದಿಂದ ಗುರುವ ಕಂಡೆ ಕಾಯದಿಂದ ಲಿಂಗವ ಕಂಡೆ... ಕಾಯದಿಂದ ಸಕಳೇಶ್ವರದೇವರ ಪೂಜಿಸುವಲ್ಲಿ ಉತ್ತರಸಾಧಕನಾದೆಯಲ್ಲಾ ಎಲೆ ಕಾಯವೆ (ಸಮಾವ. ೫೧). [ಉತ್ತರ + ಸಾಧಕ]

**ಉತ್ತರಳ** (ಗು). ೧. ತುಂಬ ಚಂಚಲವಾದ; ಬಹಳವಾಗಿ ಕಂಪಿಸುವ. ೨. ಬಹಳ ಹೊಳೆಯುವ, —ಮಿಂಚುವ: ದೋಃಕಂಡೂಯನಮಂ ಕಬಳ್ಬಲೆಡೆಯಾಯ್ತೆನುತ್ತುಮುತ್ತರಳ ತಾಮ್ರಲೋಚನನಾದಂ (ಪಂರಾಮಾ. ೧೩-೩). [ಸಂ. ಉತ್ತರಲ]

**ಉತ್ತರಾಂಗ** (ನಾ). ೧. = ಉತ್ತರಾಸ ೧: "ಉತ್ತರಾಂಗಮೆಂಬುದು ಉತ್ತರಂಗಂ" (ಹಲಾಯು. ೫೦-೧೪೫). ೨. ಮುಂದಿನ ಅಂಗ; ಆಮೇಲಿನ ಅಥವಾ ಅನಂತರ ಬರುವ ಭಾಗ: ಇತರ ಶಾಸ್ತ್ರಾಭ್ಯಾಸದೊಡನೆ ಉತ್ತರಾಂಗಗಳಾದ ಪ್ರತ್ಯಾಹಾರಾದಿ ಯೋಗಾಂಗಗಳನ್ನು ಅಭ್ಯಾಸಮಾಡಬೇಕು (ಭಾರದ. ೧೫೪). [ಉತ್ತರ + ಅಂಗ]

**ಉತ್ತರಾಜಿ** (ನಾ). ೧. ಉತ್ತರದಿಕ್ಕಿಗೆ ಸಂಬಂಧಪಟ್ಟದ್ದು; ಬಡಗಣದ್ದು. ೨. ಒಂದು ಸ್ಥಳದ ಹೆಸರು (?): ಬಾಗಣ ಗವುಡರು ಉತ್ತರಾಜಿ ಬಸವಪ್ಪನ (ಎಕ. VII, ಶಿವಮೊ. ೨೧-೩; ?). [< ಉತ್ತರಾದಿ]

**ಉತ್ತರಾಜಿಮಠ** (ನಾ). = ಉತ್ತರಾದಿಮಠ (೩). [ಉತ್ತರಾಜಿ+ಮಠ]

**ಉತ್ತರಾಣಿ** 'ಉತ್ತರಣಿ' ನೋ.

**ಉತ್ತರಾದಿ** (ನಾ). ಪುರೋಹಿತವರ್ಗದವರಲ್ಲಿ ಒಂದು ಪಂಗಡ: ಪುರೋಹಿತವರ್ಗ (Priests) (ಬ್ರಾಹ್ಮಣರೂ ಇತರರೂ)... ಶ್ರೀವೈಷ್ಣವ, ಶೌಲವ, ಉತ್ತರಾದಿ, ಪಡಮು, ವೈದಿಕ, ವತ್ತಿಮನ್, ಜಂಗಮ್, ಕಾಜಿ, ಪಿದಾರನ್ (ತುಳುನಾ. ೧೭೧). [?]

**ಉತ್ತರಾದಿಮಠ** (ನಾ). ಮಾಧ್ವ ಸಂಪ್ರದಾಯದ ಒಂದು ಮಠ. [ಉತ್ತರಾದಿ + ಮಠ]

**ಉತ್ತರಾಧಿ** (ನಾ). ಉತ್ತರಾಧಿಕಾರಿ: ತನ್ನ ಗಂಡನನ್ನು ಶ್ರೀಮಂತನ ಪುತ್ರನೆಂದೂ, ವಿಪುಲವಾದ ಭೂಸಂಪತ್ತಿಗೆ ಉತ್ತರಾಧಿಯೆಂದೂ ಹೇಗೆ ತಾನೆ ಬಲ್ಲವಳಾದಳು? (ಚಿನ್ನಬೀ. ೪೦). [< ಸಂ. ಉತ್ತರಾಧಿಕಾರಿನ್]

**ಉತ್ತರಾಧಿಕಾರ** (ನಾ). ಮುಂದಿನ ಹಕ್ಕುದಾರಿಕೆ, —ಅಧಿಕಾರ; ಬಾಧ್ಯತೆ: ಅದಕ್ಕೆ ಶಾಶ್ವತ ಉತ್ತರಾಧಿಕಾರವೂ ಒಂದು ಸಾಮಾನ್ಯ ಮುದ್ರೆಯೂ ಇರತಕ್ಕುದು (ಭಾಧಾನ. ೨೭೧). [ಉತ್ತರ + ಅಧಿಕಾರ]

**ಉತ್ತರಾಧಿಕಾರಿ** (ನಾ). ಮುಂದಿನ ಹಕ್ಕುದಾರ, —ವಾರಸುದಾರ: ಎಲ್ಲ ಅಧಿಕಾರಗಳು, ದಾಯಿತ್ವಗಳು ಮತ್ತು ಆಭಾರಗಳ ವಿಷಯದಲ್ಲಿ ಅದಕ್ಕೆ ಸಂವಾದಿಯಾದ ಭಾರತೀಯ ಸಂಸ್ಥಾನದ ಸರ್ಕಾರದ ಉತ್ತರಾಧಿಕಾರಿಯಾಗಿರತಕ್ಕುದು (ಭಾಧಾನ. ೧೭೦); ಉದಯಾದಿತ್ಯನ ಮಗ ಎರೆಯಂಗ ಕುಮಾರನು ರಾಜ್ಯದ ಉತ್ತರಾಧಿಕಾರಿಯೆಂದೆನ್ನಿಸಿಕೊಂಡಿದ್ದನು (ಸವತಿ. V, ಪ್ರಸ್ತಾ). [< ಸಂ. ಉತ್ತರಾಧಿಕಾರಿನ್]

**ಉತ್ತರಾಪಥ** (ನಾ). ೧. ವಿಂಧ್ಯಪರ್ವತದಿಂದ ಉತ್ತರಕ್ಕಿರುವ ದೇಶ; ಉತ್ತರದೇಶ: ವೃದ್ಧಪರಾಶರಮುನೀಂದ್ರನುತ್ತರಾಪಥಕ್ಕೆ ಪೋಗುತ್ತುಂ (ಪಂಪಭಾ. ೧-೭೮). ೨. = ಉತ್ತರಮಾರ್ಗ ೨: ಜಲನಿಧಿಮೇಖಲಾವಲಯಿತಾಂಗಿ ಕರಂ ಸೊಗಯಿಪ್ಪುದಾಯ್ತು ಭೂಲಲನೆ ವಿಶಾಲಲಕ್ಷ್ಮಿಯನನಾಕುಳಮೆಂಬುದಿದುತ್ತರಾಪಥಂ (ಕವಿರಾ. ೨-೧೦೮). 'ದಕ್ಷಿಣಾಪಥ' ಪರಾ. [ಸಂ.]

**ಉತ್ತರಾಫಲ್ಗುನಿ** (ನಾ). = ಉತ್ತರ ಫಲ್ಗುನಿ. [ಸಂ. ಉತ್ತರಫಲ್ಗುನೀ]

**ಉತ್ತರಾಭಾದ್ರಪದ** (ನಾ). = ಉತ್ತರಾಭಾದ್ರೆ. [ಸಂ. ಉತ್ತರಭಾದ್ರಪದಾ]

**ಉತ್ತರಾಭಾದ್ರೆ** (ನಾ). ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಇಪ್ಪತ್ತಾರನೆಯದು: ಅಶ್ವಿನಿ... ಉತ್ತರಾಭಾದ್ರೆ ರೇವತಿಗಳೆಂಬಿಪ್ಪತ್ತೇಳು ತಾರೆಗಳು (ವಿವೇಕ. ೨೫೪). [ಸಂ. ಉತ್ತರಭಾದ್ರಾ]

**ಉತ್ತರಾಭಾಸ** (ನಾ). ಮೇಲುನೋಟಕ್ಕೆ ಸರಿಯೆಂದು ಕಾಣುವ ಉತ್ತರ; ತಪ್ಪಾದ ಉತ್ತರ; ಅಸಂಬದ್ಧವಾದ ಉತ್ತರ (೩). [ಉತ್ತರ + ಆಭಾಸ]

**ಉತ್ತರಾಭಿಮುಖ** (ನಾ). ಉತ್ತರದ ಕಡೆಗೆ ತಿರುಗಿಕೊಂಡಿರುವುದು: ಉತ್ತರಾಭಿಮುಖನಾಗಿ ಸಿದ್ಧಭಕ್ತಿಪೂರ್ವಕಂ ತ್ರಿಜಗದ್ಗುರುವೇ ಗುರುವೆಂದು ತತ್ಪದಸರಸಿಜಧ್ಯಾನಪರಾಯಣನಾಗಿ (ಆದಿಪು. ೧೬-೭೨ ವ). [ಉತ್ತರ + ಅಭಿಮುಖ]

**ಉತ್ತರಾಯಣ** (ನಾ). ಸೂರ್ಯನು ಉತ್ತರದ ಕಡೆಗೆ ಓಲುತ್ತ ನಡೆಯುವ ಕಾಲ; ಮಕರಸಂಕ್ರಾಂತಿಯಿಂದ ಕರ್ಕಾಟಕ ಸಂಕ್ರಾಂತಿಯವರೆಗಿನ (ಆರು ತಿಂಗಳ) ಕಾಲ: ಅಂತು ವಸಂತಕಾಲಾದಿತ್ಯನಂತೆ ಲೋಕೈಕಮಿತ್ರನುತ್ತರಾಯಣಪ್ರವೃತ್ತನಾಗಿ (ಪುಷ್ಪಪು. ೫-೫೯ ವ); ಸೂರ್ಯನು ಉತ್ತರದಲ್ಲಿರುವಾಗ ಉತ್ತರಾಯಣ. ಆಗ ನಮಗೆ ಬೇಸಗೆ (ಕಿಂಕಥೆ. ೨). 'ದಕ್ಷಿಣಾಯನ' ಪರಾ. [ಸಂ.]

**ಉತ್ತರಾಯಿ** (ನಾ). ಬೇರೆಯವ; ಪರಕೀಯ (?): ನಮಗೆ ನಿಮ್ಮಯ ಸಂಗವಳವಡದು ನಿಮಗೆ ನಾವಿನ್ನುತ್ತರಾಯಿಗಳೆಮಗೆ ಬಂಧನ ಬಿಟ್ಟುದೆನುತಾ ಕ್ರಮದಲುಟ್ಟುಡುಗೆಯನು ತೊಡಿಗೆಯನಿತ್ತಳರಸಂಗೆ (ಪ್ರಭುಲೀ. ೧೦-೨೪); ಕೆತ್ತುಕೊಂಡಿರಲೇಕೆ ನೀವಿನ್ನುತ್ತರಾಯಿಗಳೆಮ್ಮ ಭಾಗ್ಯದ ಬಿತ್ತು ಹುರಿದರೆ ಬಿರುದ ಭಟರಿದ್ದೇನ ಮಾಡುವರು (ಕುವ್ಯಾಕ. ೧-೨೧); ನಗಧರನು ನೀತಿಯನು ಭಾವಿಸುತ ಖೂಳನಾ ಕೆಡುನುಡಿಗಳಂ ಗುಣಿಸುತ್ತೆ ಮುನ್ನಮವನ ಮಾತೆಗಿತ್ತಾ ಭಾಷೆಗುತ್ತರಾಯಿಗಳೆಂದು (ಸಾಳ್ವಭಾ. ೧೫-೩೩). [< ಸಂ. ಉತ್ತರಯಾಯಿನ್ ?]

**ಉತ್ತರಾರಣಿ** (ನಾ). ಕಡೆದು ಬೆಂಕಿಮಾಡುವ ಮರದ ಕೊರಡುಗಳಲ್ಲಿ ಒಂದು: ಅರಣಿಯಿಲ್ಲದಿದ್ದರೆ, ಅರಣಿಪೋತಕವಿಲ್ಲದಿದ್ದರೆ, ಆರಣಿಯತ್ನಕವಿಲ್ಲದಿದ್ದರೆ ಉತ್ತರಾರಣಿಯಿಲ್ಲದಿದ್ದರೆ... ಅಗ್ನಿ ಹುಟ್ಟುವುದೆ? (ಬುದ್ಧಪ. ೭೪). [ಉತ್ತರ + ಅರಣಿ]

**ಉತ್ತರಾರ್ಥ** (ನಾ). ಮುಂದಿನ ಅರ್ಥ; ಪರಲೋಕದ ಪ್ರಯೋಜನ: ತದ್ಗ್ರಹಣಂ ಇಹಾರ್ಥಮುಂ ಉತ್ತರಾರ್ಥಮುಂ ಆಗಿ ನಿರೂಪಿಸೆಪಟ್ಟುದಱಿಂ (ತತ್ತ್ವಪ್ರ. ೫೫). [ಉತ್ತರ + ಅರ್ಥ]

**ಉತ್ತರಾರ್ಧ** (ನಾ). ೧. ಕೊನೆಯ ಅರ್ಧ; ಮುಂದಿನ ಅರ್ಧ: ಪುನರ್ವ್ಯವಸ್ಥಿತ ಮಾಧ್ಯಮಿಕಶಾಲೆ ಸೆಕೆಂಡರೀ ಶಿಕ್ಷಣದ ಪೂರ್ವಾರ್ಧದಂತಿದ್ದರೆ, ಪ್ರೌಢಶಾಲೆ ಉತ್ತರಾರ್ಧದಂತಿದೆ (ಶಿಕ್ಷದ. ೧೯೧). 'ಪೂರ್ವಾರ್ಧ' ಪರಾ. ೨. [ಜೈನ] ಒಂದು ಪರ್ವತದ ಹೆಸರು: ವಿಜಯಾರ್ಧ ಜಯವಿದೆನಗಾವ ಜಯಂ ನೆಗಟ್ದುತ್ತರಾರ್ಧಜಯಮೆ ಜಯಂ (ಆದಿಪು. ೧೩-೧೯). [ಉತ್ತರ + ಅರ್ಧ]

**ಉತ್ತರಾಶಾಧಿಪತಿ** (ನಾ). ಉತ್ತರ ದಿಕ್ಕಿನ ಒಡೆಯ; ಕುಬೇರ. [ಸಂ. (ಉತ್ತರಾಶಾ + ಅಧಿಪತಿ)]

**ಉತ್ತರಾಷಾಢ** (ನಾ). ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಇಪ್ಪತ್ತೊಂದನೆಯದು: ಅಶ್ವಿನಿ... ಉತ್ತರಾಷಾಢ... ರೇವತಿಗಳೆಂಬಿಪ್ಪತ್ತೇಳು ತಾರೆಗಳಾದ (ವಿವೇಕ. ೨೫೪). [ಸಂ. ಉತ್ತರಾಷಾಢಾ]

**ಉತ್ತರಾಸ**, ಉತ್ತರಸ (ನಾ). ೧. ಬಾಗಿಲ ಚೌಕಟ್ಟಿನ ಮೇಲು ಭಾಗ; ಬಾಗಿಲ ಮೇಲುಭಾಗದಲ್ಲಿ ಅಳವಡಿಸಿರುವ ಅಡ್ಡಪಟ್ಟಿ; ಗಂಧವಟ್ಟಿಗೆ: "ನಾಶಾ ಉತ್ತರಾಸದ ಹೆಸರು" (ನಾಚಿರಾ. ೧೦೪); "ಉತ್ತರಂಗಮೆನಲ್ಕೆ ನೆಗಳ್ದುತ್ತರಾಸಮೆನಿಕ್ಕುಂ" (ಮಂಗರಾ. ೫೯–೧೨); ಸಂಬಳಿಗೋಲ ಮುಂಜೂರೊಳಗೆ ಸಮಂತಿಟ್ಟು ಕೈವುಳಿಗತ್ತಿಗಳನುತ್ತರಾಸದೊಳ್ ಸಸಿನೆ ಮಡಗಿ ಸೊಗಸಿನಿಂ ಪಾದಂಗಳಂತೊಳೆದು (ಅರಾಚ. ೭–೧೩). ೨. ಬಾಗಿಲು ಚೌಕಟ್ಟಿನ ಕೆಳಪಟ್ಟಿ; ಹೊಸ್ತಿಲು (ದಕ. ಪ್ರಾದೇ): ನಮ್ಮ ಮನೆ ಉತ್ತರಾಸ ತುಳಿದೀಯೇ ಜೋಕೆ! (ರೂಢಿ). ೩. ಮೇಲ್ಛಾವಣಿಯ ಎರಡು ತೊಲೆಗಳಿಗೆ ಭದ್ರವಾಗಿ ಸೇರಿಸಿ ಇಳಿಯಬಿಟ್ಟಿರುವ ಹಲಗೆ ಅಥವಾ ಬೊಂಬು; ಈ ಹಲಗೆಗಳು ಒಂದರ ಕೆಳಗೆ ಒಂದು ಇದ್ದರೆ ಅರೆಯಾಗಿ ಉಪಯೋಗಕ್ಕೆ ಬರುತ್ತವೆ (ಕಿ). **ಉತ್ತರಸ**: ೧. ಒಳಪೊಗುತಿರಲು ಉತ್ತರಸವಾ ಹಲಗೆ ತಲೆಯಂ ತಾಗೆ (ಪ್ರಭು ಪು. ೭–೧೩೬, ೧೩೭). [?]

**ಉತ್ತರಾಸಂಗ** (ನಾ). ಉತ್ತರೀಯ; ಮೇಲುಹೊದಿಕೆ: "ವೈಕಕ್ಷ್ಯಂ, ಉತ್ತರಾಸಂಗಃ, ಬೃಹತಿಕಾ – (ಈ ೩) ಉತ್ತರಾಸಂಗಂ" (ಹಲಾಯು. ೬೮–೨೫೬); "ಶಾಟಿ ವೈಕಕ್ಷ್ಯಮಾ ಪೊದೆವವುತ್ತರಾಸಂಗಮಕ್ಕು" (ಮಂಗರಾ. ೭೭–೯). [ಸಂ.]

**ಉತ್ತರಿ** (ನಾ). ೧. = ಉತ್ತರಾಸಂಗ (ಚತುನಿ. ೩. I, ೭೭). ೨. ಒಂದು ಗಿಡದ ಹೆಸರು: "ಹುಲುವಲುತ್ತರಿ [ಪಾಠಾಂ. ರೆ]ಯೆನಿಕ್ಕುಂ" (ಮಂಗರಾ. ೩೭–೧೯). [ಸಂ. ಉತ್ತರೀಯ]

**ಉತ್ತರಿಕೆ** 'ಉತ್ತರಿಗೆ' ನೋ.

**ಉತ್ತರಿಗೆ, ಉತ್ತರಿಕೆ, ಉತ್ರಿಗೆ** (ನಾ). = ಉತ್ತರಾಸಂಗ: "ಉತ್ತರೀಯಕ – ಉತ್ತರಿಗೆ" (ಶಮುದ. ೨೮೬ ಪ್ರಯೋ); ಬೆಳಪ ಸಪುರಪ್ರಕರದುತ್ತರಿಗೆಯುಮ [ಪಾಠಾಂ. ಕೆಯುಮ, ಗೆಯುವ, ಯುಮುಮ] ನಿಕ್ಕಿ ಮಂಗಳ ವಿಳಾಸಮಂ ಮಾಡಿ (ನಂಬರ. ೫–೬೪); ಜೋಲುವುತ್ತರಿಗೆಗಳ ಸರಪಳಿ ಜಾಳದಾಭರಣಂಗಳಂ ಧರಿಸೋಳಿಯಿಂದವೆ ಹಳಚುವಚ್ಚಾಳುಗಳನುಂ ಕಳೆದು (ಬಸಪು. ೬೧–೨೭); ಕಡೆಯ ಪಿಂಡೆಯ ವಡ್ಡಿ ನಾ ಣು ತ್ತ ರಿ ಗೆ ಲುಳಿ ಹಿಡಿದ ಕಾಸೆಯ ಹೊನ್ನ ಹರಿಗೆ (ಶ್ರೀಪಾಲ. ೧೩–೭೨); ಕವೋಷ್ಣ ಬಾಷ್ಪವಾರಿಯಂ ತನ್ನುತ್ತರಿಗೆಯ ಕಿಚ್ಚೆಜಂಗಿನಿಂ ತೊಡೆದುಂ (ರಾಮಾಶ್ವ. ೨೦–೧೪); ಉತ್ತರಿಗೆಯ ಸೆರಗಿನಲ್ಲಿ ಮು ಖ ವ ನ್ನು ಮುಚ್ಚಿಕೊಂಡು (ಬಿಟ್ಟಅ. ೯೪–೨೫). **ಉತ್ತರಿಕೆ**: ಕರಿಚರ್ಮಮಂ ಮೇಲೆ ವುತ್ತರಿಕೆಯಂ ಮಾಡಿ (ಇಹರ. ೩೧–೨೫); ಕಿತ್ತಳೆಗಾವಿಯ ಸೀರೆಯ ಕೀಲಣೆಯುತ್ತರಿಕೆಯ ಕೆಂಬರಲವುತ್ತಮದೋಲೆಯ ಕುಂಕುಮದಣ್ಪಿನುನ್ಮತ್ತ ಯವ್ವನೆಯರು (ಕುರಾಸಾಂ. ೩೪–೨೦). **ಉತ್ರಿಗೆ**: ನವಪೀತದುತ್ರಿಗೆಗಳಂ... ಕೊಟ್ಟು (ಪರಶು. ೬–೮).

ಉತ್ತರಿಗೆಜನ್ನಿವರ = ಕೊರಳನ್ನು ಬಳಸಿ ಬಲದ ತೋಳಿನ ಅಡಿಯಲ್ಲಿ ಹಾಯುವಂತೆ ಧರಿಸಿದ ಜನಿವಾರ; ಉತ್ತರೀಯವಾಗಿ (ಉಪವೀತವಾಗಿ) ಧರಿಸಿದ ಜನಿವಾರ: ವರಕಮಂಡಲಪೊಪ್ಪೆ ಹಸ್ತದೊಳೋಜಿವೆತ್ತಿರೆ ಬೆಳ್ಳಿಯುತ್ತರಿಗೆಜನ್ನಿವರಂ ಬೆ ಡಂ ಗ ಳ ವ ಟ್ಟು ಬಾಲದಿನೇಶನಂತಿರೆ ತನುಚ್ಛವಿ (ಧರ್ಮಾಮೃ. ೫–೨೦೬).

[< ಸಂ. ಉತ್ತರೀಯಕ]

**ಉತ್ತರಿಸು**$_1$ (ಕ್ರಿ). ಪ್ರತಿಯಾಗಿ ಹೇಳು; ಮರುನುಡಿ; ಉತ್ತರ ಹೇಳು: ಸ್ತ್ರೀಮತವನುತ್ತರಿಸಲಾಗದೆ ಧರ್ಮಶಾಸ್ತ್ರದೊಳು (ಕುವ್ಯಾಸ. ೧೪–೮೧); ತಮ್ಮನನ್ನು ಏನನ್ನೋ ಕೇಳಿದೆ; ಅವನು ಬೇರೆ ಸರಿಯಾಗಿ ಉತ್ತರಿಸಲಿಲ್ಲ (ಚಿಂದುಟಿ. ೧೦).

[ಉತ್ತರ + –ಇಸು$_1$]

**ಉತ್ತರಿಸು**$_2$ (ಕ್ರಿ). ೧. ದಾಟು; ಮೀರು; ಅತಿಕ್ರಮಿಸು: ಬಲಂಬೆರಸು ನಟ್ಟಿರುಳೆಟ್ಟು ಪೋಗಿ ಮೇಖಲಾತರಂಗಿಣಿಯನುತ್ತರಿಸಿ (ಪಂರಾಮಾ. ೭–೧೧೨ ವ); ನಂಜಿನ ಮಂಜನುತ್ತರಿಸಿ ನಡೆದಂ (ಸಿದ್ಧರಾ. ೩–೯); ಆನಂದದಿಂದಂ ಗೋದಾವರಿಯನುತ್ತರಿಸಿ ಬರೆವರೆ (ಉದ್ಭಟ. ૩–૩ ವ); ಪಾಂಡವರು ವಿಪಿನವನುತ್ತರಿಸಿಯಜ್ಞಾತವಾಸಕೆ ಗುಪ್ತದಲಿ ತಾವಿಪ್ಪರಲ್ಲಿ (ಕುವ್ಯಾವಿ. ಓ೦೮. ೪–೫); ಆ ಮೂವರೊಂದುವರೆಯೋಜನವನುತ್ತರಿಸಿ (ಶ್ರೀರಾಮಾ. ೩೧–೮೭). ೨. ಫಲಿಸು; ನೆರವೇರು; ಕೈಗೂಡು: ಮರುಳಾಗದೆನ್ನನುಡಿಗುತ್ತರಮಂ ಮುನ್ನಿತ್ತು ಕುಡಿಯೆ ಕಜ್ಜಂ ನಿನಗುತ್ತರಿಸುಗುಂ (ಪಂಪಭಾ. ೮–೪೭). ೩. ನಡಸು; ನೆರವೇರಿಸು: ಎನ್ನ ಭಾಷೆಯನು ನಾನುತ್ತರಿಸಬೇಕು (ಪ್ರಭುಲೀ. ೭–೮೩). ೪. ಉದ್ಧರಿಸು; ಏಳಿಗೆ ಹೊಂದಿಸು: ಉತ್ತರಿಪಂ ಜಸಲತೆಯಂ ಬಿತ್ತರಿಪಂ ಸದ್ಗುಣಂಗಳಂ ಬುಧತತಿಯೊಳ್ ಕತ್ತರಿಪಂ ಭಯಲೋಭಮನುತ್ತಮಪುರುಷಂ (ಎಕ. V, ಚಿನ್ನರಾ. ೧೮೬–೨೬; 1142); ಸತ್ಯಲೋಕನಿವಾಸಿ ರಸಕಾತರಂ ಮೌನಿನನ್ನನುತ್ತರಿಸಲೀ ಭಾವಗಳ ತಂದ (ಮಲಿದೇ. ೪೭–೪). ೫. (ಸಾಲವನ್ನು) ತೀರಿಸು; ಸಲ್ಲಿಸು: ಕಾಶಿಯ ನಿವಾಸದೊಳು ಸತಿಸುತರ ಮಾಜಿ ತಾಂ ಹೇಸದೆಯನಾಮಿಕಂಗಾಳಾಗಿ ಋಣವನುತ್ತರಿಸಿದ ಹರಿಶ್ಚಂದ್ರನು (ಹಚಕಾ. ೧೧ ಸೂಚನೆ); ಅರಮನೆಯಿಂದ ಬಂದ ಉತ್ತಾರ ಬಂದಡೆ ಕುಳಸರದಿಯಲಿ ಉತ್ತರಿಸಿಕೊಂಬೆಉ (ಸೌಇಇ. IX–ii, ೪೩೩–೫೨; 1408); ಹೊಂನನೂ ಬತ್ತವನೂ ಉತ್ತರಿಸಿಕೊಂಡು (ಸೌಇಎ. ೧೯೩೧, ಮಂಗಳೂ. ೩೫೦–೧೦; ?); ಪಿತೃದೇವತೆಗಳ ಋಣವನುತ್ತರಿಸದೆ ರಾಯಕುವರರೆಲ್ಲ ರಣಭೂಮಿಯೊಳಡಗಿದರು (ಕರ್ಣವೃ. ೮–೨೦). ೬. ತಂಗು; ನಿಲ್ಲು: ಲಿಂಗವು ಪ್ರಾಣವು ಅವಿರಳಾತ್ಮಕವಾಗಿ ಅವುಳ ಸೋಂಕು ತುಳುಕಿ ಬಾಹ್ಯಕ್ರೀಯಾಗಿ ಕರಸ್ಥಲಕ್ಕೆ ಬಂದುತ್ತರಿಸೆ (ಉರಿವ. ೪೦). ೭. ಎತ್ತಿ ಹಿಡಿ: ಮತ್ತೆರಡು ಕೈಯಲ್ಲಿ ಶಂಖಚಕ್ರವ ಧರಿಸಿ ಬಿತ್ತರದಮಳಕರದೊಳಗೆ ಕೈತಾಳಮನ್ನುತ್ತರಿಸಿ (ಲಕ್ಷ್ಮಭಾ. ೩–೨೩–೨೦). ೮. (ಸವಾರನು) ಇಳಿ; ಅವತರಿಸು: ಉತ್ತರಿಸಿದ ಕುದುರೆಯಂತೆ ಮೋಜಿಯಂ ನೆಗಪುತ್ತುಂ... ಪರವಶಮಾದರಂತೆ ಜಡನಾಗುತ್ತುಮಿರಲಾಗದು (ಧರ್ಮಾಮೃ. ೫–೧೩೬).

ಉತ್ತರಿಸವೇಳು = ದಾಟಿಕೊಳ್ಳುವಂತೆ ಹೇಳು: ಮುರಿವ ಬಿಡಿಸುವ ಥಗೆಯ ಸೈರಿಸಿ ತೆರಳಿಚುವ ತಳಮೇಲುಗಳಲುತ್ತರಿಸವೇಳುವ ಬೀಳ್ವ... ಸತ್ಕೋತ್ಕರುಷ ಸರಿಯೆನೆ ಶಂಭು ಶಿಷ್ಯಗೆ ಪರಿವಿಡಿಯ ತೋಜಿಸುವೊಲಿದ್ದನು (ಕುವ್ಯಾಅ. ೬–೩೦). [ಉತ್ತರಣ + –ಇಸು$_1$]

**ಉತ್ತರಿಸು**$_3$ (ಕ್ರಿ). ಕತ್ತರಿಸು; ಚೂರುಮಾಡು: ಕಂಗಳ ಕಳೆದು ಜಿಹ್ವೆಯ ಕೊಯ್ದು ಶಿರವನರಿದು ಹಸ್ತವನುತ್ತರಿಸಿತ್ತರೂ ಲಿಂಗಸಾಹಿತ್ಯವಿಲ್ಲ (ಆದವ. ೨೧); ಉತ್ತಮದ ಸೇವಗೆಯ ತೆಜದಿ ಬಾಳೆಯ ದಿಂಡನುತ್ತರಿಸಿ (ಸೂಪಶಾ. ೪–೬೭); ಎರಡು ತೋಳ್ಗಳಂ ಕೊರ್ಗಣೆಯೊಳುತ್ತರಿಸೆ (ಜೈಮಿಭಾ. ೨೦–೨೮). [?]

**ಉತ್ತರಿಳ್ಳಗ** (ನಾ). ಒಂದು ಹೆಸರು: ಶ್ರೀಮತ್ ಪೆರ್ಮನಡಿಗಳ ಪಟ್ಟಂಗಟ್ಟಿದ ಇಪ್ಪತ್ತೆರಡನೆ ವರಿಷ ಉತ್ತರಿಳ್ಳಗರ ಕೋಟಿಯೊಳ್ (ಎಕ. III, ನಂಜನ. ೧೩೯–೩; ಸು. 915). [?]

**ಉತ್ತರೀಯ** (ನಾ). ಮೇಲುಹೊದಿಕೆ; ಹೊದೆದುಕೊಳ್ಳುವ ಬಟ್ಟೆ: ಗಂಗಾತರಂಗತರಳದುಕೂಲವಸನಾಂತರೀಯೋತ್ತರೀಯಂ (ಶಾಂತಿಪು. ೭–೧೩ ವ); ಎಲೆ ಪಾರ್ವ ನಿಮಗೆ ಕುಶಾಕ್ಷಮಾಲಾಯಜ್ಞೋಪವೀತೋತ್ತರೀಯಾದಿ ಚಿಹ್ನೆಂಗಳೆತ್ತಲೀ ನಾಯಂ ಪೊತ್ತು ಪೋಪುದೆತ್ತಲ್ (ಪಂಚತಂ. ೧೪೭–೮); ಕೌರವಸೇನೆ ಬೊಬ್ಬಿರಿದು ಉತ್ತರೀಯವನ್ನು ಬೀಸತೊಡಗಿತು (ಭಾಮಣಿ. ೩೩). [ಸಂ.]

**ಉತ್ತರೀಯಕ** (ನಾ). = ಉತ್ತರೀಯ. [ಸಂ.]

**ಉತ್ತರೀಯಾಂಶುಕ** (ನಾ). ಮೇಲುಹೊದಿಕೆಯ ಬಟ್ಟೆ : ನಿಜೋತ್ತರೀಯಾಂಶುಕವನೆ ಮಹೋತ್ಸವಧ್ವಜಮಂ ಮಾಡಿ (ಆದಿಪು. ೪–೩೦ ವ). [ಉತ್ತರೀಯ + ಅಂಶುಕ]

**ಉತ್ತರೆ** (ನಾ). ೧. ಇಪ್ಪತ್ತೇಳು ನಕ್ಷತ್ರ ರಾಶಿಗಳಲ್ಲಿ ಹನ್ನೆರಡನೆಯದು : ಖಗೋಳದಲ್ಲಿ . . . ಅಶ್ವಿನಿ . . . ಉತ್ತರೆ . . . ರೇವತಿಗಳೆಂಬಿಪ್ಪತ್ತೇಳು ತಾರೆಗಳು (ವಿವೇಕ. ೨೫೮). ೨. ಉತ್ತರಾನಕ್ಷತ್ರದ ಮಳೆ : ಉತ್ತರೆಯು ಬರತಿಹರೆ ಹೆತ್ತ ತಾಯ್ತೊಱೆದಿಹರೆ ಉತ್ತಮರು ತಪ್ಪಿ ನಡೆದಿಹರೆ ಲೋಕ ತಾನೆತ್ತ ಸಾರುವದು (ಸರ್ವಜ್ಞ. ೧೨೫೯); ಉತ್ತರೆ ಬೀಳದಿದ್ದರೆ ಹೆತ್ತವ್ವ ತೊರೆದಂತೆ (ಗಾದೆ). ೩. ವಿರಾಟರಾಜನ ಮಗಳು; ಅಭಿಮನ್ಯುವಿನ ಹೆಂಡತಿ : ಇತ್ತಲರ್ಜುನದೇವ ಸಾರಿದನುತ್ತರೆಯ ಭವನವನು (ಕುವ್ಯಾವಿ. ೯–೩೨). ೪. ಒಂದು ಗಿಡಮೂಲಿಕೆ: “ಆಗಾದಃ – ಮಗ್ಗಾರೆ, ಉತ್ತರೆ” (ಓಷಧಿ. ೧೦). [ಸಂ. ಉತ್ತರಾ]

**ಉತ್ತರೇಣಿ** ‘ಉತ್ತರಣೆ’ ನೋ.

**ಉತ್ತರೋತ್ತರ** (ನಾ). ೧. ಹೆಚ್ಚುಹೆಚ್ಚಾದ ಅಭಿವೃದ್ಧಿ, —ಏಳಿಗೆ; ಶ್ರೇಯಸ್ಸು : ವಿಕ್ರಮಾರ್ಜುನನಂ ಕುಬೇರನಿಂ ಕಪ್ಪಂಗೊಳಲ್ ಸಮರ್ಪಿಸುವಂತೆ ಉತ್ತರೋತ್ತರಮಾಗಲುತ್ತರದಿಶಾಭಾಗಕ್ಕೆ ಪೇೞ್ದಾಗಳ್ (ಪಂಪಭಾ. ೬–೨೮ ವ); ಮೃತ್ಯು ನಿನಗೊಲಿದಿಹಳು ಬಳಿಕಿನ್ನುತ್ತರೋತ್ತರವೆಲ್ಲಿಯದು (ಕುವ್ಯಾದ್ರೋ. ೧–೨). ೨. ಭವಿಷ್ಯ ; ಮುಂದು : ಈ ರಾಜ್ಯದ ಉತ್ತರೋತ್ತರ ರಕ್ಷಣಾಭಿವೃದ್ಧಿಗಳಿಗೆ ದಕ್ಷರಾದವರು ಬೇಕಾಗುವರೆಂಬುದನ್ನು ನಾನರಿಯೆನೆ ? (ಶಾಂತಲಾ. ೨೮). ೩. ಶ್ರೇಷ್ಠವಾದುದು ; ಅತ್ಯಂತ ಶ್ಲಾಘ್ಯವಾದುದು : ಪಿರಿದುಂ ಚಿತ್ರಾನ್ವಿತವಂಬರಸಂಗತವುತ್ತರೋತ್ತರಂ ತಾನೆನಲುರ್ವ್ವರೆ ತಣಿಯಲ್ಪೊಂ × × ಗಱೆವುದು ಚಟ್ಟಿಯನ ಹಸ್ತವಪ್ರತಿಹಸ್ತಂ (ಎಕ. V, ಬೇಲೂರು. ೧೯೩–೮೪ ; 1160). ೪. ತುಂಬ ಉತ್ತರದ್ದು : ಸುರತಾಸವಸೇವನಾ ಸನಾತನಸುಖದಿಂದಿರಿಪ್ಪೆನನುರಾಗದಿನೆಂಬುದಿದುತ್ತರೋತ್ತರಂ (ಕವಿರಾ. ೨–೧೦೪).

ಉತ್ತರೋತ್ತರವಾಗಿ = ಮುಂದೆ ಮುಂದೆ; ಹೆಚ್ಚು ಹೆಚ್ಚು; ಒಂದಾದಮೇಲೊಂದರಂತೆ : ನಿನ್ನ ವಂಶವು ಉತ್ತರೋತ್ತರವಾಗಿ ಬೆಳೆಯುವದು (ಸಮಜೀ. ೪೨). [ಉತ್ತರ + ಉತ್ತರ]

**ಉತ್ತರೋತ್ತರತೆ** (ನಾ). ಮೇಲು ಮೇಲಿನ ಅಭಿವೃದ್ಧಿ, —ಏಳಿಗೆ; ಮೇಲ್ಮೆ: ಇಂದ್ರ ಶೈಲಮಣಿಶೃಂಗೋತ್ತುಂಗಮಾ ಮೌಳಿಯುಂ ಶಿರದೊಳ್ ತಾಳ್ದಿದನುತ್ತರೋತ್ತರತೆಯಿಂ ಶ್ರೀವರ್ಮ ಭೂಮೀಶ್ವರಂ (ಚಂದ್ರಪು ೪–೨೫). [ಸಂ. ಉತ್ತರೋತ್ತರತಾ]

**ಉತ್ತರೋತ್ತರಸಿದ್ಧಿ** (ನಾ). ಮುಂದು ಮುಂದಿನ ಅಭಿವೃದ್ಧಿ, —ಏಳಿಗೆ; ಪುರೋಭಿವೃದ್ಧಿ : ಸುತ್ತಣರಸರಿಗೋಲೆಯುಡುಗೊಱೆಯಿತ್ತು ದೂತರ ಕಳುಹು ಬಳಿಕಿನೊಳುತ್ತರೋತ್ತರಸಿದ್ಧಿ ನಿನಗಹುದೆಂದನಸುರಾರಿ (ಕುವ್ಯಾಸ. ೨–೫೨). [ಉತ್ತರೋತ್ತರ + ಸಿದ್ಧಿ]

**ಉತ್ತರೋತ್ತರಾಭಿವೃದ್ಧಿ** (ನಾ). ಮೇಲೆ ಮೇಲೆ ಉಂಟಾಗುವ ಏಳಿಗೆ; ಒಂದಾದಮೇಲೊಂದರಂತಾಗುವ ಅಭಿವೃದ್ಧಿ: ಶ್ರೀ ಕನ್ನರದೇವರ ರಾಜ್ಯಮುತ್ತರೋತ್ತರಾಭಿವೃದ್ಧಿಗೆ ಸಲುತ್ತಿರೆ (ಎಕ. VII, ಶಿಕಾರಿ. ೨೧೯–೩ ; 918). [ಉತ್ತರೋತ್ತರ + ಅಭಿವೃದ್ಧಿ]

**ಉತ್ತರ್ಯ** (ಗು). ವಿರಾಜಿಸುವ. ‘ಉತ್ತರ್ಯದುಕೂಲ’ ಪರಾ. [< ಸಂ. ಉತ್ತರ]

**ಉತ್ತರ್ಯದುಕೂಲ** (ನಾ). ವಿರಾಜಿಸುವ ರೇಷ್ಮೆಬಟ್ಟೆ : ಚಕ್ರಿಯುಂ . . . ಪವಡಿಸಿ ತನ್ನುತ್ತರ್ಯದುಕೂಲ ವಿಶದಶಯ್ಯಾತಳದೊಳ್ (ಶಾಂತಿಪು. ೪–೧೦೬). [ಉತ್ತರ್ಯ + ದುಕೂಲ]

**ಉತ್ತಲ್** ‘ಉತ್ತು’ ಪರಾ.

**ಉತ್ತವಗಳ್ಳ** ‘ಉತ್ತಮಗಳ್ಳ’ ನೋ.

**ಉತ್ತವಳ** (ನಾ). ಕಾತರತೆ ; ಆತುರ; ತವಕ : ಮನಂ ಪಟಚಿತ್ರದ ಪೆಣ್ಣರೂಪ ವೈಭವದೊಳಲಂಪುವೆತ್ತುದು ಕರಂ ನೆಲೆಗೊಂಡುದು ನಟ್ಟು ನಿಂದುದುತ್ತವಳದಿನೊಂದಿ ಸಂದುದೊಳಪೊಕ್ಕುದಭೀಕ್ಷಿಸಿದಾ ಕ್ಷಣಾರ್ಧದೊಳ್ (ಕುಸುಮಾ. ೯–೬೮). ೨. ಕಾತರದಿಂದಿರುವವನು; ಆತುರಗಾರ : “ಸೋತ್ಕಂಠಂ ಕರಮುನ್ಮನನುತ್ಕಂ ವಿಮನಸ್ಕಮ[ನು]ತ್ತವಳನವನಕ್ಕುಂ” (ವಸ್ತುಕೋ. ೧೧೪–೨೩); ಅರಸಂ . . . ನಾಗದತ್ತಸೆಟ್ಟಿಯಲ್ಲಿಗೆ ಕೂಸಂ ಬೇಡಿಯಟ್ಟಯುತ್ತವಳನಾಗಿಯವರ ಬೞಿಯನೆ ತಾನುಂ ನಾಗದತ್ತನ ಮನೆಗೆ ಪೋಗಿ (ವಡ್ಡಾರಾ. ೩೩–೨೨); ಅನ್ನು ಸಿಡಿಬಲೆಯು ಸಿಡಿ[ಲೇಳ್ಗೆ]ಯುಮಿಪ್ಪಂತಿರ್ದ ಕುಂದುಗೊಳದ ಕಲಿಗೊಡಗೆ ಕಲಿಗಳಂಕುಸಂ ಕಾಮದೇವನೆತ್ತಲುತ್ತವಳನಾಗಿಪ್ಪುದುಂ (ಸೌಇಇ. XX, ೧೨೬–೫ ; 1186). ‘ಉತಾವಳಿ’ ಪರಾ. [ಪ್ರಾ. ಉತ್ತಾವಲ= ಆಕುಲ, ಶೀಘ್ರಕಾರಿ]

**ಉತ್ತವಳತನ** (ನಾ). ಕಾತರತೆ; ಆತುರತೆ; ಔತ್ಸುಕ್ಯ : ಮತ್ತೊರ್ವಳ್ಗರವೇಟಗಾರ್ತಿ ಕಲಹದೊಳಿರ್ದರಬೊಜಗನನೋಲಗಕ್ಕಲಂಕರಿಸಿ ಕಳುಹಿ ಚಿತ್ತದುತ್ತವಳತನಮಂ ತನ್ನ ಮನದನ್ನಳಪ್ಪ ಕೆಳದಿಗಿಂತೆಂದಳ್ (ಅನಂಪು. ೮–೧೫ ವ). [ಉತ್ತವಳ + -ತನ]

**ಉತ್ತವಳಿಕೆ** (ನಾ). ಕಾತರತೆ; ವಿಮನಸ್ಕತೆ : ಸತ್ತವರೇೞ್ವರೆ ಪೇೞೊಡಸತ್ತರೆ ತಮ್ಮ ಬಲಿನಳವಿಯುಂ ಮೞ್ಗಿಸಲೆಂದುತ್ತವಳಿಕೆಯೊಳೆ ಸಾವರ್ಸತ್ತವರವರ್ಗಾವ ಹಿತಮನಾಚರಿಸುವರೋ (ಕಾದಂಪೂ. ೯೬೧). [ಉತ್ತವಳ + -ಇಕೆ]

**ಉತ್ತವಳಿಸು** (ಕ್ರಿ). ಕಾತರಗೊಳ್ಳು; ಆತುರಪಡು; ತವಕಿಸು : ಕೃಪಾಣಾಹಿಯನೂಡಿ ಬೞಿಕಮಾನುಂಡಪ್ಪೆಂ ಎಂದೆತ್ತಿ ನಡೆಯಲುತ್ತವಳಿಸಿದ ಸಮಯದೊಳ್ (ಅನಂಪು. ೧೧–೬೧ ವ); ಕಣ್ಗಳ ಬೞಿಯೊಳುತ್ತವಳಿಸಿ ಪರಿವ ಚಿತ್ತಮಂ ನಿಲಿಸಲೆಯ್ದುವಂತೆ ನಿಮಿರ್ವ ಸುಯ್ಗಳುಂ (ವರ್ಧಪು. ೬–೧೨ ವ). [ಉತ್ತವಳ + -ಇಸು$_3$]

**ಉತ್ತವಳ್ಳ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಮತ್ತುಗಳನ ಎಡವರಿಯ ಕಾಳೆಗ ದೇವಳೂರ ಮೇಲಾವೇಗ ಉತ್ತವಳ್ಳಂಗಾ (ಎಕ. III, ಮೈಸೂರು. ೪೫–೨ ; ಸು. 900). [?]

**ಉತ್ತಳಿಸು** (ಕ್ರಿ). ಚಿಮುಕಿಸು; ಸಾರಿಸು : ಲವಂಗಿಕೆಯಂ ಲವಂಗಪಲ್ಲವ ರಸದೊಳೆ ವಿಳಾಸಾವಾಸಭವನಮನುತ್ತಳಿಸ [ಪಾಠಾಂ. ಅತ್ತಳಿಸ ಉತ್ತರಿಸ]ಲುಂ . . . ಪೇೞ್ದಾಗಳ್ (ಆದಿಪು. ೭–೨೧ ವ). [ಉತ್ತಳ$_0$ + -ಇಸು$_3$]

**ಉತ್ತಾಡಿತ** (ಗು). ವಿಶೇಷವಾಗಿ ಹೊಡೆಯಲ್ಪಟ್ಟ; ಹೆಚ್ಚಾಗಿ ತೀಡಿದ : ಸುರಸ್ತ್ರೀ ಚಲಿತ ಚಾಮರೋತ್ತಾಡಿತ ಪಾವನ ಜಟಾಗ್ರಗಂಗಾ ಜಲೋತ್ಥಿತ ಶೀಕರಾವಲಿಗಳೇ ವೃಷ್ಟಿಯಾಗೆ (ಪದ್ಮರಾ. ೧–೧). [ಸಂ.]

**ಉತ್ತಾನ** (ಗು). ೧. ಮೇಲಕ್ಕೆ ಎದ್ದ ; ಉಚ್ಚವಾದ : ದೇವಾಪಗಾಜಳಮಂ ತೊಟ್ಟನೆ ಸೇತುಗಟ್ಟಿ ತಡೆದತ್ತುತ್ತಾನಸೇನಾರಜಂ (ಮಲ್ಲಿಪು. ೮–೧೪೫). ೨. ಮೇಲುಮುಖವಾದ : ಮೀನಾಬ್ಜಶಂಖಚಕ್ರವಿತಾನಾಂಕಿತ ದಕ್ಷಿಣಾಂಘ್ರಿತಲಪಲ್ಲವಮುತ್ತಾನಂ ರತ್ನಾಕರದವೋಲೇನಮರ್ದುದೊ ಸಾರ್ವಭೌಮಗಗನೇಚರನಾ (ಶಾಂತಿಪು. ೩–೪೮). ೩. ಅಂಗತ್ತನಾದ. ‘ಉತ್ತಾನಶಯ’ ಪರಾ. (ನಾ). ೪. ಅತಿಸ್ಪಷ್ಟವಾದುದು ; ಅತಿರೇಕ : ಗುಣವರ್ಮನ ಶೃಂಗಾರಿಕ ವರ್ಣನೆಗಳಲ್ಲಿ ಉತ್ತಾನವೆನ್ನುವಷ್ಟು ಬಿಚ್ಚುಬಗೆಯಿದೆ (ಕಸಾಚ. ೫೧); ಕೆಲವು ಸಲ ಇಂಥ ಹಾಡುಗಳ ಶೃಂಗಾರ ಉತ್ತಾನಕ್ಕಿಳಿಯುತ್ತದೆ (ಕಸಾಚ. ೨೮೫).

ಉತ್ತಾನವಾಗಿ = ಉತ್ಕಟವಾಗಿ; ಅತಿರೇಕವಾಗಿ : ಮೋಹಿನಿಯ ದೇಹ ಆತನ ಚಿತ್ತವನ್ನೆಲ್ಲ ಸೂರೆಗೊಂಡಿತ್ತು. ಆ ಬಳುಕುವ ದೇಹವನ್ನು ಉತ್ತಾನವಾಗಿ ಬಯಸುತ್ತಿತ್ತು (ಕಮನಿ. ೧೯೮). [ಸಂ.]

**ಉತ್ತಾನಕೆ** (ನಾ). ಮಲ್ಲಯುದ್ಧದಲ್ಲಿ ಒಂದು ಭಂಗಿ, —ವರಸೆ : ಸಾರದೊಳ್ ನುಣ್ಚುವ ಮಲ್ಲನನೆಾಂಕಿ ಪಿಡಿದು ಸುತ್ತಿ ಮುತ್ತಿ ಸೆಳೆದಿಕ್ಕಿ ಸೀಸಕದೊಳ್ ಪೊಕ್ಕು ಭುಜದೊಳಡೆದುರದೊಳ್ ತೇದು ಉತ್ತಾನಕದೊಳ್ ನಿಂದು (ಗಿರಿಕ. ೨–೧೦೫ ವ). [ಸಂ.]

**ಉತ್ತಾನಗಾನ** (ನಾ). ಉಚ್ಚಸ್ವರದಲ್ಲಿ ಹೇಳುವ ಹಾಡು : ಪ್ರತ್ಯಂತರಾಜಾತ್ಮಜ ವಿಭವಸಮಾಕರ್ಣಿತೋತ್ತಾನಗಾನಧ್ವನಿಯಿಂ (ಚಂದ್ರಪು. ೧–೧೩೧) ; ಗತಿಸ್ತಂಭಮಂ ಖೇಚರಾಧೀಶತನೂಜಂಗಿತ್ತುದಾ ಕನ್ನಿಕೆಯ ಮಧುರ ಸಪ್ತಸ್ವರೋತ್ತಾನಗಾನಂ (ಪಂರಾಮಾ. ೧೦–೧೧೦). [ಉತ್ತಾನ + ಗಾನ]

**ಉತ್ತಾನತೆ** (ನಾ). ಉನ್ನತಿ; ಆಧಿಕ್ಯ (?); "(ಸೋತು) ಬಿದ್ದಿರುವಿಕೆ" (ಸುಬ್ಬಣ್ಣ. ಕೋಶ) : ಇಂಥ ಸಂತೋಷದ ಮಧ್ಯದಲ್ಲಿ ಅಂಥ ಸಂತೋಷವಿಲ್ಲದ ಮನುಷ್ಯನಿಗೆ ತನ್ನನ್ನೇ ಅರಿಯದ ಒಂದು ಉತ್ತಾನತೆ ಬರುತ್ತದೆ. ಈ ಉತ್ತಾನತೆ ಸುಬ್ಬಣ್ಣನವರ ಆ ಗಾನದಲ್ಲಿ ಮಿಂಚಿನ ಬಳ್ಳಿಯಂತೆ ರೂಪವನ್ನು ತಳೆಯಿತು (ಸುಬ್ಬಣ್ಣ. ೫೭). [ಸಂ. ಉತ್ತಾನತಾ]

**ಉತ್ತಾನಶಯ** (ಗು). ೧. ಅಂಗತ್ತವಾಗಿ ಮಲಗಿರುವ. (ನಾ). ೨. (ಅಂಗತ್ತವಾಗಿ ಮಲಗಿರುವ) ಸಣ್ಣ ಮಗು; ಹಾಲಹಸುಳೆ. [ಉತ್ತಾನ + ಶಯ]

**ಉತ್ತಾನಶಯನ** (ನಾ). ಅಂಗತ್ತನಾಗಿ ಮಲಗುವಿಕೆ: ಅನಿಮಿತ್ತದರಸ್ಮಿತದಿಂ. . . ಅಕಾರಣಾನಂದನದಿಂದುತ್ತಾನಶಯನದಿಂ ಹರಿಯಿಸೆದಂ (ಜಗವಿ. ೩–೨೮). [ಉತ್ತಾನ + ಶಯನ]

**ಉತ್ತಾನಶಯ್ಯೆ** (ನಾ). = ಉತ್ತಾನಶಯನ : ಅವರ್ಗೆ ಪುಟ್ಟಿದ ಯುಗಳಂಗಳ್ ಏೞುದಿವಸಮುಂ . . . ಉತ್ತಾನಶಯ್ಯೆಯೊಳಂ ಕಳಿ[ಪಾಠಾಂ. ಳು]ಪಿ (ಆದಿಪು. ೫–೪೧ ವ) ; ಅನಪೇಕ್ಷಿತ ಸಕಳವಿಳೋಕನದಿಂದುತ್ತಾನಶಯ್ಯೆಯೊಳ್ಕಗ್ಗಿಸೆದಂ (ಮಲ್ಲಿಪು. ೧೩–೫೪). [ಉತ್ತಾನ + ಶಯ್ಯೆ]

**ಉತ್ತಾನಿತ** (ಗು). ಮೇಲಕ್ಕೆ ಎತ್ತಿದ : ಸಕಲ ಕ್ಷತ್ರ ಕಿರೀಟತಾಡಿತ ಪದಾಂಭೋಜಾತನಾಸ್ಥಾನವೇದಿಕೆಗುತ್ತಾನಿತ ಚಿತ್ರವೇತ್ರಲತನೊರ್ವಂ. . . ಬಂದಂ ಪ್ರತೀಹಾರಕಂ (ಪಂರಾಮಾ. ೨–೨). [ಸಂ.]

**ಉತ್ತಾಪ** (ನಾ). ೧. ವಿಶೇಷವಾದ ತಾಪ. ೨. ಉದ್ವೇಗ ; ಹಂಬಲ ; ತೀವ್ರತೆ : ಶಾಸನದ ನಿಯಮಗಳಲ್ಲಿ ಮನುಷ್ಯ ಹೃದಯದ ಉತ್ತಾಪ ಇರದು (ಇಪ್ಪಕ. ೧೦೨). ೩. ಆತಂಕ ; ತವಕ. [ಸಂ.]

**ಉತ್ತಾಯಕ** (ನಾ). ಸಹಾಯಕ ; ಬೆಂಬಲಿಗ (?) : ಅಗಳ್ ಧರ್ಮನಂದನಂ ಮುಕುಂದಂಗೆ ಬಱಿಯನಟ್ಟಿ ಬರಿಸಿ ನಮ್ಮ ಸೇನಾನಾಯಕನುತ್ತಾಯಕನಾಗಿ ಗಾಂಗೇಯರಿಂದಮುೞಿದನಿನ್ನಾರ್ಗೆ ವೀರಪಟ್ಟಮಂ ಕಟ್ಟುವಂ ಪೇೞಿಮೆನೆ (ಪಂಪಭಾ. ೧೧–೪ ವ) ; ಪಾಂಡವಬಲದ ನಾಯಕರುತ್ತಾಯಕರಾಗಿ ತಂತಮ್ಮ ಚತುರ್ವಲಂಗಳನೊಂದುಮಾಡಿಕೊಂಡು ಕಾಲಾಗ್ನಿಯಂ ಕಿಡಿ ಸುತ್ತುವಂತೆ ಕರ್ಣನಂ ಸುತ್ತಿ ಮುತ್ತಿಕೊಂಡು (ಪಂಪಭಾ. ೧೨–೧೧೮ ವ). 'ಉತ್ಸಾಯಕ' ಪರಾ. [ಸಂ.]

**ಉತ್ತಾರ** (ನಾ). ೧. ಪರಿಹಾರ : ಅಯ್ಯ ತನುವಿರ್ದಂತೆ ಮರಣಶೋಕಭಯಂಗಳು ಎಂತುತ್ತಾರವಹವೆಂದರೆ ಏನಯ್ಯ (ಆದವ. ೩೫); ಜೀವಿತದಿಂ ಉತ್ತಾರವಮಾಡಿ (ಸೌಇಎ. ೧೯೩೧, ಮಂಗಳೂ. ೩೪೯–೨೨ ; 1254). ೨. ವಿನಿಮಯ ; ಪ್ರತಿವಸ್ತು : ಯಿಾಪಣವಿಗೆ ಉತ್ತಾರವಾಗಿ ನೆಲವಂಗಲಸ್ಥಳದ ದಾಬನಾಯಕನ ಹಳ್ಳಿ ಗ್ರಾಮದ ಹುಟ್ಟುವಳಿ (ಎಕ. IX, ನೆಲಮಂ. ೮–೯ ; 1763). ೩. ಸಲುವಳಿ ; ಸಂದಾಯ ; ಹಿಂತಿರುಗಿಸಿದ್ದು : ಓರಂತೆ ಯಜ್ಞಾದಿ ಸತ್ಕರ್ಮ ಕೋಟಿಯ ಪಾರಂಗತವನೆ ಮಾಡಿ ಧಾರಾಮುಖದೆ ಕೊಟ್ಟರೆ ನಮ್ಮ ರಿಣ ವುತ್ತಾರವಾಗದು ಮಾನನಿಧಿಯೆ (ಮೋಹತ. ೩೨–೩೯) ; ತುರಗಮಂ ಬಿಡಿಸಿಕೊಂಡಗಧರನ ಸಮ್ಮುಖಕೆ ತಂದು ನಿಲಿಸಿದನಿತ್ತ ಭಾಷೆಗುತ್ತಾರಮಾಗಿ (ಜೈಮಿಭಾ. ೭–೬೬) ; ಮಂಡಲೇಶ್ವರರೇ ಈ ಜವಾಹಿರಿಗಳೆಲ್ಲವೂ ಮೈಸೂರಿನದು ಇದನ್ನು ಸ್ವೀಕರಿಸಬೇಕು. ಚಕ್ರೇಶ್ವರರಿಗೆ ಸಲ್ಲಬೇಕಾದ ಹದಿನಾರು ಸಾವಿರ ವರಹಗಳಿಗೆ ಉತ್ತಾರ ಹಾಕಿಕೊಳ್ಳಬೇಕು (ಶ್ರೀರಾಯ. ೨೬೫). ೪. ಎತ್ತರವಾದ ಧ್ವನಿ ; ಉಚ್ಚಸ್ವರ : ಪಾಱಿಬಂದುದದೆ ನಾನಾಸಾರಸೋತ್ತಾರ ಸಂಮದ ಕೋಳಾಹಳಂ (ಕಾದಂಪೂ. ೧೯೬) ; ಪೊಣ್ಮುವ ಹಂಸಸಾರಸರಥಾಂಗೋತ್ತಾರ [ಪಾಠಾಂ. ಉತ್ತಾನ] ಕೋಲಾಹಲಂ (ಪಂರಾಮಾ. ೧೧–೧೮೬). 'ಉತ್ತಾರರಾಗ' ಪರಾ. ೫. ಸೋಡಿ ; ರಿಯಾಯಿತಿ (ಕ್ರಿಸ್‌ಗ. ೫೬೪) : ತಾವು ದೊಡ್ಡ ಮನಸ್ಸು ಮಾಡಿ ಬಡ್ಡಿಯಲ್ಲಿ ಸ್ವಲ್ಪ ಉತ್ತಾರ ಹಾಕಿಕೊಡಿ (ರೂಢಿ). ೬. ಉಂಬಳಿ ; ದಾನ ; ದತ್ತಿ : ಹರಿಹರ ಮಹಾರಾಯರು ಶೃಂಗೇರಿ ಶ್ರೀಮಠಕ್ಕೆ ಕೂಡುವಳ್ಳಿ ಗ್ರಾಮವನ್ನು ಉತ್ತಾರವಾಗಿ ಬಿಟ್ಟುಕೊಟ್ಟದ್ದರಿಂದ (ಮೈಆರಿ. ೧೯೨೯, ೧೮–೨ ; 1402) ; ಯೀವರಿಗೆ ಉತ್ತಾರಕೊಟ್ಟ ಸ್ವಾಸ್ತಿಗೆ ಶಾಸನವ ಬರಸಿ ಕೊಡಬೇಕೆಂದು (ಎಕ. VII, ಶಿವಮೊ. ೨೯–೧೨ ; 1712) ; ಶೃಂಗಪುರಮಠಕ್ಕೋಸುಗಂ ತನ್ನ ಭಕ್ತಿಯಿಂ ಬೇರೆ ಮುನ್ನೂರ್ವರಹದ ಭೂಸ್ವಾಸ್ಥ್ಯಯಂ ಶಿವಾರ್ಪಿತವಮಾಗಿ ಉತ್ತಾರವಮಂ ಮಾಡಿಸಿ (ಕೆಳನೃ. ೧೨–೯ ವ) ; ಆ ದೇವಸ್ಥಾನದ ವೆಚ್ಚದ ಬಗ್ಗೆ . . . ಕೆಲ ಭೂಮಿಯಂನು ಉತ್ತಾರಬಿಟ್ಟು ಕೊಟ್ಟರು (ರಾಜೇಂದ್ರ. ೪) ; ವಿಜಯನಗರದ ರಾಯರು ಅಲ್ಲಿಯ ದೇವಸ್ಥಾನಗಳಿಗೆ ಉತ್ತಾರಗಳನ್ನು ಕೊಟ್ಟು ಪ್ರೋತ್ಸಾಹಿಸಿದರು (ದಕಜ. ೩೮). ೭. ಎಣಿಕೆ ; ಲೆಕ್ಕ (?) : ಹತ್ತುಮಾನಿಸರೊಳೊಂಭತ್ತೆಂದು ತನ್ನ ಮಱೆವುತ್ತೆಣಿಕೆಗೊಂಬನಂತಲ್ಲಮಾರ್ಯ ಹತ್ತಪ್ಪ ತನ್ನ ಮಱೆದಿತ್ತು ಮಾಯಿಕನೆಣಿಸುವುತ್ತಾರ[ಪಾಠಾಂ. ವುತ್ತರ]ದಂತೆ ಮನವಿಡಿದ ಮಱವೆ (ಮಸೋವಿ. ೮–೭). [ಸಂ.]

**ಉತ್ತಾರಂಗೆಯ್ಸು, ಉತ್ತಾರಗೆಯ್ಸು** (ಕ್ರಿ). ಉಂಬಳಿ ಬಿಡು: ಇಂತು ಡಂಬಳದ ಸಿದ್ಧೇಶ್ವರದೇವರ್ಗೆ ಭೂಸ್ವಾಸ್ಥ್ಯಯನುತ್ತಾರಂಗೆಯ್ಸಿ ಸುಖದಿಂ ರಾಜ್ಯಮಾಳುತ್ತಿರಲ್ (ಕೆಳನೃ. ೧೧–೭೨). **ಉತ್ತಾರಗೆಯ್ಸು** : ಮೆರೆವ ಡಂಬಳದ ಸಿದ್ಧೇಶ್ವರಗಂ ವಿಲಸದ್ರಥೋತ್ಸವಾದ್ಯುಪಚಾರೋತ್ಕರಗಳ್ ನಡೆವಂತಿರೆ ಸದ್ಧರಣಿಯನುತ್ತಾರಗೆಯ್ಸಿದಂ ತದ್ಭೂಪಂ (ಕೆಳನೃ. ೧೧–೭೧). [ಉತ್ತಾರ + ಗೆಯ್ (< ಕೆಯ್$_1$) + -ಸು$_1$]

**ಉತ್ತಾರಕ** (ಗು). ೧. ದಡವನ್ನು ಮುಟ್ಟಿಸುವ ; ಸಾಗಿಸುವ. (ನಾ). ೨. ರಕ್ಷಕ ; ಕಷ್ಟದಿಂದ ಪಾರುಮಾಡುವವನು : ಕುಲಕೋಟಿ ಬಂಧುಗಳು ಮುಕ್ತರಪ್ಪರೆ ಭವಂಗಳ ಬೇರ ಕೀಳುವಡೆ ನಾಲ್ಕುವಿಧ ಮೋಕ್ಷಪದದೊಳು ಭೋಗ ಬಯಸಿದಡೆ ಸಂಸಾರವಾರ್ಧಿಗುತ್ತಾರಕಂವಪ್ಪಡೆ (ತಿರುಶ. ೭–೧೫). ೩. ಕಷ್ಟದಿಂದ ಬಿಡುಗಡೆ ಹೊಂದಿಸುವ ಉಪಾಯ, —ಸಾಧನ. [ಸಂ.]

**ಉತ್ತಾರಗೆಯ್ಸು** 'ಉತ್ತಾರಂಗೆಯ್ಸು' ನೋ.

**ಉತ್ತಾರಣ** (ಗು). ೧. ದಾಟಿಸುವ ; ತೀರಕ್ಕೆ ಒಯ್ಯುವ ; ಪಾರುಮಾಡುವ : ಚತುರ್ದಶ ವಿದ್ಯೆಗಳ್ಗಿವಂ ಕಾರಣನೆಂಬವೊಲ್ ನೆಗಳ್ದ ಕಟ್ಟಿಗಣಾಧಿಪಪಟ್ಟಮಂ ಭವೋತ್ತಾರಣ ಪಂಚವಕ್ತ್ರನೆಸೆದಂ ಕನಕಾದ್ರಿಯೊಳು (ರಾಜಶೇ. ೩–೧೦೫). (ನಾ). ೨. ದಾಟುವುದು ; ದಂಡೆ ಮುಟ್ಟುವುದು ; ಪಾರಾಗುವುದು : ಅವನ ಉತ್ತರಾಧಿಕಾರಿಯ ಅಯೋಗ್ಯತೆಯಿಂದ ಅದು ಕೂಡ ಸಾಧ್ಯವಾಗದೆ ಹೋಯಿತು ; ಉತ್ತಾರಣವು ಮನುಷ್ಯ ಪ್ರಯತ್ನವನ್ನು ಮೀರಿತು (ಅರ್ಯಕೀ. ೧೦೮). ೩. ದಡಕ್ಕೆ ಮುಟ್ಟಿಸುವುದು ; ದಾಟಿಸುವುದು. [ಸಂ.]

**ಉತ್ತಾರಣೆ** (ನಾ). = ಉತ್ತಾರಣ ೨ : ಅರಿಂದಮನು ನಿದ್ರೆಯಿಲ್ಲದೆಯೇ ಭೂಮ್ಯಾಕಾಶಗಳನ್ನು ಚಿಂತಿಸಿ ನೋಡಿದನು. ಆವ ಬಗೆಯಿಂದಲೂ ಆತನಿಗೆ ಉತ್ತಾರಣೆಯ ಮಾರ್ಗವೇ ಕಂಡು ಬರಲಿಲ್ಲ (ಪಿ ಶಾ ಪ. ೧೪೩); ನಿಮ್ಮಿಬ್ಬರನ್ನೂ ಪ್ರಬಲವಾದ ಇಕ್ಕಟ್ಟಿನಲ್ಲಿ ಸಿಕ್ಕಿಸಿ ನಾನು ಹೇಗಾದರೂ ಮಾಡಿ ತಪ್ಪಿಸಿಕೊಳ್ಳುವೆನು. ನಿಮಗೆ ಮಟ್ಟಿಗೆ ಉತ್ತಾರಣೆಯೆಂಬುದೇ ಇಲ್ಲ (ಚೆನ್ನಬೇ. ೫೭). [ಸಂ. ಉತ್ತಾರಣ]

**ಉತ್ತಾರಪಗುದಿ** (ನಾ). ಕೊಟ್ಟಿರುವ ಉಂಬಳಿಯಿಂದ ತೆಗೆದುಕೊಳ್ಳುವ ಪೊಗದಿ; ಕಪ್ಪ: ಅಕಾಲಚಕ್ರದೊಳ್ ಕೊಳುತಿರ್ದುತ್ತಾರ [ಪಾಠಾಂ. ಅರಮನೆಗೆ ತೆಗೆದುಕೊಳ್ಳುವ ವುತ್ತಾರ] ಪಗುದಿಯಂ ಬಿಡಿಸಿ (ಕೆಳನೃ. ೧೨-೯ ವ). [ಉತ್ತಾರ + ಪಗುದಿ]

**ಉತ್ತಾರರಾಗ** (ನಾ). ಉಚ್ಚವಾದ ಸ್ವರ ಸಮ್ಮೇಳನವುಳ್ಳ ರಾಗ: ದಿಗ್ರಾಜಿಗಳೊಳ್ ಧೀಂಕಿಟ್ಟುದೆಂಬಂತನಿಲಪಥದೊಳಾವರ್ತಿಸುತ್ತಿರ್ದುದೆಂಬಂತೊಗೆದತ್ತುತ್ತಾ[ರರಾಗಂ] [ಪಾಠಾಂ. ಉತ್ತಾನರಾಗಂ] ತ್ರಿಭುವನ ಭವನೋದ್ಭೇದಿ ಶಂಖಪ್ರಣಾದಂ (ಕಾದಂಉ. ೪೨೪). [ಉತ್ತಾರ + ರಾಗ]

**ಉತ್ತಾರಿತ** (ಗು). ೧. ದಾಟಿದ. ೨. ವಿಕಾಸಹೊಂದಿದ; ಅರಳಿದ: ಎಂದು ಮುನ್ನಂ ಚಿತ್ರವಿಚಿತ್ರ ವಿದ್ಯಾಕೌಶಲಮನತಿಕುತೂಹಳೋತ್ತಾರಿತ ಲೋಚನನಾಗಿ ನೀಡುಂ ಭಾವಿಸಿ ನೋಡಿ (ಆದಿಪು. ೪-೪ ವ). [ಸಂ.]

**ಉತ್ತಾಲ, ಉತ್ತಾಳ** (ಗು). ೧. ಎತ್ತರವಾದ; ಉನ್ನತವಾದ; ಪ್ರಬಲವಾದ; ಶ್ರೇಷ್ಠವಾದ. ೨. ಗೆಲ್ಲಲು ಕಷ್ಟವಾದ; ದುರ್ಜಯವಾದ: ಶೂಲಿಭಕ್ತ ಸಕೀಲಸುಕೃತೋತ್ತಾಲ (ಬ ಸ ಪು. ೩೮-೬೮). **ಉತ್ತಾಳ**: ೧. ಬಲ್ಲಾಳನುತ್ತಾಳದಕ್ಷಿಣಪೀಠದೊಳ್ ಮೂರ್ತಿಗೊಂಡು ಪೇರೋಲಗಂಗೊಟ್ಟು ಬಳಿಕೆಲ್ಲರಂ ಬೀಳ್ಕೊಳಿಸಿ(ಪದ್ಮರಾ. ೪-೨೨). (ನಾ). ೩. ಚುರುಕಾದ ನಡಿಗೆಯುಳ್ಳವನು; ವೇಗಶಾಲಿ: "ಉದ್ಧತಜಲ್ಲಿಯುಂ ಉತ್ತಾಳಮೆಂಬುದು" (ಹಲಾಯು. ೧೩೩-೧೪). [ಸಂ.]

**ಉತ್ತಾಳ** 'ಉತ್ತಾಲ' ನೋ.

**ಉತ್ತಾಳಗಮನ** (ನಾ). ಚುರುಕಾಗಿ ಮುಂದುವರಿಯುವುದು; ವೇಗದ ನಡಿಗೆ: ಅಱಿದನಿವರುತ್ತಾಳಗಮನದ ತೆಱನನಾ ಮುನಿ ವಿಷ್ಣುವಿನ ಮೈಮಱೆಯ ಮಾಯಾನಾಟಕದ ಭೂಭಾರಭಂಜನೆಯ (ತೊರರಾ. ೪-೧೧-೨). [ಉತ್ತಾಳ (= ಉತ್ತಾಲ) + ಗಮನ]

**ಉತ್ತಾಳತೆ** (ನಾ). ಅತಿ ಎತ್ತರವಾಗಿರುವಿಕೆ; ದೀರ್ಘವಾಗಿರುವಿಕೆ: ಕಾಳಾಂಜನಮೆಂಬುದಿರುಂಗೋಳನ ಗಿರಿದುರ್ಗ್ಗವಂತದಭ್ರಂಕಷತಾಭೀಳತರಚೂಳವದಱುತ್ತಾಳತೆಯನೆ ನೋಡಿ ಧಾತ್ರಿ ನಿಡುಗಲ್ಲೆಂಗುಂ (ಎಕ. XII, ಪಾವುಗ. ೫೨-೪೩; 1232). [ಸಂ. ಉತ್ತಾಲತಾ]

**ಉತ್ತಾಱಿಲ್** (ನಾ). (ಆನೆಯ ಕುಂಭಸ್ಥಳದ ಮೇಲಿರುವ) ಚುಕ್ಕಿ, —ಬಿಂದು(?): ಒಡ್ಡಿ ಕಡೆದಂದದೊಳೊಂದಿದ ಕುಂಭಕೂಟದುತ್ತಾಱಿಲನೇಕಮುನ್ನತಿಯಿದಾನಱಿವಾನೆಯೊಳಿಲ್ಲಮೆಲ್ಲಿಯುಂ (ಚಂದ್ರಪು. ೯-೯೩). [?]

**ಉತ್ತಿಗ** (ನಾ). ಒಬ್ಬಾತನ ಹೆಸರು: ತುಱಿದಿಕ್ಕಿದನಾಸ್ತಘಟೆಯ ನಾಯಕಗಣ್ಡಂ ಕಟ್ಟಾನೆಮಲ್ಲನಂ ಕಡುಗಟ್ಟಿಗನುತ್ತಿಗನನೊಲಿಪನಂ ಚಟ್ಟಿಗನಂ (ಎಕ. XV, ಅರಸೀ. ೨೩೭-೧೩; 971); ಎಱಿಗನುತ್ತಿಗನೇಱಿದ ಮತ್ತಹಸ್ತಿಗಾರೋಹಕನಾಗಿ (ಎಕ. XII. ಶಿರಾ. ೨೩-೩; 980 ?). [?]

**ಉತ್ತೀರ್ಣ** (ನಾ). ೧. ದಾಟಿದವನು; ತೇರ್ಗಡೆ ಹೊಂದಿದವನು: ಕಡೆಯ ಪರೀಕ್ಷೆಯೊಳುತ್ತೀರ್ಣನಾದೆನು (ಇಂ ಚಾ ಪ. ೧೪-೫೮). ೨. ಹಂಗಿನಿಂದ ಬಿಡುಗಡೆ ಹೊಂದಿದವನು. [ಸಂ.]

**ಉತ್ತು**$_1$ 'ಉಱು' ಪರಾ.

**ಉತ್ತು**$_2$ 'ಉೞ್' ಪರಾ.

**ಉತ್ತುಂಗ** (ಗು). ೧. ಉನ್ನತವಾದ; ಎತ್ತರವಾದ: ಕೃತಕಗಿರಿಶಿಖರಂಗಳಂ ಗಿರಿದುರ್ಗೋತ್ತುಂಗಶಿಖರಂಗಳೆಂದು ಪಾಯಿಸಿಯುಂ (ಆದಿಪು. ೮-೪೧ ವ). ೨. ಶ್ರೇಷ್ಠವಾದ; ಉತ್ತಮವಾದ: ತರುಣೋತ್ತುಂಗಶಶಾಂಕಖಂಡಮೆ ಸುಧಾಬೀಜಂ (ಗದಾಯು. ೧-೨); ಉತ್ತುಂಗ ಮಾಣಿಕದ ಬಿತ್ತು ಮಂಟಪದೊಳಗೆ ನಿತ್ಯ ನಿರ್ಮಲದ ನಿಜಗಂಡ ಶಿವಯೋಗಿ ಗೆತ್ತಣದು ಸಾವು (ಸರ್ವಜ್ಞ. ೫೫೩); ಮಂಗಳಗುಣಗಣನಿಧಿಗೆ ನಿರ್ಮಲಗುತ್ತುಂಗಮಹಿಮಗೆ ಮಾಧವಗೆ . . . ಎಱಗುವೆನು (ಹ ದಿ ಬ. ೨-೧). ೩. ಅತಿ ಉದ್ದವಾದ: "ಉತ್ತುಂಗಮುಚ್ಛ್ರಂಖಳಮನರ್ಗಳಮದಾಯಂತ್ರಿತಂ ಮಿಾಱಿದುದ್ದಮುಕ್ಕುಂ" (ಮಂಗರಾ. ೧೩೨-೨೩). [ಸಂ.]

**ಉತ್ತುಂಗಕುಚೆ** (ನಾ). ಉಬ್ಬಿದ ಮೊಲೆಗಳನ್ನುಳ್ಳವಳು: ಸಂಗೀತಕದಿಂ ಕಾವ್ಯರಸಂಗಳಿನತಿಚತುರ ವಿಬುಧಗೋಷ್ಠಿಗಳಿಂದುತ್ತುಂಗಕುಚೆ ತಡೆದುದೀ ನಿಜಸಂಗತಿಯಿಂ ಪೊಱ್ತು ಪೋದುದರೆಗಳಿಗೆಯವೋಲ್(ಮಲ್ಲಿಪು. ೪-೯೭). [ಸಂ. ಉತ್ತುಂಗಕುಚಾ (ಉತ್ತುಂಗ + ಕುಚ + –)]

**ಉತ್ತುಂಗಚೂಡ** (ನಾ). ಎತ್ತರವಾದ ಶಿಖರವುಳ್ಳದ್ದು: ರಂಜಿಸಿರ್ಕುಂ ಕರುಮಾಡಂ ಕಾಂತಿನೀಡಂ ಮಣಿಮುಯಕಳಶಾಪೀಡಮುತ್ತುಂಗ ಚೂಡಂ (ಪುಷ್ಪಪು. ೯-೨೯). [ಸಂ. (ಉತ್ತುಂಗ + ಚೂಡಾ + –)]

**ಉತ್ತುಂಗಭಂಗ** (ನಾ). ೧. ಉನ್ನತವಾದ ಅಲೆ; ದೊಡ್ಡ ಅಲೆ: ೨. ಉನ್ನತದ ಸೋಲು; ಅತಿಶಯವಾದ ಅಪಮಾನ, —ಹಾನಿ. ೧, ೨: ಉತ್ತುಂಗಭಂಗಂ ಕಡಲೊಳ್ ವಿಶ್ವಾಸಘಾತಂ ವನದ್ರುಮನೀಡದೊಳ್ . . . ಪಂಕ್ತಿಭೇದಂ ಲಿಪಿಗಳೊಳಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ). [ಉತ್ತುಂಗ + ಭಂಗ]

**ಉತ್ತುಂಗಭುಜ** (ನಾ). ಎತ್ತರವಾದ ಹೆಗಲುಳ್ಳವನು: ಅಂಗದಮಂ ವಿರಚನೆಯಾಡುಂಗುರಮಂ ತಾಳ್ದುವಂದದಿಂ ತಾಳ್ದಿದನುತ್ತುಂಗಭುಜಂ ದಕ್ಷಿಣಭುಜದಿಂ ಗೆಲ್ದು ವಿರೋಧಿ ಮಂಡಲಾಧೀಶ್ವರರಂ (ಶಾಂತಿಪು. ೭-೫೧). [ಉತ್ತುಂಗ + ಭುಜ]

**ಉತ್ತುತ್ತ** 'ಉತ್ತುತ್ತೆ' ನೋ.

**ಉತ್ತುತೆ** 'ಉತ್ತುತ್ತೆ' ನೋ.

**ಉತ್ತುತ್ತೆ, ಉತ್ತುತ್ತಿ, ಉತ್ತುತೆ, ಉತ್ತುತ್ತ** (ನಾ). ಖರ್ಜೂರ; ಖರ್ಜೂರದ ಮರ: "ಖರ್ಜೂರವೆನಲುತ್ತುತ್ತೆಯಕ್ಕು" (ಮಂಗರಾ. ೪೩-೪೩); ಮಧುರದಾಡಿಮ ಅಮ್ಲದಾಡಿಮ ಜಟಾಖರ್ಜೂರ ಉತ್ತುತ್ತೆ ಬೇಲ ಕಿತ್ತಳೆ . . . ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೧೧); ಸಲ್ಲಕಿ ಬನ್ನಿ ಹೊನ್ನೆಯುತ್ತುತ್ತೆ ಶಿರೀಷವಿಂಗುಳವರಿಷ್ಟವಗೋತ್ಪಲ ಸಿಗ್ಗುಗುಗ್ಗುಳಂ (ನಳಚಂ. ೭೧); ಕಾಚು ಖೊಬರಿವುತು[ತ್ತು]ತ್ತೆ ಬೆಲ್ಲ ಕಬ್ಬಿನ ವಿದಳ ಬೂಸ ಮುಂತಾದ ಜಿನಸನು (ಮೈಆರಿ. ೧೯೪೩, ೪೩-೨೩; 1708). **ಉತ್ತತ್ತಿ**: ಉತ್ತತ್ತಿಯ ಮೇಲೆ ಕಡಿದರೆ ಸವಿ ತಟ್ಟುತ್ತಿರ್ಪುದಲ್ಲದೆ, ಒಳಗೆ ಕಡಿದರೆ ಮಹಾಕಠಿಣವಾಗಿ ತೋರುವ ಹಾಗೆ (ವಚಸಾ. II, ೨೫೦-೧೩ ಅರ್ಥ); ಸುಂಟಿ ಹೇರು ಮೆಣಸಿನ್ಹೇರು . . . ಸಗಟ ತುಂಬ್ಯಾನೆರಡು ಸೋಡ ಉತ್ತತ್ತಿ ಹೇರ (ಲೋಕಗೀ. ೧೬೮-೮); ಉತ್ತತ್ತಿ, ತೆಂಗಿನ ಕಾಯಿ, ಮಂಗಳಾಕ್ಷತೆಗಳಿಂದ ಉಡಿ ತುಂಬಿದಳು (ಮುತ್ತೈದೆ. ೨೬೬); ಉತ್ತತ್ತಿಗಳ ಚೀಲಗಳು ಎಲ್ಲ ಅಂಗಡಿಗಳಲ್ಲಿ ಬಾಯಿತೆರೆದು ನಿಂತುಬಿಟ್ಟವು (ಹಬ್ಬಬ. ೭೨). **ಉತ್ತುತೆ**: ಉತ್ತುತೆ ಖರ್ಜೂರಯಿಂಗು ಜೀರಿಗೆ ಮೆಂಥ್ಯ ನೀರುಳಿ ಬೆಳುಳ್ಳಿ ಅರಿಸಿನ ಶುಂಟಿ ಮುಂತಾದ (ಮೈಆರಿ. ೧೯೩೬, ೨೬-೩೭; 1708). **ಉತ್ತುತ್ತ**: ಉತ್ತುತ್ತ ನಾಲ್ಕು ತೂಕ, ಕಪ್ಪಲಿ ನಾಲ್ಕು ತೂಕ . . . ಮೊಲೆಯ ಹಾಲಲ್ಲಿ ತೇದು ಹಚ್ಚಲು ಪಟಲಗಣ್ಣು ಮಾಣ್ಗುಂ (ವಿವೈವಿ. ೭೯).
[?. / ತುಳು. ಉತ್ತುತ್ತಿ. / ಮರಾ. ಉತೋತಿ, ಉತೋತೀ]

**ಉತ್ತೇಜಕ** (ಗು). **೧.** ಉದ್ರೇಕಗೊಳಿಸುವ. **೨.** ಹುರಿದುಂಬಿಸುವ; ಪ್ರೋತ್ಸಾಹಿಸುವ. [ಸಂ.]

**ಉತ್ತೇಜನ** (ನಾ). **೧.** ಹುರಿದುಂಬಿಸುವುದು; ಪ್ರೋತ್ಸಾಹಿಸುವುದು; ಪ್ರೋತ್ಸಾಹ: ಸಾಮಾಜಿಕ ಮತ್ತು ನೈತಿಕ ಸಮಸ್ಯೆಗಳನ್ನೂ ಅಷ್ಟೇ ಧೈರ್ಯದಿಂದ ವಿಮರ್ಶಿಸಲು ಅವರಿಗೆ ಉತ್ತೇಜನ ತುಂಬಬೇಕು (ಶಿಕ್ಷದ. ೧೯). **೨.** ಉದ್ರೇಕಗೊಳಿಸುವಿಕೆ. [ಸಂ.]

**ಉತ್ತೇಜನಗೊಳ್ಳು** (ಕ್ರಿ). ಪ್ರೋತ್ಸಾಹವನ್ನು ಹೊಂದು: ಜನರನ್ನು ಮತಾಂತರಗೊಳಿಸಿ ತಮ್ಮ ಮತಕ್ಕೆ ಸೇರಿಸಿಕೊಳ್ಳುವ ಉದ್ದೇಶದಿಂದ ಉತ್ತೇಜನಗೊಂಡೇ ಮುಂದಿನ ಉಪದೇಶಕರು ದಕ್ಷಿಣಭಾರತದ ಕಡೆ ವಲಸೆ ಹೊರಟು ಬಂದರು (ದಭಾಇ. ೪೪).
[ಉತ್ತೇಜನ + ಕೊಳ್ಳು (< ಕೊಳ್$_1$)]

**ಉತ್ತೇಜಿತ** (ಗು). **೧.** ಹುರುಪುಗೊಂಡ; ಹುರಿದುಂಬಿದ: ಪ್ರಕೃತಿಯ ಆ ಸೌಂದರ್ಯದಿಂದ ಉತ್ತೇಜಿತನಾಗಿ ಅವನು ಮೆಲ್ಲನೆ ಹಾಡಲು ಮೊದಲುಮಾಡಿದನು (ಕಳಹು. ೩). (ನಾ). **೨.** ಕುದುರೆಯ ನಡಿಗೆಯಲ್ಲಿ ಒಂದು ವಿಧ. 'ಪಂಚಧಾರೆ' ಪರಾ. [ಸಂ.]

**ಉತ್ತೇಜಿಸು** (ಕ್ರಿ). ಹುರಿದುಂಬಿಸು; ಪ್ರೋತ್ಸಾಹಿಸು: ಮನು ಅವರುಗಳನ್ನೂ ತಮ್ಮ ಮನಬಿಚ್ಚಿ ಮಾತನಾಡುವಂತೆ ಉತ್ತೇಜಿಸಿದಳು (ಝಾರಾಣಿ. ೬೦); ಅದೇ ಮೇರೆಗೆ "ಶಹಬ್ಬಾಸ್ ಮಗೂ" ಎಂಬ ಹೃದಯಸ್ಥ ಪರಮಾತ್ಮನ ಶಬ್ದ ನಮ್ಮನ್ನು ಉತ್ತೇಜಿಸುತ್ತದೆ (ಶಾಂಪಜೀ. ೪೦).
[ಉತ್ತೇಜನ + -ಇಸು$_3$]

**ಉತ್ತೇರಿತ** (ನಾ). ಕುದುರೆಯ ನಡಿಗೆಯಲ್ಲಿ ಒಂದು ವಿಧ. 'ಪಂಚಧಾರೆ' ಪರಾ. [ಸಂ.]

**ಉತ್ತೋಯ** (ನಾ). ಮೇಲಕ್ಕೆ ಚಿಮ್ಮುವ ನೀರು: ಶವವತ್ತೋತ್ತೇಜಃಪಥೋತ್ತೋಯಮನಿಭಪತಿನಾಗಾಂಗನಾಂಗಂಗಳೊಳ್ ಪೂಸುವವೋಲ್ (ಶಾಂತಿಪು. ೮-೩೧). [ಸಂ.]

**ಉತ್ತೋರಣ** (ಗು). ಉನ್ನತವಾದ ತೋರಣದಿಂದ ಕೂಡಿದ: ಅದೇಂ ಸೊಗಯಿಸಿರ್ದುದೊ ತತ್ಪುರಮುತ್ಪತಾಕಮುತ್ತೋರಣಮುದ್ವಿಳಾಸರಸಮುತ್ಪಟಹಸ್ವನಮುತ್ಸವಾನಕಂ (ಆದಿಪು. ೮-೫೦).
[ಸಂ.]

**ಉತ್ಥ** (ಗು). ಮೇಲಕ್ಕೆ ಎದ್ದ: ಗುಹಾನೀಕ ಸುಪ್ತೋತ್ಥಸಿಂಹಪ್ರಕರಪ್ರೋನ್ನಾದದಿಂ ತಳ್ತುಪಗತ ವನದೇವೀಚಯಸ್ವಾಂತಸಂತ್ರಾಸಕರಂಪೊತ್ಸ್ಮತ್ತು ... ಕೈರಾತಘೋಷಂ (ಕಾದಂಪೂ. ೧೫೨). [ಸಂ.]

**ಉತ್ಥಾನ** (ನಾ). **೧.** ಮೇಲಕ್ಕೆ ಏಳುವುದು; ಎದ್ದು ನಿಲ್ಲುವುದು. **೨.** ಉದಯ; ಹುಟ್ಟಿ ಮೇಲಕ್ಕೆ ಬರುವುದು. **೩.** ಶ್ರದ್ಧೆಯಿಂದ ಕೂಡಿದ ಪ್ರಯತ್ನ; ಮನುಷ್ಯ ಪ್ರಯತ್ನ. **೪.** ಪೌರುಷ; ಶೌರ್ಯ. **೫.** ಸೈನ್ಯ. **೬.** ಯುದ್ಧ; ಕಾಳಗ. **೭.** ಅಂಗಳ. **೮.** ಸಂತೋಷ. **೯.** ಪುಸ್ತಕ. **೧೦.** ಮಲವಿಸರ್ಜನೆ. **೧೧.** ತಂತ್ರ. **೧೨.** ಪುನರುಜ್ಜೀವನ; ಮತ್ತೆ ಬದುಕುವುದು. [ಸಂ.]

**ಉತ್ಥಾನದ್ವಾದಶಿ** (ನಾ). ಕಾರ್ತಿಕಮಾಸದ ಶುಕ್ಲಪಕ್ಷದ ಹನ್ನೆರಡನೆಯ ದಿನ; ಆ ದಿನ ಆಚರಿಸುವ ಹಬ್ಬ.
[ಉತ್ಥಾನ + ದ್ವಾದಶಿ]

**ಉತ್ಥಾಪಕ** (ನಾ). ಮೇಲೆ ಎತ್ತುವವನು; ರಕ್ಷಕ: ನಾನಾನು ಚಿಕ್ಕ ಹುಡುಗನು, ಮನೆಯಲ್ಲಿ ಉತ್ಥಾಪಕರಾರೂ ಇದ್ದಿಲ್ಲ (ಚರಿಸಂ. ೭೮).
[ಸಂ.]

**ಉತ್ಥಾಪನ** (ನಾ). ಮೇಲೆ ಎತ್ತುವುದು, —ಎಬ್ಬಿಸುವುದು; ನಿಲ್ಲುವಂತೆ ಮಾಡುವುದು. [ಸಂ.]

**ಉತ್ಥಾಪನೆ** (ನಾ). = ಉತ್ಥಾಪನ: ವಿಕ್ರಮರಾಜನು ಉತ್ಥಾಪನೆ ಮಾಡಿದ ಭೀತಿಭೂತಕ್ಕೆ ಬಲಿಯಾಗಿ ಬೊಮ್ಮರಸನು ಮಹಾರಾಜರಿಗೆ ವಿಷ ಕೊಡುತ್ತಾನೆ (ಸಂಸಕ. ೧೦೬). [ಸಂ. ಉತ್ಥಾಪನ]

**ಉತ್ಥಾಪಿತ** (ಗು). ಮೇಲಕ್ಕೆ ಎಬ್ಬಿಸಿದ; ಎಬ್ಬಿಸಿ ನಿಲ್ಲಿಸಿದ. [ಸಂ.]

**ಉತ್ಥಿತ** (ಗು). **೧.** ಮೇಲಕ್ಕೆ ಎದ್ದ: ಸದ್ಭ್ರಾಂತ ಸಮೀರಣೋತ್ಥಿತ ವಿಶಾಲ ವಿಲೋಳ ತರಂಗರೇಖೆ ಪದ್ಮಾಂತರದಿಂದಮಿಂಬಱಿದು ಮಾನಸ ಹಂಸಿಯನುಯ್ವ ಮಾರ್ಗದಿಂ (ಪಂಪಭಾ. ೩-೫೭); ಗಂಗಾಜಲೋತ್ಥಿತ ಸೀಕರಾಲಿಗಳೇ ವೃಷ್ಟಿಯಾಗೆ (ಪದ್ಮರಾ. ೧-೧). **೨.** ಉಂಟಾದ; ಉತ್ಪನ್ನವಾದ: ಯುಗಪದುತ್ಥಿತ ಮಂಗಳಮೃದಂಗ ... ರವದೊಡನೆ (ಚಂದ್ರಪು. ೩-೯೪ ವ). **೩.** ಏಳಿಗೆಯನ್ನು ಹೊಂದಿದ; ಹೆಚ್ಚಿದ. **೪.** ಉದ್ಯೋಗಶೀಲನಾದ; ಕಾರ್ಯತತ್ಪರನಾದ. [ಸಂ.]

**ಉತ್ಪಟ** (ನಾ). **೧.** ಬೇರುಸಹಿತ ಕಿತ್ತು ಮೇಲೆಮಾಡುವಿಕೆ. **೨.** ಮರಗಳ ಪೊಟರೆಗಳಿಂದಲೂ ಬಿರುಕುಗಳಿಂದಲೂ ಒಸರುವ ರಸ; ಗೋಂದು; ಅಂಟು; ಮೇಣ. [ಸಂ.]

**ಉತ್ಪತಾಕ** (ನಾ). ಮೇಲೆ ಏರಿಸಿದ ಬಾವುಟ: ತತ್ಪುರಮುತ್ಪತಾಕಮುತ್ತೋರಣಮುದ್ವಿಳಾಸರಸಮುತ್ಪಟಹಸ್ವನಮುತ್ಸವಾನಕಂ (ಆದಿಪು. ೮-೫೦). [ಸಂ.]

**ಉತ್ಪತಿ** (ನಾ). = ಉತ್ಪತ್ತಿ **೧**: ಉತ್ಪತಿಗೆ ಬೊಮ್ಮ ಗಡ ಸ್ಥಿತಿಗೆ ತಾ ವಿಷ್ಣುಗಡ ಹತವಗೈವುದಕೆ ರುದ್ರ ಗಡ (ಸರ್ವಜ್ಞ. ೨೦೯).
[< ಸಂ. ಉತ್ಪತ್ತಿ]

**ಉತ್ಪತಿಷ್ಣು** (ನಾ). ಮೇಲಕ್ಕೆ ಹಾರಲು ಬಯಸುವವನು. [ಸಂ.]

**ಉತ್ಪತ್ತಿ** (ನಾ). **೧.** ಹುಟ್ಟುವಿಕೆ; ಜನ್ಮ; ಜನನ: ಅರಯಲವರುತ್ಪತ್ತಿಗೆ ಕಾರಣಮೆನಿಸಿರ್ದ ಜನಕನಂ ದಶರಥನಂ ಮಾರಣಮಂ ಪೊರ್ದಿಸುವೆಂ (ಪಂರಾಮಾ. ೩-೨೪). **೨.** ಮೂಲ. 'ಉತ್ಪತ್ತಿಸ್ಥಾನ' ಪರಾ. **೩.** ಲಾಭ; ಹುಟ್ಟುವಳಿ; ಬೆಳೆ. [ಸಂ.]

**ಉತ್ಪತ್ತಿಸಾಧನ** (ನಾ). ತಯಾರಿಸುವ ಸಲಕರಣೆ.
[ಉತ್ಪತ್ತಿ + ಸಾಧನ]

**ಉತ್ಪತ್ತಿಸ್ಥಾನ** (ನಾ). ಹುಟ್ಟಿಬರುವ ಸ್ಥಳ; ಜನ್ಮಭೂಮಿ: ಬಲದೇವ ವಾಸುದೇವರ್ ... ಸೌಭಾಗ್ಯಕ್ಕೆ ಜನ್ಮಭೂಮಿಯುಂ ಸೌಶೀಲ್ಯಕ್ಕುತ್ಪತ್ತಿಸ್ಥಾನಮುಮಾಗಿ (ಶಾಂತಿಪು. ೧-೮೦ ವ). [ಉತ್ಪತ್ತಿ + ಸ್ಥಾನ]

**ಉತ್ಪಥ** (ನಾ). **೧.** ತಪ್ಪುದಾರಿ; ಮಾರ್ಗವಲ್ಲದ್ದು; ಅಮಾರ್ಗ. **೨.** ಆಕಾಶ (ಕ). [ಸಂ.]

**ಉತ್ಪನ್ನ** (ಗು). **೧.** ಹುಟ್ಟಿದ; ಉಂಟಾದ: ಜಿನಪದಾಂಭೋಜ ವರಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ ಚತುರ ಕವಿತಾ ಗುಣಾರ್ಣವ ವಿರಚಿತಮಪ್ಪ (ಪಂಪಭಾ. ೧-೧೪೯ ವ). (ನಾ). **೨.** ಗಳಿಕೆ; ಸಂಪಾದನೆ; ಆದಾಯ: ವರ ಚಿಕ್ಕವ, ರೂಪವಂತನು, ಉತ್ಪನ್ನವಿದೆ, ಮನೆತನ ಒಳ್ಳೆಯದು (ಜಯಂತ. ೧೭೪); ಆತ್ತ ಕೊತವಾಲನ ಉತ್ಪನ್ನವು ನಿಂತಿತು (ಕೊತಕಾ. ೪೫).
ಉತ್ಪನ್ನಮಾಡು = ಉತ್ಪತ್ತಿಮಾಡು. [ಸಂ.]

**ಉತ್ಪನ್ನತೆ** (ನಾ). = ಉತ್ಪತ್ತಿ **೨**: ತನ್ನುಮಂ ಜಗಮಂ ನೆನಪಿನುತ್ಪನ್ನತೆಯ ನಾಲೋಕನಂಗಳನುನ್ನತಾಂತರ್ಬಾಹಿರಾಚರಣಂಗಳಂ ಮುಱಿದು (ಬಸಪು. ೩೫-೭). [ಸಂ. ಉತ್ಪನ್ನತಾ]

**ಉತ್ಪನ್ನದಾರ** (ನಾ). ಆದಾಯವಿರುವವನು; ಹಣವಂತ: ಉತ್ಪನ್ನದಾರರಾದ ಶ್ರೀಮಂತರು ಇದನ್ನು ಬಂಗಾರ ಬೆಳ್ಳಿ ತಗಡುಗಳಿಗೆ ಅಂಟಿಸಿ ದೇವರಮನೆಯಲ್ಲಿ ಇಡಬಹುದು (ನಿರಾಭ. ೧೭೪).
[ಉತ್ಪನ್ನ + -ದಾರ್$_4$]

**ಉತ್ಪಲ, ಉತ್ಪಳ** (ನಾ). ೧. ನೈದಿಲೆ; ಕನ್ನೈದಿಲೆ; ಕರಿಯ ಕಮಲ; ಇಂದೀವರ: "ಉತ್ಪಲಂ ಇಂದೀವರಾಖ್ಯಮೆನೆ ನೈದಿಲೆಗೆ ನಾಮಮಕ್ಕುಂ" (ಮಂಗರಾ. ೧೨೪–೧೬); ಉತ್ಪಲವನಂಬೊಲಿರ್ದುದು ಗಗನಂ (ಜಗವಿ. ೪–೫೯). ೨. ಆವಲು; ನೀರುಹೂ. ೩. [ಛಂದ] ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಇಪ್ಪತ್ತನೆಯ ಕೃತಿಯೆಂಬ ಛಂದಸ್ಸಿನಲ್ಲಿ ಒಂದು ವೃತ್ತ; ಉತ್ಪಲಮಾಲೆ: ಗುರುವೊಂದಾದಿಯೊಳುತ್ಪಲಂ (ಛಂದೋಂಬು. ೬. ೨೩೦). ೪. ನಖಕ್ಷತಗಳಲ್ಲಿ ಒಂದು ವಿಧ: ಪಂಚನಖಯೋಗ ದ್ವಂದ್ವಯೋಗ ಅರ್ಧ ಚಂದ್ರಕ ಮಂಡಲ ಮಯೂರಪ್ಲುತ ಶಶಪ್ಲುತ ಉತ್ಪಲವೆಂಬ ಸಪ್ತವಿಧನಖೋಪಕ್ಷತ ವಿಹಿತರಿಂ (ವಿವೇಕ. ೨೩೦). **ಉತ್ಪಳೆ**: ೧. "ಇಂದೀವರಂ, ಉತ್ಪಳಂ— ಈ ೨ ನೆಯ್ದಿಲ್" (ಹಲಾಯು. ೧೧೨–೫೯); ಕಂದೆಜಿದು ನೋಡಳುತ್ಪಳದ ಸಿರಿಯಳಿವುದೆಂದೆನ್ನ ಮಗಳೆಂದೊಬ್ಬ ಸತಿ ನುಡಿದಳು (ಹ ಚ ಕಾ. ೪–೧೯). ೫. ವಿರಳವಾಗಿರಲ್ಕೆದುಗುರನೊತ್ತಿ ಮೊಲೆಯ ನಾಣರವೆತ್ತಿಡೆಯ ಬೆನ್ನಲೆಳೆಯಲದುವೆ ತರದಿನೆಸಳಾಗಿ ಗೋಚರಿಸುವದರಿಂದಾಯಿತು ತರಳೆಯುತ್ಪಳಮೆಂದು ಸುರತದೊಳಗೆ (ಜನವ. ೫–೪೨). [ಸಂ.]

**ಉತ್ಪಲಪ್ರಿಯ** (ನಾ). ನೈದಿಲೆಗೆ ಪ್ರಿಯನಾದವನು; ಚಂದ್ರ: ಜಲಜಪ್ರಿಯ ರವಿಜ ಕುಜೋತ್ಪಲಪ್ರಿಯರ್ ನಿಧನ ಧನ ರಿಪು ವ್ಯಯಗೃಹದೊಳ್ ನೆಲಸಿರೆ ದೊರೆಕೊಂಡೆಡೆಯೊಳ್ ಬಲವದ್ಗ್ರಹದಧಿಕದೋಷದಿಂ ಕಣ್ಗೆಡುಗುಂ (ಜಾತತಿ. ೨೧–೧೬). [ಉತ್ಪಲ + ಪ್ರಿಯ]

**ಉತ್ಪಲಮಾಲೆ** (ನಾ). = ಉತ್ಪಲ ೩: ಸಾತಿಶಯೋಕ್ತಿಯಿಂದಿದು ವಿರಾಜಿಸುಗುಂ ಕವಿರಾಜಹಂಸನಿಂ ಭೂತಳದೊಳ್ ನೆಗಟ್ತೆವಡೆದುತ್ಪಲಮಾಲೆ ವಿಲೋಲ ಲೋಚನೇ (ಛಂದೋಂಬು. ೨–೧೨೭); ಉತ್ಪಲಮಾಲೆಯಪ್ಪುದು ಭರಂನಭಭಂ ರಲಗಂ ನೆಗಟ್ದಿರಲ್ (ಕೈಪಿಡಿ. ೮೬). [ಉತ್ಪಲ + ಮಾಲೆ]

**ಉತ್ಪಲಶಾರಿಬೆ** (ನಾ). ಸೊಗದೆ ಬೇರಿನ ಬಳ್ಳಿ; ಸುಗಂಧಪಾಲ. [ಸಂ. ಉತ್ಪಲಶಾರಿಬಾ]

**ಉತ್ಪಲಾಪ್ತ** (ನಾ). = ಉತ್ಪಲಪ್ರಿಯ (೬). [ಉತ್ಪಲ + ಆಪ್ತ]

**ಉತ್ಪಲಿನಿ** (ನಾ). ೧. ಉತ್ಪಲಗಳಿಂದ ಕೂಡಿದುದು; ಸರೋವರ: ಇನನಸ್ತಂಗತನಾಗೆಯುತ್ಪಲಿನಿ ಪೆಟ್ಟುಂ ಲಕ್ಷ್ಮಿಯುಂಟೆಂಬುದರ್ಕೆನಗಂ ತಪ್ಪದು ರಾಜಬಾಧೆ (ಚಂದ್ರಪ್ರ. ೮–೧೫). ೨. ನೈದಿಲೆಯ ಬಳ್ಳಿ. [ಸಂ. ಉತ್ಪಲಿನೀ]

**ಉತ್ಪವನ** (ನಾ). ಪವಿತ್ರಗೊಳಿಸುವುದು; ಶುದ್ಧಿಗೊಳಿಸುವುದು. [ಸಂ.]

**ಉತ್ಪಳ** 'ಉತ್ಪಲ' ನೋ.

**ಉತ್ಪಾಟಿ** (ನಾ). ನಿರ್ಮೂಲಮಾಡುವವನು: ಜಿತಾಕ್ಷ ಗರಭಕ್ಷ ಕಾಲಕ್ಷಿತಿರುಹೋತ್ಪಾಟಿ [ಪಾಠಾಂ. ಹೋಪ್ತ] ತಕ್ಷಾಕ್ಷಯ (ಉದ್ಭಟದೇ. ೩–೫೧). [ಸಂ.]

**ಉತ್ಪಾಟನ** (ನಾ). ಕೀಳುವುದು; ನಾಶಗೊಳಿಸುವುದು: ಸಕಳ ರಾಜ್ಯಕಂಟಕೋತ್ಪಾಟನ ಪ್ರಚಂಡ ದೋರ್ದಂಡನುಂ (ಕ ಇ ಆ. ೫–೨–೧೪೪; 1058); ಐರಾವತದಂತಿದಂತೋತ್ಪಾಟನ ಪಟುಬಾಹುಪರಿಘರುಮಪ್ಪನೇಕ ವೀರವಾನವಸೇನಾಗ್ರಣಿಗಳಿಂ ವೀರರಸಮುಂ . . . ನೆಗಲುತ್ತುಮಿರೆಯಿರೆ (ಜಗವಿ. ೨–೩೯ ವ). [ಸಂ.]

**ಉತ್ಪಾಟಿತ** (ಗು). ಕಿತ್ತುಹಾಕಿದ: ಆಗಳ್ ತದುತ್ಪಾಟಿತ ವಿನೀಳ ಕುಟಿಲ ಕುಂತಳಂಗಳನಮರತರುಕುಸುಮದಾಮೋದ್ದಾಮ ರಜೋರಂಜಿತಂಗಳನನರ್ಘ್ಯರತ್ನಮಯ ಪಟಳಿಕೆಯೊಳಾಂತು ಕೊಂಡು ಪೋಗಿ (ಆ ದಿ ಪು. ೯–೬೮ ವ). [ಸಂ.]

**ಉತ್ಪಾಟಿನಿ** (ನಾ). ಒಂದು ವಿದ್ಯೆ: ಮತ್ತೊಂದು ದಿವಸಂ ಪ್ರಜ್ಞಪ್ತಿ ಕಾಮರೂಪಿಣಿ . . . ಉತ್ಪಾಟನಿ . . . ಎಂಬಿವು ಮೊದಲಾಗಿ ಕುಲವಿದ್ಯೆ ಜಾತಿವಿದ್ಯೆಗಳೊಳ್ (ಚಾವುಂಉ. ೨೧೦). [ಸಂ. ಉತ್ಪಾಟಿನೀ]

**ಉತ್ಪಾತ** (ನಾ). ೧. ಮೇಲಕ್ಕೆ ಹಾರುವುದು; ಮೇಲಕ್ಕೆ ನೆಗೆಯುವುದು. ೨. (ಭೂಕಂಪ, ಉಲ್ಕಾಪಾತ ಮುಂತಾದ) ಆಕಸ್ಮಿಕವಾದ ಘಟನೆ; ವಿನಾಶಸೂಚಕ ವಸ್ತು: ಒಳಗೊಳಗೆ ನೆಲ ನುರಿವುತಿರೆ ವೆಗ್ಗಳಿಸಿ ಗಾಳಿಯು ಧೂಳಿ ನೆಗೆವುತ್ತಿಳೆಯೊಳೀಪರಿಯಿಂದ ಉತ್ಪಾತಂಗಳಾಗಿರಲು (ಬಸವು. ೫೭–೪೮); ಮಧುಮಾಸವಲ್ಲ ವಸಂತ ಬಂದಿದೆ ನೋಡಿ ವಿಧುವು ಮೂಡಿತು ರಾತ್ರಿಯಲ್ಲಿ ಇದು ಮದನೋತ್ಪಾತವೆಂದು ಮುನೀಂದ್ರರು ವಧುಗಳನಮುರ್ದಪ್ಪಿದರು (ಮೋಹತ. ೭–೧೨). ೩. ಅಪಶಕುನ; ಅಶುಭ ಸೂಚಕ ಚಿಹ್ನೆ: ಈತನೆ ನಮ್ಮ ಕುಲಕ್ಕಂ ಕೇತುದಲಾನಜುವೆನಲ್ಲದಂದೇಕಿನಿತುತ್ಪಾತಂ ತೋರ್ಪುವು ಬಿಸುಡುವುದೀತನ ಪೆಜಗುಟಿದ ಸುತರೆ ಸಂತತಿಗಪ್ಪರ್ (ಪಂಪಭಾ. ೧–೧೩೩); ಜಯವು ಜೋಡಿಸಲಜಿಯದಿದು ಸಂಶಯದ ಸುಳಿವುತ್ಪಾತಶತವಿದು ಲಯದ ಬೀಜವು ಭೀಷ್ಮ ಚಿತ್ತವಿಸೆಂದನಾ ದ್ರೋಣ (ಕುವ್ಯಾವಿ. ೭–೧); ಪಗಲೊಳ್ ಉಲ್ಕಾಪಾತಂಗಳಾಗೆ ಧೂಮಕೇತುಗಳ್ ದೆಸೆದೆಸೆಗೆ ಮುಸುಂಕೆ ನೆತ್ತರ ಸರಿ ಸುರಿಯೆ ಅಗಳಾಗಳ್ ಪೊಡವಿ ನಡುಗೆ ರಾಯನ ಸೇನೆಯೊಳ್ ಕುತ್ತಂ ಕುಜುಪಿಡೆ ಕುದುರೆ ಕಣ್ಣೀರಿಡೆ ಗಜಂ ಮಣ್ಣಂ ಗೋರೆ ತೇರ್ ಮುಜಿಯೆ ಉತ್ಪಾತವಾಯ್ತು (ರಾಮಾಶ್ವ. ೬೬–೧೧). ಉತ್ಪಾತವಾಗು = ಅನಿರೀಕ್ಷಿತ ಘಟನೆಯುಂಟಾಗು: ವಾತೋದ್ಧೃತ್ಬಣದಿಂದತಿದೂರದಿ ಕೇತಕಿಗಜುಗಳ್ಳೆತಂದು ಈ ತರುಣಿಗಳೆರ್ದೆಯಲಿ ತಾಗಿ ನಡಲುತ್ಪಾತವಾದುದು ತಪೋವನದಿ (ಮೋಹತ. ೭–೧೪). [ಸಂ.]

**ಉತ್ಪಾತಕ** (ನಾ). ೧. (ಭೂಕಂಪ, ಉಲ್ಕಾಪಾತ ಮುಂತಾದ) ಆಕಸ್ಮಿಕವಾದ ಘಟನೆ. ೨. ವಿಕೃತವಾದ ಮನೋಧರ್ಮವುಳ್ಳವನು; ವಿರುದ್ಧವಾದ ಮನೋಧರ್ಮವುಳ್ಳವನು (೬). [ಸಂ.]

**ಉತ್ಪಾತಕೇತು** (ನಾ). ಅಶುಭವನ್ನು ಸೂಚಿಸುವ ಗ್ರಹ; ಧೂಮಕೇತು: ಎನ್ನ ಜಾತಿಗಮುತ್ಪಾತಕೇತುವಾದೆನೆಂದು ತನ್ನಂ ತಾನೆ ನಿಂದಿಸಿಕೊಂಡು ವಾಯಸಂ ಪೋದುದು (ಪಂಚತಂ. ೨೩೫–೯). [ಉತ್ಪಾತ + ಕೇತು]

**ಉತ್ಪಾತಸ್ವತಂತ್ರ** (ನಾ). ಉತ್ಪಾತದಂತೆ ಸ್ವತಂತ್ರನಾದವನು; ಅತಿಸ್ವತಂತ್ರನಾದವನು; ಯಾರ ಅಂಕೆಗೂ ಒಳಗಾಗದವನು (?): ದೇವಾ ದೇವರ ಕುಮಾರನಪ್ಪ ಸೌಂದರಪೆರುಮಾಳೆ ತರಳನುತ್ಪಾತ ಸ್ವತಂತ್ರನಪ್ಪ ಕಾರಣದಿಂ ನಿಮ್ಮಡಿಗಳಾಜ್ಞೆಯಿಂದೊಂದುವಂ ಕುಂದ ನುಡಿಯಲಮ್ಮೆವು (ನಂಬಿರ. ೧೬–೩). [ಉತ್ಪಾತ + ಸ್ವತಂತ್ರ]

**ಉತ್ಪಾದ** (ನಾ). ೧. = ಉತ್ಪತ್ತಿ ೧: ಉತ್ಪಾದ ವ್ಯಯ ಧ್ರೌವ್ಯಾತ್ಮಕನುಂ . . . ಜೀವನುಂಟೆಂದು ಶತಮತಿವೆರಸು . . . ತಿಳಿಪಿ (ಆದಿಪು. ೨–೧೦ ವ); "ಉತ್ಪಾದ – ಉತ್ಪತ್ತಿಯುಂ, ವ್ಯಯ – ವಿಪತ್ತಿಯುಂ ಧ್ರೌವ್ಯ – ಧ್ರುವತ್ವಮುಂ" (ತತ್ತ್ವಪ್ರ. ೨೪೬). ೨. ಉಂಟುಮಾಡುವುದು; ಸೃಷ್ಟಿಸುವುದು. ೩. ಕಾರಣ (೬). [ಸಂ.]

**ಉತ್ಪಾದಕ** (ಗು). ಸೃಷ್ಟಿಮಾಡುವ; ತಯಾರಿಸುವ: ಸಸಾರಜನಕ ಮತ್ತು ಕೊಬ್ಬುಗಳೂ ಶಕ್ತಿಯುತ್ಪಾದಕಗಳು (ಆಡುಸೌ. ೫೬); ಉತ್ಪಾದಕ ಸಹಕಾರ ಸಂಘಗಳನ್ನು ಸ್ಥಾಪಿಸಿ (ಪುನರು. ೫೨೫). [ಸಂ.]

**ಉತ್ಪಾದನ** (ನಾ). ಸೃಷ್ಟಿಸುವಿಕೆ; ತಯಾರಿಸುವಿಕೆ; ನಿರ್ಮಾಣ. 'ಉತ್ಪಾದನಶುಲ್ಕ' ಪರಾ. [ಸಂ.]

**ಉತ್ಪಾದನಶುಲ್ಕ** (ನಾ). ತಯಾರಿಸಿದ ವಸ್ತುವಿನ ಮೇಲೆ ಹಾಕುವ ಸುಂಕ: ಸಾಮಗ್ರಿಗಳ ಮೇಲಿನ ಉತ್ಪಾದನಶುಲ್ಕಗಳನ್ನು ಭಾರತ ಸರ್ಕಾರವು ವಿಧಿಸತಕ್ಕುದು (ಭಾಘಾನ. ೧೫೨).
[ಉತ್ಪಾದನ + ಶುಲ್ಕ]

**ಉತ್ಪಾದನೆ** (ನಾ). = ಉತ್ಪಾದನ: ಶರೀರಕ್ಕೆ ಬೇಕಾದ ಶಕ್ತಿಯನ್ನೊದಗಿಸುವುದಕ್ಕೆ ಮುಖ್ಯವಾಗಿ ಪಿಷ್ಟ ಮತ್ತು ಸಕ್ಕರೆ ಶಕ್ತಿಯ ಉತ್ಪಾದನೆಗೆ ಕಾರಣವಾಗಿವೆ (ಆಡುಸೌ. ೫೬). [ಸಂ. ಉತ್ಪಾದನ]

**ಉತ್ಪಾದಿಸು** (ಕ್ರಿ). ೧. ಉಂಟುಮಾಡು; ಹುಟ್ಟಿಸು: ಸೋದರರೊಳ್ ಸೋದರರಂ ಕಾದಿಸುವುದು ಸುತನ ತಂದೆಯೆಡೆಯೊಳ್ ಬಿಡದುತ್ಪಾದಿಸುವುದು ಕೋಪಮುನಳವೀ ದೊರೆತೆನೆ ತೊಡರ್ವುದೆಂತು ರಾಜ್ಯಶ್ರೀಯೊಳ್ (ಆದಿಪು. ೧೪-೧೨೨); ನುಡಿಯಲುಜ್ಜುಗಮಂ ಲಜ್ಜೆ ಮಾಣಿಸೆ ಮುಖಸೌರಭಕ್ಕೆಱಗುವ ಮಱಿದುಂಬಿಯ ಮೇಲೆ ದೂಱನುತ್ಪಾದಿಸಿಯುಂ (ಕಾದಂಉ. ೩೬); ಕೆಲರುತ್ಪಾದಿಸುವರ್ ಸ್ವಾಮಿತ್ವದೊಳಾದಮಭೇದದೆ ಚತುರ್ಥಿಯಂ ಷಷ್ಠಿಯುಮಂ (ಕಾವ್ಯಾವ. ೧೨೦); ದೀರ್ಘಮನಿರದರೆ ಖೇದದ ಸಂಭ್ರಮದ ಮೆಯ್ಯೊಳುತ್ಪಾದಿಸುವರ್ (ಶಮುದ. ೧೧೭); ಶಕ್ತಿಯನ್ನು ಉತ್ಪಾದಿಸಲು ಕಲ್ಲಿದ್ದಲು ಪೆಟ್ರೋಲುಗಳ ಅಗತ್ಯವೇ ಉಳಿಯಲಿಲ್ಲ (ಕಾಲಯಾ. ೪೧). [ಉತ್ಪಾದನ + -ಇಸು₃]

**ಉತ್ಪಾದ್ಯ** (ಗು). ಹುಟ್ಟಿಸಲ್ಪಡುವ; ಹೊಸದಾಗಿ ನಿರ್ಮಿತವಾದ: 'ಉತ್ಪಾದ್ಯ'ವಾಗಿ – ಎಂದರೆ ಕವಿಯಿಂದ ಹೊಸದಾಗಿ ಕಲ್ಪಿತವಾಗಿ ಇರಬಹುದು (ಕೈಪಿಡಿ. ೨೦೬); ಹಾಲು ಮೊಸರಂದದ ವಿಕಾತ್ಯನು ಕೇಳು ಸ್ವರ್ಗದವೋಲು ಪ್ರಾಪ್ಯನು ಹೇಳಲೇನುತ್ಪಾದ್ಯ ಘಟದಂದದಲಿ ದ್ವಿಜನಂತೆ ಮೇಲೆ ಸಂಸ್ಕಾರ್ಯನುಮೆನಿಸನವ (ಅಮೃತ. ೬-೨೧). [ಸಂ.]

**ಉತ್ಪಿಂಜ** (ಗು). ಕ್ರಮ ತಪ್ಪಿದ; ಗೊಂದಲಗೊಂಡ; ಅಸ್ತವ್ಯಸ್ತವಾದ. [ಸಂ.]

**ಉತ್ಪಿಂಜಲ** (ಗು). = ಉತ್ಪಿಂಜ (ಕ). [ಸಂ.]

**ಉತ್ಪುಂಜ್ಯಮಾನ** (ಗು). ಗುಂಪಾಗಿ ಏಳುತ್ತಿರುವ; ಒಟ್ಟಾಗಿ ಏಳುತ್ತಿರುವ: ಅಂತರ್ಚಿಸುತ್ತಮುತ್ಪುಂಜ್ಯಮಾನ ಪುಲಕನಿಕರೆಯುಂ . . . ಮುಕುಳಾಯಮಾನ ನಯನಯುಗಳೆಯುಮಾಗಿ (ಕಾದಂಉ. ೬೦೧). [ಸಂ.]

**ಉತ್ಪುಲಕ, ಉತ್ಪುಳಕ** (ನಾ). ಮೇಲಕ್ಕೆ ಎದ್ದಿರುವ ರೋಮಾಂಚ; ನೆಟ್ಟಗೆ ನಿಂತಿರುವ ಮೈಕೂದಲು: ಭರಿತ ಸರಸಾನಂದಲೋಚನ ಶರಧಿ ಮೇಲ್ವರಿದೊತ್ತಿ ಪಸರಿಸೆ ನಿರತ ಗದ್ಗದ ಕಂಠಮೆಸೆಯಲುಮುತ್ಪುಲ [ಪಾಠಾಂ. ಳ]ಕರಾಜಿ ನೆರೆದು (ಬಸಪು. ೬೧-೬೧). **ಉತ್ಪುಳಕ**: ಕೇಳ್ದು ಮಾಚಯ್ಯಂ ಹರುಷಮಂ ತಾಳ್ದು ಮನದೊಳುಮುತ್ಪುಳಕಚಯವೇಳ್ದು ಸರ್ವಾಂಗದೊಳಾನನದೊಳು ಹಸನವೆಸೆಯೆ (ಬಸಪು. ೩೭-೨೪). [ಸಂ.]

**ಉತ್ಪುಳಕ** 'ಉತ್ಪುಲಕ' ನೋ.

**ಉತ್ಪ್ರಭ** (ಗು). ವಿಶೇಷವಾದ ಕಾಂತಿಯುಳ್ಳ: ಉಪಶಮಿಸಿದುದುತ್ಪ್ರಭ ದಂಡನಿಹತ ಸಂಭೂತಭೂರಿ ಪರಿತಾಪಮಾಱುತಿಂಗಳೊಳಗದಾ (ಶಾಂತಿಪು. ೧೧-೪೫). [ಸಂ.]

**ಉತ್ಪ್ರಾಸ** (ನಾ). ೧. ದೂರ ಎಸೆಯುವಿಕೆ. ೨. ಅಟ್ಟಹಾಸ; ಗಟ್ಟಿಯಾದ ನಗೆ. ೩. ಹೆಚ್ಚಿಗೆ; ಅತಿಶಯ. [ಸಂ.]

**ಉತ್ಪ್ರೇಕ್ಷಣ** (ನಾ). ೧. ಗಮನವಿಟ್ಟು ನೋಡುವುದು; ಪರಿಶೀಲನೆ. 'ಉತ್ಪ್ರೇಕ್ಷಿಸು' ಪರಾ. ೨. ಉತ್ಪ್ರೇಕ್ಷೆಮಾಡಿ ಹೇಳುವುದು. [ಸಂ.]

**ಉತ್ಪ್ರೇಕ್ಷಿಸು** (ಕ್ರಿ). ೧. ಗಮನವಿಟ್ಟು ನೋಡು; ಪರಿಶೀಲಿಸು: ಅದನುತ್ಪ್ರೇಕ್ಷಿಸಿ ನೋಡುತ್ತುಂ ಪೋಗಿ (ಶಾಂತಿಪು. ೮-೧೦೬ ವ). ೨. [ಕಾವ್ಯಮೀ] ಒಂದು ವಸ್ತುವನ್ನು ಮತ್ತೊಂದಾಗಿ ಸಂಭಾವಿಸು: ಚಂಡಾಲವಿದ್ಯೆಯೆಂಬ ಇಸ್ಲೋರ್ವ ಕವಯಿತ್ರಿಯು ಹಾಲು ಚೆಲ್ಲಿದಂತೆ ಬಿದ್ದ ಬೆಳದಿಂಗಳನ್ನು ಕಂಡು ಹಗಲಿನ ಕಾರ್ಯಗಳಿಂದ ದಣಿದ ಜಗತ್ತು ಕ್ಷೀರಸಾಗರದಲ್ಲಿ ಮುಳುಗಿದೆ ಎಂದು ಉತ್ಪ್ರೇಕ್ಷಿಸುವಳು (ಸಂಕವ. ೬). ೩. ಅತಿಶಯವಾಗಿ, ಅಧಿಕವಾಗಿ ವರ್ಣಿಸು.
[ಉತ್ಪ್ರೇಕ್ಷಣ + -ಇಸು₃]

**ಉತ್ಪ್ರೇಕ್ಷೆ** (ನಾ). ೧. ಕಡೆಗಣಿಸುವುದು; ಅಲಕ್ಷ್ಯ; ಔದಾಸೀನ್ಯ. ೨. [ಕಾವ್ಯಮೀ] ಕಾವ್ಯಾಲಂಕಾರಗಳಲ್ಲಿ ಒಂದು: "ಒಂದಾನೊಂದು ಪದಾರ್ಥವನ್ನು ಮತ್ತೊಂದು ಪದಾರ್ಥವನ್ನಾಗಿ ಸಂಭಾವನೆ ಮಾಡುವುದೇ ಉತ್ಪ್ರೇಕ್ಷೆಯೆನ್ನಿಸಿಕೊಳ್ಳುವುದು" (ಕೈಪಿಡಿ. ೨೬೩); ತಱಿಸಂದು ಪಲವು ತೆಱದಿಂ ತೆಱೆದಿರೆ ನೆಗೞ್ದುರ್ದದೊಂದು ವಸ್ತುಸ್ಥಿತಿಯಂ ಮಱಸಿ ಪೆಱತೊಂದು ಮಾಟ್ಕೆಯಿನಱಿಪುವುದುತ್ಪ್ರೇಕ್ಷೆಯೆಂಬುದಿಂತದಱ ತೆಱಂ (ಕವಿರಾ. ೩-೧೧೪). ೩. ಅಧಿಕವಾಗಿ ವರ್ಣಿಸುವುದು; ಅತಿಶಯವಾದ ಮಾತು. [ಸಂ. ಉತ್ಪ್ರೇಕ್ಷಾ]

**ಉತ್ಪ್ಲವನ** (ನಾ). ೧. ಮೇಲೆ ನೆಗೆಯುವುದು; ಕುಪ್ಪಳಿಸುವುದು; ಹಾರುವುದು. ೨. ಎಣ್ಣೆ, ತುಪ್ಪ ಮುಂತಾದವುಗಳ ಮೇಲಿನ ಕಸವನ್ನು ದರ್ಭೆಯಿಂದ ತಳ್ಳಿಹಾಕುವುದು. [ಸಂ.]

**ಉತ್ಪ್ಲುತ** (ನಾ). ಬಲವಾದ ನೆಗೆತ; ಎತ್ತರಕ್ಕೆ ಹಾರುವಿಕೆ: ನಿಸಿಕಂಗಳ್ ನೆಱೆವನ್ನಮುತ್ಪ್ಲುತದಿನಾಯುಃಪ್ರಾಣಮಂ ಬೆನ್ನನೇಱಿಸಿಕೊಂಡೋಡುವ ಕಾಲಮೆಂಬೆರಲೆಯಂ ಬೆಂಬತ್ತಿ ಬೀೞ್ವಂದ ದೇಹಸಮೂಹಂಗಳೊಳಾವುದಂ ನೆನೆದು ಮೋಹಂಗೆಯ್ದನೇನೆಂದು ಭಾವಿಸಿದಂ ದೇಹದ ನಿತ್ಯಮಪ್ಪ ನಿಲವಂ ಸಾಹಿತ್ಯವಿದ್ಯಾಧರಂ (ಮಲ್ಲಿಪು. ೯-೭೬). [ಸಂ.]

**ಉತ್ಫಣಿತ** (ಗು). ಮೇಲೆ ಎತ್ತಿದ ಹೆಡೆಯನ್ನುಳ್ಳ; ಹೆಡೆಯೆತ್ತಿದ: ಉತ್ಫಣಿತಾಹಿಶೀರ್ಷರತ್ನಜಘೃಣಿಮಾಲೆ (ರಾಜಶೇ. ೮-೧೦೮). [ಸಂ.]

**ಉತ್ಫಲ** (ಗು). ೧. ವಿಕಾಸವಾದ; ಬಿರಿದ; ಅರಳಿದ. (ನಾ). ೨. ಶ್ರೇಷ್ಠವಾದ ಹಣ್ಣು. [ಸಂ.]

**ಉತ್ಫುಲ್ಲ** (ಗು). ವಿಕಾಸಹೊಂದಿದ; ಚೆನ್ನಾಗಿ ಅರಳಿದ: ಮೊಗಮುತ್ಫುಲ್ಲ ಸರೋಜಹಾಸಿ ನಯನಂ ನೀಲಾಂಬುಜಸ್ಪರ್ಧಿ (ಆದಿಪು. ೧-೭೪); ವಿಸ್ಮಯೋತ್ಫುಲ್ಲಮಾಗಲ್ಕೆ ರುಚಿರಾನನಾ ರಾಮದಯಿತೆಯಾ ಮದಿರೇಕ್ಷಣಂ (ಶ್ರೀರಾಮಾ. ೨೩೨-೧೧೪). [ಸಂ.]

**ಉತ್ರಿಗೆ** 'ಉತ್ತರಿಗೆ' ನೋ.

**ಉತ್ವ** (ನಾ). [ವ್ಯಾಕ] ಉಕಾರ: ಇತ್ವದೊಳುತದೊಳಾ ಹ್ರಸ್ವೈತ್ವದೊಳೊಂದಿದ ವಕಾರಮಕ್ಕುಂ (ಶಮುದ. ೨೧೦). [ಸಂ.]

**ಉತ್ವಾಂತ** (ನಾ). [ವ್ಯಾಕ] ಕೊನೆಯಲ್ಲಿ ಉಕಾರವುಳ್ಳ (ಶಬ್ದ): ಅತ್ವಾಂತಮುಮಿತ್ವಾಂತಮುಮುತ್ವಾಂತಮುಂ (ಶಮುದ. ೮೪). [ಉತ್ವ + ಅಂತ್ಯ]

**ಉತ್ಸ** (ನಾ). (ನೀರಿನ) ಚಿಲುಮೆ; ಬುಗ್ಗೆ; ಒರತೆ: "ಉತ್ಸಃ, ಪ್ರಸ್ರವಣಂ – ಈ ೨ ಉರ್ಪರಂ" (ಹಲಾಯು. ೧೧೨-೫೫); ಉತ್ಸಮಿದು ಕೊಳನಲ್ಲ ನಿರ್ಝರಂ ಸರಯುವಲ್ಲ (ಶ್ರೀರಾಮ. ೩-೫೫). [ಸಂ.]

**ಉತ್ಸಂಗ** (ನಾ). ೧. ಸಮ್ಮೇಳನ; ಸಮಾಗಮ. ೨. ತೊಡೆ: "ಕೋಡಂ, ಅಂಕಃ, ಉತ್ಸಂಗಃ – ಈ ೩ ಮುಂದಣ ಮೆಯ್" (ಹಲಾಯು. ೮೭-೩೭೪); ತೆಗೆದುತ್ಸಂಗದೊಳಿಟ್ಟೊಯ್ಯಗೆ ಮೊಗಮಂ ನೋಡಿ ಕರ್ಚಿ ಕದಪಂ ನುಡಿದಂ ಜಗದಧಿಪತಿ (ಆದಿಪು. ೮-೫೭). ೩. ಪಕ್ಕ; ಮಗ್ಗುಲು. ೨, ೩: ಸುರಶೈಲೋತ್ಸಂಗದೊಳಂ ಸುರೇಂದ್ರರದನೀಂದ್ರ ಸುಂದರೋತ್ಸಂಗದೊಳಂ ಸುರಪೂಜಿತನೆನಿಸಿರ್ದನಚ್ಚರಿ ಮಿಗೆ ತಾನಜಿತನಂದು ಸಂಗತನಾದಂ (ಅಜಿಪು. ೫-೨೪). ೪. ನಡು; ಟೊಂಕ; ಸೊಂಟ. [ಸಂ.]

**ಉತ್ಸಂಗಸ್ಥೆ** (ನಾ). ತೊಡೆಯಮೇಲೆ ಕುಳಿತವಳು : ಕ್ಷಿತಿಪತಿಸುತೆ ನೀನೀ ಮಹಿಪತಿಯುತ್ಸಂಗಸ್ಥೆಯಾಗಿ ವಾತಾಯನ ಪದ್ಧತಿವಿಡಿದು ನೋಡು ಮಾಹಿಷ್ಮತಿಗೆ ಕಟೀಸೂತ್ರಮಾದ ರೇವಾನದಿಯಂ (ಶಾಂತಿಪು. ೫–೧೨೪). [ಸಂ. ಉತ್ಸಂಗಸ್ಥಾ]

**ಉತ್ಸಕಲ** (ಗು). ನ್ಯೂನವಾದ; ಕಡಮೆಯಾದ (?): ಶಕವರ್ಷದ ಸಾವಿರದ ನೂಱಱೊಳುತ್ಸಕಲ[ಪಾಠಾಂ. ನಾನೂಱಱೊಳ್ಸಕಲ]ವಾದಾಱು ವತ್ಸರದ ಪ್ರಕಟಿತ ಪುತ್ರವರುಷ ಮಾಘಶುದ್ಧದಿಯಕಲಂಕ ಪಾಡ್ಯದೊಳಾಯ್ತು (ತ್ರಿಪುಸಾಂ. ೨೪–೨೮೨). [< ಸಂ. ಉಚ್ಛಕಲ ?]

**ಉತ್ಸನ್ನ** (ಗು). ೧. ಶಿಥಿಲವಾದ; ನಷ್ಟವಾದ; ನಿರುಪಯೋಗವಾದ; ಬೇರುಸಹಿತ ಕಿತ್ತುಹಾಕಿದ. ೨. ಮೇಲಕ್ಕೆ ಎದ್ದ. [ಸಂ.]

**ಉತ್ಸನ್ನಶರೀರೆ** (ನಾ). ನಷ್ಟವಾದ ಶರೀರವುಳ್ಳವಳು; ದೇಹವನ್ನು ತೊರೆದವಳು : ಗುರುಪಂಚಕಮಂ ನೆನೆಯುತ್ತೆ ಭೋಂಕನುತ್ಸನ್ನಶರೀರೆಯಾಗಿ ದಿವದಿಂದಿೞಿದಳ್ (ಆದಿಪು. ೩–೧೬).
[ಸಂ. ಉತ್ಸನ್ನಶರೀರಾ (ಉತ್ಸನ್ನ + ಶರೀರ + –)]

**ಉತ್ಸರ್ಗ** (ನಾ). ೧. ವಿಸರ್ಜಿಸುವುದು; ಬಿಡುವುದು; ಹೊರದೂಡುವುದು. ೨. ತ್ಯಾಗ; ದಾನ : "ದಾನಮುತ್ಸರ್ಗಂ" (ಮಂಗರಾ. ೬೬–೧೪). ೩. ಮಲಮೂತ್ರಾದಿಗಳನ್ನು ಬಿಡುವುದು. ೪. ಮಲ; ವಿಷ್ಠೆ : "ವರ್ಚಸುತ್ಸರ್ಗಂ ಮಲಂ ಪುರೀಷಂ" (ಮಂಗರಾ. ೧೧೬–೫). ೫. ಸಾಮಾನ್ಯವಾದ ನಿಯಮ; ಕಟ್ಟಳೆ : ಒಂದು ಕಡೆ ಉತ್ಸರ್ಗವಿರುತ್ತದೆ ಮತ್ತೊಂದು ಕಡೆ ಅಪವಾದವಿರುತ್ತದೆ (ಆರ್ಯಧ. ೩೩). ೬. [ಜೈನ] ಐದು ವಿಧವಾದ ಸಮಿತಿಗಳಲ್ಲಿ ಒಂದು : ಅಂತಾ ಪರಮಯೋಗೀಶ್ವರಂ ತ್ರಿಕಾಲದೊಳಮೀರ್ಯಾಸಮಿತಿಯುಂ . . . ಆದಾನನಿಕ್ಷೇಪಣಾಸಮಿತಿಯುಂ ಉತ್ಸರ್ಗಸಮಿತಿಯುಮೆಂಬ ಪಂಚಸಮಿತಿಯೊಳಂ (ಅಜಿಪು. ೧೨–೪ ವ); ನಡೆವ ನುಡಿವುಣ್ಬ ಕೊಳ್ವಿಡುವೆಡೆಯೊಳಮುತ್ಸರ್ಗ[ಪಾಠಾಂ. ಉಚ್ಛರ್ಗ]ದೆಡೆಯೊಳಂ ಪ್ರಾಣಿಗಳಂ ತೊಡರ್ದಱಿಯದ ಸಮಿತಿಗಳಯ್ದೊಡಗೂಡಿರೆ ಪುಗುವ ಪಾಪರಜಮಂ ತೆಗೆಗುಂ (ಜೀವಸಂ. ೧೫೩–೩). ೭. [ಜೈನ] ಆರು ವಿಧವಾದ ಅಭ್ಯಂತರ ತಪಸ್ಸುಗಳಲ್ಲಿ ಒಂದು : ಅಭ್ಯಂತರ ತಪಃಷಟ್ಕದೊಳಂ ಪ್ರಾಯಶ್ಚಿತ್ತ ವಿನಯ ವೈಯಾವೃತ್ಯ ಸ್ವಾಧ್ಯಾಯ ಧ್ಯಾನವ್ಯುತ್ಸರ್ಗಂಗಳಂ ಕೈಕೊಂಡು (ಆದಿಪು. ೬–೩೩ ವ). 'ಕಾಯೋತ್ಸರ್ಗ' ಪರಾ. [ಸಂ.]

**ಉತ್ಸರ್ಜನ** (ನಾ). ೧. ತ್ಯಜಿಸುವುದು; ಬಿಡುವುದು. ೨. (ವೀರ್ಯ, ಮಲ, ಮೂತ್ರ ಮೊದಲಾದುವನ್ನು) ಹೊರದೂಡುವುದು, —ವಿಸರ್ಜಿಸುವುದು : ತತ್ರವೇಶಾಂಗಾರ ಕಿಡಿಗಳು ಉತ್ಸಹಗಳುತ್ಸರ್ಜನವು ಪುರುಷೋತ್ತಮನಿಗವದಾನವೆನೆ ಕೈಕೊಂಡು ಮನ್ನಿಸುವ (ಹಸಾರ. ೬–೬). ೩. ದಾನಮಾಡುವುದು; ದತ್ತಿಕೊಡುವುದು.
[ಸಂ.]

**ಉತ್ಸರ್ಜನಂಗೆಯ್** (ಕ್ರಿ). ತ್ಯಜಿಸು; ಬಿಡು; ವಿಸರ್ಜಿಸು : ನಿಜೇಷ್ಟಬಂಧುಭೃತ್ಯ ಸಭಾಸಮುತ್ಸರ್ಜನಂಗೆಯ್ದು ತಪದೊಳ್ ನೆಗೞ್ದೊಡೆ ದಿವ್ಯವಿಜಯ ಪರಮಾನುಪರಮ ಸಭಾಪತಿಯಕ್ಕುಂ (ಚಾವುಂಪು. ೨೫೦).
[ಉತ್ಸರ್ಜನ + ಗೆಯ್ (< ಕೆಯ್$_1$)]

**ಉತ್ಸರ್ಜಿತ** (ಗು). ತ್ಯಾಗಮಾಡಿದ; ಬಿಟ್ಟ; ಹೊರಕ್ಕೆ ಬಿಟ್ಟ.
[ಸಂ.]

**ಉತ್ಸರ್ಜಿಸು** (ಕ್ರಿ). = ಉತ್ಸರ್ಜನಂಗೆಯ್ : ಶಾಸನ ಸಂಸ್ಥೆಯ ಅಧಿಕಮತದಿಂದ ಅವಿಶ್ವಾಸ ಸೂಚನೆಯೋ ಅಪಜಯವೋ ಆದಾಗ ಮಂತ್ರಿಸಂಪುಟವು ಅಧಿಕಾರ ಭಾರವನ್ನು (ರಾಜಿನಾಮೆಕೊಡು) ಉತ್ಸರ್ಜಿಸುವುದಕ್ಕೂ . . . ಸಿದ್ಧತೆ (ರಾಜ್ಯಶಾ. ೯೦). [ಉತ್ಸರ್ಜನ + -ಇಸು$_3$]

**ಉತ್ಸರ್ಪಣ** (ನಾ). ೧. ಮೇಲೆ ಏರುವಿಕೆ. ೨. ಸಮೀಪಕ್ಕೆ ಬರುವುದು; ಹತ್ತಿರಕ್ಕೆ ಬರುವುದು. ೩. ಹರಡಿಕೊಳ್ಳುವುದು; ಊದಿಕೊಳ್ಳುವುದು. ೪. ನಿಟ್ಟುಸಿರು ಬಿಡುವುದು. ೫. [ಜೈನ] = ಉತ್ಸರ್ಪಿಣಿ : ತನು ಭೋಗಾಯುಷ್ಯಂಗಳ್ ಮನುಷ್ಯರೊಳ್ ಪೆರ್ಚುವಡೆಗುಮುತ್ಸರ್ಪಣದೊಳ್ ತನು ಭೋಗಾಯುಷ್ಯಂಗಳ್ ಮನುಷ್ಯರೊಳ್ ಕುಂದುವಡೆಗುಮವಸರ್ಪಣದೊಳ್ (ಪಂರಾಮಾ. ೧–೫೮). [ಸಂ.]

**ಉತ್ಸರ್ಪಿಣಿ** (ನಾ). [ಜೈನ] ಕಾಲದ ಒಂದುಭಾಗ; ಮನುಷ್ಯರ ದೇಹಪ್ರಮಾಣ, ಶರೀರಬಲ, ಆಯುಸ್ಸು, ಸುಖ ಮುಂತಾದುವುಗಳು ಕ್ರಮವಾಗಿ ಏರುವ ಕಾಲ : ಅದು ಶರೀರಬಳಾಯುರ್ದೇಹಪ್ರಮಾಣೋಪಚಯಾಪಚಯ ಹೇತುತ್ವದಿಂದಮುತ್ಸರ್ಪಿಣಿಯುವಸರ್ಪಿಣಿನಾಮಮುಮಂ ಪಡೆದುದು (ಆದಿಪು. ೬–೪೮ ವ); ಅವಸರ್ಪಿಣಿಯಲ್ತು ಕಾಲಮುತ್ಸರ್ಪಿಣಿಯೆಂಬಂತಾಯ್ತು ದಾನಚಿಂತಾಮಣಿಯಿಂ (ಅಜಿಪು. ೧–೬೨). 'ಅವಸರ್ಪಿಣಿ' ಪರಾ. [ಸಂ. ಉತ್ಸರ್ಪಿಣೀ]

**ಉತ್ಸವ** (ನಾ). ೧. ಹಬ್ಬ; ಜಾತ್ರೆ; ಸಮಾರಂಭ : ಮನೆ ಮನೆಗಳೊಳು ಕುಮಾರಕನ ಮದುವೆಯ ಮಾತು ಜನಜನಂಗಳ ಮೊತ್ತದೊಳಗುತ್ಸವದ ಮಾತು (ನಂಬಿರ. ೫–೧೨); ವಸಿಷ್ಠಾದಿ ಗುರುಗಳಂ ಕುರಿತೊರೆದ ನಣೆಗೆಯ್ಯಲಭಿಷೇಕದುತ್ಸವಕೆ (ಶ್ರೀರಾಮಾ. ೫೮–೧೧೨). ೨. ಸಂಭ್ರಮ; ಸಡಗರ; ಸಂತೋಷ; ಉತ್ಸಾಹ : ಪ್ರಿಯ ಕೇಳುತ್ಸವ ವಾರ್ತೆಯಂ (ಜಗವಿ. ೩–೨೩); ಇರ್ವರುಂ ವಿನಯದಿಂ ಸಭೆಗುತ್ಸವಮಂ ನಿಮಿರ್ಚಿದರ್ (ಪುಷ್ಪಪು. ೪–೭೩). ೩. ಮೆರವಣಿಗೆ : ಉತ್ಸವ, ಸ್ನಾಪನ, ಬಲಿಗಾಗಿ ಬೇಕಾದ ಮೂರ್ತಿಗಳು ಮಾತ್ರ ಲೋಹದಿಂದ ನಿರ್ಮಿತವಾಗುವುವು (ಭಾರದ. ೫೧೮). ೪. [ಛಂದ] ಅಕ್ಷರ ಛಂದಸ್ಸಿನ ಅತಿಶಕ್ವರಿಯಲ್ಲಿ ಒಂದು ಸಮವೃತ್ತ : ೧೫ನೆಯ ಅತಿಶಕ್ವರಿಯಲ್ಲಿ . . . ರಂಜರಂಜರಂ ಬರಲ್ ವಿರಾಜಿಸಿರ್ಪುದುತ್ಸವಂ (ಕೈಪಿಡಿ. ೮೪).

ಉತ್ಸವಂಬೆರಸು = ಉತ್ಸಾಹದಿಂದ ಕೂಡಿ; ಸಂಭ್ರಮದಿಂದ ಕೂಡಿ : ಅವನ ನಾಭಿಸರೋಜದೊಳ್ ವಚಶ್ರೀವರನುತ್ಸವಂಬೆರಸು ಪುಟ್ಟಿದನಾತನಶೇಷದೈತ್ಯ ವಿದ್ರಾವಣನೀಗೆ . . . ಸೌಖ್ಯಕೋಟಿಯಂ (ಪಂಚತಂ. ೧–೩). [ಸಂ.]

**ಉತ್ಸವಕರ** (ಗು). ಉತ್ಸವವನ್ನುಂಟುಮಾಡುವ : ಉತ್ಸವಕರಮೆನೆ ಬೆಳೆಪ ಶರತ್ಸಮಯದೊಳಿಂದುಕಾಂತಿ ದಳವೇಱುವವೋಲ್ (ಜಗವಿ. ೧–೧೧). [ಸಂ.]

**ಉತ್ಸವಬಡು** (ಕ್ರಿ). ಸಂತೋಷಪಡು; ಸಡಗರಿಸು : ಕವಿದ ಚಿಂತೆಯ ಬಿಡು ನನ್ನಾಣೆಯೆನೆ ಮಹೋತ್ಸವಬಟ್ಟನಾ ಮೇಘರಾಜ (ಭರಚ. ೫೬–೭೪).
[ಉತ್ಸವ + ಪಡು$_1$]

**ಉತ್ಸವವಿಹೀನ** (ನಾ). ಸಂತೋಷವಿಲ್ಲದವನು; ಉತ್ಸಾಹವಿಲ್ಲದವನು; ನಿರುತ್ಸಾಹಿಯಾದವನು : ಇವರು ಕಳುಹಿಸಿಕೊಂಡರಾ ನೃಪಭವನವನು ಹೊಱವಂಟರೊಡನುತ್ಸವವಿಹೀನರು ವಿದುರ ಭೀಷ್ಮ ದ್ರೋಣ ಗೌತಮರು (ಕುವ್ಯಾಸ. ೧೬–೬೫). [ಉತ್ಸವ + ವಿಹೀನ]

**ಉತ್ಸವಶೀಲ** (ನಾ). ಸಂತೋಷಚಿತ್ತನಾದವನು; ಸಂತೋಷಸ್ವಭಾವದವನು : ಸ್ಥೂಲ ಸೂಕ್ಷ್ಮ ಕೃತಜ್ಞನುತ್ಸವಶೀಲನಕ್ರೋಧಿ . . . ಮಂತ್ರಿಯುಂಟೇ ರಾಯ ನಿನಗೆಂದ (ಕುವ್ಯಾಉ. ೩–೮೬). [ಉತ್ಸವ+ಶೀಲ]

**ಉತ್ಸವಾನಕ** (ಗು). ೧. ಸಂತೋಷ ಸೂಚಕವಾದ ವಾದ್ಯಧ್ವನಿಗಳಿಂದ ಕೂಡಿದ : ಅದೇಂ ಸೊಗಯಿಸಿರ್ದುದೊ ತತ್ಪುರಮುತ್ಪತಾಕಮುತ್ತೋರಣಮುದ್ವಿಳಾಸರಸಮುತ್ಪಟಹಸ್ವನಮುತ್ಸವಾನಕಂ [ಪಾಠಾಂ. ವಾಕರಂ] (ಆದಿಪು. ೮–೫೦). (ನಾ). ೨. ಸಂತೋಷ ಸಮಾರಂಭ ಸಮಯದ ವಾದ್ಯ. [ಉತ್ಸವ + ಆನಕ]

**ಉತ್ಸವಿಸು** (ಕ್ರಿ). ಸಂತೋಷಪಡು ; ಉತ್ಸಾಹಗೊಳ್ಳು : ಮದುವೆಯ ಸಂಭ್ರಮಂ ಜನದ ಸಂಭ್ರಮಮುತ್ಸವಿಪಾ ಕುಮಾರಕಂಗೊದವಿದ ಸಂಭ್ರಮಂ (ನಂಬಿರ. ೫ ವೃತ್ತ) ; ಹಸ್ತವ ಮುಗಿದು ಸೌಂದರಂ ಪೊಗಳು ತ್ತಿರ್ದಂ ಜನನಿಜನಕರುತ್ಸವಿಸುತಿರಲು (ಸೌಂದಪು. ೬–೪೧) ; ಬೆಳಗಾದುದು ನವಿಲುಗಳುತ್ಸವಿಸೆ (ಮೋಹತ. ೨೭–೪). [ಉತ್ಸವ + -ಇಸು₃]

**ಉತ್ಸಹ** (ನಾ). ೧. ಸುಖ ; ಸಂತೋಷ : ಎರಡನೆಯ ಯುಗಕೆ(ದ) ಮೊದಲಾಂಗಿರವತ್ಸರಮಾದಿಯಾಗಲಯ್ದುಬ್ದಮವುಂ ಕರೆವೊಳ್ಪಿದುವು ಸುಭಿಕ್ಷಂ ಧರೆಗೆ ಧರಾಮರರರ್ಗೆಲ್ಲಮುತ್ಸಹಮುಕ್ಕುಂ (ಜಟ್ಟಮ. ೭–೭) ; ಮಹಿಷಿಪಟ್ಟವನೊಸೆದು ವಿಮಳೋತ್ಸಹದೊಳಾ ಗಂಧರ್ವದತ್ತೆಗೆ ವಹಿಸಿ (ಜೀವಂಚ. ೧೫–೫೩) ; ಅಹುದೆ ಸಾಹಸಿಗಳಿರಾ ನಿಮ್ಮ ಮನಸಿನುತ್ಸಹವ ನಾವಲ್ಲೆನಲೇಕೆ (ಭರಚ. ೬೩–೧೨) ; ಮತ್ಸರವನು ಅಳಿದು ಶ್ರೀವೆಂಕ ಟೇಶನ ಯಾತ್ರೆ ಉತ್ಸಹದಲಿ ಮಾಡೆ ವಿಜಯವಿಠ್ಠಲ ವೊಲಿವಾ (ತೀರ್ಥಮ. ೯೨). ೨. ಸಮಾರಂಭ ; ಉತ್ಸವ : ಆ ಮಹೋತ್ಸವದಲ್ಲಿ . . . ಜೀರ್ಕೊಳವೆಯಿಂದ ವೋಕುಳಿಯಾಡಿ . . . ಉತ್ಸಹವನ್ನು ನಡೆಸಿದನು (ಕೃವಾಅ. ೯೫). [< ಸಂ. ಉತ್ಸಾಹ]

**ಉತ್ಸಹಿಸು** (ಕ್ರಿ). ಹುರುಪುಗೊಳ್ಳು ; ಉತ್ಸಾಹಗೊಳ್ಳು : ಬೊಮ್ಮನೇ ಸಂಸೃತಿಯ ಕಟ್ಟಿಕೊಂಡುತ್ಸಹಿಸೆ ಸುಮ್ಮನರೆಚಣವಿರದೆ ಪ್ರಕೃತಿ ತೊಡ ಗುತಿರೆ ಜನ್ಮ ಸಾಕೆನುವುದೇಂ ? (ಮಂಕುಕ. ೨೭೨). [ಉತ್ಸಹ + -ಇಸು₃]

**ಉತ್ಸಳಿಸು** (ಕ್ರಿ). ಮೇಲೆ ನೆಗೆ ; ಹೊರಹೊಮ್ಮು ; ಪುಟೆ : ಇಳಿದನ ಬುಧಿಗೆ ಖರಖುರಾಗ್ರಾದಳಿತ ಘನವಾರಾಶಿ ಮೇಲುತ್ಸಳಿಸಿತಮರವ್ರಾತ ಕೌತುಕದಿಂದುಘೇಯೆನಲು (ನಿಭಾಗ. ೩–೯–೫೫) ; ಶರಧಿ ಪಾಶಾದ್ರಿ ಯೊಳಡಂಗಿದ ಮಹಾಧ್ವಾಂತ ಕರಿಯ ಖದ್ಯೋತ ಕೇಸರಿಯರಿಗೆ ಬಿರಿದು ಬಿದುವೆರಡರಿಂದುತ್ಸಳಿಸಿ ಪತ್ತಿರ್ದ ಕ್ಷತಜಾರುಣವೋ (ನಂದಿಮ. ೧೮–೧೯). 'ಉಚ್ಚಳಿಸು' ಪರಾ. [< ಉಚ್ಚಳಿಸು]

**ಉತ್ಸಾದನ** (ನಾ). ೧. ಮಗುಚುವುದು ; ಉತ್ಪಾಟನ ಮಾಡುವುದು. ೨. ಎರಡು ಸಲ ಉಳುವುದು. ೩. ಮೈಗೆ ಸುಗಂಧ ದ್ರವ್ಯ ಗಳನ್ನು ಲೇಪಿಸುವುದು : "ಉದ್ವರ್ತನಂ, ಉತ್ಸಾದನಂ – ಉರುಟಣೀ ಯಿಡುವುದಕ್ಕೆ ಹೆಸರು ; ಬಣ್ಣದ ಪುಡಿ ; ಮೈಗೆ ಉಜ್ಜಿ ತೊಳೆಯುವ ಪುಡಿ" (ಸಿದ್ಧಾಂತಿ. ೧೭೮). [ಸಂ.]

**ಉತ್ಸಾಯಕ** (ನಾ). ಬಾಣಗಳನ್ನು ಸಜ್ಜುಮಾಡಿಕೊಂಡು ಎತ್ತಿ ಹಿಡಿದವನು : ಪೆಸರನಾಯಕರುತ್ಸಾಯಕರಾಗಿ ನಡೆದರ್ (ಪಂರಾಮಾ. ೧೩–೨೬ ವ). [ಸಂ.]

**ಉತ್ಸಾರಕ** (ನಾ). ೧. ಅಟ್ಟುವುದು ; ಹೊರದೂಡುವುದು. ೨. ಬಾಗಿಲು ಕಾಯುವವನು ; ದ್ವಾರಪಾಲಕ : "ದ್ವಾಸ್ಥಃ . . . ಉತ್ಸಾರಕಃ, ದ್ವಾರಪಾಲಃ, ಪ್ರತೀಹಾರಃ — ಈ ೮ ಪಡಿ(ಯ) ಹಾಜಂ" (ಹಲಾಯು. ೭೦–೨೭೦). ೩. ಜನರನ್ನು ಚದುರಿಸುವವನು. [ಸಂ.]

**ಉತ್ಸಾರಿತ** (ಗು). ೧. ಒತ್ತಟ್ಟಿಗಿಟ್ಟ ; ಒಂದೆಡೆ ಬಿಟ್ಟ ; ತ್ಯಜಿಸಿದ : ಓರ್ವಂ ರಾಜಕುಮಾರಂ ದೂರೋತ್ಸಾರಿತವಾಹನಂ ಸಸಂಭ್ರಮೋಪಗತ ಪರಿಚಾರಸ್ಕಂಧವಿನ್ಯಸ್ತವಾಮಹಸ್ತನಾಗಿ (ಆದಿಪು. ೩–೯೦ ವ). ೨. ಹೊರ ದೂಡಲ್ಪಟ್ಟ ; ದೂರಕ್ಕೆ ಅಟ್ಟಿದ ; ನಿವಾರಿಸಿದ : ವಿದಿತಾಗಮಲೋಕ ವೃತ್ತನುತ್ಸಾರಿತಮತ್ಸರಂ ಸುಜನವತ್ಸಲನೆಲ್ಲಿಯುಮಾತನೆಂದು ಕೆಯ್ವಾ ರದೆ ಬಣ್ಣಿಕುಂ (ಕಾವ್ಯಾವ. ೪೯೭). [ಸಂ.]

**ಉತ್ಸಾಸ** (ನಾ). ಮೇಲುಸುರು ; ಉಬ್ಬಸ : ಬೀಸಿ ವತ್ಸಾಸುರನನಸುವನು ಘಾಸಿಮಾಡಿ ಬಕಾಸುರನನುತ್ಸಾಸದಲಿ ಸೇರಿಸಿ ಪ್ರಲಂಬನ ಹಂಬಲನು ಬಿಡಿಸಿ (ನಿಭಾಗ. ೨–೩–೨೦). [ಸಂ. ಉಚ್ಛ್ವಾಸ ?]

**ಉತ್ಸಾಸಿ** (ನಾ). ತೂರುವುದು : "ನಿಧಿಯೆನಲು ರಾಶಿಯುತ್ಸಾಸಿಯೆನೆ ತೂರ್ವುದಕ್ಕುಂ [ಪಾಠಾಂ. ಉತ್ಸಾಹಿಯೆನೆ ತೂರುನಾಮಂ]" (ಮಂಗರಾ. ೧೦೯–೩). [< ಸಂ. ಉಚ್ಛ್ವಾಸಿನ್]

**ಉತ್ಸಾಹ₁** (ನಾ). ೧. ಶಕ್ತಿ ; ಬಲ. ೨. ಒಲವು ; ಆಸಕ್ತಿ ; ಹುರುಪು. ೩. ಕಷ್ಟತರವಾದ ಪ್ರಯತ್ನ ; ಹುರುಪಿನಿಂದ ಕೆಲಸಮಾಡುವಿಕೆ : "ಉತ್ಸಾಹಮೆನೆ ಸಜ್ಜಮೆನಲದುದ್ಯೋಗಮಕ್ಕು" (ಮಂಗರಾ. ೧೩೩–೩೦). ೪. ಪರಾಕ್ರಮ ; ಶೌರ್ಯ. ೫. ಸುಖ ; ಸಂತೋಷ : ಮದಮಂ ಗಂಡಸ್ಥಳೋದೀರ್ಣ ಕಂಪದೊಳಂ ಸೇವಿಸಿ ತುಂಬಿಗಳ್ ತಣಿದುವೇನು ತ್ಸಾಹಮಂ ಮಾಡದಿರ್ಪುದೆ ಸನ್ಮಾರ್ಗದೊಳಂ ಕ್ರಮಾಧಿಕರೊಳುದ್ಯದ್ದಾನ ಸಂಪ್ರೀತಿಯಂ (ಪುಷ್ಪಪು. ೧೦–೧೧). ೬. [ರಾಜನೀ] ರಾಜರ ಮೂರು ಶಕ್ತಿಗಳಲ್ಲಿ ಒಂದು : ಅರಸುಗೆಯ್ವಾತಂ ಸಹಾಯಸಂಪನ್ನನುಂ ಪ್ರಭು ಮಂತ್ರೋತ್ಸಾಹಶಕ್ತಿಯುಕ್ತನುಮಾಗಿ ನೆಗಟಲೆವೇಟ್ಕುಂ (ಪಂಚತಂ. ೨೧೪–೬). 'ಶಕ್ತಿತ್ರಯ' ಪರಾ. ೭. [ಕಾವ್ಯಮೀ] ಸ್ಥಾಯಿಭಾವ ಗಳಲ್ಲಿ ಒಂದು : ವೀರರಸಂ ಬವರಿಸುಗುಮುದಾರೋತ್ಸಾಹ ಪ್ರವೃತ್ತಿ ಕಾರಣಕಾರ್ಯಂ (ಕಾವ್ಯಾವ. ೮೧೬) ; ಅಪಾಯಹೇತುವಂ ಪರಿಹರಿಪೆಡೆ ಯೊಳುತ್ಸಾಹಂ ಮಾಟ್ಪುದುತ್ಸಾಹಂ (ರಸರ. ೨–೧೨೭) ; ರೌದ್ರಕ್ಕೆ ಸ್ಥಾಯಿ ಕ್ರೋಧ, ವೀರಕ್ಕೆ ಸ್ಥಾಯಿ ಉತ್ಸಾಹ (ಭಾರಮೀ. ೪೧೦). ೮. [ಛಂದ] ಒಂದು ಮಾತ್ರಾವೃತ್ತದ ಹೆಸರು : "ಪ್ರತಿ ಪಾದದಲ್ಲಿಯೂ ತ್ರಿಮಾ ತ್ರಾಗಣವೇಳೂ, ಒಂದು ಗುರುವೂ ಇರುವ ನಾಲ್ಕು ಪಾದಗಳುಳ್ಳದ್ದು" (ಕೈಪಿಡಿ. ೯೩) ; ಅಜನಗಣಮವೆಯ್ದೆ ಸಪ್ತಸಂದೋಹ ಮತ್ತಲೊಂದೆ ಗುರು ಬೆಡಂಗನಾಳ್ದು ನಿಲೆ ಲಯಗ್ರಾಹಿಯಾಗಿ ಮಧುರವಚನ ರಚನೆವೆತ್ತು ಬಂದೊ ಡುತ್ಸಾಹಮೆಂಬ ಪೆಸರ್ಗೊಳಿಸೆವುದು (ಛಂದೋಂಬು. ೫–೧೯) ; ಮದನ ವತಿಯಕ್ಕರಂ ಚೌಪದಿ ಗೀತಿಕೆಯೇಳೆ ತಿವದಿಯುತ್ಸಾಹಂ ಷಟ್ಪದಿಯಕ್ಕರಿಕೆ ಕರ್ಣಂ ಚೆಲ್ವೊದವಿದ ಛಂದೋವತಂಸಮುಬ್ಬಡಳಾಕ್ಷೀ (ಛಂದೋಂಬು. ೧–೫೬). ೯. [ಛಂದ] = ಉತ್ಸಾಹ ರಗಳೆ : ಮಂದಾನಿಲ ಲಲಿತೋತ್ಸಹ [ಪಾಠಾಂ. ವ]ವೆಂದೇ ರಗಳೆಗಳ ನಾಮಮಕ್ಕುಂ (ಛಂದೋಂಬು. ೩–೨೦) ; ಉತ್ಸಾಹ, ಮಂದಾನಿಲ, ಲಲಿತ ಎಂದು ಮೂರುವಿಧವಾದ ರಗಳೆಗಳು ಪ್ರಸಿದ್ಧವಾಗಿರುವುವು (ಕೈಪಿಡಿ. ೯೭).

ಉತ್ಸಾಹಂಬೆರಸು = ಸಡಗರದಿಂದ ಕೂಡಿ ; ಸಂತೋಷದಿಂದ ಕೂಡಿ : ಲಾಭಂಬೆತ್ತ ಪರದನಂತುತ್ಸಾಹಂಬೆರಸು ಪಂದೆಯಂತು ನೋವಿಂ ಗಳ್ಕದೆ (ಧರ್ಮಾಮೃ. ೧–೧೩೫). [ಸಂ.]

**ಉತ್ಸಾಹ₂** (ನಾ). ೧. ಉತ್ಸವ ; ಮೆರೆವಣಿಗೆ (?) : ಅನ್ತಪ್ಪ ಒಸಗೆ ಉತ್ಸಾಹಂಗಳ್ಗೆ ಒಕ್ಕಲ್ ಏಳುವರ್ ಪಣವುವರ್ ಕನಿಷ್ಟರ್ ಅಯ್ದುವರ್ (ಎಇ. XIV, ೧೯೧–೧೮ ; 725) ; ದೀಪಾರಾಧನೆವುತ್ಸಾಹ ಚರಪು ಸಹಾ (ಮೈಆರಿ. ೧೯೪೩, ೫೦–೨೭ ; 1682). [< ಉತ್ಸವ]

**ಉತ್ಸಾಹಂಗುಂದು** (ಕ್ರಿ). ಹುರುಪುಗೆಡು ; ಉತ್ಸಾಹ ಕುಗ್ಗು : ಓಹೋ ಉನ್ಮದ ಮದನ ಸಮೋಹನ ಸಂತಾಪನಂ ವಶೀಕರಣಾಸ್ತ್ರ ವ್ಯೂಹಂ ವ್ಯರ್ಥಮಿದೆಂದುತ್ಸಾಹಂಗುಂದುತ್ತೆ ಮನದೊಳಂದಿಂತೆಂದಂ (ಗಿರಿಕ. ೮–೩೫). [ಉತ್ಸಾಹ₁ + ಕುಂದು₁]

**ಉತ್ಸಾಹನ** (ನಾ). ೧. ಪ್ರಯತ್ನ ; ಹಿಡಿದ ಕೆಲಸವನ್ನು ಬಿಡದೆ ನಡಸುವುದು. ೨. ಉತ್ಸಾಹವನ್ನು ಕೊಡುವಿಕೆ ; ಹುರಿದುಂಬಿಸುವಿಕೆ. [ಸಂ.]

**ಉತ್ಸಾಹಪೂರ್ವಕ** (ಅ). ಸಡಗರದಿಂದ ಕೂಡಿ ; ಸಂಭ್ರಮಯುಕ್ತವಾಗಿ : "ಅದೇ ಧರ್ಮ, ನ್ಯಾಯ, ನಮಗೆ ಬೇಕಾದದ್ದು ಅದೇಯೆ" ಎಂದು ರೈತರು ಉತ್ಸಾಹಪೂರ್ವಕವಾಗಿ ಮಾತಾಡಿದರು (ಪುನರು. ೩೦೬). [ಸಂ.]

**ಉತ್ಸಾಹಭಂಗ** (ನಾ). ಹುರುಪು ಕಡಮೆಯಾಗುವುದು; ಸಂತೋಷ ಕುಗ್ಗುವುದು: ಆದರೆ ವಸಂತನ ಬೇಸರದಲ್ಲಿ ನಿರಾಶೆಗಿಂತಲೂ ಉತ್ಸಾಹ ಭಂಗ ಹೆಚ್ಚಾಗಿತ್ತು (ಕಮನಿ. ೧). [ಉತ್ಸಾಹ$_1$ + ಭಂಗ]

**ಉತ್ಸಾಹರಗಳೆ** (ನಾ). ರಗಳೆಯೆಂಬ ಪದ್ಯಜಾತಿಯಲ್ಲಿ ಒಂದು ಬಗೆ: "ಪಾದವೊಂದಕ್ಕೆ ತ್ರಿಮಾತ್ರೆಯ ನಾಲ್ಕು ಗಣಗಳಾಗಲಿ, ಮೂರು ಗಣಗಳೂ ಒಂದು ಗುರುವೂ ಆಗಲಿ ಇರಲು ಅದು ಉತ್ಸಾಹರಗಳೆಯೆನಿಸುವುದು" (ಕೈಪಿಡಿ. ೯೬). [ಉತ್ಸಾಹ$_1$ + ರಗಳೆ]

**ಉತ್ಸಾಹಲಯ** (ನಾ). [ಛಂದ] ಮೂರು ಮಾತ್ರೆಯ ನಾಲ್ಕು ಗಣಗಳನ್ನುಳ್ಳ ರಗಳೆಯ ಕ್ರಮದ ಲಯ: ಗಂಡಸರ ಹಾಡುಗಳಲ್ಲಿ ಉತ್ಸಾಹಲಯವೂ ಪುನಃ ಪುನಃ ತೋರಿ ಬರುತ್ತದೆ (ಛಂದೋವಿ. ೨೪೬). [ಉತ್ಸಾಹ$_1$ + ಲಯ]

**ಉತ್ಸಾಹವರ್ಧನ** (ನಾ). ಉತ್ಸಾಹವನ್ನು ಹೆಚ್ಚಿಸುವುದು; ವೀರರಸ. [ಉತ್ಸಾಹ$_1$ + ವರ್ಧನ]

**ಉತ್ಸಾಹವೃತ್ತ** (ನಾ). [ಛಂದ] ಒಂದು ಮಾತ್ರಾವೃತ್ತದ ಹೆಸರು: ಉತ್ಸಾಹಕ್ಕೆ ಲಕ್ಷಣಮಂ ಪೇೞ್ವೆಂ –ಉತ್ಸಾಹವೃತ್ತಂ (ಛಂದೋಂಬು. ೫–೧೯). [ಉತ್ಸಾಹ$_1$ + ವೃತ್ತ]

**ಉತ್ಸಾಹಶಕ್ತಿ** (ನಾ). ೧. ಸಂಕಲ್ಪಬಲ. ೨. [ರಾಜನೀ] (ರಾಜರುಗಳಲ್ಲಿರಬೇಕಾದ) ಸಂಕಲ್ಪಬಲ. 'ಪ್ರಭುಶಕ್ತಿ', 'ಮಂತ್ರಶಕ್ತಿ' ಪರಾ. [ಉತ್ಸಾಹ$_1$ + ಶಕ್ತಿ]

**ಉತ್ಸಾಹಸದ್ಮ** (ನಾ). ಸಂತೋಷದ ಮನೆ; ವೀರರಸದ ನಿಧಿ: ನೃಪಕುಳತಿಲಕಂ ಪದ್ಮನುತ್ಸಾಹಸದ್ಮಂ (ಪುಷ್ಪಪು. ೨–೯೬). [ಉತ್ಸಾಹ$_1$ + ಸದ್ಮ]

**ಉತ್ಸಾಹಿ** (ನಾ). ೧. ಹುರುಪುಳ್ಳವನು; ಚಟುವಟಿಕೆಯಿಂದ ಕೂಡಿದವನು; ಉದ್ಯಮಶೀಲ. ೨. ಸಂತೋಷದಿಂದ ಕೂಡಿದವನು: "ಸಂತೋಷಿಯುತ್ಸಾಹಿಯಕ್ಕುಂ" (ಮಂಗರಾ. ೬೯–೧೧). [< ಸಂ. ಉತ್ಸಾಹಿನ್]

**ಉತ್ಸಾಹಿಸು** (ಕ್ರಿ). ೧. ಹುರುಪುಗೊಳಿಸು; ಹುರಿದುಂಬಿಸು; ಪ್ರೋತ್ಸಾಹಕೊಡು: ಸಯಂಬರಕೆ ನೆರೆದರಸುಮಕ್ಕಳೆಲ್ಲರನುತ್ಸಾಹಿಸಿ [ಪಾಠಾಂ. ಉತ್ಪಾಟಿಸಿ] ನೋೞನೋೞೆ (ಪಂಪಭಾ. ೩–೬೬ ವ); ೨. ಹುರುಪುಗೊಳ್ಳು; ಉತ್ಸಾಹಗೊಳ್ಳು: ಇನ್ನಾ ಕಾದಂಬರಿಯುಮ ನೆನ್ನಯ ಕೆಳೆಯನುಮನೆಂ[ತುಮಾಂ ಕಂಡೆನೆನು] ತ್ತುಂ ನೃಪತನೂಜನಾಗಳ್ ತನ್ನೊಳೆ ಬಗೆಯುತ್ತಮೆನಸುಮುತ್ಸಾಹಿಸಿದಂ (ಕಾದಂಉ. ೫೦೦); ಶ್ರುತಾಯುಧನಿಜಿಯಲುತ್ಸಾಹಿಸಿದನು (ಕುವ್ಯಾದ್ರೋ. ೧೦–೧೨); ಮುನಿಗಳುತ್ಸಾಹಿಸಿದರು . . . ಸೂಸಿದರು ಸುಮ್ಮಾನದಲಿ ಪೂಮಳೆಯ (ತೊರರಾ. ೧–೧೧–೨೩). [ಉತ್ಸಾಹ$_1$ + –ಇಸು$_3$]

**ಉತ್ಸಿಕ್ತ** (ಗು). ೧. ಚಿಮುಕಿಸಲ್ಪಟ್ಟ; ನೆನೆದ; ತೊಯ್ದ: ಸಮುದಿತಮಕರಂದೋತ್ಸಿಕ್ತ ಪಾಪಾಂಬುಜಾತೇ (ರಾಜಶೇ. ೧–೧೩೬). ೨. ಗರ್ವದಿಂದ ಕೂಡಿದ; ಕೊಬ್ಬಿದ. ೩. ಉದ್ವಿಗ್ನಗೊಂಡ; ಕಳವಳಗೊಂಡ. [ಸಂ.]

**ಉತ್ಸುಕ** (ಗು). ೧. ಕುತೂಹಲದಿಂದ ಕೂಡಿದ: ಜಿನೇಂದ್ರ ದ್ವಿತೀಯ ಕಲ್ಯಾಣೋತ್ಸುಕರಾಗಿ ಬರೆವರೆ(ಶಾಂತಿಪು. ೧೦–೩ ವ); ನಂದಗೋಪಂ ನಂದನಮುಖಾಲೋಕನೋತ್ಸುಕಂ ಗೋಕುಲಕ್ಕೆ ಪೋಗಿ (ಜಗವಿ. ೩–೨೩ ವ). ೨. ಅಗಲಿಕೆಯಿಂದ ಕಾತರವಾದ; ವಿರಹದಿಂದ ಹಂಬಲಿಸುವ. ೩. ಶಾಂತಿಯಿಲ್ಲದ; ಸ್ತಿಮಿತವಿಲ್ಲದ. (ನಾ). ೪. ವೇಗಶಾಲಿ; ಚಟುವಟಿಕೆಯುಳ್ಳವನು: "ಪ್ರತೂರ್ಣಃ, ತ್ವರಿತಃ, ತೂರ್ಣಃ, ಉತ್ಸುಕಃ, ಪ್ರಸೃತಃ — ಈ ೫ ಚೆಚ್ಚರಿಗಂ" (ಹಲಾಯು. ೫೮–೧೯೮). ೫. [ಕಾವ್ಯಮೀ] ಮೂವತ್ತು ಮೂರು ಸಂಚಾರಿ ಭಾವಗಳಲ್ಲಿ ಒಂದು; ಔತ್ಸುಕ್ಯ: ದೈನ್ಯೋತ್ಸುಕ ರತಿ . . . ಇಂತಿಯ್ದು ಸಂಚಾರಿಭಾವಂ (ಕಾವ್ಯಾವ. ೭೯೫). ೬. [ಛಂದ] ಅಕ್ಷರ ಛಂದಸ್ಸಿನ ಬೃಹತಿಯಲ್ಲಿ ಒಂದು ಬಗೆ: ಇಂದುಯುಗಂಗಳ ಮುಂದೆ ಬಂದೊಂದಿರೆ ವಹ್ನಿಪದಾಂತದೊಳ್ ಸುಂದರಿ ನಾಕಿಗನಿಷ್ಟದಿಂ ಸಂದುದಿದುತ್ಸುಕನಾಮದಿ(ಕೆ)ಂ (ಛಂದೋಂಬು. ೨–೪೮). [ಸಂ.]

**ಉತ್ಸುಕಚಿತ್ತ** (ನಾ). ಕುತೂಹಲದಿಂದ ಕೂಡಿದ ಮನಸ್ಸುಳ್ಳವನು; ಕಾತರನಾದವನು: ಸುಯೋಧನ ವಧಕ್ಕೇಗೆಯ್ವೆನೆಂತಕ್ಕುಮೆಂಬುದನುತ್ಸುಕಚಿತ್ತನುಮ್ಮಳಿಸಿದಂ ಭೀಮಂ ಭವತ್ಕಾರ್ಯಮಂ (ಗದಾಯು. ೬–೧೬). [ಉತ್ಸುಕ + ಚಿತ್ತ]

**ಉತ್ಸುಕತನ** (ನಾ). ೧. ಉತ್ಸಾಹ; ಕುತೂಹಲ: ಉತ್ಸುಕತನದಿಂ ಪೆಟ್ಟುವೆರ್ಚೆ ಕಡುವೆಸನಂ ಮಾಡ್ಪ ಸೊಸೆ ಮಾವನ ಮಂಡೆಯಂ ಬೋಳಿಸಿದಳೆಂಬಂತೆ (ಧರ್ಮಾಮೃ. ೬–೫೪). ೨. ಕಾತರ; ಉತ್ಕಂಠತೆ. [ಉತ್ಸುಕ + –ತನ]

**ಉತ್ಸುಕತೆ** (ನಾ). ೧. ಕುತೂಹಲ; ಬಯಕೆ; ಔತ್ಸುಕ್ಯ: ಆ ಹರಿಣಲೋಚನೆಯ ಲೋಚನದೊಳಳಿಪಂ ಮನದೊಳುತ್ಸುಕತೆಯಂ ತನುಲತೆಯೊಳ್ ಪುಳಕಾಂಕುರಮನೊದವಿಸುತ್ತುಮಿರೆ (ಮಲ್ಲಿಪು. ೩–೮೮); ನನ್ನ ಮನಸ್ಸಿನಲ್ಲಿ ಆಚಾರ್ಯ ಭಟ್ಟಿನಿಯರ ನಡುವೆ ಆದ ಮಾತುಕತೆಯನ್ನು ಕೇಳಲು ಉತ್ಸುಕತೆಯಿತ್ತು (ಬಾಣಆ. ೧೨೦). ೨. ಆಸಕ್ತಿ; ಪ್ರೀತಿ; ಭಕ್ತಿ. ೩. ವಿಷಾದ; ವ್ಯಸನ; ಪಶ್ಚಾತ್ತಾಪ. [ಸಂ. ಉತ್ಸುಕತಾ]

**ಉತ್ಸುಕತ್ವ** (ನಾ). = ಉತ್ಸುಕತೆ ೧: ಅನ್ನೆಗಂ ಸೌಧರ್ಮೇಂದ್ರಸಮೇತಂ ಚತುರ್ವಿಧವಿಬುಧನಿಕಾಯಂ ತೃತೀಯ ಕಲ್ಯಾಣಕರಣೋತ್ಸುಕತ್ವದಿಂ ಬಂದು ಭಗವತ್ಪಾದಪಯೋರುಹಕ್ಕೆಱಗೆ (ಶಾಂತಿಪು. ೮–೧೯೯ ವ). [ಸಂ.]

**ಉತ್ಸುಕಿಸು** (ಕ್ರಿ). ಔತ್ಸುಕ್ಯವನ್ನು ಹೊಂದು; ಉತ್ಸಾಹಗೊಳ್ಳು; ಉತ್ಕಂಠವಾಗು; ಹಂಬಲಿಸು: ಉತ್ಸುಕಿಸಿಹೆ, ಕಾತರಿಸಿಹೆ, ಭಾವುಕತೆಮೇನ್ನೆ (ಮಾಂದಳಿ. ೫೦). [ಉತ್ಸುಕ + –ಇಸು$_3$]

**ಉತ್ಸುಖ** (ನಾ). ಉತ್ತಮಸುಖ; ಶ್ರೇಷ್ಠಸುಖ: ಅಖಿಳ ಸುಜನಾಳಿಗಳ್ಗೆ ಉತ್ಸುಖಂ ಪೆರ್ಚಿದುದು (ಕೊಟ್ಟೂಬ. ೨–೨). [ಸಂ.]

**ಉತ್ಸೃಷ್ಟ** (ಗು). ಬಿಡಲ್ಪಟ್ಟ; ತ್ಯಜಿಸಲ್ಪಟ್ಟ: ಅತಿಮನೋಹರಮಾದ ಲತಾಗಹನದೊಳುತ್ಸೃಷ್ಟಸಕಲವ್ಯಾಪಾರನುಂ ವಿಗತನಿಮೇಷನುಮೆನಿಸಿ ಬರೆದನಂತೆಯುಂ ಕಂಡರಿಸಿದನಂತೆಯುಂ . . . ಇರ್ದಂ (ಕಾದಂಪೂ. ೮೨೮). [ಸಂ.]

**ಉತ್ಸೃಷ್ಟಭವ** (ನಾ). ಸಂಸಾರವನ್ನು ತ್ಯಜಿಸಿದವನು; ಭವವನ್ನು ಅತಿಕ್ರಮಿಸಿದವನು: ಸಂಸ್ಪೃಷ್ಟ ದೇವಾಂಶುಸಿಕ್ತರೀ ಭಕ್ತಜನ ಆತ್ಮಸಂದರ್ಶನೋತ್ಸೃಷ್ಟಭವರು (ಮಲೆದೇ. ೩೬–೨). [ಉತ್ಸೃಷ್ಟ + ಭವ]

**ಉತ್ಸೇಕ** (ನಾ). ೧. ಚಿಮುಕಿಸುವುದು; ಪ್ರೋಕ್ಷಣ. ೨. ನೊರೆಗೂಡುವಿಕೆ; ನೊರೆಗಟ್ಟುವಿಕೆ. ೩. ಗರ್ವ; ದರ್ಪ; ಅಹಂಕಾರ: ಇದು ಗಂಗಾಪೂರಪೂತಂ ನಡೆವಳಿಯಿದು ವಿಕ್ರಾಂತವುತ್ಸೇಕವೆಂದುಂ ಪದನಂ ಪೋಲಾಳ್ವದಂಡಾಧಿಪ ಪಡೆಯದು ನಿನ್ನಲ್ಲಿ (ಎಕ. XI, ದಾವಣ. ೨೫–೬೫; 1224). [ಸಂ.]

**ಉತ್ಸೇಕಸಂಹರ** (ನಾ). ಗರ್ವವನ್ನು ಕಳೆಯುವವನು; ದರ್ಪವನ್ನು ಅಪಹರಿಸುವವನು: ಉತ್ಸೇಕಸಂಹರ ವಿಯತ್‌ಸರಿನ್ಮಸ್ತಕ . . . ಜಯ ಜಗತ್ಸೇವ್ಯ ವಿಶ್ವನಾಥಾ (ಪದ್ಮರಾ. ೪–೧). [ಉತ್ಸೇಕ + ಸಂಹರ]

**ಉತ್ಸೇಧ** (ನಾ). ೧. ಎತ್ತರ; ಔನ್ನತ್ಯ: ಅದು ಜಿನಮತದೊಳ್ ದ್ವಿಸಪ್ತರಜ್ಜೂತ್ಸೇಧಂ (ಆದಿಪು. ೧–೪೪). **೨.** ಉದ್ದ; ದೀರ್ಘ: ಜನಪ ಕೇಳುತ್ಸೇಧ [ಪಾಠಾಂ. ವಿಸ್ತೀರ್ಣ] ಶತಯೋಜನ ತದರ್ಧದೊಳಗಲದಳತೆಯಿದೆನಿಪುದಿಂದ್ರಸ್ಥಾನ (ಕುವ್ಯಾಸ. ಒರಿ೪. ೧–೧೧೬). **೩.** ಉತ್ತಮವಾದ ಕೆಲಸ; ಒಳ್ಳೆಯ ಕಾರ್ಯ: "ಉನ್ನತಕಾರ್ಯದಲ್ಲಿ ಉತ್ಸೇಧಮೆಂಬುದು" (ಮಂಗರಾ. ೧೪೦–೯). **೪.** ಪ್ರಯೋಜನ; ಲಾಭ. **೫.** ದೇಹ; ಶರೀರ: "ಕಾಯದಲ್ಲಿಯುಂ ಉತ್ಸೇಧಮೆಂಬುದು" (ಹಲಾಯು. ೧೩೪–೧೭). **೬.** ಕೊಲ್ಲುವುದು; ವಧಿಸುವುದು: "ವಧಂ ಪ್ರಯೋಜನ ಮಹೌನ್ನತ್ಯಂಗಳುತ್ಸೇಧವಕ್ಕು" (ನಾನಾರ. ೧೩೩). [ಸಂ.]

**ಉದ** (ನಾ). ನೀರು; ಜಲ: ಉದಬಿಂದುಗೆತ್ತು ಗಿರಿಸಾನು ದೇಶದೊಳ್ ಕಾಯ್ದು ಬಿದಿರ ಪೊಸಮುತ್ತಂ ನುಂಗಿದ ಸೋಗೆವಿಂಡಣಂ ಮಜುಗಿದು ವುಂಡಿಗೆ ಬೇಯೆ ಕೆಂಡಮಂ ನುಂಗಿದವೋಲ್ (ಪಂರಾಮಾ. ೬–೯೬). 'ಉದಕುಂಭ' ಪರಾ. [ಸಂ.]

**ಉದಂಕೆ** (ನಾ). ೧. ಎಣ್ಣೆಯನ್ನು ಹಾಕುವ ಚರ್ಮದ ಚೀಲ; ಬುದ್ದಲಿ. ೨. ಒಬ್ಬ ಋಷಿಯ ಹೆಸರು. [ಸಂ.]

**ಉದಂಚ** (ಗು). ೧. ಚೆನ್ನಾಗಿ ಮುಂದುವರಿಯುವ; (ಬಾಣದಂತೆ) ನೇರವಾಗಿ ಗುರಿಯನ್ನು ಮುಟ್ಟುವ: ಇನ್ನಂಜಿನಂಜಿನಾಹಾ ಉನ್ನತ ಬಲವಾಯ್ತೆನುತ್ತೆ ವಿಭ್ರಮುಬಳಸಂಪನ್ನಂ ಕಾಮುಂ ತೆಗೆದಂ ತನ್ನಗ್ಗದುದಂಚಪಂಚಬಾಣಮುನಾಗಳ್ (ಗಿರಿಕ. ೮–೪೩). **೨.** ಗದಾಯುದ್ಧದಲ್ಲಿ ಒಂದು ಕ್ರಮ, —ಭಂಗಿ: ಲವಣಿ ಲಹರಿಯುದಂಚ ನವವಿದ್ರವಣ ಲಘುವಿನ್ಯಸ್ತವೆಂಬೀ ವಿವರದಲಿ ಕಾದಿದರು ಕೌತುಕವೆನಲು ಸುರನಿಕರ (ಕುವ್ಯಾಗ. ೬–೨೫). [ಸಂ. ?]

**ಉದಂಚತ್ತೋರಣ** (ನಾ). ಎತ್ತಿಕಟ್ಟಿರುವ ತೋರಣ: ಉದಂಚತ್ತೋರಣಂ ಚಿತ್ರಭಿತ್ತಿ ಲತಾಮಂಟಪವೆಂಬಿವಿಲ್ಲದ ಜಿನಾವಾಸಂಗಳಿಲ್ಲೆಲ್ಲಿಯುಂ (ಪುಷ್ಪಪು. ೨–೭೩). [ಸಂ. (ಉದಂಚತ್ + ತೋರಣ)]

**ಉದಂಚನ** (ನಾ). ೧. ಮೇಲಕ್ಕೆ ಏಳುವುದು. ೨. (ಬಾವಿಯಿಂದ) ನೀರನ್ನು ಮೇಲಕ್ಕೆ ಎತ್ತುವ ತೊಟ್ಟಿ; ಬಾನಿ. ೩. ಮುಚ್ಚಳ; ಮೇಲೆ ಮುಚ್ಚುವ ಸಾಧನ: "ಎಸರ್ಮುಚ್ಚಿಯಪಿಧಾನವದುದಂಚನಮೆನಿಕ್ಕು" (ಮಂಗರಾ. ೬೨–೨೩). [ಸಂ.]

**ಉದಂಚಿತ** (ಗು). ೧. ಮೇಲಕ್ಕೆ ಎತ್ತಿರುವ; ಎದ್ದು ಕಾಣುವ; ಹೊಮ್ಮುವ: ಉರ್ಕಿ ಸೊರ್ಕೆ ದಶಕಂಠನುದಂಚಿತಕಂಠನಾಗಿ ಬಿಟ್ಟಬಿಟ್ಟದೆ ಬೆಟ್ಟವೆಟ್ಟನುಸಿರ್ದಟ್ಟದೊಡಿರ್ದಪುದಲ್ತೆ ಕಾಳೆಗಂ (ಪಂರಾಮಾ. ೧೧–೨೩); ಕ್ರಮೋದಂಚಿತ ನಿರವಧಿ ಗಾಂಗೇಯಕಂ. . . ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ (ಜಗವಿ. ೧–೩); ಒರ್ವನುದಂಚಿತರಾಗದೆ ಸೌರಾಷ್ಟ್ರಪುರಕ್ಕೆಳ್ತಂದೊಲವಾಂತು (ಉದ್ಭದೇ. ೩–೨೩). **೨.** ಉಂಟಾದ; ಒಡಗೂಡಿದ; ಮೇಲೆದ್ದ: ಪ್ರಮೋದೋದಂಚಿತ ರೋಮಾಂಚಕಂಚುಕಿತ ಶರೀರನಾದಂ (ಶಾಂತಿಪು. ೩–೧೧ ವ); ರಾಜ್ಞೀನಿವಾಸದಂತೆ ಜರತ್ಕಂಚುಕಿಶತೋದಂಚಿತಮುಂ (ಚಂದ್ರಪು. ೫–೫೨ ವ). [ಸಂ.]

**ಉದಂಚಿತತರ್ಜನಿ** (ನಾ). ಮೇಲೆ ಎತ್ತಿದ ತೋರುಬೆರಳು: ಪ್ರತಿಹಾರವೃಷ್ಟಿಯಿಂ ಸುರಪತಿದೇವಾಸುರರ ನೆಗಟ್ದ ಕಳಕಳಮನುದಂಚಿತತರ್ಜನಿಯಿಂ ನಿಯಮಿಸಿ ಹಿತಪರಿಚರ್ಯೋಪಚಾರ ಪರಿಣತಿವೆತ್ತಂ (ಮಲ್ಲಿಪು. ೧೩–೧೮೨). [ಉದಂಚಿತ + ತರ್ಜನಿ]

**ಉದಂಚಿತಭ್ರುಕುಟಿ** (ನಾ). ಮೇಲೆತ್ತಿದ ಹುಬ್ಬುಗಂಟನ್ನುಳ್ಳವನು: ಸೌಮಿತ್ರಿ ಸುಗ್ರೀವಂಗೆಂದನುದಂಚಿತಭ್ರುಕುಟಿ ಗಂಡೋದ್ಗಾರಿಘರ್ಮೋದಕಂ (ಪಂರಾಮಾ. ೧೧–೧೭೩). [ಉದಂಚಿತ + ಭ್ರುಕುಟಿ]

**ಉದಂಚು** (ನಾ). ಮೇಲ್ಮುಖವಾದುದು; ಊರ್ಧ್ವಮುಖವಾದುದು: ಮಾಣಿಕ ಕರ್ಣಪೂರದುದಂಚಿನೊಳ್ಪುಳಿವೆಳಗು ನುಣ್ದೋಳುಗಳ ನರುವಣ್ಣ ಮುಂಚಿ ಮುಪ್ಪುರಿಯಾಗಿ ಪಸರಿಸಿ ಸಂಚರಿಸಿದುದು ದೇವಸದನದಿ ಪಂಚಮುಖನಂಗಪ್ರಭಾಪರಿಪೂರ್ಣಮಾದಂತೆ (ಶಂಕದಾ. ೨–೪೫). [< ಸಂ. ಉದಂಚತ್]

**ಉದಂಡ**[1] (ಗು). (ಉಕ). ದೀರ್ಘವಾದ: ತಮ್ಮಾ, ನಿನಗೆ ಉದಂಡ ಆಯುಷ್ಯವಿರಲಿ (ಮುಂಬಯಿ. ೬–೨೧೧). [< ಸಂ. ಉದ್ದಂಡ[1]]

**ಉದಂಡ**[2] (ಅ). (ಉಕ). ದೀರ್ಘವಾಗಿ; ಬಹುಕಾಲದವರೆಗೆ: ಇನ್ನು ತಾವೇ ಇವರ ತಂದೆ ತಾಯಿಗಳು ಎಂದು ಹೇಳಿ ಮಕ್ಕಳನ್ನು ಉದಂಡವಾಗಿ ಆಶೀರ್ವದಿಸಿ ಅವರನ್ನು ಋಷಿಗಳಿಗೆ ಒಪ್ಪಿಸಿದನು (ತುಳಸಿ. ೬೨). [< ಉದ್ದಂಡ[2]]

**ಉದಂತ**[1] (ನಾ). ವೃತ್ತಾಂತ; ಸುದ್ದಿ; ಸಮಾಚಾರ: ಆಗಳ್ ಪರಿಹಿತಾಸ್ರವನಂತಿರ್ದ ವಾಸವನಂ ದುರ್ದಂತನಳೀಕೋದಂತಂಗಳಿನಾಜಿಸುತ್ತಿರ್ಪುದುಮಾಂ ಮೆಲ್ಲನಲ್ಲಿಗೆ ಪೋಗಿ (ಆದಿಪು. ೩–೮೮ ವ); ಇಂದೆ ನಿನ್ನ ಚಿಂತಾಪರಿಹಾರಕಮಪ್ಪುದೊಂದುದಂತಮಂ ಕೇಳ್ (ಪುಷ್ಪಪು. ೩–೧೦೨ ವ). [ಸಂ.]

**ಉದಂತ**[2] (ನಾ). ಉ ಎಂಬ ವರ್ಣದಿಂದ ಕೊನೆಗೊಳ್ಳುವ ಶಬ್ದ: ಜನಿಯಿಪುದುದಂತ ಕೃತ್ಸರ್ವನಾಮ ಗುಣವಚನ ಸಂಖ್ಯೆಗಳ್ಗೆ (ಶಮದ. ೧೧೦). [ಸಂ.]

**ಉದಂಶು** (ನಾ). ಮೇಲೆ ಎದ್ದ ಕಿರಣ; ಮೇಲ್ಮುಖವಾಗಿ ಹರಡಿದ ಕಿರಣ: ಪದಿನಾಲ್ಸಾಸಿರ ನಾಯಕರುದಂಶುಮಣಿಮಕುಟಕಿರಣ ಮೊಡನಂಬರಮಂ ಪುದಿವಿನಮೊಡನೆಟ್ಟರ್ ಬಿಂಜದಡವಿಯುಂ ಬೇಗೆ ಬಳಸಿದತ್ತೆಂಬಿನೆಗಂ (ಪಂರಾಮಾ. ೯–೫೩). [ಸಂ.]

**ಉದಕ**[1] (ನಾ). (ದಕ). ಸೊಪ್ಪಿನಿಂದ ಮಾಡಿದ ತಿಳಿ ಸಾರು; ಎಸರು: ಈ ಕೋಣೆಯಲಿ ಏನನ್ನಾದರೂ ಮುಚ್ಚಿ ಮಡಗಿದ್ದಾರು—ಎನ್ನುತ ಹುಡುಕಿನೋಡಿದೆವು; ಉದಕದ ಆಲಸೂಂದೆಗೂವೆ ಒಂದು ಕಾಸಿಲ್ಲ! (ವಿಗಡ. ೬೪); ಹೆಸರಿನಲ್ಲಿ ಗೊತ್ತಾಗುತ್ತ ಬೆರಕ್ ಸೊಪ್ಪಿನ ಉದಕದ ರುಚಿ, ಊಟಮಾಡಿದರೆ ಗೊತ್ತಾಗುತ್ತೊ (ರುದ್ರಿಮು. ೮೨). [?]

**ಉದಕ**[2] (ನಾ). ನೀರು; ಜಲ; ಪಂಚಭೂತಗಳಲ್ಲಿ ಒಂದು: ಹೃದಯದ ಕಳಂಕಿಲ್ಲದೋರಂತೆ ಸಾರನುಟ್ಟುದಕಮುಂ ಕುಡಿಕುಡಿದು (ಹಚಕಾ. ೩–೩೧). [ಸಂ.]

**ಉದಕದೀವು** (ಕ್ರಿ). ನೀರನ್ನು ತುಂಬು: ಸರಸಿಜಪಾಣಿಯೊಳೊರ್ಮೆಯುದಕದೀವಿ ಪರಿಪೂರ್ಣೇಂದುವದನೆಯು ಸರಸಕೇಳಿಗೆ ಬಂದು ಸೋತಾಗ ಹಿಂದಕೆ ತೆರಳಿದಳೇನ ಬಣ್ಣಿಸುವೆ (ಕಂನವಿ. ೨೫–೧೨೫). [ಉದಕ[2] + ತೀವು]

**ಉದಕಬುದ್ಬುದ** (ನಾ). ನೀರಿನ ಗುಳ್ಳೆ: ನದಿಯ ತೆರೆಯವೊಲುರುಳಿ ಹೊರಳುತಿರುವುದು ಜೀವ ಮೊದಲಿಲ್ಲ ಮುಗಿವಿಲ್ಲ ನಿಲುವಿಲ್ಲನದಕೆ ಬದುಕೇನು ಸಾವೇನು ಸೊದೆಯೇನು ವಿಷವೇನು? ಉದಕಬುದ್ಬುದವೆಲ್ಲ (ಮಂಕುಕ. ೧೮). [ಉದಕ[2] + ಬುದ್ಬುದ]

**ಉದಕಮಂತ್ರ** (ನಾ). ೧. [ತಂತ್ರಶಾ] ಒಂದು ಯಂತ್ರದ ಹೆಸರು: "ಅನುಕ್ರಮದಿಂ ಅಜಕ್ಕರಂಗಳಂ ಬರೆವುದು ಇದು ಯಂತ್ರವಿಧಾನಂ ಉದಕಮಂತ್ರಮೆಂಬುದೀಯಂತ್ರದ ಪೆಸರು ಕಲಶಸ್ಥಾಪನೆಗಂ . . . ಪ್ರಶಸ್ತಂ" (ಪ್ರತಿಷ್ಠಾ ೧೦–೫೧). **೨.** ಜಲಸ್ತಂಭನ ಮಂತ್ರ: ಪಸಿದುಣ್ಣಪಟ್ಟು ಬಿರ್ದಿರ್ದು ಸಮುದ್ರದ ತಡಿಯೊಳುದಕಮಂತ್ರದ ಬಲದಿಂ ನುಸುಳ್ದೊಡೆ ಜಳನಿಧಿಯಂ ಕರುಣಿಸಿ ಕೊಟ್ಟರ್ ಧನಮನಂಜಿಕೊಟ್ಟರೆ ದಿವಿಜರ್ (ಆದಿಪು. ೧೪–೬೮). [ಉದಕ[2] + ಮಂತ್ರ]

**ಉದಕವಾಸಿ** (ನಾ). ನೀರಿನಲ್ಲಿ ವಾಸಮಾಡುವ ಪ್ರಾಣಿ; ಜಲಚರ ಪ್ರಾಣಿ: ನೀರ್ಮಾನಸರಂತೆ ನೀರೊಳ್ ನೆಲಸಿರ್ದುದಕವಾಸಿಗಳುಮಂ . . . ನೋಡುತಿರ್ದ ರಾಜಕುಮಾರನಂ ಅಲ್ಲಿರ್ದುದೊಂದು ರಾಜಕೀರಂ ಕಂಡು (ಪಂಚತಂ. ೧೧೯–೧೨). [< ಸಂ. ಉದಕವಾಸಿನ್]

**ಉದಕಶಾಂತಿ** (ನಾ). ಒಂದು ಬಗೆಯ ಶಾಂತಿಕರ್ಮ; ಕೆಲವು ಶುಭಕಾರ್ಯಗಳ ಮೊದಲಲ್ಲಿ ತೀರ್ಥಕಳಸವನ್ನು ವಿಧ್ಯುಕ್ತವಾಗಿ ಅರ್ಚಿಸಿ ಅಭಿಮಂತ್ರಿಸಿ ಆ ಕಳಸದ ಉದಕದಿಂದ ಪ್ರೋಕ್ಷಣೆ ಮಾಡಿಸುವುದು: ಉದಕಶಾಂತಿ ಮುಗಿದ ಮೇಲೆ ಮುಂದಣ ಕಾರ್ಯ (ರೂಢಿ). ℗ ಚೌಲ, ಉಪನಯನ, ಗರ್ಭಾಧಾನ, ಸೀಮಂತ, ಪುಂಸವನ ಮೊದಲಾದ ಸಂದರ್ಭಗಳಲ್ಲಿ ಕಲಶದಲ್ಲಿ ವರುಣನನ್ನು ಆವಾಹನೆಮಾಡಿ ಷೋಡಶೋಪಚಾರಗಳಿಂದ ಪೂಜಿಸಿ ಶಾಂತಿ ಮಂತ್ರಗಳನ್ನು ಜಪಿಸಿ ಆ ನೀರಿನಿಂದ ಪ್ರೋಕ್ಷಣೆ ಮಾಡುವುದು. ವ್ಯಾಧಿಗ್ರಸ್ತರಿಗೆ (ಛಾಯಾಭಿಷೇಕ—ಪ್ರೋಕ್ಷಣೆ ಮಾಡಿ) ತೀರ್ಥವನ್ನು ಪ್ರಾಶನಮಾಡಿಸುವುದು. ಗ್ರಹಪೀಡಾಸಂದರ್ಭಗಳಲ್ಲೂ ಇದನ್ನು ಮಾಡಿಸುತ್ತಾರೆ. [ಉದಕ$_2$ + ಶಾಂತಿ]

**ಉದಕಸದ್ಮ** (ನಾ). ನೀರಿನ ಆಶ್ರಯ; ಜಲಾಶಯ; ಸಮುದ್ರ: ಐರಾವತಂಗಳೆೞ್ದಿಶೆಗಳುಜ್ವಲಿಸೆ ಚಕ್ರಾಕಾರದೊಳ್ ನಿಂದು ಸೊಂಡಿಲ್ಗಳಿಂದಾಂತುವೊಂದುದಕಸದ್ಮದಿಂ ಮೂಡಿಬಂದಮೃತರುಚಿಯಂಬುಜದ ಮುಕುಳಮಂ (ಶ್ರೀರಾಮಾ. ೮೬೦–೬೪). [ಉದಕ$_2$ + ಸದ್ಮ]

**ಉದಕಸ್ತಂಭಿನಿ** (ನಾ). ಒಂದು ವಿದ್ಯೆ; ಜಲಸ್ತಂಭನ ವಿದ್ಯೆ: ಮತ್ತೊಂದು ದಿವಸಂ ಪ್ರಜ್ಞಪ್ತಿ ಕಾಮರೂಪಿಣಿ ಅಗ್ನಿಸ್ತಂಭಿನಿ ಉದಕಸ್ತಂಭಿನಿ. . . ಎಂಬಿವು ಮೊದಲಾಗಿ ಕುಲವಿದ್ಯೆ ಜಾತಿವಿದ್ಯೆಗಳೊಳ್ (ಚಾವುಂಉ. ೨೧೦). [ಸಂ. ಉದಕಸ್ತಂಭಿನೀ]

**ಉದಕಾರ್ಗಳ** (ನಾ). [ಜ್ಯೋತಿ] ಸುಲಭವಾಗಿ ನೀರಿನ ನೆಲೆಯನ್ನು ಗುರುತಿಸುವ ಶಾಸ್ತ್ರ; ಜಲಶಿಲ್ಪ: ಧರೆ ಪೊಗೞ್ ಮುೞಿಯ ಕುೞಿಪಂ ವರಹಿತಮಂ ನೆಱೆಯೆ ಪೇೞ್ದನುದಕಾರ್ಗಳಮಂ (ಜಟ್ಟಮ ೧೧–೧). [ಉದಕ$_2$ + ಅರ್ಗಳ]

**ಉದಕುಂಭ** (ನಾ). ನೀರಿನ ಗಡಿಗೆ, —ಕೊಡ; ಬಿಂದಿಗೆ; ನೀರು ತುಂಬುವ ಪಾತ್ರೆ: ಚುಲ್ಲಿ ಪೇಷಣಿ ಕಂಡನಿ ಉಪಸ್ಕರ ಉದಕುಂಭ ಎಂಬೈದು ಗೃಹೋಪಕರಣಗಳು . . . ಉದಕುಂಭ ನೀರುತುಂಬುವ ಪಾತ್ರೆ (ಆರ್ಯಧ. ೧೮೭). [ಸಂ.]

**ಉದಕ್ಕು** (ನಾ). ಉತ್ತರ ದಿಕ್ಕು (ಕ). [< ಸಂ. ಉದಚ್]

**ಉದಕ್ಯೆ** (ನಾ). ಮುಟ್ಟಾದವಳು; ಸ್ನಾನಮಾಡಿ ಶುದ್ಧಳಾಗಬೇಕಾದವಳು; ರಜಸ್ವಲೆ. [ಸಂ. ಉದಕ್ಯಾ]

**ಉದಗಯನ** (ನಾ). ಉತ್ತರಾಯಣ: ಉದಗಯನಕ್ಕಜಿ ಶಿಶಿರಂ ಮೊದಲಾಗಿರೆ ಮೂಱು ಋತುಗಳ್ (ಜಾತಕ ೨೪–೪). [ಸಂ. (ಉದಚ್ + ಅಯನ)]

**ಉದಗಲಿಸು** 'ಉದ್ಗರಿಸು' ನೋ.

**ಉದಗ್ಗತಿ** (ನಾ). (ಸೂರ್ಯನ) ಉತ್ತರ ದಿಕ್ಕಿನಲ್ಲಿಯ ಗಮನ; ಉತ್ತರಾಯಣ: "ಉದಗ್ಗತಿಃ – ಉತ್ತರಾಯಣ" (ಸಿದ್ಧಾಂತಿ. ೩೭). [ಸಂ. (ಉದಚ್ + ಗತಿ)]

**ಉದಗ್ಭವ** (ನಾ). ಉತ್ತರ ದಿಕ್ಕಿನಲ್ಲಿ ಹುಟ್ಟಿದುದು: "ಉದೀಚೀನಂ — (ಉದಗ್ಭವಂ) ಬಡಗಲಲ್ಲಿ ಹುಟ್ಟಿದ್ದು" (ಸಿದ್ಧಾಂತಿ. ೨೭). [ಸಂ.]

**ಉದಗ್ಭೂಮ** (ನಾ). ೧. ಉತ್ತರಕ್ಕೆ ಅಥವಾ ಮೇಲುಭಾಗಕ್ಕೆ ತಿರುವಿ ಹಾಕಿದ ಮಣ್ಣು. ೨. ಬಿಳಿಯ ಮಣ್ಣಿನ ನೆಲ: "ಪಾಂಡುಭೂ(ಮ)ಮಿಃ, ಉದಗ್ಭೂ(ಮ)ಮಿಃ, —ಈ ೨ ಮೊಗೆಯ ಭೂಮಿ" (ಹಲಾಯು ೨೬–೫); "ಮಸಭೂದಗ್ಭೂಮ ಪಾಂಡುಮಹಿಯೆನಿಸಿಕ್ಕು" (ಮಂಗರಾ. ೨೮–೩). ೩. ಫಲವತ್ತಾದ ಮಣ್ಣು. [ಸಂ.]

**ಉದಗ್ಭೂಮಿ** (ನಾ). = ಉದಗ್ಭೂಮ: "ಪಾಂಡುಭೂ(ಮ)ಮಿಃ, ಉದಗ್ಭೂ(ಮ)ಮಿಃ — ಈ ೨ ಮೊಗೆಯ ಭೂಮಿ" (ಹಲಾಯು. ೨೬–೫). [ಸಂ.]

**ಉದಗ್ರ** (ಗು). ೧. ಮೇಲೆ ಮುಖಮಾಡಿದ; ಎತ್ತರವಾದ: ಅಭ್ರಂಕಷಶಿಖರಿ ಶಿಖರದುರ್ಲಂಘ್ಯಮಪ್ಪ ಗಿರಿದುರ್ಗದ ಪೆಂಪುಮಂ ಉದಗ್ರತರುಗಹನದುಷ್ಪ್ರವೇಶಮಪ್ಪ ವನದುರ್ಗದುನ್ನತಿಯುಮಂ ಒಳಕೊಂಡು (ಆದಿಪು. ೧೩–೫೭ ವ); ಉದಗ್ರ ಮಂದಿರ ಶಿಖರಿ ಶಿಖರದೊಳ್ ಪ್ರತಿಮಾಯೋಗಂ ನಿಂದು (ಸುಕುಮಾ. ೯–೧ ವ). ೨. ಹೆಚ್ಚಾದ; ಶ್ರೇಷ್ಠವಾದ: ಸಮಧಿಕರಸ್ತ್ರಶಸ್ತ್ರಬಲದೊಳ್ ದೃಢಕಾಯದೊಳತ್ಯುದಗ್ರ ವಿಕ್ರಮದೊಳನಂತವೀರ್ಯದೊಳನೇಕವಿಧಪ್ರಧನಂಗಳೊಳ್ (ಪಂರಾಮಾ. ೧೪–೧೫೭); ಬೆರಳ ತೂಗಿದನಡಿಗಡಿಗೆ ಹಲಧರನುದಗ್ರಗವಾವಿಧಾನಕೆ ಶಿರವನೊಲೆದನು ಶೌರಿ ಮಿಗೆ ಮೆಚ್ಚಿದನು ಯಮಸೂನು (ಕುವ್ಯಾಗ. ೭–೫). (ನಾ). ೩. ವೀರ; ಶೂರ; ಪರಾಕ್ರಮಿ: ಎಜಗದುದಗ್ರರಿಲ್ಲೊ ಜೆಕಿಯ ಜಾಯೊಳೆ ನೇಲದ ರಾಯರಿಲ್ಲ ಕಂಡುಜು ಸೆಜೆಗೊಟ್ಟು ತೊಟ್ಟುವೆಸಗೆಯ್ಯದ ಮಂಡಳನಾಥರಿಲ್ಲ (ಎಇ. XIII, ೪೧; 1112). [ಸಂ.]

**ಉದಗ್ರಚರಿತ** (ನಾ). ಶ್ರೇಷ್ಠವಾದ ಚಾರಿತ್ರ್ಯವುಳ್ಳವನು: ನಿಗ್ರಹಿಸಲೇಕಕಟ ಕುರುಕುಲದಗ್ರಿಯನನೆಂದಖಿಳಸಚಿವರುದಗ್ರಚರಿತರು ಮುರಿದು ನುಡಿದರು ನೀತಿವಚನದಲಿ (ಕುವ್ಯಾಸ. ೧೭–೫೨). [ಉದಗ್ರ + ಚರಿತ]

**ಉದಗ್ರಪೀಡೆ** (ನಾ). ಅತಿಶಯವಾದ ಹಿಂಸೆ; ಉಪದ್ರವ; ತೀವ್ರವಾದ ಕಷ್ಟ: ಉದಗ್ರಪೀಡೆಗೆಡೆಯಾದ ಮಾನವಂಗಾವಭವದೊಳಂ ಸುಖಮುಂಟೇ (ಪುಷ್ಪಪು. ೧೩–೩೨). [ಉದಗ್ರ + ಪೀಡೆ]

**ಉದಗ್ರಮೂರ್ತಿ** (ನಾ). ಉನ್ನತವಾದ ಮೂರ್ತಿ: ಅಪೂರಿತಲೋಹಿತ ಪ್ರಕಟಭೀಕರ ನೇತ್ರನುದಗ್ರಮೂರ್ತಿ ಗಂಭೀರನಿನಾದನುನ್ನಮಿತಚಂಚಲ ವಾಲಧಿ ತನ್ನೊಳೊಪ್ಪೆ ಕಂಠೀರವನಾಯ್ತು (ಪಂಚತಂ. ೨೬೧–೧೯). [ಉದಗ್ರ + ಮೂರ್ತಿ]

**ಉದಗ್ರಾವನಿಪ** (ನಾ). ಶ್ರೇಷ್ಠನಾದ ರಾಜ: ನುಡಿವುದನೆ ಮುಱಿದು ಪೆಱತಂ ನುಡಿಯೆ ಕೆಲರ್ ಪಾವಡರ್ಪವೊಲಿರೆ ಕೆಲರೊಯ್ಯನೆ ತುಡುಗೆಯನೋಸರಿಸೆ ಕೆಲರುದಗ್ರಾವನಿಪರ್ (ಪಂಪಭಾ. ೩–೫೦). [ಉದಗ್ರ + ಅವನಿಪ]

**ಉದಙ್ಮುಖ** (ಗು). ಉತ್ತರ ದಿಕ್ಕಿಗೆ ಅಭಿಮುಖವಾಗಿರುವ; ಉತ್ತರಕ್ಕೆ ಮುಖಮಾಡಿಕೊಂಡ: ತದ್ವಿಜಯಾವಸಾನದೊಳ್ ಜೈನಶಾಸನಚೂಡಾಮಣಿಯುದಙ್ಮುಖನಾಗಿ ಪಯಣಂ ಬರೆವರೆ (ಶಾಂತಿಪು. ೧೧–೨೨ ವ). [ಸಂ.]

**ಉದಜ$_1$** (ನಾ). ದನಕರುಗಳನ್ನು ಮುಂದಕ್ಕೆ ಅಟ್ಟುವುದು: "ಉದಜಃ—ಪಶುಪ್ರೇರಣಂ–ದನಗಳನ್ನು ಗಮನಾದಿ ಕಾರ್ಯಗಳಲ್ಲಿ ಪ್ರೇರಿಸುವಿಕೆ" (ಸಿದ್ಧಾಂತಿ. ೩೧೭). [ಸಂ.]

**ಉದಜ$_2$** (ಗು). ೧. ನೀರಿನಿಂದ ಅಥವಾ ನೀರಿನಲ್ಲಿ ಹುಟ್ಟಿದ (ಕ). (ನಾ). ೨. ಕಮಲ; ತಾವರೆ. 'ಉದಜಲೋಚನೆ' ಪರಾ. [ಸಂ.]

**ಉದಜಲೋಚನೆ** (ನಾ). ಕಮಲದಂತೆ ಕಣ್ಣುಳ್ಳವಳು: ಇದಕೆ ಕಾರಣವಾವುದುಸುರಲ್ಲದೊಡೆ ನಾನಾಯಿತ್ತು ನೀನಾಯ್ತುದಜಲೋಚನೆ ನಿನ್ನನೆಂತುಂ ಹೋಗಬಿಡೆನೆನುತ ಗದಱುತ (ಬಸವು. ೪೦–೩೦). [ಸಂ. ಉದಜಲೋಚನಾ (ಉದಜ + ಲೋಚನ + –)]

**ಉದಧಿ** (ನಾ). ನೀರು ನಿಲ್ಲುವ ಸ್ಥಳ; ಸಮುದ್ರ; ಕಡಲು: ಉದಧಿ ತ ರ ಂ ಗ ತಾಟಿ[ಪಾಠಾಂ. ಡಿ]ತ ಧರಾತಳಮಂ ನಿನಗಿತ್ತು (ಪ ಂ ಪ ಭಾ ೧೩-೬); ಉದಧಿಯೊಳಗದ್ದಂತೆಯಿರ್ದುದು ರಾಯನಾಸ್ಥಾನ (ಕುವ್ಯಾಉ. ೯-೬). [ಸಂ.]

**ಉದಧಿಪ** (ನಾ). ಸಮುದ್ರರಾಜ: ತಮಗಿದಿರ್ವಂದುದಧಿಪನಿತ್ತ ಮಳ ಮಣಿವ್ರಜದೆ ಕ ಲ್ಪ ಕು ಜ ಮಿ ತ್ರ ಮಹಾಸುಮನಃಪುಂಜದೆ ಹರಿಗರ್ಘ್ಯ ಮನಿತ್ತರ್ ಜಯಜಯಾನ್ವಿತರ್ ಬ್ರಹ್ಮಾದ್ಯರ್ (ಜಗವಿ. ೧-೫೨). [ಸಂ.]

**ಉದಙ್ಮುಖ** (ನಾ). = ಉದಙ್ಮುಖ: ಉದಙ್ಮುಖನೊಬ್ಬ ಪುರುಷನು ಉದಯ ಮುಖನೊಬ್ಬ ಪುರುಷನು (ಬಸವ. ೯೫೫).
[< ಉದಙ್ಮುಖ]

**ಉದನ್ಯೆ** (ನಾ). ನೀರಡಿಕೆ; ಬಾಯಾರಿಕೆ. [ಸಂ. ಉದನ್ಯಾ]

**ಉದನ್ವಂತ** (ನಾ). ಸಮುದ್ರ; ಕಡಲು: ಪ್ರತಿಸ್ಪರ್ಧಿ ಮಲೆತುದಿನ್ ಮುಂದೆ ಗತಿಯೇನೆಂದೊರಲ್ವವೋಲ್ ಉದ್ವೇಗಗೊಂಡಾ ಉದನ್ವಂತನಂ ಕೇಳ್ (ಶ್ರೀರಾಮಾ. ೫೪೦-೨೦). [ಸಂ. ಉದನ್ವತ್]

**ಉದನ್ವದಂತಸ್ಥ** (ಗು). ಸಮುದ್ರದ ಒಳಗಿರುವ: ಸುರಶೈಲಂ ಪೂಣ್ದು ಪೊ ಂ ಗ ಟ್ಟೆ ವೊ ಲಿ ರೆ ಸಕಲೋದನ್ವದಂತಸ್ಥ ಕೂರ್ಮೋತ್ಕರಮುರ್ವೀ ಚಕ್ರಮಂ ತಾಳ್ದಿದ ಕಮಠನವೋಲೊಪ್ಪೆ (ಚಂದ್ರಪು. ೧೦-೬೬).
[ಸಂ. (ಉದನ್ವತ್ + ಅಂತಸ್ಥ)]

**ಉದನ್ವದ್ವೀಚಿ** (ನಾ). ಸಮುದ್ರದ ಅಲೆ: ಉದನ್ವದ್ವೀಚಿಯೊಳ್ ಸ್ವಾಚ್ಛಮುಂ ಪಿರಿದು ಗೌರವಮುಂ ಬೆಡಂಗಿಡಿದು ತೋರ್ಪೊಂದಂದದಿಂ (ಚಂದ್ರಪು. ೩-೨೬). [ಸಂ. (ಉದನ್ವತ್ + ವೀಚಿ)]

**ಉದಪಾನ** (ನಾ). ಸಣ್ಣಕೊಳ; ಸರೋವರ: "ನಿಪಾನಂ, ಉದಪಾನಂ ಪಾಪೀ, ಅಹಾವಃ— ಈ ಳ ಬೆಂಚೆ" (ಹಲಾಯು. ೧೧೩-೬೨); "ಅಹಾವ ಮದುದಪಾನಮೆನಿಸಿಕ್ಕು" (ಮಂಗರಾ. ೧೨೪-೧೮). [ಸಂ.]

**ಉದಬಿಂದು** (ನಾ). ನೀರಿನ ಹನಿ: ಜಲದ ಕಣ: ಕೊಂತಿಯ ದಿವ್ಯ ಗರ್ಭೋದರಮೆಂಬ ಶುಕ್ತಿಪುಟೋದರದೊಳ್ ತನ್ನ ದಿವ್ಯಾಂಶಮೆಂಬ ಮುಕ್ತಾಫಲೋ[ದ] [ಪಾಠಾಂ. ಪ] ಬಿಂದುವನಿಂದ್ರಂ ಸಂಕ್ರಮಿಸಿ ನಿಜ ನಿವಾಸಕ್ಕೆ ಪೋದಂ (ಪಂಪಭಾ. ೧-೧೩೯ ವ). [ಸಂ.]

**ಉದಮದ** 'ಉದುಮದ' ನೋ.

**ಉದಮೆ** (ನಾ). ಒಂದು ಊರಿನ ಹೆಸರು (?): ಮುದಿಯಪ್ಪ ನಾಯಕ ಭಕ್ತಿಯಿಂ ಹಟಣದಲಿ ಮಟವ ಕೊಟಸ್ತಿ ಉದಮೆಯಲಿ ಹೊಲಮಂ (ಎಕ. XVI, ತಿಪಟೂ. ೧೦೨-೬; 1625). [?]

**ಉದಯ** (ನಾ). **೧.** ಸೃಷ್ಟಿ; ಹುಟ್ಟು; ಜನನ; ಮೂಡುವಿಕೆ: ಉದಯಸ್ಥಿತಿ ಸಂಹಾರಪ್ರದರ್ ಜಗಕ್ಕೆನಿಪ ಕಮಲಭವ ಹರಿಹರನಾಮದ ಪುರುಷಾಕಾರತ್ರಯಂ (ಜಗವಿ. ೩-೧೦೪); ಇಂಧುಮಂಡಲಮುದಯ ವಾಯ್ತೆಂದು ನಸುಮುಗಿವ ಬಿ ಸ ಜ ಂ ಗ ಳ ಂ (ಪದ್ಮರಾ. ೮-೪೫). **೨.** ಸೂರ್ಯನು ಹುಟ್ಟುವ ದಿಕ್ಕಿನ ಪರ್ವತ; ಪೂರ್ವಪರ್ವತ. **೩.** ಅಭಿವೃದ್ಧಿ; ಶ್ರೇಯಸ್ಸು: ಉದಿತೋದಿತನ್ನೆ ನೀಂ ನಿನಗುದಯದ ಮೇಲುದಯಮೆಂದು ನೆಗಟ್ದರಿಗಂಗಭ್ಯುದಯಮನಱಿಪುವ ತೆಜದಿಂದು ದ ಯಾ ಚ ಳ ಚುಂ ಬಿ ಬಿಂ ಬ ನಿ ನ ನು ದ ಯಿ ಸಿ ದಂ (ಪಂಪಭಾ. ೨-೯೩). **೪.** ಕಾಂತಿ; ಹೊಳಪು; ಪ್ರಕಾಶ. "ತಳತಳ" (ಚತುನಿ. I, ೨೩ ಕಿ). **೫.** ಚಿಮ್ಮಿಬರುವುದು; ಮುಂದೆಬರುವುದು; ದೃಷ್ಟಿಗೆ ಗೋಚರ ವಾಗುವುದು (ಕಿ). **೬.** ಲಾಭ; ಆದಾಯ (ಕಿ). **೭.** [ಜೈನ] ಕರ್ಮಪ್ರಕೃತಿಯ ಹತ್ತು ಅವಸ್ಥೆಗಳಲ್ಲಿ ಒಂದು: ಕರ್ಮಪ್ರಕೃತಿ ಗಳೆಲ್ಲ ವಿಶ್ವದಲ್ಲಿ ಬಂಧಿ (ಆತ್ಮನಿಗೆ ಕಟ್ಟೆದ್ದು) . . . ಉದಯ (ಫಲ ಕೊಡುವ ಕಾಲ) . . . ಹತ್ತು ಅವಸ್ಥೆಗಳಲ್ಲಿರುತ್ತವೆ (ಜೈ ನ ಪ. ೩೬೯). **೮.** [ಛಂದ] ಅಕ್ಷರಛಂದಸ್ಸಿನ ಬೃಹತಿಯಲ್ಲಿ ಒಂದು ವೃತ್ತ: ಕೋಕನದ ವೈರಿ ದಿನಪಂಗಾ ಕಡೆಗೆ ವಾಯು ಬರೆ ಕೇಳಾ ಕಮಲಲೋಚನೆ ಪೆಸರ್ ನಾಕಿಗನಿನಾಡುದುದಯಂ (ಛಂದೋಂಬು. ೨-೫೦).

**ಉದಯವಾಗು** = **೧.** (ಹೊತ್ತು) ಹುಟ್ಟು; ಬೆ ಳ ಗಾ ಗು: ಉದಯವಾಗದ ಮುನ್ನ ಬವರವ ಹಿಡಿಯಬೇಹುದು (ಕು ವ್ಯಾ ದ್ರೋ. ೧-೩೪). **೨.** ಏಳಿಗೆಹೊಂದು; ಅಭಿವೃದ್ಧಿಹೊಂದು: ಉದಯವಾ ಗಲಿ ನಮ್ಮ ಚೆಲುವ ಕನ್ನಡನಾಡು (ಕನ್ನಬಾ. ೧೦೧). [ಸಂ.]

**ಉದಯಂಗೆಯ್** (ಕ್ರಿ). ಹುಟ್ಟು; ಮೂಡು: ಅಳುರ್ವ ದವಾಗ್ನಿಯವೊ ಲರ್ಕನುದಯಂಗೆಯ್ದಂ (ಕಾವ್ಯಸಾ. ೮೬೧ ಶೂದ್ರಕ); ಉದಯಾಚಳ ಗುಹೆಯಿಂ ಲಸತ್ಕಿರಣಕೇಸರಮಂ ಪರಪುತ್ತುಮಾಗಳಾಗುಳಿಸುವ ಬಾಯ ಕೆಂಪನುದಯಂಗೆಯೆ ಪೊಣ್ಮುವ ಕೆಂಪಪೋಲ್ವಿನಂ ತಳರೆ ಬೆಡಂಗಿನೊಳ್ ಪುದಿದುದೆಟ್ಟುರಮುದ್ಗತಚಂದ್ರಸಿಂಹದಾ (ಆದಿಪು. ೧೨-೫); ರವಿ ಪಡು ವಲುದಯಂಗೆಯ್ವೊಡಂ ಕೇಳ್ ಮೃಡನ ಭಕ್ತರು ಪರಧನಕೆ ಕೈದುಡುಕು ವರೆ ಭೂಪ (ಬಸಪು. ೧೦-೧೨).
[ಉದಯ + ಗೆಯ್ (< ಕೆಯ್$_1$)]

**ಉದಯಕಾಲ** (ನಾ). ಸೂರ್ಯನು ಹುಟ್ಟುವ ಕಾಲ; ಪ್ರಾತಃಕಾಲ: ಉದಯಕಾಲದೊಳೆದ್ದು ಗೊಲ್ಲನು ನದಿಯ ಸ್ನಾನವ ಮಾಡಿಕೊಂಡು (ಗೋಹಾಡು. ೨೪). [ಉದಯ + ಕಾಲ]

**ಉದಯಕುಧರ** (ನಾ). = ಉದಯಗಿರಿ: ದಿನಕರೋದಯಸಮಯ ಕಲ್ಲದವನಿಯೊಳೊಪ್ಪಧುದಯಕುಧರದೊಳ್ಪೆನಿತು (ಬಸಪು. ೧೯-೨೮).
[ಉದಯ + ಕುಧರ]

**ಉದಯಗಿರಿ** (ನಾ). ಸೂರ್ಯನು ಹುಟ್ಟುವ ಪರ್ವತ; ಪೂರ್ವ ದಿಕ್ಕಿನ ಪರ್ವತ; ಮೂಡುಬೆಟ್ಟ: ಉದಯಗಿರಿ ತಟದೊಳುದಯಿಸು ವದಿತಿಪ್ರಿಯಪುತ್ರನಲ್ಲದಿತ್ತೋರ್ವಂ ಭಾ ನು ದ ಲೊ ಗೆ ದ ನೆ ನಿ ಪ ತೇಜದ ಪೊದಟ್ಕೆಯಿಂ (ಪಂಪಭಾ. ೧೨-೫೩). [ಉದಯ + ಗಿರಿ$_1$]

**ಉದಯತಾಳದ್ರುಮ** (ನಾ). = ಉದಯತಾಳು: ಉದಯತಾಳ ದ್ರುಮವನೇಱಿ (ರೇವಣ. ೧೧೯-೨೨).
[ಉದಯ + ತಾಳ + ದ್ರುಮ]

**ಉದಯತಾಳು** (ನಾ). ಒಂದು ಬಗೆಯ ತಾಳೆಯಮರ; ಸೂರ್ಯ ತಾಳೆ: ಉದಯತಾಳಿನ ಮೋಹಿನೀಗಜದ . . . ತಾಣಂಗಳಂ ತೋಱಿದಂ ಭೈರವಂ (ಸಿದ್ಧರಾ. ೩-೧); ಉದಯತಾಳನೇಱುತ್ತ ಪಾಪಿಯು ಕೂಸ ನೆತ್ತುತ್ತ (ಸಿದ್ಧರಾ. ೩-೮). ☞ "ಇದು ಒಂದು ಬಗೆಯ ತಾಳೆಯಮರ. ಸೂರ್ಯ ಹುಟ್ಟುವಾಗ ಹುಟ್ಟಿ, ನಡುನೆತ್ತಿಗೆ ಬಂದಾಗ ಅಲ್ಲಿಯ ವರೆಗೂ ಬೆಳೆದು, ಮು ಳು ಗಿ ದಾ ಗ ಪೂರ್ತಿ ಅದೃಶ್ಯವಾಗುವ ಆಶ್ಚರ್ಯಕರವಾದ ವೃಕ್ಷ ಇದು. ಇದರ ಮೇಲೆ ಸಾಧಕರು ಕುಳಿತುಕೊಂಡು ಸೂರ್ಯಮಂಡಲವನ್ನು ಭೇದಿಸಿ ಹೊಕ್ಕುತಿರುಗಿ ಕೆಳಕ್ಕಿಳಿದು ಬರಬಹುದು. ಇದರ ಬೆಳವಣಿಗೆ ಸೂರ್ಯನ ಗತಿ ಯನ್ನು ಅನುಸರಿಸಿರುವುದರಿಂದ ಇದಕ್ಕೆ ಸೂರ್ಯತಾಳ ಎಂಬ ಹೆಸರೂ ಉಂಟು" (ಸಿದ್ಧರಾ. ೧೬೬ ಟೀಕೆ). [?]

**ಉದಯಪುರ** (ನಾ). ಒಂದು ಊರಿನ ಹೆಸರು; ಈಗಿನ ಉಡುಪಿಯ ಬಳಿಯ ಉದ್ಯಾವರ: ಉದಯಪುರಮಾನ್ ಪೊಗುವಲ್ಲಿ (ಎಇ. IX, ೧೯-೧೩; 800). [ಉದಯ + ಪುರ]

**ಉದಯಮಾನ** (ಗು). **೧.** ಉದಯವಾಗುತ್ತಿರುವ; ಹುಟ್ಟುತ್ತಿರುವ; ಏಳುತ್ತಿರುವ (ನಾ). **೨.** ಸೂರ್ಯೋದಯ; ಬೆಳಗು: ಆಯಿತ್ತೆ ಉದಯಮಾನ ಹೋಯಿತ್ತೆ ಅಸ್ತಮಾನ (ಅವಚಂ. ೧೦-೪೧).
[ಸಂ.]

**ಉದಯಮುಖ** (ಗು). ಹುಟ್ಟುತ್ತಿರುವ; ಏಳಿಗೆಯನ್ನು ಹೊಂದುತ್ತಿರುವ : ಉದಯಮುಖನೊಬ್ಬ ಪುರುಷನು ಉದಯಮುಖನೊಬ್ಬ ಪುರುಷನು ವಿರಾಟಜನನೊಬ್ಬಪುರುಷನು ವಿರಾಜಪುರುಷನೊಬ್ಬಪುರುಷನು (ಬಸವ. ೯೫೫). [ಉದಯ + ಮುಖ]

**ಉದಯರವಿ** (ನಾ). ಹುಟ್ಟುತ್ತಿರುವ ಸೂರ್ಯ. 'ಉದಯರವಿ ಚಂದ್ರಿಕೆ' ಪರಾ. [ಉದಯ + ರವಿ]

**ಉದಯರವಿಚಂದ್ರಿಕೆ** (ನಾ). ಹುಟ್ಟುತ್ತಿರುವ ಸೂರ್ಯನ ಕಾಂತಿ, —ಬಿಸಿಲು : ಬಾಲಭಾಸ್ಕರನು ಪೂರ್ವಾಕಾಶದಲ್ಲಿ ಮಹಾಬಿಂಬವಾಗಿ ಉದಯಿಸುತ್ತಿದ್ದಾನೆ. ಇಂತಹ ಉದಯರವಿಚಂದ್ರಿಕೆಯನ್ನು ಶಾಂತಲೆ ಹಿಂದೆಂದೂ ಅನುಭವಿಸಿರಲಿಲ್ಲ (ಶಾಂತಲಾ. ೪೦). [ಉದಯರವಿ + ಚಂದ್ರಿಕೆ]

**ಉದಯರಾಗ** (ನಾ). ೧. ಬೆಳಗಿನ ಕೆಂಪು; ಸೂರ್ಯೋದಯವಾಗುವ ಮುನ್ನ ಕಾಣುವ ಕೆಂಪು; ಅರುಣಕಾಂತಿ. ೨. ಬೆಳಗಿನ ಜಾವದ ಕಾಲದಲ್ಲಿ ಹಾಡುವ ಒಂದು ರಾಗ, —ಹಾಡು : ಆಗಲೇ ಗೊಗ್ಗರ ಧ್ವನಿಯ ಸನಾದಿ ಬಜಂತ್ರಿಗಳ ಉದಯರಾಗ ಆರಂಭವಾಗಿತ್ತು (ವೈನಿ. ೯). ೩. (ಪರಮಾತ್ಮನಲ್ಲಿ) ಹುಟ್ಟಿದ ಪ್ರೀತಿ; ಅನುರಾಗ : ಸುಧೆಯ ಸುಧೆಯನು ಸವಿದು ಮುದದಿ ಮಂತ್ರವ ನೆನೆದು ಉದಯರಾಗದೊಳು ನಿಂದಿರ್ದ ಶಿವಯೋಗಿ ನಿಧಿಪುರುಷ ಕಾಣೊ (ಸರ್ವಜ್ಞ. ೫೪೮). [ಉದಯ + ರಾಗ]

**ಉದಯಶೈಲ** (ನಾ). ಪೂರ್ವದಿಕ್ಕಿನ ಪರ್ವತ; ಮೂಡಣ ಬೆಟ್ಟ : ಉದಯಶೈಲಮನೇಱಿದನಂಬುಜಪ್ರಿಯಂ (ಪುಷ್ಪಪು. ೧೩–೬೦). [ಉದಯ + ಶೈಲ]

**ಉದಯಸ್ಥ** (ಗು). ಹುಟ್ಟುವ ಸ್ಥಿತಿಯ; ಮೂಡುತ್ತಿರುವ : ಶಾಂತಿನಾಥ ಮುಖದರ್ಪಣ ಬಿಂಬಿತ ಬಿಂಬದಿಂದೆ ದಿಗ್ದಂತಿಯ ಚೂಳಚಾಮರನಿಭಂ ಶಶಿಬಂದುದಯಸ್ಥನಪ್ಪುದುಂ (ಶಾಂತಿಪು. ೧೦–೧೫೪). [ಸಂ.]

**ಉದಯಾಚಲ**, ಉದಯಾಚಳ (ನಾ). = ಉದಯಶೈಲ : ಆ ನೆರವಿಗಂ ಮಹಿಪತಿ ಗತಾನಾಗತ ವರ್ತಮಾನ ವಿಷಯಾವಧಿವಿಜ್ಞಾನಮನವಯವದಿಂ ಮೆಱೆದಾನಂದಾಮೃತಕರೋದಯಾಚಲನಾದಂ (ಶಾಂತಿಪು. ೯–೧೫); ಮಹಾಪದ್ಮಾವನೀಶ್ವರಂ ತಾಂ ಕರುಮಾಡಮನೇಱಿದನನುನಯದಿಂ ಕಮಳಪ್ರಿಯನೇಱುವಂತಿರುದಯಾಚಲಮಂ (ಪುಷ್ಪಪು. ೮–೪೮). **ಉದಯಾಚಳ** : ಹೊಗರು ಕುವಳಯಕಳಿಯೆ ಸೊಂಪಿನ ನಗೆ ಸರೋರುಹಕೊಗೆಯೆ ವಿರಹದ ಧಗೆ ರಥಾಂಗದೊಳಿಳಿಯೆ ರವಿಯುದಯಾಚಳಕೆ ಬಂದ (ಕುವ್ಯಾಕ. ೨–೧). [ಉದಯ + ಅಚಲ]

**ಉದಯಾಚಳ** 'ಉದಯಾಚಲ' ನೋ.

**ಉದಯಾದಿತ್ಯ** (ನಾ). ೧. ಹುಟ್ಟುತ್ತಿರುವ ಸೂರ್ಯ; ಮೂಡುತ್ತಿರುವ ಸೂರ್ಯ. ೨. ಒಬ್ಬಾತನ ಹೆಸರು : ಅಂಭೋನಿಧಿಯುಂ ತಾನುಂ ಗಂಭೀರರೆನಿಪನುದಯಾದಿತ್ಯಂ (ಶಮದ. ೧೪೪ ಪ್ರಯೋ). ೩. ಉದಯಾದಿತ್ಯಾಲಂಕಾರ ಎಂಬ ಗ್ರಂಥದ ಕರ್ತೃವಿನ ಹೆಸರು. [ಉದಯ + ಆದಿತ್ಯ]

**ಉದಯಾದ್ರಿ** (ನಾ). = ಉದಯಶೈಲ : ಉದಯಾದ್ರಿಯುಮಸ್ತಾದ್ರಿಯುಮುದಗ್ರಕೋಪೋತ್ಕರಂಗಳಿರ್ಪಂತಿರೆ ನೀಳ್ದೊದವಿದರುನ್ನತಮೂರ್ತಿಗಳೊದವಿ ಗದಾಯುಧದೆ ಭೀಮಭುಜಗಧ್ವಜರುಂ (ಗದಾಯು. ೮–೬); ಜಗತಿಯೊಡೆಯನು ಶಿರಸುವಿಲ್ಲದ ಬಿಗಿದ ಹೆಣನಂ ಕಂಡನುದಯಾದ್ರಿಗೆ ತರಣಿ ಬಹ ಸಮಯದಲಿ (ಬಸವು. ೬೧–೧೨). [ಉದಯ + ಅದ್ರಿ]

**ಉದಯಾರೂಢ** (ನಾ). ೧. ಪೂರ್ವದಿಕ್ಕಿನ ಪರ್ವತವನ್ನು ಏರಿದವನು. ೨. ಏಳಿಗೆಯನ್ನು ಪಡೆಯುತ್ತಿರುವವನು : ಉದಯಾರೂಢಂ ಕಾಂತ್ಯಾಸ್ಪದನನುರಕ್ತಾತ್ಮಮಂಡಲಂ ಕುಮುದಕರಂ ಮೃದುತರಕರಂಗಳಿಂದತಿಮುದಮಂ ಲೋಕಕ್ಕೆ ಪಡೆಗುಮಿಂತೀ ರಾಜಂ (ಕವಿರಾ. ೩–೧೯೯). [ಉದಯ + ಆರೂಢ]

**ಉದಯಿಸು**, ಉದಿಸು, ಉದ್ಯೈಸು (ಕ್ರಿ). ಹುಟ್ಟು; ಕಾಣಿಸಿಕೊಳ್ಳು; ಉದಯವಾಗು : ತನ್ನ ಸುತನಟಲೊಳರ್ಜುನನೆನ್ನುದಯಮನೆಯ್ದೆ ಪಾರ್ದು ಪಗೆವರ ಬೇರೊಳ್ ಬೆನ್ನೀರನೆಱೆಯದಿರನದನಾನ್ನೋಡುವೆನೆಂಬ ತೆಜದಿನಿನನುದಯಿಸಿದಂ (ಪಂಪಭಾ. ೧೧–೧೩೨); ಎಱೆಯನ ಮಗನೆಱೆಯಂಗನಾತನಿಂದುದಯಿಸಿದಂ ಶ್ರೀವಲ್ಲಭಂ (ಎಕ. VII, ಶಿವಮೊ. ೪–೪೪; 1122); ಅಮೃತಮಥನಂ ಮಾಡುತಿರಲುದಯಿಸಿದವಂದು ಕ್ರಮದಿಂದ ವಿಂದು ಸುಧೆ ಲಕ್ಷ್ಮಿ ಕೌಸ್ತುಭವಂದು (ನಂಬಿರ. ೧–೫); ಇದು ಮುರಾರಿಯ ಲೀಲೆಗೋಸುಗ ಉದಯಿಸಿದ ಜಗವು (ಕುವ್ಯಾದ್ರೋ. ೮–೬೨); ಅಲ್ಲಿಗೆ ಹೋಗುವಾಗ ಸೂರ್ಯನು ಕಂತಿದನು ಚಂದ್ರನು ಉದಯಿಸಿದ್ದನು (ಮಣಿಸ. ೮೫). **ಉದಿಸು** : ದಿನಕರಮರೀಚಿಯಿಂದಿದಾದಪ್ಸರಸೆಯೊಳುದಿಸಿದ ಗೌರಿಗಂ ಗಂಧರ್ವಲೋಕಾಧಿಪತಿಯಪ್ಪ ಹಂಸಂಗಂ ಮಗಳಾಗಿ ಮಹಾಶ್ವೇತೆಯೆಂಬ ಪೆಸರಿಂ ನೆಗಳ್ತೆವೆತ್ತಳ್ (ಕಾದಂಪೂ. ೭೯೪); ಅಕಟ ಗುರುಹತ್ಯಾಮಹಾಪಾತಕಕೆ ತಂದ್ಯೆ ಮನವ ಭರತ ಪ್ರಕಟಕುಲ ನಿರ್ಮೂಲಕನೆ ನೀನೊಬ್ಬನುದಿಸಿದಲ (ಕುವ್ಯಾಕ. ೧೭–೫); ಹದಿನಾಜು ಬಣ್ಣದ ಸೊನ್ನೆಯ ಸರಳ್ಗಳ ಕುದಿಗಾಸಿ ನೀರೊಳಿಟ್ಟಂತೆ ಉದಿಸಿತು ಘುಳು ಘುಳು ಘುಳು ಧ್ವನಿ ತಂಗೊಳದೊಳು ತನುತಾಪದಿಂದೆ (ಮೋಹತ. ೯–೪೨). **ಉದ್ಯೈಸು** : ಶಿಲೆಯೊಳಗಡಗಿದ್ದ ಪಾವಕ ಉದ್ಯೈಸಿ ಸುಡದೆ ಮಹಾರಣ್ಯವ (ಮೋಳಿಮಾ. ೯೩–೩೬೦); ನೀವೆ ಜನಿಸಲ್ವೇಳ್ಕದಲ್ಲದೊಡಾವುದ್ಯೈಸಲ್ವೇಳ್ಕು (ಬಸವು. ೨–೮). [ಉದಯ + –ಇಸು]

**ಉದಯೋನ್ಮುಖ** (ಗು). ಏಳಿಗೆಯಾಗುತ್ತಿರುವ; ಆಗತಾನೆ ಅಭಿವೃದ್ಧಿ ಹೊಂದುತ್ತಿರುವ. [ಉದಯ + ಉನ್ಮುಖ]

**ಉದರ** (ನಾ). ೧. ಹೊಟ್ಟೆ; ಜಠರ : ವಾರಣಾಸಿಯಂ ಹೊಕ್ಕನುತ್ತಮ ನೃಪಂ ಪರಮಪ್ರಸಾದದೊಲವಿಂದ ಸದ್ಭಕ್ತನುದರವನು ಪೊಗುವಂತಾಗಳು (ಹಚಕಾ. ೧೦–೩೩); ಕಲಾಪಿಸ್ತ್ರೀಯುದರದಲ್ಲಿ ವಿಂಧ್ಯದೊಳೊಗೆದಂ (ಯಶೋಚ. ೩–೩೪). ೨. (ಹೊಟ್ಟೆಗೆ ಬೇಕಾದದ್ದು) ಆಹಾರ : ಸುತಂ ವಜ್ರನೆಂಬುವನೆನಗೆ ತಂದೀವನುದರಮಂ ಬರ್ದುಕಿಹೆನ್ ಮುಂದೆ ಬರ್ದುಕಿಹುದೆಂಬುವಾಸೆಯಿಂ (ಶ್ರೀರಾಮಾ. ೩೪೯–೭೪೨). ೩. ಮಧ್ಯಭಾಗ; ನಡುವೆ. [ಸಂ.]

**ಉದರಂಭರಣ**, ಉದರಭರಣ (ನಾ). ಹೊಟ್ಟೆಹೊರೆಯುವುದು; ಹೊಟ್ಟೆ ತುಂಬಿಕೊಳ್ಳುವುದು : ಶಿವಮೂರ್ತಿಸ್ವಾಮಿಗಳಿಗೆ ಉದರಂಭರಣಕ್ಕೆ ಕಷ್ಟವೆನಿಸಿರಲಿಲ್ಲ (ಜಯಂತ. ೧೧). **ಉದರಭರಣ** : ಉದರಭರಣಮಾತ್ರಮುಪ್ಪಂತೆ ರಾಜಾನುಸೇವನಂಗೆಯ್ದೂರ್ಪವು ಎನೆ (ಪಂಚತಂ. ೩೦–೧೧). [ಉದರ + ಭರಣ]

**ಉದರಂಭರಿ** (ನಾ). ತನ್ನ ಹೊಟ್ಟೆಯನ್ನು ಮಾತ್ರ ಹೊರೆದುಕೊಳ್ಳುವವನು; ಸ್ವಾರ್ಥಿ : ಇರುವರುದರಂಭರಿಗಳಲ್ಲಲ್ಲಿ ನೃಪರೆಡೆಯೊಳು (ವೆಂಕಾರಾ. ೪–೧೩–೩೩). [ಸಂ.]

**ಉದರನಿರ್ವಾಹ** (ನಾ). = ಉದರಂಭರಣ : ಉದರನಿರ್ವಾಹಕ್ಕಾಗಿ ಯಾವುದಾದರೂ ಕೆಲಸ ಮಾಡಲೇಬೇಕು (ರೂಢಿ). [ಉದರ + ನಿರ್ವಾಹ]

**ಉದರಪೂರ** (ಅ). ಹೊಟ್ಟೆ ತುಂಬ; ಹೊಟ್ಟೆತುಂಬುವಷ್ಟು. [< ಸಂ. ಉದರಪೂರಂ]

**ಉದರಪೂರ್ತಿ** (ನಾ). ಹೊಟ್ಟೆತುಂಬುವುದು : ನಳದ ನೀರು ಕುಡಿದು ಎರಡು ಹಗಲು, ಮೂರು ರಾತ್ರಿ ಕಳೆದಿರುವೆ. ನನಗೆ ಒಂದು ಆಶ್ರಯ ಸಿಕ್ಕಿತು. ಆದು ಉದರಪೂರ್ತಿಯವುಟ್ಟಿಗೆ ಆಷ್ಟೇ (ಜಯಂತ. ೪೨೫). [ಉದರ + ಪೂರ್ತಿ]

**ಉದರಪೋಷಕ** (ನಾ). = ಉದರಂಭರಿ: ವೇಷಧಾರಿಯಾನು ಉದರ ಪೋಷಕ ನಾನಯ್ಯಾ (ಬಸವ. ೮೫); ಯೋಗಮಾರ್ಗವನೊಲ್ಲದವ ನುದರಪೋಷಕಂ ನಿಜವೆಂಬರು (ವೀಕ್ಷೈಪು. ೨-೮-೧೩).
[ಉದರ + ಪೋಷಕ]

**ಉದರಪೋಷಣೆ** (ನಾ). = ಉದರಂಭರಣ.
ಉದರಪೋಷಣೆಯರ್ = ಹೊಟ್ಟೆ ಹೊರೆದುಕೊಳ್ಳುವವರು ; ತನ್ನ ಹೊಟ್ಟೆಹೊರೆದುಕೊಳ್ಳುವುದರಲ್ಲೇ ನಿರತರಾದವರು: ಕೃತ್ರಿಮದ ರೂಪುಗಳು ಬಾಹಿರಗಿತ್ತಿಯರು ಮೋಜೆಯಿಲ್ಲದೊಂದುವ ಮಿತ್ತು ಗಳುದರಪೋಷಣೆಯರುಂ ಗೋಣಗೊಯ್ಕೆಯರು (ಬಸವು. ೪೦-೫೫).
[ಉದರ + ಪೋಷಣೆ]

**ಉದರಬಂಧ** (ನಾ). ನಡುಪಟ್ಟಿ; ಒಂದು ಆಭರಣ : ಪೊಳೆವ ಮಣಿ ಮಕುಟಮೇಕಾವಳಿಹಾರಂ ಕಟಕಮುದರಬಂಧಂ ಮಣಿಮೇಖಳೆ ಮಕರ ಕುಂಡಳಂ ತೋಳ್ವಳೆಯೆಂಬಿವನವರ್ಗೆ ಭೂಷಣಾಂಗಂ ಕುಡುಗುಂ (ಶಾಂತಿಪು. ೬-೧೧೧). [ಉದರ + ಬಂಧ]

**ಉದರಭರಣ** 'ಉದರಂಭರಣ' ನೋ.

**ಉದರಯಾತ್ರೆ** (ನಾ). ಹೊಟ್ಟೆಪಾಡಿಗಾಗಿ ನಡೆಯುವುದು, —ವ್ಯವಹರಿಸುವುದು. [ಉದರ + ಯಾತ್ರೆ]

**ಉದರವೈರಾಗ್ಯ** (ನಾ). ಹೊಟ್ಟೆಯ ಪಾಡಿಗಾಗಿ ತಾಳುವ ವೈರಾಗ್ಯ; ತೋರಿಕೆಯ ವಿರಕ್ತಿ : ಉದರವೈರಾಗ್ಯವಿದು ನಮ್ಮ ಪದುಮನಾಭನಲ್ಲಿ ಲೇಶ ಭಕುತಿಯಿಲ್ಲ (ಪುರಂದ. ೨-೨೫-೧). [ಉದರ + ವೈರಾಗ್ಯ]

**ಉದರಶಿಖಿ** (ನಾ). = ಉದರಾಗ್ನಿ : ಉದರಶಿಖಿಯೊಂದುಕಡೆ, ಹೃದಯ ಶಿಖಿಯೊಂದುಕಡೆ ಕುದಿಸದಿರೆ ಜೀವಶಿಲೆ ಮೃದುವಪ್ಪುದೆಂತು ? (ಮಂಕುಕ. ೬೦೫). [ಉದರ + ಶಿಖಿ]

**ಉದರಶೂಲೆ** (ನಾ). ಹೊಟ್ಟೆಯ ನೋವು : ಫಲವು ಆಯಿತು ತೀರ್ಥ ಯಾತ್ರೆಯಲಿ ಮಲವಿಸರ್ಜನೆ ಕೆಮ್ಮು ವುಬ್ಬಸ ಜ್ವರ ವುದರಶೂಲೆ (ಜ್ಞಾನಸಿಂ. ೨೨-೩೧). [ಉದರ + ಶೂಲೆ]

**ಉದರಾಂತ** (ನಾ). ಹೊಟ್ಟೆಯ ಒಳಭಾಗ : "ಉದರಾಂತಂ – ಒಳ ಹೊಟ್ಟೆ" (ನಾನಾರ. ೧೨೭ ಟೀಕು). [ಉದರ + ಅಂತ$_{2}$]

**ಉದರಾಗ್ನಿ** (ನಾ). ಜಠರಾಗ್ನಿ; ಐದು ಅಗ್ನಿಗಳಲ್ಲಿ ಒಂದು : ಗ್ರೀಷ್ಮಾದಿರೂಪ ಕಾಲಾಗ್ನಿ, ಆತಪರೂಪ ಸೂರ್ಯಾಗ್ನಿ . . . ದೇಹಾಂ ತರ್ಗತ ಉದರಾಗ್ನಿಗಳೆಂಬ ಪಂಚಾಗ್ನಿಗಳನುಂ (ವಿವೇಕ. ೧೪೪).
[ಉದರ + ಅಗ್ನಿ]

**ಉದರಾರ್ಥಿ** (ನಾ). ಹೊಟ್ಟೆಗಾಗಿ ಬೇಡುವವನು ; ಹೊಟ್ಟೆಯ ಪಾಡಿಗಾಗಿ ಪ್ರಯತ್ನಿಸುವವನು : ಮಡದಿಯರೊಳಿನ್ನಂ ವಿಚಾರಿಸಿ ನುಡಿದೊಡಾನುದರಾರ್ಥಿಯಲ್ಲ್ಯೆ (ಬಸವು. ೪೦-೩೭).
[ಸಂ. ಉದರಾರ್ಥಿನ್]

**ಉದರಿ** (ನಾ). ದೊಡ್ಡಹೊಟ್ಟೆಯುಳ್ಳವನು. [< ಸಂ. ಉದರಿನ್]

**ಉದರೆ** 'ಉದ್ದರಿ' ನೋ.

**ಉದರ್ಕ** (ನಾ). ಮುಂದಾಗುವ ಫಲ, —ಪ್ರಯೋಜನ : ಕರ್ಕಶ ಮನಂ ಸುರಾರಿ ಕುತರ್ಕೋಕ್ತಿಯನಿಂತು ಪೂಣ್ದು ಬೆಸವೇಟ್ಟನದಂ ಮಾರ್ಕೊಂಡುಪಾಂಶುವೆನ್ನದುದರ್ಕಪರಿಜ್ಞಾನದಾನಪತಿ ಕೈಕೊಂಡಂ (ಜಗವಿ. ೫-೬೫). [ಸಂ.]

**ಉದಲಾವಣಿಕ** (ನಾ). ಉಪ್ಪುಹಾಕಿ ಬೇಯಿಸಿದ ಕಾಯಿಪಲ್ಯ ಮುಂತಾದುವು. [ಸಂ.]

**ಉದವಸಿತ** (ನಾ). ವಾಸಸ್ಥಾನ ; ಮನೆ. [ಸಂ.]

**ಉದವಾಸ** (ನಾ). ನೀರಿನಲ್ಲಿ ವಾಸಮಾಡುವುದು : ತದಪತ್ಯಂ ನಹುಷಂ ಚತುರುದಧಿವರಂ ವಸುಧೆಯಂ ನಿಮಿರ್ಚಿ ಭುಜಾಗರ್ವದ ಗರ್ವಿಂ ಮಾಣ್ದನೆ ಚತುರುದಧಿಯೊಳುದವಾಸಮಿರಿಸಿದಂ ರಿಪುನೃಪರಂ (ಪಂರಾಮಾ. ೨-೫೯). ೨. ನದಿಯ ಅಥವಾ ಕೆರೆಯ ದಡದಲ್ಲಿರುವ ಮನೆ : ಎಸೆಯಲ್ ಜಾಳಕ ಜಾಳಕಂ ದೃಢಕವಾಟಂ ದ್ವಾರ ಶಾಖಾಳಿ ಬಾಣಸು ಕೊಟ್ಟಾರ ಉದಗ್ರವಪ್ರಮುದವಾಸಂ ವಾಸುದೇವಾಖ್ಯತೀರ್ಥ ಸರಂ . . . ಮಾಡಿಸಿದನೀ ಬಲ್ಲಾಳ ಭೂಪಾಳಕಂ (ಎಕ. V, ಬೇಲೂರು. ೭೨-೨೭೯ ; ಸು. 1185). ೩. ನೀರಿರುವ ಎಡೆ ; ಕಂದಕ ; ಅಗಳು.
[ಸಂ.]

**ಉದವಾಸವ್ರತ** (ನಾ). ನೀರಿನಲ್ಲಿ ವಾಸಿಸುವ ವ್ರತ : ಉದವಾಸ ವ್ರತಮಂ ಜಿನೇಂದ್ರಸಹಜಾಮೋದಕ್ಕೆ ಸೋಲ್ತೇವದಿಂ ತ್ರಿದಶಾವಾಸ ದೊಳುಳ್ಳ ದಿವ್ಯ ಸುರಭಿದ್ರವ್ಯಂಗಳುಂ ಪಾರಿಜಾತದ ಮಂದಾರದ ಪೂಗಳುಂ ತಳೆದುವೆಂಬಂತಾಗೆ ತಳ್ಪಂಕುಗುಟ್ಟಿದುವಿಂದ್ರಂ ಜಿನನಾಥನಂ ಮಿಸಿಸೆ ತತ್ಪುಣ್ಯಾಂಬುಪೂರಂಗಳೊಳ್ (ಮಲ್ಲಿಪು. ೧೨-೧೫೯).
[ಉದವಾಸ + ವ್ರತ]

**ಉದ[ಡ]ವೀೞ್** (ಕ್ರಿ). ಜೊತೆಯಲ್ಲಿ ಬೀಳು; ಒಡನೆ ಸಾಯಿ : ಸ್ವಸ್ತಿಶ್ರೀ ಅರಕೆಲ್ಲ ಮುಗದಿ ಮಾಘರನ್ ಎಱೆಯರಾಮುಸದೆವಲ್ಲವರಸ ರೊಟ್ಟ ಎಱೆದಾರ್ ವಿಗೆ ಊರುಳ್ಳ ಅವರೊದು[ಡು]ಉದ[ಡ]ವಿೞ್ದಾರ್ ಮಣಲ್ಕೊದು ಆ ಊಕಾಳಿರಾಶಿಕರ್ (ಎಕ. XVI, ಗುಬ್ಬಿ. ೬೩-೩ ; ಸು. 950). [ಉದ್$_{0}$ (< ಉಡ) + ಬೀೞ್]

**ಉದವು** (ನಾ). ಅಭಿವೃದ್ಧಿ ; ಏಳಿಗೆ ; ಆಧಿಕ್ಯ ; ಹೆಚ್ಚಳ : ಎಟ್ಟುದನೆ ತಮ್ಮ ಕ್ಷೇಮಕ್ಕಿರದೞಿ ಮೆಚ್ಚಿರ ತಾಟ್ಟದು ಪರತ್ರೆಯ ಪದೇವುದೇರೂ ಮಹಾಪ್ರಭು ಗೋವಪಯ್ಯಂ (ಎಕ. III, ಮೈಸೂರು. ೬-೩ ; ಸು. 750). 'ಒದವು$_{2}$' ಪರಾ. [< ಒದವು$_{2}$]

**ಉದವೆ** (ನಾ). ಕಾಫಿತೋಟವನ್ನು ಮಾಡಲು ಯೋಗ್ಯವಾಗಿರುವ ಅರಣ್ಯಪ್ರದೇಶ (ಕೈಸ್‌ಗೆ. II, ೫೬೩). [?]

**ಉದಶ್ರು** (ನಾ). ಉಕ್ಕಿಬರುವ ಕಣ್ಣೀರು : ನೇಸಱಿಂದೊಳಗಾಂ ದಿನ ಕರಸುತನಸಿಕ್ಕಿ ಬಂದಲ್ಲದೆ ಕಾಣೆಂ ದಲ್ ಭವತ್ಪದಾಬ್ಜಮನೆಂದೆಟ್ದನು ದಶ್ರುಜಳಲವಾರ್ದ್ರಕಪೋಳಂ (ಪಂಪಭಾ. ೧೨-೧೩೪). [ಸಂ.]

**ಉದಶ್ವಿತ್ತು** (ನಾ). ಸಮಪ್ರಮಾಣದ ನೀರಿನಿಂದ ಕೂಡಿದ ಮಜ್ಜಿಗೆ.
[ಸಂ. ಉದಶ್ವಿತ್]

**ಉದಸ್ತ** (ಗು). ಮೇಲಕ್ಕೆ ಎಸೆಯಲ್ಪಟ್ಟ ; ಮೇಲಕ್ಕೆ ಪ್ರಸರಿಸಿದ : ಸುರಭಿ ಕುಸುಮದಾಮಮಂ ಬಾಡಿ ನೀರೋಡೆ ದಿವ್ಯಾಭರಣರುಚಿಗಳಸ್ತೋ ದಸ್ತ ಸೂರ್ಯಾಂಶುಗಳ್ವೋಲಿರೆ (ಶಾಂತಿಪು. ೭-೩೮). [ಸಂ.]

**ಉದಹರಿಸು** 'ಉದಾಹರಿಸು' ನೋ.

**ಉದಾಕಟ** (ನಾ). ನೀರು ಕಟ್ಟಿ ಮಾಡುವ ಬೇಸಾಯ ; ನೀರಾವರಿ (?) : ಮತ್ತಂ ಕಾರುಗಾಲ ಬಾಳಿಂಗೆ ಉದಾಕಟಿಯ ಬಾಳಿಂಗೆ ಉ × × × ಉ ಆಕ್ಕಿದೇವಸ್ವದ ಹಾಳಿ ಸಂನ್ಯಸಿಗ ವ್ರಿತ್ತಿ (ಕಇ. I, ೫೫-೨೨ ; 1433). [?]

**ಉದಾಗಸ** (ನಾ). ಎದ್ದುಕಾಣುವ ತಪ್ಪು, —ಅಪರಾಧ : ನೀಗಿ ತೋರ್ದುದನೆಲ್ಲ ಬಿತ್ತರಿಸವೇಳ್ಕಾನುದಾಗಸವ ಚಿತ್ತದೊಳಗಿಡದೆ ಸಂತತಿ ಗಧಿಕಮಾಗಿ ಶುಭಮೊದಗುವಂತಾಲೋಚನಂಗೈವುದೆನುತ ಮೌನದೊಳಿ ರ್ದನು (ವೆಂಕಾರಾ. ೪-೧೩-೩೦). [ಸಂ. ಉದಾಗಸ್ ?]

**ಉದಾತ್ತ** (ಗು). ೧. ಶ್ರೇಷ್ಠವಾದ; ಉನ್ನತವಾದ; ಉತ್ತಮವಾದ: ಉದಾತ್ತನಾರಾಯಣನಾದ ದೇವನೆಮುಗೀಗರಿಕೇಸರಿ ಸೌಖ್ಯಕೋಟಿಯಂ (ಪಂಪಭಾ. ೧-೧). ೨. ಔದಾರ್ಯವುಳ್ಳ; ವಿಶಾಲಹೃದಯದ. (ನಾ). ೩. ನಾಲ್ಕುಸ್ವರಗಳಲ್ಲಿ ಒಂದು; ತಾಲು ಮುಂತಾದ ವರ್ಣೋಚ್ಚಾರಣಸ್ಥಾನಗಳ ಮೇಲು ಭಾಗದಲ್ಲಿ ಉಚ್ಚರಿಸಲ್ಪಡುವ ಸ್ವರ: ವೇದದಲ್ಲಿ ಹೇಳಲ್ಪಡುವ ಉದಾತ್ತಾನುದಾತ್ತ ಸ್ವರಿತ ಪ್ರಚಯಗಳೆಂಬ ಸ್ವರಗಳು ಬ್ರಹ್ಮಯಜ್ಞದಲ್ಲಿ ವೇದಜಪಕ್ಕೆ ಉಪಯೋಗವೇ ಹೊರತು ಅರ್ಥಜ್ಞಾನಕ್ಕೆ ಉಪಯೋಗವಿಲ್ಲವೆಂದು ನಿರ್ಣಯಿಸಿದ್ದಾರೆ (ಹಿಂದಸಾ. ೧೪೯). ೪. [ಕಾವ್ಯಮೀ] ಕಾವ್ಯಾಲಂಕಾರಗಳಲ್ಲಿ ಒಂದು: ಹೃದಯದ ವಿಭವದ ಮಹಿಮೆಯುದುದಾತ್ತಮಾಂತೊಡೆ ಧರಿತ್ರಿ ಕೈಯಾಂತೊಡೆ ಪೂಣ್ದು ದೆಗನುಱದೀವ ಗುಣದಿಂ ಸದರ್ಥಮೇಂ ಮನದ ಧನದ ಪೆಂಪತಿಶಯಮೋ (ಉದಯಾ. ೧೧). ೫. [ಕಾವ್ಯಮೀ] ಕಾವ್ಯ ನಾಟಕಗಳಲ್ಲಿ ಉತ್ತಮಗುಣಗಳಿಂದ ಕೂಡಿದ ನಾಯಕರಲ್ಲಿ ಒಂದು ಭೇದ: ರಾಮಾದಿಗಳನ್ನು ಉದಾತ್ತರೆನ್ನುತ್ತೇವೆ (ದಶರೂ. ೮೫). ೬. [ಛಂದ] ಅಕ್ಷರಛಂದಸ್ಸಿನಲ್ಲಿ ಏಳನೆಯ ಛಂದಸ್ಸಾದ ಗಾಯತ್ರಿಯಲ್ಲಿ ಒಂದು ಭೇದದ ಹೆಸರು: ನಯಗಣದಿಂದಂ ನಿಯತಮಿದಕ್ಕುಂ ಪ್ರಿಯಲಲನೇ ಕೇಳ್ ನಯದಿನುದಾತ್ತಂ (ಛಂದೋಂಬು. ೨-೨೫). [ಸಂ.]

**ಉದಾತ್ತಗೊಳ್** (ಕ್ರಿ). ಉತ್ತಮವಾಗು; ಮೇಲಾಗು. 'ಉದಾತ್ತಗೊಳಿಸು' ಪರಾ. [ಉದಾತ್ತ + ಕೊಳ್$_1$]

**ಉದಾತ್ತಗೊಳಿಸು** (ಕ್ರಿ). ಉತ್ತಮವಾಗುವಂತೆ ಮಾಡು; ಶ್ರೇಷ್ಠವಾಗುವಂತೆ ಮಾಡು: ನಿತ್ಯಜೀವನದಲ್ಲಿ ಹೇಗೆ ಹೊರಗಡೆ ಬಾಳುತ್ತಿರುವರೋ ಅಂಥ ಸನ್ನಿವೇಶಗಳನ್ನು ಉದಾತ್ತಗೊಳಿಸಿ, ಶಾಲೆಯಲ್ಲೂ ಅಳವಡಿಸಿದರೆ, ಆನಂದದಿಂದ ಅದು ತಮ್ಮ ಜೀವನಕ್ಕೆ ಸಂಬಂಧಿಸಿದ್ದೆಂಬ ಆಸಕ್ತಿಯಿಂದ ಕಲಿತಾರು (ಶಿಕ್ಷದ. ೬೯). [ಉದಾತ್ತಗೊಳ್ + -ಇಸು$_3$]

**ಉದಾತ್ತಚರಿತ** (ನಾ). ಉತ್ತಮವಾದ ಗುಣಗಳನ್ನು ಉಳ್ಳವನು; ಶ್ರೇಷ್ಠವಾದ ನಡವಳಿಕೆಯುಳ್ಳವನು: ಕಲಕೇತ ಬೊಮ್ಮಗುಣೋತ್ತಮಂ ಮೆಱೆಕಿವಾದಿಭಕ್ತನುದಾತ್ತಚರಿತಂ ಸಿತಯಶಂ ಜಂಗಮದ ವಿಶ್ವಾಸಿ (ಬಸವು. ೨೯-೧). [ಉದಾತ್ತ + ಚರಿತ]

**ಉದಾತ್ತತೆ** (ನಾ). ದೊಡ್ಡತನ; ವಿಶಾಲಮನೋಭಾವ: ಹೋರು ಧೀರತೆಯಿಂದ ಮೊಂಡುತನದಿಂ ಬೇಡ ವೈರ ಹಗೆತನ ಬೇಡ, ಹಿರಿನಿಯುಮ ವಿರಲಿ ವೈರಾಗ್ಯ ಕಾರುಣ್ಯ ಮೇಳನವೆ ಧೀರತನ ಹೋರುದುದಾತ್ತತೆಯಿಂದ (ಮಂಕುಕ. ೫೭೪). [ಸಂ. ಉದಾತ್ತತಾ]

**ಉದಾತ್ತನಾಯಕ** (ನಾ). = ಉದಾತ್ತ ೫: ಆದುದರಿಂದಲೇ ನಾಟಕದಲ್ಲಿ ಪ್ರಖ್ಯಾತವಾದ ವಸ್ತುವೂ ಪ್ರಖ್ಯಾತನಾದ ಉದಾತ್ತನಾಯಕನೂ ಆವಶ್ಯವಾಗಿ ಇರಬೇಕೆಂದು ಭರತನು ವಿಧಿಸಿರುವುದು (ಧ್ವನ್ಯಾಲೋ. ೧೪೭). [ಉದಾತ್ತ + ನಾಯಕ]

**ಉದಾತ್ತಮತಿ** (ನಾ). ಉತ್ತಮವಾದ ಜ್ಞಾನವುಳ್ಳವನು; ಶ್ರೇಷ್ಠವಾದ ತಿಳಿವಳಿಕೆಯುಳ್ಳವನು: ಬಳವತ್ಸೈನ್ಯಮನವನೀತಳಪತಿ ಬಿಸುಟಂ ಪಯೋಧಿ ದೂರಾರ್ಜಿತಮಾಳಾವಿಳಸದ್ವಸನವಿಮುಕ್ತಮನಿಳಾಸ್ವಿತಂ ಬರೆವುದಾತ್ತಮತಿ ಬಿಸುಡುವವೊಲ್ (ಶಾಂತಿಪು. ೧೧-೧೪). [ಉದಾತ್ತ + ಮತಿ]

**ಉದಾತ್ತಯಶ** (ನಾ). ಉತ್ತಮವಾದ ಕೀರ್ತಿಯನ್ನು ಉಳ್ಳವನು: ಪರಹಿತರೆಂದುದಾತ್ತಯಶರೆಂದು ಜಿತೇಂದ್ರಿಯರೆಂದು ... ಮಲಯಾಳ ತಪೋನಿಧಿ ದೇವಸಿಂಗಿಜೀಯರ ಪದಯುಗ್ಮಮಂ ಪಡೆದು ಕಚ್ಚಿದರರ್ತ್ಥಿಯೆ ಪುಣ್ಯಮೂರ್ತಿಗಳ್ (ಸೌಇಇ. XX, ೪೯-೫೭; ಸು. 1076). [ಉದಾತ್ತ + ಯಶ]

**ಉದಾತ್ತವಿಷ್ಟರ** (ನಾ). ಶ್ರೇಷ್ಠವಾದ ಆಸನ; ಉನ್ನತವಾದ ಪೀಠ: ಇದಿರೆಬ್ದು ಕೈಗಳಂ ಮುಗಿದುದಾತ್ತವಿಷ್ಟರದೊಳಿರಿಸಿ ಪಾದ್ಯಮನಿತ್ತಂ (ಚಂದ್ರಪು. ೭-೯). [ಉದಾತ್ತ + ವಿಷ್ಟರ]

**ಉದಾತ್ತವೃತ್ತ** (ನಾ). = ಉದಾತ್ತಚರಿತ: ಈ ಫಣಿ ಪ್ರಭುಗಮುತ್ತಮತ್ತಳಗಮುಲ್ತೆ ರೂಪಸ್ತವಂ ಗುಣಸ್ತವಮುದಾತ್ತವೃತ್ತ ಭವದೀಯ ವಸ್ತುಸ್ತವಂ (ಆದಿಪು. ೧೩-೯೦). [ಉದಾತ್ತ + ವೃತ್ತ]

**ಉದಾತ್ತವೃತ್ತಿ** (ನಾ). ಉತ್ತಮವಾದ ವ್ಯವಹಾರ; ಶ್ರೇಷ್ಠವಾದ ಕಾರ್ಯ: ತಂತ್ರನಿಯಂತ್ರಣಂ ಬಿನದದಮೋಲಗಮಕ್ಕರಗೊಟ್ಟಿ ಕಾರ್ಯಸನ್ಮಂತ್ರಮುದಾತ್ತವೃತ್ತಿ . . . ಎಂಬಿವನಾಗಳುಮೊಂದೆ ಕೀಲೆ ದಲ್ ಜಂತ್ರದ ಪಾಪೆಯಂತೊಡನೊಡರ್ಚುವನಿಂದ್ರನುಮಾಪ್ರತೀಂದ್ರನುಂ (ಶಾಂತಿಪು. ೭-೧೧೦). [ಉದಾತ್ತ + ವೃತ್ತಿ]

**ಉದಾತ್ತಸತ್ತ್ವ** (ನಾ). ೧. ಉತ್ತಮವಾದ ಸತ್ತ್ವಗುಣದಿಂದ ಕೂಡಿದ ವ್ಯಕ್ತಿ ಅಥವಾ ವಸ್ತು. ೨. ಹಿರಿದಾದ ಪ್ರಾಣಿವಿಶೇಷಗಳಿಂದ ಕೂಡಿದ್ದು. ೧, ೨: ಆ ಮಹಾರ್ಣವಂ ಸಮುದ್ರಮಾಗಿಯುಂ ಅಪಾರವಿಸ್ತಾರಿಯುಂ . . . ಜಡಪ್ರಕೃತಿಯಾಗಿಯುಮುದಾತ್ತಸತ್ತ್ವಮುಂ . . . ಎನಿಸಿದುದು (ಜಗವಿ. ೧-೪೪ ವ). ೩. ಉತ್ತಮವಾದ ಶಕ್ತಿ. [ಉದಾತ್ತ + ಸತ್ತ್ವ]

**ಉದಾತ್ತಾಲಂಕಾರ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು: ಮಿಗೆ ಮನದ ಪೆಂಪುಮಂ ಕೈಮಿಗೆ ವಿಭವದ ಪೆಂಪುಮಂ ವಿಶೇಷಿಸಿ ಪೇೞಲ್ಪಗೆವುದುದಾತ್ತಾಲಂಕಾರ ಗುಣೋದಯಮುದಜದಿಂತು ಸದುದಾಹರಣಂ (ಕವಿರಾ. ೩-೧೭೩); ಉತ್ತಮಮಾದ ಸಂಪತ್ತನಾದೊಡಂ ಚರಿತ್ರಮನಾದೊಡಂ ಪೆಱತೊಂದರ್ಕಂಗಮಾಗಿ ಬಣ್ಣಿಸೆಯದು ಉದಾತ್ತಾಲಂಕಾರಂ (ಅಪ್ರತಿ. ೧೩೪-೧೨). 'ಉದಾತ್ತ' ಪರಾ. [ಉದಾತ್ತ + ಅಲಂಕಾರ]

**ಉದಾತ್ತೀಕರಣ** (ನಾ). ಉನ್ನತಗೊಳಿಸುವುದು: ಸಾಹಿತ್ಯವು ಮಾನವೀಯ ವ್ಯಕ್ತಿತ್ವದ ಮೂಲದ್ರವ್ಯದ ಉದಾತ್ತೀಕರಣ ಇಲ್ಲವೆ ಊರ್ಧ್ವಮುಖತೆಯ ಕಡೆಗೇ ತನ್ನ ಲಕ್ಷ್ಯವನ್ನು ಪೂರೈಸಬೇಕು (ನವ್ಯಕಾ. ೧೯). [ಸಂ.]

**ಉದಾನ** (ನಾ). ೧. ಉಸಿರಾಡುವಿಕೆ. ೨. ಪಂಚಪ್ರಾಣವಾಯುಗಳಲ್ಲಿ ಒಂದು; ಕಂಠಪ್ರದೇಶದಲ್ಲಿ ಊರ್ಧ್ವಮುಖವಾಗಿ ಆಡುವ ಒಂದು ಪ್ರಾಣವಾಯು: ರಜೋಗುಣ ಪ್ರಧಾನವಾದ ಪಂಚಭೂತಾದಿಗಳಿಂದ ಹಸ್ತಾದಿ ಪಂಚಕರ್ಮೇಂದ್ರಿಯಗಳ ಸಮುದಾಯದಿಂದ ಪ್ರಾಣಾಪಾನ ವ್ಯಾನೋದಾನ ಸಮಾನಗಳೆಂಬ ಪಂಚಪ್ರಾಣಗಳು ಹುಟ್ಟುವುವು (ಹಿಂದಸಾ. ೧೯೬). ೩. ಹೊಕ್ಕುಳು. ೪. ಒಂದು ಜಾತಿಯ ಹಾವು. ೫. ಕಣ್ಣುರೆಪ್ಪೆ. [ಸಂ.]

**ಉದಾನವಾಯು** (ನಾ). = ಉದಾನ ೨: ಹೃದಯದಲ್ಲಿ ಪ್ರಾಣವಾಯು ಕಂಠದಲ್ಲಿ ಉದಾನವಾಯು (ಚೆನ್ನವ. ೬೬-೧೩); ವಾಯುವಾಯುವ ಬೆರಸಿದಲ್ಲಿ ಉದಾನವಾಯುವಿನ ಜನನ (ಸಿದ್ಧೇವ. ೭೪). [ಉದಾನ + ವಾಯು]

**ಉದಾರ** (ಗು). ೧. ಧಾರಾಳಸ್ವಭಾವದ; ತ್ಯಾಗಶೀಲನಾದ; ಕೊಡುಗೈಯ. ೨. ಘನವಾದ; ಶ್ರೇಷ್ಠವಾದ; ಗಂಭೀರವಾದ: ಚತುರ್ವಿಧಾಮರರುದಾರರ್ ಸ್ತೋಮದೊಳ್ ಕೂಡೆ (ಪುಷ್ಪಪು. ೧೧-೧೩); ಅಬ್ಜಗಂಧಿಗುತ್ತಮ ಮದಭೃಂಗಕುಂತಳಮುದಾರಶುಕೀ ಮೃದುವಾಣಿಗೆ (ರಾಜಶೇ. ೭-೬೯). ೩. ವಿಸ್ತಾರವಾದ; ದೊಡ್ಡದಾದ: ವೀರರಿಪು ಕದಳೀವನಕೆ ಮದವಾರಣನು ಫಲುಗುಣನ ತನಯನುದಾರ ಪದ್ಮವ್ಯೂಹದಲಿ ಗೆಲಿದನು ಕುಮಾರಕರ (ಕುವ್ಯಾದ್ರೋ. ೫ ಸೂಚನೆ).

೪. ಪ್ರಾಮಾಣಿಕವಾದ; ನ್ಯಾಯಸಮ್ಮತವಾದ (*). (ನಾ). ೫. [ಕಾವ್ಯಮೀ] ಹತ್ತು ವಿಧವಾದ ಕಾವ್ಯಗುಣಗಳಲ್ಲಿ ಒಂದು : ಮಿಗೆ ವಸ್ತುಗತ ಸ್ಥಿತಿಯಂ ಬಗೆದಗ್ಗಳಮಾಗೆ ಪೇೞ್ದೊಡಕ್ಕುಮುದಾರಂ (ಕವಿರಾ. ೨–೭೭); ಲೋಕೋತ್ತರವರ್ಣನಂ ವಿಶೇಷಣ ಪರಪ್ರಕರ್ಷೋಕ್ತಿ ಯುಕ್ತಮಪ್ಪುದುದಾರಂ (ಕಾವ್ಯಾವ. ೫೧೫).

ಉದಾರಮಹೇಶ್ವರ = ಉದಾರರಿಗೆಲ್ಲ ಹಿರಿಯ ಒಡೆಯ; ಒಂದು ಬಿರುದು : ನೆಗೞ್ದುದಾರಮಹೇಶ್ವರನೀಗೆ ಭೋಗಮಂ(ಪಂಪಭಾ. ೧–೨); ಸಮಧಿಗತ ಪಂಚಮಹಾಶಬ್ದ ಮಹಾಮಣ್ಡಳೇಶ್ವರನುದಾರಮಹೇಶ್ವರಂ ಚಲಕೆ ಬಲ್ಲಣ್ಣಂ . . . ಲಕ್ಷ್ಮರಸರ್ ಪುರಿಗೆಱೆ ಮೂನೂಱುಮನ್ತೈರಡಱು ನೂಱುಮಂ ಸುಖದಿನಾಳುತ್ತಮಿರೆ (ಸೌಇಇ. XX, ೪೭–೭; 1072). [ಸಂ.]

**ಉದಾರಚರಿತ** (ನಾ). ಉತ್ತಮವಾದ ಚಾರಿತ್ರ್ಯವುಳ್ಳವನು; ಶ್ರೇಷ್ಠವಾದ ನಡವಳಿಕೆಯುಳ್ಳವನು : ಅಪೇತದೋಷನನುದಾರ ಚರಿತೋದಯನಂ (ಕವಿರಾ. ೨–೧೬). [ಉದಾರ + ಚರಿತ]

**ಉದಾರತೆ** (ನಾ). ಔದಾರ್ಯ; ಧಾರಾಳವಾಗಿ ಕೊಡುವ ಸ್ವಭಾವ : ಶ್ರೀಯುತನೊಳುದಾರತೆ ವಾಕ್ಶ್ರೀಯುತನೊಳಮತ್ಸರತ್ವಮಾಗದು (ಗದಾಯು. ೧–೪೯); ವೀರ ನಕುಲನ ಸಾತ್ತ್ವಿಕಿಯ ಬಲು ಕೂರಸಿಯ ಸಹದೇವ ಮತ್ಸ್ಯರುದಾರತೆಯ ನಿಮ್ಮರಸ ನೆನೆದಿಹುದೆಂದನಾ ಪಾರ್ಥ (ಕುವ್ಯಾಉ. ೫–೧೦). ೨. ಅತಿಶಯ; ಹೆಚ್ಚಿಗೆ; ವಿಶೇಷ; ದೊಡ್ಡಸ್ತಿಕೆ : ಅಂತಾ ರಾತ್ರಿಚರಂ ಪಗಲೊಳುದಾರತೆಯಿಂ [ಪಾಠಾಂ. ಳುತಾರಾತ್ರೆಯೊಳ್]ಚರಿಯಿಸುತ್ತುಮಿರೆ ಪಾಟಿಕ್ಕುಂ(ಲೋಕೋಪ.೪–೬೨). ೩. = ಉದಾರ ೫ : ವಾಮನನ ಲಕ್ಷಣದಂತೆ ಉದಾರತೆಯೆಂಬ ಗುಣದ ಸ್ವಭಾವವನ್ನು ನೋಡೋಣ (ಭಾರಮೀಾ. ೭೭). [ಸಂ. ಉದಾರತಾ]

**ಉದಾರತೇಜ** (ನಾ). ಅತಿಶಯವಾದ ತೇಜಸ್ಸನ್ನುಳ್ಳವನು : ಪದೆದುದಯಿಸಲೆಂದುರ್ ಕಾಲದೊಳಲ್ಲದುದಾರತೇಜನರ್ಕನುಮಲ್ಲಂ ಸದುದಿತಗುಣನದಱಿಂ ನಯವಿದನಪ್ಪಂ ಕಾಲಮಂ ನೆರಂ ತೋರ್ಕೆ ನೃಪಂ (ಕವಿರಾ. ೩–೧೪೬). [ಸಂ. ಉದಾರತೇಜಸ್]

**ಉದಾರತ್ವ** (ನಾ). ೧. ಔದಾರ್ಯ; ದೊಡ್ಡಸ್ತಿಕೆ; ಹಿರಿಮೆ : ೨. = ಉದಾರ ೫ : "ಉದಾರತ್ವ – ಅಶ್ಲೀಲ ಅಥವಾ ಗ್ರಾಮ್ಯವಾದ ವಿಷಯಗಳನ್ನು ಗಂಭೀರವಾಗಿ ಹೇಳುವುದು" (ಕೈಪಿಡಿ. ೨೩೬); ಶ್ಲೇಷ ಪ್ರಸಾದ ಸಮತೆ ಮಾಧುರ್ಯ ಸುಕುಮಾರತೆ ಅರ್ಥವ್ಯಕ್ತಿ ಉದಾರತ್ವ ಓಜಸ್ಸು ಕಾಂತಿಗಳೆಂಬ ದಶಪ್ರಾಣವಿಡಿದು (ವಿವೇಕ. ೨೨೬). [ಸಂ.]

**ಉದಾರಮತಿ** (ನಾ). ವಿಶೇಷವಾದ ಜ್ಞಾನವುಳ್ಳವನು; ವಿಶಾಲ ಮನೋಧರ್ಮವುಳ್ಳವನು : ಪರಸಂತಾಪದಮಂ ಪರಗತಿವಿಲಯಾಸ್ಪದಮಂ ಕಾರ್ಯಮನುದಾರಮತಿ ನೆಗಳ್ದಪನೇ (ರಾಜಶೇ. ೧೩–೧೨). [ಉದಾರ + ಮತಿ]

**ಉದಾರಶೀಲ** (ನಾ). ಧಾರಾಳವೇ ಶೀಲವಾದವನು; ವಿಶಾಲಮನಸ್ಸಿನ ಸ್ವಭಾವದವನು (*). [ಉದಾರ + ಶೀಲ]

**ಉದಾರಸಮರ** (ನಾ). ಅತಿಶಯವಾದ ಯುದ್ಧ; ದೊಡ್ಡಯುದ್ಧ : ರೋಷವಹ್ನಿಯ ಕೆದಱೆ ಕವಿವ ಮಹೀಶರನು ಮಾಣಿಸಿದನವನೀವಾಸವನು ವಾಸವನ ಮೊಮ್ಮನುದಾರಸಮರದಲಿ (ಕುವ್ಯಾದ್ರೋ. ೫–೭೫). [ಉದಾರ + ಸಮರ]

**ಉದಾರಿ** (ನಾ). ದಾನಶೀಲ; ಉದಾರಶೀಲ : ಸಮಂತುದಾರಿಯನೆನ್ನುವಂ ನೀ ಬೇಡು ಬೇಡಿದುದ ಅಂತರಿಸದೀವೆನು (ಬಸವು. ೯–೪೯); ದೀನರು ಏನು ಕೇಳಿದಾಗ್ಯೂ ನಿಜವಾದ ಉದಾರಿಗಳು ಕೊಟ್ಟುಬಿಡುವರು (ನೀತಿಚಿಂ. XIV, ೧೩). [ಉದಾರ + –ಇ]

**ಉದಾಸ** (ಗು). ೧. (ಉಕ). ದುಃಖಿತ; ವ್ಯಸನಗ್ರಸ್ತ; ಬೇಸರಗೊಂಡ: "ಖಾವಿಂದ, ನಿಮ್ಮಿಂದ ಅನೇಕ ವಿಧದ ಪ್ರೋತ್ಸಾಹನೆ ಹೊಂದಿದವರಾದ ನಮ್ಮಿಂದ ನಿಮ್ಮ ಒಂದೆರಡು ಕೆಲಸಗಳು ನೆರವೇರದ್ದಕ್ಕಾಗಿ ಮನಸ್ಸು ಉದಾಸವಾಗಿದೆ" (ಸ್ಕೂಲವಿ. ೨೨); ಆಟವನ್ನು ಹೂಡಿದಾಗಿನಿಂದಲೇ ಆವಳು ಅತ್ಯಂತ ಉದಾಸಳಾಗಿದ್ದಳು (ಪಂಜೀ. ೨೦). (ನಾ). ೨. ಉದಾಸೀನತೆ; ಬೇಸರಿಕೆ: ಕಾಲದಿಂದೆ ಕಡೆಮುಟ್ಟುವಮಾಡಿದ ಲೇಸು ಒಂದು ದಿನ ಉದಾಸವ [ಪಾಠಾಂ. ಉದಾಸೀನವ, ಉಪಾಸವ] ಮಾಡಿದರೆ ಅದೆಲ್ಲವು ವ್ಯರ್ಥವಾಗಿ ಹೋಹುದು ಕೇಳಯ್ಯ (ಶೂನ್ಯಸಂ.೩೪೬–೬೨). ೩. ದೂರವಾಗಿ, ಪ್ರತ್ಯೇಕವಾಗಿ ಕುಳಿತುಕೊಳ್ಳುವಿಕೆ. [ಸಂ.]

**ಉದಾಸಕಳೆ** (ನಾ). ಬೇಸರದ ಕಳೆ; ಚಿಂತೆಯ ಲಕ್ಷಣ; ಬೇಸರ: ಇದುವರೆಗಿನ ಅವಳ ಮುಖದ ಮೇಲಿನ ಮ್ಲಾನ ಹಾಗು ಉದಾಸಕಳೆಯು ಕಡಿಮೆಯಾಗಿ, ಅಲ್ಲಿ ತುಸು ಚಾಂಚಲ್ಯವು ಕಾಣತೊಡಗಿತು (ಅಂಬಿಕೆ. ೩೦). [ಉದಾಸ + ಕಳೆ]

**ಉದಾಸಭಾವ** (ನಾ). ೧. ಉದಾಸೀನತೆ : ವಿವಾಹದ ವರ್ತಮಾನವು ತಿಳಿದು, ಅವನನ್ನು ನಾನಾವಿಧವಾಗಿ ಹಾಸ್ಯಮಾಡತೊಡಗಿದರು. ಕೃಷ್ಣಕಾಂತನು ಉದಾಸಭಾವದಿಂದಿದ್ದನು (ಕಮಕು. ೭೮). ೨. ವಿಷಣ್ಣತೆ; ಖಿನ್ನತೆ; ನಿರುತ್ಸಾಹ : "ಮುಳ್ಳುಮುರಿದ ಮನಸ್ಸನ್ನು ಹೊತ್ತುಕೊಂಡು ಹೇಗೆ ಬದುಕಲಿ? ಇದಕ್ಕಾಗಿ ತಳಮಳಿಸುವೆ" ಎಂದು ಉದಾಸಭಾವದಿಂದ ನುಡಿದಳು (ಸಂಜೀವಿ. ೧೬೫). [ಉದಾಸ + ಭಾವ]

**ಉದಾಸಮುದ್ರೆ** (ನಾ). ಉದಾಸೀನತೆಯಿಂದ ಕೂಡಿದ ಮುಖಭಾವ : ದುರ್ಬಲದೇಹದ, ಉದಾಸಮುದ್ರೆಯ ತನ್ನ ತಾಯಿಯ ನೆನಪೂ ಅವಳಿಗಿತ್ತು (ಆಶ್ರಮು. ೪೭). [ಉದಾಸ + ಮುದ್ರೆ]

**ಉದಾಸಿನ** (ನಾ). = ಉದಾಸೀನ : ಹರಭಕ್ತಿಯಿತ್ತ ಬರದಿರಿಯೆ ನ ಉದಾಸಿನದಿ ಬಿಱುನುಡಿಗಳಿಂ ನೀರ ಹರವಿಗಳ ಹೊತ್ತು ಬಂದವಳೆಮ್ಮ ಹಳಿದಳೆಂದು ದೂರೆಗೆಱಹೆ (ಗುರುಚಾ. ೮–೩೫). [ಸಂ. ಉದಾಸೀನ]

**ಉದಾಸಿಸು** (ಕ್ರಿ). ಉದಾಸೀನಮಾಡು; ಅಲಕ್ಷಿಸು : ಧರ್ಮಹೀನರನುದಾಸಿಪುದು ನಿರುಪಮ ಜಾತಿಧರ್ಮಂಗಳಂ ತಪ್ಪದಂತೆ ನಡೆಸುವುದು ನೃಪಧರ್ಮದ ರಹಸ್ಯಮಿದು ತಪ್ಪದವನೀಪಾಲತಿಲಕ ನೀಂ ಕೇಳೆಂದನು (ಚಿಬವು. ೮–೮); ಅದುಕಾರಣದಿಂಮಿದನುದಾಸಿಸುವುದು ಲೇಸಿಲ್ಲೆಂದು ಕಿಱುನುಡಿ (ಸೊಬಸೋ. ೭–೨೨); ಕುಸುಮಶರನೆಂದುದಾಸಿಸಬೇಡ ಮತ್ತಾತನಸಮಬಾಣನೆಂಬುದಂ ಕೇಳಿ ಬಲ್ಲೆ (ನವಮೋ. ೨೯–೪೩). [ಉದಾಸ + –ಇಸು]

**ಉದಾಸೀನ** (ಗು). ೧. ಮಧ್ಯಸ್ಥವಾದ; ಯಾವ ಪಕ್ಷಕ್ಕೂ ಸೇರದ; ತಟಸ್ಥವಾದ; ಬೇಸತ್ತ : ಕುಸಿದು ಪೊಡಮಟ್ಟನ್ನು ಹೋಹೆನ್ನೆ ತಂದೆ ಸಂತಸವೆ ನಿಮಗೆನಲಡ್ಡಮೋಱೆಯೊಳುದಾಸೀನಮುಸಕದಿಂ ಹೋಗೆಂದು ಹೋಗಬಿಟ್ಟಳುಪಿ ಮತ್ತಾಕ್ಕೈಯಲೇ ಕರೆದನು (ಹಚಕಾ. ೮–೫೧). (ನಾ). ೨. ದೂರ ಕುಳಿತವನು; ಯಾವ ವಿವಾದಕ್ಕೂ ಸೇರದವನು; ಬೇರೆ ಕುಳಿತವನು; ಬೇಸತ್ತವನು : "ಉದಾಸೀನ – ಬೇಸತ್ತವ" (ಗಂಗಾಮ. ೪೧); ಉದಾಸೀನನಾಗಿರ್ದಯಾದೊಡೆ ಸೂಜಿಯ ಬಱಿಯ ದಾರದಂತೆ ದೋಷದ ಬಱಿಯನೆ ಪಾಪಂ ತಗುಳ್ದು ಬರ್ಕುಂ (ಜೀವಸಂ. ೩೪–೧೪ ವ). ೩. ಕಡೆಗಣಿಸುವಿಕೆ; ತಿರಸ್ಕಾರ : "ಅಪಹಸಿತಮನಾದೃತಮವಜ್ಞಾತಮೆನಲಂದುದಾಸೀನಮುಕ್ಕುಂ" (ಮಂಗರಾ. ೧೨೮–೧೦). ೪. ಕೆಟ್ಟ ನಡತೆಯುಳ್ಳವನು; ದುರಾಚಾರಿ : "ದುರ್ವೃತ್ತನುದಾಸೀನನಕ್ಕು" (ಮಂಗರಾ. ೭೫–೬). ೫. ಅಶ್ರದ್ಧೆ; ಅಲಕ್ಷ್ಯ; ಅನಾಸಕ್ತಿ; ಔದಾಸೀನ್ಯ : ಉದಾಶೀ[ಸೀ]ನವಿಡಿದು ಶರಣೆನ್ನೆನು (ಬಸವ. ೬೯೪); ಅಹಂಕಾರಕ್ಕೆ ಉದಾಸೀನವೇ ಮದ್ದು (ಗಾದೆ).

೬. [ಸಾಂಖ್ಯ]ವ್ಯಾವಹಾರಿಕ ವಸ್ತುವಿನ ನಾಲ್ಕು ಪ್ರಕಾರಗಳಲ್ಲಿ ಒಂದು : ವ್ಯಾವಹಾರಿಕವಸ್ತು ಪ್ರಕೃತಿ, ಪ್ರಕೃತಿ ವಿಕೃತಿ, ವಿಕೃತಿ, ಉದಾಸೀನವೆಂದು ಸಾಂಖ್ಯರು ಹೇಳುವಂತೆ ನಾಲ್ಕು ಪ್ರಕಾರ . . . ಉದಾಸೀನವೆಂದರೆ, ಗುಣ ಕರ್ಮ ಸಾಮಾನ್ಯ ಸಂಖ್ಯಾಶಕ್ತಿ ಮೊದಲಾದುವು (ಹಿಂದಸಾ. ೧೯೪).

ಉದಾಸೀನಮಾಡು = ಕಡೆಗಣಿಸು ; ಅಲಕ್ಷ್ಯಮಾಡು : ದೇವಾಲಯದ ಕೆಲಸ, ಪೂಜೆ ಪುನಸ್ಕಾರದಲ್ಲಿ ಉದಾಸೀನ ಮಾಡುವಂತಿಲ್ಲ (ದೇವಹಂ. ೨೧೨) ; ಕಿರಿಯರು ಯಾವಾಗಲೂ ಹಿರಿಯರ ಮಾತನ್ನು ಉದಾಸೀನಮಾಡಬಾರದು (ರೂಢಿ). [ಸಂ.]

**ಉದಾಸೀನಮಾನಸ** (ನಾ). ಅಲಕ್ಷ್ಯದಿಂದ ಅಥವಾ ಅನಾಸಕ್ತಿಯಿಂದ ಕೂಡಿದ ಮನಸ್ಸುಳ್ಳವನು : ಅಂತುದಾಸೀನಮಾನಸಂ ಮಸಕಮಿಲ್ಲದ ಸಾರ್ವಭೌಮಂ ಪೇರಡ್ಡಮಾಗಿ ಕೆಲದ ಚಕ್ರಾಯುಧನೊಳ್ ತಮ್ಮಂಗಬಾಹ್ಯವಸ್ತುವಂ ಪರಿತಂ ಮಾಡುತ್ತಿರೆ (ಶಾಂತಿಪು. ೧೦–೧೧೬ ವ). [ಉದಾಸೀನ + ಮಾನಸ]

**ಉದಾಸ್ಥಿತ** (ನಾ). ೧. ಅಧ್ಯಕ್ಷ; ಮೇಲ್ವಿಚಾರಕ. ೨. ದ್ವಾರಪಾಲಕ; ಬಾಗಿಲು ಕಾಯುವವನು. ೩. ಗೂಢಚಾರ; (ಸಂನ್ಯಾಸಿಯ ವೇಷದಲ್ಲಿದ್ದುಕೊಂಡು ರಾಜನಿಗಾಗಿ) ಬೇಹುಗಾರಿಕೆ ನಡಸುವವನು. [ಸಂ.]

**ಉದಾಹರಣ** (ನಾ). ೧. ಹೇಳಿಕೆ; ಎತ್ತಿ ಹೇಳಿದ ನುಡಿ. ೨. ದೃಷ್ಟಾಂತ; ಲಕ್ಷ್ಯ; ಪ್ರಯೋಗ: ಎಸೆದುದಾಹರಣಮೊಳ್ಪಿನುದಾಹರಣಮುಮಾಗೆ ಗುಣಾರ್ಣವನ ಶರಪರಿಣತಿಯಿಂದೆ ಕುಲಶೈಲಂ ಬೀಟ್ವಂತೆ ನೆಲನದಿರೆ ಬಿಟ್ಟಾಗಳ್ (ಪಂಪಭಾ. ೧೨–೨೧೩); ಈ ಕವಿಗಳಾದಿಯಾದ ಮತ್ತಂ ಪಲಂಬರ್ ಪ್ರಸಿದ್ಧಕವಿಗಳುದಾಹರಣಂಗಳಿದಱೊಳೊಳವು (ಶಮದ. ೫ ವೃತ್ತಿ). ೩. ಆದರ್ಶ; ಮಾದರಿ. ೪. [ತರ್ಕಶಾ] ಅನುಮಾನ ಪ್ರಮಾಣದಲ್ಲಿ ಬಳಸುವ ಐದು ನ್ಯಾಯವಾಕ್ಯಗಳಲ್ಲೊಂದು: ನ್ಯಾಯವಾಕ್ಯಗಳಾದ ಪ್ರತಿಜ್ಞಾ ಹೇತೂದಾಹರಣೋಪನಯ ನಿಗಮನಗಳಲ್ಲಿ ಐದೂ ಅವಶ್ಯಕವಿಲ್ಲ (ಹಿಂದಸಾ. ೨೦೨). [ಸಂ.]

**ಉದಾಹರಣೆ** (ನಾ). ೧. ಹೇಳಿಕೆ: ಲಕ್ಷ್ಯಂ– ಉದಾಹರಣೆಗಳ್ (ಶಮದ. ೫ ಟೀಕೆ). ೨. ದೃಷ್ಟಾಂತ; ಲಕ್ಷ್ಯ: ಹೇತು ಅನುಮಾನ. ಉದಾಹರಣೆ ಪ್ರತ್ಯಕ್ಷ. ಉಪನಯ ಉಪಮಾನ ಇವುಗಳ ಸಮಷ್ಟಿ ನಿಗಮನ (ಹಿಂದಸಾ. ೧೯೨). ೩. ಆದರ್ಶ; ಮಾದರಿ: ಗಾಂಧೀಜಿಯವರು ಎಲ್ಲರಿಗೂ ಉದಾಹರಣೆಯಾಗಿದ್ದರು (ರೂಢಿ). [ಸಂ. ಉದಾಹರಣ]

**ಉದಾಹರಣೆಗಾರ** (ನಾ). ನ್ಯಾಯದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಇಲ್ಲದ ತರ್ಕವನ್ನು ಬಳಸಿ ಮೋಸಮಾಡುವವನು; ಧರ್ಮವಿರುದ್ಧವಾಗಿ ತರ್ಕಮಾಡುವವನು ; ಕುತರ್ಕಮಾಡುವವನು ; ವಿತಂಡವಾದಿ (ಕಿ). [ಉದಾಹರಣೆ + –ಗಾರ]

**ಉದಾಹರಿಸು,** ಉದಹರಿಸು (ಕ್ರಿ). ೧. ಹೇಳು ; ನಿರೂಪಿಸು : "ಉದಾಹರಿಸು–ಕಥನೇ" (ಶಮಧಾ). ೨. ದೃಷ್ಟಾಂತವನ್ನು ಕೊಡು ; ಉಲ್ಲೇಖಿಸು ; ಎತ್ತಿ ಹೇಳು ; ವಿವರಿಸು ; ಮಾದರಿಯನ್ನು ತಿಳಿಸು: ಅಂತು ಬೃಹಂದಳೆಯಾಗಿ . . . ವಿರಾಟನ ಮಗಳಪುತ್ತರೆ ಮೊದಲಾಗೆ ಪಲವುಂ ಪಾತ್ರಂಗಳನಾಡಿಸುತ್ತುಂ ಮಹಾಭಾರಾವತಾರದೊಳಪ್ಪ ಸಂಗ್ರಾಮರಂಗದೊಳರಾತಿನಾಯಕರ ಕಬಂಧಪಾತ್ರಂಗಳನಾಡಿಸುವುದನುದಾಹರಿಸುವಂತಿರ್ದಂ (ಪಂಪಭಾ. ೮–೫೮ ವ) ; ಪರಲೋಕಾಲೋಕನಮಂ ಪರಿಹರಿಸಿದವಲ್ತೆ ನೋಡಿಮೆಂದೀಗಳುದಾಹರಿಸುವ ತೆಱದಿಂ ಪಿಡಿಯಿಪರರಸುಗಳೆಡೆವಿಡದೆ ಮೇಘಡಂಬರತತಿಯಂ (ಕಾದಂಪೂ. ೫೫೫) ; ವೈದಿಕಕೆ ನಾವಾಕೆವಾಳರು ತಪ್ಪಿ ನಡೆದರೆ ಭ್ರಮಿಸುವರು ಬುಧರು ಲೋಕನಮ್ಮನುದಾಹರಿಸುವುದು ಶಾಕನೇ ಬಳಸುವುದು (ಕುವ್ಯಾದ್ರೋ. ೧೮–೫೬).

**ಉದಹರಿಸು** : ೨. ಮೇಲೆ ಮೂರುಪ್ರಶ್ನೆಗಳನ್ನು ಉದಹರಿಸಿದೆ (ಶಿಕ್ಷದ. ೩೫೬). [ಉದಾಹರಣ + –ಇಸು₃]

**ಉದಾಹಾರ** (ನಾ). = ಉದಾಹರಣೆ (ಕಿ). [ಸಂ.]

**ಉದಾಹೃತ** (ಗು). ೧. ಹೇಳಲ್ಪಟ್ಟ ; ದೃಷ್ಟಾಂತಕೊಟ್ಟ ; ಮಾದರಿ ತೋರಿದ ; ಹೆಸರಿಸಿದ. (ನಾ). ೨. = ಉದಾಹರಣ ೨ : ಇದು ದಲ್ ಗರ್ಗಪ್ರಾಸಕ್ಕುದಾಹೃತಂ (ಛಂದೋಂಬು. ೧–೫೨). [ಸಂ.]

**ಉದಿಚೇಡು** (ನಾ). ಒಂದು ಊರಿನ ಹೆಸರು : ಅದಱ ಪೊಲ ಮೇರೆ ಮುಡಣ ದೆಸೆ ಪೆಣ್ಡಿರ್ಲ್‌ಚಿನ್ತೆ ಪುಲ್ಚೇಡು ಉದಿಚೇಡು ಚೀರಳಚಿನ್ತೆ ತೆಙ್ಕಣ ದೆಸೆ ಗುಡ್ಡೆಗಲ್ಲು (ಎಕ. XII, ಶಿರಾ. ೩೮–೩೩; 878). [ಉದಿ ? + ಚೇಡು ?]

**ಉದಿತ**₁ (ಗು) ೧. ಹುಟ್ಟಿದ ; ಉಂಟಾದ ; ಉತ್ಪನ್ನವಾದ : ದುಸ್ತರತರವಿಷಯವ್ಯಾಪ್ತನಂ ದುರ್ವಿವೇಕೋದಿತನಂ [ಪಾಠಾಂ. ದುರ್ಧರೈನೋಹ] ದುರ್ಬೋಧನಂ ರಕ್ಷಿಪುದೆಲೆ ಕೃಪೆಯಿಂದಂ ವಿರೂಪಾಕ್ಷಲಿಂಗಾ (ಪಂಪಾಶ. ೧೨) ; ಇದಿರು ಬಂದರು ಮಂತ್ರಿಗಳು ವರಸುದತಿಯರು ಸೂಸಿದರು ಸೇಸೆಯನುದಿತ ಮಂಗಳಘೋಷವಾದ್ಯವಿತಾನರಭಸದಲಿ (ಕುವ್ಯಾವಿ. ೯–೨೪). ೨. ಏಳಿಗೆಯನ್ನು ಹೊಂದಿದ; ಅಭಿವೃದ್ಧಿಯನ್ನು ಪಡೆದ. 'ಉದಿತಕೀರ್ತಿ' ಪರಾ. [ಸಂ.]

**ಉದಿತ**₂ (ಗು). ಹೇಳಿದ ; ಉಕ್ತ : ಬುಧಸಮೂಹಮಿದಂ ಪೇೞೆಂದೊಡೆ ಪೇೞಲ್ಕಾಂ ಬಗೆದಂದೆನಿದೆನ್ನಳವೆ ಗಣಧರೋದಿತ ಚರಿತಂ (ಆದಿಪು. ೧–೩೪). [ಸಂ.]

**ಉದಿತಕೀರ್ತಿ** (ನಾ). ವೃದ್ಧಿಯನ್ನು ಹೊಂದಿದವನು; ಕೀರ್ತಿಯುಳ್ಳವನು : ಶ್ರೀವಧುವಂ ನಿಜಭುಜಶೌರ್ಯಾವಷ್ಟಂಭದೊಳೆ ಕೈಗೆ ಮಾಡಲ್ ಜಯಲಕ್ಷ್ಮೀವಲ್ಲಭನಿರ್ದಂ ಪೃಥ್ವೀವಲ್ಲಭನುದಿತಕೀರ್ತಿ ಸಾಹಸಭೀಮಂ (ಗದಾಯು. ೬–೧). [ಉದಿತ₁ + ಕೀರ್ತಿ]

**ಉದಿತಪರಾರ್ಥ** (ನಾ). ಇತರರಿಗೆ ಹಿತವನ್ನುಂಟುಮಾಡುವವನು; ಪರೋಪಕಾರಿ : ವೇದವಿಹಿತ ಧರ್ಮಂಗಳೊಳಾರೋಪಿತಮತಿಗಳೆಂದೆನಿಸಿ ಶಾಪಾನುಗ್ರಹ ಸಮರ್ಥರುದಿತಪರಾರ್ಥರ್ (ಸೌಇಇ. XI–ii, ೧೯೬–೨೯; 1099). [ಉದಿತ₁ + ಪರಾರ್ಥ]

**ಉದಿತರಾಗ** (ಗು). ೧. ಕೆಂಪುಬಣ್ಣ ಹುಟ್ಟಿದ. (ನಾ). ೨. ಅನುರಾಗ ಹುಟ್ಟಿದವನು : ೧, ೨. ದಿನನಾಯಕನಪರದಿಗಂಗನೆಯೊಳ್ ನೆರೆದುದಿತರಾಗನಾದಂ ಹೀನಂ (ಕವಿರಾ. ೩–೪೩). [ಉದಿತ₁ + ರಾಗ]

**ಉದಿತಸ್ಮೇರ** (ನಾ). ಮುಗುಳುನಗೆಯವನು; ಮುಗುಳುನಗೆಯಿಂದ ಕೂಡಿದವನು : ಉದಿತಸ್ಮೇರನಿಭೇಂದ್ರವೈರಿ ನಯದಿಂ ಕೈನೀಡಿ ಗೋಮುಖ್ಯ ಬಲ್ಲಿದಿರೇ ಸಂತಸಮೇ ಕರಂ ಕುಶಲಮೇ ಕ್ಷೇಮಾಂಗಮೇ (ಪಂಚತಂ. ೫೬–೧೦). [ಉದಿತ₁ + ಸ್ಮೇರ]

**ಉದಿತಾರ್ಥ** (ನಾ). ಉಂಟಾದ ಭಾವ : ಪದಿನೆಂಟನೆಯ ಕಥೆಯ ಕೇಳಿದಾ ಖೀಂ ಮುಂದೆ ಮುದದೊಳಾ ಚಕ್ರದಾನ ಸ್ವರೂಪಂತುವೆಂದುದಿತಾರ್ಥಕಳವಟ್ಟು ಮೆಱೆವ ಹತ್ತೊಂಭತ್ತನೆಯ ಲೀಲೆಯಂ ಪೇಳ್ದನು (ವೀಶೈಪು. ೩–೧೭–೩). [ಉದಿತ₁ + ಅರ್ಥ]

**ಉದಿತೋದಿತ** (ನಾ). ಸಂತತವಾದ ಏಳಿಗೆಯುಳ್ಳವನು ; ನಿರಂತರವಾದ ಅಭಿವೃದ್ಧಿಯುಳ್ಳವನು ; ಉತ್ತರೋತ್ತರಾಭಿವೃದ್ಧಿಯುಳ್ಳವನು : ಉದಿತೋದಿತನೈ ನೀಂ ನಿನಗುದಯದ ಮೇಲುದಯವೆಂದು ನೆಗೞ್ವರಿಗಂಗಭ್ಯುದಯಮನಱಿಪುವ ತೆಱದಿಂದುದಯಾಚಳಚುಂಬಿಬಿಂಬ ನಿನನುದಯಿಸಿದಂ (ಪಂಪಭಾ. ೨–೯೩). ೨. ಶಾಸ್ತ್ರಗಳಲ್ಲಿ ಪರಿಣತನಾದವನು. [ಉದಿತ₁ + ಉದಿತ]

**ಉದಿತೋದಿತವೇಳೆ** (ನಾ). ಏಳಿಗೆಯ ಕಾಲ; ಅಭಿವೃದ್ಧಿಯ ಸಮಯ; ಶ್ರೇಷ್ಠವಾದ ಸಮಯ; ಶುಭಕಾಲ: ದಸಮಿಯೊಳಾರ್ಕ್ಕವಾರದುದಿತೋದಿತವೇಳೆಯೊಳಣ್ಮ ಭಕ್ತಿಯಿಂ ಬಸದಿಗೆವನ್ದು (ಎಕ. VII, ಶಿಕಾರಿ. ೨೧೯–೨೮ ; 918). [ಉದಿತೋದಿತ + ವೇಳೆ]

**ಉದಿಯಮರ** (ನಾ). ಒಂದು ಔಷಧಿ ಮರದ ಹೆಸರು : "ಅಜಶೃಂಗೀ–ಉದಿಯಮರ ? ಕುರುಟಿಗೆ" (ಒಷಧಿ. ೬) ; "ಮೇಷಶೃಂಗೀ– ಉದಿಯಮರ" (ಒಷಧಿ. ೧೨೯) ; "ವರ್ತಿಕಾ – ಉದಿಯಮರ" (ಒಷಧಿ. ೧೪೯). [ಉದಿಯ ? + ಮರ]

**ಉದಿರ್**, ಉದಿರು, ಉದುರ್, ಉದುರು$_1$ (ಕ್ರಿ). (ಮೇಲಿಂದ) ಕೆಳಗೆ ಬೀಳು ; ಕಳಚಿ ಬೀಳು : "ಉದಿರ್ – ಪತನೇ" (ಶಮಧಾ); ಪ್ರಣತಾರಿತ್ರುಟಿತಮುಕ್ತಾಗುಣಗಣನೋತ್ತಂಸದಿಂ ಕಟಿಲ್ದುದಿರೆ [ಪಾಠಾಂ. ಕಳಲ್ದುದುರೆ] ಸಭಾಂಗಣಮೊಪ್ಪೆ ವೀರನಾರಾಯಣನಾ ತಾರಕಿತ ನಭದವೊಲ್ ಸೊಗಯಿಸುಗುಂ (ಕವಿರಾ. ೩–೧೮೦) ; ಭೀಮಸೇನಂ ಮರನಂ ಪಿಡಿದಲ್ಗೆ ಪಣ್ಬೊಲನಿಬರುಮುದಿರ್ದರ್ (ಪಂಪಭಾ. ೨–೩೧) ; ಮತ್ತಂ ಭಾಳಸ್ಥಳದ ರುಚಿಯಿತ್ತ ಟದಿನುದಿರ್ದ ಭಸಿತರಾಶಿಗಳಂತೆಸೆವ ಭುಜಮಂಡಲಂಗಳ (ಬಸರ. ೨–೨೮). **ಉದಿರು** : ಸಱಿಮಿಂಡಿವೆಣ್ಗಳ ಕೊರಲ ಹಾರದ ಮುತ್ತು ಪಱಿದುದಿರುವ ಮಣಿನಿಚಯ ಬಿಱುವಳೆಯೊಳಗಾಲಿಕಲ್ಲುಗಳಂದದಿ ತುಱುಗಿರ್ದುದುಯ್ಯಲೆಯಡಿಯ (ಮೋಹತ. ೧೪–೯೦). **ಉದುರ್** : ತಾರಕಾಸಂಕುಳಂ ತೋಳ್ಗಳದೊಂದಳ್ಳೇಱಿನೊಳ್ ಪೂವಲಿವೊಲುದುರ್ದಿನಂ (ಆದಿಪು. ೭–೧೨೧) ; ಕೊರಲೊಳ್ ಕಟ್ಟುಗೆ ಶುನಕನ ಶಿರಮಂ ಮೇಣ್ ಬ್ರಹ್ಮದಂಡೆಯಂ ತೆಳ್ಗಱಿಯಿಂದರೆದಿದಱಿಂ ಬಱಿಯಂ ತೊಡೆಗೆರಡುಂ ಶೃಂಗಮುಮನುದುರ್ಗುವಾಗಳೆ ಪುಱುಗಳ್ (ಲೋಕೋಪ. ೯–೨೧೫). **ಉದುರು$_1$** : ಅಸ್ಥಿಚರ್ಮಂಗಳು ಸಂಚ ತಪ್ಪಿ ನೆಲಕ್ಕೆ ಉದುರಲು ಮನ ಸಂಚಲತ್ವವನೈದಿ ಅನುತಾಪಂಬಟ್ಟ ಪ್ರಸ್ತಾವದ ವಚನ (ಶೂನ್ಯಸಂ. ೧೩–೨೫) ; ಒದಱಿದರೆ ಪರ್ವತದ ಶಿಖರದಲುದುರಿದವು ಹೆಗ್ಗುಂಡುಗಳು ಮುರಿದೊದೆಯೆ ಬಿದ್ದುವು ಬೇರು ಸಹಿತ ಮಹಾದ್ರುಮಾಳಿಗಳು (ಕುವ್ಯಾಅ. ೧೦–೮) ; ಮಂಗಳಾಕರೆ ನಾಗಲಾಂಬಿಕೆಯ ಮಗ್ಗುಲಂ ಸಿಂಗರಿಸಿ ತೋರ್ಪ ಶಿಶುವಂ ಕಂಡು ಹರುಷಾಶ್ರು ಪಿಂಗದೊಡನುದುರೆ ಮಗನಂ ಗಿರಿಜೆ ತೆಗೆದೆತ್ತಿಕೊಂಡಳುತ್ಸವದೊಳು (ಚೆಬಪು. ೫–೨೩); ಏನು ಮಾಡಿದರೂ ಕೋಟಿಚೆನ್ನಯರ ತಲೆಕೂದಲು ಉದುರಲಿಲ್ಲ (ಕಗದ್ಯ. ೭೦).

ಉಧಿರದೆಗೆ = ಉದುರುವಂತೆ ಮಾಡಿ ತೆಗೆದುಕೊ ; ಬಹಳವಾಗಿ ಶೇಖರಿಸು : ಚದುರಂಗವಾಡುವ ಬಾರೆಂದೊರ್ವನ ಪದುಮಾಕ್ಷಿ ಪಿಡಿದೆಳೆದೊಯ್ದು ಮದನಾಗಮದೊಳು ಮಗ್ಗಿಸಿ ಹಣಗಳನುದಿರದೆಗೆದಳವನಿಂದ (ಕಂನವಿ. ೨–೯೭).

[ದೇ. ‖ ತಮಿ. ಮಲ. ಉದಿರ್ ; ತುಳು. ಉದರು, ಉದುರು]

**ಉದಿರಿಸು**, ಉದುರಿಸು (ಕ್ರಿ). (ಕೆಳಗೆ) ಬೀಳುವಂತೆ ಮಾಡು ; ಕೆಡಹು ; ಕಳಚು ; ಮೇಲೆ ಚಿಮುಕಿಸು ; ಚೆಲ್ಲು ; ಸೂಸು : ಪಸುಳೆದಳಿರ ಪಾಸಿನ ಮೇಲೊಱಗಿಸಿ ಪೊಸಗಪ್ಪುರವಳಿಕಂ ಪೊಸೆದುದಿರಿಸಿ ಸಸಿಯಿಂದೊಸವರ್ವಿಂದೂಪಲ ಜಲಮಂ ತನುಲತೆಯೊಳ್ತಳಿದು (ಜಯಕಾ. ೪–೩೯) ; ಕಿಡಿ ಉದಿರಿಸಿ ಸಿಡಿವಿರಿಗೋ ನೆರಳಿಗೆ ಬಡದಾಡಿ (ಆರಳು. ೪೧೨–೪). **ಉದುರಿಸು**: ಅಟ್ಟಿಕೊಲುವೆನು ಜವನವ್ಯುತ್ಯುವ ನಿಟ್ಟೆಲುವನುದುರಿಸು ವೆನೆನುತೊದಱಿದನು ಕಲಿಭೀಮ (ಕುವ್ಯಾಅ. ೨೩–೨೭) ; ರೋಮರೋಮಕೆ ಕೋಟಿಲಿಂಗವುದುರಿಸಿದ ಭೀಮನ ನೆನೆದರೆ ಬಿಟ್ಟು ಹೋಗದೆ ಪಾಪ (ಪುರಂದ. ೧–೧೯೨–೧) ; ಅಲರ್ದ ತಾವರೆವಂಡನುದುರಿಸಿ ಕೊಳನ ಹೊಂದೆರೆಯೆತ್ತಿ ಮಿಂದೇಳೆಲೆಯವಾಳೆಯ ಕರ್ಪುರದ ದೂಳಾಟಗಳನಾಡಿ (ಸಾಳ್ವಭಾ. ೨–೫). [ಉದಿರ್ + –ಇಸು$_8$]

**ಉದಿರು** 'ಉದಿರ್' ನೋ.

**ಉದಿರ್ಚು**, ಉದುರಿಚು, ಉದುರ್ಚು (ಕ್ರಿ). = ಉದಿರಿಸು : "ಉದಿರ್ಚು – ಅಧಃಪತನೇ" (ಶಮಧಾ) ; ಕದಡುತ್ತುಂ ಘನಪಟಲಮನುದಿರ್ಚುತುಂ ತಾರಕಂಗಳಂ ಬೆದಱಿಸುತುಂ ತ್ರಿದಶೌಘಮನುಗ್ರಗ್ರಹಮುದೊಂದು ಬರ್ಪಂತೆ ಬಂದುದಾ ಗದೆ ನಭದಿಂ (ಜಗವಿ. ೧೨–೪೬) ; ಚಂದ್ರಾದಿತ್ಯರಂ ಮೀಂಟುತಿರ್ಪುಡುಸಂತಾನಮನಾರ್ದುದಿರ್ಚುವ ಗಣಂಗಳ್ ಬಂದರಾನಂದದಿಂ (ಗಿರಿಕ. ೧೦–೭೨) ; ಕೆಲಬರನವಯವಂಗಳಂ ದೆಸೆದೆಸೆಗುದಿರ್ಚಿ ಕೆಲಬರನಿರದೆ ಕೋಡ್ಗಳಿಂದಿಱಿದು ... ಪುಂಗವಂ ಭಂಗವಂ ಮಾಡುತ್ತೈತರುತಿರ್ದನು (ಚೆಬಪು. ೪೪–೧೯). **ಉದುರಿಚು** : ಭುಜದಲಿ ಶಿರದಲಂದಕ್ಕಡದ ಮಣ್ಣನು ಬೆರಳಲುದುರಿಚಿ ಬಾಳುಗೆಂದರು ನೆನೆದು ನಿಂಬಜೆಯ (ಕುವ್ಯಾಕ. ೧೯–೪೧). **ಉದುರ್ಚು** : ಶರಣರೊಡನಸತ್ಯವಪ್ರಿಯಂಗಳುಸುರ್ದ ನಾಲಗೆಗಳನೊಱಲಲೊಱಲನಂತಬಾರಿ ಕೀಳ್ತು ಬಳ್ಳಿನಾಲಗೆಗಳನುದುರ್ಚಿ ಹುರಿದು ಹಲ್ಲಿನುರದೊಳಿಕ್ಕಿ ಕಾಲೊಳೊರಸಿ ಮತ್ತೆ (ಸಾನಂಚ. ೬–೩೧ ರಗಳೆ) ; ಶಿರದಿ ಪತ್ರೆಯನುದುರ್ಚಿ [ಪಾಠಾಂ. ಉದರ್ಚಿ] ಚೊನ್ನೆಯೊಳಿರಿಸಿ ತಂದಾ ಮಾಂಸವರ್ಪಿಸಿ ನಿರುತದಿಂ ಕಣ್ಣಪ್ಪದೇವಂ ಭಜಿಸುತಿರಲಿಂತು (ಬಸಪು. ೧೮–೩೨).

[ಉದಿರ್ + –ಚು]

**ಉದಿರ್ಪು** (ಕ್ರಿ). = ಉದಿರಿಸು : ಕಾಯಕ್ಲೇಶದಿನಡವಿಯ ಕಾಯಂ ಪಣ್ಣುಮನುದಿರ್ಪಿತಿಂದಗಲದೆ ನಿಂದೀ ಯಮಳರಾವ ತೆಱದಿಂ ನೋಯಿಸರ್ಪೆ ನಿನ್ನ ನನ್ನಿಕಾಱನ ಮನಮಂ (ಪಂಪಭಾ. ೭–೪೮) ; ಉದಿರ್ಪುತಿರ್ಪ ಕುಸುಮದ್ರುತಿಯೊಳ್ಪೊನಲೊಳ್ ಕಟಿಲ್ವ ಕಪ್ಪುರದ ಪುಱಿಲ್ (ವರ್ಧಪು. ೪–೭೧). [ಉದಿರ್ + –ಪು]

**ಉದಿಸು** 'ಉದಯಿಸು' ನೋ.

**ಉದೀಚಿ** (ನಾ). ಉತ್ತರದಿಕ್ಕು. [ಸಂ. ಉದೀಚೀ]

**ಉದೀಚೀನ** (ಗು). ಉತ್ತರದಿಕ್ಕಿನ ; ಬಡಗಣ. [ಸಂ.]

**ಉದೀಚೀಭವ** (ಗು). ಉತ್ತರದಿಕ್ಕಿನಲ್ಲಿ ಹುಟ್ಟಿದ : ಅಲೆದುದುದೀಚೀಭವಂ ಶೀತವಾತಂ (ಪುಷ್ಪಪು. ೬–೩೬). [ಸಂ.]

**ಉದೀಚ್ಯ** (ಗು). ೧. ಉತ್ತರದಿಕ್ಕಿನ : ಇದು ದಾಕ್ಷಿಣಾತ್ಯ ಕವಿಮಾರ್ಗದುದಾರಮುದೀಚ್ಯದುರುವಿಶೇಷಣಯುತಮಪ್ಪುದನೊಲ್ವರಿಂತು ಹೇಮಾಂಗದ ಲೀಲಾಂಬುಜ ವಿಚಿತ್ರ ಚಿತ್ರಾಧಿಕಮಂ (ಕವಿರಾ. ೨–೭೯). (ನಾ). ೨. ಸರಸ್ವತೀನದಿಯ ವಾಯವ್ಯದಿಕ್ಕಿಗಿರುವ ಪ್ರದೇಶ ; ಉತ್ತರದೇಶ. ೩. ಉತ್ತರದಿಕ್ಕಿನವನು ; ಔತ್ತರೇಯ : ಧನದಹರಿದಭಿಮುಖಂ ವಿಭು ಜಿನಚಂದ್ರಂ ನಡೆದುದೀಚ್ಯರಂ ಕಪ್ಪಂಗೊಂಡಿನನುತ್ತರಾಯಣದೊಳನುದಿನಂ ರಸಜ್ಞಾನಿ ನೀರನೊಸೆವಂತೊಸೆದಂ (ಶಾಂತಿಪು. ೧೧–೨೫). [ಸಂ.]

**ಉದೀಚ್ಯಮಾರ್ಗ** (ನಾ). ಕಾವ್ಯರಚನೆಯಲ್ಲಿ ಉತ್ತರ ದೇಶದವರು ಅನುಸರಿಸುವ ದಾರಿ, —ರೀತಿ ; ಉತ್ತರಮಾರ್ಗ : ಇವು ನಿಯತಂ ದಕ್ಷಿಣದೇಶವರ್ತಿ ಕವಿರಾಜಮಾರ್ಗದೊಳ್ ನೆಗಳ್ಗುಂ ಮತ್ತಮಱಿ ವಿಪರ್ಯಯವೃತ್ತಿಯೆ ಬವರಿಸುಗುಮುದೀಚ್ಯಮಾರ್ಗದೊಳ್ ಪ್ರಚುರತೆಯಿಂ (ಕಾವ್ಯಾವ. ೫೨೧). [ಉದೀಚ್ಯ + ಮಾರ್ಗ]

**ಉದೀಚ್ಯವಾಚಕ** (ನಾ). ಉತ್ತರದವರು ಬಳಸುವ ಶಬ್ದ : ಮನದೊಳಗಾಗಳುಂ ನಿಱಿಸದಾ ಮುಳಿಸಂ ಗತರಾಗಮೋಹನೊಯ್ಯನೆ ಮುನಿನಾಥನೆಂಬ ವಚನಾಂತರಮಿಂತಿದು ದಾಕ್ಷಿಣಾತ್ಯಕಂ ಮನದೊಳಗಾಗಳುಂ ನಿಱಿಸದೊಯ್ಯನೆ ಮೋಹಮನಂತೆ ರಾಗಮುಂ ಮುನಿಸುಮನೊಲ್ಲದಂ ಮುನಿಪನೆಂಬುದಿದಕ್ಕುಮುದೀಚ್ಯವಾಚಕಂ (ಕವಿರಾ. ೨–೧೦೬).

[ಉದೀಚ್ಯ + ವಾಚಕ]

**ಉದೀರಣ** (ನಾ). ೧. ಪ್ರೇರಣೆ: ಬಾಹ್ಯಾಭ್ಯಂತರಹೇತೂದೀರಣ ವಶದಿಂ ಉದ್ರಿಕ್ತಪರಿಣಾಮಂ ತೀವ್ರಭಾವಂ (ತತ್ತ್ವಪ್ರ. ೨೫೭). ೨.ಹೇಳುವಿಕೆ: "ಅಭಿಧಾನಂ, ವ್ಯಾಹಾರಃ, ಉದೀರಣಂ, ಕಥನಂ — ಈ ೪ ಮೊದಲಾಗುಳ್ಳವು ನುಡಿಯ ಭೇದಂಗಳ್" (ಹಲಾಯು. ೨೩–೧೩೭). ೩. ಮುಂದಕ್ಕೆ ದೂಡುವುದು; ಮೇಲೆಸೆಯುವುದು. [ಸಂ.]

**ಉದೀರಿತ** (ಗು). ಹೇಳಿದ; ನುಡಿದ: ಶಾರೀರಂ ಮಾನಸಂ ಕ್ಷೇತ್ರಜಂ ಪರಸ್ಪರೋದೀರಿತಂ ಸಂಕ್ಲಿಷ್ಟಾಸುರೋದೀರಿತಂಗಳೆಂಬ ಪಂಚಪ್ರಕಾರ ದುಃಖಂಗಳಂ . . . ಅನುಭವಿಸುತ್ತಂ (ಸುಕುಮಾ. ೧೧–೪೭ ವ). [ಸಂ.]

**ಉದೀರಿಸು** (ಕ್ರಿ). ೧. ಹೇಳು. ೨. ಹೆಚ್ಚಾಗು: ಅಲ್ಲಿ ಕರ್ಮಮಲ ಪಟಲಶಕ್ತಿ ಪ್ರತಿಸಮಯಂ ಅನಂತಗುಣಹೀನಕ್ರಮದಿಂ ಉದೀರಿಸುಗುಂ (ತತ್ತ್ವಪ್ರ. ೮೦). [ಉದೀರಣ + –ಇಸು₃]

**ಉದೀರ್ಣ** (ಗು). ೧. ದೊಡ್ಡದಾದ; ಹೆಚ್ಚಾದ: ಕರ್ಣನುಮುದೀರ್ಣ ವೀರರಸಾಸ್ವಾದನಲಂಪಟನಾಗಿ ನೀಮೆಲ್ಲಮಿಂದೆನ್ನ ಕಾಳೆಗಮಂ ಸುರಿಗೆಗಾಳೆಗಮುಂ ನೋಟ್ಪಂತೆ ನೋಟ್ಪುದೆಂದು (ಪಂಪಭಾ. ೧೨–೧೧೬ ವ). ೨. "ಎದ್ದ" (ಶಾಪಮಂ. ಕೋಶ): ಧರ್ಮಮಿಂತಿದನುಲ್ಲಂಘಿಸಿದಾತನುಗ್ರನರಕೋದೀರ್ಣಾಂತಸಂವರ್ತಗರ್ತದೊಳಾಟ್ಗುಂ (ಶಾಪಮಂ. ೬೧–೩೪೪; 1123). (ನಾ). ೩. ಹಿರಿಯ; ದೊಡ್ಡವನು: "ಉದಾತ್ತಃ, ಉದೀರ್ಣಃ, ಮಹಾತ್ಮಾ, ಉದಾರಃ– ಈ ೪ ಹಿರಿಯಂ" (ಹಲಾಯು. ೫೯–೨೦೧). [ಸಂ.]

**ಉದೀರ್ಣತೆ** (ನಾ). ಹೆಚ್ಚಿಗೆ; ಅತಿಶಯ; ಏಳಿಗೆ; ಆಧಿಕ್ಯ: ಬಿದುರರತ್ನಮಂಡನಾಕೀರ್ಣರುಚಿಪ್ರಬುದ್ಧಕವಚಾನ್ವಿತಕರ್ಣಸಹಾಯಮಂ ಗುಣೋದೀರ್ಣತೆಯಿಂದೆ ಪೊಂದಿತೆನೆ ತನ್ನಿಕಟಸ್ಥಿತಮೇಂ ಮನೋಜ್ಞಮೋ (ರಾಜಶೇ. ೬–೯೬). [ಸಂ. ಉದೀರ್ಣತಾ]

**ಉದು** (ಸ). ರೂಪಗಳು (ಪುಂ. ಏಕ). ಉವಂ, ಉವನ್, ಊತ (ಸ್ತ್ರೀ. ಏಕ). ಉವಳ್, ಊಕೆ (ಪುಂ. ಸ್ತ್ರೀ. ಬಹುವ). ಉವರ್ (ನಪುಂ. ಬಹುವ). ಉವು (ವಿಶೇ). ಊ. ನಡುವಣ ವಸ್ತುವನ್ನಾಗಲಿ, ವಿಷಯವನ್ನಾಗಲಿ, ನಿರ್ದೇಶಿಸಲು ಬಳಸುವ ಸರ್ವನಾಮ: ಅದು ಇದು ಉದೂ ನಾಮಂತೇ ವತೌ ಪುಂಸಿ (ಭಾಷಾಭೂ. ೯೫); ಅದುವಿದುವುದುವಾವುದುವೆಲ್ಲದು ಪೆಜತೇನ್ ಪೆಜದೆನಿಪ್ಪ ಶಬ್ದಂಗಳ್ ತಪ್ಪದೆ ಸರ್ವನಾಮಮುಕ್ಕುಂ (ಶಮದ. ೭೮); ಅದು, ಇದು, ಉದು (ಶಬ್ದಾನು. ೧೬೨ ಪ್ರಯೋ); ಕಾಲವಶ್ಯಲ್ಪವು ಕಾರ್ಯವು ವಿಪುಳವು . . . ಅದರಿಂದಲದರಿದರುದರೋದು ವ್ಯರ್ಥವು (ಇಂಚಾಪ. ೨೪೪–೧೦೭).

ಉವಂ, ಉವನ್: ಅವಂ, ಇವಂ, ಉವಂ (ಭಾಷಾಭೂ. ೯೫ ಉದಾ); ಆವಂ, ಇವಂ, ಉವಂ (ಶಬ್ದಾನು. ೬೪ ಪ್ರಯೋ); ಅವನೆಂ, ಇವನಂ, ಉವನಂ (ಶಬ್ದಾನು. ೬೪ ಪ್ರಯೋ); ಉವನ್, ಉವಳ್ (ಕೈಪಿಡಿ. ೬೪). ಊತ: ಆತಂ, ಈತಂ, ಊತಂ (ಭಾಷಾಭೂ. ೯೫ ಉದಾ); ಆತಂದುರ್ಯೋಧನನೀತಂ ರವಿಜಾತನೂತನಶ್ವತ್ಥಾಮಂ (ಶಮುದ. ೧೫೦ ಪ್ರಯೋ); ಆತಂ, ಈತಂ, ಊತಂ (ಶಬ್ದಾನು. ೬೪ ಪ್ರಯೋ); ಈತನುಂ ಊತನುಂ, ಉವರ್ (ಶಬ್ದಾನು. ೩೧೬ ಪ್ರಯೋ). ಉವಳ್: ಅವಳ್, ಇವಳ್, ಉವಳ್ (ಶಮುದ. ೧೫೪ ಪ್ರಯೋ); ಅವಳ್, ಇವಳ್, ಉವಳ್ (ಶಬ್ದಾನು. ೬೪ ಪ್ರಯೋ); ಉವನ್, ಉವಳ್ (ಕೈಪಿಡಿ. ೬೪). ಊಕೆ: ಕಜು ತಡೆದತ್ತು ಕಂಚನುಣಲೂ ಮನೆಯೂಕೆಗಳುಯ್ದರಕ್ಕ (ಸೂಕ್ತಿಸು. ೮–೧೩೪). ಉವರ್: ಈತನುಂ, ಊತನುಂ, ಉವರ್ (ಶಬ್ದಾನು. ೩೧೬ ಪ್ರಯೋ). ಉವು: ಉದುಂ, ಉವು (ಶಬ್ದಾನು. ೩೧೬ ಪ್ರಯೋ). ಊ: ಅದುವಿದುವುದುಗಾಯಿಾಯೂ ವೊದವುಗುಮಾದೇಶಮಾಗಿ ಗಮಕದೊಳ್ (ಶಮುದ. ೧೬೯); ಆ ಈ ಊ ಎಂಬ ಆದೇಶಕ್ಕೆ – ಆ ಬನವೀ ಬನವೂಬನವೆನ್ನದೆ ತೊಟಲ್ದು ಪೂಗೊಯ್ದರವರ್ (ಶಮುದ. ೧೬೯ ಪ್ರಯೋ). [ದೇ. ॥ ತಮಿ. ಉದು; ತುಳು. ಉಂದು; ಕುವಿ. ಊ, ಊದಿ; ಕುರುಖ್. ಹೂದ್; ಬ್ರಾಹೂಈ. ಓದ್]

**ಉದುಂಬರ** (ನಾ). ೧. ಅತ್ತಿಯ ಮರ: ಒಂದು ಹಂದಿ . . . ಒಂದು ಉದುಂಬರ ವೃಕ್ಷದ ಕೆಳಗೆ ಸೊಗಸಾದ ಸ್ಥಳದಲ್ಲಿ ಮನೆಮಾಡಿಕೊಂಡಿತು (ಬುದ್ಧಪ. ೨೯). ೨. ತಾಮ್ರ: "ತಾಮ್ರಂ, ಶುಲ್ಬಂ, ಉದುಂಬರಂ – ಈ ೩ ಕಿಸು" (ಹಲಾಯು. ೨೮–೧೬). ೩. ಹೊಸ್ತಿಲು. [ಸಂ.]

**ಉದುಂಬರಕುಷ್ಠ** (ನಾ). ಅತ್ತಿಯ ಹಣ್ಣಿನಂತೆ ಒಳಗೊಳಗೇ ಹುಳಿತುಹೋಗುವ ಒಂದು ರೋಗ: ವಾಯುಭೂತಿ . . . ಪಾಪದ ಫಲದಿಂದಮೇಟುಂದಿವಸದಿಂದೊಳಗು[ಪಾಠಾಂ. ಗೌ]ದುಂಬರಕುಷ್ಠಮಾಗಿ ಪುಟುತು ನಮೆದು ಸತ್ತು (ವಡ್ಡಾರಾ. ೮–೨೫). 'ಔದುಂಬರಕುಷ್ಠ' ಪರಾ. [ಉದುಂಬರ + ಕುಷ್ಠ]

**ಉದುಂಬರಪರ್ಣಿ** (ನಾ). "ಜಾಪಾಳದ ಗಿಡ" (ಅಮರ. ಟೀಕ); "ದಂತಿ ಗಿಡದ ಹೆಸರು" (ಸಿದ್ಧಾಂತಿ. ೧೨೭). [ಸಂ. ಉದುಂಬರಪರ್ಣಿನ್]

**ಉದುಗರಿಸು** 'ಉದ್ಗರಿಸು' ನೋ.

**ಉದುಗಲಿಸು** 'ಉದ್ಗರಿಸು' ನೋ.

**ಉದುಗ್ರಾಹಕ** (ನಾ). ಚೆನ್ನಾಗಿ ಗ್ರಹಿಸುವವನು; ನಿಪುಣ: ಷಟುತರ್ಕ್ಕಸತುಪ್ರವುಡಿಯೊಳತಿಶಯುದುದುಗ್ರಾಹಕರು (ಎಇ. XVIII, ೧೮೪–೯; 1097). [< ಸಂ. ಉದ್ಗ್ರಾಹಕ]

**ಉದುಟು** (ಕ್ರಿ). ಗರ್ವಿಸು; ಅಹಂಕಾರಪಡು: ಪಿರಿದಪ್ಪೀ ಖ್ಯಾತಿಯಿಂದಂ ದುರದ ಬಲುಪಿನಿಂ ಕ್ಷಾತ್ರತೇಜೋಗ್ರತಾವಿಸ್ತರದಿಂದಂ ಕ್ರೋಧದಿಂದಂ ಪುಸಿಗೆ ಸೊಗಸೆಂಬೊಂದು ತಾತ್ಪರ್ಯದಿಂದಂ ಅರಿಚಕ್ರೈಶ್ವರ್ಯ್ಯಮಂ ಕೊಂಡುದುಟ ಕಳೆವ ಸಾಮರ್ಥ್ಯದಿಂ ಧೈರ್ಯ್ಯದಿಂದಂ ವರಭಾಗ್ಯಂ ಪಾಂಡವಾದ್ಯಂಗೆಣೆಯೆನಲೆಸೆದಂ ವೀರಕಂಥಾರದೇವಂ (ಎಕ.IX, ದಾವಣ. ೫೯–೨೨; 1280). "ಉದುಟೆ?" (ಶಾಪಮಂ. ೧೪೧೬ ಕೋಶ). [?. / ತೆಲು. ಉದುರು]

**ಉದುಪು** (ನಾ). ೧. ರಭಸ; ವೇಗ(?); "ತ್ರಾಣ; ಬಲ" (ಸಮ್ಯಕ್ತ್ವ. ಕೋಶ). ೨. ದಿಗಿಲು; ಭಯ (?). 'ಉದುಪುಗೆಡು' ಪರಾ. [?. / ತಮಿ. ಉದ್ವೈಪ್ಪು]

**ಉದುಪುಗೆಡು** (ಕ್ರಿ). ೧. ರಭಸವಳಿ (?). ೨. ದಿಗಿಲಿನಿಂದ ಚದುರಿಹೋಗು; ಭಯದಿಂದ ಓಡಿಹೋಗು (?): ಬಲ್ಲಿದಂ ಭಗದತ್ತ ಭೂಮಿಪಾಲಕನ ಬಲದಲ್ಲಿ . . . ಕೆಲವು ಪಿಂಡುಗೆದಜುತು ಕೆಲವು ಪೊಲ್ಲಯಿಸಿದತ್ತು ಕೆಲವುದುಪುಗೆಟ್ಟತು ಕೆಲವು ಜಿತಶತ್ರುವಿಜಿವಿಜಿತಕೆ (ಸಮ್ಯಕ್ತ್ವ. ೮–೫೧). [ಉದುಪು + ಕೆಡು]

**ಉದುಭವ** (ನಾ). ಹುಟ್ಟುವುದು; ಉತ್ಪತ್ತಿ: ಏನುದುಭವಭವನವೊಸಿರಿಗೆ ಕಿಸುವೊಳಲ್ ವಸುಮತಿಯೊಳ್ (ಮುಂಬರಾ. XI, ೨೬೫–೫೧; 1167); ವಿವಳಿಸುವನಜಿವಂತೆ ಪುಣ್ಯಶ್ಲೋಕರುದುಭವವ (ನಿಭಾಗ. ೪–೧೧–೬). [< ಸಂ. ಉದ್ಭವ]

**ಉದುಭವಿಸು** 'ಉದ್ಭವಿಸು' ನೋ.

**ಉದುಮದ, ಉದಮದ** (ನಾ). ಅತಿಶಯವಾದ ಮದ, —ಸೊಕ್ಕು (?): ಉದು[ಪಾಠಾಂ. ದ] ಮದದ ಯೌವನವನೊಳಕೊಂಡ ಸತಿ ನೀನು ಇತ್ತಲೇಕೆ ಬಂದೆಯವ್ವ (ಅವಚಂ. ೨೪೨–೧೧೦೦). **ಉದಮದ**: ನರಜನ್ಮದಲ್ಲಿ ಹುಟ್ಟಿ ಲಿಂಗಮುಖಿವನಜಿಯದೆ ಉದಮದ ಸೊಕ್ಕಿ ತಲೆಗೇಜಿತ್ತೆ ಅಯ್ಯಾ (ಬಸವ. ೫೮೫). [< ಸಂ. ಉದ್ಮದ]

**ಉದುಮದದಳೆ** (ಕ್ರಿ). ಅತಿಶಯವಾದ ಮದವನ್ನು ಹೊಂದು: ಬೆಳೆದ ಕದಳಿಯ ವನದಿ ವುದುಮದದಳೆದ ಗಜ ಪರಿವಂತೆ ಭೀಮನ ಬಲಕೆ ನಿಲ್ಲುವರಾರು (ಜಿನಭಾ. ೫೨–೫೫). [ಉದುಮದ + ತಳೆ]

**ಉದುರ್** 'ಉದಿರ್' ನೋ.
**ಉದುರಿಚು** 'ಉದಿರ್ಚು' ನೋ.
**ಉದುರಿಸು** 'ಉದಿರಿಸು' ನೋ.
**ಉದುರು$_1$** 'ಉದಿರ್' ನೋ.
**ಉದುರು$_2$** (ನಾ). ಒಂದಕ್ಕೊಂದು ಅಂಟದಂತೆ ಇರುವುದು; ಬಿಡಿ ಬಿಡಿಯಾಗಿರುವುದು: ತನಿಪಾಲ ಶರ್ಕರೆಯು ನಾಡೆ ಪಚನಿಸುತ ಬೇಗನು ಪಾದ ಪರಡಿಯುದುರಂಬಿಡಿದಿರ್ವಿಯಂ (ಲಿಂಗಪು. ೮–೩).
ಉದುರುದುರು (ದ್ವಿ ರು ಕ್ರಿ): ಉದುರುದುರುವೋಗರಕೆ ನಸು ಬಿಸಿಯು ಹಾಲನೆಱೆದದಱೊಳಗೆ ನುಚ್ಚಿಗೆಯ ಹೆಪ್ಪ ಹದನಱಿದಿಕ್ಕಿಯುದಕೆ ನೀರುಳ್ಳಿಯೇಲಕ್ಕಿ ಹಸಿಯಲ್ಲಮಂ ಹಾಕಿ ಕಟ್ಟುವುದು ಕೂಳಂ (ಸೂಪಶಾ. ೩–೧೬); ಹಸನಾಗಿ ಯುದುರುದುರುವಂತಟ್ಟ ಕೂಳಸಾಱಿಸಿ (ಸೂಪಶಾ. ೩–೧೫). [< ಉದಿರ್]
**ಉದುರುಗಪ್ಪುರ** (ನಾ). ಉದುರಾದ ಕರ್ಪೂರ; ಪುಡಿಯಾದ ಕರ್ಪೂರ; ಕರ್ಪೂರದ ಪುಡಿ, —ಹಳಕು, —ಹರಳು: ಕಮ್ಮರಲ ಮಾಲೆಗೆ ಕತ್ತುರಿಯ ಪುಡಿಗುದುರುಗಪ್ಪುರಕೆ ಸುರಿದ ಕುಂಕುಮರಜಕೆ ತುಂಬಿಗಳಿರೆ ತಿರುಗುತಿರೆ (ಸಾಳ್ವಭಾ. ೪–೧೧). [ಉದುರು$_2$ + ಕಪ್ಪುರ]
**ಉದುರುಗುಟ್ಟು** 'ಉದುರ್ಗುಟ್ಟು' ನೋ.
**ಉದುರುರೊಟ್ಟಿ** (ನಾ). ಉದುರುದುರಾಗುವಂತೆ ಮಾಡಿದ ರೊಟ್ಟಿ; ಗರುಗಾಗಿರುವ ರೊಟ್ಟಿ: ನನೆದ ಸೊಜ್ಜಿಗೆಯು ಸಲೆಕುಟ್ಟಿ ಮತ್ತದಱ ಸರಿ ಕೆನೆಯುನಿಕ್ಕಿನಿಸು ಬೆಣ್ಣೆಯನಿಕ್ಕಿದಾ ರೊಟ್ಟಿಯನು ಮುಚ್ಚುಳೊಳಗಿಕ್ಕಿ ಬೇಯಿಸಲು ತಾನುದುರುರೊಟ್ಟಿವೆಸರಂ ಪಡೆದುದು (ಸೂಪಶಾ. ೧–೧೮).
[ಉದುರು$_1$ (< ಉದಿರ್) + ರೊಟ್ಟಿ]
**ಉದುರೆ$_1$** (ನಾ). ಉದುರಿಸುವ ಪುಡಿ; ಸೂಸಲು; ಪುಡಿ: ಒಲೆಯ ಮೇಲೆತ್ತಿ ಕಾಸಿ ಕುದಿಸಿದ ಬಳಿಕ ಸೋದಿಸಿ ಶುಂಠಿಯೇಲಕ್ಕಿಯುದುರೆಯಂ ಹಾಕಿ (ಸೂಪಶಾ. ೩–೨೧); ಕೀರೆ ನಱುಪಲು ಚಕ್ಕವತ್ತ ಸೊಲೆ ಸಬ್ಬಸೀಗೆ ಮೊದಲಾದ ಸೊಪ್ಪುಗಳ ಬೇಱಿಬೇಱುಕ್ಕರಿಸಿದುದುರೆಯಂ ತುಪ್ಪದೊಳು ಹುರಿದ ಹೋಳುಗಳೊಳಗೆ ಹುದುಗಿ ಕೆಲವಂ ತಾಳಿಸಿದೊಡಮವು ತಾ ಶಾತವಂಗಿ ಹೆಸರಂ ಪಡೆದವು (ಸೂಪಶಾ. ೪–೧೬). [< ಉದುರು$_2$]
**ಉದುರೆ$_2$** (ನಾ). ಒಂದು ಗಿಡದ ಹೆಸರು: ಉಡಿ, ಪುಡಿಗೆ, ಗೂಡು ಮುರ್ಕಿ, ಚಿತ್ರೋಡಿ, ಉದುರೆ (ಮೈಔಗ. ೩೨–೬೧೧). [?]
**ಉದುರೆಗರ್ಪುರ** (ನಾ). = ಉದುರುಗಪ್ಪುರ: ಇಂಗುಳ್ಳಿ ಕರಿಬೇವು ಮೊದಲಾದುವಂ ತುಂಬಿ ತುಪ್ಪದೊಳುವೊಗ್ಗರಿಸಿಯುದುರೆಗರ್ಪುರವಿಕ್ಕಿ ಮಿಶ್ರರಂಭಾಕುಸುಮವೆಂದು ಹೆಸರಂ ಕರೆವುದು (ಸೂಪಶಾ. ೪–೪೧).
[ಉದುರೆ$_1$ + ಕರ್ಪುರ]
**ಉದುರೆವಡೆ** (ಕ್ರಿ). (ಉದುರಿಸುವಂತೆ) ಪುಡಿಯಾಗು: ಕುದಿಗೊಳಿಸಿ ನೀರ ಪಲಸಿನಕಾಯ ಚುಚ್ಚಿಕೊಂಡದಕೆ ತೆಂಗಿನಹಾಲು ಸೊಜ್ಜಿಗೆಯ ರಸ [ಹಾಲು] ಉದುರೆವಡೆದುಪ್ಪು ಶುಂಠಿಯ ಸಾರ ತಿಳಿದುಪ್ಪವೆಱೆದೆಱೆದು (ಸೂಪಶಾ. ೫–೬೧). [ಉದುರೆ$_1$ + ಪಡೆ$_1$]
**ಉದುರ್ಗುಟ್ಟು**, ಉದುರುಗುಟ್ಟು (ಕ್ರಿ). ಪುಡಿಪುಡಿಯಾಗುವಂತೆ ಕುಟ್ಟು; ಹುಡಿಮಾಡು: ಕೊಳುಗುಳಕ್ಕನುವಾಗಿ ನಾಗಾರಿಯೆಂದೆಂಬ ಖಳನದಕೊ ಕುಳ್ಳಿಹನೆ ಮುನ್ನಿವಂ ಶೇಷನಂ ಹಿಳಿದು ರಣದಲ್ಲಿ ಪಡೆವಣಿಗಳನುದುರ್ಗುಟ್ಟುತಾ ರನ್ನದೊಡವನಾಂತೊ (ಘೋರಾಸು. ೫). **ಉದುರುಗುಟ್ಟು**: ಕೆದಱಿತಿಭ ಮುಱಿಮುಱಿದು ಗಿರಿಗಳನುದುರುಗುಟ್ಟುತ ಬೀದಿಯಲಿ ಬೀಸಿದುದು (ತೊರಾ. ೬–೩೨–೩೨); ಮದನನ ಮೊದಲಂಬು ನಮಗೆ ಸೋಲದರೆದೆಗದವನುಗಿದು ಧೈರ್ಯಗಿರಿಯನುದುರ್ಗುಟ್ಟುವುದೆಂದು (ಕಂಸವಿ. ೬–೮೩). [ಉದುರು$_1$ (< ಉದಿರ್) + ಕುಟ್ಟು$_1$]

**ಉದುರ್ಚು** 'ಉದಿರ್ಚು' ನೋ.
**ಉದೂಖಲ** (ನಾ). (ಮರದ) ಒರಳು. [ಸಂ.]
**ಉದೆಯಪುರ** (ನಾ). ಒಂದು ಊರಿನ ಹೆಸರು (?): ಉದೆಯಪುರಂ ಧರೆಗೀಶನ್ (ಎಇ. IX, ೧೭–೩; ೩೦೦). ☞ ಈಗಿನ ಉದ್ಯಾವರ.
[ಉದೆಯ$_0$ + ಪುರ]
**ಉದೆಯಮುರ** (ನಾ). ಒಂದು ಬಗೆಯ ಮರ: "ತಿಕ್ತದುಗ್ಧಾ–ಕಂಕುಷ್ಠ, ಉದೆಯಮುರ" (ಒಷಧಿ. ೬೮). [ಉದೆಯ$_0$ + ಮರ]
**ಉದೈಸು** 'ಉದಯಿಸು' ನೋ.
**ಉದೋ** 'ಉಧೋ' ನೋ.
**ಉದ್ಗಂಧ** (ಗು). ಉತ್ತಮವಾದ ಸುವಾಸನೆಯುನ್ನುಳ್ಳ; ಕಂಪನ್ನುಳ್ಳ: ಮುದವಂ ಮಾಡುವ ಧೂಪಧೂಮಲತೆಯಿಂ ಕರ್ಪೂರಪಾಳಿಪ್ರದೀಪದಿನೆತ್ತಂ ಬಿಡುಮುತ್ತಿನಚ್ಚಗಡೆಯಿಂ ಮಂದಾರ ಪುಷ್ಪೋಪಹಾರದಿನುದ್ಗಂಧಸುಗಂಧದಿಂ . . . ಅರ್ಚಿಸಿದರಾ ಶ್ರೀದೇವನುಂ ದೇವಿಯುಂ (ಶಾಂತಿಪು. ೭–೩೬). [ಸಂ.]
**ಉದ್ಗಂಧಿ** (ಗು). ಉದ್ಗಂಧವನ್ನು ಉಳ್ಳ; ಸುವಾಸನೆಯನ್ನು ಹೊಂದಿದ: ಕರಿಕರ್ಣತಾಳಾನಿಳನೆ ಮಳಯರುಹನಂದನಾಂದೋಳನೋದ್ಗಂಧಿಯುಂ (ಆದಿಪು. ೧೩–೬ ವ). [ಸಂ.]
**ಉದ್ಗತ** (ಗು). ೧. ಹೊರಹೊಮ್ಮಿದ; ಮೇಲಕ್ಕೆಬಂದ; ಉಂಟಾದ: ಉದ್ಗತಮಾದ ಸದ್ಗುಣೋತ್ಕರಮುಮುನೂನಲಕ್ಷ್ಮಿ ನೆಲೆಗೊಂಡಿರವುಂ ದೊರೆವೆತ್ತು ತನ್ನೊಳೊಂದಿರೆ . . . ಏಕೆ ದೊರೆಯೆಂದೆನಿಸಿತ್ತೊ ಪದ್ಮನಾ (ಪುಷ್ಪಪು. ೩–೩). ೨. ವಾಂತಿಯಾದ; ಕಕ್ಕಿದ. (ನಾ). ೩. [ಛಂದ] ಒಂದುಜಾತಿಯ ವೃತ್ತ; ವಿಷಮವೃತ್ತಗಳಲ್ಲಿ ಒಂದು ಬಗೆ: ಮರುದರ್ಕವಾಯುಲಘು ಮುಂದೆ ಬರೆ ಸುರಮುದ್ದಿನೇಶನುಂ ಶಶಿವಾರಿಜರಿಪು ಸುರಪಾರ್ಕ ಲಗಂ ಮರುದರ್ಕವಾಯುರವಿಗಾಂತಮುದ್ಗತಂ (ಛಂದೋಂಬು. ೩–೧೧). [ಸಂ.]
**ಉದ್ಗತಜೀವಿ** (ನಾ). ಸುಖಹೊಂದಿರುವವನು; ಸುಖಿ: ವ್ಯವಹಾರಧನಾಹಿಕಾಯ ಸೌಖ್ಯೋದ್ಗತ ಜೀವಿಸೇನೆ ಪರಿಪಾಲನೆ ಕಾಮುಕಿಯಿಂತು ಭೋಗಮುಕ್ಕು (ನಾನಾರ. ೧೧೪); "ಉದ್ಗತ ಜೀವಿ–ಸುಖವಂ ಹೊಂದುವ ಪ್ರಾಣಿ" (ನಾನಾರ. ೧೧೪ ಟೀಕೆ). [ಸಂ. ಉದ್ಗತಜೀವಿನ್]
**ಉದ್ಗತಿ** (ನಾ). ೧. ಮೇಲಕ್ಕೆ ಹೋಗುವುದು. ೨. ಏಳಿಗೆ; ಏರಿಕೆ. ೩. ವಾಂತಿ. [ಸಂ.]
**ಉದ್ಗಮ** (ನಾ). ೧. ಮೇಲೇರುವುದು. ೨. ಏರಿಕೆ. ೩. ಹುಟ್ಟಿಬರುವುದು; ಗೋಚರಿಸುವುದು; ಹೊರಹೊಮ್ಮುವುದು: ಅಮರ್ದಪ್ಪೆ ಹರ್ಷಪುಳಕೋದ್ಗಮಮುವರ್ಗಾದತ್ತು (ಪಂರಾಮಾ. ೧೧–೫೩). ೪. ಮೂಲಸ್ಥಾನ; ಹುಟ್ಟು: ಪೂಸುಸದ ಚರಿತೆ ಪರಸತ್ವ ಸಾಕ್ಷಾತ್ಕವಿಕೆ ಕಾಣಿಪುದಪಾತ್ಮಸ್ವಭಾವದುದ್ಗಮವ (ಮಂಕುಕ. ೪೦೯). ೫. ಹೂವು; ಪುಷ್ಪ: ಸೋಮಸೂರ್ಯರ್ ಬಲವರುವ ಪ್ರೋಪ್ಪಾಮಯುತ ಲಿಂಗಂ ಬೊಲೊಪ್ಪಿದುದಾಮರಾಶ್ರಯಮಾಗಿ ಕನಕೋದ್ಗಮದ ಪಾಂಗಿನೊಳು (ಶಂಕದಾ. ೧–೩೫). 'ಉದ್ಗಮಚಾಪ' ಪರಾ. [ಸಂ.]
**ಉದ್ಗಮಚಾಪ** (ನಾ). ಹೂವಿನ ಬಿಲ್ಲುಳ್ಳವನು; ಮನ್ಮಥ: ಪಾಡುಗಂ ಕಳಕಂಠಿಗಳ್ ಕಾಮನುದ್ಗಮಚಾಪನೋಲಗಿಸಿರ್ಪನಚ್ಚರಿ (ರಾಜಶೇ. ೨–೧೧೭). [ಉದ್ಗಮ + ಚಾಪ]
**ಉದ್ಗಮನ** (ನಾ). ಮೇಲೆ ಏಳುವುದು; ಹೊರಬರುವುದು: ಭೂತಗಳ ಸಂವೇಶನ (ಅಡಗುವುದು), ಉದ್ಗಮನ (ಹೊರಟುಬರುವುದು) — ಇವು ಭೂತಗಳ ಧರ್ಮವಲ್ಲವೆ? ಎಂದು ಶಂಕಿಸಬಾರದು (ಬ್ರಹ್ಮಭಾ. ೨೯೪ ಅಡಿಟಿ). [ಸಂ.]

**ಉದ್ಗಮನೀಯ** (ನಾ). ೧. ಮೇಲೆಬರಬೇಕಾದುದು. ೨. ಮಡಿ ಮಾಡಿದ ಧೋತ್ರ; ಒಗೆದ ಬಟ್ಟೆ: "ಧೌತಂ, ಉದ್ಗಮನೀಯಂ – ಈ ೨ ಧೌತಿ" (ಹಲಾಯು. ೯೦–೩೯೭). ೩. ಮೇಲ್ವಸ್ತ್ರ: "ಉದ್ಗಮನೀಯಮೆನಲೊಲ್ಲಿಯೆನಿಸಿಕ್ಕುಂ" (ಮಂಗರಾ. ೧೧೧–೨೯). [ಸಂ.]

**ಉದ್ಗಮಬಾಣ** (ನಾ). ಪುಷ್ಪಬಾಣವನ್ನುಳ್ಳವನು; ಮನ್ಮಥ: ವಸುದೇವಸುತನ ರೂಪಂ ರೂಪಿಟ್ಟಂದು ಮೊದಲಾಗಿ ನೃಪ ನಿಜನಂದನೆಯಂ ಮಾಣದಿಸುವನುದ್ಗಮಬಾಣಂ (ಜಗವಿ. ೧೧–೨೨). [ಉದ್ಗಮ + ಬಾಣ]

**ಉದ್ಗಮಮಂಜರಿ** (ನಾ). ಹೂವಿನ ಗೊಂಚಲು; ಪುಷ್ಪಗುಚ್ಛ: ಉದ್ಗಮಮಂಜರೀ ವಿಳಾಸಂದಳೆದಿರ್ಪ ಮಾಧವಿ (ಶಬಶಂ. ೨–೪೧). [ಉದ್ಗಮ + ಮಂಜರಿ]

**ಉದ್ಗಮಮಾಲೆ** (ನಾ). ಹೂವಿನ ಮಾಲೆ; ಪುಷ್ಪಹಾರ: "ಉದ್ಗಮ ಮಾಲೆ – ಹೂವಿನ ಸರ" (ನಾನಾರ. ೭೨ ಟೀಕೆ). [ಉದ್ಗಮ + ಮಾಲೆ]

**ಉದ್ಗಮವೃಷ್ಟಿ** (ನಾ). ಹೂವಿನ ಮಳೆ; ಪುಷ್ಪವೃಷ್ಟಿ: ಸುರಿದುದು ದ್ಗಮವೃಷ್ಟಿ ಜಗಕಚ್ಚರಿಯದಾಗಿರೆ (ತಿಮ್ಮಶಾಂ. ೮–೧೨). [ಉದ್ಗಮ + ವೃಷ್ಟಿ]

**ಉದ್ಗಮಸಾರ** (ನಾ). ಹೂವಿನ ರಸ; ಮಕರಂದ: "ಉದ್ಗಮಸಾರ– ಹೂವ್ವಿನೊಳಗಣ ಧೂಳಿ" (ನಾನಾರ. ೧೧೪). [ಉದ್ಗಮ + ಸಾರ]

**ಉದ್ಗಮಾಸ್ತ್ರ** (ನಾ). ಹೂವಿನ ಬಾಣ: ಪುಳಿಂದನ ವಕ್ಷಮನುದ್ಗಮಾಸ್ತ್ರದಿಂದಿಸೆ ಕುಸುಮಾಸ್ತ್ರಂ (ರಾಜಶೇ. ೫–೧೦೫). [ಉದ್ಗಮ + ಅಸ್ತ್ರ]

**ಉದ್ಗಮಿಸು** (ಕ್ರಿ). ೧. ಮೇಲೇರು; ಹೊರಬರು: ಶರಧಿಯಿಂದುದ್ಗಮಿಸಿಯಡರುವ ತರಣಿಯಂದದಲಿ (ಅಕ್ರೂಚ. ೮–೮). ೨. "ಹುಟ್ಟು" (ಗಂಗಾಮು. ೪೧). [ಉದ್ಗಮನ + –ಇಸು]

**ಉದ್ಗರ**, ಉಗ್ಗಾರ, ಉಗ್ಗಾರು (ನಾ). = ಉದ್ಗಾರ೧: "ಉದ್ಗರಂ, ವಮನಮೋಕರಿಕೆ ಪರಿತಾಪಮೆನೆ ದವಥು" (ಮಂಗರಾ. ೧೧೩–೨); **ಉಗ್ಗಾರ**: ಅವನಿಗೆ ಉಗ್ಗಾರ ಎತ್ತಿದೆ ನಾಲ್ಕೈದುಸಾರಿ ವಾಂತಿಮಾಡಿಕೊಂಡ (ರೂಢಿ). **ಉಗ್ಗಾರು**: ಅವನಿಗೆ ಇಂದು ಉಗ್ಗಾರು ಹತ್ತಿದೆ (ರೂಢಿ). [< ಸಂ. ಉದ್ಗಾರ]

**ಉದ್ಗರಣೆ** (ನಾ). ಹುಟ್ಟಿಬಂದುದು; ಕಾಣಿಸಿಕೊಂಡುದು: ಮಾಯಾಸ್ಫುರಣೆಯೇ ಹಂಕೃತಿಯವರೊಳುದ್ಗರಣೆ ತನ್ಮಾತ್ರಗಳು (ಸದ್ಗುರು. ೫–೬). [ಸಂ. ಉದ್ಗಾರಣಾ]

**ಉದ್ಗರಿಸು**, ಉದಗಲಿಸು, ಉದುಗರಿಸು, ಉದುಗಲಿಸು (ಕ್ರಿ). ೧. ಹೊರಚೆಲ್ಲು; ಹೊರಹೊಮ್ಮಿಸು; ಕಾರು; ಕಕ್ಕು; ವಾಂತಿ ಮಾಡು: ಮುಂಡಿಯ ಪಂಚಾಂಗಮುಮಂ ತಂಡುಲದಿಂದಳೆಯೊಳಡುವುದಂಬಲಿಯಂ ಕೊಂಡುಂಡೊಡದಂ ಮೂಷಕನಿಂ ಖಂಡಮನುದ್ಗರಿಸುವ ಖಿಳವಿಷಮದು ಪರೆಗುಂ (ಖಮದ. ೧೨–೪೮). ೨. ಹೇಳು; ಮಾತಾಡು; ಉದ್ಗಾರ ತೆಗೆ: "ಎಲ್ಲವೂ ಪಾಪದ ಫಲ" ಎನ್ನುತ್ತಾ ಮೆಲ್ಲನೆ ಉದ್ಗರಿಸಿಕೊಂಡು ನಿಟ್ಟುಸಿರಿಟ್ಟಳು (ಒಡ್ಡಿಉ. ४೧); ಹತ್ತಿರದಲ್ಲಿನ ಆ ಮುದುಕ ಉದ್ಗರಿಸಿದ. "ಅಬ್ಬಾ ಅದ್ಭುತ! ಕಲ್ಪನೆಗೂ ಬಾರದು" (ಬದುಜ. ೮). **ಉದಗಲಿಸು**: ೩. ಮೀರು; ಅತಿಕ್ರಮಿಸು; ಹೊರದೂಡು: ಇದುವೆ ತಾ ಪ್ರಾರಬ್ಧಫಲವಿದನುದಗಲಿಸಲಾರಳವು (ತೊರರಾ. ೪–೫–೨೪). **ಉದುಗರಿಸು**: ೧. ಒದೆದುಕೊಂಡವು ಜಲಧಿಗರಳವನುದುಗರಿಸಿ [ಪಾಠಾಂ. ಉದುಗಲಿಸಿ]ದನು ಫಣಿಪ ಕೂರ್ಮನ ಹೃದಯ ಬಿಚ್ಚಿತು ಬಿಗುಹು ಸಡಿಲಿದವಾ ಕುಲಾದ್ರಿಗಳ (ತೊರರಾ. ೧–೧೫–೨೦); ಎಜಗಿದವು ಬಜಸಿಡಿಲ ಮೋಹರ ಮುಜಿದು ಹೆಗ್ಗಿಡಿಗಿಚ್ಚುಗಳನುದುಗರಿಸುತನಲನು ಬೀಸಿದನು ಸಂವರ್ತನಂದದಲಿ (ನಿಭಾಗ. ೮–೧೦–೨೫). **ಉದುಗಲಿಸು**: ೧. ಭೀಕರಭೂತಭೇತಾಳರುದುಗಲಿಸೆ [ಪಾಠಾಂ. ಉದ್ಧರಿಸೆ] ಖಡ್ಗವಾಯ್ದಾಣಿಯೆ ನಿಜಭುಜದ ತೀಂಟೆ ಹರೆಯೆ ಹಗೆಗಳ ಕೊಂದು (ಹಚಕಾ. ೧೦–೧೪); ದೇವಿಯಿದ್ದಳು ಬಾಗಿಮೊಡಲಿನ ಕೈವೆರಳ ಹತ್ತಿಗೆಯ ಕದಪಿನ ಜೀವನವನುದುಗಲಿಪ ನಯನದ ಮಣಿದ ಮಸ್ತಕದ (ತೊರರಾ. ೫–೩–೩೩). [ಉದ್ಗರ + –ಇಸು]

**ಉದ್ಗಲಿತ** (ಗು). ಹೊರಹೊಮ್ಮಿದ; ಕಾರಿದ; ಹೊರಬಿದ್ದ. [ಸಂ.]

**ಉದ್ಗಾಢ** (ಗು). ತುಂಬ ಹೆಚ್ಚಾದ; ಅತಿಶಯವಾದ. [ಸಂ.]

**ಉದ್ಗಾತ** (ನಾ). = ಉದ್ಗಾತೃ: ಉದ್ಗಾತನು ಸಾಮವೇದ ಗಾನಮಾಡುತ್ತಾನೆ (ಹಿಂದಸಾ. ೧೫೭); ಉದ್ಗಾತನಾ ಗಾನದಿಂದೆ ಕರ್ಣಾಕರ್ಣಿಯಾಗಿ ಪಸರಿಪ ಸಾಮವೇದದಂತಿರದೆಸೆವ (ಹೆಬ್ಬರ. ೮–೭೧). [< ಸಂ. ಉದ್ಗಾತೃ]

**ಉದ್ಗಾತೃ** (ನಾ). (ಯಜ್ಞಯಾಗಾದಿಗಳಲ್ಲಿ) ಸಾಮಗಾನ ಮಾಡುವ ಋತ್ವಿಕ್ಕು: ವ್ಯಾಸ ಕಶ್ಯಪ . . . ಮೈತ್ರಾವರುಣಾಗ್ನಿ ಪರಿಚಾರಕೋದ್ಗಾತೃನೇತೃಹೋತೃಜಮುದಗ್ನ್ಯಾದಿಗಳಪ್ಪ ಷೋಡಶರ್ತ್ವಿಜರ್ಕಳಿಂ (ಪಂಪಭಾ. ೬–೩೩ ವ). [ಸಂ.]

**ಉದ್ಗಾಯನ** (ನಾ). ಉತ್ತಮವಾದ ಗಾನ, —ಸಂಗೀತ: ಕರಿಣೀವೃಂದ ವ್ರಜೋದ್ಗಾಯನ ಸಮುದಯ ಕರ್ಣಾಮೃತಸ್ಯಂದಿ ಹಿಂದೋಳರವಂ (ಆದಿಪು. ೧೩–೭). [ಸಂ.]

**ಉದ್ಗಾರ** (ನಾ). ೧. ವಾಂತಿ; ವಮನ; ಕಾರುವಿಕೆ. ೨. ತೇಗು. ೩. (ಭಾವಾವೇಶದಿಂದ ಕೂಡಿದ) ಮಾತು, —ಕೂಗು.

ಉದ್ಗಾರತೆಗೆ = ಶಬ್ದಮಾಡು; ಕೂಗಿಹೇಳು: "ನಾನು ಈ ಹೆಣ್ಣಾಗಿ ಈಶ್ವರನಿಗೆ ನೈವೇದ್ಯವಿಲ್ಲದೇ ಅಪಕಾರವೆಸಗಲಾದೀತೇ?" ಎಂದು ಉದ್ಗಾರತೆಗೆದನು (ಶ್ರೀರಾಯ. ೫೭); "ಶಿವು ಬಂದ!" ಎಂದು ಉದ್ವೇಗದಿಂದ ಉದ್ಗಾರತೆಗೆದು "ಎಲ್ಲಿ ಹೋಗಿದ್ದೆಪ್ಪಾ ಮಗನೆ ಇಷ್ಟುದಿನ?" ಎಂದು . . . ಕೇಳುತ್ತ (ಪ್ರಣಸ. ೭೬). [ಸಂ.]

**ಉದ್ಗಾರವೆಱು** (ಕ್ರಿ). ಓಕರಿಸು; ಅಸಹ್ಯಪಡು: ಮನದನ್ನಳಪ್ಪ ಕೆಳದಿಗೆ ಮನಮಂ ಮುಂದಿಟ್ಟು ಬಟಿಕ ಕಳಿಸಿದೊಡವಳಾತನ ರೂಪುಗಂಡು ಕಣ್ಣಂ ಮನಕ್ಕಮುದ್ಗಾರವೆತ್ತು ಭೋಂಕನೆ ಮಗುಟ್ದಳ್ (ಯಶೋಚ. ೨–೩೩); "ಉದ್ಗಾರವೆತ್ತು – ಅಸಹ್ಯಪಟ್ಟು; ಹೇಸಿ" (ಯಶೋಚ. ಕೋಶ). [ಉದ್ಗಾರ + ಪೆಱು]

**ಉದ್ಗಾರಿ** (ಗು). ಹೊರಸೂಸುವ; ಹೊರಹೊಮ್ಮಿಸುವ: ದಳನ್ನೀಲನೀರೇಜನೀಬಂಧುರಗಂಧೋದ್ಗಾರಿಲೀಲಾಸರದ ಪುಳಿನದೊಳ್ . . . ದೇವಕುಳ್ಳಿರ್ಪುದೀಗಳ್ (ಕಾದಂಉ. ೧೪೪). [< ಸಂ. ಉದ್ಗಾರಿನ್]

**ಉದ್ಗಾರಿಸು** (ಕ್ರಿ). ೧. ಹೊರಸೂಸು; ಹೊರಚೆಲ್ಲು: ಘಟಸಮಾಧಿಯೊಳಿಹುದು ಮನಮುದ್ಗಾರಿಸುತ್ತಿಹುದು ಘಟಸುಮುದ್ರಾಂಕಿತದೊಳಿಹುದು (ಶಂಕದಾ. ೩–೬೬); ಶಂಕರ ನಿರೂಪಂಬಡೆದು ಸರವಣದೊಳುದ್ಗಾರಿಸಲ್ ಕಂದನುದಯವಾಗೆ (ಗುರುಚಾ. ४–೩೨). ೨. ವಾಂತಿ ಮಾಡು; ಕಾರು: ಬಿಸರುಹನೇತ್ರೆಯವರವಲೋಕಸಾಂದ್ರಚಂದ್ರಿಕೆಯ ನೀಂಟೆ ಮತ್ತದನುದ್ಗಾರಿಸುವಂತೆಸೆದಪುದೆಂದೀಕ್ಷಿಸಿದಂ ಪೂತೆಸೆವ ತಿಲಕಮಂ ಯದುತಿಲಕಂ (ಜಗವಿ. ೧೪–೬೯). ೩. ಉದ್ಗಾರ ತೆಗೆ; ಕೂಗು. [ಉದ್ಗಾರ + –ಇಸು]

**ಉದ್ಗಿರಣ** (ನಾ). ಕಾರುವುದು; ವಮನ; ವಾಂತಿ ಮಾಡುವಿಕೆ. [ಸಂ.]

**ಉದ್ಗೀಥ** (ನಾ). ಸಾಮಗಾನ ಮಾಡುವಿಕೆ: ಬ್ರಹ್ಮೋದ್ಗೀಥದ ಸರಸತಿಯಂತೆ ನಿರ್ಗುಣದಿಂ ಗುಣಮಯಿಯೊಗೆವಂತೆ (ಗಣೇಶ. ೧೬–೪೧೭). [ಸಂ.]

**ಉದ್ಗುಣ** (ನಾ). ಅತಿಶಯವಾದ ಗುಣ. [ಸಂ.]

**ಉದ್ಗುಣಯುತ** (ನಾ). ಅತಿಶಯವಾದ ಗುಣಗಳಿಂದ ಕೂಡಿದವನು : ಕನಲ್ದಂ ಸ್ವೈರಣೆವಂತನುದ್ಗುಣಯುತಂ ತಾಂ ನಿರ್ಗುಣಂ ದುಷ್ಕುಲಂ ಧನಿಕಂ ಸತ್ಕುಲಜಾತನೈ (ಸೋಮೇಶ. ೫೨). [ಸಂ.]

**ಉದ್ಗೂರ್ಣ** (ಗು). ಮೇಲೆತ್ತಿದ ; ಮೇಲೆ ಹಿಡಿಯಲ್ಪಟ್ಟ. "ಉದ್ದವಾಗಿ ಎಳೆಯಲ್ಪಟ್ಟ" (ಅಮರ. ಟೀಕೆ). [ಸಂ.]

**ಉದ್ಗ್ರಂಥ** (ಗು). ೧. ರಟ್ಟುಕಟ್ಟದ ; ಬಿಡಿಬಿಡಿಯಾದ. (ನಾ). ೨. ವಿಭಾಗ ; ಅಧ್ಯಾಯ. ೩. ಪ್ರೌಢವಾದ ಗ್ರಂಥ : ಉದ್ಗ್ರಂಥಗಳನ್ನು ಎಲ್ಲರೂ ಮೂಲದಲ್ಲಿಯೇ ಓದುವುದು ಅಸಾಧ್ಯ (ಧ್ವನ್ಯಾಲೋ. ೨ ಮುನ್ನುಡಿ). [ಸಂ.]

**ಉದ್ಗ್ರೀವ** (ನಾ). ಕೊರಳನ್ನು ನಿಮಿರಿಸಿದವನು; ಎತ್ತಿದ ಕೊರಳುಳ್ಳವನು : ಸಮ್ಯಗ್ದರ್ಶನಮಂ ಪೊಗಟ್ದುದರ್ಕೆ ದರ್ಕಂ ನುಂಗಿದಂತುದ್ಗ್ರೀವನಾಗಿ (ಶಾಂತಿಪು. ೮–೧೫೧ ವ). [ಸಂ.]

**ಉದ್ಘ** (ಗು). ೧. ಶ್ರೇಷ್ಠವಾದ ; ಪ್ರಶಸ್ತವಾದ ; ಉಚ್ಚವಾದ : ಈ ಧರೆಯ ಪೆಂಡಿರುದ್ಘಪಯೋಧರೆಯ . . . ಬೆಡಂಗನಾರುಮೇನೆಯ್ದುವರೇ (ಆದಿಪು. ೪–೪೬) ; ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂಗೊಳಿಸಿದುದುದ್ಘಕೀರ ಮದಕೋಕಿಲ ಗರ್ಜಿತ ತರ್ಜಿತಂಗಳಿಂ (ಅಜಿಪು. ೬–೨೩). (ನಾ). ೨. ಸುಖ ; ಉತ್ತಮತೆ. ೩. ಬಲ. ೪. ಮಾದರಿ. ೫. ಒಳ್ಳೆಯವನು : "ಪ್ರಕಾಂಡಃ, ಉದ್ಘಃ – ಈ ೨ ಒಳ್ಳಿದಂ" (ಹಲಾಯು. ೬೨–೨೨೩). [ಸಂ.]

**ಉದ್ಘಕೀರ್ತಿ** (ನಾ). ಶ್ರೇಷ್ಠವಾದ ಕೀರ್ತಿಯುಳ್ಳವನು : ತೇಜಿರಾಜ ದಂಡಾಧಿಪನಂ ಪರಾರ್ಥ್ಯನಿಧಿಯಂ ನುತಮೂರ್ತಿಯನುದ್ಘಕೀರ್ತಿಯಂ (ಕಇಆ. ೭೪–೧೨–೨೩ ; 1170). [ಉದ್ಘ + ಕೀರ್ತಿ]

**ಉದ್ಘಕೃತಿ** (ನಾ). ಶ್ರೇಷ್ಠವಾದ ಕೃತಿ, —ಗ್ರಂಥ : ನೆಗಟ್ದವರಿರ್ವರ ಪೆಸರ್ಗಂ ನೆಗಟ್ದುವು ತನ್ನೆರಡುಮುದ್ಘಕೃತಿಗಳ್ ರಾಯಂ ಮಗನತ್ತಿ ಮಬ್ಬೆ ಮಗಳೆನೆ ನೆಗಟ್ದಂ ಸಂತಾನವೃದ್ಧಿಯಿಂ ಕವಿರತ್ನಂ (ಅಜಿಪು. ೧೨–೫೩). [ಉದ್ಘ + ಕೃತಿ]

**ಉದ್ಘಚಾರಿ** (ನಾ). ಶ್ರೇಷ್ಠವಾದ ನಡತೆಯುಳ್ಳವನು : ಸದಾಚಾರ ಸಮೇತರಾದರೆಮಗೀಗೆ ಶಿವಾಸ್ಪದಮುಖ್ಯ ಸೌಖ್ಯಮಂ ಸೂರಿಗಳಂಗಜಾರಿಗಳತತ್ತ್ವವಿದಾರಿಗಳುದ್ಘಚಾರಿಗಳ್ (ಶಾಂತಿಪು. ೧–೩). [ಸಂ. ಉದ್ಘಚಾರಿನ್]

**ಉದ್ಘಟ** (ನಾ). ಒಂದು ಬಗೆಯ ಪಾತ್ರೆ; ದೊಡ್ಡಪಾತ್ರೆ, —ಮಡಕೆ: "ಅಣುಮಣಿಕೆ ಮೊಗೆಯಕ್ಕುವುದ್ಘಟಂ[ಪಾಠಾಂ. ಕ. ಉಧ್ವಟಂ, ಉಪ್ಪಟಂ] ಕರಬೋನಮಕ್ಕು" (ಮಂಗರಾ. ೬೨–೨೪). [ಸಂ.]

**ಉದ್ಘಟನ** (ನಾ). ೧. ತೆರೆಯುವುದು ; ಅನಾವರಣ ; ಪ್ರಕಟನೆ. 'ಉದ್ಘಾಟನ' ಪರಾ. ೨. ತಾಗುವಿಕೆ ; ಘಟ್ಟನ. [ಸಂ.]

**ಉದ್ಘಟಿಸು** (ಕ್ರಿ). ಮೇಲೆಬಿದ್ದು ತಾಕು ; ಘಟ್ಟಿಸು : ಸ್ಫಟಿಕಲಿಂಗ ಸ್ಫುಟದ ಮರೀಚಿಗೆ ಚಟುಲಭಾಸ್ಕರಕರಪಟಲ ಉದ್ಘಟಿಸದಡಗಲು (ಬಸವು. ೫೧–೬೧). [ಉದ್ಘಟನ + –ಇಸು೩]

**ಉದ್ಘಟ್ಟ** (ನಾ). = ಉದ್ಘಟ್ಟನ : ಸುಯೋಧನೋರು ಮಕುಟೋದ್ಘಟ್ಟ ಪ್ರತಿಜ್ಞಾಕ್ಷರಾವಳಿವಿನ್ಯಸ್ತವಿಶಾಲನಿಶ್ಚಳಶಿಲಾಸ್ತಂಭಂ... ಹಿಡಿಂಬಾಂತಕಂ (ಗದಾಯು. ೧–೫೫). "ತುಳಿದು ಕುಟ್ಟುವುದು" (ಗದಾಸಂ. ಟಿಪ್ಪಣಿ). [ಸಂ.]

**ಉದ್ಘಟ್ಟನ** (ನಾ). ಬಲವಾಗಿ ಕುಟ್ಟುವಿಕೆ ; ಸದೆಬಡಿಯುವಿಕೆ : ಎಚಿಡುಯ್ದಂ ಲಕ್ಷ್ಮಣಂ ಹಸ್ತಪಾದತಲೋದ್ಘಟ್ಟನದಿಂ ಪಡಲ್ವಡಿಸುತುಂ ಮಾಜಾಂತ ಸಾಮಂತರಂ (ಪಂರಾಮಾ. ೮–೩೧). [ಸಂ.]

**ಉದ್ಘನ** (ನಾ). ಬಡಗಿಯು ಮರಗೆಲಸ ಮಾಡುವಾಗ ಒತ್ತಿಗಾಗಿ ಅಡಿಗೆ ಇಟ್ಟುಕೊಳ್ಳುವ ಪಟ್ಟಡಿ ; ಒತ್ತುಗೊರಡು ; "ಅಡಿತುಂಡು" (ಅಮರ. ಟೀಕೆ). [ಸಂ.]

**ಉದ್ಘಾಚಾರ** (ನಾ). ಶ್ರೇಷ್ಠವಾದ ಆಚಾರ : ತನುಸೌಂದರ್ಯದಿ ನನ್ನನಿನ್ನನೆನಲುದ್ಘಾಚಾರದಿಂದನ್ನನಿನ್ನನೆನಲ್ . . . ಆಕ್ಷೂಣತ್ವದಿಂದನ್ನನಿನ್ನನೆನಲ್ಪಾರದು ನಿನ್ನಂ (ಶಾಂತಿಪು. ೧–೮೫). [ಉದ್ಘ + ಆಚಾರ]

**ಉದ್ಘಾಟ** (ನಾ). ೧. ಕಾವಲು ಮನೆ ; ಠಾಣೆ. ೨. ಪ್ರಸ್ತಾವ ; ಸಂದರ್ಭ : "ಉದ್ಘಾ[ತ]ಟಃ, ಪ್ರಸ್ತಾವಃ, ದ್ವಾರಃ, ಅವಸರಃ, ಕ್ಷಣಃ– ಈ ೫ ಅವಸರಂ" (ಹಲಾಯು. ೧೨೩–೬೫). [ಸಂ.]

**ಉದ್ಘಾಟಕ** (ನಾ). ೧. ಆರಂಭಿಸುವವನು ; ತೆರೆಯುವವನು. ೨. ಬೀಗದಕೈ ; ಕೀಲಿಕೈ. ೩. (ಬಾವಿಯಿಂದ) ನೀರನ್ನು ಎತ್ತುವ ರಾಟೆ : "ಉದ್ಘಾಟಕಂ, ಘಟೀಯಂತ್ರಂ, ಪಾದಾವರ್ತಃ, ಅರಘಟ್ಟಕಃ —ಈ ೪ ರಾಟಣಂ" (ಹಲಾಯು. ೧೧೩–೬೩). [ಸಂ.]

**ಉದ್ಘಾಟನ** (ನಾ). ೧. ತೆರೆಯುವಿಕೆ : ಪೂರ್ವೋಕ್ತಸ್ಥಿತಿಯೊಳ್ ವಜ್ರಕವಾಟೋದ್ಘಾಟನಂಗೆಯ್ದು (ಶಾಂತಿಪು. ೧೧–೬೭). ೨. ಆರಂಭೋತ್ಸವ. ೩. ಎತ್ತುವುದು ; ಮೇಲೇರಿಸುವುದು. ೪. (ಬಾವಿಯಿಂದ) ನೀರನ್ನು ಎತ್ತುವ ರಾಟೆ. [ಸಂ.]

**ಉದ್ಘಾಟನೆ** (ನಾ). = ಉದ್ಘಾಟನ ೨ : ಸಾಯಿಬಾಬಾ ಮಂದಿರದ ಉದ್ಘಾಟನೆಯನ್ನು ನೆರವೇರಿಸಿದರು (ರೂಢಿ). [ಸಂ. ಉದ್ಘಾಟನಾ]

**ಉದ್ಘಾಟಿಸು** (ಕ್ರಿ). ೧. ಆರಂಭಿಸು ; ತೆರೆ : ಶ್ರೀಯುತರು ನೂತನ ಭವನವೊಂದನ್ನು ಉದ್ಘಾಟಿಸಿದರು (ರೂಢಿ). ೨. ದೋಷವನ್ನು ಎತ್ತಿ ಹೇಳು ; ಆಕ್ಷೇಪಿಸು : ತನ್ನನುದ್ಘಾಟಿಸಿ ನುಡಿದೊಡುಮ್ಮಚ್ಚದೊಳ್ ಮೆಚ್ಚದೆ (ಪಂಪಭಾ. ೧೨–೧೭೬). [ಉದ್ಘಾಟನ + –ಇಸು೩]

**ಉದ್ಘಾತ** (ನಾ). ೧. ಬಲವಾದ ಪೆಟ್ಟು ; ಹೊಡೆತ. ೨. ಒಂದು ಆಯುಧ ; ಗದೆ. ೩. ಆರಂಭ ; ಉಪಕ್ರಮ ; ಉದ್ಘಾಟನೆ. ೪. ಪ್ರಾಣಾಯಾಮ. ೫. (ಗ್ರಂಥಗಳಲ್ಲಿನ) ಅಧ್ಯಾಯ ; ವಿಭಾಗ. ೬. ಜಾರುವುದು ; ಮುಗ್ಗರಿಸುವುದು : ಮಾತೇನುದ್ಘಾತದೋಷಪ್ರಕರರಹಿತನೆನಿಪನಾಪ್ತಂ (ಸುಕುಮಾ. ೫–೩೯). [ಸಂ.]

**ಉದ್ಘಾಸಿ** (ನಾ). ಶ್ರೇಷ್ಠವಾದ ಕತ್ತಿ : ಗಜಘಟಾಟೋಪ ಕುಂಭಸ್ಥಳೀಭೇದನನುಗ್ರೋ[ದ್ಘಾ]ಸಿ [ಪಾಠಾಂ. ಉದ್ಘಾಸಿ, ಉದ್ವಾಸಿ] ಭಾಸ್ವದ್ಭುಜಪರಿಘನನಾರೂಢಸರ್ವಜ್ಞನಂ (ಪಂಪಭಾ. ೧–೫೧). [ಉದ್ಘ + ಅಸಿ]

**ಉದ್ಘೃಷ್ಟ** (ಗು). ತಿಕ್ಕಿದ ; ಉಜ್ಜಿದ : ದ್ವಿರದೋದ್ಘೃಷ್ಟಘನಸ್ರವತ್ಸರಳಸಾರಾಮೋದಮುದ್ದಾಮಭೃಂಗರವಂ (ಆದಿಪು. ೧೩–೯). [ಸಂ.]

**ಉದ್ಘೋಷ** (ನಾ). ಗಟ್ಟಿಯಾದ ಶಬ್ದ ; ಬಲವಾದ ಧ್ವನಿ : ಮಂಗಳಾರತಿಯ ವಾದ್ಯದನಿ, ಭೇರಿಯ ರವಂ ಹಂಪೆಯ ವಿರೂಪಾಕ್ಷನಾಲಯದ ಉದ್ಘೋಷಂ (ವಿಜಡ. ೧). [ಸಂ.]

**ಉದ್ಘೋಷಣ** (ನಾ). = ಉದ್ಘೋಷಣೆ (ಈ). [ಸಂ.]

**ಉದ್ಘೋಷಣೆ** (ನಾ). ಗಟ್ಟಿಯಾಗಿ ಕೂಗಿ ಹೇಳುವುದು ; ಸಾರುವುದು. [ಸಂ. ಉದ್ಘೋಷಣ]

**ಉದ್ಘೋಷಿಸು** (ಕ್ರಿ). ಗಟ್ಟಿಯಾಗಿ ಕೂಗಿ ಹೇಳು ; ಸಾರು : ಕುಡಿದಂ ಕುಂಭಜನೆನ್ನ ಸಾತ್ಮವಧುವೊಳ್ ಕೂಡಿರ್ದನೆಂದಿಂದರಂ ಕಡೆದಂ ತನ್ನಹಿತಾದ್ರಿಗಾಂ ಶರಣಮೆಂದು . . . ಹಾಲಾಹಲಂಗೊಟ್ಟೊಡಂ ಮೃಡನೊರ್ವಂ ಮುಳಿಯಂ ಗಡೆಂದುಲಿವವೋಲುದ್ಘೋಷಿಕುಂ ಸಾಗರಂ (ಶಬಶಂ. ೧–೩೧) ; ಹತ್ತು ವೈತಾಳಿಕರು ಏಕಕಂಠದಿಂದ ಹೊಯಿಸಳೇಶ್ವರರ ಬಿರುದಾವಳಿಗಳನ್ನು ಉದ್ಘೋಷಿಸಿದರು (ಶಾಂತಲಾ. ೧೦೬). [ಉದ್ಘೋಷಣ + –ಇಸು೩]

**ಉದ್ದ** (ನಾ). ೧. ಎತ್ತರ; ಉಚ್ಚ: "ಆಯಾಮಃ, ಆನಾಹಃ – ಈ ೨ ಉದ್ದಂ" (ಹಲಾಯು. ೧೩೦–೧೦೧); "ತುಂಗಮುನ್ನತಮುಚ್ಚಮೆನಲುದ್ದಮಕ್ಕು" (ಮಂಗರಾ. ೧೩೨–೨೩); "ಉದ್ದಮುಚ್ಚಮಕ್ಕುಂ" (ಕವಿಕಂ. ೨೦೬); ವಟು ಮರದುದ್ದವಾದನನಿತಲ್ಲದೊಡಿತ್ತಲೆಯುದ್ದವಾದನಕ್ಕಟ ಮದಿಲುದ್ದವಾದನಿವನಾವನೊ ಪೆರ್ಮರದುದ್ದವಾದನಿಂತುಟು ಗಿರಿಯುದ್ದವಾದನಿದು ವಿಸ್ಮಯಮಾ ಮುಗಿಲುದ್ದವಾದನೋವಟಮಟಗಂ ದಿಟಕ್ಕೆನೆ ಕರಂ ಬಳೆದಂ ಮನದಂತೆ ವಾಮನಂ (ಅರ್ಥಸೇ. ೬–೨೪); ನಿನ್ನುದ್ದಕ್ಕೆ ಹೊನ್ನಂ ಸುರಿಯನೇ ತರಿಸಿ (ಬಸವು. ४೦–೧೩); ಹದಿನಾಜುಯೋಜನದುದ್ದದುಪ್ಪರಿಗೆ (ತೊರರಾ. ೫–೩–೩); ಉದ್ದ ಬೆಳೆದವನಿಗೆ ಬುದ್ಧಿ ಕಡಿಮೆ (ಗಾದೆ). ೨. ಲಂಬ; ದೀರ್ಘ; ನೀಳ: ಮೇದಿನಿಯಳತೆಗೆ [ಕೆಳೆ] ಪಿರಿದಾದುದೆ ತಾನುದ್ದವೆನಿಪುದು (ವ್ಯವಹಾ. ೩); ಎರಡು ಸಾವಿರದುದ್ದವದು ಮತ್ತೆರಡು ಸಾವಿರದಗಲ (ಕುವ್ಯಾ.ಸ. ೩–೫೬). ೩. ಆಳ: ಸಾವಂಗೆ ಸಮುದ್ರಂ ಮೊಟಕಾಲುದ್ದಂ (ಪಂಚತಂ. ೮೯–४).

ಉದ್ದಕು, ಉದ್ದಕ್ಕೂ = ಎಡೆಬಿಡದೆ; ಅವಿಚ್ಛಿನ್ನವಾಗಿ: ಹೆಜ್ಜೆಯಲಿ ಹಿಗ್ಗಿರಲು, ಹಾದಿಯುದ್ದಕು ಸೊಗಸು (ಉಯ್ಯಾಲೆ. ೫೩); ಆತನು ಉದ್ದಕ್ಕೂ ತನ್ನ ಕಥೆಯನ್ನು ಹೇಳಿಕೊಂಡು ಬಂದ (ರೂಢಿ). ಉದ್ದದ ಗಂಜಿ = (ಕರಾ) ತೆಳ್ಳಗಿನ ಗಂಜಿ: ದಿನ — ಎರಡುಪಾವು ಅಕ್ಕಿಯನ್ನು ಬೇಯಿಸಿ, ಬೆಳ್ಳಿ ಒಂದು ಉದ್ದದ ಗಂಜಿಯನ್ನು ಮಾಡುತ್ತಾಳೆ (ಚೋಮದು. ೧೧). ಉದ್ದನೆಯ, ಉದ್ದನ್ನ = ನೀಳವಾದ; ಎತ್ತರವಾದ: ಉದ್ದನೆಯ ಬಿಳಿಯ ಜುಬ್ಬ (ಆಯರ್ಕ. ೧); ಉದ್ದನ್ನ ಬಿರಸುಕೊಡಲು (ಮುಂಬಯಿ. ೩–೩೦ ಕಿ); ಉದ್ದನ್ನ ಪಟ್ಟೆಗಳು (ಮುಂಬಯಿ. ೩–೩೧ ಕಿ). ಉದ್ದಬಿದ್ದಮಾಗು = ಅಸ್ತವ್ಯಸ್ತವಾಗು: ತುಜುಗಿದ ಮುಗಿಲಾ ಮುಗಿಲಿಂದೆಜಗುವ ಮಟಿ ಕದಡಿ ಬರ್ಪ ತೊಜ ಬೆಟ್ಟು ತೆವರ್ ಮೊಜಡುಪಜಲಧಿಗಳೆನೆ ಜನಮುಜಿಯಜಿಯೆ ದಲುದ್ದಬಿದ್ದ ಮಾಯ್ತು ವನಿತಳಂ (ಆದಿಪು. ೬–೬೨). [< ಸಂ. ಊರ್ಧ್ವ]

**ಉದ್ದಂ, ಉರ್ದಂ** (ಅ). ಉದ್ದವಾಗಿ: ಮರಂಗಳ ಪೋಟ್ಟಿಂತೆ ಕರಗಸಂಗಳಿಂದಮುದ್ದಂ ಪಿಡಿದು ಪೋಟ್ಟುದುಂ (ವಡ್ಡಾರಾ. ೬೯–೩೦). ಉರ್ದಂ: ಇಱಿವ ಬಲಿಗುಡುವ ಪೈರಂದದಿಪುರ್ದಂಸೀಳ್ವ ಪೋಟ್ವ ಪರವುವ (ಶಾಂತಿಪು. ೭–४೦). [< ಉದ್ದ]

**ಉದ್ದಂಕೆ** (ನಾ). ಉದ್ದವಾದ ಸಂಖ್ಯೆ; ಒಂದರ ಕೆಳಗೆ ಒಂದರಂತೆ ಅಂಕಿಗಳನ್ನು ಬರೆದ ಸಾಲು (ಕಿ). [ಉದ್ದ + ಅಂಕೆ₁]

**ಉದ್ದಂಗಿ** (ನಾ). ಉದ್ದನೆಯ ಅಂಗಿ; ನಿಲುವಂಗಿ: ಗಂಡಸರು ಇಜಾರು, ಉದ್ದಂಗಿ, ಶಲೆ, ಮುಂಡಾಸುಗಳನ್ನು ಮೈಮೇಲೆ ಹಾಕಿಕೊಂಡು (ಕಭಾಗೆ. ೨೦೯); ಉದ್ದಂಗಿಯ ಜನರು ಮಾತ್ರ ... ಸಾಕಷ್ಟು ಹೊತ್ತು ಕಳೆಯುವರು (ಚೀನಬಾ. ೨४). [ಉದ್ದ + ಅಂಗಿ₂]

**ಉದ್ದಂಡ₁** (ಗು). ೧. ಮೇಲಕ್ಕೆ ಎತ್ತಿದ ನಾಳವುಳ್ಳ, —ಕೋಲುಳ್ಳ: ಉದ್ದಂಡ ಪುಂಡರೀಕಂಗಳಂ ಶ್ವೇತಾತಪತ್ರಂಗಳೆಂದೇ ಮಾಡಿ ಪಿಡಿಸಿಯುಂ (ಆದಿಪು. ೮–४೧ ವ). ೨. ನೀಳವಾದ; ಎತ್ತರವಾದ: ಉರಿಗಣ್ ಕೆತ್ತುವ ಮಿಸೆ ಪೆರ್ಚಿದ ಕೊರಲ್ ಪೆರ್ಬಾಲವುದ್ದಂಡವಕ್ರರದಂ ಮಿಂಚುವ ಮೆಯ್ (ನಳಚಂ. ೭೬); ಮಂಗಳಂಗಳ ಸಾಲು ಶೃಂಗಾರಂಗಳೊಪ್ಪದ ಕೀಲು ಭಕ್ತಜನಂಗಳಿಗೆ ಬಲದೋಳು ಹರನುದ್ದಂಡಕರವಾಳು (ಬಸವು. ೨೮–४೬). ೩. ಪ್ರಬಲವಾದ; ಪ್ರಚಂಡವಾದ; ಶ್ರೇಷ್ಠವಾದ: ಧರೆಯೊಳಗೆ ಬೇಗದಿಂ ಹರಿಣನತ್ಯಧಿಕವಾ ಹರಿಣನಿಂ ಮರುತನುದ್ದಂಡವು (ಹಚಕಾ. ೬–೩೩); ಸೆಣಸುವಭಟರ ಗಂಡ ಸಮರಾಂಗಣಕಮಲಭೇರುಂಡನಾ ದಿನಮಣಿಯ ಮಗನುದ್ದಂಡಕರ್ಣನ ಕಂಡಳಾ ಕುಂತಿ (ಕುವ್ಯಾ.ಉ. ೧೧ ಸೂಚನೆ); ಆಗಳೊಂದುದ್ದಂಡಪ್ರಚಂಡಕಂಠೀರವಂ ಗೆಂಟನೊಳ್... ನಿಂದು (ರಾಜಶೇ. ೫–೧೧೫ ವ); ವೀರಶ್ರೀಯನ್ನು ಒಲಿಸಿಕೊಳ್ಳಬಲ್ಲ ಉದ್ದಂಡದೋರ್ದಂಡಬಾಹುಯುಗ್ಮ (ಶಾಂತಲಾ. ೧೦೭). (ನಾ). ४. ದರ್ಪ; ಅಹಂಕಾರ; ಗರ್ವ: ವಿಪರೀತದ ತೊಂಡುತೊಳಸಂ ಮಜಿದು ಕರ್ಮಾಂಗಮಾಗಿರ್ದ ಪಿಂಡಮಂ ತೆಗೆದು ಮಡುವಿನೊಳು ಹಾಯ್ಕೆಂಡೊಡುದ್ದಂಡದಿಂದೆತ್ತಿ ಬೀದಿಗೆ ಬಿಸುಡಲಾ ದ್ವಿಜಂ ರೋಷಭೀಷಣನಾದನು (ಜೈಮಿಭಾ. ೧೦–೩೦). ೫. ಗರ್ವದ ಮಾತು; ಅಹಂಕಾರದ ಮಾತು: ಉದ್ದಂಡವ ನುಡಿವ ಮಂಡಲಿಕರ ಗಂಡ ಸ್ವಾಮಿಗೆ ಸ್ವಾಮಿದ್ರೋಹರ ಗಂಡ (ಸೌಇಇ. IX–ii, ४೭४–४; 1497). [ಸಂ.]

**ಉದ್ದಂಡ₂** (ಅ). ದೀರ್ಘವಾಗಿ; ಬಹುಕಾಲದ ವರೆಗೆ: ಉದ್ದಂಡ ಬಾಳಣುಗ (ಹಟ್ಟಿರ. ೮–೨೧). [< ಉದ್ದಂಡ₁]

**ಉದ್ದಂಡತನ** (ನಾ). ದರ್ಪ; ಪ್ರತಿಷ್ಠೆ; ಅಹಂಕಾರ; ಶೌರ್ಯ: ಕಂಡಿರೇ ದೇವಿಯರೆ ನರನುದ್ದಂಡತನವನು (ಕುವ್ಯಾ.ಆ. ೭–೨४). [ಉದ್ದಂಡ₁ + -ತನ]

**ಉದ್ದಂಡತೆ** (ನಾ). ೧. = ಉದ್ದಂಡತನ. ೨. ಉದ್ದವಾದ ತಾಳು ಇರುವಿಕೆ; ಉದ್ದವಾದ ನಾಳವಿರುವಿಕೆ: ೧,೨. ನೆಗಲ್ದುದ್ದಂಡತೆ ಕಂಟಕಸ್ಥಿತಿ ಸರೋಜವ್ರಾತದೊಳ್ ರಾಜಲೀಲೆ ಗುರುಸ್ಫೂರ್ತಿ ನಭೋಗ್ರದೊಳ್... ಪೀನಮೊಪ್ಪುಗುಮುರ್ವೀಶರೊಳೊಪ್ಪದೆಂದೆನಿಸಿದಂ ತನ್ನೇಟಿಗ್ಗಿಯಿಂ ಪದ್ಮಜಂ (ಪುಷ್ಪಪು. ೫–೫೬). [ಸಂ. ಉದ್ದಂಡತಾ]

**ಉದ್ದಂಡದೇವತೆ** (ನಾ). ಶ್ರೇಷ್ಠವಾದ ದೇವತೆ: ಕಂಡರಿಸಿದ ಕಲ್ಲ ಪುತ್ತಳಿಗಳ ಮೊಗಗಂಡು ದೇವತೆಗಳೆಂದವನು ಕೊಂಡಾಡಿ ಬೇಡಿದರೀವವೆ ವರವನುದ್ದಂಡ ದೇವತೆ ನಿನ್ನಂತೆ (ಕುರಾಸಾಂ. ೨೩–೮೧). [ಉದ್ದಂಡ₁ + ದೇವತೆ]

**ಉದ್ದಂಡನಮುಸ್ಕಾರ** (ನಾ). ದೀರ್ಘದಂಡ ನಮುಸ್ಕಾರ; ಸಾಷ್ಟಾಂಗ ನಮುಸ್ಕಾರ: ಉದ್ದಂಡ ನಮುಸ್ಕಾರಮಾಡಿ ಸ್ವಾಮಿಾ ನೀವೇ ಗತಿ ಎಂದು ದೀನನಾಗಿ ಪ್ರಾರ್ಥಿಸಿಕೊಂಡನು (ಕುರುಕಾ. ೯೩). [ಉದ್ದಂಡ₁ + ನಮುಸ್ಕಾರ]

**ಉದ್ದಂಡಷಟ್ಪದ** (ನಾ). = ಉದ್ದಂಡಷಟ್ಪದಿ: ಸಲ್ಲಲಿತಮಪ್ಪ ಸಕ್ಕದದಿ ಪೂರ್ವಾಚಾರ್ಯರುಲ್ಲಸದಿ ಪೇಳ್ದುದಂ ಕರ್ಣಾಟಕೃತಿಬಂಧದಲ್ಲಿಯುದ್ದಂಡಷಟ್ಪದಮಾಗಿ ಬರೆದೆನಿಂತಿದನು ಭವ್ಯರು ಕೇಳ್ವುದು (ಸಮ್ಯಕಾ. ೧–೯). [ಉದ್ದಂಡ₁ + ಷಟ್ಪದ]

**ಉದ್ದಂಡಷಟ್ಪದಿ** (ನಾ). [ಛಂದ] ಷಟ್ಪದಿಯಲ್ಲಿ ಒಂದು ಬಗೆ; ವಾರ್ಧಕ ಷಟ್ಪದಿ: ಉದ್ದಂಡ ಷಟ್ಪದಿ (ರಾಘಚ. ೧೯–೮೧); ವೆಂಕಟನೃಪಂ ಶಿವಗೀತೆಯರ್ಥಮನುದ್ದಂಡಷಟ್ಪದಿಗಳಿಂ ಕನ್ನಡಿಸಬೇಕೆಂದು ನೇಮಿಸಿದನು (ಕವಿಚ. II, ३೧೯, ಶಿವಗೀತೆ). [ಉದ್ದಂಡ₁ + ಷಟ್ಪದಿ]

**ಉದ್ದಂಡಿಕೆ** (ನಾ). ದರ್ಪ; ಪ್ರತಿಷ್ಠೆ; ಅಹಂಕಾರ; ಗರ್ವ: ದಂಡಿಸುವರಾರೆನ್ನನೆಂಬುದ್ದಂಡಿಕೆಯೊಳೆಮ್ಮರ್ಥವಂ ನೀಂ ಕೊಂಡೆಯಲ್ಲದೆ ಮಿಕ್ಕಿನವರಾದಡೇನವರ ದಂಡಿಸದೆ ಬಿಡುವೆನೆ (ಬಸವು. ೧೧–೮); ತಾಯ ತಂದೆಯಚಿತ್ತಮುಂ ಭಾವಿಸುತೆ ತರಬೇಕೊ ಉದ್ದಂಡಿಕೆಯೊಳೀಗ ಸೇವಕರ ಬಿಟ್ಟು ಪಿಡಿತರಿಸಬೇಕೋ (ಪ್ರಭುಪು. ೮–೨೭). [ಉದ್ದಂಡ + -ಇಕೆ]

**ಉದ್ದಂಡಿಸು** (ಕ್ರಿ). ತಿರಸ್ಕರಿಸು; ಅಲ್ಲಗಳೆ; ಮಿಾರು: ಕಂಡುದ ಮಜಿಯಿಟ್ಟೆನೆ ನಿನ್ನ ಸೊಲ್ಲನುದ್ದಂಡಿಸಿದೆನೆ ಸೇವೆಗಲತೆನೆ ಕೊಂಡಾಡದುಬ್ಬಿದೆನೆ ನಿನ್ನ ಪಿಂತಾಡಿಕೊಂಡೆನೆ ಮುಳಿಸ ಬಿಟ್ಟುಸುರೆಂದಾ (ಸೊಬಸೋ. ೧೩–೧೨); ಮಗನ ಶಿರವಂ ನೀಂ ಖಂಡಿಸೆಂದಾ ಪ್ರಧಾನಿಗೆ ಬೆಸಸಲೊಡೆಯನ ಕುಮಾರನೆಂದುಳಿಹಿ ತನ್ನ ಮಂಡೆಯಂ ಮನೆಗೆ ಬಂದರಿದುಕೊಳೆ ಮಂತ್ರಿಯುದ್ದಂಡಿಸಿದನೆಲವೊ ಸರಿದಾಯಿ ನೀನೀತನಂ ಕೊಂಡೊಯ್ದು ಮಸ್ತಕವನರಿಯೆನುತೆ (ಚಬವು. ೫೫–೧೫). [ಉದ್ದಂಡ₁ + -ಇಸು]

**ಉದ್ದಂಡೆ** (ನಾ). ಸಮರ್ಥಳಾದವಳು; ಪ್ರೌಢೆ; ಗಟ್ಟಿಗಿತ್ತಿ; ಗರ್ವಿಷ್ಠೆ: ಅಳಿಗೊಳೆ ರಂಜಿಸುವ ಜಾಣಿನ ಮೇಳದುದ್ದಂಡೆಯರು ಜೊತ್ತಿನ ಸೂಳುಪಾಳಿಯೊಳಂಗನೆಯರೈದಿದರು ಗೋಪತಿಯ (ಅಕ್ರೂಚ. ೪-೧೫); ಕಂಡ ಕಂಡವರೊಳು ಕಡುದೈನ್ಯವಡೆಯದುದ್ದಂಡೆಯೆನಿಸಿ ತಾನಿರದೆ ಗಂಡನ ಘನತೆಯೆಂತಂತು ಪೆರ್ಮೆಯ ಕೈಕೊಂಡೆಸೆವುದು ಕೋವಿದೆಯರು (ಹದಿಬ. ೪-೪೧). [ಉದ್ದಂಡ$_1$ + -ಎ$_2$]

**ಉದ್ದಂನುಡಿ** (ಕ್ರಿ). ಹೆಚ್ಚು ಮಾತನಾಡು; ಗಟ್ಟಿಯಾಗಿ ಮಾತಾಡು: ಎಡೆಗೋದಿರದಿರಿಮುದ್ದಂ [ಪಾಠಾಂ. ಉಚ್ಚಂ, ಊಚಂ] ನುಡಿಯದಿರಿಂ ನೃಪತಿ ನುಡಿಯೆ ನುಡಿಯಿಂ (ಆದಿಪು. ೯-೬); ಇವು ಮತ್ತೇ ಭಂಗಳುದ್ದಂನುಡಿಯದೆ ಭಯದಿಂದಟ್ಟಿದಂ ಮಾಳವಂ (ಧರ್ಮಾಮೃ. ೪-೧೪೪). [ಉದ್ದಂ + ನುಡಿ$_1$]

**ಉದ್ದಂನೆಗೆ** (ಕ್ರಿ). ಎತ್ತರಕ್ಕೆ ಹಾರು; ದೂರಹಾರು: "ಉದಂಚಿತ ಮೆಂಬುದು ಉದ್ದಂನೆಗೆದುದು" (ಹಲಾಯು. ೧೨೬-೮೩); ಪಿರಿಯಮರಂಗಳನುಜಿದೆ ಕೊಂಡು ನೂಂಕಿ ಪೊತ್ತುಂ ಪರಿಯುತ್ತುಂ ಪೋಣದುರ್ದ್ದಂ ನೆಗೆದು ಕುನುಂಗಿ ಭರದಿಂ ತಲೆಯೆತ್ತಿಯುರ್ಬಿ (ಪಂಚತಂ. ೪೬-೫); ಮುನ್ನೀರುದ್ದಂ ನೆಗೆದಿಂದ್ರನಂದನಕೆ ಪೊಯ್ಮೀರಾಯ್ತಿದೇಂ ರೌದ್ರನೋ (ಜಗವಿ. ೧೮-೨೬). [ಉದ್ದಂ + ನೆಗೆ]

**ಉದ್ದಂಬರ್** (ಕ್ರಿ). ಉದ್ದವಾಗಿ ಬರು; ಸಾಲಾಗಿ ಬರು: ಲಯದಿಂ ಮೆಲ್ಪಿಂ ಬೆಡಂಗಂಪಡೆವ ತುರಗದಿಂ ಚಿತ್ರಿತಚ್ಛತ್ರಿಕಾಲೀಲೆಯಿನುದ್ದಂ ಬರ್ಪ ಚೇಟೀನಿವಹದ ಬರವಿಂ (ಆದಿಪು. ೧೧-೪೫); ಮಲೆಪರ್ ಮಾಜಾಂಪರಿಲ್ಲ ... ಎತ್ತಲುಮುದ್ದಂಬಂದು ದಳ್ಳಿಂದುರಿವ ರಿಪುಗಳಿಲ್ಲ (ಸುಕುಮಾ. ೧-೮೦). [ಉದ್ದಂ + ಬರ್]

**ಉದ್ದಗದ್ದುಗೆಯಾಗು** (ಕ್ರಿ). ಎತ್ತರವಾದ ಗದ್ದುಗೆಯ ಮೇಲೆ ಅಥವಾ ಪೀಠದ ಮೇಲೆ ಕುಳ್ಳಿರು: ಅಂಜದೆ ಪೋಗಿ ಬಸವಣ್ಣನುದ್ದ ಗದ್ದುಗೆಯಾಗೆ ತನ್ನಯ ಪೊದಕೆಯಂ ತೆಗೆದಿಳೆಯ ಮೇಲಿರಿಸಿ (ಬಸವು. ೫೫-೧೧). [ಉದ್ದ + ಗದ್ದುಗೆ + ಆಗು$_1$]

**ಉದ್ದಗಲ** (ನಾ). ೧. ಉದ್ದ ಮತ್ತು ಅಗಲ: ನಿಮ್ಮ ನಿವೇಶನದ ಉದ್ದಗಲ ಎಷ್ಟಿದೆ? (ರೂಢಿ). ೨. ವ್ಯಾಪ್ತಿ; ತುಂಬಿಕೊಂಡಿರುವುದು; ಗಾತ್ರ: ಒಳ್ಳೆ ಉದ್ದಗಲದ ಕುಸ್ತಿಯ ಆಳಿನ ಕಳೆ ವನಮಾಲಿಗೆ (ಇಷ್ಟಕ. ೪೦೪). [ಉದ್ದ + ಅಗಲ]

**ಉದ್ದಟ** 'ಉದ್ಧಟ' ನೋ.

**ಉದ್ದಧ್ವನಿ** (ನಾ). ಎತ್ತರವಾದ ಧ್ವನಿ; ತಾರಸ್ವರ: "ಉದ್ದಧ್ವನಿ ತಾರಮೆಂಬುದು" (ಹಲಾಯು. ೨೩-೧೯೯). [ಉದ್ದ + ಧ್ವನಿ]

**ಉದ್ದನೀರು** (ನಾ). ೧. ಆಳವಾದ ನೀರು. ೨. (ಆಲಂ) ಅತಿ ಹೆಚ್ಚಿನ ಗೋಜು: ಚೆನ್ನಪ್ಪ ಅಲಸಿಗನಲ್ಲ, ಹಾಳುಹರಟೆಗಾರನಲ್ಲ; ತುಂಟನಲ್ಲ; ಇಲ್ಲದ ಉದ್ದನೀರಿಗೆ ಹೋಗುವವನಲ್ಲ (ನಮ್ಮುಬ. ೪೪).

ಉದ್ದನೀರಿಗೆಹೋಗು = ಕೈಲಾಗದ ಕೆಲಸಕ್ಕೆ ತೊಡಗು; ದೀರ್ಘಕ್ಕೆ ಹೋಗು (ಉಕ). [ಉದ್ದ + ನೀರು (< ನೀರ್$_1$)]

**ಉದ್ದನೆಯ** 'ಉದ್ದ' ಪರಾ.

**ಉದ್ದನ್ನ** 'ಉದ್ದ' ಪರಾ.

**ಉದ್ದಮಿದಾರ** 'ಉದ್ದಿಮೆದಾರ' ನೋ.

**ಉದ್ದಮಿಸು** (ಕ್ರಿ). ಉದ್ಯೋಗಮಾಡು; ವ್ಯವಹಾರ ಮಾಡು (ಕಿ). [ಉದ್ದಮಿ (< ಉದ್ದಿಮೆ) + -ಇಸು$_3$]

**ಉದ್ದಮುರಿ** (ಕ್ರಿ). ಹೆಚ್ಚಾಗಿ ಉರಿ; ಸಿಟ್ಟಿಗೇಳು: ಕರೆವ ಕೋಗಿಲೆಗಳೆಂದೊಡೆ ಬಂದೆಳಮಾವೆಂದೊಡೆ ನೆಱೆದಿಂಗಳ ತಣ್ಪೆಳಗೆಂದೊಡುದ್ದ ಮುರಿವಂ ಗೊರವಂ (ಕಬ್ಬಿಗಕಾ. ೧೪೬). [ಉದ್ದಂ + ಉರಿ$_1$]

**ಉದ್ದಮುರಿಸು** (ಕ್ರಿ). ೧. ಬಲವಾಗಿ ಜ್ವಲಿಸುವಂತೆ ಮಾಡು. ೨. ಬಲುತಾಪಗೊಳಿಸು: ಅಂತು ಕಂದರ್ಪದುರ್ವಹದಹನವಾಹ ಮಪರಿಮಿತಶಿಶಿರೋಪಚಾರವಿಧಿಗಳೊಳಮುಪಶಮಿಸದುದ್ದಮುರಿಪೆ [ಪಾಠಾಂ. ಯೆ] (ವರ್ಧಪು. ೪-೪೭ ವ). [ಉದ್ದಮುರಿ + -ಇಸು$_3$]

**ಉದ್ದಮೆ** 'ಉದ್ದಿಮೆ' ನೋ.

**ಉದ್ದಮೇಱು** 'ಉದ್ದವೇಱು' ನೋ.

**ಉದ್ದರಿ$_1$, ಉದ್ದರೆ$_1$** (ನಾ). ೧. ಸಾಲದ ವ್ಯಾಪಾರ; ಕಡದ ವ್ಯಾಪಾರ: ಉದ್ದರಿಯ ಕೊಟ್ಟಣ್ಣ ಹದ್ದಾದ ಹಾವಾದ ಎದ್ದೆದ್ದು ಬರುವ ನಾಯಾದ ಹುತ್ತದ ಗೊದ್ದದಂತಾದ (ಸರ್ವಜ್ಞ. ೧೪೦೬); ಪೇಟೆಯಲ್ಲಿ ದುಡ್ಡು ಅದ್ದೇಲಿಯ ಸಾಮಾನೂ ಉದ್ದರಿಯಾಗಿ ಹುಟ್ಟುತ್ತಿರಲಿಲ್ಲ (ಪ್ರೇಮಾಶ್ರ. ೬). ೨. (ಉಕ). ಸಾಲ; ಬಾಕಿ: ಮಾತಿನಲ್ಲಿ ಉದ್ದರಿ ಇಲ್ಲ ಸುಂದರಕ್ಕನಿಗೆ (ವೈನಿ. ೧೬೮). **ಉದ್ದರೆ$_1$**: ೧. ಮೈದುನನ ಹೆಸರಿಗೆ ಉದ್ದರೆ ಬರಸಿ ತನಗೆ ಬೇಕಾದ ಬಟ್ಟೆಯನ್ನು ತರುವುದೊಂದೆ ಉಪಾಯ (ಬೆಳುಮ. ೪೪).

ಉದ್ದರಿಕೊಡು = ಸಾಲವಾಗಿ ಸಾಮಾನನ್ನು ಕೊಡು: ಇದ್ದೂರವರಿಗೆ ಉದ್ದರಿ ಕೊಡುವ ದಡ್ಡತನಕ್ಕೆ ಹೋಗದೆ (ಹುಚ್ಚುಹು. ೬೬). ಉದ್ದರಿಗಿರಾಕಿ = ಸಾಲದ ಗಿರಾಕಿ: ಅಧಿಕಾರ ಬಜಾಯಿಸುವುದು ಅಂಗಡಿಯಲ್ಲಿಯ ಉದ್ದರಿಗಿರಾಕಿಗಳ ಮೇಲೆ, ಇಲ್ಲ ಮುದುಕ ಗಣಪೂನ ಮೇಲೆ (ಮೂರುದಾ. ೭೧). ಉದ್ದರಿಹೇಳು = ಸಾಲಹೇಳು: ದಕ್ಷಿಣೆಯನ್ನು ಎಲ್ಲಿ ಉದ್ದರಿಹೇಳುವರೋ ಎಂದು ಹೆದರಿದ್ದೆ (ಅಪವಾ. ೬).

[← ಮರಾ. ಹಿಂ. ಉಧಾರ್ < ಸಂ. ಉದ್ಧಾರ]

**ಉದ್ದರಿ$_2$** (ನಾ). ಸರಿಸಮ; ಸಮಬಲ; ಪ್ರತಿಸ್ಪರ್ಧಿ: ರಾವಣನು ಜಗತ್ತಿನಲ್ಲೆಲ್ಲ ಅಟ್ಟಹಾಸದಿಂದ ಅಲೆದಾಡುತ್ತ, ತನಗೆ ಉದ್ದರಿಯಾದ ವೀರನನ್ನು ಹುಡುಕುತ್ತಲಿದ್ದನು (ತುಳಸಿ. ೫೧). 'ಹುದ್ದರಿ' ಪರಾ. [?]

**ಉದ್ದರೆ$_1$** 'ಉದ್ದರಿ$_1$' ನೋ.

**ಉದ್ದರೆ$_2$** (ನಾ). ಭಾಗ; ಪಾಲು (?): ಗೆರೆಯಿಲ್ಲದ ಕೋಲಿನಲ್ಲಿ ಉದ್ದರೆ [ಪಾಠಾಂ. ಉದರೆ]ಯನಿಕ್ಕಿದ ಭಂಡಾದ ಹರದನಂತಾದೆನಯ್ಯಾ (ಬಸವ. ೯೩೪); "ಉದರೆ - ಉದ್ದರಿ" (ಬಸವ. ಕೋಶ). [?]

**ಉದ್ದವಣ** (ನಾ). ಗಟ್ಟಿಯಾದ ಕೂಗು; ಘೋಷಣೆ: ಮುದದೆಸೆದಿರ್ಪ ಬದ್ದವಣಮುದ್ದವಣಂ ರಿಚೆ ಪಾಟವಾಟಮೆತ್ತಿದ ಗುಡಿ ತೋರಣಂ (ಅರ್ಧನೇ. ೨-೩೯).

[?. P. ವರ್ಧಮಾನ > ಬದ್ದವಣ ಆಗಿದೆಯೆಂದು ಹೇಳುವಂತೆ ಊರ್ಧ್ವಮಾನ > ಉದ್ದವಣ ಆಗಿರಬಹುದು; ಅಥವಾ ಉತ್ + ರವಣ = ಉದ್ರವಣ > ಉದ್ದವಣ]

**ಉದ್ದವರಿ** (ಕ್ರಿ). ಉದ್ದವಾಗಿ ಹರಿ; ದೀರ್ಘವಾಗು; ಅತಿಶಯವಾಗು: ಪೂಸುವ ಬೂದಿಗಂಗಭವನಂ ಭವಸಾರನನಾರ್ದು ಸುಟ್ಟ ಭೂತೇಶನ ಬುದ್ಧಿಗುದ್ದವರಿದಾಂ ಪೊಗಟೆಂ ಪೊಗಟ್ವೆಂ ಮನೋಜನಂ (ಲೀಲಾವ. ೧-೮೫). [ಉದ್ದ + ಪರ್ಿ$_2$]

**ಉದ್ದವಟಿ** (ನಾ). ಕಂದುಕ ಕ್ರೀಡೆಯಲ್ಲಿ ಚೆಂಡನ್ನು ಎಳೆಯುವ ಒಂದು ವಿಧಾನ; ಮಂಡಳಮಾಲೆ, ತ್ರಿಮಂಡಳ, ಯಾಮಕ, ಮಂಡಳ, ಅರ್ಧಚಂದ್ರ, ಸರ್ವತೋಭದ್ರ, ಉದ್ದವಟಿ, ಚಕ್ರವ್ಯೂಹ ಎಂಬ ಎಳತಗಳಲ್ಲಿ ಒಂದು: ಉದ್ದವಟಿಮೆಚಿವರೆಂಬುದೆ ಬಿದ್ದಂ ಮುನ್ನಲ್ಲಿ ಕಡುಪಿನೊಳ್ ಬಹುವಿಧದಿಂದುದ್ದವಟಿಮೆಚಿದು ಮುರಿಗುಂ ಬಿದ್ದಮೆನಲ್ ಬಳಲ್ದ ಪೊಜಗನೆಟಿವಬೆಡಂಗಂ (ಎಕ. XII, ಶಿರಾ. ೨೭-೧; 982); ಕಡುಪುಗಳುದ್ದವಟಿಂ ... ಎಳಗಳದೇಂ ಕಡುಜಾಣೆನೆ ಬದಿಕಯ್ಯು ರಮಡದರ್ದ್ಪುಳೆನೆ (ಎಕ. II, ೧೩೩-೧೦೭; 982); (ಎಕ. II, ೧೩೩-೧೧೨, ೧೧೭; 982 ನೋ). [?. / ತೆಲು. ಉದ್ದವಡಿ = ಬೇಗನೆ, ವೇಗವಾಗಿ]

**ಉದ್ದವೇಱು,** ಉದ್ದವೋಱು (ಕ್ರಿ). ೧. ಎತ್ತರವಾದ ಸ್ಥಾನವನ್ನು ಏರು : ಪಿರಿದುದ್ದವೇಱಿ ನಾನಿದ್ದರೆ ಕಂಡು ನಿಮ್ಮರಸಿಯರೆಳಲುವರಿದಱ ಪಿರಿದೇನು ಪುಟ್ಟಿಗದ್ದುಗೆಯಲ್ಲಿ ಕೆಳಗೆ ಕುಳ್ಳಿರುವೆನೆಂದಳು ಕಳಾನಿಪುಣೆ (ಭರಜ. ೪೨–೫೩). ೨. ಅತಿಗರ್ವಿಷ್ಠನಾಗು ; ಸೊಕ್ಕು : ಬಾಯ್ಗಿವಂದಂತೆ ಕೊನೆದುದ್ದವೇಱಿ ಪಲವನೆನ್ನ ಮುಂದೆ ಗಱಪದುಸಿರದಿರೆಂಬುದುಂ (ಧರ್ಮಾಮೃ. ೯–೪೪). **ಉದ್ದವೋಱು:**೧. ಅಜನಂ ಬಗೆಯದೆ ಬೇಂಟೆಗೆ ಪೊಱಮಡಿಮೆಂದುದ್ದವೋಱಿ ಸವಳದೆ ನಿಚ್ಚಂ ಪಱಿಯಂ ಪೊಯ್ಯುತ್ತಿರ್ಪಂ (ಸಮಪ. ೧೪–೭೪). [ಉದ್ದ + ಏಱು$_1$]

**ಉದ್ದಳನ** (ನಾ). ೧. ಸೀಳುವಿಕೆ ; ಭೇದಿಸುವಿಕೆ. ೨. ಸೀಳುವವನು ; ಭೇದಿಸುವವನು : ವೈರಿನರೇಂದ್ರೋದ್ದಾಮದರ್ಪೋದ್ದಳನನನೆ ಕಥಾನಾಯಕಂ ಮಾಡಿ . . . ಪೇೞಲೆಂದೆತ್ತಿಕೊಂಡೆಂ (ಪಂಪಭಾ. ೧–೫೧). [ಸಂ. ಉದ್ದಲನ]

**ಉದ್ದಳಿಕೆ** (ನಾ). ಮೃದಂಗಾದಿ ವಾದ್ಯಗಳಿಗೆ ಮೇಲಿಂದ ಕೆಳಕ್ಕೆ ಬಿಗಿದಿರುವ ಚರ್ಮದ ಪಟ್ಟಿಕೆ (?) : ಪೊಳೆವುದ್ದಳಿಕೆಯನೊಪ್ಪಿರೆ ತಳದಿಂದಂ ನೀವಿ ನೇವರಿಸಿಯುಲ್ಲಾಸಂಗಳನಿತ್ತು ಪೊಯ್ದು ನೋಡಿದನಳವಡೆ ಝೋಂಕಾರಮಂ ಮನೋಮುದದಿಂದಂ (ಧರ್ಮಪ. ೨–೨೨). [?]

**ಉದ್ದಳಿತ** (ಗು). ಸೀಳಿದ ; ಸೀಳಲ್ಪಟ್ಟ : ಉತ್ತೇಜಿತಮನೋಜಮಾರ್ಗಣಮುಮುದ್ದಳಿತ ವಿರಹಿಹೃದಯಮುಂ (ಕಾದಂಉ. ೫೬೧). [ಸಂ. ಉದ್ದಲಿತ]

**ಉದ್ದಾನ$_1$** (ಗು). ಭಯಂಕರವಾದ ; ಕಟ್ಟುಮೀರಿದ : ಸತ್ಕ್ರಿಯೆಯೆಂಬ ಕತ್ತಿಯಲಿ ಹೀನಮಾಯಾಮೋಹವೆಂಬುದ್ದಾನವೃಕವಂ ಕಡಿದು (ಬಸವು. ೩೪–೩೩) ; ಹಂಪೆಯ ಉದ್ದಾನ ವೀರಭದ್ರನ ನೋಡಿ ಬಂದೆ (ರೂಢಿ). [< ಸಂ. ಉದ್ದಾಮ ?]

**ಉದ್ದಾನ$_2$** (ನಾ). ೧. ಬಂಧಿಸುವುದು ; ಅಂಕೆಯಲ್ಲಿಡುವುದು. ೨. ಒಲೆ. [ಸಂ.]

**ಉದ್ದಾನಿ** (ನಾ). ಹಿರಿಮೆ ; ಹೆಚ್ಚಿಗೆ ; ವೈಭವ ; ಅತಿಶಯ ; ಆಧಿಕ್ಯ : ಅಂಭೋಧಿಗಭೀರೋದ್ದಾನಿಯೆಂದುನ್ನತಿಯನೆಸೆವಿನಂ (ಎಇ. XIII, ೩೩೦–೭ ; 929) ; ಆನೆಯನೇಱಿ ಸೌಷ್ಪವದೆ ಬರ್ಪರಿಕೇಸರಿಯೊಂದು ಗಾಡಿಯುದ್ದಾನಿ ತಗುಳ್ದು ಕಣ್ಣೊಳೆ ತೊೞಲ್ದು (ಪಂಪಭಾ. ೪–೫೮) ; ಏನಂ ಪೇೞ್ವುದೊ ಸಿರಿಯುದ್ದಾನಿಯಂ (ಪಂಪಭಾ. ೧–೧೭) ; ಈ ನಯನೋತ್ಸವಮುಪ್ಪ ರೂಪಿನುದ್ದಾನಿಯನೀ ತನುಚ್ಛವಿಯನೇ ಪೊಗೞ್ದಪುದೊ [ಪಾಠಾಂ. ನೇಂ ತಳೆದಪ್ಪುರೆ] (ಪಂರಾಮಾ. ೯–೧೬೫) ; ರಾಜಹಂಸನಪಪಾಪಕಳಾಪನೆನುತ್ತೆ ರಾಗದುದ್ದಾನಿಯಿನೊಲ್ದು ಬಣ್ಣಿಪ ಜನಂಗಳನಂತವನಂತಪಾಳನಾ (ಎಕ. VII, ಶಿಕಾರಿ. ೧೩೭–೨೩ ; 1114) ; ಚತುರ್ಥವಂಶದುದ್ದಾನಿಯನಾಂತ ಬಾಚಹುಲಿ (ಕೊಲ್ಹಾಶಾ. ೧೫–೫೬ ; 1186). [?]

**ಉದ್ದಾಮ** (ಗು). ಉತ್ತಮವಾದ ; ಶ್ರೇಷ್ಠವಾದ ; ಉನ್ನತವಾದ ; ಘನವಾದ ; ಅತಿಶಯವಾದ : ಅಮರೇಂದ್ರಾರುಣಮಣಿ ಮಕುಟದ್ಯೋತಿ ಬಾಲಾರ್ಕಲೀಲೋದ್ದಾಮಂ ಕಾಶ್ಮೀರ ರಾಗಂ ತನಗೆ ವಿನತನಾಗೇಂದ್ರಹಸ್ತಾರುಣಾಬ್ಜಂ ಹೈಮಂ ಕರ್ಣಾವತಂಸಂ ತನಗೆನೆ (ಅಜಿಪು. ೧–೧) ; ಚತುರಕವಿಕುಲಲಲಾಮಂ ಗುಣೋದಯೋದ್ದಾಮಂ . . . ಶ್ರೀನಾಗವರ್ಮಂ (ಛಂದೋಂಬು. ಕಿ. ೩–೨೪೯) ; ಮತಿಭೂಮನಾ ಶ್ರೀರಾಮನುದ್ದಾಮನಾ ವೀರಲಕ್ಷ್ಮಣನುಂ (ಶ್ರೀರಾಮಾ. ೧೪೭–೧೫೦). [ಸಂ.]

**ಉದ್ದಾಮತೆ** (ನಾ). ೧. ಶ್ರೇಷ್ಠತ್ವ ; ಹಿರಿಮೆ ; ಅತಿಶಯತೆ : ನಿಸ್ಸೀಮ ನಿತ್ಯಾನಂದ ಸುಖದುದ್ದಾಮತೆಯನೊಲಿದಿತ್ತನಾ ಪ್ರಭುಲಿಂಗ ಕೆಲಬರಿಗೆ (ಪ್ರಭುಲೀ. ೨೦–೧೩). ೨. ರೋಷ ; ರಭಸ : ತಾಮಸದಿ ತಾ ಮೀಱಿ ನಡೆದುದ್ದಾಮತೆಯ ಸೈರಿಸುವುದು (ಕುವ್ಯಾವಿ. ೩–೭೭) ; ಭೂಪತಿಯ ಆಕಸ್ಮಿಕ ಉದ್ದಾಮತೆಯ ಕುದಿ ಇಳಿದು ಶಾಂತವಾಗುತ್ತ ಬಂತು (ಇಪ್ಪಕ. ೨೯೨). [ಸಂ. ಉದ್ದಾಮತಾ]

**ಉದ್ದಾಮತೆವೆಱು** (ಕ್ರಿ). ಶ್ರೇಷ್ಠತೆಯನ್ನು ಪಡೆ ; ಹಿರಿಮೆಯನ್ನು ಹೊಂದು : ಸುಕುಮಾರರ್ ಜನಿಯಿಸಿಯುದ್ದಾಮತೆವೆತ್ತು ಬಳೆದು ಬಳಿಕೇಱುಂಜೌವನಮೆಯ್ದಿದರು (ಜಯಕಾ. ೨–೭೧). [ಉದ್ದಾಮತೆ + ಪೆಱು$_1$]

**ಉದ್ದಾಮಧಾಮ** (ನಾ). ಶ್ರೇಷ್ಠವಾದ ತೇಜಸ್ಸುಳ್ಳವನು ; ಮಹಾತೇಜಸ್ವಿ : ಅಮಿತಗುಣಾಧಾರಂ ನಿಮ್ಮ ಮಾವನುದ್ದಾಮಧಾಮಂ (ಸುಕುಮಾ. ೨–೪೦). [ಉದ್ದಾಮ + ಧಾಮ]

**ಉದ್ದಾಮಪಂಡಿತ** (ನಾ). ಶ್ರೇಷ್ಠಪಂಡಿತ ; ದೊಡ್ಡವಿದ್ವಾಂಸ : ನಾವು ಮಾತನಾಡಿಸಿದ ಆ ವ್ಯಕ್ತಿ ಉದ್ದಾಮಪಂಡಿತನಾಗಿದ್ದಂತೆ ತೋರಿತು (ರೂಢಿ). [ಉದ್ದಾಮ + ಪಂಡಿತ]

**ಉದ್ದಾಲ** (ನಾ). ೧. ಒಂದು ಬಗೆಯ ಧಾನ್ಯ ; ಹಾರಕ. ೨. ಚಳ್ಳಿಮರ. ೩. "ಯಾವ ಕುದುರೆಯ ಮೇಲಣ ಹಲ್ಲುಗಳಿಂದ ಕೆಳಗಣ ಹಲ್ಲುಗಳು ಮುಚ್ಚಲ್ಪಡುವುವೊ ಅದು ಉದ್ದಾಲವೆನಿಸಿಕೊಳ್ಳುವುದು" (ಸೌಗಂಧಿ. ೩೧೨–೫). [ಸಂ.]

**ಉದ್ದಾಲಕ** (ನಾ). ೧. = ಉದ್ದಾಲ. ೨. ಒಬ್ಬ ಋಷಿಯ ಹೆಸರು : ಸವ್ಯಸಾಚಿ ಸೌಭರಿಯ ದೆಸೆಯಿಂದಮುದ್ದಾಲಕನ ಕಥೆಗೇಳುತಿರದೆ ಹಂಸಧ್ವಜನ ಪಟ್ಟಣಕೆ ಬರಲು (ಜೈಮಿಭಾ. ೧೦ ಸೂಚನೆ). [ಸಂ.]

**ಉದ್ದಿ$_1$** (ನಾ). ಗದ್ದೆ ತೋಟಗಳಲ್ಲಿ ನೀರು ಹಾಯಿಸಲು ಮಾಡಿರುವ ಸಣ್ಣ ಕಾಲುವೆ, —ಕಿರುಗಾಲುವೆ, —ಪಿಳ್ಳಗಾಲುವೆ : ತೆಂಕ ಉದ್ದಿಯ ಕಾಲು ಪಡುವಲು ನಾರಾಯಣಯ್ಯನ ಜ್ಯೇಷ್ಠಮಾಸದ ಭೂಮಿ (ಹೈಆರಿ. V, ೭–೨೯ ; 1038) ; ಒಂದು ದೊಡ್ಡ 'ಉದ್ದಿ' ಯಲ್ಲಿ ಹರಿದು ಬರುತ್ತಿತ್ತು (ನಾಲ್ಕಮ. ೭೪). [ದೇ. ‖ ಮಲ. ಉದಿರ್ = ಸಣ್ಣಗದ್ದೆ ; ತೆಲು. ಉದ್ದಿ]

**ಉದ್ದಿ$_2$** (ನಾ). ವೃದ್ಧಿ ; ಬೆಳವಣಿಗೆ : ಕಂಡೆನಲ್ಲಾ ಕೆಳದಿ ಚೆಲುವರಗಂಡ ಹದಿನಾರುದ್ದಿ ಹರೆಯದ [ಪಾಠಾಂ. ನನು ಹದಿನಾರು ವರುಷದ] ಗಂಡನನು (ನಿಭಾಗ. ೧೦–೮೮–೧೯). [< ಸಂ. ವೃದ್ಧಿ].

**ಉದ್ದಿ$_3$** (ನಾ). (?) : ನರಕ ಬಿಲಂಗಳಂ ಮೇಗಳಟ್ಟುಗಳೊಳೆಟ್ಟ ಜೀನಪುಟ್ಟಿಗಳುಮನುದ್ದಿಗಳುಮಂ (ಅಜಿಪು. ೧೧–೭ ವ). [?]

**ಉದ್ದಿ$_4$** (ನಾ). ಸಮಾನ ; ಸಮ ; ಸರಿಸಮಾನನಾದವನು ; ಸ್ಪರ್ಧಿ : ನಿನ್ನ ಉದ್ದಿಯನ್ನು ನೀನು ಅರಿಸಿಕೋ (ರೂಢಿ). [ದೇ. ‖ ತೆಲು. ಉದ್ದಿ]

**ಉದ್ದಿಗೆ$_1$** (ನಾ). = ಉದ್ದಿ$_1$ (೩). [?]

**ಉದ್ದಿಗೆ$_2$** (ನಾ). ೧. ಗಾಡಿಯ ಅಥವಾ ರಥದ ಈಸು ; ಈಸುಮರ ; ಯುಗಂಧರ : ಇದ್ದ ಭರದೊಳಗೀತ ರಿಪುರಥದುದ್ದಿಗೆಯ ಹಿಡಿದಿಟ್ಟನಾ ರಥ ಬಿದ್ದುದಂಬರನದಿಯೊಳಂಬರಚರರು ಕೊಂಡಾಡೆ (ತೊರರಾ. ೬–೩೪–೯) ; ಬಂಡಿಯ ಉದ್ದಿಗೆಗೆ ನೊಗವನ್ನು ಹಗ್ಗದಿಂದ ಕಟ್ಟು (ಬೆಳದೀ. ೬೫). ೨. ಅಟ್ಟಣೆ : ಕೊಟಡಿಯಲ್ಲಿ ಸ್ತ್ರೀಪುರುಷರು ಕಿಕ್ಕಿರಿದಿದ್ದರು. ಅವರಲ್ಲಿ ಕೆಲವರು ಉದ್ದಿಗೆಗಳ ಮೇಲೂ, ಕೆಲವರು ಅವುಗಳ ಕೆಳಗೂ ಕುಳಿತಿದ್ದರು (ಪುನರು. ೫೧೬). [?]

**ಉದ್ದಿತ** (ಗು). ಬದ್ಧವಾದ ; ಕಟ್ಟಲ್ಪಟ್ಟ. [ಸಂ.]

**ಉದ್ದಿತು** 'ಉದ್ದಿತ್ತು' ನೋ.

**ಉದ್ದಿತ್ತು,** ಉದ್ದಿತು (ಗು). ಉದ್ದವಾದ : ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ಉದ್ದಿತ್ತು, ನುಣ್ಣಿತ್ತು, ತಣ್ಣಿತ್ತು (ಶಮದ. ೭೭ ವೃತ್ತಿ, ಪ್ರಯೋ). **ಉದ್ದಿತು :** "ಉದ್ದಿತಜಲ್ಲಿಯುಂ ಉತ್ತಾಳಮೆಂಬುದು" (ಹಲಾಯು. ೧೩೩–೧೪). [ಉದ್ದ + -ಇತು]

**ಉದ್ದಿನಿ** (ನಾ). (?) : ಇಕ್ಕೇರಿಯ ರಾಜವಂಶದ ಒಬ್ಬ ಉದ್ದಿನಿ ಇಲ್ಲಿಗೆ ಬಂದು . . . ದೊರೆಯಾದನು (ಚಿಕರಾ. ೩). [?]

**ಉದ್ದಿಮೆ**, ಉದ್ದಮೆ, ಉದ್ದುಮೆ (ನಾ). **೧.** ಉದ್ಯೋಗ ; ವೃತ್ತಿ ; ಕೆಲಸ : ಸಾರಮೇಯಗೆ ಚಪ್ಪಲಿಯ ವ್ಯಾಪಾರ ಶೂಕರಗುದ್ದಿಮೆಯು ಸರಬುರುಡೆಗಳ ವ್ಯವಹಾರ ನರಿಗಾಪರಿಯು ಜ್ಞಾನಿಗಳ (ಜ್ಞಾನಸಿಂ. ೩೪–೪೭) ; ಏನಾದರೂ ಉದ್ದಿಮೆ ಮಾಡೋಣ ಅಂದರೆ ಹಣ ಇಲ್ಲ (ತುಂಗಭ. ೧೪). **೨.** (ಉಕ). ಕೈಗಾರಿಕೆ. **ಉದ್ದಮೆ : ೧.** ಕಳಕಂಠಿ ನೀತಿವಚನದುದ್ದಮೆಗೆ ಪ್ರಾರಂಭಗೊಂಡಳ್ (ಜನಮು. ೨೩–೮). **ಉದ್ದುಮೆ : ೧.** 'ಉದ್ದುಮೆಗೈ' ಪರಾ.
[< ಸಂ. ಉದ್ಯಮ]

**ಉದ್ದಿಮೆಗಾರ** (ನಾ). ಉದ್ಯೋಗವಮಾಡುವವನು ; ಕಸಬುದಾರ : ಉದ್ದಿಮೆಗಾರನಿಗೆ ಉದ್ದು ಉರುಳುವಷ್ಟು ಪುರುಸೊತ್ತಿಲ್ಲ (ಗಾದೆ).
[ಉದ್ದಿಮೆ + –ಗಾರ (< –ಕಾಱ)]

**ಉದ್ದಿಮೆಗಾರಿಕೆ** (ನಾ). ಕಸಬುಗಾರಿಕೆ ; ಕೈಗಾರಿಕೆ : ಪ್ರಥಮ ಮಹಾಯುದ್ಧದ ನಂತರ ನಮ್ಮ ದೇಶದಲ್ಲಿ ಚಿಕ್ಕ ಪ್ರಮಾಣದಲ್ಲಿ ಉದ್ದಿಮೆಗಾರಿಕೆ ತಲೆದೋರಿತು (ಮಾವಾದ. ೯೮). [ಉದ್ದಿಮೆಗಾರ + –ಇಕೆ]

**ಉದ್ದಿಮೆದಾರ**, **ಉದ್ದಮಿದಾರ** (ನಾ). = ಉದ್ದಿಮೆಗಾರ : ಕಾಂಗ್ರೆಸ್ ಚಳುವಳಿಯಲ್ಲಿ ತೊಡಗಿ ಬೆಳೆದ ರಾಷ್ಟ್ರೀಯ ಭಾವನೆಗೂ ನಮ್ಮದೇಶೀ ಉದ್ದಿಮೆದಾರರ ಬಂಡವಾಳಗಾರಿಕೆಗೂ ಒಳಹೊಂದಿಕೆ ಇದೆ (ಮಾವಾದ. ೯೮). **ಉದ್ದಮಿದಾರ :** "ಉದ್ದಮಿದಾರ – ವ್ಯಾಪಾರಸ್ಥ" (ಜಾನಕೋ. ೨೦). [ಉದ್ದಿಮೆ + –ದಾರ$_4$]

**ಉದ್ದಿಶ್ಯ$_1$** (ನಾ). ಉದ್ದೇಶ ; ಅಭಿಪ್ರಾಯ ; ಗುರಿ : ನಿನ್ನ ಉದ್ದಿಶ್ಯ ಏನೆಂಬುದನ್ನು ಸ್ಪಷ್ಟವಾಗಿ ಹೇಳಿಬಿಡು (ರೂಢಿ). [ಸಂ.]

**ಉದ್ದಿಶ್ಯ$_2$** (ಅ). ಸಲುವಾಗಿ ; ಕುರಿತು : ದೋಸ್ತಿ ಉದ್ದಿಶ್ಯವಾಗಿ ಬಿಟ್ಟು ಕೊಟ್ಟು ಇದ್ದರು (ರಾಜೇಂದ್ರ. ೪೭). [ಸಂ.]

**ಉದ್ದಿಶ್ಯಪೂರ್ವಕ** (ಅ). = ಉದ್ದೇಶಪೂರ್ವಕ : ಪಂತ – ಭುಜಂಗ ರಾಯರುಗಳಿಂದ ಪಹರೆಯವರು ಉದ್ದಿಶ್ಯಪೂರ್ವಕವಾಗಿ ಆಜ್ಞಾಪಿಸಲ್ಪಟ್ಟದ್ದರು (ಅಂಬಿಕೆ. ೧೦೩). [ಉದ್ದಿಶ್ಯ$_1$ + ಪೂರ್ವಕ]

**ಉದ್ದಿಷ್ಟ** (ಗು). **೧.** ಗುರಿಯಿಟ್ಟ ; ಉದ್ದೇಶಿಸಿದ ; ಕುರಿತ. (ನಾ). **೨.** ಉದ್ದೇಶ ; ಗುರಿ. **೩.** [ಛಂದ] "ನಮಗೆ ಬೇಕಾದ ಸಮವೃತ್ತದ ಒಂದು ಪಾದದ ಅಕ್ಷರಗಳ ಮೇಲೆ ಮೊದಲನೆಯ ಅಕ್ಷರದಿಂದ ಒಂದನ್ನು ಆರಂಭಿಸಿ ದ್ವಿಗುಣಗಳಾದ ಸಂಖ್ಯೆಗಳನ್ನು ಕ್ರಮವಾಗಿ ಬರೆದು ಲಘ್ವಕ್ಷರಗಳ ಮೇಲಿರುವ ಸಂಖ್ಯೆಗಳ ಮೊತ್ತಕ್ಕೆ ಒಂದನ್ನು ಸೇರಿಸಲು ಅದು ಆ ವೃತ್ತದ ಸಂಖ್ಯೆಯಾಗುವುದು. ಈ ಉಪಾಯಕ್ಕೆ ಉದ್ದಿಷ್ಟವೆಂದು ಹೆಸರು" (ಕೈಪಿಡಿ. ೯೦) ; ಆರೇನಂ ಬೆಸಗೊಂಡ ಛಂದದ ಲಘುವ್ರಾತಂಗಳುದ್ದಿಷ್ಟದಾಧಾರಂ ಮಾಡೆಯುನಿತ್ತು ಸಂಖ್ಯೆಗೆಸೆವಾ ಛಂದಾಂಕದೊಳ್ ಪುಟ್ಟಿದಾನಾರಂದೋರ್ಪ ಲಗಕ್ರಿಯಾವ್ರಜದ ವೃತ್ತಂಗಳ್ ಸಮಾನಂಬರಲ್ ನೀರೇಜಾನನೆ . . . ಪೇಱು ತ್ವರಿತದಿಂ ಪ್ರತ್ಯೇಕದುದ್ದಿಷ್ಟಮಂ (ಛಂದೋಂಬು. ೬–೪ ಅಡಿಟ). [ಸಂ.]

**ಉದ್ದಿಷ್ಟವಿರತ** (ನಾ). [ಜೈನ] "ಇದು ಶ್ರಾವಕರ ಅಂತಿಮ ತರಗತಿಯು. ಇವನು ತನಗಾಗಿ ಮಾಡಿದ ಅನ್ನವನ್ನು ಉಣ್ಣುವುದಿಲ್ಲ. ಅದ್ದರಿಂದ ಇವನಿಗೆ ಉದ್ದಿಷ್ಟವಿರತನೆಂದು ಹೇಳುವರು" (ಜೈನಪ. ೪೭೪) ; ದರ್ಶನಿಕಂ ವರ್ತಿಕಂ . . . ಅನುಮತಿವಿರತಂ ಉದ್ದಿಷ್ಟವಿರತನೆಂದಿಂತು ಪನ್ನೊಂದು ವಿಕಲ್ಪಮನುಳ್ಳ ಶ್ರಾವಕರೊಳ್ (ಸುಕುಮಾ. ೬–೩೬ ವ).
[ಉದ್ದಿಷ್ಟ + ವಿರತ]

**ಉದ್ದೀಪ** (ಗು). **೧.** ಹೊತ್ತಿಸುವ ; ಉರಿಸುವ ; ಪ್ರಕಾಶಗೊಳಿಸುವ. (ನಾ). **೨.** ಎತ್ತರದಲ್ಲಿರುವ ದೀಪ ; ದೊಡ್ಡದೀಪ : ಸಜ್ಜನಭಕ್ತಿ ಪಸರಿಸಿ ಸಂದುದೆಲ್ಲಾ ಭುವನ ಭವನೋದ್ದೀಪ ರೂಪದೊಳು (ಬಸವು. ೧೧–೧೨). **೩.** ಉತ್ತೇಜಿಸುವುದು. [ಸಂ.]

**ಉದ್ದೀಪಕ** (ಗು). ಉತ್ತೇಜಿಸುವ : ಸಕಲವಿಲಾಸಗಳಿಗೂ ನೆಲೆಯಾದ ಆ ಕಣ್ಣುಗಳನ್ನು . . . ದಿಕ್ಕು ದಿಕ್ಕಿಗೂ ತಿರುಗಿಸುವ ಅವಸ್ಥೆ ಶೋಕಕ್ಕೆ ಅತ್ಯಂತ ಉದ್ದೀಪಕವಾಗಿದೆ (ಧ್ವನ್ಯಾಲೋ. ೧೨೮). [ಸಂ.]

**ಉದ್ದೀಪನ** (ಗು). **೧.** ಹೊತ್ತಿಸುವ ; ಉರಿಸುವ : ಎಲ್ಲಮುಂ ಪುಂಡರೀಕಂಗುದ್ದೀಪನಪಿಂಡದಂತೆ ಕೇವಲಂ ಸಂತಾಪಮಂ ಮಾಱ್ಪುದುಂ (ಕಾದಂಪೂ. ೮೫೫) ; ಆ ಪಕ್ವಾನ್ನಮೆ ಮೃತಿಗುದ್ದೀಪನಪಿಂಡದ ವೊಲಾಗೆ ಯಘುದಿಂ ಬೀಜಾವಾಪಮೆನೆ ಜನ್ಮಲತೆಗೆ ಕಲಾಪಸ್ತ್ರೀಯುದರದಲ್ಲಿ ವಿಂಧ್ಯದೊಳೊಗೆದಂ (ಯಶೋಚ. ೩–೩೪). (ನಾ). **೨.** ಪ್ರಕಾಶನ ; ಉತ್ತೇಜನ. **೩.** [ಕಾವ್ಯಮೀ] ವಿಭಾವಗಳಲ್ಲಿ ಒಂದು ; ಉದಿಸಿದ ಭಾವವನ್ನು ಪ್ರಬಲಪಡಿಸುವ ಸಾಮಗ್ರಿ : "ಭಾವಗಳು ಹುಟ್ಟಿದ ಮೇಲೆ ಅವುಗಳನ್ನು ಉದ್ರೇಕಗೊಳಿಸುವ ವಸ್ತುಗಳಿಗೆ ಉದ್ದೀಪನವಿಭಾವಗಳೆಂದೂ . . . ಹೆಸರು" (ಕೈಪಿಡಿ. ೧೮೯) ; ವಿಭಾವಗಳನ್ನು ಅಲಂಬನ ವಿಭಾವ, ಉದ್ದೀಪನವಿಭಾವ ಎಂದು ಅವುಗಳ ಪ್ರಭಾವದ ತಾರತಮ್ಯವನ್ನು ಅನುಸರಿಸಿ ಎರಡು ಬಗೆಯಾಗಿ ವಿಂಗಡಿಸುತ್ತಾರೆ (ಭಾರಮೀ. ೩೫೦). [ಸಂ.]

**ಉದ್ದೀಪನಂಗೊಳ್** (ಕ್ರಿ). **೧.** ಹೊತ್ತಿಕೊ ; ಪ್ರಕಾಶಗೊಳ್ಳು. **೨.** ಉತ್ಸಾಹಗೊಳ್ಳು ; ಹುರಿದುಂಬು : ದೃಶ್ಯ ಸೌಂದರ್ಯದಿಂದುದ್ದೀಪನಂಗೊಂಡು . . . ಜನಕಜಾಪ್ರಿಯಂ ನಲ್ಲೆಯಂ ನುಡಿಸಿದನು (ಶ್ರೀರಾಮಾ. ೧೫೩–೩೨). [ಉದ್ದೀಪನ + ಕೊಳ್$_1$]

**ಉದ್ದೀಪನಚೂರ್ಣ** (ನಾ). ಜೀರ್ಣಶಕ್ತಿ ಮೊದಲಾದುವನ್ನು ಹೆಚ್ಚಿಸುವ ಪುಡಿ : ಮಂದಾಗ್ನಿಗೆ ಉದ್ದೀಪನಚೂರ್ಣ ಔಷಧಿ (ರೂಢಿ).
[ಉದ್ದೀಪನ + ಚೂರ್ಣ]

**ಉದ್ದೀಪಿತ** (ಗು). = ಉದ್ದೀಪ್ತ : **೧.** ಉತ್ತಪ್ತಜಾಂಬೂನದ ಕುಸುಮದಾಮಂಗಳಿಂದುದ್ದೀಪಿತ ರತ್ನಪ್ರದೀಪಂಗಳಿಂದಂ (ಆದಿಪು. ೨–೩೨ ವ).
[ಸಂ.]

**ಉದ್ದೀಪಿಸು** (ಕ್ರಿ). **೧.** ಬೆಳಗಿಸು ; ಪ್ರಕಾಶಗೊಳಿಸು. **೨.** ಕೆರಳಿಸು ; ಹೆಚ್ಚಿಸು : ಮೆಣಸು ಅಲ್ಲಗಳಲ್ಲೆ ಪಾಚಕಶಕ್ತಿಯಿದ್ದು ಹಸಿವನ್ನು ಉದ್ದೀಪಿಸುವ ಗುಣವೂ ಉಂಟು (ಗೋಗ್ರಾಸ. ೮೮). [ಉದ್ದೀಪನ + –ಇಸು$_3$]

**ಉದ್ದೀಪ್ತ** (ಗು). **೧.** ಬೆಳಗಿದ ; ಪ್ರಕಾಶಗೊಂಡ : ಧೀಮಂತರುದ್ದೀಪ್ತ ಚಿತ್ತದುಳಿವನು ಮೆರೆವ ನಾರಣನ ಕರುಣಾಕಟಾಕ್ಷ (ಮಲೆದೇ. ೫೦–೮). **೨.** ಕೆರಳಿದ ; ಉದ್ರೇಕಗೊಂಡ. [ಸಂ.]

**ಉದ್ದು$_1$** 'ಉದ್ದು$_1$' ನೋ.

**ಉದ್ದು$_2$** 'ಉದ್ದು$_2$' ನೋ.

**ಉದ್ದುಮೆ** 'ಉದ್ದಿಮೆ' ನೋ.

**ಉದ್ದುಮೆಗೈ** (ಕ್ರಿ). ಕೆಲಸಮಾಡು ; ಪ್ರಯತ್ನಮಾಡು : ಎಲ್ಲ ಸಮಯದಿ ನೆನಹು ಬಹುದೆಂತಿಲ್ಲವೆನಲವರುದ್ದುಮೆಗೈದೆಲ್ಲ ಸಾಮ್ಯದೊಳು ಸಕಲಕು ಬಾಹದೊಂದವಕೆ (ಕದಂಪು. ೧೪).
[ಉದ್ದುಮೆ (< ಉದ್ದಿಮೆ) + ಗೆಯ್$_1$ (< ಕೆಯ್$_1$)]

**ಉದ್ದುರುಟೆ** (ನಾ). ಬಹಳ ಒರಟ ; ಅಸಭ್ಯ : ಎದ್ದು ಪರಿತಹ ದೇವವೃಂದವನದ್ದುವೆನೆನೆ ಶಂಭು ದಾನವನುದ್ದುರುಟನೆಂದಜಿಾದು ನಿಂದಾ ದೈತ್ಯಗಿದಿರಾಗಿ ಅದ್ದರಕ್ತೆಯೊಳವನನಾಕ್ಷಣಕದ್ದಿದನು ಭಯರಸದಿ ಶಿವ ತಾನುದ್ದುರುಟನಪ್ಪಳಿಸಿ [ಪಾಠಾಂ. ನುದ್ದುರುಳುವಷ್ಟಳಿ] ಕೆಡಹಿದ. ಪಾದತಳದಿಂದ (ಸಂಭಪ. ೬–೩೨). [ಉದ್ದುರುಟು + –ಅ$_7$]

**ಉದ್ದುರುಟು** (ಗು). ೧. ಬಹಳ ಒರಟಾದ: ಉದ್ದುರುಟು ಮಾತಾಡಿ ಇದ್ದುದನು ಹೋಗಾಡಿ ಉದ್ದನ ಮರದ ತುದಿಗೇಱಿ ತಲೆಯೂಱಿ ಬಿದ್ದು ಸತ್ತಂತೆ (ಸರ್ವಜ್ಞ. ೧೨೩೩). ೨. ಬಲುಗಟ್ಟಿಯಾದ: ಅರಸು ರಾಮರ ಪಂಥಕಡ್ಡಲಾದೆನು ಎಂದು ಮಱುಗಿದ ಮಹಾತ್ಮನುದ್ದುರುಟು ಹನುಮಂತ (ಪುರಂದ. ೨-೬೫-೪). (ನಾ). ೩. ಒರಟುತನ; ಅಸಭ್ಯತನ: ನೀನಾರು ಸಾರೆಂದು ಉದ್ದುರುಟನಿಂದ ಜರೆದನು ವಿಜಯನಂದು (ಕವಿಚ. III, ೯೪ ಇಂದ್ರಕೀಲಚೌಪದ). [ಉದ್ದ + ಉರುಟ್ಟು₃]

**ಉದ್ದುರುಟುತನ** (ನಾ). ಧೂರ್ತತನ; ಉದ್ಧಟತನ; ಒರಟುತನ: ಉದ್ದುರುಟುತನ ನಿನ್ನ ಮೋಱೆಯಲಿದ್ದುದೈ (ಕುವ್ಯಾಅ. ೧೦-೪೬); ಒದ್ದುಕೊಂಡವು ಧರಣಿಯನು ಹೊತ್ತಿರ್ದ ದಂತಿಗಳಹಿಪ ಕೂರುಮರುದ್ದುರುಟುತನವೆಲ್ಲಿಯೇನಾಯ್ತಱಿಯೆ (ಕೊರರಾ. ೪-೧೨-೩೪); ದಾನವನುದ್ದುರುಟುತನಕಳ್ಕಿಹಾಯ್ದರು ಸುರರು ದೆಸೆದೆಸೆಗೆ (ಪ್ರಹ್ಲಾಚ. ೩-೪೦). [ಉದ್ದುರುಟು + -ತನ]

**ಉದ್ದುವಾರೆ** (ನಾ). (ಶತ್ರುಗಳನ್ನು) ಮರ್ದಿಸಲು ಉಪಯೋಗಿಸುವ ಹಾರೆ; ಉಜ್ಜುವ ಹಾರೆ: ಚರಿತದಿಂದೊಂದುದ್ದುವಾರೆಯಂ ಪಿಡಿತಂದು (ವಾಗೀರ. ದೇ. ೨೬೯-೫); ಹಲ್ಲಣ ಹಕ್ಕರಿಕ್ಕೆ ಕಡಿವಾಣವು ಕಬ್ಬಿಯು ಜೋಡು ಮೊಚ್ಚೆಯಂ ಭಲ್ಲೆಹ ಸೀಸಕಂ ಕವಚಡಾಯುಧವೊಕ್ಕಣವುದ್ದುವಾರೆಯುಂ ಸೆಲ್ಲಹಮುಂ ಶರಾವಳಿಗಳುಂ ಧನುಮುದ್ಗರಲೌಡಿಗಳಾದಿಯಾದವಿಂಬಿಲ್ಲೆನೆ ಪೊತ್ತವರ್ ನಡೆವ ಸಂಭ್ರಮಮುಬ್ಬರಮಾಯ್ತು ದಂಡಿನೊಳ್ (ಸೂಕ್ತಿಸು. ೧೮-೨೮). [ಉದ್ದು₁ (< ಉರ್ದು₁) + ಪಾರೆ]

**ಉದ್ದೆಗ** (ನಾ). = ಉದ್ಯೋಗ (?): ವಿದ್ಯೆ ಸತ್ಕುಲ ಬಹುವಿವೇಕವು ಬುದ್ಧಿ ಜಾಣುಮೆ ನುಡಿಯ ಸಡಗರ ಶುದ್ಧಚಿತ್ತ ಸುಶೀಲ ಭುಜಬಲಭದ್ರನೆಂದೆನಿಪ ಉದ್ದೆಗವು ಮೊದಲಾ ಗುಣಂಗಳಲಿದ್ದು ಫಲವೇನರಸ ಭಾಗ್ಯದ ಬುದ್ಧಿ ಹೊದ್ದದವ ನರನು ದರಿದ್ರಾಂಗನವನೆಂದ (ಕುವ್ಯಾಸ. ಓರಿಇ. ೧-೧೦೫). [< ಸಂ. ಉದ್ಯೋಗ]

**ಉದ್ದೆಸ** (ನಾ). = ಉದ್ದೇಶ ೧: ಆಸದಳಮೆಸೆದುದು ಮೊಗೆವುದ್ದೆಸದೊಳೆ ತಳತಳಿಸಿ ಪೊನ್ನಕಳಸಂಗಳ್ (ಆದಿಪು. ೭-೮೪); ಬೆಸಗೊ[ಳ್ವದ ಱಿಂದಿದನು]ದ್ದೆಸಮಾವುದು ತರುಣಿ ನಿನಗೆ (ಕಾದಂಪೂ. ೭೬೧); ಹಸುವಾರ್ಸೆ ಬಟ್ಟೆಯಿಂದುದ್ದೆಸಮಱಿಯದೆ ನಡೆದು ಕುಚನಗಾಂತದೊಳ್ ಪೊಕ್ಕು (ವರ್ಧಪು. ೬-೮). [< ಸಂ. ಉದ್ದೇಶ]

**ಉದ್ದೇಶ** (ನಾ). ೧. ಗುರಿ; ಧ್ಯೇಯ. ೨. ಅಭಿಪ್ರಾಯ; ಆಲೋಚನೆ; ಹಂಚಿಕೆ. ೩. ಎತ್ತರವಾದ ಸ್ಥಳ: ಮಗನನೆತ್ತಿಕೊಂಡು ವಸುದೇವಂ . . . ಮಧುರಾಪುರಮಂ ಪೊಱಮಟ್ಟು ಬಯಲ್ದೊಱೆವರಿವ ಬಟ್ಟೆಯೊಳುದ್ದೇಶಕ್ಕೆ ಬರ್ಪಲ್ಲಿ (ಜಗವಿ. ೩-೮ ವ). [ಸಂ.]

**ಉದ್ದೇಶಪೂರ್ವಕ** (ಅ). ಆಲೋಚನಾಪೂರ್ವಕವಾಗಿ; ಬೇಕೆಂದೇ: ಉದ್ದೇಶಪೂರ್ವಕವಾಗಿ ವಿಷಕುಡಿಸಿದಂತೆ . . . ಅಪಾದನೆ ಹೊರಿಸಿದೆ (ಪುನರು. ೨೦೪); ಉದ್ದೇಶಪೂರ್ವಕವಾಗಿ ಲೆಖ್ಖಮಾಡಿಸಿದ್ದಾರೆ (ಶಾಲೆಮ. ೩೩). [ಉದ್ದೇಶ + ಪೂರ್ವಕ]

**ಉದ್ದೇಶಿಸು** (ಕ್ರಿ). ದೃಷ್ಟಿಯಲ್ಲಿಡು; ಕುರಿ: ಮತ್ತಮಾ ದಮಿತಾರಿಯನುದ್ದೇಶಿಸಿ ಬಲದೇವನಿಂತೆಂದಂ (ಶಾಂತಿಪು. ೨-೩೦ ವ); ಆ ಬಾವಿಗಂ ದೇವಗ್ಗಳವರನುದ್ದೇಶಿಸಿ . . . ಬಿಟ್ಟ ಭೂಮಿ (ಎಕ. VII, ಶಿವಮೊ. ೯೯-೨೪ ; 1127); ವನಜಾನನೆಯೇಱುಂಜವ್ವನದೊಳ್ ವಸದೊಳ್ ನಿರೋಧಮೊಳ್ ಪೇಳಿಂತಾವನನುದ್ದೇಶಿಸಿ ತಪಮಿದನೆನಗಱಿಪಿದೊಡೇನೊ ದೋಷವೇ (ಗಿರಿಕ. ೯-೧೦೭); ಉದ್ದೇಶಿಸಿದ್ದನ್ನು ಚೆನ್ನಾಗಿ ಕಲಿಯುತ್ತೇವೆ. ಉದ್ದೇಶಿಸದ್ದನ್ನು ಕಲಿಯಲಾರೆವು (ಶಿಕ್ಷದ. ೨೧೫). [ಉದ್ದೇಶ + -ಇಸು₃]

**ಉದ್ದೇಶ್ಯ** (ನಾ). ೧. ಗುರಿ; ಧ್ಯೇಯ. ೨. ಗುರಿಯಿಟ್ಟದ್ದು; ಕುರಿತದ್ದು: ಒಂದು ವಾಕ್ಯದಲ್ಲಿ ಉದ್ದೇಶ್ಯ, ವಿಧೇಯವೆಂದು ವಿಭಾಗವಿರುವುದು. ತಿಳಿದ ಅಂಶವು ಉದ್ದೇಶ್ಯ. ತಿಳಿಯಿಸಲ್ಪಡುವ ಅಂಶವು ವಿಧೇಯ (ಹಿಂದಸಾ. ೧೯೯). [ಸಂ.]

**ಉದ್ದ್ರವ** (ನಾ). ಹೆಚ್ಚಾದ ಮೊರೆತ, —ಘೋಷ: ಮೊಱೆದುದು ಸಮುದ್ರ ಮುದ್ದ್ರವದ ಪೆರ್ಚುಗೆಯಿಂದಂ (ಜೈಮಿಭಾ. ೨೬-೧೪). [ಸಂ.]

**ಉದ್ಧಟ, ಉದ್ದಟ** (ನಾ). = ಉದ್ಧತ ೬: "ಆ ಹುಡುಗನು ಉದ್ಧಟನಾಗಿದ್ದಾನೆ" (ರಂಗರೋ. ೫೬). **ಉದ್ದಟ**: "ಉದ್ದಟ – ಉದ್ಧತ – ಗರ್ವಿಷ್ಠ" (ತದ್ಭಕೋ. ೪). [< ಸಂ. ಉದ್ಧತ]

**ಉದ್ಧಟತನ** (ನಾ). ಔದ್ಧತ್ಯ: ಅವಳ ಉದ್ಧಟತನಕ್ಕೆ ಎಷ್ಟೋಸಾರಿ ನಮ್ಮ ತಾಯಿಯವರು ಆಕ್ಷೇಪಿಸಿದ್ದುಂಟು (ಅನಾಮಿ. ೧೬). [ಉದ್ಧಟ + -ತನ]

**ಉದ್ಧಟೆ** (ನಾ). ಗರ್ವ; ಉದ್ಧತತನ (?): ಏನುದ್ಧಟೆ! ನಿಷಾದಗಮವಾ ಧನುರ್ವೇದವೇ? (ಹೆಜ್ಜೆರ. ೯-೩೩). [ಉದ್ಧಟ + -ಎ₂]

**ಉದ್ಧತ** (ಗು). ೧. ಮೇಲೆತ್ತಿದ; ಎತ್ತರಿಸಿದ. ೨. ಹೊಡೆದ; ಮಿಡಿದ: ಆಳ ನಿಲಿಸೋ ನಿಲಿಸೆನುತ ಸಂಸ್ಫಾಳಿತೋದ್ಧತ ಚಪಳಚಾಪಕರಾಳಮೌರ್ವೀನಾದ ಭೀಷಣನಾದನಾ ಭೀಮ (ಕುವ್ಯಾಕ. ೧೨-೧೩). ೩. ಗರ್ವಿಷ್ಠನಾದ; ಸೊಕ್ಕಿದ; ಕೊಬ್ಬಿದ: ಮುಂಗಾಣದತ್ಯುದ್ಧತತರಮುಖವಾಗಿರ್ಪುದೋ ಎಂತೆ ವಿದ್ವಜ್ಜನಮಂ ಕೈಕೊಳ್ಳದೆನ್ನೀ ಮನದೊಡತಣಹಂಕಾರವಿಂತಿಂತಿದಂ ದೇವನೆ ನೀಂ ತಗ್ರೋತ್ತಿ . . . ರಕ್ಷಿಪ್ಪುದೆನ್ನಂ (ರಕ್ಷಾಶ. ೧೬). ೪. ಉದ್ರೇಕಗೊಂಡ; ಕೆರಳಿದ: ಚಮೂರುಷಂಕುಳಮನುದ್ಧತಭೀಕರ ಸೂಕರಾಳಿಯುಂ (ಪಂಚತಂ. ೫೭-೯). ೫. ಉತ್ಸಾಹವುಳ್ಳ; ಉತ್ತೇಜನವುಳ್ಳ. ೬. ಒರಟ; ಅವಿನೀತ. ೭. ಬೇರುಸಹಿತ ಕಿತ್ತ; ಮೂಲೋತ್ಪಾಟನ ಮಾಡಿದ: ಕೆಲರನುದ್ಧತಾ [ಪಾಠಾಂ. ಉಪ್ಪಾತ, ಉದ್ದತ, ಉದಾತ್ತ] ಪ್ರತಿಮಹಿತಮರ್ಮಾಡಿ ಕೆಲರನುಚ್ಚಾಟಿಸಿ (ಪಂಪಭಾ. ೬-೩೦ ವ). (ನಾ). ೮. ರಾಜನ ಆಸ್ಥಾನದ ಜಟ್ಟಿ. [ಸಂ.]

**ಉದ್ಧತಂ** (ಅ). ತುಂಬ ವೈಭವವಾಗಿ.

ಉದ್ಧತಮಾಡು = ತುಂಬ ವೈಭವದಿಂದ ಆಡು, —ಕುಣಿ: ನೋಡುವನಿಂದ್ರನಿಂದ್ರನತಿಯುದ್ಧತಮಾಡುವನಾ ಜಿನೇಂದ್ರನಾ ಷೋಡಶತೀರ್ಥನಾಥನೊರೆಗಂ ದೊರೆಗಂ ದೊರೆಯಾರಘಾಂತಕರ್ (ಶಾಂತಿಪು. ೧೨-೨೫). [< ಉದ್ಧತ]

**ಉದ್ಧತವಾದಿ** (ನಾ). ಗರ್ವಿಷ್ಠನಾದ ವಾದಿ: ದಿಟನುಡಿವನ್ಯವಾದಿಮುಖಮುದ್ರಿತನುದ್ಧ[ತ]ವಾದಿ . . . ವಾದಿಭಯಂಕರನೆನ್ದು ದಂಡುಳಂ ಸ್ಫುಟಪಟುಘೋಷದಿಕ್ತಟಮನೆಯ್ದಿತು ವಾಕುಪಟು ಗೋಪನನ್ದಿಯ (ಎಕ. II, ೬೯-೪೮ ; 1100). [ಉದ್ಧತ + ವಾದಿ]

**ಉದ್ಧತವೃತ್ತ** (ನಾ). ಗರ್ವಿಷ್ಠವಾದ ನಡತೆಯುಳ್ಳವನು; ಸೊಕ್ಕಿದವನು: ಉದ್ಧತವೃತ್ತಂ ಗತಧೈರ್ಯನಾರ್ಯವಿಮುಖಂ ನಿದ್ರಾಳುತಾನಾದ ಭೂಪತಿಗಾದ್ಯೆಸಿರಿ ಗಾಳಿಗೊಡ್ಡಿದ ಸೊಡರ್ (ರಾಜಶೇ. ೬-೧೨೪). [ಉದ್ಧತ + ವೃತ್ತ]

**ಉದ್ಧತಶೀಲ** (ನಾ). ಗರ್ವಿಷ್ಠವಾದ ಸ್ವಭಾವವುಳ್ಳವನು; ಅಹಂಕಾರಿ: ಬಂದನಪ್ರತಿಮನಂಗಜವಿಮರ್ದನನೆಂಬ ಬಂದನುದ್ಧತಶೀಲತರಕಾಲಹರನೆಂಬ (ನಂಬಿರ. ೭-೧೧೪). [ಉದ್ಧತ + ಶೀಲ]

**ಉದ್ಧತಾರಿ** (ನಾ). ಮದಿಸಿದ ಶತ್ರು; ಸೊಕ್ಕಿದ ಹಗೆ: ಧರೆಯುಂ ಕಾಯಲುಮರ್ಥಿಗಂ ಪರಿಜನಕ್ಕಂ ಬಂಧುವರ್ಗಕ್ಕಮಾದರದಿಂದೀಯಲುಮುದ್ಧತಾರಿನೃಪರಂ ಸಂಗ್ರಾಮದೊಳ್ ಸೋವಲುಂ (ಮಲ್ಲಿಪು. ೪-೧೪೯). [ಉದ್ಧತ + ಅರಿ₆]

**ಉದ್ಧತಿಕೆ,** ಉದ್ಧತಿಕ್ಕೆ (ನಾ). ೧. ಅಹಂಕಾರ; ಸೊಕ್ಕು; ಕೊಬ್ಬು: ಇಕೆಗೆ– ಉನ್ನತಿಕೆ ಉದ್ಧತಿಕೆ, ಆಯತಿಕೆ, ಪನ್ನತಿಕೆ (ಶಮದ. ೨೧೧ ಪ್ರಯೋ). ೨. ಹಿರಿಮೆ; ದೊಡ್ಡಸ್ತಿಕೆ: ಮದವೆತ್ತಿ ನಡೆವ ರಾಯಗ[ಡ]ಣ ಮನುದ್ಯಪ್ರತಾಪತಪನಾತಪದಿಂ ನಡೆ ಕೊರಗಿಸುವುದ್ಧತಿಕೆಗೆ ಪಡಿಯಾ ವೋಂ ವೀರರಾಯಸೋಮೇಶ್ವರನೊಳ್ (ಸೌಇಇ. XX, ೧೦೭–೭; 1138); ಅತುಳತರ ಶಾಸ್ತ್ರಜ್ಞರನಿಬರಂ ಕೂಡಿಯುದ್ಧತಿಕೆಯಿಂ ಪೋಗಿ (ಪಾಸೋಪು. ೮–೪೫). **ಉದ್ಧತಿಕ್ಕೆ:** ೧. ಸೀನೆನ್ನಂ ಬಗೆಯದುದ್ಧತಿಕ್ಕೆ ಯೊಳಿರ್ದೆ (ಧರ್ಮಾಮೃ. ೫–೨೦೨); ಇಕೆಗೆ ದ್ವಿತ್ವಮುಂಟು–ಉನ್ನತಿಕ್ಕೆ, ಉದ್ಧತಿಕ್ಕೆ (ಶಮದ. ೨೧೧ ಪ್ರಯೋ); ಗುಣದೊಳ್ ಸಿರಿಯೊಳ್ ಕೀರ್ತಿ ಯೊಳಿಣೆಯಿಲ್ಲೆಂಬುದ್ಧತರ್ಕಳೇ(೦) ಮುನ್ನಿನವರ್ ಗುಣಹೀನರೂನರೀ ಗಳಿನಣುಮಾತ್ರಕ್ಷಿತಿಪರುದ್ಧತಿಕ್ಕೆಯೆ ಚೋದ್ಯಂ (ಜೀವಸಂ. ೧೪೫–೨೩).
[ಉದ್ಧತ + –ಇಕೆ]

**ಉದ್ಧತಿಕ್ಕೆ** 'ಉದ್ಧತಿಕೆ' ನೋ.

**ಉದ್ಧತಿಬಡು** (ಕ್ರಿ). ಅಹಂಕಾರಪಡು; ಗರ್ವಪಡು: ವಿತತಧರ್ಮಾ ಚಾರವುಳಿದುದ್ಧತಿಬಡುವ ಮುಂಗಾಣನವನೀ ಕ್ಷಿತಿಯೊಳಗೆ ಹಗೆಯಾಗಿಹನು (ಜೀವಂಚ. ೪–೩). [ಉದ್ಧತಿ + ಪಡು₁]

**ಉದ್ಧರ** (ಗು). ೧. ಮೇಲಕ್ಕೆ ಎತ್ತುವ. ೨. ನಾಶಗೊಳಿಸುವ; ಕಿತ್ತುಬಿಸಾಡುವ. 'ಉದ್ಧರಾಗ್ನಿ' ಪರಾ. [ಸಂ.]

**ಉದ್ಧರಣ** (ನಾ). ೧. ಮೇಲಕ್ಕೆ ಎತ್ತುವಿಕೆ; ಉದ್ಧಾರಮಾಡು ವುದು. ೨. ನಾಶಗೊಳಿಸುವುದು; ಕಿತ್ತುಬಿಸುಡುವುದು. ೩. ವಾಂತಿ ಮಾಡುವಿಕೆ. ೪. ಮುಕ್ತಿ; ಬಿಡುಗಡೆ. ೫. ಹೊಂದಿರುವುದು; ಪಡೆದಿರುವುದು: ದೊರೆವಡೆದ ಮಹಾಪ್ರಾಣಾಕ್ಷರಾಂತದಿಂ ಜಝ ಶಷಾಂತಹಾಂತಕ್ಷಾಂತೋದ್ಧರಣದಿನುದ್ಭವಿಸವು ಬಲ್ಲರ ಮತದಿಂ ಧಾತು ತಿಳಿವುದವನೀ ಕ್ರಮದಿಂ (ಶಮದ. ಸ. ೨೬೫). ೬. ಇತರರ ಮಾತನ್ನು ಎತ್ತಿ ಹೇಳುವುದು; ಉದ್ಧರಿಸುವುದು; ಉದ್ಧರಿಸಿದ ಮಾತು; ಅವತರಣ: ಕೆಲವರ ಜೀವನಕ್ಕೆ ಸಂಬಂಧಿಸಿದ ವಿವರಗಳು, ಅವರ ಕೃತಿಯಿಂದಲೂ ಇತರರ ಉದ್ಧರಣಗಳಿಂದಲೂ ದೊರಕುತ್ತವೆ (ಶಿಕ್ಷದ. ೫೯೪). ೭. [ವೀಶೈ] ರೋಗ, ಭಯ ಇತ್ಯಾದಿಗಳ ಪರಿಹಾರಾರ್ಥ ವಾಗಿ ಕಟ್ಟುವ ತಾಯಿತ, —ಯಂತ್ರ. [ಸಂ.]

**ಉದ್ಧರಣಚಿಹ್ನೆ** (ನಾ). ಅವತರಣಚಿಹ್ನೆ: "ಉದ್ಧರಣವೆಂದು ತೋರಿ ಸಲು ಅದರ ಮೊದಲಲ್ಲೂ ಕೊನೆಯಲ್ಲೂ ಹಾಕುವ ಸಂಕೇತ ಚಿಹ್ನೆಗಳು: ಉದ್ಧರಣಚಿಹ್ನೆಗಳು (" ", ' ')" (Quotation Marks. ಇಂಕನಿ).
[ಉದ್ಧರಣ + ಚಿಹ್ನೆ]

**ಉದ್ಧರಣೆ** (ನಾ). ೧. ಉದಾಹರಣೆ; ಉದ್ಧರಿಸಿದ ಮಾತು: ಶಿವ ನಿರ್ಮಾಲ್ಯವು ತ್ಯಾಜ್ಯವಲ್ಲವೆಂಬುದನ್ನು ಸ್ಪಷ್ಟಮಾಡುವುದಕ್ಕೋಸುಗ ಮೇಲಿನ ಉದ್ಧರಣೆಗಳನ್ನಿತ್ತಿದ್ದೇನೆ (ತುಳುನಾ. ೨೩೫). ೨. [ವೀಶೈ] "ಉದ್ಧರಣೆಗಳು–ವೀರಶೈವತತ್ತ್ವಗಳನ್ನು ತಿಳಿಸುವ ಸಾಧನಗಳು" (ಶರಸಾ. ೨೪–೮). ೩. ತೀರ್ಥ ಮುಂತಾದುವನ್ನು ಕೊಡುವುದ ಕ್ಕಾಗಿ ಉಪಯೋಗಿಸುವ ಲೋಹದ ಸಣ್ಣ ಸವುಟು: "... ಮೂರು ದಿನಗಳಾಯ್ತು ಒಂದು ಉದ್ಧರಣೆ ನೀರನ್ನೂ ಕುಡಿಯುವುದಿಲ್ಲ. ಯಾರೊಡ ನೆಯೂ ಮಾತನಾಡುವುದಿಲ್ಲ" ಎಂದು ಗಾಬರಿಯಿಂದ ತಿಳಿಸಿದರು (ಚಿತ್ರಕೂ. ೬೬). [ಸಂ. ಉದ್ಧರಣ]

**ಉದ್ಧರಾಗ್ನಿ** (ನಾ). ಪ್ರಜ್ವಲಿಸುವ ನಾಶಕರವಾದ ಉರಿ: ಒಳಗಿರ್ದ ಬದ್ಧಜಲಮಂ ಚೆಲ್ಲಿ ಚೆಲ್ಲಿ ತದುದ್ಧರಾಗ್ನಿಯನಂತು ಕೆಡಿಸಿ ಸಮುದ್ಧರಿಸಿ ಕಿಡಿಯಿಲ್ಲ ಹೊಗೆಯದು ಬೂದಿಯದು ತಾನು (ಬಸವು. ೩–೫).
[ಉದ್ಧರ + ಅಗ್ನಿ]

**ಉದ್ಧರಿಸು** (ಕ್ರಿ). ೧. ಮೇಲಕ್ಕೆ ಎತ್ತು; ಸಂರಕ್ಷಿಸು; ಕಾಪಾಡು: ಕಾರ್ಯಸೆಮಗಿದುವೆ ಶಿವಪದಪರ್ಯಂತಂಬರಮಮೋಘಮುದ್ಧರಿಸುಗೆ ತಾತ್ಪರ್ಯದಿನರ್ಹತ್ಸಿದ್ಧಾಚಾರ್ಯೋಪಾಧ್ಯಾಯ ಸರ್ವಸಾಧುಗಳೆಮ್ಮಂ (ಆದಿಪು. ೧–೬); ಸಚ್ಚರಿತರ್ ಸಾಧುಗಳೆಮ್ಮನುದ್ಧರಿಸುಗೀ ಸಂಸಾರ ಪಾರಾಶಿಯಿಂ (ಮಲ್ಲಿಪು. ೧–೫); ನರಕದೊಳಾಳಲೀಯದೆ ಚಂಡಿಕೆವಿಡಿ ದುದ್ಧರಿಸಲೆಂದಾಳ್ಗೊಂಡ ಗುರುವೆ (ಬಸರ. ೪–೩೨); ಕಲ್ಪಾಂತದಲಿ ಕರಗಿದ ಧರೆಯನುದ್ಧರಿಸಿದೆನು (ಕುಮಾವ್ಯಾದ್ರೋ. ೩–೭೧); ಉದ್ಧರಿಸುವೆನು ಜಗವನೆನ್ನುತಿಹ ಸಖನೆ ನಿನ್ನುದ್ಧಾರವೆಷ್ಟಾಯ್ತೊ? (ಮಂಕುಕ. ೬೫೮). ೨. ಉದಾಹರಣೆಕೊಡು; ಬೇರೆಯವರ ಮಾತುಗಳನ್ನು ಎತ್ತಿ ಹೇಳು: ಅಭಿನವವಾದಿವಿದ್ಯಾನಂದನು ಕಾವ್ಯಸಾರವೆಂಬ ಪದ್ಯಸಂಕಲನ ದಲ್ಲಿ ಶಬರವರ್ಣನೆಯ ಪ್ರಸಂಗದಲ್ಲಿ ಇದನ್ನು ಉದ್ಧರಿಸಿದ್ದಾನೆ (ಸಮಾಲೋ. ೧೬೦); ಲೋಪದೋಷಗಳನ್ನೂ ಅವುಗಳ ಅಪಕ್ವಸ್ವರೂಪ ವನ್ನೂ ಉದ್ಧರಿಸಿದೆ (ಶಿಕ್ಷದ. ೩೬೧). ೩. ಉದ್ಧಾರವಾಗು; ಏಳಿಗೆ ಯಾಗು: ಕಲಿಯುಗದೊಳು ಹರಿನಾಮವ ನೆನೆದರೆ ಕುಲಕೋಟಿಗಳುದ್ಧರಿ ಸುವುವು (ಪುರಂದ. ೪–೭೧ ಪಲ್ಲವಿ).
[ಉದ್ಧರಣ + –ಇಸು₃]

**ಉದ್ಧರ್ಷ** (ನಾ). ಹೆಚ್ಚಾದ ಸಂತೋಷ; ಅತಿಶಯಾನಂದ: "ಪ್ರಮೋದಃ . . . ಉದ್ಧರ್ಷಃ, ಉದ್ಧವಃ . . . ಸುಖಂ – ಈ ೧೩ ಸುಖದ ಪೆಸರ್" (ಹಲಾಯು. ೨೧–೧೨೩). [ಸಂ.]

**ಉದ್ಧಾಂತ** (ಗು). ಹೊರಹಾಕಿದ; ಕಾರಿದ; ವಾಂತಿಮಾಡಿದ. ೨. ಮದವಿಳಿದ ಆನೆ. 'ಉದ್ವಾಂತ' ಪರಾ. [ಸಂ.]

**ಉದ್ಧಾನ** (ನಾ). ಒಲೆ. [ಸಂ.]

**ಉದ್ಧಾರ** (ನಾ). ೧. ಮೇಲಕ್ಕೆ ಎತ್ತುವುದು; ಸಂರಕ್ಷಣೆ; ಕಾಪಾ ಡುವುದು: ಈ ಅಸಹಾಯಕ ಪರಿಸ್ಥಿತಿಯಲ್ಲಿ ನನ್ನನ್ನು ಕೈಹಿಡಿದು ಉದ್ಧಾರಮಾಡಿ (ರೂಢಿ). ೨. ಬಿಡುಗಡೆ; ಮೋಕ್ಷ. ೩. ಸಾಲ; ಋಣ; ಬಡ್ಡಿಯಿಲ್ಲದ ಸಾಲ. ೪. ಕಿತ್ತುಹಾಕುವುದು; ತೆಗೆದು ಹಾಕುವುದು; ಮೂಲೋತ್ಪಾಟನ. ೫. (ನಾಯಕನಿಗೆ) ಸುಲಿಗೆ ಯಲ್ಲಿ ಸಲ್ಲಬೇಕಾದ ಆರನೆಯ ಒಂದು ಭಾಗ, —ಆರೊಂದಿ. ೬. ಉತ್ತಾರ (ಕೈಸ್‌ಗ. ೫೬೪).

**ಉದ್ಧಾರಮಾಡು** = ೧. ಸಂರಕ್ಷಿಸು; ಕಾಪಾಡು: ನನ್ನನ್ನು ಉದ್ಧಾರಮಾಡಬೇಕು (ರೂಢಿ). ೨. ಇನ್ನೊಬ್ಬರ ಉಕ್ತಿಯಿಂದ ಅಥವಾ ಗ್ರಂಥದಿಂದ ಎತ್ತಿ ಹೇಳು. **ಉದ್ಧಾರವಾಗು** = ಅಭಿವೃದ್ಧಿ ಯಾಗು; ಏಳಿಗೆ ಹೊಂದು: ಕಷ್ಟಪಟ್ಟು ದುಡಿದರೆ ಉದ್ಧಾರವಾಗು ತ್ತಾರೆ (ರೂಢಿ). [ಸಂ.]

**ಉದ್ಧಾರಕ** (ನಾ). ಉದ್ಧಾರಮಾಡುವವನು; ಕಾಪಾಡುವವನು; ರಕ್ಷಿಸುವವನು: ಬುದ್ಧ, ಶಂಕರ, ವಿದ್ಯಾರಣ್ಯ, ವಿವೇಕಾನಂದ ಇತ್ಯಾದಿ ಮಹಾಪುರುಷರು ಭಾರತೀಯಸಂಸ್ಕೃತಿಯ ಉದ್ಧಾರಕರು (ಋಕ್ಸಾರ. ೧೦೫ ಪೀಠಿಕೆ). [ಸಂ.]

**ಉದ್ಧಾರಿಸು** (ಕ್ರಿ). = ಉದ್ಧರಿಸು ೧: ಧಾರುಣಿಯಲಜುವಂತೆ ಕರುಣಾ ಕಾರನಾಗಿ ಷಡುಸ್ಥಲವನುದ್ಧಾರಿಸಿದ ಗುರು ಚೆನ್ನಸಂಗನಬಸವ ಶರಣಾರ್ಥಿ (ಪ್ರಭುಲೀ. ೧–೩). [ಉದ್ಧಾರ + –ಇಸು₃]

**ಉದ್ಧಿ** (ನಾ). (?): ತ್ರಿಸಂಧಿಯ ಹೆಬ್ಬಲ್ಲದ ಮೂಡಣ ಉದ್ಧಿಯ ಕಲ್ಲು ಆ ಮೂಡ ಕೊಳತೂರ ಬಡಗ ಹನೆಕಾಲದ ತ್ರಿಸಂಧಿಯ ಗಾಣದ ಕಲ್ಲು ಆ ಮುಂದೆ ಹುಟ್ಟೊಬ್ಬೆಯ ಗಾಣದ ಕಲ್ಲು . . . ಆ ಮೂಡಹನೆ ಕೊಲದ ಮರವೂರ ಕೊಳತೂರ ತ್ರಿಸಂಧಿಯ ಹುತ್ತದ ಮೇಲಣ ಉದ್ಧಿಯ ಬಿಳಿಯ ಕಲ್ಲು (ಎಕ. III, ತಿರುಮ. ೬೪–೯೮; 1497). [?]

**ಉದ್ಧುರ** (ಗು). ೧. ಸ್ವತಂತ್ರವಾದ; ಸ್ವೇಚ್ಛೆಯಾದ. ೨. ಸಮರ್ಥವಾದ; ಶಕ್ತವಾದ; ದಕ್ಷವಾದ. ೩. ಶ್ರೇಷ್ಠವಾದ; ಮೇಲಾದ; ಉತ್ತಮವಾದ: ಉದ್ಧುರಗಂಭೀರಪಯೋದನಾದನತಿಪುಷ್ಪಾಂಗಂ (ಪಂಚತಂ. ೨೪–೧೭). ೪. ಉತ್ಸಾಹಗೊಂಡ; ಹರ್ಷದಿಂದ ಕೂಡಿದ; ಹುರುಪಿನ: ಸುರಭಿಸಮಯದೊಳೆ ಕೋಕಿಳವಿರುತಿ ನಿಬಂಧನಮನಬ್ದಕಾಲದೊಳೆ ಮದೋದ್ಧುರಕೇಕಿ ಮಧುರಕೇಕಾವಿರುತಿಯನಭಿಯುಕ್ತರ ಜಱದು ಪೇೞ್ವುದು ಕೃತಿಯೊಳ್ (ಕಾವ್ಯಾವ. ೮೯೧). ೫. ಕಳಚಿಬಿದ್ದ: ಕರಮೆರಡುಂ ಪಱಿವುದುಮಾ ಕರದಿಂದಂ ತನ್ನ ಕುಸ್ನಗೆಯ್ಯೊಳೆ ಕೊಂಡುದ್ಧುರರಥಚಕ್ರದಿನಿಟ್ಟಂ ತಿರಿಪಿ ನರಪ್ರಿಯತನೂಜನಕ್ಷೋಹಿಣಿಯಂ (ಪಂಪಭಾ. ೧೧–೧೦೩). [ಸಂ.]

**ಉದ್ಧುಷಣ** (ನಾ). ರೋಮಾಂಚ; ಪುಳಕ. [< ಸಂ. ಉದ್ಧರ್ಷಣ]

**ಉದ್ಧೂತ** (ಗು). ಮೇಲಕ್ಕೆ ಎಸೆಯಲ್ಪಟ್ಟ; ದೂರ ಎಸೆದ; ಪರಿಹರಿಸಲ್ಪಟ್ಟ: ಅತನುಸಮಾಕಾರರುದ್ಧೂತಲೇಪರ್ ಪ್ರಣುತರ್ . . . ಸಿದ್ಧರ್ (ಆದಿಪು. ೧–೨). [ಸಂ.]

**ಉದ್ಧೂತದೋಷ** (ಗು). ದೋಷದಿಂದ ಮುಕ್ತವಾದ: ಸದಮಳಚರಿತರನುದ್ಧೂತದೋಷರಂ ವಿಗತರೋಷರಂ ಸಕಳಕಳಾವಿದರಂ ನೆಟ್ಟನೆ ಮಲಧಾರಿದೇವರಂ ದೇವರೆಂದು ಬಣ್ಣಿಪುದು ಜಗಂ (ಸುಕುಮಾ. ೧–೨೦). [ಉದ್ಧೂತ + ದೋಷ]

**ಉದ್ಧೂಪ** (ನಾ). ಮೇಲಕ್ಕೆ ಎದ್ದ ಧೂಪ: ಸತತ ದಹ್ಯಮಾನ ಕಾಲಾಗರೂದ್ಧೂಪೋದ್ದಾಮ ಧೂಮಾಮೋದ ಮತ್ತ ಮಧುಕರನಿಕರ ಝಂಕಾರ ಪರೀತದಿಗಂತರಾಳದೊಳ್ (ಶಾಂತಿಪು. ೧೦–೭೭ ವ). [ಸಂ.]

**ಉದ್ಧೂಲನ**, ಉದ್ಧೂಳನ (ನಾ). ೧. ಪುಡಿ ಮಾಡುವುದು. ೨. ಪುಡಿಯನ್ನು ಉದುರಿಸುವುದು, —ಬಳಿಯುವುದು, —ಬಳಿದುಕೊಳ್ಳುವುದು: ವರಭಸಿತೋದ್ಧೂಲ [ಪಾಠಾಂ. ಳ] ನಮಂ ಗಿರಿಜೆಗೆ ಸುರಸತಿಯರೊಲ್ದು ಮಾಳ್ಪೆಡೆಯೊಳ್ (ಗಿರಿಕ. ೯–೪). **ಉದ್ಧೂಳನ**: ಅತ್ಯಧಿಕ ಫಲವೀವುದೀ ಭಸಿತದುದ್ಧೂಳನ (ಆರಾಚ. ೨–೯); ಬ್ರಾಹ್ಮಣರ್ಗೆ ಚತುರಾಶ್ರಮಿಗಳಿಗೆ ಸರ್ವಾಂಗೋದ್ಧೂಳನ ಸಲ್ಲುವುದು ವೈಶ್ಯರಿಗೆ ಲಲಾಟಮಾತ್ರೋದ್ಧೂಳನ ಸಲ್ಲುವುದು (ವಿವೇಕ. ೭೩). [ಸಂ.]

**ಉದ್ಧೂಲಿತ**, ಉದ್ಧೂಳಿತ (ಗು). ಲೇಪಿಸಲ್ಪಟ್ಟ; ಬಳಿದ; ಸವರಿದ: ಉರುಜಟಾಮಕುಟೋತ್ತಮಾಂಗರು ಸ್ಫುರಿತಭಸಿತೋದ್ಧೂಲಿ [ಪಾಠಾಂ. ಳಿ] ತಾಂಗರು . . . ಶಿವಲಿಂಗಧಾರಕರು (ಬಸವಪು. ೫೮–೫೧). **ಉದ್ಧೂಳಿತ**: ಮದನನಂ ಸುಟ್ಟುರಿಪಿ ತದಂಗಭಸ್ಮೋದ್ಧೂಳಿತಗಾತ್ರನಾಗಿ (ಗಿರಿಕ. ೮–೫೩); ಬೆಳ್ಮುಗಿಲಾಗಸದಂತಿರೆ ಭಸಿತೋದ್ಧೂಳಿತಲಲಾಟಂ ಕಣ್ಗೊಳಿಸೆ (ರಾಮಾಶ್ವ. ೪೦–೧೮). [ಸಂ.]

**ಉದ್ಧೂಲಿಸು**, ಉದ್ಧೂಳಿಸು (ಕ್ರಿ). ಪುಡಿಯನ್ನು ಉದುರಿಸು; ಸವರು; ಬಳಿ; ಲೇಪಿಸು: ಹರನುದ್ಧೂಲಿ [ಪಾಠಾಂ. ಳಿ] ಸಿದತ್ಯನೂನ ಭಸಿತಪ್ರದ್ಯೋತಮೋ (ಗಿರಿಕ. ೪–೧೦೮). **ಉದ್ಧೂಳಿಸು**: ಪಸುಜ್ವರಯಿಸಿದೊಡೆ ಹೊಲೆಯರ ಮಸಣದ ಬೂದಿಯನೆ ಪೂಸುಗಲ್ಲದೊಡುದ್ಧೂಳಿಸು ತಡೆಯದೆ ಕೊಳೆವಾವಿನ ಭಸಿತಮನನಿತಱೊಳೆ ತಜ್ಜ್ವರಂ ಪ್ರಶಮಿಸುಗುಂ (ಲೋಕೋಪ. ೯–೨೦೭); ಭಸಿತವಂ ಮೈದುಂಬಲುದ್ಧೂಳಿಸುತ ಭಸಿತವನೇಕೆ ವುದ್ಧೂಳಿಸೆ ತಲೋದರಿ ನೀನೆನಲು (ಬಸವಪು. ೧೨–೧೭). [ಉದ್ಧೂಲನ + –ಇಸು₃]

**ಉದ್ಧೂಳನ** 'ಉದ್ಧೂಲನ' ನೋ.

**ಉದ್ಧೂಳನಂಗೆಯ್** (ಕ್ರಿ). ಪುಡಿಯನ್ನು ಉದುರಿಸು; ಬಳಿ; ಲೇಪಿಸು. 'ಉದ್ಧೂಳನಂಗೆಯ್ಯು' ಪರಾ. [ಉದ್ಧೂಳನ (= ಉದ್ಧೂಲನ) + ಗೆಯ್ (< ಕೆಯ್$_1$)]

**ಉದ್ಧೂಳನಂಗೆಯ್ಯು** (ಕ್ರಿ). ಲೇಪಿಸು; ಬಳಿಯುವಂತೆ ಮಾಡು: ಅಮಳವಿಭೂತಿಯಂ ಸರ್ವಾಂಗದೊಳು ಉದ್ಧೂಳನಂಗೆಯ್ಸಿ [ಪಾಠಾಂ. ಯ್ಸಿ, ಯ್ದು] (ಬಸವಪು. ೪೧–೨೦). [ಉದ್ಧೂಳನಂಗೆಯ್ + –ಸು]

**ಉದ್ಧೂಳನಂಮಾಡು** (ಕ್ರಿ). = ಉದ್ಧೂಳನಂಗೆಯ್: ಹರನಾಲಯಕ್ಕೆಯ್ತಂದು ಕರಗುತೆ ವಿಭೂತಿಯನುದ್ಧೂಳನಂಮಾಡಿ ಹರುಷದಿಂ ಪಾಡುತುಂ ರುದ್ರಾಕ್ಷೆಯಂ ಸೂಡಿ (ತಿರುರ. ೪–೧೦). [ಉದ್ಧೂಳನ (= ಉದ್ಧೂಲನ) + ಮಾಡು$_1$]

**ಉದ್ಧೂಳಿತ** 'ಉದ್ಧೂಲಿತ' ನೋ.

**ಉದ್ಧೂಳಿಸು** 'ಉದ್ಧೂಲಿಸು' ನೋ.

**ಉದ್ಧೃತ** (ಗು). ೧. ಮೇಲಕ್ಕೆ ಎತ್ತಿದ; ಹೊರಕ್ಕೆ ಎಳೆದ, —ತೆಗೆದ; ಕಿತ್ತೆತ್ತಿದ: ಬೊಬ್ಬೆಗೊಟ್ಟಾನೆಯ ಕೊಂಬದಾಗೆ ಸಿಡಿವಂಜರಮುದ್ಧೃತ ಹಸ್ತದಂಡಮಾ ಬಾನೊಳೆ ತಳ್ತು ತೋಱಿ (ರಾಜಶೇ. ೬–೭೫). ೨. ಉದಾಹರಿಸಿದ; ಉದ್ಧರಿಸಿದ.

ಉದ್ಧೃತಗೊಳಿಸು = ಉದ್ಧರಿಸು ೨: ಮಲ್ಲಿಕಾರ್ಜುನ ಅಭಿನವವಾದಿ ವಿದ್ಯಾನಂದರಂಥ ಸಂಕಲನಕಾರರು ಅವನ ಪದ್ಯಗಳನ್ನು ಉದ್ಧೃತಗೊಳಿಸಿದ್ದಾರೆ (ಕಸಾಚ. ೪೯). [ಸಂ.]

**ಉದ್ಧೃತಿ** (ನಾ). ಉದ್ಧರಿಸಿದ್ದು; ಉದಾಹರಣೆ: ಮಲ್ಲಿಕಾರ್ಜುನ ಕೇಶಿರಾಜರು . . . ಹರಿಹರನಿಂದ ಉದ್ಧೃತಿಗಳನ್ನು ತೆಗೆದುಕೊಂಡಿದ್ದಾರೆ (ಕಸಾಚ. ೧೮೪). [ಸಂ.]

**ಉದ್ಧ್ಯ** (ನಾ). ಪೂರ್ವದಿಂದ ಪಶ್ಚಿಮಕ್ಕೆ ಹರಿವ ನದಿ; ಗಂಡುನದಿ: "ಭಿದ್ಯಃ, ಉದ್ಯಃ [ದ್ಧ್ಯಃ], ನದಃ, —ಈ ೩ ಗಂಡುದೊಱೆ" (ಹಲಾಯು. ೧೧೦–೪೩). [ಸಂ.]

**ಉದ್ಬದ್ಧ** (ಗು). ಎತ್ತಿ ಕಟ್ಟಲ್ಪಟ್ಟ: ನಾಲ್ಸಾಸಿರದಿಂ ಮಿಗಿಲೆನೆ ಮುನ್ನೂಱಿರ್ಪತ್ತುಗೆಯ್ದ ಮುಖ್ಯಧ್ವಜಂಗಳುದ್ಬದ್ಧಂಗಳ್ (ಮಲ್ಲಿಪು. ೧೪–೧೫೯). [ಸಂ.]

**ಉದ್ಬದ್ಧಕುಕ್ಷಿ** (ಗು). ಒಳಕ್ಕೆ ಸೇದಿದ ಜಠರ ಪ್ರದೇಶವುಳ್ಳ; ದೃಢವಾದ ಉದರವುಳ್ಳ: ಮೃದುಕೇಸರಂ ನಿಬಿಡಜಂಘಾಕಾಂಡನುದ್ಬದ್ಧಕುಕ್ಷಿ ತನುಸ್ನಿಗ್ಧತನೂರುಹಂ . . . ತುರಗಂ ಮನಂಗೊಳಿಸಿದತ್ತು (ಮಲ್ಲಿಪು. ೮–೧೪೯). [ಉದ್ಬದ್ಧ + ಕುಕ್ಷಿ]

**ಉದ್ಬದ್ಧಜೂಟ** (ಗು). ಎತ್ತಿ ಕಟ್ಟಿದ ಜಡೆಯುಳ್ಳ: ಉತ್ಕಟಹಾಟಕ ಪದಕಮಣಿ ತ್ರಿಖಂಡಕರ್ಣಾಭರಣಮುದ್ಬದ್ಧಜೂಟಂ . . . ನಾಟಕಾಭಿನಯ ನಟವೃಂದಮಿದು ಮಹಾನಾಟಕಬಲಂ (ಆದಿಪು. ೧೩–೪೫ ವ). [ಉದ್ಬದ್ಧ + ಜೂಟ]

**ಉದ್ಬಿಜ** 'ಉದ್ಭಿಜ' ನೋ.

**ಉದ್ಬುದ್ಧ** (ಗು). ೧. ಎಚ್ಚರಗೊಂಡ; ಚೇತರಿಸಿದ; ಎದ್ದ: ಸುರಸ್ವಪ್ನವಿದ್ದ ಪ್ರತಿಬಿಂಬಬಿದ್ದ ಉದ್ಬುದ್ಧ ಶುದ್ಧನೀರೆ (ಗಂಗಾತ. ೮). ೨. ಅರಳಿದ; ವಿಕಾಸಗೊಂಡ: "ಉನ್ಮೀಲಿತಂ, ಉನ್ಮಿಷಿತಂ . . . ಉದ್ಬುದ್ಧಂ, ವ್ಯಾಕೋಚಂ, ವಿಕಾಸಃ—ಈ ೯ ಅಲರ್ವುದರ್ಕೆ ಪೆಸರ್" (ಹಲಾಯು. ೩೧–೩೩); ಉದ್ದೀಪನವಿಭಾವದಿಂದ ವಿಪ್ರಲಂಭ ಶೃಂಗಾರವು ಉದ್ಬುದ್ಧವಾಗುತ್ತದೆ (ಧ್ವನ್ಯಾಲೋ. ೫೫). [ಸಂ.]

**ಉದ್ಬೋಧ** (ನಾ). ೧. ಎಚ್ಚರ. ೨. ಜ್ಞಾನ; ಉತ್ತಮವಾದ ಅರಿವು. 'ಉದ್ಬೋಧಗೊಳಿಸು' ಪರಾ. [ಸಂ.]

**ಉದ್ಬೋಧಕ** (ಗು). ಎಚ್ಚರವನ್ನು ಉಂಟುಮಾಡುವ; ತಿಳಿವಳಿಕೆಯನ್ನು ಕೊಡುವ; ವಿಕಾಸಗೊಳಿಸುವ: ಒಳಸನ್ನಿವೇಶಗಳು ಚಾಲಕ ಶಕ್ತಿಯಾಗಿ ಕೆಲಸಮಾಡಿದರೆ ಹೊರಸನ್ನಿವೇಶಗಳು ಉದ್ಬೋಧಕ ಅಥವಾ ಪ್ರಚೋದಕಗಳಾಗಿ ಕೆಲಸಮಾಡುತ್ತವೆ (ಶಿಕ್ಷದ. ೪೫೦). [ಸಂ.]

**ಉದ್ಬೋಧಕೋಶ** (ನಾ). ಜ್ಞಾನಕೋಶ, —ಭಂಡಾರ: ದೇಶಂ ಧರ್ಮೋಪದೇಶಂ ಶ್ರುತಬಲಮೆ ಬಲಂ ಕೋಶಮುದ್ಬೋಧಕೋಶಂ (ಚಂದ್ರಪ್ರ. ೧-೨೯). [ಉದ್ಬೋಧ + ಕೋಶ]

**ಉದ್ಬೋಧಗೊಳಿಸು** (ಕ್ರಿ). ಎಬ್ಬಿಸು; ಎಚ್ಚರಿಸು; ಅರಳಿಸು; ವಿಕಾಸಗೊಳಿಸು: ತಾನವಳ ಅಂತರಾತ್ಮವನ್ನು ಉದ್ಬೋಧಗೊಳಿಸಬೇಕೆಂದೂ, ಅದು ಕಷ್ಟತರವಾದ ಕಾರ್ಯವೆಂದೂ ಅವನಿಗೆ ಗೊತ್ತಿತ್ತು (ಪುನರು. ೧೯೬). [ಉದ್ಬೋಧ + ಕೊಳ್$_1$ + -ಇಸು$_3$]

**ಉದ್ಭಟ** (ಗು). ೧. ಉತ್ತಮವಾದ; ಅತಿಶಯವಾದ; ಹೆಚ್ಚಾದ: "ಉಲ್ಬಣಂ, ಉದ್ಭಟಂ, (ಉತ್ಕಟಂ), ಉದ್ಧತಂ — ಈ ೪ ಮಿಕ್ಕುದು" (ಹಲಾಯು. ೧೨೩-೨೯); "ಉತ್ಕಟಮುದುದ್ಭಟಮುದುದ್ಧತಮುದುಲ್ಬಣಮುದುತ್ಕೃಷ್ಟಮೆನಲು ಪೆರ್ಚಿದುದಕ್ಕು" (ಮಂಗರಾ. ೧೩೨-೨೪). (ನಾ). ೨. (ಅಕ್ಕಿ ಮುಂತಾದುವುಗಳನ್ನು ಕೇರುವ) ಮೊರ; ಶೂರ್ಪ. ೩. ಒಬ್ಬ ಶಿವಭಕ್ತನ ಹೆಸರು: ಕೊಂಡೊಯ್ವಂ ಕೊಂಡೊಯ್ವಂ ಪುರವಂ ಕಂಡಜಿಯವೆ ಕೇಳುದ್ಭಟನಿರವಂ (ಉದ್ಭರ. ೧೧-೨). ೪. ಒಬ್ಬ ಕವಿಯ ಹೆಸರು: ಕೇಶಿರಾಜನ ಬಗೆಯುದ್ಭಟಯ್ಯನ ಗಭೀರತೆ (೧೧೮. ೧-೮). [ಸಂ.]

**ಉದ್ಭಟಭಟ** (ನಾ). ಅತ್ಯುತ್ತಮನಾದ ಭಟ: ಚಿತ್ರನೇತ್ರಾಂಬರನಾನಾಹೇತಿಹಸ್ತೋದ್ಭಟಭಟಪ್ರತನಾಭೀಳಮಂ ಚಿತ್ತದೊಳ್ ವೀರರಸಂ ಕೈಗಣ್ಮೆ (ಆದಿಪು. ೧೧-೨೪). [ಉದ್ಭಟ + ಭಟ]

**ಉದ್ಭಟವೃತ್ತ** (ನಾ). ಉತ್ತಮವಾದ ಚರಿತ್ರೆಯುಳ್ಳವನು; ಶ್ರೇಷ್ಠವಾದ ನಡವಳಿಕೆಯುಳ್ಳವನು: ಪತ್ತುಂ ಧರ್ಮಂಗಳ್ ಮೂವತ್ತಾಜುಂ ಗುಣದೊಳಮರೆಸನ್ಮಾರ್ಗಣವೋಕ್ಷಾತ್ತದೃಢಚಿತ್ತನುದ್ಭಟವೃತ್ತಂ ಘಾತಿಸಲೊಡರ್ಚಿದಂ ಘಾತಿಗಳಂ (ಪುಷ್ಪಪು. ೧೪-೧೬). [ಉದ್ಭಟ + ವೃತ್ತ]

**ಉದ್ಭಟೆ** (ನಾ). ಬೊಬ್ಬುಲಿಗಿಡ: "ಉದ್ಭಟೆಯೆನಲು ಬೊಬ್ಬುಲಿ" (ಮಂಗರಾ. ೩೫-೧೫). [ಸಂ. ಉದ್ಭಟಾ]

**ಉದ್ಭವ** (ನಾ). ೧. ತಲೆದೋರುವುದು; ಹುಟ್ಟುವುದು; ಉತ್ಪತ್ತಿ: ಅಮಳಶ್ರೀ ಜಿನವರ್ತನಂ ಕಿಡದು ... ಅನ್ಯಮತಕ್ಕುದ್ಭವಮಿಲ್ಲ (ಪುಷ್ಪಪು. ೨-೩). ೨. ಏಳಿಗೆ; ಅಭಿವೃದ್ಧಿ. 'ಉದ್ಭವಕರ' ಪರಾ. ೩. (ತಾನಾಗಿಯೇ) ಹುಟ್ಟಿದುದು. 'ಉದ್ಭವಮೂರ್ತಿ' ಪರಾ. [ಸಂ.]

**ಉದ್ಭವಂಗೈ** (ಕ್ರಿ). ಹುಟ್ಟು; ಕಾಣಿಸಿಕೊಳ್ಳು: ತರುಣಿ ನಾಗಾಂಬೆಯ ಸುಗರ್ಭದಿ ನಿರುಪಮಜ್ಞಾನಸ್ವರೂಪಂ ಪರಮಕಾರಣ ಚನ್ನಬಸವಂ ವುದ್ಭವಂಗೈದ (ಬಸವು. ೭ ಸೂಚನೆ). [ಉದ್ಭವ + ಗೈ (< ಕೆಯ್$_1$)]

**ಉದ್ಭವಕರ** (ಗು). ಅಭಿವೃದ್ಧಿಗೆ ಕಾರಣವಾದ; ಏಳಿಗೆಯನ್ನುಂಟುಮಾಡುವ: ಸಂದುದು ನಾಕಿಗನನುಮತದಿಂ ಪೂರ್ಣೇಂದು ನಿಭಾಸ್ಯೇ ಧರೆಗಿದು ಪರಿದತ್ತೆಲ್ಲಿಯುಮುದ್ಭವಕರ [ಪಾಠಾಂ. ಉತ್ಸವಕರ] ಮೆನೆ ತನ್ವೀ (ಭಂಡೋಂಬು. ೨-೧೪೧). [ಸಂ.]

**ಉದ್ಭವಮೂರ್ತಿ** (ನಾ). ತಾನೇ ತಾನಾಗಿ ಹುಟ್ಟಿದ ಮೂರ್ತಿ; ಒಡಮೂಡಿದ ಮೂರ್ತಿ: ಲೇಪಾಕ್ಷಿಯ ವೀರಭದ್ರ ಉದ್ಭವಮೂರ್ತಿ (ರೂಢಿ). [ಉದ್ಭವ + ಮೂರ್ತಿ]

**ಉದ್ಭವಿಸು, ಉದುಭವಿಸು** (ಕ್ರಿ). ತಲೆದೋರು; ಹುಟ್ಟು; ಅವತರಿಸು: ಆಗಳೆ ಗಾಡಿ ನಾಡೆ ಕಣ್ಗೊಡಿರಲೊರ್ವನುದ್ಭವಿಸೆ ಕಂಡು (ಕಾದಂಪೂ. ೭೬೪); ಉದ್ಭವಿಸಿದ ರುಜೆಗೆ ಚಿಕಿತ್ಸೆಯನವಧಾರಿಸಿ ಮಾಟ್ಪ ವೈದ್ಯನವಂ ನವವೈದ್ಯಂ (ಕಲ್ಯಾಕಾ. ೨-೪೧); ಲಿಂಗದೊಳಗಿದ್ದ ಪುರಾತನರು ಉದ್ಭವಿಸಿದರು ಮರಳಿ ... ಲಿಂಗದೊಳಗೆ ಬೆರಸಿದರು (ಮಹಾಸಾ. ೫೧); ಉರದೊಳ್ ಭಗಣಕುಲವೆಸೆವ ಪಣೆಯೊಳೊಪ್ಪುವ ಮಹಾರುದ್ರರುದ್ಭವಿಸಿದರ್ ಸಂತಸದೊಳು (ಚೆಬಪು. ೧೨-೧೪); ಉಪಾಧ್ಯಾಯಿನಿಯ ಮನಸ್ಸಿನಲ್ಲಿ ಆಲೋಚನಾತರಂಗಗಳು ಉದ್ಭವಿಸಿದುವು (ಮೊಗ್ಗು. ೪೯).

**ಉದುಭವಿಸು**: ನನಗಿದುವೆ ಜಲೋದಯದ ಋತುಸಮಯಮಿಾ ಪದದೊಳುದುಭವಿಸುವುದು ನಿನ್ನ ಭೂಮಿಯೊಳ್ ಬೀಜಮಂ ಬಿತ್ತಿದೊಡೆ ಬೆಳೆ (ಜೈಮಿಭಾ. ೧೧-೧೪). [ಉದ್ಭವ + -ಇಸು$_3$]

**ಉದ್ಭಾವ** (ನಾ). = ಉದ್ಭವ ೧: ಪಾವಕೋದ್ಭಾವದಿಂ ಶ್ರೀವಧೂಪಾವನಂ (ಭಂಡೋಂಬು. ೨-೮). [ಸಂ.]

**ಉದ್ಭಾವಕ** (ಗು). ಎಣಿಕೆಮಾಡುವ; ಗಣಿಸುವ; ಭಾವಿಸುವ: ದೇವರುಂ ಗೊರವರುಂ ಗುಣವೃದ್ಧರನಾರತಂ ಕಾವರಕ್ಕರಸನಂ ಪ್ರಜೆಯಂ ಪರಿವಾರಮಂ ಏನುಮಂ ಬಗೆಯದಂತಿರೆ ಪೇಟ್ದ ಸಮುಚ್ಚಯೋದ್ಭಾವಕ ಕ್ರಮವಿಚಾರದೆ ದೋಷಮಿದಗ್ಗಳಂ (ಕವಿರಾ. ೧-೧೩೧). [ಸಂ.]

**ಉದ್ಭಾವನ** (ನಾ). ೧. ಎಣಿಕೆ; ಭಾವನೆ. ೨. ತೋರ್ಪಡಿಸುವುದು; ಪ್ರಕಟಿಸುವುದು: ವಿದ್ಯಮಾನಪರಗುಣಪ್ರಚ್ಛಾದನಮುಂ ಅವಿದ್ಯಮಾನ ನಿಜಗುಣೋದ್ಭಾವನಮುಂ (ತತ್ತ್ವಪ್ರ. ೨೬೭). [ಸಂ.]

**ಉದ್ಭಾವಿಸು** (ಕ್ರಿ). ೧. ಎಣಿಸು; ತಿಳಿ. ೨. ತೋರ್ಪಡಿಸು; ಪ್ರಕಟಿಸು: ದೇವ ಪೆಜತಾವುದವ್ಯಕ್ತಾವಯವದೊಳಂ ಕುಮಾರನುನ್ನತಿಕೆಯನುದ್ಭಾವಿಸುತಿರ್ದಪು[ದಂ ಪರಿ]ಭಾವಿಸು (ಕಾದಂಪೂ. ೪೧೯); ಶ್ರೀವಾಗ್ದೇವಿಗೆ ಶಬ್ದದಿನಾಪಾವಿಂದ್ರಿಯದ ವಿಷಯಮಂ ಶ್ರೋತ್ರದೊಳುದ್ಭಾವಿಪ ನಿರ್ಮಲ ಮೂರ್ತಿಗಿಳಾವಂದ್ಯೆಗೆ ಶಾಸ್ತ್ರಮುಖದೊಳವನತನಪ್ಪೆಂ (ಶಮದ. ೧); "ಉದ್ಭಾವಿಪ-ಅಭಿವ್ಯಕ್ತಮಾಗಿ ಅಜಿಯಿಸುವ" (ಶಮದ. ೧ ಟೀಕೆ). ೩. ಉಂಟಾಗು; ಹುಟ್ಟು; ಕಾಣಿಸಿಕೊಳ್ಳು: ಕೇವಲ ಮದಂತಲಿಂಗದೊಳಾವರ್ಜಿತಮಪ್ಪಮಾಗಮಂಗಳ್ಗಕ್ಕುಂ ತಾವೊಂದಿ ಬಿಂದುಗಳ್ದುದ್ಭಾವಿಸಿ ನೆಗಟ್ಗುಂ ಮನಂ ಸ್ವರಂ ನಿಲೆ ಪರದೊಳ್ (ಕಾವ್ಯಾವ. ೯೮). [ಉದ್ಭಾವ + -ಇಸು$_3$]

**ಉದ್ಭಾಷಿಸು** (ಕ್ರಿ). ಎತ್ತಿ ಹೇಳು; ವರ್ಣಿಸು; ಪ್ರಕಾಶಪಡಿಸು: ದೋಷಮಿನಿತೆಂದು ಬಗೆದುದ್ಭಾಷಿಸಿ ತಜಿಸಂದು ಕನ್ನಡಂಗಳೊಳೆಂದುಂ ವಾಸುಗಿಯುಮಜಿಯಲಾಜದೆ ಬೇಸಜಗುಂ ದೇಶಿ ಬೇಜೆಬೇಜಪ್ಪುದಜಿಂ (ಕವಿರಾ. ೧-೪೮). [ಉದ್ಭಾಷಣ$_0$ + -ಇಸು$_3$]

**ಉದ್ಭಾಸಿ** (ಗು). ಪ್ರಕಾಶಮಾನವಾದ; ಶೋಭಿಸುವ; ಕಾಂತಿಯಿಂದ ಕೂಡಿದ: ಕಮಲೋದರೋದ್ಭಾಸಿ ಭಾಸುರಶುಕ್ಲಪಕ್ಷದಂತಹಿತಲ್ಪದಂತೆ ತತ್ಸರಂ ಕರಿಗೊಳಿಸಿತು (ಜೈಮಿಭಾ. ೧೫-೧೧). [< ಸಂ. ಉದ್ಭಾಸಿನ್]

**ಉದ್ಭಾಸಿತ** (ಗು). ಪ್ರಕಾಶಪಡಿಸಲ್ಪಟ್ಟ; ಬೆಳಗಿಸಿದ: ಶರದುದ್ಭಾಸಿತ ಲಕ್ಷ್ಮಿಗೆ ಸದೃಶವಿಕಾಸಮಿದೆನಿಸಿದುದು ಲಕ್ಷ್ಮಿ ಶಾಂತೀಶ್ವರನಾ (ಶಾಂತಿಪು. ೧೦-೧೩೬); ಅಪರದಿಗ್ಭಾಗದಂತಂಜನೋದ್ಭಾಸಿತಂ ವಿಪುಲ ಹರಿಪದದಂತೆ ತಾರಕಾಲಂಕೃತಂ (ಜೈಮಿಭಾ. ೩೧-೮). [ಸಂ.]

**ಉದ್ಭಾಸಿನಿ** (ನಾ). ಪ್ರಕಾಶಮಾನಳಾದವಳು; ಲಾವಣ್ಯವತಿ: ಬಾಸಣಿಸಿದ ಮದನನ ಬಾಣಾಸನದವೊಲೆಸೆವ ಚಾರು ಝುಂಪಾಣದೊಳುದ್ಭಾಸಿನಿಯರ್ ನೃಪಸುತನ ವಿಳಾಸಿನಿಯರ್ ಬಂದರೇಜಿ ಪೊನ್ನಂದಣಮಂ (ಪುಷ್ಪಪು. ೫-೨೦). [ಸಂ. ಉದ್ಭಾಸಿನೀ]

**ಉದ್ಭಾಸಿಸು** (ಕ್ರಿ). ಪ್ರಕಾಶಗೊಳಿಸು; ಪ್ರಕಟಿಸು. [ಉದ್ಭಾಸ$_0$ + -ಇಸು$_3$]

**ಉದ್ಭಾಸೆ** (ನಾ). ಪ್ರಕಾಶಪಡಿಸುವವಳು: ಜೈನಶಾಸನ ವಿಶೇಷೋದ್ಭಾಸೆ ಕೂಷ್ಮಾಂಡಿಯಂಬಿಕೆ ಯಕ್ಷೇಶ್ವರಿ ಕೂರ್ತು ರಕ್ಷಿಸುಗೆ ಭವ್ಯಾನೀಕಮಂ ಸಂತತಂ (ಸುಕುಮಾ. ೧-೮). [ಸಂ. ಉದ್ಭಾಸಾ]

**ಉದ್ಭಿಜ,** ಉದ್ಭಿಜ (ನಾ). = ಉದ್ಭಿಜ್ಜ : ಅಂಡಜ, ಸ್ವೇದಜ, ಉದ್ಭಿಜ, ಜರಾಯುಜರೆಂಬ ಪ್ರಾಣಿಗಳಿಗೆ ಭವಿತವ್ಯವ ಕೊಟ್ಟವರಾರೋ (ಬಸವ. ೨೨೫) ; ಸ್ವೇದಜೋದ್ಭಿಜ ನೆರೆ ಜರಾಯುಜವಂಡಜವೆನಿಪ ನಾಲ್ಕು ಪ್ರಾಣಿಗಳು (ಅಮೃತ. ೪-೧೪). **ಉದ್ಭಿಜ :** ಘನಮಹಾವೃಕ್ಷವಾ ತೃಣಲತೆಗಳುದ್ಭಿಜಂ (ಲಶಿಚಂ. ೩೯-೨೬) ; ಈ ಉದ್ಭಿಜಗಳೆ ಪ್ರಾಣಿಗಳ ಜೀವನ (ಜ್ಯೋತಿಶ್ಶಾ. ೫೫). [< ಸಂ. ಉದ್ಭಿಜ್ಜ]

**ಉದ್ಭಿಜ್ಜ** (ನಾ). ಭೂಮಿಯನ್ನು ಸೀಳಿಕೊಂಡು ಮೊಳೆತು ಬರುವಂಥದು ; ಮರ, ಬಳ್ಳಿ ಮೊದಲಾದುವು : 'ಉದ್ಭಿಜ್ಜ' ಎಂದರೆ ಭೂಮಿಯನ್ನು ಭೇದಿಸಿಕೊಂಡು ಹೊರಗೆ ಬರುವ ವೃಕ್ಷಗುಲ್ಮಾದಿಗಳು (ಹಿಂದಸಾ. ೧೯೮). [ಸಂ.]

**ಉದ್ಭಿಜ್ಜಶಾಸ್ತ್ರ** (ನಾ). ಸಸ್ಯಶಾಸ್ತ್ರ. [ಉದ್ಭಿಜ್ಜ + ಶಾಸ್ತ್ರ]

**ಉದ್ಭಿದ** (ಗು). ೧. ಅಂಕುರಿಸುವ; ಮೊಳೆಯುವ. (ನಾ). ೨. = ಉದ್ಭಿಜ್ಜ. [ಸಂ.]

**ಉದ್ಭಿದ್ಯಮಾನ** (ಗು). ಅಂಕುರಿಸುತ್ತಿರುವ; ಮೊಳೆಯುತ್ತಿರುವ : ಅಭಿನವೋದ್ಭಿದ್ಯಮಾನಮೃದುಕುಟಿಲಶ್ಮಶ್ರು ಮಧುಕರಪಟಳಪರಿವೃತಮುಗ್ಧಮುಖಸರಸಿಜನುಂ (ಆದಿಪು. ೩-೯೦ ವ). [ಸಂ.]

**ಉದ್ಭಿನ್ನ** (ಗು). ಬಿರಿದ ; ಅರಳಿದ ; ವಿಕಾಸವಾದ. ೨. ಭಿನ್ನವಾದ ; ಬೇರೆಯ (ಕ). [ಸಂ.]

**ಉದ್ಭೂತ** (ಗು). ೧. ಹುಟ್ಟಿದ; ಕಾಣಿಸಿಕೊಂಡ : ಅಮೃತಮಥನೋದ್ಭೂತವಿಷಮವಿಷಧರನೆಂಬ ಆಮಮ ಬಂದಂ ಜನನಮರಣ ವರ್ಜಿತನೆಂಬ (ನಂಬಿರ. ೭-೧೧೫) ; ಆ ಬಸವನತ್ಯದ್ಭುತೋದ್ಭೂತಚಿತ್ತನಾಗುತ್ತ (ಬಸವು. ೨೯-೨೦). ೨. ಕಣ್ಣಿಗೆ ಕಾಣಿಸುವ; ಗೋಚರವಾಗುವ. ೩. ಅತ್ಯಂತ ಎತ್ತರವಾದ; ಉನ್ನತವಾದ.

**ಉದ್ಭೂತವಾಗು** = ಹುಟ್ಟಿಕೊಳ್ಳು ; ತಲೆದೋರು : ಈ ಅಭಿಪ್ರಾಯಗಳ ಚರ್ಚೆಯಲ್ಲಿ ಒಂದೆರಡು ಸಾಮಾನ್ಯಪ್ರಶ್ನೆಗಳು ಉದ್ಭೂತವಾಗುತ್ತವೆ (ಕಸಾಜ. ೬೬). [ಸಂ.]

**ಉದ್ಭೂತಿ** (ನಾ). ಕಾಣಿಸಿಕೊಳ್ಳುವಿಕೆ ; ಉತ್ಪತ್ತಿ : ಭೂತಮಾತ್ರೇಂದ್ರಿಯದ ಕೃತಿಯುದ್ಭೂ[ದ್ಭೂ]ತಿ ಸರ್ಗವೆನಿಪ್ಪುದಜೀವರೆ ಭೂತಳಾಧಿಪ ಕೇಳು (ನಿಭಾಗ. ೨-೪-೨). [ಸಂ.]

**ಉದ್ಭೇದ** (ನಾ). ಹೊರಹೊಮ್ಮುವುದು ; ಒಡೆಯುವುದು ; ಮೊಳೆಯುವುದು : ರೋಮಾಂಚನಿಕಾಯೋದ್ಭೇದವಲ್ಲಿಂಬಟೀಕ ಭುಜಯುಗಂ ಸುತ್ತೆ ರಾಜೇಂದ್ರಚಂದ್ರಂ (ಕಾದಂಉ. ೧೮೫). [ಸಂ.]

**ಉದ್ಭ್ರಮಿ** (ನಾ). ಕಕ್ಕಾಬಿಕ್ಕಿಯಾದವನು; ಭ್ರಾಂತಿಗೊಂಡವನು: ಸಮತೆಯಾಯಿತು ತವಕಿಗಳಿಗುದ್ಭ್ರಮಿಗಳಿಗೆ ತಿಳಿವಾಯ್ತು ವಾಸಿಯ ಮಮತೆಯವರು ವಿರಕ್ತರಾದರು (ಕುವ್ಯಾಕ. ೫-೧೫). [ಸಂ.]

**ಉದ್ಭ್ರಮಿತ** (ನಾ). = ಉದ್ಭ್ರಮಿ. 'ಉದ್ಭ್ರಮಿತತನ' ಪರಾ. [ಸಂ.]

**ಉದ್ಭ್ರಮಿತತನ** (ನಾ). ಕಕ್ಕಾಬಿಕ್ಕಿಯಾದ ಸ್ಥಿತಿ ; ಭ್ರಾಂತಿಗೊಂಡ ಇರವು: ನಿಮಗಿದೇಕೀ ಕ್ಷತ್ರಿಯರೊಳುದ್ಭ್ರಮಿತ[ಪಾಠಾಂ. ಉಭ್ರಮಿತ]ತನ (ತೊರರಾ. ೧-೧೭-೬). [ಉದ್ಭ್ರಮಿತ + -ತನ]

**ಉದ್ಭ್ರಮಿಸು** (ಕ್ರಿ). ೧. ಕಕ್ಕಾಬಿಕ್ಕಿಯಾಗು ; ದಿಗ್ಭ್ರಮೆಗೊಳ್ಳು : ಧರಣಿತಳದೊಳು ಕೆಡೆದು ಮಡಿದವು ನೆರೆದ ಸಾಮಂತಾದಿ ಭಟಪರಿಕರನಿಕರವುದ್ಭ್ರಮಿಸಿ ಸವೆದರು ಕಾದಿ ತಮ್ಮೊಳಗೆ (ಬಸವು. ೬೧-೩೯). ೨. ಭ್ರಮೆಗೊಳಿಸು ; ಸಂಭ್ರಮಿಸು ; ಸಡಗರಿಸು : ಕಮಲಮುಖಿಯನು ನಿಮಗೆ ಪಟ್ಟದ ರಮಣಿಯನು ಮಾಡುವೆವೆನುತ್ತುದ್ಭ್ರಮಿಸಿ ನುಡಿದನು ಗರ್ವದಲಿ ಕಲಿಪುರುಷ ಸುರಪತಿಗೆ (ನಳಚ. ೪-೧೦). ೩. ಸುತ್ತು ; ಅಲೆದಾಡು ; ತಿರುಗು : ಗಮಿಸಿದವು ಹಂಸೆಗಳು ಲಲಿತಕ್ರಮದ ಸೋಂಕಿನಲಳಕತತಿಗುದ್ಭ್ರಮಿಸಿದವು ಭ್ರಮರಾಳಿ ಬೆಂಬಳಿಯಲಿ ನಿತಂಬಿನಿಯ (ತೊರರಾ. ೩-೮-೨೭). [ಉದ್ಭ್ರಮಣ + -ಇಸು]

**ಉದ್ಭ್ರಾಂತ** (ಗು). ೧. ಭ್ರಾಂತಿಗೊಂಡ; ಕಕ್ಕಾಬಿಕ್ಕಿಯಾದ. ೨. ಅಲೆಯುತ್ತಿರುವ. [ಸಂ.]

**ಉದ್ಭ್ರಾಮಿತ** (ನಾ). ಗದೆಯಿಂದ ಹೊಡೆಯುವ ವಿಧಾನಗಳಲ್ಲಿ ಒಂದು ; ಒಂದು ರೀತಿಯ ವರಸೆ, —ಪಟ್ಟು (?) : ವಿಳಂಬಿತಮಾಕುಂಚಿತಮಾಸ್ಫೋಟಿತಮಾಕ್ಷಿಪ್ತಮುದ್ಭ್ರಾಮಿತಂ ದಿಗ್ಭ್ರಾಮಿತಂ . . . ಎಂಬೆಂಟುಂ ತೆಱದ ಪ್ರಹರಣಂಗಳೊಳ್ (ಗದಾಯು. ೮-೧ ವ). [ಸಂ.]

**ಉದ್ಯಚ್ಚಕ್ರ** (ನಾ). ಶ್ರೇಷ್ಠವಾದ ಚಕ್ರ: ಆ ಯಕ್ಷಸಹಸ್ರರಕ್ಷಿತಮನುದ್ಯಚ್ಚಕ್ರಮಂ ಚಂದ್ರಹಾಸಜಯೋಗ್ರಾಸಿಯನಾಂಪ ಕೈದುವೊಳವೇ (ಪಂರಾಮಾ. ೧೦-೨೧೪). [ಸಂ. (ಉದ್ಯತ್ + ಚಕ್ರ)]

**ಉದ್ಯಚ್ಚಕ್ರಿ** (ನಾ). ಶ್ರೇಷ್ಠವಾದ ಚಕ್ರವನ್ನು ಹಿಡಿದಿರುವವನು : ಉದ್ಯಚ್ಚಕ್ರಿ [ಪಾಠಾಂ. ಕ್ರ] ಚಕ್ರೋಜ್ವಳತರ ತರಳಜ್ಯೋತಿ ತೋಳಿಂಟ ಗುರ್ವಾಗಿರೆ (ಆದಿಪು. ೧-೭). [< ಸಂ. ಉದ್ಯಚ್ಚಕ್ರಿನ್]

**ಉದ್ಯತ** (ಗು). ೧. ಮೇಲಕ್ಕೆ ಎತ್ತಿದ; ಎತ್ತಿಹಿಡಿದ. ೨. ಶಿಕ್ಷಣವನ್ನು ಪಡೆದ ; ತರಬೇತಾದ. ೩. ಸಿದ್ಧವಾದ ; ತಯಾರಾದ. (ನಾ). ೪. ಪ್ರಯತ್ನಶೀಲ; ಉದ್ಯೋಗಶೀಲ : ನೀಂ ಪೇೞುವುದು ಜಾತಕತಿಲಕಮನೆನೆ ಪಲರ್ಗಱಿಯೆ ಕನ್ನಡದಿನೆಸೆಯೆ ಪೇೞಲುದ್ಯತನಾದೆಂ (ಜಾತತಿ. ೧-೧೭) ; ಓದಲುದ್ಯತನಾಗುತಾ ಪತ್ರಮಂ ಕಂಡು (ನಂಬಿರ. ೭-೬೮). [ಸಂ.]

**ಉದ್ಯಮ** (ನಾ). ೧. ಮೇಲೆ ಎತ್ತುವಿಕೆ. ೨. ಪ್ರಯತ್ನ ; ಉದ್ಯೋಗ ; ಕೆಲಸ : ಆ ಕೌಂತೇಯರಾಯಕ್ಕೆ ಗೆಂಟಿಂತೆಂತಕ್ಕುಮದಂ' ಮದುದ್ಯಮಮೆ ಪೇೞ್ಗೆ (ಪಂಪಭಾ. ೧೨-೪೭) ; ಪ್ರಾಥಮಿಕ ಶಾಲೆಗಳಲ್ಲಿ ಓದುಬರಹಗಳಿಗೇ ಪ್ರಾಧಾನ್ಯವಿರದೆ ಉದ್ಯಮಗಳಿಗೆ ಸ್ಥಳಕೊಡುವಂತೆ ಪುನರ್ವ್ಯವಸ್ಥೆಯಾಗಬೇಕು (ಶಿಕ್ಷದ. ೧೩೩). [ಸಂ.]

**ಉದ್ಯಮರತ** (ನಾ). ಉದ್ಯೋಗದಲ್ಲಿ ಆಸಕ್ತನಾದವನು; ವ್ಯವಸಾಯಶೀಲ : ಕನಕತ್ವಕ್ನಖದಂತದಿನನುವರದಿಂ ನೃಪರಿನಧ್ವಗಮನದಿನಕ್ಕುಂ ಧನಮುದ್ಯಮರತ [ಪಾಠಾಂ. ಉದ್ಯಮಿಕ್ಕ] ವಿಖ್ಯಾತನ ಚಳಿತಂ ಶಿಕ್ಷನೆನಿಕುಮರ್ಕನ ದೆಸೆಯೊಳ್ (ಜಾತತಿ. ೯-೧೭). [ಉದ್ಯಮ + ರತ]

**ಉದ್ಯಮಿ** (ನಾ). ಉದ್ಯೋಗಮಾಡುವವನು ; ಕಾರ್ಯಶೀಲ : ಜಾತಕನು ಉದ್ಯಮಿಯೂ ಪ್ರಖ್ಯಾತನೂ ಅಚಲಿತಶಿಕ್ಷನೂ ಆಗುತ್ತಾನೆ (ಜಾತತಿ. ೯-೧೭ ಟೀಕೆ). [< ಸಂ. ಉದ್ಯಮಿನ್]

**ಉದ್ಯವನ** (ನಾ). = ಉದ್ಯಾನ : ತುದ್ಯಾನಾಮದೊಳಿಹವು ನಾಲ್ಕನವದ್ಯಚೈತ್ಯಾಲಯಗಳೊಂದೊಂದೊದ್ಯವನದೊಳು ರಾಯ ಚಿತ್ತೈಸು(ಜಿರಾಮಾ. ೨-೩). [< ಸಂ. ಉದ್ಯಾನ]

**ಉದ್ಯಾನ** (ನಾ). ೧. ಹೊರಹೊರಡುವುದು. ೨. ಕೈತೋಟ; ಉಪವನ : "ಅರಮನೆಯ ಸಮೀಪದ ಬನಮಂ ಉದ್ಯಾನಮೆಂಬುದು" (ಹಲಾಯು. ೩೬-೬೦) ; "ಊರೊಳಗಣ ಅರಮನೆಗಳೊತ್ತಿನಲ್ಲಿಹ ವನಮದುದ್ಯಾನಮೆಂದೆನಿಕ್ಕುಂ" (ಮಂಗರಾ. ೪೫-೫೦) ; ಅರಮನೆಯ ಉದ್ಯಾನ ಶಾದ್ವಲಶ್ಯಾಮ ವೇದಿಕೆಯಲ್ಲಿ ರಾಣಿಯರ್ . . . ವಿಹರಿಸುತ್ತಿರೆ (ಶ್ರೀರಾಮಾ. ೧೯-೪೯೭). ೩. ಉದ್ದೇಶ; ಪ್ರಯೋಜನ; ಗುರಿ. ೪. ಉತ್ತರಭಾರತದ ಒಂದು ದೇಶದ ಹೆಸರು (ಕ). [ಸಂ.]

**ಉದ್ಯಾನಕುಂಜ** (ನಾ). ಉದ್ಯಾನವನದಲ್ಲಿರುವ ಲತಾಗೃಹ; ಬಳ್ಳಿಮನೆ. [ಉದ್ಯಾನ + ಕುಂಜ]

**ಉದ್ಯಾನಪಾಲಕ** (ನಾ). ಉದ್ಯಾನವನ್ನು ಪಾಲಿಸುವವನು; ವನಪಾಲಕ: ಉದ್ಯಾನಪಾಲಕನಿರ್ದಿಷ್ಟಮಾರ್ಗಂ ಬಂದು (ಶಾಂತಿಪು. ೮–೩). [ಉದ್ಯಾನ + ಪಾಲಕ]

**ಉದ್ಯಾನವನ** (ನಾ). = ಉದ್ಯಾನ ೨: ಉದ್ಯಾನವನವನ್ನು ನೋಡಲು ಹೋಗಿದ್ದೆವು (ರೂಢಿ). [ಉದ್ಯಾನ + ವನ]

**ಉದ್ಯಾಪನ** (ನಾ). ೧. ಪೂರ್ತಿಮಾಡುವಿಕೆ. 'ಉದ್ಯಾಪನಂಗೆಯ್' ಪರಾ. ೨. ಕೈಗೊಂಡ ವ್ರತಗಳನ್ನು ಮುಗಿಸುವಾಗ ಮಾಡುವ ಶಾಸ್ತ್ರೋಕ್ತವಾದ ಕರ್ಮ: ಅಜಾನ್ನುವರ್ಧನಮೊಂದಕ್ಕುಮವಿಪ್ಪತಯ್ದು ನೆಱೆದಂದಕ್ಕುಂ ತದುದ್ಯಾಪನಂ (ಸುಕುಮಾ. ೯–೧೧); ಅರಿದೆನಿಪ ನಿಮ್ಮ ಮಹಾವ್ರತೋದ್ಯಾಪನವನೊಲಿದಿಂದು ಸನಯದಿಂ ಮಾಳ್ಪಂ (ಬಸವು. ೨೪–೯); ಓರ್ವ ಕಾಯಸ್ಥಗೃಹಿಣಿಯು ಯಾವುದೋ ವ್ರತ ಉದ್ಯಾಪನ ಮಾಡಿದ್ದಳು (ಇಪ್ಪಕ. ೩೪೧). [ಸಂ.]

**ಉದ್ಯಾಪನಂಗೆಯ್** (ಕ್ರಿ). ೧. (ವ್ರತವನ್ನು) ಪೂರ್ತಿಮಾಡು; ಮುಗಿಸು. ೨. (ಆಲಂ). ಬಿಡು; ತ್ಯಜಿಸು: ಪಟಯಿಗೆಯಂ ಪಱಿದು ವಾದ್ಯಂಗಳನುದ್ಯಾಪನಂಗೆಯ್ದು . . . ಪೋಪುದುಂ (ಚಿಕವಂ. ೪೦–೧೮). [ಉದ್ಯಾಪನ + ಗೆಯ್ (< ಕೆಯ್$_1$)]

**ಉದ್ಯಾಪನಂಮಾಡು** (ಕ್ರಿ). = ಉದ್ಯಾಪನಂಗೆಯ್ ೧: ಸುಕ್ರವಾರ ದಂದು [ಭಾ]ವಿಯುದ್ಯಾಪನಂಮಾಡಿ (ಸೌಇಇ. XX, ೬೫–೭; 1101). [ಉದ್ಯಾಪನ + ಮಾಡು$_1$]

**ಉದ್ಯಾಪನೆ** (ನಾ). = ಉದ್ಯಾಪನ ೨: ಮಹಾಪ್ರಭು ಮುಟ್ಟರಸನು ತಂನ ಅನನ್ತದೇವರ ನೋಂಪಿ ಉದ್ಯಾಪನೆ ನಿಮಿತ್ತವಾಗಿ ಕೊಟ್ಟ ಮತ್ತರು (ಸೌಇಇ. XX, ೨೦೨–೯೫; 1124); ಶಾಲೆಯಲ್ಲಿ ಕಲಿಯುವ ಕಾಲವು ಮುಗಿಯುತ್ತಲೇ ವಿದ್ಯಾಭ್ಯಾಸ ವ್ರತಕ್ಕೆ ಉದ್ಯಾಪನೆಯನ್ನು ಮಾಡಿ ಮುಗಿಸದೆ . . . ಅದರ ಪೂರ್ಣಪ್ರಯೋಜನವನ್ನು ಮಾಡಿಕೊಳ್ಳಬೇಕು (ನೀಗಟ್ಟು. ೬೩). [ಸಂ. ಉದ್ಯಾಪನ]

**ಉದ್ಯಾಪಿಸು** (ಕ್ರಿ). ಪೂರ್ಣಗೊಳಿಸು; ಮುಗಿಸು; ನೆರವೇರಿಸು: ನಮ್ಮೇಕಗಾರ್ಹಪತ್ಯವ್ರತವ ಸತಿಯ ಧರ್ಮದಿಂದುದ್ಯಾಪಿಸಿದೆ ನೀ (ಗಿಳಿವಿಂ. ೫೭–೨೦). [ಉದ್ಯಾಪನ + –ಇಸು$_3$]

**ಉದ್ಯುಕ್ತ** (ನಾ). ಉದ್ಯೋಗಿಸುವವನು; ಪ್ರಯತ್ನಿಸುವವನು; ತೊಡಗುವವನು: ಲೋಕದೊಳದಱಿಂ ಕಾವ್ಯಶ್ರೀಕರಣೋದ್ಯುಕ್ತನಕ್ಕೆ ಕವಿ ತನ್ನಱಿವಂತೆ (ಕವಿರಾ.೧–೨೧); ಉದ್ಯದ್ವರೂಥಮಂ ಜೋಡಿಸಿ ಮಹಾಸಮರಕುದ್ಯುಕ್ತನಾಗಿ ಸಾರಥಿ ತಂದು ನಿಲಿಸಲಾ ಪ್ರದ್ಯುಮ್ನನಡರ್ದು ನಿಜಚಾಪಮಂ ಜೇಗೈದು ಬಂದನಾಹವಕೆ (ಜೈಮಿಭಾ. ೭–೩೬).

ಉದ್ಯುಕ್ತನಾಗು = ತೊಡಗು; ಆರಂಭಿಸು: ಏಳಲುದ್ಯುಕ್ತರಾಗೆ ಶಂಕರನಱಿದು (ಶಿರುರ. ದೇ. ೨೪–೯). [ಸಂ.]

**ಉದ್ಯುಕ್ತಪಡು** (ಕ್ರಿ). ಪ್ರಯತ್ನಿಸು: ಗಿಡುಗನು ತನ್ನ ಹಿಂಸೆಯಂ ಮಾಡಬೇಕೆಂದುವುದ್ಯುಕ್ತಪಟ್ಟು ಬೆನ್ನಲೆ ಬಂದಿದೆ ಯೆಲೆ ರಾಜೇಂದ್ರನೆ, ಶರಣಾಗತನಾದ ನನ್ನನ್ನು ಕೃಪೆಯಿಂದ ರಕ್ಷಿಸಬೇಕು (ಶೀಪಥ. ೭–೯). [ಉದ್ಯುಕ್ತ + ಪಡು$_1$]

**ಉದ್ಯೋಗ** (ನಾ). ೧. ಪ್ರಯತ್ನಮಾಡುವುದು; ಕೈಕೊಳ್ಳುವುದು; ತೊಡಗುವುದು. ೨. (ಶ್ರದ್ಧೆಯಿಂದ ಅಥವಾ ಆಸಕ್ತಿಯಿಂದ ಮಾಡುವ) ಕೆಲಸ; ಪ್ರಯತ್ನ: ಅನತರಿಪುದ್ಯೋಗದಿಂ ದೇವನಿರ್ದಂ (ಜಗವಿ. ೧–೯೦). ೩. ವೃತ್ತಿ; ಕಸಬು; ಕಾರ್ಯ: ಉದ್ಯೋಗವಿಲ್ಲದ ಊರಲ್ಲಿ ಉದ್ದು ಉರುಳುವಷ್ಟು ಹೊತ್ತು ಇರಬೇಡ (ಗಾದೆ); ಉದ್ಯೋಗವಿಲ್ಲದ ಬಡಗಿ ಮಕ್ಕಳ ತಿಕಾ ಕೆತ್ತಿದ (ಗಾದೆ. ೬). 'ಸಮರೋದ್ಯೋಗ' ಪರಾ. ೪. ಅಧಿಕಾರ; ಹುದ್ದೆ: ನಿಮ್ಮ ಉದ್ಯೋಗ ಯಾವುದು? (ರೂಢಿ). ೫. ಕೈಗಾರಿಕೆ (ಉಕ): ಪ್ರತಿಯೊಂದು ದಂದುಗಕ್ಕೆ ಉದ್ಯೋಗಕ್ಕೆ ವ್ಯಾಪಾರಕ್ಕೆ ಬಂಡವಲು ಅತ್ಯಾವಶ್ಯಕ (ತಕ್ಕಡಿ. ೪೨).

ಉದ್ಯೋಗಮಾಡು = ೧. ಕೆಲಸಮಾಡು; ಪ್ರಯತ್ನಿಸು: ಎಷ್ಟೋ ಹುಡುಗರು . . . ಏನೇನೂ ಉದ್ಯೋಗಮಾಡುವುದಿಲ್ಲ (ಮುಂಬಯಿ. ೪–೧). ೨. ವೃತ್ತಿಯಲ್ಲಿರು; ಕಸಬನ್ನು ಕೈಕೊಳ್ಳು. [ಸಂ.]

**ಉದ್ಯೋಗಂಗೆಯ್** (ಕ್ರಿ). ೧. ಉದ್ಯೋಗಮಾಡು. ೨. ಪ್ರಯತ್ನಿಸು; ತೊಡಗು: ಆರಭಟೀವೃತ್ತಿಯುಕ್ತಮುಮಪ್ಪ ತಾಂಡವಮನಾಡಲುದ್ಯೋಗಂಗೆಯ್ದು (ಆದಿಪು. ೭–೧೧೪ ವ); ಮಹಾಶ್ವೇತೆ ಪೋಗಲುದ್ಯೋಗಂಗೆಯ್ದಿರಸಂಗಿಕ್ಕೆದಾಣವಾವುದೆಂದು ಕಾದಂಬರಿಯಂ ಬೆಸಗೊಳ್ವುದುಮಾಕೆಯಿಂತೆಂದಳ್ (ಕಾದಂಉ. ೬೩). [ಉದ್ಯೋಗ + ಗೆಯ್ (< ಕೆಯ್$_1$)]

**ಉದ್ಯೋಗಗೇಹ** (ನಾ). ೧. ಉದ್ಯೋಗದ ಮನೆ. ೨. [ಜ್ಯೋತಿ] ಲಗ್ನಕ್ಕೆ ಹತ್ತನೆಯ ಸ್ಥಾನ: ಉದಯಕ್ಕೆಂಟಱಕೊಳಿಂದು ಕೂಡೆಸರುಜಂ ಕಾಮಾಧಿಕಂ . . . ಉದ್ಯೋಗಗೇಹದೊಳೊಳ್ಪಂ ನೆಱೆ ತೀರ್ಚುವಂ ಸುಮತಿ ಶೂರಂ (ಜಾತತಿ. ೧೮–೮). [ಉದ್ಯೋಗ + ಗೇಹ]

**ಉದ್ಯೋಗಪತಿ** (ನಾ). (ಉಕ). ಕೈಗಾರಿಕೆಗಾರ. [ಉದ್ಯೋಗ + ಪತಿ]

**ಉದ್ಯೋಗಸ್ಥ** (ನಾ). ೧. ಕಾರ್ಯತತ್ಪರ. ೨. ಕಸಬುದಾರ. ೩. ಹುದ್ದೆಯಲ್ಲಿರುವವನು; ಅಧಿಕಾರಿ. [ಸಂ.]

**ಉದ್ಯೋಗಾರಂಭ** (ನಾ). ಕೆಲಸವನ್ನು ಪ್ರಾರಂಭಿಸುವುದು: "ಮೊಗಸು – ಉದ್ಯೋಗಾರಂಭೇ" (ಶಮಧಾ). [ಉದ್ಯೋಗ + ಆರಂಭ]

**ಉದ್ಯೋಗಿ** (ನಾ). = ಉದ್ಯೋಗಸ್ಥ ೧: ಆರ್ಕಕೀರ್ತಿ ವಂಶಾಗತಖೇಚರೇಂದ್ರವಿಭವಂ . . . ಆ ವಿಭುಗಾಳ್ದುಮುದ್ಯೋಗಿ ವಿರೋಧಿದರ್ಪಮಥನಂ ರಥನೂಪುರಚಕ್ರವಾಳಪಂ (ಶಾಂತಿಪು. ೫–೧೫೧). [ಸಂ. ಉದ್ಯೋಗಿನ್]

**ಉದ್ಯೋಗಿಸು** (ಕ್ರಿ). ಕೆಲಸಕ್ಕೆ ಪ್ರಯತ್ನಿಸು, —ತೊಡಗು; ಕಾರ್ಯಶೀಲನಾಗು: ಉಪಕಾರವಂ ಮಾಡಿದ ಸಜ್ಜನನಲ್ಲಿಯಾದೊಡಂ ನೀಚನಾಗಿರ್ದಪನಪಕಾರವನೇ ಮಾಡಲುದ್ಯೋಗಿಸುವಂ (ಪಂಚತಂ. ೧೦೭–೭); ದಂಡಿಗೆವಿಡಿದು ಹಾಡಲುದ್ಯೋಗಿಸಿದರು (ಹಚಕಾ. ೭–೫); ಪರಮತತ್ತ್ವನಿರೂಪಣೆಯ ವಿಸ್ತರಿಸಲುದ್ಯೋಗಿಸಿದನಲ್ಲಮ ತನ್ನ ಲೀಲೆಯಲಿ (ಪ್ರಭುಲೀ. ೬–೩೬); ಉಣಲುದ್ಯೋಗಿಸಿದಳು (ಮೋಹತ. ೪–೨೮). [ಉದ್ಯೋಗ + –ಇಸು$_3$]

**ಉದ್ಯೋತ** (ನಾ). ೧. ಹೊಳಪು; ಕಾಂತಿ; ಪ್ರಕಾಶ: "ಪ್ರಕಾಶಃ, ಆಲೋಕಃ, ಉದ್ಯೋತಃ – ಈ ೩ ಬೆಳಗು" (ಹಲಾಯು. ೧೨–೬೬); "ಉದ್ಯೋತ – ಬೆಂಕಿಯಿಲ್ಲದ ಬೆಳಗುಂ" (ತತ್ತ್ವಪ್ರ. ೨೯೫); ಅತಿವಿಶದ ಮಣಿಪ್ರದೀಪಕೋದ್ಯೋತದೂರೀಕೃತ ತಮಸ್ತಮದೊಳ್ (ಆದಿಪು. ೫–೨೨ ವ). ೨. (ಗ್ರಂಥದ) ಅಧ್ಯಾಯ; ವಿಭಾಗ; ಸಂಧಿ; ಆಶ್ವಾಸ: ಧ್ವನ್ಯಾಲೋಕದ ನಾಲ್ಕನೆಯ ಉದ್ಯೋತವೆಲ್ಲಾ ರಾಮಾಯಣ ಮಹಾಭಾರತಗಳ ವಿಮರ್ಶೆಯೇ ಎಂದರೆ ತಪ್ಪಾಗಲಾರದು (ಧ್ವನ್ಯಾಲೋ. ೧೧ ಮುನ್ನುಡಿ). [ಸಂ.]

**ಉದ್ಯೋತಿಸು** (ಕ್ರಿ). ಹೊಳೆ; ಬೆಳಗು; ಮಿರುಗು; ಪ್ರಕಾಶಿಸು: ದೀಪಪ್ರೋದ್ಯಜ್ಜ್ಯೋತಿಸ್ಥಿತಿಯೊಳಮುದ್ಯೋತಿಸೆ ತುದಿಯೊಳಂಗಮಿಂತು ದಶಾಂಗಂ (ಆದಿಪು. ೫–೩೧); ಅರ್ಕಂಬೊಲುದ್ಯೋತಿಸುಗೆ ಸಕಲ ಧಾತ್ರೀಚಕ್ರದೊಳ್ ಧರ್ಮಚಕ್ರಂ (ಅಜಿಪು. ೧–೧೬); ನಿರ್ಮಳತತ್ತ್ವಬೋಧಮುದ್ಯೋತಿಪುದೆಂಬುದಂ ಬಯಸಿ ಪೇೞಲೊಡರ್ಚಿದೆನೀ ಪ್ರಬಂಧಮಂ (ಜಗವಿ. ೧–೧೬). [ಉದ್ಯೋತ + –ಇಸು$_3$]

**ಉದ್ರ** (ನಾ). ೧. ನೀರು ; ತೇವ ; ಒದ್ದೆ. ೨. ಒಂದು ಬಗೆಯ ಜಲಚರ ; "ನೀರುಹಂದಿ" (ಅಮರ. ಟೀಕೆ) ; "ನೀರುಬೆಕ್ಕು" (ಗಂಗಾಮು. ೪೧) ; "ನೀರುನಾಯಿ" (ಬುದ್ಧಪ. ಕೋಶ) : ಮೊಲಕ್ಕೆ ಮೂವರು ಸ್ನೇಹಿತರಿದ್ದರು : ಒಂದು ಕೋತಿ, ಒಂದು ಸೃಗಾಲ, ಒಂದು ಉದ್ರ . . . ಆ ಉದ್ರವು ಆಹಾರ ಹುಡುಕುವೆನೆಂದು ಹೊರಟು ಗಂಗಾತೀರಕ್ಕೆ ಹೋಯಿತು (ಬುದ್ಧಪ. ೨೦). [ಸಂ.]

**ಉದ್ರಂಗ** (ನಾ). ೧. ಒಂದು ತೆರಿಗೆ (?) : ರತ್ತಜುಣಗ್ರಾಮಃ ಸೋದ್ರಂಗಃ ಸಪರಿಕರಃ (ಎಇ. VI, ೨೪೬–೪೯ ; 808) ; ಸೋದ್ರಂಗಃ ಸಪರಿಕರಃ ಪೂರ್ವದತ್ತ ದೇವಪಾಯ (ಎಇ. III, ೨೭೪–೬೦ ; 997). ೨. ಹರಿಶ್ಚಂದ್ರನ ಊರಿನ ಹೆಸರು. [ಸಂ.]

**ಉದ್ರಿಕ್ತ** (ಗು). ೧. ಹೆಚ್ಚಿದ; ಅತಿಶಯವಾದ: ಶ್ರೀಶೈಲಾದ್ರಿಪ್ರಸಿದ್ಧಂ ಸುರುಚಿರವಿಜಯಸ್ತುತ್ಯನುದ್ರಿಕ್ತಸತ್ವಾವೇಶಂ (ರಾಜಶೇ. ೧–೧). ೨. ಕೆರಳಿದ; ಉದ್ರೇಕಗೊಂಡ. [ಸಂ.]

**ಉದ್ರಿಕ್ತಗೊಳಿಸು** (ಕ್ರಿ). ಕೆರಳಿಸು ; ಉದ್ರೇಕಗೊಳಿಸು : ನನ್ನ ಪ್ರತಿಯೊಂದು ಕಾರ್ಯವೂ ದೇವಪುತ್ರನಂದಿನಿಯ ಸಂದೇಹವನ್ನು ಉದ್ರಿಕ್ತಗೊಳಿಸಬಲ್ಲದು (ಬಾಣಅ. ೮೮). [ಉದ್ರಿಕ್ತ + ಕೊಳ್$_1$ + –ಇಸು$_3$]

**ಉದ್ರು[ದ್ದ್ರು]ತ** (ನಾ). ಬಹಳವೇಗ; ಬಹುದುಡುಕು (?) : ವೃದ್ಧಪರೀತಮೂರ್ತಿಯಾಗಿಯುಮನುಶಾಸ್ಯನೇ ಮಹಿತನಾಗಿಯುಮುದ್ರು[ದ್ದ್ರು]ತನೇ (ಶಾಂತಿಪು. ೧೧–೬೬). [ಸಂ.]

**ಉದ್ರೇಕ** (ನಾ). ೧. ಉದ್ವೇಗ ; ಆವೇಗ : ಅವಳಂಬಿತಕುಲೀನಧೀರತಾಜಲದಿನೊಯ್ಯನೊಯ್ಯನೆ ತದುದ್ರೇಕಮಂ ಪದವಡಿಸಿ (ಶಾಂತಿಪು. ೩–೬೬ವ); ವೈರಿದ್ರುಮಂಗಳನೆ ಖಂಡಿಸುವೆನೆಂಬಾಳುತನದುದ್ರೇಕಮೆನಗಿಲ್ಲ ನಿನ್ನವರ್ಗಶ್ವಮಂ ಪಿಡಿದೊಪ್ಪಿಸುವೆನೆಂದನು (ಜೈಮಿಭಾ. ೨–೪೧). ೨. ಮೇರೆ ಮೀರುವಿಕೆ; ಹೆಚ್ಚಾಗುವಿಕೆ; ಉಲ್ಬಣತೆ : ಅಂದು ಕಾಮೋದ್ರೇಕದಿಂ ಮಱಹೊಂದಿ ತನ್ನುವನಱಿಯದಿಪ್ಪರವಿಂದಗರ್ಭನ ಮಸ್ತಕವನುದ್ದಂಡ ಚಾಪದಲಿ ಸಂಧಿಸಿದ . . . ಶಶಿಧರನೊ (ಬಸಪು. ೪೪–೩). ೩. ದುಡುಕು : ಉದ್ರೇಕದಿಂ ಮುನಿವರನೊಳಾಡಿ ತಪ್ಪಿದ ಗುರುದ್ರೋಹಂ (ಜೈಮಿಭಾ. ೪–೨). ೪. ಅಮಲು ; ಮತ್ತು : ಸಾರಾಯಿಯಲ್ಲಿ ಉದ್ರೇಕ ಬರುವಂತಹ ನಿಷಾವಸ್ತು ಹುಟ್ಟುವಂತೆ (ಜೀವಾತ್ಮ. ೫೯). [ಸಂ.]

**ಉದ್ರೇಕಿಸು** (ಕ್ರಿ). ೧. ಕೆರಳು; ರೇಗು ; ಆವೇಶಗೊಳ್ಳು: ಹಸುಳೆಯಾಂ ಸರ್ವಾಪರಾಧಿಯಾಂ ತಂದೆ ಕರುಣಿಸು ದಯಂಗೆಡದಿರುದ್ರೇಕಿಸದಿರೆಂದು ಪದಬಿಸರುಹದ ಮೇಲೆ ಕೆಡಹಿದನು (ಹಚಕಾ. ೮–೧೦). ೨. ಕೆರಳಿಸು ; ಉದ್ರೇಕವನ್ನು ಉಂಟುಮಾಡು : ಅಹಲ್ಯೆ, ಇಂದ್ರ, ಗೌತಮ . . . ಇವರನ್ನು ಉದ್ರೇಕಿಸಿದ ಭಾವಗಳೇನು ? (ಸಮಾಲೋ. ೭೩). [ಉದ್ರೇಕ + –ಇಸು$_3$]

**ಉದ್ವರ್ತನ** (ನಾ). ೧. ಮೇಲೆ ಏರುವುದು; ಹೆಚ್ಚುವುದು. ೨. ಹೋಗಲಾಡಿಸುವುದು ; ನಿವಾರಿಸುವುದು. 'ಉದ್ವರ್ತಿಸು' ಪರಾ. ೩. ಸುಗಂಧದ್ರವ್ಯಗಳನ್ನು ಮೈಗೆ ಲೇಪಿಸುವುದು, —ಬಳಿಯುವುದು,—ತೀಡುವುದು, —ಒತ್ತುವುದು: "ಉದ್ವರ್ತನಂ, ಉನ್ಮರ್ದನಂ, ಸೋತ್ಸಾದನಂ, ಘುರಿತಂ –ಈ ೪ ತಿಮಿರುವುದು" (ಹಲಾಯು. ೧೨೧–೪೬) ; "ಉದ್ವರ್ತನಂ [ಪಾಠಾಂ.ಕ. ಉದ್ವರ್ತ] [ಸೋತ್ಸಾದನಂ] ಪ್ರಚ್ಛುರಿತನುದ್ವರ್ತ[ಪಾಠಾಂ. ಮುನ್ಮರ್ದ]ನಕ್ಕಕ್ಕು" (ಮಂಗರಾ. ೧೨೮–೧೧). ೪. (ಚಿತ್ರಕ್ಕೆ) ಬಣ್ಣವನ್ನು ಹಾಕುವ ಒಂದು ರೀತಿ : ಆಱುಂ ತೆಱದ ಮೊದಲ ಬಣ್ಣಮುಮನವನೋರೊಂದಱೊಳ್ ಬೆರಸುವ ಪರಿಣತಿಯುಮನನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಕಮುದ್ವರ್ತನಂ ಚಿತ್ರಪ್ರವರ್ತನಮೆಂಬಾಱುಂ ತೆಱದಣ್ಣೆಯುಮಂ(ಮಲ್ಲಿಪು. ೫–೪೨). ೫. ದೇಹಕ್ಕೆ ಲೇಪಿಸಲು ಉಪಯೋಗಿಸುವ ಸುಗಂಧದ್ರವ್ಯ ; "ಮೈಗೆ ಉಜ್ಜುವ ಪುಡಿ" (ಅಮರ. ಟೀಕೆ). ೬. ಸ್ನಾನದ ಸಮಯದಲ್ಲಿ ಮೈಯ ಕೊಳೆಯನ್ನು ತೆಗೆಯಲು ಉಪಯೋಗಿಸುವ ಪುಡಿ ; ಸೀಗೆಪುಡಿ ಮುಂತಾದುದು.

ಉದ್ವರ್ತನಂಮಾಡು = (ಸುಗಂಧವಸ್ತುವನ್ನು) ಲೇಪಿಸು ; ಸವರು ; ಬಳಿ : ಹರುಷದಿಂ ಚಂದನಮನುದ್ವರ್ತನಂ ಮಾಡಿ (ಕಲಿಕಾ. ೨೯೭) ; ಚಂದನಕೆ ಪರಿಮಳಂ ಪನ್ನೀರ ಕರ್ಪುರವ ಬೆರಸಿ ಕಸ್ತೂರಿಯಿಂದುದ್ವರ್ತನಂ ಮಾಡಿ ಕರಿಯ ಮುರುಗವನೆ ಸೂಡಿ (ಸಿದ್ಧರಾ. ೮–೭೪). [ಸಂ.]

**ಉದ್ವರ್ತನಂಗೆಯ್** (ಕ್ರಿ). ಲೇಪಿಸು ; ಬಳಿ ; ಸವರು ; ತೀಡು ; ಉಜ್ಜು : ದಿವ್ಯಚಂದನಮನುದ್ವರ್ತನಂಗೆಯ್ದು ಪರಾಗದ ತಿಲಕಮನಿಕ್ಕಿ (ಗಿರಿಕ. ೭–೭೨ ವ) ; ಎಲ್ಲರ್ಗೆ ಬೇಱಿವೇಱಿ ದಿವ್ಯಚಂದನಮನುದ್ವರ್ತನಂಗೆಯ್ದು ಮೃಗಮದಮನಲಂಪಿಕ್ಕಿ (ಬಸರ. ೮–೬). [ಉದ್ವರ್ತನ + ಗೆಯ್ (< ಕೆಯ್$_1$)]

**ಉದ್ವರ್ತನದ್ರವ್ಯ** (ನಾ). ಲೇಪಿಸುವ ವಸ್ತು, —ಪದಾರ್ಥ : ಗೋಧೂಮಚೂರ್ಣಮುದ್ಗಚೂರ್ಣ ಗಂಧಾದ್ಯುದ್ವರ್ತನದ್ರವ್ಯಂಗಳಂ (ವಿವೇಕ. ೧೦೫). [ಉದ್ವರ್ತನ + ದ್ರವ್ಯ]

**ಉದ್ವರ್ತನವಿಧಿ** (ನಾ). ಸುಗಂಧ ದ್ರವ್ಯಗಳನ್ನು ಮೈಗೆ ಬಳಿಯುವುದು, —ತಿಕ್ಕುವುದು, —ಉಜ್ಜುವುದು : ಧರ್ಮತೀರ್ಥಪ್ರವರ್ಧನಂಗೆ ಸುಗಂಧ ಶುಷ್ಕಚೂರ್ಣಪಿಷ್ಟದಿನುದ್ವರ್ತನವಿಧಿಯಂ ನಿರ್ವರ್ತಿಸಿ (ಅಜಿಪು. ೪–೬೮ ವ). [ಉದ್ವರ್ತನ + ವಿಧಿ]

**ಉದ್ವರ್ತನಾಲಯ** (ನಾ). ೧. ಮೈಗೆ ಸುಗಂಧದ್ರವ್ಯ, ಎಣ್ಣೆ ಬಳಿಯುವ ಕೋಣೆ. ೨. ಸ್ನಾನದ ಮನೆ; ಬಚ್ಚಲು ಮನೆ : "ಬಹುವಸ್ತ್ರ ವರ್ತಿಸಿಹ ಮನೆ ವಾಸವತಿಯಕ್ಕು ಮಿಾವುದುದ್ವರ್ತನಾಲಯಮಕ್ಕು" (ಮಂಗರಾ. ೫೮–೯). [ಉದ್ವರ್ತನ + ಆಲಯ]

**ಉದ್ವರ್ತಿಸು** (ಕ್ರಿ). ೧. ಲೇಪಿಸು ; ಬಳಿ ; ಸವರು : ಮಗನ ಮಯ್ಯಂ ಚೂರ್ಣವಾಸದಿನುದ್ವರ್ತಿಸಿ ಮಂದರಾಭಿಷೇಕಾರ್ಹನಾಗೆಂದು ಪರಸಿ (ಚಾವುಂಉ. ೨೫೫). ೨. ತೊಡೆದುಹಾಕು ; ನಿವಾರಿಸು : ವಿಷಧರೇಂದ್ರನ ಮದವನುದ್ವರ್ತಿಸಿ ಸುರಾವಳಿವಂದ್ಯನೆಳ್ಬಟ್ಟದನು ವಾರಿಧಿಗೆ (ನಿಭಾಗ. ೧೦–೬ ಸೂಚನೆ). [ಉದ್ವರ್ತನ + –ಇಸು$_3$]

**ಉದ್ವಹ** (ನಾ). ೧. ಸುಖ ; ಸಂತೋಷ ; ಹರ್ಷ : "ಹರ್ಷಮಾನಂದಮುದ್ವಹಂ [ಪಾಠಾಂ. ಉದ್ಧವಂ] ಸಂಪ್ರಮೋದಂ ಸುಸುಖಮೆನಿಸಿಕ್ಕು" (ಮಂಗರಾ. ೮–೨೫). ೨. ಮಗ; ಪುತ್ರ. 'ಭೃಗೂದ್ವಹ' ಪರಾ. ೩. ಶ್ರೇಷ್ಠ ; ಪ್ರಮುಖ ; ಅಗ್ರಗಣ್ಯ : ಅನುರಾಗಮನಪ್ಪುಕೆಯ್ದು ಭೋಂಕನೆ ರಥದಿಂದಮಂದಿೞಿದುಬಂದನುಪೇಂದ್ರಯುತಂ ರಘೂದ್ವಹಂ (ಪಂರಾಮಾ. ೧೬–೨೦). ೪. ವಿವಾಹ ; ಮದುವೆ. [ಸಂ.]

**ಉದ್ವಹನ** (ನಾ). ೧. ಎತ್ತಿ ಹಿಡಿಯುವುದು; ಮೇಲಕ್ಕೆ ಎತ್ತುವುದು; ಆಧಾರವಾಗಿರುವುದು. ೨. ಎಳೆಯುವುದು ; ಹೊರುವುದು. ೩. ಸವಾರಿ ಮಾಡುವುದು. ೪. ಉಂಟಾಗುವುದು ; ಹೊಂದಿರುವುದು. ೫. ಮದುವೆ ; ವಿವಾಹ. [ಸಂ.]

**ಉದ್ವಾಂತ** (ಗು). ೧. ಹೊರದೂಡಿದ ; ಕಾರಿದ. (ನಾ). ೨. ಮದವಿಳಿದ ಆನೆ : "ಮದವಿೞಿದಾನೆ ಉದ್ವಾಂತಮೆಂಬುದು" (ಹಲಾಯು. ೩೭–೬೭) ; "ಉದ್ವಾಂತ [ಪಾಠಾಂ. ಕ. ಉದ್ಧಾಂತ]ಮೆನೆ ಮದವಿೞಿದುದಕ್ಕು" (ಮಂಗರಾ. ೪೬–೩). [ಸಂ.]

**ಉದ್ವಾನ** (ಗು). ೧. ವಾಂತಿಯಾದ ; ಕಾರಿದ. (ನಾ). ೨. ಒಲೆ. ೩. ವಾಂತಿಮಾಡುವಿಕೆ [ಸಂ.]

**ಉದ್ವಾಪ್ಯ** (ನಾ). ೧. ಸಣ್ಣಕೊಳ; ಇಳಿಯುವ ಬಾವಿ : "ಉದ್ವಾಪ್ಯಮೆ [ಪಾಠಾಂ. ಪಿಯೆ]ನೆ ಬೆಂಚೆಗಭಿಧಾನಮಕ್ಕು" (ಮಂಗರಾ. ೧೨೪-೧೬). ೨. ಬಾವಿಗಳ ಸಮೀಪದಲ್ಲಿ ದನಕರುಗಳು ನೀರು ಕುಡಿಯಲು ಇಟ್ಟಿರುವ ತೊಟ್ಟಿ,—ದೋಣಿ,—ಬಾನಿ(ಕ). [ಸಂ.]

**ಉದ್ವಾಯನ** (ನಾ). = ಉದ್ವಾಸನ. (ಕರಾ). [< ಸಂ. ಉದ್ವಾಸನ]

**ಉದ್ವಾರ್ಚನೆ** (ನಾ). ವಿಗ್ರಹಾರಾಧನೆಯಲ್ಲಿ ಕೊನೆಯ ಸಮಾರಂಭ; ಮುಗಿವು. [?]

**ಉದ್ವಾಸನ** (ನಾ). ೧. (ಆವಾಹನ ಮಾಡಿದ ದೇವತೆಗಳನ್ನು) ಬೀಳ್ಕೊಡುವುದು; ವಿಸರ್ಜಿಸುವುದು. ೨. (ಸ್ಥಳವನ್ನು ಬಿಟ್ಟು) ಎಬ್ಬಿಸುವುದು ; ಓಡಿಸುವುದು ; ಹೊರದೂಡುವುದು ; ಗಡೀಪಾರು ಮಾಡುವುದು. ೩. "ಕೊಲ್ಲುವುದು" (ಅಮರ. ಟೀಕೆ). [ಸಂ.]

**ಉದ್ವಾಸಿತ** (ಗು). (ಸ್ಥಳದಿಂದ) ಹೊರದೂಡಲ್ಪಟ್ಟ; ಗಡೀಪಾರು ಮಾಡಲ್ಪಟ್ಟ : ಪಾಕಿಸ್ತಾನದಿಂದ ಉದ್ವಾಸಿತರಾದ ಹಿಂದುಗಳ ಹೊಣೆ ಭಾರತ ಸರ್ಕಾರದ್ದು (ರೂಢಿ). [ಸಂ.]

**ಉದ್ವಾಸಿಸು** (ಕ್ರಿ). ಕಳಿಸಿಕೊಡು ; ಬೀಳ್ಕೊಡು : ಒಸೆದು ಪೂಜಿಸಿ ತನ್ನನುದ್ವಾಸಿಸುವುದಾ ಶ್ರೀಪತಿಯನಿದಿರಲಿ (ನಿಭಾಗ. ೬-೧೭-೧೪). [ಉದ್ವಾಸನ + -ಇಸು$_3$]

**ಉದ್ವಾಹ** (ನಾ). ೧. ಮೇಲಕ್ಕೆ ಎತ್ತುವುದು ; ಉದ್ಧರಿಸುವುದು. ೨. ಮದುವೆ; ವಿವಾಹ : "ಉಪಯಾಮಃ, ಪರಿಣಯನಂ, ಪಾಣಿಗ್ರಹಣಂ, ವಿವಾಹಃ, ಉದ್ವಾಹಃ — ಈ ೫ ಮದುವೆ" (ಹಲಾಯು. ೮೧-೩೪೧) ; ಸಮರೂಪ ಸಮವಿಭವ ಸಮಶೀಲ ಸಮಗುಣಗಣೋದ್ದೀಪಿತಾಂಗಿಯನೊರ್ವಳಂ ಸುತಂಗುದ್ವಾಹವಂ ಮಾಡಿ ಸುಖಮಿರುತ್ತೆ (ಪದ್ಮರಾ. ೪-೩೭). 'ಉದ್ವಾಹಗೇಹ' ಪರಾ. [ಸಂ.]

**ಉದ್ವಾಹಗೇಹ** (ನಾ). ಮದುವೆಯ ಮನೆ : ರತ್ನಸ್ಫುರತ್ತೋರಣ ಮೆಳಸೆ ಬೆಡಂಗಾದುದುದ್ವಾಹಗೇಹಂ (ಪಂರಾಮಾ. ೫-೧೧೨). [ಉದ್ವಾಹ + ಗೇಹ]

**ಉದ್ವಾಹನ** (ನಾ). ಮೇಲಕ್ಕೆ ಎತ್ತಲು ಅಥವಾ ಎಳೆಯಲು ಸಹಾಯವಾಗುವ ಸಾಧನ. [ಸಂ.]

**ಉದ್ವಾಹಿಕ** (ಗು). ಮದುವೆಗೆ ಸಂಬಂಧಿಸಿದ; ವಿವಾಹಕ್ಕೆ ಸಂಬಂಧಪಟ್ಟ. [ಸಂ.]

**ಉದ್ವಾಹಿಸು** (ಕ್ರಿ). ೧. ಮದುವೆ ಮಾಡು. ೨. ಮದುವೆಯಾಗು. ೩. ಅನುಸರಿಸಿ ನಡೆ, —ನಡೆದುಕೊ : ದೇಹಗಳಲೇಕಾತ್ಮತೆಯನುದ್ವಾಹಿಸುವ ನಿನ್ನವರವೋಲಾ ಬಾಹಿರರು ನೆಜಕೆ ಕಳಿಯಲಜೀವರೆ ಭವವನಿದನು (ನಿಭಾಗ. ೬-೧೫-೧೬). [ಉದ್ವಾಹ + -ಇಸು$_3$]

**ಉದ್ವಿಗ್ನ** (ಗು). ೧. ಉದ್ವೇಗಗೊಂಡ; ತಳಮಳಗೊಂಡ; ಕ್ಷೋಭೆಗೊಂಡ. (ನಾ). ೨. ಉದ್ವೇಗಗೊಂಡವನು : ನನ್ನ ಕೀರ್ತಿಯು ಒಂದು ಪಾಲಿದ್ದರೆ ನಿನ್ನದು ಎರಡು ಪಾಲು ಎಂದು ಕೇಶವನು ಉದ್ವಿಗ್ನನಾದ (ಸಮಜೀ. ೧೯೮). ೩. ದುಃಖಿತ. [ಸಂ.]

**ಉದ್ವಿಗ್ನತೆ** (ನಾ). = ಉದ್ವೇಗ ೩ : ಅವರ ಮನಸ್ಸು ಅದಾವ ಕಾರಣದಿಂದಲೋ ಈಗ ಯಾವಾಗಲೂ ಉದ್ವಿಗ್ನತೆಯಲ್ಲಿಯೇ ಇರುತ್ತಿತ್ತು (ಮುಗಿಮ. ೪೩). [ಸಂ. ಉದ್ವಿಗ್ನತಾ]

**ಉದ್ವಿಗ್ನೆ** (ನಾ). ತಳಮಳಗೊಂಡವಳು ; ಕ್ಷೋಭೆಗೊಂಡವಳು ; ದುಃಖಿತೆ : ಪೊತ್ತುದು ಸಂಲಗ್ನವಿರಹಾಗ್ನಿ ತಾಪೋದ್ವಿಗ್ನೆಯ ನಾಸಿಕಮಭೇದಮಂ ಚಂಪಕದೊಳ್ (ಚಂಪ್ರಪು. ೫-೧೩೦). [ಸಂ. ಉದ್ವಿಗ್ನಾ]

**ಉದ್ವೀಕ್ಷಣ** (ನಾ). ಮೇಲೆ ನೋಡುವುದು; ಕತ್ತೆತ್ತಿ ನೋಡುವುದು; *ಚೆನ್ನಾಗಿ ನೋಡುವುದು. 'ಉದ್ವೀಕ್ಷಣಗವಾಕ್ಷ' ಪರಾ. [ಸಂ.]

**ಉದ್ವೀಕ್ಷಣಗವಾಕ್ಷ** (ನಾ). ನೋಡುವ ಕಿಟಕಿ : ಆವನಿಗೆ ನಾಣೀ ಮಾಲೆಯೊಳಗಾದೆ ಭವಲೀಲೆಯುದ್ವೀಕ್ಷಣಗವಾಕ್ಷ (ಮಲೆದೇ. ೪೧-೮). [ಉದ್ವೀಕ್ಷಣ + ಗವಾಕ್ಷ]

**ಉದ್ವೃತ್ತ** (ಗು). ೧. ಮೇಲಕ್ಕೆ ಏರಿರುವ; ಅಭಿವೃದ್ಧಿ ಹೊಂದಿದ; ಏಳಿಗೆ ಹೊಂದಿದ. ೨. ಕೊಬ್ಬಿದ; ಸೊಕ್ಕಿದ; ಗರ್ವಿಷ್ಠನಾದ : ಉದ್ವೃತ್ತರಿಪುನೃಪತಿಗಳನೇಸಾಡುತ್ತುಮಲ್ಲಿಂ ತಳರ್ದು (ಪಂಪಭಾ. ೪-೧೮ ವ); ಅತ್ತಲವೆ ಪವನಜನ ಕಳಕಳದತ್ತ ಹರಿಸೈ ರಥವನೆನುತುದ್ವೃತ್ತ ಭೀಮನನೈದಿದನು ಚಾಪಾಗಮಾಚಾರ್ಯ (ಕುವ್ಯಾದ್ರೋ. ೧೩-೬). (ನಾ). ೩. ದಾರಿತಪ್ಪಿದವನು ; ಕೆಟ್ಟನಡತೆಯವನು.

ಉದ್ವೃತ್ತನಾಗು = ಕೊಬ್ಬಿರು ; ಗರ್ವಿಷ್ಠನಾಗು. ಉದ್ವೃತ್ತವಾಗು = ಹೆಚ್ಚಾಗು; ಉಕ್ಕಿಬರು: ಇತ್ತ ಮಗ್ಗುಲಲಪ್ಪಿ ಕುಳ್ಳಿರಲತ್ತಲಾ ಹಾಲೊಲೆಯಮೇಲುದ್ವೃತ್ತವಾಗಲು ಹೋದಳಾ ಮುರಹರನ ಧರೆಗಿಳುಹಿ (ನಿಭಾಗ. ೧೦-೯-೨೬). [ಸಂ.]

**ಉದ್ವೃತ್ತತೆ** (ನಾ). ಗರ್ವಿಷ್ಠತೆ; ಗರ್ವದಿಂದ ಕೂಡಿರುವುದು ; ಕೊಬ್ಬಿರುವುದು : ದುರ್ಯೋಧನನುದ್ವೃತ್ತತೆಯುಮುಂ ಭೀಮಸೇನನ ಮಹಾಪ್ರತಿಜ್ಞೆಯುಮನಾರ್ಗಂ ಬಾರಿಸಲ್ಬಾರದು (ಪಂಪಭಾ. ೭-೧೬ವ). [ಸಂ. ಉದ್ವೃತ್ತತಾ]

**ಉದ್ವೃತ್ತಿ** (ನಾ). ಕೊಬ್ಬು ; ಗರ್ವ ; ಸೊಕ್ಕು ; ದುರುದುಂಬಿತನ. [ಸಂ.]

**ಉದ್ವೇಗ** (ನಾ). ೧. ವೇಗದಿಂದ ಹೋಗುವುದು. ೨. ಭಯ ; ಹೆದರಿಕೆ. ೩. ಗಾಬರಿ ; ತಳಮಳ ; ಉಮ್ಮಳಿಕೆ ; ಆತಂಕ ; ಅಶಾಂತಿ ; ಕ್ಷೋಭೆ : ಉದ್ವೇಗಪರನಾಗಿ ನುಡಿದಾತ್ಮಗತದೊಳಿಂತೆಂದಂ (ಪಂರಾಮಾ. ೧೪-೧೧೮ ವ) ; ಚಿತ್ತದುದ್ವೇಗಶೂಲದ ಮೇಲೆಯೆಂಬಂತೆ ಕುಳಿತಿರ್ದ ಧರಣಿಜೆಗೆ ಗದಗದಿಸಿತೆದೆ (ಶ್ರೀರಾಮಾ. ೪೬-೪೯೫) ; ಮಕ್ಕಳಲ್ಲಿ ಆವೇಗ ಉದ್ವೇಗಗಳು ಹೆಚ್ಚು (ಶಿಕ್ಷದ. ೩೧೨). ೪. "ಅಡಕೆ ಕಾಯಿ" (ಗಂಗಾಮ. ೪೨). [ಸಂ.]

**ಉದ್ವೇಗಗೊಳ್** (ಕ್ರಿ). ತಳಮಳಗೊಳ್ಳು ; ಕ್ಷೋಭೆಗೊಳ್ಳು : ತನ್ನ ಮೇಲಣ ಕನಿಕರ ಹಾಗೂ ಅವನ ಮೇಲಣ ಆಕ್ರೋಶದಿಂದ ಆವಳು ಉದ್ವೇಗಗೊಂಡಳು (ಪುನರು. ೩೨೫). [ಉದ್ವೇಗ + ಕೊಳ್$_1$]

**ಉದ್ವೇಗಪರ** (ಗು). ತಳಮಳಗೊಂಡ ; ಕ್ಷೋಭೆಗೊಂಡ : ನುಡಿನೆರೆದ ಜೀವಕದಂಬಗಳ್ಗ ಭಯಮೆಂಬ ಡಂಗುರದವೊಲೊಪ್ಪಂಬಡೆಯೆ ಮಾರಿದತ್ತ ನೃಪಂ ಬಿಲ್ಲುಂಬೆಜಗುವಾದನುದ್ವೇಗಪರಂ (ಯಶೋಚ. ೪-೭೧). [ಉದ್ವೇಗ + ಪರ]

**ಉದ್ವೇಗಿಸು** (ಕ್ರಿ). ೧. ವೇಗವಾಗಿ ನಡೆ. ೨. ಕ್ಷೋಭೆಯನ್ನುಂಟುಮಾಡು ; ಕೆರಳಿಸು. [ಉದ್ವೇಗ + -ಇಸು$_3$]

**ಉದ್ವೇಜನ** (ನಾ). ಕೆರಳಿಸುವುದು ; ಕದಡುವುದು : ಪ್ರಾವರ್ಷಧಾರಾವಳಿವೊಲೊಗೆವ ಕಣ್ಣೀರ್ಗಳೊಳ್ ತೇಂಕುತಂ ದುಃಖಸಹಸ್ರೋದ್ವೇಜನಾಧೋಮುಖಿಯೆನಿಪ ಮಹಾಶ್ವೇತೆಯಂ ಕಂಡನಾಗಳ್ (ಕಾದಂಉ. ೫೪೨). [ಸಂ.]

**ಉದ್ವೇಜಿಸು** (ಕ್ರಿ). ಕದಡು ; ಕೆರಳಿಸು ; ಪ್ರಚೋದಿಸು : ಈ ನರವು ಯಾವುದಾದರೂ ಕಾರಣದಿಂದ ಉದ್ವೇಜಿಸಲ್ಪಟ್ಟರೆ ನಮಗೆ ಬೆಳಕೆಂಬ ಅನುಭವವುಂಟಾಗುವುದು (ಭೌತವಿ. ೧೫೩). [ಉದ್ವೇಜನ + -ಇಸು$_3$]

**ಉದ್ವೇಲ**, ಉದ್ವೇಳ (ಗು). ದಡವನ್ನು ಅತಿಕ್ರಮಿಸಿದ; ಮೇರೆ ಮೀರಿದ. **ಉದ್ವೇಳ** : ಶೃಂಗಾರ ರಸೋದ್ವೇಳಂ ಕಂದರ್ಪ ಕುಸುಮಬಾಣಾಭೀಳಂ (ಗಿರಿಕ. ೧೦-೪೭). [ಸಂ.]

**ಉದ್ವೇಳ** 'ಉದ್ವೇಲ' ನೋ.

**ಉಘೋ, ಉದೋ** (ಅ). ೧. ಎಲ್ಲಮ್ಮದೇವತೆಯನ್ನು ಕುರಿತು ಭಕ್ತರು ಮಾಡುವ ಉದ್ಗಾರ. ೨. ಒಂದು ನಿಪಾತಾವ್ಯಯ: ಉಘೋ ಎಂದು ನಿಂದಿಸಿದರೂ ತಿಳಿಯದೆಂದು ಬಾಯಿತಿಂಡಿಯನ್ನು ತೀರಿಸಿ ಕೊಳ್ಳುತ್ತಿದ್ದರು (ಜಯಂತ. ೧೩೮); ಹೃದಯದ ವೇದನೆ "ಉಘೋ" ಎಂದು ಮುಂದೆ ಬಂದು . . . ಕೆಣಕಿ ಕುಣಿಯತೊಡಗಿತು (ಚಿತೆಸ. ೫೦); ಮುಂಜಾನೆ ಎದ್ದು ಉಘೋ ಲಕ್ಷ್ಮಣ ಎಂದು . . . ಮಾರುತಿಯ ಗುಡಿಗೆ ಹೋಗಿಬರಲು ಆವನೆಂದೂ ತಪ್ಪುತ್ತಿರಲಿಲ್ಲ (ಫಲಸಂ. ೧೫). **ಉದೋ**: ೧. (ಕ).

**ಉಘೋ ಉಘೋ ಮಾಡು** = ಅತಿಯಾಗಿ ಸ್ತುತಿಸು; ಗೊಂದಲ ಎಬ್ಬಿಸು; ರಾದ್ಧಾಂತಮಾಡು: ಈ ವರ್ಣನೆಯು ಕಲ್ಯಾಣಿಯ ಕಿವಿಗೆ ಬಿದ್ದಿತು. ಸಿಟ್ಟು ಬೆಂಕಿಯಾದಳು. ಇವನ ಈ ಭಂಡಾಚಾರವನ್ನು ಬೈಲಿಗೆ ಎಳೆದು ಉಘೋ ಉಘೋ ಮಾಡಬೇಕೆಂದು ಎದ್ದಳು (ಅಪವಾ. ೮೨).
[?. / ಮರಾ. ಉದೋ]

**ಉಧ್ವಸ್ತ** (ನಾ). ನಾಶ; ಧ್ವಂಸ: ಬಂಡವಾಳಗಾರಿಕೆಯನ್ನು ಕಟ್ಟಿ ಕೊಂಡ ರಾಜ್ಯಸತ್ತೆ ಸಾಮಾಜಿಕ ಸಂಘಟನೆಯನ್ನೇ ಉಧ್ವಸ್ತಮಾಡು ವುದು (ಮಾವಾದ. ೨೪). [ಸಂ. ಉದ್ಧ್ವಸ್ತ]

**ಉನಾಮಕ** (ನಾ). [ದ್ವೈಕೃತ] 'ಉ' ಎಂಬ ಹೆಸರುಳ್ಳವನು; ವಿಷ್ಣು: "ಅಧಿಕನಾದುದರಿಂದ ಅನಾಮನೆಂತಲೂ (ಉತ್ಕೃಷ್ಟನಾದುದರಿಂದ) ಉಚ್ಚನಾದುದರಿಂದ ಉನಾಮಕನೆಂತಲೂ, ಸರ್ವವೇದಗಳಿಂದಲೂ ಮಿತ ಎಂದರೆ ತಿಳಿಸಿಕೊಳ್ಳಲ್ಪಡುವನಾದುದರಿಂದ ಮಕಾರವಾಚ್ಯನೆಂತಲೂ ಒಟ್ಟು ಅಧಿಕವಾದ ಉಚ್ಚತ್ವವನ್ನು ಹೊಂದಿದವನೆಂದರ್ಥ" (ಹಸಾರ. ೬-೨ ಟೀಕು) [ಸಂ.]

**ಉನಿ** (ಕ್ರಿ). ನೆನೆ; ಒದ್ದೆಯಾಗು: ಎಂಜಲಿನಲ್ಲಿ ಉನಿದುಹೋಗಿದ್ದ ಆ ನಿಪ್ಪಟ್ಟು ಮಣ್ಣಿಗೆ ಬಿತ್ತು (ಅವತಂ. ೬೦); ನೀರಿನಲ್ಲಿ ಚೆನ್ನಾಗಿ ಉನಿದ ಬಟ್ಟೆಯನ್ನು ಒಗೆದರೆ ಕೊಳೆ ಬಹು ಬೇಗ ಹೋಗುತ್ತದೆ (ರೂಢಿ).

**ಉನಿಯಹಾಕು** = ನೆನೆಹಾಕು; ತೋಯಿಸು; ನೀರು ಅಥವಾ ಹಾಲು ಮುಂತಾದ ದ್ರವಗಳಲ್ಲಿ ನೆನೆಯಿಕ್ಕು (ದಕ. ಕ).
[?. / ತಮಿ. ಊಟ್ಟು = ಬಣ್ಣಹಾಕು; ತೆಲು. ಉನುಪು = ಬಟ್ಟೆಗೆ ಬಣ್ಣಹಾಕು. ಸಂ. ಉನ್ನ]

**ಉನಿಯಿಸು, ಉನಿಸು$_1$** (ಕ್ರಿ). ನೆನೆಯ ಹಾಕು; ನೆನಸು; ತೋಯಿಸು: ಬಟ್ಟೆಯನ್ನು ಚೆನ್ನಾಗಿ ನೀರಿನಲ್ಲಿ ಉನಿಯಿಸು (ರೂಢಿ). **ಉನಿಸು$_1$**: "ತೋಯಿಸು, ಮಡಿಗೆ ನೀರುಣಿಸು" (ಜಾನಕೋ. ೨೦).
[ಉನಿ + -ಇಸು$_3$]

**ಉನಿಸು$_1$** 'ಉನಿಯಿಸು' ನೋ.

**ಉನಿಸು$_2$** (ನಾ). (?): ಮಿಸುಗುವ ಮುಂಮು ಮುದ್ದುನಗೆ ಮೆಲ್ನುಡಿ ಕುಂಕುವ ಕೋರೆನೋಟದಿಂ ದಸೆಗಳೆದೆಮ್ಮ ನೇಹವುನಿಸಂ ಸವಿವಾಯ್ದ ಜಕಿ ಯೂಡಿಯೂಡಿಯುಣ್ಬ ಸಸಿಮೊಗಂ (ಅಪ್ರತಿ. ೧೪೧-೧೦). [?]

**ಉನುಮನಿ** (ನಾ). = ಉನ್ಮನಿ ೧: ಮನ ಕರಣ ಧ್ಯಾನಕ್ಕೆ ತನು ಧ್ಯಾನ ಮೂರ್ತಿಗೆ ಉನುಮನಿಯ ಉಲುಹಿನ ಭಾವಕ್ಕೆ (ಬಸಸ್ತೋ. ೨೮).
[< ಸಂ. ಉನ್ಮನೀ]

**ಉನ್ನ$_1$** (ಗು). ಈ ನಡುವಣ ರೀತಿಯ: ಅನ್ನಕಾರ್ಯದ ದೇಹ ತಾನೆಲೆಯುನ್ನ ಕಾರ್ಯದ ಪುರುಷ ತಾನಹನಿನ್ನ ನೋಡುವುದೇನು ದೇಹವ ಪುರುಷರಂತಹರೊ (ನಿಭಾಗ. ೧೧-೧೭-೧೪).

**ಉನ್ನಂ** = ನಡುವಣ ರೀತಿಯವನು, —ಪ್ರಕಾರದವನು: "ಉನ್ನಮುಂತಪ್ಪನುಂತಹಂ" (ಕವಿಕಂ. ೨೧೮); ಅನ್ನಂ, ಉನ್ನಂ, ಇನ್ನಂ, ಎನ್ನಂ (ಶಮದ. ೧೬೦ ವೃತ್ತಿ). [ದೇ.]

**ಉನ್ನ$_2$** (ಗು). ನೆನೆಯಿಸಿದ; ತೋಯಿಸಿದ: "ಉನ್ನಂ, ಕ್ಲಿನ್ನಂ – ಈ ೨ ಹಸಿ" (ಹಲಾಯು. ೧೨೬-೮೨); "ಕ್ಲಿನ್ನಮುನ್ನಮೆನಲ್ಕೆ ಹಸಿಯಕ್ಕು" (ಮಂಗರಾ. ೧೩೨-೨೬). [ಸಂ.]

**ಉನ್ನಂತ, ಉನ್ನಂತು** (ನಾ). = ಉನ್ನತ ೨: ಎಣಿಕೆ ಹುಲ್ಲೆ ವರ್ಣದಾವು ಉನ್ನಂತ ಬೆಟ್ಟದ ಕೆಂದ ಆವು ಉನ್ನಂತವಹ ಕಪಿಲೆ ಗೋವ್ಗಳು ಉನ್ನಂತ ವಾಗಿ ನಡೆದವು (ಗೋಹಾಡು. ೪೨). **ಉನ್ನಂತು**: ಅನಂತಾನಂತಶಯನಾ ಅಂಬುಜದಳನಯನ ಉನ್ನಂತುಗುಣನಿಲಯಾ ಪನ್ನಗ ಗೇಯ (ತೀರ್ಥಮ. ೧೯೫). [< ಸಂ. ಉನ್ನತ]

**ಉನ್ನಂತು** 'ಉನ್ನಂತ' ನೋ.

**ಉನ್ನತ** (ಗು). ೧. ಎತ್ತರವಾದ; ಮೇಲಾದ. (ನಾ). ೨. ಹಿರಿಯ; ಉತ್ತಮ; ಶ್ರೇಷ್ಠ; ಉದಾತ್ತ: "ಪ್ರಾಂಶು, ಉಚ್ಚಂ, ಉನ್ನತಂ, ತುಂಗಂ, ಉದಗ್ರಂ – ಈ ೫ ಉದ್ದಿತು" (ಹಲಾಯು. ೧೨೪-೬೬); ರಂಭಾನೃತ್ಯದಿಂ ಡೊಂಬರೇ ಸಖರಿಂದುನ್ನತವಸ್ತುವೇ ಹರಹರಾ ಶ್ರೀ ಚೆನ್ನಸೋಮೇಶ್ವರಾ (ಸೋಮೇಶ. ೪).

**ಉನ್ನತೋನ್ನತ** (ದ್ವಿರುಕ್ತಿ): ಹರಿ ನಿನ್ನ ಮಹತ್ತ್ವಂ ಪ್ರಥಿತಮಗಾಧ ಮುಮುನ್ನತೋನ್ನತಮಲ್ತೇ (ಜಗವಿ. ೩-೧೦೫). **ಉನ್ನತವಾಗು** = ಹಿರಿದಾಗು; ಶ್ರೇಷ್ಠವಾಗು; ಉಚ್ಚವಾಗು: ರನ್ನದೊಡವನಿಟ್ಟ ರಮಣಿಯ ಕಣ್ಬೆಳಗುನ್ನತವಾಯ್ತು ಬೀದಿಯಲಿ (ಮೋಹತ. ೧೮-೩೩).
[ಸಂ.]

**ಉನ್ನತಚ್ಛಾಯ** (ನಾ). ದೊಡ್ಡ ಧ್ವನಿಯುಳ್ಳವನು: "ಉನ್ನತ ಚ್ಛಾಯ [ಪಾಠಾಂ. ಉನ್ನತಾಚ್ಛಾಯ, ಉನ್ನತೇಚ್ಛ] ನೆನೆ ಹಿರಿಯಧ್ವನಿ ಯವನಕ್ಕು" (ಮಂಗರಾ. ೭೦-೧೬).
[ಸಂ. (ಉನ್ನತ + ಛಾಯಾ + –)]

**ಉನ್ನತತ್ವ** (ನಾ). ಎತ್ತರ; ಔನ್ನತ್ಯ (ಕ). [ಸಂ.]

**ಉನ್ನತಪೀಠ** (ನಾ). ಎತ್ತರವಾದ ಪೀಠ; ಶ್ರೇಷ್ಠವಾದ ಪೀಠ: ಹರ ಕುಳ್ಳಿರಿಮುನ್ನತಪೀಠದೊಳ್ ಪದಾವನತಿಯಿನೇೞ್ ಮಹೇಂದ್ರ (ಜಗವಿ. ೩-೫೮). [ಉನ್ನತ + ಪೀಠ]

**ಉನ್ನತಪ್ರಶ್ನೆ** (ನಾ). ಮಹಾಪ್ರಶ್ನೆ; ದೊಡ್ಡಪ್ರಶ್ನೆ.
[ಉನ್ನತ + ಪ್ರಶ್ನೆ]

**ಉನ್ನತಭೂಮಿ** (ನಾ). ಎತ್ತರವಾದ ಭೂಮಿ; ತಿಟ್ಟು; ದಿಣೆ.
[ಉನ್ನತ + ಭೂಮಿ]

**ಉನ್ನತವಲಯ** (ನಾ). ಶಿಷ್ಟಜನರ ಸಮೂಹ: ಶ್ರೀಮಂತ . . . ಉನ್ನತವಲಯದಲ್ಲೆಲ್ಲ ಸಂಪರ್ಕವಿಟ್ಟುಕೊಂಡಿದ್ದನು (ಫುನರು. ೩೩೪).
[ಉನ್ನತ + ವಲಯ]

**ಉನ್ನತಾಂಶ** (ನಾ). ಮಹತ್ತರವಾದ ಅಂಶ. [ಉನ್ನತ + ಅಂಶ]

**ಉನ್ನತಾಧಿಕಾರ** (ನಾ). ಮೇಲಿನ ಅಧಿಕಾರ; ಹೆಚ್ಚಿನ ಅಧಿಕಾರ: ಉನ್ನತಾಧಿಕಾರದಲ್ಲಿರುವ ಜನ ವಿನೀತರಾಗಿರಬೇಕು (ರೂಢಿ).
[ಉನ್ನತ + ಅಧಿಕಾರ]

**ಉನ್ನತಾಧಿಕಾರಿ** (ನಾ). ಮೇಲಿನ ಅಧಿಕಾರಿ: ಕೆಳಗಿನ ಅಧಿಕಾರಿಗಳು ಉನ್ನತಾಧಿಕಾರಿಗಳಿಗೆ ವಿಧೇಯರಾಗಿರಬೇಕು (ರೂಢಿ).
[ಸಂ. ಉನ್ನತಾಧಿಕಾರಿನ್]

**ಉನ್ನತಾನತ** (ಗು). ಏರುತಗ್ಗಾದ; ಹಳ್ಳದಿಣ್ಣೆಯಾದ (ಕ).
[ಉನ್ನತ + ಆನತ]

**ಉನ್ನತಾಸನ** (ನಾ). = ಉನ್ನತಪೀಠ: ಹೊನ್ನ ರನ್ನ ದೊಳೆಸೆವ ಸಿಂಹಾಸನದ ಮೇಲೆ ಉನ್ನತಾಸನವಿತ್ತನಬಲಾಜನಂ ಸೋಲೆ (ನಂಬಿರ. ೩-೭೪). [ಉನ್ನತ + ಆಸನ]

**ಉನ್ನತಿ** (ನಾ). ೧. ಮೇಲ್ಮೆ; ಹಿರಿಮೆ; ಶ್ರೇಷ್ಠತೆ: "ಪೆಂಪುನ್ನತಿ" (ಚತುಃ. ೨೦); ನಿಜ ವಿಜಯಯುಯಶಂ ಪರೆಯೆ ನೆಗಟ್ಟಿದನವನೀಧರೆಯೊಳ್ ಮಲ್ಲಪನ ತನಯನೆಂಬುನ್ನತಿಯಂ (ಅಜಿಪು. ೧–೩೯); ತನ್ನ ಸಾಮರ್ಥ್ಯದೊಂದುನ್ನತಿಯಂ ನುಡಿಯುತ್ತುಂ (ಗಿರಿಕ. ೮–೮೬ ವ); ಅದಱುನ್ನತಿಯ ತುದಿಮೊದಲನಱುಹೆನಲ್ (ಜೈಮಿಭಾ. ೧೧–೨೨). ೨. ಅಭ್ಯುದಯ; ಏಳಿಗೆ; ಅಭಿವೃದ್ಧಿ: ಅರತಿಗಳನೆತ್ತಿಯೆತ್ತಿ ಪಿಂಗದೆ ಮಂಗಳೋನ್ನತಿಯಂ ಕೊಂಡಾಡುತ್ತುಂ (ಗಿರಿಕ. ೧೦–೪೫ ವ); ಸೌಮಂಗಳ್ಯ ಮಾಗಿಯುಂ ಮೇಲೆಯುನ್ನತಿಯುಪ್ಪುದೆ (ಜೈಮಿಭಾ. ೫–೫೩); ಕನ್ನೆರನ್ನೆಯರು ಪರಕೆಗೈಯಲಾ ಮನೆಯುನ್ನತಿವಡೆದೊಪ್ಪುವುದು (ಹದಿಬ. ೫–೨೫). ೩. ಎತ್ತರ; ಉಚ್ಚತೆ: ಹಿಮಾಲಯದ ಉನ್ನತಿ ಲೋಕಪ್ರಸಿದ್ಧ (ರೂಢಿ).
ಉನ್ನತಿಗೆತರು = ಏಳಿಗೆಗೆ ತರು; ಅಭಿವೃದ್ಧಿಪಡಿಸು. ಉನ್ನತಿಮಾಡು = ದೊಡ್ಡದುಮಾಡು; ಹಿರಿದೆಂದು ಹೇಳು: ಮುಂದಿಟ್ಟು ಚಕ್ರಮಂ ತಿರಿತಂದುದುಮಂ ಪೂಜಿದಿರ್ದು ಬಯ್ತುಂಗೊಳ್ವೊಂದಂದದೆ ಕೊಂಡುದು ಮನದೇನೆಂದುನ್ನತಿಮಾಡಿ ಪೊಗಟ್ಟೆಯೊಳಗಱಿಯದುದೇ (ಆದಿಪು. ೧೪–೬೬). [ಸಂ.]

**ಉನ್ನತಿಕೆ, ಉನ್ನತಿಕ್ಕೆ, ಉನ್ನತಿರ್ಕೆ** (ನಾ). ೧. ದೊಡ್ಡಸ್ತಿಕೆ; ಮೇಲ್ಮೆ; ಹಿರಿಮೆ: "ಉನ್ನತಿಕೆಯು ಪನ್ನತಿಕೆಯೆನೆ ತಪ್ಪದು" (ಶಬ್ದಮಂ. ೩೬); ಧರೆಯೊಳ್ ಹರಿಶ್ಚಂದ್ರಭೂಭುಜಂ ತನ್ನ ಸಾರ್ದರ ಬೇಡಿದರ ಬಯಸಿದರ ಸೋಂಕಿದರ ಬೆರಸಿದರನು ತನ್ನಂತೆ ಮಾಳ್ಪುನ್ನತಿಕೆಯಂ ಕಂಡು ನಾಚಿ ಸಿಗ್ಗಾಗಿ ಸೆಡೆದು ಮರನಾಯ್ತು ಚಂದನಂ (ಹಚಕಾ. ೧–೪೨). ೨. ಏಳಿಗೆ; ಅಭಿವೃದ್ಧಿ; ಶ್ರೇಯಸ್ಸು: ಪಿರಿದೀವ ಪೆಂಪು ಮೆಸೆದೊಪ್ಪಿಟ್ಟಿಪ್ಪುವಾರ್ಬ್ಬಣ್ನಿಸಲ್ಕೆಱೆವರ್ಬ್ಬೀರದ ಚಾಗಮುನ್ನತಿಕೆಯಂ ಶ್ರೀರಾಜಮಾರ್ತ್ತಣ್ಡನ (ಎಕ. II, ೧೩೩–೧೯; 989); ಈವರ ಧರ್ಮದಿಂದಘಕುಲಂ ಕಿಡುಗುಂ ಸುಖಮಕ್ಕುಮಕ್ಷಯಶ್ರೀವಘು ಸಾರ್ಗುಮುನ್ನತಿಕೆಯಕ್ಕುಂ ಮಳಂ ಕಿಡುಗುಂ (ಧರ್ಮಾಮೃ. ೬–೮೪); ಮುನ್ನ ಮಾಡಿದ ಕರ್ಮಫಲ ಋತುಪರ್ಣನಲಿ ಸೇವೆಯನು ಮಾಡಿದ್ದೆ ಬನ್ನದುನ್ನತಿಕೆಯಲಿ ಬಂದುದೆ ಸಾರ್ವಭೌಮರಿಗೆ (ನಳಚ. ೮–೫೩). ೩. ಪರಾಕ್ರಮ; ಸಾಹಸ: "ಉಬ್ಬಟೆಯುನ್ನತಿಕೆ ಪರಾಕ್ರಮದೊಳು" (ಕ್ಷಶರ. ೧೫); ನನ್ನಿಯಿದು ಮಧುಕೈಟಭಾದಿಗಳುನ್ನತಿಕೆಯೇನಾಯ್ತು ಧೃತಿಭೂಕನ್ನೆಯನು ಕದ್ದವರ ಕಡುಹೇನಾಯ್ತು ಹೇಳೆಂದ (ತೊರರಾ. ೩–೩೪–೧೬).
**ಉನ್ನತಿಕ್ಕೆ**: ೧. ಸಿರಿಗಂ ಮೈಮೆಗಮುನ್ನತಿಕ್ಕೆಗಮಣಂ ಭೋಗಕ್ಕಮೇ ನಾಸೆಯೇ (ಧರ್ಮಾಮೃ. ೫–೩೦); ಶ್ರುತದಗ್ಗಳಿಕ್ಕೆ ತಪದುನ್ನತಿಕ್ಕೆ ತನ್ನೊಳೆ ನೆಗಟ್ತೆವೆತ್ತಿರೆ ಭೂವಿಶ್ರುತನೆನೆ ಸುಕೌಶಲ ವ್ರತಿಪತಿ ತಪದಿಂ ಶ್ರುತದಿನಾರುಮಂ ಗೆಲೆವಂದಂ (ಪಂರಾಮಾ. ೨–೫೧). ೨. ಬೇಸಱದಾಸಱದೆ ವನಾವಾಸಂಗಳೊಳುನ್ನತಿಕ್ಕೆ ನಿಲೆ ನಮೆದವರೊಳ್ ನೇಸನ್ನಿಕೆಯಿಂ (ಕಾವ್ಯಾವ. ೩೪೬). △ **ಉನ್ನತಿರ್ಕೆ**: ೧. ತತ್ಪುರೋಪವನ ಶಾಶ್ವತ ಲಕ್ಷ್ಮಿಯೊಳುಂನತಿರ್ಕೆಯುಂ ಧನಕನಕಗಳಿಂದಮೆಸೆಗುಂ (ಮುಂಬರಾ. XII, ೧೨; 1223). [ಉನ್ನತ + –ಇಕೆ]

**ಉನ್ನತಿಕೆವಡೆ** (ಕ್ರಿ). ಏಳಿಗೆಯನ್ನು ಹೊಂದು; ಅಭಿವೃದ್ಧಿಯಾಗು: ನತಜನಪಾಲಕನಿಕುರುಂಬದೊಳುನ್ನತಿಕೆವಡೆದನವನವರಸರುಚಿರ ಪ್ರತಿಮೆಯ ತೆಱದಿ ವಿರಾಜಿಸಿದಂ ವಿಕ್ರಮ ಕೌರವರಾಜಂ (ಜಯಕಾ. ೬–೬೦). [ಉನ್ನತಿಕೆ + ಪಡೆ₁]

**ಉನ್ನತಿಕೆವೆಱು** (ಕ್ರಿ). ಉನ್ನತಿಕೆಹೊಂದು; ಏಳಿಗೆಯನ್ನು ಪಡೆ: ಸುರೇನ್ದ್ರನಾಜ್ಞೆಯಂ ಮಂದರಗಿರೀಂದ್ರ ಪರಿವೇಷ್ಟಿಸಿದುದೆಂಬಂತಿರು (೦)ನ್ನತಿಕೆವೆತ್ತ × × ಪ್ರಾಕಾರದಿಂ (ಸೌಇಇ. IX–i, ೩೨೨–೧೧; 1195). [ಉನ್ನತಿಕೆ + ಪೆಱು₁]

**ಉನ್ನತಿಕ್ಕೆ** 'ಉನ್ನತಿಕೆ' ನೋ.

**ಉನ್ನತಿಗಿಡು** (ಕ್ರಿ). ದೊಡ್ಡತನ ಕಡಮೆಯಾಗು; ಹಿರಿಮೆಗುಂದು: ವ್ರತಿಗಳ್ ಮನುಗಳ್ ಮುನಿಗಳ್ ಯತಿಗಳ್ ಸೆಡೆದಳ್ಕಿ ಬಳ್ಕಿ ಸುಗಿದಗಿದು ಕರಂ ಮತಿಗೆಟ್ಟರ್ . . . ಬುದ್ಧಿಗೆಟ್ಟರುನ್ನತಿಗೆಟ್ಟರ್ (ಗಿರಿಕ. ೮–೨೩). [ಉನ್ನತಿ + ಕಿಡು₂ (< ಕೆಡು)]

**ಉನ್ನತಿರ್ಕೆ** 'ಉನ್ನತಿಕೆ' ನೋ.

**ಉನ್ನತಿವಡೆ** (ಕ್ರಿ). = ಉನ್ನತಿಕೆವಡೆ: ಏನುನ್ನತಿವಡೆದುದೊ ಚಾಗದ ನನ್ನಿಯ ಬೀರದ ನೆಗಟ್ತೆ ಚಲದಗ್ಗಳಿಯಾ (ಎಕ. II, ೧೩೩–೫೯; 982); ಆತನ ಮಹೋನ್ನತಿವಡೆದ ಪೆಂಪಂ ಕಾಣಲಾಱದೆ ಜಡಮತಿಗಳಾಗಿ (ಬಸವು. ೩೨–೪೯); ತನ್ನ ತವರುಮನೆಗೆಲ್ಲ ತಾನೊಡತಿಯೆಂಬುನ್ನತಿವಡೆವುದಱಿಂದ ತನ್ನಿನಿಯಳಿಗೂಳಿಗದವಳಪ್ಪುದು ಸಂಪನ್ನತೆ (ಹದಿಬ. ೩–೩೫). [ಉನ್ನತಿ + ಪಡೆ₁]

**ಉನ್ನತಿವೆಱು** (ಕ್ರಿ). = ಉನ್ನತಿಕೆವೆಱು: ವಿನಯೋನ್ನತಿವೆತ್ತ ನಿಜನಂದನನನರ್ಘಾಸನದೊಳ್ ಅನ್ನೃಪಂ ಕುಳ್ಳಿರಿಸೆಯುಂ (ಕಾದಂಪೂ. ೯೯೨); ಮಾಚಯ್ಯನುನ್ನತಿವೆತ್ತನಾ ಪ್ರಮಥಪ್ರಸಾದಾಯತ್ತ ನವ್ಯಪ್ರಸವ ವೃಷ್ಟಿಯು ಮೇಲೆ ಸುರಿಯುತಿರೆ (ಬಸವು. ೨೨–೫೬). [ಉನ್ನತಿ + ಪೆಱು₁]

**ಉನ್ನತೀಕರಣ** (ನಾ). ಮೇಲಕ್ಕೇರಿಸುವುದು; ಮಹತ್ತ್ವವನ್ನುಂಟು ಮಾಡುವುದು: ವಚನಸಾಹಿತ್ಯ ಸುಸಂಸ್ಕೃತವೆನಿಸಿಕೊಂಡ ಸಾಹಿತ್ಯವನ್ನು ಹಿಂದೆಹಾಕುವ ಶಕ್ತಿಯನ್ನು ಪಡೆದುದು ವಚನದ ಶಕ್ತಿಗಾಗಿ; ವಚನಸಾಹಿತ್ಯ ಇರಿಸಿಕೊಂಡ ಮಾನವನ ಉನ್ನತೀಕರಣಕ್ಕಾಗಿ (ಮಹಾಸಾ. ೧೬ ಪ್ರಸ್ತಾ). [ಸಂ.]

**ಉನ್ನತೇಚ್ಛ** (ನಾ). ಉನ್ನತವಾದ ಇಚ್ಛೆಯುಳ್ಳವನು; ವಿಶಾಲ ಹೃದಯ. [ಸಂ. (ಉನ್ನತ + ಇಚ್ಛಾ + –)]

**ಉನ್ನತೇಶ** (ನಾ). ಶ್ರೇಷ್ಠನಾದ ಒಡೆಯ; ಮಹಾಪ್ರಭು: ಮಹಾಜನಂಗಳ್ . . . ಉನ್ನತೇಶಂಗೆ ಮಂಗಳದ್ರವ್ಯಮಂ ಕೊಂಡು ಬರೆ (ನಂಬಿರ. ೬–೧೨). [ಉನ್ನತ + ಈಶ]

**ಉನ್ನತೋದರ**(ಗು). ೧. ಹೊರಬಾಗುಳ್ಳ; ಹೊರಕ್ಕೆ ಉಬ್ಬಿದ. (ನಾ). ೨. ಉಬ್ಬಿದ ಹೊಟ್ಟೆಯುಳ್ಳವನು: "ಉನ್ನತೋದರನಲ್ಲಿ ಶಿವನಲ್ಲಿ ಬುಧ್ನಮೆಂಬುದು" (ಮಂಗರಾ. ೧೪೩–೨೨). [ಉನ್ನತ + ಉದರ]

**ಉನ್ನದ್ಧ** (ಗು). ೧. ಕಟ್ಟಲ್ಪಟ್ಟ. ೨. ಅಪರಿಮಿತವಾದ. ೩. ಗರ್ವಿತನಾದ; ಕೊಬ್ಬಿದ. 'ಸಮುನ್ನದ್ಧ' ಪರಾ. [ಸಂ.]

**ಉನ್ನಮಿತ**(ಗು). ಮೇಲಕ್ಕೆ ಎತ್ತಿದ: ಬಂದಂ ಕದನಕ್ಷೋಣೀತಲಕ್ಕುನ್ನಮಿತಬಹುಪತಾಕಾ ಪಟಚ್ಛನ್ನ ಮೇಘಾಸ್ಪದಮಂ . . . ದಶಾಸ್ಯಂ (ಪಂರಾಮಾ. ೧೪–೧೨೯). [ಸಂ.]

**ಉನ್ನಯನ** (ನಾ). ೧. ಮೇಲೆ ಸಾಗಿಸುವಿಕೆ; ಮೇಲಕ್ಕೆ ಒಯ್ಯುವುದು; ಎತ್ತುವಿಕೆ. ೨. (ಬೈತಲೆ) ಬಿಡಿಸುವುದು: ಅನಂತರಮವರ್ಗೆ ಪುಂಸವನ ಸೀಮಂತೋನ್ನಯನಾದಿ ಸಕಲಮಂಗಳಮಂ ದಶರಥ ನರನಾಥಂ ಮಾಳ್ಪುದುಂ (ಪಂರಾಮಾ. ೩–೧೩೩ ವ). ೩. ತರ್ಕಿಸುವುದು; ಊಹಿಸುವುದು. ೪. (ಉಕ). ಉದಾತ್ತೀಕರಣ. [ಸಂ.]

**ಉನ್ನಯಿಸು₁, ಉನ್ನೈಸು** (ಕ್ರಿ). ೧. ನಡಸು; ನಿರ್ವರ್ತಿಸು: ಮುನ್ನಂ ಭಾರ್ಗವಮುನಿ . . . ಸಗರನೆಂಬಂಗೆಂತಂತುನ್ನಯಿಸಿದನಾ ಗೌತಮನುನ್ನತ ತದ್ವಂಶಸದೃಶ ಸಂಸ್ಕಾರಮುಮಂ (ಸೌನಂದ. ೧–೨೫).
**ಉನ್ನೈಸು**: ೨. ಬರೆಯಿಸು: ನಿನ್ನ ಮಗನಿಗೆಮ್ಮ ಭಾಗ್ಯವೆಲ್ಲವ ಕೊಟ್ಟು ಚೆನ್ನಾಗಿ ನಡೆಯಿಸಿಕೊಂಬೆ ಇನ್ನಿದಕೇಣಿಕೆ ನಿನಗೆ ಬೇಡವೆಂದವ ನುನ್ನೈಸಿ [ಪಾಠಾಂ. ಮನ್ನಿಸಿ]ದನು ಕಾಗಜವನು (ಕುರಾಸಾಂ. ೧೬–೬೬). [ಉನ್ನಯನ + –ಇಸು₃]

**ಉನ್ನಯಿಸು**$_3$ 'ಉನ್ನಿಸು' ನೋ.
**ಉನ್ನವಿಸು** 'ಉನ್ನಿಸು' ನೋ.
**ಉನ್ನಾಯ** (ನಾ). ಎತ್ತರಿಸುವುದು ; ಎತ್ತುವುದು. [ಸಂ.]
**ಉನ್ನಾಹ** (ನಾ). ೧. ಸಂಭ್ರಮ; ಉನ್ನತಿ: ಹರುಷವನುಂಬ ಉನ್ನಾಹಂಗಳಿಂದ ಪುರಂದರವಿಠಲರೇಯನ ದಯದಿಂದ ಸುರಮುಷಿ ನರರಿಗೆಲ್ಲವು ನಿಜಾನಂದ (ಕನ್ನಸು. I, ೨೯೪). ೨. ಗರ್ವ; ಹೆಮ್ಮೆ. ೩. ಗಂಜಿ. [ಸಂ.]
**ಉನ್ನಾಳ** (ನಾ). ಕೀಳುತರಗತಿಯ ಧಾನ್ಯ; ಹಾರಕ: "ಉನ್ನಾ [ಪಾಠಾಂ. ನ್ಮಾ]ಳಮಾ ಕೋದ್ರವಂ ಹಾರಕು" (ಮಂಗರಾ. ೧೧೧-೪). 'ಉನ್ಮಾಳ' ಪರಾ. [?]
**ಉನ್ನಿದ್ರ** (ಗು). ೧. ನಿದ್ರೆಯಿಲ್ಲದ; ಎಚ್ಚರಗೊಂಡ. ೨. ಅರಳಿದ; ವಿಕಾಸವಾದ: "ಉನ್ಮೀಲಿತಂ . . . ಉನ್ನಿದ್ರಂ . . . ವಿಕಾಸಃ—ಈ ೯ ಅಲರ್ವುದರ್ಕೆ ಪೆಸರ್" (ಹಲಾಯು. ೩೧-೩೩); ನಿನ್ನ ಮುಖದಂತೆ ಕಮಲಮಿದುನ್ನಿದ್ರಂ ನಿನ್ನ ತಳದವೋಲಾರಕ್ತಂ ನನ್ನಿಯನೀ ಪಲ್ಲವಂ (ಕವಿರಾ. ೩-೬೨); ಉನ್ನಿದ್ರ ಕೈತಕ್ಕ ಪರಾಗಶ್ರೇಣಿ (ರಾಜಶೇ. ೮-೯೩). [ಸಂ.]
**ಉನ್ನಿದ್ರತೆ** (ನಾ). ನಿದ್ರೆಯಿಲ್ಲದಿರುವಿಕೆ; ಎಚ್ಚರವಾಗಿರುವಿಕೆ: ದಿನದೊಳ್ ಸಜಳತೆಯಿಂ ಮತ್ಸ್ಯನಳಿನಮಂ ಮತ್ತಮಿರುಳೊಳುನ್ನಿದ್ರತೆಯಿಂದೆನಸುಂ ಚಕೋರ ಕುಮುದಮನನುಕರಿಸಿದುದಾ ವಿಯೋಗ ವಿಧುರೆಯ ಕಣ್ಗಳ್ (ಚಂದ್ರಪ್ರ. ೫-೧೨೫). [ಸಂ. ಉನ್ನಿದ್ರತಾ]
**ಉನ್ನಿದ್ರೆ** (ನಾ). ನಿದ್ರೆಯಿಲ್ಲದವಳು; ಎಚ್ಚರಗೊಂಡವಳು: ಕನಸು ಗಂಡು ಮಂಗಳಪಾಠಕರ ಪುಣ್ಯರವಂಗಳೊಳಂ . . . ಉನ್ನಿದ್ರೆಯಾಗಿ (ಅಜಿಪು. ೩-೧೨ ವ). [ಸಂ. ಉನ್ನಿದ್ರಾ]
**ಉನ್ನಿಮರ** (ನಾ). ಒಂದು ಜಾತಿಯ ಮರ: ಉನ್ನಿಮರ, ಕಲ್ ಬೋವು, ದೊಡ್ಡೆಲೆಭೋಗಿ (ವೈಔಗಿ. ೪೪-೮೭೪). [ಉನ್ನಿ$_0$ + ಮರ]
**ಉನ್ನಿಸು, ಉನ್ನಯಿಸು₃, ಉನ್ನವಿಸು** (ಕ್ರಿ). ಭಾವಿಸು; ಯೋಚಿಸು; ಎಣಿಸು; ಆಲೋಚಿಸು; ಊಹಿಸು: ಅರಂ ಗಡುನ್ನಿಸದು ತನು ಮನವ ಮೇಣೆನ್ನಾರುತ್ಕಧೀರತೆಯನಾಹರಿಸದು (ಅನುಮು. ೮೨); ತನ್ನೊಳು ಸುಖದುಃಖಮೋಹಾದಿಗಳು ತೋಜಲುನ್ನಿಪುದವನೆಲ್ಲ ಗುಣಮಯವೆಂದು (ಕೈವಲ್ಯ. ೩-೫-೧); ತನ್ನೆದೆಯೊಳಗದು ಹೊಳೆದುದೀಗಹುದಣ್ಣ ನಿನ್ನೊಡನುಸುರುವೆನೆಂದು ಉನ್ನಿಸುತಿದ್ದೆನಪ್ಪಜಿಳು ಮುಂಚಿದೆ (ಭರಚ. ೪೫-೯೪); ಮೂಜಗದೊಳುನ್ನಿಸಲ್ ನಿನಗೆ ಪಡಿಯಹರುಂಟೆ (ಜೈಮಿಭಾ. ೨೩-೫೯); ಚಿನ್ನಕೆ ಪರಿಮಳ ಬಂದಂತಹುದೆಂದುನ್ನಿಸಿದನು ಮನದೊಳಗೆ (ಗೋಮಟೇ. ೬-೮೩); ಮಂತ್ರಿ ಅರಮನೆಗೆ ಬಂದು ತಾನು ಉನ್ನಿಸಿದ ಬಗೆಯನ್ನು ಆಲೋಚಿಸಿ ಅರಸನನ್ನು ಬೀಳ್ಕೊಂಡ (ಬದುರಿ. ೧೬೫). **ಉನ್ನಯಿಸು₃**: ತಾನೋದಿ ಮಗುಟ್ವನ್ನಂ ತದ್ಭವಸೇನನ ದುಷ್ಕರ್ಮದ ಫಲದಿಂ ಮುಂ ತಾನುನ್ನಯಿಸಿದ ವರುಷದ ಮೇಲೆಣ್ಬಗಲೆಯ್ತುರಲಿತ್ತ (ಜಯಕಾ. ೧೨-೫೮). **ಉನ್ನವಿಸು**: ತನ್ನ ಮನದಣಿಕೆಗಳು ಬೇಜಹುದನುನ್ನವಿಸಿ ನೋಡಿದೊಡೆ ದೈವದ ಭಿನ್ನತಂತ್ರವನಜಿಯಲಳವೇ ದೈವಗತಿ ಬೇಜಿ (ತಿಮ್ಮಸ್ತ್ರೀ. ೨-೫೧). [ಉನ್ನು$_1$ + -ಇಸು$_3$]
**ಉನ್ನು**$_1$ (ಕ್ರಿ). ಭಾವಿಸು; ಯೋಚಿಸು; ಎಣಿಸು: ಪಿಂದಧಿಕ ಕಬ್ಬಿಗರ ಕಬ್ಬಂಗಳಿರಲೀ ಪ್ರಬಂಧವೇನೆಂದುನ್ನದಾ [ಪಾಠಾಂ. ದೆನ್ನದಾ, ದೆನನಾ] ಲಿಪುದು ರಸಿಕರು (ಮದೇಪು. ೧-೧೪).
[ದೇ. ‖ ತಮಿ. ಉನ್ನು; ಮಲ. ಉನ್ನಿ, ಉನ್ನು; ತೆಲು. ಉಂಕಿಸು; ಕುವಿ. ಒನ್ಪಿನೈ; ಬ್ರಾಹೂಈ. ಹುನ್ನಿಂಗ್]
**ಉನ್ನು**$_2$ 'ಉಂ$_1$' ನೋ.
**ಉನ್ನುನ್ನಂ** (ಅ). ವಿಶೇಷವಾಗಿ; ಹೆಚ್ಚಾಗಿ; ಅತಿಶಯವಾಗಿ (?): ಪೂವಿನ ಪೊರಜೆಯೊಳುನ್ನುನ್ನಂ ಸೊಗಯಿಪಂತೆ ಕಣ್ಗೆಸೆದಿರ್ಪಳ್ (ಶಾಂತಿಪು. ೮-೧೭); ಕುಮಾರರುಗ್ರೋಗ್ರಮೆನಲ್ ಸನ್ನುತ ತಪಃಪ್ರಭಾವದೊಳುನ್ನುನ್ನಂ ನೆಗಟ್ದು ತತ್ಸಮಾಧಿಯನಾಂತರ್ (ನೇಮಿಪು. ೬-೫೯). [ಉನ್ನಂ + ಉನ್ನಂ ?]
**ಉನ್ನೆ** (ನಾ). ಆ ನಡುವಣ ಕಾಲ. 'ಉನ್ನೆಗಂ' ಪರಾ. [?]
**ಉನ್ನೆಗಂ** (ಅ). ಆ ನಡುವಣ ಕಾಲದಲ್ಲಿ; ಅಲ್ಲಿಯವರೆಗೆ; ಆವೇಳೆಗೆ: "ಅನ್ನೆಗಂ . . . ಉನ್ನೆಗಂ, ಉನ್ನೆವರಂ, ಉನ್ನೆವರೆಗಂ – ಇವು ಸೀಮಾಪ್ರಮಾಣ ಶಬ್ದಂಗಳ್" (ಶಶಸಾ. ೨೬-೫೪೭); "ಉನ್ನೆಗಮೆನಲಕ್ಕುಂ ತಾಮಿನ್ನುಂ ಕಾಲಪ್ರಮಾಣಂ" (ಕವಿಕಂ. ೨೨೧). [ಉನ್ನೆ + -ಗಂ]
**ಉನ್ನೆವರಂ** (ಅ). = ಉನ್ನೆಗಂ: "ಉನ್ನೆವರಂ . . . ಕಾಲಪ್ರಮಾಣಂ" (ಕವಿಕಂ. ೨೨೦, ೨೨೧); ಉನ್ನೆವರಂ ಉನ್ನೆವರೆಗಂ (ಶಬ್ದಾನು. ೪೩೭, ಪ್ರಯೋ). [ಉನ್ನೆ + -ವರಂ]
**ಉನ್ನೆವರೆಗಂ** (ಅ). = ಉನ್ನೆಗಂ: "ಅನ್ನೆಗಂ, ಅನ್ನೆವರಂ . . . ಉನ್ನೆವರಂ, ಉನ್ನೆವರೆಗಂ – ಇವು ಸೀಮಾಪ್ರಮಾಣ ಶಬ್ದಂಗಳ್" (ಶಶಸಾ. ೨೬-೫೪೭); "ಉನ್ನೆವರೆಗಂ . . . ಕಾಲಪ್ರಮಾಣಂ" (ಕವಿಕಂ. ೨೨೦, ೨೨೧). [ಉನ್ನೆ + -ವರೆಗಂ]
**ಉನ್ನೇಯ** (ಗು). ತರ್ಕಮಾಡಬಹುದಾದ; ಸಾದೃಶ್ಯದಿಂದ ನಿಶ್ಚಯಿಸಬಹುದಾದ. [ಸಂ.]
**ಉನ್ನೈಸು** 'ಉನ್ನಯಿಸು$_1$' ನೋ.
**ಉನ್ಮಗ್ನ** (ಗು). ಮುಳುಗಿ ಮೇಲೆದ್ದ: ಸಿಂಧುವಿನೊಳ್ ಕೂಡಿದ ಗುಹಾಮಧ್ಯದೊಳುನ್ಮಗ್ನನಿಮಗ್ನಜಲ ನಿಮ್ನಗಾತಟದೊಳ್ ಬೀಡಂ ಬಿಡಿಸಿ (ಆದಿಪು. ೧೩-೫೦ ವ). [ಸಂ.]
**ಉನ್ಮಜ್ಜನ** (ನಾ). (ನೀರಿನಲ್ಲಿ) ತೇಲಾಡುವಿಕೆ, —ಎದ್ದು ಬರುವಿಕೆ. [ಸಂ.]
**ಉನ್ಮತ್ತ** (ಗು). ೧. (ಬಹಳವಾಗಿ) ಮದಿಸಿದ; ಕೊಬ್ಬಿದ; ಸೊಕ್ಕಿದ: ಶಿಜಿಯಾತಂ ನಿಸರ್ಗದಿಂ ವಕ್ರಗತಿಪರಿಣಾಮದಿನುದ್ವೃತ್ತಚಿತ್ತದಿನುನ್ಮತ್ತನಾದಂ (ಸುಕುಮಾ. ೨-೫೭ ವ); ಮತ್ತಕಾಶಿನಿಯನೆಳೆದುನ್ಮತ್ತರಾವಣಂ ನೆಗೆದನಂಬರಕೆ (ಶ್ರೀರಾಮಾ. ೨೪೭-೫೧೭). (ನಾ). ೨. ಹುಚ್ಚುಹಿಡಿದವನು; ಬುದ್ಧಿಭ್ರಮಣೆಯಾದವನು: ಅವನೀ ಉನ್ಮತ್ತ ಈ ಸರಿಯ ಹೊತ್ತಿನೊಳು ಕೊಳಲ ಬಾರಿಸಿ ಮಧುರ ರಾಗವನು ರಚಿಪನಿಂತೆ (ಗೋಕುನಿ. ೧). ೩. ದತ್ತೂರದ ಗಿಡ; ಉಮ್ಮತ್ತಿಗಿಡ: "ಉನ್ಮತ್ತ – ಉಮ್ಮತ್ತದ ಗಿಡ" (ನಾನಾರ. ೧೧೭ ಟೀಕು). [ಸಂ.]
**ಉನ್ಮತ್ತತನ** (ನಾ). = ಉನ್ಮತ್ತತೆ (೧). [ಉನ್ಮತ್ತ + -ತನ]
**ಉನ್ಮತ್ತತಾರುಣ್ಯ** (ನಾ). ಮದಿಸಿದ ಪ್ರಾಯ; ಸೊಕ್ಕಿದ ಯೌವನ: ಉನ್ಮತ್ತತಾರುಣ್ಯವು ಆ ಎಚ್ಚರಿಕೆಯನ್ನು ಹೆಜ್ಜೆ ಹೆಜ್ಜೆಗೆ ಸ್ಮರಿಸುವಷ್ಟು ತಾಳ್ಮೆಯುಳ್ಳದ್ದಿರಲಿಲ್ಲ (ಜಯಂತ. ೩೬೨). [ಉನ್ಮತ್ತ + ತಾರುಣ್ಯ]
**ಉನ್ಮತ್ತತೆ** (ನಾ). ೧. ಸೊಕ್ಕು; ಕೊಬ್ಬು; ಮದ: ವಿದ್ಯಾರ್ಥಿಯ ಉನ್ಮತ್ತತೆಯನ್ನು ಶಿಕ್ಷಕನು ಸಹಿಸಿಕೊಳ್ಳಬೇಕೇ (ರಂಗರೊ. ೫೭). ೨. ಹುಚ್ಚು; ಬುದ್ಧಿಭ್ರಮಣೆ. [ಸಂ. ಉನ್ಮತ್ತತಾ]
**ಉನ್ಮತ್ತೆ** (ನಾ). ೧. ಸೊಕ್ಕಿದವಳು; ಮದವೇರಿದವಳು; ಕೊಬ್ಬಿದವಳು: ಅತ್ತೆ ನಾದಿನಿಯರೊಳಳುಕದೆ ಕಾದುವುನ್ಮತ್ತೆಯರೀ ಕೃತಿಗೇಳೆ ಉತ್ತಮಗುಣಗಳಿಂದೊಳಗುಗ್ಗೈದವರೊಳು ಪತ್ತುಗೆವೆರಸಿ ಬಾಳುವರು (ಹದಿಬ. ೧-೫೮). ೨. ಹುಚ್ಚಿ; ಬುದ್ಧಿಭ್ರಮಣೆಯಾದವಳು. [ಸಂ. ಉನ್ಮತ್ತಾ]

**ಉನ್ಮದ** (ಗು). (ಅತಿಯಾಗಿ) ಸೊಕ್ಕಿದ; ಕೊಬ್ಬೇರಿದ; ಉದ್ರೇಕಗೊಂಡ: ಚೂತಕುಜಾತಮಿಾಗಳೀಗಳೆ ನನೆವೋದುದಿಂದೊಳದಿನುನ್ಮದ ಷಟ್ಪದವೃಂದಮಿಾಗಳೀಗಳೆ ಮೊರೆದತ್ತು (ಆದಿಪು. ೧೩-೫). (ನಾ). ೨.(ಅತಿಯಾದ) ಸೊಕ್ಕು; ಮದ; ಕೊಬ್ಬು. ೩. ಉದ್ರೇಕ. [ಸಂ.]

**ಉನ್ಮದನ** (ನಾ). = ಉನ್ಮಾದನ: ಓಹೋ ಉನ್ಮದನಮದನ [ಪಾಠಾಂ. ಉನ್ಮದ ಮದನಸ]ಮೋಹನ ಸಂತಾಪನಂ ವಶೀಕರಣಾಸ್ತ್ರವ್ಯೂಹಂ ವ್ಯರ್ಥಮಿದೆಂದುತ್ಸಾಹಂಗುಂದುತ್ತೆ ಮದನನಂದಿಂತೆಂದಂ (ಗಿರಿಕ. ೮-೩೫). [ಸಂ.]

**ಉನ್ಮದನಬಾಣ** (ನಾ). = ಉನ್ಮಾದನ: ಮದನಂ ದಿವ್ಯಜ್ಞಾನಿಯ ನಿರದುಜಿ ಸರ್ವಜ್ಞನನುನ್ಮದನಬಾಣದಿಂ ತೆಗೆದೆಚ್ಚಂ (ಗಿರಿಕ. ೮-೨೬). [ಉನ್ಮದನ + ಬಾಣ]

**ಉನ್ಮದಾಳಿನಿ** (ನಾ). ಸೊಕ್ಕಿದ ಹೆಣ್ಣುದುಂಬಿ; ಮದವೇರಿದ ಹೆಣ್ಣುಭ್ರಮರ: ವಿಕಸಿತ ಶಾತಕುಂಭ ಸರಸೀರುಹವಕ್ತ್ರೆಯನುನ್ಮದಾಳಿನೀ ಚಿಕುರೆಯಂ ಮೃಗಾಕ್ಷಿಯಂ (ಸುಕುಮಾ. ೫-೫೫). [ಉನ್ಮದ + ಅಳಿನಿ (= ಅಲಿನಿ)]

**ಉನ್ಮದಿಷ್ಣು** (ನಾ). ಹುಚ್ಚು ಹಿಡಿದವನು; ಉನ್ಮತ್ತನಾದವನು: "ಪಿಶಾಚಾವೇಶ ಮೊದಲಾದುವುಗಳಿಂದ ಮೈಮೇಲೆ ಪ್ರಜ್ಞೆಯಿಲ್ಲದವನು" (ಅಮರ. ಟೀಕೆ). [ಸಂ.]

**ಉನ್ಮಧುಕೆ** (ನಾ). ದೊಡ್ಡ ಕಣಿಗಿಲು ಗಿಡ; ಹೆಗ್ಗಣಿಗಿಲು: "ದ್ವಿಪೆ ಉನ್ಮಧುಕೆ [ಪಾಠಾಂ. ೬. ಉನ್ಮದಿಕೆ, ಉನ್ಮಥಿಕೆ] ಪೆರ್ಗಣಿಗಿಲ್" (ಮಂಗರಾ. ೪೨-೩೬). [ಸಂ. ಉನ್ಮಧುಕಾ]

**ಉನ್ಮನ** (ನಾ). ೧. ಉತ್ಕಂಠತೆಯಿಂದ ಕೂಡಿದ ಮನಸ್ಸು; ಉದ್ರೇಕಗೊಂಡ ಮನಸ್ಸು: ಉನ್ಮನಮೆ ಮಾಟ್ಕುಮುತ್ಕೆಯನುಸ್ಥದ ಬರ್ಹಿಣ ಶಿಖಂಡಿಕೇಕಾವಿರುತಂ ತನ್ಮಧುರಧ್ವನಿಯುಂ (ಕಾವ್ಯಾವ. ೪೬೦); ಉನ್ಮನದ ರಾಜ್ಯದಲಿ ವಿಹರಿಸುವ ಎಳೆಯ ಜೀವವದು (ಸಮಷ್ಟೀ. ೭೬೧). ೨. ಕಾತರವಾದ ಮನಸ್ಸುಳ್ಳವನು; ಉತ್ಕಂಠತೆಯಿಂದ ಕೂಡಿದ ಮನದವನು. 'ಉನ್ಮನಾವಸ್ಥೆ' ಪರಾ.

ಉನ್ಮನವಾಗು = ಮನಸ್ಸಿಗೆ ಮಿಾರಿದ ಅವಸ್ಥೆಯಾಗು: ಸುಜ್ಞಾನದ ಪ್ರಜ್ವಲಿಸುವ ಪ್ರಭೆಯಲ್ಲಿ ಭಾವ ಬೆಳಗಿ ನಿರ್ಭಾವವಾಗುತ್ತದೆ. ಮನ ಮಹವನಿಂಬುಗೊಂಡು ಉನ್ಮನವಾಗುತ್ತದೆ (ಮೋಲಿಮಾ. ೩ ಪ್ರಸ್ತಾ). ಉನ್ಮನಳು = ಕಾತರಗೊಂಡ ಮನದವಳು; ವಿಮನಸ್ಕಳಾದವಳು: ಅವಳು ಉನ್ಮನಳಾಗಿ ಅವರಿಗಾಗಿ ಕಾಯುತ್ತಿದ್ದಳು (ಕಸ್ತೂರಿ. ೪-೬೫; 1964). [< ಸಂ. ಉನ್ಮನಸ್]

**ಉನ್ಮನಾವಸ್ಥೆ** (ನಾ). ಉನ್ಮನದ ಅವಸ್ಥೆ, —ಸ್ಥಿತಿ: ತೂಕತಪ್ಪಿದ ಅವನ ಮಾತಿಗೆ, ಅವನ ಈಗಿನ ಉನ್ಮನಾವಸ್ಥೆಯೇ ಕಾರಣವಿರಬೇಕು (ಪರಿಲ. ೫೮). [ಉನ್ಮನ + ಅವಸ್ಥೆ]

**ಉನ್ಮನಿ** (ನಾ). ೧. [ಯೋಗ] ಬ್ರಹ್ಮರಂಧ್ರಪ್ರದೇಶದ ಮೇಲುಭಾಗ; "ಸಹಸ್ರಾರ ಮತ್ತು ಭ್ರೂಮಧ್ಯ ಇವುಗಳ ನಡುವಣ ಭಾಗ" (ಅವಚಂ. ಕೋಶ); ಬಸವಣ್ಣನ ಗಳ ಮುಖ ಭ್ರೂಮಧ್ಯ ಉನ್ಮನಿ ಉತ್ತಮಾಂಗ ಪರಿಯಂತವು ಲಿಂಗಸ್ವರೂಪದೊಟ್ಟಿಲ ಕಂಡೆನಯ್ಯಾ (ಅವಚಂ. ೨೦೧-೯೦೭). ೨. [ಯೋಗ] ಯೋಗದಲ್ಲಿನ ಮೂರು ಅವಸ್ಥೆಗಳಲ್ಲಿ ಒಂದು: "ಉನ್ಮನೀ ಮನೋನ್ಮನೀ ಸಹಜೆಯೆಂಬವಸ್ಥಾತ್ರಯಮುಂ" (ವಿವೇಕ. ೧೫೪); ಸರ್ವಕರಣಂಗಳು ನಿವೃತ್ತಿಯಾಗಿ ಮನವುನ್ಮನಿಯಲ್ಲಿ ನಿಂದು ಸಮರಸ ಸಮಾಧಿಯಲ್ಲಿಯಿದ್ದನಯ್ಯಾ (ಪದಗೂ. ೨೬೪-೨೩೮); ಸಮುನಿಯೊಳು ವಿಷ್ಣು ಮತ್ತುನ್ಮನಿಯೊಳುಂ ನೀನೆ ವಿಮಲನ್ನಿರಂಜನಂ (ವಂಕಾರಾ. ೬-೫೮-೨೬). [ಸಂ. ಉನ್ಮನೀ]

**ಉನ್ಮಹಿಮ** (ನಾ). ಉನ್ನತವಾದ ಮಹಿಮೆಯುಳ್ಳವನು; ಮಹಾಮಹಿಮ: ಚಿನ್ಮಂಡನನುದ್ಘಟನುಜಿ ನಗೆ ಭಾಸ್ವನ್ಮುದದಿಂ ನೆತ್ತಮನಾಡುತೆ ಹಿಮಕೃನ್ಮುಖಿ ಕೇಳಲ್ ಪೇಳಿದನೋಹಿಲನುನ್ಮಹಿಮನ ಕಥೆಯಂ (ಉದ್ಭಟೇ. ೩ ಸೂಚನೆ). [ಸಂ.]

**ಉನ್ಮಾಥ** (ನಾ). ೧. "ಕೊಲ್ಲುವುದು" (ಅಮರ. ಟೀಕೆ). ೨. ಬೋನು: "ಉನ್ಮಾಥಃ, ಕೂಟಯಂತ್ರಂ, ನಿಯಂತ್ರಣಂ – ಈ ೩ ತಗವುದು [ಬಲೆ, ಬೋನು]" (ಹಲಾಯು. ೧೨೫-೯೭). [ಸಂ.]

**ಉನ್ಮಾದ** (ನಾ). ೧. ಹುಚ್ಚು; ಬುದ್ಧಿಭ್ರಮಣೆ: ಪ್ರಿಯಪುತ್ರವಾತ್ಸಲ್ಯಮಧುವಿನೊಳ್ ಮುಳುಗಿಮಿಂದಾ ನೃಪೋನ್ಮಾದವತಿವಿಷಮತೆಗೆ ನೆಗೆದುದಯ್ (ಶ್ರೀರಾಮಾ. ೧೦೦-೩). ೨. [ಕಾವ್ಯಮಿಾ] ಸಂಚಾರಿ ಭಾವಗಳಲ್ಲಿ ಒಂದು: ಮತಿ ಲಜ್ಜೆ . . . ಉನ್ಮಾದ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರೀಭಾವಂಗಳೆಂ (ವಿವೇಕ. ೨೨೭). ೩. ಒಂದು ಗಿಡದ ಹೆಸರು: "ಉಲಿಗನುನ್ಮಾದ [ಪಾಠಾಂ. ಉನಾಡ] ನಕ್ಕು" (ಮಂಗರಾ. ೩೬-೧೭). [ಸಂ.]

**ಉನ್ಮಾದಕಾರಿ** (ಗು). ಉನ್ಮಾದಕ್ಕೆ ಕಾರಣವಾದ; ಹುಚ್ಚನ್ನು ಉಂಟುಮಾಡುವಂಥ: ಹೃದಯದಲ್ಲಿ ಅದ ವಿಪ್ಲವದಂತೆ ಪಿಟೀಲಿನ ತಂತಿಗಳ ಮೇಲೆ ಹಿಡಿದ ಕಮಾನಿನಿಂದಾಗುತ್ತಿದ್ದ ಉನ್ಮಾದಕಾರಿ ನರ್ತನ (ವಾತ್ಸಲ್ಯ. ೪೯). [< ಸಂ. ಉನ್ಮಾದಕಾರಿನ್]

**ಉನ್ಮಾದನ** (ನಾ). ಕಾಮನ ಪಂಚಬಾಣಗಳಲ್ಲಿ ಒಂದು: ಉನ್ಮಾದನ ಮದನ ಮೋಹನ ಸಂತಾಪನ ವಶೀಕರಣವೆಂಬ ಪಂಚಮಂತ್ರ ಬಾಣ ಪ್ರಯೋಗ ಪ್ರತಾಪ ಪ್ರವೀಣರಿಂ (ವಿವೇಕ. ೨೩೦). [ಸಂ.]

**ಉನ್ಮಾದವಂತ** (ನಾ). ಹುಚ್ಚುಹಿಡಿದವನು; ಬುದ್ಧಿಭ್ರಮಣೆಯಾದವನು. [< ಸಂ. ಉನ್ಮಾದವತ್]

**ಉನ್ಮಾದಾವಸ್ಥೆ** (ನಾ). ಉನ್ಮಾದದ ಸ್ಥಿತಿ: ತಾಯಿ ಎತ್ತಿಕೊಂಡು ಸಂತೈಸಿದ ಮಗುವಿನಂತೆ ಕುವರನ ದುಃಖ ಊರ್ಧ್ವ ಉನ್ಮಾದಾವಸ್ಥೆಯಿಂದ ಅಧೋಮುಖವಾಯಿತು (ಶಾಂತಲಾ. ೧೮೭). [ಉನ್ಮಾದ + ಅವಸ್ಥೆ]

**ಉನ್ಮಾದಿ** (ನಾ). = ಉನ್ಮಾದವಂತ. [< ಸಂ. ಉನ್ಮಾದಿನ್]

**ಉನ್ಮಾದಿನಿ** (ನಾ). ಹುಚ್ಚಿ; ಬುದ್ಧಿಭ್ರಮಣೆಯಾದವಳು: ಯಶೋದೆ ಆ ಮಾತು ಕೇಳಿದೊಡನೆಯೇ ಉನ್ಮಾದಿನಿಯಂತೆ ಎದ್ದು ಕುಳಿತಳು (ವಾತ್ಸಲ್ಯ. ೩೨೮). [ಸಂ. ಉನ್ಮಾದಿನೀ]

**ಉನ್ಮಾನ** (ನಾ). ೧. ಮೇಲಕ್ಕೆತ್ತಿ ತೂಗುವುದು, —ಅಳೆಯುವುದು. ೨. ತೂಕ; ಅಳತೆ. ೩. ಬೆಲೆ; ಕ್ರಯ. [ಸಂ.]

**ಉನ್ಮಾರ್ಗ** (ನಾ). ೧. ಎತ್ತರವಾದ ದಾರಿ, —ಮಾರ್ಗ: ಸತತಂ ರಾಗಾವಿಳಂ ಪೀಡಿತಕುವಲಯನುನ್ಮಾರ್ಗಸಂಸಕ್ತಂ . . . ಖರದಂಡಪ್ರಿಯಂ ತಾನೆನಿಪ್ಪಾ ಕ್ಷಿತಿಪಂಗೆನ್ನಂದದಿಂ ಸಮನಿಸುಗುಮಧಃಪಾತಮಸ್ತಾಬ್ಧಿಯೊಳ್ ನಿಶ್ಚಿತಮೆಂಬಂತಾ ಪ್ರತೀಚೀಜಲಧಿಗಿಱಿದನಂಭೋಜಿನೀಜೀವಿತೇಶಂ (ಚಂದ್ರಪ್ರ. ೨-೯೫). ೨. ತಪ್ಪುದಾರಿ; ಕೆಟ್ಟಮಾರ್ಗ. [ಸಂ.]

**ಉನ್ಮಾರ್ಗಗಾಮಿ** (ನಾ). ತಪ್ಪುದಾರಿಯಲ್ಲಿ ನಡೆಯುವವನು; ಕೆಟ್ಟಮಾರ್ಗದಲ್ಲಿ ಹೋಗುವವನು: ಉನ್ಮಾರ್ಗಗಾಮಿಯೂ, ವ್ಯಸನಾಸಕ್ತನೂ ದುಶ್ಚರಿತನೂ ಆದ ಹಣಗಾರನಿಗೆ ಯಾವ ಯಾವ ವ್ಯಾಧಿಗಳು ಸಂಭವಿಸಬಹುದೋ (ಚಿನ್ನಬೀ. ೩೯). [< ಸಂ. ಉನ್ಮಾರ್ಗಗಾಮಿನ್]

**ಉನ್ಮಾರ್ಗತೆ** (ನಾ). ೧. ಮಾರ್ಗವನ್ನು ಅತಿಕ್ರಮಿಸುವುದು. ೨. ತಪ್ಪುದಾರಿಯಲ್ಲಿ ನಡೆಯುವುದು. ೧, ೨: ಉನ್ಮಾರ್ಗತೆ ಜಾತ್ಯಶ್ವಂಗಳೊಳ್ ವಕ್ರಚಾರಂ ಸರ್ಪಂಗಳೊಳ್ . . . ಅಕ್ಕುಂ (ಜಗವಿ. ೨-೧೪). [ಸಂ. ಉನ್ಮಾರ್ಗತಾ]

**ಉನ್ಮಾರ್ಗಿ** (ನಾ). = ಉನ್ಮಾರ್ಗಗಾಮಿ : ತಗದೆನಗುನ್ಮಾರ್ಗಿಗೆ ಕೂಸು ಗುಡಲ್ ದಶಕಂಧರಂ ಮದಾಂಧಂ ಧರ್ಮಾನುಗನಲ್ಲನನುಜೆಯ್ಂ ಕುಡೆ ತೆಗಟಿಹದೊಳ್ ಪರದೊಳಿನಗೆ ಪಾತಕಮಕ್ಕುಂ (ಪಂರಾಮಾ. ೧೦–೧೭೦). [< ಸಂ. ಉನ್ಮಾರ್ಗಿನ್]

**ಉನ್ಮಾರ್ಜನ** (ನಾ). ತಿಕ್ಕುವುದು ; ಉಜ್ಜುವುದು ; ತೊಳೆಯುವುದು : ಒಳ್ಪೊತ್ತು ನಿಂದುಣ್ಬುದಾರಯಮಸ್ನಾನಮಚೇಳಸಂಯಮ ಮದಂತೋನ್ಮಾರ್ಜನಂ ಧಾರಿಣೀಶಯನಂ ರೋಜೆನಿಸಿರ್ದ ಮೂಲಗುಣ ಮಿರ್ಪತ್ತೆಂಟುಮಮಂ ತಾಳ್ದಿದಂ (ಸುಕುಮಾ. ೩–೪೭). [ಸಂ.]

**ಉನ್ಮಾಳ** (ನಾ). ಕೀಳು ತರಗತಿಯ ಧಾನ್ಯ ; ಹಾರಕ : "ಉನ್ಮಾಳಃ, ಕೋದ್ರವಃ, ಕೋರದೂಷಕಃ — ಈ ೩ ಹಾರಕು" (ಹಲಾಯು. ೯೫–೪೨೭) ; "ಉನ್ಮಾಳ [ಪಾಠಾಂ. ನ್ಮಾಳ] ಮಾ ಕೋದ್ರವಂ ಹಾರಕು" (ಮಂಗರಾ. ೧೧೧–೪). 'ಉನ್ನಾಳ' ಪರಾ. [ಸಂ.]

**ಉನ್ಮಿಶ್ರ** (ಗು). ಮಿಶ್ರಣವಾದ; ಕಲಬೆರಕೆಯಾದ : ಚಂದನ ದ್ರವೋನ್ಮಿಶ್ರಜಲಂಗಳ ಪೊಳೆವಿನೊಳೆಸೆದು ವಿಯತ್ತಳಂಬರಂ ನೆಗೆದು ದಿಂದ್ರನರ್ಘೋದ್ಧರಣಂ (ಆದಿಪು. ೭–೭೯). [ಸಂ.]

**ಉನ್ಮಿಷಿತ** (ಗು). (ಕಣ್ಣು) ತೆರೆದ; ಅರಳಿದ; ವಿಕಾಸಹೊಂದಿದ : ತಳೆದನಿಮಿಷವಧುಗಳ್ ಕಣ್ಗೊಳಿಸಿದರುನ್ಮಿಷಿತ ಕರ್ಣಿಕಾರ ಲತಾಸಂಕುಳ ಮೆನೆ ಸುವರ್ಣಮಯ ಪರಿಮಳಮಂ ಭಕ್ಷ್ಯೋಪದಂಶ ಚರುವಿಲಸಿತಮಂ (ಪಂರಾಮಾ. ೧೩–೯೧). [ಸಂ.]

**ಉನ್ಮೀಲ** (ನಾ). = ಉನ್ಮೀಲನ : ನೇತ್ರೋನ್ಮೀಲನಿಮಿಾಲನ ಮಾತ್ರದೆ ನರಸುರವಿಭೇದಮಾಯ್ತು (ಅಜಿಪು. ೫–೪೭). [ಸಂ.]

**ಉನ್ಮೀಲನ**, ಉನ್ಮೀಳನ (ನಾ). ತೆರೆಯುವಿಕೆ; ಅರಳುವಿಕೆ; ವಿಕಾಸ : ಘನಶೌರ್ಯಾನಲಧೂಮವಲ್ಲಿ... ವಪುರಾಲೇಖ್ಯ [ಪ್ರಭೋನ್ಮೀಲನಾಂ] [ಪಾಠಾಂ. ಪಭೋನ್ಮೀಳನಾಂ] ಜನರುಗ್ಗೀಟಿ (ಕಾದಂಉ. ೪೧೧).

**ಉನ್ಮೀಳನ** : ಉನ್ಮೀಲನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ಉನ್ಮೀಲನಗೊಳ್ಳು** (ಕ್ರಿ). ತೆರೆ; ವಿಕಾಸಹೊಂದು ; ಅರಳು : ಚಿತ್ತಾಕರ್ಷಕವಾದ ತರುಣವ್ಯಕ್ತಿಯನ್ನು ಕಂಡ ಕೂಡಲೆ ಉನ್ಮೀಲನಗೊಂಡಿದ್ದ ಭಾವಾಲೋಚನೆಗಳ ನೂತನ ಕೌತುಕಪ್ರಪಂಚ ಅವಳ ಸ್ಮೃತಿಪಟಲದ ಮೇಲೆ ಗೊಂಚುಗೊಂಚಾಗಿ ಗೋಚರಿಸಿತು (ಪುನರು. ೧೯೩). [ಉನ್ಮೀಲನ + ಕೊಳ್ಳು (< ಕೊಳ್$_1$)]

**ಉನ್ಮೀಲಿತ**, ಉನ್ಮೀಳಿತ (ಗು). ೧. ತೆರೆದ ; ಅರಳಿದ ; ವಿಕಾಸವಾದ. (ನಾ). ೨. [ಕಾವ್ಯಮಿ] ಒಂದು ಅಲಂಕಾರ : "ಒಂದು ಪದಾರ್ಥವು ತನಗೆ ಸದೃಶವಾದ ಪದಾರ್ಥದಲ್ಲಿ ಐಕ್ಯವನ್ನು ಪಡೆದಿರುವಾಗ ಕಾರಣಾಂತರದಿಂದ ಭೇದಸ್ಫೂರ್ತಿ ಉಂಟಾದಲ್ಲಿ ಮಿಾಲಿತಕ್ಕೆ ಪ್ರತಿದ್ವಂದ್ವಿಯಾದ ಉನ್ಮೀಲಿತಾಲಂಕಾರವಾಗುವುದು." ಲಕ್ಷ್ಯ : ಮುಸುಕೆ ಹರಿಕಾಂತಿ ನೀಲೀವಸನಂ ಸ್ಪರ್ಶಾನುಮೇಯಮಾದುದು ರಾಮುಂಗಸಿತಾಂಬರಮಂ ಮಜಿ ವಿಡಿದ ಸುವರ್ಣದ ವಿಧ್ಧದಂತಿರುದ್ಧವನೆಸೆದಂ (ಕೈಪಿಡಿ. ೨೮೭).

**ಉನ್ಮೀಳಿತ** : ೧. ಸುಖ ನಿಮಿಾಳಿತೋನ್ಮೀಳಿತ ನಯನಂಗಳಿಂ ಮುಕುಳಿತಮುಂ ಕುಸುಮಿತಮುಮಾದ ನಿಶ್ವಾಸಪವನನಿಂ ಪರಿಮಳಮಂ ಬೀಜುವ ವಧೂವರರಾಗವಿಷಯವಲ್ಲರಿ ಫಲಿತಮಾದುದು (ಜಗವಿ. ೨–೫೨ ವ). [ಸಂ.]

**ಉನ್ಮೀಲಿತನಯನ** (ನಾ). ೧. ಅರಳಿದ ಕಣ್ಣು. ೨. ಎಚ್ಚರಗೊಂಡವನು : ಮಂಗಳವೃತ್ತೋಚ್ಚಾರಣೆಗಳಿಂದಂ ಪಾಂಡವರಯ್ವರುಮುನ್ಮೀಲಿತನಯನರಾಗಿ ನಿತ್ಯನಿಯಮಂಗಳಂ ನಿರ್ವರ್ತಿಸಿ (ಪಂಪಭಾ. ೨–೯೩ ವ). [ಉನ್ಮೀಲಿತ + ನಯನ]

**ಉನ್ಮೀಲಿಸು**, ಉನ್ಮೀಳಿಸು (ಕ್ರಿ). ೧. ಅರಳು ; ಪ್ರಕಟವಾಗು ; ವಿಕಾಸಗೊಳ್ಳು : ವಕ್ಷದೊಳುನ್ಮೀಲಿಸೆ ಕೌಸ್ತುಭಮಣಿರುಗ್ಜಾಲಂ ವನಮಾಲಿ ಸಿಂಹಪೀಠದೊಳಿರ್ದಂ (ಜಗವಿ. ೧೮–೧). ೨. ಹೆಚ್ಚು ; ಅಭಿವೃದ್ಧಿ ಹೊಂದು ; ಏಳಿಗೆಹೊಂದು : ಏಳಿಸುವುದುಂ ಚರರಿಂದಜಿದುಗ್ರ ಕೋಪಮುನ್ಮೀಳಿಸೆ (ಪಂರಾಮಾ. ೧೦–೧೩೫).

**ಉನ್ಮೀಳಿಸು** : ೧. ಮೆಲ್ಲುಯ್ಯುತ್ತಿನಿಂದೊಂದಿದ ಹೃದಯಮುಷಸ್ಸಂಗ ಪದ್ಮಂಬೋಲುನ್ಮೀಳಿಸೆ [ಪಾಠಾಂ. ಉನ್ಮೀಲಿಸೆ] (ಕಾದಂಉ. ೭೪೯). ೨. ಉರಗಾರಾತಿಗೆ ತನ್ನ ನಿತ್ತು ಭುಜಗಪ್ರಾತಂಗಳಂ ಕಾದನನ್ತರವುನ್ಮೀಳಿಸಿದಂ ಮದಿೀಯಕುಲ ಸಂಜಾತಂ ದಲೆಂದಜ್ಞಪಜ್ಞರ ಪಂಪಿಂದಮೆ ಪೊಂಗುತಿರ್ದ್ದಪನೆ ತಾನ್ (ಎಇ. XXVII, ೧೫–೩೦ ; 1114). [ಉನ್ಮೀಲನ + –ಇಸು$_1$]

**ಉನ್ಮೀಳನ** 'ಉನ್ಮೀಲನ' ನೋ.

**ಉನ್ಮೀಳಿತ** 'ಉನ್ಮೀಲಿತ' ನೋ.

**ಉನ್ಮೀಳಿಸು** 'ಉನ್ಮೀಲಿಸು' ನೋ.

**ಉನ್ಮುಕ್ತಿ** (ನಾ). ಬಿಡುಗಡೆ; ನಿರ್ಬಂಧವಿಲ್ಲದಿರುವುದು ; (ತೆರಿಗೆ ಮುಂತಾದುವುಗಳಿಂದ) ವಿನಾಯಿತಿ : ಉಪರಾಷ್ಟ್ರಪತಿಯವರು . . . ರಾಷ್ಟ್ರಪತಿಯವರ ಸಮಸ್ತ ಶಕ್ತಿಗಳನ್ನು ಮತ್ತು ಉನ್ಮುಕ್ತಿಗಳನ್ನು ಪಡೆದಿರತಕ್ಕುದು (ಭಾಧಾನ. ೩೨). [ಸಂ.]

**ಉನ್ಮುಖ** (ಗು). ೧. ಮೇಲಕ್ಕೆತ್ತಿದ ಮುಖವುಳ್ಳ ; ಮೇಲುಮುಖನಾದ : "ಉತ್ಪಶ್ಯಃ, ಉನ್ಮುಖಃ – ಈ ೨ ಮುಸುಡನುದ್ದವೆತ್ತಿಕೊಂಡಿರ್ಪವಂ" (ಹಲಾಯು. ೭೩–೭೩೦) ; ಆತನೆನಗೆ ಮಜುವಾತುಗುಡದುನ್ಮುಖನಾಗಿ (ಕಾದಂಪೂ. ೯೪೧). ೨. ಅಭಿಮುಖವಾದ ; ತನ್ನ ಕಡೆಗೆ ತಿರುಗಿದ : ಶೃಂಗಾರರಸದ ಅಂಗಗಳ ಮೂಲಕ ಜನರನ್ನು ಮೊದಲು ಉನ್ಮುಖರನ್ನಾಗಿ ಮಾಡಿಕೊಂಡರೆ (ಧ್ವನ್ಯಾಲೋ. ೧೮೯). ೩. ಕಾತರನಾದ ; ಆತುರನಾದ : ದಶಮುಖನುನ್ಮುಖನಳಿಪಿಂ ಶಶಿಮುಖಿಯಂ . . . ಉಯ್ದಂ (ಪಂರಾಮಾ. ೯–೧೦೨). ೪. ಸನ್ನದ್ಧವಾದ ; ಸಿದ್ಧವಾಗಿರುವ : ವಾರಾಣಸಿಯೊಳು ಗದಾಧರನ ದೇಗುಲದೊತ್ತಿನಲಿ ಸಭೆವೆರಸಿ ಕುಳ್ಳಿತು ತರ್ಕದುನ್ಮುಖರಾಗಿ ಕರೆಸಿದೊಡೆ . . . ನಡೆತರಲ್ (ಬಸವು. ೫೩–೫೮). (ನಾ). ೫. ಒಬ್ಬಾತನ ಹೆಸರು : ನಿಜವಲ್ಲಭನ ರಾಜಗೃಹಮಂ ಬಿಟ್ಟು ಪೋದಳಾ ಜ್ವಾಲೆಯುನ್ಮುಖನೆಂಬ ತಮ್ಮನೆಡೆಗೆ (ಜೈಮಿಭಾ. ೯–೨೦).

ಉನ್ಮುಖವಾಗು = ಮೇಲುಮುಖವಾಗು ; ಮೇಲೇಳು ; ಎದ್ದು ಕಾಣಿಸಿಕೋ : ವೈದ್ಯನು ಅತಿಥಿಯಾಡಿದ ಮಾತನ್ನು ಕೇಳಿ ಮರ್ಮಾಹತನಾಗಿ ಉನ್ಮುಖವಾಗುತ್ತಿದ್ದ ಮಾನಸಿಕ ಚಾಂಚಲ್ಯವನ್ನು ಅತಿಪ್ರಯಾಸದಿಂದ ಅಡಗಿಸಿಕೊಂಡು (ಬೆನ್ನಬೇ. ೩೦). [ಸಂ.]

**ಉನ್ಮುಖವಡೆ** (ಕ್ರಿ). ಮೇಲುಮುಖವಾಗು : ನೀರೊಳು ನೆನೆದಾಗ ಬಿಗುಹೇಜಿ ವೃತ್ತಾಕಾರದೊಳುನ್ಮುಖವಡೆದು ಚಾರುತರದ ಮೊಲೆ ಮೆಜಿದುವು ಮೇಲಕ್ಕೆ ಪಾಜುವ ಕೋಕಗಳಂತೆ (ಕಂನವಿ. ೨೫–೧೩೨). [ಉನ್ಮುಖ + ಪಡೆ$_1$]

**ಉನ್ಮೂಲನ** (ನಾ). ಬುಡಸಹಿತ ಕಿತ್ತುಹಾಕುವಿಕೆ ; ಮೂಲೋತ್ಪಾಟನ; ನಿರ್ಮೂಲನ : ಕುರುರಾಜಾನುಜಮಹಾಮಹೀಜ ಮೂಲೋನ್ಮೂಲನ ಪ್ರಳಯಪ್ರಭಂಜನನುಂ (ಗದಾಯು. ೨–೧೮ ವ). [ಸಂ.]

**ಉನ್ಮೂಲಿತ**, ಉನ್ಮೂಳಿತ (ಗು). ಬೇರುಸಹಿತ ಕೀಳಲ್ಪಟ್ಟ ; ಮೂಲೋತ್ಪಾಟನ ಮಾಡಿದ : ಪೃಥುಸತ್ವಂ . . . ಮನೋರಥನುನ್ಮೂಲಿತಶತ್ರುವರ್ಗನನುರಕ್ತಾಶೇಷತಂತ್ರಂ (ಚಂದ್ರಪು. ೯–೯೮).

**ಉನ್ಮೂಳಿತ** : "ಆಬರ್ಹಿತಂ, ಉನ್ಮೂಳಿತಂ, ಉತ್ಪಾಟಿತಂ, ಉದ್ಧೃತಂ – ಈ ೪ ಕಿಱಲ್ಪಟ್ಟುದು" (ಹಲಾಯು. ೧೧೮–೨೭). [ಸಂ.]

**ಉನ್ಮೂಲಿಸು,** ಉನ್ಮೂಳಿಸು (ಕ್ರಿ). ಬೇರುಸಹಿತ ಕಿತ್ತುಹಾಕು; ಮೂಲೋತ್ಪಾಟನ ಮಾಡು; ನಿರ್ಮೂಲಿಸು. **ಉನ್ಮೂಳಿಸು:** ಪಾಳಿಸುತುಂ ಧರ್ಮಮನುನ್ಮೂಳಿಸುತುಂ ದ್ರೋಹರಂ (ಪುಷ್ಪಪು. ೫–೫೪). [ಉನ್ಮೂಲನ + –ಇಸು₃]

**ಉನ್ಮೂಳಿತ** 'ಉನ್ಮೂಲಿತ' ನೋ.

**ಉನ್ಮೂಳಿಸು** 'ಉನ್ಮೂಲಿಸು' ನೋ.

**ಉನ್ಮೇಷ** (ನಾ). ಕಣ್ಣು ತೆರೆಯುವಿಕೆ; ವಿಕಾಸ: ನಿಜನಿಮೇಷೋನ್ಮೇಷ ಮಾತ್ರಂ ಜಗತ್ತ್ರಯ ಸೃಷ್ಟಿಕ್ಷಮನಾದ ಕೃಷ್ಣನ ಮಹತ್ತ್ವಕ್ಕೇನಿದಾಶ್ಚರ್ಯಮೇ (ಜಗವಿ. ೩–೬೭); ಆನಂದದ ಉನ್ಮೇಷದಲ್ಲಿ ಮೈಮರೆತು (ಇಪ್ಪಕ. ೨೯೧). [ಸಂ.]

**ಉನ್ಮೋದ** (ನಾ). ಹೆಚ್ಚಾದ ಸಂತೋಷ; ಅತಿಶಯಾನಂದ: ಬೆಳ್ದಿಂಗಳನ್ನೀಂಟಿ ತೇನೆ ತಾನುನ್ಮೋದದಿಂ ಹಾರಾಡಿ ಮಿಾಟುತಿರಲಾಕಾಶಮಂ (ಶ್ರೀರಾಮಾ. ೧೨–೩೨೨). [ಸಂ.]

**ಉನ್ಮೌಲಿ** (ನಾ). ಉತ್ತಮವಾದ ಕಿರೀಟ: ಉನ್ಮೌಲಿ ವಿಭಾಸ್ವನ್ಮಣಿರುಚಿರೋಚಿನ್ಮಂಜುಲಪಾದಾಬ್ಜಂಗಗಜಾಹ್ವನ್ಮರುತಪಥೋದ್ಯನ್ಮಹಿರಂಗೆ ಸುಹೃನ್ಮುಖಮುಕುರಂಗೆ (ಉದ್ಭದೇ. ೬–೨೭). [ಸಂ.]

**ಉಪ** (ನಾ). ಉಪಚಾರ: ಎಷ್ಟುವುಪವೆಷ್ಟು ಪೂಜೆಯನೆಸ್ಟ್ ಮಾಡಲುಂ ಕಟ್ಟಕಡೆಯಲ್ಲಿ ತನು ಲಿಂಗದೊಳು ಬೆರವನಿಷ್ಟಸಿದ್ಧಾಂತಿಗಿದಿರಿಲ್ಲಾ (ಗುರುಬೋ. ೧೯೦–೭೪). [< ಸಂ. ಉಪಚಾರ]

**ಉಪಕಂಠ** (ನಾ). ೧. ಕೊರಳಿನ ಬಳಿ. ೨. ಸಮಿಾಪ ಪ್ರದೇಶ; ನೆರೆಹೊರೆ: ಪರ್ವತದ ವಿಪುಳವನೋಪಕಂಠಂಗಳೊಳ್ ತಾಪಸಕನ್ಯೆಯರ್ ನಡಪಿದೆಳಲತೆಗಳೊಳೆಜಗಿ (ಪಂಪಭಾ. ೧–೧೧೫); ಕುಂಭಿನೀಕಾಂತನಾವನೋಪಕಂಠಮಂ ಮುಟ್ಟವರೆ (ರಾಜಶೇ. ೧೦–೧೪ ವ). ೩. ಕುದುರೆಯ ಓಟದಲ್ಲಿ ಒಂದು ಬಗೆ: ಬಿಂಕಂಬಡೆದುದು ವಿಕ್ರಮಮುಂಕಿತಮುಪಕಂಠಮುಪಜಮುಪಜವಮೆಂಬಯ್ದುಂ ಕಣ್ಗೊಳಿಸುವ ಧಾರೆಗಳಿಂ ಕುದುರೆಯ ಕಾಲ್ಗೆ ಕೋಡಗಜಿಯೊಳವಕ್ಕುಂ (ಮಲ್ಲಿಪು. ೯–೩೭). [ಸಂ.]

**ಉಪಕಥೆ** (ನಾ). ಮುಖ್ಯವಾದ ಕಥೆಯ ನಡುವೆ ಬರುವ ಸಣ್ಣ ಕಥೆ; ಅಡ್ಡಕಥೆ: ಹರಿಕಥೆಯಲ್ಲಿ ಉಪಕಥೆಯೂ ಇರಬೇಕು (ರೂಢಿ). [ಸಂ. ಉಪಕಥಾ]

**ಉಪಕರ** (ನಾ). ಮುಖ್ಯವಾದ ತೆರಿಗೆಗಳಲ್ಲದೆ ಬೇರೆಯಾದ ತೆರಿಗೆ; ಸಣ್ಣ ತೆರಿಗೆ: ವಿಧಿವತ್ತಾಗಿ ವಿಧಾಯಕವಾಗುತ್ತಿದ್ದ ಯಾವುದಾದರೂ ಕರಗಳು, ಶುಲ್ಕಗಳು, ಉಪಕರಗಳು . . . ವಿಧಾಯಕವಾಗುತ್ತ ಬರತಕ್ಕದ್ದು (ಭಾಧಾಸ. ೧೫೪). [ಸಂ.]

**ಉಪಕರಣ** (ನಾ). ೧. ಉಪಕಾರ; ಸಹಾಯ. ೨. (ಕೆಲಸ ಮಾಡಲು ಬೇಕಾದ) ಸಾಧನ; ಸಲಕರಣೆ; ಮುಟ್ಟು: "ಉಪಕರಣಂ, ಪರಿಬರ್ಹಃ, ಪರಿಚ್ಛದಂ—ಈ ೩ ಉಪಕರಣಂ" (ಹಲಾಯು. ೫೧–೧೫೧); ಉಪಕರಣವೆನಿಪ ಕೋದಂಡಪಾಣಿಗಳ್ ದಂಡಪಾಣಿಗಳ್ಗೆಣೆಯೆನೆ ತಳರ್ದರ್ (ಶಂರಾಮಾ. ೮–೫೧); ಕಾರ್ಯಕ್ಕೆ ನೆರವಾಗತಕ್ಕ ಉಪಕರಣಗಳನ್ನೂ ತಿಳಿದವರಾಗಿರಬೇಕು (ಶಿಕ್ಷದ. ೧೩೭). ೩. (ರಾಜನ) ಪರಿವಾರ. [ಸಂ.]

**ಉಪಕರಣಗೆಯಿ** (ನಾ). ಉಪಕರಣಕ್ಕಾಗಿ ಕೊಟ್ಟ ಗದ್ದೆ,—ದಾನ ಮಾಡಿದ ಗದ್ದೆ: ಮಾದಗೆಯಿ ಮ ೧೨ ಉಪಕರಣಗೆಯಿ ಮ ೧೦(ಸೌಇಇ. XX, ೨೨೬–೧೬; 1306). [ಉಪಕರಣ + ಕೆಯಿ (< ಕೆಯ್₄)]

**ಉಪಕರಣೆ** (ನಾ). ಪೂಜಾಪಾತ್ರೆ: ಅಲ್ಲಿ ಎಲೆ ಗೋಮೆ ಉಪಕರಣೆ ಸುತ್ತಲಿನ ಕೆಲಸವೇ ಬೇಕಾದ ಹಾಗಿರುತ್ತೆ ಎಂದಳು (ಕೀಲುಗೊಂ. ೩೩). [ಸಂ. ಉಪಕರಣ]

**ಉಪಕರಿಸು** (ಕ್ರಿ). ಉಪಕಾರಮಾಡು; ಸಹಾಯವೆಸಗು; ನೆರವು ನೀಡು: ನೀನಿನಿತು ಕಾಲಮುದ್ಯಮಹೀನನೆಯಾಗಿರ್ದೆಯದಜಿನಾಮುಂ ನಿನಗಂತೇನುಮುಪಕರಿಸಲಜಿಯೆಮೆ (ಪಂಚತಂ. ೧೯೧–೫); ಉಪಕರಿಸಿದುದು ಮೃತ್ಯುವಿಗೆ ಕಡು ಕೃಪೆಯಮಾಡಿತು (ತೊರರಾ. ೬–೩೨–೨೧). [ಉಪಕರಣ + –ಇಸು₃]

**ಉಪಕಲ್ಪ** (ನಾ). [ವೀಶೈ] ವಿಭೂತಿಯನ್ನು ಸಿದ್ಧಪಡಿಸುವ ಒಂದು ವಿಧಾನ: "ಸಮಸ್ತ ಭಸಿತಂಗಳಾದೊಡೆ ಕಲ್ಪ ಅನುಕಲ್ಪ ಉಪಕಲ್ಪ ಅಕಲ್ಪವೆಂದು ನಾಲ್ಕು ತೆಜಂ . . . ಮೊದಲು ದಹನಮಾಗಿರ್ದುದನೇ ವಸ್ತ್ರದಿಂ ಶೋಧಿಸಿ ಗೋಮೂತ್ರದಿಂ ಕಲಸಿ ಉಂಡೆಯಂ ಮಾಡಿ ಪೂರ್ವೋಕ್ತವಿಧಿಯಿಂ ಪಚಿಸಿ ಮಾಡಿಕೊಂಬುದೇ ಉಪಕಲ್ಪವೆನಿಸುವುದು" (ವಿವೇಕ. ೭೫). [ಸಂ.]

**ಉಪಕಲ್ಪಭಸ್ಮ** (ನಾ). [ವೀಶೈ] ಉಪಕಲ್ಪದಿಂದ ಮಾಡಿದ ಭಸ್ಮ, —ವಿಭೂತಿ: "ಭಸ್ಮದ ಉಂಡೆಗಳನ್ನು ತಂದು ಪುಡಿಮಾಡಿ ವಸ್ತ್ರದಿಂದ ಶೋಧಿಸಿ ಮರಳಿ ಗೋಮೂತ್ರದಿಂದ ತೋಯಿಸಿ ಉಂಡೆಯನ್ನು ಮಾಡಿ ಆನಂತರ ಮೊದಲಿನಂತೆ ಶಿವಾಗ್ನಿಯಿಂದ ದಹಿಸಲ್ಪಟ್ಟ ಭಸ್ಮವೇ ಉಪಕಲ್ಪ ಭಸ್ಮವು" (ಅಷ್ಟಾವಿ. ೬೩). [ಉಪಕಲ್ಪ + ಭಸ್ಮ]

**ಉಪಕಸಬು** (ನಾ). ಮುಖ್ಯವಾದ ಕಸಬಿನ ಜೊತೆಗೆ ಮಾಡುವ ಸಣ್ಣ ಕಸಬು; ಅಡ್ಡಗಸಬು: ಉಪಕಸಬು ಮೂಲಕಸಬಿಗೆ ಮಾರಿ (ರೂಢಿ). [ಉಪ₀ + ಕಸಬು]

**ಉಪಕಾರ** (ನಾ). ೧. ಸಹಾಯ; ಸಹಕಾರ; ಅನುಕೂಲ; ನೆರವು: ಉಪಕಾರವಂ ಮಾಡಿದ ಸಜ್ಜನನಲ್ಲಿಯಾದೊಡಂ ನೀಚನಾಗಿರ್ದಪನಪಕಾರವನೇ ಮಾಡಲುದ್ಯೋಗಿಸುವಂ (ಪಂಚತಂ. ೧೦೭–೭); ನಿಜದಿನೊಳ್ಪಿದರಪ್ಪವರೆಂತು ಬಾಧೆವಟ್ಟೊಡಮುಪಕಾರಮಂ ಪೆಜರ್ಗೆ ಮಾಡದೆ ಬಾಧೆಯನೇಕೆ ಮಾಡುವರ್ (ಶಂರಾಮಾ. ೭–೭೯); ಉಪಕಾರಕ್ಕೆ ಅಪಕಾರ ಮಾಡಿದ ಹಾಗೆ (ಗಾದೆ); ಊರು ಉಪಕಾರವರಿಯದು, ಹೆಣ ಸಿಂಗಾರವರಿಯದು (ಗಾದೆ). ೨. ಉಪಕಾರಮಾಡುವವನು; ಸಹಾಯಕ: ಜೀವಾದಿ ಸಪ್ತತತ್ತ್ವವನು ಜೀವಹಿತಾರ್ಥ ನಿರೂಪಿಸಿದವನು ಜಿನದೇವನಿಂದುಪಕಾರರುಂಟೆ (ಭರಚ. ೩೮–೨).

ಉಪಕಾರ ತಿಳಿ = ಸಹಾಯವನ್ನು ನೆನಸಿಕೊ (ಕ್ರಿ). ಉಪಕಾರ ಮಾಡು = ಉಪಕಾರಂಗೆಯ್: ಉಪಕಾರಮಾಡುವವರಿಗೆ ಅಪಕಾರ ಮಾಡಬೇಡ (ರೂಢಿ). [ಸಂ.]

**ಉಪಕಾರಂಗೆಯ್** (ಕ್ರಿ). ಸಹಾಯಮಾಡು; ನೆರವು ನೀಡು: ಮತ್ತೆನಗಾರ್ ಬಂಧುಗಳಾರ್ ಸಹಾಯರುಪಕಾರಂಗೆಯ್ವರಾರಿರ್ದಪರ್ (ಕಾದಂಪೂ. ೮೬೬). [ಉಪಕಾರ + ಗೆಯ್ (< ಕೆಯ್₁)]

**ಉಪಕಾರವರಿ** (ಕ್ರಿ). ಮಾಡಿದ ಸಹಾಯವನ್ನು ನೆನೆ, —ತಿಳಿ: ಉಪಕಾರವರಿತವ ಕೃತಜ್ಞ, ಅರಿಯದವ ಕೃತಘ್ನ (ರೂಢಿ). [ಉಪಕಾರ + ಅರಿ₁ (< ಅಜಿ₁)]

**ಉಪಕಾರಿ** (ನಾ). ಸಹಾಯಮಾಡುವವನು; ನೆರವು ನೀಡುವವನು: ಅಪರಾಜಿತನಿನಿಸೆ ಗಂಧದ್ವಿಪಂ ಮೊಗಂದಿರಿದು ತನ್ನ ಬಲಮನೆ ತುಱಿದತ್ತುಪಕಾರಿಗೆ ಮದದೂಷಿತನಪಕಾರಂಗೆಯ್ವನೆಂಬುದೊಂದಚ್ಚರಿಯೇ (ಶಾಂತಿಪು. ೮–೨೦); ಜಗದೊಳುಪಕಾರಿಯಾದವಂ ತನ್ನ ನೋವಂ ನೋಳ್ಪನೇ (ಜೈಮಿಭಾ. ೧೯–೩೫); ಮನೆಗೆ ಮಾರಿ ಪರರಿಗುಪಕಾರಿ (ಗಾದೆ).

ಉಪಕಾರಿಯಾಗು = ಸಹಾಯವಾಗು; ನೆರವಾಗು: ತೋಳೊಳಗೆ ನೆಗ್ಗೊತ್ತಿ ಮಿಗೆ ಕಾಳಾಳ ತೊತ್ತಳದುಳಿದು ಕಾಲನ ಗೂಳೆಯಕ್ಕುಪಕಾರಿಯಾದುದು ಸುಪ್ರತೀಕ ಗಜ (ಕುವ್ಯಾದ್ರೋ. ೩–೧೫). [< ಸಂ. ಉಪಕಾರಿನ್]

**ಉಪಕಾರಿಕೆ** (ನಾ). ೧. ಉಪಚಾರಿಕೆ; ಸೇವಕಿ; ದಾಸಿ. ೨. ಅರಸನ ಬಿಡಾರ; ಅರಮನೆ: "ಉಪಕಾರ್ಯಾ, ಉಪಕಾರಿಕಾ – ಈ ೨ ಅರಸುಗಳ ಬಿಡಾರಂ" (ಹಲಾಯು. ೪೮–೧೩೫); "ಅರಸುಗಳ ಬೀಡುಮುಪಕಾರಿಕೆಯೆನಿಕ್ಕುಂ" (ಮಂಗರಾ. ೫೬–೪). [ಸಂ. ಉಪಕಾರಿಕಾ]

**ಉಪಕಾರ್ಯ** (ನಾ). = ಉಪಕಾರಿಕೆ ೨: "ಉಪಕಾರ್ಯಾ, ಉಪಕಾರಿಕಾ – ಈ ೨ ಅರಸುಗಳ ಬಿಡಾರಂ" (ಹಲಾಯು. ೪೮–೧೩೫); ಪೊಬಲ ಪೂರ್ವದಿಗ್ಭಾಗಂಗಳೊಳ್ ಶಿಬಿರ ನಿವೇಶೋಪಕಾರ್ಯಾ ವಿರಚನ ಪರರಾಗಿ (ಶಾಂತಿಪು. ೧೦–೧೨೩ ವ). [ಸಂ. ಉಪಕಾರ್ಯಾ]

**ಉಪಕುಂಚಿಕೆ** (ನಾ). ೧. "ಕರಿಜೀರಿಗೆ" (ಅಮರ. ಟೀಕೆ). ೨. "ಸಣ್ಣ ಯಾಲಕ್ಕಿ" (ಅಮರ. ಟೀಕೆ). [ಸಂ. ಉಪಕುಂಚಿಕಾ]

**ಉಪಕುರ್ವಾಣ** (ನಾ). ೧. ಉಪಕಾರಮಾಡುವ ಸ್ವಭಾವದವನು. ೨. ವೇದಾಧ್ಯಯನವನ್ನು ಪೂರೈಸಿ ಬ್ರಹ್ಮಚರ್ಯದಿಂದ ಗೃಹಸ್ಥಾಶ್ರಮವನ್ನು ಪ್ರವೇಶಿಸುವ ಬ್ರಾಹ್ಮಣ. [ಸಂ.]

**ಉಪಕುಲಪತಿ** (ನಾ). ವಿಶ್ವವಿದ್ಯಾನಿಲಯದಲ್ಲಿ ಕುಲಪತಿಯ ಪರವಾಗಿ ಆಡಳಿತ ನಿರ್ವಹಿಸುವವನು; ವೈಸ್ ಚಾನ್ಸಲರ್: ವಿಶ್ವವಿದ್ಯಾನಿಲಯದ ಉಪಕುಲಪತಿಗಳು ವಿದ್ಯಾರ್ಥಿಗಳ ಕ್ಷೇಮಚಿಂತನೆಯಲ್ಲಿ ನಿರತರಾಗಿರುತ್ತಾರೆ (ರೂಢಿ). [ಸಂ.]

**ಉಪಕುಲ್ಯೆ** (ನಾ). ೧. ಕಾಲುವೆ; ಹಳ್ಳ. ೨. ಹಿಪ್ಪಲಿ: "ಕೃಷ್ಣಾ, ಉಪಕುಲ್ಯಾ . . . ಕಣಾ – ಈ ೬ ಹಿಪ್ಪಲಿ" (ಹಲಾಯು. ೧೦೦–೪೬೦). [ಸಂ. ಉಪಕುಲ್ಯಾ]

**ಉಪಕುಶ** (ನಾ). ಹಲ್ಲಿನ ಒಂದು ರೋಗ: ಉಪಕುಶ ಎಂಬ ದಂತ ಮೂಲರೋಗದಲ್ಲಿ ರಕ್ತ ಸುರಿವುದು (ವೈದ್ಯಸಾ. II, ೧೨೪). [ಸಂ.]

**ಉಪಕೂಪ** (ನಾ). ೧. ಸಣ್ಣ ಬಾವಿ, —ಕೊಳ. ೨. ನೀರಿನ ತೊಟ್ಟಿ. [ಸಂ.]

**ಉಪಕೃತ** (ಗು). ೧. ಉಪಕಾರಹೊಂದಿದ; ಉಪಕರಿಸಲ್ಪಟ್ಟ: ನಿಮ್ಮಿಂದ ನಾನು ತುಂಬ ಉಪಕೃತನಾದೆ (ರೂಢಿ). (ನಾ). ೨. ಉಪಕಾರ: ನೆನೆದಾಗಳ್ ನಿಜನಂದನೋಪಕೃತಮಂ ತದ್ದೇವನೆಯ್ತಂದು ದೇವನಿಕಾಯಂಬೆರಸಪ್ಪಿಕೊಂಡು (ಆದಿಪು. ೨–೧೮). [ಸಂ.]

**ಉಪಕೃತಿ** (ನಾ). ೧. ಉಪಕಾರ; ಸಹಾಯ; ನೆರವು: ಉಪಕೃತಿಯಂ ನೆನೆಯದೆ ನೀನಪಕೃತಿಯನೊಡರ್ಚಿದೈ ದುರಾತ್ಮನೆ (ಪಂರಾಮಾ. ೧೧–೧೩೬); ಉಪಕಾರಿ ನಾನು ಎನ್ನುಪಕೃತಿಯು ಜಗಕೆಂಬ ವಿಪರೀತಮತಿಯನುಳಿದು (ನಿವೇದ. ೪೯–೨). ೨. ಸಣ್ಣ ಕಾವ್ಯ, —ಗ್ರಂಥ (ದಕ. ೬). [ಸಂ.]

**ಉಪಕೆಯ** (ನಾ). ಸಾಮಾನ್ಯವಾದ ವೆಚ್ಚ, —ಖರ್ಚು: ಬ್ರಾಹ್ಮಣರಿಗೆ ಭೂಮಿದಾನವಾಗಿ ಧಾರಾಪೂರ್ವಕಂ ಉಪಕೆಯಂಗಳಂ ತೆತ್ತುಂಬಂತಾಗಿ ಕೊಟ್ಟ ವೃತ್ತಿ (ಸೌಇಇ. XX. ೯೩–೫೨; ?). [< ಸಂ. ಉಪಕ್ಷಯ]

**ಉಪಕೇಂದ್ರ** (ನಾ). ಮುಖ್ಯಕೇಂದ್ರಕ್ಕೆ ಹೊಂದಿಕೊಂಡ ಸಣ್ಣ ಕೇಂದ್ರ (Apocentre. ಪಾಠಿನಿ. ೫). [ಸಂ.]

**ಉಪಕ್ರಮ** (ನಾ). ೧. ಸಮೀಪಿಸುವುದು; ಹತ್ತಿರಹೋಗುವುದು. ೨. ಪ್ರಾರಂಭ; ಮೊದಲುಮಾಡುವುದು; ತೊಡಗುವುದು: "ಉಪಜ್ಞಃ, ಉಪಕ್ರಮಃ, ಆರಂಭಃ—ಈ ೩ ಮೊದಲ್ಗೊಳುಹ" (ಹಲಾಯು. ೧೧೬–೨೭). ೩. ರಾಜನು ನಡಸಬೇಕಾದ ಮಂತ್ರಿಗಳ ಚಿತ್ತಪರೀಕ್ಷೆ: "ಉಪಕ್ರಮಃ – ಅರಂಭಮುಂ ಅರಸು ಧರ್ಮಾದಿಗಳಿಂದ ಮಂತ್ರಿಗಳ ಚಿತ್ತಮಂ ಪರೀಕ್ಷಿಸುಹಮುಂ" (ನಾಚಿರಾ. ೬). ೪. ಉಪಾಯ; ಹಂಚಿಕೆ: ಅಧಿಕ ಆಹಾರೋತ್ಪಾದನೆಯ ಮಾರ್ಗದಲ್ಲಿ ಸಾಧ್ಯವಿದ್ದ ಎಲ್ಲಾ ಉಪಕ್ರಮಗಳನ್ನೂ ಕಂಡುಹಿಡಿಯುವುದು ಅತ್ಯಾವಶ್ಯಕವಾಗಿದೆ (ಕೀಟಟು. ೧). ೫. ಚಿಕಿತ್ಸೆ; ವೈದ್ಯೋಪಚಾರ. [ಸಂ.]

**ಉಪಕ್ರಮಶೀಲತೆ** (ನಾ). ಪ್ರಾರಂಭ ಮಾಡುವ ಸ್ವಭಾವ: ನಮ್ಮಲ್ಲಿ ಉಪಕ್ರಮಶೀಲತೆ ಹೆಚ್ಚು; ಸಾಧನಶೀಲತೆ ಕಡಮೆ (ರೂಢಿ). [ಸಂ. ಉಪಕ್ರಮಶೀಲತಾ]

**ಉಪಕ್ರಮಿ** (ನಾ). ಮೊದಲುಮಾಡುವ ವ್ಯಕ್ತಿ; ಪ್ರಾರಂಭ ಮಾಡುವವನು: ಬೋಧವಕ್ರೋಪಕ್ರಮಿಗಳಪರಾಧತತಿಗಳು ಸುಕೃತ ಧರ್ಮವಿರೋಧಿಗಳು ಕುಪಥಾಲವಾಲಂಗಳು ಕುತಾಪಿಗಳು (ಬಸವಪು. ೪೦–೬೫). [< ಸಂ. ಉಪಕ್ರಮಿನ್]

**ಉಪಕ್ರಮಿಸು** (ಕ್ರಿ). ೧. ಮೊದಲುಮಾಡು; ಪ್ರಾರಂಭಿಸು; ತೊಡಗು: ಯುಧಿಷ್ಠಿರಂ ನಳಿನಾಕ್ಷನಿಲ್ಲದಧ್ವರಕುಪಕ್ರಮಿಸೆ ನಡೆಯದು (ಜೈಮಿಭಾ. ೨–೪೫); ಜನರಿಗೆ ಸೊಂಟನೋವು ಬಂದು ಕೂಗಲುಪಕ್ರಮಿಸಿದರು (ರಾಯಕ. ೬೧); ಸಂಸಾರ ಸಮೇತರಾಗಿ ಗುಂಪು ಗುಂಪಾಗಿ ದ್ವಾರಾವತಿಯಲ್ಲಿ ಬಂದಿಳಿಯಲುಪಕ್ರಮಿಸಿದರು (ಶಾಂತಲಾ. ೧೦೦). ೨. ಆರಂಭವಾಗು; ಕಾಣಿಸಿಕೊಳ್ಳು: ಸಂಕ್ರಮಿಸುಗುಂ ಪೋದ ಋತುಗಳೊಳ್ ಬರ್ಪ ಋತುಗಳೊಳುಪಕ್ರಮಿಸುಗುಂ (ಕಲ್ಯಾಕಾ. ೨–೬); ಶಕ್ರನಾಸ್ಥಾನಮಂ ವಿವಿಧ ವೈಭವದಿಂದತಿಕ್ರಮಿಸಿದರಸನೋಲಗಮಂ ನಿರೀಕ್ಷಿಸುತುಪಕ್ರಮಿಸುವೆಳನಗೆಯೊಳಸುರಾರಿ ನುಡಿದನು (ಜೈಮಿಭಾ. ೨–೫೨). ೩. ಸಮೀಪಿಸು; ಆಕ್ರಮಿಸು: ಚಕ್ರ ಮುಸುಕಿ ರಥಗಳ ನೂಂಕಿ ಬಂದುದುಪಕ್ರಮಿಸುತ ಪರಬಲವಾ (ವರ್ಧಚ. ೬–೧೧೫). [ಉಪಕ್ರಮ + –ಇಸು]

**ಉಪಕ್ರೋಶ** (ನಾ). ನಿಂದೆ; ಆಕ್ಷೇಪಣೆ; ಅಪವಾದ: "ಅಪವಾದಃ, ಉಪಕ್ರೋಶಃ . . . ಗರ್ಹಾ, ನಿಂದಾ, ಜುಗುಪ್ಸಾ – ಈ ೮ ಅಪವಾದದ ನಾಮಂ" (ಹಲಾಯು. ೨೪–೧೪೬). [ಸಂ.]

**ಉಪಕ್ಷಮ** (ನಾ). ಸಹನೆ; ತಾಳ್ಮೆ; ಸೈರಣೆ: ಅವನ ಉಪಕ್ಷಮವು ಆಶ್ಚರ್ಯಕರವಾಗಿದೆ (ಕಸ್ತೂರಿ. ೪–೭೨; 1964). [ಸಂ.]

**ಉಪಕ್ಷಯ** (ನಾ). ೧. ಕ್ಷಯಿಸುವುದು; ನಶಿಸುವುದು. ೨. ಸಾಮಾನ್ಯವಾದ ವೆಚ್ಚ, —ಖರ್ಚು: ಪ್ರಜೆಗಳು . . . ಮನೆಯಂ ಮಾಡಿಸಿದೊಡಂ ಮನೆಸಾಮ್ಯದವರೆಮ್ಮ ಮನೆಯೆಂದು ಮೂಱು ವರ್ಷದೊಳಗೆ ಬಂದರಪ್ಪಡವರ ಕಯ್ಯುಲು ಮಾಡಿಸಿ[ದು]ಪಕ್ಷಯಕ್ಕಿಮ್ಮಡಿಯಂ ಕೊಣ್ಡು ಬಿಡುವರ್ (ಸೌಇಇ. XX, ೧೦೨–೬; 1132); ಸುತ್ತಣ ಮನಿ ಆನಿಮಾಡಿಕೊಂಡು ಇಹದಕ್ಕೆ ಬಾವಿ ಹೂಳಿದರೆ ತೋಡುವುದಕ್ಕೆ ಯಿಪ್ಪರ ಉಪಕ್ಷಯಕ್ಕೆ ಮಿಕ್ಕ ಎರಡು ಭಾಗೆ ಸಲುವುದು (ಸೌಇಇ. IX–ii, ೪೩೬–೨೬; 1412). ಉಪಕ್ಷಯಂಮಾಡು = ವೆಚ್ಚಮಾಡು; ಖರ್ಚುಮಾಡು: ಅರ್ಥಮುಂ ಶರೀರಮುಮನುಪಕ್ಷಯಂ ಮಾಡುವ ಸಂಶಯವಂ ಮಾಡುವ ಧರ್ಮಮೆ ಬಾರ್ತೆ (ಮದತಿ. ೧–೫೮ ವ). [ಸಂ.]

**ಉಪಕ್ಷೇಪ** (ನಾ). ೧. ಕಾವ್ಯದ ಪ್ರಾರಂಭ, —ಮೊದಲು, —ಆದಿ: ಕಥೆಯ ಉಪಕ್ಷೇಪ (=ಆದಿ)ದಿಂದ ಹಿಡಿದು ಪರಾರ್ಥಕ್ಕಾಗಿ ಶರೀರವನ್ನರ್ಪಿಸುವ ನಿರ್ವಹಣದವರೆಗೂ ಶಾಂತವೇ ರಸ (ಧ್ವನ್ಯಾಲೋ. ೧೮೨). ೨. [ನಾಟ್ಯ] ರೂಪಕಗಳಲ್ಲಿ ಮುಖಸಂಧಿಯ ಮೊದಲನೆಯ ಅಂಗ: ಕಾವ್ಯಾರ್ಥದ ಸಮುತ್ಪತ್ತಿ 'ಉಪಕ್ಷೇಪ' (ದಶರೂ. ೧–೩೪ ಟಿಪ್ಪಣಿ) [ಸಂ.]

**ಉಪಖಂಡ** (ನಾ). ೧. ದೊಡ್ಡ ಖಂಡಕ್ಕೆ ಸೇರಿದ ಒಂದು ಸಣ್ಣ ಖಂಡ: ಭಾರತ ದೇಶವನ್ನು ಉಪಖಂಡವೆಂದು ಕರೆಯುತ್ತಾರೆ (ರೂಢಿ). ೨. ಒಳವಿಭಾಗ: ಮಸೂದೆಯಲ್ಲಿ ಎಷ್ಟೋ ಖಂಡಗಳು ಉಪಖಂಡಗಳು ಇವೆ (ರೂಢಿ). [ಸಂ.]

**ಉಪಖ್ಯಾತ** (ಗು). ಎಲ್ಲರಿಗೂ ತಿಳಿದ; ಪ್ರಸಿದ್ಧವಾದ: ಸ್ವೀತಭಕ್ತಿ ಸಮುಗ್ರದೊಳುಪ [ಪಾಠಾಂ. ಪ್ರ]ಖ್ಯಾತಭಕ್ತಿ ವಿರುದ್ಧವಾದ ದ್ಯೂತಸ ವಿನೋದಮೆ ಸುಭಕ್ತಿ ವಿನೋದಮಾಗಲ್ಕೆ. (ಬಸವು. ೪೩–೯). [ಸಂ.]

**ಉಪಗತ** (ಗು). ೧. ಸಮೀಪಕ್ಕೆ ಬಂದ; ಹತ್ತಿರವಾದ; ಪ್ರಾಪ್ತವಾದ; ಸಂಭವಿಸಿದ. ೨. ಯುಕ್ತವಾದ; ಸಹಿತವಾದ: ಉಪಗತ ವನದೇವೀಚಯ ಸ್ವಾಂತ ಸಂತ್ರಾಸಕರಂ ಪೊಣ್ಮಿತ್ತು... ಕೈರಾತಘೋಷಂ (ಕಾದಂಪೂ. ೧೫೨); ಮುನಿಪತಿ ವಿವಿಕ್ತ ಶಯ್ಯಾಸನಮೆಂಬಯ್ದನೆಯ ತಪದೊಳುಪಗತನಾದಂ. (ಸುಕುಮಾ. ೪–೮). ೩. ಅಂಗೀಕರಿಸಿದ. [ಸಂ.]

**ಉಪಗಮ** (ನಾ). ೧. ಸಮೀಪಿಸುವಿಕೆ; ಬಂದು ಸೇರುವುದು, —ತಲಪುವುದು. ೨. ಪ್ರಾಪ್ತವಾಗುವಿಕೆ; ಹೊಂದುವುದು. ೩. ಒಪ್ಪಿಗೆಯಾಗಿರುವುದು; ಅಂಗೀಕೃತವಾಗಿರುವುದು. [ಸಂ.]

**ಉಪಗಮನ** (ನಾ). = ಉಪಗಮ. 'ಪ್ರಾಯೋಪಗಮನ' ಪರಾ. [ಸಂ.]

**ಉಪಗಿರಿ** (ನಾ). ೧. ದೊಡ್ಡ ಬೆಟ್ಟದ ಬಳಿಯಿರುವ ಸಣ್ಣ ಗುಡ್ಡ. ೨. ಬೆಟ್ಟದ ಬಳಿಯ ಪ್ರದೇಶ. [ಸಂ.]

**ಉಪಗೂಹನ** (ನಾ). ೧. ಮರೆಮಾಡುವುದು; ಬಚ್ಚಿಡುವುದು. ೨. ಆಲಿಂಗನ; ತಬ್ಬಿಕೊಳ್ಳುವುದು: "ಆಲಿಂಗನಂ, ಉಪಗೂಹನಂ, ಪರಿರಂಭಣಂ... – ಈ ೩ ಅಪ್ಪಿಕೊಳುಹ" (ಹಲಾಯು. ೯೩–೪೧೪). ೩. ಆಶ್ಚರ್ಯ. ೪. ರಕ್ಷಣೆ; ಎತ್ತಿ ಹಿಡಿಯುವುದು: ಉಪಗೂಹನಮುಂ ಸದ್ಧರ್ಮಪಥಚ್ಯುತಭವ್ಯ ಸಂಹತಿಸ್ಥಾಪನಮುಂ ವಿಪುಳಗುಣವತ್ಸಳತ್ವಮುಮುಪಗತಮಳಜ್ಜೈನಶಾಸನೋದ್ಭಾಸನಮುಂ (ಆದಿಪು. ೫–೫೮). [ಸಂ.]

**ಉಪಗೂಹಿತ** (ಗು). ಮರೆಮಾಡಿದ; ಬಚ್ಚಿಟ್ಟ: ಮಿಥ್ಯಾವಿನಯ ವಿನೋದೋಪಗೂಹಿತಸ್ವಾಂತಚಿಂತಿತ ಚಿತ್ತನಾಗಿರ್ದಂ (ಜಗಏ. ೩–೨೨ ವ). [ಸಂ.]

**ಉಪಗೃಹ** (ನಾ). ಒಳಗಿನ ಕೋಣೆ; ಓವರಿ: "ಓವರಿಯದುಪಗೃಹಂ ಗರ್ಭಗೃಹಮುಕ್ಕು" (ಮಂಗರಾ. ೫೪–೮). [ಸಂ.]

**ಉಪಗೃಹೀತ** (ಗು). ಹಿಡಿದ; ವಶಪಡಿಸಿಕೊಂಡ; ಕೈಕೊಂಡ: ಉಪಜಾಪೋಪಗೃಹೀತ ವಿರೋಧಿನರೇಂದ್ರಾಪ್ತಾಪ್ಪದಶಶೀರ್ಷನುಂ (ಶಾಂತಿಪು. ೧–೭೧ ವ). [ಸಂ.]

**ಉಪಗ್ರಹ** (ನಾ). ೧. ಕಿತ್ತುಕೊಳ್ಳುವುದು. ೨. ಸೆರೆಹಿಡಿಯುವುದು; ಕೈಸೆರೆ. ೩. ಸೆರೆಸಿಕ್ಕಿದವನು; ಸೆರೆಯಾಳು; ಬಂದಿ. ೪. ಅನುಕೂಲಪಡಿಸುವುದು. ೫. ದೊಡ್ಡಗ್ರಹದ ನೆರೆಯಲ್ಲಿರುವ ಸಣ್ಣಗ್ರಹ: ಗ್ರಹದಿಂದ ಮಂಡಲಗಳು ಬೇರ್ಪಟ್ಟು ಉಪಗ್ರಹಗಳಾಗಿರಬೇಕು (ಭೂಹುಟ್ಟು. ೨೩). ೬. = ಉಪಗ್ರಹಸಂಧಿ. [ಸಂ.]

**ಉಪಗ್ರಹಣ** (ನಾ). ೧. ಕೈಸೆರೆ ಹಿಡಿಯುವುದು; ಬಂಧಿಸುವುದು. ೨. ಸಂಸ್ಕಾರಪೂರ್ವಕವಾಗಿ ವೇದಾಭ್ಯಾಸಮಾಡುವುದು. [ಸಂ.]

**ಉಪಗ್ರಹಸಂಧಿ** (ನಾ). [ರಾಜನೀ] ಹದಿನಾರು ಬಗೆಯ ಸಂಧಿಗಳಲ್ಲಿ ಒಂದು: ಶತ್ರು ಸಮಸ್ತ ಬಲಂಬೆರಸು ವಿಜಿಗೀಷುವಂ ಕಾಣ್ಬುದುಂ ಆತ್ಮಾಮಿಷಸಂಧಿಯೆಂಬುದಕ್ಕುಂ ಸರ್ವಸ್ವಮುಂ ತೆತ್ತು ಪ್ರಾಣರಕ್ಷಣಂಗೆಯ್ವುದು ಉಪಗ್ರಹಸಂಧಿಯೆಂಬುದಕ್ಕುಂ (ಪಂಚತಂ. ೨೨೦–೨೧). [ಉಪಗ್ರಹ + ಸಂಧಿ]

**ಉಪಗ್ರಾಮ** (ನಾ). ದೊಡ್ಡಗ್ರಾಮಕ್ಕೆ ಸೇರಿದಂತಿರುವ ಸಣ್ಣಗ್ರಾಮ; ಹುಂಡಿ; ಪಾಳ್ಯ; ಕೊಪ್ಪಲು: ಮದ್ದೂರೆಂಬ ಗ್ರಾಮಕ್ಕೆ ಸಲ್ಲುವ ಕೌಡ್ಲೆಗ್ರಾಮಯಿದಕೆ ಉಪಗ್ರಾಮ ನಾಗನಹಳ್ಳಿಗ್ರಾಮ ... ಯೀ ಆರು ಉಪಗ್ರಾಮ ಸಹಿತವಾಗಿ (ಮೈಆರಿ. ೧೯೩೩, ೪೯–೧೮; 1668). 'ಅನುಗ್ರಾಮ' ಪರಾ. [ಸಂ.]

**ಉಪಗ್ರಾಹ್ಯ** (ಗು). ೧. ಸ್ವೀಕಾರ ಯೋಗ್ಯವಾದ. (ನಾ). ೨. ಶಾಸ್ತ್ರಕ್ರಮದಿಂದ ಅಭಿವಾದನೆ ಮಾಡಲು ಯೋಗ್ಯನಾದವನು: "ಶಾಸ್ತ್ರಕ್ರಮದೊಳಭಿವಾದನಂಗೊಳ್ವ ಪುರುಷನುಪಗ್ರಾಹ್ಯನಕ್ಕು" (ಮಂಗರಾ. ೭೪–೮). ೩. (ರಾಜನಿಗೆ ಅಥವಾ ದೊಡ್ಡವರಿಗೆ ಅರ್ಪಿಸುವ) ಕಾಣಿಕೆ; ನಜರು: "ಉಪದಾ, ಪ್ರಾಭೃತಂ, ಉಪಗ್ರಾಹ್ಯಂ, ಉಪಾಯನಂ – ಈ ೪ ಪಾಗುಡಂ" (ಹಲಾಯು. ೭೧–೨೮೦). [ಸಂ.]

**ಉಪಘಾತ** (ನಾ). ೧. ಪೆಟ್ಟು; ಹೊಡೆತ. ೨. (ಪೆಟ್ಟಿನಿಂದಾದ) ನೋವು; ಘಾಯ: ದೇವೋಪ ಘಾತಮಂ ಶೌರ್ಯಾವಷ್ಟಂಭದಿನದೆಂತು ಗೆಲ್ದೆಯೊ ಪೇಟಿಲ್ (ಶಾಂತಿಪು. ೮–೬೯). [ಸಂ.]

**ಉಪಘ್ನ** (ನಾ). (ಹತ್ತಿರದಲ್ಲಿರುವ) ಆಶ್ರಯ, —ಆಶ್ರಯಸ್ಥಾನ: "ಉಪಘ್ನಃ, ಆಶ್ರಯಃ – ಈ ೨ ಇರ್ಪ ಠಾವು" (ಹಲಾಯು. ೫೦–೧೪೩). [ಸಂ.]

**ಉಪಚಯ** (ನಾ). ೧. ಶೇಖರಣೆ; ಕೂಡಿಸುವುದು; ಸಂಗ್ರಹ. ೨. ರಾಶಿ; ಗುಂಪು: ನಿನ್ನ ಪಾಪೋಪಚಯಕಾರಣ ದುರಾಚರಿತಮಂ ನೋಡಿ (ಆದಿಪು. ೩–೩೮ ವ). ೩. ಅಭಿವೃದ್ಧಿ; ಏಳಿಗೆ: ನಿರಂತರೋಪಚಯಮನಪ್ಪುಕೆಯ್ದು (ಮಲ್ಲಿಪು. ೪–೧೩೦); "ಉಪಚಯ ಎಂದರೆ ಪುಷ್ಟಿಪ್ರಕರ್ಷ" (ಭಾರವಿಮಾ. ೩೩೪). [ಸಂ.]

**ಉಪಚರ** (ನಾ). = ಉಪಚಾರ ೩: ಕೊಟ್ಟು ಕುಡುಕುದಂಬುಲಮಂ ಸವಿಯಂ ತಟ್ಟುವ ತನಿಗಲೆಯುಪಚರದಿಂ ಮನಮುಟ್ಟೆ ಕರಂಕೂಡಿದರಂಗಭವಂ ಮಿಗೆ ಮೆಚ್ಚುವ ತೆಱದಿ (ಜಯುಕಾ. ೨–೫೩). [< ಸಂ. ಉಪಚಾರ]

**ಉಪಚರಂಗೈ** (ಕ್ರಿ). = ಉಪಚಾರಗೆಯ್: ವಾಣೀಪತಿಯ ಕಂಡು ವಹಿಲದಿಂದಿದಿರೆದ್ದು ಕಾಣಿಕೆಯನಿತ್ತೆರಗುತ್ತುಪಚರಂ [ಪಾಠಾಂ. ಚಿತಿಯ] ಗೈದೊಡನೆ ಕೈಪಾರಿಸಿದ ಭಕ್ತಿಯಿಂದ (ವೆಂಕಾರಾ. ೧–೩–೪೩). [ಉಪಚರ + ಗೈ (< ಕೆಯ್$_1$)]

**ಉಪಚರಣ** (ನಾ). ಸೇವೆ: ರಾಜಪದುಪಚರಣ ನಿಯಮ ಸಂಪೂಜಿತಾರ್ಥಿಗಳಂ ನಿರಂತರ ರಾಜಪದುಪಚರಣ ನಿಯಮದಿಂದಂ ಭಜಿಸಿ (ಬಸವು. ೬–೩೦). [ಸಂ.]

**ಉಪಚರಣೆ** (ನಾ). ಆದರಣೆ; ಸತ್ಕಾರ: ಬಾಹ್ಯಭಾವನೆಯುಪಚರಣೆ ಮುನಿಗಳಿಗೆಯನುಚಿತವೆಂದನಲ್ಲಮನು (ಪ್ರಭುಲೀ. ೨೦–೪೦); ತರಣಿವಂಶಜ ನತ್ರಿಮುನಿಯುಪಚರಣೆ [ಪಾಠಾಂ. ಣ]ಯನು ಕೈಕೊಂಡು (ತೊರರಾ. ೩–೧ ಸೂಚನೆ). [ಸಂ. ಉಪಚರಣ]

**ಉಪಚರಿತ** (ಗು). ೧. ಸಮೀಪಿಸಲ್ಪಟ್ಟ; ಹತ್ತಿರಕ್ಕೆ ಬಂದ. ೨. ಆಚರಿಸಲ್ಪಟ್ಟ; ನೆರವೇರಿಸಿದ: ಉಪಚರಿತ ಗರ್ಭಾಧಾನ ಮಂಗಳ ವಿಧಾನಂ ದಶರಥಮಹೀನಾಥಂ... ಒಳವುಗುವುದುಂ (ಪಂರಾಮಾ. ೩–೭೭ ವ). [ಸಂ.]

**ಉಪಚರಿಸು** (ಕ್ರಿ). ಉಪಚಾರಮಾಡು; ಆಚರಿಸು; ಆರೈಕೆ ಮಾಡು: ಅನೇಕ ಶಿಶಿರೋಪಚಾರಂಗಳಿಂದುಪಚರಿಸಲದಱಿನೆಂತಾನುಂ ಮೂರ್ಛೆಯಿಂದೆಚ್ಚತ್ತು (ಕಾದಂಪೂ. ೮೫೪); ನುಡಿವ ಕವಿಗಮಕಿವಾಗ್ಮಿಗಳನುಪಚರಿಸುತುಂ (ನಂಬಿರ. ೩–೬೪); ನೀನುದ್ದಂಡಬಲನೆಂದನಿಬರು ಪಚರಿಸಿದರು ಫಲುಗುಣನ (ಕುವ್ಯಾಅ. ೭–೬); ಒಂದು ದಿನವಾದರೂ ನೀವು ನನ್ನನ್ನು ಉಪಚರಿಸಲಿಲ್ಲ (ಕಾವೇರಿ. ೩೯). [ಉಪಚರಣ + –ಇಸು$_1$]

**ಉಪಚರ್ಯೆ** (ನಾ). ೧. ಸೇವೆ. ೨. ಚಿಕಿತ್ಸೆ: "ಉಪಚರ್ಯಾ, ಚಿಕಿತ್ಸಾ – ಈ ೨ ವೈದ್ಯಂ ಮಾಡುಹಂ" (ಹಲಾಯು. ೧೦೦–೪೫೮). [ಸಂ. ಉಪಚರ್ಯಾ]

**ಉಪಚಾಯಿಕೆ** (ನಾ). ಸೇವಕಿ; ದಾಸಿ: ಉಪಚಾಯಿಕೆಯಾಗಿ ನಿನ್ನ ಅಪ್ಪಣೆಯನ್ನು ಬೇಡುತ್ತೇನೆ (ದೇವೀಚಾ. ೧೨೯). [ಸಂ. ಉಪಚಾಯಿಕಾ]

**ಉಪಚಾಯ್ಯ** (ನಾ). ೧. ಮಂತ್ರದಿಂದ ಸಂಸ್ಕರಿಸಲ್ಪಟ್ಟ ಯಜ್ಞದ ಅಗ್ನಿ. ೨. ಯಜ್ಞದ ವೇದಿಕೆ; ಯಜ್ಞದಲ್ಲಿ ಅಗ್ನಿಸಂಧಾನ ಮಾಡುವ ಸ್ಥಳ. [ಸಂ.]

**ಉಪಚಾರ** (ನಾ). ೧. ಹತ್ತಿರ ನಡೆಯುವುದು, —ಸೇರುವುದು. ೨. ಆದರಣೆ; ಸತ್ಕಾರ; ಸೇವೆ: ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವ ಹಮ್ಮಿನಲ್ಲಿ ಬೆಂದೆನಯ್ಯಾ (ಬಸವ. ೩೮೪); ಉಡುಗೊಱೆಗಳಲಿ ವಿವಿಧೋಪಚಾರದಲಿ ಹಿರಿದು ಮನ್ನಿಸಿ ಕಳುಹಿದನು (ತೊರರಾ. ೧-೭-೬೧). ೩. ವೈದ್ಯಕೀಯ ಆರೈಕೆ, —ಶುಶ್ರೂಷೆ. ೪. (ಆಲಂ). ತೋರಿಕೆ; ಬೂಟಾಟಿಕೆ: ಲಿಂಗವೆಂದಱಿಯೆ ಜಂಗಮವೆಂದಱಿಯೆ . . . ಅನು ಮಾಡುವುದೆಲ್ಲಾ ಉಪಚಾರವಯ್ಯಾ (ಬಸವ. ೩೮೪). ೫. ಒಂದು ಬಗೆಯ ವ್ಯಂಗ್ಯ. ಉದಾ: ಕತ್ತು ಹಿಡಿದು ತಳ್ಳಿದನು ಎಂಬುದಕ್ಕೆ ಬದಲಾಗಿ ಅರ್ಧಚಂದ್ರನನ್ನು ಕೊಟ್ಟನು ಎಂಬಂತೆ. ೬. ವಿಕಲ್ಪವಾದುದು; ಗೌಣವಾದುದು: ನೂಂಕಿದನೆಂಬೊಂದರ್ಥದೊಳ್ ಅರ್ಧಚಂದ್ರನನಿತ್ತನೆಂದು ನಕಾರಮುಪಚಾರಮಾಯ್ತು (ಶಮದ. ೧೦೬ ಪ್ರಯೋ). ೭. ಲಂಚ: "ಲಂಚಃ . . . ಉಪಚಾರಃ, ಆಮಿಷಂ— ಈ ೫ ಲಂಚಂ" (ಹಲಾಯು. ೭೧-೨೮೦). [ಸಂ.]

**ಉಪಚಾರಗೆಯ್** (ಕ್ರಿ). ಉಪಚಾರಮಾಡು; ಸತ್ಕರಿಸು: ಕೆಳೆಗೋಸುಗ ಬಂದೆನೆಂದು ಮನ್ಮಥನಂದು ಎಳೆವೆಱೆಗುಪಚಾರಗೆಯ್ದು (ಮೋಹತ. ೧೬-೫೨). [ಉಪಚಾರ + ಗೆಯ್ (< ಕೆಯ್$_1$)]

**ಉಪಚಾರಣ** (ನಾ). (ಪೀಠ ಮೊದಲಾದುವನ್ನು ಒದಗಿಸುವ) ಉಪಚಾರ: "ಆಸನಾದ್ಯುಪಚಾರಣಂ" (ಮಂಗರಾ. ೬೭-೧೨). [ಸಂ.]

**ಉಪಚಾರವಡೆ** (ಕ್ರಿ). ಉಪಚಾರವನ್ನು ಹೊಂದು; ಸತ್ಕಾರವನ್ನು ಪಡೆ: ನೋಟಕಚ್ಚರಿಯಾದ ಪರಮಸುಂದರಿಯ ಕೈಮಾಟದಿಂದುಪಚಾರವಡೆದು (ಮೋಹತ. ೪-೩೦). [ಉಪಚಾರ + ಪಡೆ$_1$]

**ಉಪಚಾರಿ** (ನಾ). ಉಪಚರಿಸುವವನು; ಆದರಿಸುವ ಸ್ವಭಾವವುಳ್ಳವನು: ಎನ್ನ ತಾಗಿದ ಸುಖವ ಜಂಗಮಕ್ಕರ್ಪಿಸಲಱಿಯದ ಉಪಚಾರಿಯಾನು (ಬಸವ. ೩೭೯). [< ಸಂ. ಉಪಚಾರಿನ್]

**ಉಪಚಾರಿಸು** (ಕ್ರಿ). = ಉಪಚಾರಗೆಯ್: ಗೋಪ ಮಾಧವನುಪಚಾರಿಸಿ (ಎಕ. VII, ಶಿವಮೊ. ೯೯-೧೬; 1320). [ಉಪಚಾರ + -ಇಸು$_3$]

**ಉಪಚಾರೋಕ್ತಿ** (ನಾ). ೧. ಉಪಚಾರದ ಮಾತು; ಆದರಣೆಯ ಮಾತು. ೨. ಗೌಣವಾದ ಮಾತು: ಗಳಗಡ ಎಂಬಿವು ಉಪಚಾರೋಕ್ತಿಯೊಳಂ ಉಚಿತಸಂಭಾಷಣೆಯೊಳಂ ಪೇೞಲ್ಪಡೆಗುಂ (ಶಮದ. ೩೦೬ ವೃತ್ತಿ). [ಉಪಚಾರ + ಉಕ್ತಿ]

**ಉಪಚಾರ್ಯ** (ನಾ). ೧. ಉಪಚಾರಕ್ಕೆ ಯೋಗ್ಯನಾದವನು. ೨. = ಉಪಚಾರ ೩: "ಉಪಚಾರ್ಯಂ [ಪಾಠಾಂ. ಉಪಚರಿಯಂ, ಉಪಚರ್ಯಂ] ಚಿಕಿತ್ಸೆಯೆನಲಾ ಸುವೈದ್ಯವ ಮಾಳ್ಪುದಕ್ಕು" (ಮಂಗರಾ. ೧೧೫-೭). [ಸಂ.]

**ಉಪಚಿತ** (ಗು). ೧. ಕೂಡುತ್ತಾ ಬಂದ; ಶೇಖರಿಸಲ್ಪಟ್ಟ. ೨. ಒಟ್ಟಾದ; ರಾಶಿಯಾದ: ದೇಹವಿದು ಭೂತೇಂದ್ರಿಯಾದಿಯ ಗೇಹ ಉಪಚಿತಕರ್ಮಫಲಸಂದೋಹದಲಿ ತಿರುಗುವುವು (ಕುವ್ಯಾದ್ರೋ. ೧೮-೫೮). ೩. ಹೆಚ್ಚಾದ; ವೃದ್ಧಿಹೊಂದಿದ; ಬೆಳೆದ: ಭಗದತ್ತಂ ಸುಪ್ರತೀಕದ್ವಿಪಮನುಪಚಿತೋತ್ಸಾಹದಿಂ ತೋಱಿ ಕೊಟ್ಟಂ (ಪಂಪಭಾ. ೧೧-೬೯). ೪. ಗೌರವಿಸಲ್ಪಟ್ಟ; ಸನ್ಮಾನಿಸಿದ; ಉಪಚರಿಸಿದ: "ಗುರುವೆನಲ್ಕುಪಚಿತನೆನಲ್ ಪೂಜಿಸಪಡೆದವಂ" (ಮಂಗರಾ. ೬೨-೨೨). [ಸಂ.]

**ಉಪಚಿತಗುಣ** (ನಾ). ವೃದ್ಧಿಹೊಂದಿದ ಗುಣವುಳ್ಳವನು (?): ಅತಿಶಯ ವಿಶಾಲಕೀರ್ತಿಧ್ವಜನಾನುಪಚಿತಗುಣನಾನುಚಿತನನಪೇತದೋಷನನುದಾರಚರಿತೋದಯನಂ (ಕವಿರಾ. ೨-೧೬). [ಉಪಚಿತ + ಗುಣ]

**ಉಪಚಿತಪುಣ್ಯ** (ನಾ). ಶೇಖರಿಸಿದ ಪುಣ್ಯ; ಸಂಚಿತ ಪುಣ್ಯ: ಸುಯೋಧನರಾಯನುಪಚಿತಪುಣ್ಯವಕಟಾ ದಾಯವೇ ಬಾಯೆಂದು ಮಿಗೆ ಬೊಬ್ಬಿಱಿದನಾ ಶಕುನಿ (ಕುವ್ಯಾಸ. ೧೩-೬೫). [ಉಪಚಿತ + ಪುಣ್ಯ]

**ಉಪಚಿತವಾರ್ತೆ** (ನಾ). ಸೇರಿಕೊಂಡು ಬರುವ ಮಾತು: ರಂಜಿಪುವು ಗಡ ಗಳ ಗಡಂಗಳವುಪಚಿತ ವಾರ್ತೆಯೊಳಮುಚಿತ ಸಂಭಾಷಣೆಯೊಳ್ (ಶಮದ. ೩೦೬). [ಉಪಚಿತ + ವಾರ್ತೆ]

**ಉಪಚಿತಾನಂದ** (ನಾ). ಹೆಚ್ಚಾದ ಅಥವಾ ವೃದ್ಧಿಯಾದ ಆನಂದ: ದ್ರುಪದಸುತೆಯುತ್ಸವವ ಮುನಿಜನದಪಗತಗ್ಲಾನಿಯನು ಪರಿಜನದುಪಚಿತಾನಂದವನು ಬಣ್ಣಿಸಲರಿದು ತನಗೆಂದ (ಕುವ್ಯಾಅ. ೧೨-೬೩). [ಉಪಚಿತ + ಆನಂದ]

**ಉಪಚಿತ್ರಿಕೆ** (ನಾ). [ಛಂದ] ಒಂದು ವೃತ್ತದ ಹೆಸರು: ಭುಜಪಕ್ಷಯುಗ ಧೂಮಧ್ವಜಪಾದ ಗುರುವಿನೊಳಜನಿರ್ದ ರಸದೊಳಂ ಪೆಱವೆಡೆಗಳೊಳಧೋಕ್ಷಜ ಗಣಮಾದೊಡದುಪಚಿತ್ರಿಕೆ (ಛಂದೋಂಬು. ೬. ೩೦೦). [ಸಂ. ಉಪಚಿತ್ರಿಕಾ]

**ಉಪಚಿತ್ರೆ** (ನಾ). ೧. ಹಸ್ತ ಮತ್ತು ಸ್ವಾತೀ ನಕ್ಷತ್ರಗಳು. ೨. "ಇಲಿಯಾಲದ ಮರ; ಇಲಿಕಿವಿಯ ಗಿಡ" (ಅಮರ. ಟೀಕೆ). [ಸಂ. ಉಪಚಿತ್ರಾ]

**ಉಪಚುನಾವಣೆ** (ನಾ). ಸಾರ್ವತ್ರಿಕ ಚುನಾವಣೆಯಾದ ನಂತರ ಕಾರಣಾಂತರಗಳಿಂದ ತೆರವಾದ ಸ್ಥಾನಗಳಿಗೆ ನಡೆಯುವ ಚುನಾವಣೆ: ಉಪಚುನಾವಣೆಯ ದಿನವನ್ನು ಪ್ರಕಟಿಸಿದ್ದಾರೆ (ರೂಢಿ). [ಉಪ$_1$ + ಚುನಾವಣೆ]

**ಉಪಜ** (ನಾ). ಕುದುರೆಯ ಓಟದಲ್ಲಿ ಒಂದು ಬಗೆ: ಬಿಂಕಂಬಡೆದುದು ವಿಕ್ರಮುಮಂಕಿತಮುಪಕಂಠಮುಪಜಮುಪಜವಮೆಂಬಯ್ದುಂ ಕಣ್ಗೊಳಿಸುವ ಧಾರೆಗಳಿಂ ಕುದುರೆಯ ಕಾಲ್ಗೆ ಕೋಡಗಱಿಯೊಳವಕ್ಕುಂ (ಮಲ್ಲಿಪು. ೯-೩೬). 'ಉಪಜವ' ಪರಾ. [ಸಂ.]

**ಉಪಜಲಧಿ** (ನಾ). ಸಣ್ಣ ಸಾಗರ, —ಸಮುದ್ರ: ತುಱುಗಿದ ಮುಗಿಲಾ ಮುಗಿಲಿಂದೆಱಗುವ ಮಱಿ ಕದಡಿ ಬರ್ಪ ತೊಱೆ ಬೆಟ್ಟಿಂ ತೆವರ್ ಮೊಱಡುಪಜಲಧಿಗಳೆನೆ ಜನಮಱಿಯಱಿಯೆ ದಲುದ್ದ ಬಿದ್ದಮಾಯ್ತು ವನಿತಳಂ (ಆದಿಪು. ೭-೬೨). [ಸಂ.]

**ಉಪಜವ** (ನಾ). ಕುದುರೆಯ ಓಟದಲ್ಲಿ ಒಂದು ಬಗೆ. 'ಉಪಜ' ಶಬ್ದದ ಪ್ರಯೋಗವನ್ನು ನೋಡಿ. [ಸಂ.]

**ಉಪಜಾತ** (ಗು). ಉತ್ಪತ್ತಿಯಾದ; ಕಾಣಿಸಿಕೊಂಡ: ಜನಕನೊಳನುರೂಪತೆಯಂ ತನೂಭವಂ . . . ಪ್ರದೀಪೋಪಜಾತ ದೀಪಾಕೃತಿಯಿಂ (ಚಂದ್ರಪು. ೪-೯). [ಸಂ.]

**ಉಪಜಾಪ** (ನಾ). ೧. ರಹಸ್ಯವಾಗಿ ಕಿವಿಯಲ್ಲಿ ಹೇಳುವುದು; ಪಿಸುಮಾತನಾಡುವುದು; ಚಾಡಿಹೇಳುವುದು. ೨. ಭೇದೋಪಾಯ; ಒಳಜಗಳವುಂಟುಮಾಡುವಿಕೆ: "ಉಪಜಾಪಃ, ಭೇದಃ, — ಈ ೨ ಒಳಗುಗುಡುವುದು" (ಹಲಾಯು. ೧೨೮-೯೫); ಉಪಜಾಪೋಪಗೃಹೀತ ವಿರೋಧಿನರೇಂದ್ರಾಪ್ತಾದಶ ತೀರ್ಥನುಂ (ಶಾಂತಿಪು. ೧-೭೧ ವ). [ಸಂ.]

**ಉಪಜಾಪ್ಯ** (ನಾ). ರಹಸ್ಯವಾಗಿ ಕಿವಿಯಲ್ಲಿ ಹೇಳಿದ ಮಾತು; ಪಿಸುಮಾತು; ಚಾಡಿಮಾತು: ಬಂಧುಜನೋಪಜಾಪ್ಯಮುದು ಕರ್ಣಪ್ರಾಪ್ಯಮೇ ನಲ್ಲನೊಲ್ಲನೆ (ಚಂದ್ರಪು. ೮-೮೮). [ಸಂ.]

**ಉಪಜಾಹ** (ನಾ). = ಉಪಜಾಪ ೧: "ಉ ಪ ಜಾ ಹ ಂ ಭೇದಂ" (ವಸ್ತುಕೋ. ೧೧೪–೧೯); "ಉಪಜಾಹ[ಪಾಠಾಂ. ತ]ಮೆನೆ ಭೇದಮೆನ ಲೊಳಗುಗುಡುವುದು" (ಮಂಗರಾ. ೧೩೫–೩೫). [< ಸಂ. ಉಪಜಾಪ]

**ಉಪಜಿಹ್ವಿಕೆ** (ನಾ). = ಉಪಜಿಹ್ವೆ ೨: ಕೃಷ್ಣಕಂಟಕರೋಚಕೇತರ ರುಚಿ ಲವಣಮಾಮ್ಲಾಚಮನಮುಪಜಿಂಹ್ವಿ[ಜಿಹ್ವಿ]ಕಾದಿ ಗದಂಗಳೊಡನೊಡನೆ (ವಿವೇಭ. ೩–೩೬). [ಸಂ. ಉಪಜಿಹ್ವಿಕಾ]

**ಉಪಜಿಹ್ವೆ** (ನಾ). ೧. ಕಿರುನಾಲಗೆ. ೨. ಕಿರುನಾಲಗೆ ಊದಿಕೊಳ್ಳುವ ಒಂದು ರೋಗ: ಜಪವ ಮಾಡುವ ಜಿಹ್ವೆ ಉಪಜಿಹ್ವೆಯಾದಂತೆ ಜಪ ಬೇಜಿಕೆ ಹಿಂಸೆಯದು ಬೇಜಿಕೆ (ಸರ್ವಜ್ಞ. ೯೩೫); ಜಿಹ್ವೆಯಲ್ಲಿ ಆಱು ತೆರನಾಗಿ ರೋಗಂಗಳು ಹುಟ್ಟುವುವು. ಅವಾವುವೆಂದೆನೆ–ಜಿಹ್ವಾಲಸವೆಂದು, ಅಧಿಜಿಹ್ವೆ ಎಂದು, ಉಪಜಿಹ್ವೆ ಎಂದು, ವಾತಜಿಹ್ವೆ, ಪಿತ್ತಜಿಹ್ವೆ, ಶ್ಲೇಷ್ಮಜಿಹ್ವೆ ಎಂದು ಆಱು ತೆಱ (ವೈದ್ಯಸಾ. II, ೧೦೬). ೩. ಒಂದು ಜಾತಿಯ ಇರುವೆ. ೪. ಹಾವಿನ ಮೈಯಿಂದ ಕಳಚಿ ಬೀಳದ ಪರೆ: "ಉಪಜಿಹ್ವಾ... ಉಪದೇಹಿಕಾ –ಈ ೪ ಉರ್ಚದ ಹೆರೆ" (ಹಲಾಯು. ೧೦೬–೨೨). [ಸಂ. ಉಪಜಿಹ್ವಾ]

**ಉಪಜೀವಕ** (ನಾ). (ಇತರರನ್ನು) ಆಶ್ರಯಿಸಿ ಜೀವಿಸುವವನು; ಪರಾವಲಂಬಿ: ಸಾಯಲಾಜದ ಜೀವವಂಚಕ ಕಾಯಧಾರಿಗೆ ಕೋಪಿಗಜ್ಞಾನಾಯತಂಗುಪಜೀವಕಂಗತಿಕುಟಿಲನಾದಂಗೆ (ಬಸವು. ೬೦–೧೫); ಕವಿಗಳಲ್ಲಿ ಉಪಜೀವ್ಯ ಉಪಜೀವಕ ಎಂಬ ಭೇದವುಂಟೇ ಉಂಟು (ಭಾರವಿಮಾ. ೧೬೯). [ಸಂ.]

**ಉಪಜೀವನ** (ನಾ). ೧. (ಇತರರನ್ನು) ಆಶ್ರಯಿಸಿ ಬದುಕುವಿಕೆ; ಪರಾವಲಂಬಿ ಜೀವನ: ಉಪಜೀವನವನ್ನು ಸಾಗಿಸುವ ಸಸ್ಯಕ್ಕೆ ಉಪಜೀವಿ (parasite) ಎಂದು ಕರೆಯಬಹುದು (ಸಸ್ಯಶಾ. ೧೦೬). ೨. ಹೊಟ್ಟೆ ಹೊರೆಯುವುದು; ಜೀವನ ನಿರ್ವಾಹ; ಬದುಕು: ದನಕರುಗಳನ್ನು ಹಿಂಡುಗಟ್ಟಲೆ ಸಾಕಿ ಅವುಗಳಿಂದ ಉಪಜೀವನ ಸಾಗಿಸುತ್ತಿದ್ದರು (ಬಂಗಾಹೆ. ೧೫). [ಸಂ.]

**ಉಪಜೀವಿ** (ನಾ). ಪರಾವಲಂಬನದಿಂದ ಜೀವಿಸುವ ಮನುಷ್ಯ, ಸಸ್ಯ, ಪ್ರಾಣಿ ಮೊದಲಾದುವು. [< ಸಂ. ಉಪಜೀವಿನ್]

**ಉಪಜೀವಿಕೆ** (ನಾ). ೧. = ಉಪಜೀವನ ೨: ಅವರ ಉಪಜೀವಿಕೆಗಾಗಿ ಪ್ರತಿಯೊಬ್ಬನಿಗೂ ದಿನಕ್ಕೆ ೧ ರೂಪಾಯಿ ಕೊಡುತ್ತೇನೆ (ಮಾವಾದ. ೧೨೧). [ಸಂ. ಉಪಜೀವಿಕಾ]

**ಉಪಜೀವಿತ** (ನಾ). (ಇತರರನ್ನು) ಆಶ್ರಯಿಸಿ ಬದುಕುವವನು; ಪರಾವಲಂಬಿ: ಮಾಡಿದ ಮಾಟ ಭಕ್ತಿಸ್ಥಲಕ್ಕೆ ಸಲ್ಲದು ... ಮಾಡಿಸಿಕೊಂಬುದು ಜಂಗಮಸ್ಥಲಕ್ಕೆ ಸಲ್ಲದು ಉಪಜೀವಿತನ್ನೈಸೆ (ಬಸವ. ೮೮೪). [ಸಂ.]

**ಉಪಜೀವಿಸು** (ಕ್ರಿ). (ಇತರರನ್ನು) ಆಶ್ರಯಿಸಿ ಬದುಕು; ಪರಾವಲಂಬಿಯಾಗಿ ಬಾಳು: ಅನೆವದಿಂದಂ ಶ್ರಾವಕಮಾನಿಗಳನನೇಕವಿಧದಿನುಪಜೀವಿಪರಜ್ಞಾನಿಗಳ ಬುದ್ಧಿಪೌರುಷಹೀನಮುಪಜೀವಿಕೃತಂ ಬೃಹಸ್ಪತಿಮತವೊಳ್ (ಶಾಂತಿಪು. ೮–೧೩೧); ವಸುಧಾವಳಯದೊಳುಪಜೀವಿಸುವಂತಿರೆ ಕಲರ್ಗಮುಚಿತಮೆಂಬೀ ಬಗೆಯಿಂದೆಸೆದಿರೆ (ಲೋಕೋಪ. ೬–೧); ಅದನ್ನು ಆಶ್ರಯಿಸಿ ಹಾಗೂ ಹೀಗೂ ಉಪಜೀವಿಸಿಕೊಂಡು ಇರಬಹುದಾಗಲಿ, ಅದರಿಂದ ವಂಶಗೌರವ ರಕ್ಷಿಸಿಕೊಳ್ಳುವುದು ಸಾಧ್ಯವಿಲ್ಲ (ಇಪ್ಪಕ. ೩೫೪). [ಉಪಜೀವನ + –ಇಸು₃]

**ಉಪಜೀವ್ಯ** (ನಾ). ಜೀವನಕ್ಕೆ ಆಶ್ರಯವಾಗಿರುವವನು; ಆಶ್ರಯದಾತ: ಕವಿಗಳಲ್ಲಿ ಉಪಜೀವ್ಯ, ಉಪಜೀವಕ ಎಂಬ ಭೇದವುಂಟೇ ಉಂಟು (ಭಾರವಿಮಾ. ೧೯೯). [ಸಂ.]

**ಉಪಜೋಷ** (ನಾ). ೧. ಆನಂದ; ಸಂತೋಷ; ತೃಪ್ತಿ. ೨. ಮೌನ; ನಿಶ್ಶಬ್ದವಾಗಿರುವಿಕೆ. [ಸಂ.]

**ಉಪಜ್ಞ** (ನಾ). ಮೊತ್ತಮೊದಲು ಕಂಡುಹಿಡಿದವನು; ತಿಳಿದುಕೊಂಡವನು; ಉಪದೇಶವಿಲ್ಲದೆ ಜ್ಞಾನ ಪಡೆದುಕೊಂಡವನು; ಸ್ವತಂತ್ರ ವಿಚಾರಶಕ್ತಿಯುಳ್ಳವನು: ಅವನು ಈ ವಿಚಾರದಲ್ಲಿ ಉಪಜ್ಞ (ಕಸ್ತೂರಿ. ೨–೬೦; 1965). [ಸಂ.]

**ಉಪಜ್ಞತೆ** (ನಾ). ಸ್ವತಂತ್ರ ವಿಚಾರಶಕ್ತಿ; ಪ್ರತಿಭೆ: ಅವನ ಉಪಜ್ಞತೆಗೆ ಏನೂ ಕುಂದಿಲ್ಲ (ಧ್ವನ್ಯಾಲೋ. XI, ಮುನ್ನುಡಿ). [ಸಂ. ಉಪಜ್ಞತಾ]

**ಉಪಜ್ಞೆ** (ನಾ). ಸ್ವಪ್ರಯತ್ನದಿಂದ ಪಡೆದ ಜ್ಞಾನ; ಸ್ವತಂತ್ರ ವಿಚಾರಶಕ್ತಿ; ಪ್ರತಿಭೆ: "ಉಪಜ್ಞಾ – ಉಪದೇಶವಿಲ್ಲದೆ ತಾನಾಗಿ ಮೊದಲು ಹುಟ್ಟಿದ ತಿಳಿವಳಿಕೆ, ಎಲ್ಲರಿಗೂ ತಿಳಿದಿದ್ದಕ್ಕಿಂತ ಮುಂಚೆ ಮೊದಲು ಒಬ್ಬನಿಗೆ ತಿಳಿದ ತಿಳುವಳಿಕೆ" (ಸಿದ್ಧಾಂತಿ. ೧೮೬). [ಸಂ. ಉಪಜ್ಞಾ]

**ಉಪಟಲ,** ಉಪಟಳ (ನಾ). ಹಿಂಸೆ; ತೊಂದರೆ; ಪೀಡೆ; ಬಾಧೆ: ದಂಡಧರನುಪಟಲದಿ ಮಿಗೆ ಮುಂಕೊಂಡು ಮೊರೆಹೊಗುವವರ ಕಾಣೆನು (ಹಭಸಾ. ೬೨); ಹಿಂಜುಟ್ಟಿ ಜಗ್ಗಾಟದುಪಟಲಕ್ಕಿಂತ ಇದೆ ಮೇಲಾಯಿತೊ? (ಗಣೇಶ. ೬೩–೨೦). **ಉಪಟಳ**: ಅಸಾಸೂರರು ನಿಚ್ಚ ನಿಚ್ಚ ಊರಿಗುಪಟಳ ಮಾಡುತ್ತಿರ್ದರಯ್ಯಾ (ಅದವ. ೧೩೪); ನಿಜಸುತನಳಿದವಾರ್ತಾವಚನದುಪಟಳಕವನಿಪಾಲಕನು ಮಲಗಿದನು ಮೈ ಮಱೆದು (ಕುವ್ಯಾದ್ರೌ. ೬–೪); ಎನಗೆ ವೋರಗಿತ್ತಿಯ ಸವತಿಯತ್ತಿಗೆಯರು ಪಟಳಂ ತೋರಂ (ವೆಂಕಾರಾ. ೫–೨–೪೧); ವಿಷ್ಣುವರ್ಧನಪ್ರಭುವಿನ ಸೈನ್ಯಶಿಬಿರಗಳಲ್ಲಿ ಸಾಂಕ್ರಾಮಿಕ ಉಪಟಳ ಒಂದು ಕಾಣಿಸಿಕೊಂಡಿತು (ಶಾಂತಲಾ. ೪೦೦). [?]

**ಉಪಟಳ** 'ಉಪಟಲ' ನೋ.

**ಉಪಟಾಳಿ** (ನಾ). ಉಪಟಳ ಮಾಡುವವನು. [?]

**ಉಪಟೋಕನ** (ನಾ). ಗೌರವಕಾಣಿಕೆಯನ್ನು ಕೊಡುವುದು: ನಾನಾವಿಧವಾದ ಉಪಟೋಕನಾದ್ವಾರಾ ಸಂವರ್ಧನೆಯನ್ನು ಮಾಡಿದರು (ಕುಂಹಿಂ. ೮೯). [< ಸಂ. ಉಪಢೌಕನ]

**ಉಪಢೌಕಿತ** (ಗು). ೧. ಸಜ್ಜಿತವಾದ; ಸಿದ್ಧವಾದ: ಅನಂತರ ಮದೆತ್ತಲುಂ ತರದೆ ಸುತ್ತಿದತ್ತಾ ಕುಮಾರನೇಱಿದ ವರೂಥಮುಂ ಖಚರಯಾನ ಸಂದೋಹಕಂ... ಅಂತು ಪಢೌಕಿತವಾಗೆ (ಚಂದ್ರಪ್ರ. ೬–೨೯, ೩೦). (ನಾ). ೨. (ಗೌರವದ) ಕಾಣಿಕೆ; ನಜರು. [ಸಂ.]

**ಉಪತಂಡ** (ನಾ). ಸಣ್ಣ ಗುಂಪು. 'ತಂಡೋಪತಂಡ' ಪರಾ. [ಉಪ₄ + ತಂಡ]

**ಉಪತರಣಿ** (ನಾ). ೧. (ಸೂರ್ಯನ) ಮಂಡಲ; ಬಿಂಬ: "ಮಂಡಲಮದುಪತರಣಿಯಕ್ಕು" (ಮಂಗರಾ. ೧೧–೩). ೨. ವೃತ್ತಾಕಾರವಾಗಿ ನಿಂತ ಸೈನ್ಯ ವ್ಯೂಹ (ಕಿ). [ಸಂ.]

**ಉಪತಾಪ** (ನಾ). ೧. ಸೆಕೆ; ಶಾಖ. ೨. ಕಾಟ. ೩. ರೋಗ: "ರೋಗಃ, ರುಕ್... ಉಪತಾಪಃ, ರುಜಾ – ಈ ೧೨ ವ್ಯಾಧಿ" (ಹಲಾಯು. ೯೮–೪೪೬); ಒಳಗಣುಪತಾಪೋಪಶಮನಕೆ ಮಲಯರುಹಕರ್ಪುರದ ಶೀತಳಸಲಿಲದಿಂ ನೆನೆದಿದಱ ನೆವವಿರುಳಿನಿತು ಕಣ್ಮುಚ್ಚಿ (ಬಸವು. ೩–೧೭). [ಸಂ.]

**ಉಪತಾಪಬಡು** (ಕ್ರಿ). ಸಂತಾಪವನ್ನು ಅನುಭವಿಸು; ನೋಯು. 'ಉಪತಾಪಬಡುಹ' ಪರಾ. [ಉಪತಾಪ + ಪಡು₁]

**ಉಪತಾಪಬಡುಹ** (ನಾ). ಸಂತಾಪವನ್ನು ಅನುಭವಿಸುವುದು; ನೋಯುವುದು (ನಾಚಿರಾ. ೬). [ಉಪತಾಪಬಡು + -ಹ$_1$].

**ಉಪತಾಯ** (ನಾ). ಕಾಳಗದಲ್ಲಿ ಒಂದು ವರಸೆ: ತರದೆಸೆವ ಸಮ ಘಂಟೆ ಸಮಬಿತ್ತರವು ಚಾಂಗಳ ಕಂದನಾದವು ಭರದಿವೊಡವೆನಿಪ್ಪ ಉಪತಾಯದಲಿ ಅರ್ಧಾಂಗ ಪಿರಿದೆನಿಪ ಹೆಟ್ಟಾಂಗ ಸೀಸವು ಬೆರಸಿದಗ್ಗದೆ ರಾಯ ಕರಪಾಳುಜುವಡೊಂದಿಗಳೆಂಬ ತಾನಕದಿಂದೆ ಕಾದಿದರು (ಸಾಳ್ವಭಾ. ೧೨-೬೦). [?]

**ಉಪತ್ಯಕ, ಉಪತ್ಯಕೆ** (ನಾ). ಬೆಟ್ಟದಬುಡದಲ್ಲಿನ ಪ್ರದೇಶ; ಬೆಟ್ಟದ ತಪ್ಪಲು: ಓರಂತೊಜಗಿರ್ದ ಶಾಲಿವನದಿಂ ಸೇವ್ಯಂ ನಗೋಪತ್ಯಕಂ (ಆದಿಪು. ೧-೬೪). **ಉಪತ್ಯಕೆ:** ಆರಾವಳಿ ಪರ್ವತದ ಉಪತ್ಯಕೆಯಲ್ಲಿ ಹರಿಯುವ ಮಾನಾನದಿ (ಕೋಹಿನೂ. ೭). [ಸಂ. ಉಪತ್ಯಕಾ]

**ಉಪತ್ಯಕೆ** 'ಉಪತ್ಯಕ' ನೋ.

**ಉಪದಂಶ** (ನಾ). ೧. ಆಹಾರವನ್ನು ರುಚಿಕರವಾಗಿ ಮಾಡುವ ವ್ಯಂಜನ; ಉಪ್ಪಿನಕಾಯಿ, ಹಪ್ಪಳ ಮುಂತಾದ ನಂಜಿಕೊಳ್ಳುವ ಪದಾರ್ಥ: ಅನೇಕ ಭಕ್ಷ್ಯೋಪದಂಶ ರಸಪ್ರಚುರ ಚಾರು ಚರುಕಂಗಳಿಂದಂ (ಆದಿಪು. ೨-೩೨ ವ); ಅಪರಿಮಿತಮೆನಿಸೆ ಚೆಂಬೊನ್ನ ಪರಿಯಣದ ಬಳಸಿ ಬಣ್ಣವಣ್ಣಿಗೆಗಳೊಳಾದುಪದಂಶಂಗಳ್ ತುಱುಗಿದವು (ಸುಕುಮಾ. ೧೧-೨೯); ಸುವರ್ಣಮಯ ಪರಿಮಳಮಂ ಭಕ್ಷ್ಯೋಪದಂಶ ಚರುವಿಲಸಿತಮಂ (ಪಂಚಾಮಾ. ೧೬-೯೧). ೨. ವ್ಯಾಧಿಗ್ರಸ್ತರ ಸಂಸರ್ಗದಿಂದ ಉಂಟಾಗುವ ಗುಹ್ಯರೋಗ: ಉಗುರುತಾಗಿಯಾದರೂ, ಹಲ್ಲುತಾಗಿಯಾದರೂ, ಕುಯೋನಿಯುಳ್ಳ ಸ್ತ್ರೀಯ ಸಂಗದಿಂದಲಾದರೂ ಉಪದಂಶವೆಂಬ ವ್ಯಾಧಿಯು ಶಿಶ್ನದಲ್ಲಿ ಹುಟ್ಟುವುದು (ವೈದ್ಯಸಾ. II, ೧೬೫). [ಸಂ.]

**ಉಪದಾನ** (ನಾ). ೧. ಹಿರಿಯರಿಗೆ ಸಲ್ಲುವ ಕಾಣಿಕೆ; ಉಪಾಯನ. ೨. ಉಚಿತವಾಗಿ ಕೊಟ್ಟದ್ದು. ೩. ಲಂಚ. [ಸಂ.]

**ಉಪದಿಗ್ಧ** (ಗು). ಬಳಿಯಲ್ಪಟ್ಟ; ಲೇಪಿಸಿದ: ಕನಕಾದ್ರೀಂದ್ರಂ . . . ಇರ್ದುದು ಜಿನಸವನಸ್ನಿಗ್ಧದುಗ್ಧೋಪದಿಗ್ಧಂ (ಅಜಿಪು. ೪-೬೮). [ಸಂ.]

**ಉಪದಿಶ್ಯಮಾನ** (ಗು). ೧. ಉಪದೇಶಿಸಲ್ಪಡುತ್ತಿರುವ. ೨. ತೋರಿಸಲ್ಪಡುತ್ತಿರುವ: ಆಗಳರಸನುಂ ತತ್ಪ್ರತೀಹಾರಿಕಾಜನೋಪದಿಶ್ಯಮಾನ ಮಾರ್ಗನಾಗಿ ಪೊಕ್ಕು (ಕಾದಂಪೂ. ೯೯೭). [ಸಂ.]

**ಉಪದಿಷ್ಟ** (ಗು). ೧. ಉಪದೇಶಿಸಲ್ಪಟ್ಟ; ಬೋಧಿಸಲ್ಪಟ್ಟ: ಪಿರಿದೆಸೆವಂ ದೇವದೇವಂಗೆ ಮಾಡಿತ್ತಪವರ್ಗಶ್ರೀಯನೇಂ ಶಾಂತಿತೆ ಬಹುಗುಣಮೋ ನೀತಿಶಾಸ್ತ್ರೋಪದಿಷ್ಟಂ (ಶಾಂತಿಪು. ೧೦-೧೧೦). (ನಾ). ೨. ಉಪದೇಶ ಪಡೆದವನು: ವಿದ್ವಾಂಸರ ಬಳಿಗೆ ಹೋಗಿ ಅವರಿಂದ ಉಪದಿಷ್ಟರಾಗುತ್ತಿದ್ದರು (ಮಹಾವಂ. II, ೫೨); ಉಪದಿಷ್ಟನು ಮುಗ್ಗರಿಸುವದಾದರೂ ಉಪದೇಶಕನೂ ಮುಗ್ಗರಿಸುವವನು (ಬೆನ್ನಬೀ. ೧೬೦).
[ಸಂ.]

**ಉಪದೀಕೆ** (ನಾ). ಒಂದು ಬಗೆಯ ಗೆದ್ದಲು ಹುಳು (೬).
[ಸಂ. ಉಪದೀಕಾ]

**ಉಪದೂಷಣ** (ನಾ). ಸಂಬಂಧಿಸಿದ ತಪ್ಪು: ನಿಯಮಿತಾಕ್ಷರದಿಂದು ಪಮಾಪ್ರತಿಜ್ಞೆಯನೆ ತಿರ್ದುವುದಟ್ಟಿಯಿನಿರ್ದುಮಾ ಬಯಕೆ ತೀರದೆ ಕಾರಣದಿಂ ವಿಪರ್ಯಯಮಿದಭ್ಯುಪಮೋಕ್ಷ್ಯುಪದೂಷಣಂ (ಕವಿರಾ. ೧-೧೪೪). [ಸಂ.]

**ಉಪದೃಷ್ಟ** (ಗು). ನೋವಿಲ್ಲದಿರುವಿಕೆ; ಭಾರವಿಲ್ಲದಿರುವಿಕೆ (?); "ಕಣ್ಣಿಗೆ ಮರೆಯಾದ" (ಮೋಳಿಮಾ. ಕೋಶ); ಕುಸುಮಗಂಧವ ಉಪದೃಷ್ಟದಿಂದ ಹೊಱುವಂತೆ ಕಿಸಲಯದ ಘೃತವ ಅದು ತನ್ನ ಎಸಕದಿಂದ ಬಂಧ ಬಿಡುವಂತೆ (ಮೋಳಿಮಾ. ೯೩-೩೭೧). [ಸಂ. ?]

**ಉಪದೆ** (ನಾ). ನಜರು; ಕಾಣಿಕೆ; "ರಾಜದರ್ಶನಾರ್ಥವಾಗಿ ತರತಕ್ಕ ಕಾಣಿಕೆ, ನಜರ್ ಮುಂತಾದ್ದಕ್ಕೆ ಪೆಸರು" (ಸಿದ್ಧಾಂತಿ. ೨೦೯). ೨. ದಾನ; ಕೊಡುಗೆ: ಅವಿಭಾಜ್ಯವಾಗಿಯೂ ನೆನೆವವರ ಹಿತವರಿತು ರೂಪಿನುಪದೆಯ ಭೂಮೆ ಪತಿಕರಿಪ ತಳಕೋ (ಮಲೆದೇ. ೨೦-೪).
[< ಸಂ. ಉಪದಾ]

**ಉಪದೇವತೆ** (ನಾ). ಯಕ್ಷ, ಗಂಧರ್ವ, ಅಪ್ಸರ ಮೊದಲಾದ ದೇವತೆ. [ಸಂ. ಉಪದೇವತಾ]

**ಉಪದೇಶ** (ನಾ). ೧. ಮಂತ್ರವೇ ಮುಂತಾದ ರಹಸ್ಯಗಳನ್ನು ಬೋಧಿಸುವುದು, —ಕಲಿಸಿಕೊಡುವುದು; ಶಿಕ್ಷಣ: ಉಪದೇಶಂ ದೊರೆಕೊಂಡುದಪ್ಪೊಡೆನಗೀ ತ್ರೈಲೋಕ್ಯ ಸಾಮ್ರಾಜ್ಯ ರಾಜ್ಯಪದಂ ಸಾರ್ದನಿತುಂ ಮಹಾಮಹಿಮೆ ಸಾರ್ಗುಂ (ಸುಕುಮಾ. ೩-೨೩); ನೀನೆ ಪರಬ್ರಹ್ಮವೆಂದುಳ್ಳ ಪರಮಾತ್ಮತತ್ವವನಱುಹಿಪುದೇ ಶ್ರೀಗುರುವಿನುಪದೇಶಮಕ್ಕುಂ (ವಿವೇಕ. ೧೮). ೨. ಹಿತವನ್ನು ಹೇಳುವುದು; ಬುದ್ಧಿವಾದ; ತಿಳಿವಳಿಕೆ ಕೊಡುವುದು: ಉಪದೇಶ ಕೇಳಿದರೂ ಉಪದ್ರ ತಪ್ಪಲಿಲ್ಲ (ಗಾದೆ). [ಸಂ.]

**ಉಪದೇಶಂಗುಡು** (ಕ್ರಿ). ೧. ಮಂತ್ರವೇ ಮೊದಲಾದುವನ್ನು ಉಪದೇಶಿಸು, —ಬೋಧಿಸು. ೨. ಬುದ್ಧಿವಾದವನ್ನು ಹೇಳು: ಪ್ರಸಾದದಿಂ ದೊರೆಕೊಂಡುದೆಂತುಮುಪದೇಶಂಗೊಟ್ಟರ್ ಋಣಂಗೊಟ್ಟರೆಂಬನಾಱುಡಿಯುಂಟು (ಧರ್ಮಾಮೃ. ೬-೧೯೭). [ಉಪದೇಶ + ಕುಡು$_1$ (< ಕೊಡು)]

**ಉಪದೇಶಂಗೆಯ್** (ಕ್ರಿ). ೧. = ಉಪದೇಶಂಗುಡು ೧: ನೀಂ ಸಾಧಿಸುವ ವಿದ್ಯೆಯ ಪೆಸರೇನಿದನುಪದೇಶಂಗೆಯ್ದರಾರ್ ಪೇೞ್ (ಧರ್ಮಾಮೃ. ೨-೧೨೯ ವ). ೨. ಬೋಧಿಸು: ಸತ್ಯಪರೀತನೆ ಮಧನದಾವದಹನಂ ತಳ್ತಿರ್ದ ಪುದಿಲ್ಲ ನಿನ್ನನದಱಿಂದುಪದೇಶಂಗೆಯ್ಯುತಿರ್ಪುದಿದು ಸುಖಮಲ್ತೇ (ಕಾದಂಪೂ. ೮೪೯). [ಉಪದೇಶ + ಗೆಯ್ (< ಕೆಯ್$_1$)]

**ಉಪದೇಶಕ** (ನಾ). ೧. ಮಂತ್ರವೇ ಮೊದಲಾದುವನ್ನು ಉಪದೇಶಿಸುವವನು; ಶಿಕ್ಷಕ: ಅರಸಂ ದೀಕ್ಷಿತನಿಲ್ಲಿ ಋತ್ವಿಜರುಮೆಮ್ಮಾ ನಾಲ್ವರುಂ ಸಂಗರಾಧ್ವರದೊಳ್ ತಾನುಪದೇಶಕಂ ಮುರಹರಂ (ಗದಾಯು. ೮-೪೭). ೨. ಹಿತವನ್ನು ಹೇಳುವವನು; ತಿಳಿವಳಿಕೆ ಕೊಡುವವನು: ಖಳನ್ಯಾಯಮನೆಲ್ಲಮುಂ ನೆಱೆಯೆ ಕಲ್ತುಪದೇಶಕನಾಗು ಲೋಕದೊಳ್ (ಕಾವ್ಯಾವ. ೪೦೨). [ಸಂ.]

**ಉಪದೇಶಿ** (ನಾ). = ಉಪದೇಶಕ ೧. [< ಸಂ. ಉಪದೇಶಿನ್]

**ಉಪದೇಶಿಸು** (ಕ್ರಿ). = ಉಪದೇಶಂಗುಡು ೧: ಚಪಲಾಕ್ಷಿ ವಿಷಮವೃತ್ತಮನುಪದೇಶಿಪೆನವಱ ಭೇದಮಂ ಕ್ರಮದಿಂದಂ (ಛಂದೋಂಬು. ೩-೧೦); ನಿನ್ನಯ ಪ್ರಾಣಲಿಂಗಂ ತಾನದುವೆಯೆಂದು ರಾಗದಿಂದುಪದೇಶಿಸಿದನೆನುತಾಗ (ಬಸವು. ೧೮-೪); ಅಱುವನುಪದೇಶಿಪಡೆ ಗುರುಗಳಲ್ಲವೆ ನೀವು (ಜೈಮಿಭಾ. ೧೦-೨೧). [ಉಪದೇಶ + -ಇಸು$_3$]

**ಉಪದೇಹಿಕೆ** (ನಾ). ಸುಲಿದು ಬೀಳದ ಹಾವಿನ ಪೊರೆ: "ಉಪಜಿಹ್ವಾ . . . ಉಪದೇಹಿಕಾ – ಈ ಳ ಉರ್ಚದ ಹೆರೆ" (ಹಲಾಯು. ೧೦೬-೨೩). [ಸಂ. ಉಪದೇಹಿಕಾ]

**ಉಪದ್ಯಾಮ** (ನಾ). ಕ್ಷಮೆ (?): ನೇಮ ಮೊದಲಾದೊರ್ಣನವನಭಿರಾಮಿಸೆನ್ನಪರಾಧವನುಪದ್ಯಾಮಗೊಳುತಾರೈವುದೆನಲನಿಲಾತ್ಮರಾಘವಗೇ (ಜರಾಮಾ. ೨೧೪-೮). [?]

**ಉಪದ್ರ** (ನಾ). = ಉಪದ್ರವ ೨: ತೊಡರಿಯದ್ದಂಪಾರ್ವ ಜೀವಿಗಳಿಡೆಗುಪದ್ರವದಹುದೊ ತಾ ಪೋಪೆಡೆಯೊಳೆನುತಂ (ಬಸವು. ೩೮-೯); ನಿದ್ರೆಯಿಂ ಸುಖಮಿಲ್ಲುಪದ್ರದಿಂ ಅರಿಯಿಲ್ಲ (ಸರ್ವಜ್ಞ. ೨೩೧); ಉಪಕಾರಕ್ಕೆ ಹೋಗಿ ಉಪದ್ರ ಬಂತು (ಗಾದೆ). [< ಸಂ. ಉಪದ್ರವ]

**ಉಪದ್ರವ** (ನಾ). ೧. ಹತ್ತಿರ ಓಡುವುದು; ಮುತ್ತಿಗೆ ಹಾಕುವುದು. ೨. ಅನಿಷ್ಟ; ಕೇಡು; ಕಾಟ; ತೊಂದರೆ: ಭವ ನಿಗಳದ ತೊಡರಂ ಕಳೆ ಭವಜಳಧಿಯ ತಡಿಗೆ ಸಾರ್ಚಿ ಭವಗಹನದುಪದ್ರವಮಂ ಕಿಡಿಸು (ಆದಿಪು. ೧೦–೫೬); ಸತಿಗುಪದ್ರವಂ ಮಾಡಬೇಕೆಂದು ಕೌಶಿಕ ಮುನೀಂದ್ರಂ ನೆನೆದು (ಹಚರಾ. ೧೨–೫೭); ಎಂತು ಮೊದಲೆಜಗಿತೋ ಈ ಪಾಟುಪದ್ರವಂ? (ಅಶ್ವತ್ಥಾ. ೨೪೬). ೩. ರೋಗ; ಬೇನೆ. [ಸಂ.]

**ಉಪದ್ರಿಸು** (ಕ್ರಿ). ೧. ಮುತ್ತು; ಆಕ್ರಮಿಸು; ಆವರಿಸು; ಎರಗು. ೨. ತೊಂದರೆ ಕೊಡು; ಬಾಧಿಸು: ಸಮುದ್ರನಾಥನು ಗಮಿಸಲಿತ್ತ ಉಪದ್ರಿಸಿತು ಭೂಪನನು ಬಹಳೋದರ ಮಹಾವ್ಯಾಧಿ (ನಿಭಾಗ. ೯–೭–೧೩); ಕುರುಪತಿಗೆ ಸುಜನರನುಪದ್ರಿಸದಿರಲು ಬಾರದು ನಿದ್ರೆ ಮೂರ್ಖರ ಗುರುವಲಾ (ಕುಮುದಾ ೨೯). [ಉಪದ್ರ + –ಇಸು]

**ಉಪದ್ರುತ** (ಗು). ತೊಂದರೆಗೊಳಿಸಲ್ಪಟ್ಟ; ಪೀಡಿಸಿದ. 'ಉಪದ್ರುತಶೀಲ' ಪರಾ. [ಸಂ.]

**ಉಪದ್ರುತಶೀಲ** (ನಾ). ತೊಂದರೆಗೊಳಗಾದ ಶೀಲವುಳ್ಳವನು: ಮಲಿನವರ್ಣನುಮುಪದ್ರುತಶೀಲನುಂ (ಚಾವುಂಪು. ೧೬೬). [ಉಪದ್ರುತ + ಶೀಲ]

**ಉಪದ್ವೀಪ** (ನಾ). ಸಣ್ಣ ದ್ವೀಪ; ದೊಡ್ಡದಾದ ನಡುಗಡ್ಡೆಯ ಹತ್ತಿರವಿರುವ ಚಿಕ್ಕ ದ್ವೀಪ. [ಸಂ.]

**ಉಪದ್ವ್ಯಾಪ** (ನಾ). (ಉಕ). ತನಗೆ ಸಂಬಂಧವಿಲ್ಲದೆ ತಲೆಹಾಕುವುದು; ಪರನಿಂದಾವ್ಯಸನ: ಜಾನಕೀಬಾಯರು ತಮ್ಮ ದುಃಖದ ಮಧ್ಯದಲ್ಲಿಯೂ ಇನ್ನೊಬ್ಬರ ಉಪದ್ವ್ಯಾಪವನ್ನು ಮರೆಯಲಿಲ್ಲ (ಸಮಜೀ. ೫೦೪); ನೀವು ಸಮಾಜಕ್ಕೆ ಬಂದ ಮೇಲೆ ಈ ಉಪದ್ವ್ಯಾಪ ಎದ್ದಿದೆ (ಬದುಜ. ೧೫೩). [← ಮರಾ. ಉಪದ್ವ್ಯಾಪ]

**ಉಪದ್ವ್ಯಾಪಿ** (ನಾ). (ಉಕ). ತಲೆಹಾಕುವವನು; ಅಧಿಕಪ್ರಸಂಗಿ: ಸುಬ್ಬಣ್ಣಭಟ್ಟ ಒಬ್ಬ ಉಂಡಾಡಿಗ, ಉಪದ್ವ್ಯಾಪಿ (ತಿದುಗು. ೩೦). [ಉಪದ್ವ್ಯಾಪ + –ಇ]

**ಉಪದ್ವ್ಯಾಪಿತನ**(ನಾ).(ಉಕ). ಅಧಿಕಪ್ರಸಂಗಿತನ; ಕುಚೋದ್ಯ: ಜಾತಿಮತಗಳಲ್ಲಿ ಉಪದ್ವ್ಯಾಪಿತನ ಈಗಿನ ಸರ್ಕಾರಕ್ಕೆ ಅಗತ್ಯವಿಲ್ಲವಾಗಿತ್ತು (ಹೊಸೂಹ. ೩೨). [ಉಪದ್ವ್ಯಾಪಿ + –ತನ]

**ಉಪಧಾನ** (ನಾ). ೧. ಒರಗುವಿಕೆ; ಅವಲಂಬನ. ೨. ತಲೆದಿಂಬು; ಒರಗುದಿಂಬು; ಹಚ್ಚಡ; ಹಾಸು: ಪ್ರಚ್ಛದಾಚ್ಛಾದಿತ ವಿಚಿತ್ರನೇತ್ರೋಭಯೋಪಧಾನ ಶಯ್ಯಾತಳದೊಳ್ (ಆದಿಪು. ೫–೩೨ ವ); ಮಜ್ಜನ ಭೋಜನಾದಿ ದಿವಸವ್ಯಾಪಾರಮಂ ತೀರ್ಚಿ ಸೆಜ್ಜೆವನೆಯೊಳುಪಧಾನವಿರಾಜಮಾನ ಹಂಸತೂಲತಲ್ಪದೊಳ್ ವಿಶ್ರಮಿಸಿ (ಪಂರಾಮಾ. ೫–೩೦ ವ). [ಸಂ.]

**ಉಪಧಾನಾವಲಂಬ** (ನಾ). ಒರಗುದಿಂಬನ್ನು ಆಶ್ರಯಿಸಿ ವಿಶ್ರಮಿಸುವುದು, —ಮಲಗುವುದು: "ಮಲಗು— ಉಪಧಾನಾವಲಂಬೇ" (ಶಮಧಾ). [ಉಪಧಾನ + ಅವಲಂಬ]

**ಉಪಧಾವನ** (ನಾ). ಹತ್ತಿರಕ್ಕೆ ಓಡುವುದು; ಆಶ್ರಯಿಸುವುದು. 'ಉಪಧಾವಿಸು' ಪರಾ. [ಸಂ.]

**ಉಪಧಾವಿಶುದ್ಧ** (ನಾ). [ರಾಜನೀ] ಧರ್ಮ, ಅರ್ಥ, ಕಾಮ, ಭಯ— ಈ ನಾಲ್ಕು ವಿಧವಾದ ಪರೀಕ್ಷೆಗಳಿಂದ ಶುದ್ಧನೆಂದು ನಿರ್ಣಯಿಸಲ್ಪಟ್ಟವನು: ಚತುರುಪಧಾವಿಶುದ್ಧನುಂ ಬುದ್ಧಿವೃದ್ಧನುಂ ಭದ್ರಮೂರ್ತಿಯುಮಪ್ಪ ವಸುಭಾಗಭಟ್ಟನಿಂತೆಂದಂ (ಪಂಚತಂ. ೧೭–೧೩); ಪ್ರತ್ಯಕ್ಷಾನುಮಾನಂಗಳಿಂ ಕಾರ್ಯಾಕಾರ್ಯಂಗಳನುಪಧಾವಿಶುದ್ಧ ಮಂತ್ರಿಮಂಡಳದೊಳವಿರತಂ ನಿರ್ಧರಿಸಿಯುಂ (ಚಂದ್ರಪು. ೨–೬೦ ವ). [ಸಂ. (ಉಪಧಾ + ವಿಶುದ್ಧ)]

**ಉಪಧಾವಿಸು** (ಕ್ರಿ). ಹತ್ತಿರಕ್ಕೆ ಓಡಿಬರು; ಆಶ್ರಯಿಸು: ಕ್ಷೀರಸಮುದ್ರ ಸನ್ನಿಧಿಯೊಳಿರ್ದು ಪಿಪಾಸಿತನಾಗಿ ಜಾವಿಯಂ ಹಾರಿಯನಾಂತ ಗುಳ್ವನೊಲಾಯ್ತು ಸಮಸ್ತ ಸುಖೈಕಸಿದ್ಧಿವಿಸ್ತಾರಕನಪ್ಪ ನಿನ್ನನುಪಧಾವಿಸದನ್ಯಮನುಷ್ಯಮಾತ್ರಮಂ ಹಾರುವ ಬುದ್ಧಿ (ಶತಕ. ೨೮ ಐಪು೦೧). [ಉಪಧಾವನ + –ಇಸು]

**ಉಪಧಾಶುದ್ಧ** (ನಾ). = ಉಪಧಾವಿಶುದ್ಧ: ಸ್ವಕೀಯಾನ್ವಯಕ್ರಮಸಿದ್ಧರ್ ಮತಿಬುದ್ಧವೃದ್ಧರುಪಧಾಶುದ್ಧರ್ ಕುಲೀನರ್ ನೃಪೇಂದ್ರ ಮೃಗೇಂದ್ರಾಸನ ವಿಷ್ಟರದೊಳಿರ್ದರ್ (ಅನಂಪು. ೨–೨೩). [ಸಂ. (ಉಪಧಾ + ಶುದ್ಧ)]

**ಉಪಧಾಶುದ್ಧತೆ** (ನಾ). ಉಪಧಾವಿಶುದ್ಧನಾಗಿರುವಿಕೆ: ಮಹಾಸಭೆಯ ಉಪಧಾಶುದ್ಧತೆಯನ್ನು ಪರೀಕ್ಷಿಸಲು ಈ ವೇಷಭಾಷೆಗಳಿಗಾದ ದಳವಾಯ್ತನವು (ಮಂತ್ರಶ. ೮೬–೧೯). [ಸಂ. ಉಪಧಾಶುದ್ಧತಾ (ಉಪಧಾ + ಶುದ್ಧತಾ)]

**ಉಪಧಿ** (ನಾ). ೧. ಮೋಸ; ಕಪಟ; ವಂಚನೆ: "ವ್ಯಾಜಂ, ಛದ್ಮಃ, ಉಪಧಿಃ . . . ವ್ಯಪದೇಶಃ – ಈ ೧೦ ನೆವಂ" (ಹಲಾಯು. ೧೧೭–೨೪); ಮಧುರಂ ಬೀಣೆಯ ನಾದಂ ಮಧುರಂ ವೇಣುವ ನಿನಾದಮೆಂಬರ್ ವಿಗತೋಪಧಿಯಂ ಕೇಳದರಕ್ಕುಂ ಸುಧೆಯಂ ತಳ್ವೊಯ್ವ ಸುತರ ಕಲಭಾಷಿತಮಂ (ನೀತಿಮಂ. II,೩೬). ೨. ಹಿಂಸೆ; ತೊಂದರೆ; ಉಪದ್ರವ: ದೊರೆಯಲ್ಲದ ಬಾಹ್ಯಾಭ್ಯಂತರೋಪಧಿಯನುಬಿಡದನಾರತಂ ವ್ಯುತ್ಸರ್ಗೋತ್ರ ತಪದೊಳತಿವಿಶುದ್ಧಾಂತರಂಗನೆನಿಸಿದನಮಾನುಷಂ ಮುನಿತಿಲಕಂ (ಸುಕುಮಾ. ೪–೧೯). [ಸಂ.]

**ಉಪಧೃತಿ** (ನಾ). ಕಾಂತಿ; ಶೋಭೆ; ಬೆಳಕು; ಕಿರಣ: "ಉಸ್ರಃ . . . ಉಪಧೃತಿಃ, ಘೃಷ್ಟಿಃ . . . ಗೌಃ – ಈ ೩೨ ರಶ್ಮಿಗಳ ಪೆಸರ್" (ಹಲಾಯು. ೩೮–೩೯). [ಸಂ.]

**ಉಪಧೆ** (ನಾ). ೧. ಮೋಸ; ವಂಚನೆ; ಠಕ್ಕು. ೨. ಪ್ರಾಮಾಣಿಕತೆಯ ಪರೀಕ್ಷೆ: "ಉಪಧಾ, ಪರೀಕ್ಷಣಂ— ಈ ಎರಡು ಅರೈಕೆ" (ಹಲಾಯು. ೧೭೯–೭೨); ಸಕಳ ಕಳಾವಗಾಹನ ಸಮಾಹಿತಮತಿಗಳುಮಾಗಿ ನಾಲ್ಕುಮುಪಧೆಗಳೊಳಂ ಶುದ್ಧರಾಗಿ (ಆದಿಪು. ೧–೪೧ ವ). 'ಉಪಧಾವಿಶುದ್ಧ' ಪರಾ. ೩. [ವ್ಯಾಕ] ಶಬ್ದದ ಕಡೆಯ ಅಕ್ಷರದ ಹಿಂದಿನ ಅಕ್ಷರ: ಉಪಹತಿ ನಾಲ್ಕಯ್ದುಂಬಿವಜುಪಧೆಯೊಳಾಕ್ಕಿಂಬಿದರ್ಕೆ ಮೊದಲೊಳ್ ಹ್ರಸ್ವಂ (ಕಾವ್ಯಾವ. ೨೬೭); ಪರದೊಳ್ ಗಾಜ ಪ್ರತ್ಯಯಮಿರೆ ಸಲ್ಗುಂ ಬಿಂದು ಮೇಣಕಾರಮುದಂತಕ್ಕೊರೆವರಿಜ ಪ್ರತ್ಯಯಮಂ ಪಿರಿದುಂ ತದ್ಭವದೊಳುಪಧೆಗಕ್ಕುಂ ಹ್ರಸ್ವಂ (ಶಮದ. ೨೦೦). 'ಗುರೂಪಧೆ', 'ಲಘೂಪಧೆ' ಪರಾ. [ಸಂ.]

**ಉಪಧ್ಮಾನೀಯ** (ನಾ). ಪ, ಫಕಾರಗಳ ಹಿಂದೆ ವಿಸರ್ಗ ಬಂದಾಗ ಮಾಡುವ ಉಚ್ಚಾರಣೆ: ಸಮಸಂದಿರ್ದ ೱ ಮುಮು ೠ ಮುಮೊಂದಿದ ಬಿಂದುವುಂ ವಿಸರ್ಗಮುಮೆಂದಕ್ಕುಮಿವೆಯ್ದೆ ಯೋಗವಾಹಂ ಕ್ರಮದಿಂ . . . ಪಕಾರಮುಚ್ಚಾರಣಾರ್ಥಮಾಗುಬಿದ ಕುಮಾರೀಸ್ತನಯುಗಳಾಕೃತಿಯ ವರ್ಣಮುಪಧ್ಮಾನೀಯಂ (ಪಕಾರ ಸಂಗಡದ) ಆದಜ ಸ್ವರೂಪಂ (ೲ) (ಶಮದ. ೧೭, ವೃತ್ತಿ). [ಸಂ.]

**ಉಪನಂದನ** (ನಾ). ಕೈತೋಟ; ಉದ್ಯಾನವನ: "ಉಪನಂದನ ಕೈತವ ದೇವಗೇಹ ಕೇಪಾರಮೆನಿಕ್ಕು" (ನಾನಾರ. ೩೯). [ಸಂ.]

**ಉಪನಗರ** (ನಾ). ನಗರಕ್ಕೆ ಸೇರಿದಂತಿರುವ ಊರು: "ಉಪನಗರ ಮೆನಲು ನಗರದೊತ್ತಿನ ಬೀಡು" (ಮಂಗರಾ. ೫೭–೩); ನನ್ನನ್ನು ಸಂಗಡ ಕರೆದುಕೊಂಡು ಉಪನಗರಕ್ಕೆ ತೆರಳಿದರು (ಇಪ್ಪಕ. ೨೦೬). [ಸಂ.]

**ಉಪನತ** (ಗು). ೧. ಹತ್ತಿರಕ್ಕೆ ಬಂದ; ಸಮೀಪವಾದ: ಖಚರಾನ್ವಯಪತಿಯುಪನತನ್ಮೃತ್ಯೂದಯಂಗೆ ದುರ್ನಯಮೆ ಸುನಯಮೆನಿಸುಗುಮೆ ಪೊಲಂ (ಚಂದ್ರಪು. ೬-೧೬). ೨. ತಲೆಬಾಗಿ ನಮಸ್ಕರಿಸಿದ; ಅಧೀನವಾದ. (ನಾ). ೩. ಉಂಟಾದುದು; ಪ್ರಾಪ್ತವಾದುದು: "ಉಪನತಂ, ಉಪಸಂನಂ, ಉಪಸ್ಥಿತಂ—ಈ ೩ ಪೊ (ಹೊ)ರ್ದಿದುದು" (ಹಲಾಯು. ೧೨೩-೬೫). [ಸಂ.]

**ಉಪನದಿ** (ನಾ). ದೊಡ್ಡನದಿಗೆ ಸೇರುವ ಸಣ್ಣ ನದಿ: ಕಾವೇರಿಯ ಉಪನದಿಯಾದ ಶಿಂಷಾನದಿಯ ನೀರಿನಿಂದ . . . ವಿದ್ಯುತ್ತನ್ನು ಉತ್ಪತ್ತಿ ಮಾಡಲು ಪ್ರಾರಂಭಿಸಿದರು (ಕಪಪು. ೬-೬೦). [ಸಂ.]

**ಉಪನಯ** (ನಾ). ೧. ಹತ್ತಿರಕ್ಕೆ ತರುವುದು; ಸಮೀಪಕ್ಕೆ ಒಯ್ಯುವುದು. ೨. [ನ್ಯಾಯ] ನ್ಯಾಯದ ಐದು ಅವಯವಗಳಲ್ಲಿ ಒಂದು: ನ್ಯಾಯವಾಕ್ಯಗಳಾದ ಪ್ರತಿಜ್ಞಾ ಹೇತೂದಾಹರಣೋಪನಯ ನಿಗಮನಗಳಲ್ಲಿ ಐದೂ ಆವಶ್ಯಕವಿಲ್ಲ (ಹಿಂದಸಾ. ೨೦೨). [ಸಂ.]

**ಉಪನಯನ** (ನಾ). ೧. = ಉಪನಯ ೧. ೨. ವೇದಾಭ್ಯಾಸಕ್ಕಾಗಿ ಬಾಲಕನನ್ನು ಗುರುವಿನಲ್ಲಿಗೆ ಕಳಿಸಿಕೊಡಲು ಮಾಡುವ ಒಂದು ಸಂಸ್ಕಾರ; ಮುಂಜಿ; ಬ್ರಹ್ಮೋಪದೇಶ: ಚೌಲ, ಉಪನಯನ, ಉಪಾಕರ್ಮ . . . ಷೋಡಶಕರ್ಮಗಳೊಡನೆ (ವಿವೇಕ. ೫). ೩. [ಜೈನ] ಜೈನಾಗಮಾಭ್ಯಾಸಕ್ಕಾಗಿ ಬಾಲಕನನ್ನು ಗುರುವಿನಲ್ಲಿಗೆ ಕಳಿಸಿಕೊಡಲು ಮಾಡುವ ಒಂದು ಸಂಸ್ಕಾರ: ನಿಜಾನ್ವಯಲೀಲಾಲಲಾಮಂಗೆ ಲೋಕಯಾತ್ರಾಪ್ರವರ್ತನ ನಿಮಿತ್ತಮಾದಿಬ್ರಹ್ಮನನ್ನಪ್ರಾಶನ ಚೌಲೋಪನಯನಾದಿ ಕ್ರಿಯೆಗಳನನುಕ್ರಮದಿಂ ತಾನೆ ಮಾಡಿ (ಆದಿಪು. ೮-೪೧ ವ). ೪. [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು: ಲಿಪಿಸಂಖ್ಯಾನ ಸಂಗ್ರಹೋಪನಯನ ಬ್ರತಚರ್ಯಾವ್ರತಾವತರಣ . . . ಎಂಬಯ್ವತ್ತುಮೂಱು ಗರ್ಭಾನ್ವಯಕ್ರಿಯೆಗಳಂ (ಆದಿಪು. ೧೫-೧೪ ವ). ೫. ಕನ್ನಡಕ. 'ಉಪನೇತ್ರ' ಪರಾ. [ಸಂ.]

**ಉಪನಾಗರಿಕವೃತ್ತಿ** (ನಾ). [ಕಾವ್ಯಮೀ] ಮಾಧುರ್ಯ ಮತ್ತು ವೈದರ್ಭೀ ರೀತಿಗಳಿಗೆ ಸಮನಾದ ವೃತ್ತಿ: ಮಾಧುರ್ಯ, ಓಜಸ್ಸು ಕೋಮಲತೆಗಳನ್ನು ವ್ಯಕ್ತಗೊಳಿಸುವ ವರ್ಣನೆಗಳಿಂದ ಕೂಡಿದ ಪದರಚನೆಯನ್ನು ಕಾವ್ಯಪ್ರಕಾಶಕಾರನು ಕ್ರಮವಾಗಿ 'ಉಪನಾಗರಿಕವೃತ್ತಿ', 'ಪರುಷವೃತ್ತಿ', 'ನಿಕೋಮಲವೃತ್ತಿ'ಗಳೆಂದು ಕರೆದು (ಕೈಪಿಡಿ. ೨೨೩). [ಉಪನಾಗರಿಕ + ವೃತ್ತಿ]

**ಉಪನಾಗರಿಕೆ** (ನಾ). [ಕಾವ್ಯಮೀ] ಶಬ್ದಾಲಂಕಾರಗಳಲ್ಲಿ ಒಂದು ಭೇದ: ತಂತಮ್ಮ ವರ್ಗದಂತ್ಯದೊಳಂತಾ ವರ್ಗಂಗಳಮಳ್ಗಳಾಗಿರೆ ಮೇಣತ್ಯಂತ ಸರೇಫ ಸಯೋಗಾಂತರಮುಮದೊದವೆ ಮಧುರೆಯೆಂಬುದದಕ್ಕುಂ . . . . ‖ ಉಪನಾಗರಿಕೆಯೆಂದೊಡಮಿದುವೆ (ಕಾವ್ಯಾವ. ೫೬೨). [ಸಂ. ಉಪನಾಗರಿಕಾ]

**ಉಪನಾಮ** (ನಾ). ಅಂಕಿತನಾಮದ ಜೊತೆಗೆ ವೃತ್ತಿ, ಮನೆತನ, ಊರು ಮೊದಲಾದುವನ್ನು ಸೂಚಿಸುವ ಮತ್ತೊಂದು ಹೆಸರು: ಕುಲನಾಮ, ಉಪನಾಮ, ಅಡ್ಡಹೆಸರು (Surname. ಪತ್ರಿನಿ. ೮೦). [ಸಂ.]

**ಉಪನಾಯಕ** (ನಾ). ೧. ಸಹಾಯಕ ನಾಯಕ. ೨. ಗೌಣ ನಾಯಕ: ಕಥಾನಾಯಕರಲ್ಲಿಯೂ 'ಧೀರೋದಾತ್ತ'ನೇ ಮೊದಲಾದ ಭೇದಗಳಂತೆ 'ಮುಖ್ಯನಾಯಕ' ಅಥವಾ 'ಉಪನಾಯಕ' ಇವೇ ಮೊದಲಾದ ವೈವಿಧ್ಯಗಳೂ ಇರುತ್ತವೆ (ಧ್ವನ್ಯಾಲೋ. ೧೩೮). [ಸಂ.]

**ಉಪನಾಹ** (ನಾ). ೧. ಗಂಟು. ೨. ವೀಣೆಯ ತಂತಿಯನ್ನು ಎಳೆದು ಕಟ್ಟುವ ಬಾಯಿ ಮತ್ತು ಬಿರಡೆ; "ವೀಣೆಯ ತಂತಿ ಕಟ್ಟುವ ಬಾಯಿಗೂ ಬಿರಡೆಗಳಿಗೂ ಹೆಸರು" (ಅಮರ. ಟೀಕೆ). ೩. ಗಾಯ, ಹುಣ್ಣು, ವ್ರಣ ಮೊದಲಾದುವುಗಳಿಗೆ ಹಾಕುವ ಲೇಪ,—ಪಟ್ಟಿ: ಉಪನಾಹವೆಂದರೆ ದೇಹಕ್ಕೆ ದೋಷಹರವಾದ ಔಷಧಂಗಳ ಬಿಸಿಮಾಡಿ ಕಟ್ಟಿಸುವಣ (ವೈದ್ಯಸಾ. I, ೬೫). [ಸಂ.]

**ಉಪನಿದಿ** (ನಾ). ಅಲ್ಪ ನಿಧಿ; ಸಣ್ಣ ನಿಧಿ(?): ತೆಂಕಲು ರಾಜಗೊಂಡನ ಹಳ್ಳಿಯ ಗುಡದ ಒತ್ತಿನಲು ಉಪನಿದಿಗಳು ಹಾಕಿ ನಟ್ಟಿಹ ವಾಮನ ಮುದ್ರೆಯ ಕ × × × ಉಪನಿದಿಗಳು ಹಾಕಿ ನಟ್ಟ ವಾಮನಮುದ್ರೆ (ಸೌಇಇ. IX-ii, ೪೪೦-೧೮; 1419). [< ಸಂ. ಉಪನಿಧಿ ?]

**ಉಪನಿಧಿ** (ನಾ). ಕೇಳಿದಾಗ ತಿರುಗಿ ಕೊಡುವಂತೆ ಹೇಳಿ ಒಬ್ಬರಲ್ಲಿಟ್ಟ ವಸ್ತು; ನ್ಯಾಸ; ಸಮಯಕ್ಕೆ ಒದಗಲೆಂದು ಬೇರೆಯವರಿಗೆ ತಿಳಿಯದಂತೆ ಬಚ್ಚಿಟ್ಟ ವಸ್ತು; ಬೈಕೆ: "ಸುನಿಹಿತನಿಕ್ಷೇಪಮಂತದುಪನಿಧಿಯೆನಿಕ್ಕುಂ" (ವಸ್ತುಕೋ. ೨೮-೧೨); "ನಿಕ್ಷೇಪಃ, ಉಪನಿಧಿಃ—ಈ ೨ ಬಯ್ಕೆ" (ಹಲಾಯು. ೧೪-೮೨). [ಸಂ.]

**ಉಪನಿಬಂಧನೆ** (ನಾ). ಉಪನಿಯಮ; ಒಳನಿಬಂಧನೆ. [ಸಂ.]

**ಉಪನಿವೇಶ** (ನಾ). ಉಪನಗರ. [ಸಂ.]

**ಉಪನಿಷತ್ತು** (ನಾ). ವೇದವಾಙ್ಮಯದಲ್ಲಿ ಬ್ರಹ್ಮನ ಸ್ವರೂಪವನ್ನು ನಿರೂಪಿಸುವ ಜ್ಞಾನಕಾಂಡ; ವೇದಾಂತ ವಿಭಾಗ: "ಉಪನಿಷತ್ತುಗಳಿಗೆ ವೇದಾಂತವೆಂದು ನಾಮಧೇಯ. ಉಪನಿಷತ್ತು ಎಂದರೆ ಪರಬ್ರಹ್ಮನ ಸ್ವರೂಪವನ್ನು ಸ್ಪಷ್ಟವಾಗಿ ತಿಳಿಸುವ ಗ್ರಂಥಗಳೆಂದು ಅರ್ಥ" (ಹಿಂದಸಾ. ೧೮೩); ವೇದದಱಿಕೆಗಳಡಗದುಪನಿಷದಾದಿ ದಿವ್ಯಸ್ತುತಿಯ ಗಡಣೆಗೆ ಹೋದ ಹೊಲಬಳವಡದ . . . ಅನಾದಿಸಿದ್ಧನ ಬರವ ಕಂಡನು ಬಾಗಿಲಲಿ ವಿದುರ (ಕುವ್ಯಾಉ. ೮-೯). [ಸಂ. ಉಪನಿಷತ್]

**ಉಪನಿಷದ್ವ್ರತ** (ನಾ). ನಾಲ್ಕು ವಿಧವಾದ ವೈದಿಕವ್ರತಗಳಲ್ಲಿ ಒಂದು: ಮಹಾನಾಮ್ನೀವ್ರತ, ಮಹಾವ್ರತ, ಉಪನಿಷದ್ವ್ರತ, ಗೋದಾನವ್ರತ ಈ ನಾಲ್ಕೂ ವೇದವ್ರತಗಳು (ಆರ್ಯಧ. ೧೨೭). [ಸಂ. (ಉಪನಿಷತ್ + ವ್ರತ)]

**ಉಪನಿಷ್ಕರ** (ನಾ). ಮುಖ್ಯವಾದ ರಸ್ತೆ; ರಾಜಮಾರ್ಗ: "ಉಪನಿಷ್ಕರ—ದುರ್ಗವಾದ ರಾಜಧಾನಿಗೆ ಹೋಗತಕ್ಕ ರಾಜಮಾರ್ಗಕ್ಕೆ ಹೆಸರು" (ಸಿದ್ಧಾಂಶಿ. ೮೭). [ಸಂ.]

**ಉಪನೀತ** (ಗು). ಹತ್ತಿರಕ್ಕೆ ತರಲ್ಪಟ್ಟ; ಸಮೀಪಕ್ಕೆ ತಂದ: ಪರಿವಾರಜನೋಪನೀತ ಚಂದನ ಕರ್ಪೂರ ಮಿಶ್ರಿತ ಹಿಮಶಿಶಿರಧಾರಾ ಪರಿಷೇಕದಿಂ (ಪಂಪಭಾ. ೧೩-೨ ವ). [ಸಂ.]

**ಉಪನೀಯಮಾನ** (ಗು). ಹತ್ತಿರಕ್ಕೆ ಒಯ್ಯಲ್ಪಡುತ್ತಿರುವ; ಸಮೀಪಕ್ಕೆ ತರಲ್ಪಡುತ್ತಿರುವ: ಮುನಿಜನ ಪೂಜಾನ್ನದಾನಾದಿಕರಣ ಜಿನಗೃಹಜನ ಸತತೋಪನೀಯಮಾನ ಪಾದ್ಯ ಗಂಧಾಕ್ಷತ ಕುಸುಮ ಚರು ಧೂಪ ದೀಪ ಫಲಾದ್ಯರ್ಚನಾತ್ಮಕಮಪ್ಪ ನಿತ್ಯಮಹಮುಂ (ಆದಿಪು. ೧೫-೧೩). [ಸಂ.]

**ಉಪನೇತ್ರ** (ನಾ). ಕನ್ನಡಕ; ಸುಲೋಚನ: ಅಮೃತಕಣವಂ ಮತ್ರ್ಯಮೃಢಘಟದಿ ಬಯ್ತುರಿಸಿ ವಿಮೃಶಬುದ್ಧಿಗೆ ಮೋಹದುಪನೇತ್ರವಿಡಿಸಿ ಸಾಮ್ರಾಜ್ಯಮಧ್ಯದಲಿ ದುರ್ಭಿಕ್ಷವಾಗಿಪುದು ಕಮೃತೆಯೊ ನಮ್ರತೆಯೊ (ಮಂಕುತಿ. ೧೯೦); ನಿಮ್ಮ ಮೂಗಿನ ಮೇಲಿನ ಉಪನೇತ್ರವನ್ನಷ್ಟು ಎಚ್ಚರದಿಂದ ಕಾಪಾಡಿಕೊಳ್ಳಿರಿ (ಕಳ್ಳಕಾ. ೫೨). [ಸಂ.]

**ಉಪನ್ಯಸನ** (ನಾ). = ಉಪನ್ಯಾಸ ೩. 'ಉಪನ್ಯಸಿಸು' ಪರಾ. [ಸಂ.]

**ಉಪನ್ಯಸಿಸು** (ಕ್ರಿ). ಉಪನ್ಯಾಸಮಾಡು; ಭಾಷಣಮಾಡು: ಉಪನ್ಯಾಸಕರು ಯಾವ ವಿಷಯವನ್ನೇ ತೆಗೆದುಕೊಳ್ಳಲಿ . . . ತೃಪ್ತಿಯಾಗುವಷ್ಟು ವಿಸ್ತಾರವಾಗಿ ಉಪನ್ಯಸಿಸುವುದು ಸಾಧ್ಯವಿಲ್ಲ (ಸಾಹಿಶ. ೫೩). [ಉಪನ್ಯಸನ + –ಇಸು]

**ಉಪನ್ಯಸ್ತ** (ಗು). ವಿವರಿಸಿ ಹೇಳಲ್ಪಟ್ಟ; ವ್ಯಾಖ್ಯಾನಮಾಡಲ್ಪಟ್ಟ: ಸಮ್ಯಗ್ದರ್ಶನವಿಷಯಭಾವದಿಂ ಉಪನ್ಯಸ್ತ ಜೀವಾದಿ ತತ್ತ್ವಾರ್ಥಾದಿಯೊಳ್ ಉಕ್ತ ಜೀವಕ್ಕೆ ಆತ್ಮತತ್ತ್ವಮಿದೆಂದು ಪೇೞ್ದಪರ್ (ತತ್ತ್ವಪ್ರ. ೭೮). [ಸಂ.]

**ಉಪನ್ಯಾಸ** (ನಾ). ೧. ಹತ್ತಿರದಲ್ಲಿ ಇಡುವಿಕೆ. ೨. ಸಲಹೆ; ಸೂಚನೆ. ೩. ಅರ್ಥವಿವರಣೆ; ವ್ಯಾಖ್ಯಾನ; ಭಾಷಣ: "ಉಪನ್ಯಾಸಃ, ವಾಙ್ಮುಖಂ – ವಾಕ್ಯಾರಂಭದ ಹೆಸರುಗಳು" (ಸಿದ್ಧಾಂತಿ. ೪೮); ಸರಸಕವಿತಾರಚನೆಯಲಿ ವಿಸ್ತರದುಪನ್ಯಾಸದಲಿ ಭೂಪತಿ ಕರೆಸಿ ನೋಡಲಿ ನಮ್ಮನೆಂದರು ದ್ವಿಜರು (ಕುವ್ಯಾಆ. ೧೫–೬). ೪. [ರಾಜನೀ] = ಉಪನ್ಯಾಸಸಂಧಿ: ಸಂಗತ ಉಪನ್ಯಾಸ ಪ್ರತೀಕಾರ . . . ಷೋಡಶವಿಧಮಕ್ಕುಂ (ಪಂಚತಂ. ೨೨೦–೩).

ಉಪನ್ಯಾಸಕೊಡು = ಭಾಷಣಮಾಡು: "ನೀನೇ ಯಾವುದಾದರೂ ವಿಷಯ ಹೇಳಯ್ಯಾ, ಅದರ ಮೇಲೇ ಉಪನ್ಯಾಸಕೊಡುತ್ತೇನೆ" ಎಂದರು (ರಾಯಕ. ೯೧). ಉಪನ್ಯಾಸಮಾಡು = ಉಪನ್ಯಸಿಸು: ಅರ್ಧಗಂಟೆ, ಮುಕ್ಕಾಲುಗಂಟೆಯ ಹೊತ್ತು ಉಪನ್ಯಾಸಮಾಡುವುದು . . . ನಮ್ಮ ಉದ್ದೇಶ (ಸಾಹಿಶ. ೫೨). [ಸಂ.]

**ಉಪನ್ಯಾಸಕ** (ನಾ). ಭಾಷಣಕಾರ: ಶ್ರೋತೃಗಳ ಮನಸ್ಸಿಗೆ ಹಿಡಿಯಬೇಕೆನ್ನುವುದು ಉಪನ್ಯಾಸಕರ ಉದ್ದೇಶವಾಗಿರುತ್ತದೆ (ರೂಢಿ). [ಸಂ.]

**ಉಪನ್ಯಾಸಕಾರ** (ನಾ). = ಉಪನ್ಯಾಸಕ: ಈಗ ಉಪನ್ಯಾಸಕಾರರಿಗೆ ಕೊರತೆಯಿಲ್ಲ (ರೂಢಿ). [ಸಂ.]

**ಉಪನ್ಯಾಸಮಾಲೆ** (ನಾ). ಭಾಷಣಗಳ ಸರಣಿ: ಉಪನ್ಯಾಸಮಾಲೆಯ ಜೊತೆಯಲ್ಲಿ ಗ್ರಂಥಪ್ರದರ್ಶನವೊಂದನ್ನು ನಡೆಸಿದರೆ ಉಪಯೋಗವಾಗಬಹುದು (ಸಾಹಿಶ. ೫೫); ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸಮಾಲೆ (ರೂಢಿ). [ಉಪನ್ಯಾಸ + ಮಾಲೆ]

**ಉಪನ್ಯಾಸಸಂಧಿ** (ನಾ). [ರಾಜನೀ] ವಿರೋಧಿಗಳೊಡನೆ ಮಾಡಿಕೊಳ್ಳುವ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು ಬಗೆ; ತನ್ನ ಕಾರ್ಯಸಿದ್ಧಿಯನ್ನುದ್ದೇಶಿಸಿ ಮಾಡಿಕೊಳ್ಳುವ ಸಂಧಿ: ಭಾವಿಯಪ್ಪೇಕಾರ್ಥಸಿದ್ಧಿಯನುದ್ದೇಶಂಗೆಯ್ದು ನಡೆವುದು ಉಪನ್ಯಾಸಸಂಧಿಯೆಂಬುದಕ್ಕುಂ (ಪಂಚತಂ. ೨೨೦–೩). [ಉಪನ್ಯಾಸ + ಸಂಧಿ]

**ಉಪಪತಿ** (ನಾ). ಗಂಡನಲ್ಲದಿದ್ದರೂ ಗಂಡನಂತೆ ವರ್ತಿಸುವವನು; ಮಿಂಡ: "ಜಾರಃ, ಉಪಪತಿಃ – ಈ ೨ ಹಾಹರಿಗಂ" (ಹಲಾಯು. ೬೩–೨೭೯); ಆ ಮಹಾಪಾತಕಿ ಮುನ್ನುಪಪತಿಯಿಂ ಪತಿಯಂ ಕೊಲಿಸಿ ಪುತ್ರವಧೆಗಂ ಬಟಿಕ್ಕೆ ಬಗೆಯಂ ತಂದಳ್ (ಪಂರಾಮಾ. ೮–೫೧). [ಸಂ.]

**ಉಪಪತ್ತಿ** (ನಾ). ೧. ಒಂದು ಸಿದ್ಧಾಂತವನ್ನು ಸಮರ್ಥಿಸುವುದಕ್ಕಾಗಿ ಮಾಡುವ ತರ್ಕ, —ಸಾಧನ, —ಯುಕ್ತಿ: ಪರಪಕ್ಷದೂಷಣಪುರಸ್ಸರಮನೇಕೋಪಪತ್ತಿಗಳಿಂ ಸ್ವಪಕ್ಷಸ್ಥಾಪನಂಗೆಯ್ದು . . . ಸಭಾಸದರಿಂ ಲಬ್ಧಪ್ರಶಂಸನಾಗಿ (ಆದಿಪು. ೨–೨೨ ವ); ಇನಿತುಪಪತ್ತಿಯಿಲ್ಲಿ ನಿತು ಬಿನ್ನಣಮಿಲ್ಲಿನಿತರ್ಥದೃಷ್ಟಿಯಿಲ್ಲ . . . ಪೆಱರ್ಗೆ (ಅಜಿಪು. ೧೨–೩೪). ೨. ಕಾರಣ; ಆಧಾರ; ರುಜುವಾತು. ೩. ಜೀವನಕ್ಕೆ ಆಧಾರವಾದುದು; ಜೀವನೋಪಾಯ: ಅವನ ಕುಟುಂಬಭರಣಕ್ಕೆ ಬೇಕಾದ ಉಪಪತ್ತಿಯನ್ನು ಕಲ್ಪಿಸಿದನು (ಛತ್ರಶಿ. ೧೦೩). [ಸಂ.]

**ಉಪಪತ್ನಿ** (ನಾ). ಹೆಂಡತಿಯಲ್ಲದಿದ್ದರೂ ಹೆಂಡತಿಯಂತೆ ವರ್ತಿಸುವವಳು; ಮಿಂಡಿ; ಬಂಗಾರದವಳು: ತನ್ನ ಅದೃಷ್ಟದಲ್ಲಿ ಉಪಪತ್ನಿಯೋಗವಿದ್ದರೆ ಅದೂ ಆಗಿಬಿಡಲಿ (ದೇವಹಂ. ೧೧೪). [ಸಂ.]

**ಉಪಪದ** (ನಾ). ಮುಖ್ಯಪದದ ಸಂಗಡ ಬರುವ ಪದ. [ಸಂ.]

**ಉಪಪನ್ನ** (ಗು). ೧. ಉಂಟಾದ; ಕೂಡಿರುವ: ಲೋಕಾಂತಿಕದೇವರ್ ವೈಮಾನಿಕರಾಗಿಯುಂ ಕಲ್ಪೋಪಪನ್ನರೆಂಬುದಂ ಪೇೞಲೆಂದು ಬಂದುದುತ್ತರಸೂತ್ರಂ (ತತ್ತ್ವಪ್ರ. ೨೨೧). ೨. ತಕ್ಕ; ನ್ಯಾಯವಾದ; ಹೊಂದತಕ್ಕ: ಸಮೀಚೀನನಾನಾವರ್ಣೋಪಚಿತಾಸ್ತರಣೋಪಪನ್ನಪ್ರಚ್ಛದಾಚ್ಛಾದಿತಾಸನದೊಳ್ ಕುಳ್ಳಿರ್ದು (ಶಾಂತಿಪು. ೫–೯೪ ವ). (ನಾ). ೩. ಹಣವಂತ; ಧನಿಕ: ಉಪಪನ್ನರಾದ ವಿದ್ಯಾರ್ಥಿಗಳು ತಾವು ಶಿಕ್ಷಿತರಾದ ತರುವಾಯ ತಮ್ಮ ತಮ್ಮ ಯೋಗ್ಯತಾನುಗುಣವಾಗಿ ಗುರುದಕ್ಷಿಣೆಯನ್ನು ಒಪ್ಪಿಸುತಲಿದ್ದರು (ಮಹಾವಂ. II, ೫೧); ಅವನು ಅಷ್ಟೇನೂ ಉಪಪನ್ನನಲ್ಲದಿದ್ದರೂ ಸಮಾಜದಲ್ಲಿ ಗಣ್ಯವ್ಯಕ್ತಿಯಾಗಿದ್ದನು (ಬಂಕಿಮ. ೧೦). [ಸಂ.]

**ಉಪಪನ್ನಮಂತ್ರ** (ನಾ). ತಕ್ಕ ಆಲೋಚನೆ; ಸಮಯೋಚಿತವಾದ ತಿಳಿವಳಿಕೆ: ಅನ್ನಿಗರಿಗಜುಹದಿರು ನಮ್ಮವರೆನ್ನದಿರು ವಿದುರಾದಿಗಳನುಪಪನ್ನಮಂತ್ರವನಜುಹು ಬೊಪ್ಪಂಗೆಂದನವನೀಶ (ಕುವ್ಯಾಸ. ೧೨–೨೦). [ಉಪಪನ್ನ + ಮಂತ್ರ]

**ಉಪಪಾತ** (ನಾ). ಆಕಸ್ಮಿಕ ಘಟನೆ; ಅಪಘಾತ; ವಿನಾಶ. [ಸಂ.]

**ಉಪಪಾತಕ** (ನಾ). ಮಹಾಪಾತಕಕ್ಕಿಂತ ಕಡಮೆಯಾದ ಪಾಪ; ಹತ್ತು ವಿಧವಾದ ಪಾಪಗುಣಗಳಲ್ಲಿ ಒಂದು: ಉಪಪಾತಕವೆಂದು . . . ಪಾಪರಾಶಿಗಳೊಳು ದಶವಿಧಮಾಗಿ ಮುಖ್ಯಪಾಪಗುಣಂಗಳಿರ್ಕು (ವಿವೇಕ. ೧೮೩); ಮರ ಗಿಡ ಬಳ್ಳಿ ಪೈರು ಪಚ್ಚೆ ಧಾನ್ಯ ಇತ್ಯಾದಿಗಳ ಹಿಂಸೆಯೂ ಉಪಪಾತಕಗಳು (ಆರ್ಯಧ. ೭೬). [ಸಂ.]

**ಉಪಪಾತತಲ್ಪ, ಉಪಪಾತತಳ್ಪ** (ನಾ). [ಜೈನ] "ಕಲ್ಪಗಳಲ್ಲಿ ದಿವಿಜರು ಹುಟ್ಟುವ ಹಾಸಿಗೆ" (ಆದಿಪು. ಕೋಶ); ಜೈನಧರ್ಮಮಂ ಪತ್ತುವಿಡದೆ ನಡೆದು ಕಡೆಯೊಳಯ್ದನೆಯ ಕಲ್ಪದುಪಪಾತತಲ್ಪದೊಳ್ ದೇವನಾದೈ (ಪಂರಾಮಾ. ೬–೫೭ ವ); (ಪಂರಾಮಾ. ೪–೨೦ ನೋ). **ಉಪಪಾತತಳ್ಪ**: ಪಲಂಬರುಮತಿಕ್ರಾಂತೆಯರಾಗೆ ತತ್ಸಂತಾನದೊಳ್ ಶ್ರೀಪ್ರಭವಿಮಾನದೊಳುಪಪಾತತಳ್ಪತಳದ ಪೊರೆಯೊಳಂ . . . ಪೊರೆದು (ಆದಿಪು. ೨–೭೨ ವ). [ಉಪಪಾತ + ತಲ್ಪ]

**ಉಪಪಾತತಳ್ಪ** 'ಉಪಪಾತತಲ್ಪ' ನೋ.

**ಉಪಪಾತಶಯನ** (ನಾ). = ಉಪಪಾತತಲ್ಪ: ರತ್ನರಚನಾವಿಚಿತ್ರೋಪಪಾತಶಯನತಳದೊಳಂತರ್ಮುಹೂರ್ತದೊಳ್ ಪರ್ಯಾಪ್ತಿಯಂ ಕೈಕೊಂಡು (ಆದಿಪು. ೬–೩೭ ವ). [ಉಪಪಾತ + ಶಯನ]

**ಉಪಪಾದ** (ನಾ). [ಜೈನ] (ಗರ್ಭವಾಸವಿಲ್ಲದೆ) ಇದ್ದಕ್ಕಿದ್ದಂತೆ ಹುಟ್ಟುವುದು; ದೇವತೆಗಳು ಮತ್ತು ನಾರಕಿಗಳ ಸದ್ಯೋಜನನ. 'ಉಪಪಾದಜ' ಪರಾ. [ಸಂ.]

**ಉಪಪಾದಜ** (ನಾ). [ಜೈನ] ಉಪಪಾತಕಲ್ಪದಲ್ಲಿ ಹುಟ್ಟಿದವನು; ದೇವತೆ; ನಾರಕಿ: ಜರಾಯುಜಾಂಡಜ ಪೋತಂಗಳ್ ಗರ್ಭಸಂಭವಂ ದ್ಯಾನಿರಯೋದ್ಭೂತಮುಪಪಾದಜಂ ವಿಖ್ಯಾತಂ (ಸುಕುಮಾ. ೮–೯). [ಸಂ.]

**ಉಪಪಾದನೆ** (ನಾ). ವಿವರಣೆ; ಸಾಧನೆ. [ಸಂ. ಉಪಪಾದನ]

**ಉಪಪಾದಿಸು** (ಕ್ರಿ). ಸಮರ್ಥಿಸು; ಸಾಧಿಸು. [ಉಪಪಾದನ + –ಇಸು]

**ಉಪಸಾದುಕ** (ಗು). ೧. ಲಾಳ ಕಟ್ಟಿದ. (ನಾ). ೨. ತಾನಾಗಿ ಹುಟ್ಟಿದವನು ; ಸ್ವಯಂಭು ; ದೇವತೆ : "ದೇವರುಪಪಾದುಕರ್" (ಮಂಗರಾ. ೫೩–೧೧). [ಸಂ.]

**ಉಪಸಾಧ್ಯ** (ನಾ). ಸಾಧ್ಯ ; ಸಾಧಿಸಲ್ಪಡಬೇಕಾದ್ದು. [ಸಂ.]

**ಉಪಪುರಾಣ** (ನಾ). ಚಿಕ್ಕ ಪುರಾಣ. ℙ ವ್ಯಾಸರಚಿತವಾದ ಹದಿನೆಂಟು ಪುರಾಣಗಳಲ್ಲದೆ ಸನತ್ಕುಮಾರಪುರಾಣವೇ ಮೊದಲಾದ ಹದಿನೆಂಟು ಪುರಾಣಗಳು ಇವೆ. [ಸಂ.]

**ಉಪಪ್ರಚ್ಛದ** (ನಾ). ಸಣ್ಣ ಹೊದಿಕೆ, —ಹಚ್ಚಡ : ಪಯಃಪಯೋಧಿಫೇನಸಂಕಾಶದುಕೂಲೋಪಪ್ರಚ್ಛದಾಚ್ಛಾದಿತ ವಿಚಿತ್ರನೇತ್ರಂ (ಆದಿಪು. ೫–೨೨ ವ). [ಸಂ.]

**ಉಪಪ್ರದಾನ** (ನಾ). ಕಾರ್ಯಸಾಧನೆಗಾಗಿ ಕೊಡುವ ಹಣ ಮುಂತಾದುವು ; ಕಾಣಿಕೆ : ಕಿಡುಗುಮುಪಪ್ರದಾನದೆ ಧನಂ ನಿಜಸೈನಿಕಹಾನಿ ದಂಡದಿಂ (ಚಂದ್ರಪು. ೯–೧೧೮) ; ಆವರತಿಬಲಿಷ್ಠರಾದುದರಿಂ ಕಾಳಗಂ ಸಲ್ಲದುದರಿಂದುಪಪ್ರದಾನಮಾಡಲಕ್ಕುಂ (ಕಗವಿ. ೧೦೩ ರಾಜಾವ). [ಸಂ.]

**ಉಪಪ್ರಶ್ನೆ** (ನಾ). ೧. ಮುಖ್ಯವಾದ ಪ್ರಶ್ನೆಗೆ ಪೂರಕವಾದ ಪ್ರಶ್ನೆ, —ಚಿಕ್ಕ ಪ್ರಶ್ನೆ : ಮಾತುಗಳು ಅವನಿಂದ ಹೊರಬರಲು ಗೆಳೆಯರ ಎಷ್ಟೋ ಉಪಪ್ರಶ್ನೆಗಳು ಕಾರಣವಾಗಿದ್ದುವು (ಅಪನಾ. ೬೩). ೨. ಪ್ರಶ್ನೆಯ ಒಂದು ವಿಭಾಗ : ಈ ಕೆಳಗಿನ ಉಪಪ್ರಶ್ನೆಗಳಲ್ಲಿ ಐದಕ್ಕೆ ಉತ್ತರಿಸಿ (ರೂಢಿ). [ಸಂ. ಉಪಪ್ರಶ್ನ]

**ಉಪಪ್ಲವ** (ನಾ). ೧. ಆಕ್ರಮಣ ; ಮುತ್ತಿಗೆ ; ಧಾಳಿ : ಆ ಮಹಾಬಳನೊಳತಿಪ್ರತಾಪನೊಳುಪಪ್ಲವಮಂ ಬಗೆವೊಂ ಮಹೀಪತೀ (ಚಂದ್ರಪು. ೫–೩೬). ೨. ಅನಿಷ್ಟ ; ಕೇಡು ; ವಿಪತ್ತು : ಧರಣಿಯಮರರುಪಪ್ಲವವ ಪರಿಹರಿಸದಿರಲಾ ಪಾತಕಕೆ ಸಂಹರಣವುಂಟೇ ಶಾಸ್ತ್ರದೃಷ್ಟಿಯೊಳೆಂದು ಚಿಂತಿಸಿದ (ಕುವ್ಯಾ. ಆ. ೧೯–೬). ೩. (ಸೂರ್ಯಚಂದ್ರರಿಗೆ ಒದಗುವ) ಗ್ರಹಣ. ೨, ೩ : ಉಪಪ್ಲವಂ ಚಂದ್ರಾರ್ಕಬಿಂಬಗಳೊಳ್ . . . ಅಲ್ಲದೆ ಜನಪದಜನಂಗಳೊಳಿಲ್ಲ (ಜಗವಿ. ೨–೧ ವ). [ಸಂ.]

**ಉಪಬರ್ಹ** (ನಾ). ತಲೆದಿಂಬು ; ಒರಗುದಿಂಬು : "ಉಚ್ಛೀರ್ಷಕಂ, ಉಪಧಾನಂ, ಉಪಬರ್ಹಂ – ಈ ೩ ತಲೆಗಿಂಬು" (ಹಲಾಯು. ೫೨–೧೫೪) ; "ತಲೆಗಿಂಬದುಪಬರ್ಹಮುಪಧಾನಮಕ್ಕುಂ" (ಮಂಗರಾ. ೬೦–೧೬). [ಸಂ.]

**ಉಪಬಿಯ** (ನಾ). (ಅಗತ್ಯವಾದ) ಸಣ್ಣಪುಟ್ಟ ಖರ್ಚು ; ಚಿಲ್ಲರೆ ಖರ್ಚು : ಮಾನ್ಯದ ಸತ್ರದ ಧರ್ಮ್ಮಬ್ರಯದುಪಬಿಯದನ್ತನಿತುವೆಡೆಯ ಕೆಯ್ಯುತ್ತರೈನೂಱು (ಎಇ. XX, ೬–೪೫ ; 1012) ; ಮಹಾಜನಕ್ಕಂ ಪ್ರಜೆಗಂ ಮಾಡಿದ ವ್ಯವಸ್ಥೆಯುಂ ಧರ್ಮ್ಮಬ್ರಯದುಪಬಿಯದ ಮಾನ್ಯದ ಭೂಮಿ (ಎಇ. XX, ೬–೧೫ ; 1012). [< ಸಂ. ಉಪವ್ಯಯ]

**ಉಪಬೃಂಹಣ** (ನಾ). ೧. ಹೆಚ್ಚುವುದು ; ವರ್ಧನೆ : ಉತ್ತಮಕ್ಷಮಾದಿ ಭಾವನೆಯಿಂ ಆತ್ಮಧರ್ಮ ಪರಿವೃದ್ಧಿಕರಣಂ ಉಪಬೃಂಹಣಂ (ತತ್ತ್ವಪ್ರ. ೨೬೫). ೨. ಪುಷ್ಟೀಕರಣ ; ಪೋಷಣೆ. [ಸಂ.]

**ಉಪಬೃಂಹಣೆ** (ನಾ). = ಉಪಬೃಂಹಣ ೧ : ಉತ್ತಮಕ್ಷಮಾದಿ ದಶಭಾವನೆಯಿಂ ತನಗಂ ಪೆಱರ್ಗಂ ಧರ್ಮಮಂ ಪೆರ್ಚಿಸುವುದು ಉಪಬೃಂಹಣೆ (ಚಾವುಂಉ. ೨೬೧). [ಸಂ. ಉಪಬೃಂಹಣ]

**ಉಪಭಕ್ತಿ** (ನಾ). ಜೊತೆಗೂಡಿದ ಭಕ್ತಿ ; ಸಂಬಂಧಿಸಿದ ಭಕ್ತಿ : ಉಭಯಪ್ರಸಾದಸುರಂಗಸಂಯೋಗೋಪಭಕ್ತಿ ಜಗಂಗಳೊಳು ಪರಿಭಾವಿಸುವೊಡಿನ್ನುಂಟೆ (ಬಸವು. ೮–೨೬). [ಸಂ.]

**ಉಪಭಾಗ** (ನಾ). ವಿಭಾಗ ; ಒಳಭಾಗ. [ಸಂ.]

**ಉಪಭುಕ್ತ** (ಗು). ೧. ತಿನ್ನಲ್ಪಟ್ಟ ; ಸೇವಿಸಿದ : ಜನನ್ಯುಪಭುಕ್ತಾಹಾರಗರಣದಿಂ ಮೇಣ್ ಗರ್ಭಂ ಇದಱೊಳ್ ಪೊರ್ದಿ ಪುಟ್ಟುವುದು (ತತ್ತ್ವಪ್ರ. ೧೦೨). ೨. ಉಪಭೋಗಿಸಲಾದ ; ಅನುಭವಿಸಲಾದ. [ಸಂ.]

**ಉಪಭೃತ್ತು** (ನಾ). ಅರಳೀಮರದಿಂದ ಮಾಡಿದ ಯಜ್ಞಪಾತ್ರೆ ; ಯಾಗದಲ್ಲಿ ಹೋಮದ ತುಪ್ಪವನ್ನು ಇಟ್ಟುಕೊಳ್ಳುವ ಆಜ್ಯಪಾತ್ರೆ. [ಸಂ. ಉಪಭೃತ್]

**ಉಪಭೋಕ್ತೃ** (ನಾ). ಅನುಭವಿಸುವವನು ; ಭೋಗಿಸುವವನು. [ಸಂ.]

**ಉಪಭೋಗ** (ನಾ). ೧. ವಿಷಯಾನುಭವ ; ಸುಖಪಡುವಿಕೆ : "ನಿರ್ವೇಶಃ, ಉಪಭೋಗಃ – ಈ ೨ ಉಪಭೋಗಂ" (ಹಲಾಯು. ೧೨೪–೬೦) ; ವಿಚಿತ್ರಭೂಷಣ ಸುರಭಿವಿಲೇಪನ ಪ್ರಮುಖ ಭೋಗೋಪಭೋಗಂಗಳೊಳಂ (ಆದಿಪು. ೮–೩ ವ). ೨. ಮೈಥುನ ; ಸಂಭೋಗ. [ಸಂ.]

**ಉಪಭೋಗಿ** (ನಾ). ಅನುಭವಿಸುವವನು ; ಭೋಗಪಡುವವನು : ಶಿಲಾವ್ಯೂಢಸಂಚಯೋಪಭೋಗಿಜನನಿವಾಸಿಗಳಪ್ಪ ಸಂವಾಹಂಗಳುಮಂ (ಆದಿಪು. ೮–೬೩ ವ). [< ಸಂ. ಉಪಭೋಗಿನ್]

**ಉಪಭೋಗಿಸು** (ಕ್ರಿ). ೧. ಸುಖಪಡು ; ಅನುಭವಿಸು. ೨. ತಿನ್ನು ; ಸೇವಿಸು : ಕ್ಷುತ್ಪಿಪಾಸೆಗಳಿನಾಯಾಸಂಬಡದೆ ಮುನಿಜನೋಚಿತಮಪ್ಪ ನವಫಲಂಗಳನುಪಭೋಗಿಸೆಂದು ನುಡಿಯೆ (ಕಾದಂಉ. ೬೫೬) ; ವಿಷವನಣುವೆಂದಳುಕದುಪಭೋಗಿಸಲು ಕೊಲ್ಲದೆ ಬಿಡುವುದೇ (ಕುವ್ಯಾಆ. ೮–೨೮) ; ದೇವತ್ವಕ್ಕೆ ಗೌರವವನ್ನು ಸಲ್ಲಿಸಿ ಪ್ರಸಾದರೂಪದಲ್ಲಿ ನಾವು ಉಪಭೋಗಿಸುತ್ತೇವೆ. ಹಾಗೆ ಮಾಡದೆ ಉಪಭೋಗಿಸುವುದು ಅಪಹಾರವಾಗುವುದು (ಆರ್ಯಧ. ೨೦೧). [ಉಪಭೋಗ + –ಇಸು೩]

**ಉಪಭೋಗ್ಯ** (ಗು). ೧. ಅನುಭವಿಸಲು ಯೋಗ್ಯವಾದ : ಎನಗೊರ್ವಂಗುಪಭೋಗ್ಯಮಲ್ತು ವಸುಧಾಸಾಮ್ರಾಜ್ಯಂ (ಆದಿಪು. ೧೪–೩೧) ; ಇರುಳು ನಾನಾಸ್ವಪ್ನ ಕಾನನ ಗಿರಿ ಪರಿಭ್ರಮಣೈಕಚಿಂತಾಭರಿತನಾದೆನು ದೈವಕೃತ ಉಪಭೋಗ್ಯವೆನಗೆಂದ (ಕುವ್ಯಾಸ. ೧೩–೧೮). ೨. ಹಲವು ಸಾರಿ ಉಪಯೋಗಿಸಬಹುದಾದ : "ಯಾವ ವಸ್ತುಗಳನ್ನು ಒಂದೇ ಸರತಿ ಭೋಗಿಸಲಿಕ್ಕೆ ಬರುವುದೋ ಅವು (ಹೂವು, ಅನ್ನ ಇತ್ಯಾದಿ) ಭೋಗ್ಯವಸ್ತುಗಳು. ಯಾವ ವಸ್ತುಗಳನ್ನು ಹಲವು ಸಲ ಉಪಭೋಗಿಸಬಹುದೋ ಅವು (ವಸ್ತ್ರ, ಸ್ತ್ರೀ ಇತ್ಯಾದಿ) ಉಪಭೋಗ್ಯ ವಸ್ತುಗಳು" (ಜೈನಪ. ೪೭೦). [ಸಂ.]

**ಉಪಮಂತ್ರಿ** (ನಾ). = ಉಪಸಚಿವ : ವಿದ್ಯಾಇಲಾಖೆ ಉಪಮಂತ್ರಿಗಳು ಶಾಲೆಯ ಪ್ರಾರಂಭೋತ್ಸವ ನೆರವೇರಿಸುವರು (ರೂಢಿ). [ಸಂ.]

**ಉಪಮರ್ದ** (ನಾ). ಹಿಂಡುವುದು ; ಅಮುಕುವುದು ; ಕಿವುಚುವುದು : "ಉಪಮರ್ದಃ, ವಿಪ್ರಕಾರಃ – ಈ ೨ ಕಿವು(ಮು)ಚ್ಚುವುದು" (ಹಲಾಯು. ೧೨೬–೮೪). [ಸಂ.]

**ಉಪಮರ್ದನ** (ನಾ). = ಉಪಮರ್ದ. [ಸಂ.]

**ಉಪಮಾಕ್ಷೇಪ** (ನಾ). [ಕಾವ್ಯಮಿ] ಒಂದು ಅರ್ಥಾಲಂಕಾರ : ವರಹಂಸಕದಂಬಕಮದು ಶರದಂಬುದಮಲ್ತು ಮುಖರನೂಪುರಸಂವಾದಿರವಂ ನೆಗಟ್ದಪ್ಪುದು ಬಂಧುರಮದಱಿಂದಿದಱೊಳೆಂಬುದುಪಮಾಕ್ಷೇಪಂ (ಕವಿರಾ. ೩–೧೦೩). [ಸಂ. (ಉಪಮಾ + ಆಕ್ಷೇಪ)]

**ಉಪಮಾಖ್ಯಾತ** (ಗು). [ಕಾವ್ಯಮಿ] ಉಪಮೆಗಳಲ್ಲಿ ಪ್ರಸಿದ್ಧವಾದ, —ಉತ್ತಮವಾದ : ಅಳಿಗಳಿವು ಕಣ್ಗಳಲ್ಲಿವು ನಳಿನಮಿದೀ ವದನಮಲ್ತು ನಿಜಕಾಮಿನಿಯಾ ತಿಳಿದಿಂತು ಪೇೞ್ವೊಡಿದು ಮೊಕ್ಕಳಮುಪಮಾಖ್ಯಾತಮಪ್ಪ ತತ್ತ್ವಾಖ್ಯಾನಂ (ಕವಿರಾ. ೩–೭೬). [ಸಂ. (ಉಪಮಾ + ಆಖ್ಯಾತ)]

**ಉಪಮೊಗು** (ಕ್ರಿ). ಉಪಮೆಯಾಗು ; ಹೋಲುವೆಯಾಗು : ಭಟಕ್ಕರ್ಳನ್ನಿರಿದಸುಂಗೊಳೆ ಪೊನ್ನಿದ ಕೇಸವಯ್ಯನನಾರ್ಪೊಗಳರ್ನ್ನೆಗಟ್ಟಿಗುಪಮಾಗಿ ಜಸಂ ಭುವನಾನ್ತರಾಳದೊಳ್ (ಎಕ. III, ನಂಜನ. ೭೮–೧೮ ; ಸು. 900). [ಉಪಮೆ + ಆಗು$_1$]

**ಉಪಮಾತೀತ** (ಗು). ಹೋಲಿಕೆಗೆ ಮೀರಿದ; ಅಸದೃಶವಾದ : ಉಪಮಾತೀತಂ ಕೃತಿ ಶಾಂತಿಪುರಾಣಂ ಸಲೆ . . . ಮಲ್ಲಪಯ್ಯನುಂ ಪೊನ್ನಮಯ್ಯನುಂ ಪರೆಯಿಸಿದರ್ (ಶಾಂತಿಪು. ೧–೩೮).
[ಸಂ. (ಉಪಮಾ + ಅತೀತ)]

**ಉಪಮಾತೃ** (ನಾ). = ಉಪಮಾತೆ. [ಸಂ.]

**ಉಪಮಾತೆ** (ನಾ). ಸಾಕು ತಾಯಿ ; ದಾದಿ : "ಧಾತ್ರೀ, ಉಪಮಾತಾ—ಈ ೨ ದಾದಿ" (ಹಲಾಯು. ೮೪–೩೫೩); ಪುತ್ರಿಯ ಮನೋಭಿಪ್ರಾಯಮಂ ತಿಳಿಯಲೋಸುಗ ಪಂಡಿತೆಯೆಂಬ ಉಪಮಾತೆಯಂ ಕರೆಯಿಸಿ (ಪುರುಚ. ೨೬). [< ಸಂ. ಉಪಮಾತೃ]

**ಉಪಮಾದೀಕ್ಷೆ** (ನಾ). [ವೀಶೈ] ಪುರಾತನರ ಆಚಾರಕ್ಕೆ ಸದೃಶವಾಗಿ ನಡೆದುಕೊಳ್ಳಬೇಕೆಂದು ತಿಳಿಸಿಕೊಡುವ ದೀಕ್ಷೆ: "ಪುರಾತನರ ಸಮಯಾಚಾರಕ್ಕೆ ಸದೃಶಮಾಗಿ ಮಾಳ್ಪುದೇ ಉಪಮಾದೀಕ್ಷೆಯೆನಿಸುವುದು" (ವಿವೇಕ. ೧೧೪).
[ಸಂ. ಉಪಮಾದೀಕ್ಷಾ (ಉಪಮಾ + ದೀಕ್ಷಾ)]

**ಉಪಮಾನ** (ನಾ). ೧. ಹೋಲಿಕೆ ; ಸಾಮ್ಯ ; ಸಾದೃಶ್ಯ : ವಿವಿಧ ಭೇದ ಪಾರಾವಾರಂಗಳ ನೀರೆಲ್ಲಮಿಕ್ಷುರಸೋಪಮಾನಂ (ಸುಕುಮಾ. ೧೧–೫೬) ; ಭಂಡತನವೀ ಮಾತಿದಕ್ಕೆಯುಪಮಾನವೇ ಕೆಂಡವನು ಮುಟ್ಟಿದಡೆ ಬೇವಂತೆ (ಹಚಕಾ. ೧–೨೦). ೨. [ಕಾವ್ಯಮೀ] ಪ್ರಕೃತವಾದ ವಸ್ತು ಅಥವಾ ವಿಷಯಕ್ಕೆ ಕೊಡತಕ್ಕ ಹೋಲಿಕೆಯ ವಸ್ತು ಅಥವಾ ವಿಷಯ : ಉಪಮೇಯಂ ಗುಣಲೇಶದಿನುಪಮಾನಕ್ಕೆಣೆಗೆವರ್ಪೊಡುಪಮೆಯೆನಿಕ್ಕುಂ ವ್ಯುಪಸರ್ಗ ವಿಷಯರೂಪ ಪ್ರಪಂಚಿತಮನೇಕ ಭೇದಮದು ತಾನಕ್ಕುಂ (ಕಾವ್ಯಾವ. ೬೬೬). [ಸಂ.]

**ಉಪಮಾಲಂಕಾರ** (ನಾ). = [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು : "ಎರಡು ವಸ್ತುಗಳಿಗೆ ಪರಸ್ಪರವಾಗಿ ಇರುವ ಸಾದೃಶ್ಯ ಸಂಪತ್ತನ್ನು ಹೇಳುವುದು ಉಪಮಾಲಂಕಾರ" (ಕೈಪಿಡಿ. ೨೫೬).
[ಸಂ. (ಉಪಮಾ + ಅಲಂಕಾರ)]

**ಉಪಮಾವಾಚಕ** (ನಾ). ಹೋಲಿಕೆಯನ್ನು ಸೂಚಿಸುವ ಪದ. ಉದಾ : ಅಂತೆ, ಅಂತೆವೋಲ್. [ಸಂ. (ಉಪಮಾ + ವಾಚಕ)]

**ಉಪಮಿತ** (ಗು). ಹೋಲಿಸಲ್ಪಟ್ಟ ; ಉಪಮೇಯವಾದ : ಉಪಮಿತಭೇದೋಕ್ತಿಕ್ರಮಮುಪರಿಮಿತಾಖ್ಯಾಕೃತಿ ಪ್ರಯೋಗಾನುಗತಂ (ಕವಿರಾ. ೩–೯೮). [ಸಂ.]

**ಉಪಮಿತಾಕ್ಷರ** (ನಾ). ೧. ಹೋಲಿಕೆಯ ಅಕ್ಷರ, —ಪದ; ಉಪಮಾವಾಚಕ; ಅಂತೆ, ಅಂತೆವೋಲ್ ಮೊದಲಾದುವು. ೨. ಕಟ್ಟಿದ, ಬದ್ಧವಾದ ಅಕ್ಷರ : ಉಪಮಿತಾಕ್ಷರಮೆಲ್ಲಿಯುಮೇಕರೂಪಪರಿವೃತ್ತಿಯೊಳೊಂದಿದ ಮಾಟ್ಕೆಯಿಂದುಪಚಿತ ಕ್ರಮಮುಕ್ಕುಮಿದೆಂದುಮಭ್ಯುಪಗಮಕ್ಕೆ ಗುಣೋದಯಕಾರಣಂ (ಕವಿರಾ. ೧–೧೪೫).
[ಉಪಮಿತ + ಅಕ್ಷರ]

**ಉಪಮಿಸಗುಡು** (ಕ್ರಿ). ಹೋಲಿಕೆಗೆ ಅವಕಾಶವನ್ನು ಕೊಡು; ಹೋಲಿಸಲು ಎಡೆಗೊಡು : ಆ ಚಿತ್ರಲೇಖೆಗಟ್ಟುವಶನದಿ ಮಂತ್ರಿಸಿ ಮಹಾಜ್ವಾಲೆಯೊಳ್ ಕಟ್ಟುವಳ್ ಕಡುನಿಶಿಯಿಂದೆ ಅಟ್ಟುವುದಾ ಚಕ್ರಕೌಳಿಕವನು ಕಡಿದಟ್ಟುವುದುಪಮಿಸಗುಡದೆ (ಮೋಹತ. ೨೯–೩೦).
[ಉಪಮಿಸು + ಕುಡು$_1$ (< ಕೊಡು)]

**ಉಪಮಿಸು** (ಕ್ರಿ). ೧. ಹೋಲಿಸು ; ಸಾದೃಶ್ಯವನ್ನು ಹೇಳು : ಉಪಮಿಸಬಾರದ ಉಪಮಾತೀತರು ಕಾಲಕರ್ಮರಹಿತರು ಭವವಿರಹಿತರು . . . ಶರಣರು (ಬಸವ. ೮೬೩) ; ಅತ್ತಿಮಬ್ಬೆಯ ಶುಭ್ರಶೀಲವನ್ನುಪಮಿಸುವ ಈ ಪದ್ಯವಂತೂ ಧವಳೋಜ್ವಲಮೌಕ್ತಿಕ (ಸಮಾಲೋ. ೧೪೬). ೨. ವರ್ಣಿಸು : ಮಱುಗಿದಳು ದ್ರೌಪದಿ ದೃಗಂಬುಗಳೊಜತೆಯಲಿ ಸಹದೇವ ನಕುಳರಲಱಿಯೆನುಪಮಿಸಲವರ ಬಹುಳಾಕ್ರಂಧನ ಧ್ವನಿಯ (ಕುವ್ಯಾಕ. ೧೮–೨) ; ವಿಪುಳ ಸುತ ಪುತ್ರಾಭಿವೃದ್ಧಿಯನುಪಮಿಸಲ್ಕೊಲವಿಂದ . . . ಒದವಿಪನು (ಕೋಗಯ. ೨೬–೧೨೦). ೩. ಉಂಟಾಗು ; ಕಾಣಿಸಿಕೊಳ್ಳು : ತಪನನ ಮೆಯ್ಯೊಳ್ ಪುಗುಳುಗಳುಪಮಿಸೆ ಪಾವಕನ ತನುವಿನೊಳ್ ಸ್ಫೋಟಕವಾತಪದ ಕಡುಪಿಂದೆ ನೆಗೆತಂದಪುದೆನೆ ಬೇಸಗೆಯ ಬಿಸಿಲನದನೇನೆಂಬೆಂ (ಗಿರಿಕ. ೯–೨೬) ; ಶಂಭುಪುರಕ್ಕೆ ಗುರುವಾಜ್ಞೆಯಿಂದೆಮ್ಮ ಬಳಿಗೆ ಬಂದುಪಮಿಸಲು ಹರಸಮಾಧಿಯ ಪಡೆಯೆ (ರಾಘಚ. ೧೯–೬೯). [ಉಪಮೆ + –ಇಸು$_3$]

**ಉಪಮೆ** (ನಾ). ೧. ಹೋಲಿಕೆ; ಸಮಾನತೆ; ಸಾದೃಶ್ಯ. ೨. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು : ನಾನಾ ವಸ್ತುವಿಭೇದಮುಮೇನಾನುಂ ತೆಱದೆ ಪೋಲ್ಕೆಮಾಡುವುದುಪಮಾ (ಕವಿರಾ. ೩–೫೯). [ಸಂ. ಉಪಮಾ]

**ಉಪಮೆಗಾಣ್** (ಕ್ರಿ). ಹೋಲಿಕೆಯನ್ನು ಕಾಣು ; ಸಾದೃಶ್ಯವನ್ನು ತಿಳಿ : ಕಪಟವನು ಬಿಡರಾತ್ಮಬುದ್ಧಿಯೊಳುಪಮೆಗಾಣದೆ ನುಡಿದು ಪೊಳೆವರು . . . ನಿಪುಣೆಯರು (ನಳಚ. ೩–೨೪). [ಉಪಮೆ + ಕಾಣ್]

**ಉಪಮೆವೆಱು** (ಕ್ರಿ). ಹೋಲಿಕೆಯನ್ನು ಹೊಂದು ; ಸಾದೃಶ್ಯವನ್ನು ಪಡೆ : ಮೊಗದೊಳು ಪೊಡರ್ವ ಪುಣ್ಣಿಮೆಯ ಬೀಡು ವೀಕ್ಷಣದೊಳರಲಂಬು ಮಡದಿಯಿಂದುಟಿಯೊಳೆಳೆಪವಳಲತೆ ಕುರುಳೊಳಾಱಡಿ ಕಬರಿಯೊಳು ಸೋಗೆ ತಾವುಪಮೆವೆತ್ತು (ಸಾಳ್ವಭಾ. ೧೪–೧೮).
[ಉಪಮೆ + ಪೆಱು$_1$]

**ಉಪಮೇಯ** (ನಾ). [ಕಾವ್ಯಮೀ] ಹೋಲಿಸಲ್ಪಡಬೇಕಾದ ವಸ್ತು ಅಥವಾ ವಿಷಯ : ಉಪಮೇಯಂ ಗುಣಲೇಶದಿನುಪಮಾನಕ್ಕೆಣೆಗೆವರ್ಪೊಡುಪಮೆಯೆನಿಕ್ಕುಂ (ಕಾವ್ಯಾವ. ೬೬೬). [ಸಂ.]

**ಉಪಮೇಯೋಪಮೆ** (ನಾ). [ಕಾವ್ಯಮೀ] ಒಂದು ಅರ್ಥಾಲಂಕಾರ : ಎರಡುಂ ವಸ್ತುಗಳನೊಂದಕೊರ್ಂದನುಪಮಾನಂಗೆಯ್ದು ಪೇೞ್ವುದು ಉಪಮೇಯೋಪಮೆಯೆನಿಸುವುದು (ಅಪ್ರತಿ. ೨೯–೬) ; ಪರಸ್ಪರವಾಗಿ ಉಪಮಾನೋಪಮೇಯಭಾವವಿದ್ದಲ್ಲಿ ಉಪಮೇಯೋಪಮಾಲಂಕಾರ (ಕೈಪಿಡಿ. ೨೫೮). [ಉಪಮೇಯ + ಉಪಮೆ]

**ಉಪಮೋತ್ಪ್ರೇಕ್ಷೆ** (ನಾ). [ಕಾವ್ಯಮೀ] ಒಂದು ಅಲಂಕಾರ : ಈಕೆಯ ವದನಾಕಾರಮನೇಕಾಂತಂ ಪೋಲ್ವೆನೆಂಬುದರ್ಕಾಗಿ ಕನತ್ಕೋಕನದಕ್ಕಿಂದುಗಮುಂಟಾಕಾಂಕ್ಷಣಮದಱೊಳೆಂಬುದುಪಮೋತ್ಪ್ರೇಕ್ಷಂ (ಕವಿರಾ. ೩–೬೭). [ಸಂ. ಉಪಮೋತ್ಪ್ರೇಕ್ಷಾ (ಉಪಮಾ + ಉತ್ಪ್ರೇಕ್ಷಾ)]

**ಉಪಯಮ** (ನಾ). ಮದುವೆ ; ವಿವಾಹ : "ವಿವಾಹಃ, ಉಪಯಮಃ . . . ಪಾಣಿಪೀಡನಂ ೯ ಮದುವೆಯ ಹೆಸರು" (ಸಿದ್ಧಾಂತಿ. ೨೦೧) ; ಕೃಪನನುಜೆಯನು ತಂದು ದ್ರೋಣಂಗುಪಯಮವ ಮಾಡಿದರು (ಕುವ್ಯಾಆ. ೬–೨೩). [ಸಂ.]

**ಉಪಯಾಮ** (ನಾ). ಮದುವೆ ; ವಿವಾಹ : "ಉಪಯಾಮಃ, ಪರಿಣಯನಂ, ಪಾಣಿಗ್ರಹಣಂ, ವಿವಾಹಃ, ಉದ್ವಾಹಃ — ಈ ೫ ಮದುವೆ" (ಹಲಾಯು. ೮೧–೩೪೧). [ಸಂ.]

**ಉಪಯುಕ್ತ** (ಗು). ಉಪಯೋಗಿಸಲ್ಪಟ್ಟ ; ಅನುಭವಿಸಲ್ಪಟ್ಟ ; ಉಪಯೋಗಕ್ಕೆ ಬರುವ. [ಸಂ.]

**ಉಪಯೋಗ** (ನಾ). ಪ್ರಯೋಜನ; ಬಳಕೆ: ಈಚೆಗೆ ಪ್ಲಾಸ್ಟಿಕ್ಕಿನ ಉಪಯೋಗ ವಿಪರೀತವಾಗಿದೆ (ರೂಢಿ). [ಸಂ.]

**ಉಪಯೋಗಾಸ್ತ್ರ** (ನಾ). ಪರಿಣಾಮಕಾರಿಯಾದ ಬಾಣ (?): ನೃಪ ನಿನ್ನಂ ಪಿಡಿದುಯ್ದು ಭಾನುಮತಿಯಂ ಸಂತೈಸಿ ಚಿತ್ರಾಂಗದಂಗುಪ ಯೋಗಾಸ್ತ್ರಮನೆಚ್ಚು ಕೂಡೆ ನಭದಿಂ ಗಾಂಡೀವಿ ತರ್ಪಾಗಳ್ (ಗದಾಯು. ೨-೩೪). [ಉಪಯೋಗ + ಅಸ್ತ್ರ]

**ಉಪಯೋಗಿಸು** (ಕ್ರಿ). ೧. ಬಳಸು: ನಿರ್ವಿಕಾರ ಚಿತ್ತವೃತ್ತಿಗಳಪ್ಪ ಪಕ್ಷಿಗಳ ಪಸಿವುಂ ನೀರಟ್ಕೆಯುಮಾಗಲುಪಯೋಗಿಸದುದೊಂದುಮಿಲ್ಲ (ಕಾದಂಉ. ೭೫೭). ೨. ಕೆಲಸಕ್ಕೆ ಬರು; ಪ್ರಯೋಜನವಾಗು: ಮಹಾಸ್ತ್ರವಿದಾರು ಕಲಿಸಿದ ವಿದ್ಯವುಪಯೋಗಿಸಿತು ನಿನಗೆಂದ (ಕುವ್ಯಾದ್ರೋ. ೧೪-೧೫). [ಉಪಯೋಗ + -ಇಸು$_3$]

**ಉಪಯೋಗ್ಯ** (ಗು). ಬಳಸಲು ತಕ್ಕುದಾದ; ಪ್ರಯೋಜನಕ್ಕೆ ಬರುವ: ಯುಕ್ತವಾದ ತಪಕ್ಕುಪಯೋಗ್ಯಮಪ್ಪ ಕ್ರಿಯಾಕ್ರಮಮೆಲ್ಲಮ ನಾತ್ಮೀಯಂ ಮಾಡಿ (ಶಾಂತಿಪು. ೯-೨೭ ವ). [ಸಂ.]

**ಉಪರ** 'ಉಪಾರ' ನೋ.

**ಉಪರಕ್ತ** (ಗು). ೧. ನೋವಿಗೆ ಒಳಗಾದ; ದುಃಖಕ್ಕೆ ಗುರಿಯಾದ. ೨. ಗ್ರಹಣಹಿಡಿದ. ೩. ಕೆಂಪಾದ. [ಸಂ.]

**ಉಪರಕ್ಷಣ** (ನಾ). ಪಾಳಯದ ಸುತ್ತಲೂ ಇರುವ ಕಾವಲು; "ಪಾಳೆಯದ ಕಾಪು" (ನಾಚಿರಾ. ೬). [ಸಂ.]

**ಉಪರಚಿತ** (ಗು). ರಚಿಸಲ್ಪಟ್ಟ; ಬರೆಯಲ್ಪಟ್ಟ: ಮುನ್ನಂ ಪೇೞ್ದ ದರ್ಥಂ ಭಿನ್ನಪ್ರಸ್ತಾರಭಿತ್ತಿ ದೋಷಾನುಗತಂ ಸನ್ನುತಮಪರಾರ್ಥಂ ಸಂಪನ್ನಂ ಶ್ಲಿಷ್ಟಾಕ್ಷರೋಪರಚಿತಮದೋಷಂ (ಕವಿರಾ. ೧-೯೬). [ಸಂ.]

**ಉಪರಣೆ, ಉಪ್ಪರಣೆ** (ನಾ). (ಉಕ). ಮೇಲುಹೊದಿಕೆ; ಶಲ್ಯ; ಉತ್ತರೀಯ: ವ್ಯಕ್ತಿ . . . ಉಪರಣೆ ಹೊದ್ದುಕೊಂಡು ಮೆಟ್ಟಿಗಳನ್ನು ಮೆಟ್ಟಿದ್ದರು (ಸಮಜೀ. ೬೪೦); ಇದೀಗ ತನ್ನ ಸಮಯ ಬಂದಿತೆಂದು ರಾಘಪ್ಪ ಎದ್ದು ಉಪರಣೆ ಸರಿಪಡಿಸುತ್ತ ಅಂದನು (ಗಂಮಾಯಿ. ೧೦೯). **ಉಪ್ಪರಣೆ**: ಗೋವರ್ಧನನೂ ಉಪ್ಪರಣೆಯ ಸೆರಗಿನಿಂದ ಕಣ್ಣೊರಸಿ ಕೊಂಡ (ಎರಸಿ. ೪). [← ಮರಾ. ಉಪರಣಾ, ಉಪರಣೇ < ಸಂ. ಉಪಾವರಣ]

**ಉಪರತ** (ಗು). ೧. ಬಿಟ್ಟ; ದೂರೀಕರಿಸಿದ. ೨. ಸತ್ತ; ಮರಣ ಹೊಂದಿದ. (ನಾ). ೩. ವಿರಕ್ತ; ವಿಷಯಾಭಿಲಾಷೆಯಿಂದ ದೂರ ವಾದವನು. ೪. ಸಾವು; ಮರಣ. 'ಉಪರತವಶನಾಗು' ಪರಾ. [ಸಂ.]

**ಉಪರತವಶನಾಗು** (ಕ್ರಿ). ಮೃತ್ಯುವಶನಾಗು: ಮರವಟ್ಟನಂತೆಯುಂ ಯೋಗಸಮಾಧಿಸ್ಥಿತನಂತೆಯುಮುಪರತವಶನಾದಂತೆಯುಮಿರ್ದಂ (ಕಾದಂಪೂ. ೮೨೮). [ಉಪರತ + ವಶ + ಆಗು$_1$]

**ಉಪರತಿ** (ನಾ). ೧. ಬಿಡುವು; ಮುಲುಗಡೆ; ವಿರಾಮ. ೨. ಸಾವು; ಮರಣ; ಮೃತ್ಯು. ೩. ಆಸೆಯನ್ನು ತೊರೆಯುವುದು; ವೈರಾಗ್ಯ: ನಾಲ್ಕು ಪರಿಭೇದವೆಂಬುದೀಗಲಿಂತೀ ನಾಟಕ . . . ಭೋಗ ವೈರಾಗ್ಯ ಶಮೆ ದಮೆಯುಪರತಿ ತಿತಿಕ್ಷೆಯಾ ಶ್ರದ್ಧೆಯು (ವೀಶೈಪು. ೫-೧೧-೫); ಕನಕ ದಾಸನು . . . ಸಂಸಾರದ ಬಗ್ಗೆ ಉಪರತಿ ಹುಟ್ಟಿ ಭಕ್ತನಾದನೆಂದೂ ತೋರುತ್ತದೆ (ಕಸಾಚ. ೨೮೮). [ಸಂ.]

**ಉಪರತ್ನ** (ನಾ). ಪ್ರಧಾನವಲ್ಲದ ರತ್ನ (?): ಲೋಕದೊಳು ಪಂಚ ರತ್ನಗಳಿಗುಪರತ್ನಗಳನಾ ಕನ್ನಡದಿ ಕೇಳಿ ಲಾಲಿಪುದು (ರತ್ನಶಾ. ೨೨-೧). [ಸಂ.]

**ಉಪರಸ್ತೆ** (ನಾ). ಚಿಕ್ಕರಸ್ತೆ; ಕಾಲುಹಾದಿ: (ಸಂಚಾರ ಹೆಚ್ಚಾಗಿರುವ ರಸ್ತೆಯ ಭಾಗದ) ಉಪರಸ್ತೆ" (By-Pass. ಇಂಕನಿ). [ಉಪ$_0$ + ರಸ್ತೆ]

**ಉಪರಾಗ** (ನಾ). ೧. ಕಪ್ಪಾಗಿರುವಿಕೆ. ೨. (ಸೂರ್ಯ ಚಂದ್ರರ) ಗ್ರಹಣ: ೧,೨. ದಾನವರ ಪಂದಲೆಗಳ್ ರವಿಮಂಡಲಂಬರಂ ಪಾಯೆ ಬಿಸಿಲ್ ಪೊಡರ್ಪುಗಿಡೆ ಪಾಳಿಸಿದತ್ತುಪರಾಗಲೀಲೆಯಂ (ಪಂರಾಮಾ. ೧೩-೬೫). [ಸಂ.]

**ಉಪರಾಟಿ** (ನಾ). (ಉಕ). ಅಸ್ತವ್ಯಸ್ತ; ತಿರುವುಮುರುವು. [← ಮರಾ. ಉಫರಾಟಾ, ಉರಫಾಟಾ]

**ಉಪರಾಟಿಗಿ** (ನಾ). (ಉಕ). = ಉಪರಾಟಿ: ಊರಲ್ಲಿ ಉಪರಾಟಿಗಿ ಅಂದರೆ ಕೃಷ್ಣಾವತಾರವನ್ನು ತಾಳಿದ ಹಾಗೆ ಆಗಿರುವುದು (ಜನನಾ. ೯೩). [< ಉಪರಾಟಿ ?]

**ಉಪರಾಯಭಾರಿ** (ನಾ). ರಾಯಭಾರಿಗೆ ಎರಡನೆಯವನಾಗಿ ಕಾರ್ಯನಿರ್ವಹಿಸುವವನು. [ಉಪ$_0$ + ರಾಯಭಾರಿ]

**ಉಪರಾಷ್ಟ್ರಪತಿ** (ನಾ). ರಾಷ್ಟ್ರಪತಿಗೆ ಎರಡನೆಯವನಾಗಿ ಕಾರ್ಯ ನಿರ್ವಹಿಸುವವನು: ರಾಷ್ಟ್ರಪತಿಯವರು ತಮ್ಮ ಹಸ್ತಾಕ್ಷರದೊಡನೆ ಉಪರಾಷ್ಟ್ರಪತಿಯವರಿಗೆ ಪತ್ರ ಬರೆದು ತಮ್ಮ ಪದತ್ಯಾಗಮಾಡಬಹುದು (ಭಾಧಾನ. ೨೮). [ಸಂ.]

**ಉಪರಿ$_1$** (ಗು). ೧. ಮೇಲಿನ; ಮೇಲುಭಾಗದ. 'ಉಪರಿಜೀವಿ', 'ಉಪರಿಲೋಕ' ಪರಾ. (ನಾ). ೨. ಮೇಲುಭಾಗ: ಆೞದೆ ನಜೀದೆಂ ನಿನ್ನಂ ಚಾಣೂರಮುಷ್ಟಿಕಮಲ್ಲರಂ ಮುಜೀದುಪರಿಗಂ[ಪಾಠಾಂ. ಮುರಿದ ಪರಿಗಂ] ಧೀಂಕಿಟ್ಟು ಕಂಸನಂ ನೆಲಕಿಕ್ಕಿ ಮೇಲೆಜಿಗಿ ತುೞಿದುಂ (ಜಗವಿ. ೭-೩೦); ನವರತ್ನರಚಿತಹರ್ಮ್ಯದುಪರಿಯೊಳಾ ನೃಪತಿಯ ನಿಟ್ಟಿಸುತಾ (ಶ್ರೀಪಾಲ. ೪-೭೯); ಪಿಂಗಲ ಜಟಾಜೂಟದುಪರಿಯೊಳ್ ಗಿರಿ ಜಾತೆಯಂಗುಲಿಕ್ಷೇಪಮಂ ಮಾಡಲು (ವೀಶೈಪು. ೨-೬೮-೧). ೩. ಅಧಿಕ; ಹೆಚ್ಚು: ಭೂಮಿ ಉಪರಿಯಾಗಿದೆ (ರೂಢಿ). [ಸಂ.]

**ಉಪರಿ$_2$** (ಅ). ಬಳಿಕ; ಅನಂತರ: ಮೂದಲಿಸಿದುಪರಿಯೊಳ್ ಕೋಟಿ ದಿರ್ಪುದು ಶಂಭುಪಾದಭಕ್ತರ ಚಾಳಿಯಲ್ತು (ಪದ್ಮರಾ. ೪-೬೨); ಕಪಿ ಕುಲೇಂದ್ರನು ದಧಿಮುಖನ ಮಿಗಲುಪಚರಿಸಿ ಶೀಘ್ರದಲಿ ಕರತಹುದವರ ನೆಂದೆನಲೂ ಉಚರಿ ಬಂದನಿಲಜಗೆ ತಿಳುಹಲು (ಅನಂರಾ. ೪-೬-೧೨). [ಸಂ.]

**ಉಪರಿಜೀವಿ** (ನಾ). ಪರೋಪಜೀವಿ; "(ಪ್ರಾಣಿಯ ಮೈ ಮೇಲೆ ಜೀವಿಸುವ) ಉಪರಿಜೀವಿ" (Epizoom. ಇಂಕನಿ). [< ಸಂ. ಉಪರಿಜೀವಿನ್]

**ಉಪರಿತನ** (ನಾ). ಅಧಿಕ; ಹೆಚ್ಚು: ತ್ರಿಗುಣಿತ ದಶವಿಲಸಿತ ಲಘುಪರಿ ಮಿಳಿತಮುಪರಿತನ ಗುರುಶುಭಗಮಿದು ಶಿಖಾ (ಛಂದಸ್ಸಾ. ೪-೩೬). [ಉಪರಿ$_1$ + -ತನ]

**ಉಪರಿದೇಶ** (ನಾ). ಮೇಲಿನ ಪ್ರದೇಶ; ಮೇಲುಭಾಗ: ತರದೆ ಪೆಱ ತನ್ನ ಕಱೆಯಂ ಶಿರದೊಳ್ ತಾಳ್ದಿರ್ದುದೆನಿಸೆ ನಿಜನಿಟಿಲಂ ತಳ್ತುರುಳಿ ಗುರುಳ್ಗಳನಾತ್ಮೋಪರಿದೇಶದೊಳಾಂತುದಿಲ್ಲದೇಕಾರಣದಿಂ (ಚಂದ್ರಪು. ೩-೬೦). [ಉಪರಿ$_1$ + ದೇಶ]

**ಉಪರಿಮ** (ಗು). ೧. ಮೇಲುಭಾಗದ; ಮೇಲಿನ: ಅರೆಮುದ್ದಳೆಯು ಪರಿಮಭಾಗದೊಳೊಂದು ನೆಱಮುದ್ದಳೆಯನಿಟ್ಟಂತೆ (ಜ್ಞಾನಚ. ೧-೫೬). (ನಾ). ೨. ಮೇಲುಭಾಗ; ಊರ್ಧ್ವಭಾಗ: ಪ್ರತಿಮಾಯೋಗ ನಿಯುಕ್ತರೆಂಟುದಿವಸಂ ಕೈಯೆತ್ತಿ ವೆಂದಿರ್ದರಪ್ರತಿಮರ್ ಚಾರಣರಾ ನಗೋಪರಿಮದೊಳ್ (ಪಂರಾಮಾ. ೧೧-೫೮). [ಸಂ.]

**ಉಪರಿಮತಲ,** ಉಪರಿಮತಳ (ನಾ). ಮೇಲುಗಡೆಯ ಪ್ರದೇಶ: ಮಂಡಪದುಪರಿಮತಲದೊಳ್ ಕಂಡರಿಸಿದ ಖಚರಮಂಡಲಂ . . . ಸೊಗಯಿಸುಗುಂ (ಕಾದಂಪೂ. ೧೧೦೫). **ಉಪರಿಮತಳ:** ಒರ್ವಳುತ್ತುಂಗ ಪ್ರಾಸಾದೋಪರಿಮತಳದೊಳ್ ನಿಂದು (ಆದಿಪು. ೧೧–೧೭ ವ).
[ಉಪರಿಮ + ತಲ$_1$]

**ಉಪರಿಮತಳ** 'ಉಪರಿಮತಲ' ನೋ.

**ಉಪರಿಮಭೂಮಿ** (ನಾ). ಮೇಲುಭಾಗದ ಪ್ರದೇಶ: ನಳಿನಕೇತುವುಂ ತಾನುಂ ಪ್ರಾಸಾದದುಪರಿಮಭೂಮಿಯೊಳ್ ಇರ್ದು (ಶಾಂತಿಪು. ೯–೧೨ವ).
[ಉಪರಿಮ + ಭೂಮಿ]

**ಉಪರಿಲೋಕ** (ನಾ). ಮೇಲಿನಲೋಕ; ಸ್ವರ್ಗ: ಹಯಮುಪರಿಲೋಕದೊಳಶ್ವಪದವಿಯಂ ತಾನೊಲ್ಲೆನುಪಮೆಗೈದದ ಕೃಷ್ಣಸಾಯುಜ್ಯಮಂ ಪಡೆವೆನೆಂದೆಂಬುದೆನ್ನೊಳು (ಜೈಮಿಭಾ. ೩೪–೧೩).
[ಉಪರಿ$_1$ + ಲೋಕ]

**ಉಪರುಚಿ** (ನಾ). ಮರೆಯಾಗಿರುವುದು; ರಹಸ್ಯವಾದುದು: "ಉಪರುಚಿ [ಪಾಠಾಂ. ರೋಚಿ] ಪ್ರಚ್ಛನ್ನಮೇಕಾಂತಮೆಂದೆನಿಕ್ಕುಂ" (ಮಂಗರಾ. ೧೨೮–೧೦). [ಸಂ.]

**ಉಪರೋಧ** (ನಾ). ೧. ಅಡ್ಡಿ; ಅಡಚಣೆ; ವಿಘ್ನ: ವಿಟಬುದ್ಧಿ ಸಿರಿಗುಪರೋಧವೈ (ಕಬ್ಬಿಗ ಅ. ೧೩–೬೭). ೨. ಒತ್ತಾಯ; ಬಲಾತ್ಕಾರ: ಒರ್ವಳ್ ಕುಂಟಣಿಯುಪರೋಧಕ್ಕೆ ಪಿರಿದೀವ ಮುದುಪನನುಱಿಯಲಂಜಿ . . . ತನ್ನ ಬೇಸಱಿಂ ತನ್ನ ಸಬ್ಬವದಾಕೆಗಿಂತೆಂದಳ್ (ಪಂಪಭಾ. ೪–೯೯ ವ).
[ಸಂ.]

**ಉಪರೋಧಕ** (ಗು). ೧. ಅಡ್ಡಿಮಾಡುವ; ತಡೆಗಟ್ಟುವ. (ನಾ). ೨. (ಮನೆಯ) ಒಳಕೋಣೆ, ಕೊಠಡಿ. [ಸಂ.]

**ಉಪರೋಧಿಸು** (ಕ್ರಿ). ೧. ಅಡ್ಡಿಮಾಡು; ಪ್ರತಿಭಟಿಸು. ೨. ಒತ್ತಾಯಮಾಡು; ಬಲಾತ್ಕರಿಸು: ಅಂಜುಳಿಯಿಂ ಜಲಮಂ ತಂದು ದೇವಿಯರವಧಾರಿಸುವುದೆಂದು ಭೂಪನಿಳಿಂಪನನುಪರೋಧಿಸುತ್ತುಮೆಱೆಯೆ (ಕಾದಂಪೂ. ೭೦); ಗುರುಗಳ್ ಬಂದುಪರೋಧಿಸೆ ಗುರುವಚನಮಲಂಘನೀಯಮೆಂದೆಡೆಗೊಂಡಂ (ಅಜಿಪು. ೬–೩೭).
[ಉಪರೋಧ + –ಇಸು$_3$]

**ಉಪರೋಪಿತ,** ಉಪರೋಹಿತ (ನಾ). ನಗರದ ಹೊರಗಿನ ತೋಟ: "ಊರಿಂಗೆ ದೂರದೊಳಿರ್ದ ವನಮಂ ಉಪರೋ(ಪಿ)ಪಿತಮೆಂಬುದು" (ಹಲಾಯು. ೩೫–೫೫). **ಉಪರೋಹಿತ:** "ಊರದೂರದೊಳಿರ್ದ ವನಮದುಪರೋಹಿ [ಪಾಠಾಂ. ಪಿ] ತಂ" (ಮಂಗರಾ. ೪೫–೫೦). [ಸಂ.]

**ಉಪರೋಹಿತ** 'ಉಪರೋಪಿತ' ನೋ.

**ಉಪಲ,** ಉಪಳ (ನಾ). ಕಲ್ಲು; ಶಿಲೆ: ಗಗನತಳದೊಳ್ . . . ಏಕಖಂಡಾಖಂಡಲನೀಲೋಪಲ ನಿರ್ಮಿತಮುಂ (ಅಜಿಪು. ೭–೩೦ವ); ನೀಲಾಂಬರದೆ ವರ್ಷಮಯ ಧಾರೆಯಿಂದಿಂದ್ರಗೋಪಂಗಳಿಂ ಘನೋಪಲಗಳಿಂದಂ ಮುಂಗಾರ್ ಬಂದುದು (ಭಾವಚಂ. ೬–೨). **ಉಪಳ:** ಪೊಳೆವ ನವಚಂದ್ರಕಾಂತೋಪಳಮಂ ಕಂಡರಿಸಿ ಕಡೆದು (ಸುಕುಮಾ. ೧೨–೪೭).
[ಸಂ.]

**ಉಪಲಕ್ಷಣ** (ನಾ). ಸಮಾನವಾದುವುಗಳಲ್ಲಿ ಕೆಲವರ ಲಕ್ಷಣ ಹೇಳಿ ಬೇರೆಯದನ್ನು ಹಾಗೆಯೆ ತಿಳಿದುಕೊಳ್ಳಬೇಕೆಂದು ಸೂಚಿಸುವ ಕ್ರಮ: ನಯನಿಯೋಗ ವಿಕಲ್ಪನೆಯೊಳ್ ವಿಶಂಕೆಯ ವಿಶೇಷ ಗುಣಕ್ಕುಪಲಕ್ಷಣಂ (ಕವಿರಾ. ೧–೧೩೭); ಉಪಲಕ್ಷಣವಾಗಿ ಉಳ್ ಧಾತುಗೆ ದಪ ವಕಾರಂಗಳ್ ಮೂಱುಂ ನಿಷೇಧವೆಂಬುದರ್ಥಂ (ಶಮದ. ೨೪೫ ಅಡಿಟ). [ಸಂ.]

**ಉಪಲಕ್ಷಿತ** (ಗು). ೧. ದೃಷ್ಟಿಗೆ ಬಿದ್ದ; ಗೋಚರಿಸಿದ. ೨. ಗುರುತು ಮಾಡಿದ; ಗುರುತಾಗಿರುವ: ಶೋಣಾಕ್ಷೋಪಲಕ್ಷಿತ ನಿಜಪಿತೃಗೂತ ಕೇತನ ಕಥಿತಮಾಗಿರ್ದ ರಥಮನುಪಲಕ್ಷಿಸಿ ನೋಡಿ (ಪಂಪಭಾ. ೧೨–೬೦ ವ). ೩. ವಿಶಿಷ್ಟವಾದದ್ದು; ಸ್ಪಷ್ಟವಾದದ್ದು: ತಮಗಿದಿರಂ ಬರ್ಪ ಸೂರ್ಯಮಿತ್ರನಂ ಕಂಡು ತದಾಕಾರೋಪಲಕ್ಷಿತದಿಂದತ್ಯಾಸನ್ನ ಭವ್ಯನೆಂದು ನಿಶ್ಚಯ್ಸಿ (ಸುಕುಮಾ. ೬–೫ ವ). [ಸಂ.]

**ಉಪಲಕ್ಷಿಸು** (ಕ್ರಿ). ಗುರುತಿಸು; ಕಾಣು: ಆ ಗುರುವಿನ ಚಿತ್ತವೃತ್ತಿಯನದೆಂತುಪಲಕ್ಷಿಸಲಾರ್ತಯೊ ಮಹಾಪುರುಷ (ಆದಿಪು. ೧೦–೨); ಉಣ್ಮುವ ಕಣ್ಣನೀರಿನಂಕುರಿಸಿದ ಮೆಯ್ಯ ರೋಮದೊದವಿಂದುಪಲಕ್ಷಿಸೆ ಬರ್ಪುದಿಲ್ಲ (ಶಾಂತಿಪು. ೨–೨೨); ನಾಗಶ್ರೀಕನ್ನಿಕೆಯ ಮನದೊಳಾದುಪಶಮಮನುಪಲಕ್ಷಿಸಿ ಸಂಸಾರಸ್ವರೂಪಮನಿಂತೆಂದು ಬೆಸಸಿದರ್ (ಸುಕುಮಾ. ೬–೫ ವ); ವಕ್ಷೋಜ ಕುಚ ಸ್ತನಮುಪಲಕ್ಷಿಸೆ ಮೊಲೆ (ವಸ್ತುಕೋ. ೬೮–೮).
[ಉಪಲಕ್ಷಣ + –ಇಸು$_3$]

**ಉಪಲತಲ** (ನಾ). ಕಲ್ಲಿನ ಮೇಲುಭಾಗ: ತಮಾಲಪಾದಪದಪಲ್ಲವಮಂ ಹಿಳಿದೊಂದು ನಿರ್ಮಲೋಪಲತಲದಲ್ಲಿ ತದ್ರಸದಿನಾಗಳೆ ನೋಡಿ (ಕಾದಂಪೂ. ೭೯೭). [ಉಪಲ + ತಲ]

**ಉಪಲಬ್ಧ** (ಗು). ೧. ದೊರೆತ; ಪ್ರಾಪ್ತವಾದ: ಅನುಪಲಬ್ಧದೊಳಱಿತಮಂ ಮೆಱೆದುಪಲಬ್ಧದೊಳ್ ನಿಶ್ಚಯಗ್ರಾಹಿಯಾಗಿ (ಮಲ್ಲಿಪು. ೩–೧೧); ಈ ಯುಗದಲ್ಲಿ 'ಕವಿರಾಜಮಾರ್ಗ' ವೊಂದೇ ಉಪಲಬ್ಧವಾದ ಮತ್ತು ಅನೇಕ ದೃಷ್ಟಿಯಿಂದ ಬೆಲೆಯುಳ್ಳ ಗ್ರಂಥ (ಕಸಾಚ. ೪೫). (ನಾ). ೨. ಮತ್ತೆ ಕಣ್ಣಿಗೆ ಬಿದ್ದುದು; ಪ್ರಸಿದ್ಧವಾದುದು: "ಅವಗೀತಂ, ಮುಹುರ್ದೃಷ್ಟಂ, ಉಪಲಬ್ಧಂ – ಈ ೩ ಮಗುಳ್ಕಂಡುದು" (ಹಲಾಯು. ೧೨೪–೭೦). [ಸಂ.]

**ಉಪಲಬ್ಧಾರ್ಥ** (ನಾ). ನಡೆದ ಕಥೆಯನ್ನು ಹೇಳುವ ಗ್ರಂಥ: "ಆಖ್ಯಾಯಿಕಾ, ಉಪಲಬ್ಧಾರ್ಥಾ – ಸತ್ಯವಾದ ಚರಿತ್ರೆಗಳುಳ್ಳ ಗ್ರಂಥದ ಹೆಸರುಗಳು, ಅಂದರೆ ದಿಟವಾದ ಗ್ರಂಥ" (ಸಿದ್ಧಾಂತಿ. ೪೭). [ಉಪಲಬ್ಧ+ಅರ್ಥ]

**ಉಪಲಬ್ಧಿ** (ನಾ). ೧. ಪ್ರಾಪ್ತಿ; ಪಡೆಯುವಿಕೆ. ೨. ಆದಾಯ; ವರಮಾನ: ರಾಷ್ಟ್ರಪತಿಯವರು ಸಂಸತ್ತು ವಿಧಿದ್ವಾರಾ ನಿರ್ಧರಿಸಬಹುದಾದಂಥಾ ಉಪಲಬ್ಧಿಗಳನ್ನೂ . . . ಪಡೆಯಲು ಹಕ್ಕು ಹೊಂದಿರತಕ್ಕುದು (ಭಾಧಾನ. ೨೯). ೩. ಜ್ಞಾನ; ತಿಳಿವಳಿಕೆ: "ಪ್ರೇಕ್ಷಾ . . . ಸಂವಿತ್ತಿಃ, ಉಪಲಬ್ಧಿಃ – ಈ ೧೩ ಬುದ್ಧಿ" (ಹಲಾಯು. ೫೫–೧೬೯). [ಸಂ.]

**ಉಪಲಭ್ಯ** (ಗು). ೧. ಅರಿಯಬಹುದಾದ; ತಿಳಿಯಲು ಶಕ್ಯವಾದ. ೨. ಈಗಿರುವ; ಪ್ರಚಲಿತವಾದ. [ಸಂ.]

**ಉಪಲಸಿತ** (ಗು). ಕಾಂತಿಯಿಂದ ಕೂಡಿದ; ಪ್ರಕಾಶಮಾನವಾದ: ವೈಶದ್ಯದ್ಯೋತಿ ಚಂದ್ರೋಪಲಸಿತ ಭಸಿತಾನಂತಕಾಂತೋತ್ತಮಾಂಗಂ (ರಾಜಶೇ. ೧–೧). [ಸಂ.]

**ಉಪಲಾಭ** (ನಾ). ಗೌಣಲಾಭ; ಸ್ವಲ್ಪ ಆದಾಯ: ಬಲ್ಲವರು ಕೈವಲ್ಯಪದದಲಿ ನಿಂದು ನಿಜಲಾಭೋಪಲಾಭ [ಪಾಠಾಂ. ಭೋಗ]ದಲಿ ಎಲ್ಲ ಹರಿಮಯವೆಂಬ ಭಾವನೆ (ನಿಭಾಗ. ೨–೧–೩೫). [ಸಂ.]

**ಉಪಲಾಲನೆ** (ನಾ). ಪ್ರೀತಿಸುವುದು; ಮುದ್ದಾಡುವುದು: ಸರ್ವದೋಷ ಪ್ರದುಷ್ಟ ಗಜಂಗಳನುಪಲಾಲನೆಯೊಳ್ (ಶಾಂತಿಪು. ೩–೬೨ ವ).
[ಸಂ. ಉಪಲಾಲನ]

**ಉಪಲಾಲನೋಕ್ತಿ** (ನಾ). ಪ್ರೀತಿಯ ಮಾತು; ಮುದ್ದಿನ ಮಾತು: ಅಂತು ಮದೋಗ್ರಮುಂ ಅಖಿಲಲಕ್ಷಣಸಮಗ್ರಮುಮಾದ ಗಜಪತಿಯೊಳುಪಲಾಲನೋಕ್ತಿಗಳಂ ಪ್ರಯೋಗಿಸುವುದುಂ (ಚಂದ್ರಪು. ೯–೯೪ ವ).
[ಉಪಲಾಲನ$_1$ + ಉಕ್ತಿ]

**ಉಪಲಾಲಿತ** (ಗು). ಪ್ರೀತಿಸಲ್ಪಟ್ಟ; ಮುದ್ದಾಡಿದ: ಜನಪ ಕೇಳು ಪಲಾಲಿತಾಂಜನವೆನೆ ಜಿತಾಕ್ಷ ವಿಪಕ್ಷವಾದವು ವಿನುತ ಕರ್ಣ ಪ್ರಣಯಗಳು ವೃಷಸೇನ ವೈರದಲಿ (ಕುವ್ಯಾ.ಅ. ೧೩-೨೦); ಹರಿ ನಿಜಜ್ಞಾನೋಪಲಾಲಿತ ಪರತರಾನಂದಾನುಭವವಿನಿತಿರದೆ ವಿಸ್ತರವೆನಲು ವರ್ಣಿಸತಕ್ಕುದಿದಜಕೊಳಗೆ (ನಿಭಾಗ. ೧-೧-೧೦). [ಸಂ.]

**ಉಪಲಾಲಿಸು** (ಕ್ರಿ). ೧. ಪ್ರೀತಿಸು; ಮುದ್ದುಮಾಡು: ಈ ಪರಿಯೊಳನವರತಮುಂ ಸತಿಯೋಪ ಶಿವನಂ ತನಯನೆಂದೇ ರೂಪಿಸುತ್ತುಪಲಾಲಿಸುತ ಕೊಂಡಾಡುತಿರಲಾಗಿ (ಬಸವು. ೧೫-೧೫). ೨. ಹೊಗಳು; ಪ್ರಶಂಸಿಸು: ಮಂಗಳಪ್ರದವಾಗಿ ಸಂದಿತು ಸಂಗಮೇಶ್ವರ ಬಸವ ನಿನಗೆನುತಂಗಜಾಂತಕಭಕ್ತರತಿ ಉಪಲಾಲಿಸುತ್ತಿರಲು (ಬಸವು. ೩೬-೬೧); ಕೇಳು ಜನಮೇಜಯ ಧರಿತ್ರೀಪಾಲ ಧರ್ಮಜನರ್ಜುನನನುಪಲಾಲಿಸಿದ ನುಡಿ ಮುಳುಗಿದನು ಪುಳಕಾಶ್ರುಪೂರದಲಿ (ಕುವ್ಯಾ.ಅ. ೧೨-೧). [ಉಪಲಾಲನ + -ಇಸು]

**ಉಪಲಾಸಿತ** (ಗು). ಅಲಂಕರಿಸಲ್ಪಟ್ಟ: ವನಸ್ಪತಿಪರಿಚ್ಛದಾಯಮಾನ ಪಲ್ಲವೋಪಲಾಸಿತ [ಪಾಠಾಂ. ಪಲ್ಲವೋಲ್ಲಾಸಿತ] ಗುಚ್ಛಾಚ್ಛಾದನ (ಶಾಂತಿಪು. ೬-೧೪೩ ವ). [ಸಂ.]

**ಉಪಲಿಂಗ** (ನಾ). ಕಾಟ; ಹಿಂಸೆ; ತೊಂದರೆ: "ಉಪಲಿಂಗಂ, ಅರಿಷ್ಟಂ, ಉಪಸರ್ಗಃ ... ವಿಪ್ಲವಃ - ಈ ೧೦ ಉಪದ್ರವಂ" (ಹಲಾಯು. ೨೧-೧೨೬). [ಸಂ.]

**ಉಪಲಿಕೆ** 'ಉಪ್ಪಲಿಗ' ನೋ.

**ಉಪಲಿಗ** 'ಉಪ್ಪಲಿಗ' ನೋ.

**ಉಪಲಿಪ್ತ** (ಗು). ಬಳಿದ; ಸವರಿದ; ಲೇಪಿಸಿದ: ಕೋಪಾಗ್ನಿ ಶಿಖಾರೋಚಿಃ ಪಟಲೋಪಲಿಪ್ತಮೆನಿಸಿದುದಾಗಳ್ (ಶಾಂತಿಪು. ೪-೬). [ಸಂ.]

**ಉಪಲೆ** (ನಾ). ೧. "ಬೆಣಚುಕಲ್ಲು" (ಅಮರ. ಟೀಕೆ). ೨. ಕಲ್ಲುಸಕ್ಕರೆ. [ಸಂ. ಉಪಲಾ]

**ಉಪಲೇಪನ** (ನಾ). ೧. ಬಳಿಯುವುದು; ಸವರುವುದು. ೨. (ಗಾಯಗಳಿಗೆ) ಬಳಿಯುವ ಮುಲಾಮು, ಗಂಧ, ಔಷಧಿ ಮುಂತಾದುವು. [ಸಂ.]

**ಉಪವನ** (ನಾ). ಊರಿನ ಸಮೀಪದಲ್ಲಿರುವ ತೋಟ: "ಆರಾಮಃ, ಉಪವನಂ - ಈ ೨ ಅರವೆ" (ಹಲಾಯು. ೩೫-೫೯); "ಊರ ಸಾರಿಪ್ಪ ವನಮಾರಾಮಮುಮುಪವನಂ" (ಮಂಗರಾ. ೪೫-೫೦); ಬರಿಪೆನಮೋಘಮಿಂದುಪವನಾಂತರದಲ್ಲಿಗೆ ನಲ್ಲನಂ (ಕವಿರಾ. ೨-೧೦೩). [ಸಂ.]

**ಉಪವರ** (ನಾ). ಮದುವೆಗೆ ಯೋಗ್ಯಳಾದ ಹುಡುಗಿ; ವರನನ್ನು ಹೊಂದುವ ವಯಸ್ಸಿಗೆ ಬಂದ ಹುಡುಗಿ: ನನ್ನ ಉಪವರಳಾದ ಕನ್ನೆಯ ಸಲುವಾಗಿ ವ್ಯಸನಾಧೀನನಾಗಿದ್ದೇನೆ (ಸ್ಕೂಲವು. ೧೧೧). [ಸಂ.]

**ಉಪವರ್ಗ** (ನಾ). ಸಣ್ಣವರ್ಗ. [ಸಂ.]

**ಉಪವರ್ಣನೆ** (ನಾ). ವಿವರಣೆ; ಅತಿಸೂಕ್ಷ್ಮವಿವರಣೆ: ನಾಡಾಡಿಗಳಿವಿನಂ ಕೆಯ್ಗೊಂಡಿದ ವಸ್ತೂಪವರ್ಣನಂ ವಿಸ್ಮಯಮುಂ ಮಾಡುವೊಡತಿಶಯಮುಕ್ಕುಂ (ಕಾವ್ಯಾವ. ೭೨೫). [ಸಂ. ಉಪವರ್ಣನ]

**ಉಪವರ್ಣಿತ** (ಗು). ಸೂಕ್ಷ್ಮವಾಗಿ ವರ್ಣಿಸಿದ: ಮಾತುಗಳಾವುವಾನುಪವರ್ಣಿತಮಾರ್ಗಯುತ ಪ್ರಯೋಗಸಂಜಾತ ವಿಭಾಗದಿಂ ನೆಗಲ್ದ ಕನ್ನಡದೊಳ್ ಗುಣಮಂ ತಗಳ್ಚುಗುಂ (ಕವಿರಾ. ೨-೯೯). [ಸಂ.]

**ಉಪವರ್ತನ** (ನಾ). ೧. ದೇಶ; ನಾಡು: "ನಿವೃತ್, ಜನಪದಃ, ದೇಶಃ, ಉಪವರ್ತನಂ - ಈ ೪ ನಾಡು" (ಹಲಾಯು. ೪೬-೧೨೯). ೨. ಒಂದು ದೇಶದ ವಿಭಾಗ; ಜಿಲ್ಲೆ. [ಸಂ.]

**ಉಪವಸಥ** (ನಾ). ಉಪವಾಸದ ದಿವಸ: ಕಾರ್ತಿಕಮಾಸದ ಹದಿನೈದನೆಯ ದಿವಸ; ಕೌಮುದಿಯೆಂಬ ಹುಣ್ಣಿಮೆಯ ರಾತ್ರಿ; ಅಂದು ಉಪವಸಥ (ಬುದ್ಧಪ. ೧೦೮). [ಸಂ.]

**ಉಪವಸ್ತ** (ನಾ). ಉಪವಾಸ: "ಉಪವಸ್ತಂ... ಅನ್ನವಿಲ್ಲದೆ ಉಪವಾಸವಿರುವುದಕ್ಕೆ ಹೆಸರು" (ಸಿದ್ಧಾಂತಿ. ೧೯೫). [ಸಂ.]

**ಉಪವಸ್ತು** (ನಾ). ಮುಖ್ಯಪದಾರ್ಥದ ಜೊತೆಗೆ ಉತ್ಪತ್ತಿಯಾಗುವ ಪದಾರ್ಥ; ಉಪಪದಾರ್ಥ. [ಸಂ.]

**ಉಪವಾದಕ** (ಗು). ೧. ಅನುಸರಿಸಿ ನುಡಿಸುವ, —ಬಾರಿಸುವ. (ನಾ). ೨. ಸ್ವರ್ಗದ ವಾದ್ಯಗಳಲ್ಲಿ ಒಂದು ಪ್ರಕಾರ: ಅಗಳ್ ನಾಕಲೋಕವಾದ್ಯಂಗಳೊಳನೇಕಭೇದಂಗಳಪ್ಪುಪವಾದಕ ಪರಿವಾದಕ ವಾದ್ಯಂಗಳೊಳ್ ... ನೆಗಟೆ (ಆದಿಪು. ೬-೧೧೮ ವ). ೩. ಪಕ್ಕವಾದ್ಯ ಬಾರಿಸುವವನು. [ಸಂ.]

**ಉಪವಾಸ** (ನಾ). ೧. ಹತ್ತಿರದಲ್ಲಿ ವಾಸಿಸುವುದು; ಸಮೀಪದಲ್ಲಿ ನೆಲಸುವುದು. ೨. ಊಟಮಾಡದಿರುವುದು; ಹಸಿದಿರುವುದು: ನಿದ್ದೆಗೆಟ್ಟು ನಿಡುಜಾಗರದೊಳ್ ತೊಡರ್ದೇಕಪಾದದೊಳ್ ಬಲಿದುಪವಾಸದೊಳ್ ನಮೆದು (ಪಂಪಭಾ. ೧-೧೩೬); ವ್ರತಹೋಮ ನಿಯಮೋಪವಾಸ ದಾನಂಗಳೆಂದತಿಶಯವಡೆದ ಧರ್ಮಗಳು (ಹದಿಬ. ೩-೬).

**ಉಪವಾಸಬೀಳು** = ಊಟಮಾಡದಿರು; ಆಹಾರವನ್ನು ಬಿಟ್ಟುಬಿಡು: ಉಪವಾಸಬಿದ್ದು ಮಹಾತ್ಮರೆನಿಸಿಕೊಳ್ಳುವುದೇ ಮೇಲು (ಮುಂಗಾಪು. ೧೦೦). **ಉಪವಾಸಮಾಡು** = ಉಪವಾಸಬೀಳು: ಏಕಾದಶೀ ದಿನ ವೈಷ್ಣವರು ಉಪವಾಸಮಾಡುತ್ತಾರೆ (ರೂಢಿ). **ಉಪವಾಸ ಮುಗಿಸು** = ಉಪವಾಸಮಾಡುವುದನ್ನು ನಿಲ್ಲಿಸು; ಆಹಾರ ತೆಗೆದುಕೊ: ತಮ್ಮ ಬೇಡಿಕೆಗಳು ಈಡೇರಿದುದರಿಂದ ನೌಕರರು ಉಪವಾಸ ಮುಗಿಸಿದರು (ರೂಢಿ). **ಉಪವಾಸವಿರು** = ಉಪವಾಸಬೀಳು: ಮೂಱು ದಿನವುಪವಾಸವಿರ್ದನು (ಬಸವು. ೫೦-೬೬). [ಸಂ.]

**ಉಪವಾಸಂಗೆಯ್** (ಕ್ರಿ). ಊಟವನ್ನು ಮಾಡದೆ ಇರು; ಆಹಾರವನ್ನು ಬಿಟ್ಟುಬಿಡು: ಉಣ್ಬುದಿಲ್ಲ ಕುಡಿವುದಿಲ್ಲುಪವಾಸಂಗೆಯ್ದಿರ್ದ ರಾಮನಿತು ಕೀಱು ನುಡಿದೊಡಂ ಚರಿಗೆ ಮಾಡಲೊಲ್ಲರ್ (ವಡ್ಡಾರಾ. ೮೨-೬). [ಉಪವಾಸ + ಗೆಯ್ (< ಕೆಯ್$_1$)]

**ಉಪವಾಸಮುಷ್ಕರ** (ನಾ). ಆಹಾರವನ್ನು ತೆಗೆದುಕೊಳ್ಳುವುದಿಲ್ಲವೆಂದು ಮಾಡುವ ಮುಷ್ಕರ; ಊಟಮಾಡದೆ ಮುಷ್ಕರ ಹಿಡಿಯುವುದು: ನೌಕರರು ಬೇಡಿಕೆಗಳ ಈಡೇರಿಕೆಗಾಗಿ ಉಪವಾಸಮುಷ್ಕರ ಪ್ರಾರಂಭಿಸಿದ್ದಾರೆ (ರೂಢಿ). [ಉಪವಾಸ + ಮುಷ್ಕರ]

**ಉಪವಾಸಿ** (ನಾ). ಉಪವಾಸ ಮಾಡುವವನು; ಹಸಿದಿರುವವನು: ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ (ಗಾದೆ). 'ಅಷ್ಟೋಪವಾಸಿ', 'ಮಾಸೋಪವಾಸಿ' ಪರಾ. [< ಸಂ. ಉಪವಾಸಿನ್]

**ಉಪವಾಸಿಗ** (ನಾ). = ಉಪವಾಸಿ: ಆಟಮಟಗಂ, ಪುಸಿಗಂ, ಉಪವಾಸಿಗಂ, ನಿಯಮಿಗಂ, ವ್ರತಿಗಂ (ಶಬ್ದಾನು. ೪೦೭ ಪ್ರಯೋ). [ಉಪವಾಸ + -ಇಗ]

**ಉಪವಾಹ್ಯ** (ನಾ). ರಾಜನ ಆನೆ, —ವಾಹನ. [ಸಂ.]

**ಉಪವಿಧಿ** (ನಾ). ಒಳನಿಯಮ; ಉಪನಿಬಂಧನೆ. [ಸಂ.]

**ಉಪವಿದ್ಧ** (ಗು). ಕೂಡಿದ; ಸಹಿತವಾದ: ಪಿಂಜರವರ್ಣಪಲಿತಶ್ಮಶ್ರುಕೂರ್ಚೋಪವಿದ್ಧವೃದ್ಧಕಂಚುಕಿಸಂಚಯಮುಮಂ ... ಇರ್ಪಾಗಳ್ (ಚಂದ್ರಪು. ೩-೯೬ ವ). [ಸಂ.]

**ಉಪವಿಶೇಷಣ** (ನಾ). ವಿಶೇಷಣಕ್ಕೆ ವಿಶೇಷಣವಾಗಿ ಬರುವ ಶಬ್ದ (ಕ). [ಸಂ.]

**ಉಪವಿಷೆ** (ನಾ). ಅತಿಬಜೆ: "ಉಪವಿಷಾ, ಅಪವಿಷಾ . . . ಅತಿಬಜೆಯ ಹೆಸರು" (ಸಿದ್ಧಾಂತಿ. ೧೧೮). [ಸಂ. ಉಪವಿಷಾ]

**ಉಪವಿಷ್ಟ** (ಗು). ಕುಳಿತುಕೊಂಡಿರುವ; ಕುಳಿತ: ಸುರಪತಿಗುಪವಿಷ್ಟಾಸನಾಕಂಪದಿಂದಂ ಬರೆ (ಶಾಂತಿಪು. ೯–೧೬೨). [ಸಂ.]

**ಉಪವೀಣಿತ** (ಗು). ವೀಣಾವಾದನದಿಂದ ಕೂಡಿದ: ಮಧುಕರನಿಕರನಿನಾದೋಪವೀಣಿತ ಕ್ರೀಡಾಸರೋವರಂಗಳೇ ಜಳಕೇಳೀ ಕುತೂಹಳನಿಳಯಂಗಳಾಗೆಯುಂ (ಆದಿಪು. ೪–೫೩ ವ). [ಸಂ.]

**ಉಪವೀತ** (ನಾ). ೧. ಜನಿವಾರ; ಯಜ್ಞೋಪವೀತ: "ಜನ್ನಿವಾರಂ ಬ್ರಹ್ಮಸೂತ್ರಮುಮುಪವೀತಮೆನಿಕು" (ಮಂಗರಾ. ೭೫–೮); ಕಮಲಿನಿಯೊಳಗುಣ್ಮಿದ ನವಮೃಣಾಳಮೆನಲೆಸೆದುದು ಮುನಿಗತ್ಯಂತ ಧವಳಮೆನಿಪುಪವೀತಂ (ಕಾದಂಪೂ. ೩೩೫). ೨. ಎಡದ ಹೆಗಲ ಮೇಲೆಯೂ ಬಲದ ತೋಳಿನ ಕೆಳಗೂ ಬರುವಂತೆ ಜನಿವಾರವನ್ನು ಧರಿಸುವುದು: "ಜನ್ನವಿರಮಂ ಬಲಂದೊಡುವುದು ಉಪವೀತಮೆಂಬುದು ಎಡದೊಡುವುದು ಪ್ರಾಚೀನಾವೀತಮೆಂಬುದು" (ಹಲಾಯು. ೬೮–೨೫೩). [ಸಂ.]

**ಉಪವೃತ್ತಿ** (ನಾ). ಮುಖ್ಯವೃತ್ತಿಯ ಜೊತೆಗೆ ಅವಲಂಬಿಸುವ ಬೇರೆ ವೃತ್ತಿ; ಉಪಕಸಬು: ಅವರು ತಮ್ಮ ಸ್ಥಾನಮಾನಗಳನ್ನು ಅರಿತು ಉಪವೃತ್ತಿಗಳನ್ನು ಅವಲಂಬಿಸುವಂತೆ ಪ್ರೇರೇಪಿಸಬೇಕು (ತರಬೆ. ೬೦). [ಸಂ.]

**ಉಪವೇದ** (ನಾ). = ಉಪಾಂಗ ೩: ಅರ್ಥಶಾಸ್ತ್ರವನ್ನು . . . ಋಗ್ವೇದದ ಉಪವೇದವೆಂದೂ ಶೌನಕ ಚರಣವ್ಯೂಹದಲ್ಲಿ ಅಥರ್ವವೇದದ ಉಪವೇದವೆಂದೂ ಕರೆದಿದೆ (ಭಾರದ. ೩೫೧). [ಸಂ.]

**ಉಪವೇಶ** (ನಾ). ಕುಳಿತುಕೊಳ್ಳುವುದು; ಬೈಠಕ್. [ಸಂ.]

**ಉಪವೇಶನ** (ನಾ). = ಉಪವೇಶ: ರಾಷ್ಟ್ರಪತಿಯವರು . . . ಉಭಯ ಸದನಗಳೂ ಸಂಯುಕ್ತ ಉಪವೇಶನದಲ್ಲಿ ಸಭೆ ಸೇರುವ ಹಾಗೆ ಆಹ್ವಾನಿಸಬಹುದು (ಭಾಧಾನ. ೫೪). [ಸಂ.]

**ಉಪವೇಶನಮಂದಿರ** (ನಾ). ಕುಳಿತುಕೊಳ್ಳುವ ಮನೆ; ಬೈಠಕ್ ಖಾನೆ: ಭೃತ್ಯನು ದೇವೇಂದ್ರನನ್ನು ವೈದ್ಯನ ಉಪವೇಶನಮಂದಿರದಲ್ಲಿ ಹಿಡಿತಂದು ನಿಲ್ಲಿಸಿ ಹೊರಟುಹೋದನು (ಚಿನ್ನಬೇ. ೧೮೮). [ಉಪವೇಶನ + ಮಂದಿರ]

**ಉಪವೇಷ್ಟಿತ** (ಗು). ಸುತ್ತಲ್ಪಟ್ಟ; ಧರಿಸಿದ: ನವವಸ್ತ್ರೋಪವೇಷ್ಟಿತ ಘನಜಟಾಭರರು (ಬಸಪು. ೬–೧೪). [ಸಂ.]

**ಉಪಶಮ** (ನಾ). ೧. ಇಂದ್ರಿಯ ನಿಗ್ರಹ: ನಿಶ್ಚಿಂತಮನನಿ ಕೂರ್ಪಂತರ್ಪಂತುಪಶಮಮಿರ್ದುದಾ ನರೇಂದ್ರೋತ್ತಮನೊಳ್ (ಶಾಂತಿಪು. ೧೦–೧೧೧). ೨. ಸಹನೆ; ತಾಳ್ಮೆ; ಶಾಂತಿ: ಎಲ್ಲಿತ್ತೊ ಧೈರ್ಯಮುಪಶಮಮೆಲ್ಲಿತ್ತೊ (ಕಾದಂಪೂ. ೭೭೫). ೩. ಶಮನ; ಶಾಂತವಾಗುವುದು; ವಾಸಿಯಾಗುವುದು. ೪. [ಜೈನ] ಕರ್ಮಪ್ರಕೃತಿಗಳ ಹತ್ತು ಅವಸ್ಥೆಗಳಲ್ಲಿ ಒಂದು: "ಉಪಶಮ (ಕರ್ಮ ಫಲಕೊಡದೆ ಬಿಟ್ಟು ಹೋಗುವುದು)" (ಜೈನಪ. ೩೬೯). [ಸಂ.]

**ಉಪಶಮನ** (ನಾ). ಕಡಮೆಯಾಗುವುದು; ಶಾಂತವಾಗುವುದು: ಅವರ ಕೋಪ ಈಗತಾನೆ ಉಪಶಮನವಾಯಿತು (ರೂಢಿ). [ಸಂ.]

**ಉಪಶಮಿಸು** (ಕ್ರಿ). ೧. ಅಡಗು; ಶಾಂತವಾಗು: ಪ್ರಳಯಾಗ್ನಿಯುನ್ನತ ಕಟಕಮನೊಳಕೊಂಡುಳುರ್ವಗ್ನಿ ದಾನಚಿನ್ತಾಮಣಿ ನಿರ್ಮಳಜಿನಗನ್ಧೋದಕಮಂ ತಳಿಯಲ್ಕುಪಶಮಿಸಿತೆನ್ದೊಡೇವಣ್ಣಿಸುವೆ (ಸೌಇಇ. XI–i, ೫೨–೨೪; 1007); ಗಾಳಿಯುಪಶಮಿಸಿದೊಡೆ ವಹ್ನಿಜ್ವಾಲೆ ತಾನೇ ನಿಲುವುದು (ಕುವ್ಯಾಉ. ೯–೪೨). ೨. ಶಮನಮಾಡು; ಅಡಗಿಸು: ಉಪನಾಸದಿಂದಜೀರ್ಣಮನುಪಶಮಿಸುವ ವೈದ್ಯನಂತೆ (ಅಜಿಪು. ೬–೫೯). ೩. ಶಾಂತಿಯನ್ನು ತಂದುಕೊ; ಸೈರಿಸು: ಅಗ್ರಜರನುಜರಲಿ ಕದಡಾದೊಡುಪಶಮಿಸುವಿರಿ ನಿಮ್ಮೊಳಗೆ (ಕುವ್ಯಾಉ. ೧೧–೬). [ಉಪಶಮನ + -ಇಸು₃]

**ಉಪಶಮೆ** (ನಾ). = ಉಪಶಮ ೧: ಉಪಶಮೆಯು ನನ್ನ ಕುಮಾರನಾದ ಉದಾಯುಭದ್ರನಿಗೆ ಬರಲಿ (ಬುದ್ಧಪ. ೧೮೨). [ಸಂ. ಉಪಶಮ]

**ಉಪಶಯ** (ನಾ). [ವೈದ್ಯ] ರೋಗನಿದಾನ; ಚಿಕಿತ್ಸೆ; ಪಥ್ಯ: "ಉಪಶಯವೆಂಬುದು ಈ ರೋಗಕ್ಕೆ ಈ ಆಹಾರ ಹಿತ, ಆ ಆಹಾರ ಅಹಿತವೆಂಬುದು" (ವೈದ್ಯಸಾ. I, ೨೫). [ಸಂ.]

**ಉಪಶಲ್ಯ** (ನಾ). ೧. ಊರಿನ ಸಮೀಪ ಪ್ರದೇಶ: "ಗ್ರಾಮಾಂತಿಕಂ, ಉಪಶಲ್ಯಂ, ಪರ್ಯಂತಃ, ಪರಿಸರಃ, ಕ(ಪ)ಟಃ – ಈ ೫ ಊರ ಹೊ(ಚ್)ರೆ" (ಹಲಾಯು. ೪೩–೧೦೪). ೨. ಶಾಖೆ; ವಿಸ್ತರಣೆ. ೩. ಈಟಿ; ಭಲ್ಲೆ: ೧, ೩. ಅಪರಿಮಿತ ಪೌರಕಳಕಳಮುಪೇತಬಾಳಾಪ್ರಪಂಚಮತಿ ವಿಶ್ರುತಮಿಂತುಪಶಲ್ಯಂ ವಿರಹಿಗಳೆರ್ದೆಗುಪಶಲ್ಯಮಿದೆನಿಸಿ ಸಂತತಂ ಸೊಗಯಿಸುಗುಂ (ಪುಷ್ಪಪು. ೯–೨೩). [ಸಂ.]

**ಉಪಶಲ್ಯಕ** (ನಾ). = ಉಪಶಲ್ಯ ೧: ರಹಟ ಘಟೀಯಂತ್ರಂಗಳ್ ಬಹುವಿಧವಿಭ್ರಮದಿನೆಸೆವುವುಪಶಲ್ಯಕದೊಳ್ (ಪುಷ್ಪಪು. ೨–೫೧). [ಸಂ.]

**ಉಪಶಾಂತ** (ಗು). ೧. ಅಡಗಿದ; ಶಮನಹೊಂದಿದ: ಉಪಶಾಂತರಜೋವಿಕೃತಿಯಿನುಪಾತ್ತಕಾಳಿಮಪಯೋಧರಾಸ್ಯತೆಯಿಂ (ಚಂದ್ರಪು. ೪–೪೩). (ನಾ). ೨. ತಾಳ್ಮೆಯಿಂದ ಕೂಡಿದವನು; ಸಹನೆಯಿಂದ ಕೂಡಿದವನು: ವಿವೇಕದ ಫಲ ಶಾಂತಿ, ಆದ್ದರಿಂದ ಉಪಶಾಂತನಾಗು (ವಚಭಾ. ೧೦೫). [ಸಂ.]

**ಉಪಶಾಂತಿ** (ನಾ). ಶಾಂತಿ; ಸಹನೆ; ತಾಳ್ಮೆ: ಎಸೆದುದೀ ಭರತಾವನಿ . . . ಜೈನಾಗಮ ಭಾಗಿ ಭವ್ಯಜನಕೇನುಪಶಾಂತಿಯೊ ಶಾಂತಿನಾಥನಾ (ಶಾಂತಿಪು. ೧೨–೨೪). [ಸಂ.]

**ಉಪಶಾಖೆ** (ನಾ). ಸಣ್ಣ ಕೊಂಬೆ, —ಕವಲು; ಚಿಕ್ಕರೆಂಬೆ: ಬೇರು ನೀರುಂಡಾಗ ತಣಿಯವೆ ಭೂರುಹದ ಶಾಖೋಪಶಾಖೆಗಳು (ಕುವ್ಯಾಅ. ೧೬–೪೮). [ಸಂ.]

**ಉಪಶಾಯ** (ನಾ). ೧. ಸರದಿಯಿಂದ ನಿದ್ದೆಮಾಡುವುದು; "ಸರದಿಯ ಮೇಲೆ ಮಲಗುವುದು" (ಅಮರ. ಟೀಕೆ). ೨. ಅನುಪೂರ್ವಿ; ಕ್ರಮ: ಪರಿಪಾಟೀ, ಅನುಪೂರ್ವೀ, ಉಪಶಾಯಃ . . . ವಿಶಾಯಃ — ಈ ೭ ಪರಿವಿಡಿ" (ಹಲಾಯು. ೧೨೨–೫೫). [ಸಂ.]

**ಉಪಶಿಷ್ಟ** (ಗು). ಕೂಡಿದ; ಒಡಗೊಂಡ: ಅಷ್ಟಮಭೂಮಿ ವಿಷ್ಟರಸ್ಥಾವಧಿಸೌಖ್ಯ ಮುಖ್ಯರುಪಶಿಷ್ಟಗುಣಾಷ್ಟಕರಾದನಶ್ವರ ಶ್ರೀವನಿತೇಶರೀಗೆ . . . ಸಿದ್ಧಿಯಂ (ಚಂದ್ರಪು. ೧–೨). [ಸಂ.]

**ಉಪಶೀರ್ಷಕ** (ನಾ). ೧. "ಮಧ್ಯದಲ್ಲಿ ಕ್ರಮವಾಗಿ ಒಂದಕ್ಕಿಂತ ಒಂದು ದೊಡ್ಡದಾಗಿರುವ ಮೂರುಮುತ್ತುಗಳುಳ್ಳ ಹಾರ" (ಆದಿಪು. ಕೋಶ); ಪ್ರತ್ಯೇಕ ಶೀರ್ಷಕೋ[ಪಾಠಾಂ. ಕಾ]ಪಶೀರ್ಷಕಾವಘಾಟಕ ಪ್ರಕಾಂಡಕ ತರಳ ತರ ಬಂಧೋಪಪದ ಪಂಚಕ ಸಮೇತಂಗಳಾಗಿ (ಆದಿಪು. ೮–೫೪ ವ). ೨. ಅರೆದಲೆನೋವು. [ಸಂ.]

**ಉಪಶೋಭಿತ** (ಗು). ಅಲಂಕೃತವಾದ; ಶೋಭೆಯಿಂದ ಕೂಡಿದ: ಚಂಚತ್ಕಾಂಚನಮಂಚೋಪಶೋಭಿತ . . . ಶಯ್ಯಾತಳದೊಳ್ . . . ಪಟ್ಟದರ್ಗರ್ಭೇಶ್ವರಿಯಲ್ಲಿಗೆ ದೂತನನಟ್ಟಿ ಪಸರಂಬಡೆಯದೆ (ಶಾಂತಿಪು. ೮–೮೩ ವ). [ಸಂ.]

**ಉಪಶ್ರುತ** (ಗು). ೧. ಕೇಳಲ್ಪಟ್ಟ; ಕೇಳಿದ. ೨. "ಒಪ್ಪಿಕೊಳ್ಳಲ್ಪಟ್ಟ" (ಅಮರ. ಟೀಕೆ). ೩. ವಾಗ್ದಾನಮಾಡಿದ. [ಸಂ.]

**ಉಪಶ್ರುತಿ** (ನಾ). ೧. ಸಮೀಪದಲ್ಲಿ ಕೇಳುವುದು. ೨. ಮಾತನಾಡುವಾಗ ಸಂಬಂಧಪಡದ ಮೂರನೆಯವನು ಕೇಳುವುದು: ನಿರ್ಮಮತೆಯಲಿ ನಡೆದುಪಶ್ರುತಿಗುಮ್ಮಹವನ್ನೈದುವವೊಲೌಕುವ ಮರ್ಮಿಗಳನೊಳಹೊಯ್ದು ಕೊಂಬುದು (ಕುವ್ಯಾಉ. ೪-೮೭). ೩. [ಜ್ಯೋತಿ] ಭವಿಷ್ಯ ಹೇಳುವುದು. ೪. (ರಾತ್ರಿಯಲ್ಲಿ ಕೇಳಿಸುವ) ಅಶರೀರವಾಣಿ. ೫. ವೇದಗಳಿಗೆ ಸೇರಿದಂತೆ ಇರುವ ಬೇರೆಯ ಶಾಸ್ತ್ರಭಾಗಗಳು; ಸ್ಮೃತಿಗಳು. [ಸಂ.]

**ಉಪಶ್ಲೋಕಿಸು** (ಕ್ರಿ). ಕೊಂಡಾಡು; ಹೊಗಳು: ಒಳ್ಳಿತಪ್ಪ ದಿವಸವಾರನಕ್ಷತ್ರ ಮುಹೂರ್ತದೊಳತಿಬಲಮಹಾರಾಜನಂ ಕಂಡಿರ್ದರುಂಬೇಜಿಬೇಜುಪಶ್ಲೋಕಿಸಿ (ವಡ್ಡಾರಾ. ೪-೨೪). [ಉಪಶ್ಲೋಕಂ + -ಇಸು$_3$]

**ಉಪಷ್ಟಂಭ** (ನಾ). ಆಧಾರ; ಆಶ್ರಯ; ನೆಲೆ; ಬಲ: ಕ್ಷಾತ್ರಶಕ್ತಿಗೆ ಧರ್ಮವೇ ಉಪಷ್ಟಂಭ (ಮುಕ್ತಾರ. ೧೦೩ ಪೀಠಿಕೆ). [ಸಂ.]

**ಉಪಷ್ಟಂಭಕ** (ನಾ). = ಉಪಷ್ಟಂಭ: ಅವನ ರಾಜಕಾರ್ಯಪ್ರವೀಣತೆಗೂ ರಣನಿಪುಣತೆಗೂ ಉಪಷ್ಟಂಭಕವಾಗಿ ಅಪಾರವಾದ ಸಹಾಯಸಂಪತ್ತಿಗಳೂ ಇದ್ದುವು (ಆರ್ಯಕೀ. ೯೪). [ಸಂ.]

**ಉಪಸಂಗ್ರಹಣ** (ನಾ). ೧. ಪಾದವನ್ನು ಮುಟ್ಟಿಮಾಡುವ ನಮಸ್ಕಾರ; ಅಭಿವಾದನ: "ಅಭಿವಾದನಮುಪಸಂಗ್ರಹಣಮೆಂಬುದು" (ಹಲಾಯು. ೬೬-೨೪೪). ೨. ನಮಸ್ಕರಿಸುವವನು; ಅಭಿವಾದನ ಮಾಡುವವನು: "ವಂದಿಸುವ ಮನುಜನುಪಸಂಗ್ರಹಣನೆನಿಸಿಕ್ಕುಂ" (ಮಂಗರಾ. ೭೪-೪). [ಸಂ.]

**ಉಪಸಂಗ್ರಾಹ್ಯ** (ನಾ). (ಪಾದ ಮುಟ್ಟಿಸಿಕೊಂಡು) ನಮಸ್ಕಾರ ಮಾಡಿಸಿಕೊಳ್ಳಲು ಅರ್ಹನಾದವನು; ಅಭಿವಾದನ ಮಾಡಿಸಿಕೊಳ್ಳುವವನು: "ಶಾಸ್ತ್ರಕ್ರಮದಿಂದೆ ಅಭಿವಾದನಮಂ ಮಾಡಿಸಿಕೊಳ್ಳುವಾತನಂ ಉಪಸಂಗ್ರಾಹ್ಯನೆಂಬುದು" (ಹಲಾಯು. ೬೬-೨೪೪). [ಸಂ.]

**ಉಪಸಂಪನ್ನ** (ಗು). ೧. ಕೂಡಿರುವ; ಸೇರಿಕೊಂಡಿರುವ. ೨. ಒದಗಿದ; ಸಂಪಾದಿತವಾದ. ೩. ಸುಸಜ್ಜಿತವಾದ. (ನಾ). ೪. ಯಜ್ಞದಲ್ಲಿ ವಧಿಸಿದ ಪಶು: "ಉಪಸಂಪನ್ನಃ . . . ಯಜ್ಞದಲ್ಲಿ ಕೊಲ್ಲಲ್ಪಟ್ಟ ಪಶು" (ಸಿದ್ಧಾಂತಿ. ೧೯೦). ೫. ಒಗ್ಗರಣೆಯಿಂದ ರುಚಿಗೊಳಿಸಲ್ಪಟ್ಟ ಆಹಾರಸಾಮಗ್ರಿ; "ಸರ್ವ ಪರಿಕರದಿಂದ ಬಹಳ ರುಚಿಯಾಗಿ ಮಾಡಿದ ಪದಾರ್ಥ" (ಅಮರ. ಟೀಕೆ). ೬. ತೃಪ್ತಿಯನ್ನುಂಟುಮಾಡಿದುದು; ಸಾಕಾದುದು: "ಪರ್ಯಾಪ್ತಂ, ಉಪಸಂಪನ್ನಂ, ತೃಪ್ತಿಃ, ಸೌಹಿತ್ಯಂ – ಈ ೪ ತ(ಣಿ)ಣುವು" (ಹಲಾಯು. ೫೪-೧೭೧). ೭. ಸತ್ತವನು; ಮೃತನಾದವನು: "ಪರಾಸುಃ, ಉಪಸಂಪನ್ನಃ, . . . ಮೃತಃ – ಈ ೫ ಸತ್ತಾತಂ" (ಹಲಾಯು. ೧೦೪-೭). [ಸಂ.]

**ಉಪಸಂವ್ಯಾನ** (ನಾ). ಉಡುವ ಬಟ್ಟೆ, —ವಸ್ತ್ರ: "ಉಪಸಂವ್ಯಾನಂ . . . ನಿವಸನಂ – ಈ ೪ ಉಟ್ಟುದು" (ಹಲಾಯು. ೯೦-೩೯೨). [ಸಂ.]

**ಉಪಸಂಹರಿಸು** (ಕ್ರಿ). ೧. (ಬಿಟ್ಟ ಬಾಣವನ್ನು) ಹಿಂದಕ್ಕೆ ತೆಗೆದುಕೊ; ಮರಳಿ ಪಡೆ: ತೆಗೆಸಿದನು ಶಿಖಿಶರವ ಧನುವಿಂದುಗುಳಿಸಿದ ವಾರುಣವನಭ್ರವ ಮೊಗೆದು ದದ್ಭುತ ವಾರಿಯುಪಸಂಹರಿಸಿದನು (ಸಂಭಪ. ೧೮-೬೬). ೨. ನಿಲ್ಲಿಸು; ಮುಕ್ತಾಯಮಾಡು; ಸಮಾರೋಪಮಾಡು: "ನವೋ ನವೋ ಭವತಿ ಜಾಯಮಾನೋಹ್ನಾಂ" ಎಂಬ ಸಂಸ್ಕೃತ ವಾಕ್ಯಾಂತಮಂ ಜಾಯಮಾನೋಹ್ನಮೆಂದು ಉಪಸಂಹರಿಸಲಾಗದು (ಶಮದ. ೬೧ ಪ್ರಯೋ). ೩. ಅಡಗಿಸು; ನಾಶಮಾಡು; ಕೊನೆಗಾಣಿಸು: ಮಲೆವ ರಿಪು ದಂಡೆತ್ತಿ ಬರೆ ಬೆಸನಾಂತಿವರು ನಡೆದು ಅಲಘುಭುಜಬಲದಿಂದ ಮಂತ್ರದ ಬಲದಿ ಅದನುಪಸಂಹರಿಸಿ ಬರೆ (ಸಾಳ್ವಭಾ. ೮-೧೬). [ಉಪಸಂಹರಣಂ + -ಇಸು$_3$]

**ಉಪಸಂಹಾರ** (ನಾ). ೧. (ಬಿಟ್ಟ ಬಾಣವನ್ನು) ಹಿಂದಕ್ಕೆ ತೆಗೆದುಕೊಳ್ಳುವಿಕೆ. ೨. ತಡೆಯುವುದು; ನಿಲ್ಲಿಸುವುದು. ೩. ಮುಕ್ತಾಯ; ಕೊನೆ. ೪. ನಾಶ; ಪ್ರಳಯ. [ಸಂ.]

**ಉಪಸಂಹಾರಿಸು** (ಕ್ರಿ). ೧. = ಉಪಸಂಹರಿಸು ೨: ಅಂತು ಸೂಚೀನಾಟ್ಯಪರ್ಯವಸಾನಂಬರಮಾದಾಕೆಗಳಾಡಿದಾಟಮನಿಂದ್ರಂ ನೋಡಿ ಮಚ್ಚಿ ಮಚ್ಚುಗೊಟ್ಟುಪಸಂಹಾರಿಸಿ (ಶಾಂತಿಪು. ೭-೩೪ ವ). ೨. = ಉಪಸಂಹರಿಸು ೩: ತೇರಂ ಕುದುರೆಯನೆಸಗುವ ಸಾರಥಿಯ ಪೊಡರ್ಪನಯ್ದುಬಾಣದೊಳುಪಸಂಹಾರಿಸಿ (ಪಂಪಭಾ. ೧೨-೬೯). [ಉಪಸಂಹಾರ + -ಇಸು$_3$]

**ಉಪಸಂಹೃತಿ** (ನಾ). = ಉಪಸಂಹಾರ ೪: ಕೃತಕ ತುರಂಗಮಾಕೃತಿಯನಂದುಪಸಂಹೃತಿಮಾಡಿ ಮುನ್ನಿನಾಕೃತಿಯೊಳೆ ಪೋಗಿ ಪೊಕ್ಕನುಚರಂ ಖಚರಂ (ಪಂಚಾಮಾ. ೫-೧೨). [ಸಂ.]

**ಉಪಸಚಿವ** (ನಾ). ಸಚಿವನಿಗೆ ಎರಡನೆಯ ಸ್ಥಾನದಲ್ಲಿರುವವನು: ಶ್ರೀಯುತರು ಹಣಕಾಸಿನ ಉಪಸಚಿರಾಗಿ ಪ್ರಮಾಣವಚನ ಸ್ವೀಕರಿಸಿದರು (ರೂಢಿ). [ಸಂ.]

**ಉಪಸನ್ನ** (ಗು). ೧. ಹತ್ತಿರದಲ್ಲಿರುವ; ಸಮೀಪಕ್ಕೆ ಬಂದ: ಇಂದುಮುಖಿ ಮೊಲೆಯೂಡಿದಳು ಮುದದಿಂದಖಿಳಭುವನಾಶ್ರಯೋದರ ಮಂದಿರಂಗುಪಸನ್ನ ಜನ ನಿಜಬಂಧುವಿಂಗೊಲಿದು (ನಿಭಾಗ. ೧೦-೭-೨೧). (ನಾ). ೨. ಹತ್ತಿರಬರುವಿಕೆ, —ಸಾರುವಿಕೆ: "ಉಪಸನ್ನಮುಪನತಮುಪಸ್ಥಿತಂ ಸೇರಿಗೆ" (ಮಂಗರಾ. ೧೩೪-೩೫). [ಸಂ.]

**ಉಪಸಮಿತಿ** (ನಾ). ಒಳಸಮಿತಿ; ಅಂಗಸಮಿತಿ: ಹುಡುಗರು . . . ಉಪಸಮಿತಿಗಳನ್ನು ರಚಿಸಿಕೊಂಡು ಸಂಭಾಷಣೆ ನಡೆಸುತ್ತಿದ್ದರು (ಸ್ವಾಮಿಸ್ಮೃ. ೫೭). [ಸಂ.]

**ಉಪಸಮುದ್ರ** (ನಾ). ಚಿಕ್ಕಸಮುದ್ರ: ಲವಣಸಮುದ್ರದುಪಸಮುದ್ರದ ನಡುವೆ ನಡೆದು (ಆದಿಪು. ೧೩-೩ ವ). [ಸಂ.]

**ಉಪಸರ** (ನಾ). ೧. ಹತ್ತಿರ ಹೋಗುವಿಕೆ. ೨. ಹಸುವಿನ ಮೇಲೆ ಗೂಳಿ ಹಾರುವುದು; "ದನದ ಮೇಲೆ ಗೂಳಿ ಹಾರುವಿಕೆ" (ಅಮರ. ಟೀಕೆ). [ಸಂ.]

**ಉಪಸರಣ** (ನಾ). ೧. ಹತ್ತಿರಹೋಗುವಿಕೆ. ೨. "(ಕಾರ್ಯ, ಮಾರ್ಗ, ಕಥೆ, ಪುಸ್ತಕ ಮೊದಲಾದುವುಗಳ) ಮುಂಬರಿವು; ಮುನ್ನಡೆ; ನಡಸಿಕೊಂಡು ಹೋಗುವುದು; ಸಾಗಿಸುವುದು" (Continuation. ಇಂಕನಿ). [ಸಂ.]

**ಉಪಸರ್ಗ** (ನಾ). ೧. ಹತ್ತಿರ; ಸಮೀಪ: "ಪೊರೆ – ಪೋಷಣೇ, ಉಪಸರ್ಗೇಚ" (ಶಮಧಾ). ೨. ತೊಂದರೆ; ಕಷ್ಟ; ಪೀಡೆ; ಉಪದ್ರವ: ದೇವೋಪಸರ್ಗ ಮನುಷ್ಯೋಪಸರ್ಗ ತಿರಿಕೋಪಸರ್ಗಮಚೇತನೋಪಸರ್ಗಮೆಂದಿಂತು ಚತುರ್ವಿಧಮಪ್ಪುಪಸರ್ಗಮುಮಂ . . . ಸೈರಿಸಿ (ವಡ್ಡಾರಾ. ೧-೨); ಸ್ವರ್ಗವಾಗಿದ್ದುದಹುದು ನಮಗಿಲ್ಲುಪಸರ್ಗವೆಂಬುದು ಕನಸಿನೊಳು ಆರ್ಗೆ ಸುಖವ ಕೊಡದರಸ ನಿನ್ನೊಂದು ಸಂಸರ್ಗದೊಲಗ ವೆಂದರವರು (ಭರತ. ೧೪-೬). ೩. ಅಪಶಕುನ; ಅನಿಷ್ಟವನ್ನು ಸೂಚಿಸುವ ನಿಮಿತ್ತ. ೪. [ವ್ಯಾಕ] ಧಾತುಗಳ ಹಿಂದೆ ಸೇರುವ ಅಕ್ಷರ ಸಮುದಾಯ: ಯಾಸ್ಕರೇ ಮೊದಲಾದವರು ಪದಗಳನ್ನು ನಾಮ ಆಖ್ಯಾತ ಉಪಸರ್ಗ ನಿಪಾತ ಎಂದು ನಾಲ್ಕುವಿಧಗಳಾಗಿ ಉಪದೇಶಿಸಿರುವರು (ಹಿಂದಸಾ. ೧೪೭). ೫. ಸಾಂಕ್ರಾಮಿಕ ರೋಗ. [ಸಂ.]

**ಉಪಸರ್ಜನ** (ನಾ). ೧. ಅನಿಷ್ಟವನ್ನು ಸೂಚಿಸುವ ಚಿಹ್ನೆ; ಕೇಡು. ೨. ಮುಖ್ಯವಲ್ಲದುದು; ಮತ್ತೊಂದಕ್ಕೆ ಅಧೀನವಾದುದು. [ಸಂ.]

**ಉಪಸರ್ಪ** (ನಾ). ೧. ಹತ್ತಿರ ಬರುವುದು ; ಮತ್ತೊಬ್ಬರನ್ನು ಅನುಸರಿಸುವುದು. ೨. ಸೇವಕ : "ಉಪ [ಪ್ರಾಕಾಂ. ಅಪ, ಅವ]ಸರ್ಪನೆನಲು ಚರನೆಂದೊಡರಸಾಳಕ್ಕು" (ಮಂಗರಾ. ೭೪–೧). [ಸಂ.]

**ಉಪಸರ್ಪಣ** (ನಾ). ಹತ್ತಿರ ಬರುವುದು ; ಮತ್ತೊಬ್ಬರನ್ನು ಆಶ್ರಯಿಸುವುದು. [ಸಂ.]

**ಉಪಸರ್ಪಿಸು** (ಕ್ರಿ). ಹತ್ತಿರಕ್ಕೆ ಹೋಗು ; ಮತ್ತೊಬ್ಬರನ್ನು ಆಶ್ರಯಿಸು. [ಉಪಸರ್ಪಣ + –ಇಸು$_1$]

**ಉಪಸರ್ಯೆ** (ನಾ). ಬೆದೆ ಬಂದ ಹಸು : "ಉರ್ಕಿನಾಕಳುಪಸರ್ಯೆಯಕ್ಕುಂ" (ಮಂಗರಾ. ೫೪–೪). [ಸಂ. ಉಪಸರ್ಯಾ]

**ಉಪಸಾಕ್ಷಿ** (ನಾ). ೧. ಮುಖ್ಯಸಾಕ್ಷಿಗೆ ಪೂರಕವಾದ ಬೇರೊಂದು ಸಾಕ್ಷಿ. ೨. ರುಜುವಾತು : ಮೋಕ್ಷನುಹುದಾಗಿ ಚಂಡಿಗೆ ಶಾಪವಿಾಗಲುಪಸಾಕ್ಷಿಗೈತಂದು ನಿಂದುದು ಹಯಂ ನೀಂ ಮುಟ್ಟಲೀಕ್ಷಣದೊಳೆದ್ದು ಪೋದವುದು (ಜೈಮಿಭಾ. ೧೦–೩೨). [< ಸಂ. ಉಪಸಾಕ್ಷಿನ್]

**ಉಪಸಾಗರ** (ನಾ). ಸಣ್ಣ ಸಾಗರ (ಮುಂಬಯಿ. ೪–೧೧೫ ಕ). [ಸಂ.]

**ಉಪಸಿದ್ಧಾಂತ** (ನಾ). ಸಿದ್ಧಾಂತಗೊಂಡ ಒಂದು ಪ್ರಮೇಯಕ್ಕೆ ಸಂಬಂಧಿಸಿದ ಅನುಪ್ರಮೇಯ : "ಸಿದ್ಧಾಂತವಾದ ಒಂದು ಪ್ರತಿಜ್ಞೆಯೊಡನೆ ಸೇರಿಸಿದ, ಆ ಪ್ರತಿಜ್ಞೆಯಿಂದ ಸುಲಭವಾಗಿ ಅನುಮಾನಿಸಬಹುದಾದ, ಮತ್ತೊಂದು ಪ್ರತಿಜ್ಞೆ : ಉಪಸಿದ್ಧಾಂತ : ಅನುಸಿದ್ಧಾಂತ ; ಪರಿಣಾಮ" (Corollary. ಇಂಕಪ). [ಸಂ.]

**ಉಪಸೂರ್ಯಕ** (ನಾ). ಸೂರ್ಯನ ಸುತ್ತಲೂ ಕಟ್ಟುವ ವೃತ್ತಾಕಾರದ ಪರಿಧಿ : ಪರಿಧಿಯುಪಸೂರ್ಯಕಂ ತತ್ಪರಿವೇಷಂ" (ವಸ್ತುಕೋ. ೧೨–೬೬). [ಸಂ.]

**ಉಪಸೃಷ್ಟಿ** (ನಾ). ಮೂಲ ಸೃಷ್ಟಿಯ ಜೊತೆಗೆ ಆದ ಸೃಷ್ಟಿ : ಪುದ್ಗಲಂಗಳೊಳ್ ಪರಸ್ಪರ ಪ್ರದೇಶೋಪಸೃಷ್ಟಿಯಿಂ ಸಮುಸಂದು (ಸುಕುಮಾ. ೮–೨೭ ವ). [ಸಂ.]

**ಉಪಸೇವಿಸು** (ಕ್ರಿ). ಅನುಸರಿಸಿಕೊಂಡು ಸೇವೆ ಮಾಡು ; ಪರಿಚರ್ಯೆಮಾಡು : ಸಂತತಮುಪಸೇವಿಪಂತೆ ಯತಿಕಾಮಿನಿಯರ್ ಮೊಗೆದುಯ್ದು ನೀರ್ಗಳಂ ಲತೆಗೆಱೆವಲ್ಲಿ (ಜಗವಿ. ೧೬–೪೩). [ಉಪಸೇವನ$_0$ + –ಇಸು$_3$]

**ಉಪಸೇವೆ** (ನಾ). ಅನುಸರಿಸಿಕೊಂಡು ಸೇವೆಮಾಡುವುದು ; ಉಪಚಾರಮಾಡುವುದು.'ಉಪಸೇವೆಗೆಯ್' ಪರಾ. [ಸಂ. ಉಪಸೇವಾ]

**ಉಪಸೇವೆಗೆಯ್** (ಕ್ರಿ). ಅನುಸರಿಸಿಕೊಂಡು ಸೇವೆಮಾಡು ; ಉಪಚಾರಮಾಡು : ಕುಲಿಂಗಿಗಳಂ ಕುಬ್ರಾಹ್ಮಣರನುಪಸೇವೆಗೆಯ್ವುದು (ಚಾವುಂಪು. ೨೫೮). [ಉಪಸೇವೆ + ಗೆಯ್ (< ಕೆಯ್$_1$)]

**ಉಪಸ್ಕರ** (ನಾ). ೧. ಅಲಂಕಾರ. ೨. ಉಪಕರಣ; ಅಣಿ; ಸಾಮಗ್ರಿ: ರಚನೆಯ ಬಗೆ ರಯ್ಯಮಾಗೆಯುಪಸ್ಕರ ಉಚಿತಮೆನಿಸಿಯೊಳ್ಪುವಡೆಯೆ (ಹದಿಬ. ೮–೨೬). ೩. ಮನೆಗೆ ಬೇಕಾದ ಪಾತ್ರೆ ಪಡಿಗಗಳು; ಗೃಹೋಪಕರಣಗಳು. ೪. ಉಪ್ಪು, ಮೆಣಸು ಮೊದಲಾದ ಪರಿಕರ ; ಸಂಬಾರ; ಮಸಾಲೆ : ಚುಲ್ಲಿ, ಪೇಷಣಿ, ಕಂಡನಿ, ಉಪಸ್ಕರ, ಉದಕುಂಭ–ಎಂಬೈದು ಗೃಹೋಪಕರಣಗಳೂ (ಆರ್ಯಧ. ೧೪೭). [ಸಂ.]

**ಉಪಸ್ಕಾರಕ** (ಗು). ೧. ಶೋಭಾಕಾರಕವಾದ. ೨. ಪೂರಕವಾದ : ವ್ಯಂಗ್ಯವು ವಾಚ್ಯಕ್ಕೆ ಉಪಸ್ಕಾರಕವಾಗಿ ನಿಲ್ಲುತ್ತದೆ (ಭಾರಮಿಾ. ೩೧೨). [ಸಂ.]

**ಉಪಸ್ತರ** (ನಾ). ಹಾಸಿದ್ದು ; ಹಾಸು ; ಚಾಪೆ ಮೊದಲಾದುವು : ರಥಕ್ಕೆ ಹಾಸಿರುವ ಉಪಸ್ತರದ ಮೇಲೆ ನಿಂತು . . . ಏನಾದರೂ ಮಂತಣ ಮಾಡುವನು (ಬುದ್ಧಪ. ೧೦೫). [ಸಂ.]

**ಉಪಸ್ಥ** (ಗು). ೧. ಹತ್ತಿರದಲ್ಲಿರುವ ; ಸಮಿಾಪದ. (ನಾ). ೨. (ಸ್ತ್ರೀ ಅಥವಾ ಪುರುಷನ) ಜನನೇಂದ್ರಿಯ. ೩. ಸಮಿಾಪದಲ್ಲಿ ವಾಸಮಾಡುವವನು ; ಪರಮಾತ್ಮ : ಸಮಿಾಪದಲ್ಲಿ ವಾಸಮಾಡುವವನಾದುದರಿಂದ ಉಪಸ್ಥನೆಂದು ಪರಮಾತ್ಮನ ಹೆಸರು (ಹಸಾರ. ೬–೬ ಟೀಕೆ). [ಸಂ.]

**ಉಪಸ್ಥಾಪನ** (ನಾ). ಹತ್ತಿರಕ್ಕೆ ತರುವುದು ; ಸಮಿಾಪದಲ್ಲಿ ಇರಿಸುವುದು : ಸಾಮಯಿಕಮುಂ ಛೇದೋಪಸ್ಥಾಪನಮುಂ ಪರಿಹಾರವಿಶುದ್ಧಿಯುಂ ಸೂಕ್ಷ್ಮಸಾಂಪರಾಯಮುಂ. . , ನೆಱೆದು ನಿಸ್ಸಂಗರಾಗಿ(ಆದಿಪು. ೧೨–೪ ವ). [ಸಂ.]

**ಉಪಸ್ಥಿತ** (ಗು). ೧. ಹತ್ತಿರದಲ್ಲಿರುವ ; ಸಮಿಾಪಕ್ಕೆ ಬಂದ : ನಿರ್ಣಯಕ್ಕೆ ಬಾಧಕವಾದ ಅಡ್ಡಿಗಳು ಉಪಸ್ಥಿತವಾಗುತ್ತವೆ (ಕಸಾಚ. ೬೬). ೨. ಕುಳಿತುಕೊಂಡ ; ಹಾಜರಿರುವ. [ಸಂ.]

**ಉಪಸ್ಥಿತಿ** (ನಾ). ಎದುರಿಗಿರುವುದು ; ಸಮ್ಮುಖತೆ ; ಹಾಜರಿ : ನನ್ನ ತಂಗಿಯ ಉಪಸ್ಥಿತಿಯಲ್ಲಿ ತೊಂದರೆಯಾಗಬಹುದೆಂದು ಅವರು ಈ ರೀತಿ ಹೇಳುತ್ತಿದ್ದಾರೆಂದು ನಾನು ಊಹಿಸಿದೆ (ಫೇಮ್ಸಾಗಂ. ೧೬). [ಸಂ.]

**ಉಪಸ್ಥೆ** (ನಾ). (ಸ್ತ್ರೀ ಅಥವಾ ಪುರುಷನ) ಜನನೇಂದ್ರಿಯ : ವಾಕ್, ಪಾಣಿ, ಪಾದ, ಪಾಯು, ಉಪಸ್ಥೆ ಎಂದು ಕರ್ಮೇಂದ್ರಿಯಗಳು ಐದು (ನೀಗಟ್ಟು. ೧೩೮). [ಸಂ. ಉಪಸ್ಥ]

**ಉಪಸ್ಪರ್ಶ** (ನಾ). ೧. ಮುಟ್ಟುವುದು ; ಸ್ಪರ್ಶಿಸುವುದು. ೨. ತೊಳೆಯುವುದು ; ಮಾರ್ಜನ ; ಸ್ನಾನ. ೩. ಆಚಮನ. ೪. ಬಾಯಿ ಮುಕ್ಕುಳಿಸುವುದು. [ಸಂ.]

**ಉಪಸ್ಪರ್ಶನ** (ನಾ). = ಉಪಸ್ಪರ್ಶ ೨ : "ಉಪಸ್ಪರ್ಶನಂ, ಆಚಮನಂ– ಈ ೨ ಅಂಗದಂಟು ಬಾರಿಸುವುದು" (ಹಲಾಯು. ೬೪–೨೫೪). [ಸಂ.]

**ಉಪಸ್ಮೃತಿ** (ನಾ). ಮುಖ್ಯಸ್ಮೃತಿಗಳಲ್ಲದೆ ಬೇರೆಯ ಧರ್ಮಶಾಸ್ತ್ರ ಗ್ರಂಥ. [ಸಂ.]

**ಉಪಸ್ವರ್ಗ** (ನಾ). ಸ್ವರ್ಗದ ಸಮಿಾಪದ ಸ್ವರ್ಗ : ವಿಪುಲ ವ್ಯಾಕರಣದಿ ಸ್ವರ್ಗದೊತ್ತಿಗೆ ನಾವು ಉಪಸ[ಸ್ವ]ರ್ಗವೆಂದಹುದಾಗಿ ಉಪಸರ್ಗವೆನಬೇಡ ಉಪಸ್ವರ್ಗವೆನಬೇಕು ಲಿಪಿಗೊತ್ತು ತಪ್ಪಿತು ಕೆಳಗೆ (ಭರಚ. ೧೪–೬). [ಸಂ.]

**ಉಪಹತ** (ಗು). ತೊಂದರೆಗೆ ಒಳಗಾದ ; ಕೇಡಿಗೆ ಗುರಿಯಾದ ; ದುರ್ಬಲವಾದ : ಉಪಹತರಲ್ಲದ ಚಂದ್ರ ಶುಕ್ರರು ಸ್ತ್ರೀಕ್ಷೇತ್ರಗಳಲ್ಲಿ ಬುಧ ಶನಿ ಸೂರ್ಯಕುಜ ಗುರುಗಳು ಪುರುಷಕ್ಷೇತ್ರಗಳಲ್ಲಿ ಇರುವಾಗ ಬಲಿಷ್ಠರು (ಜಾತಕ. ೨–೭ ಅಡಿಟಿ). [ಸಂ.]

**ಉಪಹತಿ** (ನಾ). ೧. ಹೊಡೆತ ; ಪೆಟ್ಟು : ತಜ್ಜಲದೋಪಹತಿಯಿಂ ಬೇಱೊಂದು ಸರೋವರಮೆಂಬ ಸಂದೆಯಮಂ ಸಂದಿಸುವಚ್ಛೋದ ಸರೋವರಮಂ ಕಂಡು (ಕಾದಂಉ. ೫೩೯). ೨. ಕೇಡು ; ಅಪಾಯ ; ತೊಂದರೆ ; ಹಾನಿ : ರನ್ನದ ದೀವಿಗೆ ಪರುಷಪವನಹತಿಯಂ ಬಗೆಯದವೊಲ್ ಸೀತೆ ಬಗೆದಳಿಲ್ಲುಪಹತಿಯಂ (ಪಂಠಾಮಾ. ೯–೧೯೦). ೩. [ವ್ಯಾಕ] ಲೋಪ : ಉಪಹತಿ ನಾಲ್ಕೈದೆಂಬಿವಱುಪಧೆಯೊಳಾಱೆಂಬಿದರ್ಕೆ ಮೊದಲೊಳ್ ಹ್ರಸ್ವಂ (ಕಾವ್ಯಾವ. ೨೬೭). ೪. ಅಶಾಂತಿ ; ಕ್ಷೋಭೆ ; ಉದ್ವೇಗ. [ಸಂ.]

**ಉಪಹತಿಗೆಯ್** (ಕ್ರಿ). ತೊಂದರೆಮಾಡು ; ಹಿಂಸೆಪಡಿಸು : ಬನದ ತಪಸ್ವಿಗಳ್ಗುಪಹತಿಗೆಯ್ವುದಿದಂ ತವಿಪುದೆನಗೆ ಕರ್ತವ್ಯಮಕ್ಕುಂ (ಶಬಶಂ. ೪–೨೪ ವ). [ಉಪಹತಿ + ಗೆಯ್ (< ಕೆಯ್$_1$)]

**ಉಪಹಸಿತ** (ಗು). ೧. ಹಾಸ್ಯಮಾಡಲ್ಪಟ್ಟ; ನಗೆಗೆ ಗುರಿಯಾದ: ಉಪಹಸಿತ ಸನತ್ಕುಮಾರ ನಳಕೂಬರ ಮಕರಕೇತು ಸೌಂದರ್ಯನುಂ (ಶಾಂತಿಪು. ೧–೭೧ ವ). (ನಾ). ೨. ತಿರಸ್ಕಾರ ಅಥವಾ ಅಪಹಾಸ್ಯದಿಂದ ಕೂಡಿದ ನಗೆ. ೩. [ಕಾವ್ಯಮೀ] ಹಾಸ್ಯದಲ್ಲಿ ಒಂದು ಬಗೆ: ಹಾಸ್ಯವು ಆರು ವಿಧವೆಂದು ಈಚಿನ ಲಾಕ್ಷಣಿಕರು ಅಂಗೀಕರಿಸುತ್ತಾರೆ. ಉತ್ತಮಪ್ರಕೃತಿ (ಎಂದರೆ ಸ್ವಭಾವ) ಉಳ್ಳವರಲ್ಲಿ ಸ್ಮಿತ ಹಸಿತಗಳೂ ಮಧ್ಯಮಪ್ರಕೃತಿಯವರಲ್ಲಿ ವಿಹಸಿತ ಉಪಹಸಿತಗಳೂ . . . ಗೋಚರಿಸುತ್ತವೆ (ಭಾರಮೀ. ೯೦೩). [ಸಂ.]

**ಉಪಹಾರ** (ನಾ). ೧. ಹತ್ತಿರಕ್ಕೆ ತರುವುದು; ಸಮೀಪಕ್ಕೆ ತರುವುದು. ೨. ಬಲಿ; ನೈವೇದ್ಯ; ಅರ್ಪಣೆ. ೩. ಪೂಜೆ; ಅರ್ಚನೆ: ಭರತೇಶ್ವರಚಕ್ರವರ್ತಿಮಹೀತಳನಿಹಿತಮಣಿಕಿರೀಟರಶ್ಮಿಸಂದೋಹ ಸಾಂದ್ರಕುಂಕುಮಪಂಕದಿಂ ವಿಹಿತೋಪಹಾರನಾಗಿ (ಆದಿಪು. ೧೩–೮೨ ವ). ೪. ಕಾಣಿಕೆ; ನಜರು: "ಉಪಹಾರಮೆನಲ್ ಪಸರಮೆಂದು ತಿಳಿಗೆ" (ಭಾರನಿ. ೬೨); ದೇವದಾನ ಅಕ್ಷೀಣಿ ಆಗಾಮಿ ಕಾಣಿಕೆ ಉಪಹಾರ ಮೊದಲಾಗಿದ್ದ ಸಮಸ್ತ ಆ × × ರಾಮಕೃಷ್ಣದೇವರವರೆ ಕೊಂಬರು (ಮೈಆರಿ. ೧೯೩೬, ೧೭–೨; 13ನೆಯ ಶತ). ೫. ತಿಂಡಿ. 'ಉಪಹಾರಗೃಹ' ಪರಾ. [ಸಂ.]

**ಉಪಹಾರಗೃಹ** (ನಾ). ಉಪಹಾರವನ್ನು ಒದಗಿಸುವ ಮನೆ; ಹೋಟೆಲು: ನಮ್ಮ ಸ್ನೇಹಿತರು ಒಂದು ಉಪಹಾರಗೃಹವನ್ನು ತೆರೆದಿದ್ದಾರೆ (ರೂಢಿ). [ಉಪಹಾರ + ಗೃಹ]

**ಉಪಹಾಸ** (ನಾ). ೧. ವ್ಯಂಗ್ಯದಿಂದ ಕೂಡಿದ ನಗೆ; ವಿಡಂಬನೆ; ಹಾಸ್ಯ: ಭಾವಿಸಿ ವಂದಿಜನಂ ಪ್ರಸ್ತಾವದೊಳುಪಹಾಸ ಲವಮನೊಡರಿಸೆ (ಶಾಂತಿಪು. ೩–೫೦); ಬಿಲ್ಲ ಕೊಪ್ಪಿನ ಮೇಲೆ ಚಾಚಿದ ಗಲ್ಲದುಪಹಾಸದ ನುಡಿಯ ಮೈಭುಲ್ಲಣೆಯ (ಕುವ್ಯಾದ್ರೋ. ೧೭–೬೩). ೨. ತಿರಸ್ಕಾರ; ಅಲ್ಲಗಳೆಯುವುದು. [ಸಂ.]

**ಉಪಹಾಸಕ** (ನಾ). ವಿಡಂಬನಕಾರ. [ಸಂ.]

**ಉಪಹಾಸನ** (ನಾ). [ರಾಜನೀ] ಹದಿನಾರು ಬಗೆಯ ಸಂಧಿಗಳಲ್ಲಿ ಒಂದು: ಸಂಧಿ ಯಾವುವೆಂದೊಡೆ:—ಸಂಪ್ರದಾನ ಕಪಾಲ ಉಪಹಾಸನ . . . ಸ್ಕಂಧೋಪನಯಮೆಂದು ಷೋಡಶವಿಧಮಕ್ಕುಂ (ಪಂಚತಂ. ೨೨೦–೮). [ಸಂ.]

**ಉಪಹಾಸಿ** (ಗು). ಹಾಸ್ಯಮಾಡುವ; ತಿರಸ್ಕರಿಸುವ: ನಿರಾಕುಳಸ್ವಾಂತನಪಗತರಾಜ್ಯಚಿಂತನಮರಸೌಂದರೀವಿಳಾಸೋಪಹಾಸಿ ಗಗನಚರಸೌಂದರೀಮನೋನಯನಸೌಂದರನಾಗಿ (ಆದಿಪು. ೧–೮೧ ವ). [< ಸಂ. ಉಪಹಾಸಿನ್]

**ಉಪಹಿತ** (ಗು). ೧. ಕೂಡಿರುವ; ಸೇರಿರುವ; ಸಂಬಂಧಿಸಿದ: ಮೂಡಣ ಭರತದೊಳ್ ಉಪಹಿತಲೋಭವಶಜನಪರಿಪೂರ್ಣ ನಾನಾನಗರ ನಂದನವನನದೀರತ್ನನಿಕರಾಕರ ಸರಃಕೇದಾರಸಾರ ಸಂಪದ್ವಿಷಯಮುಪ್ಪಳಕಾವಿಷಯಮೆಂಬ ದೇಶದೊಳ್ (ಚಂದ್ರಪು. ೪–೭೯ ವ); ತಿಳಿ ಬಗೆಯಿಂ ಪರಮಾರ್ಥಾದ್ಯುಪಹಿತಮಂ ಹಿತಮುಂ ನೀಂ (ಸೌನಂದ. ೯–೪೯). ೨. ಇಡಲ್ಪಟ್ಟ. ೩. ಅವಲಂಬಿಸಿದ. [ಸಂ.]

**ಉಪಹೃತ** (ಗು). ೧. ಹತ್ತಿರಕ್ಕೆ ತರಲ್ಪಟ್ಟ; ಕರೆತರಲಾದ. ೨. ಅರ್ಪಿಸಲ್ಪಟ್ಟ; ಕಾಣಿಕೆಯಾಗಿ ಕೊಟ್ಟ. [ಸಂ.]

**ಉಪಹ್ವರ** (ನಾ). ೧. ಸಮೀಪದಲ್ಲಿರುವ ಪ್ರದೇಶ; ನೆರೆಹೊರೆ; ಹತ್ತಿರದಲ್ಲಿರುವ ಸ್ಥಳ. ೨. ರಹಸ್ಯ ಪ್ರದೇಶ; ಗುಪ್ತವಾದ ಸ್ಥಳ: "ರಹಃ . . . ಉಪಹ್ವರಂ – ಈ ೯ ಏಕಾಂತಂ" (ಹಲಾಯು. ೧೧೧೭–೨೩). [ಸಂ.]

**ಉಪಳ** 'ಉಪಲ' ನೋ.

**ಉಪಾಂಗ** (ನಾ). ೧. ಮುಖ್ಯವಾದ ಅಂಗದ ಒಳವಿಭಾಗ; ಅಂಗದೊಳಗಿನ ಅಂಗ,—ಅಂಶ: ಒಡಲನಾವರಿಸಿದಂಗೋಪಾಂಗ ಸಂಕುಳದ ನಡುವೆ ನಯನದ್ವಯಂಗಳು (ಹಚಕಾ. ೨–೫). ೨. ಹಣೆಯಲ್ಲಿಟ್ಟುಕೊಳ್ಳುವ ಗಂಧದ ಬೊಟ್ಟು,—ತಿಲಕ. ೩. ಶಾಸ್ತ್ರದ ಅಥವಾ ವೇದದ ಬೇರೆಬೇರೆ ವಿಭಾಗ; ಮೀಮಾಂಸೆ, ನ್ಯಾಯ, ಪುರಾಣ, ಸ್ಮೃತಿಗಳೆಂಬ ವೇದಗಳ ನಾಲ್ಕು ಉಪಾಂಗಗಳು. ೪. [ಸಂಗೀತ] ರಾಗದ ಜಾತಿಗಳಲ್ಲಿ ಒಂದು ಬಗೆ: ಉದಿಸಿದುವು ರಾಗಾಂಗ ಭಾಷಾಂಗಮಾ ಕ್ರಿಯಾಂಗಮುಪಾಂಗಮೆಂಬ ನಿಜಭಾಷೆಯೊಳು ನೂಱೊಂದು ರಾಗಂಗಳು (ಮಂಗರಾ. ೨೪–೫). ೫. [ಸಂಗೀತ] ಒಂದು ವಾದ್ಯ ವಿಶೇಷ; ಉಪ್ಪಂಗ: ಚೆಂಗು ದಂಡಿಗೆ ಮುಖವೀಣೆ ತಿತ್ತಿ ಜಂತ್ರವುಪಾಂಗ ಮುಂತಾದುವನಾಂತು (ಭರಚ. ೪೭–೪೭). [ಸಂ.]

**ಉಪಾಂತ** (ನಾ). ೧. ಸಮೀಪ; ಹತ್ತಿರ: "ಸಮೀಪಂ . . . ಉಪಾಂತಂ, ಅಪದಾಂತರಂ – ಈ ೧೮ ಸಮೀಪಂ" (ಹಲಾಯು. ೧೧೫–೭೮). ೨. ಒಂದು ಬಿಟ್ಟು ಕಡೆಯದು. 'ಉಪಾಂತಾಕ್ಷರ' ಪರಾ. [ಸಂ.]

**ಉಪಾಂತಾಕ್ಷರ** (ನಾ). ಕೊನೆಯ ಅಕ್ಷರಕ್ಕೆ ಹಿಂದಿನ ಅಕ್ಷರ: ಪೊಱಗು ಒಳಗು ಪೊಸತು ಪಳದು ಎಳದು ಎಂಬಿವರ್ಕೆ ಸಮಾಸವಿಷಯದೊಳುಪಾಂತಾಕ್ಷರಕ್ಕೆ ಲೋಪಮಾಗಿ (ಶಮದ. ೫೮ ವೃತ್ತಿ). [ಉಪಾಂತ + ಅಕ್ಷರ]

**ಉಪಾಂತ್ಯ** (ನಾ). ೧. ಹತ್ತಿರ; ಸಮೀಪ: ಅಮಿತ ಜಿನಮಾಳೆಯೊಳ್ ವರ್ಧಮಾನಜಿನನೆಂತುಪಾಂತ್ಯದೊಳ್ ನೆಗಟ್ಟಿವೊಲ್ (ಸುಕುಮಾ. ೧–೨೪). ೨. ಕಡೆಯದರ ಸಮೀಪದ್ದು; ಕೊನೆಯದರ ಹಿಂದಿನದು: ಉಪಾಂತ್ಯದಕಾರದ ನೆಲೆಯೊಳೊಕಾರಂ . . . ಅಕ್ಕುಂ (ಕಾವ್ಯಾವ. ೩೦). [ಸಂ.]

**ಉಪಾಂಶು** (ನಾ). ೧. ಗುಟ್ಟು; ರಹಸ್ಯ: ಸುರಾರಿ ಕುತರ್ಕೋಕ್ತಿಯನೆಂತು ಪೊಣ್ದು ಬೆಸವೇಟ್ಟನದಂ ಮಾರ್ಕೊಂಡುಪಾಂಶುವೆನ್ನದುದರ್ಕ ಪರಿಜ್ಞಾನದಾನಪತಿ ಕೈಕೊಂಡಂ (ಜಗವಿ. ೫–೬೫). ೨. ಇತರರಿಗೆ ಕೇಳಿಸದಂತೆ ಮೆಲುದನಿಯಲ್ಲಿ ಉಚ್ಚರಿಸುವುದು. 'ಉಪಾಂಶುಜಪ' ಪರಾ. [ಸಂ.]

**ಉಪಾಂಶುಜಪ** (ನಾ). ಇತರರಿಗೆ ಕೇಳಿಸದಂತೆ ಮೆಲುದನಿಯಲ್ಲಿ ಉಚ್ಚರಿಸುವ ಮಂತ್ರ: "ತನ್ನ ಕಿವಿಗಳಿಗೆ ಮಾತ್ರ ಕೇಳಿಸುವ ಹಾಗೆ ಓಷ್ಠಸ್ಪಂದಮಾತ್ರದಿಂದ ಜಪಿಸುವುದೇ ಉಪಾಂಶುಜಪವೆನಿಸುವುದು" (ಅಷ್ಟಾವಿ. ೯). [ಉಪಾಂಶು + ಜಪ]

**ಉಪಾಂಶುವಧೆ** (ನಾ). ರಹಸ್ಯವಾಗಿ ನಡಸುವ ಕೊಲೆ; ಗುಟ್ಟಾಗಿ ಕೊಲ್ಲುವುದು. 'ಉಪಾಂಶುವಧೆಗೆಯ್' ಪರಾ. [ಉಪಾಂಶು+ವಧೆ]

**ಉಪಾಂಶುವಧೆಗೆಯ್** (ಕ್ರಿ). ರಹಸ್ಯವಾಗಿ ಕೊಲ್ಲು; ಗುಟ್ಟಾಗಿ ಕೊಲೆಮಾಡು: ಮದೀಯಜನಕನಂ ಚಂದ್ರೋದರ ವಿಯಚ್ಚರೇಂದ್ರನನುಪಾಂಶುವಧೆಗೆಯ್ದುದುಮೆಮ್ಮ ಪರಿಜನಮೋಡಿಪೋಗಿ (ಪಂರಾಮಾ. ೯–೧೩೨ ವ). [ಉಪಾಂಶುವಧೆ + ಗೆಯ್ (< ಕೆಯ್$_1$)]

**ಉಪಾಂಸು** (ನಾ). ರಹಸ್ಯ; ಗುಟ್ಟು: ವಿಕ್ರಮಾರ್ಜುನಂ ಬಿಲ್ಲೊಳಲುಂ ಭೀಮಸೇನಂ ಗದೆಗೊಳಲುಮಾಂಪುದರಿದುಪಾಂಸುವದೆ ಕೆಯ್ಗೆಮಾಡುವುದುತ್ತಮಪಕ್ಷಂ (ಪಂಪಭಾ. ೨–೯೦ ವ). [< ಸಂ. ಉಪಾಂಶು]

**ಉಪಾಕರಣ** (ನಾ). ೧. ಸಮೀಪಕ್ಕೆ ತರುವುದು; ಹತ್ತಿರಕ್ಕೆ ಬರಮಾಡಿಕೊಳ್ಳುವುದು; ಕರೆಯುವುದು. ೨. ಸಂಸ್ಕಾರ ಪೂರ್ವಕವಾಗಿ ವೇದವನ್ನು ಗ್ರಹಿಸುವುದು. ೩. ಯಾಗದಲ್ಲಿ ಮಂತ್ರಪೂರ್ವಕವಾಗಿ ಯಜ್ಞಪಶುವನ್ನು ಪ್ರೋಕ್ಷಿಸುವುದು. [ಸಂ.]

**ಉಪಾಕರ್ಮ** (ನಾ). ೧. ಆರಂಭ; ಉಪಕ್ರಮ; ಸಿದ್ಧತೆ. ೨. ಪ್ರತಿ ವರ್ಷವೂ ಶ್ರಾವಣಮಾಸದ ಹುಣ್ಣಿಮೆಯಂದು ಆಚರಿಸುವ ಕರ್ಮ; ಜನಿವಾರದ ಹಬ್ಬ; ಶ್ರಾವಣಿ. [< ಸಂ. ಉಪಾಕರ್ಮನ್]

**ಉಪಾಕೃತ** (ಗು). ೧. ಸಮೀಪಕ್ಕೆ ಒಯ್ಯಲ್ಪಟ್ಟ; ಬರಮಾಡಿಕೊಂಡ. (ನಾ). ೨. ಯಾಗದಲ್ಲಿ ಮಂತ್ರಪೂರ್ವಕವಾಗಿ ವಧಿಸಿದ ಯಜ್ಞಪಶು: "ಮಂತ್ರಿಸಿದ ಪಶು ಉಪಾಕೃತಮೆಂಬುದು" (ಹಲಾಯು. ೬೯–೨೬೩). [ಸಂ.]

**ಉಪಾಖ್ಯಾನ** (ನಾ). ೧. ಹಿಂದೆ ನಡೆದಿರುವ ವಿಷಯವನ್ನು ತಿಳಿಸುವುದು; ಪೂರ್ವಕಥೆ. ೨. ಮುಖ್ಯವಾದ ಕಥೆಯ ನಡುವೆ ಬರುವ ಸಣ್ಣ ಕಥೆ: ಪೆಱವುಮುಪಾಖ್ಯಾನ ಕಥೆಗಳೊಳಮೊಂದುಮಂ ಕುಂದಲೀಯದೆ ಪೇೞ್ದೆಂ (ಪಂಪಭಾ. ೧೪–೫೨ ವ). [ಸಂ.]

**ಉಪಾಗಮ** (ನಾ). ೧. ತಲಪುವುದು; ಬಂದು ಸೇರುವುದು. ೨. ಒದಗುವುದು; ಉಂಟಾಗುವುದು. ೩. ಸಮ್ಮತಿ; ಒಪ್ಪಿಗೆ. ೪. ವಾಗ್ದಾನ; ಮಾತುಕೊಡುವುದು. ೫. ಅಮುಖ್ಯ ಅಥವಾ ಗೌಣವಾದ ಆಗಮ. [ಸಂ.]

**ಉಪಾಗಿ** (ನಾ). ಒಂದು ಗಿಡದ ಹೆಸರು: ಮಂತುಳ್ಳಿ, ಉಪಾಗಿ, ಮೆಂತೇಹುಳಿ (ವೈಔಗಿ. ೩೮–೬೫೪). [?]

**ಉಪಾಗ್ರ** (ನಾ). ೧. ಅಗ್ರದ ಹಿಂದಿನದು; ಉಪಾಂತ್ಯ. ೨. ಅಧೀನವಾದುದು; ಗೌಣ: "ಉಪಾಗ್ರಂ, ಉಪಸರ್ಜನಂ – ಈ ೨ ಪೊ[ಹೊ]ರ್ದುಗೆ" (ಹಲಾಯು. ೧೨೬–೬೮). [ಸಂ.]

**ಉಪಾತ್ತ** (ಗು). ೧. ಸಂಪಾದಿಸಲ್ಪಟ್ಟ; ಪಡೆದ: ಉಪಾತ್ತ ಕಾಳಿಮ ಪಯೋಧರಾಸ್ಯತೆಯಿಂ ಪೋಲ್ತುದಭ್ರಾಗಮಂ ಸಗರ್ಭಾಂಗನೆಯಂ (ಚಂದ್ರಪು. ೪–೪೩). ೨. ಉಂಟುಮಾಡುವ; ತರುವ: ಸುಖಮಿದು ದುಃಖೋಪಾತ್ತಮಿದೆಂದಱಿಪುಗುಮಾ ಪರಮ ಕವಿಪ್ರಧಾನರಾ ಕಾವ್ಯಂಗಳ್ (ಕವಿರಾ. ೧–೧೮). ೩. ಒಯ್ಯಲ್ಪಟ್ಟ; ಒಯ್ದ. ೪. ಕೈಕೊಳ್ಳಲ್ಪಟ್ಟ; ಸ್ವೀಕರಿಸಿದ. (ನಾ). ೫. ಮದವಿಳಿದ ಆನೆ: "ಮದವಿೞಿದಾನೆ ಉಪಾತ್ತ [ಪಾಠಾಂ. ಉಪ್ಪಾಂತ] ಮೆಂಬುದು" (ಹಲಾಯು. ೩೭–೬೭). [ಸಂ.]

**ಉಪಾತ್ಯಯ** (ನಾ). ಕ್ರಮ ಅಥವಾ ಸಂಪ್ರದಾಯದ ಉಲ್ಲಂಘನೆ; "ಕ್ರಮತಪ್ಪುವುದು" (ಅಮರ. ಟೀಕೆ). [ಸಂ.]

**ಉಪಾದಾನ** (ನಾ). ೧. ತೆಗೆದುಕೊಳ್ಳುವುದು; ಸ್ವೀಕರಿಸುವುದು; ಗ್ರಹಿಸುವುದು; ಗ್ರಹಿಕೆ. ೨. ಒಯ್ಯುವುದು. ೩. ಹಿಂದೆಗೆದುಕೊಳ್ಳುವುದು; "ವಿಷಯಗಳ ದೆಸೆಯಿಂದ ಕಣ್ಣು ಮೊದಲಾದ ಇಂದ್ರಿಯಗಳನ್ನು ಹಿಂದಿರುಗಿಸುವಿಕೆ" (ಅಮರ. ಟೀಕೆ). ೪. ಉಪಾಯನ; ಪಾರಿತೋಷಿಕ. ೫. ಲಂಚ: "ಲಂಚಃ, ಉತ್ಕೋಚಃ, ಉಪಾದಾನಂ, ಉಪಚಾರಃ, ಆಮಿಷಃ – ಈ ೫ ಲಂಚಂ" (ಹಲಾಯು. ೬೧–೨೮೦). ೬. ವಸ್ತುವಿನ ಮೂಲ ಸಾಮಗ್ರಿ. 'ಉಪಾದಾನಕಾರಣ' ಪರಾ. ೭. ಭಿಕ್ಷೆ; ತಿರುಪೆ: ಉಪಾದಾನಕ್ಕೆ ಯಾರು ಬಂದರೂ ಅಟ್ಟುತ್ತಿದ್ದನು (ನೀತಿಚಿಂ. X, ೩).

ಉಪಾದಾನದವರು = ಭಿಕ್ಷುಕರು; ತಿರುಪೆಯವರು: ಆಪ್ತರಾದ ಕೆಲವು ಗೂಢಚಾರರಿಗೆ ಉಪಾದಾನದವರ ವೇಷವನ್ನು ಹಾಕಿಸಿ ಕಳುಹಿಸುತಾ (ಮುಸುಗ. ೫೫). [ಸಂ.]

**ಉಪಾದಾನಕಾರಣ** (ನಾ). ಮೂಲಕಾರಣ; ಮೂಲ ಸಾಮಗ್ರಿ: ಈ ಪ್ರಪಂಚಕ್ಕೆ ಪ್ರಧಾನವೆಂಬ ಮೂಲಪ್ರಕೃತಿಯೇ ಉಪಾದಾನಕಾರಣವು ಎಂದರೆ ಭೂಷಣಗಳಿಗೆ ಬಂಗಾರದಂತೆ ಪರಿಣಮಿಸುವ ಕಾರಣವು (ಹಿಂದಸಾ. ೯೩). [ಉಪಾದಾನ + ಕಾರಣ]

**ಉಪಾದಿಕೆ** (ನಾ). ಹಿಂಸೆ; ತೊಂದರೆ: ಹಸಿವುಳ್ಳನ್ನಕ್ಕ ವ್ಯಾಪಾರ ಬಿಡದು ಶೀತವುಳ್ಳನ್ನಕ್ಕವುಪಾದಿಕೆ ಬಿಡದು (ಪದಗೋ. ೧೨೬–೧೧೮). [< ಸಂ. ಉಪಾಧಿಕಾ]

**ಉಪಾದೆಯ** 'ಉಪಾದ್ಯ₁' ನೋ.

**ಉಪಾದೇಯ** (ಗು). ತೆಗೆದುಕೊಳ್ಳಲು ಯೋಗ್ಯವಾದ; ಸ್ವೀಕಾರಕ್ಕೆ ಅರ್ಹವಾದ; ಗ್ರಾಹ್ಯವಾದ: ನಿನ್ನ ಬೆಸಗೊಂಡ ತತ್ತ್ವಮುಂ ಹೇಯೋಪಾದೇಯರೂಪದಿಂ ದ್ವಿವಿಧಮಕ್ಕುಂ (ಆದಿಪು. ೧೦–೬೧ ವ). [ಸಂ.]

**ಉಪಾದೇಶ** (ನಾ). ಸೂಚನೆ; ನಿರ್ದೇಶನ: ಆದಾನಱಿವೋರುಂ ಅಱಿವಲ್ಪಱ್ಚಿದೋರ್ ಮನದೆ ನೆನೆವೋರುಂ ಅಱಿಮೆನೆನ್ದುಪಾದೇಶಂ ಕೊಡುವೋರುಂ ಪಞ್ಚಮಹಾಪಾತಕ ಸಂಯುಕ್ತರಪ್ಪೊರ್ (ಎಕ. VI, ಕೊಪ್ಪ. ೩೮–೯; 675). [ಸಂ.]

**ಉಪಾದ್ಯ₁**, ಉಪಾದೆಯ, ಉಪಾಧ್ಯ (ನಾ). ೧. ಉಪಾಧ್ಯಾಯ; ಶಿಕ್ಷಕ: ರುಗ್ವೇದವನೋದಿಸುವ ಖಂಡಿಕದ ಉಪಾದ್ಯರ ಜೀವಿತಕ್ಕೆ ವರ್ಷ ೧ಕ್ಕೆ ಗದ್ಯಾಣಂ ಆಱು (ಎಕ. III, ತಿರುಮ. ೨೭–೩೩; 1290); ಬಾಲ್ಯದಲ್ಲಿ ತಂದೆಯೂ ಉಪಾದ್ಯನೂ . . . ವಿದ್ಯೆ ಕಲಿಸಿದರು (ಕಥಾಮಂ. ೧೧೨). **ಉಪಾದೆಯ**: ೧. (ಕ). **ಉಪಾಧ್ಯ**: ೧. ಪುರಾಣವ ಹೇಳುವ ವೆಂಕಣ್ಣ ಉಪಾಧ್ಯರಿಗೆ (ಎಕ. VII, ಶಿವಮೊ. ೬೦–೧೭; 1409); ಏನು ಸುದ್ದಿಯುಪಾಧ್ಯರೆದ್ದಿರಿದೇನು ಧನುವಿಂಗಲ್ಲಲೇ (ಕುವ್ಯಾ ಆ. ೧೫–೧೦); ಗುತ್ತಿನ ಭಂಟರು . . . ಉಪ್ಪಿನಂಗಡಿ ಉಪಾಧ್ಯರು ಮೊದಲಾದವರೆಲ್ಲರೂ ಬಂದಿದ್ದರು (ಈಕಥೆ. ೧೦೭). ೨. ಉಪಾಧ್ಯಾಯನಿಗೆ ಕೊಟ್ಟ ವೃತ್ತಿ (?): ಅತಿಮೋಘ ಹೊಂನಿಭಟ್ಟರ ದೇವರ ಭಟರಿಗೆ ಸಲುವ ಉಪಾಧ್ಯಕೆ ಜ್ಯೋತಿಷ್ಯಕೆ ಸ್ವಾಸ್ತ್ಯಯಿರಲಾಗಿ (ಎಕ. VI, ತರೀಕೆ. ೨೧–೩೦; 1655). [< ಸಂ. ಉಪಾಧ್ಯಾಯ]

**ಉಪಾದ್ಯ₂** (ಗು). ಮೊದಲನೆಯದರ ಹತ್ತಿರದ; ಎರಡನೆಯ: ಪುರುದೇವಾಜಿತದೇವರಿರ್ವರೆ ದಲಾದ್ಯೋಪಾದ್ಯ ತೀರ್ಥೇಶ್ವರರ್ (ಅಜಿಪು. ೧೨–೭). [ಸಂ.]

**ಉಪಾದ್ರಿ** (ನಾ). ೧. ಬೆಟ್ಟದ ಸಮೀಪ, —ಹತ್ತಿರ. ೨. ಸಮೀಪದ ಬೆಟ್ಟ: ವಿಷಯಸೌಖ್ಯಾಯತ್ತನತ್ಯಂತ ಲೋಭವಿಷಗ್ರಸ್ತನುಪಾದ್ರಿಯೊಳ್ . . . ಬೆಂದು (ಆದಿಪು. ೫–೪). [ಸಂ.]

**ಉಪಾಧಿ₁** (ನಾ). ೧. ಧರ್ಮದ ವಿಷಯವಾಗಿ ಮಾಡುವ ಚಿಂತನೆ. ೨. ಕುಟುಂಬ ಪೋಷಣೆಯಲ್ಲಿ ನಿರತನಾದ ವ್ಯಕ್ತಿ. [ಸಂ.]

**ಉಪಾಧಿ₂** (ನಾ). ೧. ತೋರಿಕೆ; ವೇಷ; ಮೋಸ; ವಂಚನೆ; ಯುಕ್ತಿ. ೨. ಒಂದು ವಸ್ತು ಇತರ ವಸ್ತುಗಳಿಗಿಂತ ಬೇರೆಯದೆಂದು ತೋರಿಸುವ ವಿಶಿಷ್ಟ ಗುಣ; ವಿಶೇಷ ಲಕ್ಷಣ. ೩. ಬಿರುದು; ಪ್ರಶಸ್ತಿ; ಪದವಿ: ಯಾವ ಉಪಾಧಿಗಳ ಚಿಂತೆ ಚಾಪಲ್ಯವೂ ಇಲ್ಲದೆ ಹಿಡಿದ ವ್ರತವನ್ನು ನಿಷ್ಠೆಯಿಂದ ಸಾಧಿಸಬಲ್ಲವನು (ಬಂಕಿಮ. ೧೮೫). ೪. ಸಂಬಂಧಿಸಿದ್ದು; ಲಗತ್ತಾದದ್ದು: ಯಾ ಗ್ರಾಮದ ಚತುಸ್ಸೀಮೆಗೆ ಸಲುವ . . . ಹಲ ಉಪಾಧಿಗಳೂ ಸಹ ಸೇರ್ಸಿ ಕೊಟ್ಟೆವು (ಸೌಇಇ. IX–i, ೪೬೩–೮; 1470); ಅಂತಃಕರಣದ ಉಪಾಧಿಯಿಂದ ಕೂಡಿದ ಕೇವಲ ಚೈತನ್ಯವೇ ಜೀವ (ಅವೃತ. ೩–೨೧ ಟೀಕೆ). ೫. ಕಾರಣ; ಹೇತು. ೬. ಹಿಂಸೆ; ತೊಂದರೆ; ಉಪದ್ರವ: ಎಲ್ಲಿ ಸುಳಿದಡೆ ಅಲ್ಲಲ್ಲಿ ಉಪಾಧಿ ಬಿಡದಯ್ಯ ಈ ಉಪಾಧಿಗೆ ಅಪಾಯವನಿತ್ತು ನಿರುಪಾಧಿಯಲ್ಲಿ ನಿಲಿಸಯ್ಯ (ಆದವ. ೨೭); ಎತ್ತುಗಳ ಕೊಂಬುಗಳಿಗೆ ಉಪಾಧಿಯಿಲ್ಲದಂತೆ ಪಂಜುಗಳನ್ನು ಕಟ್ಟಿ (ಮಹಾವಂ. II, ೧೧೪). [ಸಂ.]

**ಉಪಾಧಿಕೆ** (ನಾ). "ಅತ್ಯಧಿಕ ವಿಷಯಲಂಪಟ; ಸಂಸಾರಭಾರವ ಹೊತ್ತವ" (ಚನ್ನವ. ಕೋಶ); ಊರೊಳಗಿರ್ದಡೆ ಉಪಾಧಿಕನೆಂ [ಪಾಠಾಂ ಸಂಸಾರಿಯಂ]ಬರು ಅಡವಿಯೊಳಗಿರ್ದಡೆ ಮೃಗನೆಂಬರು (ಚನ್ನವ. ಕ. ೫೨೫). [ಸಂ.]

**ಉಪಾಧಿವಂತ** (ನಾ). ಬಿಡುವಿಲ್ಲದವನು; ಗಡಿಬಿಡಿಕಾರ (ಕ). [< ಸಂ. ಉಪಾಧಿಮತ್]

**ಉಪಾಧ್ಯ** 'ಉಪಾಧ್ಯ' ನೋ.

**ಉಪಾಧ್ಯಕ್ಷ** (ನಾ). ಅಧ್ಯಕ್ಷರಿಗೆ ಎರಡನೆಯ ಸ್ಥಾನದಲ್ಲಿರುವವನು: ರಾಜ್ಯಸಭೆಯ ಉಪಾಧ್ಯಕ್ಷ (ರೂಢಿ). [ಸಂ.]

**ಉಪಾಧ್ಯತನ** (ನಾ). ಉಪಾಧ್ಯಾಯ ವೃತ್ತಿ, —ಕೆಲಸ: (ಮುಂಬಯಿ. ೪–೨೮೧ ಕ). [ಉಪಾಧ್ಯ (< ಉಪಾಧ್ಯ$_1$) + –ತನ]

**ಉಪಾಧ್ಯಾಯ** (ನಾ). ೧. ಓದಿಸುವವನು; ಪಾಠಹೇಳಿಕೊಡುವವನು; ಶಿಕ್ಷಕ; ಅಧ್ಯಾಪಕ: "ಅಧ್ಯಾಪಕಃ, ಉಪಾಧ್ಯಾಯಃ – ಈ ೨ ಓದಿಸುವಾತಂ" (ಹಲಾಯು. ೬೬–೨೪೬); ಉಪಾಧ್ಯಾಯಂಗೆ ಕಟಿಮೆಯ ಕೂಟುಂ ತುಪ್ಪಮುಂ ತೊವೆಯುಮನುಣಲ್ಕೊಟ್ಟು ಕುಮಾರನನೋದಿಸುಗೆ (ವಡ್ಡಾರಾ. ೯೯–೧೩). ೨. [ಜೈನ] ಪಂಚಪರಮೇಷ್ಠಿಗಳಲ್ಲಿ ಒಬ್ಬ: ಕಣ್ಣೂಱ ಕಲ್ಪಿಪ್ಪುಪಾಧ್ಯಾಯರ್ ಜ್ಯೋತಿಸುಗೆಮ್ಮಾ ಚಿತ್ತಗೃಹದೊಳ್ ರತ್ನತ್ರಯಜ್ಯೋತಿಯಂ (ಆದಿಪು. ೧–೪). [ಸಂ.]

**ಉಪಾಧ್ಯಾಯತೆ** (ನಾ). = ಉಪಾಧ್ಯತನ: ಮರ್ಮರಧ್ವನಿ ಪಱಿಯಾಗೀ ಪವನಂ ಲತಿಕಾಲಾಸ್ಯೋಪಾಧ್ಯಾಯತೆಯನಱಿಪಿ ಶೀಡುಗುಮುಗದೊಳ್ (ಶಾಂತಿಪು. ೨–೧೦೧). [ಸಂ. ಉಪಾಧ್ಯಾಯತಾ]

**ಉಪಾಧ್ಯಾಯರಹಸ್ಯ** (ನಾ). ಉಪಾಧ್ಯಾಯರು ಶಿಷ್ಯನಿಗೆ ಬೋಧಿಸದೆ ಗೂಢವಾಗಿಟ್ಟುಕೊಂಡಿರುವ ರಹಸ್ಯ: ಅಲ್ಲಿಯೇನಾನುಮುಪಾಧ್ಯಾಯರಹಸ್ಯಮುಕ್ಕುಮದುವುಂ ಸೂಚನಾಮಾತ್ರದೊಳ್ ವಿದಿತಮಕ್ಕುಂ (ಸುಕುಮಾ. ೩–೨೨ವ). [ಉಪಾಧ್ಯಾಯ + ರಹಸ್ಯ]

**ಉಪಾಧ್ಯಾಯಾನಿ** (ನಾ). ಉಪಾಧ್ಯಾಯನ ಹೆಂಡತಿ. [ಸಂ. ಉಪಾಧ್ಯಾಯಾನೀ]

**ಉಪಾಧ್ಯಾಯಿ** (ನಾ). ೧. ಉಪಾಧ್ಯಾಯನ ಹೆಂಡತಿ, —ಪತ್ನಿ. ೨. ವಿದ್ಯೆ ಕಲಿಸುವವಳು; ಶಿಕ್ಷಕಿ: ಸ್ತ್ರೀಯರು ವೇದಾಧ್ಯಯನವನ್ನು ಮಾಡಿಸುತ್ತಿದ್ದರೆಂದು ಪಾಣಿನಿ ಮೊದಲಾದವರ "ಉಪಾಧ್ಯಾಯಾ, ಉಪಾಧ್ಯಾಯೀ, ಆಚಾರ್ಯಾ" ಮೊದಲಾದ ವ್ಯವಹಾರದಿಂದ ತಿಳಿದು ಬರುತ್ತದೆ (ಹಿಂದಸಾ. ೧೫೮). [ಸಂ. ಉಪಾಧ್ಯಾಯೀ]

**ಉಪಾಧ್ಯಾಯಿನಿ** (ನಾ). ೧. = ಉಪಾಧ್ಯಾಯಿ ೧: ಉಪಾಧ್ಯಾಯ ಪತ್ನೀ ಎಂಬ ಅರ್ಥದಲ್ಲಿ ಉಪಾಧ್ಯಾಯಿನಿ (ಹಿಂದಸಾ. ೧೫೯). ೨. = ಉಪಾಧ್ಯಾಯಿ ೨: ಆಕೆ ಪ್ರೌಢಶಾಲೆಯಲ್ಲಿ ಉಪಾಧ್ಯಾಯಿನಿಯಾಗಿದ್ದಾಳೆ (ರೂಢಿ). [ಸಂ. ಉಪಾಧ್ಯಾಯಿನೀ]

**ಉಪಾನತಿ** (ನಾ). ಮೆಟ್ಟು; ಪಾದರಕ್ಷೆ: "ಚರ್ಮಪಾದುಕಮುಪಾನತಿಯೆನಲ್ ಕೆರವು" (ಮಂಗರಾ. ೬೧–೧೮). [< ಸಂ. ಉಪಾನಹ್]

**ಉಪಾನಹ** (ನಾ). = ಉಪಾನತಿ: ಪ್ರದ್ಯೋತಮಾನ ಚರ್ಮರತ್ನೋಪಾನಹನಾಗಿ ... ಆಭರಣಂಗಳಂ ತೊಟ್ಟು (ಚಾವುಂಉ. ೭೦). [ಸಂ. ಉಪಾನಹ್]

**ಉಪಾಯ** (ನಾ). ೧. ಹತ್ತಿರಕ್ಕೆ ಬರುವುದು; ಸಮೀಪಕ್ಕೆ ಸೇರುವುದು. ೨. ಸಾಧನ; ಯುಕ್ತಿ; ಹಂಚಿಕೆ: ಈ ಶಿಶುವಂ ನಮ್ಮ ಸಂತಾನಕ್ಕುಱಿಪಿ ಕೃತಕೃತ್ಯರಪ್ಪುದರ್ಕುಪಾಯಮಾವುದು ... ಎಂದು ನಾಡೆಯುಂ ಮಱುಗಿ (ಜಗವಿ. ೩–೬ವ); ಅಪಾರಮಹಿಮೆಯ ಉಡುಪಿಯ ಕೃಷ್ಣನ ಉಪಾಯದಿಂದಲಿ ನೆನೆ ಮನವೇ (ಪುರಂದ. ೧–೩೦–೬). ೩. [ರಾಜನೀ] ಸಾಮ, ದಾನ, ಭೇದ, ದಂಡ ಎಂಬ ಪ್ರಸಿದ್ಧವಾದ ನಾಲ್ಕು ಉಪಾಯಗಳು: ಸಾಮಾದಿಯಾಗಿ ದಂಡಪರ್ಯಂತಮಾವುಪಾಯಂ ನಾಲ್ಕು ತೆಜನಕ್ಕುಂ (ಪಂಚತಂ. ೧೬೪–೨೧). ೪. [ತತ್ತ್ವಶಾ] ಮೋಕ್ಷಸಿದ್ಧಿಗಾಗಿ ಅವಲಂಬಿಸುವ ಭಕ್ತಿ, ಜ್ಞಾನ, ಕರ್ಮಮಾರ್ಗಗಳು: ಭಕ್ತಿಯೋಗಕ್ಕೆ ಯೋಗವೆಂದರೆ ಉಪಾಯಮಾರ್ಗವೆಂದರ್ಥ (ಹಿಂದಸಾ. ೨೫೭). ೫. (ಆಲಂ). ಸುಲಭ; ನಾಜೂಕು: ಅಂತು ಆ ಕೆಲಸವನ್ನು ಉಪಾಯವಾಗಿ ಸಾಧಿಸಿಬಿಟ್ಟ (ರೂಢಿ). [ಸಂ]

**ಉಪಾಯಂಬಡೆ** (ಕ್ರಿ). ಮಾರ್ಗವನ್ನು ಪಡೆ; ಅವಕಾಶವನ್ನು ಹೊಂದು: ಅಕಟಾ ಒಮ್ಮೆಯೆಮ್ಮುವನು ಮಡಿಹಿಸಲ್ಕೆಂದೊಂದುಪಾಯಂಬಡೆದು (ಬಸವು. ೫೮–೪೨). [ಉಪಾಯ + ಪಡೆ$_1$]

**ಉಪಾಯಗಾರ** (ನಾ). ಯುಕ್ತಿವಂತ; ತಂತ್ರಿ: "ಪ್ರವೀಣಃ ... ಕುಶಲಃ – ೧೦ ಕೆಲಸದ ಉಪಾಯಗಾರನ ಪೆಸರು" (ಸಿದ್ಧಾಂತಿ. ೨೭೮); ನರಿ ತುಂಬಾ ಉಪಾಯಗಾರ ಪ್ರಾಣಿ (ರೂಢಿ). [ಉಪಾಯ + –ಗಾರ (< –ಕಾಱ)]

**ಉಪಾಯನ** (ನಾ). ೧. ಹತ್ತಿರ ಹೋಗುವುದು; ಸಮೀಪಿಸುವುದು. ೨. ಕೈಕೊಳ್ಳುವುದು; ಅಂಗೀಕರಿಸುವುದು. ೩. (ಪ್ರೀತಿಯಿಂದ ಕೊಡುವ) ಕಾಣಿಕೆ; ನಜರು; ಉಡುಗೊರೆ: "ಉಪದಾ, ಪ್ರಾಭೃತಂ, ಉಪಗ್ರಾಹ್ಯಂ, ಉಪಾಯನಂ – ಈ ೪ ಪಾಗುಡಂ" (ಹಲಾಯು. ೭೧–೨೮೦); ಅಪಾರಪುಣ್ಯ ಪುಣ್ಯಾಂಗನಾಜನಕ್ಕೆ ಪಂಚರತ್ನದುಪಾಯನಮನಿತ್ತು (ಪಂಪಾರಾಮಾ. ೫–೧೨೭ ವ). [ಸಂ.]

**ಉಪಾಯನಂಗೆಯ್** (ಕ್ರಿ). ಕಾಣಿಕೆಯನ್ನು ಕೊಡು; ನಜರನ್ನು ಒಪ್ಪಿಸು: ಗಂಧವಾಹಂ ಸುಗಂಧಸಾರಮನುಪಾಯನಂಗೆಯ್ಯೆ (ಶಬಶಂ. ೨–೪೨). [ಉಪಾಯನ + ಗೆಯ್ (< ಕೆಯ್$_1$)]

**ಉಪಾಯನಂಬೆರಸು** (ಅ). ಕಾಣಿಕೆಯೊಡನೆ ಕೂಡಿ; ನಜರಿನೊಡಗೂಡಿ: ದೂರಾವನತಮಸ್ತಕರಾಗಿ ತಮ್ಮ ತಂದುಪಾಯನಂಬೆರಸು ರತ್ನಕರಂಡಮಂ ಮುಂದಿಟ್ಟಾಗಳ್ (ಆದಿಪು. ೪–೮೬ ವ). [ಉಪಾಯನ + ಬೆರಸು$_3$]

**ಉಪಾಯಪರ** (ನಾ). = ಉಪಾಯಗಾರ: ಕಿಱಿದಾಗಿರ್ದೊಡದೇನುಪಾಯಪರನೊರ್ವಂ ಕೋಟಿಗೀಡಕ್ಕು ... ಸನ್ನೆ ಸಾವಿರ ಕಾಲಾಳಿನ ಸತ್ವವೈ (ಸೋಮೇಶ. ೧೧). [ಸಂ.]

**ಉಪಾಯವಾದಿ** (ನಾ). ಉಪಾಯದಿಂದ ಕೆಲಸವನ್ನು ಸಾಧಿಸಬೇಕೆಂದು ವಾದಿಸುವವನು: ಉಪಾಯವಾದಿಗಳು ಮತ್ತು ಖಂಡಿತವಾದಿಗಳಲ್ಲಿ ಭಿನ್ನತೆ ಈ ಬಗೆಯಾಗಿತ್ತು (ದಾದಾನ. ೧೫೯). [< ಸಂ. ಉಪಾಯವಾದಿನ್]

**ಉಪಾಯವೇದಾಂತ** (ನಾ). (ಆಲಂ) ಸುಲಭವಾಗಿ ಕಾರ್ಯಸಾಧನೆಮಾಡಲು ಸಾಧಕವಾದ ತತ್ತ್ವಜ್ಞಾನ; ಅನುಕೂಲಸಿಂಧು. [ಉಪಾಯ + ವೇದಾಂತ]

**ಉಪಾಯಾಂತರ** (ನಾ). ಬೇರೊಂದು ಉಪಾಯ: ಏನಾನುಮೊಂದುಪಾಯಾಂತರಮಂ ನೀಗಲ್ ನೆಱಿಯದೆಯನುಪಮನೀ ಗಣಿದದಿನಾನೆ ಮಾಡಿ ನುಡಿದಂ ಬಗೆಯಂ (ಕವಿರಾ. ೩–೧೩೦). [ಉಪಾಯ + ಅಂತರ]

**ಉಪಾರ, ಉಪರ, ಉಪ್ಪಾರ$_2$** (ನಾ). ನೈವೇದ್ಯ: ದೇವರ ನಿತ್ಯದ ಉಪಾರಕೆ (ಬೊಂಕಶಾ. ೧೯೩೪, ರಾಣಿಬೆ. ೧೦೦–೬; 1215); ದೇವರಿಗೆ ತ್ರಿಕಾಲದ ಉಪಾರದ ... ಮಾನ್ಯ (ಎಕ. VI, ಕೊಪ್ಪ. ೧೦–೧೪; 1327); ಮಹಾದೇವರಿಗೆ ಪೊಸರ ಉಪಾರಕ್ಕೆ (ಸೌಇಇ. IX–ii, ४೭೯–೨೧; 1510); ಕೊಟ್ಟ ಭಕ್ಷ್ಯವ ಹರಿಗುಪಾರವನಿಟ್ಟು (ಪ್ರಹ್ಲಾಚ. ೭–೭೯).

**ಉಪರ**: ಕಲಿನಾಥದೇವರಿಗೆ ಪಾತ್ರಕೆ ಉಪರಕೆ ಕೊಟ್ಟ ಕೆಇ (ಸೌಇಇ. IX–i, ೩೭೬–೭ ; 1276). **ಉಪ್ಪಾರ್ರ**₂ : ನಂದೀಶ್ವರದೇವರ ವುಪ್ಪಾರಕೆ ಪ ೧ (ಎಕ. VI, ಕಡೂರು. ೪೯–೫೭ ; 1291); ಊರೆಲ್ಲಾ ಉಪ್ಪಾರ ಕೊಂಡು ಹೋಗುವಾಗ ನಮ್ಮತ್ತೆ ಮಾಸಲು ಭತ್ತ ಕುಟ್ಟಿದಳು (ಕನ್ನಗಾ. ೨೬). [< ಸಂ. ಉಪಾಹಾರ]

**ಉಪಾರಗಡುಗೆ**, ಉಪ್ಪಾರಗಡುಗೆ (ನಾ). ನೈವೇದ್ಯ ಸಾಮಗ್ರಿಯನ್ನುಳ್ಳ ಪಾತ್ರೆ (?) : ಚಯಿತ್ರಮಾಸದ ದವನವುಪಾರಗಡುಗೆಯ ದಕ್ಷಿಣೆಗೂಡಿ (ಎಕ. VI, ಕಡೂರು. ೪೯–೫೭ ; 1291). **ಉಪ್ಪಾರಗಡುಗೆ** : ನೂಲಪರ್ವದ ವುಪ್ಪಾರಗಡುಗೆಯ ದಕ್ಷಿಣೆಗೂಡಿ (ಎಕ. VI, ಕಡೂರು. ೪೯–೫೭ ; 1291). P ಇದರಲ್ಲಿ ಉಪಾರ ಮತ್ತು ಗಡುಗೆ ಎಂಬಿವೆರಡೂ ಭಿನ್ನಶಬ್ದಗಳಾಗಿರಬಹುದು. [ಉಪಾರ + ಗಡುಗೆ (< ಗಡಿಗೆ)]

**ಉಪಾರೂಢ** (ಗು). ಹತ್ತಿದ ; ಏರಿದ ; ಪ್ರಾಪ್ತವಾದ : ಕನಕಕವಚಾಲಂಕೃತಶರೀರನುಮಾರೂಢಸಮರರಸನುಮುಪಾರೂಢಕನಕರಥನುಮಾಗಿ (ಪಂಪಭಾ. ೧೦–೫೨ ವ) ; ಉಪಾರೂಢಯೌವನೆಯಪ್ಪ ಮಗಳ ನಿಶ್ಚಯಮಂ . . . ಕೇಳ್ದು (ಕಾದಂಪೂ. ೯೭೯). [ಸಂ.]

**ಉಪಾರ್ಚನ** (ನಾ). ಪೂಜೆ ; ಆರಾಧನೆ. 'ಉಪಾರ್ಚಿಸು' ಪರಾ. [ಸಂ.]

**ಉಪಾರ್ಚಿಸು** (ಕ್ರಿ). ಪೂಜಿಸು ; ಆರಾಧಿಸು : ದೂರ್ವಾಸಮುನಿ ತವಕದಿಂದ ಚಂದ್ರಾವತಂಸನನುಪಾರ್ಚಿಸಿ (ಹಚಶಾ. ೧೦–೪೨). [ಉಪಾರ್ಚನ + -ಇಸು₃]

**ಉಪಾರ್ಜನ** (ನಾ). ಸಂಪಾದನೆ ; ಪಡೆಯುವಿಕೆ ; ಗಳಿಕೆ : ಅಶುಭಕರ್ಮೋಪಾರ್ಜನಕ್ಕಂ . . . ಶುಭಕರ್ಮಾರ್ಜನಕ್ಕಂ (ತತ್ತ್ವಪ್ರ. ೧೭೪). [ಸಂ.]

**ಉಪಾರ್ಜನಂಗೆಯ್** (ಕ್ರಿ). ಸಂಪಾದಿಸು ; ಪಡೆ ; ಗಳಿಸು : ನೀತಿಶಾಸ್ತ್ರಮಾರ್ಗದೊಳಂ ವ್ಯವಹಾರಕುಶಲದೊಳೆ ಅರ್ಥೋಪಾರ್ಜನಂಗೆಯ್ಗೆ (ಮದಕಿ. ೧–೫೮ ವ). [ಉಪಾರ್ಜನ + ಗೆಯ್ (< ಕೆಯ್₁)]

**ಉಪಾರ್ಜನೆ** (ನಾ). = ಉಪಾರ್ಜನ. [ಸಂ. ಉಪಾರ್ಜನ]

**ಉಪಾರ್ಜಿತ** (ಗು). ಗಳಿಸಲ್ಪಟ್ಟ ; ಸಂಪಾದಿಸಿದ ; ಪಡೆದ : ನೀನತೀತಭವದೊಳ್ ಉಪಾರ್ಜಿತೋರ್ಜಿತಪುಣ್ಯನೆಯಾಗಿ ಸೌಧರ್ಮಕಲ್ಪದೊಳ್ ದೇವನಾದೈ (ಶಾಂತಿಪು. ೬–೮೫ ವ). [ಸಂ.]

**ಉಪಾರ್ಜಿತಯಶ** (ನಾ). ಕೀರ್ತಿಯನ್ನು ಗಳಿಸಿದವನು : ಅಷ್ಟದಿಗ್ವಯೋಪಾರ್ಜಿತ ಯಶನುಂ (ಚಂದ್ರಪು. ೭–೩೫ ವ). [ಉಪಾರ್ಜಿತ + ಯಶ]

**ಉಪಾರ್ಜಿಸು** (ಕ್ರಿ). ಗಳಿಸು ; ಸಂಪಾದಿಸು ; ಪಡೆ : ಮಜೆಗೆ ವಂದರಂ ಕಾಯದೆ ನೀಳ್ದೊದವಿದ ಜಸಮನುಪಾರ್ಜಿಸದಧಮನದೇತರ್ಕೆ ಬಾರ್ತೆ ಜೀವನ್ಮೃತಕಂ (ಆದಿಪು. ೧೨–೯೭) ; ಪೂಜೆಯ ಮಾಡಿ ಕೀರ್ತಿ ಪುಂಣ್ಯವನುಪಾರ್ಜಿಸಿಕೊಂಡರು (ಎಕ. II, ೩೩೨–೧೫ ; 1467) ; ತಾನವಿವೇಕದಲುಪಾರ್ಜಿಸಿದ ದುಷ್ಕೃತಫಲವೆ ತನಗಾಯ್ತು (ಕುವ್ಯಾದ್ರೋ. ೪–೩). [ಉಪಾರ್ಜನ + -ಇಸು₃]

**ಉಪಾಲಂಭ** (ನಾ). ೧. ಪ್ರಾಪ್ತಿ ; ಪಡೆಯುವುದು. ೨. ನಿಂದೆ ; ತಿರಸ್ಕಾರದ ಮಾತು. ೩. ವ್ಯಂಗ್ಯೋಕ್ತಿ ; ಕೊಂಕುನುಡಿ : "ಪರ್ಯನುಯೋಗಃ, ಉಪಾಲಂಭಃ – ಈ ೨ ಚುನ್ನವಾಡಿ ಬೆಸಗೊಳುಹ" (ಹಲಾಯು. ೨೫–೧೫೩) ; ಚುಂಬನಕ್ಕಿಕೆ ಉಪಾಲಂಭಮುಂ ಪ್ರಣಯ ಪ್ರಸಂಗದೊಳ್ (ಶ್ರೀರಾಮಾ. ೨೪೩–೯೩). ೪. ನಿಷೇಧ ; ತಡೆ. [ಸಂ.]

**ಉಪಾಲಂಭಂಗೆಯ್** (ಕ್ರಿ). ನಿಂದಿಸು ; ದೂಷಿಸು : ಮೇಲಾದ ಪಾಂಡುಸುತರನುಪಾಲಂಭಂಗೆಯ್ಯುತಿರ್ಪ ದುರ್ಯೋಧನನಂ ಲೀಲೆಯೆನುಂಗುವ ಮೃತ್ಯು (ಪಂಪಭಾ. ३–೬). [ಉಪಾಲಂಭ + ಗೆಯ್ (< ಕೆಯ್₁)]

**ಉಪಾಲಂಭನ** (ನಾ). = ಉಪಾಲಂಭ ೩ : ನಿಷ್ಕರುಣೆಯಾದೆಯೆಂದೋರೊರ್ಮೆ ಸಂಭ್ರಮದಿನುಪಾಲಂಭನಂ ಮಾಡಿಯುಂ (ಕಾದಂಪೂ. ೯೨೭). [ಸಂ.]

**ಉಪಾಲಂಭನಂಗೆಯ್** (ಕ್ರಿ). = ಉಪಾಲಂಭಂಗೆಯ್ : ನಿನಗಿದಾವ ಯುಕ್ತಮೆಂದು ವಿನಯಮೆ ತನ್ನನುಪಾಲಂಭನಂಗೆಯ್ವಂತೆಯುಂ (ಕಾದಂಉ. ೭೫). [ಉಪಾಲಂಭನ + ಗೆಯ್ (< ಕೆಯ್₁)]

**ಉಪಾವಸ್ತಿ** 'ಉಪಾವಸ್ಥಿ' ನೋ.

**ಉಪಾವಸ್ಥಿ**, ಉಪಾವಸ್ತಿ (ನಾ). ಪೂಜೆ ; ಅರ್ಚನೆ : ಧ್ಯಾನ ಮೌನ ಉಪಾವಸ್ಥಿಯಿಂದ ಷಟ್ಕೋಣೆಯ ಸುವರ್ಣದ್ವೀಪದ ಅರಸಿನಬಲವಿಡಿದು . . . ಮಾಯಾಸುಭಟರ ಸುಡಕೊಂಡು (ಘನವ. ೩೧). **ಉಪಾವಸ್ತಿ** : ಜ್ಞಾನಗುರುವಿಂಗೆ ಭಕ್ತಿಯಿಂದುಪಾವಸ್ತಿಯ ಮಾಡಿ ತನ್ನ ನಿಜವಪ್ಪ ಪರಬ್ರಹ್ಮನ ಬೆಸಗೊಳುತಿರ್ದ (ಮಘುವ. ೨೯) ; ಗೀತಮಂ ಪಾಡಿ ಲಿಂಗದ ಉಪಾವಸ್ತಿಯಲ್ಲಿ ಮೈಮುಜದು (ಭೈರಸೂ. ೨೩೯). [< ಸಂ. ಉಪಾಸ್ತಿ]

**ಉಪಾವಾಸ** (ನಾ). ಊಟಮಾಡದಿರುವುದು ; ಹಸಿದಿರುವುದು : ಒಂದುಪಾವಾಸವಾದುದು ಶಿವನ ಭಕ್ತಂಗೆ . . . ಇಪ್ಪತ್ತುಪಾವಾಸವಾದುದು ಭಕ್ತಂಗೆ (ಅರಿರ. ೧೭೪). [< ಸಂ. ಉಪವಾಸ]

**ಉಪಾವೃತ್ತ** (ಗು). ೧. ಹಿಂತಿರುಗಿದ ; ಹಿಂದಕ್ಕೆ ಬಂದ ; ಹತ್ತಿರ ಬಂದ. ೨. (ನೆಲದಮೇಲೆ) ಹೊರಳಾಡುವ. (ನಾ). ೩. (ಆಯಾಸ ಪರಿಹಾರಕ್ಕಾಗಿ) ಹೊರಳಾಡುವ ಕುದುರೆ. [ಸಂ.]

**ಉಪಾಶ್ರಯ** (ನಾ). ೧. ಆಸರೆ ; ಆಶ್ರಯ ; ಅವಲಂಬನ. ೨. ಒರಗುದಿಂಬು ; ದಿಂಬು ; ಮೆತ್ತೆ : "ಉಪಾಶ್ರಯಂ ಮತ್ತವಾರಣ ಮೆನಲ್ ಮಲಗುದಲೆಗಿಂಬು" (ಮಂಗರಾ. ೬೦–೧೬). [ಸಂ.]

**ಉಪಾಶ್ರಯಂಬಡೆ** (ಕ್ರಿ). ಆಸರೆಯನ್ನು ಹೊಂದು ; ಆಶ್ರಯಿಸು : ಬಿರಿಮುಗುಳ್ಗಳೊಳ್ ತುಱುಗಿದದಿರ್ಮುತ್ತೆಯ ಸುತ್ತಿನೊಳೆಸೆದುಪಾಶ್ರಯಂಬಡೆದ ಸಾಂದ್ರಚಂದ್ರಕಾಂತದ ಶಿಲೆಯನೊಳಗುಮಾಡಿ (ಪಂಪಭಾ. ೫–೫ ವ) ; ತೊಡವುಗಳೀ ಸರೋಜದಳನೇತ್ರೆಯ ಮೆಯ್ಯೊಳಗಿಂದುಪಾಶ್ರಯಂಬಡೆದುವು ನೋಟ್ಟಿರುಮ್ಮಳಿಸುವಂತಿರೆ (ಪಂರಾಮಾ. ೫–೧೪೦). [ಉಪಾಶ್ರಯ + ಪಡೆ₁]

**ಉಪಾಶ್ರಿತ** (ಗು). ಆಸರೆಗೊಂಡ ; ಆಶ್ರಯಿಸಿದ : ಆಶ್ರಿತ ನಾಭಿನಂದನನುಪಾಶ್ರಿತ ಭವ್ಯಜನಾಭಿನಂದನಂ (ಆದಿಪು. ೧–೪೦). [ಸಂ.]

**ಉಪಾಸ** (ನಾ). ಉಪವಾಸ : ಪಲವುಪಾಸದಿನೂಟವಂ ಕಂಡೆ (ಕಣ್ಣರ. ೧೩೨) ; ಆರು ಪೊದ್ದದಿದ್ದಡುಪಾಸವಿಪ್ಪುದು ನಿದ್ರೆಯಲಿ ತಾ ದಿನವ ಕಳೆವುದು ಸಿದ್ಧರಿಗೆ ಹಿತವಾ ಮಹಾಹಿಯ ಚರಿತ (ನಿಭಾಗ. ೧೧–೧೪–೨) ; ನೀನು ಊಟಮಾಡಿಬಿಡು . . . ಉಪಾಸ ಇರಬೇಡಮ್ಮ (ಪುಟ್ಟರ. ೨೦). [< ಸಂ. ಉಪವಾಸ]

**ಉಪಾಸಂಗ** (ನಾ). ೧. ನೆರೆ ಹೊರೆ. ೨. ಬಾಣದ ಚೀಲ ; ಬತ್ತಳಿಕೆ : "ತೂಣೀರಂ, ಉಪಾಸಂಗಃ . . . ಕಳಾಪಃ—ಈ ೮ ಮೂಡಿಗೆ" (ಹಲಾಯು. ೭೬–೩೧೧). [ಸಂ.]

**ಉಪಾಸಂಪತ್ತು** (ಕ್ರಿ). ಉಪವಾಸಕ್ರಮವನ್ನು ಹಿಡಿ ; ಉಪವಾಸವಿರು : ಹಲವುಪಾಸಂಪತ್ತಿ ಬಜತ ಬಸುಜಜತ ಬಾಯ್ ಕುಳಿದ ಕಣ್ಣೀವ ಕಂಬನಿ (ಸಿದ್ಧರಾ. ೮–೮). [ಉಪಾಸ + ಪತ್ತು₁]

**ಉಪಾಸಂಬಡಿಸು** (ಕ್ರಿ). ಉಪವಾಸವಿರಿಸು; ಹಸಿದಿರುವಂತೆ ಮಾಡು: ಹಲಕಾಲದಲುಪಾಸಂಬಡಿಸಿದೆನ್ನದು ದೋಷ (ಕುವ್ಯಾದ್ರೋ. ೩-೫೭). [ಉಪಾಸ + ಪಡು$_1$ + –ಇಸು$_3$]

**ಉಪಾಸಕ** (ನಾ). ೧. ಉಪಾಸನೆ ಮಾಡುವವನು; ಆರಾಧಕ; ಭಕ್ತ: ಪರಮಾತ್ಮನು ಉಪಾಸಕರಿಗೆ ಅಪರೋಕ್ಷಜ್ಞಾನವನ್ನೂ . . . ಅನುಗ್ರಹಿಸುವನು (ಹಿಂದಸಾ. ೨೮೫). ೨. [ಜೈನ] ಶ್ರಾವಕ: ಧವಳಾತಪವಾರಣಕ ಕುದ ವಿಭೂತಿಯನುೞಿದು ನೆಗೞ್ದುಪಾಸಕನಾದಂ (ಆದಿಪು. ೬-೬). [ಸಂ.]

**ಉಪಾಸಕಾಂಗನೆ** (ನಾ). [ಜೈನ] ಶ್ರಾವಕಿ; ಭವ್ಯೆ: ಕಲ್ಪಾಮರಕಾಂತಾನಿಕಾಯಮುಂ ಉಪಾಸಕಾಂಗನಾಸಂಗಿ ಜನಸಮಾಜಮುಂ (ಚಾವುಂಪು. ೪೧-೨೫). [ಸಂ. ಉಪಾಸಕಾಂಗನಾ]

**ಉಪಾಸಕಾಧ್ಯಯನ** (ನಾ). [ಜೈನ] ಶ್ರಾವಕರು ಆಚರಿಸುವ ಕ್ರಿಯೆಯನ್ನು ತಿಳಿಸುವ ಶಾಸ್ತ್ರ: ಉಪಾಸಕಾಧ್ಯಯನ ಗದಿತ ಸಮಸ್ತ ಪ್ರಕಾರ ಪಿಪೀಲಿಕಾಜಾತ್ಯಾದಿ ಮಂತ್ರಂಗಳಿಂ ಕ್ರಿಯಾನುಯುಕ್ತಮಾಗೆ ಪೇೞ್ದು (ಆದಿಪು. ೧೫-೧೬ ವ). [ಉಪಾಸಕ + ಅಧ್ಯಯನ]

**ಉಪಾಸನ** (ನಾ). ೧. ಸಮೀಪದಲ್ಲಿ ಕುಳ್ಳಿರುವಿಕೆ. ೨. ಸೇವೆಸಲ್ಲಿಸುವುದು; ಶುಶ್ರೂಷೆ. ೩. ಭಕ್ತಿ; ಪೂಜೆ; ಆರಾಧನೆ. ೪. ಪೀಠ; ಆಸನ. [ಸಂ.]

**ಉಪಾಸನೆ** (ನಾ) = ಉಪಾಸನ ೨: "ವರಿವಸ್ಯಾ, ಪರಿಚರ್ಯಾ, ಶುಶ್ರೂಷಾ, ಉಪಾಸನಾ . . . ಉಪಚಾರಃ – ಈ ೧೧ ಬೆಸಕೆಯ್ವುದರ್ಕೆ ಪೆಸರ್" (ಹಲಾಯು. ೨೧-೧೨೯). [ಸಂ. ಉಪಾಸನಾ]

**ಉಪಾಸಾಸ್ತವ** (ನಾ). ಉಪಾಸನಾಯುಕ್ತವಾದ ಸ್ತೋತ್ರ: ನಿನಗೀ ಪರಾರ್ಧ್ಯನಿಲಯಂ ಶ್ರೀಪ್ರಾಭವಂ ಜೈನಪಾದದುಪಾಸಾಸ್ತವದಿಂದಮಾದುದು (ಶಾಂತಿಪು. ೬-೨೫). [ಸಂ. (ಉಪಾಸಾ + ಸ್ತವ)]

**ಉಪಾಸಿ** (ನಾ). = ಉಪವಾಸಿ: ಉಂಡುಪಾಸಿ ಬಳಸಿ ಬ್ರಹ್ಮಚಾರಿ (ಗಾದೆ). [< ಸಂ. ಉಪವಾಸಿನ್]

**ಉಪಾಸಿಕೆ** (ನಾ). [ಬೌದ್ಧ] ಬೌದ್ಧ ಧರ್ಮವನ್ನು ಅನುಸರಿಸುವ (ಭಿಕ್ಷುಣಿಯಲ್ಲದ) ಗೃಹಿಣಿ: "ಉಪಾಸಿಕೆ" ಎಂದರೆ ಗೃಹಜೀವನದೊಡನೆ ಧರ್ಮವನ್ನು ಕೈಕೊಂಡು ನಡಸುವಾಕೆ (ರಾಮರಾ. ೧೮); ಮಹಾ ಉಪಾಸಿಕೆಯಾದ ವಿಶಾಖಾ (ಹತ್ತುಮ. ೫೦). [ಸಂ. ಉಪಾಸಿಕಾ]

**ಉಪಾಸಿತ** (ಗು). ಸೇವಿಸಲ್ಪಟ್ಟ; ಪೂಜಿಸಲ್ಪಟ್ಟ: ತ್ರಿಜಗದುಪಾಸಿತಂ . . . ಕಥೆ ಶಾಂತಿನಾಥನಾ (ಶಾಂತಿಪು. ೧೨-೫೫). [ಸಂ.]

**ಉಪಾಸಿಸು** (ಕ್ರಿ). ಭಜಿಸು; ಸೇವಿಸು; ಆರಾಧಿಸು: ಪರಮಶಿವನಂ ಧ್ಯಾನಿಸಿಯುಪಾಸಿಸುವುದು (ಪದ್ಮರಾ. ೧೧-೧೦೭); ಜನಪನವನೀಸುರರ ಮಂತ್ರದೊಳನಿಲಸಖನನುಪಾಸಿಸಲು (ನಳಚ. ೭-೨೩). [ಉಪಾಸನ + –ಇಸು$_3$]

**ಉಪಾಸ್ತಿ** (ನಾ). ೧. = ಉಪಾಸನ ೨: "ಉಪಾಸನಂ . . . ಉಪಾಸ್ತಿ ಪರಿಚರ್ಯಮೆನೆ ಸೇವೆಯಕ್ಕುಂ" (ಮಂಗರಾ. ೮-೨೭). ೨. ಧರ್ಮಬುದ್ಧಿ: "ಉಪಾಸ್ತಿಯೆನೆ ಧರ್ಮಬುದ್ಧಿಯುದು" (ಮಂಗರಾ. ೧೩೬-೩೯). [ಸಂ.]

**ಉಪಾಸ್ತಿಗೆಯ್**, ಉಪಾಸ್ತಿಗೈ, ಉಪಾಸ್ತೆಗೆಯ್ (ಕ್ರಿ). ಉಪಾಸನೆ ಮಾಡು; ಭಜಿಸು: ಶ್ರೀಗಿರಿಜಾವರಂ ಹರನದೊರ್ವ್ವಳಿಳಾಮರಪುತ್ರಿ ತನ್ನನಿಂತಾಗಳುಮೊಲ್ದುಪಾಸ್ತಿಗೆಯೆ (ಎಕ. XI, ದಾವಣ. ೪೨-೫; 1162). **ಉಪಾಸ್ತಿಗೈ**: ಭಕ್ತಿಮಿಗೆ ಪರಿಸದಿಂದಮುಪಾಸ್ತಿಗೈದು ಮೋಕ್ಷಮನೈದುವರ್ (ಆರಾಚ. ೬-೨೦); ತಮ್ಮ ಚರಣಾಬ್ಜವನುಪಾಸ್ತಿಗೈದ (ವಿವೇಭ. ೧-೧೫). **ಉಪಾಸ್ತೆಗೆಯ್**: ಸ್ತ್ರೀಯರುಪಾಸ್ತೆಗೆಯ್ವೊಡೆ . . . ಪುಣ್ಯಮುಮಕ್ಕುಂ (ಚಾವುಂಉ. ೨೪೦); ನಿಯಮವ್ರತದಿಂದಮುಪಾಸ್ತೆಗೆಯ್ದು (ಇಅ. XII, ೨೭೯-೧೪೦; 1077). [ಉಪಾಸ್ತಿ + ಗೆಯ್ (< ಕೆಯ್$_1$)]

**ಉಪಾಸ್ತಿಗೈ** 'ಉಪಾಸ್ತಿಗೆಯ್' ನೋ.

**ಉಪಾಸ್ತೆ** (ನಾ). = ಉಪಾಸನ ೩: ರಸಕೆ ವಿಷ್ಣುವೆನುತ್ತುಪಾಸ್ತೆಯಂ ಮಾಡಿ (ವೀಶೈಪು. ೫-೧೩-೩೧). [< ಉಪಾಸ್ತಿ]

**ಉಪಾಸ್ತೆಗೆಯ್** 'ಉಪಾಸ್ತಿಗೆಯ್' ನೋ.

**ಉಪಾಸ್ಯ** (ಗು). ಭಕ್ತಿಯಿಂದ ಸೇವಿಸತಕ್ಕ; ಆರಾಧಿಸಲು ಯೋಗ್ಯವಾದ: ಚರಾಚರೋಪಾಸ್ಯನುಮಷ್ಟಾದಶದೋಷದೂರನುಂ . . . ಆಗಿ (ಶಾಂತಿಪು. ೧೨-೧ ವ). [ಸಂ.]

**ಉಪಾಸ್ಯದೈವತ** (ನಾ). ಸೇವಿಸಬೇಕಾದ ದೈವ; ಆರಾಧ್ಯದೇವತೆ: ಇವು ಕಲೋಪಾಸಕನ ಪ್ರಥಮ ಉಪಾಸ್ಯದೈವತಗಳು (ನವ್ಯಕಾ. ೭೦). [ಉಪಾಸ್ಯ + ದೈವತ]

**ಉಪಾಹಾರ** (ನಾ). ಉಪಹಾರ; ಅಲ್ಪಾಹಾರ; ತಿಂಡಿ: ಯಜ್ಞಕರ್ಮಗಳು ಮುಗಿದನಂತರ ಹಾಲುಪೊಂಗಲ ಉಪಾಹಾರ (ಶಾಂತಲಾ. ೭೭). [ಸಂ.]

**ಉಪಾಹಿತ** (ಗು). ೧. ಸಮೀಪದಲ್ಲಿ ಇಟ್ಟ; ಕೂಡಿಸಿದ: ವಿವೇಕಪರಾಯಣಂ ಪ್ರಕಟಿತೋಕ್ತಿ ವಿವಿಕ್ತ ಕಳಾಕಳಾಪಕಮುಪಾಹಿತ ಸಾಹಿತ್ಯವಿದ್ಯೆಯೊಳ್ (ಕವಿರಾ. ೩-೨೧೮). (ನಾ). ೨. ಉತ್ಪಾತ; ಧೂಮಕೇತು. [ಸಂ.]

**ಉಪಾಹೃತ** (ಗು). ೧. ಸಮೀಪಕ್ಕೆ ತರಲ್ಪಟ್ಟ; ಹತ್ತಿರಕ್ಕೆ ಒಯ್ದ. ೨. ಉಪಹಾರವಾಗಿ ಕೊಟ್ಟ, –ಒಪ್ಪಿಸಿದ. [ಸಂ.]

**ಉಪೇಂದ್ರ** (ನಾ). ೧. ಇಂದ್ರನ ತಮ್ಮ; ವಾಮನಮೂರ್ತಿ. ೨. ವಿಷ್ಣು. ೩. ಕೃಷ್ಣ. ೪. ಇಂದ್ರ. ೫. ಜಿನ. ೬. ಸೂರ್ಯ. ೭. ದೊರೆ; ರಾಜ. ೮. ಹಾವು: "ಉರಗ ಬಿಡೌಜ ವಿಷ್ಣು ಜಿನಭಾನು ನರೇಂದ್ರರುಪೇಂದ್ರವಾಚಕಂ" (ನಾನಾರ. ೬೧); "ಕೃಷ್ಣಂ ನೃಪಜಿನ ಸೂರ್ಯರಂ ಜಿಷ್ಣುಜೆಯಹಿಯಾಜುಪೇಂದ್ರಶಬ್ದಮೆನಿಕ್ಕುಂ" (ನಾನಾಕಂ. ೯೫). ೯. [ಛಂದ] ವಿಷ್ಣುಗಣ: ವಿದಿತಮುಪೇಂದ್ರಚತುಷ್ಟಯದತ್ತಲಬುಜವದನೇ ಮದನಹರತ್ರಯದಿಂ ಹರಿ ಪಡೆಪಡೆ ಮಧನವತೀ (ಛಂದೋಂಬು. ೫-೧೭). [ಸಂ.]

**ಉಪೇಂದ್ರವಜ್ರ** (ನಾ). [ಛಂದ] ಒಂದು ಸಮವೃತ್ತದ ಹೆಸರು: ದಿನಾಧಿಪಂ ವ್ಯೋಮ ರವೀಶಯುಗ್ಮಂ ಘನಂ ನಿಲಲ್ಕೆಂಟಜಕೋಳಾ ವಿರಾಮಮಂ ಪಿನಾಕಿಯುಂ ನಾಕಿಯುಮೆಂದ ಪಾಂಗಿಂ ಘನಸ್ತನೇ ಕೇಳಿದುಪೇಂದ್ರವಜ್ರಂ (ಛಂದೋಂಬು. ೨-೬೪). [ಉಪೇಂದ್ರ + ವಜ್ರ]

**ಉಪೇಕ್ಷಾದೋಷ** (ನಾ). ಇತರರ ತಪ್ಪನ್ನು ಕಂಡು ನಿವಾರಿಸದಿರುವ ದೋಷ; ಉದಾಸೀನದ ದೋಷ: ರಾವಣಂ ನೆಲನೆಲ್ಲಂ ಪಱಿವನ್ನಮನ್ಯವಧುವಂ ದುರ್ಮೋಹದಿಂ ಬಾೞ್ತಿಗೆಯ್ಯಲದಂ ಬಾರಿಸದೊಯ್ಯನಿರ್ಪುದುಮುಪೇಕ್ಷಾದೋಷಮೇನಾಗದೇ (ಪಂರಾಮಾ. ೧೧-೭೭). [ಸಂ. (ಉಪೇಕ್ಷಾ + ದೋಷ)]

**ಉಪೇಕ್ಷಾಸಂಯುತ** (ನಾ). ಇಂದ್ರಿಯಗಳು ವಿಷಯದ ಕಡೆ ಹರಿಯದಂತೆ ಉಪೇಕ್ಷಿಸುವವನು; ಜಿತೇಂದ್ರಿಯ: ಆಚಾರಾಂಬುಧಿ ಪಾರಗರ್ ಜಿತಮದರ್ ಜ್ಞಾನರ್ಧಿಸಂಪನ್ನರುರ್ವೀಚಕ್ರಸ್ತುತಪಾದಪಂಕಜರುಪೇಕ್ಷಾಸಂಯುತರ್ . . . ನೆಗೞ್ದರ್ (ಸುಕುಮಾ. ೧-೧೭). [ಸಂ. (ಉಪೇಕ್ಷಾ + ಸಂಯುತ)]

**ಉಪೇಕ್ಷಿತ** (ಗು). ೧. ಕಡೆಗಣಿಸಲ್ಪಟ್ಟ; ಉದಾಸೀನಕ್ಕೆ ಗುರಿಯಾದ. (ನಾ). ೨. ಕಡೆಗಣಿಸುವವನು; ಉದಾಸೀನಮಾಡುವವನು: ಒಂದಕ್ಕೆ ಹಿತನುಡಿಯೆ ಪಕ್ಷವೆಂದೆರಡುವಂ ಹಿಂದುಗಳೆದಿರಲುಪೇಕ್ಷಿತನೆಂದು [ಪಾಠಾಂ. ವೆಂದು] . . . ಶಾಪವನೀಯದಿರರು (ಹಚಕಾ. ೨-೨೪). [ಸಂ.]

**ಉಪೇಕ್ಷಿಸು** (ಕ್ರಿ). ಕಡೆಗಣಿಸು; ಅಲಕ್ಷ್ಯಮಾಡು; ಉದಾಸೀನ ಮಾಡು: ಕೃತಾಂತನಿಂತು ನಿರ್ನಿರಮೆಟ್ಟಿದುಯ್ಯೆ ಬಾರಿಸದೆ ಕೆಮ್ಮನು ಪೇಕ್ಷಿಸಿ ನೋಡುತಿರ್ಪಿರೇ (ಆದಿಪು. ೩-೪); ನೀನಿನ್ನುಪೇಕ್ಷಿಸಿದಂದು ಎನ್ನಯ ಜೀವವಂ ಬಿಡದಿರೆಂ (ಕಾದಂಉ. ៩೨); ರಸವನ್ನು ಉಪೇಕ್ಷಿಸಿದ್ದು ಹೇಗೆ ಕಾವ್ಯವಾದೀತು (ಭಾರವಿಶಾ. ៩೧).
[ಉಪೇಕ್ಷಣ$_0$ + -ಇಸು$_1$]

**ಉಪೇಕ್ಷೆ** (ನಾ). ಅಲಕ್ಷ್ಯ; ಕಡೆಗಾಣಿಕೆ; ಉದಾಸೀನತೆ: ಅದು ನಿಮ್ಮುಪೇಕ್ಷೆಯೆಂದಱಿಯೆನಿದೆನ್ನ ಕರ್ಮವಶಮೆಂದಱಿವೆಂ (ಗದಾಯು. ೪-೪೯). [ಸಂ. ಉಪೇಕ್ಷಾ]

**ಉಪೇತ** (ಗು). ಕೂಡಿದ; ಸೇರಿದ; ಹೊಂದಿದ; ಸಮೇತ: ಚತುರಂಗಬಲೋಪೇತನತಿಧವಳರಥನಭಿಜಾತಂ ಕ್ಷತ್ರಿಯರನುಜದ ಕಲಿ ಕೃಪನಾತಂ (ಪಂಪಭಾ. ೧೦-೫೫). [ಸಂ.]

**ಉಪೇಯ** (ಗು). ೧. (ಉಪಾಯದಿಂದ) ಹೊಂದಬೇಕಾದ; ಪಡೆಯಬೇಕಾದ; ಪ್ರಾಪ್ಯ: ಯಾವಾಗಲೂ ಉಪಾಯಗಳಿಗೆ ಗಮನ ಮೊದಲು; ಆದರೆ ಉಪೇಯದ ಲಾಭವೇ ಗುರಿ (ಧ್ವನ್ಯಾಲೋ. ೨೨ ಅಡಿಟಿ). (ನಾ). ೨. ಪ್ರಾಪ್ಯವಸ್ತು; ಪಡೆಯಲು ತಕ್ಕ ವಸ್ತು: ವಿಶಿಷ್ಟಾದ್ವೈತಿಗಳಿಗೆ ಉಪಾಯ ಉಪೇಯ ಎರಡೂ ನಾರಾಯಣನೇ (ರೂಢಿ).
[ಸಂ.]

**ಉಪೋಜು** (ನಾ). ವಾಜರು ಮುಂತಾದ ಕಾರ್ಮಿಕರಿಗೆ ಸಲ್ಲುವ ಧಾನ್ಯದ ಮಿರಾಸೆ (?): ಬಡಗಿ ಕಂಮಾಜರಿಗೆ ಕೊಟ್ಟಾರದ ವೊಳಗೆ ತಾನೆ ನಡಸುವ ಉಪೋಜುಗಳೂ ತೆಜುವ ಆಡೆಯ ಹಣ ಅರ್ಧಪ್ರಹಾರ ಸೀಮೆಗೊರಲು ತೆಜುವ ಮಜಿಗೆ (ಸೌಇಇ. IX-ii, ೫೫೪-೪೬; 1533).
[?]

**ಉಪೋತ್ಪಾದನ** (ನಾ). ಮುಖ್ಯವಸ್ತುವಿನ ಜೊತೆಯಲ್ಲಿ ಉತ್ಪತ್ತಿಯಾಗುವ ವಸ್ತು (By-Product. ಪಾರಿಶೀ. ೧೦). [ಸಂ.]

**ಉಪೋದಕಿ** (ನಾ). ಒಂದು ಗಿಡದ ಹೆಸರು; "ಹಂಬುಬಸಳೆ" (ಅಮರ. ಟೀಕೆ): "ಉಪೋದಕಾ [ಪಾಠಾಂ. ಉಪೋದಕೀ] . . . ಬಳ್ಳಿ ಬಚ್ಚಲ ಸೊಪ್ಪು" (ಸಿದ್ಧಾಂತಿ. ೧೩೦).
[ಸಂ. ಉಪೋದಕೀ]

**ಉಪೋದ್ಘಾತ** (ನಾ). ೧. ಆರಂಭ; ಪೀಠಿಕೆ; ಮುನ್ನುಡಿ: ಉಪೋದ್ಘಾತವನ್ನು ಕೇವಲ ತೋರಿಕೆಗಾಗಿ ಸೇರಿಸಬೇಕಾಯಿತು (ಮುಕ್ಸಾರ. ೧೬ ಪೀಠಿಕೆ). ೨. "ನಿದರ್ಶನವನ್ನು ತೋರಿಸುವುದು" (ಅಮರ. ಟೀಕೆ). ೩. ವಿಭಜನೆ. [ಸಂ.]

**ಉಪೋಷಣ** (ನಾ). ಉಪವಾಸ; ಹಸಿದಿರುವುದು; ಆಹಾರವಿಲ್ಲದಿರುವುದು: ಅವರೆಲ್ಲರೂ ಆ ದಿನವನ್ನು ನಿರ್ಜಲ ಉಪೋಷಣದಿಂದ ಕಳೆದರು (ತುಳಸಿ. ೧೯೯); ತನ್ನ ಉಪೋಷಣಾದಿಗಳಿಂದ ನೋಡುವವರಿಗೂ ಸಂಕಟವನ್ನುಂಟುಮಾಡುವವನಿಗಿಂತ . . . ಉಂಡಾಡುವ ಸದಾನಂದಿಯು ಲೇಸು (ವಿಚಾಮುಂ. ೪೯). [ಸಂ.]

**ಉಪೋಷಣಂಗೆಯ್** (ಕ್ರಿ). ಉಪವಾಸವಿರು; ಉಪವಾಸವ್ರತವನ್ನು ಆಚರಿಸು: ದ್ವಾದಶೀದಿನಮವಳುಪೋಷಣಂಗೆಯ್ದು ನಿಜಕಾಂತಂಬೆರಸು ವಿಷ್ಣುಸನ್ನಿಧಿಯೊಳ್ ಪವಡಿಸಿರಲ್ (ಅದ್ಭುತ. ೪-೨೪).
[ಉಪೋಷಣ + ಗೆಯ್ (< ಕೆಯ್$_1$)]

**ಉಪೋಷಿತ** (ನಾ). ೧. ಉಪವಾಸ: ವಿಷಯಸನ್ನಿಧಿಗಿಂತ ಮಸಣಸನ್ನಿಧಿ ಲೇಸು, ವಿಷದೂಟಕಿಂತುಪೋಷಿತವೆ ಲೇಸಲ್ತೆ (ಮಂಕುಕ. ៩೨೩). ೨. ಉಪವಾಸವ್ರತವನ್ನು ಆಚರಿಸುವವನು; ಆಹಾರವಿಲ್ಲದಿರುವವನು. [ಸಂ.]

**ಉಪೋಷಿತೆ** (ನಾ). ಉಪವಾಸ ವ್ರತವನ್ನು ಆಚರಿಸುವವಳು; ಆಹಾರವಿಲ್ಲದಿರುವವಳು: ಪರ್ವದಿನಂಗಳೊಳಖಿಳ ತೀರ್ಥಕೃತ್ಕಲ್ಯಾಣಾಭ್ಯುದಯ ದಿವಸಂಗಳೊಳ್ ತಪ್ಪದುಪೊ[ಪೋ]ಷಿತೆಯಾಗಿ ದರ್ಭಶಯನದೊಳಿರ್ಪಳ್ (ಪುಷ್ಪವು. ೩-೧೧೩). [ಸಂ. ಉಪೋಷಿತಾ]

**ಉಪೋಷ್ಯ** (ನಾ). ಉಪವಾಸ: ಗುರುವೆ ಇಪ್ಪತ್ತೊಂದು ದಿನದುಪೋಷ್ಯವ ನೋಂತು (ಗಿರಿವಿಂ. ೪೫-೧೭). [ಸಂ.]

**ಉಪ್ತ** (ಗು). ಬಿತ್ತಿದ; ಬೀಜ ಹಾಕಿದ. [ಸಂ.]

**ಉಪ್ತಕೃಷ್ಟ** (ಗು). ಬಿತ್ತಿದ ಮೇಲೆ ಉತ್ತ; ಬೀಜ ಹಾಕಿದ ಮೇಲೆ ಉಳುಮೆ ಮಾಡಿದ. [ಸಂ.]

**ಉಪ್ತಿ** (ನಾ). ಬೀಜ ಬಿತ್ತುವುದು. [ಸಂ.]

**ಉಪ್ಪಂಗ** (ನಾ). ಒಂದು ವಾದ್ಯವಿಶೇಷ; ಒಂದು ಬಗೆಯ ಮದ್ದಳೆ: ಉಪ್ಪಂಗ, ಏಕನಾದ, ಕಯ್ತಮ್ಮಟೆ, ಅಡ್ಡಕಟ್ಟಿಗೆ (ಸುಗುಗಂ. ៩೬-೧೨). 'ಉಪಾಂಗ' ಪರಾ. [< ಸಂ. ಉಪಾಂಗ ?]

**ಉಪ್ಪಂಡ** (ನಾ). ಮಲೆತಿರುವಿಕೆ: ನಿಯತದಿಂ ದ್ವಿತ್ವಂಗಳಪ್ಪುವವರ್ಕೆ ಪ್ರಯೋಗಂ: ಉಪ್ಪಂಡರ [ಪಾಠಾಂ. ಉಪ್ಪಂಡಂ] (= ಮಲೆದಿರ್ದುದು) (ಶಮದ. ಸ. ೪೬ ಪ್ರಯೋ).
[ಪ್ರಾ. ಉಪ್ಪಡ = ಮೇಲೆ ಹಾರು < ಸಂ. ಉತ್ಪತ]

**ಉಪ್ಪಗಚಿ** 'ಉಪ್ಪಿಗಚಿ' ನೋ.

**ಉಪ್ಪಗರಿ** (ನಾ). (ಕರಾ). ತೆಂಗಿನತುರಿ, ಉಪ್ಪು, ಹಸಿಮೆಣಸು ಹಾಕಿ ಮಾಡಿದ ಅವಲಕ್ಕಿಯ ತಿನಿಸು; ಚಾಕಣ: ಸಂಜೆ ಮನೆ ಕಡೆ ಬಾ . . . ಹುಳಿ ಹೆಂಡ ನಾಲ್ಕು ಮಡಿಕೆಯಲ್ಲಿದೆ. ಬೇಕಿದ್ದರೆ ಉಪ್ಪಗರಿ ಮಾಡಿಸುತ್ತೇನೆ (ದೇವಹೆಂ. ೧೯೪). [ಉಪ್ಪು$_1$ + ಕರಿ$_3$]

**ಉಪ್ಪಚ್ಚಿ** 'ಉಪ್ಪಿಗಚಿ' ನೋ.

**ಉಪ್ಪಟ**, ಉಪ್ಪಟ್ಟ, ಉಪ್ಪಡ$_1$ (ನಾ). ಉತ್ತಮವಾದ ವಸ್ತ್ರ: ತುಡುಗೆ ನಿಚ್ಚಲುಂ ಪಂಚರತ್ನಂಗಳುಂ ಪೊಜಮಡೆ ತನ್ನುಡುವುಪ್ಪಟಂಗಳ್ ಮುಡಿಯೊಳಾಗೆಯುಂ (ಪಂಪಭಾ. ೧೪-೫೫); ಒಪ್ಪುವ ನಿಡುಗಣ್ಣ ಕೆಂಪು ಘನಮಾಡುವು ಕುಂತಳವಲ್ಲಿ ಸುರ್ಕುನೀಳ್ದುವು ತೆರೆವೊಣ್ಮೆ ಪತ್ತಿದುವು ಸೌಂದರಿಯರ್ಕಳ ಮೆಯ್ಯೊಳುಪ್ಪಟಂ (ಸೂಕ್ತಿಸು. ೧೨-೭೯). **ಉಪ್ಪಟ್ಟ**: 'ಉಪ್ಪಟ್ಟವರ್ಷೆ' ಪರಾ. **ಉಪ್ಪಡ$_1$**: ತತ್ವಕ್ಕೆ ಪತ್ವಂ —ಉತ್ಪಟ —ಉಪ್ಪಡ (ಶಮದ. ೨೬೫ ಪ್ರಯೋ); ಉಪ್ಪಡಂ ತುಡುಗೆ ಜವ್ವನಮಾದಂ ಕೆಪ್ಪುರಂ ಮೃಗಮದಂ ಸುಲಿಪಲ್ ಲೇಸಪ್ಪ ಸಾದು ಬಿಡುದಂಬುಲಮೆಂದುಂ ತಪ್ಪದುಳ್ಳವನೆ ಸಂದ ಭುಜಂಗಂ (ಮದತಿ. ೧೦-೧೨).
[< ಸಂ. ಉತ್ಪಟ]

**ಉಪ್ಪಟ್ಟ** 'ಉಪ್ಪಟ' ನೋ.

**ಉಪ್ಪಟ್ಟವರ್ಷೆ** (ನಾ). ಉತ್ತಮವಾದ ವಸ್ತ್ರಗಳನ್ನು ಮಳೆಯಂತೆ ಸುರಿದು ದಾನಮಾಡುವವಳು: ಅಸ್ಥಾನರಂಜನೆ ಸವತಿಮದಭಂಜನೆ ಉಪ್ಪಟ್ಟವರ್ಷೆ ಧರ್ಮಸಂಕರ್ಷೆ। ಶ್ರೀಮಾನ್ ಹರಿಗ ಮನಸ್ಸರೋವರ ರಾಜಹಂಸಿ . . . ಶ್ರೀಮಲ್ಲಚ್ಚಲದೇವಿಯರು (ಕಇ. I, ೧೬-೨೧; 1053).
[ಉಪ್ಪಟ್ಟ (< ಉಪ್ಪಟ) + ವರ್ಷ + -ಎ$_4$]

**ಉಪ್ಪಟ್ಟಾಯ್ತ** (ನಾ). ಒಬ್ಬಾತನ ಹೆಸರು (?): ನಿಪ್ಪಟಮೆ ಜೀರ್ಣ್ಣಮಾದುದನುಪ್ಪಟ್ಟಾಯ್ತನ ಮಹಾಜಿನೇಂದ್ರಾಲಯಮುಂ ನಿಷ್ಪೊಸತು ಮಾಡಿದಂ ಕರಮೊಪ್ಪಿರೆ ಹುಳ್ಳಂ ಮನಸ್ಸಿ ಬಂಕಾಪುರದೊಳ್ (ಎಕ. II, ೩೪೫-೪೦; 1159). ℙ ಉಪ್ಪಟ್ಟಾಯ್ತನ ಎಂಬುದನ್ನು ಉಪ್ಪಟ + ಆಯ್ತನ ಎಂದು ಬಿಡಿಸಿ ಉನ್ನತಾಲಯ ಎಂದೂ ಅರ್ಥವನ್ನು ಮಾಡಬಹುದು. [ಉಪ್ಪಟ್ಟ (< ಉಪ್ಪಟ) + ಆಯ್ತ ?]

**ಉಪ್ಪಡ$_1$** 'ಉಪ್ಪಟ' ನೋ.

**ಉಪ್ಪಡ$_2$** (ನಾ). ಉಪ್ಪುಹಾಕಿ ಒಣಗಿಸಿದ ತರಕಾರಿ; ಬಾಳಕ.
[ಉಪ್ಪು$_1$ + ?]

**ಉಪ್ಪಡ$_3$** 'ಉಪ್ಪವಡ' ನೋ.

**ಉಪ್ಪಡಪದ** (ನಾ). ಸುಪ್ರಭಾತದ ಹಾಡು: ಕನ್ನೆಯರು ವೀಣೆಗಳ ಪಿಡಿದುವುಪ್ಪಡಪದವ ಉನ್ನತದಿ ಪಾಡಲೆಚ್ಚತ್ತು ಕುಳಿತಿರೆ (ಪ್ರಭುಪು. ೪–೧೪೫). [ಉಪ್ಪಡ$_3$ (< ಉಪ್ಪವಡ) + ಪದ್ಯ]

**ಉಪ್ಪಯಣ** (ನಾ). ಪ್ರಯಾಣಮಾಡುವಾಗ ತಂಗುವುದು; ನಡುವೆ ಬೀಡು ಬಿಡುವುದು: ಅರಸಂ ಕೇಳ್ದಂದಿನ ಪಯಣಮುಪ್ಪಯಣಮೆಂದಂದಿನ ಪಯಣಮಂ ಮಾಣ್ದು (ಪಂಚತಂ. ೧೨೬–೧೮); ಕೊಲ್ಲಿಪಾಕೆಯ ಉಪ್ಪಯಣದ ನೆಲೆವೀಡಿನೊಳ್ (ತೆಲಂಶಾ. ೩೨–೧೦; 1117); ಬರುತಿರ್ದಂದೀ ಪರ್ವತದಲುಪ್ಪಯಣಮಂ ಮಾಡಿ ಮಂಜೂಷೆಯನಿರಿಸಿ (ಪುಣ್ಯಾಸ್ರ. ೨–೬೬ ವ); ಬಿದುರೆಯೊಳುಪ್ಪಯಣವನೆಂಟುದಿನ ಮಾಡಿ ಸದಳವ ತೆರಳಿಸಿ ಮುಂದೆ ಕದನಲಂಪಟರೊಡನೆಯ್ತರೆ ಮಾತಂಗಿ ಮದಗಜವೇಙೀ ನಡೆದಳು (ಕುರಾಸಾಂ. ೪೨–೪೨). 'ಅಪ್ಪಯಣ' ಪರಾ.
[< ಸಂ. ಉತ್ಪ್ರಯಾಣ. / ತೆಲು. ಉಪ್ಪಯನ]

**ಉಪ್ಪಯಣಂಗೆಯ್** (ಕ್ರಿ). ಪ್ರಯಾಣದಲ್ಲಿ ನಡುವೆ ತಂಗು; ಬೀಡು ಬಿಡು: ದಯಾಪರೀತಚೇತಂ ಮೂಱುದಿವಸಮುಲ್ಲಿ ಉಪ್ಪಯಣಂಗೆಯ್ದು ಎಂತುಂ ಸಂಜೀವಕಂ ಚೇತರಿಸುವುದಂ ಕಾಣದೆ (ಪಂಚತಂ. ೨೩–೨೦); ಬೞಿಕ್ಕಮಾ ಶತ್ರುಘ್ನರರೆವಗಲುಪ್ಪಯಣಂಗೆಯ್ದು ಸುರಥನಿಂದ ಸತ್ಕೃತರಾಗಿ (ರಾಮಾಶ್ವ. ೧೪೨–೨೧).
[ಉಪ್ಪಯಣ + ಗೆಯ್ (< ಕೆಯ್$_1$)]

**ಉಪ್ಪರ$_1$** (ನಾ). ಉಪ್ಪಾರರ ಮೇಲಿನ ಸುಂಕ, —ತೆರಿಗೆ (?): ಅವರ ಮಕ್ಕಮಕ್ಕಳು ತರಾಂತರದಲೂ ನಂಮ ಉಪ್ಪರ ಉಭಯಮಾರ್ಗದ ಹೆಜುಂಕ (ಎಕ. XII, ಶಿರಾ. ೬೬–೧೬; 1379); ಭಂಡಿಯ ಬತ್ತದ ಸುಂಕ ಉಪ್ಪರ ನೆಲವಳಿ ಆನುಪು ಆಳು ಅರಕಾಣಿಕೆ ಕಡಾಯ . . . ಬರದು ಕೊಟೆವು (ಸೌಇಇ. IX–ii, ೪೩೮–೧೫; 1418). [?]

**ಉಪ್ಪರ$_2$**, ಉಪ್ಪುರ (ಗು). ೧. ಎತ್ತರವಾದ; ಉನ್ನತವಾದ: ಸೆಳೆವ ಸಿಂಧದ ಕಟ್ಟಿದುಪ್ಪರ ಗುಡಿಗಳಲ್ಲಿ ಹೊಳೆವ ತಿಕ್ಕೆಯದ ನೆರೆದಣುಕುಗಳವಲ್ಲಲ್ಲಿ (ಇಹರ. ದೇ. ೩೬–೧೪); ಪಡಿತಳವ ಬೀಸಿದರೆ ಕಾಲಿಕ್ಕಡಿ ನಡುವ ತಾಗಿದರೆ ಮಂಡಲವುಡಿದುಬಿದ್ದುದು ನಿಲುಕಿನುಪ್ಪರಶಿರವ ಮನ್ನಿಸದು (ಕುವ್ಯಾಭೀ. ೪–೩೬). (ನಾ). ೨. ಎತ್ತರ; ಉನ್ನತಿ: ಉಪ್ಪರದ ಗುಡಿಗಳ್ (ಬಸಪು. ೩೫–೫೫); ಮಂದಿರದ ಮುಂದಣುಪ್ಪರದ ಚಪ್ಪರದೊಳಗೆ ನಿಂದನಾನಂದದಿಂದಂ (ಸೌಂದಪು. ೪–೩೬); ಸೊಬಗನಾಂತೊಪ್ಪುವ ಬಂಡಿಯನಾಗ ಉಪ್ಪರವಾಗಿ ಮಾಡಿಸಿದನು (ಗೋಮಟೇ. ೩–೪೦). ೩. ಅತಿಶಯ; ಹೆಚ್ಚು: ಉಪ್ಪರದ ಬಿಱುಬಿಸಿಲ ಬೀದಿಯೊಳು ತಗೆದನವನನಿಬರಂ ನಿಷ್ಕರುಣನು (ಹಚಕಾ. ೧೦–೪೬); ಒಡಲುಪ್ಪರದ ಘಾಯವ ಕಳಚಿ ಕೈಮಾಡಿದರು (ಕುವ್ಯಾಭೀ. ೪–೩೯); ಉಪ್ಪರದ ಚಿಂತೆಯಲಿ ಹೊಱವಂಟನು ನಿಜಾಶ್ರಮುವ (ನಿಭಾಗ. ೯–೬–೩೧). **ಉಪ್ಪುರ**: "ಉಪ್ಪುರಮೆನೆ ಮೇಲೆಂಬುದರ್ಥಂ" (ಧಾರಸಿ. ೧೪).

**ಉಪ್ಪರದ ಸಾಧನೆ** = ಎರಡು ಹಿಮ್ಮಡಿಗಳಿಂದ ಎರಡು ಅಂಡುಗಳನ್ನು ಮುಟ್ಟುವಂತೆ ಹಾರಿ ಕುಣಿಯುವುದು: ಶೀಘ್ರವಾಗಿ ಹಾರಿ ಹಾರಿ ಎರಡು ಹಿಮ್ಮಡಗಳಿಂದ ಯರಡು ಪಥಳ ತಾಡಿಸುವುದು ಮಾಡಿದರೆ ಆದು ಉಪ್ಪರದ ಸಾಧನೆಯೆಂಬರು (ಖಡ್ಗಟೀ. ೪–೭೦). **ಉಪ್ಪರಮಾಡು** = ಎತ್ತರವಾಗುವ ಹಾಗೆ ಮಾಡು; ಎತ್ತರಿಸು: ತಗ್ಗಾಗಿರುವ ಹಲಗೆಯನ್ನು ಒತ್ತುಕೊಟ್ಟು ಉಪ್ಪರಮಾಡು (ರೂಢಿ). [< ಸಂ. ಉಪರಿ]

**ಉಪ್ಪರಂಗಟ್ಟು** (ಕ್ರಿ). ಎತ್ತರವಾಗಿ ಕಟ್ಟು: ಇಲ್ಲೆನ್ನದೀವ ಬಿರುದಿಂಗುಪ್ಪರಂಗಟ್ಟಿ ಅಲ್ಲಿ ತನ್ನರಮನೆಯ ಮುಂದೆ ಮುಗಿಲಂ ಮುಟ್ಟಿ ಇರ್ಪುದಾತನ ಮನಮನೇನೆಂದು ಬಣ್ಣಿಪೆಂ (ಇಹರ. ದೇ. ೨೯–೪).
[ಉಪ್ಪರ$_2$ + ಕಟ್ಟು$_1$]

**ಉಪ್ಪರಂನೆಗೆ** (ಕ್ರಿ). ಎತ್ತರಕ್ಕೆ ಹಾರು, —ಜಿಗಿ: ಕಡುಗುದುರೆಯಂತೆ ಮೇಲೆವಾಯ್ದುಪ್ಪರಂನೆಗೆದು ಇದ್ದ ದುಷ್ಟವಾಜಿಯಂ ಕಂಡು (ಪುಣ್ಯಾಸ್ರ. ೭–೫೪ ವ). [ಉಪ್ಪರ$_2$ + ನೆಗೆ$_2$]

**ಉಪ್ಪರಗುಡಿ**, ಉಪ್ಪುರಗುಡಿ (ನಾ). ಎತ್ತರವಾದ ಧ್ವಜ, —ಬಾವುಟ: ತನುವಿನ ಮಹಾಮನೆಯಲ್ಲಿ ಪ್ರಾಡುವ ಮಾಟ ಘನಕ್ಕೆ ಘನವೆಂದು ಎದ್ದಿತ್ತು ಉಪ್ಪರಗುಡಿ ಲೀಲೋಲ್ಲಾಸವೆಂಬ ಕಳೆ ನಟ್ಟಿತ್ತು (ಸಗಬೊ. ೪೭); ಬಿರುದರ ಬೆನ್ನ ಚಮ್ಮಟಿಕೆ ಗಂಡರ ದಾವಣಿ ವೀರಘಂಟೆಯುಪ್ಪರಗುಡಿ ಬಿಲ್ಲ ಜೇವಣಿಕೆ (ಮಹಾಸೇ. ೧೧–೧೩೬); ರಥ ಸಾವಿರ ದಲಾ ಪಾಂಚಾಲಬಲವುಪ್ಪರಗುಡಿಯ ಸಿಂಧದ ಸಘಾಡದಲ್ಕೈದಿತರಿಭಟನ (ಕುವ್ಯಾಕ. ೨–೨೩). **ಉಪ್ಪುರಗುಡಿ**: ಶರಣಾವಳಿಯ ಜಯರವ ಪೊಣ್ಮಲುಪ್ಪುರಗುಡಿಯನೆತ್ತಿ ಭಕ್ತರ್ ನಲಿಯೆ (ಕೊಟ್ಟೂಬ. ೧೬–೩೧).
[ಉಪ್ಪರ$_2$ + ಗುಡಿ$_2$. / ತೆಲು. ಉಪ್ಪರಗುಡಿ]

**ಉಪ್ಪರಗೋಂಟೆ** (ನಾ). ಎತ್ತರವಾದ ಕೋಟೆ: ವರದುರ್ಗಿಯ ಪಲ್ಲಳವೊಲಾ ಪಿರಿದುಪ್ಪರಗೋಂಟೆದೆನೆಗಳೊಪ್ಪಿದವು (ಹಮ್ಮಿರ. ೧–೬೧).
[ಉಪ್ಪರ$_2$ + ಕೋಂಟೆ]

**ಉಪ್ಪರಘಾಯ** (ನಾ). ಮೇಲುಗಡೆಯಿಂದ ಹೊಡೆಯುವುದು; ಮೇಲು ಹೊಡೆತ (?): ರಾಯನಲ್ಲಿಗೆ ಮೆಲ್ಲಮೆಲ್ಲನುಪಾಯಗತಿ ಪಲ್ಲವಿಸಲುಪ್ಪರಘಾಯದಲಿ ಲಾಗಿಸುವ ಪಾರ್ಥನ ಕಂಡುದಖಿಳಜನ (ಕುವ್ಯಾಕ. ೧೭–೨). 'ಉಪ್ಪರವೊಯ್ಲು' ಪರಾ. [ಉಪ್ಪರ$_2$ + ಘಾಯ]

**ಉಪ್ಪರಜವ್ವನೆ** (ನಾ). ಯೌವನದ ಏರಿಕೆಯಲ್ಲಿರುವವಳು; ಏರುಂಜವ್ವನೆ: ಉಪ್ಪರಜವ್ವನೆಯರು ಕಂಡು ಸೋಲ್ತು ಬಂದಪ್ಪುವೊಲೆಸೆದನಾ ಮದನಾ (ಭರಚ. ೪೭–೬೭). [ಉಪ್ಪರ$_2$ + ಜವ್ವನೆ]

**ಉಪ್ಪರಣೆ** 'ಉಪರಣೆ' ನೋ.

**ಉಪ್ಪರದಂಡೆ** (ನಾ). [ನಾಟ್ಯ] ನೃತ್ಯದಲ್ಲಿ ಒಂದು ಭಂಗಿ: ಪುಷ್ಪಾಂಜಲಿಯ ಮಾಡೀ ಸ್ವರಗೈದು ಮೆಲ್ಲಮೆಲ್ಲನೆ ಪಾಡಿ ಜೊತೆಯಲಿ . . . ತಿರುಪು ಕತ್ತರಿ ಲವಣಿ ಲಾಗು ಮುಖಚಾರಿಯುಪ್ಪರದಂಡೆ ಗುಂಡಲಾದಿಯಾ . . . ಕಂಡು ಬೆಱಗಾದನು (ಗುಭಚ. ೨೯–೪೨).
[ಉಪ್ಪರ ? + ದಂಡೆ$_8$]

**ಉಪ್ಪರಮನೆ** (ನಾ). ಎತ್ತರವಾದ ಮನೆ: ಉಪ್ಪರಮನೆ × × × ಚಿಕ್ಕಯಲ್ಲಪ್ಪ ಬೀರಯ್ಯನು (ಎಕ. XI, ಮೊಳಕಾ. ೯–೮; 1551).
[ಉಪ್ಪರ$_2$ + ಮನೆ]

**ಉಪ್ಪರಮುಡಿ** (ನಾ). ಎತ್ತರವಾದ ಕಿರೀಟ (?): ಕಟ್ಟಿಸಿದುಪ್ಪರಮುಡಿಯಂ ಎತ್ತಿಸಿದಂ ಅಭವನೊಲ್ದ ನಂದಿಯ ಸಿಂದಂ ಹೋ ಉಘೆ ಉಘೆ ಎಂದೆನುತಂ ವೀರೇಶ್ವರನೊಪ್ಪುಗೊಂಡ ಚಾವುಂಡನುಮಂ (ಎಕ. VII, ಚೆನ್ನಗಿ. ೨೪–೧೦; 1280). ℙ ಇದು ಉಪ್ಪರಮುಡಿ = ಮೇಲೆ ಕಟ್ಟಿದ ವಸ್ತ್ರ, ವಿತಾನ ಎಂದಿರಬಹುದೆ? [ಉಪ್ಪರ$_2$ + ಮುಡಿ$_3$]

**ಉಪ್ಪರವಟ್ಟ$_1$** (ನಾ). ಮೇಲುಮಟ್ಟ; ಉತ್ತಮ ದರ್ಜೆ ಅಥವಾ ಸ್ಥಾನ: ಆವಾವ ಗುಣಂಗಳೊಳಂ ಭಾವಿಸುವೊಡೆ ನೋಡ ಜಗದೊಳುಪ್ಪರವಟ್ಟಂ ಕೇವಳಮೆ ಸಂಧಿವಿಗ್ರಹಿ ಚಾವುಂಡಂ ಗುಣಕರಂಡನಮೃತದ ಪಿಂಡಂ (ಎಕ. V, ಅರಸೀ. ೧೪೧–೨೪; 1158); ಮಟ್ಟವಿರದಾಂತ ಪಗೆವರ ಪಟ್ಟಂ ಪಾಱಿಸದೆ ಮಾಣ್ಬನೇ ವೈರಿದಿಶಾಪಟ್ಟಂ ರಿಪುಗೋಧೂಮಘರಟ್ಟಂ ಮಲಿದೇವನದಟರುಪ್ಪರವಟ್ಟಂ (ಕೊಲ್ಹಾಶಾ. ೧೫–೫೫; 1186).

ಉಪ್ಪರವಟ್ಟದಕ್ಕರ=ಮೇಲುಮಟ್ಟದ ಜ್ಞಾನ; ಹೆಚ್ಚಿನ ಅರಿವು: ಪರಿಕಿಪೊಡೆಲ್ಲರಕ್ಕರಮುಮಕ್ಕರಮೇ ಪ್ರತಿಕಂಟ ಚನ್ದನಕ್ಕರಮೆ ನೆಗತ್ತೆಯಕ್ಕರಮನೇಕರುಮಂ ಪೊರೆವಕ್ಕರಂ ಮಹೀಶ್ವರರ ಸಭಾನ್ತರಾಳಮನಳಂಕರಿಪಕ್ಕರಮೆನ್ನುಮಾಳ್ವನಂ ಪಿರಿಯ ದಗುನ್ತಿಯೊಳ್ನಿಲಿಸುವಕ್ಕರಮುಪ್ಪರವಟ್ಟದಕ್ಕರ (ಸೌಇಇ. XI–ii, ೧೪೭–೫೫ ; 1099).

[ಉಪ್ಪರ₂ + ಮಟ್ಟ₃. / ತೆಲು. ಉಪ್ಪರವಟ್ಟ]

**ಉಪ್ಪರವಟ್ಟ₃** (ನಾ). ಮೇಲೆಕಟ್ಟುವ ಬಟ್ಟೆ; ವಿತಾನ ವಸ್ತ್ರ; "ಮೇಲ್ಕಟ್ಟಿನ ಬಟ್ಟೆ" (ಅರ್ಥನೇ. ಕೋಶ): ಮದನಂಗುಪ್ಪರವಟ್ಟವಾಗದ ತಳಿರ್ ಕಾಮುಂಗೆ ಕೋದಂಡಮಾಗದ ಕರ್ವಂಗಭವಂಗೆ ಭಂಗುರ ಧನು ಜ್ಯಾರ್ ಲೇಖೆ ತಾನಾಗದುನ್ಮದಭೃಂಗಾವಳಿ . . . ಮಜಿದಾಗವು (ಅರ್ಥನೇ. ೧–೬೪); ತಮಾಳ ಪಲ್ಲವದ ಚಾಮರದುಪ್ಪರವಟ್ಟಮೊಪ್ಪೆ (ಚಂದ್ರಪು. ೧–೧೧೧); ಸತ್ಫುಲ್ಲಶರಕ್ಕೆ ಮಿಕ್ಕ ಗಜಿಯಾಗೆ ವಿನಿರ್ಮಿಸಿ ಕರ್ವುವಿಲ್ಗದೇಂ ನಿಲ್ಲದೆ ಕಂತು ಮಾಡಿದನೊ ತೋಮರದುಪ್ಪರವಟ್ಟದೊಪ್ಪಮಂ (ವರ್ಧಪು. ೨–೬); ನೆಟ್ಟನೆ ಬಲವಟಿಯೆ ಜವಂಗೆಟ್ಟರೆ ತನು ಶಿಥಿಲಮಾಗೆ ಕಾಯಂ ಸಲೆಘಾಟಿಟ್ಟೋಡಿ ಜವನುಪ್ಪರವಟ್ಟಮನನುಕರಿಸಿ ನರೆಗಳೊಗೆದುವು ಶಿರದೊಳ್ (ಪಾರ್ಶ್ವಪು. ೧–೧೨೪).

[ಉಪ್ಪರ₂ + ಪಟ್ಟ]

**ಉಪ್ಪರವೊಯ್ಲು** (ನಾ). = ಉಪ್ಪರಘಾಯ: ಕಡುಗದ ಪೊಯ್ಲಿಂದಂ ಕಾಲಡಿಗಳ್ ಕಡಿಯಾಗೆ ನೀಡಿದುಪ್ಪರವೊಯ್ಲಿಂ ಪೊಡವಿಗೆ ಬೀಱುರೆ ತಲೆಸೊರ್ಕಡಗದೆ ಕೆಲರಿಱಿದು ಬೀರಸಿರಿಯೊಳ್ ನೆರೆದರ್ (ಕಬ್ಬಕಾ. ೨೭೩).

[ಉಪ್ಪರ₂ + ಪೊಯ್ಲು]

**ಉಪ್ಪರಸಂಚ** (ನಾ). ಮೇಲುಮಟ್ಟದಲ್ಲಿ ಕತ್ತಿಯನ್ನು ಬೀಸುವುದು (?): ಮಿಾಱಿ ತಳಸಂಚದೊಳು ಮೊನೆಯನು ತೋಱಿ ತಿರುಪಿನೊಳಡೆದು ಕಳಚುವರೇಱುಗಾಣದೆ ಮಧ್ಯಸಂಚಕೆ ಸಿಲುಕಿ ಕೈಮಾಡಿ ಜಾಱಿ ಸುರಗಿಯೊಳಣೆವರಳುಕದೆ ಮಿಾಱಿದುಪ್ಪರಸಂಚದಲಿ ಕೈದೋಱಿ ದಂಡೆಯನೆತ್ತಿ ಕಾದಿತು ಸುರಗಿಯತಿಬಲರು (ಕುವ್ಯಾಭೀ. ೪–೨೨).

[ಉಪ್ಪರ₂ + ಸಂಚ₁]

**ಉಪ್ಪರಸಾಲೆ** (ನಾ). ಎತ್ತರವಾದ ಮನೆ; ಉಪ್ಪರಿಗೆ: ಮೇಲುಗುಡಿಗಳ ಭದ್ರದುಪ್ಪರ ಸಾಲೆಗಳ . . . ರಾಜಾಲಯಂಗಳ ರಚಿಸಿದರು ಕುಂತೀ ಕುಮಾರರಿಗೆ (ಕುವ್ಯಾಉ. ಓ೦ಇ. ೧೨–೪೫).

[ಉಪ್ಪರ₂ + ಸಾಲೆ₅]

**ಉಪ್ಪರಿಕೆ** 'ಉಪ್ಪರಿಗೆ' ನೋ.

**ಉಪ್ಪರಿಗೆ,** ಉಪ್ಪರಿಕೆ (ನಾ). ಕರುಮಾಡ; ಮಹಡಿ; ಸೌಧ: "ನೆಲೆವಾಡಂ ಕರುಮಾಡಮುಪ್ಪರಿಗೆಯೊಳ್" (ಕರ್ಣಾನಿ. ೯೪); ಕರುಮಾಡಂ ನೆಲೆವನೆಯುಪ್ಪರಿಗೆಯುಮೆನೆ ಸೌಧಂ" (ಕವಿಕಂ. ೧೪೪); ಏಳುನೆಲೆಯ ಕರುಮಾಡದುಪ್ಪರಿಗೆಯೊಳಗೆ (ಆದವ. ೭೬); ದೇವಲ್ಕದ ಮುಂದಣ ಅದಿಷ್ಟಣ ಮುಖ ನೆಲೆಯ ಉಪ್ಪರಿಗೆ ಕಲ್ಲನವಿಲುಯ್ಯಾಲು ಮೇಲಣ ಸಿಖರವು (ವೈಆರಿ. ೧೯೩೯, ೪–೬; 1355); ಮುಗಿಲಂ ಮುಟ್ಟುವುಪ್ಪರಿಗೆಗಳೆ (ಜಬಪು. ೫–೫೨); ಉಪ್ಪರಿಗೆಯ ಚಂದ್ರಸಾಲೆಯಲ್ಲಿ ಕುಳಿತು . . . ಮಾತನಾಡುತ್ತಿದ್ದಳು (ಶಾಂತಲಾ. ೨೯೨); ತಿಪ್ಪೆ ಮೇಲೆ ಬಿದ್ದುಕೊಂಡು ಉಪ್ಪರಿಗೆ ಕನಸು ಕಂಡ ಹಾಗೆ (ಗಾದೆ). **ಉಪ್ಪರಿಕೆ:** ಒಪ್ಪವಡೆದ ಯಾಗಶಾಲೆ ಸದ್ಗಳಿಹಾರದುಪ್ಪರಿಕೆಯೊಳು ಜೋಯಿಸರು ತಪ್ಪದೆ ಗಳಿಗೆಗೊಮ್ಮೊಮ್ಮೆ ಭೇರಿಯ ಹೊಯ್ಯುತ್ತಿಪ್ಪುದದೊಂದು ಬಾಗಿಲೊಳು (ಮೋಹತ. ೨೦–೩೦); ಸರ್ವಜನರ ವಸತಿಗಳೆಸೆವುವು ನವರತ್ನಹೇಮ ಪ್ರಸರದುಪ್ಪರಿಕೆಗಳಿಂದ (ಕಂಸವಿ. ೨–೬೯).

[ಉಪ್ಪರ + ?. / ತಮಿ. ಉಪ್ಪರಿಗೈ ; ತೆಲು. ಉಪ್ಪರಿಗ]

**ಉಪ್ಪರಿಸು,** ಉಪ್ಪಳಿಸು (ಕ್ರಿ). ೧. ಮೇಲಕ್ಕೆ ನೆಗೆ,—ಹಾರು, —ಚಿಮ್ಮು; ಸಿಡಿ: ಮುರಿದುಪ್ಪರಿಸುವ ತರಹರಿಸಿ ಪೊಣ್ಮುವ ಪೊಱಕಾಲೊಳ್ ನಡೆವ ಸೂಕಳಾಶ್ವಮುಂ ಕಂಡು (ಗಿರಿಕ. ೨–೧೦೫ ವ); ಚರಿಯಿಪ ಕಿನ್ನರಿಯರ ಮೊಗಸಿರಿಗೊಯ್ಯನೆ ಗೋರಿಗೊಂಡು ಕೂಡೆ ಕುಕಿಲ್ದುಪ್ಪರಿಸಿ ರವಿರಥದ ವಾಜಿಗಳ್ (ಸೂಕ್ತಿಸು. ೩–೨೧೯); ಧರೆಗೆ ಬಸವನ ಭಕ್ತಿರಸ ಘನಶರಧಿಯದುವಗಲಕ್ಕೆ ನೆರೆದುಪ್ಪರಿಸೆ ಬಂಡಹನಲ್ಲಮಪ್ರಭು (ಬಸಪು. ೮–೮); ಬಿಗುಹುಗೊಂಡುಪ್ಪರಿಸಿದವು ಹುಬ್ಬುಗಳು (ತೊರರಾ. ೨–೩–೮); ತಪ್ಪದೆ ಜಲಚರನಿಕರ ಬಿದಿರೆ ಮೇಲಕುಪ್ಪರಿಸುವ ಜಲಬಿಂದು (ಕಂಸವಿ. ೫–೪೫). **೨.** ವ್ಯಾಪಿಸು: ಮಂಗಳವಾದ್ಯದ ಬಲುರವವುಪ್ಪರಿಸಿದುವೆಂಟುದೆಸೆಗೆ (ಕಂಸವಿ. ೭–೧೦೪). **೩.** ಹಿಗ್ಗು; ಅತಿಶಯವಾಗು: ಸಭೆಯುಂ ತಾನುಮಚ್ಚರಿಯುಪ್ಪರಿಸೆ ಶಿವಭಕ್ತಿ ಮಹಿಮೆಯ ನೊಪ್ಪಿ ರಂಜಿಪ ಬಸವರಾಜನ ಘನತೆಯಂ ನೆನೆದು (ಬಸಪು. ೧೦–೫೨); ಕುಲಿಶಮುಷ್ಟಿಯ ಕಲಿಗಳುಪ್ಪರಿಸಿದರು ಕಲಹದಲಿ (ತೊರರಾ. ೬–೩೩–೧೪). **೪.** ಮೇಲಕ್ಕೆ ಎಬ್ಬಿಸು; ಎತ್ತರಿಸು: ನರಾಂತಕನುರುಳಿದಶ್ವವನುಪ್ಪರಿಸಿ ಚಪ್ಪರಿಸಿದಾಯೆನುತ (ತೊರರಾ. ೬–೩೦–೩೦); ತಗ್ಗಾಗಿರುವ ಹಲಗೆಯನ್ನು ಸ್ವಲ್ಪ ಉಪ್ಪರಿಸಬೇಕು (ರೂಢಿ). **೫.** ಮುಚ್ಚಳವನ್ನು ತೆಗೆ; ಬಿಚ್ಚು: ಸೆಜ್ಜೆಯುಪ್ಪರಿಸಿ ಶಿವಲಿಂಗ ನೀನೆನ್ನ ಶಿರಸ್ಥಳಕ್ಕೆ ಬರೆ ಪ್ರಜ್ವಲಿಸಿ ತೊಳತೊಳಗಿದೆ (ಮಹಾದೇ. ೨೬–೨); ಅಂಜುವರೆ ದೇವ ಸೆಜ್ಜೆಯನು ಉಪ್ಪರಿಸಿಮೆನೆ (ಬಸರ. ೯–೫೩); ಕರ್ಣಿಕಾಂತರದಲ್ಲಿ ಪಸಿಸಿರ್ದ ಸತ್ರಾಣ ಲಿಂಗಮಂ ಸೆಜ್ಜೆಯಿಂದುಪ್ಪರಿಸಿ ಥಳಥಳಿಸುತೆ (ಆರಾಜ. ೧೧–೩೨). **ಉಪ್ಪಳಿಸು:** ಕ್ಷೋಣಿಯಿಂ ನಭಕುಪ್ಪಳಿಸೆ ಶಾರ್ದೂಲಮಂ ಕಂಡ ಏಣತತಿಯಂದದಲಿ (ಕೋಗಯು. ೨೩–೪೩). [ಉಪ್ಪರ₂ + –ಇಸು₃]

**ಉಪ್ಪಲ₁** (ನಾ). ಚೌಳು; ಚೌಳುಭೂಮಿ. 'ಉಪ್ಪಲಿಗ' ಪರಾ.

[ದೇ. ‖ ತಮಿ. ಮಲ. ತೆಲು. ಉಪ್ಪಳ]

**ಉಪ್ಪಲ₂** 'ಉಪ್ಪಳ' ನೋ.

**ಉಪ್ಪಲಗೌರಿ** (ನಾ). ನೈದಿಲೆಯಂತಿರುವ ಗೌರಿ: ಒಪ್ಪಿಡಿ ನಡುವಿನ ವನಿತೆಯಾಗಬೇಕೆಂದು ಕಪ್ಪುಗೊರಳ ಕಪಟದಿ ತಾ ಬಂದು ಉಪ್ಪಲ ಗೌರಿಯ ಹರ ಗೆದ್ದನು (ನಾಪದ. ೧೯೫).

[ಉಪ್ಪಲ₂ (< ಉಪ್ಪಳ) + ಗೌರಿ]

**ಉಪ್ಪಲಿ** (ನಾ). "ಕಮಾನು" (ಜಾನಕೋ. ೨೦). [?]

**ಉಪ್ಪಲಿಕ** 'ಉಪ್ಪಲಿಗ' ನೋ.

**ಉಪ್ಪಲಿಕೆ** (ನಾ). ಒಂದು ಸೀಮೆಯ ಹೆಸರು: ಉಪ್ಪಲಿಕಾ ಶತತ್ರಯಾನ್ತರ್ಗ್ಗತವಪ್ಪುಲ ತಲ್ಲದ್ವಾದಶಮಧ್ಯೇ ಕುಂಗರಿಕಾನಾಮ ಗ್ರಾಮಃ (ಇಆ. XII, ೨೬೬–೫೨; 972). [?]

**ಉಪ್ಪಲಿಗ,** ಉಪಲಿಕ, ಉಪಲಿಗ, ಉಪ್ಪಲಿಕ, ಉಪ್ಪಲೀಕ, ಉಪ್ಪಿಲಿಕ (ನಾ). ೧. ಉಪ್ಪು ತಯಾರಿಸುವವನು: ಪೊಡವಿಯೊಳಗುಪ್ಪಲಿಗ ದಾಸನಾಗಿರ್ಪವನ ಮುಡುಹಿನೊಳಗಣ ಮುದ್ರೆ ಬಯಲಾದುದು (ವೀಶೈಪು. ೮–೮–೭). **೨.** ಮಣ್ಣು ಅಥವಾ ಗಾರೆ ಕೆಲಸದವನು: ರಾಜಿಸುವ ನಣ್ಣಾ ಭಕ್ತನುಪ್ಪಲಿಗಕಾಯಕದೊಳೊಸೆದು (ಗುರುಚಾ. ೧೦–೩೩); ಉಪ್ಪಲಿಗ ಜೋಗಿ ಉಂಡಿಗೆ ಪಡುವಲು (ಎಕ. III, ತಿರುಮ. ೬೩–೮೫೪; 1748). **ಉಪಲಿಕ:** ೧. ಮಲಪನಾಯಕರು ಹಿರಿಯೂರ ಸೀಮೆಯ ಉಪಲಿಕರಿಗೆ ಕೊಟ್ಟ (ಎಕ. XI, ಹಿರಿಯೂ. ೪೧–೪; 1551). **ಉಪಲಿಗ:** ೧. ಉಪಲಿಗರ ಕಾವಲಿ ಅಂತು ಯಿಾ ತೆಱಗೆ ಸಹವಾಗಿ (ಎಕ. XIV, ಗುಂಡ್ಲುಪೇ. ೧೨೯–೧೧೧; 1521). **ಉಪ್ಪಲಿಕ:** ೧. ಪಿರಿದೆನಿಸುತುಪ್ಪಲಿಕ ಕಾಯಕವ ಮಾಡುತಿಹ ಶರಣ (ಲಶಿಚಂ. ೩೮–೧೭); ಹರಭಕ್ತ ಪದಸೇವ ತತ್ಪದೊಳಗುಪ್ಪಲಿಕ ಕಾಯಕವ ಮಾಡುತಿರಲು (ಗುರುಚಾ. ೧೦–೩೪).

**ಉಪ್ಪಲೀಕೆ** : ೨. ಅರಸನೊಂದಿನ ಚಿತ್ರಮಂಟಪಂ ಕಿಱಿದೆನಲು ಮುಱಿದಿದಂ ಪಿರಿದಾಗಿ ಕಟ್ಟಿಸುವೆನೆಂದೆನುತ ವರಮಂತ್ರಿ ಕೆಳಿಪಿದಂ ಉಪ್ಪಲೀ [ಪಾಠಾಂ. ನೀ] ಕರನಂದು ಹಾರೆ ಸಲಿಕೆಗಳು ಸಹಿತ (ಲಶಿಚಂ. ೩೨–೫೭); ನಿಜಜಂಗಮದ ರೂಪ ನಾ ಕ್ಷ ಣ ಂ ಹಾರವಿಸಲೆಬ್ಬಿಸಿದ ಮಡಿದುಪ್ಪಲೀ [ಪಾಠಾಂ. ನೀ] ಕರಂ ವೀರಶೈವಾಗಮದ ಮೆಱೆದ (ಲಶಿಚಂ. ೩೨–೫೯).

**ಉಪ್ಪಿಲಿಕೆ** : ೧. 'ಉಪ್ಪಿಲಿಕದೆಱೆ' ಪರಾ.

[ಉಪ್ಪಲ$_1$ + –ಇಗ. / ತಮಿ. ಉಪ್ಪಿಲಿಯನ್]

**ಉಪ್ಪಲಿಗೆ** (ನಾ). ಒಂದು ಗಿಡದ ಹೆಸರು : ಉತ್ತರಣೆ ಉಪ್ಪಲಿಗೆ ಮತ್ತಲ್ಲ ಶಿಶುಮಾರ ಕತ್ತೆಯ ಮೂತ್ರವೆರೆದಿಹರೆ ರಸಭಸ್ಮ ಉತ್ತಮವದಕ್ಕು (ಸರ್ವಜ್ಞ. ೧೯೬೪).

[ದೇ. ॥ ಮಲ. ಉಪ್ಪಿಲೆ; ತುಳು. ಉಪ್ಪಳಿಗೆ]

**ಉಪ್ಪಲೀಕ** 'ಉಪ್ಪಲಿಕ' ನೋ.

**ಉಪ್ಪವಡ**, ಉಪ್ಪಡ$_3$ (ನಾ). ೧. ಹಾಸಿಗೆಯನ್ನು ಬಿಟ್ಟು ಮೇಲಕ್ಕೆ ಏಳುವುದು; ನಿದ್ದೆಯಿಂದ ಎಚ್ಚತ್ತು ಏಳುವುದು : ದಂಪತಿಗಳಿಗುಪ್ಪವಡವು ಸಮನಿಸಿತೆ ಮುಪ್ಪಾಗುತಿದೆ ರಾತ್ರಿ (ಅಂಜಚ. ೮–೧೩೭); ಉದಯರಾಗದೊಳುಪ್ಪವಡದ ಪಾಡಂ ಪಾಡುವವರ ಪಾಡೊಪ್ಪಿತಾಗ (ಸಮ್ಯ ಕೌ. ೧೨–೧೧); ನೆರೆದರು ಬಳಿಕುಪ್ಪವಡಕೆ ಪಾಡುವ ತರುಣಿಯರ್ ತಾಳದಂಡಿಗೆಯ ಕರದೊಳು ತಳೆದು (ಕಂನವಿ. ೨೨–೩೯). ೨. ಸುಪ್ರಭಾತ; ಸುಪ್ರಭಾತದ ಹಾಡು : ಪುಷ್ಪಸುಗಂಧಗಂಧಿಯರು ಬಂದರು ಬಾಣನುಪ್ಪವಡವನು ಪಾಡುವೊಡೆ (ಮೋಹತ. ೨೨–೩೦); ಬೆಳಗಾಯಿತೇಕೆಂದೊಬ್ಬ ತರುಣಿಯುಪ್ಪವಡಮಂ ಹಾಡಿ (ಭಿಕ್ಷಾಚ. ೩–೪೫); ಉಪ್ಪವಡಮಂ ಪಾಡುವ ಗಾಡಿಕಾರ್ತಿಯರ ರಾಗರಸದೊಡನೆ (ಚಂದ್ರಭ್ಯು. ೧೬–೧೩೩ ವ). **ಉಪ್ಪಡ$_3$** : ೨. 'ಉಪ್ಪಡಪದ' ಪರಾ.

[ಸಂ. (ಉತ್–) + ಪವಡು. / ತೆಲು. ಉಪ್ಪವಡ ?]

**ಉಪ್ಪವಡಂದಳೆ** (ಕ್ರಿ). ಹಾಸಿಗೆಯನ್ನು ಬಿಟ್ಟು ಮೇಲೇಳು; ಎಚ್ಚರಹೊಂದು : ನಿಜಸತಿಯೊಡನೆ ಮಂದೇರಕಕೇಳಿಯೊಳಿರ್ದು ಉಪ್ಪವಡಂದಳೆದತಿಹರುಷದೊಳು (ಪ್ರಭಂಜ. ೧–೮೫). [ಉಪ್ಪವಡ + ತಳೆ$_1$]

**ಉಪ್ಪವಡಂಬಡೆ** (ಕ್ರಿ). = ಉಪ್ಪವಡಂದಳೆ : ಸುಯ್ಯೆಲರ್ ತರಹರವಾಂತು ಸೂಸೆ ಸತಿಯುಪ್ಪವಡಂಬಡೆದೊಪ್ಪಿ ತೋಱಿದಳ್ (ರಾಜಶೇ. ೪–೨೫). [ಉಪ್ಪವಡ + ಪಡೆ$_1$]

**ಉಪ್ಪವಡಗೀತ** (ನಾ). ಸುಪ್ರಭಾತದ ಹಾಡು; ಸುಪ್ರಭಾತ : ಉಪ್ಪವಡಗೀತ ಅಥವಾ ಸುಪ್ರಭಾತ ಗೀತ (ಕವಿಚ. II, ೨೮೪ ಸಿದ್ಧೇಶ್ವರ ಪುರಾಣ). [ಉಪ್ಪವಡ + ಗೀತ]

**ಉಪ್ಪವಡವಾಡು** (ನಾ). = ಉಪ್ಪವಡಗೀತ : ಸೂತಜರು ಸವಿಯುಪ್ಪವಡವಾಡನು ಪಾಡಿದರು ಮುನ್ನೇಸಱಿನೊಳಾಗ (ಅಂಜಚ. ೧–೩೧).

[ಉಪ್ಪವಡ + ಪಾಡು$_2$]

**ಉಪ್ಪವಡಿಸು** (ಕ್ರಿ). ನಿದ್ರೆಯಿಂದ ಎಚ್ಚರಗೊಳ್ಳು; ಹಾಸಿಗೆ ಬಿಟ್ಟು ಏಳು : ಪವಡಿಸಿದನಂತನೊಸೆದುಪ್ಪವಡಿಸಿ ತನ್ನೆರಡುಮಡಿಯನೊತ್ತಿತ್ರಿದಾರ್ಹವವಿಜಯಿಯಪ್ಪ ವಿಜಯನನೆ ವಲಂ ಮುಂ ಕಂಡು (ಪಂಪಭಾ. ೯–೧೧); ಬೆಳಗಾಯ್ತುಪ್ಪವಡಿಸು ತೊಳತೊಳಗುವ ಮಣಿಮುಕುರಮಂ ನಿರೀಕ್ಷಿಸು (ಗಿರಿಕ. ೮–೭೧); ಹರಹರ ಶ್ರೀಕಾಂತ ಎನುತ್ತೆವರು ಕುಮಾರಕರುಪ್ಪವಡಿಸಿದರರಿವಿನಾಶಕರು (ಕುಮ್ಯಾವಿ. ೧೧–೪); ರುದ್ರನುಪ್ಪವಡಿಸಿದ ನೆಳ್ಚತ್ತರಾ ವೀರಭದ್ರಮುಖ್ಯರ್ (ಚಿಬಸ್ತು. ೪೮–೩೬). 'ಪವಡಿಸು' ಪರಾ. [ಉಪ್ಪವಡ + –ಇಸು$_3$]

**ಉಪ್ಪವರೆ** (ನಾ). ಅವರೆಯಲ್ಲಿ ಒಂದು ಬಗೆ : "ಕಾಕಾಂಡೋಲಃ – ಕಾಡವರೆ, ಉಪ್ಪವರೆ" (ಔಷಧಿ. ೩೦). [ಉಪ್ಪು$_1$ + ಅವರೆ$_1$]

**ಉಪ್ಪವಳ್ಳಿ** (ನಾ). ಒಂದು ಊರಿನ ಹೆಸರು : ಉಪ್ಪವಳ್ಳಿಯ ಪೋಚಗಾಮುಣ್ಡ (ಎಕ. V, ಬೇಲೂರು. ೩೦೮–೧೨; 971). [ಉಪ್ಪು$_1$ + ಪಳ್ಳಿ]

**ಉಪ್ಪಳ**, ಉಪ್ಪಲ$_2$ (ನಾ). ನೈದಿಲೆ ಹೂವು; ಉತ್ಪಲದ ಹೂವು : "ನೆಯ್ದಿಲ್ಗಳೊಳ್ ಉಪ್ಪಳಕೋವಳೆಗಳು" (ಕರ್ಣಾನಿ. ೩೯); ಕೊಂಡುವು ಸಪ್ಪದಮುಪ್ಪಳದಿನೊಱೆವ ನಱುವಂಡುಗಳಂ (ಲೀಲಾವ. ೯–೮೬); ಕಣ್ದೆಱೆದು ನೋಡಲುಪ್ಪ [ಪಾಠಾಂ. ತ್ಪ] ಳದ ಸಿರಿಯಳಿವುದೆಂದೆನ್ನ ಮಗಳೆಂದೊಬ್ಬ ಸತಿ ನುಡಿದಳು (ಹಚಕಾ. ೪–೧೯); ನೆಱೆಯಿಪುದೊಪ್ಪಿನುಪ್ಪಳದ ತಾವರೆಯೋರಣದೋರಣಂಗಳಂ (ಅಪ್ರತಿ. ೨೪–೧೯). **ಉಪ್ಪಲ$_2$** : 'ಉಪ್ಪಲಗೌರಿ' ಪರಾ. [< ಸಂ. ಉತ್ಪಲ]

**ಉಪ್ಪಳಗಂಪು** (ನಾ). ನೈದಿಲೆ ಹೂವಿನ ವಾಸನೆ : ಕಿಱುದುಂಬಿಗುರುಳ ಹೊಂಜೆಳೆಮೆಯ್ಯುಪ್ಪಳಗಂಪಿನ ಗರುವೆ ವಿಲಾಸದಿನೆಯ್ದಿದಳು (ಜಯಕಾ. ೧೬–೪). [ಉಪ್ಪಳ + ಕಂಪು]

**ಉಪ್ಪಳಗಣ್** (ನಾ). ನೆಯ್ದಿಲೆಯಂತೆ ಇರುವ ಕಣ್ಣು : ತೊಳಪ್ಪುಪ್ಪಳಗಣ್ಣ ನೀಱೆ ವರ ಸೌಂದರಿಗೂಡಿ ಬೆಡಂಗುವೆತ್ತಿರಲ್ (ಉದ್ಭಟ. ೧೦–೨); ಇಪ್ಪಂತೆ ನೋಡಿದರಾ ರಾಜಚಂದ್ರನನುಪ್ಪಳಗಣ್ಣ ನೀಱೆಯರು (ಚಂಪ್ರಸಾಂ. ೧೬–೧೪೮). [ಉಪ್ಪಳ + ಕಣ್]

**ಉಪ್ಪಳಿಸು** 'ಉಪ್ಪರಿಸು' ನೋ.

**ಉಪ್ಪಾಟ** (ನಾ). ಒಂದು ಬಗೆಯ ಆಟ : ಚಿಕ್ಕಂದು ನಾವಾಡಿದುಪ್ಪಾಟಮಂ ಮತ್ತಿಂದು ತೋರಿದಪೆನೆನ್ನ ತಮ್ಮಂಗೆ (ಶ್ರೀರಾಮಾ. ೩೧೦–೨೫೪).

[ಉಪ್ಪು$_1$ + ಆಟ]

**ಉಪ್ಪಾತಿ** (ನಾ). ಒಂದು ಗಿಡದ ಹೆಸರು : ಉಪ್ಪಾತಿ (ವೈಶಿಗ. ೧೧–೧೮೫). [ಉಪ್ಪು$_1$ + ಆತಿ ?]

**ಉಪ್ಪಾರ$_1$** 'ಉಪ್ಪಾಱ' ನೋ.

**ಉಪ್ಪಾರ$_2$** 'ಉಪಾರ' ನೋ.

**ಉಪ್ಪಾರಗಡುಗೆ** 'ಉಪಾರಗಡುಗೆ' ನೋ.

**ಉಪ್ಪಾರತಿ$_1$** (ನಾ). ಉಪ್ಪಾರಜಾತಿಗೆ ಸೇರಿದವಳು (ಕ).

[ಉಪ್ಪಾರ$_1$ (< ಉಪ್ಪಾಱ) + –ತಿ$_1$ (< –ಇತ್ತಿ)]

**ಉಪ್ಪಾರತಿ$_2$** (ನಾ). ೧. (ದೃಷ್ಟಿದೋಷಪರಿಹಾರಕ್ಕಾಗಿ) ಎತ್ತುವ ಉಪ್ಪಿನ ಆರತಿ : ದೃಷ್ಟಿಯಾಯ್ತೆಲೆಲೆ ಉಪ್ಪಾರತಿಯನೆತ್ತೆಂಬ (ಬಸರ. ೭–೧೩೨); ಕೋಮಲೆಯರು . . . ಉಪ್ಪಾರತಿಯನೆತ್ತಿ (ಪದ್ಮರಾ. ೩–೪೭). ೨. ಉಪ್ಪನ್ನು ನಿವಾಳಿಸಿ ದೃಷ್ಟಿಯನ್ನು ತೆಗೆಯುವುದು : ಆರತಿಯನೆತ್ತಿದರು ಬಳಿಕುಪ್ಪಾರತಿಯ ಹಾಯ್ಕಿದರು (ಕುಮ್ಯಾಅ. ೨೯–೨೭); ನಾರಿಯರು ಬಳಿಕೆಸೆವ ಮಣಿಮಯದಾರತಿಯ ನಲಿದೆತ್ತಿ ಬಳಿಕುಪ್ಪಾರತಿಯನು ಸೂಸಿದರು (ಜೀವಂಚ. ೮–೨೪). [ಉಪ್ಪು$_1$ + ಆರತಿ$_1$]

**ಉಪ್ಪಾರತುಪ್ಪದೀವಿಗೆ** (ನಾ). ದೇವರಿಗೆ ಹತ್ತಿಸಿಡುವ ತುಪ್ಪದ ದೀಪ : ಕಾರ್ತಿಕ ಪೌರ್ನಮಿಯವುಪ್ಪಾರತುಪ್ಪದೀವಿಗೆ ಪ ೨ (ಎಕ. VI, ಕಡೂರು. ೪೯–೫೮; 1291). ℙ ಇದರಲ್ಲಿ ಉಪ್ಪಾರ ಮತ್ತು ತುಪ್ಪ ದೀವಿಗೆ ಇವು ಭಿನ್ನಶಬ್ದಗಳಾಗಿರಬಹುದು.

[ಉಪ್ಪಾರ$_2$ (< ಉಪಾರ) + ತುಪ್ಪ + ದೀವಿಗೆ]

**ಉಪ್ಪಾರದೀಪಮಾಲೆ** (ನಾ). = ಉಪ್ಪಾರತುಪ್ಪದೀವಿಗೆ : ದೀಪಾವಳಿಯ ಹಬ್ಬದ ದಿನ ೩ ಕಂ ಉಪ್ಪಾರದೀಪಮಾಲೆ ಮುಂತಾದ ದೀವಿಗೆಯೆಂಣೆಗೆ ಗ ೧ (ಎಕ. VI, ಕಡೂರು. ೪೯–೫೮; 1291).

[ಉಪ್ಪಾರ$_2$ (< ಉಪಾರ) + ದೀಪ + ಮಾಲೆ]

**ಉಪ್ಪಾರದೀವಿಗೆ** (ನಾ). = ಉಪ್ಪಾರತುಪ್ಪದೀವಿಗೆ : ಸಿವರಾತ್ರಿಯಲು ದೇವರುಗಳವು ವುಪ್ಪಾರದೀವಿಗೆಯ ಯೆಂಣ್ಣೆಗೆ ಪ ೨ (ಎಕ. VI, ಕಡೂರು. ೪೯–೬೦; 1291). [ಉಪ್ಪಾರ$_2$ (< ಉಪಾರ) + ದೀವಿಗೆ]

**ಉಪ್ಪಾರವೋೞೆ** (ನಾ). ಉಪ್ಪಿನ ಮೋೞೆ (ದಕ. ೩).
[ಉಪ್ಪಾರ$_1$ (< ಉಪ್ಪಾಱ) + ಮೋೞೆ$_2$]

**ಉಪ್ಪಾರಿಕೆ** (ನಾ). ೧. ಉಪ್ಪು ತಯಾರಿಸುವ ಕೆಲಸ. ೨. ಗಾರೆ ಕೆಲಸ (೩). [ಉಪ್ಪಾರ$_1$ (< ಉಪ್ಪಾಱ) + -ಇಕೆ]

**ಉಪ್ಪಾರಿತ** (ನಾ). ಒಂದು ಗಿಡದ ಹೆಸರು: ಬಜೆ, ಉಪ್ಪಾರಿತನ ಬೇರು, ಯಷ್ಟಿಮಧುಕ, ಇವಿಷ್ಟನು ಪ್ರತ್ಯೇಕ ಎರಡು ವರಹ ತೂಕವ . . . ಶ್ಲೇಷ್ಮ ಪಿತ್ತದಿಂದುಂಟಾದ ಕುಷ್ಠಪರಿಹರವಹುದು (ವೈದ್ಯಸಾ. I, ೩೯೦). [?]

**ಉಪ್ಪಾಱ, ಉಪ್ಪಾರ$_1$** (ನಾ). ೧. ಉಪ್ಪು ತಯಾರಿಸುವವನು; ಆ ಜಾತಿಗೆ ಸೇರಿದವನು: ಉಪಾ[ಪ್ಪಾ]ಱರ ಮೊಳೆಯ ರೊಕ ಸಹ ಬ್ರಹ್ಮಸಮುದ್ರಗ್ರಾಮ (ಸೌಇಇ. IV, ೨೫೫–೧೫; 1513); ಉಪ್ಪಾಱರಿಗೆ ಕೊಟ್ಟ ಉಪ್ಪಿನ ಮೋೞೆ (ಎಕ. XI, ಮೊಳಕಾ. ೯–೪; 1551). ೨. ಮಣ್ಣು ಕೆಲಸದವನು; ಗಾರೆಕೆಲಸದವನು: ಶಿಖಿ ಬ್ರಾಹ್ಮಣ . . . ಅಂಗೈ ಉಪ್ಪಾಱ, ನಖ ನಾಯಿದ, ಒಡಲು ಡೊಂಬ (ವಚಶಾ. I, ೩೬೨); ಸತ್ತ ಉಪ್ಪಾಱರೆಲ್ಲರ ತೋಱ (ಪ್ರೌಢರಾ. ೨೧–೧೭). **ಉಪ್ಪಾರ$_1$**: ೧. "ಉಪ್ಪುತಯಾರಿಸುವವನು . . . ಉಪ್ಪಾರ" (ತುಳುನಾ. ೧೭೩); ಉಪ್ಪಾರನ ಮಗನಾದರೆ ಉಪ್ಪಿಲ್ಲದೆ ಉಂಡಾನೇ (ಗಾದೆ). ೨. ನಿಜವಾಗಿ ಆ ಉಪ್ಪಾರನಿಗೆ ಶಿಕ್ಷೆಯಾಗಲು ಬೇಕು (ಹುಚ್ಚಾಟ. ೫೮).
[ದೇ. ‖ ತಮಿ. ಉಪ್ಪಾರಕಾರನ್, ಉಪ್ಪರವರ್; ತೆಲು. ಉಪ್ಪರ]

**ಉಪ್ಪಿ** (ನಾ). ಎಸಗದ ಗಿಡ; ಯಗಚಿ ಗಿಡ: ಬಿಳಿಯ ಉಪ್ಪಿಯ ಬೇರಂ ತೇದು ಛಾಯಾಶುಷ್ಕಮಂ ಮಾಡಿ . . . ಜೇನುತುಪ್ಪದಿ ಕಲಸಿ ತೆಗೆದುಕೊಂಡರೆ ಕೃತ್ರಿಮ ಮಾಣ್ಗುಂ (ವಿವೈವಿ. ೧೩೪). [ದೇ. ‖ ತೆಲು. ಉಪ್ಪಿ]

**ಉಪ್ಪಿಕ್ಕು** (ಕ್ರಿ). ೧. ಉಪ್ಪನ್ನು ಹಾಕು, —ಬಡಿಸು: ಉಪ್ಪಿಕ್ಕಿದೊಡೆ ತುಪ್ಪದ ಮೆಟ್ಟಿಡಿತೆಂಬಂತೆ ನಮ್ಮ ಕೆಮ್ಮನಿರ್ಪ ರವಿದೇಕಾರಣಂ (ಪಂಪಭಾ. ೭–೧೬ ವ). ೨. ಅನ್ನಹಾಕು: ಉಪ್ಪಿಕ್ಕಿದವನನ್ನು ಮುಪ್ಪಿನ ತನಕ ನೆನೆ (ಗಾದೆ). [ಉಪ್ಪು$_1$ + ಇಕ್ಕು]

**ಉಪ್ಪಿಗ** (ನಾ). = ಉಪ್ಪಲಿಗ: ಉಜ್ಜುಗಿಗರಂ ಗುರಿಗರುಪ್ಪಿಗರ್ ಸುಪ್ಪಾಣಿಗರ್ ಸೂಜಿವಳೆಗಾಱರು (ಮದೇಪು. ೨೮–೭). [ಉಪ್ಪು$_1$ + -ಇಗ]

**ಉಪ್ಪಿಟ್ಟು** (ನಾ). ಅಕ್ಕಿತರಿ, ರವೆ ಇವುಗಳನ್ನು ಒಗರಣೆಯಲ್ಲಿ ಹಾಕಿ ಬೇಯಿಸಿ ಮಾಡಿದ ಒಂದು ತಿನಿಸು: "ಊರಿಂದ ಬಂದಿದ್ದೀರಿ ಹಸಿದು, ಉಪ್ಪಿಟ್ಟು ಕಾಫಿ ಮಾಡಲೆ . . ." ಎಂದಳು (ಗಾಳಿಗು. ೬೯). [ಉಪ್ಪು$_1$ + ಹಿಟ್ಟು (< ಪಿಟ್ಟು$_2$)]

**ಉಪ್ಪಿಡು** (ಕ್ರಿ). = ಉಪ್ಪಿಕ್ಕು ೨: ಉಪ್ಪಿಟ್ಟವರನ್ನು ಮುಪ್ಪಿನ ತನಕ ನೆನೆ (ಗಾದೆ). [ಉಪ್ಪು$_1$ + ಇಡು$_1$]

**ಉಪ್ಪಿನಕಾಯ್** 'ಉಪ್ಪು' ಪರಾ.

**ಉಪ್ಪಿನಕಾಯಿ** 'ಉಪ್ಪು' ಪರಾ.

**ಉಪ್ಪಿನಮಾಳ** 'ಉಪ್ಪು' ಪರಾ.

**ಉಪ್ಪಿನಮಾಳೆ** 'ಉಪ್ಪು' ಪರಾ.

**ಉಪ್ಪಿನಮೇೞೆ** 'ಉಪ್ಪು' ಪರಾ.

**ಉಪ್ಪಿನಮೊಳೆ** 'ಉಪ್ಪು' ಪರಾ.

**ಉಪ್ಪಿನಮೋೞೆ** 'ಉಪ್ಪು' ಪರಾ.

**ಉಪ್ಪಿನಾಗರ** 'ಉಪ್ಪು' ಪರಾ.

**ಉಪ್ಪಿಲಿಕೆ** 'ಉಪ್ಪಲಿಗ' ನೋ.

**ಉಪ್ಪಿಲಿಕದೆಱೆ** (ನಾ). ಉಪ್ಪಾರರು ಕೊಡಬೇಕಾದ ತೆರಿಗೆ: ಹೊಗೆದೆರ್ಱೆ ಮಗ್ಗದೆರ್ಱೆ ಪಂಚಕಾರುಕ ಕಬ್ಬುನದ ಸುಂಕ ಬಿಲ್ಲಹದಿಕೆ ಬಾಲವಣ ಉಪ್ಪಲಿಕದೆರ್ಱೆ[ಱೆ] ಒಳಗಾದ (ಎಕ. XVI, ಚಿಕ್ಕನಾ. ೭೧–೨೯; 1330). [ಉಪ್ಪಿಲಿಕ (< ಉಪ್ಪಲಿಗ) + ತೆಱೆ$_3$]

**ಉಪ್ಪಿಲಿಬಳ್ಳಿ** (ನಾ). ಒಂದು ಗಿಡದ ಹೆಸರು (ವೈಔಗಿ. ೬೦–೧೨೧೪). [ಉಪ್ಪಲಿ$_0$ + ಬಳ್ಳಿ]

**ಉಪ್ಪು$_1$, ಉಪ್ಪುರ್** (ನಾ). ೧. ಆಹಾರ ಪದಾರ್ಥಗಳನ್ನು ರುಚಿಗೊಳಿಸಲು ಬಳಸುವ ಪದಾರ್ಥ; ಲವಣ: ಬೈಕಂದಿರಿದು ತಂದ ಕೂೞ್ಗೆ ನೆರಮೆಣ್ಣೆಯನಕ್ಕುಪ್ಪನಕ್ಕೆ ಕೞಿಯನಕ್ಕೆಂದಪ್ಪೊಡಮಿಕ್ಕಿಯುಮೆಱೆಯಿಸಿಯುಮೞಿಯಂ (ವಡ್ಡಾರಾ. ೪–೧೫); ಉಪ್ಪುತುಪ್ಪ (ಇಆ. XII, ೨೫೬–೧೭; 971); ಮಠದ ಮಾಣಿಗಳ್ಗೆ ಉಪ್ಪು ಎಣ್ಣೆಗೆ ಗದ್ಯಾಣಂ ಪದಿನಾಱು (ಎಕ. VII, ಶಿಕಾರಿ. ೭೪–೧೩; 1010); ಸಕ್ಕರೆಗುಪ್ಪಂ ಸರಿಮಾಳ್ಪರೇ (ಸೋಮೇಶ. ೧೦); ಸಂಪಳೆಯೊಳಗೆಯೆಳೆಯಲ್ಲ ನೀರುಳ್ಳಿಯುಪ್ಪು ಜೀರಿಗೆಯಿಕ್ಕಿ (ಸೂಪಶಾ. ೧–೭೫); ಉಪ್ಪಿನ ತಿತ್ತಿಗಳು (ಕಂನವಿ. ೧೪–೭೭); ತಾಯಿಗಿಂತ ಬಂಧುವಿಲ್ಲ ಉಪ್ಪಿಗಿಂತ ರುಚಿಯಿಲ್ಲ (ಗಾದೆ); ಉಪ್ಪು ತಿಂದವ ನೀರು ಕುಡಿದಾನು (ಗಾದೆ). 'ಅಟ್ಟುಪ್ಪು', 'ಕಲ್ಲುಪ್ಪು', 'ಕಾರುಪ್ಪು', 'ಚೌಳುಪ್ಪು', 'ಪೆಟ್ಲುಪ್ಪು', 'ಸೋರುಪ್ಪು' ಪರಾ. ೨. ಷಡ್ರಸಗಳಲ್ಲಿ ಒಂದು: ಉಪ್ಪಂ ಪುಳಿಯಂ ಕಡುಬಿಸಿದಪ್ಪುದುಮಂ ಬಯಸುತಿಪ್ಪ (ಕಲ್ಯಾಕಾ. ೨–೨೭); ಒಗರುಪ್ಪು ಸಿಹಿ ಕಹಿ ಹುಳಿ ಕಾರ (ಭರಚ. ೪–೯೩). ೩. (ಆಲಂ). ಹಂಗು; ಉಪಕಾರದ ಋಣ: ಸಮಸ್ತರು ನಂಮ ಅರಮನೆಗೆ ಉಪ್ಪಿಗೆ ಸರಿಯಾಗಿ ಭಕ್ತಿಯಿಂದಾ ನಡೆದುಕೊಂಡು (ರಾಜೇಂದ್ರ. ೧೨೪); ಈ ಉಪ್ಪಿಗೆ ನಂಬುಗೆಗೇಡನ್ನು ಅಹಿತವನ್ನು ಮನಸ್ಸಿನಲ್ಲಿಯೇ ನಡೆಯಿಸಿದಿರಾದರೂ ನಿಮ್ಮ ಗತಿಯೇನು (ಬಿಟ್ಟಅ. ೫೫–೧). △ **ಉಪ್ಪುರ್**: ೨. ನಾಲಗೆಯಿಂ ಸವಿಯೆ ಇದು ಮಧುರಂ ಇದು ಪುೞಿ ಇದುಪ್ಪುರ್ ಎಂದಿವು ಮುಂತಾಗಿ ಪುಟ್ಟುವ ತಿಳಿವು (ಚಿಕಬಿ. ೩).

ಉಪ್ಪಿನಕಾಯ್, ಉಪ್ಪಿನಕಾಯಿ = ಮಾವು ನಿಂಬೆ ಮೊದಲಾದುವುಗಳನ್ನು ಉಪ್ಪು ಕಾರದೊಡನೆ ಕೂಡಿಸಿ ನಂಜಿಕೆಗೆ (ಬಾಡಿಸಿಕೊಳ್ಳುವುದಕ್ಕೆ) ಉಪಯೋಗಿಸುವ ಪದಾರ್ಥ; ಊರುಗಾಯಿ: ಉಪ್ಪಿನಕಾಯ್ಗೆ ಗದ್ಯಾಣ ಎರಡು (ಎಕ. VII, ಶಿಕಾರಿ. ೩೪–೧೭; 1010); ಮಾಮಿಡಿ ಕರಂಜಿಕೆಯಂಬಟೆ ನಿಂಬೆ ನೆಲ್ಲಿಗಾಯ್ ಕಪ್ಪುರಗಂಪ . . . ಉಪ್ಪಿನಕಾಯ್ (ಲೀಲಾವ. ೫–೭೧); ನೆಲ್ಲಿ ಹಿಪ್ಪಲಿ ಕರಂಜಿಗೆ ಬೆಲ್ಲವುದಿ ಬೆಲ್ಲವತ್ತ ಮಾಗುಳಿ ಬಿದಿರ ಕಳಿಲೆ ಪೊಸತದುಕಂಬಟೆಯ ಕಾಯ್ಗಳಿಂದ ಸಮೆದೊಪ್ಪುವುಪ್ಪಿನಕಾಯ್ಗಳಂ ಮಾಳ್ಪುದು (ಸೂಪಶಾ. ೩–೧೭); ವುಪ್ಪಿನಕಾಯಿ ೨ಕ್ಕಂ ವುಪ್ಪಿನ ಕ್ರಯ ೭ (ಎಕ. VII, ಶಿವಮೊ. ೭೧–೬೨; 1431); ಉಪ್ಪಿನಕಾಯಿ ಹುರಿಮೆಣಸುಗಡಲೆ . . . ಮಾಱುವವರ್ ಬರುತಿರ್ದರು (ಚಬಪು. ೫೭–೪೨); ಪರಿಪರಿಯುಪ್ಪಿನಕಾಯಿ ಹಪ್ಪಳ ಸವಿವೆರಸಿದ ಶುಭ್ರ ಬಾಳಕವ . . . ತರುಣಿಯರೆಡೆಮಾಡಿದರು (ಕಂನವಿ. ೮–೮೪); ಮಾತಿಗೆ ಮೊದಲು ಗಾದೆ ಊಟಕ್ಕೆ ಮೊದಲು ಉಪ್ಪಿನಕಾಯಿ (ಗಾದೆ); ಊಟಕ್ಕಿಲ್ಲದ ಉಪ್ಪಿನಕಾಯಿ ಯಾತಕ್ಕೂ ಬೇಡ (ಗಾದೆ). ಉಪ್ಪಿನಮಾಳ = ೧. ಉಪ್ಪನ್ನು ತಯಾರಿಸುವ ಸ್ಥಳ. ೨. ಉಪ್ಪಿನ ಮಾಳದ ಮೇಲೆ ಹಾಕುವ ತೆರಿಗೆ: ಪೂರ್ವಕಾಲದ ತೆರಿಗೆಗಳು: – ಮನೆತೆರಿಗೆ, ಹುಲ್ಲುಹಣ . . . ಮಾರಿಕೆ, ಉಪ್ಪಿನ ಮಾಳ (ನಮ್ಮನು. ೨೪೩). ಉಪ್ಪಿನಮಾಳೆ = ೧. ಉಪ್ಪು ತಯಾರಿಸುವ ಉಪ್ಪುಮಣ್ಣಿನ ರಾಶಿ, —ಗುಡ್ಡೆ: ಉಪ್ಪಿನ ಮಾಳೆಗಳು (ಎಸವೈ. XXI, ೧೦). ೨. ಉಪ್ಪುಮಣ್ಣಿನ ಮೇಲೆ ಹಾಕುವ ತೆರಿಗೆ: ತಿಪ್ಪೆ ಹಳವುಪ್ಪಿನ ಮಾಳೆ (ಎಕ. IX (S), ಮಾಗಡಿ. ೮೬–೮; 1687). ಉಪ್ಪಿನಮೇೞೆ = ಉಪ್ಪಿನ ಮಾಳೆ: ೧. ಉಪ್ಪಿನಮೇೞೆ ಮೇಲೆ ನ್ಯಟ್ಟ ಕಲ್ಲು‖ (ಎಕ. X, ಗೋರೀಬಿ. ೫೬–೧೧೫; 1407). ಉಪ್ಪಿನಮೊಳೆ = ಉಪ್ಪಿನಮಾಳೆ: ೧. ಹೊಂನ ಹಳ್ಳದ ಆ ಉಪ್ಪಿನಮೊಳೆ ಅಳಿಗೆರೆಗಳಲಿ (ಎಕ. III, ಮಳವ. ೧೨೧–೧೬೫; 1474).

೨. ಉಪ್ಪಿನ ಮೋಳೆಯ ರೊಕ್ಕ ಕ್ರಯ ಕಡ್ಡಾಯ ಬಿಟ್ಟ ಬಿರಾಡ ಕಾಣಿಕೆ (ಎಕ. XI, ಜಗಳೂ. ೪೧–೩೨ ; 1526). **ಉಪ್ಪಿನಮೋಳೆ** = ಉಪ್ಪಿನ ಮಾಳೆ: ೧. [ಉಪಿ] [ಪ್ಪಿ]ನ ಮೋಳೆಯ ಚೌಡಗೊಂಡನ ಗದ್ದೆಯಲ್ಲಿ (ಸೌಇಇ. IV, ೨೫೪–೫೪ ; 1513). ೨. ಕಾಡಾರಂಭಸುವರ್ನಾದಾಯ ವಾರಕಾರು ಸೇಸೆ ಸಿದ್ಧಾಯ ಉಪ್ಪಿನಮೋಳೆ ದಣಾಯಕಸಾಮ್ಯ (ಸೌಇಇ. IX–ii, ೪೪೦–೨೪; 1419); ಕಬಿಣದ ಪೊಂಮುಚರಾದಾಯ ಹುಲ್ಲುಹಣಾ ವುಪ್ಪಿನ ಮೋಳೆ ಯಾಚಲಪ್ಪೆರು (ಮೈಆರಿ. ೧೯೩೯, ೪೨–೯೪ ; 1825) ; ಮದುವೆದೆರಿಗೆ, ಉಪ್ಪಿನಮೋಳೆ, ಕೌದಿಯ ತೆರಿಗೆ (ಮಹಾಪಂ. I, ೧೨೪) ; ತಂಬಾಕು, ಗಾಂಜ, ಷರಾಬು, ಉಪ್ಪಿನಮೋಳೆ ಆಚಾರಕಾಣಿಕೆ ಇವೇ ಮೊದಲಾಗಿ ಸರ್ಕಾರಕ್ಕೆ ಆದಾಯದ ಬಾಬುಗಳಾಗಿದ್ದವು (ಪಾಳೆಗಾ. ೫೧) ; **ಉಪ್ಪಿನಾಗರ** = ಉಪ್ಪಿನ ಗಣಿ : ಉಪ್ಪಿನಾಗರ ಗೇಣಿಯಿಂ ವರುಷ ೧ ಕಂ ಬಹ ರೊಕ್ಕ ಗ ೬ (ಸೌಇಇ. IX–ii, ೪೧೯–೨೨ ; 1365). **ಉಪ್ಪು ಸೊಪ್ಪಾಗು** = (ಆಲಂ). ಸ್ವಭಾವವನ್ನು ಬದಲಾಯಿಸು : ತಪ್ಪೆಂದು ಮುಪ್ಪುರಿಗೊಂಡು ಬಾಯಳಿದೊಳಲುಪ್ಪುಸೊಪ್ಪೇನಾದಪುದೇ (ರಾಮವಿ. ೧–೫೦). **ಉಪ್ಪುಹಾಕು** = ೧. ಉಪ್ಪನ್ನು ಒದಗಿಸು : ಸಾರಿಗೆ ಸ್ವಲ್ಪ ಉಪ್ಪುಹಾಕು (ರೂಢಿ). ೨. (ಆಲಂ). ಲೆಕ್ಕಿಸು ; ಲಕ್ಷ್ಯಮಾಡು : ರಾಜಪುತ್ರನು ಅಕಬರನ ಉಪಟಳಕ್ಕೆ ಉಪ್ಪುಹಾಕದೆ . . . ಮೆರೆಯುತ್ತಿದ್ದನು (ಭಜ್ಯೋತಿ. ೧೬೨). 'ಸೊಪ್ಪು ಹಾಕು' ಪರಾ.

[ದೇ. ‖ ತಮಿ. ಮಲ. ಉಪ್ಪು ; ಕೊಡ. ಉಪ್ಪೀ ; ತುಳು. ತೆಲು. ಉಪ್ಪು ; ಕೋಲಾ. ಸುಪ್ ; ನಾಯ್ಕಿ. ಸುಪ್ಪ್ ; ಪರ್ಜಿ. ಚುಪ್]

**ಉಪ್ಪು₂** (ನಾ). (ಉಕ) ೧. ಸ್ಥಿತಿ ; ನೆಲೆ. ೨. ತಿಳ್ಳಿ ಮೊದಲಾದ ಗೆರೆ ಆಟಗಳಲ್ಲಿ ಹೊರಿಸುವ ಸೋಲು : ರಾಮನ ಮೇಲೆ ಎರಡು ಉಪ್ಪು ಹೊತ್ತಿರುವುದರಿಂದಲೋ ಏನೋ ರಾಮನ ಮೋರೆ ಸಪ್ಪಗಾಗಿರುವುದು (ನಿರಾಭ. ೯೬) ; ಬಹಳೇ ಜಾಗ್ರತೆಯಿಂದ ಆಟವನ್ನು ಆಡಿದ್ದರಿಂದ ತಿರುಗುಪ್ಪಾಗಿ ತಿರುಗಿ ಎರಡನೆಯ ಮನೆಯವರಿಗೆ ಉಪ್ಪು ಏರಿ ಬಂದಿತ್ತು (ನಿರಾಭ. ೯೬) ; ೩. ರಾಮುಪಟ್ಟಿಯ ಆಟ (ಕಿ). ೪. ಹೆಂಗಸರು ಆಡುವ ಒಂದು ಬಗೆಯ ಆಟ (ಕಿ). [< ಉಳ್ ?]

**ಉಪ್ಪು₃** (ನಾ). (ಉಕ). ಪ್ರೀತಿ ; ಮುದ್ದು.

ಉಪ್ಪುಪ್ಪು (ದ್ವಿರುಕ್ತಿ) : ಒಬ್ಬನೇ ಮಗ, ಮೊದಲಿನಿಂದ ಅತೀ ಉಪ್ಪುಪ್ಪು ಮಾಡಿ ಬೆಳೆಸಿದ್ದಾರೆ (ರೂಢಿ). [?]

**ಉಪ್ಪುಕಂಡ** (ನಾ). = ಉಪ್ಪುಬಾಳಕ. (ದಕ). [ಉಪ್ಪು₁ + ಕಂಡ]

**ಉಪ್ಪುಕಡಲು** 'ಉಪ್ಪುಗಡಲ್' ನೋ.

**ಉಪ್ಪುಕಡಲೆ** 'ಉಪ್ಪುಗಡಲೆ' ನೋ.

**ಉಪ್ಪುಕಡ್ಡಿಆಟ** (ನಾ). (ದಕ) ಒಂದು ಬಗೆಯ ಆಟ : ಮಕ್ಕಳು ಉಪ್ಪುಕಡ್ಡಿಆಟವಾಡುತ್ತಿದ್ದಾರೆ (ರೂಢಿ).
[ಉಪ್ಪು₂ + ಕಡ್ಡಿ + ಆಟ]

**ಉಪ್ಪುಕಾಗದ** (ನಾ). ಒರಟು ಕಾಗದ ; ಮರಳು ಕಾಗದ : ಶಾಯಿ ಕರೆಯು ಹಳೆಯದಾದರೆ, ತಿಳಿನಿಂಬೆಹಣ್ಣಿನ ರಸವನ್ನು ಸವರಿ ಇದು ಒಣಗಿದ ನಂತರ ಉಪ್ಪುಕಾಗದದಿಂದ . . . ಸವರಿ ಉಜ್ಜಬೇಕು (ಗೃಹವಿ. ೧೬೫). [ಉಪ್ಪು₁ + ಕಾಗದ]

**ಉಪ್ಪುಕಾರ** (ನಾ). ಉಪ್ಪಿನ ಜೊತೆಗೆ ಸೇರಿದ ಖಾರ : ಪುರಿಗೆ ಉಪ್ಪುಕಾರ ಹಾಕಿದ್ದಾರೆ (ರೂಢಿ).

**ಉಪ್ಪುಕಾರಹಚ್ಚು** = (ಆಲಂ). ಬಣ್ಣಕಟ್ಟಿ ವರ್ಣನೆಮಾಡು : ನಿಜವಿರಲಿ ಸುಳ್ಳು ಇರಲಿ ಉಪ್ಪುಕಾರಹಚ್ಚಿ ಹೇಳುವವರನ್ನು ಕಂಡರೆ ನಿಮಗೆ ಬಹಳ ಪ್ರೀತಿಯುಂಟಾಗುತ್ತದೆ (ತುಳಸಿ. ೧೦೭).
[ಉಪ್ಪು₁ + ಕಾರ₁]

**ಉಪ್ಪುಕೊರಚ** (ನಾ). ಕೊರಚರಲ್ಲಿ ಒಂದು ಬಗೆ : ಉಪ್ಪುಕೊರಚ, ಘಟ್ಟದ ಕೊರಚ (ಎಸಮೈ. VII, ೩). [ಉಪ್ಪು₁ + ಕೊರಚ (< ಕೊಜಚ)]

**ಉಪ್ಪುಗಡಲ್**, ಉಪ್ಪುಕಡಲು (ನಾ). ಉಪ್ಪುನೀರಿನ ಸಮುದ್ರ ; ಲವಣ ಸಮುದ್ರ : ಆ ಮಿಸುಪುಪ್ಪುಗಡಲ ಮಧ್ಯದೊಳುದ್ಧಾಮತೆಯಿಂ ಪಡೆದೊಪ್ಪುವ ಜಂಬೂನಾಮದ ದೀವಿ ಕರಂ ನಯನಾನಂದಮನಿರದೊದವಿಸಿತು (ಜಯಕಾ. ೧–೩೧). **ಉಪ್ಪುಕಡಲು** : ಉಪ್ಪುಕಡಲದು ಕಪ್ಪು ಜನ ಕಪ್ಪು ಏನೆಂದೆ ತಪ್ಪು ತಪ್ಪು (ಹೊಂಗಳು. ೧೫–೧೪).
[ಉಪ್ಪು₁ + ಕಡಲ್₂]

**ಉಪ್ಪುಗಡಲೆ**, ಉಪ್ಪುಕಡಲೆ (ನಾ). ಹುರಿದು ಉಪ್ಪನ್ನು ಸವರಿದ ಕಡಲೆ : ಕಡಕೊಳವು ಉಪ್ಪುಗಡಲೆಗೆ ಪ್ರಸಿದ್ಧವಾಗಿದೆ (ರೂಢಿ). **ಉಪ್ಪುಕಡಲೆ** : ಉಪ್ಪುಕಡಲೆ ಕುರುಕಲು ರುಚಿಯಾಗಿರುತ್ತದೆ (ರೂಢಿ).
[ಉಪ್ಪು₁ + ಕಡಲೆ]

**ಉಪ್ಪುಗಡ್ಡಿ** (ನಾ). ಒಂದು ಗಿಡದ ಹೆಸರು (ಮೈಔಗಿ. ೩೬೮).
[ಉಪ್ಪು₁ + ಕಡ್ಡಿ]

**ಉಪ್ಪುಗಾಯ್**, ಉಪ್ಪುಗಾಯಿ, ಉಪ್ಪುರ್ಗಾಯ್ (ನಾ). ಮಾವು ನಿಂಬೆ ಮೊದಲಾದುವುಗಳನ್ನು ಉಪ್ಪುಕಾರದೊಡನೆ ಕೂಡಿಸಿ ನಂಜಿಕೆಗೆ (ಬಾಡಿಸಿಕೊಳ್ಳುವುದಕ್ಕೆ) ಉಪಯೋಗಿಸುವ ಪದಾರ್ಥ; ಊರುಗಾಯಿ : ಕೆಲಬಲದೊಳೊಪ್ಪೆ ತೋಜುತ್ತಮಿರೆ ಖಪ್ಪರದೊಳಗೆ ಶಾಕಪಾಕಂಗಳೆಸವುತಿರೆ (ಚನ್ನರ. ೮೨–೧೫) ; ಬಿಸಿಬಿಸಿಯೋಗರಂ ಕೆಲದ ಸೋಡಗೆ ತೆಳ್ಪೊಳುದುಪ್ಪಮುಪ್ಪುಗಾಯ್ ಮೊಸರಿಥಿದಪ್ಪ ಮಜ್ಜಿಗೆ (ಸೂಕ್ತಿಸು. ೧೦–೨೬೫) ; ತನಿವಣ್ಗಳರಸಿ ರಸಾಯನ ಸಾರ್ಗಳುಪ್ಪುಗಾಯ್ ಬಾಳುಕಂ (ಜೈಮಿಭಾ. ೬–೪೪). **ಉಪ್ಪುಗಾಯಿ** : "ಲವಣದೊಳು ಪುದಿದ ಫಲಮುಪ್ಪುಗಾಯಿಗಳೆನಿಕು" (ಮಂಗರಾ. ೬೫–೬) ; ಮಲ್ಲಿಗೆಯರಳಂತೆ ಬೆಚ್ಚೋಗರ ಮೊಸರೊಳ್ಳೆಯ ಬಹಳುಪ್ಪುಗಾಯಿ (ಮೋಹತ. ೩–೫೬) ; ಪಂಚಭಕ್ಷ್ಯ ಪಾಲ್ಮೊಸರುಪ್ಪುಗಾಯಿ ಶಾಕಗಳ (ಭೈರವೇ. ೨–೧೯೭). △ **ಉಪ್ಪುರ್ಗಾಯ್** : ನವೀನ ಸ್ವಾದುವೆತ್ತುಪ್ಪುರ್ಗಾಯ್ಗನಾಲೋಕಿಸಿ ತಂದು ಬಡ್ಡಿಸಿದರಾ ಲೋಲಾಕ್ಷಿಯರ್ (ಶಾಂತೀಶ್ವ. ೧೫–೭೦). [ಉಪ್ಪು₁ + ಕಾಯ್₄]

**ಉಪ್ಪುಗಾಯಿ** 'ಉಪ್ಪುಗಾಯ್' ನೋ.

**ಉಪ್ಪುಗಾವು** (ನಾ). ಉಪ್ಪನ್ನು ಹುರಿದು ಬಟ್ಟೆಯಲ್ಲಿ ಕಟ್ಟಿ ಕೊಡುವ ಶಾಖ : ಗಾಯಕ್ಕೆ ಉಪ್ಪುಗಾವು ಕೊಡಬೇಕು (ರೂಢಿ).
[ಉಪ್ಪು₁ + ಕಾವು₂ (< ಕಾಯ್ಪು₁)]

**ಉಪ್ಪುಗಾಳು** (ನಾ). ಉಪ್ಪು ಸವರಿದ ಕಾಳು. [ಉಪು + ಕಾಳು₁]

**ಉಪ್ಪುಣ್ಣು** (ಕ್ರಿ). ೧. ಉಪ್ಪನ್ನು ತಿನ್ನು. ೨. (ಆಲಂ). ಹಂಗಿಗೆ ಒಳಗಾಗು : ಧೊರೆಗಳುಪ್ಪುಂಡು ಮರಳಿ ಬಿದ್ದ ಸ್ವಾಮಿದ್ರೋಹಿಗೆ ರಂಗಜೈಸದು ಮರುಳೆ (ಸೌಂದಕಾ. ೭–೧೩೩). [ಉಪ್ಪು₁ + ಉಣ್ಣು (< ಉಣ್)]

**ಉಪ್ಪುನೀರ್**, ಉಪ್ಪುನೀರು (ನಾ). ಉಪ್ಪುಮಿಶ್ರವಾದ ನೀರು ; ಗಡುಸುನೀರು ; ಸವಳು ನೀರು : ವಿಷಮುಮೆನಿಪುಪ್ಪುನೀರುಂ ಕಷಾಯಿತಾಸ್ಯಂಗೆ ಮಧುರತರಮಪ್ಪಂತೆ ವಿಷಯಂಗಳೆ ನವಯೌವನ ಕಷಾಯಿತಾತ್ಮನ ಮನಕ್ಕವತಿಮಧುರಂಗಳ್ (ಕಾದಂಪೂ. ೫೩೬) ; ಉಪ್ಪುನೀರೊಳೆ ಮಾಡಿದುದು ಲವಣೋದಕಿತಮೆಂಬುದು (ಹಲಾಯು. ೫೪–೧೬೭); ಉಪ್ಪುನೀರೆ ತುಳುಕಿ ತಳ್ಪೊಯ್ಯೆ (ಪಾರಸಿ. ೧೬–೩). **ಉಪ್ಪುನೀರು** : "ಲವಣೋದಃ – ಉಪ್ಪುನೀರಿನ ಕಡಲು" (ಸಿದ್ಧಾಂತಿ. ೬೮) ; ನಿಮ್ಮ ಬಾವಿಯ ನೀರು ಉಪ್ಪುನೀರೋ ಸಿಹಿನೀರೋ ? (ರೂಢಿ).
[ಉಪ್ಪು₁ + ನೀರ್₁]

**ಉಪ್ಪುನೀರು** 'ಉಪ್ಪುನೀರ್' ನೋ.

**ಉಪ್ಪುನೆಲ** (ನಾ). ಉಪ್ಪಿನ ಅಂಶ ಹೆಚ್ಚಾಗಿರುವ ಭೂಮಿ; ಚೌಳು ಭೂಮಿ (ಹ). [ಉಪ್ಪು$_1$ + ನೆಲ]

**ಉಪ್ಪುನೇರಳೆ** (ನಾ). ಹಿಪ್ಪನೇರಳೆ: ಉಪ್ಪುನೇರಳೆ ಗಿಡಗಳು ಪುಷ್ಕಳವಾಗಿ ಬೆಳೆಯುವ ಪ್ರದೇಶದಲ್ಲಿ ರೇಷ್ಮೆಕಸುಬು . . . ಶಿಕ್ಷಣ ಕೊಡಬೇಕು (ಕ್ರಿಯಾಶಿ. ೧೬೯). [ಉಪ್ಪು$_1$ + ನೇರಳೆ (< ನೇಱಿಲ್)]

**ಉಪ್ಪುಮಡಿ** (ನಾ). (ಉಪ್ಪನ್ನು ತಯಾರಿಸಲು) ಉಪ್ಪುನೀರನ್ನು ತಡೆದು ನಿಲ್ಲಿಸುವ ಪಾತಿ (ಹ).
[ಉಪ್ಪು$_1$ + ಮಡ್ಕಿ$_2$. / ತೆಲು. ಉಪ್ಪುಮಡಿ]

**ಉಪ್ಪುಮಣ್ಣು** (ನಾ). ಉಪ್ಪಿನ ಅಂಶ ಬೆರೆತಿರುವ ಮಣ್ಣು; ಚೌಳು ಮಣ್ಣು: "ವೃಷಕಾಹ್ವಯ – ಉಪ್ಪುಮಣ್ಣು" (ಓ ಷ ಧಿ. ೧೫೮); ಉಪ್ಪುಮಣ್ಣಿನ ಗೋಡೆ ಭದ್ರವಾಗಿರುವುದಿಲ್ಲ (ರೂಢಿ).
[ಉಪ್ಪು$_1$ + ಮಣ್ಣು (< ಮಣ್)]

**ಉಪ್ಪುಮೀನು** (ನಾ). ಉಪ್ಪುಹಾಕಿ ಒಣಗಿಸಿದ ಮೀನು: ಉಪ್ಪು ಮೀನು ಬಹಳದಿನ ಕೆಡದೆ ಇರುತ್ತದೆ (ರೂಢಿ).
[ಉಪ್ಪು$_1$ + ಮೀನು (< ಮೀನ್$_3$)]

**ಉಪ್ಪುರ** 'ಉಪ್ಪರ$_2$' ನೋ.

**ಉಪ್ಪುರಗುಡಿ** 'ಉಪ್ಪರಗುಡಿ' ನೋ.

**ಉಪ್ಪುರಿ** (ನಾ). ಒಂದು ಗಿಡ: "ಲವಣಾರ್ಕ – ಉಪ್ಪುರಿ" (ಓಷಧಿ. ೧೯೨). [?]

**ಉಪ್ಪುರೇವು** (ನಾ). ಉಪ್ಪನ್ನು ತಯಾರಿಸುವ ಸ್ಥಳ (ಹ).
[ಉಪ್ಪು$_1$ + ರೇವು$_1$. / ತೆಲು. ಉಪ್ಪುರೇವು]

**ಉಪ್ಪುವಡ್ಡ** (ನಾ). ಒಡ್ಡರ ಜಾತಿಯಲ್ಲಿ ಒಂದು ಪಂಗಡ (ಎಸಮೈ. XI, ೨). [ಉಪ್ಪು$_1$ + ವಡ್ಡ$_2$ (< ಒಡ್ಡ$_1$)]

**ಉಪ್ಪುಹುಲ್ಲು** (ನಾ). ರುಚಿಯಲ್ಲಿ ಉಪ್ಪಾಗಿರುವ ಹುಲ್ಲು: "ಲೋಣೀ ತೃಣಂ – ಉಪ್ಪುಹುಲ್ಲು" (ಓಷಧಿ. ೧೯೪).
[ಉಪ್ಪು$_1$ + ಹುಲ್ಲು (< ಪುಲ್)]

**ಉಪ್ಪುಳ** (ಗು). ಅರಳಿದ; ವಿಸ್ತಾರವಾದ. 'ಉಪ್ಪುಳಗಣ್' ಪರಾ.
[ಪ್ರಾ. ಉಪ್ಫುಲ್ಲ (< ಸಂ. ಉತ್ಫುಲ್ಲ)]

**ಉಪ್ಪುಳಗಣ್** (ನಾ). ಅರಳಿದ ಕಣ್ಣು; ವಿಸ್ತಾರವಾದ ಕಣ್ಣು: ಉಪ್ಪುಳಗಣ್ ತೊಳಪ್ಪ ಕುಡುಮಿಂಚಿನ ಮಂಜರಿಯೊಳ್ ಪಳಂಚಿ ಶೋಭಿಪ್ಪಮುಖಂ (ಉದ್ಭಟ. ೩–೨). [ಉಪ್ಪುಳ + ಕಣ್]

**ಉಪ್ಪೂಡು** (ಕ್ರಿ). ಉಪ್ಪನ್ನು ಸವರು; ಉಪ್ಪು ಸೇರಿಸು: "ಹವಣಱಿದು ಮಾಂಸಮಂ ತುಂಡುಗೆಯ್ದು ಉಪ್ಪೂಡಿದವರಲ್ಲಿ ವಲ್ಲೂರವೆನಿಸಿಕ್ಕು" (ಮಂಗರಾ. ೬೫–೫). [ಉಪ್ಪು$_1$ + ಊಡು$_1$]

**ಉಪ್ಪೆಗಚಿ, ಉಪ್ಪಗಚಿ, ಉಪ್ಪಚ್ಚಿ** (ನಾ). ಉಪ್ಪಿಗಿಡ: ಅಲ್ಲಿ ಕಂಡದ್ದು ಉಪ್ಪೆಗಚಿಯ ಮೆಳೆ, ದತ್ತೂರಿಯ ವನ (ಅಲೆಮ. ೨೧೨).
**ಉಪ್ಪಗಚಿ**: (ಹ). **ಉಪ್ಪಚ್ಚಿ**: (ಹ). [ಉಪ್ಪು$_1$ + ಎಗಚಿ]

**ಉಪ್ಪೆಸರ್** (ನಾ). ಹುಳಿ ಕಾರವಿಲ್ಲದ ಉಪ್ಪು ಮಾತ್ರ ಹಾಕಿದ ಸಾರು; ಉಪ್ಪು ಬೆರಸಿದ ಕಟ್ಟು: ಸವಿಯ ಸೊರ್ಕೇಱಿ ಸೊದೆಯನುಪ್ಪೆಸರ್ಗೆತ್ತು ಸೊದೆಯುಣಿಗಳಂ ಗಣಿಸದಿರ್ಪಂ (ಚಿಕವಂ. ೧೧೬–೩).
[ಉಪ್ಪು$_1$ + ಎಸರ್]

**ಉಪ್ಪೇರಿ** (ನಾ). ಆಲೂಗೆಡ್ಡೆ, ಬಾಳೆಕಾಯಿ ಮುಂತಾದ ತರಕಾರಿಗಳನ್ನು ತೆಳ್ಳಗೆ ಬಿಲ್ಲೆಯಾಗಿ ಹೆಚ್ಚಿ ಎಣ್ಣೆಯಲ್ಲಿ ಕರಿದು ಉಪ್ಪು ಕಾರ ಹಚ್ಚಿ ಮಾಡುವ ಒಂದು ತಿನಿಸು: ಆಲೂಗೆಡ್ಡೆ ಉಪ್ಪೇರಿ, ಬಿಸ್ಕತ್ತು (ದಿಲ್ಲೀಪ. ೬); ಉಪ್ಪೇರಿ, ವಾಂಗಿಭಾತು (ರೂಪಸಂ. ೧೬).
[ಉಪ್ಪು$_1$ + ?]

**ಉಪ್ಪೊಂಗು** (ಕ್ರಿ). ಉಬ್ಬಿಹಿಗ್ಗು; ಉಕ್ಕೇರು: ಸಮುದ್ರನೊರ್ಮೆಯೆ ತಿಂಗಳುದಿಸಲ್ ಪೆರ್ಮೆಯಿಂದುಪ್ಪೊಂಗುವನೆನಲ್ (ಬಾಲಭಾ. ೧–೩); ಅಂಗಪತಿಯದನು ಕಂಡುಪ್ಪೊಂಗುವ ಹರುಷವನು ತಳೆಯುತೆ (ಬಾಲಭಾ. ೬–೬೫). [← ತೆಲು. ಉಪ್ಪೊಂಗು]

**ಉಬಂಯ** (ನಾ). = ಉಭಯ: ಇವರೆ ಉಬಯದಿಂ ಬಲಿದ ಸೀನಬೋವನು ಬಾನೋಜ (ಎಕ. IX (S), ಹೊಸಕೋ. ೨೧೨–೧೮; 17 ನೆಯ ಶತ). [< ಸಂ. ಉಭಯ]

**ಉಬಲು** (ನಾ). ಒಂದುಬಗೆಯ ಗಿಡ: ಉಬಲು, ಹೆಸ್ಸರೆ, ಕೊಲೆ ಹಲಸು, ಅನವು (ಮೈಔಗಿ. ೫೬–೧೧೨೩). [?]

**ಉಬಿಕು** (ಕ್ರಿ). ಉಬ್ಬು; ಹೆಚ್ಚು; ಉಕ್ಕು (ಹ).
[ದೇ. ‖ ತಮಿ. ಉಬುಕ್ಕು; ತೆಲು. ಉಬುಕು]

**ಉಬುಬು** (ಅ). ಸಂತೋಷ, ಸಂಭ್ರಮ, ದಿಟ್ಟತನದ ಭಾವಗಳನ್ನು ಸೂಚಿಸುವ ಅವ್ಯಯ: ಬಿಡದೋಡೆ ಕಂಡು ಶಬರಂ ಕಡುಮುಳಿದಱಿಯಟ್ಟಿ ತಿರುಗಿ ತಿರುಗುತ್ತುಂ ಸಂಗಡಿಸಿ ಪಱಿದುಬುಬೆನುತ್ತುಂ (ಗಿರಿಕ. ೧–೮೬); ಎನ್ನೊಡೆಯರೆಯ್ತಪ್ಪ ಪುಣ್ಯವಂ ಕಂಡೆನೇ ಎನ್ನೊಡೆಯರಿಂತಪ್ಪ ಬಾಳ್ಕೆಯಂ ಕಂಡೆನೇ ಉಬುಬುಬು ಎನಗಾರು ಸರಿಯೆಂದು ಕೊರ್ಬುತಂ (ವಿಣಾರ. ೧೧೯); ಎಲೆಲೆಲೆಲೆಲೇ ಹಂದಿಯನುವಾದುದುಬುಬುಬೆಂದುಲಿದು ನಾಯ್ಗಳುವೆರಸಿ ಮುಕ್ಕುಱಿಕ್ಕಲು ಮೆಲ್ಲನೊಳೆದುಬ್ಬಿ ಫುಟನೆಗೆದು ಗಜಱಿ ಗರ್ಜಿಸಿ (ಹಚಕಾ. ೬–೭); ನಿಂದುಬುಬು ಶೋಯೆನುತ್ತೆಡದ ಕರದಿಂ ಲಿಂಗಮಸ್ತಕದ ಶಿಖಿಯ ಪಿಡಿದು ಕಂಧರಕೆ ದಕ್ಷಿಣದ ಹಸ್ತದಲಗಂ ಜಡಿವುತೊಂದಿಸುತ ಬೊಬ್ಬಿಱಿದು (ವೀಶೈವ. ४–८–೧೦).
[?]

**ಉಬ್ಬಚ್ಚು** (ನಾ). ಉಬ್ಬಿ ಕಾಣುವಂತೆ ರಚಿಸಿರುವ ಅಚ್ಚು: "ಉಬ್ಬು ಚಿತ್ರ ಕೆತ್ತು, ಉಬ್ಬಚ್ಚು ಮಾಡು" (Emboss. ಇಂಕನ್ನಿ).
[ಉಬ್ಬು$_2$ (< ಉರ್ವು$_2$) + ಅಚ್ಚು$_3$]

**ಉಬ್ಬಟೆ** 'ಉರ್ಬಟೆ' ನೋ.

**ಉಬ್ಬಟೆಗಾಣ್** (ಕ್ರಿ). ಉಬ್ಬಟೆಯನ್ನು ಕಾಣು; ಅತಿಶಯವನ್ನು ಕಾಣು: ತುಟಿ ಮಿಡುಕದಿರಲವನಱಿದೂ ಪಟುತರಕಾಯ್ದುನುಬ್ಬಟೆಗಂಡು ಕಣ್ಮುಚ್ಚಿ ವಿಟ ನುಡಿಸಿದ ತನ್ನಿನಿಯಳಾ (ಭೈರವೇ. ೨–೧೧೦).
[ಉಬ್ಬಟೆ (< ಉರ್ಬಟೆ) + ಕಾಣ್]

**ಉಬ್ಬಡಿಗ** 'ಉಬ್ಬದಿಗ' ನೋ.

**ಉಬ್ಬಣ$_1$** (ನಾ). ೧. ಬಾಗಿಲನ್ನು ಭದ್ರಪಡಿಸಲು ಹಾಕುವ ಮರದ ತುಂಡು; ಅಗಳಿ; "ಲಾಳವಿಂಡಿಗೆ" (ಷಟ್ಪನಿ). ೨. ಒಂದು ಬಗೆಯ ಮೊನಚಾದ ಆಯುಧ (?): ಹರಿಗೆ ಕತ್ತಿ ಕರವಾಳು ಸುರಗಿ ಬಿಲ್ಲು ಹಿರಿಯುಬ್ಬಣ ಹಲಗೆಯನು ಭರದೆ ಪಿಡಿದು ಪರಿವಾರ ನಡೆದುದಾ ವರುಣನ ಪುರದತ್ತಲಾಗಿ (ಅಂಜಚ. ೬–೬೨); ಗಣನೆಗೈದದ ಹೆಗಲ ಹಿರಿಯುಬ್ಬಣದ ಕನಕದ ಝುಗೆಯ ತಲೆಗಡ್ಡಣಿಯ ನೇಣಿನ ಹೊಗರ ಮೋಱಿಯ ಕೆಂಪಿನಾಲಿಗಳ (ಕುವ್ಯಾಭೀ. ೩–೧೦); ಉಬ್ಬಣ, ಕಬ್ಬಿ ಕೋಲು, ಚಕ್ರ, ಚಂಡು, ಪೋತಿ, ಚಲ್ಲೆಹ, ಬಲ್ಲೆಹ . . . ಜವದಾಡೆಗಳೆಂಬ ಬತ್ತೀಸಾಯುಧಂಗಳಿಂ (ವಿವೇಕ. ೨೬೨); ಕೈಮೆಗಳ ಮೋಡಾ ಮೋಡಿಯುಬ್ಬಣದ ಲಲಿತ ಚಿತ್ರದ ಚದುರಭಟರವ್ವಳಿಸಿ ಹೊಯ್ದಾಡಿದರು (ಕುವ್ಯಾದ್ರೋ. ೧೪–೮); ಮಸಗಿದಂಬಿನಲುಬ್ಬಣದ ಮೊನೆ ಮಿಸುಕಿದೆಡೆಯಲಿ ಸುರಗಿ ಸುಳಿದೆಬ್ಬಿಸಿದ ತಾಣದಲಂಬು ಲಂಬಿಸೆ ಹೊಕ್ಕಹೊದಱಿನಲಿ (ತೊರರಾ. ೬–೧೦–೮); ಹಿರಿಯುಬ್ಬಣವ ಜಳಪಿಸಿ ಮೀಸೆಯ ಮೇಲೆ ಬೆರಳಿಡುತತುಳ ಪೌರುಷದ ಬಿರುದಿನಗ್ಗಳಿಕೆಗಳನ್ನು ಪೊಗಳಿಸಿಕೊಳ್ವ ದೊರೆಯಾವನು (ಕಂನವಿ. ೧೩–೩೮). [?]

**ಉಬ್ಬಣ್ಣ** (ನಾ). ಅತಿಶಯ; ಆಧಿಕ್ಯ; ಹೆಚ್ಚಳ: ಗಿಳಿಗಳಿಂ ಕೂಡಿರ್ಪ ಸಾಲ್ವಂಗಳುಬ್ಬಣದಿಂದಂ ಘನಶಾಂತಿಯಂ ತಳೆದು ಪಂಪಾಕ್ಷೇತ್ರಮಾರಾಜಿಕುಂ (ಉದ್ಭಟ. ೩-೩೫); ಬಾಜಿಪ ತೂರ್ಯದ ಸಂಭ್ರಮಂಗಳಿಂ ತೊಟ್ಟಿಡೆಯಾಡುವೆಯ್ದಿಯರ ಪಾವನ ಮಂಗಳದೊಪ್ಪುಗೂಡಿ ನೇರ್ಪಟ್ಟಿದು ನೋಟಕರ್ಗೊಸಗೆಯುಬ್ಬಣಮುಪ್ಪಿನಮಾವಿವಾಹದೊಳ್ (ಸೂಕ್ತಿಸು. ೬-೨೨); ರಣವನಭಿವರ್ಣಿಸುವೊಡರಿದುಬ್ಬಣದ ಬೈಗುಳ ಕೇಳಿ ಬಂದುದು (ನಿಭಾಗ. ೮-೧೩-೩೧). [ಉಬ್ಬು$_1$ (< ಉರ್ವು$_1$) + -ವಣ]

**ಉಬ್ಬಣಿಸು** (ಕ್ರಿ). ಅತಿಶಯವಾಗು; ತೀವ್ರವಾಗು: ಉಬ್ಬಲುರವಣಿಗೆಗಳು ಉಬ್ಬಣಿಸಿ ಬಂದರೂ ಯಾವುದೋ ಶಕ್ತಿ ಅನಂತನನ್ನು ಮುಂದೆ ನಡೆಸುತ್ತಿತ್ತು (ಜೀದಾನ. ೨೯). [ಉಬ್ಬಣ್ಣ + -ಇಸು$_3$]

**ಉಬ್ಬದಿಗ, ಉಬ್ಬಡಿಗ, ಉಬ್ಬರಿಗ** (ನಾ). ಆಧಿಕ್ಯ; ಅತಿಶಯ: ಬೇಟದುಬ್ಬದಿಗಮನಾಂತ ನಲ್ಲಳ ಮುಖಾಂಬುಜಮಂ ನಡೆನೋಡಿ ನೋಡಿ ಸಾಯದೆ ಬರ್ದುಕಾಡಿದಂ (ಆವಿಪು. ೧೨-೨೬); ಅಲಂಪಿನುಬ್ಬದಿಗಮನಾಲತಾಂಗಿಗೆ ನೃಪಂ ಪಡೆದಂ ನವ ಸಂಪ್ರಯೋಗದೊಳ್ (ಕಾವ್ಯಾವ. ೮೦೦). **ಉಬ್ಬಡಿಗ**: "ಉಬ್ಬಡಿಗಂ (ಉಬ್ಬರಿಗಂ)-ಪಿರಿದು" (ಶಮುದ. ಪಂ೨); ಪಡಿದೆಱೆವಂದದಿಂದಮೆರ್ದೆಯುಂ ತೆಱೆದತ್ತು ಪೊದಟ್ದ ಸಂಕೆಯಿಂ ನಡುಕಮುಮಾಗಳುಬ್ಬಡಿಗ [ಪಾಠಾಂ. ದಿಗ]ಮಾದುದು ಸಾಧ್ವಸದಿಂ ಬೆಮರ್ ಬೆಮರ್ವೆಡೆಗಳಿನುಣ್ಮಿ ಪೊಣ್ಮಿದುದು (ಪಂಪಭಾ. ೫-೧೫). **ಉಬ್ಬರಿಗ**: "ಉಬ್ಬಡಿಗಂ (ಉಬ್ಬರಿಗಂ)-ಪಿರಿದು" (ಶಮುದ. ಪಂ. ೨). ☞ ಇದರ ಸರಿಯಾದ ರೂಪ ಉಬ್ಬದಿಗ. ಉಳಿದುವು ಪಾಠಾಂತರಗಳು. [?]

**ಉಬ್ಬರ** 'ಉರ್ವರ' ನೋ.

**ಉಬ್ಬರಂ** (ಅ). ಅತಿಶಯವಾಗಿ; ಬಹಳವಾಗಿ. 'ಉಬ್ಬರಂಬರಿ', 'ಉಬ್ಬರಮುರಿ' ಪರಾ. [< ಉಬ್ಬರ]

**ಉಬ್ಬರಂಬರಿ, ಉಬ್ಬರವರಿ** (ಕ್ರಿ). ಉಕ್ಕಿ ಹರಿ; ಪ್ರವಾಹವಾಗಿ ಹರಿ: ಬನದೊಳಗುಬ್ಬರಂಬರಿವ [ಪಾಠಾಂ. ಪರಿವ] ಶಾಂತರಸಾಮೃತಮೆಯ್ದೆ ತಣ್ಣನೆ ತಣಿದಂತೆ (ಚಂದ್ರಪು. ೨-೧೦೨); ನವೀನ ನಿಜಭಕ್ತಿತರಂಗಿಣಿ ಮಿಱುತುಬ್ಬರಂಬರಿಯುತುಂ (ಪಂಪಾಶ. ೬). **ಉಬ್ಬರವರಿ**: ಉಬ್ಬರವರಿದ ಸೊಬಗಿಂಗೆ ಸಂತೋಷಂಬಟ್ಟು (ಅರ್ಥನೇ. ೫-೨). [ಉಬ್ಬರ (< ಉರ್ವರ) + ಪರಿ$_2$]

**ಉಬ್ಬರಗಹಳೆ** (ನಾ). ಗಟ್ಟಿಯಾಗಿ ಧ್ವನಿಮಾಡುವ ಕಹಳೆ; ದೊಡ್ಡ ಕಹಳೆ: ಹರಿಸುತ ಬಿರಿದಿನುಬ್ಬರಗಹಳೆಯಂ ಪಿಡಿಸಿ ಹರಿನಾದವಂ ಮಾಡಿಕೊಳುತ (ತುರಂಗ. ೩೬-೧೩). [ಉಬ್ಬರ (< ಉರ್ವರ) + ಕಹಳೆ]

**ಉಬ್ಬರಗಿಡಿ** (ನಾ). ಹಾರುವ ಕಿಡಿ: ಅಲಗಿನುಬ್ಬರಗಿಡಿಯ ಹಬ್ಬುಗೆ ಥಳಥಳಿಸಿ ಸೈಗಱೆದುದ್ಯೆ (ಕುವ್ಯಾಭೀ. ೨-೬). [ಉಬ್ಬರ (< ಉರ್ವರ) + ಕಿಡಿ]

**ಉಬ್ಬರಣೆ** (ನಾ). ಸಂಭ್ರಮ; ಕೋಲಾಹಲ: ಪುರವ ಹೊಱವಂಟವರು ಬರಲು[ಪಾಠಾಂ. ಲ]ಬ್ಬರಣೆಯಾಗಲು ಬಳಿಕ ಸಾತ್ಯಕಿ ಹರಿಯ ನೇಮವನಱಿದು ಕಳುಹಿದ ರಾಮಗೂಳಿಗವ (ಕುವ್ಯಾಅ. ಓರಿಇ. ೩೬-೯೨). [ಉಬ್ಬರ (< ಉರ್ವರ) + -ಅಣೆ$_4$]

**ಉಬ್ಬರಬವರ** (ನಾ). ಅತಿಶಯವಾದ ಯುದ್ಧ; ದೊಡ್ಡ ಸಮರ: ಅರಿಭಟರು ಪವನಜನನಾನುತ ಮರಳುತುಬ್ಬರಬವರವನು ತಂದರನೆಲೆಗೆ ಹಾಯ್ಕಿದರು (ಕುವ್ಯಾದ್ರೋ. ೧೩-೧೯). [ಉಬ್ಬರ(< ಉರ್ವರ)+ಬವರ$_1$]

**ಉಬ್ಬರಮುರಿ** (ಕ್ರಿ). ಪ್ರಬಲವಾಗಿ ಉರಿ; ವಿಶೇಷವಾಗಿ ತೋರು; ಹೆಚ್ಚಿನ ಗರ್ವದಿಂದ ಕೂಡಿರು: ಬಿರುದರನದಟನೊಳುಬ್ಬರಮುರಿವರ ನಾಯ್ದಱಿಸಿ ಕೊಂಡ್ಗುವರಿಗನ ಕಣೆಗಳ್ (ಪಂಪಭಾ. ೧೨-೧೧೪). [ಉಬ್ಬರ (< ಉರ್ವರ) + ಉರಿ$_1$]

**ಉಬ್ಬರವರಿ** 'ಉಬ್ಬರಂಬರಿ' ನೋ.

**ಉಬ್ಬರವಾತು** (ನಾ). ಆಡಂಬರದ ಮಾತು; ಗರ್ವದಿಂದ ಕೂಡಿದ ನುಡಿ: ರಕ್ಕಸರಾಯ ಮಿಾಸೆಗಳ ಮುಱಿದು ನಿಂದಿರಲಿಂದ್ರಜಿತು ಬಲು ಬಿರುದಿನುಬ್ಬರವಾತಿನಲಿ ಕಿಡಿ ಸುರಿಯೆ (ತೊರರಾ. ೫-೬-೪). [ಉಬ್ಬರ (< ಉರ್ವರ) + ಮಾತು$_1$]

**ಉಬ್ಬರವಿಳಿತ** (ನಾ). ಏರಿಕೆ ಮತ್ತು ಇಳಿಕೆ; ಹಿಗ್ಗು ಕುಗ್ಗು; ಸಮುದ್ರದ ನೀರು ಪರ್ವಕಾಲದಲ್ಲಿ ಮೇಲಕ್ಕೆ ಏರಿ ತಗ್ಗುವಿಕೆ: ಸಮುದ್ರದ ಮೇಲ್ಮಟ್ಟ ದಿನಕ್ಕೆರಡಾವೃತ್ತಿ ಉಬ್ಬುತ್ತಲೂ ಇಳಿಯುತ್ತಲೂ ಇರುವುದನ್ನು ನೋಡಿರಬಹುದು. ಹೀಗೆ ಉಬ್ಬಿ ಇಳಿಯುವುದಕ್ಕೆ ಉಬ್ಬರವಿಳಿತಗಳು ಎಂದು ಹೆಸರು (ಭೂವಿವ. I, ೧೦೧). [ಉಬ್ಬರ (< ಉರ್ವರ) + ಇಳಿತ]

**ಉಬ್ಬರಿ** (ಕ್ರಿ). ಉಬ್ಬಿ ಹರಿ; ಉಕ್ಕಿ ಹರಿ: ಸೇನೆಯ ಸೂಡಿ ತಂದಿಳುಹಿದನು ನಾಯಕವಾಡಿಗಳು ಸಹಿತುಬ್ಬರಿವ ಸಾಗರದ ತೀರದಲಿ (ತೊರರಾ. ೪-೧೧-೨೧). [ಉಬ್ಬು$_1$ (< ಉರ್ವು$_1$) + ಪರಿ$_3$]

**ಉಬ್ಬರಿಕೆ** (ನಾ). ಹೆಚ್ಚಳ; ಅತಿಶಯ; ಉಬ್ಬುವಿಕೆ: ಖರಕೋಪಾದಿ ಕಷಾಯದುಬ್ಬರಿಕೆಯಿಂ ಚಾರಿತ್ರಮೋಹಾಸ್ರವಂ ದೊರೆಕೊಳ್ಗುಂ (ಸುಕುಮಾ. ೮-೧೯). [ಉಬ್ಬರ (< ಉರ್ವರ) + -ಇಕೆ]

**ಉಬ್ಬರಿಗ** 'ಉಬ್ಬದಿಗ' ನೋ.

**ಉಬ್ಬರಿಸು** (ಕ್ರಿ). ೧. ದೊಡ್ಡದಾಗು; ಬಾತುಕೊಳ್ಳು; ಊದಿಕೊಳ್ಳು; ಮುಂದಕ್ಕೆ ಚಾಚು: ಪೊಟ್ಟೆಯುಬ್ಬರಿಸುಗುಂ ಕೆಮ್ಮುಗುಂ ತೇಂಕುಗುಂ (ಬಾಲಚಿ. ೧೨೭-೪); ಹೊಟ್ಟೆಯುಬ್ಬರಿಸುತ್ತಮಿದೆ ಮುಪ್ಪಿನಲಿ ಬೊಪ್ಪಂಗೆ (ಬಸವು. ೧೫-೨೨); ಕಡಲ ತಾಯ್ಮಳಲುಬ್ಬರಿಸಿ ಧರೆ ನಡುಗಿದುದು (ಸಾಳ್ವಭಾ. ೮-೬೯); ಹೊಟ್ಟೆಯುಬ್ಬರಿಸಿತ್ತು (ದೀಪದ. ೨೬). ೨. ಪ್ರಕಟವಾಗು; ಹೊರಬೀಳು; ಎದ್ದು ಕಾಣಿಸಿಕೊಳ್ಳು: ಮನ್ಯುವೇಗದೊಳ್ ಬೀಗಿ ಬಿರಿವಂತೆ ಗಗ್ಗರಿಪ ಕೊರಲೊಳುಬ್ಬರಿಸಿ ಪೊರೆದ ಸೆರೆಗಳೊಳಂ (ವರ್ಧಪು. ೯-೬೦ ವ); ಉರಿಯ ಜೂಣೆಯುಲುಸುರ ಹೊಗೆಯುಬ್ಬರಿಸುತಿದೆ (ಕುವ್ಯಾಕ. ೧೨-೧೫); ಝುಮ್ಮೆಂದು ಸಮಿಧಾವಳಿಗಳುಬ್ಬರಿಸಿದವು ಛಟ ಛಟ ವಿನಾದದಲಿ (ತೊರರಾ. ೧-೭-೪೯). ೩. ಅತಿಶಯವಾಗು; ಬಹಳವಾಗು; ತುಂಬಿಬರು: "ಉಬ್ಬರಿಸು – ಪೂರಣೇ (ಊ)" (ಶಮುಧಾ); ಸುರಿವಶ್ರುಜಲಮುಬ್ಬರಿಸಿ ಪೊನಲ್ ಪೊನಲನಟ್ಟಿ ಜನನುತೆಗಾಗಳ್ (ಪಂಪಭಾ. ೯-೭೪); ಪಿರಿದುಂ ಹರ್ಷಂ ಧರೆಗುಬ್ಬರಿಸಿರೆ ಸಿರಿಗರಸನೆನಿಸಿದ್ಯೆ ನೀಂ (ಲೀಲಾವ. ೪-೪೬); ಚಿತ್ತದಾವೇಶಮುಬ್ಬರಿಸಿದುದು (ಚಿಬಪು. ೪೨-೩೫). ೪. ಗರ್ವಿಸು; ಉಬ್ಬು: ಸುರಲೋಕಂ ಮರ್ತ್ಯಲೋಕಂ ಫಣಿಪತಿಭುವನಂ ಪೂಜ್ಯಮೆಮ್ಮಿಂದಮೆಂಬಂತಿರೆ ಮುನ್ನಾರ್ ನೋಂತರೆಂದುಬ್ಬರಿಸಿ ಕೊನೆದು (ಧರ್ಮಾನ್ಯ. ೮-೨೦೦); ಇವನುಬ್ಬರಿಸಿ ನುಡಿದರೆ ನೊರಜ ಕೊಲುವರೆ ಕೈದುವೇಕೆಂದ (ಕುವ್ಯಾಭೀ. ೧-೪೧). ೫. ಹಿಗ್ಗು; ಸಂಭ್ರಮಿಸು; ಆತುರಗೊಳ್ಳು; ಉತ್ಸಾಹಗೊಳ್ಳು: ತಿರುನೀಲಕಂಠರುಬ್ಬರಿಸುತ್ತೆ [ಪಾಠಾಂ. ಉತ್ಸವದಿಂದೆ]ಪರಿತಂದು (ತಿರುರ. ದೇ. ೨೫-೨೦); ಎರಡು ಕಂಗಳನಾಗಳಂತುಬ್ಬರಿಸಿ ಕಳಚಿ ಬಳಿಕ್ಕವಳುಕದೆ (ಬಸವು. ೪೫-೪೯); ಉಬ್ಬರಿಸಿ ಕೈದೋಱಿದನು ಕಲಿ ಪವಮಾನಸುತ (ಕುವ್ಯಾದ್ರೋ. ೨-೭೫). ೬. ಅಸಮಾಧಾನಗೊಳ್ಳು; ಅಸೂಯೆ ಪಡು; ಮುಖಗಂಟುಹಾಕು: ಉಬ್ಬರಿಸಿ ಕಜ್ಜದ ತುದಿಯನಱಿಯದೆ ನುಡಿವುದಿದು ನಿನಗೆ ಹಿರಿಯತನವೇ (ಬಸವು. ೨೮-೩೩); ಒಬ್ಬಳಿರದೆ ಮತ್ತೊಬ್ಬರ ನಿಳಯಕೊಬ್ಬಳೆ ಪೋಗದೆ ಪತಿ ನಲಿಯೆ ಉಬ್ಬರಿಸದೆ ಕಡುಮುಬ್ಬಿನೊಳಾಡದೆ (ಜನವ. ೧೦-೭೩). [ಉಬ್ಬರ (< ಉರ್ವರ) + -ಇಸು$_3$]

**ಉಬ್ಬಲ** (ನಾ). ಕೆಸರು; ಬದಿ: ಅರ್ಭಾಟವಾಗಿದ್ದ ಸಂಸಾರವೆಂದೆಂಬೊ ಉಬ್ಬಲದೊಳು ಬಿದ್ದು ಬಳಲಿ ತೊಳಲಿ ಉಬ್ಬಸವನೆ ಬಟ್ಟು ಕಡಿಗೇಳು ವನ್ನ (ಮೋಕ್ಷದೀ. ೧೯೯–೧). [?. / ತೆಲು. ಉಬ್ಬಲಿ = ಕೆಸರು]

**ಉಬ್ಬಲು**$_1$, ಊಬಲು (ನಾ). ೧. ಹೊಟ್ಟು; ಸಿಪ್ಪೆ; ಉಮಿ: ಭತ್ತದ ಉಬ್ಬಲನ್ನು ತಲೆದಿಂಬಿಗೆ ಉಪಯೋಗಿಸುತ್ತಾರೆ (ರೂಢಿ). ೨. (ತಾನಾಗಿ ಉದುರಿದ) ಕೂದಲು ಅಥವಾ ತುಪ್ಪಟ (ಈ). **ಊಬಲು**: ೧. (ಜಾನಕೋ. ೨೨). [?]

**ಉಬ್ಬಲು**$_2$ (ನಾ). ಗಳುಗಳಿಂದ ಮಾಡಿದ ಬಾಗಿಲು: ನಿನ್ನ ತಲೆ ಒಡೆಯುತ್ತೇನೆ ಎಂದವರು ಬಡಿಗೆ ಎತ್ತಿಕೊಂಡು ಬರಲು ಉಬ್ಬಲಿನತ್ತ ಧಾವಿಸಿದರು (ಮಸಕೂ. ೨೯). [?]

**ಉಬ್ಬಲು**$_3$ (ನಾ). ಅತಿಶಯವಾಗುವುದು; ಹೆಚ್ಚಾಗುವುದು: ಉಬ್ಬಲುರವಣಿಗೆಗಳು ಉಬ್ಬಣಿಸಿ ಬಂದರೂ ಯಾವುದೋ ಶಕ್ತಿ ಅನಂತ ನನ್ನು ಮುಂದೆ ನಡಸುತ್ತಿತ್ತು (ಜೀದಾನ. ೨೯).
[ಉಬ್ಬು$_1$ (< ಉರ್ಬು$_1$) + –ಅಲ್]

**ಉಬ್ಬಸ** (ನಾ). ೧. ಕಷ್ಟ; ಸಂಕಟ; ಹಿಂಸೆ: ಪರಪಕ್ಷಮುಳ್ಳನಂ ತನಗಿರ ವುಬ್ಬಸಮುದಜೀನಜೀವುದು (ಕವಿರಾ. ೩–೧೫೦); ಮುನ್ನಿನ ಪೋದಬಂದೆಡೆ ಗಳೊಳ್ ಸಾವೆಯ್ದೆ ಬರ್ಪನ್ನಮುಬ್ಬಸದೊಳ್ ಬಿರ್ದನಿದಕ್ಕು ಪಾಯ ಮಣಮಿಲ್ಲ (ಬಂಹರಿ. ೪–೨೬); ನಿನ್ನುಸುರಿಗುಬ್ಬಸ ಮಾಡೆನಂಘ್ರಿಗಳಾಣೆ (ಕುವ್ಯಾಆ. ೨೦–೨೬); ಅಕೆಯುಗ್ರತಪಸ್ಸಿನಿಂದ ಮಹಾಕಠೋರಜ್ವಾಲೆ ನೆಗೆಯಲು ಪಿನಾಕಿಗಳಿಗುಬ್ಬಸವಾಯ್ತು (ದೇವೀಮ. ೨–೮). ೨. ಮೇಲು ಸಿರು; ಉಸಿರಾಡಲು ಕಷ್ಟವಾದ ಸ್ಥಿತಿ; ಶ್ವಾಸದ ಬಿಕ್ಕಟ್ಟು: ಎಚ್ಚರ್ತುರ್ಬಸಮುಪ್ಪುದತ್ತೆಯತ್ತತ್ತ ಸಾರಿಮೆಂದು (ಧರ್ಮಾಮೃ. ೨–೨೦೬); ಒರ್ವನುಬ್ಬಸದಿ ಹರಿದು ಬಂದು ಅಸವಸದಿ ಸಾಷ್ಟಾಂಗವೆಣಗಿ (ಸಮ್ಯಕೌ. ೨–೬). ೩. ಗೂರಲುರೋಗ; ದಮ್ಮು; ನೇವಸ: ಗಂಧಕವ ಜೇನುತುಪ್ಪವೆರಸಿ ಸೇವಿಸಲು ಕಾಸ, ಶ್ವಾಸ, ಪೀನಸ, ಉಬ್ಬಸ . . . ಇವೆಲ್ಲವನೂ ಪರಿಹರಿಸುವುದು (ವೈದ್ಯಸಾ. II, ೧೫೧); ಅಪ್ಪನಿಗೆ ಆಗಲೇ ಉಬ್ಬಸವು ಪ್ರಾರಂಭವಾಗಿದ್ದಿತು (ಮುನಿಮಾ. ೨೯). ೪. ಅಸಮಾಧಾನ; ಅಸೂಯೆ; ಭಯದ ಭಾವ: ಕಸವೇಂ ಕಸವರಮೇನುಬ್ಬ ಸಮಂ ಬಸಮಲ್ಲದಿರ್ದು ಮಾಡುವರೆಲ್ಲಂ (ಕವಿರಾ. ೩–೧೬೭); ಅಸದೃಶ ತಪಮಂ ಮನದುಬ್ಬಸದಿಂದೆ ಭವಾನಿ ಮಾಣ್ದು (ಗಿರಿಕ. ೯–೧೦೮); ಒಬ್ಬ ಪುರುಷನೊಬ್ಬ ಸತಿಯೊಳಿಪ್ಪಂತಿಹನುಬ್ಬಸವಿಲ್ಲದೆಲ್ಲರೊಳು (ಭರಚ. ೫–೯೬).
[ದೇ. ‖ ತಮಿ. ಉಬ್ಬಸ; ಮಲ. ಉಮ್ಮಿಟ್ಟ; ತುಳು. ಉಬ್ಬಸ, ಉಬ್ಬೆಸ; ತೆಲು. ಉಬ್ಬಸ]

**ಉಬ್ಬಸಂಬಡು**, ಉಬ್ಬಸಪಡು, ಉಬ್ಬಸಬಡು, ಉಬ್ಬಸವಡು (ಕ್ರಿ). ೧. ಉಸಿರಿಗೆ ತಡೆಯುಂಟಾಗಿ ಕಷ್ಟಪಡು: "ಉಬ್ಬಸಂಬಡು– ಉತ್ಸಾಹನಿಗ್ರಹೇ, ಉಚ್ಛ್ವಾಸನಿಗ್ರಹೇ" (ಶಮಧಾ); ಕೂಸು ನಾನಾ ವಿಕಾರವೆರಸಿಕ್ಕುಂ ಉಬ್ಬಸಂಬಡುಗುಂ ಅಗುಳಿಸುಗುಂ (ಬಾಲಚಿ. ೧೨೬–೧೩). ೨. ಉತ್ಸಾಹಗುಂದು; ಹುರುಪುಗೆಡು: "ಉಬ್ಬಸಂಬಡು – ಉತ್ಸಾಹನಿಗ್ರಹೇ, ಉಚ್ಛ್ವಾಸನಿಗ್ರಹೇ" (ಶಮಧಾ). **ಉಬ್ಬಸಪಡು**: ೧. ಎತ್ತ ನೋಡಿದತ್ತ ಒಂದೇ ಸಮನೆ ಉಬ್ಬಸಪಡುವ ಕಪ್ಪು ನೀರು (ಹೊಸಕ್ಷಿ. ೧೩೩). **ಉಬ್ಬಸಬಡು**: ೧. ಇಡೀ ದಿನ ಶಾಖವಾಗಿ ಜನ ಉಬ್ಬಸಬಡುತ್ತಿತ್ತು (ಬಾಬಲ. ೯೮). ೩. ಉದ್ವೇಗಪಡು; ಸಂಕಟ ಪಡು: ಅವರು ಉಬ್ಬಸಬಡುತ್ತಾ ನೆಲದಮೇಲೆ ಕುಳಿತಿದ್ದರು (ಬಂಗಾಹೆ. ೧೧). **ಉಬ್ಬಸವಡು**: ೧. ಉಲಿದೂರಜೀದುಬ್ಬಸವಟ್ಟು ರಚ್ಚೆಗೆ ಸಲೆ ಸಂದಿಹ ಬೆಲೆವೆಣ್ಣು ಬಲುರಸಿಕರು ಭಾವಿಸರು (ಕಂನವಿ. ೯–೧೫೮).
[ಉಬ್ಬಸ + ಪಡು$_1$]

**ಉಬ್ಬಸಗಳೆ** (ಕ್ರಿ). ಕಷ್ಟವನ್ನು ನಿವಾರಿಸು; ಆಯಾಸವನ್ನು ಕಳೆ: ತೀವಿದ ತಿಳಿನೀರಂ ಕೆಜೀ ಠಾವಜೀತೊಳ್ಗೆಯ್ಗೆ ಸೂಸಿಯುಬ್ಬಸಗಳೆವಂತೆ (ಚಕವಿ. ೩–೭೧). [ಉಬ್ಬಸ + ಕಳೆ$_1$]

**ಉಬ್ಬಸಗೊಳ್** (ಕ್ರಿ). ೧. ಉಸಿರು ಬಿಡುವುದಕ್ಕೆ ಕಷ್ಟಪಡು, —ತೊಂದರೆಪಡು: ಭಾರವಾಯ್ತೀ ತಲೆಗಳೆಲ್ಲಂ ಮುಸುಕಿಯುಬ್ಬಸ ಗೊಳುತಲಿದ್ದೇನೆ ಸಾಕು ಸೈರಿಸಲಾಜೆ ನಾನಿನ್ನು (ಬಸವು. ೪೯–೨೩); ಅರಸಿಯುಬ್ಬಸಗೊಂಡು ಗಂಗಾತೀರದೇಶದಲಿ ಬರುತಿರಲು (ಕುವ್ಯಾಆ. ೩೦೯. ೨೬–೯೩). ೨. ಅಸಮಾಧಾನಪಡು; ವ್ಯಥೆಪಡು: ಅಸಮ ಕಲುಷಿತರಾಗಿ ಗೌಳತಪಸಿಗಳೆಲ್ಲರು ಕೂಡಿ ತಾವುಬ್ಬಸಗೊಳುತ್ತಿಂತೆಂದರು (ಬಸವು. ೪೩–೩೫). [ಉಬ್ಬಸ + ಕೊಳ್$_1$]

**ಉಬ್ಬಸಗೊಳಿಸು** (ಕ್ರಿ). ಉಬ್ಬಸಪಡುವಂತೆ ಮಾಡು; ಕಷ್ಟಕ್ಕೆ ಗುರಿಮಾಡು: ಪಸುವನುಬ್ಬಸ[ಪಾಠಾಂ. ಬರ್]ಗೊಳಿಸಿ ವಧಿಸುವ ಹಸಿಯ ಹೊಲೆಯರ ನೇಣ ಹೊಲೆಯರ ಹುಸಿವ ಹೊಲೆಯರ (ಬಸವು. ೫೫–೧೮).
[ಉಬ್ಬಸ + ಕೊಳ್$_1$ + –ಇಸು$_3$]

**ಉಬ್ಬಸಪಡು** 'ಉಬ್ಬಸಂಬಡು' ನೋ.

**ಉಬ್ಬಸಬಡು** 'ಉಬ್ಬಸಂಬಡು' ನೋ.

**ಉಬ್ಬಸರೆ** (ನಾ). ಒಂದು ಗಿಡದ ಹೆಸರು: ಉಬ್ಬಸರೆಯ ಸೊಪ್ಪನ್ನು ಹಾಲಲ್ಲಿ ಕೊಳ್ಳೆ ರಕ್ತಪ್ರಮೇಹ ಮಾಣ್ಗುಂ (ವಿವೈವಿ. ೭೨).
[ಉಪ್ಪು$_1$ + ಬಸರೆ (< ಬಸಲೆ)]

**ಉಬ್ಬಸವಡು** 'ಉಬ್ಬಸಂಬಡು' ನೋ.

**ಉಬ್ಬಸವೆಱು** (ಕ್ರಿ). ಉಸಿರಾಡಲು ಕಷ್ಟಪಡು; ಆಯಾಸಪಡು: ಮೂಲೋಕವುಬ್ಬಸವೆತ್ತುದಂತಃಶ್ವಾಸರೋಧನಿರೋಧವನು ತಳೆದು (ನಿಭಾಗ. ೪–೭–೩೨). [ಉಬ್ಬಸ + ಪೆಱು$_1$]

**ಉಬ್ಬಳ** (ನಾ). = ಉಬ್ಬಳಿಕೆ$_1$ ೧. (ಈ). [< ಉಬ್ಬರ]

**ಉಬ್ಬಳಿಕೆ**$_1$ (ನಾ). ೧. ಓಕರಿಕೆ; ವಾಂತಿ ಬರುವಂತಾಗುವುದು: ಉಂಡರನ್ನವು ದಕ್ಕದುಬ್ಬಳಿಕೆ ಘನವು (ಸೌಗಂಧಿ. ೧೬–೧೧). ೨. ಹುಳಿ ತೇಗು: "ಉಬ್ಬಳಿಕೆ – ಕಮುಟಡರಕೆ, ಅಪಚನವಾಗಿ ಬಾಯಿಂದ ಕೆಟ್ಟ ವಾಯು ಬಿಡುವುದು" (ಜಾನಕೋ. ೨೦). ೩. ನಿಟ್ಟುಸಿರು: ದೀರ್ಘ ವಾದ ಉಬ್ಬಳಿಕೆಯಿಂದ ಮಾತುನಿಲ್ಲಿಸಿ (ಜಯಂತ. ೪೭೭).
[ಉಬ್ಬಳ + –ಇಕೆ]

**ಉಬ್ಬಳಿಕೆ**$_2$ (ನಾ). ಹೆಚ್ಚಳ; ಅತಿಶಯ; ಉಬ್ಬುವಿಕೆ. 'ಉಬ್ಬಳಿಕೆ ವಾತು' ಪರಾ. [ಉಬ್ಬಳ$_0$ + –ಇಕೆ]

**ಉಬ್ಬಳಿಕೆವಾತು** (ನಾ). ಹೆಚ್ಚಳದ ಮಾತು; ಗರ್ವದ ನುಡಿ: ಬಳ ಸಲಿಸಿತ್ತೈನೂರ್ವರಾತನ ಬಳಿಯ ಪಂಚ ಚಮೂಪಸುತರುಬ್ಬಳಿಕೆ [ಪಾಠಾಂ. ಉಬ್ಬಳಕೆ, ಉಬ್ಬುಳಿಕೆ]ವಾತಿನ ಬಿಗಿದ ಕಾಸೆಯ ಬಲಿದ ತಲೆವಿಣಿಲ (ತೊರರಾ. ೫–೫–೧೩). 'ಉಬ್ಬರಿಕೆ' ಪರಾ.
[ಉಬ್ಬಳಿಕೆ$_2$ + ಮಾತು$_1$]

**ಉಬ್ಬಳಿಸು** (ಕ್ರಿ). ೧. ಓಕರಿಸು; ಕಾರು; ವಾಂತಿಮಾಡು. ೨. ಅಸಹ್ಯಪಡು; ಹೇಸು. [ಉಬ್ಬಳ + –ಇಸು$_3$]

**ಉಬ್ಬಾಟ** (ನಾ). ಉಬ್ಬುವಿಕೆ; ಸೊಕ್ಕು: ನವಬ್ರಹ್ಮರಾಟೋಪವೀ ದೆಸೆಯೊಳಿಂತಿದೆ ದಿನಪರುಬ್ಬಾಟವಿದೆ (ಚಬಸು. ೧೬–೧೫); ಉಬ್ಬಾಟ ದಿಂದ ಅವನು . . . ಆ ನಗರವನ್ನು ಜಯಿಸಿದನು (ಬಾಲಪ್ರ. III, ೧೨೩೧).
[ಉಬ್ಬು$_1$ (< ಉರ್ಬು$_1$) + ಆಟ]

**ಉಬ್ಬಾನಿಕೆ** (ನಾ). (?): ಸೇನಭಾವ ಭೂಮಿ ೪೫೦ ಗ್ರಹಂ ಹಸ್ತ ೭ ಹರಿಯರಿಗ ಉಬ್ಬಾನಿಕ ಗೆಯಿ ೬೦೦ ಗ್ರಹಂ ಹಸ್ತ ೧೨ (ಕೊಲ್ಹಾಶಾ. ೨೩–೫೧; 1209). [?]

**ಉಬ್ಬಾರ** (ನಾ). ಉಬ್ಬುವಿಕೆ; ಸಂಭ್ರಮ; ಹಿಗ್ಗು : ಅರಿತದು ಬೊಬ್ಬೆಯಲಿ ದುಗುಡದ ಭಾರದಲಿ ತಲೆಗುತ್ತಿತಿವರುಬ್ಬಾರದಲಿ ಭುಲ್ಲವಿಸಿತವರು ವಿಘಾತಿಯಿಂದಿವರು (ಕುವ್ಯಾಕ. ೧೨-೩೩). [< ಉಬ್ಬರ ?]

**ಉಬ್ಬಾಳಿ** (ನಾ). ೧. ಉಬ್ಬುವುದೇ ಶೀಲವಾಗಿ ಉಳ್ಳವನು : ಆಳ್ದನ ಬೆಸನಂ ಮರಳಿ ಕೇಳದ ಬೆಸಗಲಿಗಳುಮಂ ಉಬ್ಬಾಳಿಯುಳವಿಯ ಲೆಕ್ಕಕ್ಕಿಱಿದು ಬೆಸಕೆಯ್ವ ಪಟಿಗಲಿಗಳುಮಂ ಅಳವನಱಿದು ಬೇಗಿಱಿವ ಬಲ್ಗಲಿಗಳುಮಂ (ಗದಾಯು. ೯-೩೪ ವ). ೨. ಉದ್ಧಟತನ; ಪ್ರತಾಪ: ಹೇಳು ಮಿಕ್ಕವರಿಂಗೆ ನಿನ್ನುಬ್ಬಾಳುತನವನು ಬಿಡೆನೆನುತ್ತುಬ್ಬಾಳಿಯಲಿ ಕಡುಹಸಿದು ನುಂಗಿದುದಂಘ್ರಿಯನು ತುಡುಕಿ (ನಿಭಾಗ. ೮-೩-೨) ; ಕೃತವೀರ್ಯಸುತನುಬ್ಬಾಳಿಯನು ಕೇಳುತ್ತ ಕಿಡಿಕಿಡಿಯೋಗಿ ಕಂಗಳಲಿ (ನಿಭಾಗ. ೯-೧೪-೨೪). [ಉಬ್ಬು$_1$ (< ಉರ್ವು$_1$) + -ಆಳಿ$_3$]

**ಉಬ್ಬಾಳಿಕೆ** (ನಾ). ದರ್ಪದಿಂದ ಕೂಡಿದ ಆಳಿಕೆ: ಪರಕೀಯರದಬ್ಬಾಳಿಕೆ ನಮ್ಮವರೆದೆಯುಬ್ಬಾಳಿಕೆ, ಮಬ್ಬಾಳಿಕೆ, ಗಬ್ಬಾಳಿಕೆ – ಎಲ್ಲ ಒಂದೆ, ಒಂದೆ (ನಡೆಬಂ. ೭೦). [ಉಬ್ಬಾಳು + -ಇಕೆ]

**ಉಬ್ಬಾಳಿಗ** (ನಾ). ಉತ್ಸಾಹಶಾಲಿ ; ದರ್ಪಿಷ್ಠ : ಬಾಲವನು ಬರಸೆಳೆದು ಧಾರೆಯ ತೈಲದದ್ದುಗೆಯಱುವೆಗಳಲುಬ್ಬಾಳಿಗರು [ಪಾಠಾಂ. ಉಬ್ಬಾಳುಗಳು] ಸುತ್ತಿದರು ಸೂರ್ಯಾನ್ವಯನ ಕಿಂಕರನ (ತೊರರಾ. ೫-೮-೧). [ಉಬ್ಬಾಳು + -ಇಗ]

**ಉಬ್ಬಾಳಿಸು** (ಕ್ರಿ). ದರ್ಪದಿಂದ ಮುಂದೆ ನುಗ್ಗು : ಮೇಳವಿಸಿದಹಿಕುಲದ ಕೊಲೆಗುಬ್ಬಾಳಿಸಿದ ಖಗಪತಿಯೊ ತಾನೆನೆ ತೂಳಿದನು ರಕ್ಕಸನು ಮರ್ಕಟರಾಯಸೈನಿಕವ (ತೊರರಾ. ೬-೨೭-೩೯). [ಉಬ್ಬಾಳು + -ಇಸು$_3$]

**ಉಬ್ಬಾಳು** (ನಾ). ೧. ಉತ್ಸಾಹಿಯಾದ ಶೂರ; ದರ್ಪಿಷ್ಠನಾದ ಯೋಧ : ಒಗ್ಗೊಡೆದು ರಿಪುಸೇನೆ ಸಂದುದು ತಗ್ಗಿತುಬ್ಬಾಳುಗಳ ನುಡಿಮನ ನೆಗ್ಗಿದವು ಮಂಡಳಿಕರಿಗೆ (ಕುವ್ಯಾಭೀ. ೮-೩೩). ೨. (ಇತರರು ಹೊಗಳಿದರೆ) ಸಂತೋಷಪಟ್ಟು ಹಿಗ್ಗುವವನು; ಸ್ತೋತ್ರಪ್ರಿಯ : ಪರತಂತ್ರಚರಿತನೆ ಸಿಮ್ಮಣ್ಣನಾವೊಂದನೊರೆದುಬ್ಬಿಸುವರೆ ಉಬ್ಬಿಸಲು ಭರತೇಶನುಬ್ಬಾಳೆ (ಭರಚ. ೪೭-೯೨) ; ವೈಕುಂಠರಾಯರು ಉಬ್ಬಾಳು . . . ಹೊಗಳಬೇಕು (ಹಿಂಕತೆ. ೫೦). ೩. “ದೊಡ್ಡಮನುಷ್ಯ, ಮಾನವಂತ” (ಜಾನಕೋ. ೨೦). ೪. ಉತ್ಸಾಹ; ಸಂಭ್ರಮ : ಸಿಡಿಲೆಱಗಿತೆನಲುಬ್ಬಾಳು ಮಿಗೆ ಕೈನೆಗಹಿ ಕೈವಾರಿಸುವ ಗಮಕಿಗಳು (ಕುವ್ಯಾದ್ರೋ. ೪-೫೨) ; ಸೂಳುಮಿಗೆ ಸಂಗರದ ರವದುಬ್ಬಾಳಿನಲಿ ತಿರುಹಿಟ್ಟನರುಣಜಲಾಳಿ ಝೋರಿಡೆ (ತೊರರಾ. ೪-೨-೩೭). [ಉಬ್ಬು$_1$ (< ಉರ್ವು$_1$) + ಆಳು$_3$ (< ಆಳ್$_3$)]

**ಉಬ್ಬಾಳುತನ** (ನಾ). ದರ್ಪ ; ಪರಾಕ್ರಮ : ಬೀಳುಬೀಳಭಿಮನ್ಯುವಿನ ವಧೆ ಬಾಳಲೀವುದೆ ನಿನ್ನನೆನುತುಬ್ಬಾಳುತನದಲಿ ಪಾರ್ಥ ಬೊಬ್ಬಿಡೆ (ಕುವ್ಯಾದ್ರೋ. ೧೪-೪೧) ; ಶಿವಾಜಿಯು ಚಿಕ್ಕಂದಿನಲ್ಲಿಯೇ ಬಹುಧೈರ್ಯಶಾಲಿಯಾದ ಉಬ್ಬಾಳುತನದ ಹುಡುಗನೆನಿಸಿಕೊಳ್ಳುತ್ತಿದ್ದನು (ಕಭಾಗೆ. ೩೩೪). [ಉಬ್ಬಾಳು + -ತನ]

**ಉಬ್ಬಿಕೆ** (ನಾ). ಉಬ್ಬುವಿಕೆ (ಕಿ). [ಉಬ್ಬು$_1$ (< ಉರ್ವು$_1$) + -ಇಕೆ]

**ಉಬ್ಬಿಕ್ಕಿಸು** (ಕ್ರಿ). ಹಬ್ಬಿ ಹರಡುವಂತೆ ಮಾಡು : ಪ್ರತಾಪದ ರಕ್ಕಸಾಗ್ನಿಯನಾಹವದೊಳುಬ್ಬಿಕ್ಕಿಸುವೆನೆಂದಗಲಿಸಿದನಂತಸ್ಥ ವಿಹ್ವಲವ (ತೊರರಾ. ೬-೨೦-೫). [ಉಬ್ಬು$_1$ (< ಉರ್ವು$_1$) + ಇಕ್ಕಿಸು$_1$]

**ಉಬ್ಬಿನ** (ನಾ). ಕೇಡು ; ಹಾನಿ : “ಉಬ್ಬಿನಮೆಂದು ಕೇಡು” (ಕರ್ಣಾನಿ. ೨೨). [ಉಬ್ಬು$_1$ (< ಉರ್ವು$_1$) + ಇನ ?]

**ಉಬ್ಬಿಸು** ‘ಉರ್ಬಿಸು’ ನೋ.

**ಉಬ್ಬಿಱು** (ಕ್ರಿ). ೧. ಹೊರಹೊಮ್ಮು ; ಎದ್ದುಕಾಣು : ಮಿಱುಪಿನಲಿ ತನುರುಚಿಯನಣದುಬ್ಬಿಱಿವ ಹೊಗರಿನ ಮುಸುಕುಗಳ ಮೇಲ್ಸೆಱಗುಗಳ ವಳೌಳಿಗಳ ಮಹಿಳಾಜನ ವಿರಾಜಿಸಿತು (ತೊರರಾ. ೧-೫-೨೯). ೨. ಉಬ್ಬು; ಹಿಗ್ಗು : ಅಬ್ಬರಿಸಿ ಬಲುಮುಷ್ಟಿಗಳ ನಭಕೆಬ್ಬಿಸುತ ಕಯ್ದುಡುಕಿದರು ಸುರರುಬ್ಬಿಱಿಯೆ ಸುಳಿಸಿದರು ಮುಷ್ಟಿಯ ಸೂಳುಪಾಳಿನಲಿ (ತೊರರಾ. ೪-೩-೯). [ಉಬ್ಬು$_1$ (< ಉರ್ವು$_1$) + ಇಱಿ$_1$]

**ಉಬ್ಬಿಱಿತ** (ನಾ). ಬಲವಾದ ಇರಿತ; ವೇಗದಿಂದ ಚುಚ್ಚುವುದು : ಹಲುಗಿರಿದು ಒಱಲುತಿರ್ದವು ಕೋಡಗಗಳುಬ್ಬಿಱಿತದೇಱಿನ ನೋವುಗಳ ಲಸುದೊಱೆವುತಿರ್ದವು ಮುಸುಗಳಸುರರ ಕೊಲೆಯ ಕವತೆಯಲಿ (ತೊರರಾ. ೬-೧೯-೩೦). [ಉಬ್ಬು$_1$ (< ಉರ್ವು$_1$) + ಇಱಿತ]

**ಉಬ್ಬು$_1$** ‘ಉರ್ವು$_1$’ ನೋ.

**ಉಬ್ಬು$_2$** ‘ಉರ್ವು$_2$’ ನೋ.

**ಉಬ್ಬುಕೊಬ್ಬು** ‘ಉಬ್ಬುಗೊಬ್ಬು’ ನೋ.

**ಉಬ್ಬುಗಣ್ಣು** (ನಾ). ಉಬ್ಬಿದ ಕಣ್ಣು ; ಹೊರಚಾಚಿಕೊಂಡಿರುವ ಕಣ್ಣು : ಉಬ್ಬುಗಣ್ಣು ಮುಖಕ್ಕೆ ಲಕ್ಷಣವಾಗಿ ಕಾಣುವುದಿಲ್ಲ (ರೂಢಿ). [ಉಬ್ಬು$_1$ (< ಉರ್ವು$_1$) + ಕಣ್ಣು (< ಕಣ್)]

**ಉಬ್ಬುಗನ್ನಡಿ** (ನಾ). ನಡುವೆ ಉಬ್ಬಾಗಿ ಅಂಚಿನಕಡೆಗೆ ತಗ್ಗಾಗಿರುವ ಕನ್ನಡಿ : ಮೇಲಕ್ಕೆ ಉಬ್ಬಿಕೊಂಡಿರುವ ಉಬ್ಬುಗನ್ನಡಿಗಳಲ್ಲಿ (Convex mirrors) ಯಾವಾಗಲೂ ತಲೆ ಮೇಲಾಗಿ ವಸ್ತುವಿಗಿಂತ ಸಣ್ಣನಾಗಿ ಕನ್ನಡಿಯ ಹಿಂಭಾಗದಲ್ಲಿರುವ ಮಿಥ್ಯಾಪ್ರತಿಬಿಂಬಗಳು ಮಾತ್ರ ಉಂಟಾಗುತ್ತವೆ (ಭೌತವಿ. ೧೬೭). [ಉಬ್ಬು$_1$ (< ಉರ್ವು$_1$) + ಕನ್ನಡಿ]

**ಉಬ್ಬುಗಲ್ಲ** (ನಾ). ಉಬ್ಬಿಕೊಂಡಿರುವ ಗಲ್ಲ; ಮುಂದೆ ಚಾಚಿಕೊಂಡಿರುವ ಗಲ್ಲ (ಕಿ). [ಉಬ್ಬು$_1$ (< ಉರ್ವು$_1$) + ಗಲ್ಲ]

**ಉಬ್ಬುಗವಳ** (ನಾ). ಉತ್ಸಾಹವನ್ನುಂಟುಮಾಡುವ ತುತ್ತು ; ಉದ್ದೀಪನಗೊಳಿಸುವ ತಾಂಬೂಲ ಮುಂತಾದುವುಗಳ ಕವಳ : ದಿಟದಿನಬಲೆಯರುಬ್ಬುಗವಳದಲಿ ಮೇರೆದಪ್ಪುವನೇ ವಿಕಾರಿ (ಕುವ್ಯಾಆ. ೧೪-೫೭) ; ತಬ್ಬಿದನು ತದ್ಗಿರಿಯನತಿಬಲನುಬ್ಬುಗವಳವ ಕೊಂಡವೊಲು (ತೊರರಾ. ೬-೫-೫೦) ; ಅವರುದ್ಧತಮೋಹನದ ಮನಕೆಯುಬ್ಬುಗವಳವನಿಕ್ಕುವಂದದೊಳು (ಸೇವಿಸಂ. ೧೨-೩) ; ಪವಳದಧರಾಮೃತದುಣಿಸು ತಂಬುಲದುಬ್ಬುಗವಳವನಿತ್ತಳಾಳ್ದನಿಗೆ (ಮೋಹತ. ೩೩-೬೨). [ಉಬ್ಬು$_1$ (< ಉರ್ವು$_1$) + ಕವಳ]

**ಉಬ್ಬುಗುಂದು** ‘ಉರ್ಬುಗುಂದು’ ನೋ.

**ಉಬ್ಬುಗುದುರೆ** (ನಾ). ಉತ್ಸಾಹದಿಂದ ಕೂಡಿದ ಕುದುರೆ : ಉಬ್ಬುಗುದುರೆಗಳ ಸಾಲ ಮೋಹರದಲಿಯುಬ್ಬರಿಸುವನಿವನಾರೊ (ಕಂನವಿ. ೧೨-೫೬) ; ಉಬ್ಬುಗುದುರೆಗಳ ಸಾಲ ಮೋಹರದಲ್ಲಿ ಹೊಕ್ಕು ಉರವಣಿಸಿದರು (ಕರತ್ನ. ೧೨೯). [ಉಬ್ಬು$_1$ (< ಉರ್ವು$_1$) + ಕುದುರೆ]

**ಉಬ್ಬುಗೆಡು** ‘ಉರ್ಬುಗೆಡು’ ನೋ.

**ಉಬ್ಬುಗೆನ್ನೆ** (ನಾ). ಉಬ್ಬಿದ ಕೆನ್ನೆ ; ತುಂಬಿದ ಕಪೋಲ : ಉಬ್ಬುಗೆನ್ನೆಯ ಚುವಾಷ್ ಜನಾಂಗದ ಸಹೋದ್ಯೋಗಿಯ ಕಡೆಗೆ ಕಣ್ಣುಮಿಟುಕಿಸಿದನು (ಪುನರು. ೫). [ಉಬ್ಬು$_1$ (< ಉರ್ವು$_1$) + ಕೆನ್ನೆ]

**ಉಬ್ಬುಗೊಬ್ಬು**, ಉಬ್ಬುಕೊಬ್ಬು (ನಾ). ಉಬ್ಬಿದ ಕೊಬ್ಬು ; ಅತಿಯಾದ ಗರ್ವ : ವೀರರು ಮನದ ಕಲಿತನದುಬ್ಬುಗೊಬ್ಬಿನಲೆಂಬರಿದಕೇನು (ಕುವ್ಯಾದ್ರೋ. ೧-೨೫) ; ಯೌವನದುಬ್ಬುಗೊಬ್ಬಿನಲಿರಲಿ ಸಿರಿಯಲಿ ಬರವನಾಗಲಿ (ನಿಭಾಗ. ೨-೧-೪). **ಉಬ್ಬುಕೊಬ್ಬು** : ಜ್ಞಾನದ ಉಬ್ಬುಕೊಬ್ಬಿನಲಿ ಉಲಿವುತ್ತಿಪ್ಪವರೆಲ್ಲರು ನಾಮ ನಾಸ್ತಿಯಾಗದು (ಅವಚಂ. ೧೦೬-೪೮೨). [ಉಬ್ಬು$_2$ (< ಉರ್ವು$_2$) + ಕೊಬ್ಬು$_2$ (< ಕೊರ್ವು$_2$)]

**ಉಬ್ಬುಗೋಮಾಳೆ** (ನಾ). ಉಬ್ಬಿದ ಕೊರಳು; ಪುಷ್ಟಿಯಾಗಿ ತುಂಬಿದ ಕೊರಳು: ಉಬ್ಬುಗೋಮಾಳೆಯ ತರುಣ, ಹೆಂಗಸರ ಪಕ್ಕದಿಂದ ಸರಿದು (ಪುನರು. ೩೪೮). [ಉಬ್ಬು$_1$(< ಉರ್ಬ್$_1$) + ಗೋಮಾಳೆ]

**ಉಬ್ಬುಚಿತ್ರ** (ನಾ). ಉಬ್ಬಿ ಕಾಣುವಂತೆ ಕೆತ್ತಿದ ಚಿತ್ರ: ಉಬ್ಬು ಚಿತ್ರದಿಂದ ಮುದ್ರಿಸುವುದು (ಮುದ್ರಕ. ೨).
[ಉಬ್ಬು$_1$ (< ಉರ್ಬ್$_1$) + ಚಿತ್ರ]

**ಉಬ್ಬುರೊಟ್ಟಿ** (ನಾ). ರೊಟ್ಟಿಯಲ್ಲಿ ಒಂದು ಬಗೆ.
[ಉಬ್ಬು$_1$ (< ಉರ್ಬ್$_1$) + ರೊಟ್ಟಿ]

**ಉಬ್ಬುಮಾತು** (ನಾ). ಉತ್ಸಾಹದಿಂದ ಕೂಡಿದ ಮಾತು; ಹಿಗ್ಗಿನ ನುಡಿ: ಆಬಲೆಯರುಬ್ಬುಮಾತಿನಲಿ ಅರಸಿ ಕೇಳೀ ವೈಭವವನಾದರಿಸಬೇಕು (ತೊರರಾ. ೫-೩-೩೫). [ಉಬ್ಬು$_1$ (< ಉರ್ಬ್$_1$) + ಮಾತು$_1$]

**ಉಬ್ಬುಹಣೆ** (ನಾ). ಉಬ್ಬಿದ ಹಣೆ.
[ಉಬ್ಬು$_1$ (< ಉರ್ಬ್$_1$) + ಹಣೆ$_1$ (< ಪಣೆ)]

**ಉಬ್ಬುಹಲ್ಲ** (ನಾ). ಉಬ್ಬಿದ ಹಲ್ಲುಳ್ಳವನು; ತುಟಿಮೀರಿದ ಹಲ್ಲುಳ್ಳವನು: ಉಬ್ಬುಹಲ್ಲ ನಕ್ಕರೂ ಒಂದೆ, ಅತ್ತರೂ ಒಂದೆ (ರೂಢಿ).
[ಉಬ್ಬುಹಲ್ಲು + -ಅ$_7$]

**ಉಬ್ಬುಹಲ್ಲು** (ನಾ). ಉಬ್ಬಿದ ಹಲ್ಲು; ತುಟಿ ಮೀರಿದ ಹಲ್ಲು: ಉಬ್ಬುಹಲ್ಲು ಮುಖಕ್ಕೆ ಅವಲಕ್ಷಣ (ರೂಢಿ).
[ಉಬ್ಬು$_1$ (< ಉರ್ಬ್$_1$) + ಹಲ್ಲು (< ಪಲ್)]

**ಉಬ್ಬುಹೊಳೆ** (ನಾ). ತುಂಬಿ ಹರಿಯುವ ನದಿ; ಪ್ರವಾಹ.
[ಉಬ್ಬು$_1$ (<ಉರ್ಬ್$_1$) + ಹೊಳೆ$_4$ (< ಪೊಳೆ$_4$)]

**ಉಬ್ಬೆ$_1$** (ನಾ). ೧. ಉಷ್ಣ; ಸೆಕೆ; ಕಾವು: ಕಾಲನುಬ್ಬೆಗೆ ಶೀತಳಂಗೊಡು ವಾಲವಟ್ಟವೊ (ಕುವ್ಯಾಭೀ. ೪-೭೨); ಕ್ಷೀರಪಂಚಕ ಪಾಕರಸಂ ರಸಾಯನ ಪಾಕ ದಾರುಣನಿದಾಘದುಬ್ಬೆಯನು ಭಂಜಿಸುವ. . .ನಾನಾ ಪಾನಭೇದವಮಂ (ಸೂ ಪ ಶಾ. ೨ ಸೂಚನೆ); ಪಡಿಯ ಹೊಚ್ಚಿದೊಡುಬ್ಬೆ ತಾಗುವುದೆಂದಾ ಮಡದಿಯೆಡದ ತೋಳೊಳೊಜಗಿ (ನೇಮಿಸಂ. ೯-೩೬). ೨. ಉದ್ವೇಗ; ಸಂಕಟ; ತಾಪ: ಉಬ್ಬೆಯನು ಸೈರಿಸುತ ಸಾಹಸಮಲ್ಲ (ಕುವ್ಯಾಕ. ೨೭-೨೬); ಮುನಿಗಳುಪಹತಿಯುಬ್ಬೆಯನು ಸೈರಿಸುವರೇ (ತೊರರಾ. ೧-೧೧-೯); ಹಜಾರದ ಬಾಗಿಲ ಮುಂದಕೆ ನಡೆದನೇನೆಂಬೆನುಬ್ಬೆಯೊಳು (ಭರಚ. ೪೯-೨). ೩. ಬಿಸಿ; ಜೋರು: ದಾನವಾಧಿಪರುಬ್ಬೆಯನು ಸುರ ಮಾನವರು ತರಹರಿಸಲಳವೇ (ಕುವ್ಯಾಆ. ಓರಿಇ. ೧೩-೩೬). ೪. ಬಟ್ಟೆಗಳನ್ನು ಮಡಿಮಾಡುವುದಕ್ಕಾಗಿ ಸೋಡಾಪುಡಿ ಮುಂತಾದುವನ್ನು ನೀರಿಗೆ ಸೇರಿಸಿ ಬೇಯಿಸುವ ಕ್ರಮ: ಬಟ್ಟೆಗಳನ್ನು ಉಬ್ಬೆಗೆ ಹಾಕಲು. . . ಯಂತ್ರ ತಯಾರಿಸಿದ್ದಾರಂತೆ (ದಿಲ್ಲಿಪ. ೧೧೩); ಶೋಕದ ನಿಶ್ವಾಸದುಬ್ಬೆಯಲಿ ಗಳಿಗೆಯನು ಏಕೆ ಬೇಯಿಸಲಿ (ಯಶೋಧ. ೪೮). 'ಉಬ್ಬೆಕಾಣಿಕೆ' ಪರಾ. ೫. ಕಾಯಿಗಳನ್ನು ಹಣ್ಣುಮಾಡಲು ಅಡೆ ಹಾಕುವುದು: ಅವರ ಹೆಣ್ಣು ನಮಗ್ಯಾಕೆ? ಅವರೇ ಉಬ್ಬೆಗೆ ಹಾಕಿ ಹಣ್ಣುಮಾಡಿಕೊಳ್ಳಲಿ (ಕಾನೂರು. ೪೦೭).

ಉಬ್ಬೆಗೆಹಾಕು = ೧. ಬಟ್ಟೆಗಳನ್ನು ಮಡಿಮಾಡಲು, ಬೇಯಿಸಲಿಡು. ೨. ಹಾಗೆ ಬೇಯಿಸಲು ಅಗಸನಿಗೆ ಬಟ್ಟೆಗಳನ್ನು ಕೊಡು. ೩. ಕಾಯಿಗಳನ್ನು ಹಣ್ಣುಮಾಡಲು ಅಡೆಹಾಕು.
[ದೇ. ‖ ತುಳು. ಉಬ್ಬೆ; ತೆಲು. ಉಬ್ಬ]

**ಉಬ್ಬೆ$_2$** (ನಾ). ಒಂದು ಸಲ ಒರಳಿನಲ್ಲಿ ಹಿಡಿಯುವಷ್ಟು ಅಳತೆ: ಎರಡುಬ್ಬೆ ಮಾಡಿದರೆ ಕಡಿನುಚ್ಚು ಆದಾವು ಒಂದುಬ್ಬೆ ಮಾಡಿದರೆ ಕುರುಡಕ್ಕಿ ಆದಾವು ಸಾಕಣ್ಣ ನಿನ್ನ ಮನೆಗೆಲಸ (ಜಗೀತೆ. ೫೪). 'ಒಬ್ಬೆ$_2$' ಪರಾ.
[< ಒಬ್ಬೆ$_2$]

**ಉಬ್ಬೆ$_3$** 'ಪುಬ್ಬೆ' ನೋ.

**ಉಬ್ಬೆಕಾಣಿಕೆ** (ನಾ). ಉಬ್ಬೆಗಾಗಿ ಕೊಡುವ ಕಾಣಿಕೆ; ಮಡಿವಾಳರು ಕೊಡುವ ತೆರಿಗೆ: ಉಬ್ಬೆಕಾಣಿಕೆ (೧೨) ಅಂಗಡಿಪಟ್ಟಡಿ (೧೩) ಗಿಡ ಕಾವಲು . . . – ಈ ಮೇರೆಗೆ ಹತ್ತೊಂಬತ್ತು ಬಾಬುಗಳು (ಮಹಾವಂ. I, ೧೨೪); ಪೂರ್ವಕಾಲದ ತೆರಿಗೆಗಳು . . . ಉಬ್ಬೆಕಾಣಿಕೆ, ಕುರಿತೆರಿಗೆ (ನಮ್ಮನು. ೨೪೩). [ಉಬ್ಬೆ$_1$ + ಕಾಣಿಕೆ]

**ಉಬ್ಬೆಗ, ಉಬ್ಬೇಗ, ಉಬ್ಬೇಗೆ** (ನಾ). ೧. ದುಃಖ; ಸಂತಾಪ; ಕ್ಷೋಭೆ: "ಉಬ್ಬೆಗಮೆ ತಾಪಂ" (ಶಬ್ದಮಂ. ೩೩); "ಉಬ್ಬೆಗಂ – ಸಂತಾಪಂ" (ಕಶಸಾ. ೧೨-೨೨೬); ಮಗಂ ಕುರುಡಾದುದಂ ಕಂಡಾದ ಮಾನುಮುಬ್ಬೆಗಂಬಟ್ಟು (ವಡ್ಡಾರಾ. ೬೯-೨೧); ಅನೇಕೋಪಶಾಂತ ವಚನಂಗಳಿಂದವಮಾಕೆಯುಬ್ಬೆಗಮನಾಜ಼ು ನುಡಿದುಂ(ಪಂಪಭಾ. ೨-೨೮ವ); ಧರ್ಮಮಜ಼ಿಯಿತ್ತೆನು ತುಬ್ಬೆಗದೊಳ್ ಮುಟುಂಗಿದಂ (ದಶಕು. ೧೧-೧೦೦); ಒಡಲುರಿಯಿಂದ ಅವನಿಗೆ ಉಬ್ಬೆಗವಾಯಿತು (ಬದುರಿ. ೩೧). ೨. ಚಿಂತೆ: "ಚಿಂತೆ ತಾನುಬ್ಬೆಗಮಕ್ಕು" (ಕಬ್ಬಕೈ. ೭೧); ಮಗನೆ ತಪಂ ಮೊಗ್ಗಲ್ಲದು ಜಗದೊಳ್ ವೈರಾಗ್ಯಮಿಲ್ಲದಂಗಾ ತಪಮುಬ್ಬೆಗಮಂ ಮಾಡುಗುಂ (ಧರ್ಮಾಮೃ. ೫-೮೧). ೩. ತೊಂದರೆ; ಕೆಡುಕು; ಕೇಡು: ಜಗವಜ಼ಿಯೆ ನಮ್ಮನ್ವಯದ ಪೂರ್ವಗನಲಾ ನಹುಷಂಗೆ ಬಂದುಬ್ಬೆಗದ ಹದನಿದು ನಮ್ಮ ಪಾಡೇನೆಂದನಾ ಭೂಪ (ಕುವ್ಯಾಆ. ೧೪-೭೦). ೪. ವೇಗ; ರಭಸ: ಐವರ್ ವಿಕ್ರಮಶಾಲಿಗಳೊಳಗವಿರಳಮಾದಜ಼ಿಕೆಯ ಸಾಹಸಿಗರೆ ಬವರಂಬೊಕ್ಕುಬ್ಬೆಗಮಂ ಮಾಡುತ್ತಿರೆ (ಜಯಕಾ. ೬-೫೪). ೫. ಭಯ; ಭಯಂಕರತೆ: ಕೆಂಬಟ್ಟೆಯಿಂ ಗಂಟೆಗಳಿಂ ಮಾಯೂರಕಂಠಾವಳಿಯಿ ನೆಸೆದಿರಲ್ ತೋರಣಂ ಕೂಡೆ ಕಣ್ಣುಬ್ಬೆಗಮಂ ತಾಳ್ದಿರ್ದ ದಂತಾರ್ಗಳ ಕಲಿತ ಕವಾಟಂಗಳಿಂ (ಕಾದಂಉ. ೨೭೦); "ಉಬ್ಬೆಗಮುಂ – ಭಯವನ್ನು" (ಕಾದಂಉ. ಅಡಿಟಿ). **ಉಬ್ಬೇಗ**: ೧. "ಉಬ್ಬೇಗಮೆನಲ್ಕನುತಾಪಮಕ್ಕುಂ" (ಕವಿಕಂ. ೧೧೦); ಎತ್ತಿದುಬ್ಬೇಗದ ವಿಕಾರದ ಚಿತ್ತಬುದ್ಧಿಮನಂಗಳಾತ್ಮನ ಜೊತ್ತಿಸಿದವದ್ಭುತದಹಂಕಾರದಲಿ ಕಾಮಿನಿಯ (ಕುವ್ಯಾಆ. ೮-೩೮); ನೋಯೆ ನುಡಿವ ನಿಜಾತ್ಮಬಂಧುನಿಕಾಯದುಬ್ಬೇಗವನು ಕಾಣುತ (ನಿಭಾಗ. ೩-೧೪-೭). ೩. ಉಬ್ಬಿರ್ದ ವಿಷಮರಳ್ಪೊಂದುಬ್ಬೇಗದೊಳಂ ಬಟಲ್ದು ಬಿರ್ದ ನರಂಗಂ ಕಬ್ಬುಗಳಂ ಮೆಲಿಸುವುದಜ಼ಿ ನೆಬ್ಬಿಸುವುದದೊಂದೆ ರಾತ್ರಿಯೊಳ್ (ಖಮುದ. ೨-೧೯೭). **ಉಬ್ಬೇಗೆ**: ೧. ವೇಗದಿಂ ಕಲಿಭೀಮನೈತಂದು ಬಳದೊಳುಬ್ಬೇಗೆಯಂ ನೋಡ್ದು (ತುರಂಗ. ೪೯-೨೮). [< ಸಂ. ಉದ್ವೇಗ]

**ಉಬ್ಬೆಗಂಗೊಳ್** (ಕ್ರಿ). ವ್ಯಥೆಪಡು; ಚಿಂತಿಸು; ಬೆದರು: ದಿಶಾಚಕ್ರಮಂ ಕೊರ್ವಿ ಪರ್ವಿದ ತನ್ನಾದಮಂ ಕೇಳುತುಂ ಋತ್ವಿಜರುಬ್ಬೆಗಂಗೊಳೆ ಹೋತೃಗಳಾಕರಿಸೆ (ಉದ್ಭಟ. ೪-೬೩ ವ).
[ಉಬ್ಬೆಗ + ಕೊಳ್$_1$]

**ಉಬ್ಬೆಗಂಬಡು** (ಕ್ರಿ). ೧. ಆತಂಕಪಡು; ದುಃಖಪಡು: ಮಿತ್ರಾ ಇಂತೇಕೆ ಬರ್ದಿ ಬಂಬಳಂಬಾಡಿ ಪಾಡಜ಼ಿದುಬ್ಬೆಗಂಬಟ್ಟಿರ್ದಯೆಂದು ಬೆಸಗೊಂಡೊಡೆ (ವಡ್ಡಾರಾ. ೩೯-೬); ನೀನುಬ್ಬೆಗಂಬಡದಿರು ನಾಳೆಯೊ ನಾಳಿದೊ ನಿಜಪ್ರಿಯಸಮಾಗಮಮಕ್ಕುಂ (ಚಾವುಂಪು. ೨೭-೨೪); ಪಾಂಡವ ಸೇನೆ. . . ಹೊರಳುತಿರಲುಬ್ಬೆಗಂಬಟ್ಟು ಪಾರ್ಥಂ ಚಿಂತಿಸಿದನು (ಜೈಮಿಭಾ. ೮-೪೦). ೨. ಕೋಪಿಸು; ತಾಪಿಸು: ಜಿನುಗುವಂತಿರ್ದ ಮಧುಕರ ನಿವಹಕ್ಕೆ ಪಿರಿದುಮುಬ್ಬೆಗಂಬಡುವಳೆ (ಕಾದಂಉ. ೩೩೪).
[ಉಬ್ಬೆಗ + ಪಡು$_1$]

**ಉಬ್ಬೆಮನೆ** (ನಾ). ಅಗಸರು ಬಟ್ಟೆಗಳನ್ನು ಉಬ್ಬೆಗೆ ಹಾಕುವ ಮನೆ (ಶಿ). [ಉಬ್ಬೆ$_1$ + ಮನೆ]

**ಉಬ್ಬೆಮೆ** (ನಾ). ೧. ಹೆಚ್ಚಾದ ಭ್ರಾಂತಿ; ಅತಿಶಯವಾದ ಭ್ರಮೆ. ೨. ತವಕ; ಆವೇಗ: ಬಲ್ಲತೆಯಂ ಬಿತ್ತರಿಪೊಂದುಬ್ಬೆಮೆಯೊಳೀನೆನ್ನಂ ತೊಟ್ಟುಮಾಡಿ ದೇವಿಗೆತ್ತು ಕರೆದಯ್ (ರಾಮಾಶ್ವ. ೮೬–೧೦). [< ಸಂ. ಉದ್ಭ್ರಮ]

**ಉಬ್ಬೆಳೆ** (ನಾ). ಎದ್ದುಕಾಣುವಂತೆ ಉಬ್ಬಿದ ನೂಲಿನ ಎಳೆ: (ಒಡಲಿನಲ್ಲಿ) ಉಬ್ಬೆಳೆಗಳುಳ್ಳ ಮೂಲೆನೆಯ್ಗೆಯ ಉಣ್ಣೆಯ ಬಟ್ಟೆ (Everlasting. ಇಂಕನಿ). [ಉಬ್ಬು$_1$ (< ಉರ್ವು$_1$) + ಎಳೆ$_2$ (< ಎೞೆ$_2$)]

**ಉಬ್ಬೇಗ** 'ಉಬ್ಬೆಗ' ನೋ.

**ಉಬ್ಬೇಗೆ** 'ಉಬ್ಬೆಗ' ನೋ.

**ಉಬ್ಬೇಣು** (ನಾ). ಉಬ್ಬಿದ ಏಣು; ಹೊರಚಾಚಿದ ಅಂಚು: ಎಲುಬಿನ ಉಬ್ಬೇಣು (Crest. ಇಂಕನಿ). [ಉಬ್ಬು$_1$ (< ಉರ್ವು$_1$) + ಏಣು]

**ಉಬ್ಬೇಳ್** 'ಉರ್ವೇೞ್' ನೋ.

**ಉಬ್ಬೇಳು** 'ಉರ್ವೇೞ್' ನೋ.

**ಉಬ್ಬೇಱು** (ಕ್ರಿ). ಉತ್ಸಾಹದಿಂದ ಕೂಡು; ಹಿಗ್ಗು: ಹರುಷದಿಂದುಬ್ಬೇಱಿದನು ಧೃತರಾಷ್ಟ್ರ (ಕುವ್ಯಾಆ. ೭–೩೧); ಮಿಾಸಲಿನೇಱು ನಮ್ಮದು ತಮ್ಮದೆನುತುಬ್ಬೇಱಿ ಭೀಮನ ಮುತ್ತಿದರು (ಕುವ್ಯಾಕ. ೧೫–೨೦); ಮೂಱು ಲೋಕದ ಕೊಲೆಗೆಲಸಕುಬ್ಬೇಱಿದಸಮಾಂಬಕನವೊಲು ಮೈದೋಱಿದನು (ತೊರರಾ. ೪–೬–೧೮). [ಉಬ್ಬು$_2$ (< ಉರ್ವು$_2$) + ಏಱು$_1$]

**ಉಬ್ಬೇಱುವೊಯ್ಲು**, ಉಬ್ಬೇಱುಹೊಯ್ಲು (ನಾ). ಹುರುಪಿನಿಂದ ಹೊಡೆದ ಏಟು; ವೀರಾವೇಶದ ಪೆಟ್ಟು: ಜಾಱುವೊಯ್ಲಡವೊಯ್ಲು ನಿಡುವೊಯ್ಲೋರೆವೊಯ್ಲುಪ್ಪರದವೊಯ್ಲುಬ್ಬೇಱುವೊ [ಪಾಠಾಂ. ಹೊ]ಯ್ಲು ನಲೊದಗಿದರು ಭಟರು (ತೊರರಾ. ೪–೪–೨೪). **ಉಬ್ಬೇಱುಹೊಯ್ಲು**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಉಬ್ಬೇಱು + ಪೊಯ್ಲು]

**ಉಬ್ಬೇಱುಹೊಯ್ಲು** 'ಉಬ್ಬೇಱುವೊಯ್ಲು' ನೋ.

**ಉಬ್ಬೊಟ್ಟೆ** (ನಾ). ಉಬ್ಬಿದ ಹೊಟ್ಟೆ; ಊದಿಕೊಂಡ ಹೊಟ್ಟೆ. [ಉಬ್ಬು$_1$ (< ಉರ್ವು$_1$) + ಪೊಟ್ಟೆ$_1$]

**ಉಭ** (ನಾ).=ಉಭಯ ೨: ನೂಱ ಇಪ್ಪತ್ತ ಅಯಿದು ಹೊಂನನೂ ದೇವರ ವಸಂತ ತಿರುನಾಳ ಉಭಕ್ಕೆ ಸೇರಿಸಿ ಕೊಟ್ಟೆವು (ಸೌಇಇ. IX–ii, ೪೬೬–೫; 1472). [ಸಂ.]

**ಉಭಯ** (ನಾ). ೧. ಎರಡು: "ಯುಗಳಂ ಸಮ ಉಭಯಂ ಬಾಹುಶಿವಿಗಳೆರಡಱ ನಾಮಂ" (ವ್ಯವಹಾ. ೯–೨). ೨. ಎರಡು ಉತ್ಸವ: ವ[ಸ]ಂತದ ಉಭಯವನು ಸಂವತ್ಸರಂ ಪ್ರತಿಊ ತಪ್ಪದೆ ನಡಸುವುದಕ್ಕೆ ಕೊಟ್ಟು (ಸೌಇಇ. IX–ii, ೪೬೬–೭; 1472).

ಉಭಯಕುಶಲೋಪರಿಸಾಂಪ್ರತ = ನಮ್ಮಿಬ್ಬರ ಕ್ಷೇಮವನ್ನು ವಿಚಾರಿಸಿದ ಮೇಲೆ ಈಗ: ತೀರ್ಥರೂಪ ತಂದೆಯವರಿಗೆ ನಮಸ್ಕಾರಗಳು. ಉಭಯ ಕುಶಲೋಪರಿ ಸಾಂಪ್ರತ (ರೂಢಿ). [ಸಂ.]

**ಉಭಯಕರ್ತೃಕ** (ಗು). ಇಬ್ಬರು ಕರ್ತೃಗಳುಳ್ಳ: ವಿದಿತೋಭಯ ಕರ್ತೃಕಮೆನಿಸಿದ ಸತಿಸಪ್ತ ಮಿಗೆಕಾರಮಪ್ಪುದು (ಶಮುದ. ೨೪೯). [ಉಭಯ + ಕರ್ತೃಕ]

**ಉಭಯಕರ್ಮ** (ನಾ). ೧. ಪಾಪ ಮತ್ತು ಪುಣ್ಯ ಎಂಬ ಕರ್ಮಗಳು: ಪುಣ್ಯಪಾಪವೆಂಬುಭಯಕರ್ಮವನಾರು ಬಲ್ಲರಯ್ಯಾ (ಬಸವ. ೮೬೨). ೨. ಐಹಿಕ ಮತ್ತು ಪಾರಲೌಕಿಕದ ಕರ್ಮಗಳು: ವೀರಶೈವಾಚಾರ ದೀಕ್ಷಾಧಾರಕನನತಿನಿರ್ಮಿತೋಭಯಕರ್ಮನಿರ್ಮಲನ (ಬಸವು. ೩–೪೯). [ಉಭಯ + ಕರ್ಮ]

**ಉಭಯಕವಿ** (ನಾ). (ಸಂಸ್ಕೃತ ಮತ್ತು ಕನ್ನಡ) ಎರಡು ಭಾಷೆಗಳಲ್ಲಿ ಕಾವ್ಯವನ್ನು ರಚಿಸಬಲ್ಲವನು: ಚಾಳುಕ್ಯರಾಜ್ಯದೊಳ್ ನೆಗೞ್ದನುಭಯಕವಿ ಕವಿರತ್ನಂ (ಅಜಿಪು. ೧೨–೪೨); ಉಭಯಕವಿ ಶರಭಭೇರುಂಡ ಹಂಪೆಯ ರಾಘವಂ (ಹಚಕಾ. ೧–೩೧).

ಉಭಯಕವಿಚಕ್ರವರ್ತಿ = (ಸಂಸ್ಕೃತ ಮತ್ತು ಕನ್ನಡ) ಎರಡು ಭಾಷಾಕವಿಗಳಿಗೆ ಅಧಿಪತಿ: ಸವಣಂಗಿತ್ತಂ ಸುವಿವೇಕಮುಭಯ ಕವಿಚಕ್ರವರ್ತಿವೆಸರಂ ನಿಜಾಹಿತೋಷ್ಣಂ ಕೃಷ್ಣಂ (ಶಾಂತಿಪು. ೧–೯). [ಉಭಯ + ಕವಿ$_3$]

**ಉಭಯಕವಿತ್ವ** (ನಾ). (ಸಂಸ್ಕೃತ ಮತ್ತು ಕನ್ನಡ) ಎರಡು ಭಾಷೆಗಳಲ್ಲಿಯೂ ನೂಡುವ ಕವಿತಾ ರಚನೆ: ಶಿವಕವಿದೇವನಾತ್ಮಜ ಸುಮತಿ ಭೀಮನುಭಯಕವಿತ್ವ ಸಮರ್ಥನುಸುರುವಡೆ (ಬಸವು. ೧–೧೬). [ಉಭಯ + ಕವಿತ್ವ]

**ಉಭಯಕುಲ** (ನಾ). ತಂದೆ ಮತ್ತು ತಾಯಿಯ ಕಡೆಯ ವಂಶ: ಉಭಯಕುಲವಿಶುದ್ಧರ್ ನ್ಯಾಯವಂತರ್ ಜಿತಾತ್ಮರ್ (ಶಾಂತಿಪು. ೩–೭೬). [ಉಭಯ + ಕುಲ]

**ಉಭಯಗುಣ** (ನಾ). [ಕಾವ್ಯಮಿಾ]ಶಬ್ದ ಮತ್ತು ಅರ್ಥಗುಣಗಳು: ಮಾಧುರ್ಯವು ಉಭಯಗುಣವೆಂದೂ ಹೇಳಬಹುದು (ಕೈಪಿಡಿ. ೨೩೨). [ಉಭಯ + ಗುಣ$_2$]

**ಉಭಯತೋಮುಖಿ** (ನಾ). ಕರುಹಾಕುತ್ತಿರುವ ಹಸು; ಕರುವಿನ ಮುಖ ಮತ್ತು ಹಸುವಿನ ಮುಖ ಎಂದು ಎರಡು ಮುಖಗಳುಳ್ಳ ಹಸು: ಬ್ರಾಹ್ಮಣನಿಗೆ ಉಭಯತೋಮುಖಿ ದಾನವನ್ನು ಕೊಟ್ಟಂಥಾ ಪುಣ್ಯ (ಶೇಷಧ. ೯–೧೨). [ಸಂ.]

**ಉಭಯತ್ರ** (ಅ). ಎರಡು ಕಡೆಯೂ; ಎರಡು ಸ್ಥಳಗಳಲ್ಲಿಯೂ; ಎರಡು ಕಾಲದಲ್ಲಿಯೂ (ಕ).

ಉಭಯತರು, ಉಭಯತ್ತರು, ಉಭಯರ್ತರು = ಎರಡು ಕಡೆಯವರು; ಇಬ್ಬರೂ: ಭುಜವನಾಸ್ಫೋಟಿಸುತಯುಭಯತರು ಖಂಡೆಯದಿ ಪೊಯ್ದಾಡಿ (ತುರಂಗ. ೬೬–೨೩); ಉಭಯತ್ತರವದಿರು (ತುರಂಗ. ೪೮–೪); ಸಂಗರದಿ ಉಭಯರ್ತರಾವು ಪೊಯ್ದಾಡಿ (ತುರಂಗ. ೭೫–೬); (ತುರಂಗ. ೭೫–೨೧; ೭೭ ಸೂಚನೆ ನೋ). [ಸಂ.]

**ಉಭಯದೇಸಿ** (ನಾ). ಒಂದು ವ್ಯಾಪಾರಿಸಂಸ್ಥೆಯ ಹೆಸರು: ಉಭಯದೇಸೀ ಮನೋರಂಜನಂ (ಕಇಅ. ೧೦೩–೮–೧೪; ?); ಮಾಧವ ಚಂದ್ರದೇವರ ಗುಡ್ಡಗಳು ಉಭಯದೇಸಿಗಳು ಮಾಡಿಸಿದ . . . ಬಸದಿ (ಮೈಆರಿ. ೧೯೪೨, ೨೫–೩; 13ನೆಯ ಶತ).

ಉಭಯನಾನಾದೇಸಿಗಳ್ = ಎರಡು ಸೀಮೆಗೂ ಸೇರಿದ ನಾನಾ ದೇಸೀಯರು (?): ಹಂನೊಂದುವರೆಯ ಉಭಯ ನಾನಾದೇಸಿಗಳುಂ (ಎಇ. XIV, ೨೫–೫೯; 1245). [ಉಭಯ + ದೇಸಿ]

**ಉಭಯಪಕ್ಷ** (ನಾ). ೧. ಎರಡು ಪಕ್ಷ: ಸ್ಥಾವರ ಜಂಗಮವೆಂಬುಭಯಪಕ್ಷ ಒಂದೇ (ಬಸವ. ೮೦೫). ೨. ಶತ್ರು ಮತ್ತು ಮಿತ್ರಪಕ್ಷ: ಉಭಯಪಕ್ಷಗಳ ಹೋರಾಟ ಇತರರಿಗೆ ಲಾಭ (ರೂಢಿ). [ಉಭಯ + ಪಕ್ಷ]

**ಉಭಯಪಾರ್ಶ್ವ** (ನಾ). ಎರಡು ಪಕ್ಕ ಅಥವಾ ಮಗ್ಗುಲು: ಉಭಯ ಪಾರ್ಶ್ವಂಗಳಿಗೆ ಹೋಗಿ ತಲ್ಲಣಿಸುತಂ (ಬಸವು. ೨೬–೨೭). [ಉಭಯ + ಪಾರ್ಶ್ವ]

**ಉಭಯಬಲ** (ನಾ). ಶತ್ರು ಮತ್ತು ಮಿತ್ರಸೈನ್ಯ: ಸುಭಟರ್ ಸುಭಟರೊಳುಜದಿಱಿದುಭಯ ಬಲಂ ಮೊಟ್ಟನಾದೊಡೆ (ಶಾಂತಿಪು. ೬–೮೨). [ಉಭಯ + ಬಲ]

**ಉಭಯಭಾಷೆ** (ನಾ). ೧. ಎರಡು ಭಾಷೆ. ೨. ಸಂಸ್ಕೃತ ಮತ್ತು ಕನ್ನಡ: ಉಭಯಭಾಷೆಯೊಳಂ ತೊಡರದೆ . . . ತಿಳಿಪಿದಪೆಂ (ಛಂದೋಂಬು. ೧–೫೮). ೩. ಸಂಸ್ಕೃತ ಮತ್ತು ಪ್ರಾಕೃತ. [ಉಭಯ + ಭಾಷೆ]

**ಉಭಯಭ್ರಷ್ಟ** (ನಾ). ಇಹಕ್ಕೆ ಮತ್ತು ಪರಕ್ಕೆ ಸಲ್ಲದವನು: ತಲೆಯಿಲ್ಲದಟ್ಟೆಗೆ ಪಟ್ಟವ ಕಟ್ಟುವ ಉಭಯಭ್ರಷ್ಟರ ಮೆಚ್ಚುವನೆ (ಬಸವ. ೬೨). [ಉಭಯ + ಭ್ರಷ್ಟ]

**ಉಭಯಮಾತ್ರಿಕೆ** (ನಾ). [ಛಂದ] ಎರಡು ಮಾತ್ರೆಗಳಷ್ಟು ಕಾಲ ಉಚ್ಚಾರವುಳ್ಳ ಅಕ್ಷರ; ದೀರ್ಘಾಕ್ಷರ: ಹ್ರಸ್ವಮದೇಕಮಾತ್ರಿಕಂ ದೀರ್ಘಮುಭಯಮಾತ್ರಿಕಂ (ಶಮದ. ೧೦). [ಉಭಯ + ಮಾತ್ರಿಕ]

**ಉಭಯಮುಖಿ** (ನಾ). = ಉಭಯತೋಮುಖಿ: ಸ್ವಾರ್ಥ ೯೦ ಗೊಟ್ಟೊಳ್ ಹಸ್ತಿರಥಮಿಟ್ಟೊಳ್ ಭೂಮಿದಾನಮುಂ ಉಭಯಮುಖಿಯುಂ ಕೊಟ್ಟಾಳ್ (ಇಅ. XI, ೧೨೫–೬; 778). [ಸಂ. ಉಭಯಮುಖೀ (ಉಭಯ + ಮುಖ + –)]

**ಉಭಯಮುಖಿಗುಡು** (ಕ್ರಿ). ಉಭಯಮುಖಿಯಾದ ಹಸುವನ್ನು ದಾನಮಾಡು: ಉಭಯಮುಖಿಗೊಟ್ಟ ಪ(ಫ)ಳಂ (ಇಅ. XVIII, ೯೦–೩೪; 999); ಉಭಯಮುಖಿಗೊಟ್ಟ ಫಲಂ (ಸೌ ಇ ಇ. XI–ii, ೧೨೬–೪೬; 1087). [ಉಭಯಮುಖಿ + ಕುಡು$_1$ (< ಕೊಡು)]

**ಉಭಯರಾಶಿ** (ನಾ). ೧. ಎರಡು ಗುಂಪು, —ಸಂಗಡ. ೨. ಸರ್ಕಾರಕ್ಕೆ ಮತ್ತು ರೈತರಿಗೆ ಸಂಬಂಧಿಸಿದ ರಾಶಿ (ಕಿ). ೩. [ಜ್ಯೋತಿ] ಎರಡು ರಾಶಿಗಳ ಸಂಧಿಕಾಲ. [ಉಭಯ + ರಾಶಿ]

**ಉಭಯಲಿಂಗ** (ನಾ). ೧. ಹೆಣ್ಣು ಮತ್ತು ಗಂಡಿನ ಲಕ್ಷಣವುಳ್ಳವನು: ಉಭಯಲಿಂಗನೆಂದೂ (ಪರಮಾತ್ಮನಿಗೆ) ವ್ಯವಹಾರ (ಹಿಂದಸಾ. ೨೪೯). ೨. [ವೀಶೈ] ಇಷ್ಟಲಿಂಗ ಮತ್ತು ಪ್ರಾಣಲಿಂಗ: ತನುವಿನ ಮೇಲಿಪ್ಪುದು ಇಷ್ಟಲಿಂಗವೆಂಬರು. ಆತ್ಮನ ನೆನಹಿನ ಮೇಲಿಪ್ಪುದು ಪ್ರಾಣಲಿಂಗವೆಂಬರು. ಇಂತೀ ಘಟಕ್ಕೂ ಆತ್ಮಕ್ಕೂ ಉಭಯಲಿಂಗ ಉಂಟೆ? (ಮೋಳಿಮಾ. ೨೭೬–೩೨). ೩. [ವ್ಯಾಕ] ಎರಡು ಲಿಂಗಗಳಲ್ಲಿ ವ್ಯವಹರಿಸಬಲ್ಲ ಶಬ್ದ. ☞ ಪುನ್ನಪುಂಸಕ, ಸ್ತ್ರೀನಪುಂಸಕ, ಪುಂಸ್ತ್ರೀಲಿಂಗಗಳಲ್ಲಿ ಒಂದು. [ಉಭಯ + ಲಿಂಗ]

**ಉಭಯಲಿಂಗಪ್ರಸಾದ** (ನಾ). [ವೀಶೈ] ಇಷ್ಟ ಮತ್ತು ಪ್ರಾಣಲಿಂಗಗಳ ಪ್ರಸಾದ: ನಿರುಪಮ ಗೂಢಲಿಂಗೈಕ್ಯನು ಉಭಯಲಿಂಗಪ್ರಸಾದಸುಖಿ (ಬಸಪು. ೩೩–೨). [ಉಭಯ + ಲಿಂಗ + ಪ್ರಸಾದ]

**ಉಭಯಲಿಂಗಸಂಗಿ** (ನಾ). [ವೀಶೈ] ಇಷ್ಟ ಮತ್ತು ಪ್ರಾಣಲಿಂಗದ ಸಂಗವುಳ್ಳವನು: ಅನುಭಯಲಿಂಗಸಂಗಿಯೆಂಬೆನು ಈ ನುಡಿ ಸುಡದಿಹುದೆ (ಬಸವ. ೩೮೧). [ಸಂ. ಉಭಯಲಿಂಗಸಂಗಿನ್]

**ಉಭಯಲಿಂಗಿ** (ನಾ). ೧. ಹೆಣ್ಣು ಮತ್ತು ಗಂಡಿನ ಲಕ್ಷಣವುಳ್ಳವನು: "ಪುಂಸ್ತ್ರೀ ಲಕ್ಷಣಗಳೆರಡೂ ಉಳ್ಳ (ಮನುಷ್ಯ, ಪ್ರಾಣಿ); ಉಭಯಲಿಂಗಿ" (Hermaphrodite. ಇಂಕನಿ). ೨. [ವ್ಯಾಕ] ಪುಲ್ಲಿಂಗ ಮತ್ತು ಸ್ತ್ರೀಲಿಂಗಕ್ಕೆ ಸೇರಿರುವುದು: (ಲಿಂಗಭೇದ ತೋರಿಸದೆ ಪುಂಸ್ತ್ರೀಜಾತಿಗಳಿಗೆ ಅನ್ವಯಿಸುವ) ಉಭಯಲಿಂಗಿ (Epicene. ಇಂಕನಿ). [< ಸಂ. ಉಭಯಲಿಂಗಿನ್]

**ಉಭಯಲೋಕ** (ನಾ). ೧. ಇಹಲೋಕ ಮತ್ತು ಪರಲೋಕ: ಉಭಯಲೋಕಹಿತದೊಳ್ ನೆಗಟ್ (ಕವಿರಾ. ೩–೧೯೯). ೨. ಭೂಲೋಕ ಮತ್ತು ಕೈಲಾಸ: ಎಂದಿನಂದದೊಳುಭಯಲೋಕಕೆ ಬರುತ ಹೋಗುತ ಶುಭಚರಿತನೇಕಾಂತರಾಮಯ್ಯ ಪ್ರವರ್ತಿಸಲು (ಬಸಪು. ೪೯–೬). [ಉಭಯ + ಲೋಕ]

**ಉಭಯವಂಶ** (ನಾ) = ಉಭಯಕುಲ: ಹರಿವ ನದಿ ತನ್ನಿಚ್ಚೆಯಲಿ ದಡವೆರಡ ಕೆಡಿಸುವವೋಲು ನಾರಿಯರುರವಣೆಗೆ ಕೈಗೊಟ್ಟು ನಡೆಸಿದಡುಭಯವಂಶವನು ನೆರಹುವಳು ನೀರೊಳಗೆ (ಕುವ್ಯಾಉ. ೩–೧೬). [ಉಭಯ + ವಂಶ]

**ಉಭಯವ್ಯಂಜನ** (ನಾ). ೧. ಹೆಣ್ಣು ಮತ್ತು ಗಂಡಿನ ಲಕ್ಷಣವುಳ್ಳವನು. ೨. ಹೇಡಿ: "ಉಭಯವ್ಯಂಜನಾ, ಪೋಟಾ—ಈ ೩ ಹೇ(ಪೇ)ಡಿ" (ಹಲಾಯು. ೬೧–೨೬೬). [ಉಭಯ + ವ್ಯಂಜನ]

**ಉಭಯವ್ಯತಿರೇಕ** (ನಾ). [ಕಾವ್ಯಮೀ] ವ್ಯತಿರೇಕಾಲಂಕಾರದಲ್ಲಿ ಒಂದು ಬಗೆ: ಉದಾ– ಪರಮೋದಯರಿರ್ಕ್ಕೆಮಲಾಕರಬೋಧಕರಿರ್ದ್ದನೇಕನುಂ ನೀನುಂ ಭಾಸ್ಕರನನಿಯತವೃತ್ತಕ್ರಮನರಸಾ ನಿನ್ನಂತೆ ನಿಯತವೃತ್ತಿಸ್ಥಿತನೈ ॥ ಉಭಯವ್ಯತಿರೇಕ (ಕವಿರಾ. ೩–೪೧). [ಉಭಯ + ವ್ಯತಿರೇಕ]

**ಉಭಯವ್ಯಾಕರಣ** (ನಾ). (ಸಂಸ್ಕೃತ ಮತ್ತು ಕನ್ನಡ) ಎರಡು ಭಾಷೆಗಳ ವ್ಯಾಕರಣ: ವಚೋವಿಭವಮೊಡನೆಸೆಯೆ ರಂಜಿಪನುಭಯವ್ಯಾಕರಣಪರಿಣತಂ ಕವಿರತ್ನಂ (ಅಜಿಪು. ೧೨–೪೩). [ಉಭಯ + ವ್ಯಾಕರಣ]

**ಉಭಯಶ್ರೇಣಿ** (ನಾ). [ಜೈನ] ಉತ್ತರ ಮತ್ತು ದಕ್ಷಿಣದ ಎರಡು ಸಾಲು, —ವಲಯ: ವಿಜಯಾರ್ಧದೊಳ್ ನಿಂದುದಜಿಂ ವಿಜಯಾರ್ಧಮೆಂಬಪೆಸರಂ ಪಡೆದುದಿದರ್ಕೆ ಪ್ರಥಮ ಮೇಖಳಾಸ್ಥಿತೋಭಯಶ್ರೇಣಿಯೊಳ್ ಕರ್ಮಭೂಮಿಯ ನಿಯೋಗಮೆ ನಿಯೋಗಂ (ಆದಿಪು. ೯–೧೨೧ವ); ಕಾಂಚನಪುರಮೆಂಬ ಪೊಬಲರಸಂ ಮಹೇಂದ್ರನೆಂಬೊನುಭಯಶ್ರೇಣಿಗಳ ನಾಳ್ದೊಂ (ಶಾಂತಿಪು. ೯–೧೧ ವ). [ಉಭಯ + ಶ್ರೇಣಿ]

**ಉಭಯಸಂಕಟ** (ನಾ). (ಕೆಲಸಮಾಡಿದರೂ ಕಷ್ಟ, ಬಿಟ್ಟರೂ ಕಷ್ಟ ಎಂಬ) ಇಕ್ಕಟ್ಟಿನ ಸ್ಥಿತಿ; ಪ್ರಾಣಸಂಕಟ: ಸಾಕುಸಾಕೀ ಉಭಯಸಂಕಟ ಇನ್ನು ತಿಳಿಯಿತು (ವಿಜದ. ೫೫). [ಉಭಯ + ಸಂಕಟ]

**ಉಭಯಸಂಸ್ಕಾರ** (ನಾ). [ವೀಶೈ] ಇಷ್ಟ ಮತ್ತು ಪ್ರಾಣಲಿಂಗಗಳ ಸಂಸ್ಕಾರ: ಆತನಂತಾನುಭಯಸಂಸ್ಕಾರಾತಿಶಯನಂ ಮಾಡಿ (ಬಸಪು. ೩೯–೧೪). [ಉಭಯ + ಸಂಸ್ಕಾರ]

**ಉಭಯಸಮ್ಮತ** (ಗು). ಇಬ್ಬರಿಗೂ ಸಮ್ಮತವಾದ, —ಒಪ್ಪಿಗೆಯಾದ: ಮಹಾಜನ ಆಯ್ದಿಂಬರು ಉಭಯಸಮ್ಮತದೊಳಿಟ್ಟು . . . ಇತ್ತೊರ್ (ಸೌ ಇ ಇ. IX–i, ೫೯–೮; ?). [ಉಭಯ + ಸಮ್ಮತ]

**ಉಭಯಸಾಧಾರಣ** (ನಾ). ಇಬ್ಬರಿಗೂ ಸಮಾನವಾದುದು: ಈ ಪ್ರಾರ್ಥನೆ ಉಭಯಸಾಧಾರಣವಾದುದು (ಶಾಕುಂತ. ೪೦–೧). [ಉಭಯ + ಸಾಧಾರಣ]

**ಉಭಯಸಾಮ್ಯ** (ನಾ). ಎರಡು ಪದಾರ್ಥಗಳಲ್ಲಿನ ಸಮಾನ ಧರ್ಮ: ವ್ಯತಿರೇಕಮುಭಯಸಾಮ್ಯಪ್ರತೀತಿಯಂ ತೋಱಿ ಭೇದಮಂ ಮಾಡ್ಪುದು (ಕಾವ್ಯಾವ. ೬೪೨). [ಉಭಯ + ಸಾಮ್ಯ]

**ಉಭಯಾಚಾರ** (ನಾ). [ವೀಶೈ] ಸದಾಚಾರ ಮತ್ತು ಸಮಯಾಚಾರ: ಗುರುವಿನಲ್ಲಿ ಸದಾಚಾರ. . . ಸಮಯಾಚಾರ ಲಿಂಗದಲ್ಲಿ ಅನುದಿನವೇಳೆ ಈ ಉಭಯಾಚಾರದಿಂದ ತಿಳಿದ ತಿಳಿವು ಲಿಂಗದಲ್ಲಿ ಅನುದಿನವೇಳೆ ಬೇಱೆ ತೋಱಲಿಲ್ಲ (ಬಸವ. ೮೧೯). [ಉಭಯ + ಆಚಾರ]

**ಉಭಯಾಬ್ಧಿ** (ನಾ). ಎರಡು ಸಮುದ್ರಗಳು: ಉಭಯಾಬ್ಧಿರವದಿಂ . . . ಇಱಿದು (ಶಾಂತಿಪು. ೬–೮೨). [ಉಭಯ + ಅಬ್ಧಿ]

**ಉಭಯಾಯತ್ತ** (ನಾ). ರಾಜ ಮತ್ತು ಸಚಿವರಿಬ್ಬರಿಗೂ ಸಮಾನವಾದುದು: ಪ್ರಭುಸಿದ್ಧಿಯನ್ನು ಅರ್ಥಶಾಸ್ತ್ರಕಾರರು ರಾಜಾಯತ್ತ, ಸಚಿವಾಯತ್ತ, ಉಭಯಾಯತ್ತ ಎಂದು ಮೂರು ಬಗೆ ವಿಂಗಡಿಸುತ್ತಾರೆ (ರಾಕ್ಷಮು. ೪೬). [ಉಭಯ + ಆಯತ್ತ$_2$]

**ಉಭಯಾಯಿ** (ಗು). ೧. ಇಹ ಮತ್ತು ಪರಗಳಿಗೆ ಯೋಗ್ಯವಾದ. ೨. ಇಬ್ಬರಿಗೂ ಹಿತವನ್ನು ಬಯಸುವ. 'ಉಭಯಾಯಿತನ' ಪರಾ. [< ಸಂ. ಉಭಯಾಯಿನ್]

**ಉಭಯಾಯಿತನ** (ನಾ). ಇಬ್ಬರಿಗೂ ಹಿತವನ್ನು ಬಯಸುವುದು: ಕಾಯಿದನು ಕೆವಲನ್ವಯವನುಭಯಾಯಿತನದಲಿ ತನ್ನ ಭಕ್ತನಿಕಾಯ ಲಂಪಟತನದಿ (ನಿಭಾಗ. ೮-೨೧-೫೪). [ಉಭಯಾಯಿ + -ತನ]

**ಉಭಯಾರೂಢ** (ನಾ). [ವೀಶೈ] ಜ್ಞಾನ ಮತ್ತು ಕ್ರಿಯೆಯಲ್ಲಿ ಪರಿಣತನಾದವನು : ತನ್ನ ತಾನಜೀವ ಮನಕ್ಕೆ ಉಭಯ[ಯಾ]ರೂಢ ನಾಗಿರಬೇಕು (ಮೋಳಿಮಾ. ೭೩-೨೮೮). [ಉಭಯ + ಆರೂಢ]

**ಉಭಯಾಲಂಕಾರ** (ನಾ). [ಕಾವ್ಯಮೀ] ಶಬ್ದಾಲಂಕಾರ ಮತ್ತು ಅರ್ಥಾಲಂಕಾರ: ಅಗ್ನಿಪುರಾಣ ಸರಸ್ವತೀಕಂಠಾಭರಣಗಳಲ್ಲಿ ಶಬ್ದಾರ್ಥಾಲಂಕಾರ (ಅಥವಾ ಉಭಯಾಲಂಕಾರಗಳೂ) ಉಂಟೆಂದು ಉಕ್ತವಾಗಿದೆ (ಕೈಪಿಡಿ. ೨೫೧). [ಉಭಯ + ಅಲಂಕಾರ]

**ಉಮತ್ತ** 'ಉನ್ಮತ್ತ' ನೋ.

**ಉಮದಾ** (ನಾ). ಘನತೆ ಅಥವಾ ಗೌರವವುಳ್ಳ ವ್ಯಕ್ತಿ (ಕ). 'ಉಂದ' ಪರಾ. [← ಅರ. ಉಮ್ದಾ ; ಮರಾ. ಹಿಂ. ಉಮದಾ = ಶ್ರೇಷ್ಠ, ವಿಶಾಲ ಮನಸ್ಕ]

**ಉಮರಾ**, ಉಮರಾವ, ಉಮರಾವು, ಉಮ್ರಾ (ನಾ). ದೊಡ್ಡ ಮನುಷ್ಯ ; ಸರದಾರ : ಉರ್ದುಶಬ್ದಗಳನ್ನೂ ಕನ್ನಡ ಭಾಷಾನುಗುಣ ವಾಗಿ ಮಾರ್ಪಡಿಸಿಕೊಂಡಿದ್ದಾನೆ . . . 'ಉಮರಾ' ಎಂಬುದನ್ನು ಉಮ ರಾವು ಎಂದೂ, ಗನೀಂ (ವೈರಿ ಎಂಬ ಅರ್ಥದಲ್ಲಿ) ಎಂಬುದನ್ನು ಗನೀಬ ಎಂದೂ ಮಾರ್ಪಡಿಸಿಕೊಂಡಿದ್ದಾನೆ (ಕಸಾಪ. ೨೨-೬೧) ; ದೊಡ್ಡ ಉಮರಾಗಳನ್ನೂ ತನ್ನ ಮನೆಗೆ ಔತಣಕ್ಕೆ ಕರೆದಿದ್ದನು (ಕಪಾಕಂ. ೬೪). **ಉಮರಾವ** : ಎಡಬಲದಲ್ಲಿ ಉಮರಾವರೂ ಸೇನಾನಿಗಳೂ ರಾಯ ಭಾರಿಗಳೂ . . . ಕುಳಿತಿದ್ದರು (ನೂರಜ. ೧೦). **ಉಮರಾವು** : ಮೇಲಿನ (ಕಸಾಪ. ೨೨-೬೧) ರ ಪ್ರಯೋಗವನ್ನು ನೋಡಿ. **ಉಮ್ರಾ** : ಸೇನೆಯ ದಳದ ಉಮ್ರಾಗಳೂ ಬಾದಷಹನ ಆಗಮನವನ್ನು ನೀರವವಾಗಿ ನಿರೀಕ್ಷಿಸಿ ಕೊಂಡಿದ್ದಾರೆ (ಕೋಹಿನೂ. ೨೮). [← ಅರ. ಉಮರಾ, ಉಮರಾಹ್]

**ಉಮರಾವ** 'ಉಮರಾ' ನೋ.

**ಉಮರಾವು** 'ಉಮರಾ' ನೋ.

**ಉಮರು** (ನಾ). ಸೆಕೆ; ಬೇಗೆ ; ತಾಪ : ಮಳೆ ಬರುವಹಾಗಿದೆ, ಬಿಸಿಲಿನ ಉಮರು ಹೆಚ್ಚಾಗಿದೆ (ರೂಢಿ). [?]

**ಉಮರುಬೊಕ್ಕೆ** (ನಾ). (ಉಕ). ಸೆಕೆಗುಳ್ಳೆ ; ಬೇಗೆಯಿಂದ ಏಳುವ ಬೊಕ್ಕೆ : ಬೇಸಿಗೆಯಲ್ಲಿ ಮೈಮೇಲೆ ಉಮರುಬೊಕ್ಕೆ ಏಳುತ್ತವೆ (ರೂಢಿ). [ಉಮರು + ಬೊಕ್ಕೆ$_1$]

**ಉಮಾಧವ** (ನಾ). ಪಾರ್ವತೀಪತಿ ; ಶಿವ : ಪಿಂಗದೆ ಬಂದಂ ಯುತ ಚತುರಂಗಂ ಮಾಧವನುಮಾಧವಂ ಮೆಚ್ಚುವಿನಂ (ಗಿರಿಕ. ೧೧-೬೮). [ಸಂ. (ಉಮಾ + ಧವ)]

**ಉಮಾಪುತ್ರ** (ನಾ). ೧. ಪಾರ್ವತಿಯ ಮಗ. ೨. ಗಣಪತಿ. ೩. ಷಣ್ಮುಖ. [ಸಂ. (ಉಮಾ + ಪುತ್ರ)]

**ಉಮಾವರ** (ನಾ). ೧. ಪಾರ್ವತಿಯ ಗಂಡ; ಶಿವ. ೨. ಕೀರ್ತಿವಂತ: ವಿದಿತೋಮಾವರನಾತ್ತಭುಜಂಗನಲ್ಲನೇ ಭೂಪಾಲಂ (ಕವಿರಾ. ೩-೧೧೨). [ಸಂ. (ಉಮಾ + ವರ)]

**ಉಮಿ** 'ಉಮ್ಮಿ' ನೋ.

**ಉಮುವಿಧಿ** (ನಾ). 'ಉಂ' ಎಂಬ ಸಮುಚ್ಚಯವು ಸೇರುವ ಕ್ರಮ, —ನಿಯಮ : ಅಮುಮೆಂದುಸಿರ್ವ ಸಮುಚ್ಚಯದುಮುವಿಧಿ ನಿರುತಂ ದ್ವಿತೀಯೆಯೊಳ್ ಪೊಕ್ಕಿರ್ಕುಂ (ಶಮದ. ೧೨೨). [ಉಮ್ಮು$_1$ + ವಿಧಿ]

**ಉಮುಳ್** 'ಉಮುಱು' ನೋ.

**ಉಮುಱು**, ಉಮುಳ್ (ಕ್ರಿ). ಉಗುಳು ; ಮುಕ್ಕುಳಿಸು : ಚಂದ್ರ ಮುಖಿ ಸುಧಾರಶ್ಮಿ ಸೀಧು ರಸಧಾರೆಯನಂದುಮುಱಿ (ಲೀಲಾವ. ೨-೧೭); ಉಮು[ಪಾಠಾಂ. ಒಮು]ಱ್ದು ಭವಮದ ಕರ್ದಮಮಂ ಕ್ರಮದೊಳೆ ಕಾನೀಕ ಜಾನುದಘ್ನ ಮನೆ ತುರಂಗಮ ಲಾಳಾಜಳದ ಪೊನಲ್ (ಅರ್ಧನೇ. ೩-೮೭). **ಉಮುಳ್** : ಶೇಷನ ಕಂಠನಾಳಸಂವಳನದೆ ನಿನ್ನ ನಂಜನು ಮುಳಿಂದು ಮುಳಿಪ್ಪ ಪೊಡರ್ಪನಾವಗಂ . . . ಕಲಿ ವಿಷ್ಣುವರ್ಧನಂ (ಎಕ. VI, ಕಡೂರು. ೫೧-೭ ; 1148). 'ಉಗುಳು' ಪರಾ. [?]

**-ಉಮೆ$_1$** (ಪ್ರ). ಭಾವನಾಮ ಪ್ರತ್ಯಯಗಳಲ್ಲಿ ಒಂದು : ಚೇತನ ಭಾವದೊಳಿಕೆ ತನಮುಮೆಯಕ್ಕು . . . ಉಮೆಗೆ- ತಕ್ಕುಮೆ (ಶಮದ. ೨೧೧ ಪ್ರಯೋ).

**ಉಮೆ$_2$** (ನಾ). ೧. ಪಾರ್ವತಿ : "ಮಾದೇವಿ ಮಾಕಾಳಿ . . . ಉಮೆಯ ನಾಮಂ" (ಕವಿಕಂ. ೧೯). ೨. ಕೀರ್ತಿ : ವರವಿತ್ತೇಶನುಮೇಶನನ್ತ ಖಿಳದಿಕ್ಪಾಳಪ್ರಭಾವಾನ್ವಿತಂ ನರಸಿಂಹಪ್ರಿಯ ಮಂತ್ರಿಮಂತ್ರ ವಿಳಸ ದ್ವಿದ್ಯಾಚಣಂ ಬೂಚಣಂ (ಎಕ. V, ಅರಸೀ. ೧೭೨-೩೦ ; 1167). ೩. ಎಳ್ಳಗಸೆ ಗಿಡ : "ಅತಸೀ, ಉಮಾ, ಕ್ಷಮಾ - ಈ ೩ ಎಳ್ಳಗಸೆ" (ಹಲಾಯು. ೯೫-೪೨೮). [ಸಂ. ಉಮಾ]

**ಉಮೇದ** 'ಉಮೇದು' ನೋ.

**ಉಮೇದವಾರಿ** 'ಉಮೇದುವಾರಿ' ನೋ.

**ಉಮೇದಿ** 'ಉಮೇದು' ನೋ.

**ಉಮೇದು**, ಉಮೇದ, ಉಮೇದಿ (ನಾ). ೧. ಉತ್ಸಾಹ; ಹುರುಪು : ಕಾಮನ ಹಬ್ಬದಲ್ಲಂತೂ . . . ಅವರವರ ಉಮೇದು ಹೊರಹೊಮ್ಮು ತ್ತಿತ್ತು (ಚಿಕ್ಕದೇ. ೨೬) ; ಉತ್ಸವವು ಮುಗಿಯಿತು. ಉಮೇದು ಮಾತ್ರ ಯಾರದೂ ತೀರಲಿಲ್ಲ (ಭದ್ರಾಯು. ೫೬). ೨. ಭರವಸೆ ; ವಿಶ್ವಾಸ (ಕ). ೩. ಅಪೇಕ್ಷೆ; ಆಕಾಂಕ್ಷೆ. 'ಉಮೇದುವಾರ' ಪರಾ. **ಉಮೇದ** : ೧. "ಉಮೇದ - ಹೌಸು, ಆನಂದ" (ಜಾನಕೋ. ೨೧) ; ಲಾಭವು ಹೆಚ್ಚು ಹೆಚ್ಚಾದಂತೆ ಅದನ್ನು ಬೆಳೆಸುವುದಕ್ಕೆ ಇವರಿಗೆ ಉಮೇದ ಬಂತು (ಮುಂಬಯಿ. ೬-೧೨೫). **ಉಮೇದಿ** : ೧. ತಾಯಿ ಹೇಳಿದ ಕೆಲಸಗಳನ್ನು ಉಮೇದಿಯಿಂದ ಮಾಡಿದಳು (ಅನ್ನ. ೧೩೪) ; ನಾಟಕ ಕಟ್ಟಬೇಕೆಂಬ ಉಮೇದಿ ತುಂಬಿಕೊಂಡಂತೆ ತೋರುತ್ತದೆ (ಗಂಗಾಸಾ. ೨೬). [← ಪಾರ. ಅರ. ಉಮ್ಮೆದ್, ಉಮಾದ್ = ಭರವಸೆ]

**ಉಮೇದುವಾರ** (ನಾ). ೧. ಉತ್ಸಾಹಶಾಲಿ ; ಭರವಸೆಯುಳ್ಳವನು (ಕ). ೨. ಕೆಲಸವನ್ನು ಕಲಿಯಬಯಸುವವನು ; ತರಬೇತಿನಲ್ಲಿರು ವವನು : ಕೆಲಸವನ್ನು ಕಲಿಯಲಿಚ್ಛಿಸುತ್ತಿದ್ದ ಉಮೇದುವಾರರು (Apprentices) (ಕ್ರಿಯಾಶಿ. ೯೩) ; ತರಬೇತಿ ಪಡೆಯುವ ಉಮೇದು ವಾರರು (ನಾಪೋಲೀ. ೩೭). ೩. ಹುದ್ದೆ, ಅಧಿಕಾರ, ಸದಸ್ಯತ್ವ, ಚುನಾವಣೆ, ಪರೀಕ್ಷೆ ಅಥವಾ ಬಿರುದಿಗಾಗಲಿ ಅಪೇಕ್ಷಿಸಿ ಅರ್ಜಿ ಸಲ್ಲಿಸುವವನು ; ಅಭ್ಯರ್ಥಿ : ಓಟುಗಳನ್ನು ಗುರುತುಮಾಡುವ ಚೀಟಿ ಗಳಲ್ಲಿ ಹೆಸರಿನೊಡನೆ ಉಮೇದುವಾರರ ಯಾವುದಾದರೂ ಒಂದು ಚಿಹ್ನೆ ಯನ್ನು ಸೂಚಿಸುವುದೂ ಒಂದು ಪದ್ಧತಿ (ರಾಯಕ. ೯೦) ; ದಿವಾನ್ ಬಹದ್ದೂರ ಆಗಲು ಉಮೇದುವಾರರಾಗಿರತಕ್ಕವರು (ಕಮಕ. ೧೪೩). [ಉಮೇದು + -ವಾರ$_4$]

**ಉಮೇದುವಾರಿ**, ಉಮೇದವಾರಿ (ನಾ). ೧. ಭರವಸೆ; ನಿರೀಕ್ಷೆ (ಕ). ೨. ಕೆಲಸವನ್ನು ಕಲಿಯಲು ಮುಂದೆ ಬರುವುದು; ತರಬೇತಿಗಾಗಿ ಬಯಸುವುದು: ಉಮೇದುವಾರಿ ಶಿಕ್ಷಕನಾಗಿ ಹರಲಾಲ ಬಂದು ಒದಗಿದನು (ಇಪ್ಪಕ. ೩೦೧). **ಉಮೇದವಾರಿ**: ಪರೀಕ್ಷೆ ಇಲ್ಲ; ಉಮೇದವಾರಿ ಇಲ್ಲ; ಕೆಲಸವಿಲ್ಲ (ಇಪ್ಪಕ. ೪೪೭).
[← ಅರ. ಮರಾ. ಉಮೇದ್‌ವಾರೀ; ಹಿಂ. ಉಮ್ಮೇದವಾರೀ]

**ಉಮೇದುವಾರಿಕೆ** (ನಾ). ಹುದ್ದೆ, ಅಧಿಕಾರ, ಸದಸ್ಯತ್ವ, ಚುನಾವಣೆ, ಪರೀಕ್ಷೆ ಅಥವಾ ಬಿರುದಿಗಾಗಲಿ ಅಪೇಕ್ಷಿಸಿ ಅರ್ಜಿಯನ್ನು ಸಲ್ಲಿಸುವುದು: ನಮ್ಮ ಉಮೇದುವಾರಿಕೆ ಹಕ್ಕನ್ನು ರದ್ದು ಮಾಡುವ ಉದ್ದೇಶದಿಂದಲೋ ಎಂಬಂತೆ ಬದಲಾಯಿಸಿದರು (ಕಲಸ. ೨೬೦). [ಉಮೇದುವಾರ + -ಇಕೆ]

**ಉಮೇಶ** (ನಾ). ೧. ಉಮೆಯ ಗಂಡ; ಶಿವ. ೨. ಕೀರ್ತಿಗೆ ಒಡೆಯ: ಈಶ್ವರನಂತುಮೇಶನಾಶಾರದನೀಂದ್ರನಂತಧಿಕದಾನಂ . . . ಆಹವಮಲ್ಲವಲ್ಲಭಂ (ಎಕ. VII, ಶಿಕಾರಿ. ೧೧೮–೬; 1054).
[ಸಂ. (ಉಮಾ + ಈಶ)]

**ಉಮ್ಮ**$_1$ (ನಾ). ಮುತ್ತು; ಮುದ್ದು; ಚುಂಬನ: ಮಗುವಿನ . . . ಗುಳಿಬೀಳುತ್ತಿದ್ದ ಕೆನ್ನೆಗೆ 'ಉಮ್ಮ' ಕೊಟ್ಟು (ರಂಗವ. ೧೩೮); 'ಜಾಣಮರಿ ನನ್ನಣ್ಣ' ಎಂದು . . . . ಉಮ್ಮ ಕೊಟ್ಟಳು (ಅನ್ನಪೂ. ೮). [?]

**ಉಮ್ಮ**$_2$ 'ಉಮ್ಮೆ' ನೋ.

**ಉಮ್ಮಗುರು** (ನಾ). ಉಷ್ಣ ಅಥವಾ ಸೆಕೆಯಿಂದ ಏಳುವ ಕುರು, —ಬೊಕ್ಕೆ: ಬೇಸಿಗೆಯಲ್ಲಿ ಮಗುವಿನ ತಲೆಗೆ ಉಮ್ಮಗುರುವಾಯಿತು ಸ್ವಲ್ಪ ಜ್ವರವೂ ಒಮ್ಮೊಮ್ಮೆ ಬರಹತ್ತಿದವು (ಚೀನಬಾ. ೧೧೮).
[ಉಮ್ಮ$_2$ (< ಉಮ್ಮೆ) + ಕುರು$_1$]

**ಉಮ್ಮಗೆ** 'ಉಮ್ಮಿಗೆ' ನೋ.

**ಉಮ್ಮಚಿಗೆ** (ನಾ). ಒಂದು ಊರಿನ ಹೆಸರು: ಉಮ್ಮಚಿಗೆಯಂ ಸರ್ವಾಭ್ಯಂತರ ಸಿದ್ಧಿಯಾಗಿ . . . ಮಾಡಿ (ಎಇ. XX, ೬–೧೧; 1012); ಉಮ್ಮಚಿಗೆಯ ಸೇನಿಸೆಟ್ಟಿ ಹದ್ದಳ ಕಲ್ಲಿಸೆಟ್ಟಿ (ಕಕುಲ. ೬–೭೯; 1216).
[?]

**ಉಮ್ಮಚ್ಚ**$_1$ (ನಾ). ಕೋಪ; ಅಸಮಾಧಾನ: ಮುಜಿವುದಾ ಮನದುಮ್ಮಚ್ಚಮನಜ್ಜ[ಪಾಠಾಂ. ಮ್ಮಚ್ಚರಮಜ್ಜ] ನಿಮ್ಮನೆರೆಯಲೆ ಬಂದೆಂ (ಪಂಪಭಾ. ೧೨–೫೪); ತನ್ನನುದ್ಘಾಟಿಸಿ ನುಡಿದೊಡುಮ್ಮಚ್ಚ [ಪಾಠಾಂ. ಚ್ಚರ]ದೊಳ್ ಮೆಚ್ಚದೆ . . . ಇಂತೆಂದಂ (ಪಂಪಭಾ. ೧೨–೧೭೬ ವ); ಒಂದೊಂದರ್ಕೆ ಮಚ್ಚರಿಸಿದಂತೆ ಪಚ್ಚು ಪಸರಿಸಿ ನಿಚ್ಚಯ್ಸಲಾಜದುಮ್ಮಚ್ಚದೊಳಚ್ಚಿಗಂಗೊಂಡು(ಸುಕುಮಾ. ೩–೬ ವ); ಉಮ್ಮಚ್ಚದ ಪೆರ್ಚಿನಿಂದುರಿವ ಕಿರ್ಚು (ನೇಮಿಪು. ೩–೧೬೧); ತೆಱಲುಮ್ಮಚ್ಚಮಿರದೊದವೆ ಮನದೊಳೆ (ಪಾರ್ಶ್ವಪು. ೧೦–೧೧೪).
[ಪ್ರಾದೇ. ಉಮ್ಮಚ್ಛ = ಕ್ರೋಧ, ಅಸಂಬದ್ಧ, ಭಂಗೀಭಣಿತಂ]

**ಉಮ್ಮಚ್ಚ**$_2$ (ನಾ). ೧. ದಿಕ್ಕುತೋರದ ಸ್ಥಿತಿ; ದಿಗ್ಭ್ರಮೆ: ಮೂಗರವೋಲ್ ಮೌನದೊಳೊಂದಿ ಪಚ್ಚಬಗೆಯಿಂದುಮ್ಮಚ್ಚಮಂ ತಾಳ್ದಿದಂ (ಪಂರಾಮಾ. ೬–೧೦೦). ೨. ದುಃಖ; ದುಗುಡ; ಖಿನ್ನತೆ: ಕುಮಾರನಾತ್ಮಜನಕಂಗುತ್ತರಂಗುಡಲಣ್ಮದೆ ಪೆರ್ಚಿದುಮ್ಮಚ್ಚದಿನಶ್ರುಜಲಗಳಿತಲೋಚನ ಕುಶೇಶಯನುಂ (ನೇಮಿಪು. ೨–೫೮ ವ); ಅಂ ಮೃಗಮೆಂದೆ ಬಗೆದು ಪಾಪಕರ್ಮನೆಂ ನಿಮ್ಮನೆಚ್ಚೆಂ ಈವುಮ್ಮಚ್ಚಮನಿನ್ನೇ ತಜಿರೊಳ್ ನೀಗುವೆಂ (ನೇಮಿಪು. ೧೪–೪೪ ವ). ೩. ಉತ್ಸಾಹ; ಹುರುಪು: ಆತ್ಮಪ್ರಿಯೆಯ ಬಯಕೆಯಂ ತೀರ್ಚುವುಮ್ಮಚ್ಚದಿಂ (ನೇಮಿಪು. ೫–೧೦೭ ವ). [< ಸಂ. ಉನ್ಮತ್ತ ?]

**ಉಮ್ಮಚ್ಚರ** (ನಾ). ಅತಿಶಯವಾದ ಕೋಪ, —ಅಸಮಾಧಾನ: ಮದ್ರರಾಜನುಮ್ಮಚ್ಚರದೊಳುಮ್ಮನೆ ಬೆಮರ್ತುರ್ ಕಿನಿಸಿ ಕಿಂಕಿರಿವೋಗಿ (ಪಂಪಭಾ. ೧೨–೯೧ ವ).
[ಪ್ರಾ. ಉಮ್ಮಚ್ಚರ < ಸಂ. ಉನ್ಮತ್ಸರ]

**ಉಮ್ಮಡಿಕೆ** (ನಾ). ಸೊಕ್ಕು; ಗರ್ವ; ಉನ್ಮತ್ತತೆ (?): ಒಮ್ಮಾದರೂ ನಿನ್ನ ನೆಮ್ಮದೆ ಅವಾಗವಿಮ್ಮಡಿ ದುಷ್ಕರ್ಮ ರಮ್ಮಿಸಿದೆ ಉಮ್ಮಡಿಕೆಯಿಂದಹಮ್ಮತಿಯೊಳಗಿದ್ದು ಗಿಮ್ಮನೆ ಸುತ್ತಿದೆ (ತೀರ್ಥಮ. ೧೪೮).
[< ಸಂ. ಉನ್ಮಾದಿಕಾ ?]

**ಉಮ್ಮತ** 'ಉಮ್ಮತ್ತ' ನೋ.

**ಉಮ್ಮತ್ತ**, ಉಮತ್ತ, ಉಮ್ಮತ, ಉಮ್ಮತ್ತಿ (ನಾ). ಮದ್ದುಗುಣಿಕೆ ಗಿಡ; ದತ್ತೂರಿಗಿಡ: "ಉಮ್ಮತ್ತ ಮದ್ದುಗುಣಿಕೆಯುಮಕ್ಕುಂ" (ಕವಿಕಂ. ೨೦೯); ಉಮ್ಮತ್ತದ ಸೊಪ್ಪಿನ ರಸ ಒಂದು ಬಳ್ಳದಲ್ಲಿ ಒಂದುಮಾನ ಎಣ್ಣೆಯ ಹನಿಸಿ . . . ಮಂಡೆ ಕೂದಲು ಬೆಳೆವುದು (ವೈದ್ಯಸಾ. II, ೧೩೯); ಉಮ್ಮತ್ತ ಈ ಬೇರಂ ಅಕ್ಕಿಗಚ್ಚಿನಲ್ಲಿ ತೇದು ಕಿಬ್ಬಸುರಂ ಪೂಸಲು ಮೂತ್ರ ಸುಲಭವಾಗಿ ಬಿಡುವುದು (ವಿದ್ಯವಿ. ೩). **ಉಮತ್ತ**: "ಮರ್ದುಗುಣಿಕೆಯೆಂದು ಉಮತ್ತಂ[ಪಾಠಾಂ. ಉನ್ಮತ್ತ]" (ಕಶಸಾ. ೨೫–೫೩೪). **ಉಮ್ಮತ**: ಉನ್ಮತ್ತ – ಉಮ್ಮತ (ಶಮದ. ೨೬೫ಪ್ರಯೋ); ಉಮ್ಮತದಂತುಪಭೋಗದೊಳ್ ಮರುಳ್ಮಾಡಿ(ಧರ್ಮನಾ. ೧–೧೧೨ ವ); ಜಡಮತಿಗೆ ಮರುಳುಮ್ಮತವನಿಕ್ಕಿದೊಡೆ ಸುಕಲೆಯಪ್ಪುದೆ (ಜೈಮಿಭಾ. ೨–೩೩). **ಉಮ್ಮತ್ತಿ**: ಬಸರೀ ಆಗದಿದ್ದರೆ ಹೆಣ್ಣಿಗೆ ಉಮ್ಮತ್ತಿಕಾಯಿನ ರಸವನ್ನು ಕುಡಿಸುತ್ತಿದ್ದರು (ಹುಟ್ಟಿಹ. ೧೬); ಉಮ್ಮತ್ತಿ, ಹೊಗೇಸೊಪ್ಪು, ಬಿರಟು (ನಮ್ಮನು. ೨೩೮).
[ಪ್ರಾ. ಉಮ್ಮತ್ತ < ಸಂ. ಉನ್ಮತ್ತ]

**ಉಮ್ಮತ್ತಿ** 'ಉಮ್ಮತ್ತ' ನೋ.

**ಉಮ್ಮದ** (ನಾ). = ಉನ್ಮದ: "ಉನ್ಮದ – ಉಮ್ಮದ" (ತದ್ಭಕೋ. ೪).
[< ಸಂ. ಉನ್ಮದ]

**ಉಮ್ಮದಾ** (ನಾ). ಯೋಗ್ಯನಾದವನು; ಉತ್ತಮನಾದವನು: ಅವರು ಬಹಳ ಉಮ್ಮದಾ ಸಾಹೇಬರು (ರಾಜೇಂದ್ರ. ೧೨೭); ಉಭಯ ಕಡೆಯಿಂದಲೂ ಉಮ್ಮದಾ ಜನರು ಬೇಕಿಲ್ಲ (ರಾಜೇಂದ್ರ. ೧೨೭).
[← ಅರ. ಮರಾ. ಹಿಂ. ಉಮ್ದಾ = ಶ್ರೇಷ್ಠ]

**ಉಮ್ಮನೆ** (ಅ). ಬಿಸಿಬಿಸಿಯಾಗಿ: ಪಂದೆಯಂ ಪಾವಡರ್ದಂತುಮ್ಮನೆ ಬೆಮರ್ತುರ್ (ಪಂಪಭಾ. ೨–೮೨ ವ); ಕೃಷ್ಣೋರಗನಂ ಪಿಡಿದ ಬೆಳ್ಳಾಳಂತುಮ್ಮನೆ ಬೆಮರುತ್ತುಮಿರ್ದ ದುಶ್ಶಾಸನನುಮಂ (ಪಂಪಭಾ. ೬–೫); ಪಾವಂ ದಾಂಟದರಂತುಮ್ಮನೆ ಬೆಮರ್ತುರ್ (ಬಂಹರಿ. ೯–೧೦ ವ).
[ಉಮ್ಮ + -ಅನೆ$_1$]

**ಉಮ್ಮಯ** 'ಉಮ್ಮಹ' ನೋ.

**ಉಮ್ಮಲು**, ಉಮ್ಮುಲು (ನಾ). ೧. ಉಗುಳು; ಶ್ಲೇಷ್ಮ; ಕಫ (ಕ). ೨. ಉಬ್ಬಸ; ದಮ್ಮು (ಕ). **ಉಮ್ಮುಲು**: ೧. (ಕ).
[< ಉಮುಱ್]

**ಉಮ್ಮಹ**, ಉಮ್ಮಯ, ಉಮ್ಮಾಯ, ಉಮ್ಮಾಹ (ನಾ). ಹೆಚ್ಚು ಉತ್ಸಾಹ, —ಸಂತೋಷ, —ಸಂಭ್ರಮ: ಶ್ರೀಪದಂ ತನ್ನ ಸೋಂಕಿದವೆಂಬುಮ್ಮಹದಿಂ ಶಿವನ ಮೆಲ್ಲಡಿಗಳ್ಗೆ ತನ್ನ ಕರಪಲ್ಲವಮಂ ಪಾಸುತುಂ ಬರೆ (ನಂಬಿರ. ೧೨–೯೯); ಬಹಳ ಶೋಕದಲಖಿಳಜನವುಮ್ಮಹವ ಬಿಸುಟರು (ಕುವ್ಯಾಕ. ೧೭–೩); ಅಕುಟಿಲರ ಮನಮಚ್ಚು ಸಿರಿಹರಿಭಕುತರುಮ್ಮಹದಚ್ಚು ಶಿವಸೇವಕರ ಮೆಚ್ಚು (ತೊರರಾ. ೧–೧–೧೧); ಕಳಕಳಕನ್ನಡಿಗಳಿಂದೊಳಪೊಕ್ಕರುಮ್ಮಹದೊಳು (ಪರಶು. ೮–೩೨).

ಉಮ್ಮಾಯ$_1$ : ಅಮೃತರಸಮಂ ಉಮ್ಮಾಯದೊಳೀಂಟಿ (ಪ್ರಭುಪು. ೩-೨೦) ; ನಮ್ಮೊಡೆಯಕುವರರುಂ ಸಾಯೆ ನಾನೇಕೆಂದು ಸಚಿವ ಕೊರಲ್ಗೊಯ್ದಿರಿಸಲು ಅಮ್ಮಮ್ಮ ನನ್ನಿಂದಲಿಂತಾಯಿತೆನ್ನುತಂ ಉಮ್ಮಾಯದಿ ತಿರುಕೊಳವಿನಾಚಿ ತಲೆಯರಿದೀಯೆ (ಪ್ರಭುಪು. ೭-೧೪೫) ; ಉಮ್ಮಾಯದಿಂ ವಿಶ್ವ ಉದ್ಭವ ಮಾಡುವ . . . ವಿಷ್ಣು (ಪ್ರಸಭಾ. ೩-೩). **ಉಮ್ಮಾಯ** : ಹೆಣ್ಣಾಲಾಬಾನಾ ಉಣತಿರಲೆ ಹೆಣ್ಣನ ತಾಯಿ ಉಮ್ಮಾಯದ ನಗಿಯ ನಗತಿರಲೆ (ಮಲ್ಲಿಗೆ. ೫೦). **ಉಮ್ಮಾಹ** : ತಮ್ಮ ಕಂಥೆಯ ನದಿಯಮೇಲೆ ಗದ್ದುಗೆಯಿಕ್ಕಿಯುಮ್ಮಾಹದಿಂ ಕುಳಿತು ದಾಂಟಲು (ಗುರುಚಾ. ೧೫-೩೧).
[ಪಾಲಿ. ಉಮಾಹ ; ಹಿಂ. ಉಮಾಹ್ = ಉತ್ಸಾಹ, ಉಬ್ಬು]

**ಉಮ್ಮಳ** (ನಾ). ೧. ದುಃಖ; ದುಗುಡ; ಚಿಂತೆ; ಖೇದ : "ನಿರ್ವೇದಃ, ಖೇದಃ — ಈ ೨ ಉಮ್ಮ(ಳಂ)ಳಿ" (ಹಲಾಯು. ೧೨೪-೭೯) ; "ದುಮ್ಮಾನಮುಮ್ಮಳಂ ಬೇವಸಮುಂ" (ಕವಿಕಂ. ೧೧೦) ; ಸಿಡಿಲಪೊಲೆಜಗುವ ನರಗನ ಪಡೆಗೆಗಿದುಮ್ಮಳದಿನುಣ್ಮಡೆಯೊಳುಣ್ಣದೆಯುಂ . . . ನಿಂದೆಡೆಯೊಳ್ ನಿಲ್ಲದೆಯುಮೋಡಿದಂ ಮಹಿಪಾಲಂ (ಪಂಪಭಾ. ೧-೩೭) ; ಉಮ್ಮಳಿಸಿದ ಪುರಜನಂಗಳುಮ್ಮಳಮನೊರ್ಮೊದಲಾಗೆ ನಿರ್ಮೂಳಿಸಿ (ವರ್ಧಪು. ೩-೪೫ ವ) ; ಚಿತ್ತದುಮ್ಮಳದಿಂದೆ ಖುಷಿಯಡಿಗೆ ಮಣಿದು (ಚಿಬಪು. ೨೮-೩). ೨. ಉಷ್ಣ ; ಸೆಕೆ ; ಕಾವು : "ಉಮ್ಮಳಮುಂ ಕಾವಿಂತುಷ್ಣಕ್ಕೆ" (ಕವಿಕಂ. ೪೧).
[ಪ್ರಾ. ಉಮ್ಹಾಲ. / ಸಂ. ಉಷ್ಮವತ್, ಊಷ್ಮಲ]

**ಉಮ್ಮಳಂಗೊಳ್, ಉಮ್ಮಳಗೊಳ್** (ಕ್ರಿ). ವ್ಯಥೆಪಡು : ಭೀತಿಯಂ ಬಟ್ಟದನೆ ಕನಸುಗಂಡುಮ್ಮಳಂಗೊಂಡು (ಎಕ. VII, ಶಿವಮೊ. ೭೪-೩ ; 1117) ; ಶಿರಮಂ ಶರೀರಮಂ ಪೊತ್ತುಮ್ಮಳಂಗೊಂಡು ಬಂದು ಚೋಳನ ಸಭಾಮಂದಿರದ ಮುಂದಿರಿಸಿ (ಇಜಿರ. ದೇ. ೧೦೮-೨೧). **ಉಮ್ಮಳಗೊಳ್** : ಪಂಡಿತವರನೆಜಗೆ ಭೂಪನುಮ್ಮಳಗೊಂಡಂ (ಹಮ್ಮಾರ. ೨-೧೧೯).
[ಉಮ್ಮಳ + ಕೊಳ್$_1$]

**ಉಮ್ಮಳಂಬೆಱು** (ಕ್ರಿ). = ಉಮ್ಮಳಿಸು : ಈ ಪೊತ್ತಿನ್ನ ಕುಲದ ಕುಡಿ ಮುರುಟತೆಂದುಮ್ಮಳಂಬೆತ್ತು (ಹಚಕಾ. ೧೨-೧೦). [ಉಮ್ಮಳ + ಪೆಱು$_1$]

**ಉಮ್ಮಳಗೊಳ್** 'ಉಮ್ಮಳಂಗೊಳ್' ನೋ.

**ಉಮ್ಮಳಪಡು** (ಕ್ರಿ). = ಉಮ್ಮಳಿಸು : ತಮ್ಮ ನೃತ್ಯವ ನೋಡುತರಸ . . . ಒಮ್ಮಿಮ್ಮೆ ಮಂತ್ರಿಯತ್ತೊಲೆದು ನೋಡಿದರದಕುಮ್ಮಳಪಟ್ಟಗಲಿದರು (ಭರಚ. ೧೪-೩೨). [ಉಮ್ಮಳ + ಪಡು$_1$]

**ಉಮ್ಮಳಿ$_1$** (ಕ್ರಿ). = ಉಮ್ಮಳಿಸು (?) : ತಿಳಿದಪೆನೆನುತ್ತಿನಿಯಗಟ್ಟುವೆನೊ ಸಖಿಯರಂ ಪಳಿವು ಸುಡುವುಮ್ಮಳಿವುದೇ ಕಷ್ಟಮಾಕ್ಷಣಂ ತಿಳಿಯದುದೆ ಮೂಢತ್ವಂ (ಚಿಬಪು. ೧೦-೩೪). [?]

**ಉಮ್ಮಳಿ$_2$** (ನಾ). ದುಃಖ; ಶೋಕ (?) : ಉಮ್ಮಾಬಾಯಿಯ ದಾಳಿಯ ಧೊಮ್ಮೆಯೆ ಕವಿತಂದೊಡೆಯ್ದು ಸಂಗರದೆಡೆಯೊಳುವುಮ್ಮಳಿಯಪ್ಪಿನವರಿ ಬಲವಮ್ಮಿ ಕಱುಬ್ಬಿ ಱಿದನುಱದೆ ನಾಯಕಮ್ಮೆಲಂ (ಎಕ. VII, ಹೊನ್ನಾಳಿ. ೩೮-೫ ; 1196). [?]

**ಉಮ್ಮಳಿ$_3$** 'ಉಂಬಳಿ' ನೋ.

**ಉಮ್ಮಳಿಕೆ** (ನಾ). ೧. ಸಂತಾಪ; ಉದ್ವೇಗ : ನೀರೊಳ್ ಮುಱುಂಗಿದ ರಂತುಮ್ಮನೆ ಬೆಮರುತ್ತುಮ್ಮಳಿಕೆವಂದು ಬೆಚ್ಚನೆ ಸುಯ್ದೊಡೆ (ಪಂಪಭಾ. ೪-೬೯ ವ) ; ನೀನೆಮಗೆ ವಲ್ಲಭನಾಗಿ ಚಿತ್ತದುಮ್ಮಳಿಕೆಯಂ ಕಳೆ (ಹಚಕಾ. ೭-೧೫) ; ನೀಂ ತಿಳಿಯೆ ಕೂರ್ಮೆಯುಮ್ಮಳಿಕೆಯಳಲಂ (ಗಿರಿಜಾ. ೮-೯೬). ೨. ಸೆಕೆ ; ಉಷ್ಣ : ತಮ್ಮಂಗುಮ್ಮಳಿಕೆಯಕ್ಕುಮೊಳಗಣ್ಗೆ ಪೋಗವೇಱಿಮೆಂದು ತಾನಾತ್ಮೀಯ ರಾಜಭವನಕ್ಕೆ ಪೋದಂ (ಸುಕುಮಾ. ೧೧-೩೭ ವ).
[ಉಮ್ಮಳ + -ಇಕೆ]

**ಉಮ್ಮಳಿಗೆ, ಉಮ್ಮುಳಿಗೆ** (ನಾ). = ಉಂಬಳಿ (?). **ಉಮ್ಮುಳಿಗೆ** : (?). [ಉಮ್ಮಳಿ$_3$ (< ಉಂಬಳಿ) + -ಗೆ$_1$]

**ಉಮ್ಮಳಿಸು** (ಕ್ರಿ). ೧. ದುಃಖಿಸು ; ಚಿಂತಿಸು; ಖೇದಪಡು : "ಉಮ್ಮಳಿಸು – ಚಿಂತಾಯಾಂ (ಶೋಕಪಡು)" (ಶಮಧಾ) ; ಮುಳಿವಳಿಱಿಪಳಬ್ವಳಿರ್ದೆಯಂ ಬಡಿವಳ್ ಪುರುಡಿಪ್ಪಳೂಳ್ವಳುಮ್ಮಳಿಸುವಳಟ್ಟಿ ಪತ್ತುವಳ್ (ಕಾವ್ಯಸಾ. ೯೯೩ ಶೂದ್ರಕ) ; ಅರಾತಿಗಳ್ಗಂತ್ಯಕಾಲಂ ನೆಱಿಯದುದರ್ಕುಮ್ಮಳಿಸಿ (ಪಂಪಭಾ. ೯-೧೦ ವ) ; ಮತಿಗುಂದದಿರಿ ಮನದೊಳುಮ್ಮಳಿಸದಿರಿ (ಹಚಕಾ. ೧೧-೪೪) ; ಎಲೆಲೆ ಕೆಟ್ಟುದು ಕಟಕವೆಂದುಮ್ಮಳಿಸಿದರು (ಕುವ್ಯಾ ದ್ರೋ. ೭-೩) ; ಕಷ್ಟಗಳನ್ನು ನೆನೆನೆನೆದು ಉಮ್ಮಳಿಸಬೇಡ (ಘಲಸಂ. ೯೯). ೨. ಕಷ್ಟಪಡು : ಬೇಸಱಿಂ ತಿಣುಕಿದನಾನಲುಮ್ಮಳಿಸಿ ಶೇಷನಶೇಷಮಹೀವಿಭಾಗಮಂ (ಪಂಪಭಾ. ೯-೯೯). ೩. ತವಕಿಸು; ಆತುರಪಡು ; ಕುದಿ : ಹರಿಗನೊಳಿರ್ದಿರ್ಚ ಕರ್ಣಂ ಗೆಲಲುಮ್ಮಳಿಪಂ ಗಡ (ಪಂಪಭಾ. ೧೨-೧೪೪) ; ಸುಯೋಧನವಧಕ್ಕೇಗೆಯ್ವೆನೆಂತಕ್ಕುಮೆಂಬುದನಂದುತ್ಸುಕಚಿತ್ತನುಮ್ಮಳಿಸಿದಂ ಭೀಮಂ (ಗದಾಯು. ೬-೧೬). ೪. ಉಕ್ಕಿಬರು ; ಉಕ್ಕು : ಉಮ್ಮಳಿಸುತಡಿಗಡಿಗೆ ಸಂಸೃತಿ ಬಿಮ್ಮಿನಿಂದೊಳಗೊಳಗೆ ತೋಱುವಹಮ್ಮಿಳಿಯೆ (ಅಮೃತ. ೧೦-೨೫) ; ದಾಸರು ಉಮ್ಮಳಿಸುತ್ತಿದ್ದ ದುಃಖವನ್ನು ಅದುಮಿ ಕೇಳಿದ್ದರು (ಬದುಬ್ಬೈ. ೧೩೪) ; ತಂದೆಯ ನಿರಾಸೆ ಹಟ ಕಂಡು ದುಃಖ ಉಮ್ಮಳಿಸಿತು (ಮರಳಿ. ೧೭೪). ೫. ಸೆಕೆಯಾಗು : ಅಮ್ಮಗೆ ಬಳೆಯಿಲ್ಲ ಎಮ್ಮೆಗೆ ಚಳಿಯಿಲ್ಲ ಉಮ್ಮಳಿಸುವಾಗ ಮಳೆಯಿಲ್ಲ (ಸರ್ವಜ್ಞ. ೧೧೧೧). [ಉಮ್ಮಳ + -ಇಸು$_3$]

**ಉಮ್ಮಾದಗಾಮುಂಡ** (ನಾ). ಒಬ್ಬಾತನ ಹೆಸರು : ಮಿರಿದೆಯ ಉಮ್ಮಾದಗಾಮುಣ್ಡರುಂ ಎಱೆಯಜ್ಜಗಾಮುಣ್ಡರುಂ (ಎಕ. IV, ಎಡತೊ. ೬೦-೭೦ ; 890) ; ಪೆರ್ಮೊಟಿಲ ಉಂಮಾದಗಾಮುಣ್ಡರುಂ ಪಿಟ್ಟಿವಿಗಾಮುಣ್ಡರುಂ (ಎಕ. IV, ಎಡತೊ. ೬೦-೭೧; 890). [ಉಮ್ಮಾದ$_2$ + ಗಾಮುಂಡ]

**ಉಮ್ಮಾಯ** 'ಉಮ್ಮಹ' ನೋ.

**ಉಮ್ಮಾಹ** 'ಉಮ್ಮಹ' ನೋ.

**ಉಮ್ಮಿ, ಉಮಿ, ಉವಿ** (ನಾ). (ಧಾನ್ಯದ) ಹೊಟ್ಟು ; ಉಬ್ಬಲು ; ಸಿಪ್ಪೆ : ಮಾದಯ್ಯ ಆ ನೆಲ್ಲನ್ನು ಮಿದಿದ. ಆಕೆ ಅನಂತರ ಮಿದಿದ ಆ ನೆಲ್ಲನ್ನು ಕೇರಿ ಉಮ್ಮಿ ತವುಡುಗಳನ್ನು ವಿಂಗಡಿಸಿ ತೆಗೆದಳು (ಕೊದಿನ. ೨೩) ; ತವಡು ತಿನ್ನುವವ ಹೋದರೆ ಉಮ್ಮಿ ತಿನ್ನುವವ ಬರುತ್ತಾನೆ (ಗಾದೆ). **ಉಮಿ** : ಭತ್ತದ ಉಮಿ ಅಥವಾ ಹೊರಕವಚವನ್ನು ತೆಗೆದರೆ ಬರುವ ಅಕ್ಕಿಯಲ್ಲಿ (ಅಡುಸೌ. ೬೨) ; ಉಮಿಯಿಂದ ತಯಾರಿಸಿದ ಕಾಫಿ ಪುಡಿ (ಮಸಕೂ. ೧೭). **ಉವಿ** : ಜವೆಯಂ ಖಾ(ಬಾ)ಣಂಗಟ್ಟುವಡುವಿಯಂ ಕಳೆದಿಕ್ಕಿ ಮೂಡಿ ಕಟ್ಟುಗೆ ಪೆಸಱಿಂ (ಅಶ್ವಶಾ. ೭-೫೬).
[ದೇ. ‖ ತಮಿ. ತುಳು. ಉಮಿ]

**ಉಮ್ಮಿಗುಡ್ಡೆ** (ನಾ). ಹೊಟ್ಟಿನ ರಾಶಿ ; ತೌಡಿನ ಗುಡ್ಡೆ : ಭತ್ತದ ಹೊಟ್ಟು ರಾಶಿರಾಶಿಯಾಗಿ ಬಿದ್ದಿದ್ದ 'ಉಮ್ಮಿಗುಡ್ಡೆ'ಯ ಕಡೆಗೆ ಇಣಿಕಿ ನೋಡಿದನು (ಕಾನೂರು. ೬೧). [ಉಮ್ಮಿ + ಗುಡ್ಡೆ$_1$]

**ಉಮ್ಮಿಗೆ, ಉಮ್ಮಗೆ, ಉಮ್ಮುಗೆ** (ನಾ). ೧. ಗೋಧಿಯ ಹಸಿಯ ತೆನೆ: ಉಮ್ಮಿಗೆ ಸೀತೆನೆಯಿಂದ ಉಸುಳಿ ಮಾಡುವರು (ರೂಢಿ). ೨. ಜೋಳ, ರಾಗಿ, ಗೋಧಿ ತೆನೆಗಳನ್ನು ಸುಟ್ಟು ಉಜ್ಜಿ ತೆಗೆದ ಕಾಳು : "ಒರಸಿ ದುಮ್ಮಿ [ಪಾಠಾಂ. ಮ್ಮ]ಗೆಯು ಧಾನಾಖ್ಯಮೆನಿಸಿಕ್ಕು" (ಮಂಗರಾ. ೧೧೧-೬). **ಉಮ್ಮಗೆ** : ೧. ಪಡನಱಿದುಮ್ಮಗೆಯಂ ಕಾಸಿದ ಪಾಲೊಳಗಿಕ್ಕಿ ತೆಗೆದುಕೊಂಡವನರೆದಾಜ್ಯದೊಳಡುವುದು (ಲೋಕೋಪ. ೮-೯). **ಉಮ್ಮುಗೆ** : ೧. "ಧಾನಾಯೆಂಬುದು ಉಮ್ಮುಗೆ" (ಹಲಾಯು. ೯೬-೪೩೧). [?]

**ಉಮ್ಮಿಸು** 'ಉಣ್ಮಿಸು' ನೋ.
**ಉಮ್ಮು$_1$** 'ಉಣ್ಮು' ನೋ.
**ಉಮ್ಮು$_2$** 'ಉಮ್ಮೆ' ನೋ.
**ಉಮ್ಮುಗಿಸು** (ಕ್ರಿ). ಗಂಜಿ ಬಸಿದ ಮೇಲೆ ಅನ್ನವು ಹದವಾಗುವುದಕ್ಕಾಗಿ ಬೆಂಕಿಯ ಮೇಲಿಡು (ದಕ).
[ಉಮ್ಮುಗ್$_0$ + -ಇಸು$_3$]
**ಉಮ್ಮುಗೆ** 'ಉಮ್ಮಿಗೆ' ನೋ.
**ಉಮ್ಮುಗೊಯ್** (ಕ್ರಿ). (ಉಕ) ಗಂಜಿ ಇಂಗಿಹೋಗಿ ಅನ್ನ ಹದವಾಗು: ಭಕ್ರಿ ತಿನ್ನುವಷ್ಟರಲ್ಲಿ ಅನ್ನ ಉಮ್ಮುಗೊಯ್ದಿತ್ತು (ವೈನಿ. ೧೫೭).
[ಉಮ್ಮುಗ್$_0$ + ?]
**ಉಮ್ಮುಲು** 'ಉಮ್ಮಲು' ನೋ.
**ಉಮ್ಮುಳಿಗೆ** 'ಉಮ್ಮಳಿಗೆ' ನೋ.
**ಉಮ್ಮೆ**, ಉಮ್ಮ$_2$, ಉಮ್ಮು$_3$ (ನಾ). ೧. ಉಷ್ಣ; ಸೆಕೆ; ಕಾವು: "ಉಮ್ಮಳಮುಂ ಕಾವಿಂತುಷ್ಣಕ್ಕೆ ಸೆಗಳಿ ಜಳಮುಮ್ಮೆಂದುಂ" (ಕವಿಕಂ. ೪೧); "ಉಮ್ಮೆಯೆಂದುಂ... ಉಷ್ಣಕ್ಕೆ ಪೆಸರ್" (ಕಶಸಾ. ೩-೨೯). ೨. ಸಂತಾಪ; ದುಃಖ; ವ್ಯಥೆ. ೧, ೨: ಉದಿಸಿ ಚಿಕದೇವಚಂದ್ರಮನೊದೆದುಮ್ಮೆಯನೊರಸಿ ತಮಮಂ (ಅಪ್ರತಿ. ೬೮-೧೭). **ಉಮ್ಮ$_2$**: 'ಉಮ್ಮುಗುರು' ಪರಾ. **ಉಮ್ಮು$_3$**: ೨. ಚಿಂತೆಯಂ ತಳೆದವಳ ಜನನೀಜನಕರಿರಲ್ಕಾ ಸಮಯದೊಳಾಂ ಬಂದವರ ಮೊಗದೊಳುದಿಸುವುಮ್ಮಂ ಕಂಡು (ಉದ್ಭಟ. ೬-೧೧೮ ವ).
[ಪ್ರಾ. ಉಮ್ಹ (< ಸಂ. ಊಷ್ಮನ್)]
**ಉಮ್ರಾ** 'ಉಮರಾ' ನೋ.
**ಉಯ್$_1$** (ಕ್ರಿ). ಒಯ್ಯು; ತೆಗೆದುಕೊಂಡು ಹೋಗು; ಕರೆದುಕೊಂಡು ಹೋಗು: ಸಾಸಿರ್ವ್ವರ ಪೂಜೆದನ್ದಾಯೆ ಅವರ್ಸ್ವರ್ಗ್ಗಾಗ್ರ್ರವೂನೇಜಿದಾರ್ (ಎಕ. II, ೨೭-೨; 700); ದೇವಗಣಿಕ್ಕೆಯುರಾರ್ಗ್ಗಮ್ಬಿಡಿದು ಬನ್ದಿದಿದಿರ್ಗ್ಗೊಣ್ಡುಯೆ ವೀರಲೋಕಕೆ ಸನ್ದೋನ್ (ಎಕ. VIII, ಸೊರಬ. ೧೦-೯; 800); ಭವಾಂತಕಭವನಕ್ಕುಯ್ ತಡೆಯದೆನ್ನನಿಂ ಭವಮಥನಾ (ಆದಿಪು. ೧೦-೫೬); ರಕ್ಕಸರುಗಳು ಮಾಯದೊಳುಯ್ದರು ತಾಯೆ ದುಕ್ಕಬೇಡೆಂದು ಪೇಳಿದಳು (ಮೋಹತ. ೪-೯೧). 'ಒಯ್$_1$' ಪರಾ.

ಉಯಿಕೊ=ಎಳೆದುಕೊ; ಸೆಳೆದುಕೊ: ಸಿಟ್ಟಿನಿಂದ ದುರ್ಯೋಧನ ಸಾರಿ ಕೋಪಿಸಿ ಉಟ್ಟ ಸೀರೆ ಉಡಿಯಲವಳ ಉಯಿಕೊ ತೀರಲೆಂದು ದೃಷ್ಟಿಯಿಂದ ದುಶ್ಶ್ಯಾಸನಗೆ ಸನ್ನೆಮಾಡಿದ (ಪುರಂದ. ೫-೭೨-೧೩).

[ದೇ. ‖ ತಮಿ. ಉಯ್, ಒಯ್; ತುಳು. ಒಯಿ; ಪರ್ಜಿ. ಉಯ್; ಕುಇ. ಒಪ; ಕುವಿ. ಒಯಿಯಲಿ; ಮಲ್ತೊ. ಒಯೆ]
**ಉಯ್$_2$** (ಕ್ರಿ). ತಡೆದಿಡು; ಹಿಡಿತದಲ್ಲಿಡು; ನಿರ್ಬಂಧಿಸು: "ಉಯ್ - ನಿಯಾಮೇ" (ಶಮುಧಾ).
[ದೇ. ‖ ತಮಿ. ಉಯ್]
**ಉಯ್$_3$**, ಉಯಿ (ನಾ). = ಉಮ್ಮಿ: "ದಾನ್ಯದ ಉಯ್ಯಲ್ಲಿ ತುಷ ಎನಿಸುಗು" (ನಾಚಿರಾ. ೬); ಉಯ್ಯಂ ಕುಟ್ಟಿ ಪದೆದಕ್ಕಿಯಟಿಸುವ ಬೆಳ್ಪನುಮಂ (ಧರ್ಮಾಮೃ. ೬-೧೭೮); ಉಯ್ಯ ಕೈವಿಡಿದು ತಂಡುಲವ ಬಿಸುಟ ಮರುಳಯ್ಯರ ಮಾರ್ಗವೇನಲ್ತೆ (ಭರಚ. ೫-೮೧); ಉಯ್ಗಳಗ್ನಿಯ ಮುಂದೆ ನಿಲ್ಲುವೇ (ಚಬಪು. ೩೧-೩೪). **ಉಯಿ**: 'ಉಯಿಕುಟ್ಟು' ಪರಾ. [?]
**ಉಯ್$_4$** (ಅ). ಒಂದು ಅನುಕರಣಧ್ವನಿ (೬).
**ಉಯಿ** 'ಉಯ್$_3$' ನೋ.
**ಉಯಿಕುಟ್ಟು** 'ಉಯ್ಗುಟ್ಟು' ನೋ.
**ಉಯಿಗುಟ್ಟು** 'ಉಯ್ಗುಟ್ಟು' ನೋ.
**ಉಯಿಲು$_1$** (ನಾ). ಮರಣಾನಂತರ ತನ್ನ ಸ್ವತ್ತು ಯಾರಿಗೆ ಸೇರಬೇಕು ಎಂದು ಮೊದಲೇ ಬರೆದಿಡುವ ಪತ್ರ; ಮೃತ್ಯುಪತ್ರ; ವಿಲ್ಲು; ವೀಲು: ಆಸ್ತಿಯ ಜೊತೆಗೆ ರಾಮಗೋಪಾಲನು ಬರೆದಿಟ್ಟದ್ದ ಉಯಿಲು ಬೇಕಾಗಿತ್ತು (ಬಂಕಿಮ. ೩೮); ನಮ್ಮ ತಾತ ಹಾಸಿಗೆ ಹಿಡಿದರು, ಆಗ ಅವರು ತಮ್ಮ ಆಸ್ತಿ ಮತ್ತು ನಗದುಗಳ ಬಗ್ಗೆ ಉಯಿಲು ಬರೆದರು (ಮಸಕೂ. ೬೧); "ಆ ಹಣವನ್ನು ನನ್ನ ಇಬ್ಬರು ಮಕ್ಕಳಿಗೂ ಸಮನಾಗಿ ಹಂಚಿ ಒಂದು ಉಯಿಲು ಸಿದ್ಧಪಡಿಸ್ಬೇಕು" (ಏಕಾಂಗಿ. ೧೫೫).
[← ಇಂ. will]
**ಉಯಿಲು$_2$** 'ಉಯ್ಲು' ನೋ.
**ಉಯ್ಗುಟ್ಟು**, ಉಯಿಕುಟ್ಟು, ಉಯಿಗುಟ್ಟು (ಕ್ರಿ). ೧. ಹೊಟ್ಟನ್ನು ಕುಟ್ಟು. ೨. (ಆಲಂ) ವ್ಯರ್ಥವಾದ ಕೆಲಸವನ್ನು ಮಾಡು: ಕೊಳ್ಳುವುದುಮದೃಶ್ಯರಾಗಿ ಪೋಗಿ ಮತ್ತಮಾಯಂದದಿಂ ಮುಂದೆ ಬಂದುಯ್ಗುಟ್ಟಿಯುಂ ನೀರ್ಗಡೆದುಂ (ನೇಮಿಪು. ೧೪-೧೦೩ ವ). **ಉಯಿಕುಟ್ಟು**: ೧. ತುಷಖಂಡನಮಿವ-ಉಯಿಕುಟ್ಟುವಂತೆ (ನೀತಿವಾ. ೧೦-೪೨). **ಉಯಿಗುಟ್ಟು**: ೧. ಧನಂಬಡೆವೊಡೆ ಪುಣ್ಯಮಿಲ್ಲದೆ ಮಟಲ್ಪಿಟಿವಂತುಯಿಗುಟ್ಟುವಂತೆ ನೀರ್ಗಡೆವವರಂತೆ ಸೇದೆವಡುತಿರ್ಪುದು ಕಜ್ಜಮೆ ಭವ್ಯಜೀವನೇ (ಜೀವಸಂ. ೪೯-೧೮).
[ಉಯ್$_3$ + ಕುಟ್ಟು$_1$]
**ಉಯ್ಯನೆ** (ಅ). ಕೂಡಲೆ; ಸರ್ರನೆ: ಜವನುಣ್ಡುಯ್ಯನೆ ಕಾಟಿದನ್ತೆ ಪೆರ್ಬೆಣದ ಬಳಮ್ಬ ಪೆರ್ಗ್ಗರುಳ ತಿಂತಿಣಿ ನೆತ್ತರ ಪೆರ್ಬೊನಲ್ (ಎಕ. VIII, ಸೊರಬ. ೧೨-೬; 1155). 'ಒಯ್ಯನೆ' ಪರಾ.
[ಉಯ್$_4$ + -ಅನೆ$_1$]
**ಉಯ್ಯಲ್**, ಉಯ್ಯಲು, ಉಯ್ಯಲೆ, ಉಯ್ಯಾಲು, ಉಯ್ಯಾಲೆ (ನಾ). ತೂಗಾಡುವ ತೊಟ್ಟಿಲು; ತೂಗುಮಣೆ; ಜೋಕಾಲಿ: ಉಣ್ಮುವುಯ್ಯಲ ಪೊಸಗಾವರಂ ಪುಗಿಲೊಳೀನೆಸೆದತ್ತೊ ವಸಂತಮಾಸದೊಳ್ (ಪಂಪಭಾ. ೨-೧೨); ಪುಲಿಯ ಮೀಸೆಯನಂಜದುಯ್ಯಲನಾಡಲಪ್ಪುದು (ಧರ್ಮಾಮೃ. ೧-೧೬೯); ಗೋರಟೆಯುಡಿಯಲ್ಲಿ ಪೂಡಿದುಯ್ಯಲ್ಗೆ (ಮರಾಚ. ೪-೪೪). **ಉಯ್ಯಲು**: ಹಾಸುಮಂಚವರಳ್ಗಳುಯ್ಯಲುವಾಸುಮಣೆ ತಲೆಗಿಂಬು (ಬಸವು. ೧೨-೯); ಆಡುವ ನವಿಲುಯ್ಯಲುಗಳು (ಅಂಜಚ. ೩-೩೭). **ಉಯ್ಯಲೆ**: ಮಧುಕರನಿಕರಮೆಂಬ ಕಿಂಕಿಣಿಗಳ ಸುಣ್ಣರಂಗಳಿಂದೆಸೆವಲರುಯ್ಯಲೆಗಳುಮಂ (ಕಾದಂಉ. ೨೧೬); ನೀಲಗಿರಿಯ ಮೇಲೆ ನಿಂದು ಉಲಿವ ಉಯ್ಯಲೆಯನಾಡುತಿಪ್ಪರಯ್ಯಾ (ಅವಚಂ. ೧೦೭-೪೮೫); ಗಿಳಿಯುನೋದಿಸುವಬಲೆಯರಲುಯ್ಯಲೆಯನಾಡುವ ಸತಿಯರಲಿ (ತೊರರಾ. ೫-೨-೧೯). **ಉಯ್ಯಾಲು**: (೬). **ಉಯ್ಯಾಲೆ**: ಮಾಡಿಸಿದ ಉಯ್ಯಾಲೆಯ ಕಂಭ (ಎಕ. VIII, ಕೊಪ್ಪ. ೮-೧೦; 1437).

ಉಯ್ಯಲಮಣೆ, ಉಯ್ಯಾಲೆಮಣೆ = ಉಯ್ಯಾಲೆಗೆ ಜೋಡಿಸಿರುವ ಮಣೆ: ಜಾತಿ ಜಾಯಿಲಂಗಳನುಯ್ಯಲಮಣೆಯನೊಲೆದು ಬಿಟ್ಟಂತೆ (ಅನಂಪು. ೨-೩೦ ವ); ಅವರ ಮನೆಯಲ್ಲಿ ಉಯ್ಯಾಲೆಮಣೆಯಿದೆ (ರೂಢಿ). ಉಯ್ಯಾಲೋತ್ಸವ = ದೇವರ ವಿಗ್ರಹವನ್ನು ಉಯ್ಯಾಲೆಯಲ್ಲಿ ಕೂಡಿಸಿ ತೂಗುವ ಉತ್ಸವ: ಇಂದು ದೇವರಿಗೆ ಉಯ್ಯಾಲೋತ್ಸವವಿದೆ (ರೂಢಿ). ☞ ಇದಕ್ಕೆ ಡೋಲೋತ್ಸವ ಎಂದೂ ಹೆಸರು.

[ದೇ. ‖ ತಮಿ. ಊಞ್ಜಲ್, ಉಞ್ಜಲ್; ಮಲ. ಊಞ್ಜಲ್; ತುಳು. ಉಯ್ಯಾಲ್, ಉಜ್ಜಾಲ್; ತೆಲು. ಉಯ್ಯಲ, ಉಯ್ಯಾಲ, ಉಯ್ಯೇಲ]

**ಉಯ್ಯಲಾಟ** (ನಾ). ೧. ಉಯ್ಯಾಲೆಯಲ್ಲಿ ಕುಳಿತು ತೂಗಾಡುವ ಆಟ: ಮುಕ್ತಿ ಉಯ್ಯಲಾಟ ನೋಡು ಮೂಗ – ಮೂಗತೆನೆಗಿದೆ (ಸೂರ್ಯ ಪಾ. ೧೯೯–೫). ೨. ಡೋಲಾಯಮಾನವಾಗಿರುವಿಕೆ; ಅನಿಶ್ಚಿತ ಪರಿಸ್ಥಿತಿ: ಮನಸ್ಸಿನ ಉಯ್ಯಲಾಟ ತಪ್ಪಿಲ್ಲ (ರೂಢಿ). [ಉಯ್ಯಲ್ + ಆಟ]

**ಉಯ್ಯಲಾಡಿಸು** (ಕ್ರಿ). ಉಯ್ಯಾಲೆಯಲ್ಲಿಟ್ಟು ತೂಗು: ಕಂಠೀರವ ಕಿಶೋರಂಗಳಂ ಕರದೊಳಿಟ್ಟೊಯ್ಯನುಯ್ಯಲಾಡಿಸುವ ಕಾಡಾನೆಗಳಿಂ (ದಶಕು. ೪–೭೧ ವ). [ಉಯ್ಯಲಾಡು + –ಇಸು$_3$]

**ಉಯ್ಯಲಾಡು** (ಕ್ರಿ). ೧. ಉಯ್ಯಾಲೆಯಲ್ಲಿ ಕುಳಿತು ತೂಗಾಡು; ಓಲಾಡು: ಮದನೋದ್ಯಾನದೊಳುಯ್ಯಲಾಡುತ್ತಿರ್ದೊಳಂ . . . ಕಂಡು (ವಡ್ಡಾರಾ. ೫೪–೯); ಪುಲಿಗಳ ಮೀಸೆಯನುಯ್ಯಲಾಡಲೆ ನಂಜನೆಂಜಲಿ ಸಲುಮಟ್ಟಿಯೆ . . . ಬಂದನೊಳ್ಗಲಿ (ಕಾವ್ಯಾವ. ೮೨); ಸಿಂಹಕೇಸರ ದುಯ್ಯಲಾಡುವ ಗಜವ ನೋಡೆಂದುಜುಬಿದನು (ಕುವ್ಯಾದ್ರೋ. ೧೫–೫೬); ನೃಪನ ಮುಡುಹ ಪಿಡಿದು ಜಡಿದುಯ್ಯಲಾಡುವರಾಗಿ ಮುಡುಹಿಷ್ಟು ಕಠಿಣವಾಗಿಹುದು (ಭರಜ. ೬–೫೬). ೨. ಡೋಲಾಯಮಾನವಾಗು; ಹೊಯ್ದಾಡು: ಒರ್ವರೊರ್ವರಂ ತೂಗಿ ಲತಾಲ್ಲಲಿತೇ ನಾವಿರ್ವರು ಮುಯ್ಯಲಾಡೆ ಪುನಮುಯ್ಯಲಾಡೆ (ಶಾಂತಿಪು. ೪–೯೬). [ಉಯ್ಯಲ್ + ಆಡು$_1$]

**ಉಯ್ಯಲಿಡು** (ಕ್ರಿ). = ಉಯ್ಯಲಾಡು ೧: ಮಲೆಯ ಘನವನೌನದೊಳು ಕನಸಾಂತು ನಿಂತಂತೆ ಕೆಂದಳಿರ ಹೊಳಹಿನೊಳು ಉಯ್ಯಲಿಡುವಂತೆ (ಮಲೆದೇ. ೪೩–೮). [ಉಯ್ಯಲ್ + ಇಡು$_1$]

**ಉಯ್ಯಲು** 'ಉಯ್ಯಲ್' ನೋ.

**ಉಯ್ಯಲೆ** 'ಉಯ್ಯಲ್' ನೋ.

**ಉಯ್ಯಲೇಱಿಸು** (ಕ್ರಿ). ಉಯ್ಯಾಲೆಯನ್ನು ಹತ್ತುವಂತೆ ಮಾಡು; ಉಯ್ಯಾಲೆಯಲ್ಲಿ ಕೂರಿಸು: ತರುಣಿಯೊರ್ವಳನುಯ್ಯಲೇಱಿಸಿ ವಿಟಂ ಮನೋಹರುಷದಿಂ ತೂಗುತಿರ್ದಂ (ಚಿಬಪು. ೧೧–೧೩). [ಉಯ್ಯಲೇಱು + –ಇಸು$_3$]

**ಉಯ್ಯಲೇಱು** (ಕ್ರಿ). ಉಯ್ಯಾಲೆಯನ್ನು ಹತ್ತು, –ಏರು: ಉರಿಯುಯ್ಯಲೇಱಿ ಕೈರಂದಱಿಯಲ್ಕೆ ಮಾಡಿದಡೆಮಂಚಿಕೆ ಮಿಂಚಿದುದಾ ಶ್ಮಶಾನದೊಳ್ (ಕಾವ್ಯಾವ. ೫೬). [ಉಯ್ಯಲ್ + ಏಱು$_1$]

**ಉಯ್ಯಾಪರೆ** (ನಾ). (ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ) ಗುಡಾರ; ಡೇರೆ: ಚಿಕ್ಕಮನೆಯಲ್ಲಿ ಔತಣ ಸುಧಾರಿಸುವುದು ಕಷ್ಟ ಅಂಗಳದಲ್ಲೊಂದು ಉಯ್ಯಾಪರೆ ಹಾಕಿದರು (ಭ್ರಾಂತಿಸು. ೧೧). [?]

**ಉಯ್ಯಾಲು** 'ಉಯ್ಯಲ್' ನೋ.

**ಉಯ್ಯಾಲೆ** 'ಉಯ್ಯಲ್' ನೋ.

**ಉಯ್ಯಾಲೆಮಂಟಪ**, ಉಯ್ಯಾಲೆಮಂಡಪ (ನಾ). ಉಯ್ಯಾಲೆಯಾಡುವುದಕ್ಕಾಗಿ ಕಟ್ಟಿದ ಮಂಟಪ: ವೆಂಕಟಾದ್ರಿ ನಾಯಕರೂ ಸ್ವಾಮಿಯ ವಸಂತೋತ್ಸವದ ಉಯ್ಯಾಲೆಮಂಟಪ ಆಂಕಣ ೧೫ (ಎಕ. V, ಬೇಲೂರು. ೧೨–೮; 1580). **ಉಯ್ಯಾಲೆಮಂಡಪ**: ವೆಂಕಟಾದ್ರಿ ನಾಯಕನು ವಸಂತೋತ್ಸವಕ್ಕಾಗಿ ಉಯ್ಯಾಲೆಮಂಡಪಮಾಡಿಸಿದನು (ಹೊಯ್ಸವಾ. ೨೪). [ಉಯ್ಯಾಲೆ (< ಉಯ್ಯಲ್) + ಮಂಟಪ]

**ಉಯ್ಯಾಲೆಮಂಡಪ** 'ಉಯ್ಯಾಲೆಮಂಟಪ' ನೋ.

**ಉಯ್ಕಿ** (ನಾ). ತೃಣ; ಗ್ರಾಸ; ಆಹಾರ: ಕಟುಕನಿಗೆ ಪ್ರಾಣಿಗಳೆಲ್ಲಾ ಹೇಗೆ ಆಹಾರವೋ ಹಾಗೆ ಭಾರತಸೈನ್ಯದ ದೃಷ್ಟಿಯಲ್ಲಿ ನಾವೆಲ್ಲಾ ಬರಿಯ ಬಂದೂಕಕ್ಕೆ ಉಯ್ಕಿ (ಬೆಸ್ತಕ. ೯೩). [?]

**ಉಯ್ಲು**, ಉಯಿಲು$_2$ (ನಾ). ಸೆಳೆತವುಳ್ಳ ಪ್ರವಾಹ: ದೋಣಿಯಂ ಯತ್ನದಿಂದೊರ್ವಂ ಕಟ್ಟುಗುಂ ಕಾಗುವೆಂಬುದು ಸ್ನೇಹದಿಂದಲ್ಲಮದು ಪೇರುಯ್ಲಂ ದಾಂಟುವ ಕಾಂಕ್ಷೆಯಿಂ (ಸೌನಂದ. ೧೪–೧೬). **ಉಯಿಲು**: ನಿಮಿಷ ನಿಮಿಷಕ್ಕೂ ನದಿಯ ಉಯಿಲು ಅಂಗರನನ್ನು ದಿಕ್ಕು ತಪ್ಪಿಸುತ್ತಿತ್ತು (ಹೊಸಕ್ಷಿ. ೬೩). [ದೇ. ‖ ತುಳು. ಒಯಿಲ್]

**ಉರ**$_1$ 'ಉಱ' ನೋ.

**ಉರ**$_2$ (ನಾ). ಎದೆ; ವಕ್ಷಸ್ಥಳ: ಡೊಕ್ಕನೆ ಸುರಗಿಯೊಳುರಮಂ ಬಿಕ್ಕನೆ ಬಿರಿಯಿಱಿದು (ಪಂಪಭಾ. ೧೨–೧೫೩); ಒಡನೆ ನಾರಾಯಣನುರವ ಸೇರಿದ ಸಿರಿಮುಡದಿಯಡಿಗೆ ವಂದಿಪೆನು (ಹದಿಬ. ೫–೨). [< ಸಂ. ಉರಸ್]

**ಉರಂಗ** (ನಾ). = ಉರಗ ೧. 'ಉರಂಗಪುಂಗವ' ಪರಾ. [< ಸಂ. ಉರಗ]

**ಉರಂಗಪುಂಗವ** (ನಾ). ಸರ್ಪಗಳಲ್ಲಿ ಶ್ರೇಷ್ಠವಾದವನು; ಆದಿಶೇಷ: ಮಂಗಳಾಂಗಿ ಶಮಣ ರಂಗ ರಂಗೋರಂಗಪುಂಗವ ಪರಿಯಂಕಸಂಗ (ವಿಸ್ತೋಸು. ೯–೨). [ಉರಂಗ + ಪುಂಗವ]

**ಉರಃಕವಾಟ** (ನಾ). ಎದೆಯ ಬಾಗಿಲು: ಕಲಿಗಳುರಃಕವಾಟಕವಚಂಗಳ ಕಟ್ಟಲೆಯೊಳ್ . . . ಸಲೆ ಬರುತಿರ್ದಳಭಿಸಾರಿಕೆಯಂದದೆ ರಾಜ್ಯಲಕ್ಷ್ಮಿ (ಕಾದಂಪೂ. ೧೯). [ಸಂ. (ಉರಸ್ + ಕವಾಟ)]

**ಉರಃಸೂತ್ರಿಕೆ** (ನಾ). ಮುತ್ತಿನ ಸರ. [ಸಂ. ಉರಃಸೂತ್ರಿಕಾ (ಉರಸ್ + ಸೂತ್ರಿಕಾ)]

**ಉರಃಸೆಲ್ಲ** (ನಾ). ಎದೆಗೆ ಶಲ್ಯದಂಥವನು, –ಶಲ್ಯವಾದವನು: ಯಾದವಕುಳಕಮಳಿನೀವಿಕಾಸ ಭಾಸ್ಕರನಹಿತರಾಯ ಉರಃಸೆಲ್ಲಂ ಮಾಳವ ಮಲ್ಲಂ (ಕೊಲ್ಹಾಶಾ. ೧೬–೩೬; 1189). [ಸಂ. (ಉರಸ್) + ಸೆಲ್ಲ]

**ಉರಗ** (ನಾ). ೧. ಎದೆಯಿಂದ ಸರಿಯುವ ಪ್ರಾಣಿ, –ಹಾವು; ಸರ್ಪ: ಬಂದಂ ಮಱಿಯಂ ನಿವಾರಿಸಲನಂತಂಗಂದನಂತೋರಗಂ (ಜಗವಿ. ೩–೯); ಉರಗಂ ಪಿಡಿದಂತೆ ಬೆದಱಿ (ಕಾವ್ಯಸಾ. ೬೩). ೨. ದೇವಗಣದಲ್ಲಿ ಒಂದು ಗುಂಪು; ನಾಗರು: ಗರುಡರು ಸಿದ್ಧರುರಗ ಮುಖ್ಯರು ದನುಜರೆಯ್ದೆ ನೆರೆಯಿತು (ಹಚಕಾ. ೧೪–೧). [ಸಂ.]

**ಉರಗಕಟಕ** (ನಾ). ಉರಗವನ್ನು ಕಡಗವಾಗಿ ಉಳ್ಳವನು; ಶಿವ: ಉರಗಕಟಕಂ ನಂಬಿಯಣ್ಣಂಗೊರೆದು ಭಕ್ತರ ಮಹಿಮೆಯಂ (ಬಸವು. ೨೬–೬೪). [ಉರಗ + ಕಟಕ$_2$]

**ಉರಗಗೇಹ** (ನಾ). ಹಾವಿನ ಮನೆ; ಹುತ್ತ: ನೇಱಿಲ ಮರದಿಂ ಮೂಡಲುರಗಗೇಹಮಾದೊಡೆ ತೆಂಕಲೆರಡು ಕೆಯ್ಯಂತರದೊಳ್ ಜಲಮಿರ್ಪುರುಷಪ್ರಮಾಣದದ್ಭುತಮಕ್ಕುಂ (ಲೋಕೋಪ. ೫–೧೪). [ಉರಗ + ಗೇಹ]

**ಉರಗತರ** (ನಾ). ಹಾವುರಾಣಿ; ಅರಣೆ: "ಉರಗತ[ಪಾಠಾಂ. ಕ]ರನೆನೆ ಹಾವರಣೆಯಕ್ಕು" (ಮಂಗರಾ. ೪೯–೧೩). [ಸಂ.]

**ಉರಗಧರ** (ನಾ). ಹಾವನ್ನು ಧರಿಸಿರುವವನು; ಶಿವ: ಉರಗಧರ ನೀನೆನ್ನ ಪತಿವ್ರತಾಭಾವಕ್ಕೆ ತರುವರೇ ಹಾನಿಯನು (ಪ್ರೌಢರಾ. ೬–೬೧). [ಸಂ.]

**ಉರಗಪತಾಕ** (ನಾ). ಬಾವುಟದಲ್ಲಿ ಹಾವಿನ ಗುರುತು ಉಳ್ಳವನು; ದುರ್ಯೋಧನ: ನೀರೊಳಗಿರ್ದುಂ ಬೆಮರ್ತನುರಗಪತಾಕಂ (ಗದಾಯು. ೭–೨೨). [ಸಂ. (ಉರಗ + ಪತಾಕಾ + –)]

**ಉರಗಪತಿ** (ನಾ). ಸರ್ಪರಾಜ; ಆದಿಶೇಷ: ಉರಗಪತಿಯ ಫಣಾವಳಿಯ ಗುಡಿಯೆತ್ತಿದುವು ಪಾತಾಳ ಲೋಕದಲಿ (ಕುವ್ಯಾಕ. ೨೫–೭). [ಉರಗ + ಪತಿ$_2$]

**ಉರಗಪರಿವೃಢ** (ನಾ). = ಉರಗಪತಿ : ಅಂತು ಬಂದುರಗಪರಿವೃಢಂ ಪ್ರಸಾರಿತ ಫಣಾಸಹಸ್ರನಾಗಿ (ಜಗನು. ೩-೯ ವ). [ಉರಗ + ಪರಿವೃಢ]

**ಉರಗಬಂಧನ** (ನಾ). ಸರ್ಪಗಳ ಕಟ್ಟು; ನಾಗಪಾಶ ಬಂಧನ: ಸುರಮುನೀಶ್ವರ ಬಂದನಿತ್ತಲು ಉರಗಬಂಧನವಾದ ಕಪಿಗಳ ಕಂಡು ಚಿಂತಿಸಿದ (ಕೌಶಿರಾ. ೧೯-೫೧). [ಉರಗ + ಬಂಧನ]

**ಉರಗಬಲ** (ನಾ). ಸರ್ಪಗಳ ಸೈನ್ಯ: ಉರಗಬಲದುರವಣೆಯೊ ... ಗಬ್ಬರಿಸಿದುವು ದಿಗುತಟವನು (ಕುವ್ಯಾಭೀ. ೪-೧೫). [ಉರಗ + ಬಲ್ಯ]

**ಉರಗಭುವನ** (ನಾ). ನಾಗಲೋಕ; ಪಾತಾಳ: ಉರಗಭುವನ ದೊಳಿರಲಿ ಮೇಣ್ ಸಾಗರವ ಮುಳುಗಲಿ ನಾಳೆ ... ಕೊಲುವೆನು ವೈರಿ ಸೈಂಧವನ (ಕುವ್ಯಾದ್ರೋ. ೮-೩೫). [ಉರಗ + ಭುವನ]

**ಉರಗಭೂಷಣ** (ನಾ). ಹಾವನ್ನು ಒಡವೆಯಾಗಿ ಧರಿಸಿದವನು; ಶಿವ: ಕರದಲಿ ವೀಣೆಯ ಗಾನವ ಮಾಡುವ ಉರಗಭೂಷಣ ನೀನೆ (ಪುರಂದ. ೧-೧೮೬-೩). [ಉರಗ + ಭೂಷಣ]

**ಉರಗಭೋಜಿ** (ನಾ). ೧. ಹಾವನ್ನು ತಿನ್ನತಕ್ಕ ಪ್ರಾಣಿ. ೨. ಮುಂಗಸಿ. ೩. ನವಿಲು. ೪. ಗರುಡ. [< ಸಂ. ಉರಗಭೋಜಿನ್]

**ಉರಗಮಂದಿರ** (ನಾ). = ಉರಗಗೇಹ: ಕಿನ್ನರ ಕಿಂಪುರುಷರ ಬೆರಳು ಗಚ್ಚಿಸಿ ಪುಲ್ಲುವಿಡಿಸಿ ಉರಗಮಂದಿರವೇಱಿಸಿ (ತ್ರಿಪುಸಾಂ. ೧೧-೧೨೮). [ಉರಗ + ಮಂದಿರ]

**ಉರಗಮಥನ** (ನಾ). ಹಾವನ್ನು ಮಥಿಸುವವನು, —ಕೊಲ್ಲುವವನು; ಗರುಡ. 'ಉರಗಮಥನಾರೂಢ' ಪರಾ. [ಉರಗ + ಮಥನ]

**ಉರಗಮಥನಾರೂಢ** (ನಾ). ಹಾವನ್ನು ಮಥಿಸುವ ಗರುಡನ ಮೇಲೆ ಆರೋಹಣ ಮಾಡುವವನು; ವಿಷ್ಣು: ಆಕಾಶಕ್ಕೊಗೆದನುರಗ ಮಥನಾರೂಢಂ (ಜಗನಾ. ೧೨-೧). [ಉರಗಮಥನ + ಆರೂಢ]

**ಉರಗರಾಜ** (ನಾ). = ಉರಗಪತಿ: ಉರಗರಾಜನದ್ರಿದರೀಗಹ್ವರಮಂ ಪೊಱಮಡುವವೊಲ್ (ಶಾಂತಿಪು. ೧೧-೫೩). [ಉರಗ + ರಾಜ]

**ಉರಗವನಿತೆ** (ನಾ). ನಾಗಕನ್ನಿಕೆ; ನಾಗಸ್ತ್ರೀ: ಉರಗವನಿತೆಯಂತೆ ಕೋಳ್ವಪ್ಪಿ ಮುಳಿದಿರ್ದಳಂ (ಶಾಂತಿಪು. ೮-೮೩ ವ). [ಉರಗ + ವನಿತೆ]

**ಉರಗವರ** (ನಾ). = ಉರಗಪತಿ: ಉರಗವರಂಗೆತ್ತಲುಂ ಭೋಗದೊಳ್ ... ಸಂದಂ (ಸುಕುಮಾ. ೧೧-೩೭). [ಉರಗ + ವರ]

**ಉರಗವಳ್ಳಿ** (ನಾ). ವೀಳೆಯದೆಲೆಯ ಬಳ್ಳಿ; ನಾಗವಲ್ಲಿ: ಉರಗವಳ್ಳಿಯುಂ ಮೆಣಸು ಪಿಪ್ಪಲಂ ಜಂಬೀರ (ಲಶಿಚಂ. ೩೧-೪). [ಉರಗ+ಬಳ್ಳಿ]

**ಉರಗಶಯನ** (ನಾ). ಹಾವಿನಮೇಲೆ ಮಲಗುವವನು; ಶೇಷಶಾಯಿ. [ಉರಗ + ಶಯನ]

**ಉರಗಶಯ್ಯೆ** (ನಾ). ಹಾವಿನ ಹಾಸುಗೆ: ಉರಗಶಯ್ಯೆಯನೇಱಿದಂ (ಶಮುದ. ೧೮೯ ಪ್ರಯೋ). [ಉರಗ + ಶಯ್ಯೆ]

**ಉರಗಸ್ಪರ್ಶ** (ನಾ). ರಾಹುವಿನ ಸ್ಪರ್ಶ; ಗ್ರಹಣ: ಉಪರಾಗ ಮುರಗಸ್ಪರ್ಶ [ಪಾಠಾಂ. ಸ್ಪರ್ಶನ]ಮುಪಪ್ಲವಮೆನಲ್ ಗ್ರಹಣಮಕ್ಕುಂ" (ಮಂಗರಾ. ೧೧-೩). [ಉರಗ + ಸ್ಪರ್ಶ]

**ಉರಗಹಾರ** (ನಾ). ಹಾವನ್ನು ಹಾರವಾಗಿ ಧರಿಸಿದವನು; ಶಿವ: ನಿರುತ ಸುಗುಣೋತ್ತಂಸೆ ಬಂದಳು ವುರಗಹಾರನ ಸಾರೆ (ಬಸವು. ೫೦-೯). [ಉರಗ + ಹಾರ್ಯ]

**ಉರಗಾಂಗನೆ** (ನಾ). = ಉರಗವನಿತೆ: ಲಲಿತಲಾವಣ್ಯದುರಗಾಂಗನೆಯರಿಂ ಸಮಾಕುಲಿತಮಾಗಿಹ ಭೋಗವತಿಯ ನದಿಯಿಂದೆ (ಜೈಮಿಭಾ. ೨೪-೧೩). [ಉರಗ + ಅಂಗನೆ]

**ಉರಗಿ** (ನಾ). ೧. ಹೆಣ್ಣು ಹಾವು: ಉರಗಿಯನೆಯ್ದ್ ಪಿಡಿದೊಡದಂ ಕುರಂಗರಿಪು ಬೆಕ್ಕು ಕೊಕ್ಕನಂ ತವೆ ಪಿಡಿವಂತಿರೆ ಪಿಡಿದುದು (ಯಶೋಚ. ೩-೪೬). ೨. ಒಂದೆಲಗನ ಗಿಡ: ಉರಗಿಯ ಮುತ್ತಾಕ್ಷಿಯ ಭಿನ್ನರುಹದ ಕೊಳುಗುಳಿಕೆಯ ರಸದೊಳೊಂದನೆ ಸಕ್ಕರೆವೆರಸು ಕುಡಿಯೆ ಕರಮುಬ್ಬರಿಸಿದ ಪಿತ್ತಪ್ರಕೋಪಮಿರದುಪಶಮಿಕುಂ (ಲೋಕೋಪ. ೯-೯). [ಸಂ. ಉರಗೀ]

**ಉರಗಿಣಿ** (ನಾ). = ಉರಗವನಿತೆ: ಉರಗಿಣಿಯರು ನೀರುಗಳಿಂದ ಪೊರಮಟ್ಟು ಪುರದ ಕೋಟೆಯ ತೆನೆ ಹತ್ತಿ (ಜರಾಮಾ. ೭-೪೦). [ಸಂ. ಉರಗಿಣೀ]

**ಉರಗು** (ಕ್ರಿ). ಕರಗು: ಚಿತ್ತದೊಳ್ ಕುದಿಯದಿರು ಸತ್ಯಕಂ ನ್ಯಾಯದೊಳ್ಳಿತ್ತುರಗಲೇಕೀ ನಿಮಿತ್ಯದೊಳ್ಳಗನೆ ತುಸುಮಾತ್ರ ಕಲ್ಮಷಗಳಿನ್ನಿಲ್ಲ ಮನದೊಳಗೆ (ತುರಂಗ. ೮೦-೩). [ದೇ. ‖ ತಮಿ. ಉರುಕ್ಕು = ಕರಗಿಸು, ಕರಗು]

**ಉರಗೆಜ್ಜೆ** (ನಾ). ಎತ್ತುಗಳ ಕೊರಳಿಗೆ ಕಟ್ಟುವ ಗೆಜ್ಜೆ: ಘೋರ್ಗರೆದುಲಿವ ಘಂಟೆಯುಮುರಗೆಜ್ಜೆಯುಮುಂದಂಬಡೆಯೆ (ಜಗನಿ. ೪-೮೦ ವ); ಅನುಪಮಪ್ರಣವಮುಂದುಗೆ ದಯೆಯೆ ತೊಡರು ಶ್ರುತಿಧ್ವನಿಗಳುರ [ಪಾಠಾಂ. ರು]ಗೆಜ್ಜೆ ಸತ್ಯದ ಘಂಟೆ ಶಾಂತಿಯ ಮಂಡನ (ಸಿದ್ಧರಾ. ೩-೪೬); ನಾಗಾಳ ಸರಿಗೆಜ್ಜೆ ನಾಗಾಳ ಉರಿ[ರ]ಗೆಜ್ಜೆ ... ಚನ್ನಬಸವಣ್ಣ (ಜಗೀತೆ. ೯೨). [ಉರ್$_2$ + ಗೆಜ್ಜೆ$_1$]

**ಉರಗೇಂದ್ರ** (ನಾ). ೧. = ಉರಗಪತಿ: ಉರಗೇಂದ್ರಂಗೆ ಸಮಾನಮೊಳ್ಪಿಯೆ (ಸೋಮೇಶ. ೧೦). ೨. [ಜ್ಯೋತಿ] ರಾಹು: ಉರಗೇಂದ್ರಂ ನಿಲೆ ಷಟ್‌ತ್ರಿಲಾಭಗೃಹದೊಳ್ ಸೌಮ್ಯಗ್ರಹಂ ನೋಡೆ ನಿಖಿಳರಿಷ್ಟಂ ನಷ್ಟಮಂ ಪೊರ್ದುಗುಂ (ಜಾತತಿ. ೭-೧೬). [ಉರಗ + ಇಂದ್ರ]

**ಉರಚಲ್ಲಿ** (ನಾ). ಎದೆಗೆ ಕಟ್ಟಿಕೊಳ್ಳುವ ಕನ್ನಡಿ: ವದನರಸಂ ಮದನರಸಂ ಪೊದಳ್ದುದೆನಿಸುವಿನಮುಮರಿ ನರ್ತಿಸೆ ಚೆಲ್ವಂ ಪುದಿದುಱ[ರ]ಚಲ್ಲಿಯೊಳೆಸೆದುದು ತದುರೋಜಸರೋಜಮುಕುಳಯುಗಸಂಚಳನಂ (ಆದಿಪು. ೭-೧೯); ಅತಿಶಯಮಾಯ್ತು ಕಾಲ್ದುಱುಗಲಿಟ್ಟೆಳಮಾಯ್ತುರಚಲ್ಲಿಕೊಂದು ಕೂಗಿತು ಕಟಿಚಲ್ಲಿ ಸೂಸಕದ ನೂಪುರದಬ್ಬರಮಾದುದುಬ್ಬರಂ ... ಗಾಡಿಕಾರ್ತಿಯಾ (ಕಾವ್ಯಾವ. ೭೧); ಪೊಳೆವ ಪಂಚವಣ್ಣಿಗೆಯ ಪಟ್ಟೆಯ ತೋರದೊಂಗಲುಂ ಬೇವಿನ ದಂಡೆಯುಂ ನವಿಲ ಕಂಠದ ಬಾಸಿಗಮುಮಲಗೆವಾರಮುಂ ಉಱ[ರ]ಚಲ್ಲಿಯುಂ ನೇವಣಮುಂ ಲೀಲೆವಡೆಯೆ (ಜಗನಿ. ೪-೮೦ ವ); ಪಯದ ಬೆಡಂಗು ಚಾಳಯದ ಚೆಲ್ವುರಚಲ್ಲಿಯ ನೀಲೆ ಹಸ್ತಶಾಖೆಯ ಲಲಿತತ್ವಮಿಾಕ್ಷಣದ ಕಾಂತತೆ (ಪಾರ್ಶ್ವಪು. ೧೪-೧೩೮). [ಉರ್$_2$ + ಚಲ್ಲಿ]

**ಉರಟಣೆ** 'ಉರುಟಣೆ' ನೋ.

**ಉರಟರಿವೆ** (ನಾ). ಒರಟಾದ ಅರಿವೆ, —ಬಟ್ಟೆ. [ಉರಟ್ಟು$_0$ + ಅರಿವೆ (< ಅಱುವೆ)]

**ಉರಟಾಣೆ** 'ಉರುಟಣೆ' ನೋ.

**ಉರಡಿಕೆ** 'ಊರಡಿಕೆ' ನೋ.

**ಉರಣ** (ನಾ). "ಕುರಿ" (ಅಮರ. ಟೀಕೆ). [ಸಂ.]

**ಉರಣಾಕ್ಷ** (ನಾ). ಒಂದು ಗಿಡ; "ತಗಚಿ; ತಗಸಿಕೆ" (ಅಮರ. ಟೀಕೆ). [ಸಂ.]

**ಉರಣೆ** (ನಾ). (ಕರಾ). ಬಹಳ ಕಹಿ ಅಥವಾ ಉಪ್ಪು. [?]

**ಉರನೂರ್** (ನಾ). ಒಂದು ಊರಿನ ಹೆಸರು: ಮೂಲಸಂಘೇನಾನುಷ್ಠಿತಾಯ ಉರನೂರಾರ್ಹದಾಯತನಾಯ (ಎಕ. X, ಮಾಲೂರು. ೭೩-೨೩; 425). [?]

**ಉರಪಾಶ** (ನಾ). (ಹೊರೆಯನ್ನು ಭದ್ರಪಡಿಸಲು ಹೇರೆತ್ತುಗಳ) ಎದೆಗೆ ಬಿಗಿಯುವ ಹಗ್ಗ; ಎದೆಪಟ್ಟಿ: "ಉರಪಾಶಮಾ ಪಟ್ಟಳಿಯೆ ನಿಕ್ಕು" (ಮಂಗರಾ. ೧೦೨–೩). [ಉರ್$_2$ + ಪಾಶ]

**ಉರಭ್ರ** (ನಾ). "ಕುರಿ" (ಅಮರ. ಟೀಕೆ). [ಸಂ.]

**ಉರಮಟ್ಟೆ** 'ಉರ್ಮಟ' ನೋ.

**ಉರಮರಿನಾಡು** (ನಾ). ಒಂದು ಸೀಮೆಯ ಹೆಸರು: ಸ್ವಸ್ತಿ ಶ್ರೀ ಮಯಿಂದಮರಸ ಪೃಥಿವೀರಾಜ್ಯಂಗೆಯೆ ಮಾರ ಉರಮರಿನಾಡ ಮೇಗೆ ವಂದೊಡೆ (ಮೈಆರಿ. ೧೯೨೬, ೬೩–೨; 9ನೆಯ ಶತ).

[ಉರಮರ್$_0$ + ನಾಡು]

**ಉರಮಾಲೆ** (ನಾ). ಎದೆಯಲ್ಲಿ ಧರಿಸುವ ಮಾಲೆ: ಚತುರ್ಮುಖದ ರುದ್ರಾಕ್ಷಿಯ ಪಂಚಾಶತ್ ಉರಮಾಲೆಯಾಗಿ ಧರಿಸುವದಯ್ಯ (ಆದವ. ೪೫). [ಉರ್$_2$ + ಮಾಲೆ]

**ಉರರೀಕರಣ** (ನಾ). ೧. ಅಂಗೀಕರಿಸುವುದು ೨. ವಿಸ್ತರಿಸುವುದು. 'ಉರರೀಕರಿಸು' ಪರಾ. [ಸಂ.]

**ಉರರೀಕರಿಸು** (ಕ್ರಿ). ೧. ಅಂಗೀಕರಿಸು. ೨. ವಿಸ್ತಾರಗೊಳಿಸು: ಧರೆಯೊಳ್ ಸದ್ಬುಧನುರರೀಕರಿಸಿದ ಸತ್ಕೃತಿಯನಧಮನೇಗೆಯ್ವನೊ (ಶಬಶಂ. ೧–೧೪). [ಉರರೀಕರಣ + –ಇಸು$_3$]

**ಉರರೀಕೃತ** (ಗು). ೧. ಅಂಗೀಕರಿಸಿದ. ೨. ವಿಸ್ತಾರವಾದ: ಉರರೀಕೃತಪುಳಿನನಿತಂಬರಮ್ಯಮಾ ಪರಿಗತಾಳಿಕುಳಗಂಭೀರ ಸ್ಫುರದಾವರ್ತಂ ಮೆಱೆದುದು ಸರಸಿ ವನಶ್ರೀಗೆ ಮಧ್ಯದೊಳ್ ನಾಭಿಯವೊಲ್ (ಚಂದ್ರಪು. ೬–೧೧೯). [ಸಂ.]

**ಉರವಣಿ** 'ಉರವಣೆ' ನೋ.

**ಉರವಣಿಗೆ, ಉರುವಣಿಗೆ** (ನಾ). ೧. ಉಪದ್ರವ; ಪೀಡೆ: ಜಗತ್ತಿನಲ್ಲಿ ಎಲ್ಲವೂ ನಡೆದಿದೆ ಮದುವೆಯ ಮೆರವಣಿಗೆ; ಬರಗಾಲದ ಉರವಣಿಗೆ (ಅನ್ನ. ೨೯೭); ಸರಸದುರವಣಿಗೆ ಮೆರವಣಿಗೆ ಕಣ್ಣೀರು ತಣ್ಣೀರು (ಉಯ್ಯಾಲೆ. ೧೩–೬); ಹೈದರಲ್ಲಿಯ ಉರವಣಿಗೆಯು ಹೆಚ್ಚಾದ್ದರಿಂದ . . . ದಂಡೆತ್ತಿಹೋದನು (ಚರಿಸಂ. ೯೧). ೨. ರಭಸ; ಆತುರ; ತೀವ್ರತೆ: "ಅಸವಸವವಸರವೆನಿಕ್ಕುರವಣಿಗೆಯರ್ಥದೊಳ್" (ಶಬ್ದಮಂ. ೬೩); ನಮ್ಮ ಪಡುವಣ ಗಡಿಗಳ್ಗೆ ಉರವಣಿಗೆಯಿಂದ ನುಗ್ಗಿ ಕೊಳ್ಳೆಗೊಳ್ಳಲಾರಂಭಿಸಿ (ಟಿಪ್ಪುಅ. ೭೮–೧೯). ೩. ಗಟ್ಟಿಯಾಗಿ ಕೂಗುವುದು (ಕಿ). **ಉರುವಣಿಗೆ:** ೧. "... ಆ ಮಾಸ್ತರನ ಉರುವಣಿಗೆ ಬಹಳವಾಗಿದೆ" (ರಂಗರೋ. ೨೨). [ಉರವಣೆ + –ಇಗೆ$_2$]

**ಉರವಣಿಗೊಬ್ಬು** (ನಾ). ಉರವಣೆಯ ಕೊಬ್ಬು; ರಭಸದ ಉಬ್ಬರ (?): ಬೊಬ್ಬುಳಿಯ ಬೆಳುನೊರೆಗಳೊಟ್ಟಲಿನೊಬ್ಬುಳಿಯನುಪ್ಪರಿಸು ತುರವಣಿಗೊಬ್ಬಿನಲಿ [ಪಾಠಾಂ. ತುರುವಣಿಗೊಬ್ಬಿನಲಿ, ತರಣಗಬ್ಬಿನಲಿ] ಮದವೇಱಿ ಪಾಲ್ಗಡಲೆಸೆದುದಿದಿರಿನಲಿ (ತೊರರಾ. ೧–೮–೪೫).

[ಉರವಣಿ (< ಉರವಣೆ) + ಕೊಬ್ಬು$_2$ (< ಕೊಬ್ರ್$_2$)]

**ಉರವಣಿಸು** (ಕ್ರಿ). ೧. ರಭಸದಿಂದ ಮುಂದೆ ನುಗ್ಗು; ವೇಗದಿಂದ ಮುಂದುವರಿ; ಆಕ್ರಮಿಸು: ಬಕಾಂತಕಂ ಪೋ ಕೊಂದಂ ಬಕವೆಸರ್ಗೆ ಮುನಿದು ನಮ್ಮುಮನಿನ್ನೆಂಬಂದದೊಳೆ ಪಾಱಿ ಪೋದುವು ನಿಂದುರವಣಿಸಿ ಬಕನಿಕಾಯಕಮುದಱೊಳ್ (ಗದಾಯು. ೭–೧೯); ಪಟ್ಟದಾನೆ ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ ತಿರುವೀಥಿಯೊಳುರವಣಿಸಿ ಬರುತ್ತಿರಲ್ (ನಂಬಿರ. ೨–೪೦); ಸುಯೋಧನಾದಿಗಳೂರನುರವಣಿಸಿ ದೂಳಿಗೋಟೆಯ ಕೊಂಡಿವರು ರಾಜಾಲಯಕೆ ಬರೆ ದ್ರುಪದನನುಜರು ಸೋಲಿಸಿದರ್ರೆ (ಕುವ್ಯಾಆ. ೭–೬೪); ಆನೆಗಳು . . . ಶತ್ರುಗಜಗಳ ಮೇಲೆ ಉರವಣಿಸಿದವು (ಕೃವಾಭೀ. ೭೪). ೨. ತವಕಿಸು; ಉತ್ಸಾಹಗೊಳ್ಳು: ಆರಾಧನೆಗೆ ಚಿತ್ತವುರವಣಿಸಿ ಜಾಳಿಗೆಗಳಂ ತರಿಸುತಂ ಮುದ್ರೆಗಳನೊಡೆದು (ಬಸರ. ೮–೨೧); ಹರಿಬದಾಹವವೆನಗೆ ತನಗೆಂದುರವಣಿಸಿದರು (ಕುವ್ಯಾಕ. ೪–೧೬); ತನ್ನ ಮಗಳ ಬಗೆವರ್ಪನೊರ್ವನಂ ಬಿಡಿಸಲ್ಕಿನಿತುರವಣಿಪಳೆನೆ (ಚಿಕವಿ. ೬–೯೪ ವ). ೩. ಅತಿಕ್ರಮಿಸು; ಮೀರು; ದುಡುಕು: ಅರಸುತನದತಿಮುಸಕದಿಂ ಮುಂಗಾಣದುರವಣಿಸಿ ಮೀಱಿ (ಹಚಕಾ. ೭–೩೨); ನಾ ನಿಮ್ಮ ಉರವಣಿಸಿ ಹರಿವೆ (ಶೂನ್ಯಸಂ. ೨೦೫–೧೦); ಸುಧಾನಿಧಿಯನುರವಣಿಸಿ ಲಂಘಿಸಿ ಸುರಾಪಗೆಯೊಳೋಲಾಡಿ (ಸೌಂದಪು. ೨–೧೪); ಉಲಿಗೇಳಿದೊಡನುರವಣಿಸಿ ಕೆಲದಲ್ಲಿ ನಿಂದವರೊಳು ಕೇಣವೆಸಗುತ ನೆಲೆಗೆಡಿಸುವಳು ನೇಹಿಗರ (ಹದಿಬ. ೭–೨೦). ೪. ವಿಜೃಂಭಿಸು; ವೆಗ್ಗಳವಾಗು: ಸನ್ನೆಗಾಳೆಗಳುರವಣಿಸಿತೆನೆ ತಂಬಟದ ನಿಸ್ಸಾಳ ರಭಸದಲಿ (ಕುವ್ಯಾದ್ರೋ. ೩–೮೦); ಉರವಣಿಸಿ ಹೆಗ್ಗಾಳೆಗಳು ಸಾಱಿದವು ಸುಭಟರ ವೀರವಿತರಣವ (ಕುವ್ಯಾದ್ರೋ. ೯–೧೬).

[ಉರವಣೆ + –ಇಸು$_3$. / ತೆಲು. ಉರುವಡಿಂಚು, ಉರುವಣಿಂಚು]

**ಉರವಣೆ, ಉರವಣಿ** (ನಾ). ೧. ಆತುರ; ಅವಸರ; ದುಡುಕು: "ಉರವಣೆಯಿಂ – ಶೀಘ್ರದಿಂದೆ" (ಶಮದ. ೬೩ ಟೀಕೆ); ಇರೆ ಮೂವತ್ತೆರಡಾಯುಧ [ಮುರವಣೆಯಿಂದುರ್ಚಿ] ಬಿಟ್ಟ ಭಟರಂ ವಿದ್ಯಾಧರ ಕರಣದಿನುಯ್ವೆಡೆಯೊಳ್ ಸುರವಧು (ಗದಾಯು. ೪–೨೧); ಶೀಲಮನುರವಣೆಯಿಂ ಬಿಟ್ಟ ಖಳರ ಬಾೞೆಂ ಬಾೞೇ (ಧರ್ಮಾಮೃ. ೪–೨೩೦); ಉರವಣೆಯಿಂದ ಮುಂಬರಿದು (ಕುಸುಮಾ. ೫–೧೨೨); ಪರವೆನಾಚಿಯ ತಾಪದುರವಣೆಯ ಪುಯ್ಯಲೇಳ್ತಪ್ಪಂತೆ (ಸೌಂದಪು. ೧೪–೧೧); ಬರುವ ಬಾಣಪರಂಪರೆಯ ಉರವಣೆಯ ಸಹಿಸಲಾರದೆ (ಸೌಗಂಧಿ. ೩೨೨–೩೫). ೨. ಸಂಭ್ರಮ; ಸಡಗರ; ಆಟೋಪ; ಆಡಂಬರ; ಪ್ರಭಾವ: ನೃಪನ ಬೇಂಟೆಯ ಬಿನದದುರವಣೆಯನೊದವಿಸುವ ಹರಿವೈರಿ ಕರಿವೈರಿ (ಹಚಕಾ. ೫–೫೩); ಎಲ್ಲಿ ನಾನಾಭಕ್ಷ್ಯಗಿರಿಗಳು ಘೃತದ ಕಡಲುಗಳು ಅಲ್ಲಿ ನಿನ್ನುರವಣೆಗಳೊಪ್ಪುವುದು (ಕುವ್ಯಾದ್ರೋ. ೧೩–೬೩); ಕೃತವರ್ಮನುರವಣೆಯನನು ಸಾಲ್ವನುಬ್ಬಟೆಯ . . . ಅನಿರುದ್ಧನಾಟೋಪಮಂ (ಜೈಮಿಭಾ. ೮–೩೪). ೩. ರಭಸ: ಶಿಥಿಲಸಾಹಸರೇನ ನಿಲುವರು ದ್ರೋಣನುರವಣೆಗೆ (ಕುವ್ಯಾದ್ರೋ. ೨–೩೧). ೪. ಅಧಿಕ್ಯ; ಹೆಚ್ಚಳ: ದಾರಿದ್ರ್ಯದುರವಣೆಯೊಳಗೆ ನೊಂದ ಮಾನವಂ ಪರಮಸೌಭಾಗ್ಯಮಂ ಬಯಸುವಂತೆ (ಚಿಬಪು. ೩–೧೪). ೫. ನಿಷ್ಠುರ: "ಉರವಣೆಯೆಂದು ನಿಷ್ಠುರಂ" (ಕಶಸಾ. ೩೦–೬೩೮); "ಉರವಣೆ ನಿಪ್ಪಸರಂ ತಾಂ ನೆಱೆ ನಿಷ್ಠುರಮಕ್ಕು" (ಕವಿಕಂ. ೨೪೫). **ಉರವಣಿ:** ೧. ಉರವಣಿಯಿಂದ ಬಂದ ಮಗಧಾಂಧ್ರ ಕಳಿಂಗ ಚಳುಕ್ಯ ಪಾಂಡ್ಯ ಗೂರ್ಜ್ಜರರ್ . . . ಭಂಗಮನಾಂತು ಪೋದರ್ (ಸೌಇಇ. IX–i, ೨೯೭–೧೮; 1177); ಬಿರುದರಾನುವರಿಲ್ಲ ಷಡುರಥರುರವಣಿಯು ಹಿರಿದಾಯ್ತು (ಕುವ್ಯಾದ್ರೋ. ೬–೫೬); ಇರ್ವರುರವಣಿಗೆಯಿರ್ವರ ಚಮತ್ಕಾರಕಿರ್ವರೇ ಸಾಟಿಯೆನಲು (ಚಿಬಪು. ೨೫–೩೩). ೨. ಗುಹೇಶ್ವರನ ಶರಣನ ಸಂಗ ಸುಖದ ಉರವಣಿ [ಪಾಠಾಂ. ಉರುವಣೆ]ಯ ಸೋಂಕು (ಪ್ರಭುವ. ೨೫೩); ಪುರಹರಂ ಮೆಚ್ಚಿದನು ತೇರೆಸರುರವಣಿಯ ಮೆಱವಣಿಗೆ (ಬಸಪು. ೫೪–೭೬). ೩. ಹರಿಹರ ಹಿರಣ್ಯಗರ್ಭರನುರವಣಿಯಿಂ ಗೆಲ್ದ ಕಾಮನಂ (ಎಕ. II, ೧೪೦–೧೭೨; 1145); ಇಱಿತಕಿವರಾರಿದಿರಹರು ನಿನ್ನುರವಣಿಯನಾರಾನುವರು (ಕುವ್ಯಾಕ. ೧೧–೨೩); ಉರಗಂಗಳುರವಣಿಗೆ ಗರುಡಕುಲಮಳಿಗುಮೇ (ಚಿಬಪು. ೩೧–೪೨). ೪. (?): ಅಯಿದು ಹಾನೆ ಗದ್ದೆಗೆ ತೆಱು ಬಿಗ ವಂದು ಉರವಣಿಯಿಂದ ವಂದು ಮೂಡೆ ಗದ್ದೆಗೆ ಬೆಳಿಗ ವಂದು (ಕಇ. III–i, ೧೧–೨೩; 1542).

[?. P ಸಂ. ರವಣ = ರಭಸ ಎಂಬುದಕ್ಕೆ ಉಚ್ಚಾರಣೆಗಾಗಿ ಆದಿಯಲ್ಲಿ ಉ ಸೇರಿದೆ]

**ಉರವಣೆಕಾರ್ತನ** (ನಾ). ರಭಸತನ; ದುಡುಕಿನ ಸ್ವಭಾವ; ಆತುರಗಾರಿಕೆ: "ಆವಗಱಿಯಮೆಂದುರವಣೆಕಾರ್ತನಂ" (ಶಮದ. ೨೩ ವೃತ್ತಿ). [ಉರವಣೆಕಾಱ + -ತನ]

**ಉರವಣೆಕಾಱ**, ಉರವಣೆಗಾಱ (ನಾ). ೧. ದುಡುಕಿನಿಂದ ನಡೆದುಕೊಳ್ಳುವವನು; ಆತುರಗಾರ. 'ಉರವಣೆಕಾರ್ತನ' ಪರಾ. **ಉರವಣೆಗಾಱ**: ೨. ರಭಸದಿಂದ ಕೆಲಸಮಾಡುವವನು; ಪ್ರಭಾವಶಾಲಿ: ಹರನ ಮೇಲೊಂದಂಬ ತೊಡಲು ಉರವಣೆಗಾಱ ಕೆಂಗಿಡಿಗಣ್ಣ ತೆಱೆದರೆನ್ನಿರವಳಿದವುದೆಂದು ನುಡಿದ (ಮೋಹತ. ೫-೯೯).
[ಉರವಣೆ + -ಕಾಱ]

**ಉರವಣೆಗಾಱ** 'ಉರವಣೆಕಾಱ' ನೋ.

**ಉರವಣ್ಣಿ** (ನಾ). ಒಂದು ಗಿಡಮೂಲಿಕೆ (?). [?]

**ಉರವರಿ** (ನಾ). ವೇಗದಿಂದ ಓಡುವಿಕೆ, ಹರಿಯುವಿಕೆ; ರಭಸ: ನರಪತಿ ನೋಡುತ್ತಿರಲುರವರಿಯಿಂ ಕೊಂಡುಯ್ದು ರಾಜಿಯಂ (ಸೌಇಇ. IX-i, ೧೬೩-೧೨; 1093); ತರುಣವಯಸಿನೊಳ್ ಮೆಚ್ಚಿದ ಪುರುಷರೊಳೊಡಗೂಡಿ ಕಾಲಮಂ ಕಳೆಯದೆ ಪಂಕರುಹಾಕ್ಷಿ ಶೀಲಮಂ ಪಿಡಿದುರವರಿಯಿಂ ಬಂದ ಸುಖಮನೆಡೆಯೊಳ್ ಕಿಡಿಪಳ್ (ಧರ್ಮಾಮೃ. ೪-೨೫೮); ಉರವರಿಯಿಂದ ಗೋವೆಯನುಪ್ಪಿನ ಕಟ್ಟೆಯುಮಂ ಪ್ರತಾಪದಿಂದುರುಪಿ (ಮುಂಬರಾ. XI, ೨೬೧-೨೨; 1167); ಉರವರಿಯಿಂದ ದೂರದೊಳು ತಾಗಿದ ವೀರಧನುರ್ಧರರ್ಕ್ಳಳ್ಂ ತ್ವರಿತದಿನೆಚ್ಚು ಕೊರ್ಗಣೆಗಳಿಂ ಧರೆಗಿಕ್ಕಿ (ಎಕ. VII, ಶಿಕಾರಿ. ೧೫೦-೮; 1171). 'ಉರವರಿಸು' ಪರಾ.
[ಉರ್$_0$ + ಪರಿ$_3$. P ತಮಿ. ಉರ = ವೇಗ, ಶಕ್ತಿ]

**ಉರವರಿಸು** (ಕ್ರಿ). ರಭಸದಿಂದ ಮುಂದೆ ನುಗ್ಗು; ವೇಗದಿಂದ ಮುಂದೆ ನಡೆ: ಮೇಲ್ವಾಯ್ದುರವರಿಸಿದನೆಂದಱಿದು ಮುನ್ನಮೆ ಕರಮುಕ್ತಶಸ್ತ್ರಪಾತಪ್ರಮಾಣಭೂಮ್ಯಂತರದೊಳ್ ... ಚಕ್ರದೊಳಿಟ್ಟೊಡೆ (ಚಂದ್ರಪ್ರ. ೧೦-೧೦೨ ವ, ೧೦೩). [ಉರವರಿ + -ಇಸು$_3$]

**ಉರವಲ** 'ಉರುವಲು' ನೋ.

**ಉರಶ್ಛದ** (ನಾ). "ಯುದ್ಧದ ಅಂಗಿ" (ಅಮರ. ಟೀಕೆ). [ಸಂ.]

**ಉರಸಿಜ** (ನಾ). ಮೊಲೆ; ಸ್ತನ: "ಉರಸಿಜಃ, ಕುಚಃ, ವಕ್ಷೋರುಹಃ, ಪಯೋಧರಃ, ಸ್ತನಃ - ಈ ೫ ಮೊಲೆ" (ಹಲಾಯು. ೮೭-೩೭೨).
[ಸಂ.]

**ಉರಸಿಲ** (ನಾ). "ಧೈರ್ಯಶಾಲಿ" (ಅಮರ. ಟೀಕೆ). [ಸಂ.]

**ಉರಸು** 'ಉರುಸು' ನೋ.

**ಉರಸ್ತ್ರ** (ನಾ). = ಉರಸ್ತ್ರಾಣ: 'ದಗಲೆ' ಅಥವಾ 'ತಗಲೆ' ಎಂದರೆ ತೆಗಲೆಯ ಮೇಲೆ ಬಿಗಿದು ಕಟ್ಟುವ ಬಟ್ಟೆಲಿನಾಕಾರದ ಒಂದು ಪದಾರ್ಥ ಇದನ್ನು 'ಉರಸ್ತ್ರ' ಎನ್ನಬಹುದು (ಪಾರ್ತಿಸು. ೯೭). [ಸಂ.]

**ಉರಸ್ತ್ರಾಣ** (ನಾ). ಎದೆಯನ್ನು ಕಾಪಾಡುವಂಥದು; ಕವಚ; ಲೋಹಕವಚ: ಬಂಗಾರದ ಉರಸ್ತ್ರಾಣ (ಎದೆಯ ಮೇಲೆ ವೀರರು ಧರಿಸುವ ಆಭರಣ) ಬಂಗಾರದ ಕಿರೀಟ ಮೊದಲಾದ ಅಲಂಕಾರಗಳ ಬಗ್ಗೆ ಉಲ್ಲೇಖವಿದೆ (ಪ್ರಾಚೀಹಿಂ. ೨೮). [ಸಂ. (ಉರಸ್ + ತ್ರಾಣ)]

**ಉರಸ್ಯ** (ನಾ). ಪುತ್ರ; ಮಗ. [ಸಂ.]

**ಉರಸ್ಸು** (ನಾ). ಎದೆ; ವಕ್ಷಸ್ಥಳ. [ಸಂ. ಉರಸ್]

**ಉರಸ್ಸ್ಥಲ**, ಉರಸ್ಸ್ಥಳ (ನಾ). ಎದೆಯ ಪ್ರದೇಶ; ವಕ್ಷಸ್ಥಳ: ತತ್ಕುಚಕೂಟಘಟ್ಟಿತ ವಿಶಾಲೋರಸ್ಸ್ಥಲಂ (ಆದಿಪು. ೫-೭೧). **ಉರಸ್ಸ್ಥಳ**: ಪರಿಪೂರ್ಣಗ್ರೀವನುಮತಿವಿಶಾಲೋರಸ್ಥಳನುಂ (ಅಜಿಪು. ೪-೨೦ ವ).
[ಸಂ. (ಉರಸ್ + ಸ್ಥಲ)]

**ಉರಳಿ** 'ಉರುಳಿ$_1$' ನೋ.

**ಉರಳು** 'ಉರಿಲ್' ನೋ.

**ಉರಾಟಿ** (ನಾ). ಹೆಂಡತಿ; ಮಡದಿ: 'ಒಬ್ಬ ಉರಾಟಿಯನ್ನು ಕರೆದುಕೊಂಡು ಬರುವುದೆಂದರೆ ಸುಮ್ಮನೇ ಆಗುವುದೇ? ಅವಳ ತಾಯಿ - ತಂದೆಗಳಿಗೆ ಹಣ ಕೊಡಬೇಕು . . .' (ಧೂಮಮು. ೨೮); ಹಣ್ಣುಗಳನ್ನು . . . ಕೈಹಿಡಿದ ಉರಾಟಿಯಿದ್ದಿದ್ದರೆ ಅವಳಿಗಾದರೂ ತೆಗೆದುಕೊಂಡು ಹೋಗಿ ಕೊಡಬಹುದಿತ್ತು (ಧೂಮಮು. ೨೯). [?]

**ಉರಾವುರೇ** (ಅ). ಭಳಿರೇ, ಭಾಪುರೇ ಎಂಬ ಪ್ರಶಂಸೆಯ ಮಾತು: ಚತುರಾಸ್ಯನುಮಿಂದ್ರಾದಿ ದಿಗ್ವರರುಂ ಮುಂದೆ ಉರಾವುರೇ ಎಂದು ಮೆಯ್ಯಾಂತು (ಗಿರಿಕ. ೭-೭೨ ವ). [?]

**ಉರಾಳ್ಕೆ** (ನಾ). ಊರಿನ ಪ್ರಭುತ್ವ; ಊರಿನ ಆಳಿಕೆ: ಸ್ವಸ್ತಿಶ್ರೀ ಸಿಯಗೆಲ್ಲ ಉರಾಳ್ಕೆ ಕೆಱೂಗ್ರೋಳಿ (ಎಕ. XVI, ತುಮಕೂ. ೯೯-೨; 780).
[?]

**ಉರಿ$_1$** (ಕ್ರಿ). ೧. ಜ್ವಲಿಸು; ಸುಡು; ಸುಟ್ಟು ಹೋಗು: "ಉರಿ- ದಹನೇ, ತರುವಿಶೇಷೇ ಚ" (ಶಮಧಾ); ನರಗನುರುಪಿದೊಡೆ ಕರಿಂಕೆಱಿಸಿ ದಾತನ ತೇಜದ ಬೀಱಲನನುಕರಿಪುವಾದುವೊಗೆದುರಿವುರಿಗಳ್ (ಪಂಪಭಾ. ೧-೩೫); ವನನಿಧಿಯಾದೊಡೇನುರಿಯದಿರ್ಪುದೆ ದಳ್ಳಿಸೆ ಬಾಡಬಾನಲಂ (ಕಾದಂಪೂ. ೫೪೧); ಉರಿವ ಕೊಳ್ಳಿಯ ತಂದಾ ತಗರಂ ಪೊಯ್ಯಲೊಡನದಱ ಮೆಯ್ಯನುರಿ ಪತ್ತಲ್ (ಪಂಚತಂ. ೧೭೯-೯ ವ); ದಿಟ್ಟರುರಿದುದು ವೀರರಸುಗಳ ಬಿಟ್ಟರು (ಕುವ್ಯಾಕ. ೭-೪೧); ಹಳೆಯೊಡಲುರಿದು ನೂತನ ದೇಹವನು ತಳೆದಿರಲದ ಕಂಡು (ಮೋಹತ. ೧೬-೫೨); ಉರಿಯುವ ಬೆಂಕಿಗೆ ತುಪ್ಪಹಾಕಿದಂತೆ (ಗಾದೆ). ೨. ಸಂತಾಪಕ್ಕೆ ಗುರಿಯಾಗು; ಸಂಕಟಪಡು: ಒಡಲುರಿಗುಂ ಮನಂ ಮಱುಗುಗುಂ ಕಿವಿ ಗಿಱ್ಱನೆ ಪೋಕುಂ ಮತ್ತೆ ಕಣ್ಪೆಡುಗುಗುಂ (ಆದಿಪು. ೧೨-೪೧); ವಿರಹಾನಲನಳುಱೆ ವಿಯಚ್ಚರರಾಜಂ ನಿಲಿಸಲಾಱದೊಡಲಂ ದಾಹಜ್ವರಮಾದರಂತೆ ಕಾಯ್ಪಿಂ ದುರಿಯುತ್ತಿರ್ದಂ (ಧರ್ಮಾಮೃ. ೩-೩೨); ಅನುತಾಪದೊಳುರಿದು ಮನಂ ಕರಿಮುರಿವೋಗಿ (ಬಸರ. ೮-೬೮). ೩. ಗರ್ವದಿಂದ ಬೀಗು; ಅಹಂಕಾರದಿಂದ ಮೆರೆ: ಕೂಳು ಕೊಬ್ಬಿ ಉರಿವವಳ ಗಂಡ ಹೇಳಿದ ಮಾತ ಕೇಳದೆ ಮಿಱುವವಳ ಸೂಳೆಯಂದದಿ ನಡೆವವಳ ತಲೆ ಬೋಳಿಸಿ ಕಸಹೆಡಿಗೆ ಹೊಱಿಸಬೇಕವಳ (ಪುರಂದ. ೨-೧೪-೨).

**ಉರಿದೇಱ್**, **ಉರಿದೇಳು** = ರೇಗಿ ಪ್ರತಿಭಟಿಸು; ಕೆರಳಿ ನಿಲ್ಲು: ಆದಂ ಕೇಳದೆ ಮುನ್ನಿನ ಮುದುಬೋಜಂಗನಂ ಬರವೇಟ್ಟಪಳೆಂದುರಿದೆದ್ದು (ಧರ್ಮಾಮೃ. ೨-೫೩); ಚರನ ನುಡಿಗೇಳ್ದು ಕೋಪದಿನುರಿದೆಟ್ಟಂ (ವರ್ಧಪು. ೮-೧೯); ನನ್ನಲ್ಲಿ ವಿಶ್ವಾಸವಿಟ್ಟಿಲ್ಲವಲ್ಲ ಎಂದು ಮನಸ್ಸು ಕೊಂಚ ಉರಿದೇಳುತ್ತಿತ್ತು (ಅಲಹೂ. ೫೯). **ಉರಿದುಬೀಳು** = ರೇಗಿ ಮೇಲೆ ಬೀಳು; ಪ್ರತಿಭಟಿಸು: ಅಡುಗೆಯ ಮನೆಯ ಕಿರುಕುಳದಿಂದಾಗಿ ಎಷ್ಟು ಮಂದಿ ಹೆಂಗಸರು ತಮ್ಮ ನಿರಪರಾಧಿ ಮಕ್ಕಳ ಮೇಲೂ ಸಹನಶೀಲ ಗಂಡಂದಿರ ಮೇಲೂ ಉರಿದುಬೀಳುವುದಿಲ್ಲ (ಅಡುಸಾ. ೨೦). **ಉರಿದುಹೋಗು** = ೧. (ಆಲಂ) ಕರುಬು; ಅಸೂಯೆಪಡು: ಜನಗಳು ಹೇಳುತ್ತಿದುದನ್ನು ಕೇಳಿ ಉರಿದುಹೋಗುತ್ತಿದ್ದಳು (ಕೂನಿಭೇ. ೨೦೬). ೨. (ಆಲಂ) ಬೆಲೆ ಏರಿರು: ಸಾಮಾನು ಉರಿದುಹೋಗಿದೆ (ರೂಢಿ). **ಉರಿಯುವವನು** = ದೇವರು; ಭಗವಂತ; ಸೂರ್ಯ: ಆಹ, ಎಲ್ಲಡಗಿತೋ ಆರ್ಯಧರ್ಮದ ಕರುಣ, ಆರ್ಯಜನಗಳ ಮರುಕ, ಉರಿಯುವನೆ ಬಲ್ಲ! (ಇಂಗೀತ. ೬೩).

[ದೇ. ‖ ತಮಿ. ಉರು; ಕೊಡ. ತುಳು. ಉರಿ; ತೆಲು. ಉರಿಯು, ಉರಲು; ಪರ್ಜಿ. ಉಱ್ = ಸಿಹಿಮಾಡು; ಕುವಿ. ರುಟ = ಬೆಂಕಿಹಾಕು; ಬ್ರಾಹೂಈ. ಹುಶಿಂಗ್ = ಬೆಂಕಿಹಾಕು]

**ಉರಿ$_2$** (ನಾ). ೧. ಬೆಂಕಿಯ ನಾಲಗೆ; ಜ್ವಾಲೆ : ಉರಿಗೊಡ್ಡಿ ಮೆಯ್ಯ ನಳ್ಕದೆ . . . ಮಹೇಶ್ವರನನೆ ಚಿಂತಿಸಿ (ಇಅ. XIV, ೭೦–೧೫ ; 9ನೆಯ ಶತ); ಉರಿ ಮುಟ್ಟಿದರಳೆಯಂತಂಬರಮುರಿದತ್ತು (ಪ೦ಪಭಾ. ೧೦–೩೫ ವ); ಉರಿಯ ಪೇಟೆಗಳಲಿ ಪತಂಗದ ಸರಕು ಮಾಜದೆ ಮರಳುವುದೆ (ಕುವ್ಯಾಕ. ೧೦–೨೮); ಒಲೆ ಉರಿಯುತ್ತಿದೆ (ರೂಢಿ). ೨. (ಆಲಂ) ಸಂತಾಪ; ಸಂಕಟ : ಪುತ್ರಶೋಕದುರಿ ಭುಗಿಲೆನೆ (ಹಚಕಾ. ೧೨–೩); ಉರಿ ಪರಿದಪ್ಪುದೆನ್ನೊಡಲೊಳ್ (ದಶಕು. ೫–೫೭); ಉರಿ ಜಠರದಲಿ ಮೋಹರಿಸಿತವನಿಪನ (ಕುವ್ಯಾದ್ರೋ. ೧–೩); ಕಂಡರೆ ಕಣ್ಣುರಿ ಕಾಣದಿದ್ದರೆ ಹೊಟ್ಟೆಯುರಿ (ಗಾದೆ). ೩. (ಉಕ) ಜ್ವರ : ಉರಿ ಬಂದಾವು (ರೂಢಿ).

ಉರಿಹತ್ತು = ಜ್ವಾಲೆ ತಗುಲು; ಸುಟ್ಟುಹೋಗು : ನಾರಸಿಂಹನ ಕೊಟ್ಟಿಗೆಯು ಉರಿಹತ್ತಿ . . . ಭಸ್ಮವಾಯಿತ್ತು (ಬಸವು. ೫೬–೩೪).

[ದೇ. ‖ ತಮಿ. ಮಲ. ತುಳು. ಉರಿ ; ತೆಲು. ಎರಿ]

**ಉರಿ$_3$** (ನಾ). ಒಂದು ಗಿಡದ ಹೆಸರು : "ಉರಿ – ದಹನೇ ತರುವಿಶೇಷೇ ಚ (ಶಮಧಾ); "ಮೇಧಸಿಯೆನಲ್ಕುರಿಯ ಮರನಕ್ಕು" (ಮಂಗರಾ. ೩೬–೧೬); ಗೊರಗುರಿ ಸೀವರ ನೆಲನಾಲರಳಿ ಬಿದಿರ್ವಕ್ಕಿ ಕಕ್ಕೆ (ಮಹಾನೇ. ೪–೭೨); ಉರಿ ತಾರಿ ತೇಗು ತಜು ತಂಡಸಿ ಬೊಬ್ಬುಲಿ ಯಿಪ್ಪೆ (ಪುಣ್ಯಾಸ್ರ. ೩–೭೪). [?]

**ಉರಿಕ** (ನಾ). ೧. ಉರಿಸುವವನು; ಸುಟ್ಟು ಹಾಕುವವನು. 'ಪೊಟಲುರಿಕ' ಪರಾ. ೨. (ಆಲಂ) ಅಸೂಯೆಪಡುವವನು; ಕರುಬುವವನು. 'ಹೊಟ್ಟುರಿಕ' ಪರಾ. ೩. ಕೋಪಿಷ್ಠ : "ಉರಿಕನೆನಲ್ ಕೋಪಿ" (ಭಾರನಿ. ೪೩). [ಉರಿ$_2$ + –ಕ$_3$]

**ಉರಿಕಜ್ಜಿ** (ನಾ). ಮೈಯಲ್ಲಿ ಉರಿಯನ್ನು ಹುಟ್ಟಿಸುವ ಕಜ್ಜಿ (∗). [ಉರಿ$_2$ + ಕಜ್ಜಿ]

**ಉರಿಕಾಸು** (ಕ್ರಿ). ಬೆಂಕಿಯ ಮುಂದೆ ಕುಳಿತು ಮೈಯನ್ನು ಕಾಸಿಕೊ (∗). [ಉರಿ$_2$ + ಕಾಸು$_1$ (< ಕಾಯಿಸು$_2$)]

**ಉರಿಕಿಡಿ** 'ಉರಿಗಿಡಿ' ನೋ.

**ಉರಿಕೆಂಡ** 'ಉರಿಗೆಂಡ' ನೋ.

**ಉರಿಗ** (ನಾ). ಒಂದು ಗಿಡದ ಹೆಸರು : "ಉರಿಗ [ಪಾಠಾಂ. ಲಿಗ]ನುಂ ನಾದವಕ್ಕುಂ" (ಮಂಗರಾ. ೩೭–೮). [ಉರಿ$_3$ + –ಗ ?]

**ಉರಿಗಡಲು** (ನಾ). ಜ್ವಾಲೆಯ ಸಮುದ್ರ; ಅಗ್ನಿಮಯವಾದ ಸಾಗರ : ಒಡೆದುದಿಳೆಯೆನೆ ಸಮವಿಷ್ಟರದುರಿಗಡಲು ಶಿವಶಿವಾಯೆನೆ (ಕುವ್ಯಾಅ. ೧೩–೩೩); ಉರಿಗಡಲ ಅಲೆಗಳೋ ಎಂಬಂತೆ ಸಂತತವೂ ಚಲನದಲ್ಲಿರುತ್ತದೆ (ಜ್ಯೋತಿರ್ವಿ. ೯೩). [ಉರಿ$_2$ + ಕಡಲು$_1$ (< ಕಡಲ್$_2$)]

**ಉರಿಗಣ್, ಉರಿಗಣ್ಣು** (ನಾ). ೧. ಉರಿಯನ್ನು ಕಾರುವ ಕಣ್ಣು : ಕೊರಲ ಕಟಿ ಶಿರದ ಪೆಟಿನೊಸಲುರಿಗಣ್ . . . ಬಂದನಶ್ವತ್ಥಾಮಂ (ಗದಾಯು. ೯–೨); ಪುರಹರನುರಿಗಣ್ಣನ್ನನೀ ನಾರಸಿಂಹಂ (ಶಮದ. ೧೬೦ ಪ್ರಯೋ); ಹರನುರಿಗಣ್ಣ ದೀಧಿತಿಯೊ . . . ಮಹಾಸ್ತ್ರದ ಬೆಳಗೊ (ಕುವ್ಯಾದ್ರೋ. ೯–೧೫). ೨. (ಕೋಪ, ಹೊಟ್ಟೆಕಿಚ್ಚು, ಅಸೂಯೆ ಮೊದಲಾದುವುಗಳಿಂದ) ಕೆಂಪಾದ ಕಣ್ಣು : ಉರಿಗಣ್ ಕೆತ್ತುವ ಮಾಸೆ ಪೆರ್ಚಿದ ಕೊರಲ್ . . . ಪೆರ್ಬುಲಿಯಿರ್ದುದೇಣಕುಲಮಂ ನಿಃಶೇಷಮಂ ಮಾಡುತಂ (ನಳಚಂ. ೭೬). **ಉರಿಗಣ್ಣು** : ೧. ತ್ರಿಪುರಾರಿಯುರಿಗಣ್ಣಿಂಗೆ ಸೋಲದ ಕೈದುಗೊಂಡನಲ (ಕುವ್ಯಾದ್ರೋ. ೩–೫೮); ಉರಿಗಣ್ಣಿನಿಂದಳಿದ ಸ್ಮರ (ಚಿಬಪು. ೧೯–೩೯). ೨. ತಂದು ಕೊಡುವುದು ಸ್ವಲ್ಪ ತಡವಾಯಿತು, ಅಷ್ಟಕ್ಕೇನೇ ಉರಿಗಣ್ಣಿನಿಂದ ನನ್ನನ್ನು ಇರಿಯುತ್ತ . . . ಶಿಡುಕಿದರು (ಸುವಸಂ. ೮). ೩. ಕಣ್ಣು ಕೆಂಪಗಾಗುವ ಒಂದು ರೋಗ : ಅವನು ಉರಿಗಣ್ಣಿನಿಂದ ನರಳುತ್ತಿದ್ದಾನೆ (ರೂಢಿ). [ಉರಿ$_2$ + ಕಣ್$_1$]

**ಉರಿಗಣೆ** (ನಾ). ಉರಿಯನ್ನು ಕೆದರುವ ಬಾಣ; ಆಗ್ನೇಯಾಸ್ತ್ರ : ಕೃತಾಂತನೆಚ್ಚುರಿಗಣೆಯಂತೆ ಬಂದುದು ಲಯಾನಿಳಕಲ್ಪನಿದಾಘಜಾನಿಳಂ (ಅರ್ಧನೇ. ೪–೭೪). [ಉರಿ$_2$ + ಕಣೆ$_1$]

**ಉರಿಗಣ್ಣ** (ನಾ). ಉರಿಯನ್ನು ಕಾರುವ ಕಣ್ಣು ಉಳ್ಳವನು; ಶಿವ : ಪುದಿದುರಿಗಣ್ಣನಾಣೆಯನದೇವೊಗಟ್ಟಿಂ (ಕಬ್ಬಿಕಾ. ೧೪೭); ಕಣ್ಣು ಮೂಜುಳ್ಳಾತನೆಂದುರಿಗಣ್ಣ ಕೇಳ್ ಮೂಲೋಕವಂಜುವುದು (ಬಸಪು. ೧೮–೭೮). [ಉರಿಗಣ್ + –ಅ$_7$]

**ಉರಿಗಣ್ಣು** 'ಉರಿಗಣ್' ನೋ.

**ಉರಿಗದಿರ್** (ನಾ). ಉರಿಯುವ ಕಿರಣ : ತರುಣಿಯ ಬಳಿಯಿಂ ಬಂದು ವಿರಹದಿಂದುರಿಗದಿರಿಂದ ಕಿಮುಳ್ಳಿದ ತಳಿರೆನೆ ಕೊರಗಿ (ಜಯುಕಾ. ೪–೪೫). [ಉರಿ$_1$ + ಕದಿರ್]

**ಉರಿಗಪ್ಪುರ** (ನಾ). ಉರಿಯಿಸುವ ಕರ್ಪೂರ; ಕರ್ಪೂರದ ಆರತಿ (?) : ಬೆಟ್ಟದ ಚಾಮಪ್ಪ ಅರಸಿಗೆ – ಸ್ವರುಚಿಯಿಂದ ಒಡಂಬಟ್ಟು – ಬರೆಯಿಸಿ ಕಣ್ಗೆ ಕಟ್ಟಿಸಿ ಕೊಟ್ಟ ಉಂಬಳಿಕೊಡಿಗೆಯ ಉರಿಗಪ್ಪುರದ ತಕ್ಕ ಶಾಸನ (ಬೆಟ್ಟಅ. ೧೯೪–೩). [ಉರಿ$_1$ + ಕಪ್ಪುರ]

**ಉರಿಗಯ್ಯ** (ನಾ). ಉರಿಯುವಂತಿರುವ ಕಿರಣಗಳುಳ್ಳವನು; ಸೂರ್ಯ : ಉರಿಗಯ್ಯ ಗಗನಾಂಗಣದ ಮಧ್ಯದೊಳ್ ಮಿಗೆ ಪರಿದಾಡುವಂತಾ ರಾಮ ಧುರಧರಣಿಯೊಳು ತಿಜ್ಞನೆ ತಿರುಗಿದನು (ಕುರಾಸಾಂ. ೧೫–೬೧). [ಉರಿ$_1$ + ಕಯ್ (< ಕೆಯ್$_2$) + –ಅ$_7$]

**ಉರಿಗಾಳಿ** (ನಾ). ಬಿಸಿಯಾದ ಗಾಳಿ; ಬಿಸಿಗಾಳಿ (∗). [ಉರಿ$_1$ + ಗಾಳಿ]

**ಉರಿಗಿ** (ನಾ). ಒಂದು ಊರಿನ ಹೆಸರು (?) : ಕರಿಯ ಬೀರಗೌಂಡಾ ಉರಿಗಿ ಬೀರಾಗೊಂಡಾ (ಎಕ. XI, ಹೊಳಲ್ಕೆ. ೭೬–೨೧ ; ?). [?]

**ಉರಿಗಿಚ್ಚು** (ನಾ). ಉರಿಯುವ ಬೆಂಕಿ : ಮಚ್ಚರಿಪ ದಕ್ಷನ ಭುಜಕ್ಕುರಿಗಿಚ್ಚನಿಕ್ಕಿದಂ (ಬಸವು. ೧೬–೨); ಪೆರ್ಚಿದುರಿಗಿಚ್ಚಿನೊಳ್ ಮುಗ್ಗರಾದರ್ ಕೆಲರ್ (ಜೈಮಿಭಾ. ೮–೪೧); ಉರಿಗಿಚ್ಚಿಗೆ ನೆಯ್ಯೆಟಿಯೆ ಕೆದರ್ವಂತೆ ಕೋಪಂ ಕೆದಟಿ (ಅದ್ಭುತ. ೧೫–೫). [ಉರಿ$_1$ + ಕಿಚ್ಚು (< ಕಿರ್ಚು)]

**ಉರಿಗಿಡಿ, ಉರಿಕಿಡಿ** (ನಾ). ಬೆಂಕಿಯ ಕಿಡಿ : ಕಂಗಳಿಂದ ಒಗುವುರಿಗಿಡಿಗಳಿಂದಾ ಮೋಹನೊಳು ತಿರ್ಯಗ್ಗತಿ ನುಡಿದನಿಂತೆಂದು (ತ್ರಿಪುಸಾಂ. ೧೨–೧೩೭). **ಉರಿಕಿಡಿ** : (∗). [ಉರಿ$_1$ + ಕಿಡಿ]

**ಉರಿಗುದುರೆ** (ನಾ). ಬಡಬಾಗ್ನಿ : ನೋಟ್ಪೊಡಿಂತೀ ಪೊಳ್ತುಮುರಿಗುದುರೆಯನೊಳಕೊಂಡ ಕಡಲ ಗುಣ್ಪೆಂದೆಸೆಗುಂ (ರಾಮಾಶ್ವ. ೧೨೧–೧). [ಉರಿ$_2$ + ಕುದುರೆ]

**ಉರಿಗೆಂಡ, ಉರಿಕೆಂಡ** (ನಾ). ಉರಿಯುತ್ತಿರುವ ಕೆಂಡ; ನಿಗಿ ನಿಗಿ ಕೆಂಡ : ಸದರವೇ ಉರಿಗೆಂಡವೊಜಲೆಯ ಬಾಯ್ಗೆ (ಕುವ್ಯಾದ್ರೋ. ೩–೬೦). **ಉರಿಕೆಂಡ** : (∗). [ಉರಿ$_1$ + ಕೆಂಡ]

**ಉರಿಗೆದಱ್** (ಕ್ರಿ). ಉರಿಯನ್ನು ಹರಡು; ಜ್ವಾಲೆಯನ್ನು ಹಬ್ಬಿಸು : ಭೀಕರಾಕೃತಿವೆತ್ತು ಮುರಿದೇಳ್ದುರಿಗೆದರ್ವ ಕಣ್ಗಳಿಂ ನುಂಗುವಂತೆ ನಿರೀಕ್ಷಿಸಿ (ರಾಜಶೇ. ೫–೧೨೦ ವ). [ಉರಿ$_1$ + ಕೆದಱ್]

**ಉರಿಗೆಯ್** (ನಾ). ೧. ಉರಿಯನ್ನು ಹರಡುವ ಕೈ; ಅಗ್ನಿಹಸ್ತ. ೨. (ಆಲಂ) ಮುಟ್ಟಿದ್ದನ್ನು ಸುಟ್ಟುಹಾಕುವ ಕೈ. 'ಉರಿಗೈಯ್ಯ' ಪರಾ. [ಉರಿ$_1$ + ಕೆಯ್$_2$]

**ಉರಿಗೆಯ್ಯ** (ನಾ). ೧. ಉರಿಯನ್ನು ಹರಡುವ ಕೈಯುಳ್ಳವನು. ೨. (ಆಲಂ) ಮುಟ್ಟಿದ್ದನ್ನು ಸುಟ್ಟುಹಾಕುವವನು; ಭಸ್ಮಾಸುರ : ಉರಿಗೆಯ್ಯ ರಕ್ಕಸನ ಕೊಲೆ ಹರಿ ಪೆಣ್ಬರಿಜ ಕೈಕೊಂಡಮಾಳ್ಕೆಯೊಳು (ಶ್ರೀಪಾಲ. ೩–೨೩). [ಉರಿಗೆಯ್ + –ಅ$_7$]

**ಉರಿಗೇಸ** (ನಾ). ಬೆಂಕಿಯಂತೆ ಕೆಂಪು ಅಥವಾ ಪಿಂಗಳ ವರ್ಣದ ಕೂದಲು : ಕಾರಿರುಳ ತಿರುಳ ಬಣ್ಣಂ ಕೂರಿದುವೆನೆ ತೊಳಪ ದಾಡೆ ಮಿಳಿರ್ವುರಿಗೇಸಂ ಪೇರೊಡಲೆಸೆದಿರೆ ಪುಟ್ಟಿದಂ . . . ಘಟೋತ್ಕಚನೆಂಬಂ (ಪಂಪಭಾ. ೩-೨೦); ಪರೆದುರಿಗೇಸಮುವ್ವಳಿಪ ನಾಲಗೆ (ಪಂಪಭಾ. ೧೨-೭).
[ಉರಿ$_2$ + ಕೇಸ]

**ಉರಿಗೊಂಡ** (ನಾ). ಅಗ್ನಿಕುಂಡ : ತಲೆಯ ತರಿಸಿಕೊಂಡು ಸೊಸೆಯರನುರಿಗೊಂಡದೊಳಗೆ ಬೀಳ್ವಂತೆ ಮಾಡೆನಲು (ಕುರಾಸಾಂ. ೩೬-೧೫೧); ಹೊಗುವರಾರುರಿಗೊಂಡವೋ ಮಱಿದೆಗೆದ ಕಾಲನ ಧಂಡವೋ (ನಿಭಾಗ. ೪-೯-೧೮).
[ಉರಿ$_2$ + ಕೊಂಡ]

**ಉರಿಗೊಳ್**, ಉರಿಗೊಳು (ಕ್ರಿ). ಬೆಂಕಿ ಹತ್ತಿಕೊಳ್ಳು ; ಅಗ್ನಿಜ್ವಾಲೆ ಸೋಕು : ತುಂಬಿದ ಮನೆಯು ಕಿಚ್ಚಿಂದಾವರಿಸಿಯುರಿಗೊಳಲ್ ಒಳಗಿಪ್ಪ ಕುಟುಂಬಿಗನು ಮಡದಿ ಮಕ್ಕಳು ಮೊದಲಾದುವಂ ಬಿಟ್ಟು ತಾನುಳಿದೋಡುವಂತೆ (ವಿವೇಕ. ೧೫). **ಉರಿಗೊಳು** : ಉರಿಗೊಳುವ ಕಡುಗೋಪದಲಿ ಕಿಡಿಕಿಡಿಯಾದನಸುರೇಂದ್ರ (ತೊರರಾ. ೩-೬-೧೪) ; ರಥ ರಥಾಂಗ ತ್ರಿವೇಣುಕ ಯುಗಾಕ್ಷಂಗಳುರಿಗೊಳೆ ಪಾಂಡುಪುತ್ರ ಸೇನೆಯೊಳೆಲ್ಲರುಂ ಬೆದಱಿರ್ದರ್ (ಜೈಮಿಭಾ. ೮-೩೮). [ಉರಿ$_2$ + ಕೊಳ್$_1$]

**ಉರಿಗೊಳಿಸು** (ಕ್ರಿ). ೧. ಬೆಂಕಿಯನ್ನು ಹತ್ತಿಸು, —ಹಚ್ಚು ; ಉರಿಮುಟ್ಟಿಸು : ತಂದು ಕಿಚ್ಚಂ ಹೊಸೆವ ಕೋಲಂ ಸಂದಿಸುತ ಹೊಸೆಹೊಸೆದು ಸಂಭ್ರಮದಿಂದೆ ಪಿರಿದುರಿಗೊಳಿಸಿ ಕೆಲವಡುಗಬ್ಬನಾಯ್ದೊಟ್ಟಿ (ಬಸಪು. ೧೮-೨೮); ಪಟ್ಟಣವನುರಿಗೊಳಿಸಲಿದು ತಾ ಬಟ್ಟೆ ತಸಗೆನುತಱಿಚಿ ಹಲುಗಿರಿದೊಟ್ಟೆದಿಂಧನಗೆದಱಿ ಬಿದ್ದನು ರಥದ ಮಧ್ಯದಲಿ (ತೊರರಾ. ೫-೭-೯). ೨. ಜ್ವಲಿಸುವಂತೆ ಮಾಡು ; ಉರಿಯಿಸು : ತರುಹಿ ಬಾಲದ ಕೊನೆಯ ವಹ್ನಿಯನುರಿಗೊಳಿಸಿ ಪುಟನೆಗೆದು ನಿಂದನು ಸರಿಸದಲಿ (ತೊರರಾ. ೫-೮-೩೩) ; ತುದಿವಾಲದಗ್ನಿಯನುರಿಗೊಳಿಸಿ [ಪಾಠಾಂ. ರುಹಿಕಲಿ] ಹನುಮ (ತೊರರಾ. ೫-೮-೪೯). [ಉರಿ$_2$ + ಕೊಳ್$_1$ + -ಇಸು$_3$]

**ಉರಿಗೊಳು** 'ಉರಿಗೊಳ್' ನೋ.

**ಉರಿಗೊಳ್ಳಿ** (ನಾ). ಉರಿಯುವ ಕೊಳ್ಳಿ : ವಿಷವಮೃತವಾಯ್ತುರಿಗೊಳ್ಳಿ ಶೀತಳವಾಯಿತೀತನ ಸೆಳ್ಳುಗುರ ಕೊನೆ ಕೊಂದುದಸುರನ (ನಿಭಾಗ. ೬-೧-೩೬).
[ಉರಿ$_1$ + ಕೊಳ್ಳಿ]

**ಉರಿಗೋಲ್** (ನಾ). ಉರಿಯ ಬಾಣ ; ಅಗ್ನಿಬಾಣ.
ಉರಿಗೋಲಸುರತ್ರಾಣ = ಒಂದು ಬಿರುದು : ಅಂತೆಂಬವರಗಂಡಾಂಕಃ ಸಿಂಧ್ವಂತಕ್ಷಿತಿರಕ್ಷಕಃ . . . ಉರಿಗೋಲ ಸುರತ್ರಾಣ ಹರಿಗೋಚರಮಾನಸಃ (ಎಕ. XII, ತುಮಕೂ. ೧-೯೪; 1570). [ಉರಿ$_1$ + ಕೋಲ್$_1$]

**ಉರಿಚಳಿ** (ನಾ). ಚಳಿಜ್ವರ: ಈ ಋತುವಿನಲ್ಲಿ ಹವೆಯು ಯಾವಾಗಲೂ ತೇವ ಉಳ್ಳದ್ದಿರುವ ಕಾರಣ ಉರಿಚಳಿಯೆಂಬ ಬೇನೆಯು ಸಾಧಾರಣವಾದದ್ದು (ಮುಂಬಯಿ. ೫-೧೯೯). [ಉರಿ$_2$ + ಚಳಿ$_2$]

**ಉರಿಚುಗಟ್ಟು** (ಕ್ರಿ). ಉರಿಮೂತ್ರವಾಗು : ಉಷ್ಣಸ್ನಾನದಿಂದ ವೀರ್ಯವು ತೆಳ್ಳಗಾಗಿ ಚಂಚಲವಾಗುವುದು ಮತ್ತು ಮೂತ್ರದ್ವಾರದಿಂದ ಅದು ಹೊರಬೀಳ ಹತ್ತುವುದು. ಉರಿಚುಗಟ್ಟುವುದು (ಬ್ರಹ್ಮಜೀ. ೧೨೦).
[ಉರಿಚು$_0$ + ಕಟ್ಟು$_1$]

**ಉರಿಚೇಳು** (ನಾ). ಒಂದು ಬಗೆಯ ಚೇಳು (ಕ).
[ಉರಿ$_2$ + ಚೇಳು (< ತೇೞ್)]

**ಉರಿಜಾಳಿಗೆ** (ನಾ). ಉರಿಯ ಜಾಲ, —ಸಮೂಹ : ಹೊಗರುಗಿಡಿಗಳ ಬಾಯಿಧಾರೆಯಲೊಗೆವ ಹೊಗೆಗಳ ಹೊದಱಿನುರಿಜಾಳಿಗೆಯ ಭೋಂಕಾರದ ಭಯಂಕರ ಶೂಲವೈತರಲು (ಕುವ್ಯಾದ್ರೋ. ೧೬-೪೦).
[ಉರಿ$_2$ + ಜಾಳಿಗೆ]

**ಉರಿಜ್ವರ** (ನಾ). ಒಂದು ಬಗೆಯ ಜ್ವರ : ಉರಿಜ್ವರಕ್ಕೆ :— ಕರಿಹತ್ತಿಯ ಹರಳು, ಬಸಲೇಕೊಂಬು, ತೊಂಡೆಯ ಸೊಪ್ಪು ಇವನ್ನು ನೀರೆ ತಳಿದು ಕುಷ್ಮರಸವ ಹಿಂಡಿಕೊಂಡು ಪಾನವಮಾಡುವುದು (ವಿವೈವಿ. ೧೦೦).
[ಉರಿ$_2$ + ಜ್ವರ]

**ಉರಿತ** (ನಾ). ಉರಿಯುವಿಕೆ; ಸಂತಾಪ. 'ಕಣ್ಣುರಿತ', 'ಮೈಯುರಿತ' ಪರಾ. [ಉರಿ$_1$ + -ತ$_2$]

**ಉರಿನಂಜು** (ನಾ). ಉರಿಯುವ ವಿಷ ; ಅತಿಯಾದ ವಿಷ : ನಿಮ್ಮ ಅಸೂಯೆಯ ಉರಿನಂಜು ಹದ್ದುಮೀರಿ ಹಬ್ಬುತ್ತಿದೆ (ತುಂಗಭ. ೨೪).
[ಉರಿ$_1$ + ನಂಜು$_2$]

**ಉರಿನಾಲಗೆ**, ಉರಿನಾಲಿಗೆ (ನಾ). ಉರಿಯ ನಾಲಗೆ ; ಅಗ್ನಿಜ್ವಾಲೆ : ಹೊಗೆಯು ಹಬ್ಬುಗೆ ಸತ್ಯಲೋಕವನುಗಿದುದುರಿನಾಲಗೆಯ ಗರವೊಟ್ಟೆಗೆಯ ತೊಳಲಿಕೆ ತೆರಳಿಚಿತು ಕಿತ್ತೀಸಕೋಟಿಗಳ (ಕುವ್ಯಾಆ. ೨೦-೫೭) ; ಉಗುಳಿದುದು ಬಲುಗಿಡಿಯನುರಿನಾಲ [ಪಾಠಾಂ. ಲಿ]ಗೆಯ (ತೊರರಾ. ೧-೧೧-೧೭). **ಉರಿನಾಲಿಗೆ** : ಬೀಳುವಾಹುತಿಗಳನು ಸವಿದುರಿನಾಲ್ಗಿ [ಪಾಠಾಂ. ಲ]ಗೆಗಳುಬ್ಬೆದ್ದು ಕುಣಿವುವು (ತೊಶರಾ. ೧-೭-೪೮); ಸುತ್ತಲಿಂದ ಉರಿನಾಲಿಗೆ ಚಾಚಿದಂತಾಯಿತು (ಸ್ವಪ್ನತಿ. ೨೪೭). [ಉರಿ$_2$ + ನಾಲಗೆ]

**ಉರಿನಾಲಿಗೆ** 'ಉರಿನಾಲಗೆ' ನೋ.

**ಉರಿನೀರ್**, ಉರಿನೀರು (ನಾ). ಕುದಿಯುವ ನೀರು ; ಬಿಸಿನೀರು. 'ಉರಿನೀರ್ಗೊಡ' ಪರಾ. **ಉರಿನೀರು**: ಮನದ ತುರಿಯ ನಿವಾರಿಸಲು ಉರಿನೀರ ಸುರಿವಿದ ಹಾಗೆ (ಹಾಡುಪಾ. ೪೫-೧೨). [ಉರಿ$_1$ + ನೀರ್$_1$]

**ಉರಿನೀರು** 'ಉರಿನೀರ್' ನೋ.

**ಉರಿನೀರ್ಗೊಡ** (ನಾ). ಬಿಸಿನೀರು ತುಂಬಿರುವ ಕೊಡ, —ಬಿಂದಿಗೆ: ಜಲಜಾಕರಮುರಿನೀರ್ಗೊಡನಾದುವು ಬಲುವಿಸಿಲ್ವಗಲ ಕಾಲದೊಳು (ಶ್ರೀಪಾಲ. ೪-೫೧). [ಉರಿನೀರ್ + ಕೊಡ]

**ಉರಿನೆಳಲು** (ನಾ). ಉರಿಯಂತಿರುವ ನೆರಳು ; ಸಂತಾಪಕ್ಕೆ ಕಾರಣವಾದ ನೆರಳು : ಸಾಕಿನ್ನು ಈ ರಾಜ್ಯದ ಸಹವಾಸ, ಈ ರಾಜಾಸ್ಥಾನ ಉರಿನೆರಳು (ತುಂಗಭ. ೧೧). [ಉರಿ$_2$ + ನೆಳಲು (< ನೆೞಲ್)]

**ಉರಿಪ** (ನಾ). ಉರಿಯುವಿಕೆ; ಸಂತಾಪ : ಉದಯಿಸುಗುಂ ಶೂಲಂ ವಾತದಿನುರಿಪಂ ಪಿತ್ತದೇೞ್ಗೆಯಿಂ (ಲೋಕೋಪ. ೯-೩) ; ಕಾಥಲನಗಲ್ದಗಲ್ಕೆಯುರಿಪಂ ಸೈರಿಸಲಾಱದೆ ಹರಣಂಗಳೆಯಲುಜ್ಜುಗಿಸಿ (ಶಬಶಂ. ೩-೩೫ ವ). [ಉರಿ$_1$ + -ಪ$_2$]

**ಉರಿಪಡು** (ಕ್ರಿ). ಮೈಯುರಿತವನ್ನು ಪಡೆ ; ಬೇಗೆಯನ್ನು ಅನುಭವಿಸು : ತುರಿಸಿಕೊಂಡವ ಉರಿಪಟ್ಟಾನು (ಗಾದೆ).
[ಉರಿ$_2$ + ಪಡು$_1$]

**ಉರಿಪು$_1$**, ಉರುಪು$_1$, ಉರುವು$_1$, ಉರುಹು (ಕ್ರಿ). ಉರಿಯುವಂತೆ ಮಾಡು ; ಉರಿಸು ; ಸುಡು ; ದಹಿಸು : "ಉರಿಪು (ಉರುಪು) —ಅಗ್ನಿಬಾಧೇ" (ಶಮುಧಾ); ಉರಿ[ಪಾಠಾಂ. ರು]ಪಿತ್ತ ಶೋಕ ಪಲ್ಲವ ವಿರಚಿತಶಯೆನೀಯಮೆನ್ನ ಮೆಯ್ಯಂ (ಕವಿರಾ. ೩-೩೭); ಪುಲ್ಲಂ ಪುಳ್ಳಿಯುಮಂ ತಂದಿಕ್ಕಿ ಕಿಚ್ಚನುರಿಪೆ ಸರ್ವಾಂಗಮಂ ಕಾಸಿಕೊಂಡು (ಪಂಚತಂ. ೨೪೫-೧೮); ವಾಯುವಲುಗಿಸಿದುದಿಲ್ಲನಲನುರಿಪಿದುದಿಲ್ಲ (ಪದ್ಮರಾ. ೧೦-೨೫೪); ಉರಿಪಿದುದು ತತ್ಪುರಂಗಳ ಪರಿಕರಂ ನೋಡೆ ಕರಿಕಾದುದಾ ಕ್ಷಣದೊಳ್ ದೈತ್ಯಸಂಕುಲಂ (ಜಬಪು. ೪೪-೪೮). **ಉರುಪು$_1$** : "ಉರಿಪು (ಉರುಪು) – ಅಗ್ನಿಬಾಧೇ" (ಶಮುಧಾ) ; ಲಂಕೆಯನುರುಪಿದ ಕಪಿಪತಿಯೊಲಿರ್ಪುದಾ ಕಪಿಯುಗಳಂ (ಅರ್ಥನೇ. ೪-೧೨೫) ; ದನುಜಕುಲದ ಎಱೆಯನಂ ನೊಸಲ ಕಣ್ದೆಱೆದುರುಪಿ (ಸೌಂದಪು. ೧೨-೧); ಕಚ್ಚೆಗಟ್ಟದೆ ಕೈದುವಿಡಿಯದೆ ಕೆಚ್ಚೆದೆಯ ಮನಸಿಜನ ತಪಸಿನ ಕಿಚ್ಚಿನಿಂದುರುಪಿದೆ (ಸಾಳ್ವಭಾ. ೩-೫).

**ಉರುವು**₁ : 'ಉರುವಲು' ಪರಾ. **ಉರುಹು** : ಕಾಮು ಬಲ್ಲಿದ ನೆಂದರೆ ಉರುಹಿ ಭಸ್ಮವ ಮಾಡಿದ (ಮಹಾದೇ. ೧೫-೩); ಹರಿಯ ಹಗೆ ಹೊಗೆದೋಱದುರುಹದೆ ಬಱಿದೆ ಹೋಹುದೆ (ಕು ವ್ಯಾ ಉ. ೧೧-೧೧); ರಿಪುಜಲಧಿಯನುಸಿರ್ಗಿಚ್ಚಿನುರುಹೆಂದು (ಕಂನವಿ. ೬-೧೫).

ಉರಿಪೆಪಡು = ಉರಿಸಲ್ಪಡು; ಸುಡಲ್ಪಡು : ಪಳಿವಿದಚ್ಚಿ-ಉರಿಪೆ [ಪಾಠಾಂ. ಯೆ] ಪಟ್ಟುದಾದೊಡೆ (ವಡ್ಡಾರಾ. ೧೪೦-೬).

[ಉರಿ₁ + -ಪು₁]

**ಉರಿಪ್ಪು**₂, ಉರುಪ್ಪು₂, ಉರುವ್ವು₂ (ನಾ). ಉರಿಯುವಿಕೆ; ಸಂತಾಪ: ದೇವರಾಜನು ಆಡಿದ ಮಾತು ನೆನಪಾದರೆ ಮೈಗೆ ಪಂಜನ್ನು ಹಚ್ಚಿದಷ್ಟು ಉರಿಪು ಬೀಳುತ್ತದೆ (ಯದುರಾ. ೧೭). **ಉರುಪ್ಪು**₂ : ಬಕಪಕ್ಷಿಯ ಹೊಟ್ಟೆ ಯಲ್ಲಿದ್ದ ಕೃಷ್ಣನು ಆ ಪಕ್ಷಿಯ ಅಂಗಗಳಲ್ಲಿ ಉರುಪನ್ನು ಹುಟ್ಟಿಸಿದನು, ಉರುಪು ತಾಳಲಾರದೆ ಪಕ್ಷಿಯು ಕೃಷ್ಣನನ್ನು ಉಗುಳಿ ಬಿಟ್ಟಿತು (ಭಾವ್ಯ್ರ ತ. ೩೧೩); ಒಂದು ಕಡೆ ಮಾತಿನ ಉರುಪು ಹಾಯಗೊಳಿಸುತ್ತಿದ್ದರೆ ಇನ್ನೊಂದೆಡೆಗೆ ಭವ್ಯ ಭವಿಷತ್ತಿನ ಚಿತ್‌ವೃತ್ತಿಯು ಅಲ್ಹಾದಗೊಳಿಸುತ್ತಿತ್ತು (ರಕ್ತಧ್ವ. ೨೬೯). **ಉರುವ್ವು**₂ : (ಕ). [ಉರಿ₁ + -ಪು₂]

**ಉರಿಬಣಂಬೆ** (ನಾ). ಉರಿಯ ಬಣಬೆ, —ಮೆದೆ : ಉರಿಬಣಂಬೆಯ ತೆಱದಿನತಿರೌದ್ರದಿಂ ಕಾಣಿಸುತ್ತೆ (ಪಾಸೋಪು. ೫-೭೯).

[ಉರಿ₂ + ಬಣಂಬೆ]

**ಉರಿಬತ್ತಿ** 'ಉರಿವತ್ತಿ' ನೋ.

**ಉರಿಬಳ್ಳಿ** (ನಾ). ಒಂದು ಬಗೆಯ ಬಳ್ಳಿ (ಕ). [ಉರಿ₂ + ಬಳ್ಳಿ]

**ಉರಿಬಾಣ** (ನಾ). ಉರಿಯನ್ನು ಹರಡಿಕೊಂಡು ಹಾರುವ ಮದ್ದಿನ ಬಾಣ : ಉರಿಬಾಣ ಚೀಳುಬಾಣಗಳ ಬಿಡುತ ಪರಿಪರಿಯಲ್ಲಿ ಪುಷ್ಪಬಾಣಗಳ ಸುರಿವುತ (ಭರಚ. ೨೦-೭೨); ಪೂರದೊಳುರಿಬಾಣ ಪುಷ್ಪಬಾಣವ ಪರಿವಾರ ಸೂಸುವುದೊಂದು ಸೊಬಗು (ಭರಚ. ೪೦-೧೦೭).

[ಉರಿ₂ + ಬಾಣ₂]

**ಉರಿಬಿಸಿಲು** 'ಉರಿವಿಸಿಲ್' ನೋ.

**ಉರಿಬೆಂಕಿ** (ನಾ). ಉರಿಯುತ್ತಿರುವ ಬೆಂಕಿ (ಕ).

[ಉರಿ₁ + ಬೆಂಕಿ (< ಬೆಂಕೆ)]

**ಉರಿಮಂಡಲ** (ನಾ). ೧. ಹೊಟ್ಟೆಯಲ್ಲಿ ಉರಿ ಸುತ್ತಿಕೊಂಡಂತೆ ಬೇನೆ ಹುಟ್ಟಿಸುವ ಒಂದು ರೋಗ. ೨. ಸೋಕಿದ ಕಡೆ ಉರಿ ತೋರುವ, ವಿಷದಿಂದ ಕೂಡಿದ ಒಂದು ಬಗೆಯ ಹಾವು (ಕ).

[ಉರಿ₂ + ಮಂಡಲ]

**ಉರಿಮಣಲು** (ನಾ). ಚೆನ್ನಾಗಿ ಕಾಸಿದ ಮರಳು : ಶತಸಾವಿರ ದಿವಾಕರ ಬಿಂಬವೆಸೆದುದು ಝಳದ ಹೊಯಿಲಿನಲಿ . . . ಬತ್ತಿದುದುದಧಿಯೊಳುರಿಮಣಲು ಮಾಣಿಕವ ಹುರಿದುದು (ಕುವ್ಯಾಭೀ. ೬-೩೩).

[ಉರಿ₁ + ಮಣಲು (< ಮಣಲ್)]

**ಉರಿಮನೆ** 'ಉರಿವನೆ' ನೋ.

**ಉರಿಮಾರಿ**, ಉರುಮಾರಿ (ನಾ). ೧. ಉಗ್ರರೂಪದ ಮಾರಿ; ಭಯಂಕರಳಾದ ಮಾರಿ : ಬಿಲ್ಲಂಬು ಜವದಾಡೆ ಕಿರಿಸೆಗಳಾ ಗೃಹದಲ್ಲಿದ್ದವುಂ ಮಾರಿಯಂತೆ (ಭರಚ. ೨೦-೧೩೨). ೨. ಉಗ್ರಳಾದ ಮಾರಿಯಂತೆ ಭಯಂಕರ ವ್ಯಕ್ತಿ; ಘೋರ ವ್ಯಕ್ತಿ : ತನಗೆ ಚಿಣ್ಣಂ ಕಾಲನೆಂಬವಗೆ ಉರಿಮಾರಿ (ವೀರರ. ೩೭೦); ಉರಿಮಾರಿಯವಧಿ ಬಂದುದು ಋಣವನಿನ್ನಾವ ಪರಿಯೊಳುತ್ತರಿಸಿ ಶುಚಿಯಹೆನು (ಹಚಕಾ. ೧೧-೧೨); ಲಂಕೆಗೆ ಉರಿಮಾರಿ ಈ ಕಪಿಯೆಂಬರು (ಹಸುದ್ದಿ. ೮೨); ದಂಡನೆಂಬವನು ಉರಿಮಾರಿ ಕಂಡರೆ ಕಂದ ಕಿಚ್ಚೆದ್ದು ಕೆದರ್‍ಯಾನು (ಹಳ್ಳಿಬಾ. ೩೭-೯).

**ಉರುಮಾರಿ** : ೧. (ಕ). [ಉರಿ₁ + ಮಾರಿ]

**ಉರಿಮಾಲೆ** (ನಾ). ಉರಿಯ ಜ್ವಾಲೆಯ ಸಮೂಹ : ಮಯನೆಂಬ ದಾನವ ವಿಶ್ವಕರ್ಮಂ ನೆಗೆದುರಿವುರಿಮಾಲೆಗಳಂ ಗದೆಯೊಳ್ ಬೀಸುತ್ತುಂ ಪೊಱಮಡೆ (ಪಂಪಭಾ. ೫-೯೭ ವ). [ಉರಿ₂ + ಮಾಲೆ]

**ಉರಿಮುಖ** (ನಾ). (ಕೋಪದಿಂದ) ಉಗ್ರವಾದ ಮುಖ; ಸಿಡುಕು ಮುಖ : ದೊಡ್ಡಮ್ಮನ ಉರಿಮುಖವನ್ನು ಕಂಡು ಬೆಳಗಿನ ಉಪಹಾರ ಸೊನ್ನೆಯೆಂದು ತೀರ್ಮಾನಿಸಿಕೊಂಡಿದ್ದ (ವಾತ್ಸಲ್ಯ. ೨೦೨).

[ಉರಿ₂ + ಮುಖ]

**ಉರಿಮೂತ್ರ** (ನಾ). (ಅತಿಉಷ್ಣ ಅಥವಾ ಮೇಹದಿಂದ ಮೂತ್ರನಾಳದಲ್ಲಿ ಉರಿ ಬರುವ) ಒಂದು ರೋಗ : ನೀರುಳ್ಳಿ ಬೆಲ್ಲ ಸಹ ಮೆಲ್ಲಲು ಉರಿಮೂತ್ರ ಮಾಣ್ಗುಂ (ವಿವೈವಿ. ೮). [ಉರಿ₂ + ಮೂತ್ರ]

**ಉರಿಮೇಷ** (ನಾ). ತೇಗದ ಮರ : "ಜಂಬು ಜಾಂಬವಿಯಕ್ಕು ತೇಗು ಮುರಿ [ಪಾಠಾಂ. ಮರಿ] ಮೇಷವಕ್ಕು" (ಮಂಗರಾ. ೩೭-೧೮). [?]

**ಉರಿಮೊಗ** (ನಾ). = ಉರಿಮುಖ.

ಉರಿಮೊಗದಮುನಿ = ಕೋಪಿಷ್ಠನಾದ ಮುನಿ; ದೂರ್ವಾಸ ಮುನಿ : ಉರಿಮೊಗದಮುನಿವೀರನೈತರೆ ಬರವ ಕಾಣುತ ದೂರದಿಂದಾ ನೆರವಿಸಹಿತಿದಿರೆದ್ದು ಸುರಮುನಿವಂದ್ಯನಭಿನಮಿಸಿ (ನಿಭಾಗ. ೧೦-೫೪-೫).

[ಉರಿ₂ + ಮೊಗ₂]

**ಉರಿಯಂಬು** (ನಾ). ಅಗ್ನಿಬಾಣ; ಆಗ್ನೇಯಾಸ್ತ್ರ : ಅತನುರಿಯಂಬಿನ ಪೊಗೆ ಮೊಗಸಿದಂತಧರಕಿಸಲಯಂ ನಸುಗುಂದಿದುದು (ಕಾದಂಉ. ೬೭೦). [ಉರಿ₂ + ಅಂಬು₂]

**ಉರಿಯಬೆಂಚೆ** (ನಾ). ಒಂದು ಕೊಳದ ಅಥವಾ ಊರಿನ ಹೆಸರು : ಉರಿಯಬೆಂಚೆಯುಂ ಪಡುವಲು × × × ತಂಮ ಹೊಲದೊಟಗೆ (ಸೌಇಇ. IX-i, ೩೭೭-೩೮; 1225). [ಉರಿ ? + ಬೆಂಚೆ]

**ಉರಿಯರಗು** (ನಾ). ೧. ಬೆಂಕಿ ಮುಟ್ಟಿದ ಅರಗು; ಉರಿಯುವ ಅರಗು. ೨. (ಅಲಂ) ಅಂತಃಕರಣದಲ್ಲಿ ಕರಗುವಿಕೆ : ನೀವೆಂದುರುರಿಯರಗಾಗಿ ಕರಗುವ ಕೃಷ್ಣನನವರತ (ನಿಭಾಗ. ೧೦-೪೩-೪೩).

[ಉರಿ₂ + ಅರಗು₃]

**ಉರಿಯುಚ್ಚೆ** (ನಾ). = ಉರಿಮೂತ್ರ (ಕ). [ಉರಿ₂ + ಉಚ್ಚೆ]

**ಉರಿಯುಣ್ಣು** (ಕ್ರಿ). ಉರಿಯನ್ನು ನುಂಗು : ಅರಗಿನ ಮಡುವು ಉರಿಯುಂಡು ಗಱಿಗತವಾಯಿತ್ತು (ಆದವ. ೧೦೪).

[ಉರಿ₂ + ಉಣ್ಣು (< ಉಣ್)]

**ಉರಿಯುಸಿರು** (ನಾ). ೧. ಬಿಸಿಯಾದ ಉಸಿರು. ೨. (ಅಲಂ) ಕೋಪ ಅಥವಾ ಉದ್ರೇಕದಿಂದ ಬಿಡುವ ಉಸಿರು : ಉರಿಯುಸಿರ ನುಗುಳಿ (ಬದ್ಧಪ್ರ. ೨೦-೪೧೪). [ಉರಿ₂ + ಉಸಿರು₂ (< ಉಸಿರ್)]

**ಉರಿಯೂತ** (ನಾ). ಒಂದು ಬಗೆಯ ರೋಗ (?) : ರೋಗಿಯು . . . ಶ್ವಾಸಕೋಶಗಳ ಉರಿಯೂತದಿಂದಾಗಲೀ ಸಾಯುತ್ತಾನೆ (ಕೆಲರೋ. ೧೮).

[ಉರಿ₂ + ಊತ₂]

**ಉರಿಯೆಣ್ಣೆ** (ನಾ). ಉರಿಯುತ್ತಿರುವ ಎಣ್ಣೆ; ತುಂಬ ಕಾದ ಎಣ್ಣೆ : "ಉರಿಯೆಣ್ಣೆ ಅಗ್ನಿವಳೆದೆಣ್ಣೆಯೆಂದಕ್ಕು" (ಕಬ್ಬಿಕ್ಕೆ. ೭೩); ದಿನಕರ ತೀವ್ರತಾಪಮುರಿಯೆಣ್ಣೆವೊಲಟ್ಟೆ (ಪಂರಾಮಾ. ೭-೯೪); ಅವನೆರ್ದೆಯಂ ಸೀಳ್ದುರಿಯೆಣ್ಣೆಯನೆಱೆಯೆಱೆ (ಧರ್ಮಾಮೃ. ೬-೧೯೩).

[ಉರಿ₁ + ಎಣ್ಣೆ]

**ಉರಿಯೇಳು** (ಕ್ರಿ). ೧. ಬೆಂಕಿಯ ಜ್ವಾಲೆ ಮೇಲೇಳು. ೨. (ಅಲಂ) ಕೋಪಗೊಳ್ಳು; ಸಿಟ್ಟಿಗೇಳು : ಸುಭದ್ರೆಯನ್ನು ತಾನು ಅಪಹರಿಸುವಾಗ ಉರಿಯೆದ್ದ ಬಲಭದ್ರನನ್ನ ವಗಣಿಸಿದರ್ಜುನನು (ನಾಡೋಜ. ೧೩೭).

[ಉರಿ₂ + ಏಳು₁ (< ಏೞ್₁)]

**ಉರಿಯೊಗು** (ಕ್ರಿ). ಉರಿಯಲ್ಲಿ ಹೊಗು; ಅಗ್ನಿಪ್ರವೇಶಮಾಡು: ಮಗನ ತಾಯುರಿಯೊಗುತ ಕೈಲೆಡೆಯುಲಿಟ್ಟಳು ತನ್ನ ಬಾಲಕನ (ನಿಭಾಗ. ೫-೬-೧೦). ℙ ಇದರ ಸರಿಯಾದ ರೂಪ ಉರಿವೊಗು (= ಉರಿ + ಪೊಗು) ಎಂದಿರಬೇಕು. [ಉರ್ಿ$_2$ + ಒಗು$_1$ (< ಪೊಗು$_1$)]

**ಉರಿಲ್**, ಉರಲು$_1$, ಉರಳು, ಉರುಲ್, ಉರುಲು$_1$, ಉರುಳ್$_2$, ಉರುಳು$_3$ (ನಾ). ಪಾಶ; ಜೀರು(ಸರ)ಗುಣಿಕೆಯ ಹಗ್ಗ: ಎನ್ನ ಬಗೆಗೆ ತಕ್ಕ ತಾವೆಂದು ವಟವಿಟಪಿಯ ಕೆಲದ ಕಿಱುಗೊಂಬಿನೊಳ್ ಸೆಜಗಂ ಕಟ್ಟಿಯುಱ[ರಿ]ಲನಿಕ್ಕಿಕೊಳಲುಜ್ಜುಗಿಸುತ್ತುಮಿರಲ್ (ದಶಕು. ೨-೯೬ ವ); ವರುಣಕರಪಾಶವುರಿಲಾಗಿ ಮಾರುತನ ಗದೆ ತೂಗುತಿದೆ (ಚಬಪು. ೨೧-೨೫); ಬಾದರಾಯಣನಿಕ್ಕಿದುರಿಲ [ಪಾಠಾಂ. ಉರುಳ, ಉರುಳು] ಕಣ್ಣಿಗೆ ಸಿಲುಕುವರೆ (ಜೈಮಿಭಾ. ೨-೫೭); ಇಡುಗಾಣಂ ಸೊರ್ಕಿ ಸಿಲ್ಕುರಿಲ್ ಕಿಱುಗೂಳಿ . . . ಎಂಬಿವಂ ಕೊಂಡು (ರಾಜಶೇ. ೫-೧೧೪ ವ). **ಉರಲು$_1$**: ಪರುಷದಿಂ ಕಾಲ್ಕಣ್ಣ ಬಡಿಗೋಲು ಬಲೆ ದೊಣ್ಣೆಯುರಲು ಭರ್ಜಿಯು ಕರದೊಳು (ಸಿದ್ಧಕಾ. ೬-೧೫). **ಉರಳು$_3$**: ಹಗ್ಗದ ಉರಳು ಗಳಂ ದಾಪಿನ ಆನೆಗಳಂ ಸಜ್ಜುಮಾಡಿ (ಸೌಗಂಧಿ. ೨೪೬-೭). **ಉರುಲ್**: 'ಉರುಲ್ಗೊನೆ' ಪರಾ. **ಉರುಲು$_1$**: "ಉಱು[ರು]ಲು ತಂತ್ರಿ ಕೂಲಾಖ್ಯಮಕ್ಕುಂ" (ಮಂಗರಾ. ೧೧೨-೫); ನಮ್ಮಕ್ಕನರಮನೆಗಡಿ ಗಡಿಗೇಕೆ ಬರಲೊಲ್ಲೆ ಬಂದಿನ್ನು ಪೋಪೆಯ ನಿನ್ನ ಕಾಲ್ಗುರುಲನಿಕ್ಕುವೆನೆಂದುದಾಗ (ಭರತೇ. ೯-೩೮); ರೈತನು ಬಡತನದ ಉರುಲಿಗೆ ಸಿಕ್ಕು ಒದ್ದಾಡುತ್ತಾನೆ (ಮಣ್ಣಮ. ೨೧೯); ಮದುವೆಯಾದ ತಂಗಿಯರು ಇಬ್ಬರು ನಿನ್ನ ಕೊರಲಿಗೆ ಉರುಲು ಬಿದ್ದಿದ್ದಾರೆ (ಮಹಾಗ. ೨). **ಉರುಳ್$_2$**: "ವಿತಂಸಃ – ಉರುಳ್" (ನಾಚಿರಾ. ೩); ಹುಪ್ಪುವ ಪುಲ್ಲೆಗಳ್ಗುರುಳ ನೊಯ್ಯನೆ ಸೇರಿಸು (ಉದ್ಭಟ. ೨-೫೧). 'ಉರುಳ್ಗಣ್ಣಿ' ಪರಾ. **ಉರುಳು$_3$**: ಸತಿಯ ಕಂಗಳೊಲ್ಡುರುಳುಗಳೊ (ಬಸವು. ೪೦-೪); ಕಾಲ್ಕಣ್ಣಯುರುಳು ಪಾಡಿ ಸಿಡಿ ಸೆಳೆಗಾಣ . . . ಕೂಡಿ (ನೇಮಿಸಂ. ೨-೩೮); ಕಿತ್ತು ಹೊಟ್ಟೆಯ ಕೊಯ್ವರೊ ಬೊಬ್ಬಿರಿಯುತ್ತುರುಳುಹಾಕುವರೋ (ವಿದಾಕ್ಷ. ೧೧೬-೨); ಈ ಮಾತು ನನ್ನ ಕೊರಳಿಗೆ ಉರುಳಾದಂತಾಯಿತು (ನಾಚಿಕೆ. ೨೭).

ಉರಲುಹಾಕು, ಉರುಲುಹಾಕು = ನೇಣುಹಾಕು; ಪಾಶಬೀಸು: ಅವನು ಉರಲುಹಾಕಿಕೊಂಡು ಸತ್ತನು (ರೂಢಿ); ಉರುಲುಹಾಕಿ ಕೊಲ್ಲುವವನಿಗೆ ಕೊರಳ ಚಂದ ತೋರಿಸಿದರಂತೆ (ಗಾದೆ). ಉರುಲಾಗು, ಉರುಲು ಆಗು = ನೇಣಾಗು; ಪಾಶವಾಗು: ಈ ಪಶುಪತಿತ್ವದ ಪಾಶವು ಸಾಹಿತ್ಯದ ಕೊರಳೊಳಗಿನ ಉರುಲಾದೀತು (ಪ್ರಬಂಧ. ೪೯); "ಏನು ಮಾಡಲಿ ಮಾನಾ? ಹಾರುವಲ್ಲಿಗೆ ಮುಳ್ಳು ಓಡುವಲ್ಲಿಗೆ ಉರುಲುಆಗಿದೆಯಲ್ಲ" (ಸಾವಿಸ. ೭೯). ಉರುಲಿನಹಗ್ಗ = ನೇಣುಹಾಕಿಕೊಳ್ಳುವ ಹಗ್ಗ, —ಪಾಶ: ಸಗ್ಗ ಸಗ್ಗಸಗ್ಗವದೋ ಅದು ಉರುಲಿನ ಹಗ್ಗ (ಆರಳು. ೪೧೨-೧೨). [ದೇ. ‖ ತಮಿ. ಉರುವು; ಮಲ. ತೆಲು. ಉರಿ]

**ಉರಿಲಿಂಗ** (ನಾ). ಲಿಂಗಾಕಾರವಾದ ಜ್ಯೋತಿ; ಜ್ಯೋತಿರ್ಲಿಂಗ: ಉರಿಲಿಂಗಂ ದೆಸೆಯಿಂದಮಂದೊಗೆದುದೋ (ಪಂಠಾಮಾ. ೧೧-೧೪೨); ಉರಿಲಿಂಗಮನಾಲಿಂಗಿಸಲುಂ (ಜಗವಿ. ೭-೮೪ ವ); ಉರಿಲಿಂಗಂ ನಿಲ್ವವೊಲು ನಿಂದೇಳಱೆ ಪೇಳಱೆ (ಸೌಇಇ. IX-i, ೩೪೩-೨೫; 1226); ಉರಿಲಿಂಗಂಬೊಲು ಕೋಂಟಿ ಕರದ ಕಣ್ಗೆ ವಿರಾಜಿಸಿತು (ಜಯಕಾ. ೧-೫೩). [ಉರ್ಿ$_2$ + ಲಿಂಗ]

**ಉರಿವತ್ತಿ**, ಉರಿಬತ್ತಿ (ನಾ). ಉರಿಯುವ ಬತ್ತಿ: "ಅಗ್ನಿಯೊಳು ಕಿಚ್ಚುಗೋಲೊಳು ಉರಿವತ್ತಿಯೊಳು ಪಾವಕಮೆನಿಕ್ಕು" (ಮಂಗರಾ. ೧೫೩-೬೨). **ಉರಿಬತ್ತಿ**: ಉರಿಬತ್ತಿದಾಸಯ್ಯ ಬಂದ (ರೂಢಿ).

ಉರಿಬತ್ತಿದಾಸಯ್ಯ = ಉರಿಯುವ ಬತ್ತಿಯುಳ್ಳ ದೀಪದ (ಗರುಡ) ಕಂಬವನ್ನು ಹಿಡಿದು ಬರುವ ದಾಸಯ್ಯ. [ಉರ್ಿ$_1$ + ಬತ್ತಿ]

**ಉರಿವನೆ**, ಉರಿಮನೆ (ನಾ). ಉರಿಯುವ ಮನೆ: ಕುಂತೀಕುಮಾರರ ಕರೆಸಿ ಕಟ್ಟೇಕಾಂತದಲಿ ಧೃತರಾಷ್ಟ್ರಭೂಪಾಲ ಬೆಜಗು ಬಿನ್ನಾಣದಲಿ ಮಕ್ಕಳ ಮರುಳುಮಾಡಿದನೇನ ಹೇಳುವೆನುರಿವ[ಪಾಠಾಂ. ಮ]ನೆಯ ಬೀಡಾರದಲಿ ಬಿಡಿಸಲ್ಕೆ ಮನದಂದ (ಕುವ್ಯಾಆ. ೮-೭೧). **ಉರಿಮನೆ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಉರ್ಿ$_1$ + ಮನೆ]

**ಉರಿವರಿ$_1$** (ಕ್ರಿ). ೧. ಉರಿಯಂತೆ ಹರಡು; ಜ್ವಾಲೆಯಂತೆ ವ್ಯಾಪಿಸು: ಅಗುರ್ವುರಿವರಿಯುತ್ತುಮಿರ್ಪಿಣಿ ಬೃಹದ್ಬಡಬಾನಳನಂತೆ ತೋಱೆ (ಪಂಪಭಾ. ೮-೯೯); ಉರಿವರಿವ ದಾವಶಿಖಿಯೊಳ್ ಪರಿತಂದೆಱಗುವ ಪತಂಗವಿತತಿಯ ತೆಱದಿಂ (ಜಗವಿ. ೧೩-೯೨); ಧಾತುಗೆಟ್ಟುರಿವರಿವ ಬಿಸಿಲೊಳಗೆ ಕಾದ ಬಟ್ಟೆಯ ಹುಡಿಯ ಹರಳೊಳಗೆ ಬಿದ್ದು (ಸಿದ್ಧರಾ. ೨-೩೯). ೨. (ಅಲಂ) ಕೋಪದಿಂದ ಕೇಗು; ಸಿಟ್ಟಿಗೇಳು: ಉರಿವರಿವಸೆರಸು ತನೆದೊಳ್ ಪಿರಿದು ಖಳರ್ ಗಳಪುವಂತಿರೆ (ಜಗವಿ. ೧೭-೫೪).

ಉರಿವರಿಯಾಗು = (ಅಲಂ) ಕೋಪದಿಂದ ಜ್ವಲಿಸು, —ಕೆಂಡವಾಗು: ಧವನೆ ನೀ ಮುನ್ನೇನಱೆಯ ಕಣ್ಣೆಮೆಗಳುರಿಮ[ವ]ರಿಯಾದೊಡೆನ್ನವಯವವು ಕರಿಗುಂದಿದುವು (ಜೀವಂಚ. ೫-೧೮). [ಉರ್ಿ$_2$ + ಪರ್ಿ$_2$]

**ಉರಿವರ್ಿ$_2$** (ನಾ). ಉರಿ ಹರಡುವುದು. 'ಉರಿವರಿವರಿ' ಪರಾ. [ಉರ್ಿ$_2$ + ಪರ್ಿ$_3$]

**ಉರಿವರಿವರಿ** (ಕ್ರಿ). ಉರಿಯ ದಾಳಿಯನ್ನಿಡು: ಪರಪುಹಿಪರ ಬಿರುದಿನ ಗರಿಮುಮುರಗುಂ ಕರಗುವ ತೆಱದಿಂದಿರದೆ ಕರಗುವಿನಮುರಿವರಿವರಿದುದು ತೇಜಂ ಪ್ರತಾಪ ಕಾಳಾನಳನಂ (ಮೈಆರಿ. ೧೯೨೯, ೬೫-೨೭; 1081). [ಉರಿವರ್ಿ$_2$ + ಪರ್ಿ$_2$]

**ಉರಿವಾತು** (ನಾ). ಅಸೂಯೆಯ ನುಡಿ; ಚುಚ್ಚು ಮಾತು: ರೋಷದಲಿ ಹೊಗೆಸುತ್ತಮುರಿವಾತುಗಳ ಸೂಸಿದರ ಪನಿಪನ ಮೇಲೆ (ಕುವ್ಯಾಆ. ೯-೧೯). [ಉರ್ಿ$_2$ + ಮಾತು$_1$]

**ಉರಿವಿಸಿಲ್**, ಉರಿಬಿಸಿಲು (ನಾ). ಉರಿಯಂತೆ ಉಗ್ರವಾದ ಬಿಸಿಲು; ತೀಕ್ಷ್ಣವಾದ ಬಿಸಿಲು: ನೋಳ್ಪೆವೆಯೆರಡು ಕರಿಕರಿಯಾಗೆ ದೆಸೆಗಾವರಿಸುತಿರಲುರಿವಿಸಿಲೊಳಂತೆಡೆವಿಡದೆ ನಿಂದಿರ್ದು (ಬಸವು. ೨-೧೩). **ಉರಿಬಿಸಿಲು**: ಹಗಲು ಉರಿಬಿಸಿಲಿನಲ್ಲಿ ಬೆಂದು (ಮುಣಿಸ. ೭೪); ಈ ಉರಿಬಿಸಿಲಿಗೆ ಹೇಗೆ ಹೋಗಲಿ (ರೂಪಸಂ. ೬). [ಉರ್ಿ$_1$ + ಬಿಸಿಲ್]

**ಉರಿವುರಿ** (ನಾ). ಉರಿಯುವ ಉರಿ; ಧಗಧಗಿಸುವ ಕಿಚ್ಚು; "ಉರಿಯ ಉರಿ" (ಪಂಪಭಾ. ಕೋಶ): ನರಗನುರಿಪಿದೊಡೆ ಕರಂಕೇಙಿಸಿದಾತನ ತೇಜದ ಬೀಜಲನನುಕರಿಪುವಾದುಪೊಗೆದುರಿವುರಿಗಳ್ (ಪಂಪಭಾ. ೧-೩೫). [ಉರ್ಿ$_1$ + ಉರ್ಿ$_2$]

**ಉರಿವೆಳಗು** (ನಾ). ಉರಿಯ ಬೆಳಕು; ಉರಿಯುವ ಬೆಳಕು: ಪತ್ತಿದ ಪಂಜುಗಳುರಿವೆಳಗೆತ್ತಂ ಮಿಸುಗುವಿನಮೆಳ್ಳಱೆಳ್ಳಱೆನುತ್ತುಂ (ಪ್ರಪವಿ. ೧೦-೧೨). [ಉರ್ಿ$_2$ + ಬೆಳಗು$_3$]

**ಉರಿವೊಗು** (ಕ್ರಿ). ಬೆಂಕಿಯನ್ನು ಹೊಗು; ಅಗ್ನಿಪ್ರವೇಶಮಾಡು: ಮಾನವರ ಪಾಣಿಗ್ರಹಣಕೊಪ್ಪೆನಾಂ ಪತಿಯೊಳುರಿವೊಗ [ಪಾಠಾಂ. ವುಗ] ವೇಳ್ಪುದಲ್ಲದೊಡೆ ವಿಧವೆಯಾಗಿರವೇಳ್ಪುದು (ಜೈಮಿಭಾ. ೨೭-೧೩). [ಉರ್ಿ$_2$ + ಪೊಗು$_1$]

**ಉರಿಶಿಂಗಿ** 'ಉರಿಸಿಂಗಿ' ನೋ.

**ಉರಿಶೀತ** (ನಾ). ಚಳಿಜ್ವರ: ಉರಿಶೀತವಾಗಿ ನರಿ ಸತ್ತಿತು (ಗಾದೆ). [ಉರ್ಿ$_2$ + ಶೀತ]

**ಉರಿಸಿಂಗಿ**$_1$, ಉರಿಶಿಂಗಿ (ನಾ). ೧. (ವಿಷವಿಲ್ಲದ) ಒಂದು ಬಗೆಯ ಹಾವು: "ರಾಜಿಲಃ – ಎರಡು ತಲೆ ಉರಿಸಿ[ಪಾಠಾಂ. ಶಿ]ಂಗಿ" (ಸಿದ್ಧಾಂತಿ. ೬೫). ೨. ಒಂದು ಬಗೆಯ ವಿಷದ ಹಾವು: ಉರಿಸಿಂಗಿಗೆ ಗಱಿ ಮೂಡಿದಂದೀ ಖಳ ಪಿರಿದುಗ್ರಕೋಪದಿಂದಾಗ (ಅನಂತ. ೨೪–೯೭). ೩. ಒಂದು ಬಗೆಯ ಮಾದಕ ಮೂಲಿಕೆ: ಭಂಗಿಯ ಭಂಡಿಯಪಿನಿಯ ಕೊಟ್ಟಿಗೆಯುರಿಸಿಂಗಿಯ ಹೊಱೆಯುಮ್ಮತ್ತದ ಪೊಂಗಿದಿಟ್ಟಿಯ ಬೀಜದ ಹೇಱು ನಡೆದವಾಭಂಗನೇಮಿಯ ದಂಡಿನೊಡನೆ (ಕುರಾಸಾಂ. ೧೯–೧೦). ೪. (ಆಲಂ) ಕೋಪಿಷ್ಠನಾದ ವ್ಯಕ್ತಿ: ಅವನೊಬ್ಬ ಉರಿಸಿಂಗಿ (ರೂಢಿ). **ಉರಿಶಿಂಗಿ**: ೧. "ಎರಡು ತಲೆಯ ಉರಿಶಿಂಗಿ ಹಾವು" (ಅಮರ. ಟೀಕ). [ಉರಿ$_2$ + ಸಿಂಗಿ]

**ಉರಿಸು** (ಕ್ರಿ). ೧. ಉರಿಯುವಂತೆ ಮಾಡು; ದಹಿಸು; ಸುಡು: ಉರಿಸುವುದೋ ನರಕದ ಕಡುದುಃಖ (ಆದಿಪು. ೫–೧೩); ಧಗದ್ಧಗೆಂದುರಿಸುಗುಮುಗ್ರಕೋಪಶಿಖಿಯಿಂ (ಧರ್ಮಾಮೃ. ೪–೨೩೭); ಬತ್ತಿಯನ್ನು ಉರಿಸಿದೊಡನೆ ಎಣ್ಣೆ ಆವಿಯಾಗಿ . . . ಪರಿವರ್ತಿಸುವ ರೀತಿಯಲ್ಲಿ ಈ ಒಲೆಯ ಬರ್ನರು ರಚಿಸಲ್ಪಟ್ಟಿದೆ (ಅಡುಸೌ. ೧೭). ೨. (ಆಲಂ) ಸಂಕಟಪಡಿಸು; ಸಂತಾಪಗೊಳಿಸು: ಹಡೆದವರು ಆ ರೀತಿಯಾಗಿ ನನ್ನನ್ನು 'ಉರಿಸು'ತ್ತಿದ್ದಾರೆ (ಸುವಸಂ. ೧೯). [ಉರಿ$_1$ + –ಇಸು$_3$]

**ಉರಿಹತ್ತಿಸು** (ಕ್ರಿ). ೧. ಬೆಂಕಿ ಹತ್ತಿಸು, —ತಗುಲಿಸು: ನೀರೊಲೆಗೆ ಉರಿಹತ್ತಿಸು (ರೂಢಿ). ೨. (ಆಲಂ) ರೇಗಿಸು: ಇಲ್ಲದ ಮಾತನಾಡಿ ಉರಿಹತ್ತಿಸಬಾರದು (ರೂಢಿ). [ಉರಿ$_2$ + ಹತ್ತಿಸು$_2$ (< ಪತ್ತಿಸು$_2$)]

**ಉರು**$_1$ (ನಾ). (ಪಾಠ, ಮಗ್ಗಿ ಮೊದಲಾದುವುಗಳನ್ನು) ಕಂಠಪಾಠ ಮಾಡುವುದು; ಗಟ್ಟಿಮಾಡುವುದು.

**ಉರುತೆಗೆ, ಉರುಹಚ್ಚು, ಉರುಹಾಕು, ಉರುಹೊಡೆ** = ಕಂಠಪಾಠ ಮಾಡು; ಗಟ್ಟಿಮಾಡು: ನನಗೆ ಅಂಥ ಕೊರಳಿರುತ್ತಿದ್ದರೆ ಉರುತೆಗೆಯುತ್ತಿದ್ದೆ (ಸ್ವಪ್ನಹೊ. ೧೮೫); ನನಗೆ ಎರಡನೆಯ ತರಗತಿಯಲ್ಲಿ ಉರುಹಚ್ಚುವ ಮಗ್ಗಿಕೋಷ್ಟಕ ಹೇಳಿದ್ದಾರೆ (ಶಾಲೆಮ. ೧೬); ಪುಸ್ತಕದಿಂದ ಉರುಹಾಕಿದ ಮಾತುಗಳನ್ನು ಚನ್ನಾಗಿ ಒಪ್ಪಿಸುತ್ತೀ (ಮಣ್ಣಿಮ. ೪೬); ಸಂಜೆ ಮುಂಜಾನೆ ಎಷ್ಟುರುಹಾಕಿದ್ರು . . . ಆಗತಿದ್ದಿಲ್ಲಾ (ತಿಡುಗು. ೨೪); ವ್ಯಾಕರಣಸೂತ್ರ ಉರುಹೊಡೆಯುತ್ತಿದ್ದ ಶಿಷ್ಯನಿಗೆ ಉಪದೇಶಿಸಿದರು (ಜಗದಾ. ೧೬). **ಉರುಹಾಕಿಸು** = ಬಾಯಿಪಾಠ ಮಾಡಿಸು; ಕಂಠಪಾಠಮಾಡಿಸು: ಪ್ರತಿದಿನ ಸಾಯಂಕಾಲ ಅವಳು ಅವನಿಂದ ಉರುಹಾಕಿಸುತ್ತಿದ್ದಳು (ರಂಗರೋ. ೧೪). [ದೇ. ‖ ತಮಿ. ಉರು; ತೆಲು. ರೂವು]

**ಉರು**$_2$ (ಗು). ೧. ವಿಶೇಷವಾದ; ವಿಸ್ತಾರವಾದ; ಹೆಚ್ಚಿನ: ಅಮ್ಮ ತಪ್ಪೆಕನ್ತಿಯರುರದು ನೋಸ್ತು ಸಮಾಧಿಯಿಂದರವರ ಮಕ್ಕಳನಿಮಿತ್ತ . . . ನಿಲಿಸಿದರ್ (ಮೈಆರಿ. ೧೮೩೯, ೬೫–೧೫; 976); ಸವತಿಯರೆಂಬರಲ್ತೆ ಮುಳಿಸಿಂಗುರುಕಾರ್ದಣಂ (ಕಾದಂಬ. ೭೦); ಅನುಜರೊಡನಾಡುತಿಹ ಹಿರಿಯನುರು ಸರಸ (ಅಮತಂ. ೧೫). ೨. ಶ್ರೇಷ್ಠವಾದ; ಉತ್ತಮವಾದ; ಅನೋಘವಾದ. 'ಉರುಗಜ್ಜ' ಪರಾ. [ಸಂ.]

**ಉರುಂಡಿಸು** 'ಉರುಟಿಸು' ನೋ.

**ಉರುಂಬಲೆ**, ಉಲುಂಬಲ, ಉಲುಂಬಲೆ (ನಾ). ಮೃತ್ಯು; ಮೃತ್ಯುದೂತ (?): ನಿರಯಾಂಭೋಧಿಯೊಳಲ್ದವಂಗೆ ಸತತಂ ಸಂಜೀವನಂ ಮುಕ್ತಿಸುಂದರಿಗಾಕರ್ಷಣಮಿಂತುರುಂಬಲೆಯ ಸಂಹಾರಕ್ಕಿದೇ ಮಾರಣಂ ದುರಿತೋಚ್ಚಾಟಣ ಮಂತ್ರಮಾಗಿ ಬಳೆಕೊಂದೇ ನಿನ್ನ ಪಂಚಾಕ್ಷರೀ ವರ ಮಂತ್ರಂ ಬಹುಮಂತ್ರವಾದುದಿಳೆಯೊಳ್ ಶ್ರೀಪಾರ್ವತೀವಲ್ಲಭಾ (ಪಾವಶ. ೪೮). **ಉಲುಂಬಲ**: ಅನಿತಕ್ಕುಲುಂಬಲ ಮೊದಲಾದ ಮೃತ್ಯುಗಳು ತನತನಗೆ ಹೇವರಿಸಿ , , , ಬಂಧಿವೆ ನಾವು (ವೀಕೃಪು. ೨–೭–೪೯). **ಉಲುಂಬಲೆ**: ನಿನ್ನಯ ಜನ್ನದೋಗರಕೆ ಬಾಯೊಡತರ್ಗೆ ವಿಪತ್ತು ತೋರ್ಕೆಯೀ ಜನ್ನಿಗನಪ್ಪವಂಗಿರದೆ ಸಾರ್ಗೆಯುಲುಂಬಲೆಯೆಂದನಾಕ್ಷಣಂ (ವೀರವಿ. ೧೦–೨೦). [?]

**ಉರುಂಬು** 'ಉಱುಂಬು' ನೋ.

**ಉರುಕು**$_1$ 'ಉರ್ಕು$_1$' ನೋ.

**ಉರುಕು**$_2$ 'ಉಱುಕು' ನೋ.

**ಉರುಕುಗೊಳ್** 'ಉಱುಕುಗೊಳ್' ನೋ.

**ಉರುಕುಗೊಳಿಸು** 'ಉಱುಕುಗೊಳಿಸು' ನೋ.

**ಉರುಗಜ್ಜ** (ನಾ). ಶ್ರೇಷ್ಠವಾದ ಕೆಲಸ: ತನಯನೆನಗೆಂದು ಮನ್ನಿಸಿ ತನಗುರುಗಜ್ಜ [ಮನೆ] ಪಾಕಶಾಸನನರ್ಧಾಸನಮೇಱಿಸಿ ನೀಱೀಱಿಸಿ ಮನುಜಜಂಗಂ ಮಾನ್ಯಪದವಿಯಂ ಮಾಡಿದನೇ (ಗದಾಯು. ೩–೪೦). [ಉರು$_2$ + ಕಜ್ಜ$_1$]

**ಉರುಗಣ್ಣು** (ನಾ). ಓರೆಗಣ್ಣು; ಸೊಟ್ಟಗಣ್ಣು: ಅಳಿಗಣ್ಣೊ ಪೊಸನೀಲಿಗಣ್ಣೊ ಪೆರೆಗಣ್ಣೊ . . . ದುರ್ಮಾರ್ಗಂಸದುರುಗಣ್ಣೊ ಮೈಲಿಗೆಗಣ್ಣೊ ವಾತದಿಂ ಬಲಿದ ಕಣ್ಣೊ (ಮಹಾವಿ. ೭–೫೧). [< ಉರುಗು (< ಉಱುಗು$_2$) + ಕಣ್ಣು (< ಕಣ್)]

**ಉರುಗಲಿ** (ನಾ). ಮಹಾಶೂರ; ತುಂಬ ಶೂರ: ಅಳಿಗಲಿಗಳುವುರುಗಲಿಗಳೆಲ್ಲರ ಭೀಮನುಳಿಯದೆ ನೆಲಕಿಕ್ಕಿದನು (ನೇಮಿಸಂ. ೨೫–೭೫). [ಉರು$_2$ + ಕಲಿ$_2$]

**ಉರುಗು** 'ಉಱುಗು$_2$' ನೋ.

**ಉರುಗುಬಾಯಿ** (ನಾ). ಸೊಟ್ಟಬಾಯಿ (ದಕ.ಕ).
[ಉರುಗು (< ಉಱುಗು$_2$) + ಬಾಯಿ$_1$ (< ಬಾಯ್)]

**ಉರುಗುರ** (ನಾ). "ಅಮೇಧ್ಯ; ಮಲ" (ಜೀವಸಂ. ಕೋಶ): ಈಗಳೆ ಗೃಹಕ್ಕೆ ನೀಂ ಪೋಘಾಗಳ್ ಬೀಟ್ಟುರ್ಕುಮುರುಗುರಂ [ಪಾಠಾಂ. ಊರಗೂಥಂ] ನಿನ್ನ ಶಿರೋಭಾಗದೊಳದು ದಿಟಮಾಡೊಡನಾಗತಮಂ ನಂಬು (ಜೀವಸಂ. ೧೩೩–೨೯ ವ). [?. P ತಮಿ. ಉರ = ಗೊಬ್ಬರ]

**ಉರುಟಣೆ**, ಉರಟಣೆ, ಉರಟಾಣೆ, ಊಟಣಿ, ಊಟಣೆ (ನಾ). ೧. ಮದುವೆಯಲ್ಲಿ ವಧೂವರರು ಹೂವಿನ ಚೆಂಡು, ತೆಂಗಿನ ಕಾಯಿ ಮೊದಲಾದುವುಗಳನ್ನು ಪರಸ್ಪರ ಉರುಳಿಸುತ್ತಾ ಆಡುವ ಆಟ: ಉರುಟಣೆ ಆರತಿಗಳಾದವು. ರಾತ್ರಿ ಭೋಜನವೂ ಆಯಿತು (ಕಥಾವಿ. II, ೪); ಉರುಟಣೆ ಉಯ್ಯಾಲೆಗಳ ಹಾರಾಟದಲ್ಲಿ . . . ಮದುವೆಯ ಮೂರು ದಿವಸಗಳು ಬೆಳಗಿನ ಜಾವದ ಮೂರು ಕನಸಿನಷ್ಟು ಹಗುರವಾಗಿ ಕಳೆದು ಹೋಗಿದ್ದುವು (ಬಾಡಿಬ. ೮೨); ನಾಗಮ್ಮ ಸಾತೂ ವನ್ನು ಕೂಡಿಸಿಕೊಂಡು ಅವಳಿಗೆ ಕ್ರಮವಾಗಿ ಉರುಟಣೆ . . . ಹಾಡುಗಳನ್ನು ಪಾಠಮಾಡಿಸಿದರು (ಕಾಯಕ. ೧೫). ೨. ವಧೂವರರು ಪರಸ್ಪರ ಅರಿಸಿನ ಕುಂಕುಮಗಳನ್ನು ಹಚ್ಚಿ ಹೆಸರು ಹೇಳುವ ವಿನೋದ; "ಮದುವೆಯ ದಿನಗಳ ಅರಿಸಿನೆಣ್ಣೆ" (ಕರಾ). **ಉರಟಣೆ**: ೧. ಮುತ್ತೈದೆಯರು ಹಸೆ ಉರಟಣೆ ಮಂಗಳಾರತಿಗಳನ್ನು ರಚಿಸಿ . . . ಸಂತೋಷಪಡಿಸುತ್ತಿದ್ದರು (ಸೌಗಂಧಿ. ೧೩೩–೬). **ಉರಟಾಣೆ**: ೧. ಲಕ್ಷ್ಮೀರಮಣಗೆ ಮಾಡಿದ ಉರಟಾಣೆ (ವಾದಿಕೀ. I, ೧೪೮). **ಊಟಣಿ**: ೨. ಲಗ್ನದಲ್ಲಿ ವಧೂವರರಿಗೆ ಊಟಣಿ, ಅಡಿಕೆ ಅಡಗಿಸೋಣ ವಧುವನ್ನು ಅಡಗಿಸಿ ಇಡೋಣ ಮುಂತಾದ ವಿನೋದಗಳು ನಡೆಯುತ್ತವೆ (ಕಭಾಗೆ. ೮೧); ನಾನು ದಮಯಂತಿಯ ಊಟಣಿಯ ಸಮಾರಂಭಕ್ಕೆ ಹೊರಟಿರುವೆನು (ನಲದ. ೫೦). **ಊಟಣೆ**: ೧. ಮಾಧವ ಮದುವೆಯ ಕೈಕೊಳಲಮರರು ಮೋದ ಪೂಮುಳಿಗರೆಯೆ ಊಟಣೆಯೊಳು ವಿಶ್ವ ನಾಟಕನುಸತಿಯರಿಗೆ ನೀಟಾದ ರೂಪವ ಬೇರೆ ಬೇರೆ ತೋರಿ (ಶ್ರೀಕೃಪಾ. ೧೧೨).

ಉರುಟಣೆಹಾಡು, ಊಟಣೆಹಾಡು = ಉರುಟಣೆಯಲ್ಲಿ ಹಾಡುವ ಹಾಡು : ಒಂದು ಉರುಟಣೆಹಾಡು ಹೇಳು (ರೂಢಿ) ; ಮದುವೆಯ ಉರುಟಣೆಹಾಡು ಚೆನ್ನಾಗಿತ್ತು (ರೂಢಿ) ; ಕೆಲರಸಿಕರಮಣಿಯರು ಮರೆತಿರುವ ಊಟಣೆಹಾಡುಗಳನ್ನು ಭೂಮುದ ಪದಗಳನ್ನು ನೆನಪುಮಾಡಿಕೊಳ್ಳುವುದರ ಸಲುವಾಗಿ (ದೇಯೂನಿ. ೧೫೨).

[ಉರುಟ್ಟು$_2$ + –ಅಣೆ$_4$]

**ಉರುಟಾಟ,** ಉರುಡಾಟ (ನಾ). ಹೋರಾಟ ; ಪ್ರತಿಭಟನೆ : ಒಡೆಯರೊಳುರುಟಾಟವಿದಾವೆಡೆಗಂ ಲೇಸಲ್ಲದೆಂದು ಪೇಟ್ದಿಟ್ಟುವಂ (ಮಹಾನೇ. ೧೧–೧೨೧) ; ಹುಲಿಯ ಉರುಟಾಟದಲ್ಲಿ ತ್ಯಾಂಪಣ್ಣನಿಗೂ ಗಾಯವಾಗಿತ್ತು (ತ್ಯಾಗಮ. ೩೮). **ಉರುಡಾಟ** : ಹುಲಿಯೊಂದಿಗೆ ಶ್ರೀನಿವಾಸಯ್ಯ ಉರುಡಾಟವಾಡುತ್ತಿರಲು ಹುಲಿ ನೆಲಕ್ಕೆ ಬಿದ್ದಿತು (ತ್ಯಾಗಮ. ೩೬).

[ಉರುಟ್ಟು$_2$ + ಆಟ]

**ಉರುಟಾಣಿ$_1$** (ನಾ). ಉಂಡೆ ; ಗುಂಡಾದ ಮುದ್ದೆ : ಎವೆಗಳು ಬಿಳೀಸಾಸುವೆಗಳು ಇವಪ್ಪನ್ನೂ ಹುಡಿಮಾಡಿ ಆ ಚೂರ್ಣದಿಂದ ಉರುಟಾಣಿಯಂ ಮಾಡಿ (ಕೃವಾಅ. ೧೦೦).

[ಉರುಟು + ಅಣಿ$_2$ (< ಅಟ್ಟು$_2$)]

**ಉರುಟಾಣಿ$_2$** (ನಾ). ಮರದ ದಿಮ್ಮಿಗಳನ್ನು ಉರುಳಿಸಲು ಅಡಿಗೆ ಕೊಡುವ ತುಂಡು, —ಸರಬು (ಕ). [ಉರುಟ್ಟು$_2$ + ಅಣಿ$_3$]

**ಉರುಟಿಸು,** ಉರುಡಿಸು (ಕ್ರಿ). ಗೋಲಿಯ ಹಾಗೆ ನೆಲದಲ್ಲಿ ಚಲಿಸುವಂತೆ ಮಾಡು ; ಉರುಳಿಸು ; ಬೀಳಿಸು : ಬೆಕ್ಕು ಹಾಲಿನ ಪಾತ್ರೆಯನ್ನು ಉರುಟಿಸಿಬಿಟ್ಟಿತು (ರೂಢಿ). **ಉರುಡಿಸು** : (ಕ).

[ಉರುಟ್ಟು$_2$ + –ಇಸು$_3$]

**ಉರುಟ್ಟು$_1$** (ಕ್ರಿ). ಅತಿಕ್ರಮಿಸು ; ಮೀರಿ ನಡೆ : "ಉರುಟು – ಅತಿಕ್ರಮಣೇ" (ಶಮುಧಾ). [?]

**ಉರುಟ್ಟು$_2$,** ಉರುಡು (ಕ್ರಿ). ೧. ಕೆಳಕ್ಕೆ ಬೀಳು : ಚೊಂಬು ಉರುಟ ಶಬ್ದಮಾಡಿತು (ಬಾಳಹೊ. ೩೧). ೨. ಉರುಳಿಸು ; ತಲೆ ಕೆಳಗುಮಾಡು (ಕ). **ಉರುಡು** : ೧. ಕಾಲು ತಪ್ಪಿ ಉರುಡಿ ದಿವಾಸುಂದರಿಯ ಪದತಲದಲ್ಲಿ ಬಿದ್ದನು (ದೇವೀಚೌ. ೧೫೧).

ಉರುಟಕೊಳ್ = ಉರುಡಿಕೊ ; ಮಲಗಿಕೊ : ಹಾಗೇ ಸ್ವಲ್ಪ ಹೊತ್ತು ಉರುಟಕೊಂಡಿರಲಿ (ಪಂಯಾತ್ರೆ. ೨೫). **ಉರುಡುಹಾಕು** = ಉರುಡಿಸು ; ನೆಲದಮೇಲೆ ಮಲಗಿಸು : ತಿಂಗಳ ಕೂಸನ್ನು ಅರುವೆಯ ಮೇಲೆ ಉರುಡುಹಾಕಿಕೊಂಡು ಆಡಿಸುತ್ತಿದ್ದಳು (ಮಲೆಮ. ೯೯).

[ದೇ. ‖ ತಮಿ. ಉರುಟ್ಟು]

**ಉರುಟ್ಟು$_3$** (ನಾ). ೧. ದುಂಡು ; ಗುಂಡಾಗಿರುವಿಕೆ ; ಮೈತುಂಬಿಕೊಂಡಿರುವಿಕೆ : "ವೃತ್ತತೆಯತಿಕ್ರಮಣದಲ್ಲಿ ಅಱಿಯುರು[ಪಾಠಾಂ.ರ]ಟೆನಿರ್ಪುದಂ" (ಶಬ್ದಮಂ. ೯೧) ; ಉರುಟು ಕದಳಿಯ ಕಂಬದಂತೆ ವರ್ತುಳವಾದ ಹರಿಯ ಪೀವರ ತೊಡೆಗಳಂ ಕಂಡೆ ಕನಸಿನಲಿ (ವಾದಿಕೀ. ೧–೧೧೨–೫) ; ನಿರುಪಮ ಜಾನುದ್ವಯಗಳ ಪೋಲ್ವ ಉರುಟು ಕದಳಿಮರ (ಕುಚೇಲೋ. ೫೯) ; ಉರುಟಾದದ್ದು ಉರುಳದೇ ಇರದು (ಗಾದೆ). ೨. ಕೈಬೆರಳಿನ ಅಥವಾ ಕಾಲಿನ ಉಂಗುರ : "ಅಂಗುಳೀಯಕಂ . . . ಉರುಟು" (ಸಿದ್ಧಾಂತಿ. ೧೬೪) ; ಕಾಲಿಗೆ ಜತೆ ಉರುಟುಮಾಡಿಸಬೇಕು (ರೂಢಿ).

[ದೇ. ‖ ತಮಿ. ಮಲ. ಉರುಟ್ಟು ; ತುಳು. ಉರುಂಟು]

**ಉರುಟ್ಟು$_4$** (ಗು). ಒರಟಾದ ; ನಯವಲ್ಲದ ; "ನಾಜೂಕಲ್ಲದ ; ಸೊಕ್ಕಿನ ; ಹುಂಬ" (ಜಾನಕೋ. ೨೧) : ನೂಲು ತೀರ ಉರುಟಾಗಿ, ಅವು ತೀರ ಬಡವರ ಅರಿವೆಗಳ ಹಾಗೆ ತೋರಹತ್ತಿದವು (ಮುಂಬಯಿ. ೫–೨೬೮) ; ಇವನ ಮೈಕಟ್ಟು ಉರುಟೂ ಅಸಹ್ಯವೂ ಇತ್ತು (ಇಂಗ್ಲಇ. ೧೧೦) ; ಅದು ದೇಶೀ – ದಪ್ಪಾದ ಉರುಟು ಕಾಗದದಲ್ಲಿ ತೆಗೆಯಲ್ಪಟ್ಟಿತ್ತು (ಇಂದುಮು. ೧೪) ; ಕಡಮೆ ಬೆಲೆಯ ಉರುಟುಧೋತರಕೊಂಡು ಉಡಬೇಕಾಗಿ ಬಂದಾಗ ಅವನಿಗೆ ನಗೆ ಬಂದಿತು (ಇಪ್ಪಕ. ೩೫೯). 'ಒಱಟು' ಪರಾ. [< ಒಱಂಟು]

**ಉರುಟ್ಟು$_5$** (ನಾ). [ನಾಟ್ಯ] ನೃತ್ಯಕ್ಕೆ ಹೊಂದುವಂತಹ ಗೀತಕ್ರಮ: ನಸುನಗೆ ವದನದಲ್ಲಿ ಮಿಸುಗಲಾ ಯಿಂಗಿತಂಗಂಡುರುಟು ಸುಳುಹು ಪೇರಣೆ ಸಂಚುಗಳನು ತೋಱಿ (ಪಾಸೋಪು. ೧–೪೮) ; ಇಂಗ್ಲಿಷ್ ಸ್ವರಪ್ರಸ್ತಾರಕ್ಕೆ ಸಂವಾದಿಯೋ ಎನ್ನುವಹಾಗಿದ್ದ ಆ ಉರುಟುಗಳು ಅವರನ್ನು ಬೆರಗುಗೊಳಿಸಿದುವು (ರೂಪಸ. ೫೦). [?]

**ಉರುಟುಮುಖ** (ನಾ). ದುಂಡಾದ ಮುಖ ; ಗುಂಡು ಮುಖ : ಏನೋ ನಮ್ಮ ಅಪ್ಪ ತಿಳಿಯದೆ ನಿಮ್ಮ ಉರುಟುಮುಖ ಕಂಡು ಮದುವೆ ಮಾಡಿಸಿದರು (ಕಾವೇರಿ. ೬೬). [ಉರುಟ್ಟು$_3$ + ಮುಖ]

**ಉರುಡಾಟ** 'ಉರುಟಾಟ' ನೋ.

**ಉರುಡಾಡು** (ಕ್ರಿ). ಎದುರುಬೀಳು ; ಪ್ರತಿಭಟಿಸು : ನೀನಿರ್ಪಿರವುಂ ಪರಿಭಾವಿಪೊಡೊಡೆಯರೊಳಿರದುರುಡಾಡುವ ಪಾಂಗಿದಲ್ತೆ (ನೇಮಿಪು. ೧೧–೯೬). [ಉರುಡು (< ಉರುಟ್ಟು$_2$) + ಆಡು$_1$]

**ಉರುಡಿಸು** 'ಉರುಟಿಸು' ನೋ.

**ಉರುಡು** 'ಉರುಟ್ಟು$_2$' ನೋ.

**ಉರುಣೆ** (ನಾ). ಉಂಡೆ ; ಉರುಳಿ. 'ಉರುಣೆಗೆಯ್' ಪರಾ.

[< ಉರುಳಿ]

**ಉರುಣೆಗೆಯ್** (ಕ್ರಿ). ಉಂಡೆಮಾಡು ; ಉರುಳಿಯಾಗಿಸು ; ಗುಳಿಗೆ ಮಾಡು : ಎನ್ನ ಘುಟಿಕೆಯಂ ತಳುವದೀವುದೆನಲ್ಕೆ ಕೌಂಕುಳ ಮಲಿನದೆಗೆದುರುಣೆಗೆಯ್ದು ಕುಡಲಂತದು ನೆಲೆಯಿನಾ ಘುಟಿಕೆಯಿಂ ಪತ್ತುಗುಣವಧಿಕದಿಂ ಲಲಿತಮಾಗಿರೆ ಕಂಡು (ಪಾಸೋಪು. ೬–೮೧).

[ಉರುಣೆ + ಗೆಯ್ (< ಕೆಯ್$_1$)]

**ಉರುತಲ್ಪ** (ನಾ). ಶ್ರೇಷ್ಠವಾದ ಮಂಚ, —ಹಾಸಿಗೆ : ಪರಿವ್ರಾಜಕನು ದೀಕ್ಷಿತ ತನ್ನ ಕೈಕೊಂಡ ನರರಿಗೆ ನಿಜಮಾರ್ಗವನು ವಿರಚಿಸೆ ಮರಣವಾಗಲು ಬ್ರಹ್ಮಕಲ್ಪದೊಳುರುತಲ್ಪದಲ್ಲಿ ಪುಟ್ಟಿದನು (ವರ್ಧಚ. ೩–೪೩).

[ಉರು$_2$ + ತಳ್ಪ (= ತಲ್ಪ)]

**ಉರುತ್ವ** (ನಾ). ಶ್ರೇಷ್ಠತೆ ; ಅತಿಶಯತೆ : "ಅಣಿಮಮೆಂಬುದಣುತ್ವಂ ವರಿಮಮುರುತ್ವಂ ಕ್ರಶಿಮಂ ವರಕೃಶತೆ" (ವಸ್ತುಕೋ. ೧೧೫–೨೮).

[ಸಂ.]

**ಉರುಪ,** ಉರುಪು (ನಾ). [ನಾಟ್ಯ] ನೃತ್ಯದಲ್ಲಿ ಒಂದು ಭಂಗಿ : ಗಿರಿಯೊಳಾಡುವನೊಮ್ಮೆ ಮುಗಿಲೊಳಾಡುವನೊಮ್ಮೆ ಸರಿತದೋಱುವನು ಡೊಂಕಹನು ಉರುಪ ನೇರಗಳ ಚಕ್ಕಡಿ ಚಿಂತು ಮೊದಲಾದ ಪರಿಪರಿ ನಾಟ್ಯದೋಱಿದನು (ಭರಚ. ೬೪–೯೧). **ಉರುಪು** : ಸಂಗೀತ ವಾದ್ಯ ಶ್ರುತಿಯ ಕೇಣಿಕೊಂಡುರುಪು ತಿರುಪಭಿನವಕಳಾಸ ಪ್ರಮಾಣದ ಸುನೃತ್ತದಿಂ ಮೆಚ್ಚಿಸಿದಳಚ್ಯುತನನಚ್ಚರಿಯರಚ್ಚರಿಯೆನೆ (ಜೈಮಿಭಾ. ೬–೧೫).

[?]

**ಉರುಪಾಪ** (ನಾ). ದೊಡ್ಡ ಪಾಪ : ಲೋಕದುರುಪಾಪವಂ ಹೊತ್ತ ಕುರಿಮರಿಯಂತೆ ಗಿಡುಗಗಳ ನಡುವೆ ತೊಡರಿದ ಕಪೋತಕದಂತೆ (ಗೊಲ್ಗೊಥಾ. ೩–೧೮). [ಉರು$_2$ + ಪಾಪ$_1$]

**ಉರುಪಾರ** (ನಾ). ದೂರದ ತೀರ : ಪರಮಗುಣಪರೀತ ಕಾವ್ಯರತ್ನಾಕರದುರುಪಾರಮನೆಯ್ದುಗುಂ ಮಹಾತ್ಮ್ಯಂ (ಕವಿರಾ. ೩–೨೩೦).

[ಉರು$_2$ + ಪಾರ]

**ಉರುಪು$_1$** 'ಉರಿಪು$_1$' ನೋ.
**ಉರುಪು$_2$** 'ಉರಿಪು$_2$' ನೋ.
**ಉರುಬು$_1$** 'ಉಜುಂಬು$_1$' ನೋ.
**ಉರುಬು$_2$** 'ಉಜುಬು$_2$' ನೋ.
**ಉರುಬೂಕ** (ನಾ). "ಹರಳುಗಿಡ" (ಅಮರ. ಟೀಕ). [ಸಂ.]
**ಉರುಬೆ** 'ಉಜುಬೆ' ನೋ.
**ಉರುಬೇಗ** (ನಾ). ಬಹಳವಾದ ವೇಗ; ತೀವ್ರವೇಗ: ಕಲಿ ಜಟಾಯು ಬಿರುಗಾಳಿಯುರುಬೇಗದಿಂ ಬೆಂಬತ್ತಿ ಮುಂಚುವ ವಿಮಾನಮಂ ಮುಸಲ ಸಮಪದ ಗದಾಘಾತದಿಂದಪ್ಪಳಿಸಿದನ್ (ಶ್ರೀರಾಮಾ. ೨೪೮–೫೪೫). [ಉರು$_2$ + ಬೇಗ]
**ಉರುಮತಿ** (ನಾ). ಶ್ರೇಷ್ಠಬುದ್ಧಿ; ಸುಜ್ಞಾನ: ವರ ಕವಿರಾಜರೆಲ್ಲರನು ಮರಳಿ ಮರಳಿ ಕೊಂಡಾಡುವೆನವರೆನಗುರುಮತಿಯನು ಕೊಡಲೆಂದು (ತ್ರಿಪುಸಾಂ. ೨–೧೮). [ಉರು$_2$ + ಮತಿ$_1$]
**ಉರುಮಾರಿ** 'ಉರಿಮಾರಿ' ನೋ.
**ಉರುಮು** (ಕ್ರಿ). ಮೇಲೆ ಬೀಳು; ಮುತ್ತು; ಉರವಣಿಸು: ಉರುಮುತೋರೋರ್ವರ್ವರಿಗೆ ಸತ್ತ್ವಾದ್ವಿರಸದೊಳು ಪಿಂದೊತ್ತಿ ತಿರ್‍ರನೆ ತಿರುಹುತ (ಜಿನಭಾ. ೬೫–೫೭); ಶನಿಗಳು ನೆಮ್ಮದಿಯಾಗಿ ಚಿಂತೆ ಮೂಡ್ಲಿಕ್ಕೂ ಬಿಡೋದಿಲ್ಲ ಹೀಗೆ ಉರುಮಿಕೊಂಡು ನಾಡೋಡಿಯುವರು ಧಡಧಡನೆ ಹೋಗಿ ಬಾಗಿಲು ತೆರೆದು (ಕಾಬರುಪು. ೨೪).
[< ಉಜುಂಬು$_1$. / ತೆಲು. ಉರುವು]
**ಉರುಮೆ** (ನಾ). ಒಂದು ಬಗೆಯ ತಾಳವಾದ್ಯ: ಉರುಮೆ ನುಣ್ದನಿಗಾಣಿಸೆ (ರೇವಣ. ೩೧–೪೫); ವೇಣು ಡಿಂಡಿಮ ಬುರುಗು ತಾಳ ಚೆಂಗುಂಪ್ರವಾಂಗಂ ತೆತ್ತಿಯುರುಮೆಗಳನು (ಪ್ರಭುಪು. ೪–೯೮); ಕಿನ್ನರಿ ವುರುಮೆ ಮದ್ದಳೆ ತಾಳ (ಯಾದವ. ೧೧–೪೪). [?]
**ಉರುಲ್** 'ಉರಿಲ್' ನೋ.
**ಉರುಲು$_1$** 'ಉರಿಲ್' ನೋ.
**ಉರುಲು$_2$** 'ಉರುವಲು' ನೋ.
**ಉರುಲುವಲೆ** 'ಉರುಳ್ವಲೆ' ನೋ.
**ಉರುಲೊಡ್ಡು**, ಉರುಳೊಡ್ಡು (ಕ್ರಿ). ಪಾಶವನ್ನು ಒಡ್ಡು; ಜೀರು (ಸರ) ಗುಣಿಕೆ ಹಗ್ಗ ಹಾಕು: ತ್ರ್ಯೋಮಿಕ್ಕುತುರುಗಂಡಿಗುರುಲೊಡ್ಡುತೆ (ಪರಶು. ೨೧–೩೦). **ಉರುಳೊಡ್ಡು**: ಉರುಳೊಡ್ಡುವುದಕ್ಕಾಗಿ ಅದೇ ಕಮರಿಯ ಕಡೆಗೆ ಬಂದ (ಕುಡಿಕೂ. ೧೬೨).
[ಉರುಲ್ (< ಉರಿಲ್) + ಒಡ್ಡು$_1$]
**ಉರುಲ್ಗೊಲೆ**, ಉರುಳ್ಗೊನೆ (ನಾ). ಜೀರು (ಸರ)ಗುಣಿಕೆಯುಳ್ಳ ಹಗ್ಗದ ಕಟ್ಟು: ಖಗಮೃಗವ್ರಾತಮಂ ಪಾತಮಂ ಮಾಡಿದರ್ ಕೂಡೆ ಕೂಡೆ ಸಿಡಿಗುಂಡು ಬಡಿಕೋಲ್ಗಳುಜುಬೆಯಿಂದಿಜುಬೆಯಿಂದಿಡುಗವಣೆನೇಣುರುಲ್ಗೊಲೆಗಳಿಂ ಬಲೆಗಳಿಂ ಜಡಿದು (ಜೈಮಿಭಾ. ೨೮–೪೬). **ಉರುಳ್ಗೊನೆ**: ಕೊನೆವಾಳೆ ಕುಸುಮಮಂಜರಿ ಮುಖ್ಯಶಾಲಿಯ ಕೊನೆಗಳನಗಿವ ಕೀರಗಳು ಕೊನೆಗಣ್ಣ ಪಾಮರಿಯರ ದಿಟ್ಟಗಣ್ಣುರುಳ್ಗೊನೆಯೆಂದು ಕೊನೆಗೆ ಪಾಜಿಮುವು (ಮೋಹತ. ೨–೪೪).
[ಉರುಲ್ (< ಉರಿಲ್) + ಗೊಲೆ$_2$]
**ಉರುವಣಿ** 'ಉರವಣೆ' ನೋ.
**ಉರುವಣಿಗೆ** 'ಉರವಣಿಗೆ$_2$' ನೋ.
**ಉರುವಣಿಸು** 'ಉರವಣಿಸು' ನೋ.
**ಉರುವಣೆ** 'ಉರವಣೆ' ನೋ.
**ಉರುವಲ** 'ಉರುವಲು' ನೋ.

**ಉರುವಲಮನೆ** (ನಾ). ೧. ಉರಿಯ ಮನೆ: ಇದು ಉರುವಲ ಮನೆ. ಮೂಸಿ ನೋಡಿದರೆ ಕೊಬ್ಬು, ತುಪ್ಪ, ಅರಗು ಇವು ಬೆರೆತಿರುವುದರ ವಾಸನೆ ಬರುತ್ತದೆ. ಬೇಗ ಹೊತ್ತಿಕೊಳ್ಳಲೆಂದು ನಾರು ಸಜ್ಜರಸಗಳನ್ನು ಉಪಯೋಗಿಸಿದ್ದಾರೆ . . . ಎಂದನು (ವಚಭಾ. ೩೨). ೨. ಸೌದೆ ಇಡುವ ಮನೆ, —ಕೋಣೆ.
[ಉರುವಲ (< ಉರುವಲು) + ಮನೆ]
**ಉರುವಲು**, ಉರವಲ, ಉರುಲು$_2$, ಉರುವಲ (ನಾ). ಸೌದೆ; ಇಂಧನ; ಕಟ್ಟಿಗೆ: ಇಮಾರತಿನ ಕಟ್ಟಿಗೆಯನ್ನೂ ಉರುವಲನ್ನೂ ತೆಕ್ಕೊಳ್ಳುವರು (ಕಭಾಗೆ. ೨೩); ಹೆಣವಾದೆವು ಹೆಂಡದಲ್ಲಿ ಉರುವಲು ಬಾಳ್ಕೊಂಡದಲ್ಲಿ (ಮುಕ್ತಕಂ. ೬೨–೬); ಕದ್ರಾದಿಂದ ಕಾರವಾರಕ್ಕೆ ಉರುವಲಿನ ಹಾಗೂ ಇಮಾರತಿನ ಕಟ್ಟಿಗೆಗಳು ಜಲಮಾರ್ಗದಿಂದ ಹೋಗುತ್ತವೆ (ಕಾರವಾ. ೧೮). **ಉರವಲ**: "ಸಮಿಧ್–ಒಣಗಿದ ಕಟ್ಟಿಗೆ, ಉರವಲ" (ಗಂಗಾಮ. ೩೨೩). **ಉರುಲು$_2$**: "ಉರುವಲು, ಕಟ್ಟಿಗೆ" (ಜಾನಕೋ. ೨೧). **ಉರುವಲ**: ಉರುವಲ ಹಾಕದಿದ್ದರೆ ಬೆಂಕಿ ಆರಿಹೋಗುತ್ತದೆ. ಉಳಿದ ಮರಗಳು ಉರುವಲಕ್ಕೆಂದು ಉಪಯೋಗವಾಗುತ್ತವೆ (ಕಪಪು. ೬–೧೪). [ಉರುವು$_1$ (< ಉರಿಪು$_1$) + -ಅಲು (< -ಅಲ್$_2$)]
**ಉರುವಾರು** (ಕ್ರಿ). ಚಾಚು; ಚೆನ್ನಾಗಿ ಬಳಿ (?): ತುರಗ ಕರಿಗಳು ಕರಭಯುಳಗನನೇಜಿ ಪುರದ ಬೀದಿಯೊಳು ಸಂದಣಿಸಿ ಉರುವಾರಿ ಗುಡಿಸಲೆಂದೆಯ್ದಿ ತಿರುಗುವುದೊಂದಿರವ ನಿನ್ನೇನೆನ್ನಬಹುದು (ಅನಂಚ. ೧–೧೪೮).
[?]
**ಉರುವಿಗೆ** (ನಾ). ಒಂದು ಗ್ರಾಮದ ಹೆಸರು: ಉರುವಿಗೆ ಗ್ರಾಮ (ಕಇ. II, ೩–೩೪; 693). [?]
**ಉರುವು$_1$** 'ಉರಿಪು$_1$' ನೋ.
**ಉರುವು$_2$** 'ಉರಿಪು$_2$' ನೋ.
**ಉರುಶು** (ನಾ). ಒಂದು ಸಂವತ್ಸರದ ಹೆಸರು; ವಿಷು: ಶಾಲಿವಾಹನ ಶಕ ವರುಷ ೧೪೪೩ನೆಯ ಉರುಶು ಸಂವತ್ಸರದ ವಯಿಶಾಖ (ಕಇಅ. ೬೨–೯–೨; 1521). [< ಸಂ. ವೃಷ]
**ಉರುಸತ್ತ್ವ** (ನಾ). ಅಧಿಕವಾದ ಶಕ್ತಿಯುಳ್ಳವನು: ಉರುಸತ್ತ್ವನ್ನಿಷೇನಪ್ರವರ ಮುನಿವರನ್ದೇವಲೋಕಕ್ಕೆ ಸನ್ದಾನ್ (ಎಕ. II, ೮೮–೪; 700). [ಉರು$_2$ + ಸತ್ತ್ವ]
**ಉರುಸರ** (ನಾ). ಬಲವಾದ ಧ್ವನಿ; ಗಟ್ಟಿಯಾದ ಕೂಗು: ಆತನುರುಸರದಿನಿನಿಸಾಕೂತಮನಾಂ ಜಡನೆನಜಿಂದೆನೆಂದೊಡೆ ನೀತಿಖ್ಯಾತರಿರಗಾಧಬೋಧ ಸಮೇತರಿರಜಿವವರಿನಿತನಜಿಯಲೆವೇಡಾ (ಶಾಂತಿಪು. ೨–೬೦).
[ಉರು$_2$ + ಸರ$_3$]
**ಉರುಸು**, ಉರಸು (ನಾ). ಮುಹಮ್ಮದೀಯ ಸಾಧುಗಳ ಪುಣ್ಯತಿಥಿ; ಅಂದು ನಡೆಸುವ ಜಾತ್ರೆ; "ಮುಸಲ್ಮಾನದೇವರ ಮಹೋತ್ಸವ" (ಜಾನಕೋ. ೨೧): ವರುಷಕ್ಕೊಮ್ಮೆ ಆಗುವ ಉರುಸಿಗೆ ಸುತ್ತಲಿನ ಹಳ್ಳಿಯ ಜನರು ಬಂದು ಹೋಗುವುದುಂಟು (ಹಬ್ಬಬ. ೩೯); ಆಗ ಮುಸಲ್ಮಾನರ ಉರುಸುಗಳು ಮುಗಿಯುವ . . . ಕಾಲವಾದ್ದರಿಂದ (ದೇವಅ. ೩೧). **ಉರಸು**: ಹವಣೂರಿಗೆ ಹೊಂಟದೇವ್ರಿ, ಸ್ವಾಮಿ. ಉರಸು. ಕುಸ್ತಿ ಮಾಡಾಕೆ (ಎಳಕ. ೧೫). [←ಅರ. ಹಿಂ. ಉರುಸ್. ಮರಾ. ಉರೂಸ್].
**ಉರುಸೊಪ್ಪು** (ನಾ). ಶ್ರೇಷ್ಠವಾದ ಸೊಪ್ಪು: ಕಸಗಸಿಯುಗಸಿನುಗ್ಗಿ ಸೊಪ್ಪುಗಳನ್ನು ಕೋಳಿಕಾಲಿನ ಸೊಪ್ಪು ಗೋಜಿಹ್ವ ಶಾನಕಾವಾಲ ಖರಕರ್ಣದುರುಸೊಪ್ಪುವಂ ಭೂಛತ್ರಮುಂ ಬಿಟ್ಟನಾ ಗುರುವರಂ (ಮಹಾವಿ. ೧೧–೩೫). [ಉರು$_2$ + ಸೊಪ್ಪು$_3$]
**ಉರುಹು** 'ಉರಿಪು$_1$' ನೋ.

**ಉರುಳ್$_1$**, ಉರುಳು$_1$ (ಕ್ರಿ). ೧. ದುಂಡಾದ ವಸ್ತು ನೆಲದಲ್ಲಿ ಚಲಿಸುವಂತೆ ಚಲಿಸು; ಕೆಳಕ್ಕೆ ಬೀಳು; ಹೊರಳಾಡು: "ಉರುಳ್ – ನಿಮ್ನಪತನೇ" (ಶಮುಧಾ); ಅವರ್ಗಳನಿಬರುಂ ಪೆಜಗಣ್ಗುರುಳ್ದು ಬಿಜಿಗ್ದೊಡೆ (ವಡ್ಡಾರಾ. ೯೬–೭); ಬೀರರೆರ್ದೆವಟ್ಟುಗಳ್ ತೊಟ್ಟನೆ ಬಿರಿಯೆ ಸುರುಳ್ದು ತೆರಳ್ದು ಪರೆದೋಡೆ (ವರ್ಧಪು. ೩–೪೩ ವ); ಪೀತಾಂಬರ ತಲ್ಪದೊಳುರುಳ್ವೆಳೆಯನನೆತ್ತುವ ಭಾಗ್ಯಂ ಮುನ್ನಂ ನೋನದರ್ಗುಂಟೇ (ಜಯಕಾ. ೨–೩೬); ಗಿರಿಯುತ್ತುಣಿಂ ಕಲ್ಲುರುಳ್ದುದು (ಶಬ್ದಾನು. ೨೨೧ ಪ್ರಯೋ). ೨. ಬೀಳು; ನಾಶವಾಗು; ಸಾಯಿ: ಸಂಸ್ಕೃತಿವಾರ್ಧಿಯಲ್ಲಿ ಬಿರ್ದುರುಳದೆ ವೀರವೃತ್ತಿಯನೆ ಪಾಟಿಸಿ (ಧರ್ಮಾಮೃ. ೧೨–೫೦); ಧರೆಯೊಳ್ ಮೇಣ್ ಪುಟ್ಟೆ ಪುಟ್ಟುತ್ತುರುಳ್ವ ನರರ ಮೇಲುರ್ಬಿ ಕಬ್ಬಂಗಳಂ ಬಿತ್ತರಿಸುತ್ತುಂ. . .ಕಬ್ಬಿಗರ್ ಕೆಟ್ಟುಪೋದರ್ (ರಾಜಶೇ. ೧–೧೯). **ಉರುಳು$_1$**: ೧. ಭಗದತ್ತನುರುಳಿದನು ಗಜದಿಂದ (ಕುವ್ಯಾದ್ರೋ. ೩–೭೬); ಉರುಳುವಂಬಕ ವಾರಿಬಿಂದುವ ಬೆರಳಕೊನೆಯಲಿ ಮಿಡಿದು (ತೊರರಾ. ೨–೨–೧೧); ಉರುಳುವ ನರಳುವ ತೆರಳುವ ಹೊರಳುವ ಬೆರಳ ಕಚ್ಚುವ ಬೇಡಿಕೊಳ್ವ (ಕಂನವಿ. ೧೫–೫೦); ಉದ್ದು ಉರುಳಿದರೆ ಹೆದ್ದಾರಿ ದಾಟೀತೇ (ಗಾದೆ). ೨. ಧರಣಿಪತಿಗಳು ಹತ್ತುಸಾವಿರವುರುಳಿತಾ ದಿವಸದಲಿ ಹಿಂದಣ ಕೊಜತೆಯುಳಿಲೆಕ್ಕಕ್ಕೆ ಕೊಂದನು ಹತ್ತುಸಾವಿರವ (ಕುವ್ಯಾಭೀ. ೯–೨೧).

ಉರುಳಾಡು = ಅತ್ತಿತ್ತ ಹೊರಳು; ಸುತ್ತು: ಅವನು ನೆಲದ ಮೇಲೆ ಬಿದ್ದು ಉರುಳಾಡಹತ್ತಿದನು (ಮುಂಬಯಿ. ೨–೧೬); ಹಾಸಿಗೆಯ ಮೇಲೆ ಹಾಗಿಂದ ಹೀಗೆ ಉರುಳಾಡುತ್ತಿದ್ದೆ (ಅಲಹೂ. ೪೩). **ಉರುಳೆಗಡಿ** = ಉರುಳಿ ಹೋಗುವಂತೆ ಕಡಿ, —ಕತ್ತರಿಸು: ಉರುಳೆಗಡಿದನು ಪಾರ್ಥನಶ್ವತ್ಥಾಮನಂಬುಗಳ (ಕುವ್ಯಾವಿ. ೯–೪೨); ಪರಬಲದ ಮೋಹರದ ಸನ್ನಾಹವನು . . . ಶಿಶುಪಾಲ ಉರುಳೆ[ಪಾಠಾಂ. ಳ]ಗಡಿದನು (ನಿಭಾಗ. ೧೦–೮೦–೨೪).

[ದೇ. ‖ ತಮಿ. ಉರುಳ್; ತುಳು. ಉರುಂಟು; ಕೊಡ. ಉರಿಡ್ ಉರಿಟ್; ತೆಲು. ಉರಲು, ಉರ್ಲು]

**ಉರುಳ್$_2$** 'ಉರಿಲ್' ನೋ.

**ಉರುಳಾಣಿ** (ನಾ). ಮರದ ದಿಮ್ಮಿಗಳನ್ನು ಉರುಳಿಸಲು ಅಡಿಗೆ ಕೊಡುವ ತುಂಡು, —ಸರಬು (ಕ). [ಉರುಳು + ಆಣಿ$_3$]

**ಉರುಳಿ$_1$**, ಉರಳಿ, ಉರುಳೆ, ಉಳ್ಳಿ (ನಾ). ೧. ಗುಂಡಾದ ವಸ್ತು; ಉಂಡೆ; ಗುಳಿಗೆ: ಗೋಲಿ: ಸವಿಗಿಂಬಾಗಿ ರತರಾಗದುರುಳಿವೊಲಾಗೆ ಕರಂ ಬೀಗಿ ಬಾಯ್ಗುಳಂ ಚುಂಬಿಸಿದರ್ (ಕಾವ್ಯಸಾ. ೬೭೭ ಶೂದ್ರಕ); ಬೆಳಗುಗಳೆಲ್ಲ ಮೊಂದುರುಳಿಯಾಗಿ (ಪಂಪಭಾ. ೬–೬); ಕುಂಕುಮದುರುಳಿಯನನುಕರಿಸಿಪರ್ ಮಡಂಗಳ್ (ಧರ್ಮಾಮೃ. ೧೦–೧೪೫); ಕರಿಗಳಿಲ್ಲದ ಕಾಡು ಮಾಣಿಕದುರುಳಿಯಿಲ್ಲದ ಬೆಟ್ಟ (ಸಾಳ್ವಭಾ. ೧–೫೯); ತನಿಮಿಂಚಿನುರುಳಿ ತನ್ನನ್ನೆ ತೂಗುವಂತೆ (ಹೃದಸ. ೪–೫). ೨. ದುಂಡಾದ ಪಾತ್ರೆ: ಕರಿಯಲು . . . ಬಾಣಲೆ ಅಥವಾ ಉರುಳಿಯನ್ನು ಉಪಯೋಗಿಸುತ್ತಾರೆ (ಅಡುಸಾ. ೯೦). ೩. ಸುತ್ತಿದ ಸುರುಳಿ: ರತ್ನಗಂಬಳಿಗಳ ಉರುಳಿಗಳು (ಬೆಟ್ಟಅ. ೧೦೬–೯). **ಉರಳಿ**: ೧. ರಸಂ ಪರಮಾನಂದರಸಂ ಸುರತರುಗಳ್ ಸವಿಯುರಳಿ ಪುರುಳಿಯರಗಿಳಿಯ ರವಂ (ಶಾಂತಿಪು. ೬–೯೮); "ಉರಳಿ . . . ಉರುಟು, ವೃತ್ತ" (ಕಸಾಪ. ೨–೧೭೯). **ಉರುಳೆ**: ೧. ಒಡಗಲಸಿ ಹಲ್ಲೆಯ ಮಾಳ್ಕೆಯೊಳು ಕೆಲವನುರುಳೆಯಂ ಕೆಲವನಸಿದಾಗಿ ಕೆಲವಂ ಮಾಡಿ (ಸೂಪಶಾ. ೪–೬೧); ಹಿಗ್ಗಿನೊಂದು ಉರುಳೆಯಂತೆ ಅವಳ ಮುಖದ ಮಂಡಲ (ಸೂರ್ಯಪಾ. ೧೧೮–೧); ಗೋದಾವರಿ . . . ಉರುಳೆಗಳನ್ನು ಮಾಡಿ ಅವನ್ನು ಕೋಡುಬಳೆಯಂತೆ ರಚಿಸುತ್ತ (ರಕ್ತಧ್ವ. ೧೧೪). ೨. ಹಾಲುಕಾಸೋಣವೆಂದರೆ ಒಂದುರುಳೆಯಿಲ್ಲ (ರೂಢಿ).

**ಉಳ್ಳಿ**: ಗಜ್ಜುಗದ ಬೇರಿನ ತಿಗಡು, ಬೆಳ್ಳುಳ್ಳಿ ಇವಂ ಸಮಾನಂಗೊಂಡು ಅರೆದುಳ್ಳಿಯಂ ಮಾಡಿ ಒಂದು ಗುಳಿಗೆಯಂ ಕೊಳ್ಳಲು ಮೂತ್ರಕೃಚ್ಛ್ರಂ, ವಾತಪ್ರಮೇಹ ಸಹ ಗುಣಮಕ್ಕುಂ (ಸಕವೈ. ೩೯೭).

ಉರುಳಿಮಾಡು = ಉಂಡೆಮಾಡು; ಸುರುಳಿಮಾಡು: ಪ್ರಳಯದುರಿಯನುರುಳಿಮಾಡಿದಂತೆ (ಪಂಪಭಾ. ೧೦–೮೦ ವ); ಕೆಂಡರಿಸೆ ಮರಾಳವಪ್ಪುರುಳಿಮಾಡಿ ಸರಂಗೊಳೆ (ಜಗವಿ. ೧೬–೧೦೯). **ಉರುಳಿಯಾಗು** = ಉಂಡೆಯಾಗು; ದುಂಡಾಗು: ರಜೋಗುಣದುರುಳಿಯಾದುದು ಲೋಕವೆನೆ ಘಾಡಿಸಿತು ಪದಧೂಳಿ (ಕುವ್ಯಾದ್ರೋ. ೪–೫೮).

[ಉರುಳ್$_1$ + –ಇ$_7$ ?]

**ಉರುಳಿ$_2$** (ನಾ). ಒಂದು ಬಗೆಯ ಹಕ್ಕಿ. 'ಉರುಳಿಹಕ್ಕಿ' ಪರಾ.

[ದೇ. ‖ ತಮಿ. ಮಲ. ಉರುಳಿ, ಉರ್ಳಿ]

**ಉರುಳಿಕೆ** (ನಾ). ಉರುಳುವಿಕೆ (ಕ). [ಉರುಳ್ + –ಇಕೆ]

**ಉರುಳಿಕ್ಕು** (ಕ್ರಿ). ಮಗುಚಿಕೊ; ಬೋರಲಾಗು: ಅಂಬೆಗಾಲಿಟ್ಟುರುಳಿಕ್ಕಿ ಕೂಗಿತು ಪೊನ್ನಗೊಂಬೆಗಳಡಿಗೆಜಗಿದಂತೆ (ಜೀವಂಸಾಂ. ೭–೪).

[ಉರುಳ್ + ಇಕ್ಕು]

**ಉರುಳಿಗುರುಳ್** (ನಾ). ಸುರುಳಿಯಾದ ಮುಂಗುರುಳು; ಗುಂಗುರು ಕೂದಲು: ಸುಕರ್ಬಿದುರುಳಿಗುರುಳ್ ನಸು ಸೋರ್ಕಿದ ಕುಚಚೂಚುಕಂ ಬೆಳರ್ತಧರಂ (ಆದಿಪು. ೧೧–೧೪೯); ಕಟ್ಟಲೆಯ ಬಟ್ಟೆನಿಪ್ಪವಳ ಪೊದಱ್ದುಳಿಗುರುಳ್ (ಮಲ್ಲಿಪು. ೩–೮೩); ಸುಕರ್ಗುರುಳ ಸುಱಿಗುರುಳ ನಿಡುಗುರುಳುರುಳಿಗುರುಳ ತುಂಬಿಗುರುಳ ಗೋಪಸ್ತ್ರೀಯರ್ (ಜಗವಿ. ೪–೧೨೫).

[ಉರುಳಿ + ಕುರುಳ್$_1$]

**ಉರುಳಿಗೊಳ್** (ಕ್ರಿ). ೧. ಗುಂಡಾಗು; ಸುರುಳಿಯಾಗು; ಗುಳಿಗೆಯಾಗು: ಯಶಮೆ ತೆರಳ್ದುರುಳಿಗೊಂಡಂತಿರ್ದ ಶಂಖಮಂ ಬಾಸಣಿಗೆಗಳೆದು (ಪಂಪಭಾ. ೬–೩ ವ); ಉರುಳಿಗೊಂಡಿರ್ಪುದೀ ಕೇಶಮಿಾ ದೃಗ್ಯುಗಳಂ ಕನ್ನೆಯ್ದಿಲಂತಿರ್ದಪುದು (ಕಾದಂಉ. ೬೩೨); ಪೊಲ್ಲಮೆಯೆಲ್ಲಮೊಂದುರುಳಿಗೊಂಡವೊಲಾದೊಡಲೊಳ್ ಕಡಂಗಿ ಪೆಂಪೆಲ್ಲಮುಡಂಗಿ ನಿನ್ನಿರವಿದೇಂ ಗಳ (ಜೀವಸಂ. ೭–೪). ೨. (ಸ್ವರೂಪ ನಾಶವಾಗಿ) ಮುದ್ದೆಯಾಗು; ಉಂಡೆಯಾಗು: ಪಾಂಡವ ಸೈನ್ಯಮಾತನಂಬಿನ ಮೊನೆಯೊಳ್ ಸುರುಳ್ದುರುಳಿಗೊಂಡುದು ಶಲ್ಯನಿದೇಂ ಪ್ರತಾಪಿಯೋ (ಪಂಪಭಾ. ೧೩–೪೪). [ಉರುಳಿ$_1$ + ಕೊಳ್$_1$]

**ಉರುಳಿಚು** 'ಉರುಳ್ಚು' ನೋ.

**ಉರುಳಿಡು$_1$** (ಕ್ರಿ). ಹೊರಳಾಡು; ಬೋರಲಾಗು: ಉರುಳಿಟ್ಟು ಅಂಬೆಗಾಲಿಕ್ಕಿ ತೊದಲ್ನುಡಿವೆರಸು ದಟ್ಟಡಿಗಳನಿಟ್ಟು . . . ಪಸುಳೆ (ಶ್ರೀಪಾಲ. ೨–೮೧). [ಉರುಳು$_2$ (< ಉರುಳ್$_2$) + ಇಡು$_1$]

**ಉರುಳಿಡು$_2$** (ಕ್ರಿ). ಪಾಶವನ್ನು ಒಡ್ಡು; ಜೀರು(ಸರ)ಗುಣಿಕೆ ಹಗ್ಗ ಹಾಕು: ಪ್ರಾಣಿಗಳಿಗೆ ಉರುಳಿಡಲು ಒಳ್ಳೆಯ ತಾವು ಅದು (ಕುಡಿಕೂ. ೭೫). [ಉರುಳು$_3$ (< ಉರಿಲ್) + ಇಡು$_1$]

**ಉರುಳಿವರಿ** (ಕ್ರಿ). ಗೋಲಿಯಂತೆ ಉರುಳಿ ಮುಂದೆ ಹೋಗು; ಗುಂಡಿನಂತೆ ಉರುಳು: ತೊಟ್ಟಿಲನೊದೆದಾಡುತ್ತುಂ ಪಟ್ಟಿರ್ದನನುರುಳಿವರಿದು ಶಿಶುವಂ ಕೊಲಲೆಂದಿಟ್ಟೊತ್ತಿ ತದಂಘ್ರಿತಳಂ ಮುಟ್ಟೆ ಸಿಡಿಲ್ ಪೊಡೆವ ತೆಱದೆ ಕೆಡೆವಂ ಶಕಟಂ (ಜಗವಿ. ೩–೨೯). [ಉರುಳಿ$_1$ + ಪರಿ$_2$]

**ಉರುಳಿಸು** (ಕ್ರಿ). ಗೋಲಿಯಂತೆ ನೆಲದಲ್ಲಿ ಚಲಿಸುವಂತೆ ಮಾಡು; ಬೀಳಿಸು: ಅವರುರುಳಿಸಿದರಶ್ರುಗಳನಲುಗುವ ಶಿರದ ಶೋಕದಲಿ (ತೊರರಾ. ೨–೫–೨೪); ಸಡಲಿಸಿ ಸಿಂಜಿನಿ ಶಿಖರಿಣಿಯರಿಗೆಂದು ಕಡಗವನುರುಳಿಸಿಬಿಟ್ಟ (ಭರಚ. ೧೩–೧೬೮); ಹಾಲಿನ ಪಾತ್ರೆಯನ್ನು ಉರುಳಿಸಿ ಬಿಟ್ಟ (ರೂಢಿ). [ಉರುಳ್$_1$ + –ಇಸು$_3$]

**ಉರುಳಿಹಕ್ಕಿ** (ನಾ). ಒಂದು ಬಗೆಯ ಹಕ್ಕಿ: ಮರದ ಎಲೆಗಳಲ್ಲಿ ಕುಳಿತಿದ್ದ ಕೆಲವು ಉರುಳಿಹಕ್ಕಿಗಳು ಕಿರುದನಿಗೈಯುತ್ತ ಹಾರಿ ಹೋದುವು (ಕಾನೂರು. ೮೪). [ಉರುಳಿ$_2$ + ಹಕ್ಕಿ$_1$ (< ಪಕ್ಕಿ$_1$)]

**ಉರುಳು$_1$** 'ಉರುಳ್$_1$' ನೋ.

**ಉರುಳು$_2$** (ನಾ). ಉರುಳುವಿಕೆ; ಸುತ್ತುವಿಕೆ: ಗಾಡಿ ಎರಡುರುಳಾಗಿ ಬಿದ್ದಿತು (ರೂಢಿ). [< ಉರುಳ್$_1$]

**ಉರುಳು$_3$** 'ಉರಿಲ್' ನೋ.

**ಉರುಳುಕ** (ನಾ). ಉರುಳಿಕೊಂಡು ಹೋಗುವವನು; ಅಸ್ಥಿರನಾದವನು; ಚಂಚಲನಾದವನು: ಆರಸನಲ್ಲಾ ದ್ರುಮನು ವರ ಕಿಂಪುರುಷ ಮಾನ್ಯನು ನಿಮ್ಮಯಜ್ಞದೊಳುರುಳುಕರಿಗಲ್ಲದೆ ವಿಶಿಷ್ಟರಿಗಿಲ್ಲ ಗತಿಯೆಂದ (ಕುವ್ಯಾಸ. ೮–೨೩). [ಉರುಳು + –ಕ$_2$]

**ಉರುಳುಗಡಿ** (ಕ್ರಿ). ಉರುಳುವಂತೆ ಕಡಿ, —ಕತ್ತರಿಸು: ಮುರೆನ ನರಕನ ಹಂಸ ಡಿಬಿಕರ ಶಿರವ ನೆಱೆಚಂಡಾಡಿ ಲೀಲೆಯಲುರುಳುಗಡಿವಪ ನವನಿಭಾರವ (ನಿಭಾಗ. ೨–೩–೨೮); ದಿವಿಜರಂ ದೆಸೆದೆಸೆಯೊಳು ಉರುಳುಗಡಿವಂ ವೀರನೊಲವಿನಿಂ ಗೆಲವಿನಿಂ ತೆರಳದವನೊಡನೆಸೆವನುಬ್ಬಿನಿಂ ಕೊಬ್ಬಿನಿಂ (ಚಬಪು. ೫೦–೩೩).

[ಉರುಳು$_1$ (< ಉರುಳ್$_1$) + ಕಡಿ$_3$]

**ಉರುಳುಗಣ್ಣಿ** 'ಉರುಳ್ಗಣ್ಣಿ' ನೋ.

**ಉರುಳುಗಳ್ಳ** (ನಾ). ಸಮಯಕ್ಕೆ ತಕ್ಕಂತೆ ಕಳ್ಳತನ ಮಾಡುವವನು (?): ಹುಟ್ಟಿದ ಮರ ನೆಟ್ಟ ಕಲ್ಲು ಮತ್ತೀತರ ಇಷ್ಟದಲ್ಲಿ ಒತ್ತಿದ ಲಿಂಗಮುದ್ರೆ ಇರಲಿಕೆ ಕಿತ್ತುಕೊಂಡವ ದ್ರೋಹಿ ಎಂಬರು ದೃಷ್ಟದಲ್ಲಿ ಜಂಗಮಭಕ್ತರ ಕೊಲುತ್ತ ಇಂತೀ ಉರುಳುಗಳ್ಳರ ಭಕ್ತರು ಜಂಗಮ ವೆಂದರೆ ಒಪ್ಪನೆಯ್ಯ (ಶೂನ್ಯಸಂ. ೨೬೫–೨೦).

[ಉರುಳು$_1$ (< ಉರುಳ್$_1$) + ಕಳ್ಳ]

**ಉರುಳುಗೆಡಹು** (ಕ್ರಿ). = ಉರುಳಿಸು: ಕೆರಳಿ ಬಳಿಕವನಸ್ತ್ರಶಸ್ತ್ರವ ಸರಗೋಳಿಸಿ ಸವ್ಯಾಪಸವ್ಯದಲುರುಳುಗೆಡಹಿದ ನೂಕುವತಿಬಲ ವೀರವಾನರರ (ತೊರರಾ. ೬–೩೦–೩೨).

[ಉರುಳು$_1$ (< ಉರುಳ್$_1$) + ಕೆಡಹು (< ಕೆಡಪು)]

**ಉರುಳುಗೆಡ್ಡೆ** (ನಾ). ದುಂಡಾದ ಗೆಡ್ಡೆ; ಆಲೂಗೆಡ್ಡೆ: ಕರಿದ ಉರುಳುಗೆಡ್ಡೆ ಮೊದಲಾದುವುಗಳ ತೆಳ್ಳನೆಯ ಬಿಲ್ಲೆಗಳು; ಉಪ್ಪೇರಿ (Chip. ಇಂಕನಿ). [ಉರುಳು$_1$ (< ಉರುಳ್$_1$) + ಗೆಡ್ಡೆ]

**ಉರುಳುನೂಕು** (ಕ್ರಿ). ಉರುಳುವಂತೆ ನೂಕು, —ತಳ್ಳು: ಕೃಷ್ಣನ ಚರಿತವನು ಕೇಳುತ್ತ ಕಾಲವನುರುಳುನೂಕಲುಬೇಹುದು (ನಿಭಾಗ. ೧೦–೯೫–೫). [ಉರುಳು$_1$ (< ಉರುಳ್$_1$) + ನೂಕು$_1$]

**ಉರುಳುಬೇಟೆ** (ನಾ). ಕೊರಳಿಗೆ ಉರುಲು ಹಾಕಿ ಪ್ರಾಣಿಯನ್ನು ಹಿಡಿಯುವ ಬೇಟೆ: ಹಕ್ಕಿಬೇಟೆ, ಮಾನುಬೇಟೆ, ಉರುಳುಬೇಟೆ ಮೊದಲಾದುವುಗಳಲ್ಲಿ ಸಹಾಯಕನಾಗಿದ್ದದ್ದೆ (ಮಲೆಮ. ೧೩೪).

[ಉರುಳು$_3$ (< ಉರಿಲ್) + ಬೇಟೆ]

**ಉರುಳುಸೇವೆ** (ನಾ). (ಹರಕೆ ಹೊತ್ತು ಒದ್ದೆಯನ್ನುಟ್ಟು ದೇವಸ್ಥಾನದ ಸುತ್ತಲೂ) ಉರುಳುವ ಪ್ರದಕ್ಷಿಣೆ; ದಿಂಡುರುಳು: ಒದ್ದೆವಸ್ತ್ರದಿಂದ ಉರುಳುಸೇವೆ ಮಾಡುವರು (ಹುಟ್ಟಿಹ. ೧೬೪); ಸೂರ್ಯನ ಸುತ್ತಲೂ ಉರುಳುಸೇವೆಯನ್ನು ಮಾಡುತ್ತಿರುವುದು (ಜ್ಯೋತಿರ್ವಿ. ೧೨); ಈಗ ದೇವರು ಯಾರು, ಯಾವ ದೇವರ ಹಿಂದೆ ಇಂಥ ಪರಿಪಾಟ ಈ ಉರುಳು ಸೇವೆ? (ನಡೆಪಾ. I, ೩೬೨).

[ಉರುಳು$_1$ (< ಉರುಳ್$_1$) + ಸೇವೆ]

**ಉರುಳಿ** 'ಉರುಳಿ$_1$' ನೋ.

**ಉರುಳಿವರಿ** (ಕ್ರಿ). ಉರುಳಿಕೊಂಡು ಮುಂದಕ್ಕೆ ಹೋಗು: ನೀರೊಳಗಣ ಪೆಣನಂತೆವೊಲಾರೆಟೆದೊಡಮುರುಳಿವರಿದು ಪುರುಳಿಲ್ಲದಹಂಕಾರದೊಳಿ ಬಾತು ಬಲ್ಮೆಗೆ ಹಾರೈಸುವರೇಕೆ ಬಯಕೆಗವಿಗಳ್ (ಲೀಲಾವ. ೧–೨೪). [ಉರುಳಿ (< ಉರುಳಿ$_1$) + ಪರಿ$_2$]

**ಉರುಳಿವಲಸು** (ನಾ). ದುಂಡಾದ ಹಲಸಿನಕಾಯಿ; ಅಡಿಗೆ ಹಲಸು: ಉರುಳಿವಲಸಿನ ಕಾಯ ಕೆತ್ತಿ ಬೇಯಿಸಿಕೊಂಡು ಹಿರಿದಾಗಿ ಮುಳ್ಳಿಱಿದು ಮೊಸರು ಮಜ್ಜಿಗೆಯ ಹಾಲರಿಸಿನಕೆ ಕೂಡಿ (ಸೂಪಶಾ. ೫–೪೫).

[ಉರುಳಿ (< ಉರುಳಿ$_1$) + ಪಲಸು]

**ಉರುಳಿವಾಯ್** (ಕ್ರಿ). ಉರುಳಿಕೊಂಡು ಮುನ್ನುಗ್ಗು: ಬೊಬ್ಬಿಱಿದು ಪರಿವಬ್ಬರಗಲಿಗಳುಮಂ ನೆರವಿಯನುರುಳಿವಾಯ್ದುಗುರ್ವಿಸಿ ಪರಿವ ಕರ್ಬುಸುಗಲಿಗಳುಮಂ (ಲೀಲಾವ. ೫–೧೩೩ ವ).

[ಉರುಳಿ (< ಉರುಳಿ$_1$) + ಪಾಯ್$_1$]

**ಉರುಳೊಡ್ಡು** 'ಉರುಲೊಡ್ಡು' ನೋ.

**ಉರುಳ್ಗಣೆ** (ನಾ). ಕುಣಿಕೆಯುಳ್ಳ ಹಗ್ಗದಿಂದ ಕೂಡಿದ ಕೋಲು; ಪಾಶವಿರುವ ಗಣೆ: ಬಾಣನಂದನೆಯೆಂಬ ತಡಿಕೆಯ ಮಱೆಯ ಸುಜಾಣ ಮನ್ಮಥನುರುಳ್ಗಣೆಯ ಕೇಣವಿಲ್ಲದೆ ನೀಡಿ ಸುರರೆರ್ದೆಯೊಳಗಿರ್ದ ಪ್ರಾಣಹಂಸಗಳ ಬಂಧಿಸಿದ (ಮೋಹತ. ೨೫–೧೬).

[ಉರುಳ್$_3$ (< ಉರಿಲ್) + ಗಣೆ (< ಗಱೆ)]

**ಉರುಳ್ಗಣ್ಣಿ**, ಉರುಳುಗಣ್ಣಿ (ನಾ). ಉರುಳಿನಿಂದ ಕೂಡಿದ ಹಗ್ಗದ ಕುಣಿಕೆ; ಉರುಳುಪಾಶ: ಕೈಗತ್ತರಿಯುರುಳ್ಗಣ್ಣಿ ಬಲ್ಗುಂಡು ಪೆರ್ದೊಗಲೆ (ಪದ್ಮರಾ. ೩–೨೧); ಚಲ್ಲಗಣ್ಣಡೆಯ ಕುಡಿವೆಳಗೆಂಬುರುಳ್ಗಣ್ಣಿಯಲ್ಲಿ ಪಥಿಕಮನೋಮೃಗವನೆಯ್ದೆ ಬೀಱಿ ತಂದಿಲ್ಲಿ ತಡೆವರಿವಲ್ಲರೇಂ ವ್ಯಾಧವಧುಗಳೋ ಮೇಣ್ ಪ್ರಪಾವಧುಗಳೋಯೆನೆ (ಪದ್ಮರಾ. ೮–೯). **ಉರುಳುಗಣ್ಣಿ**: ಮರುಳಹರೆ ಭೂಪಾಲ ಬಾದರಾಯಣನಿಕ್ಕಿದುರುಳುಗಣ್ಣಿ [ಪಾಠಾಂ. ಉರಿಲಕಣ್ಣಿ]ಗೆ ಸಿಲುಕುವರೆ (ಜೈಮಿಭಾ. ೨–೫೬).

[ಉರುಳ್$_3$ (< ಉರಿಲ್) + ಕಣ್ಣಿ]

**ಉರುಳ್ಗೊನೆ** 'ಉರುಲ್ಗೊಲೆ' ನೋ.

**ಉರುಳ್ಚಿಸು** (ಕ್ರಿ). ಉರುಳಿಸು; ಬೀಳಿಸು: ಮೇರುನಗಕ್ಕೆಳದುಯ್ದು ಮೇಗಣಿಂ ಕೂಡಿ ಸಮಂತುರುಳ್ಚಿಸನೆ... ಆಗುರ್ವಿಸಲೆನ್ನ ವಿದ್ಯೆಯಿಂ (ಧರ್ಮಾಮೃ. ೯–೧೯೦). [ಉರುಳ್ಚು + –ಇಸು$_3$]

**ಉರುಳ್ಚು**, ಉರುಳಿಚು (ಕ್ರಿ). ಉರುಳುವಂತೆ ಮಾಡು; ಬೀಳಿಸು: "ಉರುಳ್ಚು–ನಿಮ್ನಾಗಮನಕರಣೇ" (ಶಮಧಾ); ಉರುಳ್ಚಿ ಪೂವಿನ ಪಸೆಯೊಳ್ ಪೊರಳ್ಚಿದನಳುರ್ಕೆಯ ಬರ್ದೆಯುರಂ ಗುಣಾರ್ಣವಂ (ಪಂಪಭಾ. ೨–೪೦); ಅದಿರೆ ವಳಿತ್ರಯ ಸೋಪಾನದೊಳೋವದುರುಳ್ಚಿ... ಪುಡುಕುನೀರಟ್ಟಿದನಚ್ಚೇಕ್ಷಣನ ಚಿತ್ತಮಂ ಚಿತ್ತಭವಂ (ವರ್ಧಪು. ೬–೯); ಕೊಂಡು ಬಲೀಂದ್ರನನುರುಳ್ಚಿ ಕಟ್ಟಿದ ಮುಕುಂದನೇಂ ಕೇವಲಮೇ (ಜಗವಿ. ೮–೮೯); ಹಾಸಂಗಿಯಂ ಪಚ್ಚೆಯ ವಿದೂಷಕನುರುಳ್ಚಿದಂ ಬಾಲೆಯರ ಮಚ್ಚುಸುವ ಕಟಕಿವಾತುಗಳ ಜಾಣ್ಮೆಗಳಿಂದೆ ಪಗಡೆಯಾಡುವ ನೆವದೊಳು (ಜೈಮಿಭಾ. ೬–೩೧). **ಉರುಳಿಚು**: ಚಾಮೀಕರದ ಚಟುಳಪ್ರಭೆಯ ಕೋಟೆಯನುರುಳಿಚಿದರ್ (ತೊರರಾ. ೬–೧೧–೧೫). [ಉರುಳ್$_1$ + –ಚು]

**ಉರುಳ್ವಲೆ**, ಉರುಲುವಲೆ (ನಾ). ಉರುಳುಹಾಕುವ ಬಲೆ; ಒಂದು ಬಗೆಯ ಬಲೆ: ಕಣ್ಣಿವಲೆಗಳುರುಳ್ವಲೆ ಕಿಱುವಲೆ ಕಾಲ್ಗಣ್ಣಿವಲೆಗಳೆಂಟು ಕಣೆಯಿಂ ಬಣ್ಣಗೆಡಿಸಿ (ಅನಂಚ. ೧೨–೧೭೯). **ಉರುಲುವಲೆ**: ಗಳ್ಳನೆ ನಾಲ್ದೆಸೆಗೆವುರುಲುವಲೆ ತೊಡಕುವಲೆ ಸಿಕ್ಕುವಲೆ ಸಿಡಿಲುವಲೆ (ನವಮೋ. ೧೬–೨೦). [ಉರುಳ್$_1$ (< ಉರಿಲ್) + ಬಲೆ$_1$]

**ಉರ್ಕೆ$_1$** 'ಉಱೆ' ನೋ.

**ಉರೆ$_2$** (ನಾ). (?) : ತೆಱನನಱಿಯದೆ ಭಂಗಮನಿಕ್ಕಿಯುಂ ಮೂಱಡೆಗಲ್ಲದೆ ಕಟ್ಟಾಡಿಯುಂ ಮುಱಿಯೆ ಪೊಯಿಸಿದನುರೆ[ಪಾಠಾಂ. ಅರೆ]ಯಂ ಕೊನ್ದು ಧರೆಗೆಡೆ ತಗರ್ಗಡಯಿವನೆನಿಸದೆ ನೆಱೆಯೆ ಕಡು ಜಾಣನೆನಿಸಲ್ಕೆ ಬಕ್ಕುರ್ಮೆ (ಎಕ. II, ೧೩೩–೧೪೧ ; 987). [?]

**ಉರೋಜ** (ನಾ). ಮೊಲೆ ; ಸ್ತನ : ಚೆಲ್ವಿಂ ಪುದಿದುರಚಲ್ಲಿಯೊಳಿಸೆ ದುದು ತದುರೋಜಸರೋಜಮುಕುಳಯುಗಸಂಚಳನಂ (ಆದಿಪು. ೬–೧೯) ; ಉರೋಜದೊಳ್ ತಳೆದ ಕುಂಕುಮಲೇಪನಮಂದವೀಯೆ (ರಾಜಶೇ. ೪–೧೦). [ಸಂ.]

**ಉರೋರುಹ** (ನಾ). = ಉರೋಜ : ಸ್ಫುರದೀಷತ್ಪ್ರೋದ್ಗತೋರೋರುಹಮುಕುಳೆಯರುನ್ಮತ್ತಹಂಸೀಕ್ವಣನ್ನೂಪುರೆಯರ್ (ಆದಿಪು. ೮–೫೬) ; ಏಳಿಸೆ ಪುರ್ವು ದೂರ್ವೆಯನುರೋರುಹಮುಜ್ಜ್ವಲ ಕುಂಭಶೋಭೆಯಂ (ಚಂದ್ರಪು. ೧೦–೫). [ಸಂ.]

**ಉರ್ಕಂದ್ರೆ** (?) : ಈ ಭೂಮಿಗಳಿಗೆ ವುಳ್ಳ ಕರೆ ಮುರೆ ಮನೆ ಬಾವಿ ಹಲಸು ಮಾವು ಹುಂಬೆ ನಿಕ್ಕಿಲುರ್ಕಂದ್ರೆ ಕದಿರು ಜಲ ಪಾಷಾಣ ಸಹ ಮೂಲಾಧಾರೆಯನು ಯೆರೆದು ಕೊಟ್ಟು ಯಿಸಿಕೊಂಬ ದೊಡ್ಡವರಹಲಂ (ಎಇ. XX, ೮–೪೨ ; 1556). [?]

**ಉರ್ಕಣೆಗಾಮುಂಡ** (ನಾ). ಒಬ್ಬಾತನ ಹೆಸರು: ಮರವೂರ ಉರ್ಕಣೆ ಗಾಮುಣ್ಡರುಂ ಭೀಮಗಾಮುಣ್ಡರುಂ (ಎಕ. XV, ಶ್ರೀರಂಗ. ೧೬೦–೧೯ ; 800). [ಉರ್ಕಣೆ$_0$ + ಗಾಮುಂಡ]

**ಉರ್ಕಳಿ** (ಕ್ರಿ). ಧೈರ್ಯಗುಂದು ; ಉತ್ಸಾಹ ಹೀನವಾಗು : ಇಳೆ ಕಾಯ್ಪೇಱಿ ಪುದಬ್ಧಿ ನೀರ್ದೆಗೆದುದಾಶಾದಂತಿ ಬಾಯ್ವಿಟ್ಟುದುರ್ಕಳಿ ದರ್ ದಿಗ್ವರರಂಜಿದರ್ ದಿವಿಜರ್ . . . ಗ್ರೀಷ್ಮದೊಳ್ (ರಾಜಶೇ. ೫–೩೬). [ಉರ್ಕು$_1$ + ಅಳಿ$_1$ (< ಅೞಿ$_1$)]

**ಉರ್ಕಳಿಸು** (ಕ್ರಿ). ಅಹಂಕಾರ ಪಡು ; ಗರ್ವಿಸು : ಪಳನುಡಿ ಪಾರ್ವರ್ಗ ಳುಪುವ ಖಳರಂ ಬೇರ್ಗಳೆದೆನೆನಗೆ ದೊರೆಯಿಲ್ಲೆಂದುರ್ಕಳಿಪರೆ (ಅಪ್ರತಿ. ೪೦–೧೩). [ಉರ್ಕಳ$_0$ + –ಇಸು$_3$]

**ಉರ್ಕಾಳ್** (ನಾ). ಕೆಚ್ಚಿನ ಆಳು ; ಪರಾಕ್ರಮಿ ; ಶೂರ ; ಧೀರ : "ಉರ್ಕಾಳ್ . . . ಬಲ್ಪಂಟೆಂ – ಈ ೫ ಪರಾಕ್ರಮಮುಳ್ಳಂ" (ಕಶಸಾ. ೧೪–೨೬೪) ; "ಕೂರಾಳುರ್ಕಾಳೆಂದುಂ . . . ವೀರರ್ಗೆ ನಾಮಮುಕ್ಕುಂ" (ಕವಿಕಂ. ೧೨೬) ; ಒರ್ಕೆಯ್ಸಿ ಬಿಲ್ಲನಂಬುಮನುರ್ಕಾಳ್ಗಳ್ ಸುರಿಗೆಗಿಱು . . . ಇಱಿದು (ಕಾವ್ಯಾವ. ೫೮) ; ಕಿರಾತರಾಜರ್ ತಮ್ಮುಳ್ಳಾಳುಮ ನೊಳ್ಳಾಳುಮನುರ್ಕಾಳುಮನೊಡಗೊಂಡು ಬಂದು ಮುತ್ತಿದರಾಗಳ್ (ಜೀವಸಂ. ೫೮–೪೦) ; ಉರ್ಕಾಳ್ಗಳಾದೊಡೇಂ ಕೇಳ್ ಸೂರ್ಕಾನೆಯ ಕೈಯ ಕರ್ವನಿನಿತುಂ ಸೆಳೆಯಲ್ ಬರ್ಕುಮೆ (ಕಬ್ಬಿಕಾ. ೧೮೦). [ಉರ್ಕು$_3$ + ಆಳ್$_3$]

**ಉರ್ಕು$_1$**, ಉಕ್ಕು$_1$, ಉರುಕು, ಉಗ್ರು$_1$ (ಕ್ರಿ). ೧. ಮೇಲಕ್ಕೆ ಉಬ್ಬು ; ಹೊಮ್ಮಿಬರು ; ಹಿಗ್ಗು : ನಿನ್ನ ಮೆಯ್ಯ ನೆತ್ತರ್ ಕುದಿದುರ್ಕಿ ಸಾವ ಬಗೆಯಿಂ ಸೆಣಸಲ್ ಬಗೆ ಬಂದುದಾಗದೇ (ಪಂಪಭಾ. ೯–೫೦) ; ಗದ್ಗದಂ ಸುಳಿಗೊಳುತ್ತಿರೆ ಕಂಪನಮುರ್ಕಿ ಲೀಲೆಯೊತ್ತರಿಸುತಿರಲ್ (ಪಂಪಾಶ. ೬) ; ಸ್ತಿಮಿತತೆವಡೆದಿರ್ದ ಕಡಲ್ ಸಮೀರಣನಿನುರ್ಕುವಂತೆ (ಚಕವಿ. ೪–೬೦). ೨. ಪರಾಕ್ರಮವನ್ನು ತೋರು ; ಉತ್ಸಾಹಿಸು : ಲಂಕೆಯಂ ಬನಮುನಾಟಂದುರ್ಕಿ ಕಿಱ್ತಿಕ್ಕಿ ಸಂತಸಮುಂ ಸೀತೆಗೆ ಮಾಡಿ (ಪಂಪಭಾ. ೮–೩೫). ೩. ಗರ್ವಿಸು ; ಕೊಬ್ಬು : "ಉರ್ಕು – ಔದ್ಧತ್ಯೇ (ಗರ್ವಿಸು) ಲೋಹಭೇದೇ ಚ" (ಶಮಧಾ) ; ಒಡೆಯರ ದೇವರೆಂದು ನಿನಗಿತ್ತೊಡೆ ಪಟ್ಟಮನುರ್ಕಿದಪ್ಪೆ (ಪಂಪಭಾ. ೪–೬) ; ಪುಸಿವರ್ಗಂ ಸಿತಗರ್ಗಂ ವಸುಧೇಶ್ವರ ಕೇಳ ಕುಡುವನುರ್ಕಿ ಕುಮಾರಂ (ಧರ್ಮಾಮೃ. ೨–೬೦). ಉಕ್ಕು$_1$ : ೧. ಮಹಾಪ್ರಳಯ ಜಳಧಿಗಳ್ ಮೇರೆದಪ್ಪಿ ಕವಿದು ಭವನಂ ಗಳೆಲ್ಲಮನೊಳಕೈಯಲುಕ್ಕಿದುವೆಂಬಂತಿಡಿದಡರೆಗೊಂಡು (ಕಾದಂಪೂ. ೮೬೨) ; ನಿಮಗೆ ಮಾಡಿದ ದಾನಮುಂ ಪಾಲುಕ್ಕಿಮ್ಮಡಿಸುವಂತೆ ಇಮ್ಮಡಿ ಯಕ್ಕುಂ (ಧರ್ಮಾಮೃ. ೧–೨೬) ; ಸಸಿಯ ಬರವಿಂಗುಕ್ಕುವಂಬುನಿಧಿಯುಂತೆ (ಹಚಕಾ. ೧೪–೨೦) ; ಕಾಯ್ದ ತಾಮ್ರರಸವನುಕ್ಕು ವೆಣ್ಣೆಯೆಱೆದು (ಸಾನಂಚ. ೬–೩೮) ; ಉಕ್ಕಿತೋ ವಿಲಯಾಬ್ಧಿಯೆನೆ ಸಾಲಿಕ್ಕಿ ನಡೆದುದು ಸೇನೆ (ಕುವ್ಯಾಕ. ೮–೨೫) ; ಗೃಹಸ್ಥರಲ್ಲಿ ಉಕ್ಕುತ್ತಿದ್ದ ಪುತ್ರಪ್ರೇಮ (ರಾಮಾನ. ೧೧೨). ೩. ರಕ್ಕಸಿಯರುಕ್ಕುವ ಮನಮನಱಿಯಲ್ಬಾರದು (ಪಂಚತಂ. ೧೫೬–೬) ; ಇನ್ನಿತ್ತಲುಕ್ಕಿ ಬಂದೊಡೆ ನಿನ್ನಾಣೆ ನರೇಂದ್ರ ಮಱಿದು ಬಂದೊಡೆ ಕೊಲ್ (ಧರ್ಮಾಮೃ. ೨–೪೬) ; ಕಡು ಸಲುಗೆಯಿಂದುಕ್ಕಿ ನಲಿದಾಡುತುಂ (ಮೆಱೆರ. ೭೩) ; ಉಕ್ಕಿದಾತನ ಹೆಗಲು ಬೇವುದು (ಕುವ್ಯಾವಿ. ೪–೫೩) ; ಪಿರಿದುಂ ಗಂಡುಮಿಕ್ಕು ಮೆಯ್ಯಱಿ ಯುದೇ ಮೇಲು ತಾಗಂ ನೋಡದುಕ್ಕುಸೊಕ್ಕಿಂ ಬೆಳೆದು ಜವ್ವನಂಬಡೆದು ಜೂದುಂಗಾಜನಾದೆಯಲ್ಲ (ಸಮ್ಯಕೌ. ೧೦–೮). **ಉರುಕು** : ೧. ಪರಾಕ್ರಮದ ದೇವಾಂತಕ ತ್ರಿಶಿರ ಪ್ರಸಿದ್ಧ ನರಾಂತಕ ಮಹೋದರನು ಯುದ್ಧೋನ್ಮತ್ತರುರುಕಿದರು [ಪಾಠಾಂ. ಉಲುಕಿದರು, ಉರುಬಿದರು] (ತೊರರಾ. ೬–೨೯–೮). **ಉಗ್ರು$_1$** : ೧. ದುರ್ಗಮುವದುರ್ಗಗೈದೆರ್ಗಿದರ ಕಾಯ್ದುಯೆದುರುರ್ಗಿದರ ಸ್ವರ್ಗನಿಳಯರ್ಗಿಸುತ ಮುರ್ಗಿಸುವ (ಜಿನಮು. ೩೨–೮). ೪. ಕೃಶವಾಗು : ವಿರೋಧಿನಾಯಕನಿಕಾಯಂ ಬಂದು ನಿಂದಾಂತಡಾ ಬಲಮುಂ ಗಂಡುವದುರ್ಗ್ಗಿ ತರ್ಗ್ಗಿನೆಂದೊಲ್ ಮುಗ್ಗಲ್ (ಮುಂಬರಾ. X, ೨೪೫–೪೩ ; 1219).

ಉಕ್ಕಬಿಡು = ಹೊಮ್ಮಿ ಉಬ್ಬುವುದಕ್ಕೆ ಅವಕಾಶ ಕೊಡು : ಜೀರಿಗೆ ಮೆಂತೆಯುದ ಚೂರ್ಣಮಿಕ್ಕಿ ಮುಚ್ಚಳನು ತೆಗೆಯದೆ ಉಕ್ಕಬಿಡದೆ ಚೆನ್ನಾಗಿ ಹದನಱಿದುಕ್ಕರಿಸಿಕೊಂಬುದು (ಸೂಪಶಾ. ೫–೮).

[ದೇ. ‖ ತುಳು. ಉಕ್ಕು, ಉರ್ಕು ; ತೆಲು. ಊರು ; ಗೊಂಡಿ. ಉಕುರ್ಪ ; ಕುಇ. ಉಂಗ್ ; ಬ್ರಾಹೂಈ. ಊರಿಂಗಿಂಗ್]

**ಉರ್ಕು$_2$** (ಕ್ರಿ). ಕರಗು ; ದ್ರವವಾಗು : ವರಗಂಧದ್ರವ್ಯ ಸಂದೋಹಮೆ ಜಿನತನುಗಂಧಕ್ಕೆ ಸೋಲ್ತಾದ ಲಜ್ಜಾಭರದಿಂ ನೀರಾಗಿ ತಾನುರ್ಕಿದುದೆನಿಸಿ (ಆದಿಪು. ೭–೧೦೨).

[ದೇ. ‖ ತಮಿ. ಮಲ. ಉರುಕು, ಉರುಕ್ಕು ; ತೆಲು. ಉಕ್ಕು]

**ಉರ್ಕು$_3$**, ಉಕ್ಕು$_2$ (ನಾ). ೧. ಹಿಗ್ಗುವಿಕೆ ; ಉತ್ಸಾಹ ; ಏಳಿಗೆ ; ಹೊಮ್ಮಿ ಮೇಲಕ್ಕೆ ಬರುವಿಕೆ : ಕಡವಿನ ಕಂಪಡಂಗಿದುದು ಜಾದಿಯ ಕಂಪೊದವಿತ್ತು ಸೋಗೆಯುರ್ಕುಡುಗಿದುದಂಚೆಯುರ್ಕು ಪೊಸತಾಯ್ತು (ಪಂಪಭಾ. ೭–೬೯) ; ಪರಪಕ್ಷದೂಷಣಾಲೋಕನದುರ್ಕು ತರ್ಕದೊಳಭಿಜ್ಞತೆ ಯಾಗಮದೊಳ್ . . . ಆದುದು (ಅರ್ಧನೇ. ೨–೩೪) ; ಮದ ಯೌವನದುರ್ಕಂ ಸತ್ಪ್ರೌಢತೆಯೊದವಂ ತೋಱುತ್ತುಂ (ಜಯಕಾ. ೫–೪೬). ೨. ದರ್ಪ ; ಗರ್ವ : "ಉರ್ಕೆಂದು ಉಕ್ಕು ಗರ್ವಮುಮಕ್ಕು" (ಕಶಸಾ. ೫–೬೫) ; ಉರ್ಕುಂ ಕಂಪನಮುಂ ಮಂಡಲಾಗ್ರದೊಳ್ (ಎಇ. XIII, ೩೩೨–೪೩ ; 929) ; ಕಡುಗಲಿತನಮುಂ ಚಾಗದ ಪಡೆಮಾತುಂ ವಿದ್ಯೆಯುರ್ಕು ಮೊರ್ವನೊಳೆಂತುಂ ನಡೆಯವು (ಆದಿಪು. ೧೨–೧೦೪) ; ಆ ಪಾರ್ವನುರ್ಕಂ ಮುಱಿವೆನೆಂದು ನುಡಿದು (ಪದ್ಮರಾ. ೯–೨೩) ; ಕೊಲಲುಮೆನ್ನಂ ಶಂಭುವೇ ಶಕ್ತನುರ್ಕಿನ ಮಾತಂ ಬಿಡು (ವೃಷವಿ. ೩೬–೪೧). ೩. ಬಲ ; ಸಾಮರ್ಥ್ಯ ; ಕೆಚ್ಚು : ಉರ್ವರೆಯ ತಮಮನೆಬ್ಬಟ್ಟುವರ್ಕ್ಕಂಗೆ ತೇಜಂ ತವದುರ್ಕ್ಕಂ ತಾಳ್ದಿ... ಪುಟ್ಟಿದಂ ನಾರಸಿಂಹಂ (ಎಕ. V, ಚೆನ್ನರಾ. ೨೪೩–೪೯ ; 1209) ; ಅಡವಿಗಿಚ್ಚಂ ಕೆಡಿಸಲೆಂದುಜ್ಜುಗಿಪ ತಱಗೆಲೆಗಳಂದದಂ ತಶನಿಯುರ್ಕಂ ನಿಲಿಸಲೆಂದೂಹಿಸುವ ಕುಧರ ನಿಕರದಂತೆ (ಪದ್ಮರಾ. ೬–೪).

**ಉಕ್ಕು₂**: ೧. ಕೋಪಿಸಲು ನಿಮುಗದಲ್ತೆಂದೇದು ನಮಿಪರುಕ್ಕಿನ ದೊಂದು ಭಯಭಕ್ತಿಯಂ (ಸಾಕಂಚ. ೨-೪೧); ಜಾನಪದದ ಏಳಿಗೆಯಾಗಬೇಕೆಂಬ ಕಾಲದಲ್ಲಲ್ಲ ವರ್ಣಕ ಸಾಹಿತ್ಯಕ್ಕೆ ಉಕ್ಕು ಹೆಚ್ಚು (ಸಾಹಿವಿ. ೧೦೪). ೨. ನಿನ್ನ ಮುನ್ನಿನ ಸೊಕ್ಕುಮುಕ್ಕುವೆತ್ತ ಪೋದುದು (ಜಾವುಂಉ. ೧೬೦); ಪುರಜನಮಂ ಪರಿಜನಮಂ ಕರಮುಕ್ಕಿಂ ಪಿಡಿದು ತನ್ನ ಗೆಡೆಗಳ್ತಾನುಂ ಪರಿಭವಿಸಿ ಬಡಿಯಲರಸನುಮರಸಿಯುಮುಚ್ಚರ್ತು ನೋಡುತಿರ್ಪರ್ ನಗುತುಂ (ಧರ್ಮಾಮೃ. ೨-೧೪); ರಕ್ಕಸರು ನಾವೆಂಬ ಭುಜಬಲದುಕ್ಕು ಮುಱಿದುದು (ತೊರರಾ. ೬-೧೯-೨); ಈಗ ನೀವೆರಡು ಖಂಡದ ಮ್ಲೇಚ್ಛದವರುಕ್ಕ ನೀಗಾಡಿತಹುದಿಲ್ಲಿಗೆಂದ (ಭರಚ. ೩೦-೩); ದೇವಾಧಿದೇವಾ ಮಹದೇವ ನೀನ್ ಮುರಿದೆ ಪಾರಸಿಕರುಕ್ಕನ್ (ಪಾರಸಿ. ೧೯-೨೧). ೩. ಖಳನಿಕ್ಕಿದ ಮರ್ದಿನ ತೀವ್ರಮಪ್ಪ ನಿಷ್ಠುರ ವಿಷದುಕ್ಕು ಪೋಗೆ (ಧರ್ಮಾಮೃ. ೧೧-೧೨೪). [< ಉಕ್ಕುರ್ಪ್₁]

**ಉಕ್ಕುರ್ಪ್₄**, ಉಕ್ಕು₃ (ನಾ). ಹದಮಾಡಿದ ಕಬ್ಬಿಣ: "ಉಕ್ಕುರ್ - ಔದ್ಧತ್ಯೇ (ಗರ್ವಿಸು), ಲೋಹಭೇದೇ ಚ" (ಶಮಧಾ); "ಉಕ್ಕೆಂದು ಉಕ್ಕು ಗರ್ವಮುಮುಕ್ಕುಂ" (ಕಶಸಾ. ೫-೬೫); ಓದಿದೊಡೆ ಕಲ್ಲಮಾಲೆಯ ನಾದಂ ಕರ್ಬೊನ್ನ ಕಡಲೆ ಪಾದಿಸೆ ರಸಮಂ ಸೊಂದಿಸೆಯುಕ್ಕಿನ ಪುಡಿಯೆನಿಪಾ ದುಷ್ಕವಿತೆಗಳನೆಣಿಸಲೇಕೀ ಕೃತಿಯೊಳ್ (ಗಿಂಕ. ೧-೨೨).

**ಉಕ್ಕು₃**: ಕಡುಗೂರಿತಕ್ಕುಮುಕ್ಕಿನೊಳೊಡಗೂಡಿದ ಪಚ್ಚೆ (ಗದಾಯು. ೩-೬೫); ಉಕ್ಕಿನಂತತಿನಿಷ್ಠುರನಾಗದೆ ಪಚ್ಚೆಯ ಸೀರೆಯಂತೆ ಗುಣದೊಳ್ ನೂನಮಾಗದೆ (ಧರ್ಮಾಮೃ. ೫-೪೮ ವ); ಉಕ್ಕಿನುರುಳಿಯೊಳಿಡುವ ಖಂಡೆಯದಿಕ್ಕಡಿಯ ಘಾಯಗಳ (ಕುವ್ಯಾಭೀ. ೪-೬೫); ಭದ್ರಾವತಿಯಲ್ಲಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಇದೆ (ರೂಢಿ).

[ದೇ. ‖ ತಮಿ. ಮಲ. ಉರುಕ್ಕು]

**ಉಕ್ಕುರ್ಂದೊಱೆ**, ಉಕ್ಕುಂದೊಱೆ, ಉಕ್ಕುರ್ದೊಱೆ (ನಾ). ಉಕ್ಕಿ ಹರಿಯುತ್ತಿರುವ ಹೊಳೆ; ತುಂಬುಹೊಳೆ: ಕಡುಕುಂದಱೆ, ಉಕ್ಕುರ್ಂದೊಱೆ (ಶಮದ. ೧೬೦ ಪ್ರಯೋ). **ಉಕ್ಕುಂದೊಱೆ**: ಆ ಗಿರಿಯ ಪಕ್ಕದೊಳ್ ತಮ್ಮ ಸೊಕ್ಕು ನೀರಿಂದೊದವಿದುಕ್ಕುಂದೊಱೆಯೊಳ್ (ವಿರೂಪಾ. ೩೦ ವ); ಪೆರ್ಮಡುವಿಡಿದು ಕಣ್ಗೆಸೆವ ಕೆಱೆಗಳ ಗಡಣದಿಂದುಕ್ಕುಂದೊಱೆಗಳಿಂದಾ ನಾಡು ಕಡುರಯ್ಯಮಾಗಿರುತಿಹುದು (ಕುರಾಸಾಂ. ೨-೬೨); ಉಕ್ಕುವುದು ತೊಱೆ, ಉಕ್ಕುಂದೊಱೆ (ಶಬ್ದಾನು. ೩೩೩ ಪ್ರಯೋ). **ಉಕ್ಕುರ್ದೊಱೆ**: ತಳ್ಪಂಕಿಸದುಕ್ಕುರ್ದೊಱೆಯೊಳು ಮೇರೆಯನುಲ್ಲಂಘಿಪ ಕಾಯ್ಪುಕಡಲಂತೆ (ಸೊಬಸೋ. ೧೩-೧೪).

[ಉಕ್ಕುರ್ಪ್₁ + ತೊಱೆ₂]

**ಉಕ್ಕುರ್ಗಾಳೆಗ** (ನಾ). ಪರಾಕ್ರಮದಿಂದ ಮಾಡುವ ಯುದ್ಧ. —ಕಾಳಗ: ರತ್ನಕಂಬಳದ ಉಕ್ಕುರ್ಗಾಳೆಗದ ಜಟ್ಟಿಗರು, ವಾದಿಗಳು (ಬಿಟ್ಟಅ. ೩೨-೮). [ಉಕ್ಕುರ್ಪ್₃ + ಕಾಳೆಗ]

**ಉಕ್ಕುರ್ಗಿಡು** (ಕ್ರಿ). ಧೈರ್ಯಗುಂದು; ಉತ್ಸಾಹಹೀನನಾಗು: ಪಾವಕನುಕ್ಕುರ್ಗೆಟ್ಟಿದೆಂತುವೊ ತೊದಳಾಯ್ತು ಪಾನಮೆನೆ ಮಾರುತ ಬಾಣದೆ ಮೇಘಮಾಲಿಕಾನಿವಹಮನೆಚ್ಚು (ಪಂಪಭಾ. ೫-೯೬); ಬಗೆಯೆ ನಿಜದೇಹದನ್ನರ್ ಖಗನಾಯಕರೆಱೆದೊಡುಕ್ಕುರ್ಗೆಟ್ಟನೆ ಮುನ್ನಿಂ ಮಿಗೆ ಕಡುಗೂರ್ಪಂ ತಳೆದಂ (ವರ್ಧಪು. ೮-೫೬); ಪಿಂಗಿದ ನೀಜರ ಬಲ್ಪು ಪಾಱೆ ಪಾದರಿಗರ ನಾಣ್ಗಳುಕ್ಕುರ್ಗಿಡೆ ಬಲ್ಮುಳಿಸಿಂದಂ ಅಗಲ್ಕೆವೆತ್ತ ನಲ್ಲರ ಬಗೆ ಬಳ್ಕೆ ಜೇವೊಡೆಯ ಬಲ್ಲುಲಿ ನೀಳ್ಪುದು ಕರ್ಪುವಿಲ್ಲನಾ (ಕಬ್ಬಿಕಾ. ೩೦೦). [ಉಕ್ಕುರ್ಪ್₃ + ಕಿಡು (< ಕೆಡು)]

**ಉಕ್ಕುರ್ಡಿ₁** (ಕ್ರಿ). ಗರ್ವ ಅಡಗು; ಹೆಮ್ಮೆ, ಸೊಕ್ಕು ಮುರಿ. 'ಉಕ್ಕುರ್ಡಿಸು' ಪರಾ. [ಉಕ್ಕುರ್ಪ್₃ + ಉಡಿ₁]

**ಉಕ್ಕುರ್ಡಿ₂** (ನಾ). ೧. ಗರ್ವವನ್ನು ಮುರಿಯುವುದು; "ಗರ್ವಭಂಗ" (ಶಾಪಮಂ. ಕೋಶ); ಅರಿಯಂಗುಕ್ಕುರ್ಡಿ ಬಲ್ಲಿದಂಗೆ ಘಟಸರ್ಪಂ ಗಂಡುದೋರ್ಪಂಗೆ ಮಾರಿ (ಎಕ. VII, ಶಿಕಾರಿ. ೧೫೧-೪೨; 1047); ಕಿಡಿಗಳ್ ಜಾತಿ ಜರಾದಿಗಳ್ಗೆ ದುರಘವ್ರಾತಾದಿಗಳ್ಗಳ್ಕದುಕ್ಕುರ್ಡಿಗಳ್ ಪುಣ್ಯದ ಬೀಡು ಬಿಟ್ಟ ಗುಡಿಗಳ್ . . . ಗುಣಭದ್ರ ದೇವರಡಿಗಳ್ (ಕಾವ್ಯಾವ. ೮೯). ೨. (ಆಲಂ) ಪರಾಕ್ರಮಶಾಲಿ: ಅಡ್ಡಣಮಡ್ಡಮಾಗೆ ಮೂದಲಿಸಿ ಪೊಡರ್ಪು ಪೆರ್ಚಿ ಕೆಲರುಕ್ಕುರ್ಡಿಗಳ್ ತಱಿಸಂದು ಕಾದಿದರ್ (ಕಬ್ಬಿಕಾ. ೨೬೨). 'ಬಕ್ಕುರ್ಡಿ' ಪರಾ. [ಉಕ್ಕುರ್ಪ್₂ + ಉಡಿ₄]

**ಉಕ್ಕುರ್ಡಿಸು** (ಕ್ರಿ). ಗರ್ವವನ್ನು ಮುರಿ; ಗರ್ವಭಂಗಮಾಡು: ಕಣ್ಗಡೆ ಕುಡಿಮಿಂಚನುಕ್ಕುರ್ಡಿಯಲಾರ್ಪುದು ಬಾಳೆಯ ಭಾಳ ವರ್ಣಮಂ ತೊಡೆತೊಡೆದಪ್ಪುದು (ರಾಜಶೇ. ೭-೬೧). [ಉಕ್ಕುರ್ಡಿ₂ + -ಇಸು₃]

**ಉಕ್ಕುರ್ಡುಗು** (ಕ್ರಿ). ಉಬ್ಬುವಿಕೆ ಕಡಮೆಯಾಗು: ಉಕ್ಕುರ್ಡುಗಲ್ ಕುಮುದಂಗಳ್ ಸೊರ್ಕೊಗೆಯಲ್ ಕಮಳ... ಅರ್ಕನುದಯಿಸುವಾಗಳ್ (ಗಿಂಕ. ೮-೬). [ಉಕ್ಕುರ್ಪ್₃ + ಉಡುಗು₁]

**ಉಕ್ಕುರ್ದೊಱೆ** 'ಉಕ್ಕುರ್ಂದೊಱೆ' ನೋ.

**ಉಕ್ಕೆವ** 'ಉಕ್ಕೆವ₁' ನೋ.

**ಉಗರ್ಗಾವುಂಡು** 'ಊಗಾರ್ಗಾಮುಂಡು' ನೋ.

**ಉಗರ್ಗಾವುಂಡುಗೆಯ್** 'ಊಗಾರ್ಗಾಮುಂಡುಗೆಯ್' ನೋ.

**ಉಗ್ಗಿವಳದೆಣ್ಣೆ** (ನಾ). ಉರಿ ಸುತ್ತಿಕೊಂಡಿರುವ ಎಣ್ಣೆ; ಉರಿಯುತ್ತಿರುವ ಎಣ್ಣೆ: "ಉಗ್ಗಿವಳದೆಣ್ಣೆ [ಪಾಠಾಂ. ಉಗ್ಗಿವಳದೆಣ್ಣೆ, ಉಗ್ಗಿವಳದೆಣ್ಣೆಯೆಂದು] = ಉರಿವೆಣ್ಣೆ" (ಶಮದ. ಪರಿ. ೨). 'ಅಗ್ಗಿವಳೆದೆಣ್ಣೆ' ಪರಾ. ℙ ಇದು ಅಗ್ಗಿವಳದೆಣ್ಣೆ ಎಂಬುದರ ಅಪಲಿಖಿತ.

[< ಅಗ್ಗಿವಳೆದೆಣ್ಣೆ]

**ಉಗುರ್₁** 'ಉಕ್ಕುರ್₁' ನೋ.

△ **ಉಗುರ್₂** (ನಾ). ತೊದಲುವಿಕೆ; ಬಿಕ್ಕುವಿಕೆ. 'ಉಗುರ್ಗೊಳ್' ಪರಾ. [< ಉಗ್ಗು₃]

**ಉಗುರ್ಗೊಳ್** (ಕ್ರಿ). ತೊದಲುಂಟಾಗು; ಉಗ್ಗನ್ನು ಹೊಂದು: ಅಗ್ರಹಿಸಿ ತರ್ಕಶಾಸ್ತ್ರ ಸಮುಗ್ರತೆಯಂ ತೋರ್ಪುದಿಲ್ಲಿ ನೀಮೆನೆ ಕುಳಿಕಾಹಿಗ್ರಸ್ತರಂತೆ ನುಡಿವುದವಗ್ರಹಮೆಂದುಗುರ್ಗೊಂಡರಂತೆ ನಿತಾಂತಂ (ಸುಕುಮಾ. ೧-೧೯). [ಉಗುರ್₂ + ಕೊಳ್₁]

△ **ಉಚ್ಚಾಟಿಸು** 'ಉಚ್ಚಾಟಿಸು' ನೋ.

**ಉಚ್ಚಿಸು**, ಉಚ್ಚಿಸು (ಕ್ರಿ). ೧. ಭೇದಿಸು; ಸೀಳು: ಲೀಲೆಯೊಳೆ ಪಿಡಿದು ನಿಲಿಪಂ ವ್ಯಾಳೀಭಮನೊಂದು ಪೊಯ್ಲಿನಿಂದಮೆ ಕಡಿವಂ ತಾಳಂಗಳನುಚ್ಚಿಸುವಂ ಶೈಲಶಿಲಾತಳಮನೆಳವೆಯೊಳ್ ನೃಪತನಯಂ (ಕಾದಂಪೂ. ೪೩೪). **ಉಚ್ಚಿಸು**: ೧. ಕಚ್ಚಿಪರು ಫಣಿಗಳಲಿ ಕ್ರಿಮಿಗಳೊಳುಚ್ಚಿಪರು ಸರ್ವಾಂಗವನು ಮನದಿಚ್ಛೆ ಬಂದಂತೊಡಿಪರು ನಗ್ನದೊಳು ಕೈವೊಯ್ದು (ಉತ್ತರಾ. ೭-೧೬). ೨. ಸಡಿಲವಾಗುವಂತೆ ಮಾಡು; ಕಳಚು (ಕಿ). [ಉಚ್ಚುರ್ + -ಇಸು₃]

**ಉಚ್ಚುರ್**, ಉಚ್ಚು₁, ಉಬ್ಬು (ಕ್ರಿ). ೧. ಹಿರಿ; ಹೊರಕ್ಕೆ ತೆಗೆ; ಕೀಳು; ಸೆಳೆ: "ಉಚ್ಚುರ್ - ಆಕರ್ಷಣೇ, ಮಲಭೇದನೇ ಚ" (ಶಮಧಾ); ಅರ್ಥರಾಶಿಯುಂ ಪಡೆವವರೆಲ್ಲಮೋಗಡಿಸದೀವೊಡಮಾಜಿಯೊಳುಚ್ಚಿ ಕೈದುವಂ ಪಿಡಿವವರೆಲ್ಲಮುಣ್ಮುವೊಡಂ (ಕಾವ್ಯಸಾ. ೪೨೩ ಶೂದ್ರಕ); ಕೌರವರ್ಕಳನುಂತಿನ್ನೆಗಮುಚ್ಚಿ ಮುಕ್ಕದೆ ಸಡಿಲ್ದೇ ಭೀಮನೇಂ ಮಾಣ್ಣುಮೇ (ಪಂಪಭಾ. ೭-೧೪); ವಿಯೋಗಿಗಣಕ್ಕುಚ್ಚುರ್ವ ಮೇಘಮನ್ಮಥನ ತೂಣೀರೋದ್ಗತ ಜ್ವಾಲೆಯಂಬುಗಳೋ (ಕುಸುಮಾ. ೬-೧೫); ಬರಲಿ ಬರಲಿವನಸುವನುಚ್ಚುರ್ವೆ [ಪಾಠಾಂ. ಉಚ್ಚುವೆ] (ತೊರರಾ. ೬-೨೧-೪೦).

೨. ಚುಚ್ಚು; ತಿವಿ ; ಇರಿ : ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮನುೞಿಯನೂಱಿ ಕೊಡಂತಿಯೊಳ್ ಬಿಟ್ಟದಂತತ್ತಮಿತ್ತಮುರ್ಚಿಪೋಗೆ (ಪಂಪಭಾ. ೧–೧೦೪ ವ) ; ಉಡಿದಿರ್ದ ಕಯ್ದು ನೆತ್ತರ ಕಡಲೊಳಗಡಿಗಡಿಗೆ ತಳಮನುರ್ಚುತ್ತಿರೆ (ಗದಾಯು. ೪–೧೪) ; ಕೇದಗೆಗೆ ಪಾಯ್ದು ಪತ್ತಿದ ಕೆಯ್ಯುಂ ಮುಳ್ಳುರ್ಚಿ ತೆಱೆದು (ಕಾವ್ಯಾವ. ೮೧೩) ; ಉರವೊಡೆದು ಸರಳುರ್ಚಿ ನರಳುತ್ತ (ಹಚಕಾ. ೬–೩೦). ೩. ಚುಚ್ಚಲ್ಪಡು ; ತಿವಿಯಲ್ಪಡು : ಬಲ್ಪೆಣನುರ್ಚಿ ಕೋಡೊೞೆರೆ ನೆತ್ತರುರೋಮಣಿಯಿಂ ನೆಲಕ್ಕೆ ಬಾನಲ್ವರಿವನ್ನೆಗಂ . . . ಬಂಬಲ್ವರಿಯುತ್ತುಮಿರ್ದುದು (ಕಾವ್ಯಾವ. ೬೮). ೪. ಜಾರಿಬೀಳು; ಕಳಚಿಹೋಗು; ಉದುರು: ಕಯ್ಯಿಂದಮುರ್ಚುವ ಕಂಕಣಂಗಳಂ ತುಡಿಸುತ್ತುಂ (ಕಾದಂಉ. ೨೦೨) ; ಚರಣತಳಕ್ಕೆ ಬೀೞ್ವ ಮಣಿಕಾಂಚಿಯನೆತ್ತದೆಯುರ್ಚುತಿರ್ಪ ನೂಪುರಮನೆ ಸೈತು ಸಾರ್ಚದೆ (ಶಾಂತೀಶ್ವ.೩–೨೯); ಕದ್ದೈಸದೆ ನೋಡು ಸ್ಮರನ ಬಾಯೊಳಗುರ್ಚಿಬಿದ್ದಂತೆ (ಮೋಹತ. ೩೦–೩೨). ೫. ರಭಸದಿಂದ ನುಗ್ಗು ; ಭೇದಿಸಿಕೊಂಡು ಹೊರಬರು; ಸೀಳಿಕೊಂಡು ಬರು : ಬಾಳ ದಿನೇಶಬಿಂಬದ ಸೆಱಲ್ ಜಲದೊಳ್ ನೆಲಸಿತ್ತೊ ಮೇಣ್ ಫಣೀಂದ್ರಾಲಯದಿಂದಮುರ್ಚಿದ ಫಣಾಮಣಿ ಮಂಗಳ ರಶ್ಮಿಯೋ (ಪಂಪಭಾ. ೧–೯೬); ಮಿಱುಪಿಡೆ ಮ್ರಿತ್ಯು ಕಡಂಗಿದೊಡಾರ್ದು ಭೈರವಂ ಕೆರಳ್ದಡೆ ಸಿಂಹವುರ್ಚಿದಡೆ ಪೆಬ್ಬುಲಿ(ಎಕ. XI, ಚಿತ್ರದು. ೧೩–೧೮; 1124); ತುಂಗಸ್ತನಯುಗ್ಮಂ ತೂಗೆ ಸೂತ್ಕಾರದಿನುಸಿರ್ವಿಡುತುಂ ಲೋಳೆವಾಯುರ್ಚಿಯೊರ್ವಳ್ ತೊನೆಯುತ್ತುಂ ಪಾಡಿ ಪಾಲಂ ಪೊಸೆದಳ್ (ಲೀಲಾವ. ೫–೧೨೮). ೬. ಸುಡು; ದಹಿಸು : ಕಡುವಿಸಿಲುರ್ಚೆ ಕೋಮಲಲತಾತನು ಬಂಬಲ ಬಾಡೆ (ಪಂಶಾಮಾ. ೭–೧೦೩). ೭. ಹೊರಕ್ಕೆ ಚಾಚು, —ನೀಡು: ಬೇಸಗೆಯ ಕೋಣನಂತೆ ನಾಲಗೆಯನುರ್ಚಿ (ಧರ್ಮಾಮೃ. ೧–೧೬೮) ; ನರಡಾದೆತ್ತಿನಂತೆ ನಾಲಗೆಯನುರ್ಚುವ (ಧರ್ಮಾಮೃ. ೩–೨೦೬). ೮. ಮಲವಿಸರ್ಜನೆಯಾಗು; ಭೇದಿಯಾಗು: "ಉರ್ಚು – ಆಕರ್ಷಣೇ, ಮಲಭೇದನೇ ಚ" (ಶಮಧಾ) ; ತವೆ ಕಿಱುಕುಸಾಲೆ ನಿಜಸ್ಕಂಧವ ಬಿಲ್ವಂ ಲೊಕ್ಕಿಯಾಲಮೊಟ್ಟೊಟ್ಟೆ ಸರೋಜವಸಲೆ ಬಸಿರಿಯ(ಯಾ)ವರೆಯೆಂಬಿವು ಮಾಣಿಸುಗಿರದೆ ಪಸುಗೆ ಬಸಿಱುರ್ಚುವುದಂ (ಲೋಕೋಪ. ೯–೨೦೩). ೯. [ಗಣಿತ] ಭಾಗಿಸು ; ಭಾಗಾಹಾರ ಮಾಡು : ಪಸು, ಪಸಲು, ಭಾಗಂಗೊಳು, ಸೆಳೆ, ಉರ್ಚಿಂ[ಪಾಠಾಂ. ಚಿಂ]ದುಂ, ಇಂತಿನಿತುಂ ಭಾಗಂಗೊಂಬುದಕ್ಕೆ ಪೆಸರು (ವ್ಯವಹಾ.೧೨) ; ಪದಿನಾಱುಂ ತಾಣದೊಳ್ ಪುಟ್ಟುವ ಗಣತತಿಯಂ ತನ್ಮೊಳೊಂದೊಂದನಾಹ್ಲಾದದಿನುರ್ಚಲ್ಕಲ್ಲಿ ಕಂಡಾ ಗಣದ ಕೆಳಗೆ (ಛಂದೋಂಬು. ೬–೧೧).

**ಉಚ್ಚು**[1]: ೧. ಮುಂಜೂರ ಹುಲ್ಲನುಚ್ಚುತ್ತೆ ಶಿವಧೋಯಿಡುತೆ (ತಿರುರ. ೨೭–೨೫) ; ಉಚ್ಚಿದಾಯುಧದಿಂದಲಿರ್ವರಂ ತಿವಿಯೆ (ಚಬಪು. ೬೩–೧೪). ೨. ಪೊಳಪಿಂದಂ ಚಲ್ಲೆಗಣ್ ಕಾಮನ ಕುಸುಮಶರಾನೀಕಮಂ ಪೋಲ್ವ ಭೂಪಾವಳಿಯಂ ಕಯ್ಗಾಯದುಚ್ಚುತ್ತಿರೆ ವಿಟಜನಮುಂ ಸತ್ಕಟಾಕ್ಷಂಗಳಿಂದೆ (ಧರ್ಮಾಮೃ. ೧೩–೧೭) ; ಬೀಜದಡಿಯೊಳ್ ಬೇರುಚ್ಚಿ ನಿಲ್ವುಧುಮಂ ಬಗೆ ಮೊಳೆ ಪೊಱಮಟ್ಟು ಪೆಚ್ಚಿ ಫಲಮಪ್ಪುದುಮಂ ಕಾಣಲಪ್ಪಂತೆ (ಬಂಹರಿ. ೧೦–೧೦ ವ) ; ಪೆಚ್ಚಿರ್ದ ದ್ರೌಪದಿ ಸುಭದ್ರೆಗಂ ಹರುಷರಸವುಚ್ಚಿದುದು (ತುರಂಗ. ೮೦–೩೩). ೪. ತಲೆಯ ನವಿರುಚ್ಚುತಿರೆ ತಾರೆಗಳ್ (ಕಲ್ಯಾಕಾ. ೨–೧) ; ಆಕಾಶದಿಂದುಚ್ಚಿದುವು ತಾರೆಗಳ್ (ಚಬಪು. ೩೨–೨೩) ; ಹೊಲಿದ ದಾರ ಹರಿದು ಓಲೆಗಳು ಉಚ್ಚುವುವು (ಮುಂಬಯಿ. ೨–೭) ; ಗೋವರ್ಧನನ ಬಾಯಿಂದ ಫಕ್ಕನೆ ಮಾತು ಉಚ್ಚಿತು (ಮುಗಿಮ. ೧೦೫). ೮. ಸಣ್ಣವರ ಜ್ವರ, ಕೆಮ್ಮು, ಉಚ್ಚುವುದಕ್ಕೆ, ಓಕರಿಕೆಗೆ :– ಕರ್ಕಾಟಕಶೃಂಗಿ, ಹಿಪ್ಪಲಿ, ಅತಿಬಜೆ, ಭದ್ರಮುಸ್ತೆ, ಇವಂ ತೇದು ಮೊಲೆಹಾಲಲ್ಲಿ ಜೇನುತುಪ್ಪದಲ್ಲಿ ಕುಡಿಸೆ ಜ್ವರ, ಅತಿಸಾರ . . . ಮಾಣ್ಗುಂ (ವಿವೈವಿ. ೧೦೯) ; ಇದ್ದಕ್ಕಿದ್ದಹಾಗೆ ದನಗಳು ಉಚ್ಚಿಕೆಕೊಂಡರೆ (ಹುಟ್ಟಹ. ೧೧). ೧೦. ಕಳಚು ; ಸಡಿಲವಾಗು : ಯುದ್ಧದುಳ್ ಉಱಕೀಲಿ[ಲು]ಚ್ಚಿದವಂಬುವಾಳ್ಪಲಗೆಯುಳ್ತಟ್ಟು (ಶಾಇ. IX–i, ೩೯೨–೩ ; 8ನೆಯ ಶತ). ೧೧. ಸಡಿಲಿಸು ; ಬಿಚ್ಚು ; ತೆಗೆ : ಆ ಏರಿಯೊಳಗೆ ಒಂಬತ್ತು ತೂಬನುಚ್ಚಿದರೆ ಆಕಾಶವೆಲ್ಲವೂ ಜಲಮಯವಾಯಿತ್ತು (ಅವಚಂ. ೧೦೯–೪೯೪).

△ **ಉಚ್ಚು** : ೧. ಅಜ್ಗರ ಸಿಜ್ಗ ಪೆಣ್ಣಕ್ಕಿಱುಮಂಕ್ಕಾಳಾ ಉದುಗುಱಿಯನುಚ್ಚಿಕೊಳ್ವ ಪ್ರಿಯ × × × ಪಲರುಮಂ ಕೊನ್ದು (ಎಕ. VIII, ಸೊರಬ. ೨೨–೩ ; 800) ; ಮಾಗರಯ್ಯಂ ಪಣ್ಣೆ ಪೆಣ್ಡಿರನುಡೆಯನುಚ್ಚಲುಮೆೞ್ತನ ತುಱುಗೊಳೊಳುಮುೞ್ಚಿ ಸತ್ತನ್ (ಎಕ. X, ಮುಳಬಾ. ೧೬೧–೨ ; 950) ; ಚುಚ್ಚಿದ ತೆಱದಿಂ ಪುಸಿಗಳನುಚ್ಚು ವನಿವನೆಂದು ಕಾಯ್ದು ಕರ್ಬುನದಿಂದಂ ಚುಚ್ಚಿ ಪೆಡತಲೆಯ ತೂಂತಿಂದುಚ್ಚಿ [ಪಾಠಾಂ. ಳ್ಚಿ]ವರಿಕ್ಕುಱಿಸಿ ನಾರಕರ್ ನಾಲಗೆಯಂ (ಸುಕುಮಾ. ೧೧–೪೪).

**ಉರ್ಚವೇೞ್** = ಭೇದಿಸುವಂತೆ ಹೇಳು ; ಸುಲಿಯುವಂತೆ ಹೇಳು : ತುಱುವಂ ಕಳಿಸುವ ಕೃಷ್ಣಯ ನಿಱಿಯಂ ಪಿಡಿದುರ್ಚವೇೞ್ವ ಕೊಳನಂ ಪಿಂದುಂ ಪೆಱಗಾಗಿ ಪುಗುವ ದುರ್ನಯಮುಱಿಪವೆ ಕೌರವನ ರಾಜ್ಯದಾಯುವ ಕೇಡಂ (ಗದಾಯು. ೬–೧೦). **ಉರ್ಚಿಕೊಳ್** = (ಒರೆ ಅಥವಾ ಬತ್ತಳಿಕೆಯಿಂದ) ಸೆಳೆದುಕೊ ; ಕೀಳು : ತನಗೆ ವಿನಾಯಕಂ ದಯೆಯಿನಿತ್ತ ಜಯಾಸ್ತ್ರಮನುರ್ಚಿಕೊಂಡು (ಪಂಪಭಾ. ೧೨–೧೬೮) ; ನಿಶಿತಾಸ್ತ್ರಂಗಳನೊಱೆಯಿಂದುರ್ಚಿಕೊಂಡು (ಧರ್ಮಾಮೃ. ೭–೧೦೫) ; ಅಸುವಂ ಕಳೆಯದಿರ್ಪ ಕಡುಗಳ್ಪರನೇಂ ಪಿಡಿದುರ್ಚಿಕೊಂಡರೋ (ಅರ್ಧನೇ. ೫–೨೯). **ಉರ್ಚಿತಿನ್** = ಕಿತ್ತು ತಿನ್ನು : ಗಜಮಾಂಸವನುರ್ಚಿ ತಿಂದು ಕೂಗಿಡುವ ಮರುಳ್ (ಎಕ. VIII, ಸೊರಬ. ೧೮೪–೧೦ ; 1033). **ಉರ್ಚಿಪಾಯ್** = ೧. ರಭಸದಿಂದ ನುಗ್ಗು ; ಭೇದಿಸಿ ನುಗ್ಗು : ಭುಗಭುಗನುರ್ಚಿಪಾಯ್ವಬಿಸುನೆತ್ತರ ಸುಟ್ಟುರೆಯಂ (ಪಂಪಭಾ. ೧೦–೮೦). ೨. ಮೇಲಕ್ಕೆ ಚಿಮ್ಮು : ಮೊಲೆವಾಲಾದಂ [ತಾನೆತ್ತಲುಂ] ತೊರೆದುರ್ಚಿಪಾಯ್ವೆನೆಗಮಿರದೆಳ್ತಂದಳ್ ಸೋತ್ಕಂಠ ಪುತ್ರವಿಮೋಹದಿಂ (ಕಾದಂಉ. ೬೭೩). **ಉರ್ಚಿಪೋಗು** = ೧. ಬಸಿ ; ಸುರಿ ; ಮೀರೆವರಿ : ದೊರೆವಡೆದಿರ್ದುದಿರ್ವರ ಮನೋರಥಮುಗ್ಗಳಮುರ್ಚಿಪೋದುದಿರ್ವರ ಮನದಟ್ಟಱಚ್ಚುಡಿದುದಿರ್ವರ . . . ಮಚ್ಚು (ಶಾಂತಿಪು. ೧–೭೯). ೨. ನುಗ್ಗಿಹೋಗು ; ಭೇದಿಸಿಕೊಂಡು ಹೋಗು : ಅಚ್ಚಿನ್ನ ಶಿಳಾಭಿಧಾನ ಗುಹಾಭ್ಯಂತರದಿನುರ್ಚಿಪೋಗಿ (ನೇಮಿಪು. ೪–೯೬ ವ) ; ಪಿರಿದೆನ್ನಂಗದೊಳಾದ ಪುಣ್ಗಳ ಗುಹಾದ್ವಾರಂಗಳೊಳ್ ಪೊಕ್ಕು ಪುಲ್ಮರುಳೆತ್ತಂ ನುಸುಳ್ದುರ್ಚಿಪೋಪಿನೆಗಮೊಂದಾಟೋಪದಿಂ ಕಾದುವೆಂ (ಜಗವಿ. ೧೭–೮೬). **ಉರ್ಚಿಬರ್** = **ಉರ್ಚಿಪಾಯ್** : ಪರಿವ ಪೊಡರ್ಪುಗೆಟ್ಟು ರವಿ ಘುಂದಿರೆ ಲಜ್ಜಿಸಿ ಕಣ್ಣ ಬೆಳ್ಪುಗಳ್ ಕರಮೊಳಗುರ್ಚಿಬಂದು . . . ಪುಟ್ಟಿಸುತಿರ್ದುದು (ಧರ್ಮಾಮೃ. ೭–೨೧೩). **ಉರ್ಚಿಬೀೞ್** = ಕಳಚಿ ಬೀಳು ; ಜಾರಿಬೀಳು : ಗರ್ಭದ ಕೂಸುಗಳುರ್ಚಿಬೀಳ್ವಂತೆ ಮುಗಿದುವು ಮಿಳ್ತುಗಳೆನಿಸೆ (ಮೋಹತ. ೧೯–೧೯) ; ಹಲಸಿನ ಬೀಜ ಉರ್ಚಿ ಬಿತ್ತು (ರೂಢಿ). **ಉರ್ಚಿಮುಕ್ಕು** = **ಉರ್ಚಿತಿನ್** : ತಕ್ಕಿನಭಿಮನ್ಯುವ ಕೂರ್ಗಣೆ ಪಾಯ್ದು ನುಂಗಲುಂ ಟೊಣೆಯಲುಮುರ್ಚಿಮುಕ್ಕಲುಂ (ಪಂಪಭಾ. ೧೧–೯೪) ; ಬಱಿದೆ ತಿರುಗಿದೊಡೆ ಮುೞಿಯಂ ಕಱಿಯದೆ ವಕ್ರಿಸಿದೊಡುರ್ಚಿಮುಕ್ಕುವೆನೆಂದಳ್ಪಱಿಸಿ (ಅನಂಪು. ೧೩–೯). **ಉರ್ಚೇೞ್** = ಮೇಲಕ್ಕೆ ನೆಗೆ, —ಚಿಮ್ಮು : ಬಿಟ್ಟ ಭರದಿಂದೆ ವಾರಿಯೆರಟ್ಟಿಸೆಗಂ ಪಚ್ಚು ಸೂಸೆ ಕೊಳದೊಳಗೆ ಬಯಲ್ [illegible] ತದ್ರಭಸಕ್ಕುರ್ಚೆೞ್ದು ಕಡಂಗಿದುವು ಜಳಚರಪ್ರಕರಂಗಳ್ (ಚಂದ್ರಪು. ೫–೪೩).

[ದೇ. ॥ ತಮಿ. ಉರಿ ; ಮಲ. ಉರಿ]

**△ಉಜುರ್ಗ** (ನಾ). ಪ್ರಯತ್ನ; ಉದ್ಯೋಗ; ಕಾರ್ಯ; ಕೆಲಸ: ಜರ್ಜಿಪ ಭೂಷಣವನಿತ್ತೀಗ ಬಹ ಸಮರಕುಜುರ್ಗಂಗೊಳಿರೆಂದು ಬೀಳ್ಕೊಟ್ಟ (ಜಿನಮು. ೧೬–೨೨). 'ಉಜ್ಜುಗ' ಪರಾ. [< ಉಜ್ಜುಗ]

**ಉಜುರ್ಗಂಗೊಳ್** (ಕ್ರಿ). ಪ್ರಯತ್ನಿಸು; ಉದ್ಯೋಗಿಸು: ಜರ್ಝರಿಸಲಗ್ನಿಪ್ರವೇಶಕಿಳಿಯಾಜ್ಞೆ ಧೃತಿಗುಜುರ್ಗಂಗೊಳಲು ಸೀತಾ ಮೈದುನಾತ್ಮಜರು (ಜಿನಮು. ೪೦–೧೫). [ಉಜುರ್ಗ + ಕೊಳ್$_1$]

**ಉಜುರ್ಗಿಸು** 'ಉಜ್ಜುಗಿಸು' ನೋ.

**ಉದರ್ಂ** 'ಉದ್ದಂ' ನೋ.

**ಉರ್ದಿಡು** (ಕ್ರಿ). ಉಜ್ಜಿಹಾಕು; ಒರಸಿಹಾಕು: ಅರ್ಪಿನುಂ ಕಾಪಿನುಂ ಪತ್ತಿ ನೆಲನೆಲ್ಲಮನೆತ್ತಿದಂ ಸ್ಪಷ್ಟದಂಡದಿನುರ್ದಿಟ್ಟನಿರುಳ್ ತೊಂದರೆಗಾರರಂ (ಸೌನಂದ. ೨–೨೮). [ಉರ್ದು$_1$ + ಇಡು$_1$]

**ಉರ್ದಿಸು**, ಉಜ್ಜಿಸು (ಕ್ರಿ). ತಿಕ್ಕಿಸು; ತೇಯಿಸು: ಕೈಸಾಣೆಗಳಿಂದಂ ನಾಲ್ಕುಂ ದಾಡೆಗಳನುರ್ದಿಸಿ ಕಳೆದು ಮಟ್ಟಂ ಮಾಡಿದೊಂ (ವಡ್ಡಾರಾ. ೧೬೫–೧೪); ಅಗುರುಮಂ ಕುಂಕುಮವನರೆಯಿಸುತೆ . . . ಸಾದಿನಂ ಪೊಗೆಯ ಗಂಧವನುರ್ದಿಸುತೆ ಪೂವ ಪೊರೆಯಿಸುತೆ ಬಗೆಗಾರ್ತಿಯೊರ್ವಳೆಸೆದಳ್ (ಪದ್ಮರಾ. ೮–೮೯). **ಉಜ್ಜಿಸು**: ಪಾತ್ರೆಗಳನ್ನು ಚೆನ್ನಾಗಿ ಉಜ್ಜಿಸಬೇಕು (ರೂಢಿ). [ಉರ್ದು$_1$ + -ಇಸು$_3$]

**ಉರ್ದು$_1$**, ಉಜ್ಜು, ಉದ್ದು$_1$ (ಕ್ರಿ). **೧.** ಒರಸು; ತಿಕ್ಕು; ತೇಯು: "ಉರ್ದು – ಸಂನಿಘೃಷ್ಟೇ (ಉಜ್ಜು) ಮಾಷೇ ಚ (ಉದ್ದು)" (ಶಮಧಾ); ಪೊರಳೆ ವಾರಿಧಿಗಳ್ ಕಲಂಕಿದುವು[ರ್ದೆ ಮೆ] [ಪಾಠಾಂ. ದ್ದಮ, ದ್ಧಮ]ಯ್ಕನುದಗ್ರಮಂದರಮದಂದಲುಗಿತ್ತು (ಪಂಪಭಾ. ೮–೧೫); ಕೆಲರಂ ಗುರ್ದಿಯುಮುರ್ದಿಯುಂ ತಿರುಪಿಯುಂ ತೇದುಂ ಭುಜಾದಂಡದಿಂ (ಗದಾಯು. ೩–೧೨); ಮಡಕೆಯನುರ್ದಿ ಕರ್ಚಿ ಸಹಕಾರದ ಪಕ್ವಫಲಂಗಳಿಂದಪಂ ತೊಡೆದರೆಕಾದ ಪಾಲನೆಱೆದಂದು ಮೊಸರ್ ಸಹಕಾರ ಗಂಧಮಂ ಪಡೆಗುಂ (ಲೋಕೋಪ. ೮–೪೮). **೨.** ಉಜ್ಜಿ ಹರೆಯನ್ನು ಬಾಜಿಸು: ಉದ್ದು [ಪಾಠಾಂ. ಊದು]ವಱುಂಚೆಯ ರವಮುಂ ಬಾರಿಪ ಜಿಂಕರಮುಂ (ಅರ್ಧನೇ. ೮–೭೫ ವ); ಱುಂಚೆಯುರ್ದಿ ಬಾಜಿಸಿ ಪಾಡುತ್ತಿರೆ (ಬಂಹರಿ. ೧೪–೨೬ ವ); ಅನಿತಱೊಳಾ ವಾದ್ಯ ವಿದ್ಯಾಧಿಕರ್ ಮರ್ದಳಮನುರ್ದಿ (ಚಕವಿ. ೬–೧೫೧ ವ). **ಉಜ್ಜು**: **೧.** ಆತ್ಮತತ್ತ್ವವ ಮುಟ್ಟೆ ಬರೆದಿದ್ದ ಲಿಪಿಗಳನಾತ್ಮನೊಳರ್ತಿವಟ್ಟರಿಸಿ ಆತ್ಮತತ್ತ್ವಕೆ ಹೊಱಗಾದೊಂದು ಲಿಪಿಯ ಮಹಾತ್ಮನುಜ್ಜೆಂದು ತೋಱಿದನು (ಭರಚ. ೩೬–೮೬). **ಉದ್ದು$_1$**: **೧.** ಭವದ ಬೇರಂ ಹಱಿಯಲುದ್ದುವಂದದಿಂ . . . ಭವನಾಲಯದ ಹುಲ್ಲನುದ್ದತೊಡಗಿದನಂದು (ವಾಗೀರ. ೬೯–೫); ವೀರ ಪೋಗಿ ಬಿದ್ದನು ಜಂಬೂದ್ವೀಪದೊಳಗೆ ಗಱಿಯುದ್ದಿದ ಪಕ್ಕಿಯಂದದಲಿ (ಅಂಜಚ. ೧೩–೨೧೯); ಚಂದ್ರಮಂಡಳದ ಕಳಂಕವನುದ್ದುವಂತೆ ಲೋಹಚಕ್ರದಿಂ ಹಳೆಯ ಬೋಹಣಮನುದ್ದಿ (ಧರ್ಮಪ. ೨–೨೩ ವ); ಮರ ಸಹಿತ ಹಿಡಿದುದ್ದಿ ನೆಲದೊಳಗೊರಸಿ ಕೊಂದನು ಕಲಿ ಹಿಡಿಂಬಕನ (ಕುವ್ಯಾಆ. ೧೦–೨೦). **೩.** ಮರ್ದನ ಮಾಡು; ಅಳಿಸು: ರುಧಿರದ ಕಡಲೊಳದ್ದಿದನುದ್ದಿದನು ಮಾರ್ಬಲದ ಗರ್ವಿತರ (ಕುವ್ಯಾಕ. ೨–೪೫); ಕುರುಕುಲವನುದ್ದುವೆನು (ತುರಂಗ. ೨೫–೯).

[ದೇ. ‖ ತಮಿ. ಉರೈ; ಮಲ. ಉರಸು; ಕೊಡ. ಒಜ್ರ್, ಉಜ್; ತುಳು. ಉರೆಸು; ತೆಲು. ಒರಯು]

**ಉರ್ದು$_2$**, 'ಉಬ್ಬು' ನೋ.

**ಉರ್ದು$_3$** (ನಾ). ಉಜ್ಜುವಿಕೆ; ತಿಕ್ಕುವಿಕೆ: ಕೋಪಾನಳನಿಂ . . . ಕಾಲುರ್ದಿಂಗೆ ಪೊರಳ್ದು ಭ್ರಮರಿ ಮೊದಲಾಗೊಡೆಯ ಕರಚಾರಂಗಳೊಳು (ಬಂಹರಿ. ೨–೫೦ ವ). [< ಉರ್ದು$_1$]

**ಉಪ್ರ್ವಳ್ಳಿ** (ನಾ). ಒಂದು ಊರಿನ ಹೆಸರು: ಉಪ್ರ್ವಳ್ಳಿಯ ಚಾಮಯ್ಯನುಂ (ಎಕ. VI, ಚಿಕ್ಕಮ. ೩–೧೫ ; 899 ?); ಉಪ್ರ್ವಳ್ಳಿಯ ಬಾಸಗವುಣ್ಡನ (ಮೈಆರಿ. ೧೯೩೨, ೨೨–೭೮ ; 1012). [ಉಪ್ರ್ (< ಉಪ್ಪು$_1$) + ಪಳ್ಳಿ$_1$]

△ **ಉಪ್ರ್** 'ಉಪ್ಪು$_1$' ನೋ.

**ಉಪ್ರ್ಗಾಯ್** 'ಉಪ್ಪುಗಾಯ್' ನೋ.

**ಉಪ್ರ್ವೇಱು** (ನಾ). ಉಪ್ಪಿನ ಹೇರು (?): ತದ್ಭಂಗ ಚಿತ್ತನವಂ ಮಟ್ಟಿ ಉಲಾಯಮಾಗಿ ಜನಿಸಿರ್ದೋರಂದದಿಂದುಪ್ರ್ವೇಱನೆ ಪೊತ್ತು (ಶಾಂತೀಶ್ವ. ೫–೬೫). [ಉಪ್ರ್ (< ಉಪ್ಪು$_1$) + ಪೇಱು$_3$]

**ಉಬ್ರ್ಬಟೆ**, ಉಬ್ಬಟೆ (ನಾ). **೧.** ಅತಿಶಯ; ಹಿರಿಮೆ; ಹೆಚ್ಚಳ. **೨.** ಪರಾಕ್ರಮ; ಸಾಹಸ; ಸಾಮರ್ಥ್ಯ; ಶೌರ್ಯ. **೩.** ಹಿಂಸೆ; ಕಾಟ; ಉಪಟಳ: ಕಡುವೇಗದಿಂ ಭದ್ರಕಾಳೀಪತಿಯ ಮಱವೊಕ್ಕುದಱಿಳಸೈನ್ಯಂ ಪೇಳ್ವುದೇಂ ದನುಜರುಬ್ರ್[ಪಾಠಾಂ. ಬ್ಬ]ಟೆಯನು (ಚೆಬಪು. ೩೨–೩೯); ಇನಿತೊಂದುಬ್ರ್[ಪಾಠಾಂ. ಬ್ಬ]ಟೆಯೇ ಪುಳಿಂದ ಬಿಡು ನಿನ್ನೀ ಬಿಂಕಮಂ (ಶಬಶಂ. ೪–೬೫). **ಉಬ್ಬಟೆ**: **೧.** "ಉಬ್ಬರಂ ಉಬ್ಬಟೆ, ಅಣಿಯರಂ . . . ಪೆರ್ಚುಗೆ —ಈ ೧೯ ಅತಿಶಯಂ" (ಕಶಸಾ. ೧೨–೨೩೪); "ಉಬ್ಬಟೆಯುಬ್ಬರಮಣಿಯರ ನೆಱೆ ಮಿಂಟೆನ್ನಲತಿಶಯಾರ್ಥಂ ಧರೆಯೊಳ್" (ಕವಿಕಂ. ೧೨೦); ಈ ಕಲಿಕಾಲದೊಳ್ ವಿಷಮಕಾಲದೊಳುಬ್ಬಟೆಯಾಯ್ತು (ಎಇ. XVI, ೬೧–೨೫ ; 1081); ಉಬ್ಬಟೆಯ ಭಕ್ತಿ (ತಿರುರ. ೧೮–೮); ನಿನ್ನೆಱೆಯಂಗುಬ್ಬಟೆಯ ಬೀರಮುಂಟು (ಕಬ್ಬಿಕಾ. ೧೮೧); ಕಡುಮುಳಿಸಿನುಬ್ಬಟೆಯ ಮಾರುತಿ (ಕುವ್ಯಾಸ. ೧೬–೬೯). **೨.** "ದಪ್ಪ ಪೆಟ್ಟದಟಾಪುರ್ ಸಾಸ ಪೆರ್ಚುಬ್ಬಟೆಯುದಪ್ಪುದು" (ಶಬ್ದಮಂ. ೩೯); "ಉಬ್ಬಟೆಯೆನೆ ಶೌರ್ಯಾತಿರೇಕಂ" (ಭಾರನಿ. ೪೪); ಕುಟಿಲಾಳಾಪದೆ ಪಿಂತೆ ಕಾಟ್ಗೆಡೆದು ಮುಂತಾ ಸತ್ಯವೀಂದ್ರರ್ಕಳುಬ್ಬಟೆಯಂ ಕಂಡು ಕನಲ್ದು (ಧರ್ಮನಾ. ೧–೫೩); ಪವನಜ ಪಾರ್ಥರುಬ್ಬಟೆಯ ನಿಲಿಸುವಾಪತ್ತಿಗರು ನಮಗಿಲ್ಲ (ಕುವ್ಯಾದ್ರೋ. ೪–೭); ಸಮೀರಣನುಬ್ಬಟೆಯಿಂದೆ ವಾರಾಶಿ ಬಳೆದುವು (ಮೋಹತ. ೩೬–೫೦). **೩.** "ಉತ್ಪಾಟ, ಉಬ್ಬಟೆ" (ಶಬ್ದಾನು. ೧೬೦ ಪ್ರಯೋ); ಗರುಡನುಬ್ಬಟೆಗಹಿನಿಕರ ಜರ್ಝರಿತವಾದವೊಲು (ಕುವ್ಯಾದ್ರೋ. ೧೬–೧೨); ಮದದಂತಿಯುಬ್ಬಟೆಗೆ ಸಿಲುಕಿದ ಶಿಶುಗಳುಳಿದುದುಂಟೇ ಧರೆಯೊಳು (ಸೌಂದಪು. ೩–೪೭); ದಿವಿಜರಾ ಬ್ರಹ್ಮಾಂಡಪತಿಯಂಘ್ರಿಯಲಿ ಸೈಗೆಡೆದು . . . ದೈತೇಯರುಬ್ಬಟೆಗಳನು ಬಿನ್ನೈಸೆ (ನಿಭಾಗ. ೬–೭–೧೬). [< ಉಪ್ರ್ + -ಅಟೆ]

**ಉಬ್ರ್ಬರೆ** (ನಾ). ಭೂಮಿ; ನೆಲ: ಕಬ್ಬೆಂಬಭಿಧಾನಂ ಕಾಱ್ಗಬ್ಬಿಂಗಂ ನೆಗಟ್ಟ ಮೆಲ್ಪ ಕಬ್ಬಿಂಗಂ ಕೇಳುಬ್ರ್ಬರೆಯೊಳಕ್ಕುಂ (ಧರ್ಮಾಮೃ. ೧–೧೯೦). [< ಉರ್ವರೆ]

**ಉಬ್ರ್ಬಳಿ** (ಕ್ರಿ). ಉಬ್ಬರ ಇಳಿ: ಬಿರಿವ ಸರೋರುಹಂ ಮುಗಿವ ಕೈರವಪಂಕ್ತಿ . . . ಉಬ್ರ್ಬಳಿವ ಸಾಗರವೊಪ್ಪುದು ಸುಪ್ರಭಾತದೊಳ್ (ವೃಷವಿ. ೯–೨೪). [ಉಬುರ್$_1$ (< ಉವುರ್$_1$) + ಅಳಿ$_1$ (< ಅಱಿ$_1$)]

**ಉರ್ಬಿ** (ನಾ). ಭೂಮಂಡಲ; ನೆಲ: ಉರ್ಬ್ಬಿಯೊಳ್ ಸಕಲದೊಳೊರ್ಬ್ಬನೆ ಗಣ್ಡ ಶ್ರೀಚನ್ತಮನೆನ್ತು ಮೊಳ್ಪಿಡೆಯೆನ್ (ಎಇ. XXVI, ೨೬–೬ ; 885); ಜಯಸಿಂಹವಲ್ಲಭನನನ್ವಯರಾಜ್ಯದೊಳುರ್ಬ್ಬಿಯೊಳ್ ವಿಗುರ್ಬಿಸಿದನ್ (ಎಕ. VIII, ನಗರ. ೩೫–೨೯ ; 1077); ಪೆರ್ಬಿಸಿಲರ್ಬಿಸಿ ತುರ್ಬಿ ನಿದಾಘಮುರ್ಬಿಯೊಳ್ (ಜಗವಿ. ೧೭–೭೬); ರಾಯಭೂವರನಿಧಿ ಬುಕ್ಕರಾಯ ನಿನಗಾರ್ದೊರೆ ಮಿಕ್ಕಿನ ರಾಯರುರ್ಬಿಯೊಳ್ (ಎಕ. XI, ಚಿತ್ರದು. ೨–೧೦ ; 1355); ಉರ್ಬಿಗತಿಹಿತಮಾಯ್ತು (ನಿಭಾಗ. ೪–೧೪–೪೬). [< ಉರ್ವಿ]

**ಉರ್ಬಿನಂ** 'ಉರ್ವಿನಂ' ನೋ.

**ಉರ್ಬಿಸು** 'ಉರ್ವಿಸು' ನೋ.

**ಉರ್ಬೀಪಾಳ** (ನಾ). ದೊರೆ; ರಾಜ: ಬಂನ್ದನೀ ಬಂನ್ದನೆಂದುರ್ಬ್ಬೀಪಾಳರ ಕಂಡ್ಗ (ಎಕ. VI, ಕಡೂರು. ೨–೭; 1110). [< ಸಂ. ಉರ್ವೀಪಾಲ]

**ಉರ್ಬು**$_1$ 'ಉರ್ವು$_1$' ನೋ.

**ಉರ್ಬು**$_2$ 'ಉರ್ವು$_2$' ನೋ.

**ಉರ್ಬುಗುಂದು**, ಉಬ್ಬುಗುಂದು (ಕ್ರಿ). = ಉರ್ಬುಗೆಡು: ಪುಲ್ಲಂ ಮೇಯಲೆಳಸಿ ಬಂದು ಮೆಯ್ಯ ತಿಂಟಿಗೆ ಪುಲಿ ಪೊರಳ್ದು ಪೋದ ತಾಣದೊಳ್ಳಂದು ಗರ್ಬಿಂಗಗಿದುರ್ಬುಗುಂದಿ ಹಮ್ಮದಂಬೋದ ಹರಿಣಂಗಳಿಂ (ರಾಜಶೇ. ೫–೫೫ ವ). **ಉಬ್ಬುಗುಂದು**: ತಾರ್ಕಿಕರುಬ್ಬುಗುಂದಿದರುತ್ತಮೋತ್ತಮ ಬಾಚಿರಾಜನು ದಾತ್ತ ಮಹಿಮನು ಮರ್ತ್ಯನೇ (ಬಸಪು. ೫೪–೮೪). [ಉರ್ಬು$_2$ (< ಉರ್ವು$_2$) + ಕುಂದು$_1$]

**ಉರ್ಬುಗೆಡು**, ಉಬ್ಬುಗೆಡು (ಕ್ರಿ). ಉತ್ಸಾಹಗೆಡು; ಹುರುಪು ಕಡಮೆಯಾಗು: ನೀತಿಗೆಟ್ಟಂ ಮಱೆದು ಮಿಗೆ ಮನಂಗೆಟ್ಟನಾನುರ್ಬುಗೆಟ್ಟಂ (ರಕ್ಷಾಶ. ೫೩). **ಉಬ್ಬುಗೆಡು**: ಕಳವಳಿಸದುಬ್ಬುಗೆಡದಡಿಯಿಡದೆ (ಬಸಪು. ೪೪–೨೨); ಉಬ್ಬುಗೆಡದಿರಿ ಕರ್ಣ ಪಾರ್ಥ ಸಗರ್ಭರಹಿರೋ (ಕುವ್ಯಾಕ. ೨೩–೩). [ಉರ್ಬು$_2$ (< ಉರ್ವು$_2$) + ಕೆಡು]

**ಉರ್ಬುಜವ್ವನೆ** (ನಾ). ಯೌವನ ಏರುತ್ತಿರುವವಳು; ಏರುಂಜವ್ವನೆ: ಕೊರ್ಬಿದ ಶರೀರೆ ಸೂಕ್ಷ್ಮಾಪಾಂಗಿ ಕೆಂಗೂದಲುರ್ಬುಜವ್ವನೆ ... ಎಡೆಯಾಡುತ್ತಿರೆ (ಚಬಪು. ೧೦–೨೫). [ಉರ್ಬು$_1$ (< ಉರ್ವು$_1$) + ಜವ್ವನೆ]

**ಉರ್ಬೇಱು** 'ಉರ್ವೇಱು' ನೋ.

**ಉರ್ಬೇಱಿಸು** (ಕ್ರಿ). ಹಿಗ್ಗಿಸು; ನಿಗುರಿಸು: ಒರ್ಮೆಯೆ ಮುಟ್ಟಿವಂದುದು ಬೆರಂಟುತ್ತುಂ ಮಹೀರಂಗವಂ ಕೆಲೆದುರ್ಬೇಱಿಸುತಂಗವಂ ಮೊನೆಯಿಡುತ್ತುಂ ಶೃಂಗವಂ ಪುಂಗವಂ (ಜಗವಿ. ೫–೩೬). [ಉರ್ಬೇಱು (< ಉರ್ವೇಱು) + -ಇಸು$_3$]

**ಉರ್ಮಟ್ಟಿ**, ಉರಮಟ್ಟ, ಉರ್ಮಟ್ಟ (ನಾ). (ಉಕ) ಉದ್ಧಟ; ಧೂರ್ತ; ಧಾಂಡಿಗ: ಆ ಉರ್ಮಟಮಂದೀಕಡೆ ಹೋಗಬ್ಯಾಡೊ ... ನಮ್ಮ ಮನೆತನದ ದರ್ಜಾಕ್ಕೆ ಭೂಷಣವಲ್ಲ (ಎತ್ತಿಕೈ. ೭). **ಉರಮಟ್ಟ**: ಅವನು ಬಹಳ ಉರಮಟ್ಟ ಇದ್ದಾನೆ (ರೂಢಿ). **ಉರ್ಮಟ್ಟ**: ಅಂವಾ ಏನ ಬರೇ ಉಲಕೋಚಿನ ಇಲ್ಲಾ, ಉರ್ಮಟ್ಟನೂ ಇದ್ದಾನ (ದೀಪಹ. I, ೨೯). [← ಮರಾ. ಉರಮಟ್. / ಸಂ. ಉನ್ಮತ್ತ]

**ಉರ್ಮಟ್ಟ** 'ಉರ್ಮಟ' ನೋ.

**ಉರ್ಮೆ** 'ಊರ್ಮೆ' ನೋ.

**ಉರ್ಲಜಾಡ್ಯ** (ನಾ). ದನಕರುಗಳಿಗೆ ಬರುವ ಒಂದು ರೋಗ; ಕೂದಲುದುರುವ ರೋಗ (ಎಸಮ್ಮೆ. XV, ೪೨). [ಉರ್ಲು ?+ ಜಾಡ್ಯ]

**ಉರ್ವ** 'ಉಱುವ' ನೋ.

**ಉರ್ವಟ** (ನಾ). ೧. ಕರು. ೨. ವರ್ಷ. ೩. ಧ್ವನಿ; ಸಪ್ಪಳ. [ಸಂ.]

**ಉರ್ವರ**, ಉಬ್ಬರ (ನಾ). ೧. ಹೆಚ್ಚಿಗೆ; ಅತಿಶಯ: ಹರನುರಿಗಣ್ಣ ಕಾಯ್ಪು ಸಿಡಿಲೆಟ್ಟರಮುರ್ಬಿಪ ಬಾಡಬಾಗ್ನಿಯುರ್ವ್ವರಮುಱಿಯಟ್ಟಿ ಕೊಳ್ವ ಕುಳಿಕಾಹಿಯ ಕೋಳ ಪೊಡರ್ಪು (ಶಾಪಮಂ. ೧೯೦–೧೦೬೦; 1189). **ಉಬ್ಬರ**: ೧. "ಉಬ್ಬರಂ, ಉಬ್ಬಟೆ ... ಪೆರ್ಚುಗೆ — ಈ ೧೯ ಅತಿಶಯಂ" (ಕಶಸಾ. ೧೨–೩೩೪); ಬಱಸಿಡಿಲೆಱಪಂತಿರೆ ಬಂದೆಱಗಿದರಂತಳ್ಳು ಬಾಳ ಕೀಱ್ಮೊನೆಯಿಂ ತಳ್ತಱದಱಿದುಬ್ಬರಮೆಂಬಿವನಱಿದಿಱಿದರ್ ಪೆಣಬಣಂಬೆಗಳ್ ನೆಗೆವಿನೆಗಂ (ಪಂಪಭಾ. ೧೦–೮೨); ಪಾಪದುಬ್ಬರದಿಂ ದೈವವಿರಕ್ತಿ ಸಂಭವಿಸುಗುಂ (ಲೋಕೋಪ. ೪–೨); ನಾನಾಕ್ರೀಡೆಯಿಂದಿರ್ವರುಂ ತಱಿಸಂದುದ್ಧತ ಭಾವದುಬ್ಬರದಿನೇನುದ್ವೃತ್ತರಾಗಿರ್ದರೋ (ಸುಕುಮಾ. ೨–೬); ಕೃಪನುಬ್ಬರದ ಗರ್ವವ ಮುಱಿದು ಕೃತವರ್ಮಕನ ನೋಯಿಸಿದ (ಕುವ್ಯಾದ್ರೋ. ೫–೨೬); ಉಬ್ಬರದ ದುಗುಡದ ಬಂಧನವ ಪರಿಹರಿಸಿ (ತೊರರಾ. ೧–೪–೧೩). ೨. ಆಡಂಬರ; ಸಂಭ್ರಮ; ಸಡಗರ: ಸೂಳೆಗೇರಿಯಂ ಪೊಕ್ಕು ತಾಂ ಮಾಱ್ಪುಬ್ಬರಕ್ಕೆ ಅಬ್ಬರಂ ಪಿರಿದಾಗೆ (ಧರ್ಮಾಮೃ. ೨–೪೩ ವ); ಮುಂಭಾಗದಲಿ ವಿಜಯದುಬ್ಬರದ ಭಟರೈತಂದರು (ತೊರರಾ. ೬–೨೮–೬೯); ಬಿನ್ನಣಂ ಪಾಱಿತು ಪಾಳಿ ಬರ್ದುಕೆಲಸಾರ್ದುದು ಕೈಮೆ ಕಟಿಲ್ದುದುಬ್ಬರಂ ತಾಱಿತು (ಚಿಕವಿ. ೬–೨೦೯). ೩. ಉದ್ವೇಗ; ಆವೇಗ; ವೇಗ: ಪರಕಾಂತಾನಿಕರಕ್ಕೆ ಸೋಲ್ತು ಮನಮುಂ ಸಂತೈಸಲೇನಾಱದುಬ್ಬರದಿಂದುಬ್ಬರವಾಗೆ ಕೂಡಿ (ಧರ್ಮಾಮೃ. ೧೩–೧೩೫); ಜೋಡಿಸಿದರುಬ್ಬರದ ಮದಗಜವ (ಕುವ್ಯಾದ್ರೋ. ೩–೨); ಕೂಗಿ ಬೊಬ್ಬಿಱಿದರುಬ್ಬರ[ದ] ಸಿಡಿಲ್ಕೋಟಿ ಜೊತ್ತಾಗಿ ಗರ್ಜಿಸುವಂತೆ (ಮೋಹತ. ೩೫–೧೯); ಮುದದೆ ಕೋಲುಗಳನು ಪೊಯ್ವುಬ್ಬರಕೆ ಮಿಗೆ ಮೇಲುದು ಜಾಱಿ (ಕಂನವಿ. ೨೧–೧೧೧). ೪. ಏರಿಕೆ; ಉಕ್ಕಿ ಹರಿಯುವಿಕೆ; ಭರತ: ನದಿಗಳುಬ್ಬರಮುಡಗಿ ತಿಳಿದು ಪರಿದುವು (ಜೈಮಿಭಾ. ೨೫–೩). 'ಉಬ್ಬರವಿಳಿತ' ಪರಾ. ೫. ಉಬ್ಬುವಿಕೆ; ಬಾತುಕೊಳ್ಳುವಿಕೆ: "ಆನಾಹಃ, ವಿಬಂಧಃ – ಹೊಟ್ಟೆಯುಬ್ಬರ" (ಸಿದ್ಧಾಂತಿ. ೧೬೦); "ಉಬ್ಬರ – ಬಾಯುವಿಕೆ" (ಜಾನಕೋ. ೨೦).

[ದೇ. ‖ ತುಳು. ಉಬರ್, ಉಬೆರೆ = ಮಂದವಾಗು, ದಟ್ಟವಾಗು; ತೆಲು. ಉಬ್ಬರ. / ಪ್ರಾ. ಉವ್ವರ = ಘರ್ಮ, ತಾಪ]

**ಉರ್ವರಾಜಿತ** (ನಾ). ಭೂಮಿಯನ್ನೆಲ್ಲಾ ಜಯಿಸಿದವನು: ಸುತ್ರಾಮಜಿತನು ನೃಜಿತನು ಉರ್ವರಾಜಿತನು ... ಕೂಡಲ ಸಂಗಯ್ಯನು (ಬಸವ. ೯೫೪). [ಸಂ.]

**ಉರ್ವರಾಪಾಳ** (ನಾ). ದೊರೆ; ರಾಜ: ಉರ್ವರಾಪಾಳನಿನಿಟ್ಟ ವಾಸರಚತುಸ್ತ್ರಿಕ ಮಾತ್ರದೊಳಾವುಪಾಯದಿಂ ಮೇಳಿಸಿ ತಂದು ಕೊಂಡುಕುಡುವೆಂ (ಸುಕುಮಾ. ೭–೯). [ಸಂ. ಉರ್ವರಾಪಾಲ]

**ಉರ್ವರಾಮರ** (ನಾ). ಭೂಸುರ; ಬ್ರಾಹ್ಮಣ: ಉರ್ವರಾಮರ ಸಭಾಭ್ಯಂತರ ಲೋಹಾಸನಸ್ಥಿತಂ (ಸುಕುಮಾ. ೫–೭ ವ). [ಸಂ. (ಉರ್ವರಾ + ಅಮರ$_3$)]

**ಉರ್ವರಾವಳಯ** (ನಾ). ಭೂಮಂಡಲ: ಅಂಭೋಧಿಯುಂ ರವಿಯುಂ ಚಂದ್ರನುಮುರ್ವರಾವಳಯಮುಂ ನಿಲ್ವನ್ನೆಗಂ (ಎಕ. II, ೩೪೫–೫೯; 1159). [ಸಂ. ಉರ್ವರಾವಲಯ (ಉರ್ವರಾ + ವಲಯ)]

**ಉರ್ವರೆ** (ನಾ). ೧. ಭೂಮಿ; ನೆಲ: ಸಪ್ತಾಬ್ಧಿ ಸಮುದ್ರಿತೋರ್ವ್ವರೆಗೊರ್ವ್ವಂ ಪತಿ (ಎಇ. XXVII, ೫–೧೦; 1082); ಉರ್ವರೆಯ ಧನಮೆಲ್ಲವುಂ ನಿನಗೆ ಬಸವಣ್ಣ (ಬಸರ. ೫–೧೬೦). ೨. ಸಮೃದ್ಧವಾದ ನೆಲ; ಫಲವತ್ತಾದ ಭೂಮಿ: ಸರ್ವರ್ತುಕಮೆ ಬನಂ ನೆಲನುರ್ವರೆಯೆ ಕೊಳಂ ಸಮಂತು ಪೂಗೊಳನೆ ಬಱಿಕ್ಕುರ್ವೀಧ್ರಂ ರೋಹಣಮೆ ಗಡ (ಚಂದ್ರಪ. ೩–೧೦). [ಸಂ. ಉರ್ವರಾ]

**ಉರ್ವರೇಶ್ವರ** (ನಾ). = ಉರ್ವರಾಪಾಳ: ಇರ್ಪತೊಂದುರ್ವೇಶ್ವರರಂ ನೀಂ ತಱಿದೊಟ್ಟಿದ್ದೈ ಪರಶುರಾಮಾಕಾರದಿಂದಚ್ಯುತಾ (ಜಗವಿ. ೧–೬೦). [ಸಂ. (ಉರ್ವರಾ + ಈಶ್ವರ)]

**ಉರ್ವಸಿ** (ನಾ). ಅಪ್ಸರ ಸ್ತ್ರೀಯರಲ್ಲಿ ಒಬ್ಬಳು: ತೋರಮಲ್ಲಿಗೆಯ ತುಱುಂಬು ರಾಹು ತವೆ ನುಂಗಿದ ಚಂದ್ರನನೊಯ್ಯನೊಯ್ಯನಂದುಗುಟ್ಟುವೊಲೊಪ್ಪಿರಲ್ ಬಲದೊಳುರ್ವಸಿ [ಪಾಠಾಂ. ರ್ವಿಸೆ] ದೇಸಿಗೆ ದೇಸಿಯಾದಿದಳ್ (ಪಂಪಭಾ. ೭–೮೭). [< ಸಂ. ಉರ್ವಶೀ]

**ಉರ್ವಾರು** (ನಾ). ೧. "ಸೌತೆಗಿಡ" (ಅಮರ. ಟೀಕ) ೨. ಮೆಕ್ಕೆಗಿಡ: "ಉರ್ವಾರುಃ, ಚಿರ್ಭಟಿಃ—ಈ ೨ ಮೆಕ್ಕೆ" (ಹಲಾಯು. ೩೫–೫೬); "ವಾಕುಳಮೆನೆ ಸೌತೆ ಉರ್ವಾರುಮೆನೆ ಮೆಕ್ಕೆ" (ಮಂಗರಾ. ೪೪–೪೬). [ಸಂ.]

**ಉರ್ವಾರುಕ** (ನಾ). = ಉರ್ವಾರು ೨: "ಉರ್ವಾರುಕಂ ಕರ್ಕಟೀನಾಮವಿಶೇಷಂ ಚಿರ್ಬ[ಟಂ] ವಾಳುಕಿಯೆನೆ ಪಡೆಗುಂ" (ವಸ್ತುಕೋ. ೩೮–೩೧). [ಸಂ.]

**ಉರ್ವಿ** (ನಾ). ೧. ಭೂಮಂಡಲ; ನೆಲ: ಸಚರಾಚರೋರ್ವಿಯೊಳೆ ನಿನ್ನ ಚರಿತ್ರಂ ಚಿತ್ರಂ (ಜಿನಾಲೆ. ೩); ಉರ್ವಿಯಂ ಪರ್ವಿ ಪಸರಿಸಿದ ನಾನಾ ನದಿಗಳ ನಡುವೆ (ಹಡಕಾ. ೨–೫). ೨. [ಛಂದ] ಮಗಣವೆಂಬ (– – –) ಮೂರು ಗುರುಗಳುಳ್ಳ ಅಕ್ಷರಗಣ: ಆಶೀರ್ವಾದದೊಳುರ್ವಿಯುಂ ಪರಬಲಂ ಮುತ್ತಿರ್ದೊಡಾ ತೋಯಮುಂ (ಛಂದೋಂಬು. ೧–೩೬). [ಸಂ. ಉರ್ವೀ]

**ಉರ್ವಿಜ** (ಗು). ೧. ಭೂಮಿಯಲ್ಲಿ ಹುಟ್ಟಿದ; ನೆಲದಲ್ಲಿ ಬೆಳೆದ. (ನಾ). ೨. ಮರ; ಗಿಡ. [ಸಂ. ಉರ್ವೀಜ]

**ಉರ್ವಿತಳ** (ನಾ). ಭೂಮಂಡಲ: ಖಳ ವೇದಂಗಳನೊಯ್ದುಮುರ್ವಿತಳಮಂ ತಾಂ ಚಾಪೆವೊಲ್ ಸುತ್ತಿದಂ (ಸೋಮೇಶ. ೪೪). [ಉರ್ವಿ + ತಳ$_2$ (= ತಲ$_1$)]

**ಉರ್ವಿಧರ** (ನಾ). = ಉರ್ವೀಧರ: ಉರ್ವಿಧರದಗ್ರದಲಿ ದೇಹಸುರ್ವಿಯಾತ್ಮನ ಕಾಂತಿಯಲಿ ಮುಕ್ತ್ಯುರ್ವಿಗೈದೇನಿರಘನಿರುಪಮ ನಿಗಮನಾಗುವನೂ (ಬಿಜ್ಜಪು. ೧೪–೬೦). [ಸಂ. ಉರ್ವೀಧರ]

**ಉರ್ವಿನಂ**, ಉರ್ಬಿನಂ (ಅ). ಅತಿಶಯವಾಗಿ; ಹೆಚ್ಚಾಗಿ: "ಅಣಿಯರಮುಬ್ಬಡಿಗಮುಗುಂದಲೆಯುರ್ವಿ[ಪಾಠಾಂ. ರ್ಬಿ]ನಂ ನೂಳದೆಂದು ಪಿರಿದೆಂಬರ್ಥಂ" (ಶಬ್ದಕೈ. ೮೩); ಲತಾಂಗಿ ಸುಗ್ಗಿಯಬ್ಬರಸಿಗಮುರ್ವ್ವಿನ ದೊಸಗೆ ಪುಟ್ಟೆ ಪುಟ್ಟಿದ ತನೆಯನತಿಪ್ರಕಟವಿಶದಯಶನೆಜೆಯಂಗ (ಮೈಅರಿ. ೧೯೩೯, ೩೬–೧೪; 1096). **ಉರ್ಬಿನಂ**: "ಉರ್ಬಿನಂ ಪಿರಿದು" (ಶಮುದ. ಪರಿ ೨). [ಉರ್ವು + ಇನಂ (< ಇನ್ನಂ)]

**ಉರ್ವಿಪ** (ನಾ). ದೊರೆ; ರಾಜ: ಅತಿಶಯಧವಳೋರ್ವಿಪೋದಿತಾಳಂಕೃತಿ ಮತಿ ನೀತಿ ನಿರಂತರ ಪ್ರತೀತಂ (ಕವಿರಾ. ೧–೧೪೬). [ಸಂ. ಉರ್ವೀಪ]

**ಉರ್ವಿಸು**, ಉಬ್ಬಿಸು, ಉರ್ಬಿಸು (ಕ್ರಿ). ೧. ಪ್ರಬಲಿಸು; ಅತಿಶಯವಾಗು; ಹೆಚ್ಚು: ನೆಲದೊಳ್ ಬಿದ್ದಡಗಿಂಡೆಯಾಗೆ ನೆಜಿಸಂ ನಟ್ಟುರ್ಚಿ ದುಗ್ರಾಯುಧಾವಲಿಯಿಂದುರ್ವಿಸುವಿಂದ್ರಜಾಲಿಗನವೋಲ್ (ಶಾಂತಿಪು. ೭–೮೯); ಉರ್ವಿಸುವ ಬೇಸಗೆಯೊಳ್ ಗುಡಮಿಶ್ರಂ ತಾನದು ದೋಷವಿನಾಶನಂ (ಲೋಕೋಪ. ೯–೨೧೭); ಅನಿಳನುರ್ವಿಸಿ ತೀಡೆ (ಜಗವಿ. ೪–೩೯). ೨. ಹೆಚ್ಚಿಸು; ಅಧಿಕವಾಗಿಸು: ಕರಗಿಸುವಂತೆ ಗರ್ವ ಘನಜಾಳಮಂ ಉರ್ವಿಸುವಂತೆ ಕಾಮ ತೋಮರ ಜನಿತಾಗ್ನಿಯಂ (ಪುಷ್ಪಪು. ೨–೨೫); ಮೇಳಂಗೈದುರ್ವಿಸುತೆ ಶ್ರುತಿಯಂ ವೀಣೆಯಂ (ರಾಜಶೇ. ೧೧–೮೭); ಕವಿಗಳ್ ಮೋದದಿನುರ್ವಿಸುವುದೀ ಪ್ರಬಂಧಮನಿಳೆಯೊಳ್ (ಯಾದವ. ೧–೨೩). **ಉಬ್ಬಿಸು**: ೨. ಹೊಸ ಮುಸೆಯ ಹೊಗರೆಂಬುಗಳನೆಬ್ಬಿಸಿದನುಬ್ಬಿಸಿದನು (ಕುವ್ಯಾದ್ರೋ. ೧೫–೬೧); ಪಡೆಗಣ್ಣುರಿಯನುಬ್ಬಿಸಿ ತನುವನೊಡ್ಡಿದನಭವ (ತೊರರಾ. ೩–೨–೩). **ಉರ್ಬಿಸು**: ೧. ಮನುಜರದ್ಭುತಚಿತ್ತರಾಗುತ ತನತನಗೆವುರ್ಬಿಸುತಮಿರಲು (ಬಸವು. ೫೭–೮). ೨. ದೋರ್ಬಲವದ್ದಂಡೇಶರಿಂದುರ್ಬಿಸುವ ಪೆಸರ ಸಾಮಂತರಿಂ (ಕುಸುಮಾ. ೩–೨೨). [ಉರ್ವು$_1$ + –ಇಸು$_3$]

**ಉರ್ವೀಚಕ್ರ** (ನಾ). ಭೂಮಂಡಲ: ಜ್ಞಾನರ್ಧಿಸಂಪನ್ನರುರ್ವೀಚಕ್ರಸ್ತುತಪಾದಪಂಕಜರ್ (ಸುಕುಮಾ. ೧–೧೬). [ಸಂ. (ಉರ್ವೀ + ಚಕ್ರ)]

**ಉರ್ವೀಚರ** (ನಾ). ನೆಲದಮೇಲೆ ಸಂಚರಿಸುವ ಪ್ರಾಣಿ; ಭೂಚರ: ಆಗಸದೊಳ್ ಪಣ್ಣಿದ ಪೊನ್ನ ಪಣ್ಣಿಗೆಯಿಭಂಗಳ್ ಚಿಹ್ನಮುರ್ವೀಚರಪ್ರಸರಕ್ಕುರ್ವಿಯೊಳ್ (ಶಾಂತಿಪು. ೫–೩೮). [ಸಂ. (ಉರ್ವೀ + ಚರ)]

**ಉರ್ವೀಜ** (ನಾ). = ಉರ್ವಿಜ: ವನದೊಳ್ ಮದೀಯ ಪಿತೃಗೆಂತುಂ ವೈರಮುರ್ವೀಜರಾಜಿಗಳೊಳ್ (ಸಂರಾಮಾ. ೧೧–೧೨೬). [ಸಂ.]

**ಉರ್ವೀಧರ** (ನಾ). ೧. ಬೆಟ್ಟ; ಪರ್ವತ: ಏನೆಸೆದುದೋ ತನ್ಮಹಿರೋರ್ವೀಧರಂ (ಸುಕುಮಾ. ೧–೬೫). ೨. ಆದಿಶೇಷ. [ಸಂ.]

**ಉರ್ವೀಧ್ರ** (ನಾ). = ಉರ್ವೀಧರ ೧: ಉರ್ವೀಧ್ರ ರೋಹಣಮೆಗಡಾ ವರ್ಣಸಲಜಿಾವರಣ್ಣ ತಜ್ಜನಪದಮಂ (ಚಂದ್ರಪು. ೩–೧೦). [ಸಂ.]

**ಉರ್ವೀಪಾಲಕ** (ನಾ). ದೊರೆ; ರಾಜ: ತದುರ್ವೀಪಾಲಕಂಗಿಪ್ಪ ಸುಂದರಿಯರ್ ಸುಂದರ ರೂಪೆಯರ್ ಸೊಬಗೆಯರ್ ಕೂರ್ತಿರ್ಪರುರ್ವೀಶ್ವರಾ (ಶಾಂತಿಪು. ೫–೨೨). [ಸಂ. (ಉರ್ವೀ + ಪಾಲಕ)]

**ಉರ್ವೀಭರ** (ನಾ). ಭೂಮಿಯ ಭಾರ; ರಾಜ್ಯಭಾರ: ನೀನೊರ್ವಯ್ ಖಚರೇಶ ಪೊತ್ತುನಿಂದಿರ್ ದೊರೆವೆತ್ತುರ್ವೀಭರಮಂ (ಶಾಂತಿಪು. ೫–೮೪); ಅರಮನೆಗೆ ಪೋಗದುರ್ವೀಭರಮಂ ನಂದನನೊಳಭಯರುಚಿಯೊಳ್ ಸಂದಿಸಿ ತಾಂ ಜೈನದೀಕ್ಷೆಯಂ ಕೈಕೊಂಡಂ (ಯಶೋಚ. ೪–೬೪). [ಸಂ.]

**ಉರ್ವೀರುಹ** (ನಾ). = ಉರ್ವಿಜ: ಮಳಯೋರ್ವೀರುಹ ಕುಂಕುಮದ್ರವಯುತಂ . . . ಗಂಧೋದಕಂ (ಅಜಿಪು. ೪–೭೨). [ಸಂ.]

**ಉರ್ವೀಹರ್ಷ** (ನಾ). ಭೂಮಂಡಲಕ್ಕೆ ಆನಂದವುಂಟುಮಾಡುವವನು: ಸ್ತುತಿಗೆಯ್ವಂ . . . ಚತುರೋಕ್ತಿ ಪ್ರಚುರಾರ್ಥ ಕಾವ್ಯಜನಿತೋರ್ವೀಹರ್ಷನಂ ಹರ್ಷನಂ (ಜಗವಿ. ೧–೮). [ಸಂ. (ಉರ್ವೀ + ಹರ್ಷ)]

**ಉರ್ವು$_1$**, ಉಬ್ಬು$_1$, ಉರ್ಬು$_1$, ಊರ್ವು (ಕ್ರಿ). ೧. ಉಂಟಾಗು; ಹುಟ್ಟು; ಮೇಲೆ ಏಳು: ಭಟಕರ್ಕಳ ರಾದ್ರಮುಪ್ಪ ಕೆಯ್ದುಗಳನ ಗುರ್ವಿನದದ್ಭುತದಿನುರ್ವಿದ ಕೆಂಗಿಡಿಗಳ್ (ಪಂಪಭಾ. ೧೦–೩೫); ಪರಿವಬೆಳ್ದಂಗಳ ಬೆಳ್ಪೊನಲೊಳುರ್ವಿದ ಬೊಬ್ಬುಳಿಕೆಗಳಂತೆ ತಾರಗೆಗಳ್ ತಲೆಗರೆಯೆ (ಕಾದಂಬು. ೪೨೯); ಕಟಿಕಾಂಚೀಸುಸ್ವನಂ ಪೊಣ್ಮೆ ಕಂಕಣಝೋಂಕಾರಮುದುರ್ವೆ . . . ಕೂಡಿದರ್ (ಉದ್ಭಟ. ೮–೧೨೦); ಬರಿಪೊಯ್ಲುರ್ವೆ ನಿಮಿರ್ಚೆ ಬಿಕ್ಕುಳಿಕೆ ಮೆಯ್ಯ್ ಮುಯ್ವಾಗೆ ಕಂಪಕ್ಕೆ (ರಸರ. ೪–೧೯೦). ೨. ಹೆಚ್ಚು; ಮೀರು; ಬೀಗು; ಅಗಲಿಸು; ವೃದ್ಧಿಯಾಗು: ಹಿಮಾಚಳಮಾಯ್ತೆಂಬಿನಮುರ್ವಿ ಪರ್ವಿ ಪರಿದತ್ತು (ಆದಿಪು. ೬–೧೦೦); ಉರ್ವಿ ಕೊರ್ವಿ ಪರ್ವಿದ ಮರ್ವಿಂದೆ ಗರ್ವಿಸುತ್ತ (೧೦ಕ. ೨–೧೦೫ ಪ); ಶಾರ್ದೂಲವನೆಚ್ಚೊಡೆಹಾಯುತುರ್ವಿ ಚಂದನವತಡೆಗಡಿಯಲುಸುತ್ತಿಕೊಂಡಿರ್ದ ನಾಗರ ಹೆಡೆವಣಿ ಸುರಿದುವೇನೆಂಬೆ (ಮೋಹತ. ೧೯–೨೫). ೩. ಹಿಗ್ಗು; ಸಂತೋಷಿಸು: ಪರಿಜನಮುರ್ವೆ ಬಂಧುತತಿ ಕೊರ್ವೆಯಶೋಲತೆ ಪರ್ವೆ (ಪುಷ್ಪಪು. ೧೨–೧೧೦); ಹರ್ಷಮನಾನುತುರ್ವುತುಂ (ದಿವ್ಯಸೂ. ೬–೩೩). ೪. ಗರ್ವಿಸು; ಅಹಂಕಾರ ಪಡು: ಗರ್ವಿಯೋಗಾಚಾರಬುದ್ಧಿಮಾತ್ರವನೆ ಬಗೆದುರ್ವದಿರು (ಪದ್ಮರಾ. ೧೧–೧೯೬). **ಉಬ್ಬು$_1$**: ೧. ಬೊಬ್ಬೆಯಾರ್ಭಟೆ ಬಾಣ ಬಿಡುವ ಕೋಳಿಯೊಳುಬ್ಬಿತೀವಿದ ಬಲಿಧೂಮ ಉಬ್ಬಲಾಗಸಕಾಗ ಕೆಸರೆಯ ಮುತ್ತಿದ ಹೆಬ್ಬಲವನು ತುಡುಕಿದರು (ಕಂನವಿ. ೩–೭೩). ೨. ಜಲನಿಧಿಯುಬ್ಬಿದವೊಲು (ಕುವ್ಯಾಭೀ. ೧–೪೨); ಉಬ್ಬಿ ಬೆಳೆದು ಬಾಗಿತು (ಭರಹ. ೧–೪೦). ೩. ಉಬ್ಬಿರ್ದ ಬೇಡರಗರ್ವದಗುರ್ವಂ ಕೆಡಿಸಿ (ಧರ್ಮಾವ್ಯ. ೧–೨೧೦); ಉದ್ಗತಾನಂದಮಂ ನೂಂಕಿ ನೆನೆದುಬ್ಬುವಂ (ಬಸರ. ೩–೧೫೦); ಕೋಕಿಳ ಮಂಜುನಿನಾದಮಂ ನೆಗಟೆ ಪಂಡಿತವಕ್ಕಿಗಳುಬ್ಬೆ . . . ಬಂದುದು ಚೈತ್ರಂ (ಉದ್ಭಟ. ೯–೩).

**ಉರ್ಬು**$_1$ : ೧. ಉರ್ಬಿ ಕಾರ್ಪುಗಿಲ ನೀರ್ವೊರ್ೞಲ್ ಕೋಶದಿಂದಂ ಮದಂ ಸುರಿಯುತ್ತಿರ್ಪುದುಂ (ಆದಿಪು. ೧೨–೫೮) ; ಉರ್ಬಿ ಮರ್ಬು ಪರ್ಬಿತ್ತಾಗಳ್ (ಕಾದಂಪೂ. ೨೮೨). ೨. "ಉರ್ಬು — ಉತ್ಸಾಹೋದ್ವರ್ತನಯೋಃ" (ಶಮಧಾ) ; ಪೆಂಪಿಂದಮುರ್ಬಿದ ಗುಣ್ಪಿಂದಮಿದಬ್ಧಿಗಗ್ಗಳ ಮೆನಲ್ (ಆದಿಪು. ೧–೫೫) ; ಒಳ್ನುಡಿವೊಂದಬ್ಬರಮುರ್ಬಿತು (ಕಾದಂಪೂ. ೧೫೯) ; ಪರಿತರ್ಪ ಕಾಲ್ಗಳೊಳ್ . . . ಸುೞಿದಾಡಿ ಮತ್ತೆಯುಂ ಕಳೆಯಲಿನಿತ್ತುಮಾಜಳವಳುರ್ಬಿದ ತನ್ನಯ ಮೆಯ್ಯ ಬೆಂಕೆಯಂ (ಕಬ್ಬಕಾ. ೩೧೬). ೩. ನೀಲಕಂಠದೇವನಂ ಬಳಿಕ್ಕಮುರ್ಬಿ ಕೊಂಡಾಡುತುಂ (ಉದ್ಭಟ. ೧೨–೧೦೬) ; ಗರತಿಗೆಲಸವೆಂದು ಗೆಲ್ಲಗೊಂಡುರ್ಬದೆ ಪರಿಚಾರವೆಂದು ಪಳಿಯದೆ (ಹದಿಬ. ೩–೩೩). ೪. ಉದ್ದಮಾಡು ; ನಿಮಿರಿಸು : ಪಲ್ಗಿರಿದು ಪುರ್ಬನುರ್ಬಿ ಬೆರಲ್ಗೊನೆಯಿಂ ತುಱಿಸಿ . . . ಬಿಸಿಲ್ಗಾದುದದೊಂದು ಮರದ ಕೋಡೊಳ್ ಕೋಡಂ (ಜಗವಿ. ೧೪–೧೧). **ಊರ್ವು** : ೨. ನಳಿತೋಳು ಸುಳಿಗುರುಳು ಮುಂತೂರ್ವಿ ಬೆಳೆದ ಪೆರ್ಮೊಲೆಯ ಬ.. ಅಬಲೆಯರು ಕಣ್ಗೆಸೆದರು (ಪ್ರಭುಪು. ೩–೨೨). [?]

**ಉವ್ರ್**$_2$, **ಉಬ್ಬು**$_2$, **ಉರ್ಬು**$_2$ (ನಾ). ೧. ಏಳಿಗೆ; ಅಭಿವೃದ್ಧಿ; ಅತಿಶಯ; ಉನ್ನತಿ : ಅವನಿತಳಂ ಕ್ಷಾಂತಿಯೊಂದುರ್ವನ್ (ಎಇ. XIII, ೩೩೦–೭ ; 929) ; ಉರ್ವಿನ ಕಲಿತನಕ್ಕೆ ದುರ್ಯೋಧನನುಂ ಭೀಮನೊಳ್ ಸೆಣಸಿ ಗದೆಯಂ ಕಲ್ತಂ (ಪಂಪಭಾ. ೨–೫೯); ಬಿಸಿಲುರ್ವಿಂದಳ್ಕಿ ಬೆಂದೀಟಿದೆ (ಧರ್ಮಾಮೃ. ೧೧–೨೦೧). ೨. ವೇಗ ; ರಭಸ : ಬೆಂಕೆಯ ಪೊಯ್ದುರ್ವಿನೊಳ್ ಕೊರಗಿರ್ದ ಲತೆಗಳ ಕೊನೆಕೊನೆಯನೆ ದಹನ್ನನಳುರ್ದು ಕೊನೆಗೊನೆಗೊಂಡಂ (ಪಂಪಭಾ. ೫–೮೭). **ಉಬ್ಬು**$_2$: ೧. ತೆಗೆದು ದಾಚಿಯಲವರ ಬಲ ಜಗದಗಲದುಬ್ಬಿನ ಬೊಬ್ಬೆಯಲಿ (ಕುವ್ಯಾಕ. ೧–೭) ; ವನಜದಳಾಯತೇಕ್ಷಣೆ ಮುಂಡಿಸಿದಳು ಘನಪರಿತೋಷದುಬ್ಬಿನಲಿ (ಮೋಹತ. ೩೬–೩೨). ಬಿಸಜಗಂಧಿಯ ನಿಡುಪುರ್ಬು ಕುಸುಮಶರನ ಸಿಂಗಾಡಿಯುಬ್ಬು (ಕಂನವಿ. ೯–೩೫). ೩. ಹಿಗ್ಗು ; ಉತ್ಸಾಹ : ಹಾಱಿದುಬ್ಬಿನ ಹೊತ್ತುದುಗುಡದ ಮೋಱೆಗಳ ಮೋನ (ಕುವ್ಯಾಕ. ೬–೨೫) ; ಘುರಗಲಿಗಳು ದುರ್ಗದಾಳ್ವೇರಿಯಮೇಲೆ ಪರಿಶೋಭಿಸಿದರುಬ್ಬಿನಲಿ (ಕಂನವಿ. ೧೧–೧೪೪). ೪. ಗರ್ವ ; ಅಹಂಕಾರ ; ಹೆಮ್ಮೆ : ಗಾಜುಗೆಡೆದೆನು ನಿಮ್ಮನೋಲೆಯಕಾಱತನದುಬ್ಬಿನಲಿ (ಕುವ್ಯಾದ್ರೋ. ೧–೨೪) ; ಉಬ್ಬು ಮುಱಿದು ಖಾನರು ಹಿನ್ನೆಲೆಗೈದಿ ತಬ್ಬಿಬ್ಬುಗೊಂಡರಾಕ್ಷಣದೆ (ಕಂನವಿ. ೧೪–೯೧). **ಉರ್ಬು**$_2$: ೧. ತನು ರೂಪ ವಿಭವ ಯೌವನ . . . ಇಂದ್ರನ ಬಿಲ್ ಬೊಬ್ಬುಳಿಕೆಯುರ್ಬು ಪರ್ಬಿದ ಭೋಗಂ (ಆದಿಪು. ೯–೪೭); ಅಂಬರಮುಂ ಬಿಸುಟುರ್ಬಿನಂಧಕಾರಂ ಕವಿತರ್ಪಿನಂ ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್ (ಗದಾಯು. ೯–೩೫) ; ಭೋರ್ಗರೆವ ರವದುರ್ಬಿನಿಂ ಪರ್ಬಿನಿಂ (ಚಬಪು. ೪೯–೨೯). ೨. ನೆಗೆದುರ್ಬಿ ಪೌರ್ವಾನಳನುರ್ಬುಗಳನಲುಂ ನೆಗೆದುವಹಿಮಹಿಮಕರಬಿಂಬಂ (ಆದಿಪು. ೬–೫೨). ೩. ಭೂಪರಾನಂದದೆ ಛತ್ರ ಚಾಮರದ ತಿಂತಿಣಿಯೊಳ್ ನಡೆತಂದು ಚಿತ್ತದುರ್ಬೊಂದಿರೆ (ದಶಕು. ೮–೨). ೪. ಮದಸೊರ್ಕಿದಾನೆಯಂತೆ ತನ್ನಿಚ್ಚೆಯಿಂ ಬೀಟ್ಪನಿತು ವಿಸಟಂಬರಿವಂ ಆವುರ್ಬಿಂದೊಂದು ಬಾರಿ ದುಃಖಂಬಡೆವಂ (ಪಂಚತಂ. ೧೦೫–೧೮) ; ನಾಂ ಮುನಿದೊಡಂ ಜವಂ ಮುಳಿದೊಡಮುರ್ಬಿನೊಳಾಂತು ಸೆಣಸಿ ಕಾದುವ ಜನಪಂಗೆಂಟೆರ್ದೆಯೆ (ಧರ್ಮಾಮೃ. ೪–೨೫೧) ; ನಿರ್ಬಂಧಿಸಿ ಸಂಕಲೆಯಂ ಸರ್ಬಾಂಗದೊಳಿಕ್ಕಿ ಕಡಲ ನಡುನೀರೊಳ್ ತನ್ನುರ್ಬಿಱಿಯೆ ಬಿಸುಟು ಬಾಯೆಂದೊರ್ಬನ ಕೆಯ್ಗಿತ್ತನ್ (ದಶಕು. ೧೨–೫೦).

ಉಬ್ಬುಡುಗು = ಗರ್ವ ಅಡಗು ; ಹೆಮ್ಮೆ ಇಲ್ಲದಂತಾಗು : ಅಂದು ಬಸವಣ್ಣನುಬ್ಬುಡುಗುತಂ ಮೈಯಿಕ್ಕಿ (ಬಸರ. ೧೧–೮೪).

[< ಉವ್ರ್$_1$]

**ಉರ್ವುಗೊಳ್** (ಕ್ರಿ). ಉತ್ಸಾಹಗೊಳ್ಳು ; ಹಿಗ್ಗು : ಇದೊ ನಿನ್ನ ಪತಿ ಬಂದನೆಂಬ ನಲ್ನುಡಿ ಕೇಳಿ ಮುದವೇಱಿ ಮೊಗಸಿಂಪಡೆಹು ಕದುಬಿಯುವನ ಸೇವೆಗನುವಪ್ಪ ವಸ್ತುವನೊದವಿಪುದುರ್ವುಗೊಂಡೊಡನೆ (ಹದಿಬ. ೩–೧೧).

[ಉವ್ರ್$_2$ + ಕೊಳ್$_1$]

**ಉರ್ವೇೞ್**, ಉಬ್ಬೇಳ್, ಉಬ್ಬೇಳು, ಉರ್ಬೇೞ್ (ಕ್ರಿ). ಉಬ್ಬಿ ಏಳು ; ನೆಗೆದು ಮೇಲಕ್ಕೆ ಏಳು ; ತಲೆದೋರು : ಬಿಟ್ಟ ಭರದಿಂದೆ ವಾರಿಯೆರಟ್ಟಿ ಸೆಗಂ . . . ಬಿಟ್ಟುದು ತದ್ರಭಸಕ್ಕುರ್ವೆಟ್ಟು [ಪಾಠಾಂ. ರ್ಬೆಟ್ಟು] ಕಡಂಗಿದುವು ಜಳಚರ ಪ್ರಕರಂಗಳ್ (ಚಂದ್ರಪು. ೫–೪೩) ; ನೆಗೆದೆತ್ತಂ ಗೋತ್ರಶೈಲಂ ತಳರ್ದು ಮಸಕದಿಂ ತಾಗಲುರ್ವೆಟ್ಟುವೋವಾರ್ಧಿಗಳುಂ ದ್ವೀಪಂಗಳುಂ (ವರ್ಧಪು. ೮–೪೫). **ಉಬ್ಬೇಳ್** : ಉಬ್ಬೇಳ್ವ ರೋಷಜ್ವಾಲೆ ಹೊಗೆಸಿತು ವದನವನು (ಕುವ್ಯಾಕ. ೧೭–೧) ; ಮೇಗೆ ಮೇಗುಬ್ಬೇಳ್ವ ಸುಯ್ಲಿನ (ತೊರರಾ. ೩–೮–೫೨). **ಉಬ್ಬೇಳು** : ಕೂಡೆ ವಾನರ ಕಟಕ ಬೊಬ್ಬೆಯ ಗಾಡಿಕೆಯಲುಬ್ಬೇಳುತಿರ್ದುದು (ತೊರರಾ. ೬–೧೦–೨೫) ; ಆವೇಶವು ಹೆಚ್ಚಿತು . . . ದುರುಳತನವು ಉಬ್ಬೆದ್ದಿತು (ರಾಜಸೂ. ೯೪). **ಉರ್ಬೇೞ್** : ಪೆಲ್ಲಡಿಯಂ ತಳ್ಪೊಯ್ದು ಮಂಜೀರದ ಮೃದುರವಮುರ್ಬೇೞೆಯುಂ ರಮ್ಯ ರಮ್ಯಂಬಡೆದುದ್ಯತ್ಕಂಕಣಾಂತರ್ಘುಣರುತಿವೆರಸಾಗಳ್ ವರಸ್ತ್ರೀವಿತಾನಂ ಬಿಡದೇಟಲ್ಕೆಟ್ಟನಾಗಳ್ (ಕುಸುಮಾ. ೮–೧೫೦). [ಉವ್ರ್$_1$ + ಏೞ್$_1$]

**ಉಲಂಡಿ**, ಉಲಾಂಡಿ (ನಾ). ಲಂಗರಿನಂತೆ ದೋಣಿ ಚಲಿಸದಂತೆ ಮಾಡುವ ಕೊರಡು : ದೋಣಿಗಳಿಗೆ 'ಉಲಂಡಿ' ಎಂಬ ತೋಲು ಹಿಡಿಯುವ ಕೊರಡನ್ನು ಒಂದು ಬದಿಗೆ ಕಟ್ಟಿ ನೀರೊಳಗೆ ಹಾಕುವರು (ಕಭಾಗೆ. ೩೦೮). **ಉಲಾಂಡಿ** : ಬಹು ಸಣ್ಣ ದೋಣಿಗಳ ಅಡ್ಡ ಮಗ್ಗುಲಿಗೆ "ಉಲಾಂಡಿ" ಯೆಂಬ ತೋಲು ಹಿಡಿಯುವ ಕೊರಡುಕಟ್ಟಿ (ಕಭಾಗೆ. ೧೮೩). [← ಮರಾ. ಉಲಂಡಿ, ಉಲಾಂಡಿ]

**ಉಲಕೆ** (ನಾ). ಆಕಾಶದಿಂದ ಬೀಳುವ ತೇಜಃಪುಂಜವಾದ ವಸ್ತು : ಆಕಾಶದಲ್ಲಿ ಸಂಚರಿಸುವ ಉಲಕಗಳು ಹಾದಿತಪ್ಪಿ ಚಂದ್ರನ ಮೈಗೆ ಬಡಿದ ಕುಣಿಗಳೇ ಈ ವರ್ತುಲ ಪರ್ವತಗಳು (ಬಾಲಪ್ರ. I, ೧೦).

[< ಸಂ. ಉಲ್ಕಾ]

**ಉಲಕು** 'ಉಲುಕು$_1$' ನೋ.

**ಉಲಕೋಚಿ**, ಉಲುಕೋಚಿ (ನಾ). (ಉಕ). ತುಂಟ ; ಉಡಾಳ ; ಕೇಡಿಗ: "ಉಲಕೋಚಿ–ಕಿಡಗೇಡಿ, ಉಡಾಳ, ತುಂಟ" (ಜಾನಕೋ. ೨೧); ಮಹಾ ಉಲಕೋಚಿ ಅಂದರ ಮಹಾ ಉಲಕೋಚಿ ಆದ ಖೋಡಿ ಇಷ್ಟು ಉಲಕೋಚಿ ಇದ್ದರೂ ಬಹಳ ಹುಷಾರಿ ಮತ್ತ (ವೈನಿ. ೨೦) ; ಹೊರಟತ್ತ ಉಲಕೋಚಿ ಆಯುಷ್ಯಯಂತ್ರ ತಿರುತಿರುಗಿ ಹಾಗೇ ತಿರುಗಿ ನೀರಸವು (ಮುಕ್ತಕಂ. ೫೯–೮). **ಉಲುಕೋಚಿ** : ಓಹೋ ಈ ಉಲುಕೋಚೀ ಹುಡುಗನು ಅತಿವೇಗದಿಂದ ಬಹಳ ದೂರ ಹೋದನು (ಉರಾಚ. ೮೫).

[< ಸಂ. ಉತ್ಕೋಚ ?]

**ಉಲಕೋಚಿತನ**, ಉಲುಕೋಚಿತನ (ನಾ). ತುಂಟತನ ; ಕೇಡಿಗತನ : ಅಯ್ಯ ನಮ್ಮವ್ವ ಅವನ ಉಲಕೋಚಿತನಕ್ಕೇನೂ ಕೊರತೆ ಇಲ್ಲ (ನೈನಾ. ೨೨). **ಉಲುಕೋಚಿತನ** : ಇಂತಹ ಉಲುಕೋಚಿತನವನ್ನು ಮಾಡಿ ದಕ್ಕಿಸಿಕೊಳ್ಳಬೇಕಿದ್ದರೆ ಸಮುದ್ರದಂತಹ ತಾಯಿ ಬೇಕು (ಶ್ರೀರಂಗ. ೨೬). [ಉಲಕೋಚಿ + -ತನ]

**ಉಲಗ** 'ಉಲಿಗ' ನೋ.

**ಉಲಚು** (ಕ್ರಿ). ಕದಡು ; ಅಳಿಸು (?) : ಹೆಣ್ಣಿಲ್ಲದಮ್ಮನ ಹೆಣ ಚಂದವಿಲ್ಲವು ಬಣ್ಣದ ನಿರಿಯ ಸೊಸೆದಿರು ತೀಡಿದರ ಕಣ್ಣಿಗೆ ಕಾಡಿಗೆ ಉಲಚವು (ಹಳ್ಳಿಯ. ೧೧೬). [?]

**ಉಲಪ** (ನಾ). ೧. ಪೊದರು; ಪೊದೆ: "ಉಲಪಃ . . . ವಿಟಪಃ — ಈ ೫ ಪೊದಱು" (ಹಲಾಯು. ೩೧-೩೩). ೨. ಒಂದು ಬಗೆಯ ಹುಲ್ಲು: "ಉಲಪಃ . . . ಜಲ್ಬಜಃ — ಈ ೫ ಹಂಜಳದ ಪುಲ್" (ಹ ಲಾ ಯು. ೩೨-೩೭). [?]

**ಉಲಪಿ** 'ಉಲುಪೆ' ನೋ.

**ಉಲಾಂಡಿ** 'ಉಲಂಡಿ' ನೋ.

**ಉಲಾರ** 'ಉಲ್ಲಾರ' ನೋ.

**ಉಲಿ₁** (ಕ್ರಿ). ೧. ಧ್ವನಿಮಾಡು; ಕೂಗು: ಬಹಿರಂತರುಪವನಂಗಳೊಳ ಹರೆಹಮಾ ಪರಭೃತಂಗಳುಲಿವ ರವಂಗಳ್ (ಕವಿರಾ. ೧-೫೪); ಪಥಿಕರ್ ಬ ಕ್ಕೆ ೯ ೦ ದು ಭೃಂಗಂಗಳಿಂದುಲಿವಂತಿರ್ದುದು ಪಣ್ತ ಬಕ್ಕೆ (ಆದಿಪು. ೧೧-೬೮); ಉಲಿಯೆ ಸುರದುಂದುಭಿಗಳ್ (ಗದಾಯು. ೮-೪೨); ಉಲಿವ ಮಂಗಳತರದ ತೂರ್ಯತ್ರಯ (ತೊರರಾ. ೧-೬-೨೯). ೨. ಮಾತನಾಡು; ಹೇಳು; ಘೋಷಿಸು: ಉಲಿವ ಜನದ ಕಳಕಳರವಮುಮಂ ಮೊಱಗುವ ಪಱೆಗಳುಮಂ ಬಾರಿಸಿ (ಪಂಪಭಾ. ೨-೭೪ ವ); ನಿಲಿಸಲೊಲ್ಲದೆ ಮಾಣ್ದುಱಿದಿರ್ದನಪ್ಪೊಡಂ ನಿ ಜಾ ಸ ದ ಕಷ್ಟನೆಂದುಲಿವರ್ (ಧರ್ಮಾಮೃ. ೪-೧೧೪); ಅಭ್ರದಲಿ ಗುಹ್ಯಕನುಲಿದನೆಲೆ ನಕುಲಾಂಕ (ಕುವ್ಯಾಅ.೨೩-೧೮); ಸರಳತೆಯ ತೋರಿ ನೀನುಲಿ ಎನ್ನೊಳು (ಅರುಣ.೧೦). [ದೇ. ‖ ತಮಿ. ಮಲ. ಕೊಡ. ಒಲಿ; ತೆಲು. ಉಲಿ; ಮಲ್ತೊ. ಒಲ್ಗೆ = ಅಳು]

**ಉಲಿ₂** (ನಾ). ೧. ಧ್ವನಿ; ಕೂಗು; ಶಬ್ದ; ರವ: ಒಡನುಲಿದುವು ಬೆರಲ ಕೊರಲ ನಾಲಗೆಯುಲಿಗಳ್ (ಕಾವ್ಯಸಾ. ೬೫೮ ಶೂದ್ರಕ); ಎಸೆವ ವಿಮಾನಘಂಟೆಗಳ ಮೆಲ್ಲುಲಿ (ಆದಿಪು. ೨-೪೧); ಉಲಿವ ಜಲನಿಧಿಯುಲಿಯಂ (ಪುಷ್ಪಪು. ೧೦-೪೦). ೨. ಮಾತು: ಜಲಶಯನೋದರಾಂತರದಿನೀ ತ್ರಿಜಗಂ ಪೊಱಮಟ್ಟುದೀಗಳೆಂಬುಲಿ ಸಲೆ (ಪಂಪಭಾ. ೧೦-೫೨); ಪರಮಾನುಭವಗಳುಲಿಯನುಭವಿಗಳೊಳಕಿವಿಗೆ (ಮಂಕುತ. ೨೯).
[< ಉಲಿ₁. / ತಮಿ. ಮಲ. ಕೊಡ. ಒಲಿ; ತೆಲು. ಉಲಿ]

**ಉಲಿಕು** 'ಉಲುಕು₁' ನೋ.

**ಉಲಿಗ₁**, ಉಲಗ (ನಾ). ಒಂದು ಬಗೆಯ ಗಿಡ; ಹುಲಿಗಲ ಗಿಡ: ಉಲಿಗನಸೊಪ್ಪಿನ ರಸದೊಳ್ ತಿಲತೈಲಮನೊಂದುಗೂಡಿ ಕುಡಿಸಲ್ ಕಿಡುಗುಂ . . . ಮಹಾಮಯಂ (ಖಮದ. ೧೪-೫೩); ಹುಣಿಸೆಯ ಹುರುಪಲು, ಬಿಳಿಯ ತರಗು, ಉಲಿಗನ ಸೊಪ್ಪು, ಆಡುಸೋಗೆ ಇವಂ ಸಮಾನಂಗೊಂಡು ಸುಟ್ಟು . . . ಅಜೀರ್ಣಂಗಳಿಗೆ ಕೊಡಲು ಮಾಣುವುವು (ವೈವಿ. ೪೮). **ಉಲಗ**: ಕಾಂಚತೊಂಡೆಯ ಬೇರು . . . ಉಲಗನ ಬೇರಿನ ತೊಪ್ಪಡೆ . . . ರಸದಲ್ಲಿ ಕೇದು ನಸ್ಯಮಾಡಲು ಹದಿನಾಲ್ಕು ಬಗೆ ಮೊಲ ನಾಗರವ್ಯಾಧಿ ಗುಣವಹುದು (ವೈವಿ. ೯೯). [< ಹುಲಿಗ ?]

**ಉಲಿಗ₂** (ನಾ). ವಾಚಾಳಿ; ಹರಟೆಮಲ್ಲ: ಉಂಗರ ಮಾತು ಉಲಿಗರ ಕೋಟಿ ಎತ್ತ ಲಿಂಗಾನುಭಾವದ ರಹಸ್ಯದ ವಾಕ್ಯವೆತ್ತ (ಚೆನ್ನವ. ೬೩-೨).
[ಉಲಿ₂ + -ಗ₃]

**ಉಲಿಗ₃** 'ಉಱಿಗ' ನೋ.

**ಉಲಿಗ₄** (ನಾ). ಗ್ರಾಮಾಧಿಕಾರಿ; ಊರಿನ ಪ್ರಮುಖ; ಊಳಿಗದವನು (?): ಇದಕೆ ಸಾಕ್ಷಿಗಳು ಸಾಮಿಸರು ಗಳುಡಗಳು ಉಲಿಗರು ಕೆರೆಕಣಾಂಬಿ ಹಲರು ಕಳಲೆಹಲರು ಹಂಪಪುರದ ಹಲರು (ಎಕ. III, ನಂಜನ. ೧೦೬-೧೪; 1652).
[< ಊಱಿಗ ?. / ಮರಾ. ಉಲಿಂಗ = ಸೇವೆ; ಕೆಲಸ]

**ಉಲಿಗುಡು** (ಕ್ರಿ). ಧ್ವನಿಮಾಡು; ಶಬ್ದಮಾಡು: ಗೆಜ್ಜೆ ಮೆಲ್ಲುಲಿಗುಡೆ (ರಾಜಶೇ. ೧೩-೧೦೨). [ಉಲಿ₂ + ಕುಡು₁ (< ಕೊಡು₁)]

**ಉಲಿಗೆ** (ನಾ). ಉಂಡಲಿಗೆ; ಉಂಡ್ಲಕಾಳು (ಕರಾ). ℙ ಹಲಸಿನ ತೊಳೆಯಿಂದ ಮಾಡಿದ ಭಕ್ಷ್ಯ: ಎಳೆವದದ ಹಲಸಿನ ಕಾಯನೊಡೆವೆರಸಿ ಸಂಭಾರಮಂ ತುಪ್ಪವೆಱೆದಟ್ಟು ಬಡಗಸಂಡಿಗೆಯುಲಿಗೆ [ಪಾಠಾಂ. ಯಂತೆ] ಮಾಡಿಯುದ್ದಿನ ಸಂಡಗೆಯೊಳದ್ದಿ . . . ನಸು ಹುಳಿಯನಿಕ್ಕಿ ಪರಿಮಳವಿಡುವುದು (ಸೂಪಶಾ. ೫-೫೨). [?]

**ಉಲಿಪ**, ಉಲಿಹ (ನಾ). ೧. ಧ್ವನಿ: ರಸತರಂಗಿಣಿಯ ತೆರೆಯುಲಿಪದಂತೆ ಮಧುರವಾದ ಪಾರಿವದುಲಿಪಂಗಳುಂ (ಪಂರಾಮಾ. ೩-೭೫ ವ); ನಾನಾ ಜಲಚ್ಚರಿಯುಲಿಪದಿಂದೊಪ್ಪುವ ಹೆಗ್ಗೆಱೆಯಂ ಕಂ ಡು ಬೀಡಂಬಿಟ್ಟು (ಎಕ. VII, ಶಿವಮೊ. ೪-೩೭; 1122); ಪರಪುಟ್ಟ ಮಯೂರ ಕೀರ ಪಾರಾವತಂಗಳುಲಿಪಮುಂ (ಮಹಾನೀ. ೮-೮೧ ವ). **ಉಲಿಹ**: ೨. ಮಾತು: ಅವು ಸತಿಯರಾದೆಪ್ಪೆವೆಂಬುಲಿಹವೆಂಬುದು ಬಂದ ಕಾಲ ಗುಣವೋ ನಿಂದ ನೆಲದ ಗುಣವೋ (ಹಚಕಾ. ೭-೧೩). [ಉಲಿ₁ + -ಪ₂]

**ಉಲಿಪು**, ಉಲಿವು, ಉಲುಪು, ಉಲುವು, ಉಲುಹು (ನಾ). ಧ್ವನಿ; ಕೂಗು; ಮಾತು: ಬೇಲಿಯ ಕೆಲದೊಳಲ್ಲದೆ ಪೆಱಗಣುಲಿಪಿಂಗ [ಪಾಠಾಂ. ಣುರಿವಿಂಗ, ಣಪಿಪಿನಂ] ಮುಳ್ಳೊಳಕ್ಕಂ ಗೆಂಟಾಗಿ ಬೀಡಂ ಬಿಡಿಸಿ (ಪಂಪಭಾ. ೫-೪೭ ವ); ಪೊಟಲೊಳಾದುಲಿಪುಮಂ ಪಱೆಯ ರವಮುಮಂ . . . ಕೇಳ್ದು (ಧರ್ಮಾಮೃ. ೫-೩೦೭); ಲತಾಂಗೀ ಜನದೊಂದು ಮೆಲ್ಲುಲಿಪುಮಂ ಕೇಳ್ದು (ಕಾವ್ಯಸಾ. ೧೧೮); ಗಿಳಿಗಳಂ ಸೋವ ಪಾಮರೀಜಾಳದೊಂದುಲಿಪುಮಂ (ಜಬಪು. ೧೧-೯). **ಉಲಿವು**: ಪಕ್ಷಿಗಳ ಉಲಿವು ಕೇಳಬಂದಿತು (ಶಾಂತಲಾ. ೨೬೭); ನಿನ್ನ ಹಳಸದೀ ನಲಿವಿನುಲಿವಿನ ಸನಿಹಕೆ (ಗಿಳಿವಿಂ. ೮-೧೧೪). **ಉಲುಪು₁**: ತಱಗೆಲೆಗಳಂತೆ ಬೆದಱೆ ನೆಲಕ್ಕೆ ಬೀಟ್ವ ಪಕ್ಕಿಗಳುಲುಪುಗಳೊಳಂ (ಕಾದಂಪೂ. ೧೬೦); ವಿಚಾರಿಸಿಕೊಂಡಿಂದು ನೆಗಟ್ಟು ಕಂಠದುಲುಪಂ ಕೀರಾಳಿಯೇ (ಉದ್ಭಟ. ೭-೬೩); ಉಲುಪಡಂಗಿದ ವಾದಿಯಂ ನೋಡಿ (ಪದ್ಮರಾ. ೧೧-೧೮೪). **ಉಲುವು**: "ಬಾಯಿ ಸಪ್ಪಳ" (ಜಾನಕೋ. ೨೨); ಗಿಳಿರಾಮು ತವರೂರ ಉತ್ತತ್ತಿ ವನಕ ಉಲುವಿಲ್ಲ (ಜನಗೀ. ೬೨); ನಮಗೂ ಎಂಥಾ ಉಲುವು ಅನಿಸಿತ್ತು (ವೃನಿ. ೧೯೫); ಊರಳಿದು ಉಲುವಡಗಿ ಭೀರಿನಾದವು ನಿಲಲು (ಸಿದ್ಧಪು. ೩೭-೩). **ಉಲುಹು**: ಅಳಿದುವಾ ದ್ರೌಪದಿಯ ಸಿರಿಯೆಂಬುಲುಹ ಕೇಳುತ ಪಾರ್ಥ ಬಂದನು (ಕುವ್ಯಾದ್ರೋ. ೨-೩); ಗಂಭೀರಗಮನೆಯರುಗಳು ಅಂದವಡೆದ ಚರಣಾಭರಣಗಳುಲುಹಿಂದಲ್ಲೆದಿದರಿಕ್ಕೆಲದಿ (ಮೋಹತ. ೨೪-೧೫); ಕುಂದದ ಗದ್ಗದದುಲುಹಿಂದ ಸಖಿಯೊಡನೆಂದಳು ಮಾಣುತ್ತರವ (ಕಂಠವಿ. ೯-೧೩೮). [ಉಲಿ₁ + -ಪು₁]

**ಉಲಿಪುಗೇಳ್** (ಕ್ರಿ). ಧ್ವನಿಯನ್ನು ಆಲಿಸು; ಶಬ್ದವನ್ನು ಕೇಳು: ಇಲಿಯುಲಿಪುಗೇಳ್ದ ಬೆಕ್ಕಿನಂತೆ ಬೊಕ್ಕನೆ ಪಾಱೆ ವಾಯ್ದು (ಅರ್ಧನೇ. ೭-೨೯ ವ); ಜಲವಿಹಗಂಗಳೊಳ್ಪುಲಿಪುಗೇಳ್ದು (ಕುಸುಮಾ. ೧-೮೧).
[ಉಲಿಪು + ಕೇಳ್]

**ಉಲಿಪೆ** 'ಉಲುಪೆ' ನೋ.

**ಉಲಿಮಿರಿ** (ನಾ). ಒಂದುಗಿಡ; ಮದವಸಲೆ: "ವರುಣಃ . . . ಉಲಿಮಿರಿ, ಒಸಲೆ" (ಸಿದ್ಧಾಂತಿ. ೧೦೩).
[ದೇ. ‖ ತೆಲು. ಉಲಿಮಿಡಿ, ಉಲಿಮಿರಿ]

**ಉಲಿವ** (ನಾ). ಒಂದು ಬಗೆಯ ಹಕ್ಕಿ: "ಉಚ್ಚಪುಚ್ಛಮಾಮ್ಲಾನಮೆನಲುಲಿವಮಕ್ಕುಂ" (ಮಂಗರಾ. ೫೨-೮). [?]

**ಉಲಿವಕ್ಕಿ** (ನಾ). ಉಲಿಯುವ ಹಕ್ಕಿ: ಪೊರವಮಡಿಸಿದುಲಿವಕ್ಕಿಯಮ್ಮ ಸಂಜೆಯೊಳವಂ ಗೂಡುಗೊಳಪಂತೆ ಕೂಡಿ (ಗಿಳಿವಿಂ. XV, ೬).
[ಉಲಿ + ಪಕ್ಕಿ₁]

**ಉಲಿವು** 'ಉಲಿಪು' ನೋ.

**ಉಲಿಸು**$_1$ (ಕ್ರಿ). ನುಡಿಸು; ಮಿಡಿ; ಮೀಟು : ಕಲೆಯೆಡೆಯ ವಸುದೇವ ನಾಕೆಯ ಪೊಳೆವ ವೀಣೆಯ ಕೊಂಡು ತಂತಿಯನುಲಿಸಿ ಕೆಳಗಿರಿಸಿದನು ತರಿಸಿದನುಳಿದ ವೀಣೆಗಳ (ಸಾಳ್ವಭಾ. ೮-೮). [ಉಲಿ$_1$ + -ಇಸು$_3$]

**ಉಲಿಸು**$_2$ (ನಾ). ಧ್ವನಿ; ಸದ್ದು : ಎಲೆ ವೃಷಭ ಗೇಹಪತಿ ಮನವಲಸದೆ ಬಳಿಗಂತು ಗಟ್ಟಿಯಾತ್ಮ ಕ್ಷೇತ್ರ ಸ್ಥಲಮಂ ರಕ್ಷಿಸುತಿರ್ದಪನುಲಿಸಿಲ್ಲದೆ ತೊಲಗು ಪೋಗು ಕಾಣದ ಮುನ್ನಂ (ರಸರ. ೧೧೯-೧೬).
[ಉಲಿ$_1$ + -ಇಸು$_4$]

**ಉಲಿಹ** 'ಉಲಿಪ' ನೋ.

**ಉಲುಂಬಲ**, 'ಉರುಂಬಲೆ' ನೋ.

**ಉಲುಂಬಲೆ** 'ಉರುಂಬಲೆ' ನೋ.

**ಉಲುಕಿಸು** (ಕ್ರಿ). ಅಲುಗಿಸು; ಅಲ್ಲಾಡಿಸು : ಅಳುಕದಾದುದು ಸರಳಪಂಜರಂ ಮತ್ತದರನುಲುಕಿಸುವೆನೆನುತಲದ್ಭುತರೂಪಮಂ ತಾಳ್ದು ಗಗನಕಂ ಪಾರಿಬಿದ್ದಂ (ತುರಂಗ. ೧೫-೩೬).
[ಉಲುಕು$_1$ + -ಇಸು$_3$]

**ಉಲುಕು**$_1$, ಉಲಕು, ಉಲಿಕು (ಕ್ರಿ). ೧. ಅಲುಗು; ನಡುಗು; ಅಲ್ಲಾಡು; ಮಿಸುಕು : "ಉಲುಕು – ಶರೀರಸ್ಫುರಣೇ" (ಶಮುಧಾ); ಉಲುಕಿದಡೆ ನಾಲಗೆಯ ತೊಡಬೆಯ ಕಳಚುವೆನು ನಿಲ್ಲೆನುತಲಾ ಕುಂಡಳಿತ ಕಾರ್ಮುಕನೆಚ್ಚು ಕಡಿದನು (ಕುವ್ಯಾಕ. ೧೧-೨೫); ಉಲಿಯದಿರ್ಪುದು ಕೋಕಿ ನಲಿಯದಿರ್ಪುದು ಕೇಕಿಯುಲಕದಿರ್ಪುದು ಕೊಂಚೆಯಲುಕದಿರ್ಪುದದಂಚೆ (ಚಬಪು. ೩೫-೩೧); ನಿನ್ನ ಪಂಚಾಂಗ ಸಾಕು, ನಾನು ಇಲ್ಲಿಂದ ಉಲುಕುವುದಿಲ್ಲ (ಮುಂಬಯಿ. ೫-೪೮). ೨. ಅಳುಕುಂಟಾಗು; ಶಂಕೆತೋರು : ಗಿಳಿಯ ರೂಪಿನ ಗುಪ್ತಚರನೆಂದುಲುಕುತಿದೆ ಚಿತ್ತದಲಿ ಚಿತ್ತವ ತಿಳುಹೆನಲು ಕಂಡಜಾಡು ಬೇಹಿನ ದೂತನಿವನೆಂದು (ತೊರರಾ. ೬-೪-೨೪); ತಾನು ಇಂಥಹ ಹೊಲಸು ಕೆಲಸಕ್ಕೆ ಏಕಾದರೂ ಒಪ್ಪಿಕೊಂಡೆನೋ ಎಂದು ಉಲುಕಿದ (ಬೆಂದಜೀ. ೧೦೯). **ಉಲಕು** : ೧. ನನ್ನ ಸಹಾಯದ ಹೊರತು ಈ ಹುಡುಗನು ಉಲಕಲಿಕ್ಕಿಲ್ಲ (ಮುಂಬಯಿ. ೫-೧೪೭). ೨. ಮನಸು ಉಲಕುತ್ತದೆ (ರೂಢಿ). **ಉಲಿಕು** : ೧. ನೆನಹಿನೊಳ್ ಬಗೆವೆರ್ಚೆ ಪಂಚಾಮೃತಂ ಮಾಡಿ ಉಲಿಕಿ [ಪಾಠಾಂ. ಅಲುಕಿ]ದೊಡೆ ಪಂಚಾಮೃತಂಗಳಂ ಮಾಡುತುಂ (ರುದ್ರರ. ೫೭-೧೫).

**ಉಲುಕಾಡು** = ಅಲುಗಾಡು; ಅಲ್ಲಾಡು; ಚಲಿಸು : ನಮ್ಮ ಶರೀರವು ನೀರಿಗಿಂತ ಹಗುರಿರುವುದರಿಂದ ಉಲುಕಾಡದೆ ಸುಮ್ಮನೆ ಬಿದ್ದುಕೊಂಡರೇ ಅದು ತೇಲುತ್ತದೆ (ಮುಂಬಯಿ. ೪-೬೧); ಒಬ್ಬರಾದರೂ ಬ್ರಾಹ್ಮಣೋತ್ತಮರು ಉಲುಕಾಡುತಾರೇನೋ ನೋಡ್ರಿ (ಹೊಸಂಸಾ. ೧೦).

[ದೇ. ‖ ತಮಿ. ಉಟ್ಕು, ಉಲುಕ್ಕು; ಮಲ. ಉಳು; ತುಳು. ಉಳ್ಕು; ತೆಲು. ಉಲುಕು]

**ಉಲುಕು**$_2$ (ನಾ). ಅದುರುವಿಕೆ; ಮಿಡಿಕುವಿಕೆ; ಅದಿರಾಟ : ಅಂಗದೊಳು ನೋವನಕ್ಷಿಯೊಳು ಬೆಳ್ಪಂ ಭಾಳದೊಳು ಬೆಮರನು ಲಲಿತ ಕಂಠದೊಳುಲುಕನಂಘ್ರಿಯೊಳು ಬಿಸಿಯನು . . . ಅರಯ್ದು ಕಾಣದೆ ನೊಂದಳು (ಹಚರಾ. ೧೨-೨೬).

[< ಉಲುಕು. / ತಮಿ. ಉಲುಕ್ಕು; ಮಲ. ಉಳಕ್ಕು; ತುಳು. ಉಲುಕು, ಉಲ್ಕು, ಉಳ್ಕು]

**ಉಲುಕುಮಂತ್ರ**, ಉಳುಕುಮಂತ್ರ (ನಾ). ಉಳುಕನ್ನು ಸರಿಪಡಿಸಲು ಹಾಕುವ ಮಂತ್ರ. **ಉಳುಕುಮಂತ್ರ** : ಅವನಿಗೆ ಉಳುಕು ಮಂತ್ರ ಬರುತ್ತದೆ (ರೂಢಿ). [ಉಲುಕು$_2$ + ಮಂತ್ರ]

**ಉಲುಕುಮಂತ್ರಗಾರ** (ನಾ). ಉಳುಕನ್ನು ಸರಿಪಡಿಸಲು ಮಂತ್ರ ಹಾಕುವವನು : ಉಲುಕುಮಂತ್ರಗಾರನ ಮಂತ್ರದಿಂದ ನನ್ನ ನೋವು ಬಹುಬೇಗ ಕಡಮೆ ಆಯಿತು (ರೂಢಿ).
[ಉಲುಕುಮಂತ್ರ + -ಗಾರ (< -ಕಾಱ)]

**ಉಲುಕೋಚಿ** 'ಉಲಕೋಚಿ' ನೋ.

**ಉಲುಕೋಚಿತನ** 'ಉಲಕೋಚಿತನ' ನೋ.

**ಉಲುಗ**(ನಾ). ದಡ್ಡ; ಮೂರ್ಖ; ಬುದ್ಧಿಯಿಲ್ಲದವನು; ಹುಚ್ಚ(?) : ಡಂಬಕನು ಢಾಳಿಯ ವೃಥಾ ದುಱುದುಂಬಿಗಂ ದುಶ್ಶೀಲಜಾಲಕದಂಬನು ನ್ನತಪಾತಕನು ವಿಶ್ವಾಸಘಾತಕನು ರಂಜಕನು ರಜಹೋಕನುಲುಗನು ನಾಂ ಬಱುಗನೆಂದಿರದೆ ಬಱಿದೆ ನಂದಿ ನೆಱೆ ಪಕ್ಕಾದಿರಕ್ಕಟ ದುಃಖದುರಂಗೆಂದ (ಮದೇಪು. ೩-೨೫). 'ಉಲುಗಿತಿ' ಪರಾ. [ಉಲು + -ಗ$_3$]

**ಉಲುಗಿತಿ** (ನಾ). ಬುದ್ಧಿಕೆಟ್ಟವಳು; ಹುಚ್ಚಿ (?): ಊರಿಗೆ ಹೋಗುವ ದಾರಿಯೊಳಗೊಬ್ಬ ಉಲುಗಿತಿ ಮನೆಯ ಮಾಡಿಕೊಂಡು ದಾರಿಗೊಂಡು ಹೋಗುವಯ್ಯಗಳ ಚಾಂಭೋ . . . ಎನ್ನುತ್ತಿದ್ದಾಳೆ (ಸಿದ್ಧೇವ. ೧೯೯); "ಉಲುಗಿತಿ ಎನೆ ತನುಕರಣೇಂದ್ರಿಯ ಜಾಲಗಳನ್ನುಳ್ಳ ಮಾಯಾಂಗನೆ" (ಸಿದ್ಧೇವ. ಟೀಕ). [ಉಲುಗ + -ಇತಿ$_1$ (< -ಇತ್ತಿ)]

**ಉಲುಗುಲುಗುಪ್ಪಂಡೆ** (ನಾ). ಒಂದು ಬಗೆಯ ಆಟ : ತಪ್ಪದೆ ಬಾಲಕೇಳಿಯೊಳು ಮೇಗುಲುಗುಲುಗುಪ್ಪಂಡೆಯ ಹೂಡಿದಂತೆ ಒಪ್ಪವಡೆದ ಹಿಮದಿಂಡೆಗಳೆಸೆದುವು ಪುಷ್ಪಬಾಣನ ಕಣ್ಮನಕೆ (ಮೋಹತ. ೬-೫೦). [?]

**ಉಲುಪಿ**$_1$ 'ಉಲುಪೆ' ನೋ.

**ಉಲುಪಿ**$_2$ (ನಾ). ಒಂದು ಬಗೆಯ ಮೀನು (ಕ). [?]

**ಉಲುಪು**$_1$ 'ಉಲಿಪು' ನೋ.

**ಉಲುಪು**$_2$ 'ಉಲುಪೆ' ನೋ.

**ಉಲುಪೆ**, ಉಲಪಿ, ಉಲುಪಿ$_1$, ಉಲುಪು$_2$, ಉಳುಪೆ (ನಾ). (ಮದುವೆ ಅಥವಾ ಪ್ರಯಾಣದ ಸಂದರ್ಭಗಳಲ್ಲಿ) ಉಚಿತವಾಗಿ ಕೊಡುವ ಆಹಾರ ಸಾಮಗ್ರಿಗಳು; ಭತ್ಯ; ಕಾಣಿಕೆ : ಹುಲ್ಲು ಉಲುಪೆ ಉಡುಗೊಱೆ ಬಿಟ್ಟು ಕೊಟ್ಟಣ (ಸಾಇಇ. IX-ii, ೪೪೦-೨೬; 1419); ಕುಮಾರರು ದಿಕ್ಕುದಿಕ್ಕಿಂದ ಸಾರವಸ್ತುಗಳುಲುಪೆಯ ಕಳುಹಿದರವನಾರೈವುತಿರ್ದಳಾ ಜನನಿ (ಭರಚ. ೧೯-೪೬); ಊರೂರ್ಗಳಿಂ ತರ್ಪುಲುಪೆಗಳ ಪಣ್ಯಾಯ್ಕುರ್ಬೆಳನೀರ್ಗಳಂ ಕಸನೆಂದು ಮಾಣಿಸಿ (ಚಿಕವಂ. ೭-೧೬); ಊರುಗರು ತಂದೊಪ್ಪಿಸಿದ ನವಸಾರ ಫಲದುಲುಪೆಯೊಳು ಪಥಸಂಚಾರವೇ ನಂದನವಿಹಾರವದೆನಿಸಿತಾತಂಗೆ (ಅಜಚ. ೧-೭). **ಉಲಪಿ** : ಅವರ ಊಟ ಉಡಿಗೆಯ ಸಲುವಾಗಿ ದಿನಾಲು ಉತ್ತಮ ಸಾಮಾನುಗಳ ಉಲಪಿಯು ಹೊತ್ತು ಹೊತ್ತಿಗೆ ಸಿಗುವಂತೆ . . . ವ್ಯವಸ್ಥೆ ಮಾಡಿದ್ದರು (ಛತ್ರಪ. ೧೧೭). **ಉಲುಪಿ**$_1$ : ಇನಿತುಲುಪಿಗಳೇಕೆ ಮಾಮಾಜಿ (ಜಿನರಾ. ೯-೧೧೧). **ಉಲುಪು**$_2$ : ಉಡುಗರೆ ಉಲುಪು ಮನೆದೆರೆ (ಮೈಆರಿ. ೧೯೩೪, ೫೮-೨೪; 1430). **ಉಳುಪೆ** : ಸ್ಥಳಕ್ಕೆ ಕರಸಿಕೊಂಡು ಉಳುಪೆ ಮುಂತಾದ್ದು ಕಳುಹ್ಸಿಕೊಟ್ಟು (ಕಳವಂ. ೧೦-೫).

[?. / ಹಿಂ. ಉಲೂಫ್. / ತಮಿ. ಉಲುಪ್ಪೈ; ತುಳು. ಒಲಿಪೆ; ತೆಲು. ಉಲುಪ, ಉಲುಪಾ]

**ಉಲುಬು** (ಕ್ರಿ). ಅಲುಗಿಸು; ಅಲ್ಲಾಡಿಸು; ಉದಿರಿಸು : ಎಲವೊ ಮಡಿವಳ ನಿನ್ನ ತೊಳಹವು ಚೆಲುವನಾದುವು ನಮ್ಮ ಯಮುನೆಯಲುಲುಬಿ ತೊಳೆದೊಡೆ ಕಪ್ಪಡವು ಬೆಳ್ಪಡಗಳಾಗದಿವೆ ಕೊಳೆದುಕೊಡು ನಾವುಟ್ಟುದನು ನೀ (ಸಾಳ್ವಭಾ. ೧೨-೨೨). P ಇದು 'ಅಲುಬು' ಎಂಬುದರ ರೂಪಾಂತರವಿರಬಹುದೆ? [ದೇ. ‖ ತಮಿ. ಉಲುಪ್ಪು. ತೆಲು. ಉಲುಪು]

**ಉಲುವು** 'ಉಲಿವು' ನೋ.

**ಉಲುಹು** 'ಉಲಿವು' ನೋ.

**ಉಲುಹುಗೆಡು** (ಕ್ರಿ). ಧ್ವನಿಯಡಗು; ನಿಶ್ಶಬ್ದವಾಗು: ಬಳಸಿ ಬರಿಯಲು ಕಂಠಪತ್ರದವುಲುಹುಗೆಡದಗ್ಗಳಿಕೆಯೆಂಬೀ ಬ ಲು ಹು ಗದುಗಿನ ವೀರನಾರಾಯಣನ ಕಿಂಕರಗೆ (ಕುವ್ಯಾ.ಆ. ೧-೧೫).

[ಉಲುಹು (< ಉಲಿವು) + ಕೆಡು]

**ಉಲುಹುದೆಗೆ** (ಕ್ರಿ). ಶಬ್ದವಿಲ್ಲವಾಗು; ಅಬ್ಬರವಿಲ್ಲವಾಗು: ಉಲುಹು ದೆಗೆದಿಂಗುವ ಸಮುದ್ರದ ಸಲಿಲದವೊಲಾಯ್ತಖಿಳ ಸೇನಾಜಲಧಿ (ತೊರರಾ. ೧-೧೬-೫). [ಉಲುಹು (< ಉಲಿವು) + ತೆಗೈ]

**ಉಲೂಕ**, ಉಳೂಕ (ನಾ). ೧. ಗೂಗೆ; ಗೂಬೆ: ಅಡಗಿನ ಬಸೆಗೆ ಬಂದೆಜಗಿದವುಲೂಕಧ್ವಾಂಕ್ಷಸಂದೋಹ (ಕುವ್ಯಾಭೀ. ೪-೪೫). ೨. ಒಬ್ಬ ರಾಕ್ಷಸನ ಹೆಸರು: ಅಂದು ಮಹಾಹವಕೆ ನಡೆದುದು ಕಟಕವಲ್ಲಿ ಯುಲೂಕನೆಂಬವನು (ಕುವ್ಯಾಭೀ. ೧-೫೭). ೩. ಒಂದು ನರಕದ ಹೆಸರು: ಸರ್ಪ ಕೂರ್ಮ ವಾಯಸ ಗೃಧ್ರ ಉಲೂಕವೆಂಬೈದು ಮಂತ್ರಿ ನರಕಂಗಳಿಂ (ವಿವೇಕ. ೧೮೦). **ಉಳೂಕ**: ೧. ಕಾಕೋಳೂಕಸೃಗಾಳ ಬಳಾಕೋಪ್ಸ್ಯ ಚಮೂರು (ಸುಕುಮಾ. ೧೧-೯೧ ವ). [ಸಂ.]

**ಉಲೂಖ** (ನಾ). = ಉಲೂಖಲ: ತನ್ನ ಕಾಯಮಂ ಘ...ೋಲೂಖ ದೊಳಗಿಟ್ಟು ಮುಸಲದೊಳೊಲ್ದು (ಅರಾಚ. ೯-೨೦).

[< ಸಂ. ಉಲೂಖಲ]

**ಉಲೂಖಲ** (ನಾ). ಒರಳು: ಗೋಪಿ . . . ದೃಢವಾಗಲುಲೂಖಲದಲ್ಲಿ ಕಟ್ಟ (ಜಗವಿ. ೬-೩೬); ಉಲೂಖಲದ ಸೋಮವಲ್ಲಿಯ ಮುಸಲದ ಮಖ ಶಾಲೆ ಕಣ್ಗೆಸೆದುದು (ಜೈಮಿಭಾ. ೩೩-೩೮). [ಸಂ.]

**ಉಲ್ಕ**, ಉಲ್ಕೆ, ಉಳ್ಕ, ಉಳ್ಕೆ (ನಾ). ೧. ಆಕಾಶದಿಂದ ಕೆಳಕ್ಕೆ ಬೀಳುವ ತೇಜಃಪುಂಜವಾದ ವಸ್ತು: ಗಗನದಿಂ ಬೀಳ್ವ ಪ್ರುಲ್ಕಮಂ ಕಂಡು (ಪಂಪರಾಮಾ. ೧೩-೯೨ ವ). **ಉಲ್ಕೆ**: ಗಗನದೊಳುಲ್ಕೆ ಬೀಳ್ವ ವೊಲು ನೋಡಲು ನೋಡಲಡಂಗಿ ಪೋಪ ಸೋಜಿಗದ ಚಮತ್ಕೃತಿ (ಶತಕ. ೧೯೬-೬೯); ಉಲ್ಕೆಯಂತೆ ಆಕಾಶಕ್ಕೆ ಹಾರಿ ಮಾಯವಾಯಿತು (ವಚಭಾ. ೩೫೮). ೨. ಉರಿಯುವ ಕೊಳ್ಳಿ, —ಪಂಜು: ನೂರಾರು ಉಲ್ಕೆಗಳ ಬೆಳಕಿನಲ್ಲಿ ಒಂದು ವಿಶಾಲ ಜನಸಮೂಹ ನೃತ್ಯಗಾನವಾದ್ಯಗಳಿಂದ ದಿಙ್ಮಂಡಲವನ್ನು ಮುಖರಿತಗೊಳಿಸುತ್ತಿತ್ತು (ಬಾಣಾ. ೩೦೮). **ಉಳ್ಕೆ**: ೧. ಅಗಳ್ ಪ್ರಳಯದುಳ್ಕಮುಳ್ಕುವಂತೆ ತನ್ನೆಚ್ಚಂಬು ಮುನಿಕುಮಾರನ ಕಣ್ಣೊಳಮೆರ್ದೆಯೊಳಮುಳ್ಕೆ (ಪಂಪಭಾ. ೧-೧೧ ವ); ಬಾಳುಡಿ ಪಾಜಿ ಬೀಟಿ ಪಗಲುಳ್ಕದವೋಲ್ (ಪಂಪರಾಮಾ. ೧೩-೬೩). **ಉಳ್ಕಿ**: ಧುಮ್ಮಿಕ್ಕಿದನು ಧರೆಗೆ ಸೌಮಿತ್ರಿ ತಾನುಳ್ಕೆಯೊಲ್ (ಶ್ರೀರಾಮಾ. ೧೫೮-೧೭೬).

[< ಸಂ. ಉಲ್ಕಾ]

**ಉಲ್ಕಾಪಾತ** (ನಾ). ಆಕಾಶದಿಂದ ತೇಜಃಪುಂಜವಾದ ವಸ್ತು ಕೆಳಕ್ಕೆ ಬೀಳುವುದು: ಆಗಸದೊಳೊಗೆವ ಧೂಮಕೇತುಗಳಂ ವಿಜಯ ಕೇತುಗಳೆಂದುಂ ಕಣ್ಣೊಳುಳ್ಕುವುಲ್ಕಾಪಾತಮಂ ನಿಜಪ್ರತಾಪಾನಲಸ್ಫುಲಿಂಗಂಗಳೆಂದುಂ (ಪಂಪರಾಮಾ. ೧೪-೧೨೮ ವ); ಆಕಾಶದಲ್ಲಿ ಮಿಂಚಿನಂತೆ ಒಂದುಕ್ಷಣ ಪ್ರಕಾಶಮಾನವಾಗಿ ಕಾಣುತ್ತದೆ. ಆಗ ಅವನ್ನು 'ಉಲ್ಕಾಪಾತ' ವೆಂದು ಕರೆಯುತ್ತಾರೆ (ಆಕಾಶ. ೩೮).

[ಸಂ. (ಉಲ್ಕಾ + ಪಾತ)]

**ಉಲ್ಕಾಮುಖ** (ನಾ). ಒಂದು ಬಗೆಯ ಆಯುಧ: ಬಿಲ್ಲು ತೀರು . . . ಉಲ್ಕಾಮುಖ . . . ಸಾಧನ ವಿಶೇಷಂಗಳ್ (ವಿವೇಕ. ೨೬೨).

[ಸಂ. (ಉಲ್ಕಾ + ಮುಖ)]

**ಉಲ್ಕೆ** 'ಉಲ್ಕ' ನೋ.

**ಉಲ್ಟಾ**, ಉಲ್ಟಿ, ಉಳ್ಟಾ (ನಾ). ೧. ಎದುರುಮುಖ; ವಿರುದ್ಧವಾದ ದಿಕ್ಕು; ತಲೆಕೆಳಗು. ೨. (ಉಕ) ವಾಂತಿ. ೩. ಅಂಗಿಯ ಒಳಮೈ (೬). **ಉಲ್ಟಿ**: ೨. (ಉಕ). **ಉಳ್ಟಾ**: ೧. ಉಳ್ಟಾ ಸೀದಾ ವಿಷಯ (ಚಂಗೂಲಿ. ೧೪).

ಉಲ್ಟಾಪಲ್ಟಿ = ಅಸ್ತವ್ಯಸ್ತ; ತಲೆಕೆಳಗು: ಅವನು ಪರೀಕ್ಷೆಯಲ್ಲಿ ಉಲ್ಟಾಪಲ್ಟಿ ಹೊಡೆದಿದ್ದಾನೆ (ರೂಢಿ).

[←ಮರಾ. ಉಲಟ, ಉಲಟಾ, ಉಲಟೀ; ಹಿಂ. ಉಲಟಾ, ಉಲಟೀ]

**ಉಲ್ಟಿ** 'ಉಲ್ಟಾ' ನೋ.

**ಉಲ್ಪ** (ನಾ). = ಉಲ್ಬ: ಜಲ್ಪಿಸಲು ಅರುದಿಂಗಳಾದಿಯದುಲ್ಪ ನವ ಮಾಸಾಂತ್ಯ ಸುರಪತಿ ಕಲ್ಪಿಸುವ ನವರತ್ನವೃಷ್ಟಿಯ ಮೂರು ಸಂಜೆಯಲೀ (ಬಜ್ಜಪು. ೯-೩೬). [< ಸಂ. ಉಲ್ಬ]

**ಉಲ್ಬ** (ನಾ). ಜರಾಯು; ಮಾಸು; ಕಸ: "ಕೂಸಿರ್ಪ ಚೀಲಂ ಜರಾಯುವೆನಿಕ್ಕುಮಾ ತಟದು ಗಲ್ಲೆ ಉಲ್ಬಮೆನಿಕ್ಕು" (ಮಂಗರಾ. ೯೧-೮).

[ಸಂ.]

**ಉಲ್ಬಣ** (ಗು). ೧. ತೀವ್ರವಾದ; ಉಗ್ರವಾದ; ಅತಿರೇಕದ; ಹೆಚ್ಚಿನ: ಉಲ್ಬಣ ನಿರರ್ಗಳ ವೃತ್ತಿಯಿಂದೆಸೆವ ಪಣಗಣದಿನಪಯರ ಮವಂ ನಗುತೆ ಪರದರೊಪ್ಪಿದರಾ ವಿಪಣಿಯೊಳು (ಪದ್ಮರಾ. ೮-೩೭). (ನಾ). ೨. ತೀವ್ರತೆ; ಅತಿಶಯ; ಅತಿರೇಕ: ಆಕ್ರೋಶದುಲ್ಬಣದೊಳಂದು ನಾಂ ತಮ್ಮನ ವಿನಯಮಂ ಕಿ ವು ಳ್ಗೆ ೯ ಳ್ದು (ಶ್ರೀರಾದೂ. ೩೧೯-೨೯೭). ೩. ರಾಶಿ; ಮೆದೆ: ಅಂಗದಂಗಡಿ ಪೊಸಕಂಡದಿಂದೆ ನೆಣದುಲ್ಬಣ ಮಂತ್ರದ ಮಂತಣಂ (ರಾಜಶೇ. ೬-೭೪).

ಉಲ್ಬಣವಾಗು = ತೀವ್ರವಾಗು; ಉಗ್ರವೆನಿಸು: ಅವರಲ್ಲಿ ಮೊದಲೇ ಇದ್ದ ಪಿತ್ತವಿಕಾರ ಇದ್ದಕಿದ್ದಂತೆ ಉಲ್ಬಣವಾಯಿತು (ಬಿಸ್ತಕ. ೧೧೪). [ಸಂ.]

**ಉಲ್ಬಣಗೊಳ್** (ಕ್ರಿ). ತೀವ್ರವಾಗು; ಉಗ್ರವೆನಿಸು. 'ಉಲ್ಬಣಗೊಳಿಸು' ಪರಾ. [ಉಲ್ಬಣ + ಕೊಳ್₁]

**ಉಲ್ಬಣಗೊಳಿಸು** (ಕ್ರಿ). ತೀವ್ರಗೊಳಿಸು; ಉಗ್ರವಾಗಿಸು: ಅವಳ ಭ್ರಮೆಯನ್ನು ಮತ್ತಷ್ಟು ಉಲ್ಬಣಗೊಳಿಸುವ ಘಟನೆಯೊಂದು ನಡೆಯಿತು (ಪದ್ಮಸ. ೮೦). [ಉಲ್ಬಣಗೊಳ್ + -ಇಸು₁]

**ಉಲ್ಬಣಸ್ಥಿತಿ** (ನಾ). ತೀವ್ರವಾದ ಸ್ಥಿತಿ; ಉಗ್ರವಾದ ಪರಿಸ್ಥಿತಿ: ತಾಯಿ ಮಗನುಲ್ಬಣಸ್ಥಿತಿಗೆ ಕದಿದು ಕಾತರೆಯಾಗಿ (ಶ್ರೀರಾಮಾ. ೧೯-೫೦೫). [ಉಲ್ಬಣ + ಸ್ಥಿತಿ]

**ಉಲ್ಬಣಾವಸ್ಥೆ** (ನಾ). = ಉಲ್ಬಣಸ್ಥಿತಿ: ಉಲ್ಬಣಾವಸ್ಥೆಗೆ ಮುಟ್ಟಿದಾಗ ತಮ್ಮ ನಡೆನುಡಿಗಳ ಮೇಲೂ ವರ್ತನೆಯ ಮೇಲೂ ನಿಯಂತ್ರಣ ತಪ್ಪಿ ಮನೋರೋಗದ ಚಿಕಿತ್ಸಾಲಯಕ್ಕೆ ಸೇರುವ ಸ್ಥಿತಿಗೆ ಬರುವರು (ಶಿಕ್ಷದ. ೬೬೮). [ಉಲ್ಬಣ + ಅವಸ್ಥೆ]

**ಉಲ್ಬಣಿಸು** (ಕ್ರಿ). ತೀವ್ರವಾಗು; ಉಗ್ರವಾಗು: ಕಲವನಪುರದ ಅರಸನ ಸಲ್ಲದ ಮಾತುಗಳನ್ನು ಕೇಳಿ ಕೇತಮಲ್ಲನಿಗೆ ಸಿಟ್ಟು ಉಲ್ಬಣಿಸಿ ಬಂತು (ಶಾಂತಲಾ. ೧೪೨). [ಉಲ್ಬಣ + -ಇಸು₁]

**ಉಲ್ಮುಕ** (ನಾ). ಉರಿಯುವ ಕೊಳ್ಳಿ: "ಅಲಾತಂ, ಉಲ್ಮುಕಂ - ಈ ೨ ಕೊಳ್ಳಿ" (ಹಲಾಯು. ೧೨-೬೭). [ಸಂ.]

**ಉಲ್ಲಂಗಿ** (ನಾ). ಒಂದು ಪಕ್ಷಿ: "ಉಲ್ಲಂಗಿ-ಚೋಟುಮೂಗಿನ ಗೇಣುದ್ದಗರಿಯ ಹಕ್ಕಿ; ಹಾರುಬುರುಕ" (ಜಾನಕೋ. ೨೨). [?]

**ಉಲ್ಲಂಘನ** (ನಾ). ೧. ದಾಟುವುದು; ಹಾರುವುದು. ೨. ಮೀರುವುದು; ಅತಿಕ್ರಮಣ: ಪಾಟಿಯಲ್ತು ಪಿತೃವಾಕ್ಯೋಲ್ಲಂಘನಂ ರಾಘವಾ (ಪಂಪರಾಮಾ. ೬-೮೨). [ಸಂ.]

**ಉಲ್ಲಂಘನೆ** (ನಾ). = ಉಲ್ಲಂಘನ ೨ : ಸಂಸ್ಥೆಯ ನಿಯಮ ಉಲ್ಲಂಘನೆಯಾಗುತ್ತಿರುವುದನ್ನು ನಾನು ನೋಡಿಯೂ ಸುಮ್ಮನಿರಲಾರೆ (ರಂಗರೋ. ೫೬). [ಸಂ. ಉಲ್ಲಂಘನ]

**ಉಲ್ಲಂಘಿಸು** (ಕ್ರಿ). ೧. ದಾಟು ; ಹಾರು : ಬೇಂಟೆಕಾಜರ ಸರಳುಗಳ ಗುಲ್ಲಂಘಿಸುತ ರಭಸದೊಳಗೆಯ್ತರಲು (ಬಸವ. ೩೪–೨೪). ೨. ಮೀರು ; ಅತಿಕ್ರಮಿಸು : ಆ ದಿವ್ಯವಚನಮನುಲ್ಲಂಘಿಸಿ ನೀರೆಟ್ಟೆಪೋಪಿನಂ ನೀರಂ ಕುಡಿದು (ಪಂಪಭಾ. ೮–೩೯ ವ) ; ಗುರುವಚನವನುಲ್ಲಂಘಿಸಿ ಚರಿಯಿಸಲಣ ಮಾಗದು (ಧರ್ಮಾಮೃ. ೫–೧೫೦) ; ಉಲ್ಲಂಘಿಸುವರುಂಟೆ ವಿಧಿಕೃತವನು (ಜೈಮಿಭಾ. ೩೦–೨೬) ; ಆಜ್ಞೆಯನ್ನು ಉಲ್ಲಂಘಿಸಿದವರಿಗೆ ಶಿಕ್ಷೆ ಏನು (ನೀತಿಚಿಂ. XX, ೩೧). [ಉಲ್ಲಂಘನ + –ಇಸು₃]

**ಉಲ್ಲಟೆ** (ನಾ). ಚಂಚಲತೆ ; ಹೊರಳಾಟ. 'ಉಲ್ಲಟಿಸು' ನರಾ. [< ಸಂ. ಉಲ್ಲುಠನ]

**ಉಲ್ಲಟಿಸು** (ಕ್ರಿ). ಹೊರಳಾಡು ; ಚಂಚಲವಾಗು : ಸಿಲ್ಲದ ತಕ್ಕೆಲರ್ಗಟಿಗೆಯೊಳ್ಕಳಿವಾ ಫಲಮೊಂದು ಮೂರ್ತಮುಂ ಸಲ್ಲದ ಬೇಂಟಮುಲ್ಲಟಿಸಿ ಮಿಂಚುವ ಮಿಂಚು (ಲೀಲಾವ. ೧–೩೧) ; ಹೃದ್ಯಚಿತ್ರತರಂಗ ಮಿಂಚಿನಂತುಲ್ಲಟಿಸಿ ಆಟಮುಟಿಸಿ ತಾನು ಮಣಿದುದೆ ಭಂಗಿ (ಉದ್ಯಾಕಿ. ೩–೭). [ಉಲ್ಲಟ + –ಇಸು₃]

**ಉಲ್ಲಡೆ** (ನಾ). (ಕರಾ) ಮೆರವಣಿಗೆ ಹೋಗುವಾಗ ಮೇಲೆ ಹಿಡಿಯುವ ಆವರಣ ; ವಿತಾನ ; ಮೇಲ್ಕಾಪು. [← ತೆಲು. ಉಲ್ಲಡ]

**ಉಲ್ಲವ** (ನಾ). ವಿತಾನ ; ಮೇಲ್ಕಟ್ಟು : ಪಲವುಂ ನೇತ್ರದ ಪಟುವುಲ್ಲವಂಗಳ್ ಧ್ವಜಪತಾಕೆಗಳುಮನೆತ್ತಿಸಿ (ವಡ್ಡಾರಾ. ೩೮–೨೭) ; ಪಿರಿಯ ಪಂದರಂ ಮಾಡಿಸಿಯಲ್ಲಿ ನಾನಾ ಪ್ರಕಾರದ ನೇತ್ರಪಟುಯುಲ್ಲವಂಗ[ಳುಮ]ಂ ಧ್ವಜಂಗಳುಮಂ ಕಟ್ಟಿಸಿ (ವಡ್ಡಾರಾ. ೧೪೨–೧೦). [ಪ್ರಾ. ಉಲ್ಲವ]

**ಉಲ್ಲಸ** (ನಾ). = ಉಲ್ಲಾಸ : ತನುವೆರಸು ಕೈಲಾಸಕುಲ್ಲಸದೆ ಪೋಪ ನವನಿಯೊಳಿಲ್ಲೆನಲ್ (ಉದ್ಭಟ. ೧೨–೧೦೨). [< ಸಂ. ಉಲ್ಲಾಸ]

**ಉಲ್ಲಸಿತ** (ಗು). ೧. ಪ್ರಕಾಶಮಾನವಾದ ; ಹೊಳೆಯುವ. ೨. ರಮ್ಯವಾದ ; ಸೊಗಸಾದ : ಕರತಳಪಲ್ಲವೋಲ್ಲಸಿತ ಹೇಮ ಚಾಮರ ಪವನವಿಲೋಲದುಕೂಲವಸನಪರಿವೃತ (ಆದಿಪು. ೨–೨ ವ). ೩. ಸುಖಕರವಾದ ; ಸಂತೋಷಕರವಾದ. (ನಾ). ೪. [ಸಂಗೀತ] ಇಪ್ಪತ್ತೆರಡು ಬಗೆಯ ಶ್ರುತಿಗಮಕಗಳಲ್ಲಿ ಒಂದು : ಸ್ಫುರಿತ . . . ಉಲ್ಲಸಿತ . . . ಇಪ್ಪತ್ತೆರಡೇ ಶ್ರುತಿಗಮಕಂಗಳು (ವಿವೇಕ. ೨೩೨). [ಸಂ.]

**ಉಲ್ಲಸಿಸು** (ಕ್ರಿ). ೧. ಪ್ರಕಾಶಿಸು ; ಹೊಳೆ. ೨. ಪ್ರಕಾಶಿಸುವಂತೆ ಮಾಡು. ೩. ಸಂತೋಷವಾಗಿರು ; ಉತ್ಸಾಹಗೊಳ್ಳು. [ಉಲ್ಲಸನ₂ + –ಇಸು₃]

**ಉಲ್ಲಾಘ** (ನಾ). ೧. ರೋಗದಿಂದ ಗುಣವಾದವನು : "ಕುತ್ತವಾಗಿ ಮಾಣ್ದವನಂ ಉಲ್ಲಾಘನೆಂಬುದು" (ಹಲಾಯು. ೬೨–೨೨೫). ೨. ಸುಖಿ. [ಸಂ.]

**ಉಲ್ಲಾಪ** (ನಾ). ೧. ವ್ಯಂಗ್ಯವಾದ ನುಡಿ ; ಕಟಕಿ ; ಅಣಕದ ಮಾತು : "ಕೊಂಕುವೆರಸಿದ ನುಡಿ ಉಲ್ಲಾಪಮೆಂಬುದು" (ಹಲಾಯು. ೨೪–೧೪೯). ೨. ಗಟ್ಟಿಯಾದ ಕೂಗು, —ಮಾತು. ೩. ದುಃಖ ಅಥವಾ ಬೇನೆಯಲ್ಲಿ ಉಂಟಾಗುವ ಧ್ವನಿಯ ವ್ಯತ್ಯಾಸ (೬). [ಸಂ.]

**ಉಲ್ಲಾರ**, **ಉಲಾರ** (ನಾ). ೧. ಗೌಸು. ೨. ದಿಂಬು ಹಾಕಿರುವ ಆಸನ, —ಗಾದಿ : ಪೊಸತು ಉಲ್ಲಾರಂ (ಶಮದ. ಮ. ೫೨ ಪ್ರಯೋ). ೩. ಜಾಲರಿ ; ಬೆಳಕಂಡಿ(?) : ಕುಳ್ಳನು ಅಲ್ಲಿಯ ಉಲ್ಲಾರದೊಳಗಿಂದ ಇಣಿಕಿ ಹಾಕಿದಾಗ ನರಹರಿರಾಯರನು ಸಂದೂಕದೊಂದಿಗೆ ಕುಳಿತು ಅದರೊಳಗಿನ ನಗಗಳನ್ನೆಣಿಕೆಹಾಕುತ್ತಿರುವುದು ಅವನಿಗೆ ಕಂಡಿತು (ಇಂದುಮು. ೫೬). **ಉಲಾರ** : ೨. ಸಜ್ಜುಮಾಡಿಯಿರುವ ಸರಿಗೆ ಉಲಾರಗಳಲ್ಲಿ ಕುಳಿತಿರಲು (ಸೌಗಂಧಿ. ೩೧೧–೧೬). [?. / ತೆಲು. ಉಲ್ಲಾರು]

**ಉಲ್ಲಾಸ** (ನಾ). ೧. ಉತ್ಸಾಹ ; ಸಂತೋಷ ; ನಲಿವು : ತಮ್ಮ ವಿಕಾಸೋಲ್ಲಾಸದಿಂ ತಮ್ಮಿಕಿಸಿರಿಮುಳಿದಿಂ . . . ಸಂಪತ್ತುವೆತ್ತಿರ್ದುದು (ಜಗವಿ. ೪–೬೫). ೨. ಕಾಂತಿ ; ಪ್ರಕಾಶ. ೩. [ಕಾವ್ಯಮೀ] ಒಂದು ಅರ್ಥಾಲಂಕಾರ : "ಒಂದರ ಗುಣದೋಷಂಗಳಿಂ ಪೆರತೊಂದರ್ಕೆ ಗುಣದೋಷಂಗಳಪ್ಪುದು ಉಲ್ಲಾಸಾಲಂಕಾರಂ . . . ಉದಾ : –ಬಹುವಿಧದೊಳ್ ಪೊಣರ್ದುಂ ನಿರ್ವಹಿಸದೆ ಚಿಕದೇವರಾಯನೊಳ್ ಸಾಮಂತರ್ ಮಹಿಶೂರ ಗಡಿಯ ಸನಿಯದ ಮಹಿಯಂ ಪಡೆದಾತ್ಮವಂಶಜರನುಜಿಜಿವಿರ್ (ಅಪ್ರತಿ. ೧೧೩–೧೪೫). ೪. (ಗ್ರಂಥಗಳಲ್ಲಿನ) ಅಧ್ಯಾಯ ; ಆಶ್ವಾಸ ; ಸಂಧಿ. [ಸಂ.]

**ಉಲ್ಲಾಸಗಾರ** (ನಾ). ಉತ್ಸಾಹಶಾಲಿ ; ವಿನೋದಪ್ರಿಯ. [ಉಲ್ಲಾಸ + –ಗಾರ (< –ಕಾಱ)]

**ಉಲ್ಲಾಸಗಾರ್ತಿ** (ನಾ). ಉತ್ಸಾಹಶಾಲಿನಿ ; ವಿನೋದಪ್ರಿಯೆ (೬). [ಉಲ್ಲಾಸಗಾರ + –ತಿ₁ (< –ಇತ್ತಿ)]

**ಉಲ್ಲಾಸವೆಱು** (ಕ್ರಿ). ಉತ್ಸಾಹವನ್ನು ಹೊಂದು ; ಸಂತೋಷಿಸು : ಲೇಸೆನಿಪ ಕೈದೀವಿಗೆಗಳ ವಿಕಾಸದಿಂ ಮಿಗೆ ಪಿಡಿದುಕೊಂಡುಲ್ಲಾಸವೆತ್ತಾಳ್ದರಿಯ ಮೇಲಿರುಳೋವಿ ತಿರುಗುತಿರೆ (ಬಸವ. ೧೬–೨೩). [ಉಲ್ಲಾಸ + ಪೆಱು₁]

**ಉಲ್ಲಾಸಿಸು** (ಕ್ರಿ). = ಉಲ್ಲಾಸವೆಱು : ಶಂಕರನದರ್ಕುಲ್ಲಾಸಿಸುತ್ತೆ ಶಿರದೊಳ್ ಧರಿಸಿ ತೋಱಿದಂ ಭಕ್ತಜನಕೆ (ಪದ್ಮರಾ. ೧೦–೨೦೩). [ಉಲ್ಲಾಸ + –ಇಸು₃]

**ಉಲ್ಲಾಳ** (ನಾ). [ನಾಟ್ಯ] ಒಂದು ಬಗೆಯ ನೃತ್ಯಭಂಗಿ : ನಯನಾನಂದಮನಿತ್ತುದಿಂದ್ರನಟನಪ್ರಾಗಲ್ಭ್ಯದಿಂ ಕೂಡೆ ಚಾರಿಯೊಳುಲ್ಲಾಳದ ಬೀಗದೊಳ್ . . . ಸೂಚೀನರ್ತನಂ (ಅನಂತಪು. ೫–೯೭) ; ತಾಳಾನುಗತ ಮೆನಿಪ್ಪುಲ್ಲಾಳಂ ಮೊದಲಾಗಿ ಸೊಗಯಿಸುವ ಪದಿನಾಱುಂ ಪಾಳಕಳೆಯ ನಮರ್ದಂ ವಿಭುಲೀಲೆಯಿನವಂ ಬಗೆಗೀಯುತಂ ಬಾಜಿಸಿದಂ (ಪಾರ್ಶ್ವಪು. ೧೨–೧೮). [ಪ್ರಾ. ಉಲ್ಲಾಲ = ಮೇಲೆ ನೆಗೆಯುವಿಕೆ. / ಮರಾ. ಉಲಾಳ]

**ಉಲ್ಲಿ**₁, **ಉಲ್ಲೆ** (ನಾ). ನಾದಿದ ಹಿಟ್ಟು ; ಕಣಕ : ಸಮುದ್ರದೊಳಗೆ ಉಲ್ಲಿಯಂತೆ ಮೃದುಶರೀರವುಳ್ಳದ್ದೊಂದು ಜಂತುವಿರುತ್ತದೆ (ಮುಂಬಯಿ. ೫–೨೯). **ಉಲ್ಲೆ** : (ಸ್ಯಾಂಡರ್). [?]

**ಉಲ್ಲಿ**₂ (ಅ). ಈ ನಡುವಣಸ್ಥಳದಲ್ಲಿ ; ಮಧ್ಯದಲ್ಲಿ : ಉಲ್ಲಿಂಡೋಱುವಮೇಂ ಬಲ್ಮುಂಣಂ ತಂದ ಕೂಟನೂ ಸಂಗಮದೊಳ್ (ಕವಿರಾ. ೧–೬೨) ; ಅಲ್ಲಿ ಇಲ್ಲಿ ಎಲ್ಲಿ ಉಲ್ಲಿ ಎಂದು ಸ್ಥಳವಿಶೇಷದೊಳಮಾ ಶಬ್ದಮೊಳವು (ಶಮದ. ೧೧೯ ಪ್ರಯೋ). [?]

**ಉಲ್ಲಿಖಿತ** (ಗು). ೧. ಬರೆಯಲ್ಪಟ್ಟ. ೨. ಕೆತ್ತಲ್ಪಟ್ಟ. (ನಾ). ೩. ಉಲ್ಲೇಖ : ಬಿ. ಎಂ. ಶ್ರೀಕಂಠಯ್ಯನವರು ಹೊಸಮಾರ್ಗದ ಪದ್ಯರಚನೆಗೆ ತೊಡಗಿದರೆಂಬ ವಿಷಯದಲ್ಲಿ ಎಲ್ಲಿಯಾದರೂ ಉಲ್ಲಿಖಿತವಾಗಿರುವಂತೆ ನನಗೆ ತಿಳಿದಿಲ್ಲ (ಸಮಾಲೋ. ೮). [ಸಂ.]

**ಉಲ್ಲಿದ** (ನಾ). ಈ ನಡುವಣ ಸ್ಥಳಕ್ಕೆ ಸೇರಿದವನು ; ಮಧ್ಯದವನು : ಉಲ್ಲಿಯಣಂ, ಉಲ್ಲಿದಂ (ಶಬ್ದಾನು. ೪೨೨ ಪ್ರಯೋ). [ಉಲ್ಲಿ₂ + –ದ₂]

**ಉಲ್ಲಿಯಣ** (ನಾ). = ಉಲ್ಲಿದ : ಉಲ್ಲಿಯಣಂ, ಉಲ್ಲಿದಂ (ಶಬ್ದಾನು. ೬೨೩ ಪ್ರಯೋ). [ಉಲ್ಲಿ₃ + -ಅಣ]

**ಉಲ್ಲು, ಉಲ್ಲೂ** (ನಾ). ೧. ಗೂಗೆ; ಗೂಬೆ. ೨. (ಆಲಂ) ದಡ್ಡ ; ಮೂರ್ಖ; ಹೆಡ್ಡ (ಕ). **ಉಲ್ಲೂ** : ೨. ನೀನು ಬಹು ಉಲ್ಲೂ ಕಾಣುತ್ತೀ. ಉತಾವಳಿತನದಿಂದ ಯಾವ ಲಾಭವಿಲ್ಲೆಂಬದು ನಿನಗರಿಯದೇ? (ಮೋಜೀವ. ೬). [← ಹಿಂ. ಮರಾ. ಉಲ್ಲೂ]

**ಉಲ್ಲುಂಠೆ** (ನಾ). ವ್ಯಂಗ್ಯವಾದ ಮಾತು ; ಕಟಕಿ. [ಸಂ. ಉಲ್ಲುಂಠಾ]

**ಉಲ್ಲುಳಿತ** (ಗು). ಸುತ್ತಾಡಿದ; ಹೊರಳಾಡಿದ: ಜಳರುಹನಾಭನ ನಾಭಿಯ ಜಳಬುದ್ಬುದದೊಳಗೆ ಸುರಭಿಪರಿಮಳಮಿಳಿತೋಲ್ಲುಳಿತಾಳಿ ಜಲ [ಜ]ಮಾಯ್ತಾ ಜಳ[ಜ]ದೊಳೊಗೆದಂ ಹಿರಣ್ಯಗರ್ಭ ಬ್ರಹ್ಮಂ (ಪಂಪಭಾ. ೧ ೫). [ಸಂ. ಉಲ್ಲುಲಿತ]

**ಉಲ್ಲೂ** 'ಉಲ್ಲು' ನೋ.

**ಉಲ್ಲೆ** 'ಉಲ್ಲಿ' ನೋ.

**ಉಲ್ಲೇಖ** (ನಾ). ೧. ಅಗೆತ : ಇಕ್ಷ್ವಾಕುಮಹೋಮುವಿದಕಗ್ನಿಯೇ ಸಂಸ್ಕಾರ ಮುಲ್ಲೇಖಸಾಧನಂ ದ್ರವ್ಯಸಿದ್ಧಿ (ಸಿದ್ಧರಾ. ೪-೪). ೨. ಬರೆಹ : ಪ್ರಾಚೀನ ಗ್ರಂಥಗಳಲ್ಲಿ ಸಹ ಅದರ ಉಲ್ಲೇಖವುಂಟು (ಮುಂಬಯಿ. ೪-೧೩೬). ೩. [ಕಾವ್ಯಮೀ] ಒಂದು ಅರ್ಥಾಲಂಕಾರ : "ನಾನಾ ಧರ್ಮಗಳಿರುವ ಪದಾರ್ಥವೊಂದನ್ನು ಒಬ್ಬೊಬ್ಬರು ಒಂದೊಂದು ಪ್ರಕಾರದಿಂದ ತಿಳಿದು ಕೊಳ್ಳುವುದು ಉಲ್ಲೇಖಾಲಂಕಾರ" (ಕೈಪಿಡಿ. ೨೬೯). [ಸಂ.]

**ಉಲ್ಲೇಖನ** (ನಾ). ೧. ಬರೆಯುವುದು. ೨. ಅಗೆಯುವುದು. ೩. ಕೊರೆಯುವುದು. ೪. ವರ್ಣನೆ. 'ಉಲ್ಲೇಖನಂಗೆಯ್' ಪರಾ. [ಸಂ.]

**ಉಲ್ಲೇಖನಂಗೆಯ್** (ಕ್ರಿ). ಬರೆ : ಮಂತ್ರತಂತ್ರಯಂತ್ರ ಸಿದ್ಧನಪ್ಪ ಪರಮೇಷ್ಠಿ ಹರನನುಜ್ಞೆಯಿಂ ಸ್ಥಂಡಿಲಮನಲಂಕರಿಸಿ ಮೆಲ್ಲಮೆಲ್ಲನುಲ್ಲೇಖನಂಗೆಯ್ದಗ್ನಿಯಂ ಪ್ರತಿಷ್ಠೆಯಂ ಮಾಡಿ (ಗಿರಿಕ. ೧೦-೯೫ ವ). [ಉಲ್ಲೇಖನ + ಗೆಯ್ (< ಕೆಯ್₁)]

**ಉಲ್ಲೇಖಿತ** (ಗು). ಬರೆದ; ಸೂಚಿಸಿದ : ಪ್ರಸ್ಥಾನತ್ರಯದಲ್ಲೂ ಈ ವಿಷಯವು ಉಲ್ಲೇಖಿತವಾಗಿದೆ (ಶಕ್ತಿವಿ. ೬೬). [ಸಂ.]

**ಉಲ್ಲೇಖಿಸು** (ಕ್ರಿ). ೧. ಬರೆ; ಲಿಖಿಸು : ಅಲ್ಲಿ ಶ್ರೀನರಹರಿತೀರ್ಥರ ಹೆಸರನ್ನೇ ಉಲ್ಲೇಖಿಸಿಲ್ಲ (ಜಗದಾ. ೬೯). ೨. ಎತ್ತಿಬರೆ ; ಉದ್ಧರಿಸು : ಸರಸ್ವತೀಕಂಠಾಭರಣದಲ್ಲಿ ಸರಸ್ವತೀ ಮತ್ತು ಚಿನ್ನಮ್ಮರ ಪದ್ಯಗಳನ್ನು ಉಲ್ಲೇಖಿಸುವನು (ಸಂಕವ. ೩). ೩. ವರ್ಣಿಸು : ಆ ಕಪಿಚಾಪಲ್ಯವನ್ನು ಇಲ್ಲಿ ಅನುಪಮವಾಗಿ ಉಲ್ಲೇಖಿಸಿದ್ದಾನೆ (ಸಮಾಲೋ. ೧೧೯). [ಉಲ್ಲೇಖನ + -ಇಸು₃]

**ಉಲ್ಲೋಚ** (ನಾ). ವಿತಾನ; ಮೇಲುಕಟ್ಟು (ಕ). [ಸಂ.]

**ಉಲ್ಲೋಲ, ಉಲ್ಲೋಳ** (ಗು). ೧. ಬಲವಾಗಿ ಮೇಲಕ್ಕೆ ಎದ್ದ. (ನಾ). ೨. ದೊಡ್ಡ ಅಲೆ : ರತ್ನಾಕರಮುಲ್ಲೋಲಂಗಳಿಂದಂ ಮಜಿಯಿಸಿ (ಕಾದಂಪೂ. ೪೫೭). **ಉಲ್ಲೋಳ** : ೩. ರಭಸ; ವೇಗ : ಮಸಗಿದ ಜಳನಿಧಿಯ ಕಲ್ಲೋಲದಂತೆ ಪಿರಿದುಮುಲ್ಲೋಳಂಬೆರಸು ಬಂದು ತಾಗುವಾಗಳ್ (ಶಾಂತಿಪು. ೪-೬ ವ). [ಸಂ.]

**ಉಲ್ಲೋಲಕಲ್ಲೋಲ** (ನಾ). ೧. ದೊಡ್ಡ ತೆರೆ: ಉಲ್ಲೋಲ ಕಲ್ಲೋಲ ಮಾಲಾರಂಭ ಪ್ರೋದ್ಧೀನಫೇನ . . . ರೌದ್ರಂ ಸಮುದ್ರಂ (ಕಾವ್ಯಸಾ. ೬೩). ೨. (ಆಲಂ) ಕ್ಷೋಭೆ; ಕಲಕಿಹೋಗಿರುವ ಸ್ಥಿತಿ : ನನ್ನ ಮನಸ್ಸು ಅನೇಕ ಕ್ಷುದ್ರಸಂಕಟಗಳಿಂದ ಉಲ್ಲೋಲಕಲ್ಲೋಲವಾಗಿ ಬಿಟ್ಟಿತು (ರಾಮಾನಿ. ೧೦೬). [ಉಲ್ಲೋಲ + ಕಲ್ಲೋಲ]

**ಉಲ್ಲೋಲಿಸು** (ಕ್ರಿ). ಒಲೆದಾಡು ; ಹೊಯ್ದಾಡು : ಎರಗಿದುರುಬೆಗೆ ತೇರ್ ತತ್ತರಿಸಿ ಉಲ್ಲೋಲಿಸಿತು (ಶ್ರೀರಾಮಾ. ೨೪೮-೫೫೦). [ಉಲ್ಲೋಲ + -ಇಸು₃]

**ಉಲ್ಲೋಳ** 'ಉಲ್ಲೋಲ' ನೋ.

**ಉಲ್ವ** (ನಾ). ಜರಾಯು ; ಮಾಸು ; ಕಸ : "ಉಲ್ವಂ, ಕಲಿಲಂ - ಈ ೨ ಗಲ್ಲಿಗಟ್ಟಿದ ನೆತ್ತರು" (ಹಲಾಯು. ೬೨-೩೪೬). 'ಉಲ್ಬ' ಪರಾ. [ಸಂ.]

**ಉಲ್ಬಣ** (ಗು). ತೀವ್ರವಾದ ; ಉಗ್ರವಾದ ; ಹೆಚ್ಚಿನ : ಮಲ್ವಾಸಿನೊಳ್ ಬಿಟ್ಟು ಸೇವಕರ್ ಪರಿಚರಿಸಲುಲ್ಬಣಾತಂಕದಿಂದಾ ಸುಮಂತ್ರಂ ಬೆದರೆ (ಭರಭ. ೪-೨೫). [ಸಂ.]

**ಉವರ್** 'ಉದು' ಪರಾ.

**ಉವರ್ಣ** (ನಾ). ಉಕಾರ ಮತ್ತು ಊಕಾರ : ವರ್ಣಸಂಜ್ಞೆ ಎಂತೆಂದೊಡೆ, ಅವರ್ಣಂ ಇವರ್ಣಂ ಉವರ್ಣಂ ಎಂಬಂತೆ (ಶಮುದ. ೧೦ ಅಡಿಟಿ). [ಸಂ.]

**ಉವಳ್** 'ಉದು' ಪರಾ.

**ಉವಟಿನ್** (ನಾ). ಒಬ್ಬಾತನ ಹೆಸರು : ಊರಾ ತೊಜುವಳ್ಳ ಉವಟಿನ್ ತುಜುವಟ್ಟಿ ಇದಿರೆ ನಡದಿಜಿಂದು (ಎಕ- X, ಮುಳಬಾ. ೯೨-೬; 780). [?]

**ಉವಿ** 'ಉಮ್ಮಿ' ನೋ.

**ಉವಿತ** (ನಾ). [ಗಣಿತ] ಕಳೆಯುವುದು : ಉವಿತಂ ತ್ಯಜಂ . . . ಇಂತಿನಿತುಂ ಕಳೆವುದಕ್ಕೆ ಪೆಸರು (ವ್ಯವಹಾ. ೧೧-೧೨ ವ). [?]

**ಉಶ್** 'ಉಸ್' ನೋ.

**ಉಶನ** (ನಾ). ಶುಕ್ರಾಚಾರ್ಯ; ದೈತ್ಯರ ಗುರು : "ಉಶನನಸುರರ ಗುರುವೆಂದೆನಲು ಶುಕ್ರನು" (ಮಂಗರಾ. ೧೨-೬). [< ಸಂ. ಉಶನಸ್]

**ಉಶೀರ** (ನಾ). ಲಾಮಂಚದ ಬೇರು : "ಉಶೀರಂ, ವೀರಣೀಮೂಲಂ - ಈ ೨ ಬಿಳಿಯಬಾಳಂ" (ಹಲಾಯು. ೧೦೨-೯೬೮). [ಸಂ.]

**ಉಶ್ವಾಸ** (ನಾ). (ಉಕ) ಕೆರೆ ಕಾಲುವೆಗಳಿಂದ ನೀರು ಬಿಡುವ ಸ್ಥಳ; ತೂಬು : ಈ ನಳಕ್ಕೆ ೧೨೦ ಫೂಟಿನ ಅಂತರದಿಂದ ಒಂದೊಂದು ಉಶ್ವಾಸವನ್ನು ಮಾಡಿದ್ದಾರೆ . . . ಈ ಉಶ್ವಾಸಗಳು ಈಗಲೂ ಇರುತ್ತವೆ (ಕಭಾಗ. ೫೩೦). [< ಸಂ. ಉಚ್ಛ್ವಾಸ]

**ಉಷ** (ನಾ). ಬೆಳಗಿನಜಾವ : ಇಂತು ಸುಖಶಯ್ಯೆಯೊಳಿರ್ಪುದುಂ ಉಷದ ಸಮಯಂ ಸಮನಿಸಿತಾಗಳ್ (ಕುಸುಮಾ. ೧-೫೧ ವ). [< ಸಂ. ಉಷಸ್]

**ಉಷಃಕಾಲ** (ನಾ). ಬೆಳಗಿನಕಾಲ; ಪ್ರಾತಃಕಾಲ : ಬಂದ ಬಸಂತಮಾಸದೊಳೊಂದುಮಾಸರದುಷಃಕಾಲದೊಳುಮಾಕಾಂತನಂ ಪೂಜಿಸಿದನು (ರಾಜಶೇ. ೯-೬೬ ವ). [ಸಂ.(ಉಷಸ್ + ಕಾಲ₁)]

**ಉಷಃಪಾನ** (ನಾ). ಬೆಳಗಿನಜಾವ ಎದ್ದಕೂಡಲೇ ತಣ್ಣೀರನ್ನು ಕುಡಿಯುವುದು : ನರಹರಿಯು ಈಗ ಚಹ ಕುಡಿಯುತ್ತಿರಲಿಲ್ಲ, ಉಷಃಪಾನ ಮಾಡುತ್ತಿದ್ದ (ಸಮಜೀ. ೭೪೯). [ಸಂ. (ಉಷಸ್ + ಪಾನ)]

**ಉಷಃಸ್ಮಿತ** (ನಾ). ಬೆಳಗಿನ ಜಾವದ ನಸುನಗೆಯಂತಹ ಬೆಳಕು : ಮನೋಧ್ಯಾನ ನೇಮಿಯೊಳ್ ಸೂರ್ಯೋದಯದ ಸುದೂರಸ್ಮೃತಿಯವೋಲ್ ಲಸತ್ ಗೋಚರಿಸುತಿರ್ದುದು ಉಷಃಸ್ಮಿತಂ (ಶ್ರೀರಾಮಾ. ೪೮೦-೧೫೪). [ಸಂ. (ಉಷಸ್ + ಸ್ಮಿತ)]

**ಉಷಣ** (ನಾ). ೧. ಶುಂಠಿ. ೨. ಮೆಣಸು : "ಕರೆ– ಆಹ್ವಾನೇ ವಸ್ತ್ರದ ಶೋಷಣ, ಗೋಕುಲೇಷು (ವಸ್ತ್ರದಶಾ = ಸೆರಗಿನ ತುದಿ; ಉಷಣ = ಮೆಣಸು)" (ಶಮಧಾ) ; "ಉಷಣಮುದಾ ಮರಿಚಮೆನಲು ಮೆಣಸಕ್ಕು" (ಮಂಗರಾ. ೬. ೪೧–೩೬). ೩. ಹಿಪ್ಪಲಿ. [ಸಂ.]

**ಉಷಣೆ** (ನಾ). "ಹಿಪ್ಪಲಿ" (ಗಂಗಾಮ. ೪೬). [ಸಂ. ಉಷಣಾ]

**ಉಷತಿ** (ನಾ). ಅಮಂಗಳಕರವಾದ ಮಾತು. [ಸಂ. ಉಷತೀ]

**ಉಷರ್ಬುಧ** (ನಾ). ಅಗ್ನಿ; ಬೆಂಕಿ : ನಿಷ್ಠುರಜಿಹ್ವನುಷರ್ಬುಧನಂತಿರೆ ದುರ್ಬುಧನಾರೊಳೊಂದಿ ಪಡೆಯಂ ನೋವಂ (ಚಂದ್ರಪ್ರ. ೧–೪೨). [ಸಂ.]

**ಉಷಸ್ಸು** (ನಾ). ೧. ಬೆಳಗಿನ ಕಾಲ. ೨. ಉಷಃಕಾಲದ ಅಧಿದೇವತೆ: ಪ್ರಾತಃ ಸಂಧ್ಯಾರಾಗವುಳ್ಳವರೂ ಜಗದುತ್ಪಾದಕರೂ ಆದ ಉಷಸ್ಸುಗಳು ಪ್ರತಿದಿನವೂ ತಮ್ಮ ನಿಯಮದ ಪ್ರಕಾರ ಸಂಚರಿಸುತ್ತಾರೆ (ಋಕ್ಸಾರ. ೧೪೦). [ಸಂ. ಉಷಸ್]

**ಉಷಾಸೂಕ್ತ** (ನಾ). ಉಷಃಕಾಲದ ದೇವತೆಯನ್ನು ಕುರಿತು ಹಾಡುವ ಸೂಕ್ತ. [ಸಂ. (ಉಷಾ + ಸೂಕ್ತ)]

**ಉಷಿತ**$_1$ (ಗು). ೧. ಸುಡಲ್ಪಟ್ಟ. ೨. ವೇಗವಾದ. [ಸಂ.]

**ಉಷಿತ**$_2$ (ಗು). ವಾಸಿಸಲ್ಪಟ್ಟ; ನೆಲೆಗೊಂಡ. [ಸಂ.]

**ಉಷೆ** (ನಾ). ೧. ಬೆಳಗಿನಕಾಲ ; ಪ್ರಾತಃಕಾಲ : ಜವನಿಕೆಯಂ ನಿಶಾಚರ ಕಬಂಧವುನಾಡಿಸಲಂಧಕಾರಮಂ ರವಿ ಕಳೆದಿಕ್ಕೆ ತನ್ನ ಕರಪಲ್ಲವದಿಂದುಷೆ ಪಿಂಗೆ (ಪಂರಾಮಾ. ೧೩–೯೫) ; ಏನು ಲಲಿತಾದ್ರಿಯಲಿ ಬೆಳಕುಗಳುಷೆಗೆ ಕಾಂತಿಯನೀವುವು (ಕನ್ನಬಾ. ೧೩೪–೨) ; ಇರುಳಳಿದುದುಷೆ ಮೂಡಿತೊಯ್ಯನೆಯೆ ಬೆಳಗಾಯ್ತು (ಶ್ರೀರಾಮಾ. ೨೬೮–೧೩೬). ೨. ಬಾಣಾಸುರನ ಮಗಳು ; ಅನಿರುದ್ಧನ ಹೆಂಡತಿ. ೩. ಸುಡುವಿಕೆ; ತಾಪ. ೪. ಪಾತ್ರೆ. [ಸಂ. ಉಷಾ]

**ಉಷ್ಟಾಂಗ** (ನಾ). ಒಂದು ಬಗೆಯ ಮುಖವಾದ್ಯ (?) : ಉಷ್ಟಾಂಗದಿಂದ ಸ್ವರಶುದ್ಧವಾಗಿ ಊದಿ (ಶರಚ. ೭೩). [ಸಂ. ?]

**ಉಷ್ಟ್ರ** (ನಾ). ೧. ಒಂಟೆ : "ದಾಸೇರಕಃ . . . ಉಷ್ಟ್ರಃ . . . ಶಂಖಳಕಃ —ಈ ೭ ಒಟ್ಟೆ" (ಹಲಾಯು. ೪೭–೧೨೫). ೨. ಮಣ್ಣಿನ ಪಾತ್ರೆ; ಮಡಕೆ. ೩. ಕುಂಬಾರನ ತಿಗುರಿ; ಚಕ್ರ : "ಉಷ್ಟ್ರ ಕುಲಾಲಚಕ್ರವರಮೃಣ್ಮಯ ಪಾತ್ರೆಗಳುಷ್ಟ್ರವಾಚಕಂ" (ನಾನಾರ. ೮೬). ೪. = ಉಷ್ಟ್ರಪಕ್ಷಿ: ಪಕ್ಷಿವರ್ಗದಲ್ಲಿ ಕಸೋವಾರಿ, ಉಷ್ಟ್ರ, ಉಮು ಮೊದಲಾದುವು (ಬಾಲಪ್ರ. I, ೪೮೯). [ಸಂ.]

**ಉಷ್ಟ್ರತುಂಡ** (ನಾ). ಒಂಟೆಯಂತೆ ಮುಖವುಳ್ಳವನು : ಕರಿವದನದತಿಶಯ ವೃಕಾನನರು ಲಸದುಷ್ಟ್ರತುಂಡವೆನಿಸುವರು (ವೀಶೈಪು. ೩–೧೯–೬). [ಉಷ್ಟ್ರ + ತುಂಡ$_2$]

**ಉಷ್ಟ್ರಪಕ್ಷಿ** (ನಾ). ಒಂಟೆಯಂತೆ ಕೊರಳುದ್ದವಾದ ಹಕ್ಕಿ : ಉಷ್ಟ್ರಪಕ್ಷಿ (ಬಾಲಪ್ರ. I, ೧೩೬) ; ಉಷ್ಟ್ರಪಕ್ಷಿಯ ಮೊಟ್ಟೆ ತುಂಬ ದಪ್ಪವಾಗಿರುತ್ತದೆ (ರೂಢಿ). [ಉಷ್ಟ್ರ + ಪಕ್ಷಿ$_1$]

**ಉಷ್ಟ್ರಪತಿವಕ್ತ್ರ** (ನಾ). = ಉಷ್ಟ್ರತುಂಡ : ಉಷ್ಟ್ರಪತಿವಕ್ತ್ರಂ . . . ರುರುವಕ್ತ್ರನೆಂಬರೆಸೆದರ್ (ರಾಜಶೇ. ೧೪–೧೫೪). [ಉಷ್ಟ್ರ + ಪತಿ$_2$ + ವಕ್ತ್ರ]

**ಉಷ್ಟ್ರಿ** (ನಾ). ಹೆಣ್ಣು ಒಂಟೆ. [ಸಂ. ಉಷ್ಟ್ರೀ]

**ಉಷ್ಟ್ರಿಕೆ** (ನಾ). ೧. ಹೆಣ್ಣು ಒಂಟೆ. ೨. ಮಣ್ಣಿನ ಪಾತ್ರೆ ; ಮಡಕೆ : "ಮಣ್ಣಮಡಕೆ ಉಷ್ಟ್ರಿಕೆ [ಪಾಠಾಂ. ವೃಷ್ಟಿಕೆ] ಯೆನಿಪ್ಪುದು" (ಮಂಗರಾ. ೧೩೮–೨). [ಸಂ. ಉಷ್ಟ್ರಿಕಾ]

**ಉಷ್ಣ** (ನಾ). ೧. ಬಿಸಿ; ತೀಕ್ಷ್ಣತೆ; ಕಾವು : "ತೀವ್ರಂ . . . ಉಷ್ಣಂ, ಪಟು – ಈ ೨ ಉಷ್ಣಂ" (ಹಲಾಯು. ೮–೪೦). ೨. ಪಟುವಾದವನು ; ಉತ್ಸಾಹಶಾಲಿಯಾದವನು. ೩. ಸೆಕೆ ; ತಾಪ : "ಉಷ್ಣಂ ಬಾಷ್ಪಮೆನೆ ಸೆಗಳಿಯುಳ್ಕು" (ಮಂಗರಾ. ೧೪–೮). ೪. ಬೇಸಗೆಯ ಕಾಲ ; ಗ್ರೀಷ್ಮಋತು. ೫. ಒಂದು ನರಕದ ಹೆಸರು : ಉಷ್ಣ . . . ಕಾಲಸೂತ್ರಗಳೆಂಬವೇ ಯೆಂಟುನರಕಂಗಳು (ವಿವೇಕ. ೧೭೯). [ಸಂ.]

**ಉಷ್ಣಗಣ್ಣು** (ನಾ). ಒಂದು ಬಗೆಯ ನೇತ್ರರೋಗ : ಕಾವುಗಣ್ಣು, ಉಷ್ಣಗಣ್ಣು, ನೀರುಗಣ್ಣು, ಜಾರುಗಣ್ಣು, ಸಂಜೆಗಣ್ಣು (ಶುಕಸ. ೪೨೮). [ಉಷ್ಣ + ಕಣ್ಣು (< ಕಣ್)]

**ಉಷ್ಣಜಲ** (ನಾ). ಬಿಸಿನೀರು : ಉಷ್ಣಜಲಮುಕ್ತಿಗಳೊಳ್ ಕರೆಗಣ್ಮೆ (ಶಾಂತಿಪು. ೮–೯೫). [ಉಷ್ಣ + ಜಲ$_1$]

**ಉಷ್ಣಜ್ವರ** (ನಾ). ಒಂದು ಬಗೆಯ ಜ್ವರ : ದೇಹದೊಳಗುಷ್ಣಜ್ವರದ ರೂಪಿನಲಿ ನೆಲಸಿ ಪರಿತಾಪವನೊಡರ್ಚುರ್ (ಬಸವು. ೫೦–೨೫). [ಉಷ್ಣ + ಜ್ವರ]

**ಉಷ್ಣತೆ** (ನಾ). ಉಷ್ಣ ; ಶಾಖ ; ಸೆಕೆ. [ಸಂ. ಉಷ್ಣತಾ]

**ಉಷ್ಣನಯನ** (ನಾ). ೧. ಶಾಖವನ್ನು ಒಯ್ಯುವುದು, —ಸಾಗಿಸುವುದು : ವಸ್ತುವಿನ ಅಣುಗಳು ಒಂದು ಕಡೆಯಿಂದ ಇನ್ನೊಂದಕ್ಕೆ ಉಷ್ಣವನ್ನು ಹೊತ್ತುಕೊಂಡು ಹೋಗುವುದಕ್ಕೆ ಉಷ್ಣನಯನವೆಂದು (convection of heat) ಹೆಸರು (ಭೌತವಿ. ೨೯೪). ೨. ಬಿಸಿಗಣ್ಣು ; ಉರಿಗಣ್ಣು. [ಉಷ್ಣ + ನಯನ]

**ಉಷ್ಣನಾಡಿ** (ನಾ). ನಾಡಿಯಲ್ಲಿ ಒಂದು ಬಗೆ : ಮಯೂರನಾಡಿ . . . ಶೈತ್ಯನಾಡಿ ಉಷ್ಣನಾಡಿ (ಶರಚ. ೪೮೦). [ಉಷ್ಣ + ನಾಡಿ]

**ಉಷ್ಣಪ್ರದೇಶ** (ನಾ). = ಉಷ್ಣವಲಯ : ಏಶಿಯ ಖಂಡದೊಳಗಿನ ಉಷ್ಣಪ್ರದೇಶವು ಹುಲಿಯ ಮೂಲಸ್ಥಾನವು (ಮುಂಬಯಿ. ೪–೩೫). [ಉಷ್ಣ + ಪ್ರದೇಶ]

**ಉಷ್ಣಮಯೂಖ** (ನಾ). ಸೂರ್ಯ; ಬೆಂಗದಿರ: ಉಷ್ಣಮಯೂಖಂ ಸಿಂಹಲಗ್ನದೊಳ್ . . . ಇರೆ ನೃಪಾತ್ಮಜನೆ ನೃಪಂ (ಜಾತಕ. ೧೨–೨೨). [ಉಷ್ಣ + ಮಯೂಖ]

**ಉಷ್ಣಮಾನ** (ನಾ). ಶಾಖದ ಅಳತೆ : ನೀರು ೧೦೦ ಡಿಗ್ರಿ ಸೆಂಟಿಗ್ರೇಡ್ ಉಷ್ಣಮಾನದಲ್ಲಿ ಕುದಿಯುತ್ತದೆ (ರೂಢಿ). [ಉಷ್ಣ + ಮಾನ]

**ಉಷ್ಣಮಾಪಕ** (ನಾ). ಉಷ್ಣವನ್ನು ಅಳೆಯುವ ಸಾಧನ : ಉಷ್ಣಮಾಪಕವನ್ನು ಫಾರ್ಮಾಲ್ಡಿಹೈಡ್ ದ್ರಾವಕದಲ್ಲಿಡಬೇಕು (ಕಲರೋ. ೮೦). [ಉಷ್ಣ + ಮಾಪಕ$_1$]

**ಉಷ್ಣಮಾಪಿ** (ನಾ). = ಉಷ್ಣಮಾಪಕ : ಮಗುವಿಗೆ ಜ್ವರದ ವೇಗ ಇಳಿಯಲಿಲ್ಲ ಎಷ್ಟು ಬಾರಿ ಉಷ್ಣಮಾಪಿಯನ್ನಿಟ್ಟು ನೋಡಿದರೂ . . . ಜ್ವರ ಕಂಡುಬರುತ್ತಿತ್ತು (ಮಹಾಗ. ೩೨೧). [ಸಂ. ಉಷ್ಣಮಾಪಿನ್]

**ಉಷ್ಣರಶ್ಮಿ** (ನಾ). ೧. ಬಿಸಿಯಾದ ಕಿರಣ : ಪೊಂಪುಳಿವೋಯ್ತು ದೀಪ್ತತಪಮೆಂಬಿನಮರ್ಕಕರಂಗಳತ್ತಮಿತ್ತಂ ಪುದಿದುಷ್ಣರಶ್ಮಿ ಪುರುಷಾಕೃತಿಯಂತಿರೆ (ಶಾಂತಿಪು. ೯–೧೦೮). ೨. ಬಿಸಿಯಾದ ಕಿರಣಗಳುಳ್ಳವನು ; ಸೂರ್ಯ. [ಉಷ್ಣ + ರಶ್ಮಿ]

**ಉಷ್ಣರೋಗ** (ನಾ). ಅತಿಉಷ್ಣತೆಯಿಂದ ಬರುವ ರೋಗ ; ಮೇಹವ್ಯಾಧಿ : ಈ ಅಗ್ನಿವೇಗವು ಉಷ್ಣರೋಗವಾಗಿ ಪಾಂಡ್ಯನನ್ನು ಸೇರಲಿ (ಪುರಾವಿ. ೧೬೯). [ಉಷ್ಣ + ರೋಗ]

**ಉಷ್ಣರೋಚಿ** (ನಾ). = ಉಷ್ಣರಶ್ಮಿ: ಆಕಾಶಮಾರ್ಗಶ್ರಮಂಗಳ ನೊಲ್ದಾಱಿಸಲುಷ್ಣರೋಚಿಗೆ ನಿಜೋತ್ಪೀನಾತಪತ್ರಂಗಳಂ ತಳೆವುತ್ತಂ (ಜಗವಿ. ೧-೪೩). [ಸಂ. ಉಷ್ಣರೋಚಿಸ್ (ಉಷ್ಣ + ರೋಚಿಸ್)]

**ಉಷ್ಣವಲಯ** (ನಾ). [ಭೂಗೋಳ] ಸಮಭಾಜಕವೃತ್ತದ ಉಭಯ ಪಾರ್ಶ್ವಗಳಲ್ಲಿರುವ ಬಿಸುಪು ಹೆಚ್ಚಾದ ಭೂಭಾಗ: ಕರ್ಕಾಟಕ ಸಂಕ್ರಾಂತಿ ವೃತ್ತಕ್ಕೂ ಮಕರ ಸಂಕ್ರಾಂತಿ ವೃತ್ತಕ್ಕೂ ನಡುವೆ ಇರುವ ಭಾಗ ಉಷ್ಣವಲಯ (ಭೂವಿವ. ೧೯). [ಉಷ್ಣ + ವಲಯ]

**ಉಷ್ಣವಾಯು** (ನಾ). ಅಜೀರ್ಣ ಸಂಬಂಧವಾದ ಒಂದುರೋಗ. [ಉಷ್ಣ + ವಾಯು]

**ಉಷ್ಣವಾಹಕ** (ಗು). ಉಷ್ಣವನ್ನು ಸಾಗಿಸಬಲ್ಲ; ಶಾಖವನ್ನು ಸಾಗಿಸುವ: ಬೆಳ್ಳಿ ಉತ್ತಮ ಉಷ್ಣವಾಹಕವಲ್ಲವೇನೇ? (ನಿಕಉ. ೮೮). [ಉಷ್ಣ + ವಾಹಕ]

**ಉಷ್ಣವೈತಾಳಿ** (ನಾ). ಒಂದು ಬಗೆಯ ವಿದ್ಯೆ: ಸರ್ವವಿದ್ಯಾಭೇದಿನಿ ಉಷ್ಣವೈತಾಳಿ (ಜಾವುಂಪು. ೨೧೦). [ಉಷ್ಣ + ವೈತಾಳಿ]

**ಉಷ್ಣಾಂಶು** (ನಾ). ಸೂರ್ಯ: ಶಶಾಂಕಂಗೆ ಶೈತ್ಯಮುಮುಷ್ಣಾಂಶುಗೆ ತೇಜಮುಂ ನಿಜಮುವಂ ಮತ್ತೊರ್ವರಾರ್ ಮಾಡಿದರ್ (ಪುಷ್ಪಪು. ೧೨-೩೮). [ಉಷ್ಣ + ಅಂಶು]

**ಉಷ್ಣಿಕೆ** (ನಾ). ಗಂಜಿ: "ಉಷ್ಣಿಕಾ . . . ವಿಲೇಪಿಕಾ – ಈ ೫ ಗಂಜಿ" (ಹಲಾಯು. ೫೩-೧೬೫); "ಕೂರಾಂಬುವುಷ್ಣಿಕೆಯಪ್ಪಾಗುವವೆನೆ ಗಂಜಿ" (ಮಂಗರಾ. ೬೩-೧). [ಸಂ. ಉಷ್ಣಿಕಾ]

**ಉಷ್ಣಿಕ್ಕು** (ನಾ). [ಛಂದ] ಅಕ್ಷರ ಛಂದಸ್ಸಿನಲ್ಲಿ ಏಳನೆಯದು: ಉಷ್ಣಿಕ್ಕೆಂಬ ಛಂದದೊಳೇಱಕ್ಕರಂ ಪಾದಮಾಗಿ ಪುಟ್ಟುವ ವೃತ್ತಂಗಳ್ (ಛಂದೋಂಬು. ೨-೩೧ ವ). [ಸಂ. ಉಷ್ಣಿಕ್]

**ಉಷ್ಣಿಸು** (ಕ್ರಿ). ಬಿಸಿಯಾಗು; ಉಷ್ಣವಾಗು: ನಿದಾಘ ಸಮಯದ ಬಿಸಿಲ ಬೇಗೆಗೆ ಬೆಂದು ನೆಲನುಷ್ಣಿಸಿ [ಪಾಠಾಂ. ನೂಷ್ಣಿಸಿ] ತಳ್ಳೆ ಕಡು ಗಾಢ ಕಾವಲಿಯಂತೆ (ತೊರರಾ. ೨-೪-೧೫). [ಉಷ್ಣ + -ಇಸು₃]

**ಉಷ್ಣೀಷ** (ನಾ). ೧. ರುಮಾಲು; ಮುಂಡಾಸು; ಶಿರೋವೇಷ್ಟನ: ಪಾಗು: ಧವಳರಥಂ ಧವಳೋಷ್ಣೀಷಂ ಶಶಾಂಕಸಂಕಾಶಯಶೋಧವಳಿತ ಭುವನಂ ತಾಗಿದನವಯವದಿಂ ಬಂದು (ಪಂಪಭಾ. ೧೧-೩೯); ನಸುಗಾವಿಯಿಂ ಮಿಱುಗುವುಷ್ಣೀಷಬೃಹತಿಕೆಗಳಿಂ ದೋತ್ರದಿಂ (ಪದ್ಮರಾ. ೫-೩೦). ೨. ಕಿರೀಟ: ಚಂದ್ರಗುಪ್ತನು ಮಾಣಿಕ್ಯಮಯವಾದ ಉಷ್ಣೀಷಮಂ ಧರಿಸಿ (ಮುದ್ರಾಮಂ. ೩೧೦). [ಸಂ.]

**ಉಷ್ಣೀಷಪಟ್ಟ** (ನಾ). ರುಮಾಲಿನ ವಸ್ತ್ರ; ಶಿರೋವೇಷ್ಟನ ಪಟ್ಟಿ: ಉಷ್ಣೀಷಪಟ್ಟಂ ಶಿಖಾಮಣಿಯಂ ಕಂಧರಮಾರದಿಂ . . . ಅಲಂಕೃತನಾಗಿಯುಂ (ಶಾಂತಿಪು. ೧೦-೫೮ ವ). [ಉಷ್ಣೀಷ + ಪಟ್ಟ]

**ಉಷ್ಣೇತರಕಿರಣ** (ನಾ). ಬಿಸಿಯಲ್ಲದ (ತಂಪಾದ) ಕಿರಣಗಳುಳ್ಳವನು; ತಣ್ಗದಿರ; ಚಂದ್ರ: ಕರಮೊಪ್ಪಿತುಷ್ಣೇತರಕಿರಣಂ ವರ್ಷಾಂತ ಸಮಯ ಜಳಧರಪಥದೊಳ್ (ಕವಿರಾ. ೩-೭೬). [ಉಷ್ಣ + ಇತರ + ಕಿರಣ]

**ಉಷ್ಣೋದಕ** (ನಾ). ಬಿಸಿನೀರು. 'ಉಷ್ಣೋದಕಪ್ರವಾಹ' ಪರಾ. [ಉಷ್ಣ + ಉದಕ₂]

**ಉಷ್ಣೋದಕಪ್ರವಾಹ** (ನಾ). ಬಿಸಿನೀರಿನ ಪ್ರವಾಹ, —ಹೊಳೆ: ಉಷ್ಣಪ್ರದೇಶದಿಂದ ಶೀತಪ್ರದೇಶಗಳಿಗೆ ಹರಿಯುವ ಉದಕ ಪ್ರವಾಹ ಸ್ವಭಾವವಾಗಿ ಉಷ್ಣೋದಕಪ್ರವಾಹ (ಭೂವಿವ. ೯೧). [ಉಷ್ಣೋದಕ + ಪ್ರವಾಹ]

**ಉಷ್ಮಕ** (ನಾ). ಬೇಸಗೆಯ ಕಾಲ. [ಸಂ.]

**ಉಸ್, ಉಶ್** (ಅ). ೧. ಆಯಾಸ, ದುಃಖದಲ್ಲಿ ಉಸಿರು ಬಿಡುವ ಧ್ವನಿ. ೨. ಪ್ರಾಣಿಗಳನ್ನು ಬೆದರಿಸಲು ಬಳಸುವ ಉದ್ಗಾರ. ೩. ಎಚ್ಚರಿಸುವಾಗ ಬಳಸುವ ಉದ್ಗಾರ. **ಉಶ್**: ೨. ಉಶ್ ನಡಿ ಅತ್ತ (ರೂಢಿ).

**ಉಸ್‌ಉಸ್‌ಅನ್ನು, ಉಸ್ಸೆನ್ನು** = ನಿಟ್ಟುಸಿರುಬಿಡು; ಸಂಕಟಪಡು: "ಉಸ್ ಉಸ್ ಅನ್ನು–ಎಚ್ಚರಿಸು" (ಜಾನಕೋ. ೨೨); ಪಲ್ಲವಾಧರೆ ಚಿಂತಿಸುತ್ತೆದೆ ತಲ್ಲಣಿಸಿ ವುಸ್ಸೆಂದು ಸುಯ್ಯುತೆ (ಬಸವು. ೩-೧೭); ಸಂದೆಗವೆ ಜಗದಂಬೆ ನೀಮುಸ್ಸೆಂದ ಬಳಿಕೇನಸುರನುಳಿವನೆ (ರಾಮಾಸಂ. ೬-೧೦-೧೧). ಉಸ್ಸಪ್ಪ = ಉಸ್: ಆಚಾರ್ಯರು . . . ಉಸ್ಸಪ್ಪ ಎಂದು ಕುಳಿತರು (ಅಪವಾ. ೫). [ದೇ. ॥ ತುಳು. ಉಸ್; ತೆಲು. ಉಸ್ಸು]

**ಉಸಲಿ, ಉಸಳಿ, ಉಸಳೆ, ಉಸುಳಿ** (ನಾ). ಹೆಸರು, ಕಡಲೆ ಮೊದಲಾದ ಕಾಳು ಅಥವಾ ಬೇಳೆಯನ್ನು ಬೇಯಿಸಿ ಸಂಬಾರ ಹಾಕಿದ ತಿನಿಸು; ಗುಗ್ಗರಿ: "ಅಪಕ್ವಂ, ಪೌಳಿ, ಅಭ್ಯೂಷಃ – ಈ ೩ ಉಸಲಿಯ ಪೆಸರುಗಳು, ಗುಗ್ಗರಿ" (ಸಿದ್ಧಾಂತ. ೨೪೭). **ಉಸಳೆ**: ಕಡಲೆಯ ಉಸಳೆತಂದಿದ್ದೆ (ಕುರಿಹಿಂ. ೪೬); ಹಸಿಬಟಾಣಿಗಳ ಉಸಳಿ (ಬೆವರ. ೨೧೫). **ಉಸಳೆ**: ಹೆಸರು ಮೊದಲಾದವುಗಳ ಉಸಳೆ (ಅಷ್ಟಾಂಗ. ೧೨೩-೩೯). **ಉಸುಳಿ**: ಅಕ್ಕಡಿಕಾಳಿನ ಉಸುಳಿ (ಬೆಳಭಾ. ೭). [?. / ತಮಿ. ಉಶಿಲಿ; ತೆಲು. ಉಚಲಿ. / ಮರಾ. ಉಸಳ್]

**ಉಸಳಿ** 'ಉಸಲಿ' ನೋ.

**ಉಸಳೆ** 'ಉಸಲಿ' ನೋ.

**ಉಸಾಬರಿ** (ನಾ). ಗೊಡವೆ; ಗೋಜು; ತಂಟೆ: ಛೀ ಆಕೆಯ ಉಸಾಬರಿಗೆ ಹೋಗಿಲ್ಲ (ಹುಚ್ಚಾಟ. ೮); ಆ ಬಡವಿಯು ನಿಮ್ಮ ಉಸಾಬರಿಗೆ ಬಂದಿಲ್ಲ (ಮೋಹಿನೀ. ೮); ಕಂಡವರ ಮನೆಯ ಹೆಣ್ಣುಮಕ್ಕಳ ಉಸಾಬರಿ ನಿಮಗೇಕೆ? (ವಾತ್ಸಲ್ಯ. ೨೯೨). [← ಮರಾ. ಉಸಾಬರ್; ಉಸಾಭರ್]

**ಉಸಿಕೆ** (ನಾ). ಮೌನವಾಗಿರುವವನು; ಮೌನಿ: ಮಿಸುಕದುಸುಂಡ ದುಸಿಕನಿದ್ದಂತಸುಗಳೆದವಾ ದೇವನಲಿ (ಬಸವು. ೫೦-೫೯); ಉಸಿಕನೊಳೇಕೆ ಮಾತು (ಶಬ್ದಾನು. ೨೦ ವಾಕ್ಯಾ). [?]

**ಉಸಿಕಂ** (ಅ). ಮೌನವಾಗಿ; ಸುಮ್ಮನೆ: ಉಸಿಕಂ ಮೌನಾರ್ಥಃ ಉಸಿಕಮಿರ್ದಂ (ಶಬ್ದಾನು. ೨೦ ಪ್ರಯೋ). [?]

**ಉಸಿಕನೆ** (ಅ). ೧. ಸುಮ್ಮನೆ; ಸದ್ದಿಲ್ಲದೆ; ಮೌನವಾಗಿ: "ನೆಗಱ್ಗುಂ ಮೌನಾರ್ಥಂ ಸುಮ್ಮಗೆ ಸಮ್ಮನೆಯುಸಿಕನೆಂದು ನುಡಿವವ್ಯಯದೊಳ್" (ಶಮದ. ೩೦೨); ಪಸುಳೆರಿರೆ ನಮಗೇತಕಾ ಗಡಣಿಸಿದ ಭಿಕ್ಷಾನ್ನಂಗಳಂ ನೀನುಸಿಕದಿಪ್ಪುದು ಧರ್ಮವೇ ಕರೆಯುವ್ವ ತನುಭವನ (ಬಸವು. ೨೪-೬೩); ಶಿವನಿರ್ಪ ಮಂದಿರಕೆ ಪೋಗಿ ನೈವೇದ್ಯಮಂ ಮಾಳ್ಪನುಸಿಕನೆ ಮಲಗು ನೀನೆನಲ್ಕೆ (ಸಿದ್ಧೇಪು. ೩-೧೭). ೨. ಕಾರಣವಿಲ್ಲದೆ; ವ್ಯರ್ಥವಾಗಿ: ಪುಟ್ಟಿದುದು ಮೊದಲಿಂದುತನಕೊಂದಡಕೆಹಂಗಿನೊಳೊಂದೆನುಸಿಕನೆ ನಿನ್ನನಾನೋಳೈಸಿದೆನು (ಬಸವು. ೬೧-೫೭). ೩. ಯಾವ ಕೆಲಸವನ್ನೂ ಮಾಡದೆ; ಉದಾಸೀನವಾಗಿ: ಪಾಂಥರನುಸಿಕನೈದಿದರೆಂದು ತಡೆವರ್ ಗಾಡಿಕಾರ್ತಿಯರು (ಮದೇಪು. ೨-೧೫); ಎಲೆ ಮಹೇಶ್ವರ ನೋಡದುಸಿಕನೈದುವರೆಯೆನೆ (ಗುರುಚಾ. ೧-೩). ೪. ಥಟ್ಟನೆ; ಇದ್ದಕ್ಕಿದ್ದಂತೆ: ದೇವರಾಜ (ಉಸಿಕನೆ ತನ್ನಾತುರವನ್ನೆತ್ತಿ ತೋರಿರುವವನು) (ನಡೆವಾ. I, ೪೪೪). [?]

**ಉಸಿಕೆಮಿರ್** (ಕ್ರಿ). ಸುಮ್ಮನಿರು; ಮೌನವಾಗಿರು: ಇನಿಸುಂ ಪೊಱುತ್ತಿಸಿಕಮಿರ್ದು (ಚಕವಿ. ೬-೧೧೪ ವ); ನಿಜಸ್ವರೂಪನುಡುಗಿಸಿಯುಸಿಕಮಿರ್ದನಾಗಳ್ (ವಿಷ್ಣುಪು. ೫-೧-೧೩೯); ಮನದೊಳ್ ಸಂಶಯದೇಳ್ಗೆಯಿಂದುಸಿಕಮಿರ್ದಾಗಳೋಚಿಸುತ್ತಿರ್ಪಿನಂ (ವೆಂಕಮು. ೮-೧೩). [ಉಸಿಕಂ + ಇರು (< ಇರ್₁)]

**ಉಸಿರ್$_1$, ಉಸಿರು$_1$, ಉಸುರ್$_1$, ಉಸುರು$_1$ (ಕ್ರಿ).** ೧. ಶ್ವಾಸೋಚ್ಛ್ವಾಸವನ್ನು ಮಾಡು; ಉಸಿರಾಡು; ಸುಯ್ಯು: ಲಲಿತಾಂಗಿ ಬೆಚ್ಚನುಸಿರ್ದುಚ್ಚರಿವೆತ್ತಿರೆ ಮೂರ್ಛೆವೋಪುದುಂ (ಆದಿಪು. ೩-೫೩). ೨. ಮಾತನಾಡು; ಹೇಳು: "ಉಸಿರ್ – ಭಾಷಣೇ" (ಶಮಧಾ); ಕಾಲದೆಸೆಯೊಳುಸಿರದೆ ಕುಳ್ಳಿರೆ (ಪಂಪಭಾ. ೯-೧೦ ವ); ತಾರಾಪೀಡದೇವಂ . . . ಭೋಂಕನೆ ಮನಂ ಕಲಂಕೆ ಮನಂ ಮಿಕ್ಕುಸಿರಲೊಲ್ಲದೆಂತಾನುಮಿಂತೆಂದಂ (ಕಾದಂಉ. ೫೦೭); ಬಸವಂಗುಸಿರ್ದ ಗುರುಸಂಗಮೇಶ್ವರಂ (ಬಸರ. ೫-೧). ೩. ಧ್ವನಿಮಾಡು; ಸದ್ದುಮಾಡು: ಸಾರೆ ಚಕೋರಮಿಂದುಮಂಡಳಗಳಿತಾಮೃತಾಸವಮನುಂಡುಸಿರುತ್ತಿರೆ ಚೆಲ್ವು ಶಾರದಂ (ಪಂಪಭಾ. ೭-೭೦); ಕಿಂಕಿಣಿಯೆನಲ್ಕುಸಿರ್ವ ಕಿಱುಘಂಟೆ (ಮಂಗರಾ. ೧೦೧-೩೦). ೪. ಉಸಿರನ್ನು ಸ್ವಲ್ಪ ನಿಲ್ಲಿಸು: ಯತಿಯೆಂಬುದುಸಿರ್ವ ತಾಣಂ ಕೃತಾಸ್ಪದಂ ವೃತ್ತ ಜಾ ತ ಪ ದ ಪ ದ್ಧ ತಿ ಯೊ ಳ್ (ಕವಿರಾ. ೧-೭೦). **ಉಸಿರು$_1$:** ೨. ಪೂಜ್ಯಪಾದ ಸ್ವಾಮಿಯ ಪದಮಂ ನೆನೆದು ಬಳಿಕ್ಕೀ ಕಾವ್ಯಮನುಸಿರುವೆನು (ಜಯಕಾ. ೧-೮); ಕರ್ಣ ರ ಸಾ ಯ ನ ವೆ ನ ಲು ಸಿರುವೆನೀ ಕೃತಿಯ (ಮೋಹತ. ೧೨-೨); ತನ್ನ ವಿಧಿಗೆ ಶಂಕರನೇಕೆ ಹೊಣೆಯಾದಾನೆಂದು ವಿವೇಕ ಉಸಿರುತ್ತಿತ್ತು (ನಿ ರಾ ತಿ. ೬೮). **ಉಸುರ್$_1$:** ೨. ನೃಪಸುತ ಕೌತುಕಮೆಂಬೆಯಪ್ಪೊಡುಸುರ್ದಪೆನೀಗಳ್ (ಕಾದಂಪೂ. ೭೦೫); ತ ತ್ಕಾ ರ ಣ ಮ ಂ ಮನಮೊಸೆದೆನಗುಸುವುರ್ದೆನಲ್ (ಉದ್ಭಟ. ೧೧-೨೩); ಉಸುರ್ವಡೀ ವಿಜಯಾರ್ಧ ದಕ್ಷಿಣ ದೆಶೆಯೊಳಗೆ ಶಿವಮಂದಿರವು (ಸಾಳ್ವಭಾ. ೭-೧೮). **ಉಸುರು$_1$:** ೧. ಉಸುರುವಾಗಳು ಕಮಲಜಾದಿಗಳುಸುರುವರು ನಿನ್ನೊಡನೆ (ನಿ ಭಾ ಗ. ೬-೧೫-೧೯). ೨. ಏನನುಸುರುವೆನೆನ್ನ ಜನ್ಮಫಲಾನುಭೋಕ್ತೃವ್ಯಕ್ಕೆ (ಬಸವು. ೩-೨೨); ಕೌರವೇಂದ್ರಂಗುಸುರಿದನು ಕಲಿಭೀಷ್ಮ (ಕುವ್ಯಾಭೀ. ೨-೧೮); ಪರಮಾತ್ಮನೀನೆಂದುಸುರುತಿವೆ ವೇದಗಳು (ಹಭಸಾ. ೨೩); ಬೊಮ್ಮವನು ಅಱಿದಿಹರೆ ಸುಮ್ಮನಿದ್ದಿರಬೇಕು ಬೊಮ್ಮವನಱಿದು ಉಸುರಿದರೆ ಕಳಹೋಗಿ ಕೆಮ್ಮಿದಂತಕ್ಕು (ಸರ್ವಜ್ಞ. ೩೮೯).

[ದೇ. ‖ ತಮಿ. ಮಲ. ಉಯಿರ್; ತೆಲು. ಉಸುರು, ಉಸುಱು, ಉಸುರನು; ಕುರುಖ್. ಉಚ್ಛಾ; ಮಲ್ತೊ. ಉಜೆ]

**ಉಸಿರ್$_2$, ಉಸಿರು$_2$, ಉಸುರ್$_2$, ಉಸುರು$_2$ (ನಾ).** ೧. ಶ್ವಾಸ; ಪ್ರಾ ಣ ವಾ ಯು; ಜೀವ: ಅನಂತರಮುಸಿರೊಡನೆಮೆಯಿಕ್ಕುವುದಂ ಮಱೆದು (ಕಾ ದ ಂ ಪೂ. ೭೪೬); ಮೂಗುಂ ಬಾಯುಮುಸಿರ್ಮಿಡುಕಗುಡದೆ ಪಿಡಿದುಂ (ಧರ್ಮಾಮೃ. ೩-೭೩). ೨. ಗಾಳಿ (?): ಬೆಳಗುಗಳ ಬಳೆದ ಬಳಗದ ಬಳಸುಗಳೊಳಗೊಳಗೆ ತೊಳಗಿ ಪೊಳೆಪೊಳೆದೊಳಗುಚ್ಚಳಿಸಿ ತಳತಳಿಸಿ ದೆಸೆಗಳನಳುರ್ದುಸಿರೊಳ್ ಕೆಳರ್ದು ಮಿಳಿರ್ದು ತಳರ್ದತ್ತಾಗಳ್ (ಕಾವ್ಯಾವ. ೨೩). ೩. [ಛಂದ] ಯತಿ; ನಿಲುಗಡೆಯ ಸ್ಥಳ: ಉಸಿರ್ ಅಱು ನೆಲೆಯೊಳ್ (ಛಂದೋಂಬು. ೨-೮೮; ಅಡಿಟ). 'ಉ ಸಿ ದಾ ರ್ ಣ' ಪರಾ. **ಉಸಿರು$_2$:** ೧. ಬಸಿಱೊಡನೆ ಬಾಸೆ ಬಲಕೊಲೆಯೆ ತೆಳುಗುರುಳ ಕೊಡುಸಿರು ಭಾರ್ಯೆಸೆ ನಡೆಯೊಡನೆ ನುಡಿ ಬಾಡಲ್ (ಸಿದ್ಧರಾ. ೧-೫೨); ಮೂಗಿನುಸಿರುಬ್ಬೆದ್ದುದಡಿಗಡಿಗೆ(ಕುವ್ಯಾಕ.೧೪-೪). ೪. ಶಕ್ತಿ; ಚೈತನ್ಯ; ತ್ರಾಣ: ಅವನಿಗೆ ಮಾತನಾಡಲು ಉಸಿರೇ ಇಲ್ಲ (ರೂಢಿ). ೫. ವಾಕ್ಯ; ನುಡಿ; ಸೊಲ್ಲು. 'ಉಸಿರ್ವೆಣ್' ಪರಾ. **ಉಸುರ್$_2$:** ೧. ಉಸುರಂಗುಸುರಂ ಕೊಡುವೆವು (ಸಮುಪ. ೯-೧೦೭); ಉಸುರ್ ಬಂದಂತೆ ಹರಣದಳಲುಮಂ ಪರಿಹರಿಸಿಕೊಂಡು (ನಂಬಿರ. ೨-೫೭). **ಉ ಸು ರು$_2$:** ೧. ಉಸುರು ವಿಷವಾದೊಡಿನ್ನೆಂತು ಸೈರಿಪೆಂ (ವಾಗೀರ. ೨೭೦); ಉಸುರಿಲ್ಲದೊಡಲಿನ ಚೆಲುವಿನಂತಿರೆ ನಮ್ಮ ಬಲ (ಕುವ್ಯಾದ್ರೋ. ೯-೫೨); ಉಸುರುಂಟಾದರೆ ಉಪ್ಪುಮಾರಿ ತಿನ್ನಬಹುದು (ಗಾದೆ).

ಉಸಿರುಕಟ್ಟು = ಶ್ವಾಸನಿಲ್ಲು; ಉಸಿರಿಗೆ ತಡೆಯಾಗು: ಹೊಗೆಯಲ್ಲಿ ಉಸಿರುಕಟ್ಟುತ್ತದೆ (ರೂಢಿ). ಉಸಿರುತಟ್ಟು, ಉಸಿರುತಾಗು = ಶಾಪತಗುಲು, — ತಟ್ಟು: ಉಸಿರುನಿಲ್ಲು = ಸತ್ತುಹೋಗು: ಉಸಿರಾಡುವವರೆಲ್ಲ ಸಂಕಟಪಡುವರು ಧನ್ಯರು ಉಸಿರುನಿಂತವರು (ಇಂಚಾಪ. ೯೦-೩೯). ಉಸಿರುಹಿಡಿ = ೧. ಜೀವಹಿಡಿದುಕೊ; ಬದುಕು: ಅಜ್ಜ ಮೊಮ್ಮಗನ ಮುಖ ನೋಡಬೇಕೆಂದು ಉಸಿರುಹಿಡಿದುಕೊಂಡಿದೆ (ರೂಢಿ). ೨. ನಿಧಾನಮಾಡು; ತಾಳು: ಆತುರಪಡಬೇಡ, ಸ್ವಲ್ಪ ಉಸಿರು ಹಿಡಿದುಕೊಂಡಿರು (ರೂಢಿ).

[< ಉಸಿರ್$_1$. / ತಮಿ. ಮಲ. ಉಯಿರ್; ತುಳು. ಉಸುರು, ತೆಲು. ಉಸುರು]

**ಉಸಿರಾಟ, ಉಸುರಾಟ (ನಾ).** ಉಸಿರಾಡುವಿಕೆ; ಶ್ವಾಸೋಚ್ಛ್ವಾಸ: ಜ್ವರ ವಿಪರೀತವಾಗಿ ಎಚ್ಚರ ತಪ್ಪಿ ಉಸಿರಾಟ ನಿಂತುಬಿಟ್ಟಿತು (ಪ್ರತಾಪ. ೧೨೦). **ಉಸುರಾಟ:** ಇರದೆ ನಿಜವುಸುರಾಟದೆಡೆಯೊಳು ಹರಿಯ ದರ್ಪವನಳಿದು ಕಾಯ್ದರು ಕರುಣೆಯಭವನ ದಿಟ್ಟ (ಸಾನಂಚ. ೯-೨೬).

[ಉಸಿರ್$_2$ + ಆಟ]

**ಉಸಿರಾಡು, ಉಸುರಾಡು (ಕ್ರಿ).** ಶ್ವಾಸೋಚ್ಛ್ವಾಸವನ್ನು ಮಾಡು: ಈ ರಂಧ್ರಗಳ ಮೂಲಕ ಸಸ್ಯವು ಉಸಿರಾಡುತ್ತದೆ (ಸಸ್ಯಶಾ. ೧೮); ತೊಳೆದ ಮುಕ್ತಾಫಲದ ಕಾಂತಿವೆತ್ತಾತ್ಮವಿದು ಹೊರಗಲೆವ ನಲವಿನುಸಿರಾಡಿ ಜ್ವಲಿಸೆ (ಮಲೆದೇ. ೩೮-೪). **ಉಸುರಾಡು:** (ಕ).

[ಉಸಿರ್$_2$ + ಆಡು$_1$]

**ಉಸಿರಾವಿ (ನಾ).** ಉಸಿರಿನ ಹಬೆ: ಸಿಡಿಮದ್ದಿನಿಂದೇಳ್ವ ಹೊಗೆಯೆನಲಿಲ್ಲಿ ಅಲ್ಲಿ ದರಿ ಪೂತ್ಕರಿಸುವುಸಿರಾವಿಯೋಲುಣ್ಣೆ ಮಂಜು (ಶ್ರೀರಾಮಾ. ೨೮೪-೧೬೮). [ಉಸಿರ್$_2$ + ಆವಿ$_1$]

**ಉಸಿರಿ (ನಾ).** ಉಸಿರುಳ್ಳದ್ದು; ಜೀವಿ; ಪ್ರಾಣಿ: ಪಿಡಿವನ್ ಬಯಲಾ ಕೂರುಸಿರಿಗಳನ್ ಮೇಣ್ ಕಡಲಾಟದ ನೀರುಸಿರಿಗಳನ್ (ಅಂತಿಗೊ. ೧೬-೩೨೩); ಗಱಿಗೆಯನಿತು ತೆವಳಲಿರ್ಪ ಉಸಿರಿಗಳಾ ಸಾಹಸವದ್ (ಬದ್ಧಪ್ರ. ೨೯-೬೧೭). [ಉಸಿರ್$_2$ + -ಇ$_3$]

**ಉಸಿರಿಕ್ಕು, ಉಸುರಿಕ್ಕು (ಕ್ರಿ).** ೧. = ಉಸಿರಾಡು: ಕಂಡರಿಸಿಟ್ಟಂತು ಸಿರಿಕ್ಕಲುಂ ಮಱೆದು (ಕಾದಂಉ. ೫೮೫); ಎವೆಯಿಕ್ಕದುಸಿರಿಕ್ಕದುಣ್ಣದ ಜಿತೇಂದ್ರಿಯತ್ವವ ತಳೆದ (ಸಿದ್ಧರಾ. ೧-೨೬); ತಿತ್ತಿಗಳ್ ಮೊರೆಯುತ್ತೀನುಸಿರಿಕ್ಕವೇ (ಸೋಮೇಶ. ೧೮). ೨. ಮಾತನಾಡು; ನುಡಿ: ನಿನ್ನ ಬೇಟದ ಮಿಂಡನಾವನವನಂ ಪೇಱೆಂದು ಬೆಸಗೊಳೆ ದೂತಿ ಭೀತಿಯಿಂದುಸಿರಿಕ್ಕದಿರೆ (ಪಂಚತಂ. ೭೫-೧೪). **ಉಸುರಿಕ್ಕು:** ೧. ಉಸುರಿಕ್ಕುವುದುಮನೇಂ ಮಱೆದೆ ಕಾಂತೆ (ಕಾದಂಪೂ. ೪೮೨); ಬದುಕಿ ಫಲವೇನು ಜಡತೆಯಲಲಸದುಸುರಿಕ್ಕಿದರೆ ಮಾನ್ಯವೆ ತಿದಿಯ ತೊಗಲುಗಳು (ನಭಾಗ. ೨-೨-೬). [ಉಸಿರ್$_2$ + ಇಕ್ಕು]

**ಉಸಿರಿಡು, ಉಸುರಿಡು (ಕ್ರಿ).** ೧. = ಉಸಿರಾಡು: ಪದಿನಾಱುಂ ತಿಂಗಳುಂ ಪಕ್ಷದೊಳುಸಿರಿಡುವಂ (ಬಾಧಪು. ೫-೧೦೦); ಒಕ್ಕುದು ನೆತ್ತರ್ ಬಾಯಿಂ ಮಿಕ್ಕಲರ್ದುಸಿರಿಡುವ ಮೂಗಿನೆರಡುಂ ಕ ಡೆ ಯಿ ಂ (ಶಬಶಂ. ೪-೮೮). ೨. ವ್ಯಕ್ತವಾಗು; ಪ್ರಕಟಗೊಳ್ಳು: ಪೂಜ್ಯಭಾವಗಳೆಲ್ಲ ಉಸಿರಿಡದೆ ಮುತ್ತಗಿಹವು (ಕವಿಸೋ. ೩೮). **ಉಸುರಿಡು:** ೧. ಮುಸುಕದುಸುರಿಡದುಸಿಕನಿದ್ದಂತಸುಗೆಳೆದವಾ ದೇವನಲಿ (ಬ ಸ ಪು. ೫೦-೫೯). ೩. ಬೇಗಬೇಗ ಉಸಿರುಬಿಡು; ಏದು: ಮುಸುಡನೆತ್ತುತ್ತುಸುರಿಡುತ ಘೂರ್ಮಿಸುತ ಸಗಣವನಿಕ್ಕುತಂ ಮೂತ್ರಿಸುತ (ಬ ಸ ಪು. ೩೨-೨೭). ೪. ನುಡಿ; ಶಾಪಹಾಕು (ಉಕ.ಕ). [ಉಸಿರ್$_2$ + ಇಡು$_1$]

**ಉಸಿರು$_1$** 'ಉಸಿರ್$_1$' ನೋ.

**ಉಸಿರು$_2$** 'ಉಸಿರ್$_2$' ನೋ.

**ಉಸಿರುಕೊಳವೆ** (ನಾ). ಶ್ವಾಸನಾಳ: ಉಸಿರು ಕೊಳವೆ (Trachea)ಯ ಮೇಲೆ ಶಸ್ತ್ರಕ್ರಿಯೆ ನಡೆಸಿ ಉಸಿರಾಡಲು ಒಂದು ನಾಳವನ್ನು ಇಡಬೇಕು (ಕಲರೋ. ೨೬). [ಉಸಿರು$_2$ (< ಉಸಿರ್$_2$) + ಕೊಳವೆ]

**ಉಸಿರುಚೀಲ** (ನಾ). ಶ್ವಾಸಕೋಶ; "ಉಸಿರು ಚೀಲ; ಶ್ವಾಶಕೋಶ; ಪುಪ್ಪುಸ" (Lung. ಇಂಕನಿ). [ಉಸಿರು$_2$ (< ಉಸಿರ್$_2$) + ಚೀಲ]

**ಉಸಿರೆತ್ತು** (ಕ್ರಿ). ಮಾತಾಡು : ಇದನ್ನು ನೋಡುತ್ತಿದ್ದ ರಾಜರೊಬ್ಬರೂ ಉಸಿರೆತ್ತಲಿಲ್ಲ (ವಚಭಾ. ೮೬) ; ಅವನು ಉಸಿರೆತ್ತಲಿಲ್ಲ (ರಕ್ತರೂ. ೨೯). [ಉಸಿರ್$_2$ + ಎತ್ತು$_1$]

**ಉಸಿರೆಳೆ** (ಕ್ರಿ). = ಉಸಿರಾಡು : ಅವರ ತಾಯಿ ಹಾಯಾಗಿ ಉಸಿರೆಳೆಯುತ್ತಿದ್ದರು (ಶಾಲೆವು. ೫೧) ; ಸಮಾಧಾನದ ಉಸಿರೆಳೆದಳು (ಮರಳಿ. ೧೦೧). [ಉಸಿರ್$_2$ + ಎಳೆ$_1$ (< ಎೞೆ$_1$)]

**ಉಸಿರ್ಗರೆ, ಉಸುರುಗರೆ** (ಕ್ರಿ). = ಉಸಿರಾಡು : ಇನ್ನು ನನ್ನ ಜೀವನ ಇದೇ ರೀತಿ ಸಾಗುವುದು ಎಂದು ಉಸಿರ್ಗರೆದಳು (ಕುಂಕುಮ. ೧೦) ; ವಿನಾಯಕನು . . . ಉಸಿರ್ಗರೆದು ಘೋರವಾದ ಚಿಂತೆಗೊಳಗಾದನು (ಅಂಬಿಕೆ. ೧೮). **ಉಸುರುಗರೆ** : "ಬಿಸುಸುಯ್ಯು–ಬೆಚ್ಚನ್ನ ಉಸುರುಗರೆಯು" (ಗಂಗಾಮು. ೩೬೪). [ಉಸಿರ್$_2$ + ಕರೆ$_1$]

**ಉಸಿರ್ಗಿಚ್ಚು** (ನಾ). ಉಸಿರಿನ ಕಿಚ್ಚು, —ಬೆಂಕಿ : ಪುರಕ್ಕೈದಿಬಹ ರಿಪುಜಲಧಿಯನುಸಿರ್ಗಿಚ್ಚಿನುರುಹೆಂದು ಪಲವು ಬಾಡವರ ಪರಮೇಷ್ಠಿ ನಿರ್ಮಿಸಿ ಕಳುಹಿದ ತೆಱದಂತೆ ಮೆಱೆದುವು ಬಲುಶತಘ್ನಿಗಳು (ಕಂನವಿ. ೬–೧೫). [ಉಸಿರ್$_2$ + ಕಿಚ್ಚು (< ಕಿರ್ಚು)]

**ಉಸಿರ್ಗಿಡಿಸು** (ಕ್ರಿ). ಉಸಿರನ್ನು ವ್ಯರ್ಥಮಾಡಿಕೊಳ್ಳು : ದಂಡಣಿಯನ್ನೆಲ್ಲಾ ಸಾಂಗೋಪಾಂಗವಾಗಿ ವರದಿಯೊಪ್ಪಿಸಿ ಆಗಲೇ ಉಸಿರ್ಗಿಡಿಸಿಕೊಂಡೆ (ಬಿರುಗಂ. ೧೫–೯). [ಉಸಿರ್$_2$ + ಕಿಡಿಸು (< ಕೆಡಿಸು)]

**ಉಸಿರ್ದಾಣ, ಉಸುರ್ದಾಣ** (ನಾ). [ಛಂದ] (ಪದ್ಯಗಳಲ್ಲಿ) ಉಸಿರನ್ನು ನಿಲ್ಲಿಸಬಹುದಾದ ಸ್ಥಳ, —ಎಡೆ; ಯತಿಸ್ಥಾನ: ಯತಿಯೆಂಬುದು ಗಣನಿಯಮ ಪ್ರತತಿಗುಸಿ[ಪಾಠಾಂ. ಸು]ರ್ದಾಣಂ (ಛಂದೋಂಬು. ೧–೪೫). **ಉಸುರ್ದಾಣ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಉಸಿರ್$_2$ + ತಾಣ]

**ಉಸಿರ್ದೆಗೆ** (ಕ್ರಿ). ಉಸಿರನ್ನು ಒಳಕ್ಕೆ ತೆಗೆದುಕೊ ; ಉಚ್ಛ್ವಸಿಸು : ಉಸಿರ್ವೊಯ್ವಾಗಳ್ಕಾ ಸೌರಭ್ಯವನುಸಿರ್ದೆಗೆವಾಗಳ್ಕಾ ಬಾವನ್ನದ ಪೊಸ ಕಂಪಂ ಕೊಳಲೆರಡೆಡೆಗೆಡೆಯಾಡುವ ಮಱಿದುಂಬಿಗಳು ಎಸೆದವು (ಜಯಕಾ. ೧–೬೦). [ಉಸಿರ್$_2$ + ತೆಗೆ$_1$]

**ಉಸಿರ್ನೆಲೆ** (ನಾ). ಪ್ರಾಣದ ನೆಲೆ ; ಶರೀರ : ಕಳ್ವರ್ಗೆ ತಪ್ಪುಗುಮುಸಿರ್ನೆಲೆ ಕಳದರ್ಗೆ ತಪ್ಪದು ದೇವಲೋಕಂ (ಕುಜಿಳ್. ೧–೨೯–೧೦). [ಉಸಿರ್$_2$ + ನೆಲೆ]

**ಉಸಿರ್ಪತ್ತು** (ನಾ). ಉಸಿರಿನ ಸಂಬಂಧ (?) : ಕಣ್ಣೆಮೆಯಿಕ್ಕುವನಿತು ಪೊೞ್ತುಪೊಡಮುಸಿರ್ಪತ್ತಿಲ್ಲದೆ ದುಃಖಂಗಳನನುಭವಿಸುವರ್ (ವಡ್ಡಾರಾ. ೯೭–೨) ; ಎಲ್ಲಿಲ್ಲದ ಸುರಗಣಿಕೆಯರೆಲ್ಲಿಲ್ಲದ ದೇವಿಯರ್ಕಳಗಲರುಸಿರ್ಪ[ಪಾಠಾಂ. ಪೆ]ತ್ತಿಲ್ಲ ನಮಗವರೆ ಜಗತೀವಲ್ಲಭನಂ ಪಚ್ಚಿವಚ್ಚಿಮಚ್ಚಿಸಿಕೊಂಡರ್ (ಅಜಿಪು. ೬–೧೦೦). [ಉಸಿರ್$_2$ + ಪತ್ತು$_1$]

**ಉಸಿರ್ವೊಯ್** (ಕ್ರಿ). ೧. = ಉಸಿರಾಡು : ಎಸಳ್ಗಣ್ಣಾಡಿದೊಡೆವೆಯಿನಿಸಲುಗಿದೊಡುಸಿರ್ವೊಯ್ದೊಡೆಯುಲುಕಿದೊಡಧರಂ ಮೆಯ್ ನಸುಮಿಡುಕಿದೊಡೆ (ಜಯಕಾ. ೪–೨೨). ೨. ಉಸಿರು ಬಡಿದುಕೊ : ಉಸಿರ್ವೊಯ್ವ ಬಸಿಱ ತಳ್ಳಂಕದಿಂ ಮುಗ್ಗಿದುವು ದಿಕ್ಕರಿಕುಲಂ (ಚೆಬಪು. ೪೮–೫). [ಉಸಿರ್$_2$ + ಪೊಯ್$_2$]

**ಉಸುಕು, ಉಸುಗು, ಉಸುಬು** (ನಾ). (ಉಕ) ಮರಳು : ಸುಣ್ಣವನ್ನೂ ಉಸುಕನ್ನೂ ಕೂಡಿಸಿ ಕುಟ್ಟಿ ಗಚ್ಚು ಮಾಡಿಕೊಳ್ಳಬೇಕು (ಮುಂಬಯಿ. ೪–೧೪೭) ; ಉಸುಕಿನ ಒಡ್ಡುಗಳ ಮೇಲೆ ಹುಲ್ಲು ಬೆಳೆಯಿಸಿ ಅವು ಕುಸಿಯದಂತೆ ಮಾಡಿದರು (ಅಪೂಪ. ೧೯೦) ; ಅವಿವೇಕಿಗಳಿಂದ ಸುಖ ಬಯಸುವುದೆಂದರೆ ಉಸುಕಿನಿಂದ ಎಣ್ಣೆ ತೆಗೆಯಲು ಯತ್ನ ಮಾಡಿದಂತೆಯೇ ಸರಿ (ಕೃತಕೃ. ೫೯). **ಉಸುಗು** : ಸುಂದರಕ್ಕ . . . ಚೀಲದ ತುಂಬ ತುಂಗಭದ್ರೆಯ ಉಸುಗು ತುಂಬಿಕೊಂಡು ಬಂದ ಸಂಗತಿ (ವೈನಿ. ೧೪೩). **ಉಸುಬು** : ತೆಂಗಿನ ಬನಗಳುಳ್ಳಂಥ ಉಸುಬಿನ ಬೈಲುಗಳಿಂದಲೂ ಸಮುದ್ರತೀರ ಚಿತ್ರವಿಚಿತ್ರ (ಕಭಾಗೆ. ೪) ; ಸಣ್ಣಸಣ್ಣ ತೆರೆಗಳು . . . ಉಸುಬಿನ ಮೇಲೆ ಬಂದಪ್ಪಳಿಸುತ್ತಿದ್ದವು (ಪ್ರತಿಬಿಂ. ೩೧). [ದೇ. ॥ ತೆಲು. ಇಸುಕ, ಇಸುಮು, ಎಸಲು]

**ಉಸುಗು** 'ಉಸುಕು' ನೋ.

**ಉಸುಬು** 'ಉಸುಕು' ನೋ.

**ಉಸುಮುನಿ** (ನಾ). ಒಂದು ಬಗೆಯ ಗಿಡ : ಸಬಸೀಗೆ, ಉಸುಮುನಿ, ಹೊಮ್ಮುಗುಳಿ ಪೆಟ್ಲು (ನಮ್ಮನು. ೨೩೯). [?]

**ಉಸುರ್$_1$** 'ಉಸಿರ್$_1$' ನೋ.

**ಉಸುರ್$_2$** 'ಉಸಿರ್$_2$' ನೋ.

**ಉಸುರಡಗು** (ಕ್ರಿ). ಉಸಿರಿಲ್ಲದಂತಾಗು ; ಸತ್ತುಹೋಗು : ಘನಪಥದೊಳಾಡುವ ಖಗಂಗಳವನಿಗೆ ಬಿದ್ದುಸುರಡಗಿದವು (ಬಸವು. ೫೮–೫೬). [ಉಸುರ್$_2$ (< ಉಸಿರ್$_2$) + ಅಡಗು$_1$]

**ಉಸುರನುಗೊಳಿಸು** (ಕ್ರಿ). ಸರಿಯಾಗಿ ಉಸಿರಾಡುವಂತೆ ಮಾಡು ; ಶ್ವಾಸೋಚ್ಛ್ವಾಸ ಸರಿಯಾಗು : ತನು ಮುರಿಮುರಿದು ನಿಲಿಕಿಸುತ್ತಂ ಮನವಲರಿಸುತ್ತಾಗುಳಿಸುತುಸುರನುಗೊಳಿಸುತಂ ಕಣ್ದೆಱೆದು ನೆಱೆ ಚಿಕ್ಕ ಮಾದಣ್ಣ (ಬಸವು. ೪೭–೫೯). [ಉಸುರ್$_2$ (< ಉಸಿರ್$_2$) + ಅನುಗೊಳಿಸು]

**ಉಸುರಾಟ** 'ಉಸಿರಾಟ' ನೋ.

**ಉಸುರಾಡು** 'ಉಸಿರಾಡು' ನೋ.

**ಉಸುರಾನ್** (ಕ್ರಿ). ಉಸಿರನ್ನು ತೆಗೆದುಕೊ ; ದಮ್ಮು ತೆಗೆದುಕೊ : ಜಾಱೆ ಮುಂಡೆಯನಿಕ್ಕಿ ಮುಂಬಿಗೆ ಪಾಱೆ ಕೈಕಾಲ್ ಕೊಂಕಿಸುತೆ ಕಾಲೂಱೆ ನಿಂದುಸುರಾಂತು ಬಯಲಂ ಪೊಯ್ಯಲಪ್ಪಳಿಸಿ (ಬಸವು. ೧–೫೦). [ಉಸುರ್$_2$ (< ಉಸಿರ್$_2$) + ಆನ್$_1$]

**ಉಸುರಿಕ್ಕು** 'ಉಸಿರಿಕ್ಕು' ನೋ.

**ಉಸುರಿಡು** 'ಉಸಿರಿಡು' ನೋ.

**ಉಸುರು$_1$** 'ಉಸಿರ್$_1$' ನೋ.

**ಉಸುರು$_2$** 'ಉಸಿರ್$_2$' ನೋ.

**ಉಸುರುಕಟ್ಟಿಸು** (ಕ್ರಿ). ಉಸಿರಾಟಕ್ಕೆ ಅಡ್ಡಿಪಡಿಸು : ಕೆಟ್ಟ ಗಾಳಿ ಉಸುರುಕಟ್ಟಿಸುತ್ತದೆ (ರೂಢಿ). [ಉಸುರುಕಟ್ಟು + –ಇಸು$_3$]

**ಉಸುರುಕಟ್ಟು** (ಕ್ರಿ). ೧. ಉಸಿರಾಟಕ್ಕೆ ಅಡ್ಡಿಯಾಗು : ಹೊಗೆಯೊಳಗೆ . . . ಉಸುರುಕಟ್ಟಿ ಪ್ರಾಣಹೋಗುವುದು (ಮುಂಬಯಿ. ೪–೬೧). ೨. ದಮ್ಮುಹಿಡಿ. ೩. ಮಾತನಾಡದಂತೆ ಆಗು. [ಉಸುರು$_2$ (< ಉಸಿರ್$_2$) + ಕಟ್ಟು$_1$]

**ಉಸುರುಗರೆ** 'ಉಸಿರ್ಗರೆ' ನೋ.

**ಉಸುರುಗಳೆ** (ಕ್ರಿ). = ಉಸುರುಬಿಡು೧ : "ಆಶ್ವಾಸ – ಉಸುರುಗಳೆಯೋಣ" (ಗಂಗಾಮು. ೨೯). [ಉಸುರು$_2$ + (< ಉಸಿರ್$_2$) + ಕಳೆ$_1$]

**ಉಸುರುಡುಗು** (ಕ್ರಿ). ೧. ಉಸುರು ಕುಗ್ಗು; ಶಕ್ತಿ ಕಡಮೆಯಾಗು. ೨. ಸತ್ತು ಹೋಗು: ಮೊನ್ನೆ ತಾನೆ ಆತನು ಉಸುರುಡುಗಿಹೋದ (ರೂಢಿ). [ಉಸುರ್$_2$ (< ಉಸಿರ್$_2$) + ಉಡುಗು]

**ಉಸುರುದೆಗಹು** (ನಾ). ಉಸಿರಿಲ್ಲದಂತಾಗುವುದು; ಸಾವು: ಅಸು ವಳಿದ ಶಂಬುಕನ ಬಳಿಗವನುಸುರುದೆಗಹನು ಕಂಡು ಹಲುಗಳ ನುಸೆವು ತೈದಿದಳಿನಕುಲೇಂದ್ರನ ಪರ್ಣಮಂದಿರವ (ತೊರರಾ. ೩-೪-೧). [ಉಸುರ್$_2$ (< ಉಸಿರ್$_2$) + ತೆಗಹು]

**ಉಸುರುನಿಲ್ಲು** (ಕ್ರಿ). ಉಸಿರುನಿಂತುಹೋಗು; ಪ್ರಾಣಹೋಗು. [ಉಸುರು$_2$ (< ಉಸಿರ್$_2$) + ನಿಲ್ಲು (< ನಿಲ್)]

**ಉಸುರುಬಿಡು** (ಕ್ರಿ). ೧. ನಿಃಶ್ವಾಸವನ್ನು ಬಿಡು. ೨. ಪ್ರಾಣವನ್ನು ಬಿಡು. [ಉಸುರು$_2$ (< ಉಸಿರ್$_2$) + ಬಿಡು]

**ಉಸುರುಬುರುಡೆ** (ನಾ). ಉಸಿರಿನಿಂದ ತುಂಬಿಸಿದ ಬರುಡೆ; ಗಾಳಿಯಿಂದ ತುಂಬಿಸಿದ ಬುರುಡೆ; ಬಲೂನ್; ಪೀಪಿ: ಅತಿಯಾಗಿ ಊದಿದರೆ ಉಸುರುಬುರುಡೆ ಒಡೆದು ಹೋಗುತ್ತದೆ (ರೂಢಿ). [ಉಸುರು$_2$ (< ಉಸಿರ್$_2$) + ಬುರುಡೆ (< ಬುಜುಡೆ)]

**ಉಸುರುಬ್ಬಸ** (ನಾ). ಕಷ್ಟಕರವಾದ ಶ್ವಾಸೋಚ್ಛ್ವಾಸ; ಏದುಸಿರು: ತಂದಿರಿ ಬಾಲಕನ ಬಲುತಪದ ಬೆಳವಿಗೆಯೊಳಿಗವನೆನ್ನಲ್ಲಿಗುಸುರುಬ್ಬಸದ ದುಸ್ಥಿತಿಯ (ನಿಭಾಗ. ೪-೭-೫೨). 'ಕಟ್ಟುಬ್ಬಸ' ಪರಾ. [ಉಸುರು$_2$ (< ಉಸಿರ್$_2$) + ಉಬ್ಬಸ]

**ಉಸುರುವೆಣ** (ನಾ). ಬದುಕಿರುವ ಹೆಣ; ಉಸಿರಾಡುತ್ತಿರುವ ಹೆಣ: ಜೀವವಿರೆ ಮೃತರಾದವರಲಾ ಭ್ಭಾವಿಸಲು . . . ಉಸುರುವೆಣಂಗಳವರೆಂದ (ನಿಭಾಗ. ೨-೨-೭); ಉಸುರುವೆಣನನು ಮಾತನಾಡಿಸಬೇಡಿ ನೀವೆಂದ (ನಿಭಾಗ. ೪-೬-೨೦). [ಉಸುರು$_2$ (< ಉಸಿರ್$_2$) + ಪೆಣ]

**ಉಸುರುಹಿಡಿ** (ಕ್ರಿ). ೧. ಉಸಿರಾಟವನ್ನು ತಡೆದು ನಿಲ್ಲಿಸು. ೨. (ಆಲಂ) ಬದುಕಿರು; ಜೀವದಿಂದಿರು: ಮಗನ ಮದುವೆಯಾಗುವವರೆಗೂ ಮುದುಕಿ ಉಸುರುಹಿಡಿದಿದ್ದಳು (ರೂಢಿ). ೩. ಉಸಿರಾಟಕ್ಕೆ ಅಡ್ಡಿಯಾಗು: ಉಸುರುಹಿಡಿದು ಉಸಿರಾಟಕ್ಕೆ ತೊಂದರೆಯಾಗಿದೆ (ರೂಢಿ). [ಉಸುರು$_2$ (< ಉಸಿರ್$_2$) + ಹಿಡಿ$_1$ (< ಪಿಡಿ$_1$)]

**ಉಸುರೂದು** (ಕ್ರಿ). (ಮಕ್ಕಳ ನೆತ್ತಿಯ ಮೇಲೆ) ಉಸಿರನ್ನು ಊದು: ತೊರೆದ ನುಣ್ಮೊಲೆಯನೀಂಟುವ ಪೆಸರ್ಗಾಯ ಪೆರ್ಚಿರೆಳಿಂದ ಮೊಲೆದೊಟ್ಟುವಿಡಿದೂ ಮರುಳುಂಡು ಪಾಲ್ಪೆತ್ತಿಗೇರಿದರುಸುರೂದಿ ತರಳಾಕ್ಷಿ ಬೆಚ್ಚಿದಳ್ ಭಯದಿ (ಮೋಹತ. ೧೭-೬೬). [ಉಸಿರ್$_2$ + ಊದು$_1$]

**ಉಸುರ್ದಾಣ** 'ಉಸಿರ್ದಾಣ' ನೋ.

**ಉಸುರ್ವಿಡು** (ಕ್ರಿ). ಉಸಿರುಬಿಡು: ಮರುತ್ತಂ ತ್ರಿಲೋಕವಿಖ್ಯಾತ ನಾದಂ ಪಗೆಗಳಂ ಗೆಲ್ವೆಡೆಯೊಳುಸುರ್ವಿಡುತಿರಲ್ಕೆ ವ್ಯಾಕೀರ್ಣ ಚಾತುರ್ಬಲಂ ಪುಟ್ಟುತಿಹುದು (ಜೈಮಿಭಾ. ೫-೨೩). [ಉಸುರ್$_2$ (< ಉಸಿರ್$_2$) + ಬಿಡು$_1$]

**ಉಸುರ್ವೆಣ್** (ನಾ). ವಾಕ್ಕಿಗೆ ಅಧಿದೇವತೆ; ಸರಸ್ವತಿ. 'ಉಸುರ್ವೆಣ್ಣೊಡೆಯ' ಪರಾ. [ಉಸುರ್$_2$ (< ಉಸಿರ್$_2$) + ಪೆಣ್]

**ಉಸುರ್ವೆಣ್ಣೊಡೆಯ** (ನಾ). ಸರಸ್ವತಿಯ ಒಡೆಯ; ಬ್ರಹ್ಮ: ಜಜುಚೇ ಮಾನ್ಯವಳಯಿನ ಗೆಲ್ವದಟಂ ನಿಜುಸೀರೇಳ್ಗಗಮಂ ಗೆಲ್ವುದೆನುತ್ತು ಜದುಸುರ್ವೆಣ್ಣೊಡೆಯಂ ನೆಜಿವೆಡೆಯಂ ಕಂಡರಸಿಟ್ಟಂತೆ (ಉದ್ಭದೇ. ೪-೨೩). [ಉಸುರ್ವೆಣ್ + ಒಡೆಯ]

**ಉಸುಲು** (ನಾ). (ಉಕ) ಒಳ ಅಳತೆ; ವಿಸ್ತೀರ್ಣ: ಕೋಪಿನ ಮುಂಭಾಗದ ವೊಳಉಸುಲಿನ ಉದ್ದಳತೆ ೧೨ ಫೂಟು ೧೦ ಇಂಚು (ಕಭಾಗ. ೫೨೭); ಕೋಣೆಯ ವೊಳ ಉಸುಲು ೪೦ ಫೂಟು (ಕಭಾಗ. ೫೩೩). [?]

**ಉಸುಳಿ** 'ಉಸಲಿ' ನೋ.

**ಉಸೂರ್** (ಅ). ನೋವು ಸಂಕಟಗಳನ್ನು ಸೂಚಿಸುವ ಅವ್ಯಯ: 'ಮನೆತನ ಸುಮಾರು' ಎಂದಾಗ ಆ ಮನೆಯ ಹೆಣ್ಣು ಎಷ್ಟು 'ಉಸೂರ್' ಎನ್ನುವುದಲ್ಲಾ ಎಂದು ಮರುಗಿದರು (ಬೆಳುಮ. ೩೮). [?]

**ಉಸ್ತವಾರಿ** 'ಉಸ್ತುವಾರಿ' ನೋ.

**ಉಸ್ತಾದ** (ನಾ). ಗುರು; ಆಚಾರ್ಯ: ಅವರೆಲ್ಲರೂ ಉಸ್ತಾದನಿಗೆ ಪ್ರಣಾಮಮಾಡಿ ನವಾಬನ ಸಮ್ಮುಖದಲ್ಲಿ ಸಂಗೀತವೇರ್ಪಡಿಸಿದರು (ಝೂರಾಣಿ. ೬೮). [← ಹಿಂ. ಅರ. ಪಾರ. ಉಸ್ತಾದ್; ಮರಾ. ಉಸ್ತಾದ್, ವಸ್ತಾದ್]

**ಉಸ್ತಾದಪಟ್ಟ** (ನಾ). ಗುರುವಿನ ಪಟ್ಟ: ಗರಡಿಮನೆಯ ಉಸ್ತಾದ ಪಟ್ಟ ದಾದಾನಿಗೇ ಲಭಿಸಿತು (ಗ್ರಾಮಾಯ. ೪೩೦). [ಉಸ್ತಾದ + ಪಟ್ಟ]

**ಉಸ್ತುವಾರಿ, ಉಸ್ತವಾರಿ** (ನಾ). ಎಚ್ಚರಿಕೆಯಿಂದ ನೋಡಿಕೊಳ್ಳುವುದು; ಮೇಲ್ವಿಚಾರಣೆ; ವ್ಯವಸ್ಥೆ: ಗಾಡಿಯವನನ್ನು ಕರೆದು ಅವನ ಎತ್ತುಗಳ ಉಸ್ತುವಾರಿಗೆ ಏರ್ಪಾಟು ಮಾಡಿದನು (ಬನಶಂ. ೪೬). ಕೋಟೆಕೊತ್ತಲುಗಳ ಉಸ್ತುವಾರಿ ಊರುಬಾಗಿಲುಗಳ ಕಾವಲು ಕಟ್ಟಲೆಗಳು ಬಲಗೊಂಡುವು (ಚದೇವ. ೨೩೧); ಗುರುಚರಣದಾಸನು ತನ್ನ ಪ್ರೌಢಶಾಲೆಯ ಉಸ್ತುವಾರಿಗೆ ನಿಂತನು (ಚತಸು. ೨೭). **ಉಸ್ತವಾರಿ:** ಅರಮನೆಯ ಮೊತ್ತೇಸರರುಗಳು ಮೇಲೆ ಉಸ್ತವಾರಿ ನೋಡಿಕೊಳ್ಳುತ್ತಾ ಎಲ್ಲ ವ್ಯವಸ್ಥೆಯನ್ನು ಮಾಡುತ್ತಾರೆ (ಪ್ರವಾಇ. II. ೩೭೪). [← ಹಿಂ. ಮರಾ. ಉಸ್ತವಾರೀ; ಪಾರ. ಉಸ್ತುವಾರೀ]

**ಉಸ್ತುವಾರಿಕೆ** (ನಾ). ಮೇಲ್ವಿಚಾರಣೆ: ಆಂಗ್ಲೇಯರು ನಗರದ ಎಲ್ಲಾ ದ್ವಾರಗಳ ಉಸ್ತುವಾರಿಕೆಯ ಪ್ರಬಂಧ ಮಾಡಿದರು (ಝೂರಾಣಿ. ೩೯೯); ಕಾರ್ಮಿಕರುಗಳ ಕೈಯಿಂದ ಕೆಲಸ ತೆಗೆಯುವ ಉಸ್ತುವಾರಿಕೆ ಅವನಿಗೆ ದೊರಕಿತು (ಮೂಲಾನ. ೨೪). [ಉಸ್ತುವಾರಿ + -ಕೆ$_1$]

**ಉಸ್ರ** (ನಾ). ೧. ಪ್ರಕಾಶಮಾನವಾದುದು; ಕಿರಣ. ೨. ವೃಷಭ; ಬಸವ. [ಸಂ.]

**ಉಸ್ರೆ** (ನಾ). ಹಸು. [ಸಂ. ಉಸ್ರಾ]

**ಉಸ್ಸೆನ್ನು** (ಕ್ರಿ). ೧. ದೀರ್ಘಶ್ವಾಸವನ್ನು ಎಳೆ: ಒಳಗೊಳಗೆ ಮಿಗೆ ಬೆಂದಳುಸ್ಸೆ[ಸ್ಸೆ]ಂದಳು ಹೊರಳಿದಳು ಕಂಸನರ್ಧಾಂಗಿ (ಸಾಕ್ಷಭಾ. ೧೦-೧೨); ನಿಡಿದುಸಿರೆಳೆದರು ಬಾಲಕರುಸ್ಸೆಂದು ತಲೆಕೆಳಗಾಯಿತು ಚಿತ್ತ (ಇಂಚಾಪ. ೯೭-೭೪). ೨. ಆಯಾಸದಲ್ಲಿ ಉಸಿರಾಡು. [ಉಸ್ + ಎನ್ನು$_1$ (< ಎನ್$_1$)]

**ಉಳ್$_1$** (ಕ್ರಿ). ಇರು; ಹೊಂದು; ಪಡೆ: "ಉಳ್ — ಸತ್ತಾಯಾಂ" (ಶಮದ. ೨೪೪ ಟೀಕೆ); ಚಂದ್ರಾರ್ಕರುಳ (ಸೌಇಇ. XI-i, ೭-೩೨; 837); ಲೋಕದೊಳುಳ್ಳ ಶಾಸ್ತ್ರಂಗಳೆಲ್ಲಮಂ ಕಲ್ಪಿಸಿದೊಡಧಿಗಮ ಸಮ್ಯಗ್ದೃಷ್ಟಿಯಾಗಿ (ವಡ್ಡಾರಾ. ೭೪-೧೦); ನೀನುಳ್ಳೊಡುಂಟು ರಾಜ್ಯಂ ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟೈ ನೀನುಳ್ಳೊಡುಂಟು ಪೀಟಿಗೆ ನೀನಿಲ್ಲದಿವೆಲ್ಲಮೊಳವೆ ಅಂಗಾಧಿಪತೀ (ಗದಾಯು. ೫-೨೦); ನೀನಿಂತು ಪಲವೋದನೋದಿ ಎನ್ನಂ ಪೊಲಗಿಡಿಸದೆ ಉಳ್ಳುದನುಳ್ಳಂತೆ ಪೇಟೆನೆ (ಪಂಚತಂ. ೧೩೪-೧೦); ಮನದ ಕೆಚ್ಚುಳ್ಳದಟನಹೆ ಮಾತಿನ ಸಘಾಡಿಕೆ ಲೇಸು ಪಾರ್ಥನ ತನಯನಲ್ಲಾ (ಕುವ್ಯಾದ್ರೋ. ೬-೧೧); ಉಳ್ ಧಾತುವಿಗೆ ಉಳ್ಳ, ಉಳ್ಳುದು, ಉಳ್ಳೊಡೆ ಎಂಬಲ್ಲಿ ಮಾತ್ರ ದ್ವಿತ್ವವುಂಟು (ಕೈಪಿಡಿ. ೧೨). ⓟ ಇತರ ವಿಶಿಷ್ಟರೂಪಗಳು. ಒಳನ್, ಒಳರ್, ಒಳದು, ಒಳವು, ಒಳೆನ್, ಒಳೆವು, ಒಳಯ್, ಒಳಿರ್. 'ಉಂಟು', 'ಉಂಡು' ಪರಾ.

ಉಳ್ಳನಕ, ಉಳ್ಳನ್ನಂಬರಂ, ಉಳ್ಳನ್ನಕ್ಕ, ಉಳ್ಳನ್ನಬರ, ಉಳ್ಳನ್ನೆಗಂ, ಉಳ್ಳನ್ನೆವರಂ, ಉಳ್ಳಿನ, ಉಳ್ಳಿನೆಗಂ = ಇರುವವರೆಗೆ: ಚಂದ್ರ ಸೂರ್ಯರುಳ್ಳನಕಲು (ಎಕ. XII, ತಿರಾ. ೬೬–೧೬ ; 1379) ; ಧನಕನಕ ವುಳ್ಳನಕ ದಿನಕರನವೋಲಕ್ಕು ಧನಕನಕಹೋದ ಮಱುದಿನ ಹಾಳೂರ ಶುನಕನಂತಕ್ಕು (ಸರ್ವಜ್ಞ. ೧೨೩೭) ; ಚಂದ್ರಾದಿತ್ಯರ್ಕಳ್ ಉಳ್ಳನ್ನಂಬರಂ (ಎಕ. IV, ಚಾಮರಾ. ೪೮–೧೩ ; 965) ; ನೀ ನಾನೆಂಬ ಭಾವಲೀಲೆಯುಳ್ಳನ್ನಕ್ಕ ಮತ್ತೆ ತಿಳಿದು ನೋಡಲಿಕ್ಕೆ ಮತ್ತೆಯೂ ಪರಿಪೂರ್ಣನೇನೇ (ಮೋಳಿಮಾ. ೧೫); ಚಂದ್ರಸೂರ್ಯರು ಉಳ್ಳನ್ನಬರ (ಎಕ. X, ಗೋರೀಬ. ೫೯–೧೯ ; 1408) ; ಈ ದೇಹದೊಳಿಂದೀ ಪ್ರಾಣಮುಳ್ಳನ್ನೆಗಮೆ ತಡೆಯದಾತ್ಮೇಶನಂ ಕಾಣ್ಬೆನೋ (ಕಾದಂಪೂ. ೮೫೭) ; ಚಂದ್ರಾರ್ಕತಾರಮುಳ್ಳನ್ನೆವರಂ (ಎಕ. VII, ಶಿವಮೊ. ೯೭–೫೦ ; 1113) ; ಪರಪಕ್ಷಮುಳ್ಳಿನಂ ತನಗಿರವುಬ್ಬಸಮದಱಿನಱಿವುದು (ಕವಿರಾ. ೩–೧೫೧) ; ಜೀವಮುಳ್ಳಿನಮಿಱಿದರ್ಥಮುಳ್ಳಿನೆಗಮಿತ್ತು ನೆಗಟ್ತೆಯನಾಂಪುದು (ಪಂಪಭಾ. ೫–೭೭).

[ದೇ. ‖ ತಮಿ. ಮಲ. ಕೊಡ. ತುಳು. ಉಳ್ ; ತೆಲು. ಉಂಡು]

**ಉಳ್$_2$** (ನಾ). ಒಳಗು ಎಂಬುದು ಸಮಾಸದ ಪೂರ್ವಪದವಾಗಿದ್ದಲ್ಲಿ ಅದಕ್ಕೆ ಬರುವ ಆದೇಶ: ಉಳ್ಳುಡೆ, ಉಳ್ಳಲರ್ ಮುಂತಾದುವನ್ನು ನೋಡಿ. ☞ 'ಉಳ್' ಎಂಬುದು ಪೂರ್ವದ ಹಳಗನ್ನಡದಲ್ಲಿ ಸಪ್ತಮೀ ವಿಭಕ್ತಿ ಪ್ರತ್ಯಯವಾಗಿಯೂ ಪ್ರಯೋಗವಾಗಿದೆ: ಮೆಚ್ಚೆನಾನೀ ಧರಣಿಯುಳಿರ್ದವಾನೆನ್ದು ಸನ್ನ್ಯಾಸನಂಗೆಯ್ದು (ಎಕ. II, ೮೮–೩ ; 700). [?]

**ಉಳ್$_3$** 'ಉೞ್' ನೋ.

**ಉಳಕ** (ನಾ). (ಉಕ) ಮರದಿಂದ ಮಾಡಿದ ಒಂದು ಬಗೆಯ ಆಟದ ಸಾಮಾನು (ಕ). [?]

**ಉಳಗುನ್ನಿ** (ನಾ). ತುರಿಚೆಗಿಡ; ನಸುಗುನ್ನಿ ; ಉರಸಣಿಗೆ : ಇನ್ನು ಅಂತರಂಗದ ಅರಿಷಡ್ವರ್ಗಂಗಳೆಂಬ ಭವಿಗಳ ಕಳೆಯಲಿಲ್ಲ ಮಾಯಾ ಮೋಹ ಬೆಳೆ ಉಳಗುನ್ನಿಯ [ಪಾಠಾಂ. ಉಳ್ಳಿನುಗ್ಗಿಯ] ಬಿಡಲಿಲ್ಲ (ವಚಶಾ. I, ೩೨೦). 'ನಸುಗುನ್ನಿ' ಪರಾ. [ಉಳ + ಕುನ್ನಿ ?]

**ಉಳನೂರ್** (ನಾ). ಒಂದು ಊರಿನ ಹೆಸರು : ಶ್ರೀಮತ್ ಮಾರಸಿಂಘದೇವ ಪೆರ್ಮ್ಮಾನಡಿಗಳ್ ಉಳನೂರೊಳೆ ನೋಱಿಮ್ಬರಂಕದ (ಎಕ. V, ಚನ್ನರಾ. ೨೬೭–೮ ; 971). [ಉಳನ್ ? + ಊರ್]

**ಉಳನೆ** (ಅ). ಸುಮ್ಮನೆ; ಒಳಗೆ (?) : ಪಿಂಗಾಕ್ಷ ನೀನೇಕೆ ಮಿಳ್ಳಿಳ ನೋಡುತ್ತುಳನಿರ್ದಯೆಂದದಟರಂ ಭೀಮಂ ಪಳಂಚಲ್ವಿದಂ (ಪಂಪಭಾ. ೧೨–೧೫೦). [?]

**ಉಳಮೆ$_1$** 'ಉಳಿಮೆ' ನೋ.

**ಉಳಮೆ$_2$** 'ಉೞುಮೆ' ನೋ.

**ಉಳಮೆದಾರ** (ನಾ). ಬೇಸಾಯಗಾರ (ಕೈಸಾಗ. ೫೬೩).

[ಉಳಮೆ$_2$ (< ಉೞುಮೆ) + -ದಾರ$_4$]

**ಉಳಾಲ್** (ನಾ). (ಕರಾ) ಮಣ್ಣಿನೊಳಗೆ ಹೂತಿರುವ ಮೀನು. [?]

**ಉಳಿ$_1$** 'ಉೞಿ$_1$' ನೋ.

**ಉಳಿ$_2$** (ಕ್ರಿ). ಅಡಗು ; ಮರೆಯಾಗು ; ಅವಿತುಕೊ : "ಚೋರ ಪ್ರಸ್ತರೋಪಕರಣ ಗೋಪನೇಷು ಕುಳಂ" (ಶಮುಧಾ) ; ಆಲೋಕನ ವಿದ್ಯೆಯನೀತಂ ಕಲ್ತನಪ್ಪುದಱಿಂದೆಲ್ಲಿಯುಳಿದೊಡಂ ಕಾಣಲಾಗದು (ವಡ್ಡಾರಾ. ೧೨೯–೬) ; ತಾಪಸಕುಮಾರನನಾಗಳೆ ವಂಚಿಸಲ್ಕೆ ತಳ್ತಿಡಿದ ಲತಾಪ್ರತಾನದೊಳಪೊಕ್ಕುಳಿದೊಯ್ಯನೆ ಸಾರ್ದು (ಕಾದಂಪೂ. ೭೯೨).

[ದೇ. ‖ ತಮಿ. ಮಲ. ಒಳಿ]

**ಉಳಿ$_3$** (ಕ್ರಿ). ಉಳುಕು ; ನರ ಸಿಕ್ಕಿಹಾಕಿಕೊ ; "ಒಳಿ" (ಉಕ) : ಒಳದೊಡೆ ಸೆಳೆದೊಡೆ ಸಂದುಗಳುಳಿದೊಡೆ ನರವೊಂದು ದೆಸೆಗೆ ತಱಿಸಂದೊಡೆ ಶೀತಳಜಳಮಿಶ್ರಿತವಸ್ತ್ರವನಳವಟ್ಟರೆ ಸುತ್ತಲಿನಿಸುಬೇನೆಗಳಱಿಗುಂ (ಲೋಕೋಪ. ೯–೧೬೬). [?]

**ಉಳಿ$_4$** (ನಾ). ೧. ಅಡಗಿಕೊಳ್ಳುವಿಕೆ; ಮರೆಯಾಗುವಿಕೆ. ೨. (ಬೇಡರು) ಅಡಗಿಕೊಳ್ಳುವ ಜಾಗ; ಗುಪ್ತಸ್ಥಳ: "ಅಡಂಗಿದುದು, ಬಡಿಗೆಯ ಮತ್ತು ಕಳ್ಳನ ಬೇಂಟೆಯ ಉಳಿ– ಇವುಗಳೊಳ್ ಕುಳಂ" (ಶಮುದ. ಪರಿ. ೧) ; ಮನಸಿಜನೆಂಬ ಬೇಡರಸನೀ ಖಳಸಂಸೃತಿಯೆಂಬುದೊಂದು ಕಾಪಿನೊಳಬಳಾಂಗಮೆಂಬುೞಿ[ಳಿ]ಯೊಳಿರ್ದಖಿಳೇಂದ್ರಿಯಮೆಂಬ ಬೇಡರಿಂ (ಜೀವಸಂ. ೮೪–೧೮).

[ದೇ. ‖ ತಮಿ. ಒಳಿ, ಒಳಿಪ್ಪು, ಒಳಿವು ; ಮಲ. ಒಳಿ, ಒಳಿವು ; ತುಳು. ಒಳ ; ತೆಲು. ಒಳವು]

**ಉಳಿ$_5$** (ನಾ). ಮರ, ಕಲ್ಲು, ಲೋಹ ಮೊದಲಾದುವುಗಳನ್ನು ಕತ್ತರಿಸಲು ಉಪಯೋಗಿಸುವ ಲೋಹದ ಒಂದು ಉಪಕರಣ ; ಚಾಣ ; ಟಂಕ : "ಚೋರ ಪ್ರಸ್ತರೋಪಕರಣ ಗೋಪನೇಷು ಕುಳಂ" (ಶಮುಧಾ) ; ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮನುಳಿಯ ನೂಱಿ ಕೊಡಂತಿಯೊಳ್ ಬೆಟ್ಟಿದಂತತ್ತಮಿತ್ತಮುರ್ಚಿಪೋಗೆಯುಂ (ಪಂಪಭಾ. ೧–೧೦೪ ವ) ; ಅಟ್ಟೆಯ ಚುಚ್ಚುವ ಉಳಿಯ ಮೊನೆಯಲ್ಲಿ ಪ್ರತ್ಯಕ್ಷವಾದ ಪರಮೇಶ್ವರನ ಕಂಡು (ಮಾದೂಳ. ೫೨) ; ಸೀಳಬಹುದೇ ಸೀಸದುಳಿಯಲಿ ಶೈಲವನು ಹರಿಯೊಲಿದ ಮನುಜರ ಮೇಲೆ ಮುನಿದೇಗುವರು ಕೆಲಬರು (ಕುವ್ಯಾದ್ರೋ. ೧–೨೯) ; ಶಿವಣ್ಣನು ಉಳಿಯಿಂದ ಹಲಗೆಗಳನ್ನು ಕೆತ್ತಿದನು (ಕಪವು. ೪–೫) ; ಉಳಿ ಸಣ್ಣದಾದರೂ ಮರ ಕಡಿಯದೆ ಬಿಡದು (ಗಾದೆ).

ಉಳಿಯಮೂನೂರ್ವರು = ಉಳಿಗೆಲಸದ ಮುನ್ನೂರು ಜನ, —ಒಕ್ಕಲು : ಒಕ್ಕಲ ಮಕ್ಕಳುಂ ಉಳಿಯಮೂನೂರ್ವರುಂ ಕುಂಬಾಱಗಟ್ಟದ ಕೆಳಗೆ ಬಿಟ್ಟ ತೋಂಟ (ಸೌಇಇ. IX–i, ೧೪೧–೪೯ ; 1174).

[ದೇ. ‖ ತಮಿ. ಮಲ. ತುಳು. ಉಳಿ ; ತೆಲು. ಉಲಿ]

**ಉಳಿ$_6$** (ನಾ). ಕಳ್ಳ ; ಚೋರ : "ಚೋರ ಪ್ರಸ್ತರೋಪಕರಣ ಗೋಪನೇಷು ಕುಳಂ" (ಶಮುಧಾ). [?]

**ಉಳಿ$_7$** (ನಾ). ಒಂದು ಗಿಡದ ಹೆಸರು (?) : ಪಳ್ಳದೊಳಗಣ ಉಳಿಯ ಳರಿಯ ಕೊಡೆಯಾಳಿ ಬೆಳನೆ ಸಯ್ಕನೆ ಬನ್ದು (ಇಆ. XII, ೧೬–೧೪ ; 735). [?]

**ಉಳಿ$_8$** (ನಾ). (ಕರಾ) ಬಿಡುವು ; ರಜ : ಶಾಲೆಗೆ ಉಳಿ ಇದ್ದರೂ ಉಡುಪಿಗೆ ಹೋಗಿ ತಿರುಗಾಡಿಕೊಂಡು ಬರಬೇಕೆಂಬ ಹಂಬಲವು ಬಲವಾಯಿತು (ಮರಮ. ೧೪೬). [< ಉೞಿ ?]

**-ಉಳಿ$_9$** (ಪ್ರ). ಉಳ್ಳವನು ಅಥವಾ ಹೊಂದಿದವನು ಎಂಬ ಅರ್ಥದಲ್ಲಿ ಬರುವ ತದ್ಧಿತ ಪ್ರತ್ಯಯ. 'ಅಟ್ಟುಳಿ', 'ಎಗ್ಗುಳಿ' ಪರಾ. ☞ ಹಿಂದಿನ ವ್ಯಾಕರಣಕಾರರು ಈ ಪ್ರತ್ಯಯವನ್ನು ಹೇಳಿಲ್ಲ.

**ಉಳಿಕಾರ** (ನಾ). ಅಡಗಿಕೊಂಡಿರುವವನು ; ಮರೆಗಾರ ; ಪಳ್ಳಿಗಾಧಟ ಉಳಿಕಾರ ಕರುಣಾಸಿಂಧು ಎಲ್ಲೆಲ್ಲೋ ಎಲೋ ದೇವ ಒಂದಾದರು ಮಾತು ಸಲ್ಲಿಸಿದ್ದು ಕಾಣೆ (ವಿಸ್ತೋಸು. ೧೮–೧).

[ಉಳಿ$_4$ + -ಕಾರ$_3$ (< -ಕಾಜ)]

**ಉಳಿಕು** 'ಉಳುಕು$_1$' ನೋ.

**ಉಳಿಕೆ** 'ಉೞಿಕೆ' ನೋ.

**ಉಳಿಗ$_1$** 'ಉೞಿಗ' ನೋ.

**ಉಳಿಗ$_2$** 'ಊೞಿಗ' ನೋ.

**-ಉಳಿಗ$_3$** (ಪ್ರ). ಇದರಲ್ಲಿ ಬಾಳುವವನು ಎನ್ನುವಲ್ಲಿ ಬರುವ ತದ್ಧಿತ ಪ್ರತ್ಯಯ: ಉಳಿಗ ಪ್ರತ್ಯಯಕ್ಕೆ – ದೇವುಳಿಗಂ, ಮಣ್ಣುಳಿಗಂ (ಶಮುದ. ೨೦೧ ಪ್ರಯೋ). [?]

**ಉಳಿಗಡೆ** (ನಾ). ೧. ಮಿಕ್ಕುದು; ಉಳಿದುದು: ಉಳಿಗಡೆಯ[ಪಾಠಾಂ. ಅಳಿದ ಗಜ] ನಾನೂಱು ಕುದುರೆಗಳಳಿದವರಸನ ಶರಹತಿಗೆ (ಕುವ್ಯಾಗ. ೧–೫೧). ೨. (ಆಲಂ) ಕ್ಷೇಮ; ನೆಮ್ಮದಿ: ಜೀವಕ್ಕೆ ಉಳಿಗಡೆಯಿಲ್ಲ (ರೂಢಿ). 'ಉಳಿಗಾಲ' ಪರಾ.

[ಉಳಿ$_1$ (< ಉೞ್$_1$) + ಕಡೆ ?]

**ಉಳಿಗಾಲ** (ನಾ). ಉಳಿಯುವ ಕಾಲ; ಜೀವಿಸುವ ಅವಕಾಶ: ಹೀಗೆಯೇ ಬಿಟ್ಟರೆ ಜಮೀನುದಾರರಿಗೆ ಉಳಿಗಾಲವಿಲ್ಲ (ಮಣ್ಣಿನ. ೨೧೨); ಡಾಕಾದಲ್ಲಿ ಹಿಂದುಗಳಿಗೆ ಉಳಿಗಾಲವೇ ಇರಲಿಲ್ಲ (ಬದುಜ. ೨೧).

[ಉಳಿ$_1$ (< ಉೞ್$_1$) + ಕಾಲ$_1$]

**ಉಳಿಗಾಳು** (ನಾ). ಉಳಿದ ಕಾಳು; ಅವಶೇಷ: ಕನಸಿನ ವಿಷಯದ ಈ ತಿಳುವಳಿಕೆಗಳೆಲ್ಲಾ ಹಳೆಯ ಶಾಸ್ತ್ರದ ಗಸಿಯಿಂದಾಗಲೀ, ಉಳಿಗಾಳಿಂದಾಗಲಿ ತಿಳಿಯಬಹುದು (ವಿಜಾಮಂ. ೬೨).

[ಉಳಿ$_1$ (< ಉೞ್$_1$) + ಕಾಳು$_2$ (< ಕಾೞ್$_2$)]

**ಉಳಿಗೆಲಸ$_1$** (ನಾ). ಉಳಿದ ಕೆಲಸ; ಮಿಕ್ಕ ಕೆಲಸ; ಚಿಲ್ಲರೆ ಕೆಲಸ: ತೊಳಲಿದಿರಿ ಹನ್ನೆರಡು ವರ್ಷವು ಹಳುವದಲಿ ಸೊಂಪಡಗಿ ಪರರೊಡನುಳಿಗೆಲಸದೋಗವಿದೆಂತ್ತೆ ಸಾರ್ವಭೌಮರಿಗೆ (ಕುವ್ಯಾವಿ. ೧–೮).

[ಉಳಿ$_1$ (< ಉೞ್$_1$) + ಕೆಲಸ]

**ಉಳಿಗೆಲಸ$_2$** (ನಾ). ಉಳಿ ಹಿಡಿದು ಮಾಡುವ ಕೆಲಸ; ಮರಗೆಲಸ; ಬಡಗಿಕೆಲಸ: ಮನೆಯ ಮಣ್ಣಿನಗೆಲಸ ಮುಗಿದಿದೆ ಉಳಿಗೆಲಸವಿದೆ (ರೂಢಿ). [ಉಳಿ$_5$ + ಕೆಲಸ]

**ಉಳಿಚೆಂಡು** 'ಉಳಿಸೆಂಡು' ನೋ.

**ಉಳಿಡ್ಡ** (ನಾ). (?): ಪೊಲೆಯಿಗೌಡನ ಸೋಮನುಳಿಡ್ಡರ ಹಾಸುಂಗಲ್ಲ ಬೊಮ್ಮಯ್ಯನಾಯಕನು ನಿಲ್ಲಿಸಿದ ಕಲ್ಲು (ಎಕ. VI, ಕಡೂರು. ೩–೫; 1116). [?]

**ಉಳಿತ** (ನಾ). ಸೇರುವಿಕೆ; ಒಂದಾಗುವಿಕೆ: "ಉಳಿತಮೆನಲ್ ಸೇರುವೆ" (ಭಾರನಿ. ೧೧). [ಉಳಿ$_1$ (< ಉೞ್$_1$) + -ತ$_2$]

**ಉಳಿತಾಯ** (ನಾ). ಮಿಗುವಿಕೆ; ಲಾಭ; ನಿವ್ವಳ ಉತ್ಪನ್ನ: ಸೇಕಡ ೨೫ ರಿಂದ ೫೦ ರ ವರೆಗೆ ಉರುವಲಿನ ಉಳಿತಾಯವಾಗುವುದೆಂದು ಹೇಳುತ್ತಾರೆ (ಅಡುಸಾ. ೨೨); ರಾಷ್ಟ್ರೀಯ ಉಳಿತಾಯ ಯೋಜನೆ (ರೂಢಿ).

[ಉಳಿತ (< ಉೞಿತ) + -ಆಯ$_4$]

**ಉಳಿಪೆ** (ನಾ). ಒಂದು ಗಿಡದ ಹೆಸರು. (ಮೈಔಗ. ೧೨–೨೧೫). [?]

**ಉಳಿಬಳೆ** (ನಾ). ಚಕ್ರದ ಒಳಭಾಗಕ್ಕೆ ಹಾಕುವ ಬಳೆ; "ಅಚ್ಚುಗಂಡಿಯ ಬಳೆ; ಉಳಿಬಳೆ" (Bush. ಇಂಕನಿ).

[ಉಳಿ$_1$ (< ಉೞ್$_1$) + ಬಳೆ$_2$]

**ಉಳಿಮಿಂಡ** (ನಾ). ಪ್ರೀತಿಪಾತ್ರಳಿಂದ ಬಿಡಲ್ಪಟ್ಟ ಮಿಂಡ; ನಲ್ಲೆಯಿಂದ ದೂರಮಾಡಲ್ಪಟ್ಟ ಜಾರ: ಗಂಡುಗಲಿಗಳೊ ವೀರಸಿರಿಯುಳಿಮಿಂಡ [ಪಾಠಾಂ. ಯಳಮಿಂಡ, ಉಳಿಖಂಡ, ಯಲಿವಿಂಡ, ಯಲಿಮಿಂಡ]ರೋ ತನಿನಗೆಯ ಬಿರುದಿನ ಭಂಡರೋ ನೀವಾರು (ಕುವ್ಯಾಶ. ೨–೫೦). [ಉಳಿ$_1$ (< ಉೞ್$_1$) + ಮಿಂಡ]

**ಉಳಿಮುಖ** (ನಾ). ಉಳಿಯಂತಿರುವ ಮುಖ; ಉಳಿಯಿಂದ ಕೆತ್ತಲ್ಪಟ್ಟದ್ದು (?): ವಾಯುಬ್ಯದಲು ಪಳ್ಳದ ಪಡುವಣ ಬದುವಿನ ಕೊತ್ತುರೊಳಗಣ ಉಳಿಮುಖದ ಕಿನ್ನರಿಗಲ್ಲು (ಸೌಇಇ. XX, ೬೪–೩೬; 1116). [ಉಳಿ$_5$ + ಮುಖ]

**ಉಳಿಮೆ, ಉಳಮೆ$_1$, ಉಳುಮೆ$_1$** (ನಾ). = ಉೞಿಕೆ: ಚಿತ್ತುತನ್ನೊಳಗಿರ್ಪ ಸತ್ತಾದ ಮಾಯೆ ಬಹುವೃತ್ತಿಗಳನೆಯ್ದಲದಱಿಂದ ಬಾಧೆವಡೆಯುತ್ತಿರದು ತಾನುಳಿಮೆಯಾಗಿ (ಅನುಸಾ. ೧–೪–೧೧). **ಉಳಮೆ$_1$**: ನೀರುಕೂಡಿದ ಕ್ಷೀರ ಬೆಂದಲ್ಲದೆ ಮತ್ತಾ ನೀರು ಸಾರವಱತು ಹೊತ್ತದೆ ಉಳಿದ ಉಳಮೆಯೆಂತೋ (ಮೋಳಿಮಾ. ೧೩೮–೫೩೩). **ಉಳುಮೆ$_1$**: ಬೆಣ್ಣೆಯ ಮಡಿಕೆಯಲ್ಲಿ ಕಿಚ್ಚು ತುಂಬಿ ಉರಿವುತ್ತಿದ್ದುದ ಕಂಡೆ ಕಿಚ್ಚುಕರಗಿ ಬೆಣ್ಣೆ ಉಳಿಯಿತ್ತು ಉಳಿದ ಉಳುಮೆಯ ಒಡಗೂಡಬಲ್ಲಡೆ . . . ಲಿಂಗವ ಬಲ್ಲವನೆಂಬೆ (ಮೋಳಿಮಾ. ೧೯೬–೬೩೦); ಸಾಂದ್ರಭಕ್ತಿಯುದರದೊಳಗೆ ತೊಳಗುವಱವಿನುಳುಮೆಯಂತೆ (ಷು ಳಿ ರ. ೧೨೦–೨೧); ಒಳಗಿನಿಂದೊಳಗನಱಿದೊಡೆ ಪರಬೊಮ್ಮದುಳುಮೆ ತಾನಕ್ಕು (ಸರ್ವಜ್ಞ. ೧೧೩).

[ಉಳಿ$_1$ (< ಉೞ್$_1$) + -ಮೆ$_1$]

**ಉಳಿಯಲಗು** (ನಾ). ಉಳಿಯ ಬಾಯಂತೆ ಅಲುಗುಳ್ಳ ಬಾಣ: ಹೆರೆಯಲಗು ಮುಳ್ಳಲಗುಗಾಣದ ತೆರದಲಗುವುಳಿಯಲಗು ವಜ್ರತ್ಕರದಲಗು (ಜಿರಾಪೂ. ೧೫೯–೩೬). [ಉಳಿ$_5$ + ಅಲಗು$_2$]

**ಉಳಿಯಾಳು** (ನಾ). ೧. ಉಳಿದ ಆಳು; ಮಿಾಸಲಾಳು: ಬೇಟೆಗೆ ಹೋಗೋ ಆಳುಗಳನ್ನೆಲ್ಲಾ ಉಳಿಯಾಳು, ಅಟ್ಟುಳಿಯಾಳು, ಅಂಚೆ ಆಳು ಅಂತ ವಿಭಾಗ ಮಾಡ್ತೀವಿ (ಬೈಸರ್ವ. ೧೦೨). ೨. ಆಳು ಕೆಲಸಕ್ಕೆ ಬಾರದ ದಿನದ ಕೆಲಸಕ್ಕೆ ಬಂದ ಆಳು: ಈ ತಿಂಗಳಲ್ಲಿ ನಾಲ್ಕುದಿನ ಉಳಿಯಾಳಾಗಿದ್ದಾನೆ (ರೂಢಿ). 'ಅಟ್ಟುಳಿಯಾಳು' ಪರಾ.

[ಉಳಿ$_1$ (< ಉೞ್$_1$) + ಆಳು$_3$ (< ಆಳ್$_3$)]

**ಉಳಿಯಿಡು** (ಕ್ರಿ). ಉಳಿಸು: ಯಾರು ಬಹಳ ಹಣವನ್ನು ಉಳಿಯಿಡುವರೋ ಅವರೇ ಇಂದಿನ ಶ್ರೀಮಂತರು (ಮತಂಟ. ೫೦).

[ಉಳಿ$_1$ (< ಉೞ್$_1$) + ಇಡು$_1$]

**ಉಳಿಲೆಕ್ಕ** (ನಾ). ಉಳಿದ ಲೆಕ್ಕ; ಮಿಕ್ಕಲೆಕ್ಕ: ಧರಣಿಪತಿಗಳು ಹತ್ತುಸಾವಿರವುರುಳಿತಾ ದಿವಸದಲಿ ಹಿಂದಣ ಕೊಱತೆಯುಳಿಲೆಕ್ಕಕ್ಕೆ ಕೊಂದನು ಹತ್ತುಸಾವಿರವ (ಕುವ್ಯಾಭೀ. ೯–೨೧).

[ಉಳಿ$_1$ (< ಉೞ್$_1$) + ಲೆಕ್ಕ]

**ಉಳಿವು** 'ಉೞಿವು' ನೋ.

**ಉಳಿಸು$_1$** 'ಉೞಿಸು$_1$' ನೋ.

**ಉಳಿಸು$_2$** 'ಉೞಿಸು$_2$' ನೋ.

**ಉಳಿಸೆಂಡು, ಉಳಿಚೆಂಡು** (ನಾ). ಚೆಂಡನ್ನು ಬಚ್ಚಿಟ್ಟುಕೊಂಡು ಆಡುವ ಒಂದು ಬಗೆಯ ಆಟ: ನಂದನವನದೊಳಿರ್ವರುಮುಳಿಸೆಂ[ಡನಾ] [ಪಾಠಾಂ. ಡೆಯಾ, ಸಿಂದಿಯಾ, ಸುಟ್ಟಲೋ, ಸುಟ್ಟಲಾ]ಡುತ್ತಿ[ರ]ಲೋಕ[ನ]ವಿದ್ಯೆಯನೀತ ಕಲ್ತನಪ್ಪುದಱಿಂದೆಲ್ಲಿಯುಳಿದೊಡಂ ಕಾಣಲಾಗದು (ವಡ್ಡಾರಾ. ೧೨೯–೫); ಒಡನಾಡಿಯುಮೊಡನೋದಿಯುಮೊಡವಳೆದುಂ ಗುಳ್ಳೆಗೊಟ್ಟ ಬಟ್ಟುಳಿಸೆಂಡುಂ ಪೊಡೆಸೆಂಡೆಂಬಿವನಾಡುತ್ತೊಡವಳೆದರ್ ತಮ್ಮೊಳಳಸೆ ತಂತಂ ಗೆಡೆಗಳ್ (ಪಂಪಭಾ. ೩–೩೦). **ಉಳಿಚೆಂಡು**: ವನದಲ್ಲಿ ಇಬ್ಬರೂ ಉಳಿಚೆಂಡಾಡುತ್ತಿದ್ದವು (ಕಸಾಟಿ.೬).

[ಉಳಿ$_1$ (< ಉೞ್$_1$) + ಸೆಂಡು]

**ಉಳಿಹು** 'ಉೞಿವು' ನೋ.

**ಉಳಿಹೂವು** (ನಾ). ಒಂದು ಬಗೆಯ ಹೂವು: "ಉದರ್ಘಂ-ದುಂದುಪೆ, ಉಳಿಹೂವು" (ಒಷಧಿ. ೧೫). [ಉಳಿ$_6$ + ಹೂವು (< ಪೂವು)]

**ಉಳು** 'ಉೞ್' ನೋ.

**ಉಳುಂದೋಗರೆ** (ನಾ). ಉದ್ದಿನ ಅನ್ನ: ಲಕ್ಷ್ಮಿ ಮಾಡಿಟ್ಟ ಉಳುಂದೋಗರೆ ಪುಳಿಯೋಗರೆಗಳನ್ನು ಸವಿದು (ಶಾಂತಲಾ. ೧೨೩).

[← ತಮಿ. ಉೞುನ್ದೋಗರೈ]

**ಉಳುಕೆ** (ನಾ). ೧. ತಪ್ಪಿಸಿಕೊಂಡವನು; ಮರೆಯಾದವನು: ಶಿಕ್ಷ ವಾದ ಅಪರಾಧಿಯು ಉಳುಕನಾಗಿ ಉಳಿದು ನಿರಪರಾಧಿಗಳು ಬಹುಪರಿಯಾಗಿ ಕಷ್ಟಬಟ್ಟರು (ಸ್ಕೂಲಮಿ. ೨೨೧). ೨. (ಉಕ) ಮೈಗಳ್ಳ; ಸೋಮಾರಿ. [ಉಳ್ಳು₀ (< ಉೞ್₁) + -ಕ್ಕ₃]

**ಉಳುಕೆಲು** (ನಾ). ಉಳಿದದ್ದು; ಮಿಕ್ಕದ್ದು; ಶೇಷ: ಬಳಿಸರಳ ಸಂಧಾನದಲಿ ಬಳಿಕುಳುಕಲಿನ ರಕ್ಕಸರ ಜವಪುರದೊಳಗೆ ಹೊಗಿಸಿದನು (ತೊರರಾ. ೧-೧೧-೨೨); ದುಷ್ಟರಿಲ್ಲೆಲಾಯಿನ್ನು ಭೂಲೋಕದೊಳುವುಳು ಕಲುಳಿದಿರ್ದೊಡಂ ಸಂಗ್ರಾಮದಿಂ ಮಡುಹಿ (ತುರಂಗ. ೮೫-೪೬); ಅರ್ಧ ಮರ್ಧ ಸುಟ್ಟ ತಂಬಾಕಿನ ಉಳುಕಲನ್ನು ಕಿರುಬೆರಳಿನಿಂದ ಸ್ವಚ್ಛಮಾಡಿ (ಚಿನ್ನಹಿಂ. ೩೭). [ಉಳ್ಳು₀ (< ಉೞ್₁) + -ಕಲು₂ (< -ಕಲ್₂)]

**ಉಳುಕು₁**, ಉಳಿಕು (ಕ್ರಿ). ೧. ನರ ಹೊರಳು: ಬೆರಳಲ್ಲಿ ಬೆಟ್ಟವ ನೆಗಹಿದ ಕಾರಣ ಬೆರಳು ಉಳುಕಿತೆ ನಿನಗೆ ರಂಗಯ್ಯ (ಪುರಂದ. ೩-೧೦-೨); ದಪ್ಪನೆಬಿದ್ದ ಹೆಗ್ಗಡೆಯ ಎಡಗಾಲೇ ಉಳುಕಿಹೋಗಿತ್ತು (ದೇವಹಂ. ೨೩೨). ೨. (ಆಲಂ) ನೋವು ಉಂಟಾಗು: ನನಗೆ ಈ ಮಾತಿನಿಂದ ನಿಜವಾಗಿಯೂ ಉಳುಕಿತು (ಆಲಹೂ. ೨೩). **ಉಳಿಕು**: ೧. ಮುಟ್ಟದ ಮುನ್ನವೆ ತೊಟ್ಟನೆ ಬಿದ್ದು ಬೆನ್ನುಳಿ [ಪಾಠಾಂ. ಳು] ಕಿಂದಂತುಸುರಂ ಪಿಡಿಯುತಂ (ನಂಬಿರ. ೬-೧೦೨).

[ದೇ. ‖ ತಮಿ. ಮಲ. ಉಳುಕ್ಕು; ತುಳು. ಉಳ್ಕುನಿ; ತೆಲು. ಇಲುಕು]

**ಉಳುಕ್ಕು₂** (ನಾ). ನರಹೊರಳುವಿಕೆ; ನೋವು ಉಂಟಾಗುವಿಕೆ: ಪೈಸರ ಬೆಸುಗೆ ಬಿಗುಹುಳುಕೊತ್ತು ಕಲೆಗಳ ರಸದ ಪಸರವನಜ಼ಯ ಬಾರದು ವಿಗಡ ವಿಟರುಗಳ (ಕುಮಾರ. ೧೫-೨೫); ಉಳುಕು ಮೊದಲಾದ ಬೇನೆಗಳಾದಾಗ ಲೇಪ ಸವರುವುದಕ್ಕೆ ಇದನ್ನು ಉಪಯೋಗಿಸುತ್ತಾರೆ (ಬಾಲಪ್ರ. II, ೯೩೦); ಉಳುಕು ತೆಗೆಯುವುದಕ್ಕೆ ಭಾಗೀರಥಮ್ಮನನ್ನು ಕರೆಸಿದರು (ಗೌರಕ. ೨೬).

[ದೇ. ‖ ತಮಿ. ಮಲ. ಉಳುಕ್ಕು; ತುಳು. ಉಲ್ಕು, ಉಳ್ಕು; ತೆಲು. ಇಲುಕು]

**ಉಳುಕ್ಕು₃** 'ಉಳ್ಕು₄' ನೋ.

**ಉಳುಕುಮಂತ್ರ** 'ಉಲುಕುಮಂತ್ರ' ನೋ.

**ಉಳುಕೆ** (ನಾ). ಆಕಾಶದಿಂದ ಕೆಳಗೆ ಬೀಳುವ ತೇಜಃಪುಂಜವಾದ ವಸ್ತು. 'ಉಳುಕೆವಳೆ' ಪರಾ. [< ಸಂ. ಉಲ್ಕಾ]

**ಉಳುಕೆವಳೆ** (ನಾ). ಉಲ್ಕೆಯ ಮಳೆ: ಮಹಾಮಣಿಕಿರೀಟಂ ಕೆದರಿ ಕರೆದುದು ಕಿಡಿಕಿಡಿಯ ರತುನ ವಯಿರಗಳುಳುಕೆವಳೆಯಾಳಿಕಲ್ಗಳಂ (ಶ್ರೀರಾಮಾ. ೬೮೬-೨೩೩). [ಉಳುಕೆ + ಮಳೆ (< ಮೞೆ)]

**ಉಳುಗು** 'ಉಱುಗ್ಗು₂' ನೋ.

**ಉಳುಪು** 'ಉಱುಪು' ನೋ.

**ಉಳುಪೆ** 'ಉಲುಪೆ' ನೋ.

**ಉಳುಬಾಳು** (ನಾ). ಇರುವಿಕೆ; ಬದುಕುವಿಕೆ; ನೆಮ್ಮದಿ: ಆ ಬಡಪಾಯಿ ದಿಗ್ವಿಜಯನಿಗಂತೂ ಅವಳಿಂದ ಉಳುಬಾಳಿಲ್ಲ (ಬಂಕಿಮ. ೧೮೬).

[ಉಳ್ಳು₀ + ಬಾಳ್ಳು₂ (< ಬಾೞ್₂)]

**ಉಳುಮೆ₁** 'ಉಳಿಮೆ' ನೋ.

**ಉಳುಮೆ₂** 'ಉಱುಮೆ' ನೋ.

**ಉಳುವರಿ** (ನಾ). (ಭೂಮಿಯನ್ನು) ಉಳುವುದಕ್ಕಾಗಿ ಕೊಡುವ ತೆರಿಗೆ: ಮಾರವಂಗಲಕ್ಕೆ ಹದಿಕೆ ಸಂಬಳ ಉಳುವರಿ ಅಮದುವಣ ಮರಮೆಲಕ್ಕೆಮಬಲಾಳದೇವನಾಣೆ (ಮೈಆರಿ. ೧೯೩೪, ೪೨-೧೨; 1175). [ಉಳ್ಳು₀ (< ಉೞ್) + ವರಿ₁]

**ಉಳುವಲು** (ನಾ). ದಾಟುವ ಜಾಗ; ಕಡಕಲು: ಹಿತ್ತಿಲ ಬಾಗಿಲಿನಿಂದ ಹೊರಟು ಹಿತ್ತಿಲ ಉಳುವಲನ್ನು ದಾಟಿ, ಶಿವಮೊಗ್ಗೆಯ ಮೋಟಾರನ್ನು ಹಿಡಿಯಲು ಧಾವಿಸಿದ್ದ (ಬೆಳುವು. ೨೬೪).

[ದೇ. ‖ ತುಳು. ಉರುವೇಲ್]

**ಉಳುವೊಕ್ಕಲ್** (ನಾ). ಉಳುವ ಮನೆತನದವರು; ಒಕ್ಕಲುತನದ ಮನೆ; ಆರಂಬದ ಕುಳ: ಬಲರಾಮನನು ಬಾಳ್ದಲೆಗೊಂಡವನ ಕರತಳದ ಹಲಾಯುಧ ಸಹಿತ ಛಲದಂಕ ಕೇಳ್ನಿನ್ನ ತೆರಿಗೆಯ ಹಳ್ಳಿಯೊಳುಳುವೊಕ್ಕಲ ಮಾಡುವೆವು (ನೇಮಿಸಂ. ೨೬-೯೮).

[ಉಳು (< ಉೞ್) + ಒಕ್ಕಲ್₂]

**ಉಳುಹು** 'ಉಱುಪು' ನೋ.

**ಉಳೂಕ** 'ಉಲೂಕ' ನೋ.

**ಉಳೆ** (ನಾ). ಜಿಂಕೆ; ಚಿಗರೆ: ರಾತ್ರಿ ಉಳೆಗಳ ಹಿಂಡುಗಳೇ ಬಂದು ಬೆಳೆಯನ್ನು ಪುಡಿ ಎಬ್ಬಿಸಿದುವು (ಬಾಳಿಗ. ೧೧೬).

[ದೇ. ‖ ತಮಿ. ಉೞೈ; ತುಳು. ಉರೆ, ಉಳೆ; ಪರ್ಜಿ. ಉಜುಪ್; ತೆಲು. ಡುಪ್ಪಿ; ಗೊಂಡಿ. ಡುಪ್ಪಲ್]

**ಉಳ್ಕ** 'ಉಲ್ಕ' ನೋ.

**ಉಳ್ಕು₁** (ಕ್ರಿ). ೧. ಕಣ್ಣು ಕೋರೈಸು; ಅತಿಪ್ರಕಾಶವಾಗು: "ಉಳ್ಕು - ದೀಪ್ತೌ (ಪ್ರಕಾಶಿಸು), ದ್ರವ್ಯೇ ಚ (ಉಲ್ಕ)" (ಶಮುಧಾ); ಪೊಳೆದುಳ್ಕುವ ಕುಡುದಾಡೆಯ ಪೊಳೆಪು (ಪಂಪಭಾ. ೬-೫೯); ಪಗಲುಳ್ಕ ಮುಳ್ಕುವಂದದಿನೊಗೆವ ಗದಾಶಲ್ಕಮುಳ್ಕೆ (ಗದಾಯು. ೮-೧೨); ನೋಟ್ಪರ ಕಣ್ಣುಳ್ಕೆ ವಿಯಚ್ಚರ ಕಿರೀಟರತ್ನಾಂಶುಚಯಂಗಳೊರ್ಮೆ ಮಿಱುಗಿದುವು (ಚಂದ್ರಪ್ರ. ೬-೧೬). ೨. (ಆಲಂ) ಚುಚ್ಚು; ವೇದನೆಯುಂಟುಮಾಡು: ಪ್ರಳಯದುಳ್ಕಮುಳ್ಕುವಂತೆ ತನ್ನೆಚ್ಚಂಬು ಮುನಿಕುಮಾರನ ಕಣ್ಣೊಳಮೆರ್ದೆಯೊಳಮುಳ್ಕೆ (ಪಂಪಭಾ. ೧-೧೧೧ ವ); ಕಳ್ಳರಂ ಕಂಡಂತಳ್ಕದೆ ಕಣ್ಣೊಳಗಣ ಕಸವಿನಂತುಳ್ಕದೆ (ಧರ್ಮಾಮೃ. ೭-೧೦೫); ದಾರುಣಮಂ ಶರಶಲ್ಯಮನೋರಂತಿರೆ ಪುಣ್ಣೊಳುಡಿದು ಬಿಡದುಳ್ಕುವುದಂ (ಕಾವ್ಯಾವ. ೬೦೪). [?]

**ಉಳ್ಕು₂** (ಕ್ರಿ). ಬಾಗು; ಕುಗ್ಗು: ಪೋಗದಿರೆಂದು ತಾಗಿ ರಥಮಂ ಸೆಡೆದುಳ್ಕದೆ ಪತ್ತಿಮುತ್ತಿ ಚೆಲ್ವಾಗಿರೆ ತನ್ನ ಚಾಪದ ಪರಿಶ್ರಮಮಂ ನೆಜಿ ತೋರ್ಪೆಂ (ಧರ್ಮಾಮೃ. ೧೩-೧೪೬); ಬಿರುದರೊಳಾಂತು ಕಾದಿ ಸೆಡೆದುಳ್ಕನೆ ... ಯುದ್ಧದೊಳ್ (ಧರ್ಮಾಮೃ. ೧೩-೧೧೩). ℙ ಈ ಶಬ್ದ 'ಅಳ್ಕು' ಎಂಬುದರ ಅಪಲಿಖಿತವಿರಬಹುದು.

[ದೇ. ‖ ತಮಿ. ಉಳುಕ್ಕು]

**ಉಳ್ಕು₃** (ಕ್ರಿ). ಪ್ರವಾಹವಾಗಿ ಹರಿ; ಧಾರೆಯಾಗಿ ಸುರಿ; ಸ್ರವಿಸು: ಓರೊರ್ಮೆ ಧಾರಾಗೃಹಾಂತರಾಳದೊಳಂತುಮಿಂತುಮುಳ್ಕುವ [ಪಾಠಾಂ. ಉಣ್ಮುವ] ಹಿಮಾಂಬುಧಾರೆಗಳ್ (ವರ್ಧಪು. ೪-೫೭ ವ); ನೋಡುವ ಚೆಲ್ವುಮುಂ ನುಡಿವ ವಾಕ್ಯಮುಮಂ ಮನದುಳ್ಕಿದ [ಪಾಠಾಂ. ದೊಳ್ಪನ, ಉಕ್ಕಿದ]ಕ್ಕಜಿಂ ಕೊಡುವ ಸೌಖ್ಯಮುಂ ತನಗೆ ಬಂದ ಮಹೋನ್ನತ ಸಂಪದಂಗಳಂ (ನಂಬಿರ. ೧೧-೧). ℙ ಇದು 'ಒಟ್ಟು - ಪ್ರವಾಹೇ' ಎಂಬ ಧಾತುವಿನ ಇನ್ನೊಂದು ರೂಪವಿರಬಹುದು. [?]

**ಉಳ್ಕು₄**, ಉಳುಕ್ಕು₃ (ನಾ). ಆಕಾಶದಿಂದ ಕೆಳಗೆ ಬೀಳುವ ತೇಜಃಪುಂಜವಾದ ವಸ್ತು: "ಉಳ್ಕು - ದೀಪ್ತೌ (ಪ್ರಕಾಶಿಸು), ದ್ರವ್ಯೇ ಚ (ಉಲ್ಕ)" (ಶಮುಧಾ); ಅಂಬರದಿಂದುಳ್ಕುವುಳ್ಕುಮಂ ಪೋಲ್ತು ಶರಂ (ಆದಿಪು. ೧೨-೯೦); ಹಗಲುಂ ನರಿಗಳೂಳಿದವುಳ್ಕು ಬಿದ್ದುವು (ಬಸವು. ೬೦-೧೧). **ಉಳುಕ್ಕು₃**: ಥಳಥಳನೆ ಹಗಲುಳುಕು ಬಿದ್ದುವು (ಸಾಳ್ವಭಾ. ೧೧-೩೪). [< ಸಂ. ಉಲ್ಕಾ]

**ಉಳ್ಕಿ$_1$** ‘ಉಟಕ್ಕಿ’ ನೋ.
**ಉಳ್ಕಿ$_2$** ‘ಉಲ್ಕ’ ನೋ.
**ಉಳ್ಕಾ** ‘ಉಲ್ಕಾ’ ನೋ.
**ಉಳ್ತೊಡೆ** (ನಾ). ಒಳತೊಡೆ; ತೊಡೆಯ ಒಳಭಾಗ: ಬಳಿಕ ನಿಜಿಸಿದ ಪೊಸಪೊಂಗೆಲಸದ ಯೂಪಸ್ತಂಭಂಗಳ ಭಂಗಿಯನನುಕರಿಸಿದುವು ಳ್ತೊಡೆಯಾ ಕಮಲದಳಾಂಬಕಿಗೆ(ಜಯಕಾ. ೩-೩೦). [ಉಳ್$_2$ + ತೊಡೆ$_2$]
**ಉಳ್ಪಂಜರಿಸು** (ಕ್ರಿ). ಒಳಗೆ ಹೆಣೆದುಕೊ: ಕೊರಲೊಳ್ ಯಜ್ಞೋಪವೀತಂ ಪೊಳೆಯೆ ಬರಿಗಳೊಳ್ತೋಱುತಿರ್ಪೆಲ್ಲುಳುಳ್ಪಂಜರಿಸಿರ್ದಂತೆಯ್ದೆ ಬೇರ್ಪಟ್ಟರೆ (ಕಾದಂಪೂ. ೨೪೦). [ಉಳ್$_2$ + ಪಂಜರ + -ಇಸು$_3$]
**ಉಳ್ಮೆ** (ನಾ). ಸತ್ಯ: “ಸತ್ಯಮೆಂಬುದು ಉಳ್ಮೆ” (ತತ್ತ್ವಪ್ರ. ೩೧೩); ಸತ್ತ್ವಮೆಂಬುದು ಕರ್ಮಂಗಳುಳ್ಮೆ (ತಸೂವ್ಯ. ೨೮೭).
[ಉಳ್$_1$ + -ಮೆ$_1$. / ತಮಿ. ಉಣ್ಮೈ]
**ಉಳ್ಳಳಿಸು** (ಕ್ರಿ). ತವಕಿಸು (?): ಸುಲಲಿತಮಪ್ಪ ಸತ್ಕುಲಕ್ಕೆಣೆಯಾದತಿರೂಪಿನೊಳ್ ವಿಳಸಿತಮಪ್ಪ ಶ್ರೀಯು ಸಿರಿಯೊಳ್ ನೆಲಸೊಪ್ಪುವ ಧರ್ಮದೊಳ್ ಪಳಯಿಪ ಸತ್ಯವಾ ವಿಮಳ ಸತ್ಯಕೆ ಸೇರುವ ಕೀರ್ತಿಗುಳ್ಳಳಿಸುವ ಮೋನಮಂ ಪರಮ ಕಾರಣಕಂ ಮದನಾಂಗನಾಶನಾ (ನೀತಿಸಾ. ೧೬೩). [ಉಳ್ + ಪಳಿಸು ?]
**ಉಳ್ಳಂ** (ನಾ). ಮನಸ್ಸು; ಹೃದಯ. ‘ಉಳ್ಳಂಜಿಸು’ ಪರಾ.
[< ತಮಿ. ಉಳ್ಳಮ್ ?]
**ಉಳ್ಳಂಜಿಸು** (ಕ್ರಿ). ಮನದೊಳಗೆ ಭಯವನ್ನುಂಟುಮಾಡು: ಅಸಿರತ್ನಂ ಚಕ್ರರತ್ನಂ ನವನಿಧಿ ಪಲವುಂ ವಿದ್ಯೆ ಕೈಸಾರ್ದುವುಳ್ಳಂಜಿಸಿದಂ ದಿಕ್ಪಾಲರಂ (ಪಂರಾಮಾ. ೯-೧೭೭); ಉಳ್ . . . ಉಳ್ಳಂಜಿಸು, ಉಳ್ಳಲರ್, ಉಳ್ಳಳ್ಕು . . . ಧಾತುವಿನ ಪೂರ್ವದಲ್ಲಿ ಹತ್ತಿರುವುದನ್ನು ಕಾಣುತ್ತೇವೆ (ಸಮಾಲೋ. ೨೪೪). [ಉಳ್$_2$ + ಅಂಜಿಸು]
**ಉಳ್ಳಂಬಿರಿಸು** (ನಾ). (?) : ಸೋಮಶೇಖರನು ದುರ್ಗದ ಧೊರೆಯ ಕೈಯಲ್ಲಿದ್ದ ಕತ್ತಿಯನ್ನು ಕಿತ್ತುಕೊಂಡು ಎರಕದ ಕಠಾರಿಯನ್ನು ಉಳ್ಳಂಬಿರಿಸಿಗೂ ಎಸೆಯಲು ದುರ್ಗದ ರಾಜನು ಅದನ್ನು ಕೈಯಲ್ಲಿ ಹಿಡಿದುಕೊಂಡನು (ಚಿತ್ರಪಾ. ೫೩). [?]
**ಉಳ್ಳಗಾಯಿ** (ನಾ). ೧. ಉರುಳುಗಾಯಿ (ಉಕ.೬). ೨. ಅರ್ಧ ಹಣ್ಣಾದ ಮಾವಿನಕಾಯಿ (ದಕ. ೬).
[ಉಳ್ಳ$_0$ (< ಉರುಳು) + ಕಾಯಿ$_4$ (< ಕಾಯ್$_4$)]
**ಉಳ್ಳರಲ್$_1$** ‘ಉಳ್ಳಲರ್$_1$’ ನೋ.
**ಉಳ್ಳರಲ್$_2$** ‘ಉಳ್ಳಲರ್$_2$’ ನೋ.
**ಉಳ್ಳರಿತ** (ನಾ). ಸತ್ಯಪ್ರಜ್ಞೆ; ಒಳಜ್ಞಾನ: ನಾನೂ ಅಹುದೆಂಬ ಉಳ್ಳರಿತದ ಸಾರಸಾರ್ಥಕತೆಗೆ ಮಾಯಾಮುಕ್ತಿಯಾಗಿ (ಮಂತ್ರಶ. ೯೬-೮). [ಉಳ್$_1$ + ಅರಿತ (< ಅಱಿತ)]
**ಉಳ್ಳಲರ್$_1$**, ಉಳ್ಳರಲ್$_1$ (ಕ್ರಿ). ಒಳಗಿನಿಂದ ಅರಳು; ಚೆನ್ನಾಗಿ ಅರಳು: “ಬೀಗಿ ಬೆಳೆದುದನು ಕವಿಗಳ್ ಬೇಗದಿ ತಾನುಳ್ಳಲರ್ದುದೆಂಬರ್” (ಕವಿಕಂ. ೨೭೦); ಕೋಕನದ ಕುಲಂಗಳುಳ್ಳಲರ್ದುವೆಂಬಿನ ಮಂದೊಗೆದಂ ದಿವಾಕರಂ (ಪಂಪಭಾ. ೩-೮೪); ಅಲರ್ದಿರದೆ ಮುಕುಳಿತ ಮಾಗದುಳ್ಳಲರ್ದ ಬಿರಿಮುಗುಳೊಳ್ ಭರದಿಂ ಪೊಕ್ಕು (ಗಿರಿಕ. ೩-೧೦೩ ವ); ಮೆಲ್ಲಲರಿಂದುಳ್ಳಲರ್ದ ಮಲ್ಲಿಗೆಯ ಮಕರಂದದೊಡವೆರೆದ (ರಾಜಶೇ. ೨-೭೬ ವ); ಉಳ್ಳಲರ್ದ ಕೆಸರ್ದಮಲ್ಲಿಗೆಯ ತಾಯ್ವೇರ್ ತಳದಿಂ ಮುಱಿಯೆ (ರಾಮಾಶ್ವ. ೧೧-೨೧); **ಉಳ್ಳರಲ್$_1$**: ಪೆಂಪುವೆತ್ತಗಟ್ ಬಿಸರುಹಮುಳ್ಳರಲ್ದು ಸಿರಿ ಕಣ್ದೆಱೆದಂತಿರೆ (ಪಂರಾಮಾ. ೩-೩೫). ‘ಒಳ್ಳಲರ್’ ಪರಾ. [ಉಳ್$_1$ + ಅಲರ್$_1$]
**ಉಳ್ಳಲರ್$_2$**, ಉಳ್ಳರಲ್$_2$ (ನಾ). ಪೂರ್ಣ ಅರಳಿದ ಹೂವು: ವರಭವ್ಯಾನನ ಪದ್ಮಮುಳ್ಳಲರಲಜ್ಞಾನೀಕ ನೇತ್ರೋತ್ಪಳಂ (ಎಕ. II, ೧೧೭-೬೨; 1173); ಗುರುಕುಚದಂಡಮಂ ಸ್ತಬಕಮುಳ್ಳಲರ್ಗಳ್ ನಗೆಗಣ್ಗಳಂದಮಂ ಧರಿಯಿಸೆ (ವರ್ಧಪು. ೪-೯); ಉಳ್ಳಲರ ಜೇನ್ ಗುಡಿದು ಮರಿದುಂಬಿ ಕೂಗಿ (ಕಪು. ೪೪). **ಉಳ್ಳರಲ್$_2$**: ತನಯನ ಮೊಗದಾವರೆಯುಳ್ಳರಲೊಳ್ ತನಿವಾಲಂ ಕಱೆವೆನ್ನೀ ನೆಲೆಮೊಲೆಗನುರಾಗದಿ ಕಂಚುಕಮಂ ಕಟ್ಟುವ ಸೈಪೆನಗೆಂದಹುದೊ (ಜಯಕಾ. ೨-೩೮); ಮಗಮಗಿಸಿತ್ತು ತೋಳ ಮೊದಲಾನನಮುಳ್ಳರಲಾಯ್ತು ಕಣ್ಮಲರ್ ಮಿಗೆ ನಿಡಿದಾಯ್ತು (ರಸರ. ೧-೨೨); ಪಯೋಜಿನಿಗುಳ್ಳರಲಿಂಪುವೆತ್ತ ಸಂಪಗೆ (ರಾಜಶೇ. ೧೦-೩). ‘ಒಳ್ಳಲರ್’ ಪರಾ. [ಉಳ್$_1$ + ಅಲರ್$_2$]
**ಉಳ್ಳಲರ್ಚು** (ಕ್ರಿ). ಚೆನ್ನಾಗಿ ಅರಳಿಸು; ವಿಕಾಸಗೊಳಿಸು: ಜನನೀನಯನಾಬ್ಜಮನುಳ್ಳಲರ್ಚಿ ವಿಸ್ತಾರಮನೋರಥಾಂಗಮನೊಣರ್ಚಿ (ಪುಷ್ಪಪು. ೧೦-೧೬). [ಉಳ್$_1$ + ಅಲರ್$_1$ + -ಚು]
**ಉಳ್ಳಳುಕು** ‘ಉಳ್ಳಳ್ಕು’ ನೋ.
**ಉಳ್ಳಳ್ಕು**, ಉಳ್ಳಳುಕು (ಕ್ರಿ). ಅಂತರಂಗದಲ್ಲಿ ಹೆದರು; ಮನಸ್ಸಿನಲ್ಲಿ ಭಯಪಡು; ಹಿಂದೆಗೆ: ನೆಲನುಂ ಸರ್ವಸ್ವಮಂ ಕೊಟ್ಟಡಿಗೆಱಗಿದನಾ ಪಾಣ್ಡ್ಯನುಳ್ಳಳ್ಕಿ ಬೇಗಂ (ಸೌಇಇ. XX, ೪೯-೨೫; 1077 ?); ಚಿತ್ರದೊಳುಳ್ಳಳ್ಕುತ್ತಂ ನಿಲಲ್ಪಾರದೆನಿಸುವ ನೋವಿಂಗೆ ಬೆಬ್ಬಳವೋಗಿ (ಧರ್ಮಾಮೃ. ೧-೧೪೪); ಜಗದ್ವಲಯಕ್ಕೊರ್ಡಿಕಾಜನಾದನನಯಕ್ಕುಳ್ಳಳ್ಕಿ ಸಂಗ್ರಾಮದೊಳ್ ಕಲಿಯಾದಂ ವಿಪರೀತ ಜಾತ ಚರಿತಂ (ಕಾವ್ಯಾವ. ೨೬೧); ಆಳುವರ್ತನುಸಂತಾಪಕ್ಕುಳ್ಳಳ್ಕಿ ನಲ್ಲವಳ್ (ವರ್ಧಪು. ೪-೭೦). **ಉಳ್ಳಳುಕು**: ಕೇಳ್ದು ಭೀತಿಯಿಂದನ್ನಡುಗುತ್ತುಮುಳ್ಳಳುಕಿ ಕಾವ ಬುದ್ಧಿಯನೊಲ್ಲದಂತು (ಧರ್ಮಾಮೃ. ೧೩-೧೪೨). [ಉಳ್$_2$ + ಅಳ್ಕು$_1$]
**ಉಳ್ಳಾಡು** (ಕ್ರಿ). ಉರುಳಾಡು: ಬೆಳ್ಳಗೆ ಇರುತಿಹುದು ಉಳ್ಳಾಡಿ ಬರುತಿಹುದು ಸುಳ್ಳಲ್ಲ ಸತಿಯರಳಿಸುವದು ಕವಿಗಳಲಿ ಉಳ್ಳವರು ಪೇಳಿ (ಸರ್ವಜ್ಞ. ೨೦೯೭). [< ಉರುಳ್ + ಆಡು$_1$]
**ಉಳ್ಳಾತ** (ನಾ). ಉಳ್ಳವನು; ಧನಿಕ; ಹಣವಂತ: ಉಳ್ಳಾತಂ ಕಾಳ್ಗೆಡದೊಡಮೊಳ್ಳಿತ್ತೆಂದೆಂಬರೆಯ್ದೆ ಬಡವಂ ಪಿರಿದಂ ಒಳ್ಳಿತ್ತಂ ನುಡಿದೊಡಂ ಪೊಲ್ಲೆಂಬರ್ ಕಷ್ಟಮಲ್ಲವೇ ದಾರಿದ್ರ್ಯಂ (ಧರ್ಮಪ. ೫-೧೫).
[ಉಳ್$_1$ + ಆತ]
**ಉಳ್ಳಾಳ್** (ನಾ). ಇರುವ ಶೂರರು, —ಸಮರ್ಥರು: ಕಾಳನು ಹುತ್ತುಗ್ರಮಹಾಕಾಳನುಮೆಂಬರ್ ಕಿರಾತರಾಜರ್ ತಮ್ಮುಳ್ಳಾಳುಮನು ಕಾಳುಮನೊಳ್ಳಾಳುಮನೊಡಗೊಂಡು ಬಂದು ತಾಗಿದ ರಾಗಳ್ (ಜೀವಸಂ. ೫೮-೪೦). [ಉಳ್$_1$ + ಆಳ್$_3$]
**ಉಳ್ಳಾಱು** (ಕ್ರಿ). ಒಳಗೇ ಆರು; ವಾಸಿಯಾಗು; ಮಾಯು: ಬೆಂಕಿಯಿಂ ಸುಟ್ಟ ಪುಣ್ಣುಳ್ಳಾಱುಗುಮಾಱದಾ ನಾಲಗೆಯಿಂ ಸುಟ್ಟ ಕಲೆ (ಕುಱಳ್. ೧-೧೩-೯). [ಉಳ್$_1$ + ಆಱು$_1$]
**ಉಳ್ಳಿ$_1$** (ನಾ). ಈರುಳ್ಳಿ ಅಥವಾ ಬೆಳ್ಳುಳ್ಳಿ: ಎರಡುಳ್ಳಿ ಹಿಂಗು ನಿಂಬದ ತಿರುಳಾಡಿನ ಬೆಣ್ಣೆ ಬೇವಿನೆಣ್ಣೆಯುಂ ಬಿತ್ತರದಿಂ ನೆಯ್ ನಿಲೆ ಕುದಿಯಿಸುಗೆ (ಲೋಕೋಪ. ೭-೩೮); ಪಲತೆಱದ ಮಾಂಸಮಂ ಸಲೆ ಮೆಲಲಕ್ಕುಂ ನುಗ್ಗಿಯುಳ್ಳಿಯೆಂಬಿವನೆಂತುಂ ಮೆಲಲಾಗದೆಂದೆ ಪೇಟ್ವರ್ (ಸಮುಪ. ೧೪-೧೩೮); ಉಳ್ಳಿ ಮೆಱೆವುತಿರೆ ಕಂಪು ಬಸವನ ನಾಸಿಕಕ್ಕೆ ತೀಡುತ್ತಮಿರೆ (ಬಸರ. ೧೧-೪೩); ಶುಂಠಿಯ ಹಾಕಿ ಅದಕುಳ್ಳಿ ಮೆಣಸು ಜೀರಿಗೆಯ ಮರ್ದಿಸಿ (ಸೂಪಶಾ. ೪-೩); ಉಳ್ಳಿ ತಿಂದವಗೆ ಉಳುಕಿತು (ಗಾದೆ).
[ದೇ. ‖ ತಮಿ. ಮಲ. ತುಳು. ಉಳ್ಳಿ; ತೆಲು. ಕೋಲಾ. ಪರ್ಜಿ. ಉಲ್ಲಿ; ಗೊಂಡಿ. ಉಲ್ಲೀ; ಕುವಿ. ಊಲ್ಲಿ]

**ಉಳ್ಳಿ₂** 'ಉರುಳ್ಳಿ₁' ನೋ.

**ಉಳ್ಳಿಕಾಯ್ಪ** (ನಾ). ಒಂದು ಮನೆತನದ ಹೆಸರು (?): ಪೂರಿತ ವಂಸದ ದೋರಯ್ಯಕುಳ್ಳಿಕಾಯ್ಪ ಕೊಂಗೊಣಿವರ್ಮ್ಮ ಧರ್ಮ್ಮ (ಎಕ. V, ಹಾಸನ. ೧೪೫–೪ ; ?). [ಉಳ್ಳಿ ? + ಕಾಯ್ ?]

**ಉಳ್ಳಿಕ್ಕಲ್** (ನಾ). ಒಂದು ಊರಿನ ಹೆಸರು: ಶ್ರೀ ಉಳ್ಳಿಕ್ಕಲ್ಲೂರ ವಡಿಗಳ್ಳೋನ್ತು (ಎಕ. II, ೬–೧ ; 700). [ಉಳ್ಳಿ ? + ಕಲ್ ?]

**ಉಳ್ಳಿಗಡ್ಡೆ** (ನಾ). ಈ(ನೀ)ರುಳ್ಳಿಯ ಬೇರಿನಂತಹ ಹರುಕಲಾದ ಗಡ್ಡೆ: ಎಲೆವೆಲೆವೊ ಮಾರುತಿಯುಳ್ಳಿಗಡ್ಡದ ಹಱಿದಲೆಯ ರಣಮೂಢ ಸಿಲುಕಿದೆಲಾ (ಕುಮಾರವ್ಯಾಸ. ೧೩–೬೧); ಬಿಟ್ಟಿಹೆಗಂಟು ಕಿವಿಯೊಳಿಟ್ಟ ಕುಂಡಲ ಉಟ್ಟ ಧೋತ್ರವು ಉಳ್ಳಿಗಡ್ಡ ಮಟ್ಟ ಬೆರಲ ದರ್ಭೆಯಿಂ ಕೃತಕದ್ವಿಜನಿಟ್ಟಣಿಸಿದ ಸಭೆಯಿಂದ (ನೇಮಿಸಂ. ೨೩–೨೭೩). [ಉಳ್ಳಿ₁ + ಗಡ್ಡೆ]

**ಉಳ್ಳಿಗೆಡ್ಡೆ** (ನಾ). ಈ(ನೀ)ರುಳ್ಳಿಯ ಗೆಡ್ಡೆ: ಉಳ್ಳಿಗೆಡ್ಡೆಯಲ್ಲಿ ಕಾಂಡವು ಬಲು ಸಣ್ಣದು (ಸಸ್ಯಶಾ. ೨೬). [ಉಳ್ಳಿ₁ + ಗೆಡ್ಡೆ]

**ಉಳ್ಳಿಡು** (ಕ್ರಿ). ಒಳಗಾಗು ; ಒಳಗೊಳ್ಳು : ಕೇಸವಭಟ್ಟರುಳ್ಳಿಟ್ಟ ಸಭೆಯ ಕಯ್ಯಲ ಪೊನ್ನರ ಕೊಟ್ಟು (ಎಕ. IV, ಗುಂಡ್ಲುಪೇ. ೯೩–೩೦ ; 1049); ಉಳ್ಳಿಟ್ಟ ಮೂನೂರ್ವರುಂ ಸೂಳೆಯರುಂ ಪೆಮ್ಮಾಳರಾನುಳ್ಳಿಟ್ಟ ಮೂನೂರ್ವರುಂ ವಹುದಿದಕ್ಕೆ ಸಾಕ್ಷಿ (ಎಕ. X, ಶ್ರೀನಿವಾ. ೧೬–೫ ; ?). [ಉಳ್₂ + ಇಡು₁. / ತಮಿ. ಉಳ್ಳಿಡು]

**ಉಳ್ಳಿಮಾವು** (ನಾ). ಮಾವಿನಲ್ಲಿ ಒಂದು ಬಗೆ: "ಕಪಿಸರಸಾಧ್ಯಃ – ಉಳ್ಳಿಮಾವು" (ಓಷಧಿ. ೨೬). [ಉಳ್ಳಿ₁ + ಮಾವು]

**ಉಳ್ಳುಗುರ್** (ನಾ). ಒಳ ಉಗುರು ; ಉಗುರಿನ ಒಳಮೈ: ತನು ತನಿಗೆತ್ತ ಚಂಚು ಮಿಡುಕುತ್ತಿರೆ ಪೊತ್ತೆಳಗೊಂಬನುಳ್ಳುಗುರ್ [ಪಾಠಾಂ. ಸೆಳ್ಳುಗುರ್, ಬೆನಲ್ಕುಗುರ್] ಸೋನೆವಿಡೆ ತಾಗಿ ಸೂಗುರಿಸೆ ಕಂಠದ ತುಪ್ಪುಟ ಪಾಂಗ ಕಾಂತಿ ಕೆಂಪಿನ ಪಸರಕ್ಕೆ ಪಕ್ಕುಗುಡೆ (ಲೀಲಾವ. ೬–೧೧೯). [ಉಳ್₁ + ಉಗುರ್]

**ಉಳ್ಳುಡೆ** (ನಾ). ೧. ಒಳಗಿನ ಉಡುವು ; ಅಂತರೀಯ: "ಉಳ್ಳುಡೆ ಪಟ್ಟಣಿಗೆಯುಂ ವಸ್ತ್ರಮಕ್ಕುಂ" (ಕವಿಕಂ. ೧೬೪); ಅವಯವದಿಂದಮೆ ದೇವಾಂಗ ವಸ್ತ್ರದುಳ್ಳುಡೆಯನಾಕೆಯೋಸರಿಸುವ ಸೂಸುವ ಹಾರಲತೆಯ ನಳವಡಿಸುವ ಭಂಗಿಯೆ ಮದನರಾಜ ರಾಜ್ಯವಿಳಾಸಂ (ಆದಿಪು. ೯–೩೬); ಬೆಂಬಿಡದೊಯ್ಯನೊಯ್ಯನುಳ್ಳುಡೆ ಕಟಸೂತ್ರದೊತ್ತಿನೊಳೆ ಜೋಲ್ದಿರೆ ನಾಣ್ ತಲೆದೋಱೆ . . . ಡಕ್ಕೆಯೊಳಟ್ಟಜವಾಗೆಯ್ದಾಡಿದಳ್ (ಪಂಪಭಾ. ೪–೯೦); ಪೊಂಗಳಸಂಬೊಲಿರ್ದ ಪೆರ್ಮೊಲೆಯ ಲತಾಂಗದುಳ್ಳುಡೆಯ ತೆಳ್ಪಸಿಱಿಂದುನಿಭಾಸ್ಯದಂಗನಾವಳಿ ನೆರೆದಂದು ಬಂದುದು (ಧರ್ಮಾಮೃ. ೧೬–೧೬); ಕು ಚ ವ ಸ್ತ್ರ ಮಂ ತೆಗೆಯೆ ಸಾವನ್ನಂ ನಗುತ್ತಿರ್ಪಳುಳ್ಳುಡೆ [ಪಾಠಾಂ. ಸಡಿಲ್ದುಡೆ]ಯುಂ ಮೆಲ್ಲನೆ ಲೀಲೆಯಿಂ ಸೆಳೆದೊಡೆನ್ನ ಸಸ್ಪೃಹಂ ಕೊಳ್ವವೊಲ್ ಕಡೆಗಣ್ಣಿಂದಮೆ ಕೂಂಕುವಳ್ (ಲೀಲಾವ. ೨–೧೦೫); ಚಿತ್ರದ ಕಂಕಣ ಬಳಪದೋಲೆ ಕುರುಳ್ಗಳವಟ್ಟ ಕಾಡಹೂ ಕತ್ತರಿ ಪೀಲಿಯುಳ್ಳುಡೆ . . . ಮನಂಗೊಳೆ ಪುಳಿಂದಿಯರೊಪ್ಪುವರ್ (ವಶಕು. ೪–೨೬). [ಉಳ್₁ + ಉಡ್ಗೆ]

**ಉಳ್ಳಿಱುಗು** (ಕ್ರಿ). ಒಳಕ್ಕೆ ಬಾಗು (?): ಅಳಿದ ಅಣಿಗಡಿ ಕಡಿದ [ಕುಳ]ಗಡಿ ಬಡಗಲು ಉಳ್ಳಿಱಿಗಿದ ಅಣೆ (ಕಇ. I, ೩೬–೧೦ ; 1408). [?]

**ಉಳ್ಳೊಳ** (ನಾ). ಗದ್ದಲ ; ಕೋಲಾಹಲ: ಬೇಂಟಿಗೆ ಪೊಱಮಟ್ಟು ಪರಿಯತಾಣಕ್ಕೆ ವಂದು ಬೇಲಿಯ ಕೆಲದೊಳಲ್ಲದೆ ಪೆಱಗಣುಲಿ ಪಿಂಗಮುಳ್ಳೊಳಕ್ಕಂ ಗೆಂಟಾಗಿ ಬೀಡಂ ಬಿಡಿಸಿ (ಪಂಪಭಾ. ೫–೪೬ ವ); ದೆಸೆಕಿವುಡುವೀಱ್ವಿನಂ ತೆರೆಮಸಗಿದ ಮುನ್ನೀರ ಪೆರ್ಚಿದುಳ್ಳೊಳಮಂ ಬೆರ್ಚಿಸಿ ಕಾರಮುಗಿಲ ಮೊಳಗಂ ಮಸುಳಿಸಿ ಪೊಣ್ಮಿತ್ತು ಬೃಂಹಿತಂ ಕಾನನದೊಳ್ (ಪಂರಾಮಾ. ೧೦–೧೫೬); ನಭಕ್ಕೆ ತೂಂತಿಟ್ಟವೊಲಾಗೆ ದಳ್ಳಿಸಿದುದಾ ಪಡೆಯೊಳ್ ಪೊಱಪೊಣ್ಮುವುಳ್ಳೊಳಂ (ಪಂರಾಮಾ. ೧೨–೯೬). [< ಸಂ. ಉಲ್ಲೋಲ]

**ಉಳ್ಳೋವಣ** (ನಾ). (?): ಒಳಗುಳ್ಳೋವಣಮುಮರ್ದಿರೆ [ಪಾಠಾಂ. ಲೋವಣ್ಣಮುರೆದಿರೆ] ಚಳನಂ ಪೊಱಗೆಸೆಯೆ ಬೆಳಪನೆಯ್ದುವ ಬೆಳಗಂ ಪೋಳಿವ ಸುಲಿವಲ್ಲೆ ಮಸುಳಿಸೆ ವಿಳಾಸದಿಂ ದರ್ಪಶಯನ ತಳಗತನಾದಂ (ಕಾವ್ಯಾವ. ೨೪೬). [?]

**ಉಱಕೀಲ್** (ನಾ). (?): ಉಱಕೀಲಿಚ್ಚಿದವಂಬುವಾಳ್ಪಲಗೆಯುಳ್ತಟ್ಟುಟ್ಟು (ಸೌಇಇ. IX–i, ೩೯೨–೩ ; 8ನೆಯ ಶತ). ☞ ಈ ಶಬ್ದ 'ಉರಕೀಲ್' ಎಂದಿದ್ದಿರಬಹುದು. ಉರದ + ಕೀಲ್ = ಎದೆಯ ಕೀಲುಗಳು ಎಂಬರ್ಥವಾಗುತ್ತದೆ. ಕ್ವಚಿತ್ತಾಗಿ ಸಂಸ್ಕೃತದ ರೇಫಕ್ಕೆ ಕನ್ನಡದಲ್ಲಿ ಶಕಟರೇಫ ಬರುವುದುಂಟು. [ಉಱು₀ + ಕೀಲ್]

**ಉಱವ** (ನಾ). ೧. ನಂಟ ; ಬಂಧು: ತೊಱೆದು ನಿಜ ಪಿತೃಮಾತೃಬಾಂಧವರಱೆಕೆಯನು ಸತಿಸುತರ ಹಿತವರ ನೆರವಣಿಗೆಯಾಸೆಯನು ಮೇಣಿಹಪರದ ಸೌಖ್ಯವನು ಉಱವನಾನೆಂದೆನ್ನ ಚರಣದ ಮಱೆಯ ಸಾರಿದ ಭಕತರನು ತಾ ಮಱೆವೆನೆಂತೆಲೆ ತಾಯೆ (ನಿಭಾಗ. ೩–೧೩–೧೧). ೨. ಹಿರಿಯ ; ದೊಡ್ಡವ: ಪಿರಿದೀವಂ ಕಲಿ ಕೂಡೆ ಕೂರ್ಪನುಱುವಂ ನೀಱಂ ಕರಂಭಾವನಂ (ಲೀಲಾವ. ೬–೬೫). [ದೇ. ‖ ತಮಿ. ಮಲ. ಉಱವ]

**ಉಱಳಿ** (ನಾ). ಮೊತ್ತ ; ಗುಂಪು ; ಸಮೂಹ: "ಉಱಳಿ [ಪಾಠಾಂ. ಪುರುಳಿ]ಯೆನಲ್ ಮೊತ್ತಂ" (ಭಾರನಿ. ೧೫). [?]

**ಉಱಿ** (ನಾ). ೧. ಪಾತ್ರೆ ಮುಂತಾದುವುಗಳನ್ನು ಎತ್ತರದಲ್ಲಿಡುವುದಕ್ಕಾಗಿ ಹುರಿ ಹಗ್ಗಗಳಿಂದ ಮಾಡಿರುವ ಸಾಧನ ; ನೆಲುವು ; ಉಗ್ಗ(?). ೨. ಮೃಗಗಳನ್ನು ಹಿಡಿಯುವ ಬಲೆ(?): ಉಱಿ[ಪಾಠಾಂ. ಉಱಿ]ತಾಗಿದ ಮೃಗವು ಒಂದಡಿಯನಿಡುವುದೆ ಅಯ್ಯಾ ? (ಬಸವ. ೬೯೨). [ದೇ. ‖ ತಮಿ. ಮಲ. ಉಱಿ ; ತುಳು. ಉರಿ ; ತೆಲು. ಉಟ್ಟಿ]

**ಉಱಿತ** (ನಾ). ಸೇದುವಿಕೆ ; ಹೀರುವಿಕೆ: ಅಱಿತಂ, ಕಡಿತಂ, ಉಱಿತಂ (ಶಮದ. ೨೧೦ ಪ್ರಯೋ). [ಉಱಿ₁ + –ತ₂]

**ಉಱಿಯಱಿ** (ಕ್ರಿ). (?): ನೆಱೆದಿರೆ ಸಂಕಲೆವಂದದ ತೆಱದಿಂ ಪೆಣೆದಿರ್ದ ನಾಗರಜ್ಜುಗಳೆಲ್ಲಂ ಉಱಿಯಱಿಯೆ ಬಲದ ಕಂಡಂ ಪಱಿವಂತಿರೆ ಪಱಿದು ಕೆದಱಿ ಬಿದ್ದುವು ಕೊಳದೊಳ್ (ಶಾಂತಿಪು. ೮–೫೧). [?]

**ಉಱಿಲ್ಲಾಗೆ ?** (ನಾ). ಒಂದು ಬಗೆಯ ಸುಂಕ (?): ವಣ್ಣಾಕ್ಕೇತಾನಿ ದತ್ತಾನಿ ಸುಜ್ಯಾ[ನಿ]ವ್ರಿಜ್ತಿ × ಪೆಱ[ಕು]ಳ[ಕ್ಕೆ] ಮೊದಲಾಗೆ ಅಂಗ್ರಾಡಿಯುಳಿಮ್ಮಾರ್ಗನ[ಮೆಣ್ಣೆಯು]ಮುಮುರಿಸಿನಮುಂ[ಮೇಣೊ]ಪ್ಪರ್ಲಂ ಸಕ್ಕರೆ ಇಪ್ಪರ್ಲಂ ಪೆಱ [ಸೋ]ಳಿಪ್ಪರ್[ಲಱ]ಯ್ದಡೆ ಕೊ[ಟಕಾ]ಇಪ್ಪರ್ತೈದಂ ಉಱಿಲ್ಲಾಗೆ ಸಾಲೆ ಒಳುರೇ (ಕಇ. I, ೨–೧೩ ; 699). [?]

**ಉಱುಸು₁** (ಕ್ರಿ). ಸೈರಿಸು ; ಸಹಿಸು: "ಉಱಿಸು [ಪಾಠಾಂ. ಉಱಿಸು] ಸಹನೇ (ತಾಳಿಕೊ)" (ಶಮಧಾ); ಚಂದಚಂದದ ಚರಿತ್ರನಲ್ಲ ನಿಲ್ಲುಮಾಣು ನಿಮ್ಮಿಚ್ಛೆಯ ಪಡೆದವರೆಮ್ಮವರು ಇಂತಹ ದೇವನು ಅಂತಹ ದೇವನು ಎಂಬ ನಾಮ ಉಱಿಸದು (ಅವಚಂ. ೧೧೮–೫೩೬); ವಿರಹದಿ ಪಾಡುವ ವಿದ್ಯಾಧರವೆಂಗಳಾ ಕಿವಿಗುಱಿಸುವ ಗಾವರ ದಿಂಟೆಗಳು ಬಾಲೆಯ ರಳಲುರಿ ಪೊಳಲುರಿಯುಱಿಸಿತೆಲ್ಲೆಡೆಯಲ್ಲಿ (ಸೂಬಸೋ. ೧೪–೪೫, ೪೬); ಕುಱುಹುಗೊಂಡರೆ ನಮ್ಮ ತಾತನು ಉಱಿಸುವನೆ ನಿನ್ನೀ ವಿಕಾರಕೆ ಕಱಿವ ನಗ್ನಿಯ ಮಳೆಯನೇ ದಿಟವೆಂದು ಗಜಱಿದಳು (ಉತ್ತರಾ. ೩೬–೧೨). [ಉಱು + –ಇಸು₃]

**ಉಱಿಸು₃** (ಕ್ರಿ). ೧. ಹತ್ತಿರ ಸಾರು; ಮುಟ್ಟು; "ತಪ್ಪಿಸು" (ಶಿವಗೀ. ಕೋಶ) : ಶರಭಂಗಳ್ ಕೇಸರಿಕೇಸರಂಗಳಂ ಕ್ರೂರಘೋರ ಮಾ ರ್ಜಾ ರ ೦ ಗ ಳ್ ತರುಕ್ಷಾಖು ಶಾಬಶತಕಂಧರಮಂ ನಖಮುಖದಿ ನುಱಿಸಿ ತುಱಿಸಿದುವೊಲವಿಂ (ಪುಷ್ಪಪು. ೧೪–೧೯) ; ಅಕ್ಷಯದಿಂ ನಾದ್ವೈವ ಚರಿತಂಗೆ ಅಱಿವು ನೆಲಸಿದಗ್ರಾಹಿಸಾಕ್ಷಯ[ದಿನದ್ವೈವಚರಿತಂಗೆ]ಮುಱಿವೆ ಉಱಿಸದ ನಿರ್ಣಯವು (ಶಿವಗೀ. ೧೧೩–೫೫೭) ; ಮಹಿಷಿಯನು ತಂದಿತ್ತು ನಿಜವಿಗ್ರಹವ ರಕ್ಷಿಸಿಕೊಂಬುದೆಂಬುದು ಕುಹಕಿಗೀ ಮಾತು ಉಱಿ ಸ ದಿ ರೆ ಬಳಿಕೆಂಬುದೀ ಹದನ (ತೊರರಾ. ೬–೧೦–೨೧) ; ಮಧುರವಚನದಿನುಱಿ ಸುವವೊಲಿಂದ್ರಂಗೆ ಬಿನ್ನಹಮಾಡಿತಮರಗಣ (ತೊ ರ ರಾ. ೬–೪೯–೧೧). ೨. ಅನುವರ್ತಿಸು; ಆಸೆಪಡು (?) : ತೆಜವರೇ ಬಾಗಿಲನು ಪರಸತಿಗು ಱಿಸು[ಪಾಠಾಂ. ಉರಿಸು]ವತಿ ಪಾತಕನು ನೀನೆಚ್ಚಱಿತು ನಡೆಯದೆ ನಮ್ಮ ನುಡಿವುದು ಗುಣವೆ ನಿಮಗೆಂದ (ತೊರರಾ. ೪–೪–೪೪).

[ಉಱು + –ಇಸು₃]

**ಉಱು** (ಕ್ರಿ). ೧. ಇರು; ನೆಲಸು; ನಿಲ್ಲು; ಉತ್ತ (ಭೂತಕೃ) : ಎನ್ನರುಮನಾದೊಡಂ ತನ್ನೊಳಗಿಡುವುದೆ ನಮಗುಱುವ ಕಾ ರ್ಯ ರ್ಂ (ಪಂಚತಂ. ೧೪೮–೧೦) ; ಕೋಪಾಗ್ನಿಯುಂ ಬಿಡು ತಂದೆಯೆಂದು ಧರೆಗು ಱುವ ಸತಿಸುತರ್ವೆರಸಿ ಪೊಡಮಟ್ಟೊಡೆ (ಹಚಕಾ. ೮–೧೯) ; ಇಱಿದು ಮೇಣ್ ರಿಪುರಾಯನ ಕು ಕ್ಕ ಱಿ ಸು ವ ರೆ ರಾಥೇಯನಂತಿರಲುಱು ವನೊಬ್ಬನೆ ಬೇಹುದಲ್ಲದಡಿಲ್ಲ ಜಯವೆಂದ (ಕುವ್ಯಾಕ. ೧೬–೩೩) ; ಬರಿಕೈ ಮುಱಿದ ಮದಗಜದಂತೆ ಚಿತ್ರದಲುಱುವ ಕೇಸರಿಯಂತೆ ಮೆಱೆದಿದೆ ನಮ್ಮ ಬಲವೆಂದ (ಕುವ್ಯಾಭೀ. ೭–೭) ; ಬಱಿಯ ಪಕ್ಷ ಭ್ರಮೆಯಲಾಡಿದ ಡುಱುವ ನುಡಿಯೇ ಶಲ್ಯ (ಕುವ್ಯಾಕ. ೯–೨೯). ೨. ಪಡೆ; ಹೊಂದು; ಸೇರು : ತನಗುಱುವಂತುಟಾಗೆ ಕಡುನನ್ನಿಯ ಪೆಂಪುಮನಾಂತು . . . ಮಾಣ್ಬುದೇಂ ತನಗುಱುವೊಂದು ನನ್ನಿಯನೆ ಪೂಣ್ದು (ಪಂ ಪ ಭಾ. ೧೨–೧೯೭) ; ಬೆಕ್ಕಸಮುತ್ತಳ್ ಬರೆ ಕಂಡು ಪಾಂಡವ ಬಲ ಪ್ರಾಕಾರನಾ ಕಾರಮಂ (ಗದಾಯು. ೬–೩೩) ; ಅರೈಸಲಿಕ್ಕೆ ತಾಂಬೂಲಾದಿಗಳಳಿತ್ತು ದೂರಿಸುತ್ತುಂ ಪ್ರಸಾದಮನುಂಡು ಭಯಮುತ್ತು (ತಿರುರ. ೭–೧೪) ; (ಗದಾಯು. ೬–೫೫ ನೋ). ೩. ಒಪ್ಪು; ಹಿಡಿಸು; ಇಷ್ಟವಾಗು : ಚಕ್ರವರ್ತಿಯೊಳಯಸಂ ನ ಮ ಗು ಱ ದು ಬೇಗಮೆಱೆಗುವುದುಱುಗುಂ (ಆದಿಪು. ೧೨–೧೦೮) ; ಬೆಱಗಾಗಿ ಚಿಂತೆಯಿಂ ಬಾಯ್ ಬಱಬಱ ಬತ್ತುತ್ತುಂ ಓವೊ ಕೊಂಡೀ ವ್ರತಮಂ ತೊಱೆವುದಱಿಂ ಸಾವುದು ಕರಮುಱುವುದು (ಧರ್ಮಾಮೃ. ೩–೯೭) ; ದಿವ್ಯಾಮೃತವನೊಸೆದುಂಡು ತಣಿದವಂಗೆ ಜೇನು ಱುವುದೆ (ಸಿದ್ಧರಾ. ೩–೧೧). ೪. ಲಕ್ಷ್ಯಮಾಡು; ಗಣಿಸು : ಪ್ರದ್ಯೋತ ನೆಂಬರಸನೀಗಳ್ ಎಮ್ಮನುಱದಿರ್ಪೊನಾತನಂ ಪಿಡಿದು ಕಟ್ಟಿಕೊಂಡು ಬರ್ಕೆ (ವಡ್ಡಾ ರಾ. ೧೫೮–೧೧) ; ಚಂಡಪರಾಕ್ರಮನುಱದರಿಮಂಡಲಿಕರನಟ್ಟಿ (ಎಇ. X, ೧೫೨–೬೨ ; 915) ; ಅ ಕಮಳಾಕರಮಂ ಪೊಕ್ಕಾಕಾಶಧ್ವನಿಯ ನುಱದೆ [ಪಾಠಾಂ. ಮುಱದೆ, ಮುಱಿದೆ] ಕುಡಿದು (ಪಂ ಪ ಭಾ. ೮–೪೧). ೫. ಸಮರ್ಥವಾಗು; ಶಕ್ತವಾಗು : ಸಲಹಲು ಮುಱಿವಳೆ ಬಾಲಕನ ತಾಯ್ ನೀನುಱುವ ವಜ್ರದ ಜೋಡು ನಮಗಿರೆ ಭೀ ತಿ ಯೆ ೯ ಕೆ ೦ ದ (ಕುವ್ಯಾಭೀ. ೭–೧೯).

ಉಱದವರ್ = ಹೊಂದಿಬರದವರು; ಸೇರದವನು : ಅಣಿಯರ ಮೊದಲಿದ ಮನಸಿನೊಳಣಮುಱದವರೆಂದು ರಣದೆ ಜಯಿಸಲ್ ನಾರಾಯಣ ನೊಳಮುವಾತ್ತ ನಾರಾಯಣನೊಳಮಿಂತೆತ್ತಿಕೊಂಡ ಗಂ ಡ ರು ಮೊ ಳ ರೇ (ಪಂಪಭಾ. ೧೦–೧೧) ; ನಿಮಗವರೇತಱಿಂದುಱದರೆಂದಿಳಿಕೆಯ್ವುರೊ ವಂಶ ವೀರರದಿಂ ಸಮನವರ್ಗಾರುಮಿಲ್ಲವರಶೇಷಕಳಾಕುಶಲರ್ (ಪಂ ರಾ ಮಾ. ೫–೨೫). [ದೇ. ‖ ತಮಿ. ಮಲ. ಉಱು; ತುಳು. ಉಮ = ನಿಲ್ಲು]

**ಉಱುಂಗು** 'ಉಱುಗು₂' ನೋ.

**ಉಱುಂಬು₁**, ಉರುಂಬು, ಉರುಬು₁, ಉಱುಬು (ಕ್ರಿ). ೧. ಮೇಲೆ ಬೀಳು; ಮುತ್ತು; ಉರವಣಿಸು : "ಉಱುಂಬು–ಯುದ್ಧಕ್ರಮಣಗ ಮನೇ (ದಂಡೆತ್ತಿಹೋಗು)" (ಶಮುಧಾ). **ಉರುಂಬು** : ೧. ಎನಿತೋ ಸಾಸಿರ ಮಾರ್ಬಲಗಳೊಡನೆ ಈ ಪ ಟ್ಟ ಣ ವ ನ್ನು ಮುತ್ತಿಗೆಯಿಕ್ಕಲು ಉರುಂಬಿ ನಡೆತರುತ್ತಿರುವರೆಂದು ಬೇಹನ್ನು ಬರೆಯಿಸಿ (ಬೆಟ್ಟಅ. ೫೩–೨೨). **ಉರುಬು₁** : ೧. ನಲುಮೆಯೊಂದುಕಡೆ ಉರುಬುತಿರೆ ಪುರುಷಂಗೆ ನಲು ಮೆಯುಳಿತವೆ ಗೆಲವು ಪುರುಷತನವೇ ವಿಜಯ (ಮಂಕುಕ. ೧೩೫–೫೯೨). ೨. ಬಾಯಿಂದ ಗಾಳಿ ಊದು : ನೋಡುವ ಆಸೆಯನ್ನು ಉರುಬಿ ಹತ್ತಿಸಿತು (ನಾಲ್ಕುಮು. ೧೧೨) ; ದೀಪವನ್ನು ಉರುಬಿ ಆರಿಸಿಬಿಡು (ರೂಢಿ). **ಉಱುಬು₁** : ೧. ನೆಱೆ ಕಾಲಕಾಲನೆಂದಱಿಯೆನ್ನನೆಲವೊ ಫಡ ಬರ ವೆಲ್ಲಿಯೆನೆವುಱುಬೆ ಶಿವಧೋಯೆನೆ (ಸಾನಂಚ. ೩–೫೩) ; ಧರ್ಮಪುತ್ರನ ತೋಳ ಬಲುಹನು ನೋಡಬೇಕೆಂದುಱುಬಿದನು ದ್ರೋಣ (ಕುವ್ಯಾದ್ರೋ. ೧–೫೯) ; ಮುಱಿದ ಬಲ ಸಂವರಿಸಿಕೊಂಡುದು ಮೊರೆವ ಕಹಳಾರವದ ಸನ್ನೆಯೊಳುಱುಬಿತು (ನಳಚ. ೯–೨೯) ; ಕೆಳ್ ನೆತ್ತಿಗೇಱಿದೊನ್ ಪಗೆ ಸುಯ್ದು ದ್ವೇಷಮುನ್ ಕಾಱುತ್ತುಮುಱುಬಿದೊನ್ (ಅಂತಿಗೊ. ೭–೧೨೦). ೨. ಏನ ಹೇಳುವೆನರಸ ಪಾರ್ಥನನೂನ ಶಕ್ತಿಯನುಱುಬಿದನು ಪವಮಾನ ಶರದಲಿ ಪುಷ್ಕಳಾವರ್ತಾದಿ ಘನಘಟೆಯ (ಕುವ್ಯಾಅ. ೨೦–೫೭). [?]

**ಉಱುಂಬು₂**, ಉರುಬು₂ (ನಾ). ಅತಿಶಯವಾದ ವೇಗ; ರಭಸ : ಒಡನೆ ಕರ್ಣನು ಶಾಪದುಱುಬಿನೊಳೆದೆಗೆಟ್ಟು (ಕರ್ಣವ್ಯ. ೩–೩೧) ; ಬಿಸು ಪೇಱಿದ ಕೋಪದುಱುಬಿನಿಂದೊದರುವ ಪ ತಿ ಗೆ (ಹ ದಿ ಬ. ೩–೨೭). **ಉರುಬು₂** : ಅವರ ಉರುಬನ್ನು ತಾಳಲಾರದೆ ಶತ್ರುಸೈನ್ಯವು ಹಿಮ್ಮೆಟ್ಟಿ ಓಡಿ ಹೋಯಿತು (ಸಂಸಕ. ೧೪೦) ; ಉರುಬಿನಿಂದಾ ಬರುವ ಕರಿಗಳು . . . ಬಳಸಿ ಮೆರದವರಣ್ಯಾದಿ (ಗೋಹಾಡು. ೩–೧೫) ; ರಾಜೇಂದ್ರ ದೇವನ ಉರುಬಿಗೆ ಸೋಮೇಶ್ವರನ ಸೈ ನ್ಯ ವು ತಲ್ಲಣಿಸಿ ಹಿಮ್ಮೆಟ್ಟಿತು (ಕರತ್ನ. ೫೮).

[ದೇ. ‖ ತೆಲು. ರುಪ್ಪು, ರುಂಪು, ರೂವು = ಎಸೆ, ಚಿಮ್ಮು]

**ಉಱುಕು**, ಉರುಕು₂ (ನಾ). ನಡುಕ; ಭಯ. 'ಉಱುಕುಗೊಳ್' ಪರಾ. **ಉರುಕು₂** : 'ಉರುಕುಗೊಳಿಸು' ಪರಾ.

[ದೇ. ‖ ತಮಿ. ಉಱುಕ್ಕು = ಭಯಪಡಿಸುವಿಕೆ]

**ಉಱುಕುಗೊಳ್**, ಉರುಕುಗೊಳ್ (ಕ್ರಿ). ಕಂಪಿಸು; ನಡುಗು; ಭಯಪಡು : ಕುದುರೆಗಳುಱುಕುಗೊಂಡುದು ನಿನ್ನವರು ಹೊಕ್ಕಿಱಿದು ಹೋಗಾಡಿದರು (ಕುವ್ಯಾಗ. ೧೯–೨೭) ; ಉಱುಕುಗೊಂಡ [ಪಾಠಾಂ. ಕೊಂಡ]ರಸುಗಳ ಗರ್ವವ ಮುಱಿದು ಮಾಱುಂತವರ ಪುರಗಳ ಪೊಱಪೆ ಗಳ ಹಾಯ್ದೊತ್ತಬರಸಿತು ತಿರುಗಿ ಗೌಳವಕೆ (ತೊ ರ ರಾ. ೪–೧೦–೩). **ಉರುಕುಗೊಳ್** : 'ಉರುಕುಗೊಳಿಸು' ಪರಾ.

[ಉಱುಕು + ಕೊಳ್₁]

**ಉಱುಕುಗೊಳಿಸು**, ಉರುಕುಗೊಳಿಸು (ಕ್ರಿ). ನಡುಗಿಸು; ಭಯಗೊಳಿಸು : ಆಹವದೊಳಗೆ ಭೀಕರದ ಬಾಹ್ಲಿಕರ ಸೆಱೆಯ ಹಿಡಿದನು ಪಾರ್ವತೀಯರನುಱುಕುಗೊಳಿಸಿದ (ಕುವ್ಯಾಸ. ೭೦೩. ೬–೩). **ಉರುಕುಗೊಳಿಸು** : ಅವನಾದರುಂ ಈ ಹಯವ ಪಿಡಿದರೆಯು ಹೀನವರನು ಉರುಕುಗೊಳಿಸದೆ ನೀತಿಯನ್ನೊರೆದು (ತುರಂಗ. ೮೧–೯).

[ಉಱುಕುಗೊಳ್ + –ಇಸು₃]

**ಉಱುಕದೇವ** (ನಾ). ಒಂದು ಹೆಸರು (?) : ಸಹಿರಣ್ಯ ಧಾರಾಪೂರ್ವ್ವ ಕದಿಂದುಱುಕದೇವರ ಕೆಱೆ ಯ ಪುಣಿಸೆಯ ಮಧ್ಯದಿ ಭೂ ಮಿ ಯ ೦ ಮಾಱುಗೊಣ್ಡ (ಸೌಇಇ. IX–i, ೧೦೪–೧೮ ; 1046). [?]

**ಉೞುಗಗದ್ದೆ** (ನಾ). ಓರೆಯಾದ ಗದ್ದೆ; ಬದುವುಗಳು ಡೊಂಕಾಗಿರುವ ಗದ್ದೆ (?): ಕಬ್ಬುಕಾಲ್ವೆಯ ಪಡುವಣ ಉೞುಗಗದ್ದೆಯೊಳಗಾಗಿ ಮೂಡಣ ಕೊಪ್ಪುರದಲಿ ಗದ್ದೆ ಖಂ ೪ (ಸೌಇಇ. IX-i, ೨೭೦-೬೩; 1169). [ಉೞುಗು + ಗದ್ದೆ (< ಗಟ್ದೆ)]

**ಉೞುಗಲು** (ನಾ). ವಕ್ರತೆ; ಡೊಂಕು (?): × × ನೆ ಉೞುಗಲು × × ಎೞುಕೆಳ (ಎಕ. IX, ಕಾನಕಾ. ೧೬-೩; ?). [ಉೞುಗು + -ಅಲ್]

**ಉೞುಗಿಸು**, ಉರುಗಿಸು (ಕ್ರಿ). ಬಾಗಿಸು; ಕೊಂಕಿಸು; ಓರೆ ಮಾಡು: ಪುರ್ಬನೇಱಿಸುತ್ತುೞುಗಿಸಿ ನೋಡಿ (ಗಿಂಕ. ೫-೨೦); ಸುಸುಳದಿರು ತಂದಪೆನೊಡಲುರ್ಬಿಸದೆ ನೀನುಟ್ಟುದನೆ ಸಡಿಲಿಸಿ ಮುಸುಡನುೞುಗಿಸದೀಂಟು ಮುಂದೆಱಿದಿರ್ದುದಿದೆಯೆನುತ (ಬಸಪು. ೫೯-೧೦); ಬಿೞುಬಿೞನೆ ಕಂಗಳಂ ಬಿಟ್ಟು ಪಲ್ಲ ಕಿಱಿದುವುದುೞುಗಿಸುತೆ ಮೊಗಮಂ (ಚಬಪು. ೨-೨೭). **ಉರುಗಿಸು:** ತುಸು ಪಕ್ಕಕ್ಕುರುಗಿಸಿದ ನಗುಬಾಯಿಯ, ತುಸುಬಾಗಿದ ತಲೆಯ ಮೇರಿಯಟ್ (ಪುನರು. ೩೭೭). [ಉೞುಗು₂ + -ಇಸು₃]

**ಉೞುಗು**, ಉರುಗು, ಉೞುಂಗು (ಕ್ರಿ). ೧. ಬಾಗು; ಓರೆಯಾಗು: "ಉೞುಗು – ವಕ್ರಭಾವೇ" (ಶಮುಧಾ); ಉತ್ತಮಾದಮಿನ್ನುೞುಗುಱಿ ಬಾೞಲೀಯದಿದು ನಿಕ್ಕುವಂ (ಎಕ. XV, ಹೊಳೆನ. ೬೬-೫; 950); ನೀಡಿದ ಕೈಯುೞುಗಿದ ಗೋಣಾಡದ ವದನಾಂಬುಜಾತಮರೆಮುಚ್ಚಿದ ಕಣ್ (ಕಾವ್ಯಸಾ. ೬೭೦ ಲೀಲಾವ); ಉರೆ ಡೊಂಕ ನುಡಿದೆ ನೀನೆನಗೆ ಉೞುಗಿತಾ ಫಲದಿಂದ ನಿನ್ನಯ ಮೊಗವಿದನಱಿದಿನ್ನು ನವಗಳ್ಕಿರೆಂದಾ (ಭರಚ. ೪೬-೧೪೪); ವಿಭೀಷಣಂ ಚಿದ್ರದಿಂ ತಶನೆ ಕೊಂಡನಲ್ಲದುಂಡೊೞುಗನುೞುಗಿ ಸೋಂಬಿಂದಿರದೆ ಕೊಂದನಲ್ಲದೆ (ರಾಮಾಶ್ವ. ೧೧೨-೨೯). ೨. ತಿರುಗು; ಹೊರಳು; ವಕ್ರಿಸು: ಭಯಮಱಿಯದ ಕಲಿಯುಂ ಚಾಗಿಯುಮೆನಿಸದೆ ನಾಡೆ ಲೋಭಿಯುಂ ಪಂದೆಯುಮಾಗಿಯೆ ಬಾೞ್ವಂಗಲ್ಲದೆ ಸೂಳೆಯ ಕಣ್ ಪಾಸಗೆಯ ಕಣ್ಣುಮೇನುೞುಗುಗುಮೇ (ಪಂಪಭಾ. ೬-೬೩). **ಉರುಗು:** ಮುಂದಕ್ಕೆ ಹಿಂತಕ್ಕೆ ಮೆಯ್ದಾಗಿ ಕೆಲಕುರುಗಿ (ಸಂಸಪ. ೩೨-೧೨); ಉರಗಿಯಂತೆಯುರುಗಿ ತಿರುಗಿ (ನಿವೇದ. ೩೧); ತೆಳ್ಳನೆಯ ಮೆಯ್ಯು, ಉದ್ದನೆಯ ಕೊರಳಿನ, ಪಕ್ಕಕ್ಕುರುಗಿದ ನಡೆಯ ... ದೌವಾರಿಕ (ಪುನರು. ೨೯). **ಉೞುಂಗು:** ಕಂಗಳಂ ನಸುಮುಚ್ಚಿ ಜೋಂಪಿಸುತಂಗದಿಬ್ಬದಿಗಳನುೞುಂಗಿ ಬೆರಂಟ ಶಾಬಗಳ (ಮದೇಪು. ೫-೧೭). [?]

**ಉೞುಗುಗಡಿಯಣ** (ನಾ). ಬಾಗಿದ ಕಡಿವಾಣ: ಬೞಿಗಡಗ ಕೀಳ್ಕಟ್ಟಿ ಮುಕ್ಕುಡಿಯುೞುಗುಗಡಿಯಣ ಮೊಗವಡಂಗಳು ತುರಗವದನದಲೊಪ್ಪಿರಲು ತಾ ಪಣೆಯನಳವಡಿಸಿ (ಕುವ್ಯಾಭೀ. ೪-೪೮). [ಉೞುಗು₂ + ಕಡಿಯಣ]

**ಉೞುಗುಟೊಂಕೆ** (ನಾ). ಬಾಗಿದ ಸೊಂಟ, —ಟೊಂಕ: ಕಣಕಾಲ ಸಂದು ತಪ್ಪಿ ಬಿೞುಬೇನೆಯ ಎಡಹಿ ಬಟ್ಟೊಡೆದು ಗಾಯದ ಉೞುಗು ಟೊಂಕದ [ಪಾಠಾಂ. ಉಗುರುಡೊಂಕಾಗಿ] ಬೞುಗುಂಟನ ನೋೞಾ (ಬಸವ. ೮. ೧೩೩೪); ಉೞುಗುಟೊಂಕದ ಕುಂಟಗಾಲಿನ ಬೆಱತ ಬಿಂಕದ ಮೆಯ್ಯ ಬಿಗುಹಿನ ತಱಿದ ಬಾಸುಳ ಬದಿಯ (ಪ್ರಭುಲೀ. ೨೨-೩೪). [ಉೞುಗು₂ + ಟೊಂಕ]

**ಉೞುಗುಡಿಸು** (ಕ್ರಿ). ಚೆನ್ನಾಗಿ ಸೇರಿಸು; ಹೊಂದಿಕೊಳ್ಳು (?): ಅಱಿಯಳೇ ತನ್ನುರುವ ಗುಣವನು ಮೆಱೆವಳೇ ತನ್ನೊಡೆಯನಲಿ ತಾನುೞುಗುಡಿಸಿ ಬಳಸುವುದು ಮಱೆದಳೆ ಮಾಯೆ ಸೇವಿತವ (ನಿಭಾಗ. ೮-೧೫-೫). [ಉೞು + ಗುಡಿಸು ?]

**ಉೞುಗುದುೞುಂಬು** (ನಾ). ಬಾಗಿದ ತುರುಬು; ಡೊಂಕಾದ ಮುಡಿ: ನೊಸಲೊಳಿಟ್ಟ ಕತ್ತುರಿಯಮುಳ್ಳೊಟ್ಟಿನ ಕೆನ್ನೆವರಮೆೞಗಿದುೞುಗುದುೞುಂಬಿನ ಚೆಲ್ವು ಪಲ್ಲವಿಸಿ ತುೞುಗೆ (ಧರ್ಮನಾ. ೨-೧೧೨ ವ). [ಉೞುಗು₂ + ತುೞುಂಬು]

**ಉೞುಬು** 'ಉೞುಂಬು₁' ನೋ.

**ಉೞುಬುದೆರೆ** (ನಾ). ರಭಸದಿಂದ ಮೇಲೆ ಮೇಲೆ ಬರುವ ಅಲೆ; ಅಟ್ಟಿಬರುವ ಅಲೆ: ತಿಳಿಗೊಳನುೞುಬುದೆರೆಗಳ ತಿವಿಗುಳಿನ ತುಂತುೞು ತುಷಾರದಲಿ (ಕುವ್ಯಾಅ. ೧೩-೩). [ಉೞುಬು₁ + ತೆರೆ₁]

**ಉೞುಬೆ**, ಉರುಬೆ (ನಾ). ೧. ರಭಸ; ಮೇಲೆಬೀಳುವಿಕೆ; ಆಕ್ರಮಣ; ಮುತ್ತಿಗೆ: ಗಾಳಿಯುೞುಬೆಗೆ ಮಲೆತ ಮೇಘದ ತೋಳುವಲ ನಗೆಗೆಡೆಯಲಾ (ಕುವ್ಯಾಭೀ. ೫-೧೪); ಚಂಡವಿಕ್ರಮನುೞುಬೆಗಾೞದೆ ಕಂಡ ದೆಸೆಗೋಡಿದನು (ನಿಭಾಗ. ೧೦-೨-೪೬); ದಶಶಿರನುೞುಬೆಗಾನುವರಿಲ್ಲ (ಉತ್ತರಾ. ೫-೨೯); ಖೂಳತನವೇನೞಿಯದವರೇ ಪಾಂಡುಸುತರೆಂದುೞುಬೆಯಲಿ ಬಿನ್ನೈಸಿದಳು ಗಾಂಧಾರಿಗಬುಜಾಕ್ಷಿ (ಕುವ್ಯಾಸ. ೧೬-೮೦). **ಉರುಬೆ:** ೧. ದಶಕಂಠನುರುಬೆಯಿಂ ತ್ರಿದಶಗಣ ಪ್ರಾರ್ಥಿಸಲ್ ರಸೆಯಲ್ಲಿ ಮನುಷ್ಯಾಕೃತಿಯೊಳುದ್ಭವಿಸುತಂ (ವೆಂಕಾರಾ. ೧-೨-೬೦); ರೋಜಿ ಎಂದಿಗಿಂತಲೂ ಹೆಚ್ಚಾಗಿ ಉರುಬೆಯಿಂದ ಉರವಣಿಸುತ್ತಿತ್ತು (ಮಲೆಚ. ೧೦). [< ಉೞುಂಬು₂]

**ಉೞುಬೆಕಾಱ** (ನಾ). ರಭಸವುಳ್ಳವನು: ಕಾದಿ ವಿಭಾಡಿಸುವ ರಣದುೞುಬೆಕಾಱನನೆಂತು ಸೈರಿಸಿ ಗೆಲುವೆ ನೀನೆಂದ (ಕುವ್ಯಾಕ. ೧೬-೨೪). [ಉೞುಬೆ + -ಕಾಱ]

**ಉೞುಬೆಗಣೆ** (ನಾ). ರಭಸದಿಂದ ಬರುವ ಬಾಣ; ಬಿರುಸಾದ ಬಾಣ: ಹೆಱತೆಗೆದು ಹೆಣಗಿದರು ರಿಪುಭಟನುೞುಬೆಗಣೆಗಳ ಖಾತಿಯಲಿ ಮುಂಕೊಳಿಸಿ ತಲೆವರಿಗೆಯಲಿ ಅಂತುದು ಖಂಡೆಯದ ಪಟುಭಟರು (ಕುವ್ಯಾದ್ರೋ. ಓಂ೩. ಪರಿ. ೨೪೦). [ಉೞುಬೆ + ಕಣೆ₁]

**ಉೞುಮಾೞು** 'ಉೞುವಾೞು₂' ನೋ.

**ಉೞುಮಿಕೆ** (ನಾ). ರಭಸ; ವೇಗ; ಶಕ್ತಿ: ಕೞುಪೆಟ್ಟ ಪಗೆಯ ಬೇರ್ವಱಿದುೞುಮಿಕೆಯ ಪೊದಟ್ಟ ಗಂಡಮಚ್ಚರದೊದವಿಂ ನೆಲನನೆ ಮೂದಲಿಸುತ್ತುಂ ನೆಲನನೆ ತೆಗೆದೆಚ್ಚರೊರ್ವರೊರ್ವರನಾಗಳ್ (ಪಂಪಭಾ. ೧೨-೧೪೭); ನಿನ್ನ ಸುತನೊಳೆನ್ನಯ ಸುತೆಯಂ ಕೞುಪಿ ಕೂಡಿರ್ದಾ ನಿನ್ನುೞುಮಿಕೆಯುಂ ತೋಱಿದ್ದೈ (ನೇಮಿಪು. ೪-೯೨). [?]

**ಉೞುವ**, ಉರ್ವ (ಗು). ಶ್ರೇಷ್ಠವಾದ; ಪ್ರಸಿದ್ಧವಾದ; ಯೋಗ್ಯವಾದ: "ಉೞುವಂ ವಿದಿತಾರ್ಥ" (ಕರ್ಣಾನಿ. ೮೯). **ಉರ್ವ:** ಉರ್ವ ಕತ್ತುರಿಯ ಮೃಗದಿಕ್ಕೆಗಳನಾ ... ಅೞುವ ಕಿರಾತರ್ (ಜೈಮಿಭಾ. ೨೮-೪೩); ಈ ಸೂೞ ಪೊರ್ದುಗೆಯ ಗುರ್ದಿನಾಟದೊಳುರ್ವ ಕೊರ್ವಿನ ಕೇಡಾಳಿಯುಂ ಕೆಡಪಡೊಡಾತನ ಸೇನೆಯುಂ ಕೇಱಿ ತುಪ್ಪುಟಿಂ ತೂೞ ದೊಡೆ (ರಾಮಾಶ್ವ. ೧೧೧-೬). [< ಉೞು ?]

**ಉೞುವಾೞು**₁ (ಕ್ರಿ). ವಕ್ರವಾಗಿ ಹಾರು: ಎಳಸಿ ಬಳಸಿ ಬಲವಂದು ನಲಿದುೞುವಾೞಿ [ಪಾಠಾಂ. ದಾರುಪಾರಿ] ಮೆಲ್ಲೆಳಸಂ ಪರಪುವ ಪುರುಳಿಗಳುಮಂ (ಲೀಲಾವ. ೫-೭೪). [< ಉೞುಗು + ಪಾೞು₁]

**ಉೞುವಾೞು**₂, ಉೞುಮಾೞು (ನಾ). ವಿನಿಮಯದ ವ್ಯಾಪಾರ: ಕರಮುೞುವಾೞು ದುಗ್ಧಜಲವಿಕ್ರಯದಿಂ ದೊರೆಕೊಂಡುದೀ ಜಿನೇಶ್ವರನ ಳಕಂಗಳೆಂಬ ಹರಿನೀಲಚಯಂಗಳ ಲಾಭಂ (ಅಜಿಪು. ೬-೧೨೮). **ಉೞುಮಾೞು:** ಸ್ತ್ರೀರತ್ನದೆಡೆಗೆ ಮುಕ್ತಿಶ್ರೀರತ್ನಂ ಸಭೆಗೆ ದೇವಮಾನವ ಸಭೆ ಗಂಭೀರೋಕ್ತಿಗೆ ದಿವ್ಯಧ್ವನಿಸಾರಮುಮಂ ಬಿಸುಟನಪ್ಪೊಡುೞುಮಾೞಲ್ತೇ (ಶಾಂತಿಪು. ೧೧-೯೦). [< ಉೞುಗು + ಮಾೞು₁]

**ಉಱುವಾಱ್** (ನಾ). ಇರುವ ಒಂದೇ ಬಾಳು ; ಈಗಿರುವ ಬದುಕು : ಬೀಜ ಭೋಜಿಗಳವೊಲಪ್ಪುದಪ್ಪುದುಱುವಾಱಿ [ಪಾಠಾಂ. ವಾರಿ, ವಾಱಿ] ಮಗೆಂಬುದುಮಾ ಕುಮಾರಕಂ ಬಗೆವುದು ದೇವ ಬೀಜನಿರೆ ಬಿತ್ತರೆ ಪೇಱ್ ಬೆದೆಯಾದ ಭೂಮಿಯೊಳ್ (ನೇಮಿಪು. ೧೨–೩೧). [ಉಱು + ಬಾಱ್$_2$]

**ಉಱುವು** (ನಾ). ಡೊಂಕು; ವಕ್ರತೆ: ಕಿವಿಗಳ್ ತೋರ್ಪೊಡೆ ನಿರ್ಮಾಂಸವಾಗಿ ಸಿರವ(ರೆಯ) ಸಮವಾಗಿ [ನೆರೆ] ನಿಲೆ ನವಿರ್ಗಳ್ ಕವಲುಂ ಕಡುಗೆಂಪುಂ ಪಲವುಮಪ್ಪ ಮುಸುಡು ಉಱುವುಮಾಗೆ ದುಃಖಿತೆಯಕ್ಕುಂ (ಲೋಕೋಪ. ೧೧–೫೯) ; "ಗುಡ್ಡನಾಗಿರುಹ" (ಲೋಕೋಪ. ಟೀಕೆ) ; ಅಱಿವುದುಱುವಿಗಾದ ಬಗೆ ಹೂಸಕದ ಬಾಯಿದೆಱೆಗೂವು ಜೊಂಪಿಸುವಂಗಾತುಱುಬಿದ ರೋಮಾಳಿ (ವರ್ಧಚ. ೫–೯೦). [?]

**ಉಱುವೆಸ** (ನಾ). ಹೊಂದುವ ಎಂದರೆ, ಇಷ್ಟವಾದ ಉಪಚಾರ : ಅಱುವರುಮಂ ಜಿನಾಂಬಿಕೆಗುಱುವೆಸಂಗೆಯಲ್ಕೆ ನಿಯಮಿಸಿಯುಂ (ನೇಮಿಪು. ೮–೮೨ ವ). [ಉಱು + ಬೆಸ]

**ಉಱುಸೆಱೆ** (ನಾ). ಬಲವಾದ ಬಂಧನ. 'ಉಱುಸೆಱೆಗೆಯ್' ಪರಾ. [ಉಱು + ಸೆಱೆ]

**ಉಱುಸೆಱೆಗೆಯ್** (ಕ್ರಿ). ಬಲವಾಗಿ ಬಂಧಿಸು : ಮೇಲುದಱ ಸೆಱಂಗನುಱುಸೆಱೆಗೆಯ್ದು ಪೊಱಪೊಣ್ಮುವಪರಭಾಗ ಶರೀರಕಾಂತಿ ಲಾವಣ್ಯರಸದ ತಂದಲನಗುಂದಲೆ ಮಾಡಿಯುಂ (ಮಲ್ಲಿಪು. ೪–೯೭). [ಉಱುಸೆಱೆ + ಗೆಯ್ (< ಕೆಯ್$_1$)]

**ಉಱುಸೆಱೆಗೊಡು** (ಕ್ರಿ). ವಶವಾಗು; ಅಧೀನವಾಗು : ಕಂಡುಱುಸೆಱೆಗೊಟ್ಟು ತೊತ್ತುರ್ವೆಸಗೆಯ್ಯದ ಮಂಡಳನಾಥರಿಲ್ಲ (ಎಇ. XIII, ೪೪–೩೦ ; 1112). [ಉಱುಸೆಱೆ + ಕೊಡು]

**ಉಱುಹಿಸು** (ಕ್ರಿ). ಎಚ್ಚರ ತಪ್ಪಿಸು (?) : ಸಮ್ಮೋಹನಾಸ್ತ್ರದಲಂಗವುಱುಹಿಸೆ ಮರಳಿ ಭೀಷ್ಮನ ಪರಿಯ ಕೇಳೆಂದ (ಸಂಭಪ. ೧೩–೪೭). [ಉಱುಹು + -ಇಸು$_3$]

**ಉಱುಹು** (ಕ್ರಿ). ಬಾಯಿಂದ ಗಾಳಿ ಊದು : ಪುರದ ವೀಥಿಯೊಳೊರ್ವ ಜಾತರೂಪಂ ಮೆಲ್ಲನುಱುಹಿದೊಡೆ ಬೀಳ್ವಂತೆ ಮೆತ್ತಮೆತ್ತನೆ ಚಂದ್ರಗತಿಯಿಂದ ನಡೆತಂದನು (ಸಮ್ಯಕೌ. ೫–೪). [< ಉಱುಬು$_1$]

**ಉಱೆ**, ಉರೆ$_1$ (ಅ). ಅತಿಶಯವಾಗಿ ; ಬಹಳವಾಗಿ ; ಮಹತ್ತರವಾಗಿ : "ಅಣಿಯರಂ ಯೆಡೆಯುಱೆಯೆನಿಪ್ಪುವೆಲ್ಲಂ ವಿಲಸಿತಾಧಿಕನಾಮಂ" (ಶಬ್ದಮಂ. ೬೯); ಹೃದಯಮನಳವಳವಿಂದುಱೆ ವಿದಾರಿಸುವುದಿಂತು ಕುಸುಮಮಯಮಲ್ಲದಱಿಂ (ಕವಿರಾ. ೩–೧೦೧) ; ಕಾಯ್ವುಱಿಲುಱೆ ಜತುಗೃಹದೊಳಗಯ್ವರುಮಂ ಮಂತ್ರಬಲದೆ ಸುಟ್ಟೊಡಂ (ಪಂಪಭಾ. ೪–೩) ; ಪಿಡಿದು ತಂದಿತ್ತ ಕುಱಿಯನಾನುಱೆ ಕೊಂದು ಪಿಶಿತಮಂ ಮಾಡಿದೆನೆಂದನೊರ್ವಂ (ಸುಕುಮಾ. ೭–೧೫); ಉಱೆ ಕಾಯ್ವ ಬಿಸಿಲ್ (ಕಬ್ಬಿಕಾ. ೨೩). **ಉರೆ$_1$** : ಇನ್ನು ರೋಣ ಕಾದು ಸ[ತ್ತು ರೆ] ಸುರಲೋಕಂ ಪ್ರಪ್ತನಾದೊ[ನ್] (ಸೌಇಇ. XI–i, ೩೬–೨೪ ; 947) ; ಉರೆ ಕಾರುವ ಕಂಬನಿ (ವಿಸೀಗೀ. ೭೭–೨೩). [ಉಱು + -ಎ ?]

**ಉಱೆವೊಯ್ಲು** (ನಾ). ಬಿರುಸಾದ ಹೊಡೆತ; ಬಲವಾದ ಪೆಟ್ಟು : ಅ ಬಲದವರ ಮೋಱೆಯ ಹೊಗೆಯನೀ ಬಲದವರ ಭುಜದುಱೆವೊಯ್ಲುನಾ ಬಲದವರ ಬಿಸುಸುಯ್ಲು (ಕುವ್ಯಾಕ. ೧೨–೨). [ಉಱೆ + ಪೊಯ್ಲು]

**ಉಱ್**, ಉಳ್$_3$, ಉಳು, ಉಟು, ಊಳ್ಳು$_2$ (ಕ್ರಿ). ಉತ್ತು$_3$ (ಭೂತಕೃ) ನೇಗಿಲಿನಿಂದ ಬಿತ್ತನೆಗೆ ಮಣ್ಣನ್ನು ಅಗೆದು ತಿರುವಿಹಾಕು; ನೇಗಿಲು ಹೊಡೆ : "ಉಱ್ – ಹಲವಿಲೇಖನೇ" (ಶಮಧಾ) ; ಅಱು ತೊಡಿವಿಟ್ಟು ಉಟಲ್ಪೆಱುಗುಂ ಅಗುಳದಾರಸ್ಕ (ಎಕ. X (S), ಚಿಕ್ಕಬ. ೧೦೪–೧೪ ; 500); ತಟ್ಟೆಟ್ಟುವಲ್ಪನ್ದಿಪಿನ್ (ಸೌಇಇ. IX–ii, ೩೯೨–೩ ; 8ನೆಯ ಶತ) ; ಪಾರ್ವಂ ತನ್ನ ಮೂಡಣ ಕೆಯ್ಯನುಟಲೆಂದು ಪೋಗಿ ಕೆಸಱಾದುದಂ ಕಂಡುಱಿಲ್ ಪದನಲ್ತೆಂದು (ವಡ್ಡಾರಾ. ೧೪೫–೯) ; ಕುರುಧರೆಯಂ ನಿಜೋಗ್ರಗದೆಯೇರ್ಗಳಿನುತ್ತುಗಿಯುತ್ತೆ . . . ಕೀರ್ತಿಯೆಂಬ ಬೆಳಸಂ ಬೆಳೆದಂ (ಗದಾಯು. ೧೦–೪) ; ಕಟಿತ್ತಿಯಿಂದುಟ್ಟುಂ (ಶಮದ. ೨೩೮ ಪ್ರಯೋ) ; ಉಟ್ಟುಂ ಪೊಲನನೊಕ್ಕಲಿಗಂ (ಶಬ್ದಾನು. ೪೩೮ ಪ್ರಯೋ). **ಉಳ್$_3$** : ಕೀಳ್ವುದು ಕಳೆ ನೆನೆವುದು ಪೊನ್ನಾಂಬಲ ಉಳ್ವುದು ಕೆಯಿ ಕಾಣ್ಬುದು ಪೊನ್ನಾಂಬಲ (ತಿರುನಾ. ದೇ. ೨೧೭–೧೦). **ಉಳು** : ಮಣ್ಣು ಬಿಟ್ಟ ಬಳಿಕ ಆ ಕೆಯ್ಯಿಯ ನಾರುತ್ತರೇನು (ಮಹಾದೇ. ೩೯–೩) ; ಪಾಡುಬಿದ್ದು ಉಳುವಾರಂಬದ ಧಾನ್ಯ . . . ಮುಂ ಪಲಕಷ್ಟಂ ಕಡೆಗೊಳ್ಳಿತ್ತೆ (ಸೋಮೇಶ. ೯೬) ; ಕಲ್ಲನೊಡೆದು ಮುಳ್ಳ ಮುರಿದು ಕೂಳೆಕಿತ್ತು ನೆಲವನುಳುವೆವು (ವಿಸೀಗೀ. ೮೧) ; ಉತ್ತಲ್ಲದೆ ಮಣ್ಣಲ್ಲ, ಹೆತ್ತಲ್ಲದೆ ಹೆಣ್ಣಲ್ಲ (ಗಾದೆ). **ಉಟು** : ಮೂಗಿನೊಳುಟುವಾತಂಗೆ ನೇಗಿಲಂ ಕೊಟ್ಟರೆಂಬಂತೆ (ಧರ್ಮಾಮೃ. ೨–೧೪೯). **ಊಳ್ಳು$_2$**: ಭೂಮಿಯನ್ನು ಊಳಿ ಧಾನ್ಯ ಹುಟ್ಟಿಸಿ ಪ್ರತಿವರುಷ ಸ್ಥಳಾಂತರವಮಾಡುವರು (ಯಾತ್ರಿಕ. ೧೦೫); ಊಳಿದ ಬಿತ್ತದ ಬರಿ ಹೊಲವು (ಗಂಗಾತ. ೬೫–೧೭).

[ದೇ. ॥ ತಮಿ. ಮಲ. ಉಟು ; ತುಳು. ಊಡ್, ಹೂಡ್ ; ಕೊಡ. ಉಳ್ ; ತೆಲು. ದುನು, ದುನ್ನು ; ಕೋಲಾ. ನಾಯ್ಕಿ. ಉರ್ ; ಪರ್ಜಿ. ಉಱ್ ; ಕುಇ. ರೂವ ; ಕುರುಖ್. ಉಯಿ, ಉಗ್ರಾ]

**ಉಟಲಮಱಿಯ್ಯ** 'ಉಟಲ್ಮಱಿಯ' ನೋ.

**ಉಟಲ್ಮಱಿಯ**, ಉಟಲಮಱಿಯ್ಯ (ನಾ). ಒಂದು ಊರಿನ ಹೆಸರು (?) : ಪ್ರಚಣ್ಣ ದಣ್ಣನಾಯಕನ ಮಗಂ ಗೊಗ್ಗಿ ಉಟಲ್ಮಱಿಯ ನಾಳುತ್ತಿರೆ (ಎಕ. XI, ಚಳ್ಳಕೆ. ೬–೩ ; 925). **ಉಟಲಮಱಿಯ್ಯ** : ಉಟಲಮಱಿಯ್ಯ ಒಕಲ ಮಗ ಕಂಭಯ್ಯ (ಎಕ. XI, ಚಳ್ಳಕೆ. ೪–೩ ; 974). [ಉಟಲ್$_0$ + ಮಱಿಯ ?]

**ಉಟಿ$_1$**, ಉಳಿ$_1$ (ಕ್ರಿ). ೧. ಬಿಡು ; ತೊರೆ ; ಕಳೆ : "ಉಟಿ – ಅವಶಿಷ್ಟೇ, ವಿಮೋಚನೇ ಚ (ಜೀವದಿಂದುಳಿ)" (ಶಮಧಾ) ; ದೂಷಿಸುಗುಂ ಕೃತಿವಧುವಂ ಭಾಷಾವಿದರದಱ ದೆಸೆಯನುಟಿಗೀ ಕೆಱದಿಂ (ಕವಿರಾ. ೧–೧೦೦) ; ಒರ್ವರ್ಗಳ್ ತನ್ನನುಟಿದ ಪೊಸಬೇಟದಾಣ್ಮನ ನೇಗೆಯ್ದುಂ ಪೋಗಲೀಯದೆ ತನ್ನಳಿಪನೆ ತೋಱೆ (ಪಂಪಭಾ. ೪–೯೬ ವ) ; ನಲ್ಲ ನೀಂ ಮುನಿದುಟಿದಂದು ಪೇಱುಟಿಯಲೀಗುಮೆ ಮನ್ಮಥನೆನ್ನಂ (ಜಗವಿ. ೧೭–೧೩೨). ೨. ಬಾಕಿಯಾಗು ; ಹೊರತಾಗು ; ಮಿಗು : "ಉಟಿ – ಅವಶಿಷ್ಟೇ, ವಿಮೋಚನೇ ಚ (ಜೀವದುಂದುಳಿ)" (ಶಮಧಾ) ; ದುಷ್ಕರ ಕಾವ್ಯಂಗಳೊಳಗರ್ಹಿತಪ್ರಾಯಮಕ್ಕುಮಾ ಶ್ರುತಿಕಷ್ಟಂ ಪಗರಣದೊಳುಟಿದ ಮೂಱುಂ ನಗಿಸುಗುಮಪ್ಪುದಱಿನಲ್ಲಿಗಂತವು ದೋಷಂ (ಕವಿರಾ. ೧–೬೭) ; ಪಲಂಬರ್ ಪರದರ್ ಸತ್ತರುಟಿದರೆಲ್ಲಮೋಡಿ ಕೆಟ್ಟೊಡೆ (ವಡ್ಡಾರಾ. ೭೬–೧೩) ; ಜಗದೊಳಗಿನ್ನುಟಿದ ಜಡರದೇನಱಿದಪರೋ (ಪಂಚತಂ. ೩–೧೬) ; ಲೋಭಿಯ ಪೊನ್ನಂ ತಾನೊಂದು ಮುಟಿಯದಂತಿರೆ ಹೀನಗುಣಂ ಕವರ್ದುಕೊಂಡು ಜಾಗಂಗೆಯ್ವಂ (ಧರ್ಮಾಮೃ. ೨–೩೪). ೩. ಜೀವದಿಂದಿರು; ಬದುಕಿರು: "ಉಟಿ – ಅವಶಿಷ್ಟೇ, ವಿಮೋಚನೇ ಚ (ಜೀವದಿಂದುಳಿ)" (ಶಮಧಾ); ಅಂತು ಮದೀಯ ಜನನಿಯುಂ ಜನನಿಯ ಜನನಿಯುಮುಟಿಯಲುಮುಟಿದರುಮೆಲ್ಲಮೊರ್ವರುಟಿಯದಂತೆ ಪೋಪುದುಂ (ಆದಿಪು. ೩–೩೪ ವ); ದುರ್ಘಟಮುಟಿವುದೆಂಬವೋಲ್ ಸಂಕಟದಿಂ ರತ್ನಾಚಲಕ್ಕೆ ಸರಿದರ್ ಸಚಿವರ್ (ದಕಕು. ೨–೩೦); ನೋಂತು ತನು ತವಿಯೆ ಕರಮುಪವಾಸಮುಟಿದುಂ (ರಾಮಾಶ್ವ. ೩೭–೧೯). ೪. ಮೀರು ; ಅತಿಕ್ರಮಿಸು : ತನ್ನಾಣೆಯನುಟಿದುದರ್ಕೆ ಮುಳಿದು ನರೇಂದ್ರಂ . . . ಜಡಿದು ನುಡಿದೊಡೆ (ಧರ್ಮಾಮೃ. ೨–೯೩).

೫. ಲಾಭವಾಗು : "ಉೞಿದುದು . . . ಲಾಭಮಾದುದು" (ಶಮದ. ಪರಿ. ೧). **ಉಳಿ$_1$** : ೧. ಸೂಳೆ ಹಲಬರನುಳಿ [ಪಾಠಾಂ. ಉರುಳಿ]ದ ಳೆಂದು ನಿಂದಿಸುವವರಿಲ್ಲ (ಶೂನ್ಯಸಂ. ೧೯೯–೭೧) ; ಅಂತ್ರರಂಗವ ಬಲ್ವಿಡಿದು ಚಿಂತೆಯನುಳಿದರು (ಕಂನವಿ. ೯–೧೪೫). ೨. ತುಂಬುರನುಳಿ ಯಲುಳಿದರೆಲ್ಲಂ ನರಸಿಂಗಮೊನೆಯರ ಪುರಕ್ಕೆ ಪೋಗೆ (ನಂಬಿರ. ೮–೯); ಹರ ಭಕ್ತರಿರವನವರೇ ಬಲ್ಲರಲ್ಲದುಳಿದರ್ ಬಲ್ಲರೇ (ಪದ್ಮರಾ. ೫–೫೦) ; ದಿನಪ ದೀವಿಗೆಯಾಗಲುಳಿದೀ ಬಿನುಗುಬೆಳಗಿನ ಹಂಗು ಬೇಹುದೆ (ಕುವ್ಯಾದ್ರೋ. ೫–೩೯). ೩. ಸಾಯದುಳಿದವರಿಲ್ಲ ಮಿಕ್ಕಿನ ನಾಯಕರೊಳಿಂಕಟ (ಕುವ್ಯಾದ್ರೋ. ೫–೫೯) ; ಸಮರದಲಿ ನೀನುಳಿದೆಯಾದರೆ (ತೊರರಾ. ೬–೨೭–೫೨) ; ಸಮಸ್ತ ಜಡಚೇತನ ವಸ್ತುಗಳೂ ಪರಮಾತ್ಮನ ಆಶ್ರಯ ವಿಲ್ಲದೇ ಸುತರಾಂ ಉಳಿಯಲಾರವು (ಜಗದಾ. ೨೬೯). ೬. ನಿಲ್ಲು ; ಶಾಶ್ವತವಾಗಿರು : ನಂಟು ಗಂಟು ಎರಡೂ ಉಳಿಯಬೇಕು (ಗಾದೆ). ೭. ತಂಗು ; ಇರು: ಬಳಸುತುಣುತಿರೆ ದಾಯವನು ನೆರೆ ಉಳಿದು ತನ್ನಯ ಮನೆಯಲಿ (ಕಏಪು. ೪೧).

**ಉಳಿದುಬಳಿದುದು** = ಮಿಕ್ಕುದು : ಉಳಿದುಬಳಿದುದನ್ನು ಕೈ ಕೊಕ್ಕ ರಿಸದೆ ಖರ್ಚುಮಾಡಿ ಕೇಳಿದವರಿಗೆಲ್ಲ ಹಂಚಿಬಿಟ್ಟಳು (ಪುನರು. ೯). **ಉಳಿದುಬಿಸುಡು** = ಬಿಟ್ಟುಬಿಡು ; ತ್ಯಜಿಸು : ತನ್ದೆಯ ತಾಯ್ವರಾ ಸನ್ತಾನಮ(ಂ)ನುಳಿದು ಬಿಸುಟೊಂ (ಸೌ ಇ ಇ. XI–i, ೧೧–೬ ; 865). **ಉಳಿಯಗೊಡು** = ಇರಿಸು ; ಇರಗೊಡು : ಪರಕೀಯರನ್ನು ಇಲ್ಲಿ ಅರಗಳಿಗೆಯೂ ಉಳಿಯಗೊಡದಂತೆ ತಳ್ಳಿಬಿಡಲು ಜನರನ್ನು ಹುರಿದುಂಬಿಸಿ (ಯಕ್ಷಪ್ರ. ೨೫). **ಉಳುಹಿಬಿಡು** = ಉಳಿಸಿಬಿಡು : ಉಳುಹಿಬಿಡುವನೆ ಸಮರಮುಖದಲಿ ಮಲೆತನಾದರೆ ಕರ್ಣನೇನಗ್ಗಳಿಕೆವಡೆಹನೊ (ಕುವ್ಯಾಕ. ೬–೧೪). **ಉೞಿವಳ್** = ಬಿಡುವವಳು ; ತ್ಯಜಿಸುವವಳು : ಅೞಿದುೞಿಪಿ ಬೞಿಯನುೞಿಯದೆ ಪೞಿವರುಮಂ ತವಿಸಿ ಕೞಿಯದುೞಿ [ಪಾಠಾಂ. ಳಿ] ವಳನಾದಂ ಪೞಿಕೆಯ್ದು ತೊಟ್ಟನುೞಿದಂತುೞಿದ (ಕವಿರಾ. ೩–೧೭೫).

[ದೇ. ‖ ತಮಿ. ಮಲ. ಒೞಿ ; ಕೊಡ. ಒಳಿ ; ತುಳು. ಒರಿ]

**ಉೞಿ$_2$** (ನಾ). ಮಿಕ್ಕುದು ; ಶೇಷ ; ಅವಶೇಷ. [< ಉೞಿ$_1$]

**ಉೞಿ$_3$** (ನಾ). ಎಡೆ ; ಸ್ಥಳ : "ಸ್ಥಾನವ್ಯಕ್ತಿಯಂ ಪೇೞ್ವೆಡೆ ಉೞಿ" (ಶಮದ. ನ. ೩೩ ಪ್ರಯೋ) ; ಅರಿ ಉೞಿಮಲ್ಲಮೇಷ ಮಹಿಷೋದ್ಧುರ ಯುದ್ಧರಸಪ್ರಿಯರ್ಕಳಿಂ (ಕಾವ್ಯಾವ. ೫೧) ; ದೊರೆಕೊಳ್ಗುಂ ಪಾಧೇಶಮ ದರೆ ಉೞಿ ವಾಕ್ಯದೊಳಮನ್ವಿತಾರ್ಥದೊಳಕ್ಕುಂ (ಕಾವ್ಯಾವ. ೬೩) ; ಪೆಱ ವುಳ [ಪಾಠಾಂ. ವೊಳ] [ಪೆಱವುೞಿ]ವುಳ್ಳುವಿಲ್ಲಿಯೊಳವಾಗಮಭಾಷೆಗ ಳಿಲ್ಲಿಯುಳ್ಳುವಂ ಪೆಱವುಳಿ[ೞಿ]ಕಾಣಲಾಗದೆನೆ ಪಂಪನ ಪೊನ್ನನ ಪೇೞ್ದ ಕಬ್ಬದೊಳ್ ನೆಱೆಯೆ ಪರಿಸ್ಫುಟಂ ನೆಱೆಯದರ್ದುಮಂ ನುಡಿದು . . . ನೆಗೞ್ದ ದಂ ಕವಿಚತುರ್ಮುಖನಾಗಮವೇದಿಯಪ್ಪುದಂ (ಅಜಿಪು. ೧೨–೩೩) ; ಎರಡು ನನ್ದಾದೀವಿಗೆಯುಂ ಸಲಿಲೆಕ್ಕಮೊನ್ದು ಪೊಟ ನಿವೇದ್ಯ ಮುೞಿ ಕರಗಾಣದೆಣ್ಣೆಯುಮಿನ್ತಿನಿಸುವ (ಎಕ. III, ನಂಜನ. ೧೩೪–೧೩ ; 1021). [ದೇ. ‖ ತಮಿ. ಉೞಿ = ಸ್ಥಳ]

**ಉೞಿ$_4$** (ನಾ). ಶಕುನದ ಪಕ್ಷಿ : ಪ್ರಯಾಣ ಶಕುನದೊಳ್ ಉೞಿಯ [ಪಾಠಾಂ. ಅಳಿಯ]ನೊಂದಂ ಕಂಡಂತೆ (ಪಂಚತಂ. ೨೦೭–೯). 'ಉೞಿಗ' ಪಠಾ. [?]

**ಉೞಿಂದಿ** (ನಾ). ಒಂದು ಬಗೆಯ ಕಾಡುಹತ್ತಿಯ ಮರ (?) : ವಾಯವ್ಯದ ಕೋಣ ಪಿರಿಯ ಉೞಿನ್ದಿ ಅಂಗಿನೆ ಕೞಿಕ್ಕೆ [ತ]ಟ್ಟೇರಿ (ಎಇ. X, ೬೭–೭೯ ; 862). [?]

**ಉೞಿಕಲ್** (ನಾ). ಮಿಕ್ಕುದು ; ಅವಶೇಷ : ಗುಱಿಕಲ್, ಉೞಿ ಕಲ್, ಮೊಟಿಕಾಲ್ (ಶಬ್ದಾನು. ೧೪೦ ವ್ಯಾಖ್ಯಾ). [ಉೞಿ$_1$ + –ಕಲ್$_4$]

**ಉೞಿಕೞಿ** (ನಾ). ಕಳೆದು ಉಳಿದುದು : ದೞವುೞ, ಉೞಿಕೞಿ, ಕೞಿಕುೞಿ (ಶಬ್ದಾನು. ೧೪೦ ವ್ಯಾಖ್ಯಾ). [ಉೞಿ$_1$ + ಕೞಿ$_1$]

**ಉೞಿಕು** (ನಾ). ೧. ಉಳಿದುದು : "ಉೞಿಕು (ಉೞಕು) – ಭಾವ ವಾಚಿ" (ಶಮದ. ಪರಿ. ೧). ೨. ವಾದ್ಯ : "ಉೞಿಕೆನಲ್ ಮೊಟಿಗೆನಲ್ ವಾದ್ಯ" (ಸಂಜೀವ. ೩). [ಉೞಿ$_1$ + –ಕು$_1$]

**ಉೞಿಕೆ**, ಉಳಿಕೆ (ನಾ). ಮಿಕ್ಕುದು ; ಉಳಿದದ್ದು : ಪೊಸತಿಱಿದ ತಳಿರಿಂದೆ ಮೆಯ್ಯುೞಿಕೆಯನ್ ಬೂದಿಮಾಡಿದೊಮ್ (ಅಂತಿಗೊ. ೧೧೩೨); ಇನಿಸು ತಡೆಯಿಂ ಅವಳೞಲ ಉೞಿಕೆಯನ್ ಕೇಳ್ವಿನಂ (ಬದ್ಧಪ್ರ. ೩೭–೭೯). **ಉಳಿಕೆ** : ಉಳಿಕೆ ಮೂರರಲ್ಲೊಂದು ಪಾಲು ಜಮೀನನ್ನು ರೈತರೇ ಉಳುತ್ತಿದ್ದರು (ಪುನರು. ೨೬೪). [ಉೞಿ$_1$ + –ಕೆ]

**ಉೞಿಗ**, ಉಲಿಗ$_3$, ಉಳಿಗ$_1$ (ನಾ). ಒಂದು ಶಕುನದ ಹಕ್ಕಿ ; ಹಾಲಕ್ಕಿ ; ಗೀಜುಗನ ಹಕ್ಕಿ : "ಉೞಿಗಂ – ಶಕುನದ ಹಕ್ಕಿ" (ಶಮದ. ಪರಿ. ೧); "ಉೞಿ [ಪಾಠಾಂ. ಲ] ಗಮೆಂದೊಂದು ಶಕುನದ ಪಕ್ಕಿ" (ಸಂಜೀವ. ೩); ಈಗಡೆ ಉೞಿಗಂ ಸಗುಣ ನುಡಿಗುಂ (ರಾಮಾಶ್ವ. ೨–೧೫). **ಉಲಿಗ$_3$** : ಉಲಿ [ಪಾಠಾಂ. ಳಿ]ಗನ ಮಱಿಯಂತೆ ಉಲಿವಾಕೆ ಸಜ್ಜನೆಯೆ (ಸರ್ವಜ್ಞ. ೧೮೩೨). **ಉಳಿಗ$_1$** : ಮೇಲಿನ ಪ್ರಯೋಗದ ಪಾಠಾಂತರ ವನ್ನು ನೋಡಿ. [ಉೞಿ$_4$ + –ಗ$_3$]

**ಉೞಿಗು$_1$** 'ಉೞ್ಗು$_1$' ನೋ.

**ಉೞಿಪು**, ಉಳಿಹು, ಉಳುಪು, ಉಳುಹು (ಕ್ರಿ). ೧. ಇರುವಂತೆ ಮಾಡು ; ನೆಲೆಯಾಗಿಸು : ಅಜಿತ ಪರಾಕ್ರಮಮನುೞಿದೆಱಗಿ ದಿಗ್ವಿಜಯ ಮನುೞಿಪಿ ಧರೆಱಕಮಿಾಯದಿರ್ಕುಮೆ ನಯಮಂ (ಶಾಂತಿಪು. ೪–೭೬). ೨. ಮರೆಮಾಡು ; ಮುಚ್ಚು : ಏಕುೞಿಪಿ ಪೇೞ್ವೆ ಮಗಳೇ ಪ್ರಾಕಟ ಮಾಗ್ಗಱಿಯೆ ಪೇೞ ನಿನ್ನಂದಮನೆಂದಾ ಕಮಳಾನನೆ ಬೆಸಗೊಳಲ್ (ನೇಮಿಪು. ೮–೬೫). ೩. ಮಿಗಿಸು ; ಅವಶೇಷವಾಗಿಸು. ೪. ಬದು ಕಿಸು ; ಕಾಪಾಡು. **ಉಳಿಹು** : ೪. ಶಿವಾಚಾರಸಂಪನ್ನರೆನಿಸಿ ಮನುಜರ ನುಳಿಹಬೇಕೆಂದನು (ಚಬಪು. ೩–೧೬). **ಉಳುಪು** : ೩. ಸುರಸುಂದರಿ ಯರ್ಕಳ್ ಸಿಂಗರಂಗೊಂಡುಳುಪಿರ್ದ ಬಣ್ಣದಿಂ . . . ಬರೆವರ್ (ಶಾಕುಂತ. ೧೦೦–೧೬೮). **ಉಳುಹು** : ೪. ಫಲುಗುಣನ ಮಗನಿವನು ಬಲುಗೈ ಯುಳುಹಬಾರದು (ಕುವ್ಯಾದ್ರೋ. ೪–೨೭) ; ಹಗೆ ಹಸುಳೆಯೆಂದುಳುಹ ಲಾಗದು (ಅಕ್ರೂಚ. ೨–೧೫) ; ನವರತ್ನ ಪೊಂಗಿದ ಮಣಿಮಂಚದಲಿ ಅಂಗಜ ಕೇಳಿಯನಿತ್ತೆನ್ನನುಳುಹೊ (ಕಂನವಿ. ೯–೧೮೭) ; ಯಾರು ಉಳು ಹುವರೆಂದು ಅತ್ತಿತ್ತ ನೋಡುತಿರೆ ಕತ್ತಲೆಯು ಮುಸುಕಿತ್ತು (ಕನನೆ. ೫೦). [ಉೞಿ$_1$ + –ಪು$_1$]

**ಉೞಿವಳ್** 'ಉೞಿ$_1$' ಪಠಾ.

**ಉೞಿವು**, ಉಳಿವು (ನಾ). ೧. ಉಳಿಯುವಿಕೆ ; ಬದುಕುವಿಕೆ ; ಜೀವನ : ಎಮ್ಮ ಸಾವುಮುೞಿವುಂ ದೈವೇಚ್ಛೆಯಾಯ್ತಾಗದೇ (ಪಂಪಭಾ. ೨–೮೯) ; ಪಿನ್ನಿಂ ನಿನಗಕ್ಕುಮುೞಿವುಮವನಿಱನೊಲವುಂ (ದಶಕು. ೮–೩೦೯). ೨. ಇರುವೆಡೆ ; ಇರುವ ಸ್ಥಳ (?) : ಗಾಳಿಯುಂ ಕೞಿವು ೞಿವುಂ ಕಾಪುಂ ಮೇವುಂ ತೋಡುಂ ಬೀಡುಂ (ಪಂಪಭಾ. ೫–೪೩ ವ). ೩. [ಕಾವ್ಯಮೀ] ಒಂದು ಉಕ್ತಿವಿಶೇಷ (ಮರೆಮಾಡಿ ಹೇಳು ವುದು) : ನುಸುಳೊನುರ್ಡಿ ಭಾಮೆ ಮನಕ್ಕೆಸೆವಸ್ಪಷ್ಟಾರ್ಥಮುೞಿವು ನಾಮಾಂತರಿತಂ ಕುಸುರಿಯ ನುಡಿಯೆಂಬಿವು ಭಾವಿಸೆ ಪೇಳಿಕೆಗಳೊಳೆ ಪೇೞ್ವ ಭೇದಮವಕ್ಕುಂ (ಕಾವ್ಯಾವ. ೫೯೪). **ಉಳಿವು** : ೧. ಆದಱ ಭೇದ ಏತಱಿಂದ ಅಳಿವು ಉಳಿವು (ಕೋಲಶಾಂ. ೧೨) ; ಕೌರವನುಳಿವು ನಿನ್ನದು ಕಂದ (ಕುವ್ಯಾದ್ರೋ. ೧–೨೩) ; ಅಳಿವು ಉಳಿವುಗಳ ಹೋರಾಟ ಆರಂಭ ವಾಗುತ್ತದೆ (ಶಿಕ್ಷದ. ೩೧೬). [ಉೞಿ$_1$ + –ವು]

**ಉೞಿಸು$_1$**, ಉಳಿಸು$_1$ (ಕ್ರಿ). ನೇಗಿಲಿನಿಂದ ಭೂಮಿಯನ್ನು ಉಳುವಂತೆ ಮಾಡು: ಅರಸಂ ಗಾಂಡನಿಂ ಪೊಲಮನುೞಿಸಿದಂ (ಶಬ್ದಾನು. ೨೦೫ ಪ್ರಯೋ). **ಉಳಿಸು$_1$** : ಗೌಡರೆ ಖುದ್ದು ನಿಂತು ಹೊಲ ಉಳಿಸುತ್ತಿದ್ದಾರೆ (ರೂಢಿ). [ಉೞ್ + –ಇಸು$_3$]

**ಉೞಿಸು$_2$**, ಉಳಿಸು$_2$ (ಕ್ರಿ). ಉಳಿಯುವಂತೆಮಾಡು ; ಬದುಕಿಸು ; ಜೀವದಿಂದಿರಿಸು. **ಉಳಿಸು$_2$** : ಬಯಿಸಿದಂ, ಉೞಿಸಿದಂ, ನುತಿಸಿದಂ (ಶಬ್ದಾನು. ೬೩ ಪ್ರಯೋ); ಈ ಕಷ್ಟದಿಂದ ದೇವರೇ ಉಳಿಸಬೇಕು (ರೂಢಿ). [ಉೞಿ$_1$ + –ಇಸು$_3$]

**ಉೞಿಸು$_3$** (ಕ್ರಿ). ಸಹಿಸು : "ಉೞಿಸು – ಸಹನೇ (ತಾಳಿಕೊ)" (ಶಮುಧಾ). ℙ ಒಂದು ಓಲೆ ಪ್ರತಿಯಲ್ಲಿ "ಉಱಿಸು–ಸಹನೇ" ಎಂಬ ಪಾಠವಿದೆ. [?]

**ಉೞು** 'ಉೞ್' ನೋ.

**ಉೞುಂಗು** 'ಉೞುಗು' ನೋ.

**ಉೞುಗಿಸು** (ಕ್ರಿ). ಒಲಿಸು ; ಒಲಿಯುವಂತೆ ಮಾಡು : ನಿನ್ನನುೞುಗಿಸ [ಪಾಠಾಂ. ಒಲಿಯಿಸ]ಲುಮಾಜಿಯೊಳೆನ್ನಂ ಬೆಂಕೊಂಡು ಕಾದಲುಂ ಬಂದೀಗಳ್ ಬಿನ್ನಣೆ ಮೊಗದಿಂ ಬೀರರ್ ಬೆನ್ನಿತ್ತುದನಿನಿಸು ನೋಡ ಸರಸಿರುಹಮುಖೀ (ಪಂಪಭಾ. ೩–೭೩) ; ಪೊದೞ್ದ ಬಾಸುಳಂದುೞುಗಿಸೆ ಚಿತ್ತಮಂ ವಿರಹವಲ್ಲಭನೊಳ್ ನೆರೆದಿರ್ದ ನಲ್ಲಳಂ (ಲೀಲಾವ. ೧೨–೪೮) ; ಅಬಲೆ ತಗುಳ್ದಿ ಕಟ್ಟಿ ಕುಲದೇವತೆ ರನ್ನದ ಚೆಂಡನೆಂದು ಮುದ್ದುೞುಗಿಸೆ ಗೋಪಿಯರ್ ಪಿಡಿದು ತೊಟ್ಟಿಲೊಳೊಯ್ಯನೆ ತೂಗಿ ಪಾಡಿದರ್ (ಸೂಕ್ತಿಸು. ೭–೬೩). [ಉೞುಗು$_1$ + –ಇಸು$_3$]

**ಉೞುಗು$_1$** ಉೞುಂಗು, ಉೞ್ಗು (ಕ್ರಿ). ಒಲಿ ; ಪ್ರೀತಿಸು : "ಉೞುಗಿದಂ = ಕೂರ್ತಂ" (ಶಮುದ. ಪರಿ. ೨). **ಉೞುಂಗು** : "ಉೞುಂಗಿದನೆಂದು ಕೂರ್ತನೊಳ್" (ಕರ್ಣಾನಿ. ೫೯). **ಉೞ್ಗು** : "ಉೞ್ಗು – ಸ್ನೇಹೇ" (ಶಮುಧಾ) ; "ಉೞ್ಗಿದನೆನೆ ಪ್ರೀತಿಪಟ್ಟನೊಳ್" (ಕರ್ಣಾನಿ. ೫೬) ; ಅಕೆಯ ಪತ್ತಿದ ಕಣ್ಣುಮನುೞ್ಗಿದ ಮನಮುಮಂ ಜೋಲ್ದ ನಾಣುಮಂ ನೇಲ್ದ ಸರಮುಮನಜಿದು (ಪಂಪಭಾ. ೪–೪೦ ವ). [?]

**ಉೞುಗು$_2$**, ಉಳುಗು (ನಾ). ಅನುರಾಗ ; ಪ್ರೀತಿ ; ಸ್ನೇಹ ; "ಉೞುಗೆಂದು ಬೇಟಂ" (ಶಮುದ. ಪರಿ. ೧) ; "ಉೞುಗಿದನೆಂದೊಡೊಲ್ದವಂ" (ಸಂಜೀಪ. ೨) ; ಕೊಱವಿ, ಉೞುಗು, ಬೆೞಗು (ಶಬ್ದಾನು. ೧೪೦ ಪ್ರಯೋ). **ಉಳುಗು** : ಉಳುಗಂ ಬಿತ್ತುತೆ ನಾಡೆ ಚೊಕ್ಕಳಿಕೆಯಿಂ ಸ್ರಕ್ಚಂದನಾಮೋದಮಂ ತಳೆದೋರಂತೆಸೆದಿರ್ಪ ಸೂಳೆಯರ ಪೆರ್ಮೇಳಂಗಳಿಂದಂ (ವೀರವಿ. ೬–೯೪). [ದೇ. ‖ ತಮಿ. ಉೞುವಲ್ ; ಕುಇ. ಒೞ್ವ]

**ಉೞುಗುಗದಱೆ** (ನಾ). ಬಾಗೆಯ ಮರ (?) ; ಅದಿನ್ತೆ[ಂ]ಕು ಉೞುಗುಗದಱೆ [ಅ]ದಿನ್ತೆಂಕು ಮೆ[ೀ]ಲ್[ಸ]ರಿಗೆ (ಎಇ. X, ೬೬–೫೮ ; 892). [ಉೞುಗು ? + ಕದಱೆ]

**ಉೞುಮೆ**, ಉಳಮೆ$_2$, ಉಳುಮೆ$_2$ (ನಾ). ೧. ಉಳುವಿಕೆ ; ಬೇಸಾಯ ; ಆರಂಬ : ಕೆಯ್ಯಂತೆ ಕೆಯ್ಯುೞುಮೆಯಂತೆ (ಧರ್ಮಾಮೃ. ೧೨–೨೪). **ಉಳಮೆ$_2$** : ೨. ಗೇಣಿಗೆ ಕೊಟ್ಟ ಹೊಲ (ಕೃಷಿಗ. ೫೬೩). **ಉಳುಮೆ$_2$** : ಪುಟದಿಂದ ಚಿನ್ನದ ಸ್ವಭಾವವೂ, ಉಳುಮೆಯಿಂದ ಎತ್ತಿನ ಸ್ವಭಾವವೂ . . . ತಿಳಿಯಲ್ಪಡುವುದು (ಕೃವಾಉ. ೫೫). [ಉೞು (< ಉೞ್) + –ಮೆ$_1$]

**ಉೞ್ಕ** (ನಾ). (?) : ವರಿಸ ಬಟ್ಟವರಿಯರ ಪತ್ತುವರಿಸಂಬೞಿಂ ಮತ್ತವರ್ವರ್ಣಿಣಂ ಉೞ್ಕಗೂರ್ವರ್ಜಿನ್ದು ಮಾಣಲಾಗ ತಮ್ಮ ಸ್ವೇಚ್ಛೆಯೊಳ[ಂ] ನೆಗೞ್ವುದು (ಸೌಇಇ. XI–i, ೪೩–೧೯ ; 970). [?]

**ಉೞ್ಕೆ**, ಉಕ್ಕೆ, ಉಳ್ಕೆ$_1$ (ನಾ). = ಉೞುಮೆ: "ಉೞ್ಕೆಯೆಂದು ಉೞ್ವ ಸ್ವಭಾವಂ" (ಶಮುದ. ಪರಿ. ೧) ; "ನೇಗಿಲಿಂ ಗೆಯ್ವುದುೞ್ಕೆ" (ಸಂಜೀಪ. ೮) ; ಉೞ್ಕೆ [ಪಾಠಾಂ. ಊೞ್ಕೆ] (ಶಬ್ದಾನು. ೫೫೮ ಪ್ರಯೋ). **ಉಕ್ಕೆ** : ನೇಗಿಲೊಳುಕ್ಕೆಯನುೞುವ ಕುಡಿಯರನಂ ಕಂಡು (ಪುಣ್ಯಾಸ್ರ. ೩–೧೩ ವ) ; ಊರಿಗುಕ್ಕೆಯ ಚಿಂತೆ ಪೋರಿಗೆ ಮದುವೆಯ ತೋರಚಿಂತೆ (ಜ್ಞಾನಜ. ೧೪–೮೮) ; ಶೀಳು ಉಕ್ಕೆಯ ಕೆರೆದು (ಅರ್ಚಾವಿ. ೩೧–೨೯) ; ಹೊತ್ತಾರೆ ಎದ್ದು ಹೊಲಾ ನೋಡು, ಮಳೆ ನೋಡಿ ಉಕ್ಕೆ ಮಾಡು (ಗಾದೆ). **ಉಳ್ಕೆ$_1$** : "ಹಲವಿಲೇಖನೇ – ಉಳ್ಕೆಯೊಳ್" (ಕಾಶಕ್ಯ. ೧೪೬) ; "ಕಾರ್ಷಾ = ಕಾಸುಂ, ಉಳ್ಕೆಯ ಸಾಲುಂ" (ಕಾಶಕ್ಯ. ೫೮). [ಉೞ್ + –ಕೆ]

**ಉೞ್ಗಿ**, ಉಗ್ಗಿ$_1$ (ನಾ). ಒಂದು ಬಗೆಯ ವ್ರತ : "ಉೞ್ಗಿ (ಉಗ್ಗಿ) ಯೆಂದೊಂದು ನೋಂಪಿ" (ಶಮುದ. ಪರಿ. ೨). **ಉಗ್ಗಿ$_1$** : ತಂಗಾಳಿಯುಂ ತಿಂಗಳುಂ ಬನಮುಂ ಬೆಂಬಲಮಾಗಿ ತೀರ್ಚವೆ ಗಡಂ ಕೊಂಡುಗ್ಗಿಯಂ ಸುಗ್ಗಿಯೊಳ್ (ಅಜಿಪು. ೬–೨೮) ; ಮಹಾಜಿಯೊಳ್ಸದೆಯುದುಡುಗ್ಗಿಯೆಂದು ನುಡಿವೀ ನುಡಿ ಲೆಂಕರೊಳಾವಕಾಲಮುಂ ನಡೆವುದು (ಸೌಇಇ. IX–i, ೧೭೧–೧೫ ; 1045) ; ಸುಗ್ಗಿಯ ಪುಗಿಲೊಳ್ ಮುಂಕೊಂಡುಗ್ಗಿಯನುೞ್ಚವಿಸಿದಂತೆ ಮೋನಮನುೞಿದೇಂ ಬಗ್ಗಿಸಿದುವೊ ಕೋಗಿಲೆಗಳ್ (ಕಾವ್ಯಾವ. ೮೯೨). [?]

**ಉೞ್ಗು** 'ಉೞುಗು$_1$' ನೋ.

**ಉೞ್ಗೆ** (ನಾ). ಅನುರಾಗ ; ಪ್ರೀತಿ ; "ಸ್ನೇಹ" (ಚತುನಿ. ಕಿ. I, ೪೫). [ಉೞ್ಗು + –ಎ ?]

△**ಉೞ್ಚು** 'ಉಚ್ಚು' ನೋ.

**ಉೞ್ದು**, ಉದ್ದು$_2$, ಉದ್ದು$_2$ (ನಾ). ಒಂದು ಬಗೆಯ ದ್ವಿದಳ ಧಾನ್ಯ ; ಮಾಷ : ಮಧುಮಾಂಸಮಿಲ್ಲದಿರ್ದಂದು ಧರಾಮರ ಸಮಿತಿಯಾಜ್ಯಮುಮನುೞ್ದು[ಪಾಠಾಂ. ದ್ದು] ಮನಾ ಮಧುಮಾಂಸಮೆಂದು ಕಲ್ಪಿಪರಧಾರ್ಮಿಕ ಶ್ರಾದ್ಧಮಿಕ್ಕುವೆಡೆಯೊಳ್ ಪಾರ್ವರ್ (ಸಮುಪ. ೧೪–೧೪೯). **ಉದ್ದು$_2$** : ಘೃತದೊಳೆ ಪುರಿದುದ್ದು ಪೆಸಱು ಗೋದುವೆ ವೆರಸಿರೆ (ಕಲ್ಯಾಕಾ. ೩–೨೬) ; ಶುಭ್ರವಣ್ಣದುದ್ದಿನ ಸವಿಗಡುಬು (ಕಂನವಿ. ೮–೮೭) ; ಉದ್ದು ಉಬ್ಬಿದರೆ ಮದ್ದಳೆ ಆದೀತೇ (ಗಾದೆ) ; ಉದ್ದು ಉರುಳಿದರೆ ಹೆದ್ದಾರಿ ದಾಟೀತೇ (ಗಾದೆ). **ಉರ್ದು$_2$** : "ಉರ್ದು ಮಾಷಂ" (ವಸ್ತುಕೋ. ೯೪–೧೭) ; "ಉರ್ದು– ಸಂನಿಕೃಷ್ಟೇ (ಉೞ್ಚು), ಮಾಷೇಚ ಉದ್ದು" (ಶಮುಧಾ) ; ಜವೆ ಪೆಸಱುರ್ದೆಂಬಿವನಾಡುವ ಪಾಲೊಳಗಟ್ಟು ಕುಜದ ಮೂಲಂಗಳೊಳಿಕ್ಕುವುದಾ ಮರನೊಪ್ಪುವ ಪಲ್ಲವದಿಂ ಪುಷ್ಪಂಗಳಿಂ ಫಲಂಗಳಿನೆಸೆಗುಂ (ಲೋಕೋಪ. ೬–೧೫) ; ಪುೞ್ಗಿ = ಉರ್ದು, ತೊವರಿ, ಹೆಸಱು ಮೊದಲಾದುವನಿಕ್ಕಿ ಅಟ್ಟ ಕೂೞ್ (ಶಮುದ. ಪರಿ. ೧).

ಉದ್ದುಹುರಿ = ಅವಶ್ಯಕವಿಲ್ಲದ ಕೆಲಸ ಮಾಡು : ಉದ್ಯೋಗವಿಲ್ಲದ ಅಜ್ಜಿ ಉದ್ದು ಹುರಿದು ತಿಂದಳಂತೆ (ರೂಢಿ).

[ದೇ. ‖ ತಮಿ. ಉೞುನ್ದು ; ಮಲ. ಉೞುನ್ನು ; ತುಳು. ಉರ್ದು ; ಕೊಡ. ಉದ್ದು ; ತೆಲು. ಉದ್ದು ; ಕೋಲಾ. ಉರುಂದೆ ; ನಾಯ್ಕಿ. ಉರುಂದಳ್. / ಪ್ರಾ. ಉಡಿದೊ ; ಮರಾ. ಉಡೀದ್]

**ಊ**$_1$ (ನಾ). ಕನ್ನಡ ವರ್ಣಮಾಲೆಯ ಆರನೆಯ ವರ್ಣ; ಊಕಾರ: ಅ ಆ, ಇ ಈ, ಉ ಊ... ಎಂದೀ ಪದಿನಾಲ್ಕುಂ ಸ್ವರಂಗಳ್ (ಶಮದ. ೬ ವೃತ್ತಿ).

**ಊ**$_2$ 'ಉದು' ಪರಾ.

**ಊ**$_3$ 'ಉಂ$_1$' ನೋ.

**ಊಂ** 'ಉಂ$_1$' ನೋ.

**ಊಂಕಿಡು** (ಕ್ರಿ). ತೂಗಾಡು; ಹಿಂದೆಮುಂದೆ ಚಲಿಸು: ಮೆಟ್ಟಿದವನಿಯ ಚತುರಪದ ಚತುರಗತಿಯೊಳೂಂಕಿಟ್ಟು ಕುರುಪುಟವ ಸಮಕಿಟ್ಟು ಭಯಪದಗತಿಯಗೊಟ್ಟು ನರ್ತಕಿಯ ಲಂಘನದಂತೆ ಹಾರಿ ಹಯ ಪಾಯ್ದು ಮೇಲ್ವಾಯ್ದು ಬರಲು (ಜನಮು. ೧೫–೨೪). 'ಊಂಕಿಸು' ಪರಾ. [ಊಂಕು$_2$ + ಇಡು$_1$]

**ಊಂಕಿಸು, ಉಂಕಿಸು** (ಕ್ರಿ). ಆಲೋಚಿಸು; ಭಾವಿಸು; ಧ್ಯಾನಿಸು: ಘನತರದ ನಿತ್ಯತೆಯ ಬೇಡುವೆನೆನುತಲೂಂಕಿಸೆ ಕುಂಭಕರ್ಣನ ಕೊನೆಯ ನಾಲಿಗೆಯಲ್ಲಿ ಭಾರತಿ ನೆಲಸಿ ಮಾಯೆಯಲಿ ಮುನಿದು ನಿತ್ಯವ ನಿದ್ರೆಯೆನಿಸಲು (ಅನಂರಾ. ೧–೭–೧೮). **ಉಂಕಿಸು**: ಏಜಿ ನೋಡಲು ಲೋಕವೆಲ್ಲಂ ತೋಜಲಾಪ ಮಹೀರುಹಂಗಳನೇಜಿ ನೋಡಲು ಲೋಕವೆಲ್ಲಂ ತೋಱುವ ದ್ರಿಗಳ ಏಜಿವುಂ[ಪಾಠಾಂ. ಯುಂ] ಕಿಸಲೆಲ್ಲಿಗಾದೊಡೆ ಜಾಜಿದೊಯ್ವ ಮಹೀರುಹಂಗಳನೇಜಿವುಂ[ಪಾಠಾಂ. ಯುಂ] ಕಿಸಲೆಲ್ಲಿಗಾದೊಡೆವೊಯ್ವ ನಗತತಿಯ (ಬಸಪು. ೧೯–೪೯). [ಊಂಕು$_1$ + –ಇಸು$_3$. / ತೆಲು. ಉಂಕಿಂಚು]

**ಊಂಕು**$_1$ (ಕ್ರಿ). ಭಾವಿಸು; ಧ್ಯಾನಿಸು; ನೆನೆ: ಪಾಙ್ತ್ರರಾಜವ್ರಯೆಂತಿಹುದೆಯೆಂದೂಂಕಿ ಹೃದಯದಿ ನೆನೆದ ಚಿದನಂದಾತ್ಮ ಗುರುವರನ (ಜ್ಞಾನಸಿಂ. ೧೭–೫೬). [ದೇ. ‖ ತಮಿ. ಊಕ್ಕು = ಧ್ಯಾನಿಸು, ಚಿಂತಿಸು]

**ಊಂಕು**$_2$ (ನಾ). ನೆಗೆತ; ಹಾರುವಿಕೆ. 'ಊಂಕಿಡು' ಪರಾ. [ದೇ. ‖ ತಮಿ. ಉಕ್ಕೈ]

**ಊಂಕು**$_3$ (ನಾ). "ಹೊಲದಲ್ಲಿ ಬೆಳೆದ ಪೈರನ್ನು ರಾಶಿಮಾಡೋಣ" (ಗಂಗಾಮು. ೪೭). [?]

**ಊಂಕೆ** 'ಉಂಕಿ' ನೋ.

**ಊಂಚೆ** 'ಉಂಚ$_3$' ನೋ.

**ಊಂಚು** 'ಉಂಚ$_3$' ನೋ.

**ಊಂಟು** (ಕ್ರಿ). "ಉಬ್ಬಿಬೆಳೆ" (ಚತುನಿ. ಕಿ. I, ೪೭); ದರ್ಪಣದ ಇತರ ಭಾಗಗಳಲ್ಲಿಯೂ ಇಲ್ಲವೆಂದು ಕಿಟ್ಟೆಲ್‌ರವರ ನಿಘಂಟಿನಿಂದ ಎಣಿಸಬಹುದಾದ ಕೆಲವು ಸಿದ್ಧಧಾತುಗಳನ್ನು ಕೆಳಗೆ ಕಾಣಿಸಿದ್ದೇನೆ. ಇಣಿಕು... ಅಂಟು, ಊಂಟು, ಪೀಂಟು (ಕಸಾಪ. I, ೨೯೦). [?]

**ಊಂದುಗ** (ನಾ). (?). ಹಡವಳ ಮಾಚಣ್ಣ ಅಣುವ ನಾಗಸೋವಯ್ಯ ನಾಯಕ ಬಳಗಾರ ದೇವಣ್ಣ ಊಂದುಗ ಮಾಬಣ್ಣನಿಂತಿವರ್ ಮುಖ್ಯವಾಗಿ ದೋಣಿ ಸಾಸಿರ್ವರು ದೇವರ್ಗೆ ಪಡೆದರ್ (ಸೌಇಇ. XI–ii, ೩೦೦–೧೬; 1126). [?]

**ಊಕ**$_1$ (ನಾ). ಪ್ರಯತ್ನ; ಉದ್ಯಮ; ಪರಿಶ್ರಮ. [ದೇ. ‖ ತಮಿ. ಊಕ್ಕಂ; ತೆಲು. ಊಕುವ]

**ಊಕ**$_2$ (ನಾ). ಭಾವಿಸುವಿಕೆ; ಚಿಂತನೆ. [?]

**ಊಕ**$_3$ (ನಾ). "ಹೇನು" (ಗಂಗಾಮು. ೪೭). [< ಸಂ. ಯೂಕಾ]

**ಊಕಡ** 'ಉಕ್ಕಡ$_1$' ನೋ.

**ಊಕಾರ** (ನಾ). [ವ್ಯಾಕ] 'ಊ' ಎಂಬ ವರ್ಣ. [ಸಂ.]

**ಊಕಾರಾಂತ** (ಗು). [ವ್ಯಾಕ] 'ಊ' ಎಂಬ ವರ್ಣದಿಂದ ಕೊನೆಗೊಳ್ಳುವ (ಶಬ್ದ): ಊಕಾರಾಂತಕ್ಕೆ – ಸರಯೂ, ಕಂಡೂ, ಖರ್ಜೂ (ಶಮದ. ೮೩ ಪ್ರಯೋ). [ಊಕಾರ + ಅಂತ$_2$]

**ಊಕಿ** 'ಉಂಕಿ' ನೋ.

**ಊಕೆ**$_1$ 'ಉಂಕಿ' ನೋ.

**ಊಕೆ**$_2$ 'ಉದು' ಪರಾ.

**ಊಖ್ಯ** (ನಾ). ಮಡಕೆಯಲ್ಲಿ ಬೇಯಿಸಿದ್ದು (ಮಾಂಸ ಮೊದಲಾದುದು). [< ಸಂ. ಉಖ್ಯ]

**ಊಗಾಯ** (ನಾ). ಸಣ್ಣಗಾಯ; "ಸ್ವಲ್ಪವಾದ ಘಾಯದ ಹೆಸರು" (ಗಂಗಾಮು. ೪೭). [?]

**ಊಗಾಡು** (ಕ್ರಿ). "ತೂಗಾಡು" (ಜಾನಕೋ. ೨೨). [ಊಗು$_1$ + ಆಡು$_1$. / ತೆಲು. ಊಗಾಡು]

**ಊಗು**$_1$ (ಕ್ರಿ). ತೂಗು; ಜೋಲು. 'ಊಗಾಡು' ಪರಾ. [ದೇ. ‖ ತಮಿ. ಊಂಗು; ತೆಲು. ಊಗು]

**ಊಗು**$_2$ (ಕ್ರಿ). ಹೊಗು; ಪ್ರವೇಶಿಸು: ಆಚಂದ್ರಾರ್ಕಸ್ಥಾಯಿ ಹಾಗಿ ಅಧಿಕಾರಿ ಸುಂಕಿಗ ತಳವಾರರು ಆರು ಊಗದಾಂಗೆ ಕಟಳೆಯನು ಮಾಡಿ (ಸೌಇಇ. IX–ii, ೪೨೯–೩೮; 1405). [< ಪೊಗು]

**ಊಗು**$_3$ 'ಊಬು$_2$' ನೋ.

**ಊಗುರಿಸು** 'ಉಗುರಿಸು' ನೋ.

**ಊಚ** 'ಉಂಚ$_3$' ನೋ.

**ಊಚತ್ವ** (ನಾ). ಉಚ್ಚತ್ವ: ಪ್ರೀತರೇ ಸುಪವಿತ್ರಪರಧನಕಾತವರಿ ನಿಜ ಮಹಿಮರಾದೊಡೆ ಯಾತರದು ಊಚತ್ವ ನೀಚವು ಬಗೆದು ನೋಳ್ಪರಿಗೆ (ಬಿಜ್ಜಪು. ೧೦೮–೭೬). [< ಸಂ. ಉಚ್ಚತ್ವ]

**ಊಚನೀಚ** (ನಾ). ಮೇಲು ಮತ್ತು ಕೀಳು; ಉತ್ತಮ ಮತ್ತು ಅಧಮ: ಆಕೆಯು ಊಚನೀಚ ನೋಡದೆ, ಯಾತಕ್ಕೂ ಹೇಸಿಕೊಳ್ಳದೆ ಅತ್ತೆಯ ಔಷಧೋಪಚಾರದ ವ್ಯವಸ್ಥೆಯನ್ನು... ಮಾಡುತ್ತಿದ್ದಳು (ಉತ್ತಗೃ. ೨೦); ಪ್ರತಿಯೊಂದು ಪೀಳಿಗೆಯಲ್ಲಿ ಅದರ ಊಚ – ನೀಚ ಪ್ರಕಾರಗಳಿದ್ದೇ ಇರುತ್ತವೆ (ಸಮುಜೀ. ೩ ಪೀಠಿಕೆ). [ಊಚ (< ಉಂಚ$_3$) + ನೀಚ]

**ಊಚಬೆಳ್ಳಿ** (ನಾ). ಶುದ್ಧವಾದ ಬೆಳ್ಳಿ (ಕ). [ಊಚ (< ಉಂಚ$_3$) + ಬೆಳ್ಳಿ]

**ಊಚಿ**$_1$ (ನಾ). ಒಂದು ಬಗೆಯ ಹುಲ್ಲು; ಹಂಚಿಹುಲ್ಲು. 'ಊಚಿಹುಲ್ಲು' ಪರಾ. [ದೇ. ‖ ತಮಿ. ಊಶಿಲ್, ಊಂಜಿಲ್; ತೆಲು. ಊಚ]

**ಊಚಿ**$_2$, **ಊಚೆ** (ನಾ). ಚಮ್ಮಗಾರನ ದಬ್ಬಳ, —ಸೂಜಿ (ಸ್ಯಾಂಡರ್): **ಊಚೆ**: "ಮಾದಿಗನ ದಬ್ಬಳ" (ಕಲ್ಪದ್ರು. ೪೩). [?. / ತಮಿ. ಊಶಿ. / ಸಂ. ಸೂಚೀ]

**ಊಚಿ**$_3$ (ಗು). ಉಚ್ಚವಾದ; ಶ್ರೇಷ್ಠವಾದ; ಉತ್ತಮವಾದ: ಮಾಲಿನ ಖರೀದಿ ಬರೆಯುವವರು ಮಾಲು ಊಚಿ ಮಧ್ಯಮ ಸುಮಾರು ಅಂತ ಬರಿಯದೆ (ಮುಂಬವ್ಯಾ. ಪ್ರಸ್ತಾವ. ೨೭). [← ಮರಾ. ಉಂಚ್, ಉಂಚೀ]

**ಊಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು; ಕಸಬರಿಕೆಗಾಗಿ ಉಪಯೋಗಿಸುವ ಒಂದು ಬಗೆಯ ಉದ್ದವಾದ ಹುಲ್ಲು; ಹಂಚಿಹುಲ್ಲು (ಕ). [ಊಚಿ$_1$ + ಹುಲ್ಲು (< ಪುಲ್)]

**ಊಚು₁** 'ಉರ್ಚು' ನೋ.
**ಊಚು₂** 'ಉಂಚ' ನೋ.
**ಊಚೆ** 'ಊಚ್ಚಿ' ನೋ.
**ಊಜಿ** (ನಾ). ಬಲಿಪೀಠ, ಮಹಡಿಯ ತಾಳ್ವಾರ, ಮೆಟ್ಟಿಲು ಮೊದಲಾದವುಗಳನ್ನು ಸುತ್ತುವರಿದಿರುವ ಕಂಬಿಗೆ ಆಧಾರವಾಗಿರುವ ಸಣ್ಣ ಸಣ್ಣ ಕಂಬಗಳ ಸಾಲು; ಕಟಾಂಜನ; ಕಟಕಟೆ (ಕಿಸಂಗ್ಲಾ. ೧೧೨). [ದೇ. ‖ ತಮಿ. ಊಶಿ = ಸಲಾಕಿ]
**ಊಟ** (ನಾ). ಆಹಾರವನ್ನು ತೆಗೆದುಕೊಳ್ಳುವುದು ; ಭೋಜನ : "ವಲ್ಭನಂ . . . ಆಹಾರಃ, ಭೋಜನಂ, ಸ್ವದನಂ—ಈ ೧೧ ಊಟಂ" (ಹಲಾಯು. ೫೪–೧೭೦) ; ಘೃತಮಿಲ್ಲದೂಟಮೇನೊಪ್ಪುಗುಮೇ (ಅಜಿಪು. ೬–೯೩) ; ಕುಂಟಣಿಯ ಕೂರ್ಮೆಯಂತೆ ಪಶುವಿನ ಕರೆಹದಂತೆ ದೀವಳಿಗೆಯೂಟದಂತೆ (ಧರ್ಮಾಮೃ. ೭–೧೨೨) ; ಉಣ್ಣದ ಊಟವನುಣಿಸಿ ವಿಧಿಯೊಳಗಾಗಿಸುವ ಕೇಳಿರಣ್ಣಾ (ಮಹಾದೇ. ೨೪–೨) ; ಕಾಮಧೇನಿರ್ದು ಮೂಟಕೆ ಗೊಡ್ಡಾಕಳನಾಳ್ವರೇ (ಸೋಮೇಶ. ೩) ; ವರಸುತನುಮಿಲ್ಲದ ಮನೆಯೊಳೂಟವದಾಗದು (ಬಸವ. ೨೪–೩೧) ; ಯಾರಾದರೂ ಮದುವೆ ಮಾಡಿದರೆ ಊರಿಗೆ ಒಂದು ಊಟ ಕೊಡಬೇಕು (ಹುಟ್ಟಿಹ. ೨೦) ; ಅಗ್ರಸಾಲೆ ಊಟ, ಚಂದ್ರಸಾಲೆ ನಿದ್ದೆ (ಗಾದೆ) ; ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ (ಗಾದೆ) ; ಊಟ ತನ್ನಿಚ್ಛೆ ನೋಟ ಪರರಿಚ್ಛೆ (ಗಾದೆ) ; ಮಾತಿಗೆ ಮೊದಲು ಗಾದೆ, ಊಟಕ್ಕೆ ಮೊದಲು ಉಪ್ಪಿನಕಾಯಿ (ಗಾದೆ) ; ಊಟ ಕೌರವರಲ್ಲಿ, ಪಕ್ಷ ಪಾಂಡವರಲ್ಲಿ (ಗಾದೆ).
**ಊಟಉಡುಗೆ** = ಊಟ ಮತ್ತು ಉಡುಪನ್ನು ಧರಿಸುವುದು : ಊಟಉಡುಗೆಯ ಮುಗಿಸಿ ಕೋಟ ಕುದುರೆಯನೇರಿ (ಕನ್ನಜಾ. ೩೩೯–೧೩೪). **ಊಟದಅಂಗಡಿ** = ಭೋಜನಗೃಹ; ಖಾನಾವಳಿ; ಹೋಟೆಲು : ಊಟದ ಅಂಗಡಿಗಳಲ್ಲಿ ಎಷ್ಟೇ ಸೊಗಸಾದ ಪದಾರ್ಥಗಳನ್ನೇ ಮಾಡಿರಲಿ, ಅದಕ್ಕೆ ಮನೆ ಅಡುಗೆಯ ಸವಿ ಬರಲಾರದು (ಯಕ್ಷಪ್ರ. ೧೫೧). **ಊಟದತಾಟು** = ಊಟ ಮಾಡುವ ತಟ್ಟೆ: ಊಟದ ತಾಟು ಬಿಟ್ಟು ಓಡುತ್ತಲೇ ಬಂದ (ಕೊತಕಾ. ೫೯). **ಊಟೋಪಚಾರ** = ಊಟ ಮತ್ತು ಉಪಚಾರ : ಪ್ರೀತಿಯಿಂದೂಟೋಪಚಾರಗಳನು ಮಾಡು ನಿನ್ನಣ್ಣ ತಮ್ಮದಿರೊಡನೆ ವ್ಯವಹಾರವನು ಮಾತ್ರ ಬೇರೊಬ್ಬರೊಳು ಮಾಡು (ಇಂಚಾಪ. ೨೨೫–೧೨); ಊಟೋಪಚಾರಮುಗಿದನಂತರ . . . ಆಗಮಿಸಿದರು (ದಾನಚಿಂ. ೨).
[< ಉಂಡು₁. / ತಮಿ. ಊಟ್ಟಮ್, ಊಟ್ಟ ; ಮಲ. ಊಟ್ಟು]
**ಊಟಗ** (ನಾ). ಊಟದಿಂದ ಜೀವಿಸುವವನು : ಲಂಚದಿಂ ಜೀವಿಸುವಂ ಲಂಚಗಂ, ಲಂಚವಣಿಗಂ ಏವಂ . . . ಊಟಗಂ, ಊಟವಣಿಗಂ (ಶಬ್ದಾನು. ೪೧೫ ಪ್ರಯೋ). [ಊಟ₁ + –ಗ₃]
**ಊಟಗಾರ** (ನಾ). ಊಟಮಾಡುವವನು : ಊಟಗಾರರೆ ಊಟ ಬಡಿಸಿಕೊಂಡರು (ಪುನರು. ೩೪೩).
[ಊಟ₁ + –ಗಾರ (< –ಕಾಱ)]
**ಊಟಗಾರ್ತಿ** (ನಾ). ಊಟಮಾಡುವವಳು.
[ಊಟಗಾರ + –ತಿ₁ (< –ಇತ್ತಿ)]
**ಊಟಣೆ** 'ಉರುಟಣೆ' ನೋ.
**ಊಟಣೆ** 'ಉರುಟಣೆ' ನೋ.
**ಊಟಬೈಸು** (ನಾ). ಏಳುವುದು ಮತ್ತು ಕೂಡುವುದು; ಬೈಸಿಗೆ : ಹುಡಿಗೆ ಊಟಬೈಸು ಮಾಡಹತ್ತುವಳು (ನಡುಮ. ೧೧೩).
[← ಮರಾ. ಊಠಬಶೀ ; ಊಠಬಸ್, ಊಠಾಬಶೀ ; ಹಿಂ. ಉಟ್‌ಬೈಟ್]

**ಊಟಲೆ, ಊಟಳೆ** (ನಾ). ಜಂಬ ಕೊಚ್ಚುವುದು ; "ತನ್ನ ಪೌರುಷವನ್ನು ತಾನೇ ಹೊಗಳೋಣ, ಆತ್ಮಪೌರುಷಿ" (ಗಂಗಾಮು. ೪೭). 'ಊಟಲೆಕೊಚ್ಚು' ಪರಾ. **ಊಟಳೆ** : 'ಊಟಳೆಕೊಚ್ಚು' ಪರಾ. [?]
**ಊಟಲೆಕೊಚ್ಚು, ಊಟಳೆಕೊಚ್ಚು** (ಕ್ರಿ). ಜಂಭಕೊಚ್ಚು ; ಆತ್ಮಸ್ತುತಿ ಮಾಡಿಕೊಳ್ಳು (ಸ್ಯಾಂಡರ್). **ಊಟಳೆಕೊಚ್ಚು** : (ಸ್ಯಾಂಡರ್). [ಊಟಲೆ + ಕೊಚ್ಚು₁]
**ಊಟವಣಿಗ** (ನಾ). = ಊಟಗ : ಲಂಚದಿಂ ಜೀವಿಸುವಂ ಲಂಚಗಂ, ಲಂಚವಣಿಗಂ . . . ಊಟಗಂ, ಊಟವಣಿಗಂ (ಶಬ್ದಾನು. ೪೧೫ ಪ್ರಯೋ).
[ಊಟ + –ವಣಿಗ]
**ಊಟವಸತಿ** (ನಾ). ಊಟದ ಮತ್ತು ತಂಗುವ ಸ್ಥಳ; "ಊಟ ವಸತಿಗಳು" (Boarding – Lodging. ಪತ್ರಿನಿ. ೧೦).
[ಊಟ + ವಸತಿ]
**ಊಟವಿಡು** (ಕ್ರಿ). ಊಟ ಹಾಕು ; ಅನ್ನ ಕೊಡು : ನಂಟರಿಗೆ ಊಟವಿಡಲು ಅವನ ಮನೆಯಲ್ಲಿ ಗೋಧಿಯ ಹಿಟ್ಟು ಕೂಡ ಇರಲಿಲ್ಲ (ಪ್ರೈಮಹ. ೫೯). [ಊಟ + ಇಡು₁]
**ಊಟಳೆ** 'ಊಟಲೆ' ನೋ.
**ಊಟಳೆಕೊಚ್ಚು** 'ಊಟಲೆಕೊಚ್ಚು' ನೋ.
**ಊಟನಗದ್ದೆ** (ನಾ). ಊಟೆಯ ನೀರಿನಿಂದ ಬೆಳೆಯುವ ಗದ್ದೆ : ಮುತ್ತರಾಜು ಲೆಕ್ಕದಿಂ ಮತ್ತ ೬ ದೇವರಿಂ ಪಡುವ ಊಟನಗದ್ದೆಯ ಕಮ್ಮ ೨೦೦ (ಸೌಇಇ. IX–i, ೨೧೦–೧೯ ; 1125).
[ಊಟನ್ನ + ಗದ್ದೆ (< ಗಟ್ಟೆ)]
**ಊಟಿಸು** (ಕ್ರಿ). ಕಳೆ ; ಹೋಗಲಾಡಿಸು ; ಹಾರಿಸು (?) : ಊಟಿಸಿತು ಹೃದಯದೊಳಗಣ ಧೈರ್ಯಮಂ ಭೀತಿ ನಾಟಿಸಿತು ನಿನ್ನ ಸುಕುಮಾರಂಗೆ ಯಮುನವರ ಚೀಟು ಬಂದುದು (ತುರಂಗ. ೬೬–೨೯).
[ಊಟ₀ + –ಇಸು₃]
**ಊಟೆ** (ನಾ). ನೀರಿನ ಚಿಲುಮೆ ; ಬುಗ್ಗೆ ; ತಲಪರಿಗೆ : ಊಟೆಯಿಂದ ನೀರು ಹರಿಯುವಂತೆ ಮೈಯಿಂದ ಬೆವರು ಸುರಿಯಿತು (ನಗೆಗ. ೨೧) ; ಮುಗಿಲಿಗೆ ಪಾರ್ವಂತೆ ಪಾತಾಳಗಂಗೆಯು ನೆಗೆದಳೂಟೆಯಾಗಿ (ಅರಳು. ೪೫೮–೧೨) ; ಭೂವಿಷಯದಲಿ ಪುದಿದ ರಸವಾಸನೆಗಳೆಲ್ಲ ಆವಿಯಾಗೇಳ್ದು ಮುಗಿಲಾಗಿ ಮಳೆಗರೆದು ಬಾವಿಗೂಟೆಯನಿತ್ತು ನರರೊಡಲ ಸೇರುವುದು ದೈವ ರಸತಂತ್ರವಿದು (ಮಂಕುಕ. ೭೦). 'ಊಟೆವರಿ' ಪರಾ.
[< ಊಜು₁. / ತಮಿ. ಊಱು ; ಮಲ. ಉಜವ, ಉಜವು, ಉಱು ; ತುಳು. ಊಟ ; ತೆಲು. ಕುವಿ. ಊಟ]
**ಊಟೆವರಿ** (ಕ್ರಿ). ಊಟೆಯ ನೀರಿನಂತೆ ಹರಿ, —ನುಗ್ಗು : ನಾಟಿರ್ದಪಸುರ್ಗಿಡು ಪುಷ್ಪಲತೆಯ ವೃಕ್ಷವಾಟಿಯೊಳ್ ಕುಸುಮಸೌರಭಕೆ ಊಟೆವರಿವ ತುಂಬಿಗಳ ದೊಂಬಿ ದನಿಗೆಯ್ಯೆ ಕೂಟ ಕೋಗಿಲೆಗಳೊಪ್ಪಿದುವು (ಮೋಹತ. ೫–೨೫) ; ಸೂಠಿಯಿಂದಡರ್ದರು ಬಲರಾಮ ಸಾತ್ಯಕಿ ಪಾಠೀನಕೇತೂದ್ಭವನು ಊಟೆವರಿವ ಯದುಕುಮರರು ಚಪ್ಪನ್ನಕೋಟಿ ಯಾದವರು ಹತ್ತಿದರು (ಮೋಹತ. ೩೬–೩೪). [ಊಟೆ + ಪರಿ₁]
**ಊಡಿಡು** (ಕ್ರಿ). ಊರೆಕೊಡು ; ಆಧಾರವಾಗಿ ಮಾಡು : ಇದು ಲೋಕೋತ್ತರಮೆಂಬಿನಂ ನೆಗೆದ್ದರ್ವಲ್ಲಿ ಗ್ರಾಮದೊಳ್ ಮೇರು ತಾನಿದು ಕೈಳಾಸಮಿದೆಂಬಿನಂ ಧರೆಗವಾಕಾಶಕ್ಕವೂಡಿಟ್ಟನಿನ್ನಿದನಂಭೋಜಜನೆಂಬಿನಂ ಜನನುತಂ ಶ್ರೀಸರ್ವದೇವಂ ಮನೋಮುದದಿಂ ಮಾಡಿಸಿದಂ (ಎಕ. VII, ಶಿಕಾರಿ. ೧೧೪–೪೩ ; 1096) ; "ಊಡಿಟ್ಟಂ–ಊರೆಕೊಟ್ಟನು" (ಶಾಪಮುಂ. ೩೧–೧೬೬; ಕೋಶ). [ಊಡು₃ + ಇಡು₁]

**ಊಡಿಸು** (ಕ್ರಿ). ೧. ತಿನ್ನಿಸು ; ಉಣ್ಣಿಸು : ಕುರುಡನ ಕೈಯ್ಯ ಕೂಳ ಕಲಿ[ಲ]ಸಿ ಪ್ರತಿಗುರುಡಂಗೆ ಊಡಿಸಿದಂತಾಯಿತ್ತು (ವಚಶಾ. I, ೬೧) ; ತರುವೇ ಪಣ್ಗಳ ಮೆಲ್ಲ ಮಾತೆ ವಿಷಮಂ ಪೆತ್ತರ್ಭಕಂಗೂಡಿಸಲ್ . . . ಪರ ಕಾಯ್ವನೇ (ಸೋಮೇಶ. ೨೯) ; ಸೇದಿದನು ಪೂತನಿಯಸುವನವಳಾದರಿಸಿ ಮೊಲೆವಾಲನೂಡಿಸೆ (ಕುವ್ಯಾ ಸ. ೯–೫೬) ; ಕೊಂದಪನೊ ವಿಷವನೂಡಿಸಿ ಚಂದ್ರಹಾಸನಂ (ಜೈಮಿಭಾ. ೩೧–೨೮) ; ಹಾಲನ್ನವನ್ನು ಔಷಧಿಯಂತೆ ಊಡಿಸುತ್ತಾಳೆ (ನಂಟರು. ೩೫). ೨. ಕುಡಿಸು : ನೀರ್ಗಳಿಸಿದೊಡೆ ತಂದು ನೀರನೂಡಿಸಿ (ಚಂದ್ರಪು. ೫–೬೪) ; ಅವರನ್ನು ಮೀಯಿಸಿ ಹಾಲೂಡಿಸಿ ಗುರಾಣಿಯ ತೊಟ್ಟಿಲಲ್ಲಿ ಮಲಗಿಸಿದಳು (ಮಣಿಸ. ೭೧). ೩. ಊಟಕ್ಕಾಗಿ ಕೊಡು : ಅಮರಾಚಾರ್ಯ ಭಟ್ಟಾರಕರ್ಗೆ . . . ನೂಱು ಮತ್ತರ್ ಕೈಯ್ಯುಮಂ ಮಠಮಂ ಊಡಿಸಿ ಮಠಕ್ಕೆ ವಿದ್ಯಾದಾನವಾಗೆ . . . ವಿಟ್ಟನ್ (ಎಇ. XIV, ೨೯–೩೬ ; 1010). [ಊಡು$_1$ + –ಇಸು$_3$]

**ಊಡು$_1$** (ಕ್ರಿ). ೧. ಊಟಮಾಡು ; ತಿನ್ನು ; ಕುಡಿ ; ಸೇವಿಸು : ಊಡಿಹೆನುಟ್ಟಿಹೆನೆಂಬನ್ನಕ್ಕ ಪ್ರಸಾದಿಸ್ಥಲ (ವಚಶಾ. II, ೨೭೯) ; ಊಡಿ ಎಲ್ಲರು ಬನ್ನಿ (ವಿಸೀಗೀ. ೧೦). ೨. ತಿನ್ನಿಸು ; ಉಣ್ಣಿಸು ; ಕುಡಿಸು : "ಊಡು – ಭೋಜನಕ್ರಿಯಾಯಾಂ, ಆಧಾರೇ ಚ" (ಶಮಧಾ) ; ತನ್ನ ಮನೆಗೊಡಗೊಂಡುಪೋಗಿಯೂಡಿ (ವಡ್ಡಾರಾ. ೭೧–೨೬) ; ರಸರಸಾಯನಂಗಳನೂಡುವಂತೆ ದಿವ್ಯಾಹಾರಂಗಳನೂಡಿ (ಪಂಪಭಾ. ೪–೧೬ ವ) ; ನಾಡುವಿಡಿಯದರಸುಗೆಯ್ವೆನೆಂಬಂತೆ ಘೃತಮಿಲ್ಲದೂರನೂಡುವೆನೆಂಬಂತೆ (ಧರ್ಮಾಮೃ. ೪–೫೦) ; ಊಡದ ಆವಿಂಗೆ ಉಣ್ಣದ ಕಱುವ ಬಿಟ್ಟಂತೆ (ಬಸವ. ೧೦೯) ; ಮೊಲೆಯೂಡಿದುದಂ ಬಗೆದಳಿಲ್ಲ ಮನಮಳ್ಕಾಡಿದುದನೆ ಬಗೆದಳ್ (ಬಂಹರಿ. ೮–೫೯ ವ) ; ಆಡುವ ಮಕ್ಕಳಿಗೆ ಊಡುವ ತಾಯಂತೆ ಮಾಡಿದ ಕರ್ಮ ಬಳಿವಿಡಿದು ಪಿಡಿತಂದು ಊಡುತ್ತಲಿಹುದು (ಸರ್ವಜ್ಞ. ೮೮೦) ; ತುಂಗೆಯ ತೊರೆಯಂತೆ ಮನ ಕರಗಿ ನೀರಾಗಿ ಊಡು ಬಡಜೀವರನಿತ್ತ (ಇಂಚಾಪ. ೧೫೬–೭೯). ೩. ನೆನಸು ; ನೀರುಬಿಡು ; ಹಾಯಿಸು: ಕೇಶವದೇವನ ನೂಱಮೂವತ್ತು ಮರಕ್ಕೆ ದೇವರತೋಂಟದ ಬಾವಿಯಲು ನೀರನೆತ್ತಿಯೂಡುವರು (ಸೌಇಇ. IX–i, ೨೬೭–೬೫ ; 1160). ೪. ಲೇಪಿಸು ; ಬಳಿ : ಜಾದಿನೊಳೂಡಿದವೆರಡು ವಸ್ತ್ರಮೊಳವು (ವಡ್ಡಾರಾ. ೧೯೦–೧೧) ; ಅಡಿಯೂಡಲ್ಕಲತಗೆಯಂ (ಆದಿಪು. ೭–೧೧).

**ಊಡಿಕೊಳ್** = ಹೊಯ್ದುಕೊಳ್ಳು; ತುಂಬಿಕೊಳ್ಳು; ಹೀರು : ಚಲಿಪ ಕದಳೀದಳದ ಮಾರುತಂ ರವಿಘರ್ಮಜಲವನಾಱಿಸಿ ವಿಯದ್ಗಂಗೋದಕಮನೂಡಿ[ಪಾಠಾಂ. ದಿ] ಕೊಳುತೆ ನಡೆತಂದತ್ತು ಋಂಡಾಲಸೈನ್ಯಮದನೇನೆಂಬೆನದ್ಭುತವನು (ಚಿಬಪು. ೪೭–೩೪).

[ದೇ. ‖ ತಮಿ. ಮಲ. ಊಟ್ಟು ; ತೆಲು. ಊಟು ; ಕೋಲಾ. ಉರ್ತ, ಊರ್ತ ; ನಾಯ್ಕಿ. ಊರ್ತ್ ; ಕುಇ. ಊರ್ಪ, ಊತ್ಪ ; ಮಲ್ತೊ. ಒಂದೆ]

**ಊಡು$_2$** (ನಾ). ತಿನಿಸು ; "ಆಹಾರ" (ಶಾಪಮಂ. ಕೋಶ) : ಸಂಗರದೊಳೆಡಱಿ ಬೆನ್ನಿತ್ತರಂ ಸತ್ತರಂ ತನ್ನಿಷುವಿಙ್ಗೂಡಾಗದಾಳಾದರನಿರಿಸಿದನ್ (ಎಕ. V, ಬೇಲೂರು. ೧೧೨–೨೧ ; 1220). ℙ ಊಡು = ಗುರಿ ಎಂದೂ ಅರ್ಥವಾಗಬಹುದು. 'ಊಡು$_3$' ಪರಾ. [< ಊಡು$_1$]

**ಊಡು$_3$** (ನಾ). ೧. ಆಧಾರ; ಆಶ್ರಯ; ಊರೆ; ಅವಲಂಬನ : "ಊಡು – ಭೋಜನಕ್ರಿಯಾಯಾಂ, ಆಧಾರೇ ಚ" (ಶಮಧಾ); ರಸೆಯೊಳ್ಕೂರ್ಮನನಿಟ್ಟು ವಾಸುಗಿಯನೂಡಂ ಕೊಟ್ಟು ತೂಗಾಡಿ ನಾಲ್ದೆಸೆಗಂ ಜಾಱುಗುವೆಂದು ಕೀಲಿಱಿದು ಕುತ್ಕೀಳಂಗಳಂ ತಳ್ಗದಂತು ಸೆಱಂಗಿಂಗಜನಾನೆಯಂ ನಿಱಿಪಿನಿತ್ತಾಯಾಸಮೇಕೆಂದು ತೋಳ್ಪಸೆಯೊಳ್ತಾಳ್ದಿದನುರ್ವರಾರಮಣಿಯಂ ಚೋಳಪ್ರತಿಷ್ಠಾಪಕಂ (ಎಕ. V, ಚನ್ನರಾ. ೨೦೩–೧೨; 1223); ಪಾಂಡವವಡೆ ಭಯಂಗೊಂಡು ಗಾಂಡಿವಿಯನೂ[ಪಾಠಾಂ. ಮಾ]ಡುಗೊಂಡು ನೂಂಕಿ ಶರವರ್ಷಮಂ ಸುರಿಯೆ (ನೇಮಿಪು. ೧೨–೧೦೨ ವ). ೨. ಗುರಿ : ಸಂಗರದೊಳೆಡಱಿ ಬೆನ್ನಿತ್ತರಂ ಸತ್ತರಂ ತನ್ನಿಷುವಿಂಗೂಡಾಗದಾಳಾದರ ನಿರಿಸಿದಂ (ಎಕ. V, ಬೇಲೂರು. ೧೧೨–೨೧; 1220). ℙ ಊಡು= ಆಹಾರ ಎಂದೂ ಅರ್ಥವಾಗಬಹುದು. 'ಊಡು$_2$' ಪರಾ.

**ಊಡಾಗು** = ಆಧಾರವಾಗು ; ಆಶ್ರಯವಾಗು : ಅಂತವರಿಬ್ಬರುಂ ಪೋಗದೆ ನಿಂದುದಂ ಕಂಡು ಪೊರಿದಾಳು ಕುದುರೆಯ ಮೊಬ್ಬರ್ಂ ತಾಗಿಯೆಸಲ್ವಿಱಿಯಲುಂ ಕೋಲ್ಕೊಂತಂಗಳೂಡಾಗಿ ಬಿದ್ದುರ್ ಸುರಲೋಕಪ್ರಾಪ್ತರಾದಡವರಿಬ್ಬರ್ರ ಪೆಣನಂ ಮೆಟ್ಟಿ (ಎಕ. VIII, ಸೊರಬ. ೧೬೫–೧೫ ; 1156) ; ಮಾಡುತ ನಿಜನಿಷ್ಠೆಗೂಡಾದ ಮೂರ್ಖನಾರಾಡುವ ಜೂಜನಾನೊಮ್ಮೆ ನೋಡಬೇಕೆಂದೀಶ ಜೋಡಿಸಿದನು ಮಹದಾಡಂಬರದ ವಣಜತೆಯ (ಭೈರವೇ. ೧–೩೫೦) ; ಊಡಾದ ಸಂಸಾರವನ್ನು ಕಂಡು ಆತನಿಗೆ ಸಂತಸವಲ್ಲವೆ ? (ನದೀಪ. ೬).

[< ಊಱು$_1$. / ತುಳು. ಊರು ; ತೆಲು. ಊಡು = ನೆಡು]

**ಊಡುಗೊಳ್** (ಕ್ರಿ). ದಾಟಿ ಹೊರಬೀಳು : ಗಗನಮನಡರ್ವ ಭೀಮಧೂಮಧ್ವಜನೊಳ್ ಪಾಯ್ದಂತೆ ಮಾಡಿ ನೀಡುಮೂಡುಗೊಂಡೋಡಿ ತತ್ಪಿತೃವನಾಭ್ಯಂತರದೊಳಿರ್ದ ಭೂರುಹಮನೇಱಿ (ನೇಮಿಪು. ೩–೧೬೧ವ). [ಊಡು$_0$ + ಕೊಳ್$_1$]

**ಊಡೆ** (ನಾ). ಆಲದ ಮರದ ಬಿಳಲು (ಕ). [ದೇ. ‖ ತೆಲು. ಊಡ]

**ಊಢೆ** (ನಾ). ಮದುವೆಯಾದ ಹೆಂಗಸು : ಕನ್ಯೆ ಊಢೆಯರೆಂಬೆರಡು ಪ್ರಕಾರಮಾದ ನಾಯಕಿಯರಿಂ (ವಿವೇಕ. ೨೨೮) ; ಕೊಡುಕೊರಕಿಯೊ ಕೊರಡಿಯೊ ಮೇಣೂ [ಪಾಠಾಂ. ಣ್ಮೊ]ಢೆಯೋ ಮೂರ್ಖೆಯೋ ಮುಗುದೆಯೊ . . . ಅವ ಕೊಱತೆಯನಱಿದು ನೀ ನೆಱೆ ಹೇವರಿಸಿ ಪುಚ್ಚಳಿಯನೈದಿದೆ (ಮದೇಪು. ೬–೨೧). [ಸಂ. ಊಢಾ]

**ಊಣ$_1$** (ನಾ). ಆಹಾರ ; ಊಟ : ಪಶುವನೆಚ್ಚು ಕೂಡಿ ಹಸಿಗೆಗೆ ಬಂದಂತೆ ಉಂಬ ಊಣಕ್ಕೆ ನೆಱದು ಭಕ್ತಿಯ ಊಣೆಯಕ್ಕೆ ಹಿಂದುಮುಂದಾಹ (ಸುಂಕಬಂ. ೮೩).

[< ಉಣ್. / ತಮಿ. ಉಣ ; ಮಲ. ಊಣ್ ; ತುಳು. ಉಣಸ್]

**ಊಣ$_2$, ಊಣೆ** (ನಾ). ಕುಂದು ; ಕೊರತೆ : ಜಡಮತಿಯೊಳೆನ್ನೊಳಾವುದಮೂಣಂ [ಪಾಠಾಂ. ಳಾವುದುಮನಣಂ] ನೋಡದೆ (ಪುಷ್ಪಪು. ೫–೧೦೩). **ಊಣೆ** : ಇಂದುವಿಗಾದ ಕುಂದನು ವರುಣನಿಗಾದೂಣೆಯನು ನೋಡಲು (ಕೈವಲ್ಯ. ೩–೯–೧) ; ಪೇಳ್ದವಂಗೂಣೆ ಪಳಿಕ್ಕೆವವಂ ಗಾವಿಲನಲಾ (ಮಹಾವಿ. ೧–೩೬). [< ಸಂ. ಊನ]

**ಊಣಯ, ಊಣೆಯ** (ನಾ). ನ್ಯೂನತೆ ; ಕುಂದು ; ಕೊರತೆ : ಎಮ್ಮ ಮಾರ್ಜಾಲಂಗೆ ಕಿಂಚಿದೂಣಯಂ ಬಂದಡೆದಱ ಸಾಮರ್ಥ್ಯಂ ಕಿಡುವುದೆ ಪೇಳಿಮೆನೆ (ಧರ್ಮಪ. ೩–೧೩೦ ವ) ; ಬಾಲತನವೇನೂಣಯವೆ ಕಟ್ಟಾಳುತನವಾಭರಣವವನೀಪಾಲಸುತರಿಗೆ (ಕುವ್ಯಾ ದ್ರೋ. ೫–೩೧) ; ಸಕಲ ಸೌಭಾಗ್ಯಗಳನಿತ್ತು ವಿಧಿ ನಿನಗೊಂದು ಯುಕುತಿಯಂ ತೆರದಾದ ನೂಣಯಂ ಚಂದ್ರಮನ ಸಕಳಂಕಿಯೆನಿಸಿದಂ (ವೆಂಕಾರಾ. ೫–೯–೧೫). **ಊಣೆಯ** : ಒಡೆಯರು ಭಕ್ತರ ಠಾವಿನಲ್ಲಿ ಊಣೆಯಕ್ಕೆ ಎಡೆಗೊಡದೆ (ಏಲೇಶ್ವ. ೧೫೪) ; ಊಣೆಯಮಿಲ್ಲದೆ ಮಕ್ಕಳ ಮಾಣಿಕವಂ ಕಂಡೆವು (ದಶಕು. ೫–೮೫) ; ಜಾಣರಂ ತಲೆದೂಗಿಸದೆ ನುಡಿದೊಡಾ ಪದಕ್ಕೂಣೆಯಂ ಬಹುದೆಂದು (ಜೈಮಿಭಾ. ೧–೮).

**ಊಣೆಯವಾಗು** = ನ್ಯೂನತೆಯುಂಟಾಗು ; ಕುಂದಾಗು: ಭೀಮನ ನಲವಿಗೂಣೆಯವಾಯ್ತು ದುಃಸ್ಥಿತಿಯಾಯ್ತು ನಕುಲಂಗೆ (ಕುವ್ಯಾ ದ್ರೋ. ೭–೨೨). [ಪ್ರಾ. ಊಣಯ. / ಸಂ. ಊನಿತ]

**ಊಣಯಂದಳೆ** (ಕ್ರಿ). ನ್ಯೂನತೆಯನ್ನು ಹೊಂದು; ಕುಂದನ್ನು ತಳೆ: ಮರಗಿಡಗಳೆಡೆಯೊಳುದಯಿಸಿದವರನೇಂ ಪೋಲಿಪರೆ ನೋಡಲಿನಿತೂಣಯಂದಳೆಯದಿರ್ದ ಸೌಂದರಿಗೆ ಸರಿಯಾರೊ ದೊರೆಯಾರೊ ಎನೆ (ಸಾಳ್ವಭಾ. ೧೪–೧೩). [ಊಣಯ + ತಳೆ$_1$]

**ಊಣಯಂಬುಗು, ಊಣೆಯಂಬುಗು** (ಕ್ರಿ). ನ್ಯೂನತೆಯನ್ನು ಪಡೆ; ಕುಂದುಂಟಾಗು: ಊಣಯಂಬುಗದೆ ಷಟ್ಸಮ್ರ್ಯಾರ್ಜನಂಗೆಯ್ದು ಮಾಣದಾ ಚೌಕಮಧ್ಯದೊಳು (ಪಾಸೋಪು. ೧೨–೨೦). **ಊಣೆಯಂಬುಗು**: ಶ್ರೀ ಗುರುಪರಂಪರಾಸಂಭವಂ ಸಕಲ ಸುಕಲಾಗಾರನಮಲ ದಾಕ್ಷಿಣ್ಯಲಲಿತಾಸ್ಯನೆಲ್ಲಾ ಗುಣದೊಳೂಣೆಯಂಬುಗದೆಸೆವನಾತನ ಪೆಸರ್ ಪದ್ಮರಸಂ (ಪದ್ಮಚ. ೪–೪).
[ಊಣಯ + ಪುಗು (< ಪೊಗು)]

**ಊಣಯವಿಕ್ಕು** (ಕ್ರಿ). ನ್ಯೂನತೆಯನ್ನುಂಟುಮಾಡು; ಕುಂದು ಮಾಡು: ಕಾಣುತ್ತ ಕಾಟಣ್ಣ ಮುಱಿದೋಡಿ ಬಹ ಮಂದಿಗೂಣಯವಿಕ್ಕುತ ನಡೆದು ಮಾಣದೆ ಮಲೆತು ನಿಂದನು (ಕು. ರಾ. ಸಾ. ೦. ೧೩–೭).
[ಊಣಯ + ಇಕ್ಕು]

**ಊಣಿಸು** (ಕ್ರಿ). ಅಂಟಿಸು; ತೆತ್ತಿಸು; ಹುಗಿ (?): ಅಣಿಮುತ್ತಿನ ಪೋಣಿಕೆಯೊ ಕುಲಿಶೂಣಿಸಿದ ಬಿಲ್ಲೆಗಳೊ ಕೊರೆಕೊರೆದಾಣಿಗ್ಯೆದಿಹ ಚಂದ್ರಕಾಂತದ ಶಿಲೆಯ ಬಟುವುಗಳೋ (ಜಿರಾಮಾ. ೧೭–೪೧).
[ಊಣು (< ಪೂಣ್ ?) + –ಇಸು$_3$]

**ಊಣುಕಲ್ಲು** (ನಾ). ಒಂದು ಊರಿನ ಹೆಸರು: ಲೆಂಕಗೇತನಂ ಕನ್ದಂ ಊಣುಕಲ್ಲ ಕೋಟೆಯೊಳಗಿಟ್ಟಣಿ ಸನ್ದಣಿಯಾಗೆ ನೂಂಕೆಮ್ಮ[ಣ] ದಾಕೇತ ಪೆಣದಿಱಿದು ಸತ್ತೊಡೆ (ಸೌಇಇ. XI–i, ೫೧–೫; 1006).
[ಊಣು + ಕಲ್ಲು (< ಕಲ್$_2$)]

**ಊಣೆ** 'ಊಣ' ನೋ.

**ಊಣೆಯ** 'ಊಣಯ' ನೋ.

**ಊಣೆಯಂಬುಗು** 'ಊಣಯಂಬುಗು' ನೋ.

**ಊಣೆಯವಿಡಿ** (ಕ್ರಿ). ನ್ಯೂನತೆಯಿಂದ ಕೂಡು; ಕೊರತೆಯಿಂದ ತುಂಬು: ಜಾಣಸೇಕರ ನಿನ್ನೆಡೆಯೊಳಗೆಳ್ಳನಿತೂಣೆಯವಿಡಿದ ಕಾರ್ಯಗಳ ಕಾಣಿಸಿಕೊಂಡೆನಾದೊಡೆ ಕೇಳು ಮುಡಿಮೊಲೆದಾಣವ ನಿನಗಿತ್ತಳಲ್ಲ (ಕಂನವಿ. ೬–೧೬೪). [ಊಣೆಯ (< ಊಣಯ) + ಇಡಿ$_2$]

**ಊತ$_1$** (ನಾ). ಬಾತುಕೊಳ್ಳುವಿಕೆ; ಊದಿಕೊಳ್ಳುವಿಕೆ: ಏಟು ಬಿದ್ದ ಜಾಗದಲ್ಲಿ ಊತ ಬಂದಿದೆ (ರೂಢಿ). [< ಊದ್ಮ$_2$]

**ಊತ$_2$** 'ಉದು' ಪರಾ.

**ಊತ$_3$** (ನಾ). ದೃಢತ್ವ; ಸ್ಥಿರತ್ವ (ಕ). [< ಊಱು$_1$]

**ಊತ$_4$** (ಗು). "ದಾರದಿಂದ ಹೊಲಿಯಲ್ಪಟ್ಟ; ನೆಯ್ದ" (ಅಮರ. ಟೀಕ).
[ಸಂ.]

**ಊತಪ್ಪ** 'ಉತ್ತಪ್ಪ' ನೋ.

**ಊತಿ$_1$** (ನಾ). ಒಂದು ರೋಗ: ಅದಿದೆನ್ನದೆ ಲಾಂಗಲಿ ದೇವದುಂಬೆ ಸುರದಾಳಿಯೆಂಬಿವಂ ಕಟಿಯಿಂದಂ ಪೂಸಿದೊಡಂತದಾವಗಂ ಪೆರ್ಚಿದ ಕಿರ್ಚು ಪೊಲುರಿವ ಊತಿಯುಂ ಮಱ್ಗುಸುಗುಂ (ಲೋಕೋಪ. ೯–೧೬೧). [?]

**ಊತಿ$_2$** (ನಾ). ೧. ಹೊಲಿಯುವುದು; ನೇಯುವುದು. ೨. ವೇಗ; ರಭಸ. ೩. ಆಸೆ; ಬಯಕೆ: ಪುಣ್ಯಕರ್ಮ–ಪಾಪಕರ್ಮಗಳ ಯೋಗದಿಂದ ಉಂಟಾಗುವ ವಾಸನೆಗಳಿಗೆ ಊತಿ ಅನ್ನುವರು (ಭಾಮೃತ. ೬೬). ೪. [ತತ್ತ್ವಶಾ] ಕರ್ಮಗಳ ವಾಸನೆ: ವಿತತ ಬಹುವಿಧಕರ್ಮಸಂಭವಗತಿಗಳೂರಿ [ತಿ] [ಪಾಠಾಂ. ಕೋಳಿ] ಗಳೆನಿಸುವವು ಸಂಪ್ರತಿಯವಾಸನೆ ಜೀವರಿಂಗೆಲೆ ಜನಪ ಕೇಳೆಂದ (ನಿಭಾಗ. ೨–೪–೩). [ಸಂ.]

**ಊತು** (ನಾ). ಹೊಡೆತ; ಪೆಟ್ಟು (?): ಘಾಸಿಯಾದುದು ತಪನತನುಜಾತನೂತಿನೊಳ್ ಸೂಸುಗಣೆಗಳ ಸೊಗಡಿನೊಳ್ ಮಲಗೆ ಕರ್ಣ ಕೈವಿಟಿಸಿದನು (ತುರಂಗ. ೬೨–೪೯). [< ಊಱು$_1$]

**ಊತ್ವ** (ನಾ). [ವ್ಯಾಕ] 'ಊ' ಎಂಬ ವರ್ಣ; ಊಕಾರ: ಪದದೆರಡನೆಯಕ್ಕರದತ್ವದೊಳೆತ್ವಂ ಪ್ರಸ್ವದೆತ್ವಮಾತ್ವಕ್ಕೂತ್ವಕ್ಕುದಯಿಕುಮುತ್ವಸ್ಥಿತಿ (ಶಮದ. ೨೮೩). [ಸಂ.]

**ಊದ$_1$** 'ಊದಾ' ನೋ.

**ಊದ$_2$** 'ಊದ್ಮ$_3$' ನೋ.

**ಊದಕಡ್ಡಿ** 'ಊದುಕಡ್ಡಿ' ನೋ.

**ಊದಬತ್ತಿ** 'ಊದುಬತ್ತಿ' ನೋ.

**ಊದರ, ಊದರೆ, ಊದಲು$_1$, ಊದಿಲು** (ನಾ). ೧. ಹೊಗೆ; ಧೂಮ. **ಊದರೆ**: ೧. "ಹೆಬ್ಬೊಗೆ" (ನಾನಾಶ. ೪೦). ೨. ಬಾವು: "ಬಾವು, ಉಬ್ಬು" (ನಾನಾಶ. ೪೦). ೩. ಬೆಳೆಯ ಮಧ್ಯೆ ಬೆಳೆಯುವ ಹುಲ್ಲು; ಕಳೆ: "ಕಳೆ, ಕಣೆ" (ನಾನಾಶ. ೪೦). **ಊದಲು$_1$**: ೧. ಹೆಗ್ಗಣದ ಬಿಲಗಳಿಗೆ ಊದಲು ಹಾಕಬೇಕು (ರೂಢಿ). **ಊದಿಲು**: ೧. "ನೋಡು ಪುಟ್ಸ್ವಾಸಾನು ಬಂದೆ; ಅಷ್ಟರಲ್ಲೇ ಒಂದು ಉಡ ನುಗ್ಗಿಬಿಡ್ತು, ಈ ದೊಗರಿಗೆ . . . ಊದಿಲನ್ನಾದರೂ (ಕಂಟುಹೊಗೆ) ಹಾಕಿ ಪ್ರಯತ್ನಮಾಡೋಣ" (ಮುಗಮಾಂ. ೩೭).
[< ಊದ್ಮ. / ತೆಲು. ಊದರ]

**ಊದರಹಾಕು** (ಕ್ರಿ). ಹೊಗೆಹಾಕು: ಊದರಹಾಕಿದರೆ ಸೊಳ್ಳೆಗಳು ಹೋಗುತ್ತವೆ (ರೂಢಿ). [ಊದರ + ಹಾಕು (< ಪಾಯ್ಕು$_1$)]

**ಊದರೆ** 'ಊದರ' ನೋ.

**ಊದರೆಯಿಡು** (ಕ್ರಿ). (ಇಲಿ ಮೊದಲಾದವುಗಳನ್ನು ಕೊಲ್ಲುವುದಕ್ಕಾಗಿ ಅಥವಾ ಓಡಿಸುವುದಕ್ಕಾಗಿ) ಹೊಗೆಯಿಡು, — ಹಾಕು: (ಸ್ಯಾಂಡರ್). [ಊದರೆ (< ಊದರ) + ಇಡು$_1$]

**ಊದಲು$_1$** 'ಊದರ' ನೋ.

**ಊದಲು$_2$** (ನಾ). ಊದಿಕೊಂಡಿರುವುದು; ಬಾತುಕೊಂಡಿರುವುದು; ಊತ: ಅವನೊಬ್ಬ ಊದಲು ಮೋರೆಯವನು (ರೂಢಿ).
[ಊದ್ಮ$_2$ + –ಅಲು (< –ಅಲ್$_2$)]

**ಊದಲು$_3$** (ನಾ). ಒಂದು ಹುಲ್ಲು ಗಿಡ: "ಊದಲು; ಕಾಡುಹಾರಕ ಹುಲ್ಲು" (ಮೈಔಗಿ. ೩೨–೬೨೧).
[← ತೆಲು. ಊದಲು = ವನಧಾನ್ಯವಿಶೇಷ]

**ಊದಾ, ಊದ$_1$, ಊದಿ** (ನಾ). ೧. ಒಂದು ಬಣ್ಣ; ಕೆಂಪೂ ನೀಲಿಯೂ ಸ್ವಲ್ಪಕಪ್ಪು ಅಥವಾ ಬಿಳುಪಿನೊಡನೆ ಅಥವಾ ಇವೆರಡರೊಡನೆ ವಿವಿಧ ಪ್ರಮಾಣಗಳಲ್ಲಿ ಮಿಶ್ರವಾದ ಬಣ್ಣ; ಕೆನ್ನೀಲಿ. ೨. ಕಂದುಬಣ್ಣ; ಬೂದುಬಣ್ಣ: ಹಸುವಿನ ಹೆಸರು ಯಶೋದಾ, ಅದರ ಬಣ್ಣ ಊದಾ (ಗಣೇಶ. ೭೬–೭). ೩. ನೀಲಿಬಣ್ಣ; ಆಕಾಶನೀಲಿ (ಕ). **ಊದ**: ೧. ಊದಬಣ್ಣದ ಸೀರೆ (ರೂಢಿ). **ಊದಿ**: ೨. ಕಡೆಯಲ್ಲಿ ಊದಿ, ಈ ಪ್ರಕಾರ ಬಣ್ಣಗಳ ಪಟ್ಟೆಗಳು ಕಾಣಿಸುವುವು (ಮುಂಬಯಿ. ೪–೪೪). [← ಅರ. ಊದಾ. / ತೆಲು. ಊದಾ]

**ಊದಿ** 'ಊದಾ' ನೋ.

**ಊದಿಕೆ** (ನಾ). ಊದಿಕೊಳ್ಳುವುದು; ಬಾತುಕೊಳ್ಳುವುದು.
[ಊದ್ಮ$_2$ + –ಇಕೆ (< –ಇಕ್ಕೆ$_2$)]

**ಊದಿಮರ** (ನಾ). ಧೂಪ ಅಥವಾ ಲೋಬಾನದ ಮರ (?): "ಉಡಿಮರ, ಗೊಡ್ಡ, ಊದಿಮರ, ಸಿಂಟಿಮರ, ಗೊಗಲ್, ಹೆಣ್ಣುಗೊಡ್ಡ" (ಮೈಔಗಿ. ೩೭–೧೧೫೦). [ಊದ್ಮ$_0$ + ಮರ್ಮ]

**ಊದಿಸು$_1$** (ಕ್ರಿ). ೧. ಗಾಳಿ ಬೀಸುವಂತೆ ಮಾಡು : ಮೇರುವಂ ಪೆಜತೇನೂದಿಸಿ ಬೆಂಡು ವಾಜಿಸುವೆನೋ ಬ್ರಹ್ಮಾಂಡವಂ ಪೋೞ್ಪೆನೋ (ಕಾವ್ಯಸಾ. ೪೧೩). ೨. ಲೋಹವನ್ನು ಪುಟಕ್ಕೆ ಹಾಕಿ ಶುದ್ಧಗೊಳಿಸು : ಪಾದದ ಬೆಳ್ಳಿಯನೊಂದಿನಿಸೂದಲೊಡಂ ತನ್ನ ಸಾಜಮಂ ತೋಱುವವೊಲ್ (ಸಮುಪ. ೮–೪೬). ೩. ವೋಳ, ಕೊಂಬು, ಕಹಳೆ ಮೊದಲಾದುವನ್ನು ಊದುವಂತೆ ಮಾಡು.

**ಊದಿಸಿಕೊಳ್** = ಬಾಯಿಂದ ವಾದ್ಯಗಳನ್ನು ಶಬ್ದಮಾಡಿಸಿಕೊಳ್ಳು; ಕೂಗಿಸಿಕೊಳ್ಳು : ಕಾಳೆಯನೂದಿಸಿಕೊಳುತ ಕಾಳಂಗ ದೇಶದ ರಾಯ ಬಂದಾ ಪೂರ್ವಕಾಲದ ಚಕ್ರಿಯ ಕಂಡಾ (ಭರಚ. ೨೨–೪೪). [ಊದು$_1$ + –ಇಸು$_3$]

**ಊದಿಸು$_2$** (ಕ್ರಿ). ದಪ್ಪನಾಗುವಂತೆ ಮಾಡು; ಊದಿಕೊಳ್ಳುವಂತೆ ಮಾಡು (ಕ). [ಊದು$_2$ + –ಇಸು$_3$]

**ಊದು$_1$** (ಕ್ರಿ). ೧. ಬೀಸು; ತೀಡು : ಸೂಸಿ ಪಾಯ್ವ ಶೀಕರದೊಳೆನಾಂದು ಸೇಡುಗೊಳುತಂ ಸುೞಿದೂದುವ ಗಾಳಿ (ಕಾವ್ಯಸಾ. ೭೮ ಶೂದ್ರಕ); ಮೊರೆದೆಜಗಿ ಕೊಳ್ವ ಮುೞ್ ಭೋರ್ಗರೆದೂದುವ ಗಾಳಿ ಸಿಡಿದು ಪೊಯ್ವ ಸಿಡಿಲ್ (ಆದಿಪು. ೬–೩೨); ಊದಿದುದಾಗಳಂಗಜ ಮಹಾಶಿಖಿ ಪೊತ್ತೆ ಪಟೀರಭೂಮಿಭೃತ್ಪಾದವನಾಂತಚಾರಿ . . . ಸಮೀರಣಂ (ದಮಸ್ವ. ೪೯–೫೮). ೨. ಬಾಯಿಂದ ಗಾಳಿಯನ್ನು ಹೊರಡಿಸು; ಉರುಬು : "ಊದು – ಶ್ವಾಸಪ್ರಹರಣೇ" (ಶಮುಧಾ); "ಶೀಟಮೆಂದುಂ . . . ಊದುವುದೆಂದುಂ ವಾಯುಸಂಚಾರಂ" (ಕಶಸಾ. ೩೧–೬೬೧); ಬಿಲಂಗಳೊಳಗಣೆಱುಂಪೆಗಳಂ ಮೊಗವಿಟ್ಟೂದಿಯೂದಿ ತಿಂದು . . . ನಲಿನಲಿದಾಡುವ ಭಲ್ಲೂಕನಿಕಾಯದಿಂ (೧೦ಕ. ೧–೧೨೮ ವ); ಬಲ್ಗೆಂಡಂಗಳನಾಯ್ದು ತಂದು ಪುಟವಪ್ಪಂತೂದಿ (ಉದ್ಭಟ. ೧೧–೭೯); ಗೋಪುರಪ್ರಾಕಾರಮಂಟಪ ವಿಮಾನಂಗಳೊಳ್ ನೆಲಸಿರ್ಪ ಕಿಱುವಕ್ಕಿಗಳನೂದಿ ಮಿಾಂಟಿಗಳಿಂದಿಟ್ಟು ಕೆಡಪಿ (ಚಕವಂ. ೭–೧೧); ಕಲ್ಲಿದ್ದಲನ್ನು ಹೊತ್ತಿಸಿ . . . ತಿದೀ ಊದಿದನು (ಮುಂಬಯಿ. ೪–೧೫೭); ಸಿಕ್ಕಿದ ಕಿಚ್ಚನು ಊದಲು ಹಾರುತ (ಕಎಥು. ೨೮). ೩. ಧ್ವನಿಮಾಡು; ನುಡಿಸು: ಉಲಿದ ವಿದಿೞ್ಳೊಳು ಡೌಡೆ ಬಿರುದಾವಳಿಯ ಕಹಳೆಗಳೂದಿದವು (ಕುವ್ಯಾಭೀ. ೪–೭೪); ಕೊಳಲನ್ನು ಟಾಸೋ ಸಾವಿರಸಲ ಊದಿದ (ಭಾವಗೀ. ೭೦). ೪. ಗುಟ್ಟಾಗಿ ಹೇಳು; ಚಾಡಿಹೇಳು : ಆತನ ಕಿವಿಯಲ್ಲಿ ಏನೇನೋ ಊದಿದ್ದಾರೆ (ರೂಢಿ).

**ಊದಿತೋರು** = ನುಡಿಸು; ಬಾರಿಸು : ನೀನೂದಿ ತೋರದೆ ಹೋದರೆ ಏನಿದೆ ಇದು ಒಂದು ಬಿದಿರಿನ ಕೊಳಲು (ಇಂಚಾಪ. ೬೫–೧೨).

[**ದೇ. ‖ ತಮಿ. ಮಲ. ತುಳು.** ಊದು; **ತೆಲು.** ಊಂದು; **ಕೋಲಾ.** ಊಂದ್]

**ಊದು$_2$** (ಕ್ರಿ). ದಪ್ಪನಾಗು; ಬಾತುಕೊಳ್ಳು : ಅರು ಸೂನಿಗೆಯ ಮೇಲೆ ಇಪ್ಪತ್ತೈದು ಹೆಣ ತೆಗೆಯಿತ್ತು. ಹೆಣನೂದಿ ರುಧಿರ ಸುರಿಯಲಾಗಿ ಆದರ ಭಾರತಾಗಿ ಸೂನಿಗೆ ಮುಱಿಯಿತ್ತು (ಮೋಳಿಮಾ. ೨೨೪–೭೭೭); ಅಣ್ಣನ ಬಲಗಾಲು ಊದಿತ್ತು (ಪುಟ್ಟರ. ೮೫).

**ಊತುಕೊಳ್, ಊದಿಕೊಳ್** = ಉಬ್ಬು; ಬಾತುಕೊಳ್ಳು : ಮುಂದಿನ ಕಾಲನ್ನು ಎತ್ತಿತು. ಅದು ಬಹಳಷ್ಟು ಊತುಕೊಂಡಿತ್ತು (ನಾಕಥೆ. ೪೬); ಅವನ ಕಾಲು ಊತುಕೊಂಡಿತ್ತು (ರೂಢಿ); ಕಣ್ಣುಗಳು ಕೆಂಪಗೆ ಊದಿಕೊಂಡಿದ್ದುವು (ದೀಪದ. ೧೮೮); ಕಾಡಿನಲ್ಲಿ ನಡೆದು ನಡೆದು ಆ ಹುಡುಗಿಯ ಹೆಜ್ಜೆ ಊದಿಕೊಂಡಿತು (ಮಧ್ಯಮ. ೬).

[**ದೇ. ‖ ತಮಿ. ಮಲ.** ಊದು; **ತುಳು. ತೆಲು.** ಊದು; **ನಾಯ್ಕಿ.** ಊಂದ್]

**ಊದು$_3$**, ಊದ$_2$ (ನಾ). ಧೂಪ; ಸಾಂಬ್ರಾಣಿ; ಹಾಲುಮಡ್ಡಿ; ಲೋಬಾನ. 'ಊದುಕಡ್ಡಿ' ಪರಾ. **ಊದ$_2$** : "ಸಿಲ್ಹ – ಊದ, ಲೋಬಾನ" (ಗಂಗಾಮು. ೩೨೯).

**ಊದಿನಕಡ್ಡಿ** = ಊದುಕಡ್ಡಿ : ಇಲ್ಲಿ ಚಲೋ ಊದಿನಕಡ್ಡಿ, ಮಸಾಲೀ ಎಣ್ಣೆ, ಬುಕ್ಕಿಟ್ಟು ಮುಂತಾದ ಸುಗಂಧದ ಪದಾರ್ಥಗಳು ಹುಟ್ಟುತ್ತವೆ (ಮುಂಬಯಿ. ೪–೧೪೬).

[← **ಅರ. ಹಿಂ. ಮರಾ.** ಊದ]

**ಊದು$_4$** (ನಾ). ಚಾಡಿಹೇಳುವಿಕೆ : ಯಾದವಪತಿ ನೀನಿಂದೂ ನಾವು ಪೋದಲ್ಲಿಗಿದಿರ್ದೈತಂದೂ ಊದಿಗೆ ಭೀಮಾರ್ಜುನರೂ ಕುಟಿಲೋದಯಕೆಡೆನಿನಗ್ಯಾರೂ (ಕುಮುದಾ. ೩೯). [< ಊದು$_1$]

**ಊದುಕಡ್ಡಿ**, ಊದಕಡ್ಡಿ, ಊದುಗಡ್ಡಿ (ನಾ). ಧೂಪಕ್ಕಾಗಿ ಸುಗಂಧವಸ್ತುಗಳಿಂದ ತಯಾರಿಸಿದ ಕಡ್ಡಿ; ಗಂಧದ ಕಡ್ಡಿ; ಅಗರುಬತ್ತಿ : ಕಾಡಿಗೆ ಭರಣಿ ಅಂದವಾದೂದುಕಡ್ಡಿಗಳು (ಶ್ರೀಕೃಪಾ. ೨೧೦). **ಊದಕಡ್ಡಿ** : ಮಘಮಘಿಪ ವೂದಕಡ್ಡಿಗಳು ಅಂತಗೃಹಕೆ (ಬಾಣಾಕ. ೧೧). **ಊದುಗಡ್ಡಿ** : (ಕ).

[ಊದು$_3$ + ಕಡ್ಡಿ. / **ಹಿಂ. ಮರಾ.** ಊದಕಾಡೀ]

**ಊದುಕಾಮನಿ**, ಊದುಗಾಮನಿ (ನಾ). (ಉಕ) = ಊದುಕಾಮಾಲೆ : "ಊದುಕಾಮನಿ – ಹಳದಿರೋಗ" (ಜಾನಕೋ. ೨೨).

**ಊದುಗಾಮನಿ** : (ಉಕ. ಕ).

[ಊದು$_2$ + ಕಾಮನಿ]

**ಊದುಕಾಮಾಲೆ**, ಊದುಗಾಮಾಲೆ, ಊದುಗಾಮಿಲೆ (ನಾ). ದೇಹವು ಊದಿಕೊಂಡು ಹಳದಿ ಬಣ್ಣಕ್ಕೆ ತಿರುಗುವ ಒಂದು ರೋಗ; ಅರಿಸಿನಮುಂಡೆ : ಸಂವತ್ಸರಲವಣ, ಶುಂಠಿ, ಇಂಗು ಇವಂ ಚೂರ್ಣವಂ ಮಾಡಿ ಕಷಾಯಮಂ ಕುಡಿಯೆ ಊದುಕಾಮಾಲೆ ತೀರ್ಗುಂ (ವಿಷ್ಣವಿ. ೮೫). **ಊದುಗಾಮಾಲೆ** : ಊದುಗಾಮಾಲೆಗೆ :– ಎತ್ತು ನಾಲಿಗೆರಸವಂ ಎಣ್ಣೆಯಲ್ಲಿ ಕುಡಿಯೆ ಊದುಕಾಮಾಲೆ ಮಾಣ್ಗುಂ (ವಿಷ್ಣವಿ. ೧೩೦). **ಊದುಗಾಮಿಲೆ** : ಲಾಲಾಸ್ರವ, ಮೂಕತ್ವ, ಕಾಮಿಲೆ, ಊದುಗಾಮಿಲೆ, ಬಳಲ್ಗಾಮಿಲೆ, ಕುಂಭಕಾಮಿಲೆ (ಶುಕಸ. ೩೨೭).

[ಊದು$_2$ + ಕಾಮಾಲೆ. / **ತಮಿ.** ಊದುಕಾಮಾಲೈ; **ತುಳು.** ಊದುಕಾಮೆಲಿ]

**ಊದುಕೊಳವೆ**, ಊದುಗೊಳವಿ, ಊದುಗೊಳವೆ (ನಾ). (ಬೆಂಕಿಯನ್ನು ಹೊತ್ತಿಸುವುದಕ್ಕಾಗಿ) ಗಾಳಿಯನ್ನು ಊದುವ ಕೊಳವೆ : **ಊದುಗೊಳವಿ** : ಹೊತ್ತಲಾರದ ಒಲೆಯನ್ನು ಕಂಡು ಸಿಡುಕಿನಿಂದ . . . ಊದುಗೊಳವಿಯಿಂದ ತಿವಿದು (ಬರಹಾ. ೪೬); ಕೆಲಸವೆಲ್ಲಾ ಮುಗಿದಮೇಲೆ ಊದುಗೊಳವಿ ಗಲಬರಿಸೋಕೆ ಬಂದಳು (ಗಾದೆ). **ಊದುಗೊಳವೆ** : (ಕ). [ಊದು$_1$ + ಕೊಳವೆ]

**ಊದುಗಡ್ಡಿ** 'ಊದುಕಡ್ಡಿ' ನೋ.

**ಊದುಗಲ್ಲ** (ನಾ). ೧. ಊದಿಕೊಂಡಿರುವ ಗಲ್ಲ. ೨. ಕೆನ್ನೆ ಊದಿಕೊಳ್ಳುವ ಒಂದು ರೋಗ; ಗದ್ದಮಾರಿ; "ಕೆಪ್ಪಟಿರಾಯ" (ಕರಾ); "ಉಬ್ಬಿದ ಗಲ್ಲ; ಮಂಗ್ಯನ ಬಾವು" (ಜಾನಕೋ. ೨೨).

[ಊದು$_2$ + ಗಲ್ಲ$_1$]

**ಊದುಗಾಮನಿ** 'ಊದುಕಾಮನಿ' ನೋ.

**ಊದುಗಾಮಾಲೆ** 'ಊದುಕಾಮಾಲೆ' ನೋ.

**ಊದುಗಾಮಿಲೆ** 'ಊದುಕಾಮಾಲೆ' ನೋ.

**ಊದುಗಾಲು** (ನಾ). ಊದಿಕೊಂಡಿರುವ ಕಾಲು; ಬಾತುಕೊಂಡಿರುವ ಕಾಲು (ಕ). [ಊದು$_2$ + ಕಾಲು$_1$ (< ಕಾಲ್$_1$)]

**ಊದುಗಿಚ್ಚು** (ನಾ). ಗಾಳಿಯನ್ನು ಬೀಸಿ ನಿಗಿನಿಗಿ ಮಾಡಿದ ಕಿಚ್ಚು, —ಬೆಂಕಿ: ಕೆಂಪಾದವಸುರರ ನೋಙಿಗಳು ತಿದಿಯೊದುಗಿಚ್ಚಿನ ಹೊದಙಿ ನಂತಿರೆ ಬಿಡದೆ ಭುಗಿಲಿಡುತ (ಕುವ್ಯಾಕ. ೬–೨೮). [ಊದು₁ + ಕಿಚ್ಚು (< ಕಿರ್ಚು)]

**ಊದುಗೊಳವಿ** 'ಊದುಕೊಳವೆ' ನೋ.

**ಊದುಗೊಳವೆ** 'ಊದುಕೊಳವೆ' ನೋ.

**ಊದುದಾನಿ** 'ಊದುದಾನು' ನೋ.

**ಊದುದಾನು, ಊದುದಾನಿ** (ನಾ). ೧. ಊದುಕಡ್ಡಿ ಸಿಕ್ಕಿಸುವ ಅಥವಾ ಇಡುವ ಪಾತ್ರೆ: ನೆಲದಮೇಲೆ . . . ಅದೇ ಅತ್ತರದಾನು, ಊದುದಾನು, ಬಂಗಾರದ ಪುಷ್ಪಕಪಾತ್ರೆಗಳಲ್ಲಿ ತುಂಬ ಹೂವು (ದೇವೀಚಾ. ೧೪೫). ೨. = ಊದುಬತ್ತಿಗಿಡ (ಕ). **ಊದುದಾನಿ**: (ಕ). [ಊದು₃ + ದಾನು]

**ಊದುಬಟ್ಟೆ** (ನಾ). ರೋಗದಿಂದ ಊದಿಕೊಂಡಿರುವ ಹೊಟ್ಟೆ (ಕ). [ಊದು₂ + ಬಟ್ಟೆ]

**ಊದುಬತ್ತಿ, ಊದಬತ್ತಿ** (ನಾ). = ಊದುಕಡ್ಡಿ: ಎರಡು ಊದುಬತ್ತಿಗಳನ್ನು ತೆಗೆದು ಅದರ ಮುಂದೆ ಹೊತ್ತಿಸಿ ಇಡಲಾಯಿತು (ರಂಗರೋ. ೨೭); ಹಸ್ತಗಳಲ್ಲಿ ಊದುಬತ್ತಿಯ ದಾನಿಗಳನ್ನು ಹಿಡಿದು (ಶ್ರೀರಾಯ. ೧೯೬). **ಊದಬತ್ತಿ**: (ಕ). [ಊದು₃ + ಬತ್ತಿ₁./ ಹಿಂ. ಮರಾ. ಊದಬತ್ತಿ; ತುಳು. ಊದುಬತ್ತಿ; ತೆಲು. ಊದುವತ್ತಿ]

**ಊದುಬತ್ತಿಗಿಡ** (ನಾ). ಊದುಕಡ್ಡಿಗಳನ್ನು ಸಿಕ್ಕಿಸಲು ಲೋಹದಿಂದ ಮಾಡಿದ ಮರದ ಆಕಾರದ ಸಾಧನ (ಕ). [ಊದುಬತ್ತಿ + ಗಿಡ (< ಗಿಡು)]

**ಊದುಹೊಟ್ಟೆ** (ನಾ). ಊದಿಕೊಂಡಿರುವ ಹೊಟ್ಟೆ. [ಊದು₂ + ಹೊಟ್ಟೆ₁ (< ಪೊಟ್ಟೆ₁)]

**ಊಧ** (ನಾ). "ಕೆಚ್ಚಲು" (ಅಮರ. ಟೀಕೆ). [< ಸಂ. ಊಧಸ್]

**ಊಧಸ್ಯ** (ನಾ). ಹಾಲು: "ಊಧಸ್ಯಂ, ಕ್ಷೀರಂ . . . ಪಯಃ, ಪೀಯೂಷಂ – ಈ ೬ ಪಾಲ್ (ಹಾಲು)" (ಹಲಾಯು. ೪೬–೧೯೧). [ಸಂ.]

**ಊಧಸ್ಸು** (ನಾ). = ಊಧ: "ಊಧಸ್, ಆಪೀನಂ— ಈ ೨ ಕೆಚ್ಚಲ್" (ಹಲಾಯು. ೪೫–೧೧೬). [< ಸಂ. ಊಧಸ್]

**ಊನ** (ನಾ). ೧. ಕಡಮೆಯಾಗಿರುವುದು; ಕುಂದು; ಕೊರತೆ: "ಗತಮದೂನಂ" (ಮಂಗರಾ. ೧೩೦–೧೮); ತನಗಿನಿತೂನಮಾಗೆ ಮೆಙಿದಾ ಭುಜವೀರ್ಯಮನಾಂತು ಮಾಣ್ಬುದೇಂ (ಪಂಪಭಾ. ೧೨–೧೯೭); ಆ ಸಹನೆಗೂ ಒಂದು ಮಿತಿಯಿತ್ತು; ಅದಕ್ಕೂ ಒಂದು ದಿನ ಊನ ಬರುವ ಪ್ರಸಂಗ ನಡೆಯಿತು (ರೂಪಸ. ೨೬೧). ೨. ಅಂಗಹೀನತೆ; ವಿಕಲತೆ. [ಸಂ.]

**ಊನಗಣ** (ನಾ). [ಛಂದ] ಅಕ್ಷರ ಅಥವಾ ಮಾತ್ರೆ ಕೊರತೆಯಾದ ಗಣ: ಕೊನೆಯ ದ್ವಿಪದಿಯ ಕಡೆಯ ಗಣ ಒಂದು ಗುರುವಿನ ಒಂದು ಊನಗಣ (ಕೈಪಿಡಿ. ೧೪೧). [ಊನ + ಗಣ]

**ಊನತೆ** (ನಾ). ಕಡಮೆಯಾಗಿರುವುದು; ಕೊರತೆ. [ಸಂ. ಊನತಾ]

**ಊನತ್ವ** (ನಾ).= ಊನತೆ: ನಿಚ್ಚಲುಮಿಂದ್ರಸೋಲಗದೊಳಂತಾ ಪಾಂಡುರಾಜಂಗೆ ನಿರ್ನೆರಮಪ್ಪೊಂದಪಮಾನದಿಂದಮಿನಿತೊಂದೂನತ್ವಮಪ್ಪಂತುಟೀ (ಪಂಪಭಾ. ೬–೧೭). [ಸಂ.]

**ಊನಮನ** (ನಾ). ಅಲ್ಪಮನಸ್ಕ; ಸಣ್ಣ ಮನಸ್ಸಿನ ವ್ಯಕ್ತಿ: ಜೀತಗಾರರಲ್ಲಿ ಮೂರು ವಿಧ. ತೆಗೆದುಕೊಳ್ಳುವ ಶುಲ್ಕಕ್ಕಾಗಿ, ಅದರ ಆಳತೆಯಷ್ಟು ಮಾತ್ರ ಕೃಷಿಗೈಯುವ ಊನಮನರ ದೊಡ್ಡ ಗುಂಪು (ಕಜಸಾ. IX, ಪೀಠಿಕೆ). [ಊನ + ಮನ]

**ಊನಮಾನ** (ನಾ). ಅಪಾಯ; ತೊಂದರೆ; ಹಾನಿ: ನಿಂಮು ಕೆಙಿಗೆ ಊನಮಾನವಾದರೆ ನೀವು ಮಹಾಜನಂಗಳು ಕಟಲುಳವರು (ಎಕ. X, ಮುಳಬಾ. ೬–೧೨; 1416); ಕಟಿಸಿದ ಕೆಙಿಗೆ ಊನಮಾನವಾದರೆ (ಸೌಇಎ. ೧೯೩೪, ಪುಂಗನೂ. ೧೫೬–೧೧೩; 1419). [ಊನ + ಮಾನ]

**ಊನಮಾಸಿಕೆ** (ನಾ). ಸತ್ತವರಿಗಾಗಿ ಅವರು ಸತ್ತ ಒಂದು ವರ್ಷದೊಳಗೆ — ಒಂದು ತಿಂಗಳಿಗೆ ಸ್ವಲ್ಪ ಮುಂಚೆ ಮತ್ತು ಆರು ತಿಂಗಳು ತುಂಬುವುದಕ್ಕೆ ಸ್ವಲ್ಪ ಮುಂಚೆ ಮತ್ತು ಹನ್ನೆರಡು ತಿಂಗಳು ತುಂಬುವುದಕ್ಕೆ ಸ್ವಲ್ಪ ಮುಂಚೆ ನಡಸುವ ಶ್ರಾದ್ಧಕಾರ್ಯ: ಇನ್ನೂ ಏನಾದರೂ ಉಳಿದರೆ ಅದು ಮುಂದೆ ಬರೋ ಮಾಸಿಕ, ಊನಮಾಸಿಕಗಳಿಗೆ ಆಗಬೇಕಲ್ಲವೇ? (ಮಾಂಗಲ್ಯ. ೩೫). [ಊನ + ಮಾಸಿಕ]

**ಊನರವೈಶಿಕ** (ನಾ). ಒಂದು ಬಿರುದು (?): ಕೊಙ್ಗುಣಿ ಅರಸರ ಅಳು ಎಙಿದು ಸತ್ರೊನ್ ಭಾನುದಾಸನ್ ಜಯಮಿತ್ರನ್ ಊನರವೈಶಿಕನ್ ಒಡಿವೆಚ್ಚಿರಾಯಿಳನ್ನಿಗ್ಗೊಳನ್ನನುಜಾಗರನ್ ಅಣ್ಣನವತಿಗನ್ ಅನ್ತಕಙ್ಗಙ್ಗದೊನ್ (ಮೈಆರಿ. ೧೯೩೯, ೨೨–೧೧; 750). [ಊನರ₀ + ವೈಶಿಕ]

**ಊನೈಸು** (ಕ್ರಿ). ಕಡಮೆಯಾಗು; ಕ್ಷೀಣಿಸು (?): ಅನನಶಿರಃಪ್ರದೇಶದೊಳೇನುಂ ಬೆಳ್ಪಿಲ್ಲದಿರ್ದು ಘೋಟಾನನ ಸುಸ್ಥಾನದೊಳೆ ಬೆಳ್ಪು ಪುಟ್ಟಿದೊಡೂನೈಸದೆಯಾಳಲಾಗದಭಿನವಚಂದ್ರಾ (ಅಶ್ವಶಾ. ೩–೮). [ಊನ + –ಇಸು₃]

**ಊಬ** (ನಾ). (ಉಕ) ಕಾವು; ಶಾಖ: "ಛೇ, ಎಲ್ಲೀದು? ಹೊತಗೊಂಡ ಮಲಗಿದ್ದೆ. ರಗ್ಗಿನ ಊಬ ಹಿಡಿದಿರಬೇಕು. ಜ್ವರಾ ಇಲ್ಲಾ, ಏನ ಇಲ್ಲಾ. ದಿನದಕಿಂತಾ ಇಂದ ಅರಾಮ ಅದ" (ದೀಪಹ. I, ೧೭೮). 'ಉಬ್ಬೆ' ಪರಾ. [← ಮರಾ. ಊಬ್]

**ಊಬಲು** 'ಉಬ್ಬಲು' ನೋ.

**ಊಬು₁** (ಕ್ರಿ). ೧. ಬೀಸು; ತೀಡು. ೨. ಬಾಯಿಯಿಂದ ಗಾಳಿಯನ್ನು ಹಾಕು: ಊಬಿ ಪರ್ವತವನ್ನು ಹಾರಿಸಲು ನೀವು ಇಚ್ಛಿಸುತ್ತಿರುವಿರೋ ಏನು? (ತುಳಸಿ. ೮೩). [< ಉಬುಬು]

**ಊಬು₂, ಊಗು₃** (ನಾ). ೧. ರಾಗಿ, ಬತ್ತ, ಜೋಳ, ಗೋಧಿ ಮುಂತಾದ ಧಾನ್ಯಗಳ ಹೊಟ್ಟಿನ ಮೊನಚಾದ ತುದಿ; ತೆನೆಯ ಮುಳ್ಳು: "(ಸೆಜ್ಜೆಯ ಊಬು) ಧಾನ್ಯದ ಮುಳ್ಳು; ಭತ್ತದ ಊಗು" (ಜಾನಕೋ. ೨೨). ೨. ಪೊರಕೆಗಾಗಿ ಬಳಸುವ ಹಂಚಿಕಡ್ಡಿ ಮುಂತಾದುವುಗಳ ಮುಳ್ಳು: "ಊಬು ಕಂಟಕಿಯಕ್ಕು" (ಮಂಗರಾ. ೩೩–೮); ಪೊರಕೆ ಊಬು ಉದುರಿ ಬರಲಾಗಿದೆ (ರೂಢಿ). **ಊಗು₃**: ೨. ಊಗಿನ ಮೊನೆಯನಿತೂ ಕಾಮನೆಯಿಲ್ಲದ ತಮ್ಮಾ ಮನಸಿನ ಗಟ್ಟಿ (ನವರಾ. ೫–೩೩). [?]

**ಊಬುಹುಲ್ಲು** (ನಾ). ಒಂದು ಬಗೆಯ ಹುಲ್ಲು; ಹಂಚಿಕಡ್ಡಿಯ ಹುಲ್ಲು: ಹೊಲದ ಬದುಗಳಲ್ಲಿ ಊಬುಹುಲ್ಲು ಬೆಳೆದಿದೆ (ರೂಢಿ). [ಊಬು₂ + ಹುಲ್ಲು (< ಪುಲ್)]

**ಊಮ** 'ಊಮೆ' ನೋ.

**ಊಮಾನಿಸ** (ನಾ). ನಡುವಣ ಮನುಷ್ಯ: ಊಮಾನಿಸಂ, ಊವಾಳ್ (ಶಬ್ದಾನು. ೩೭೦ ಪ್ರಯೋ). [ಊ₃ (< ಉದು) + ಮಾನಿಸ]

**ಊಮಿಸು** (ನಾ). ನಾಟಿಸು ; ಚುಚ್ಚು (?) : ನಿಸಿತಾಸ್ತ್ರ ಹಾರಿಸುತ ಲಸುರನಂಗಾಂಗಕಊಮಿಸಿದ ಬಹು ಸ ರ ಳಿ ಗಾ ರ ದೆ ಪಾರ್ಥ (ಜಿನಮು. ೩೪–೨೩) ; ಏಮಾತ ಪೇಳಲಮ್ಮಾಜಿ ಕಾಸರಿವಾಸಕಊಮಿಸಿದ ದಾಶರಥಿ ಯಂನೊಸ್ತು ವಗ್ರತನು ಭೂಮಿಯನು ಬಿಡದೆಂದು ಮುಳುಗಿ ಶೋಕಾಂಬು ವಿಲಿ (ಜಿನಮು. ೩೬–೩೧). [ಊಮ್ಮು₀ (< ಉಣ್ಮು ?) + -ಇಸು₃]

**ಊಮು** (ಕ್ರಿ). ಉಬ್ಬಿಸು (?) : ಎತ್ತಿ ಪುಷ್ಪವನೊದರಿ ಸಟಮನೆದುರೂ ಮುತೀ ಲೋಕಮಂ ನುಂಗುವಂತಾರ್ಭಟಿಸೆ (ಜಿನಮು. ೩೫–೨೪).
[< ಉಣ್ಮು]

**ಊಮೆ**, ಊಮ (ನಾ). ೧. ಮೂಗ ; ಬಾಯಿಬಾರದವನು. "ಮೂಗ" (ಕಲ್ಪದು. ೪೪). ೨. "ಮೂಕಿ" (ಸಿ ೦ ಕೋ ೯. ೬೮). **ಊಮ** : ೧. "ಮೂಕ" (ರ ಮಾ ಕಾ ೦ . ೧೦೮). ೨. "ಗೆಳೆಯ ; ಸ್ನೇಹಿತ" (ಸಿಂಕೋ. ೬೮).
[ದೇ. ‖ ತಮಿ. ಊಮ, ಊಮ್ಯೆ ; ಮಲ. ಊಮ]

**ಊಯಲ್** (ನಾ). ಸಂದೇಶ (?) : ತೋತ್ರದಿಂ ತರ್ಜನೆಯ ಗೈದು ಪಿಮ್ಮೆಟ್ಟಸೆನ್ನೊಡನೈದುವಡೆ ಸಂಪದವತ್ರಕೊಳ್ಳದುವುಳಿದುದೆಲ್ಲ ಚರ ಣೋಪಾಂತಮಾತ್ರದೊಳಗೈದಲೆಂದೂಯಲಂ ಕಳುಹಿ ಕಿ ಡಿ ನೇ ತ್ರ ದಿ ೦ ಪಿಂತಿರುಗಿ ನಿಲೆ (ಜಿನಮು. ೩–೩೮). [< ಪುಯ್ಯಲ್ ?]

**ಊರ್**, ಊರು₃ (ನಾ). ಜನ ವಾ ಸ ಮಾ ಡು ವ ಸ್ಥಳ; ಹಳ್ಳಿ; ಗ್ರಾಮ; ಪಟ್ಟಣ : "ಗ್ರಾಮುವಾಸಂ ವಸಥಮೆನಲೂರ ಪೆ ಸ ರ್" (ಮ ೦ ಗ ರಾ. ೫೬–೧) ; ಮುಟ್ಟಲಪ್ಪಿಯೂರ್ನ್ನಾಮಗ್ರಾಮಂ (ಮೈಆರ್. ೧೯೩೬, ೫೩–೨೩ ; 550) ; ಬೆಂಗಿಮಂಡಳದೊಳ್ ಬೆಳ್ವಾವಗಮ ತನಗ ದೊಂದೂರ್ ನಾ ಮ ದೊ ಳ ೦ ವೆಂಗಿಪಟು ಕರಂ ಸೊಗೆಯಿಸುಗುಂ (ಶಂಪಭಾ. ೧೪–೪೦) ; ಕೆಲದೂರ್ಗಳೊಳೆಲ್ಲಮಜಸುತ್ತಿರ್ದರ್ (ಸುಕುಮಾ. ೧೨–೨೪ ವ). **ಊರು₃** : "ಗ್ರಾಮಃ ಸಂವಸಥಃ – ಈ ೨ ಊರು" (ಹಲಾಯು. ೪೩–೧೦೩) ; ಊರ ಸೀರೆಗೆ ಅಗಸ ತಡಬಡಗೊಂಬಂತೆ (ಮಹಾದೇ. ೩–೬) ; ಹೋಗದೂರಿನ ದಾರಿ ಕೇ ಳಿ ಮಾ ಡು ವು ದೇ ನು (ಪುರಂದ. ೧–೧೩೯–೩) ; ಊರಿದ್ದಲ್ಲಿ ಹೊಲಗೇರಿ (ಗಾದೆ) ; ಊರಿಗೆ ಅರಸನಾದರೂ ತಾಯಿಗೆ ಮಗ (ಗಾದೆ) ; ಊರಿಗೆ ಬಂದವಳು ನೀರಿಗೆ ಬರಲಾರಳೆ (ಗಾದೆ) ; ನೀರು ಇದ್ದರೆ ಊರು, ನಾರಿ ಇದ್ದರೆ ಮನೆ (ಗಾದೆ) ; ಊರು ಸೂರೆಯಾದ ಮೇಲೆ ಕೋಟೆ ಬಾಗಿಲು ಹಾಕಿದರು (ಗಾದೆ).

**ಊರಬಟ್ಟೆ** = ಊರಿನ ದಾರಿ, —ಮಾರ್ಗ : ಮಣನ ಕೆಜಗೆ ಊ[ರ ಬ]ಟ್ಟೆಯಿಂ ಬಡಗ (ಸೌಇಇ. XX, ೧೦೩–೬ ; 1133). **ಊರ ಮಂಟಪ** = ಊರಿನ ಸಭಾಭವನ; ಚಾವಡಿ : ನಡೆದು ಬಂದಾ ಪೂರ ಮಂಟಪದ ಮುಂದಿಳಿದು (ನಂಬರ. ೬–೧೫). **ಊರವ** = ಊರಿಗೆ ಸೇರಿ ದವನು ; ಊರಿನವನು : ಗರುಡನೂರವರೆಜೆವರೇ ನಾ ಗ ರಿ ಗೆ ತನಿ ಯನು (ಕುವ್ಯಾಕ. ೨–೧೫).

[ದೇ. ‖ ತಮಿ. ಮಲ. ಊರ್ ; ಕೊಡ. ಊರಿ ; ತುಳು. ತೆಲು. ಊರು ; ಕೋಲಾ. ನಾಯ್ಕಿ. ಊರ್. / ಪ್ರಾ. ಊರ]

**ಊರಕಿರಿಯಾತು** (ನಾ). ನೆಲಬೇವಿನ ಗಿಡ (ಕ). [?]

**ಊರಗಲ** (ನಾ). ೧. ಊರಿನ ತುಂಬ. ೨. (ಆಲಂ) ಬಹಳ ಅಗಲ : ತಳೆದು ಪುಳಕಂಗಳಿಂ ಗುಡಿಕಟ್ಟಿ ನಲವಿಂದೆ ಅಲ್ಲಿ ಊರಗಲದೊಳು ಮಂಟಪವನೊಲಿದಿಕ್ಕಿ (ನಂಬರ. ೫–೨೫); "ಇದೇನೊ ಇಷ್ಟು ಸಂತೋಷ ? ಮುಖ ಊರಗಲವಾಗಿದೆ, ಯಾರ ಕಾಗದವೊ ಅದು ?" (ನಡೆದಾ. II, ೯೪೦). [ಊರ್ + ಅಗಲ₁]

**ಊರಗಸೆ** 'ಊರಗುಸೆ' ನೋ.

**ಊರಗಾಯಿ** 'ಊರುಗಾಯಿ' ನೋ.

**ಊರಗುಣಿ** (ನಾ). ಒಂದು ದೇವತೆ : ಮಾರಿ ಮಸಣಿಗಳೊಳಗಣಜ್ಜೆ ಗಳೂರಗುಣಿಯಾಕಾಶ ಬೊಮ್ಮನು ಬೀರಭೂತಗಳೆಂಬ ದೈವದ ಬಾಧೆ ಯಿಂದುಳಿದು (ಪ್ರಹ್ಲಾಚ. ೮–೪೨). [ಊರು₃ (< ಊರ್) + ಗುಣಿ ?]

**ಊರಗುಸೆ**, ಊರಗಸೆ (ನಾ). ಊರಿನ ಹೆಬ್ಬಾಗಿಲು, —ಮಹಾ ದ್ವಾರ ; ಅಗಸೆ ಬಾಗಿಲು : ಹೊಟ್ಟೆ ನೊಂದೊಡೆ ತುಜುಬ ಕೊಯ್ವ ವನ ಪಶು ಕಜುವ ಮೆಟ್ಟಿದಡೆ ಗೂಳಿಯಂ ಸದೆವವನ ಸೂಳೆ ಮೊಜಿ ಯಿಟ್ಟಡೂರಗುಸೆಯಂ ಮುಜಿವವನ ನಗೆಯ ಕತೆಯಂ ಕಾಣಲಾದು ದಿಂದು (ಹಚಕಾ. ೨–೨೬) ; ಊರಗುಸೆಯ ನಡುವಿಹ ವೃಕ್ಷಫಲ ವಿಷ ಮಯಮೆನಲ್ (ಯೋಗಾಂವಿ. ೪–೩೦). **ಊರಗಸೆ** : "ಪುರದ್ವಾರ" (ಜಾನಕೋ. ೨೩). [ಊರ್ + ಅಗುಸೆ]

**ಊರಗೂಢ** (ನಾ). ಊರಿನ ಮುಖ ; ಈಗಳೆ ಗೃಹಕ್ಕೆ ನೀಂ ಪೋಪಾ ಗಳ್ ದೀಟ್ಟಿರ್ಕುಮೂರಗೂಢಂ [ಪಾಠಾಂ. ಉರುಗುರಂ] ನಿನ್ನ ಶಿರೋ ಭಾಗದೊಳದು ದಿ ಟ ಮಾ ದೊ ಡ ನಾ ಗ ತ ಮ ೦ ನಂಬು (ಜೀವಸಂ. ೧೩೩–೨೯ ವ). [ಊರ್ + ಗೂಢ]

**ಊರಟೆ** (ನಾ). ೧. "ರೋಗದ ಇಳಿತರ ; ಸುಖದ ಸುಳಿಗೆ" (ನಾನಾಶ. ೪೦). ೨. "ಆದಾಯ ; ಲಾಭ ; ಪ್ರಯೋಜನ" (ನಾನಾಶ. ೪೦) ; ಅರಮನೇ ವೆಚ್ಚವನ್ನು ಕಡಿಮೆಮಾಡಿ ದೊರೆಗೆ ಊರಟೆ ಮಾಡುತ್ತೇನೆಂದು ನಟಿಸುತ್ತಾ ಇದ್ದ ಈ ಶಾಸ್ತ್ರಿಯು (ಮಾಮರಾ. ೯). ೩. "ಸಹಾಯ ; ಕೈನೆರವು" (ನಾನಾಶ. ೪೦). [?]

**ಊರಡಿ₁** (ನಾ). ತೊಡೆಯ ಕೆಳಭಾಗ : ಕೂರುಗುರ್ಗೊನೆ [ಪಾಠಾಂ. ಗರ್ಲೆ, ಮೊ ರ್ನೆ]ಗಳನೋರಣಮಾಗಿರೆ ಮಾರಗೃಹದ ಮೇಲೆಳೆದಪ್ಪು ಊರಡಿಯಂ [ಪಾಠಾಂ. ಊರೆಡೆಯೊಳ್, ಪೊರೆಡೆಯ] ನಿಜಾ [ಪಾಠಾಂ. ನಿರಿಸಿ] ಸಾರದವೊಲ್ ಸೀತ್ಕಾರಂ ಮ್ಮಾಟ್ಪುದು ರತಿಯಾ (ಜನವ. ೬–೨೧).
[ಊರು₄ + ಅಡಿ₁]

**ಊರಡಿ₂** (ನಾ). ಊರಿನವರು ನಿಗದಿ ಮಾಡಿರುವ ಅಳತೆ : ಧರೆ ಯೊಳೂರಡಿಯಾದ ಕೊಳಗದ ಸರಿಯ ಸೊಲ್ಲಿಗೆ ಸಲ್ಲದಿಪ್ಪುದೆ ಪರಿಮಿತಾ ಕ್ಷರತತಿಯೊಳಪರಿಮಿತಾರ್ಥ ರಚನೆಯ ಲಿ ವಿರಚಿಸುವುದಮ ಕವಿಯ ಚತುರತೆ (ಬಸವು. ೧–೨೨). [ಊರ್ + ಅಡಿ₁]

**ಊರಡಿಕೆ**, ಉರಡಿಕೆ (ನಾ). ಊರಗೌಡಿಕೆ (?) : ಸರ್ವಬಾಧ ಪರಿ ಹಾರ ಶ್ರೀಮಾನ್ಯವಾಗಿ ದೇವರಿಗೆ ಊರಡಿಕೆಯಂ ಕೊಟ್ಟರು (ಸೌಇಇ. XV, ೧೫೯–೫೦ ; 1213). **ಉರಡಿಕೆ** : ಅ ಗದುಗಿನ ಉರಡಿ[ಕೆಯ] ಪ್ರಭುತ್ವಕ್ಕೆ ಶ್ರೀಮಾನ್ಯವಾಗಿ ಬಡಗಣ ಭೂಮಿಯಲ್ಲಿ ಕೊಟ್ಟಕೆ[ಯಿ] (ಸೌಇಇ. XV, ೧೫೯–೩೯ ; 1213). [?]

**ಊರಡೆಯ** 'ಊರೊಡೆಯ' ನೋ.

**ಊರಡೆವಾಳ** (ನಾ). ಒಂದು ಪ್ರದೇಶದ ಹೆಸರು : ಧಾರೆಗೊಂಡ ಕೆಯಿಮತ್ತರು ಮೂಜು ಊರಡೆವಾಳ ಮೊ ದ ಲ ಹಸುಗೆ ಉಂಡಿಗೆ ಮತ್ತರು ನಾಲ್ಕು (ಸೌಇಇ. IX–i, ೩೩೩–೫೦ ; 1215). [?]

**ಊರಪ್ಪ** (ನಾ). ಊರಿನ ಅಪ್ಪ ; ಯಜಮಾನ ; ಗೌಡ : ಊರಪ್ಪನ ಎತ್ತು ಮಾರಪ್ಪನ ಗೋಣಿ (ಗಾದೆ). [ಊರು₃ (< ಊರ್) + ಅಪ್ಪ₁]

**ಊರಬಸವಿ** 'ಊರುಬಸವಿ' ನೋ.

**ಊರವಂಕೆ** (ನಾ). ಊರಮಗ್ಗುಲು, —ಪಕ್ಕ : ಊರವಂಕದ ಹೊರ ಗಿರ್ದು ಮನೆಯ ಬಾಗಿಲ ಕಾಣೆನೆಂದು ಅರಸುವವನಂತೆ (ಚಿತ್ರಪಾ. ೧ ಉಪೋ). [ಊರ್ + ವಂಕ]

**ಊರವ್ಯ** (ನಾ). ೧. ತೊಡೆಗೆ ಸಂಬಂಧಿಸಿದ್ದು. ೨. ವೈಶ್ಯ : "ಆರ್ಯಾಃ . . . ಊರವ್ಯಾಃ, ವಿಶಃ – ಈ ೫ ವೈಶ್ಯಂ" (ಹಲಾಯು. ೯೩–೪೧೬).
[ಸಂ.]

**ಊರೆಱಿಕೆ** (ನಾ). ಊರಿಗೆಲ್ಲಾ ತಿಳಿದಿರುವುದು : ಊರೆಱಿಕೆಯ ಕೊಲೆ ಪರಿದು ಪೋಪುದೆ ಮಾಗಾರದೊಳಗೆ ಕಾಲ್ಪಿಡಿಯೆ ? ಆರಾಮನ ಮಱೆಗೊಲೆಯ ಕೊಲಿಸಲದನಾರು ಮೆಚ್ಚುವರೆಲೆಯೊಳಗೆ (ಕುರಾಸಾಂ. ೩೫-೫೨). [ಊರ್ + ಅಱಿಕೆ]

**ಊರೆಱು** (ಕ್ರಿ). ೧. ಊರು ಹಾಳಾಗು. ೨. ಊರನ್ನು ಹಾಳು ಮಾಡು, —ನಾಶಪಡಿಸು : ಮಹಾರಾಜರಾ ಸಮಸ್ತ ಬಲಮುಂ ನೆರೆದು ವನ್ದು ಊರೆಱು ಎಱಿದಲ್ಲಿ ಸಾವುಗವರ್ ನೊಱಿಯೊಂಮ್ಬ ಗಾಮುಣ್ಡಮ್ ಮಗನ್ ಶ್ರೀಮೆಯಿ ಪಗರನೆಱಿದು ಸಗಲಯ ಪೋಕನ್ (ಎಕ. X (s), ಚಿಂತಾಮ. ೧೮೬-೫ ; 800) ; ಶ್ರೀಮಾವಲಿವಣರಸರ್ ಪ್ರಿಥುವೀರಾಜ್ಯಱ್ಗಿಯೆ ಮಿಸ್ಸಿಮುದುನ್ದ ಕುಱುಂಜಿಯಳ ಊರೆಱು ಕೊಲ್ವಲ್ಲಿ (ಸೌಇಇ. IX-i, ೩-೭ ; 9ನೆಯ ಶತ) ; ಬೆಣ್ಣವಳಿ ಜನ್ನೆಗುರುಗಳ ಪೂರಱಿದು ಹುಯಲ ಹರಿದು ಕಾದಿ ತಳ್ತಿಱಿದು (ಎಕ. VII, ಶಿವಮೊ. ೬೧-೧೩ ; 1287). [ಊರ್ + ಅಱು₁]

**ಊರೆಱುವು** (ನಾ). ಊರಿನ ನಾಶ, —ಸೂರೆ : ಮಟ್ಟವುರಾ ಊರೆಱುವಿನೊಳ್ (ಎಇ. VI, ೧೬೧-೩ ; 765) ; ಗೊಟ್ಟಿಯಣ್ಣ ಗಾವುಣ್ಡನೂರೆಱುವಿನೊಳ್ ಕಾದಿ ಸತ್ತು (ಎಕ. IX, ಚನ್ನಪ. ೧೫೮-೫ ; 907) ; ತುಱು[ಗಳವೊಳ್] ಪೆಣ್ಬುಯ್ಯಲೊಳಱುವೆಸದೊಳ್ಳಂಟೆನೆಡಱೊಳೂರೆಱುವಿನೊಳಂ ತಱಿಸಂದು ಗಂಡುತನಮನೆ ನೆಱಪದವಂ ಗಂಡನಲ್ಲನೆಂತುಂ ಷಂಡಂ (ಗದಾಯು. ೨-೨೪) ; ನೊಣಂಬಗಾಮುಣ್ಡ ಬಲ್ಲದ ಊರೆಱುವಿನೊಳ್ ಕಾದಿ ಸತ್ತು (ಎಕ. X, ಮುಳಬಾ. ೯೧-೭ ; 1007) ; ರಾಜಯನ ಮಗ ಮಾಚ ತಾಯುಡೆಯುಚ್ಚುಗವಲ್ಲಿ ಊರೆಱುವಿನ ತುಱುಗೊಳಲು ಮೂದಲಿಸಿ ಸತ್ತ ಮಾಚಯ್ಯನು (ಮೈಆರಿ. ೧೯೩೯, ೩೬-೫ ; 1034). [ಊರ್ + ಅಱುವು]

**ಊರಾಣೆ** (ನಾ). ಒಂದು ತೆರಿಗೆ (?): ಆಣೆಕುಡಿ ಊರಾಣೆ ಕಾಳು ಬೀಯ (ಸೌಇಎ. ೧೯೩೧, ಕುಂದಾಪು. ೩೫೭-೧೯ ; 1379 ?). [ಊರ್ ? + ಆಣೆ ?]

**ಊರಾನೆ** (ನಾ). ಹಂದಿ ; ಸೂಕರ : ನೀಂ ಕಾಡಾನೆಯಲ್ತು ನಿಣಗೊರ್ವಿನೂರಾನೆಯಕ್ಕುಂ (ರಾಮಾಶ್ವ. ೯೨-೨೯). [ಊರ್ + ಆನೆ₁]

**ಊರಾವು** (ನಾ). ಊರಹಸು : ಕಾಡೆಮ್ಮೆಯುಮೊರೆಮ್ಮೆಯುಂ ಕಾಟ್ಬಲಸುಂ ಊರಪಲಸುಂ ಕಾಡಾವುಮೂರಾವುಂ (ಧರ್ಮಾಮೃ ೯-೬೮). [ಊರ್ + ಆವು]

**ಊರಾಸೆ** (ನಾ). ಊರಿನ ಮೇಲೆ ಆಸೆ, —ಪ್ರೀತಿ : ಒಕ್ಕಲಿಗೆ ಊರಾಸೆ ಮಕ್ಕಳಿಗೆ ಮನೆಯಾಸೆ ಜಕ್ಕವಕ್ಕಿಗೆ ಕೊಳದಾಸೆ ಸೂಳೆಗೆ ರೊಕ್ಕದ ಆಸೆ (ಸರ್ವಜ್ಞ. ೧೯೦೮). [ಊರ್ + ಆಸೆ₁]

**ಊರಾಳ್₁** (ಕ್ರಿ). ಊರನ್ನು ಆಳು ; ಅಧಿಪತ್ಯ ನಡಸು : ನಾಡಾಳ್ವೋನಾನುಂ ಊರಾಳ್ವೋನಾನುಂ ಊರಾ ಒಕ್ಕಲಸುಂ ಅಱಿದೋರ್ಪ್ಪರ್ಣ್ಣಮಹಾಪಾತಕ ಸಂಯುತ್ತರ್ (ಎಕ. VI, ಚಿಕ್ಕಮ. ೯೨-೬ ; 750 ?) ; ಅಬ್ಬೆ ಊರಾಳೆ ಮುದುಗಾರ ತೊಣ್ಣನ್ದರ ಮಗನಂ (ಸೌಇಇ. XX, ೧೦-೨ ; ?). [ಊರ್ + ಆಳ್₁]

**ಊರಾಳ್₂, ಊರಾಳು** (ನಾ). ಊರಿನ ಮುಖ್ಯಸ್ಥ : ಊರಾಳ ಬಲ್ಲಾಳ ಪೆರ್ಗಡೆ . . . ಮುಂತಪ್ಪ ನಾಡೊಡೆಯರ್ (ರಾಮಾಶ್ವ. ೫೧-೧೩). **ಊರಾಳು** : ಧಾರಾಳಕ್ಯೋಸ್ಕರ ದಂಡಣೆಯಾದರೆ ಊರಾಳು ಏನ್ ಮಾಡ್ತಾರು (ಗಾದೆ). [ಊರ್ + ಆಳ್₃]

**ಊರಾಳಿ** (ನಾ). ಊರಿನ ಪ್ರಮುಖ, —ಒಡೆಯ (?) : ನೂಱು ಇರ್ಪ್ಪದಿನ್ವರು ಊರಾಳಿಗಳು ಅನಿತ್ತಱು (ಸೌಇಇ. XV, ೪೬೩-೨ ; 900) ; ಊರಾಳಿಗಱುಗಣ್ಣುಗ ಮಣ್ಣು ಪಱಮಯ ತಾಱಿ ಮೆಚ್ಚಿದ ಮಣ್ಣು ಟ್ಕಿ ಸಾಮ್ಯಮ್ (ಎಕ. V, ಚನ್ನರಾ. ೨೫೧-೯ ; 925) ; ತನ್ನ ಕಯ್ಯರನಾಡ ನೆಕುನ್ದಿ ನಾಡ ಊರಾಳಿಯ ದೇವಭೋಗ (ಎಕ. IX, ಹೊಸಕೋ. ೩೭-೧೪ ; 950). [ಊರ್ + ಆಳ್₃ + -ಇ₂. / ತಮಿ. ಊರಾಳಿ]

**ಊರಾಳಿಸು** (ಕ್ರಿ). ಊರನ್ನು ಆಳುವಂತೆ ಮಾಡು ; ಗ್ರಾಮಾಧಿಪತ್ಯ ನಡಸು : ಮುನ್ದಿಱುವೋನೀಕ್ರಮವನೂರಾಳಿಸುವೊನ್ (ಎಕ. III, ಮಂಡ್ಯ. ೧೪-೧೨ ; 907). [ಊರಾಳ್₁ + -ಇಸು₄]

**ಊರಾಳು** 'ಊರಾಳ್₂' ನೋ.

**ಊರಿಗೆ** 'ಪೂರಿಗೆ' ನೋ.

**ಊರಿಚ** (ನಾ). ೧. ಊರಿನಲ್ಲಿ ಹುಟ್ಟಿದವನು : ಬಂದರೂರಿಚರೆಂದು ಭಯವೆತ್ತು ನಿಂದಿಸುತೆ ಮಂದಗಮನವನಾಗಿಪಂಗನಾಲೋಕದೊಡಬಂದಮಂ ನಿರ್ಮಿಸಿದ ವಿಧಿಯನಿರದತ್ರಿತ್ತಮೋಡಿದರ್ ಕಾಳ್ವೆಣ್ಣಳು (ಶೀಪರಾ. ೧೯೨-೧೨). ೨. ದಡ್ಡ ; ಮೂಢ ; ಗಾವಿಲ : ಮೊಲೆಯಂ ನಿನಗಬ್ಬೆಯಕ್ಕಟಾ ಕುಡಳೆಯದೇಕೆ ಬಿಕ್ಕಿ ಬಿರಿದಟ್ಟಪೆಯೆಂದನದೊರ್ವನೂ[ಪಾಡಾಂ. ಮಾ]ರಿಚಂ (ಲೀಲಾವ. ೨-೧೨೦) ; ಬಾಡಿ ಸುರತಾಂತದೊಳಕ್ಷಿಗಳಂ ಮುಗುಳ್ಚೆ ಪಟ್ಟಿರೆ ಪರಮಾಯು ಶೀವಿತಿವಳ್ಗೆಂದಿರದೋಡಿದನೊರ್ವನೂರಿಚಂ (ರಾಜಶೇ. ೧೧-೧೪೪). [ಊರ್ + -ಇಚ]

**ಊರಿಸು₁** 'ಊಱಿಸು₁' ನೋ.

**ಊರಿಸು₂** (ಕ್ರಿ). ಸ್ರವಿಸುವಂತೆ ಮಾಡು ; ನೆನೆಯಿಸು ; ಒದ್ದೆಯಾಗಿಸು : ಊಟದ ನೋಟವೇ ಬಾಯಲ್ಲಿ ನೀರೂರಿಸುತ್ತದೆ (ರೂಢಿ). [ಊರು₂ (< ಊಱು₂) + -ಇಸು₃]

**ಊರೀಕೃತ** (ಗು). ಒಪ್ಪಿದ ; ಸಮ್ಮತಿಸಿದ ; ಅಂಗೀಕರಿಸಿದ ; "ಒಪ್ಪಿಕೊಳ್ಳಲ್ಪಟ್ಟ" (ಅಮರ. ಟೀಕೆ). [ಸಂ.]

**ಊರು₁** 'ಊಱು₁' ನೋ.

**ಊರು₂** 'ಊಱು₂' ನೋ.

**ಊರು₃** 'ಊರ್' ನೋ.

**ಊರು₄** (ನಾ). ತೊಡೆ : "ಊರುಃ, ಸಕ್ಥಿ, ಪಿಚಂಡಂ—ಈ ೩ ಪೆರ್ದೊಡೆ" (ಹಲಾಯು. ೮೫-೩೬೧) ; "ತೊಡೆಯೆನಲೂರು" (ಕಶಿರ. ೧೨೪) ; ಗದಾಘಾತದಿಂದೂರುಯುಗ್ಮಂ ಮುಱಿದೆತ್ತಂ ನುಚ್ಚುನೂಱಾಗಿರೆ (ಪಂಪಭಾ. ೧೩-೯೬) ; ಊರುಗಳನುಡಿವೆನೊದೆವೆಂ ಕೌರವ ಪರಿಬೃಢನ ಮಕುಟಮಂ (ಗದಾಯು. ೧-೬೦) ; ಸಂಧಿಯ ಮಾಡಿ ಮುರರಿಪು ಕೊಡಿಸು ಸಾಕೈದೂರನಿವರಿಗೆ ತಡೆಯದಾನೆರಡೂರ ಕೊಂಬೆನು ಕೌರವೇಂದ್ರನಲಿ (ಕುಮ್ವಾಭಾ. ೬-೩೦). [ಸಂ.]

**ಊರುಂಬಳಿ** (ನಾ). ಉಂಬಳಿಯಾಗಿ ಕೊಟ್ಟ ಊರು ; ಊರನ್ನು ದಾನವಾಗಿ ಕೊಡುವುದು ; ಜಹಗೀರು ; ಮಾನ್ಯ : ಊರುಂಬಳಿ ಗಜಾಶ್ವಗೋವೃಂದಧನಯುವತಿಯರ್ ಮೊದಲಾದ ಸಕಲವಸ್ತುಗಳನಿತ್ತಪೆನೆಂದನು (ಜೈಮಿಭಾ. ೭-೩೦) ; ಊರ್ವರಂದಿಯಂ ತಂದವಂಗೂರುಂಬಳಿಯನೀವರ್ (ಚಿಕವಂ. ೮-೧೬). [ಊರ್ + ಉಂಬಳಿ]

**ಊರುಕೆ** (ನಾ). ತೊಡೆ (?) : ಯುಗಸಂಧಿಯ ಕೆಳಗಂ ನೀಂ ಬಗೆ ಶಕ್ತಿ ಶಿವನಿಯೆನೆ ಪೆಸರಾಪಾಂಡುಂ ಪಿ[೦]ಡಗಲದ ಕೆಳಗದು ಮತ್ತಂ ಬಗೆಯೂರುಕವದೆ(ಮೆ)ಂಬ ಪೆಸರೆ ತುರಗಾ[ಗ]ಮದೊಳ್ (ಅಶ್ವಶಾ. ೯-೫೩) ; ಅಪಾಂಡು ಪಿಂಡಿಯ ಕೆಳಗೆ ಊರು(ಕ)ವೆಂಬ ಪೆಸರಕ್ಕುಂ ಊರುವಿನ ಕಣದೆಡೆಗೆ ಉಪಾಂಡು[ತ]ಪಿಂಡಮೆಂಬ ಪೆಸರಕ್ಕುಂ (ಅಶ್ವಶಾ. ವ. ೮೯-೨೧). [ಸಂ.]

**ಊರುಕಟ್ಟೆ** (ನಾ). ಊರಮುಂದಿರುವ ಕಟ್ಟೆ, —ಜಗಲಿ (ಕ). [ಊರು₃ (< ಊರ್) + ಕಟ್ಟೆ₁]

**ಊರುಕೇರಿ** (ನಾ). ೧. ಊರಿನ ಬೀದಿ, —ರಸ್ತೆ. ೨. ಊರು ಮತ್ತು ಬೀದಿ: ಅವನ ಊರುಕೇರಿ ಯಾವುದೂ ಯಾರಿಗೂ ಗೊತ್ತಿರಲಿಲ್ಲ (ಬಂಕಿಮು. ೬೨). [ಊರು$_3$ (< ಊರ್) + ಕೇರಿ]

**ಊರುಕೊಡಗೆ** (ನಾ). ೧. ಊರಿನವರು ಕೊಡುವ ಕೊಡುಗೆ. ೨. ಊರನ್ನು ದಾನವಾಗಿ ಕೊಡುವುದು: ಮಾಚಿಗವುಡಗೆ ಊರು ಕೊಡಗೆ (ಎಕ. IX, ಬೆಂಗಳೂ. ೬೩–೮; 1332). [ಊರು$_3$ (< ಊರ್) + ಕೊಡಗೆ (< ಕೊಡುಗೆ)]

**ಊರುಕೋಲು** 'ಊಱುಂಗೋಲು' ನೋ.

**ಊರುಗ** (ನಾ). ೧. ಊರಿನಲ್ಲಿರುವವನು: ವಟಪತ್ರತಲ್ಪನ ಮೊಮ್ಮನೆಂದಸುರರ ಘಟ ಬಿದ್ದುದೆಂದರೂರುಗರು (ಮೋಹತ. ೩೪–೧೨); ದಾರಿಗರೂರುಗರ್ನಾಡುಗರಿಹ ಪರಿವಾರ ವಿದ್ವಾಂಸರು ನೃಪರು ... ಗೋಳಿಟ್ಟರಾ ಮಾರನಗ್ರಜ ಮುಕ್ತಿಗೈದೆ (ಭರಚ. ೭೮–೧೦೩); ಊರುಗರ್ಗೆ ಕವಲ್ನಂಬುಗೆಯನಿತ್ತು (ಚಿಕವಂ. ೫೩–೧೭). ೨. ಅಸಂಸ್ಕೃತ; ದಡ್ಡ; ಮೂಢ: "ಗ್ರಾಮೀಣಃ, ಗ್ರಾಮ್ಯಃ, ಗ್ರಾಮೇಯಕಃ – ಈ ೩ ಊರುಗಂ" (ಹಲಾಯು. ೪೩–೧೦೩); ಊರುಗರಾದ ಮೂವರನದೇಂ ಬಿದಿ ಪೆತ್ತನೋ ಭೂಮಿಭಾರರಾ (ಶಮಪಾಂ. ೮೨); ಊರುಗರಲಾ ಮಾದ್ರದೇಶದ ಭೂರಿದುರಿತರು (ಕುವ್ಯಾಕ. ೯–೧೯).

**ಊರುಗರನುಡಿ, ಊರುಗರಮಾತು** = ಮಂದಿಯ ಮಾತು; ಅಸಭ್ಯರ ನುಡಿ: "ಊರುಗರ ನುಡಿ ಅಶ್ಲೀಲವೆಂಬುದು" (ಹಲಾಯು. ೨೩–೧೪೧); "ಊರುಗರ ಮಾತದಶ್ಲೀಲಮೆಂದೆನಿಕ್ಕುಂ" (ಮಂಗರಾ. ೨೬–೨). [ಊರು$_3$ (< ಊರ್) + –ಗ$_3$]

**ಊರುಗಂಬ** (ನಾ). ೧. ಆಸರೆಗಾಗಿ ನಟ್ಟ ಕಂಬ: ದ್ರಾಕ್ಷಿಯ ತೋಟದಲ್ಲಿ ತೋಟಗಾರನು ಊರುಗಂಬಗಳನ್ನು ನೆಟ್ಟು ಗಿಡಕ್ಕೆ ಆಶ್ರಯ ಕೊಡುತ್ತಾನೆ (ನಿಬಂಧ. II, ೧೦). ೨. (ಅಲಂ) ಆಸರೆ; ಆಧಾರ: ವೈಷ್ಣವಮತಸಂಪ್ರದಾಯಕ್ಕೆ ಊರುಗಂಬಗಳಾಗಿ ನಿಂತವರು ಈ ಮೂವರು ಪಂಡಿತ ವಿದ್ವಾಂಸ ಭಕ್ತರು (ಭಾರದ. ೨೯೦). [ಊರು$_1$ (< ಊಱು$_1$) + ಕಂಬ$_1$]

**ಊರುಗಲಿ** 'ಊರ್ಗಲಿ' ನೋ.

**ಊರುಗಳ್ಳ** (ನಾ). ೧. ಊರಿನ ಕಳ್ಳ. ೨. ಇಡಿ ಊರನ್ನೇ ಕದಿಯುವವನು: ದ್ವಾರಾವತಿಯನ್ನು ನೀರೊಳು ಬಚ್ಚಿಟ್ಟು ಊರುಗಳ್ಳ ಬಂದ ಕೊಕೊಕೊ ಎನ್ನಿರೊ (ಕನಕ. ೨೦೧–೫). [ಊರು$_3$ (< ಊರ್) + ಕಳ್ಳ$_1$]

**ಊರುಗಾಯಿ, ಊರಗಾಯಿ** (ನಾ). ಉಪ್ಪಿನಕಾಯಿ: ಈಗಾ ಆ ಊರ್ನೆಕೊಡಿ, ತಾಲ್ಲೋಕೆ ಕೊಡೀಂದ್ರೆ, ಈ ಹಳ್ಳೀನೆ ಕೊಡೀಂದ್ರೆ ಯಾರಿಗೂ ಹೊಟ್ಟೇಲಿ ಊರುಗಾಯಿ ಸುರಿದ ಹಾಗೆ ಆಗೋ ಮಾತೆ (ವೈದ್ಯವಿ.೬೧). **ಊರಗಾಯಿ**: "ಅನ್ನ, ಸಾರು ... ಅಪ್ಪಳ, ವಡಾನೂ ಕರಿ ಊರಗಾಯಿ–ಹೂಹೂ ಬೇಗ" ಎಂದರು (ಕಲನೆ. ೨೯೬). [ಊರು$_2$ (<ಊಱು$_2$) + ಕಾಯಿ$_4$ (< ಕಾಯ್$_4$). / ತಮಿ. ಊಱುಗಾಯ್; ತೆಲು. ಊರುಗಾಯಿ]

**ಊರುಗುಬ್ಬಿ** (ನಾ). ಊರಿನ ಗುಬ್ಬಿ: "ಕಲವಿಂಕಃ – ಊರುಗುಬ್ಬಿ" (ಓಷಧಿ. ೨೪). [ಊರು$_3$ (< ಊರ್) + ಗುಬ್ಬಿ]

**ಊರುಗೆಡಿಸು** (ಕ್ರಿ). ಊರನ್ನು ಕೆಡಿಸು, —ಹಾಳುಮಾಡು, —ನಾಶಪಡಿಸು: ಊರುಗೆಡಿಸಿದ ಕುಮುದಮ್ಮೆಂದನ ಕಾರಿದನು ತನಿಗರುಳ ಪನಸನು ಹೇಱಿದನು ಹದಿನೆಂಟು ಶರದಲಿ ಶರಭ ಶತಬಲಿಯ (ಕೌಶಿರಾ. ೨೭–೯). [ಊರು$_3$ (< ಊರ್) + ಕೆಡಿಸು]

**ಊರುಗೋಲು** 'ಊಱುಂಗೋಲು' ನೋ.

**ಊರುಜ** (ನಾ). (ಭಗವಂತನ) ತೊಡೆಯಿಂದ ಹುಟ್ಟಿದವನು; ವೈಶ್ಯ. 'ಊರುಜವೃತ್ತಿ' ಪರಾ. [ಸಂ.]

**ಊರುಜವೃತ್ತಿ** (ನಾ). ವೈಶ್ಯವೃತ್ತಿ: ಕ್ಷತ್ರಿಯಗೂರುಜವೃತ್ತಿಯುಚಿತಮಕ್ಕುಂ (ವಿಷ್ಣುಪು. ೧೧–೭೦). [ಊರುಜ + ವೃತ್ತಿ$_1$]

**ಊರುಟ್ಟಿಗೆ** (ನಾ). ಒಂದು ತೆರಿಗೆ: ಮನದೆಱಿ ಮದುವೆದೆಱಿ ಊರುಟ್ಟಿಗೆ ... ಯಿವೊಳಗಾಗಿ (ಮೈಆರಿ. ೧೯೩೨; ೧೬–೨೯; 1069). [ಊರು$_3$ (< ಊರ್) + ಉಟ್ಟಿಗೆ ?]

**ಊರುತನ** (ನಾ). ಊರಿಗೆ ಸಂಬಂಧಿಸಿದುದು (?): ಹುಲಸಾರರು ಹೊಲೆಯರಂತೆ ಊರುತನದ ಕೆಲಸಗಳನ್ನು ಮಾಡುವುದಲ್ಲದೆ ಬಿದಿರಿನ ಬುಟ್ಟಿಗಳನ್ನು ಹೆಣೆದು ಮಾರುವರು (ಕಭಾಗೆ. ೨೨೪); ಇವರಲ್ಲದೆ ಜೋಯಿಸ, ಸೊನ್ನೆಗಾರ, ನಾಡಿಗ, ಅಗಸ ಮುಂತಾದ ೧೨ ಜನ ಬಲೂತಿದಾರರು ಊರುತನದ ಕೆಲಸಕ್ಕೆ ಪೂರ್ವದಲ್ಲಿ ಸಹಾಯ ಮಾಡುತ್ತಿದ್ದರು (ಕಭಾಗೆ. ೩೭೬). [ಊರು$_3$ (< ಊರ್) + –ತನ]

**ಊರುದಂಡ** (ನಾ). ಊರುವ ಕೋಲು; ಊರುಗೋಲು: ಹೊರಳಾಡುತಿರುಳನು ಕಳೆದಿವಳಿದ್ದಳು ಪಿಡಿದಾಸೆಯೂರುದಂಡವನು (ಚಂದ್ರವೀ. ೧೧೫–೭೦). [ಊರು$_1$ (< ಊಱು$_1$) + ದಂಡ]

**ಊರುದಘ್ನ** (ಗು). ತೊಡೆ ಮುಳುಗುವಷ್ಟು (ನೀರಿನ) ಮಟ್ಟವುಳ್ಳ: ಪೆಣ್ಬಡೆ ನಿಂದುದು ಪೊಕ್ಕು ಜಾನುದಘ್ನೋರುದಘ್ನಕಟಿದಘ್ನನಾಭಿದಘ್ನಸ್ಥಳದೊಳ್ (ಜಗವಿ. ೧೪–೯೫). [ಸಂ.]

**ಊರುದೇವಮ್ಮ** (ನಾ). ಊರಿನ ದೇವತೆ; ಗ್ರಾಮದೇವತೆ (ಕ). [ಊರು$_3$ (< ಊರ್) + ದೇವಮ್ಮ]

**ಊರುದೊರೆ** (ನಾ). ಊರಿನದೊರೆ; ಯಜಮಾನ; ಗೌಡ: 'ಊರುದೊರೆ' ಶಾಂತಪ್ಪನಾಯಕರಿಗೆ ... ಗೊತ್ತಾಗದಿದ್ದೀತೆ? (ಬೆಳುಮು. ೭೪). [ಊರು$_3$ (< ಊರ್) + ದೊರೆ$_3$]

**ಊರುದ್ವಯಸ** (ಗು). = ಊರುದಘ್ನ: ಲಾವಣ್ಯರಸಂ ತೆಕ್ಕನೆ ತೀವಿದ ತಿಳಿಗೊಳದ ಪಯಸಮೂರುದ್ವಯಸಂ (ಅನಂಪು. ೭–೩೫). [ಸಂ.]

**ಊರುಧನಿ** (ನಾ). = ಊರುದೊರೆ: ಕುಂದಾಪುರಗ್ರಾಮದ ಒಳಗಣ ಹಂಗರು ಅಧಿವಾಸದ ಊರುಧನಿಯರ ಜನ ೨ ಎರಡು (ಸೌಇಇ. IX–ii, ೪೩೦–೧೫; 1406). [ಊರು$_3$ (< ಊರ್) + ಧನಿ]

**ಊರುನರಿ** (ನಾ). ೧. ಊರಿನಲ್ಲಿ ಸೇರಿಕೊಂಡಿರುವ ನರಿ. ೨. (ಅಲಂ) ಕುತಂತ್ರಿ; ಮೋಸಗಾರ; "ಕುತಂತ್ರಿ" (ರಮಾಕಾಂ). [ಊರು$_3$ (< ಊರ್) + ನರಿ]

**ಊರುಪರ್ವ** (ನಾ). ಮೊಣಕಾಲು; ಮಂಡಿ (ಕ). [ಊರು$_4$ + ಪರ್ವ]

**ಊರುಬಸವಿ, ಊರಬಸವಿ** (ನಾ). ೧. ದೇವರಿಗೆ ಮೀಸಲಾಗಿ ಬಿಟ್ಟ ಹೆಣ್ಣು: ಎಲ್ಲಮ್ಮನ ಊರುಬಸವಿ (ರೂಢಿ). ೨. ಸೂಳೆ; ಜಾರೆ: ಊರುಬಸವಿಗೆ ಇವನು ತಾಳಿಕಟ್ಟಿದನಂತೆ (ತುಂಗಭ. ೫೩). **ಊರಬಸವಿ**: ಈ ಊರಬಸವಿಗೇಕೆ ಇಷ್ಟು ಮಾನ (ಹುಚ್ಚಾಟ. ೬೬); ಇದ್ದೋಳೊಬ್ಬಳು ಮಗಳು ಊರಬಸವಿಯಾದಳು (ಗಾದೆ). [ಊರು$_3$ (< ಊರ್) + ಬಸವಿ]

**ಊರುಬಾಗಿಲು** (ನಾ). ಊರಿನ ಹೆಬ್ಬಾಗಿಲು, —ಮಹಾದ್ವಾರ: "ಗೋಪುರಂ ... ಊರುಬಾಗಿಲು" (ಸಿದ್ಧಾಂತಿ. ೯೨); ಊರು ಮೂರು ಸುತ್ತು ಸುತ್ತಿದರೂ ಊರು ಬಾಗಿಲಲ್ಲಿಯೇ ಹೊರಡಬೇಕು (ಗಾದೆ). [ಊರು$_3$ (< ಊರ್) + ಬಾಗಿಲು (< ಬಾಗಿಲ್)]

**ಊರುಬ್ಬೆ** (ನಾ). ಊರಿಗೆ ಕಷ್ಟ, —ಸಂತಾಪ: ಊರುಬ್ಬೆಯಾದ ತಮ್ಮನಗುರ್ವಿನುರ್ವಿಂಗುಬ್ಬೆಗಂಬಟ್ಟು (ಅರ್ಧನೇ. ೫–೨ ವ). [ಊರು$_3$ (< ಊರ್) + ಉಬ್ಬೆ$_1$]

**ಊರುಭಂಗ** (ನಾ). ತೊಡೆಯನ್ನು ಮುರಿಯುವಿಕೆ : ಭೀಮಕೋಪದೆ ನಿನಗೂರುಭಂಗಭಯಮಾಗದೆ **ಪೋ**ಕುಮೆ ಕೌರವೇಶ್ವರಾ (ಗದಾಯು. ೪-೪೩); ಅತ್ಯಂತ ಶಕಟಭಾರಾಕ್ರಾಂತಿಯಿಂದೂರುಭಂಗಂಗೆಯ್ದು (ಪಂಚತಂ. ೨೩-೧೮); ದುರ್ಯೋಧನನಿಗೆ ಬಲದ ಹುಚ್ಚು ಹಿಡಿದು ಊರು ಭಂಗವಾಯಿತು (ಕಾವ್ಯಸ. ೩). [ಊರು$_4$ + ಭಂಗ]

**ಊರುಮಗ** (ನಾ). ಊರಿನ ಮಗ ; ಸೇವಕ ; ಆಳು : ಹೀಗೆ ಎಲ್ಲರ ಮನೆಯಲ್ಲಿಯೂ ದುಡಿಯುವುದಕ್ಕೆ, ಅದುವೆ ಪ್ರತಿಫಲದ ನಿರೀಕ್ಷಣೆ ಯಿಲ್ಲದೆ ದುಡಿಯಲು, ಹಕ್ಕಿದ್ದುದರಿಂದ ಇವನೆ ನಿಜವಾದ ಊರುಮಗ (ಬೆಳುಮ. ೪). [ಊರು$_3$ (< ಊರ್) + ಮಗ]

**ಊರುಮನೆ** (ನಾ). ಊರಿನ ಪ್ರತಿಯೊಂದು ಮನೆ : ಊರೊಟ್ಟಿನ ಕಾರ್ಯವಾದರೇನು ಊರುಮನೆಯ ಕೆಲಸವಾದರೇನು ? ಇವನು ಮೈಬಗ್ಗಿ ಸಿಯೆ ಮನಬಗ್ಗಿಸಿಯೆ ಮಾಡಿಯಾನು (ಬೆಳುಮ. ೩). [ಊರು$_3$ (< ಊರ್) + ಮನೆ]

**ಊರುಮರ್ಜಿ** (ನಾ). ಊರಿನ ಗೌರವ, —ಮರ್ಯಾದೆ : ಏನಾದರೂ ಆಗಲಿ, ಊರುಮರ್ಜಿನ ಒಳ್ಳೇ ಪಾಡಾಗಿ ಕಾದಿರಿ (ಬೆಳುಮ. ೧೦೦). [ಊರು$_3$ (< ಊರ್) + ಮರ್ಜಿ]

**ಊರುಯುಗ** (ನಾ). ಎರಡು ತೊಡೆ : ಅಲಘುಸುಯೋಧನೋರು ಯುಗಮಂ ಸದೆದು (ಧ್ವನ್ಯಾಲೋ. ೭೨). [ಊರು$_4$ + ಯುಗ]

**ಊರುಯುಗ್ಮ** (ನಾ). = ಊರುಯುಗ : ನೆಜನೀತಂಗೂರುಯುಗ್ಮಂ (ಪಂಪಭಾ. ೧೨-೯೬). [ಊರು$_4$ + ಯುಗ್ಮ]

**ಊರುವಂದಿ** 'ಊರ್ವಂದಿ' ನೋ.

**ಊರುವಿಭಂಗ** (ನಾ). = ಊರುಭಂಗ : ಆನಿಲಸುತ ಸಪ್ರಾಣಿಸಲಿ ರಿಪುಜನಪನೂರುವಿಭಂಗವೇ ಮುನ್ನಿನ ಪ್ರತಿಜ್ಞೆಯಲಾ (ಕುವ್ಯಾಗ. ೭-೪೬). [ಊರು$_4$ + ವಿಭಂಗ]

**ಊರುವಿಶ್ಲೇಷ** (ನಾ). ತೊಡೆಗಳನ್ನು ಬೇರ್ಪಡಿಸುವಿಕೆ, —ಅಗಲಿಸುವಿಕೆ : "ಬಗಟು – ಊರುವಿಶ್ಲೇಷೇ (ಕಾಲುಗಳನ್ನು ಅಗಲಿಸು)" (ಶಮಧಾ). [ಊರು$_4$ + ವಿಶ್ಲೇಷ]

**ಊರುಸಿಂಗ** (ನಾ). ಊರಿನ ಸಿಂಹ ; ನಾಯಿ (ಕ). 'ಗ್ರಾಮಸಿಂಹ' ಪರಾ. [ಊರು$_3$ (< ಊರ್) + ಸಿಂಗ$_1$]

**ಊರುಹಾಕು** (ಕ್ರಿ). ನೆನೆಹಾಕು ; ನೆನೆಯಿಸು : ಬೂರುಗದ ಚಕ್ಕೆ, ಬೂರುಗದ ಎಲೆ ಇವುಗಳನ್ನು ನೀರಿನಲ್ಲಿ ಬೇಯಿಸಿ ಊರುಹಾಕಿ ಕಟ್ಟೆ ನೀರನ್ನು ಚೆಲ್ಲಿ ಜೀರಿಗೆ ಏಲಕ್ಕಿ ಪ್ರತಿಪಾಕವಿಕ್ಕಿ ಅರೆದು ಕೊಡಲು ಛಳಿಜ್ವರ ಬಿಡುವುದು (ಸಕವೈ. ೭೪). [ಊರು$_1$ (<ಊಱು$_1$) + ಹಾಕು (< ಪಾಯ್ಕು$_1$)]

**ಊರುಹಾಗಲಬಳ್ಳಿ** (ನಾ). ಒಂದು ಜಾತಿಯ ಬಳ್ಳಿ (ಕ). [ಊರು$_3$ (< ಊರ್) + ಹಾಗಲ (< ಪಾಗಲ) + ಬಳ್ಳಿ]

**ಊರೂಟ** (ನಾ). ಇಡೀ ಊರಿಗೆಲ್ಲಾ ಹಾಕುವ ಊಟ ; ಭೂರಿ ಭೋಜನ : ಮದುವೆ ಅತಿವಿಜೃಂಭಣೆಯಿಂದ ನಡೆದಿತ್ತು. (ಊರೂಟ), ಧಾರೆಊಟಗಳ ದಿನ ಊರಿನ ಒಂದು ಒಲೆಯೂ ಬೆಂಕಿಯನ್ನು ಕಾಣಲಿಲ್ಲ (ಬೆಳುಮ. ೩೬). [ಊರು$_3$ (< ಊರ್) + ಊಟ]

**ಊರೂಪಗೂಹನ** (ನಾ). [ಕಾಮಶಾ] ಆಲಿಂಗನದಲ್ಲಿ ಒಂದುಬಗೆ ; ತೊಡೆಗಳಿಂದ ಆಲಿಂಗಿಸುವುದು : ಪುಷ್ಕರ . . . ಊರೂಪಗೂಹನ ಲಲಾಟಿಕವೆಂಬ ದ್ವಾದಶವಿಧಾಲಿಂಗನಗಳಿಂ (ವಿವೇಕ. ೨೨೯). [ಸಂ.]

**ಊರೆ** (ನಾ). ಆಶ್ರಯ ; ಆಧಾರ ; ಗಾಂಡೀವದಿಂದ ಮೂರು ಬಾಣಗಳನ್ನು ಅಭಿಮಂತ್ರಿಸಿ ಅವು ದಿಂಬಿನಂತೆ ಊರೆ ನಿಲ್ಲುವ ಹಾಗೆ ಪ್ರಯೋಗ ಮಾಡಿದನು (ವಚಭಾ. ೨೭೬). [< ಊಱು$_1$. / ತುಳು. ಊರೆ]

**ಊರೆಕಟ್ಟು** (ನಾ). "ಕಮಾನು, ಗುಮ್ಮಟ ಮೊದಲಾದುವನ್ನು ಕಟ್ಟುವಾಗ ಅವುಗಳಿಗೆ ತಾತ್ಕಾಲಿಕ ಆಧಾರವಾಗಿ ಉಪಯೋಗಿಸುವ ಚೌಕಟ್ಟು ; ಊರೆಕಟ್ಟು" (Centering. ಇಂಕನಿ). [ಊರೆ + ಕಟ್ಟು$_2$]

**ಊರೆಕೊಡು** 'ಊರೆಗೊಡು' ನೋ.

**ಊರೆಗೊಡು**, ಊರೆಕೊಡು (ಕ್ರಿ). ಆಧಾರಕೊಡು ; ಆಶ್ರಯ ಕೊಡು : ಗಲ್ಲಕೆ ಕೈಬೆರಳೊಂದನು ನೀನೂರೆಗೊಟ್ಟೇಕೆ ನಿಂತೆಯೆ ನೀರೆ (ಇಂಚಾಪ. ೮೫-೧೫). **ಊರೆಕೊಡು** : ತನ್ನ ಮೊಣಕೈಯನ್ನು ಗಲ್ಲಕ್ಕೆ ಊರೆಕೊಟ್ಟು ಕುಳಿತಿದ್ದ ಹೆಣ್ಣುವ್ಯಕ್ತಿ . . . ಎದ್ದು ನಿಂತಳು (ನಡೆದಾ. II, 910). [ಊರೆ + ಕೊಡು]

**ಊರೆಗೋಲು** (ನಾ). ಆಧಾರವಾದ ಕೋಲು, —ಬೆತ್ತ : ಊರೆಗೋಲಿನ ಮೇಲೆಯೇ ಭಾರವಿಟ್ಟು ನಿಂತವನು ಕ್ರಮೇಣ ಆ ಕೋಲನ್ನೇ ಮರೆತ (ರೂಪಸ. ೫) ; ಇಂದಿಗು ಊರೆಗೋಲೆನ್ನ ಈ ಬಾಳಿಗೆ ಅವರಂಥ ಹಿರಿಯರ ಹರಕೆ (ಇಂಚಾಪ. ೩೨-೪೮). [ಊರೆ + ಕೋಲು$_1$ (< ಕೋಲ್$_1$)]

**ಊರೆನಿಲ್ಲಿಸು** (ಕ್ರಿ). ಆಧಾರವಾಗಿ ಕೊಡು ; ಊರೆಯಾಗಿಸು : ಅರಳುತ್ತಿರುವ ಗುಲಾಬಿಯಂತೆ ಇರುವ ಮುಖಗಳನ್ನು ಬಾಗಿಸಿ ಊರೆ ನಿಲ್ಲಿಸಿಕೊಂಡು ನಿಡುಸುಯ್ಯುವರು (ಪಂಯಾತ್ರೆ. ೫೩). [ಊರೆ + ನಿಲ್ಲಿಸು]

**ಊರೆಮ್ಮೆ** (ನಾ). ಮನೆಯಲ್ಲಿ ಸಾಕುವ ಎಮ್ಮೆ : ನೆಲ್ಲುಂ ಪುಲ್ಲುಂ ಕಾಡೆಮ್ಮೆಯುಮೂರೆಮ್ಮೆಯುಂ ಕಾಟ್ಟಿಲಸುಂ ಊರಪಲಸುಂ (ಧರ್ಮಾಮೃ. ೯-೬೮). 'ಕಾಡೆಮ್ಮೆ' ಪರಾ. [ಊರು$_3$ (< ಊರ್) + ಎಮ್ಮೆ (< ಎರ್ಮೆ)]

**ಊರೆಯೆತ್ತಿಗೆ** (ನಾ). ಎತ್ತಿಕೊಡುವ ಊರೆ : "(ಬಂಡಿಯ) ಚಕ್ರವನ್ನು ಚೊಕ್ಕಟಮಾಡುವುದಕ್ಕಾಗಿ ಅಚ್ಚನ್ನು ಮೇಲೆತ್ತಿಹಿಡಿಯುವ ಸಲಕರಣೆ ; ಊರೆಯೆತ್ತಿಗೆ" (Carriage Jack. ಇಂಕನಿ). [ಊರೆ (< ಊಱು$_1$) + ಎತ್ತಿಗೆ]

**ಊರೆಳ್ಳು** (ನಾ). ಬೇಸಾಯಮಾಡಿ ಬೆಳೆಯುವ ಎಳ್ಳು : ಕುಲಹೀನನುಂ ಕುಲಜನುಂ ಸೂಳೆಯುಂ ಸಜ್ಜನಮುಂ ಕಾಡೆಳ್ಳುಮೂರೆಳ್ಳು ಮೆಂತು ಲೋಕದೊಳೊಳವು (ಧರ್ಮಾಮೃ. ೯-೬೮). [ಊರು$_3$ (< ಊರ್) + ಎಳ್ಳು (< ಎಳ್)]

**ಊರೇಱು** (ಕ್ರಿ). ಬೇರೆ ಊರಿಗೆ ಒಕ್ಕಲು ಹೋಗು, —ವಲಸೆ ಹೋಗು : ಅರೆಜಾವಂ ಬೆಸವೋಲೆವಂಗೆ ಪಯಣಂಬೋಪಂಗೆ ತಾನಂದಿ ನೋಱಿರುಳೂಱೇ[ ರೇ ]ಱುವವಂಗೆ . . . ಎಯ್ದೆ ಶಕುನಂ (ಲೋಕೋಪ. ೧೨-೪) ; ಊರೇಱಲ್ ಮನೆಯಂ ಪುಗಲ್ . . . ಒಳ್ಳಿತಥೋವಕ್ತ್ರದೊಳ್ (ಲೋಕೋಪ. ೧-೮) ; "ಬೇಱೂರ್ಗೆ ಒಕ್ಕಲ್ ಪೋಗಲ್" (ಲೋಕೋಪ. ಟೀಕು) ; ಊರೇಱ [ ಪಾಠಾಂ. ರತೆಱ ]ಲ್ ಮನೆಮಾಡಲ್ಕಾರರಬಂಗೆಯ್ಯಲೆಟ್ಟುಗೊಳಲಾಳಾಳಲ್ಕಾರಾಮುಮಿಡಲ್ಕೆಂದುಂ ದಾರುಣ ತಾರೆಗಳನುಟಿಯೆ ಪೆಜವಜೊಳುಚಿತಂ (ಕಾವ್ಯಾವ. ೨೧೫). [ಊರ್ + ಏಱು$_1$]

**ಊರೊಕ್ಕಲು** (ನಾ). ಊರಿನ ಒಕ್ಕಲು, —ಸಂಸಾರಗಳು : ಅಲ್ಲಿ ನೆಲಸಿರುವ ಬಾಣೇಶ್ವರಸ್ವಾಮಿಯ ಸೇವೆಗೆಂದು ನಿಂತಿರುವ ಕೊಂಬಿನವನಿಗೆ ಊರೊಕ್ಕಲು ಒಬ್ಬೊಬ್ಬನೂ ಒಂದು ಕೊಳಗ ಬಿತ್ತುವರಿಗೆ ಒಂದು ಪಡಿ ನೆಲ್ಲನ್ನು ಬಿತ್ತುವಟ್ಟವಾಗಿ ಕೊಡಬೇಕೆಂಬ ಆಣತಿ ಕಳೆದ ವರುಷ ಶಾಸನವಾಯಿತು (ಸವಕಿ. ೧೬೬). [ಊರು$_3$(<ಊರ್) + ಒಕ್ಕಲು (<ಒಕ್ಕಲ್$_2$)]

**ಊರೊಟ್ಟು** (ನಾ). ಇಡೀ ಊರು; ಪೂರ್ತಿ ಊರು; ಊರಿಗೆಲ್ಲ ಸೇರಿದ್ದು: ಊರೊಟ್ಟಿನ ಕಾರ್ಯವಾದರೇನು, ಊರುಮನೆಯ ಕೆಲಸವಾದರೇನು? (ಬೆಳುವ. ೩); ಊರೊಟ್ಟಿಗೆ ಹೊಲದ ಬೇಟೆಗೆ ಹೋಗುವುದೂ ಉಂಟು (ಹುಟ್ಟಿಹ. ೨೭); ಗ್ರಾಮಾಭಿಮಾನದೇವತೆಗಳ ಪ್ರೀತ್ಯರ್ಥವಾಗಿ... ಊರೊಟ್ಟಿನ ಸಾರ್ಟ್ಯೋತ್ಸವ ಇದೆ (ಭಾರದ. ೫೭೦). [ಊರ್ + ಒಟ್ಟು$_2$]

**ಊರೊಡೆಗೇರಿ** (ನಾ). ಗ್ರಾಮಕಾರ್ಯಮಾಡುವ ಊರಿನ ಮುಖ್ಯಸ್ಥರ ಬೀದಿ: ಮನೆಗಳುಮ ಊರೊಡೆಗೇರಿಯ ಶ್ರೀ ಸಿದ್ಧೇಸ್ವರದೇವ[ರ] ಗಡಿಯ ಪತ್ತಿರೆ (ಸೌಇಇ. XX, ೧೧೨–೫೩; 1144). [ಊರೊಡೆಯ ? + ಕೇರಿ]

**ಊರೊಡೆತನ** (ನಾ). ಊರಿನ ಯಜಮಾನಿಕೆ, —ಆಧಿಪತ್ಯ: ನಾರಾಯಣನಾತ್ಮಸಂಭವದ್ಯೆತ್ಯಗಭೀರಮಂತ್ರೀಶನ ಕರೆಸಿ ಊರೊಡೆತನದ ಪಟ್ಟವ ಕಟ್ಟಿ ಪರಮ ವಿಚಾರದ ಬುದ್ಧಿವೇಳಿದನು (ಮೋಹತ. ೧೩–೭). [ಊರ್ + ಒಡೆತನ]

**ಊರೊಡೆದೋಟ** (ನಾ). ಊರೊಡೆತನದ ತೋಟ; ಒಂದು ತೋಟದ ಹೆಸರು (?): ಚೋೞದೋಂಟದಿಂ ಮೂಡಲು ಹಳ್ಳದಿಂ ತೆಂಕಲು ಊರೊಡೆದೋಟ ಕಂಬ ೫೨೦ ಶ್ರೀಮಾನ್ಯ (ಸೌಇಇ. IX–i, ೩೭೧–೩೮; 1258). [ಊರೊಡ್ಡೆ + ತೋಟ (< ತೋಂಟ)]

**ಊರೊಡೆಯ, ಊರಡೆಯ** (ನಾ). ಊರಿನ ಒಡೆಯ, —ಪ್ರಭು, —ಯಜಮಾನ, —ಅಧಿಕಾರಿ, —ಗೌಡ: ಊರೊಡೆಯ ಪಿಟ್ಟಯ್ಯಂ ಕಾಲ್ಗೆಱೆಯೆ (ಇಆ. XII, ೨೫೭–೧೧; 951); ಮೂನೂಱು ಊರೊಡೆಯರ್ಗ್ಗೆ ಮಾನ್ಯದ ಕೆಯ್ಯ ತ್ತ್ರರನ್ನೂಱು (ಎಇ. XX, ೬–೩೧; 1012); ಊರೊಡೆಯ ಮಾರಮಯ್ಯ (ಎಕ. XI, ದಾವಣ. ೨೦–೧೩–1045); ಸ್ವಾಮಿ ಸಂಬಂಧಕ್ಕೆ ಊರೊಡೆಯಂ ನಾಡೆಱೆಯಂ (ಶಮದ. ೧೬೩ ಪ್ರಯೋ). **ಊರಡೆಯು**: ಊರಡೆಯರು ಮುಖ್ಯವಾಗಿ ಗ್ರಾಮಕಾರ್ಯ್ಯವ ಮಾಡುವುದು (ಸೌಇಇ. XV, ೧೫೫–೪೭; 1210); ಊರಡೆಯ ಪ್ರಮುಖ ಅಶೇಷಮಹಾಜನಂಗಳಗೆ ಪಾದಪೂಜೆಯಂ ಕೊಟ್ಟು ವೂರಡೆಯರ ಮಾನ್ಯದೋಪಾದಿಯಾಗಿ... ಕೊಟ್ಟರು (ಸೌಇಇ. XV, ೫೪೫–೯; 1165). [ಊರ್ + ಒಡೆಯ]

**ಊರ್ಕಾವಲಿಗ** (ನಾ). ಊರನ್ನು ಕಾಯುವವನು; ಗ್ರಾಮರಕ್ಷಕ. [ಊರ್ + ಕಾವಲಿಗ. / ತಮಿ. ಊರ್ಕಾವಲ್]

**ಊರ್ಕೆಡುಕ** (ನಾ). ಊರನ್ನು ಕೆಡಿಸುವವನು: ಕೊಂಡ ಸಾಲವ ಕೊಡದನೂರ್ಕೆಡುಕನೆನಿಸಲೇನೆಮ್ಮ ಬಳಿಯನೆ ಸಾಲದೊಳಗದ್ದಿಸಲೆ ತಾತ? (ಹಬ್ಬಿರ. ೧೯–೮೪). [ಊರ್ + ಕೆಡುಕ]

**ಊರ್ಕೆಲಸಿಗ** (ನಾ). ಊರಿನ ಹಜಾಮ, —ಕ್ಷೌರಿಕ (ಕ). [ಊರ್ + ಕೆಲಸಿಗ]

**ಊರ್ಕೋಟೆ** (ನಾ). ಊರಿನ ಕೋಟೆ: ಅಧಿಪಯನರಿರುವನ್ನ ಬಾಳುವುದು ಆ ಊರ್, ಊರ್ಕೋಟೆ ಅಳ್ಗಳ್ (ಪಾರಸಿ. ೧೪–೩೩೨). [ಊರ್ + ಕೋಟೆ (< ಕೋಂಟೆ)]

**ಊರ್ಗಲಿ, ಊರುಗಲಿ** (ನಾ). ಊರಿನ ಕಲಿ, —ಶೂರ: "ಗ್ರಾಮಶೂರಾಣಾಂ – ಊರುಗಲಿಗಳಿಗೆ – ಊರ್ಗಲಿಗಳ್ಗೆ" (ನೀತಿವಾ. ೧೦–೫೧). **ಊರುಗಲಿ**: ಮೇಲಿನ ಪ್ರಯೋಗವನ್ನು ನೋಡಿ. [ಊರ್ + ಕಲಿ$_2$]

**ಊರ್ಗಾಮುಂಡು, ಊರ್ಗಾವುಂಡು** (ನಾ). ಊರಿನ ಗೌಡಿಕೆ. 'ಊರ್ಗಾಮುಂಡುಗೆಯ್' ಪರಾ. **ಊರ್ಗಾವುಂಡು**: 'ಊರ್ಗಾವುಂಡುಗೆಯ್' ಪರಾ. [ಊರ್ + ಗಾಮುಂಡು]

**ಊರ್ಗಾಮುಂಡುಗೆಯ್, ಊರ್ಗಾವುಂಡುಗೆಯ್** (ಕ್ರಿ). ಊರಿನ ಗೌಡಿಕೆ ನಡಸು, —ಆಧಿಪತ್ಯ ನಡಸು: ಗಿಂಗಿಟಿಯೂರ್ಗ್ಗಾಮುಂಡುಗೆಯ್ಯೆ (ಮೈಆರಿ. ೧೯೨೯; ೭೮–೮; 964); ಮಾನಯ್ಯನೂರ್ಗ್ಗಾಮುಣ್ಡುಗೆಯ್ಯೆ (ಇಆ. XII, ೨೭೧–೧೩; 973). **ಊರ್ಗಾವುಂಡುಗೆಯ್**: ಪೆರ್ಬ್ಬಳ್ಳಿ ನನ್ನಿಯ ಗಂಗಗಾವುಣ್ಡನೂರ್ಗಾವುಣ್ಡುಗೆಯ್ಯುತ್ತಿರೆ (ಎಕ. XI, ಹೊಳಲ್ಕೆ. ೩೮–೨; 965); ಅರಜಗಾವುಣ್ಡನೂರ್ಗ್ಗಾವುಣ್ಡುಗೆಯ್ಯೆ (ಎಕ. VII, ಶಿಕಾರಿ. ೮೧–೧೨; 1030); ಬೆಂಗೇರಿಗೆ ಸೋವಗಾವುಣ್ಡನ ಮಗಂ ಬಮ್ಮಯ್ಯನೂರ್ಗಾವುಣ್ಡುಗೆಯ್ಯೆ (ಸೌಇಇ. XX, ೩೫–೮; 1055). [ಊರ್ಗಾಮುಂಡು + ಗೆಯ್ (< ಕೆಯ್$_1$)]

**ಊರ್ಗಾವ** (ನಾ). ೧. = ಊರ್ಕಾವಲಿಗ. ೨. ಧಾನ್ಯದ ರಾಶಿಯನ್ನು ಕಾದುಕೊಂಡಿದ್ದು ಅನಂತರ ತನ್ನ ಪಾಲು ಪಡೆಯುವವನು (ಕ). "ಕಾಳಬಾಳಂ" (ಚತುನಿ. ಕಿ. 1, ೧೭೪). [ಊರ್ + ಕಾವ$_1$]

**ಊರ್ಗಾವುಂಡು** 'ಊರ್ಗಾಮುಂಡು' ನೋ.

**ಊರ್ಗಾವುಂಡುಗೆಯ್** 'ಊರ್ಗಾಮುಂಡುಗೆಯ್' ನೋ.

**ಊರ್ಜ** (ನಾ). ೧. ಶಕ್ತಿ; ಸಾಮರ್ಥ್ಯ. ೨. ಪ್ರಯತ್ನ. ೩. ಕಾರ್ತಿಕ ಮಾಸ: "ಕಾರ್ತಿಕಮಾಸಮುಂ ಊರ್ಜನೆಂಬುದು" (ಹಲಾಯು. ೧೯–೧೧೪); "ನಭೋಮಾಸಮದು ನಭಸ್ಯಮಿಷುವೂರ್ಜಂ" (ಮಂಗರಾ. ೨೧–೧೧); ಏವೊಗಟ್ಟಿನೂರ್ಜಶ್ರೀಯ ಬೆಳ್ದಿಂಗಳಂ (ಜಗವಿ. ೪–೭೪). [ಸಂ.]

**ಊರ್ಜಸ್ವಲ** (ನಾ). ಶಕ್ತಿವಂತ; ಸಮರ್ಥ. [ಸಂ.]

**ಊರ್ಜಸ್ವಿ** (ನಾ). ೧. ಶಕ್ತಿವಂತ; ಸಮರ್ಥ. ೨. [ಕಾವ್ಯಮಿ] ಒಂದು ಕಾವ್ಯಾಲಂಕಾರ: ಪ್ರೇಯಂ ಪ್ರಿಯತರವಚನಾಖ್ಯೇಯ ಮಹಂಕಾರಗರಿಮಮೂರ್ಜಸ್ವಿ (ಕಾವ್ಯಾವ. ೭೭೨); ಎಸೆವೂರ್ಜಸ್ವಿಯೆ ವೀರೋಲ್ಲಸಿತಾಹಂಕಾರಂ (ಉದಯಾ. ೪೯). ಉದಾ:— ಅರಿಗಳೆರ ದೋಡುವರೀಂ ವಿಶಸನದೊಳುದೆಗನೀ ಕೊರಸಿ ಕೊಲ್ಲದು ವಿನುತ ಕೀರ್ತಿ ಭೀತಾತ್ಮಕರಂ (ಉದಯಾ. ೪೯). [ಸಂ. ಊರ್ಜಸ್ವಿನ್]

**ಊರ್ಜಸ್ವಿತೆ** (ನಾ). = ಊರ್ಜ ೧: ಸ್ಫೂರ್ಜದೂರ್ಜಸ್ವಿತೆಯ ಚೈತನ್ಯದೊಂದಳಿಗೆ ಜನ್ಮಲಯಲಯಗತಿಯೊಳುಳಿಯೇಟ ಹೊಡೆದು (ಮಲೆದೇ. ೨೧–೧). [ಸಂ. ಊರ್ಜಸ್ವಿತಾ]

**ಊರ್ಜಿತ** (ಗು). ೧. ಶಕ್ತಿಯಿಂದ ಕೂಡಿದ; ಸಾಮರ್ಥ್ಯವುಳ್ಳ; ಬಲಿಷ್ಠ. ೨. ಅಭಿವೃದ್ಧಿ ಹೊಂದಿದ; ಏಳಿಗೆಯನ್ನು ಪಡೆದ; ನೆಲೆ ನಿಂತ. ೩. ದೊಡ್ಡದಾದ; ಹೆಚ್ಚಿನ. 'ಊರ್ಜಿತಪುಣ್ಯ' ಪರಾ. ೪. "ರೂಢಿಯಲ್ಲಿರುವ" (ಸೋಮೇಶ. ಟಿಪ್ಪಣಿ); ಅತಿಗಂಭೀರನುದಾರ ಧೀರನು ಮಹಾಸಂಪನ್ನ ಸತ್ಯಾತ್ಮನೂರ್ಜಿತ ನಾನಾಲಿಪಿ ಭಾಷೆಯೊಳ್ ಪರಿಚಿತಂ... ವರಮಂತ್ರಿಯ್ಯೆ (ಸೋಮೇಶ. ೬೧).

**ಊರ್ಜಿತವಾಗು** = ೧. ಸಿದ್ಧಿಸು: ಈ ಪತ್ರ ಊರ್ಜಿತವಾಗುವುದಿಲ್ಲ (ರೂಢಿ). ೨. ಏಳಿಗೆಯನ್ನು ಪಡೆ: ಈ ಮನೆ ಊರ್ಜಿತವಾಗುವ ಹಾಗಿಲ್ಲ (ರೂಢಿ). [ಸಂ.]

**ಊರ್ಜಿತಗೊಳಿಸು** (ಕ್ರಿ). ಅಭಿವೃದ್ಧಿಗೊಳಿಸು; ಏಳಿಗೆಗೊಳಿಸು: ತಿಲೋದಕ ಕೊಡುವುದಕ್ಕೆ – ಮನೆತನ ಊರ್ಜಿತಗೊಳಿಸುವುದಕ್ಕೆ ಪುತ್ರ ನೆಡೆಬ್ಬ ಬೇಕು (ಹೊಸಕ್ಕ. ೨೭). [ಊರ್ಜಿತ + ಕೊಳ್ + –ಇಸು$_3$]

**ಊರ್ಜಿತತೇಜ** (ನಾ). ಹೆಚ್ಚಾದ ತೇಜಸ್ಸುಳ್ಳವನು: ಸಂಗ್ರಾಮರಾಮನೂರ್ಜಿತತೇಜಂ (ಸೌಇಇ. XX, ೧೪–೧೧; 980); ನಳಿನೀವನ ಕಿಂಜಲ್ಕದೊಳೆಳಸಿಯುಮೆಳನೇಸಜಂತೆ ಪೀಡೆಯನವ್ಯಾಕುಳಮಾಯದಂ ತಿರೀಯನೆ ಲಳಿತೆಯ ಗರ್ಭದೊಳಗಿರ್ದುಮೂರ್ಜಿತತೇಜಂ (ಪುಷ್ಪಪು. ೯–೧೧೫). [ಸಂ. ಊರ್ಜಿತತೇಜಸ್ (ಊರ್ಜಿತ + ತೇಜಸ್)]

**ಊರ್ಜಿತಪುಣ್ಯ** (ನಾ). ಹೆಚ್ಚಾದ ಪುಣ್ಯವುಳ್ಳವನು : ನೀನತೀತಭವದೊಳ್ ಉಪಾರ್ಜಿತೋರ್ಜಿತಪುಣ್ಯನೆಯಾಗಿ ಸೌಧರ್ಮಕಲ್ಪದೊಳ್ ದೇವನಾದೈ (ಶಾಂತಿಪು. ೩-೮೫ ವ); ವಿಕ್ರಮಪುರವೆಂಬುದುಮಗ್ರಹಾರ ಸಂಪತ್ಪದವಿಗಳೊಳಮಗ್ರಗಣ್ಯನೂರ್ಜಿತಪುಣ್ಯಂ (ಪಂಪಭಾ. ೧೪-೪೧) [ಊರ್ಜಿತ + ಪುಣ್ಯ]

**ಊರ್ಜಿತಮತಿ** (ಗು). ಹೆಚ್ಚಾದ ಬುದ್ಧಿಯುಳ್ಳ : ಅತಿಗಂಭೀರೆಯನೂರ್ಜಿತಮತಿಯಂ ನಿರ್ಮಳೆಯನಮಳಧೈರ್ಯಾದಿ ಗುಣಾನ್ವಿತೆಯಂ . . ಕನ್ನೆಯನಂದು ಕಂಡಂ ಕ್ಷಿತಿಪಂ (ಕಾದಂಪೂ. ೬೮೨). [ಊರ್ಜಿತ + ಮತಿ]

**ಊರ್ಜಿತಯಶ** (ನಾ). ಹೆಚ್ಚಾದ ಕೀರ್ತಿಯುಳ್ಳವನು : ಚಾರುಚರಿತ್ರರೂರ್ಜಿತಯಶರ್ (ಸುಕುಮಾ. ೧-೧೨). [ಊರ್ಜಿತ + ಯಶ]

**ಊರ್ಜಿತಸ್ಥಿತಿ** (ನಾ). ಅಭಿವೃದ್ಧಿಯ ಸ್ಥಿತಿ; ಏಳಿಗೆಯ ಸ್ಥಿತಿ: ಕರ್ಣಾಟಕದಲ್ಲಿ ಶಿಲ್ಪಕಲೆಯು ಊರ್ಜಿತಸ್ಥಿತಿಯಲ್ಲಿದ್ದಿತೆಂದು ಹೇಳಬಹುದು (ಕರ್ಣಾಅ. ೯). [ಊರ್ಜಿತ + ಸ್ಥಿತಿ]

**ಊರ್ಜಿತೋಕ್ತಿ** (ನಾ). ಪ್ರಸಿದ್ಧವಾದ ಮಾತು; ಶ್ರೇಷ್ಠವಾದ ಮಾತು : ನೃಪತುಂಗದೇವಮಾರ್ಗೋತ್ಸವಮೂರ್ಜಿತೋಕ್ತಿಗಳಿನಕ್ಕತಿ ರೌದ್ರರಸಂ ರಸಾವಹಂ (ಕವಿರಾ. ೨-೯೮). [ಊರ್ಜಿತ + ಉಕ್ತಿ]

**ಊರ್ಜಿತೋಪಮಾನ** (ನಾ). [ಕಾವ್ಯಮಿ] ಶ್ರೇಷ್ಠವಾದ, ಉತ್ತಮವಾದ ಉಪಮಾನ : ನಿನ್ನ ಮುಖಂ ಹರಿಣಧರವಿಜಯಶೋಭಾಕರಮೆಂಬುದೂರ್ಜಿತೋಪಮಾನ ವಿಭಾಗಂ (ಕವಿರಾ. ೩-೭೧). [ಊರ್ಜಿತ + ಉಪಮಾನ]

**ಊರ್ಜಿಸು** (ಕ್ರಿ). ಶಕ್ತಿಯನ್ನು ಪಡೆದಿರು; ಸಮರ್ಥವಾಗಿರು : ಬಸವರಸರುಂ ಭಕ್ತರುಂ ತಾವಸಮವೊಡ್ಡೋಲಗವನಿತ್ತೂರ್ಜಿಸುವ ಹೆಂಪಿಂದಿಪ್ಪೆಡೆಯೊಳೆಡೆಗೆಡೆಗೆ ಪಾಡುತ್ತ (ಬಸಪು. ೫೩-೨೪). [ಊರ್ಜ + -ಇಸು₃]

**ಊರ್ಡಂಗುರ** (ನಾ). ಊರಿಗೆ ಹಾಕುವ ಡಂಗುರ; ಊರಿಗೆ ಮಾಡುವ ಘೋಷಣೆ : ಮಱಿಯಂ ಕಾಲನಿದೇಕೆ ಮೈಮಱವಿರೆಂದೂರ್ಡಂಗುರಂ ಪೊಯ್ವವೊಲ್ ಪಱಿಪೊಯ್ದು (ಅನಂಪು. ೯-೨೧). [ಊರ್ + ಡಂಗುರ]

**ಊರ್ಣ** (ನಾ). ೧. ಉಣ್ಣೆ. ೨. ಉಣ್ಣೆಯ ಬಟ್ಟೆ : ಜೀರ್ಣಮಲಿನ ವಸ್ತ್ರಕಾಣದ ಮನುಜಗೆ ಊರ್ಣವಿಚಿತ್ರದ ವಸನಾ (ಕಭವಿ. II, ೧೦); ಚರ್ಮ, ತೊಗಟೆ, ಊರ್ಣ, ಹತ್ತಿಗಳೇ ವಸ್ತ್ರಸಾಮಗ್ರಿಯಾಗಿದ್ದವು (ಭಾಇಪ್ರ. ೪೪); ರೇಶಿಮೆ, ಊರ್ಣ ಮತ್ತು ಕಿನಖಾಫ ಮೊದಲಾದ ಅಂಗಡಿಗಳು ಅಂದವಾಗಿ ಕಾಣುತ್ತವೆ (ಮಂಜುಕ. ೮). [ಸಂ.]

**ಊರ್ಣಕೇಶ** (ನಾ). ಹುಬ್ಬುಗಳ ಮಧ್ಯದಲ್ಲಿರುವ ಸುಳಿಯ ಕೂದಲು : ಜಿನನಿಗೆ ಬುದ್ಧನಿಗಿರುವಂತೆ ಊರ್ಣಕೇಶವಿದೆ (ಹೊಯ್ಸವಾ. ೧೦೩). ☞ ಇದು ಚಕ್ರವರ್ತಿತ್ವಸೂಚಕವಾದ ಲಕ್ಷಣ. [ಊರ್ಣ + ಕೇಶ]

**ಊರ್ಣನಾಭ** (ನಾ). ೧. ಜೇಡರ ಹುಳು : ತಿರುಗುತಿತ್ತು ತನ್ನ ಸುತ್ತು ಬೆಳಕಿನೂರ್ಣನಾಭ ಗುರಿಯು ಗೊತ್ತು ತನಗೆ ಗೊತ್ತು ಬಂದುದೇನೊ ಲಾಭ (ಸ್ವದರ್ಶಿ. ೧೫); ಹೇಳು ಯಾರು ದೊರೆಯು? ಕಮಲನಾಭನೋ? ಊರ್ಣನಾಭನೋ? ಏಕೆ ಮುಚ್ಚುಮರೆಯು (ಚಿಂತನ. ೫೪). ೨. [ನಾಟ್ಯ] ಹಸ್ತಕ್ರಮಗಳಲ್ಲಿ ಒಂದು : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ ೧. ಪತಾಕ . . . ೨೩ ಊರ್ಣನಾಭ; ೨೪ ತಾಮ್ರಚೂಡ (ಅಭಾನೃ. ೪೮). [ಊರ್ಣ + ನಾಭಿ + -]

**ಊರ್ಣನಾಭಿ** (ನಾ). = ಊರ್ಣನಾಭ (೬). [ಸಂ.]

**ಊರ್ಣವಸ್ತ್ರ** (ನಾ). ಉಣ್ಣೆಯ ಬಟ್ಟೆ : ಎಷ್ಟೋ ಜನರು ಶೀತನಿವಾರಣಾರ್ಥವಾಗಿ ಊರ್ಣವಸ್ತ್ರಗಳನ್ನು ಹೊದ್ದುಕೊಂಡು, ಸ್ನಾನಮಾಡಿಕೊಂಡು ಹೋಗುತ್ತಿದ್ದರು (ಮಂಜುಳ. ೬). [ಊರ್ಣ + ವಸ್ತ್ರ]

**ಊರ್ಣಾಯು** (ನಾ). ೧. ಉಣ್ಣೆ; ಉಣ್ಣೆಯ ಬಟ್ಟೆ. ೨. ಕಂಬಳಿ : "ಆವಿಕಃ . . . ಊರ್ಣಾಯುಃ, ಕಂಬಳಃ— ಈ ೫ ಕಂಬಳಿ" (ಹಲಾಯು. ೯೦-೩೯೭). ೩. ಕುರಿ; ಟಗರು : "ಅವಿಮೇಷಮೇಂಡಮುರಣಮೂರ್ಣಾಯು ವೃಷ್ಣಿವುರಭ್ರಮೆನಲು ಕುಱಿಯಕ್ಕು" (ಮಂಗರಾ. ೫೫-೭). ೪. ಕಂಬಳಿಯ ಹುಳು : "ಊರ್ಣಾಯು ಕಂಬಳಿಯ ಹುಳುವೆನಿಕ್ಕುಂ" (ಮಂಗರಾ. ೪೯-೧೩). [ಸಂ.]

**ಊರ್ಣೆ** (ನಾ). ೧. ಉಣ್ಣೆ. ೨. ಹುಬ್ಬಿನ ನಡುವೆ ಇರುವ ಕೂದಲ ಸುಳಿ. [ಸಂ. ಊರ್ಣಾ]

**ಊರ್ಧ್ವ** (ಗು). ೧. ಮೇಲಿನ; ಎತ್ತರದಲ್ಲಿರುವ. (ನಾ). ೨. ಮೇಲ್ಭಾಗ : ನೆಲುವಂ ಬದ್ಧದಿಂ ಮೇಲಕ್ಕೆ ಕಟ್ಟಿ ಕೆಳಗೊಂದಲಗತಿದ್ದಿವೂರ್ಧ್ವಕ್ಕೆ ಮಾಡಿಟ್ಟು ನೆಲುವಿನೊಳಿರ್ದು (ಪ್ರೌಢರಾ. ೨-೪೫). ೩. [ನಾಟ್ಯ] ಹಸ್ತಕ್ಷೇತ್ರಗಳಲ್ಲಿ ಒಂದು : ಊರ್ಧ್ವ . . . ಊರುದ್ವಂದ್ವ – ಈ ಹದಿಮೂಱು ಹಸ್ತಕ್ಷೇತ್ರಂಗಳ್ (ಲಾಸ್ಯರಂ. ೪-೧೫ ವ). ೪. [ವೈದ್ಯಶಾ] ಶ್ವಾಸರೋಗಗಳಲ್ಲಿ ಒಂದು : ಈ ಶ್ವಾಸರೋಗವು ಕ್ಷುದ್ರಕವೆಂದೂ . . . ಮಹಾನೆಂದೂ, ಊರ್ಧ್ವವೆಂದೂ ಐದು ವಿಧವಾಗಿರ್ಪುದು (ಸಕವೈ. ೨೨೪). [ಸಂ.]

**ಊರ್ಧ್ವಂಗಮ** (ಗು). ಮೇಲೇರುವ; ಏರಿನಿಲ್ಲುವ (೬). [ಸಂ.]

**ಊರ್ಧ್ವಕ** (ನಾ). ಒಂದು ವಿಧವಾದ ಮದ್ದಳೆ; ಮೃದಂಗದ ಒಂದು ಭೇದ : ಅಂಕ್ಯ, ಆಲಿಂಗ್ಯ, ಊರ್ಧ್ವಕವೆಂಬ ತ್ರಿವಿಧಕ್ರಮವಱಿತು ನುಡಿಸಿ ಬಾರಿಸುವ ಕಡುಜಾಣರಪ್ಪ ಮರ್ದಳಕಾರರಿಂ (ವಿವೇಕ. ೨೩೭). [ಸಂ.]

**ಊರ್ಧ್ವಕ್ರಿಯೆ** (ನಾ). ದಹನಾದಿ ಶವಸಂಸ್ಕಾರ; ಪ್ರೇತತೃಪ್ತಿಕಾರ್ಯ : ಅತನೂರ್ಧ್ವಕ್ರಿಯೆಯನಾಗಿಸಿ ಸೀತೆಯಱಸುತ ಕೆಲವು ದಿವಸಕೆ ಭೂತಳೇಶ್ವರ ಶಬರಿಯಾಶ್ರಮದತ್ತ ತಿರುಗಿದನು (ತೊಶಿರಾ. ೬-೫೯). [ಊರ್ಧ್ವ + ಕ್ರಿಯೆ]

**ಊರ್ಧ್ವಗ** (ಗು). ಮೇಲಕ್ಕೆ ಹೋಗುವ : ಮೂಲಾಂಕುರಂಗಳೊಳಗೊಂದಧೋಗಮೊಂದೂರ್ಧ್ವಗಮಂತಿರೆ ವಾಸುದೇವ ಬಲದೇವರೊಳೊರ್ವನಧೋಗನೊರ್ವನೂರ್ಧ್ವಗನಾದೊಂ (ಶಾಂತಿಪು. ೪-೧೧೧). [ಸಂ.]

**ಊರ್ಧ್ವಗತ** (ಗು). ಮೇಲಕ್ಕೆ ಹೋದ; ಏರಿದ (೬). [ಸಂ.]

**ಊರ್ಧ್ವಗತಿ** (ನಾ). ೧. ಮೇಲಕ್ಕೆ ಹೋಗುವಿಕೆ; ಏರುವಿಕೆ. ೨. ಉತ್ತಮ ಅಥವಾ ಮೇಲಾದ ಗತಿ : ಚಿತ್ರಗ್ರೀವಂ ಕೃತಾರ್ಥನಾದೆನೆಂದು ಮಿತ್ರಂಗೆ ಪೊಡೆವಟ್ಟು ಪಾಶಮುಕ್ತನಾದ ಜೀವನಂತೂರ್ಧ್ವಗತಿಗೆ ಸಂದಂ (ಪಂಚತಂ. ೨೯೪-೧೫). [ಊರ್ಧ್ವ + ಗತಿ]

**ಊರ್ಧ್ವಗಮ** (ಗು). = ಊರ್ಧ್ವಗ : ಊರ್ಧ್ವಗಮ ವಾಸನಾಸ್ನೇಹಕ್ಕೆ ಬೆಂಬಲಂ ನಿಂದು (ಶ್ರೀಶಾಮಾ. ೪೪೫-೩). [ಸಂ.]

**ಊರ್ಧ್ವಗಮನ** (ನಾ). ೧. ಮೇಲಕ್ಕೆ ನಡೆಯುವುದು : ಆತ್ಮದ ಸ್ವಭಾವವಾದರೋ ಊರ್ಧ್ವಗಮನವುಳ್ಳುದು (ಅನಾಸ. ೧೯). ೨. ಉತ್ತಮಗತಿಗೆ ಹೋಗುವವನು; ಮೇಲಕ್ಕೆ ನಡೆಯುವವನು : ಅತ್ಯಧೋಗಮನೆಯಾಗಿಯು ಮುಟ್ಟಿದವರನೆಸೆವೂರ್ಧ್ವಗಮನರ ಮಾಳ್ಪಳಾವಗಂ (ಹಚಕಾ. ೧೦-೩೧). [ಊರ್ಧ್ವ + ಗಮನ]

**ಊರ್ಧ್ವಗಾಂಶು** (ನಾ). ಮೇಲ್ಮುಖವಾಗಿ ಹರಿಯುವ ಅಥವಾ ಹರಡುವ ಕಿರಣ: ಇದಱಭ್ರಂಕಷ ಕೂಟಕೋಟಿಗಳೊಳಿರ್ದಂಭೋಜ ಷಂಡಂಗಳಂ ಪುದಿದುಷ್ಣಾಂಶುವಿನೂರ್ಧ್ವಗಾಂಶುನಿವಹಂ ಮೆಯ್ಯಿಟ್ಟ ಲರ್ಚುಗೆತ್ತುಮಿರ್ಪುದಿದು (ಪಂಪಭಾ. ೪–೨೨).
[ಊರ್ಧ್ವಗ + ಅಂಶು]

**ಊರ್ಧ್ವಜಾನು** (ನಾ). ೧. ಉದ್ದವಾದ ಮೊಳಕಾಲುಳ್ಳವನು. ೨. ನಿಂತಿರುವವನು: "ಊರ್ಧ್ವಜಾನುಃ, ಸಮುತ್ಥಿತಃ – ಈ ೨ ನಿಂದಿರ್ದವಂ" (ಹಲಾಯು. ೬೪–೨೩೧). ೩. [ನಾಟ್ಯ] ಆಕಾಶಚಾರಿಗಳಲ್ಲಿ ಒಂದು ಬಗೆ: ಪದಮೊಂದು ಕುಂಚಿತದೆಳ್ದೊದವಲ್ ಕುಚದೆಡೆಗೆ ಜಾನು ಮಗುಟಿರ್ದೊಂದು ಪದಂ ಪುದಿದುಂ ನೆಲದೊಳ್ ನಿಡಿದಿಂ ಮುದದೆಸೆಯಲ್ಕೂರ್ಧ್ವಜಾನುಚಾರಿಯೆನಿಕ್ಕುಂ (ಲಾಸ್ಯರಂ. ೬–೪೪); "ಒಂದು ಕಾಲನ್ನು ಕುಂಚಿತನಾಡಿ ಎತ್ತಿ ಎದೆಯಮಟ್ಟಕ್ಕೆ ತಂದು ಇನ್ನೊಂದು ಕಾಲನ್ನು ಸ್ಥಿರವಾಗಿ ಇಡುವುದು" (ಲಾಸ್ಯರಂ. ೩೧೮–೨೧ ಗದ್ಯಾನು).
[ಊರ್ಧ್ವ + ಜಾನು]

**ಊರ್ಧ್ವಜ್ಞು** (ನಾ). ೧. ಮೇಲಕ್ಕೆತ್ತಿದ ಮೊಳಕಾಲುಳ್ಳವನು. ೨. "ಉದ್ದವಾದ ಮೊಳಕಾಲುಳ್ಳವನು; ಬಾರುಕಾಲವನು" (ಸಿದ್ಧಾಂತಿ. ೧೫೪). [ಸಂ.]

**ಊರ್ಧ್ವಜ್ವಲನ** (ನಾ). ಮೇಲುಮುಖವಾಗಿ ಉರಿಯುವಿಕೆ: ಎಱಗುವುದೂರ್ಧ್ವಜ್ವಲನಮ ತೆಱನೆನಿಸಿದ ದೀಪವರ್ತಿನಿಧಿಗಾ ನಿಧಿಯಂ ತೊಱೆದಂ ದಲೆಂದೊಡಾರ್ಪಿನ ತಱಿಸಲವಂ ಕಂಡನೇಕಕುಂಡಲನೆವಲಂ (ಶಂರಾಮಾ. ೬–೧೩೫). [ಊರ್ಧ್ವ + ಜ್ವಲನ]

**ಊರ್ಧ್ವದೇಹಕರ್ಮ** (ನಾ). ಮೃತದೇಹವನ್ನು ಕುರಿತು ಮಾಡುವ ಅಂತ್ಯಕ್ರಿಯೆ; ಉತ್ತರಕ್ರಿಯೆ: ಅವನು ತನ್ನ ಮಕ್ಕಳಿಗೂ ಮೊಮ್ಮಕ್ಕಳಿಗೂ ಪಿತೃಗಳಿಗೂ ತನಗೂ ಗಾಂಧಾರಿಗೂ ಊರ್ಧ್ವದೇಹಕರ್ಮಗಳನ್ನು ನಡಸಿ ಋಣಮುಕ್ತನಾದನು (ವಚಭಾ. ೩೭೧).
[ಊರ್ಧ್ವ + ದೇಹ + ಕರ್ಮ]

**ಊರ್ಧ್ವಪಿಂಡ** (ನಾ). ಆನೆಯ ಗಂಡಸ್ಥಳ,—ಕೆನ್ನೆ: "ಊರ್ಧ್ವಪಿಂಡಮೆನೆ ಗಂಡಸ್ಥಳಮದೆಂದೆನಿಕು" (ಮಂಗರಾ. ೪೬–೨).
[ಊರ್ಧ್ವ + ಪಿಂಡ]

**ಊರ್ಧ್ವಪುಂಡ್ರ** (ನಾ). ಮೇಲುಮುಖವಾಗಿ ಧರಿಸುವ ಗೆರೆ; ನಾಮ: ಗೋಪೀಚಂದನದಿಂದ ೧೨ ಊರ್ಧ್ವಪುಂಡ್ರಗಳನ್ನು ಧರಿಸಿ ಮೇಲೆ ಶಂಖ, ಚಕ್ರ, ಗದಾ, ಪದ್ಮ, ನಾರಾಯಣಮುದ್ರೆಗಳನ್ನು ಧರಿಸುವುದು (ಹಸಾರ. ೧೬–೨೦ ಟೀಕು). [ಊರ್ಧ್ವ + ಪುಂಡ್ರ]

**ಊರ್ಧ್ವಬಾಹುವ್ರತಿ** (ನಾ). ಕೈಯನ್ನು ಮೇಲಕ್ಕೆತ್ತಿಕೊಂಡು ತಪಸ್ಸು ಮಾಡುವ ಯತಿ: ಸಗ್ಗದ ಬಟ್ಟೆಯಂ ಸುಟ್ಟಿ ತೋಱುವಂತೆ ಕೈಯನೆತ್ತಿ ನಿಂದೂರ್ಧ್ವಬಾಹುವ್ರತಿಗಳುಮಂ (ಪಂಚತಂ. ೧೧೯–೧೬).
[ಊರ್ಧ್ವ + ಬಾಹು + ವ್ರತಿ]

**ಊರ್ಧ್ವಮುಖ** (ನಾ). ಮೇಲುಮುಖ: ಹಿಂದಣ ಅಧೋಮುಖಕ್ಕೆ ನಡುವಣ ಅಭಿಮುಖಕ್ಕೆ ಕಡೆಯ ಊರ್ಧ್ವಮುಖಕ್ಕೆ ಕುಂಡಲಿಯ ಹಾಲೆದ್ದು (ಅಱಿಮಾ. ೯–೫೦); ಅಗ್ನಿಯು . . . ತನ್ನನ್ನು ತಾನೇ ಪ್ರಕಾಶಪಡಿಸಿಕೊಂಡು ಊರ್ಧ್ವಮುಖವಾದ ಜ್ವಾಲೆಯಿಂದ ಆವಿರ್ಭೂತನಾಗಿ ಬೆಳೆಯುತ್ತಾನೆ (ಋಕ್ಸಾರ. ೧೧). [ಊರ್ಧ್ವ + ಮುಖ]

**ಊರ್ಧ್ವಮುಖತೆ** (ನಾ). ಮೇಲು ಮುಖವಾಗಿರುವಿಕೆ: ಸಾಹಿತ್ಯವು ಮಾನವೀಯ ವ್ಯಕ್ತಿತ್ವದ ಮೂಲದ್ರವ್ಯದ ಉದಾತ್ತೀಕರಣ ಇಲ್ಲವೆ ಊರ್ಧ್ವಮುಖತೆಯ ಕಡೆಗೇ ತನ್ನ ಲಕ್ಷ್ಯವನ್ನು ಪೂರೈಸಬೇಕು (ನವ್ಯಕಾ. ೧೯). [ಸಂ. ಊರ್ಧ್ವಮುಖತಾ]

**ಊರ್ಧ್ವಮುಖಪ್ರವಾಹ** (ನಾ). ಮೇಲುಮುಖವಾಗಿ ಹರಿಯುವ ಪ್ರವಾಹ: ಸಮುದ್ರತಳದಲ್ಲಿ ನೀರಿನ ಚಲನೆಯಿಂದ ತಳೋದಕ ಪ್ರವಾಹಗಳೂ . . . ಕಾದನೀರು ಮೇಲಕ್ಕೇಳುವುದರಿಂದ ಊರ್ಧ್ವಮುಖ ಪ್ರವಾಹಗಳೂ ಹುಟ್ಟುತ್ತವೆ (ಭೂವಿವ. ೯೧).
[ಊರ್ಧ್ವ + ಮುಖ + ಪ್ರವಾಹ]

**ಊರ್ಧ್ವರೇತ** (ನಾ). ವೀರ್ಯವನ್ನು ತಡೆದಿಟ್ಟಿರುವವನು; ಬ್ರಹ್ಮಚಾರಿ: ನೆರೆದೂರ್ಧ್ವರೇತನೊಳ್ ಪುರುಹಿರಣ್ಯರೇತೋತಿ ತೀವ್ರನೊಳ್ . . . ಮುನಿವರನೊಳ್ (ಕವಿರಾ. ೧–೬೩).
[< ಸಂ. ಊರ್ಧ್ವರೇತಸ್]

**ಊರ್ಧ್ವರೇತಸ್ಕ** (ನಾ). = ಊರ್ಧ್ವರೇತ: ನಾರಾಯಣ ಸ್ತುತಿಪಾತ್ರನೇಕನಧ್ವರವಿಲಸದೂರ್ಧ್ವಮಾರ್ಗಮನೆಯ್ದಿ ಪನೆಯೂರ್ಧ್ವರೇತಸ್ಕನೇ (ವೀಶೈಪು. ೩–೧೯–೪೬). [ಊರ್ಧ್ವ + ರೇತಸ್ಕ]

**ಊರ್ಧ್ವರೋಮ** (ನಾ). ಮೈಮೇಲೆ ನೇರಾದ ಕೂದಲುಳ್ಳವನು: ಭರಿತಧೈರ್ಯನ ಪತಿಹಿತನ ಸಂಗರ ಸದಾರನನೂರ್ಧ್ವರೋಮನನಿರದೆ ಸೇನಾಪತಿಯ ಮಾಡುವುದರಸ (ಕುವ್ಯಾಉ. ೩–೮೮).
[< ಸಂ. ಊರ್ಧ್ವರೋಮನ್]

**ಊರ್ಧ್ವಲೋಕ** (ನಾ). ೧. ಮೇಲಿನ ಲೋಕ; ಸ್ವರ್ಗ: "ಸ್ವರ್, ಸ್ವರ್ಗಃ . . . ಊರ್ಧ್ವಲೋಕಃ – ಈ ೧೧ ದೇವಲೋಕದ ಪೆಸರ್" (ಹಲಾಯು. ೨–೩); "ನಾಕಮೂರ್ಧ್ವಲೋಕಂ ಸ್ವರ್ಗಮದು" (ಮಂಗರಾ. ೩–೮). ೨. [ಜೈನ] (ಲೋಕಸ್ವರೂಪದಲ್ಲಿ) ಮೇಲುಗಡೆ ಇರುವ ಲೋಕಗಳಲ್ಲಿ ಕೊನೆಯದು; ಕೊನೆಯ ಲೋಕ: ಮಧ್ಯಲೋಕಮೆಸೆದಿರ್ದಾ ಚೂಳಿಕಾಭಾಗದಾದಲೆಯೊಳ್ನಿಂದಪುದೂರ್ಧ್ವಲೋಕಮೆನೆ ಮೂಲೋಕಕ್ಕೆ ಪೆಂಪಿದಗುಂದಲೆಯಾಗಿರ್ದುದು (ಆದಿಪು. ೧–೫೦). [ಊರ್ಧ್ವ + ಲೋಕ]

**ಊರ್ಧ್ವಶ್ವಾಸ** (ನಾ). ೧. ಮೇಲುಸಿರು; ದಮ್ಮು: ಬಾಯಿ ಒಣಗುವುದು ಊರ್ಧ್ವಶ್ವಾಸ, ಶ್ಲೇಷ್ಮ ಸಹ ಮಾಣುವುವು (ಸಕವೈ. ೪೦೬). ೨. ಪ್ರಾಣಾಯಾಮ: ವರನದಿಗಳಂ ಮುಳುಗಿ ಮೂಗಿನ ಬೆರಳ ಊರ್ಧ್ವಶ್ವಾಸ ಪವನನ ಧರಿಸಿ ಕಾಲತ್ರಯ ಜಪಾನುಷ್ಠಾನ ಹೋಮದಲಿ (ಕುವ್ಯಾಕ. ೧೧–೬೦). [ಊರ್ಧ್ವ + ಶ್ವಾಸ]

**ಊರ್ಧ್ವಸಂಸ್ಕಾರ** (ನಾ).=ಊರ್ಧ್ವದೇಹಕರ್ಮ: ಅವರ ಜೊತೆಯಲ್ಲಿ ಇನ್ನು ಯಾರು ನಮ್ಮ ಕಡೆಯವರು ಸಿಕ್ಕಿ ಸತ್ತಿದ್ದರೂ ಅವರಿಗೆ ಊರ್ಧ್ವಸಂಸ್ಕಾರಗಳನ್ನು ನಡಸಿ (ವಚಭಾ. ೩೫).
[ಊರ್ಧ್ವ + ಸಂಸ್ಕಾರ]

**ಊರ್ಧ್ವಾಂಗ** (ನಾ). ಮೇಲುಭಾಗ: ಭೂತಭವಿಷ್ಯದ್ವರ್ತಮಾನವ ಹಿಂದೆಸೆ ಮುಂದೆಸೆಯ ಬಿಟ್ಟು ಊರ್ಧ್ವಾಂಗ ಅಭಿಮುಖವಾಗಿ ನೋಡಲಾಗಿ ಮಹದಾಕಾಶವ ಕಂಡೆ (ಮೋಳಿಮಾ. ೧೪೯–೫೬೬).
[ಊರ್ಧ್ವ + ಅಂಗ$_2$]

**ಊರ್ಪಾಱು** (ನಾ). ಊರಿನ ಗದ್ದೆ ಬಯಲು: ಪಱಿಯಾ ಎರೆ ನಲ್ಲೂರಾ ಊರ್ಪ್ಪಾಱು ಒಕ್ಕಣ್ಣುಗಂ (ಎಕ. IV, ನಾಗಮಂ. ೮೫–೬೬; 776). [ಊರ್ + ಪಾಱು]

**ಊರ್ಮಿ**$_1$ (ನಾ). ಉತ್ಸಾಹ; ಹೆಚ್ಚಳ: ಇನ್ನೊಂದು ಮನವನ್ನು ಮುಟ್ಟಬೇಕೆಂಬ ಊರ್ಮಿಯು ಕವಿಯಲ್ಲಿ ರಬೇಕು (ಸಾಹಿವಿ. ೯೯–೧೦); ಅವನ ಬಗ್ಗೆ ಅವಳಲ್ಲಿ ಕರುಣಭಾವನೆಯ ಊರ್ಮಿಯು ಮೂಡಿತೆನ್ನು ವಷ್ಟರಲ್ಲಿ ಮಟಮಾಯವಾಗುತ್ತಿತ್ತು (ಮುಳ್ಳುಬೇ. ೧೬); ಹೊಸ ಮೌನ ಹೊಸ ಊರ್ಮಿ ಹೊಸದೊಂದು ರತಿಯು (ಗರಿ. ೩೮–೮). 'ಊರ್ಮೆ' ಪಠಾ. [?]

**ಊರ್ಮಿ₂** (ನಾ). ೧. ದೊಡ್ಡ ಅಲೆ, —ತೆರೆ: "ಊರ್ಮಿಃ... ಕಲ್ಲೋಳಃ, ಲಹರೀ – ಈ ೫ ಪೆರ್ದೆರೆ" (ಹಲಾಯು. '೧೦೮–೩೧); ಕಡಂಗಿ ಕಾಲ್ವಿಡಿವವೋಲ್ ತನ್ನೂರ್ಮಿಗಳ್ ಬಂದುವಂದು ... ಕಣ್ಗೊಪ್ಪಿ ತೋರ್ಪುದು ... ಗಂಭೀರ ನೀರಾಕರಂ (ಪಂಪಭಾ. ೪–೨೪); ವೀರೋಚಿತವಾದ ಸಾಹಸದ ಊರ್ಮಿಗಳು ಒಂದೊಂದಾಗಿ ಆತನಲ್ಲಿ ಮೊಳೆದೋರಹತ್ತಿದವು (ತಿಲೋ ಮೆ. ೯೬). ೨. ವಸ್ತ್ರದ ಅಥವಾ ಬಟ್ಟೆಯ ಮಡಿಕೆ; ನಿರಿ. ೩. ಪ್ರವಾಹ; ಹರಿವು. [ಸಂ.]

**ಊರ್ಮಿಕೆ, ಊರ್ಮಿಕೆ** (ನಾ). ೧. ಉಂಗುರ: "ಊರ್ಮಿಕಮದಾವುಂಗುರಮೆನಿಕ್ಕು" (ಮಂಗರಾ. ೧೦೦–೨೬). ೨. ಕಳೆದು ಹೋದುದಕ್ಕಾಗಿ ವ್ಯಸನಪಡುವುದು; ವಿಷಾದ; ಖೇದ. **ಊರ್ಮಿಕೆ:** ೧. "ಅಂಗುಲೀಯಕಂ, ಊರ್ಮಿಕಾ– ಈ ೨ ಉಂಗುರಂ" (ಹಲಾಯು. ೯೨–೪೦೫); ಪಾಣಿಶಾಖೋತ್ಕರ ಚಂಚದ್ವಿದ್ರುಮಶಾಖಿಂ ಮಿಸುಪುದು ಪಿರಿದೇ ರತ್ನಯುಕ್ತೋರ್ಮಿಕಾ ಬಂಧುರಂ (ರಾಜಶೇ. ೮–೪೧).
[ಸಂ. ಊರ್ಮಿಕಾ]

**ಊರ್ಮಿಕೆ** 'ಊರ್ಮಿಕ' ನೋ.

**ಊರ್ಮಿಕೆಗೊಡು** (ಕ್ರಿ). ಉಂಗುರವನ್ನು ಕೊಡು: ಆ ನವಠತ್ನದೂರ್ಮಿಕೆಗೊಟ್ಟು ಬಳಿಕ (ಶ್ರೀಪಾಲ. ೬–೬).
[ಊರ್ಮಿಕೆ (< ಊರ್ಮಿಕ) + ಕೊಡು]

**ಊರ್ಮಿಘಟ್ಟನ** (ಕ್ರಿ). ಅಲೆಗಳ ಹೊಡೆತ, —ಬಡಿತ: ಮಹಾಘೋಷವೇ ಘನಗೀತಮೂರ್ಮಿಘಟ್ಟನವೆ ತಾಳಂ ನೀರ್ಗಿಳಿವ ಘನವಸಿತ ಯವನಿಕೆ ಮಿನುಗುವ ತಟಸ್ಥ ಶುಕ್ತಿಜಮೆ ಪುಷ್ಪಾಂಜಲಿ (ಪದ್ಮರಾ. ೧೧–೧೬೫).
[ಊರ್ಮಿ + ಘಟ್ಟನ]

**ಊರ್ಮಿಮಾಲೆ** (ನಾ). ತರಂಗಮಾಲೆ; ಅಲೆಗಳ ಸಾಲು: ಓಕರಿಪುದದ್ರಿಸಮ ಊರ್ಮಿಮಾಲಾ ಭಯಂಕರ ಸಮುದ್ರಂ ತಿಮಿಂಗಿಲಂ ತೃಣದ ಕಣವಾಯಿತೆಂಬಂತೆ (ಶ್ರೀಕೊಮಾ. ೧೬೫–೩೫೪).
[ಊರ್ಮಿ + ಮಾಲೆ]

**ಊರ್ಮಿಮಾಲಿನಿ** (ನಾ). ಅಲೆಗಳ ಮಾಲೆಯನ್ನು ಉಳ್ಳದ್ದು; ನದಿ: ತೇಂಕುವ ಪೂವಿನ ಸಂಕರಂಗಳಂ ನೂಂಕುವುವೂರ್ಮಿಮಾಲಿನಿಯ ತುಂಗತರತ್ತರಳೋರ್ಮಿಮಾಲೆಗಳ್ (ಆದಿಪು. ೧–೬೧).
[ಸಂ. ಊರ್ಮಿಮಾಲಿನೀ]

**ಊರ್ಮಿಶ್ರೇಣಿ** (ನಾ). ತೆರೆಗಳ ಪಂಕ್ತಿ; ಅಲೆಗಳ ಸಾಲು: ವದನೋಚ್ಛ್ವಾಸದಿನುಣ್ಮುತಿರ್ಪ ಯಮುನೋರ್ಮಿಶ್ರೇಣಿಯಂ ... ಮಿಕ್ಕಂ (ಜಗವಿ. ೩–೮೩). [ಊರ್ಮಿ + ಶ್ರೇಣಿ]

**ಊರ್ಮಿಸು** (ಕ್ರಿ). ಅತಿಶಯವಾಗು; ಜೋರಾಗು: ಒರ್ಮೊದಲು ಕೊಗುವೆನು ನೀವಿದ ನಿರ್ಮಳದಿ ನೋಡೆಂದು ಹರಿಯಂತೂರ್ಮಿಸಿದ ಕಲಿ ಭೀಮಸೇನ (ಜನಭಾ. ೫೨–೩೮). [ಊರ್ಮೆ + –ಇಸು₃]

**ಊರ್ಮಿಳಾಕಾಂತ** (ನಾ). ಊರ್ಮಿಳೆಯ ಗಂಡ; ಲಕ್ಷ್ಮಣ: ಊರ್ಮಿಳಾಕಾಂತನಂ ಪೆಜಗಿಕ್ಕಿ ಕಾಲಜಿತುವಿದಿರಾದನು (ಜೈಮಿಭಾ. ೨೦–೫೬) [ಸಂ. ಊರ್ಮಿಲಾಕಾಂತ (ಊರ್ಮಿಲಾ + ಕಾಂತ)]

**ಊರ್ಮಿಳೆ** (ನಾ). ಜನಕರಾಜನ ಮಗಳು; ಲಕ್ಷ್ಮಣನ ಹೆಂಡತಿ: ರಾಮುಂ ಕೆಮ್ಮನಿರ್ದುದಂ ಕಂಡುಮ್ಮಳಂಗೊಂಡು ಊರ್ಮಿಳೆಯ ಗಂಡನಂ ಬೆಸಗೊಂಡೊಡೆ (ಶ್ರೀರಾಮಾ. ೭೮–೨೩).
[ಸಂ. ಊರ್ಮಿಲಾ]

**ಊರ್ಮುರ್** (ಕ್ರಿ). ಅಹಂಕಾರ ಪಡು; ಉಬ್ಬು: ಧರ್ಮವಾಚರಿಸದಗೆ ಸದ್ಗುಣ ಪೇರ್ಮೆಯಿರದಪರಾಧವಿರದರಿಗೂರ್ಮುರ್ವಗೆ ಸತ್ಕಾನುಬಂಧಕ ಮನ್ನಿಸದಲಿರುವಾ ದುರ್ಮತಿಗೆ (ಜನಭಾ. ೩೬–೨೯). [?]

**ಊರ್ಮೆ, ಉರ್ಮೆ** (ನಾ). ಅತಿಶಯ; ಆಧಿಕ್ಯ; ಶ್ರೇಷ್ಠತೆ; ಉತ್ತಮಿಕೆ: ಊರ್ಮೆ ಜೋಗವ್ವೆಯ ವಂಶದೊಳ್ ಪೆಣ್ಗೂಸುಗಳಲ್ಲದೆ ಗಣ್ಗೂಸುಗಳ ವಂಶಕ್ಕಧಿಕಾರಮಲ್ಲದೆ ಸಲ್ಲದು (ಎಇ. XXIX, 208); ವಿಲಾಸದು [ದೂ]ರ್ಮೆ [ಪಾಠಾಂ. ಪೇರ್ಮೆ, ಪಿರ್ಮೆ] ಗಳೊಳಾವೆವಗಾಗಿಪೆವೆಂದು ಬಂದ ಚೆನ್ನಿಗರುಮನಾಸೆಕಾಜರುಮನೊಲ್ಲದೆ (ಪಂಪಭಾ. ೧–೧೦೬); ಧರ್ಮಕ್ಕರ್ಥಕ್ಕತಿಥಿಗೆ ಪೆರ್ಮೆಯ ಪಿತೃಗಳ್ಗೆ ದೇವಕಾರ್ಯಕ್ಕೆಂದುಂ ನಿರ್ಮಳಸಂತತಿಗಳ್ಗಕ್ಕೂರ್ಮೆಯ ಕುಲವನಿತೆ ಮುಖ್ಯವಾಕೆಯೆ ಪೂಜ್ಯಂ (ಮದಕಿ. ೮–೫); ಊರ್ಮಿಳಕರು ನಿಜಸೇನೆ ವಾದ್ಯಗಳೂರ್ಮೆಯೊಳು ನಡೆತಂದರಂದು ವಿರಾಟಪಟ್ಟಣಕೆ (ಜನಭಾ. ೬೦–೨೬). **ಉರ್ಮೆ:** ಮೇಲಿನ (ಪಂಪಭಾ. ೧–೧೦೬) ರ ಪ್ರಯೋಗವನ್ನು ನೋಡಿ.
[ಊಜ್ಮ₂ + –ಮೆ₁]

**ಊರ್ವ** (ನಾ). ಸಮುದ್ರದ ಬೆಂಕಿ; "ವಡಬಾಗ್ನಿ" (ಗಂಗಾಮು. ೪೮). ೨. ಜಲಾಶಯ; ಸಾಗರ. ೩. ನೋಡ. ೪. ದನಗಳ ಕೊಟ್ಟಿಗೆ; ಲಾಯ. ೫. ಪಿತೃಲೋಕದಲ್ಲಿರುವ ಒಂದು ಪಿತೃಗಣ. ೬. ಒಬ್ಬ ಋಷಿಯ ಹೆಸರು. [ಸಂ.]

**ಊರ್ವಂದಿ, ಊರುವಂದಿ** (ನಾ). ಊರಿನಲ್ಲಿರುವ ಹಂದಿ: ಊರ್ವಂದಿಯುಂ ತಂದವಂಗೂರುಂಬಳಿಯನೀವರ್ ಕುಱಿಯುಂ ತಂದವಂಗೆ ತೆಱಗೆಯುಂ ಮನ್ನಿಪರ್ (ಚಕವಂ. ೬–೫). **ಊರುವಂದಿ:** ಪರಿಪೂರಿತಾಮೃತಕಿರಣರುಚಿಯಂ ರುಚಿಸುವ ಚಕೋರ ಸೇರಿ ಮರ್ದಿಂಗೆಳಸುವುದೆ ದಿಗ್ವಾರಣದ ಮಱಿಯುಂಟುದೇ ಬಂದೂರುವಂದಿಯ ಮೊಲೆಯಂ (ಬಸಪು. ೧೧–೧೦). 'ಕಾಡುಹಂದಿ' ಪರಾ.
[ಊರ್ + ಪಂದಿ. / ತಮಿ. ಊರ್ಪ್ಪನ್ನಿ]

**ಊರ್ವರೆ** (ನಾ). ನೆಲ; ಭೂಮಿ: ಊರ್ವರೆಯ ನಾನಾಖಗಮೃಗಂಗಳೆಲ್ಲವನಿಱಿದು (ಹಚಕಾ. ೩–೯೨). [ಸಂ. ಊರ್ವರಾ]

**ಊರ್ವಶಿ** (ನಾ). ಒಬ್ಬ ಅಪ್ಸರೆ; ನಾರಾಯಣನೆಂಬ ಋಷಿಯ ತೊಡೆಯಿಂದ ಜನಿಸಿದವಳು: ಬಂದಳೂರ್ವಶಿ ಬಳ್ಳಿಮಿಂಚಿನ ಮಂದೆಯಲಿ ಮುರಿದಿಳಿವ ಮಱಿಮುಗಿಲಂದದಲಿ (ಕುವ್ಯಾಅ. ೬೦೫. ೯–೧೩).
[ಸಂ. ಊರ್ವಶೀ]

**ಊರ್ವಾನಳ** (ನಾ). ಬಡಬಾಗ್ನಿ: ತನುರುಚಿಯ ಮುಂದೆ ದಿನಪನ ಕಾಂತಿ ಕಪ್ಪಕಪ್ಪನೆ ಕೋಪದಿದಿರೊಳೂರ್ವಾ[ಪಾಠಾಂ. ಉಗ್ರಾ]ನಳಂ ತಣ್ಣತಣ್ಣನೆ ಕೊಡುವ ಕೈಯಿದಿರೊಳಮರತರು ಮೆಲ್ಲಮೆಲ್ಲನೆ ... ಎನೆ ಹರಿಶ್ಚಂದ್ರನೆಸೆದಿರ್ದನು (ಹಚಕಾ. ೧–೪೧).
[ಊರ್ವ + ಅನಳ (= ಅನಲ)]

**ಊರ್ವೀಧರ** (ನಾ). ೧. ಬೆಟ್ಟ; ಪರ್ವತ: ಊರ್ವೀಧರಂಗಳೆಲ್ಲಕ್ಕಧಿಕತರಮಪ್ಪ ಸಾರ್ವಭೌಮನ ಬಿಲ್ಲ ಮಾಡಿ (ವೀಶೈಪು. ೨–೧೧–೧). ೨. ಆದಿಶೇಷ. [< ಸಂ. ಉರ್ವೀಧರ]

**ಊರ್ವು** 'ಉರ್ವು₁' ನೋ.

**ಊರ್ವೇಲಿ** (ನಾ). ಊರ ಸುತ್ತಲಿನ ಬೇಲಿ: ದ್ವಿತ್ವಕ್ಕೆ – ನೀರ್ಗಿಚ್ಚು, ಊರ್ವೇಲಿ (ಶಮದ. ೧೮೪ ಪ್ರಯೋ). [ಊರ್ + ಬೇಲಿ]

**ಊಲೆ₁** (ನಾ). ಒರಲೆ; ಗೆದ್ದಲು (?): ಇಂಗರಕ್ಕೂಲೆಗಳ್ ಮುಟ್ಟಿ ಜೀವಿಪುದೆ ರಣರಂಗದಲಿ ಗುರುಗಳಂ ತೊಡಕಿ ಬಾಳ್ದವ ಪರದವಂಗದಲಿ ಕಾಣೆ (ತುರಂಗ. ೫೮–೪೬). [< ಒಜಲೆ ?]

**ಊಲೆ₂** (ನಾ). ದುಃಖ; ಸಂತಾಪ; ನೋವು: ಅವನ ಮನದೂಲೆ ತವಿಸುವುದೆ ನಿನ್ನಯ ಧರ್ಮ (ಹೆಬ್ಬೆರ. ೬–೧೧೯). [< ಸಂ. ಶೂಲ]

**ಊವಾಳ್₁** (ನಾ). ನಡುವಣ ಆಳು; ಮನುಷ್ಯ.
[ಊ₂ (< ಉದು) + ಆಳ್₃]

**ಊವಾಳ್ಕ** (ನಾ). ನಡುವಣ ಕತ್ತಿ. [ಊ$_2$ (< ಉದು) + ಬಾಳ್$_3$]

**ಊಷ** (ನಾ). ಉಪ್ಪುಭೂಮಿ ; ಚೌಳುನೆಲ ; ಸೌಳುನೆಲ. [ಸಂ.]

**ಊಷಣ** (ನಾ). ಕರಿಯ ಮೆಣಸು : "ವೇಲನಂ, ಮರಿಚಂ, ಊಷಣಂ –ಈ ೩ ಮೆಣ[ಳ]ಸು" (ಹಲಾಯು. ೧೧೧–೪೬೨) ; "ಊಷಣ [ಪಾಠಾಂ. ರ]ಮುದಾ ಮರಿಚಮೆನಲು ಮೆಣಸಕ್ಕು" (ಮಂಗರಾ. ೪೧–೩೬). [ಸಂ.]

**ಊಷಣೆ** (ನಾ). "ಹಿಪ್ಪಲಿ" (ಗಂಗಾಮು. ೪೮). [ಸಂ. ಊಷಣಾ]

**ಊಷರ** (ನಾ). = ಊಷ : "ಈರಣಂ, ಊಷರಃ –ಈ ೨ ಸೌಳುಮಣ್ಣು (ಳ್ಳ ಭೂಮಿ) ಯೆಂಬುದು" (ಹಲಾಯು. ೨೬–೩) ; ಅ ಪೊಟ್ಟಜೆ ಯೊಳ್ ಕಣ್ದೆಜಿದತ್ತೂಷರ ಶಯ್ಯಾಧೂಮ್ರರೋಮ ಹರಿಣಸಮೂಹಂ (ಕಾದಂಪೂ. ೧೪೮). [ಸಂ.]

**ಊಷರಕ್ಷೇತ್ರ** (ನಾ). ಉಪ್ಪುನೆಲ; ಚೌಳುಭೂಮಿ : "ಊಷರ ಕ್ಷೇತ್ರ" ಅಂದರೆ ಚೌಳುಭೂಮಿ (ಭೂಗೋಳ. ೧೧). [ಊಷರ + ಕ್ಷೇತ್ರ]

**ಊಷರಭೂಮಿ** (ನಾ). = ಊಷರಕ್ಷೇತ್ರ : ಕಣ್ಣಿಲ್ಲದ ಮನುಜ ರಂತೆಯುಂ ಊಷರಭೂಮಿಯಂತೆಯುಂ (ಭಾರಶಾಂ. ೬೦–೫೨೪). [ಊಷರ + ಭೂಮಿ]

**ಊಷರಾಂಬು** (ನಾ). ಚೌಳು ನೆಲದ ನೀರು ; ಉಪ್ಪುನೀರು; ಸೌಳು ನೀರು : ಸೊದೆಯಂ ಮಾಣ್ದೂಷರಾಂಬುವಂ ಕಾಮಿಪರೇ (ವಿಷ್ಣುಪು. ೧–೧೪). [ಊಷರ + ಅಂಬು$_3$]

**ಊಷರು** (ನಾ). = ಊಷ : "ಊರ್ಮ – ಊಷರು, ಉಪ್ಪುಮಣ್ಣು" (ಓಷಧಿ. ೧೭). [< ಸಂ. ಊಷರ]

**ಊಷ್ಮ**, ಊಷ್ಮೆ (ನಾ). ೧. ಶಾಖ ; ಕಾವು ; ತಾಪ. ೨. ಬೇಸಗೆಯ ಕಾಲ : ಊಷ್ಮದ ಒಜತೆಯಂತೆ, ಉರಿಯ ನೆಳಲಂತೆ . . . ಸುಳಿವ ಸಿದ್ಧ ಸೋಮನಾಥ ನಿಮ್ಮ ಶರಣ (ವಚಸಂ. ೪೭೨–೧೬೪). ೩. [ವ್ಯಾಕ] ಶ, ಷ, ಸ, ಹ ಎಂಬ ವರ್ಣಗಳು : ಶಷಸಹಗಳೂಷ್ಮಗಳು (ಹೊಸುಗ. ೩–೪). ೪. ತೇಜಸ್ಸು. ೩, ೪ : ಅಖಿಲ ವರ್ಣವಿತಾನದೊಳ್ ಲೋಪ ಕೃತ್ಯಮುಂ ನೆಗಳದೊಪ್ಪುವನೂಷ್ಮ ತಾನು (ಪದ್ಮರಾ. ೨–೭೫). **ಊಷ್ಮೆ** : ೧. ಬತ್ತಿದುದಧಿಯೊಳುರಿಮಣಲು ಮಾಣಿಕವ ಹುರಿದುದು ಚಕ್ರದೂಷ್ಮೆ ಯಲಿ (ಕುವ್ಯಾಭೀ. ೬–೩೩). [< ಸಂ. ಊಷ್ಮನ್]

**ಊಷ್ಮತೃಷ್ಣೆ** (ನಾ). ಬೇಗೆಯಿಂದಾದ ಬಾಯಾರಿಕೆ, —ದಾಹ (?): ಊಷ್ಮತೃಷ್ಣೆ [ಪಾಠಾಂ. ಉಷ್ಮತೃಷೆ, ಉಷ್ಣತೃಷ್ಣೆ] ಘನವಾಗಿ ಕಡಲೇಳು ಸಮುದ್ರವ ಕುಡಿದು ನೀರಡಸಿಪಾತ ಅಜಲುಗೊಂಡು ಬೆಜಗಾದ (ಅವಚಂ. ೫–೧೮). [ಊಷ್ಮ + ತೃಷ್ಣೆ]

**ಊಷ್ಮಧ್ವನಿ** (ನಾ). ಶ, ಷ, ಸ ಗಳ ಧ್ವನಿ. [ಊಷ್ಮ + ಧ್ವನಿ]

**ಊಷ್ಮೆ** 'ಊಷ್ಮ' ನೋ.

**ಊಷ್ಮೋಚ್ಚಾರ** (ನಾ). ಶ, ಷ, ಸ ಗಳ ಉಚ್ಚಾರ. [ಊಷ್ಮ + ಉಚ್ಚಾರ]

**ಊಸರವಳ್ಳಿ**, ಊಸುರವಳ್ಳಿ, ಊಸುರುವಳ್ಳಿ (ನಾ). ಕ್ಷಣಕ್ಷಣಕ್ಕೂ ಬಣ್ಣ ಬದಲಾಯಿಸುವ ಹಾವುರಾಣಿ ಜಾತಿಗೆ ಸೇರಿದ ಪ್ರಾಣಿ; ಓತೀಕೇತ; ಗೋಸುಂಬೆ : ಉಡುವಿನ ಭಾವದಲ್ಲಿ ಹಡೆದರೆಮ್ಮವರು ಊಸರವಳ್ಳಿಯಂತೆ ಎನ್ನಿರವು (ಬಸವ. ೨೯೨) ; ಮಿಗೆ ನಚ್ಚಲಾಗದೂಸರ ವಳ್ಳಿಗಳ ತೆಱದೆ ಸೊಗಸಿನಿಂದೊಂದು ತೆಜನಪ್ಪರ್ (ಅರಾಚ. ೫–೪೬) ; ನಿಮಿಷ ನಿಮಿಷಕೆ ಮೊದಲ ಬಣ್ಣಗಳ ತೋರಿಪೂಸರವಳ್ಳಿಯಂತೇನು ಬೊಮ್ಮಂ ? (ವ್ಯಂಕುಕ. ೩೮). **ಊಸುರವಳ್ಳಿ** : ಒಂದೆ ಹರೆಯವು ರೂಪು ಜಾತಿಗಳೆಂದು ಭಾವಿಸಲಿಲ್ಲ ತಾವೊಂದೊಂದು ಪರಿಯಾಗಿಪ್ಪರೂಸುರ[ಪಾಠಾಂ. ರು]ವಳ್ಳಿಗಳ ತೆಱದಿ (ಬಸವು. ೪೦–೭೪). **ಊಸುರುವಳ್ಳಿ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ಊಸರ$_0$ (< ಸಂ. ಧೂಸರ) + ಪಳ್ಳಿ$_2$ (< ಪಲ್ಲಿ). / ತೆಲು. ಊಸರವೆಲ್ಲಿ]

**ಊಸಿಸು** (ಕ್ರಿ). ನೇವರಿಸು ; ಸವರು (?) : ಉಸುರದಿರಲ್ಕೆ ಕಂಡು ತಾಪಯೇತರ ಚಿಂತೆಯೆನುತ್ತ ಗಲ್ಲಮುನಸವಸದಿಂದಲೂಸಿಸುತ ಕಂಬ ನಿಯಂ ತೊಡೆವುತ್ತ ಮುದ್ದಿಡುತ್ತ (ನಳವಿ. ೬೦). [ಊಸು$_1$ + –ಇಸು$_3$]

**ಊಸು$_1$** (ಕ್ರಿ). ಸವರು ; ನೇವರಿಸು (?). 'ಊಸಿಸು' ಪರಾ. [< ಪೂಸು ?]

**ಊಸು$_2$** (ಕ್ರಿ). ಹಳಸು; ಕೆಟ್ಟುಹೋಗು : ಉಪವಾಸಕ್ಕೆ ಬಾಯಿ ಊಸಿ ಅಳಿವುದಱಿಂದಂ (ಪಸಾರ. ೯೦–೨೦). [← ತಮಿ. ಊಶು]

**ಊಸು$_3$** (ನಾ). ಅಷ್ಟು, ಇಷ್ಟು ಎಂಬರ್ಥದ ಆಸು ಈಸುಗಳ ನಡು ವಣ ಪ್ರಮಾಣ : ಈಸು, ಊಸು, ಏಸು (ಶಬ್ದಾನು. ೪೪೧ ವ್ಯಾಖ್ಯಾನ). 'ಆಸು$_3$', 'ಈಸು$_3$' ಪರಾ. [?]

**ಊಸುರವಳ್ಳಿ**, 'ಊಸರವಳ್ಳಿ' ನೋ.

**ಊಸುರುವಳ್ಳಿ** 'ಊಸರವಳ್ಳಿ' ನೋ.

**ಊಹ** (ನಾ). ಅನುಮಾನಿಸಿ ತಿಳಿಯುವ ಕ್ರಮ ; ತರ್ಕ; ಊಹೆ : "ಊಹಃ, ತರ್ಕಃ, ಅನುಮಾನೋಕ್ತಿಃ — ಈ ೩ ತರ್ಕದ ಪೆಸರ್" (ಹಲಾಯು. ೩–೧೦) ; ಅಕಾರಾಂತಕ್ಕೆ – ವಧ . . . ಊಹ, ಅಳಕ ಎಂಬಿವು (ಶಮದ. ೮೩ ಪ್ರಯೋ). [ಸಂ.]

**ಊಹನೀಯ** (ಗು). ಊಹಿಸಲ್ಪಡಬಹುದಾದ : ಊಹ್ಯ, ಊಹನಂ, ಊಹನೀಯಂ, ಊಹ್ಯಂ (ಕಾಶಕ್ಯ. ೧೨೪). [ಸಂ.]

**ಊಹನೆ** (ನಾ). = ಊಹೆ : ಅವನು ಎಲ್ಲಿಯೋ ಸತ್ತಿರಬೇಕೆಂದು ಪತ್ರಿಕೆ ಗಳ ಊಹನೆ (ನಿಷ್ಕಾಮು. ೧೩೫). [ಸಂ. ಊಹನ]

**ಊಹಾತೀತ** (ಗು). ಊಹೆಗೆ ಎಟುಕದ, —ನಿಲುಕದ: ಪರಹಿತಕ್ಕಾಗಿ ಸ್ವಹಿತವನ್ನು ಬಲಿಗೊಡುವ ಭಾವನೆ ಊಹಾತೀತವಾಗಿ ಕಾಣುತ್ತದೆ (ಪುನರು. ೨೯೧). [ಊಹ + ಅತೀತ]

**ಊಹಾಪೋಹ** (ನಾ). ೧. ತರ್ಕ ಮತ್ತು ವಿತರ್ಕ : ಮತಿಯುತರು ನಾಲ್ವರಿಂ ಬೆರಸುತೂಹಾಪೋಹ ತತಿಗಳಂ ತಿಳಿದಾತ್ಮಬಲ ಪರಬಲಗಳಂ (ವೆಂಕರಾ. ೬–೨೬–೨೯). ೨. ಕೇವಲ ಊಹೆ : ಕಾಡಿನಲ್ಲಿ ಸೌದೆ ಕಡಿಯುವವನು ತಂದ ಸುದ್ದಿ ಜನರ ಊಹಾಪೋಹಗಳನ್ನು ಮತ್ತೆ ಕೆರಳಿ ಸಿತು (ಸಿಡಿಲು. ೨೩) [ಊಹ + ಅಪೋಹ]

**ಊಹಾಪೋಹಜ್ಞಾನ** (ನಾ). ತರ್ಕ ವಿತರ್ಕದಿಂದಾದ ಜ್ಞಾನ : ನನಗಾದರೋ ಪತ್ತೆದಾರರ ಊಹಾಪೋಹಜ್ಞಾನವಾಗಲಿ, ಕಲಾಕೌಶಲವಾ ಗಲಿ . . . ಗೊತ್ತಾಗುವುದಿಲ್ಲ (ಬೆನ್ನಬೀ. ೧೧೩). [ಊಹಾಪೋಹ + ಜ್ಞಾನ]

**ಊಹಾಪೋಹೆ** (ನಾ). = ಊಹಾಪೋಹ : ಆ ವಿಷಯದಲ್ಲಿ ಊಹಾ ಪೋಹೆಗಳು ಎದ್ದಿವೆ (ರೂಢಿ). [ಸಂ. ಊಹಾಪೋಹ]

**ಊಹಾಬಲ** (ನಾ). ಊಹೆಮಾಡುವ ಶಕ್ತಿ, —ಸಾಮರ್ಥ್ಯ : ಅಳವಿ ಯಲಿ ಪರಿವಿಡಿಯಲೂಹಾಬಲದಲವಧಾನದಲಿ ಶಸ್ತ್ರಾವಳಿಯ ಸಾಂಗೋ ಪಾಂಗಶ್ರಮವನು ಕೋಱಿದನು ಪಾರ್ಥ (ಕುವ್ಯಾಆ. ೭–೪೧). [ಸಂ.]

**ಊಹಿತ** (ಗು). ಊಹಿಸಲ್ಪಟ್ಟ ; ತರ್ಕಿಸಿದ. [ಸಂ.]

**ಊಹಿನಿ** (ನಾ). ಗುಂಪು ; ಒಂದು ಕ್ರಮದಲ್ಲಿ ವ್ಯವಸ್ಥೆಗೊಳಿಸಿದ ಸಮೂಹ. 'ಅಕ್ಷೌಹಿಣಿ' ಪರಾ. [ಸಂ. ಊಹಿನೀ]

**ಊಹಿಸು** (ಕ್ರಿ). ತರ್ಕಿಸು ; ಅನುಮಾನಿಸು : ಊಹಿಪಡೆಯಾಂ ಭಕ್ತ ದೇಹಿಕದೇಹನಪ್ಪಪ್ಪನಿದು ಸಂದೇಹಮೇ (ಬಸವು. ೧–೩೩) ; ಮೋಹಾಗಮಸಿದ್ಧಾಂತದ ಗಣಿತಮನೂಹಿಸಿ ಗುಣೆಯಿಸಬೇಕೆಂದೆನುತ (ಜಯುಕಾ. ೩–೩೫) ; ಊಹಿಸಿ ಕಡುಚೆಲ್ವ ಚಿತ್ರಮಂಟಪ ಸನ್ನಾಹದ ಮೆಱೆದುವೇ ವೇಳ್ವೆ (ಕಂಸವಿ. ೭–೮೭) ; ಅನೇಕ ವರ್ಷಗಳವರೆಗೆ "ಬಿ" ಜೀವಾತು ಒಂದೇ ಜೀವಾತೆಂದು ಊಹಿಸಲಾಗಿತ್ತು (ಅಡುಸೌ. ೬೧).

[ಊಹನ$_0$ + –ಇಸು$_3$]

**ಊಹಿಸುಹ** (ನಾ). ಊಹೆ ಮಾಡುವುದು ; ತರ್ಕಿಸುವುದು (೬).

[ಊಹಿಸು + –ಹ$_2$]

**ಊಹು** 'ಉಃ' ನೋ.

**ಊಹೆ** (ನಾ). ಅನುಮಾನಿಸುವುದು ; ತರ್ಕ : ಊಹೆ ಕೊಂಬುದೆ ಕಪಟದಿಂದವಗಾಹಿಸುವೆ ಸಾಕಿನ್ನು ಮೇಲಣ ಗಾಹುಗತಕಗಳೆಮ್ಮೊಳೆಂದರು ಜಱೆದು ಸೌಬಲನ (ಕುವ್ಯಾಸ. ೧೪–೨೦) ; ತನ್ನ ಊಹೆಯಂತೆಯೇ ಎಲ್ಲವೂ ನಡೆದುದನ್ನು ಕಣ್ಣಾರೆ ಕಂಡಂತಾಯಿತು (ಕೃದೇವ. ೧೫).

[ಸಂ. ಊಹ]

**ಊಹೆಕಡ್ಡಿ** (ನಾ). (ನೀರು ಅಥವಾ ಖನಿಜಗಳನ್ನು ಕಂಡು ಹಿಡಿಯಲು) ಊಹೆಗಾಗಿ ಉಪಯೋಗಿಸುವ ಕಡ್ಡಿ, —ಕೋಲು : ನೆಲದೊಳಗೆ ಅಡಗಿರುವ ನೀರನ್ನಾಗಲಿ ಖನಿಜಗಳನ್ನಾಗಲಿ ಊಹೆ ಕಡ್ಡಿಯ ಮೂಲಕ ಹುಡುಕುವುದು (Dowsing. ಇಂಕಸ).

[ಊಹೆ + ಕಡ್ಡಿ]

**ಊಹೆಗೆಡು** (ಕ್ರಿ). ವಿಚಾರ ಶೂನ್ಯವಾಗು ; ದಿಕ್ಕುತೋಚದಿರು : ಆಟದಲ್ಲಿ ಶಕುನಿಗೆ ಕೇಳಿಕೊಂಡ ದಾಯಗಳು ಬಿದ್ದುವು, ಧರ್ಮರಾಯನು ಊಹೆಗೆಟ್ಟನು (ರಾಜಸೂ. ೯೫). [ಊಹೆ + ಕೆಡು]

**ಊಹೆದೆಗಹು** (ನಾ). ವಿಚಾರ ಶೂನ್ಯವಾಗುವಿಕೆ ; ದಿಕ್ಕುತೋಚದಿರುವಿಕೆ : ಊಹೆದೆಗಹಿನ ಕಂಬನಿಯ ತನಿಮೋಹರದ ಘನಶೋಕ ವಹ್ನಿಯ ಮೇಹುಗಾಡಿನ ಮನದ ಕೌರವನಿತ್ತನೋಲಗವ (ಕುವ್ಯಾದ್ರೋ. ೧–೧೨). [ಊಹೆ + ತೆಗಹು]

**ಊಹೆಮಿಗು** (ಕ್ರಿ). ಊಹೆಗೆ ಮೀಱು : ಊಹೆಮಿಕ್ಕ ಯುಕ್ತಿಯಿಂ ಸುಣ್ಣನಪ್ಪ ಜಾಣ್ಮೆಯಿಂ (ಅಂಕಿಗೂ. ೩–೪೯). [ಊಹೆ + ಮಿಗು]

**ಊಹ್ಯ** (ಗು). ಊಹೆಮಾಡಬಹುದಾದ ; ಅನುಮಾನಿಸತಕ್ಕ : ಊಹ್ಯ ಅಥವಾ ಮಿಥ್ಯ (imaginary) ಸಂಖ್ಯೆಗಳನ್ನು ಮೊಟ್ಟಮೊದಲು ಕಲ್ಪಿಸಿ, ಉಪಯೋಗಿಸಿದವನು ಕಾರ್ಡಾನ್ (ಗಣಿಚ. ೯೮). [ಸಂ.]

**ಊಳ್$_1$**, ಊಳು$_1$ (ಕ್ರಿ). ೧. ಗಟ್ಟಿಯಾಗಿ ಕೂಗು ; ಧ್ವನಿಮಾಡು ; ಕಿರುಚು ; ಬೊಬ್ಬಿಡು : ಮುಳಿವಳಿಱಪ್ಪಳಿಪ್ಪಳೆರ್ದೆಯಂ ಬಡವಳ್ಪುರುಡಿಪ್ಪ ಊಳ್ವಳ್ (ಕಾವ್ಯಸಾ. ೯೯೩ ಶೂದ್ರಕ) ; ಮರುಳ್ಗೊಂಡವೊಲೂಳ್ವ ಬಗ್ಗಿಸುವ ಬೇಗದೊಳಾ ಕಟಕಂಗಳೆಯ್ದೆ ಕೆಯ್ಕೊಂಡುವು ಮಂದರಕ್ಷುಭಿತ ದುಗ್ಧಪಯೋಧಿಗಭೀರನಾದಮಂ (ಪಂಪಭಾ. ೧೦–೪೯) ; ತಾಮ್ರಭೀಕರವಮಂ ಬಿಚ್ಚನೆ ಬಿಟ್ಟು ಕಣ್ಣನೆರಡುಂ ನೀಳಂಬಿಸುತ್ತೂಳ್ದೊಡಂಬರದೊಳ್ ನಿಂದು ಗಜಪ್ರಿಯಾಂಬರಚರರ್ ಜೀಯಯ್ಯ ಛಾಪ್ಪೆಂದು ಜೀಂಕರಿಪನ್ನಂ ವನದಂತಿ ಪೋರ್ದುದು (ಶಾಂತಿಪು. ೨–೧೧೧) ; ಎರಡು ಸಂಜೆಯೊಳಂ ಮೃಗಪಕ್ಷಿಗಳ್ ನೆರೆದು ದೀಪ್ತದೊಳೂಳೆ (ಲೋಕೋಪ. ೪–೬೧) ; ಬಂದೂಳ್ವ ಬೆರ್ಚಿಸುವ ಚಪಳ ಕಪಿಗಲ್ಲಾಡಿ (ಪುಷ್ಪವು. ೨–೪೪) ; ಕವಕ್ಕವ ಎಲೆಎಲೆ ಉಊಉ ಪುಗಲ್ ಪುಗಲೆಂದೊಚ್ಚತಮೂಳ್ವ ಕೋಗಿಲೆಯುಂ (ಶಮುದ. ೬೧ ಪ್ರಯೋ) ; ತಾಳ ಮೃದಂಗ ಕಾಹಳ ರವಂ ಪಡೆದೂಳ್ವ ಪಿಶಾಚಕೋಟಿ ಭೀತಾಳರ ಬೊಬ್ಬೆ (ದಶಕು. ೫–೩). ೨. ದೂರದಿಂದ ಕರೆ, —ಕೂಗು : "ಊಳ್ – ದೂರಾದಾಹ್ವಾನೇ" (ಶಮಧಾ). ೩. (ನಾಯಿ ನರಿಗಳು) ಕೂಗು : ಆಕಾಶಕ್ಕೆ ಬಾಯಂ ತೆಱೆದೊಳ್ವ ಬಳ್ಳುಗಳುಮಂ (ಪಂಪಭಾ. ೧೩–೫೬ ವ) ; ಉದಯದೊಳೂರ ನಟ್ಟನಡುವಿರ್ದನನತ್ತಲೆ ದಿಟ್ಟಿಗೊಟ್ಟು ಮಾಣದೆ ಶುನಕಂಗಳೂಳ್ದೊಡವನೀಪತಿಗಕ್ಕುಮಪಾಯಂ (ಲೋಕೋಪ. ೧೨–೬೧) ; ದೆಸೆದೆಸೆಯೊಳಸದಳಂ ಸುಸಗಿ ಮಾಣದೂಳ್ವ ಬಳ್ಳುಗಳಳವಿಗಳಿದ ಕರ್ಕಶರವಂಗಳೊಡನೆ (ವರ್ಧಪು. ೮–೪೦ ವ) ; ಮುಂದಡ್ಡಗಟ್ಟಿ ನರಿಯೂಳ್ದುವು (ಚೆಬಪು. ೩೫–೧೮) ; ಬಸದಿಯೊಳೂಳ್ವ ಬಳ್ಳುಗಳಂತೆ ಕೂಗಿಡುತ್ತಂ (ವೃಷವಿ. ೩೫–೫೫ ವ). ೪. (ಆಲಂ) ನಿಂದಿಸು ; ತೆಗಳು ; ದೂಷಿಸು ; ಬಯ್ಯು : ಭಂಡಗವಿ ಬಣಗುಗವಿಗಳ ಕೊಂಡುಂ ಕೊನೆದೂಳುತಿರ್ಪ ಕುಕವಿಗಳಂ (ಛಂದೋಂಬು. ೧–೨೬ ಅಡಟ) ; ಶಿವಭಕ್ತರದಂ ಮಱೆಯಿಸಿ ಶಿವನಭವಂ ಜನಕರಾರುಮಿಲ್ಲೆಂದೂಳ್ವರ್ (ಸಮಪ. ೮–೩೦) ; ಅದನಜ್ಞಾನಿ ಜನಂಗಳ್ ಪದೆದೂಳ್ವರ್ (ನೇಮಿಪು. ೭–೮೧) ; ಗಾಂಪರಿರದೂಳಿದೊಡೇಂ (ಉದ್ಭಟ. ೧–೧೭) ; ಮುಱಿದುದು ಕೆಳದಿಯ ಪಡೆ ತೆಱನಱಿಯದೆ ಮುನ್ನೂಳ್ದ ಚೆನ್ನಬಸವನ ಪಲ್ಲುಂ (ಅಪ್ರತಿ. ೫೫–೧೧). ೫. (ಆಲಂ) ಅರ್ಥಹೀನವಾದ ಮಾತನ್ನು ಹೇಳು ; ಹುರುಳಿಲ್ಲದೆ ಮಾತಾಡು ; ಒದರು : ಆದಿಶಿವನಂ ಬಿಟ್ಟು ದುರ್ಭ್ರಾಂತಿಯಿಂದೆ ವಿಷ್ಣ್ವಾದಿಗಳ್ ಪರತತ್ತ್ವವೆಂದು ಪೇಳ್ವವು ಸಕಲ ವೇದಂಗಳೆಂದೂಳ್ವರರೆಬರ್ (ಪದ್ಮರಾ. ೧೦–೨೭೪) ; ಬಲ್ಲವರಾದೊಡಮೇನೊ ಕೆಲರ್ ತಾಮಲ್ಲದೆ ತಮ್ಮೊಳ್ದಾ ಮಾತಲ್ಲದೆ ಸಲ್ಲದು ಸರ್ವಗರ್ಗನುತಂ ಮತ್ತಿನ ಮಾನ್ಯರೊರೆದ ಕೃತಿಯ ಸಲ್ಲಲಿತಮನೇನೆನ್ನದೆ ತಮ್ಮಯ ಬಲ್ಲತನವನೇ ಮೆಱೆವಣ್ಣಂಗಳ (ಜಯುಕಾ. ೧–೧೭) ; ಉತ್ತರಂಬೇಳಲಾಱದೆ ಮೊಗಂ ಬೆಮರ್ದು ಕಂಗೆಟ್ಟೂಳ್ವ ಖೂಳ ಕುಕವಿಯ ಕಾವ್ಯದಂತಿಲ್ಲ ಖಂಡಶರ್ಕರೆಯಿನಿದಿಗಿನಿದುಮಾಗಿ (ಚೆಬಪು. ೧–೩೫).

**ಊಳು$_1$** : ೧. ಊಳಿದುವು ಪೆರ್ಗಹಳೆಗಳು . . . ಶಂಖಗಳೂಳಿದುವು ಶಂಕರನ ಸಮ್ಮುಖದೊಳಗೆ (ಶಂಕಪಾ. ೨–೫೩) ; ಪಿತನು ರತ್ನಾಕರ ಲಕ್ಷ್ಮಿ ಸಹೋದರಿ ಆದರು ಶಂಖದ ನಿಲವು ಭಿಕ್ಷೆಯೊಳೂಳುವುದಾಯಿತಿದಚ್ಚರಿ (ಇಂಚಾಪ. ೮೯–೩೩). ೩. ಶೂಲಿಯಲಿ ಗರ್ವಿಸಿ ಮಹೀಧರಮೂಲದಲಿ ಕೈಸಿಕ್ಕಿ ನಾಯವೊಲೂಳಿದವ ತಾನೀತನಲ್ಲವೆ (ತೊರರಾ. ೬–೧೦೫೦) ; ನರಕದೊಳು ನಾಯಾಗಿ ಬಿಲ್ಲೇಶ ಬೊಮ್ಮಯ್ಯ ಗುರುಸಿದ್ಧರಾಮನಾಥಂ ಸುಳಿಯೆ ಕಂಡೂಳೆ ಕರುಣದಿಂ ಕೈನೀಡೆ (ಸಂಗಿರಾ. ೧೦–೨೭) ; ವೇದಾಗಮಂಗಳೆಂಗಿತವಱಿಯದೂಳುತ್ತೆ ಶಾಗೆನರಿಗಳ ಮಾಳ್ಕೆಯಿಂ (ಸಿದ್ದೇಪು. ೮–೩೭) ; ಕತ್ತಲೆಯ ಮಱೆಗೆಯ್ದು ಬೊಗಡುಬಾಯಿಂದಲೂಳುತ್ತೆ ತನ್ನಿಚ್ಚೆಬಂದಂತೆ ನಾಯ್ಸರಕೆಂದೊಡಿತ್ತ ಬಾ ಜಾಣಯೆಂಬಾ ಹಣ್ಣುಮುದುಸೂಳೆಯರೆಸೆದರು (ಚೆಬಪು. ೧೦–೭೬). ೫. ದುಷ್ಕವಿಯೂಳುತ್ತಿರಲೇನಾನುಂ ಶಬ್ದಂ ದೊರೆಕೊಂಡೆಸಗಿದೊಡೆ ಕವಿತೆಯಕ್ಕುಮೇ (ದಿವ್ಯಸೂ. ೧–೩೪).

ಊಳೂಳು (ದ್ವಿರುಕ್ತಿ) : ಕಾರಿದ್ದನುಂಡು ಕಪ್ಪರವೆತ್ತು ಕೈಯೊಳು ಕೇರಿಕೇರಿಯೊಳಳುತಳುತೆ ಊರೂರದೇವರ್ಗೆ ಊಳೂಳುತಿರುತಿರ್ಪ ಮೂಳರ ಮುಱಿದೋವು ರಂಗ (ಶತಸಾಂ. ೧೧–೬೧).

[ದೇ. ‖ ತಮಿ. ಊಳೈ ; ಮಲ. ಊಳಿ, ಓಳಿ = ನಾಯಿ ಅಥವಾ ನರಿಯ ಕೂಗು ; ತೆಲು. ಊಲ = ನರಿಯ ಕೂಗು]

**ಊಳ್$_2$**, ಊಳು$_3$ (ನಾ). ೧. (ಗಟ್ಟಿಯಾಗಿ) ಅರಚುವುದು ; ಕೂಗುವುದು. **ಊಳು$_3$** : ೨. ನಾಯಿ ನರಿಗಳ ಧ್ವನಿ : ನನ್ನ ಅಳು ನರಿಗಳ ಊಳಿನ ಮಧ್ಯೆ ಮುಳುಗಿಹೋಗಿದ್ದು ನನ್ನ ತಪ್ಪಲ್ಲ (ಹೊಸಕ್ಷಿ. ೧೨೩).

[< ಊಳ್$_1$]

**ಊಳಿ$_1$** (ನಾ). ಮರೆ ; ತಡಿಕೆ (?) : ಪೊಲನನೆಲ್ಲರುಮ್ಮೈದಿ ಬಿಲ್ಲರ ನಿಲಿಸಿ ಕಳಿವನು ಕಟ್ಟಿ ಮರ ಮೆಟ್ಟೊಲೆಯದೇಱಿಯೆ ಸಾತೆಯನು ನಿಂದೂಳಿಗಳ ಕಟ್ಟಿ (ಸಾಳ್ವಭಾ. ೫–೨೪). [< ಉಳಿ$_4$]

**ಊಳಿ₂** (ನಾ). ಕೊಳೆ; ಕಸ; ದುರ್ಗಂಧ: ಪಾಲೆಜಿದರುರಗ ನಿರ್ವಿಷವೆ ಕಸ್ತೂರಿಯೊಳಿರ್ದೂಳಿ ಗಂಧಮೆ (ತಿರುಶ. ೭-೫೭).
[ದೇ. ‖ ತಮಿ. ಮಲ. ಊಬಲ್ = ಕೊಳೆ, ಕಸ; ಊಳೈ = ದುರ್ವಾಸನೆ, ದುರ್ಗಂಧ]

**ಊಳಿಕ್ಕು** (ಕ್ರಿ). ಕೂಗಿಕೊ; ಅರಚಿಕೊಳ್ಳು: ಅಸಿಪತ್ರವನದೊಳೂಳಿಕ್ಕೆ ಗುರ್ದುವುದುಂ (ಸುಕುಮಾ. ೧೧-೪೭ ವ). [ಊಳ್₂ + ಇಕ್ಕು]

**ಊಳಿಗ** 'ಊೞಿಗ' ನೋ.

**ಊಳಿಗಗಿತ್ತಿ** (ನಾ). ಊಳಿಗದವಳು; ಕೆಲಸದವಳು; ಸೇವಕಿ; ದಾಸಿ. [ಊಳಿಗ (< ಊೞಿಗ) + -ಗಿತ್ತಿ]

**ಊಳಿಗಗುಡು** (ಕ್ರಿ). = ಊಳಿಗಗೈ: ಶಂಖಚಕ್ರಕಣ್ಣೀರವಾದಿ ಬಿರುದುಗಳು ಮುಂತಾದುವನ್ನು ಹಿಡಿದು ಊಳಿಗಗುಡುತ್ತ . . . ರಂಜಿಸುತ್ತಿರುವ ಸೇವಾಜನರ ಒಡ್ಡಣೆ (ಬಿಟ್ಟಉ. ೩೦-೧೦).
[ಊಳಿಗ (< ಊೞಿಗ) + ಕುಡು₁ (< ಕೊಡು)]

**ಊಳಿಗಗೈ** (ಕ್ರಿ). ಕೆಲಸಮಾಡು; ಸೇವೆಮಾಡು; ಚಾಕರಿ ಮಾಡು: ಕುಂಚ ಕನ್ನಡಿ ಗಿಂಡಿ ಬಿಜ್ಜಣಿಗೆಗಳ ಪಿಡಿದೂಳಿಗಗೈವ ಬಿಂಕಗಾತಿಯರಾ ಪೊಡವಿಯಾಣ್ಮನ ಪೊದ್ದಿಹರು (ಹದಿಬ. ೧-೧೩).
[ಊಳಿಗ (< ಊೞಿಗ) + ಗೈ (< ಕೆಯ್₁)]

**ಊಳಿಗತನ** (ನಾ). ಸೇವಕತನ; ಜೀತಗಾರಿಕೆ: ದಾಜೀಬಾನು ನಮ್ಮ ಮನೆಯ ಊಳಿಗತನವನ್ನು ವಹಿಸಿದ್ದನಂತೆ (ಹೂಬಿಸಿ. ೨೯).
[ಊಳಿಗ (< ಊೞಿಗ) + -ತನ]

**ಊಳಿಗಮಾನ್ಯ** (ನಾ). ಊಳಿಗಕ್ಕಾಗಿ ಬಿಟ್ಟ ಮಾನ್ಯ; ಸೇವೆಗಾಗಿ ಬಿಟ್ಟ ಉಂಬಳಿ: ಸಕಲ ಸ್ವಾಮ್ಯವನೂ ಊಳಿಗಮಾನ್ಯದ ಅರೆಪಾಸಿಯನ್ನೂ ಕೂಡಾ . . . ಸುಖದಿಂದ ಅನುಭವಿಸಿಕೊಂಡು ಬಹರು (ಎಕ. XIV, ಮೈಸೂರು. ೧೧೫-೪೧೫; 1674); ಗ್ರಾಮಾದಾಯ ಚರಾದಾಯ ಹೊರಾದಾಯ ಊಳಿಗಮಾನ್ಯ ಇವು ಮೊದಲಾದ ಸಕಲ ಸ್ವಾಮ್ಯವನು (ಎಕ. XIV, ನಂಜನ. ೨೯೫. ಪು ೧೫೧-೩೪; 1716); ಅದೇ ಸಮಯದಲ್ಲಿ ಊಳಿಗಮಾನ್ಯ ಪದ್ಧತಿಯನ್ನು ಕುರಿತು ಪ್ರಬಂಧವೊಂದನ್ನು ತಯಾರಿಸುತ್ತಿದ್ದನು (ಪುನರು. ೫೩). [ಊಳಿಗ (< ಊೞಿಗ) + ಮಾನ್ಯ]

**ಊಳಿಗವರ್ಗ** (ನಾ). ಕೆಲಸದವರ ಗುಂಪು; ಸೇವಕವರ್ಗ: ಊಳಿಗವರ್ಗಕ್ಕೆ ಸಲುವಷ್ಟು ಗೆಲುಗೆಯ್ಯ ತಾಳಿಕೊಂಡಿರಬೇಕು ಭಟನೂ (ಸೌಂದಕಾ. ೭-೧೩೫). [ಊಳಿಗ (< ಊೞಿಗ) + ವರ್ಗ]

**ಊಳಿಗವಿಡಿ** (ಕ್ರಿ). ಸೇವಾಕಾರ್ಯವನ್ನು ಹಿಡಿ; ಅವಲಂಬಿಸು: ಮಾನುನಿಯರಖಿಳ ವಿನಿಯೋಗದೂಳಿಗವಿಡಿದು ಮಾನಧ್ವಜನನ್ನು ವಾಲೈಸುತ್ತಬರಲು (ನವಮೋ. ೫-೪೪).
[ಊಳಿಗ (< ಊೞಿಗ) + ಪಿಡಿ₁]

**ಊಳಿಗವೆಣ್** (ನಾ). = ಊಳಿಗಗಿತ್ತಿ: ಕಿಱುನಡುವೆಸೆಯೆ ಊಳಿಗವೆಂಗಳೂಳಿಗವಱಿದೆಸಗಲು ರಾಯ ನಡೆದಾ (ಭರಹ. ೩-೭೭).
[ಊಳಿಗ (< ಊೞಿಗ) + ಪೆಣ್]

**ಊಳಿಗಾಳಿ** (ನಾ). ಸೇವಕರ ಗುಂಪು, —ಸಮೂಹ: ಊಳಿಗಾಳಿಯ ರೆರಡು ಸಾಸಿರದಾಳುಗೈವರು ಭಕ್ಷ್ಯಗಳನಾ ಕೂಳ ಬಡಿಸುವರೊರ್ವಳೆಂತೆನೆ (ಬಜ್ಜಪು. ೬೯-೧೭); ಬರುವ ಸಮಯದೊಳೂಳಿಗಾಳಿಯರಿರವ ನೋಡ್ಲಿಂಗಗಳ ಕೀಳಿಸಿ ಚರಣದಡಿಯೊಳು ಹೊಸಕಿ (ಬಜ್ಜಪು. ೬೫-೧೦).
[ಊಳಿಗ (< ಊೞಿಗ) + ಆಳಿ₄]

**ಊಳಿಗಿ** (ನಾ). ಕೆಲಸದವನು; ಸೇವಕ; ಆಳು: ನಂಬಿದರೂಳಿಗಿ ಎಂದು ಸಾರೆ ಬಳಿ ಕುದುರೆಯು ಕಿಳಿರಿನ ಡಂಗುರವೆ? (ಗೀಎಂ. ೪೧-೮).
[ಊಳಿಗ + -ಇ₃]

**ಊಳಿಡು** (ಕ್ರಿ). = ಊಳಿಕ್ಕು: "ಊಳಿಡು (ಊಳ್ + ಇಡು) ಜಂಬುಕಸ್ವನೇ" (ಶಮುಧಾ); ಕೆರದ ಕಿಸಿಕಿಲ ಕಾಕರೋಲ ಬಸದಿಗಳೊಳೂಳಿಡುವ ನರಿಗಳೋ ಬತ್ತಲೆಯ ಭಂಡರೊ (ಬಸವು. ೫೧-೫೩); ಗೋೞಿಡು, ಊಳಿಡು, ದೂಳಿಡು (ಶಬ್ದಾನು. ೪೮೮ ಪ್ರಯೋ); ಪಾಶವೀತೈಪ್ತಿಯಿಂದ ತೋಳಗಳೆರಡು ಊಳಿಟ್ಟುವು (ಒಡ್ಡಿ ಉ. ೬); ನರಿ ಊಳಿಟ್ಟರೆ ನಾಗಲೋಕ ಹಾಳಿ (ಗಾದೆ). [ಊಳ್₁ + ಇಡು₁. / ತಮಿ. ಊಳೈಯಿಡು]

**ಊಳು₁** 'ಊಳ್₁' ನೋ.

**ಊಳು₂** 'ಉೞು' ನೋ.

**ಊಳು₃** 'ಊಳ್₂' ನೋ.

**ಊಱಿಕೆ** (ನಾ). ೧. ಊರುವಿಕೆ. ೨. ಕುಂದಣದಲ್ಲಿ ಕಟ್ಟಿರುವುದು: ಮಣಿಗಣದೂಱಿಕೆಯ[ಪಾಠಾಂ. ದೋಱಿಕೆಯ, ದೂರ್ಮಿಕೆಯ] ಮುದ್ರಿಕೆಯನಿತ್ತನು ರಮೆಗೆ ರಾಘವನ (ತೊರರಾ. ೫-೩-೯೨).
[ಊಱು₁ + -ಇಕೆ]

**ಊಱಿಡು** (ಕ್ರಿ). ನೆನೆಹಾಕು; ನೆನೆಯಿಸು: ಎಕದ ಹಣ್ಣೆಲೆ ಚುಚ್ಚಿಲ ಶಕ್ಕೆಯುಮಿವ ತುಳಿದು ಮೂತ್ರದೊಳಗೂಱಿಟ್ಟುಂ ಯಿಕ್ಕುವಯ ಕಾಲದೊಳಗಂ (ಅಶ್ವವೈ. ೧೨-೯೪). [ಊರು₂ (< ಊಱು₂) + ಇಡು₁]

**ಊಱಿಸು₁**, ಊರಿಸು₁ (ಕ್ರಿ). ೧. ಕಚ್ಚಿಸು; ಚುಚ್ಚಿಸು; ಇರಿಯುವಂತೆ ಮಾಡು; ಮೆಟ್ಟಿಸು: ಪೆರ್ಗೊಣಂಗಳಿಂ ತಗುಳ್ದೂಱಿಸಿಯುಂ (ಧರ್ಮಾಮೃ. ೩-೭೩); ಅಸಿಪತ್ರದ ಮರಗಳನೇಱಿಸಿಯುಂ ದಸಿಯೊಳ್ ನೆಱೆದೆಡೆಗಳನೂಱಿಸಿಯುಂ (ಬಂಹರಿ. ೧೧-೯ ರ); ಕರಡಿಯಂ ಕವಿಸುತ್ತುಂ ಚೇಳುಗಳಿಂದೂಱಿಸುತ್ತುಂ (ಧರ್ಮಪ. ೧-೭೩ ವ). **ಊರಿಸು₁**: ೨. ನಡು; ನೆಡು; ನಾಟು: ಮನಸಿನೊಳು ಭಯ ಖೋಡಿಯೂರಿಸಲು ಬೇಡ (ತುರಂಗ. ೨೯-೮೭); ತಗಟೆ ಗಿಡಗಳನ್ನು ಕಲ್ಲು ಇಲ್ಲದ ನೆಲದಿ ಊರಿಸಿ (ಅರರೋ. ೩).

ಊಱಿಸಿಕೊಳ್ = ಚುಚ್ಚಿಸಿಕೊಳ್ಳು; ಇರಿಸಿಕೊಳ್ಳು: ಇಱಿಸಿಕೊಳುತಂ ತುಱಿಸಿಕೊಳುತೆ ಕೊಱಯಿಸಿಕೊಳುತೆ ನೆಱಿ ಮುಱಿಸಿಕೊಳುತೊಱಸಿಕೊಳುತಲೂಱಿಸಿಕೊಳುತೆ ಹರಿವುತುಂ ತೇರೈಸುತುಂ ತೆರಳುತುರುಳುತುಂ (ಸಾನಂಚ. ೪-೨೦೨ ರ). [ಊಱು₁ + -ಇಸು₃]

**ಊಱು₁**, ಊರು₁ (ಕ್ರಿ). ೧. ನೆಲೆಯಾಗಿ ನಿಲ್ಲು; ಸ್ಥಿರವಾಗಿರು; ನೆಲಸು: "ಊಱು – ಸತ್ವೇ (ನೆಲಸು)" (ಶಮುಧಾ). ೨. ಭದ್ರವಾಗಿ ನಿಲ್ಲಿಸು; ನಾಟು; ನೆಡು: ಗಂಡರ ನೆತ್ತಿಯೊಳೊತ್ತಿ ಬಾಳನಿನ್ನೂಱುಗುಮೆಂದೊಡೇಂ ಪಿರಿದೊ ತೇಜದ ದಳ್ಳುರಿ ಪಾಂಡುರಾಜನಾ (ಪಂಪಭಾ. ೧-೧೦೯); ಇಟ್ಟ ವಿಭೂತಿಯಿಂ ಊಱಿದ ಯಷ್ಟಿಯ ಕೋಲಿಂ (ನಂಬಿರ. ೬-೨೪); ನೆಲಕೆ ದಾಡೆಯನೂಱಿ ಕೆಡೆದುದು ಸುಪ್ರತೀಕಗಜ(ಕುಮ್ಯಾದ್ರೌ. ೩-೭೪); ಗಂಡನ ಪಿಡಿದು ನುಂಗಿದ ಮಾನ ತಾ ಚನಿಖಂಡವ ಕೊಯ್ವಂತೆ ಕೊಯ್ದು ಸಂಡಿಗೆಗೆಯಲು ಶಸ್ತ್ರದೊಳೂಱಿ ವರಮೇಲುಗೆಂಡದಿ ಕರೆಯ ಕಾಸಿದಳು (ಮೋಹತ. ೧೧-೪೭). ೩. ಸ್ಥಾಪಿಸು; ಇಡು; ನೆಲಸುವಂತೆ ಮಾಡು: ತೊಳಪ ಹರಿನ್ಮಣಿಕುಟ್ಟಿಮತಳದೊಳ್ ತಳಮಾರೆ ತಳಮನೂಱಿ ಬೆಡಂಗಂ ತಳೆದು ತಳರ್ನಡೆ ನಡೆವೆಡೆಯೊಳ್ (ಸುಕುಮಾ. ೧೦-೩೯). ೪. ಕಚ್ಚು: ನೊಣವು ಬೆನ್ನನೂಱಿದೊಡೆ ಸೈರಿಸಲಾಱದೆ ಬೆನ್ನಂ ಪೊಯ್ದುಕೊಳ್ವುದುಂ (ಧರ್ಮಾಮೃ. ೧೧-೫೩); ಅಕಟ ಬೆಂಬಿಡದೂಱುವಾ ಮಹಾನೊಳವಹೋ ಅಕಟ ಅಱಿಯಟ್ಟ ನುಂಗುವ ಮಹೋರಗವೋ (ಸಾನಂಚ. ೪-೧೩೫ ರ); ಮುಸುಱುವ ಗುಂಗುಱೂಱುವ ಪಿಪೀಲಿಕೆ ಮುತ್ತುವ ಮಕ್ಷಿಕಂಗಳ್ (ಮಹಾನೀ. ೩-೧೫); ತೇೞೂಱಿದೊಡಾ ಚೇಲೈತನ ಬೇರಪೊಂದೆ ಕಟಿಯಿಂದೀಂಟಲ್ (ಖಮುದ. ೧೧-೩೦); ಚೇಳುಗಳು ತಾವೆಂಟು ಸಾವಿರ ಮೇಳವಿಸಿ ಬಂದೂಱಿದಂದದಿ (ಸಂಭಪ. ೧೨-೧೯)

೫. ಆವರಿಸು : ಮಾಱಿದಾ ಪೊಂಗಳಿಗೆ ಹತ್ತಿಯ ಹೇಱುಗಳ ತಂದಡವಿಯೊಳಗಿಡಲೂಱಿ ಕಾಳ್ಗಿಚ್ಚದನು ನುಂಗಲು ಗುಹೆಗಳನು ಹೊಕ್ಕು (ಸಾಳ್ವಭಾ. ೭-೪೧). ೬. ಅಂಟಿಕೊ; ಹೊಂದಿಕೊ. ೭. ನಡೆ. **ಊರು$_1$** : ೧. ಊರಿತೆನ್ನಯ ಭೀತಿ ರಜಪೂತರೆದೆಯಲ್ಲಿ (ಕೃಷ್ಣಾಕು. ೧೧-೩) ; ನಾರಿ ಮೋರೆ ನೋಡಿ ಊರಿ ಕೂತರೆ ನೀರು ಸಿಕ್ಕೀತೆ (ಗಾದೆ). ೨. ಸೂಜಿಮೊನೆಯನ್ನು ಊರುವಷ್ಟು ಭೂಮಿಯನ್ನಾದರೂ ನಾನು ಅವರಿಗೆ ಕೊಡೆನು (ಕೃವಾಉ. ೩೦೦) ; ಮೊಳಕೆಯನ್ನು ಅಗಿದು ಮತ್ತೊಂದು ಸ್ಥಲದಲ್ಲಿ ಊರುತ್ತಾರೆ (ಮುಂಬಯಿ. ೩-೧೦೨).

ಊಱಿತೋಱು = ಸ್ಪಷ್ಟವಾಗಿ ತೋರಿಸು ; ಒತ್ತಿ ತೋರಿಸು : ಕರಮೊಳ್ಪಿದನಿವನೆಂದೊರ್ವರ ಶಿಷ್ಯನನೂಱಿತೋಱಿ ನುಡಿದೊಯ್ಯನೆ ಮಾಣ್ದಿರದೊಯ್ದು ದೀಕ್ಷೆಗುಡುವಂ (ಧರ್ಮಾಮೃ. ೫-೧೧೦). ಊಱಿಸಾಱು = ಸ್ಪಷ್ಟವಾಗಿ ಕೂಗಿ ಹೇಳು ; ಗಟ್ಟಿಯಾಗಿ ಕೂಗು : ಇದಂ ಪುಗಲಿಂ ಗಡಮೆಂದು ಬೇಟಕಾಱರನಿರದೂಱಿಸಾಱಿ ಜಡಿವಂತೆಸೆಗುಂ (ಪಂಪಭಾ. ೨-೧೩) ; ಓಳಿಯೆ ಕೋದು ಪಲ್ಲವರ ಪನ್ದಲೆಯೆಲ್ಲ ಮನೆಯ್ದೆದಟ್ಟಿ ಕಾಪಾಳಿಕರೂಱಿಸಾಱಿ ಪರಮಣ್ಡಳಿಕರ್ಕ್ಕಳ (ಎಕ. II, ೫೯-೮೮ ; 974).

[ದೇ. ‖ ತಮಿ. ಊನ್ಱು ; ಮಲ. ಊನ್ನು ; ಕೊಡ. ಊರ್ ; ತುಳು. ಊರು ; ತೆಲು. ಊನು ; ಗೊಂಡಿ. ಉರ್‌ಸಾನ ; ಕುವಿ. ಊಹಲಿ ; ಕುರುಖ್. ಊದ್‌ನಾ]

**ಊಱು$_2$, ಊರು$_2$** (ಕ್ರಿ). ೧. ಸುರಿ; ಸ್ರವಿಸು ; ಜಿನುಗು ; ಒಸರು : ಬೇಱೆಯುಂಟೆಂದು ತದ್ವ್ಯಾವೃತ್ತಿ ಮುಖದಿಂದಯೂಱಿ ಮುಟ್ಟದೆ ಮಹಾಸುಜ್ಞಾನಿಗಳಿಗೆ ನೆಱೆ ತೋಱಿಸಲು (ವೀಶೈಪು. ೫-೩-೭). ೨. ತೇವವಾಗು ; ಒದ್ದೆಯಾಗು ; ನೆನೆ (೬). ೩. ಅಧಿಕವಾಗು; ಹೆಚ್ಚಾಗು. 'ಊರ್ಮೆ' ಪರಾ. **ಊರು$_2$** : ೧. ದೃಷ್ಟಿಯಲ್ಲಿ ಚಾಂಚಲ್ಯ ಬೆರೆತಿತ್ತು. ಕಣ್ಣುಕುಣಿಕೆಗಳಲ್ಲಿ ನೀರೂರಿತ್ತು (ಪ್ರಣಸ. ೩); ಊಱ್ ಒಸದು ಎಂಬ ಅರ್ಥದ ಬೇರು. ಊರು ಕ್ರಿಯಾಪದ. ಬಾಯಲ್ಲಿ ನೀರು ಊರುತ್ತದೆ (ನಮ್ಮನು. ೮೫). ೨. ಇವಂ ಸಮೂಲಂಗಳಂ ತಂದು ಸರಿಗೂಡಿ ಸುಟ್ಟು ಬೂದಿಯಂ ಮಡಕೆಯೊಳಗಿಕ್ಕಿ ಉದಕದಲಿ ಕಲಸಿ ಊರಲಿಟ್ಟು ಗುಳಿಯನಗೆದು ಗಡಿಗೆಯಂ ಹೂಳಿ (ವಿವೈವಿ. ೯).

ಊರಲುಹಾಕು = ಊರಹಾಕು ; ನೆನೆಹಾಕು ; ನೀರಿನಲ್ಲಿ ನೆನೆಸು : ನೆಲ್ಲಿಕಾಯನ್ನು ಊರಲುಹಾಕಿದೆ (ರೂಢಿ).

[ದೇ. ‖ ತಮಿ. ಮಲ. ಊಱು ; ತುಳು. ಊಜು, ಊಸು ; ತೆಲು. ಊರು ; ಕೋಲಾ. ಊಱ್ ; ನಾಯ್ಕಿ. ಊಱ್ ; ಕುಇ. ಉರ್ಪ]

**ಊಱುಂಗೋಲು, ಊರುಕೋಲು, ಊರುಗೋಲು, ಊಱುಗೋಲು** (ನಾ). ೧. ನಡೆಯುವಾಗ ಊರಿಕೊಳ್ಳುವ ಕೋಲು ; ಆಧಾರವಾದ ಕೋಲು, -ಬೆತ್ತ: ಈ ಕೊಳುಗುಳದೊಳ್ ನಿನ್ನಂಗೆಲ್ದಲ್ಲದೆ ಕಾಟ್ಗಿಡೆದೆನಾದೊಡೀ ಬಿಲ್ ಊಱುಂಗೋಲಕ್ಕೆ (ರಾಮಾಶ್ವ. ೯೨-೩೦). **ಊರುಕೋಲು**: ೧. ನೀನು ನನಗೆ ಒಂದು ಊರುಕೋಲು ಆದ ಹಾಗೆ ಆಗುತ್ತಿ (ಮುನಿಮಾ. ೫೬). **ಊರುಗೋಲು** : ೧. ಅವರು ಎಲ್ಲರಿಗೂ ಊರುಗೋಲಿದ್ದಂತೆ (ಶೀಪ್ರಕ್ಷ. ೪) ; ಪಾರಿಜಾತವೃಕ್ಷದ ಕೊಂಬೆಗೆ ಊರುಗೋಲಾಗಿಯೂ ದೋಟಗೋಲಾಗಿಯೂ ಇರುವಂತೆ ತೋರುತ್ತದೆ (ದೇವೀಚಾ. ೧೨೧). ೨. (ಆಲಂ) ಆಧಾರ; ಆಲಂಬನ : ಅತನು ನನಗೆ ಊರುಗೋಲಾಗಲಿಕ್ಕಿಲ್ಲವೆ (ವಿಧಿವೈ. ೯೨). ೩. ತೆಪ್ಪ ನಡೆಸುವ ಕೋಲು; ಹುಟ್ಟು : ಹಾಕೋಕೊಂದಾರುಗೋಲು ನೂಕೋಕೊಂದೂರುಗೋಲು ಬೊಬ್ಬೆ ಹೊಡೆದವೆ ಬಾಳೆಮೀನು (ನಾಪದ. ೧೮). **ಊಱುಗೋಲು** : ೩. ಜಲಹರಿಯಿಂದೊಂದೂಱುಗೋಲು ಪೊಱಮಡಲದಂ ಕೊಂಡು (ನಂಬಿರ. ೧೪-೧೦೫). [ಊಱು$_1$ + ಕೋಲು$_1$ (< ಕೋಲ್$_1$)]

**ಊಱುಗೋಲು** 'ಊಱುಂಗೋಲು' ನೋ.

**ಊೞಿಗ, ಉಳಿಗ$_2$, ಊಳಿಗ** (ನಾ). ಕೆಲಸ ; ಕಾರ್ಯ ; ಸೇವೆ ; ಜೀತ : ಪೆಱರ ಪಲವುಂ ಜೀವಧನಂಗಳನರಸರ ಕಾಪಿನ ಪೊಲನಂ ಪೊಕ್ಕುವೆಂದುಂಡಿಗೆಯೊತ್ತಿಕೊಳುತ್ತುಮೂೞಿಗವಾದೆಡೆಗಳೊಳ್ ಝಾಳೆಯಂಗೊಳುತ್ತುಮನಿತಱೊಳಂ ತಣಿಯದೆ (ಸುಕುಮಾ. ೭-೩೫ ವ) ; ಅಗಿದೆನಗಿಂತು ಸಂಜೆಯನೆ ಸಾಧಿಸಿ ಸೂರುಳಿದಾಗಳೇಂ ಗಳೂೞಿಗವೆಲೆ ಕಂಡಪೊಱ್ತು ಗುಣದಿಂ ನಿನಗೊಲ್ದುದು ಮಾತೆ (ಲೀಲಾವ. ೨-೫೬). **ಉಳಿಗ$_2$** : ಬಿಡದಿ ಉಳಿಗದ ಲಿಂಗಣ (ಎಕ. XIV, ಗುಂಡ್ಲುಪೇ. ೧೪೮-೩೫ ; 1087); ಮಲಪ್ಪಣಗಳ ಉಳಿಗದ ಚಿಕಣ (ಎಕ. XVI, ಚಿಕ್ಕನಾ. ೮೩-೩೦; 1529); ನನ್ನ ಹಯ್ದನಿಗೆ ಉಳಿಗಕ್ಕೆ !—ಉಹುಂ, ನಾನೊಲ್ಲೆ (ಬೆಟ್ಟಅ. ೧೪೨-೧೪). **ಊಳಿಗ** : ದನಸರ ಊಳಿಗಂ ನಿಕೆವಟು ಕೊಟಂ (ಎಕ. VIII, ಸೊರಬ. ೫೭೧-೩೮ ; 692) ; ಲೋಭಮೋಹಂಗಳೂಳಿಗವಲ್ಲಿ ಮದದ ಸಂದಣಿಯಲ್ಲಿ ಮತ್ಸರದ ವಾಯುವಲ್ಲಿ (ನಂಬಿರ. ೧-೬೨) ; ಆ ದೇವರುಗಳ ಊಳಿಗಕ್ಕೆ (ಎಕ. XII, ಚಿಕ್ಕನಾ. ೨-೨೬ ; 1261) ; ಏಳನೆಯ ದಿವಸದ ಮಹಾರಥರೂಳಿಗವು ಹಿರಿದಾಯ್ತು (ಕುವ್ಯಾಭೀ. ೭-೫) ; ಸರಸ್ವತಿಯ ಊಳಿಗದಲ್ಲಿ ಮೇಲುಕೀಳುಗಳ ಎಣಿಕೆಯಿರಬಹುದೆ ? (ಜೀವಸಾ. ೪೭).

ಊಳಿಗದವ = ಕೆಲಸದವನು ; ಸೇವಕ ; ಆಳು : ಇಂದುಧರ ಪಂಪಾಪುರೀಶನೂಳಿಗದವರ್ಬೆರಸದಂ ಕೊಂಡು. . . ವಿಜ್ಞಾಪಿಸೆ (ಪದ್ಮರಾ. ೫-೧೭) ; ಶಿವ ನಿನ್ನ ಬಾಗಿಲ ಕಾದಿಹ . . . ಇಂದ್ರೋಪೇಂದ್ರಾದಿಗಳು ನಿನ್ನೂಳಿಗದವರಂತೆ ಕಟ್ಟಿಕಾದಿಹರು (ಮೋಹತ. ೨೦-೪೫) ; ಊಳಿಗದವರೆಲ್ಲ ಕಿವಿಯುಳ್ಳರದರಿಂದ ಕೇಳಿದರರಸನಾಜ್ಞೆಯನು (ಭರಚ. ೩-೧೪). ಊಳಿಗದವಳು = ಕೆಲಸದವಳು ; ಸೇವಕಿ : ಗಿಣಿಯನ್ನು ಸಂಚಿಯೂಳಿಗದವಳ ಕೈಯಲ್ಲಿ ಕೊಟ್ಟು (ವಚಕಾ. ೨-೧).

[ದೇ. ‖ ತಮಿ. ಮಲ. ಊೞಿಯ ; ತುಳು. ಊಳಿಗ ; ತೆಲು. ಊಡಿಗ, ಊಡಿಯ]

**ಊೞಿಗಗುವರ** (ನಾ). ಸೇವಕನ ಮಗ ; ದಾಸನ ಕುವರ : ಊೞಿಗಗುವರನ ನುಡಿಗೇಳ್ದಾಳೋಚಿಸಿ (ಚಕವಿ. ೪-೩೩).

[ಊೞಿಗ + ಕುವರ$_2$]

**ಋ** (ನಾ). ಕನ್ನಡ ವರ್ಣಮಾಲೆಯ ಏಳನೆಯ ಅಕ್ಷರ; ಋಕಾರ. ☞ ಇದು ಸಂಸ್ಕೃತದಿಂದ ಬಂದದ್ದು: ಋ ಋೂ (ಶಮದ. ೪ ವೃತ್ತಿ). [ಸಂ.]

**ಋಕಾರ** (ನಾ). [ವ್ಯಾಕ] = ಋ. 'ಋಕಾರಾಂತ' ಪರಾ. [ಸಂ.]

**ಋಕಾರಾಂತ** (ಗು). [ವ್ಯಾಕ] 'ಋ' ಎಂಬ ವರ್ಣದಿಂದ ಕೊನೆಗೊಳ್ಳುವ (ಶಬ್ದ): ಅಕಾರಾಂತಮುಮಿಕಾರಾಂತಮುಮುಕಾರಾಂತಮುಂ ಋಕಾರಾಂತಮುಂ ಸ್ವಭಾವದಿಂ ಲಿಂಗಮಪ್ಪುವು ... ಋಕಾರಾಂತಕ್ಕೆ—ಪಿತೃ, ಸವಿತೃ, ನಪ್ತೃ (ಶಮದ. ೬೪ ವೃತ್ತಿ, ಪ್ರಯೋ). [ಋಕಾರ + ಅಂತ]

**ಋಕ್ಕು** (ನಾ). ವೇದಮಂತ್ರ; ಋಗ್ವೇದದ ಮಂತ್ರ: ದ್ವಿತ್ವದಿನುತ್ತಮಕ್ಕುಂ; ವಾಕ್ಕು, ದಿಕ್ಕು, ತ್ವಕ್ಕು, ಋಕ್ಕು (ಶಮದ. ೮೬ ಅಡಿಟ). [< ಸಂ. ಋಚ್]

**ಋಕ್ಛಂದಸ್ಸು** (ನಾ). ಋಗ್ವೇದದ ಛಂದಸ್ಸು: ಕಣ್ವರು–(ಋಕ್ಛಂದಸ್ಸಿನಿಂದ ಹರಸುವರು) (ಶಾಕುಂತ. ೫೨–೨೦). [ಸಂ. ಋಕ್ಛಂದಸ್ (ಋಚ್ + ಛಂದಸ್)]

**ಋಕ್ಥ** (ನಾ). ೧. ಆಸ್ತಿ; ಐಶ್ವರ್ಯ. ೨. ಹಣ: "ದ್ಯುಮ್ನಂ ... ಋಕ್ಥಂ ... ಹಿರಣ್ಯಂ, ವಸು, ವಿಭವಃ—ಈ ೧೫ ಒಡಮೆಯ ಪೆಸರ್" (ಹಲಾಯು. ೧೪–೮೦). [ಸಂ.]

**ಋಕ್ಷ** (ನಾ). ೧. ಕರಡಿ: "ಋಕ್ಷಃ ... ಭಲ್ಲೂಕಃ – ಈ ೫ (ಕರಡಿ)" (ಹಲಾಯು. ೩೮–೬೫); ಕಾನನಂ ಮನುಜ ಖೇಚರ ಗೋಚರಮಲ್ತು ಋಕ್ಷ ಶಾರ್ದೂಲ ಮದೇಭ ಸಿಂಹ ಶರಭಾಕುಲಂ (ಪಂರಾಮಾ. ೧೦–೯೩); ಋಕ್ಷ ವಾನರ ಕುಲದ ವಿವಿಧ ಚೇಷ್ಟೆಗಳಿಂದೆ (ಜೈಮಿಭಾ. ೧೦–೪). ೨. ನಕ್ಷತ್ರ: "ಭಂ, ನಕ್ಷತ್ರಂ ... ಋಕ್ಷಂ, (ತಥಾ) ಉಡು – ಈ ೯ ನಕ್ಷತ್ರದ ಪೆಸರ್" (ಹಲಾಯು. ೧೦–೫೧). ೩. ಒಂದು ಜಾತಿಯ ಮರ; "ದಿಂಡಿಲಮರ" (ಗಂಗಾಮ. ೪೯). ೪. ಒಂದು ಬಗೆಯ ಜಿಂಕೆ. ೫. ಏಳು ಕುಲಪರ್ವತಗಳಲ್ಲೊಂದು. [ಸಂ.]

**ಋಕ್ಷಗಂಧಿಕೆ** (ನಾ). ಕರಿಯ ನೆಲಗುಂಬಳ: "ಕ್ಷೀರವಿದಾರೀ, ಮಹಾಶ್ವೇತಾ, ಋಕ್ಷಗಂಧಿಕಾ – ಈ ೩ ಕರೀನೆಲಗುಂಬಳದ ಹೆಸರುಗಳು" (ಸಿದ್ಧಾಂತಿ. ೧೨೦). [ಸಂ. ಋಕ್ಷಗಂಧಿಕಾ (ಋಕ್ಷ + ಗಂಧಿಕಾ)]

**ಋಕ್ಷಗಂಧೆ** (ನಾ). "ಅನಂತನಗೊಂಡೆಸೊಪ್ಪು" (ಅಮರ. ಟೀಕೆ). [ಸಂ. ಋಕ್ಷಗಂಧಾ]

**ಋಕ್ಷನಾಯಕ** (ನಾ). ೧. ಕರಡಿಗಳ ಒಡೆಯ; ಕರಡಿಗಳಲ್ಲಿ ಶ್ರೇಷ್ಠ; ದೊಡ್ಡ ಕರಡಿ: ಹರಿಯ ಕರುಣಾಕಟಾಕ್ಷವೀಕ್ಷಣ ಸಿರಿಗೆ ಭಾಜನವಾಯಿತ ಮಮಾ ತರುಚರೇಂದ್ರರು ವಿದಿತ ರಾಕ್ಷಸ ಋಕ್ಷನಾಯಕರು (ಕೌಶಿರಾ. ೪೪–೧೪). ೨. ನಕ್ಷತ್ರಗಳ ಒಡೆಯ; ಚಂದ್ರ. [ಋಕ್ಷ + ನಾಯಕ]

**ಋಕ್ಷಪತಿ** (ನಾ). = ಋಕ್ಷನಾಯಕ ೨. 'ಋಕ್ಷಪತಿಜೂಟ' ಪರಾ. [ಋಕ್ಷ + ಪತಿ]

**ಋಕ್ಷಪತಿಜೂಟ** (ನಾ). ಚಂದ್ರನನ್ನು ಜಡೆಯಲ್ಲಿ ಧರಿಸಿರುವವನು; ಶಿವ: ಋಕ್ಷಪತಿಜೂಟ ನಿಟಿಲಾಕ್ಷ ಹರಿಗರ್ಭನುತ ಮೋಕ್ಷದಾಯಕ ... ರಕ್ಷಿಪುದು ಸಂಗಮೇಶ (ಪ್ರೌಢರಾ. ೧೪–೧). [ಋಕ್ಷಪತಿ + ಜೂಟ]

**ಋಕ್ಷಭಲ್ಲ** (ನಾ). ಕರಡಿ. [ಋಕ್ಷ + ಭಲ್ಲ]

**ಋಕ್ಷಾಕೀರ್ಣ** (ಗು). ೧. ನಕ್ಷತ್ರಗಳಿಂದ ಆವರಿಸಿದ. ೨. ಕರಡಿಗಳಿಂದ ತುಂಬಿದ. ೩. ಜಿಂಕೆಗಳಿಂದ ವ್ಯಾಪಿಸಿದ. ೪. ದಿಂಡಲ ಮರಗಳಿಂದ ತುಂಬಿದ: ೧, ೨, ೩, ೪ : ಆ ಮಹಾವನಂ ... ಗಗನ ಮಂಡಲದಂತೆ ಋಕ್ಷಾಕೀರ್ಣಮುಂ (ಚಂದ್ರಪ್ರ. ೫–೫೨ ವ). [ಋಕ್ಷ + ಆಕೀರ್ಣ]

**ಋಕ್ಷೇಶ** (ನಾ). ನಕ್ಷತ್ರಗಳ ಒಡೆಯ; ಚಂದ್ರ. [ಋಕ್ಷ + ಈಶ]

**ಋಗ್ವೇದ** (ನಾ). ನಾಲ್ಕು ವೇದಗಳಲ್ಲಿ ಮೊದಲನೆಯದು: ವೇದವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂದು ಕರೆಯುವುದು ವಾಡಿಕೆ (ಭಾರದ. ೧೯). [ಸಂ. (ಋಚ್ + ವೇದ)]

**ಋಗ್ವೇದಿ** (ಗು). ೧. ಋಗ್ವೇದಕ್ಕೆ ಸೇರಿದ. (ನಾ). ೨. ಋಗ್ವೇದವನ್ನು ಅನುಸರಿಸುವವನು: ಪೌರಾಣಿಕರ ಬಲಭದ್ರ ಹೆಗಲ ವಿಕ್ರಣ್ಣಗಳು ಋಗ್ವೇದಿಗಳ ಸಿಂಗರಿ ... ಪುರೋಹಿತ ನಾಯಿದೇವಗಳು (ಬಸವು. ೫೬–೯೧). [< ಸಂ. ಋಗ್ವೇದಿನ್]

**ಋಙ್ನಿಕಾಯ** (ನಾ). ಋಕ್ಕುಗಳ ಸಮೂಹ, —ಗುಂಪು: ಸಲೆ ಯಜುರಂಗದಿಂದಭಿನಯಂಗಳನುನ್ನತ ಋಙ್ನಿಕಾಯದಿಂ ನೆಲೆವಡೆದಿರ್ಪ ಶಬ್ದತತಿಯಂ ... ಕೂಡೆ ಮಿಗೆ ಪುಟ್ಟಿಸಿದ ಬಿದಿ ನಾಟ್ಯವೇದಮಂ (ಲಾಸ್ಯರಂ. ೧–೮). [ಸಂ. (ಋಚ್ + ನಿಕಾಯ)]

**ಋಚ, ಋಚೆ** (ನಾ). ೧. ವೇದಮಂತ್ರ; ಋಕ್ಕು: ಸಾಮಂತಚೂಡಾಮಣಿಯನೆಯ್ದೆವಂದು ನಾಲ್ಕುಂ ವೇದಂಗಳೊಳ್ ನಾಲ್ಕುಂ ಋಚಂಗಳಂ ಪೇಟ್ದು (ಪಂಪಭಾ. ೫–೭೦ ವ). ೨. ಋಗ್ವೇದ. **ಋಚೆ**: ೧. ಅಂತು ಸೊಗಯಿಸೆ ಪಾಡುವ ಮಂಗಳರವಂಗಳುಮೋದುವ ಋಚೆಗಳುಂ ಪರಸುವ ಪರಕೆಗಳುಮೆಸೆಯೆ (ಪಂಪಭಾ. ೩–೭೬ ವ); ಋಗ್ವೇದದ ಋಚೆಗಳನ್ನು ಸ್ತೋಭಗಳೆಂಬ ಇನ್ನೂ ಸ್ವಲ್ಪ ಅಲಂಕಾರಪೂರಿತ ಶೈಲಿಯಲ್ಲಿ ಹಾಡಲಾದುದೇ ಅಲ್ಲದೆ (ಭಾರದ. ೫೩೭). [ಸಂ. ಋಚ್]

**ಋಚೀಷ** (ನಾ). = ಋಜೀಷ ೧. [ಸಂ.]

**ಋಚೆ** 'ಋಚ' ನೋ.

**ಋಜೀಷ** (ನಾ). ೧. ಹಿಟ್ಟುಮಾಡುವ ಪಾತ್ರೆ; ಹಿಟ್ಟಿನ ಮಡಕೆ, ಹಿಟ್ಟು ಬೇಯಿಸುವ ಬಾಣಲಿ ಮುಂತಾದುದು: "ಋಜೀಷಂ, ಪಿಷ್ಟಪಚನಂ – ೨ ಬಾಣಲಿ, ಗಾರಿಗೇಮುಚ್ಚಳ, ಕಡುಬುಮುಚ್ಚಳ, ಹಿಟ್ಟು ತೊಳಸುವ ಬಾನೆ" (ಸಿದ್ಧಾಂತಿ. ೨೪೩). ೨. ಒಂದು ನರಕ. [ಸಂ.]

**ಋಜು** (ಗು). ೧. ನೇರವಾದ; ಸರಿಯಾದ. 'ಋಜುಮಾರ್ಗ' ಪರಾ. ೨. ನೀತಿಯಿಂದ ಕೂಡಿದ; ಪ್ರಾಮಾಣಿಕವಾದ: ನಡತೆಯಲ್ಲಿ ಋಜುವಾಗಿ ಗೌರವವಾಗಿದ್ದನು (ದಾದಾನ. ೧೧); ಆಗಿನ ಜನದ ಆಶೆಗಳೂ ಆಲೋಚನೆಗಳೂ ಋಜುವಾಗಿ ಸುಗಮವಾಗಿದ್ದುವು (ರಾಜ್ಯಶಾ. ೧೯). 'ಋಜುದೃಷ್ಟಿ' ಪರಾ. ೩. ಸರಳವಾದ; ಆಡಂಬರವಿಲ್ಲದ. (ನಾ). ೪. ನೇರವಾದವನು; ಪ್ರಾಮಾಣಿಕ: ಸರಸಮೃಜುವೀರನೆಂದಾ ತರುಣಿಯನೊಸೆದಿತ್ತಂ (ಶಮದ. ಸ. ೭೧ ಪ್ರಯೋ). ೫. [ಚಿತ್ರಶಾ] ಒಂದು ವಸ್ತುವಿನ ಸಮ್ಮುಖದ ನೇರನೋಟ; ಪಂಚವಿಧ ಸ್ಥಾನಕಗಳಲ್ಲಿ ಒಂದನೆಯದು: ಕೆಲರಾಗಳ್ ಋಜುವಿಂದಮರ್ಧಋಜುವಿಂದಂ ಸಾಚಿಯಿಂದಂ ಕೆಲರ್ ಪಲವುಂ ಭಂಗಿಯಿನಿರ್ದು ಜಾನಕಿಯ ರೂಪಾಶ್ಚರ್ಯಮಂ ನೋಡಿ (ಪಂರಾಮಾ. ೫–೬೫). [ಸಂ.]

**ಋಜುತೆ** (ನಾ). ನೇರವಾಗಿರುವ ಗುಣ; ಪ್ರಾಮಾಣಿಕತೆ : ಒಡೆಯನೆಂದೋ ಬಂದು ಕೇಳ್ವನದಕುತ್ತರವ ಕೊಡಬೇಕು ತಾನೆನುವವೊಲು ಋಜುತೆಯಿಂದ ಒಡಲ, ಜಾಣ್ಮೆನ, ಜೀವಶಕ್ತಿಗಳನೆಲ್ಲವನು ಮುಡುಪು ಕೊಟ್ಟನು ಭರತ (ಮಂಕುಕ. ೭೦೭). [ಸಂ. ಋಜುತಾ]

**ಋಜುತೆವೆರು** (ಕ್ರಿ). ನೇರವಾಗು : ಇಂದೊ ನಾಳೆಯೊ ಎಂದೊ ಗೆಲ್ಲದಿರ್ಪುದೆ ಋತಂ ತನ್ನ ಮುನ್ನಿನ ಋಜುತೆವೆತ್ತು ? (ಶ್ರೀರಾಮಾ. ೨೮೨-೧೩೩). [ಋಜುತೆ + ಪೆರು (< ಪೆಱು₁)]

**ಋಜುತ್ವ** (ನಾ). = ಋಜುತೆ : ಈ ತೆಱದಿಂದನುಗ್ರಹಂ ಮಾಡುವುದರ್ಕೆ ದೇವಿಯರದೊಂದು ಋಜುತ್ವಮೆ ಮುಖ್ಯಕಾರಣಂ (ಕಾದಂಉ. ೧೫೨). [ಸಂ.]

**ಋಜುದೃಷ್ಟಿ** (ನಾ). ನೇರವಾದ ದೃಷ್ಟಿ ; ಪ್ರಾಮಾಣಿಕ ದೃಷ್ಟಿ : ಋಜುದೃಷ್ಟಿ ದೊರೆಕೊಳಲ್ ಮೂರು ಯುಗಗಳ್ ಕಳೆದು ಕಲಿಕಾಲ ಬೇಕಾಯ್ತು (ಅಮತಂ. ೧೨). [ಋಜು + ದೃಷ್ಟಿ]

**ಋಜುದೇವತೆ** (ನಾ). [ದ್ವೈತ] ಮುಕ್ತಿಯೋಗ್ಯ ಜೀವಾತ್ಮರಲ್ಲಿ ಒಂದು ಪ್ರಭೇದಕ್ಕೆ ಸೇರಿದವನು : ಭಗವದುಪಾಸನೆಯನ್ನು ಶತಬ್ರಹ್ಮ ಕಲ್ಪಕಾಲ ಋಜುದೇವತೆಗಳು ಮಾಡಿ ಬ್ರಹ್ಮಪದವನ್ನು ಹೊಂದಿ (ಹಿಂದಸಾ. ೨೯೧). [ಋಜು + ದೇವತೆ]

**ಋಜುಭೇದ ?** (ನಾ). ಬಾಗಿರುವ ಸ್ಥಿತಿ ; ಡೊಂಕಾಗಿರುವಿಕೆ (?) : "ಕುಳಿರ್ - ಋಜು [ಪಾಠಾಂ. ರಜ್ಜು, ರುಜ] ಭೇದೇ (ಬಗ್ಗು, ಕುಳಿತು ಕೊಳ್ಳು), ಹೈಮೇಚ (ಶೀತಳವಾಗು)" (ಶಮಧಾ). P ಇದು ಮಿಥ್ಯಾಶಬ್ದವಿರಬಹುದು. ಇಲ್ಲಿನ ಸರಿಯಾದ ಪಾಠ "ಕುಳಿರ್ — ಶೈತ್ಯಾಸಂದಿ ರುಜಾಭೇದೇಷು" ಎಂದಿರಬಹುದು. [ಋಜು + ಭೇದ]

**ಋಜುಮತಿ** (ನಾ). ೧. [ಜೈನ] ಋಜುವಾದ ಬುದ್ಧಿ : "ಋಜುಮತಿಯೆಂಬುದು ಪರಮನೋಗತಾವಕ್ರವಾಕ್ಕಾಯ ಮನಃಕೃತಾರ್ಥಮಂ ಅಱಿಗುಂ" (ತತ್ತ್ವಪ್ರ. ೬೯); ಕ್ರಮದಿಂ ಋಜುಮತಿಯುಂ ವಿಪುಲ ಮತಿಯುಮೆಂದದಱ ಭೇದಮಿರ್ತೆಱನಕ್ಕುಂ (ಚಂದ್ರಪು. ೧೪-೫೭). ೨. ಋಜುಬುದ್ಧಿಯುಳ್ಳವನು; ಪ್ರಾಮಾಣಿಕ. [ಋಜು + ಮತಿ]

**ಋಜುಮಾರ್ಗ** (ನಾ). ಸರಳಸ್ವಭಾವ ; ನೇರವಾದ ಮಾರ್ಗ ; ಕಪಟವಿಲ್ಲದ ದಾರಿ, —ರೀತಿ : ಪಿರಿಯಾತಂ ಸ್ವಭಾವದಿಂ ಋಜುಮಾರ್ಗವೃತ್ತಿಯಂ ತಳೆದು (ಸುಕುಮಾ. ೨-೫೭ ವ) ; ಅವನ ಭಾವನಾ ಪ್ರವಾಹವು ಋಜುಮಾರ್ಗದಲ್ಲಿ ಹರಿಯುತ್ತದೆ (ಭಾರದ. ೧೫೮). [ಋಜು + ಮಾರ್ಗ]

**ಋಜುರೇಖೆ** (ನಾ). ಸರಳವಾದ ರೇಖೆ : ಸ್ಥಾನನಿರ್ದೇಶಕ ಅಕ್ಷವೊಂದಕ್ಕೆ ಸಮಾನಾಂತರವಾಗಿ ಯಾವ ಬಿಂದುವಿನಿಂದಾಗಲಿ ಎಳೆದು ಮತ್ತೊಂದು ಅಕ್ಷವನ್ನು ಸಂಧಿಸುವ ಋಜುರೇಖೆ (Ordinate. ಇಂಕನಿ). [ಋಜು + ರೇಖೆ]

**ಋಜುರೋಹಿತ** (ನಾ). ೧. ನೆಟ್ಟಗಿರುವ ಕೆಂಪಾದ ಇಂದ್ರನ ಬಿಲ್ಲು : "ಇಂದ್ರನಬಿಲ್ಲು ಋಜು(ವಾದುದು)ರೋಹಿತಮೆಂಬುದು" (ಹಲಾಯು. ೧೧-೫೭) ; "ಐರಾವತಾಭ್ರಮಾತಂಗಮೆನೆ ಸುರರಾಜನೈರಾವತಕ್ಕೆ ಪೆಸರಕ್ಕುಂ . . . ಆತನ ಬಿಲ್ಲು ಋಜುರೋಹಿತಾಖ್ಯಮಕ್ಕುಂ" (ಮಂಗರಾ. ೧೩-೩). ೨. ಕಾಮನಬಿಲ್ಲು : ಅಂತಾ ಋಜುರೋಹಿತಂ ತಿರೋಹಿತಮಾಗೆ . . . ಸಂಸೃತಿಯ ಅನಿತ್ಯತೆಗಿದುವೆ ನಿದರ್ಶನಮೆಂದು ಆತ್ಮಗತದೊಳಿಂತೆಂದಂ (ಚಂದ್ರಪು. ೪-೫೧ ವ). [ಋಜು + ರೋಹಿತ]

**ಋಜುಲಂಬಿ** (ಗು). ನೆಟ್ಟಗೆ ಕೆಳಕ್ಕಿಳಿಯ ಬಿದ್ದಿರುವ (ಕಿ). [< ಸಂ. ಋಜುಲಂಬಿನ್]

**ಋಜುವೃತ್ತಿ** (ನಾ). ನೇರವಾದ ವೃತ್ತಿ ; ಪ್ರಾಮಾಣಿಕವಾದ ನಡತೆ : ರೋಹಿಣಿ . . . ಆತ್ಮವಲ್ಲಭನೊಳಾದನುರಕ್ತತೆಯಂ ಮಹತ್ತ್ವಮಂ ಸಂದ ಪತಿವ್ರತಾಚರಣಮಂ ಋಜುವೃತ್ತಿಯನಂದು ಭಾವಿಸುತ್ತೊಂದುಮನೆಂದಳಿಲ್ಲ (ಕಾದಂಉ. ೮೧೭). [ಋಜು + ವೃತ್ತಿ₂]

**ಋಜೂಕರಣ** (ನಾ). ನೆಟ್ಟಗೆ ಮಾಡುವುದು ; ಸರಿಪಡಿಸುವುದು (ಕಿ). [ಸಂ.]

**ಋಜ್ವಾಗತ** (ಗು). ೧. ನೇರವಾಗಿ ಬಂದ. (ನಾ). ೨. ನೇರವಾದ ಮಾರ್ಗ. ೩. [ಚಿತ್ರಶಾ] = ಋಜು ೫ : ಎಸೆಗುಂ ಋಜ್ವಾಗತಂ ಕಣ್ಗೊಳಿಸುಗುಮಳವಟ್ಟರ್ದ [ಪಾಠಾಂ. ಟ್ಟರ್ಥ] ಋಜ್ವಾಗತಂ ರಂಜಿಸುಗುಂ ಪಾರ್ಶ್ವಾಗತಂ (ಅಜಿಪು. ೨-೪೫) ; (ಕಾವ್ಯಾವ. ೪೧೮ ನೋ). [ಋಜು + ಆಗತ]

**ಋಣ** (ನಾ). ೧. ಸಾಲ ; ಕಡ : ಕಾಶಿಯ ನಿವಾಸದೊಳು ಸತಿಸುತರ ಮಾಱಿ ತಾಂ ಹೇಸದೆಯನಾಮಿಕಂಗಾಳಾಗಿ ಋಣವನುತ್ತರಿಸಿದ ಹರಿಶ್ಚಂದ್ರನು (ಹಚಕಾ. ೧೧ ಸೂಚನೆ) ; ಅವನ ಋಣವನ್ನು ನಾನು ಹೇಗೆ ತೀರಿಸಲಿ ? (ತೀನೋಡ. ೨೫). ೨. ದುರ್ಗ ; ಕೋಟೆ. ೩. ನೀರು : "ಋಣವೆಂದರೆ ಸಾಲಕ್ಕೂ ದುರ್ಗ ಭೂಮಿಗೂ ನೀರಿಗೂ ಹೆಸರು" (ಹೊನುಗ. ೨೧). ೪. (ಆಲಂ) ಹಂಗು : ಅವನ ಋಣದಲ್ಲಿ ಬಿದ್ದಿರುವುದು ಬೇಡ (ರೂಢಿ). ೫. (ಆಲಂ) ಉಪಕಾರ. ೬. [ಗಣಿತ] ಕಳೆಯಬೇಕಾದುದನ್ನು ಸೂಚಿಸುವ ಚಿಹ್ನೆ. 'ಋಣಚಿಹ್ನೆ' ಪರಾ.

**ಋಣತೀರಿಸು** = ಸಾಲವನ್ನು ತೀರಿಸು, — ಹಿಂದಿರುಗಿಸು : ಧಣಿಯ ಋಣತೀರಿಸಬೇಕು (ರೂಢಿ). **ಋಣಹರಿಸು** = ಋಣ ತೀರಿಸು (ಕಿ). **ಋಣಹೊರಿಸು** = ಸಾಲವನ್ನು ಹೊರಿಸು, —ಹೇರು: ದಾಯಾದಿಗಳು ನನಗೆ ಋಣ ಹೊರಿಸಿದರು (ರೂಢಿ). **ಋಣಹೊರು** = ಸಾಲ ಹೊತ್ತುಕೊ: ನಾನು ಕುಟುಂಬದ ಋಣ ಹೊತ್ತಿದ್ದೇನೆ (ರೂಢಿ). [ಸಂ.]

**ಋಣಂಗುಡು** (ಕ್ರಿ). ಸಾಲವನ್ನು ಕೊಡು ; ಕಡಕೊಡು : ಉಪದೇಶಂಗೊಟ್ಟರ್ ಋಣಂಗೊಟ್ಟರೆಂಬ ನಾಣ್ನುಡಿಯುಂಟು (ಧರ್ಮಾವ್ಯ. ೬-೧೯೭). [ಋಣ + ಕುಡು₁ (< ಕೊಡು)]

**ಋಣಗಾರ** (ನಾ). ಸಾಲಗಾರ : ನಾನು ನಿನ್ನ ಋಣಗಾರನಾಗಿ ಬಿದ್ದಿರುವೆ (ರೂಢಿ). [ಋಣ + -ಗಾರ (< -ಕಾಱ)]

**ಋಣಗೂಳು** (ನಾ). ಹಂಗಿನ ಅನ್ನ ; ದಾಕ್ಷಿಣ್ಯದ ಆಹಾರ : ನಾನೇನು ಇವರ ಮನೆಯ 'ಋಣಗೂಳು' ತಿನ್ನಲು ಬಿದ್ದಿಲ್ಲ (ಗಂಗಾವ. ೧೬೨). [ಋಣ + ಕೂಳು (< ಕೂೞ್₁)]

**ಋಣಚಿಹ್ನೆ** (ನಾ). [ಗಣಿತ] ಕಳೆಯಬೇಕಾದುದನ್ನು ಸೂಚಿಸುವ ಚಿಹ್ನೆ ; ಉದಾ '–' : ಈ ದೂರಗಳು ಕನ್ನಡಿಯ ಮುಂದುಗಡೆ ಇದ್ದರೆ ಧನಚಿಹ್ನೆಯನ್ನು ಹಾಕಬೇಕು ; ಕನ್ನಡಿಯ ಹಿಂದೆ ಇದ್ದರೆ ಋಣ ಚಿಹ್ನೆಯನ್ನು ಹಾಕಬೇಕು (ಭೌತವಿ. ೧೬೨). 'ಧನಚಿಹ್ನೆ' ಪರಾ. [ಋಣ + ಚಿಹ್ನೆ]

**ಋಣತ್ರಯ** (ನಾ). ಮೂರು ಬಗೆಯ ಋಣಗಳು ; ದೇವಋಣ, ಪಿತೃಋಣ, ಋಷಿಋಣ — ಎಂಬ ಮೂರು ಋಣಗಳು : ಕರುಣಿಸೆಲೆ ವಿಪ್ರ ನಿನ್ನಂ ಬೇಡಿಕೊಂಬೆ ನಾಂ ತರುಣಂ ಸುಪುಷ್ಟವವು ತುಷ್ಟಿ ಮೃಗಪತಿಗಾಗದಿರದು ತಾತನ ಋಣತ್ರಯಕೆ ಹಱಿವಹುದು (ಜೈಮಿಭಾ. ೨೬-೫೮). [ಋಣ + ತ್ರಯ]

**ಋಣನಿಧಾನ** (ನಾ). "ತನಗೆ ಲಭ್ಯವಾಗಬೇಕಾಗಿರುವ ನಿಧಾನ ; ನಿಕ್ಷೇಪ" (ಮಹಾದೇ. ಕೋಶ) ; ಮಱೆದೊಱಗಿ ಕನಸ ಕಂಡೇಳುವಲ್ಲಿ ಸತ್ತ ಹೆಣ ಎದ್ದಿತ್ತು ತನ್ನ ಋಣನಿಧಾನ ಎದ್ದು ಕರೆಯಿತ್ತು (ಮಹಾದೇ. ೨೫೦). [ಋಣ + ನಿಧಾನ]

**ಋಣನಿಬದ್ಧ** (ನಾ). ಋಣದಿಂದ ಬದ್ಧನಾದವನು ; ಸಾಲಕ್ಕೆ ಕಟ್ಟುಬಿದ್ದವನು : ದುಷ್ಕರ್ಮಶೇಷದ ಋಣನಿಬದ್ಧರು ಕಂಡು ಮಾಡುವುದೇನು ಕೌರವರು (ಕುವ್ಯಾಕ. ೮–೨೪). [ಋಣ + ನಿಬದ್ಧ]

**ಋಣಪಾತಕ** (ನಾ). ಕಡವನ್ನು ತೀರಿಸದ ಪಾಪಿ ; ಕೊಟ್ಟ ಸಾಲವನ್ನು ಹಿಂದಿರುಗಿಸದವನು : ಆ ಋಣಪಾತಕ ಇನ್ನೂ ಬಡ್ಡಿ ಕೊಡಲಿಲ್ಲ (ಸುವಸಂ. ೭೮). [ಋಣ + ಪಾತಕ]

**ಋಣಬಾಧೆ** (ನಾ). ಕಡದ ಬಾಧೆ; ಸಾಲದ ಬಾಧೆ: ಋಣಬಾಧೆಯಿಂದ ಮುಕ್ತನಾಗದ ಹೊರತು ನೆಮ್ಮದಿಯಿಲ್ಲ (ರೂಢಿ). [ಋಣ + ಬಾಧೆ]

**ಋಣಭಯ** (ನಾ). ಕಡದ ಭಯ ; ಸಾಲದ ಅಂಜಿಕೆ : ಎಲ್ಲಿಹುದು ಋಣಭಯವು ಮನುಜರೊಳಲ್ಲಿಹುದು ದೇವಾಂಶ ನಿಜವಾಗೆಲ್ಲಿಹುದು ಸನ್ಮಾರ್ಗ ಬಳಿಕಲ್ಲಿಹುದು ಬ್ರಾಹ್ಮಣ್ಯ (ಕುವ್ಯಾಉ. ೩–೩೦). [ಋಣ + ಭಯ]

**ಋಣಭಾರ** (ನಾ). ಕಡದ ಹೊರೆ; ಸಾಲದ ಹೊರೆ: ಆ ಕಾರಣ ಇಲ್ಲಿ ಋಣಭಾರದ ಪ್ರಶ್ನೆಯೇನೂ ಇಲ್ಲ (ವಾತ್ಸಲ್ಯ. ೨೦೫). [ಋಣ + ಭಾರ]

**ಋಣಮುಕ್ತ** (ನಾ). ಸಾಲದಿಂದ ಬಿಡುಗಡೆಯಾದವನು : ತಂದೆ ತನಗೆ ಮಗ ಹುಟ್ಟಿದರೆ ಋಣಮುಕ್ತನಾಗುತ್ತಾನೆ (ಭಾರದ. ೩೧) ; ಸಾಲ ತೀರಿಸಿ ಋಣಮುಕ್ತನಾದೆ (ರೂಢಿ). [ಋಣ + ಮುಕ್ತ]

**ಋಣಮುಕ್ತಿ** (ನಾ). ಸಾಲದಿಂದ ಬಿಡುಗಡೆ ಪಡೆಯುವಿಕೆ (ಕ). [ಋಣ + ಮುಕ್ತಿ]

**ಋಣಮುಕ್ತೆ** (ನಾ). ಸಾಲದಿಂದ ಬಿಡುಗಡೆಯಾದವಳು : ಆರ್ಯನ ಮಾತಿನಿಂದಲೇ ಈಕೆ ಈಗ ಋಣಮುಕ್ತೆಯಾದಳು (ಶಾಕುಂತ. ೧೬–೨೪). [ಋಣ + ಮುಕ್ತೆ]

**ಋಣವಿದ್ಯುತ್ತು** (ನಾ). ರಾಳ ಮೊದಲಾದುವನ್ನು ಉಜ್ಜುವುದರಿಂದ ಹುಟ್ಟುವ ವಿದ್ಯುತ್ತು: ವಲ್ಕನೈಟ್ ಅಥವಾ ಗಂಧಕ ಅಥವಾ ಕರೋಬಾಮಣಿ ಇವುಗಳನ್ನು ಉಣ್ಣೆಬಟ್ಟೆಯಿಂದ ಉಜ್ಜಿದರೆ ಬರುವ ವಿದ್ಯುತ್ತಿಗೆ ಋಣವಿದ್ಯುತ್ತೆಂದು ಹೆಸರು (ಭೌತವಿ. ೩೨೩). [ಋಣ + ವಿದ್ಯುತ್ತು]

**ಋಣವಿಮೋಚನೆ** (ನಾ). = ಋಣಮುಕ್ತಿ (ಕ). [ಋಣ + ವಿಮೋಚನೆ]

**ಋಣವ್ಯಾಪಾರ** (ನಾ). ಸಾಲದ ವ್ಯವಹಾರ ; ಉದ್ದರಿ ವ್ಯಾಪಾರ (ಉಕ). (Credit transaction. ಪಾರಿಭಿ. ೨೪). [ಋಣ + ವ್ಯಾಪಾರ]

**ಋಣಸಂಖ್ಯೆ** (ನಾ). [ಗಣಿತ] "(ವ್ಯವಕಲನ ಲೆಕ್ಕದಲ್ಲಿ) ಕಳೆಯಬೇಕಾದ ಸಂಖ್ಯೆ, ಋಣಸಂಖ್ಯೆ; ಕಳೆಯಬೇಕಾದ್ದು" (Subtrahend. ಇಂಕನಿ). [ಋಣ + ಸಂಖ್ಯೆ]

**ಋಣಸಂಬಂಧ** (ನಾ). = ಋಣಾನುಬಂಧ ೨ : ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯಾ ರಾಶಿ ಕೂಟ ಋಣಸಂಬಂಧ [ಪಾಠಾಂ. ಋಣಾನುಬಂಧ]ವುಂಟೆಂದು ಹೇಳಿರಯ್ಯಾ (ಬಸವ. ೮೩) ; ಸಂಧಿಯಲಿ ನಮ್ಮವನಿ ಋಣಸಂಬಂಧವುಂಟೇ ಬರಲಿ ರಣದಭಿಸಂಧಿ ಸಾಕಿನ್ನೆನುತ ಫಲುಗುಣ ಶಿರವ ಬಾಗಿದನು (ಕುವ್ಯಾಭೀ. ೩–೩೭). [ಋಣ + ಸಂಬಂಧ]

**ಋಣಸೂತಕ** (ನಾ). ಸಾಲದಿಂದ ಉಂಟಾಗುವ ದೋಷ, —ವೈಲಿಗೆ: ಹೆತ್ತ ಸೂತಕ ಹತ್ತು ದಿನಗಳಿಗೆ ಪರಿಹಾರ; ಮೃತ್ಯುಸೂತಕವು ಹನ್ನೊಂದು ದಿನಕೆ ಮತ್ತೆ ಋಣಸೂತಕವು ಜನ್ಮ ಜನ್ಮಾಂತರಕೆ (ಕವಪು. ೨೩). [ಋಣ + ಸೂತಕ]

**ಋಣಸ್ಥ** (ನಾ). ೧. ಸಾಲಕೊಟ್ಟವನು ; ಸಾಲಿಗ. ೨. ಸಾಲವನ್ನು ತೆಗೆದುಕೊಂಡವನು ; ಸಾಲಗಾರ. ೧, ೨ : "ಉತ್ತಮರ್ಣನೆಂದರೆ ಸಾಲಕೊಟ್ಟವನು ಅಧಮರ್ಣನೆಂದರೆ ಸಾಲ ತೆಗೆದುಕೊಂಡವನು ಈ ಇಬ್ಬರು ಋಣಸ್ಥರು" (ಸಿದ್ಧಾಂತಿ. ೨೩೬). [ಸಂ.]

**ಋಣಹರಿ** (ಕ್ರಿ). ಸಾಲ ಬಗೆಹರಿ, —ತೀರು : ಇಂದಿಗೆ ತಮ್ಮ ಕೃಪೆಯಿಂದ ಅವರ ಋಣಹರಿಯಿತು (ನೀತಿಚಿಂ. XI, ೧೯). [ಋಣ + ಹರಿ$_1$ (< ಪಱಿ$_1$)]

**ಋಣಾತೂರ್ಯ** (ನಾ). (?) : ಕ್ರಿಯನರಿದು ಆಚಾರದಲ್ಲಿ ನಿಂದು ಋಣಾತೂರ್ಯ ಮುಖ್ಯತೂರ್ಯ ಸ್ವೇಚ್ಛಾತೂರ್ಯವೆಂಬ ಮೂಱುಮಾಟವ ಕಂಡು . . . ಮಾನ್ಯರ ಇರವನಱಿತು ಕೂಡುವಲ್ಲಿ ಇಂತೀಭಾವ ಸದ್ಭಕ್ತನ ಸ್ಥಲ (ಮೋಳಿಮಾ. ೧೧೬–೪೫). [?]

**ಋಣಾದಾನ** (ನಾ). ಸಾಲವನ್ನು ಹಿಂದಕ್ಕೆ ಪಡೆಯುವುದು. [ಋಣ + ಆದಾನ]

**ಋಣಾನುಬಂಧ** (ನಾ). ೧. ಹಿಂದೆ ಕೊಟ್ಟ ಸಾಲದ ಸಂಬಂಧ; ಹಿಂದಿನ ಕಡದ ನಂಟು. ೨. ಪೂರ್ವಜನ್ಮದ ವಾಸನೆಯಿಂದ ಬರುವ ಬಾಂಧವ್ಯ, —ಸ್ನೇಹಸಂಬಂಧ, —ಆತ್ಮಸಂಬಂಧ : ಅವರ ಸ್ವಯಂಕಲ್ಪಿತ ಬಂಧುತ್ವ ರಕ್ತಬಾಂಧವ್ಯಕ್ಕಿಂತ ಹೆಚ್ಚಾಗಿ ಋಣಾನುಬಂಧವಾಗಿಯೇ ಮಾರ್ಪಟ್ಟಿತು (ಶಾಂತಲಾ. ೧೧೧) ; ಯಾವುದೋ ಜನ್ಮಾಂತರದ ಋಣಾನುಬಂಧವೊಂದು ತನ್ನನ್ನು ಈ ನೆಲಕ್ಕೆ ಕಟ್ಟಿಹಾಕಿರಬೇಕು (ಮೂರುದಾ. ೧೧೧). [ಋಣ + ಅನುಬಂಧ]

**ಋಣಿ** (ನಾ). ೧. ಸಾಲವನ್ನು ಹೊತ್ತವನು; ಸಾಲಗಾರ: ಶಠಗೃಹದೊಳ್ ಬುಧನಿರೆ ಋಣಿ [ಪಾಠಾಂ. ಣ] ಧನಹೀನಂ ಶಿಲ್ಪಿ ಶಾಸನಾರ್ಥಿ ಪರಪ್ರೇಷ್ಯನೆನಿಕ್ಕುಂ (ಜಾತಕ. ೧೭–೨೫) ; ಋಣಿಗಳೈಸಲೆ ತನೂಭವರ್ ತಮ್ಮ ತಂದೆಯ ಋಣಕೆ (ಶ್ರೀರಾಮಾ. ೭೫–೫೬೨). ೨. (ಅಲಂ) ಹಂಗಿಗೆ ಒಳಗಾದವನು : ತಾನು ಹಿಂದಿನವರಿಗೆ ಋಣಿಯೆಂದೂ, ಮುಂದಿನವರಿಗೆ ಗಣಿಯೆಂದೂ ತಿಳಿದುಕೊಂಡರೆ ಸಾಕು (ಪಂರಾಮಾ. ಸಂಗ್ರಹ. ಪೀಠಿಕೆ XCIV). 'ಚಿರಋಣಿ' ಪರಾ. [< ಸಂ. ಋಣಿನ್]

**ಋತ** (ನಾ). ೧. ಸತ್ಯ : "ಋತಂ, ಸತ್ಯಂ, ಸಮೀಚೀನಂ, ಸಮ್ಯಕ್, ತಥ್ಯಂ–ಈ ಆ ಸತ್ಯದ ಪೆಸರ್" (ಹಲಾಯು. ೨೩–೧೪೩) ; ಋತವೊಂದೆ ಗೆಲ್ಲುವುದು, ಅನೃತವಲ್ತು (ಹೊಂಗಳು. ೩೮–೧೫) ; ಸ್ಮಿತವಿರಲಿ ವದನದಲಿ ಕಿವಿಗೆ ಕೇಳಿಸದಿರಲಿ ಹಿತವಿರಲಿ ವಚನದಲಿ ಋತವ ಬಿಡದಿರಲಿ (ಮಂಕುಕ. ೭೨೪) ; ಗೆಲ್ಗೆ ನಿರುತಂ ಋತಂ (ಶ್ರೀರಾಮಾ. ೮೪–೧೬೮). ೨. ಧರ್ಮ; ನ್ಯಾಯ : ಇದರಿಂದ ಋತವನ್ನು ಮೀರಿದನೆಂಬಂತೆ . . . ಆಗಿ ಸ್ಮೂಸನ ವೈರವೈಷಮ್ಯಗಳಿಗೆ ಗುರಿಯಾಗಬೇಕಾಯಿತು (ಬದ್ಧಪ್ರ. ಪೀಠಿಕೆ. XXIX). ೩. ಪೂಜಾರ್ಹ; ಗೌರವಾರ್ಹ. ೪. "ಕಾಳುಗಳನ್ನು ಆರಿಸಿಕೊಂಡು ಜೀವಿಸುವುದು" (ಅಮರ. ಟೀಕೆ). ೫. ತೇಜಸ್ವಿ. ೬. ಸೂರ್ಯ. ೭. ನೀರು. ೮. ಚಂದ್ರ. ೯. ಹಂಸ. ೧೦. ಮುನಿ; ಯತಿ. ೧೧. ಕತ್ತಲೆ: "ತರಣಿ ಮರಾಳ ಚಂದ್ರ ಮುನಿ ಕತ್ತಲೆ ವಾರಿ ಋತಾ [ಪಾಠಾಂ. ವೃದಾ]ಖ್ಯೆ" (ನಾನಾರ. ೧೦). [ಸಂ.]

**ಋತಂಭರ** (ನಾ). ಸತ್ಯಶೀಲ; ಪರಮಾತ್ಮ. [ಸಂ.]

**ಋತಂಭರೆ** (ನಾ). ೧. [ಯೋಗಶಾ] ಸಮಾಧಿಕಾಲದಲ್ಲಿ ಸತ್ವಗುಣದಿಂದ ಪ್ರಕಾಶಿಸುವ ಒಂದು ಪ್ರಜ್ಞೆ : ನವನವೋನ್ಮೇಷಶಾಲಿನಿಯಾದ ಪ್ರಜ್ಞೆ, ಋತಂಭರಳಾದ ಪ್ರಜ್ಞೆ, ತಾರಕಳಾದ ಪ್ರಜ್ಞೆ, ವಿಶ್ವವನ್ನುನ್ಮೀಲಿಸುವ ಪ್ರಜ್ಞೆ ಅಲ್ಲಿ ತಾನೇ ತಾನಾಗಿರುವಳು (ಸಾಹಿವಿ. ೩೫). ೨. [ಯೋಗಶಾ] ನಾಲ್ಕು ವಿಧವಾದ ಸಂಪ್ರಜ್ಞಾತ ಸಮಾಧಿಸಿದ್ಧಿಗಳಲ್ಲಿ ಒಂದನೆಯದು; ಮಧುಮತಿ: ಒಂದನೆಯ ಮಧುಮತಿಯೇ ಋತಂಭರಾ ಎಂದು ಹೇಳಲ್ಪಡುವುದು (ಹಿಂದಸಾ. ೧೧೮). [ಸಂ. ಋತಂಭರಾ]

**ಋತಕಲ್ಪನೆ** (ನಾ). ಸತ್ಯದ ಕಲ್ಪನೆ : ಕವೀಂದ್ರಮತಿ ಲೋಕದೊಳ್ ಪೊಳೆವ ಋತಕಲ್ಪನಾ ಮೂರ್ತಂಗಳಂ, ಭಾವಚರ ನಿತ್ಯಸತ್ಯಂಗಳಂ (ಶ್ರೀರಾಮಾ. ೪–೮೫). [ಋತ + ಕಲ್ಪನೆ]

**ಋತಚಿತ್ತು** (ನಾ). ಸತ್ಯವಾದ ಜ್ಞಾನ: ನಿನ್ನ ಋತಚಿತ್ತನೆಮಗೆ ಕೃಪೆಯಿತ್ತು ಕಾಯಿ ದಿವ್ಯಮಾತೆ (ಅಗ್ನಿಹಂ. ೯೫–೬೬). [ಸಂ. ಋತಚಿತ್ (ಋತ + ಚಿತ್)]

**ಋತಜುಷ್ಟ** (ಗು). ಸತ್ಯದಿಂದ ಕೂಡಿದ; ಋಜುವಾದ: ಸುಪ್ತಿಯೊಳು ಭವವಿಲ್ಲ ಸ್ವಪ್ನದೊಳು ಋತವಿಲ್ಲ ಜಾಗರದಿ ಋತಜುಷ್ಟಭವವೇಳ್ವುದು (ಮಲೆದೇ. ೪೬–೨). [ಋತ + ಜುಷ್ಟ]

**ಋತದರ್ಶಿ** (ನಾ). ಸತ್ಯವನ್ನು ಸಾಕ್ಷಾತ್ಕರಿಸಿಕೊಂಡವನು: ಋತದರ್ಶಿ ತಾಂ ನುಡಿದನಪ್ರತಿವಾದ ವೇದಮಂ, ಸಮಹೃದಯ ಸಂವೇದ್ಯಮಂ (ಶ್ರೀರಾಮಾ. ೧೬೦–೫೦೦). [< ಸಂ. ಋತದರ್ಶಿನ್]

**ಋತಪ್ರಕೃತಿ** (ನಾ). ನಿಜವಾದ ಸ್ವಭಾವ, —ಪ್ರಕೃತಿ: ನಿನ್ನೊರ್ ತಪಃಶಕ್ತಿ, ಪೇಳ್ ಚಲಿಸಲಾರದೆ ಋತಪ್ರಕೃತಿಯಂ? (ಶ್ರೀರಾಮಾ. ೫೪೬–೧೮೧). [ಋತ + ಪ್ರಕೃತಿ]

**ಋತಮಾರ್ಗ** (ನಾ). ಸತ್ಯದ ಮಾರ್ಗ, —ದಾರಿ: ಜಗದ್ಧಾರಕವಾದ ಋತಮಾರ್ಗದ ಅನುಸರಣೆಯೇ ಅನ್ನದಾಯಕವಾದದ್ದು (ಋಕ್ಸಾರ. ೩೩೪). [ಋತ + ಮಾರ್ಗ]

**ಋತವಚನ** (ನಾ). ಸತ್ಯದ ನುಡಿ; ಸತ್ಯವಾಕ್ಯ: ಯತಿಪತಿ ಮುಖಾರವಿಂದೋದ್ಗತ ಋತವಚನಂ ಸ್ವಕೀಯ ಹೃದ್ಗೋಚರಮಾಗೆ (ಸುಕುಮಾ. ೯–೧೧೨). [ಋತ + ವಚನ]

**ಋತವಾಕ್ಯ** (ನಾ). = ಋತವಚನ: ಅನುಪಮ ವಿಕ್ರಮಕ್ರಮುಮುದಾರಗುಣಂ ಋತವಾಕ್ಯಮೆಂಬ ಪೆಂಪೆನಲಿವು ಮೂಱಿಕ್ ನಾಲ್ಕೆ ಗುಣಂ (ಪಂಪಭಾ. ೧೨–೯೩). [ಋತ + ವಾಕ್ಯ]

**ಋತಶಕ್ತಿ** (ನಾ). ಸತ್ಯದ ಬಲ: ಸತಿಯ ಮೇರುಕಂಪನಕಾರಿ ಸುವ್ರತದ ಋತಶಕ್ತಿಯಂ ಪೊತ್ತು ಪೋದಪೆನಕ್ಕ (ಶ್ರೀರಾಮಾ. ೬೨೮–೩೦೩). [ಋತ + ಶಕ್ತಿ]

**ಋತಿ** (ನಾ). ೧. ಹೋಗುವುದು. ೨. ಮಾರ್ಗ. ೩. ನಿಂದೆ. ೪. ಅಭಿವೃದ್ಧಿ (?). [ಸಂ.]

**ಋತು** (ನಾ). ೧. ಎರಡೆರಡು ತಿಂಗಳುಗಳ ಕಾಲದ ಅವಧಿ; ವಸಂತ ಗ್ರೀಷ್ಮ ಮುಂತಾದ ಆರು ಋತುಗಳು: "ಸಂದ ದಿನ ಮೂವತ್ತು ಮಾಸ ಮದುವೆರಡಾಗಲೊಂದು ಋತುವಕ್ಕು" (ಮಂಗರಾ. ೨೧–೧೧); ಮಾಸಂ ಪಕ್ಷ ದ್ವಿತಯಂ ಮಾಸದ್ವಯಮೊಂದೆ ಋತು ಋತುತ್ರಯಮಯನನ್ಯಾಸಂ (ಪಂರಾಮಾ. ೧–೫೨); ನೋಂಪಿ ಋತು ಮಹೋತ್ಸಾಹದೊಳಂ ಪಸದನದೊಳಮೊಡಗೂಡುವುದಸಿಯಳ ಸೂಳಲ್ಲದೆನ್ನದೆಂದು ಚದುರಂ (ಮದನ. ೮–೬೬). 'ಷಡೃತು' ಪರಾ. ೨. ಸ್ತ್ರೀಯರ ಮುಟ್ಟು; ರಜಸ್ಸು: "ಕಾಂತೆಯರು ಪೊಱತೊಲಗೆ ಋತುವೆನಿಕ್ಕು" (ಮಂಗರಾ. ೧೩೮–೪); "ಕಾಲವಿಭೇದಮುಂ ಸತಿಯ ಸೂತಕಮುಂ ಋತುವಕ್ಕು" (ನಾನಾರ. ೧೩೪). ೩. ಆರು ಎಂಬ ಸಂಖ್ಯೆಯ ಒಂದು ಸಂಕೇತ: "ಖರ, ದ್ರವ್ಯ, ಋತು ... ಇಂತಿನಿತುಂ ೬ಕ್ಕೆ ಪೆಸರು" (ವ್ಯವಹಾ. ೧೦); "ಋತು ರಸ ಖರಮವಾಱು" (ಮಂಗರಾ. ೧೦೩–೮). ೪. [ಜೈನ] ಅರುವತ್ತು ಮೂರು ಇಂದ್ರಕಗಳಲ್ಲಿ ಒಂದು. [ಸಂ.]

**ಋತುಕಾಲ** (ನಾ). ೧. ಋತುಗಳ ಕಾಲ: ಋತುಕಾಲವನಱಿತು ವಿಷಮ ತಪವ ನೆಗಳ್ದನೀಳೇಶ್ವರಂ (ಹಮ್ಮಿರ. ೨–೬ ವ). ೨. ಮುಟ್ಟಾಗುವ ಕಾಲ.

**ಋತುಕಾಲನಿಯಮ** = ಋತುಸ್ನಾತೆಯಾದ ಹೆಂಡತಿಯೊಡನೆ ಸಂಭೋಗಮಾಡುವುದರ ನಿಯಮ, —ವ್ರತ: ಇದಕ್ಕೆ ಅನುಕೂಲವಾದ ಋತುಕಾಲ ನಿಯಮಗಳನ್ನು ಅನುಸರಿಸುವುದಾಗಿ ಆರನೆಯ ಹೆಜ್ಜೆ ಪ್ರಮಾಣ (ಶಾಂತಲಾ. ೧೧೩). [ಋತು + ಕಾಲ$_1$]

**ಋತುಗೊಳ್** (ಕ್ರಿ). ರಜಸ್ವಲೆಯಾಗು; ಮುಟ್ಟಾಗು; ಹೊರಗಾಗು: "ಋತುಗೊಂಡ [ಪಾಠಾಂ. ವಡೆದ, ವಡೆವ]ವಳ್ ನಗ್ನಿಕೆ" (ಮಂಗರಾ. ೮೯–೨). [ಋತು + ಕೊಳ್$_1$]

**ಋತುದಾನ** (ನಾ). ಋತುಸ್ನಾತೆಯಾದ ಪತ್ನಿಗೆ ಸಂಭೋಗಾವಕಾಶವನ್ನು ಕೊಡುವುದು: ಈ ತರಳೆಗಿಂದು ಋತುದಾನಮಂ ಮಾಡಿದೊಡೆ ಪಾತಕಂ ತನಗಿಲ್ಲ (ಜೈಮಿಭಾ. ೧೧–೨೧). [ಋತು + ದಾನ]

**ಋತುಧರ್ಮ** (ನಾ). ಋತುವಿನ ನಿಯಮ, —ಸ್ವಭಾವ: ನೊವೆಂಬರ್ ತಿಂಗಳ ಮೊದಲನೆಯ ವಾರದಲ್ಲಿ ನೆಗಡಿ ಭೇಟಿ ಕೊಡದಿದ್ದರೆ, ಋತುಧರ್ಮವೇ ಬದಲಾದಂತೆ ಆತಂಕಪಡುವವರೂ ಉಂಟು (ನಂಟರು. ೩೬). [ಋತು + ಧರ್ಮ]

**ಋತುಧರ್ಮಶಾಸ್ತ್ರ** (ನಾ). ಋತುಗಳ ಧರ್ಮವನ್ನು ತಿಳಿಸುವ ಶಾಸ್ತ್ರ: "ವಾಯುಗುಣಕ್ಕೆ ಸಂಬಂಧಿಸಿದಂತೆ ಪ್ರಕೃತಿ ದೃಶ್ಯಗಳು ಅಥವಾ ಘಟನೆಗಳು ಆವರ್ತವಾಗುವ ಕಾಲಗಳನ್ನು ಕುರಿತ ಶಾಸ್ತ್ರ; ಋತುಧರ್ಮಶಾಸ್ತ್ರ" (Phenology. ಇಂಕನಿ). [ಋತುಧರ್ಮ + ಶಾಸ್ತ್ರ]

**ಋತುಪ್ರತಾನ** (ನಾ). ಋತುಗಳ ಸಮೂಹ: ಆಕೆಯಂ ನೋಡಿ... ಬಸಂತದೊಳ್ ಬಂಬಲ್ದುಗುಳ್ದ ಮದನಮದಾನೇಕಪಕ್ಕೆ ಪಕ್ಕಾದಳೀಕೆಯೆಂದು ಋತುಪ್ರತಾನಾವಯವಂಗಳನೆ ವಿದೂಷಕಂ ಮದೋಪಕ್ರಮದನುಕ್ರಮಂಮಾಡಿ (ಶಾಂತಿಪು. ೮–೮೮ ವ). [ಋತು + ಪ್ರತಾನ]

**ಋತುಭೇದ** (ನಾ). ಋತುಗಳ ವ್ಯತ್ಯಾಸ: ಭೂಮಿಗೆ ಮುಖ್ಯವಾಗಿ ಎರಡು ವಿಧವಾದ ಚಲನೆಗಳಿವೆ... ಸೂರ್ಯನನ್ನು ವರ್ಷಕ್ಕೆ ಒಂದು ಸಲ ಬಳಸಿ ಬರುತ್ತದೆ; ಇದರಿಂದ ಋತುಭೇದಗಳಾಗುತ್ತವೆ (ಭೂವಿವ. ೧೧). [ಋತು + ಭೇದ]

**ಋತುಮತಿ** (ನಾ). ರಜಸ್ವಲೆಯಾದವಳು; ಮುಟ್ಟಾದವಳು; ಹೊರಗಾದವಳು: ನಾರಿ ಋತುಮತಿಯೆಂದಡೆಯು ಸುಲಿ ಸೀರೆಗಳನೆಂಬಗ್ಗಳಿಕೆ ಕಾಸಾರದಲಿ ಕರಗಿತೆ ಸುಯೋಧನ ಎಂದನಾ ಭೀಮ (ಕುವ್ಯಾಗ. ೮–೮). [ಸಂ. ಋತುಮತೀ]

**ಋತುಯಾಪನ** (ನಾ). ಋತುವಿನ ಕಾಲವನ್ನು ಕಳೆಯುವಿಕೆ: ಫಾಲ್ಗುಣ ಋತುಯಾಪನಕ್ಕೆ ಉಪಯುಕ್ತವಾದ ಒಂದು ಪೀತ ಉತ್ತರೀಯ (ಇಪ್ಪಕ. ೪೦೭). [ಋತು + ಯಾಪನ]

**ಋತುವಡೆ** (ಕ್ರಿ). = ಋತುಗೊಳ್: "ಕೊಡಗೂಸು ಕನ್ನೆ ಕೊಟ್ಟಾಕೂಸು ವರ್ಯೆ ಋತುವಡೆದ [ಪಾಠಾಂ. ಗೊಂಡ]ವಳ್ ನಗ್ನಿಕೆ" (ಮಂಗರಾ. ೮೯–೨). [ಋತು + ಪಡೆ$_1$]

**ಋತುವಾಗು** (ಕ್ರಿ). ಪುಷ್ಪವತಿಯಾಗು; ದೊಡ್ಡವಳಾಗು: ಸಬ್ಬಸಿಗೆ ಘೃತ ... ಸೇವಿಸೆ ಹಳೆಯ ಜ್ವರಂ ಪರಿಹಾರಮಾಗಿ ದೇಹಪುಷ್ಟಿಯಹುದು ದಿನ ಮೀರಿ ನೆರೆಯದ ಕನ್ನೆಯರು ಸೇವಿಸೆ ಋತುವಹರು (ಸಕವೈ. ೧೨೫). [ಋತು + ಆಗು$_1$]

**ಋತುವಿಮಾನ** (ನಾ). [ಜೈನ] ಅರುವತ್ತುಮೂರು ಇಂದ್ರಕಗಳಲ್ಲಿ ಮೊದಲನೆಯದು: ಇದು ರಿ[ಋ]ತು ವಿಮಾನಮಂ ತನ್ನುದಗ್ರ ಚೂಳಿಕೆಯೊಳಾಂತುಕೊಂಡಿರೆ ಸಗ್ಗಕ್ಕಿದು ನಿಚ್ಚಣಿಗೆಪ್ಪವೊಲಿರ್ದುದಲ್ತೆ (ಆದಿಪು. ೨–೩೧); ಸೌಧರ್ಮೇಂದ್ರನ ಋತುವಿಮಾನಂ ನಡುವಾಗೆ ಸಂಖ್ಯಾತಾಸಂಖ್ಯಾತ ಯೋಜನ ವಿಸ್ತೀರ್ಣಂಗಳ್ ... ವಿಮಾನಂಗಳ್ ಕಿಕ್ಕಿಱಿಗಿಱಿದಿರೆ (ಸುಕುಮಾ. ೧೧–೬೦ ವ); ವಿಶ್ವಾವನಿಯೊಳಗೆ ನೆಲ್ಲವತ್ತಿಯ ಜಿನಭವನಂ ರಿ[ಋ]ತುವಿಮಾನಮಂ ಪೋಲ್ತಿರ್ಕುಂ (ಎಕ. VII, ಶಿವಮೊ. ೧೦–೪೮; 1085); ಇದು ಋತು [ಪಾಠಾಂ. ರುತು, ರಿತು] ವಿಮಾನಮೋ ಮೇಣೆದಹೀಂದ್ರನ ರುಂದ್ರ ರಮ್ಯ ಹರ್ಮ್ಯಮೋ (ನೇಮಿಪು. ೧೧–೪). [ಋತು + ವಿಮಾನ]

**ಋತುವೃತ್ತಿ** (ನಾ). ಋತುಚಕ್ರ (೬). [ಋತು + ವೃತ್ತಿ₁]

**ಋತುಶಾಂತಿ** (ನಾ). ಮದುವೆಯಾದ ಹೆಣ್ಣು ಮೊದಲ ಬಾರಿಗೆ ಮುಟ್ಟಾದಾಗ ಮಾಡುವ ಒಂದು ಶುಭ ಸಂಸ್ಕಾರ, —ಕರ್ಮ: ಅವಳು ತವರಿಗೆ ಹೋಗಿ ಬಂದಿದ್ದಳು. ಅನಂತರ ಋತುಶಾಂತಿಯಾಯಿತು (ಸ್ವಪ್ನಹೊ. ೧೩೨). [ಋತು + ಶಾಂತಿ]

**ಋತುಸಮಯ** (ನಾ). ರಜಸ್ವಲೆಯಾಗುವ ಸಮಯ; ಮುಟ್ಟಿನ ದಿನ: ಸತಿಗೆ ಷೋಡಶದ ಋತುಸಮಯಮೇಕಾದಶೀವ್ರತಮುಲಂಘ್ಯ ಶ್ರಾದ್ಧಮಿನಿತೊಂದು ದಿನಮೆ ಸಂಗತಮಾದೊಡೆಂತು ಕರ್ತವ್ಯಂ (ಜೈಮಿಭಾ. ೧೧-೨೦). [ಋತು + ಸಮಯ]

**ಋತುಸಾರ್ವಭೌಮ** (ನಾ). ಋತುಗಳ ಚಕ್ರವರ್ತಿ, —ಒಡೆಯ; ವಸಂತ: ವಸಂತಂ ಋತುಸಾರ್ವಭೌಮ ವಿಭವಂ ಮೆಯ್ವೆತ್ತದೇಂ ಬಂದುದೋ (ಚಂದ್ರಪು. ೭-೩೬). [ಋತು + ಸಾರ್ವಭೌಮ]

**ಋತುಸ್ನಾತೆ** (ನಾ). ಮುಟ್ಟಾದ ನಾಲ್ಕನೆಯ ದಿನ ಸ್ನಾನಮಾಡಿ ಶುದ್ಧಳಾದ ಹೆಂಗಸು; ಋತುಸ್ನಾನಮಾಡಿದವಳು: ಎಳೆವೆಣ್ಣುಜು ದಿಂಗಳ ಗರ್ಭಿಣಿ ತಿಂಗಳ ಬಾಣಂತಿ ಋತುಸ್ನಾತೆ ಮುಳಿಸು ತಿಳಿದ ಕೋಮಲೆ (ಜನಪ. ೩-೯೬); ಸುಧನ್ವಂ ಋತುಸ್ನಾತೆಯಂ ಮಾಜಿದೊಡ ಗೂಡಿ ತನ್ನಿಯಂ ಬೀಳ್ಕೊಂಡು ಸಮರಕನುವಾಗುತಿರಲ್ (ಜೈಮಿಭಾ. ೧೧-೨೬). [ಋತು + ಸ್ನಾತೆ]

**ಋತುಸ್ನಾನ** (ನಾ). ಮುಟ್ಟಾದ ಮೇಲೆ ನಾಲ್ಕನೆಯ ದಿನದಲ್ಲಿ ಮಾಡುವ ಸ್ನಾನ. [ಋತು + ಸ್ನಾನ]

**ಋತುಸ್ರಾವ** (ನಾ). ಮುಟ್ಟಾಗುವುದು: ಋತುಸ್ರಾವ (Catamenia. ಇಂಕನಿ). [ಋತು + ಸ್ರಾವ]

**ಋತ್ವ** (ನಾ). [ವ್ಯಾಕ] = ಋಕಾರ: ಋತ್ವಕ್ಕಾರಾದೇಶಂ (ಶಮದ. ೮೪). [ಸಂ.]

**ಋತ್ವಿಕ್ಕು** (ನಾ). ಯಜ್ಞಪುರೋಹಿತ: ಯಾಗದಲ್ಲಿ ನಾಲ್ಕು ಋತ್ವಿಕ್ಕುಗಳು ಮುಖ್ಯವಾಗಿರಬೇಕು (ಹಿಂದಸಾ. ೧೫೭). [< ಸಂ. ಋತ್ವಿಜ್]

**ಋತ್ವಿಜ** (ನಾ). = ಋತ್ವಿಕ್ಕು: ಜಮದಗ್ನ್ಯಾದಿಗಳಪ್ಪ ಷೋಡಶರ್ತ್ವಿಜರ್ಕಳಿಂ ಬೇಳಲ್ವೇೞ್ದು (ಪಂಪಭಾ. ೬-೩೩ ವ); ಅರಸಂ ದೀಕ್ಷಿತನಿಲ್ಲಿ ಋತ್ವಿಜರುಮೆಮ್ಮಾ ನಾಲ್ವರುಂ ಸಂಗರಾಧ್ವರದೊಳ್ (ಗದಾಯು. ೮-೯೬). [ಸಂ. ಋತ್ವಿಜ್]

**ಋದಂತ** (ನಾ). [ವ್ಯಾಕ] ಋಕಾರಾಂತವಾದ ಶಬ್ದ: ಅತ್ವಾಂತಮುಮಿತ್ವಾಂತಮುಮುತ್ವಾಂತಮುಮಾ ಋದಂತಮುಂ ನಿಜಲಿಂಗಂ (ಶಮದ. ೮೪). [ಸಂ.]

**ಋದ್ಧ** (ಗು). ೧. ವೃದ್ಧಿಹೊಂದಿದ; ತುಂಬಿದ; ಭರಿತವಾದ: ಮೃಗಭೂಋದ್ಧ ವಿಳಾಸಿನೀ ಕಬರಿಕಾ ಬಂಧಂಗಳಂ ಪೊತ್ತು ... ಸುಟ್ಟಿ ದತ್ತಂದೊಂದು ಮಂದಾನಿಳಂ (ಪಂಪಭಾ. ೪-೮೦). (ನಾ). ೨. ಕೂಡಿ ಹಾಕಿದ ಅಥವಾ ರಾಶಿಮಾಡಿದ ಧಾನ್ಯ. [ಸಂ.]

**ಋದ್ಧಸತ್ವ** (ನಾ). ಅಭಿವೃದ್ಧಿಹೊಂದಿದ ಸತ್ತ್ವಗುಣವನ್ನುಳ್ಳವನು; ಸತ್ತ್ವಭರಿತನಾದವನು: ಆದರಿನರಸುವರಲ್ತೆ ಋದ್ಧಸತ್ವರು (ಮಲೆದೇ. ೪೯-೯). [ಋದ್ಧ + ಸತ್ವ₂ (= ಸತ್ತ್ವ)]

**ಋದ್ಧಿ** (ನಾ). ೧. ಸಮೃದ್ಧಿ; ಅಭಿವೃದ್ಧಿ: ಬೆನಕಂ ಋದ್ಧಿ ಬುದ್ಧಿ ಸಿದ್ಧಿಪ್ರದಾಯಕಂ (ಗಣೇಶ. ೨-೪೨). ೨. ಸಿದ್ಧಿ; ಕೈಗೂಡುವಿಕೆ: ಪಲವುಂ ಋದ್ಧಿಗಳಿಂ ಕೂಡಿದೊರೆಲ್ಲಾ ಋಷಿಸಮುದಾಯಮುಮಂ ಪ್ರತಿಪಾಳಿಸುತ್ತಂ (ವಡ್ಡಾರಾ. ೭೫-೨); ಘೋರವೀರತಪದಿಂ ಋದ್ಧಿಪ್ರಾಪ್ತನಾದಂ (ಶಂರಾಮಾ. ೧೦-೧೭೩ ವ). ೩. ಸಂಪತ್ತು; ಐಶ್ವರ್ಯ. ೪. ಒಂದು ಔಷಧ ದ್ರವ್ಯ: "ಮುರುಡಶಿಂಗಿ" (ಗಂಗಾಮು. ೪೯). [ಸಂ.]

**ಋದ್ಧಿಪ್ರಾಪ್ತ** (ನಾ). ಋದ್ಧಿಯನ್ನು ಪಡೆದವನು: ಧೂಳಿಧೂಸರ ರತ್ನಾವಳಿಗಳಂ ಕಂಡ ದೂಸಱಿಂದಂ ಧರಣೀಪಾಲಕ ಮುಖಿಪರ್ ಪಂಚಮಕಾಲದೊಳಣಮಾಗರಲ್ತೆ ಋದ್ಧಿಪ್ರಾಪ್ತರ್ (ಆದಿಪು. ೧೫-೪೧). [ಋದ್ಧಿ + ಪ್ರಾಪ್ತ]

**ಋದ್ಧಿಮಂತ** (ನಾ). ೧. ಶ್ರೀಮಂತ; ಐಶ್ವರ್ಯವಂತ. ೨. ಅಣಿಮಾದಿ ಸಿದ್ಧಿಗಳನ್ನುಳ್ಳವನು; ಪವಾಡಗಳನ್ನು, ಅದ್ಭುತಗಳನ್ನು ನಡೆಸುವ ಸಾಮರ್ಥ್ಯವುಳ್ಳವನು: ಸ್ಥವಿರನಾದ ಮಹಾಮೌದ್ಗಲ್ಯಾಯನನು ಋದ್ಧಿಮಂತನು. ಇವನನ್ನು ಆಶ್ರಯಿಸಿದರೆ ನನ್ನ ಕರ್ಮ ಲಘುವಾಗಿ ನೆರವೇರುತ್ತದೆ (ಹತ್ತುಮ. ೫೧). [< ಸಂ. ಋದ್ಧಿಮತ್]

**ಋದ್ಧಿಸಂಪನ್ನ** (ನಾ). ಸಮೃದ್ಧಿಯುಳ್ಳವನು: ರಾಮನುಮಣುವಂತನುಂ ಶ್ರುತಕೇವಲಿಗಳಾದೊರುಳಿದವರೆಲ್ಲಂ ಋದ್ಧಿಸಂಪನ್ನರಾದರ್ (ಕಗಪಿ. ೩೯-೧೪ ಚಾವುಂಪು). [ಋದ್ಧಿ + ಸಂಪನ್ನ]

**ಋಭು** (ನಾ). ೧. ಒಂದು ದೇವತೆ: "ಆದಿತ್ಯಃ, ತ್ರಿದಶಃ ... ಋಭುಃ, ಅಮರಃ ... ದೈವತಂ ಈ ೨೧ ದೇವರ್ಕಳ ಪೆಸರ್" (ಹಲಾಯು. ೨-೪). ೨. ದೇವತೆಗಳಲ್ಲಿ ಒಂದು ಪಂಗಡ (೬). [ಸಂ.]

**ಋವರ್ಣ** (ನಾ). ಋಕಾರ ಮತ್ತು ೠಕಾರ: ವಿದಿತಮುವರ್ಣ ಋವರ್ಣತ್ವದೊಳಂ ಹ್ರಸ್ವೈತ್ವದೊಳಮಿನಾಗಮವಿಧಿ ತಪ್ಪದು (ಶಮದ. ೧೦೮). [ಋ + ವರ್ಣ]

**ಋಶ್ಯ** (ನಾ). ಮೈ ಮೇಲೆ ಬಿಳಿಚುಕ್ಕಿಗಳನ್ನುಳ್ಳ ಅಥವಾ ಬಿಳಿ ಬಣ್ಣದ ಪಾದಗಳನ್ನುಳ್ಳ ಜಿಂಕೆ. 'ಋಶ್ಯಕೇತು' ಪರಾ. [ಸಂ.]

**ಋಶ್ಯಕೇತು** (ನಾ). ಜಿಂಕೆಯ ಚಿಹ್ನೆಯನ್ನು ಧ್ವಜದಲ್ಲಿ ಉಳ್ಳವನು; ಅನಿರುದ್ಧ. [ಋಶ್ಯ + ಕೇತು]

**ಋಶ್ಯಶೃಂಗ** (ನಾ). = ಋಷ್ಯಶೃಂಗ. [ಋಶ್ಯ + ಶೃಂಗ]

**ಋಷಭ** (ನಾ). ೧. ಎತ್ತು; ಗೂಳಿ: "ಉಕ್ಷಂ ವೃಷಂ ... ವೃಷಭಮಾಋ [ಪಾಠಾಂ. ರು] ಷಭವಾ ಗೋ ಬಾಡಬೇಯಮೆನೆಯೆತ್ತೆನಿಕ್ಕುಂ" (ಮಂಗರಾ. ೫೩-೧). ೨. ಉತ್ತಮವಾದುದು; ಶ್ರೇಷ್ಠವಾದುದು. ೩. [ಜೈನ] ಮೊದಲನೆಯ ತೀರ್ಥಂಕರ: ಇದರಲ್ಲಿ ಋಷಭಾದಿ ತೀರ್ಥಂಕರರ ಚರಿತ್ರೆಯು ... ಬಂದಿರುತ್ತದೆ (ಜೈನಪ. ೧೩ ಮುನ್ನುಡಿ). ೪. [ಸಂಗೀತ] ಸಪ್ತಸ್ವರಗಳಲ್ಲಿ ಎರಡನೆಯದು: "ಷಡ್ಜಮಾ ಋಷಭಮಾ ಗಾಂಧಾರಮಾ ಮಧ್ಯಮಂ ಮಾಱಿಪ್ಪ ಪಂಚಮಂ ಧೈವತಂ ಸುನಿಷಾದಮೋರಂತೆ ಸಪ್ತಸ್ವರಂಗಳಕ್ಕು" (ಮಂಗರಾ. ೨೩-೩); ಋಷಭಾದಿ ಸಪ್ತಸ್ವರ ಸಮಾಯೋಗ ಸಂಭವಮಪ್ಪ ಮೂವತ್ತುಂ ವಿಶುದ್ಧ ರಾಗದೊಳಂ (ಮಲ್ಲಿಪು. ೮-೨೬). ೫. ಒಂದು ಬಗೆಯ ಔಷಧಿ ಗಿಡ; ಹೆರಿಗೆಹಾಲೆಯೆಂಬ ಮೂಲಿಕೆ: "ಶೃಂಗೀ, ಋ[ಪಾಠಾಂ. ವೃ]ಷಭಃ ವೃಷ್ಯಃ - ೩ ಹೆರೆ[ರಿ]ಗೆಹಾಲೆಯ ಹೆಸರು. ವೃಷಭವೆಂಬುವ ಮೂಲಿಕೆ" (ಸಿದ್ಧಾಂತಿ. ೧೨೧). [ಸಂ.]

**ಋಷಭಕ** (ನಾ). ಒಂದು ಬಗೆಯ ಔಷಧಿ ಗಿಡ: "ಕೂರ್ಚರುಷಭಃ-ಜೀವಿಕ, ಋಷಭಕ" (ಔಷಧಿ. ೩೭). [ಸಂ.]

**ಋಷಿ** (ನಾ). ೧. ತಪಸ್ವಿ; ಮುನಿ: "ಋಷಿಃ, ತ್ರಿಕಾಲದರ್ಶೀ, ಮುನಿಃ, ವಾಚಂಯಮಃ - ಈ ೪ ಋಷಿಗಳ್" (ಹಲಾಯು. ೬೮-೨೫೪); ದಂಡಕಂ ಕಡುಮುಳಿದಂ ಋಷಿಯರ್ಗೆ (ಶಂರಾಮಾ. ೯-೯). ೨. ಏಳು ಎಂಬ ಸಂಖ್ಯೆಯ ಸಂಕೇತ: "ಋಷಿ, ಶೃಂಗಿ ... ದ್ವೀಪ, ಅಶ್ವ ಇಂತಿನಿತುಂ ೭ಕ್ಕೆ ಹೆಸರು" (ವ್ಯವಹಾ. ೧೧). ೩. ಸಪ್ತರ್ಷಿ ಎಂಬ ನಕ್ಷತ್ರ ಮಂಡಲ. [ಸಂ.]

**ಋಷಿಋಣ** (ನಾ). ಋಣತ್ರಯಗಳಲ್ಲಿ ಒಂದು : ವೇದಗಳನ್ನು ಅಧ್ಯಯನ ಮಾಡುವುದು ಋಷಿಋಣದಿಂದ ಪಾರಾಗುವ ಮಾರ್ಗವೆಂಬ ವಿಶ್ವಾಸವು ಅವರ ದೇಹದ ಅಣು ಅಣುವಿನಲ್ಲಿಯೂ ವ್ಯಾಪಿಸಿತ್ತು (ಭಾರದ. ೩೪). [ಋಷಿ + ಋಣ]

**ಋಷಿಕಲ್ಪ** (ನಾ). ಋಷಿಯ ಸಮಾನನಾದವನು : ಋಷಿಕಲ್ಪನಾದ ಈ ರಾಜನಲ್ಲಿ ಇದು ಯುಕ್ತವೇ (ಶಾಕುಂತ. ೨೭–೩). [ಸಂ.]

**ಋಷಿಕೆ** (ನಾ). ವೇದಮಂತ್ರಗಳನ್ನು ರಚಿಸಿದವಳು : ಆ ಯುಗದ ಋಷಿಕೆಯರನ್ನು ಬಹು ಶ್ರದ್ಧಾಗೌರವಗಳಿಂದ ಸ್ಮರಿಸಬೇಕಾಗಿದೆ (ಭಾರದ. ೪೭೭). [ಸಂ. ಋಷಿಕಾ]

**ಋಷಿತ್ವ** (ನಾ). ಋಷಿಯಾಗಿರುವಿಕೆ ; ಋಷಿತನ : ಮಂತ್ರಸಂಸ್ಕಾರ ಮಾಡಿಕೊಂಡವರೇ ಋಷಿಗಳು. ಈ ಸತ್ಯವನ್ನು ಕಾಣುವುದೇ ಋಷಿಗಳ ಋಷಿತ್ವ (ಭಾರದ. ೪೭೮). [ಸಂ.]

**ಋಷಿಧುರ್ಯ** (ನಾ). ಋಷಿಗಳಲ್ಲಿ ಶ್ರೇಷ್ಠನಾದವನು; ಶಿವ: ಋಷಿ ಧುರ್ಯ[ಪಾಠಾಂ. ದೂರ್ಯ]ಗೋ ಅರ್ಜುನಂಗೊಲಿದು ಶರವಿತ್ತ ಭವ ಸಂಗಮೇಶ್ವರ ರಕ್ಷಿಸು (ಪ್ರೌಢರಾ. ೭–೧). [ಸಂ.]

**ಋಷಿನಿವೇದಕ** (ನಾ). ಋಷಿಗಳ ಆಗಮನವನ್ನು ತಿಳಿಸುವವನು : ಋಷಿನಿವೇದಕನಿಂತೆಂದು ಬಿನ್ನಪಂಗೆಯ್ದಂ (ಶಾಂತಿಪು. ೮–೧೫೩ ವ) ; ವಿಚಕಿಲೋದ್ಗಮಮಂ . . . ದಶರಥ ಸಕಲೋರ್ವೀಶಂಗೆ ಋಷಿನಿವೇದಕ ನಿತ್ತಂ (ಪಂರಾಮಾ. ೬–೨೫). [ಋಷಿ + ನಿವೇದಕ]

**ಋಷಿಪುತ್ರಿ** (ನಾ). ೧. ಋಷಿಯ ಮಗಳು : ಋಷಿಪುತ್ರಿ ಆಶ್ರಮದ ಆವರಣದಲ್ಲಿ ಹೂಬಿಡಿಸುತ್ತಿದ್ದಳು (ರೂಢಿ). ೨. ದವನ : "ಯವಾನಿ ಯೆನಲಜಜಟಾ ತಪಸಿ ಋಷಿಪುತ್ರಿ [ಪಾಠಾಂ. ಪುಷ್ಪ, ಮಿತ್ರ]ಯೆನೆ ದವನ ನಾಮಂ" (ಮಂಗರಾ. ೪೧–೩೪). [ಋಷಿ + ಪುತ್ರಿ]

**ಋಷಿರೂಪಕ** (ನಾ). ಋಷಿಯ ರೂಪ, —ಶರೀರ: ಯೋಗ ನಿಯೋಗ ಧ್ಯಾನೋಪಯೋಗದಿಂ ನಿರುದ್ಧಕರಣ ನಿಷ್ಪಂದ ಶರೀರನಾಗಿ ಮೆಲ್ಲ ನಡಕಂಬೆರಸು ಪಟ್ಟಿರ್ದ ಋಷಿರೂಪಕಮಂ ಕಂಡು (ಸುಕುಮಾ. ೧೨–೨೪ ವ). [ಋಷಿ + ರೂಪಕ]

**ಋಷಿವಧು** (ನಾ). ಋಷಿಯ ಹೆಂಡತಿ (*). [ಋಷಿ + ವಧು]

**ಋಷಿವಾಣಿ** (ನಾ). ಋಷಿಗಳ ವಾಣಿ, —ಮಾತು : ಈ ನಂಬಿಕೆ ಬರಬೇಕಾದರೆ ನಮ್ಮ ಉಪನಿಷತ್ತುಗಳಲ್ಲಿನ ಋಷಿವಾಣಿಯನ್ನು ನಾವು ಕೇಳಬೇಕು (ರಾಮರಾ. ೫೧). [ಋಷಿ + ವಾಣಿ$_1$]

**ಋಷಿವಾಸ** (ನಾ). [ಸಂಗೀತ] ಹದಿನೆಂಟು ತೆರದ ಕೊಳಲುಗಳಲ್ಲಿ ಒಂದು : ಜಾತಿವಾಸ . . . ಋಷಿವಾಸ . . . ಭುವನಾಧಿಪವಾಸವೆಂಬ ಹದಿನೆಂಟು ತೆಜದ ವಾಸಂಗಳ ಲಕ್ಷಣವಱಿತು (ವಿವೇಕ. ೨೩೭). [ಋಷಿ + ವಾಸ$_2$]

**ಋಷಿಶಕ್ತಿ** (ನಾ). ಋಷಿಗಳ ಶಕ್ತಿ ; ತಪಸ್ಸಿನ ಬಲ : ಮೂಲತತ್ತ್ವದ ಅನಂತವಾದ ಕಲ್ಯಾಣ ಗುಣಗಳಲ್ಲಿ ಯಾವ ಋಷಿಶಕ್ತಿಗೆ ಯಾವ ಅಂಶ ಪ್ರತಿಭಾಸಿತವಾಗುತ್ತದೆಯೋ ಅದನ್ನು ಅವನು ಪ್ರಶಂಸಿಸುತ್ತಾನೆ (ಋಕ್ಸಾರ. ೧೨೩ ಪೀಠಿಕೆ). [ಋಷಿ + ಶಕ್ತಿ]

**ಋಷ್ಟಿ** (ನಾ). ಖಡ್ಗ ; ಕತ್ತಿ. [ಸಂ.]

**ಋಷ್ಯ** (ನಾ). = ಋಶ್ಯ. 'ಋಷ್ಯಶೃಂಗ' ಪರಾ. [ಸಂ.]

**ಋಷ್ಯಕೇತು** (ನಾ). = ಋಶ್ಯಕೇತು. [ಸಂ.]

**ಋಷ್ಯಪ್ರೋಕ್ತೆ** (ನಾ). ೧. ನಸುಗುನ್ನಿಗಿಡ. ೨. ಶತಾವರೀಗಿಡ. [ಸಂ. ಋಷ್ಯಪ್ರೋಕ್ತಾ]

**ಋಷ್ಯಶೃಂಗ** (ನಾ). ೧. ಜಿಂಕೆಯ ಕೋಡು. ೨. ಒಬ್ಬ ಋಷಿಯ ಹೆಸರು : ಕುರಂಗಿ . . . ಇಳುಹಿತವನಿಗೆ ಋಷ್ಯಶೃಂಗನನು (ತೊರರಾ. ೧–೫–೧೩). [ಸಂ.]

# ಋ



**ಋ**$_1$ (ನಾ). ಕನ್ನಡ ವರ್ಣಮಾಲೆಯ ಎಂಟನೆಯ ಅಕ್ಷರ; ಋಕಾರ. ℙ ಇದು ಸಂಸ್ಕೃತದಿಂದ ಬಂದದ್ದು: ಅಕ್ಕರಂಗಳಕಾರಂ ಮೊದಲಾಗಿ ಳಕಾರ ಪರ್ಯಂತಂ ಪರಿಪೂರ್ಣಮಾಗಿರ್ಪುವು. ಅವಾವುವೆಂದೊಡೆ—ಅಆ, ಇಈ, ಉಊ, ಋೠ . . . ಹ್, ಳ್ (ಶಮದ. ೪ ವೃತ್ತಿ).

**ಋ**$_2$ (ಅ). ಭಯ, ನಿಂದೆ, ದೂರೀಕರಣ, ನೆನಪು ಮೊದಲಾದುವುಗಳನ್ನು ಸೂಚಿಸುವ ಅವ್ಯಯ: ಋವೆಂದಂ, ಋವಿತ್ತಂ (ಶಮದ. ೫೫ ಪ್ರಯೋ). [ಸಂ.]

**ಋಕಾರ** (ನಾ). [ವ್ಯಾಕ] = ಋ$_1$: ಋಕಾರಕ್ಕೆ:—ಋವೆಂದಂ; ಋವಿತ್ತಂ (ಶಮದ. ೫೫ ಪ್ರಯೋ). [ಸಂ.]

# ಌ



**ಌ** (ನಾ). ಕನ್ನಡ ವರ್ಣಮಾಲೆಯ ಒಂಬತ್ತನೆಯ ಅಕ್ಷರ; ಌಕಾರ. ℙ ಇದು ಸಂಸ್ಕೃತದಿಂದ ಬಂದದ್ದು. ಅಕ್ಕರಂಗಳಕಾರಂ ಮೊದಲಾಗಿ ಳಕಾರ ಪರ್ಯಂತಂ ಪರಿಪೂರ್ಣಮಾಗಿರ್ಪುವು. ಅವಾವುವೆಂದೊಡೆ—ಅಆ, ಇಈ, ಉಊ, ಋೠ, ಌೡ . . . ಹ್, ಳ್ (ಶಮದ. ೪ ವೃತ್ತಿ). [ಸಂ.]

**ಌಕಾರ** (ನಾ). = ಌ. [ಸಂ.]

# ೡ



**ೡ** (ನಾ). ಕನ್ನಡ ವರ್ಣಮಾಲೆಯ ಹತ್ತನೆಯ ಅಕ್ಷರ; ೡಕಾರ: ℙ ಇದು ಸಂಸ್ಕೃತದಿಂದ ಬಂದದ್ದು. ಅಕ್ಕರಂಗಳಕಾರಂ ಮೊದಲಾಗಿ ಳಕಾರ ಪರ್ಯಂತಂ ಪರಿಪೂರ್ಣಮಾಗಿರ್ಪುವು. ಅವಾವುವೆಂದೊಡೆ—ಅಆ, ಇಈ, ಉಊ, ಋೠ, ಌೡ . . . ಹ್, ಳ್ (ಶಮದ. ೪ ವೃತ್ತಿ). [ಸಂ.]

**ೡಕಾರ** (ನಾ). = ೡ. [ಸಂ.]

**ಎ$_1$** (ನಾ). ಕನ್ನಡ ವರ್ಣಮಾಲೆಯ ಹನ್ನೊಂದನೆಯ ಅಕ್ಷರ; ಎಕಾರ: ಎ ಏ, ಒ ಓ ಎಂಬೀ ಯುಗಳಾಕ್ಷರಂಗಳ್ ವಿಶಂಕಾವಧಾರಣ ನಿಪಾತಂಗಳಲ್ಲದೆ ನಿಜದಿನೊಳವು (ಶಮುದ. ೮ ವೃತ್ತಿ).

**-ಎ$_2$** (ಪ್ರ). ಸ್ತ್ರೀಲಿಂಗ ಪ್ರತ್ಯಯ: ಏಂ ಕಡುಜಾಣೆಯರೋ ಲತಾಂಗಿಯರ್ (ಆದಿಪು. ೧೨-೪೬); ಎತ್ವಕ್ಕೆ – ಜೋಡೆ, ಸಿತಗೆ, ಚದುರೆ, ಪಾಣ್ಬೆ (ಶಮುದ. ೨೦೮ ಪ್ರಯೋ).

**-ಎ$_3$** (ಪ್ರ). ೧. ನಾಮವಾಚಕ, ಕ್ರಿಯಾವಾಚಕಗಳ ಕೊನೆಯಲ್ಲಿ ಪ್ರಶ್ನಾರ್ಥದಲ್ಲಿ ಸೇರುವ ಪ್ರತ್ಯಯ: ಬಂದಿರೆ ಮಾಮರಂಗಳಿರ ಮಲ್ಲಿಗೆ ಬಂದಿರೆ (ಅಜಿಪು. ೬-೧೪); ವಿಶಂಕೆಗೆ:- ಇನಿಯನೆ ಬೆಲ್ಲದಿಂ ದಿನಿಯಂ . . . ಇತ್ತುದಂ ನೆನೆವನೆ ಚೀ ಅದಂ ನೆನೆಯಂ (ಶಮುದ. ೫೬ ಪ್ರಯೋ); ಪ್ರಮಥಪುಂಗವನೆನಿಪ ಬಸವನನಮಳನಂ ಕಂಡಿರೆ (ಬಸಪು. ೧೦-೧೫). ೨. ಪ್ರಶ್ನಾರ್ಥದಲ್ಲಿ 'ಹೌದು' ಎಂಬ ಉತ್ತರವನ್ನು ಸೂಚಿಸಲು ಹತ್ತುವ ಪ್ರತ್ಯಯ: ಪಱಿದೊಡೆ ಬಾೞ್ವನಲ್ಲದೊಡೆ ಸಾಯನೆ ಸತ್ಕೃತಿಗೇಳ್ದು ದುರ್ಜನಂ (ಅನಂಪು. ೧-೪೦); ಒರ್ವನೆ ಗಂಡನಲ್ತೆ ಜಗತೀತಲದೊಳ್ (ಶಮುದ. ೪೭ ಪ್ರಯೋ); ಧರಣಿಯೊಳು ಕೆಲವೂರ್ಗಳಿಲ್ಲವೆ (ಬಸಪು. ೪೪-೩೯). ೩. ಪ್ರಶ್ನಾರ್ಥದಲ್ಲಿ 'ಅಲ್ಲ', 'ಇಲ್ಲ' ಎಂಬ ನಿಷೇದಾರ್ಥವನ್ನು ಸೂಚಿಸಲು ಹತ್ತುವ ಪ್ರತ್ಯಯ: ನೀನಿಲ್ಲದರಸುಗೆಯ್ವನೆ ನೀನಿಲ್ಲದೆ ಬಾೞ್ವನೆ (ಗದಾಯು. ೪-೧೨).

**-ಎ$_4$** (ಪ್ರ). ಅವಧಾರಣಾರ್ಥದಲ್ಲಿ ಬರುವ ಪ್ರತ್ಯಯ: ಕೆಜ್ಜಗೆ ಮೊರಡಿಎ (ಎಕ. I, ೧-೨೨; 445); ದಕ್ಷಿಣಾ ದೆಸೆಗೆಲ್ಲಂ ತೋಱಿಎ ಅನ್ತೆ ಬನ್ದು ಪಶ್ಚಿಮಾ ದೆಸೆಗೆಲ್ಲಂ ಮತ್ತಂ ತೋಱಿ ಎ (ಮೈಆರಿ. ೧೯೩೬, ೫೩-೨೭; 550); ಧನಮುಳ್ಳನಾವೊನಂತಾತನೆ ಶೂರನಾತನೆ ಕುಲೋದ್ಭವನಾತನೆ ಶುದ್ಧವೃತ್ತನಂತಾತನೆ ಇಂದ್ರನಾತನೆ ಮನೋಭವನಾತನೆ ಅಂಬುಜೋದ್ಭವಂ (ಕಾವ್ಯಾವ. ೫೩).

**ಎಂಕನಾಂ** (ನಾ). (?) : ಪಂಣನಾಯಕರು ತಂಮಂಣ ರಣಗಬ್ಬಗೆ ಉಳ್ಳ ದಂಡಿಗೆ ಸತ್ತಿಗೆ ಕುಂಚ ಕು[ತ]ಂಜಿ ಮಲಗಾಮೂಡೆ ಜಂಬುವಿನಂ ಅಂಕ ಎಂಕ ನಾಂ ಮುಂತಾದ ಸರ್ವಮಾನ್ಯ (ಕಇ. I, ೬೪-೨೭; 1484).

[?]

**ಎಂಕೆಲು** (ನಾ). "ರೆಂಬೆ, ಕೊಂಬೆ" (ಕಸ್ತೂಕೋ. ೧೨೫). [?]

**ಎಂಗ** (ನಾ). ಮೂಢ: "ಎಂಗ – ಮೂಢನು : ನೀನೇನೆಂಗಮನುಷ್ಯನಾಗಿದ್ದೀಯೆ" (ಕಲ್ಪದ್ರು. ೪೪). [< ಎಗ್ಗ]

**ಎಂಗಿ$_1$** (ನಾ). ದಡ್ಡ; ತಿಳಿಗೇಡಿ; ಬುದ್ಧಿಕಡಮೆಯಾದವನು.

[?]

**ಎಂಗಿ$_2$** (ನಾ). ೧. ವಂಚಕ; ಮೋಸಗಾರ: ಒಡೆಯಗೆರಡು ಬಗೆದಾ ಎಂಗಿಯ್ಕೆ ಸರ್ವರೊಳು ಮಧ್ಯಸ್ಥನಲ್ಲದಹಂಗೆ (ವೀಶೈಪು. ೪-೨೨-೩೬). ೨. ಮೋಸ; ಕಪಟ; ವಂಚನೆ.

**ಎಂಗಿಬೀಳು** = ಮೋಸಹೋಗು: ಅವನು ಎಂಗಿಬಿದ್ದನು (ರೂಢಿ). **ಎಂಗಿನಾಣ್ಯ** = ಮೋಸದ ನಾಣ್ಯ; ಖೋಟಾ ನಾಣ್ಯ (ಕಿ). 'ಬೆಂಗಿ', 'ವೆಂಗಿ' ಪರಾ. [< ವೆಂಗಿ]

**ಎಂಚೆಯ** (ನಾ). ಕಿವಿಯಲ್ಲಿ ಧರಿಸುವ ಒಂದು ಆಭರಣ: ಸಿರಿಕಾಂತೆ ಕರ್ಣಸಿಂಗಡಿಗೆ ಸ್ಮರಮಲ್ಲಿಗೆಯ ಮುಗುಳ ಬಾಣಬಿಟ್ಟಂತೆ ಮೆರೆದುದು ಮುತ್ತಿನೆಂಚೆಯವು (ಜ್ಞಾನಚ. ೩-೬೯). [?]

**ಎಂಜಲ್**, ಎಂಜಲ, ಎಂಜಲು (ನಾ). ೧. ತಿಂದಮೇಲೆ (ಎಲೆಯಲ್ಲಿ) ಉಳಿಯುವ ಆಹಾರ; ತಿನ್ನುವವನು ಕೈ ಹಾಗೂ ಬಾಯಿಂದ ಮುಟ್ಟಿದ ಆಹಾರಪಾನೀಯಗಳು: "ಎವುೞೆಂದುಂ, ತಿನ್ನಮೆಂದುಂ, ಪತ್ತಳಿಯೆಂದುಂ, ಎಂಜಲ್" (ಕಶಸಾ. ೨೫-೫೧೮); ನೀನೆ ಜಾತಿದೇವತೆಯಪ್ಪೊಡೆನ್ನೆಂಜಲನೆಂತು ತಿಂಬೆಯೆಂಬುದುಂ (ಪಂಪಭಾ. ೮-೪೩ ವ). ೨. ಇತರರು ಅನುಭವಿಸಿ ಬಿಟ್ಟದ್ದು: ಆ ಸ್ವಾಮಿಗಾನಲ್ತು ಪೊದಲೊಲ್ಮೆ ಕರ್ಣನ್ ಸೇನಾಧಿಪತ್ಯಮೇ ಕರ್ಣನ್, ಶೃಂಗಾರಮೇ ಕರ್ಣನ್, ಎಂಜಲೆಂಜಲ್ ನನಗೆ ಸಿಡುಕಂಗೆ ಹುಂ (ಅಶ್ವತ್ಥಾ. ೨೫-೨೬). **ಎಂಜಲ**: ೧. ಎಂಜಲವಶೌಚವು ಸಂಜೆಯೆಂದೆನಬೇಡ ಕುಂಜರವು ವನವನೆನೆವಂತೆ ಬಿಡದೆ ನಿರಂಜನನ ನೆನೆಯೊ (ಸರ್ವಜ್ಞ. ೨೯೭); ಈ ಬ್ರಹ್ಮಸೃಷ್ಟಿಯು ಸ್ತ್ರೀಯ ಎಂಜಲವು (ಸಂಜೀವಿ. ೭). **ಎಂಜಲು**: ೧. "ಎವುೞೆಂಜಲುಮೆನುತ್ತುಂ ತಾವೇನುಂ ಪತ್ತಱೆನ್ನಲುಚ್ಛಿಷ್ಟಕ್ಕಂ" (ಕವಿಕಂ. ೨೦೭); ಅಗಲೊಳಗಿಕ್ಕಿದೊಳ್ಳುಣಿಸಮೇಧ್ಯಮುಮೆಂಜಲುಮಪ್ಪುದು (ಅಜಿಪು. ೨-೫೧); ಇಕ್ಕಲಾಱೆ ಕೈಎಂಜಲು (ಪುರಂದ. ೧-೧೩೧-೧); ಎಂಜಲೆಂಜಲು ಎಂಬರಾ ನುಡಿ ಎಂಜಲಲ್ಲವೆ ವಾರಿ ಜಲಚರದೆಂಜಲಲ್ಲವೆ ಹಾಲು ಕಱುವಿನ ಎಂಜಲೆನ್ನಿಸದೆ ಎಂಜಲೆಲ್ಲಿಯದೆಲ್ಲಿಯುಂ ಪರರೆಂಜಲಲ್ಲವೆ ಬೇಱೆ ಭಾವಿಸಲೆಂಜಲುಂಟೇ (ಹಭಸಾ. ೧೦೧); ಊಟ ಮಾಡಿದ ಬಟ್ಟಲು ಇತ್ಯಾದಿಗಳಲ್ಲಿ ಎಂಜಲು ಚೂರುಗಳು ಉಳಿಯುತ್ತವೆ (ಅಡುಸೌ. ೩೯); ಎಂಜಲು ಎತ್ತೊ ಗುಂಡಾ ಅಂದರೆ ಉಂಡವರು ಎಷ್ಟು ಜನ ಅಂದ (ಗಾದೆ).

**ಎಂಜಲಕುಳಿ, ಎಂಜಲಕುೞಿ** = ಎಂಜಲು ಮತ್ತು ನೀರು ಚೆಲ್ಲುವ ಕುಳಿ; ಎಂಜಲು ಹಾಕುವ ಗುಂಡಿ: ನಂಜಿನ ಮರದ ನೆಳಲ್ಪಲರೆಂಜಲಕುಳಿ ಪಚ್ಚವಡದ ತಾಣಂ ಕಳ್ಳೊಳ್ ರಂಜಿಸಿದ ಮಡಕೆ ಪಾಪದ ಪುಂಜಂ ಸೂಳೆಯರ ತೆಱದೆ ಕಷ್ಟರುಮೊಳರೇ (ಪಸಾರ. ೬೦೦-೧೦); ಬಿಡದೆಂಜಲಕುೞಿಯಂ ನೇರ್ಪಡೆ ಪೊರ್ದಿದ ವಾರಿ ಪೊಲ್ಲದೆನಿಪವೊಲಳಿಪಿಂ ಕಡುವೊಲ್ಲರಪ್ಪ ಮಾನವರೊಡಗೂಡಿದ ಮಾನಿಸರ್ಗೆ ಸದ್ಗುಣವಱಿಗುಂ (ಧರ್ಮಾಮೃ. ೧೧-೩೦). **ಎಂಜಲಮಾತು** = ೧. ಬೇರೆಯವರ ಮಾತು (ಉಕ). ೨. ನಿನ್ನೆಯ ಮಾತು (ಉಕ. ಕಿ).

[ದೇ. ‖ ತಮಿ. ಎಚ್ಚ; ಮಲ. ಕೊಡ. ಎಚ್ಚಿ; ತೆಲು. ಎಂಗಿಲಿ; ಗೊಂಡಿ. ಯೆಂಗುಲ್; ಮಲ್ತೊ. ಎಂಗೆ, ಎಂಗ್ರೆ]

**ಎಂಜಲ** 'ಎಂಜಲ್' ನೋ.

**ಎಂಜಲಗುೞ್**, ಎಂಜಲವುಳು (ನಾ). ಇತರರು ತಿಂದು ಮಿಕ್ಕ ಅನ್ನದ ಅಗುಳು: ಕೂಸನಾಥೆಯಾಗಿ ಪೂರ್ವಕೃತ ಕರ್ಮಫಲಮನನುಭವಿಸುತ್ತುಂ ಕೂೞ್ಪಡೆಯದೆ ಪೊಱಲೊಳಗೆಂಜಲಗುೞನಾಯ್ದಲಸಿ ಕುಱುಕುತ್ತುಂ (ಧರ್ಮಾಮೃ. ೮-೧೬೩). **ಎಂಜಲವುಳು**: "ಎವುೞ್ (ಎರೆ) = ಎಂಜಲವುಳು" (ಶಮುದ. ಪರಿ. ೨). 'ಎಂಜಲೆವುೞು' ಪರಾ.

[ಎಂಜಲ್ + ಅಗುೞ್$_4$]

**ಎಂಜಲಿಗ** (ನಾ). ೧. ಎಂಜಲನ್ನು ತಿನ್ನುವವನು. ೨. ಎಂಜಲಾದವನು: ತಿಳಿಯಲ್ ಕಳಂಕಿ ನೀಂ ಕ್ಷಯರೋಗಿ ದಿವಿಜರೆಂಜಲಿಗನತಿದೋಷಾಕರಂ ನಿನ್ನನೆನ್ನ ಮಂಗಳ ಮುಖಕೆ ಸರಿಯೆಂದು ಪೋಲಿಸುವರುಪಮೆಗಳನೀಗ ಮಾಣಿಸುವೆನೆಂದು ನಳಿನಾಕ್ಷಿಯೊರ್ವಳ್ (ಚಬಪು. ೧೦-೧೬).

[ಎಂಜಲ್ + -ಇಗ]

**ಎಂಜಲಿಸು** (ಕ್ರಿ). ಎಂಜಲು ಮಾಡು; ಬಾಯಿಂದ ಮುಟ್ಟು, —ತಿನ್ನು : ನಂಜಿನೊಳೊಡಿದ ಕಂಜಮನೆಂಜಲಿಸಿದ ಮಧುಪನಂತೆ (ಶಾಂತಿಪು. ೬-೯೨); ನಂಜನೆಂಜಲಿಸಲಪ್ಪುದು ಸಿಂಹಮಂ ಪಿಡಿದೇಱಲಪ್ಪುದು (ಧರ್ಮಾಮೃ. ೧-೧೯೯); ಕಾಲೋರಗನೆಂಜಲಿಸಿದ ಪಾಲಂ ಕುಡಿಯಿಪುದೆ ಮಱಿದುಮಱಿಯದ ಶಿಶುವಂ (ವರ್ಧಪು. ೭-೩೮); ಹಾಲಾಹಲವ ನೊಣನೆಂಜಲಿಸುವುದೆ (ಕುವ್ಯಾಆ. ೬-೧೧); ಅಖಂಡಿತದ ಮಂತ್ರಪೂತದ ಹವಿಯನ್ನು ಕಾಗೆ ತಿಳಿದು ಎಂಜಲಿಸುವುದೆ (ಬದುರಿ. ೧೯೭). [ಎಂಜಲ್ + -ಇಸು₃]

**ಎಂಜಲು** 'ಎಂಜಲ್' ನೋ.

**ಎಂಜಲುಗೂಳು** 'ಎಂಜಲ್ಗೂೞ್' ನೋ.

**ಎಂಜಲುಗೋಮ** (ನಾ). ಎಂಜಲಾದ ಜಾಗವನ್ನು ಸಗಣಿಯಿಂದ ಸಾರಿಸುವುದು : ಊಟ ಮುಗಿದು ಎಂಜಲುಗೋಮ ಆಗುವುದೊಂದೇ ತಡ (ಗಂಗಾಸಾ. ೧೫೪). [ಎಂಜಲು (< ಎಂಜಲ್) + ಗೋಮ]

**ಎಂಜಲುದುಡ್ಡು** (ನಾ). ೧. (ಇಂದಲ್ಲದೆ) ನೆನ್ನೆ ಪಡೆದ ಹಣ (ಉಕ. ೩). ೨. ಅಕ್ರಮವಾಗಿ ಪಡೆದ ಹಣ; ಲಂಚ: ಎಂಜಲುದುಡ್ಡಿಗೆ ಕೈಯೊಡ್ಡಬಾರದು (ರೂಢಿ). [ಎಂಜಲು (< ಎಂಜಲ್) + ದುಡ್ಡು]

**ಎಂಜಲುಬಂಡಿದೇವರು** (ನಾ). ಮೊರಸು ಒಕ್ಕಲಿಗರು ಪೂಜಿಸುವ ದೇವರು; ಮೊರಸು ಒಕ್ಕಲಿಗರ ಪಂಗಡದಲ್ಲಿ ಎರಡನೆಯ ಅಥವಾ ಅನಂತರದ ಮಕ್ಕಳಿಗೆ ಕಿವಿಚುಚ್ಚುವಾಗ ಮಾಡುವ ಒಂದು ಸಮಾರಂಭ (ಎಸಮೈ. XV, ೧೦). [ಎಂಜಲು (< ಎಂಜಲ್) + ಬಂಡಿ + ದೇವರು]

**ಎಂಜಲುರುಳು** (ನಾ). ಎಂಜಲುಸೇವೆ ಮತ್ತು ಉರುಳುಸೇವೆ; ದಿಂಡುರುಳುಸೇವೆಯಂತೆ ದೇವರಿಗಾಗಿ ಮಾಡುವ ಸೇವೆಗಳಲ್ಲಿ ಒಂದು ಬಗೆ. [ಎಂಜಲು (< ಎಂಜಲ್) + ಉರುಳು₂]

**ಎಂಜಲುವಾತು** 'ಎಂಜಲ್ವಾತು' ನೋ.

**ಎಂಜಲುಹಾಳೆ** (ನಾ). ಊಟಮಾಡಿದ ಎಲೆ; ಎಂಜಲೆಲೆ : ತುಂಬಿದ ಕೊಟ್ಟೆಯ ಕೆದಕುವ ಇಲಿಯಾಗಬೇಡ ಹೆರರುಂಡು ಹೊರಗೆಸೆದೆಂಜಲು ಹಾಳೆಯ ನೆಕ್ಕುವ ಶುನಿಯಾಗಬೇಡ (ಇಂಬಾಪ. ೨೧೮-೩೦). [ಎಂಜಲು (< ಎಂಜಲ್) + ಹಾಳೆ]

**ಎಂಜಲೆಲೆ** (ನಾ). ಊಟಮಾಡಿ ಬಿಟ್ಟ ಎಲೆ: ಒಂದು ಹೆಂಗಸು ಮತ್ತು ಒಂದು ಹುಡುಗಿ ನಿಂತುಕೊಂಡು ಯಾರೋ ಉಂಡು ಬಿಸಾಕಿದ ಎಂಜಲೆಲೆಯನ್ನು ಹೆಕ್ಕಿ ನೆಕ್ಕುತ್ತಿದ್ದರು (ಮುಂಗಾಮು. ೧೯). [ಎಂಜಲು (< ಎಂಜಲ್) + ಎಲೆ₁]

**ಎಂಜಲೆವುಱು** (ನಾ). ಎಂಜಲಿನ ಅಗುಳು; ಎಂಜಲನ್ನ: ತಾವಿರ್ಬರುಂ ತಿರಿದು ತಂದಿಕ್ಕಿದೆಂಜಲೆವುಱುಮಂ ತಿಂದು ಪೆಸರುಮಿಲ್ಲದೆ ನಿರ್ನಾಮಿಕೆಯೆಂದು ಪೆಸರಾಗಿ ಬೆಳೆಯೆ (ಆದಿಪು. ೨-೩೮ ವ); ತಾಮಿರ್ವರುಂ ತಿರಿದು ತಂದಿಕ್ಕಿದೆಂಜಲೆವುಱುಮಂ ತಿಂದು (ಚಾವುಂಪು. ೨೬-೯). [ಎಂಜಲ್ + ಎವುಱು]

**ಎಂಜಲೋದನ** (ನಾ). = ಎಂಜಲ್ಗೂೞ್ : ಲೋಕನಾಯಕ ಶರಣ ಕೈವಿನ್ ಈ ಕುಲೆಚ್ಚಂದೆಂಜಲೋದನವಾಕಿ ಕಾರಣಪುರುಷ ನೀನಾದೆಂದನಾ ಬಸವ (ಬಜ್ಜಪು. ೬೧-೪೯). [ಎಂಜಲ್ + ಓದನ]

**ಎಂಜಲ್ಗೂೞ್**, ಎಂಜಲುಗೂಳು (ನಾ). ಎಂಜಲಾದ ಕೂಳು, —ಆಹಾರ : ತಾಮಿರ್ವರುಂ ತಿರಿದು ತಂದಿಕ್ಕಿದೆಂಜಲ್ಗೂೞುಮಂ [ಪಾಠಾಂ. ಎಂಜಲೆವುಱುಮಂ] ತಿಂದು (ಚಾವುಂಪು. ೨೬-೯). **ಎಂಜಲುಗೂಳು** : ದುರಿತವಶದಿ ತನಗಾರು ಭಿಕ್ಷವ ಕೊಡದಿರಲಾ ಪುರದ ತಿಪ್ಪೆಯೊಳು ಸುರಿದೆಂಜಲುಗೂಳುಗಳನಾಯ್ದು ತಾನುಣುತಿರಲಾಗ (ನೇಮಿಸಂ. ೭-೩೮). [ಎಂಜಲ್ + ಕೂೞ್₁]

**ಎಂಜಲ್ವಾತು**, ಎಂಜಲುವಾತು (ನಾ). ಬೇರೆಯವರ ಮಾತು : "ಎಂಜಲ್ವಾತು – ಒಬ್ಬರು ಉಪಯೋಗಿಸಿದ ನುಡಿ, ಒಬ್ಬರು ಆಡಿಬಿಟ್ಟ ಮಾತು" (ಪ್ರಭಣ್ಣ). **ಎಂಜಲುವಾತು** : ನಾಕೆರಡೆಂಜಲುವಾತಂ ತಾ ಕೆಲಗಂಟಕ್ಕಿ ಸಕಲ ಪಿಕವೆನ್ನುತ ಪದನೂಕದೆ ಕೈಪರಿಗುಟ್ಟುವ ಕಾಕಂ ಕವಿಯೆ (ನೀತಿಸಾ. ೮೦). [ಎಂಜಲ್ + ಮಾತು₁]

**ಎಂಜಿನಿಯರಿಕೆ** (ನಾ). ಇಂಜಿನಿಯರನ ವೃತ್ತಿ : ಎಂಜಿನಿಯರಿಕೆ ಗುಮಾಸ್ತಿಕೆಯಲ್ಲ, ಹಿರಿಯ ನೌಕರಿ, ಗೌರವದ ನೌಕರಿ (ಚಗುಕ. ೯). [ಎಂಜಿನಿಯರು + -ಇಕೆ]

**ಎಂಜಿನಿಯರು** (ನಾ). ಎಂಜಿನುಗಳನ್ನು ರಚಿಸುವವನು; ಯಂತ್ರಶಿಲ್ಪಿ. [← ಇಂ. Engineer]

**ಎಂಟಡಿ** (ನಾ). ಎಂಟು ಪಾದಗಳನ್ನು ಉಳ್ಳದ್ದು; ಶರಭ: "ಎಂಟಡಿಯೆ ಶರಭ" (ಚತುನಿ. I, ೨೩); "ಎಂಟಡಿಯೆಂದೆನೆ ಶರಭ" (ಕವಿಕಂ. ೬೦); ಸಿಂಹಸಂಕುಲದ ಬೆಂಬತ್ತುವೆಂಟಡಿಯಂತೆ (ಸೌಂದಪು. ೧೩-೨೨); ಮೆಲ್ಲನಡಿಯಿಡುವೆಂಟಡಿಯ ಕೊಣಸುಗಳ್ (ರೇವಣ. ೩೬-೭); ದ್ವಿಶಿರಂ ತಾಯ್ದಪ್ಪಿ ಪಾಯ್ದೆಂಟಡಿಗೆ ಕುಟುಕನೊಲ್ದೂಡುಗುಂ (ಶಬಶಂ. ೨-೬೫). [ಎಂಟು + ಅಡಿ₁]

**ಎಂಟಡಿಗ** (ನಾ). = ಎಂಟಡಿ : ಆ ಭೇರುಂಡನೆಂಟಡಿಗನುಱೆ ಸುಡುವಗ್ನಿಯಂತಾಯ್ತು (ಶ್ರೀಪಾಲ. ೬-೩೧). [ಎಂಟಡಿ + -ಗ₃]

**ಎಂಟಡಿವರಿಜ** (ನಾ). ಶರಭದಂತೆ ರೂಪವುಳ್ಳವನು; ವೀರಭದ್ರ: "ಬೀರನೆಂಟಡಿವರಿಜ . . . ವೀರಭದ್ರಗೆ ಪೆಸರ್" (ಕಬ್ಬಕೈ. ೬); "ಬೀರಂ ಬಿಸುಗಣ್ಣನ ಮಗನೋರಂತಿರೆ ಜನ್ನವಗೆಯನೆಂಟಡಿವರಿಜಂ ವೀರೇಶನ ಪೆಸರಕ್ಕುಂ" (ಕವಿಕಂ. ೨೨); "ಎಂಟಡಿವರಿಜನೆಂದೊಡಾ ವೀರಭದ್ರಾಹ್ವಯಂ" (ಕಶರ. ೧೬). [ಎಂಟಡಿ + ಪರಿಜು + -ಅ₇]

**ಎಂಟು** (ನಾ). ಒಂದು ಸಂಖ್ಯಾವಾಚಕ; ಅಷ್ಟ: ಸಾಲಾಮ್ಬಾಲ ತಪೋಗ್ರದಿನ್ತು ನಡದೊಂ ನೂಱೆಣ್ಬ ಸಂವತ್ಸರಂ (ಎಕ. II, ೨೨-೨; 700); ಎಂಟು ದಮ್ಮದ ಪುಳ್ಳಿಯಂ ತಂದೊಡಂ (ವಡ್ಡಾರಾ. ೭೭-೨೦); ಶಂತನುಗಮುಮಳ ಗಂಗಾಕಾಂತೆಗಮೆಂಟನೆಯ ವಸು . . . ಪುಟ್ಟಿದಂ ಗಾಂಗೇಯಂ (ಪಂಪಭಾ. ೧-೬೭); ರಾಯನ ಘುಲ್ಲಿಸಿದನೇಳೆಂಟು ಬಾಣದ ಲೀಕನಡಿಗಡಿಗೆ (ಕುವ್ಯಾಕ. ೧೩-೩೦).

**ಎಂಟೊಕ್ಕಲ್** = ಎಂಟು ಒಕ್ಕಲುಗಳು, —ಸಂಸಾರಗಳು : ಸಾಕ್ಷಿ × × × ಎಟ್ಟಿದಿಂಬರುಂ ಎಂಟೊಕ್ಕಲುಂ (ಇಆ. XIV, ೭೬-೧೪; 899). [ದೇ. ‖ ತಮಿ. ಎಟ್ಟು; ತುಳು. ಎಣ್ಮ; ತೆಲು. ಎನಿಮಿದಿ]

**ಎಂಟುಗೆಯ್** (ಕ್ರಿ). ಎಂಟುಭಾಗ ಮಾಡು : ಪ್ರಸಿದ್ಧ ಕುಲವಾಹಿನಿ ಸೀತೆಯ ವಜ್ರವೇದಿಕಾಮಂಡಿತ ದಕ್ಷಿಣೋತ್ತರ ತಟಂಗಳೊಳೊಂದಱೊಳೆಣ್ಬಗೆಯ್ದು (ಮಲ್ಲಿಪು. ೨-೧೧). [ಎಂಟು + ಗೆಯ್ (< ಕೆಯ್₁)]

**ಎಂಟುಹಿಟ್ಟು** (ನಾ). ೧. ಎಂಟು ವಿಧವಾದ ಜೀವಿಕೆ, ಅಥವಾ ಕಸಬು. ೨. ಆಯಾ ಕಸಬುದಾರರ ಮುಖ್ಯಸ್ಥ : ಮೂಲಿಗ ಹಂಪಗಾ[ಡ]ನುಂ ಎಂಟುಹಿಟ್ಟುಗಳು ವಿದ್ಯಾರ್ಥಿ ಕುಡೆ ಹಡೆದ ವೃತ್ತಿ (ಸೌಇಇ. IX-i, ೨೫೩-೮೩; 1149); ಅಱುವತ್ತೊಕ್ಕಲುಮತಿಭಕ್ತಿ[ಯಿ]ನೆಂಟುಹಿಟ್ಟುಮಾಚಂದ್ರಾರ್ಕ್ಕ[೦] (ಸೌಇಇ. XV, ೨೩೬-೩೧; 1153); ನಿಧಿ ನಿಧಾನ ನಿಕ್ಷೇಪ ಜಲಪಾಷಾಣ ಮಾಳಾವೃಕ್ಷ ಗುಲ್ಮಲತಾವಳಿ ಚತುರಾಘಾಟ ಕಲ್ಲಕಣಿಯೆಂಟುಹಿಟ್ಟು ಮೂಲಿಗ ಆರುವಣ ಹಿಟ್ಟುದೆಱೆ (ಸೌಇಇ. XX, ೧೨೮-೧೦; 1186); ಮಾರಿಸೆಟ್ಟಿ ಮುಖ್ಯ ಎಂಟು ಹಿಟು[ಟ್ಟು]ಂ ಧರ್ಮ್ಮವಂ ಪ್ರತಿಪಾಳಿಸುವರು (ಸೌಇಇ. IX-i, ೩೭೪-೧೧; 1265); ಬನವಸೆಯ ಎಂಟುಹಿಟ್ಟು ಪಂಚಮಠದ ಸ[ಮಕ್ಷ]ದಲು (ಮೈಆರಿ. ೧೯೨೯, ೧೧೬-೨೧; 1368). [ಎಂಟು + ಹಿಟ್ಟು]

**ಎಂಟೆಡೆ** (ನಾ). (ಮುತ್ತು ಹುಟ್ಟುವ) ಎಂಟು ಸ್ಥಳಗಳು : ನವವಿಧದ ಸದ್ರತ್ನರಾಜಿಗಳನೆಂಟೆಡೆಯೊಳೊಗೆದ ವಿಲಸದ್ರುಚಿರ ಮುಕ್ತಾಫಲಂಗಳಂ ಕೊಟ್ಟು ನರನೊಡನವಂ ಪೂಜಿಸುಟ್ಟನು (ಜೈಮಿಭಾ. ೨೭–೫೫). ☞ ಆನೆಯ ಮಸ್ತಕ, ಹಾವಿನ ಹೆಡೆ, ಹಂದಿಯದಾಡೆ, ಬಿದಿರು, ಪರ್ವತ, ತಿಮಿಯೆಂಬ ಮೀನು, ಚಿಪ್ಪು, ಶಂಖ—ಇವು ಎಂಟು ಸ್ಥಳಗಳು. [ಎಂಟು + ಎಡೆ$_3$]

**ಎಂಟೆದೆ** 'ಎಂಟೆರ್ದೆ' ನೋ.

**ಎಂಟೆಯ** (ನಾ). ಬೆರಳಲ್ಲಿ ಧರಿಸುವ ಉಂಗುರ : ನೆಲೆಗೊಳಿಸಿದ ಗುಜಿಯೆನೆ ಮುತ್ತಿನೆಂಟೆಯಗಳು ಕೋಮಲಾಂಗಿಗೊಪ್ಪಿದವು (ಚಂಪ್ರಸಾಂ. ೧೫–೧೦೯). [?./ ತೆಲು. ಮೆಂಡಿಯ, ಮೆಂಡೆ]

**ಎಂಟೆರಡವತೆ** (ನಾ). (ವಿರಹದಲ್ಲಿನ) ಎಂಟು ಮತ್ತು ಎರಡು ಅವಸ್ಥೆಗಳು ; ದಶಾವಸ್ಥೆಗಳು : ಉಂಟಾದ ಧೈರ್ಯರ್ ತೀರ್ಕಣಿಸಿತು ಹೃದಯದೊಳೆಂಟೆರಡವತೆ ಸಂಭ್ರಮಿಸೆ (ಮೋಹತ. ೨೮–೧೨). [ಎಂಟು + ಎರಡು + ಅವತೆ]

**ಎಂಟೆರಡು** (ನಾ). ಎಂಟು ಮತ್ತು ಎರಡು ; ಹತ್ತು : ಅಷ್ಟಮೂರ್ತಿ ಅಷ್ಟಮದಂಗಳ ನಷ್ಟವ ಮಾಡಿ ಎಂಟೆರಡು ದಿಕ್ಕಿನಲ್ಲಿ ಹರಿವ ದಶ ವಾಯುಗಳ ಗಂಟಲ ಮುಱಿದು (ಘನವ. ೨೦). [ಎಂಟು + ಎರಡು]

**ಎಂಟೆರ್ದೆ, ಎಂಟೆದೆ** (ನಾ). ೧. ಎಂಟು ಎದೆ. ೨. (ಅಲಂ) ಕೆಚ್ಚು ; ಅತಿಧೈರ್ಯ ; ಎದೆಗಾರಿಕೆ : ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇೞಿ ಪರಿಕ್ಷಿಪಂಗೆಂಟೆರ್ದೆಯೇ (ಗದಾಯು. ೧–೪೪) ; ತೊಡರ್ವ ವಿರೋಧಿಗೆಂಟೆರ್ದೆಯೆ ಮಾಱುವ ವೈರಿಗೆ ಮೂಱು ಕಂಣೆ (ಎಕ. VIII, ಸಾಗರ. ೧೧೯–೬೬ ; 1042) ; ಸೆಣಸಿ ಕಾದುವ ಜನಪಂಗೆಂಟೆರ್ದೆಯೆ ಮರುಳ್ ನೀನೆತ್ತಱಿದಾ (ಧರ್ಮಾಮೃ. ४–೨೫೧) ; ಉಂಟು ನೀನಾಹವದೊಳಗೆ ಗೆಲಲೆಂಟೆರ್ದೆಯಲಾ ನಿನ್ನ ಹೋಲುವರುಂಟೆ ವೀರರು (ಕುಮಾವ್ಯಾ. ವಿ. ೮–೧೮). **ಎಂಟೆದೆ** : ೧. ಆ ಆತ್ಮಪ್ರಜ್ಞೆ ದಿಗ್ದೇಶ ಮುಟ್ಟಿ ಎಂಟೆದೆಯ ರೂಪ ತಳೆದು (ಹೃದಸ. ೫೫–೧). [ಎಂಟು + ಎರ್ದೆ]

**ಎಂಟೊಡಲ** (ನಾ). ಎಂಟು ದೇಹಗಳನ್ನು ಉಳ್ಳವನು ; ಅಷ್ಟಮೂರ್ತಿ ; ಶಿವ : ಬಿಡೆ ಸಕಲಕ್ಕೆ ಬಲಂ ಬಗೆಗೆಂಟೊಡಲಾ ಎಂಟೊಡಲಂಗೆ ಬಲಂ ರುದ್ರಂ (ವೀರೇಚ. ೧–೫). ಎಂಟೊಡಲ ಹರನೊಡನೆ ನಸುಮುನಿಸುಂಟು ಗಡ ಕೃಷ್ಣಂಗೆ (ನಿಭಾಗ. ೧೦–೬೧–೩೦). [ಎಂಟು + ಒಡಲ್ + –ಅ$_7$]

**ಎಂತಪ್ಪ, ಎಂತಹ, ಎಂಥ** (ಗು). ಯಾವ ಪ್ರಕಾರವಾದ, —ರೀತಿಯ, —ಬಗೆಯ : ವಿರಾಟನಂ ಕಂಡೆಂತಪ್ಪ ದುಷ್ಪಾಶ್ವಂಗಳು ಮನೀಜಲುಂ ತಿರ್ದಲುಂ ಬಲ್ಲನೆಂದು (ಪಂಪಭಾ. ೮–೫೪ ವ) ; ಎಂತಪ್ಪ ಬುದ್ಧಿವಂತನುಂ ಸಂಸರ್ಗವಶದಿಂ ನಿಸರ್ಗಗುಣಮಂ ಪತ್ತುವಿಡುವುದು ಕಡುದಿಟಂ (ಪಂಚತಂ. ೧೨೧–೨೦) ; ಇದೆಂತಪ್ಪನ್ನೆದೆಂತಪ್ಪ ದರ್ಪಮಿದೆಂತಪ್ಪಳವೆಂದು ಕಂಸನತಿಚಿಂತಾಕ್ರಾಂತನಾಗಿರ್ಪುದುಂ (ಜಗವಿ. ೬–೩೪). **ಎಂತಹ** : ಅಂತಪ್ಪಂ ಮೊದಲಾದುವಱ ಹಕಾರಕ್ಕೆ – ಅಂತಹಂ. . . ಎಂತಹಂ (ಶಮದ. ೧೬೦ ಪ್ರಯೋ) ; ಬಸವಣ್ಣನೆಂತಹ ವಿನಯಭಕ್ತನೋ (ಬಸಪು. ४–೬೯). **ಎಂಥ** : ಎಂಥ ಹುಚ್ಚಿ ನಾನು (ಶನಿಸಂ. ೭೧).

ಎಂತಪ್ಪಂ, ಎಂತಹಂ, ಎಂಥವನು = ಎಂತಹವನು : ದುಷ್ಟಚೇಷ್ಟಾ ಸಹಸ್ರದಾರುಣಮಪ್ಪ ರಾಜ್ಯತಂತ್ರದೊಳೆಂತಪ್ಪನುಂ ಮೋಹಿಸದಿರಂ (ಕಾದಂಪೂ. ೫೬೩) ; ಈ ಕಬ್ಬಮೆಂತಪ್ಪಂಗಂ ಪೊಸಮುತ್ತಿನೆಕ್ಕಸರದಂತೆಂದು ಕೊರಲ್ಗೊಳ್ಳದೇ (ಕಬ್ಬಿಕಾ. ೫) ; ಎಂಥವನೆಂಥವನೆ ರಂಗಯ್ಯ ಎಂಥವನೆಂಥವನೆ (ಪುರಂದ. ೨–೨೮–೧).

ಎಂತಹವರ್ಗಳ್ (ಬಹುವ) : ಏನೆಂಬ ಪೆಂಪೊ ! (ಎಂದರೆ) ಎಂತಹವರ್ಗಳೆಂಬ ಪೆರ್ಮೆಯೊ (ಶಮದ. ೧೮४ ಪ್ರಯೋ). ಎಂಥೆಂಥ (ದ್ವಿರುಕ್ತಿ): ದಸರಾ ಮೆರವಣಿಗೆಯಲ್ಲಿ ಎಂಥೆಂಥ ದೃಶ್ಯಗಳನ್ನು ನೋಡಬಹುದು (ರೂಢಿ). [ಎಂತು + ಅಪ್ಪ$_4$ (< ಅಗು$_1$)]

**ಎಂತಹ** 'ಎಂತಪ್ಪ' ನೋ.

**ಎಂತಾನುಂ** (ಅ). ಹೇಗಾದರೂ ; ಯಾವರೀತಿಯಲ್ಲಾದರೂ : ಮಲಯಜರಸ ಲುಳಿತ ಕದಳೀದಳವ್ಯಜನ ಮಂದಮಾರುತಾಂದೋಳನದಿನೆಂತಾನುಂ ಮೂರ್ಚ್ಛೆಯಿಂದೆಟ್ಟುಱಿಸಿ (ಆದಿಪು. ೬–೨೩ ವ) ; ಎಂದು ಬಿನ್ನವಿಸಿದ ಪನ್ನಗನಸುರರ ಸಂತಾಪಮನೆಂತಾನುಂ ಕೇಳಲಾಱದೆ ಸಂತೈಸಿ (ಗಿರಿಕ. ೬–೧೨ ವ) ; ಸೊರ್ಕಿ ನೀನೆಂತಾನುಂ ಗೆಲಿವುವುದಂ ಕಾಣುತೆ (ಅದ್ಭುತ. ೧೩–೧೫). [ಎಂತು + ಆನುಂ]

**ಎಂತು** (ಅ). ಹೇಗೆ ; ಯಾವರೀತಿ ; ಯಾವವಿಧ : ಆಱಿದಾಯುಷ್ಯಮನೆನ್ನು ನೋಡೆನಗೆ ತಾನಿನ್ನೆನ್ದು (ಎಕ. II, ೭೬–೩ ; 700) ; ಎಂತು ಬಿಗುರ್ತು ಬೀರರನೆ ಕೊಂದಪಿರೆಂತು ಸಮಸ್ತವಾರ್ಧಿಪರ್ಯಂತ ಧರಿತ್ರಿಯಂ ನಶಕೆ ತಂದಪಿರ್ (ಪಂಪಭಾ. ೬–೨೩) ; ಜಡರಂ ಕರಮುಱಿದು ತಿಳಿಪಲೆಂತೆನೆ ಖರಕರನಂ ಗೂಗೆಗೆಯ್ದೆ ತೋರ್ಪಂತಕ್ಕುಂ (ಧರ್ಮಾಮೃ. ೧–४३) ; ಮಹಾರಥರೆಸುಗೆಯನು ನೀನೆಂತು ಸೈರಿಸಲಾಪೆ ಹೇಳೆಂದ (ಕುಮಾವ್ಯಾ. ದ್ರೋ. ४–೬೬) ; ಎಂತು ನೋಡಿದರು ಚಿಂತೆ (ಪುರಂದ. ೧–೧೬४–೧).

ಎಂತಕ್ಕೆ = ಹೇಗಾದರೂ; ಯಾವರೀತಿಯಲ್ಲಾದರೂ: ಎಂತಕ್ಕೆ! ಎಂತಕ್ಕೆ ! ಹಡೆದ ಕಾಯ ಬೀಯವಾಗದ ಮುನ್ನ ಅಟ್ಟುಣ್ಣುವೋ (ಬಸವ. ೧೬೬) ; ಮೌನದಿಂದೆಂತಕ್ಕೆ ಕಣ್ಮುಚ್ಚಿ ಮನದೊಳಗೆ ಜಾನಿಸುತಾಪ್ತಾನಿ ಸುತ್ತರ್ಚಿಸುವ ತೊಡಕನಾನಂದದಿಂ ನಿಲಿಸಿ (ಸಿದ್ಧರಾ. ೬–೩೭). ಎಂತಱ = ಎನಿತರ ; ಎಷ್ಟರ : ತಾನುಂಡುಟ್ಟು ಚಿಮ್ಮಿರ್ಂದುಕೊಂಡಿರೆ ಮಾಹೆಂತಱ ಬಲ್ಲದಾವ ಸಿರಿಯೆಂದಾತ್ತ್ಸಣ್ಣೆ ಕೂರ್ತಿತ್ತು (ಎಕ. VI, ತರೀಕೆ. ೫೫–೬೭ ; 1196) ; ಅಂತಕಾಂತಕ ಸಿದ್ಧನಂಜೇಶ ನಾಂ ನಡೆಯಲೆಂತಱವಳಯ್ಯ ನೀಂ ಕಾರುಣ್ಯದಿಂ ನೋಡಿಯಂತಕನ ಬಾಧೆಯಂ ಬಿಡಿಸಿ ಪಾಲಿಪುದು (ಗುರುಚಾ. ೧೬–೫೨). ಎಂತುಂ = ಯಾವ ವಿಧದಲ್ಲಾದರೂ ; ಹೇಗಾದರೂ ; ಹೇಗೂ : "ಎಂತುಂ ಹೇಗೆಯಾದೊಡಂ" (ಶಮದ. ೧೩४ ಟೀಕು) ; ಶ್ರೀಚನ್ನಮನೆನ್ನುಮೊಳ್ಪಿಡೆಯನ್ (ಎಇ. XXIV, ೨೬–೭ ; 885) ; ಮತ್ತೊಂದು ದಿನವೆಂತುಂ ದೊರಕದಿದ್ದೊಡೆ ಕಳವಳಿಸದೆ (ಬಸಪು. ४४–೨४). ಎಂತುಗೆ = ಸ್ತ್ರೀಯನ್ನು ಸಂಬೋಧಿಸುವಾಗ ಎಲೇ ಎಂಬರ್ಥದಲ್ಲಿ ಗೆ ಪ್ರತ್ಯಯ ಸೇರಿ ಆಗಿರುವ ರೂಪ: ಅಣಮೆಮೆ ಯಿಕ್ಕದೊಪ್ಪುಗುಮೆ ಕಣ್ಮಲರೆಂತುಗೆ ದೇವಸೌಂದರೀಗಣದ ವಿಳಾಸಂ (ಆದಿಪು. ४–४೭). ಎಂತುಮೊಳ್ಳಿದಂ = ಹೇಗೂ ಒಳ್ಳೆಯವನು ; ಒಂದು ಬಿರುದು(?): ಸಮಧಿಗತಪಂಚಮಹಾಶಬ್ದಮಾ ಸಾಮಾನ್ತಚಲ್ಲಧ್ವಜರಣದುತ್ತರಙ್ಗನೆನ್ತುಮೊಳ್ಳಿದಂ ಕನ್ದುಕಮಾಳನ ಧಳಕೆ ಧೊರಯ್ಗಂ ವೈರಿಕಾಳಾನಳಂ (ಎಕ. VIII, ಸೊರಬ. ೮೮–೩ ; 912). ಎಂತೆಂತು (ದ್ವಿರುಕ್ತಿ) : ಎಂತೆಂತು ಕಂಡೆ ಕಣ್ಬರಿವೆಂತೆಂತೇನೆಂದು ನುಡಿದಂ (ಕಾದಂಪೂ. ೮೦೬) ; ಎಂತೆಂತು ಪಿಕ್ಕಿ ನೋಟ್ಪಿಡಮಂತಂತೆ ವಿಚಾರಸಹ್ಯಮಕ್ಕಿಂದ್ಯಂ (ಸಮುಪ. ೩–೨४). ಎಂತೆಂದೊಡೆ = ಹೇಗೆಂದರೆ : ಅದೆಂತೆಂದೊಡೆ (ವಡ್ಡಾರಾ. ೭೨–೯) ; ಜಗದ ಸ್ಥಿತಿಗತಿ ಇಲ್ಲ ಅಂದೆಂತೆಂದೊಡೆ (ಅದವ. ೯).

[ದೇ. ‖ ತಮಿ. ಮಲ. ಎನ್ನು ; ತುಳು. ಏಟು ; ತೆಲು. ಎಟ್ಟು, ಎಟುಲ, ಎಟುಲು ; ಎಟ್ಟುಲು, ಎಟ್ಲು ; ಕೋಲಾ. ಎಂಟಾ ; ಪರ್ಜಿ. ಎಟಿ, ಎಟಿನ್]

**ಎಂತುಟು**$_1$ (ಗು). ಎಷ್ಟು : ಸುಯೋಧನಂಗೆ ರಣಭೂಮಿಯೊಳೆಂತುಟ ವಸ್ಥೆಯೋ (ಪಂಪಭಾ. ೧೩–೬೩) ; ಸೆಳೆವ ಸೀರೆಗೆ ಲಯವ ಕಾಣೆನು ಕರುಣ ವೆಂತುಟೊ ದೇವಕೀಸುತನ (ಕುವ್ಯಾಸ. ೧೫–೧) ; ಅಸ್ತ್ರದ ಮಹಿಮೆಯೆಂತುಟೊ ಶಿವಮಹಾದೇವ (ತೊರರಾ. ೨–೬–೧೨). [< ಎನಿತು + ಉಂಟು]

**ಎಂತುಟು**$_2$ (ಅ). ಹೇಗೆ ; ಯಾವ ರೀತಿಯಲ್ಲಿ : ಎಂತುಟು ಯುವ ರಾಜನ ವೃತ್ತಾಂತಂ ಬರುತಿರ್ದಪನೆಲ್ಲಿ (ಕಾದಂಬ. ೬೪೦) ; ಭಟಸಂಘಕ್ಕ ದಟೆಂತುಟಂತುಟಿ ಮುಖಾಂಭೋಜಕ್ಕೆ ಮೂಗೆಂತುಟಂತುಟಿ (ಧರ್ಮಾಮೃ. ೧–೭೨); ಭುವನಾಕಾರಮದೆಂತುಟೆಂದೆನಲ್ (ನೇಮಿಪು. ೧–೪೩); ನಿಮ್ಮೊಂದಿರವಂತಿಂತೆಂತುಟುಮನೇನುಮಱಿಯದೆ ಮಣ್ಣಾಗಿ (ರಕ್ಷಾ ಶ. ೨) ; ತತ್ಸಂಗಮಿಲ್ಲದೆ ನಿರ್ಲೇಪನದೆಂತುಟತ್ತಿ ಕಳೆಗುಂ (ವಿಷ್ಣುಪು. ೮–೨೬).

[ಎಂತು + –ಟು]

**ಎಂಥ** 'ಎಂತಪ್ಪ' ನೋ.

**ಎಂದ** 'ಎನ್$_1$' ಪರಾ.

**ಎಂದಡೆ** 'ಎನ್$_1$' ಪರಾ.

**ಎಂದಮುದುವು[ಳ?]** (ನಾ). ಒಂದು ಊರಿನ ಹೆಸರು : ಎನ್ದ ಮುದುವು[ಳ ?] ಗ್ರಾಮಸ್ಯ (ಕಇ. II, ೩–೩೨ ; 693). [?]

**ಎಂದರೆ** 'ಎನ್$_1$' ಪರಾ.

**ಎಂದಿಗ** (ನಾ). ಒಂದು ಬಗೆಯ ಮೀನು : ಸೀಗಡಿ ಗೊರವಂ . . . ಬಾಳೆ ಸಕ್ಕರೆ ಗಂಟೆಂದಿಗನಾನೆಮೊಗ ಮುದಲೆಂಬಗಣಿತ ಶಫರಾಳಿಗಳನು ತೆಗೆದರ್ ಬೇಡರ್ (ಶ್ರೀಪುವಿ. ೨೬–೯೧). [?]

**ಎಂದಿರು** (ನಾ). ಅಕ್ಕಿ, ತುಪ್ಪದಂತಹ ಆಹಾರ ಪದಾರ್ಥಗಳು (?) : ತಮ್ಮ ಮಠದ ಮಾಣಿಗಳ್ಗೆ ಉಪ್ಪು ಎಣ್ಣೆಗೆ ಗದ್ಯಾಣಂ ಪದಿನಾಱು ಕಪ್ಪಡಕ್ಕೆ ಗದ್ಯಾಣಂ ಪನ್ನೆರಡು ಎನ್ದಿರಿಂಗೆ ಗದ್ಯಾಣ ನಾಲ್ಕು (ಎಕ. VII, ಶಿಕಾರಿ. ೭೪–೧೪ ; 1010) ; ಅನ್ತು ಹದಿಮೂಱು ಮನುಷ್ಯರ್ಗ್ಗಂ ನೆಲ್ಲಕ್ಕಿ ಕೊಳಗ ೧ ಬಳ್ಳ ೧ ಎನ್ದಿರು ಮಾನಂ ೨ ತುಪ್ಪಮಾನ ೧ ಸೊಳಸ ಅಳೆ ಬಳ್ಳ ೩ (ಸೌಇಇ. IX–i, ೨೫೮–೨೬ ; 1153). [?]

**ಎಂದು**$_1$ 'ಎನ್$_1$' ಪರಾ.

**ಎಂದು**$_2$ (ನಾ). ಯಾವ ದಿನ ; ಯಾವ ವೇಳೆ : ಕಾಲಾರ್ಥೇ– ಅಂದು, ಇಂದು, ಎಂದು (ಭಾಷಾಭೂ. ೧೮೨ ಉದಾ) ; ಈ ದುರಾತ್ಮರಿಗೆ ನಜೀವಂ ದಾದರಿಸಿ ಕೇಳುವೆನೆನುತೆ (ಕುವ್ಯಾಕ. ೬–೧೪).

ಎಂದಾದರೂ = ಯಾವಾಗಲಾದರೂ ; ಯಾವ ಸಮಯದಲ್ಲಾದರೂ : ಈ ಮುದುಕನ ಮನೆಗೆ ಎಂದಾದರೂ ನೀನು ಹೋಗಿದ್ದಿ ? (ಮುಂಬಯಿ. ೨–೩೮ ಕ). ಎಂದಿಗಂ, ಎಂದಿಗೆ= ಯಾವಾಗಲೂ; ಯಾವ ಕಾಲಕ್ಕೂ : ಚಕ್ರೇಶ ಸಿಗ್ಗನುಱು ಮುಳಿಸಂ ನೀನೆಂದಿಂಗಂ ಬಿಸುಡು (ಆದಿಪು. ೧೪–೧೨೮) ; ನಿನ್ನೊಡನೆ ನಗುತಿರ್ಪ ಪಾತಕವೆನ್ನೊಳೆಂದಿಗೆ ಪರಿಹರಿಸುವುದು (ಬಸವು. ೪೫–೮).

[ದೇ. ‖ ತಮಿ. ಎನ್ನು ; ಮಲ. ಎನ್ನು ; ತುಳು. ಏನಿ, ಏಪ ; ತೆಲು. ಎಪುಡು, ಎಪ್ಪುಡು]

**ಎಂದುಂ, ಎಂದೂ** (ಅ). ಯಾವ ಕಾಲದಲ್ಲೂ ; ಯಾವಾಗಲೂ : ಕಾಣನೇಗೆಯ್ದುಂ ತನ್ನ ದೋಷಮಂ ಕಾಣದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯಂ (ಕವಿರಾ. ೧–೪೫) ; ಎಂದುಂ ಸೋಲವು ಕಣ್ ಪರಬಲಾಭ್ಧಿಗಂ ಪರವಧುಗಂ (ಪಂಪಭಾ. ೧–೪೭) ; ಕುಳದ ನಿಯಾಮದೊಳೆಂದುಂ ಶ್ಲೇಕ್ಕೆ ಲಾಕ್ಷರ ವಿಕಲ್ಪಮಿಲ್ಲ (ಶಮದ. ೫) ; ಎಂದುವುಂ ಮನವಚನ ಕಾಯಕದಿಂದಲೀಶನನಲ್ಲದನ್ಯಥವೊಂದುವಱಿಯದ ಪರಮ ಭಕ್ತರು ಮುಗ್ಧರುಗಳಲ್ಲ (ಬಸವು. ೧೨–೫೮). **ಎಂದೂ** : ಎಂದೂ ನಾನು ಮಾತಿಗೆ ತಪ್ಪುವುದಿಲ್ಲ (ರೂಢಿ).

ಎಂದೆಂದೂ (ದ್ವಿರುಕ್ತಿ) : ಇನ್ನುಮುಂದೆ ನಾನು ಎಂದೆಂದೂ ಇಂಥ ಕೆಟ್ಟಕೆಲಸ ಮಾಡಲಿಕ್ಕಿಲ್ಲ (ಮುಂಬಯಿ. ೪–೪೫).

[ಎಂದು$_2$ + –ಉಂ. / ತಮಿ. ಎನ್ನುಂ]

**ಎಂದೂ** 'ಎಂದುಂ' ನೋ.

**ಎಂದೊಡೆ** 'ಎನ್$_1$' ಪರಾ.

**ಎಂಪರಲಾಡಿಸು** (ಕ್ರಿ). ಪೂರ್ತಿಯಾಗಿ ಶೋಧಿಸು, —ಅನ್ವೇಷಣ ಮಾಡು. [ಎಂಪರಲಾಡು$_0$ + –ಇಸು$_3$]

**ಎಂಪರಾಡಿಸು** 'ಎಂಪಲಾಡಿಸು' ನೋ.

**ಎಂಪಲಾಡಿಸು,** ಎಂಪರಾಡಿಸು, ಎಂಪಾಲಾಡಿಸು (ಕ್ರಿ). ಉಪದ್ರ ಕೊಡು ; ಕಾಟ ಕೊಡು ; "ಪೀಡಿಸು" (ಗಂಗಾಮ. ೫೦); "ಉಪದ್ರ ಕೊಡು" (ಗುವಿನೋ. ೨೪). **ಎಂಪರಾಡಿಸು** : ಅವನನ್ನು ಹಿಡಿದುಕೊಂಡು ಎಂಪರಾಡಿಸಿಬಿಟ್ಟರು (ರೂಢಿ). **ಎಂಪಾಲಾಡಿಸು** : "ಹಿಂಸಿಸು" (ಕಲ್ಪದ್ರು. ೪೫).

[ಎಂಪಲಾಡು$_0$ + –ಇಸು$_3$. / ತೆಲು. ವೆಂಪರಲಾಡು]

**ಎಂಪಾಲಾಡಿಸು** 'ಎಂಪಲಾಡಿಸು' ನೋ.

**ಎಂಬತ್ತು** 'ಎಣ್ಬತ್ತು' ನೋ.

**ಎಂಬಲ** (ನಾ). ಹುಳಿಮಜ್ಜಿಗೆ: ಕಾಜೀನ ಗಿಂಡಿಯ ಮೋಜಿನ ಎಂಬಲಕ ದೇವರು ಬಂದ್ರ ಹೇಳಬ್ಯಾಡ್ರಿ . . . ಕಂಚೀನ ಗಿಂಡಿಯ ಮಿಂಚಿನ ಎಂಬಲಕ ದೇವರು ಬಂದ್ರ ಹೇಳಬ್ಯಾಡ್ರಿ (ಲೋಕಗೀ. ೧೪೮–೨೨, ೨೩).

[< ಅಮ್ಲ]

**ಎಂಬುಕೆಯ್** (ಕ್ರಿ). ಎಂದುದನ್ನು ಮಾಡು ; ಹೇಳಿದ್ದನ್ನು ಒಪ್ಪು ; ಅಂಗೀಕರಿಸು : "ಎಂಬುಕೆಯ್–ಅನುಮತೌ (ಒಪ್ಪು)" (ಶಮಧಾ). 'ಇಂಬುಕೆಯ್' ಪರಾ. ℙ 'ಎಂಬುಕೆಯ್' ಎಂಬುದು ಈಚಿನ ಕಾಲದಲ್ಲಿ 'ಇಂಬುಕೆಯ್' ಆಗಿರಬಹುದು.

[< ಎನ್$_1$ + ಕೆಯ್$_1$]

**ಎಂಬುವಿಕೆ** (ನಾ). ಎನ್ನುವಿಕೆ ; ಹೇಳುವಿಕೆ (ಕ).

[< ಎನ್$_1$ + –ಇಕೆ]

**ಎಂಬೆರುಮಾನಾರು** (ನಾ). ರಾಮಾನುಜಾಚಾರ್ಯರ ಗೌರವದ ಹೆಸರು : ಸನ್ನುತದೆಂಬೆರುಮಾನಾರು ಪನ್ನೆರಡಾಳ್ವಾರುಗಳು ಪನ್ನಗಶಯನಗೆ ಕರಕಮಲವ ಮುಗಿದು (ಕಂನವಿ. ೭–೯೯) ; ಎಂಬೆರುಮಾನಾರ ಮಠಮೆಲ್ಲಿರ್ಪುದೆಂದು ಕೇಳಲೊಡಮವಂ ಆವೆಂಬರುಮಾನಾರಮಠ ಮೆಂದುಸಿರಲೊಡಂ . . . ಕೇಳ್ದು (ದಿವ್ಯಸೂ. ೧೩–೨೪ ವ).

[← ತಮಿ. ಎಮ್ಬೆರುಮಾನಾರ್]

**ಎಂಭತ್ತು** 'ಎಣ್ಬತ್ತು' ನೋ.

**ಎಕಡು** 'ಎಕ್ಕಡು' ನೋ.

**ಎಕಣ** (ನಾ). ಒಂದು ಪ್ರದೇಶ (?) : ಐನುಪ್ಪಾಚಾರಿಯ ಮಗಂ ಪುಳಿಯಣ್ಣನಪ್ಪಯ ಎಕಣದ ಬಾಗಿಯುಲಗನಾಗೆ ಕಟ್ಟುಪಡಿದ ಸ್ಥಿತಿ (ಎಕ. X. (S), ಚಿಕ್ಕಬ. ೨೬–೯ ; 9ನೆಯ ಶತ). [?]

**ಎಕತಾಯಿ** (ನಾ). ಒಂದು ತೆರನಾದ ವಸ್ತ್ರ, —ಬಟ್ಟೆ : ದುಗುಲದ ಪೈಠಣಿ ಸುಕ್ಕುಗುಪ್ಪಸ ಮಿಗೆ ಸೊಗಯಿಸುವೆಕ [ಪಾಠಾಂ. ಎಕ್ಕ, ಏಕ] ತಾಯಿ ಮೆಱೆಯೆ . . . ಖಾನರಗಣಿತರಲ್ಲಿಗೈದಿದರು (ಕುರಾಸಾಂ. ೧೮–೩೩). ℙ ಸೊಗಸುವ ಕಥಾಯಿ ಎಂದಿರಬಹುದೆ ? [?]

**ಎಕತ್ಯಾರು** (ನಾ). ಅಧಿಕಾರ ; ಹತೋಟಿ ; ಸ್ವಾಮ್ಯ (ಕ).

[← ಹಿಂ. ಏಕತ್ಯಾರ್]

**ಎಕನಾತಿ** 'ಎಕ್ಕನಾತಿ' ನೋ.

**ಎಕರೆ** 'ಎಕ್ಕರ' ನೋ.

**ಎಕರಾರು** (ನಾ). ೧. ತಪ್ಪುಒಪ್ಪಿಕೊಳ್ಳುವಿಕೆ, —ಒಪ್ಪಿಗೆ (ಕ). ೨. ಒಪ್ಪಂದ. ೩. ಇಡುವುದು; ನ್ಯಾಸ; ನಿಕ್ಷೇಪ (ಕ). [← ಅರ. ಇಕ್ರಾರ್; ಮರಾ. ಇಕರಾರ್. / ತೆಲು. ಎಕರಾರು]

**ಎಕರು** 'ಎಕರೆ' ನೋ.

**ಎಕರೆ, ಎಕರು** (ನಾ). ಭೂಮಿಯ ಒಂದು ಅಳತೆ; ನಲವತ್ತುಗುಂಟೆಗಳ ಪ್ರದೇಶ: ಒಂದು ಎಕರೆಗೆ ೩೦ ಸೇರಿನಿಂದ ೫೦ ಸೇರಿನವರೆಗೂ ಬೀಜವರಿ ಆಗುತ್ತದೆ (ವ್ಯವಮ. ೪೨); ಎಕರೆಗೆ ನಲವತ್ತು ಪಲ್ಲ ಭತ್ತ ಬೆಳೆಯ ಬಹುದು (ರೂಢಿ). **ಎಕರು**: ಇದು ಸುಮಾರು ೧೦ ಎಕರು ಕ್ಷೇತ್ರ ಫಲವುಳ್ಳದ್ದುಂಟು (ಮುಂಬಯಿ. ೫-೧೦೬). [← ಇಂ. Acre]

**ಎಕಲುಗದ್ದೆ** 'ಎಕ್ಕಲಗದ್ದೆ' ನೋ.

**ಎಕಲ್ಲೆ** (ನಾ). ೧. ಒಂದೇ ಮನಸ್ಸು. ೨. ಒಂದೇ ಮನಸ್ಸುಳ್ಳವನು. **ಎಕಲ್ಲೇಮನುಷ್ಯ**=ದೃಢವಾದ ಮನಸ್ಸುಳ್ಳವನು; ನಿಶ್ಚಿತವಾದ ಅಭಿಪ್ರಾಯವುಳ್ಳ ಮನುಷ್ಯ (ಸ್ಯಾಂಡರ್). [ಪ್ರಾ. ಹೇ. ಎಕ್ಕಲ್ಲ=ಬಲಿಷ್ಠವಾದ; ಮರಾ. ಏಕಲ್ಲಿ = ಹಠಮಾರಿ]

**ಎಕಳೆ** (ನಾ). ಮೂರ್ಖಹೆಂಗಸು; ಬುದ್ಧಿಯಿಲ್ಲದ ಹೆಣ್ಣು (ಸ್ಯಾಂಡರ್). [?]

**ಎಕಾರ** (ನಾ). [ವ್ಯಾಕ] = ಎ$_1$: ಎಕಾರಕ್ಕೆ . . . ನಡೆನಡೆಯೆಂದೇಂ ನಡೆದುದೊ (ಶಮದ. ೫೩ ಪ್ರಯೋ). [ಸಂ.]

**ಎಕಾರವಿಧಿ** (ನಾ). [ವ್ಯಾಕ] ಎಕಾರ ಬರಬೇಕೆಂಬ ನಿಯಮ: ಪದದುಪಾಂತ್ಯಸ್ವರದಿಂ ಸಂದಿಪುದು ಲೋಪಮಾದಿಯೊಳೊಂದಿಕಾರಕ್ಕೆಕಾರವಿಧಿ ಬಹುಳತೆಯಿಂ (ಶಮದ. ೧೬೯). [ಎಕಾರ + ವಿಧಿ]

**ಎಕಾರಾಂತ** (ಗು). [ವ್ಯಾಕ] 'ಎ' ಎಂಬ ವರ್ಣದಿಂದ ಕೊನೆಗೊಳ್ಳುವ (ಶಬ್ದ). ಉದಾ— ಮನೆ, ಮಾಲೆ: ಎಕಾರಾಂತ ಇಕಾರಾಂತ ವ್ಯಂಜನಾಂತಂಗಳ್ಗೆ ಪರಮಾದ ದ ದ ಪ ಂ ಗ ಳ್ಗೆ ಯು ಂ ಇದಾಗಮಮಿಲ್ಲದುದರ್ಕೆ (ಶಮದ. ೨೨೧ ವೃತ್ತಿ). [ಎಕಾರ + ಅಂತ$_2$]

**ಎಕ್ಕೆ, ಎಕ್ಕೈಇ** (ನಾ). ಒಂದು ಅಳತೆ; ಏಳುಕೈಯ ಪ್ರಮಾಣ; ಏಳುಮೊಳ; ಒಂದು ಅಂಕಣ: ಗವರೇಶ್ವರದೇವರ ಮೂಡಣದ್ದುವಕೆ ಎಕ್ಕೆ ಅಗಲದ ಮೂಡಣದ್ದುವಕೆ ಮೂಲಸ್ತನದೇವರ್ಗೆ (ಸೌಇಇ. IX–i, ೨೯೧–೩೩; 11ನೆಯ ಶತ). **ಎಕ್ಕೈಇ**: ರುದ್ರಭಟ್ಟನ ಮನೆಇಂ ಪಡುವಲು ಎಕ್ಕೈಇ ಎಕ್ಕೈಇ ೨ ಮನೆ (ಸೌಇಇ. IX–i, ೨೯೧–೩೨; 11ನೆಯ ಶತ). [< ಏಟ್ಟು$_2$ + ಕೆಯ್$_2$]

**ಎಕ್ಕೈಇ** 'ಎಕ್ಕೆ' ನೋ.

**ಎಕ್ಕ$_1$** 'ಎಕ್ಕೆ$_2$' ನೋ.

**ಎಕ್ಕ$_2$, ಎಕ್ಕಾ** (ನಾ). ೧. ಸಂಖ್ಯಾವಾಚಕ; ಒಂದು: "ಎಕ್ಕಮೆಂದುಂ ಓರೆಂದುಂ ಒಂದು" (ಕಶಸಾ. ೨೫–೫೩೬); "ಓರೆಕ್ಕಮೊಂದೆ ನಿಕ್ಕಂ" (ಕವಿಕಂ. ೨೧೨). ೨. [ಗಣಿತ] ಒಂದು ಸಂಖ್ಯೆಯಲ್ಲಿ ಏಕಸ್ಥಾನದಲ್ಲಿರುವ ಅಂಕಿ: ಉಗ್ಗಡಣೆ – ಎಕ್ಕಂ, ದಾಹಂ, ಶತಂ, ಸಾವಿರ (ವ್ಯವಹಾ. ೮). ೩. ಒಂಟೆತ್ತು ಅಥವಾ ಒಂಟಿ ಕುದುರೆಯ ಗಾಡಿ: "ಎಕ್ಕ – ಒಂದೆತ್ತಿನ ಗಾಡಿ" (ಜಾನಕೋ. ೨೩); ಒಂದು ಎಕ್ಕ ತಂದು ನಿನ್ನ ಸಾಮಾನು ನಮ್ಮ ಮನೆಗೆ ಹೇರಿಸುವೆ . . . ಆಳನ್ನು ಕರೆ ಎಕ್ಕ ತರಲಿ (ಅರಗಿ. ೩). ೪. (ಪಗಡೆ ಆಟದಲ್ಲಿ) ದಾಳದ ಮೇಲಿನ ಒಂದನೆಯ ಸಂಖ್ಯೆಯ ಗುರುತು. ೪. (ಇಸ್ಪೀಟಿನಲ್ಲಿ) 'A' ಎಂಬ ಗುರುತುಳ್ಳ ಎಲೆ; ಹಾಸು: ನನ್ನ ಇನ್ನೊಂದು ಹತ್ತನ್ನು ತನ್ನ ಎಕ್ಕದಲ್ಲಿ ಎತ್ತಿಕೊಂಡು ಹೋದ (ಗಾಳಿಪ. ೨೫). **ಎಕ್ಕಾ**: ೩. ಒಂದು ಎಕ್ಕಾ ಗೊತ್ತುಮಾಡಿ ಸ್ಟೇಷನ್ನಿಗೆ ಮುಟ್ಟಿಸುವ ವ್ಯವಸ್ಥೆಮಾಡಿರಿ (ಕುಂಹಿಂ. ೩೫). [< ಸಂ. ಏಕ]

**ಎಕ್ಕಂಚಿ** (ನಾ). ಒಂದು ಬಗೆಯ ತಂತೀವಾದ್ಯ: ವಿಪಂಚಿಕೆ . . . ಎಕ್ಕಂಚಿ . . . ಮೂವತ್ತುಮೂಱು ತಂತ್ರೀವಾದ್ಯಂಗಳ್ (ವಿವೇಕ. ೨೩೬). [?]

**ಎಕ್ಕಂಡೆ** (ನಾ). ಒಳ್ಳೆಯ ಮೈಕಟ್ಟಿನಿಂದ ಕೂಡಿದ ಆಳು; ಕಟ್ಟುಮಸ್ತಾದ ಆಳು.

**ಎಕ್ಕಂಡೆಸಿಪಾಯಿ** = ಒಳ್ಳೆಯ ಮೈಕಟ್ಟಿನಿಂದ ಕೂಡಿದ ಸಿಪಾಯಿ; ಕಟ್ಟುಮಸ್ತಾದ ಸಿಪಾಯಿ: ದೊಡ್ಡದೊಡ್ಡ ಸರದಾರರು ಮತ್ತು ಎಕ್ಕಂಡೆಸಿಪಾಯಿ, ಚಿರಾಯಿತು ಜನ . . . ನಿಂತರು (ಚಿತ್ರಪಾ. ೬೪). [?]

**ಎಕ್ಕಚರ** (ನಾ). "ಒಂಟಿಗನಾಗಿ ಹೋಗುವುದು, —ಹೋಗುವವ" (ಕಸ್ತೂಕೋ. ೧೨೪). [ಎಕ್ಕ$_3$ + ಚರ$_2$]

**ಎಕ್ಕಛಾಯ** (ನಾ). ೧. ಒಂದೇಬಣ್ಣ. ೨. ಇಂದ್ರನೀಲರತ್ನದಲ್ಲಿ ಒಂದು ಬಗೆ: ಎಕ್ಕಛಾಯಂ (ಶಮದ. ೧೫ ವೃತ್ತಿ). [< ಸಂ. ಏಕಚ್ಛಾಯ]

**ಎಕ್ಕಟ** (ನಾ). ಏಕಾಕಿ; ಒಂಟಿ. 'ಎಕ್ಕಟಗಲಿ' ಪರಾ. [← ಮರಾ. ಏಕಟಾ = ಒಂಟಿ, ಒಂದೇ ಆಗುವುದು. < ಸಂ. ಏಕವಾಟ = ಒಂದೇ ಮಾರ್ಗದಲ್ಲಿ ಹೋಗುವವನು]

**ಎಕ್ಕಟಗಲಿ** (ನಾ). ಏಕಾಂಗವೀರ: ವಿಜುಗೀಷು ವಸುದೇವನೆಸುಗೆಗೆ ಸಕಲ ಭೂಭುಜರೆಲ್ಲ ಹೆಜಸಾರಲಾಗ ನಿಜಗಲಿತನದಿಂದಿದಿರಾಗೆ ಸಾಗರ ವಿಜಯ ನೆಕ್ಕಟಗಲಿ ನಿಂದ (ನೇಮಿಸಂ. ೧೨–೮೬); ಎಕ್ಕಟಗಲಿಗಳೇಳಿಗೆಯಿಂದದೆ ಹೊಕ್ಕರೆಕ್ಕಲವಂದಿಗಳಂತೆ (ನೇಮಿಸಂ. ೨೭–೪೩). [ಎಕ್ಕಟ + ಕಲಿ$_2$]

**ಎಕ್ಕಟಾಗೆ** (ನಾ). (ಉಕ) "ಏಕಭಾಗ; ಒಂದು ಪಾಲು" (ರಮಾಕಾಂ. ೧೧೧). [← ಮರಾ. ?]

**ಎಕ್ಕಟಿ$_1$, ಎಕ್ಕಟಿ** (ಗು). ೧. ಏಕಾಂತವಾದ; ರಹಸ್ಯವಾದ; ಗುಟ್ಟಾದ: ದಯೆಯಿಂದೆಕ್ಕಟ ವಚನಮೆ ನುಡಿವರನಱಿದೆಸೆಪರ್ (ಸಮುಪ. ೫–೧೧೬). (ನಾ). ೨. ಒಬ್ಬಂಟಿಗ; ಏಕಾಕಿ: "ಎಕ್ಕಟ – ಒಂಟಿಗ" (ಜಾನಕೋ. ೨೩); ಪೇರಡವಿಯೊಳಗೆಕ್ಕಟಿಯಿದೇತಕೆ ನವೆವುತಿರ್ದಪೆ (ಬಸವು. ೧೮–೯); ಕಡುಭರದಿ ಕಂಡೆಕ್ಕಟಿಗಳೊಳಗಣಂ ಬಂದು ಕೆಡೆವಂತೆ (ಸಮ್ಯಕೌ. ೮–೩೪); ಲೆಕ್ಕಿಸಿ ಮನೆಯ ಬೀಯಕೆ ತಕ್ಕ ಹಣವ ಹೆಮ್ಮಕ್ಕಳ ಕೈಯೊಳಗಿತ್ತು ಮಕ್ಕಳ ಮುದ್ದಾಡಿಸಿ ಪೊಜಮುಡುತಿರ್ದರೆಕ್ಕಟ[ಟ]ಗಳು ಮನೆಗಳನು (ಶ್ರೀಪಾಲ. ೧೩–೫೬). **ಎಕ್ಕಟಿ**: ೧. ಎಕ್ಕಟಿಯೊಳಾ ಶರಭ ರುದ್ರಂ ನಡೆದು ಬಪ್ಪಂತೆ (ಶಂಕರಾ. ೧೨–೫೩). [?]

**ಎಕ್ಕಟಿ$_2$** (ಅ). ಏಕಾಂತವಾಗಿ; ರಹಸ್ಯವಾಗಿ; ಗುಟ್ಟಾಗಿ: ಪಾಂಚಾಲೆಗೆಕ್ಕಟ ನುಡಿದ ನಾವಿನ್ನಿಹುದು ಮತವಲ್ಲ (ಕುವ್ಯಾವಿ. ೫–೨೬); ಹೂವಯ್ಯನೊಬ್ಬನನ್ನೇ ಎಕ್ಕಟ ಕರೆದು . . . ಹೇಳಿದನು (ಕಾನೂರು. ೬೨೫). [?]

**ಎಕ್ಕಟಿಕರೆ** 'ಎಕ್ಕಟಗರೆ' ನೋ.

**ಎಕ್ಕಟಿಗ, ಎಕ್ಕಡಿಗ** (ನಾ). ೧. ಗ್ರಾಮದ ಪ್ರಧಾನ ವ್ಯಕ್ತಿ; ಮುಖ್ಯಸ್ಥ (?): ಸಮಸ್ತ ಸಾಹಣಿಯೆಕ್ಕಟಿಗರು ಶ್ರೀ ವೀರಸೋಮನಾಥದೇವರ್ಗೆ ಬಿಟ್ಟ ದತ್ತಿ (ಎಕ. VII, ಚನ್ನಗಿ. ೩೨–೬೪; 1050); ಎಕ್ಕಟಿಗರ್ನಾಲ್ವತ್ತು ಮಾನಸರುಮಿರ್ದು ಬರೆಯಿಸಿದ ಶಾಸನ (ಸೌಇಇ. IX–i, ೨೩೧–೧೫; 1134); ಎಕ್ಕಟಿಗನ ಮಕ್ಕಳೆಲ್ಲರು ನಷ್ಟಸಂತಾನವಾದರು (ಮೋಳಿಮಾ. ೨೩೩–೭೮೪). ೨. ರಹಸ್ಯದವನು; ಗೂಢಚಾರ: ಅಂತರವಳರನಚ್ಚಾಳುಗಳನೆಕ್ಕಟಿಗರನು ಸಬಳಿಗರ (ಬಸವು. ೧೬–೧೩); ಕಂಬಿಯವರ ಕರೆಪಕ್ಕಳ್ದು ತಳುಮಾಡದೆ ಪೊಜಮಡು ವೆಕ್ಕಟಿಗರ (ಜಯಕಾ. ೧೨–೧೪). ೩. ಒಬ್ಬಂಟಿಗ; ಏಕಾಂಗಿ: ಎಕ್ಕಟಿಗ ನೀನೆತ್ತಹಂದೇತಕ್ಕಿದೆತ್ತಲು ಪೋಪೆ (ಸಾಳ್ವಭಾ. ೭–೫೮).

ಎಕ್ಕಡಿಗ: ೧. ಲಿಂಗಮುನಜಿಸಿ ಪಿಡಿದೆಕ್ಕಡಿ [ಪಾಠಾಂ. ಟ]ಗ ತರುವರಿಗತನವನೆಂದೆಂದು ಬಿಟ್ಟಪೆ ಬಿಟ್ಟಪೆಯೆಯೆಂದು (ಮದೇಪು. ೨೫-೩೦); ಹಿಂದೆ ಹಿತವರು ಬಳಸಿದೆಕ್ಕಡಿಗರ ಬಲು ಬಜಾವಣೆಯೊಳೊಪ್ಪಿದನು (ಭರಚ. ೧-೫೮). ೪. ಏಕಾಂತದವನು; ಆಪ್ತ: ಗಣಿಕೆಯರೆಕ್ಕಡಿಗರು ನಾಟ್ಯಶಾಸ್ತ್ರ ಲಕ್ಷಣಿಕರು . . . ಕುಳಿತರೋಜೆಯೊಳು (ಭರಚ. ೧೨-೨೯). [ದೇ. ‖ ತೆಲು. ಎಕ್ಕಟ]

**ಎಕ್ಕಟಿಗರೆ, ಎಕ್ಕುಟಿಕರೆ** (ಕ್ರಿ). ಏಕಾಂತದ ಸ್ಥಳಕ್ಕೆ ಕರೆ; ರಹಸ್ಯ ಜಾಗಕ್ಕೆ ಬರಮಾಡಿಕೊಳ್ಳು: ಹುಸಿಯಸೂಯಾ ನೀಚವೃತ್ತಿ ನಿರ್ದಾಕ್ಷಿಣ್ಯ ನಿಷ್ಕರುಣ ನೀತಿಗಳಲಿ ಹೆಸರುಳ್ಳ ಹಿರಿಯ ನಕ್ಷತ್ರಕನೆನಿಪ್ಪ ಮಾನಸನೆಕ್ಕಟಿಗರೆದು ಕೈವಿಡಿದು (ಹಚಕಾ. ೯-೧೫); ಪದ್ಮಾವತಿ ತನ್ನಯ ಮಗಳಂ ಸೂಚಿಸಿ ಸುಖಾರಿಯೆಕ್ಕಟಿಗರೆದಳ್ (ಉದ್ಭಟ. ೧೨-೫೧); ಹರಿ ಯುಧಿಷ್ಠಿರ ನೃಪನನೆಕ್ಕಟಿಗರೆದು ನಿಜಶಕ್ತಿ ಪ್ರಯೋಗವನೊರೆದಡೊಡಂಬಟ್ಟನು (ಕುವ್ಯಾಶ. ೩-೬೪). **ಎಕ್ಕಟಿಕರೆ:** ಚಿನ್ನಪ್ಪನನ್ನು ಎಕ್ಕಟಕರೆದು ದೇವಯ್ಯ ಈಗ ಏನು ಮಾಡೋದೋ ಎಂದು ಕೇಳಿದನು (ಮಲೆಮ. ೨೩೪). [ಎಕ್ಕಟ$_1$ + ಕರೆ$_1$]

**ಎಕ್ಕಟಿಗಾಳಿಗ** (ನಾ). ದ್ವಂದ್ವಯುದ್ಧ: ಪುದುವೆತ್ತೆಕ್ಕಟಗಾಳೆಗಂ ಸಮನಿಸಿತ್ತೆಮ್ಮಿ ಗದಾಯುದ್ಧಮಂ ತ್ರಿದಶರ್ ನೋಡಲೆ ಕೌತುಕಂ ಬೆರಸಿ ಬಂದಿರ್ದರ್ (ಗದಾಯು. ೭-೬೮); ಎಕ್ಕಟಿಗಾಳಿಗದೊಳಗಿನ ಕೀರ್ತಿಯನೆಕ್ಕತುಳದ ಭಟನಂ ಗೆಲ್ದಂ ರಣರಕ್ಕಸನೆನಿಸುವ ವಿಕ್ರಮ ಕೌರವ ಧರಣೀಪಾಲಕನು (ಜಯಕಾ. ೨ ಸೂಚನೆ). [ಎಕ್ಕಟ$_1$ + ಕಾಳಿಗ]

**ಎಕ್ಕಟಿಗೈ** (ಕ್ರಿ). ಗುಟ್ಟಾಗಿ ಮಾತಾಡು; ರಹಸ್ಯವಾಗಿ ಆಲೋಚಿಸು: ಅಕ್ಕೆ ನಳನೃಪತಿ ನಡೆಯೆಂದೊಕ್ಕಣಿಸಿ ಬಳಿಕ್ಕೆ ತಕ್ಕುದಿದಕೆ ಸಪೆವೆನುತ್ತೆಕ್ಕಟಗೈದಮರೇಂದ್ರರ್ ಪೊಕ್ಕರ್ (ದಮಪ್ತ. ೩-೧೬೭). [ಎಕ್ಕಟ$_1$ + ಗೈ (< ಕೆಯ್$_1$)]

**ಎಕ್ಕಟಿ** 'ಎಕ್ಕಟ$_1$' ನೋ.

**ಎಕ್ಕಡ** 'ಎಕ್ಕವಡ$_1$' ನೋ.

**ಎಕ್ಕಡಿ** (ನಾ). ಪಗಡೆ ಆಟದಲ್ಲಿ ಒಂದು ವಿಧ: ಆರಿದಿರಾದೊಡಾಡಿದಪೆನೆಕ್ಕಡಿಯಂ ಪಡೆ ಪಂಚದಾಯುಮಂ . . . ಕೆರಳ್ಚಿದಂ (ದಶಕು. ೮-೯೨); ಗೊಂಬೆ ಮದುವೆಯನೊಮ್ಮೆ ಮಾಡಿ ಚೆನ್ನೆಯೆಕ್ಕಡಿಯೊಮ್ಮೆ ಹೂಡಿ (ಗೀವಿಂ. ೬೧-೩೪). [← ತುಳು. ಎಕ್ಕಡಿ = ಒಂದು ಆಟ]

**ಎಕ್ಕಡಿಗ** 'ಎಕ್ಕಟಿಗ' ನೋ.

**ಎಕ್ಕಡು, ಎಕಡು, ಎಕ್ಕುಡು** (ನಾ). (ಕರಾ) ಬಿಕ್ಕಳಿಕೆ: ಮೆಣಸಿನ ಕಷಾಯವನ್ನು ಕುಡಿದು ಎಕ್ಕಡು ಬಂದಿದೆ (ರೂಢಿ). **ಎಕಡು:** ಇದ್ದಕ್ಕಿದ್ದಂತೆ ಎಕಡು ಮರುಕಳಿಸಿದಾಗ ನಡುಮನೆಯಿಂದಲೇ ಕೂಗಿದ (ದೇವಹಂ. ೧೬೭). **ಎಕ್ಕುಡು:** ಆತುರವಾಗಿ ಕಡುಬು ತಿಂದದ್ದರಿಂದ ಎಕ್ಕುಡು ಬಂತು (ರೂಢಿ). 'ಬಿಕ್ಕುಳ್' ಪರಾ.

[ದೇ. ‖ ಮಲ. ಎಕ್ಕಿಳ್, ಎಕ್ಕಿಟ್ಟ; ತುಳು. ಎಕ್ಕ್ಯಡ್, ಎಕ್ಕದೆ; ತೆಲು. ಎಕ್ಕಿಲಿ, ಎಕ್ಕು; ಬ್ರಾಹೂಈ. ಹಿಕ್ಕಿಂಗ್]

**ಎಕ್ಕತಕ್ಕು** (ನಾ). ಒಂದೇ ಬಗೆಯಾದ ಯೋಗ್ಯತೆ; ಸಮಾನ ಶಕ್ತಿ: ಕರಿಯಂ ಬೇಡುವ ಬಾಯ್ಗೆಯೊಂದಲಗಿನಂಬೊಲ್ಪೀಱುವಂಗಕ್ಕೆ ಭಾಸುರ ಭಲ್ಲಾಸ್ತ್ರಮಿದೊಂದು ನೀಡಿ ಬಿಡದಿಕ್ಕಲ್ಕೆಕ್ಕತಕ್ಕುಳ್ಳ ತೋಳಿರದಕ್ಕಂ (ಅನಂಪು. ೧೪-೧೮). [ಎಕ್ಕ$_2$ + ತಕ್ಕು]

**ಎಕ್ಕತಳ** (ನಾ). ಗೊತ್ತಾದ ಸ್ಥಳ; ನಿಯತವಾದ ಜಾಗ: "ಏಕಸ್ಥಳ – ಎಕ್ಕತಳ" (ಶಮುದ. ೨೯೦ ಪ್ರಯೋ); ಕವರ್ತೆಯ ಗೊತ್ತು ಕೈತವಕೆಕ್ಕತಳಂ ಕನಲ್ಕೆಗಿರವು . . . ಬೆಲೆವೆಣ್ಗಳ ಬೀದಿಯದೇಂ ಪೊದಟ್ಟುದೋ (ಚಿಕವಿ. ೬-೬೪). [< ಸಂ. ಏಕಸ್ಥಲ]

**ಎಕ್ಕತಳಂಗೊಳ್** (ಕ್ರಿ). ಒಂದಾಗಿ ತೆಗೆದುಕೊ; ಸಮವಾಗಿ ಗಣಿಸು: ಚಿಕ್ಕಸವಡೆದೇತರ್ಕಾಮೆಕ್ಕತಳಂಗೊಂಬುದೊಳ್ಳೆ ಪೊಲ್ಲಮೆಯೆರಡಂ ತಕ್ಕರ್ ಕಳೆವರ್ ಗುಣಮಂ ಮಿಕ್ಕರ್ ದೋಷಮನೆ ಕೂರ್ತು ದೂಜುವರಲ್ತೇ (ಚಿಕವಿ. ೬-೭೪). [ಎಕ್ಕತಳ + ಕೊಳ್$_1$]

**ಎಕ್ಕತಾಣ** 'ಎಕ್ಕದಾಣ' ನೋ.

**ಎಕ್ಕತಾಳ** (ನಾ). ೧. [ಸಂಗೀತ] ಸ್ವರಮೇಳ; ಸ್ವರಮೈತ್ರಿ. ೨. ಸಪ್ತತಾಳಗಳಲ್ಲಿ ಒಂದು. [< ಸಂ. ಏಕತಾಲ]

**ಎಕ್ಕತಾಳಿ, ಎಗತಾಳಿ** (ನಾ). ಹಾಸ್ಯ; ಗೇಲಿ; ಕುಚೋದ್ಯ (ಕ). **ಎಗತಾಳಿ:** ಈ ಕಲಿಕಾಲದಲ್ಲಿ ಅಪೂರ್ವವಾಗಿ ಯಾರಾದರೊಬ್ಬನು ಪುಣ್ಯಯುಗದ ಕರ್ಮವೊಂದನ್ನು ಮಾಡಿದನೆಂದರೆ ಜನರ ಬಾಯಿಯಲ್ಲಿ ಎಗತಾಳಿಯೇ ಸರಿ (ಮೊಮುಗು. ೮೭).

[← ತೆಲು. ಎಗತಾಳಿ]

**ಎಕ್ಕತುಳ, ಎಕ್ಕತೂಳ** (ನಾ). ೧. ಒಂದೇ ತೂಕ; ಒಂದೇಬಲ; ಒಂದು ಸಮ; ಸಮಾನತೆ: ರಾವಣನೊಳದುರ್ತೆಕ್ಕತುಳಮಿಱಿದು (ಪಂರಾಮಾ. ೯-೧೦೫); ಆ ನೆಗಟ್ದಿಂದ್ರನೆಕ್ಕತುಳದೊಳ್ ಧುರದೊಳ್ ಬಲದೊಳ್ ಕಡಂಗಿನಿಂದಾನಲೊಡರ್ಚಲಾಂಕೆಗೊಳಲಾಜದೆ ಪೋಗಿ (ಜಗವಿ. ೩-೨೦); ಅದರ ಎಕ್ಕತುಳ ಲಾವಣ್ಯವೂ ಹೊಡಕರಿಸಿ ಮೂಡಿಬರುವುವು (ಸಾಹಿಸಂ. ೪). ೨. ಪರಾಕ್ರಮ; ಶೌರ್ಯ; ದಿಟ್ಟತನ: ಕಂದನನಿಕ್ಕಿದಿರಲಾ ಲೇಸು ಮಾಡಿದಿರೆಕ್ಕತುಳದಾಳುಗಳೆನುತ ಭೂಪತಿಗೆ ಪೊಡವಂಟ (ಕುವ್ಯಾದ್ರೋ. ೮-೧೫); ಎಕ್ಕತುಳದಲಿ ತಾಯೆ ಪಡೆದಾ ಮಕ್ಕಳನು (ನಿಘಾಗ. ೧೦-೮-೨೩); ಎಕ್ಕತುಳದ ರೋಸದಿ ನಾಡಿ ಕುಣಿವ ಕುಡಿಮಿಾಸೆಯಂ ಪುರಿಗೆಯ್ದು (ರಾಮಾಶ್ವ. ೯೦-೧೩). ೩. ದ್ವಂದ್ವಯುದ್ಧ: ಮುಳಿಸಿನ ಮೋಪಿನ ಗಂಡಮುಚ್ಚರದ ಮೆಚ್ಚುವಣೆಗೆಯಂಕಕಾಜರೆಕ್ಕತುಳಕ್ಕೆಕ್ಕೆಯಿಂ ಸೂಟೀಱಿಱಿವಂ ತೊರ್ವರೊರ್ವರೊಳ್ ಕಾದೆ (ಪಂಪಭಾ. ೧೨-೬೬ವ); ಇಱಿವಬೆಡಂಗ ನೋಳಿಱಿಯಲ್ ನೆಱೆಯ್ಯೆ ನಿನಗಾನೆ ಸಾಲ್ವೆನೆಕ್ಕತುಳಕ್ಕಂ ನೆಱೆದಿರ್ದೆಂ (ಗದಾಯು. ೭-೩); ವಕ್ಕಲು ಗೆಱೆಯ ಮಲ್ಲನೊಳೆಕ್ಕತುಟ[ಳ]ಕ್ಕಿಱಿವವೈರಿ (ಎಕ. VI, ಕಡೂರು. ೨೦-೨೩; 1170). **ಎಕ್ಕತೂಳ:** ದಿಕ್ಕುಗಾಣದ ಗರ್ವದಲಿ ಜನಕಿಕ್ಕಿ ಲಿಂಗವ ಬೂದಿಯನು ಬಳಿದೆಕ್ಕತೂಳದ ಭಟರೆ ದುರ್ಗತಿ ನಿಮಗೆ ನಿಜವೈಸೆ (ಬಜ್ಜಪು. ೧೦೭-೬೯).

**ಎಕ್ಕತುಳದಾಳ್** = ಸಾಹಸಿ; ಪರಾಕ್ರಮಿ; ಶೂರ: ಎಕ್ಕದ ಮುಗುಳ್ಗಳಂ ಹರಹಿ ಜಗಜಟ್ಟಿಗಳನೆಕ್ಕತುಳದಾಳ್ಗಳಂ ಮಜೆಯೊಳಡಂಗಿಸಿ ಬಳಿಕ್ಕ ಘಟದಲ್ಲಿ ಕೆಂಡವನಿರಿಸಿಯರಸನಂ ಕುಳ್ಳಿರಿಸಲ್ (ಸಮ್ಮಕಾ. ೪-೧೮). [< ಸಂ. ಏಕತುಲ]

**ಎಕ್ಕತುಳಂ** (ಅ). ಅತಿಶಯವಾಗಿ: ಅಂತಃಪುರವಧೂಕದಂಬ ಕದಂಬಕದ ಮುಡಿಗಳಂ ಪಿಡಿದು ಕಡೆಗಣ್ಣ ಕಾಂತಿಗಳೊಳೆಕ್ಕತುಳಮಿಕ್ಕಿಯುಂ (ವರ್ಧಪು. ೬-೩೨ವ); ಘೋಟಾಯ್ತರ್ಕಳೊಳೆಕ್ಕತುಳಮಿಱಿದು ಕುಱಿದಱಿಯಾದರ್ (ಶಮುದ. ೬೭ ಪ್ರಯೋ). [< ಎಕ್ಕತುಳ]

**ಎಕ್ಕತೂಳ** 'ಎಕ್ಕತುಳ' ನೋ.

**ಎಕ್ಕದಾಣ, ಎಕ್ಕತಾಣ** (ನಾ). ಆಶ್ರಯಸ್ಥಾನ; ನೆಲೆ: ರಾಜ್ಯಶ್ರೀಗೆ ತಾನೆಕ್ಕದಾಣ ವಿಳಾಸಂ (ಎಕ. XI, ದಾವಣ. ೫-೨೯; 1166). **ಎಕ್ಕತಾಣ:** (ಕಲ್ಪದ್ರು. ೫೧). [ಎಕ್ಕ$_2$ + ತಾಣ]

**ಎಕ್ಕದಾಳೆ** (ನಾ). ಬೂರುಗದ ಮರ: ದೈವಯತ್ನದಿಂದ ತಱಗೆಲೆಯ ರಾಶಿಯಮೇಲೆ ಬಿದ್ದು ಅವನಿಱಿದು ಬರುವವನಿತಜಲ್ಲಿಯೆ ಕೆಲದಲ್ಲಿರುವೆಕ್ಕದಾಳೆಯ ಮರದ ಬೇರನು ಸೇರಿ ಇದ್ದು (ವಚಕಾ. ೩-೨೪).

[ಎಕ್ಕ$_1$ (< ಎಕ್ಕ$_2$) + ತಾಳೆ]

**ಎಕ್ಕನಾತಿ,** ಎಕನಾತಿ, ಎಕ್ಕನಾದಿ (ನಾ). ಒಂದು ಕ್ಷುದ್ರದೇವತೆಯ ಹೆಸರು: ಪುರದ ಮಸಣಿಗೀಂದು ಪುರದೆ ಕ್ಕನಾತಿಗೆ ಪಿರಿಯ ಭೈರವ ದೇವರಿಗೆ ವರವೀವಮೈಲಾರಗೆಂಡದಜರ್ಝವನಿರುಳು ಪಗಲು ತೂನುತಿಹರು (ಅಂಜಚ. ೩–೧೨೯); ಜಾಜಿಯ ಎಕ್ಕನಾತಿಯ ಕುಳವಾಡಿ ಹೂವಿನ ಎಲ್ಲಯ ಮಾಡುವ (ಸೌಇಇ. IV, ೨೫೫–೨೪; 1513); ಎಕ್ಕನಾತಿಯರ ಕಾಟ ಜಕ್ಕಿಯರು ಕನ್ನೆಯರು ಸೊಕ್ಕಿನಿಂದ ಸೊಂಟಮುರುಕ ಬೈರೇ ದೇವರು (ಕನಕ. ೧೪೨–೧). **ಎಕನಾತಿ;** ನಾರಸಿಂಹನ ಪಿಡಿದು ತಹುದೇ ನರಿದು ವೈಷ್ಣವ ಪಡೆ ಸಹಿತ ತಂದೊಪ್ಪಿಸುವೆನೆನಲೆಂದಳೆಕನಾತಿ (ಶಂಕದಾ. ೧೨–೪೪). **ಎಕ್ಕನಾದಿ:** ಗಂಗೆ, ಗೌರಿ, ಬನಶಂಕರಿ, ಎಲ್ಲಿ, ಎಕ್ಕನಾದಿ, ಹುಲಿಗೆ, ಹೊಸೂರಿ, ಸತ್ತವರು, ಹೆತ್ತವರು ಇಂತೀ ಹಲವು ಪಿಶಾಚಿಗಳ ಹೆಸರಿಂದ ಇದಿರಿಟ್ಟು ಆರಾಧಿಸಿ (ವಚಶಾ. I, ೩೩೧). [< ಏಕನಾಥ?]

**ಎಕ್ಕನಾದಿ** 'ಎಕ್ಕನಾತಿ' ನೋ.

**ಎಕ್ಕಬಾಗೆ** (ನಾ). ಒಂದೇ ಪಾಲು, —ಭಾಗ: ನೀನಾಗಳುಮಣ್ಣ ಬೇಡಿದಪೆ ಸಜ್ಜನದಂತೆನಗೆಕ್ಕಬಾಗೆ ನೋಡೀಗಳೀಳಾಲತಾಂಗಿ ಪುದುವಲ್ಲಳ್ (ಪಂಪಭಾ. ೯–೪೬). [< ಸಂ. ಏಕಭಾಗ]

**ಎಕ್ಕಮುದ್ದಳೆ,** ಎಕ್ಕವದ್ದಳೆ (ನಾ). ಒಂದು ಬಗೆಯ ಚರ್ಮವಾದ್ಯ: ಎಕ್ಕಮುದ್ದಳೆಯ ಕೊಟಲ ಝಂಕಾರದ ಪಜೆಗಳ್ ಮುಂದೆ ಬಾಜಿಸುತ್ತಂ (ವಡ್ಡಾರಾ. ೮೦–೧೧); ಗೋವಳರು ಬಾಜಿಪ ತಿತ್ತಿರಿಯ ಕೊಂಬುಗಳ ಕೊಳಲುಗಳೆತ್ತರದ ಕಂಕಲಿಯ ಜುಂಜೆಯ ಯೆಕ್ಕಮುದ್ದಳೆಯ (ಸಾಳ್ವಭಾ. ೧೨–೫೬). **ಎಕ್ಕವದ್ದಳೆ:** ಗೋವಳರೊತ್ತುವ ತಿತ್ತಿರಿಗಾಳೆ ತೂತ್ತಾರ ಮುಮೂದುವ ಕೊಳಲ ಸರಮುಂ ಪಿಡಿವ ಕೊಂಬಿನ ನಿನದಮುಂ ಪೊಯ್ವೆ ಕ್ಕವದ್ದಳೆಯ ದನಿಯುಂ (ಅರ್ಧನೇ. ೮–೭೫ ವ). [ಎಕ್ಕ$_2$ + ಮದ್ದಳೆ]

**ಎಕ್ಕರ,** ಎಕರ (ನಾ). ಕೀಳ; ತುಚ್ಛವಾದವನು; "ನೀಚ" (ನಾನಾಶ. ೪೩): ಅವನೊಬ್ಬ ಎಕ್ಕರ (ರೂಢಿ). **ಎಕರ:** ಅವನು ತುಂಬ ಎಕರ (ರೂಢಿ). [?]

**ಎಕ್ಕರಾಶಿ** (ನಾ). ಒಂದೇರಾಶಿ, —ಗುಂಪು: ಎಕ್ಕರಾಶಿ, ಏಕರಾಶಿ (ಶಬ್ದಾನು. ೩೭೫ ಪ್ರಯೋ). [ಎಕ್ಕ$_2$ + ರಾಶಿ]

**ಎಕ್ಕರಿಸು** (ಕ್ರಿ). ಅಣಕಿಸು; ಹಾಸ್ಯಮಾಡು; ಗೇಲಿಮಾಡು: ಎಕ್ಕರಿಸಿ ಸೂಳೆಯರ ಕೆಕ್ಕರಿಸಿ ನೋಡುತಲಿ ಮಿಕ್ಕ ಸೂಳೆಯರೆನಗೆ ಲೆಕ್ಕವೆ ಎನುತ (ಶರಲೀ. ೩೬೪–೧೨); ಮಸೆದಲರಕಣೆಗಳನುಮುಕ್ಕಿಯುಗ ಧಿಕ್ಕರಿಸೆ ಶಶಿಯನೆಕ್ಕರಿಸೆ (ವೆಂಕಾರಾ. ೧–೨೧–೫೮); (ವೆಂಕಾರಾ. ೩–೪–೩೬; ೬–೩೧–೧೦ ನೋ). [← ತೆಲು. ಎಕ್ಕಿರಿಂಚು, ವೆಕ್ಕಿರಿಂಚು]

**ಎಕ್ಕಲ$_1$** (ನಾ). ೧. ಒಂಟಿ. ೨. ಸಲಗ. ೩. ಕಾಡುಹಂದಿ: "ಎಕ್ಕಲನೆನೆ ಕಾಡುಹಂದಿ" (ಚತುನಿ. ೩೯); "ಎಕ್ಕಲನೆಂದು ಸೂಕರಂ" (ಕರ್ಣಾನಿ. ೫೦); ಮೆಲ್ಲನೆ ಬಂದತ್ತೊಂದು ಸೊರ್ಕಿದೆಕ್ಕಲನಾಗಳ್ (ಗಿರಿಕ. ೧–೯೯); ಪುಳಿಂದರು ಕಂಡರೊಂದು ಸೊಕ್ಕಿದೆಕ್ಕಲನ ನಡುಕಾನನದಲಿ (ಹಚಕಾ. ೬–೨); ರೌದ್ರಾಟೋಪದಲಿ ಕೆಕ್ಕಳಿಸಿದೆಕ್ಕಲ [ಪಾಠಾಂ. ದಿಕ್ಕೆಲ] ನೋಡುತಿರ್ದುದು ದೇವಸಂತತಿಯ (ಕುವ್ಯಾಅ. ೫–೪೧); ಒಂದೆಡೆಯೊಳ್ ಎಕ್ಕಲನಗುಬ್ಬು ಗೋರಿಟ್ಟಿಗೆಟಿಸಿಂ (ರಾಮಾಶ್ವ. ೪೩–೨೮); ಆ ಪರ್ವತದಲ್ಲಿ ಒಂದು ದೊಡ್ಡ ಎಕ್ಕಲ ವಾಸಮಾಡಿಕೊಂಡಿತ್ತು (ಮಣಿಸ. ೯೦). ೪. ಒಂದು ನರಕದ ಹೆಸರು: ಇಂತವರಿರವ ಕಂಡು ಬೆರಸಿದನಾದಡೆ ಎನಗೆ ಅಮೋಘ ನರಕ ನಿಮಗೆ ಎಕ್ಕಲ ತಪ್ಪದು (ಪೋಳಮಾ. ೩೪–೧೪೧). ೫. ಶ್ರೇಷ್ಠ; ಬಲಿಷ್ಠ: ರಾವುತ ಪಾಯಕರ ಲೆಕ್ಕಿಸದೆಕ್ಕಲ ಖನ್ನೋಜಿಗಳಾರಕ್ಕಸನಿದಿರೊಳೊಪ್ಪಿದರು (ಕುರಾಸಾಂ. ೧೮–೪೪); ಎಕ್ಕಲರು ಹುಟ್ಟಿದರು ನಿನ್ನಾ ಇಕ್ಕೆಲದ ಕಿವಿಗಳಲಿ ಯನ್ನನು ಮುಕ್ಕುರಿಕಿದರು (ಅಂಬಿಕಾ. ೯–೪೪). [< ಸಂ. ಏಕಲ]

**ಎಕ್ಕಲ$_2$** (ನಾ). ಅಡ್ಡಿ; ವಕ್ರ (?): ಸಲುವಂತಾಗಿ ಬರೆಸಿದ ಶಿಲಾಶಾಸ್ನಕ್ಕೆ ಇಧರ್ಮ್ಮಕ್ಕೆ ಎಕ್ಕಲವಾದವರು ಶ್ರೀಗಂಗೆಯ ತಡಿಯಲು ಗೋಬ್ರಾಂಮಣ ಕೊಂದ ಪಾಪದಲಿ ಹೋಹರು (ಎಕ. IX (S), ಚನ್ನಪ. ೭೬–೨೯; 1306). [?]

**ಎಕ್ಕಲಕುಂಡ** (ನಾ). ನರಕದ ಒಂದು ಅಗ್ನಿಕುಂಡ: ಭಕ್ತನೆಂದು ಅವನ ಮನೆಯ ಹೊಕ್ಕು ಮಂತ್ರವ ಹೇಳಿ ಅನ್ನವ ತಿಂಬವನೊಬ್ಬ ಜಂಗಮ ದ್ರೋಹಿ. ಇಂತೀ ನಾಲ್ವರಿಗೆ ಸೂರ್ಯಚಂದ್ರರುಳ್ಳನ್ನಕ್ಕರ ಎಕ್ಕಲ ಕುಂಡದಲ್ಲಿ ಇಕ್ಕದೇ ಮಾಣ್ಬನೇ (ವಚಶಾ. I, ೩೩೨). [ಎಕ್ಕಲ$_1$ + ಕುಂಡ]

**ಎಕ್ಕಲಕ್ಷೋಣಿಪಾಳ** (ನಾ). = ಎಕ್ಕಲರಾಯ: ಅತ್ಯುದ್ಧುರ ವೀರಾಡಂಬರಂ ತ್ರೈಭುವನಭರಿತಮಾಗೆಕ್ಕಲಕ್ಷೋಣಿಪಾಳಂ (ಎಕ. VIII, ಸೊರಬ. ೧೩೮–೨೮; 1145). [ಎಕ್ಕಲ$_1$ + ಕ್ಷೋಣಿಪಾಳ]

**ಎಕ್ಕಲಗದ್ದೆ,** ಎಕಲುಗದ್ದೆ, ಎಕ್ಕಲುಗದ್ದೆ (ನಾ). ಒಂದು ಬಗೆಯ ಗದ್ದೆ; ಮೆಕ್ಕಲುಗದ್ದೆ (?): ಕೇಶವಭಟ್ಟೋಪಾಧ್ಯಾಯರಿಗೆ ಹೊನ್ನೇಯ ಮಾಲು ಅರಟಿಕಂಡ ಎಕ್ಕಲಗದ್ದೆ ಬಟ್ಟಿಗದ್ದೆ ಕಾಳುವಗದ್ದೆ ಸಹಿತಮಾಗಿ ಗದ್ದೆ (ಎಇ. XXVII, ೨೮–೪೧; 1256). **ಎಕಲುಗದ್ದೆ:** (ಕಿಸಂಗ್ಲಾ. ೯). **ಎಕ್ಕಲುಗದ್ದೆ:** (ಕೈಸಗೆ. ೫೪೬). [ಎಕ್ಕಲ? + ಗದ್ದೆ (< ಗಟ್ಟಿ)]

**ಎಕ್ಕಲಗಾಣ,** ಎಕ್ಕಾಗಾಣ (ನಾ). ಪಕ್ಕವಾದ್ಯಗಳಿಲ್ಲದೆ ಒಬ್ಬನೇ ಹಾಡುವವನು; ಒಂಟಿಗಾಯಕ; ತನಿಸಂಗೀತಗಾರ: ನುಣ್ಬರ ದಿನಾಣತಿ ಮಾಡಿದುದುನ್ನದಾಳಿ ತಾವರೆಯೊಳಗಿರ್ದ ಲಕ್ಷ್ಮಿಯ ಮನಂಬಡೆವೆಕ್ಕಲಗಾಣನೆಂಬಿನಂ (ಮಲ್ಲಿಪು. ೬–೯೮); ಗೀತಮನಂದು ಪಾಡುವಿಂ ಪಾಣನನುರ್ವರಾಧಿಪತಿ ಲೀಲೆಯಿನೆಕ್ಕಲಗಾಣನೊರ್ವನಂ (ಚಂಪ್ರಪು. ೭–೯೬); ಅಳಿಯೆಂದೆಂಬೆಕ್ಕಲಗಾಣಂ ಸ್ಮರಮೋಹನ ಗೀತಮನಾಳಾಪಿಸುತಿರೆ (ಜಯಕಾ. ೧೧–೩೫). **ಎಕ್ಕಾಗಾಣ:** ಮೃಡನರೆಮೆಯ್ಯ ನಂದಿಕೆಗೀಯೆ ತನಗಿಪ್ಪೆಡೆಗಾಣದೆ ಎಡಗಿವಿಯಾ ತೊಡಪಿನೆಕ್ಕಾಗಾಣನೀಳಿಗೀಳಿದನೇಯೆಂಬ ಪಡಿಯಾದನಾ ಪಾಡುಗಾಜ (ಶ್ರೀಪಾಲ. ೩–೧೪). [ಎಕ್ಕಲ$_1$ + ಗಾಣ$_3$]

**ಎಕ್ಕಲಜೋಗ** (ನಾ). ಜೋಗಿಗಳಲ್ಲಿ ಒಂದು ಜಾತಿ; ಹಂದಿಜೋಗಿ (?): ಅಕ್ಕಟ ಗಿರಿಜೆ ಕೇಳ್ ಮರ್ಕಟಗುಣದೊಳೆ ಯೆಕ್ಕಲಜೋಗರ ಮಗಳೆ ಕುಕ್ಕು ಹೊರಸು ನಿನ್ನ ಲೆಕ್ಕಿಸುವೆನೆ ನಿಮ್ಮ ಮುಕ್ಕಣ್ಣ ಶಿವನ ಬಲುವೆನಗೆ (ಮುಡಿಕ್ಯಾ. VI, ೧೫೩೧, ಗಂಗಾಗೌರೀ ಸಂವಾದ). [ಎಕ್ಕಲ$_1$ + ಜೋಗ]

**ಎಕ್ಕಲದುಂಬಿ** (ನಾ). ಒಂಟಿ ದುಂಬಿ: ಎಕ್ಕಲದುಂಬಿಯಿಂ ಜವಳಿ ದುಂಬಿಯಿನಟ್ಟುವ ಮಾಲೆದುಂಬಿಯಿಂದಿಕ್ಕುವ ಕುಂಭದಂತೆಸೆವ ಗೊಂದಣ ದುಂಬಿಯಿನಾವ ಮೆಯ್ಯೊಳಂ ... ಕೂಡೆ ಬನಂ ಬಸಂತದೊಳ್ (ಸೂಕ್ತಿಸು. ೧೧–೧೦). [ಎಕ್ಕಲ$_1$ + ತುಂಬಿ]

**ಎಕ್ಕಲದೇವಿ** (ನಾ). ರೇಣುಕೆ; ಎಲ್ಲಮ್ಮ: ಎಕ್ಕಲದೇವಿ! ಜೋಗಮಾಯಿ! "ಉಧೋ! ಉಧೋ! ಉಧೋ!" (ಅರಳು. ೩೦೮–೧). [ಎಕ್ಕಲ$_1$ + ದೇವಿ]

**ಎಕ್ಕಲನರಕ** (ನಾ). ನಾಯಕ ನರಕ; "ರೌರವ ನರಕ" (ಧನವ. ಕೋಶ); ನಾ ತಪ್ಪಿ ನುಡಿದೆನಾದಡೆಯೆನಗೆ ಎಕ್ಕಲನರಕ (ಏಲೇಶ್ವ. ೬೩); ನಾನು ಮಾಡಿದ ಸರ್ವದ್ರೋಹಕೆ ನಿನ್ನ ಮನನೊಂದು ಎನ್ನಂ ಎಕ್ಕಲನರಕಕ್ಕೆ ನೂಂಕುವುದಕ್ಕೋಸ್ಕರ ಕೊಟ್ಟ ಸಟೆಯುಪಚಾರ (ಧನವ. ೫); ಮನ್ನಿಸದೆ ಸಂಹರಿಸಿ ಯೆಕ್ಕಲನರಕದೊಳು ಹಾಯ್ದುಹೋಗೆಂದು ನೇಮಿಸಿದನು (ಚಬವು.* ೫೬–೪೩). [ಎಕ್ಕಲ$_1$ + ನರಕ]

**ಎಕ್ಕಲಬಂಟಿ** (ನಾ). ಏಕಾಂಗವೀರ ; ಎಕ್ಕಟಗಲಿ : ನಿಂದಿಹರಿದೊ ಇಗೊ ಎಕ್ಕಡಮೆಟ್ಟಿಹ ಎಕ್ಕಲಬಂಟರು ಉಕ್ಕಡಗಾತ್ರದ ಉಕ್ಕಡದವರು (ಗಿರಿ. ೬೬–೨). [ಎಕ್ಕಲ$_1$ + ಬಂಟ$_1$]

**ಎಕ್ಕಲರಾಯ** (ನಾ). ಏಕಾಂಗವೀರನಾದ ರಾಜ,—ರಾಯ : ಎಕ್ಕಲರಾವುತ ಪೊಱಮಟ್ಟನೊಸೆದಂದೆಕ್ಕಲ [ಪಾಠಾಂ. ದುಕ್ಕೆಯ] ರಾಯ ದೇವಣನು (ಕುರಾಸಾಂ. ೧೧–೬೦). [ಎಕ್ಕಲ$_1$ + ರಾಯ]

**ಎಕ್ಕಲರಾವುತ** (ನಾ). ಶ್ರೇಷ್ಠನಾದ ಸವಾರ : ಲಕ್ಕ ಕುದುರೆಯನೆ ನ್ನೊಂದೆ ಲೌಡಿಗೆ ಸೆಲವಿಕ್ಕೆಂದು ನೃಪತಿಯೊಳ್ ನುಡಿವ ಎಕ್ಕಲರಾವುತ ಪೊಱಮಟ್ಟನೊಸೆದಂದೆಕ್ಕಲರಾಯ ದೇವಣನು (ಕುರಾಸಾಂ. ೧೧–೬೦). [ಎಕ್ಕಲ$_1$ + ರಾವುತ]

**ಎಕ್ಕಲವಂದಿ** (ನಾ). ಒಂಟಿಹಂದಿ ; ಸಲಗಹಂದಿ : ಏಚಗಾವುಣ್ಡ ನೆಕ್ಕಲವನ್ದಿಯನಿಱಿದು ಪನ್ದಿ ಸತ್ತಿಂಬೞಿಯಂ ತಾಂ ಸತ್ತಂ (ಎಕ. XV, ಹೊಳೆನ. ೧೨೮–೧ ; 970); ಉದ್ದುರಭಟನೊರ್ವಂ . . . ಕುಡುದಾಡೆಗಳ್ ಸೊಗಯಿಪೆಕ್ಕಲವಂದಿವೋಲೊಕ್ಕಲಿಕ್ಕಿದಂ (ನೇಮಿಪು. ೧೧–೧೫೭) ; ಗಂಡುಗೆಯ್ದು ಪೋಪೆಕ್ಕಲವಂದಿಯಂ ತಿವಿ (ನಳಚಂ. ೬೪) ; ಎಕ್ಕಟಗಲಿ ಗಳೇಳಿಗೆಯಂದವೆ ಹೊಕ್ಕರೆಕ್ಕಲವಂದಿಗಳಂತೆ (ನೇಮಿಸಂ. ೨೭–೪೩) ; (ಸೂಕ್ತಿಸು. ೩–೯೯ ನೋ). [ಎಕ್ಕಲ$_1$ + ಪಂದಿ]

**ಎಕ್ಕಲವಾಡ** (ನಾ). ಒಂದು ಊರಿನ ಹೆಸರು : ಇತ್ತಂ ಹೊಂಗೆಲಸ ಕ್ಕೆಕ್ಕಲವಾಡದ ಬಳಿ ಕುನ್ದುರವಳ್ಳಿಯೊಳ್ (ಎಇ. XVI, ೪೮–೪೯; 1147). [ಎಕ್ಕಲ$_1$ + ವಾಡ (< ಬಾಡ)]

**ಎಕ್ಕಲವಿರಿ** (ನಾ). ರೇಣುಕೆ ; ಎಲ್ಲಮ್ಮ : ನೆಲನೆಲ್ಲಂ ಕೊಂಡಾಡು ವೆಕ್ಕಲವಿರಿಯುಂ ಬನದಬ್ಬೆಯುಂ (ಧರ್ಮಾಮೃ. ೯–೧೧೧) ; ಎಕ್ಕಲವಿರಿ ಗಣನಾಮಾ ಲಕ್ಕಣಗರ ಬನದ ಬಳರಿಗಂ ಪ್ಪೈಲಾರಂಗಕ್ಕೆಯ್ದೆ ಜಾತ್ರೆ ಮಾಟ್ಪಂ ಪೊಕ್ಕಲಿಗಂ (ಸಮುಪ. ೪–೧೨೫). [ಎಕ್ಕಲ$_1$ + ?]

**ಎಕ್ಕಲಾವಣ** (ನಾ). ಒಂದೇ ಅಂಗಡಿ ; ಏಕಾಶ್ರಯ ; ಒಂದೇ ನೆಲೆ ; ಒಂದೇ ಆಕರ : ಬೆಡಂಗಿಂಗೆ ಪಾಂಗಾದ ದೇಸಿಗಂ ಮಾಸರಿಗೆಕ್ಕಲಾವಣ ಮಾದ ಸೌಷ್ಠವಕ್ಕಂ ಕಣ್ಬೇಟಕ್ಕಿದಿರಾದ ದೊಡ್ಡಿಂಗಂ (ಶಾಂತಿಪು. ೩–೫೩ ವ) ; ಕಣಿ ವಿದ್ಯಾವಿಭವಕ್ಕುದಾಹರಣೆಯರ್ಥೋಪಾರ್ಜನಕ್ಕೆಕ್ಕ ಲಾವಣಮುದ್ಯದ್ಗುಣ ರತ್ನರಾಜಿಗೆ (ಎಇ. XV, ೯೦–೫೧ ; 1060) ; ತನ ಗೆಕ್ಕಲಾವಣಮೆನಿಪ್ಪಂ ಮೂರ್ತಿ ನಾರಾಯಣ[ಂ] (ಎಇ. XIII, ೪೬–೫೦; 1112) ; ವಿಜಿಗೀಷುವೃತ್ತಿ ಭೂಭುವನದೊಳೆಕ್ಕಲಾವಣಮಿವಂಗೆನೆ ನಿಂದ ನಿಳೇಜ್ಯರಾಜ್ಯದೊಳು (ಎಕ. XI, ದಾವಣ. ೪೨–೧೮ ; 1162) ; ಪಂಚ ಪದಂಗಳನಾತ್ಮತತ್ವದೊಳ್ ನೆಲಸಿದ ಸತ್ಸಮಾಧಿ ವಿಧಿ ಜಕ್ಕಲೆನಾರಿಗಿ ದೆಕ್ಕಲಾವಣಂ (ಎಕ. VII, ಶಿಕಾರಿ. ೧೯೬–೭೭; 1212) ; ಕಲಿರಾಯ ನೃಸಿಂ ಹನ ಪಟ್ಟದಾನೆ ಮೆಟ್ಟಿದ ರಣರಂಗವಿಲ್ಲಮಮ ಬಾಪ್ಪು ಜಯಂ ತನಗೆಕ್ಕ ಲಾವಣಂ (ಎಕ. XI, ದಾವಣ. ೨೫–೨೭ ; 1224) ; ಮೇಲೆವಾಯ್ವಡೆ ತಿನಿದಾರ್ದಲಗಿಂದೆಕ್ಕಲನಂ ಕೊಲೆ ಕಲಿತನವಾಯ್ತೆಕ್ಕಲಾವಣಂ ಲುಬ್ಧಕ ನೊಳ್ (ಪಾರ್ಶ್ವಪು. ೧೨–೮೦) ; (ಶಾಂತಿಪು. ೧೨–೭೬ ; ಮಲ್ಲಿಪು. ೮–೭ ನೋ). [ಎಕ್ಕಲ$_1$ + ಆವಣ]

**ಎಕ್ಕಲು** (ನಾ). ಒಂದು ಬಗೆಯ ಮಣ್ಣು : ಕಪ್ಪುಮಣ್ಣಿನಲ್ಲಿ ಕೆಬ್ಬೆ, ಗೋಡು, ಎಕ್ಕಲುಮಣ್ಣುಗಳೂ ಇರುವುವು (ವ್ಯವಮು. ೩). 'ಮೆಕ್ಕಲು' ಪರಾ. [?]

**ಎಕ್ಕಲುಗದ್ದೆ** 'ಎಕ್ಕಲಗದ್ದೆ' ನೋ.

**ಎಕ್ಕವಡ$_1$**, ಎಕ್ಕಡ (ನಾ). ಕಾಲಿಗೆ ಹಾಕಿಕೊಳ್ಳುವ ಚರ್ಮದ ಜೋಡು; ಪಾದರಕ್ಷೆ; ಮೆಟ್ಟು; ಕೆರ; ಚಪ್ಪಲಿ: "ಎಕ್ಕವಡಂ ಬೇಂಟೆಯ ಕೆಱ" (ಚತುನಿ. ೩೬); "ಎಕ್ಕವಡ ಕೆರ್ಪಕ್ಕು" (ಶಬ್ದಮಂ. ೩೩); ತೊಟ್ಟೆಕ್ಕವಡಂ ಮುರವಿಲ್ ಕಟ್ಟಿದ ಪಣೆಕಟ್ಟು ಬೇಂಟೆವಱಿ . . . ತನ್ನೊಳ್ಳಮರೆ ಬೇಂಟೆಯನೊರ್ವಂ (ಪಂಪಭಾ. ೫–೩೬) ; ಚಂದನದ ಚಿಗುರಂ ಸೆರ್ಕಿ ತಳಿರೆಕ್ಕವಡಮಂ ಮುಡಮೇಱಿಸಿ ಕೈಗೊಟ್ಟು (ಲೀಲಾವ. ೧೦–೯೬ ವ); ಅಂಗಾಲ್ಗೆ ಮೆಟ್ಟುವಡೆಯುತಿರ್ದುದೇಂ ಸಿರಿಸದೆಕ್ಕವಡಮೋ? (ಸಂಸಪ. ೨೭–೧೨). **ಎಕ್ಕಡ**: ಮಹಾವಿಭೂತಿಯಂ ಬಿಟ್ಟೆಕ್ಕಡಮಂ ಮೆಟ್ಟಿ ಬಿಲ್ಗೊಂಡು (ಧರ್ಮಾಮೃ. ೬–೬೩) ; ಸಿರದೊಳಮುರ್ದೊೞಲೆ ಕೌಂಕುಳ ಕರಪಾಳಿಕೆ ಮೆಟ್ಟಿದೆಕ್ಕಡಂ (ವರ್ಧಪು. ೩–೧೩) ; ನಿಡುಗುಂಡುಗಳ ಬಡಿ ಕೋಲುಗಳನೆಕ್ಕಡವನುರು ಪಾರಿಯದ ಕುಪ್ಪಸದ (ಕುವ್ಯಾಅ. ೨೩–೮) ; ಇಂತಾಕಡೆ ಒಬ್ಬರ ಎಕ್ಕಡ ಒಬ್ಬರು ಮೆಟ್ಟಿಕೊಂಡು ಹೋಗಿಬಿಡುತ್ತಾರೆ (ಗರುಡಾ. ೬೪). [?]

**ಎಕ್ಕವಡ$_2$** (ನಾ). ಏಕವಸ್ತ್ರ ; "ಹಕ್ಕಿಗಳನ್ನು ಹಿಡಿಯುವ ಬಟ್ಟೆ" (ಹಚಕಾ. ಕೋಶ) : ಕೊಡತಿ ಕರವತಿಗೆ ಕೂಳೆಕ್ಕವಡ ದಂಡೆ ಕಯ್ ಹೊಡೆಯಿಟ್ಟ ಗೂಡುಗಳು . . . ಬೆರಸಿ ಬೇಡರು ನೆರೆದರು (ಹಚಕಾ. ೫–೯). [< ಸಂ. ಏಕಪಟ]

**ಎಕ್ಕವತ್ತ**, ಎಕ್ಕವತ್ತಿ (ನಾ). ಒಂದೇ ಎಲೆಯುಳ್ಳದ್ದು ; ಒಂದೆಲಗ: "ಎಕ್ಕವತ್ತ – ಏಕಪತ್ರ" (ತದ್ಭಕೋ. ೪). **ಎಕ್ಕವತ್ತಿ** : "ಏಕಪತ್ರ – ಎಕ್ಕವತ್ತಿ" (ಶಮದ. ೨೯೦ ಪ್ರಯೋ). [< ಸಂ. ಏಕಪತ್ರ]

**ಎಕ್ಕವತ್ತಿ** 'ಎಕ್ಕವತ್ತ' ನೋ.

**ಎಕ್ಕವತ್ತಿಗೆ** (ನಾ). ವೀಳೆಯದೆಲೆಯಲ್ಲಿ ಒಂದು ಬಗೆ : ಎಕ್ಕವತ್ತಿಗೆಯ ಎಲೆಯ ಪೇಱಿರಡು ಪಳೆಯೆಲೆಯ ಪೇಱಿರಡು ಕೞಿಯೆಲೆಯ ಪೇಱಿ ರಡು (ಎಇ. XVI, ೩೩೧–೧೯ ; 1077). [ಎಕ್ಕ$_2$ + ಪತ್ತಿಗೆ ?]

**ಎಕ್ಕವದ್ದಳೆ** 'ಎಕ್ಕಮುದ್ದಳೆ' ನೋ.

**ಎಕ್ಕವಳಿ** 'ಎಕ್ಕಾವಳಿ' ನೋ.

**ಎಕ್ಕವಿಂಡು** 'ಎಕ್ಕೆವಿಂಡು' ನೋ.

**ಎಕ್ಕಸ** (ನಾ). ೧. ಶೀಘ್ರತೆ ; ವೇಗ : ಆ ಮೃಗಾಳಿಯಿಂದಗ್ಗಳ ಪೋಪುದು ನಾಮೆಕ್ಕಸದೆ ಪೋಪಮೆಂದು (ಶಾಂತೀಚ. ೧–೮೬). ೨. (ಕರಾ) ಅಹಂಕಾರ ; ಗರ್ವ : ಗಂಜಿಯ ತಿಳಿಯಿಲ್ಲ, ಎಕ್ಕಸ ನೋಡಿದರೆ ಆಕಾಶಕ್ಕೂ ಮೇಲು (ರೂಢಿ). ೩. "ಬಹಳ" (ಗುವಿಮೋ. ೨೪). [?. / ತೆಲು. ವೆಕ್ಕಸಮು]

**ಎಕ್ಕಸಂದಿ** (ನಾ). ಒಂದು ಸಂದಿ ; ಚಿಕ್ಕಗಲ್ಲಿ (?) : ಪಡುವ ಚಂದಣ ಗೇರಿಯೆಕ್ಕಸಂದಿಯಿಂ ಬಡಗವಾರಿಯಿಂ ಮೂಡಣ ಮನೆಯ ನಿವೇಶನಮಂ (ಸೌಇಇ. XV, ೧೨೯–೪೯ ; 1176). [ಎಕ್ಕ$_2$ + ಸಂದಿ]

**ಎಕ್ಕಸಕ್ಕ**, ಎಕ್ಕಸಿಕ್ಕ, ಎಕ್ಕಸಿರ್ಕ, ಎಕ್ಕಸೆಕ್ಕ (ನಾ). ೧. ಅಸಹನೆಯ ಮಾತು ; ಕರುಬಿನ ಮಾತು ; ಅಸಂಬದ್ಧದ ಮಾತು : ಎಮ್ಮ ನುಡಿಗುತ್ತರಮಂ ಕಾಣದೇನಾನುಮೆಕ್ಕಸಕ್ಕಂ ಗಬಪಿದೆಯಾದೊಡಮೇಂ (ಧರ್ಮಾಮೃ. ೯–೧೨೦) ; ಹಱಿಗವಿಗಳ ಕಬ್ಬಂಗಳ ಹೊಱಗಳಿಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ಬಱಿ ತಾಱಿಗ ಬೀಱಿಗವೆತ್ತ ಜತತ್ತ ಜವೆಕ್ಕಸಕ್ಕ ಮಸ್ತವ್ಯಸ್ತಂ (ಗಿರಿಕ. ೧–೨೩) ; ಪೊಡವಿಜೆಯ ಬಿಡದೆಕ್ಕಸಕ್ಕವಗಡಹಿ ಕುಲವನು ಕೂಗಿ ಕೆಡದಿರು (ಕಾಶಿರಾ. ೧೮–೪೯). ೨. ಎಕ್ಕಸಕ್ಕ ಮಾಡುವವನು ; ಅಸಂಬದ್ಧಪ್ರಲಾಪಿ : ಅತಿಮಾರ್ಗನೆಕ್ಕಸಕ್ಕಂ ಸಿತಗಂ ಚಳಬಳಿಗಂ (ಸಮುಪ. ೩–೫೫). **ಎಕ್ಕಸಿಕ್ಕ** : ೧. ನಿನ್ನಂ ಕಂಡೆಕ್ಕಸಿಕ್ಕಮಂ ನುಡಿಯೆ . . . ಮುನಿದರ್ (ಪುಣ್ಯಾಸ್ರ. ೧೨–೨೩ ವ); ಅನ್ನತಮನ್ನೆಯ ತೊಂಡುತೊಳಸೆಕ್ಕಸಿಕ್ಕ ವಂಚನೆ ಕುಹಕ ಜೂದು ಕುತ್ಸಿತ ಲಂಡು ಬಂಡು ದುರ್ಜನಮೆಂಬಿವೆಲ್ಲ ದುಷ್ಟಸ್ವಭಾವಂ (ಸಮ್ಯಕೌ. ೬–೩೩). **ಎಕ್ಕಸಿರ್ಕ** : ೧. ಕಲ್ಮಷಿಕವಾಗಿ ತನ್ನೊಕ್ಕಲ್ಮಕ್ಕಳೆನೆಕ್ಕ ಸಿರ್ಕಮಾದೊಡೆ ಪಾರ್ವಂ ಮಲ್ಲಲನೆ ಮಱುಗಿ (ಸುಕುಮಾ. ೨–೧೧).

ಎಕ್ಕಸಕ್ಕ: ೧. ಎಕ್ಕಸಕ್ಕದ ಮಾತುಗಳು (ಬಸವು. ೫೭–೫೧); ಅಕ್ಕಜಿತು ಪಾಲ್ಪೆಣ್ಣ ಮೊಸರ್ಗಳನಿಕ್ಕಿದಾ ದಿನವೊಲ್ಲನೂಟವನೆಕ್ಕಸಕ್ಕದ ಮಾತು ನಿಮಗೇಕೆಂದಳಬುಜಾಕ್ಷಿ (ನಿಭಾಗ. ೧೦–೮–೩೧).

ಎಕ್ಕಸಿಕ್ಕಬಾಜಿಗ = ಅಸಂಬದ್ಧಪ್ರಲಾಪ ಮಾಡುವವನು: ಅವನು ಶುದ್ಧ ಎಕ್ಕಸಿಕ್ಕಬಾಜಿಗ (ರೂಢಿ).

[ದೇ. ‖ ತಮಿ. ಎಕ್ಕಚ್ಚಕ್ಕ; ಮಲ. ಎಕ್ಕಚಕ್ಕ, ಎಕ್ಕಚಕ್ಕು; ತುಳು. ಎಕ್ಕಚಕ್ಕ, ಎಕ್ಕುಸಕ್ಕ, ಎಕ್‌ಸಕ್; ತೆಲು. ಎಕ್ಕಸಕ್ಕೆ, ಎಕ್ಕಸೆಕ್ಕೆ, ಎಕ್ಕಸೆಕ್ಕೆ]

**ಎಕ್ಕಸಕ್ಕಂಗೆಡೆ** (ಕ್ರಿ). ಅಸೂಯೆಯ, ಅಸಂಬದ್ಧವಾದ ಮಾತನಾಡು: ತಮ್ಮಾಯುಂ ಕುಂದಲ್ ತಮ್ಮ ಭವಿಷ್ಯಂ ಕುಂದಲ್ ಕಂಡಾಗಳೆಕ್ಕಸಕ್ಕಂಗೆಡೆವರ್ (ಸಮುಪ. ೧೩–೪೦). [ಎಕ್ಕಸಕ್ಕ + ಕೆಡೆ]

**ಎಕ್ಕಸಕ್ಕತನ** (ನಾ). ಕರುಬುತನ: ದ್ರೋಣಾಚಾರ್ಯಂ ಮುಗುಳ್ನಗೆ ನಕ್ಕು ವಿಕ್ರಮಾರ್ಜುನನನಿಳಿಸಿ ನುಡಿವ-ನಿನ್ನೆಣಗೋಣಂಗಳುಮೆಕ್ಕಸಕ್ಕತನಂಗಳುಮೆತ್ತವೋದುವು (ಪಂಪಭಾ. ೧೧–೧೩೭). [ಎಕ್ಕಸಕ್ಕ + –ತನ]

**ಎಕ್ಕಸಕ್ಕೆ** (ನಾ). ಎಕ್ಕಸಕ್ಕ ಮಾತನಾಡುವವಳು: ಎಕ್ಕಸಕ್ಕೆ [ಪಾಠಾಂ. ಎಕ್ಕೆಸೆಕ್ಕೆ]ಯರವರವರುಗಳ ನಕ್ಕು ಬಸಲೆಯರಗಿದು ತಿಂಬಾರಕ್ಕಸಿಯರಾ ಪಿಶಾಚಿಯರಿಚ್ಚೆಗಾರ್ತಿಯರು (ಬಸವು. ೪೦–೫೩). [ಎಕ್ಕಸಕ್ಕ + –ಎ₂]

**ಎಕ್ಕಸರ₁** (ನಾ). ಒಂದು ಎಳೆಯ ಸರ; ಒಂಟೆಳೆಯ ಸರ; ಏಕಾವಳಿ: ಎಕ್ಕಸರಮಿದಾವುದಾಂ ಮುಳಿಯೆ ಕಾಲ್ವಿಡಿದಿಂದ್ರನ ಕೊಟ್ಟುದಲ್ತೆ (ಪಂಪಭಾ. ೪–೮೬); ಇಕ್ಕಿದ ಮುತ್ತಿನೆಕ್ಕಸರದೋಲೆ ತುಜುಂಬಿದ ಜಾದಿವೂವೆ ತೊಟ್ಟೆಕ್ಕಸರಂ (ಅರ್ಧನೇ. ೩–೯೯); ರಕ್ಕೆವಣಿ ಪುಲಿಯುಗುರ್ ಗೆಜ್ಜೆ ಮಾಗಾಯ್ ಮುತ್ತಿನೆಕ್ಕಸರಮುಡಿದಾರ ಕಾಲಕಡಗಂ . . . ಪರಿಪರಿಯ ಬಾಲದೊಡಿಗೆಗಳನಾಂತು (ಚೆಬಪು. ೫–೩೬); ನಮ್ಮ ಪಸದನದಲ್ಲಿ ನೀವು ಬಹುವಾಗಿ ಮೆಚ್ಚುತ್ತಿದ್ದ ಎಕ್ಕಸರವಿದು (ಸವತಿ. ೨೭೮). [ಎಕ್ಕ₂ + ಸರ₆]

**ಎಕ್ಕಸರ₂** (ನಾ). ಒಂದೇ ಬಾಣ, —ಕಣೆ: "ಏಕಶರ – ಎಕ್ಕಸರ" (ಶಮುದ. ೨೯೦ ಪ್ರಯೋ). [ಎಕ್ಕ₂ + ಸರ₄]

**ಎಕ್ಕಸರ₃** (ನಾ). ಕತ್ತಿವರಸೆಯಲ್ಲಿ ಒಂದು ಬಗೆ (?): ನಿಜಜಿಗೆಗಾಯತ ಮಂಡಿ ದುವಾಡವೆಕ್ಕಸರ ವಿಸ [ಪಾಠಾಂ. ವೆಕಸರಲುಸು]ರವುಲ್ಲಾಸದುಸ್ಸರ ಚವಡಿ . . . ಖಡ್ಗವಂ ಜಡಿದರು (ಸೋಮುಚ. ೫–೧೪). [ಎಕ್ಕ₂ + ಸರ₃]

**ಎಕ್ಕಸರ₄** (ನಾ). "ಒಂದೇ ಧ್ವನಿ" (ಕಸ್ತೂಕೋ. ೧೨೫). [< ಸಂ. ಏಕಸ್ವರ]

**ಎಕ್ಕಸರ₅** (ನಾ). ನಿರಂತರತೆ; ಸತತವಾಗಿರುವಿಕೆ: ಹೊಕ್ಕನೈ ಶ್ರೀಹರಿಯ ಕೃಪೆಯಿಂದೆಕ್ಕಸರದಲಿಯಂಥಕಾದ್ಯರ ಶಕ್ತಿಸಿಯೆ ಇಂದ್ರಾದಿ ದೇವರಿಗಿತ್ತನಾ ಸುಧೆಯ (ಸಂಭಪ. ೬–೫೩); ರಕ್ಕಸಾರಿಯ ಕೀರ್ತಿ ಸಲಿಲಜನೊಕ್ಕತನ ಪರಿಯಂತ ಕೆಲಸವಿದೆಕ್ಕಸರಮೆನುತನಿಲಸುತ ಬೆಳೆದನು ನಭಾಂತರಕೆ (ತೊರರಾ. ೬–೫–೪೯). [?]

**ಎಕ್ಕಸರ₆** (ನಾ). ಒಂಟಿಯಾಗಿ ಸಂಚರಿಸುವುದು: ಅರ್ಜುನನ ಹಯಮೆಕ್ಕಸರದೊಳ್ ಬಂದುದಲ್ಲಿಗೆ (ಜೈಮಿಭಾ. ೧೬–೨೨). [ಎಕ್ಕ₂ + ಸರ₆]

**ಎಕ್ಕಸಿಕ್ಕ** 'ಎಕ್ಕಸಕ್ಕ' ನೋ.

**ಎಕ್ಕಸಿರ್ಕ** 'ಎಕ್ಕಸಕ್ಕ' ನೋ.

**ಎಕ್ಕಸೆಕ್ಕ** 'ಎಕ್ಕಸಕ್ಕ' ನೋ.

**ಎಕ್ಕಸೊಕ್ಕಿ** (ನಾ). ಎಕ್ಕಸಕ್ಕ ಮಾತನಾಡುವವಳು: ಕರ್ಕಸಿಯ ರತಿವೆಕ್ಕಸೊಕ್ಕಿಯರನಾರತಂ ದಕ್ಕಡತಿಯರು ಕಾಮದಿಕ್ಕೆಯರು (ಪತಿಲ. ೨–೬೦). [ಎಕ್ಕಸೊಕ್ಕು + –ಇ₂]

**ಎಕ್ಕಸೊಕ್ಕು** (ನಾ). ಸ್ವಾಭಿಮಾನ; ಅಹಂಕಾರ: ಮಿಕ್ಕುಮೀರುತ ಬಂದನಾದರೆಯೆಕ್ಕಸೊಕ್ಕನು ಮುರಿದು ತಕ್ಕ ಬುದ್ಧಿಯನೂ (ಚಂದ್ರಾವ. ೬). [ಎಕ್ಕ₂ + ಸೊಕ್ಕು₃ (< ಸೊರ್ಕು₃)]

**ಎಕ್ಕಹಾಲೆ** (ನಾ). ಒಂದು ಮೂಲಿಕೆ: ಚಂದನೋಸೀರಾದಿ ಲೇಹ್ಯ–ಶ್ರೀಗಂಧ, ಲಾಮಂಚ . . . ಯಷ್ಟಿಮಧುಕ . . . ಎಕ್ಕಹಾಲೆ, ಕಹಿಹಾಲೆ . . . ಇವೆಲ್ಲ ಪ್ರತ್ಯೇಕ ೪ ತೊಲಕವಂ ಚೂರ್ಣಿಸಿ ಹಾಕಿ ಹದದಲ್ಲಿಳುಹಿ (ಸಕವೈ. ೧೪೮). [ಎಕ್ಕ ? + ಹಾಲೆ (< ಪಾಲೆ)]

**ಎಕ್ಕಳವಟ್ಟೆ** (ನಾ). ಉಡುವುದಕ್ಕೂ ಹೊದೆಯುವುದಕ್ಕೂ ಒಂದೇ ಸೀರೆ; ಏಕವಸ್ತ್ರ (?): ತಳಿರುಯ್ಯಲ್ ಶ್ರುತಿಯಿಂದವೊಂದೆ ಕೊರಲೊಳ್ ಜೀಯೆಂಬಿನಂ ಪಾಡುವಿಂದೊಳಮುಟ್ಟೆಕ್ಕಳವಟ್ಟೆಯಿಂದಜಾಯೆ ಬರ್ಪರ್ (ಶಾಂತಿಪು. ೮–೭೫). [ಎಕ್ಕಳ್₀ (< ಎಕ್ಕಲ) + ಪಟ್ಟೆ]

**ಎಕ್ಕಳಿಸು** (ಕ್ರಿ). ತಗ್ಗು; ಸಂಕೋಚವಾಗು: ಹೊಟ್ಟೆ ಎಕ್ಕಳಿಸಿ ಹೋಗಿ ಆ ಹಳ್ಳದಲ್ಲಿ ಒಂದು ಹಾವು ಅಕ್ಕಿ ಹಿಡಿಯುವಂತಿರುವುದು (ಮೊಮುಗು. ೩೦). 'ಅಕ್ಕಳಿಸು' ಪರಾ. [ಎಕ್ಕಳ್₀ + –ಇಸು₃]

**ಎಕ್ಕಳೆ** (ನಾ). ಒಂದು ಜಾತಿಯ ಕೀಟ; ಜಿರಲೆ: ಯಾವುದೋ ಒಂದು ಎಕ್ಕಳೆ ತನ್ನ ಮೇಲೆ ಓಡಾಡಿದಂತಾಗಿ (ಮರಮ. ೩೬). 'ಅಕ್ಕಳೆ' ಪರಾ. [ದೇ. ‖ ತುಳು. ಎಕ್ಕದೆ, ಎಕ್ಕಲೆ]

**ಎಕ್ಕಾ** 'ಎಕ್ಕ₂' ನೋ.

**ಎಕ್ಕಾಗಾಡಿ** (ನಾ). (ಉಕ) ಒಂಟೆತ್ತು ಅಥವಾ ಒಂಟಿ ಕುದುರೆಯ ಗಾಡಿ: ಸ್ನಾನಕ್ಕೆ ಹೋದರೂ ಎಕ್ಕಾಗಾಡಿ ಬಂದು ನಿಲ್ಲುತ್ತಿದ್ದುವು (ಜಮಿನ್ದಾ. ೪೦). [ಎಕ್ಕಾ (< ಎಕ್ಕ₂) + ಗಾಡಿ₂]

**ಎಕ್ಕಾಗಾಣ** 'ಎಕ್ಕಲಗಾಣ' ನೋ.

**ಎಕ್ಕಾಡು** (ಕ್ರಿ). ೧. ಹತ್ತಿಯನ್ನು ಬಿಡಿಸು; ಹಿಂಜು. ೨. ಜೀರ್ಣವಾಗು; ಶಿಥಿಲವಾಗು. 'ಅಕ್ಕಾಡು' ಪರಾ.

ಎಕ್ಕಾಡಿಹೋಗು=ನಾಶವಾಗಿ ಹೋಗು; ಛಿದ್ರವಾಗಿ ಹೋಗು: ಕವಚ ಹಜಿದುವು ಬಿರಿಯೆ ಸೀಸಕ ಸವಗ ಸವೆದುವು ಪೆಚ್ಚವಾಯಿತು ಕವಲುಗೋಲೆಕ್ಕಾಡಿ ಹೋಯಿತು ಕಪಿಗಳವಯವವು (ಕೌಶಿರಾ. ೨೧–೨೯). [ಎಕ್ಕು₁ + ಅಡು₁]

**ಎಕ್ಕಾವಳಿ, ಎಕ್ಕವಳಿ** (ನಾ). = ಎಕ್ಕಸರ₁: ತರಳತರವೃತ್ತ ಮೌಕ್ತಿಕ ಪರಿಕರಮೇಕಾಂತಮೆಕ್ಕಾವಳಿ ಕಂಧರದೊಳಮರ್ದೆಸೆಯೆ (ಆದಿಪು. ೪–೩೭); ಇಕ್ಕಿದನಿಳಾಧಿಪತಿ ಸತಿಯ ಕೊರಲೊಳೆಕ್ಕಾವಳಿಯಂ (ಮಲ್ಲಿಪು. ೪–೮೦); ಪೊತ್ತೆ ಪೆರ್ಮುತ್ತಿನೆಕ್ಕಾವಳಿ (ಚಕವಂ. ೮೩–೧೬). **ಎಕ್ಕವಳಿ**: "ಎಕ್ಕಸರ, ಮುತ್ತಿನ ಒಂಟೆಳೆ ಹಾರ" (ಕಸ್ತೂಕೋ. ೧೨೫). [< ಸಂ. ಏಕಾವಲೀ]

**ಎಕ್ಕಿಸು** (ಕ್ರಿ). ೧. ಹತ್ತಿಯನ್ನು ಎಕ್ಕುವಂತೆ ಮಾಡು; ಬಿಡಿಸಿಡು; ಹಿಂಜಿಸು. ೨. ಸೀಳು; ವಿಭಾಗಿಸು. [ಎಕ್ಕು₁ + –ಇಸು₃]

**ಎಕ್ಕು₁** (ಕ್ರಿ). ೧. ವಿಭಾಗಿಸು; ಬೇರೆಮಾಡು; ಹತ್ತಿಯನ್ನು ಬಿಡಿಸು; ಹಿಂಜು: "ಎಕ್ಕು – ವಿಭಜನೇ, ಪ್ರವಾಹಿಕಾಯಾಂ ಚ (ಭೇದಿಯಾಗು)" (ಶಮುಧಾ); ತನು ಪಂಜಿವೊಲ್ ಬೆಳರ್ತಿರ್ಪಿನೆಗಂ ಹಿಮಮೆಕ್ಕಿದರಲೆವೋಲ್ ಪುದಿದಿರೆಯುಂ (ಆದಿಪು. ೬–೩೩); ತರಣಿ ಹಿಮಾಂಶುವೊಲ್ ಗಿರಿಗಳೆಕ್ಕಿದ ಪಚ್ಚಿಯ ಮೊತ್ತದಂತೆವೋಲ್ (ಅಪ್ರತಿ. ೭೦–೬). ೨. ಹೊಡೆ; ಬಡಿ; ಇಕ್ಕು: ಪಯಿರನ್ನು ಕುಯಿದು ಒಟ್ಟಿ ಎಕ್ಕಿ . . . ಕೊಡುತ್ತಿದ್ದರು (ಹುಟ್ಟಹ. ೬೩). ೩. ತೊಂದರೆಗೊಳಿಸು; ಆಕ್ರಮಿಸಿ ಹಿಂಸಿಸು: ಗುರುವಸಿಷ್ಠನೊಳೆಕ್ಕುವೀ ಕೊರಗಣಿಗೆ ಪರಿಹಾರವನು ಬೆಸಸೆಂದ (ರಾಮಾಸಂ. ೧–೨–೩).

[ದೇ. ‖ ತಮಿ. ಮಲ. ತುಳು. ಎಕ್ಕು; ತೆಲು. ಏಕು]

**ಎಕ್ಕು$_2$** (ಕ್ರಿ). ಭೇದಿಯಾಗು: "ಎಕ್ಕು – ವಿಭಜನೇ, ಪ್ರವಾಹಿಕಾಯಾಂ ಚ (ಭೇದಿಯಾಗು)" (ಶಮಧಾ). [?]

**ಎಕ್ಕು$_3$** (ಕ್ರಿ). ಮೇಲಕ್ಕೆ ಏರು: ಉಕ್ಕಿದವು ಭುಗಭುಗನೆ ಕೇತನವೆಕ್ಕಿದವು ದೆಸೆದೆಸೆಗೆ (ಜಿನಭಾ. ೫೩–೨೬).

**ಎಕ್ಕೆಕ್ಕು** (ದ್ವಿರುಕ್ತಿ): ಹಾಕಿದ ಹೆರಳು ಕೆದರಿಕೊಂಡಾ ಕುರುಳು ಎಕ್ಕೆಕ್ಕಿ ಯಾರನೋ ಒದರುತಿಹವು (ಗಂಗಾತ. ೬೨–೮).

[ದೇ. ‖ ತಮಿ. ಮಲ. ಎಕ್ಕು; ತುಳು. ಎಕ್ಕಲ್; ತೆಲು. ಎಕ್ಕು; ಕುಇ. ಎಕಸಿ, ಎಂಗಸಿ]

**ಎಕ್ಕುಟ್ಟೆ** (ನಾ). (ಕರಾ) ಚಿಣ್ಣಿಕೋಲಿನ ಆಟದ ಎಣಿಕೆ: ಎಕ್ಕುಟ್ಟ, ಸಾಂತೀರ ಮೊದಲಾದ ಆಟಗಳು (ಕುಟ್ಟಿದೊ. ೬೫). [?]

**ಎಕ್ಕುಡು** 'ಎಕ್ಕಡು' ನೋ.

**ಎಕ್ಕೆ$_1$** (ನಾ). ೧. ಜತೆ; ಸಂಗಡ; ಸಮಾನತೆ: ಖಂಡಿಸೆ ಬಿಲ್ಲಂ ಬಿಸುಟೆಕ್ಕೆಯಿಂ ಸುರಿಗೆಗಿಱಿತ್ತುಯ್ತುರ್ಪರಂ ಶಾತಭಲ್ಲಸಹಸ್ರಂಗಳಿಂ . . . ಎಚ್ಚು (ಶಾಂತಿಪು. ೪–೯); ಸಲುಗೆಗೆ ಸಾಮ್ಯಕ್ಕೆಕ್ಕೆಗೆ ಪಲರಕ್ಕೆಮ ಸತಿಯರ ಹಿತರಂ ಗೆಲ್ವೆಡೆಯೊಳ್ ಗೆಲ್ವ[ಲುವ] ಬೆಡಂಗಿಯೆ ಬೀರನ ಬಲದ ಭುಜಾದಣ್ಡದಲ್ಲಿ ಕೆಲದೊಳ್ನಿಲ್ವಳ್ (ಎಕ. VIII, ನಗರ. ೪೭–೮೪; 1066); ಮುನಿಸನುವಿಸೆ ಕಾದುವ ತಕ್ಕಿನೊಳಾಹವಭೂಮಿಗೆಕ್ಕೆಯಿಂ ನಡೆತಂದರ್ (ಪಂರಾಮಾ. ೧೩–೨೧); ಪೊಕ್ಕೆಡದಡಿಯುಂ ಮುಂದಿಟ್ಟೆಕ್ಕೆಯಿನನುಗೆಯ್ದು ನಿವಿದರ್ಗ ಗಜೆಯಂ ನೋಟಂ ಮಿಕ್ಕಾದರ್ಗ ಪೊಯ್ಯೆ (ನೇಮಿಪು.೧೨–೯೩). ೨. ಒಟ್ಟು; ಗುಂಪು; ಸಮೂಹ; ರಾಶಿ: ಪಿಶಿತಭೋಜನದಲ್ಲಿಗೆ ನಿಲ್ಲದೆಕ್ಕೆಯಿಂ ಸಾರ್ವ ನಿಶಾಚರೀಜನಮಂ (ಕಾವ್ಯಸಾ. ೫೩೪ ಶೂದ್ರಕ); ಸೂಸುವ ಸೀಸೆ ಬೀಸುವ ಚಳಚ್ಚಮರೀರುಹಮೆಕ್ಕೆಯಿಂ ರಣಾಯಾಸಪರಿಶ್ರಮಾಂಬುಲವಮಂ ತವೆ ಪೀರೆ (ಪಂಪಭಾ. ೮–೧೧೦); ಎಕ್ಕೆಯಿನಿರ್ಪ ಪುಲ್ಲೆಗಳನಿಲ್ಲಿಯೆ ಮಗ್ಗಿಸು (ನಳಚಂ. ೭೪). [< ಸಂ. ಏಕ]

**ಎಕ್ಕೆ$_2$**, ಎಕ್ಕ$_1$, ಎರ್ಕೆ (ನಾ). ಒಂದು ಜಾತಿಯ ಗಿಡ; ಎಕ್ಕದ ಗಿಡ: "ಅರ್ಕಮೆಂದೆನಲ್ಕೆಕ್ಕೆಯಕ್ಕುಂ" (ಮಂಗರಾ. ೩೯–೨೬); "ಎಕ್ಕೆಯರ್ಕಂ" (ಕವಿಕಂ. ೭೨); ಎಕ್ಕೆಯ ಕಾಯ್ಗಳಂತೆ (ಕಾದಂಪೂ. ೧೭೮); ಎಕ್ಕೆಯ ಹಾಲು . . . ಲೇಪವಂ ಮಾಡಿಸಲು ಮೂಲವ್ಯಾಧಿಯ ಮೊಳೆ ಕರಗಿಹೋಗುವುದು (ವೈದ್ಯಸಾ. II, ೧೯೩). ಎಕ್ಕೆ$_1$: ಎಕ್ಕದ ಮುಗುಳ್ಗಳಂ ಹರಡಿ ಜಗಜಟ್ಟಿಗಳನೆಕ್ಕತುಳದಾಳ್ಗಳಂ ಮಱಿಯೊಳಡಂಗಿಸೆ (ಸಮ್ಯಕಾ. ೪–೧೮); ಹಸಿವನ್ನು ತಡೆಯಲಾರದೆ ಎಕ್ಕದೆಲೆಗಳನ್ನು ತಿಂದುಬಿಟ್ಟನು (ನೀಗಟ್ಟ. ೪೨); ಎಕ್ಕದ ಹೂಗಳನ್ನು ತಲೆಯಮೇಲೆ ಹಾಕಿ ಹೋದರು (ಅವತಂ. ೧೭೪). ಎರ್ಕೆ: "ಎರ್ಕೆಯೆಂದು ಅರ್ಕಂ" (ಕಶಸಾ. ೨೫–೫೩೩); ಒರ್ಕುಡಿತೆ ನೀರ್ಗೆ ಪಱಿಪಟ್ಟೆರ್ಕೆಯ ಪಣ್ಣೆಲೆಯ ಮುಱಿಗೆ ದೇಸಿಗರಂ ದೇವರ್ಕಳ್ಗೊಡೆಯರ್ ಮಾಟ್ಪರೆ (ಶಮದ. ೨೪ ಪ್ರಯೋ); ಅರ್ಕ, ಎರ್ಕೆ (ಶಬ್ದಾನು. ೧೬೦ ವ್ಯಾಖ್ಯಾನ).

**ಎಕ್ಕಹುಟ್ಟಿಸು** = (ಆಲಂ) ನಾಶಪಡಿಸು; ಹಾಳುಮಾಡು: ಡೆಪ್ಯುಟಿ ಕಮಿಷನರ್ ಕಾರು ಎಕ್ಕಹುಟ್ಟಿಸಬೇಕೆಂದು ಮಸಲತ್ತು ಮಾಡಿದ್ದೇವೆ (ನಟಸಾ. ೨೨೧); ಅಕ್ಕಸಾಲೆ ಅಕ್ಕ ಕೊಟ್ಟ ಚಿನ್ನದಲ್ಲೂ ಎಕ್ಕಹುಟ್ಟಿಸಿದ ಅಂದಹಾಗೆ (ಮರಳಿ. ೬೩). **ಎಕ್ಕಹುಟ್ಟು** = (ಆಲಂ) ನಾಶವಾಗು; ಹಾಳಾಗು: ಅವನ ಮನೆಯಲ್ಲಿ ಎಕ್ಕಹುಟ್ಟಿಹೋಗಲಿ (ಸುಗುಗಂ. ೯೮–೫). **ಎಕ್ಕೆಯಹೊಲ** = ಒಂದು ಹೊಲದ ಹೆಸರು: ದೇವರ್ಗೆ ಕಯ್ವಲನಪ್ಪುದೆಕ್ಕೆಯ ಹೊಲಕುಂಟೆ ಸಹಿತಮಾಗಿ . . . ಬಿಟ್ಟರ್ (ಸೌಇಇ. IX–i, ೨೭೩–೯೯; 1179).

[< ಸಂ. ಅರ್ಕ. / ತಮಿ. ಎರುಕ್ಕು; ಮಲ. ಎರಿಕ್ಕು; ತುಳು. ಎಕ್ಕಮಲೆ, ಎಕ್ಕಮಾಲೆ, ಎಕ್ಕಮೆ]

**ಎಕ್ಕೆ$_3$** (ನಾ). ಮಂಚದ ಚೌಕಟ್ಟು: ಹೊರಸಿನ ಎಕ್ಕೆಯ ಶಂಖದ ಮಣಿಯ ಪವಣಿಸಬಲ್ಲವರು ನೀವಾರಾದಡೂ ಪವಣಿಸಿರಯ್ಯ (ಅವಚಂ. ೧೩೫–೬೧೭); ತಾಯಾತನ ತಂದ ಮಂಚದೆಕ್ಕೆಯಂ ಮಣ್ ಪತ್ತಿತ್ತೆಂದದ ನೊರಸಿ ಕರ್ಚಿದೊಡೆ (ಜೀವಸಂ. ೧೯೬–೨೯ ವ); ಹಲವೆಲುವಿನೆಕ್ಕೆಗಳ ಬಿಗಿದು ಬೀವಂ ನೆಯ್ದು ನುಲಿಯ ಹಂದೊಗಲ ಹಾಸಿನೊಳು ಮಂಚಂ ಜಡಿಯೆ ಹೊಲೆಯನೋಲಗವಿತ್ತು (ಹಚಕಾ. ೧೧–೩೧); ಸಾರವೇದಂಗಳೇ ಪಾದವಾಗಮವೆಕ್ಕೆ ಶೂರ ಪೌರಾಣಮೇ ಪಲಗೆಯಾಗೊಪ್ಪಲ್ (ಪ್ರಭುಪು. ೨–೧೬). [?]

**ಎಕ್ಕೆ$_4$** (ನಾ). ಇಕ್ಕೆ; ಮನೆ: ಪಂಚವಸದಿಯ ಕೇರಿಯಲ್ಲಿಗೆ ಬಡಗಣೆಕ್ಕೆಯ ಹಸ್ತವಿಪ್ಪತ್ತಾಱು (ಮುಂಬರಾ. X, ೨೨೬–೬೦; 1205).

[< ಇರ್ಕೆ ?]

**ಎಕ್ಕೆಕಾಯಿ** (ನಾ). ಎಕ್ಕೆಯ ಗಿಡದ ಕಾಯಿ: ಲಲನೆ ಕೇಳಲೆ ಸಂಗಿ ಸಲೆ ಸತ್ತು ಹುಟ್ಟನಾ(ದ?) ಚಲದಂಕರಾಮನ ನಾನು ಕೊಲಿಸದೆ ಬಿಟ್ಟೆನಾದರೆ ಕೇಳಲೆ ಸಂಗಿ ಮೊಲೆಯಲ್ಲ ಇವು ಎಕ್ಕೆಕಾಯಿ (ಕುಮಾಸಾಂ. ೧೦೦. ಅಡಟ). [ಎಕ್ಕೆ$_2$ + ಕಾಯಿ (< ಕಾಯ್$_4$)]

**ಎಕ್ಕೆಕ್ಕೆ** (ಅ). ೧. ಒಂದರಮೇಲೊಂದಾಗಿ; ಮೇಲೆಮೇಲೆ; ಒಟ್ಟಾಗಿ: "ಎಕ್ಕೆಕ್ಕೆ ತೇನತೇನಮಿವಕ್ಕುಂ ಮೇಲ್ಮೇಲೆ" (ಚತುನಿ. ೭೫); ದೀವಿಗೆಗಳ್ ಜಲಕ್ಕನೆಕ್ಕೆಕ್ಕೆಯಿನಿಟ್ಟಳಂ ಬೆಳಗುತಿರ್ದುವು (ಪಂಪಭಾ. ೧೨–೫); ಎಕ್ಕೆಕ್ಕೆಯೆ ನೆಗಱಿರ್ದ್ದಮೊರ್ದಲೊಳೆ ಕುಕ್ಕೂ ಕೂ ಎಂದು ಕೋೞಿ ಕೂಗಿದುವಾಗಳ್ (ಕಾವ್ಯಾವ. ೧೧). ೨. ಪರಸ್ಪರವಾಗಿ: ಮಕ್ಕಳಾಟಕೆಯೊಳಗಾ ರಾಜನಂದನರೆಕ್ಕೆಕ್ಕೆಯಿಂ ಹೋರುತಿಹರು (ನೇಮಿಸಂ. ೬–೫೭). [ಎಕ್ಕೆ$_1$ + ಎಕ್ಕೆ$_1$]

**ಎಕ್ಕೆಗಿಡ** (ನಾ). = ಎಕ್ಕೆ$_2$ (ಈ). [ಎಕ್ಕೆ$_2$ + ಗಿಡ (< ಗಿಡು)]

**ಎಕ್ಕೆಗುಟ್ಟು** (ಕ್ರಿ). ೧. (ತನ್ನಲ್ಲಿ ತಾನೇ) ಗೊಣಗುಟ್ಟು (?): ಅಸುವಿಪ ತಾಯ ಬಾರಿಸುವ ತಂದೆಯ ಕಾಯ್ಪಿನೊಳೆಕ್ಕೆಗುಟ್ಟುವಕ್ಕನ ಪಡಪೆತ್ತಿ ಬಯ್ವ ಕಿಱುದಂಗೆಯ ಕಣ್ಣೊಳೆ ಕೀಱಿ ಕಲ್ಪಿಪಣ್ಣನ ಬಿಯಕಿಲ್ಲದವ್ವಳಿಪ ತಮ್ಮನ ತೀನಿಗೆ ಮೆಯ್ಯನೊಡ್ಡಿ ನಿನ್ನನೆ ಪಿಡಿದೆನ್ನ ನಲ್ಮೆಗಿದೆ ತಕ್ಕುದೆ ನಲ್ಮೆಗೆ ದೋಷಮಾಗದೇ (ಶಾಂತಿಪು. ೮–೧೦೫). ೨. ಸಲಿಗೆಯಿಂದಿರು; ಒಟ್ಟಾಗಿರು: ಸಿಂಗದೊಡನೆಕ್ಕೆಗುಟ್ಟುವ ಕರಿಗಳಂ ಹುಲಿಯ ಜಂಗುಳಿಯ ನೀಡಿಱಿವ ಹರಿಣಂಗಳಂ (ಹಚಕಾ. ೬–೩೮). [ಎಕ್ಕೆ$_1$ + ಕುಟ್ಟು$_1$]

**ಎಕ್ಕೆಬೆನಕ** (ನಾ). ಎಕ್ಕದ ಗಿಡದ ಬೇರಿನಲ್ಲಿ ಮೂಡಿರುವ ಗಣೇಶನ ಆಕಾರ: ಎಕ್ಕೆಬೆನಕನನ್ನು ಪೂಜಿಸುತ್ತಾರೆ (ರೂಢಿ).

[ಎಕ್ಕೆ$_2$ + ಬೆನಕ]

**ಎಕ್ಕೆಮಾಲೆಗಿಡ** (ನಾ). = ಎಕ್ಕೆ$_2$ (ಈ).

[ಎಕ್ಕೆ$_2$ + ಮಾಲೆ + ಗಿಡ (< ಗಿಡು)]

**ಎಕ್ಕೆಯುಲಿ** (ನಾ). ಒಟ್ಟಾದ ಶಬ್ದ; ತುಮುಲ ಶಬ್ದ: ತೆಕ್ಕನುಕ್ಕಿದ ಸಂತಸಕೆ ಕೊರಳ್ ಬಿಚ್ಚಿದೊಲ್ ಹಕ್ಕಿ ಹಾಡಿದುವೆಕ್ಕೆಯುಲಿಗಳಂ (ಶ್ರೀರಾಮಾ. ೫೦೮–೨೩೫). [ಎಕ್ಕೆ$_1$ + ಉಲಿ]

**ಎಕ್ಕೆವಸ[ಯ]ಲ್** (ನಾ). ಎಕ್ಕೆಯ ಬಯಲು; ಒಂದು ಪ್ರದೇಶ (?): ಊರಿಂ ಮೂಡಲು ಎಕ್ಕೆವಸ[ಯ]ಲೊಳಗೆ ಬೆದ್ದಲು ಕಂಬ ೧೫ (ಎಕ. XI, ಹೊಳಲ್ಕೆ. ೧೨೪–೬೨; 1208).

[ಎಕ್ಕೆ$_2$ + ಬಯಲ್]

**ಎಕ್ಕೆವಾಯ್** (ಕ್ರಿ). ಒಮ್ಮಿಂದೊಮ್ಮೆ ಮೇಲೆ ನುಗ್ಗು; ಮುನ್ನುಗ್ಗು; ಪ್ರತಿಭಟಿಸು: ಅಕ್ಕಟಯಿಂದೊಂದು ಹೆಣ್ಣಿನ ನುಡಿಯೇನು ಲೆಕ್ಕಕಿನಿಸು ಕುಂದೆ ಮುನ್ನಾ ಅಕ್ಕ ಸೋದರಿಯರ ಕೊಟ್ಟದ್ದೆನಲ್ನೆಯೆಂದೆಕ್ಕೆವಾಯ್ದನು ನಮಿರಾಜ (ಭರಚ. ೪೩–೧೯). [ಎಕ್ಕೆ$_1$ + ಪಾಯ್$_1$]

**ಎಕ್ಕೆವಾಜು**$_1$ (ಕ್ರಿ). ಒಂದೇಸಮನೆ ಮಿಡಿ, —ಕಂಪಿಸು, —ಹಾರು: ಬೆಳ್ಳೇಱಿ ಬಾನಲ್ಗೊಂಡ ವದನಮಂಡಲಮುಂ ಎಕ್ಕೆಪಾ[ವಾ]ಜುವಳ್ಳಿರ್ದೆಯುಂ (ಕುಸುಮಾ. ೧೩–೪೬ ವ). [ಎಕ್ಕ$_1$ + ಪಾಜು$_1$]

**ಎಕ್ಕೆವಾಯ್ತು**$_2$ (ನಾ). ಒಂದು ನೆಗೆತ, —ಹಾರಿಕೆ.

**ಎಕ್ಕೆವಾಜುವಾಜು** = ಒಂದೇ ನೆಗೆತಕ್ಕೆ ನೆಗೆ, —ಹಾರು: ಎರಡುಂ ಬಲದ ಕಡಿತಲೆಯ ನಾಯಕರ್ ಕೆಯ್ಕೊಂಡು ಬಳ್ಳುಗೆಡೆದೆಕ್ಕೆ [ಪಾಠಾಂ. ದಿಕ್ಕೆ] ವಾಜುವಾಜಿ ಪಲಗೆವಾಡಿ ಗೂಳಿ ಸೊರ್ಕಿ ಮಾರ್ಕೊಂಡು ಕಾದೆ (ಪಂಪಭಾ. ೧೦–೮೦ ವ). [< ಎಕ್ಕೆವಾಜು$_1$]

**ಎಕ್ಕೆವಿಂಡು**, ಎಕ್ಕವಿಂಡು (ನಾ). ಶಿಷ್ಯರ ಸಮೂಹ, —ಗುಂಪು: ಎಕ್ಕೆವಿಂಡುಗಳೆಂಬುವರು ಮುಕ್ಕಣ್ಣ ನಿಮ್ಮ ಗಣಂಗಳು (ಸಿದ್ಧವ. ೧೭೬); ದೇಗುಲವ ಮಾಡಿಸುತಿಪ್ಪ ಗುಡ್ಡಗಳೆಕ್ಕೆವಿಂಡುಗಳ (ಪ್ರಭುಲೀ. ೧೩–೪); ಮತ್ತಗಟ್ಟದೊಳೆಕ್ಕೆವಿಂಡುಗಳ್ ಜ್ವರಬಾಧೆಯೊತ್ತರಿಸಿ ಮರಣವಾಗುತಮಿರಲ್ಕೆ (ಕೊಟ್ಟೂ ಬ. ೧೧–೩). **ಎಕ್ಕೆವಿಂಡು**: ಲೋಕದುರಿತಮಥನ ಕಥನೋದ್ಯೋಗರಿವರೆಂದು ಸಂತಸದೊಳೆಕ್ಕವಿಂಡಂ [ಪಾಠಾಂ. ಸಂತೋಷದಿಂದ] ಸಲಹುಗಾ ಸಿದ್ಧಚಕ್ರೇಶನು (ಸಿದ್ಧರಾ. ೧–೨); ಕೃತಿಯ ಪಾಲಕರು ಗುರುಭಕ್ತರೆನಿಪೆಕ್ಕವಿಂಡುಗಳ್ (ಸಿದ್ಧರಾ. ೧–೧೨); ನುಡಿಯ ನುಡಿವಾಲಿಪುದು ನಾನೀವ ಭಾಷೆಗಳ ಗಡಿಯನೀಯೆಕ್ಕವಿಂಡಂ ಪೊಕ್ಕು ವೇಷಮಂ ಪಡೆದು (ಸಿದ್ಧರಾ. ೭–೮); (ಸಿದ್ಧರಾ. ೫ ಸೂಚನೆ; ೧೦–೧೬; ೭–೧೫; ೮–೧, ೩ ನೋ). [ಎಕ್ಕ$_1$ + ಪಿಂಡು$_2$]

**ಎಕ್ಕೆಸಾಕ್ಷಿ** (ನಾ). ಏಕೈಕಸಾಕ್ಷಿ; ಒಂದೇ ಸಾಕ್ಷಿ: ವ್ಯವಹಾರದಂತರಂ ಸಾಲಂ ಇಲ್ಲಾಮ್ ಎಕ್ಕೆ ಸಾಕ್ಷಿ ಲೋಕಾದಿತ್ಯ ಎಳಅರಸರ್ಮಗಂದಿರ್ (ಎಕ. X, ಕೋಲಾರ. ೭–೪; 760). [ಎಕ್ಕ$_1$ + ಸಾಕ್ಷಿ]

**ಎಕ್ಕೆಹಟ್ಟಿ** (ನಾ). ಒಂದು ಊರಿನ ಹೆಸರು: ಗುಜ್ಜವ್ವೆನಾಯಕಿತಿಯ ಕೆಱೆಯ ಕೆಳಗೆ ಸ ೪ ಎಕ್ಕೆಹಟ್ಟಿಯ ಕೆಱೆಯ ಕೆಳಗೆ ಸ ೩ (ಎಕ. III, ಮಂಡ್ಯ. ೧೨೧–೪೧; 1235). [ಎಕ್ಕ$_1$ + ಪಟ್ಟಿ$_1$]

**ಎಕ್ಕೋಗಿಲೆಹುಳು** (ನಾ). ಒಂದು ಬಗೆಯ ಹುಳು; ಗುಂಗುರು ಹುಳು; ನೊರಜು (?): ಉಚ್ಚುಗು ರಕ್ತಮಶ್ವಾಸಮನಿಕ್ಕೈಸಿಯೆ ಮಾಡು ನಡೆಯಲಾಜದೆ ಬೀಳ್ಕುಂ ಅಚ್ಚುಗಯೆಕ್ಕೋಗಿಲೆಹುಳು ಬೆಚ್ಚದೆ ಮಾಡೂದಕ್ಕೆ ಬೇಗ ಕ್ರಿಯೆಯಂ (ಅಶ್ವವೈ. ೧೧–೭೫). [?]

**ಎಕ್ಕೋಟಿ** 'ಏಟಿಕ್ಕೋಟಿ' ನೋ.

**ಎಕ್ಕಂಡ** (ಗು). ಅಖಂಡವಾದ (?): ಅಹುದೆಕ್ಖ[ಕ್ಕ]ಂಡದ ತಾನ್ರು ದುಂಗುರಮದೇ ತಾಂ ನಿರ್ವಿಷಂ (ಖಮುದ. ೧೬–೧೪೨); ಆ ಪರ್ವತವೆಕ್ಕಂಡದ ಶಿಲೆ ನಾನೇಪೇಳ್ವೆನದಜಗ್ರದಲಿ (ನಾಗಕು. ೧–೩೧). [ಎಕ್ಕ$_1$ + ಖಂಡ]

**ಎಕ್ಸ್‌ರೇ** (ನಾ). ಸಾಮಾನ್ಯ ಬೆಳಕಿನ ಕಿರಣ ತೂರದ ಪದಾರ್ಥವನ್ನು ಭೇದಿಸಿಕೊಂಡು ಹೋಗುವ ಒಂದು ವಿಶೇಷ ಕಿರಣ: ಎಕ್ಸ್‌ರೇ ಮೂಲಕ ನೋಡಿದರೆ ಮೂಳೆ ಮುರಿದಿರುವುದು ಗೊತ್ತಾಗುತ್ತದೆ (ರೂಢಿ). [← ಇಂ. X-Ray]

**ಎಗಚಿ** 'ಎಲಚಿ' ನೋ.

**ಎಗಚಿಗ** (ನಾ). ಅಣಕಿಸುವವನು (ಕ). [ಎಗಚು + -ಇಗ]

**ಎಗಚು** (ನಾ). = ಎಗರು ೧. (ಸ್ಯಾಂಡರ್). 'ಎಗುಚುಮಾತು' ಪರಾ. [< ಎಗರು ?]

**ಎಗಚುಮಾತು** (ನಾ). ಅಣಕದ ಮಾತು; ನಕಲಿಯ ಮಾತು: ನೀನು ಚಿಕ್ಕಂದು ಯಾವಾಗಲೋ ಕಿವಿಯಲ್ಲಿ ಬಿದ್ದ ಪ್ರಪಂಚದ ರೂಢಿಯ ಎಗಚುಮಾತು ಗಿಳಿಪಾಠ ಮಾಡಿಕೊಂಡು ಅದನ್ನೇ ಹೇಳುತ್ತಿದ್ದೀಯೆ (ಸುಖವಿ. ೬೫). [ಎಗಚು + ಮಾತು$_1$]

**ಎಗಟು**, ಎಗಡು (ಗು). ೧. (ವಿಪರೀತ ಸೇವನೆಯಿಂದ) ರುಚಿಗೆಟ್ಟ; ಅಸಹ್ಯವಾದ. ೨. ಒರಟಾದ; ಮೃದುವಲ್ಲದ (ಮನುಷ್ಯ): ಅವನು ಎಗಟು ಮನುಷ್ಯ (ರೂಢಿ). **ಎಗಡು**: ೨. (ಸ್ಯಾಂಡರ್). 'ವೆಗಟು' ಪರಾ. [← ತೆಲು. ವೆಗಟು]

**ಎಗಡು** 'ಎಗಟು' ನೋ.

**ಎಗತಾಳಿ** 'ಎಕ್ಕತಾಳಿ' ನೋ.

**ಎಗರಿಕೆ** (ನಾ). ಎಗರಾಡುವುದು; ಕುಪ್ಪಳಿಸುವುದು; ಹಾರುವುದು. [ಎಗರು + -ಇಕೆ]

**ಎಗರಿಸು** (ಕ್ರಿ). ೧. ಮೇಲಕ್ಕೆ ಚಿಮ್ಮು ಅಥವಾ ಕುಪ್ಪಳಿಸುವಂತೆ ಮಾಡು: ಪರಿಪರಿಯೊಳೆಗರಿಸುತ ಕಂಗಳ ತೆರೆದು ಮಿಣಕಿಸಿ ಸಿಂಹನಾದ ಸ್ಫುರಣೆಯಿಂದಬ್ಬರಿಸಿ ಹಾರಿದ ರಾಮರಾಮೆನುತ (ಅನಂರಾ. ೪–೩–೨೫). ೨. ಅಪಹರಿಸು; ಕದಿ: ಕಣಿವೆ ಕೆಳಗಿನ ಕೊರಮಾನೇ ಎಗರಿಸಿಬಿಟ್ಟಿರಬೇಕು (ನಡೆದಾ. I, ೫೧೩); ಕೆಂಚ . . . ಒಂದು ಹೊರೆ ಸೊಪ್ಪೆಯನ್ನು ಎಗರಿಸಿದ್ದ (ಸುವಸಂ. ೧೧೯); ಬಾಳೆಹಣ್ಣನ್ನು ಅಂಗಡಿಯಿಂದ ಎಗರಿಸಿಬಿಟ್ಟ (ಕಸಾಪ. I, ೨೪೦).

**ಎಗರಿಸಿಕೊಳ್ಳು** = ಅಪಹರಿಸು; ಕಿತ್ತುಕೊಳ್ಳು: ಜೇಬುಗಳ್ಳ ಹಣ ಎಗರಿಸಿಕೊಂಡು ಹೋದ (ರೂಢಿ). [ಎಗರು + -ಇಸು$_3$. / ತೆಲು. ಎಗರಿಂಚು, ಎಗಯಿಂಚು]

**ಎಗರು** (ಕ್ರಿ). ೧. ಏರು; ನೆಗೆ; ಹಾರು; ಚಿಮ್ಮು: ಕವಣೆಗಲ್ಲಿಲಿ ಅದ್ರಿ ಎಗರಿ ಪೋದದ್ದುಂಟೆ ರವಿಯ ಮೇಲೆ ಮಣ್ಣುದೂರೆ ಮೊಗವನೆತ್ತಿ (ವಿಸಾಸು. ೩೮–೩); ಗದೆಯನ್ನೆತ್ತಿದೆನೆಂದರೆ ಮೇಲಕ್ಕೆಗರುತ್ತಿದ್ದನು (ಅಗ್ರಹ. ೧೩). ೨. ಹಾರಿಹೋಗು. ೩. ಸವೆದುಹೋಗು.

**ಎಗರೆಗರು** = (ದ್ವಿರುಕ್ತಿ): ಶಬ್ದ ಕಿವಿಗೆ ಬೀಳುತ್ತಲೇ ಅವಳ ಮನಸ್ಸು ಬಾಗಿಲ ಕಡೆಗೆ ಎಗರೆಗರಿ ಹೋಗತೊಡಗಿತ್ತು (ಇಪ್ಪಕ. ೨೩೨).

**ಎಗರಾಡು** = ಹಾರಾಡು; ಅಹಂಕಾರದಿಂದ ಮೆರೆ: ಮಗ ಕೊಲೆ ಪಾತಕನನ್ನು ವಹಿಸಿಕೊಂಡು ತಾಯಿಯಮೇಲೆ ಎಗರಾಡಿದನು (ಪುನರು. ೩೪೪); ಮಾತನಾಡಿಸಿದವರ ಮೇಲೆ ಎಗರಾಡುವಳು (ಚೆಂಗೂಲಿ. ೧೭೯). [ದೇ. ‖ ತಮಿ. ಇವರ್; ತೆಲು. ಎಗುರು]

**ಎಗಲು** (ನಾ). ರೆಂಬೆ; ಮರದ ಎಳೆಯ ಗೆಲ್ಲು. [← ತುಳು. ಎಗ್ಲ್]

**ಎಗು** (ನಾ). ಏರುವುದು; ಮೇಲೆ ಹತ್ತುವುದು. 'ಎಗುಮತಿ' ಪರಾ. [ದೇ. ‖ ತಮಿ. ಏಜ್ಜು; ಮಲ. ಏಜ್ಜ, ಏಜ್ಜು]

**ಎಗುಮತಿ** (ನಾ). ರಫ್ತು; ನಿರ್ಯಾತ; ಸರಕನ್ನು ಹಡಗಿಗೇರಿಸುವುದು: ಇತರ ದೇಶಗಳಿಗೆ ಹೋಗುವ ಸರಕುಗಳು (ಎಗುಮತಿ) – ಹತ್ತಿ, ಧಾನ್ಯ, ಅಫೀಂ (ಭೂಗೋಳ. ೩೯). [ದೇ. ‖ ತಮಿ. ಮಲ. ಏಜುಮತಿ; ತೆಲು. ಎಗುಮತಿ]

**ಎಗುಮತಿದಿಗುಮತಿ** (ನಾ). ರಫ್ತು ಮತ್ತು ಆಮದು; ಸರಕನ್ನು ಹಡಗಿಗೇರಿಸುವುದು ಮತ್ತು ಇಳಿಸುವುದು (ಕ). [← ತೆಲು. ಎಗುಮತಿದಿಗುಮತಿ]

**ಎಗುರುಕಂಬಿ** (ನಾ). ಸ್ಥಿತಿಸ್ಥಾಪಕತ್ವವುಳ್ಳ ಸಾಧನ; ಸ್ಪ್ರಿಂಗು: ಕೊಳವಿಯಲ್ಲಿರುವ ಎಗುರುಕಂಬಿಯ ಸಹಾಯದಿಂದ ಕ್ರಮೇಣ ಮೇಲೆದ್ದು ಉರಿಯುವ ಗಟ್ಟಿ ಮೋಂಬತ್ತಿ (Carriage Candle. ಇಂಕನಿ). [ಎಗುರು + ಕಂಬಿ$_1$]

**ಎಗುರುಗಡಾರಿ** (ನಾ). "ಬಂಡೆ ಮೊದಲಾದುವುಗಳನ್ನು ಒಡೆಯುವುದಕ್ಕಾಗಿ, ಸಿಡಿಮದ್ದು ತುಂಬುವುದಕ್ಕೆ ತೂತನ್ನು ಕೊರೆಯಲು ಉಪಯೋಗಿಸುವ ಉಳಿಯಲಗಿನ ಭಾರವಾದ ಗಡಾರಿ: ಎಗುರುಗಡಾರಿ" (Jumper. ಇಂಕನಿ). [ಎಗುರು + ಗಡಾರಿ]

**ಎಗುರುಪಟ್ಟಿ** (ನಾ). ಬಗ್ಗಿಸಿದ ಅಥವಾ ಸುರುಳಿ ಸುತ್ತಿದ ಲೋಹದ ಸ್ಥಿತಿಸ್ಥಾಪಕತೆಯುಳ್ಳ ಪಟ್ಟಿ ; ಹಾರುಪಟ್ಟಿ (Hang. ೩೦೫೩).
[ಎಗುರು + ಪಟ್ಟಿ₂]

**ಎಗೆ** (ನಾ). = ಎಗಲು. [← ತುಳು. ಎಗ್ಗೆ]

**ಎಗ್ಗ, ಎಗ್ರ್ಗ** (ನಾ). ಹಳ್ಳಿಯವ; ಒರಟ; ಅಸಂಸ್ಕೃತ; ದಡ್ಡ; ಗಾಂಪ: "ಕೂಬಂ - ಎಗ್ಗಂ" (ಶಮುದ. ಪರಿ. ೧) ; "ಗಾಂಪನೊಳೆಗ್ಗಂ" (ಕರ್ಣಾನಿ. ೪೬); "ಎಗ್ಗನೆಂದು ಹೆಡ್ಡಂ" (ಕ ಶ ಸಾ. ೧೮–೩೬೬); ಕಟಿಸ್ತ್ರಿಯಂತೆ ದೆಸೆದೆಸೆಗೆ ಬೆಸೆವ ಪಚ್ಚಪಸಿಯೆಗ್ಗರುಮಂ ಕಂಡು (ಪಂಪಭಾ. ೯–೪೯ ವ); ಪಱುಗೋಲೊಳ್ ವಾರ್ಧಿಯ ತಡಿಗುಱದೆ ಭರಂಗೆಯ್ದು ಪೋಪೆನೆಂಬೆಗ್ಗನವೋಲ್ (ಧರ್ಮಾಮೃ. ೧–೫೨); ಕೇಳದಲೆ ಗುರುವು ತಾ ಹೇಳುವನು ನಿನಗೊಂದ ಕೇಳಿದರೆ ಬೇಱೆ ಹೇಳುವನ ನೆರಮಾತು ಕೇಳುವವನೆಗ್ಗ (ಸರ್ವಜ್ಞ. ೮೨); ಎಗ್ಗರೆಂಗೆ! ಲೋಗರಾಡುಗೆ! ಬಱಿ ದೂಱಿಂ ತಡೆಯಲಾವಂ ಸಾಲ್ವಂ (ರಾಮಾಶ್ವ. ೧೪–೧೩). △ **ಎರ್ಗ**: ನರ್ಗಸುಖನಾಗಿಹನಿಗೀ ಲೋಕೊರ್ಗುವದೆ ಬಿಟ್ಟಿಂಜಲುಂಡಂತೆರ್ಗನಾ ಪರಮಾತ್ಮನವನೀನಾಥನೆನೆ ಮುನಿಪ (ಬಜ್ಜಪು. ೮೭–೫೨). [ಎಗ್ಗು₂ + -ಅ₇]

**ಎಗ್ಗಡೆದಿಗ್ಗಡೆ** (ನಾ). ಏರುಪೇರು; ಹಳ್ಳತಿಟ್ಟು; ಅಸ್ತವ್ಯಸ್ತ (?): ಪಕ್ಷ ಬಲವೂ ಕ್ಷೇತ್ರ ವಿಸ್ತಾರವೂ ಎಗ್ಗಡೆದಿಗ್ಗಡೆಯಾಗಿರುವುದರಿಂದ . . . ಸ್ಥಾನಗಳು ದೊರಕಬಹುದು (ರಾಜ್ಯಶಾ. ೩೩೪).
[← ತೆಲು. ಎಗುಡುದಿಗುಡು]

**ಎಗ್ಗತನ** (ನಾ). ದಡ್ಡತನ; ಹೆಡ್ಡತನ: ತನಕ್ಕೆ – ಎಗ್ಗತನಂ, ಮರುಳ್ತನಂ (ಶಮುದ. ೨೧೧ ಪ್ರಯೋ); ಸಂದಣಿಸುತಿಟ್ಟಣಿಸಿ ನೆರೆದಿಹ ಮಂದಿಯಲಿ ನಾನಿವನನನುಚಿತದಿಂದಲಿವಳಿಗೆ ನುಡಿದು ತೋಱುವುದೆಗ್ಗತನವೆನುತ (ಪ್ರಭುಲೀ. ೭–೨೮); ಪೊಱಮಿಂಚುಗ್ಗೈವನಂ ಬಱಿವಾತುಗಾಱನಂ ಕಱುಬನಂ ಕಪಟಹೃದಯನಂ ಧೂರ್ತನಂ ತೋಱಿಯದುದೆಗ್ಗತನವಲ್ತೇ (ರಾಜಶೇ. ೧೧–೯೨); ನನ್ನೆಗ್ಗತನಮುಮನ್ ಬಿಟ್ಟು ಕಳೆಯೀಗಳ್ (ಅಂತಿಗೊ. ೫–೮೦). [ಎಗ್ಗ + -ತನ]

**ಎಗ್ಗಲ** 'ಎಗ್ಗಳ' ನೋ.

**ಎಗ್ಗಳ, ಎಗ್ಗಲ** (ನಾ). ಆಧಿಕ್ಯ; ವಿಶೇಷ; ಬಹಳ: ಮುಳಿಸೆನಿಸಿದನು ರಾಗ ಬಲುಘನಕೋಪದೆಗ್ಗಳದವಳಿ ಗೌಳ . . . ಅಬ್ಬಗಂಧಿ (ಜನವ. ೪–೧೬); ದೂರಕ್ಕೆಗ್ಗಳನಾದ ನಿಕಟಕೆ ತೋರದಿನ್ನೊಂದಾಗಿ (ಬಜ್ಜಪು. ೧೩–೫೬); ಮುನಿಗಳಿರ ಸಾಸಿರ ಸುನಾಮಕೆ[ಪಾಠಾಂ. ಕ]ಗ್ಗಳ ರಾಮಚಂದ್ರಮನ ದಿವ್ಯಮೂರ್ತಿಯ ಧ್ಯಾನಿಪ ವಾಸಿ ಪುಟ್ಟಿಪುದು (ವೆಂಕಾರಾ. ೧–೧೩–೨೬). △ **ಎಗ್ಗಲ**: ಆತ್ತೇರು ಮನಿದಗದ ಸೋಸ್ತೇರನೆಬ್ಬಿಸ್ಯಾರ ಎಗ್ಗಲಗಾಟ ಬಾನವ್ವನಮಗ (ಲೋಕಗೀ. ೧೭೮–೯). 'ವೆಗ್ಗಳ' ಪರಾ.
[< ವೆಗ್ಗಳ ?]

**ಎಗ್ಗಱಿ** (ಕ್ರಿ). ನಾಚಿಕೆ ಪಡು: ಅಗ್ಗಿಸಿದೊಡೆ ದಿಟವೆಂದೆಗ್ಗಱಿಯದ ನಗ್ಗದ ಹೆಗ್ಗರು ನುಗ್ಗುಗಳಂ ಬಗ್ಗಿಸಿ (ವೀರೇಚ. ೨–೨೭); ವೆಗ್ಗಳ ರೂಪಸ್ಥ ತನ್ನ ಮಗ್ಗುಲೊಳ್ ಬಂದು ಮಚ್ಚಿಸಿ ಪೋದ ಬೆಚಕಲಾನೆಗ್ಗಱಿಯದೆ ಬಂದೆ ತಾಯೆ (ಮೋಹತ. ೨೭–೫೪). [ಎಗ್ಗು₂ + ಅಱಿ]

**ಎಗ್ಗಾಮುಗ್ಗಾ** (ಅ). ಹಿಂದಕ್ಕೆ ಮುಂದಕ್ಕೆ: ಆ ನೂರು ಕೆಲಸ ಆ ನೂರು ಚಿಂತೆಗಳ ನಡುವೆ ರಾಜನ ಮನಸ್ಸು ಎಗ್ಗಾಮುಗ್ಗ ನಡೆಯಬೇಕಾಗಿತ್ತು (ಸವತಿ. ೪೨). 'ಹಿಗ್ಗಾಮುಗ್ಗಾ' ಪರಾ.
[< ಹಿಗ್ಗಾಮುಗ್ಗಾ ?]

**ಎಗ್ಗಿಕೆ** (ನಾ). ದಡ್ಡತನ; ಹೆಡ್ಡತನ: ಸಂಸಾರಮಂ ನಂಬಿ ದರ್ಶನಮುಮಂ ವ್ರತಮುಮಂ ಕೆಡಿಸುವುವೆಗ್ಗಿಕೆಯೆಂದು ವ್ರತಪರಿರಕ್ಷಣೋಪಾಯಮುಮಂ ಚಿಂತಿಸುತ್ತಿರ್ದರ್ (ಧರ್ಮಾಮೃ. ೩–೧೪೬). [ಎಗ್ಗು₂ + -ಇಕೆ]

**ಎಗ್ಗು₁** (ಕ್ರಿ). ಬಿಕ್ಕು; ಬಿಕ್ಕಳಿಸು: ರಸಿಯಿಸಿದೊಡೆ ತಲೆಗುತ್ತಂ ಮಸಗಿದೊಡೆಗ್ಗುವೊಡೆ ತಿರಿಗಿ ಕೆಡವೊಡೆ ಮೆಯ್ಯರ್ ಘೋಂಪಿಸುವೊಡೆ . . . ರಾಸ್ನಾದಿ ತೋಯಮಂ ಕುಡೆ ತೀರ್ಗುಂ (ಲೋಕೋಪ. ೯–೨೩೯); ಕಗ್ಗೊಱವೆ . . . ಮಱಚದ ಚೂರ್ಣಂ ಅಗ್ಗಳಮೊಂದಿರೆ ಸಸ್ಯದೊಳೆಗ್ಗಲ್ಲದೆ ವಿಷಹರಂ ವಲಂ ಪ್ರತ್ಯೇಕಂ (ಖಮುದ. ೭–೮೨). 'ಉಗ್ಗು' ಪರಾ.
[< ಉಗ್ಗು ?]

**ಎಗ್ಗು₂, ಎರ್ಗು₂** (ನಾ). ೧. ದಡ್ಡತನ; ಹೆಡ್ಡತನ: ಅಳವಱಿಯದೆಗ್ಗು ಬಳವಳ ಬಳೆವಿನೆಗಂ (ಪಂಪಭಾ. ೬–೪೬); ತಮ್ಮೆಗ್ಗನಗ್ಗಂಮಾಡಿ ಬಂದ ಬರವುಮಂ (ವರ್ಧಪು. ೯–೪೭ ವ); ನಿಚ್ಚಲು ಶಿವರಾತ್ರಿಯ್ಯಂ ಮಾಳ್ಪಚ್ಚರಿಯೆನಿಪ ಭಾಷೆ ಭಕ್ತರನಚ್ಚಶಿವನೆಂದಿಪ್ಪ ಭಾಷೆ ಶಿವೈಕ್ಯರೆಗ್ಗುಗಳ ಎಚ್ಚಱಿಸದಿಹ ಭಾಷೆ (ಬಸವು. ೬–೧); ಉಗ್ಗಡದ ರಣವಿದಕೆ ಶಲ್ಯನನಗ್ಗಿಸುವನೀ ಕೌರವೇಶ್ವರನೆಗ್ಗ ನೋಡುವೆನೆಂಬವೊಲು ರವಿಯಡರ್ದನಂಬರವ (ಕುವ್ಯಾಶ. ೨–೨); ಅಗ್ಗಸುಗ್ಗಿಗಳುಂಟು ಡೊಗ್ಗೆ ಮಜ್ಜಿಗೆಯುಂಟು ಹೆಗ್ಗುಳದ ಕಾಯಿ ಮೆಲಲುಂಟು ಮೂಡನಾಡೆಗ್ಗೆನ್ನಬಹುದೆ (ಸರ್ವಜ್ಞ. ೧೬೦೯). ೨. ನಾಚಿಕೆ; ಸಂಕೋಚ: ಕಡುಚೆಲ್ವಿಂ ರತಿಗೆಗ್ಗಂ ಪಡೆದು ವಿಲಾಸಕ್ಕೆ ದೇಸಿವಡೆದವನಿಪನೊಳ್ ಪಡೆದು ಪಿರಿಯರಸಿತನಮಂ (ಪಂರಾಮಾ. ೨–೭೨); ಹೆಂಗಸರೂ ಗಂಡಸರೂ ಯಾವಾಗಲೂ ಯಾವತರದ ಎಗ್ಗಿಲ್ಲದೆ ಕೂಡಿ ಇರಬಾರದು (ಶಿಭ್ರಮ. ೪); ಅಸಭ್ಯ ವಿಷಯಗಳಲ್ಲಿ ಇಬ್ಬರಿಗೂ ಎಗ್ಗಿಲ್ಲ (ಸಾಹಿಜೀ. ೧೧೧). △ **ಎಗುರ್ಗ₂**: ೧. ಅಗ್ಗಳಿಕೆಯಿಂದೆರ್ಗೆ[ಪಾಠಾಂ. ಗ್ಗೆ]ನ್ನದುರ್ವೆಟ್ಟು (ಧರ್ಮನಾ. ೧–೪೯); ಮುಳಿಸೆರ್ಗು ಸೊರ್ಕು ಬರ್ಕುಡಿ ಪುರುಡಂಕೆಝುಂಕಣೆ (ವೃಷವಿ. ೨೮–೬೩). ೨. ಎಗ್ಗಿಲ್ಲದೆ [ಪಾಠಾಂ. ಎಗ್ಗಿಲ್ಲದೆ, ಎಳ್ಳಿಲ್ಲದೆ] ಪಾದರಿಯೆಲೆ ಪೆರ್ಗುರುಟಗೆ ಯೆಸವ ಬೇರುಮಂ ಖರ್ಜೂರದೊಳೊಗಿರ್ರೆ ಜಲದಿಂದಿಂಟಲ್ಕಿಗ್ಗಲಿಸಿದ ವೃಕವಿಷಂಗಳಱಿಗುಮ ಮೋಘಂ (ಖಮುದ. ೧೩–೨೧).

ಎಗ್ಗಾಗು = ನಾಚಿಕೆಯಾಗು: ಪಲವುಂ ನಂಜುವಾಯ್ ಪನ್ನಗೇಂದ್ರಂಗಿರದಾನೋರಂತೆ ಬೆಂಬತ್ತಿಯುಮೆರ್ದೆಗುಡದೆಗ್ಗಾಯ್ತು ಕೂರ್ಮಂಗೆನುತ್ತೆ (ಕಾವ್ಯಸಾ. ೨೨೩; ಧರ್ಮನಾ. ೩–೩ ನೋ).
[ದೇ. ॥ ತಮಿ. ವೆಕ್ಕಂ = ನಾಚಿಕೆ; ತೆಲು. ಎಗ್ಗು = ತೊಂದರೆ]

**ಎಗ್ಗುಡಿ** (ನಾ). ದಿಣ್ಣೆ; ದಿಬ್ಬ. [← ತೆಲು. ಎಗುಡು]

**ಎಗ್ಗುಳಿ** (ನಾ). ೧. ಒರಟ; ಗಾಂಪ; "ಕೊಬ್ಬಿಲ" (ಚತುನಿ. ೩. 1, ೫). ೨. ನಾಚಿಕೆಪಡುವವನು; ಸಂಕೋಚಸ್ವಭಾವದವನು; "ನಾಚುಬುರಕಿ" (ಜಾನಕೋ. ೨೩). [ಎಗ್ಗು₂ + -ಉಳಿ₂]

**ಎಗ್ಗುಳಿತನ** (ನಾ). ನಾಚಿಕೆಸ್ವಭಾವ; ಸಂಕೋಚದ ಸ್ವಭಾವ.
[ಎಗ್ಗುಳಿ + -ತನ]

**ಎಗ್ಗೆ** (ನಾ). ದಡ್ಡಹೆಂಗಸು; ಪೆದ್ದಿ: ಸಿತಗೆ, ಚದುರೆ, ಪಾಣ್ಬೆ, ಜೋಡೆ, ಕಳ್ಳೆ, ಬೆಳ್ಳೆ, ಹೆಡ್ಡೆ, ಎಗ್ಗೆ (ಶಬ್ದಾನು. ೧೯೭ ಪ್ರಯೋ).
[ಎಗ್ಗು₂ + -ಎ₂]

**ಎಚೆ** 'ಎಸೆ₁' ನೋ.

**ಎಚ್ಚ₁** (ನಾ). (ಮಲದ) ಹಿಕ್ಕೆ; ಪಿಚಿಕೆ: ದ್ರಾಕ್ಷಾವಲ್ಲಿಯ ಫಲಮನ ಪೇಕ್ಷಿಸುವೊಡೆ ಕೋಱಿಯೆ(ಯು)ಚ್ಚಮಂ ತೊಡೆ (ಲೋಕೋಪ. ೬–೫೩); ನವಿಲುಂ ಚರಣಾಯುಧ ಪಾರಿವಮೆಂಚವಱೆಚ್ಚಮರ್ಕಮೂಲಮುಮಂ ತಾಂ ಜವದಿಂ ಧೂಪಂಗೊಳಲಹಿನಿವಹ ಸಮುದ್ಭೂತ ವೃಶ್ಚಿಕೋಗ್ರ ವಿಷಘ್ನಂ (ಖಮುದ. ೧೧–೧೬). 'ಅಚ್ಚು₆' ಪರಾ.
[ದೇ. ॥ ತಮಿ. ಎಚ್ಚ]

**ಎಚ್ಚ₂** 'ಎಸ್ಕು₁' ಪರಾ.

**ಎಚ್ಚಕ** (ನಾ). "ಕೊಡುವ ದಾತಾ" (ವಿಸ್ತೋಸು. ಅಡಿಟ): ನೆಟ್ಟ ದವರ ಬಂಟಾನೆನಿಪಾ ವೈಕುಂಠಾ ಹೆಚ್ಚಿನ ಹೆದ್ದೈವ ವಿಜಯ ವಿಠ್ಠಲರೇಯಾ ಎಚ್ಚಕನೊ ನೀನು ನಂಬಿದ ದಾಸರಿಗೇ (ವಿಸ್ತೋಸು. ೪೨-೧). 'ಇಚ್ಚಕ' ಪರಾ. [?]

**ಎಚ್ಚತ್ತ** 'ಎಚ್ಚುಱ್$_1$' ಪರಾ.

**ಎಚ್ಚತ್ತು** 'ಎಚ್ಚುಱ್$_1$' ಪರಾ.

**ಎಚ್ಚದಡಿ** (ನಾ). ವಸ್ತ್ರಗಳಲ್ಲಿ ಒಂದು ರೀತಿಯ ಅಂಚು (?): ಪಟ್ಟೆ ಪಟ್ಟಾಳ ಸೀರಿ ಎಚ್ಚದಡಿಯ ನ್ಯಾಮದಡಿಯ ಜರತಾರ ಸೀರಿ ಚಾಯಾ ಕುಟ್ಟು ಜಾಣಿ ನಿನ್ನ ಕರಿಯ ಬಂದೆ (ಲೋಕಗೀ. ೧೩೯-೧). [?]

**ಎಚ್ಚರ** 'ಎಚ್ಚುಱ್$_2$' ನೋ.

**ಎಚ್ಚರಗನಸು** (ನಾ). ಎಚ್ಚರವಾಗಿದ್ದಾಗ ಕಾಣುವ ಕನಸು; "ಹಗಲುಗನಸು" (Waking Dream. ಇಂಕನಿ).
[ಎಚ್ಚರ (< ಎಚ್ಚುಱ್$_2$) + ಕನಸು]

**ಎಚ್ಚರಗೇಡಿ** (ನಾ). ಎಚ್ಚರವಿಲ್ಲದವನು; ಅಜಾಗರೂಕ: ಒಂದು ವೇಳೆ ಸುರಾಪಾನ ಮಾಡಿದ ಮನುಷ್ಯನು ಸಹ ಮೈಮರೆತು ಎಚ್ಚರಗೇಡಿ ಯಾಗಲಿಕ್ಕಿಲ್ಲ (ಬ್ರಹ್ಮಜೀ. ೧೧೧).
[ಎಚ್ಚರ (< ಎಚ್ಚುಱ್$_2$) + ಕೇಡಿ]

**ಎಚ್ಚರಗೊಳಿಸು** (ಕ್ರಿ). ಎಚ್ಚರಾಗುವಂತೆ ಮಾಡು; ಎಬ್ಬಿಸು: "ವೈತಾಳಿಕ . . . ಎಚ್ಚರಗೊಳಿಸುವ ಹಾಡುಗಾರರಾದ ಸ್ತುತಿಪಾಠಕರ ಹೆಸರು" (ಸಿದ್ಧಾಂತಿ. ೨೨೯). [ಎಚ್ಚರಗೊಳ್ಳು + -ಇಸು$_3$]

**ಎಚ್ಚರಗೊಳ್ಳು** (ಕ್ರಿ). ಎಚ್ಚರಾಗು; ಎದ್ದೇಳು: ಅವನು ಈಗತಾನೇ ನಿದ್ದೆಯಿಂದ ಎಚ್ಚರಗೊಂಡ (ರೂಢಿ).
[ಎಚ್ಚರ (< ಎಚ್ಚುಱ್$_2$) + ಕೊಳ್ಳು$_1$ (< ಕೊಳ್$_1$)]

**ಎಚ್ಚರತಪ್ಪು** 'ಎಚ್ಚರದಪ್ಪು' ನೋ.

**ಎಚ್ಚರದಪ್ಪು**, ಎಚ್ಚರತಪ್ಪು (ಕ್ರಿ). ಎಚ್ಚರಿಲ್ಲದಂತಾಗು; ಮೈಮರೆ: (ಮುಂಬಯಿ. ೫-೧೩೯ ೬); ಅವನು ನಿಶ್ಶಕ್ತಿಯಿಂದ ಎಚ್ಚರದಪ್ಪಿ ಬಿದ್ದು ಬಿಟ್ಟನು (ರೂಢಿ). ಎಚ್ಚರತಪ್ಪು: "ಜ್ಞಾನಾಂಬೆಗೆ ಸಿಡುಬು ಜ್ವರ ವಿಪರೀತವಾಗಿ ಎಚ್ಚರತಪ್ಪಿ ಉಸಿರಾಟ ನಿಂತುಬಿಟ್ಟಿತು . . ." (ಪ್ರತಾಪ. ೧೨೦); ಅವನ ಕಾಲಿನ ಮೇಲೆ ದೊಪ್ಪನೆ ಎಚ್ಚರತಪ್ಪಿ ಬಿದ್ದಳು (ಬಂಕಿಮ. ೧೮೧). [ಎಚ್ಚರ (< ಎಚ್ಚುಱ್$_2$) + ತಪ್ಪು$_1$]

**ಎಚ್ಚರಪಡು** (ಕ್ರಿ). ಜಾಗರೂಕತೆಯನ್ನು ವಹಿಸು: ತತ್ತಿಗಳನ್ನು ಹಾಕಿದಮೇಲೆ ಅವುಗಳನ್ನು ಕಾಯುವುದಕ್ಕೆ ಅದು ಎಷ್ಟು ಎಚ್ಚರಪಡುತ್ತದೆ (ಮುಂಬಯಿ. ೫-೩೯). [ಎಚ್ಚರ (< ಎಚ್ಚುಱ್$_2$) + ಪಡು$_1$]

**ಎಚ್ಚರಮರೆ** (ಕ್ರಿ). = ಎಚ್ಚರದಪ್ಪು
[ಎಚ್ಚರ (< ಎಚ್ಚುಱ್$_2$) + ಮರೆ$_1$ (< ಮಱೆ$_1$)]

**ಎಚ್ಚರಿಕೆ** 'ಎಚ್ಚುಱಿಕೆ' ನೋ.

**ಎಚ್ಚರಿಕೆದಪ್ಪು** (ಕ್ರಿ). = ಎಚ್ಚರದಪ್ಪು: ಎಚ್ಚರಿಕೆದಪ್ಪದ ನುರಿತು ಸಮರ್ಥರಾಗಿರುವ ಹಳಬರನ್ನಾಯ್ದುಕೊಳ್ಳಿರಿ (ಮಂತ್ರಶ. ೪೩-೧೩)
[ಎಚ್ಚರಿಕೆ (< ಎಚ್ಚುಱಿಕೆ) + ತಪ್ಪು$_1$]

**ಎಚ್ಚರಿರು** (ಕ್ರಿ). ಎಚ್ಚರವಾಗಿರು; ಜಾಗೃತವಾಗಿರು: ಜನರೆಚ್ಚರಿರುವಾಗ ಚಂಚಲನೇತ್ರೆಯೆ ಅವರ ಚೇತನವನು ನೀನು ಹಗಲೊಳೆ ಕದಿಯುವೆ ನೀನೆಲ್ಲಿ ಕಲಿತೆಯೆ ಇಂತಹ ಚೋರವಿದ್ಯೆಯನು (ಇಂಚಾಪ. ೧೧೩-೫೩). [ಎಚ್ಚರ (< ಎಚ್ಚುಱ್$_2$) + ಇರು$_2$ (< ಇರ್$_2$)]

**ಎಚ್ಚರಿಸು** 'ಎಚ್ಚುಱಿಸು' ನೋ.

**ಎಚ್ಚರು$_1$** 'ಎಚ್ಚುಱ್$_1$' ನೋ.

**ಎಚ್ಚರು$_2$** 'ಎಚ್ಚುಱ್$_2$' ನೋ.

**ಎಚ್ಚರುಗೇಳು** (ಕ್ರಿ). ಎಚ್ಚರದಿಂದ ಕೇಳು; ಮನಸ್ಸಿಟ್ಟು-ಕೇಳು: ಕದಗಳ ಹಿಂದೆ ಅವಿತಡಗಿರುತ್ತ ಇಲ್ಲಿ ನಡೆದ ಮಾತುಗಳನ್ನೆಲ್ಲಾ ಎಚ್ಚರುಗೇಳಿರುವರು (ಮಂತ್ರಶ. ೨೧-೨೪).
[ಎಚ್ಚರು$_2$ (< ಎಚ್ಚುಱ್$_2$) + ಕೇಳು (< ಕೇಳ್)]

**ಎಚ್ಚರುಗೊಳಿಸು** (ಕ್ರಿ). ಎಚ್ಚರಾಗುವಂತೆ ಮಾಡು: ಛಕ್ಕನೇ ಒಂದು ಆರ್ತಧ್ವನಿ ನನ್ನನ್ನು ಎಚ್ಚರುಗೊಳಿಸಿತು (ತೀಮೋಹ. ೪೨).
[ಎಚ್ಚರು$_2$ (< ಎಚ್ಚುಱ್$_2$) + ಕೊಳ್$_1$ + -ಇಸು$_3$]

**ಎಚ್ಚವಿಕ್ಕು** (ಕ್ರಿ). ಹಿಚಕೆಹಾಕು; (ಪಕ್ಷಿಗಳು) ಮಲ ವಿಸರ್ಜನೆ ಮಾಡು: ಗಗನಶಿಲಾತಳದೊಳ್ ಘನಖಗಸಂಕುಳಮೆಚ್ಚವಿಕ್ಕಿ [ಪಾಠಾಂ. ಮೆಚ್ಚಲಿಕ್ಕಿ, ವಚ್ಚನಿಕ್ಕಿ]ಪೋದುವೊ ಮಿಗೆ ಬಾಂಜಗುನೆಗೆ ನೆಗೆದುವೊ ನೊರೆಯೆನೆ ಬಗೆಗೊಂಡುವು ಬಾನೊಳೊಗೆದ ಬಿಳಿಯ ಮುಗಿಲ್ಗಳ್ (ಲೀಲಾವ. ೫-೨೫). 'ಅಚ್ಚಿಕ್ಕು' ಪರಾ. [ಎಚ್ಚ$_1$ + ಇಕ್ಕು]

**ಎಚ್ಚಱ್$_1$** 'ಎಚ್ಚುಱ್$_1$' ನೋ.

**ಎಚ್ಚಱ್$_2$** 'ಎಚ್ಚುಱ್$_2$' ನೋ.

**ಎಚ್ಚಱಿಕೆ** 'ಎಚ್ಚುಱಿಕೆ' ನೋ.

**ಎಚ್ಚಱಿಸು** 'ಎಚ್ಚುಱಿಸು' ನೋ.

**ಎಚ್ಚಱು$_1$** 'ಎಚ್ಚುಱ್$_1$' ನೋ.

**ಎಚ್ಚಱು$_2$** 'ಎಚ್ಚುಱ್$_2$' ನೋ.

**ಎಚ್ಚಾಡು** 'ಎಸು$_1$' ಪರಾ.

**ಎಚ್ಚಿತ** (ಗು). ಸರಿಯಾದ; ಯೋಗ್ಯವಾದ: ಬಿಡದೆ ತತ್ಪ್ರಾಯಶ್ಚಿತಂಗಳಿಂ ದುಷ್ಕೃತಂ ಕೆಡುವಂತೆನಿಸಿದ ತತ್ಪ್ರಖ್ಯಾತದಿಂ ಸುಕೃತ ಕೆಡುವಂತೆಯೆಚ್ಚಿತದ [ಪಾಠಾಂ. ಯೆಚ್ಚಿತ್ತದ] ಮಾರ್ಗಂಗಳಲ್ಲಿ ಯಾವುದಱಿಂದ ವರ್ತಮಾನಾ (ವೀಶೈಪು. ೫-೧೯-೧೮). 'ಒಚ್ಚಿತ' ಪರಾ. [?]

**ಎಚ್ಚು**, ಎಸು$_2$ (ಕ್ರಿ). ೧. ಬಳಿ; ಲೇಪಿಸು; ಸವರು; ಹಚ್ಚು: "ಎಚ್ಚು - ಅಂಜನಕ್ರಿಯಾಯಾಂ" (ಶಮಧಾ); ಅಂಜನಮನೆಚ್ಚಿ ತಾಂ ತೊನ್ನನಾಗಿ (ವಡ್ಡಾರಾ. ೧೨೨-೧೨); ಉತ್ತರಣೆಯ ಬೇರಂ ಸೈಂಧವ ಸಮನ್ವಿತಂ . . . ಜಾರಿಸಿಕೊಂಡೆಚ್ಚೆ ನೇತ್ರರೋಗಂ ಕಿಡುಗುಂ (ಲೋಕೋಪ. ೯-೬೮); ಅಂಜನಮನೆಚ್ಚಿದರ್ ಸಂತಸದಿಂ (ಗಿರಿಜ. ೧೧-೪೦); ಕಂಗಳಾಲಿಗೆ ಕಪ್ಪುರವೆಚ್ಚಿ (ಭರತ. ೧೧-೬೨). ೨. ಸರಿಪಡಿಸು; ಸಮಮಾಡು; ಅಲಂಕರಿಸು: "ಸಮಭಾವಮೆನಲೆಚ್ಚುವುದೆನಿಕ್ಕುಂ" (ಮಂಗರಾ. ೧೦೦-೨೫). **ಎಸು$_2$**: ೧. ಬಜುವಡಣ ತುಱುಚಿ ಯಾಸಡಿಯೆರನ ಫಳಂ ನಾಗಚಂಪಕಂ ನೆಲ್ಲಿಯ ಬಿತ್ತಿರಲರೆದು ಪೂಗರಸದಿಂದುರಗಂ ಕೊಂಡಂಗೆ ಕಣ್ಗೆಸಲ್ ವಿಷಮುಱಿಗುಂ (ಖಮದ. ೬-೨೬).
ಎಚ್ಚಿಕೊಳ್ = ಬಳಿದುಕೊ; ಲೇಪಿಸಿಕೊ; ಸವರಿಕೊ: ತುರಿಪದಿ ನಂಜನಮಂ ವಿಸ್ತರದಿಂದಂ ಕಣ್ಣೊಳೆಚ್ಚಿಕೊಂಡು (ಧರ್ಮಾಮೃ. ೨-೧೨೫); ಕುಚಚೂಚುಕಂಗಳೊಳ್ ಕಣ್ಗಳೊಳಂಗನೆಯೆಚ್ಚಿಕೊಳ್ವ ಕಾಡಿಗೆಯುದಿರ್ದಂತೆ (ಅರ್ಧನೇ. ೨-೨೩); ಅಂಜನಮನೆಚ್ಚಿಕೊಂಡಾಭರಣಮಂ ತೊಟ್ಟುಕೊಂಡು (ನಂಬಿರ. ೬-೩೧).
[ದೇ. ‖ ತಮಿ. ಇಱುಕು, ಇಱೈ, ಇಱೈಚು; ಮಲ. ಇಱುಕ]

**ಎಚ್ಚೋಟಿ** (ನಾ). ಸಂಪಿಗೆ ಹೂವು (ಸ್ಯಾಂಡರ್). [?]

**ಎಜ್ಜ** (ನಾ). ವೆಜ್ಜ; ರಂಧ್ರ; ತೂತು: ಈ ತೂತಿಗೆ ಸೂಜಿಕಣ್ಣು ಅಥವಾ 'ಎಜ್ಜ' ಎನ್ನುತ್ತಾರೆ (ಮುಂಬಯಿ. ೪-೧೫೪). 'ವೆಜ್ಜ' ಪರಾ.
[< ವೆಜ್ಜ]

**ಎಜ್ಜಂಗೊಳಿಸು** (ಕ್ರಿ). ರಂಧ್ರಮಾಡು; ತೂತುಮಾಡು: ಗಿಳಿ ಕುರ್ಕದ ಪಣ್ಣೆಜ್ಜಂಗೊಳಿಸದ ಮುತ್ತಳಿ ಮುಸುಂಬನಿಕ್ಕದ ಕುಸುಮಂ (ದಮಸ್ವ. ೧-೧೧೬). [ಎಜ್ಜ + ಕೊಳ್$_1$ + - ಇಸು$_3$]

**ಎಜ್ಜವಿಕ್ಕು** (ಕ್ರಿ). ಕೊರೆದು ತೂತುಮಾಡು; ರಂಧ್ರಮಾಡು: ಎಣಿಸೆ ನಖಂಗಳಿಂದುತಿಯುದಿರ್ದ ಚಿಗುರ್ ಕಡೆದೆಜ್ಜವಿಕ್ಕದೊಳ್ಗಣಿ ಸವಿ ನೋಡದಿರ್ದಭಿನವಂ ಮಧು (ಶಾಕುಂತ. ೨೫–೪೫). [ಎಜ್ಜ + ಇಕ್ಕು]

**ಎಟಕಿಸು** (ಕ್ರಿ). ಕೈಗೆ ಸಿಕ್ಕುವಂತೆ ಮಾಡು; ನಿಲುಕಿಸು: ಮಾಯಾದ ದೊಡ್ಡಮ್ಮ ಮಾವಿನ ಮರವೇರಿ ಎಟಕೀಸಿ ನೋಡ್ಯಾಳೊ ತವರೂರ (ಹುಟ್ಟಿಹ. ೪೨). [ಎಟಕು + –ಇಸು$_3$]

**ಎಟಕು, ಎಟುಕು$_1$** (ಕ್ರಿ). ೧. ಕೈಗೆ ಸಿಕ್ಕು; ನಿಲುಕು: ಅವಂಗೆ ಎಟಕೀತಲೆ ಸ್ವಾಮಿ ಎಂದು ಬೆಸಗೊಂಡಲ್ಲಿ (ವಚಶಾ. II, ೨೩೬); ಅದು ನನ್ನ ತಿಳುವಳಿಕೆಗೆ ಎಟಕದ ವಿಷಯವಾಗಿರಬಹುದು (ಬರಬಾ. ೪೩); ಅದು ನನಗೆ ಎಟಕುವುದಿಲ್ಲ (ರೂಢಿ). **ಎಟುಕು$_1$**: ೧. ದ್ರಾಕ್ಷೆ ಚಪ್ಪರ ಕಣ್ಣಿಗೆ ಕಾಣುತ್ತದೆ, ಆದರೆ ಅದು ಎಟುಕುವುದಿಲ್ಲ (ಕೊನೆಭೇ. ೨೨೦); ಮನನದ ಯುಗಯುಗದ ತಪಕೆಟುಕದ (ಮಾನಸ. ೧೮). ೨. ಸಾಕಾಗು; ಬೇಕಾದಷ್ಟು ಇರು: ಗಂಡನ ಸಂಬಳ ಹಾಲಿನ ಖರ್ಚಿಗೂ ಎಟುಕುವುದಿಲ್ಲ (ಕೊನೆಭೇ. ೧೦೨). [?]

**ಎಟುಕು$_1$** 'ಎಟಕು' ನೋ.

**ಎಟುಕು$_2$** (ನಾ). ನಿಲುಕುವಿಕೆ; ಸಿಕ್ಕುವಿಕೆ; ಹಿಡಿತ: ಗಂಟಲ ಎಟುಕಿಗೆ ಸುಲಭವಲ್ಲದ ಈ ಶೈಲಿ (ಗಾಂಧಾರಗ್ರಾಮ) (ಯಕ್ಷಬ. ೬೧); ಅಂತರಿಕ್ಷದಲ್ಲಿ ಬಂಡಿಯ ಎಟುಕಿಗೆ ಸಿಗುವಂತೆ ಉದ್ದಕ್ಕೂ ತೂಗುವರು (ಬಾಲಪ್ರ. I, ೪೦೫). [< ಎಟಕು]

**ಎಟುವ** (ನಾ). ಸಲ್ಲದವನು; ಕೆಲಸಕ್ಕೆ ಬಾರದವನು; ಎಡವಟ್ಟಾದವನು: ಹೊನ್ನಬಿಟ್ಟೆ ಹೆಣ್ಣಬಿಟ್ಟೆ ಮಣ್ಣಬಿಟ್ಟೆ ಎಂದು. . ಹಿಡಿದು ಸಂಸಾರಿಗಳಲ್ಲ ಬಿಟ್ಟು ನಿಸ್ಸಂಸಾರಿಗಳಲ್ಲ ಎರಡೂ ಅಲ್ಲದ ಎಟುವರನು ಏನೆಂಬೆನಯ್ಯಾ (ಸಿದ್ಧೇವ. ೪೬೧). 'ಎಡಗ' ಪರಾ. [?]

**ಎಟ್ಟಿ$_1$** (ನಾ). ಹಠಮಾರಿ; ಮೊಂಡ: ಹುಚ್ಚ ಮಹಮ್ಮದನು ಬರಿಯ ಶೆಟ್ಟಿಯೇ ಅಲ್ಲ; ಯಾರ ಮಾತೂ ಕೇಳದ ಎಟ್ಟಿಯೂ ಆಗಿದ್ದನು (ಮಾಧವ. I, ೧೧೬); ಏನ್ ಎಟ್ಟಿ ಹೆಂಗಸು ನೀನು (ಹೊಸಂಸಾ. ೧೪೪); ಯಾವಳೋ ಎಟ್ಟಿ ಹೆಂಗಸಿನ ಮೋಹದ ಬಲೆಗೆ ಬಿದ್ದು, ಹೆಂಡತಿ ಮಕ್ಕಳನ್ನು ನಿರ್ಲಕ್ಷಿಸಿ ಅವರನ್ನು ಬೀದಿಯಪಾಲುಮಾಡಿದ್ದ (ವಿದ್ಯಾಕಿ. ೧೨). [?]

**ಎಟ್ಟಿ$_2$** (ನಾ). ಒಂದು ಬಗೆಯ ಮೀನು: ಮಲ್ಪೆಯಲ್ಲಿ ನಿನ್ನೆ ಎಟ್ಟಿ ಮಾತ್ರ ಗತಿಯಂತೆ (ಹೊಸಕ್ಷಿ. ೪೮).
[← ತುಳು. ಎಟ್ಟಿ = ಜಲಚರ]

**ಎಟ್ಟಿ$_3$** (ಗು). ಒಣಗಿ ಬಿರುಸಾದ; ಬಂಜರಾದ. 'ಎಟ್ಟಿಕರಲು' ಪರಾ.
[< ವೆಟ್ಟಿ. / ತಮಿ. ಮಲ. ವೆಟ್ಟಿ; ತೆಲು. ವಟ್ಟಿ]

**ಎಟ್ಟಿಕರಲು** (ನಾ). ಕರಲುಭೂಮಿಯಲ್ಲಿ ಒಂದು ಬಗೆ; ನೀರನ್ನು ಜಾಗ್ರತೆ ಹೀರದ ಭೂಮಿ: ಎಟ್ಟಿಕರಲಾದರೆ ಅಂಥ ಹೊಲಕ್ಕೆ ಗೋದಿಯನ್ನು ಬಿತ್ತಬೇಕಾದರೆ ಹರಗದೆ ಬಿಟ್ಟುಬಿಡಬೇಕು (ಕೃಷಿಪ್ರ. ೮೨).
[ಎಟ್ಟಿ$_3$ + ಕರಲು$_1$]

**ಎಟ್ಟಿತನ** (ನಾ). ಹಠಮಾರಿತನ; ಮೊಂಡಾಟ; ಒರಟುತನ: ಸೊಕ್ಕು ತಾನೇ ಇಳಿದು ನನ್ನ ಸಂಗಡ ಆಕೆಯು ಎಟ್ಟಿತನ ಮಾಡುವುದನ್ನು ಬಿಟ್ಟು ಬಿಡುವಳು (ರಾಹಾರಾ. ೧೮); ಈತನ ಎಟ್ಟಿತನಕ್ಕೆ ಎಣೆಯಿಲ್ಲ (ತುಳಸಿ. ೮೬). [ಎಟ್ಟಿ$_1$ + –ತನ]

**ಎಟ್ಟಿನುಡಿ** (ನಾ). ಹಠದ ಮಾತು; ಒರಟು ಮಾತು; ಸೊಕ್ಕಿನ ಮಾತು: ಜನರು ಎಲ್ಲ ಘಟನೆಗಳನ್ನು ಸತ್ಯವಾಗಿ ಹೇಳಿದರು – ಬಲರಾಜನ ಎಟ್ಟಿನುಡಿಗಳನ್ನು ಮಾತ್ರ ಬಚ್ಚಿಟ್ಟುಕೊಂಡರು (ಪ್ರೇಮಾಶ್ರ. ೬೮).
[ಎಟ್ಟಿ$_1$ + ನುಡಿ$_2$]

**ಎಟ್ಟಿಮನಸ್ಸು** (ನಾ). ಹಠಮಾರಿತನ; ಒರಟು ಮನಸ್ಸು: ರಾಮರಾಜನ ಎಟ್ಟಿಮನಸ್ಸು ಮಾರ್ಜೀನೆಯ ಸದ್ಬೋಧಕ್ಕೆ ಬಗ್ಗಲಿಲ್ಲ (ಕನ್ನಡಿ. ೨೧). [ಎಟ್ಟಿ$_1$ + ಮನಸ್ಸು]

**ಎಟ್ಟಿಮರ** (ನಾ). ಒಂದು ಬಗೆಯ ಮರ (?): ಮತ್ತಂ ಮೂಢಜನಂಗಳೆಟ್ಟಿ [ಪಾಠಾಂ. ಟ್ಟ] ಮರಂಗಳುಮನೊಟ್ಟದಕ್ಕೆಯಿವುಗಳುಮಂ ನಂಜುಗುಡ್ಡಂಗಳುಮಂ ದೈವಮೆಂದದಕ್ಕೆ ಒಂದೊಂದು ಪೆಸರನಿಟ್ಟು ಕೊಂಡಾಡಿ (ಶ್ರಾವಕಾ. ೧೦೫–೧೫). [ಎಟ್ಟಿ ? + ಮರ$_1$]

**ಎಟ್ಟಿಸು** (ಕ್ರಿ). = ಎಟಕಿಸು (ದಕ. ೬). [ಎಟ್ಟು$_1$ + –ಇಸು$_3$]

**ಎಟ್ಟು$_1$** (ಕ್ರಿ). (ಎತ್ತರದಲ್ಲಿರುವ ಪದಾರ್ಥವು) ನಿಲುಕು; ಎಟುಕು: "ಎಟ್ಟು – ಊರ್ಧ್ವಗತವಸ್ತುಗ್ರಹಣೇ" (ಶಮಧಾ); ಮರ್ಕಟನ ಲಂಘನ ಚಿತ್ತಕ್ಕೆಯೆಟ್ಟುದುದನೊಲ್ಲದಾಗಿ (ಅವರೀ. ೩೬); ಶೂನ್ಯದಲ್ಲಿ ವಿಶ್ರಮಿಸಿ ಕಂಡಹೆನೆಂದೆಡೆ ಕಂಗಳಿಗೆಟ್ಟದು ಕೈಮುಟ್ಟದು (ತುಜುಗಾ. ೪೧); ಕಣ್ಣೆಟ್ಟುವಷ್ಟು ಜಕ್ಕೊಳೆತ್ತ ನೋಡಿದರತ್ತ ಹಣ್ಣಿದಾನೆಗಳು ತೇಜಿಗಳು (ಭರಚ. ೩೩–೮); ಸೂರ್ಯಮಂಡಲವ ನಿಚ್ಚಣಿಕೆಯಿಂದೆಟ್ಟಬಹುದೆ (ಷಶಿಲ. ೪–೯೬).

**ಎಟ್ಟಿಬರು** = ಕೈಗೆ ಸಿಕ್ಕು, —ನಿಲುಕು: ನಮ್ಮಂತಹ ಕೌಟಲ್ಯ ವಿಶಿಷ್ಟರಿಗೆ ಎಟ್ಟಬಾರದ ಒಗ್ಗದ ಅಪಥ್ಯವಾಗದಿರದ ಗಗನಕುಸುಮದ ಸೌಂದರ್ಯ (ಬೆಟ್ಟಅ. ೪೫–೨೦). **ಎಟ್ಟಿಹಿಡಿ** = ಸಿಲುಕಿಸಿ ಹಿಡಿ: ಮಹಾರಾಜನ ತಣ್ಣಡಿಗಳನ್ನೆಟ್ಟಿ ಹಿಡಿದು (ವಿಗಡ. ೨೬–೧೦).
[ದೇ. ‖ ತಮಿ. ಎಟ್ಟು]

**ಎಟ್ಟು$_2$** 'ಏಟು$_1$' ನೋ.

**ಎಟ್ಟು$_3$** 'ಎಷ್ಟು' ನೋ.

**ಎಟ್ಟುಗೆ** (ನಾ). ಕೈಬಟ್ಟಲು: "ಕೈವಟ್ಟಲೆಟ್ಟುಗೆ" (ರನ್ನಕಂ. ೧೦).
[?]

**ಎಟ್ಟಿಗ** (ನಾ). ಒಂದು ಬಗೆಯ ಮರ (ವೈಔಗಿ. ೪–೪೦). [?]

**ಎಟ್ಟಿಹಾಲು** (ನಾ). ಗಟ್ಟಿಯಾದ ಹಾಲು; ಕೆನೆಹಾಲು (?): ಬಟ್ಟಹಾಲು, ಚಿಲುಹಾಲು, ಕೆನೆಹಾಲು, ಎಟ್ಟಿಹಾಲು, ತನಿವಾಲು ಮುಂತಾದ ತರತರದ ಹಾಲುಗಳನ್ನು ಬಟ್ಟಲು ಬಟ್ಟಲು ತುಂಬಿ ತಂದು ಎಡೆಮಾಡಿದಳು (ಮಾಮಲ್ಲಿ. ೫೪).
[ಎಟ್ಟಿ$_0$ + ಹಾಲು (< ಪಾಲ್$_1$). P ತಮಿ. ಏಡು = ಕೆನೆ]

**ಎಡ$_1$** (ನಾ). ೧. ಬಲಭಾಗವಲ್ಲದ್ದು; ವಾಮಭಾಗ: "ವಾಮಂ, ಸವ್ಯಂ— ಈ ೨ ಎಡಂ" (ಹಲಾಯು. ೧೨೪–೬೧); ಮಲಯ ಸುಂದರನ್ ಬಲದ ದೆಸೆಯೊಳ್ ಮಲಯಾವತಿಗೆ ಪೋಪ ದಾಯಮನೆಡದ ದೆಸೆಯೊಳ್ ಪದ್ಮಾವತಿಗೆ ಪೋಪ ದಾಯಮನಿತ್ತು (ಪದ್ಮಾರಾ. ೩೬–೨೩); ಆಗಸುತೆ ದೇವನ ಬಲದಿಂದಮೆಡಕೆ ಬಂದಳ್ (ಗಿರಿಕ. ೧೦–೯೬); ಎಡದೆಡೆವೆರಲ ಸೆಳ್ಪುಗುರಿಂದೆ ಕಂಬನಿಗಡಣವ ಮೊಗೆದು ಸಿಂಪಿಸುತ (ಮೋಹತ. ೯–೮); ರಸ್ತೆಯ ಎಡದಲ್ಲಿಯೇ ನಡೆಯಿರಿ (ರೂಢಿ). ೨. ಸುಮಾರಾದದ್ದು; ಕೀಳಾದದ್ದು: ಹಿಂದೂಸ್ಥಾನದಲ್ಲಿಯೂ ಹತ್ತಿ ಬೇಕಾದಷ್ಟು ಬೆಳೆಯುತ್ತದೆ. ಆದರೆ ಅದು ಅಮೇರಿಕದ ಹತ್ತಿಗಿಂತಲೂ ಎಡ (ಮುಂಬಯಿ. ೪–೨೬); ಆ ಕುದುರೆ ಇದಕ್ಕಿಂತ ಎಡ (ರೂಢಿ).

**ಎಡಕಿಕ್ಕು** = ಎಡಕ್ಕೆ ಬಿಟ್ಟು ನಡೆ: ಪಟ್ಟಣದ ಪಡಿತಳಿಸಿ ಪಾರಾವಾರದೋರಣದ ಬಟ್ಟೆವಿಡಿದೆಡಕಿಕ್ಕಿ [ಪಾಠಾಂ. ವಕ್ಕಿ] ಮೇರುವಿನಿಟ್ಟೆಡೆ [ಪಾಠಾಂ. ಟ್ಟಣಿ]ಯ ಜನಪದದ ರಾಯರ ಕಟ್ಟೆ ಕೇಳುತ ಕಂಡಮ್ಮೆಯಲಿ ಹರಿದುದಗಲದಲಿ (ತೊರರಾ. ೪–೯–೨೩).

[ದೇ. ‖ ತಮಿ. ಇಡ, ಇಡೈ; ಮಲ. ಇಡ, ಎಡ; ತುಳು. ಎಡ, ಯಡ; ಕೊಡ. ಏಡತೆ; ತೆಲು. ಎಡ]

**ಎಡ್ಡ₂** (ನಾ). ಎಳೆಯದು; ಮರಿ. 'ಎಡನಾಯಿ' ಪರಾ.
[?. / ತೆಲು. ಏಡ = ಏಳೆಯದಾದ; ಮೃದುವಾದ]

**ಎಡ-₃** (ಸಪೂರೂ) ಸ್ಥಳ ಎಂಬ ಅರ್ಥದಲ್ಲಿ ಎಡ ಎಂಬ ರೂಪ ಪೂರ್ವಪದದಲ್ಲಿ ಪ್ರಯೋಗವಾಗಿರುವ ಸಮಾಸ ಪದಗಳಿಗೆಲ್ಲಾ ಎಡೆ-₇ ಎಂಬ ರೂಪ ಪೂರ್ವಪದವಾಗಿ ಪ್ರಯೋಗವಾಗಿರುವ ಸಮಾಸಪದಗಳನ್ನು ನೋಡಿ.

**ಎಡಂಗುಡು** (ಕ್ರಿ). ಸೊಗಸನ್ನುಂಟುಮಾಡು; ಚೆಲುವಾಗಿಸು; "ಒಪ್ಪು, ಪೊರ್ದುಗೆಯಾಗು, ಮನೋಹರವಾಗು" (ಪ್ರಭಣ್ಣ): ಜಾಣ್ಗೆ ನಯನುಡಿಯೆಡಂಗುಡೆ (ರೇವಣ. ೮-೪).
[ಎಡ್ಡ₀ (< ಎಡ್ಡ) + ಕುಡು₁ (< ಕೊಡು)]

**ಎಡಂಬೊಡು**, ಎಡದೊಡು (ಕ್ರಿ). ಎಡಭಾಗದಲ್ಲಿ ಧರಿಸು, —ಹಾಕು: ಜನ್ನಿವಾರವನೆಡಂದೊಡಲು [ಪಾ ಠಾಂ. ಎಡದೊಡಲು] ಪ್ರಾಚೀನಮುದು (ಮಂಗರಾ. ೬೫-೮). **ಎಡದೊಡು**: ಜನ್ನವಿರಮಂ . . . ಎಡದೊಡುವುದು ಪ್ರಾಚೀನಾವೀತಮೆಂಬುದು (ಹಲಾಯು. ೬೭-೨೫೩).
[ಎಡ್ಡ₂ + ತೊಡು₁]

**ಎಡಂಪಿಸು**, ಎಡಹಿಸು (ಕ್ರಿ). ಎಡವಿ ಬೀಳುವಂತೆ ಮಾಡು: "ಕಿಂ ನಸ್ಖಲಯತಿ = ಏನೆಡಂಪಿಸದೆ [ಪಾಠಾಂ. ಎಡಹಿಸದೆ] (ತಡೆಯದೆ)" (ನೀತಿವಾ. ೨೯-೪೮). **ಎಡಹಿಸು**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಎಡಂಪು (< ಎಡವು) + -ಇಸು₃]

**ಎಡಂಪು** 'ಎಡವು' ನೋ.

**ಎಡಂಬಡು** (ನಾ). ಅಸಮಾಧಾನ; ಎಡವಟ್ಟು: ಕಡುಗೂರ್ಪಿಲ್ಲದ ಕರವಾಳ್ ಕಡುಪಿಲ್ಲದ ಕುದುರೆ ಗಾಡಿಯಿಲ್ಲದ ಬೆಲೆವೆಣ್ ನಡೆಯಿಲ್ಲದ ಕರ್ತೆ ಮನಕ್ಕೆ [ಪಾಠಾಂ. ಕ್ಕೊ]ಡಂಬಡಂ ಮಾಳ್ಕುಮರ್ಥಿಯಂ ಮಾಡುಗುಮೇ (ಅಜಿಪು. ೬-೯೬); ಪಡೆಯಲ್ ಬಾರದ ಕುಲಮಂ ಪಡೆದು ಬಟಿಕ್ಕದನೆ ನೀರೊಳರ್ದಿದೆ ನೀನುಂ ಪಡೆವೈ ಪ್ರಾಯಶ್ಚಿತ್ತಮನೆಡಂಬಡಿವರಿಂದಮಿಂದು ನಿನಗಾದುದಜಂ (ಸುಕುಮಾ. ೪-೩೨); ನಡೆವ ನೆಗಳ್ತೆ ಗಾಂಪು ಪತಿಭಕ್ತಿ ಕೆಲಕುಪಚಾರವೊಳ್ಪೆಡಂಬಡು ಚದುರೆಕ್ಕಸಕ್ಕಮಜಿತಂ ಮೊಲಗರ್ತ್ತಲೆಯಾಗೆ (ಎಇ. XII, ೨೮೧-೧೮೨; 1077); ತೊದಳಿಲ್ಲದೊಂದೆ ನುಡಿ ಲೋಭದೊಳೊಂದದ ಮನಮೆಡಂಬಡಿಲ್ಲದ ಚರಿತಂ ಮದಮಿಲ್ಲದ ಸಂಪದಮೆಂಬಿದು ಸಾಜಂ ತೂದಪಿಳ್ಳೆದಂಡಾಧಿಪನೊಳ್ (ಎಕ. VII, ಹೊನ್ನಾಳಿ. ೪೫-೯; 1175); "ವಾಮತೆ, ದೋಷ" (ಶಾಪಮಂ ಕೋಶ); ವಸುದೇವಂಗೆಮೆಡಂಬಡಪ್ಪ ಜನದಿಂ ಪೋಪಂತುಟಾಯಕ್ಕಟಾ (ಬಂಹರಿ. ೨-೯).
[ಎಡ ? + ಪಡು₁]

**ಎಡಂಬಡೆ** 'ಎಡ್ಡಂಬಡೆ' ನೋ.

**ಎಡಂಮಾಡು** (ಕ್ರಿ). ಕೀಳುಮಾಡು; ಕಡೆಗಣಿಸು: ಪದ್ಮಸದ್ಮನ ಮೊಗಸಿರಿಯನೆಡವುತೆಡಂಮಾಡೆ (ರಾಮಾಶ್ವ. ೧೩೯-೧೧).
[ಎಡ್ಡ₁ + ಮಾಡು₁]

**ಎಡಕು** (ನಾ). ತೊಂದರೆ; ಕಷ್ಟ; ಉಭಯಸಂಕಟ (ಸ್ಯಾಂಡರ್).
[?]

**ಎಡಗ** (ನಾ). ಸಲ್ಲದವನು; ಕೆಲಸಕ್ಕೆ ಬಾರದವನು; ಎಡವಟ್ಟಾದವನು; ಒರಟ: "ಎಡಗನೆನೆ ಸಲ್ಲದವ" (ಕಬ್ಬಿಕೈ. ೩೬); ಗ ಪ್ರತ್ಯಯಕ್ಕೆ:—ಸಟಿಗಂ, ನವಸಿಗಂ, ಎಡಗಂ (ಶಮದ. ೨೦೧ ಪ್ರಯೋ); ಬೇಂಟೆಯ ಬಿನದದೊಳೆಡಗನನಾಂ ಕಂಡೆನೆಂದು ಕಡುಮುಳಿಸಿಂದಂ ಬಿಡೆ ನಾಯ್ಗಳಂ (ಪು ಣ್ಯಾ ಸ್ರ. ೩-೫೫); ತನ್ನರಮನೆಯಲ್ಲಿ ತಾನೇ ಎಡಗ (ಮಂತ್ರಶ. ೧೯೯-೧೪). 'ಎಟುವ' ಪರಾ.
[ಎಡ್ಡ₂ + -ಗ₃. / ತಮಿ. ಇಡಕ್ಕನ್ = ಒರಟ, ಮರ್ಯಾದೆಗೆಟ್ಟವನು]

**ಎಡಗಡೆ** (ನಾ). ಎಡದ ಕಡೆ; ವಾಮಭಾಗ: ತೋಜಿತು ವಾಯಸನೆಡಗಡೆಯೆಡದಿಂದೆ ಹಾಜಿತು ಹಂಗ ದಕ್ಷಿಣಕೆ (ಮೋಹತ. ೬-೨೫); ಎಡಗಡೆಯೊಳಧಿಕ ತರ ವಿಭವದಿಂ ನಾರಿಯರ ಗಡಣದಿಂ ಗಿರಿಜೆ ರಂಜಿಸಲು (ಚಬಪು. ೨-೨೧). 'ಎಡಗಟಿ' ಪರಾ. [ಎಡ್ಡ₁ + ಕಡೆ₃]

**ಎಡಗಣ್** (ನಾ). ಎಡಭಾಗದ ಕಣ್ಣು; ವಾಮಾಕ್ಷಿ: ಎಡಗಣ್ಪೊಳೆಚ್ಚ ದಂಜನಮೊಡಂಬಡೆನೆ ಬಲದ ಕಣ್ಪೊಳೆಚ್ಚದೆ ಕುಡುಪಂ ಪಿಡಿದು (ಶಾಂತಿಪು. ೬-೮); ಕಪ್ಪುಗೊರಳನ ಕಣ್ಪೊಳಗೆ ಕಣ್ಣಪ್ಪದೇವನು ತನ್ನ ನೇತ್ರವನೊಪ್ಪಲರ್ಪಿಸಲೊಡನೆ . . . ಎಡಗಣ್ಣಪ್ಪ ಘೋರನೆ ಕುಪ್ಪಳಿಸುತಂ (ಬಸವು. ೧೮-೬೨). [ಎಡ್ಡ₁ + ಕಣ್]

**ಎಡಗಯ್** 'ಎಡಗೆಯ್' ನೋ.

**ಎಡಗಯ್ಯ** (ನಾ). ೧. ಎಡಗೈಯಿಂದಲೇ ಕೆಲಸ ಕಾರ್ಯಗಳನ್ನು ಮಾಡುವವನು; ಎಡಚ. ೨. ಮಾದಿಗರವನು. ೩. ಸವ್ಯಸಾಚಿ; ಒಂದು ಬಿರುದು: ಚತುಷಷ್ಟಿಕಳಾಕಳಿತ ಸರ್ವಜ್ಞನಪರಿಮಿತ ದಾನ ವಿನೋದಶೀಳ ಎಡಗಯ್ಯ ಸೇನಾನಾಯಕ ಕಾಚಿದೇವ (ಎಕ. XIV, ನಾಗಮಂ. ೧೪೦-೨೪; 1225).
[ಎಡಗಯ್ (< ಎಡಗೆಯ್) + -ಅ₇]

**ಎಡಗಲಿಸು** (ಕ್ರಿ). ಎಡಕ್ಕೆ ಸರಿಸು; ಬದಿಗೊತ್ತು; ಪಕ್ಕಕ್ಕೆ ಬಿಟ್ಟುಕೊ: ಅಂತು ತಮ್ಮ ಮನದೊಳೊಡಂಬಟ್ಟಂತೆ ಮನಮನೆಡಗಲಿಸಿ ಪರಿವ ಜಾತ್ಯಶ್ವಂಗಳೆಲ್ಲಮಟಿಗಾಳೆಗದೊಳ್ ಸತ್ತೊಡೆ (ಪಂಪಭಾ. ೮-೯೪ ವ); ವಿಂಧ್ಯಾಚಲಮನೆಡಗಲಿಸಿದಗಸ್ತ್ಯನಂತೆ ಭೀಮಸೇನಂ ತಡೆಯದೆಡಗಲಿಸಿ (ಪಂಪಭಾ. ೧೨-೬೫ ವ); ದುರ್ಯೋಧನ ದುಶ್ಶಾಸನರಿರ್ವರುಮುಟಿಯುಟಿದ ಕೌರವರೆಲ್ಲರುಮಂ ಜೀರಗೆಯೊಕ್ಕಲ್ಮಾಡಿ ಕೆಡೆದ ಪೆಣಂಗಳನೆಡಗಲಿಸಿ ಬೆಳ್ಪೋಟಮೋಡಿ ಜವಂಗೆಟ್ಟು (ಪಂಪಭಾ. ೧೨-೧೪೫ ವ); ಕಿಜುವೇಂಟೆಯ ನಾಯ್ಗಳಿಂದಮಟ್ಟುಪಟ್ಟ ಪೆಣ್ಪೊಲನಂತೆ ಭಯಮನೆಡಗಲಿಸಿ ಬೆಳ್ಪೋಟಮೋಡಿ (ಶಾಂತಿಪು. ೬-೧೧ ವ); ಕೋಪಾಂಧರ್ ಜಡಿದರ್ ಪತಿಯ ಕಬಂಧಮನೆಡಗಲಿಸಿ ಪೋಪದುರ್ಯೋಧನನಂ (ಗದಾಯು. ೪-೧೬); ಕಡಲನೆಡಗಲಿಸಿ ಶೇಷನ ಪೆಡೆಯೊಳ್ ದಿಕ್ಕುಂಭಿಕುಂಭದೊಳ್ ಸುರಸಭೆಯೊಳ್ ಬಿಡದೆ ಕಲಿಭಾಯಿದೇವನ ಕೊಡವೆನಿಸಿದ ಕೀರ್ತಿ ನರ್ತಿಪಳ್ ನಲವಿಂದಂ (ಶಾಪಮಂ. ೬೧-೩೪೩; 1123); ಗಾಳಿಗೆ ಗಜಿಮೂಡಿದಂತೆಯುಂ ಮನಮನೆಡಗಲಿಸಿದಂತೆಯುಮಾಗಿ ಪಿರಿದಂತರಮಂ ಪೋಗಿ (ಪಂಚತಂ. ೧೧೫-೧೬); ನಿಲಿಸೆನುತ ನೃಪನೊಜಲೆ ಕವಿದೆಡ[ಪಾಠಾಂ. ಡೆ]ಗಲಿಸಿ ಹಿಡಿದನು ಭೀಮ (ಕುವ್ಯಾದ್ರೋ. ೧೯-೨೬). ℙ ಎಡಗಲಸು, ಎಡಗಲಿಸು, ಎಡೆಗಲಸು, ಎಡೆಗಲಿಸು – ಈ ನಾಲ್ಕು ರೂಪಗಳು ದೊರೆಯುತ್ತವೆ. ಎಡಗಲಸು ಎಡಗಲಿಸು ಎಂಬುವನ್ನು ಒಂದು ಗುಂಪಾಗಿಯೂ ಎಡೆಗಲಸು, ಎಡೆಗಲಿಸು ಎಂಬುವನ್ನು ಇನ್ನೊಂದು ಗುಂಪಾಗಿಯೂ ಪರಿಗಣಿಸಿ, ಎಡಗಲಿಸು ಎಂಬುದಕ್ಕೆ ಎಡಕ್ಕೆ ಅಗಲಿಸು = ಬದಿಗೊತ್ತು, ಪಕ್ಕಕ್ಕೆ ಬಿಟ್ಟುಕೊ ಎಂದೂ, ಎಡೆಗಲಸು ಎಂಬುದಕ್ಕೆ ನಡುವೆ ಸೇರಿಸು, ಬೆರೆ ಎಂದೂ ಅರ್ಥ ಮಾಡಿದೆ. ಇಲ್ಲಿ ಕಾಣುವ ಕಲಸು ಕಲಿಸು ಎಂಬ ರೂಪಗಳಲ್ಲಿ ಯಾವುದು ಸರಿ ಎಂಬುದನ್ನು ನಿಶ್ಚಯಿಸುವುದು ಕಷ್ಟ.
[ಎಡ್ಡ₁ + ಕಲಿಸು]

**ಎಡಗಟಿ** (ನಾ). ಎಡಗಡೆ; ಎಡಭಾಗ: ಎಡಗಟಿ [ಪಾಠಾಂ. ಎಡೆಗರೆ] ದೋಜುವ ಸುಳಿಪಲ್ಲು ಪೊಳೆವ ಪೆರ್ಜಡೆಯಲರ್ಮಾಲೆ ಹೊಂಗೆಜ್ಜೆ ಬಿಡಯವಿಲ್ಲದ ಹೊನ್ನಂಡೆಗಾತಿಯರು ಬೆಂಗಡೆಯ ಸಾರಿದರು ರುಕ್ಮಿಣಿಯ (ಮೋಹತ. ೧೪-೬೧). [ಎಡ್ಡ₁ + ಕಜಿ (< ಕಡೆ)]

**ಎಡಗಾಲ್** (ನಾ). ಎಡಭಾಗದ ಕಾಲು; ವಾಮಪಾದ: ಘುಳು ಘುಳಿಪ ಪೊಸತೊಡರನೆಡಗಾಲೊಳೊಲಿದಿಟ್ಟು (ಇಹರ. ದೇ. ೪೦–೧೦); ಗದೆಯ ಕೊಂಡಪ್ಪಳಿಸಿದನು ಹೊಙಕ್ಕೆಯಲರಿದಿಟ್ಟಳಿಸಿದರನೆಡಗಾಲಲೊದೆದನು (ಕು ವ್ಯಾ ಕ. ೧೩–೧೭); ಅವ ಬಿಂಕವೊ ಎಡಗಾಲ ಗದ್ದುಗೆಯ ಮೇಲೋವಿ ಮಡಿದು ಮತ್ತೆ ಕೆಳಗೆ (ಭರಜ. ೧–೩೧). [ಎಡ$_1$ + ಕಾಲ್$_1$]

**ಎಡಗಾಲ** (ನಾ). ಕಾಲವಲ್ಲದ ಕಾಲ; ಅಕಾಲ: ಎಡಗಾಲದಲ್ಲಿ ಮಳೆ ಬಂದು ಬಹಳ ತೊಂದರೆ ಆಯಿತು (ರೂಢಿ).

[ಎಡ$_0$ (< ಎಡ$_3$) + ಕಾಲ$_1$]

**ಎಡಗಾಸೆ** (ನಾ). ಎಡದ ಕಡೆಗೆ ಹಾಕಿರುವ ಕಚ್ಚೆ: ನಂಜಾನಗೂಡಲ್ಲಿ ಸಂಬಳದ ಸೂಳೇರು ಕಂಬಿಸೀರೆಯ ಎಡಗಾಸೆ ಹಾಕ್ಕೊಂಡು ನಂಜುಂಡಗಾರ್ತಿ ಬೆಳಗ್ಯಾರೊ (ಹಳ್ಳಿಯ. ೩೭). [ಎಡ$_1$ + ಕಾಸೆ]

**ಎಡಗುಳ್ಳಿ** (ನಾ). (?): ಬಳಲದೆ ಪೊತ್ತು ಕಲ್ಲನುಲುವಂಗೆಡೆಯಾದ ಮಹಾಪ್ರತಾಪಿ ನೀಂ ಪೆಳಕನಡುರ್ಕು ಕೊಂದ ಕಡು ಬಲ್ಲಣಿ ಮೂಣ್ಡೆರದಣ್ಮ ಬಂದು ನಾಯ್ಕಾಳಲೆಯ ಮೇಲೆ ಪಟ್ಟ ಕಡುವೀರ ಕುಟುಂಬದಿನ ಗಳಿಕ್ಕೆ ಕೈಗಳಿದಿರೆ ಶಂಖಮೊ ಮ ಹಾ ತ್ಮ್ಯ ರಣಾಗ್ರದೊಳೆಡಗುಳ್ಳಿಯೋ (ಬಂಹರಿ. ೭–೩೩). [?]

**ಎಡಗೆಯ್**, **ಎಡಗಯ್**, ಎಡಗೈ (ನಾ). ಎಡಭಾಗದ ಕೈ; ವಾಮಹಸ್ತ: ದಿವ್ಯಚಾಪಕ್ಕೆ ಪೊಡವಟ್ಟವನವಯವದಿನೆಡಗೆಯ್ಯೊಳೆತ್ತಿಕೊಂಡು (ಪಂಪ ಭಾ. ೩–೬೨ ವ); ಎಡಗೆಯ್ಯೊಳುಂಬ ಕುಂಚಂ ಪಿಡಿದುಣ್ಣದೆ ಬಿಟ್ಟೊಡೆಂಜಲಂ ತಿಂಪಾತಂ (ಸಮುಪ ೧೧–೬೯); ಕುಸುಮಕೋದಂಡವನೆಡಗೆಯ್ಯೊಳಾಂತು (ಮೋಹತ. ೭–೩೨); ಬಲಗೈಯೊಳೊಪ್ಪಿರೆ ವನಜವೆಡಗೆಯ್ಯ ಮೆಱೆದಿರೆ ಮಾತುಳಂಗ ಫಲ (ಸಾಳ್ವಭಾ. ೧–೯). **ಎಡಗಯ್**: ಕಾಯದೆ ಕಾಮನಾರ್ದಿಸೆ ತೊವಲ್ವಿಡಿವಂತೆಡಗಯ್ಯೊಳೊಪ್ಪೆ ತೋರ್ಪಾಯೆಲೆ (ಪಂಪ ಭಾ. ೪–೩೭); ನಿರ್ಮಲತರ ಮಣಿಬದ್ಧಾವನೀಭಾಗಮಂ ತನ್ನೆಡಗಯ್ಯಿಂ ಮೆಲ್ಲನೊತ್ತುತ್ತೆ (ಕಾದಂ. ಉ. ೨೩೪); ಎಡಗಯ್ಯೊಳೆ ಕೊಟ್ಟರ್ಥದಂತೆ (ಧರ್ಮಾಮೃ. ೮–೧೪೬ ಅಡಿಟ); ತಡವೇನು ತಾ ವೀಳೆಯವನೆನುತೆಡಗಯ್ಯನರಳಿಚುತ (ಕು ವ್ಯಾ ದ್ರೋ. ೧೫–೪೫). **ಎಡಗೈ**: ಅಕ್ಕರಮಂ ಬಲಗೈಯೊಳು ಲೆಕ್ಕಮನೆಡಗಯ್ಯೊಳಭವನನುಲೋಮವಿಲೋಮಕ್ಕೆ ನೆಲೆಯಾಗಿ ಮಾಡಿ (ಸಮುಪ. ೨–೧೪); ಎಡಗೈಯಿಂ ನೀವಿಯಂ ಸಾರ್ಚುತುಂ (ಕುಸುಮಾ. ೪–೩೩); ಎಡಗೈದುದಿಯಲಾ ಮುಂಜೆಱಗ ಸಂವರಿಸುತ್ತ (ತೊರರಾ. ೩–೪–೮).

ಎಡಗೈಯವ = ಎಡಗೈ ಜಾತಿಯವನು; ಮಾದಿಗ: ಯಿದಕ್ಕೆ ತಪ್ಪಿದರೆ ಬಲಗಯಡಗೆ[ಗೈ]ಯವನ ಯಂಜಲಿಗೆ ಆಶೆ ಮಾಡಿದಾಗೆ (ಎಕ. IX, ಆನೇಕ. ೭೧–೬; 1600). [ಎಡ$_1$ + ಕೆಯ್$_2$]

**ಎಡಗೆಯ್ಜಾತಿ** (ನಾ). ಮಾದಿಗ ಜಾತಿ. [ಎಡಗೆಯ್ + ಜಾತಿ]

**ಎಡಗೆಲ** (ನಾ). ಎಡಭಾಗ: ಬಂದೆಡಗೆಲದಾಸನದೊಳು ಕುಳ್ಳಿರ್ದು (ಶ್ರೀಪಾಲ. ೨–೬೪). [ಎಡ$_1$ + ಕೆಲ$_1$]

**ಎಡಗೈ** 'ಎಡಗೆಯ್' ನೋ.

**ಎಡಗೈಕುಲ** (ನಾ). = ಎಡಗೆಯ್ಜಾತಿ: ಹಲವು ಎಡಗೈಕುಲದವರು ಮುಸಲ್ಮಾನರೂ ಕ್ರಿಸ್ತಿಗಳೂ ಆಗಲಿಲ್ಲವೆ? (ಯಕ್ಷಪ್ರ. ೧೦೪).

[ಎಡಗೈ (< ಎಡಗೆಯ್) + ಕುಲ]

**ಎಡಗೋಲು** (ನಾ). ೧. ನೊಗದ ಎಡಭಾಗ: ನೋ[ನೊ]ಗದ ಉಭಯದ ಕೊನೆಯಲ್ಲಿ ನೆಲೆಗೊಳಿಸಿ ಎಡಗೋಲಿನಲ್ಲಿ ಕಾರಿಯ ಹೂಡಿ (ಕೃಷಿ ಪ್ರ. ೩೫೫); ಎತ್ತು ಎಡಗೋಲಾಗಿ ಎಳೆಯುತ್ತದೆ (ರೂಢಿ). ೨. ಎಡಭಾಗಕ್ಕೆ ಕಟ್ಟುವ ಎತ್ತು: ಈ ಎತ್ತು ಎಡಗೋಲು (ರೂಢಿ).

[ಎಡ$_1$ + ಕೋಲು$_1$ (< ಕೋಲ್$_1$)]

**ಎಡಚ** (ನಾ). ೧. ಎಡಗೈಯನ್ನೇ ಉಪಯೋಗಿಸಿ ಕೆಲಸ ಮಾಡುವವನು; ಲೊಡ್ಡ; ರೊಡ್ಡ; "ಡೆಮ್ಮ" (ಕರಾ). ೨. ಅಲ್ಪ; ಕೀಳ: ಇನ್ದುನಾಳೆಯೆ ಬಾಯೆಂಬೆಡಚರನೆ ಜಡಿದು (ಎಕ. VIII, ನಗರ. ೩೮–೪೩; 1077); ಮೃಡನಿಟ್ಟುದಂ ಸುಡಲುಡಿಯಲಡಿಯಿಡಿಸಲೆಡಚನಾಯ್ತನ್ನಿಂದ್ರದಡಿಗ ಪವನರ್ಗೆಂದ ನಿಗಮಾದಿಯಂ (ಸಾಸಂಚ. ೨–೧೮೫). ೩. (?); "ಶನಿ" (ಪದ್ಮರಾ. ಕೋಶ); ಶಿವಭಕ್ತರಡಿಯನರ್ಚಿಪ ಬುದ್ಧಿಯೊಡನಮಮ ಬುದ್ಧಿಗಲ್ತೆಡಚ ಜವಕಾವರಂ ಕೆಡಿಪಾಟದೊಡನಾಟಮಂ ಕಲ್ತದೇಂ ಮೆಱೆದನೋ (ಪದ್ಮರಾ. ೪–೩೩) [< ಎಡಚು$_2$ + –ಅ$_7$]

**ಎಡಚತನ** (ನಾ). ಎಡಗೈಯ್ಯನ್ನೇ ಉಪಯೋಗಿಸುವಿಕೆ; ಲೊಡ್ಡತನ: ಜಿನೇಶ್ವರನಿಪ್ಪನೊಳಗೆ ಪೊಱಗಡೆಯ ರಂಗದೊಳ್ ಲಿಂಗಮಡಚತನದಿಂದಿರ್ಕುಂ (ಸಮಪ. ೨–೭೩). [ಎಡಚ + –ತನ]

**ಎಡಚಾರಿ** (ನಾ). [ನಾಟ್ಯ] ಒಂದು ಬಗೆಯ ನರ್ತನ; ಎಡದಿಂದ ಬಲಕ್ಕೆ ಸುತ್ತುವುದು: ಷೋಡಶವನಿತೆಯರೆಡಚಾರಿ ಬಲಚಾರಿಗೂಡಿ ತಿರುಗಿದರೊಮ್ಮೊಮ್ಮೆ (ಭರಜ. ೧೩–೧೨೨).

[ಎಡ$_2$ + ಚಾರಿ$_3$. / ತಮಿ. ಇಡಚಾರಿ=ಎಡದಿಂದ ಬಲಕ್ಕೆ ಸುತ್ತುವುದು]

**ಎಡಚಿಬಿಡಚಿ** (ಅ). (ಉಕ) ಆಗೊಮ್ಮೆ ಈಗೊಮ್ಮೆ: ಶ್ಯಾಮರಾಯನ ಖಾನ–ಪೀನಾ ರುಚಿ ಅಷ್ಟು ಅವಾಥವ್ಯವಾಗಿ ಬೆಳೆದಿರಲಿಲ್ಲ. ಆದರೆ ಅದರ ಸವಯ್ ಇತ್ತು. ಎಡಚಿಬಿಡಚಿ ಬೇಕಾಗುತ್ತಿತ್ತು (ದೀಪಹ. II, ೧೩೩). [ಎಡಚಿ$_0$ + ಬಿಡಚಿ$_0$]

**ಎಡಚಿಲ್** (ಗು). ಮಧ್ಯೆ ಹುಟ್ಟಿದ; ಎರಡನೆಯ (ಮಗ ಅಥವಾ ಮಗಳು) (ದಕ.ಕ). [ಎಡ$_2$ ? + ಚಿಲ್ ?]

**ಎಡಚು$_1$** (ನಾ). (ಉಕ) ತೊಂದರೆ; ಅನಾನುಕೂಲ; ಅಡ್ಡಿ; ಆತಂಕ: ಈಗ ಜೀವನದ ಬಗ್ಗೆ, ಭವಿಷ್ಯತ್ತಿನ ಬಗ್ಗೆ ಯೋಚಿಸಲು ಸ್ವಲ್ಪ ಎಡಚಾಗುತ್ತಿದೆ (ಮುಕ್ತಿ. ೧೯೫).

ಎಡಚೆಡಚು = ಸಂಕೋಚ: ಯಾಕೋ ಇತ್ತೀಚೆಗೆ ಬಿಂದಣ್ಣನೊಡನೆ ಮಾತನಾಡಲಿಕ್ಕೆ ನನಗೆ ಸ್ವಲ್ಪ ಎಡಚೆಡಚು (ವ್ಯಸಿ. ೧೯೦); ಹೊಸಪದ್ಧತಿಯ ಟಾಪುಟೀಪಿನ ಮನೆಯಲ್ಲಿದ್ದ ಸುಶೀಲೆಗೆ ಈ ಹಳೇ ಪದ್ಧತಿಯ ಮನೆಯಲ್ಲಿ ಸ್ವಲ್ಪ ಎಡಚೆಡಚು ಎನಿಸಹತ್ತಿತು (ಅನಂತ. ೩).

[< ಎಡರ್ + –ಚು]

**ಎಡಚು$_2$** (ನಾ). ಎಡಗೈಯಲ್ಲೇ ಕೆಲಸಮಾಡುವ ಅಭ್ಯಾಸ.

[ಎಡ$_1$ + –ಚು]

**ಎಡಚೋರಿ** (ನಾ). = ಎಡಗೋಲು ೨: ಎತ್ತು ಎನಬಹುದೆ ಎಡಚೋರಿ ಬಸವನ ಸುತ್ತೇಳು ಲೋಕ ಸಲಹೋನ (ಹಳ್ಳಿಜಾ. ೩೩). [?]

**ಎಡತರಿ** (ನಾ). ಒಂದು ಬಗೆಯ ಗಿಡ: (ವೈಔಗಿ. ೩೦–೫೮೧).

[ಎಡ$_1$ ? + ತರಿ$_3$ (< ತಱಿ$_5$)]

**ಎಡತಿ** (ನಾ). ೧. ಗೊಲ್ಲಗಿತ್ತಿ. ೨. ಮಧ್ಯವಯಸ್ಸಿನವಳು: ಇತ್ವ ಲೋಪಕ್ಕೆ:—ಪೊಲತಿ, ನರತಿ, ಎಡತಿ (ಶಮುದ. ೨೦೮ ಪ್ರಯೋ).

[< ಎಡೆ ? + –ತಿ$_1$ (< –ಇತ್ತಿ). / ತಮಿ. ಇಡೈಚ್ಚಿ = ಗೊಲ್ಲಗಿತ್ತಿ]

**ಎಡತಿಗೆ** (ನಾ). ಒಂದು ಗಿಡದ ಹೆಸರು: (ವೈಔಗಿ. ೨೪–೪೩೭). [?]

**ಎಡತುಂಟ** (ನಾ). ವಕ್ರನಾದ ತುಂಟ: ದಕ್ಷಿಣದಿಕ್ಕಿನಲಿ ಹುಟ್ಟುವನು ಎಡತುಂಟ ಕೇಳಿರಣ್ಣಾ (ಕಾಲಸಂ. ೧೦೩–೧).

[ಎಡ$_1$ + ತುಂಟ]

**ಎಡತೊಱೆ** 'ಎಡದೊಱೆ' ನೋ.

**ಎಡತೋಳು** 'ಎಡದೋಳು' ನೋ.

**ಎಡದುಂಬಿ** (ನಾ). ಒಂದು ವಿಷಕ್ರಿಮಿ,—ಕೀಟ: "ಬಿಂದುಲಃ–ಎಡದುಂಬಿ" (ಹಿಷಧಿ. ೧೦೮). [ಎಡ$_1$ ? + ತುಂಬಿ$_1$]

**ಎಡದೆಸೆ** (ನಾ). ಎಡಭಾಗ : ತೊಡೆಯೊಳ್ ಕಾದಲೆಯಿರೆ ಬಲಗಡೆಯಲ್ಲಿ ಬಸಂತನೊಲವಿನಿಂ ಕುಳ್ಳಿರೆ ತನ್ನೆಡದೆಸೆಯೊಳ್ ಸೊಬಗಿಯಿರೆ ಕಡು ಚೆಲ್ವಂ ಪಡೆದನಾವಗಂ ನನೆಗಣೆಯಂ (ಕಬ್ಬಿಕಾ. ೧೩೬). [ಎಡ$_1$ + ದೆಸೆ$_2$]

ಎಡದೊಡು 'ಎಡಂದೊಡು' ನೋ.

**ಎಡದೊಡೆ** (ನಾ). ಎಡಭಾಗದ ತೊಡೆ : ಶಿವೆಯನೆಡದೊಡೆಯೊಳಾಂತ ಶಿವ ಸಲಹೆಮ್ಮನು (ಚಬಪು. ೬–೧). [ಎಡ$_1$ + ತೊಡೆ$_2$]

**ಎಡದೊಱೆ**, ಎಡತೊಱೆ (ನಾ). ತೊರೆಗೆ ಎಡದಲ್ಲಿರುವ ಒಂದು ನಾಡಿನ ಹೆಸರು : ಎಡದೊಱೆ [ತುಱ್ವನಾಳ್ದು] (ಸೌಇಇ. XI–i, ೬–೧೪ ; 837) ; ಎಡದೊಱೆ ದ್ವಿಸಹಸ್ರಾಂತಃ (ಎಇ. XII, ೩೧೩–೬೯ ; 1124). **ಎಡತೊಱೆ** : ಸ್ವಸ್ತಿಶ್ರೀ ಕುಙ್ಗಣಿ ಅರಸರ್ ಶಿವಮಾರರ್ ಪೃಥುವೀರಾಜ್ಯಕೆಯೆ ಎಡತೊಱೆ ನಾಡ (ಎಕ. III, ನಂಜನ. ೧೨೬–೩ ; 1024). [ಎಡ$_1$ + ತೊಱೆ$_2$]

**ಎಡದೋಳು**, ಎಡತೋಳು (ನಾ). ಎಡಭಾಗದ ತೋಳು : ಎಡದೋಳು ಹಾಱಿತು ವಾಮಲೋಚನ ಬೆಂಬಿಡದಲುಗಿತು (ಮೋಹತ. ೬–೨೬). **ಎಡತೋಳು** : ಮುಂದೆ ಸಾಗುವಾಗ ಅವಳ ಎಡತೋಳು ಹಿಂದಕ್ಕೂ ಮುಂದಕ್ಕೂ ಚುರುಕಾಗಿ ತೂಗಾಡುತ್ತಿತ್ತು (ಪುನರು. ೨೩೫). [ಎಡ$_1$ + ತೋಳು (< ತೋಳ್)]

**ಎಡನಾಯಿ** (ನಾ). ಎಳೆಯ ನಾಯಿ ; ನಾಯಿಮರಿ : ಬಾಡ ತಿಂಬಾತಂಗೆ ಆಡೇನು ಆವೇನು ಕೋಡಗವೇನು ನರಿಯೇನು ಮನೆಯಲಿದ್ದೆಡ ನಾಯಿಯೇನು (ಸರ್ವಜ್ಞ. ೯೪೨). [ಎಡ$_2$ + ನಾಯಿ]

**ಎಡಪ** (ನಾ). "ಎಡಗೈಯಿಂದ ಕೆಲಸಮಾಡುವವ" (ಕಸ್ತೂಕೋ. ೧೨೫). [?]

**ಎಡಪಕ್ಷ** (ನಾ). ೧. ವಿರೋಧಪಕ್ಷ. ೨. ವಾಮಪಕ್ಷ: ಎಡಪಕ್ಷದ ಸಿನೇಟರರಾದ ಫ್ರಾಂಕಿಸ್ ಮಿಟರೆಂಡರ (ಕರ್ಮವೀ. ೮–೧೧–೧೯೫೯). [ಎಡ$_1$ + ಪಕ್ಷ]

**ಎಡಪು**, ಎಡಂಪು, ಎಡವು, ಎಡಹು$_1$ (ಕ್ರಿ). ೧. (ನಡೆಯುವಾಗ ದಾರಿಯಲ್ಲಿರುವ ವಸ್ತು ಕಾಲಿಗೆ ತಗುಲಿ) ಬೀಳುವಂತಾಗು ; ಮುಗ್ಗರಿಸು ; ತೊಡರು : ಜಾತ್ಯಶ್ವಂಗಳ ಪೆಣದ ತಿಂತಿಣಿಯೊಳ್ ತೊಡರ್ದೆಡಪುತ್ತುಮಾಡುವ ಸುಭಟರಟ್ಟೆಗಳುಂ (ಪಂಪಭಾ. ೧೦–೧೧೬ ವ) ; ನಡೆಪಾಡುತಿರ್ದೆಡಪಿ ಕೆಡೆವ ಜರತ್ತಾಪಸರ್ (ಪಂಚತಂ. ೧೧೮–೧೭) ; ನೇವುರದ ನುಣ್ದನಿಗೆ ಮಿಗೆಯಾವರಿಸುವ ಹಂಸೆವಿಂಡನೆಡಪುತ್ತುಂ . . . ನಡೆತಂದಳ್ (ಗಿರಿಕ. ೫–೫೨) ; ಪೊಸಂತಿಲನೆಡಪಿದಂತಡ್ಡವಿಬ್ಬು (ಚಿಕವಿ. ೬–೧೧೮) ; ದೈವಂ ತಪ್ಪಾಗಿ ನಡಸುವೊಡೆ ಕಲಿ ಎಡಪುವನ್ (ಅಶ್ವತ್ಥಾ. ೨೦–೧೦). **ಎಡಂಪು** : ಒರ್ವರೊರ್ವರ ನೂಂಕುವೆಡಂಪುವ ಸಂಭ್ರಮಾನ್ವಿತರ್ (ಮಹಾನೇ. ೮–೩೧). 'ಎಡಂಪಿಸು' ಪರಾ. **ಎಡವು$_1$** : ಪೊಱೆವೊತ್ತವನೆಡವಿ ಬಿದ್ದಡೆ ಪೊಱೆ ಬೀಬಿದೆ ಗಗನತಳದೊಳಿಕ್ಕುಮೆ ಪೇಟಿಂ (ಸಮುಪ. ೧೧–೨೦೫) ; ಅಣುಗನೆಡವಿ ಬಿಳ್ದೊಡೆ (ಭಾವಚಿಂ. ೯–೫) ; ಎರಡು ಮೂರು ಸಲ ಎಡವಿದನು (ಕನಕ. ೮೮). **ಎಡಹು$_1$** : ೧. ಎಡರಡಸಿದ ವಿಪತ್ತು ಕಡೆಯಾಗಲೊಡನೆ ಮೃಡ ನಿಮ್ಮನೆಡಹಿಯೂ ಕಾಣರು (ದೇವಾಪ್ರ. ೧೧೬–೩೮) ; ನಡೆವರೆಡಹದೆ ಬಜಬರೆಡಹುವರೆ (ಹಚಕಾ. ೧–೨೩) : ಹಡಗು ಜಲಧಿಯೊಳೋಡಿ ಗಿರಿಗಳನೆಡಹಿ ನುಗ್ಗಾದಂತೆ (ಕುವ್ಯಾದ್ರೌ. ೩–೨೮) ; ನಡೆಯುತೆಡಹಿದ ಪಟ್ಟದಾನೆ (ನಳಚ. ೮–೫೮). ೨. ತಪ್ಪುಮಾಡು : ಪತ್ರಿಕೆಯೊಳೆಡಹಿ ಬರೆದಕ್ಕರದ ಬೀಳ್ದೊರ್ಡದ ಜಱಿಂದೆ ಕೆಡುವುದಗ್ಗದ ಕಜ್ಜ (ಜೈಮಿಭಾ. ೩೦–೨೮) ; 'ಮಮ್ಮ' ಎಂಬುದರ ಬದಲಿಗೆ 'ತಮ್ಮ' ಎಂದು ಎಡಹಿ ಬರೆದಿರುವಂತೆ . . . ನಿಶ್ಚಯಿಸಬಹುದು (ಮೂರುಉ. ೯೬). [ದೇ. ‖ ತಮಿ. ಮಲ. ಇಡಱು ; ತುಳು. ಎಟ್ಟುನಿ]

**ಎಡಬದಿ** (ನಾ). ಎಡಭಾಗ: ಅದು ಎಡಬದಿಯಲ್ಲಿ ಮಾತ್ರ ಹುಲ್ಲನ್ನೂ ಮರದೆಲೆಗಳನ್ನೂ ತಿಂದಿದೆ (ಮಣಿಸ. ೧೨) ; ಎಡಬದಿಯಿಂದ ಮನೋರಮಾ ಬರುವಳು (ವೈದ್ಯರಾ. ೯). [ಎಡ$_1$ + ಬದಿ$_2$]

**ಎಡಬಲ** (ನಾ). ಎಡಭಾಗ ಮತ್ತು ಬಲಭಾಗ ; ಅಕ್ಕಪಕ್ಕ : ಮೂಗುಂ ಮುಱಿವನ್ನಂ ಮುಂದೆ ಮುಗ್ಗುತ್ತೆಡಬಲದೊಳಗಾಂ ಬೀಱುತುಂ (ಕಾದಂಪೂ. ೧೯೧) ; ನಡೆನಡೆದು ನಸುಬಳುಂಕುತ್ತೆಡಬಲನಂ ನೋಡಿ (ಗಿರಿಕ. ೧–೮೫) ; ಎಡಬಲದೊಳೊಯ್ಯಾರ ಸತಿಯರ ಗಡಣ (ಸಂಭಪ. ೨೦–೧೫) ; ಎಡಬಲದುಪ್ಪರಿಗೆಯ ಸಾಲು (ಮೋಹತ. ೨೪–೨೦). [ಎಡ$_1$ + ಬಲ]

**ಎಡಬಲವಂಕೆ** (ನಾ). ಎಡಪಕ್ಕ ಮತ್ತು ಬಲಪಕ್ಕ : ಬಲುಮಂಡಳಿಕರೆಡಬಲವಂಕದಲಿ ನೆರೆದುದು (ಕುವ್ಯಾದ್ರೌ. ೧೨–೨೬) ; ತಳಿತುದೆಡಬಲವಂಕದಲಿ ಹೆಬ್ಬಲ ಛಢಾಳಿಸಿ ಮೊರೆವ ಭೇರಿಯ ಘುಳುಘುಳುಧ್ವನಿ ಕೂಡೆ ಜಡಿದುದು (ಕುವ್ಯಾದ್ರೌ. ೫–೪೦). [ಎಡ$_1$ + ಬಲ + ವಂಕ]

**ಎಡಬಿಡಂಗಿ** (ನಾ). ಮಧ್ಯದಲ್ಲಿರುವವನು ; ಅಂತರ ಪಿಶಾಚಿ : ನಾನು ಎಡಬ[ಬಿ]ಡಂಗಿ ಹೊರಗೆ ಭಟ್ಟಂಗಿ (ಹೊಸಕ್ಷಿ. ೨೩೯) ; ಎಡಬಿಡಂಗಿಯಾಗಿ ಅತೃಪ್ತಿಯ ಜ್ವಾಲಾಮುಖಿಯಾಗಿದ್ದೇನೆ (ಪಂಜಪಂ. ೨೦೬) ; ನಾನು ಎಡಬಿಡಂಗಿ (ಇಣಿನೋ. ೪೫). [?]

**ಎಡಬಿಡಂಗಿತನ** (ನಾ). ಮಧ್ಯದಲ್ಲಿರುವಿಕೆ ; ಅಂತರಪಿಶಾಚಿಯಾಗಿರುವಿಕೆ : ಕೇಶವನ ಇನ್ನೊಂದು ಸಮಸ್ಯೆಯೆಂದರೆ ಅಭಿವ್ಯಕ್ತಿಯ ಎಡಬಿಡಂಗಿತನ (ಹೊಸಕ್ಷಿ. ೨೯೬). [ಎಡಬಿಡಂಗಿ + –ತನ]

**ಎಡಭರ್ಜಿ** (ನಾ). ಎಡಭಾಗದಲ್ಲಿ ಭರ್ಜಿ ಸಿಕ್ಕಿಸಿಕೊಂಡಿರುವವರು ; ಸೈನ್ಯದ ಒಂದು ಭಾಗ : ಪಂಚಕಸೆ ಭಲ್ಲೆದವರು ಎಡಭರ್ಜಿ ಬಲಭರ್ಜಿ ಜನ . . . ಸೇರಿಕೊಂಡು ನಿಂತರು (ಚಿತ್ರಪಾ. ೬೩). [ಎಡ$_1$ + ಭರ್ಜಿ]

**ಎಡಭಾಗ** (ನಾ). ಎಡಗಡೆಯ ಭಾಗ, —ಪಕ್ಕ : "ಸವ್ಯ – ಒಡಲ ಎಡಭಾಗವು" (ನಾಚಿರಾ. ೩) ; ಗಾಡಿಯನ್ನು ಎಡಭಾಗದಲ್ಲಿಯೇ ಹೊಡೆಯಿರಿ (ರೂಢಿ). [ಎಡ$_1$ + ಭಾಗ]

**ಎಡಮುಗ್ಗುಲು** (ನಾ). ೧. ಎಡಪಕ್ಕ ; ಎಡದ ಭಾಗ. ೨. (ಆಲಂ) (ಮಲಗಿದವನು) ಎಡಪಕ್ಕವಾಗಿ ಏಳುವುದು. ೩. (ಆಲಂ) ಉಪವಾಸ : ಯಜಮಾನರಂಥವರು ಕೃಪೆತೋರಿ ಅನ್ನಮಾಡಿ ಹಾಕದಿದ್ದರೆ ನಮಗೆ ಎಡಮುಗ್ಗುಲೆ ! (ಪಂಯಾತ್ರ. ೬) ; ನೀನು ತುಂಬಾ ಚೇಷ್ಟೆಮಾಡಿದರೆ ನಿನಗೆ ಈವತ್ತು ಎಡಮುಗ್ಗುಲೇ (ರೂಢಿ). [ಎಡ$_1$ + ಮುಗ್ಗುಲು (< ಮುಗ್ಗುಲ್)]

**ಎಡಮುರಿ$_1$** (ನಾ). ಎಡಕ್ಕೆ ತಿರುಗಿರುವುದು, —ಬಾಗಿರುವ ಸ್ಥಿತಿ : ಒಬ್ಬರೊಬ್ಬರು ಬಲಮುರಿ ಎಡಮುರಿಯಾಗಿ ಸಬ್ಬವದೊಳು ಚಾರಿವರಿದು (ಭರಚ. ೧೨–೬೪) ; ಎಡಮುರಿಯಾಗಿ ಬಾಲವನು ಸುರುಟಿ ಬೀಸಲು ಒಡೆಯನಿಗೆ ಅಂಜಿಕೆಯನು ಹೇಳುವುದು (ಅಶ್ವಟೀ. ೧೯–೩). 'ಎಡಮುರಿ ಶಂಖು' ಪರಾ. [ಎಡ$_1$ + ಮುರಿ]

**ಎಡಮುರಿ$_2$** (ನಾ). ಒಂದು ವೃಕ್ಷ ವಿಶೇಷ : (ಪಂಡಿತ. ೨೨). [?]

**ಎಡಮುರಿಶಂಖು** (ನಾ). ಎಡಭಾಗಕ್ಕೆ ತಿರುಗಿಕೊಂಡಿರುವ ಶಂಖು : ಎಡಮುರಿಶಂಖು (ರೂಢಿ). [ಎಡಮುರಿ$_2$ + ಶಂಖು]

**ಎಡಯ್ಯ** (ನಾ). ಒಬ್ಬಾತನ ಹೆಸರು : ಆಕೆಯ ಗಣ್ಡ ಪರಮಶ್ರಾವಕ ಎಡಯ್ಯ ಮಂಗಳಂ (ಎಕ. IX, ಕೊಡಗು. ೩೧–೧೩ ; 1050 ?). [ಎಡ ? + ಅಯ್ಯ$_1$]

**ಎಡರ್**$_1$ (ಕ್ರಿ). ಬಡತನವನ್ನು ಹೊಂದು, —ಪಡೆ: ಬಹುವಿದ್ಯೆಗಳಂ ಕಲ್ತುಂ ವಿಷಯಕ್ಕಂಟಿಕೊಳ್ಳದಂ ಎಡರ್ದುಂ ಧರ್ಮದಿಂ ಬೀಳಂ ನಿಂದಿರ್ಪಂ ಸತ್ಯಧರ್ಮದೊಳ್ (ಸೌನಂದ. ೨-೨೫). [< ಎಡಋ]

**ಎಡರ್**$_2$, ಎಡರು (ನಾ). ಅಡಚಣೆ; ಅಡ್ಡಿ; ಆತಂಕ; ಕಷ್ಟ; ವಿಪತ್ತು: "ವಿಪತ್ತಿಯೊಳೆಡರ್" (ಕರ್ನಾಟ ನಿ. ೮೪); ಸಿಡಿಲ್ವೊಡೆದ ಪೊಲಟ್ಟಮುಟ್ಟ ಕಡಿದಿಕ್ಕಿದುದಾದೆಡರಂ (ಪಂಪಭಾ. ೧-೯೯); ಎಡರಡಸಲ್ ಮಜಿದುಮೊಡಂಬಡುವರ್ (ಸಮಪ. ೭-೧೨); ಎಮ್ಮರಸಂಗಿನಿತ್ತು ಬವಣೆ ಬೇನೆ ದಣಿವು ತೊಡರ್ ಮುಂತಪ್ಪೆಡರೊಡರೆ (ಅದ್ಭುತ. ೪೧-೧೯). **ಎಡರು**$_1$: ಬೆಚ್ಚಿ ಬೆದಱಿದಿರೆಡರಿನಲಿ (ಕುವ್ಯಾಸ. ೧-೫೮); ಎಡರು ಬಂದಲ್ಲಿ ತನ್ನಂ ನೆನೆಯೆಂದು (ಜೀವಂಸಾಂ. ೧೨-೧೩); ಒಡಲು ತಾನಳಿವಲ್ಲಿ ಮಡದಿಯರು ಮಡಿವಲ್ಲಿ ತಡೆಯೆಡರು ನಿಂದೆ ಬರುವಲ್ಲಿ ಸಮತೆಯನು ಬಿಡದಿಹನೆ ಯೋಗಿ (ಸರ್ವಜ್ಞ. ೪೯೮); ಹಲವು ಸನ್ನಿವೇಶಗಳು ನೆರವಾಗುತ್ತವೆ ಮತ್ತೆ ಕೆಲವು ಎಡರಾಗಿ ಪರಿಣಮಿಸುತ್ತವೆ (ಶಿಕ್ಷದ. ೫೫೫). 'ಎಡರ್ಗೇಡಿ' ಪರಾ.

**ಎಡರುತೊಡರು** = ಅಡ್ಡಿ ಆತಂಕ; ಅಡಚಣೆ: ಜೀವನ ಯಾತ್ರೆಯ ಎಡರುತೊಡರುಗಳಿಂದ ಉಂಟಾಗುವ ಅವಮಾನವನ್ನು ಸಹಿಸಲು ಯುವಕರಿಗೆ ದುಸ್ಸಹ (ಶಿಕ್ಷದ. ೧೧೫). **ಎಡರೊತ್ತು** = ಕಷ್ಟ, ಆವರಿಸು: ಭೂಭರಮುಂ ನನ್ನಿಗೆ ದಾಯಿಗರ್ಗಿರದಿತ್ತೆಡರೊತ್ತೆ ನೀನೆ ಧನ್ಯನೆ[ಅ]ಲ್ತೇ (ಪಂಪಭಾ. ೭-೬೨). [ದೇ. ॥ ತಮಿ. ಮಲ. ಇಡರ್; ತೆಲು. ಎಡರು]

**ಎಡರು** 'ಎಡರ್$_2$' ನೋ.

**ಎಡರ್ಗೇಡಿ** (ನಾ). ಅಡ್ಡಿಗಳನ್ನು ನಿವಾರಿಸುವವನು; ವಿಘ್ನಗಳಿಲ್ಲದಂತೆ ಮಾಡುವವನು; ವಿನಾಯಕ; ವಿಘ್ನೇಶ್ವರ: "ಕರಿಮೊಗಂ, ಇಲಿದೇರಂ, ಎಡರ್ಗೇಡಿ . . . ತಂದೆಯ ತಂದೆಯಿಲ್ಲದವಂ – ಈ ೭ ವಿನಾಯಕಂಗೆ ಪೆಸರ್" (ಕಶಸಾ. ೧-೪); "ಬಿಜ್ಜೆವಳನೆಡರ್ಗೇಡಿ ಮೇಣೆಲರುಣಿವಸಿಜನು ತಂದೆಯ ತಂದೆಯಿಲ್ಲದಂ ಕರಿಮೊಗಂ ಬಿಂಕಣಗಿವಿಯನು ಮೂಸಕದೇರನೆನೆ ವಿನಾಯಕನ ನಾಮಂ" (ಕಬ್ಬಿಕೈ. ೫); ಆಃ ಎಡರ್ಗೇಡಿಯನೆ ಮಱೆತೆಂ ಆತನಂ ಬಲಂಗೊಳದಿರ್ಪಿನಂ ಮೊತ್ತಮೊದಲೊಳೆನಿತುಂ ವಿಘ್ನಂ (ರಾಮಾಶ್ವ. ೮೮-೧೯). [ಎಡರ್$_2$ + ಕೇಡು + –ಇ$_3$]

**ಎಡರ್ಗೇಡಿಗ** (ನಾ). = ಎಡರ್ಗೇಡಿ: "ಕರಿಮೊಗನಿಲಿದೇರಂ . . . ಎಡರ್ಗೇಡಿಗನೆನಲತಿಭರದಿಂ ಗಣನಾಥನಮರ್ದ ನಾಮಂ" (ಕವಿಕಂ. ೨೦). [ಎಡರ್$_2$ + ಕೇಡಿಗ]

**ಎಡರ್ಪಡು** (ಕ್ರಿ). ತೊಂದರೆಪಡು; ಕಷ್ಟಪಡು: ಪಥಿಕ ವಚನ ಪರಂಪರೆಯಿಂ ಧರಣೀಜಟಂ ಕೇಳ್ದು ಎಡರ್ವಟ್ಟು ಬರೆ ಮಾಯಾಬ್ರಾಹ್ಮಣನಿದಿರೆಟ್ಟು ಅಭಿವಾದನಂಗೆಯ್ದು ಪೂಜಿಸಿರ್ಪಿನಂ (ಚಾವುಂಪು. ೫೯-೧೨). [ಎಡರ್$_2$ + ಪಡು$_1$]

**ಎಡರ್ಪು** (ನಾ). ಕೇಡು; ಹಾನಿ: ಧನುವಂ ರಾಘವನೇಱಿಸದಿರ್ದಡೆ [ಘನತರ ದುರಿತಂ] ಯಶಲತಿಕೆಗೆಡರ್ಪಂ ತಳೆಗುಂ ಖಚರತೆಯಱಿಗುಂ (ಕುಮುರಾ. ೪-೬೯). [ಎಡರ್$_2$ + –ಪು$_2$]

**ಎಡವ**$_1$ (ನಾ). ೧. ಗೋವಳ; ಗೋಪಾಲ; ಕೃಷ್ಣ (?): ಕೌರವಸೇನೆಗಂಡೆಡವನಂತಿರೆ ತುಂಗತುರಂಗ ಸೇನೆಯಂ ವಾರಣಸೇನೆಯಂ ರಥದಸೇನೆಯುನಗ್ಗದ ವೀರಸೇನೆಯಂ ಮಾರಿಗೆ ಬೋನಮಿತ್ತಿ (ಪುಣ್ಯಾಸ್ರ. ೫-೯). [?. / ತಮಿ. ಇಡೈಯನ್]

**ಎಡವ**$_2$ (ನಾ). ಒಂದು ವೃತ್ತಿ (?): ಎಡವ ಸಿದ್ದಪ್ಪ, ಮಹದೇವಪುರದ ದೇವಪ್ಪ, ಸುಬೇದಾರ ಸಿದ್ದಪ್ಪ . . . ಮುಂತಾದ ಮಂತ್ರಿ ಮನ್ನೆಯ ನಿಯೋಗಿ ಸಾಮಾಜಿಕ ಜನರ್ಗೆ . . . ಉಚಿತಾಧಿಕಾರಂಗಳನಿತ್ತು (ಕೆಳನೃ. ೧೦-೨೨ ವ). [?]

**ಎಡವ**$_3$ (ನಾ). ನಾಡಾಡಿ; ಸಾಮಾನ್ಯ: ಹೊಸನಾಟಕದಲ್ಲಿ ಸೀತಾ ಮತ್ತು ಊರ್ಮಿಳೆಯರ ಪಾತ್ರದ ಮುಂದೆ ರಾಮಚಂದ್ರನೂ ಎಡವನಾಗಿ ಕಾಣುತ್ತಾನೆ (ಮಸಾಹಿ. ៩೭). 'ಎಟುವ', 'ಎಡಗ' ಪರಾ. [?]

**ಎಡವಂಕ** 'ಎಡವಕ್ಕ' ನೋ.

**ಎಡವಕ್ಕ**, ಎಡವಂಕ (ನಾ). ಎಡಭಾಗ: ಯಾದವರ ಕುಲದೊಡೆಯನಕ್ಷೋಹಿಣೀ ಪತಿಯನಾಯಕಂ ಭೂಪತಿಯೆಡವಕ್ಕ [ಪಾಠಾಂ. ವಂಕ] ದೊಳ್ ನಡೆಯೆ (ಪಂಪಭಾ. ೯-೯೫ ವ); ಬಲವಕ್ಕದೆಡವಕ್ಕದಂಗರಕ್ಕರ ನೆರವಿಯುಮನೀಕ್ಷಿಸುತ್ತುಂ (ವರ್ಧಪು. ೯-೬೦ ವ); ಎಡವಕ್ಕದೊಳ್ಬಾಕ್ಷಕಂ . . . ಒಡನಿರೆ (ವೃಷವಿ. ೭-೩೦). **ಎಡವಂಕ**: ಅಗಜಾತೆವೆರಸೋಲಗಂಗೊಟ್ಟನಾಯೆಡವಂಕ ಬಲವಂಕದಿ (ಸಿದ್ಧರಾ. ೧-೧೮); ಅಗಜಾಪುತ್ರನೆಡವಂಕದೊಳು ಕುಳ್ಳಿರ್ದಂ (ಸಾನಂಚ. ೯-೨೫); ಬಲನೆಡವಂಕದಲಿ ಸೈಂಧವನ ಮೊನೆಯವರೌಕಿದರು (ಕುವ್ಯಾದ್ರೋ. ೧೧-೧೭). [ಎಡ$_1$ + ಪಕ್ಕ]

**ಎಡವಟ್ಟ** (ನಾ). ೧. ತಿಳಿವಳಿಕೆಯಿಲ್ಲದವನು; ದಡ್ಡ; ಮೂಢ. ೨. ಒರಟ; ವಕ್ರ: ಎಲ್ಲರಿಗೂ ಒಂದು ದಾರಿಯಾದರೆ ನಮ್ಮ ಎಡವಟ್ಟನಿಗೇ ಬೇರೆದಾರಿ (ನಾ೪೬ಜಂ. ೮೭); ಇಂತಹ ಎಡವಟ್ಟ ಹೇವದ ಹೆಣ್ಣನ್ನು ನಾ ಇನ್ನೆಲ್ಲಿಯೂ ಕಂಡಿಲ್ಲ (ಗಾಳಿಪ. ೧೭೮). [ಎಡವಟ್ಟು + –ಅ$_7$]

**ಎಡವಟ್ಟತನ** 'ಎಡವಟ್ಟುತನ' ನೋ.

**ಎಡವಟ್ಟು** (ನಾ). ೧. ಕ್ರಮ ತಪ್ಪಿದ್ದು; ರೂಢಿಗೆ ವಿರೋಧವಾದದ್ದು: ದೇಹ ತಾನದು ಪೋಡಿ ಕೇಳ್ಳೆ ದೇಹವಿದುಯಡವಟ್ಟು ಯದಕೆಯು ದೇಹ ಪೋಷಣೆಯೆಂದು ವುಣಿಸಲು ಮದ ಮುರಿವುತಿಹುದು (ಜ್ಞಾನಸಿಂ. ೧೯-೭೩); ಎಡವಟ್ಟು ಹಾದಿಗಳಲ್ಲಿ ಹಸುಗಳು ನಡೆಯುತ್ತಿರುವುದನ್ನು . . . ನೋಡಬೇಕು (ಸುವಸಂ. ೬೭); ಮಣಿ ಎಡವಟ್ಟನ ಪರಿಸ್ಥಿತಿಯಲ್ಲಿದ್ದ (ಸ್ವಾಮಿಸ್ನೇ. ೨೩). ೨. ಅನುಕೂಲವಾಗಿಲ್ಲದಿರುವುದು; ಸೌಕರ್ಯವಿಲ್ಲದುದು: ವರ್ತಕನ ಹತ್ತಿರ ಒಂದು ಸುಂದರವಾದ ಮತ್ತು ಎಡವಟ್ಟಾದ ಕುದುರೆಯಿತ್ತು (ಕರತ್ನ. ೯೧); ಸಾವಧಾನವಾದ ಪೂರ್ವವಿಮರ್ಶನೆಯಿಲ್ಲದೆ ಮಾಡಿಕೊಂಡ "ದತ್ತು" ಎಡವಟ್ಟಾದೀತು (ರಾಜ್ಯಶಾ. ೧೫೫). [ಎಡ$_1$ + ಪಡು$_1$. / ತುಳು. ಎಡವಟ್ಟು]

**ಎಡವಟ್ಟುತನ**, ಎಡವಟ್ಟತನ (ನಾ). ಕ್ರಮ ತಪ್ಪಿದ ಸ್ಥಿತಿ; ದಡ್ಡತನ: ಆಹಾರದಲ್ಲಿ ಥಿಯಾಮಿನ್ ಕಡಿಮೆಯಾದರೆ . . . ಎಡವಟ್ಟುತನ, ವ್ಯಾಕುಲತೆ, ತಾನು ಹೆರವರಿಗಿಂತ ಕೀಳೆಂಬ ಭಾವನೆ ಮೊದಲಾದ ಲಕ್ಷಣಗಳು ಕಾಣಿಸುವುವು (ಅಡುಸೌ. ೬೧). **ಎಡವಟ್ಟತನ**: ಅವರಕೂಡ ಎಡವಟ್ಟತನ ಮಾಡಿದರೆ ನಡೆಯುವುದಿಲ್ಲ (ಪ್ರೇಮಾಶ್ರ. ೫). [ಎಡವಟ್ಟು + –ತನ]

**ಎಡವಟ್ಟುದಾರಿ** (ನಾ). ವಕ್ರಮಾರ್ಗ; ಒರಟುದಾರಿ; ಅಡ್ಡದಾರಿ (ದಕ. ೩). [ಎಡವಟ್ಟು + ದಾರಿ$_1$]

**ಎಡವಮುರಾರಿ** (ನಾ). ೧. ಒಬ್ಬಾತನ ಹೆಸರು(?). ೨. ಕೆಳದಿ ರಾಜರ ಒಂದು ಬಿರುದು: ಎಡವಮುರಾರಿ ಕೋಟೆ ಕೋಳಾಹಳ (ಎಕ. VIII, ತೀರ್ಥಹ. ೯೭-೭; 1615); ಶ್ರೀಮದ್ದೆಡವಮುರಾರಿ ಕೋಟೆ ಕೋಳಾಹಳ ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ (ಮೈಆರಿ. ೧೯೩೩, ೨೮-೯; 1630); ಶ್ರೀಮದ್ದೆಡವಮುರಾರಿ ಕೋಟೆ ಕೋಳಾಹಲ ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ (ಮೈಆರಿ. ೧೯೪೪, ೪೭-೮; 1642); ಎಡವಮುರಾರಿಯೆಂಬದಟರಂ ಮುರಿದೇರ್ದವರಿರ್ಪ್ಪ ಕೋಂಟೆಗೊಂಡೆಡವಮುರಾರಿಯೆಂಬ ಬಿರುದಂ ಪಡೆದೊಪ್ಪಿದ ನಾ ನರಾಧಿಪಂ (ಕೆಳನೃ. ೨-೨೪). [ಎಡವ$_1$ ? + ಮುರಾರಿ]

**ಎಡವಯ್ಯ** (ನಾ). ಒಬ್ಬಾತನ ಹೆಸರು: ಎಡವಯ್ಯ ಹೆಣ್ಣಿರುಡೆಯು ಟ್ಟುವಲ್ಲಿ ಕಾದು ಸತ್ತಂ (ಎಕ. XII, ಶಿರಾ. ೪೩–೧ ; ಸು. 1000). [ಎಡವ$_2$ + ಅಯ್ಯ$_1$]

**ಎಡವರ** (ನಾ). ಕಳೆದು ಹೋಗುವುದು; ತಪ್ಪಿಹೋಗುವುದು (?): ಯಿಾ ಮಠದ ಧರ್ಮಕೆ . . . ಬರಸಿ ಕೊಟ್ಟ ನಿರೂಪವುಯೆಡವರವಾದ್ದರಿಂದ (ಮೈಆರಿ. ೧೧೪೩, ೪೩–೧೪ ; 1708); ರಾಧೆಯೆಂಬಳುಂ ತೆರಳಿ ಘಳಿಗೆ ನಾಲ್ಕಾಯಿತೀಗಳೂ ದೊರಕಲಿಲ್ಲವೆ ನಿಮಗೆ ಪಥದೊಳೂ ದಾರಿಯೆಡವರವಾಯ್ತು ನಿಮ್ಮಲೀ (ಚಂದ್ರಾವ. ೨೧); ಕೈಚೀಲ ಎಡವರವಾಗಿದೆ (ರೂಢಿ). [ಎಡೆ? + ಬರ (< ಬಱ)]

**ಎಡವರಿದೇವ** (ನಾ). ಒಬ್ಬಾತನ ಹೆಸರು: ಎರಡನೆಯ ಸತ್ಯಾಶ್ರಯಂ ಮಂಗಳಾರ್ಣವಂ ಎಡವರಿದೇವಂ ಆದಿತ್ಯವರ್ಮ (ಸೌ ಇ ಇ. XX, ೧೯–೧೨ ; 1015). [ಎಡವರಿ$_0$ + ದೇವ]

**ಎಡವರಿಸು** (ಕ್ರಿ). ಎಡವು; ಮುಗ್ಗರಿಸು: ಇಂಗ್ಲೀಷಿನಲ್ಲಾದರೆ ಒಂದೊಂದುವೇಳೆ ತಡವರಿಸಬಹುದು ಎಡವರಿಸಬಹುದು (ಬಂಕಿಮು. ೩೪). [ಎಡವರಿ$_0$ + -ಸು$_1$]

**ಎಡವಾಟು್** (ಕ್ರಿ). ಪ್ರತಿಕೂಲವಾಗಿ ಬದುಕು; ವಿರೋಧಿಸು; ಅಡ್ಡಿಮಾಡು; ವಾರಣಾಸಿಯೊಳ್ ಕವಿಲೆಯುಂ ಪಾರ್ವರುಮಂ ಕೊನ್ದ ಪಾಪಮುಕ್ಕೆ ಇದಕೆಡವಟ್ದನುಮಿಾ ಪಾಪದಿ ಅಧೋ ××× ಧೊನ್ (ಎಕ. III, ಮಳವ. ೮೬–೧೩ ; 740). [ಎಡ$_1$ + ಬಾಟು್$_1$]

**ಎಡವಿಕೆ** (ನಾ). ಎಡವುವುದು; ತಪ್ಪುವುದು: ಯುವರಾಜರದು ಹುಡುಗಬುದ್ಧಿಯ ಎಡವಿಕೆಯೆಂದೇ ಹೇಳುವ. ಆದರೆ ಆ ಎಡವಿಕೆಗೆ ಈ ಅಂತಶ್ಶತ್ರುಗಳೇ ಕಾರಣ (ವೀರಬಂ. ೧೬). [ಎಡವು (< ಎಡಪು) + -ಇಕೆ]

**ಎಡವು** 'ಎಡಪು' ನೋ.

**ಎಡವುಗಲ್ಲು** 'ಎಡಹುಗಲ್ಲು' ನೋ.

**ಎಡವೆಗಲ್** (ನಾ). ಎಡಭಾಗದ ಹೆಗಲು; ಎಡಭುಜ: ಪೊನ್ನ ಬತ್ತಳಿಕೆಯಂ ಬೆನ್ನೊಳ್ ತಳೆದು ತರಕಸಮನೆಡವೆಗಲೊಳ್ ತೊಡರ್ದ (ರಾಜಶೇ. ೬–೧೧ ವ); ಏರಿಸಿದ ಪದವಿಲ್ಲಗಳನ್ನು ಎಡವೆಗಲ್ಗಳಿಂದುಗಿದು (ಮಂತ್ರಶ. ೧೪೬–೧೬). [ಎಡ$_1$ + ಪೆಗಲ್]

**ಎಡವೊರಜೆ** (ನಾ). ಎಡಭಾಗದ ಹಗ್ಗ: ಬಲವೊರಜೆ ಎಡವೊರಜೆ ಬೆನ್ನಿನ ಮಿಳಿಯ ಜಾಳಿಗೆವೊರಜೆ ತಳಸಂಕಲೆಯ ತೊಡರಂಕಣಿಯ ಕೊಂಡೆಯ ಪಕ್ಕಗಂಟೆಗಳ (ಕುವ್ಯಾದ್ರೋ. ೩–೨); ಮೊಗವಡಂ ಬಲವೊರಜೆಯೆಡವೊರಜೆ ಬಲಿದರಂಚಿಗೆಯೆಸೆಯೆ (ಸೌಂದಪು. ೧೨–೧೯). [ಎಡ$_1$ + ಪೊರಜೆ]

**ಎಡಸಂಸಾರ** (ನಾ). ಸೂಳೆಯನ್ನು ಇಟ್ಟುಕೊಂಡು ಮಾಡುವ ಸಂಸಾರ: ಎಡಸಂಸಾರ ದೂರವಿರುವುದೇ ಚಂದ (ದೇವಹೆಂ. ೮೬). [ಎಡ$_1$ + ಸಂಸಾರ]

**ಎಡಸಲಿಗೆ** (ನಾ). ಎಡಗಡೆ (?): ಮನೆ ಮನೆಶಾಲು ಅಂಗೋಡು ಅಂಗಸಿ ನೀರುದಾರಿ ಮತ್ತಂ ಎಡಸಲಿಗೆಯ ಬಾಳಿಂಗೆ ಗಡಿ ಮುಡಲು (ಕಇ. I, ೫೫–೧೬ ; 1433). [ಎಡ ? + ಸಲಿಗೆ]

**ಎಡಸಾಗು** (ಕ್ರಿ). ಎಡಕ್ಕೆ ಸಾಗು, —ಹೋಗು: ಹರಿಯದಿರು ವಿಷಯಗಳಿಗಪಯಶಕ್ಕೆಡಸಾಗು ವಿರತಿದಳೆಯಹಮೆಂಬುದುಳಿಯಾತ್ಮನಿದ್ದೆಗೊಳಿ (ಕೈಕವ. ೩–೨–೪). [ಎಡ$_1$ + ಸಾಗು$_1$]

**ಎಡಸು** (ನಾ). = ಎಡಚು: ದಾರಿಗೆ ಹತ್ತಿಂಟು ಬಾರು ಎಡಸಾಗಿರುವ . . . ದೊಡ್ಡ ಪೊದೆಯಲ್ಲಿ ಹೊಕ್ಕೊಂಡನು (ಕಥಾಮಂ. ೧೮). [ಎಡ$_1$ + -ಸು$_1$]

**ಎಡಸುತ್ತು** (ನಾ). ಎಡಕ್ಕೆ ತಿರುಗಿರುವುದು, —ಬಾಗಿರುವ ಸ್ಥಿತಿ: ಒಂದು ಕೊನೆಯಲ್ಲಿ ಎಡಸುತ್ತುಗಳೂ ಮತ್ತೊಂದು ಕೊನೆಯಲ್ಲಿ ಬಲಸುತ್ತುಗಳೂ ಒಂದರಲ್ಲೇ ಇರುವ ಉದ್ದ ತಿರುಪುಪಟ್ಟಿ (sleeve-nut. ಇಂಕಪ). [ಎಡ$_2$ + ಸುತ್ತು$_2$]

**ಎಡಹಂಚ** (ನಾ). ಎಡಗೈಯವನು; ವಾಮಾಚಾರದವನು; ನೀಚ; ಅಲ್ಪ; ಕ್ಷುದ್ರ: ಎಡಹಂಚ ದೈವದೊಳು ತೊಡರ್ದು ಮರುಳಾದಂಗೆ ಕೆಡುವ ಹುಟ್ಟುವ ಸಾವರೊಡನೆ ಲಘುವಾದಂಗೆ (ವಾಗೀರ. ದೇ. ೨೩೦–೯). ಅಱಿದಱಿದು ಪಾರ್ವ ಹರಿ ನೆಱೆ ದೈವವೆಂದೆಕಟವುಱೆ ನಂದಿ ಯೆಡಹಂಚನಾಗಿ ಕೆಟ್ಟ (ಸಾನಂಚ. ೨–೧೧೯); ಕುಂದಱಿಯದಿರ್ಪ ಲೋಚಿನ ನೀಚರುಗಳು ಕಿನಿಸಿಂದೆ ಬೊಟ್ಟಿನ ಭ್ರಷ್ಟರುಗಳು ಹಾವಸೆವಲ್ಲ ಹಂದಿಗಳು ಮಲಧಾರಿಗಳು ವೇದಬಾಹಿರರು ಕುಂಚಗಳಯೆಡ[ಡ]ಹಂಚರು (ಸಿದ್ಧೇಪು. ೬–೬). [ಎಡ$_1$ + ಹಂಚ. P ಹಂಚ < ಪ್ರಾ. ಹಚ್ಛ < ಸಂ. ಹಸ್ತ]

**ಎಡಹಿಸು** 'ಎಡಂಪಿಸು' ನೋ.

**ಎಡಹು**$_1$ 'ಎಡಪು' ನೋ.

**ಎಡಹು**$_2$ (ನಾ). ೧. ಎಡಹುವಿಕೆ; ಮುಗ್ಗರಿಸುವಿಕೆ: ತಡೆದುದೀತನ ಮನದ ಸಂಶಯದೆಡಹು ಕರಣೇಂದ್ರಿಯದ ಬುದ್ಧಿಯ ಕಡುಹು ಕೈಗುಂದಿದುದು (ತೊರರಾ. ೫–೨–೬೬); ಆಗುಳಿಕೆಯಲಿ ಸೀಣಿನಲಿ ನಡೆವಾಗ ನುಡಿವಾಗಳಲಸಿಕೆಗಳಲಿ ತಾಗುಗಳೆಲೆಡಹುಗಳಲೆಚ್ಚರಿಕೆಯಲಿ ಮಱವೆಯಲಿ (ತೊರರಾ. ೫–೩–೪೪). ೨. ತಪ್ಪು; ದೋಷ: ಸದ್ವಕ್ತರ್ ಲಾಲಿಪುದೋವುವುದೆನ್ನೀ ಕಾವ್ಯದೊಳೆನಿತೆಡಹಿರಲನಿತಂ ಕಳೆದು (ಉದ್ಭದೇ. ೧–೩೩); ಉಸಿರಿದ ಕೃತಿಯೊಳು ಮಱೆದೆಡಹಿರೆ ತಿದ್ದಿ ಜಸವ ಮೆಱೆವುದು ಕೋವಿದರು (ಕಂಠವಿ. ೧–೧೫). [< ಎಡಪು]

**ಎಡಹುಗಲ್ಲು, ಎಡವುಗಲ್ಲು** (ನಾ). ಕಾಲಿಗೆ ತಗುಲಿ ಮುಗ್ಗರಿಸುವಂತೆ ಮಾಡುವ ಕಲ್ಲು: ಮುಳ್ಳುಮರದ ಬೇರೆಡಹುಗಲ್ಲುಗಳಿಂದ ನಿಲ್ಲದೊಪ್ಪಿದುದು ಕಾಂತಾರ (ಕಂನವಿ. ೧೮–೪೩); ದಾರಿಯೆಡಹುಗಲ್ಲು ನೀರೊಳಗಣ ನಕ್ರವಾರವೆಗಳ ಮುಳ್ಳಿನಂತೆ ವಾರಾಂಗನೆಯರ ಕೇರಿಗಳು (ಕವಿಚ. II, ೪೧೩ ರುಕ್ಮಾಂಗದ ಚರಿತ್ರೆ). **ಎಡವುಗಲ್ಲು**: ದಾರಿಯಲ್ಲಿ ಎಡವುಗಲ್ಲಿದೆ ಜೋಕೆ (ರೂಢಿ). [ಎಡಹು$_1$ (< ಎಡಪು) + ಕಲ್ಲು (< ಕಲ್$_3$)]

**ಎಡಹುಗುಳಿ**$_1$ (ನಾ). ಎಡವಿ ಬೀಳುವ ಕುಣಿ, —ಹಳ್ಳ; ವಿಘ್ನ: ಎಡಹುಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯಾ (ಬಸವ. ೮೯೨). [ಎಡಹು$_1$ (< ಎಡಪು) + ಕುಳಿ (< ಕುೞಿ)]

**ಎಡಹುಗುಳಿ**$_2$ (ನಾ). ಎಡವುವುದೇ ಶೀಲವಾಗಿ ಉಳ್ಳವನು: ಮೌನಸುವ್ರತ ಜಪವಿಧಾನ ಲಿಂಗಾರ್ಚನಾ ಧ್ಯಾನವೇನುಂಟಾದ ಸತ್ಕರ್ಮಮಂ ಆನೊಸೆದು ಮಾಡಲ್ಕೆ ತಾನೆಡಹುಗುಳಿಯಾಗಿ ಮಾನಸವಿದೆನ್ನನಳಲಿಸುತಿರ್ಪುದು (ಮನೋವಿ. ೧–೩೩). [ಎಡಹು$_1$ (< ಎಡಪು) + -ಕುಳಿ$_3$]

**ಎಡಹುದಲೆ** (ನಾ). ೧. ಕಾಲಿಗೆ ಸಿಕ್ಕಿ ಎಡವುವಂತೆ ಮಾಡುವ ವಸ್ತು: ಎಡಹುದಲೆಗಳ ದಾಂಟಿ ರಕುತದ ಮಡುವಿನಲಿ ಗದೆಯೂಱಿ ನೆಲೆಗಳ ಪಡೆದು ಕಂಪಿಸಿ (ಕುವ್ಯಾಗ. ೩–೯). ೨. ಎಡವುವಿಕೆ. [ಎಡಹು$_1$ (< ಎಡಪು) + -ದಲೆ$_1$]

**ಎಡಹುಹ** (ನಾ). ಎಡವುವಿಕೆ ಜಾರುವಿಕೆ: (ನಾಚಿರಾ. ೬). [ಎಡಹು$_1$ (< ಎಡಪು) + -ಹ$_2$]

**ಎಡಹೊತ್ತು** (ನಾ). ಸಮಯವಲ್ಲದ ಸಮಯ; ಅಕಾಲ: ಈಗಳೀ ರಾತ್ರಿಯ ಎಡಹೊತ್ತಿನಲ್ಲಿ ಎತ್ತಣ್ಗೆ ಸಂಚಾರ (ಮಂತ್ರಶ. ೩೧–೨೬). [ಎಡ$_1$ + ಹೊತ್ತು$_2$ (< ಪೊಱ್ತು)]

**ಎಡಱು₁** (ಕ್ರಿ). ೧. ಅಡ್ಡವಾಗಿರು ; ಅಡ್ಡಿಯಾಗಿರು ; ಪ್ರತಿಭಟಿಸು ; ವಿರೋಧಿಸು : "ಎಡಱು – ವಕ್ರಭಾವೇ, ದಾರಿದ್ರ್ಯೇ ಚ" (ಶಮಧಾ); "ವಕ್ರಭಾವದೊಳು ದಾರಿದ್ರ್ಯದೊಳೆಡಱು" (ಶಬ್ದಮಂ. ೧೦೬) ; ಎಡಱಿದೊಡೆನ್ನರೊಳಂ ಮಲ್ಲನೊರ್ವ ನಲ್ಲಲನೆಂಬೆಂ (ಪಂಪಭಾ. ೮–೫೪); ಎಲೆಲೇ ನಿನಾಜಿಲ್ ಕಡಂಗಲ್ ತೊಡರಲೆಡಱಲೊಟ್ಟಯ್ಯಲುಕ್ಕಲ್ ಪಳಂಚಲ್ ಪೊಳೆಪಿಂ ಮಾಜಾಂತು ಕಾದಲ್ (ಎಇ. XVI, ೬೧–೨೨ ; 1074) ; ನಡೆದಾತನ ಮೇಲೆ ಭೀಮಕೋಪಂ ತನಗಾಂತೆಡಱಿದರನಿಕ್ಕಿ (ನೇಮಿಪು. ೩–೩೦) ; ಇಂತುಜಿದಿಜಿದ್ದೈ ದೇಶಮನೆಂತೀಶಾದೇಶಮಂ ಸಮುಲ್ಲಂಘಿಸಿಯೆಂತಂತೆನ್ನೊಳೆಡಱಿ ನುಡಿದಂತಂತೆ ರಣಾಂಗಣದೊಳೊಡ್ಡಿ ನಿಲ್ ನಿರ್ಭಯದಿಂ (ಪಾರ್ಶ್ವಪು. ೨–೮೬) ; ಎಡಱಿದರನಟ್ಟಿ ಮೋದುವ ಪಡಿಯಜಗಟ್ಟಿಗೆಗಳ್ (ಶಮದ. ೮ ಪ್ರಯೋ) ; ಎಡಱಿದನೋ ಅವನ ನೊಸಲಕ್ಕರು ತೊಡೆದುದು (ಶಬ್ದಾನು. ೪೪ ಪ್ರಯೋ). ೨. ತೊಂದರೆಮಾಡು ; ಕಷ್ಟಪಡಿಸು : ಬೆಡಂಗನಾಳ್ದು ಕಳ್ಗಿಡಱದೆ ಪೆಂಡವಾಸದ ವಿಳಾಸದ ಸೂಳೆಯರೊಪ್ಪಿ ತೋಱಿದರ್ (ಪಂಪಭಾ. ೯–೧೦೩) ; ಕಡುಗಾಡಿ ನಾಡೆಯುಂ ಕಣ್ಗೆಡಱಿ [ಪಾಠಾಂ. ಕೆಡದೆ, ಕೆದಱಿ] ಮನಂ ಬೆರ್ಚೆ (ಕಾವ್ಯಾವ. ೨೦೦). ೩. ಅನುಮಾನಪಡು ; ಸಂಕೋಚಪಡು (?) : ನಿರಂತರಂ ಕಡಿಕಡಿದಿತ್ತ ಪೊ[ನ್ನೆ] ಬುಧ ಮಾಗಧ ವಂದಿಜನಕ್ಕೆ ಕೊಟ್ಟ ಕೋ[ಡೆ]ಡಱದೆ ಬೇಡಿ[ಮೋ]ಡಿಮಿದು ಚಾಗದ ಬೀರದ ಮಾತು ಕರ್ಣನಾ (ಪಂಪಭಾ. ೧–೯೯).
[ದೇ. ‖ ತಮಿ. ಮಲ. ಇಡಱು]

**ಎಡಱು₂** (ನಾ). ವಕ್ರತೆ (?). [< ಎಡಱು₁]

**ಎಡಱು₃** (ನಾ). ಬಡತನ; ದಾರಿದ್ರ್ಯ; ನಿರ್ಗತಿಕತನ: "ಎಡಱು – ವಕ್ರಭಾವೇ, ದಾರಿದ್ರ್ಯೇ ಚ" (ಶಮಧಾ); "ಎಡಱೆಂದುಂ, ತವಿಲೆಂದುಂ, ದಾರಿದ್ರ್ಯಂ" (ಕಶಸಾ. ೨೯–೬೨೨); ಒಡನೆ ದರಿದ್ರರೆಲ್ಲಮುಭಿಮಾನಿಗಳಪ್ಪೊಡಮಾಳ್ದನಿಚ್ಚೆಯಂ ನುಡಿವವರೆಲ್ಲಮಾತನೆಡಱೊಳ್ ನಿಲಲಾರ್ಪೊಡಮರ್ಥರಾಶಿಯಂ ಪಡೆವವರೆಲ್ಲಮೋಗಡಿಸದೀವೊಡಂ . . . ಈ ಯುಗಮೇಕೆ ಕನಿಷ್ಠಮಪ್ಪುದೋ (ಕಾವ್ಯಸಾ. ೪೨೩ ಶೂದ್ರಕ) ; ಎಡಱಿದೀವ ಕಲ್ಪತರುವೆಂದು ವನೀಪಕ ಕೋಟಿ ಸಂತಸಂಬಡೆ (ಪಂಪಭಾ. ೨–೫೮); ತುಱು[ಗಳವೊಳ್] ಪೆಣ್ಬುಯ್ಯಲೊಳೆಡಱುವೆಸದೊಳ್ ನಂಟನೆಡಱೊಳೂರಱುವಿನೊಳಂ ತಱಿಸಂದು ಗಂಡುತನಮನೆ ನೆಱಪದವಂ ಗಂಡನಲ್ಲನೆಂತುಂ ಷಂಡಂ (ಗದಾಯು. ೨–೨೪); ಆಡುವ ಬೇಡುವ ಪಾಡುವ ನೋಡುವ ಜನಕೆಲ್ಲಮಿವಾವ ಸೂಸುವ ಕುಡುವೀಡಾಡುವ ವಸ್ತುಗಳಿಂದೆಡಱೋಡುವಿನಂ ಪಿರಿದನಿತ್ತು ಬಿಯಮಂ ಮೆಱೆದಳ್ (ಸುಕುಮಾ. ೧೦–೯೨); ತೊಲಗದ ಸಂಪದಂ ಸೊಬಗುಗುಂದದ ಯೌವನದೇೞ್ಗೆ . . . ಎಡಱಿಲ್ಲದ ಭೋಗಮನಾರತ ಸಮುಜ್ಜ್ವಲಮೆನಿಸಿರ್ಪುದಾ ನಿಷಧದೇಶದ ಸನ್ಮುತಸಜ್ಜನರ್ಕಳಾ (ನಳಚಂ. ೧೦) ; ಎಡಱು ಬಂದಡಸಿರಲು ಧೈರ್ಯಂಗೆಡುವರೆ (ಕೌಶಿರಾ. ೨೯–೧೭).
[ದೇ. ‖ ತಮಿ. ಇಡಱು ; ತೆಲು. ಎಡರು = ದುರದೃಷ್ಟ]

**ಎಡಾರಕುಳಿ** (ನಾ). ಒಂದು ಊರಿನ ಹೆಸರು : ಪೋಟೂರ ವಸಿಷ್ಠಗೋತ್ರದ ಎಡಾರಕುಳಿಯ ಮಧುಸೂದನ ಭಟರ ಮಗ ವಿಷ್ಣುಭಟ್ಟೋಪಾಧ್ಯಾಯರಿಂಗೆ (ಎಇ. XXVII, ೨೮–೪೩ ; 1256).
[ಎಡಾರ್₀ + ಕುಳಿ ?]

**ಎಡಿಯಣ** (ನಾ). ಒಬ್ಬಾತನ ಹೆಸರು : ಎಡಿಯಣನ ತೋಂಟದಿಂ ಬಡಗಲು (ಸೌಇಇ. XX, ೧೧೫–೫೪ ; 1146).
[ಎಡಿ ? + ಅಣ₀ (< ಅಣ್ಣ₁)]

**ಎಡುಕು** (ನಾ). (ಕರಾ) ಸಂದು ; ಬಿರುಕು : ಬಂಡೆಯ ಎಡುಕಿನಲ್ಲಿ ಕಾಲು ಮರಡಿತು (ದೇವಹಂ. ೨೪೪). 'ಇಡುಕ್ಕು' ಪರಾ. [?]

**ಎಡುಗೋಲು** (ನಾ). (ಕರಾ) ಆಶ್ರಯ ; ಊರುಗೋಲು : ನಾನೇ ಅವಳಿಗೆ ಸರ್ವಸ್ವ. ಎಡುಗೋಲು. ಹೀಗಿದ್ದೂ ಅವಳನ್ನು ಬಿಟ್ಟು ಹೋಗುವುದೇ ? (ನಿರ್ದೋಷಿ. ೧೬). [ಎಡು₀ + ಕೋಲು₁ (< ಕೋಲ್₁)]

**ಎಡುನಾರಿಗೆಬೇರು** (ನಾ). ಒಂದು ಬಗೆಯ ಗಿಡಮೂಲಿಕೆ: ಬಾವಿಗೆ : – ಎಡುನಾರಿಗೆಬೇರಿನ ತಿಗುಡಂ ಎಣ್ಣೆಯಲ್ಲಟ್ಟು ಕೊಡೆಯಲು ಗುಣ (ವಿವೈವಿ. ೬೭). [ಎಡುನಾರಿಗೆ ? + ಬೇರು]

**ಎಡುವು** (ನಾ). [ಸಂಗೀತ] ಹಾಡು ಆರಂಭವಾಗುವ ಕಾಲ, ತಾಳ ಆರಂಭವಾಗುವ ಕಾಲ – ಇವೆರಡರ ಹೋಲಿಕೆ : ಇದರ ಪೂರ್ಣ ಪ್ರಕಾಶನಕ್ಕಾಗಿಯೇ ಕೃತಿ, ಎಲ್ಲಾ ವಿಧವಾದ ಎಡುವು (ಗ್ರಹ)ಗಳನ್ನೂ ಉಪಯೋಗಿಸಿಕೊಂಡಿರುವುದೇ ಅಲ್ಲದೆ . . . ಸಂಗತಿಗಳನ್ನೂ ಒಳಗೊಂಡಿದೆ (ಸಂಗೀತ. ೬೫). ℙ ಇದು ನಾಲ್ಕು ವಿಧಗಳು. ಅತೀತ, ಅನುಗತ, ಸಮ, ವಿಷಮ. [?. / ತಮಿ. ಎಡುಪ್ಪು]

**ಎಡೆ₁** (ಕ್ರಿ). ೧. (ಸಿಪ್ಪೆಯನ್ನು) ಸುಲಿ ; ತೆಗೆ : ತುಪ್ಪಾ ಕಾಸಿನ್ನಿ ಕಿತ್ತಳೆ ಹಣ್ಣು ಎಡೆದಿನ್ನಿ (ಹಳ್ಳಿಬಾ. ೧೬) ; ಅವರೆಕಾಯನ್ನು ಎಡೆ (ರೂಢಿ). ೨. ಬಿಚ್ಚಿತೋರು ; ಸ್ಪಷ್ಟವಾಗಿ ಕಾಣು : ಶಾಸ್ತ್ರಿಗಳಲ್ಲಿ ಬೇಕಾದಷ್ಟು ಸಂಪತ್ತು ಇರಬೇಕೆಂದು ಶಾಲಬ್ಬೆಯ ಕಣ್ಣಿಗೆ ಎಡೆದದ್ದು (ಹೊಸಕ್ಷಿ. ೪೩).
[ದೇ. ‖ ತಮಿ. ಇಡ]

**ಎಡೆ₂** (ಕ್ರಿ). ಸಾಧ್ಯವಾಗು.
ಎಡೆಯ = ಅಸಾಧ್ಯ : ಇಂತದ್ವಿತೀಯ ಕೌಶಲಮನ್ನುಮೆನಗೆಡೆಯ (ಹೆಬ್ಬರ. ೨೬–೧೧) ; ಕೆಲಸವನ್ನೆಸಗಲೆಸಗಿದ ಕೆಡುಕೆ ಕೊನೆಗದಕೆ ಮುಳುವಹುದು ಇದರೊಳಿಬ್ಬಗೆ ಎಡೆಯ (ಹೆಬ್ಬರ. ೩೪–೧೪). [?]

**ಎಡೆ₃** (ನಾ). ೧. ಪ್ರದೇಶ; ಸ್ಥಳ; ಜಾಗ : ಎರೆ ಪುಲಿಗೆಱೆಯಾ ಕೋಯಿಲ್ಲೊಡಾ ಎಡೆ ಇಪ್ಪತ್ತು ಗಣ್ದುಗಂ (ಎಕ. IV, ನಾಗಮಂ. ೮೫–೬೮ ; 776) ; ಕಂದಮುಮುಮಳಿನವೃತ್ತಮುಮೊಂದೊಂದೆಡೆಗೊಂದು ಜಾತಿಜಾಣೆಸೆಯೆ (ಕವಿರಾ. ೧–೩೪) ; ದಕ್ಷಿಣಸಮುದ್ರದ ತಡಿವಿಡಿದು ಬಂದು ರಾಮಚಂದ್ರಂ ವಿಹರಿಸಿದೆಡೆಗಳಂ ನೋಡಿ (ಪಂಪಭಾ. ೪–೧೮ವ) ; ನಾಯ್ಕುಗೆಡೆಯೆಲ್ಲಮಂ ಪುಗಿಸಿ (ಸುಕುಮಾ. ೨–೬೩) ; ಇವು ವರ್ಣಾವೃತ್ತಿಗೆ ಸಲ್ಲುವು ಸಂದುಂ ಪ್ರಾಸದೆಡೆಗೆ ಸಲ್ಲವು (ಶಮದ. ೧೯) ; ಹಸುವು ತನ್ನ ಎಳೆಗರುವಿನೆಡೆಗೆ ಬಂದಂತೆ ದೇವರು ನಾಮದೇವನೆಡೆಗೆ ಬಂದನು (ಜಗದಾ. ೩೦) ; ಊಟವಾದಮೇಲೆ ಆಯಾ ಜಾತಿಯವರು ತಾವು ಕುಳಿತಿದ್ದ ಎಡೆಗಳನ್ನು ತಾವು ತಾವೇ ಚೊಕ್ಕಮಾಡಿ ಕೈತೊಳೆದುಕೊಂಡು ಬಂದು (ರಂಗಕ. ೯೧). ೨. ನಡುವೆ; ಮಧ್ಯ : ಅನ್ನೆಗಂ ಎಡೆಯೊಳರಸನ ಪುರೋಹಿತಂ ಸೋಮಶರ್ಮನೆಂಬೊಂ (ವಡ್ಡಾರಾ. ೧೨–೩) ; ಎಡೆಯಲಾದ ಒಂದು ಉಡುಗೆಯನುಟ್ಟು ಸಡಿಲಿದರೆ ಲಜ್ಜೆ (ಬಸವ. ೬೭೫) ; ಸೈಂಧವಗಲ್ಲದಿದ್ದರೆ ಮರಣ ಪಾರ್ಥಂಗಲ್ಲದೆಡೆಯಲಿ ಪರಿಹರಿಸುವುದ ಕಾಣೆವೆಂದರು ಚರರು (ಕುವ್ಯಾದ್ರೋ. ೮–೫೦). ೩. ಅವಕಾಶ; ಸಂದರ್ಭ : ಮನೆಗೆ ಬಂದೆಡೆಯೊಳು ಮನ್ನಿಸಿ ಮನಮೊಲಿದನುವಱಿತಾದರಿಸುವುದು (ಹದಿಬ. ೪–೩೬) ; ಪತ್ರಗಳ ವಿಷಯ ಅಲ್ಲಿ ಹೋಗಲು ಎಡೆಇದ್ದರೆ ತಾನೆ ? (ಮುಂಗಾಮು. ೧೬). ೪. ಆಸ್ಪದ; ಈಡು : ಮುನಿವರಿಗೆ ನಗೆಗೆಡೆಯಾಗಿ ನಿಷ್ಕಾರಣಂ ಮಡಿವರೇ ಕಂದ (ಹಚಕಾ. ೧೨–೫೧) ; ಅತಿವೈದ್ಯದಿಂದ ಹೊಸರುಜೆನಕೆಡೆಯಾದೀತೊ (ಮಂಕುಕ. ೮೭೭). ೫. ಸಮಾನ; ಸಮ : ಬಡನಡು ಬಳುಕುವ ನಡು ಮೃಣಾಳದ ಮಾಲೆಗೆಡೆಯಾದ ನಡು (ಕಂಸವಿ. ೬–೧೧೧). ೬. ಹತ್ತಿರ; ಸಮೀಪ; ಸನಿಯ : ಪಲಕೆಜದ ಪಱಿಗಳೆಡೆಯೊಳ್ ಬಾಜಿಸುವ ಪದಿರ ಪಱಿಗಳುಂ (ಕಾದಂಪೂ. ೪೭೪) ; ಎಡೆಕುಂಟೆ ಬಿತ್ತಿದಮೇಲೆ ಮೂರುಸಾಲು ಎಡೆಯ ಹೊಡೆದು (ಕೃಷಿಪ್ರ. ೪೯).

ಎಡೆಯಾಗು = ಅವಕಾಶವಾಗು; ಆಸ್ಪದವಾಗು; ಗುರಿಯಾಗು; ಈಡಾಗು: ಭೂಭುವನದೊಳಾರೆಣೆಯೆನಗೆಂಬೊಂದು ಸಂತಸಕ್ಕೆಡೆಯಾದೆಂ (ಆದಿಪು. ೪–೩೦); ಯೋಜನವೆರಡಱಲಿ ಘೃತತೈಲದುಗ್ಧಾದಿಗಳಿಗೆಡೆಯಾಯ್ತು (ತೊರಠಾ. ೧–೭–೬); ಸಮಸ್ತ ನದಿಗಳ ಸಡಗರದೊಳಗೊಳಗೊಂಡು ಮುಕ್ತಿಸ್ಥಾನಕೆಡೆಯಾಗಿಹಳು ಕಾವೇರಿ (ಕಂಠನವಿ. ೨–೧೯). ಎಡೆಯೆಡೆ = ಅಲ್ಲಲ್ಲಿ; ನಡುನಡುವೆ: ಎಡೆಯೆಡೆಯ ಮರಂಗಳ ತೋಱಿಗಳ ಬಾಡಂಗಳ ಪೆಸರ್ಗಳಂ ಬೆಸಗೊಳುತ್ತುಂ (ಪಂಪಭಾ. ೨–೯೭ ವ); ಮುಗಿಲ ಮುಟ್ಟುವ ಕೋಟೆಯ ತೆನೆಯೆಡೆಯೆಡೆ ಹೊಗರೆದ್ದ ದಸಿ ಮೊನೆ ಶೂಲ (ಕಂಠನವಿ. ೧೧–೧೩೧).

[ದೇ. ‖ ತಮಿ. ಇಡಂ; ಮಲ. ಇಡಂ, ಎಡಂ, ಏಡಂ; ಕೊಡ. ಏಡೆ; ತುಳು. ಇಡೆ; ತೆಲು. ಎಡ]

**ಎಡೆ₄** (ನಾ). ೧. ನೈವೇದ್ಯ: ಭಕ್ತರು ಎಡೆಯ ತಳಿಗೆಯನ್ನು ಮೇಲ್ವಾಸಿನಿಂದ ಮುಚ್ಚಿಕೊಂಡು . . . ಬರತೊಡಗಿದರು (ಹಬ್ಬಬ. ೫); ದೇವರ ಎಡೆ (ರೂಢಿ). ೨. ಊಟ; ಆಹಾರ: ಬಾಡಿದ ಮೊಗಮಂ ದಯೆಯಿಂ ನೋಡೆ ಕರಂ ಪಸಿದ ಮೊಗಮನಱಿದುಣಲೆಡೆಯಂ ಮಾಡುವರಾರ್ಹತರೆಡೆಯಂ ಮಾಡುವರುಣಿಸಾಗದಂತು ಸಮಯಿಗೆ ಲೋಗರ್ (ಸಮುಪ. ೪–೮೪); ಆತ್ಮಜರು ತಾವೊಲಿದು ತಮ್ಮೈನೂರ್ವರೂಟಕ್ಕೆಡೆಗಳೊಂದಿಸಿರೆ (ಜೀವಂಚ. ೫–೬೧); ದೊನ್ನೆಯ ಹರಹಿ ಬಾಳೆಲೆ ಹಾಳೆಯ್ಗಂ ಹಾಕಿ ಬಿನ್ನಣದಿ ಮಾಡಿದಾ ಚೌಕದೆಡೆಗಳ ಮುಂದೆ . . . ಭೋಜನಮನಿಂತು ಮಾಡುತ್ತಿರ್ದರಾ ಪಾರ್ವರು (ಸಮ್ಯಕೌ. ೭–೨೩); ಹನ್ನಮನುಂಡುಂಡು ಸವಿಗೊಂಡ ಬೋಟಿಯರೆತ್ತಾನುಮೊರ್ವನೀ ನಿಚ್ಚವಲಿಯೆಡೆಯಂ ಪುರುಳ್ಗಾಣದೆ (ರಾಮಾಶ್ವ. ೫೫–೩೦). ೩. (ಊಟಕ್ಕೆ ಬಡಿಸುವ) ಎಲೆ; ತಟ್ಟೆ: ಅಡಿಗೆಯಾಗಿದ್ದರೆ ಮೂರು ಎಡೆಗಳನ್ನು ಸಿದ್ಧಪಡಿಸು (ರಾಜಾಮು. ೨೪೬).

ಎಡೆಮಾಡು = ಊಟಕ್ಕೆ ಬಡಿಸು; ನೈವೇದ್ಯಮಾಡು: ತಳಿಗೆಯನಿಟ್ಟು ತಮ್ಮನ ಮಲಗಿಸಿ ತೊಟ್ಟಿಲೊಳಗೆ ಎಡೆಮಾಡಿದಳೊಬ್ಬಳು (ಪುರಂದ. ೧–೧೧೧–೧೭); ದೇವರಿಗೆ ಎಡೆಮಾಡು (ರೂಢಿ). [?]

**ಎಡೆ₅** (ನಾ). ಕೀಳಾಗಿರುವಿಕೆ; ಮಿಶ್ರಣ; ಅಶುದ್ಧ. 'ಎಡೆಮಟ್ಟು' ಪರಾ. [?]

**ಎಡೆ₆** (ಅ). ಹೆಚ್ಚಾಗಿ; ಬಹಳವಾಗಿ; ಅತಿಶಯವಾಗಿ: "ನಾಡೆಯೆಡೆಯಾವಗಂ ನೆಱೆ ನೀಡುಂ . . . ಅಧಿಕಾರ್ಥಂ" (ಶಮದ. ೩೦೪); "ಮಿಗೆಯುಣೆಯರಂ ಯೆಡೆಯುಱೆಯೆ ನಿಪ್ಪ ವೆಲ್ಲಂ ಖಿಲಸಿತಾಧಿಕಂ" (ಶಬ್ದಮಂ. ೫೯); "ಎಡೆಯೆನಲ್ ಪೆರ್ಚೆನಿಕ್ಕುಂ" (ಕಶಶ. ೯೫).

[ದೇ. ‖ ತಮಿ. ಇಡ = ವಿಸ್ತಾರವಾದ, ದೊಡ್ಡದಾದ]

**ಎಡೆ₇**-(ಸಪೂರೂ)=ಎಡ₃. ☞ ಎಡಗಡೆ ಎಂಬ ಅರ್ಥದಲ್ಲಿ ಎಡೆ ಎಂಬ ರೂಪ ಪ್ರಯೋಗವಾಗಿರುವ ಸಮಾಸಪದಗಳಿಗೆಲ್ಲಾ ಎಡ ಎಂಬ ರೂಪ ಪೂರ್ವಪದವಾಗಿ ಪ್ರಯೋಗವಾಗಿರುವ ಸಮಾಸಪದಗಳನ್ನು ನೋಡಿ.

**ಎಡೆಕಟ್ಟು₁** (ಕ್ರಿ). (?); "ಮಧ್ಯಂತರದಲ್ಲಿ ಬಂಧಿಸು" (ಶಿವಗೀ. ಕೋಶ): ಬಳಸಿ ಬ್ರಹ್ಮಚಾರಿಗಳು ಉಂಡು ಉಪವಾಸಿಗಳು ಎಡೆಕಟ್ಟಿ ಕಡೆ ಕಂಠಣಿಸದ ಸಮಹಿತ ಸಾಧ್ಯರು (ಶಿವಗೀ. ೮೧–೩೯೭).

[ಎಡೆ₃ + ಕಟ್ಟು₁]

**ಎಡೆಕಟ್ಟು₂** (ನಾ). (?); "ಮದ್ದಳೆಯ ಮಧ್ಯಭಾಗದಲ್ಲಿ ಹುಟ್ಟುವ ನಾದ" (ಪ್ರಭಣ್ಣ): ಎಡೆಕಟ್ಟು ಕಡೆಕಟ್ಟು ಜತಿಗಳುಪ್ಪರ ಜತಿ ತುಡುಕು ಪಹರಣವಾದಿಯಾದ ಶಬ್ದಂಗಳು (ರೇವಣ. ೩–೪೨). [ಎಡೆ₃ + ಕಟ್ಟು₂]

**ಎಡೆಕಡೆ** (ನಾ). ನಡುವೆ ಕೊನೆ; ಗೊತ್ತುಗುರಿ (?): ಇಂದು ತನ್ನ ಕೃತಾರ್ಥತನಕೇನೆಂದರೆಡೆಕಡೆಯುಂಟೆ ಶರಣಾಗು (ನಿಭಾಗ. ೩–೯–೬೨); ಕಡಿದು ಬಿಸುಡುವೆನವರ ತೋಳನು ಪೊಡರಿಸಿದರೀ ನಮ್ಮೊಡನೆ ಸಾಕೆಡೆಕಡೆಯ ಮಾತೇಕೆ ಮಾನ್ಯರದಾರು ನಿಮ್ಮಂತೆ (ನಿಭಾಗ. ೩–೭–೫); ಕುಡುವವಂ ಕುಡುವ ಬೇಡುವರೊಳಗೆ ಕುಡೆನೆಂಬ ಬೇಡೆನೆಂಬ ಎಡೆಕಡೆ [ಪಾಠಾಂ. ತಡೆ]ಗಳಿಲ್ಲೆಂಬ ನಾಣ್ಣುಡಿ (ಜೈಮಿಭಾ. ೨೬–೫೨).

[ಎಡೆ₃ + ಕಡೆ₃]

**ಎಡೆಕಾಲ** 'ಎಡೆಗಾಲ' ನೋ.

**ಎಡೆಕಾಸು** (ನಾ). ಎಡೆಯ ಜತೆಯಲ್ಲಿ ಇಡುವ ಕಾಸು; ದಕ್ಷಿಣೆಯ ಕಾಸು (ಕಿ). [ಎಡೆ₄ + ಕಾಸು₁]

**ಎಡೆಕುಂಟೆ** (ನಾ). (ಸಾಲುಗಳ ಮಧ್ಯೆ) ಹರಗಲು ಉಪಯೋಗಿಸುವ ಸಣ್ಣ ಕುಂಟೆ: ಎಡೆಕುಂಟೆ ಎಂಬ ಮುಟ್ಟನ್ನು ಸಾಲುಗಳ ಮಧ್ಯೆ ಹೊಡೆದು ಕಳೆಯನ್ನು ಸುಲಭವಾಗಿ ತೆಗೆಯಬಹುದು (ವ್ಯವಮು. ೨೨); ಎಡೆಕುಂಟೆಯ ಬಾಯಿಗೆ ಸಿಕ್ಕದೆ ತಪ್ಪಿಸಿಕೊಂಡಿದ್ದ ಹೋಕನ್ನು ಹುಡುಕಿ ಹುಡುಕಿ ಕಿತ್ತುಹಾಕುತ್ತಾನೆ (ಬೆಳಮು. ೧೦೩). [ಎಡೆ₃ + ಕುಂಟೆ₁]

**ಎಡೆಕೊಳ್** (ನಾ). (ದೇವರಿಗೆ) ಎಡೆಯಾಗಿಟ್ಟ ಕೂಳು; ನೈವೇದ್ಯ (?): ಅಲ್ಲಿಗೆ ದೇಸಿಗ ಗಣದವರ್ಗಲ್ಲದೆ ಮುತ್ತಾವ ಗಣದಲಾರ್ಗಂದೆಡೆ[ಡೆ]ಕೊಳಲ್ಲದೆ ತೇಜಂಬೊಂದಿಪರ್ಗಲ್ಲದದೆಂತುಂ ಬುಧಾಬ್ಜವನಕಳಹಂಸ (ಎಕ. VII, ಶಿವಮೊ. ೯೭–೪೧; 1113).

[ಎಡೆ₄ + ಕೂಳ್ (< ಕೂೞ್₁)]

**ಎಡೆಕೆಯ್ಯಿಸು** (ಕ್ರಿ). ಅವಕಾಶ ಮಾಡಿಕೊಡು (?): ತಾಯೂರ ಪಱಿಕೆಱಿ ಬಸವಯ್ಯ ತನ್ನ ಪರ ಏರಿಯ ಜೋಳದ ಕೆಯ್ಯ ಪಱಿ ಕಮ್ಪಳದೆಡೆಕೆಯ್ಯಿಸಿ ಮಾರಗವುಣ್ಣಗಂ (ಎಕ. III, ನಂಜನ. ೯೭–೬; 898 ?).

[ಎಡೆ₃ + ಕೆಯ್ಯಿಸು (< ಕೆಯ್ಸು)]

**ಎಡೆಕೆಱೆಗಾಲ** (ನಾ). ಒಂದು ಊರಿನ ಹೆಸರು: ಎಡೆಕೆಱೆಗಾಲ ಮೂಡಣ ಭಾಗದ ಮುತ್ತಾಣಯಂ (ಎಕ. III, ನಂಜನ. ೧೩೯–೧೩; 915).

[ಎಡೆ₃ + ಕೆಱೆ + ಕಾಲ ?]

**ಎಡೆಕೊಡು** 'ಎಡೆಗೊಡು' ನೋ.

**ಎಡೆಗಂಡಿ** (ನಾ). ನಡುವಿನ ರಂಧ್ರ; ಮಧ್ಯದ ತೂತು: ಕೋಟೆಯ ತೆನೆಯೆಡೆಗಂಡಿಯೊಳ್ ತಲೆಯಿಟ್ಟು ನೀಟಲಿ ನೋಡುವರುಗಳ ಸೂಟಯ ಬಾಣಗಳಿಂದಿಟ್ಟು (ಕಂಠನವಿ. ೧೮–೭೭). [ಎಡೆ₃ + ಕಂಡಿ₁]

**ಎಡೆಗಂಡಿಕೆ** (ನಾ). (?); "ಮಂತ್ರವಾದಿ" (ಪಾರ್ಶ್ವಪು. ತಾತ್ಪರ್ಯ): ಚಂಡಿಕೆ ಭೃಗುಭೀತಾಳಂ ಚಂಡತೆಯಿಂ ಕೆಯ್ದುವಿಡಿದು ನಿಂದಾಂತೊಡೆ ಮಾಕೊರ್ಂಡು ಗೆಲಲ್ನೆಱೆವೆಡೆಗೆಡೆಗಂಡಿಕೆಯಾಚಾರ್ಯನೆನಿಸಿದಂ ಬಿನ್ನಣದಿಂ (ಪಾರ್ಶ್ವಪು. ೭–೧೦೦); ಚಂಡಿಕಾಪತಿಯ ಚಕ್ಷುವಿನುರಿಯ ನಂದಿಪಾ ಪ್ರಚಂಡಿಕೆಯ ಪಡೆದ ಪಂಚೇಷುವಿನ ಖಡ್ಗದೆಡೆಗಂಡಿಕೆಯ ಸಮದ ನಡು (ಸಮ್ಯಕೌ. ೮–೧೦). [?]

**ಎಡೆಗಜ್ಜ** (ನಾ). = ಎಡೆಗೆಲಸ: ಗಿರಿಸುತೆ ಪೇಳ್ದ ಕಜ್ಜಮನೊಡರ್ಚಿದರೆಲ್ಲಡೆಯೊಳ್ ಸುರಾಂಗನೋತ್ಕರಮಿರದಲ್ಲಿಗಲ್ಲಿಗೆಡೆಗಜ್ಜಮನುಜ್ಜುಗಿಸಿತ್ತು (ವೃಷವಿ. ೫–೮೦). [ಎಡೆ₃ + ಕಜ್ಜ₁]

**ಎಡೆಗಟ್ಟು** (ನಾ). ೧. ಒಳನಿಯಮ; ಕಟ್ಟುಪಾಡು; "ಭೇದ" (ಪಂಪರಾಮಾ. ಕೋಶ): ಭರತಂಗೀವುದು ವಸುಮತಿಯನೆಮ್ಮೊಳೆಡೆಗಟ್ಟುಂಟೇ (ಪಂಪರಾಮಾ. ೬–೧೧೯); ಪರಿವ ಮನಕ್ಕೆ ಪಗ್ಗಮಿಲ್ಲಂ ನೋಡುವ ಕಣ್ಗಳ್ಗೆಡೆಗಟ್ಟಿಲ್ಲಂ [ಪಾಠಾಂ. ಗಟ್ಟೆಯಿಲ್ಲ] (ಅನಂಪು. ೧೧–೩೨ ವ); ಕುಡೆ ಮುದ್ರಿಕೆಯಂ ನಮಗಿನ್ನೆಡೆಗಟ್ಟೇಕೀ ಭವಕ್ಕೆ (ಮಹಾನೀ. ೩–೧೨೬). ೨. ಕ್ಲುಪ್ತವಾದ ಜಾಗ; ನಿಶ್ಚಿತವಾದ ಸ್ಥಳ: ಪನ್ನೀರ ಕೊಪ್ಪರಿಗೆ ದೋಣಿಗಳಾ ಕೇರಿಕೇರಿಯೊಳೆಡೆಗಟ್ಟಿನೊಳಿಡೆ ಪರಿವಾರ ವಸಂತವಾಡಿದುದು (ಭರಚ. ೫೦–೨೮). ೩. ಸಣ್ಣ ಕಟ್ಟೆ (ಕಿ). [ಎಡೆ₃ + ಕಟ್ಟು₂]

**ಎಡೆಗಟ್ಟುಗೆಯ್** (ಕ್ರಿ). ಭೇದವನ್ನು ಮಾಡು ; ಭೇದವೆಣಿಸು : ಕೊಟ್ಟುಕೊಂಡನ್ನರು ಹೊಸತಾಗಿ ಬೀಯಗವಟ್ಟಿಗೆ ಬರುತಿರ್ದರೀಗ ಹುಟ್ಟು ಬೀಯಗರಲ್ತೆ ನೀವದೆಱಿಕೊಳಗೆಡೆಗಟ್ಟುಗೆಯ್ವುರೆಯೆಂದರೊಡನೆ (ಧರಚ. ೩೩–೫೭) [ಎಡೆಗಟ್ಟು + ಗೆಯ್ (< ಕೆಯ್$_1$)]

**ಎಡೆಗಟ್ಟೆ** (ನಾ). ಸಣ್ಣಕಟ್ಟೆ (?). [ಎಡ್ತೆ$_3$ + ಕಟ್ಟೆ$_1$]

**ಎಡೆಗಡಿ** (ಕ್ರಿ). ನಡುವೆ ಕತ್ತರಿಸು, —ಭೇದಿಸು : ಮೂಢ ಥಥ ಹೋಗೆನುತ ಫಲುಗುಣಂ ತೆಗೆದೆಚ್ಚನಾತನ ವರೂಥ ಹಯ ಸಾರಥಿಗಳ [ಪಾಠಾಂ. ಳ]ಡೆಗಡಿದನು (ಜೈಮಿಭಾ. ೨೫–೩೩) [ಎಡ್ತೆ$_3$ + ಕಡಿ$_1$]

**ಎಡೆಗಣೆ** (ನಾ). ನಡುವೆ ಬರುವ ಬಾಣ ; ಎದುರು ಬಾಣ : ಕತ್ತರಿಸು ವೆಡೆಗಣೆಗಳಂ ಮಿಾಱಿ ನಡುವೆದೆಯನುತ್ತರಿಸಿ ಕೋಲತ್ತಲಡಗಿತವನಿ ಯೊಳಾಗ (ಜೈಮಿಭಾ. ೧೨–೩೯). [ಎಡ್ತೆ$_3$ + ಕಣೆ$_1$]

**ಎಡೆಗಲಸು** 'ಎಡೆಗಲಿಸು' ನೋ.

**ಎಡೆಗಲಿಸು, ಎಡೆಗಲಸು** (ಕ್ರಿ). ನಡುವೆ ಸೇರಿಸು ; ಬೆರೆ : ಗಾಳಿಯ ನೆಡೆಗಲಿಸಿದುದು [ಪಾಠಾಂ. ನೆಲೆಗೆಡಿಸುವೆನೆ] ವಿನೀಳಘನಾಘನಮನಳಱಿ ಪಱಿದುದು ಮುಕ್ತಾಜಾಳ ಪರಿಲಂಬಿ . . . ವಿಮಾನಂ (ಆದಿಪು. ೪–೮೫) ; ಶರದದ ನಿಱಿಮುಗಿಲ ತುಱುಗಲನೆಡೆಗಲಿ[ಪಾಠಾಂ. ಲ] ಸಿದ ವಿದ್ಯಾಧರಿಯ ಪರಿಯನನುಕರಿಸೆ (ಚಂದ್ರಪ್ರ. ೬–೬೩ ವ) ; ಎಡಬಲದೊಳಗೆಡ[ಡೆ]ಗಲಿಸಿದಬಲೆಯರ ನಡುವೆ ನರೇಂದ್ರಲಲಾಮಂ (ಜಯಕಾ. ೧೨–೧೨) ; ಬಂದು ಬಳಿಕೆಡ[ಡೆ]ಗಲಿಸಿ ಸಿಂದು (ವೀಶೈಪು. ೬–೧೫–೩೪). **ಎಡೆಗಲಸು** : ಮುನ್ನಂ ಸೀಳುತ್ತಿ ರ್ದುಱಿದ ಪಲಗೆಗಳೆರಡುಮನೆಡ[ಡೆ]ಗಲಸಿರ್ದು (ಪಂಚತಂ. ೩೦–೭) ; ಕೆಡೆಮುಟ್ಟ ಕರ್ಮಮುಮನೊಡೆಮುಟ್ಟ ಬೊಮ್ಮಮುಮನೆಡೆಗಲಿಸಿ ದಾಂಟಿ ಸಂಸ್ಕೃತಿ ಜಲಧಿಯಂ (ಸಾನಂಚ. ೧–೪೦) ; ಪಡಿ ತಳಿಸಿ ಸಹದೇವ ನಕುಲರನೆಡೆಗಲಸಿತರ್ಜುನನ ರಥ (ಕುಮ್ಮಾಶ. ೨–೨೩) ; ಭೂತಕದಂಬಪತಿಗಳು ತಮತಮಗೆ ನೆರೆದಂಬಿಕೆಯನೆಡ[ಡೆ]ಗಲಿಸಿ ನಡೆ ದುದು ಕೊಡೆ ಸಂದಣಿಸಿ (ನಿಭಾಗ. ೪–೧–೩೬) ; ಒಡನೆ ಕೈವಾರಿಸುವ ವಂದಿಗಳೆಡೆಗಲಸಲಾ ರಾಕ್ಷಸಾಧಿಪ . . . ನಡೆತಂದ (ನಿಭಾಗ. ೯–೧೦–೩೫). [ಎಡ್ತೆ$_3$ + ಕಲಿಸು$_2$ (< ಕಲಸು$_1$)]

**ಎಡೆಗಱೆ** (ನಾ). ಮಧ್ಯದ ಮಚ್ಚೆ ; ನಡುವಿನ ಕಲೆ : ಪೊಡೆಯಲರನ ಪಾದದ ಪಜ್ಜೆಯೋ ಎನೆ ಯೆಡೆಗಱೆ ಯೆಸೆದುದಾ ಶಶಿಗೆ (ಶ್ರೀಪಾಲ. ೬–೧೮). [ಎಡ್ತೆ$_3$ + ಕಱೆ$_2$]

**ಎಡೆಗಾಣ್** (ಕ್ರಿ). ಸ್ಥಳವನ್ನು ಕಾಣು ; ಜಾಗವನ್ನು ನೋಡು ; ಆಶ್ರಯವನ್ನು ಕಾಣು : ಬೇಱೊಂದೆಡೆಗಾಣದುದ್ಧತ ರಿಪುಶ್ರೀಕಾಂತೆ ತನ್ನಂ ಶರಣ್ಬುಗೆ (ಶಾಂತಿಪು. ೨–೨೮) ; ಭಯಾಕುಲ ವೈರಿಸಂಕುಳಂ ಪುಗಲೆಡೆಗಾಣದುಳ್ಕೊಡಮೆಯೆಲ್ಲಮನೊಪ್ಪಿಸಿ (ಮಲ್ಲಿಪು. ೪–೧೫೦) ; ಒಡಲೆಲ್ಲಂ ಬಡತನದಿಂ ಗಡ ಗಿಡಿಗಿಡಿಜಂತ್ರಮಾಗೆ ಕಣ್ಣೆಲ್ಲಂ ತಮ್ಮೆಡೆಗಾಣ ಬಾರದೆನಿಸಿರೆ ಕಡುಗಲಿ ನಿತ್ಯೋಪವಾಸದೊಳ್ಪೆಱೆ ನೆಗಟ್ದಂ (ಧರ್ಮಾಮೃ. ೬–೩೭). [ಎಡ್ತೆ$_3$ + ಕಾಣ್]

**ಎಡೆಗಾಲ, ಎಡೆಕಾಲ** (ನಾ). ಮಧ್ಯದ ಕಾಲ ; ಕೇಡುಗಾಲ ; ಕೆಟ್ಟಕಾಲ; "ಕೇಡು" (ಗಂಗಾಮ. ೫೧). **ಎಡೆಕಾಲ** : "ಕೇಡುಗಾಲ" (ಗಂಗಾಮ. ೫೧). [ಎಡ್ತೆ$_3$ + ಕಾಲ$_1$]

**ಎಡೆಗಾಳ** (ನಾ). ದೊಡ್ಡದೂ ಅಲ್ಲದ, ಚಿಕ್ಕದೂ ಅಲ್ಲದ, ಮಧ್ಯಮ ಗಾತ್ರದ ಗಾಳ; ತೋರವಲ್ಲದ, ಸಣ್ಣದಲ್ಲದ ಗಾಳ: "ಎಡೆಗಾಳಂ ಸಣ್ಣಗಾಳಂ" (ಕಬ್ಬಕೈ. ೯೭) ; ಎಡೆಗಾಳ, ಗಳಗಾಳ, ಸಣ್ಣಗಾಳ (ಶಮದ. ೨೯೮ ಪ್ರಯೋ). [ಎಡ್ತೆ$_3$ + ಗಾಳ]

**ಎಡೆಗಿಡಿಸು** 'ಎಡೆಗೆಡಿಸು' ನೋ.

**ಎಡೆಗಿಡು** 'ಎಡೆಗೆಡು' ನೋ.

**ಎಡೆಗಿಱಿ** (ಕ್ರಿ). ೧. ಆಕ್ರಮಿಸು ; ಆವರಿಸು. ೨. ದಟ್ಟವಾಗು ; ಕಿಕ್ಕಿರಿ ; ತುಂಬಿರು : "ಎಡೆಗಿಱಿ (ಎಡೆಗೆ + ಇಱಿ) – ಸಂಛನ್ನೇ (ಮುಚ್ಚು)" (ಶಮಧಾ) ; ಒಂದನೊಂದು ತಳ್ತಿಡಗಿಱಿದೆತ್ತಲುಂ ನಡೆವ ದಂತಿಘಟಾಳಿಯಿನೆತ್ತವೋದುದು (ಆದಿಪು. ೧೨–೬೨) ; ಬಿಡದಡರಿ ಕೊರ್ಬಿ ಕುಚಯುಗವೆಡೆಗಿಱಿದರೆ (ಕಾದಂಸಂ. ೯) ; ಸುರತರಂಗಿಣಿಯ ತೆರೆಗಳೆಡೆಗಿಱಿದು ತೊಡರ್ದ ಮೃಡನ ಕೆಂಜಡೆಯ ಜೂಟಮಿದೆಱೊಡನೆ ಪಡಿಯಕ್ಕುಂ (ವರ್ಧಪು. ೧೦–೫ ವ) ; ಎಡೆಗಿಱಿದ ಪೂಗಡಿಯ ಗುಡಿಗಳೊಳಂ (ಕಬ್ಬಕಾ. ೨೦೮) ; ಈಪ್ಸಿತ ವರವಸ್ತುವನೀವಾಪಣ ನಿಕರಂ ಕರಮೆ ವಿರಾಜಿಸುತಿರ್ಪುವು ತತ್ಪುರವೀಥಿಯೊಳೆಡೆಗಿಱಿದು (ಜಯಕಾ. ೧–೫೭). 'ಇಡಿಕಿಱಿ' ಪರಾ. [ಎಡ್ತೆ$_3$ + ಕಿಱಿ$_1$]

**ಎಡೆಗುಡು** 'ಎಡೆಗೊಡು' ನೋ.

**ಎಡೆಗುತ್ತಿ** (ನಾ). ನಡುವಣ ದೀಪ : ಎಡೆಗುತ್ತಿಗಳನಲ್ಲಿಗಲ್ಲಿ ನಿಂದ ದ್ರಿಯ ನಿಡುಗಲ್ಲುಗಳನದೞೊಳಗೆ ಎಡೆಯಾಡುತಿಹ ದೋಣಿ ದುಗ್ಗಿ ಕಪ್ಪಲು ದೊಡ್ಡ ಹಡಗುಗಳಿರವ ನೋಡಿದರು (ಭರಚ. ೨೩–೯೭) ; ಜಡೆಯಾ ಜಂಗಮರೂ ಜಡೆಯಲ್ಲಿ ಒದರಾರು ಕಡಗಾ ಸಮುದ್ರಾ ಎಡು[ಡೆ]ಗುತ್ತಿ (ಹುಟ್ಟಹ. ೯೫). [ಎಡ್ತೆ$_3$ + ಗುತ್ತಿ$_3$]

**ಎಡೆಗುಳಿ** (ನಾ). ಸೊಂಟದ ನಡುವಣ ಕಿಬ್ಬೊಟ್ಟೆಯಲ್ಲಿರುವ ರಂಧ್ರ, —ಹಳ್ಳ (?) : ದಾಸಿಯ ಸಂಗವ ಮಾಡುವ ಭಕ್ತಂಗೆ ಶಿವಪೂಜೆಯ ದಂದುಗವೇಕೆ ವೇಶಿಯ ಸಂಗವ ಮಾಡುವ ಭಕ್ತಂಗೆ ಪ್ರಸಾದವ ಕೊಂಡಿಹೆನೆಂಬ ಆಸೆ ಏಕೆ ಪರಸ್ತ್ರೀಯರ ಸಂಗವ ಮಾಡುವ ಭಕ್ತಂಗೆ ಬ್ರಹ್ಮದ ಮಾತಿನ ನಾಲೆ ಏಕೆ ಇಂತಿರ್ದವರು ಎಡೆಗುಳಿಯಲ್ಲಿ ಹೇತು ತಿಂದಂತೆ ಕಲಿದೇವರ ದೇವಾ (ಸರ್ವವ. ೧೮೩–೮೪೦) [ಎಡ್ತೆ$_3$ + ಕುಳ್ಳಿ$_3$ (< ಕುಟ್ಟಿ$_2$). / ತಮಿ. ಇಡ್ಡೈಕ್ಕುಟಿ]

**ಎಡೆಗೆಡಪು, ಎಡೆಗೆಡಹು** (ಕ್ರಿ). ಇದ್ದ ಎಡೆಯಲ್ಲಿಯೇ ಕೆಡವು ; ನಡುವೆ ಬೀಳಿಸು ; ಸೊರ್ಕಾನೆಯ ನಿಗ್ಗವಕ್ಕೆ ಎರ್ದೆಯೊಡ್ಡಿ ಸೋಂಕದ ಮುನ್ನಮೆ ಒರ್ಮೆಯ್ಯೊಳೊಲೆದು ತಪ್ಪಿಸಿ ಎಡೆಗೆಡಪುವಂತೆ ಕೆಡಪಿ (ಚಿಕವಂ. ೧೬೫–೩). **ಎಡೆಗೆಡಹು** : ಧೇನುವನು ಕಂಡೆಡೆಗೆಡಹಿ ತನ್ನೊಡಲ . . . ಪೂಜಿಸಿದಳಾ ಕುಂಭಿ (ಸಂಭಪ. ೨೦–೧೩೨) ; ಒಡೆದು ಜಾಱುವ ಭಟರ ಭಟರಿಂದಿಡುತ ಕರಿಗಳ ಕರಿಗಳಿಂದೆಡೆಗೆಡಹುತ . . . ಕಣನೊಳಗೆ (ತೊರರಾ. ೫–೬–೧೮) ; ಕೋಲ ನೀಡಿದವೊಲು ತನುವನು ಕಾಲುಗಳಲೆಡೆಗೆಡಹಿ ಹೊರ ಳಿದನು (ನಿಭಾಗ. ೧೦–೨೯–೧೪). 'ಅಡೆಗೆಡಹು' ಪರಾ. [ಎಡ್ತೆ$_3$ + ಕೆಡಪು]

**ಎಡೆಗೆಡಹು** 'ಎಡೆಗೆಡಪು' ನೋ.

**ಎಡೆಗೆಡಿಸು, ಎಡೆಗಿಡಿಸು** (ಕ್ರಿ). ಅವಕಾಶವಿಲ್ಲದಂತೆ ಮಾಡು ; ಕಿತ್ತೊಗೆ ; ನೆಲೆಗೆಡಿಸು : "ಎಡೆಗೆಡಿಸು . . . ತಡಂಬೊಯ್ – ಈ ೨೫ ಪ್ರತಿಹತಕ್ಕೆ ಪೆಸರ್" (ಕಶಸಾ. ೧೫–೨೯೭) ; "ಎಡೆಗೆಡಿಸಿದುದೆೞಿಸಿದುದು ಕಡೆಗಣಿಸಿದುದಕ್ಕು" (ಕವಿಕಂ. ೧೩೮) ; ಕದುಬಿ ಕಾದುವ ರಿಪುಗಳ ನೆಱೆ ಮುಱಿಯಿಱಿದೆಡೆಗೆಡಿಸುತ್ತೋಡಿಸಿದರು (ಕಂನವಿ. ೧೮–೧೦೫). **ಎಡೆಗಿಡಿಸು** : ಕಷ್ಟತರಮಂ ಕಷಾಯಚತುಷ್ಟಯದೆಡೆಗಿಡಿಸಿ ದೇವ ಕಿಡಿಸಿಯೆ ಭವಚಾತುಷ್ಟಯಮಂ (ಅಜಿಪು. ೬–೭೩) ; ಕುಳನಗಮನಗೆ ಯೆತ್ತಿ ಕಳೆಯಲುಂ ಕಡಲನೆಡೆಗಿಡಿಸಲುಂ (ಜಗವಿ. ೭–೮೪ ವ). [ಎಡ್ತೆ$_3$ + ಕೆಡಿಸು]

**ಎಡೆಗೆಡು, ಎಡೆಗಿಡು** (ಕ್ರಿ). ಇದ್ದ ನೆಲೆಯಿಂದ ಕದಲು ; ಸ್ಥಳಾಂತರವಾಗು ; ನೆಲೆಗೆಡು : ಸೆಡೆದಂ ಸಿಂಧುಜನಗದಿಂ ಮಾಳವನಡಿದೆಗೆದಂ ಕೊಂಕಣವಂಗಾಧಿಪನೆಡೆಗೆಟ್ಟಂ (ಜಯಕಾ. ೭–೪) ; ಕೊಟ್ಟ ಶಾಪದ ವಜ್ರಹತಿಗೆಡೆಗೆಟ್ಟುದೆನ್ನಯ ಗರ್ವಗಿರಿ (ನಿಭಾಗ. ೧೦–೨೯–೧೯).

**ಎಡೆಗಿಡು**: ಕೊಟ್ಟಸುಗಟ್ಟುಗಳಿಂದಂ ತೊಟ್ಟನೆ ಪಱಿಪಟ್ಟು ಬೀೞ್ವವೊಲ್ ಬಿರ್ದು ನಭಂ ಮುಟ್ಟೆ ಸಿಡಿಲ್ದೆಡೆಗಿಡುವಿನಮೊಟ್ಟಿದ ಕೈದುಗಳ ಮೇಲೆ ಬಿರ್ದನನಾಗಳ್ (ಆದಿಪು. ೫-೮೪); ಪಿಡಿಗೆ ಮದಮಪ್ಪುದಂ ಮದಮುಡುಗುವುದಂ ಮದಗಜಕ್ಕೆ ಗೃಹದೇವತೆಗಳ್ ಗಡಣದಿನಟ್ಟುವದ ಸಾಗಸವೆಡೆಗೆಟ್ಟುರೆ ಧೂಮಕೇತುಗಳ್ ಮೂಡುವುದಂ (ಪಂರಾಮಾ. ೧೪-೧೨೧); ಗಗನವೆಡೆಗಿಡೆ ಮುಗಿಲು ನೆಗೆದವೆಡೆವಿಡದೆ ಭುಗಿಭುಗಿಲು ಮಿಂಚಾಡಿದವು (ಸಿದ್ಧರಾ. ೩-೩೧); ಎಡೆಗಿಡಿದು ಚೆಂದೆಂಗಿನೆಳಗಾಯೊಡೆದು ಝೋರನೆವೊಸರ್ವ ಪೊನಲಿಂ (ಸಾಳ್ವಭಾ. ೧-೬೦). [ಎಡೆ$_3$ + ಕೆಡು]

**ಎಡೆಗೆಡೆ** (ಕ್ರಿ). ೧. ನಡುವೆ ಬೀಳು; ಕೆಳಕ್ಕೆ ಬೀಳು: ಕಡಿವಡೆದುದಗ್ಗದ ಸಾರಥಿಗಳೆಡೆಗೆಡೆದುದತಿರಥ ಸಮರಥಾರ್ಧಮಹಾರಥಾದಿಗಳು (ಕುವ್ಯಾದ್ರೋ. ೧೦-೧೦); ತೇರ್ಪುಡಿಯಾಗೆ ಸಾರಥಿ ರಥಾಶ್ವಂಗಳೆಡೆಗೆಡೆಯೆ ಬಿಲ್ಲುಡಿಯೆ (ಜೈಮಿಭಾ. ೨೦-೩೦). ೨. ನಮಸ್ಕರಿಸು: ಪುಣ್ಯಾಶ್ರಮಕೈತಂದು ಚ್ಯವನನಂ ಕಂಡೆಡೆಗೆಡೆದು (ರಾಮಾಶ್ವ. ೬೦-೨೬). [ಎಡೆ$_3$ + ಕೆಡೆ$_1$]

**ಎಡೆಗೆಣೆಯ** (ನಾ). ಸಮೀಪದ ಸ್ನೇಹಿತ; ಆತ್ಮೀಯನಾದ ಗೆಳೆಯ: ಮೂಡಣರಸುಗಳೆಡೆಗೆಣೆಯರಾತಂಗೆ ತೆಂಕಣ ಕಡೆಯವರು ಕಂಡಿಹರು ಕೆಲಬಲದವರು ಕೊಂಡೆಯರು (ಕುವ್ಯಾವಿ. ೧-೩). [ಎಡೆ$_3$ + ಗೆಣೆಯ (< ಗೆಳೆಯ)]

**ಎಡೆಗೆಯ್** (ಕ್ರಿ). ೧. ಅವಕಾಶವನ್ನು ಮಾಡಿಕೊಡು; ಸ್ಥಳ ಕೊಡು: ತಡೆಯದೆ ಭಾಸ್ಕರ ಮುಂ ಪೋಗಲಾಸತ್ತು ನಡೆಗೆಟ್ಟ ಕಿರಣಸಂದೋಹ ಎಡೆಗೆಯ್ವಂತೆ ವೀಧಿಯೊಳಿರ್ಪ ಮಣಿದೀಪ ಕಡೆಯಿಲ್ಲದೆಸೆದುದಾ ಪುರದಿ (ಮೋಹತ. ೧೮-೫); ಲಿಂಗಾರ್ಚನೆಗೆಯ್ವುತಾರೋಗಣೆಗೆಡೆಗೆಯ್ದು ಗಡಣಿಸಿ (ವೃಷವಿ. ೧೪-೮೩ ವ). ೨. ತಂಗು; ತಳುವು: ಅಂತಟ್ಟ ರಾಯಭಾರಿ ದಿನಾಂತರಮನೆಡೆಗೆಯ್ಯದೆಯ್ದೆ ಪದ್ಮಪುರಕ್ಕೆ (ಅನಂಪು. ೬-೩೮); ಕರುಣಿಸದಿರನುಗೊಡದಿರಗಲದಿರು ಅನುಸರಿಸದಿರು ಬಟ್ಟೆಯೂಱಲೆಡ[ಡೆ]ಗೆಯ್ಯದಿರು (ಹಚಕಾ. ೯-೧೬). [ಎಡೆ$_3$ + ಗೆಯ್ (< ಕೆಯ್$_1$)]

**ಎಡೆಗೆಲಸ** (ನಾ). ನಡುವಣ ಕೆಲಸ; ಚಿಲ್ಲರೆ ಕೆಲಸ; ಹೆಚ್ಚಿನ ಕೆಲಸ.

**ಎಡೆಗೆಲಸದವ** = ಚಿಲ್ಲರೆ ಕೆಲಸದವನು: ಚೇಟಿಯರಲೆಡೆಗೆಲಸ [ಪಾಠಾಂ. ಚಾಟಿಯರಲೆಡೆಕೆಲ]ದವರಲಿ ಬೇಟಿಕಾತಿಯರಲ್ಲಿ ಕಡು ಕಂಬೇಟದಂಗನೆಯರಲಿ ಸಂಕೇತನ ನಿಕೇತನದ (ತೊರರಾ. ೫-೨-೨೧). [ಎಡೆ$_3$ + ಕೆಲಸ]

**ಎಡೆಗೇರಿ** (ನಾ). ಒಂದು ಊರಿನ ಹೆಸರು: ಧರ್ಮ್ಮಯಕ್ಕಂ ತಾಂ ಮಾಡಿಸಿದೆಡೆಗೇರಿಯ ಬಡವಾಗಿಲ ಶ್ರೀ ಲಕ್ಷ್ಮೀನಾರಾಯಣ ದೇವರಂಗಭೋಗಕ್ಕಂ... ಬಿಟ್ಟಡಕೆದೋಂಟ (ಸೌಇಇ. IX-i, ೨೬೭-೬೦; 1166). [ಎಡೆ$_3$ + ಕೇರಿ]

**ಎಡೆಗೈ** (ಕ್ರಿ). ಊಟಕ್ಕೆ ಬಡಿಸು: ಲಕ್ಷ ತೊಂಬತ್ತಾರು ಸಾಸಿರವಾದ ಜಂಗಮಕೆಲ್ಲ ನೀಲಾಕ್ಷಿ ಓರ್ವಳೆ ಎಡೆಗೈವಳ್ (ಬಜ್ಜಪು. ೭೯-೧೬). [ಎಡೆ$_4$ + ಗೈ (< ಕೆಯ್$_1$)]

**ಎಡೆಗೊಡು, ಎಡೆಕೊಡು, ಎಡೆಗುಡು** (ಕ್ರಿ). ಅವಕಾಶವನ್ನು ಕೊಡು; ಆಸ್ಪದ ಕೊಡು: ಸತ್ವಗುಣಕ್ಕೆ ಸಾರ್ಕೆಗುಡದೆ ಕೃಪಣತೆಗೆಡೆಗೊಟ್ಟು ವಿರಕ್ತತೆಗೆ ಬಿಗುತರ್ಪ (ಕಾದಂಉ. ೫೬೭); ನೆನೆದು ತನತ್ತು ಪರ್ವಗೆಗೆ ಮುನ್ನೆಡೆಗೊಟ್ಟು (ವರ್ಧಪು. ೧-೫೬); ಶರಣರ ಚರಣಾಲಿಂಗ ನಕ್ಕೆಡೆಗೊಟ್ಟು ಮೆಱೆವ ಪೇರುರದ (ಬಸರ. ೨-೩೦); ಘಾತುಕರಿಗೆ ತನ್ನ ಆಸ್ಥಾನದಲ್ಲಿ ಎಡೆಗೊಟ್ಟನು (ಜ್ಯೋತಿರ್ವಿ. ೨೩೫). **ಎಡೆಕೊಡು**: ಕೊಳಚೆನೀರು ಸೊಳ್ಳೆಗಳ ಬೆಳವಣಿಗೆಗೆ ಎಡೆಕೊಡುವುದು (ಅಡುಸೌ. ೪೧).

**ಎಡೆಗುಡು**: ನಾಣ್ಗೆಡೆಗುಡದಿರ್ಪುದೊಂದು ನುಡಿಗಳ್ ಮೊಱೆಯಂ ಮಱೆಯಿಪ್ಪುದೊಂದು (ಪಂಪಭಾ. ೨-೪೯); ವಾಗ್ಗುಂಫದೊಳಾಗಳ್ ಬೆಟ್ಟಿನಲ್ಪಿಟ್ಟಿನಲೆಡೆಗುಡದಾಶ್ಚರ್ಯಮಂ ತಾಳ್ದಿ ನಿಂದಂ (ಸುಕುಮಾ. ೨-೧೫); ಅಂಗಜನ ದೊಣೆಗೆ ತೊಣೆಯೆಂಬನವರ್ಕೆಡೆಗುಡದ ಲತಾಂಗಿಯ ಕಿಱುವೊಡೆಯಂ (ಮಲ್ಲಿಪು. ೩-೫೯); ಎಡೆಗುಡದನ್ಯಚಿಂತೆಗೆ ಮನೋಜ ಸುಖಾರ್ಣವ ಮಧ್ಯದೊಳ್ ಮನಂಗುಡುತುಂ (ಗಿರಿಕ. ೨-೧೯); ನುಡಿದಂತೆ ನಡೆವ ನಡೆಯೊಳು ನುಡಿಯ ಪೂರವಿಸಿ ನುಡಿಗೆಡೆಗುಡದ ಬೆಂಗಾಣ ಬಾರದ ಕಲಿ (ಶಿವಗೀ. ೨೬-೧೧೬). [ಎಡೆ$_3$ + ಕೊಡು]

**ಎಡೆಗೊಳ್** (ಕ್ರಿ). ೧. ಅವಕಾಶವನ್ನು ಹೊಂದು; ಆಸ್ಪದವನ್ನು ಪಡೆ; ಆಶ್ರಯಿಸು: ಸರಸ್ವತಿ ಮನ್ಮುಖ ಪದ್ಮರಂಗದೇೞ್ಗೆಯನೆಡೆಗೊಂಡು ಕೊಂಡು ಕೊನೆದೀಗರಿಗಂಗೆ ವಿಶುದ್ಧ ಬುದ್ಧಿಯಂ (ಪಂಪಭಾ. ೧-೫); ನಿಮಗೇಂ ಮೂರ್ಖತನವೆಡೆಗೊಂಡುದಕ್ಕುಂ (ಪಂಚತಂ. ೨೮೫-೬); ಕೊರಲ್ ಕೊಂಕಿ ನೋೞ್ಪಂಗೆಡೆಗೊಂಡಾಸ್ಯಂ ಶರಚ್ಚಂದ್ರನ ನಿೞಿಸೆ (ಲೋಕೋಪ. ೧೧-೫೦); ಪಂಚೇಂದ್ರಿಯಂಗಳಲ್ಲಿ ಪಂಚಲಿಂಗವೆಡೆಗೊಂಡಿರಲು ಇಂದ್ರಿಯಂಗಳು ನಿರ್ಮಳವಾದವು (ಆದವ. ೩೮); ಮೇರೆದಪ್ಪಿ ಬಂದೆನ್ನ ತನ್ನೊಡೆಯಂಗೆ ದಾಸನಾಗೀಗಳೆಂದೆಂಬುದಿದು ಕಾಲಗುಣವೋ ಎನ್ನನು ಎಡೆಗೊಂಡ ಕರ್ಮಫಲವೋ (ಹಚಕಾ. ೧೧-೧೯); ನಡುವಿನ ಸಣ್ಣಂ ತಮ್ಮೊಳಮೆಡೆಗೊಂಡವೊಲಿರ್ಪ ನೆಲ್ಗಳ್ (ದಶಕು. ೧-೩೧); ಪಂಡಿತರೊಡ್ಡು ಗಾಯಕರ ಸಂತತಿಯೆಡೆಗೊಂಡಿರ್ದ ದೋಲಗದೊಳಗೆ (ಭರೇಚ. ೧-೬೩). ೨. ಪಡೆ; ಹೊಂದು: ಮಹಾವಿವಾಹಮಂಟಪಮಂ ಪುಗುತಿರ್ಪಾಗಳ್ ಕಂಡು ಹರುಷಮನೆಡೆಗೊಂಡು ಮೆಯ್ಯಿಕ್ಕಿ ನಿಂದ ಮೇನಾದೇವಿಗಂ (ಗಿರಿಕ. ೧೦-೭೭ ವ); ಅಗಸ್ತ್ಯಂ ಕಡಲಂ ಪೀರ್ವ್ವಂತೆ ಮಂಡಳೇಶ್ವರ ರಾಜ್ಯಕ್ಕೊಡೆಯನೆನೆ ಪುಟ್ಟ ವೀರದಿನೆಡೆಗೊಂಡಂ ಸಕಳಧಾತ್ರಿಯಂ ಬಿಜ್ಜನೃಪಂ (ಎಕ. XI, ದಾವಣ. ೪೨-೩೮; 1162). [ಎಡೆ$_3$ + ಕೊಳ್$_1$]

**ಎಡೆಗೊಳಿಸು** (ಕ್ರಿ). ಜೋಡಿಸು; ಅಳವಡಿಸು: ಸೇರಿಸು; ಹೊಂದಿಸು: ಕೀರ್ತಿಮುಖಮುಖಮಂ ಕಳಲ್ಚಿ ಬಾಹುಪೂರಯಮನೆಡೆಗೊಳಿಸಿ [ಪಾಠಾಂ. ನಳವಡಿಸಿ] ಉರಗಕಂಕಣಮಂ ಕಳೆದು (ಗಿರಿಕ. ೧೦-೬೦ ವ); ಗುಡಿತೋರಣಗಳ ಪಂತಿವಿಡಿದೆಡೆಗೊಳಿಸಿ ಸರ್ವ ಸಂಭ್ರಮವನಂತಿಂತೆಂದು ಭಾವಕರ ಬಗೆಗೂಹಿಸಲ್ಬಾರದಂತೆ ಸಿಂಗರಗೆಯ್ದ (ಸೌಂದಪು. ೧೧-೩೩). [ಎಡೆಗೊಳ್ + -ಇಸು$_3$)

**ಎಡೆಗೋ** (ಕ್ರಿ). ನಡುವೆ ಸೇರಿಕೊಳ್ಳು, —ತೂರಿಕೊಳ್ಳು, —ಬರು: ಎಡೆಗೋದಿರದರಿಮುದ್ದಂನುಡಿಯದಿರಿಂ ನೃಪತಿ ನುಡಿಯೆ ನುಡಿಯಿಂ (ಆದಿಪು. ೯-೬); ಅಳ್ಳಾಡೆ ನರನ ಕೂರ್ಗಣೆಯಳ್ಳೆಱಿಂಗಳ್ಕಿಬಳ್ಕಿ ಕುರುಬಲಮೆಲ್ಲಂ ಬೆಳ್ಳೇಟಮೋಡೆ ನಕ್ಕನಿಸೊಳ್ಳಾಳೆಡೆಗೋದನೊದಱಿ ಚಟ್ಟನೊಳೊವಜಂ (ಕಾವ್ಯಾವ. ೨೨೪). [ಎಡೆ$_3$ + ಕೋ$_1$ (< ಕೊಳ್$_1$)]

**ಎಡೆಗೋರು** (ಕ್ರಿ). (ಬಲೆ ಬೀಸಿ ಹಿಡಿಯುವಂತೆ) ನಡುವೆ ಹಿಡಿ: ದೇವನನೆಸಲು ಮಧ್ಯದಲಿ ಹಾಱಿಸಿದನಾ ಪಾರ್ಥನಿವನೆಡೆಗೋರಿದನಲಾ ಯೆನುತ ಕಡೆಯೆನುತಾರಿ ಸುರಿದನು ನೂಱು ಬಾಣವನರ್ಜುನನ ಮೇಲೆ (ಕುವ್ಯಾದ್ರೋ. ೩-೫೪). [ಎಡೆ$_3$ + ಗೋರು$_1$ (< ಗೋರ್$_1$)]

**ಎಡೆಗೋಲ್** (ನಾ). ನಡುವಣ ಕೋಲು; ಅಡ್ಡಗೋಲು; ತಡೆಗೋಲು: ಪುಗದಿರೆಂದೆಡೆಗೋಲನಿಡೆ ವ್ಯಡನವನ ನೋಡಿ ನಗುತೆ (ಪದ್ಮರಾ. ೧೦-೨೩೬). [ಎಡೆ$_3$ + ಕೋಲ್$_1$]

**ಎಡೆಜರಿ** (ಕ್ರಿ). ಸ್ಥಳವನ್ನು ಬಿಟ್ಟು ಸರಿ; ಕದಲು: ಕಾಮುರ್ಕವ ಜೇವೊಡೆಯಲಾ ನಿಷ್ಠುರ ಧ್ವನಿಗೆ ಹೊಡೆಗೆಡೆದವು ಸಪ್ತಶರಧಿಗಳೆಡೆಜರಿದೊಡದೂಡಿದವು ಕುಲಶೈಲ (ಮೋಹತ. ೩೫-೨೬). [ಎಡೆ$_3$ + ಸರಿ$_1$]

**ಎಡೆತಡೆ** (ನಾ). ಮಧ್ಯದಲ್ಲಿ ಬರುವ ಅಡ್ಡಿ, —ಆತಂಕ: ಕವಿಜೀವವು ಎಡೆತಡೆಯಿಲ್ಲದೆ ಸಾಜಸೊಬಗಿನಿಂದ ವರ್ಣನಾವಳಿಯಲ್ಲಿ ಹರಿದಾಡಿದೆ (ತವಸಿ. ೧೭೬). 'ಅಡತಡೆ' ಪರಾ. [ಎಡ್ಡೆ$_3$ + ತಡ್ಡೆ$_2$]

**ಎಡೆತರ** (ಗು). ಮಧ್ಯಥ ದರ್ಜೆಯ; ಮಧ್ಯಮ ವರ್ಗದ; ಸಾಧಾರಣವಾದ: ಇದು ನನ್ನ ಎಡ[ಡೆ]ತರದ ಸೀರೆ ಅಂದರೆ ತೀರ ಬೆಲೆ ಬಾಳುವುದೂ ಅಲ್ಲ ತೀರ ಕೀಳೂ ಅಲ್ಲದ ವಸ್ತ್ರ (ಕಸ್ತೂರಿ. ೧೯೬೫, ೧೦೪). [ಎಡ್ಡೆ$_3$ + ತರ$_1$. / **ತಮಿ.** ಇಡೈತ್ತರಂ; **ತುಳು.** ಇಡೆತರ]

**ಎಡೆತಾಕಿಸು** (ಕ್ರಿ). ಮಧ್ಯೆಮಧ್ಯೆ ಬರುವಂತೆ ಮಾಡು; ಪದೇ ಪದೇ ಬರಿಸು; ಅತ್ತಇತ್ತ ಅಲೆಯುವಂತೆ ಮಾಡು: ಕೊಡುವವನ ಧರ್ಮಕ್ಕೆ ಕಡೆಯೇನು ಮೊದಲೇನು ಎಡೆತಾಕಿಸುತ್ತ ಕೊಡುವವನ ಧರ್ಮವದು ಹುಡಿಯ ಮಣ್ಣಿಂದ (ಸರ್ವಜ್ಞ. ೬೨೪). [ಎಡೆತಾಕು + –ಇಸು$_3$]

**ಎಡೆತಾಕು**, ಎಡೆತಾಗು (ಕ್ರಿ). ನಡುವೆ ಬರು; ಅಡ್ಡಬರು; ತಲೆಹಾಕು: ತಾವರೆಯ ನಾಳದ ತೆಜಪಿನಲ್ಲಿ ಮೂಲೋಕವನೊಳಗೊಂಡ ಗಾತ್ರದಾನೆ ಎಡೆತಾಕುತ್ತದೆ (ಅಜಿಮಾ. ೧೫೫); ಹೆಣ್ಣಿರ್ದ ಮನೆಗೆ ಎಡ[ಡೆ]ತಾಕಿ ಶಿವಯೋಗಿ ಮಣ್ಣುಮಸಿಯಾದ (ಸರ್ವಜ್ಞ. ೫೩೪); ಹಗಲ ಸಂಜೆಯನೆ ಹೊತ್ತು ಕುಂಟಣಿಯಾಗಿ ಹಗಲಿರುಳೆಡ[ಡೆ]ತಾಕಿದೆ (ಸುಸಾರ. ೧೨೭–೪); ತಮ್ಮ ಬಂಗಲೆಗಳಿಗೆ ನಿಮಿಷ ನಿಮಿಷಕ್ಕೂ ಎಡೆತಾಕುತ್ತಿರು (ಝಾರಾಣಿ. ೧೪೦); ಮೊಸರಿನವಳು ಮೂರು ಸಲ ಎಡ[ಡೆ]ತಾಕಿ ರಂಪ ಮಾಡಿ ಹೋದಳು (ಹನ್ನೊಂದ. ೮೨). **ಎಡೆತಾಗು**: ಗುರುಗಳ ಮನೆಗೆ ಎಳ್ಳುಬೆಲ್ಲವನ್ನುಕೊಡಲು ವಿದ್ಯಾರ್ಥಿಗಳು ಎಡ[ಡೆ]ತಾಗುವುದು ಸಂಪ್ರದಾಯವಾಗಿತ್ತು (ರಂಗರೋ. ೧೧೦).
[ಎಡ್ಡೆ$_3$ + ತಾಕು$_1$ (< ತಾಗು$_1$)]

**ಎಡೆತಾಗು** 'ಎಡೆತಾಕು' ನೋ.

**ಎಡೆತಿಟ್ಟು** (ನಾ). ಮಧ್ಯದ ದ್ವೀಪ, —ದಿಣ್ಣೆ; ನಡುಗಡ್ಡೆ: ಮುಖ್ಯರಾದವರು ಮೊದಲಿನಂತೆ ಸಮುದ್ರದ ಎಡೆತಿಟ್ಟಂ ಸೇರುವರು(ಮುದ್ರಾಮಂ. ೨೪೨); ನಿರ್ಜನವಾಗಿರುವುದೊಂದು ಎಡ[ಡೆ]ತಿಟ್ಟನ್ನು ಗೊತ್ತುಮಾಡಿಕೊಂಡು (ರಾಜಾಮು. ೧೫೮). [ಎಡ್ಡೆ$_3$ + ತಿಟ್ಟು$_3$]

**ಎಡೆತೆಗೆ** (ಕ್ರಿ). ಮಧ್ಯದಲ್ಲಿ ತೆಗೆ; ಬೇರೆ ತೆಗೆದಿರಿಸು (?): ಸ್ವಸ್ತಿಶ್ರೀ ಕೊಙ್ಗುಣಿಅರಸ ಸ್ವರ್ಗಸ್ಥಱ್ ಪ್ರಿಥುವೀರಾಜ್ಯ ಕೆಯೆ ಎಡೆತೆಗೆದು ಸಾಸಿರಕೆ ನೆಲ್ಲಕ್ಕಿ ಸೊವೆದಿಱು (ಎಕ. III, ನಂಜನ. ೧೨೬–೨; 812 ?).
[ಎಡ್ಡೆ$_3$ + ತೆಗೆ$_1$]

**ಎಡೆತೊಱೆ**, ಎಡೆದೊಱೆ (ನಾ). "ಎರಡು ನದಿಗಳ ಮಧ್ಯ ಪ್ರದೇಶ" (ಪ್ರಭಣ್ಣ). 'ಎಡೆತೊಱೆನಾಡು' ಪರಾ. **ಎಡೆದೊಱೆ**: ಹೆಮ್ಮಾಡಿ ದೇವನೆಡೆದೊಱೆ ಮ × × × ಸಾ ಯಿ ರ ಮು ಮಂ (ಎಕ. VII, ಶಿವಮೊ. ೬೪–೯೨; 1112). 'ಎಡೆದೊಱೆನಾಡು' ಪರಾ.
[ಎಡ್ಡೆ$_3$ + ತೊಱ್ಱೆ$_2$. / **ತಮಿ.** ಇಡೈತುಱೈ]

**ಎಡೆತೊಱೆನಾಡು**, ಎಡೆದೊಱೆನಾಡು (ನಾ). ಎರಡು ನದಿಗಳ ಮಧ್ಯದ ನಾಡು; ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ಮಧ್ಯದ ನಾಡು: ಎಡೆತ್ತೊಱೆನಾಡು (ಮೈಆರಿ. ೧೯೩೬, ೫೩–೨೨; 550); ಎಡೆತೊಱೆನಾಡು (ಎಕ. III, ಮೈಸೂರು. ೫೬–೬; 740). **ಎಡೆದೊಱೆನಾಡು**: ಎಡೆದೊಱೆನಾಡಿಂಗೆ ತಿಲಕದಂದದಿನೊಪ್ಪಂಬಡೆದಿರ್ಕುಮೆಸೆವ ಕಿಱುದೊಱೆ (ಎಇ. XII, ೨೭೯–೧೨೮; 1077). [ಎಡೆತೊಱೆ + ನಾಡು]

**ಎಡೆದಾಣ** (ನಾ). ಮಧ್ಯದ ಪ್ರದೇಶ; ನಡುವಣ ಸ್ಥಳ: ಕಾಣುತೀತನನಾ ಪ್ಲವಂಗಶ್ರೇಣಿ ದುರ್ಗವನೇಱುಗೊಡದೆಡೆ [ಪಾ ಠಾಂ. ಬಂದಡೆ, ಬಂದೆಡೆ]ದಾಣದಲಿ ತಱುಬಿದರು ತರುಶೈಲಾಯುಧಂಗಳಲಿ (ತೊರರಾ. ೪–೬–೧೯). [ಎಡ್ಡೆ$_3$ + ತಾಣ]

**ಎಡೆದಿಂಡೆ** (ನಾ). ಒಂದು ಪ್ರದೇಶದ ಹೆಸರು: × × × ಬುಗರೆ ವಿಷಯೇ ಎಡೆದಿಣ್ಡೇ ಸಪ್ತತಿ ಪ್ರತಿಬದ್ಧಃ (ಮೈಆರಿ. ೧೯೪೨, ೭೫–೧೧೦; 819).
[ಎಡ್ಡೆ$_3$ + ದಿಂಡೆ]

**ಎಡೆದುಱುಬು** (ನಾ). ತುರುಬಿನ ಮಧ್ಯಭಾಗ: ನಸುಬಳಲಿದೆಡೆದುಱುಬಿನಲಿ ವೇಷ್ಟಿಸಿದ ಕತ್ತರಿಪೀಲಿಗಳ ಹೆಱೆನೊಸಲ (ನಿಭಾಗ. ೧೦–೩೦–೧೦). [ಎಡ್ಡೆ$_3$ + ತುಱುಬ್ಬು$_2$ (< ತುಱುಂಬ್ಬು$_2$)]

**ಎಡೆದೆವರು** (ನಾ). ನಡುವಣ ತಿಟ್ಟು; ನಡುಗಡ್ಡೆ: ಕಡಿದರರಿಭಟಪಾದಪವನಡಗೆಡಹಿದರು ಗಜಗಿರಿಗಳನು ರಥದೆಡೆದೆವರ ಕೊಚ್ಚಿದರು ತುರಗವ್ರಜದ ಬಲುಮೆಳೆಯ (ಕುವ್ಯಾಭೀ. ೫–೯).
[ಎಡ್ಡೆ$_3$ + ತೆವರು$_3$]

**ಎಡೆದೆಱಪು**, ಎಡೆದೆಱಹು (ನಾ). ನಡುವೆ ಇರುವ ಅವಕಾಶ; ಬಿಡುವು; ವಿರಾಮ; ಅಂತರ: ನಡು ನಸುಪೊಂಗಿ ಸುತ್ತಿಱಿದು ಪತ್ತಿದೆಸೆಕ್ಕೊನೆ ಬಿರ್ಚಿ ತಣ್ಣೆರಲ್ಗೆಡೆದೆಱಪಾಗೆ ಪೊಕ್ಕು ಸುಱಿಯುತ್ತಿರೆ (ಚಂದ್ರಪ್ರ. ೮–೧೦೩); ಬೆಂಗೊಟ್ಟೋಡಿದನವನುತ್ತುಂಗ ಕರಂಗಳ ಮರಂಗಳೆಡೆದೆಱಪುಗಳೊಳ್ (ವರ್ಧಪು. ೨–೪೮); ಹರಿಸದಿನೆಡೆದೆಱಪಿಲ್ಲದೆ ತನ್ನೊಳ್ ನೆರೆವ ಹಲವು ಹೊಳೆವೆಣ್ಗಳನತ್ಯಾದರದಿಂದಮುರ್ದಪ್ಪುವ . . . ತೆರೆಯಿಂ (ಜಯಕಾ. ೧–೩೦). **ಎಡೆದೆಱಹು**: ತ್ರಿವಿಧಕ್ಕೆ ಬಿಡುವಿಲ್ಲದೆ ಒಡೆಯಂಗೆ ಒಡವೆಯಂ ಕೊಟ್ಟು ಅಡಿ ಎಡೆಯಲ್ಲಿಪ್ಪ ದೃಢಚಿತ್ತಂಗೆ ಎಡೆದೆಱಹಿಲ್ಲದೆ ನಮೋ ನಮೋ ಎಂಬೆ (ಮೋಳಿಮಾ. ೪೩–೧೭೭); ಮನೋವಾಕ್ಕ ಕರ್ಮಂಗಳಲ್ಲಿ ಸದ್ಭಕ್ತಿಸಂಪನ್ನ ಎಡೆದೆಱಹಿಲ್ಲದೆ ಲಿಂಗಸಂಪನ್ನ ಸರ್ವಾಂಗದಲ್ಲಿ ಸರ್ವಾಚಾರಸಂಪನ್ನ (ಚನ್ನವ. ಕ. ೧೧೨೪); ಲಿಂಗೈಕ್ಯನು ಜ್ಞಾನಪ್ರಸನ್ನದೊಳು ಲಿಂಗ ಸಮುಸುಖವನ್ನು ಭೋಗಿಸುತಿಪ್ಪನೆಡೆದೆಱಹಿಲ್ಲದೆ (ಶಿವಗೀ. ೬೧–೨೯೦); ಅಂಬುಗಳಿಗೆಡೆದೆಱಹ ಕುಡಿ ನೀವೆಂಬ ನುಡಿಗಂಜುವೆನು (ಕುವ್ಯಾದ್ರೋ. ಒರಿಇ. ೯–೪೪). [ಎಡ್ಡೆ$_3$ + ತೆಱಪು]

**ಎಡೆದೆಱಹು** 'ಎಡೆದೆಱಪು' ನೋ.

**ಎಡೆದೆಱೆ** (ಕ್ರಿ). ಮಧ್ಯದಲ್ಲಿ ತೆರೆದು ಹೋಗು, —ನಿಂತುಹೋಗು: ಎಂದೆಂದಿಗು ಎಡೆದೆಱೆಯದ ನಿಜಸುಖವನು ತೊಡಗಿ (ಕೈಕವ. ೫–೧೦–೨).
[ಎಡ್ಡೆ$_3$ + ತೆಱೆ$_1$]

**ಎಡೆದೊಱೆ** 'ಎಡೆತೊಱೆ' ನೋ.

**ಎಡೆದೊಱೆನಾಡು** 'ಎಡೆತೊಱೆನಾಡು' ನೋ.

**ಎಡೆನಡು** (ಕ್ರಿ). ಮಧ್ಯದಲ್ಲಿ ನೆಡು, —ಹೂಳು: ಎಱೆಹಂಬಾಳಂ ಆನೆಯರ ಕೊಡಗೈಂ ಕೊಡಕೆ ಎಡೆನಟ್ಟ ಕಲ್ಲಂ (ಎಕ. III, ನಂಜನ. ೧೯೯–೧೨; 189 ?). [ಎಡ್ಡೆ$_3$ + ನಡು$_1$]

**ಎಡೆನರೆ** (ನಾ). ಅಲ್ಲಿ ಇಲ್ಲಿ ಒಂದೊಂದು ಕೂದಲು ಬೆಳ್ಳಗಾಗುವುದು: ಒಡವೆಯ ನೀಗಿದಂತರಸಿಯರೆಲ್ಲರು ಮುಡಿಬಾಗಿ ಚಿಂತಿಸುತಿರಲು ಎಡೆನರೆ ಹಾಯ್ತು ಪಾಟಿಯ ರಾಣಿಯೊರ್ವಳು ಬಿಡುಗೆವಟ್ಟಂತು ನುಡಿದಳು (ಭರಚ. ೫೯–೬೨). [ಎಡ್ಡೆ$_3$ + ನರ್ರೆ$_2$. / **ತಮಿ.** ಇಡೈನರೈ]

**ಎಡೆನಾಡು** (ನಾ). ಒಂದು ನಾಡಿನ ಹೆಸರು: ವಿಟ್ಟಗೆಱೆಗಳ ಎಡೆನಾಡ ಗ್ರಾಮಂ (ಎಕ. VIII, ಸೊರಬ. ೧–೨; 797 ?); ಪುನ್ನಾಡ ಎಡೆನಾಡು ವಿಷಯೇ (ಮೈಆರಿ. ೧೯೨೭, ೧೨೨–೫೩; 800); ಮನುನಿಭನೆಡೆನಾಡಧಿಪತಿ (ಎಇ. VI, ೨೧೬–೧೨; 1057). [ಎಡ್ಡೆ$_3$ + ನಾಡು]

**ಎಡೆನಾಡೆಪ್ಪತ್ತು** 'ಎಡೆನಾಡೆಪ್ಪತ್ತು' ನೋ.

**ಎಡೆನಾಡೆಪ್ಪತ್ತು**, ಎಡೆನಾಡೆಪ್ಪತ್ತು (ನಾ). ಎಡೆನಾಡು ಎಪ್ಪತ್ತು ಎಂಬ ಪ್ರದೇಶದ ಹೆಸರು: ಬೆಳ್ಗುಹೆಯೆಪ್ಪತ್ತೆಡೆನಾಡೆಪ್ಪತ್ತು ತಂದವೂರ ಪನ್ನೆರಡು (ಎಕ. VIII, ಸೊರಬ. ೪೭೭–೧೨; 991); ಎಡೆನಾಡಿ[ಡೆ]ಪ್ಪತ್ತರ ಗಾವುಣ್ಡಗಳು (ಎಕ. IV, ಚಾಮುರಾ. ೧೪–೧೯; 1000).

**ಎಡೆನಾಡೆಪ್ಪತ್ತು** : ಎಡೆನಾಡೆಪ್ಪತ್ತಗಣಾಕ್ಷಿ (ಇಆ. VII, ೧೬೩–೩ ; 350) ; ಎ ಡೆ ನಾ ಡೆ ಪ್ಪ ತ್ತ × × × ಶಾಕ್ಷಿ (ಎಕ. VII, ಶಿಕಾ೦. ೫೨–೨೨ ; 357 ?). [ಎಡೆನಾಡು + ಎಪ್ಪತ್ತು]

**ಎಡೆನಿಚ್ಚ** (ನಾ). ಚಾ ಡಿ ಹೇ ಳು ವು ದು ; ದ್ರೋಹಮಾಡುವುದು ; "ಪಿಸುಣ" (ಚತುನಿ. I, ೧೩ ೬). [?]

**ಎಡೆನುಡಿ** (ನಾ). ಮಧ್ಯದ ಮಾತು ; ನಡುವಣ ಮಾತು : "ಎಡೆಯ ನುಡಿ = ಎಡೆನುಡಿ" (ಶಮದ. ೧೬೨ ಪ್ರಯೋ).

[ಎಡೆ$_3$ + ನುಡಿ$_2$]

**ಎಡೆನೆಱೆ** (ನಾ). ಸ್ಥಳ ಸಾಕಾಗು ; ತುಂಬು ; ಅಡಕವಾಗು : ಎಡೆ ನೆಱೆಯದು ಭುವನತಳಂ ನಡೆವ ಚತುರ್ವಲಕೆ ದಿವಿಜಖೇಚರ ಸೈನ್ಯಕ್ಕೆಡೆ ನೆಱೆಯದು ಗಗನಮುಮೆನೆ (ಆದಿಪು. ೧೧–೩೪) ; ಗಗನಮೆಡೆನೆಱೆಯ ದೆನಿಸಿದ ಗಗನೇಚರ ಸೈನ್ಯಮಿಸುವ ಪೊಸಮಸೆಯ ಸರಲ್ (ಪಂರಾಮಾ. ೯–೬೦) ; ನಡೆವರಸಂಚೆಯ ತಂಡಕ್ಕೆಡೆನೆಱೆಯದು ಪೊ ಡ ವಿ ಗಂಡು ಗೋಗಿಲೆಯಣೆಗಳ್ಗೆಡೆನೆಱೆಯದಿನಿತುಮಾಗಸಮೆಡೆನೆಱೆಯದು ಗಿ ಳಿ ಯ ದಳಕೆ ದೆಸೆಯೆನಿತನಿತುಂ (ಕಬ್ಬಕಾ. ೩೨೬) ; ಛತ್ರಚಾಮರದ ಮಸಕ ಮಯವಾಯ್ತೆಡೆವರೆ [ನೆಱೆ] ಯದಾಗಸವೆನಲು (ನಿಭಾಗ. ೪–೧೨–೪೧).

[ಎಡೆ$_3$ + ನೆಱೆ$_1$]

**ಎಡೆನೆಱೆಹ** (ನಾ). ಸ್ಥಳ ಸಾಕಾಗುವಿಕೆ, —ತುಂಬುವಿಕೆ : ಪರ್ಯಾಪ್ತಾವಕಾಶಃ – ಎಡೆನೆಱೆಹಮುಂ (ನೀತಿವಾ. ೧೯–೩).

[ಎಡೆನೆಱೆ + –ಹ$_2$]

**ಎಡೆನೋಡು** (ಕ್ರಿ). ಅವಕಾಶವನ್ನು ನೋಡು ; ಆಸ್ಪದವನ್ನು ಹೊಂದು : ರಾಜಪುತ್ರಿಯು ಎ ಡೆ ನೋ ೇ ಡಿ ಚಿಟಕೆ ಹಾಕಿದ ಹಾಗೆ, "ಕೈರಿಲೋ ಬಂದಿದ್ದಾನೋ ಏನೋ ?" ಎಂದಳು (ಪಂಚಾವ್ಯ. ೮).

[ಎಡೆ$_3$ + ನೋಡು]

**ಎಡೆಪಡು** (ಕ್ರಿ). ಅವಕಾಶವನ್ನು ಹೊಂದು ; ಆಸ್ಪದವನ್ನು ಪಡೆ : ಎಡೆಪಟ್ಟು ಮನೆಯೊಳುಂಬವರುಂಡು ಮನ್ನಣೆವಿಡಿದರು ನೀಚರೆಲ್ಲರಿಗೆ (ಭರಚ. ೪೦–೧೭). [ಎಡೆ$_3$ + ಪಡು$_1$]

**ಎಡೆಪಱೆ** (ನಾ). ಒಂದು ಸ್ಥಳದ ಹೆಸರು : ಎಡೆಪಱೆಗೀ ನಡೆಕೆಯ್ದು ತಪಂ ಸಯ್ಯುಮಮಾನ್ಕೊಳತ್ತೂರ ಸಂ ಘ ವ ಡೆ ಕೊ ಱೆ ದಿ ನ್ತು (ಎಕ. II, ೯೩–೧ ; 700). [ಎಡೆ$_3$ + ಪಱೆ ?]

**ಎಡೆಪ್ರಾಯ** (ನಾ). ಮಧ್ಯವಯಸ್ಸು ; ನ ಡು ಹ ರ ಯ : ಕೆಂಪು ಮುಖದ ಸ್ಥೂಲಕಾಯದ ಎಡ[ಡೆ] ಪ್ರಾಯದ ಮನುಷ್ಯ (ಕೆಲಸೆ. ೨೬೪) ; ಎಳವೆ ಇನ್ನೂ ತೀರ ದಾಟಲ್ಲದ ಎಡ[ಡೆ] ಪ್ರಾಯ (ಮೂರುಉ. ೩೨).

[ಎಡೆ$_3$ + ಪ್ರಾಯ]

**ಎಡೆಬಡಿಸು** (ಕ್ರಿ). ಎಡೆಯನ್ನು ಬಡಿಸು ; ಊಟಕ್ಕೆ ಹಾಕು : ವಾಯು ಹಸಿದು ಆಪೋಶಣವ ಕೊಂಬರೆ ಎಡೆಬಡಿಸುವ ತೆಱಪಿನ್ನಾವುದು (ವಚಶಾ. I, ೪೩) ; ಮಲ್ಲಮ್ಮನತಿಭಕ್ತಿಯಿಂ ಕೈಮುಟ್ಟಯೆಡೆಬಡಿಸಲನುವಾದಳು (ಮಲ್ಲಚ. ೫–೪). [ಎಡೆ$_4$ + ಬಡಿಸು$_2$]

**ಎಡೆಬಾವು** (ನಾ). ಬಾವಿನಲ್ಲಿ ಒಂದು ಬಗೆ : ಕಿರುಕುಸಾಲೆ, ಭಕ್ತ ಕಾಳು, ಅಂಬಿಲದೊಳಗಣ ಅಕ್ಕಿ, ಹೊಸಹೆಂಚು ಇವನ್ನರೆದು ಪೂಸಲು ಎಡೆಬಾವು ಮಾಣ್ಗುಂ (ವಿವೈವಿ. ೭೯). [ಎಡೆ ? + ಬಾವು]

**ಎಡೆಬಿಡು** 'ಎಡೆವಿಡು' ನೋ.

**ಎಡೆಮುಟ್ಟು** (ನಾ). ಶುದ್ಧಕ್ಕೂ ಅಶುದ್ಧಕ್ಕೂ ನಡುವಣ ಸ್ಥಿತಿ : ಪಟ್ಟಣದೊಳು ಜನ ಕೊಟ್ಟ ಹಣವನೆಡಮೆ[ಡೆಮು]ಟ್ಟು ಬಾಹಿರಮಟ್ಟವೆಂದು ದಿಟ್ಟತನದೆ ಪೆಸರಿಟ್ಟು ವಟ್ಟವ ಕೊಂಬ ಸೆಟ್ಟಿಗಳಿರುತಿಹರಲ್ಲಿ (ಅಂಜಚ. ೩–೮೩). [ಎಡೆ$_5$ + ಮುಟ್ಟು$_2$]

**ಎಡೆಮಡಗು** (ಕ್ರಿ). ತಡಮಾಡು ; ನಿಧಾನಿಸು ; ತೆರಹುಮಾಡು ; ಅ ವ ಕಾ ಶ ಕೊ ಡು : ಒಡನೆಯವರೊಂದೆ ಮಾರ್ಬಲವೆಡೆಮಡಗದೆ ಪೊಗಱ್ ತಾಗಿ ತಳ್ತಿಱಿದು ಯಶಂಬಡೆದಂ ಗೊಗ್ಗಿ (ಎಕ. XI, ಚಳ್ಳಕೆ. ೬–೪ ; 925) ; ತುಡು ಪಾಶುಪತಮನೆನೆ ನರನೆಡೆಮಡಗದೆ ತುಡೆ ದಿಶಾಳಿ ನಡುಗಿದುದು (ಪಂಪಭಾ. ೧೧–೧೫೨) ; ಒಡೆದಂ ವಜ್ರದ ಕೋಂಟೆಯ ನೆಡೆಮಡಗದೆ ಬಂದು ವಜ್ರಮುಖನಾಂತಿಱಿಯಲ್ ಕ ಡು ಕೆ ಯ್ದೊ ಡೆ ಕೊಂದೆಂ (ಪಂರಾಮಾ. ೧೧–೧೦೦). [ಎಡೆ$_3$ + ಮಡಗು]

**ಎಡೆಮಣೆ** (ನಾ). ಎಡೆಯನ್ನು ಇಡುವ ಮಣೆ : ಕೈಕಾಲು ತೊಳೆದು ಕೊಂಡು ಎಡೆಮಣೆಯ ಮುಂದೆ ಬಂದು ಕುಳಿತ (ಬೆಳುಮ. ೧೦೫).

[ಎಡೆ$_4$ + ಮಣೆ]

**ಎಡೆಮನೆ** 'ಎಡೆವನೆ' ನೋ.

**ಎಡೆಮಲೆ** (ನಾ). ಒಂದು ಊರಿನ ಹೆಸರು : ಸಾನ್ತಳಿಗೆ ಸಾಯಿರ ದೊಳಗೆಡೆಮಲೆ[೧೨] ಮುದುವರ ೩೦ ಮಂಡಲಿ ನಾಡೊಳಗೆ (ಕಇ. IV, ೧೩–೩೮ ; 1165). [ಎಡೆ$_3$ + ಮಲೆ$_1$]

**ಎಡೆಮಾಡಿಸು** (ಕ್ರಿ). ಊಟಕ್ಕೆ ಬಡಿಸು ; ಊಟಕ್ಕೆ ಸಿದ್ಧಪಡಿಸು : ಬಂದಳೆ ದೇವಿ ಪಂಕ್ತಿಗೆಡೆಮಾಡಿಸಿದಪ್ಪಳೆ ಚಂಡಶಾಸನಂ ಬಂದನೆ (ಅನಂಪು. ೧೧–೬೪). [ಎಡೆಮಾಡು$_2$ + –ಇಸು$_3$]

**ಎಡೆಮಾಡು$_1$** (ಕ್ರಿ). ಅವಕಾಶಕೊಡು ; ಸ್ಥಳಮಾಡು ; ಏರ್ಪಾಟು ಮಾಡು : ಆತನ ಪಡೆಗೆ ನಡೆಯಲೆಡೆಮಾಡಿದಂತೆ ಬಳ್ವಳಾದ ದೆಸೆಗಳುಂ (ಆದಿಪು. ೧೧–೫ ವ) ; ಬದುಕಿದೆನೆನುತ್ತವರ್ಚನೆಗೆ ಎಡೆಮಾಡುತಂ ಸದ ಮಳರನಲ್ಲಲ್ಲಿ ಭಕ್ತಿಯಂ ಬೇಡುತಂ (ಬಸರ. ೭–೨೧) ; ನಿಳಯವ ಹೊಕ್ಕು ಓಜೆಯೊಳೆಡೆಮಾಡಿದ ಗ ದ್ದು ಗೆ ಯ ಲ್ಲಿ ತೇಜೋಮಯದೆ ಮಂಡಿಸಿದ (ಮೋಹತ. ೨೨–೪೦) ; ವಿಪುಲ ವಿದ್ಯಕ್ಕೆ ಕಂಟಕವಾಗಿ ಸಜ್ಜನರ ಅಪಹಾಸ್ಯ ಕ್ಕೆಡೆಮಾಡಿ ಕೆಡಿಸುವುದರಿಂದ (ಕಎಪು. ೨೨) ; ಅವಿವೇಕದಿಂದ ಹಲವು ಅನಾಹುತಗಳಿಗೆ ಎಡೆಮಾಡಿಕೊಡುತ್ತದೆ (ಚಿಕದೇ. ೧೩೧).

[ಎಡೆ$_3$ + ಮಾಡು$_1$]

**ಎಡೆಮಾಡು$_2$** (ಕ್ರಿ). ನೈವೇದ್ಯಮಾಡು ; ಊಟಕ್ಕೆ ಬಡಿಸು ; ಬಲಿ ಕೊಡು : ಪರಚಕ್ರಕ್ಕೆಡೆಮಾಡಿ ಭೂವಲಯಮಂ ಭಂಡಾರಮಂ ಬಾಲ ವೃದ್ಧರನೀಡಾಡಿ ತಪಕ್ಕೆ ಪೋಪುದನಯಂ (ಪಂರಾಮಾ. ೨–೩೨) ; ಸತ್ಕರಿಸಿ ದಿವ್ಯಾನ್ನಗಳನೆಡೆಮಾಡುತಿರೆ (ಸೌಂದಪು. ೪–೪೯) ; ಆದಿದೈವ ವನು ತಾ ಭೇದಿಸಲಿಕಱಿಯದಲೆ ಹಾದಿಯ ಕಲ್ಲಿಗೆಡೆಮಾಡಿ ನಮಿಸುವ ಮಾದಿಗರ ನೋಡು (ಸರ್ವಜ್ಞ. ೧೯೮) ; ತಂದೆಡೆಮಾಡುತ್ತಿದ್ದರು ವನಿತೆಯ ರೊಲವಿಂದ ದಿವ್ಯಾನ್ನಪಾನಗಳ (ಭರಚ. ೪–೯) ; ಯಜಮಾನನು ಪೂಜೆ ಮಾಡಿ ತಿಂಡಿತಿನಿಸುಗಳನ್ನು ಎಡೆಮಾಡುತ್ತಾನೆ (ಕಪಪು. ೪–೭೪).

[ಎಡೆ$_4$ + ಮಾಡು$_1$]

**ಎಡೆಮಾತು** 'ಎಡೆವಾತು' ನೋ.

**ಎಡೆಮಾರು$_1$** (ಕ್ರಿ). ಸ್ಥಳಾಂತರವಾಗು ; ಸ್ಥಾ ನ ಪ ಲ್ಲ ಟ ವಾ ಗು : ಪಂಡಿತನೊಬ್ಬ ಬಂದು ತನ್ನ ಕವಿತೆ ಹೇಳುವ ಸಡಗರದಲ್ಲಿ 'ಮಹಾ ಭಾರದ ದ್ರೋಣಪರ್ವತ' ಎಂದನಂತೆ. ದೊರೆ ಬೆರಗಾಗಿ 'ಇದೇನು ವಿಚಿತ್ರ' ಎಂದರಂತೆ. ಪಂಡಿತ "ಭಾರತದ 'ತ' ಎಡೆಮಾರಿ ಪರ್ವದ ಮುಂದೆ ಹೋಗಿದೆ. ಇದು ಸ್ಥಾನಪಲ್ಲಟಾಲಂಕಾರ" ಎಂದನಂತೆ (ಕನ್ನನು. I, ೨೩೮). [ಎಡೆ$_3$ + ಮಾರು (< ಮಾಱು$_1$)]

**ಎಡೆಮಾರು$_2$** (ನಾ). ಸ್ಥಳಾಂತರವಾಗುವುದು ; ಸ್ಥಾ ನ ಪ ಲ್ಲ ಟ : ಭಾರತದ 'ತ' ಎಡೆಮಾರಿ ಪರ್ವದ ಮುಂದೆ ಹೋಗಿದೆ . . . ಇದನ್ನು ಎಡೆಮಾರು ಎಂದಾದರೂ ಕರೆಯಬಹುದು (ಕನ್ನನು. I, ೨೩೮).

[< ಎಡೆಮಾರು$_1$]

**ಎಡೆಮುರಿ** (ಕ್ರಿ). ಮಧ್ಯದಲ್ಲಿ ತಿರುಗು; ನಡುವೆ ವಿಮುಖವಾಗು: ಇರುಳುಗಳ್ಳ ವೀರನೆ ನಿನ್ನ ತಲೆಗೆ ಹೊಣೆಕಾರ ನಾನಾಗಿಹೆನು ಯಡ[ಡೆ] ಮುರಿಯದೆ ನಿಲ್ಲೆಲವೊ (ಕುರಂಗ. ೫೭–೫೩). [ಎಡ್ಡೆ$_3$ + ಮುರಿ$_1$]

**ಎಡೆಮುಳ್ಳು** (ನಾ). ನಡುದಾರಿಯಲ್ಲಿ ಹಾಕಿದ ಮುಳ್ಳು; ಅಡ್ಡ ಲಾಗಿ ಹಾಕಿದ ಮುಳ್ಳು. ೨. (ಅಲಂ) ಅಡ್ಡಿ; ತೊಂದರೆ: ತೊಡಕು ಸಲ್ಲದು ಹಿರಿಯನೊಳು ನಮ್ಮರ್ತಿಯ ನಡಸದಿರಲ್ಲಲ್ಲಿ ನೀನು ಎಡೆಮುಳ್ಳನೆಳೆಯಬೇಡೆಮಗದು ಸಲಲೆಂದು ನುಡಿದಳು (ಭರತ. ೫೦–೪೦). [ಎಡ್ಡೆ$_3$ + ಮುಳ್ಳು (< ಮುಳ್$_1$)]

**ಎಡೆಮುಱಿ** (ಕ್ರಿ). ನಡುವೆ ನಿಂತುಹೋಗು; ವಿಚ್ಛಿನ್ನವಾಗು: ಎಡೆ ಮುಱಿದುದೈಶ್ವರ್ಯವಿನ್ನೇನೊಡೆಯ ಭಿತ್ತಿಯ ಚಿತ್ರವಾದನು (ಕುವ್ಯಾಭೀ. ೧೧–೧೬). [ಎಡ್ಡೆ$_3$ + ಮುಱಿ$_1$]

**ಎಡೆಮೃತ್ಯು** (ನಾ). ಮಧ್ಯಕಾಲದ ಮೃತ್ಯು; ಅಪಮೃತ್ಯು; ಅಕಾಲಮೃತ್ಯು: ಹೊಳೆಯಲ್ಲಿ ಬಿದ್ದು ಸಿಡಿಲು ಬಡಿದು ಮರವು ಮೇಲು ರುಳಿ ಪ್ಲೇಗೊ, ಕಾಲರಾ ತಗುಲಿ ಮೃತರಾದರೆ ಎಡ[ಡೆ]ಮೃತ್ಯು (ಅಪ ಮೃತ್ಯು)ವಿನಲ್ಲಿ ಹೋದನೆಂದು (ಹುಟ್ಟುಹ. ೬೮). [ಎಡ್ಡೆ$_3$ + ಮೃತ್ಯು]

**ಎಡೆಯ$_1$** 'ಎಡ್ಡೆ$_2$' ಪರಾ.

**ಎಡೆಯ$_2$** (ನಾ). ಹತ್ತಿರದವನು; ಜತೆಯವನು: ಎಡೆಗೆ ಬಹ ನೃಪ ಸುರವಣಿಗೆ ತನ್ನೆಡೆಯರನು ಕರದೋಡಿ ಬಹಿರೊಳು ಹಿಡಿದು ಖಡುಗವ ನಿಂದ ಬಸವನು ಗಣರಾವೃತದಿ (ಬಿಜ್ಜಪು. ೧೦೨–೫೩). [ಎಡ್ಡೆ$_3$ + –ಅ$_7$]

**ಎಡೆಯ$_3$** (ನಾ). ದನಕಾಯುವವನು; ಗೋವಳ; ಗೊಲ್ಲ: ಎಡೆಯ ನರಸಾದೊಡೆ ಕೊಡೆಯ ಕಾವು ಮೇಗಾದುದೆಂಬಂತೆ (ಧರ್ಮಾಮೃ. ೨–೧೨೪). [ದೇ. ॥ ತಮಿ. ಇಡೈ]

**ಎಡೆಯಕ್ಕರ** (ನಾ). [ಛಂದ] ಒಂದು ಪದ್ಯಜಾತಿಯ ಹೆಸರು: ವನಜಸಂಭವಗಣಮಕ್ಕೆ ಮೊದಲೊಳತ್ತಲ್ ವನರುಹೋದರ ಗಣಯು ಗಳಮದಕ್ಕೆ ರುದ್ರನದಜಂತ್ಯದೊಳೆ ವಂದಿರ್ಕೆ ನಾಲ್ಕೆಗಣ ವನಿತೆ ವನಿತೇ ಕೇಳೆಡೆಯಕ್ಕರಕ್ಕೆನಸುಂ (ಛಂದೋಂಬು. ೫–೭); ನಾಗವರ್ಮನು ೫ ಅಕ್ಕರಗಳನ್ನು ಹೇಳಿರುವನು:– ಪಿರಿಯಕ್ಕರ, ದೊರೆಯಕ್ಕರ, ನಡು ವಣಕ್ಕರ, ಎಡೆಯಕ್ಕರ, ಕಿಱಿಯಕ್ಕರ (ಕೈಪಿಡಿ. ೧೨೫); ಎಡೆಯಕ್ಕರದ ಪ್ರತಿಪಾದದಲ್ಲಿ ಮೊದಲು ಒಂದು ಬ್ರಹ್ಮಗಣ, ಆಮೇಲೆ ಎರಡು ವಿಷ್ಣು ಗಣಗಳು ಕೊನೆಯಲ್ಲಿ ಒಂದು ರುದ್ರಗಣ ಹೀಗೆ ನಾಲ್ಕು ಗಣಗಳು (ಛಂದೋವಿ. ೧೩೬). [ಎಡ್ಡೆ$_3$ + ಅಕ್ಕರ$_2$]

**ಎಡೆಯಣ** (ಗು). ಮಧ್ಯದಲ್ಲಿರುವ; ನಡುವಿನ: ನಡುನೆತ್ತಿಯುದರ ದೇಹದೊಳೆಡೆಯೆಡೆಯಣ ಸಂಧಿ (ಖವುದ. ೩–೪೩). [ಎಡ್ಡೆ$_3$ + –ಅಣ]

**ಎಡೆಯಲೆ** (ಕ್ರಿ). ಅಲ್ಲಲ್ಲಿ ಸುತ್ತಾಡು; ಓಡಾಡು: ಹೊಡೆಯಲಾಗದು ಕೆಡೆದು ಯಮುನೆಯ ತಡಿಯ ಬಳಿಯಲಿ ಮಿಾನು ನುಂಗಿತದೆಡೆಯಲೆದು ತಾನೊಬ್ಬ ಬಂದನು ಬೇಂಟೆಯಾಡುತಲು (ಸಂಭಪ. ೧೩–೫). [ಎಡ್ಡೆ$_3$ + ಅಲೆ$_1$]

**ಎಡೆಯಱಿ** (ಕ್ರಿ). ಅವಕಾಶವನ್ನು ತಿಳಿ; ಆಸ್ಪದವನ್ನು ತಿಳಿ: ಎಡೆ ಯಱಿದು ತೊಳಗುವಂತಿರೆ ಸಿಡಿಲ್ದು ಪೋಯ್ತುಟ್ಟುದಾಗಳಂಗಜಕಲೆ ಯೊಳ್ (ಕಾವ್ಯಸಾ. ೬೫೪, ಶೂದ್ರಕ); ಒಳಗು ಪೊಱಗು ಬಲನೆಡನೆಂಬೀ ಯೆಡೆಯಱಿದು ಮೆಯ್ಯೊಳಂ ಸೂಟ್ಟಡವಾಗದೆ ಕಾಯ್ದು ಪೊಯ್ದು ರೊರ್ವರನೊರ್ವರ್ (ಗದಾಯು. ೮–೧೬); ಎಡೆಯಱಿದಿರಿಮೆಂಬ ಇಕ್ಕು ಗದ್ದುಗೆಯನೆಂಬ ಇನ್ನುಂ ಪೆಱಸಾರೆಂಬಗ್ಗದ ಪಡಿಯಜರ ರವಂ ನೆಗೞ್ದುದಾ ಮಹಾಸ್ಥಾಯಿಕೆಯೊಳ್ (ಜಗವಿ. ೧೧–೭೩). [ಎಡ್ಡೆ$_3$ + ಅಱಿ]

**ಎಡೆಯಾಟ** (ನಾ). ಅತ್ತಿತ್ತ ನಡುವೆ ಅಡ್ಡಾಡುವುದು, —ಓಡಾಡು ವುದು; ಸಂಚಾರ: ಎಡೆಯಾಟಕಡಬಡ್ಡಿಯ ಕೊಟ್ಟು ಕೆಟ್ಟಿತ್ತು ನೋಡಾ ಭಕ್ತಿ (ಬಸವ. ೮೮೭); ಕಾಯವಳಿದ ಠಾವಿನಲ್ಲಿ ಜೀವದ ಎಡೆಯಾಟ ಉಂಟೆ (ಶೂನ್ಯಸಂ. ೨೨೬–೨೭); ಬ್ರಹ್ಮಮುಖದಲಿ ಶ್ವಾಸರೂಪದಲಿ ನಿಲ್ಲ ದೆಡೆಯಾಟದಲಿಯಿರುತಿರೆ (ಸಂಭಪ. ४–೧४); ತೋಟ ಕಾಡಾರಂಬ ಕರ್ಬು ಗರ್ದೆಗಳೆಡೆಯಾಟದ ವ್ಯವಹಾರಿ ಜನರು (ಮೋಹತ. ೩–೩೦); ಪಡಿಯಾಸೆ ಹರದಂಗೆ ಮಡಿಯಾಸೆ ವೇಶ್ಯೆಗೆ ಜಡೆಯಾಸೆ ಬೂದಿಗೊರವಂಗೆ ಹಾದರಕೆ ಎಡೆಯಾಟದಾಸೆ (ಸರ್ವಜ್ಞ. ೧೭೭೮); ಅವಳು ಪೇಟೆಗೆ ಹೋಗಿ ಬರುವವಳಾದರೆ ದಿನಕರನಿಗೆ ಅಲ್ಲಿಯೇ ಎಡೆಯಾಟ (ಪಹಾರ. ೪೦).

ಎಡೆಯಾಟದವ = ಅಡ್ಡಾಡುವವನು; ಸುತ್ತಾಡುವವನು; ಅಲೆ ಮಾರಿ: ಕೂಟಣಿಗಳಲಿ ಕುಱುಹುಗೊಡದೆಡೆಯಾಟದವರಲಿ ವೇಷ ವಿವಿಧ ವಧೂಟಿಯರಲಜಸಿದನು (ತೊರರಾ. ೫–೨–೨೦). [ಎಡ್ಡೆ$_3$ + ಆಟ]

**ಎಡೆಯಾಡಿಕೆ** (ನಾ). = ಎಡೆಯಾಟ: ಕೂಡೆ ಪಲ್ಲಟವಾಗಿಹುದು ಮುಱಿ ಮಾಡಿ ತಿರುಗಿಸುತಿವರನಿವರೆಡೆಯಾಡಿಕೆಯಲೇ [ಪಾಠಾಂ. ಎಡೆಯಾಡಿ ಕಾಣದೆ] ಸಂದವಿಪ್ಪತ್ತೇಳು ದಿನವೆಂದ (ತೊರರಾ. ४–೧೦–೧೩). [ಎಡೆಯಾಡು + – ಇಕೆ]

**ಎಡೆಯಾಡಿಸು** (ಕ್ರಿ). ಅಲೆದಾಡುವಂತೆ ಮಾಡು; ಸುತ್ತಾಡಿಸು; ಓಡಾಡಿಸು: ದಾಸಿಮಯ್ಯನ ತೆಜದಿ ತವನಿಧಿಗಾಸೆಮಾಡೆನು ನಂಬಿ ಯಂತೆ ವಿಳಾಸಿನಿಯೊಳೆಡೆಯಾಡಿಸೆನು (ಬಸಪು. ೯–೩೩); ಅವಳಾನಕ್ಕಸಾಲೆ ಯವಗೆ ಬಂಗಾರವಂ ಮಾಡವೇಳ್ದುಂ ಪೊನ್ನಂ ಕೊಟ್ಟೊಡವಂ ಬಂಗಾ ರವಂ ಕುಡದೆಡೆಯಾಡಿಸಿದನೆನೆ (ಧರ್ಮಪ. ೬–೧೫ ವ); ನೆವದೊಳೆಡೆ ಯಾಡಿಸುತ ತವೆ ಸಖನ ನುಡಿಯಿಸುತ ಕವಿದಿರಲು ಬಗೆದ ಚಿನ್ನವನು ಪ್ರತಿ ವೆರಸಿ ತವಕದಲಿ ತೆಗೆವ (ಸರ್ವಜ್ಞ. ೧४೧೩). [ಎಡೆಯಾಡು + –ಇಸು$_3$]

**ಎಡೆಯಾಡು** (ಕ್ರಿ). ಅತ್ತಿತ್ತ ಅಡ್ಡಾಡು; ಅಲೆದಾಡು; ಸಂಚರಿಸು; ಸುತ್ತಾಡು: ಅಕೆಗಳೆಡೆಯಾಡಿಯುಂ ಮನಂಗೊಳೆ ಪಾಡಿಯುಂ ಮನುಜ ಮಾಂಧಾತನಂ ಸೋಲಿಸಲಾಜದೆ (ಪಂಪಭಾ. ೭–೯೧ ವ); ಎಡೆಯಾಡು ವೆಳೆವೆಂಡಿರ ಮೆಲ್ಲಡಿಗಳಲತಗೆಗಳಿಂ ರಾಗಸಾಗರಂ ಕವಿದಂತೆಯುಂ (ಕಾದಂಪೂ. ೧೧೧೦); ಮುಗಿಲೆಡೆಯೊಳೆಡೆವಿಡದೆಡೆಯಾಡಿ ಬಟಿಲ್ದ ಬಿಜ್ಜೋದರಿಯರ್ಕಳ್ (ಕಬ್ಬಿಕಾ. ೩೦); ಹಡಗನೇಱಿದವಂಗೆ ತಡಿಯೊ ಳಿರ್ಪಚಲಂಗಳೆಡೆಯಾಡುವಂತೆ (ಅನುಸಾ. ೨–೭–೧೦); ಶೇಷಪ್ಪ ಮಾಸ್ತ ರರು ಮುಂದೆ ಮಾತನಾಡಲಾರದೆ ದಿಗ್ಗನೆ ಎದ್ದುನಿಂತು ಎಡೆಯಾಡತೊಡ ಗಿದರು (ಮುಕ್ತ್ಯಿದೆ. ೧೮). [ಎಡ್ಡೆ$_3$ + ಆಡು$_1$]

**ಎಡೆಯಾಯ್ಲ** (ನಾ). = ಎಡೆಯಾಟ. 'ಎಡೆಯಾಯ್ಲತನ' ಪರಾ. [ಎಡ್ಡೆ$_3$ + –ಆಯ್ಲ (< –ಆಯಿಲ$_2$)]

**ಎಡೆಯಾಯ್ಲತನ** (ನಾ). ನಡುವೆ ಅಡ್ಡಾಡುವಿಕೆ; ಅಲೆತ: ಚಿದ್ದ ಯ್ಯನು ಜಕ್ಕಯ್ಯನುವೆಂಬ ಪಾರುವರು ಗುಣ್ಣಮಯ್ಯಂದೋಱಿ ಎಡೆ ಯಾಯ್ಲತನದಿಂ ರಾಜಗಾಮಿತಂಗೆಯ್ದು (ಸೌಇಇ. IX–i, ೧೨೩–೧೬; 1060). [ಎಡೆಯಾಯ್ಲ + –ತನ]

**ಎಡೆಯಾಱು** (ಕ್ರಿ). ನಡುವೆ ಬತ್ತಿಹೋಗು; ಒಣಗಿಹೋಗು: ಮತ್ತೊಂದೆಜಲಿ ಮನ ಕಾಲೂಜದಂತನುರಾಗರಸವೆಡೆಯಾಱದಂತನುಪ ಮನ ಮೂರ್ತಿಧ್ಯಾನ ಸುಖದೊಳಗೆ (ನಿಭಾಗ. ೨–೧–೨೭). [ಎಡ್ಡೆ$_3$ + ಆಱು$_1$]

**ಎಡೆಯಿಡು** (ಕ್ರಿ). ನಡುವೆಯಿಡು; ಅವಕಾಶಕೊಡು: ಅವಧಿಯ ನೊಂದು ತಿಂಗಳೆಡೆಯಿಟ್ಟನಿಯಂ ತಡೆದಿರ್ಪನಲ್ಲನೆಂಬವಸರದೊಳ್ (ಆದಿಪು. ೧೨–४३); ಎರಡುಂ ಕೈಗಳುಮಂ ನಿಷ್ಕರುಣಗಳೆಡೆಯಿಟ್ಟು ಕಡಿಯೆ (ಧರ್ಮಾಮೃ. ೭–೧೦೭).

ಎಡೆಯಿಡೆಪಡು = ಅವಕಾಶವಿರುವಂತಾಗು; ಅಂತರವಿಡು: "ಅನಂತರಾ – ಎಡೆಯಿಡೆಪಡದ" (ತತ್ತ್ವಪ್ರ. ೨೨೬). [ಎಡೆ$_3$ + ಇಡು$_1$]

**ಎಡೆಯಿಾ** (ಕ್ರಿ). ಅವಕಾಶವನ್ನು ಕೊಡು; ಆಸ್ಪದವನ್ನು ಕೊಡು: ಕಾವ್ಯಧರ್ಮ ಮೂಲಭೇದನವನ್ನೆಸಗುವ ಮಹಾದೋಷದ ಬೀಜಕ್ಕಾದರೂ ಎಡೆಯಿಾಯಬಾರದು (ನಾಡೋಜ. ೩೬೫). [ಎಡೆ$_3$ + ಈ$_1$]

**ಎಡೆಯುಡಿಯಾಡು** (ಕ್ರಿ). ಕೊಟ್ಟಮಾತನ್ನು ನಡುವೆ ಮುರಿ; ವಚನಭಂಗ ಮಾಡು: ಮನಂಗಿಡಲೀವನೆ ಪೋಗಿ ಬಂಣಿಮೆಂಡೆಡೆಯುಡಿಯಾಡಲೀವನೆ ಮನೋಮುದದಿಂ ಕರೆದಿತ್ತು ಕೆಯ್ಗಳಂ ಬಿಡೆ ಮುಗಿವಾಜಿದಲ್ ನೆಗಟ್ದನೀ ಧರೆಯೊಳ್ ಎಡೆವಾರಿದೇವನೆ (ಎಕ. VII, ಚನ್ನಗಿ. ೩೮–೧೮; 1149 ?). ☞ ಎಡೆಯುಡಿಯಾಡು (= ನಡುವೆ ಓಡಾಡು) ಎಂದು ಪಾಠವಿರಬಹುದೆ? [ಎಡೆ$_3$ + ಉಡಿ$_1$ + ಆಡು$_1$]

**ಎಡೆಯುಡುಗು,** ಎಡೆವುಡುಗು (ಕ್ರಿ). ನಡುವೆ ನಿಂತುಹೋಗು; ಪರಂಪರೆ ಮುರಿದು ಹೋಗು: "ಎಡೆಯುಡುಗು – ವಿಚ್ಛೇದೇ (ಸ್ಥಳಬಿಡು)" (ಶಮಧಾ); ನೆಗಟ್ಟೀ ಕ್ರಿಯಾವಿಶೇಷಂಗಳನಿಲ್ಲಿಂದಿತ್ತೆಡೆಯುಡುಗದೆ ನಡೆಯಿಸುವುದು (ಆದಿಪು. ೧೫–೧೬ ವ); ಕಡುಕುಂಪಿನ ಪಲ್ಲಳುಂ ಮೆಲ್ಲಡಿಗಳನೆಡೆಯುಡುಗದೊತ್ತಿದೆಡೆಯಿಂ ನೆತ್ತರ್ ಬಿಡದೆ ಚ್ಚು ಪಾಯೆ (ಸುಕುಮಾ. ೧೨–೧೮); ಕಿಡುವೊಡಲೊಡಮೆಗಳೆರಡಱಕೊಳೆಡೆಯುಡುಗದೆ ತೊಡರ್ದು ತೋರ್ಪಹಂ ಮಮಭಾವಂ (ವರ್ಧಪು. ೧೪–೯೧); ಕಡುಗಮನೆ ಘುರಿಘುರಿಲನೆಡೆಯುಡುಗದೆ ಕೊಱದರರೆ ಮಡಗಿದಂ ನಿಜಶಿರಮಂ (ರಾಜಶೇ. ೧೪–೨೯). **ಎಡೆವುಡುಗು**: ಎಡೆವುಡುಗದೆ ತದ್ಧರ್ಮ ಕಾರ್ಯತತ್ಪರನಾಗಿ (ಸೌಇಇ. IX–i, ೨೯೩–೧೮; 1162). [ಎಡೆ$_3$ + ಉಡುಗು$_1$]

**ಎಡೆಯೂರು** (ನಾ). ಒಂದು ಊರಿನ ಹೆಸರು: ಎಪ್ಪತ್ತಱ ಬಳಿಯ ಎಡೆಯೂರ ಗುಯ್ಯಲೊಂದು ಆ ಗುಯ್ಯಲಿ ತನ್ನ ಪ್ರತಿಷ್ಠೆಮಾಡಿದ ಉಂಕೇಶ್ವರದೇವರ್ಗ್ಗಂ (ಎಕ. XI, ಮೊಳಕಾ. ೪೦–೫; 987). [ಎಡೆ$_3$ + ಊರು$_3$ (< ಊರ್)]

**ಎಡೆಯೊಡ್ಡು** (ಕ್ರಿ). ಮಧ್ಯದಲ್ಲಿ ಚಾಚು, —ಸೇರಿಸು; ನಡುವೆ ಇಡು: ಇರುಳುಗಳ್ಗನ ಕೂಡೆ ಸೇರಿದ ಮರುಳಿನಂತಿರೆ ನೀವು ರಣದಲಿ ತಱಸಿಕೊಂಬಿರಿ ಹಾಯ್ದುರವದಿರು ನಿಮ್ಮನೆಡೆಯೊಡ್ಡಿ (ಕುವ್ಯಾದ್ರೋ. ೧೭–೩೨); ಉಱುವ ಬಾಲವ ಬೆಳಸಿ ದಾರಿಯ ತೆಱಹುಗೊಡದೆಡೆಯೊಡ್ಡಿ ಮನುಜನ ಮಱುಕವನು ತಾ ಕಾಂಬೆನಿನ್ನೆನುತಿರ್ದನಾ ಹನುಮ (ಕುವ್ಯಾಅ. ಓರಿಇ. ೧೧–೧೪). [ಎಡೆ$_3$ + ಒಡ್ಡು$_1$]

**ಎಡೆಯೊತ್ತು$_1$** (ಕ್ರಿ). ಮಧ್ಯದಲ್ಲಿ ಒತ್ತು, —ಅದುಮು: ಮಸಗಿ ಬೆಸದಿರ್ದು ವಿವರಮನಸಿಯದಱದೆಯೊತ್ತಿ [ಪಾಠಾಂ. ವೊತ್ತಿ] ಪೊಕ್ಕು ಕೆಲನಂ ಕೊರ್ಬುತ್ತೆಸೆದು ಬಿದಿರ್ದಾರ್ದುಮೇಟ್ಗೇಟ್ಗೆ ಸಮಂಜಸನಿಕ್ಕಿ ಮಿಕ್ಕನರಿವಾಹಿನಿಯಂ (ಕವಿರಾ. ೧–೬೫); ಎಸೆವ ಚೆಂದೆಂಗಾಯ್ಗಳೊಂದೊಂದನೆಡೆ [ಪಾಠಾಂ. ಒಡೆ] ಯೊತ್ತಲೊಸರಿ ಸೋರ್ವೆಳನೀರ್ಗಳಘ್ರ್ಯಂಗಳಾಗೆ (ಜೈಮಿಭಾ. ೩–೨೬). [ಎಡೆ$_3$ + ಒತ್ತು$_1$]

**ಎಡೆಯೊತ್ತು$_2$** (ನಾ). ಒಂದು ಬಗೆಯ ತಾಳ; ಮಧ್ಯತಾಳ (?): ಜಾಣ್ಗಿಡಪಾಡಿ ಮೊದಲ ತಾಣದೊಳೆಡೆಯೊತ್ತಿನೊಳೆಸೆವ ಕಡೆಯ ತಾಳದ ಯತಿಯೊಳ್ (ಅಜಿಪು. ೫–೪೧). [ಎಡೆ$_3$ + ಒತ್ತು$_2$]

**ಎಡೆವಗಲ್,** ಎಡೆಹಗಲು (ನಾ). ನಡುಹಗಲು; ಮಧ್ಯಾಹ್ನ: ಮಣಿಮಾಡದ ಲೋವೆಗಳಲ್ಲಿ ಕೋದ ಪೊಸಮುತ್ತಿನ ಮೊತ್ತದ ಬೆಳಗು ಚಂದನಾಲೇಪದ ಪದನಂ ಕುಡುವುದಲೆವ ರವಿಗೆಡವಗಲೊಳ್ (ಯಶೋಚ. ೧–೨೯); ಎಡೆವಗಲವರೆಗೂ ಅವರನ್ನು ತಡೆದು ಅಲ್ಲಿಯೆ ನಿಲ್ಲಿಸಿ (ನಗಗ. ೫೩). **ಎಡೆಹಗಲು**: "ಮುಂಜಾವಿನ ನಂತರ (ನಡುಹಗಲು)" (ಜಾನಕೋ. ೨೪). [ಎಡೆ$_3$ + ಪಗಲ್]

**ಎಡೆವಟ್ಟ** (ನಾ). ಒಂದು ಊರಿನ ಹೆಸರು: ಬನವಸೆ ನಾಡೊಳಗಣ ಕಂಪಣ ಮಾಸವೂರು ೧೨ ಎಡೆವಟ್ಟ ಬಳ್ಳವೆ ೭೦ ನರಿಯಳಿಗೆ ೪೦ (ಕಇ. IV, ೧೩–೩೭; 1165). 'ಎಡೆವಟ್ಟೆ' ಪಠಾ. [ಎಡೆ$_3$ + ?]

**ಎಡೆವಟ್ಟಿಲ್** (ನಾ). ಊಟದ ತಟ್ಟೆಯ ಸುತ್ತಲೂ ಇಡುವ ಬಟ್ಟಲು: ಎಡೆವಟ್ಟಲ್ಗಡ್ಡಣಿಗೆಗೆ ಪಡಿಗಕ್ಕೆ ತಗುಳ್ದ ಪಱಯ ಬಿತ್ತರಿಗೆಗೆ ತಕ್ಕೆಡೆಯಱದು ಪಂತಿಕಾಜರ ನಡೆಯಱದು ವಿಲಾಸದಿಂದಮಿರಿಸಿದರಾಗಳ್ (ಸುಕುಮಾ. ೧೧–೨೬). [ಎಡೆ$_4$ + ಬಟ್ಟಲ್]

**ಎಡೆವಟ್ಟೆ** (ನಾ). ೧. ಮಧ್ಯಮಾರ್ಗ; ನಡುದಾರಿ: ಬರುತಿಪ್ಪ ಮಡದಿಗೆಡೆವಟ್ಟೆಯೊಳು ಬಂದ ಸಂಕಟವನಿನ್ನಾವ ಜೀವರು ಕೇಳ್ವರು (ಹಚಕಾ. ೧೨–೫೬); ನಾನಾ ಧಾನ್ಯಂಗಳಂ ಪೇಱಕೊಂಡು ನಡೆತರ್ಪಾಗಳೆಡೆವಟ್ಟೆಯೊಳೆಲ್ಲಿಯುಂ ಲಿಂಗದರ್ಶನಂ ಸಮನಿಸದಿರಲ್ (ವೃಷವಿ. ೬–೮ ವ). ೨. ಒಂದು ನಾಡಿನ ಹೆಸರು: ನನ್ನಿಯ ಗಂಗಪೆರ್ಮ್ಮಾಡಿ ದೇವರಸರುಯೆಡೆವಟ್ಟೆ . . . ಬಳ್ಳವೆಯುಪ್ಪತ್ತುಮಂ (ಎಕ. VII, ಶಿಕಾರಿ. ೧೮–೧೩; 1158). 'ಎಡೆವಟ್ಟ' ಪಠಾ. [ಎಡೆ$_3$ + ಬಟ್ಟೆ$_1$]

**ಎಡೆವಡಿಸು** (ಕ್ರಿ). ಅಳವಡಿಸು; ಸೇರಿಸು; ಜೋಡಿಸು: ನುಡಿಸಿದರು ರಾಯಮುದ್ದಳಿಗರತಿಶಯ ಮುದವನೆಡೆವಡಿಸಿ ಸಭೆಗೆ (ರೇವಣ. ೩–೪೨); ಲಿಂಗವ ಸರ್ವಾಂಗದೊಳೆಡೆವಡಿಸಿದ ದೇಶಿಕ ಚಕ್ರೇಶಂ ಸಿದ್ಧೇಶಂ ರಕ್ಷಿಪುದು (ಉದ್ಭದೇ. ೨–೫). [ಎಡೆ$_3$ + ಪಡು$_1$ + –ಇಸು$_3$]

**ಎಡೆವಡು** (ಕ್ರಿ). ನಡುವೆ ಮಲಗು; ಹತ್ತಿರದಲ್ಲಿ ಮಲಗು: ಪಗಲಂ ಕಳೆದಾಯಿರುಳೆಡೆವಟ್ಟಿರ್ದ ವೈಶಂಪಾಯನನೊಳಂ ಪತ್ರಲೇಖೆಯೊಳಂ. . . ಆಲಾಪಂಗೆಯ್ಯುತ್ತಮಿರ್ದು (ಕಾದಂಪೂ. ೬೧೧). [ಎಡೆ$_3$ + ಪಡು$_2$]

**ಎಡೆವಡೆ** (ಕ್ರಿ). ಅವಕಾಶವನ್ನು ಹೊಂದು; ಆಸ್ಪದವನ್ನು ಪಡೆ: ದಿವಸಕರಾದರ್ಶಬದ್ಧ ವಿವರ ನವವನಜದೊಳೆಡೆವಡೆಯದ ವರ ಕೈರವ ಮಿತ್ರ ಕಿರಣದಂತವಳ ವಚನಮೊಳಪುಗದೆ ತನ್ಮನಃಪದ್ಮಿನಿಯೊಳ್ (ಶಾಂತಿಪು. ೫–೧೪೫); ಕಾಲಿಡಲೆಡೆವಡೆಯದೆ [ಪಾಠಾಂ. ಅಱಯದೆ] ಕುರುಪತಿ ದಡಿಗವೆಣಂಗಳನೆ ಮೆಟ್ಟಿ ನಡೆಯುತ್ತಿರ್ದಂ (ಗದಾಯು. ೪–೧೪). [ಎಡೆ$_3$ + ಪಡೆ$_1$]

**ಎಡೆವನೆ,** ಎಡೆಮನೆ (ನಾ). (ಮನೆಗಳ) ನಡುವಣ ಮನೆ: ಮೆಲ್ಲನೆ ಮರುತನಂದನಂ ಮನೆಗಳೆಡೆವನೆಗಳಂ ಶೋಧಿಸುತ (ವೆಂಕಾರಾ. ೫–೪–೨೪). **ಎಡೆಮನೆ**: ಎಡ[ಡೆ] ಮನೆ [ಪಾಠಾಂ. ವನೆ] ಯೊಳೀಕಡೆ ಮನೆಯೊಳಾಕಡೆ ಮನೆಯೊಳುಂ ಹೋಗನವಂ ಶಿಶು (ಬಸವು. ೪೮–೨೫). [ಎಡೆ$_3$+ ಮನೆ]

**ಎಡೆವರ್** (ಕ್ರಿ). ಅವಕಾಶ ಉಂಟಾಗು; ಆಸ್ಪದವಾಗು: ಮೇಣಂ ಮೇಣ್ ದುಃಖಮೊದವೆ ಬೀರದ ರೋಸಕ್ಕೆಡೆವರ್ಕುಂ (ರಾಮಾಶ್ವ. ೩೪–೩೦). [ಎಡೆ$_3$ + ಬರ್]

**ಎಡೆವರ** (ನಾ). "ನಡುವೆ ಮರೆತು ಹೋಗುವಿಕೆ; ಅಸ್ತವ್ಯಸ್ತವಾಗುವಿಕೆ" (ಸಿರಿಕೋ. ೬೧). [ಎಡೆ$_3$ + ವರಂ (< ಮಱು$_1$)]

**ಎಡೆವರಿ** 'ಎಡೆವಱ' ನೋ.

**ಎಡೆವರಿಯೂರ್** (ನಾ). ಒಂದು ಊರಿನ ಹೆಸರು: ಬೋಚಿಗ ಧರ್ಮ್ಮಸೆಟ್ಟಿ ಉತ್ತವಗಳ್ಪವನ್ ಕ್ರದೊಳೆ ನಿಲೆ ಎಡವರಿಯೂರ ಮಲೆವ ಸತ್ತವನ್ (ವೈಅರಿ. ೧೯೧೬, ೧೩–೩; 900). [ಎಡೆ$_3$ + ಪರಿ + ಊರ್]

**ಎಡೆವರಿಸು** (ಕ್ರಿ). ೧. ಮಧ್ಯದಲ್ಲಿ ಬರಿಸು; ನಡುವೆ ಬರಮಾಡು: ಸಮ್ಮುಖದೊಳೆಡೆವರಿಸಿಯಾ ನಂಬ್ಯಣ್ಣನೊಡನೆ ಶಿವನಿಂತೆಂದನು (ಸೌಂದಪು. ೬–೪೪). ೨. ಹಿಮ್ಮೆಟ್ಟಿಸು; ಓಡಿಸು: ಕವಿದುದೆಡಬಲವಂಕದಲಿ ಸುರನಿವಹ ಸೂಟಿಯ ಸರಳ ಸೋನೆಗೆಡ[ಡೆ] ವರಿಸಿದವ [ಪಾಠಾಂ. ಸೋನೆಯಡವರಿಸಿದುವ] ದಿಗಡಿಗೆ ಕರ್ಣನ ರಥದ ವಾಜಿಗಳು (ಕುವ್ಯಾಅ. ೧೯–೩೬). [ಎಡೆ$_3$ + ಪರಿ$_2$ + –ಇಸು$_3$]

**ಎಡೆವರಿಹ** (ನಾ). ನಡುವೆ ನಿಲ್ಲಿಸುವುದು : "ಕಥಾವಿಚ್ಛೇದಃ–ಮಾತಿನೆಡೆವರಿಹಮುಂ" (ನೀತಿವಾ. ೩೧–೩).
[ಎಡೆ₃ + ಪರಿ₁ (< ಪಱಿ₁) + –ಹ₂]

**ಎಡೆವರ್ಣ** (ನಾ). ಮಿಶ್ರವರ್ಣ; ಕಪ್ಪು ಮತ್ತು ಬಿಳಿಯ ಮಿಶ್ರವರ್ಣ : "ಕಲ್ಮಾಷಯೆಂಬುದು ಎಡೆವರ್ಣಂ" (ಹಲಾಯು. ೧೨೧–೫೧).
[ಎಡೆ₃ + ವರ್ಣ]

**ಎಡೆವಲಿ** (ನಾ). ಪ್ರಾದೇಶಿಕ ಬಲಿ; ಸ್ಥಳಬಲಿ (?) : ಎಡೆವಲಿಗುಡಲೆಂದಂತಕನಡುವುೞ್ಗಿಯನಟ್ಟ ತೆಱದೆ ತಾಱುಂತಟ್ಟುಂಗೆಡೆದಿರೆ ರಣದೊಳ್ ಮತ್ತಂ ಕಡಿಖಂಡಮುದಾಯ್ತು (ಪಂರಾಮಾ. ೧೩–೧೦೬).
[ಎಡೆ₃ + ಬಲಿ₄]

**ಎಡೆವಱ** (ನಾ). ನಡುವೆ ಬಂದ ಬರ, —ಅಭಾವ : ಕಡಂಗಿ ತಱಿದು ಶರವರ್ಷದಿನಂದಱಿಯೆ ಕಡಿಕೆಯ್ದು ಬಿಡದೆಡೆ [ಪಾಠಾಂ. ದ]ವಱನಂ ಮಾಡಿದುವು ಗುರುತನೂಜನ ಕಣೆಗಳ್ (ಪಂಪಭಾ. ೧೨–೮೧) ; ಎಡೆವಱದೊಳೆಱಗಿ ಬಱಸಿಡಿಲಿಡುಮುಡುಕನೆ ಪೊಡೆದುದೆನಿಸಿ ಪಾಂಡ್ಯನ ರಥದಚ್ಚುಡಿದಱ್ಗಿತಱ್ಗಿಕೊಂಡುವು ಕಡುಗೂರಿದುವೆನಿಪ ಗುರುತನೂಜನ ಕಣೆಗಳ್ (ಪಂಪಭಾ. ೧೨–೮೨).
[ಎಡೆ₃ + ಬಱ₂]

**ಎಡೆವಱಿ**, ಎಡೆವರಿ (ಕ್ರಿ). ಮಧ್ಯದಲ್ಲಿ ಹರಿದುಹೋಗು; ನಡುವೆ ಕತ್ತರಿಸಿಹೋಗು; ನಡುವೆ ನಿಂತುಹೋಗು; ವಿಚ್ಛೇದವಾಗು : ಸಯ್ತುಡವಡಿಕೆಗಳಿಂ ತೊಡೆದತ್ತೆಡೆವಱಿಯದೆ ಪೊಳೆವ ಮಿಂಚು ಮುಗಿಲೆಡೆಯೆಡೆಯೊಳ್ (ಕವಿರಾ. ೩–೧೨೬) ; ಪಾರಂಪರ್ಯ್ಯಯಮೆಡೆವಱಿಯದೆ ಬನ್ದ ಧರ್ಮಸನ್ತತಿ (ಎಕ. XI, ದಾವಣ. ೧೬–೧೦ ; 889) ; ಅವ್ಯವಚ್ಛಿನ್ನವಾಗಿ ಬಂದ ಸೋಮವಂಶಮಾಗಳೆಮ್ಮ ಕುಲಸಂತತಿಗವೂರುಮಿಲ್ಲದೆಡೆವಱಿ[ಪಾಠಾಂ. ಎಡೆವರಿ, ದೊಡೆ ಅಱಿ]ದು ಕಿಡುವಂತಾಗಿರ್ದುದು (ಪಂಪಭಾ. ೧–೮೪ ವ); ಎಡ[ಡೆ]ವಱಿಯದೆ ಪುಡಿಗಟ್ಟಿದ ಮುತ್ತಿನ ಮಳಲ್ಗೆವಱಿದ ಮಣಿಕುಟ್ಟಿಮದೊಳಂ (ಕಾದಂಉ. ೩೨೬) ; ಎಡ[ಡೆ]ವಱಿಯದು ನಿನ್ನೊಲ್ಮೆಯೆಂದು ನಚ್ಚುವೆಂ (ಜಗವಿ. ೧೨–೧೦೫); ಕಡುಚಿಂತೆವೊಳೆವಂತೆ ರಜನಿ ಮೊಳೆವಾಗ ಪತಿ ಹಿಡಿಹಡೆಯೆ ಬಪ್ಪ ಪಡೆಯಂತೆ ಕಱುಗಳು ಹಾದಿಯೆಡೆವಱಿ [ಪಾಠಾಂ. ಎಡವರಿ, ಎಡೆವರಿ]ದು ತಮಗೆ ತಾವೇ ಬಪ್ಪುದಂ ಕಂಡು (ಸಿದ್ಧರಾ. ೨–೪೪) ; ದೃಢತರದ ವರವಾಯ್ತು ಸಿರಿಯಾಯ್ತೆಡೆವಱಿಯದುಬ್ಬರದ ಶೌರ್ಯದ ಕಡಲು ಕೈವಶವಾಯ್ತು (ತೊರರಾ. ೧–೮–೩೪); ಎಡ[ಡೆ]ವಱಿಯದೆ ವಾಚ್ಯಮನಾ ವಾಚಕದೊಡವೆರೆದಲ್ಲದೆ ಬೇರ್ಪಡಿಸಿರದೆಂದಡಿಗಡಿಗುಸಿರ್ವ ಬುಧರ (ಜಯುಕಾ. ೩–೩೩).
**ಎಡೆವರಿ** : ಎಡೆವರಿಯದಂತೆ ಕೊಡಲೆ ಆತ ಮತ್ತೆ ಕಣೆಯೆಸೆಯುವನು (ಭಾಮಣಿ. ೩೧) ; ಒಡಲೊಳಗೆ ಅಲಗಿಕ್ಕಿ ತಿರಿವಿದಂತಾಯಿತು ಎಡೆವರಿಯದೆ ಉಸಿರೊಕ್ಕಿತು (ಬಿದುರಿ. ೨೦೨).
[ಎಡೆ₃ + ಪಱಿ₁]

**ಎಡೆವಱ್** (ಕ್ರಿ). ನಡುವೆ ಬತ್ತಿಹೋಗು; ಒಣಗು : ಭಾರತ ವಿನುತ ಕುಲ ಜಲರಾಶಿಯೆಡೆವರಿ[ಱ್]ತದು ವಿಚಿತ್ರನಲಿ (ಕುವ್ಯಾಆ. ೩–೫).
[ಎಡೆ₃ + ಬಱ್₁]

**ಎಡೆವಾತು**, ಎಡೆಮಾತು (ನಾ). ನಡುನಡುವೆ ಆಡುವ ಮಾತು; ಹೆಚ್ಚಿನ ಮಾತು : ಬಿಡುಬಿಡಂತಿಂತೆಂದು ಪೊಡರ್ವ ನುಡಿಗಡಣಗಳನೆಡೆವಾತದೇಂ ಷಟ್‌ಸ್ಥಲ ಸ್ಥಾಪನಾರ್ಥಮಾ ಕಡುಮೆಯ್ಮೆವಡೆದ ಷಣ್ಮುಖನಖಿಳಶಕ್ತಿ ಬಂದೊಳಪೊಕ್ಕು ಶೋಭಿಸುತಿರೆ (ಪದ್ಮರಾ. ೪–೨೮).
**ಎಡೆಮಾತು** : ನುಡಿಯ ನುಡಿವವರಲ್ಲಿ ಎಡೆಮಾತನಾಡೆ ಬೇಱೊಂದೆಡೆಯುಂಟೆಂಬುದೆ ಮಾಯೆ (ಡಬೊಮ್ಮ. ೬) ; ನಿನ್ನ ಪತಿಯಂ ಬರವೇೞ್ಕೆಡೆಮಾತನಟ್ಟಲೇಂ ಕದನದೊಳಾನೆ ಪೇೞ್ದಪೆಂ (ಚಂದ್ರಪು. ೬–೨೪).
[ಎಡೆ₃ + ಮಾತು₁]

**ಎಡೆವಾಯ್**, ಎಡೆಹಾಯ್ (ಕ್ರಿ). ನಡುವೆ ಬರು; ತಾನಾಗಿ ಕಾಣಿಸಿಕೊಳ್ಳು : ಪಿರಿಯರ ನುಡಿಗೆಡೆವಾಯದೆ ಪುಲ್ಲೆಯಂತೆ ಗುಣವಂತರ ಕೂಟಕ್ಕೆ ಬೆದಱದೆ (ಧರ್ಮಾಮೃ. ೫–೯೯) ; ಕಾವ್ಯಕರ್ತೃ ತಪ್ಪುವನೆ ಪೊಂದೆರಡೆಡೆಯೊಳು ಎಡೆವಾಯ್ದು ಬಂದ ತಪ್ಪಂ ಹಿಡಿದು ಸಾಧಿಸದೆ ಕಡೆತನಕ ಬಂದ ಲೇಸಿಂಗೆ ತಲೆದೂಗೆ ತಲೆಯೊಡೆವುದೇ (ಹಚಕಾ. ೧–೨೩) ; ನೆಗೆದೊದೆದು ಬಿಳ್ದಂ ಪೊರಳ್ದಂ ಗಗನಕ್ಕೆಡೆವಾಯ್ದು ಪಾಯ್ದುವಗಡಾದಶ್ವಂ (ಹವ್ಮಾರ. ೩–೩೧). **ಎಡೆಹಾಯ್** : ಕಲಹ ಬೀದಿಯೊಳಾಯ್ತು ಕಟ್ಟದರಳಿವಿನೋದದಲಹಿತರೆಡ[ಡೆ] [ಪಾಠಾಂ. ಅಡ]ಹಾಯ್ದೆಳೆದು ತಂದನು ಪಾರ್ಥ (ಕುವ್ಯಾಆ. ೨೧–೩೬).
[ಎಡೆ₃ + ಪಾಯ್₁]

**ಎಡೆವಿಡವು** 'ಎಡೆವಿಡಿವು' ನೋ.

**ಎಡೆವಿಡಿ** (ಕ್ರಿ). ಅವಕಾಶವನ್ನು ಪಡೆ, —ಹೊಂದು : ಎಡೆವಿಡಿಯಲ್ಕವಡಿಂ ಕಟವಪ್ರವಮೇಱಿಯೆ ನಿಲ್ಲದನನ್ಧನ್ (ಎಕ. II, ೯೩–೩ ; 700).
[ಎಡೆ₃ + ಪಿಡಿ₁]

**ಎಡೆವಿಡಿವು**, ಎಡೆವಿಡವು (ನಾ). ೧. ಅವಕಾಶವನ್ನು ಪಡೆದಿರುವಿಕೆ; ವ್ಯಾಪ್ತವಾಗಿರುವಿಕೆ; ವ್ಯಾಪ್ತಿ : ಸೌರಾಷ್ಟ್ರ ಸೋಮೇಶ್ವರನೆಡೆವಿಡಿವಿಲ್ಲ [ಪಾಠಾಂ. ಎಡೆವಿಡದಿಲ್ಲ]ದಿಪ್ಪ ಬೆಡಗ ಕಂಡೆ (ಆದವ. ೯೯).
**ಎಡೆವಿಡವು** : ೨. ಸ್ಥಳಾವಕಾಶ; ಕಾಲಾವಕಾಶ : ಈಯಂದದಿಂದ ಪುರವರದೊಳೆಡ[ಡೆ]ವಿಡವಿಲ್ಲ [ಪಾಠಾಂ. ಡೆವಿಡಲಿಲ್ಲ]ದಾಯಿಕ್ಷುಕೋದಂಡನಲಗರ್ಣೆಯನಿಟ್ಟು (ಸಮ್ಯಕೌ. ೩–೩೦) ; ಘುಡುಘುಡಿಸುತೆಡ[ಡೆ]ವಿಡವಿಲ್ಲದೇಬಿಡುವ ಲೋಹಯಂತ್ರದ ರವಂ ಘೂರ್ಣಿಸಿದುದು (ಸಮ್ಯಕೌ. ೮–೩೯).
[ಎಡೆ₂ + ಬಿಡುವು]

**ಎಡೆವಿಡಿಸು** (ಕ್ರಿ). ಸ್ಥಾನವನ್ನು ಕಲ್ಪಿಸು; ಸ್ಥಳವನ್ನು ತೋರಿಸು : ಗಾಯಿಕೆಯರನಿರಿಸಿ ನೃಪಾಸ್ಥಾಯಿಕೆಯಿಂ ಪೊಱಗೆ ದೂತನೊಳಪುಗೆ ವರನೇತ್ರಾಯುತಕರರ್ ಸಸಂಭ್ರಮಮಾಯೆಡೆಯೊಳ್ ತಂದು ನಿಲಿಸಿಯೆಡೆವಿಡಿಸುವುದುಂ (ಶಾಂತಿಪು. ೩–೩೦).
[ಎಡೆ₃ + ಬಿಡಿಸು]

**ಎಡೆವಿಡು**, ಎಡೆಬಿಡು (ಕ್ರಿ). ನಡುವೆ ಬಿಟ್ಟುಬಿಡು; ಅವಕಾಶವನ್ನು ಕೊಡು; ಆಸ್ಪದವನ್ನು ಕೊಡು : ಸರಲೆನಿತನಿತುಮನೆಡೆವಿಡದೆ ತಱಿದು ತಲೆಯಂ ತಱಿಯಾ (ಪಂಪಭಾ. ೧೨–೧೬೭) ; ಸಿಡಿಖಂಡಂಗೊಂಡುಗಿಬಗಿದಿಡಿ[ದಿ]ಡಿದೆಡೆವಿಡದೆ ಕೂಱುಗೊಳ್ವರ್ ಬಾಯೊಳ್ (ಸುಕುಮಾ. ೧೧–೪೨) ; ನಡುವಗಲು ತೊಡಗಿ ಮಧ್ಯಮರಾತ್ರೆಪರಿಯಂತ ಎಡೆವಿಡದೆ ಈ ಪರಿಯೊಳರ್ಚಿಸುತೆ (ತಿರುರ. ೬–೨) ; ಸಾಧನೆಗೆ ನಾನಾ ಪ್ರಕಾರಗಳಾದ ಬಗೆಗಳನೆಡೆವಿಡದೆ ಬೆಸಲಾದ ಮನ ಮಾಣಿಕವ ತಮ್ಮ ಶರೀರಶರಧಿಯಲಿ ಸಾಧಿಸಿಯೆ (ಪ್ರಭುಲೀ. ೨೦–೪) ; ನಿನ್ನಾಣತಿಗೇಳಿ ನಿನ್ನ ಬಳಿಗೆ ಸಂದು ನಿನ್ನೊಳಿಗಗಳನೆಸಗಿ ನಿನ್ನವಳೆನಿಸಿ ನಿನ್ನೆಡೆವಿಡದಿರ್ಪನೀಯುನ್ನತಿಗಿನ್ನೆಣೆಯುಂಟೆ (ಹದಿಬ. ೧–೩೭) ; ನಾನು ನಿನ್ನನ್ನು ಎಡ[ಡೆ]ಬಿಡದೆ ಸಂಗಡ ಇದ್ದರೆ ಹೇಗೆ ತಪ್ಪಿಸಿಕೊಂಡು ಹೋಗುವೆ (ದೇವೀಚೌ. ೪೫). **ಎಡೆಬಿಡು** : ಜಗಳ ಎಡೆಬಿಡದೆ ನಡೆಯುತ್ತಿರುತ್ತದೆ (ಪುನರು. ೩೦೪).
[ಎಡೆ₃ + ಬಿಡು₁]

**ಎಡೆವುಗು** 'ಎಡೆವೊಗು' ನೋ.

**ಎಡೆವುಡುಗು** 'ಎಡೆಯುಡುಗು' ನೋ.

**ಎಡೆವೆರಲ್** (ನಾ). ನಡುವಣ ಬೆರಳು : ಅರುಣತಲದ್ಯುತಿತತಿಯೆಡೆವೆರಲ್ಗಳಿಂ [ಪಾಠಾಂ. ಎಡೆವೆರಪುಗಳಿಂ] ದುಣ್ಮುವಂದದಿಂ ಕೆಂಬೆರಲುಂಗುರದಿಂದೊಗೆವರುಣರುಚಿಮಂಜರಿ (ಚಂದ್ರಪು. ೬–೬೧) ; ಎಡದೆಡೆವೆರಲಸೆಳ್ಳುಗುರಿಂದೆ ಕಂಬನಿ ಗಡಣವ ಮೊಗೆದು ಸಿಂಪಿಸುತ ಸಡಗರವಾಂತನ ಚಿತ್ರಪಠದ ಪಾದಜಡಜಕ್ಕೆ ನೊಸಲ ಚಾಚಿದಳು (ಮೋಹತ. ೯–೮).
[ಎಡೆ₃ + ಬೆರಲ್]

**ಎಡೆವೇಱು** (ಕ್ರಿ). ಸ್ಥಳವನ್ನು ಪಡೆ; ಜಾಗವನ್ನು ಹೊಂದು; ಅವಕಾಶವನ್ನು ಪಡೆ: ಸವಿಳಾಸ ಲೋಲಲೋಚನ ವಿವರಮನೆಡೆ [ಪಾಠಾಂ. ಎರ್ದೆ]ವೆತ್ತ ಕಸದವೊಲನವರತಂ (ಕವಿರಾ. ೧-೪೩); ಎಡವೆತ್ತೊರ್ಮೆಯೆ ಮುಪ್ಪು ಕುತ್ತದೊಳೊಡಂಬಟ್ಟೊತ್ತೆ ಮತ್ತಲ್ಲಿ ಮೆಚ್ಚಿಪಡದಾರ್ತಣ್ಕೆ ತಪಕ್ಕೆ ಪೋಪ ಪದದೊಳ್ (ಆದಿಪು. ೨-೩೮); ನಿರಂತರಮುವರಂತರಂಗಳೊಳೆಡೆವೆತ್ತು ತೋರ್ಕುಂ ಭರತಕ್ಷೇತ್ರದ ವಿಷ್ಕಂಭಂ (ಸುಕುಮಾ. ೧೧-೫೦ ವ); ದ್ರವ್ಯಲಿಂಗಿಯಾಗಿರ್ದ ಪುಷ್ಪದಾಡನೆಡೆವೆತ್ತು ರಾಗಿಸಿ ಬಲೆವಱಿದ ಕೊಂಕನಂತೆ ಮನೆಯೆ ಗುಱಿಯಾಗಿರ್ಪುದುಮಾಗಳ್ (ಧರ್ಮಾಮೃ. ೭-೧೬೮).
[ಎಡೆ$_3$ + ಪೆಱು$_1$]

**ಎಡೆವೇಡು** (ಕ್ರಿ). ಸ್ಥಳವನ್ನು ಯಾಚಿಸು; ಆಶ್ರಯವನ್ನು ಬೇಡು: ಒರ್ವ ಪಾರ್ವಂ ವಿಸ್ತೀರ್ಣಜೀರ್ಣಕರ್ಪಟಾವೃತಕಟಿತಟನುಮಾಗಿ ಬಂದು ಕಣ್ಮುಚ್ಚಲೆಡೆವೇಡೆ ತನಗವರ್ ಪಾಸಲ್ಕೊಟ್ಟ ಕೃಷ್ಣಾಜಿನಮಂ ಪಾಸಿ (ಪಂಪಭಾ. ೩-೩೧ ವ). [ಎಡೆ$_3$ + ಬೇಡು$_1$]

**ಎಡೆವೇೞ್** (ಕ್ರಿ). ಕಾರಣವನ್ನು ತಿಳಿಸು; ಇಂಗಿತವನ್ನು ಹೇಳು: ಅ[ಂ] ನಿನಗೆಡೆವೇೞದೆ ಪೇೞಾರ್ಗೆ ಪೇೞ್ವೆನಿಂದಿನ ಬಂದಾ ಕಾೞಾದ ವಾೞ್ತೆಗೊಂಡೊಡೆ ಪಾೞಾದುದು (ಪಂಪಭಾ. ೪-೬೧).
[ಎಡೆ$_3$ + ಪೇೞ್. P ತಮಿ. ಇಡೈ = ಕಾರಣ]

**ಎಡೆವೊಗು, ಎಡೆವುಗು, ಎಡೆಹೊಗು** (ಕ್ರಿ). ಮಧ್ಯೆ ಪ್ರವೇಶಿಸು; ನಡುವೆ ಬರು: ಕೈನೀಡಿ ಶಿವಿಯಲವ್ವಳಿಸೆ ತುಂಬುರಾದಿಗಳೆಡೆವೊಕ್ಕು ಇರ್ವರುಮಂ ಬೇಱೆಬೇಱೆ ನಿಲಿಸಿ (ನಂಜಿರ. ೬-೧೩೬); ಆ ರುಷಿಯ ಚರಣಕಮಲಮನಾರಾಧಿಸಲೆಂದು ಬಂದು ಕಂಡೆಡೆವೊಕ್ಕು ರ್ವೀರಮಣ ದುರ್ಬಳಸ್ಕ ಬಳೋರಾಜಾಯೆನ್ನದಿವರ್ಗೆ ಮುಳಿವುದೆ ಮರುಳೇ (ಯಶೋಚ. ೪-೪೭); ನಿವಮ್ಮಳನವರಾಳನು ವಿಭಾಗಿಸಿ ನೀಲಗಿರಿಯೆಡೆ ವೊಕ್ಕುದೆನೆ ಖಳನೊಡಲು ನಿಡುಗೆಡೆಯೆ (ಕುವ್ಯಾದ್ರೋ. ೧೭-೧). **ಎಡೆವುಗು**: ಮೋದಲೆಂದಿರ್ದೆಡೆಯೊಳ್ ಗುರು ತನ್ನ ಮಗನನೆಡೆವುಗವೇೞ್ದಂ (ಪಂಪಭಾ. ೨-೭೩); ಬಲ್ಗೊಲೆಗಳ್ ಬಾಳ್ಗಳೆಡೆವೊಕ್ಕು ಸಂತೈಸದಿರೆ ಕೃಷ್ಣನ್ (ಅಶ್ವತ್ಥಾ. ೩೦-೧). **ಎಡೆಹೊಗು**: ತಾಳಬಾರದ ಹೇಡಿಗೊಂಡೋಡಿ... ನನ್ನ ಪಾಲಿಸಿ ಪುನಃಪ್ರತಿಷ್ಠೆಯ ಮಾಡೆನುತ್ತ ರಾಜಶ್ರೇಷ್ಠಿಯೆಡೆಹೊಕ್ಕನು (ಸಮ್ಯಕೌ. ೪-೫೧). [ಎಡೆ$_3$ + ಪೊಗು$_1$]

**ಎಡೆವೊತ್ತು** (ಕ್ರಿ). ನಡುವೆ ಹೊತ್ತಿಕೊ (?): ನೀನಿನಿತು ಪೊೞ್ತು ಮನೆಯೊಳಗಾನಿಲ್ಲದನಿತಱೊಳೆ ಎಡೆವೊತ್ತುವೊಲೆಯಂ ಕಲೆಮುಟ್ಟಲ್ವೆತ್ತಂತೆ ಮನೆಯೊಳುಳ್ಳುದೆಲ್ಲಮಂ ಕಾಕಭೋಜನಂಮಾಡಿ ಕಿಡಿಸಿದೆಯೆಂದು (ಪಂಚತಂ. ೧೫೫-೫). [ಎಡೆ$_3$ + ಪೊತ್ತು$_1$]

**ಎಡೆವೊೞಲ್** (ನಾ). ೧. ಊರ ನಡುವೆ. ೨. ಒಂದು ಊರಿನ ಹೆಸರು: ಎಡೆವೊೞಲ್ನಾಡ ಸಲವುಗೆಯ (ಎಕ. VIII, ಸೊರಬ. ೫೭೧-೨೮; 692). [ಎಡೆ$_3$ + ಪೊೞಲ್]

**ಎಡೆವೋಗು** (ಕ್ರಿ). ದಾರಿಯಲ್ಲಿ ಹೋಗು; ಗೊತ್ತಾದ ಜಾಗಕ್ಕೆ ಹೋಗು: ಅಲರ್ಗಣ್ಗಳ್ ಸ್ಮರನಿರ್ದನಕ್ಕುಮೆಡೆವೋಪಾ ಜೋಡೆ ಕಾಮಂಗೆ ಕಾದಲೆಯಕ್ಕುಂ (ಪಂಪಭಾ. ೪-೮೪).
[ಎಡೆ$_3$ + ಪೋಗು$_1$. P ತಮಿ. ಇಡೈ = ದಾರಿ]

**ಎಡೆಸಂದು** (ನಾ). ನಡುವೆ ಇರುವ ಅವಕಾಶ: ಸ್ತನಪಾನಗುಡುವ ಹೆಂಗಳಿಗೆ ಪೇಳ್ದಳು ಹತ್ತುದಿನದೆಡೆಸಂದಿನ ರಾತ್ರಿ ಘನಜೋಪಾನದೊಳೀಡೇಱಬೇಕೆಂದೆನುತಲಿ (ಮೋಹತ. ೪-೭೭). [ಎಡೆ$_3$ + ಸಂದು$_2$]

**ಎಡೆಸಾರ್** (ಕ್ರಿ). ಹತ್ತಿರಕ್ಕೆ ಬರು; ಸಮೀಪಿಸು: ಅಂಜದಿರಲಿರಲಮ್ಮದೆ ಕೃತಾಂತನ ದೂತರೆಡೆಸಾರ್ದು (ನಿಭಾಗ. ೬-೨-೧೫).
[ಎಡೆ$_3$ + ಸಾರ್$_1$]

**ಎಡೆಸೆಳೆ** (ನಾ). (ನದಿಯ ನೀರಿನ) ನಡುವಣ ಸೆಳೆತ: ಬೆಳ್ನೊರೆಯ ತೊಳಪೆಳೆಯ ಮೀನ್ಪೊಳೆಯಲಿರದೆಳೆಯಲೆಡೆಸೆಳೆಯ ತುಂತುಱಿನ ತನಿಗೆದಱಿನ (ಜೈಮಿಭಾ. ೯-೨೪). [ಎಡೆ$_3$ + ಸೆಳೆ$_2$]

**ಎಡೆಸೋಲು** (ಕ್ರಿ). ಮಧ್ಯದಲ್ಲಿ ಸೋತುಹೋಗು: ಪೂಣ್ದು ತರಿಸಂದು ಬೀಡುಬಿಟ್ಟಹರಲ್ಲಿ, ಅ ದೂರಪಾರದಪಾರತೆಯುಮೆಡೆಸೋಲುವೋಲ್ (ಶ್ರೀರಾಮಾ. ೫೫೫-೯೮). [ಎಡೆ$_3$ + ಸೋಲು$_1$ (< ಸೋಲ್)]

**ಎಡೆಹಗಲು** 'ಎಡೆವಗಲ್' ನೋ.

**ಎಡೆಹರೆಯ** (ನಾ). "ಮಧ್ಯವಯಸ್ಸು" (ಜಾನಕೋ. ೨೪).
[ಎಡೆ$_3$ + ಹರೆಯ]

**ಎಡೆಹಳ್ಳಿ** (ನಾ). ಒಂದು ಹಳ್ಳಿಯ ಹೆಸರು: ಎಡೆಹಳ್ಳಿಯ ನೆಲೆವೀಡಿನೊಳು ಸುಖದಿಂ (ಎಕ. VII, ಶಿವಮೊ. ೬೫-೯೫; 1112).
[ಎಡೆ$_3$ + ಹಳ್ಳಿ (< ಪಳ್ಳಿ$_1$)]

**ಎಡೆಹಾಯ್** 'ಎಡೆವಾಯ್' ನೋ.

**ಎಡೆಹಿಡಿ** (ಕ್ರಿ). ಉಣಬಡಿಸು: ಅಕ್ಕ ಪಂಚ ಪಕ್ವಾನ್ನವನ್ನು ನನ್ನೆದುರು ಎಡೆಹಿಡಿದಳು. ಆದರಲ್ಲಿ ಯಾವ ಭಕ್ಷ್ಯವಿದ್ದಿಲ್ಲ? (ಸ್ಮೃತಿಚಿ. ೮೨).
[ಎಡೆ$_4$ + ಹಿಡಿ$_1$ (< ಪಿಡಿ$_1$)]

**ಎಡೆಹೊಗು** 'ಎಡೆವೊಗು' ನೋ.

**ಎಡೆಹೊಡೆ** (ಕ್ರಿ). ಕುಂಟೆಯನ್ನು ಹೊಡೆ: ಬೆಳೆಯು ಸುಮಾರಾಗಿ ಒಂದು ಫೂಟನಿಂದ ಕಡಿಮೆ ಇರುವುದರೊಳಗೆ ಎಡೆಹೊಡೆದು ಹುಲ್ಲು ಕಸ ಮುಂತಾದ್ದನ್ನು ತೆಗೆದುಹಾಕುತ್ತಾರೆ (ಮುಂಬಯಿ. ೫-೧೯೬).
[ಎಡೆ$_0$ + ಹೊಡೆ$_1$ (< ಪೊಡೆ$_1$)]

**ಎಡೆಹೊತ್ತು** (ನಾ). ಮಧ್ಯಾಹ್ನದ ಹೊತ್ತು, —ಕಾಲ (ದಕ. ೩).
[ಎಡೆ$_3$ + ಹೊತ್ತು$_2$ (< ಪೊೞ್ತು)]

**ಎಡೆಹೊಯ್ಯು** (ಕ್ರಿ). ಎಡೆಯನ್ನು ಹಾಕು, —ಸುರಿ: ಬೀಜದ ಜೋಳವನ್ನು ಬಸವಣ್ಣದೇವರ ಎದುರಿಗೆ 'ಎಡೆಹೊಯ್ಯು' ವಾಗ ಸಾಕ್ಷಾತ್ ನಾಯಕರೇ ಬಂದು 'ಎಡೆಹೊಯ್ಯೋದು ಹೀಗಲ್ಲ; ಹೀಗೆ' ಎಂದು ಹೇಳಿ ... ತೋರಿಸಿದರು (ಬೆಳುಮ. ೧೨೮).
[ಎಡೆ$_4$ + ಹೊಯ್ಯು$_2$ (< ಪೊಯ್$_2$)]

**ಎಡ್ಡ$_1$** (ನಾ). ಸುಂದರ; ಮನೋಹರ; ರಮ್ಯ: "ಎಡ್ಡಮೆನೆ ಮನೋಹರಮಕ್ಕುಂ" (ಕವಿಕಂ. ೯೯); "ನಿಗರ, ನೆಟ್ಟ... ಹಸ, ಎಡ್ಡ... ಪರಿವಡೆದುದು – ಈ ೧೪ ಮನೋಹರಂ" (ಕಶಸಾ. ೧೧-೨೧೧); ಭ್ರೂಲಾಸ್ಯಮಂ ನೀಳ್ದಪಾಂಗದ ಬೆಳ್ದಿಂಗಳನೆಡ್ಡಮಪ್ಪ ಕಬರೀ ವಿಸ್ತಾರಮಂ ತೋಱಿದಳ್ (ಆದಿಪು. ೧೧-೧೭); ಇದುರಲಿ ಇತ್ತ ಎಡ್ಡದಿನ್ನೊಂದು ಒಡ್ಡೋಲಗದ ಸಂಭ್ರಮಕೆ ತಿಂಗಳುದಿಸಿದನು (ನವರಾ. II, ೪೯)

ಎಡ್ಡಮಾಗು, ಎಡ್ಡವಾಗು = ಸುಂದರವಾಗು; ಮನೋಹರವಾಗು; ರಮ್ಯವಾಗು: ನಾನಾ ಮಂಗಳಾಳಂಕರಣ ವಿಭವದಿಂ ಕಾಂತೆ ಕಂಗೆಡ್ಡಮಾದಳ್ (ವರ್ಧಪು. ೭-೧೦); ಸಿಂಗರಿಸಿದ ಗೋಪುರಗಳೂ ಕಣ್ಗೆಡ್ಡವಾದ ರನ್ನಂಗಳುಪ್ಪರಿಗೆ ವಾರಾಂಗನಾ ಕೇರಿಯೊಳಿಹವೂ (ಭೈರವೇ. ೨-೯೪); ಅಡ್ಡಾಯುಧ ಗರಗಸ ಮೊನೆಗಲ್ಲು ಕಣ್ಗೆಡ್ಡವಾಗಿಯೆ ರಾಜಿಸುವುವು (ಕಂನವಿ. ೬-೨೦); ಗೆಂಟು ಗೆಂಟನೊಳ್ ಪೊಳೆವ ಬಳ್ಳಿಮಿಂಚು ಬೀಸುವ ಕೈಗೇಣ ಮೈಸಿರಿಯಂತೆ ಕಣ್ಗೆಡ್ಡಮಾದುದು (ರಾಮಾಶ್ವ. ೩-೬). ಎಡ್ಡೆಡ್ಡ (ದ್ವಿರುಕ್ತಿ): ದೊಡ್ಡ ದಾನಂಬೆತ್ತ ವಿಪ್ರರು ನೃಪ ಪ್ರಾಯದೊಡ್ಡುಜಾಱದೆ ಬಾಳಲೆಂದು ಗಡ್ಡ ಕುಣಿಯೆ ಹಿಗ್ಗಿ ನಗುತ ಕೈಯೆತ್ತಿ ತಾವೆಡ್ಡೆಡ್ಡನುಱೆ ಹರಸಿದರು (ಭರಚ. ೭೩-೧೦೪).

[ದೇ. ‖ ತಮಿ. ಎೞಿಲ್ = ಸೌಂದರ್ಯ, ಎೞಿಲಿಯ = ಸುಂದರ; **ತುಳು.** ಎಡ್ಡೆ = ಉತ್ತಮ; **ಮಲ್ತೊ.** ಏಡು = ಒಳ್ಳೆಯ, ಸುಂದರ]

**ಎಡ್ಡ₂** (ನಾ). ೧. ಬುದ್ಧಿ ಇಲ್ಲದವನು ; ತಿಳಿಗೇಡಿ ; ದಡ್ಡ ; ಗಾಂಪ: ಕಡ್ಡ ಬೇಡೆಲೆ ಸ್ವಾಮಿ ನಾವರೆಯೆಡ್ಡರೆಮ್ಮೊಳು ನಿಮಗೆನುತ ತಲೆಯೊಡ್ಡಿದರು ಪಾದದೊಳು (ಶಂಕದಾ. ೮-೪) ; ಹುಚ್ಚರೇ ಆಗಲಿ, ಎಡ್ಡರೇ ಆಗಲಿ . . . ಬೆರಕಿಗಳೇ ಆಗಲಿ ಯಾರೇ ಆದರೂ ತ್ರಿಷಷ್ಟಿಗಳು ಬೇಕೇಬೇಕು (ಮುಂಗಾಪು. ೬). ೨. (ಉಕ) ಮೋಸಗಾರ. 'ಎಡ್ಡತನ', 'ಹೆಡ್ಡ' ಪರಾ.

**ಎಡ್ಡಾಗು** = ತಿಳಿಗೇಡಿಯಾಗು ; ದಡ್ಡನಾಗು ; ಮಹೇಂದ್ರಜಾಲದಂತೆ ಕಣ್ಣುಮುಂದೆ ಒಡ್ಡಿದ ಹುಸಿಯ ಸಂಸಾರದಲ್ಲಿಯೇ ಎಡ್ಡಾಗಬೇಡಿರೋ (ಅಖಂಡೇ. ೬೩-೧೭).

[ದೇ. ‖ ತಮಿ. ಎಟ್ಟನ್ ; ತೆಲು. ಎಡ್ಡ, ಎಡ್ಡೆ]

**ಎಡ್ಡಂತಿಡ್ಡ** (ನಾ). ಕ್ರಮಬದ್ಧವಲ್ಲದಿರುವುದು ; ಅಸಂಬದ್ಧತೆ ; ಅಡ್ಡಾದಿಡ್ಡಿ (ದಕ. ಕ). 'ಎಡ್ಡಾದಿಡ್ಡಿ' ಪರಾ.

[ಎಡ್ಡ₂ + ತಿಡ್ಡ ?]

**ಎಡ್ಡಂಬಡೆ, ಎಡಂಬಡೆ** (ಕ್ರಿ). ಸುಂದರವಾಗು ; ಮನೋಹರವಾಗು: ಅಂಬುರುಹದೊಳಾ ಪ್ರತಿರೂಪು ಕರಂ ಬಿಂಬಿಸೆ ಕಣ್ಗೆಡ್ಡಂಬಡೆದುದು (ಜಯಕಾ. ೧-೪೩) ; ತರುಣೀಜನ ನವಮದನಂ ಕಾರಣಪುರುಷಂ ಕಣ್ಗೆಡ್ಡಂಬಡೆದಂ (ಜಯಕಾ. ೨-೬೮). **ಎಡಂಬಡೆ**: ರೀತಿ ಶೋಭಿಸಲೆಡಂಬಡೆದು ವಿಭ್ರಾಜಿಪನಜಾತಂ (ರೇವಣ. ೨೬-೨೨). [ಎಡ್ಡ₁ + ಪಡೆ₁]

**ಎಡ್ಡಕಜ್ಜ** (ನಾ). ಮನೋಹರವಾದ ಕೆಲಸ ; ಸುಂದರ ಕಾರ್ಯ: ದೊಡ್ಡಣ್ಣ ಚಿಕ್ಕಣ್ಣ ನಿಮ್ಮ ತಂತ್ರಗಳವು ದೊಡ್ಡವಹುದು ತಂತ್ರಗಳಿಗೆ ಸಡ್ಡಲ್ಲವಿನ್ನೊಂದು ಮಂತ್ರವುಂಟದನೋಡಿರೆಡ್ಡಕಜ್ಜವ ಮಾಳ್ಪೆನೆಂದಾ (ಭರತ. ೪೬-೧೧೩). [ಎಡ್ಡ₁ + ಕಜ್ಜ₁]

**ಎಡ್ಡತನ** (ನಾ). ೧. ಮೋಸ ; ವಂಚನೆ (ಉಕ. ಕ). ೨. ಹೆಡ್ಡತನ ; ದಡ್ಡತನ. [ಎಡ್ಡ₂ + -ತನ]

**ಎಡ್ಡಠಾಣ** (ನಾ). ಸುಂದರವಾದ ಸ್ಥಳ: ವಾರವಿಲಾಸಿನೀಜನಂ ಮಳಯಮರುನ್ಮದೋಚ್ಚಳಿತ ಮಂಗಳ ಕೇಸರವಾಸ ಚೂರ್ಣಮಂಜುಳ ಲತೆಗೊಂದಳಂ ಮಣಿಯೆ ಪಾಡುವ ಚೌಪದಿ ಯೆಡ್ಡ[ಪಾಠಾಂ. ಯಡ್ಡ] ಠಾಣದೊಳ್ (ಅನಂಪು. ೬-೬೦). [ಎಡ್ಡ₁ + ಠಾಣ₂]

**ಎಡ್ಡತಿ** (ನಾ). ಬುದ್ಧಿಯಿಲ್ಲದವಳು ; ದಡ್ಡಿ (ದಕ. ಕ).

[ಎಡ್ಡ₂ + -ತಿ₁ (< -ಇತ್ತಿ)]

**ಎಡ್ಡಮಿಂಡಿ** (ನಾ). ರೂಪವತಿಯಾದ ತರುಣಿ ; ಸುಂದರಿಯಾದ ಹೆಣ್ಣು: ಸೂಳೆಗೇರಿಯ ಮುಂದಣ ಮತ್ತವಾರಣದ ಮೇಲೆ ಮೆಲ್ಲನೆ ಮರುಳ್ದು ಮಱಿದೊಱಗಿದೆಡ್ಡಮಿಂಡಿ[ಪಾಠಾಂ. ಗಿಡ್ಡಮಿಂಡಿ]ಯರ ಮೇಲುದಂ ಸೆಳೆದು ಕುಸಿದು ಕೆಲಕ್ಕೆ ಎಱಿದು ಜಕ್ಕುಗೊಂಡು ತಕ್ಕೆಗೆ ತೋರವಾದ ಪೇರುರದ ಮೊಲೆಗಳೊಳಪೊಕ್ಕು ಮುಂಡಾಡಿಯುಂ (ಲೀಲಾವ. ೩-೨೧). 'ತುಱುಮಿಂಡಿ', 'ಸಱುಮಿಂಡಿ' ಪರಾ.

[ಎಡ್ಡ₁ + ಮಿಂಡಿ]

**ಎಡ್ಡಾಟ** (ನಾ). ದಡ್ಡತನದ ಆಟ (ದಕ. ಕ). [ಎಡ್ಡ₂ + ಆಟ]

**ಎಡ್ಡಾದಿಡ್ಡಿ** (ನಾ). = ಎಡ್ಡಂತಿಡ್ಡ : ಗುರುಪತ್ನಿ ಚಿಕ್ಕಂದು ತಮ್ಮ ಮಹಿಮೆಯನ್ನು ತಿಳಿಯದೆ ಎಡ್ಡಾದಿಡ್ಡಿಯಾಗಿ ನಡೆದುಕೊಂಡರಂತೆ (ಸಣ್ಣಕ. VI, ೩೪). [ಎಡ್ಡ₂ + ದಿಡ್ಡಿ ?]

**ಎಡ್ಡಿಸು** 'ಏಡಿಸು' ನೋ.

**ಎಡ್ಡು** (ನಾ). ೧. ಮೋಸಗೊಳಿಸುವುದು ; ಸುಳ್ಳುಗಾರಿಕೆ (ಉಕ. ಕ). ೨. ಸೊಕ್ಕು ; ಅಹಂಕಾರ: ಕಲಿಯಲಾರದ ತಿಳಿಯಲಾರದ 'ಮಡ್ಡು' ಎನ್ನುವುದಕ್ಕಿಂತ ಯಾಕೆ ಎನ್ನುವ 'ಎಡ್ಡು' ತುಂಬಿದೆ (ದೀಪಹ. I, ೨೯). [?]

**ಎಡ್ಡೆಯಾಳು** (ನಾ). ನಂಬಿಕೆಗೆ ಅರ್ಹನಾದ ಬಂಟ ; ನಚ್ಚಿನ ಬಂಟ (?) : ಬಡ್ಡಿ ಸಹಿತ ತಿದ್ದುವರಂತೆ ಕಾದಿದರೆಡ್ಡೆಯಾಳುಗಳು ಕೈಮಿಾಱಿ (ಅನಂಚ. ೧೭-೮೧).

[ಎಡ್ಡೆ₀ + ಆಳು₃ (< ಆಳ್₃). / ತಮಿ. ಎಟ್ಟಿನರ್ = ನಂಬಿದವರು]

**ಎಣ್₁, ಎಣ್ಣು** (ಕ್ರಿ). ೧. ಎಣಿಸು ; ಲೆಕ್ಕಹಾಕು : "ಎಣ್ಣೆನೆ ಲೆಕ್ಕಪುದುಂ" (ರನ್ನಕಂ. ೩). ೨. ಭಾವಿಸು ; ಗುಣಿಸು ; ಬಗೆ: ಅರ್ಜುನರೋಷವ ತಾಳ್ದುಂ ಎಣ್ಣೆ ವಿರೋಧವನುಂ ಪೊಂಬಣ್ಣದ ವರೆಯಿಂದು ಗಿದಂ ಖಡ್ಗವನುಂ (ಕರ್ಣಾಕಾ. ೨೦) ; ಬಗೆವಗೆಯ ನಶ್ವರ ಭೋಗಂಗಳ್ಗಾಸೆವಡುತುಮೆಣುತುಂ ಪರಮಂ ಮಱಿದಿರ್ಕುಂ (ರಾಮಾಶ್ವ. ೭೫-೩) ; ಪುಣ್ಯಭದ್ರಾಶೀಲ ನದಿತಟದಿ ಎಣ್ಣದಿಷ್ಟಾರ್ಥವ ಕೊಡುತಿಹನಾ ವಿಷ್ಣು (ಕಜಾಗೀ. ೨೪೦). **ಎಣ್ಣು**: ೨. ಉಂಡಮನೆಗೆ ಎರಡೆಣ್ಣುವ ನೀಸಿಂಥ ಗಂಡಸೆಂಬುದನರಿಯೇ (ಕೃಆಕಾ. ೪೭) ; ಪೆಜತೇನನೆಣ್ಣದಿರ್ (ಅದ್ಭುತ. ೧೧-೧೪) ; ಅಂತೆ ನಾನೆ ನುಡಿಯೆನೆಂದೆಣ್ಣುವೆನ್ (ಅಂಕಿಗೊ. ೪೭-೯೬೮) ; ಎಣ್ಣಿದ್ದು ಮಣ್ಣು ಆಯಿತು ಹೆತ್ತಿದ್ದು ಹೆಣ್ಣು ಆಯಿತು (ಗಾದೆ).

[ದೇ. ‖ ತಮಿ. ತುಳು. ಮಲ. ಎಣ್ಣು ; ಕೊಡ. ಎಣ್ಣ್ ; ತೆಲು. ಎನ್ನು]

**ಎಣ್₂**-(ಸಪೂರೂ). 'ಎಂಟು' ಎಂಬುದಕ್ಕೆ ಸಮಾಸದ ಪೂರ್ವಪದವಾಗಿದ್ದಾಗ ಆಗುವ ರೂಪ. 'ಎಣ್ಗಂಡುಗ', 'ಎಣ್ಗಯ್' ಪರಾ. [< ಎಂಟು]

**ಎಣಗಂಟು** 'ಎಣೆಗಂಟು' ನೋ.

**ಎಣಗೊಣ** 'ಎಣಗೋಣ' ನೋ.

**ಎಣಗೋಣ**, ಎಣಗೊಣ, ಎಣೆಗೊಣ, ಎಣೆಗೋಣ, ಏಣಗೋಣ (ನಾ). ವಕ್ರ ; ಕೊಂಕು ; ಬಿಂಕ: ದ್ರೋಣಾಚಾರ್ಯಂ ಮುಗುಳ್ನಗೆ ನಕ್ಕು ವಿಕ್ರಮಾರ್ಜುನನನಿಳಿಸಿ ನುಡಿವ ನಿನ್ನೆಣಗೋಣಂಗಳುಮೆಕ್ಕಸಕ್ಕತನಂಗಳುಮೆತ್ತವೋದುವು (ಪಂಪಭಾ. ೧೧-೧೩೭ ವ). **ಎಣಗೊಣ**: ಶಬ್ದಾಂತರಾಳ ದೀರ್ಘಕ್ಕೆ: ಇಂದೊಳಂ ಇಂದೋಳಂ . . . ಎಣ[ಪಾಠಾಂ. ಣೆ]ಗೊಣಂ, ಎಣ[ಪಾಠಾಂ. ಣೆ]ಗೋಣಂ (ಶಮದ. ಸ. ೧೨೮ ಪ್ರಯೋ). **ಎಣೆಗೋಣ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಏಣಗೋಣ**: ಅತಿಕಾಮಾತುರನೆನಿಪಂ ಸಿತಗಂ ಚಳಬಳಿಗ ನೇಣಗೋಣಂ ಮೂರ್ಖಂ ತತನಱಿಯನೆನಿಪ್ಪಂ (ಸಮುಪ. ೩-೫೫) ; ಪುಣ್ಯಾಂಗನಾನೀಕದೊಳ್ಕೆಲಗೊಂಡಾಡುತವೇಣಗೋಣತನದಿಂ ಮಾತಾಡುತಂ ರಾಗದಿಂ ಸುಳಿವುತ್ತಿಪ್ಪವರ್ (ಸಮುಪ. ೬-೩೯) ; ಅವಿನ ಕಱುವನೆಮ್ಮೆಗೆ ಬಿಟ್ಟೆಮ್ಮೆಯ ಕಱುವನಾವಿಂಗೆ ಬಿಡುವಂತೇನಾನುಮನೆಕ್ಕಸಕ್ಕಮನೇಣಗೋಣಂಗಳಂ ಪೇಟ್ವರಲ್ಲಿ (ಧರ್ಮಾಮೃ. ೬-೨೧೭).

[ದೇ. ‖ ತಮಿ. ಎಣ್ಗೋಣ್ ; ತೆಲು. ಏಡಾಗೋಡ = ವಿರೋಧ ಅಥವಾ ವಕ್ರಬುದ್ಧಿಯಿಂದ ಪ್ರತಿಭಟಿಸುವುದು]

**ಎಣಮಣಿ** 'ಎಣ್ಣೆವಣಿ' ನೋ.

**ಎಣಮಣಿಸರ** 'ಎಣ್ಣೆವಣಿಸರ' ನೋ.

**ಎಣವಳಿಕೆ**, ಏಣವಳಿಕೆ (ನಾ). ಸ್ತ್ರೀಸಂಗ ; ಕೂಟ: ಅಣುಮಾತ್ರಮಪ್ಪೊಡಂ ತಾ ಪೆಣದಿಕ್ಕಾವಂಗೆ ರಾಗಮಾದಿ ವಿಭಾವಂ ಗುಣನಿಧಿಯಪ್ಪ ನಿಜಾತ್ಮನೊಳೆಣವಳಿಕೆಯವಂಗೆ ಕೂಡದಿನಿತೋದಿದೊಡಂ (ಪರಮಾ. ೬೨-೧೧೯). **ಏಣವಳಿಕೆ**: ಸ್ತೇಯಂ – ಕಳವು, ಅಬ್ರಹ್ಮ – ಏಣವಳಿಕೆ (ತಸೂವೃ. ೨೨೫).

[ಎಣ್₀ + ವಳಿಕೆ₀. / ತಮಿ. ಇಣೈ, ಇಣೈಪ್ಪು = ಕೂಡಿಕೆ, ಮೈಥುನ]

**ಎಣಹು** (ನಾ). (?): ಆರನೇನ ಬೋಧಿಸುಹವುಪಾಸ್ತೆಗೆಣಹ [ಪಾಠಾಂ. ಗೇಹ]ಕಾದಿ ಮನದಿ ಮಾರಿಗಂಜಿ ಬಂದು ಶರಣುವೊಗಲಿಕವರನು (ವೃಷಗೀ. ೮೯). [?]

**ಎಣಿಕೆ, ಎಣ್ಕೆ, ಎಣ್ಣಿಕೆ** (ನಾ). ೧. ಲೆಕ್ಕಮಾಡುವುದು; ಎಣಿಸುವುದು, ಲೆಕ್ಕ. ಅಳತೆಗೆ ತೂಕಕ್ಕೆಣಿಕೆಗೆಯೊಳಗಾದುವು ಸಕಳ ವಸ್ತುಗಳ್ ಭುವನ ಜನಕ್ಕೆ (ಆದಿಪು. ೧೦-೫೩); ಎನ್ನನರ್ಚಿಸುವರ್ಗೆ ಎಣಿಕೆ ಸಂಖ್ಯೆಗಳಿಲ್ಲ ಎನ್ನನುವಿಗರ್ಪಿಸಿಕೊಳುವ ಪ್ರಸಾದಿಗಳಿಲ್ಲ (ದೀಕ್ಷಾಬೋ. ೧೪೧-೭); ಎನ್ನಪರಾಧಗಳಿಗಿನ್ನು ಎಣಿಕೆಯಿಲ್ಲ (ಪುರಂದ. ೧-೧೭೭-೪). ೨. ಆಲೋಚನೆ; ಯೋಚನೆ; ಬಗೆ: ಎಣಿಕೆಗತೀತ ಮಾದ ವರರೂಪುಮುಮಂ ಧರಿಸಿರ್ದುದು (ಬಾಧಪು. ೧-೧೫೫); ಎಣಿಕೆ ಯಾವುದು ಜೀಯ ಧರ್ಮದ ಕಣಿಯಲಾ ನೀ ನಿನ್ನ ಭಾಗ್ಯಕೆ ತೃಣ ಕಣಾ ಸ್ವರ್ಗಾದಿ ಭೋಗದ ಸಕಲಸೌಭಾಗ್ಯ (ತೊರರಾ. ೧-೫-೩); ಕಣಿಕವಿಲ್ಲದ ಊಟ ವನಿತೆಯಿಲ್ಲದ ಬಾಳ್ವೆ ಎಣಿಕೆಯಿಲ್ಲದಳ ಮನೆವಾರ್ತೆ ಹೊಳೆಯೊಳಗೆ ಮುಣುಗಿಹೋದಂತೆ (ಸರ್ವಜ್ಞ. ೧೭೨೭); ನೀನಱಿಯದ ಕಾರ್ಯದೆಣಿಕೆಗಳ ಘನವಾಗಿ ಬಲ್ಲವರುಂಟೆ (ಕಂಸವಿ. ೧೯-೩೮). ೩. ತಿಳಿವಳಿಕೆ: ರುದ್ರಾಕ್ಷಿ ಭಸಿತವನು ಹೊದ್ದಿರಲು . . . ಶಿವನು ತಾನಿದ್ದಲ್ಲಿ ಬರುವನೆಂದು ಈತನ ಎಣಿಕೆ (ಸಾಹಿಜೀ. ೧೦೬). **ಎಣ್ಕೆ:** ೨. ಭಾರತಿ, ಕಾಂತೆಗೆ ಕಾಂತಿಮತಿ ಎಣ್ಕೆಯೇಂ (ರಾಮಾಶ್ವ. ೪೯-೧೭). **ಎಣ್ಣಿಕೆ:** ೨. ಪುಣ್ಯ-ಪಾಪಋಣಾನುಬಂಧ ವಾಸನೆಗಳಿವು ಜನ್ಮಾಂತರದ ಕರ್ಮಶೇಷದಂಶಗಳು ಎಣ್ಣಿಕೆಗೆ ಸಿಲುಕದಾಕಸ್ಮಿಕ ಯದೃಚ್ಛೆಗಳು ಸನ್ನಿಹಿತ ದೈವಿಕದೆ (ಮಂಕುಕ. ೧೫೨).

[ಎಣ್$_1$ + -ಇಕೆ. / ತಮಿ. ಎಣ್ಣಿಕ್ಕೈ; ಮಲ. ಎಣ್ಣ; ತುಳು. ಎಣಿಕೆ, ಎಣ್ಣಿಗೆ, ಎಣ್ಕೆ; ತೆಲು. ಎನ್ನಿಕ]

**ಎಣಿಕೆಗಳೆ** (ಕ್ರಿ). ಲೆಕ್ಕಿಸದಿರು; ಉದಾಸೀನಮಾಡು: ಮರುಳೇ ಗಾಂಡೀವಿಯಾರೆಂದೆಣಿಕೆಗ[ಳೆ]ವೆ (ಪಂಪಭಾ. ೯-೫೫). [ಎಣಿಕೆ + ಕಳೆ$_1$]

**ಎಣಿಕೆಗಟಿ** (ಕ್ರಿ). ಲೆಕ್ಕಕ್ಕೆ ಮೀರು; ಅಸಂಖ್ಯಾತವಾಗಿರು: ಎಣಿಕೆಗಟಿದ ಕರಿ ತುರಗ ವರೂಥ ಪದಾತಿಗಳುಮಂ ನೋಡಿ (ಪಂಪಭಾ. ೧೪-೨ ವ). [ಎಣಿಕೆ + ಕಟಿ$_1$]

**ಎಣಿಕೆಗೆಡು** (ಕ್ರಿ). ಎಣಿಸಲು ಸಾಧ್ಯವಿಲ್ಲದಂತಾಗು; ಅಸಂಖ್ಯಾತವಾಗು: ಕುಣಿದಾಡಲೀವುತಂ ಮಣಿದಾಡಲೀವುತಂ ಎಣಿಕೆಗೆಟ್ಟೀವುತಂ (ಅನೀರ. ೮೫-೧೩). [ಎಣಿಕೆ + ಕೆಡು]

**ಎಣಿಕೆಗೈ** (ಕ್ರಿ). ಆಲೋಚಿಸು; ಬಗೆ: ಚಾಪಮಂ ಕೊಂಡು ದಿವ್ಯಾಸ್ತ್ರದಿಂದಿಸುತೆ ಬರಲಾ ಪಥದೊಳೆಣಿಕೆಗೈದಣ್ಣನಂ ಮಾತೆಯಂ ನೆನೆದು (ಜೈಮಿಭಾ. ೩೦-೧೬); ಹೀನ ಮಾನವಮತಿಯಾನು ನುಡಿದ ಫಲವೇ [ವೆ]ಣಿಕೆಗೈವನೆ ಚೂಣಿ ಅಂತ ವಿಡಿದು (ತೀರ್ಥಮ. ೬೫).

[ಎಣಿಕೆ + ಕೈ$_1$ (< ಕೆಯ್$_1$)]

**ಎಣಿಕೆಗೊಳ್** (ಕ್ರಿ). ೧. ಲೆಕ್ಕಿಸು; ಬಗೆ: ವಿಮಳತ ಶ್ರೀಕಾರದಾಕಾರಮನೆಣಿಕೆಗೊಳ್ವದೆ ಮಿಱುಗುವವು ಕುಮುದದಳಲೋಚನೆಯ ಕರ್ಣಂಗಳು (ಬಸವಪು. ೪-೨೭). ೨. ಆಲೋಚಿಸು; ಲಕ್ಷಿಸು: ಮತ್ತೊಬ್ಬರನೆಣಿಕೆಗೊಂಡೊಡೆ ಕಾವನಾವೆ (ಕಂಸವಿ. ೬-೧೬೯); ಕೇಳೆನ್ನೊಂದು ಭಾಷೆಯ ನಿದಕೆಣಿಕೆಗೊಳಲೇಕೆ (ಕೋಗಯು. ೧೮-೯). [ಎಣಿಕೆ + ಕೊಳ್$_1$]

**ಎಣಿಕೆದಪ್ಪು** (ಕ್ರಿ). ೧. ಲೆಕ್ಕತಪ್ಪು. ೨. ಆಲೋಚನೆ ತಪ್ಪಿಹೋಗು: ವಲ್ಲಭಂಗೆಡೆಗುಡದೆ ಬಿಡುನುಡಿಯಂ ನುಡಿದು ಕಳೆದು ಬಟಿಯಂ ಕಳವಳಿಸಿ ಕೆಳದಿಗೇವೆನೆಂಬುದುಮುವಳೆಣಿಕೆದಪ್ಪಿದಂದಕ್ಕೆ ತಕ್ಕುದನಿಂತೆಂದಳ್ (ಚಂದ್ರಪು. ೮-೭೮ ವ). [ಎಣಿಕೆ + ತಪ್ಪು$_1$]

**ಎಣಿಕೆಯೊಸರು** (ನಾ). ಆಲೋಚನೆಯ ಜಿನುಗು; ಇದ್ದಕ್ಕಿದ್ದಂತೆ ಬುದ್ಧಿಗೆ ಹೊಳೆಯುವುದು: "ಎಂಬೆಣಿಕೆಯೊಸರು ಎದೆಯಲ್ಲಿ ಕವಿತೆಯ ಹೊನಲಾಗಿ ಹರಿದುದರಲ್ಲಿ ತಪ್ಪಿದೆಯೆ?" (ಕನ್ನಇ. ೩).

[ಎಣಿಕೆ + ಒಸರು$_2$ (< ಒಸರ್$_2$)]

**ಎಣಿಕೆವಡು** (ಕ್ರಿ). ಲೆಕ್ಕಹಾಕು; ಗಣನೆಗೆ ತರು: ಕಣ್ಣಟ್ಟೆಣಿಕೆವಟ್ಟು ಸುರುಗಟ್ಟಿ ಕಾಹೇಱಿ ಬಣ್ಣವಳಿದಮುರ್ದುಣಿಸನುಳಿದು (ಉದ್ಭದೇ. ೪-೪೦). [ಎಣಿಕೆ + ಪಡು$_1$]

**ಎಣಿಕೆವೇಱು** (ಕ್ರಿ). ಗಣನೆಗೆ ಬರು: ದೊಡ್ಡೇಶ ನೃಪಾಲಕರೊಳೆಣಿಕೆವೆತ್ತ ಸುಧರ್ಮಾದಿ ಷಡ್ಗುಣಗಣಭೂಷಣ ಭೂಷಿತಾವಯವನುಮೆನಿಸಿ . . . ಬೆಳಗುವ ಶ್ರೀವೀರರಾಜಭೂಪಾಲಂ (ಸಕವ್ಯ. ೧೦).

[ಎಣಿಕೆ + ಪೆಱು$_1$]

**ಎಣಿಕೆಹಾಕು** (ಕ್ರಿ). (ಮನಸ್ಸಿನಲ್ಲಿಯೇ) ಲೆಕ್ಕಹಾಕು; ಆಲೋಚಿಸು: ಮನದಲ್ಲಿ ಎಣಿಕೆಹಾಕುತ್ತಿರುವಂತೆಯೇ ಒಮ್ಮಿಗೇ ಅವನಿಗೆ ಅನುಭವ ಬಂದಿತು (ಇಪ್ಪಕ. ೨೯೮).

[ಎಣಿಕೆ + ಹಾಕು (< ಪಾಯ್ಕು$_1$)]

**ಎಣಿಕೊಳ್** (ಕ್ರಿ). ಲೆಕ್ಕಮಾಡು; ಎಣಿಸು: ನಿನ್ನ ಕೈಯದಂ ಕೊಂಡಾನೇನಾಚಂದ್ರಾರ್ಕತಾರಂಬರಂ ಬರ್ದ್ದಪ್ಪನೆ ಎ[ಪಾಠಾಂ. ಎಂದುಮೆ]ಣಿಕೊಂಡ ಕಸವರಂ ತವನಿಧಿಯಂತೆ ತವದಿರ್ದಪ್ಪುದೆ (ವಡ್ಡಾರಾ. ೧೭-೪). [< ಎಣಿಕೆ + ಕೊಳ್$_1$]

**ಎಣಿಲ್** (ನಾ). "ಸುಂದರಿ" (ಸುಕುಮಾ. ಕೋಶ); ಇರುಳ್ ತೊಟಲ್ದೆಣಿ[ಲ್ಗೊ]ತ್ತೆಯಿಟ್ಟು ಪಟ್ಟಾತನೇಕಾಂತದೊಳ್ ದಿನಾಂತದೊಳಗಣ್ಯಪುಣ್ಯ ಲಾವಣ್ಯ ಸಂಪನ್ನೆಯಪ್ಪ ಕನ್ನೆಯಂ ತನಗಾಟಿಸಿ (ಸುಕುಮಾ. ೭-೨೭ ವ). 'ಇಳಲೆ' ಪಠಾ. [<- ತಮಿ. ಎಟಿಲ್]

**ಎಣಿಲು** (ನಾ). (ಕರಾ) ಮುಂಗಾರು: ಆಳುಗಳು ಗದ್ದೆಯ ಬಾಯಿ ಮುಚ್ಚುವುದು ಸರಿಯಲ್ಲ. ಎಣಿಲಕಾಲದ ಉಪ್ಪನ್ನ, ಸುಗ್ಗಿಕಾಲದ ಮಳೆ ಬೆಳೆ ಇವು ನಮಗೂ ಸರಿ ನಿಮಗೂ ಸರಿ (ಕೋಟಚೆ. ೧೧).

[<- ತುಳು. ಎಣಿಲ್]

**ಎಣಿಸಿಕೆ** (ನಾ). ಯೋಚನೆ; ಬಗೆ: ಎಣಿಸಿಕೆಯ ಹರಿಗಡಿದು ಅನಿಸಿಕೆಯ ಝುರಿ ಹೊಡೆದು ಶಾಂತಿಯೊಡಮೂಡಿದ್ದೆ ಸಿದ್ಧಿಯಯ್ಯಾ (ನನಲ್ಲ. ೨೦-೧೭). [ಎಣಿಸು + -ಇಕೆ]

**ಎಣಿಸು, ಎಣ್ಣಿಸು** (ಕ್ರಿ). ೧. ಲೆಕ್ಕಹಾಕು; ಗುಣಿಸು: ಅಳಿಯಲ್ ತೂಗಲ್ಕೆಣಿಸಲ್ಕಳುಂಬಮೆನಿಸಿದುವು ನಿನ್ನ ಗುಣಗಣಮರ್ಹಾ (ಆದಿಪು. ೧೦-೫೨); ರಹಸ್ಯಂ ಭಕ್ತಿಯಿಂದಂ ಜಪಮನೆಣಿಸಿ (ರಕ್ಷಾಶ. ೭೪); ಎಣಿಸಬಹುದೇ ಭೋಜನದ ಸಂದಣಿಯ (ಕುವ್ಯಾಸ. ೭-೫೩); ಹರಿವ ನೀರೊಳಗೆ ಮುಳುಗಿ ಬೆರಳ ಎಣಿಸುತಿಹರ ಕಂಡು ನಗೆಯು ಬರುತಿದೆ (ಪುರಂದ. ೧-೨೨-೪); ಜಾತ್ರೆಗೆ ಎಣಿಸಲಾರದಷ್ಟು ಜನ ಸೇರಿತ್ತು (ರೂಢಿ). ೨. ಗಣನೆಗೆ ತರು; ಲಕ್ಷ್ಯಮಾಡು; ತಿಳಿದುಕೊಳ್ಳು: ದೋಷದೊಳಮಿನಿಸು ಗುಣಮಂ ತಂದಿರ್ದೆಣಿಸುವುದು ಲೇಶಮೆಂಬುದು (ಕವಿರಾ. ೩-೧೭೧); ಪೋದುದಿಂ ಪೋಗಲಿ ಪೆಱಗನೆಣಿಸಲಾಗದು (ಧರ್ಮಾಮೃ. ೨-೮೯); ರಸಮಂ ಸೋದಿಸೆಯುರ್ಕಿನ ಪುಡಿಯೆನಿಪಾ ದುಷ್ಕವಿತೆಗಳನೆಣಿಸಲೇಕೀ ಕೃತಿಯೊಳ್ (ಗಿರಿಕ. ೧-೨೨); ಸಾವಿಗೆಣಿಸರು ಮನದಿ ಸತ್ಯವ ಭಾವಿಸರು ಹುಸಿಯೊಲುವೆದೋಱುವರು . . . ಸತಿಯರನಾವ ಪರಿಯಲಿ ನಂಬಬಹುದೈ (ನಳಚ. ೩-೨೬); ದುರಾತ್ಮಕನಾದವನು ಜಿನೇಶ್ವರರಿಗೆ ಅಪ್ರಿಯವನ್ನು ಎಣಿಸುವನು (ಮುದ್ರಾಮಂ. ೨೩೪); ತಾನೊಂದೆಣಿಸಿದರೆ ದೈವವೊಂದೆಣಿಸಿತು (ಗಾದೆ). **ಎಣ್ಣಿಸು:** ೨. ಕಣ್ಣಲಿ ಕಂಡ ಮೇಲಿದ ಬಿಡುವವರುಂಟೆ ಎಣ್ಣಿಸಬೇಡ ನೀನು (ಪುರಂದ. ೩-೧೩೦-೧೬); ಬಣ್ಣದಾಲೋಚನೆಯನೆಣ್ಣಿಸಲವನೆಂದನಂತೇ (ರಾವಣಸೋ. ೭).

ಎಣಿಸುಮಗ = ಒಂದು ಬಿರುದು: ಎಣಿಸುಮಗ ದೇಸಿಯಂಕಕಾರ (ಎಕ. XIV, ಮಳವ. ೧೪೨-೨೮; 1251).

[ಎಣ್$_1$ + -ಇಸ್ಸು. / ತಮಿ. ಮಲ. ತುಳು. ಎಣ್ಣು; ತೆಲು. ಎನ್ನು]

**ಎಣೆ₁** (ನಾ). ೧. ಸಮ; ಸರಿ; ಹೊಂದಿಕೆ; ಸಾಟಿ: "ಸರಿ, ದೊರೆ . . . ಎಣೆ, ತೊಣೆ . . . ಸಂಗಡಂ –ಈ ೧೮ ಸಮಾನಕೆ ಪೆಸರ್" (ಕಶಸಾ. ೧೫–೨೯೧); ಸಮವಾಯಮುಳ್ಳೊಡದು ನಿನ್ನ ಮೊಗಕ್ಕೆಣೆ ಯೆಂಬುದದ್ಭುತೋಪಮ ನಿಯತಂ (ಕವಿರಾ. ૩–೬೮); ಕಟ್ಟಿದ ಪಟ್ಟಿಮೆ ಸರವಿಗೆ ನೆಟ್ಟನೆ ದೊರೆ ಪಿಡಿದ ಬಿಲ್ಲೆ ದಂಟಿಂಗೆಣೆ (ಪಂಪಭಾ. ೧೦–೧೭); ಪಡೆವಳ ತೈಲಪನ ಜನನಿಗೆಣೆ ಪೆಜರೊಳರೇ (ಅಜಿಪು. ೧–೫೧); ಎಣೆ ಮರುದೇವಿ ಪಾಸಟಿ ಸುಷೇಣಿ ಸಮಂ ಶಿವದೇವಿ ಪಾಟಿ ಲಕ್ಷ್ಮಣಿ (ಸೌಇಇ. XI–i, ೫೨–೨೮; 1008); ಮೂಲೋಕಮಂ ಕ್ಷಣದೊಳ್ ವೆಚ್ಚಿಪ ಮಾಡಿ ಬೇಡೆ ಬಲಿ ಸಾಲಕ್ಕಂಜಿ ಬಿಟ್ಟೋಡಿದಂ ರುಣಭಾರಕ್ಕೆಣೆಯಾವುದೈ (ಸೋಮೇಶ. ೮೧); ಸತಿಯಳಲು ಸೀಗೆಯೊಳಗಣ ಬಾಳೆಗೆಣೆಯಾದುದು (ಹಜಕಾ. ೧೨–೧೩); ಎರವಿನ ಪಚ್ಚಮಂ ತಳೆದಿದಕ್ಕೆಣೆವಾರದಿದೆಂದು (ರಾಜಶೇ. ೧–೬೬); ಮನಕೆ ಬಂದೊಡೆ ಪಾಲಿಸಿ ಬಾರದಿರ್ದೊಡೆ ನನಗೆಕೊಡಲ್ವೇಡವದನೂಯೆನಲವಳ್ಗಾ ಪಚ್ಚಡದೆಣೆಯನು ಕೊಟ್ಟು ಮನದೊಳಗಿಂತೆಣಿಸಿದನು (ಪ್ರಭುಂಜ. ೪–೬೬). ೨. ಪ್ರೇಮ; ಪ್ರೀತಿ: ಎಣೆಯೆಂದರೆ ಪ್ರಣಯವೆಂದರ್ಥ. ಅವು ಮೈಥುನ ಕಾರ್ಯದಲ್ಲಿ ಈಗ ತೊಡಗಿವೆ (ಪಂಜಪಂ. ೨೦೨). ೩. ಜತೆ; ಜೋಡಿ: "ಎಣೆ ಯುಗಂ" (ಕರ್ಣಾನಿ. ೪೮); "ಎಣೆಯೆನೆ ಶೋಭೆ ಜೋಡು ಸರಿಯೋರಗೆ" (ಕವಿಕಂ. ೧೩೬); ಎಣೆಯಿಲ್ಲದ ಜಕ್ಕವಕ್ಕಿ ಸೊಗಯಿಸಿದಪುದೇ (ಅಜಿಪು. ೬–೯೭); ಫಣಿಕಟಕ ಕುಂಡಲಂ ಕೊರಳ ಗರಳದಿನೊಪ್ಪೆ ಎಣೆಯಗಲದಗಜ ಗಜಚರ್ಮಂಗಳಿಂದೊಪ್ಪೆ (ಇಹರ. ೪೪); ಎಲವೊ ದುರುಳ ನಿಷಾದ ಕೊಂಚೆ ಯೆಣೆಯಿಂದಂ ಕಾಮಮೋಹಿತನಿನಿಯನನ್ನೆಸೆದೆ (ಗಿರಿವಿಂ. ೩೨–೧).

**ಎಣೆಯಾಗು** = ಜತೆಯಾಗು; ಸಮನಾಗು: ಕಲ್ಪಮಹೀಜದ ಪಕ್ಕದಿರ್ಕಲಂಬಿಡಿದು ಮಡಲ್ತು ತೋಜುವ ಲತಾವಳಿಗಳ್ಗೆಣೆಯಾಯ್ತು . . . ವಿಳಾಸಿನೀಜನಂ (ಆದಿಪು. ೨–೪); ಗಂಗಾ ಯಮುನೆ ಗೋದಾ ಸರಸ್ವತಿ ಸಿಂಧು ಎಲ್ಲ ತೀರ್ಥವು ಬಂದು ಎಣೆಯಾಗಿ ನಿಲ್ಲುವವೊ (ಪುರಂದ. ೧–೨–೨); ಇಂತಹ ಉತ್ತಾರಕವಾದ ಸಾಹಿತ್ಯಕ್ಕೆ ಎಣೆಯಾದದ್ದು ಮತ್ತೊಂದಿಲ್ಲ (ಜಗದಾ. ೬೨).

[**ದೇ.** ‖ **ತಮಿ.** ಇಣೈ; **ಮಲ.** ಇಣ; **ಕೊಡ.** ಎಣೆ; **ತುಳು.** ಇನೆ, ಇಣೆ; **ತೆಲು.** ಎನ]

**ಎಣೆ₂** (ನಾ). ಕೂದಲು. 'ಎಣೆಗಂಟು' ಪರಾ. [← ತಮಿ. ಇಣೈ]

**ಎಣೆ₃** (ನಾ). ಮಕ್ಕಳ ಒಂದು ರೋಗ: ಬಳೆಯಂ ಬಜೆಯುಮನೊಂದಿರೆ ತಿಳ ತೈಲದೊಳಟ್ಟು ಪೂಸಿ ತಿಮಿರ್ವುದು ಬಜೆಯಂ ಬಟಿಯಂ ಮಿಸಿಸುವುದಂತಾ ಬಳೆಯ ಕಷಾಯಮನೆ ಬಾಲಕಂಗೆಣೆ ಮಾಣ್ಗುಂ (ಲೋಕೋಪ. ೯–೧೮೮). [?]

**ಎಣೆ₄** (ನಾ). (ಕರಾ) ನೆತ್ತಿ; ಶಿಖರ: ಆ ಗುಡ್ಡದ ಎಣೆಯ ಮೇಲೆ ನಿಂತು ನೋಡಿ (ರೂಢಿ). [?]

**ಎಣೆಕಟ್ಟು** (ಕ್ರಿ). ೧. ಜೊತೆಯಾಗು. ೨. ತಳಕುಹಾಕು; ಅಪ್ಪಿಕೊಳ್ಳು: ಅರುಂಧತಿಯನ್ನು ಮತ್ತೆ ಹಾವು ಎಣೆಕಟ್ಟಿಕೊಳ್ಳುವಂತೆ ಮೈಗೆ ಮೈ ಬಿಗಿದು ಹಾಸಿಗೆಯಲ್ಲಿ ಹೊರಳಿದ (ಪ್ರಶ್ನೆ. ೪). [ಎಣೆ₁ + ಕಟ್ಟು₁]

**ಎಣೆಗಂಟಿಕ್ಕು**, ಎಣ್ಣೆಗಂಟಿಕ್ಕು (ಕ್ರಿ). ತಲೆಗೂದಲನ್ನು ಸುತ್ತಿ ಗಂಟುಹಾಕು; ತುರುಬುಗಟ್ಟು; ಮುಡಿಕಟ್ಟು: ಕಚಗಳ ಸಿಕ್ಕ ಬಿಡಿಸುತೆಣೆಗಂಟಿಕ್ಕಿ ಕುಚಮಧ್ಯದಲಿ ಹಾರವಿಡುತ . . . ಅಂಗನೆಯರೊಪ್ಪಿದರು (ಕಂನವಿ. ೫–೫೪). **ಎಣ್ಣೆಗಂಟಿಕ್ಕು**: "ಮುಡಿಗಂಟಿಕ್ಕು" (ಕಲ್ಪದ್ರು. ೪೫). [ಎಣೆ₂ + ಗಂಟು + ಇಕ್ಕು]

**ಎಣೆಗಂಟಿರಿಸು** (ಕ್ರಿ). = ಎಣೆಗಂಟಿಕ್ಕು: ಕುರುಳ ಮುಡಿಯನು ಬಿಚ್ಚಿಯ[ಯೆ]ಣೆಗಂಟಿರಿಸಿ ಕರಗಳ ಮುಗಿದು (ಜಿನಭಾ. ೫೧–೨).
[ಎಣೆಗಂಟು + ಇರಿಸು]

**ಎಣೆಗಂಟು**, ಎಣಗಂಟು (ನಾ). ತಲೆಗೂದಲನ್ನು ಸುತ್ತಿ ಹಾಕಿದ ಗಂಟು; ತುರುಬು; ಮುಡಿ: "ಧಮ್ಮಿಲ್ಲಃ . . . ಕಟ್ಟಿಲ್ಪಟ್ಟ ಕೂದಲೂ, ತಲೆಕೂದಲ ಗಂಟು, ಎಣೆಗಂಟು" (ಸಿದ್ಧಾಂತಿ. ೧೬೧); ಬಿಟ್ಟೆಣೆಗಂಟು ಕಿವಿಯೊಳಿಟ್ಟ ಕುಂಡಲ (ನೇಮಿಸಂ. ೨೩–೨೬೩); ಬೆನ್ನಿನಲಿವೆಣೆಗಂಟು (ಕಂನವಿ. ೧೦–೪೮); ಅಪಾದ ಸೋಂಕುತಿಹ ಕೇಶಗಳನೆಣೆ ಗಂಟನೇಪಿಸುವ (ಜಿನಮು. ೪೨–೬೯); ಮೂಗುತಿ ಮುಂಭಾರ ಎಣೆ ಗಂಟು ಹಿಂಭಾರ ನನ ಗೆಣೆಯ ನೀ ತಂದ ಬಣ್ಣ ನೆರಿಭಾರ ಮೂರೆಳೆ ಗುಂಡು ಎದೆಭಾರ (ಹಳ್ಳಿಬಾ. ೬೫). **ಎಣಗಂಟು**: ಚೆಲುವಾಂಬಾ . . . ಆ ದಿವಸ ಎಣಗಂಟು ಹಾಕಿ ಅಂದವಾಗಿ ಕಟ್ಟಿದ್ದ ಕೆಂಡಸಂಪಿಗೆ ಹೂ ಮುಡಿದಿದ್ದಳು (ಚಂಗಾಳ್ವ. ४೧೭). [ಎಣೆ₂ + ಗಂಟು]

**ಎಣೆಗಳೆ** (ಕ್ರಿ). ಸಂಬಂಧವನ್ನು ಕಳೆದುಕೊ; ಸಡಿಲವಾಗು: ಗಣಿಸಲುಪಜಿಹ್ಮಮುಪದೇಹಿಕಮೆನಲು ದೇಹದೆಣೆಗಳೆಯದಿಹ ಹರೆಯ (ಮಂಗರಾ. ೧೧೯–૩). [ಎಣೆ₁ + ಕಳೆ₁]

**ಎಣೆಗಾಣು** (ಕ್ರಿ). ಸರಿಗಾಣು; ಸಾಟಿಯಾಗಿರುವುದನ್ನು ನೋಡು: ನಿನ್ನೊರೆಗಿನಿಸಪ್ಪುಡಂ ದೊರೆಗಳಿಲ್ಲೆಣೆಗಾಣೆನಿಳಾಗ್ರದೊಳ್ (ಎಕ. II, ೬೯–೫೮; 1100); ಮಹಾವಿಭುವಲಾ ನೀನು ನಿನಗೆಣೆಗಾಣೆನುಳಿದರಲಿ (ತೊರರಾ. ೨–೭–೧೫); ಆರಾರ ಭಾವಚಿತ್ರಂಗಳ ಬರೆದು ಕುಮಾರತಿಗೆಣೆ ಗಾಣೆನೆನುತೆ (ಮೋಹತ. ೨೯–೨೨). [ಎಣೆ₁ + ಕಾಣು (< ಕಾಣ್)]

**ಎಣೆಗುಬ್ಬಿ** (ನಾ). ಜೋಡಿ ಗುಬ್ಬಚ್ಚಿ: ಕ್ಷಣವುಳಿಯದೆ ಲವಲವಿಸಿ ಕೂಡಿದರಾ ಎಣೆಗುಬ್ಬಿಯ ಮಾಳ್ಕೆಯೊಳು (ಶ್ರೀಪಾಲ. ೧೧–೨೦೯).
[ಎಣೆ₁ + ಗುಬ್ಬಿ₂]

**ಎಣೆಗೂಡು** (ಕ್ರಿ). ಜತೆಗೂಡು; ಸೇರು: ಎಣೆಗೂಡಿ ಶೂರ ವೀರರು ಬೆರಸೆಯ್ತಂದು ಮಣಿದುಸಿರ್ದರು ಕಾರ್ಯಗತಿಯ (ಭರಚ. ४೬–४೨); ಎಣೆಗೂಡಿ ನಿಮ್ಮೊಡನಿವ ದ್ರೋಣನೊಳಂದು ಕಣೆಯೆಸುಗೆಗಳ ಕಲಿತನು (ಕರ್ಣವೃ. ३–೭). [ಎಣೆ₁ + ಕೂಡು₁]

**ಎಣೆಗೊಣ** 'ಎಣಗೋಣ' ನೋ.

**ಎಣೆಗೊಳ್₁** (ಕ್ರಿ). ಸಮನಾಗು; ಸರಿಹೊಂದು: ಅಣೆದಲೆದು ನೂಂಕಿ ಗರ್ಜಿಸುತಣಿಯರಮೆಣೆಗೊಂಡಿಭಂಗಳಂ ಭರಿಕೈಗಳ್ ಪೆಣೆದಿರೆ ಕಾದಿಸಿ (ರಾಜಶೇ. ೧३–೮೬). [ಎಣೆ₁ + ಕೊಳ್₁]

**ಎಣೆಗೊಳ್₂** (ಕ್ರಿ). (ಮಕ್ಕಳ) ಎಣೆಯೆಂಬ ರೋಗಕ್ಕೆ ಒಳಗಾಗು: ಬಜೆಯಂ ಕೂಡಿ ಕಷಾಯಮಂ ಮಾಡುವುದು ಇವಜೆಂಗೆ[ದೆ] ಶಿಶುವಿಗೆ ಎಣೆಗೊಂಡುದು ಮಾಣ್ಬುದು (ಲೋಕೋಪ. ೯–೧೮೮ ಟೀಕೆ).
[ಎಣೆ₃ + ಕೊಳ್₁]

**ಎಣೆಗೋಣ** 'ಎಣಗೋಣ' ನೋ.

**ಎಣೆತೊಣೆ** (ನಾ). ಸರಿಸಮಾನ; ಸಾಟಿ: ಕಾಮನ ರತಿಯಲು ತಾನೆಣೆತೊಣೆ ಸರಿಸಮಾನೆ ಶಾಂತಲದೇವಿ (ಎಕ. II, ೧೪३–೬೫; 1131); ಅಣಿಯರವೆತ್ತ ಹಿಮ್ಮಡದ ಎಣೆತೊಣೆಯಿಲ್ಲದಡಿಯ ರಂಗಾಯೆಂಬ ರಮಣಿ ಮೈದೋರ್ವಳಿನ್ನೆಂದೊ (ಶತಸಾಂ. ೨೨–೧೧). [ಎಣೆ₁ + ತೊಣೆ₁]

**ಎಣೆದೊಟ್ಟಿಲ್** (ನಾ). ಜತೆತೊಟ್ಟಿಲು; ಜೋಡಿತೊಟ್ಟಿಲು: ರಾಯಗುವರನೊಡನೆ ಕೆಳೆಗುವರನುಮೆಣೆದೊಟ್ಟಿಲೊಳೆ ಬಳೆದು (ಚಿಕವಿ. ४–೯೧).
[ಎಣೆ₁ + ತೊಟ್ಟಿಲ್]

**ಎಣೆಪಿಳ್ಳೆ** (ನಾ). ತಾಯಿ ಗರ್ಭಿಣಿಯಾಗಿರುವಾಗ ಹಾಲು ಕುಡಿಯುವ ಮೊದಲ ಮಗು (ಸ್ಯಾಂಡರ್) [ಎಣೆ₁ + ಪಿಳ್ಳೆ]

**ಎಣೆಬೆಟ್ಟು** (ನಾ). ಜೋಡಿ ಬೆಟ್ಟ; ಜತೆಯ ಬೆಟ್ಟ: ಎಣೆಬೆಟ್ಟುಗಳೆಗಿದಿರೇಜುವ ಮುಗಿಲ ಸಂದಣಿಯಂತೆ (ಕರ್ಣವೃ. ೫–೧೮).
[ಎಣೆ₁ + ಬೆಟ್ಟು₂]

**ಎಣೆಯ** (ನಾ). ಜತೆಯವನು; ಸ್ನೇಹಿತ; ಗೆಳೆಯ: ಕೂರ್ತುರ್ಪರಿದೆಣೆಯರಂ ಸೇರ್ವ ಸೇರ್ದವರೊಡನಿದಿರ್ಚಿರುಗಿಪೋಪ (ಶ್ರೀರಾಪ. ೪–೫೬). [ಎಣೆ$_1$ + -ಅ$_7$]

**ಎಣೆಯಕ್ಕರ** (ನಾ). ಸಮಾನವಾದ ಅಕ್ಷರ: ಸಮಿಾಪಪ್ರಾಸಂ ದರ್ಶಿತಭೇದಮಾಯ್ತನುಪ್ರಾಸಮುಮಂ ಸಂದಿಸಿದೆಣೆ [ಪಾಠಾಂ. ಯೆಣೆ]ಯಕ್ಕರಮೊಂದೊಂದಱೊಳಳವಡಿಸಿ ಬಂದೊಡನುಗತಮಕ್ಕುಂ (ಕವಿರಾ. ೨–೩೯); ಸಮಿಾಪಪ್ರಾಸಂ ದರ್ಶಿತಮಾಯ್ತು ಮತ್ತನುಪ್ರಾಸಮುಮಂ ಸಂದಿಪೆನೆಣೆಯಕ್ಕರಮೊಂದೊಂದಱೊಳಳವಡಿಸಿ ಪೇೞಲನುಗತಮಕ್ಕುಂ (ಛಂದೋಂಬು. ೧–೫೩). [ಎಣೆ$_1$ + ಅಕ್ಕರ$_2$]

**ಎಣೆಯಾಡು** (ಕ್ರಿ). ೧. "ಜತೆಯಾಗಿ ಆಡು" (ರಮಾಕಾಂ): ತಿಮ್ಮಿಯ ಹೃದಯದಲ್ಲಿ ಸಿಟ್ಟೂ ಸಂಕಟವೂ ಎಣೆಯಾಡಿದವು (ಮಲೆಮ. ೩೮೦). ೨. (ಹಾವುಗಳು) ಕೂಡಿಕೆಯಾಗು: "ಅವು ಕಾಳಿಂಗನಾಗರ ಹಾವುಗಳು; ಎಣೆಯಾಡುತ್ತಿವೆ" (ಪಂಜಪಂ. ೨೦೧). [ಎಣೆ$_1$ + ಆಡು$_1$]

**ಎಣೆಯೊಡ್ಡು** (ಕ್ರಿ). ಸಮಾನವಾಗಿ ಒಡ್ಡು; ಸರಿ ಸಮಾನವಾಗಿ ಪ್ರತಿಭಟಿಸು: ಯಾದವಕುಲದ ಪಟುಭಟ ಸಮಾಜಮಂ ಪ್ರದ್ಯುಮ್ನನೊಡನೆ ಸುರಥನ ರಥಕ್ಕೆಣೆಯೊಡ್ಡಿ ನರನ ರಥದ ವಾಜಿಗಳ ವಾಘೆಯಂ ತಿರುಹಿ (ಜೈಮಿಭಾ. ೧೪–೩). [ಎಣೆ$_1$ + ಒಡ್ಡು$_1$]

**ಎಣೆವಕ್ಕಿ** (ನಾ). ಜತೆಯಾಗಿರುವ ಪಕ್ಷಿ; ಜೋಡಿಹಕ್ಕಿ; ಚಕ್ರವಾಕ: "ಎಣೆವಕ್ಕಿ ರಥಾಂಗ ಪಕ್ಷಿಯೊಳ್" (ಕರ್ಣಾನಿ. ೨೧); "ಪೊಣರ್ವಕ್ಕಿ ... ಎಣೆವಕ್ಕಿ, ಜೋಡುವಕ್ಕಿ, ಗೆಡೆವಕ್ಕಿ, ಅಮುಳ್ವಕ್ಕಿ – ಈ ೭ ಚಕ್ರವಾಕಂ" (ಕಶಸಾ. ೧೦–೨೦೦); ಅರ್ಕೋದಯಮಂ ಕಂಡೆಣೆವಕ್ಕಿಗಳಂತೆ ಎಡೆವಿಡದೆ (ಉದ್ಭಟ. ೬–೪೩ ವ); ಎಳಮಿಾನೆಣೆವಕ್ಕಿ ಕಳಹಂಸಗಳು ನಾಚಿ ಮುಳುಗಿದುವಿರದೆ ಪಾಱಿದುವು (ಕಂನವಿ. ೨೫–೧೨೦); ಕುಚಯುಗ ಕೂಡಿದೆಣೆವಕ್ಕಿಯಂತಿರಲ್ (ನಂದಿಮಾ. ೯–೪); ವಾಕ್ಕೂ ಅರ್ಥವೂ ಎಣೆವಕ್ಕಿಗಳಂತೆ ಒಂದನ್ನೊಂದು ಬಿಟ್ಟು ಇರಲಾರವು (ಭಾರವಿಾ. ೨೪೩). [ಎಣೆ$_1$ + ಪಕ್ಕಿ$_1$]

**ಎಣೆವಡೆ** (ಕ್ರಿ). ಒಟ್ಟಾಗಿ ಸೇರು; ಜತೆಯಾಗು: ಗಣನಿಯಮವಿಪರ್ಯಾಸದೊಳೆಣೆವಡೆದೊಳ್ಪೊಸೆಯೆ [ಪಾಠಾಂ. ಪದದೊಳ್ ಕೂಡಿ] ಮಾತ್ರೆ ಸಮನಾಗೆ ಗುಣಾಗ್ರಣಿಯ ಮತದಿಂದೆ ತಾಳದ ಗಣನೆಗೊಡಂಬಟ್ಟುದದುವೆ ರಘಟಾಬಂಧಂ (ಛಂದೋಂಬು. ೩–೨೨). [ಎಣೆ$_1$ + ಪಡೆ$_1$]

**ಎಣೆವರ್** (ಕ್ರಿ). ಸಮನಾಗು; ಸರಿಬರು; ಸಾಟಿಯಾಗು: ದ್ವಿಜರಾಜಂಗೆಣೆವಂದು ಚಕ್ರಹತಿಯಿಂ ಸ್ವರ್ಭಾನು ತುಂಡಾಗನೇ (ಸೋಮೇಶ. ೪೫); ಎರವಿನ ಪಚ್ಚಮಂ ತಳೆದಿದರ್ಕ್ಕೆಣೆವಾರದಿದೆಂದು ಲೋಗರಾಭರಣಮನೇಳಿಪಂತೆ (ರಾಜಶೇ. ೧–೩೬). [ಎಣೆ$_1$ + ಬರ್$_1$]

**ಎಣೆಸಾವು** (ನಾ). ಜತೆಯಲ್ಲಿ ಸಾಯುವುದು; ಸಹಮರಣ: ಒರ್ಕುಡಿಯ ನೆತ್ತರಿನ್ ಕಱಿಗೊಂಡು ಎಣೆಸಾವು ಸತ್ತೞಿದರೊರ್ಪಗಲೆ (ಅಂತಿಗೊ. ೯–೧೫೯). [ಎಣೆ$_1$ + ಸಾವು]

**ಎಣ್ಕೆ** 'ಎಣಿಕೆ' ನೋ.

**ಎಣ್ಗಂಡುಗ** (ನಾ). ಎಂಟು ಖಂಡುಗ: ಸೀಯವೂರುಮ ಅಕ್ಕಬ್ಬೆ ಆಳುತ್ತಿರೆ ಅಲ್ಲಿ ಕೊಟ್ಟುದು ಎಣ್ಗಣ್ಡುಗ ಮಣ್ಣು (ಎಕ. XII, ಶಿರಾ. ೨೪–೪೨; 900). [ಎಣ್$_2$ (< ಎಂಟು) + ಖಂಡುಗ]

**ಎಣ್ಗಡೆ** (ನಾ). ಎಂಟುಕಡೆ, —ದಿಕ್ಕು: ಎಣ್ಗಡೆಗೆ ರಂಜಿಪ ಕೊಳಂಗಳಿಂ ಕಂಗಳಿಂ ನೋಡೆ ಬನಮೆಸೆದಿರ್ದುದು (ಚೆಬಪು. ೧೧–೨೪). [ಎಣ್$_2$ (< ಎಂಟು) + ಕಡೆ$_3$]

**ಎಣ್ಗಯ್** (ನಾ). ಎಂಟು ಕೈ; ಎಂಟು ಕೈ ಉದ್ದದ ಒಂದು ಅಳತೆ: ಊರೊಡೆಯರ್ಗೆ ಮಾನ್ಯದ ಕೆಯ್ಮತ್ತರಿನ್ಮೂಱು ಮನೆಗೆಣ್ಗಯ್ಯಗಲವಿಪ್ಪತ್ತೈಗೈ ನೀಳದ ನಿವೇಶನಂ (ಎಇ. XX, ೬–೩೨; 1012). [ಎಣ್$_2$ (< ಎಂಟು) + ಕಯ್$_2$ (< ಕೆಯ್$_2$)]

**ಎಣ್ಗಾವುದ** (ನಾ). ಎಂಟು ಗಾವುದ: ನರರಥಂ ತೂಳ್ದಾ ಕುರುಕ್ಷೇತ್ರದಿಂ ಪಡುವೆಣ್ಗಾವುದು ಪೋಗೆ ಪೋಗಡಿಸುವೆಂ (ಪಂಪಭಾ. ೧೦–೨೫); ಎಣ್ಗಾವುದಂ, ಎಂಟುಗಾವುದಂ (ಶಬ್ದಾನು. ೩೫೧ ಪ್ರಯೋ). [ಎಣ್$_2$ (< ಎಂಟು) + ಗಾವುದ]

**ಎಣ್ಗೊಳ** (ನಾ). ಎಂಟು ಕೊಳಗ; ಒಂದು ಅಳತೆ: ಪಡುವಣ ತೋಂಟ್ಟ ಕೞನಿಯುಲ್ ಎಣ್ಗೊಳ ಗೞ್ದೆಗೆ ನೆಲನುಂ ಚನ್ದ್ರನು ಉಳ್ಳನ್ನೆಗಂ ತೆಱೆ ಇಲ್ಲದನ್ತಾಗಿ (ಎಕ. XIV, ಮಳವ. ೧೨೫–೧; 1014). [ಎಣ್$_2$ (< ಎಂಟು) + ಕೊಳ$_1$ (< ಕೊಳಗ)]

**ಎಣ್ಗೊಳವೆಡೆ[ದೆ]** (ನಾ). ಎಂಟು ಕೊಳಗ ಬೀಜವರಿಯ ಭೂಮಿ: ಬಸದಿಯ ಪೂಜಗಣ ಪಿತ್ತಿಲ್ದೋಣ್ಟಮುಂ ತೆಪ್ಪೊಲದೊಳು ಎಣ್ಗೊಳವೆಡೆ[ದೆ] (ಎಕ. X, ಕೋಲಾರ. ೯೦–೯೧; 903). [ಎಣ್ಗೊಳ + ಬೆದೆ$_1$]

**ಎಣ್ಛಾಸಿರ** (ನಾ). ಎಂಟು ಸಾವಿರ: ಇರ್ಛಾಸಿರಂ, ಎಣ್ಛಾಸಿರಂ (ಭಾಷಾಭೂ. ೧೧ ಪ್ರಯೋ); ಎಣ್ಛಾಸಿರ ಮಕುಟಧರರ್ (ಜಯಕಾ. ೩–೨). ಎಣ್ಛಾಸಿರ್ವರ್ = ಎಂಟುಸಾವಿರ ಜನ: ಎಣ್ಛಾಸಿರ್ವರ್ ರಿಸಿಯರನಟ್ಟಿದರ್ (ವಡ್ಡಾರಾ. ೮೮–೨೩); ಪ್ರಭಾವತೀದೇವಿ ಮೊದಲಾದೆಣ್ಛಾಸಿರ್ವರರಸಿಯರೊಳ್ ಕೂಡಿ (ಧರ್ಮಾಮೃ. ೪–೧೫). [ಎಣ್$_2$ (< ಎಂಟು) + ಸಾಸಿರ]

**ಎಣ್ಣಳವಿ** (ನಾ). ಎಂಟು ಪ್ರಮಾಣ, —ಅಳತೆ: ಎಣ್ಣಳವಿ ಬರಿಸವರಸಕೊನ್ದು ಭಾಗಮಿಟ್ಟವು[ದು] (ಸೌಇಇ. XV, ೫೦೯–೩; 9ನೆಯ ಶತ). [ಎಣ್$_2$ (< ಎಂಟು) + ಅಳವಿ]

**ಎಣ್ಣಿಕೆ** 'ಎಣಿಕೆ' ನೋ.

**ಎಣ್ಣಿಗ** (ನಾ). ಎಣ್ಣೆ ಮಾರುವವನು: ಎನ್ನಣುಗಂ ಸಿದ್ಧೇಂದ್ರಂ ನಿನ್ನೂರೆಣ್ಣಿಗನ ಮನೆಯೊಳಿರ್ದಪನವನಿಂ ಚೆನ್ನಾದಪುದೆಲೆ ಭೂಪತಿ (ಹವಿಾ್ಮರ. ೭–೧೨). [ಎಣ್ಣೆ + -ಇಗ]

**ಎಣ್ಣಿಸು** 'ಎಣಿಸು' ನೋ.

**ಎಣ್ಣು** 'ಎಣ್$_1$' ನೋ.

**ಎಣ್ಣೂರಿಗೆ, ಎಣ್ಣೆಯೂರಿಗೆ, ಎಣ್ಣೆಹೂರಿಗೆ, ಎಣ್ಣೋರಿಗೆ** (ನಾ). ಎಣ್ಣೆಯಲ್ಲಿ ಕರಿದ ಅಥವಾ ಬೇಯಿಸಿದ ಪೂರಿಗೆ; ಒಬ್ಬಟ್ಟಿನಂತೆ ಮಾಡಿ ಬೇಯಿಸಿದ ತಿಂಡಿ: ಎಣ್ಣೂರಿಗೆ [ಪಾಠಾಂ. ಮೇಲ್ಪೂರಿಗೆ] ಬೆಸುಪೂರಿಗೆ ತಱಂಗೆಳ್ಳುಂಡೆ ... ಭಕ್ಷ್ಯಚಯಮಂ ತಂದಿಕ್ಕಿದರ್ ಕಾಂತೆಯರ್ (ಧರ್ಮಪ. ೨–೫೪); ಗಾರಿಗೆ ಲಡ್ಡಿಗೆ ಬೀಸೂರಿಗೆ ಬಿಚ್ಚೂರಿಗೆ ಸಘೃತ ಪನಸುಕನೆಣ್ಣೂರಿಗೆ (ಮುದೇಪು. ೧೯–೫೮); ಓರಿಗೆ ಮಕ್ಕಳು ಒಡಗೊಂಡುಹೋಗಿ ಎಣ್ಣೂರಿಗೆಯನು ಕೊಡಿಸುವರು (ಚಂದ್ರಹಾ. ೧–೨೯). **ಎಣ್ಣೆಯೂರಿಗೆ:** ಎಣ್ಣೆಯೂರಿಗೆ ಯಿಡ್ಡಲಿಗೆ ಕಡುಸಣ್ಣ ಸೇವಗೆ ಸರವಳಿಗೆ ಮಿಗೆ ಕಣ್ಣಗಾರಿಗೆಯೊಟ್ಟುತಿರ್ದುವು ದೇವನಿದಿರಿನಲಿ (ಪ್ರಭುಲೀ. ೨೩–೧೭); ಕಜ್ಜೂರರ ವಡೆಗಡುಬು ರಸವೊಸರ್ವ ಸಜ್ಜಿಗೆ ಯೆಣ್ಣೆವೂ[ಯೂ]ರಿಗೆ ... ಪರವೆ ಗಡಣಿಸಿದಳಾಗ (ಚೇರಮ. ೧೦–೨೮). **ಎಣ್ಣೆಹೂರಿಗೆ:** ಅತಿರಸ ೫ ಸುಖಿನಪ ೫ ಯೆಂಣೆಹೂರಿಗೆ ೫ ವಡೆ ೫ (ಸೌಇಇ. IV, ೨೫೦–೮; 1321); ಈ ಯೆಣ್ಣೆಹೂರ[ರಿ]ಗೆಯ ಮೃದುತರಕೆ ಸರಿಯುಂಟೆ ಜೋಯಿಸರೆ (ಸಮ್ಯಕೌ. ೭–೨೭). **ಎಣ್ಣೋರಿಗೆ:** ಎಣ್ಣೋರಿಗತಿರಸ ದಧಿಘೃತವೋ ರಂಗ (ಪುರಂದ. ೧–೮೪–೨). [ಎಣ್ಣೆ + ಪೂರಿಗೆ]

**ಎಣ್ಣೆ**, ಎರ್ಣೆ (ನಾ). ೧. ಎಳ್ಳು, ಅಗಸೆ, ಹುಚ್ಚೆಳ್ಳು ಮೊದಲಾದ ಕಾಳುಗಳಿಂದ ತೆಗೆದ ದ್ರವ ಪದಾರ್ಥ; ತೈಲ: ಅಂಗಾಡಿಯುೞ ಮ್ಮಾರ್ನ[ಮೆಣ್ಣೆ[ಣ್ಣೆ]ಯು]ಮು ಮರಿಸಿನಮುಂ [ಮೇಣೊ]ಪ್ಪ್ರಲಂ ಸಕ್ಕರೆ (ಕಇ. I, ೨–೧೧; 699); ಬಸಿಕರ್ೞಟಿಗ್ಗಮಂಬಲಿಗಮೆಣ್ಣೆಗಂ ಕಟಿಗಂ ಕೊಟ್ಟು ಪೋಕುಂ (ವಡ್ಡಾರಾ. ೭೭–೨೨); ಸೊಡರೊಳ್ ಬತ್ತಿಯು ಮೆಣ್ಣೆಯುಮೊಡನಱಿದವೊಲ್ (ಶಾಂತಿಪು. ೯–೧೧೮); ತಮ್ಮ ಮಠದ ಮಾಣಿಗಳ್ಗೆ ಉಪ್ಪು ಎಣ್ಣೆ[ಣ್ಣೆ]ಗೆ ಗದ್ಯಾಣಂ ಪದಿನಾಱು (ಎಕ. VII, ಶಿಕಾ. ೭೪–೧೩; 1010); ನಮ್ಮ ತಿರಿದು ತಂದುಣ್ಬಶನಕ್ಕವರೆಣ್ಣೆ ಸೂಜಿಮೊನೆಯೆ ನಿಸುವೆಣ್ಣೆಯುಂ ಬಂಗುಮಾದ ಕಟಿಯುಂ (ಸುಕುಮಾ. ೨–೬೬); ಎಣ್ಣೆ ಮುಟ್ಟಿದ ಕುಂಬಳಕಾಯಂತೆ ಒಳಗೊಳಗೆ ಕೊಟಿತು (ಧರ್ಮಾಮೃ. ೩–೩೫); ಎಳ್ಳಿಂಗೆ ಪರಿಮಳವ ಕಟ್ಟದಲ್ಲದೆ ಎಣ್ಣೆಗೆ ಪರಿಮಳ ವೇಧಿಸದು (ಅವಚಂ. ೨೩೯–೧೦೮೪); ಎಳ್ೞೊಳ್ ಎಣ್ಣೆ (ಶಮದ. ೧೩೩ ಪ್ರಯೋ); ಸರಸಿಜಗಂಧಿಯ ಧವಳಶೋಭನೆ . . . ಎಣ್ಣೆಯರಿಸಿನಗೊಟ್ಟರೆಲ್ಲರಿಗೆ (ಮೋಹತ. ೧೭–೪೦); ಎಣ್ಣೆ ಬೆಣ್ಣೆ ಮುಂತಾದ ಪದಾರ್ಥಗಳಾದರೂ ಶರೀರಕ್ಕೆ ಬಹಳ ಹಿತವು (ಮುಂಬಯಿ. ೪–೩೨); ಉರಿಯುವ ಬೆಂಕಿಯಲ್ಲಿ ಎಣ್ಣೆ ಸುರಿದಹಾಗೆ (ಗಾದೆ); ಕಳ್ಳ ಹೊಕ್ಕ ಮನೆಗೆ ಎಣ್ಣೆ ದಂಡ (ಗಾದೆ); ಎಳ್ಳುಕೊಂಡ ಹಾಗೆ ಎಣ್ಣೆ ಮಾರು (ಗಾದೆ); ಎಣ್ಣೆ ಬರುವಾಗ ಕಣ್ಣು ಮುಚ್ಚಿಕೊಂಡ (ಗಾದೆ). ೨. (ಆಲಂ) ಶಕ್ತಿ; ಉತ್ಸಾಹ: ಮೈಯಲ್ಲಿ ಎಣ್ಣೆಯಿರುವತನಕ ಉರೀತಾನೆ (ರೂಢಿ). △ ಎರ್ಣೆ: ೧. ಒಂದು ಮಾನ ಎರ್ಣೆಯುಂ ಸ್ವಧರ್ಮ೦ ಆಗಿ (ಹೈಆಸಿ. ೧೩–೮೬; 1090).

ಎಣ್ಣೆ ತೆಗೆ = ಎಣ್ಣೆಯನ್ನು ತೆಗೆ, —ಬರಿಸು: ಹರಳುಬೀಜದಿಂದ ಎಣ್ಣೆ ತೆಗೆಯುತ್ತಾರೆ (ರೂಢಿ). ಎಣ್ಣೆ ಮಾಡು = ದೀಪಕ್ಕೆ ಎಣ್ಣೆ ಹಾಕು: ಪೂಜಾರಿಯು ಸಂಜೆಯದೀಪ ಎಣ್ಣೆಮಾಡಿ ಹೋಗಿದ್ದನು (ನಿರಾಭ. ೫೧). ಎಣ್ಣೆ ಸುರಿ = ೧. ಎಣ್ಣೆಯನ್ನು ಸುರಿ, —ಹಾಕು: ದೀಪಕ್ಕೆ ಎಣ್ಣೆ ಸುರಿ (ರೂಢಿ). ೨. (ಆಲಂ) ಹೆಚ್ಚುಮಾಡು; ಉದ್ರೇಕಗೊಳಿಸು: ವಿದ್ಯಾರ್ಥಿಗಳ ಅಶಿಸ್ತಿಗೆ ಎಣ್ಣೆಸುರಿಯುವಂತಾಗಿ (ಶಿಕ್ಷದ. ೩೨೦). ಎಣ್ಣೆ ಹಚ್ಚು = ಎಣ್ಣೆಯನ್ನು ಸವರು: ಮೈಗೆ ಎಣ್ಣೆಹಚ್ಚಿದರು (ರೂಢಿ). ಎಣ್ಣೆಹಾಕು = ಎಣ್ಣೆಸುರಿ ೨. ನನ್ನ ಕೆಲಸಕ್ಕೆ ಎಣ್ಣೆಹಾಕಿದನು (ರೂಢಿ). ಎಣ್ಣೆ ಸ್ನಾನ = ಅಭ್ಯಂಜನ: ಶನಿವಾರ ಎಣ್ಣೆಸ್ನಾನ ಮಾಡಬೇಕು (ರೂಢಿ). ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊ = ಫಲಬರುವಾಗ ಸುಮ್ಮನಿರು: “ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಳ್ಳುವುದು” ನಿಮಗೆ ಭೂಷಣವೂ ಅಲ್ಲ ಸೌಭಾಗ್ಯವೂ ಅಲ್ಲ (ರೂಪಸಂ. ೨೩).

[ಎಳ್ + ನೆಯ್$_2$./ ತಮಿ. ಎಣ್ಣೈ; ಮಲ. ಎಣ್ಣ; ಕೊಡ. ಎಣ್ಣೆ; ತುಳು. ಎಣ್ಣೆ]

**ಎಣ್ಣೆಗಂಟಿಕ್ಕು** ‘ಎಣೆಗಂಟಿಕ್ಕು’ ನೋ.

**ಎಣ್ಣೆಗಂಟಿಡು** (ಕ್ರಿ). = ಎಣೆಗಂಟಿಕ್ಕು: ಪೊಸಪೂಗಳಂ ತರಿಸಿ ಗಿರಿಜೆಯ ಮುಡಿಯನಂದು ಸೆಳ್ಳುಗುರ್ಗಳಿಂ ಪಿಕ್ಕಿ ತತ್ಕುಸುಮಗಳನೊಂದಿಸುತ್ತೆಣ್ಣೆಗಂಟಿಟ್ಟು ಮೊಗಮಂ ನೋಡಿ ಸುಖದೊಳೋಲಾಡಿ (ಚಬಪು. ೪೫–೭). [ಎಣ್ಣೆಗಂಟು + ಇಡು$_1$]

**ಎಣ್ಣೆಗಂಟು** (ನಾ). ಎಣ್ಣೆ ಹಚ್ಚಿರುವ ತುರುಬು; ಮುಡಿಕಟ್ಟು: ಪೊನ್ನಗಂಟು ತಾನೆಂಬಂತೆ ಪದಪುವಡೆದಿರಲೆಣ್ಣೆಗಂಟು (ಸೌಂದಪು. ೭–೫೬); ಎಣ್ಣೆಗಂಟಿನ ಪೊರೆಗೆ ನುಣ್ಗುರಲ್ ಬಳ್ಕೆ (ಚಬಪು. ೧೯–೨೬); ಸಣ್ಣನಿಱಿಯನುಗುರ್ಗಳಿನೆ ನೇವರಿಸುತ್ತೆಣ್ಣೆಗಂಟುಗಳ ತಡಹುತ (ಕಂನವಿ. ೨೧–೭೪); ಬೆನ್ನ ಮೇಲೊಲೆದೆಸೆವೆಣ್ಣೆಗಂಟು (ಶಬಶಂ. ೩–೧೦); ಕಣ್ಣುಕಾಡಿಗೆಯನು ಕರದಿಂದ ಧರಿಸುವೆಯೆಣ್ಣೆಗಂಟುಗಳ ಕಟ್ಟಬಲ್ಲೆ (ಯನಳ. ೧೨೦). [ಎಣ್ಣೆ + ಗಂಟು]

**ಎಣ್ಣೆಗಪ್ಪಡ** (ನಾ). ಎಣ್ಣೆಯಿಂದ ಪರಿಷ್ಕರಿಸಿ ನೀರಿಳಿಯದಂತೆ ಮಾಡಿದ ಬಟ್ಟೆ; ಮೇಣದ ಬಟ್ಟೆ; ಮೇಣಗಪ್ಪಟ: ಉದ್ದಮೇಜಿನ ಮೇಲೆ ಸ್ವಚ್ಛ ಎಣ್ಣೆಗಪ್ಪಡ ಅರಿವೆ ಹಾಕಲಾಗಿತ್ತು (ಮಹಾತ್ಮಾ. ೯); ಮೇಜಿನ ಮೇಲೆ . . . ಸೊಗಸಾದ ಎಣ್ಣೆಗಪ್ಪಡವೊಂದನ್ನು ಹಾಸಿತ್ತು (ಪುನರು. ೧೫). [ಎಣ್ಣೆ + ಕಪ್ಪಡ]

**ಎಣ್ಣೆಗಪ್ಪು** (ನಾ). ಎಣ್ಣೆಯ ಕರಿಬಣ್ಣ; ಕಪ್ಪು ಮತ್ತು ಕೆಂಪುಗಳ ಮಧ್ಯಸ್ಥ ಬಣ್ಣ: ಎಣ್ಣೆಗಪ್ಪಿನ ಮೈಗೆ ಕರಿದಿನ ಮೈಗೆ ಹೊಂಬಣ್ಣದ ಮೈಗೊಪ್ಪುವಂತೆ (ಭರಚ. ೧೩–೫೦); ದೆಸೆಯಂ ತಮ್ಮೆಣ್ಣೆಗಪ್ಪಿಂ ಬಳಿದು ತವೆ ಬಲಾಕಾಗಣೋದ್ರೇಕಮಂ ಮಾಡಿಸಿ (ಧ್ವನ್ಯಾಲೋ. ೫೫). [ಎಣ್ಣೆ + ಕಪ್ಪು$_4$ (< ಕರ್ಪು$_1$)]

**ಎಣ್ಣೆಗಮಟು** (ನಾ). ಎಣ್ಣೆಯ ಕಮಟಿನ ವಾಸನೆ: ಏನೋ ಎಣ್ಣೆಗಮಟಿನ ವಾಸನೆ (ರೂಢಿ). [ಎಣ್ಣೆ + ಕಮಟು]

**ಎಣ್ಣೆಗಾಯಿ** (ನಾ). ನೀರಿನಲ್ಲಿಯೂ, ಎಣ್ಣೆಯಲ್ಲಿಯೂ ಬೇಯಿಸಿ ಮಾಡಿದ ಪಲ್ಯ; ತಾಳದ: ಬದನೆಕಾಯಿ ಎಣ್ಣೆಗಾಯಿ (ರೂಢಿ). [ಎಣ್ಣೆ + ಕಾಯಿ$_4$ (< ಕಾಯ್$_4$)]

**ಎಣ್ಣೆಗಾಸು** (ಕ್ರಿ). ಎಣ್ಣೆಯನ್ನು ಕಾಯಿಸು, —ಕುದಿಸು (ಕ). [ಎಣ್ಣೆ + ಕಾಸು$_1$]

**ಎಣ್ಣೆಗೆಂಪು** (ನಾ). ಎಣ್ಣೆಯ ಕೆಂಪು ಬಣ್ಣ; ಕೆಂಪು ಮತ್ತು ಕಪ್ಪು ಬಣ್ಣಗಳ ಮಧ್ಯಸ್ಥ ಬಣ್ಣ; ನಸುಗೆಂಪು; ನುಣ್ಗೆಂಪು: ಆ ಕೆಂಪು ಬೆಳಕು ಯೌವನ ಕಳೆದಿದ್ದ ಎಣ್ಣೆಗೆಂಪು ಮುಖದ ಮೇಲೆ ಮಿನುಗಿ ಮಾಯವಾಗುತ್ತಿತ್ತು (ಕಣ್ಮಣಿ. ೫೯). [ಎಣ್ಣೆ + ಕೆಂಪು]

**ಎಣ್ಣೆಗೈ** (ನಾ). ಎಣ್ಣೆ ಬಳಿದುಕೊಂಡಿರುವ ಕೈ; ಎಣ್ಣೆಯಾದ ಕೈ: ಎಣ್ಣೆಗೈಯಲಿ ಕೆಂಡ ಹಿಡಿದೊಲು ಭಗ್ಗನೇ ಹೊತ್ತುತ್ತಿದೆ (ಹಾಡುಪಾ. ೩೧–೮). [ಎಣ್ಣೆ + ಕೈ$_2$ (< ಕೆಯ್$_2$)]

**ಎಣ್ಣೆಗೊಡ** (ನಾ). ಎಣ್ಣೆಯ ಕಡಾಯಿ: ಸುಡುವ ಮಳಲ ರಾಸಿ ಕಾಸುವಂಬಲಿಯೆಣ್ಣೆಗೊಡ ಸುಣ್ಣವರಲ ಕೊಪ್ಪರಿಗೆ . . . ದುರ್ಗದೊಳಗೆ (ಕುರಾಸಾಂ. ೪೨–೩೮). [ಎಣ್ಣೆ + ಕೊಡ$_2$]

**ಎಣ್ಣೆಗೊಪ್ಪರಿಗೆ** (ನಾ). ಎಣ್ಣೆಯನ್ನು ಹಾಕುವ ಅಗಲವಾದ ಬಾಯುಳ್ಳ ಪಾತ್ರೆ: ಬಿಗಿದ ಮಳವೆಯನೆಣ್ಣೆಗೊಪ್ಪರಿಗೆಗಳೊಳದ್ದಲಿ ಗಳಿಗಳಲಿ ಸೀರೆಗಳ ಸುತ್ತಲಿಯೆಂದು ಕೈವೀಸಿದನು ಕಲಿದ್ರೋಣ (ಕುವ್ಯಾದ್ರೋ. ೧೫–೩೨); ಆಜ್ಞೆಯಂ ಮಿಾಱದಾತನ ಕೈಗಳಂ ಕಟ್ಟಿಸಿ ತಳಪಳನೆ ಕುದಿವೆಣ್ಣೆಗೊಪ್ಪರಿಗೆ ಕಾಯ್ವಲ್ಲಿಗೆಳತರಿಸಿ (ಜೈಮಿಭಾ. ೧೧–೩೧). [ಎಣ್ಣೆ + ಕೊಪ್ಪರಿಗೆ]

**ಎಣ್ಣೆತೆಂಗು** (ನಾ). ತೆಂಗಿನಲ್ಲಿ ಒಂದು ಬಗೆ: ಎಣ್ಣೆತೆಂಗು, ಸೀಮೆ ತೆಂಗು (ವ್ಯಬಗಿ. ೩೩–೬೩೦). [ಎಣ್ಣೆ + ತೆಂಗು$_2$]

**ಎಣ್ಣೆದಲೆ** (ನಾ). ಎಣ್ಣೆ ಬಳಿದುಕೊಂಡ ತಲೆ: ಕೆಂಪಿನ ಪೂವನೆಣ್ಣೆದಲೆ ನೂತ್ನಾಗಾರಮಂ ದೈತ್ಯರಂ ಕನಸೊಳ್ ಕಾಣಲು ಬಾರದ್ಯೆ (ಸೋಮೇಶ. ೭೨). [ಎಣ್ಣೆ + ತಲೆ$_1$]

**ಎಣ್ಣೆನಾಡು** (ನಾ). ಒಂದು ನಾಡಿನ ಹೆಸರು: ಮಾಧವದಣ್ಣಾಯಕರ ಜಂಮಸ್ತಳ ಎಣ್ಣೆ[ಣ್ಣೆ]ನಾಡ ಮಗೆಯದ ಅಣಲೇಸ್ವರದೇವರ ರಂಗಮಂಟಪ (ಎಕ. XIV, ಚಾಮುರಾ. ೨೫೬–೫; 1314). [ಎಣ್ಣೆ + ನಾಡು]

**ಎಣ್ಣೆನೂಲು** (ನಾ). ಎಣ್ಣೆಮಣಿಗಳ ಸೂತ್ರ, —ಸರ: ಎಣ್ಣೆನೂಲು ಸಿಂಗದುಗುರು ಹೊಂಗವಡಿಕೆ ಕಣ್ಣ ಕಜ್ಜಳ ದಿಟ್ಟದಂಡೆ ಚಿಣ್ಣಗಾ ಕಾಲದೊಳೆಸೆದವು ಮಱಿಹುಲ್ಲೆಗಣ್ಣ ಗರುವೆ ಗಜಗಮನೆ (ರಾಮವಿ. ೫–೫೩). [ಎಣ್ಣೆ$_0$ + ನೂಲು$_2$ (< ನೂಲ್$_2$)]

**ಎಣ್ಣೆಪುಂಡಿಗಿಡ** (ನಾ). ಪುಂಡಿಗಿಡದಲ್ಲಿ ಒಂದು ಬಗೆ: (ಮೈಔಗಿ. ೨೪–೪೫೦). [ಎಣ್ಣೆ + ಪುಂಡಿ + ಗಿಡ(< ಗಿಡು)]

**ಎಣ್ಣೆಬಟ್ಟೆ** (ನಾ). = ಎಣ್ಣೆಗಪ್ಪಡ. [ಎಣ್ಣೆ + ಬಟ್ಟೆ$_3$]

**ಎಣ್ಣೆಬದನೆಗಾಯ್** (ನಾ). ಬದನೆಯ ಕಾಯನ್ನು ಎಣ್ಣೆಯಲ್ಲಿ ಬೇಯಿಸಿ ಮಾಡಿದ ಪಲ್ಯ: ಬಟ್ಟಬದನೆಯಕಾಯ ನಸುನೀರ ತಿಳಿದುಪ್ಪ ವಿಟ್ಟು ಉಕ್ಕರಿಸಿ . . . ತಟ್ಟೆಣ್ಣೆಯೊಳಗೆ ವಗ್ಗರಿಸಲವು ತಾವೆಣ್ಣೆಬದನೆಗಾಯ್ಸರಾದುದು (ಸೂಪಶಾ. ೪–೧೩). [ಎಣ್ಣೆ + ಬದನೆಕಾಯ್]

**ಎಣ್ಣೆಬುಡಿಗೆ** (ನಾ). ಒಂದು ಬಗೆಯ ಗಿಡ: (ಮೈಔಗಿ. ೩೨–೬೨೮). [ಎಣ್ಣೆ + ಬುಡಿಗೆ$_0$]

**ಎಣ್ಣೆಮಂಜರಿಸೊಪ್ಪು** (ನಾ). (ಔಷಧಿ ಗುಣವುಳ್ಳ) ಒಂದು ಬಗೆಯ ಸೊಪ್ಪು: ಚತುಷ್ಷಷ್ಟಿ ಮರೀಚಾದಿ ಲೇಹ್ಯ – ಪಿಪ್ಪಲಿ . . . ಎಣ್ಣೆಮಂಜರಿಸೊಪ್ಪಿನ ರಸ, ಗರಿಕೆ ರಸ, ಕಳ್ಳನ ಹೂವಿನ ರಸ (ಸಕವೈ. ೨೧೭). [ಎಣ್ಣೆ + ಮಂಜರಿ + ಸೊಪ್ಪು$_3$]

**ಎಣ್ಣೆಮಜ್ಜನ** (ನಾ). ಎಣ್ಣೆಯ ಸ್ನಾನ; ಅಭ್ಯಂಜನ: ಗುರುವಿಗೆ ಗುಟುಕುನೀರು ಶಿಷ್ಯನಿಗೆ ಎಣ್ಣೆಮಜ್ಜನ (ನೀತಿಚಿಂ. IV, ೨೨). [ಎಣ್ಣೆ + ಮಜ್ಜನ]

**ಎಣ್ಣೆಮಣಿ** 'ಎಣ್ಣೆವಣಿ' ನೋ.

**ಎಣ್ಣೆಮರ** (ನಾ). ಒಂದು ಬಗೆಯ ಮರ: (ಮೈಔಗಿ. ೪೮–೯೬೬). [ಎಣ್ಣೆ + ಮರ$_1$]

**ಎಣ್ಣೆಯೂರಿಗೆ** 'ಎಣ್ಣೂರಿಗೆ' ನೋ.

**ಎಣ್ಣೆಯೋಗರ** (ನಾ). ಎಣ್ಣೆಹಾಕಿ ತಯಾರಿಸಿದ ಅನ್ನ; ಒಗ್ಗರಿಸಿದ ಅನ್ನ: ಒಂದು ಮಾನೆಣ್ಣೆಯೊಳು ಹುಣಿಸೆಹಣ್ಣಿನ ಹುಳಿಯನೊಂದಿಸಿ . . . ಬಿಳಿಯುಪ್ಪಿಟ್ಟು ಕಲಸಿ ಮನಸಂದು ಹಸಗೆಯ್ದೆಣ್ಣೆಯೋಗರಂ ವಸುಧಾಮರರ್ಗೆ ಪ್ರಿಯತರಮಾದುದು (ಸೂಪಶಾ. ೩–೧೯). [ಎಣ್ಣೆ + ಓಗರ]

**ಎಣ್ಣೆವಣಿ, ಎಣಮಣಿ, ಎಣ್ಣೆಮಣಿ** (ನಾ). ಕೊರಳ ಸರದ ಒಂದು ಬಗೆಯ ಮಣಿ. 'ಎಣ್ಣೆವಣಿಸರ' ಪರಾ. **ಎಣಮಣಿ**: 'ಎಣಮಣಿಸರ' ಪರಾ. **ಎಣ್ಣೆಮಣಿ**: ಸಿಂಗದುಗುರು ಎಣ್ಣೆಮಣಿ ಹೊನ್ನ ಸರಿಗೆಯು ಮಾಂಗಾಯಿ ರನ್ನದಿ ಸಮೆದ (ಜ್ಞಾನಚ. ೩–೧೬೫). [ಎಣ್ಣೆ$_0$ + ಮಣಿ$_3$. / ತಮಿ. ಎಣ್ಣೆಯ್‌ಮಣಿ]

**ಎಣ್ಣೆವಣಿಸರ, ಎಣಮಣಿಸರ** (ನಾ). ಎಣ್ಣೆಮಣಿಗಳಿಂದ ಮಾಡಿದ ಸರ, —ಹಾರ: ತಳಗೆಲೆಯ ರವ ಗೆಜ್ಜೆಯುಲಿಯಳಿಗಳೆಣ್ಣೆವಣಿಸರ ಮಾಗಲೆಳೆಯ ನಂದದೊಳಾ ವಸಂತ ಭಾಸುರ ಭೋಗಿ ಜನಕೆ ಮುದ್ದಾಗೆ (ನಂದಿಮಾ. ೭–೧೩). **ಎಣಮಣಿಸರ**: (ಕ). [ಎಣ್ಣೆವಣಿ + ಸರ$_6$]

**ಎಣ್ಣೆಶಾಸ್ತ್ರ** (ನಾ). ಮದುವೆ ಮುಂತಾದ ಸಮಾರಂಭದಲ್ಲಿ ವಧೂವರರಿಗೆ ಎಣ್ಣೆ ಹಚ್ಚುವುದು: ರಾಯನಿಗೆ ಗೋಧಿಕಲ್ಲೆಣ್ಣೆಶಾಸ್ತ್ರಂಗಳಂ ಗೈಯಲೋಸುಗ (ವರ್ಷವ. ೩–೮). [ಎಣ್ಣೆ + ಶಾಸ್ತ್ರ]

**ಎಣ್ಣೆಸೀಗೆ** (ನಾ). ೧. ಎಣ್ಣೆ ಮತ್ತು ಸೀಗೆಕಾಯಿ. ೨. (ಅಲಂ) ಹುಟ್ಟು ಹಗೆತನ; ಪರಸ್ಪರ ವೈರ, —ವಿರೋಧ: ರಕ್ಕಸರ್ಗಮಮಗ ಮೆಣ್ಣೆಸೀಗೆ (ರಾಮಾಶ್ವ. ೧೧೧–೧೦); ಒಬ್ಬರಿಗೊಬ್ಬರು ಎಣ್ಣೆಸೀಗೇ ಕಾಯಿಯಂತೆ (ನೀಗಟ್ಟು. ೯೦). [ಎಣ್ಣೆ + ಸೀಗೆ]

**ಎಣ್ಣೆಹುಲ್ಲು** (ನಾ). (ಕರಾ) ಒಂದು ಬಗೆಯ ಹುಲ್ಲು: ನಾರಾದ ಹುಲ್ಲು. [ಎಣ್ಣೆ + ಹುಲ್ಲು (< ಪುಲ್)]

**ಎಣ್ಣೆಹೂರಿಗೆ** 'ಎಣ್ಣೂರಿಗೆ' ನೋ.

**ಎಣ್ಣೆಹೊಳೆ** (ನಾ). ಎಣ್ಣೆಯ ಪ್ರವಾಹ, —ನದಿ; ಆ ಹೆಸರಿನ ಒಂದು ಸಣ್ಣ ತೊರೆ. [ಎಣ್ಣೆ + ಹೊಳೆ$_4$ (< ಪೊಟ್$_1$)]

**ಎಣ್ಣೋರಿಗೆ** 'ಎಣ್ಣೂರಿಗೆ' ನೋ.

**ಎಣ್ದೆಕ್ಕು** (ನಾ). = ಎಣ್ದೆಸೆ: ಅಕ್ಕ ಕೇಳಂತಲ್ಲ ನೀ ಕೂರ್ತು ಸ್ವಾಮಿಯೆಣ್ದೆಕ್ಕ ಸಾಧಿಸಲೆದ್ದು ನವಗೆ ಚೊಕ್ಕನಾನಂದದೋಚುವುದಿದ್ದಿ ತೆಂದರು ತಕ್ಕಿಲ್ಲದೆಲ್ಲಾ ರಾಣಿಯರು (ಭರತ. ೫೩–೧೨೭). [ಎಣ್$_2$ (< ಎಂಟು) + ದಿಕ್ಕು]

**ಎಣ್ದೆಸೆ** (ನಾ). ಎಂಟುದಿಕ್ಕು, —ಮೂಲೆ: ಎಂಟುದೆಸೆಗಕ್ಕು ನಾಮವೆಣ್ದೆಸೆಯೆಂದುಂ" (ಕವಿಕಂ. ೮೪); ನಿಶಾಗಮನವೆಣ್ದೆಸೆಯೊಳ ಮೆಸೆವ ಕತ್ತಲೆಯಂ ಬಿತ್ತರಿಸೆ (ಕಾದಂಉ. ೩೭೫); ಭೀಮನೆಣ್ದೆಸೆಯಂ ನೋಡುತ್ತೆ (ಗದಾಯು. ೭–೩೦); ಬಲ್ಪೆಸೆವುದು ತೋಳೊಳ್ ಎಣ್ದೆಸೆಯ ಗಂಡರ ಮಾಸೆಯಮೇಲೆ ವರ್ತಿಸುವುದು ಗಂಡಗರ್ವದ ಜಸಂ (ಎಕ. VII, ಶಿವಮೊ. ೪–೮೩; 1117); ಬಿರುಗಾಳಿಯಲೆಗೆಣ್ದೆಸೆಗೆದ್ದು ತೂರುವ ತರಗೆಲೆಗಳ ಮೊತ್ತವೆನಲು (ಕಂಸವಿ. ೧೪–೯೦).

**ಎಣ್ದೆಸೆಯಾಣ್ಮರ್** = ಎಂಟುದಿಕ್ಕಿನ ಒಡೆಯರು: ನಾಗಕನ್ನೆಯರಂ ಪಿಡಿದು ತರ್ಪಂ ಎಣ್ದೆಸೆಯಾಣ್ಮರಂ ಗದ್ದಿಸುವಂ (ಅದ್ಭುತ. ೨೯–೨೨).

**ಎಣ್ದೆಸೆಯಾನೆಗಳು** = ಎಂಟುದಿಕ್ಕಿನ ಆನೆಗಳು: ಎಣ್ದೆಸೆಯಾನೆಗಳಂ ಕಡುನಲವಿಂದೇಱಿ ಬರುತಮಿರ್ದರ್ ಕೆಲಬರ್ (ಕಬ್ಬಿಕಾ. ೨೫೪). [ಎಣ್$_2$ (< ಎಂಟು) + ದೆಸೆ$_2$]

**ಎಣ್ಪಣ** (ನಾ). ಎಂಟು ಪಣ: ತಟ್ಟಿಯಾರಾಳ ಅವುಕ್ಕಯಿಯೂರೆಣ್ಪಣ ಪುಲ್ಲು ಇದಕ್ಕೆ ಸಾಕ್ಷಿ (ಎಕ. IV, ಗುಂಡ್ಲುಪೇ. ೮೬–೪; 750). [ಎಣ್$_2$ (< ಎಂಟು) + ಪಣ$_1$]

**ಎಣ್ಪತ್ತು, ಎಂಬತ್ತು, ಎಂಭತ್ತು, ಎಣ್ಬತ್ತು, ಎಣ್ಭತ್ತು** (ನಾ). ಎಂಟು ಹತ್ತುಗಳ ಗುಣಲಬ್ಧ: ಎಂಟರ್ಕೆ – ಎಣ್ದೆಸೆ, ಎಣ್ಪತ್ತು (ಶಮುದ. ೧೮೯ ಪ್ರಯೋ). **ಎಂಬತ್ತು**: ಮುದವಲರ್ದೆಂಬತ್ತುಸಾವಿರ ಕುದುರೆಗಳಿಗೊಂದವೆಲ್ಲಕ್ಕೊದವಿಸಿದ ರುದ್ರಾಕ್ಷಿಗಳು (ಬಸವು. ೪೪–೫೧).
**ಎಂಭತ್ತು**: ಎಂಭತ್ತುನಾಲ್ಕು ಲಕ್ಕೆ ಭದ್ರಹಸ್ತಿಗಳಿಂ (ಆದಿಪು.೧೧–೧ವ).
**ಎಣ್ಬತ್ತು**: ಎಣ್ಬತ್ತುಸಾಸಿರ ಪುರಂಗಳ್ಗಂ (ಚಾವುಂಪು. ೭೧–೩).
**ಎಣ್ಭತ್ತು**: ಕಾಲಾತೀತಸಂವತ್ಸರ ಸತಙ್ಗಳೆಣ್ಬನೂಱ ಎಣ್ಭತ್ತು (ಎಕ. VI, ಕಡೂರು. ೧೫೯–೪; 961).
[ಎಣ್$_2$ (< ಎಂಟು) + ಪತ್ತು$_4$. / ತಮಿ. ಮಲ. ಎಣ್ಪತು; ಕೊಡ. ಐಂಬದೀ; ತುಳು. ಎಣ್ಪ; ತೆಲು. ಎನುಬದಿ, ಎನಭೈ]

**ಎಣ್ಬರಿಜು** (ನಾ). ಎಂಟು ಆಕಾರ, —ರೂಪು: ನಿಂದುಮಿಂತೆಣ್ದೆಸೆಯೊಳೆಣ್ಬರಿಜಂ ಪೊತ್ತು ಸೇವಿಸುತ್ತಮಿರೆ (ಶಬಶಂ. ೧–೭೧ವ). [ಎಣ್$_2$ (< ಎಂಟು) + ಪರಿಜು]

**ಎಣ್ಬಗಲ್** (ನಾ). ಎಂಟು ಹಗಲು, —ದಿನ: ಮುಂತಾಸುನ್ನಯಿಸಿದ ವರುಷದ ಮೇಲೆಣ್ಬಗಲೆಯ್ದಿರಲಿತ್ತ . . . ದಿನಂ ಕಳಿದುದು (ಜಯಕಾ. ೧೨–೫೮). [ಎಣ್$_2$ (< ಎಂಟು) + ಪಗಲ್]

**ಎಣ್ಬಟ್ಟೆ** (ನಾ). ಎಂಟುದಾರಿ: ಎಣ್ಬಟ್ಟೆಗಳೊಳ್ ನೃಪನಂ ಕಾಣ್ಬನ್ನಂ ತೊಟಲಿಮೆಂದು ಮನದೊಳಗಟಲಿಂ (ದಶಕು. ೪–೧೯). [ಎಣ್$_2$ (< ಎಂಟು) + ಬಟ್ಟೆ$_1$]

**ಎಣ್ಬತ್ತು** 'ಎಣ್ಪತ್ತು' ನೋ.

**ಎಣ್ಬರ್, ಎಣ್ಬೊರ್** (ನಾ). ಎಂಟುಜನ, —ಮಂದಿ: ವರುಣ ವಾಯು ಯಕ್ಷೇಶನ ಕ್ರಮದಿನವರೆಣ್ಬರಂತುತ್ತಮನ್ಯೆ (ಕವಿರಾ. ೩–೯೬); ಅಲ್ಲಿಗೆಣ್ಬರ್ ಮಾಯಾರೂಪಿಗಳಪ್ಪ ಶಾಕಿನಿಯರ್ ಬಂದು (ಪಂಚತಂ. ೧೫೫–೮); ಎಣ್ಬರ್ ಸತಿಯರ್ ಸಿತಚಾಮರಮಂ ಬೀಸೆ (ಜಯಕಾ. ೩–೨). **ಎಣ್ಬೊರ್**: ದಿವಸಕೆಣ್ಬೊರ್ಗ್ಗೀಶಾಲೆಗೊಡುವುದು (ಮೈಆಂ. ೧೯೪೪, ೬–೨; 808). [ಎಣ್$_2$ (< ಎಂಟು) + –ಬರ್?]

**ಎಣ್ಬೆರಲ್** (ನಾ). ಎಂಟು ಬೆರಳು: ಚಕ್ರಿ ನೆಲನೊಳೆಣ್ಬೆರಲಡಂಗೆ ನರ ರಥಮನೊತ್ತಿದಂ ನಿಪುಣತೆಯಿಂ (ಪಂಪಭಾ. ೧೨-೨೦೦).
[ಎಣ್$_2$ (< ಎಂಟು) + ಬೆರಲ್]

**ಎಣ್ಭತ್ತು** 'ಎಣ್ಪತ್ತು' ನೋ.

**ಎಣ್ಮಡಿ** (ನಾ). ಎಂಟರಷ್ಟು; ಎಂಟು ಮಡಿ: ಮಂಡೋದರಿಗೆ ದುಗುಡಮೆಣ್ಮಡಿಯಾಗೆ (ಅದ್ಭುತ. ೩೧-೯).
[ಎಣ್$_2$ (< ಎಂಟು) + ಮಡಿ$_3$]

**ಎಣ್ಮಯ್ಯ** 'ಎಣ್ಮೆಯ್ಯ' ನೋ.

**ಎಣ್ಮೆ** (ನಾ). = ಎಣ್ಮಡಿ: ಎಣ್ಮೆ, ಎಣ್ಬರ್ (ಶಬ್ದಾನು. ೩೯೯ ಪ್ರಯೋ).
[ಎಣ್$_2$ (< ಎಂಟು) + -ಮೆ$_1$]

**ಎಣ್ಮೆಯ್ಯ, ಎಣ್ಮಯ್ಯ** (ನಾ). ಎಂಟು ದೇಹವುಳ್ಳವನು; ಅಷ್ಟ ಮೂರ್ತಿ; ಪರಮೇಶ್ವರ: ಆವನೆಣ್ಮೆಯ್ಯನೊಂದನೆಯ ಮೆಯ್ಯೆನಿಸಿ ರ್ಪನೋ (ಶೇಷರಾ. ೧೩೫-೭). **ಎಣ್ಮಯ್ಯ**: "ಎಣ್ಮಯ್ಯಂ . . . ಐಮೊಗಂ – ಈ ೩೩ ಈಶ್ವರಂಗೆ ಪೆಸರ್" (ಕಶಸಾ. ೧-೧); ಇವಳ ಯೌವನಕ್ಕೊಂದೊಡಲ್ ಸಾಲದೆಂದು ಮುನ್ನವೆ ಕಂಡು ಮುಕ್ಕಣ್ಣನೆ ಣ್ಮಯ್ಯನಾದನೆನಲಗಸುತೆಯ ಯೌವನದ ಪೆಂಪದೆಂತೋ (ಚಿಬಪು. ೩೪-೭).
[ಎಣ್$_2$ (< ಎಂಟು) + ಮೆಯ್ + -ಅ$_7$]

**ಎಣ್ಬೊರ್** 'ಎಣ್ಬರ್' ನೋ.

**ಎತಳೆ** (ನಾ). ಒಂದು ಊರಿನ ಹೆಸರು: ಮ[ಹಿ]ಸೆಯನಾಡ ಎತಳದ ಅಯಣಯ್ಯ ಸೆಟ್ಟಿಯುಂ (ಕಇ. IV, ೫೫-೨೭; 1000). [?]

**ಎತಿ** (ನಾ). ಸಂನ್ಯಾಸಿ; ಯತಿ: ಗಾಳಿಯಾಹಾರವ ಕೊಂಬೆತಿಗಳ ತಂದಾಳುಗೆಲಸಕಿಕ್ಕಿ ಕೊಡುವೆ (ಕುರಾಸಾಂ. ೨೪-೪೪).
[< ಸಂ. ಯತಿ]

**ಎತಿತನ** (ನಾ). ಸಂನ್ಯಾಸತ್ವ: ಮೊಳೆವ ಕಾಮನ ಕೊಲ್ಲದೆತಿತನನೇಕೆ (ಕೈಕವ. ೫-೪೩-೧). [ಎತಿ + -ತನ]

**ಎತ್ತ** (ನಾ). ಪ್ರಶ್ನಾರ್ಥಕ ದಿಗ್ವಾಚಿ; ಯಾವ ಕಡೆ; ಯಾವ ದಿಕ್ಕು; ಯಾವ ಸ್ಥಳ: ಈ ಗಣಿದ ಮನೆತ್ತಣಿ ಗುಮುಶ್ರುತ ಪ್ರಕೃತಿಜನಂ (ಕವಿರಾ. ೧-೮); ನುಡಿವೊಡೆ ರಾಜಕಾರ್ಯ ನಯಮೆತ್ತ ಬಲಾಜನದೊಂದು ಬುದ್ಧಿಯೆತ್ತ (ಪಂಪಭಾ. ೭-೪೫); ಅನೆತ್ತ ದೇವಲೋಕದನೂನಸು ಖಾಸ್ಪದಮಿದೆತ್ತ ಬಗೆವೊಡಿದೆಲ್ಲಂ ಮಾನಿತದರ್ಶನದಿಂದಂ ತಾನಾದುದು (ಧರ್ಮಾಮೃ. ೧-೨೧೩); ಇವರೆತ್ತ ಬಲ್ಲರು ಲಿಂಗದ ನಿಜವ (ಅದವ. ೪); ಐದುವರ್ಷದ ಹಸುಳೆ ವನವೆತ್ತ ತಪವೆತ್ತ (ಪುರಂದ. ೨-೬೦-೧); ಎತ್ತ ಹೋದರೂ ಮೃತ್ಯು ಬಿಡದು (ಗಾದೆ).

**ಎತ್ತಣ** = ಯಾವಕಡೆಯ; ಎಲ್ಲಿಯ: ಇನ್ನೆಲ್ಲಿಯ ಧೃತರಾಷ್ಟ್ರನೆತ್ತಣ ಗಾಂಗೇಯನೆಲ್ಲಿಯ ಸಂಧಿಕಾರ್ಯಂ (ಗದಾಯು. ೨-೮೦ ವ). **ಎತ್ತಣಂ** = ಯಾವ ಕಡೆಯವನು; ಎಲ್ಲಿಯವನು: ಆಗಳ್ ತೆ[ಪ್ಪ]ತ್ತುಮೆಲ್ಲಿದನೆತ್ತಣನೆಂದು ಕರ್ಣನ ಕಳೇವರಮಂ ನೋಡಿ (ಪಂಪಭಾ. ೧೩-೫೮ ವ); ಗುಣನಿಧಿಯೆತ್ತಣಂ ಭುವನಪೂಜಿತನೆತ್ತಣನಿಂದ್ರವಂದ್ಯನೆತ್ತಣನಕಳಂಕನೆತ್ತಣನಘಾಂತಕನೆತ್ತಣನಸ್ತದೋಷನೆತ್ತಣನಭಿರೂಪನೆತ್ತಣನನಿಂದಿತನೆತ್ತಣನೀಶರೂಪನೆತ್ತಣನಖಿಳಾವನೀತಿಲಕನೆತ್ತಣ ನುತ್ತಮಸತ್ವನೆತ್ತಣಂ (ಅಜಿಪು. ೬-೧೧೭). **ಎತ್ತಣದು, ಎತ್ತಣ್ತು** = ಯಾವ ಕಡೆಯದು; ಎಲ್ಲಿಯದು: ಚದುರೆತ್ತಣ ದಾಕೆಗೆಂದು ಕಣ್ಗೊಂಡ ವಿಲಾಸದಿಂ (ಮಲ್ಲಿಪು. ೨-೫೫); ಎತ್ತಣದೆಂಬೀ ಶಬ್ದಕ್ಕೆ ಎತ್ತಣ್ತೆಂದುಂ (ಶಮದ. ೧೯೪ ವೃತ್ತಿ). **ಎತ್ತಣಿಂ, ಎತ್ತಣಿಂದಂ, ಎತ್ತಣಿಂದೆ** = ಯಾವ ಕಡೆಯಿಂದ; ಎಲ್ಲಿಂದ: ಎತ್ತಣಿಂದೈತಂದೆ ಕಪಿ ನಿನ್ನಿತ್ತಲಾವನ ಕಳುಹಿದನು (ತೊರರಾ. ೬-೩೬, ಪ. ೭೧೨).

**ಎತ್ತಲ್, ಎತ್ತಲು** = ಎಲ್ಲ ಕಡೆಯಲ್ಲಿಯೂ: ಸುತ್ತಲುಂ ಪರಿವ ಜರಿವೊನಲ್ಗಳಿಂದೆತ್ತಲುಂ ನಲಿವ ಪೊಸನವಿಲ್ಗಳಿಂ (ಪಂಪಭಾ. ೩-೨೨ ರ); ಶಂಖನಿಸ್ವನದಿಂದತ್ತಲುಮಿತ್ತಲುಂ ಸೊಗಯಿಕುಂ ತಾನೆತ್ತಲುಂ ಸುತ್ತಲುಂ (ಸುಕುಮಾ. ೯-೫೯); ಎತ್ತಲೀಕ್ಷಿಸಲತ್ತ ರಾಯನ ತೆತ್ತಿಗರ ಕೂರಂಬು ಕವಿದವು (ಕುವ್ಯಾದ್ರೋ. ೧೦-೬೦); ಅತ್ತಲುಮಿತ್ತಲುವೋವೋಯೆತ್ತಲು ಮಾತಂಗೆ ಕೂಪಮಂ ತೆಱದಂತಾಯ್ತು (ಧರ್ಮಾಮೃ. ೬-೯೦); ಬಳಸಿಗಮೆತ್ತಲುಂ ತುಱುಗಿ ಪರ್ವಿದಗುರ್ವಿನ ಬಿಂಬ (ಗಿಂಕ. ೧-೫೨); ಎತ್ತಲುಂ ಜ್ಯೋತಿಯಿಲ್ಲ (ಕವಿಸೋ. ೩೭). **ಎತ್ತೆತ್ತ, ಎತ್ತೆತ್ತಲ್** (ದ್ವಿರುಕ್ತಿ): ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ (ಬಸವ. ೫೩೪); ಎಲ್ಲೆಲ್ಲಿ ಎತ್ತೆತ್ತ ನೋಡಿದರೂ ಅವರ ಹರುಷದ ಕೂಗಾಟ (ಗಿಂಬಾ. ೧); ಮುಗ್ಗಿಸಲಿನ್ನಾರ್ಪರೀಶೋಕಮನೆನುತೆ ಭಯಂಗೊಂಡಿದೆತ್ತೆತ್ತಲೀಗಳ್ ಬೆಸಗೊಂಡೆಂ (ಕಾದಂಪೂ. ೭೦೦); ಬಳ್ಳಿಮಲ್ಲಿಗೆಯ ಕೋಲೆತ್ತತ್ತಲುಂ ಕಾವನಾ (ಕಬ್ಬಿಕಾ. ೩೦೪); ಮತ್ತೆ ಮಣಸೂತಕವು ಜನ್ಮಜನ್ಮಾಂತರಕೆ ಎತ್ತೆತ್ತಲೂ ಬೆನ್ನು ಹತ್ತಿಕೊಂಡಿಹುದು (ಕಎಪು. ೨೩). [ದೇ.]

**ಎತ್ತಂ** (ಅ). ಎಲ್ಲೆಲ್ಲೂ: ಮನಸ್ತಾಪಮುಂ ಪುದಿದೆತ್ತಂ ಬರೆ ಸುಯ್ ಪೊದಟ್ಟು ಬಿಸಿದುಂ ಕಮ್ಮಿತ್ತು ಮಾಯ್ತೋಪಳಾ (ಕಾವ್ಯಸಾ. ೫೮೮ ಶೂದ್ರಕ); ಎತ್ತಿದ ತೋಳ ಮೊತ್ತಮೊದಲಂಗಜನಂ ಪಟವಿದ್ದೆಗೆತ್ತಿದಂತೆತ್ತಮಪೂರ್ವಮಾಗೆ ಪೊಸವಾಸಿಗಮುಂಗಜಚಕ್ರವರ್ತಿಗೆಂದೆತ್ತಿದ ಮೀನಕೇತನಮನೊತ್ತರಿಸುತ್ತಿರೆ (ಪಂಪಭಾ. ೪-೮೧); ನೆಗೆದೆತ್ತಂ ಧೂಪಧೂಮಂ ಪಸರಿಸೆ (ಕಾದಂಉ. ೨೬೦); ನಡೆದರೆತ್ತಂ ಬೀರರಾ ಪಾಡಿಯೊಳ್ (ಕಬ್ಬಿಕಾ. ೨೫೩). [< ಎತ್ತ]

**ಎತ್ತಂಗಡಿ** (ನಾ). ೧. ಎತ್ತಿದ ಅಂಗಡಿ; ದಿವಾಳಿಯಾದ ಅಂಗಡಿ: ಅವನು ಇಟ್ಟಿದ್ದ ಅಂಗಡಿ ಎತ್ತಂಗಡಿ ಆಯಿತು (ರೂಢಿ). ೨. ಮುಂದೆ ಸಾಗುವಿಕೆ; ಮುಂದಿನ ಪ್ರಯಾಣ: "ತುಮಕೂರಿನಿಂದ ಎತ್ತಂಗಡಿ" "ಎಲ್ಲಿಗೆ"? "ಹಾಸನಕ್ಕೆ" (ನಟಸಾ. ೩೨೦); ಹುಬ್ಬಳ್ಳಿಯವ ಇವನ್ನ ಸಂಪೂರ್ಣ ಎತ್ತಂಗಡಿ ಮಾಡಿ ಆರಾಮಾಸನ ಮಾಡಿಕೊಳ್ಳುವ ಸಂಚು ಹೂಡಿದ್ದ (ಮಾಮನಿ. ೮೮). [ಎತ್ತು$_1$ + ಅಂಗಡಿ (< ಅಂಗಾಡಿ)]

**ಎತ್ತಕೆ, ಎತ್ತಗ** (ನಾ). ೧. ಸತ್ತಿಗೆ ಮರ: ಬೊಬ್ಬುಲಿ ಮಾವಂಬಟಿ ಕಕ್ಕೆ ಬಿಕ್ಕೆ ಬಕುಳಂ ಬೇವೆತ್ತಕಂ ಕಿಂಶುಕಂ (ರಾಜಶೇ. ೫-೫೬). **ಎತ್ತಗ**: ೧. ಅತ್ತಿಯಾಲವು ಜಾಲಹಾಲೆ ಬಾಳೆಯೆತ್ತಗ ಬನ್ನಿಮುಗ್ಗಾರೆ ಮುತ್ತುಗ ತಾರೆ ಮುಂತಾದ ಹೆಮ್ಮರಗಳು (ಸೌಗಂಪ. ೨-೩೪). ೨. ಒಂದು ಹಳ್ಳಿಯ ಹೆಸರು: ಹೆಗ್ಗಡದೇವನಕೋಟೆ ತಾಲ್ಲೂಕು ಎತ್ತಗಮಠದ ರಾಮಾರಾಧ್ಯರು (ಕವಿಜ. III, ಅವತ. XXX). [?]

**ಎತ್ತಗ** 'ಎತ್ತಕ' ನೋ.

**ಎತ್ತಡಿಗೆ** (ನಾ). ಅನ್ನ, ಸಾರು, ಪಲ್ಯ ಮುಂತಾದ ಎತ್ತಿಡುವ ಅಡಿಗೆಗಳು: ಮಂದಾಕಿನಿ ಎತ್ತಡಿಗೆಯನ್ನಷ್ಟುಮಾಡಿ ಒಲೆಯ ಈಚೆಗೆ ಬಂದಕೂಡಲೇ ಬಕ್ಕರಿಗಳನ್ನು ಸುಡುವ ಕೆಲಸ ಸಾವಿತ್ರಿಯದು (ಬೆವಂ. ೧೬). [ಎತ್ತು$_1$ + ಅಡಿಗೆ (< ಅಡುಗೆ)]

**ಎತ್ತರ** 'ಎಟ್ಟರ' ನೋ.

**ಎತ್ತರತತ್ತರ** 'ಎತ್ತಱತತ್ತಱ' ನೋ.

**ಎತ್ತರಿಸು** (ಕ್ರಿ). ೧. ಎತ್ತರವಾಗುವ ಹಾಗೆ ಮಾಡು: ಮಂಚದ ಕಾಲನ್ನು ಸ್ವಲ್ಪ ಎತ್ತರಿಸು (ರೂಢಿ). ೨. ಹೆಚ್ಚುಮಾಡು: ಶಿಕ್ಷಣವೇತ್ತರೂ ರಾಜಕಾರಣಿಗಳೂ . . . ಸಂಶೋಧಕರ ಸಂಖ್ಯೆಯನ್ನು ಎತ್ತರಿಸಲು ಯತ್ನಿಸಿದುವು (ಶಿಕ್ಷದ. ೭೬೬). ೩. (ಧ್ವನಿಯನ್ನು) ಉಚ್ಚವಾಗುವ ಹಾಗೆ ಮಾಡು: ಎತ್ತರಿಸಿ ಕೂಗಿ ಕರೆ (ರೂಢಿ). ೪. ಉನ್ನತಿಯನ್ನುಂಟುಮಾಡು. [ಎತ್ತರ (< ಎಟ್ಟರ) + -ಇಸು$_1$]

**ಎತ್ತಱತತ್ತಱ**, ಎತ್ತರತತ್ತರ (ನಾ). ಅಸಂಬದ್ಧತೆ; ಅಸ್ತವ್ಯಸ್ತತೆ: ಹಱಿಗವಿಗಳ ಕಬ್ಬಂಗಳ ಹೊಱಗಳಿಯುಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ಬಱಿತಾಱಿಗ ಬೀಱಿಗವೆತ್ತಱತತ್ತಱವೆಕ್ಕಸಕ್ಕಮಸ್ತವ್ಯಸ್ತಂ (ಗಿರಿಶ. ೧–೨೩); ನೆಱೆ ಸನ್ನಿಪಾತವಡಸಿದ ತೆಱದಿಂ ಕೇಳದೆ ಸಮಂತು ನೋಡದೆ ಪಿಱಿದೆತ್ತಱತತ್ತಱದಿಂ ನುಡಿಯುತ ಬೆಱೆತಿರ್ಪರ್ ಸಿರಿಯ ಮದದಿನರಸುಗಳಿಳೆಯೊಳ್ (ತ್ರಿಪುವಿ. ೧೯–೩೪); ಮರುಳು ಸಿಂಗರಿಸಿ ಬಪ್ಪುದ ಕಂಡೆನೆಂದ ಸೌಂದರನಾಮಗಳ ಬಿಟ್ಟು ನರರು ಪುರುಳುಗೆಟ್ಟೆತ್ತಱತತ್ತಱನಾಮವ ಧರಿಸುವರೆಂದನಾ ಸ್ವಾಮಿ (ಭರಚ. ೬೧–೩೮). **ಎತ್ತರತತ್ತರ:** ಎತ್ತರತೆ[ತ]ತ್ತರವಾಗಿದ್ದ ಅವನ ಮುದ್ರಣಾಲಯವನ್ನು ಒಂದು ಕ್ರಮಕ್ಕೆ ತಂದಿರಿಸಿದೆನು (ಬೆಂಜನ್. ೮೬). [ಎತ್ತಱ + ತತ್ತಱ]

**ಎತ್ತಿಗ** (ನಾ). ಉದ್ಧಾರ ಮಾಡುವವನು; ಮೇಲಕ್ಕೆ ಎತ್ತುವವನು: ಶಿವಶರಣರು ಬಿದ್ದವರ ಎತ್ತಿಗರು, ಅನಾಥರ ತಂದೆತಾಯಿಗಳು, ಪತಿತರ ಬಂಧುಗಳು (ಶರಚ. ೩೩೫). [ಎತ್ತು₁ + –ಇಗ]

**ಎತ್ತಿಲು** (ನಾ). (?): ಜೋಲಕಾರುಣ್ಯ ಜಿಡದೆರ್ಲ ಪ ೩ ಬಿಟ್ಟಿಯಭಂ ೧ಕ್ಕಂಗ ೨ ಎತ್ತಿಲು ಪೊತ್ತರ ಪ ೫ (ಎಕ. XI (S), ಚಳ್ಳಕೆ. ೬೧–೨೧; 1330); ಎತ್ತಿಲು ಪೊತ್ತರ ಪ ೫ (ಎಕ. XVI, ಚಿಕ್ಕನಾ. ೬೧–೨೧; ?). [ಎತ್ತು ? + ? ]

**ಎತ್ತಿಸು** (ಕ್ರಿ). **೧.** ಮೇಲಕ್ಕೆ ಎತ್ತುವಂತೆ ಮಾಡು; ಎತ್ತಿಹಿಡಿ: ಧ್ವಜಪತಾಕೆಗಳುಮನೆತ್ತಿಸಿ (ವಡ್ಡಾರಾ. ೮೩–೨೬); ಓಳಿವಟ್ಟ ಬೆಳ್ಗೊಡೆಗಳ ಪಿಂಡನೆತ್ತಿಸಿದ ಬೆಳ್ಗೊಡೆಗಳ್ (ಪಂಪಭಾ. ೩–೬೮); ಪಲವೆಡೆಗಳೊಳಂ ಮಹಾಧ್ವಜಮನೆತ್ತಿಸಿ (ಎಕ. II, ೫೯–೧೦೩; 974); ಜಿನಭವನಂಗಳೊಳ್ . . . ನಾನಾಧ್ವಜಂಗಳನೆತ್ತಿಸುತ್ತುಂ (ಧರ್ಮಾಮೃ. ೧೦–೨೮); ರಥದಲಿ ಸರಿಸ ತಾಳಧ್ವಜವನೆತ್ತಿಸಿ ಸಮರಥರ ನೆರಹಿ (ಕುವ್ಯಾಭೀ. ೬–೧೧); ಮುತ್ತಿನ ಗದ್ದುಗೆ ಗರುಡನ ಹೆಗಲೊಳೆತ್ತಿಸಿ ಬಿಗಿದು (ಮೋಹತ. ೩೬–೩೭). **೨.** ಕಟ್ಟಿಸು; ಜೀರ್ಣೋದ್ಧಾರಮಾಡು: "ಎತ್ತಿಸು – ಉದ್ಧರಣೇ" (ಶಮುಧಾ); ದಣ್ಡನಾಯಕನೀ ವಿಷ್ಣುಗ್ರಿಹಾಮನ್ನೆತ್ತಿಸಿ (ಸೌಇಇ. IX-i, ೩೩–೬; 10ನೆಯ ಶತ); ಅಳಿಯ ನೇಣಿಗೆಯ ಮಲ್ಲ ಕೆಱೆಯಂ ಕಟ್ಟಿಸಿ ದೇಗುಲಮನೆತ್ತಿಸಿ (ಎಕ. VII, ಚನ್ನಗಿ. ೮–೧೬; 1050); ಧರೆ ಪೊಗಳ್ವಂತು . . . ದೇವನಿವಹಂಗಳನೆತ್ತಿಸಿ (ಎಇ. XIV, ೨೮೨–೩೬; 1173); ದೇವಾಲಯಮನೆತ್ತಿಸಿ ಪುರಮಂ ಮಾಡಿಸಿ (ಎಕ. VII, ಶಿವಮೊ. ೮೮–೩೬; 1203). **೩.** ದಂಡೆತ್ತಿ ಬರುವಂತೆ ಮಾಡು: ಚೆಚ್ಚರದಿಂದೆತ್ತಿಸಿ ತಂದಿರ್ದರ ಬಲ್ಪಂ ಬೞಿಕೆ ನೋಡು ನೀಂ ಕಾಳೆಗದೊಳ್ (ಕಬ್ಬಕಾ. ೧೮೪). **೪.** ಮೇಲಕ್ಕೇರಿಸು; ಸ್ವರ್ಗಕ್ಕೇರಿಸು: ಎತ್ತಿಸಿದನಸುಗಳನು ರಥಿಕರ ಹತ್ತಿಸಿದ ನಂಬರವ ಭೀತರ ಹುತ್ತನೇಱಿಸಿ ಹೊಳಕಿದನು (ತೊರರಾ. ೩–೬–೪೩). **೫.** ಸಂಗ್ರಹಿಸುವಂತೆ ಮಾಡು; ಶೇಖರಿಸುವಂತೆ ಮಾಡು: ಪ್ರತಿ ಮನೆಯಲ್ಲೂ ಚಂದಾ ಎತ್ತಿಸಬೇಕು (ರೂಢಿ).

ಎತ್ತಿಸಿಕೊಡು = **೧.** ಕಟ್ಟಿಸಿಕೊಡು: ಚಿತ್ತಜನಂತವರೊಡನಿರ್ದ ಗಾಂಧರ್ವದತ್ತೆಗೆ ಹೊನ್ನಮಾಡವನು ಎತ್ತಿಸಿಕೊಟ್ಟು ಕುಬೇರನಂದದಿ ಚಾರುದತ್ತನು ಸಂತಸಮಿರ್ದ (ನೇಮಿಸಂ. ೧೦–೩೩೮). **೨.** ವಸೂಲ್ಮಾಡು; ಶೇಖರಿಸು: ಸುತ್ತಣ ಪ್ರಭುಗಳ ಬಲವ ಮುಱಿದು ತನಗೆತ್ತಿಸಿ ಕೊಟ್ಟು ಕಪ್ಪಗಳ (ಕಂನವಿ. ೩–೫೨). [ಎತ್ತು₁ + –ಇಸು₃]

**ಎತ್ತು₁** (ಕ್ರಿ). **೧.** ಉದ್ಧರಿಸು; ಏರಿಸು; ಎತ್ತಿಹಿಡಿ: ಸಂಸಾರವೆಂಬ ಸಮುದ್ರದೊಳ್ ಮುೞುಗುತ್ತಿರ್ದ ನಿನ್ನಂ ಮುೞುಗಲೀಯದೆತ್ತಿಂ (ವಡ್ಡಾರಾ. ೧೩೩–೨೫); ಎಳೆ ರಸೆಯೊಳಟ್ಟುದಂ ಭುಜಬಳದಿಂ ಮುನ್ನೆತ್ತಿದಂತೆ (ಪಂಪಭಾ. ೯–೧೫); ಎತ್ತುವೆನೊ ಮಂದರಾದ್ರಿಯನೊತ್ತುವೆನೊ ರಸಾತಳಕ್ಕೆ ನೆಲನಂ (ಗದಾಯು. ೬–೧೮); ಮೇದಿನಿಯನೆತ್ತಿದಾದಿವರಾಹನಂತೆ (ಪಂಚತಂ. ೪೫–೨೧). **೨.** ಏರಿಸು; ಹಾರಿಸು: ಇನ್ತೀ ಧರ್ಮಮ ನಡೆಯಿಸಿದ ಮಹಾಪುರುಷರ್ಗೆ . . . ಮಹಾಧ್ವಜಮೆತ್ತಿದ ಫಳಮಕ್ಕು (ಸೌಇಇ. XI-i, ೯೪–೧೩; 1059); ಎತ್ತಿತು ಗುಡಿತೋರಣ ವೈಕುಂಠಕೆ ಹತ್ತಿತು ಹರಿಯ ಸೂಟಿಯಲಿ (ಮೋಹತ. ೪೧–೪೦); ಎತ್ತಿದ ಸತ್ತಿಗೆ ಬಿರುದಿನ ಡಾಳಿನ ಮೊತ್ತ ಡಾಳಿಪ ಚಾಮರದ (ಕಂನವಿ. ೧೧–೨೬). **೩.** ಎಬ್ಬಿಸು; ಮೇಲಕ್ಕೆತ್ತು; ತಬ್ಬಿಕೊ: ಮಗನ ಕರುಣಾಸ್ಯಮಂ ಚಂದ್ರಚೂಡಂ ಕಂಡು ನಗುತೆತ್ತಿ ತಕ್ಕೈಸುತಂ (ಬಸರ. ೧–೫೪); ಎತ್ತಬಹುದೇ ಬಲ್ಭಾರಮಂ (ಸೋಮೇಶ. ೭೬); ಭರದಲೆತ್ತಿದ ತೋಳು ಕಡಿವಡೆದುರುಳಿತವನಿಗೆ (ಕುವ್ಯಾದ್ರೋ. ೧೪–೧೪). **೪.** (ನೀರು) ಹಾಯಿಸು; ಬಿಡು: ತೋಂಟಕ್ಕೆ ನೀರನೆತ್ತದೆ ಬೀದಿಗೆ ನೀರನೆತ್ತುವಂತೆ (ಧರ್ಮಾಮೃ. ೧೩–೧೪೦). **೫.** ಹೊತ್ತುತರು; ಅಪಹರಿಸು: ಪೋಗಿ ಸುಪರ್ವ ಪರ್ವತದ ಕಾಂಚನ ರೇಣುಗಳಂ ಪರಾಕ್ರಮೋದ್ಯೋಗದಿನೆತ್ತಿ ತಂದು (ಪಂಪಭಾ. ೭–೪೭); ಕೊಂಗ್ಗನಾಡ ನಾಯಕರೆಲ್ಲ ಹನಸೋಗೆಯ ತುಱುವನೆತ್ತಲು (ಎಕ. XIV, ಎಡತೊ. ೮೨–೩; 1163). **೬.** ಹರಡು; ಬೀರು; ಎರಚು: ಪಸುರ್ಗವಿಲನಾದ ನೀಪದ ಕುಸುಮಮುಮಂ ದೆಸೆಗೆ ಕಂಪನೆತ್ತುವ ಲೋಧ್ರಪ್ರಸವಮುಮಂ (ಪಂರಾಮಾ. ೭–೧೪೧). **೭.** ಮೇಲೇರಿಬರು; ದಂಡೆತ್ತಿಹೋಗು; ಮುತ್ತು: ಶ್ರೀಮತ್ತ್ರಿಭುವನ ಮಲ್ಲದೇವರು ಭೋಜನ ಮೇಲೆ ಪಶ್ಚಿಮದಿಶಾವರಕ್ಕೆತ್ತಿದಲ್ಲಿ (ಸೌಇಇ. XX, ೬೪–೩; 1100); ಎತ್ತಣ ಪರಮಂಡಳಮುಮಂ ಮುತ್ತಿಂಗೊಳಗಾಗಿ ದಾರದಂತಿರ್ಪುವು ಕಾಯ್ದೆತ್ತಲೊಡನೆ[ನ]ಮಮಿದೇನುದ್ವೃತ್ತನೋ ರಣರಂಗಭೈರವಂ ಗೋವಿಂದಂ (ಎಕ. VII, ಶಿಕಾರಿ. ೧೩೭–೩೬; 1114); ತಮ್ಮೊಳೋರೊರ್ವರ ಮೇಲಣಿಯರಮೆತ್ತುವ ಮುತ್ತುವ ಪೊಣರ್ವ ಕೞುತ್ತಿಱಿವನೇಕ ನೃಪರಂ ಕಂಡಂ (ಜಗವಿ. ೫–೧೧೨); ಅರಿಬಲವೆತ್ತಿದಲ್ಲಿ ಪಿರಿದುಂ ಕಿರಿದಗುರ್ಬ್ಬಿ (ಸೌಇಇ. IX-i, ೨೮೭–೧೯; 1200); ತಿಳಿದೆತ್ತಿ ಕಾದುವುದು ಲೇಸಲ್ಲಗ್ಗದೇಮಂತಣಂ (ಕಬ್ಬಕಾ. ೧೫೯). **೮.** ಸಂಗ್ರಹಿಸು; ಕೂಡಿಸು: ಕರ್ಣಾಟಕ ಸಂಘದವರು ಹಬ್ಬದಲ್ಲಿ ಎತ್ತಿದ ಕಾಣಿಕೆಯೆಲ್ಲವನ್ನೂ (ಕನ್ನನು. I, ೧೬). **೯.** ಬಡಿಸು; ಊಟಕ್ಕೆ ನೀಡು: ಪರೆದ ತಱಗೆಲೆಯೆ ಪರಿಯಣಮಾಗೆ ಪಣ್ಪಲಮೆತ್ತಿದ ಬೋನಮಾಗೆ (ಪಂಪಭಾ. ೭–೨೮); ಗೃಹಲಕ್ಷ್ಮಿ ಬೋನಮೆತ್ತಿದುದೆಂಬಂತಿರೆ ಚೋದ್ಯಮಪ್ಪಿನಂ ಬಿತ್ತರದೆತ್ತಿದ ಬೋನದಿರವು ಚೆಲುವಾಯ್ತಾಗಳ್ (ಸುಕುಮಾ. ೧೧–೨೩); ಜಿನಾಂಬಿಕೆಯನೀ ತೆಱದಿಂ . . . ಮಾಲೆವೂವನೋಲಗಿಸುವ ಬೋನಮೆತ್ತುವಗಲೆತ್ತುವ ದೇವವಿಳಾಸಿನೀಜನಂ (ಮಲ್ಲಿಪು. ೧೧–೮೪). **೧೦.** ಎಚ್ಚರಿಸು; ಎಬ್ಬಿಸು: ದುಗ್ಧಾಬ್ಧಿಧವಳ ಶಯ್ಯಾತಳದೊಳ್ ಮಱೆದೊಱಗಿದ ಮಧುಮಥನನೆತ್ತಲಣ್ಮದೆ (ಪಂಪಭಾ. ೯–೧೦ ವ); ಈಷ್ಯಾಳಾಪಂಗಳನರಸನಾಲಿಸಿ ಮಕರಂದನಂ ಮೆಲ್ಲನೆತ್ತಿ ಕಿವಿಯಿತ್ತು ಕೇಳುತ್ತುಮಿರ್ಪುದುಂ (ಲೀಲಾವ. ೬–೧೨೧). **೧೧.** ಕಟ್ಟು; ರಚಿಸು. 'ಎತ್ತಿಸು' ಪರಾ. **೧೨.** ಬೆಳಗು: ಆರತಿಯನೆತ್ತಿದರು ತಂದು ಪ್ಪಾರತಿಯ ಸೂಸಿದರು (ಕುವ್ಯಾಭೀ. ೧–೩೨); ನಿತ್ಯಮುತ್ತೈದೆಯರೆಲ್ಲ ಎತ್ತೆ ರತುನದಾರತಿಯ (ಪುರಂದ. ೧–೧೨೪–೧); ಮಾರಕುಮಾರ ಮಂತ್ರೀಶಸುತೆಗೆ ರನ್ನದಾರತಿಗಳನೆತ್ತಿದಳು (ಮೋಹತ. ೩೧–೩೫); ಮುತ್ತಿನಾರತಿ ರತ್ನದಾರತಿಗಳ ತಂದು ಮುತ್ತೈದೆಯರೆತ್ತಿ ನಲಿದು (ಕಂನವಿ. ೪–೬೧). **೧೩.** ಸಮರ್ಪಿಸು; ಕೊಡು: ತನಗರ್ಘ್ಯಮೆತ್ತಿದ ತಳಿಗೆಯೊಳಿಡೆ (ಪಂಪಭಾ. ೬–೬೪); ನಿತ್ಯೋದಯನುಮಪ್ಪ ಗಭಸ್ತಿಮಾಲಿಗರ್ಘ್ಯಮನೆತ್ತಿದ ಹಸ್ತಕಮಲದೊಳ್ (ಪಂಚತಂ. ೨೫೬–೬); ಆವಳ ಪೋಲ್ವೆಯ ಪುತ್ರಿ ಕೀರ್ತಿಲಕ್ಷ್ಮೀ ವಧುವಾದಳಾ ವಧುಗೆ ಕಾವ್ಯದ ನಾಂದಿಯೊಳರ್ಘ್ಯವೆತ್ತುವೆಂ (ಸೂಕ್ತಿಸು. ೧–೬).

೧೪. ಸುಲಿ; ಸಿಗಿ: ಎತ್ತುವ ಮಿಟ್ಟು (ವರ್ಧಪು. ೧೦-೬); ಕಾಷ್ಠಮಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್ . . . ಉರ್ವರೆಯೊಳ್ ಸಂದ ಕವಿಪ್ರವೇಕರೆ ವಲಂ ಬಲ್ಲರ್ ಪೆಱರ್ ಬಲ್ಲರೇ (ಲೀಲಾವ. ೧-೧೩); ತನ್ನಯ ರೂಪಿಂಗೆ ಸೆಣಸುವ ಸತಿಯರ ಬೆನ್ನ ಪಟ್ಟೆಯನೆತ್ತುವಂತೆ (ಮೋಹತ. ೧೬-೩೨). ೧೫. ಆರಿಸು; ಆಯ್ದುಕೊಳ್ಳು: ಎತ್ತಿದ ಮುಹೂರ್ತ (ರೂಢಿ); ಚೀಟಿ ಎತ್ತು (ರೂಢಿ). ೧೬. ಉದ್ಧರಿಸು; ರಕ್ಷಿಸು; ಬದುಕಿಸು: ಈ ಕುಮಾರನನೆತ್ತಿದಂಗೆ ಬೇಡಿತ್ತಂ ಕುಡುವೆಂ (ಪಂಚತಂ. ೧೧೩-೧೫); ಕೆಡಿಸುವುದು, ಕೆಟ್ಟವರ್ಗೆ ನೆರವಾಗಿ ಮತ್ತವರನಂತೆ ಮೇಲೆತ್ತುವುದು ಎಲ್ಲಾ ಮಟಿ (ಕುಜಳ್. ೧-೨-೫). ೧೭. ಇನ್ನೊಂದು ಗ್ರಂಥದಿಂದ ತೆಗೆ; ಉದ್ಧರಿಸು. ೧೮. ಮೊದಲಿಡು; ಆರಂಭಿಸು: ಅರೋಚಕಂ ತಗುಳ್ವಡೆ ಬೞಿಬೇನೆ ಎತ್ತುವಡೆ (ಕಲ್ಯಾಕ. ೬-೧); ಮುಗಮುಗಿಸುತ್ತುಮಿರ್ಪ ನಱುಸುಯ್ ಪೊಸವೂಗಳ ಕಂಪನೆತ್ತೆ (ಕಬ್ಬಿಕಾ. ೪೦). ೧೯. ಹೊಂದು; ತಾಳು; ಧರಿಸು: ಕೋಪದತ್ತೆತ್ತಿದ ಭೀಷಣಭ್ರುಕುಟಿ (ಶಾಂತಿಪು. ೩-೬೮); ಕೋಪವೆತ್ತಿದಾದಯ್ಯ (ಸೋಮಚ. ೫-೩೭). ೨೦. [ಗಣಿತ] ಭಾಗಿಸು: ಕ್ರಮದಿಂದೆತ್ತಱುವತ್ತಱಿಂದೆ ಕಲೆಯಂ ಮೂವತ್ತಱಿಂದೆತ್ತು (ಜಾತತಿ. ೮-೧); ಭಾಗಂ ಎಂಬುದಕ್ಕೆ ಪೆಸರು – ತವಿಸು, ಭಾಗಿಸು, ಉಗಿ, ಎತ್ತು, ಕೊಡು (ವ್ಯವಹಾ. ೧೨-೧೨).

**ಎತ್ತಾಡು, ಎತ್ತಿಆಡು** = ದೋಷಾರೋಪಮಾಡು; ಹಂಗಿಸು: ಧನಲೋಭಿಗಳು ಇದನ್ನು ಎತ್ತಾಡಿದ ವರ್ತಮಾನವನ್ನು ಊರ ಜನರು ಹೇಳಿದರು (ಶಾಸಪ. ೫); ಯಿಾ ಸ್ವಾಮಿಯ ಹೊಲಮನೆಯ ಮಾತ ಯೆತ್ತಿ ಆಡಿದವರು ಜಾತಿವಂತನಲ್ಲ (ಎಕ. XII, ತಿಪಟೂ. ೭೬-೩; 1775); ದೋಷವನ್ನೇ ಎತ್ತಿ ಆಡಬಾರದು (ರೂಢಿ). **ಎತ್ತಿಕಟ್ಟು** = ೧. ವಿರುದ್ಧವಾಗಿ ನಿಲ್ಲಿಸು; ಪ್ರಚೋದನೆಮಾಡು: ಕೆಲವರನ್ನು ನನ್ನ ವಿರುದ್ಧ ಎತ್ತಿಕಟ್ಟಿ ನಿಲ್ಲಿಸಲೂಬಹುದು (ಮನೆಬಿ. ೧೦೬); ಆನಂದನನ್ನು ಎತ್ತಿಕಟ್ಟಿ ನಮ್ಮ ವಿರುದ್ಧ ಸಂಚುಮಾಡ್ರೀ (ಮರಳಿ. ೧೨೮). ೨. ಏರಿಸಿಕಟ್ಟು: ಬಗೆಗೊಳ್ವದ ಮೋಹಮೆತ್ತಿಕಟ್ಟಿದ ಜಡೆ ತೊಟ್ಟ ರತ್ನಕವಚಂ . . . ಸೌಮ್ಯ ಭಯಂಕರನಾದನರ್ಜುನಂ (ಪಂಪಭಾ. ೭-೭೯); ವಿದಳತ್ಕೈರವರಾಜಿ ರಾಜಬಲದಿಂ ಸಂತೋಷಮಂ ಮುಟ್ಟೆ ಸಮ್ಮದಮಂ ತಾವರೆಯೆತ್ತಿ ಕಟ್ಟೆ ತಮಮಂ ಶೀತಾಂಶುವೆಳ್ಚಟ್ಟೆ (ಗಿರಿಕ. ೪-೯೮). ೩. ಹೋಗಾಡಿಸು; ಒಳಸರಿ; ಕುಗ್ಗು: ಮದಮಂ ದಿಗ್ಗಜಮೆತ್ತಿಕಟ್ಟೆ ದಿಗಧೀಶರ್ ದೇವ ದೇವಂಗದಾವುದೊ ಭೂಲೋಕದ ಸಾಧ್ಯಸಾಧನೆಗಳಿಂ (ಶಾಂತಿಪು. ೧೦-೧೨೪); ಅವಿಹಿತವೇಗಮೇೞ್ಗೆಯ ಜವಂ ವ್ರಣಮಕ್ಷತಕಾಯಮೆತ್ತಿ ಕಟ್ಟುವ ಮದಮುಣ್ಮಸೋರ್ವ ಸೊನೆ ಬೀೞ್ವ ಗಜ ಧ್ವಜಮುಂಬರಕ್ಕೆ ನಿಳ್ಕುವ ಜಯಕೇತು ಸಂದೆಯದ ದಂದುಗಮಂ ಕಿಡಿಸಿತ್ತು ಮುಂದ ಣೋಡುವ ರಿಪುದಂತಿಗಂ ಪೆಱಗಣಟ್ಟುವ ಜಟ್ಟರ ಮೇರುದಂತಿಗಂ (ಕಾವ್ಯಾವ. ೬೨೦); ನಚ್ಚಿನಾನೆಯ ಮದವೆತ್ತಿಕಟ್ಟೆ ವಿಕಳತ್ವ ಮನೊಕ್ಕುವಿವೆಂದ ಕಾರಣಂ (ಚಂದ್ರಪು. ೧೦-೫೬); ನಿಶಾಚರೇಶ್ವರನ ವಾಮವಿಲೋಚನ ವಾಮಬಾಹುಗಳ್ ಕೆತ್ತಿದುವೆತ್ತಿಕಟ್ಟೆ ಮದದಂತಿಯ ಸೋರ್ವ ಮದಂ ಕರೇಣುಗಾದತ್ತು (ಜಗವಿ. ೧೨-೩); ಉಗುವೆಂಟುಂ ಮದವೆತ್ತಿಕಟ್ಟೆ ವಿರಸಂ ಸೀತ್ಕಾರ ಭೀರುಸ್ವನಂ ಮಿಗೆ ಬಾಯೊಳ್ ಬಿಡೆ ಕೈಯನಿಟ್ಟು ಸುಗಿವನ್ನಂ ಗರ್ಜಿಸುತ್ತೆಯ್ದೆ (ಜಗವಿ. ೧೬-೧೨). **ಎತ್ತಿಎಣಿಸು** = ದೋಷಾರೋಪಣೆ ಮಾಡು; ತಪ್ಪುಗಳನ್ನು ತೋರಿಸು: ಇನ್ನೊಬ್ಬರನ್ನು ಎತ್ತಿ ಎಣಿಸಬಾರದು (ರೂಢಿ). **ಎತ್ತಿಕಳೆ** = ತೊಲಗಿಸು; ಹೋಗುವಂತೆ ಮಾಡು; ಕಳೆ: ತಪೋವನ ವನೆಮುಗತ್ತು ಕರುಣಿಸು ಮೇಣ್ ವಿಕಾರಿಯನೆತ್ತಿಕಳೆ (ಕುವ್ಯಾಅ. ೫-೨೩).

**ಎತ್ತಿಕೊಳ್** = ತೆಗೆದುಕೊ; ಅಂಗೀಕರಿಸು: ಮರಿಯಾದೆಯಾ ಉಳ್ಳದಲ್ಲ ಎತ್ತಿಕೊಳ್ವೋನ್ನಪ್ಞಮಹಾಪಾತಕನಕ್ಕುಂ (ಎಕ. VI, ಕೊಪ್ಪ ೩೯-೧೭; 700); ಬಾಳೆಯ ಗರ್ಭದೊಳಿರ್ದ ಬಾಳೆಯಂ ಬಾಳನುಮಂ ಕಂಡೆತ್ತಿಕೊಂಡು (ಪಂಪಭಾ. ೧-೬೮ ವ); ಅತಿವಿಳಾಸದಿಂದೆತ್ತಿಕೊಂಡು ನಗುತ್ತೈತಂದಳ್ (ದಶಕು. ೨-೩೦); ಸತ್ಯವಂತರ ನೀನು ಸತ್ತರೆಂದೆನ ಬೇಡ ಹೆತ್ತಮ್ಮ ಮಗನ ಕರೆವಂತೆ ನಿನ್ನನವರೆತ್ತಿಕೊಂಬುವರು (ಸರ್ವಜ್ಞ. ೭೨೫). **ಎತ್ತಿತರ್** = ವಸೂಲ್ಮಾಡು: ಎಣ್ಣೆಯನೆತ್ತಿ ತಂದು ನಂದಾದೀವಿಗೆಯ (ಸೌಇಇ. XX, ೪೫-೪೨; 1071). **ಎತ್ತಿತೋರಿಸು** = ಎದ್ದು ಕಾಣುವಂತೆ ಮಾಡು; ಸ್ಪಷ್ಟಪಡಿಸು: ಎತ್ತಿತೋರಿಸಬೇಕಾದ ಪದ ಪ್ರತ್ಯಯ ಮೊದಲಾದುವುಗಳನ್ನು . . . ದೊಡ್ಡದಾದ ಅಕ್ಷರಗಳಲ್ಲಿ ಅಚ್ಚುಮಾಡಿದೆ (ಮಧ್ಯಮ. ೪ ಮುನ್ನುಡಿ). **ಎತ್ತಿದಕ್ಕೆ** = ೧. ಚತುರ; ಪ್ರವೀಣ; ಶ್ರೇಷ್ಠ: ಸೊಂಬಯ್ಯ . . . ಷಿಕಾರಿಮಾಡುವುದರಲ್ಲಿ ಎತ್ತಿದಕ್ಕೆ (ಮಗಮಾಂ. ೨೫). ೨. ಶ್ರೇಷ್ಠತೆ: ಸಾಗುವಳಿಯಲ್ಲಿ ಅವರದು ಎತ್ತಿದಕ್ಕೆ (ಭ್ರಮಾನ. ೧೫೬). **ಎತ್ತಿನಡೆ** = ಅಭಿಮುಖವಾಗಿ ಹೋಗು; ದಂಡೆತ್ತಿಹೋಗು; ಮುತ್ತು: ಕೇಸಿಮಯ್ಯನಾಳಿಕೆಯಲ್ಲಿ ತತುಸಮಯದಲ್ಲಿ ಬಂದಳಿಕೆಗೆತ್ತಿನಡೆದಲ್ಲಿ ಅಗರಕ್ಕನಾಗಂಣನಾಳುತನವಂ ಮಾಡಿ (ಎಕ. VII, ಶಿಕಾರಿ. ೧೬೧-೫; 1160); ಪೆನುಗೊಂಡೆಯಲು ರಾಜ್ಯಂಮಾಡುತಿದ್ದು ಮೇಲುಮಾವಿನ ಮಂನೆಯರ ಮೇಲೆ ಎತಿ[ತ್ತಿ]ನಡೆದಲ್ಲಿ (ಸೌಇಇ. IX-i, ೩೫೪-೩; 1320). **ಎತ್ತಿಪೋಗು** = ಎತ್ತಿನಡೆ: ಅಶೋಕ ಮಹಾರಾಜಂ ಪರಚಕ್ರದ ಮೇಗೆತ್ತಿಪೋಗಿ (ವಡ್ಡಾರಾ. ೭೫-೧೩); ತ್ರಿದಶಾವಾಸಮಿದಿಂತುಟಲ್ತೆ ರಮಣೀಯಂ ಬೀಡು ಮಂತೆತ್ತಿಪೋದುದು (ಕಾದಂಉ. ೪೪೫); ನಿನ್ನ ಪಡೆಯಪ್ಪೊಡೇಕಿಲ್ಲಿಂದೆತ್ತಿಪೋದಪುದು ಎಂಬುದುಂ (ಪಂಚತಂ. ೧೨೬-೧೪). **ಎತ್ತಿಬಡಿ** = ೧. ಅಪಹರಿಸು. ೨. ಕುಕ್ಕು: ಪಾತ್ರೆಯನ್ನು ಎತ್ತಿಬಡಿಯಬೇಡ (ರೂಢಿ). **ಎತ್ತಿಬರ್** = ಮೇಲೇರಿಬರು; ಮೇಲೆಬೀಳು: ಈ ಸಮುದ್ರಂ ಮೇಲೆ ಘೋರೆಂದೆತ್ತಿಬಂದೀ ತತ್ತಿಗಳಂ ಕೊಂಡು ಪೋದೊಡೆ (ಪಂಚತಂ. ೧೫೦-೧೬); ದಣ್ನಾಯಕ ಬೊಪ್ಪಣನೆತ್ತಿಬರಲು ಹಲಸೂರ ಕಾಳಗದಲು (ಎಕ. VII, ಶಿವಮೊ. ೧೨-೬; 1120); ನತವಿಶ್ವಮಹೀಶಮಂಡಳಂ ವಿಜಯದಲೆತ್ತಿಬಂದ ನವನಂ ರಣದೊಳ್ ಗೆಲಲಾಱವು (ವರ್ಧಪು. ೨-೩೧); ಮೇಗಾದ್ರ್ಯದೆತ್ತಿ ಬಪ್ಪಾರ್ ರಿಪುಬಲಮನೆ ಸಂಹಾರಿಸಲ್ ರುದ್ರನೀತಂ (ಎಕ. XII, ಪಾವುಗ. ೫೦-೧೩; 1248). **ಎತ್ತಿಬರೆ** = ಪ್ರತಿಯಲ್ಲಿ ಇದ್ದಂತೆ ಬರೆ; ನಕಲುಮಾಡು; ಉದ್ಧರಿಸು: ಇಲ್ಲಿ ನಾನೆತ್ತಿಬರೆದೆಲ್ಲಾ ಋಷಿ ಗ್ರಂಥದಲ್ಲಿಲ್ಲದರ್ಥಾತಿರೇಕವೊರೆಯೆ ಸೊಲ್ಲಿಸುವೆನುಳ್ಳುದುಮಂ (ಸಾನಂಚ. ೨-೫). **ಎತ್ತಿಮಾಱು** = ಹರಾಜುಹಾಕು; ಲಿಲಾವುಮಾಡು; ಏಲಂಹಾಕು: ಕತ್ತಿ ಖಂಡುಗಭಾರಹೊತ್ತು ತಿರುಗಿದಡೇನು ಹೊತ್ತು ಬಂದಾಗ ಹಿರಿಯದ ಕತ್ತಿಯನು ಎತ್ತಿಮಾಱಿಂದ (ಸರ್ವಜ್ಞ. ೭೫೬). **ಎತ್ತಿಹಾಕು** = ೧. ಅಪಹರಿಸು; ಲಪಟಾಯಿಸು; ಹೊಡೆ: ಅದಷ್ಟು ಹಣವನ್ನು ಎತ್ತಿಹಾಕಬೇಕೆಂಬ ಯೋಚನೆಯುವರಾಗಬಾರದು (ನೀಗಟ್ಟು. ೪೨); ಐದು ಸಾವಿರ ರೂಪಾಯಿ ಇಟ್ಟಿದ್ದ. ಅದನ್ನು ಅಷ್ಟೂ ಎತ್ತಿಹಾಕಬೇಕು ಅಂತ ಮಾಡಿದ. ಸಾಧಿಸಲಿಲ್ಲ (ತಿಡುಗು. ೭೩). ೨. ಮಿಾರು; ಉಪೇಕ್ಷೆಮಾಡು: ಅವನು ನನ್ನ ಮಾತನ್ನು ಎತ್ತಿಹಾಕುವುದಿಲ್ಲ (ರೂಢಿ). **ಎತ್ತಿಹಿಡಿ** = ೧. ಸರಿಯೆಂದು ಪ್ರತಿಪಾದಿಸು; ಸಮರ್ಥಿಸು; ಬೆಂಬಲಿಸು: ಜಿಲ್ಲಾಕೋರ್ಟಿನ ತೀರ್ಪನ್ನು ಉಚ್ಚನ್ಯಾಯಾಸ್ಥಾನ ಎತ್ತಿಹಿಡಿದಿತ್ತು (ಪುನರು. ೩೬೧); ಸಂವಿಧಾನವನ್ನೂ ವಿಧಿಗಳನ್ನೂ ಎತ್ತಿಹಿಡಿಯುತ್ತೇನೆ (ಭಾಧಾನ. ೨೫೩). ೨. ಉದ್ಧರಿಸು: ಎತ್ತಣಿಂದೇನೆಂದು ತಿಳಿಯೆ ಕೇಳಿದೆಯಾ ಎತ್ತಿಹಿಡಿಯುತ ಅಭಯ ಮಾತನುಸುರಿದೆಯಾ (ಕಎಪು. ೩೬-೧೭).

೩. = ಎತ್ತಿಕಟ್ಟು ೧. ಒಬ್ಬೊಬ್ಬರಮೇಲೆ ಎತ್ತಿ ಹಿಡಿಯಬಾರದು (ರೂಢಿ). ಎತ್ತಿಹೋಗು = ೧. ದಂಡೆತ್ತಿಹೋಗು : ಸೇನಾಸಹಿತವಾಗ್ಯೆ ತಂದು ಪರಮಂಡಳಪತಿಯ ಮೇಲೆತ್ತಿಹೋಗುತ್ತ (ಬಸವು. ೨೨-೨೮). ೨. ನಾಶವಾಗು ; ಹಾಳಾಗು : ಸುತ್ತ ಕೋಟಿಯ ಮೇಲೆ ಮತ್ತೆ ಕೋಟಿಯ ರಚಿಸಿ ಮುತ್ತಯ್ದೆ ಮಗನು ಅಳಿದಾನು ಬಿದನೂರು ಎತ್ತಿ ಹೋದೀತು (ಸರ್ವಜ್ಞ. ೧೧೦೦) ; ಒತ್ತರಿಸಿ ಬಂದರಾಪತ್ತುಗಳು . . . ಎತ್ತಿಹೋಗುವುದದರ ಪಾಡೆಂದು ತಿಳಿದು (ಕವಿಪು. ೫೨-೧೮). ೩. ಸಂಪೂರ್ಣವಾಗಿ ಹೋಗು ; ಗುಳೇಹೋಗು ; ವಲಸೆಹೋಗು : ಅವರು ಊರುಬಿಟ್ಟು ಎತ್ತಿಹೋಗುತ್ತಿದ್ದಾರೆ (ರೂಢಿ).

[ದೇ. ‖ ತಮಿ: ಎತ್ತು ; ಕೊಡ. ಎತ್]

**ಎತ್ತು₃** 'ಎಟ್ಟು₁' ನೋ.

**ಎತ್ತುಂಗೊರಲ್** (ನಾ). ಮೇಲಕ್ಕೆತ್ತಿದ ಕೊರಲು : ಎತ್ತುಂಗೊರಲ್ಗೆಯ್ದೆ ಸುಕುಮಾರಮಾಗಿರ್ದ ಮಗಮುಗಿಪ ಮಲರ ದಂಡೆಯದೊಂದು ಬಿಳ್ದತ್ತು (ಸಂಸಪ. ೨೬-೬). [ಎತ್ತು₁ + ಕೊರಲ್]

**ಎತ್ತುಂಗೋಲ್, ಎತ್ತುಗೋಲು** (ನಾ). ಹರಿತವಾದ ಬಾಣ ; ಗುರಿಯಿಟ್ಟ ಬಾಣ: "ಎತ್ತುಂಗೋಲೆಂದು ಕೂರ್ಗಣೆಯು" (ಕಶಸಾ. ೨೩-೪೮೫); ತದೀಯ ಶೌರ್ಯಮನೆತ್ತುಂಗೋಲ್ಗೊಳ್ವಂತೆ ಮೇಗಣಂ ಮೇಗೆ ಪಿಡಿದೆತ್ತಿಕೊಂಡು (ಶಾಂತಿಪು. ೧೦-೧೬೪ ವ) ; ಎತ್ತುಂಗೋಲಂ ವಿರಹಿಗೆ ಚಿತ್ತಭವಂ ತೊಟ್ಟನಿಕ್ಕಿದಂತಿರೆ (ಸೂಕ್ತಿಸು. ೧೦-೫೦); ಎತ್ತುವುದು ಕೋಲ್, ಎತ್ತುಂಗೋಲ್ (ಶಬ್ದಾನು. ೩೪೪ ಪ್ರಯೋ). **ಎತ್ತುಗೋಲು :** "ತೂ[ಕೂ]ರಂಬಹುದೆತ್ತುಗೋಲು" (ಕವಿಕಂ. ೧೯೫).

[ಎತ್ತು₁ + ಕೋಲ್₁]

**ಎತ್ತುಂಗೋಲಿಕ್ಕು** (ಕ್ರಿ). ಹರಿತವಾದ ಬಾಣ ಬಿಡು : ಮನೋಜಾತ ನಿರ್ದುದ್ದೆಸಕ್ಕಾರ್ದೆತ್ತುಂಗೋಲಿಕ್ಕುವಂ ಭಾವಿಸುವರಳವೆ ಸತ್ರಾಜಿತೀದೇಹದಾಹಂ (ಜಗವಿ. ೧೧-೪೦). [ಎತ್ತುಂಗೋಲ್ + ಇಕ್ಕು]

**ಎತ್ತುಂಗೋಲ್ವೋಗು** (ಕ್ರಿ.) ಹರಿತವಾದ ಬಾಣದಿಂದ ತಿವಿಯಲ್ಪಡು : ಚತುರ್ನಿಕಾಯಾಮರ ಕೋಟಿ ವಂದನಾ ಭಕ್ತಿಗೆ ವರೆ ಹಿಮಚೂಳಂ ಕಳದೊಳೆತ್ತುಂಗೋಲ್ವೋದ ರಕ್ತಚೂಳನಂತೆಜಂಕೆವಿಸುಟ್ಟು (ಶಾಂತಿಪು. ೯-೨೩ ವ). [ಎತ್ತುಂಗೋಲ್ + ಪೋಗು₁]

**ಎತ್ತುಂಗೋಳ್** (ನಾ). ಎತ್ತಿಕೊಂಡುಹೋದ ಕೊಳ್ಳೆ ; ಸುಲಿಗೆ. 'ಎತ್ತುಂಗೋಳ' ಪರಾ. [ಎತ್ತು₁ + ಕೋಳ್]

**ಎತ್ತುಂಗೋಳ** (ನಾ). ಕೊಳ್ಳೆಹೊಡೆದು ಎತ್ತಿಕೊಂಡು ಹೋಗುವವನು : ಇವನೆತ್ತುಂಗೋಳ [ಪಾಠಾಂ. ಗೂಟ] ನೀಮಿವನಂ ನಂಬದಿರಿಮೆಂದು ಕಂಡವರ್ಗಳ್ ಸಾಜುವರತ್ತಂ (ಸಮಪು. ೫-೪೦).

[ಎತ್ತುಂಗೋಳ್ + -ಅ₇]

**ಎತ್ತುಕಂಬಿ** (ನಾ). ಎತ್ತುವ ಕಂಬಿ ; ಅಡ್ಡೆ : ಸಂದಣಿ ಮೇಲುಸರಕಿನ ಬಂಡಿ ತಲೆವೊಜೆ ಯೆತ್ತುಕಂಬಿಗಳ ಹೇಳಲೇನು (ಕುವ್ಯಾಗ. ೪-೧೮).

[ಎತ್ತು₁ + ಕಂಬಿ₂]

**ಎತ್ತುಕೈ** (ನಾ). ಎತ್ತುವ ಸಾಧನ: ಗಣಿಗಳಲ್ಲಿ ಕೆಲಸಮಾಡುವ ಎತ್ತುಕೈ(Lifts)ಗಳು, ಪಂಪುಗಳು . . . ಉಗಿಯಿಂದಲೇ ಇನ್ನೂ ನಡೆಯುತ್ತಿವೆ (ಬಾಲಪ್ರ. I, ೪೨). [ಎತ್ತು₁ + ಕೈ₂ (< ಕೆಯ್₂)]

**ಎತ್ತುಗ** (ನಾ). ಬಸವ.

ಎತ್ತುಗನ ಕಥೆ = ಬಸವನ ಕಥೆ ; ಬಸವಪುರಾಣ : ಅಂಥ ಎತ್ತುಗನ ಕಥೆಯನ್ನು ಸಾಕ್ಷಾತ್ ವಿರೂಪಾಕ್ಷನ ಸನ್ನಿಧಿಯಲ್ಲಿ ಹೇಳಿಸುವುದು ನಾಲ್ಕನೆಯ ಸರದಪ್ಪು (ತುಂಗಭ. ೯೭).

[ಎತ್ತು₂ (< ಎಟ್ಟು₁) + -ಗ₄]

**ಎತ್ತುಗಟ್ಟು** (ಕ್ರಿ). ಎತ್ತನ್ನುಕಟ್ಟು : ಬಡಗಲೂ ಎತ್ತುಗಟ್ಟುವ ಮೊರಡಿಯ ಚಿಲುಂಮ (ಎಕ. XIV, ಶ್ರೀರಂಗ. ೮೬-೩೬ ; 1471).

[ಎತ್ತು₂ (< ಎಟ್ಟು₁) + ಕಟ್ಟು₁]

**ಎತ್ತುಗಡೆ** (ನಾ). ೧. ಏರ್ಪಾಡು ; ಪ್ರಯತ್ನ : ಬೆಳಗಾಗುವುದರೊಳಗೆ ಅರ್ಜುನನ ಪಾಳೆಯದಲ್ಲಿ ಕುದುರೆಯನ್ನು ಬಿಡಿಸಿಕೊಳ್ಳುವ ಎತ್ತುಗಡೆ ನಡೆದಿತ್ತು (ಬಿದುರಿ. ೮೫) ; ವರ್ತಮಾನ ತಿಳಿಯುವ ಮೊದಲಿಗೇ ಮೈದೆಗೆದು ಬಿಡುವ ಎತ್ತುಗಡೆ ಅವನದು (ಇಪ್ಪಕ. ೨೬೨) ; ಅಡಿಗೆ ಮನೆಯನ್ನು ಕೆಡಹಬೇಕೆಂದು ಎತ್ತುಗಡೆ ನಡೆಯಿಸಿದರೆ ಕೆಡಹುವವರ ಮೈಮೇಲೆಯೇ ಅದು ಬೀಳಬಾರದು (ಯಕ್ಷಪ್ರ. ೧೫೨). ೨. [ಸಂಗೀತ] ಪ್ರಾರಂಭ ; ಎತ್ತುವಿಕೆ : ಸಂಗೀತದ ಎತ್ತುಗಡೆ, ಮುಕ್ತಾಯದ ಕ್ರಮ ಒಂದು ರೀತಿ (ಕನ್ನನು. I, ೩೫೨) ; ರಾಗದ ಎತ್ತುಗಡೆಯಲ್ಲಿ, ನಿಲುಗಡೆಯಲ್ಲಿ, ಗಮಕದಲ್ಲಿ, ಆಲಾಪದಲ್ಲಿ, ಬೇರೆಯೇ ಆಗಿ ಕಾಣಿಸಬಲ್ಲುದು (ಯಕ್ಷಬ. ೬೪) ; ವರ್ಣದಲ್ಲಿ ಚರಣ ಅಥವಾ ಎತ್ತುಗಡೆ ಇರುತ್ತದೆ (ಸಂಗೀಚ. ೭೧). [ಎತ್ತು₁ + ಕಡೆ₃]

**ಎತ್ತುಗಲ್, ಎತ್ತುಗಲ್ಲು** (ನಾ). ೧. ಎತ್ತಿಹಾಕುವ ಕಲ್ಲು, —ಗುಂಡು: ಎತ್ತುಗಲ್ ಪಿರಿಯಡೆಂಕಣಿ ಸೂಸುಡೆಂಕಣಿ . . . ಕಯ್ಯವಣೆ ಇಡುಗಲ್ಲ ಮೊತ್ತ (ಪದ್ಮರಾ. ೩-೨೧). ೨. ಶಕ್ತಿಯ ಪರೀಕ್ಷಾರ್ಥವಾಗಿಟ್ಟಿರುವ ದೊಡ್ಡ ಕಲ್ಲು. **ಎತ್ತುಗಲ್ಲು :** ೧. ಎತ್ತುಗಲ್ಲುಗಳು ಪೆಟಲನಾಳಿ ಕೋಟೆಗಳೊತ್ತಿಲಿ ನಿಲಿಸಿರುತಿಹವು (ಅಂಜನ. ೩-೧೪) ; ಎತ್ತುಗಲ್ಲುಗಳೇರುಗಲ್ಲು ಕವಣೆಗಲ್ಲು ಬಿತ್ತರದರೆಗಲ್ಲುಗಳು ಮೆಜೆದುವರ್ತಿಯಲಿ (ಕಂನವಿ. ೧೧-೧೩೫). ೩. ದೊಡ್ಡಕಲ್ಲು (ಕಿ).

[ಎತ್ತು₁ + ಕಲ್₃]

**ಎತ್ತುಗಲ್ಲು** 'ಎತ್ತುಗಲ್' ನೋ.

**ಎತ್ತುಗಟಿ** (ಕ್ರಿ). ಮೇಲಕ್ಕೆ ಎತ್ತುವ ಗಳೆ : "ಎತ್ತುವ ಗಟಿ, ಎತ್ತುಗಟಿ" (ಶಬ್ದಾನು. ೩೧೫ ಪ್ರಯೋ). [ಎತ್ತು₁ + ಗಟಿ]

**ಎತ್ತುಗಾಣ** 'ಎರ್ತುಗಾಣ' ನೋ.

**ಎತ್ತುಗುಂಡು** (ನಾ). ೧. = ಎತ್ತುಗಲ್ ೧. ಕಡಿದುಟ ದಾರಿವೆಂಚಿಯೆರ್ದ ಕಮ್ಮರಗಲ್ ಮೊಲೆಯೆತ್ತುಗುಂಡು ನಾಣ್ಗಡಿಯೆಸವೂರದಿಡ್ಡೆ ಮೊಗಭೋಜನ ಕನ್ನಡಿ ಪಾದವಟ್ಟಿಗೋಲ್ (ಕಾವ್ಯಸಾ. ೧೦೦೩) ; ದಡಿ ದಸಿ ಕವಣೆ ಕೈಕಲ್ಲೆತ್ತುಗುಂಡಾರ್ದಿಡುವ ಪೆಟಲು (ಕುರಾಸಾಂ. ೩೭-೫೪). ೨. = ಎತ್ತುಗಲ್ ೨. ಸಾಗರಮೆಂದುಂ ದುಷ್ಟದೋಷಾಚರನ ಕರತಳ[ಕ್ಕೆತ್ತುಗುಂಡಾಯ್ತು] ತ್ತಾರಾಗಿರಿ (ಕುಸುಮಾ. ೨-೧೩೦).

[ಎತ್ತು₁ + ಗುಂಡು₂]

**ಎತ್ತುಗುಡಿ** (ನಾ). ಮೇಲೆ ಕಟ್ಟಿರುವ ಧ್ವಜ ; ಹಾರಿಸಿರುವ ಬಾವುಟ: ಹೊತ್ತ ದುಗುಡವ ಹಾಯ್ಕಿ ಕೈವಿಡಿದೆತ್ತಿ ಕರ್ಣನ ಕೊಟ್ಟು ಮೈಗಳಲೆತ್ತುಗುಡಿಗಳ ರೋಮ ಪುಳಕದ ಪೂರ್ಣಹರುಷದಲಿ (ಕುವ್ಯಾಕ. ೮-೬) ; ಸತ್ತಿಗೆಯ ಚಾಮರದ ವ್ಯಜನದಲೆತ್ತುಗುಡಿಗಳ ಗಡಣದಲಿ ನಭ ಕೆತ್ತುದು (ನಿಭಾಗ. ೧೦-೬೨-೧೦). [ಎತ್ತು₁ + ಗುಡಿ₂]

**ಎತ್ತುಗೆಯ್, ಎತ್ತುಗೈ** (ನಾ). ಬೆರಳು ನೆಟ್ಟಗೆ ಮಾಡಿಕೊಂಡು ಎತ್ತಿದ ಕೈ : (ಕಿ). **ಎತ್ತುಗೈ :** ಮುಗಿದೆತ್ತುಗೈಯಿದನು ಕೊಂಡೆತ್ತಿಸೆಳೆದವರಾರ್ (ಸುಲೆದೇ. ೧೬-೫).

ಎತ್ತುಗೈಯುದ್ದ = ಮೇಲಕ್ಕೆತ್ತಿದ ಕೈಯಿನ ಮನುಷ್ಯನಷ್ಟು ಉದ್ದ : ಎತ್ತಿಮ್ಮೆ ಹೂಡುವುದು ಉತ್ತೊಮ್ಮೆ ಹರಗುವುದು ಬಿತ್ತೊಮ್ಮೆ ಹರಗಿ ಕಳೆದೆಗೆದರಾ ಬೆಳೆಯು ಎತ್ತುಗೈಯುದ್ದ (ಸರ್ವಜ್ಞ. ೧೩೫೮).

[ಎತ್ತು + ಕೆಯ್₂)]

**ಎತ್ತುಗೈ** 'ಎತ್ತುಗೆಯ್' ನೋ.

**ಎತ್ತುಗೈದು** (ನಾ). ಮೇಲಕ್ಕೆತ್ತಿರುವ ಆಯುಧ: ಎತ್ತುಗೈದುವಿನ ನಿಲಜನು ದು ಗು ಡ ದ ಲಿ ಫಲುಗುಣ ಯಮುಳರೊಂದಾಗಿ (ಕುವ್ಯಾಸ. ೧೬–೭೮). [ಎತ್ತು$_1$ + ಕೈದು$_1$ (< ಕೆಯ್ದು)]

**ಎತ್ತುಗೊಳ್ಳು** (ಕ್ರಿ). ಏರಿಸು: ಎತ್ತುಗೊಂಡ ಹುಬ್ಬಿನ, ದಾರಿದ್ರ್ಯವೇ ಮೂರ್ತಿವೆತ್ತಂತಿದ್ದ ಹುಡುಗ (ಪುನರು. ೫೧೬). [ಎತ್ತು$_1$ + ಕೊಳ್ಳು (< ಕೊಳ್$_1$)]

**ಎತ್ತುಗೋಲು** 'ಎತ್ತುಂಗೋಲ್' ನೋ.

**ಎತ್ತುನಾಲಗೆ,** ಎತ್ತುನಾಲಿಗೆ (ನಾ). ಒಂದು ಬಗೆಯ ಮೂಲಿಕೆ: "ಎತ್ತುನಾಲಗೆಯನಡ್ಡಜಿಹ್ವೆಯೆನಿಕುಂ" (ಮಂಗರಾ. ೪೪–೪೬); ಎತ್ತುನಾಲಗೆಯ ಬೇರ್ (ಲೋಕೋಪ. ೯–೨೧೬); ಕತ್ತೆಗಿವಿ ಸಹದೇವಿ ಮತ್ತೆತ್ತುನಾಲಗೆಯು ಉತ್ತರಣೆವೆರಸಿ ತಿ ಅ ಕ ವಿ ಡೆ ಲೋಕ ತನ್ನತ್ತ ಸಾರುವುದು (ಸರ್ವಜ್ಞ. ೧೯೪೦). **ಎತ್ತುನಾಲಿಗೆ:** ಎತ್ತುನಾಲಿಗೆಯ ರಸಮಂ ಆಡಿನ ಹಾಲಲ್ಲಿ ಬೆಲ್ಲದಿ ಕುಡಿಯೆ ಊದುಗಾಮಾಲೆ ತೀರ್ಗುಂ (ವಿವೈವಿ. ೮೬). [ಎತ್ತು$_2$ (<ಎಬ್ಬು$_1$) + ನಾಲಗೆ]

**ಎತ್ತುನಾಲಿಗೆ** 'ಎತ್ತುನಾಲಗೆ' ನೋ.

**ಎತ್ತುಪಟ್ಟಿ** (ನಾ). ಎತ್ತಿಹಿಡಿದುಕೊಳ್ಳುವ ಪಟ್ಟಿ: ಷರಾಯಿ, ಕಾಲು ಚೀಲ, ಮೊದಲಾದುವನ್ನು ಮೇಲೆತ್ತಿ ಹಿಡಿದುಕೊಳ್ಳುವ ಪಟ್ಟಿಗಳು; ಎತ್ತು ಪಟ್ಟಿಗಳು, ತೂಗುಪಟ್ಟಿಗಳು (Suspender. ಇಂಕನ). [ಎತ್ತು$_1$ + ಪಟ್ಟಿ]

**ಎತ್ತುಮತಿ** (ನಾ). ರಫ್ತು; ನಿರ್ಯಾತ: ಎತ್ತುಮತಿ ಎಱಕುಮತಿ ಸಹ ಪಡನಾಡ ಸುಂಕ (ಸೌಇಇ. IX–ii, ೫೫೧–೩; 1532). 'ಎಗುಮತಿ', 'ಎಱಕುಮತಿ' ಪರಾ. [ಎತ್ತು$_1$ + ಮತಿ ?. / ತಮಿ. ಏಱ್ಱುಮತಿ]

**ಎತ್ತುಯಂತ್ರ** (ನಾ). ಎತ್ತುವ ಸಾಧನ (Crane ; Lift. ಇಂಕನ). [ಎತ್ತು$_1$ + ಯಂತ್ರ]

**ಎತ್ತುರುಳಿ** (ನಾ). ಒಂದು ಊರಿನ ಹೆಸರು: ಹೊಂನೆದೆಱೆ ಅಳಗನ ಹಳ್ಳ ಎತ್ತುರುಳಿ ನೆರಿಗನ ಗಟ್ಟ ಮತ್ತಜನಱನಿಜಿಯಿಂಗಲು (ಎಕ. VI, ತರೀಕೆ. ೬೬–೧೨; 888). [ಎತ್ತು$_1$ + ಉರುಳಿ ?]

**ಎತ್ತುವಳಿ** (ನಾ). ವಸೂಲ್ಮಾಡುವುದು; ಕೂಡಿಸುವುದು; ವಸೂಲಿ: ಬಿಯಸಹಿತವಾಗಿ ಯೆತ್ತುವಂಥಾಯೆತ್ತುವಳಿಯಲ್ಲವನೂ ಬಿಟ್ಟು (ಸೌಇಇ. ೧೯೨೫, ಕಾರ್ಗಲ್. ೫೨೫–೧೬; 1346); ಅರಮನೆ ಕೆಲಸ, ಸ್ಥಳ ಮನೆ ಸಾಗು, ಸಂತು, ಎತ್ತುವಳಿ ಮೊದಲಾದ ಕೆಲಸಗಳನ್ನು ಮಾ ಡು ತಾ (ಚಿತ್ರಪಾ. ೮); ಎತ್ತುವಳಿಯ ಕೆಲಸ ಆರಂಭವಾಗಲಿ (ಪ್ರೇಮಾಶ್ರ. ೨೨೫). [ಎತ್ತು$_1$ + –ವಳ$_1$]

**ಎತ್ತುವಾಡಗೆ** (ನಾ). ವಸೂಲ್ಮಾಡಿದ ಬಾಡಿಗೆ: "ಭಾಟಕಮದೆತ್ತುವಾಡ [ಪಾಠಾಂ. ಡಿ]ಗೆ" (ಮಂಗರಾ. ೧೦೨–೨). [ಎತ್ತು$_1$ + ಬಾಡಿಗೆ]

**ಎತ್ತೆಗುದಿ** (ನಾ). ಬಸಿರಿಮರ: "ಎ ತ್ತೆ ಗು ದಿ ಪ್ಲ ಕ್ಷ ಮ ಕ್ಕುಂ" (ಮಂಗರಾ. ೩೬–೧೯). [?]

**ಎತ್ತೊಲೆ** (ನಾ). ಬೇಕಾದ ಕಡೆಗೆ ಎತ್ತಿ ಇಡಬಹುದಾದ ಒಲೆ: ಒಂದು ಎತ್ತೊಲೆಯಿದ್ದರೆ ಅನುಕೂಲ (ರೂಢಿ). [ಎತ್ತು$_1$ + ಒಲೆ]

**ಎತ್ನ** (ನಾ). ಪ್ರಯತ್ನ: ಕಾತರಂಬಟ್ಟು ಕಳವಳಿಪರಲ್ಲದೆ ತನ್ನ ಮಾತಿನಿಂ ಬಯಕೆಯಿಂದೆತ್ನ ಕೈಗೂಡಿದೊಡದೇತಕ್ಕೆ ಬೇರೆ ದೈವದ ತಂತ್ರಮಿಹುದೆಂದು ಪೇಳ್ವರ್ (ವೆಂಕಾರಾ. ೨–೯–೫೨); ಎತ್ನದಲಿ ಖಳರು ಸುರನಾರಿಯರ ಕೈಸೆರೆಗಳಂ ಪಿಡಿದು (ತುರಂಗ. ೬೦–೧೮); ಸತ್ಯ ನುಡಿವಿಡಿದಾಡುತಿಹೆ ನಿನ್ನೆತ್ನವಿನ್ನಾರಿಂಗು ಪರಿಕಿಸಲರ್ಥವಾಗದು (ಜಿನಭಾ. ೨೯–೨೫). [< ಸಂ. ಯತ್ನ]

**ಎತ್ವ** (ನಾ). = ಎಕಾರ: ಎತ್ವದೊಳಂ – ಎಕಾರದಲ್ಲಿಯುಂ (ಶಮುದ. ೧೧೮ ಟೀಕ). [ಸಂ.]

**ಎದ[ಡ]ರ್ಪಡು** (ಕ್ರಿ). ಬಡತನವನ್ನು ಹೊಂದು, —ಅನುಭವಿಸು: ಬಳವದ್ವಿದ್ವಿಷ್ಟ ಭೂಭೃತ್ತತಿಗೆ ಜವನೆದ[ಡ]ರ್ಪ್ಪಟ್ಟು ಕಯ್ಯಾನ್ತ ದೀನಾವಳಿಗಿಂದ್ರೋರ್ವ್ವಿಜಂ (ಸೌಇಇ. XX, ೨೧–೩೧; 1019). [ಎಡಱು$_3$ + ಪಡು$_1$]

**ಎದವರಿ** (ನಾ). ಒಬ್ಬಾತನ ಹೆಸರು: ಗೊಗ್ಗಿಯ ಮನೆವಗತಿ ಎಱ ಬೀರಯ್ಯ ಉತ್ತರವಗಳ್ಗಂ ಎ ದ ವ ರಿ ಯುಂ ದಾಯಗ (ಎಕ. III, ಮೈಸೂರು. ೪೧–೨; 990). [?]

**ಎದವೀಳೆ** (ನಾ). ಹಿತವಾದ ರುಚಿಯಾದ ವೀ ಳೆ ಯ ದೆ ಲೆ; ತಾಂಬೂಲ; "ಒಂದು ಸುಗಂಧದ್ರವ್ಯ" (ಪ್ರಭಣ್ಣ) (?): ಸೂಡಿದ ಮಾಲೆ ಕಂದುನಾಱುಗುಮೆದವೀಳೆ ಸಾಂದು [ಪಾಠಾಂ. ಮೊ ದ ಸಂ ದು ಮಿಂತು] ಮೊದಲಾಗಿರೆ ಪೂಸಿದ ಚಂದನಂಗಳುಂ ಮಗಮಗಿಸುತ್ತುಮಿರ್ದುಮಲಮುಪ್ಪುವು ಸಂಗತಿಯಿಂ ಶರೀರದಾ (ಅಜಿಪು. ೨–೫೧). [ಎದ$_0$ (< ಸಂ. ಹಿತ) + ವೀಳೆ. P ತಮಿ. ಇದಂ (< ಸಂ. ಹಿತಂ)]

**ಎದವು,** ಎದುವು (ಕ್ರಿ). ವಯಸ್ಸಿಗೆ ಬರು; ಪ್ರಾಯವಾಗು: ಹೆಣ್ಣು ಮಕ್ಕಳಿಗೆ ಮದುವೆಯಾಗಿದೆಯೊ? ಮದುವೆಗೆ ಎ ದ ವಿ ಇದ್ದಾರೆಯೊ (ಕಥಾಮಂ. ೪–೩); ಎದವಿದ್ದ ಹೆಣ್ಣಿಗೆ ಒಬ್ಬ ವರ ಸಿಕ್ಕಿ ನಾನು ಬದುಕಿದೆನೆಂದನೊಬ್ಬ (ನವರಾ. II, ೩೫); ಮುದುಕನೊಬ್ಬ ನನ್ನ ಮಗನು ಎದವಿ ಬಂದ. ಇನ್ನುಮೇಲೆ ಬದುಕನವನು ನೋಡಿಕೊಂಬ ಎಂದು ಕನಸಲಿರುತ (ಚಿಲುವು. ೧೩). **ಎದುವು:** (ಸ್ಯಾಂಡರ್). [← ತೆಲು. ಎದುಗು]

**ಎದಿರ್,** ಎದುರ್, ಎದುರು (ನಾ). ೧. ಅಭಿಮುಖ; ಸಮ್ಮುಖ; ಇದಿರಾಗಿರುವುದು. 'ಎ ದಿ ಚ ರ್' ಪರಾ. **ಎದುರ್:** 'ಎದುರ್ಗೊಳ್ಳು' ಪರಾ. **ಎದುರು:** ಒಂದೊಂದಾಗಿ ಮುಖಮೈಗಳನ್ನೂ ಎದುರನ್ನೂ ಪಾರ್ಶ್ವಗಳನ್ನೂ ತೋರಿಸುತ್ತಾ ನಮ್ಮ ಕುತೂಹಲವನ್ನು ಕ್ರಮಕ್ರಮವಾಗಿ ಹೆಚ್ಚಿಸುತ್ತಾರೆ (ಯಕ್ಷಬ. ೪೪). 'ಇದಿರ್' ಪರಾ.

**ಎದುರುಹಾಕಿಕೊ** = ವಿರೋಧ ಕಟ್ಟಿಕೊ: ಮೈಸೂರು ದೊರೆಗಳನ್ನು ಎದುರುಹಾಕಿಕೊಳ್ಳುವ ಗಂಡೆದೆ ಯಾವ ದೊರೆಗೂ ಇಲ್ಲ (ಚಿಕ್ಕದೇ. ೨೨೭). [ದೇ. ‖ ತಮಿ. ಮಲ. ಎದಿರ್; ತುಳು. ಎದುರು; ಕೊಡ. ಎದಿಕ; ತೆಲು. ಎದುರು]

**ಎದಿರಿಸು,** ಎ ದು ರಿ ಸು (ಕ್ರಿ). ಇದಿರಾಗು; ಪ್ರತಿಭಟಿಸು (ಕ). **ಎದುರಿಸು:** ಅತನು ಅನೇಕ ಕಷ್ಟನಿಷ್ಠುರಗಳನ್ನು ಎದುರಿಸಬೇಕಾಯಿತು (ಸಸ್ಯಕ. ೯೬); 'ಎ' ಜೀವಾತು: ಇದು ಶರೀರದ ಬೆಳವಣಿಗೆಗೆ ಹಾಗೂ ರೋಗರುಜಿನಗಳನ್ನು ಎದುರಿಸುವುದಕ್ಕೆ ಸಹಾಯಕವಾಗಿದೆ (ಆ ಡು ಸಾ. ೬೦); ಕಷ್ಟಗಳು ಬಂದಾಗ ಧೈರ್ಯದಿಂದ ಎದುರಿಸುವಂತೆಯೂ ಬೋಧಿಸಬೇಕು (ಕ್ರಿಯಾಶಿ. ೮). 'ಇದಿರಿಸು' ಪರಾ. [ಎದಿರ್ + –ಇಸು$_3$]

**ಎದಿರುಗೊಳ್ಳು** 'ಎದಿರ್ಗೊಳ್ಳು' ನೋ.

**ಎದಿರೇಡು** (ನಾ). ಪ್ರತಿಪತ್ರ; ಕರಾರುಪತ್ರ; ಒಪ್ಪಂದದ ಪತ್ರ: ನೀವು ಅಪ್ಪಣ್ಣಂಗಳಿಗೆ ಒಡಂಬಟ್ಟು ಕೊಟ್ಟ ಎದಿರೇಡು ಮರ್ಯ್ಯಾದೆಯಲು (ಎಇ. XVI, ೨೨೬–೫೯; 1414). [ಎದಿರ್ + ಏಡ್ಟು$_2$. P ತಮಿ. ಏಡು = ತಾಳೆಗರಿ]

**ಎದಿರ್ಗೊಳ್ಳು,** ಎದಿರುಗೊಳ್ಳು, ಎದುರುಗೊಳ್ಳು, ಎದುರ್ಗೊಳ್ಳು (ಕ್ರಿ). ಸ್ವಾಗತಿಸು; ಪ್ರೀತಿ ಅ ಥ ವಾ ಗೌರವಪೂರ್ವಕವಾಗಿ ಎದುರಿಗೆ ಬರು: (ಕ). **ಎದಿರುಗೊಳ್ಳು:** (ಕ). **ಎದುರುಗೊಳ್ಳು:** ಶಹಜಮಾನನು . . . ಅಕ್ಕರೆಯಿಂದ ಮಂತ್ರಿಗೆ ಎದುರುಗೊಳ್ಳಬಂದನು (ಕಗದ್ಯ. II, ೭). **ಎದುರ್ಗೊಳ್ಳು:** ಗಂಗರಾಜ ನಾಗಯ್ಯನವರು ಹೊರಬಾಗಿಲಲ್ಲಿ ಗುರುಗಳನ್ನೂ ಎದುರ್ಗೊಂಡು ಕರೆದುತಂದರು (ಸವತಿ. ೨೨). 'ಇದಿರ್ಗೊಳ್' ಪರಾ. [ಎದಿರ್ + ಕೊಳ್ಳು (< ಕೊಳ್$_1$)]

**ಎದಿರ್ಚು** (ಕ್ರಿ). ಎದುರಾಗು; ಪ್ರತಿಭಟಿಸು: ರುದ್ರಾಕ್ಷಮಂ ಬಳಿ ಕೊಣ್ಬು ಕಟ್ಟಿ [ತ್ರಿ]ಶೂ[ಲ]ಮನಿಟ್ಟು ಕೊಱ್ಱಬ[ನ]ನೆದಿಜ್ಚಿ (ಸೌಇಇ. XI–i, ೨೧–೯; 893); × [ಯ್ಯಗ]ರಾಳೆ ಆಚಮಗಳಿ[ಜಕಿ]ಯಜದ ಕೊ[ಳೆ] ಎದಿಜ್ಚಿ (ಸೌಇಇ. XX, ೮–೨; ?). 'ಇದಿರ್ಚು' ಪರಾ.
[ಎದಿರ್ + –ಚು]

**ಎದು** (ಸ). ಯಾವುದು: ನಾನು ಬಡವಿ ಆತ ಬಡವ ಒಲವೆ ನಮ್ಮ ಬದುಕು ಬಳಸಿಕೊಂಡೆವದನೆ ನಾವು ಅದಕು ಇದಕು ಎದಕು (ನಾದಲೀ. ೫೯–೪).
[ದೇ. ‖ ತಮಿ. ಮಲ. ಏದು; ಕೊಡ. ಏದೀ; ತುಳು. ದಾನೆ; ತೆಲು. ಏದಿ; ಕೋಲಾ. ಎದ್]

**ಎದುರ್** 'ಎದಿರ್' ನೋ.

**ಎದುರಕ್ಕಿ** (ನಾ). (ನಂಟರನ್ನು) ಎದುರುಗೊಳ್ಳುವಾಗ ತಳಿಯುವ ಅಕ್ಷತೆ: ಕಾಶಿಯಾತ್ರೆಮಾಡಿಬಂದ ವರನಿಗೆ ಎದುರಕ್ಕಿ ಚೆಲ್ಲುವರು (ರೂಢಿ).
[ಎದುರ್ (< ಎದಿರ್) + ಅಕ್ಕಿ$_1$]

**ಎದುರಡೆ** (ನಾ). ೧. ಪ್ರತಿಹೊಣೆ; ಸಾಲದ ಒತ್ತೆ; ಈಡು. ೨. ಪ್ರತಿಕರಾರು; ಗುತ್ತಿಗೆ. [ಎದುರ್ (< ಎದಿರ್) + ಅಡೆ ?]

**ಎದುರಾಡು** (ಕ್ರಿ). ಎದುರಿಗೆ ಮಾತನಾಡು; ವಿರೋಧಿಸಿ ನುಡಿ: ಮೋತೀಬಾಯಿಯ ಮನವು ಎದುರಾಡಿತು (ಝೂರಾಣಿ. ೧೦); ಮಮ್ಮುಂ ಜಿಯು ಮ್ಯಾದಿನಿಯ ಮಾತಿಗೆ ಎದುರಾಡದಾದ (ಒಡ್ಡಿ ಉ. ೨೮).
[ಎದುರು (< ಎದಿರ್) + ಆಡು$_1$]

**ಎದುರಾನಿಸು** (ಕ್ರಿ). ಎದುರಿಗಿಡು; ಮುಂದಿಡು: ಆ ನುಡಿಗಳಾಲಿಸುತ ಆ ಸಂಧಾನರನು ಸನ್ಮಾನದಲಿಯೆದುರಾನಿಸಿ ಪೀಠಾಗ್ರದಲಿ ಕುಳ್ಳಿರಿಸಿ (ಬಿಜ್ಜಪು. ೮೧–೨೫). [ಎದುರ್ (< ಎದಿರ್) + ಆನ್$_1$ + –ಇಸು$_3$]

**ಎದುರಾಯಿಸು** (ಕ್ರಿ). ವಿರೋಧಿಸು; ಪ್ರತಿಭಟಿಸು: ತಾನು ಯಹೂದ್ಯರ ಅರಸನೆಂದು ಈತನು ಕೈಸರನನ್ನು ಎದುರಾಯಿಸುತ್ತಾನೆಂದು ದೂರಿತ್ತರು (ಗೊಲ್ಗೊಥಾ. ೭–೧೩). [< ಎದುರಿಸು]

**ಎದುರಾಳಿ** (ನಾ). ಎದುರಾಗಿ ನಿಲ್ಲುವವನು; ಪ್ರತಿಸ್ಪರ್ಧಿ: ತನ್ನ ಎದುರಾಳಿಗಳೊಡನೆ ಹೋರಾಡಿದನು (ಯೋಧರು. ೭); ಕೋಗಿಲೆಯನ್ನು ಬಿಟ್ಟರೆ ಗಳವುವ ಗಿಳಿಯೊಂದು ನವಿಲಿಗೆ ಎದುರಾಳಿಯಾಗಿ ನಿಲ್ಲುವದು (ಗಾಳಿಗು. ೭೭); ಪ್ರಚಂಡ ಬಹುಮತದಿಂದ ಎದುರಾಳಿಗಳನ್ನು ಸೋಲಿಸಿ ನಿಮ್ಮ ಪರವಾಗಿ ಮಂತ್ರಿಸ್ಥಾನಕ್ಕೇರಿದ್ದಾರೆ (ದೇಶಭು. ೨೧).
[ಎದುರ್ (< ಎದಿರ್) + –ಆಳ್$_3$]

**ಎದುರಿ** (ನಾ). ೧. "ವೈರಿ" (ಜಾನಕೋ. ೨೪). ೨. ಪ್ರತಿಸ್ಪರ್ಧಿ: ಅವನು ನಮಗೆ ಎದುರಿ (ರೂಢಿ).
[ಎದುರ್ (< ಎದಿರ್) + –ಇ$_3$]

**ಎದುರಿಕ್ಕು** (ನಾ). ಎದುರಿಗೆ ಇರು; ಸಮ್ಮುಖವಾಗು (ದಕ. ೬).
[ಎದುರ್ (< ಎದಿರ್) + ಇಕ್ಕು]

**ಎದುರಿಡು** (ಕ್ರಿ). ೧. ಸಮ್ಮುಖವಾಗು; ಪ್ರತ್ಯಕ್ಷವಾಗು. ೨. ಪ್ರತಿಯಾಗಿಡು; ವಿರೋಧಿಸು: ಕೊಟ್ಟಕಾರಣ ಮಂತ್ರಿಪದಕನುಬಟ್ಟರಲ್ಲದೆ ರಾಯನಿಗೆ ಎದುರಿಟ್ಟಪರೆ (ಬಿಜ್ಜಪು. ೧೦೩–೫೭).
[ಎದುರ್ (< ಎದಿರ್) + ಇಡು$_1$]

**ಎದುರಿಸು** 'ಎದಿರಿಸು' ನೋ.

**ಎದುರು** 'ಎದಿರ್' ನೋ.

**ಎದುರುಕುತ್ತಿಗೆ** (ನಾ). ದನಗಳಿಗೆ ಬರುವ ಒಂದು ಬಗೆಯ ಗಂಟಲುರೋಗ: (ಎಸಮ್ಮೈ. XV, ೯೧).
[ಎದುರು (< ಎದಿರ್) + ಕುತ್ತಿಗೆ]

**ಎದುರುಗಡೆ** (ನಾ). ಅಭಿಮುಖ; ಎದಿರು: ಇತ್ತ ಇಂದ್ರನ ಮುಖ ಕಂಡ ತಕ್ಷಣದಲ್ಲಿ ಎದುರುಗಡೆ ಗುಡುಗಿನ ಸದ್ದನ್ನೇ ನಿಲ್ಲಿಸಿ ಮೇಘರಾಜನನ್ನು ತೋರಿಸಬೇಕು (ಅಶ್ವಮೇ. ೨೮).
[ಎದುರು (< ಎದಿರ್) + ಕಡೆ$_3$]

**ಎದುರುಗಣ್ಣು** (ನಾ). ನೆಟ್ಟದೃಷ್ಟಿ: ಹೆಗಲಮೇಲೆ ಹಸುಬೆ ಹೊತ್ತು ಕೊಂಡಿದ್ದಾಕೆ ಎದುರುಗಣ್ಣಾಗಿದ್ದಳು (ಪುನರು. ೪೩೮).
[ಎದುರು (< ಎದಿರ್) + ಕಣ್ಣು (< ಕಣ್)]

**ಎದುರುಗಾಣಿಕೆ** (ನಾ). ೧. ಕಣ್ಣಾರ ನೋಡುವುದು. ೨. ಪ್ರತ್ಯಕ್ಷ ಕಾಣಿಕೆ: ಎಂತಾದಡವನರಿಯದಂತವನ ಬಳಿಸಂದು ಪೋಪೆನವರೆದುರು ಗಾಣಿಕೆಯ ಕಣ್ಣೊಳ್ಳೆ ಕಾಂಬೆ (ಹಬ್ಬೆರ. ೨೧–೧೪).
[ಎದುರು (< ಎದಿರ್) + ಕಾಣಿಕೆ (< ಕಾಣ್ಕೆ)]

**ಎದುರುಗೊಳಿಸು** (ಕ್ರಿ). ಎದುರುಗೊಳ್ಳುವಂತೆಮಾಡು (ದಕ. ೬).
[ಎದುರುಗೊಳ್ಳು (< ಎದಿರ್ಗೊಳ್ಳು) + –ಇಸು$_3$]

**ಎದುರುಗೊಳ್ಳು** 'ಎದಿರ್ಗೊಳ್ಳು' ನೋ.

**ಎದುರುಚೀಟು** 'ಎದುರ್ಚೀಟು' ನೋ.

**ಎದುರುತ್ತರ** (ನಾ). ಎದುರುಮಾತು; ಪ್ರತಿಯಾಗಿ ಹೇಳುವ ಮಾತು; ಪ್ರತಿಭಟನೆಯ ಮಾತು; ಪ್ರತ್ಯುತ್ತರ: ತಂದೆಯವರು ಪುನಃ ಮಾತೆತ್ತಿದರು. ಎದುರುತ್ತರ ಕೊಟ್ಟೇ ಬಿಟ್ಟೆ (ಸುವಸಂ. ೧೬).
[ಎದುರು (< ಎದಿರ್) + ಉತ್ತರ]

**ಎದುರುದಾವೆ** (ನಾ). (ದಾವೆಗೆ) ಪ್ರತಿಯಾದ ದಾವೆ, —ವ್ಯಾಜ್ಯ: (ದಕ. ೬). [ಎದುರು (< ಎದಿರ್) + ದಾವೆ$_2$]

**ಎದುರುನುಡಿ** 'ಎದುರ್ನುಡಿ' ನೋ.

**ಎದುರುನೋಡು** 'ಎದುರ್ನೋಡು' ನೋ.

**ಎದುರುಬದುರು** (ನಾ). ಪರಸ್ಪರ ಸಮ್ಮುಖ: ಬಾಗಿಲಲ್ಲಿ ಸಿಪಾಯಿಗೆದುರುಬದುರಾಗಿ . . . ಕುಳಿತಿದ್ದನು (ಪುನರು. ೧೮೩); ಪ್ರವೇಶದ್ವಾರಕ್ಕೆ ಎದುರುಬದುರಾಗಿದ್ದ ಬಾಗಿಲಿಂದ ಸರಕ್ಕನೆ ಹೊರಟುಹೋದಳು (ಪುನರು. ೩೫೯). [ಎದುರು (< ಎದಿರ್) + ಬದುರು$_0$]

**ಎದುರುಬರು** (ಕ್ರಿ). ಸಮ್ಮುಖವಾಗಿ ಬರು; ಪ್ರತಿಭಟಿಸಿ ಬರು: ಕುಂದುಕೊರತೆಗಳನ್ನು ಎದುರುಬರುತ್ತಿರುವ ಸಮಸ್ಯೆಗಳನ್ನು . . . ಬಲ್ಲವರಾಗಿರಬೇಕು (ಶಿಕ್ಷದ. ೧೩೭).
[ಎದುರು (< ಎದಿರ್) + ಬರು$_1$ (< ಬರ್$_1$)]

**ಎದುರುಬೀಳು** 'ಎದುರ್ಬೀಳು' ನೋ.

**ಎದುರುಮರಿ** (ನಾ). ಎದುರಿಗೆ ಬಲಿಕೊಡುವ ಮರಿ.
[ಎದುರು (< ಎದಿರ್) + ಮರಿ (< ಮಱಿ)]

**ಎದುರುಮಾತು** (ನಾ). ಎದುರಾಗಿ ಹೇಳುವ ಮಾತು; ಪ್ರತಿಭಟನೆಯ ಮಾತು: ನೀನು ನನಗೆ ಎದುರುಮಾತಾಡಬೇಡ (ರೂಢಿ).
[ಎದುರು (< ಎದಿರ್) + ಮಾತು$_1$]

**ಎದುರುಲಿ** (ನಾ). ಪ್ರತಿಯಾದ ಶಬ್ದ; ಮಾರ್ದನಿ; ಪ್ರತಿಧ್ವನಿ: (ಶಬ್ದ ತರಂಗಗಳ ಪ್ರತಿಫಲದಿಂದ ಹುಟ್ಟುವ) ಮರುದನಿ, ಮಾರ್ದನಿ, ಎದುರುಲಿ (Echo. ಇಂಕನಿ).
[ಎದುರು (< ಎದಿರ್) + ಉಲಿ$_2$]

**ಎದುರುವಳಿ** 'ಎದುರ್ವಳ್ಳಿ' ನೋ.

**ಎದುರುವಾದಿ** (ನಾ). ವಿರೋಧವಾಗಿ ವಾದಿಸುವವನು; ಪ್ರತಿವಾದಿ (ದಕ. ೬). [ಎದುರು (< ಎದಿರ್) + ವಾದಿ]

**ಎದುರುವ್ಯಾಜ್ಯ** (ನಾ). = ಎದುರುದಾವೆ (ದಕ. ೬).
[ಎದುರು (< ಎದಿರ್) + ವ್ಯಾಜ್ಯ]

**ಎದುರುಹೆಣ್ಣು** (ನಾ). ಒಂದು ಮನೆಗೆ ಹೆಣ್ಣುಕೊಟ್ಟು ಆ ಮನೆಯಿಂದಲೇ ತಮ್ಮ ಮನೆಗೆ ಹೆಣ್ಣನ್ನು ತಂದುಕೊಳ್ಳುವುದು.
[ಎದುರು (< ಎದಿರ್) + ಹೆಣ್ಣು (< ಪೆಣ್)]

**ಎದುರುಹೇಳು** (ಕ್ರಿ). ಪ್ರತಿಯಾಗಿ ಮಾತನಾಡು; ವಿರೋಧಿಸು: ಗುಣವಂತನ ಮಾತಿಗೆ ನೀನು ಎದುರುಹೇಳುವುದಿಲ್ಲವೆಂದಿದ್ದೇನೆ (ಆರ್ಯಕ. ೨೯). [ಎದುರು (< ಎದಿರ್) + ಹೇಳು (< ಪೇೞ್)]

**ಎದುರೆರಗು** (ಕ್ರಿ). ಎದುರಾಗಿ ಮೇಲೆಬೀಳು; ಪ್ರತಿಭಟಿಸಿ ಎರಗು: ನಾನಾ ತಂತ್ರವನುಯ[ಯೆ]ದುರೆರಗಲಿಲ್ಲವನಿಪಗೆ ಹುಡುಗನ ತರವೆನೆಂದಾ ಬಸವ ತೂರಿದ ಸೆಳದು ಖಡ್ಗವನು (ಬಜ್ಜಪು. ೧೦೪–೬೨).
[ಎದುರು (< ಎದಿರ್) + ಎರಗು (< ಎಱಗು$_1$)]

**ಎದುರೇಟು** (ನಾ). ಎದುರಾಗಿ ಕೊಡುವ ಏಟು, —ಹೊಡೆತ; ಪ್ರತ್ಯುತ್ತರ: ನಾನೂ ಧೈರ್ಯದಿಂದ ಎದುರೇಟು ಕೊಟ್ಟೆ (ಪ್ರೇಮಾಶ್ರ. ೨೬೭). [ಎದುರು (< ಎದಿರ್) + ಏಟು$_1$]

**ಎದುರೇರು** (ಕ್ರಿ). = ಎದುರೆರಗು: ಅರು ಮಲತಿಹರಾರು ಸೆಣಸುವರು ಯೆದುರೇರುವರು (ಜಿರಾಮಾ. ೨೨–೪೩).
[ಎದುರು (< ಎದಿರ್) + ಏರು$_1$ (< ಏಱು$_1$)]

**ಎದುರ್ಗೊಳ್ಳು** 'ಎದಿರ್ಗೊಳ್ಳು' ನೋ.

**ಎದುರ್ಚಂಡಿಸು** (ಕ್ರಿ). ಪ್ರತಿಹೆಠಹಿಡಿ; ಅಡ್ಡಿಬರು (ಕಿ).
[ಎದುರು (< ಎದಿರ್) + ಚಂಡಿಸು]

**ಎದುರ್ಚೀಟು**, ಎದುರುಚೀಟು (ನಾ). ೧. ಭೂಮಿಯನ್ನು ಮಾರಿದವನು ಗೊತ್ತಾದ ಅವಧಿಯ ಒಳಗಾಗಿ ತಾನು ಪಡೆದ ಹಣವನ್ನು ಹಿಂತಿರುಗಿಕೊಡುವುದಾದರೆ ಆ ಭೂಮಿಯನ್ನು ಮರಳಿ ಕೊಡುವುದಾಗಿ ಕೊಂಡವನು ಬರೆದುಕೊಡುವ ಪತ್ರ (ಕಿ). ೨. ಕಳೆದು ಹೋದ ಪತ್ರಕ್ಕೆ ಬದಲಾಗಿ ಬರೆದುಕೊಟ್ಟ ಪತ್ರ; ಪ್ರತಿಪತ್ರ (ಕಿ). **ಎದುರುಚೀಟು**: (ಸ್ಯಾಂಡರ್). [ಎದುರ್ (< ಎದಿರ್) + ಚೀಟು$_2$]

**ಎದುರ್ದನಿ** (ನಾ). = ಎದುರುಲಿ (ದಕ. ಕಿ).
[ಎದುರು (< ಎದಿರ್) + ದನಿ$_2$]

**ಎದುರ್ನುಡಿ**, ಎದುರುನುಡಿ (ನಾ). ೧. = ಎದುರ್ಚೀಟು. ೧. ೨. ಗೇಣಿಯ ಅಥವಾ ಭೋಗ್ಯದ ಕೊಡುಪ್ರತಿ. **ಎದುರುನುಡಿ**: ೨. (ಕಿಸಂಗ್ಲಾ. ೫೦). [ಎದುರು (< ಎದಿರ್) + ನುಡಿ$_2$]

**ಎದುರ್ನೋಡು**, ಎದುರುನೋಡು (ಕ್ರಿ). ನಿರೀಕ್ಷಿಸು (ಕಿ). **ಎದುರುನೋಡು**: ನಡೆದು ಬರಲಿ ಮರವ ನೆಮ್ಮಿ ಬನದ ನಡುವೆ ನಿಂದಳು ಕಚನ ಬರವನೆದುರುನೋಡಿ ದೃಷ್ಟಿ ದೂರ ನೆಟ್ಟಳು (ಕವಿಸೋ. ೨೩). [ಎದುರು (< ಎದಿರ್) + ನೋಡು]

**ಎದುರ್ಬೀಳು**, ಎದುರುಬೀಳು (ಕ್ರಿ). ಪ್ರತಿಭಟಿಸಿ ನಿಲ್ಲು (ಕಿ). **ಎದುರುಬೀಳು**: ಸಮಾಜದ ಕಟ್ಟಳೆಗೆ ಎದುರುಬೀಳುತ್ತಾನೆ (ಕಾವ್ಯಸ. ೨); ಕ್ವೇಯಿಸ್ ಎಂಬ ಭಾಗದಲ್ಲಿದ್ದವರು ಮಾತ್ರ ಎದುರುಬಿದ್ದ (ಪೈಮಹ. ೯೪). [ಎದುರು (< ಎದಿರ್) + ಬೀಳು$_1$ (< ಬೀೞ್$_1$)]

**ಎದುರ್ವಳ್ಳಿ**, ಎದುರುವಳಿ (ನಾ). = ಎದುರ್ಚೀಟು ೨. **ಎದುರುವಳಿ**: (ಸ್ಯಾಂಡರ್).
[ಎದುರು (< ಎದಿರ್) + ವಳ್ಳಿ. P ಮರಾ. ವಳೀ = ಸಾಲು]

**ಎದುವರೆಗೆ** (ಅ). ಎಲ್ಲಿಯವರೆಗೆ: ಸಂದೇಹ ಭಯಗಳಿಂದ ಎಚ್ಚತ್ತು ಎದುವರೆಗೆ ನಡೆದುಕೊಳ್ಳುವರೋ (ಸುಗುಗಂ. ೧೩–೬).
[ಎದು + –ವರೆಗೆ]

**ಎದುವು** 'ಎದವು' ನೋ.

**ಎದೆ** 'ಎರ್ದೆ' ನೋ.

**ಎದೆಕಟ್ಟು** (ನಾ). ಎದೆಗೆ ಹಾಕುವ ಕಟ್ಟು, —ಪಟ್ಟಿ: ಸ್ಥೂಲವಾಗಿರುವವರು ಎದೆಗೂ ಹೊಟ್ಟೆಗೂ ಆಧಾರವನ್ನು ಕೊಡುವಂಥ ಎದೆಕಟ್ಟುಗಳನ್ನು ಉದರಕಟ್ಟು (supports) ಗಳನ್ನು ಉಪಯೋಗಿಸುವುದರಿಂದ ಅವರಿಗೆ ಹಿತಕರವಾಗುವುದು (ಗೃಹವಿ. ೧೦೧). [ಎದೆ (< ಎರ್ದೆ) + ಕಟ್ಟು$_2$]

**ಎದೆಕೆರಗು** 'ಎರ್ದೆಗರಗು' ನೋ.

**ಎದೆಕಾಪು** 'ಎದೆಗಾಪು' ನೋ.

**ಎದೆಕೆಚ್ಚು** (ನಾ). ೧. ಎದೆಯ ಧೈರ್ಯ. ೨. ಅಹಂಕಾರ (ಕಿ).
[ಎದೆ (< ಎರ್ದೆ) + ಕೆಚ್ಚು$_2$]

**ಎದೆಕೊಡು** 'ಎರ್ದೆಗೊಡು' ನೋ.

**ಎದೆಗಟುಕತನ** (ನಾ). ಕ್ರೂರತನ: ಒಂದೊಂದು ಸಲ ಈ ಹುಸಿನಗೆಯನ್ನು ಅವಳಿಂದ ಕೋರುವುದೂ ಅವನಿಗೆ ಎದೆಗಟುಕತನವೆನ್ನಿಸುತ್ತದೆ (ಸಮಾಲೋ. ೩೪). [ಎದೆ (< ಎರ್ದೆ) + ಕಟುಕ$_1$ + –ತನ]

**ಎದೆಗಟ್ಟಿತನ** (ನಾ). ದಿಟ್ಟತನ; ಧೈರ್ಯಗಾರಿಕೆ: ಸೋಮು ಒಂದು ರಾತ್ರಿ ಎದೆಗಟ್ಟಿತನದಿಂದ ಸುಡುಗಾಡಿನ ಕಟ್ಟೆಗೆ ಲ್ಯಾಟು ಹಿಡಿದು ನೋಡಿದ (ದೇವಹಂ. ೫೮). [ಎದೆ (< ಎರ್ದೆ) + ಗಟ್ಟ + –ತನ]

**ಎದೆಗತ್ತರಿ** (ನಾ). ೧. ಎದೆಯನ್ನು ಕತ್ತರಿಸುವ ಸಾಧನ. ೨. (ಅಲಂ) ಮರ್ಮ ಭೇದಕ.
ಎದೆಗತ್ತರಿಯರ್ = (ಅಲಂ) ಎದೆಯನ್ನು ಕತ್ತರಿಸುವವರು: ಬಿತ್ತರಿಯರೆದೆಗತ್ತರಿಯರಾವೊತ್ತು ಹಾದರಗಿತ್ತಿಯರು ಬ್ರಹ್ಮತ್ಕಾತಿಯರು (ಬಸಪು. ೪೦–೫೫). [ಎದೆ (< ಎರ್ದೆ) + ಕತ್ತರಿ]

**ಎದೆಗತ್ತಿ** (ನಾ). ಎದೆಯನ್ನು ಸೀಳುವ ಕತ್ತಿ: ಗಾವಳಿಯನು ಬಂದು ಪೊಗುವ ರಾವುತರೆದೆಗತ್ತಿ ಬಂದನೊಯ್ಯನೆ ಸಾಯಿದೇವರಾವುತ (ಕುರಾಸಾಂ. ೧೧–೬೩). [ಎದೆ (< ಎರ್ದೆ) + ಕತ್ತಿ$_1$]

**ಎದೆಗದ** 'ಎರ್ದೆಗದ' ನೋ.

**ಎದೆಗದಡು**$_1$ (ಕ್ರಿ). ಎದೆ ಕದಡಿಹೋಗು; ಮನಸ್ಸು ಕಲಕಿಹೋಗು: ಎದೆಗದಡದಜಗಳನು ಮುನ್ನವೆ ಹದಗೊಳಿಸಿ ಈ ರೀತಿಯಲಿ ನೀವೊದಗಿದಡೆ ನೀನೆಂದ ಕಾರ್ಯವದಹುದು ಹೋಗೆಂದ (ಸಾಳ್ವಭಾ. ೬–೭೩).
[ಎದೆ (< ಎರ್ದೆ) + ಕದಡು$_1$]

**ಎದೆಗದಡು**$_2$ (ನಾ). ಎದೆ ಕದಡುವಿಕೆ; ಮನಸ್ಸಿನ ಕಲಕುವಿಕೆ: ಗಂಡನಾವುದ ನಮ್ಮ ಕೇಳಿರೆ ಕೊಂಡುದೇ ಮೊಜಿಕ ಬಿಟ್ಟುದೇ ಹಗೆ ಹೆಂಡತಿಗೆಯಿದು ಗುಣವಲಾಯೆಂದೆದೆಗದಡು ಹರದು (ಸಾಳ್ವಭಾ. ೫–೫೪). [< ಎದೆಗದಡು$_1$]

**ಎದೆಗರಗಿಸು** (ಕ್ರಿ). ಎದೆ ಕರಗಿಹೋಗುವಂತೆ ಮಾಡು; ಅನುಕಂಪವುಂಟಾಗುವಂತೆ ಮಾಡು: ಸನ್ನೆನೋಟಗಳ ತಿರುಹುಮುರುಹಿನಿಂದ ವಿಟನೆದೆಗರಗಿಪ ತರುಣಿಯೊರ್ವಳು ರಾಜಿಪಳು (ಕಂನವಿ. ೨–೯೪).
[ಎದೆ (< ಎರ್ದೆ) + ಕರಗು + –ಇಸು$_1$]

**ಎದೆಗಲಿಗ** (ನಾ). = ಎದೆಗಾಱ: ಎದೆಗಲಿಗನಾ ಚಾರುದತ್ತನು ಬೆದಜವಾಕುಜಿಯೆರಡ ಹಿಂದಣ ಪದಗಳನುದಿರಗೊಳಿಸಿ (ಸಾಳ್ವಭಾ. ೬–೭೯).
[ಎದೆಗಲಿ$_0$ + –ಗ$_3$]

**ಎದೆಗವಚ** (ನಾ). ಎದೆಯನ್ನು ರಕ್ಷಿಸುವ ಕವಚ: ದೇಹಕ್ಕೆ ಕಾಪಾಗಿ ಹಾಕಿಕೊಳ್ಳುವ ಕವಚ; ಎದೆಗಾಪು; (ಗುತ್ತನಾಗಿರುವ) ಎದೆಗವಚ (Corslet- ಇಂಕನಿ). [ಎದೆ (< ಎರ್ದೆ) + ಕವಚ]

**ಎದೆಗಾಣು** (ಕ್ರಿ). ಮನಗಾಣು: ನಾನಿಲ್ಲ ತಾನುಂಟು ಎಂದೆದೆಗಂಡರೆ ಮೂರು ಕರ್ಮವು ಮುಗಿದು ಮುಕ್ತಿಬಲ (ಮುಕ್ತಕಂ. ೯–೩).
[ಎದೆ (< ಎರ್ದೆ) + ಕಾಣು (< ಕಾಣ್)]

**ಎದೆಗಾತಿ** 'ಎದೆಗಾರ್ತಿ' ನೋ.

**ಎದೆಗಾಪು**, ಎದೆಕಾಪು (ನಾ). = ಎದೆಗವಚ. **ಎದೆಕಾಪು** : ಉರಸ್ತ್ರಾಣ ; ಎದೆಕಾಪು (Breast Plate. ಇಂಕನ)
[ಎದೆ (< ಎರ್ದೆ) + ಕಾಪು$_1$]

**ಎದೆಗಾರ** 'ಎದೆಗಾಱ' ನೋ.

**ಎದೆಗಾರತನ** (ನಾ). ಧೈರ್ಯ; ದಿಟ್ಟತನ: ಎದೆಗಾರತನವಿಲ್ಲದಿದ್ದರೆ ಬೇಟೆಗೆ ಹೋಗಬಾರದು (ಮಧ್ಯಮ. ೧೩೪); ಎದೆಗಾರತನವು ಅವನಲ್ಲಿ ಎಲ್ಲಿ (ದೌಲತ್ ೩೪).
[ಎದೆಗಾರ (< ಎದೆಗಾಱ) + -ತನ]

**ಎದೆಗಾರಿಕೆ** (ನಾ). = ಎದೆಗಾರತನ: ಗಂಡನ ವಿರುದ್ಧ ಮಗಳ ಪರ ವಾದಿಸುವ ಎದೆಗಾರಿಕೆ ಅವರಲ್ಲಿ ಇರಲಿಲ್ಲ (ವಿದ್ಯಾರ. ೩); ಸಾವಿರಾರು ರೂಪಾಯಿಗಳನ್ನು ಕೊಡುವ ಎದೆಗಾರಿಕೆ ನನಗಿದೆ (ಕಾವೇರಿ. ೧೮೭).
[ಎದೆಗಾರ (< ಎದೆಗಾಱ) + -ಇಕೆ]

**ಎದೆಗಾರ್ತಿ**, ಎದೆಗಾತಿ (ನಾ). ಧೈರ್ಯಶಾಲಿನಿ; ದಿಟ್ಟೆ: ಗೌರಿ, 'ನನ್ನ ಹಣೆಯಲ್ಲಿ ಬರೆದುದೇ ಹಾಗೆ' ಎಂದು ಹೇಳಿ ತೆಪ್ಪಗಾಗುವಷ್ಟು ಎದೆಗಾರ್ತಿಯಲ್ಲ (ಮುಂಗಾಮು. ೨೩). **ಎದೆಗಾತಿ**: "ದಿಟ್ಟ ಹೆಂಗುಸು" (ಕಸ್ತೂರಿಕೋ. ೧೨೮). [ಎದೆಗಾಱ + -ತಿ$_1$ (< -ಇತ್ತಿ)]

**ಎದೆಗಾಱ**, ಎದೆಗಾರ (ನಾ). ಧೈರ್ಯಶಾಲಿ; ದಿಟ್ಟ: ಇದು ಚೀರಮಾಂಕ ಭೂವರನ ಚಾರಿತ್ರ ಮೇಲೆದೆಗಾಱ ಮನದಾಟದ ಸೂತ್ರ (ತ್ರಿಭುತಿ. ೧-೨೨). **ಎದೆಗಾರ**: ಎದೆಗಾರನಹುದು ಕೊಳ್ಳೆನುತ ಪಟಗಳಿಂದ ಸದೆದರು ಸಮರ ಸಾಹಸದಿ (ಸೌಂದಕಾ. ೮-೬೬); ಹಲವು ಎದೆಗಾರರು . . . ಒಳಗೆಹೋಗಲುದ್ಯೋಗಿಸಿದರು (ಮುಂಬಯಿ. ೫-೧೨೮); ಎದೆಗಾರನಾಗಿ ಮುಂದೆ ನಡೆ (ಅಂತರಾ. ೨೯).
[ಎದೆ (< ಎರ್ದೆ) + -ಗಾಱ (< -ಕಾಱ)]

**ಎದೆಗಿಚ್ಚು** 'ಎರ್ದೆಗಿಚ್ಚು' ನೋ.

**ಎದೆಗುಂಡಿ** (ನಾ). ಹೃದಯ; ಗುಂಡಿಗೆ: ನಮ್ಮ ಮಾರಾಜರನ್ನು ಬಯ್ಯುವನ ಎದೆಗುಂಡಿ ಗಟ್ಟಿ ಅಲ್ಲವಾ (ಸುಗುಗಂ. ೯೪-೧೮); ಸೇತುವೆಯಿಂದ ಮನೆಯ ಚಾವಡೀತನಕ ಓಡಿಬಂದಿದ್ದ ಅವರಿಗೆ . . . ಎದೆಗುಂಡಿಯ ಬಡಿತ ಜೋರಾಗಿತ್ತು (ದೇವಹಂ. ೨೩೭).
[ಎದೆ (< ಎರ್ದೆ) + ಗುಂಡಿ$_1$]

**ಎದೆಗುಂಡಿಕೆ** 'ಎದೆಗುಂಡಿಗೆ' ನೋ.

**ಎದೆಗುಂಡಿಗೆ**, ಎದೆಗುಂಡಿಕೆ (ನಾ). ೧. = ಎದೆಗುಂಡಿ: ತನ್ನ ಎದೆಗುಂಡಿಗೆ ಧಿಗಿಲುಧಿಗಿಲೆನ್ನದೊರ್ಬನೆ ಸುತನಲಾ ತನಗೆನ್ನದಹಿಯೆಲ್ಲಿದ್ದು ಬಂದಿತೊ ಎನ್ನದಾತ್ಮನೊಳು (ಬಸವು. ೪೮-೧೦); ಅವನೆದೆಗುಂಡಿಗೆ ಮೇಲೆ ಕುಳಿತುಕೊಂಡು (ಸುಗುಗಂ. ೯೭-೧೭); ಜೀವವಿಲ್ಲದ ಇಡಿಯ ಶರೀರದಲ್ಲಿ ಎದೆಗುಂಡಿಗೆಯಂತೆ, ಇದಿಷ್ಟು ಜೀವವಿದೆ (ಬಿಟ್ಟಹೊ. ೯೪); ಅವನ ಎದೆಗುಂಡಿಗೆಯೇ ಹೊಡಕೊಂಡಿತು (ಮಣಿಸ. ೮೯). ೨. ಧೈರ್ಯ; ದಿಟ್ಟತನ: ಅವನ ಎದೆಗುಂಡಿಗೆ ಎಷ್ಟಿದೆ ನೋಡು (ರೂಢಿ). **ಎದೆಗುಂಡಿಕೆ**: ೧. ಒಲ್ಲೆನಿಸಿ ಒಮ್ಮೊಮ್ಮೆ ನನ್ನ ಎದೆಗುಂಡಿಕೆಯ ಝಲ್ಲೆನಿಸಿ ಬೆಚ್ಚಿ ಎಚ್ಚರಿಯ ಮೆಚ್ಚನು ಹೊಚ್ಚಿ (ಸಖೀಗೀ. ೫೬-೧೩).
[ಎದೆ (< ಎರ್ದೆ) + ಗುಂಡಿಗೆ$_1$]

**ಎದೆಗುಂತ** 'ಎದೆಗೊಂತ' ನೋ.

**ಎದೆಗುಂದು** 'ಎರ್ದೆಗುಂದು' ನೋ.

**ಎದೆಗುಕ್ಕು** (ನಾ). (ಉಕ) (ಭಯದಿಂದ) ಎದೆಹಾರುವಿಕೆ; ವೇಗವಾದ ಹೃದಯದ ತುಡಿತ: ಸರ್ವಾಧಿಕಾರಿಯಾದ ಶಾಪಾನುಗ್ರಹ ಸಮರ್ಥ ಗುರು ಏನೆಂದಾನೋ ಎಂಬ ಎದೆಗುಕ್ಕಿನಲ್ಲಿ ಏನು ನಿದ್ದೆ ಉಳಿದೀತು ? (ಗಾಳಿಪ. ೧೬೨). [ಎದೆ (< ಎರ್ದೆ) + ಗುಕ್ಕು$_3$]

**ಎದೆಗುಟುಕು** (ನಾ). ಮೊಲೆಹಾಲಿನ ಗುಟುಕು: ಕೊಡು ತಾಯೇ ಇನ್ನೊಮ್ಮೆ ಒಮ್ಮೆ ಎದೆಗುಟುಕು (ಹೃದಸ. ೨-೧೨).
[ಎದೆ (< ಎರ್ದೆ) + ಗುಟುಕು (< ಕುಟುಕು$_2$)]

**ಎದೆಗುಟ್ಟು** (ಕ್ರಿ). ಎದೆಯಮೇಲೆ ಕುಟ್ಟು, —ಬಡಿ: ಹೆಟ್ಟ ಎಳೆಕೊಂಡೊಯಿದು ಲಿಂಗವ ಕಟ್ಟಿಸೆರಗಿಪ ನೋಡು ಜನರೆದೆಗುಟ್ಟುತಿಹ ಗುಂಡುಗಳನವನೀನಾಥನೆನೆ ಶ್ರೇಷ್ಠಿ (ಬಿಜ್ಜಪು. ೬೭-೧೯).
[ಎದೆ (< ಎರ್ದೆ) + ಕುಟ್ಟು$_1$]

**ಎದೆಗುದಿ$_1$** (ಕ್ರಿ). ಹೃದಯದಲ್ಲಿ ವ್ಯಥೆಪಡು; ಸಂತಾಪಪಡು: ಜನವತಿಶಯಂಬಟ್ಟು ಪೊಗಳಲು ಮನಸಿಜಾಂತಕ ಭಕ್ತತತಿಯಂ ನೆನೆದು ಮಂಚಣಪಂಡಿತರು ಪರವಾದಿ ಎದೆಗುದಿಯೆ (ಬಸವು. ೫೩-೬೨).
[ಎದೆ (< ಎರ್ದೆ) + ಕುದಿ$_1$]

**ಎದೆಗುದಿ$_2$** (ನಾ). ೧. ಎದೆಯ ತಳಮಳ; ಸಂತಾಪ: ಸ್ವಲ್ಪ ಜಡ್ಡಾದೊಡನೆಯೇ ಸಾಯುವೆನೋ ಬದುಕುವೆನೋ ಎಂಬ ಎದೆಗುದಿ ನನಗೆ (ಅಂತರಾ. ೨೬); ಮನಸ್ಸಿನಲ್ಲಿ ಎದೆಗುದಿ ಪ್ರಾರಂಭವಾಯಿತು (ಚಂದುಟ. ೪೪); ಅವನಿಗೆ ತುಂಬ ಎದೆಗುದಿ (ಕಮನೆ. ೭೩). ೨. "ಉಭಯಸಂಕಟ; ಪೇಚಾಟ" (ಜಾನಕೋ. ೨೫). ೩. ಅಂಜಿಕೆ; ಭಯ: ಎದೆಗುದಿ ಮೊದಲೇಟಗೇ ಹಾರಿಹೋಗಿತ್ತು (ಬಿಟ್ಟಹೊ. ೨೧); ಹೇಗೆ ಎಂಬ ಎದೆಗುದಿ ಹುಟ್ಟಿತು (ಕನನೆ. ೨೪). ೪. ಚಿಂತೆ; ಕಳವಳ; ಕಾತರತೆ: ಮಧುಸೂದನನಾಮಕನೆ ವಿಜಯವಿಠಲ ಎನ್ನ ಎದೆಗುದೆ [ದಿ]ಬಿಡಿಸೊ ನೆನಸಿದೆ ನೆನಪಾದಾಗ (ನೋಕ್ಷದೀ. ೧೫೭-೫).
[ಎದೆ (< ಎರ್ದೆ) + ಕುದಿ$_2$]

**ಎದೆಗುದಿಪಡು** (ಕ್ರಿ). ೧. ತಳಮಳಿಸು; ಸಂತಾಪಪಡು; ದುಃಖಿಸು. ೨. ಅವಸರಮಾಡು; ಗಡಿಬಿಡಿಮಾಡು: ಎದೆಗುದಿಪಟ್ಟು ಕುದಿಯುವ ಅವರೆ ಬಾಯೊಳಗೆ ಹಾಕಿಕೊಂಡ (ಗಾದ).
[ಎದೆಗುದಿ$_2$ + ಪಡು$_1$]

**ಎದೆಗುದಿಹ** (ನಾ). ತಳಮಳ; ಸಂತಾಪ: ಮದನಂಗೆ ಚಿಂತೆ ಮಾಯೆಗೆ ದುಗುಡವಂತಕಂಗೆದೆಗುದಿಹ [ಪಾಠಾಂ. ಎದೆದಲ್ಲಣಾ] ವಾಶಾದಿ ವಿಷಯ ಷಡುವರ್ಗಕ್ಕೆ ಹೆದಱು (ಸಿದ್ಧರಾ. ೧-೪೭).
[ಎದೆ (< ಎರ್ದೆ) + ಕುದಿಹ]

**ಎದೆಗುಪ್ಪಸ** (ನಾ). ಎದೆಗೆ ತೊಟ್ಟುಕೊಳ್ಳುವ ಕುಪ್ಪಸ; ರವಿಕೆ: ಗುಂಜಾಭರಣವೆಸೆಯೆ ರಂಜಿಸಲು ತೊಟ್ಟ ಎದೆಗುಪ್ಪಸಂ ತಾಂ ಮೆಱೆಯೆ (ಕಣ್ಣರ. ೧೨೭-೧೦). [ಎದೆ (< ಎರ್ದೆ) + ಕುಪ್ಪಸ]

**ಎದೆಗುಮ್ಮು** (ಕ್ರಿ). ಎದೆಗೆ ಕುಟ್ಟು, —ಬಡಿ (ಉಕ. ೬).
[ಎದೆ (< ಎರ್ದೆ) + ಕುಮ್ಮು$_1$]

**ಎದೆಗುರುಡ** (ನಾ). ಹೃದಯವಿಲ್ಲದವನು; ಅರಸಿಕ: ಅಸ್ಥಾನ ವಿದ್ವಾಂಸರೆಲ್ಲರೂ ಅಂದಿನ ಕಾವ್ಯಾವಸರದಲ್ಲಿ ಎದೆಗುರುಡರಾಗಿಬಿಟ್ಟಿದ್ದರೆನ್ನುವುದೆ ? (ನಾಡೋಜ. ೧೯೨). [ಎದೆ (< ಎರ್ದೆ) + ಕುರುಡ]

**ಎದೆಗೂಡು** (ನಾ). ಎದೆಯುಗೂಡು; ಎದೆಯ ಅಸ್ಥಿಪಂಜರ: ಹೊಟ್ಟೆ ಎದೆಗೂಡನ್ನು ಸೇರಿದೆ (ರೂಢಿ). [ಎದೆ (< ಎರ್ದೆ) + ಗೂಡು]

**ಎದೆಗೆಡಿಸು** 'ಎರ್ದೆಗೆಡಿಸು' ನೋ.

**ಎದೆಗೆಡು** 'ಎರ್ದೆಗೆಡು' ನೋ.

**ಎದೆಗೆಳೆಯ** (ನಾ). ಹೃದಯದ ಸ್ನೇಹಿತ; ಆಪ್ತಗೆಳೆಯ: ಯಾರಣ್ಣ ನೀ ಬಿಡುಗಣ್ಣನೇ ಎದೆಗೆಳೆಯ ಕುಳಿತಿಹೆ ತಣ್ಣನೇ (ಅರಳು. ೧೯೬-೧).
[ಎದೆ (< ಎರ್ದೆ) + ಕೆಳೆಯ]

**ಎದೆಗೇಡಿ** 'ಎರ್ದೆಗೇಡಿ' ನೋ.

**ಎದೆಗೇಡು** 'ಎರ್ದೆಗೇಡು' ನೋ.

**ಎದೆಗೊಂತ**, ಎದೆಗುಂತ (ನಾ). ಎದೆಗೆ ಕೊಂತದಂತೆ ಇರುವುದು; ಎದೆಗೆ ಶೂಲದಂತಿರುವುದು : ಶೈವ್ರಂಗೆದೆಗೊಂತ ವೈಷ್ಣವ ಜೀಮೂತ ಝುಂಝೂಮಾರುತ (ಶೂನ್ಯಸಂ. ೮೧-೧೮). **ಎದೆಗುಂತ** : ಅಂತೇಂಬರ ಗಂಡನೆಂಗು ಕೊಂಡಾಡಿಪ ಪಂತದ ದೊರೆಯಿವನಾರೊ ಕಂತುಸನ್ನಿಭ ರಿಪು ಭೂಮಿಾಶ್ವರರೆದೆಗುಂತ ಕಂಠೀರವರಾಜ (ಕಂಠವಿ. ೧೩-೩೭).
[ಎದೆ (< ಎರ್ದೆ) + ಕೊಂತ]

**ಎದೆಗೊಡು** 'ಎರ್ದೆಗೊಡು' ನೋ.

**ಎದೆಗೊಯಿಕೆ** 'ಎದೆಗೊಯ್ಕು' ನೋ.

**ಎದೆಗೊಯಿಕೆತನ** 'ಎದೆಗೊಯ್ಕುತನ' ನೋ.

**ಎದೆಗೊಯ್ಕು**, ಎದೆಗೊಯಿಕೆ (ನಾ). ವಂಚಕ; ದ್ರೋಹಿ. 'ಎದೆಗೊಯ್ಕುತನ'. ಪರಾ. **ಎದೆಗೊಯಿಕೆ**: "ಒಬ್ಬರನ್ನು ಅಂಜಿಸುವವ" (ಜಾನಕೋ. ೨೫). [ಎದೆ (< ಎರ್ದೆ) + ಕೊಯ್ಕು]

**ಎದೆಗೊಯ್ಕುತನ**, ಎದೆಗೊಯಿಕೆತನ (ನಾ). ದ್ರೋಹ; ವಂಚನೆ: ತಮ್ಮಯ ಎದೆಗೊಯ್ಕತನದಿಂದ ಮತ್ತಿನ ಮರೆವಾಳ್ವರ್ಗಂಗೂ ಪ್ರಭುದ್ರೋಹದ ವಿಷವಮ್ಮ ಸವಿದೋರುತ್ತ (ಮಂತ್ರಶ. ೧೭೫-೧೪). **ಎದೆಗೊಯಿಕೆತನ**: (ಕ). [ಎದೆಗೊಯ್ಕು + -ತನ]

**ಎದೆಗೊಳ್** 'ಎರ್ದೆಗೊಳ್' ನೋ.

**ಎದೆಗೊಳಿಸು** 'ಎರ್ದೆಗೊಳಿಸು' ನೋ.

**ಎದೆಡೋಜು** (ನಾ). ಎದೆಯ ಒಳಭಾಗ, —ಡೊಗರು: ಕೆಲರೆದೆಡೋಜುಗಳ ಪೂರಾಯಗಾಯದಲುಸುರ ತೆಗೆಬಗೆಯ ಕಾಜುದರು ರಕ್ತವನು (ಕುವ್ಯಾವಿ. ೭-೪೭). [ಎದೆ (< ಎರ್ದೆ) + ಡೋಜು]

**ಎದೆತಟ್ಟು** (ಕ್ರಿ). ಎದೆಯನ್ನು ತಟ್ಟಿಕೊಳ್ಳು; ಧೈರ್ಯವಾಗಿರು.
ಎದೆತಟ್ಟಿಹೇಳು = ಪೌರುಷದಿಂದ ನಿರ್ಧಾರವಾಗಿ ಹೇಳು; ಪ್ರತಿಜ್ಞಾಪೂರ್ವಕವಾಗಿ ಹೇಳು: ಅವನು ಎದೆತಟ್ಟಿಹೇಳಿಕೊಂಡ (ರೂಢಿ). [ಎದೆ (< ಎರ್ದೆ) + ತಟ್ಟು$_1$]

**ಎದೆತುಂಬು** 'ಎದೆದುಂಬು' ನೋ.

**ಎದೆತೆರೆ** 'ಎರ್ದೆದೆಱೆ' ನೋ.

**ಎದೆತೊಟ್ಟು** (ನಾ). ಮೊಲೆಯ ತೊಟ್ಟು; ಚೂಚುಕ: ಮಗುವಿಗೆ ಎದೆಹಾಲು ಕೊಡಬೇಕಾಗಿರುವುದರಿಂದ ಎದೆತೊಟ್ಟುಗಳು ಹತ್ತಿಕೊಂಡಿದ್ದರೆ . . . ಹೊರಕ್ಕೆ ಮೃದುವಾಗಿ ಎಳೆಯಬೇಕು (ಗೃಹವೈ. ೧೧೧).
[ಎದೆ (< ಎರ್ದೆ) + ತೊಟ್ಟು]

**ಎದೆದಟ್ಟಿ** (ನಾ). ಎದೆಗೆ ಕಟ್ಟಿದ ದಟ್ಟಿ: ಇರಿದುರುತರದಿ ಸೇನೆಯಂ ಸೋನೆಯಂ ಹೊರಳಿಸುತ ಬೀಗಿ ಮುಂಬರಿದು ಕುಲಿಕುಲಿ ರವದಿ ತರುಣಿಯರ್ಕಾದಿದರ್ಕಟ್ಟಿದೆದೆ[ದ]ಟ್ಟಿ ಬಿಗಿದಿಟ್ಟ ನಿರಿ ಕಾಸಿಯಿಂದ (ಜಿನಮು. ೩-೪೧). [ಎದೆ (< ಎರ್ದೆ) + ದಟ್ಟಿ]

**ಎದೆದಲ್ಲಣ** 'ಎರ್ದೆದಲ್ಲಣ' ನೋ.

**ಎದೆದಲ್ಲಳ** 'ಎರ್ದೆದಲ್ಲಣ' ನೋ.

**ಎದೆದಾಗಿಸು** (ಕ್ರಿ). ಎದೆಯನ್ನು ತಾಕಿಸು, —ಮುಟ್ಟಿಸು: ಬೇಗದೊಳೆಯ್ತಂದೆನೆವಧರಿಸೆಂದೆದೆದಾಗಿಸಿ ನಿಂದನಾ ಸಖನು (ಭರತೇ. ೩೭-೪೨).
[ಎದೆ (< ಎರ್ದೆ) + ತಾಗಿಸು]

**ಎದೆದುಂಬು**, ಎದೆತುಂಬು (ಕ್ರಿ). (ಸಂತೋಷದಿಂದ) ಹೃದಯ ತುಂಬು, —ಉಬ್ಬು: ನನೆಗಣೆಯು ಬೇಕಾದರೀ ಬೀವನು ಕೆಡಿಸದಿರು ನಮ್ಮ ಕುಸುಮಾಸ್ತ್ರನ ಚೆಲುವನೀಕ್ಷಿಸಲು ನಿನಗೆದೆದುಂಬಿ ಬಹವೆನಲು (ಸಾಳ್ವಭಾ. ೧೯-೩೨). **ಎದೆತುಂಬು** : ಅವ ತುಂಬಿಹುದಿಲ್ಲಿ ಎರೆವವರಿಗೆರೆವಷ್ಟನೀವ ಮನತುಂಬುವಷ್ಟರಿವ ಎದೆತುಂಬುವಷ್ಟೊಲವ ಪಡೆಯೆ ಜೀವ? (ಮಲೆದೇ. ೩೧-೧೦).
ಎದೆತುಂಬಿಬರು = (ಸಂತೋಷ) ಮನದಲ್ಲಿ ತುಂಬಿ ತುಳುಕು: ಅಮರನಾಥನಂಥವನಿಗೂ ಎದೆತುಂಬಿಬಂದು ಮಾತನಾಡಲಾರದೆ ಅಲ್ಲಿ ನಿಲ್ಲಲಾರದೆ ಹೊರಟುಹೋದನು (ಬಂಕಿಮ. ೧೦೪).
[ಎದೆ (< ಎರ್ದೆ) + ತುಂಬು$_1$]

**ಎದೆದುಡುಕು** (ನಾ). "ಹೆದರಿಕೆ, ಹೃದಯಕಂಪನ" (ಪ್ರಭಣ್ಣ).
[ಎದೆ (< ಎರ್ದೆ) + ತುಡುಕು$_2$]

**ಎದೆದೆರೆ** 'ಎರ್ದೆದೆಱೆ' ನೋ.

**ಎದೆನೀವು** (ಕ್ರಿ). ೧. ಎದೆಯನ್ನು ತಿಕ್ಕು. ೨. (ಆಲಂ) ಧೈರ್ಯ ತಂದುಕೊ: ನಾನು ಎದೆನೀವಿಕೊಂಡೇ ಈತನೊಡನೆ ಹೋರಾಡಬೇಕಾಗಿರುವುದು (ಚೆನ್ನಬೇ. ೧೧೨). [ಎದೆ (< ಎರ್ದೆ) + ನೀವು$_1$]

**ಎದೆನುಡಿತ** (ನಾ). ಎದೆಯ ಮಾತು: ಕಡಗ ಕಂಕಣ ಕಿಣಿಕಿಣಿಯೆನೆ ಅಡಿಗೆ ಇರುಳೆ ಝಣರೆನೆ ಎದೆನುಡಿತಕೆ ಚುಕ್ಕಿ ಮಿಡಿಯೆ ಕೊಳಲನೂದಿ ಕುಣಿವನೆ (ಗೋಕುಪ. ೨೯-೧೧). [ಎದೆ (< ಎರ್ದೆ) + ನುಡಿತ]

**ಎದೆನೋವು** 'ಎರ್ದೆನೋವು' ನೋ.

**ಎದೆಪಟ್ಟಿ** (ನಾ). ಎದೆಯಮೇಲೆ ಕಟ್ಟಿಕೊಳ್ಳುವ ಪಟ್ಟಿ: ಸುವರ್ಣಮಯವಾದ ಎದೆಪಟ್ಟಿಯಿಂದಲೂ ಮೇಲುಹೊದಿಕೆಯಿಂದಲೂ ಪ್ರಕಾಶಮಾನವಾದ ಒಂದೊಂದು ಆನೆ (ಕೃವಾಉ. ೨೪೪).
[ಎದೆ (< ಎರ್ದೆ) + ಪಟ್ಟಿ$_2$]

**ಎದೆಪದಕ** (ನಾ). ಎದೆಯಮೇಲೆ ಧರಿಸುವ ಪದಕ (ಕ).
[ಎದೆ (< ಎರ್ದೆ) + ಪದಕ]

**ಎದೆಬಡಿತ** (ನಾ). ಹೃದಯದ ತುಡಿತ: ಸುಬ್ಬನ ಮಾತಿನಿಂದ ಎದೆಬಡಿತ ಕಡಮೆಯಾದದ್ದು ಗಿರಿಜಳಿಗೆ (ದೇವಹಂ. ೧೨೨).
[ಎದೆ (< ಎರ್ದೆ) + ಬಡಿತ]

**ಎದೆಬಾವು** (ನಾ). ಎದೆಯ ಮೇಲೆ ಏಳುವ ಬಾವು; ಸ್ತನರೋಗ: ಬಂದ ಎದೆಬಾವ್ನಂದದಲಿ ಇಳಿತಂದು ಜೋಲುವ ಕರಡಿಗೆಯ ಜನಸಂಧಿಯೊಳಗೆಲ್ಲೂರ ಕೊಬ್ಬಿಹನವನ ಲೋಚನಕೆ (ಬಜ್ಜವು. ೬೮-೨೧); ಕಲ್ಪದಲ್ಲಿ ಇಕ್ಕಿ ನಿಂಬೆಯ ಹುಳಿಯಲ್ಲಿ ಏಳುಬಾರಿ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯ ಮಾಡಿ ಅಲ್ಲದ ರಸದಲ್ಲಿ ಕೊಳ್ಳಲು . . . ಎದೆಬಾವು . . . ಮಾಣುವುವು (ವೈವೈನಿ. ೫೨). [ಎದೆ (< ಎರ್ದೆ) + ಬಾವು]

**ಎದೆಭಾವ** (ನಾ). ೧. ಧೈರ್ಯ; ಪರಾಕ್ರಮ (ಕ). ೨. ಮೊಲೆ ಸರಿಯಾಗಿ ಬೆಳೆದಿರುವ ಸ್ಥಿತಿ: ನಪುಂಸಕಂ . . . ಮೈನರೆಯದೆ ಎದೆಭಾವವಿಲ್ಲದ ಹೆಂಗಸಿಗೂ ಗಡ್ಡಮಿಾಸೆಗಳೂ ಇಲ್ಲದೇ ಲಿಂಗವಿಲ್ಲದ ಗಂಡಸಿಗೂ ಹೆಸರು (ಸಿದ್ಧಾಂಶಿ. ೧೫೫). [ಎದೆ (< ಎರ್ದೆ) + ಭಾವ$_2$]

**ಎದೆಮಟ್ಟ** (ನಾ). ಎದೆಮುಳುಗುವಷ್ಟು ಆಳ; ಒಂದು ಅಳತೆ: ಕೆರೆಯಲ್ಲಿ ನೀರು ಎದೆಮಟ್ಟ ಇದೆ (ರೂಢಿ). [ಎದೆ + ಮಟ್ಟ$_2$]

**ಎದೆಮಿಡಿತ** (ನಾ). ಎದೆಬಡಿದುಕೊಳ್ಳುವುದು: ಎಲ್ಲ ಬೆಳೆಗಳನಳಿದು ಸರ್ವಸಮವಾಯದೊಳು ಪ್ರಸ್ಫುರಿಸುತಿರುವಿರವಿನೆದೆಮಿಡಿತದಂತೆ (ಮಲೆದೇ. ೫೨-೮). [ಎದೆ (< ಎರ್ದೆ) + ಮಿಡಿತ]

**ಎದೆಮುಗುಳು** (ನಾ). ಎದೆಯೊಳಗಿರುವ ಒಂದು ಸಣ್ಣ ಅಂಗ: ಇದರ (ತ್ವಚೆಯ) ಕೆಳಗಿನ ತುದಿಯು ಎದೆಮುಗುಳಿನ ಮೇಲೆ ಆಮಾಶಯಕ್ಕೆ ಕೂಡಿರುತ್ತದೆ (ಮುಂಬಯಿ. ೩-೩೦೮).
[ಎದೆ (< ಎರ್ದೆ) + ಮುಗುಳು (< ಮುಗುಳ್$_2$)]

**ಎದೆಮುಚ್ಚು** (ನಾ). ಎದೆಯನ್ನು ರಕ್ಷಿಸುವ ಕವಚ: ಕರಿಯ ಮೇಕೆ ಚಕ್ಕಳದ ಜುಬ್ಬ – ಎದೆಮುಚ್ಚು (Breast Plate) ಕಂಬಳಿಯ ಚಡ್ಡಿ . . . ಒಂದು ಭಲ್ಲೆಯನ್ನು ಹಿಡಿದಿದ್ದಾನೆ (ಆರ್ಯಕ. ೧).
[ಎದೆ (< ಎರ್ದೆ) + ಮುಚ್ಚು$_2$]

**ಎದೆಮುಳುವು** (ನಾ). ೧. ದುಃಖದ ಮೂಲ; ಸಂತಾಪದ ಕಾರಣ: ಹಗಲಿರುಳು ನನ್ನ ಜೀವನದಲ್ಲಿ ಹೆಸರಲ್ಲಿ ನಿಂತಂಥ ಸಂತಾನ ಒಂದಿದೆ ಎದೆಮುಳುವು (ಸಖೀಗೀ. ೩೦-೭೧೨). ೨. ದುಃಖ; ಸಂತಾಪ.
[ಎದೆ (< ಎರ್ದೆ) + ಮುಳುವು (< ಮುಳುಹು)]

**ಎದೆಮೆಟ್ಟು** (ನಾ). (?): ಮುಟ್ಟುವರೆ ಪರರಸ್ತ್ರಿಯನು ಮತಿಗೆಟ್ಟು ಕೊಂದ್ಯೆ ಹಾರುವನನೆದೆಮೆಟ್ಟನಾತನ ಮಾತಿನಲಿ ಕಟಕಟ ವಿಧೀದದಲಿ (ನಿಭಾಗ. ೬-೧೦-೩೫). ℙ ಈ ಶಬ್ದ ಎಡೆಮೆಟ್ಟು ಎಂದಿರಬಹುದೆ?
[ಎದೆ (< ಎರ್ದೆ) + ಮೆಟ್ಟು₂]

**ಎದೆಮೊಳೆ** (ನಾ). (ಗಾಡಿಯ) ಅಚ್ಚಿನ ಮಧ್ಯದಲ್ಲಿ ಮೂಕಿ ಕೂಡಿಸಲು ಹಾಕುವ ಮೊಳೆ: ಗಾಡಿಗೆ ಎದೆಮೊಳೆಯೇ ಎದೆಯಿದ್ದಂತೆ (ರೂಢಿ).
[ಎದೆ (< ಎರ್ದೆ) + ಮೊಳೆ₂]

**ಎದೆಯಗಾಮುಂಡ** (ನಾ). ಒಬ್ಬಾತನ ಹೆಸರು: ಸೊರ್ಕ್ಕಗಾಮುಣ್ಡರುಂ ಎದೆಯಗಾಮುಣ್ಡರುಂ (ಇಆ. XIX, ೧೪೪-೯; 696).
[ಎದೆ ? + ಗಾಮುಂಡ]

**ಎದೆಯಗ್ಗಿ** (ನಾ). ಎದೆಯ ಅಗ್ನಿ, —ಸಂತಾಪ: ಓ ವಂದ್ಯರಿರ ತವಿಸಿಮನ್ನೆದೆಯಗ್ಗಿಯಂ ಬರಿಸಿ ಸುಗ್ಗಿಯಂ (ಶ್ರೀರಾಮಾ. ೯-೨೩೨).
[ಎದೆ (< ಎರ್ದೆ) + ಅಗ್ಗಿ₁]

**ಎದೆಯಪ್ಪು** (ಕ್ರಿ). ಎದೆಗೆ ಅಪ್ಪಿಕೊ, —ತಬ್ಬಿಕೊ: ಎದೆಯಪ್ಪೆ ನೆಲದ ತಂಪಂ ಧರೆ ಧರಿಸೆ ತನುಭಾರಮಂ ಲಘಿಮೆಯೊಳು ಚಿತ್ತವಾಡೆ (ಮಲೆದೇ. ೨೧-೯).
[ಎದೆ (< ಎರ್ದೆ) + ಅಪ್ಪು₁]

**ಎದೆಯಾರು** (ಕ್ರಿ). ಧೈರ್ಯಗುಂದು; ಹೆದರು; "ಅಂಜು" (ಜಾನಕೋ. ೨೪).
[ಎದೆ (< ಎರ್ದೆ) + ಆರು₄ (< ಆಱು₁)]

**ಎದೆಯಿರಿ** (ಕ್ರಿ). ಎದೆಯನ್ನು ತಿವಿ, —ಚುಚ್ಚು: ಯಾರೊ ಎದೆಯಿರಿಯುವಂತೆ ಅಳುವ ಶಬ್ದ ಕೇಳಿಬಂತು (ಪುನರು. ೧೮೮).
[ಎದೆ (< ಎರ್ದೆ) + ಇರಿ₂ (< ಇಱು₁)]

**ಎದೆಯಿಳಿ** (ಕ್ರಿ). ಧೈರ್ಯಗುಂದು: ದುರ್ಯೋಧನಾದಿಗಳು ಎದೆಯಿಳಿದುದನ್ನೇ ಸೂಚಿಸುತ್ತಿದೆ (ನಾಡೋಜ. ೨೦೨).
[ಎದೆ (< ಎರ್ದೆ) + ಇಳಿ₁ (< ಇೞಿ₁)]

**ಎದೆಯುಕ್ಕು** (ಕ್ರಿ). ಎದೆತುಂಬು; ಮನಸ್ಸು ತುಂಬು: ವಾಸ್ತವ ಸ್ಥಿತಿ ಹಾಗಿತ್ತು; ಎದೆಯುಕ್ಕಿ ಸೂಸುವ ಆ ಕಲುಷವನ್ನು ಕವಿ ತಡೆಯಲಾರದಾದನು (ನಾಡೋಜ. ೩೬೧).
[ಎದೆ (< ಎರ್ದೆ) + ಉಕ್ಕು₁ (< ಉಕ್ಕು₁)]

**ಎದೆಯುದ್ದ** (ನಾ). ಎದೆಯ ಮಟ್ಟಕ್ಕೆ ಬರುವಷ್ಟು ಎತ್ತರ: "ಅಟ್ಟಾಲ– ಎದೆಯುದ್ದ ಗೋಡೆ" (ಗಂಗಾಮು. ೫).
[ಎದೆ (< ಎರ್ದೆ) + ಉದ್ದ]

**ಎದೆಯುಬ್ಬು** 'ಎರ್ದೆಯುಬ್ಬು' ನೋ.

**ಎದೆಯುರಿ** (ನಾ). ೧. ಎದೆಯ ಉರಿ, —ಸಂತಾಪ: ಎದೆಯುರಿ ಹೆಚ್ಚಾಗಿದೆ (ರೂಢಿ). ೨. ಹೊಟ್ಟೆಕಿಚ್ಚು; ಅಸೂಯೆ.
[ಎದೆ (< ಎರ್ದೆ) + ಉರಿ₂]

**ಎದೆಯೊಡೆ** (ಕ್ರಿ). ೧. ಎದೆ ಒಡೆದುಹೋಗು, —ಸೀಳು. ೨. ಧೈರ್ಯಕೆಡು: ಕೊರಂಕುಶದಲಾನೆಯ ಬೆಗಡುಗೊಳಿಸಲು ಬೀದಿವರಿದುದು ಸುಭಟರೆದೆಯೊಡೆಯೆ (ಕುಮ್ಮಾದ್ರೋ. ೩-೧೩).
[ಎದೆ (< ಎರ್ದೆ) + ಒಡೆ₁]

**ಎದೆಯೊಲವು** (ನಾ). ಎದೆಯ ಒಲವು, —ಪ್ರೀತಿ: ನಿನ್ನದು ಕನ್ನಡದೆದೆಯೊಲವೆಂಬರು (ಹೊಂಗಳು. ೧೧-೧೭).
[ಎದೆ (< ಎರ್ದೆ) + ಒಲವು]

**ಎದೆರವ** (ನಾ). = ಎದೆಬಡಿತ: "ಮುದಮೆನಲು ಚರ್ಚಿವ್ರೀಹಿಡಿಯೆನೆ ಲಜ್ಜೆಯಕ್ಕಿದೆ [ಶಾತಾಂ. ಪ್ರೀತ್ರಪೆ ವ್ರೀಡೆಯೆನೆ ಲಜ್ಜೆಯದು] ರವಂ ತ್ರಾಡಮಕ್ಕು" (ಮಂಗರಾ. ೯೭-೧೬). ℙ ಅದು ರವ ಎಂಬ ಭಿನ್ನ ಶಬ್ದಗಳನ್ನು ಎದೆರವ ಎಂದು ಕಿಟ್ಟೆಲ್ ಅವರು ಗ್ರಹಿಸಿದ್ದಾರೆ.
[ಎದೆ (< ಎರ್ದೆ) + ರವ₁]

**ಎದೆವತ್ತಿಗೆ** (ನಾ). ಎದೆಯನ್ನು ಮುಚ್ಚುವ ವಸ್ತ್ರ (?): ಬಿಗಿದು ಗಳವತ್ತಿಗೆಯನೆದೆವತ್ತಿಗೆಯ ಘನ ಮುಂಡಿಗೆಯ ತಾಡಿಯ ಬಿಗಿದು (ಕುಮ್ಮಾದ್ರೋ. ೩-೩).
[ಎದೆ (< ಎರ್ದೆ) + ವತ್ತಿಗೆ]

**ಎದೆವಯ್ಯ** (ನಾ). ಹೃದಯಸ್ಥ ಪರಮಾತ್ಮ; ಎದೆಯಾಣ್ಮ: ಹಿರಿದಾಗಲಿ ಎನ್ನ ಮನ ಕಿರಿದಾಗಲಿ ನನ್ನತನ ಹಿರಿಯರೆಲ್ಲ ಹರಸಲೆನ್ನ ಕಿರಿಯನೆಂದು ಅನುದಿನ ಎಂದು ಎದೆವಯ್ಯನನ್ನು ಬೇಡುತ್ತಿದ್ದರು (ಬದುಬೈ. ೬೯).
[ಎದೆ (< ಎರ್ದೆ) + ಅಯ್ಯ₁]

**ಎದೆವಲಗೆ** (ನಾ). (ಹಡಗಿನ) ದೊಡ್ಡ ಹಲಗೆ: ಪಡಗು ಮುಳುಗುವ ಸಮಯದಲಿ ಕಂಗೆಡದೆ ಸಿದ್ಧಾರ್ಥನ ಕರೆದು ಸಂಗಡವೆರಡುಯೆದೆವಲಗೆಯೇಱಿದರರಸ ಕೇಳೆಂದ (ಸಾಳ್ವಭಾ. ೭-೪೬).
[ಎದೆ (< ಎರ್ದೆ) + ಪಲಗೆ]

**ಎದೆವೊಡಕ** (ನಾ). ೧. (ಮತ್ತೊಬ್ಬರ) ಎದೆಯನ್ನು ಒಡೆಯುವವನು; ಧೈರ್ಯಗೆಡಿಸುವವನು (ಕಿ). ೨. ಎದೆ ಒಡೆದು ಹೋದವನು; ಹೇಡಿ; "ಅಂಜುಬುರುಕ" (ಜಾನಕೋ. ೨೫).
[ಎದೆ (< ಎರ್ದೆ) + ಒಡಕ]

**ಎದೆಶೂಲೆ** (ನಾ). ಎದೆಯ ಬೇನೆ; ನೋವು (ಕಿ).
[ಎದೆ (< ಎರ್ದೆ) + ಶೂಲೆ]

**ಎದೆಸೆಟಿಸು** (ಕ್ರಿ). ೧. ಎದೆಯನ್ನು ನೆಟ್ಟಗೆ ನಿಲ್ಲಿಸು. ೨. (ಅಲಂ) ಸೊಕ್ಕುಮಾಡು: "... ನಿನಗೆ ಹೇಗಯ್ಯ ಸಿಕ್ಕಿದುವು ಈ ಕಾರ್ಡುಗಳು?" ವಾಮನರಾಯರು ಎದೆಸೆಟಿಸಿಕೊಂಡು ಕೇಳಿದರು ದರ್ಪದಿಂದ (ಮರಳಿ. ೧೧೮).
[ಎದೆ (< ಎರ್ದೆ) + ಸೆಟಿಸು]

**ಎದೆಸೆಳವು** (ನಾ). ಎದೆ ಸೆಳೆದುಕೊಳ್ಳುವ ಒಂದು ಬಗೆಯ ರೋಗ (Anjina. ಇಂಕನಿ).
[ಎದೆ (< ಎರ್ದೆ) + ಸೆಳವು]

**ಎದೆಸೋಲು** (ಕ್ರಿ). ಮನಸೋಲು: ರೂಪಿಗೆ ಸೋತನು ಚಕ್ರಿಯ ಸುತರ ವಿದ್ಯಾಪರಿಣತೆಗೆದೆಸೋತಾ ಕೂಪತನದೊಳು ಕೈಮುಗಿಯೆ (ಭರಜ. ೪೩-೧೦೩).
[ಎದೆ (< ಎರ್ದೆ) + ಸೋಲು₁ (< ಸೋಲ್)]

**ಎದೆಹಚ್ಚಿಗೆ** (ನಾ). ಎದೆಯಮೇಲೆ ಧರಿಸುವ ಕವಚ: ರಾಕ್ಷಸ ಪಾತ್ರಗಳಲ್ಲಿ ... ತರತರದ ಗೈರಿಕಗಳು, ಕರ್ಣಕುಂಡಲ, ಎದೆಹಚ್ಚಿಗೆ, ಎದೆಹಾರ ... ಉಪಯೋಗಿಸಿ ಪ್ರದರ್ಶಿಸುತ್ತಾರೆ (ಯಕ್ಷಗಾ. ೧೯).
[ಎದೆ (< ಎರ್ದೆ) + ಹಚ್ಚಿಗೆ₀ (< ಪಚ್ಚು₁)]

**ಎದೆಹಾರು** (ಕ್ರಿ). ಎದೆ ವೇಗವಾಗಿ ಬಡಿದುಕೊಳ್ಳು; ಅಂಜು; ಹೆದರು: ನಂದ ದುಲಾಲರ ಎದೆ ಹಾರಹತ್ತಿತು (ಕುರಿಹಿಂ. ೫೫); ಇನ್‌ಸ್ಪೆಕ್ಟರನ ಎದೆ ಹಾರಹತ್ತಿತು (ಕೊತಕಾ. ೬೯).
[ಎದೆ (< ಎರ್ದೆ) + ಹಾರು₂ (< ಪಾಱು₁)]

**ಎದೆಹಾಲು** (ನಾ). ಮೊಲೆಯ ಹಾಲು; ಸ್ತನ್ಯ: ನನ್ನ ಹೆಂಡತಿಗೆ ಒಂದು ಮಗು ಹುಟ್ಟಿ ಸತ್ತುಹೋಗಿತ್ತು. ಎದೆಹಾಲು ಇಂಗಿರಲಿಲ್ಲ (ಪ್ರತಾಪ. ೧೪).
[ಎದೆ (< ಎರ್ದೆ) + ಹಾಲು₁ (< ಪಾಲ್₁)]

**ಎದೆಹಾಜು** (ನಾ). ಅಂಜಿಕೆ; ಭಯ: ಕುಸುಮಾಜಿಯೆಲ್ಲರ ಸದನದ ಬಾಹ್ಯಕೆ ನೂಂಕಿ ಎದೆಹಾಜು ತನಗಿಲ್ಲದೆಡೆಮಾಡುತ್ತಿದ್ದಳುಬ್ಬಿದ ಹರುಷದೊಳಾತ್ಮಪತಿಗೆ (ಭರಜ. ೧೦-೨೫).
[ಎದೆ (< ಎರ್ದೆ) + ಹಾಜು₂ (< ಪಾಜು₂)]

**ಎದೆಹಾಱುತನ** (ನಾ). ಎದೆಹಾರಿಕೆ, —ಬಡಿತ: ಕುರಿಯಾಗೆ ಕೊರಲಂ ಕೊಯ್ಸಿಕೊಂಡು ಭೂತಕ್ಕೆ ಬಲಿಯಾಗುತಿದೆ ಎನ್ನ ಮೆಯ್ಯೆಂಬುದೊಂದೆದೆಹಾಱುತನದ ಸಂಕಟನ ಮಱೆಸದು (ಸಮ್ಯಕೌ. ೨-೬೬). [ಎದೆಹಾಱು + -ತನ]

**ಎದೆಹುಯ್ಲು** 'ಎದೆಹೊಯ್ಲು' ನೋ.

**ಎದೆಹುಯ್ಲುತನ** 'ಎದೆಹೊಯ್ಲುತನ' ನೋ.

**ಎದೆಹೊಯ್ಲು**, ಎದೆಹುಯ್ಲು (ನಾ). ಎದೆಬಡಿತ. 'ಎದೆಹೊಯ್ಲುತನ' ಪರಾ. **ಎದೆಹುಯ್ಲು** : 'ಎದೆಹುಯ್ಲುತನ' ಪರಾ. [ಎದೆ (< ಎರ್ದೆ) + ಹೊಯ್ಲು (< ಪೊಯ್ಲು)]

**ಎದೆಹೊಯ್ಲುತನ**, ಎದೆಹುಯ್ಲುತನ (ನಾ). ಎದೆಯ ಬಡಿತ: ಎಣಿಕೆ ಮನದೊಳಗಿಲ್ಲದೆದೆಹೊಯ್ಲು[ಯ್ಲು]ತನದಿ [ಪಾ ಠಾ ಂ. ಹಯಿಲತನದಿ, ಹೊಯ್ಯತನದಿ] ನೊಳ್ಪುಣಿಸಿನಡುಗೆಯ ಬೋನಮಂ ಪಿಡಿದು ನಡೆದು (ಸಮ್ಯಕೌ. ೪-೯). **ಎದೆಹುಯ್ಲುತನ** : ಎಲವೋ ಕಱುಗಾಯಿಯೆದೆಹುಯ್ಲುತನದಿಂದಿಳೆಯಾಣ್ಮನ ವಸ್ತ್ರಗಳನು ಹುಲುಗೋವಳರು ಸಹಿತ ಮೆಟ್ಟಬಹುದೆ (ನೇಮಿಸಂ. ೧೬-೯೭). [ಎದೆಹೊಯ್ಲು + -ತನ]

**ಎದ್ದಲಗಾಟ**, ಎಬ್ಬಲಗಾಟ (ನಾ). (ಉಕ) ಹಿಂಸೆ; ಕಾಟ; ತೊಂದರೆ: ನಿನ್ನ ಹೆಂಡತಿಗೆ ತಾಯಿ ಕಾಡುತ್ತಾಳೆ. ಅವರಿಬ್ಬರಿಂದ ನನಗೆ ಎದ್ದಲಗಾಟವಾಗಿದೆ (ಹುಚ್ಚಾಟ. ೧೩); "... ಈಗ ಮನೆಯಲ್ಲಿ ಸುಮ್ಮ ಸುಮ್ಮನೆ ಎದ್ದಲಗಾಟ ನಡೆದಿದೆಯಲ್ಲ!" (ಬೆಟ್ಟಹೊ. ೬೩); **ಎಬ್ಬಲಗಾಟ**: ಶ್ರೀಪತಿಯು ರಣಹೇಡಿಯಂತಲೂ ಇನ್ನೊಂದಿಷ್ಟು ಎಬ್ಬಲಗಾಟಕೊಟ್ಟರೆ ಅವನು ದೇಶಾಂತರಕ್ಕೆ ತೆರಳುವನೆಂತಲೂ (ಗುರುಪ್ರ. ೨೦). [?]

**ಎದ್ದಾಡು** 'ಏೞ್$_1$' ಪರಾ.

**ಎದ್ದಾಸರು** 'ಏೞ್$_1$' ಪರಾ.

**ಎದ್ದಾಳು** 'ಏೞ್$_1$' ಪರಾ.

**ಎದ್ದು$_1$** (ಕ್ರಿ). ನೀರಿನಲ್ಲಿ ನೆನೆಯಿಸು, —ಮುಳುಗಿಸು: ಎನ್ನ ನರಕದಲ್ಲಿ ಎದ್ದಿ ನೀನೆದ್ದು ಹೋಗಾ (ಗಣಭಾ. ೧೬೬-೩); ನೆಲ್ಲುಹುಲ್ಲಿನ ಮೂಡೆ ಕಟ್ಟಿ ನೀರಲ್ಲಿ ಎದ್ದಿ ಎದ್ದಿ ಇಟ್ಟರೇ ಸರಿ (ಕೃಷಿಪ್ರ. ೫೬); ಬಣಗಾರರು ಬಣ್ಣಾ ಎದ್ದಿದರು (ಮುಂಬಯಿ. ೪-೧೬೪); ಉಟ್ಟಬಟ್ಟೆಯನ್ನು ಯಮುನಾ ಜಲದಲ್ಲಿ ಎದ್ದಿ ಕೂಡಲೇ ತಂದೆನು (ಇಪ್ಪಕ. ೧೯೦). [< ಅಱ್ದು]

**ಎದ್ದು$_2$** 'ಏೞ್$_1$' ಪರಾ.

**ಎದ್ದುಕಾಣಿಸು** 'ಏೞ್$_1$' ಪರಾ.

**ಎದ್ದುಕಾಣು** 'ಏೞ್$_1$' ಪರಾ.

**ಎದ್ದುಮುದ್ದ** 'ಎದ್ದುಮೊದ್ದ' ನೋ.

**ಎದ್ದುಮುದ್ದು** (ನಾ). ಅರಸಿಕತೆ; ಮೂಢತನ. [< ಎದ್ದುಮೊದ್ದ]

**ಎದ್ದುಮೊದ್ದ**, ಎದ್ದುಮುದ್ದ (ನಾ). ಅರಸಿಕ; ಮೂಢ: ಈ ಎದ್ದುಮೊದ್ದನನ್ನು ನೆಚ್ಚಿಕೊಂಡು ನನ್ನ ಕೆಲಸವೆಲ್ಲಾ ಹಾಳಾಯಿತು (ರೂಢಿ). **ಎದ್ದುಮುದ್ದ** : (ಕಿ). [← ತೆಲು. ಎದ್ದುಮೊದ್ದು]

**ಎದ್ದೊಂಡಿಬೋಯ** (ನಾ). ಒಬ್ಬಾತನ ಹೆಸರು: ಎದ್ದೊಣ್ಡಿಬೋಯಸ್ಯ ಕಾಶ್ಯಪಗೋತ್ರ (ಇಆ. VII, ೧೮೮-೫೪; 668). [ಎದ್ದೊಂಡಿ$_1$ + ಬೋಯ]

**ಎನ್$_1$**, ಎನು, ಎನ್ನು (ಕ್ರಿ). ಎಂದ (ಭೂತಕೃ), ಎಂಬ (ಭವಿಕೃ): ಹೇಳು; ನುಡಿ; ಮಾತಾಡು: "ಎನ್ - ಭಾಷಣೇ" (ಶಮುಧಾ); ಏನನೆಂಬೆನಾರಂಕುಸವಿಟ್ಟೊಡಂ ನೆನೆವುದೆನ್ನ ಮನಂ ವನವಾಸಿದೇಶಮಂ (ಪಂಪಭಾ. ೪-೩೦); ದೂರಂ ಪೋಗಿಮೆನಲ್ (ಪಂಚತಂ. ೧೯-೧೭); ಅಗ್ನಿಜೆಗೆ ಬಂದಾಪತ್ತನೇನೆಂಬೆನಾಂ ಪರಸೇವಾಸ್ಥಿತಿ ಕಷ್ಟಮೈ (ಸೋಮೇಶ ೭೪); ಮದೀಯಾಪ್ತ ಕಾಮಿನಿಯೆಂಗುಂ (ದಶಕು. ೮-೨೨೭); ಅಯ್ಯಯ್ಯಾ ಚನ್ನಾದುದನ ಕನ್ನಡಿಗರು (ಭರಜ. ೧-೭); ಕೈಮುಗಿದೆಂದೆ ಗುಲಾಬಿಗೆ "ನಮಸ್ ತೇ" (ಅನಿಕೇ. ೩೨-೧೭). **ಎನು** : ಅಹವ ಮಲ್ಲದೇವನಿಂ ಪೇಳೆನುತಿರ್ಪ್ಪನೀದೊರೆತು ಶೌರ್ಯಗುಣೋನ್ನತಿ ನಾಗದೇವನ (ಸೌಇಇ. XI-i, ೫೨-೧೬; 1007); ಚೈತನ್ಯ ಜಂಗಮಕ್ಕೆ ನಾನು ನಮೋ ನಮೋ ಎನುತಿರ್ದೆನಯ್ಯಾ (ಆದವ. ೩); ಎನುತ ಬಿಲುದುಡುಕಿದನು (ಕುವ್ಯಾದ್ರೋ. ೫-೧೯). **ಎನ್ನು** : ಕೂಡಲಸಂಗಾ ಶರಣೆನ್ನುತ್ತಿದ್ದೀತಯ್ಯಾ (ಬಸವ. ೬೯೧); ಎನ್ನು ನಿನ್ನಭಿಮತವನೆನೆ (ಕುವ್ಯಾದ್ರೋ. ೧-೩೪); ಆ ಹಣಕ್ಕೆ ಬಾಡಿಗೆ ಎಂದೆನ್ನುತ್ತಾರೆ (ಮುಂಬಯಿ. ೫-೧೧೩); ಹರಿಸೇವೆಗೆ ಜೀವನ ಮಾಸಲು ಎನ್ನಬೇಕು (ಜಗದಾ. ೫೨).

**ಎಂದುಕೊಳ್** = ಹೇಳಿಕೊ; ತಿಳಿದುಕೊ: ತನುಮುಟ್ಟಿ ಮನ ಮುಟ್ಟದೆ ಒಂದನೊಂದ ನೆನೆನೆನೆದು ಮುಟ್ಟಿ ಮುಟ್ಟಿಯರ್ಪಿಸಿ ಪ್ರಸಾದವಾಯಿತ್ತೆಂದುಕೊಳಬಹುದೆ ಅನರ್ಪಿತವ (ಆದವ. ೬೪). **ಎಂದುದನೆನ್** = ಹೇಳಿದುದನ್ನು ಹೇಳು; ಅಜ್ಞೆಯನ್ನು ವಹಿಸು: ಮಾಳವ ಚೋಳಗೌಳ ... ಭೂಪಾಳಕರಂಜಿ ಬೆಚ್ಚಿ ಬೆಸಕೆಯ್ದೊಸೆದೆನ್ದುದನೆನ್ದು ರಾಜ್ಯಸಂಲೀಳೆಯೊಳಿರ್ಪ್ಪದಾನಜಿಯೆನೆ(ಎಕ. VII, ಶಿಕಾರಿ. ೧೦೦-೧೪; 1120). **ಎಂದುದಾಗಿ** = ಆದುದರಿಂದ; ಆದ ಕಾರಣ: ಅಲಯಂ ಸರ್ವಭೂತಾನಾಂ ಎಂದುದಾಗಿ (ಆದವ. ೪); ಎಂದುದಾಗಿ, ಆಬಾದಿಗಳ್ಗೆ (ಶಮುದ. ೮೬ ವಿಚಾರಂ). **ಎಂದುದು** = ಹೇಳಿದುದು: ಇನ್ನುಮುವರಿಮ್ಮೆಂದುದಂ ಇಂಬುಕೆಯ್ಯದವರ್ ಮಾಱುವರಲ್ಲ (ಗದಾಯು. ೫-೪೪ ವ). **ಎಂದೊಡೆ**, ಎಂದಡೆ, ಎಂದರೆ = ಎಂದು ಹೇಳಲು; ಎಂಬುದಾಗಿ ಹೇಳಲು: ಪಂಡಿತನಂ ಮಾಡಿ ನಿಮಗೊಪ್ಪಿಸುವೊಮೆಂದೊಡೆ (ವಡ್ಡಾರಾ. ೬೪-೮); ಪತ್ತಕ್ಕರಂಗಳ ಮೊದಲಕ್ಕರಂಗಳ್ ಹ್ರಸ್ವಂಗಳ್ ಅವಾವುವೆಂದೊಡೆ - ಅ, ಇ (ಶಮುದ. ೯ ವೃತ್ತಿ); ಭೊದರಿಯೂರು ಮಸ್ಕುನ್ದಕ್ಕೆ ಬಿಟ್ಟ ಸ್ತಿತಿಕ್ರಮಮಾವುವೆನ್ದಡೆ (ಎಕ. IX, ಚನ್ನಪ. ೧೬೧-೬; 913); ಆಹವಕ್ಕೆಂದಡಳುಕಬಮುಪ್ಪಿತರ ಬೀರ ಪದಾತಿ ಬಲಕ್ಕೆ ಲೆಕ್ಕವಿಲ್ಲೆಂದಡೆ (ಎಇ. XXVII, ೧೫-೨೧; 1114); ಬಸವರಾಜನ ಮಹಿಮೆಯೆಂತೆಂದಡೆ (ಎಇ. XXI, ೨-೯; 1260); ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು (ಪಾಂಚಜ. ೧೨); ಗಿಡವು ಬಲಿತು ದೊಡ್ಡದಾಯಿತೆಂದರೆ ಹೂ ಬಿಡುವುದು (ಮುಂಬಯಿ. ೪-೭೦); ಎಂಜಲು ಎತ್ತೊಗುಂಡಾ ಎಂದರೆ ಉಂಡವರು ಎಷ್ಟು ಜನ ಎಂದ (ಗಾದೆ). **ಎಂಬ** = ಎನ್ನುತ್ತೀಯೋ; ಹೀಗೆಂದು ಕೇಳುತ್ತೀಯೋ: ಕಟಕೋಪಾಧ್ಯಾಯನಾರೆಂಬ (ಅನಂಪು. ೧-೩೪). **ಎನ್ನ** = ಎಂದು ಕೇಳುತ್ತೀಯೋ: ನಿನಗೇನೆಂದೊಡಮೆಂದುದೊಪ್ಪಿದಪುದಂತೇಕೆನ್ನ (ಪಂಪಭಾ. ೧೦-೧೨೦).

[ದೇ. ‖ ತಮಿ. ಎನ್; ಮಲ. ಎನ್ನು; ಕೊಡ. ಎನ್ನ್; **ತುಳು.** ಅನ್ಪಿ, ಇನ್ಪಿ; **ತೆಲು.** ಅನು; **ಕೋಲಾ.** **ಪರ್ಜಿ.** ಎನ್; **ಗೊಂಡಿ.** ಇಂದಾನಾ; **ಕುಇ.** ಇನ್ಬ; **ಕುವಿ.** ಇಂಜಲಿ; **ಕುರು.** ಅನ್ನಾ; **ಮಲ್ತೊ.** ಆಣಿ]

**ಎನ್$_2$** (ಸ). ಉತ್ತಮ ಪುರುಷ ಏಕವಚನ ಸರ್ವನಾಮ 'ಆನ್' ಎಂಬುದಕ್ಕೆ ಪ್ರಥಮೇತರ ವಿಭಕ್ತಿಗಳಲ್ಲಿ ಬರುವ ರೂಪ: ಅಡವಿಯೊಳೆನ್ನುಮನೆನ್ನೀ ನಡಪಿದ ಶಿಶುಗಳುಮನಿರಿಸಿ ನೀಂ ಪೇಱದೆ ಪೋದೊಡಮೇನೋ (ಪಂಪಭಾ. ೨-೨೫); ಅಂಗನೋಚಿತರಸಾಲಂಕಾರಮಂ ತಾಳ್ದದೊಪ್ಪಿದ ವಾಕ್ಸುಂದರಿ ಬಂದು ಸನ್ನಿಹಿತೆಯಕ್ಕೆನ್ನೀ ಮುಖಾಂಭೋಜದೊಳ್ (ಗದಾಯು. ೧-೭). [< ಆನ್$_2$]

**ಎನಗ** (ನಾ). ಒಬ್ಬಾತನ ಹೆಸರು: ಶ್ರೀಮನೆನಗಂ ಕ್ರಿಯದ ದೇವಬಸವ (ಎಕ. II, ೪೭೧-೧; 1000). [?]

**ಎನತು** 'ಎನತ್ತು' ನೋ.

**ಎನತ್ತು**, ಎನತು (ಸ). ಎನ್ನದು; ನನ್ನದು (ಬಹುವ): ಎಮತು, ಎಮತ್ತು, ಎಮ್ಮತು, ಎಮ್ಮದು, ಎಮ್ಮುತು: "ಎನತೆಂದುಂ ಎನತ್ತೆಂದುಂ ಎನ್ನದು" (ಕಶಸಾ. ೨೬–೫೪೪); ಮುನಿಸಿದು ನಿನತ್ತು ಸ್ವೈರಣೆಯೆನತ್ತು ಕೆಳದಿಗೆ ತನತ್ತು ಸಂದಿಸುವೆಸಕಂ (ಶಮದ. ೧೪೭ ಪ್ರಯೋ); ಎನತು, ಎನತ್ತು (ಶಬ್ದಾನು. ೫೪ ಪ್ರಯೋ). **ಎನತು:** "ಎನತೆಂದುಂ ಎನತ್ತೆಂದುಂ ಎನ್ನದು" (ಕಶಸಾ. ೨೬–೫೪೪); "ಎನತುಮೆನಲ್ಕೆನದೆಂದು" (ಕಶರ. ೧೬); ಇದನೆನತೆಂದೇಕ್ಷಿನಗೆ ಬಗೆಯಲಪ್ಪುದೆ ನಿನ್ನನೆ ನೀಂ ಬಗೆಯ ಬಗೆಯದಿರ್ ಪೆಜಪೆಜತಂ (ಆದಿಪು. ೧೪–೧೪೪); ನಿನತು ಚಲವೆನತು ಶೌರ್ಯಂ ತನತು ಮಹಾಧೈರ್ಯಮವನಿಪತಿಗೆನೆ (ಶಮದ. ೧೪೭ ಪ್ರಯೋ). **ಎಮತು:** ಎಮತೀವಂಶಕೆ... ಬಿರುದಂ ತಂದಾತನಂ ಪೊತನಂ (ಮೈಸೂಮ. ೧–೧೧). **ಎಮತ್ತು:** ನಿಮತ್ತು, ಎಮತ್ತು, ತಮತ್ತು (ಶಮದ. ೧೪೭ ವೃತ್ತಿ); **ಎಮ್ಮತು:** "ನಿಮ್ಮತೆಮ್ಮತು ತಮ್ಮತೆನೆ ಬಹುವಚನಮುಕ್ಕುಂ" (ಕಬ್ಬಕೈ. ೬೦). **ಎಮ್ಮದು:** ಅತಿಘೋರ ತಪವೆಮ್ಮದದನು ನೀನಜೆಯದೆ ಮತಿಗೆಟ್ಟು ಮರುಳಾಗದಿರು (ಹದಿಬ. ೨–೪೦). **ಎಮ್ಮುತು:** ನೀಂ ವಿವಾಹೋತ್ಸವೋಚಿತಮಂ ಮುನ್ನಿಪುದೆಮ್ಮುತಿರ್ವರ ಮನಕ್ಕಂ ಮಾಳ್ಪುದಾನಂದಮಂ (ಚಂದ್ರಪು. ೧೩–೨೯); ನಿಮ್ಮುತಿರ್ವರುಂ, ಎಮ್ಮುತೈವರುಂ, ತಮ್ಮುತಜುವರುಂ (ಶಮದ. ೧೪೮ ಪ್ರಯೋ). [< ಆನ್$_2$]

**ಎನಸುಂ**, ಎನಿಸುಂ (ಅ). ಅಧಿಕವಾಗಿ; ಬಹಳವಾಗಿ; ಅತಿಶಯವಾಗಿ: "ಪಿರಿದುಂ ನಾಡೆಯಳುಂಬಂ ಕರಮಾದಮುಮೆನಸುಮೆಂಬಿವತ್ಯರ್ಥಂ" (ಚತುನಿ. ೨೫); ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನಮಾನಟ್ಟು ಬಡ್ಡಿಸು ನಾಮುಜಿಯದೆನಸುಂ ಸವಿಯಂ (ಕವಿರಾ. ೨–೧೪೫); ಬಂದೆನಸುಂ ಮಾಣದೆ ಬಾಗಿದಂ ಪದಯುಗಕ್ಕಾರೂಢಸರ್ವಜ್ಞನಾ (ಪಂಪಭಾ. ೩–೩೪); ನನೆಯಂ ಪೂಗೊಂಚಲಂ ಕಾಯನಂತೆನಸುಂ ತಾಳ್ದಿದ ಗುಜ್ಜುಗೊಂಬು (ಕಬ್ಬಕಾ. ೬೨); ಎನಸುಂ ಮಂತ್ರಿಗಳಾಗಿ ರಂಜಿಸುವರೋರಂತಾ ನವಬ್ರಹ್ಮರೆಂದೆನಿಪರ್ (ವೀರವಿ. ೨–೪೬); ಇವಳ್ಗಂ ... ರಾಮಂಗಂ ಆಕಾರದೊಳೆನಸುಂ ಭೇದಮಿರದು (ಅದ್ಭುತ. ೩–೭). **ಎನಿಸುಂ:** ಸಮನೆನೆ ಪೊಣರ್ವಕ್ಕಿ ವಿಳಾಸಮನೆನಿಸಂ ತಳೆದ ಘನಕುಚಂ ನಿಬಿಡತೆಯಿಂ ರಮಣಿಗೆ ಸೊಗಯಿಸುಗುಂ (ಜಗವಿ. ೧೦–೩೦); ನಂಜು ತಗುಳ್ದುದೆಂದೆನಿಸುಮುಂಜಲದೇವುದು (ಖಮದ. ೨–೧೮). [< ಎನಿಸು$_2$]

**ಎನಿತು** 'ಎನಿತ್ತು' ನೋ.

**ಎನಿತ್ತು**, ಎನಿತು, ಎನೆತು, ಎನೆತ್ತು (ನಾ). ಪರಿಮಾಣವನ್ನು ಸೂಚಿಸುವ ಶಬ್ದ; ಎಷ್ಟು: ಎನಿತ್ತೆನಿತ್ತಂಬುಜಪತ್ರನೇತ್ರೆಯಾ ಘನಸ್ತನಂಗಳ್ ಬಳೆಗುಂ ಕಿರಾತೆಯಾ ಅನಿತ್ತನಿತ್ತಂ ವನದೊಳ್ ವನೇಚರಂ ತನತ್ತು ಬಿಲ್ಲಾನದನಂತು ಕೀಸುಗುಂ (ಕಾವ್ಯಾವ. ೩೫೯). **ಎನಿತು:** "ಅನಿತು, ಇನಿತು, ಎನಿತು – ಎಂಬಿವು ಪ್ರಮಾಣ ಸೂಚನಂಗಳ್" (ಕಶಸಾ. ೨೬–೫೪೧); ಎನಿತು ಕೀಜಿನುಡಿದೊಡಂ ಚರಿಗೆ ಮಾಡಲೊಲ್ಲರ್ (ವಡ್ಡಾರಾ. ೮೨–೭); ಊರೊಳೆನಿತು ತೋಂಟವನಿತರ್ಕ್ಕೆ (ಸೌಇಇ. XI–i, ೪೭–೧೮; 994); ಎನಿತು ದಿನವಿರ್ಪೆ ನಾನೆಂದು ಬರ್ಪೆಂ ದೇವ (ನಂಬಿರ. ೧–೭೭); ಎನಿತು ಬಾರಿ ಪಲಾಯನದ ಸಿರಿ ನಿನಗೆ ಸೇರಿತು (ಕುವ್ಯಾದ್ರೋ. ೧೮–೪೩); ಎನಿತು ವೆಚ್ಚಂಗೆಯ್ದೊಡಂ ಮುನ್ನಿನಂತಿರ್ದ ಧನರಾಶಿಯಂ ಕಂಡು (ಸೌಂದಪು. ೬–೧೯); ಅನಿತು, ಇನಿತು, ಎನಿತು (ಶಬ್ದಾನು. ೪೪೦ ಪ್ರಯೋ). **ಎನೆತು:** ಇದನ್ನಾದವನ್ಗೆ ಎನೆತುಮನ್ನಿಸ್ತಾರಿಸಿದ ಪಲಮಕ್ಕು (ಎಕ. X (S), ಚಿಕ್ಕಬ. ೬೬–೨೭; ಸು. 850). **ಎನೆತ್ತು:** ಅಜುಗಣ್ಣಂಗಂ ಕಟನಿ ಈ ಎನೆತ್ತುಂ ಜಡಿಯಕ್ಕೆ ಪೊಯ್ದೋದು (ಎಕ. IX, ನೆಲಮಂ. ೬೦–೧೨೬; 797).

ಎನಿತನೆಯ = ಎಷ್ಟನೆಯ: 'ಅನಿತು ಇನಿತು' ಪರಾ. ಅನೆಯ ಪ್ರತ್ಯಯಕ್ಕೆ ಅನಿತನೆಯಂ, ಇನಿತನೆಯಂ, ಎನಿತನೆಯಂ (ಶಮದ. ೨೦೭ ಪ್ರಯೋ); ಅನಿತನೆಯಂ, ಇನಿತನೆಯಂ, ಎನಿತನೆಯಂ (ಶಬ್ದಾನು. ೪೩೪ ಪ್ರಯೋ). **ಎನಿತೆನಿತು**, ಎನಿತ್ತೆನಿತು (ದ್ವಿರುಕ್ತಿ): ಎನಿತೆನಿತಾತನಂ ಕಾಣ್ಬರೆನಿತನಿತನೆ ಬೇತಾಳಂ ಬಟಿಯಂ ತಗುಳ್ದಂ (ವಡ್ಡಾರಾ. ೧೯–೧೬); ಕಣ್ಣೊಳೆನ್ನುಂ ಕಿರಿದಪುದುರಿದಪುದು ನಮ್ಮ ಬನಮೆನಿತನಿತುಂ (ಪಂಪಭಾ. ೫–೯೫); ಎನಿತೆನಿತು ಕಟಿದ ಭವಮಂ ನೆನೆದಪೆ (ಅಜಿಪು. ೨–೬೦); ಎನಿತೆನಿತು ಭೂಮಿ ಕ್ರಮದಿಂ ಮಾಜೆ ಕೀಜಾಗೆ ಅನಿತನಿತು ತನ್ನಯ ಮನಂ ಹೆಚ್ಚಿ ಹಿರಿದಾಗೆ (ಇಳೆರ. ೫೦); ಎನಿತ್ತೆನಿತ್ತಂಬುಜಪತ್ರನೇತ್ರೆಯಾ ಘನಸ್ತನಂಗಳ್ ಬಳೆಗುಂ ಕಿರಾತೆಯಾ (ಕಾವ್ಯಾವ. ೩೫೯). **ಎನಿತಾನುಂ**, ಎನೆತಾನುಂ = ಯಾವ ವಿಧದಲ್ಲಾದರೂ; ಹೇಗಾದರೂ: ಅಂತೆನಿತಾನುಮುಂದದೊಳ್ ಸೆಜೆಪುಗೆಯ್ದು ವಿವಿಧ ವಿನೋದಂಗಳಂ ತೋಜೆ (ಪಂಪಭಾ. ४–४४ ವ); ಭಟರಂ ಮೆಲ್ಲನೆ ಬೇಜೆವೇಜೆ ಬರವೇಟ್ಟೆನಿತಾನುಂ ತೆಜದ ಲಲ್ಲೆಯಿಂ ಜೊತ್ತಿಸಿದಳ್ (ಸುಕುಮಾ. ೭–೧೦); ಸಮಾನನ್ದಲಾದಿನಂಥಾತ್ಮಜನೆನ್ದು ತಂದನೆ ಜಗಂ ಸಂಪ್ರೀತಿಯಿಂ ಬಣ್ಣಿಸಿತ್ತೆನೆತಾನುಂ ತೆಜದಿಂ (ಎಇ. XXVIII, ೫–೨೬; 1082). **ಎನಿಬರ್**, ಎನಿಬರು = ಎಷ್ಟು ಮಂದಿ, —ಜನ: ಅಮಾಮ ಬಿಲ್ಲನೇಜಿಸಿದಪೆವೆಂದೆನಿಬರಾನುಮರಸುಮಕ್ಕಳ್ ಬಂದು (ಪಂಪಭಾ. ೩–೫೭ ವ); ಅಗ್ನಿ ವಿಪ್ರನ ವೇಷದಿಂದ ಬಂದಾವಾವ ಸತಿಪುತ್ರರೆನಿಬರವರೆಂದಡಿವರಿಬ್ಬರ್... ಎನಲು (ಹಚಕಾ. ೧೧–೬); ಹಲಚರುಂಟೀ ರವಿಗಳೆಡಿಗತ್ತಲೆಯ ಮೊತ್ತಕೆ ಘನಬಳಾಹಕ ಬಳಗಕೆನಿಬರು ಮಾರುತರು (ತೊರರಾ. ೩–೬–೩೧); ಎನಿಬರೆಂತೆಂದೊಡೇನೆನಗೆ (ವಿಸೀಗೀ. ೨೦–೬); ಎನೆಬರು, ಎನೆಬ್ಬರು, ಎನೆವ್ವರು= ಎಲ್ಲ ಜನರು; ಎಲ್ಲರೂ: ಇನ್ತೀ ಎನೆಬರು ಶ್ರೀಕರಣ ಸಹಿತಂ ಬಿಟ್ಟಾರ್ (ಎಕ. VIII, ಸೊರಬ. ೧೦–೧೪; 800); ಎನೆಬರು ಸಮಸ್ತಬಲಬೆರಸಿ ಬಿಟ್ಟೊಡೆ (ಎಇ. XXIV, ೨೬–೭; ಸು. 885); ಎನೆಬ್ಬರುಂ ನರಸಾಕ್ಷಿಯಾಗೆ ಪಡೆದಾಂ (ಎಕ. III, ಶ್ರೀರಂಗ. ೧೬೦–೨೨; 800); ಕೊಳನೆಲ್ಲೂರ ಸಾಲತ್ತರುಂ ವಾರದರುಂ ಎನೆವ್ವರುಂ ನರ ಸಾಕ್ಷಿ (ಎಕ. IV, ಎಡತೊ. ೬೦–೭೨; ಸು. 890). [?]

**ಎನಿಬರ್** 'ಎನಿತ್ತು' ಪರಾ.

**ಎನಿಬರು** 'ಎನಿತ್ತು' ಪರಾ.

**ಎನಿವಿರಿದು** (ಗು). ಎಷ್ಟು ದೊಡ್ಡದು; ಎಷ್ಟು ಹಿರಿಯದು: ನೆನೆನೆನೆದಕ್ಕಟಾ ಕುಸುಮಕೋಮಳೆಯೀ ವಿರಹಾಗ್ನಿಯಿಂದಮಿನ್ನೆನಿವಿರಿದಪ್ಪವಸ್ಥೆಯುಮನೆಯ್ದುಗುಮೊ (ವರ್ಧಪು. ४–೮೦); ಸಮ್ಯಗ್ದರ್ಶನಾದಿ ವಿಶುದ್ಧಿ ಪರಿಣಾಮ ಸನ್ನಿಧಾನದಿನೆನಿವಿರಿದು ಪುಟ್ಟುತ್ತಿಲ್ಲಿಂ ತೊಟ್ಟಸಂಖ್ಯಾತ ಲೋಕಂಬರಂ ನಿರಂತಂ ಪೆರ್ಚುವುದು (ತಸೂವ್ಯ. ೨೩). [< ಎನಿತು + ಪಿರಿದು]

**ಎನಿಸಿಕೆ** (ನಾ). ಎನಿಸುವುದು; ತೋರಿಕೆ: ನನ್ನ ಎನಿಸಿಕೆಯು ಸುಳ್ಳೆಂದು, ಇದು ಕೇವಲ ನನ್ನ ಭ್ರಾಂತಿಯೆಂದು ಸಿದ್ಧವಾದರೆ ನನಗೂ ಅದರಲ್ಲಿ ಸಂತೋಷವೆ ಇದೆ (ಯಕ್ಷಪ್ರ. ೧೫). [ಎನಿಸು$_1$ + -ಇಕೆ]

**ಎನಿಸು$_1$**, ಎನ್ನಿಸು (ಕ್ರಿ). ಎನ್ನುವ ಹಾಗೆ ಮಾಡು; ಎಂದು ಹೇಳುವ ಹಾಗಾಗು; ಹೇಳಿಸಿಕೊಳ್ಳು: ನೆಗಟ್ದಾದಿ ಕ್ಷತ್ರಿಯರೊಳಮಿಲ್ಲೆನಿಸಿದುದೀ ತ್ರಿಜಗದೊಳೆಸಗಿದೆಸಕಮರಿಕೇಸರಿಯಾ (ಪಂಪಭಾ. ೧–೨೧); ಅನ್ತೆನಿಸಿದ ಪೆರ್ಗ್ಗಡೆ ಪ್ರಭಾಕರಯ್ಯ (ಇಅ. XVIII, ೩೮–೨; 999); ತ್ರಿಜಗನ್ನುತ ವಾಗ್ಭಿವದಿನಜಂಗೆ ನೂರ್ಮಡಿಯೆನಿಪ್ಪ ಪೆಂಪಂ ತಳೆದಂ (ಪಂಚತಂ. ೫–೨೨); ಮೈಸೂರು ಪಟ್ಟದ ನೃಪಕುಲದೇವತೆಯೆನಿಸುವಬೆಟ್ಟದ ಚಾಮುಂಡಿಯಿಹಳು (ಕಂನವಿ. ೨–೩೮). **ಎನ್ನಿಸು:** (ಕಿ).

ಎನಿಸುಗುಂ = ಎನ್ನಿಸಿಕೊಳ್ಳುತ್ತದೆ: ವಿಚಿತ್ರರತಪ್ರೌಢತೆ ಭಾವಗಮ್ಯಮೆನಿಕುಂ ಶ್ರೀರೂಪಕಂದರ್ಪನಾ (ಕಾವ್ಯಸಾ. ೬೫೫ ಶೂದ್ರಕ).

ಎನ್ನಿಸಿಕೊಳ್ = ದೂಷಣೆಗೆ ಗುರಿಯಾಗು ; ಬೈಸಿಕೊ.

[ಎನ್$_1$ + –ಇಸು$_3$]

**ಎನಿಸು$_2$** (ಗು). ಎಷ್ಟು: ಸುಡುವ ಕಿರ್ಚಿನೊಳ್ ತುಪ್ಪಮನೆನಿಸೆಱೆದೊಡ ಮನಿಸನಿಸೆ ಪೆರ್ಚುಗುಂ ನೀರನೆನಿಸೆನಿಸೆಱೆದೊಡಮನಿಸನಿಸೆ ಕುಂದುಗುಂ (ಧರ್ಮಾಮೃ. ೬-೯೫).

ಎನಿಸೆನಿಸು (ದ್ವಿರುಕ್ತಿ) : ಎನಿಸೆನಿಸೆಂದೊಡೆ ನಾ ಧೃತಿಗೆಡೆನಯ್ಯಾ ಎಲುದೋಱಿದರೆ ನರ ಹಱಿದರೆ ಕುರುಳು ಕುಪ್ಪಳಿಸಿದರೆ ನಾಧೃತಿಗೆಡೆನಯ್ಯ (ಬಸವ. ೬೯೧). [?]

**ಎನಿಸುಂ** 'ಎನಸುಂ' ನೋ.

**ಎನು** 'ಎನ್$_1$' ನೋ.

**ಎನುಹ** (ನಾ). ಎನ್ನುವಿಕೆ ; ಅಭಿಪ್ರಾಯ : ನಿನಗಾನೊರೆದೊರೆದು ಹೇಳಿದರೆ ನಿನಗಿಂತುಱಿಸದಿಪ್ಪೀ ಮನವನೆಮ್ಮಿಂದಱುಹ. ಬೇಕೆಂದೆನುಹವನುಚಿತವೆಂದ ದೇಶಿಕನು (ಸದ್ಗುರು. ೬-೨೩).

[ಎನು$_1$ (< ಎನ್$_1$) + –ಹ$_2$]

**ಎನೆತು** 'ಎನಿತ್ತು' ನೋ.

**ಎನೆತ್ತು** 'ಎನಿತ್ತು' ನೋ.

**ಎನ್ನ** (ಗು). ಎಂತಪ್ಪ ; ಎಂತಹ ; ಎಂಥ : ಅವನೀಪಾಲ ಚಕ್ರವರ್ತಿವಿಭು ತಾರಾಪೀಡನೆನ್ನಂ ವಿಳಾಸವತೀದೇವಿಯಡೆನ್ನಳಾರ್ಯ ಶುಕನಾಸಂ ತಾನದೆನ್ನಂ (ಕಾದಂಉ. ೧೬೦) ; ಅನ್ನಂ, ಇನ್ನಂ, ಉನ್ನಂ, ಎನ್ನಂ (ಶಮದ. ೧೬೦ ವೃತ್ತಿ).

ಎನ್ನದು = ಎಂಥದು : ಸೌರಾಷ್ಟ್ರ ಸೋಮೇಶ್ವರ ಲಿಂಗದೊಡಗೂಡಿ ತಾನೆನ್ನದಿದಿರೆನ್ನದೇನೂ ಎನ್ನದು (ಆದವ. ೧೫೧) ; ನಿನತೆನತು ತನತೆ ನಿಪ್ಪವು ಜನಿಯಿಸುಗುಂ ನಿನ್ನದೆನ್ನದುಂ ತನ್ನದೆನಿಪ್ಪಿನಿತಱೊಳಂ (ಶಮದ. ೧೪೬) ; ಎನ್ನದಾನೆಂಬೆರಡಱಿಂದವೆ ಬನ್ನಬಡುವನು ಜೀವನು (ಕುವ್ಯಾಕ. ೬-೨೮). ಎನ್ನರ್ = ಎಂಥವರು : ಅನ್ತಿರ್ದನಂ ನೋಡಿ ರಸಿಕರಪ್ಪರೆನ್ನರ್ಕಂಡೊಡಂ ಸೋಲ್ವರ್ (ಕಾದಂಉ. ೪೪೪) ; ನಿನ್ನಿರುಳೆ ಚರ್ಮರತ್ನವನೆನ್ನರದೆಂದಱಿಯೆ (ದಶಕು. ೮-೧೭೯) ; ಮೂಜಗದೊಳೆನ್ನರುಂ ನಿನ್ನನ್ನರೊಳರೇ (ಉದ್ಭದೇ. ೩-೨೬). ಎನ್ನವು = ಎಂಥವು : ಗಣಮಾಗಣಮಾಗಣಮಿವೆನ್ನವೆನ್ನದೆ ಧರ್ಮೋದ್ಯೋಗದಿಂದ ರಕ್ಷಿಸುವರ್ (ಸೌ ಇ ಇ. XI–i, ೫೨–೮೦ ; 1007) ; ಮಿತ್ರಗುಣಂಗಳೆನ್ನವು ಸತ್ಪಾತ್ರವೆನ್ನವೆಂಬುದುಂ (ಪಂಚತಂ. ೨೯೫–೧೩). ಎನ್ನಳ್ = ಎಂಥವಳು : ಮುನ್ನಮಾಂ ನಿನ್ನನೆನ್ನಳೆಂದಱಿಯದೆ ಪೊಲ್ಲಮಾನಸೆಯೆಂದೆ ಬಗೆದು ಪಿಡಿದೆಂ ನಿನ್ನನ್ನರ್ಮಹಾಸತಿಯರಾರುಮಿಲ್ಲ (ಸುಕುಮಾ. ೬–೨೪ ವ). [?]

**ಎನ್ನಬರ** 'ಎನ್ನೆವರಂ' ನೋ.

**ಎನ್ನಿಕೆ** (ನಾ). ಎನ್ನುವಿಕೆ; ಹೇಳುವಿಕೆ (ದಕ. ೬).

[ಎನ್ನು (< ಎನ್$_1$) + –ಇಕೆ]

**ಎನ್ನಿಸು** 'ಎನಿಸು$_1$' ನೋ.

**ಎನ್ನು** 'ಎನ್$_1$' ನೋ.

**ಎನ್ನೆಗಂ** (ಅ). ಎಲ್ಲಿಯ ವರೆಗೆ; ಯಾವ ಕಾಲದ ತನಕ : ಒಡವುಟ್ಟಿದ ಕೌಸ್ತುಭಮಿರ್ಪೆಡೆಗಂ ದಾಯಾದನಪ್ಪೆನೆನ್ನೆಗಮೆಂದಂದುಡುಪತಿಕಳೆ ನೆಲಸಿತ್ತೆನೆ (ಜಗವಿ. ೩–೪೪) ; ಅನ್ನೆಗಮಿನ್ನೆಗಮೆನ್ನೆಗಮೆನ್ನದೆ ಕಡೆಗುಂಟು ಲೋಪಮಿದಿರೊಳ್ ಸೀಮೋತ್ಪನ್ನಂ ವರಂ ವರೆಗಮಿರೆ ಕೆನ್ನಂ ಪೆಱವರ್ಕೆ ಲೋಪವಿಧಿ ಮುಟ್ಟೆನೆಯುಂ (ಶಮದ. ೨೪೮). [?]

**ಎನ್ನೆಬರ** 'ಎನ್ನೆವರಂ' ನೋ.

**ಎನ್ನೆವರಂ, ಎನ್ನಬರ, ಎನ್ನೆಬರ** (ಅ) ಎಲ್ಲಿಯವರೆಗೆ; ಎಲ್ಲಿಯ ತನಕ : ಎನ್ನೆವರಂ ಸಚೇತನಯೆನೆನ್ನೆವರಂ ಲಘುವಾಗದಿರ್ಪೆನೋ (ಕಾದಂಪೂ. ೭೫೨) ; ಎನ್ನೆವರಂ ಸಿರಿ ತಮಗುಂಟನ್ನೆವರಂ ಸೇವ್ಯರಲ್ತೆ ಖಳರುಂ (ಶಮದ. ೨೪೮ ಪ್ರಯೋ) ; ಎನ್ನೆವರಮಘಮಥನಂ ನಿನ್ನಂ ಮಱೆವುಗದನೆ (ವಿಷ್ಣುಪು. ೨–೧೭೩). **ಎನ್ನಬರ** : ಸದ್ಭಕ್ತನಾಗಿರ್ದವಂಗೆನ್ನಬರ ಭಕ್ತಿಯುಂಟು (ಗಣಭಾ. ೩೨೮). **ಎನ್ನೆಬರ** : ಎನ್ನೆಬರ ಜಿಹ್ವೆಯನು ತಡೆಯನವನನ್ನಬರಲುಳಿದಿಂದ್ರಿಯಂಗಳ ತನ್ನ ವಶದಲಿ ತಡದ ರಂಜಿತಕರಣನವನಲ್ಲ (ನಿಭಾಗ. ೧೧–೧೪–೩೧). [?]

**ಎನ್ನೆವರೆಗಂ** (ಅ) = ಎನ್ನವರಂ : ಎನ್ನೆವರಂ, ಎನ್ನೆವರೆಗಂ (ಶಬ್ದಾನು. ೪೩೯ ಪ್ರಯೋ).

[ಎನ್ನೆ$_0$ + –ವರೆಗಂ]

**ಎಪ್ಪಟ್ಟು** (ಅ). ಎಂಥದೋ ಆದ : ಮಱುಧರ್ಮ್ಮತುಸವನಿನ್ ಪಡೆದೆಪ್ಪಟ್ಟಾದು ಒಂದು ಗಾಣದುಳ್ ಒಂದು ಸೊಂಟಿಗೆ (ತೇ)ತೈಲಮಾಗೆ ಕೊಟಾ(ಟ್ಟಾ)ರ(ರ್) (ಇಅ. VIII, ೨೮೩–೫೬ ; 706). [?]

**ಎಪ್ಪತ್ತು** 'ಎಟ್ಪಿತ್ತು' ನೋ.

**ಎಪ್ಪೆ** (ನಾ). ಮೋಸ; ವಂಚನೆ; ದಗ.

**ಎಪ್ಪೆಹಾಕು** = ಮೋಸಮಾಡು ; ವಂಚಿಸು ; ದಗಹಾಕು : ನಿಂಗೆ ಎಪ್ಪೆಹಾಕುವುದು ಬಹಳ ಸುಲಭ (ಚಂದತೋ. ೧೯೯) ; ಗೋಸಾಯಿ ಏನೋ 'ಎಪ್ಪೆ' ಹಾಕಿ ಹೋಗೋದಕ್ಕೆ ಬಂದಿದಾನೆ (ಸುವಸಂ. ೧).

[?]

**ಎಪ್ಪೈಯ್ಯೂರು** (ನಾ). ಎಪ್ಪತ್ತು ಐನೂರು (?) : ಒಂದಱಿಂ ಗುಣಿಸಲ್ಪಟ್ಟಂತೆಪ್ಪೈಯ್ಯೂಱು ಯೋಜನಂ ಸಂದಿರ್ಪುದು ವಂದನವನಂ (ತಸೂವ್ಯ. ೯೬).

[ಎಪ್ಪತ್ತು (< ಎಟ್ಪಿತ್ತು) + ಅಯ್ಯೂರು (< ಅಯ್ಯೂಱು)]

**ಎಪ್ರಾಸಿ** 'ಏಬರಾಸಿ' ನೋ.

**ಎಬಡ, ಎವುಡು** (ನಾ). (ಉಕ). ೧. (ಸರಿಯಾಗಿ) ಮಾತನಾಡಲು ಬಾರದವನು ; ದಡ್ಡ ; ಮೂರ್ಖ ; ಗಾಂಪ : ನಗೆಗೀಡಾಗುವುದು ಎಬಡರ ಹಾದಿ (ಹುಚ್ಚಾಟ. ೪) ; ಈ ಹಚಡದ ಅಂಗೀ ಎಬಡರು ರಾಜ್ಯ ಆಳ್ತಾರೇನೋ ರಾಜ್ಯಾನ (ದಾಕೂಟ. ೧೨೩) ; ನಾನೊಬ್ಬ ಎಲ್ಲಿಯೋ ಒಂದು ಹಳ್ಳಿಯಿಂದ ಬಂದ ಎಬಡನೆಂದು ತಿಳಿದಿದ್ದಾರೆ (ಬೇಟೆನಾ. ೪೨) ; ಹುಚ್ಚುಹಿಡಿದಿರುವ ನನ್ನ ಎಬಡ ಗಂಡನಿಗೆ ತಲೆ ಇದ್ದರೆ ಆದನ್ನು ತಿದ್ದಿ ಕೊಡು (ಹನ್ನೊಂದ. ೧೩೫). ೨. ಯದ್ವಾತದ್ವಾ ಮಾತನಾಡುವವನು (೬). ℙ ಇದು ಎವುಡು ಎಂಬ ಶಬ್ದದ ವರ್ಣವ್ಯತ್ಯಯ ರೂಪ. **ಎವುಡು** : ಅವನೊಬ್ಬ ಎವುಡು, ಅವನನ್ನೇಕೆ ಕೇಳೋದು (ರೂಢಿ). 'ಎಟುವ', 'ಎಡಗ' ಪರಾ. [?]

**ಎಬಡತನ** (ನಾ). ಎಬಡನಾಗಿರುವುದು : ಈ ಪ್ರಾಮಾಣಿಕತೆಯು ಎಬಡತನದಲ್ಲಿ ಪರಿಣಮಿಸಲಾಗದು (ದಾಬುತ್ತಿ. ೨೬) ; ತಮ್ಮ ಎಬಡತನ ಹೊರಬಿದ್ದುದರಿಂದ ನಾಚಿಕೆಪಟ್ಟ ಜೋಷಿಯವರು (ಮೂರುದಾ. ೩೬).

[ಎಬಡ + –ತನ]

**ಎಬಡತಬಡ** (ನಾ). ಯದ್ವಾತದ್ವಾ ; ಸಿಕ್ಕಾಬಟ್ಟೆ ; ಅಸ್ತವ್ಯಸ್ತ : ಹೀಗೇಕೆ ಭ್ರಮಿಷ್ಟನಂತೆ ಎಬಡತಬಡ ಮಾತಾಡುವಿ (ಹುಚ್ಚಾಟ. ೨) ; ಮುಖಭಾವ ಕುಂಠಿತವಾಗಿರುವುದು, ಮಾತು ಎಬಡತಬಡ ಆಗುತ್ತಿರುವುದು . . . ಎಲ್ಲಿದೂ ತಿಳಿದುಕೊಂಡಳು (ಎರಸೆ. ೧೨೮).

[ಎಬಡ + ತಬಡ]

**ಎಬಡಿ** (ನಾ). (ಸರಿಯಾಗಿ) ಮಾತನಾಡಲು ಬಾರದವಳು; ಮೂರ್ಖಳು ; ಪೆದ್ದಿ : "ಶರತ್ ನಾನೇನೂ ಅಷ್ಟು ಎಬಡಿಯಲ್ಲ. ಮೋಸಹೋಗಲಾರೆ" (ಕೊನೆಕಾ. ೧೩). [ಎಬಡ + –ಇ$_2$]

**ಎಬಡಿಸು** (ಕ್ರಿ). ಯದ್ವಾತದ್ವಾ ಮಾತನಾಡು: "ಎಬಡಿಸು-ಗುಕ್ಕಿಸು" (ಜಾನಕೋ. ೨೫). [ಎಬಡ + -ಇಸು$_3$]

**ಎಬರೇಸಿ** 'ಏಬರಾಸಿ' ನೋ.

**ಎಬ್ಬಂಕೆ** (ನಾ). "ತಿಳಿಗೇಡಿ, ಹುಚ್ಚ, ಅಲ್ಲಗೇಡಿ" (ಜಾನಕೋ. ೨೫); "ಛೀ. ಏನು ಎಬ್ಬಂಕನ ಹಾಗಿದ್ದೀನೆ! . . ." (ಕಾಗೆಕ. ೬೧). [?]

**ಎಬ್ಬಟ್ಟಿ** 'ಎಟ್ಟಿಟ್ಟು' ನೋ.

**ಎಬ್ಬಲಗಾಟೆ** 'ಎದ್ದಲಗಾಟ' ನೋ.

**ಎಬ್ಬಿಸು** 'ಎಟ್ಟಿಸು' ನೋ.

**ಎಬ್ಬು** 'ಎಟ್ಟು' ನೋ.

**ಎಬ್ರಾಸಿ** 'ಏಬರಾಸಿ' ನೋ.

**-ಎಮ್ಮ$_1$** (ಅ). ಒಪ್ಪಿಗೆ, ಮೆಚ್ಚುಗೆ, ಅನಾದರ, ಅಲಕ್ಷ್ಯ, ಆಶೀರ್ವಾದ ಮುಂತಾದ ಭಾವಗಳನ್ನು ಸೂಚಿಸುವ ಪ್ರತ್ಯಯ; (i). ಒಪ್ಪಿಗೆ ಅಥವಾ ಮೆಚ್ಚುಗೆಗೆ: "ಅಂಗೀಕಾರಾರ್ಥದ ಎಮಶಬ್ದಕ್ಕಂ" (ಶಮದ. ೫೭ ವೃತ್ತಿ); ಎಮ – ಅಭ್ಯುಪಗಮಾರ್ಥ (ಶಬ್ದಾನು. ೨೧ ವ್ಯಾಖ್ಯಾ). (ii). ಅನಾದರ ಅಥವಾ ಅಲಕ್ಷ್ಯಕ್ಕೆ: ಪೊಲೆಯರ ತೇಜದಿಂ ನೆಗೞ್ದೆಮ [ಪಾಠಾಂ. ನೆಗಳ್ದಂ]ಕುಲನಾಶನಕ್ಕೆ ತನುಜನಾದಡೆ ಸಾಲ್ಗುಂ ಲಲನೆಯರ್ಗೆ (ಸಮಪ. ೫–೧೧೧); ಸಿಂಗಮಕ್ಕೆಮ ಅಂಜೆಂ (ಶಮದ. ೫೭ ಪ್ರಯೋ). (iii). ಆಶೀರ್ವಾದಕ್ಕೆ: ನಿಮಗಕ್ಕೆಮ ಅಬ್ಜಗರ್ಭನಾಯುಂ ಶ್ರೀಯುಂ (ಶಮದ. ೫೭ ಪ್ರಯೋ); ನಿನಗಕ್ಕೆಮ ಸರ್ವಮಂಗಳಂ (ರಾಮಾಶ್ವ. ೧೫–೨೪). [?]

**ಎಮ್ಮ$_2$** (ನಾ). ಯಮ; ಮೃತ್ಯುದೇವತೆ; ಜವರಾಯ: ಕೆಳವಿನಲಿ ಕೊಂಡೊಯ್ವೆನೇ ನಿನ್ನೆಳೆದು ತಂದನನೆಮನ ನಗರಿಗೆ ಕಳುಹಿ (ಸನತ್ಕು. ೭–೨೭). [< ಸಂ. ಯಮ]

**ಎಮುಕೆ** 'ಎಮಿಕೆ' ನೋ.

**ಎಮುತು** 'ಎನತ್ತು' ಪರಾ.

**ಎಮುತ್ತು** 'ಎನತ್ತು' ಪರಾ.

**ಎಮದಂಡ** (ನಾ). ಯಮನ ದಂಡ; ಯಮನ ಶಿಕ್ಷೆ: ಅಜ್ಞಾನಿಯಾ ದಡೆಮದಂಡಕ್ಕೀಡಾಗುವಂ (ಪರಶು. ೯–೧೦). [ಎಮ್ಮ$_2$ + ದಂಡ]

**ಎಮದೂತ** (ನಾ). ಯಮನ ದೂತ, –ಸೇವಕ: ಕೊಲ್ಲುತೆ ಕೊಂಡು ಪೋಪೆಮದೂತರ ನೋಡುತ್ತೆದಿದ್ದಳು (ಮೋಹತ. ೨೯–೧೪); ಎಮದೂತ ರೆಳೆಯದ ನಿರಯತತಿ (ಕೈವಲ್ಯ. ೧–೨೦–೨). [ಎಮ್ಮ$_2$ + ದೂತ]

**ಎಮಪುರ** (ನಾ). ಯಮನ ಊರು: ಸಾನಂದಮುನಿ . . . ಮುನಿಗಣ ಸಮೇತದಿಂದೆಮಪುರಕೆ ಬರುತಿರ್ದನು (ಚಿಬಪು. ೫೭–೪೩). [ಎಮ್ಮ$_2$ + ಪುರ$_3$]

**ಎಮಿಕೆ, ಎಮುಕೆ** (ನಾ). ಎಲುಬು; ಮೂಳೆ: ಸೆಟ್ಟರೆಂದರೆ ನಿಮ್ಮೂರ ಸೆಟ್ಟರಲ್ಲ, ಬೋನ್ಸೆಟ್ಟರೆಂದರೆ ಎಮಿಕೆ ಕೂಡಿಸುವವರು ಎಂದರ್ಥ (ಹುಚ್ಚುಹು. ೩೩). **ಎಮುಕೆ:** ಬರಿಯ ಎಮುಕೆ; ನರಪೇತ; ಕದಿರುಕಡ್ಡಿ (Bag of Bones. ಇಂಕನಿ). [← ತೆಲು. ಎಮುಕ]

**ಎಮೆ, ಎವೆ$_1$** (ನಾ). ಕಣ್ಣಿನ ರೆಪ್ಪೆ: ಬಳ್ಳಳನೀಳ್ದ ಕಣ್ಮಲರ ತಳ್ತೆಮೆಯಿಂ ಕರೆಗಣ್ಮ ಬೆಳ್ಗಡಲ್ಗಳ್ವರಿಯಲ್ಕಮಾಟಿಸಿದೊಡೆ (ಪಂಪಭಾ. ೭–೬೮); ಸುಲಲಿತಮಾಗಿ ನೀಳ್ದ ತುಱುಗಿರ್ದೆಮೆಗಳ್ ತಮಮಂ ಬೆಳರ್ಪ ಕಣ್ಮಲರ್ಗಣೆ ಯಂದಮಂ ನೆಱೆಯೆ ಪೋಲ್ತಿರೆ (ಧರ್ಮಾಮೃ. ೭–೧೯೭); ತೇಜದ ಸೋಂಕಿನಿಂದೆಮೆ ಸೀಗೆಂದುದ್ಧತರ್ ನೋಡಲಂಜುವಿನಂ (ಎಕ. V, ಹಾಸನ. ೫೩–೧೪; 1170); ಸೋಲ್ತೆಮೆಗದಂದೆಱೆದ ಕಣ್ಮಲರು (ಉದ್ಭದೇ. ೫–೨೧); ಗದಗದಿಕಾಲಿ ಕೈದೆಗೆದು ನಿಂದೆಮೆ ತಣ್ಣನೆ ಪಾಯ್ವ ಕಣ್ಣನೀರ್ (ಚಿಕವಿ. ೩–೯೪); ತುಱುಗೆಮೆಯರೆದೆಱೆದ ಕಣ್ಗೊಚ್ಚತಮಾಗೆ (ರಾಮಾಶ್ವ. ೪೦–೨೧). **ಎವೆ$_1$:** ಸಭಾಸದರೆಲ್ಲಮೆವೆ ಮಿಡುಕದೆ ಪಂದೆಯಂ ಪಾವಡರ್ದ ಪೊಲುಸಿರದಿರೆ (ಪಂಪಭಾ. ೬–೫೮ ವ); ಎವೆಯಿಲ್ಲದ ಕೊಱೆಗಣ್ ವಿಭ್ರಮಮಿಲ್ಲದ ರೂಪು (ಧರ್ಮಾಮೃ. ೭–೨೨೩); ಮುಗುಳೆವೆಯ ನೆಱೆ ಮುಚ್ಚಿ ನಾಸಿಕದಗ್ರದಲಿ ನಿಲಿಸಿ (ಕುಮ್ಮಾಅ. ೭೦೯. ೧೭–೨೩); ಅವನ ದಿಟ್ಟಿಗಳೆವೆಯನಿಡಮುಱಿದೆಳೆಸಿದವು ಖೇಚರಿಯ ಗಾಡಿಯೊಳು (ಸಾಳ್ವಭಾ. ೬–೨೨); ನಿದ್ದೆಯ ಹೊತ್ತಾಯಿತೆಂದರೆ . . . ಎವೆಗಳ ಕಾರ್ಯವು ಮಂದವಾಗುತ್ತದೆ (ಮುಂಬಯಿ. ೪–೧೩೧).

[ದೇ. ‖ ತಮಿ. ಇಮೈ = ರೆಪ್ಪೆಹೊಡೆ, ರೆಪ್ಪೆ; ಮಲ. ಇಮಸಿಮ; ತುಳು. ಇಮೆ, ಸಿಮೆ]

**ಎಮೆಗೊಂಕು** (ಕ್ರಿ). ರೆಪ್ಪೆಯನ್ನು ಬಾಗಿಸು, –ಮುಚ್ಚು: (ಎಮೆಗೊಂಕದಿರುವನು) (ಬಿರುಗಂ. ೨೬–೨೦). [ಎಮೆ + ಕೊಂಕು$_1$]

**ಎಮೆದುಱುಗಲ್, ಎವೆದುಱುಗಲ್** (ನಾ). ಕಣ್ಣು ರೆಪ್ಪೆಯ ಕೂದಲ ಸಾಲು: ಎಮೆದುಱುಗಲಿನಿಳಿವ ತೋರ ಕಣ್ಬನಿಗಳ್ (ಕಾದಂಪೂ. ೮೪೮); ಮುಗಿದ ಕಣ್ಗಳ ಪರ್ವುಗೆಯೊಳ್ ಮೆಱೆದುದವರ ತಳ್ತೆಮೆದುಱುಗಲ್ (ಯಶೋಚ. ೨–೨೬). **ಎವೆದುಱುಗಲ್:** ಅಂಜನರೇಖಾನಿಳಾಸಮಂ ಪಡೆದುವವಳ ತಳ್ತೆವೆದುಱುಗಲ್ (ದಶಕು. ೬–೪೭).

**ಎಮೆಯಾಟ, ಎವೆಯಾಟ** (ನಾ). ಕಣ್ಣು ರೆಪ್ಪೆ ಬಡಿಯುವುದು; ಕಣ್ಣುಮುಚ್ಚುವಿಕೆ: ಕಣ್ಣ ಲೀಲೆಗಳ ಮಿಂಚುಗಳಲ್ಲಿ, ಎಮೆಯಾಟದಲ್ಲಿ ಸಾಸಿರನಗೆಗಳಲ್ಲಿ (ಬೆಟ್ಟಅ. ೧೩–೧೫). **ಎವೆಯಾಟ:** ಜಗದ ಜನನ ಲಯಂಗಳೆವೆಯಾಟಗಳಲಡಗುವುವಾ ಮಹಾತ್ಮನ ದೃಗುನಿರೀಕ್ಷೆಯಲಿ (ತೊರರಾ. ೬–೫–೨); ನಿಖಿಲಲೋಕವನೆವೆಯಾಟದೆ ಸೃಜಿಸುವ (ಮೋಹತ. ೨೯–೧); ಎವೆಯಾಟದಿಂದಖಿಳ ಬ್ರಹ್ಮಾಂಡಮಳಿದುದಿಸುವುವು (ಚಿಬಪು. ೪೭–೨೮). [ಎಮೆ + ಆಟ]

**ಎಮೆಯಿಕ್ಕು, ಎವೆಯಿಕ್ಕು** (ಕ್ರಿ). ರೆಪ್ಪೆಹೊಡೆ, –ಮಿಟುಕಿಸು: ಮುರುಳ್ಗಳುಂ ಮುರುಳ್ಗಳಾಟಮುಂ ಪಳಪಳನೆಮೆಯಿಕ್ಕದೆ ನೋಡಿ ಮುಗುಳ್ನಗೆ ನಗುವ ವೀರಭಟರ ಪಂದಲೆಗಳುಂ (ಪಂಪಭಾ. ೧೦–೧೧೬ ವ); ಎಮೆಯಿಕ್ಕದೆ ನೀಡುಂ ನೋಡಿ (ವರ್ಧಪು. ೧–೯೭). **ಎವೆಯಿಕ್ಕು:** ಎವೆಯಿಕ್ಕದೆ ನೋಡುತಿರ್ದಳಿನ್ನೆಯ ಮೊಗಮಂ (ಕಾದಂಉ. ೨೮೭); ಹಸಿಯದು ಣ್ಣದ ಬೆಮರದೆವೆಯಿಕ್ಕದಾಗುಳಿಸದುಸುರಿಕ್ಕದ (ಸಿದ್ಧರಾ. ೧–೩); ಎಮೆಯಿಕ್ಕಲ್ಕಱಿದುವವಳ ಧವಳಕಟಾಕ್ಷಂ (ಶಮದ. ೨೨೫ ಪ್ರಯೋ); ಆ ಎಳವರೆಯದ ತರುಣಿಯು ಎವೆಯಿಕ್ಕದೆ ನನ್ನನ್ನೇ ನೋಡುತ್ತಿದ್ದಳು (ಪ್ರಣಸ. ೨).

ಎಮೆಯಿಕ್ಕದವರ್, ಎವೆಯಿಕ್ಕದವರ್ = ಕಣ್ಣುರೆಪ್ಪೆ ಹೊಡೆಯದವರು; ಬಿಡುಗಣ್ಣರು; ದೇವತೆಗಳು: "ಅಮರ್ದುಣಿಸುಗಳ್ . . . ಎವೆಯಿಕ್ಕದರ್, ಜನ್ನಗೂಳರ್ . . . ಈ ೯ ದೇವರ್ಕಳ ಪೆಸರ್" (ಕಕಸಾ. ೨–೧೯); "ಕನಸಿಲ್ಲದರೆಮೆಯಿಕ್ಕದರನುನಯದಿಂ ಗಾಳಿವಟ್ಟಿಗರ್ . . . ಎನೆ ದೇವವ್ರಾತ" (ಕವಿಕಂ. ೩೨); "ಎವೆಯಿಕ್ಕದವರೆನಲ್ ಸುರರಿಂ ಬಳಿವಿಡಿದ ಪೆಸರಕ್ಕು" (ಕಶರ. ೧೬). [ಎಮೆ + ಇಕ್ಕು]

**ಎಮೆಯಿಡು, ಎವೆಯಿಡು** (ಕ್ರಿ). = ಎಮೆಯಿಕ್ಕು: ಎಮೆಯಿಡದೆ ನೋಳ್ಪ ನರಯುವತಿ ಸುರಯುವತಿಯವೊಲಾಗೆ (ಪದ್ಮರಾ. ೩–೬೩). **ಎವೆಯಿಡು:** ಎವೆಯಿಟ್ಟು ಕಣ್ಮುಚ್ಚಿದಂತೆ ಮೂಲೋಕಕೆ ಜವೆಯ ಮೋಹವ ಕಲ್ಪಿಸಿದಳು (ಮೋಹತ. ೨೯–೮); ಅನಿಮಿಷಾಂಗನೆಯರೀ ಕುವರನ ರೂಪಿಗೆ ಮನಸೋತೆವೆಯಿಡೆ ಮಱೆದು ಘನಮಾರ್ಗದಲಿ ರಾಜಿಸಿರ್ (ಕಂನವಿ. ೯–೧೩೬). [ಎಮೆ + ಇಡು$_1$]

**ಎಮೆಯಿರಿ** (ಕ್ರಿ). ರೆಪ್ಪೆಹೊಡೆ : ಬದ್ಧಭ್ರುಕುಟಿಯಾಗಿ ಎಮೆಯಿಱಿದು (ಮಂತ್ರಶ. ೧೬–೩); ನೋಡುವಮೆಂದು ಎಮೆಯಿಱಿದೆನಾಹ (ಸಂಸಪ. ೩೫–೬). [ಎಮೆ + ಇರಿ₂ (< ಇಱಿ₁)]

**ಎಮೆವೊಱೆ** (ನಾ). ಕಣ್ಣುರೆಪ್ಪೆಯ ಭಾರ, —ಹೊರೆ : ಕಡಲ್ವರಿವ ಕಣ್ಣೀರ ಪೂರದೊಳ್ಮುಳುಗಿದೆಮೆವೊಱೆಯನಾನಲಾಜದಳವಱಿದ ಕಣ್ಣಿಂ ಕರುಣರಸಮನೆ ರೂಪುಗೊಳಿಸಿ ತೋಱುವಂತಿರೆ (ವರ್ಧಪು. ೯–೬೬ ವ). [ಎಮೆ + ಪೊಱೆ]

**ಎಮ್ಮ**₁ 'ಆನ್₂' ಪರಾ.

**ಎಮ್ಮ**₂ (ನಾ). ಒಬ್ಬಾತನ ಹೆಸರು : ವಿಜಯಮಂಗಲದ ಎಮ್ಮ ತೊಱು ಕೊಳೆವ ತೊಳ್ದಟ್ಟ ಕಡೆಯಂ ಪಲರನಾನ್ತಿಱಿದು ಸತ್ತು ಸಗ್ಗಮೇರ್ದರ್ (ಎಕ. X, ಶಿಡ್ಲಘ. ೩೯–೩ ; 900). [?]

**ಎಮ್ಮತು** 'ಎನತ್ತು' ಪರಾ.

**ಎಮ್ಮದು** 'ಎನತ್ತು' ಪರಾ.

**ಎಮ್ಮು** (ಕ್ರಿ). ನೆಮ್ಮು; ನಂಬು.

**ಎಮ್ಮಿಕೊಳ್** = ನಂಬಿಕೊಳ್ಳು; ನೆಚ್ಚು : ಸುಮ್ಮನಿರಬೇಡಿತ್ತ ಬಾ ಸುರರೆಮ್ಮಿಕೊಂಡಿಹ ಸುಧೆಗೆ ಮಿಕ್ಕಹುದುಮ್ಮಳಿಸದಿರುಯೆಮ್ಮಮಾತಿನ ಸೊಮ್ಮನಾದರು ನೀ ಪರೀಕ್ಷಿಸೂ (ಕರ್ಣಾಕಾ. ೨೬). [< ನೆಮ್ಮು ?]

**ಎಮ್ಮುತು** 'ಎನತ್ತು' ಪರಾ.

**ಎಮ್ಮೂರ್** (ನಾ). ಒಂದು ಊರಿನ ಹೆಸರು : ವಾಣರಸರ್ ಕೆನ್ದಱಿಗ ಪೆರ್ಗ್ಗಂಗಂ ಅವರ ಮಗಂ ದೇವೆಯನಂ ಬೆಸಗೊ[ಳೆ] ಎಮ್ಮೂರ ಮಿನುಕಿ ಎಡೆಯೊಳ್ಳಾಗಿ (ಸೌಇಇ. IX–i ; ೪–೮ ; 9ನೆಯ ಶತ) ; ಎಮ್ಮೂರ ಬಿಡ್ಡೂರ್ ಅಱಿವಿನೊಳ್ (ಮೈಆರಿ. ೧೯೨೪ ; ೯೫–೫ ; 1020). [ಎಮ್ಮ ? + ಊರ್]

**ಎಮ್ಮೆ** 'ಎರ್ಮೆ' ನೋ.

**ಎಮ್ಮೆಗುಂಡು** 'ಎರ್ಮೆಗುಂಡು' ನೋ.

**ಎಮ್ಮೆಗೊಬ್ಬು** (ನಾ). ೧. ಎಮ್ಮೆಯ ಕೊಬ್ಬು. ೨. ಅತಿಶಯವಾದ ಕೊಬ್ಬು; ಸೊಕ್ಕು; ಮದ : ಈ ನಿನ್ನ ತೊಂಡು ಬಳೆದಿರುವ ಎಮ್ಮೆಗೊಬ್ಬಿನ ಇಪ್ಪತ್ತು ವರುಷಗಳ ಶರೀರ ಸೌಭಾಗ್ಯಕ್ಕೆ (ಮಂತ್ರಶ. ೫೯–೨). [ಎಮ್ಮೆ (< ಎರ್ಮೆ) + ಕೊಬ್ಬು₂ (< ಕೊರ್ವು₂)]

**ಎಮ್ಮೆಚೇಳು** 'ಎಮ್ಮೆಚೇಱು' ನೋ.

**ಎಮ್ಮೆಚೇಱು**, ಎಮ್ಮೆಚೇಳು, ಎಮ್ಮೆದೇಳು (ನಾ). ದೊಡ್ಡ ಚೇಳು; ಮಂಡರಗಪ್ಪೆ : "ಕರ್ಣಜಲೂಕ – ಎಮ್ಮೆಚೇಱು" (ಷಷಧಿ. ೨೬). **ಎಮ್ಮೆಚೇಳು** : ಕುಂಡುರುಜ, ರಕ್ತಪುಚ್ಛ, ಎಮ್ಮೆಚೇಳು, ಶುಕ್ಲಕೀಟ ಎಂದು ಚೇಳುಗಳು ನಾಲ್ಕು ತೆಱ (ವೈದ್ಯಸಾ. II, ೧೯೦). **ಎಮ್ಮೆದೇಳು** : ಒಜಲೆತೇಳು ಎಮ್ಮೆದೇಳು ಇಂದ್ರಗೋಪ ಹೇನು ತಗುಣೆ . . . ಮೊದಲಾದತೀಂದ್ರಿಯಂಗಳಾಗಿ ಪುಟ್ಟೆ (ಪಸಾರ. ೪೪೯–೬). [ಎಮ್ಮೆ (< ಎರ್ಮೆ) + ಚೇಱು (< ತೇಳ್)]

**ಎಮ್ಮೆತಪ್ಪರೆಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೈಔಗಿ. ೭೬–೧೫೬೨). [ಎಮ್ಮೆ (< ಎರ್ಮೆ) + ತಪ್ಪರೆ + ಹುಲ್ಲು (< ಪುಲ್)]

**ಎಮ್ಮೆತಮ್ಮ** (ನಾ). ೧. ಕೋಣ. ೨. (ಅಲಂ) "ಮೂರ್ಖ; ಹೆಡ್ಡ; ದಡ್ಡ" (ಜಾನಕೋ. ೨೫). 'ಎಮ್ಮೆತಮ್ಮಣ್ಣ' ಪರಾ. [ಎಮ್ಮೆ (< ಎರ್ಮೆ) + ತಮ್ಮ]

**ಎಮ್ಮೆತಮ್ಮಣ್ಣ** (ನಾ). = ಎಮ್ಮೆತಮ್ಮ ೨ : ಅವನೊಬ್ಬ ಶುದ್ಧ ಎಮ್ಮೆತಮ್ಮಣ್ಣ (ರೂಢಿ). [ಎಮ್ಮೆತಮ್ಮ + ಅಣ್ಣ₁]

**ಎಮ್ಮೆದಾಂಡಿಗ** (ನಾ). ಮೈಮೇಲೆ ಚುಕ್ಕೆಗಳಿರುವ ಬಾತು (ಆ). [ಎಮ್ಮೆ (< ಎರ್ಮೆ) + ಧಾಂಡಿಗ]

**ಎಮ್ಮೆದೇಳು** 'ಎಮ್ಮೆಚೇಱು' ನೋ.

**ಎಮ್ಮೆಬಳ್ಳಿ** 'ಎಮ್ಮೆವಳ್ಳಿ' ನೋ.

**ಎಮ್ಮೆಬಾರು** (ನಾ). ಎಮ್ಮೆಯ ಚರ್ಮದಿಂದ ಮಾಡಿದ ಬಾರುಕೋಲು, —ಚಾವಟಿ : ನಿನ್ನ ಸ್ತ್ರೀಚಪಲತೆಯು ಸೈರಿಸದೆ ಅರ್ಜವರ ಚುಬುಕಿನ ಎಮ್ಮೆಬಾರಿನ ಪರಮಸೇವೆಗೆ ನಿನ್ನನ್ನು . . . ಎಳೆದೊಯ್ಯುತ್ತಿದೆ (ಬೆಟ್ಟಅ. ೨೧–೧). [ಎಮ್ಮೆ (< ಎರ್ಮೆ) + ಬಾರ್ವು]

**ಎಮ್ಮೆಮುರುಕಲುಗಿಡ** (ನಾ). ಒಂದು ಬಗೆಯ ಗಿಡ : (ಮೈಔಗಿ. ೧೪–೨೬೧). [ಎಮ್ಮೆ (< ಎರ್ಮೆ) + ಮುರುಕಲು + ಗಿಡ (< ಗಿಡು)]

**ಎಮ್ಮೆವಳ್ಳಿ**, ಎಮ್ಮೆಬಳ್ಳಿ (ನಾ). ಒಂದು ಜಾತಿಯ ಬಳ್ಳಿ : "ಅವಂತೀ– ಅಂಬಿಲ, ಎಮ್ಮೆವಳ್ಳಿ" (ಓಷಧಿ. ೩). **ಎಮ್ಮೆಬಳ್ಳಿ** : (ಮೈಔಗಿ.೯–೧೪೪). [ಎಮ್ಮೆ (< ಎರ್ಮೆ) + ಬಳ್ಳಿ]

**ಎಮ್ಮೆವೋರಿ** 'ಎರ್ಮೆವೋರಿ' ನೋ.

**ಎಯ್**, ಎಯ್ಯಿ (ನಾ). ಮುಳ್ಳುಹಂದಿ : "ಶಲಲಃ, ಶಲ್ಯಕಃ, ಶ್ವಾವಿತ್, – ಈ ೩ ಎಯ್" (ಹಲಾಯು. ೩೯–೮೦) ; ಮೆಯ್ಮೆಯ್ಯುಮ್ಬಾಗೆ ಎಱ್ಚೋಡಿಸಿ ಅ ಕಯ್ಯಂ ಗೆಲ್ದು ತಾನುಂ ಪಲವುಂ ಎ[ಐ]ಸುವೆತ್ತು ಎಯ್ವೊದೆದಪ್ಪದಪ್ಪೊಲ್ಲಿಕೆಪಂಜರದೊಳಿಜಗಿ ಭೀಷ್ಮನ್ಸಿಱ್ದನ್ತೆ (ಎಕ. VIII, ಸೊರಬ. ೧೧೦–೮ ; 800) ; ಅಡಂಗಿ ಪರಿವ ಪುಲಿಗಳುಮಂ ಸೋಂಕಿ ಪರಿವೆಯ್ಗಳುಮಂ (ಪಂಪಭಾ. ೫–೪೮ ವ) ; ಲೋಭಿಯೆಯ್ಯಾಗಿಯುಂ ಮಹಾಲೋಭಿಚಮರೀಮೃಗವಾಗಿಯುಂ . . . ಪುಟ್ಟಿ (ಧರ್ಮಾಮೃ. ೬–೧೮೮) ; ಮಿಾನಾದುದೆಯ್ಯಮೃಗಂ (ಯಶೋಚ. ೩–೪೬) ; ಕಡುಮುಳಿದೆಯ್ ಪಿಡಿದೆಡೆಯಂ ಸುಡುವುದದಂ ಗೇರತುಪ್ಪದಿಂ ಕಾದುದಱಿಂ (ಖಮುದ. ೧೩–೮೦).

**ಎಯ್ಯಿ** : (ಆ)

**ಎಯ್ಯಮುಳ್ಳು** = ಮುಳ್ಳುಹಂದಿಯ ಮುಳ್ಳು : "ಶಲಲಂ, ಶಲಂ– ಈ ೨ ಎಯ್ಯಮುಳ್ಳು" (ಹಲಾಯು. ೩೯–೮೦) ; ಎಯ್ಯಮುಳ್ಳ ವಿಷಕ್ಕೆ (ಖಮುದ. ೨–೧೨೯ ವ).

[ದೇ. ‖ ತಮಿ. ಎಯ್ ; ಮಲ. ಎಯ್ಯ ; ತುಳು. ಎಯ್ಯಪಂಜಿ ; ತೆಲು. ಏದು ; ಕೋಲಾ. ನಾಯ್ಕಿ. ಸೇದ್]

**ಎಯಿತರ್** 'ಎಯ್ತರ್' ನೋ.

**ಎಯಿದು** 'ಎಯ್ದು' ನೋ.

**ಎಯ್ತರ್**, ಆಯ್ತರ್, ಎಯಿತರ್, ಐತರ್ (ಕ್ರಿ). ಬರು; ಸಮಿಾಪಿಸು; ಬಂದು ಸೇರು : "ಎಯ್ತರ್ (ಎಯ್ + ತರ್) – ಸಮಿಾಪಾಗಮನೇ" (ಶಮುಧಾ) ; ಜನಂ ಕೂಡೆ ಕವ್ವರೆಗೊಂಡೆಯ್ತರೆ ನೋಡಲೆಂದು ಪರಿದರ್ (ಆದಿಪು. ೧೧–೨೨) ; ತನಗೆ ಸುಖೋದಯಮಾದೊಡೆ ಧನಧಾನ್ಯ ಪರಿಗ್ರಹಂಗಳೆಯ್ತರುತಿರ್ಕುಂ (ಸಮಪ. ೫–೬೮) ; ಜಿನನಿರ್ದುದ್ಯಾನವನಕ್ಕೆಯ್ತಂದಂ ಮಾನಧನಂ (ಪುಷ್ಪಪು. ೯–೧) ; ಹಿಂದೆ ಮುಂದಿಕ್ಕೆಲದೆ ನಾರೀವೃಂದಮೆಯ್ತರೆ (ಸಂಭಪ. ೨೦–೧೪) ; ಸತಿಯರಾನಂದದಿಂದಲೆಯ್ತಂದರಾಕೆಯ ಕೂಡೆ (ಭಾವಚಿಂ. ೪–೨೨). **ಆಯ್ತರ್** : (ಆ). **ಎಯಿತರ್** : ಬಿರುದಂ ಮಾಣ್ಬುದಿಂಮಾಣ್ಬುದೆಯಿತಂದವರಸಂಕಂಗೊಂದಪಂ ಕೊಂದಪಂ (ಎಕ. VIII, ಸಾಗರ. ೧೧೯–೨೩ ; 1042) ; ಮೇಳದ ಕೆಳೆಯರೊಡನೆಯಿತಂದು (ಸಾಳ್ವಭಾ. ೬–೨೨). **ಐತರ್** : ಭರತನಂ ನೋಡಲೈತಂದಲೊರ್ವಳ್ (ಆದಿಪು. ೧೧–೧೬) ; ಅನುಮಾನಂಬಡೆ ರಾಮನಗ್ನಿಯೊಳಪೊಕ್ಕಾ ಸೀತೆ ತಾನೈತರಲ್ (ಸೋಮೇಶ. ೮೯) ; ವಿಲಾಸವಡೆದೈತರುತಿರ್ಪ [ಪಾಂಚಾಂ. ಪ್ಪ] ಭೂತಳಪತಿಯ (ಹಜಕಾ. ೧೪–೨೩) ; ಕೈಲಾಸ ನಾಕಗಳ ಬಾಳ್ಕೆಗಳು ನನಗೆ ಬೇಸರ ಹಿಡಿಸಿದ್ದುವೆಂದು ಅದುದರಿಂದಲೇ ನಾನು ಇಳೆಗೆ ಐತಂದಿದ್ದೆ (ಧೂಮುಮ. ೬೧). [?]

**ಎಯ್ತರವು**, ಅಯ್ತರವು, ಐತರವು (ನಾ). ಬರುವಿಕೆ ; ಬರವು : ಬಿಸಿಲಿಂದಂ ಬಿಜುಗಾಳಿಯೆಯ್ತರವಿನಿಂದಂ ಧೂಳಿಯಿಂದಂ ಕರಂ ಮಸುಳ್ದತ್ತಂ ಗದ ಕಾಂತಿ (ಮಹಾನೇ. ೪–೧೯). **ಅಯ್ತರವು : ಐತರವು :** ಕಾಮಾಕ್ಷಿ ಸಿದ್ಧನೈತರವ ಕಾದಿಹಳು (ನವರಾ. V, ೩೪). [ಎಯ್ತರ್ + –ವು]

**ಎಯ್ದಿಸು**, ಅಯ್ದಿಸು, ಐದಿಸು (ಕ್ರಿ). ಸೇರುವಂತೆ ಮಾಡು ; ಮುಟ್ಟಿಸು ; ಉಂಟುಮಾಡು : ಬಕಾಸುರನ ಮಗನಳಂಭೂಷನರ್ಜುನನ ಮಗನಿಳಾವಂತನನಂತಕಲೋಕಮನೆಯ್ದಿಸುವುದುಂ (ಪಂಪಭಾ. ೧೧–೭ ವ) ; ಎನ್ನ ಮನೋರಥಕ್ಕೆ ಪರಿಪೂರ್ತಿಯನೆಯ್ದಿಸೆ (ಕಾದಂಪೂ. ೪೪೭) ; ಪಂಚಮಗತಿಯನೆಯ್ದಿಸುವೆನೆಂಬ ಸಮಕಟ್ಟಿಂದೆ (ಧರ್ಮಾಮೃ. ೬–೧೨೭) ; ಉಂಬನೊಬ್ಬನೆ ಪಕ್ವಫಲಗಳನಿಂಬುಗೊಟ್ಟೆಯ್ದಿಸುವರಗಣಿತ (ಪ್ರಭುಲೀ. ೨೩–೨೭). **ಅಯ್ದಿಸು :** ಎಮ್ಮ ಕೌತುಕವಾಗಿ ಮರ್ತ್ಯವನಿಮ್ಮಡಿಸಿ ಪಾವನವನಯ್ದಿಸು [ಪಾಠಾಂ. ಎಯ್ದಿಸು] ಒಮ್ಮೆಯುಂ ನೀ ಬಸವನೆಂಬಭಿಧಾನದಿಂದೆನಲು (ಬಸವಪು. ೨–೩೯). **ಐದಿಸು :** ಆ ಶಿಷ್ಯನ ನಿಜದಾದಿಯನೈದಿಸುವನೀಗ ಜ್ಞಾನಗುರು (ಮಹಾದೇ. ೮–೧) ; ಪನ್ನೆರಡು ವತ್ಸರಮಿದುನ್ನತ ಗುಗ್ಗುಳದ ಸೇವೆಯಾಯ್ತು ಪವರ್ಗಕ್ಕಿನ್ನೈನ್ನೈದಿಸೆನಲ್ (ಉದ್ಭಟ. ೧೧–೭೦) ; ಸರ್ವಲೋಕಂಗಳಂ ವಿಲಯವೈದಿಸುವ (ಭಾವಚಿಂ. ೩–೪) ; ಸಿಕ್ಕದಿರಿ ದಕ್ಷನಿಕ್ಕುವ ಬಲಿಗೆ ನೀವೆಂದು ತಪಕೈದಿಸಿದನವರನು (ಚೆಬಪು. ೧೪–೩). [ಎಯ್ದು + –ಇಸು₃]

**ಎಯ್ದು**, ಅಯ್ದು₁, ಎಯಿದು, ಐದು₁ (ಕ್ರಿ). ೧. ಬರು ; ಸೇರು ; ಸಮಿಾಪಿಸು ; ಮುಟ್ಟು : ಬಗೆದೆಡೆಯನೆಯ್ದಿ ಬಗೆದ ಬಗೆಯಂ ಬಗೆದಂತೆ ತೀರ್ಚಿ ಪೋಪ ಜೋಡೆಯರಂ ಕಂಡು (ಪಂಪಭಾ. ೪–೮೧ ವ) ; ಪೊನ್ನೆಂಬ ಪೆಸರೊಳಾ ಕಬ್ಬೊನ್ನುಂ ಕಿಸುಪೊನ್ನುಮೆಯ್ದಲಾರ್ಕುಮೆ (ಸಮಪ. ೧–೧೨೯) ; ಸುಳಿದಾ ಪೊಮ್ಮಿಗವೆಯ್ದೆ ಸೀತೆಯ ಖಳಂ ಕೊಂಡೊಯ್ದು ತಾಂ ಬಾಳ್ದನೇ (ಸೋಮೇಶ. ೪೨) ; ಓರ್ವ ಮಹಾತ್ಮ ಬಂದೀ ತರುಣನನು ಕೊಂಡೊಯ್ದು ಸಲಹುವನು . . . ಆತನೆಯ್ದುತ್ತಿರಲು ಬೇಡೆನ ಬೇಡ (ಜೀವಂಧ. ೫–೩೩). ೨. ಪಡೆ ; ಹೊಂದು : ಸಮಾಧಿ ನೆಜಿದೊನ್ ಸೋನ್ನೆಯ್ದಿದೊಸ್ಸಿದ್ಧಿಯಾನ್ (ಎಕ. II, ೨೨–೪ ; 700) ; ಪಿರಿದಪ್ಪ ಸಂತಸಮನೆಯ್ದಿ (ಕಬ್ಬಿಕಾ. ೩೨೧). **ಅಯ್ದು₁ : ೧.** ಮಹಾಜ್ಞಾನವಪ್ಪ ಅಜಿವು ನಾನಾ ವಿಷಯಂಗಳಲ್ಲಿ ನೆನೆದು ಉಗಿದು ಹಾವಸೆಯಾಗಿತ್ತು. . . ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿ ಅಯ್ದಿತ್ತು (ಮೋಳಿಮಾ. ೫–೧೭) ; ಮತ್ತೇಭ ಭೂವರದಿಂದುಂಣ್ಮುವ ರಕ್ತವಾಹಿನಿಯುಮಂ ಕಣ್ದಯ್ದಿ (ಎಕ. XVI, ಚಿಕ್ಕನಾ. ೯೮–೪೩ ; 1169). **ಎಯಿದು :** ಚಂಪಾನಗರಮನೆಯಿದಿದರಲ್ಲಿ (ಸುಕುಮಾ. ೪–೩೭ ವ) ; ಲಿಂಗಣ ತಂನ ಹೆಂಡತಿ ನಿರುಗಾಯಿಸಹ ಕಯಿಲಾಸಕ್ಕೆ ಎಯಿದಿದರು (ಎಕ. VII (S), ಶಿಕಾರಿ. ೩೫೨–೫ ; 17ನೆಯ ಶತ). **ಐದು₁ : ೧.** ನಾಕಡಿಯನೈದುವುದು ಲೋಕದ ಕಡೆಯನೇ ಕಾಣ್ಬುದು (ಬಸವ. ೮೫೭) ; ಕೀವೆಳಲೆಯ ಭವದಲಿ ಬಂಧುತನದಲಿ ನಮ್ಮನೈದು [ಪಾಠಾಂ. ಸೇರು]ವುದು (ತೊರರಾ. ೧–೮–೨೦). **೨.** ಆತಂ ಕೀಲನುರ್ಚಿದ ಕೋಡಗನಂತೆ ಕೇಡನೈದುವಂ (ಪಂಚತಂ. ೨೯–೧೧) ; ಸದ್ವೃಕ್ಷರಿಗೆ ಉಳ್ಳುದೆಲ್ಲವ ಕೊಟ್ಟು ಐದರೇ (ಸಮಾವ. ೩) ; ಎಣಿಸಲ್ ಕಾಲೋಚಿತಕ್ಕೈದಿದಾ ತೃಣವೇ ಪರ್ವತವಲ್ಲವೇ (ಸೋಮೇಶ. ೧೬).

**ಎಯ್ದಿಕೊಳ್** = ಸೇರಿಕೊಳ್ಳು ; ಸಮಿಾಪಿಸು : ನಡೆವ ನುಡಿವಾಹಾರಂಗೊಳ್ವೆಯ್ದಿ ಕೊಳ್ವಿಡುವಯ್ದು ಮೊಳ್ನಡಕಮೆ ಸಮಿತ್ಯಾಖ್ಯಂ (ಶಾಂತಿಪು. ೬–೫೨). **ಎಯ್ದಿವರ್, ಎಯ್ದೆವರ್, ಐದಿವರ್, ಐದೆವರ್** = ಬಂದು ಸೇರು ; ಸಮಿಾಪಿಸು : ಬರೆ ಗರ್ಭಕ್ಕರಿವಸ್ತು ವಾಹನಚಯಂ ಕಯ್ಗೆಯ್ದೆವಂದತ್ತು (ಗದಾಯು. ೧–೧೨) ; ಉತ್ತಮ ವೈರಾಗ್ಯದ ಪೆರ್ಚುಗೆಯಂ ತಡೆಯದೆ ಸೆಟ್ಟಿಯನೆಯ್ದೆವಂದು (ಧರ್ಮಾಮೃ. ೨–೧೪೫) ; ಆ ಖಟ್ವಾಂಗಿಯೆಂಬ ತರಂಗಿಣೀ ತೀರಮನಿನಿತಾನುಮೆಯ್ದಿವರ್ಪಲ್ಲಿ (ಜಗವಿ. ೮–೯ ವ) ; ಸೇನೆ ನೆರೆಸ್ವೈದಿವಂದು (ರಾಮಾಶ್ವ. ೧೫೪–೭) ; ಧೈರ್ಯಮಂ ಪತ್ತುವಿಟ್ಟು ಅತಿಪ್ರಲಾಪಂಗೆಯ್ವ ಲಲಿತಾಂಗದೇವನಂ ಸಾಮಾನಿಕದೇವರ್ಕೈದೆವಂದ (ಆದಿಪು. ೩–೫ ವ) ; **ಎಯ್ದೆ ಪೋಗು** = ಜತೆಗೆಹೋಗು ; ಹೊಂದಿಕೊಂಡುಹೋಗು : ಚಂದ್ರಾಪೀಡನುಮೊಡನೆಯ್ದೆಪೋಗಿ ತಾಯ ಮನೆಯೊಳ್ ಮಜ್ಜನಭೋಜನಾದಿ ದಿವಸವ್ಯಾಪಾರಮಂ ಮಾಡಿ (ಕಾದಂಪೂ. ೪೯೯). **ಎಯ್ದೆಪಡು** = ಪಡೆ ; ಹೊಂದು ; ಸೇರು : ದೇವದಣ್ಣದಿನ್ದೆಜಿವೆಪ್ಪಡುವೋರುಮಪ್ಪಾರ್ ರಾಜದಣ್ಣಮುಮೆಯ್ದೆಪ್ಪಡುವಾರ್ (ಎಕ. VI, ಕೊಪ್ಪ. ೩೮–೧೩ ; 675).

[ದೇ. || ತಮಿ. ಮಲ. ಎಯ್ದು ; ತುಳು. ಕೊಡ. ಎತ್ತ್ ; ತೆಲು. ಎಯ್ದು ; ಕೋಲಾ. ಎಂದ್ ; ಪರ್ಜಿ. ಐದ್]

**ಎಯ್ದೆ₁**, ಅಯ್ದೆ₁, ಐದೆ₁ (ಅ). ಚೆನ್ನಾಗಿ ; ಪೂರ್ತಿಯಾಗಿ ; ವಿಶೇಷವಾಗಿ ; ಅತಿಶಯವಾಗಿ : "ಪೆಂಪೆಯ್ದೆ ನಾಡೆ ಕೆನ್ನಂ ಸೊಂಪಂದಮಳಂಬ ಪೆರ್ಚುಗೆ" (ಕವಿಕಂ. ೧೯೯) ; ಜಗತೀಚಕ್ರದೊಳೆಯ್ದೆ ವರ್ತಿಸಿದ (ಎಇ. XIII, ೩೨೯–೧ ; 929) ; ಆಸನ್ನಭವ್ಯನೆಂದೆಯ್ದೆ ಮುನೀಂದ್ರ ದಿವ್ಯಮತದಿಂ ನಿಶ್ಚೈಸಿದಂ (ಆದಿಪು. ೨–೪೮) ; ಸಿದ್ಧರಾಮನ ಚರಿತ್ರವನೆಯ್ದೆ ಪೊಗಳಲಾನೆನಿತಜವನು (ಸಿದ್ಧರಾ. ೧–೬) ; ಎಯ್ದೆ ಹಗೆಯಲಿ ಹೂಣೆ ಹೊಗದಿರು ಮೈದೆಗೆದು ಕಾದುವುದು (ಕುವ್ಯಾದ್ರೋ. ೪–೪೪). **ಅಯ್ದೆ₁ :** (ಕ). **ಐದೆ₁ :** "ಪೆರ್ಚುಗೆಯೊಳೈದೆ" (ಕಶರ. ೧೭) ; ಭೋರೆಂದೋರಂದದೆ ಭುವನಮೈದೆ ಘೂರ್ಣಿಸಿದುದದೆತ್ತಂ ರಾಜಪುತ್ರಜನನೋತ್ಸವದೊಳ್ (ಕಾದಂಪೂ. ೪೧೧) ; ಮೇಲೊಡ್ಡಿದುದೈದೆ ಬಂದ ಮಾರ್ಪಡೆಯೆನಿತಂ (ಕಬ್ಬಿಕಾ. ೨೫೮). [ಎಯ್ದು + –ಎ₃]

**ಎಯ್ದೆ₂** 'ಅಯ್ದೆ₂' ನೋ.

**ಎಯ್ದೆತನ** 'ಅಯ್ದೆತನ' ನೋ.

**ಎಯ್ಮುಳ್ಳು** (ನಾ). ಎಯ್ಯ್ಯಮೃಗದ ಮುಳ್ಳು ; ಮುಳ್ಳುಹಂದಿಯ ಮುಳ್ಳು : ಉಳ್ಳಿ ಸಿತಂ ವ್ಯೋಷಂ ಪಯವೊಳ್ಳಿದುದೆನಿಸಿರ್ದ ಬಂಜೆ ಮಡುವಾಗಲಿವಂ ಕೊಳ್ಳು ತಿಲತೈಲಗೂಡೆಯ್ಮುಳ್ಳುಗಳಾ ಗರಳಮಂ ಕರಂ ಪರಿಹರಿಕುಂ (ಖಮದ. ೨–೧೩೦). [< ಎಯ್ + ಮುಳ್ಳು (< ಮುಳ್)]

**ಎಯ್ಯಪಂದಿ** 'ಎಯ್ಪಂದಿ' ನೋ.

**ಎಯ್ಯಮಿಗ** (ನಾ). ಮುಳ್ಳುಹಂದಿ : ನರಿ ಶಶಕಂ ವೃಕಂ ಸರಟನೆಯ್ಯಮಿಗಂ ಮರೆವಿಂದು (ಗಿರಿಕ. ೧–೬೩) ; ವಿಂಧ್ಯನಗದೊಳಾ ನಾಯ್ ಪಾವಾಯ್ತಾ ನವಿಲೆಯೆಯ್ಯಮಿಗ [ಪಾಠಾಂ. ಮೃಗ] ಮಾಯ್ತಾಯೆಯ್ ಪಾವಂ ಪಗೆ ಮಿಗೆ ತಿಂದುದು (ಯಶೋಚ. ೩–೪೫) ; ಬತ್ತಳಿಕೆ ಬರಿದಾಯ್ತು ಮೇಣೆಯ್ಯಮಿಗಮಾಯ್ತು ಶತ್ರುತನು (ಶ್ರೀರಾಮಾ. ೬೮೭–೨೫೩). [< ಎಯ್ + ಮಿಗ]

**ಎಯ್ಯಮೃಗ** (ನಾ). = ಎಯ್ಯಮಿಗ : "ಶಲಲಿ ಶಲ್ಯಕನೆಯ್ಯಮೃಗ ಮುಕ್ಕು" (ಮಂಗರಾ. ೪೯–೧೨) ; ಮಿಾನಾದುದೆಯ್ಯಮೃಗಂ (ಯಶೋಚ. ೩–೪೬) ; ಮೊಲನೆಯ್ಯಮೃಗಮಾನೆ . . . ಜವಾದಿಯ ಬೆಕ್ಕುಗಳಖಿರದೆ ಓಡಿದುವು ಜಡಿದರ್ (ಚೆಬಪು. ೫೩–೩೦). [< ಎಯ್ + ಮೃಗ]

**ಎಯ್ಯಿ** 'ಎಯ್' ನೋ.

**ಎಯ್ಸಂದಿ**, ಎಯ್ಯಪಂದಿ (ನಾ). = ಎಯ್ಯಮಿಗ : ಎರಲೆಯೆಯ್ಸಂದಿ ಸಾರಗ ಸರ್ಪ ಮೊಲ ಮುಂಗುಲಿಗಳಿಂದೆಸೆದುದಾ ವಿಪಿನ (ಕುರಾಸಾಂ. ೨೭–೬೩). **ಎಯ್ಯಪಂದಿ :** ರಕ್ಷಣಾರ್ಥಂ ಬಾಚ್ವೇಲಿಯಂತಿರ್ಪ ಎಯ್ಯಪಂದಿಗಳಿಂ (ದಶಕು. ೫೭೧ ವ).

[ಎಯ್ + ಪಂದಿ₁. | ತಮಿ. ಎಯ್ಪ್ಪನ್ನಿ ; ಮಲ. ಎಯ್ಯಮ್ಪನ್ನಿ ; ಕೊಡ. ಎಪ್ಪಂದಿ ; ತುಳು. ಎಯಿಪಂಜಿ ; ತೆಲು. ಏದುಪಂದಿ]

**ಎರ** (ನಾ). ಒಂದು ಬಗೆಯ ಮರ; ಎಲಚಿಮರ: ಸಿರಿಸಂ ಸೀರೆ ಬೆಳಲ್ಲವಂಗವೆಲವಂ ಬಳ್ಳಾಲೆರಂ ಬಿಕ್ಕೆ (ಕಾವ್ಯಸಾ. ೧೦೪೦ ಶೂದ್ರಕ); ಎರನುಂ ಮುತ್ತಮುಮೊಡವೆಳೆದಿರೆ (ಲೋ. ಕೋ. ಪ. ೫–೧೯); ಕಮ್ಮರ ನಾಲಂ ಜಾಲ ಬೇಲಂ ಬಿಳಿಲರಳಿಯೆರಂ ಕಕ್ಕೆ (೧೦೬. ೧–೬೨); ಕಾರಾಚ ಮಾಚಂ ಪು ಲಿಂ ಗಿ ಲೆ ರಂ ಗುರ್ಗಳಮತ್ತಿ ಮತ್ತಿ ಮಧುಕಂ (ರಾಜಶೇ. ೫–೫೬). [?]

**ಎರಂಕೆ** 'ಎಱಂಕೆ' ನೋ.

**ಎರಂಗುಡು** (ಕ್ರಿ). ಸಾಲಕೊಡು: ಬೇಡಿದ ಕಾಡೊಳಿ ಮುಟಿಕೊಂಡುದೆಟ ಕುಳಿಗೊಳ್ವಂಗೆರಂಗೊಟ್ಟಂತಾಯ್ತು ಕವರು ಕತ್ತಿಗೆ ಕಡಿತಂ ಬಂದಂತಾಯ್ತು (ಅರ್ಥನೀ. ೬–೭೦ ವ). [< ಎರವು + ಕುಡು (< ಕೊಡು)]

**ಎರಂಬರಗೆ** (ನಾ). ಒಂದು ಊರಿನ ಹೆಸರು: ಎ ರಂ ಬ ರ ಗೆ ಯ ನೆಲೆವೀಡಿನೊಳ್ ಸುಖಸಂಕಥಾ ವಿ ನೋ ದ ದಿಂ ರಾಜ್ಯಂಗೆಯ್ಯುತ್ತಿರೆ (ಸೌಇಇ. XI–ii, ೧೧೯–೩೯; 948); ಹಾನುಗಲ್ ಲೋ ಕಿ ಗುಂ ದಿ ಕುಮ್ಮಟ ಎರಂಬರಗೆಯೊಳಾದ ಸಮಸ್ತದೇಶ (ಎಕ. II, ೩೩೫–೨೩; 1195); ಶ್ರೀಮದ್ರಾಜಧಾನಿ ಪಟ್ಟಮೆರಮ್ಬರಗೆಯ ಕುಳಾಗ್ರಿ ಸೇನಬೋವ ಆಚಣ್ಣ (ಕಇಳ. ೭೩–೧೧–೩; 12ನೆಯ ಶತ). P ಈಗಿನ ಎಲಬುರ್ಗಿಗೆ ಹಿಂದೆ ಇದ್ದ ಹೆಸರು. [?]

**ಎರಕ$_1$** 'ಎಱಕ$_1$' ನೋ.

**ಎರಕ$_2$** (ನಾ). ಕಾಯಿಸಿದ ಲೋಹಾದಿಗಳ ದ್ರವವನ್ನು ಅಚ್ಚಿಗೆ ಎರೆಯುವಿಕೆ; ಹಾಗೆ ಎರೆದ ಅಚ್ಚು: ಎರಕಕ್ಕೆ ಬಿಟ್ಟ ಕರುವಿನಂತೆ ಮಱುಗುತ್ತುಂ [ಇರ್ದು] (ಧರ್ಮಾಮೃ. ೧–೧೬೨); ಕೆರಸ್ಥಳದ ಜ್ಯೋತಿಯದು ಕರುವಿಟ್ಟೆರಕವದು (ದೇದಾವ. ೧೦೩–೧೭); ತಾವರೆಯ ಮಿತ್ರನ ಕರುವಿನೆರಕದಲೆರಸಿದಂತಿರೆ ತೊ ಳ ತೊ ಳ ಗಿ ಬೆಳಗುವ ತನುಚ್ಛವಿಯ (ಸಂಭಪ. ೧೪–೩೩); ಮಿಸುನಿಯೆರಕದಲೆಸೆವ ಪ್ರಾಕಾರ ಸಪ್ತಕಗಳ್ (ವೆಂಕಾರಾ. ೫–೨–೪); ಯಾರೆರೆದರೋ ಎರಕ, ಇಲ್ಲ ಹಗರಣ ಮುರುಕ ಅಪ್ರತಿಮವೀ ಪ್ರತಿಮೆ ಎಂಥ ಎರಕ (ಅರಳು. ೨೫೪–೧೩).
[ದೇ. ‖ ತುಳು. ಎರಕ]

**ಎರಕಗಾರ** (ನಾ). ಎರಕವನ್ನು ಹೊಯ್ಯುವವನು; ಅಚ್ಚುಗಾರ.
[ಎರಕ + –ಗಾರ (< –ಕಾಱ)]

**ಎರಕಹೊಯ್** (ಕ್ರಿ). ಎರಕವನ್ನು ಅಚ್ಚಿನಲ್ಲಿ ಹೊಯ್ಯು, —ಸುರಿ: ಎಲ್ಲರೂ ಒಂದೇ ಪಡಿಯಚ್ಚಿನಲ್ಲಿ ಎರಕಹೊಯ್ದು ಬೊಂಬೆಗಳಂತಿರುತ್ತಾರೆ (ಶಿಕ್ಷದ. ೯೪); ಜನರು ಎರಕಹೊಯ್ದಂತೆ ನೆರೆದರು (ಕೊತಕಾ. ೫೮).
[ಎರಕ$_2$ + ಹೊಯ್$_2$ (< ಪೊಯ್$_2$)]

**ಎರಕೆ$_1$** 'ಎಱಂಕೆ' ನೋ.

**ಎರಕೆ$_2$** (ನಾ). ಒಂದು ಬಗೆಯ ಹುಲ್ಲು; ಜೊಂಡು ಹುಲ್ಲು: "ಎರಕೆ–ಏರಕಾ = ತೃಣಭೇದ" (ತದ್ಭಕೋ. ೪); ಬಲಭುಜರು ಕರಿತುರಗ ರಥ ಸಂಕುಲವನೇಱಿದರಿಱಿದರಸ್ತ್ರಾವಳಿ ಸವೆಯಲೆರಕೆಗಳಲಿಟ್ಟಾಡಿದರು ಕೈದಣಿಯೆ (ನಿಭಾಗ. ೩–೨–೪೮); ಯಾದವಕುಲವು ಮುನಿಶಾಪದಲಿಯೆರಕೆಗಳಲ್ಲಿ ಹೋಯಿದಾಡೇ (ತಿಮ್ಮಮೌ. ೩–೪೪). [< ಸಂ. ಏರಕಾ]

**ಎರಕೆ$_3$** (ನಾ). ಪ್ರಾರ್ಥನೆ; ಬೇಡಿಕೆ: ಹೊತ್ತರಿತ್ತವನಿತ್ತ ಮುನ್ನ ಬಗ್ಗಿಸುವುದೆ ಸುಗ್ಗಿಯನ್ನ ಮರದೆನಿತ್ತೊ ಎರಕೆ (ಗಿ ೪ ವಿ ೦. ೭೭–೨೭); ಆಸೆ ಭಯ ಲೋಭಗಳನಾಧರಿಸುವೆರಕೆಗಳ ಆಯ್ದಾಯ್ದು ತೋರ್ವುದರೊಳೇ ನಿನ್ನ ನಿಲವೆ (ಮಲೆದೇ. ೩೯–೩). [< ಎರೆ$_1$]

**ಎರಗಶರ್ಮ** (ನಾ). ಒಬ್ಬಾತನ ಹೆಸರು: ಸಾರ್ಥವಾಹೀನ ಎರಗಶರ್ಮಣಾ ಲಿಖಿತೇಯಂ (ಮೈಆರಿ. ೧೯೩೨, ೧–೨೭; 401).
[ಎರಗ$_6$ + ಶರ್ಮ]

**ಎರಗಾಡು** 'ಎರೆಕಾಡು' ನೋ.

**ಎರಗಿವಿ** (ನಾ). ಚಾಡಿ ಕೇಳುವ ಕಿವಿ; ಹಿತ್ತಾಳೆ ಕಿವಿ: ಬಸವರಾಜಂ ಕೇಳ್ದು ಎಲೆ ಬುದ್ಧಿಯಿಲ್ಲದ ಭೂಪ ಎರಗಿವಿಯ ಮರುಳೆ ನಾರಣಕ್ರಮಿತರ ಕೇರಿಯಂ ಪೊಕ್ಕನೆ (ಬಸರ. ೧೦–೪೩). [< ಎರವು + ಕಿವಿ$_3$]

**ಎರಗಿಸು$_1$** 'ಎಱಗಿಸು' ನೋ.

**ಎರಗಿಸು$_2$** (ಕ್ರಿ). = ಎರಕಹೊಯ್: ಬೊಮ್ಮವಿದ್ಯೆಯನೆರಗಿಸಿದ ಪುತ್ಥಳಿಯವೊಲು (ನಿಭಾಗ. ೫–೬–೨೭). [< ಎರಕ$_2$ + –ಇಸು$_3$]

**ಎರಗು** 'ಎಱಗು$_1$' ನೋ.

**ಎರಗುಹ** 'ಎಱಗುಹ' ನೋ.

**ಎರಗೌಡ** (ನಾ). ಒಬ್ಬಾತನ ಹೆಸರು: ಪರಬಳಮಂ ಪರಾಕ್ರಮಿಸಲೆಂದೆರಗೌಡನುದೆಗ್ರಕೋಪದಿಂ ಪರಿಯಿಡೆ (ಎಕ. XI, ಚಿತ್ರದು. ೧೩–೧೭; 1124 ?). [ಎರ ? + ಗೌಡ (< ಗಾವುಂಡ)]

**ಎರಚಲು** (ನಾ). ೧. ಎರಚುತ್ತಾ ಬೀಳುವ ಮಳೆಯ ನೀರು; ಇರಿಸಿಲು: ಎರಚಲು ಬಡಿದು ಮೈ ಅರ್ಧಕ್ಕರ್ಧ ನೆನೆದಿತ್ತು (ಅನಾಥ. ೧೩೭). ೨. ಎರಚಿದುದು; ಸಿಡಿದುದು: ಪಾನ್‌ಬೀಡಾ ಹಾಕಿಕೊಂಡವರೊಬ್ಬರು ಕೆಳಗೆ ಉಗುಳಿ ನಮ್ಮ ಕಾಲಿಗೆಲ್ಲಾ ಎರಚಲು ಬಡಿಯುವಂತೆ ಮಾಡುತ್ತಾರೆ (ಕಸಬು. ೧೭). [ಎರಚು (< ಎಱಚು) + –ಅಲ್$_3$]

**ಎರಚಾಡು** (ಕ್ರಿ). ಎಸೆದಾಡು; ಚೆಲ್ಲಾಡು: ರಂಗದಬೀದಿಯಲ್ಲೇ ಇರುವ ಓಕುಳಿಗುಂಡಿಯಲ್ಲಿ ಆರತಿನೀರು(ವಸಂತ) ಮಾಡಿ ತುಂಬಿ ಪರಸ್ಪರ ಎರಚಾಡುವರು (ಹುಟ್ಟಹ. ೫೦); ಭೀಮಸೇನನು ಓಟ, ಆಟ, ಊಟ–ಕೊನೆಗೆ ಮಣ್ಣೆರಚಾಡುವುದು ಎಲ್ಲದರಲ್ಲಿಯೂ ಎಲ್ಲರನ್ನೂ ಮೀರಿಸಿದ್ದನು (ವಚಭಾ. ೧೬). [ಎರಚು (< ಎಱಚು) + ಆಡು$_1$]

**ಎರಚು** 'ಎಱಚು' ನೋ.

**ಎರಟ್ಟೆಪುಣಿಸೆ** (ನಾ). ಜೋಡಿ ಹುಣಿಸೆಮರ: ಸನ್ನಿಗಾಲಾಸಾಡದರೆ ಪೋಗಿತೇನನ್ನಾಡಕೆಕೊಟ್ಟಾಲೆಯುಳ್ ಕುಡಿತ್ತು ಎರಟ್ಟೆಪುಣುಸೆ ಎ ಮೂಡಾಯ್ನೋಡಿ ನೀರಿಟಿವೆ ತಾಱಿವ (ಎಕ. XVI, ಗುಬ್ಬಿ. ೭೫–೫೨; 733).
[ಎರಟ್ಟು$_0$ (< ಎರಡು) + ಪುಣಿಸೆ. P ತಮಿ. ಇರಟ್ಟೈ]

**ಎರಡಟ್ಟಿ** 'ಎರಡು' ಪರಾ.

**ಎರಡನೆ** 'ಎರಡು' ಪರಾ.

**ಎರಡನೆಯ** 'ಎರಡು' ಪರಾ.

**ಎರಡಱಿ** (ಕ್ರಿ). ಭೇದವನ್ನು ತಿಳಿ; ಕಪಟವನ್ನು ತಿಳಿ: ಮುತ್ತೊರ್ವಂ ತನಗೆರಡಱಿಯದೊಲ್ದು ನಲ್ಲಳನೇತಱೊಳಪ್ಪೊಡಪೋವಮಂ ಮಾಡದೆ ಬೇಟಮುಂ ಸಲಿಸುವುದರ್ಕೆ ಸಂತಸಂಬಟ್ಟು (ಪಂ ಪ ಭಾ. ೪–೯೨ ವ); ವಿ ಲಾ ಸ ವ ತಿ ಗೆ ಮನೋವಿಕಾಸಮನೆರಡಱಿಯದೊಲವಿನ ಮನ್ನಣೆಯ ಮಾತುಗಳಿಂ (ಮಲ್ಲಿಪು. ೪–೯೩). [ಎರಡು + ಅಱಿ]

**ಎರಡಱುನೂಱು** (ನಾ). ಪುಲಿಗೆರೆ ಮುನ್ನೂರು ಮತ್ತು ಬೆಳ್ವಲ ಮುನ್ನೂರು ಎಂಬ ಪ್ರದೇಶ: ತದ್ವಿಷಯಕ್ಕೆರಡಱುನೂರು ಲಲಾಮಂ ಪುರಿಕರಜನಪದಮದಕ್ಕೆ ನವ ಪವಿಮುಕುರಂ (ಎಇ. XIII, ೩೩೧–೨೫; 929); ಕನ್ನಡಮೆರಡಱುನೂಱಱ ಕನ್ನಡಮಾ ತಿರುಳ ಕನ್ನಡಂ (ಗದಾಯು. ೧–೪೨); ದಣ್ಣನಾಯಕಂ ಕೇಸಿಮಯ್ಯಂಗಳೆರಡಱುನೂಱುಮಂ . . . ಆಳುತ್ತಮಿರೆ (ಕಇ. I, ೨೪–೭; 1148); ಚೆಲ್ವಿನ ಕ ಣ ಯೆ ನ ಲೆ ಸೆ ದು ತೋರ್ಪುದೆರೆ[ರ]ಡಱುನೂಱುಂ (ಸೌಇಇ. XI–ii, ೨೦೪–೧೦; ?).
[ಎರಡು + ಅಱುನೂಱು]

**ಎರಡಿಡು** (ಕ್ರಿ). ಎರಡಾಗು; ಎರಡು ಭಾಗವಾಗು: ತದ್ಬಲಮೆರಡಿಟ್ಟು ತಳ್ತಡಸಿ ಬೊಬ್ಬಿಱಿದಾಡಿದುದೇನನೆಂಬಪೆಂ (ರಾಜಶೇ. ೧೩–೮೮).
[ಎರಡು + ಇಡು$_1$]

**ಎರಡು** (ನಾ). ಒಂದು ಸಂಖ್ಯಾವಾಚಕ; ಒಂದು ಒಂದು ಸೇರಿ ಆದ ಮೊತ್ತ: "ಯುಗ್ಮ ಯಮಳಂ ಯುಗಂ ದ್ವೈತಮೆನಲು ಯೆರಡಕ್ಕೆ ಪೆಸರಕ್ಕು" (ಮಂಗರಾ. ೧೨೯–೧೨); ಎರಡುಂ ನಾಟ್ಕೆ ರಾಜಶ್ರಾವಿತಮಾಗೆ ಪ್ರಸಾದಂ ಕೆಯ್ದಾರ್ (ಇಅ. XII, ೧೪೫–೧೧; 680); ಪರಮಾಲಂಕಾರಮುಂ ಶರೀರಮುಮೆಂದಿಂತೆರಡಕ್ಕುಂ ಭೇದಂ (ಕವಿರಾ. ೧–೨೩); ಒಡಲೆರಡೊಂದೆ ಜೀವಂ (ಪಂಪಭಾ. ೧೩–೪); ವ್ಯವಹರಿಪುವೆರಡುರೂಪಿಂದವಕ್ಕರಂ ಶ್ರಾವಣಂ... ಚಾಕ್ಷುಷಂ (ಶಮದ. ೩); ಕಬ್ಬಿಗರೋದುಗಬ್ಬವ ಹಾಡುಗಬ್ಬವ ಕಬ್ಬದೊಳೊರೆವರಿವೆರಡು ಕಬ್ಬಿನಂತಿರಬೇಕು (ಭರಚ. ೧–೬).

**ಎರಡಕ್ಕೆ ಹೋಗು** = ಮಲವಿಸರ್ಜನೆಗೆ ಹೋಗು; ನೀರು ಕಡೆ ಹೋಗು; ಕೈಕಾಲಿಗೆ ಹೋಗು: ಮಗು ಎರಡಕ್ಕೆ ಹೋಗಿದೆ (ರೂಢಿ). **ಎರಡಚ್ಚಿ** = ಎರಡು ಕಣ್ಣು: ಚಿತ್ರಿಸೆ ಬಂದುದು ನಿನ್ನ ರೂಪು ಕಾಮಿನಿ ಎರಡಚ್ಚಿಯೊಳ್ ನೆಲನುಮಾಗಸಮುಂದೆಸೆಯುಂ ನಿನತ್ತು ರೂಪನೆ ತಳೆದೊಪ್ಪಿ ತೋಱುವುದು ನೀಱೆಗೆ (ರಸರ. ೧–೭೩). **ಎರಡನೆ** = ಎರಡನೆಯ ಸಲ, —ಬಾರಿ: ಧರೆಗೆ ಬಿದ್ದಿಹ ಖಡುಗವನು ಮತ್ತೆರಡನೆಗೆ ಕೈಕೊಂಡು ಭೂಪತಿ ತರುಣಿ ಹತ್ತಿರೆ ನಿಂದು ಕೈನೆಗಹಿದನು (ಹರಿಚ. ೫೩). **ಎರಡನೆಯ** = ೧. ಎರಡನೆಯ ಸ್ಥಾನದ; ದ್ವಿತೀಯ ಸ್ಥಾನದ: ಸರಸತಿಗೆ ಎರಡನೆಯ ಬೀಣೆಯೆನೆ ಸೌಭಾಗ್ಯಂ (ಶಮದ. ನ. ೩೪೦); ಎರಡನೆಯ ಮುಕ್ಕಣ್ಣ (ಬಸಪು. ೧–೮); ಎರಡನೆಯ ದಿನಮಣಿಯ ತೇಜದಂತೆ (ಜೈಮಿಭಾ. ೨೮–೭). ೨. ಬೇರೆಯ; ಹೊರತಾದ: ಈ ಕೆಲಸ ಸಾಧಿಸಲು ಎರಡನೆಯ ದಾರಿಯಿಲ್ಲ (ರೂಢಿ); ಅವನು ಎರಡನೆಯವನು (ರೂಢಿ). **ಎರಡಯಿದು** = ಹತ್ತು: ಎರಡಯಿದು ಶಿರದಸುರಪತಿಗೋಸರಿಸಿ ಅಲ್ಲಿಯೆ ನಿಂದನಲ್ಲಾ ಪುರಹರಂ (ಬಸಪು. ೫೩–೧೯); ಜ್ವರ ಕೃಶವನಶನ ವಿಕಲಂ ಮೌನಂದೊರೆದ ಮಱವೆ ಮರಣೋದ್ಯೋಗಮುಮೆಂಬೆರಡೈದಱವಸ್ಥೆಗಳೆಯ್ದುದುವಿನಿಯಂ ತೊಲಗಲ್ಕವಳ (ಜಯಕಾ. ೪–೨೭). **ಎರಡಯ್ದು** = ೧. ಎರಡು ಐದುಗಳ ಮೊತ್ತ; ಹತ್ತು. ೨. ಎರಡು ಮತ್ತು ಐದರ ಮೊತ್ತ; ಏಳು. ೩. ಎರಡು ಅಥವಾ ಐದು (ಕ). **ಎರಡಾಗು** = ಎರಡು ಭಾಗವಾಗು; ತುಂಡಾಗು; ಕವಲೊಡೆ: ನೀರ್ನಡುವೆ ಹೊಯ್ಡಡೆ ಸಮ್ಮರ್ದಿಸಲೆರಡಾಗದೆಂಬರದೊಮ್ಮೆಯುಂ ಮಾಣಿಸಿದನಲ್ಲಾ (ಬಸಪು. ೩೨–೩೬); ಒಸೆದು ಪಟ್ಟಣವನು ವಾಹಿನಿಯೆರಡಾಗಿ ಪಸರಿಸಿ ರಕ್ಷಿಸುತಿಹಳು (ಕಂನವಿ. ೫–೪೩); ಬಲಮೆರಡಾಗಿ ಪೆರ್ಮೆವಡೆದೊಡ್ಡಿ ವಿಳಾಸದೆ ನಿಂದು (ರಾಜಶೇ. ೧೩–೮೩). **ಎರಡಿಲ್ಲ** = ಎರಡನೆಯ ಮಾತು ಇಲ್ಲ; ಹುಸಿಇಲ್ಲ: ಹುಸಿಮಾತದೇಕೆನುತಮಿರೆ ಎನೆ ವೃಷಭಮುಖನಲ್ಲಿ ಕೊಟ್ಟೆನೆರಡಿಲ್ಲಯ್ಯ (ಬಸರ. ೧–೪೯); ಸತ್ಯಂ, ತ್ರಿಸತ್ಯಂ ಗಡಾ ಇದರೊಳೆರಡಿಲ್ಲ (ಹಬ್ಬೆರ. ೪೨–೧೬). **ಎರಡುಕೋಲಬಳಿ** = ಸೈನ್ಯದ ಉಭಯ ಪಾರ್ಶ್ವಗಳು (?): ಗುರುರಾಯವೊಡೆಯರು ತಂಮ ಸಮಸ್ತಯೆರಡುಕೋಲಬಳಿ ವೀರ ಪರಿವಾರ ಸಯವಾಗಿ ನಗಿರ ರಾಜದಮೇಲೆ ದಂಡೆತ್ತಿ ಹೋದಲಿ... ಯಿಮ್ಮಡಿ ಸಾಳುವ ಕೃಷ್ಣದೇವರಸವೊಡೆಯರು ತಂಮ ಯೆರಡು ಕೋಲಬಳಿಯಿರ ಪರಿವಾರ ಸಹಾವಾಗಿ ಬಂದು (ಕಇ. III, ೮–೬, 10; 1530). **ಎರಡುಜೀವದವಳು** = ಗರ್ಭಿಣಿ; ಬಸುರಿ (ದಕ. ಕ). **ಎರಡುತಲೆಹಾವು** = ೧. ಎರಡು ತಲೆಗಳಿರುವ ಹಾವು. ೨. (ಆಲಂ) ಎರಡು ಪಕ್ಷದಲ್ಲಿರುವವನು: ಅವನು ಎರಡು ತಲೆ ಹಾವು (ರೂಢಿ). **ಎರಡುನಾಲಗೆ** = ಎರಡು ಮಾತು; ಸುಳ್ಳುಮಾತು: ಅವನ ಕಣಿಗೆರಡುನಾಲಗೆ (ಚಂದ್ರಸ. ೧೩). **ಎರಡುನಾಲಗೆಯವ** = ಎರಡು ರೀತಿಯಲ್ಲಿ ಮಾತುನಾಡುವವನು; ಸುಳ್ಳುಗಾರ (ಕ).

**ಎರಡುಬಗೆ** = (ಆಲಂ) ದ್ರೋಹ ಎಣಿಸು; ಮೋಸಮಾಡು: ನಾನ ವ್ಮೃತವೀವೆ. ಆದನುಂಡು ನನಗೆರಡಬಗೆವ ಮಾನವ ಹೇಳು (ಕಪಪು. ೪–೩೨); ಉಂಡ ಮನೆಗೆ ಎರಡು ಬಗೆಯ ಬೇಡ (ಗಾದೆ). **ಎರಡೆಂಬತ್ತು** = ಎರಡು ಎಂಬತ್ತುಗಳ ಮೊತ್ತ; ಒಂದುನೂರ ಅರುವತ್ತು: ಎರಡೆಂಬತ್ತು ಕೋಟಿ ಪ್ರಮಥಗಣಂಗಳು ಅಂಗಾಲ ಕಣ್ಣವರು ಮೈಯೆಲ್ಲ ಕಣ್ಣವರು (ಅವಚಂ. ೭–೨೩). **ಎರಡೆರಡು** (ದ್ವಿರುಕ್ತಿ): ಶರಮನಿದಂ ಕಡಿಕಡಿದುಡಿದೆರಡೆರಡಪ್ಪಂತು ತಱಿದು (ಆದಿಪು. ೧೨–೧೦೨); ದೇವರು ಎಲ್ಲರಿಗೂ ಎರಡೆರಡು ಕಣ್ಣುಗಳನ್ನು ಕೊಟ್ಟಿರುವನು (ಮುಂಬಯಿ. ೪–೧೬೮). **ಎರಡೇಳು** = ಎರಡು ಏಳುಗಳ ಮೊತ್ತ; ಹದಿನಾಲ್ಕು: ಎರಡೇಳು ಲೋಕವ ಸೃಜಿಸುವ ವಿಧಿ (ಮೋಹತ. ೪–೩೪); ಅಂತೂ ನೀವು ಎರಡೇಳು ಮಕ್ಕಳ ತಂದಿ ಅನ್ನರೆಲ್ಲಾ (ತಿಡುಗು. ೪೨). **ಎರಡೈನೂಱು** = ಎರಡು ಐನೂರುಗಳ ಮೊತ್ತ; ಒಂದು ಸಾವಿರ: ಕಾಳೆಗ ತನಗಿಲ್ಲವೆಂದು ಚಿಂತಿಸಲಾಗಿ ಭಾಳಾಕ್ಷ ಕೃಪೆಮಾಡಿದಡೆ ಕೋಲಾಹಲವೆತ್ತು ಕಾದದಿರ್ದಡೆ ತನ್ನ ತೋಳೆರಡೈನೂಱದೇಕೆ (ಮೋಹತ. ೩೫–೮). **ಎರಡೈನೂರ್ವರು** = ಒಂದು ವರ್ತಕ ಶ್ರೇಣಿಯ ಹೆಸರು: ಯಾ ಧರ್ಮ್ಮಮನಾಚಂದ್ರಾರ್ಕ್ಕತಾರಂಬರಂ ಶ್ರೀಮದೆರಡೈನೂರ್ವ್ವ[ರು]ಪ್ರತಿಪಾಲಿಸುವರು (ಕೊಲ್ಹಾಶ. ೨೦–೪೭; 1265). **ಎರಳ್ಚವರ** = ಎರಡು ಚಾಮರಗಳು: ಪಿಡಿದೆರಳ್ಸತ್ತಿಗೆಗಳೆರಡೆರಳ್ಚವರಗಳ ನಡುವಗಲ್ಪಂಜುಗಳ ಡೌಡೆ ಜೀಗಟೆಗಳ (ಚಬಪು. ೪೭–೩೭). **ಎರಳ್ತಡಿ** = ಎರಡು ದಂಡೆ, —ದಡ: ತೊಱೆಗಳೆರಳ್ತಡಿಗಳೊಳು ಪುಟ್ಟಿರ್ದೆಳೆಗಱಿಕೆಯ ಕಾಳ್ಕೋಣಗಳು ನೆಱೆ ಮೆಲ್ದು (ಕುಠಾಸಾಂ. ೨೭–೬೦). **ಎರಳ್ತೆರ** = ಎರಡು ವಿಧ, —ಬಗೆ, —ರೀತಿ: ಪರಿಶುದ್ಧರೆಂದು ಪ್ರಾಕೃತರೆಂದೆರಳ್ತೆರಂ ನರರುಂ (ಮಹಾವಿ. ೧೦–೪೪). **ಎರಳ್ದಂಡು** = ಎರಡು ಕಡೆಯ ಸೈನ್ಯ: ಎರಳ್ದಂಡು ನೆಲನಗಲದೊಳ್ ಬೀಡು ಬೀಡುಗಳೈದೆ ಬಿಟ್ಟುವಾರ್ ಪೊಗಳ್ವರವರೇಳ್ಗೆಗಳನು (ಚಬಪು. ೪೮–೨೯). **ಎರಳ್ದೆಸೆ** = ಎರಡು ದೆಸೆ, —ದಿಕ್ಕು: ಬರುತಿರೆ ಮುಂದೆ ಪತ್ತನದೆರಱ್ದೆಸೆಯೊಪ್ಪುವ ರಾಜವೀಥಿಯೊಳ್ (ಗಿರಿಕ. ೩–೧೧೪). **ಎರಳ್ಸತ್ತಿಗೆ** = ಎರಡು ಕೊಡೆಗಳು: ಪಿಡಿದೆರಳ್ಸತ್ತಿಗೆಗಳೆರಡೆರಳ್ಚವರಗಳ (ಚಬಪು. ೪೭–೩೭). **ಎರಳ್ಸೀಳಾಗು** = ಎರಡು ತುಂಡಾಗು, —ಭಾಗವಾಗು: ಚಟುಲಸ್ವರೂಪನೊಪ್ಪಿದನಜನ ತನುವೆರಳ್ಸೀಳಾಗೆ ತತ್‌ಕ್ಷಣದೊಳು (ಚಬಪು. ೧೭–೫). **ಎರಟ್ಕಡಿ** = ಎರಡು ತುಂಡು: ಕುದುರೆಗಳನೊಂದೆ ಪೊಯ್ಕೆಂ ಮದಕರಿಗಳನೆರಡು ಪೊಯ್ಗೆರಟ್ಕಡಿ [ಪಾಠಾಂ. ಎರಡೆ ಪೊಯ್ಯೊಳ್ಕೆರ್ಕಂಡಂ] ಮಾಡಲ್ (ಗದಾಯು. ೪–೩೦); ಟಕಾರಕ್ಕೆ – ಎರಟ್ಕಡಿ, ಎರಟ್ತರಂ (ಶಮದ. ೧೮೩ ಪ್ರಯೋ). **ಎರಟ್ಕಣ್** = ಎರಡು ಕಣ್ಣು: ಎರಡೆ ಕೈಯೆರಟ್ಕಣ್ಗಳೊಂದೆ ನಾಲಗೆಯುಮೆಂದೆ ಚಿಂತಿಸುವೆನಾದಿಭಟ್ಟಾರಕಾ (ಆದಿಪು. ೧೩–೮೯); ನೊರೆವುಲ್ಲಂ ಮೇದೆರಟ್ಕಣ್ ತುಮುಳೆ ಕುಡಿದು ಪೂರಾಂಬುವಂ (ಚಂದ್ರಪು. ೪–೪೮). **ಎರಟ್ಕಣೆ** = ಎರಡು ಬಾಣ: ಎರಟ್ಕಣೆಯಿಂ ಸಾರಥಿಯಂ ಕೆಡೆಯಲ್ಕೆಚ್ಚಂ (ಜಗವಿ. ೭–೯೦). **ಎರಟ್ಕರ** = ಎರಡು ಕೈ: ಸುರಸಂದೋಹದ ತೀವಿ ತಂದ ಘಟಸಂಘಾತಂಗಳಾನಲ್ಕೆರಟ್ಕರದಿಂ ಬಾರದೆಮಾಣೆ (ಆದಿಪು. ೭–೮೫ ವ); ರೂಪು ಪಾದನಖದರ್ಪಣದೊಳ್ ಪಲವಾಗಿ ತೋಱೆ ಕಂಡಾಸತಿ ಬೆರ್ಚಿ ಮುಚ್ಚಿದಳೆರಟ್ಕರದಿಂ ತರಲೇಕ್ಷಣಂಗಳಂ (ಪಂರಾಮಾ. ೯–೧೧೨). **ಎರಟ್ಕುದುರೆ** = ಎರಡು ಕುದುರೆ: ಆನಾ ಇಮ್ಮಡಿಯಾ ಎರಟ್ಕುದುರೆಯಾ ಇರ್ಬರ್ಗೆರಟ್ಕೈದುವಾ (ಶಮದ. ೫೭ ಪ್ರಯೋ). **ಎರಟ್ಕೆಲ** = ಎರಡು ಪಕ್ಕ; ಇಬ್ಬದಿ: ಅನಿಬರ್ ತಮ್ಮಂದಿರುಂ ತನ್ನೆರಟ್ಕೆಲದೊಳ್ ಬಂದಿರೆ ನೋಡಿ (ಪಂಪಭಾ. ೩–೫೫); ಚಮರರುಹಗ್ರಾಹಿಣಿಯರ್... ಧನಶ್ರೀರಮಣಿಯೆರಟ್ಕೆಲದೊಳಂ ಬೆಡಂಗಂ ಪಡೆದರ್ (ಮಲ್ಲಿಪು. ೩–೧೦೦).

ಎರಟ್ಕೈದು = ಎರಡು ಆಯುಧ: ಅನಾ ಇಮ್ಮಡಿಯಾ ಎರಟ್ಯುದುರಿಯಾ ಇರ್ಬರ್ಗೆ ರಟ್ಕೈದುವಾ (ಶಮದ. ೫೭ ಪ್ರಯೋ). ಎರಟಕ್ಕೋಡು = ಎರಡು ಕೋಡು: "ಎರಡುಕೋಡೆರಟ್ಕೋಡು" (ಸಂಜೀವ. ೨೧). ಎರಟ್ಖಂಡ = ಎರಡು ಖಂಡ, —ತುಂಡು: ದಹನಾರ್ಚಿಗಳಿಂ ಬರ್ದುಂಕಿ ನೆಗೆದು ಪಾಱುವಾಗಳದನೆರಟ್ಖಂಡಮಪ್ಪಿನ ಮಾಖಂಡಳತನಯನಿಸುವುದುಂ (ಪಂಪಭಾ. ೫–೯೯ ವ). ಎರಟ್ಖಂಡುಗ = ಎರಡು ಖಂಡುಗ; ಒಂದು ಅಳತೆ: ನಾಲ್ವತ್ತೆರಟ್ಖಂಡುಗ ಬೀಜಕ್ಕಿತ್ತ ನತ್ಯುತ್ಸವದಿನದಟರಾದಿತ್ಯನಾದಿತ್ಯತೇಜಂ (ಎಕ. V, ಅರಸೀ. ೯೯–೧೫; 1075). ಎರಟ್ತಂಡ = ಎರಡು ಗುಂಪು, —ತಂಡ: ಎನಗೆರಟ್ತಂಡ ಮುಮೋರನ್ನರೆ ದಲೆಂತು ಕಾದುವೆನೆನ್ನಯ ಮುಕ್ಕಳೊಳಮೆನ್ನ ಮೊಮ್ಮಕ್ಕಳೊಳಂ (ಪಂಪಭಾ. ೧೦–೧೨). ಎರಟ್ತಡಿ = ಎರಳ್ತಡಿ: ವಿಷಯ ಕಾಂತೆಯ ಪುರ್ವಿನ ಕೊಂಕಿನಂತೆ ಚೆಲ್ವಂ ಕುಡೆ ತಳ್ತೆರಟ್ತಡಿಯ ಪೂಮರದಿಂ ಕಱವೂಗಳತ್ತಮಿತ್ತಂ ಕವಿದಲ್ಲಿ (ಆದಿಪು. ೧–೬೧); ಮೃಗದಗ್ರ ಖುರೆಚ್ಯುತವಾರಿಯಿಂ ನಾಂದೆರಟ್ತಡಿಯುಮಿಂಬು ತದಗ್ರಿಮಭಾಗದೊಳ್ (ಕಾವ್ಯಾವ. ೬೨೭). ಎರಟ್ತಿಱ = ಎರಳ್ತಿರ: ಏಕಬಹುಕ್ರಮದಿಂದೆ ರಟ್ತಿಱಕ್ಕಾರಯೆ ಪೇಟ್ವೆಂ (ಕವಿರಾ. ೧–೧೧೩). ಎರಟ್ದೊಣೆ = ಎರಡು ದೊಣೆ; ಎರಡು ಬತ್ತಳಿಕೆ: ತೊಟ್ಟ ರತ್ನಕವಚಂ ಕೊರಲೊಳ್ ಸಲೆ ಕೋದ ಬಿಲ್ ಪ್ರಯತ್ನದೆ ಬಿಗಿದಿರ್ದೆರಟ್ದೊಣೆ ಮಿಸುಪ್ಪಸಿ ಖೇಟಕಮಿಂತಿವೊಂದುಗುಂದದೆ ನಿಲೆ (ಪಂಪಭಾ. ೭–೭೯). ಎರಟ್ಪಜ್ಜೆ = ಎರಡು ಹೆಜ್ಜೆ: ಜಾಣನಾಗಿ ಮೂಱು ಕೊಂಬುಮನಾಱು ನಾಕ್ಪೋಗುಮನೆರಟ್ಪಜ್ಜೆಯುಮಂ (ಪಂಪಭಾ. ೫–೪೩ ವ). ಎರಟ್ಪಡೆ = ಎರಡು ಕಡೆಯ ಸೈನ್ಯ: ಸಡಗರದೇಟ್ಗೆಯುಂ ಕಳಕಳಧ್ವನಿಯುಂ ಬೆರಸಾಡುವಂತೆರಟ್ಪಡೆಯೊಳಮಾಗಳೊರ್ಮೊದಲೆ ಪಲ್ಲಣಮಿಕ್ಕಿ ಪುದಲ್ಗಲಲ್ಲೋಳಂ (ಪಂಪಭಾ. ೧೩–೩೩); ಕೀಱೆ ತಾಗಿದುವೆರಟ್ಪಡೆಯಾನೆಗಳಾನೆಯೊಳ್ ಸಿಡಿಲ್ ಸಿಡಿಲೊಳೆ ತಾಗಿದಂತೆ (ಪಂರಾಮಾ. ೧೩–೭೫). ಎರಟ್ಪಲ = ಎರಟ್ಪಡೆ: ಎರಟ್ಪಲಮುಮೊಟ್ಟಜೆಗಿಡದೆ ತಳ್ತಿಱಿದು ಪಾಱಿಯನಸಕಱಿಯದೞಿಯೆ (ಪಂರಾಮಾ. ೧೩–೧೦೯ ವ); ಭರದಿನೆರಟ್ಪಲಂಗಳ ಪದಾತಿ ಪದಾತಿಯೊಳ್ . . . ಪಳಂಚಿ (ಜಗವಿ. ೭–೫೨). ಎರಟ್ಬಾರಿ = ಎರಡುಬಾರಿ, —ಸಲ: ಎರಟ್ಬಾರಿ ಅಯ್ದು, ಈರೈದು (ಶಬ್ದಾನು. ೩೧೩ ಪ್ರಯೋ). ಎರಟ್ಮಾತು = ಎರಡು ಮಾತು: ದ್ವಿಗುವಿಂಗೆ – ಎರಟ್ಮಾತು, ಎರಟ್ರಂ (ಶಮದ. ೧೬೪ ಪ್ರಯೋ). ಎರಟ್ಪಲಗೆ = ಎರಡು ಹಲಗೆ; (ಪಗಡೆ ಆಟದಲ್ಲಿ) ಎರಡು ಆಟಗಳು: ಪಲಗೆಗೆ ಪತ್ತು ಸಾಯಿರಮೆ ಗದ್ಯಾಣಮೆಂದಿರದೊಡ್ಡಿ ತಾಮೆರಟ್ಪಲಗೆಯನಾಡಿ ಸೋಲ್ತೊಡೆ (ಪಂಪಭಾ. ೭–೭೨). ಎರಟ್ವಾತು = ಎರಟ್ಮಾತು: "ಎಕ್ಕಸರಂ, ಒರ್ಪಿಡಿ, ಇಕ್ಕೊಡೆ, ಎರಟ್ವಾತು . . . ಪಯಿಂಛಾಸಿರಂ – ಇವು ಸಂಖ್ಯಾನಂಗಳ್" (ಕಶಸಾ. ೨೫–೫೩೯).

[ದೇ. ‖ ತಮಿ. ಇರಣ್ಡು, ರೆಣ್ಡು; ಮಲ. ರಣ್ಡು; ಕೊಡ. ದಂಡಿ; ತುಳು. ಎರಡ್, ರಡ್ಡ್; ತೆಲು. ರೆಂಡು; ಕೋಲಾ. ಇಂದಿನ್; ನಾಯ್ಕಿ. ಇಂದಿಗ್; ಗೊಂಡಿ. ರಂಡ್; ಕುವಿ. ಕುಇ. ರೀ]

**ಎರಡುಕೋಲಬಳಿ** 'ಎರಡು' ಪರಾ.

**ಎರಡುಗೆಡು** (ಕ್ರಿ). ಇಹ ಪರಗಳೆರಡೂ ಕೆಟ್ಟುಹೋಗು; ಎರಡೂ ಇಲ್ಲದಾಗು: ಸ್ಮರವಿಕಾರದ ಬುದ್ಧಿ ಸಾಕಿನ್ನೆರಡುಗೆಡಬೇಡೆಂದು ಮಂಡೋದರಿ ನಿಜೇಶನನೊಯ್ದಳರಮನೆಗೆ (ತೊರರಾ. ೫–೩–೭೨); ಎರಡುಗೆಟ್ಟವ ನೀಲಕರ್ಮದ ಸರಣಿಗಳ ದೋಷಗಳ ವ್ಯವಹೃತಿ ನಿರುತವಲ್ಲದು ಭ್ರಾಂತಿಯೆಂತೆನೆ ಕೇಳು ಹಿಂಸೆಯನು (ನಿಭಾಗ. ೧೧–೨೮–೧೧).

[ಎರಡು + ಕೆಡು]

**ಎರಡುಗೇಳು** (ಕ್ರಿ). ಎರಡನೆಯ ಬಾರಿ ಕೇಳಿಸಿಕೊ: ಆಕೆಯೆನಿತರ್ಥಮಂ ಬೇಡಿದೊಡನಿತುಮಂ ಪ್ರೀತಿಯಿಂ ಕೈದೆಗೆಯದೆರಡುಗೇಳದೆಯನವರತಂ ಕುಡುತ್ತುಮಿರ್ಪುದುಂ (ಧರ್ಮಾಮೃ. ೨–೧೧೪); ವಿದ್ಯಾಧರರ್ಗೆಲ್ಲಂ ಬೞಿಯನಟ್ಟುವುದುಮೆರಡುಗೇಳದೆ ತಂತಮ್ಮ ಮಹಾವಿಭೂತಿಯಿಂದೊದವಿ (ಧರ್ಮಾಮೃ. ೮–೧೯೦).

[ಎರಡು + ಕೇಳು (< ಕೇಳ್)]

**ಎರಡುಗೊಳ್** (ಕ್ರಿ). ಎರಡನ್ನು ತೆಗೆದುಕೊ; ಎರಡನೆಯದನ್ನು (ಹೊಡೆತವನ್ನು) ಪಡೆ: ಕರಿಯಂ ನುಂಗಿ ಕಳಿಂಗನಂ ನೊಣೆದ ದರ್ಪಕ್ಕೊಂದುಗೊಳ್ ಮತ್ಸಹೋದರರಂ ಕೋಪದೆ ತಿಂದುದರ್ಕೆರಡುಗೊಳ್ . . . ಎಂದು ಮಚ್ಚರದಿಂದೋವದೆ ಪೊಯ್ದನೆತ್ತಿ ಗದೆಯಂ ದುರ್ಯೋಧನಂ ಭೀಮನಂ (ಗದಾಯು. ೮–೧೮). [ಎರಡು + ಕೊಳ್$_1$]

**ಎರಡುನಾಲಗೆ** 'ಎರಡು' ಪರಾ.

**ಎರಡುನುಡಿ** 'ಎರಟ್ನುಡಿ' ನೋ.

**ಎರಡೆಣಿಸು** (ಕ್ರಿ). ಎರಡುಬಗೆ; ದ್ರೋಹವೆಣಿಸು: ನೀಳಮೇಘಶ್ಯಾಮನಿಗೆ ಸಮಪಾಳಿಯೆನಿಸುವ ನಳನೃಪಗೆರಡೆಣಿಸುವುದೆಯೆಂದ (ನಳಚ. ೪–೧೧); ನಂಬಿದವಗೆರಡೆಣಿಸಿ ಮಾಂಸಕದಂಬ ಪೂರಿತ ತನುವ ನಂಬಿ (ಕೌಗಯು. ೧೫–೩೬); ಕಲಿತ ಹೆಣ್ಣಾಗಲಿ ಗಂಡಾಗಲಿ ಗುರುವಿನ ನುಡಿಗೆ ಎರಡೆಣಿಸುವ ಧೈರ್ಯವನ್ನು ಮಾಡುತ್ತಿರಲಿಲ್ಲ (ಸವತಿ. ೪).

[ಎರಡು + ಎಣಿಸು]

**ಎರಡೆಣ್ಬರಿಸ** (ನಾ). ಎರಡು ಎಂಟು ವರ್ಷ; ಹದಿನಾರು ವರ್ಷ: ಪ್ರಾಯಮೆರಡೆಣ್ಬರಿಸಮುಳವಡಲ್ (ಚಿಬಪು. ೧೯–೫).

[ಎರಡು + ಎಂಟು + ಬರಿಸ]

**ಎರಡೆಲೆಹೊನ್ನೆ** (ನಾ). ಒಂದು ಜಾತಿಯ ಗಿಡ: ಎರಡೆಲೆಹೊನ್ನೆ, ಅತಿಬಜೆ, ಹೊಂಗೇಬೇರು ಇವಱ ಕಷಾಯ ಕುಷ್ಠಹರ (ವೈದ್ಯಸಾ. I, 389).

[ಎರಡು + ಎಲೆ$_1$ + ಹೊನ್ನೆ]

**ಎರಡೇಳು** 'ಎರಡು' ಪರಾ.

**ಎರಣ** (ನಾ). ಕರುವಿನ ಸಗಣಿ: "ಎ [ಪಾಠಾಂ. ಅ]ರಣವೆಸರದು ನೋಡೆ ಕರುವಿನ ಸಗಣಮುಕ್ಕುಂ" (ಶಬ್ದಮಂ. ೩೫); "ಎರಣವೆಂದೆನಲು ಕರುವಿನ ಸಗಣಿ:ುಕ್ಕು" (ಕಶರ. ೯೬). 'ಅರಣ್ಯ$_2$' ಪರಾ.

[< ಸಂ. ಏರಣ]

**ಎರಣೆ** (ನಾ). "ಗೌಳಿಜಾತಿಯ ಪ್ರಾಣಿ, ಹಾವ್ರಾಣಿ" (ಸಿಂಕೊ. ೬೨). 'ಅರಣೆ' ಪರಾ. [?]

**ಎರತಿ** (ನಾ). (ಉಕ) "ಒಡತಿ; ಯಜಮಾನಿ" (ಜಾನಕೋ. ೨೫).

[ಎರೆಯ (< ಎಱೆಯ) + –ತಿ$_1$ (< –ಇತ್ತಿ)]

**ಎರದಯೂರು** (ನಾ). ಒಂದು ಊರಿನ ಹೆಸರು: ಎರದಯೂರ ಊರಱಿವಿನೊಳೆ ಬಾರ ಮಾಧವಯ್ಯ ಅನ್ತಿಱಿದು ಸತ್ತು (ಎಕ. X, ಮುಳಬಾ. ೩೧–೨; 950). [ಎರದ ? + ಊರು$_3$ (< ಊರ್)]

**ಎರದುಂಬೆಗಿಡ** (ನಾ). ಒಂದು ಬಗೆಯ ಗಿಡ: (ಸ್ಯಾಂಡರ್).

[ಎರ್$_0$ + ತುಂಬೆ + ಗಿಡ (< ಗಿಡು)]

**ಎರಲ್** 'ಎಲರ್' ನೋ.

**ಎರಲ$_1$** (ನಾ). ಒಂದು ಬಗೆಯ ಮರ; ಎಲಚಿ ಮರ: ಎರಲ ನೆಲವಾಲ ಕಂಚಾಲ ನವಿಲಡಿ ಹೊನ್ನೆಯರುಟಾಲ (ರೇವಣ. ೪–೧೩). [< ಎರ]

**ಎರಲ$_2$** (ನಾ). ಒಬ್ಬಾತನ ಹೆಸರು: ಮಾರೆತ್ತಿಗಳ ಮಗನೆ ಎರಲ (ಎಕ. X, ಚಿಂತಾಮ. ೧೬೬–೫; 1100). [?]

**ಎರಲು** 'ಎಲರ್' ನೋ.

**ಎರಲುಣಿ** 'ಎಲರುಣಿ' ನೋ.

**ಎರಲುಣಿಗ** 'ಎಲರುಣಿಗ' ನೋ.

**ಎರಲುಣಿವಕ್ಕಿಗ** 'ಎಲರುಣಿವಟ್ಕಿಗ' ನೋ.

**ಎರಲುಣಿವೆದೆಯ** 'ಎಲರುಣಿವೆದೆಯ' ನೋ.

**ಎರಲೆ, ಎರಳೆ** (ನಾ). ಜಿಂಕೆ; ಚಿಗರೆ; ಹರಿಣ: "ಮಿಗವೆಂದಕ್ಕು ಮದೆರಲೆಗೆ" (ಕವಿಕಂ. ೬೧); ತಳತಳಿಸಿ ತೊಳಗಿ ಬೆಳಗುವ ಪಳಿಕಿನ ಸಱಿಯೊಂದು ಮಱಿಯೊಳಿರ್ದೆರಲೆ ಮಹೋಜ್ಜ್ವಳ ತುಹಿನ ಕಿರಣ ಮಂಡಲದೊಳಗಣ ಹರಿಣಂಬೊಲೊಪ್ಪಿ ತೋಱಿತ್ತಾಗಳ್ (ಕಾವ್ಯಸಾ. ೧೦೫೦ ಶೂದ್ರಕ); ಎರಲೆಗೆ ಪಾಡುವ ಗೋರಿಯನರಣ್ಯದೊಳ್ ಮೃಗ ವಿರೋಧಿಗಂ ಪಾಡುವುದೇ (ಆದಿಪು. ೧೪–೮೦); ಮೊಳೆವ ಬೀಜವನು ಕ್ರಿಮಿಕೀಟಕಂಗಳು ಸಸಿಯನೆಳಹುಲ್ಲಿಗಳು ಹೊಡೆಯನೆರಲೆಗಳು ಸವಿದು (ಹಚಕಾ. ೩–೬೩); ಎರಲೆಯ ಬೀಡೆಕ್ಕಲನ ಕೊಟಾರಂ (ಜಯಕಾ. ೧೫–೨೩); ಅಳ್ಳೆಯೊತ್ತುವ ಮರೆಯ ಡಗೆವೊಯ್ದೆರಲೆಯು ಪಟ್ಟಿಗೆಟ್ಟ ನರಿಯ (ರಾಮಾಶ್ವ. ೮೪–೭). **ಎರಳೆ:** ತರುಣಿಯ ಬೆನ್ನೊಳಂಗಭವ ನಾಡಿಸಿದಂದದೊಳಾಡಿಗೋರಿಗೊಂಡೆರಳೆವೊಲಾಗಿ ಪೋದನೊ (ಕಾದಂಪೂ. ೮೨೩); ಪರಡೆ ಪಸುಂಬಂ ಪ್ಯೆನಂ ಎರಳೆ ನವಿಲ್ಕಾಗೆ (ಲೋಕೋಪ. ೧೨–೧೭); ಎರಳೆ ಮೊಲ ಸಾರಂಗ (ಕುವ್ಯಾಅ. ೨೦–೫೧); ತಾವರೆಗಣ್ಣೆರಳೆಯ ಕಣ್ಣು ಮಱಿಮಿನ ಭಾವದ ಕಣ್ಣು (ಕಂನವಿ. ೬–೧೧೨).

[ದೇ. ‖ ತಮಿ. ಇರಲೈ; ತುಳು. ಎರಳೆ; ತೆಲು. ಇರ್ರಿ, ಲೇಟ, ಲೇಡಿ; ಮಲ್ತೊ. ಇಲರು]

**ಎರಲೆಗುಱುಪ, ಎರಳೆಕುರುಪ, ಎರಳೆಗುಱುಪ** (ನಾ). ಜಿಂಕೆಯನ್ನು ಗುರುತಾಗಿ ಉಳ್ಳವನು; ಚಂದ್ರ; ಶಶಾಂಕ (ಕ). **ಎರಳೆಕುರುಪ:** "ಎರಳೆಕುರುಪನೆನಲ್ಕೆ ಕುಮುದಬಾಂಧವನಕ್ಕು" (ಕಶರ. ೯೬). **ಎರಳೆಗುಱುಪ:** "ಎರಳೆಗುಱುಪಂ . . . . ಚಂದಿರಂ" (ಶಬ್ದಮಂ. ೧೭).

[ಎರಲೆ + ಕುಱುವು + –ಅ$_7$]

**ಎರಲೆದಿಂಕು** 'ಎರಲೆಧೀಂಕು' ನೋ.

**ಎರಲೆಧೀಂಕು, ಎರಲೆದಿಂಕು** (ನಾ). ಜಿಂಕೆಯ ನೆಗೆತದಂತೆ ನೆಗೆದು ಆಡುವ ಆಟ: ಕೃಷ್ಣನದ್ಭುತಪರಾಕ್ರಮನೆಂಬು ಸಂಕರ್ಷಣ ವಧಪ್ರಯತ್ನದಿಂದಿರ್ಪಿನೆಗಮೆರಲೆಧೀಂಕನಾಡಲೆಂದಿರ್ಬರಿರ್ಬರೊಂದಾಗಿರೆವಚ್ಚಾಡುವಲ್ಲಿ (ಜಗವಿ. ೪–೫೨ ವ). **ಎರಲೆದಿಂಕು:** "ಎರಲೆದಿಂಕೆಂದು ಪೇಟಲ್ ನೆಱೆ ಗುಂಡುಗಳೊಳಗೆ ಬಿನದಿಪಾಟಂ" (ಕವಿಕಂ. ೨೨೬).

[ಎರಲೆ + ಧೀಂಕು]

**ಎರಲೆವಕ್ಕಿಗ** (ನಾ). = ಎರಲೆಗುಱುಪ (ಚತುನಿ. I, ೧೦೭; II, ೬. ಕ).

[ಎರಲೆ + ಪಕ್ಕೆ$_4$ (< ಪಟ್ಟಿ$_1$) + –ಗ$_3$]

**ಎರಲೆವಱಿ** (ನಾ). ಜಿಂಕೆಯ ಮರಿ: ಸಂತಸದಿಂದಂತಲ್ಲಿ ಪಟ್ಟದೆರಲೆವಱಿ ಲಸಲ್ಲಕ್ಷ್ಮಮಂ ಪೋಲ್ತದೇಂ ಪುಟ್ಟಿಸಿದತ್ತೊ ವೃಕ್ಷಕೋರಂಗಳನೆ ತಣಿವುವಾ ಶಕ್ತಿಯಿಂ ದೇವಿಗಾಗಳ್ (ಪುಷ್ಪಪು. ೩–೭೬).

[ಎರಲೆ + ಮಱಿ]

**ಎರಲ್ಗೆಳೆಯ** 'ಎಲರ್ಗೆಳೆಯ' ನೋ.

**ಎರಲ್ವಟ್ಟೆ** 'ಎಲರ್ವಟ್ಟೆ' ನೋ.

**ಎರಲ್ವಟ್ಟೆವಣಿ** (ನಾ). "ಆಕಾಶಮಣಿ; ದಿನಮಣಿ; ಸೂರ್ಯ" (ಪ್ರಭಣ್ಣ).

[ಎರಲ್ವಟ್ಟೆ (< ಎಲರ್ವಟ್ಟೆ) + ಮಣಿ$_3$]

**ಎರಲ್ವಟ್ಟೆವಾವು** 'ಎಲರ್ವಟ್ಟೆವಾವು' ನೋ.

**ಎರವಣ್ಣು** (ನಾ). ಎಲಚಿ ಹಣ್ಣು: ಬೇಡವೆಣ್ಕೈದಳಮಂ ಕೊಂಡೊಯ್ದು ಕೊಯ್ಯಲ್ಕೆಳಸುವಳೆರವಣ್ಣೆಂದು ಶೋಣಾಂಶುಮನ್ಮಂಡಳಮಂ ತಾಳೀಫಳಂಗೆತ್ತೆಳಸಿ ತುಡುಕುಗುಂ ಬಾಲಶಾಖಾಚರಂಗಳ್ (ರಾಜಶೇ. ೬–೨೦).

[ಎರ + ಪಣ್ಣು$_2$ (< ಪಣ್)]

**ಎರವಲು** (ನಾ). = ಎರವು ೧: ಅವನಿಂದ ನಾನು ಈ ಚೀಲವನ್ನು ಎರವಲು ತೆಗೆದುಕೊಂಡೆ (ನಗೆಹೊ. ೩೨೨); ಶಬ್ದಗಳು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಎರವಲಾಗಿ ಬಂದಿರುವುದು ಸಾಧ್ಯ (ನಮ್ಮನು. ೮).

[ಎರವು + –ಅಲು (< –ಅಲ್$_9$). / ತಮಿ. ಇರವಲ್]

**ಎರವಳಿ** (ಕ್ರಿ). ಭೇದಭಾವವನ್ನು ಬಿಡು, —ತೊರೆ: ಈ ಪುರವೇನು ನಿಮ್ಮಾ ಪುರವೇನು ಭೋಗೋಪಭೋಗದೊಳೆರವಳಿದು ವ್ಯಾಪಿಸಬಲ್ಲವರ್ಗೆಲ್ಲಿಯು ಸಮವೆಂದು ಭೂಪನಾಡಿದನು ಪೆಂಡಿರಿಗೆ (ಭರಚ. ೫೩–೧೨೯); ಎರವಳಿದಾಡುವ ಮಗನ ಮಾತಿಗೆ ಮೆಚ್ಚಿ ಭರತೇಶನಾಲಿಸುತಿರಲು (ಭರಚ. ೫೯–೧೧೧); ಪರಿಕಿಸಲ್ ಮುಕ್ತಿಸಾಧನವಲ್ಲದಿರ್ಪ ಬಲುತೆಜದ ದುಷ್ಕವಿತೆಗಳನೊಡರಿಸದೆ ಪರಶಿವನೊಳೆರವಳಿದು ಬೆರೆದ ಪರಮಾನಂದವೀವ ಶಿವಶರಣ ಸಚ್ಚಾರಿತ್ರಮಂ ಒರೆದು (ಪಾಸೋಪು. ೧–೧೭).

[ಎರವು + ಅಳಿ$_1$ (< ಅೞಿ$_1$)]

**ಎರವಿ** 'ಎರವು' ನೋ.

**ಎರವಿಕ್ಕು** (ಕ್ರಿ). ಸಾಲವಾಗಿಡು; ಎರವಿಡು (ಕ).

[ಎರವು + ಇಕ್ಕು]

**ಎರವಿಗ** (ನಾ). ೧. ಬೇರೆಯವನು; ಹೊರಗಿನವನು: ಮನೆಯೊಡೆಯ ಎರವಿಗನಾಗಿ ಪರವನೊಡೆಯನಾದ (ಸಗಬೊ. ೬೯); ಪಾಂಡುನಂದನರೆರವಿಗರೆ ಬಾ ವಿದುರ ಭೀಷ್ಮನ ಪರಮಮತವೇ ನನ್ನ ಮತ (ಕುವ್ಯಾಅ. ೧೭–೨೦); ಇರಲಿ ನಿನ್ನಲಿ ಸಕಲವಿದು ನೀನೆರವಿಗನೆ ನಿಜಜೀವಭೂತರು ತರುಣರಿವದಿರು ತನ್ನ ಧನವೇ ನಿಮ್ಮ ಧನವಾಗಿ (ನಿಭಾಗ. ೯–೧೬–೨೪); ಶಪಥಮಂ ಮಾಡಿರ್ಪ ಪರಿಯಿಂದಮುಪ್ಪಳೆಯ ಕೇಳ್ವೆನಲ್ಲದೆ ಚರಣಕೆರವಿಗನೆ ಗಿರಿವರೇಶ್ಯಾ (ವೆಂಕಾರಾ. ೫–೧–೪೦). ೨. ಎರವು ತೆಗೆದುಕೊಂಡವನು; ಸಾಲಗಾರ.

[ಎರವು + –ಇಗ]

**ಎರವಿಗೊಳ್** (ಕ್ರಿ). ಬೇಡಿಕೊಳ್ಳು: ಎಂದಾಕೆಗೆ ಲಂಚಮನಿತ್ತೆಂದುದನೆಂದರವಿಗೊಂಡು ಕಳಿಪುವುದುಂ (ಯಶೋಚ. ೨–೪೪).

[ಎರವಿ (< ಎರವು) + ಕೊಳ್$_1$]

**ಎರವು, ಎರವಿ** (ನಾ). ೧. ಬೇಡಿ ಪಡೆದದ್ದು; ಸಾಲ; ಕಡ; ಉದ್ದರಿ: ಬಡವರ ತೊಟ್ಟಿನ ಶೃಂಗಾರದಂತೆರವಾಗಿರದೆ (ಧರ್ಮನಾ. ೧–೫೧); ರತ್ನಕ್ಕೆ ಕಾಂತಿಯೆರವೆ ಚಂದ್ರಂಗೆ ಬೆಳ್ದಿಂಗಳು ಪಚಾರಮೆ (ಗಿರಿಕ. ೧೦–೨೬ ವ); ಎರವು ಮುಯ್ಯಿ ಮುಟ್ಟುಂಟು ವಸ್ತ್ರಾತ್ಕರದೊಳಗೆ ಭಾವಿಸಲು ಮಕ್ಕಳನೆರವ ಕೊಟ್ಟವರುಂಟೆ (ಕುವ್ಯಾಅ. ೧೦–೧೮); ಬರೆವರ ಕೂಡ ಹಗೆಬೇಡ ಬಂಗಾರದೆರವು ಬೇಡ (ಸರ್ವಜ್ಞ. ೫೨); ಒಂದು ಬಟ್ಟಲು ತುಂಬ ಸಕ್ಕರೆಯನ್ನು ಎರವು ಒಯ್ಯಲು ಬಂದಿದ್ದಳು (ಮಹಾತ್ಮಾ. ೮೯); ಎರವಿನ ಚಿನ್ನ ಧರಿಸಿ ತಾನು ಅರಸಿಯೆಂದಳು (ಗಾದೆ). ೨. ಕುಂದು; ದೋಷ; ನ್ಯೂನತೆ; ಕೊರತೆ: ಎರವಿಲ್ಲದಧಿಕ ವಿಶ್ವಾಸಿಯಾತನು ಚಕ್ರಧರನ ಮೆಚ್ಚಿನ ವ್ಯಂತರೇಂದ್ರ (ಭರಚ. ೩೮–೨೩); ಕಳುಹಿದ ಕಾರ್ಯ ಎರವಿಲ್ಲದಿರಬೇಕು (ಕುರಾಸಾಂ. ೧೭–೬೪). ೩. ಭೇದಭಾವ; ಅಂತರ: ಅಘಹರನೊಳೆರವಿಲ್ಲದೊಂದಿ ಬೆರಸಿದರಲ್ಲಿ (ದೀಕ್ಷಾಬೋ. ೯೧–೩); ಪುರುಷನೇ ನಿನ್ನ ಕೈವಿಡಿದಂದು ಮೊದಲಾಗಿ ಯೆರವು ಎನ್ನೊಳಗಿಲ್ಲ (ಪ್ರೌಢರಾ. ೫–೨೩೨); ಬಿರಿದ ಸಂಪಗೆಗಳಗಳಂಬುಜಕೆ ಚಂದ್ರಮಂ ಸರಸ ಕೈರವದಲರ್ಗಳಂ ಸೂರ್ಯನಿಂತಿವರೊಳೆರವಿಲ್ಲದಿಹುದು ಪಂಪಾವಿರೂಪಾಕ್ಷನ ತಪೋವನದೊಳು (ಚಿಬಪು. ೩೪–೨೯); ಪರತತ್ವ ತನ್ನೊಳಗೆ ಎರವಿಲ್ಲದಿರುತಿರ್ಪ ಪರದೇಶಿಯಂತೆ ಇರುತಿಪ್ಪ ಯೋಗಿಯನು ಪರಮಗುರುವೆಂಬೆ (ಸರ್ವಜ್ಞ. ೬೯); ಎರವಿಲ್ಲದೇಕವೆನಿಸಿ ಧರ್ಮದೊಳು ಸಂಸರಿಸುವ ಸತಿಪತಿಗಳಿಗೆ (ಹದಿಬ. ೬–೫೦); ಕಣ್ಣಿಗು ಹುಬ್ಬಿಗು ಭಿನ್ನಭೇದಗಳುಂಟೆ ನಮ್ಮಣ್ಣ ನಮಗೆ ಎರವುಂಟೆ (ಹೆಮುಪ. ೧೬–೧೮). **ಎರವಿ:** 'ಎರವಿಗೊಳ್' ಪ್ರಯೋ.

ಎರವತೆಱು = ಸಾಲಕೊಡು: ತಮ್ಮೊಳಗಾರು ಮೂದೇವರೊಳು ಮುಖ್ಯರೆನುತ್ತ ಸಂಶಯಕೆರವ ತೆತ್ತರು [ಪಾಠಾಂ. ನಿತ್ತರು] ಮನವನಂಗೀಕರಿಸಿ ಬಹುಮತವ (ನಿಘಾಗ. ೧೦–೯೨–೧). ಎರವಾಗು = ೧. ಹೊರಗಾಗು; ದೂರವಾಗು: ಈ ಹಂಗಾಮು ಸಾಧಿಸಿಕೊಳ್ಳದಿದ್ದರೆ ನಾವು ವರುಷದ ಗಂಜಿಗೇ ಎರವಾಗಬೇಕಾದೀತು (ಮೊಪಾಸಾ. ೩); ಈ ಧನಕ್ಕೆ ನಾನು ಎರವಾಗುವಂತೆ ಮಾಡಬೇಡ (ಇಪ್ಪಕ. ೩೪೭); ಇವಳಂತಹ ದೇವಿಯನ್ನು ಪಡೆದೂ ತಾನು ದಾಂಪತ್ಯ ಸುಖಕ್ಕೆ ಎರವಾಗಿದ್ದಾನೆ (ಪ್ರೇಮಾಶ್ರ. ೧೬೦). ೨. ದ್ವೇಷಿಯಾಗು; ಹಗೆಯಾಗು: ನಾವು ಬಿಟ್ಟ ಬಾಣ ನಮಗೇ ಎರವಾಗುತ್ತಿತ್ತು (ಚಿಕ್ಕದೇ. ೧೪೪); ಇಂಥ ಮಾತುಗಳಿಂದ ಈ ಮನೆಗೆ ಆಜನ್ಮ ಎರವಾಗಿ ನಿಲ್ಲಬೇಕಾಯಿತು (ದಾದಿ. ೨೦). ೩. ಹಾನಿಯಾಗು; ಕಷ್ಟವಾಗು: ಸ್ವಾಭಾವಿಕ ವೈಲಿ ಏಳುವುದರಿಂದ ಎಷ್ಟೋ ಜನರ ಪ್ರಾಣಕ್ಕೆ ಎರವಾಗುವುದು (ಮುಂಬಯಿ. ೪–೨೧೯). ಎರವಿನ ಸಿರಿ = ಸಾಲದ ಐಶ್ವರ್ಯ: ಅತನಂತಪ್ಪ ಪುತ್ರರಂ ಪಡೆವರೊತ್ತೆಯ ಗೂಂಟಂ ಸೊಡರಿಟ್ಟೇಱುವಂತೆರವಿನ ಸಿರಿಯನಜಿುದು (ಅರ್ಧನೇ. ೫–೨ ವ). ಎರವು ಕೊಡು = ಸಾಲಕೊಡು; ಕಡಕೊಡು: ತಮಗೆ ಮತ್ತೊಬ್ಬರು ಎರವು ಕೊಡಬೇಕೆಂತ್ಲೂ ಮರ್ಯಾದೆ ಮಾಡಬೇಕೆಂತಲೂ ಅಪೇಕ್ಷೆ (ಮುಂಬಯಿ. ೪–೮೫) ಎರವುತರು = ಸಾಲವನ್ನು ತೆಗೆದುಕೊಂಡುಬರು; ಕಡತರು: "ಯಾಚಿತಕಂ – ಕೇಳುವುದರಿಂದ ಹೊಂದಲ್ಪಟ್ಟದ್ದು, ಎರವು ತಂದದ್ದಕ್ಕೂ ಹೆಸರು" (ಸಿದ್ಧಾಂತಿ. ೨೩೫). ಎರವುಬೇಡು = ಸಾಲವನ್ನು ಬೇಡು; ಕಡಕೇಳು: ಅಮುಗದಲ್ಲಿ ಪಾತ್ರಮಾಡುವಾಗ, ಮದ್ದಳೆ ಎರವು ಬೇಡಿದಂತೆ (ಗಾದೆ)

[ಎರೆ + –ವು. / ತಮಿ. ಮಲ. ಇರವು; ತುಳು. ತೆಲು. ಎರವು]

**ಎರವುಗಾಣ್** (ಕ್ರಿ). ಭೇದವನ್ನು ಕಾಣು; ವಿರೋಧವನ್ನು ಕಾಣು: ಬೇಡವ್ವ ಕರೆಸು ನೀನೆರವುಕಾಣ್ಬುದಕಾನು ಮಾಡಿದ ನೋವಿಲ್ಲ ನಿನಗೆ (ಭರಚ. ೩೯–೧೩೦); ಅರಸುಮಕ್ಕಳಿಗವರಬಲೆಯರೆಲ್ಲರಿಗೆರವುಗಾಣದೆ ತನ್ನ ಮನೆಗೆ ಕರೆದುಣಲಿಕ್ಕಿ ಮತ್ತುಡಲಿತ್ತು ತೊಡಲಿತ್ತು (ಭರಚ. ೪೦–೨೧).

[ಎರವು + ಕಾಣ್]

**ಎರವುಗೊಳ್** (ಕ್ರಿ). ಬೇಡು; ಯಾಚಿಸು: ಅಂತೆರವುಗೊಂಡಿದೇನಿವ ಳೆಂತುಂ ಪೋ ಬಾರಲೇವೆನೆನುತಂ (ಕಾದಂಪೂ. ೯೫೫).

[ಎರವು + ಕೊಳ್$_1$]

**ಎರವುರಿ** 'ಎಲಹುರಿ' ನೋ.

**ಎರಲ್** 'ಎರಟ್' ನೋ.

**ಎರಳು** (ನಾ). (?): ಉರಿಯ ಹಳ್ಳವನು ಕೆಂಡದ ತೊಱೆಯನೆಸೆವ ಕತ್ತರಿವಾಣಿಗಡಲ ವಿಷಕೂಪಂಗಳಂ ನಂಜಿನೆರಳ ಮಾರಿಯ ಮನೆಯನಾ ಮೃತ್ಯುವಿನ ನೆಲೆಯನಾರಯ್ಯುತಂ ಬಂದನು (ಸಿದ್ಧರಾ. ೩–೭). ☞ ಈ ಶಬ್ದ ನೆರಳು ಎಂದಿರಬಹುದೆ. [?]

**ಎರಳೆ** 'ಎರಲೆ' ನೋ.

**ಎರಳೆಕಣ್** 'ಎರಳೆಗಣ್' ನೋ.

**ಎರಳೆಕುರುಪ** 'ಎರಲೆಗುಱುಪ' ನೋ.

**ಎರಳೆಗಣ್**, ಎರಳೆಕಣ್ (ನಾ). ಜಿಂಕೆಯ ಕಣ್ಣಿನಂತಿರುವ ಕಣ್ಣು: ಎರಳೆಗಣ್ಗಳ ವಟಫಲಾಧರದ ಬೆಳ್ನಗೆಯ ಪಶುಪುತ್ತುಮಿರ್ಪ ಪ್ರಕಾಶ ರದದ (ಭಾವಚಿಂ. ೩–೪೪); ಪರೆಳುಮೊಲೆಯರೆಳೆಗಣ್ಬುರುಳುದಲೆ... ಪೆಣ್ಗಳ್ (ಸೌಂದಪು. ೧೭–೩೬); ಬಗ್ಗದೊವಲಂ ಕಂಡೊಡಂ ಬೆರ್ಚುವೆರಳೆಗಣ್ ಪರಿವ ಪೆರ್ಬುಲಿ ನೋಟಮಂ ಸಹಿಸಲುಂಟೆ ವನದಿ (ಶ್ರೀರಾಮ. ೩–೫೩). **ಎರಳೆಕಣ್**: ಎರಳೆಕಂಗಳ ಹೆಂಗಳೊಲುಮೆ ಬರೆಹ ನೀರಮೇಲಿನ (ಪುರಂದ. ೨–೧೬–೩). [ಎರಳೆ (< ಎರಲೆ) + ಕಣ್]

**ಎರಳೆಗುಱುಪ** 'ಎರಲೆಗುಱುಪ' ನೋ.

**ಎರಳೆವಲೆ** (ನಾ). ಜಿಂಕೆಯನ್ನು ಹಿಡಿಯುವ ಬಲೆ: ಎರಳೆವಲೆ ಹಂದಿವಲೆ ಹೊಯಿವಲೆ ಹರಹುವಲೆಗಳೆಳೆವಲೆ ಹುಡಿಕೆವಲೆ (ಸಾಳ್ವಭಾ. ೫–೧೯). [ಎರಳೆ (< ಎರಲೆ$_1$) + ಬಲೆ$_1$]

**ಎರಳ್ಗವರ** 'ಎರಡು' ಪರಾ.

**ಎರಳ್ತಡಿ** 'ಎರಡು' ಪರಾ.

**ಎರಳ್ತೆರ** 'ಎರಡು' ಪರಾ.

**ಎರಳ್ದಂಡು** 'ಎರಡು' ಪರಾ.

**ಎರಳ್ದಲೆವಕ್ಕಿ** (ನಾ). ಎರಡು ತಲೆಯ ಹಕ್ಕಿ; ಗಂಡಭೇರುಂಡ: ದೊರೆವಡೆದ ಸತ್ಯಮೇವೋದ್ಧರಾಮ್ಮುಹಮೆನಿಪ್ಪ ಲೇಖನದ ಕನ್ನಡ ನಾಡರಸರ ಎರಳ್ದಲೆವಕ್ಕಿಯ ಕುರುಪಿನ ಪಳವಿಗೆಯನೆತ್ತಿದರ್ ಪಡೆವಳ್ಳರ್ (ಮರಾಚ. ೧೧–೪೨).

[ಎರಳ್ (< ಎರಡು) + ತಲೆ$_1$ + ಪಕ್ಕಿ$_2$]

**ಎರಳ್ದಿಸೆ** 'ಎರಟ್ದಿಸೆ' ನೋ.

**ಎರಳ್ನುಡಿ** 'ಎರಟ್ನುಡಿ' ನೋ.

**ಎರಳ್ಮಾಡು** (ಕ್ರಿ). ಎರಡು ತುಂಡುಮಾಡು, —ಭಾಗಮಾಡು: ಜೋಡಿಸಿದಶ್ವಕಂಧರಮನೊಂದೆ ಶರಾಗ್ರದೆ ಖಂಡಿಪಂತೆರಳ್ಮಾಡುವ ಪೊದಳ್ದ ಲೋಹದೊಳ್ ಜೋಡನದುರ್ಕೆ ತುಂಡಿಪ ವರೂಥಿಗ ಳೊಟ್ಟಜೆಯಿಂ ಪಳಂಚಿದರ್ (ರಾಜಶೇ. ೬–೭೭).

[ಎರಳ್ (< ಎರಡು) + ಮಾಡು$_1$]

**ಎರಳ್ಮೆಯ್ಗಾಣಿಸು** (ಕ್ರಿ). ಮೈಯ ಎರಡೂ ಕಡೆ ಕಾಣಿಸು: ತಾನೆ ಮನೋಜನೆನಿಸಿಕೊಂಡು ನಲ್ಲಂ ಕೊಲಗಿದ ಪದದೊಳಗೆನ್ನೊಡಲಲ್ಲಿ ನಡುವವೊಲೆರೆಳ್ಮೆಯ್ಗಾಣಿಸಿ ನಿಲ್ಲದೆ ಮನವನೆಸುತ್ತಿರ್ದಪನೆಂದಳ್ ವಿರಹಿಣಿ ಸಖಿಯೊಳ್ (ಉದ್ಭದೇ. ೪–೩೫). 'ಇರ್ಮೆಯ್ಗಾಣಿಸು' ಪರಾ.

[ಎರಳ್ಮೆಯ್ + ಕಾಣಿಸು]

**ಎರಳ್ಸತ್ತಿಗೆ** 'ಎರಡು' ಪರಾ.

**ಎರಳ್ಸೀಳಾಗು** 'ಎರಡು' ಪರಾ.

**ಎರಟ್**, ಎರಳ್ (ನಾ). ಎರಡು ಎಂಬ ಸಂಖ್ಯಾವಾಚಿಗೆ ವ್ಯಂಜನಾದಿ ಶಬ್ದ ಸೇರಿ ಸಂಧಿಯಾದಾಗ ಬರುವ ರೂಪಗಳು. 'ಎರಟ್ತಡಿ', 'ಎರಳ್ಗವರ' ಪರಾ. [< ಎರಡು]

**ಎರಟ್ಕಡಿ** 'ಎರಡು' ಪರಾ.

**ಎರಟ್ಕಣ್** 'ಎರಡು' ಪರಾ.

**ಎರಟ್ಕಣೆ** 'ಎರಡು' ಪರಾ.

**ಎರಟ್ಕರ** 'ಎರಡು' ಪರಾ.

**ಎರಟ್ಕುದುರೆ** 'ಎರಡು' ಪರಾ.

**ಎರಟ್ಕೆಲ** 'ಎರಡು' ಪರಾ.

**ಎರಟ್ಕೈದು** 'ಎರಡು' ಪರಾ.

**ಎರಟ್ಕೋಡು** 'ಎರಡು' ಪರಾ.

**ಎರಟ್ಪಂಡ** 'ಎರಡು' ಪರಾ.

**ಎರಟ್ಪಂಡುಗ** 'ಎರಡು' ಪರಾ.

**ಎರಟ್ತಂಡ** 'ಎರಡು' ಪರಾ.

**ಎರಟ್ತಡಿ** 'ಎರಡು' ಪರಾ.

**ಎರಟ್ತರ** 'ಎರಡು' ಪರಾ.

**ಎರಟ್ತೆಱ** 'ಎರಡು' ಪರಾ.

**ಎರಟ್ದೆಸೆ** 'ಎರಡು' ಪರಾ.

**ಎರಟ್ದೊಣೆ** 'ಎರಡು' ಪರಾ.

**ಎರಟ್ನುಡಿ, ಎರಡುನುಡಿ, ಎರಳ್ನುಡಿ** (ಕ್ರಿ). ಎರಡು ಮಾತಾಡು; ಆಡಿದ ಮಾತಿಗೆ ತಪ್ಪು; ಸುಳ್ಳು ಹೇಳು: ಪಿಡಿದನೆ ಪುರಿಗಣೆಯನೆರಟ್ನುಡಿದನೆ ಬಳ್ಕಿದನೆ ತಾನೆ ತನ್ನನೆ ಚಲಮಂ ಪಿಡಿದಟಿಂದಂ (ಪಂಪಭಾ. ೧೨-೨೧೬); ಎರಟ್ನುಡಿಯಂ ಫಣಿರಾಜಕೇತನಂ (ಗದಾಯು. ೭-೫೮). **ಎರಡುನುಡಿ**: "ಎರಡುನುಡಿವವ ಪುರೋಭಾಗಿ ದ್ವಿಜಿಹ್ವಕಂ" (ಮಂಗರಾ. ೬೮-೯). **ಎರಳ್ನುಡಿ**: ನೋರ್ಪ್ಪಡಮೆನ್ನುಂ ನುಡಿಗಲ್ವಂದು ವೆರಳ್ನುಡಿ ನುಡಿಯಂ ಕಲಿ ಸತ್ಯವಾಕ್ಯನೀ ಬಾಚಿ ನೃಪಾ (ಸೌಇಇ. IX-i, ೨೨೬-೩೧; 1132). [ಎರಟ್ (< ಎರಡು) + ನುಡಿ$_1$]

**ಎರಟ್ಪಿಜ್ಜೆ** 'ಎರಡು' ಪರಾ.

**ಎರಟ್ಪಿಡೆ** 'ಎರಡು' ಪರಾ.

**ಎರಟ್ಪಗೆ** 'ಎರಡು' ಪರಾ.

**ಎರಟ್ಪಲ** 'ಎರಡು' ಪರಾ.

**ಎರಟ್ಪಾರಿ** 'ಎರಡು' ಪರಾ.

**ಎರಟ್ಮಾತು** 'ಎರಡು' ಪರಾ.

**ಎರಟ್ಪಲಗೆ** 'ಎರಡು' ಪರಾ.

**ಎರಟ್ವಾತು** 'ಎರಡು' ಪರಾ.

**ಎರಿಗಲ್** (ನಾ). ಒಂದು ಊರಿನ ಹೆಸರು: ಸ್ವಸ್ತಿಶ್ರೀ ಎರಿಗಲ್ ಮಾರಟ ಕೂಡ್ಲೂರ ಮೂವತ್ತುಂ (ಎಕ. XII, ಮದ್ದಗಿ. ೫೧-೧; 950). [?]

**ಎರಿಗಲ್ಮಾರಟ** (ನಾ). ಎರಿಗಲ್ ಊರಿನ ಮಾರಟ ಎಂಬುವನು: ಸ್ವಸ್ತಿಶ್ರೀ ಎರಿಗಲ್ಮಾರಟ ಕೂಡ್ಲೂರ ಮೂವತ್ತುಂ (ಎಕ. XII, ಮದ್ದಗಿ. ೫೧-೧; 950). [ಎರಿಗಲ್ + ಮಾರಟ$_0$]

**ಎರಿಗಲ್ಮುಗ್ಗೇರಿ** (ನಾ). ಒಂದು ಸ್ಥಳದ ಹೆಸರು: ನೆಗಳ್ದಂ ಶ್ರೀ ವೀರ ವಿದ್ಯಾಧರಂ ಎರಿಗಲ್ಮುಗ್ಗೇರಿಯಂ ಮುಂ ಮುನಿಯ ಮಸಕಮಂ ಮುಳ್ಗಿ ಸಲ್ಕನ್ನಕುಬ್ಜೇಶ್ವರನಂ (ಕಕುಲ. ೭-೬; 1019). [ಎರಿಗಲ್ + ಮುಗ್ಗೇರಿ$_0$]

**ಎರಿಗಲ್ವಾಡಿ** (ನಾ). ಒಂದು ಸೀಮೆಯ ಹೆಸರು: ಸ್ವಸ್ತಿಶ್ರೀ ಚೋಳ ಧನಞ್ಜಯ ಎರಿಗಲ್ವಾಡಿ ಅಱುನೂಱು ಆಳೆ (ಎಕ. XII, ಮದ್ದಗಿ. ೯೨-೧; 750). ☞ ಎರಿಕಾಲವಾಡಿ, ಎರಿಗಾಲ[ವಾಡಿ] ಎಂಬ ರೂಪಗಳೂ ಇವೆ. [ಎರಿಗಲ್ + ವಾಡಿ]

**ಎರಿಮಾಲು** (ನಾ). ಒಂದು ಗಿಡದ ಹೆಸರು: (ವೈಶಿಗಿ. ೭೪-೧೫೧೭). [ಎರಿ$_0$ + ಮಾಲು$_3$]

**ಎರಿಯೂರು** (ನಾ). ಒಂದು ಊರಿನ ಹೆಸರು: ಎರಿಯೂರ ದಿನಕರಯ್ಯ ಸೆಟ್ಟಿಯ ಲಿಕಿತಂ (ಎಕ. IV, ಎಳಂದೂ. ೨೫-೧೫; 995). [ಎರಿ$_0$ + ಊರು$_3$ (< ಊರ್)]

**ಎರಿಲದ್ದು** (ನಾ). ಒಂದು ಬಗೆಯ ಹದ್ದು (ಕಿ). [ಎರಿಲ್ + ಹದ್ದು$_1$ (< ಪರ್ದು)]

**ಎರು** (ಕ್ರಿ). "ಸಮುಗ್ರವಾಗು" (ಕಲ್ಪದ್ರು. ೯೯). [?]

**ಎರುಂಬಳ್ಳಿ** (ನಾ). ಒಂದು ಬಗೆಯ ಬಳ್ಳಿ: (ವೈಶಿಗಿ. ೧೭-೩೧೮). [ಎರು$_0$ + ಬಳ್ಳಿ]

**ಎರುಬು** (ನಾ). ಸಗಣಿ; ಮಲ; ಗೊಬ್ಬರ: ನಿರವಧಿಕ ತೃಷೆ ಬುಭುಕ್ಷಾದಿಗಳನಾವಗಂ ನರಲುವತಿಶಯ ದುಃಖವೆಂತಕ್ಕೆಯೆರುಬುಗಳನೊಡರಿಚುತ ಪಿಡಿದು ತಂದೂ (ವೀಶೈವು. ೪-೨೫-೬೩). 'ಎರುಬುಹುಳು' ಪರಾ.

[ದೇ. ‖ ತಮಿ. ಎರು. ಎರುವು; ತೆಲು. ಎರುವು; ನಾಯ್ಕಿ. ಎರಂಗ್]

**ಎರುಬುಹುಳು** (ನಾ). ಎರೆಹುಳು: "ಮಹೀಲತಾ, ಗಂಡೂಪದಃ, ಕಿಂಚುಲಕಃ-೩ ಎರುಬುಹುಳುವಿನ ಹೆಸರುಗಳು. ಅಂದರೆ ಕೆಸರಲ್ಲಿಯೂ ತೇವದ ನೆಲದಲ್ಲಿಯೂ ಇರುವ ಹಂಚೀಕಡ್ಡಿಯಂಥಾ ಕೆಂಪು ಹುಳು (ಸಿದ್ಧಾಂತಿ. ೭೪). [ಎರುಬು + ಹುಳು (< ಪುೞು)]

**ಎರೆ$_1$** 'ಎಱೆ$_1$' ನೋ.

**ಎರೆ$_2$** (ಕ್ರಿ). ಬೇಡು; ಕೇಳು; ಯಾಚಿಸು: "ಎರೆ - ಯಾಚ್ಞಾಯಾಂ (ಬೇಡು), ಭೂವಿಶೇಷ ತಿರ್ಯಗ್ಗ್ರಾಸಯೋಃ (ಮೃಗಪಕ್ಷಿಗಳ ಆಹಾರ)" (ಶಮುಧಾ); ಎರೆದರ್ ಸಂತುಷ್ಟರಾದರ್ ಕದನದೊಳಿದಿರಂ ಮಿಾಱಿ ಮಾಱಾಂತು ನಿಂದಾಂತರಿಭೂಪರ್ ಭಸ್ಮಮಾದರ್ (ಕಾವ್ಯಸಾ. ೨೧೫ ಶೂದ್ರಕ); ಮನಮೊಲ್ದುದನೆರೆಯಿ (ಎಇ. XIV, ೩೩೦-೧೧; 929); ಬರವಂ ಬೇಡಿದರ್ಗೀವ ದೇವನೆ ವಲಂ ನಾಣ್ಗೆಟ್ಟು ಬಂದೆನ್ನನಿಂತೆರೆದಂ (ಪಂಪಭಾ. ೯-೬೩); ಬಱಸಿಡಿಲು ಪಗೆಗೆ ತನ್ನಂ ಮಱೆವೊಕ್ಕ ನರಂಗೆ ವಜ್ರಪಂಜರಮೆರೆದರ್ಗುಱಿ ಕೊಡುವ ಚಾಗದಿಂದಂ ನೆಱೆ ಪೋಲ್ತಂ ಕಲ್ಪವೃಕ್ಷಮಂ ಮಹದೇವಂ (ಸೌಇಇ. IX-i, ೨೪೯-೪೫; 1147); ಎರೆದವರಿಗೆ ನೃಪಾಲರೂಪಿನ ಸುರಕುಜವು ಮುಳಿದಹಿತ ನೃಪರಿಗೆ . . . ಜವನೆನಿಸಿದರ್ನಾ ಕಂಸ (ಸಾಳ್ವಭಾ. ೯-೫೯); ನೀನೆರೆವಂದು ನೀಡದವನಿನ್ನಾರ್ಗಂ ಗಡಾ ನೀಡುವಂ (ಗಿರಿವಂ. ೫೩-೧೩).

[ದೇ. ‖ ತಮಿ. ಮಲ. ಇರ; ಕೊಡ. ಎರ]

**ಎರೆ$_3$** (ನಾ). (ಗಾಡಿಯ ಚಕ್ರಕ್ಕೆ ಹಾಕುವ) ಕಪ್ಪಾದ ಎಣ್ಣೆ; ಕೀಲೆಣ್ಣೆ: ಮಂಡೆಯೋಡಿನ ಸಿಪ್ಪುಗಳನು ಲಗ್ಗೆಯನೊಡ್ಡಿಕೊಂಡೆರೆಯನು ಹಚ್ಚಿಕೊಂಡು ಸೆಂಡನಿಟ್ಟಾಡುವ ಮಕ್ಕಳ ಮರುಳ್ಗಳ ತಂಡ ರಂಜಿಸಿತಲ್ಲಲ್ಲಿ (ನೇಮಿಸಂ. ೮-೯೮); ಲೇ ಮದ್ದೂರ ಎರೆ ತೆಗೆದುಕೊಂಡು ಬಾರೋ (ನಮ್ಮಳ್ಳಿ. ೨೭); ಇವಳು ಯಾವಾಗಲೂ ಹೀಗೆಯೇ . . . ಆಗಾಗ್ಗೆ ಎರೆಯಿಲ್ಲದ ಚಕ್ರದಂತೆ ಕಿರುಗುಟ್ಟುತ್ತಾಳೆ (ಪುನರು. ೪೭೨). 'ಹೆರೆ' ಪರಾ. [?]

**ಎರೆ$_4$** (ನಾ). ಕಪ್ಪಾದ ಮಣ್ಣಿನ ಭೂಮಿ; ಎರೆಭೂಮಿ: "ಎರೆ - ಯಾಚ್ಞಾಯಾಂ (ಬೇಡು), ಭೂವಿಶೇಷ, ತಿರ್ಯಗ್ಗ್ರಾಸಯೋಃ (ಮೃಗಪಕ್ಷಿಗಳ ಆಹಾರ)" (ಶಮುಧಾ); "ಎರೆಯುಳ್ಳುದೊಂದು ಭೂಮ್ಯಂತರಮದು [ತಾಂ] ಕೃಷ್ಣಭೂಮಿಯಕ್ಕುಂ" (ವಸ್ತುಕೋ. ೨೬-೪); "ಅಸಿತರಸೆ ಕೃಷ್ಣಮೃತ್ತಿಕೆಯನಲ್ಕೆರೆಯಕ್ಕು" (ಮಂಗರಾ. ೨೮-೩); ಇರ್ಕ್ಕಣ್ಣುಗಂ ಕಟಪಿ ಪೆರ್ಗ್ಗೆಱೆಯಾ ಕೆಱೆಗೆ ಅಱುಗಣ್ಣುಗಂ ಎರೆ (ಎಕ. IV, ನಾಗಮಂ. ೮೫-೬೮; 776); ಮೊದಲೇಱಿಯೊಳ್ ಇರ್ಖಣ್ಣುಗವೆದೆ ಗಱ್ದೆ ಪನ್ನಿರ್ ಮತ್ತಲ್ ಎಱೆ[ರೆ] ಅಯ್ನೂಱು ಬಳ್ಳಿಯತೋಂಟ (ಎಕ. XI, ದಾವಣ. ೧೭-೧೪; 889); ಕಾಟ್ಕಿಚ್ಚಂಗೆ ಪುಲ್ಲಬೀಳಿ ಪೆರ್ವೊನಲಿಂಗೆರೆಯ ಪಟ್ಟಿ (ಧರ್ಮಾಮೃ. ೧೪-೧೦೪); ಎರೆಯನ್ನು ಉಳುವಂಗೆ ದೊರೆಯನ್ನು ಪಿಡಿದಂಗೆ ಉರಗಭೂಷಣನ ನೆನೆವಂಗೆ ಭಾಗ್ಯವು ಅರಿದಲ್ಲ (ಸರ್ವಜ್ಞ. ೨೯೦); ನೆಲವೊಂದೆ ಹೊಲಗದ್ದೆ ತೋಟ ಮರಳೆರೆ ಬೇರೆ (ಮಂಕುಕ. ೨೩೭); ಎರೆ ಹೊಲವಿರಬೇಕು ಕರೆ ಹೆಂಡತಿಯಿರಬೇಕು (ಗಾದೆ).

ಎರೆಯಮಣ್ಣು = ಕಪ್ಪಾದ ಭೂಮಿ; ಜೇಡಿಮಣ್ಣು: ತಾನಿರ್ಪ ನೆಲದ ಡೊಗರೊಳಗೆ ಹೊಕ್ಕಗೆಯುತ್ತಮಿರೆ ಜರಿದು ಬಲುಹೆಂಟೆಯಾಗಿ ಮೇಲಿಪ್ಪೆರೆಯ ಮಣ್ಣಿನ್ನ ಬೆನ್ನನೋವದೆ ಮುಱುದುದು (ಸಮ್ಮುಕೌ. ೨-೪೩).

[ದೇ. ‖ ತಮಿ. ಎರುವೈ = ರಕ್ತ, ತಾಮ್ರ; ತೆಲು. ಎಱುಪು, ಎಱ್ರ, ಎಱ್ರನ, ಎಱ್ರನಿ = ಕೆಂಪಾಗಿರುವುದು; ರೇಗಡ, ರೇಗಡಿ = ಜೇಡಿಮಣ್ಣು; ಕೋಲಾ. ಎರ್ರೊಡಿ, ಎರೊರಿ = ಕೆಂಪು]

**ಎರೆ$_5$** (ನಾ). (ಪ್ರಾಣಿ, ಹಕ್ಕಿ, ಮೀನುಗಳಿಗೆ) ಹಾಕುವ ಆಹಾರ ; ಗ್ರಾಸ: "ಎರೀ – ಯಾಚ್ಞಾಯಾಂ (ಬೇಡು), ಭೂವಿಶೇಷ, ತಿರ್ಯಗ್ಗ್ರಾಸಯೋಃ (ಮೃಗಪಕ್ಷಿಗಳ ಆಹಾರ)" (ಶಮಧಾ) ; "ಪಕ್ಕಿಗಳುಣಿಸೆರೆಯೆಂದುಮುದಕ್ಕುಂ" (ಕವಿಕಂ. ೬೩) ; ಎರೆಗೆಡಗುವ ಕಿಱುಮೀನಂತಿರೆ (ಶಾಂತಿಪು. ೫–೭೬) ; ಎರೆಯಂ ಕರ್ಚಿ ಬಲಕ್ಕೆ ಪೋಗೆ ಶುಭದಂ ಪೆಣ್ಕಾಗೆ (ಲೋಕೋಪ. ೧೨–೨೦) ; ಗಾಳದೆರೆಗೆ ಪಾಯ್ದುಱುವವು ಮೀನ್ (ಧರ್ಮಾಮೃ. ೫–೨೫) ; ಎರೆಯ ಚೆಲ್ಲುಲುಹನಱ ಬಲೆಗೆದಱು ಹಚ್ಚೆವಿಡಿ . . . ಅಡುವಬ್ಬರದ ಬೊಬ್ಬೆ ಹಬ್ಬಿತ್ತಡವಿಯ (ಹಚಕಾ. ೫–೨೫) ; ದನುಜರೆರೆಗಳ ಹಾಯ್ಕಿ ಗಾಣದಲನಿಮಿಷರನೀಡಾಡಿ ಕೊಂಡರು ದುರ್ಗವನು ಸುರರ (ಕುವ್ಯಾಕ. ೬–೧೦) ; ಎರೆಯಂ ನುಂಗುವ ಫಣಿಯಾ ಫಣೆಯಂ ಭರಿಕ್ಕೈಯಿಂದೆ ಪಿಡಿವ ಮದಕರಿ (ಜಯಕಾ. ೧೫–೩೩) ; ನಲಿದೆಱಪ ಪರ್ದಿಂಗೆ ಸವಿಯೆರೆಯ ನಿಧಿಯಾಗೆ ಬಿಸುಟರ್ಕೆ ಬಯಲೊಳ್ (ಅಂತಿಗೊ. ೨–೨೩) ; ಬಿಳೀಜನಕ್ಕೆ ಬೇಕಾದ ಎರೆ ನಮತಾವ ಅದೆ (ಚಕರಾ. ೩೭೮). 'ಎರೆಹುಳು' ಪರಾ.

[ದೇ. ‖ ತಮಿ. ಇರೈ ; ಮಲ. ಇರ ; ಕೊಡ. ಎರ್ ; ತೆಲು. ಎರ ; ಬ್ರಾಹೂಈ. ಇರ್ಘ್ = ರೊಟ್ಟಿ, ಆಹಾರ]

**ಎರೆ$_6$** (ನಾ). ಹಾವಿನ ಪೊರೆ : ನಿವೇಶಿತ ತುರಂಗ ಸೈನ್ಯ ನಪನೀತ ಸಮಾಯೋಗನಾಗಿ ಪಾವಿನೆರೆಯಬೊರೆಯ ದುಕೂಲಮಂ ಪೊದೆದು (ಕಾದಂಉ. ೫೪೧). 'ಎರೆಗೆಯ್$_1$' ಪರಾ. [< ಪೆರೆ ?]

**ಎರೆ$_7$** (ನಾ). ಜೊತೆಗಾರ ; ಸಂಗಡಿಗ ; ಒಡನಾಡಿ : ಕರದಿಂದ ಕಂತುಕ ಬಂದಾಗಸದೊಳು ಪರಿಯದ ಮುನ್ನ ಕುವರನ ಎರೆಗಳೆಡೆಯೊಳಾಂತು ಕೊಂಡು ನೋಟಕರಿಗಚ್ಚರಿಯನಿರದೆ ಪುಟ್ಟಿಸಿದರು (ಕುರಾಸಾಂ. ೩೧–೮೨).

[?]

**ಎರೆ$_8$** (ನಾ). ಅಂಚು ; ದಡ ; ಮೇರೆ : "ನಿಶಿತನೇಮಿನಾ = ಕೂರಿರೆಯ ನುಳ್ಳ [ಪಾಠಾಂ. ಕೂರಿತವಾದ ಪಟ್ಟಿಯನುಳ್ಳ]" (ನೀತಿವಾ. ೨೩–೩೯) ; ಕಾವಲುದೋಣಿಯನ್ನು ಹಿಡಿದು ಏಕಾಂಗಿಯಾಗಿ ಊರ ಎರೆಯನ್ನು ಗಸ್ತು ತಿರುಗಬೇಕು (ಬೆಳುಮ. ೧). [?]

**ಎರೆಊರು** (ನಾ). ಒಂದು ಊರಿನ ಹೆಸರು : ಎರೆಊರ ಕಾಡಿಗಾವುಣ್ಡ (ಎಕ. IV, ಗುಂಡ್ಲುಪೇ. ೧೪–೭ ; 995 ?).

[ಎರೆ$_4$ + ಊರು$_3$ (< ಊರ್)]

**ಎರೆಕಬ್ಬಿಣ** (ನಾ). ತಾಂಡವಾಳ : "ಮೊದಲಿಗೆ ತಯಾರಿಸಿದ ಕಬ್ಬಿಣದ ಒಂದು ರೂಪವು ಎರೆಕಬ್ಬಿಣ (cast–iron) ಎನ್ನಿಸುವುದು" (ಬಾಲಪ್ರ. III, 1948). 'ಬೀಡುಕಬ್ಬಿಣ' ಪರಾ.

[ಎರೆ$_1$ (< ಎಱೆ$_1$) + ಕಬ್ಬಿಣ (< ಕರ್ಬೊನ್)]

**ಎರೆಕಾಡು**, ಎರಗಾಡು (ನಾ). ಎರೆಯ ಹೊಲ : ಪನ್ನಿಸೆ ಉಜ್ಜುರು ತಾಟಿಙೆಯರ್ಗೆ ಎರೆಕಾಡು ಇರ್ಪ್ಪತ್ತೈಮತ್ತರು (ಸೌಇಇ. IX–I, ೪೭–೭ ; 9ನೆಯ ಶತ). **ಎರಗಾಡು** : ಎರಗಾಡಿನಲ್ಲಿ ಜೋಳ ಚೆನ್ನಾಗಿ ಬೆಳೆಯುತ್ತದೆ (ರೂಢಿ). 'ಕಿಸುಕಾಡು' ಪರಾ.

[ಎರೆ$_4$ + ಕಾಡು$_2$]

**ಎರೆಗದ್ದೆ** (ನಾ). ಎರೆಭೂಮಿಯ ಗದ್ದೆ : ಬೆಳವಾಡಿ ಗ್ರಾಮದಲು ಎರೆಗದ್ದೆ ಸ್ಥಳದಲು ಮಾನ್ಯವಾಗಿ (ಎಕ. XVI, ಚಿಕ್ಕನಾ. ೧೦೩–೧೧ ; 1589).

[ಎರೆ$_4$ + ಗದ್ದೆ (< ಗಱ್ದೆ)]

**ಎರೆಗಿಱು** (ಕ್ರಿ). ೧. ಆಹಾರವಾಗಿ ಭ್ರಮಿಸು. ೨. ಎರೆಹುಳುವೆಂದು ಭ್ರಮಿಸು : ಮಿಳಿರ್ವರುಣಧ್ವಜಂಗಳನೆಱಲ್ಗಳನೊಂದೆರೆಗಿತ್ತು ವಾರ್ಧಿಯೊಳ್ ಪೊಳೆವೆಳವಾಳೆಗಳ್ ಕರ್ದುಕೆ ಬಾಳೆಗಳಂ ತಿಮಿ ನುಂಗೆ (ಕಾವ್ಯಸಾ. ೬೭ ಶಬ್ದಸ್ಮೃ). [ಎರೆ$_5$ + ಗಿಱು$_1$]

**ಎರೆಗುಲಿತನ** (ನಾ). ಸ್ವಾಮಿಘಾತಕತನ : ಪ್ರಭುದ್ರೋಹದ ಎರೆಗುಲಿತನದ ಶಾಪಗ್ರಸ್ತವಾ ಅಭದ್ರವಂಶದ ಮುಳ್ಳಳಿಲೆಯು (ಮಂತ್ರಶ. ೭೭–೩).

[ಎರೆಗುಲಿ$_0$ + –ತನ]

**ಎರೆಗೆದಱು** (ಕ್ರಿ). ಎರೆಯನ್ನು ಚೆಲ್ಲು ; ಗ್ರಾಸವನ್ನು ಹರಡು ; ಚರು ಹಾಕು : ಬಲೆಯೊಡ್ಡಿ ತೋಹುಗೊಂಡೆರೆಗೆದಱಿ ಬೆಳ್ಳಾರ ಸುತ್ತಿ ಸರಿವ ಬಿಗಿವ ಸಂಕಟಬೇಡ (ಹಚಕಾ. ೫–೨೦). [ಎರೆ$_5$ + ಕೆದಱು]

**ಎರೆಗೆಯ್$_1$** (ಕ್ರಿ). ಪೊರೆಯನ್ನು ಬಿಡು : ರುಧಿರೋದ್ಗಾರಿಯಂ ಪಿಡಿದು ತೂಗುತಿರ್ಪುದುಮುರಗಕೇತನನೆರೆಗೆಯ್ದುರಗರಾಜನಂತೆ ಬೆನ್ನನೆ ಬರೆ (ನೇಮಿಪು. ೧೨–೧೮೭ ವ). [ಎರೆ$_6$ + ಕೆಯ್$_1$]

**ಎರೆಗೆಯ್$_2$** (ನಾ). ಎರೆಹೊಲ : ಎಳೆವೆಣ್ಣಮೆಯ್ಯ ಕೋಮಲ ನಖಲೇಖೆಯಂತಿರೆರೆಗೆಯ್ಯ [ಪಾಠಾಂ. ಅಱಿಗೆಯ್ದ] ಳೊಳಾದುವು ಕೊಡೆ ಬೀಡೆಗಳ್ (ಜಗವಿ. ೧೪–೭). [ಎರೆ$_4$ + ಕೆಯ್$_4$]

**ಎರೆಗೊಳ್** (ಕ್ರಿ). ಆಹಾರವನ್ನು ತೆಗೆದುಕೊ ; ಗ್ರಾಸವನ್ನು ಪಡೆ : ಅಡಸುವ ಕಾಳದಂಡಮೆರೆಗೊಳ್ವಸಿತೋರಗನೆಂಬ ಶಂಕೆ ನೂರ್ಮಡಿಸಿರೆ (ಕಾದಂಪೂ. ೧೮೪) ; ಮುಳಿಯದೆ ಕಾಲಮಲ್ಲದೆರೆಗೊಳ್ಳವು [ಪಾಠಾಂ. ದಿರೆಕೊಳ್ವುವು] ಪಾವುಗಳ್ (ಜೀವಸಂ. ೬೬–೭) ; ಭರದಿಂದವೆ ಬಂದಾರವಿ ಶಶಿಗಳನೆರೆಗೊಂಡಕ್ಕಿಸದಾಯ್ತು (ಶ್ರೀಪಾಲ. ೧೧–೬೦).

[ಎರೆ$_5$ + ಕೊಳ್$_1$]

**ಎರೆಚೀಲ** (ನಾ). ಆಹಾರದ ಚೀಲ : ಪಕ್ಷಿಗಳ ಅಥವಾ ಕೀಟಗಳ, ಜೀರ್ಣಾಂಗದ ಆದಿಭಾಗ ; ಎರೆಚೀಲ (Craw. ಇಂಕನಿ).

[ಎರೆ$_5$ + ಚೀಲ]

**ಎರೆಡಿಯೂರು** (ನಾ). ಒಂದು ಊರಿನ ಹೆಸರು : ಶಾನ್ತನೂರುಂ ಎರೆಡಿಯೂರುಳುಂ ವನ್ದ ತೂಮ್ಬು ಕಟನಿಯುಂ ಅವರ ಮನೆಯುಂ ವಾಳ್ಗಳ್ಟುಂ ಪ್ರಸಾದಜಗ್ಗೆಯ್ದಾರ್ (ಎಕ. X, ಮುಳಬಾ. ೨೫೫–೧೦; 750) ; ತಿರುವೆಙ್ಗಡಯ್ಯನ್ ಎರೆಡಿಯೂರ ಪೆಱ್ಟು ಱುಗೊಳೊಳಾನ್ತಿ ಱಿದು ಸತ್ತನ್ (ಎಕ. X, ಮುಳಬಾ. ೧೦೮–೪ ; 950).

[ಎರೆಡಿ$_0$ + ಊರು$_3$ (< ಊರ್)]

**ಎರೆತ$_1$** (ನಾ). (ನೀರು) ಎರೆಯುವಿಕೆ : ಮಾಹ ; ಮಜ್ಜನ ; ಸ್ನಾನ ; ಎರೆತ (Bath. ಇಂಕನಿ). [ಎರೆ$_1$ (< ಎಱೆ$_1$) + –ತ$_2$]

**ಎರೆತ$_2$** (ನಾ). (ಕರಾ) ಎತ್ತು, ಕೋಣ ಮೊದಲಾದುವುಗಳಿಗೆ ಕೊಡುವ ಪೌಷ್ಟಿಕ ಆಹಾರ. [ಎರೆ$_5$ + –ತ$_2$]

**ಎರೆತ$_3$** (ನಾ). ಬೇಡಿಕೆ : ಅರಸಗೆ ಉಡುಪೆಂದರೆ ಬಲು ಆಸೆ . . . ಉಡುಪಿನಾಸೆಗರಸಸ್ತು ಎಂದ ಅವರೆರೆತಕೆಲ್ಲಕೂ "ಹ್ಞೂ" ಎಂದ (ಗಣೇಶ. ೬೦–೧೩). [ಎರೆ$_2$ + –ತ$_2$]

**ಎರೆಪಡಿ** (ನಾ). (?) : ಬೆಳ್ಗಲ್ಲ ಸರಡೆ ಪೆರೊಟ್ಟಿವಿ (ಯ) ಎರೆಪಡಿ ಎ (ಯೆ) (ಇಅ. VIII, ೨೧೩–೫೪ ; 10ನೆಯ ಶತ). [?]

**ಎರೆಬುಳು**, ಎರೆಹುಳು (ನಾ). ಮಣ್ಣಿನಲ್ಲಿ ವಾಸಿಸುವ ಒಂದು ಹುಳು : ಎರೆಬುಳು ಗುಳ್ಳೆ ಮುಂತಾದುವು ಕೆಲವಕ್ಕೆ ಸ್ಪರುಶನ ಜಿಹ್ವೆಗಳುಂಟು (ಭರಜ. ೬೭–೯೭). **ಎರೆಹುಳು** : ದುಂಬಿಗಳಿಗೂ ಹೂವು ಕಾಯಾಗುವುದಕ್ಕೂ, ಎರೆಹುಳುವಿಗೂ ಜನಗಳ ಆಹಾರಕ್ಕೂ ಯಾರು ತಾನೇ ಸಂಬಂಧ ಹೇಳಬಲ್ಲರು (ಕಗದ್ಯ. ೧೫೭). [ಎರೆ$_5$ + ಪುಳು (< ಪುೞು$_1$)]

**ಎರೆಭೂಮಿ** (ನಾ). = ಎರೆಕಾಡು : (ರೈಸ್‌ಗೆ. ೫೪೭). [ಎರೆ$_4$ + ಭೂಮಿ]

**ಎರೆಮಣ್**, ಎರೆಮಣ್ಣು (ನಾ). ಕಪ್ಪುಮಣ್ಣು ; ಜೇಡಿಮಣ್ಣು : ಒಡಲಿದು ಬಲ್ಪಿಲಿಯಕ್ಕುಂ ಪಸಿಯೆರೆಮಣ್‌ಗಡಿಗೆಯಿನುಂ ಪಿಡಿದ ಮತಂ ನನ್ನೊಳಿದಂತಕ್ಕುಂ (ಸೌನಂದ. ೯–೧೧). **ಎರೆಮಣ್ಣು** : ಹತ್ತಿಯ ಪೈರು ಎರೆಮಣ್ಣಿನಲ್ಲಿ ಚನ್ನಾಗಿ ಬರುವುದು (ವಿಜಾಭೂ. ೨೦). [ಎರೆ$_4$ + ಮಣ್]

**ಎರೆಮಣ್ಣು** 'ಎರೆಮಣ್' ನೋ.

**ಎರೆಮಿಗ** (ನಾ). ಮಾಂಸವನ್ನು ಆಹಾರವಾಗಿ ಉಳ್ಳ ಮೃಗ; ಮಾಂಸಾಹಾರಿ: ಪೊಲೆಯಂಟನ್ ಇರದೆ ತಾನ್ ಕರ್ಚಿಕೊಳ್ವನ ಕಯ್ಯಿ ನೆಂಬಂತೆ. ಎರೆಮಿಗದ ಮೇಣ್ ನಾಯ ಸುಱಿವಕ್ಕೆ ಅವಱ ಪಲ್ ಕುಱಿ ಪಕ್ಕೆ (ಅಂತಿಗೊ. ೧೨–೨೩೭). [ಎರ್ೆ$_5$ + ಮಿಗ]

**ಎರೆಯ** 'ಎಱೆಯ' ನೋ.

**ಎರೆಯಪ್ಪ** 'ಎಱೆಯಪ್ಪ$_1$' ನೋ.

**ಎರೆಯಮ** (ನಾ). ಒಬ್ಬಾತನ ಹೆಸರು: ಸೊತ್ತಿಯೂರೆರೆಯಮ ದಮ್ಮ ಯ್ಯನ ಮಗ ಶ್ರೀವಮ್ಮರ್ಯ್ಯ (ಎಕ. X. ಕೋಲಾರ. ೯೦–೮೮; 903). [ಎರೆಯ (< ಎಱೆಯ) + ಅಮ (< ಅಮ್ಮ$_1$)]

**ಎರೆಯಾಡು** (ಕ್ರಿ). ಜೊತೆಯಲ್ಲಿ ಆಡು; ಸಂಗಮಾಡು: ಬಂಡುಣಿಗ ಳಂತಿಹರು ಬಂಡನೆರೆಯಾಡುವರು ಕಂಡುದನು ಹೊರೆಳೆ ನುಡಿವರು ಹಾರು ವರು ಭಂಡರೆಂದಱಿಗು (ಸರ್ವಜ್ಞ. ೯೯೮). [ಎರ್ೆ$_7$ + ಆಡು$_1$]

**ಎರೆಯಿಕ್ಕು** (ಕ್ರಿ). ಪೊರೆಯನ್ನು ಬಿಡು: ಇದಿರೊಳ್ ಪಟ್ಟೆರೆಯಿಕ್ಕುತಿರ್ಪ ಪದದೊಳ್ ತ್ರಿಬ್ರಿಕ್ಕುಧಾಗ್ರಾಗ್ನಿ ತನ್ನುದರಾವಾಸಮನುರ್ವುತಿರ್ಪ ಪದ ದೊಳ್ ದುರ್ಗಂಧಿ ಜಾತ್ಯಂಧೆ ಮೆಟ್ಟಿದೊಡೆ...ಕೊಂಡುದು ಕೃಷ್ಣೋರಗಂ (ಸುಕುಮಾ. ೫–೪೫). [ಎರ್ೆ$_6$ + ಇಕ್ಕು]

**ಎರೆಯಿಸು** 'ಎಱೆಯಿಸು' ನೋ.

**ಎರೆಯುಗಿ** (ಕ್ರಿ). ಪೊರೆಯನ್ನು ಬಿಚ್ಚು, —ಸುಲಿ: ಮೊಗಸಿತರಿ ಬಲವನನುಸಾಲ್ವಕನ ಸೇನೆಯೊಮ್ಮೊಗದೊಳೆರೆಯುಗಿದ ಫಣಿಕುಲದಂತೆ (ಜೈಮಿಭಾ. ೧೨–೧೩). [ಎರ್ೆ$_6$ + ಉಗಿ$_1$]

**ಎರೆಯೆ** (ನಾ). ಒಡತಿ; ವಲ್ಲಭೆ: ನನ್ನ ಕಟ್ಟಳತೆಯನ್ನು ನೀನರಿಯೆ ನನ್ನ ಎರೆಯೆ (ಮಂತ್ರಶ. ೫೬–೧೧). [ಎರ್ೆ$_0$ (< ಎಱೆ$_5$) + -ಎ$_3$]

**ಎರೆವ** (ನಾ). ಭಿಕ್ಷುಕ; ಯಾಚಕ: "ಎರೆವನೆನೆ ಬೇಡುವವಂ" (ಕಬ್ಬಿಕೈ. ೩೬). [< ಎರ್$_2$]

**ಎರೆವಚ್ಚಾಡು** (ಕ್ರಿ). ಜೊತೆಗಾರರನ್ನು ಎರಡು ಗುಂಪುಮಾಡಿ ಆಟವಾಡು: ಹರಿಣಕ್ರೀಡನಮೆಂಬುದನೆರೆವಚ್ಚಾಡಲ್ ವಸುದೇವ ನಂದನರ್ ಬಗೆದಂದರ್ (ಜಗವಿ. ೪–೫೨); ಎರಲೆಧೀಂಕನಾಡಲೆಂದಿರ್ಬ ರಿರ್ಬರೊಂದಾ ಗೆರೆವಚ್ಚಾಡುವಲ್ಲಿ (ಜಗವಿ. ೪–೫೨ ವ). [ಎರ್ೆ$_7$ + ಪಚ್ಚು$_1$ + ಆಡು$_1$]

**ಎರೆವಚ್ಚು** (ಕ್ರಿ). ಸಂಗಡಿಗರನ್ನು ಎರಡು ಗುಂಪುಮಾಡು: ಕೊಳ ನೊಳ್ ಕೊಳನಾಡುವಂತಿರೊಪ್ಪಿದರಾಗಳ್ ಅದಲ್ಲದೆ ತಮ್ಮೊಳೆರೆವಚ್ಚಿ ಕೊಂಡು ಮತ್ಸರಂಗೆಯ್ದು (ಗಿರಿಕ. ೪–೨೪ ವ). [ಎರ್ೆ$_7$ + ಪಚ್ಚು$_1$]

**ಎರೆವಟ್ಟು** 'ಎಱೆವಟ್ಟು' ನೋ.

**ಎರೆವೆಱು** (ಕ್ರಿ). ಸಹವಾಸವನ್ನು ಪಡೆ; ಸಂಗವನ್ನು ಹೊಂದು; ಪ್ರೀತಿಯನ್ನು ಪಡೆ; ಅನುರಾಗಹೊಂದು (?): ಸರಸಕಲಾ ಪ್ರೌಢೆಯ ಸಾರಸಾಕ್ಷಿಯ ಅರವೆಱೆದುಟಿಯು ಅಸಿಯಳ ಎರೆವೆತ್ತ ಕೇಳಿಗೆ ಗೋಳಿಸು ರಂಗಾಯೆಂಬ ತರಳೆಯ ತಕ್ಕೆಯೆಂದಹುದೊ (ಶತಸಾಂ. ೨೫–೨೯). [ಎರ್ೆ$_7$ + ಪೆಱು$_1$]

**ಎರೆವೇಳಿ** (ನಾ). ಒಂದು ಊರಿನ ಹೆಸರು: ಇನ್ದರಸಂ ಜೋಡೂರಾಳ್ಗೆ ಆಳಿ ಪೇಸಲ್ಕೊನ್ದಾನ್ ಪಲೂಂಬರಾ ಎರೆವೇಳಿ ಆಳಿ ದೇವರ್ಗ್ಗೆ ಕೊಟ್ಟದು (ಎಕ. VII, ಶಿಕಾರಿ. ೨೧೮–೧೧; 1080). [?]

**ಎರೆಹುಳು** 'ಎರೆಬುಳು' ನೋ.

**ಎರೆಹೊರೆ** (ನಾ). ೧. ಹಾವಿನ ಚರ್ಮದ ಪದರ. ೨. (ಆಲಂ) ಮುಚ್ಚುಮರೆ: ಎಂದೆಂದುಮಿನಿಯನೊಳೆರೆಹೊರೆಯಿಲ್ಲದ ಚಂದದಿಂದೆ ರ್ದೆಯೊಳು ನಿಂದ (ಹದಿಬ. ೪–೨). [ಎರ್ೆ$_6$ + ಹೊರೆ$_6$ (< ಪೊರೆ$_6$)]

**ಎರೆಹೊಲ** (ನಾ). ಕಪ್ಪುಮಣ್ಣಿನ ಭೂಮಿ; ಎರೆಭೂಮಿ; "ಎರೆ ಹೊಲ: ಕರೆಹೊಲ" (ಜಾನಕೋ. ೨೫); ಮೂರು ಎಕರೆ ಎರೆಹೊಲ, ನಾಲ್ಕಂಕಣದ ಹೆಂಚಿನಮನೆ–ಇಷ್ಟು ಇರುವ ಹಿರಿಯರ ಆಸ್ತಿ (ಬೆಳುಮ. ೨); ಎರೆಹೊಲವಿರಬೇಕು ಕರೆ ಹೆಂಡತಿಯಿರಬೇಕು (ಗಾದೆ). [ಎರ್ೆ$_4$ + ಹೊಲ (< ಪೊಲ)]

**ಎರ್ರಿ** (ನಾ). ಹುಚ್ಚು; ಮರುಳುತನ.

ಎರ್ರಿಬಿರ್ರಿ = ಸಿಕ್ಕಾಪಟ್ಟೆ; ಅಡ್ಡಾದಿಡ್ಡಿ: ಅಣ್ಣಾವರು ಕೊಂಚ ಎರ್ರಿ ಬಿರ್ರಿಯಾಗುತ್ತಿದ್ದಾರೆಂದು ಅವನು ಭಾವಿಸಿ (ನಟಸಾ. ೫೬೬). [← ತೆಲು. ವೆಱ್ಱಿ]

**ಎರ್ಕೆಯ್** (ನಾ). ಏಳುಕೈ, —ಮೊಳ (?): ದೇವರ್ಗೆ ಎರ್ಕ್ಕೆಯ್ಯ ಮನೆಗಳ್ ೧೪ (ಸೌಇಇ. IX–i, ೮೬–೪೩; 1050). [?]

**ಎರ್ಕೆ** 'ಎಕ್ಕೆ$_2$' ನೋ.

**ಎರ್ಗೆ** 'ಎಗ್ಗ' ನೋ.

**ಎರ್ಗು$_1$** 'ಎಱಗು$_1$' ನೋ.

**∆ಎರ್ಗು$_2$** 'ಎಗ್ಗು$_2$' ನೋ.

**∆ಎರ್ಣೆ** 'ಎಣ್ಣೆ' ನೋ.

**ಎರ್ತರ** 'ಎಟ್ತರ' ನೋ.

**ಎರ್ತು** 'ಎಟ್ತು$_1$' ನೋ.

**ಎರ್ತುಗಾಣ, ಎತ್ತುಗಾಣ** (ನಾ). ಎತ್ತುಗಳಿಂದ ಆಡಿಸುವ ಗಾಣ; ಎತ್ತಿನ ಗಾಣ: ಎರ್ತುಗಾಣಮುಂ ೧೨ ಮನೆಯ ಸಾಮ್ಯಮುಂ ೧ ಕಯ್ಗಾಣಮುಂ (ಎಕ. XI, ದಾವಣ. ೨೦–೨೦; 1050). **ಎತ್ತುಗಾಣ:** ಎತ್ತುಗಾಣ ೧ ಕೈಗಾಣ ೧ (ಸೌಇಇ. XI–i, ೧೦೭–೧೫; 1050); ಎತ್ತು ಗಾಣವೊನ್ದು ಕೈಗಾಣವೊನ್ದು (ಎಕ. XI, ದಾವಣ. ೧೩೩–೨೫; 1071). [ಎರ್ತು (< ಎಟ್ತು$_1$) + ಗಾಣ$_1$]

**ಎರ್ದಾಟ** 'ಏಟ್$_1$' ಪರಾ.

**ಎರ್ದೆ, ಎದೆ, ಎಟ್ದೆ** (ನಾ). ೧. ಹೃದಯ; ಉರ; ವಕ್ಷ: "ಎರ್ದೆ ಕಮಂಡಲ ಗುಂಡಿಗೆಯೆನಿಕ್ಕು" (ಶಬ್ದಮಂ. ೮೫); "ಎರ್ದೆಯೆಂದುಂ ಹೆದೆಯಮೆಂದುಂ ಹೃದಯಂ" (ಕಶಸಾ. ೨೬–೫೬೦); ಮಲಯಾನಿಲನುಂ ಮಲಯಜ ಜಲಮುಂ ಶಶಿಕಿರಣಮುಂ ವಿಯೋಗಿಗಳೆರ್ದೆಯೊಳ್ ನೆಲಸಿ ರ್ದುವು (ಕವಿರಾ. ೩–೩೨); ನಲ್ಲಂಬಿಂದಿನೆ ಪುಷ್ಪಬಾಣನೆರ್ದೆಯಂ ಬೆಂಬಿಟ್ಟು ಬೆಳ್ಳಾಗಿ ತಕ್ಕೆಲ್ಲಂ ಕೆಟ್ಟೆರ್ದೆಗೆಟ್ಟು ಜಂಗಮಲತಾ ಸಲ್ಲೀಲೆಯರ್ ಬಾಲೆ ಯರ್ (ಕಾವ್ಯಸಾ. ೫೫೧ ಶೂದ್ರಕ); ಅಲರಂಬಿಂ ಬಿರಿದೆರ್ದೆಯೊಳ್ ನಿಲ ಲಱಿಗುಮೆ ಸದ್ಗುರೂಪದೇಶಾಮೃತಂ (ಕಾದಂಪೂ. ೫೪೩); ಗಿರಿಯಂದದಿ ನತಿನಿಶಿತ ಸುಕವಿ ವಾಕ್ಕುಲಿಶಂ ಬೀಟ್ಡಂದೊಡಮೆರ್ದೆಯಂ ಸೀಳ್ದೊಡ ಮೊಂದಕ್ಕರಮಿಲ್ಲೆನಿಪ್ಪ ಕಲ್ಲೆರ್ದೆಗವಿಗಳ್ (ಲೀಲಾವ. ೧–೨೫); ಜಲ ಜಾಕ್ಷಿಯರ ಕುಸ್ತರಿಸಿ ವಿಯೋಗವಾಂತಲರಂಬಗೆರ್ದೆಯನೊಡ್ಡುವರು (ಮೋಹತ. ೧೮–೨೬). **'ಎಂಟೆರ್ದೆ'** ಪರಾ. **ಎದೆ: ೧.** "ಹೃದಯ ಮುರವಾ ವಕ್ಷಮಾ ವತ್ಸಮೆಂದೆನಲ್ಕೆದೆಯಕ್ಕು" (ಮಂಗರಾ. ೯೬–೧೩); ಕಂಡವರೆದೆ ನಡುಗಲ್ಕಾಂ ಮಿಂಡುಗಳಂ ಪಿಡಿದು ನಾಯುಮಂ ಪಂದಿ ಯುಮಂ... ಕಾದಿಸುತಿರ್ಪಂ (ಧರ್ಮಾಮೃ. ೨–೧೭); ಧೈರ್ಯದ ಕೆಚ್ಚನೆದೆ ಕರಗಿತ್ತು (ಕುವ್ಯಾದ್ರೋ. ೮–೩೧); ನೋಟದಲಿ ಮದನಾಸ್ತ್ರ ವೆದೆಯಲಿ ನಾಟದು ವು ವಿಟರುಗಳ (ತೊರರಾ. ೧–೧೪–೨೪); ಭೋಗಿ ಯೋಗಿಗಳೆದೆ ಜುಮ್ಮುಜುಮ್ಮೆನೆ ನೇಮದಾಗಿ ಸೊಲ್ಲಿಸುವೆ ನಾಲಿಸಿರೊ (ಭರಚ. ೧–೧೪); ತಪದ ಕಠಿನಕೆದೆಯ ಕೊಟ್ಟೆ (ಅನಕೀ. ೧೬–೨೦). ೨. ಧೈರ್ಯ; ಸಾಮರ್ಥ್ಯ: ಯಾರಿಗೂ ಹೇಳುವ ಎದೆಯಿಲ್ಲ (ಕನಕೆ. ೩೬); ಎತ್ತು ಇಲ್ಲದವನಿಗೆ ಎದೆ ಇಲ್ಲ (ಗಾದೆ).

△ ಎಟ್ದಿ : ೧. ಎಲೆ ಚೋಳಕ್ಷಿತಿಪಾಳ ಸನ್ನವೆಟ್ದಿಯಂ ನೀಂ ನೀವಿಕೊಳ್ (ಎಕ. II, ೫೯–೧೧೧ ; 560) ; ವೈರಿಕೋಟಿಘರಟ್ಟಂ ರಣರಂಗಕ್ಷೇತ್ರಪಾಳಂ ಮಚ್ಚರಿಸುವರೆಟ್ದಿಯ ಸೂಲಂ ದಳದಿಂ ಮುನ್ನಿಱಿವ (ಮೈಆರಿ. ೧೯೩೧, ೭೪–೪೦; 1053 ?).

ಎದೆಕಂದು=ಧೈರ್ಯಗುಂದು : ಲಸಿತ ದಿವ್ಯೋನ್ನತ ಶರೀರಂ ನಿಸಿತ ಶೂಲದ ಶೂಕ ನಿಹತಿಗೆ ಕುಸಿಯದೆದೆಕಂದದೆ ಮನಂಗುಂದದೆ (ಬಸವು. ೩೯–೬೪). ಎದೆಸೋಲು= ಮನಸೋಲು: ರೂಪಿಗೆ ಸೋತನು ಚಕ್ರಿಯ ಸುತರ ವಿದ್ಯಾಪರಿಣತೆಗೆದೆಸೋತಾ (ಭರಜ. ೪೩–೧೦೩). ಎದೆಹಣ್ಣಾಗು= ಧೈರ್ಯಗುಂದು (ಕ). ಎರ್ದೆಯೊಡೆ, ಎದೆಯೊಡೆ= ಎದೆಬಿರಿ; ಶಕ್ತಿಯಿಲ್ಲದಂತಾಗು : ಮರಣದಿನಾದ ಖೇದದಿಂದೆರ್ದೆಯೊಡೆದಂತಿರೆ ಕೂಡೆ ಬೀಡೆವರಿದುವು ನಿರಂತರೋತ್ತಪನ ತಾಪದಿಂ ಪೆರ್ಗೆಱೆಗಳ್ (ಪಂರಾಮಾ. ೬–೮೮) ; ಗುರುಪದವಿಡಿಯಲಂಡಲೆವ ಮಾಯೆಯೆರ್ದೆಯೊಡೆವ ಗಂಭೀರವಚನದಿ ಪರಸಿ ಕಣ್ಬೊಳೆಯಲು (ಭಾವಚಿಂ. ೨–೨೪) ; ಕೂರಂಕುಶದಲಾನೆಯ ಬೆಗಡುಗೊಳಿಸಲು ಬೀದಿವರಿದುದು ಸುಭಟರೆದೆಯೊಡೆಯೆ (ಕುವ್ಯಾದ್ರೋ. ೩–೧೩) ; ಇಂದಿನಿಂದ ತನಗೆ ವಿಧವೆಯೆನ್ನುವರಲ್ಲ ಎಂದು ಅವಳು ಎದೆಯೊಡೆದಳು (ಗಂಗಾಸಾ. ೨೧). ಎರ್ದೆಯನ್ನಳ್, ಎರ್ದೆಯನ್ನೆ = ಹೃದಯದಂತಿರುವವಳು ; ಪ್ರೀತಿಪಾತ್ರಳು ; ನಲ್ಲೆ : ಕೈಕೆ ತಾಂ ಮಾಂಡವಿಯನೆರ್ದೆಯೆನ್ನಳಂ ಪಡೆದಳ್ಳೆ ತನ್ನ ಸುಂದರ ತನೂಜ ಭರತಂಗೆ (ಶ್ರೀರಾಮಾ. ೫೧–೬೩೩) ; ಮೈದುನಂ ತಂದೀಯೆ ತಣ್ಣೀರ ನೀಂಟೆ ಸೊಗಸಿದಳು ಶುಶ್ರೂಷೆಗಾ ರಾಮನೆರ್ದೆಯನ್ನೆ (ಶ್ರೀರಾಮಾ. ೧೨೮–೯೫).

[ದೇ. ‖ ತುಳು. ಎದೆ; ತೆಲು. ಎದ; ಪರ್ಜಿ. ಎದ್ರಂ, ಎದ್ರೊಂ. / ಸಂ. ಹೃದಯ.]

**ಎರ್ದೆಕೊಳ್** 'ಎರ್ದೆಗೊಳ್' ನೋ.

**ಎರ್ದೆಕೊಳಿಸು** 'ಎರ್ದೆಗೊಳಿಸು' ನೋ.

**ಎರ್ದೆಗದ,** ಎದೆಗದ (ನಾ). ಎದೆಯ ಬಾಗಿಲು ; ಹೃದಯದ ಕವಾಟ. 'ಎರ್ದೆಗದಂಗಿಱು' ಪರಾ. **ಎದೆಗದ :** ಮದನನ ಮೊದಲಂಬು ನಮಗೆ ಸೋಲದರೆದೆ ಗದವನುಗಿದು ಧೈರ್ಯಗಿರಿಯ ನುದುರುಗುಟ್ಟುವುದು (ಕಂಸವಿ. ೬–೮೩). [ಎರ್ದೆ + ಕದ]

**ಎರ್ದೆಗದಂಗಿಱು** (ಕ್ರಿ). ಎದೆಯ ಬಾಗಿಲನ್ನು ಮುಚ್ಚು : ಹರಹರನಾ ಕಣ್ಬಾಗಿಲಿಂ ಪುಗಿಸಿಯನಿಮಿಷತೆಯಿರವನುಳಿದೆರ್ದೆಗದಂಗೆತ್ತಳೋ ಯೆನಲೊರ್ವ ತರುಣಿ . . . ಇರವದೇಂ ಚೆಲ್ವಾದುದೋ (ಚೆಬಪು. ೧೯–೩೯). [ಎರ್ದೆಗದ + ಕಿಱು$_1$]

**ಎರ್ದೆಗರಗು,** ಎದೆಕರಗು (ಕ್ರಿ). ಎದೆ ನೀರಾಗು ; ಮರುಕಗೊಳ್ಳು ; ಅನುಕಂಪಿಸು : ಕುಡಿ ಕಳ್ಳನೆಂದು ಕರಗಿಸಿ ಕುಡಿಯಿಸುವರ್ ಲೋಹರಸಮನೆರ್ದೆಗ [ಪಾಠಾಂ. ಕೆ] ರಗುವಿನಂ (ಆದಿಪು. ೫–೮೬) ; ಬಿದ್ದಾ ಹರಿಣನಂ ಕಂಡು ಹರಿಣಿ ಕಱುವುತೆ ಕಂಬನಿಯನೆರ್ದೆಗರಗಿ ತನ್ನನೆ ಮಱದು ಗಾಯವನೊರಸಿ ಮೊಗದೊಳು ಮೊಗವನಿಟ್ಟು ಬಿಟ್ಟುದೊಡನಸುವ (ಸಾಳ್ವಭಾ. ೫–೨೯). **ಎದೆಕರಗು :** ಮುರಹರ ಕೃಷ್ಣ ಕಮಲಾಕ್ಷ ಖಗರಾಜಗಮನ ಸಲಹೆಂದು ಚೀಱಿದೊಡವನ ಮೊಗನೋಡಿ ಕರುಣದಿಂ ಕಟುಕರೆದೆಕರಗಿದುದದೆಂತೊ ಹರಿನಾಮದೇಳ್ಗೆ (ಜೈಮಿಭಾ. ೨೮–೩೨). [ಎರ್ದೆ + ಕರಗು$_1$]

**ಎರ್ದೆಗಳ್ತಲ್** (ನಾ). ಎದೆಯ ಕತ್ತಲು ; ಹೃದಯಾಂಧಕಾರ : ಸಹಜ ಮೌನಿಯ ಮಹದ್ಧ್ವನಿಯ ಧೈರ್ಯಕೆ ರಾಮನೆರ್ದೆಗಳ್ತಲಳಿವವೋಲ್ (ಶ್ರೀರಾಮಾ. ೫೪೭–೧೯೩). [ಎರ್ದೆ + ಕಳ್ತಲ್ (< ಕಟ್ತಲೆ)]

**ಎರ್ದೆಗಱೆ** (ನಾ). ಎದೆಯ ಕಲೆ ; ಮನಸ್ಸಿನ ಕಳಂಕ, —ದೋಷ : ಸರ್ವೋರ್ವಿಗಾನಂದವಮಂ ವಾರ್ಧಿಗೆ ಪೆರ್ಚಂಮಾಡಿ ಮುನ್ನಂ ಬಱೆಕೆರ್ದೆಗಱೆಯಂ ತೋಱೆಯುಂ ಕಂಡು ಲೋಕಂ ಬಗೆಗೊಂಡಾಲಂ ಮೊಲಂ ಪುತ್ತೆರಲೆಯೆನುತದಂ ಕೂರ್ತು ಕೈಗೈಯೊಳಿನ್ನುಂ ಪೊಗಟ್ದಪ್ಪರ್ ಭಾಪು ಲೋಕಕ್ಕುಪಕರಿಸುವನೊಳ್ ದೋಷಮುಂ ಸ್ತುತ್ಯಮಲ್ತೇ (ಲೀಲಾವ. ೨–೧೦). [ಎರ್ದೆ + ಕಱೆ$_2$]

**ಎರ್ದೆಗಾಯ್** (ಕ್ರಿ). ಎದೆಯನ್ನು ರಕ್ಷಿಸುಕೊಳ್ಳು ; ಆತ್ಮರಕ್ಷಣೆ ಮಾಡಿಕೊಳ್ಳು : ಅಂತು ತೋಡುಂಬೀಡುಂ ಕಾಣಲಾಗದೆರ್ದೆಗಾಯ [ಲೆಕ್ಕೆ]ಯನೆಂಬತ್ತು ನಾಲ್ಕು ಲಕ್ಕ ಬಂಡಿಯೊಳ್ ತಂಡತಂಡದೆ ತೀವಿದ . . . ಚತುರ್ಬಲಂಗಳ (ಪಂಪಭಾ. ೧೧–೧೯ ವ). [ಎರ್ದೆ + ಕಾಯ್$_1$ (< ಕಾ$_1$)]

**ಎರ್ದೆಗಿಚ್ಚು,** ಎದೆಗಿಚ್ಚು (ನಾ). ಎದೆಯ ಕಿಚ್ಚು ; ಹೃದಯದ ಸಂತಾಪ ; ಮನದ ತಾಪ : ವೀರರ ವೀರ ವಿಮುಕ್ತಾಹಾರಂ ಭವದರಿ [ವಧೂ]ಸ್ತನದ್ವಿತಯಂ ಕಣ್ಣೀರಿಂ ಮಿಂದೆರ್ದೆಗಿಚ್ಚಿಂದೋರಂತಿರೆ[ಬೆಂದು] ಚರಿಸುತಿರ್ಪುದು ತಪಮಂ (ಕಾದಂಪೂ. ೬೧) ; ಎರ್ದೆಗಿಚ್ಚನಿಕ್ಕಿ ಪೋದಾತನಲ್ಲದೆ ಮಿಕ್ಕ ಸದೆಗರ ತಱಿದಡೊಪ್ಪುವೆನೆ (ಮೋಹತ. ೩೦–೨೧). **ಎದೆಗಿಚ್ಚು :** ಬಿಚ್ಚಿ ಬಿಸುಡಿಸುವೆಚ್ಚಱಿಕೆಗಳು ಹೆಚ್ಚು ಕುಂದುಗಳೊಟ್ಟೆಯಂಗಳ ಮುಚ್ಚುಗಳು ಜನರಚ್ಚರಿಗಳೆದೆಗಿಚ್ಚುಗಳು ವಿಟರ (ಬಸವು. ೪೦–೬೧) ; ವಿರಹಿಜನದೆದೆಗಿಚ್ಚು ಮನುಮಥನರಸುತನದಭಿಷೇಕ (ಕುವ್ಯಾದ್ರೋ. ೧೬–೧೬). [ಎರ್ದೆ + ಕಿಚ್ಚು]

**ಎರ್ದೆಗಿಡಿಸು** 'ಎರ್ದೆಗೆಡಿಸು' ನೋ.

**ಎರ್ದೆಗಿಡು** 'ಎರ್ದೆಗೆಡು' ನೋ.

**ಎರ್ದೆಗುಂದು,** ಎದೆಗುಂದು (ಕ್ರಿ). = ಎರ್ದೆಗೆಡು : ಎಡಂಬನಲ್ಲೆರ್ದೆ [ಪಾಠಾಂ. ಎದೆ] ಗುಂದದುಬ್ಬದೆ ಪೊಡವಿಗಧಿಪತಿಯಾಗೆ ಹಿಗ್ಗದೆ ಬಡತನದಿ ಕಂಗೆಡದೆ (ಅಮೃತ. ೧–೨೯). **ಎದೆಗುಂದು :** ಎಂತಹ ಸಮಯದಲ್ಲಿಯೂ ಬಂದದ್ದನ್ನು ಎದೆಗುಂದದೆ ಎದುರಿಸಬೇಕು (ವಾರಾಕ್ಯ. ೫). [ಎರ್ದೆ + ಕುಂದು$_1$]

**ಎರ್ದೆಗುಡು** 'ಎರ್ದೆಗೊಡು' ನೋ.

**ಎರ್ದೆಗೆಡಿಸು,** ಎದೆಗೆಡಿಸು, ಎರ್ದೆಗಿಡಿಸು (ಕ್ರಿ). ಧೈರ್ಯವನ್ನು ಕೆಡಿಸು ; ಶಕ್ತಿಯನ್ನು ಹಾಳುಮಾಡು : ಪೊಡೆಯಿಸು ಭೇರಿಯನಿಂದೆ ನಡೆಸು ಮತ್ಸ್ಯನ್ಯಮಂ ಬಿಡಿಸು ಪಾಳೆಯಮನೆರ್ದೆಗೆಡಿಸು ಗೂಳೆಯಮ ನುಱೆ ಪಿಡಿದು (ಚೆಬಪು. ೪೬–೨೨). **ಎದೆಗೆಡಿಸು :** ರಾಜಕುಮಾರಕರನೆದೆಗೆಡಿಪ ವಿಕ್ರಮವು (ಸಾಳ್ವಭಾ. ೮–೬೮) ; ಕಾಳ್ಮೇಘದೊಡ್ಡುಗಳೆನಲೆದೆಗೆಡಿಸಿದುದು ನೋಳ್ಪವರ (ಕಂಸವಿ. ೧೧–೧೯) ; ಎದೆಗೆಡಿಸಿಕೊಳ್ಳದಿರು ಧೀರಳಾಗು (ಅರಳು. ೨೪೨–೧೪). **ಎರ್ದೆಗಿಡಿಸು :** ಕೊರ್ವಿಂ ನಿನ್ನನೆರ್ದೆಗಿಡಿಪುವುಱಿದರನಿನ್ನೆರ್ದೆಗಿಡಿಸವೆ ಲತಾಂಗಿ ಕಠಿನಕುಚಂಗಳ್ (ಚಂದ್ರಪು. ೮–೬೩). [ಎರ್ದೆಗೆಡು + -ಇಸು$_3$]

**ಎರ್ದೆಗೆಡು,** ಎದೆಗೆಡು, ಎರ್ದೆಗಿಡು, ಎಟ್ದಿಗಿಡು (ಕ್ರಿ). ಧೈರ್ಯಗುಂದು ; ಗಾಬರಿಯಾಗು : ಎನಗಿಱಿವಟ್ತಿಯಂ ಕಿಡಿಸಿ ನಿಮ್ಮಳವಂ ಪೆಱಗಿಕ್ಕಿ ನೀಮುಮಿಂತಿನಿತೆರ್ದೆಗೆಟ್ಟರ್ (ಪಂಪಭಾ. ೧೦–೧೧೯) ; ಆದನಾಂ ಕೇಳ್ದೆರ್ದೆಗೆಟ್ಟು ಮೆಯ್ಮಱಗಿ ಸತ್ತಂತಾಗಿ (ಕಾದಂಪೂ. ೯೦೪) ; ಸಿಂಗದ ಕೈಗೆ ಬಿಟ್ಟ ಹರಿಣಾಂಗನೆವೋಲೆರ್ದೆಗೆಟ್ಟು ರಾಮಚಂದ್ರಾಂಗನೆ (ಪಂರಾಮಾ. ೯–೧೦೭). **ಎದೆಗೆಡು :** ಅದೆ ಬಂದ ರಾಯನೆಂದೆನೆ ಕೇಳ್ದು ಮನ್ನೆಯರೆದೆಗೆಟ್ಟು ಚಾವಡಿಯೊಳಗೆ ಮದಗಜಯೂಥ ಕಂಠೀರವ ಬರೆ ಕಂಡು ಗದಗದಿಪಂತೆ ಬೆಚ್ಚಿದರು (ಮೋಹತ. ೨೨–೪೭) ; ಖೇಡೆಯದ ಕೆಂಬಿಸಿಲುರವಣೆಗೆ ನಿಡುವಾಳ ಮಿಂಚಿಗೆ ಖಚರನೆದೆಗೆಟ್ಟ (ಸಾಳ್ವಭಾ. ೬–೩೪).

ಎದೆಗಿಡು : ತನ್ನ ನಾಣ್ಣಾಪನೆ ಬಗೆದತನುಪರಿತಾಪಿತ ಶರೀರನುಮಾಗಿ ಶಂತನು ಕರಂಗೆದೆಗಿಡೆ (ಪಂಪಭಾ. ೧–೭೧ ವ); ಮಿಂಡರ್ ದಂಡಂದತ್ತೊಕ್ಕಲೆಗನಂತೆರ್ದೆಗಿಡೆ (ಧರ್ಮಾಮೃ. ೨–೬೯); ಎದೆಗಿಡ ಬೇಡ ಕೇಳ್ ಕುವರಿ ನಿನ್ನಿಂದೆ ನೋಡಿದೆ ಮಹದಾದಿ ಲೋಕಗಳ (ಮೋಹತ. ೩೦–೬). △ ಎಟ್ಟೆಗಿಡು : ನುಡಿದನೆ ಕಾವುದನೇ ಎಟ್ದೆಗಿಡದಿರು ಜವನಿಟ್ಟ ರೆಕ್ಕೆ ನಿನಗೀವುದನೇಂ ನುಡಿದನೆ ಏ ಆದು ಕಯ್ಯದು ನುಡಿದುದು ತಪ್ಪುಗುಮೆ ಗಂಗಚೂಡಾಮಣಿಯಾ (ಎಕ. II, ೫೯–೯೭; 974).

[ಎರ್ದೆ + ಕೆಡು]

ಎರ್ದೆಗೆಚ್ಚು (ನಾ). ಎದೆಯ ಕೆಚ್ಚು, —ಧೈರ್ಯ : ಅಸುವಿಂ ಬರ್ಚಿದ ನಿಜಸತಿಗಂಡೆರ್ದೆಗೆಚ್ಚುಗಿಡಾ ವಜ್ರಮುಷ್ಟಿ ವಿಹ್ವಳನಾದಂ (ನೇಮಿಪು. ೬–೨೮). [ಎರ್ದೆ + ಕೆಚ್ಚು (< ಕೆಚ್ಚು$_2$)]

ಎರ್ದೆಗೇಡಿ, ಎದೆಗೇಡಿ (ನಾ). (ಜನರ) ಧೈರ್ಯವನ್ನು ಕೆಡಿಸುವವನು, —ಹಾಳುಮಾಡುವವನು ; ಮನ್ಮಥ : ವಿಘ್ನಾಯತ ಶಿಷ್ಯನೆರ್ದೆ [ಪಾಠಾಂ. ಎದೆ]ಗೇಡಿಯ ಪ್ರಲಂಬಪ್ಪು ತಾನೊಡಗೊಂಡು ಬಂದು ವಿಘ್ನವಿಲ್ಲದೆ ಮನೆದುಂಬಿಸಬೇಕೆಂದು ಲಗ್ನವ ಪೇಳ್ದನಸುಜಗೆ (ಮೋಹತ. ೧೫–೧೩). ಎದೆಗೇಡಿ : ನೀಲೋತ್ಪಲಗಾಡಿ ವಿರಹಿಗಳೆದೆಗೇಡಿ ಜ್ವಾಲಾಂಬಕ ಪುತ್ರ ಶತ್ರು ಹಾಲಾಹಲ ಬಂಧು (ಮೋಹತ. ೧೬–೫೭).

[ಎರ್ದೆಗೇಡು + –ಇ$_3$]

ಎರ್ದೆಗೇಡು, ಎದೆಗೇಡು (ನಾ). ಮನಸ್ಸಿಗೆ ಆಗುವ ಹಾನಿ, —ದುಃಖ : ನೋಡದೆ ನುಡಿಸದಿರ್ದೊಡೆ ಮಾಣು ಸಂಜ್ಞೆಯಮಾಡರೆ ಮನವೇದನರು ಕಾಡಲುಚಿತವಲ್ಲ ಕರುಣದಿಂದೆನ್ನೆರ್ದೆಗೂ[ಗೇ]ಡ ಚಿತ್ತೈಸೆಂದಳಬಲೆ (ಮೋಹತ. ೯–೭). ಎದೆಗೇಡು : ಗದೆಗುದುಗೆಯ ಝುಲ್ಲು ಝುಲ್ಲೆಂದು ತಳವಾಜರಿದೆ ಬಂದರೆಂದು ಕಾತರಿಸಿ ಬೆದೆಗಾತಿಯರನು ಬಿಟ್ಟಗಲುವ ಪರಳಿಗರೆದೆಗೇಡನೇನ ಬಣ್ಣಿಪೆನು (ಮೋಹತ. ೧೮–೨೫).

[ಎರ್ದೆ + ಕೇಡು]

ಎರ್ದೆಗೊಡು, ಎದೆಕೊಡು, ಎದೆಗೊಡು, ಎರ್ದೆಗುಡು (ಕ್ರಿ). ೧. ಧೈರ್ಯಕೊಡು; ಪ್ರೋತ್ಸಾಹಿಸು : ಅಂತು ದುರ್ಯಶಃಪದಮುಂ ದುಷ್ಕರಮುಂ ದುಸ್ಸಾಧ್ಯಮುಂ ದುರ್ಘಟಮುಮೆನಿಪೆಡೆಯೊಳೆರ್ದೆಗೊಟ್ಟ ದೊಂದವಜ್ಞೆಯಿಂದೆಸಗಿದಪಂ ವಿಷಮಾಸ್ತ್ರಂ (ಕಾದಂಪೂ. ೮೫೭). ೨. ಮೊಲೆಯೂಡು : ತಾರಾಕ್ಷದೇವಿಯರ್ ನಿನ್ನಾಗಮನಕಾಗಿ ನೋಂತಿಹರ್ ಪಸಿದು, ಶಿಶುವಜ್ರಾರಿಗೆರ್ದೆಗೊಡದೆ (ಶ್ರೀರಾಮಾ. ೮೧೭–೧೧೪). ಎದೆಕೊಡು: ೨. ಮಗುವಿನಹೊಟ್ಟೆಗೆ ಹಾಲೂಡುವವರು ಯಾರು? ನೀವೇನು ಆ ಮಗುವಿಗೆ ಎದೆಕೊಡಲು ಬಂದೀತೇ? (ಪುನರು. ೨೮೭). ೩. "ಧೈರ್ಯತಾಳು" (ಜಾನಕೋ. ೨೫). ಎದೆಗೊಡು : ೪. ಎದೆಯೊಡ್ಡು, —ಚಾಚು; ಎದುರಿಸು : ನಾರಿ ಕೇಳ್ ನಿನ್ನಯ ಧೈರ್ಯವ ಕದಲ್ಚದಿರು ಕಾಮಶರಕೆ ಎದೆಗೊಡದಿರು (ಕಂಸವಿ. ೯–೧೫೭); ಹೊಸಬಗೆಯ ಕಷ್ಟಗಳಿಗೆ ಎದೆಗೊಡುವುದಕ್ಕೆ ಉತ್ಸಾಹಪೂರ್ವಕವಾಗಿ ಒಪ್ಪಿಕೊಂಡನು (ಕವಿಕ. ೩೫). ಎರ್ದೆಗುಡು : ೧. (ತೂಗುಂದಲೆಯಿಂದ ಪ್ರೋತ್ಸಾಹಿಸಿ ಎರ್ದೆಗುಡುವವನು) (ಬಟ್ಟಅ. ೧೦೩–೯).

ಎದೆಗೊಟ್ಟು ನಿಲ್ಲು = ಧೈರ್ಯವಾಗಿ ನಿಲ್ಲು : ಕಾಶಿನಾಥ ಶಾಸ್ತ್ರಿಗಳವರು ಎದೆಗೊಟ್ಟು ನಿಂತು ಚತುರೋಪಾಯಗಳಿಂದ ಎಲ್ಲ ತೊಂದರೆಗಳನ್ನು ದೂರಮಾಡಿದರು (ಗುರುದ. ೧೦). [ಎರ್ದೆ + ಕೊಡು]

ಎರ್ದೆಗೊಳ್, ಎದೆಗೊಳ್, ಎರ್ದೆಕೊಳ್ (ಕ್ರಿ). ೧. ಮನಸ್ಸಿಗೆ ತಂದುಕೊ ; ಸಮ್ಮತಿಸು ; ಒಪ್ಪು : ಭೂಮಂಡಳಪತಿಗಳಿಪಿದೊಡೆರ್ದೆಗೊಂಡದಱ ಫಲಂಗಳನಿತುಮಂ ಮನು ತಿಳಿದಂ (ಆದಿಪು. ೭–೨೮); ಏನೆರ್ದೆಗೊಂಡ ಕಜ್ಜಮನೆ ಪೇಟ್ದಿಯೊ (ಪಂಪಭಾ. ೨–೯೨); ಸಮಯೋಚಿತವಿದು ರಾತ್ರಿವಿಹಾರಂಗೆಯಲೆನಲದನೆರ್ದೆಗೊಂಡು (ಉದ್ಭದೇ. ೪–೧೫); ಪೊಸತೆನಿಪ ವೈಡೂರ್ಯದಾ ನಿಟ್ಟಿಸುವವರ ದುಮ್ಮಾನವಂ ಸ್ತಂಭಿಸುವ ಮಾನಸ್ತಂಭವನು ನೃಪಹಂಸನೆರ್ದೆಗೊಂಡ (ಸಾಳ್ವಭಾ. ೪–೩೦). ೨. ಧೈರ್ಯ ತಂದುಕೊ : ಅಂತುಮಿಂತುಮಾ ತಾಣದೊಳ ಮೊರ್ಕಾಲಂ ಪೋದುದು ಆದೊಡಮಾರುಮೆರ್ದೆಗೊಂಡರಿಲ್ಲಂ (ಅದ್ಭುತ. ೨೭–೨೭). ೩. ಮನಸ್ಸನ್ನು ಆಕರ್ಷಿಸು; ಮನೋಹರವಾಗು : ಶ್ವೇತನ ಬಿಲ್ಲೊಳಿರ್ದ ಮದನಾರಿಯ ರೂಪೆರ್ದೆಗೊಳ್ವುದುಂ (ಪಂಪಭಾ. ೧೦–೧೧೮); ಲೋಕಮನೆರ್ದೆಗೊಳ್ವ ಚಂದ್ರಿಕೆಗೆ ಸೋರ್ಮುಡಿ ತೋರ್ಮೊಲೆ ಮೂಡಿದಂತೆ (ಅನಂಪು. ೪–೯೨). ಎದೆಗೊಳ್ : ೧. ಇಱಿವ ಕಾವ ಗುಣಂಗಳೆ ಸಾಜಮೆಂದು ಕೇಳ್ದರ್ಗೆದೆಗೊಣ್ಬು ಜೇಂಕರಿಸಿ ರಾಜಗುಣಕ್ಕಳವಟ್ಟನೊಕ್ಕನಂ ಪೆರ್ಗ್ಗಡೆಯೆಂಬುದೇ ಧುರಕೆ (ಎಕ. VII, ಶಿವಮೊ. ೧೦–೪೧; 1085). ೨. ಹದಿರಿನ ಹಕ್ಕೆ ಅನ್ಯಾಯ ದಂಗಡಿಯೆನಲೆದೆಗೊಂಡುದಾ ಸೂಳೆಗೇರಿ (ಕುರಾಸಾಂ. ೨೫–೨೪).

ಎರ್ದೆಕೊಳ್ : 'ಎರ್ದೆಕೊಳಿಸು' ಪರಾ. [ಎರ್ದೆ + ಕೊಳ್$_1$]

ಎರ್ದೆಗೊಳಿಸು, ಎದೆಗೊಳಿಸು, ಎರ್ದೆಕೊಳಿಸು (ಕ್ರಿ). ಮನಸ್ಸಿಗೆ ಮುಟ್ಟುವಂತೆ ಮಾಡು; ಒಳಗು ಮಾಡು; ಗೆಲ್ಲು : ಸತಿ ಮೇಲ್ಪರಿವುದನುಚಿತವಿವನುಪಾಯದಿಂದೆರ್ದೆಗೊಳಿಸಲ್ವೇಱ್ಕುಮೆಂದು (ಉದ್ಭಟ. ೩–೨೯ ವ). ೨. ಮನಸ್ಸನ್ನು ಮೆಚ್ಚಿಸು; ಹೃದಯಂಗಮವಾಗು; ಮನೋಹರವಾಗು : ಕಳಕಳಪಮುರಿಯರಂ ಕಣ್ಣೊಳೆ ಬಗ್ಗಿಸುವಲ್ಲಿ ಕಾಮುಕಾರ್ಮುಕ ಕರಸಂಚಳನಮನೆ ಪೋಲ್ತು ಕರಮೆರ್ದೆಗೊಳಿಸಿದು ದಾಕೆಗಳ ವಿಭ್ರಮಭ್ರೂಭಂಗಂ (ಆದಿಪು. ೭–೧೫); ಮುತ್ತಂ ಮೆಱಸಂ ಕೋದಂತಿರೆ ಪೇಟ್ದುಱಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ (ಕಾವ್ಯಾವ. ೫೫). ಎದೆಗೊಳಿಸು : ೧. ಸುರಸುಂದರಿಯರಾ ನಗುವ ರೂಪಿನ ನೀಱಿ ಕೈಸಾರುವಾಗೆಂದು ನಗುತೆದೆಗೊಳಿಸಿದಳೊಡನೆ (ಭರಚ. ೩೭–೯೨). ೨. ಶಿಶುಪಶುಗಳಿಗೂ, ಖಗನಾಗಗಳಿಗೂ ರುಚಿಕರವಾದ ಗಾನವು ಮನುಷ್ಯನನ್ನು ಎದೆಗೊಳಿಸುವುದು ಏನಾಶ್ಚರ್ಯ (ಕಾಂಪೂಚ. ೧೧). ೩. ಅಂಗೀಕರಿಸು : ಇದು ಹಿತವೆಂದವರಿತ್ತುಪದೇಶವನೆದೆಗೊಳಿಸುವುದೆಸಗುವುದು (ಹದಿಬ. ೪–೧೨). ಎರ್ದೆಕೊಳಿಸು : ೨. ಸಂದೇಶಮೆನಗೆ ವಿಶ್ವರಹಸ್ಯಮುಂ ಸಾರಿ ಎರ್ದೆಕೊಳಿಸೆ (ಸಂಸಪ. ೩೦–೪). [ಎದೆಗೊಳ್ (< ಎರ್ದೆಗೊಳ್) + –ಇಸು$_3$]

ಎರ್ದೆದಲ್ಲಣ, ಎದೆದಲ್ಲಣ, ಎದೆದಲ್ಲಳ (ನಾ). ೧. ಎದೆಯ ತಲ್ಲಣ; ಮನಸ್ಸಿನ ಭಯ, —ಅಂಜಿಕೆ : ತುಂಬಿಯ ಗೀತಶಾಲೆ ಚೈತ್ರನ ತೊಡವೋತಗಲ್ದರೆರ್ದೆದಲ್ಲಣಮೋಪರ ಸ್ಯೆಪು ಕಾಮನಂಬಿನ ಕಣೆ . . . ಎಂದಲರ್ದ ಮಲ್ಲಿಗೆಯಂ ಹರಿ ಮೆಚ್ಚಿ ನೋಡಿದಂ (ಜಗವಿ. ೧೪–೭೦). ಎದೆದಲ್ಲಣ : ೧. ಪ್ರತಿಮಲ್ಲರಾ ವ್ಯೂಹವನು ಮುಱಿದೆದೆದಲ್ಲಣವ ಮಾಡಿದರು ಮಗಧನೃಪಾಲ ಮುಖ್ಯರಿಗೆ(ನಿಭಾಗ. ೧೦–೫೩–೮). ೨. ಎದೆಯನ್ನು ತಲ್ಲಣಗೊಸುವವನು; ಭಯಕಾರಿ : ಕೀರ್ತಿಮಾನಿನಿಯ ವಲ್ಲಭಂ ಪರವಾದಿಗಳಿಗೆದೆದಲ್ಲಣಂ ಹರಮೂರ್ತಿ ಭೂತಳದಲ್ಲಿ ಮೊರಟರ ಬಂಕಿಮ ದೇವನು (ಬಸವು. ೪೯–೧೮); ನಿನ್ನ ಮಕ್ಕಳು ರಾಯರೆದೆದಲ್ಲಣರೆ ಭಾರಿಯ ಬಾಹು ವಿಕ್ರಮರೆ (ಕುವ್ಯಾಅ. ೯–೬) ಎದೆದಲ್ಲಳ : ೧. ತಾವು ಮರ್ತ್ಯರು ಪೂರ್ವಯುಗದವರಾವು ತಮ್ಮಂತರವ ನೋಡದೆ ದೇವರೆದೆದಲ್ಲಳ [ಪಾಠಾಂ. ಣ]ದ ಲಂಕೆಯ ತಾವನೀಕ್ಷಿಸದೆ (ಕುವ್ಯಾಸ. ೫–೩೭).

[ಎರ್ದೆ + ತಲ್ಲಣ]

ಎರ್ದೆದಾಣ (ನಾ). ಹೃದಯದ ಸ್ಥಾನ; ಮನಸ್ಸು : ಕಾಣುತೀಶನ ಮೂರ್ತಿಯಂ ಮಹಾಸತಿಯರೆರ್ದೆದಾಣಮುಲರ್ಗಜೆಗೆ ನೆಲೆದಾಣಮಾದುವು (ಚಬಪು. ೨೦–೧೯). [ಎರ್ದೆ + ತಾಣ$_2$]

**ಎರ್ದೆದೆಱೆ**, ಎದೆತೆರೆ, ಎದೆದೆರೆ (ಕ್ರಿ). ೧. ಎದೆಯನ್ನು ತೆರೆ; ಹೃದಯವನ್ನು ಬಿಚ್ಚು; ಮನಸ್ಸಿನಲ್ಲಿರುವುದನ್ನು ಪ್ರಕಟವಾಗಿ ಹೇಳು: ದೂತ ಮುಖೋದಂತಂಗಳಿನಱಿವುದು ಮತಿವಂತಂಗೆರ್ದೆದೆಱೆ ದನಲ್ತೆ ಬಾಯ್ದೆಱೆದಾತಂ (ಶಾಂತಿಪು. ೨-೫೭). ೨. (ದುಃಖದಿಂದ) ಎದೆಯೊಡೆ: ವೃಷಸೇನನಂ ಕಂಡು ಕರ್ಣನಂ ನೆನೆದೆರ್ದೆದೆಱೆದು ದುರ್ಯೋಧನನ ಕೆಳೆಯನಪ್ಪ ನಿಮ್ಮಮ್ಮಂ ಕರ್ಣನೆಲ್ಲಿದನೆಂದು (ಪಂಪಭಾ. ೧೩-೫೭ ವ). ೩. ಸ್ತನಗಳನ್ನು ಕಾಣಿಸು: ತೊಱೆಗಳ ಪುಳಿನತಳಂಗಳ ತೆಱಪುಗಳರೆದೆಱೆದು ಪೋಲ್ತುವೆರ್ದೆದೆಱೆ [ಪಾಠಾಂ. ವೆದೆತೆಱೆ]ದಿರೆ ನಾಣೆಱಕದಿನರೆದೆಱೆದೋಪಳ ಮಿಱುಗುವ ಘನ ಜಘನ ತಳದ ತೆಱಪಿನ ತೆಱನಂ (ಕಾವ್ಯಾವ. ೨೪). **ಎದೆತೆರೆ**: ೧. "ದುಃಖಿಸು, ಅಂತಃಕರಣವನ್ನು ಬಿಚ್ಚು" (ಕಂನುಹು. ೧೩೧). **ಎದೆದೆರೆ**: ೨. ಆ ಉಭಯ ಕಾವ್ಯಗಳಲ್ಲಿ ಹೊಳೆಯುವ, ಕವಿಯ ಎದೆದೆರೆಯುವ ವಿಶಿಷ್ಟವಾದ ಕೆಲವು ಪದ್ಯಗಳಿಂದ ಮಂದಟ್ಟು ಮಾಡಿಕೊಳ್ಳಬಹುದು (ನಾಡೋಜ. ೧೩೬). [ಎರ್ದೆ + ತೆಱೆ$_1$]

**ಎರ್ದೆದೋಱು** (ಕ್ರಿ). ಧೈರ್ಯವನ್ನು ತೋರು; ಕೆಚ್ಚನ್ನು ಪ್ರಕಟಿಸು: ಏಱನೆ ಸೂಱೆಗೊಂಡು ನುಡಿವೀ ನುಡಿಯಲ್ಲದೆ ಮತ್ತಮಾಸನಂ ದೋಱುವ ಬಲ್ಪುದೋಱುವೆರ್ದೆದೋಱುವ ಕಯ್ಪೆಸರಂಗಳೆಮ್ಮನುಂತೇಱವು (ಪಂಪಭಾ. ೮-೨೦). [ಎರ್ದೆ + ತೋಱು$_1$ (< ತೋಱ್)]

**ಎರ್ದೆನೀರ್** (ನಾ). "ಎದೆಯುದ್ದವಿರುವ ನೀರು" (ಪ್ರಭಣ್ಣ). [ಎರ್ದೆ + ನೀರ್$_1$]

**ಎರ್ದೆನೋ** (ಕ್ರಿ). (ಮನಸ್ಸಿನಲ್ಲಿ) ಅಸಮಾಧಾನವನ್ನು ಹೊಂದು; ಕಿರಿಕಿರಿಯಾಗು: ಅಚ್ಯುತಂಗಿನಿಸೆರ್ದೆನೋವೆಯಪ್ಪೊಡದು ಕೂಡದು ಮೂವರೊಳೊರ್ವಂ (ಪಂಪಭಾ. ೫-೧೦೨). [ಎರ್ದೆ + ನೋ]

**ಎರ್ದೆನೋವು** (ನಾ). ಹೃದಯದ ನೋವು; ಎದೆಯ ಬೇನೆ: ಹಿಪ್ಪಲಿ, ಸಕ್ಕರೆ, ಜೇನುತುಪ್ಪ, ಕಾದಹಾಲು, ಹೊಸತುಪ್ಪ ಇವಿಷ್ಟನೂ ಸೌಟನಲ್ಲಿ ತೊಳಸಿ ಪಾನವಂ ಮಾಡಿಸಲು...ಕೆಮ್ಮು, ಎದೆನೋವು, ಜೀರ್ಣಜ್ವರಗಳನು ಪರಿಹರಿಸುವುದು (ವೈದ್ಯಸಾ. II, ೧೧೩). [ಎರ್ದೆ + ನೋವು]

**ಎರ್ದೆಬೆಂಕೆ** (ನಾ). ಎದೆಯ ಬೆಂಕಿ; ಹೃದಯದ ಸಂತಾಪ: ಇದು ನಿನಗೆ ಬಗೆಯೆಣಿಕೆ, ಎನಗೆ ಎರ್ದೆಬೆಂಕೆ (ಅಶ್ವತ್ಥಾ. ೩೮-೨). [ಎರ್ದೆ + ಬೆಂಕೆ]

**ಎರ್ದೆಯಂಟು** (ಕ್ರಿ). ಎದೆಯನ್ನು ಮುಟ್ಟು; ಮನಮುಟ್ಟು: ಉದಯಂಗೆಯ್ವಂದೆನ್ನ ಕೊಂದೆ ನೀನೆಂದಿಂದುವಿನೆರ್ದೆಯಂಟಿ ಸೂರುಳಿಡಿಸುವ ತೆಱದಿಂ (ಕಾದಂಬು. ೨೨೯). [ಎರ್ದೆ + ಅಂಟು$_1$]

**ಎರ್ದೆಯಾಣ್ಮ** (ನಾ). ಹೃದಯೇಶ್ವರ; ಪ್ರೀತಿಪಾತ್ರ: ಸೊಬಗಿನಾಗರ ಮೆಲ್ಲಿದನಿಚ್ಚೆಯಾಣ್ಮನೆಲ್ಲಿದನೆರ್ದೆಯಾಣ್ಮ [ಪಾಠಾಂ. ಎರ್ದೆಗಾಣ್ಮ] ನೆನ್ನರಸನೆಲ್ಲಿದನೋ ಲಲಿತಾಂಗವಲ್ಲಭಂ (ಆದಿಪು. ೩-೧೫). [ಎರ್ದೆ + ಅಣ್ಮ (< ಆಳ್ಮ)]

**ಎರ್ದೆಯಾರು** (ಕ್ರಿ). ಮನಸ್ಸಿನಲ್ಲಿ ತೃಪ್ತಿಪಡು; ಮನದುಂಬು: ಭುಜಮೂಲಮಂ ನೆಱೆಯೆ ಕಂಡೆರ್ದೆಯಾರಿದೊಡಂ ನಿರೀಕ್ಷಣಾಕುಲತೆಯಿನೀಂಟುವರ್ ಪಥಿಕರ್ (ಚಂದ್ರಪು. ೧-೯೮); ಕುಸುಮಾವಳೀ ತನೂದರಿಯನಡರ್ತು ಭೂಪ ಕುಸುಮಾಯುಧನಿಂತೆರ್ದೆಯಾರೆ ನೋಡಿದಂ (ಕುಸುಮಾ. ೧೩-೭೬). [ಎರ್ದೆ + ಆರ್ಱು (< ಆರ್$_2$)]

**ಎರ್ದೆಯಾಸೆ** (ನಾ). ಎದೆಯ ಆಸೆ; ಮನಸ್ಸಿನ ಬಯಕೆ: ನಿನ್ನನ್ತ ಸ್ವತ್ತ್ವಂ ಪರಮಗುಣಮೆರ್ದೆಯಾಸೆ ಸಿದ್ಧಿಯ ಕೃತಿಯಿಂ ನಿನ್ನೊಳೆಯವಿತಳಿಯದಂತೆವೋಲ್ ಪೊರೆಪೊಣ್ಮಿಸಿ ಕವಿಯಣ್ಮಿಸುವಂ (ಸಂಸಪ. ೨೦-೧). [ಎರ್ದೆ + ಆಸೆ]

**ಎರ್ದೆಯಾಱು** (ಕ್ರಿ). ಧೈರ್ಯ ಬತ್ತು; ಭಯಪಡು: ಸಲಹುವೈಯನು ಮುಳಿದು ಲೋಕದ ಕೊಲೆಗೆಲಸಕಂಗೈಸಿದನೆ ಹಾ ಪ್ರಳಯವಾದುದಕಾಲದಲಿಯೆಂದಮರರೆರ್ದೆ[ಪಾಠಾಂ. ಎದೆ]ಯಾಱೆ (ಕುಮಾವ್ಯಾಭೀ. ೬-೨೯). [ಎರ್ದೆ + ಅಱು$_1$]

**ಎರ್ದೆಯಿಕ್ಕು** (ಕ್ರಿ). ಧೈರ್ಯಕುಗ್ಗು,—ಕಡಮೆಯಾಗು: ಈ ಕೊಸುಗಳ್ ಮನಮಿಕ್ಕಿಯುಮೆರ್ದೆಯಿಕ್ಕಿಯುಂ ಕಿಡುವರ್ (ಪಂಪಭಾ. ೨-೨೮ ವ). [ಎರ್ದೆ + ಇಕ್ಕು]

**ಎರ್ದೆಯುಗಿ** (ಕ್ರಿ). ಎದೆಯನ್ನು ಬಗಿ; ಹೃದಯವನ್ನು ಸೀಳು: ಪುಗಲೆಂಬ ಪಿಕಸ್ವರಕೆರ್ದೆಯುಗಿವ[ಪಾಠಾಂ. ಉಗುವ] ಸರಕ್ಕೆಯ್ದೆ ಬೆರ್ಚಿ ಕಣ್ಗಂ ಮನಕಂ ಸೊಗಯಿಪ ಸರದೊಳಗೆ ಶರಣ್ಬುಗುವಂತಿರೆ ಪೊಕ್ಕುದಂದು ವಿರಹಿಜನಂಗಳ್ (ಅಜಿಪು. ೬-೨೦). P ಇಲ್ಲಿ 'ಎರ್ದೆಯಗಿ' (= ಆಗಮನದಲ್ಲಿ ಭಯಪಡು) ಎಂಬ ಪಾಠವಿರಬಹುದು. [ಎರ್ದೆ + ಉಗಿ$_1$]

**ಎರ್ದೆಯುರ್ಚು** (ಕ್ರಿ). ಎದೆಯನ್ನು ಭೇದಿಸು; ಮನವನ್ನು ಸೇರು: ಪೊದಱೆರ್ದೆಯುರ್ಚಿದ ನಲ್ಮೆಯೊಂದು ಭಾವಕಮುಱಿಯಲ್ಕೆ... ತರಳಾಯತಾಕ್ಷಿಯ (ಶಾಂತಿಪು. ೮-೯೬). [ಎರ್ದೆ + ಉರ್ಚು]

**ಎರ್ದೆಯುರ್ಬು**, ಎದೆಯುಬ್ಬು (ಕ್ರಿ). ಎದೆಹಿಗ್ಗು,—ದೊಡ್ಡದಾಗು (?): ಒದವಿದ ಚಿಂತೆ ಪೆರ್ಚೆ ಪಸಿವಿಲ್ಲದೆ ಮರ್ಬೆರ್ದೆಯುರ್ಬೆ ನಿದ್ರೆಯಿಲ್ಲದೆ ಬಗೆ ಬೆರ್ಚೆ ಬುದ್ಧಿಯಣಮಿಲ್ಲದೆ ನಲ್ಲಳಗಲ್ಕೆಯಿಂದಂ (ಅದಿಪು. ೧೨-೨೩). **ಎದೆಯುಬ್ಬು**: ಪ್ರಿಯನಾಲಿಂಗಿಸಿದರೆ ರಕ್ತವು ಕಾಯುವುದಂತೆ! ಎದೆಯುಬ್ಬುವುದಂತೆ! ಸ್ನೇಹಾತಿರೇಕದಿಂದ ಎಚ್ಚರತಪ್ಪುವುದಂತೆ! ಹೌದೆ? (ಆರ್ಯಕ. ೪೪). [ಎರ್ದೆ + ಉರ್ಬು$_1$ (< ಉರ್ವು$_1$)]

**ಎರ್ದೆರಕ್ಕೆ** (ನಾ). = ಎದೆಗವಚ: ಆರ್ಗೆಳ್ಚರೆಂಬಂಗಿಯಿಲ್ಲಂ ಅವಂದೋಷಂಗಳೀಡಹಂ ಪೋರೊಳ್ ಪ್ರತಿಭಟಂಗೆಂತಂತೆರ್ದೆರಕ್ಕೆಯ ನಾನದಂ (ಸೌನಂದ. ೧೪-೩೮). [ಎರ್ದೆ + ರೆಕ್ಕೆ]

**ಎರ್ದೆವಡಿ** (ನಾ). ಎದೆಯ ಕದ: ವೀರನೊಂದುಪಹತಿಗೆರ್ದೆವಡಿ ಪವ್ವನೆ ಪಾಱಿದಂತಾಗೆ (ರಾಮಾಶ್ವ. ೯೮-೮). [ಎರ್ದೆ + ಪಡಿ$_4$]

**ಎರ್ದೆವತ್ತು** (ಕ್ರಿ). ಎದೆಗೆ ಹತ್ತು,—ಅಂಟಿರು; ಮನಸ್ಸಿಗೆ ಮುಟ್ಟು: "ಎರ್ದೆವತ್ತಿದುದೆನೆ ಚಿತ್ತದಲ್ಲಿ ನೆಲೆಗೊಂಡುದು" (ಚತುನಿ. ೧೨); ಮುತ್ತಿನ ಸರಕ್ಕೆ ನುಣ್ಪಿಂ ಬಿತ್ತರಿಸಿದ ಬೆಳ್ಪುಮಲ್ಲದಿಂತೀ ಪೊಸಗಂಪೆತ್ತಿದದೆನೆ ನಗುವಂತೆರ್ದೆವತ್ತಿದ ಮಲ್ಲಿಗೆಯ ತಿಸರವೇಂ ಸೊಗಯಿಸಿತೋ (ಕಬ್ಬಿಕಾ. ೧೯೦). [ಎರ್ದೆ + ಪತ್ತು$_1$]

**ಎರ್ದೆವತ್ತುಗೆ** (ನಾ). ೧. ಎದೆ ಸೇರುವಿಕೆ; ಹೃದಯದ ಸಂಬಂಧ: ಶ್ರೀಗೆರ್ದೆವತ್ತುಗೆ ವರವಾಕ್ಶ್ರೀಗೆ ನಿಜಂ ಸುಮುಖವೃತ್ತಿ ತೋಳ್ಗೆರಗು ಜಯಶ್ರೀಗೊಲವನೀಯೆ ನೆಗಟ್ದಂ ಭೂಗಧಿಪತಿ (ಚಂದ್ರಪು. ೨-೧). ೨. ಆಪ್ತತೆ: ಮಂತ್ರಿಗಾರೊಳಮೆರ್ದೆವತ್ತುಗೆ [ಪಾಠಾಂ. ಅಟ್ಟೆವತ್ತುಗೆ] ಯಾಗಲಾಗದೆಂಬುದುತ್ತರವಾಕ್ಯಂ (ನೀತಿವಾ. ೯-೫೫). [ಎರ್ದೆ + ಪತ್ತುಗೆ]

**ಎರ್ದೆವರ್** (ಕ್ರಿ). ಮನಸ್ಸಿಗೆ ಬರು; ಪ್ರೀತಿಪಾತ್ರವಾಗು; ಮೆಚ್ಚಾಗು: ಎನ್ನೆರ್ದೆವಂದ ರಾಯಸದ ಲಿಂಗರಸಂ ಬರೆಯಲ್ ಸಮಂತುಟಾಂ ಸನ್ಮುತ ಶಂಭುಭಕ್ತರ ಪದಾಂಬುರುಹಂಗಳನೊಲ್ದು ಪೊತ್ತು (ಉದ್ಭಟ. ೧೨-೧೪೫). [ಎರ್ದೆ + ಬರ್$_1$]

**ಎರ್ದೆವಟಲ್** (ನಾ). ಎದೆಯ ಆಯಾಸ; ಮನಸ್ಸಿನ ಕ್ಲೇಶ,—ದುಃಖ, ಚಿಂತೆ: ವಿಪರೀತಮಾದ ಮೃಗಕುಲದುಪದ್ರವಂ ನಿಮಗೆ ದಂಡಪಾಶಾದಿಗಳಿಂದಪಹರಿಸುಗುಮೆಂದಾರ್ಯಗುರ್ಪದೇಶಂಗೆಯ್ದು ಕಳೆದ ನವರೆರ್ದೆವಟಲಂ (ಪಂರಾಮಾ. ೧-೭೨). 'ಅದವಟಲ್' ಪರಾ. [ಎರ್ದೆ + ಬಟಲ್$_3$]

**ಎರ್ದೆವಾಯ್** (ನಾ). ಎದೆಯ ಬಾಯಿ (?): ಎರ್ದೆವಾಯದಿರ್ಮುತ್ತಿ ಪೊದೆಟ್ಟಿರ್ದೆಯೆಂಬಿವು ಸಹಜ ಶಿಥಿಲವೃತ್ತಿಯನಾಳ್ಗುಂ (ಶಮದ. ೪೫). [ಎರ್ದೆ + ಬಾಯ್]

**ಎರ್ದೆವುಗು** (ಕ್ರಿ). ಮ ಿಹರವಾಗು; ಎದೆಯನ್ನು ಮುಟ್ಟು: ಅವಿನಾಣಮನಿತುಮೆರ್ದೆವುಗೆ ಕಿವಿವುಗೆ ಪಂಡಿತೆಗೆ ನುಡಿದ ನಲ್ಲನ ನುಡಿ ತಳ್ತವಿರಳ ರೋಮಾಂಚ . . . ಪೋಲ್ತಳ್ (ಆದಿಪು. ೪–೨೩); ಎನ್ನ ಮನಕ್ಕೆ ಸೋಲಮುಂ ಮಾಡುವಲಂಪಿನಿಂ ಪುಗುವವೋಲೆರ್ದೆವೊಕ್ಕನ ಗಿಂದು ಶೈತ್ಯಮಂ ಮಾಡಿದಳೀಕೆ (ಜಗವಿ. ೧೧–೯೩); ಪುರುಳುಂ ಲಕ್ಕಣಮುಂ ಮೆಯ್ಸಿರಿಯುಂ . . . ತಳ್ತಿಸೆವ ರನ್ನ ದಂತೆರ್ದೆವುಗದೇ (ಕಬ್ಬಕಾ. ೬). [ಎರ್ದೆ + ಪುಗು₁ (< ಪೊಗು₁)]

**ಎರ್ದೆವೆಣೆ** (ನಾ). ಎದೆಯ ಬೆಣೆ, —ಗೂಟ: ಬಿಲ್ದಿರುವಿಂದುಗುಳ್ಚಿದಂ ಕಣೆಗಳಂ ವೈರಿಮೋಹರದ ತಲೆವೊಣೆಗಳಂ ಪಗೆಗಳೆರ್ದೆವೆಣೆ [ಪಾಠಾಂ. ಣಿ] ಗಳಂ ರವಿಗೆಣೆಗಳಂ ಕ್ಷಣದೊಳು (ಜೈಮಿಭಾ. ೨೧–೧೮). [ಎರ್ದೆ + ಪೆಣೆ]

**ಎರ್ದೆವೇೞ್** (ಕ್ರಿ). ಹೃದಯವನ್ನು ಬಿಚ್ಚಿಹೇಳು; ಮನಸ್ಸನ್ನು ತೆರೆದು ಮಾತಾಡು: ನುಡಿವೊಡೆ ಲಲ್ಲೆಯೆಂಗುಮೆರ್ದೆವೇೞ್ದೊಡೆ ಕೈತವಮೆಂಗುಂ (ಆದಿಪು. ೧೨–೩೩). [ಎರ್ದೆ + ಪೇೞ್]

**ಎರ್ಪತ್ತು** 'ಎಪ್ಪತ್ತು' ನೋ.

**ಎರ್ಪು** (ನಾ). (?): ಇರ್ಪುಂ ತೋರ್ಪುಂ ಕೆರ್ಪುಂ ನೆರ್ಪುಂ ಪೆರ್ಪೆಯುಮುಡರ್ಪುಮಾರ್ಪುಂ ಕೂರ್ಪುಂ ಪೆರ್ಪರಿಕೆಯುಮೆರ್ಪುಂ [ಪಾಠಾಂ. ಇರ್ಪುಂ] ಮೆಯ್ಗರ್ಪುಂ ಮೊದಲಾಗಿ ರೇಫಸಂಯೋಗಂಗಳ್ (ಶಮದ. ೩೯). [?]

**ಎರ್ಬಟ್ಟಿಸು** (ಕ್ರಿ). ಬೆನ್ನಟ್ಟುವಂತೆ ಮಾಡು; ಹಿಂಬಾಲಿಸುವಂತೆ ಮಾಡು: ಅರಿಭೂಪಾಳೋಗ್ರವೀರಪ್ರಮುಖಮುನಿರದಾಟಂದಪಂ ಕೊಂದಪಂ ಮತ್ಸರದಿಂದೆರ್ಬಟ್ಟಿಪಂ ಮುಟ್ಟಿಪಂ (ಎಕ. VIII, ಸಾಗರ. ೧೧೯–೨೪; 1042). [ಎರ್ಬಟ್ಟು (< ಎಬ್ಬಟ್ಟು) + –ಇಸು₃]

**ಎರ್ಬಟ್ಟು** 'ಎಬ್ಬಟ್ಟು' ನೋ.

**ಎರ್ಬು** 'ಎಬ್ಬು' ನೋ.

**ಎರ್ಮಾತಿಟ್ಟಿ** (ನಾ). ಒಬ್ಬಾತನ ಹೆಸರು: ಕೆಱೆಗೊಟ್ಟಂ ಎ[ರ್ಮ್ಮಾ]ತಿಟ್ಟಿಯ[ಧಕಿ]ಸತ್ರಾಂಗಳತ್ತಂ ಒ[ಡೆ]ಗೆಱೆಯ ತೆಙ್ಕಣಂ (ಸೌಇಇ. XI–i, ೯–೩೧; 807). [?]

**ಎರ್ಮೆ, ಎಮ್ಮೆ** (ನಾ). ೧. ಒಂದು ಚತುಷ್ಪಾದ ಪ್ರಾಣಿ; ಮಹಿಷ: ಎತ್ತುಕಱತ್ತೆಯುಂ ಪಶುವುಮೆರ್ಮೆಯುಂ ಕುದುರೆ ನಾಯೊಟ್ಟೆಯುಮುಡುವುಂ (ವಡ್ಡಾರಾ. ೯೭–೫); ಸಜಕ್ಕನೂಱ ಎರ್ಮ್ಮೆ ತುಱು ಪರಿದಟ್ಟಿ ಪುಯ್ಯಲ್ವರಿದು (ಎಕ. IX, ಹೊಸಕೋ. ೧೧–೧೦; 1041); ಅಂಬರಚರ ಪದಮಂ ಕುಡಲಾಂ ಬಯಸಿರೆ ನಟ್ಟನೆರ್ಮೆಕೋಣನನೀಂದತ್ತೆಂಬವೊಲೀ ಮಗನಿರದೆ ತಪಂಬಡಲೆಳಸಿರ್ದನೆಂದು ಬೆಚ್ಚನೆ ಸುಯ್ದಂ (ಪಾರ್ಶ್ವಪು. ೬–೪೪); ಎರ್ಮೆಯ ಪೋರಿಯನಿಕ್ಕಿದನನ್ಯಾರ್ಮಾರಿಗೆ ಮತ್ತಮದನೆ ಮಹಳಕ್ಕಿತ್ತಂ (ಯಶೋಚ. ೩–೫೭). **ಎಮ್ಮೆ**: ೧. ಎನ್ನೆಮ್ಮೆಗಳೆನ್ನ ಪಶುಗಳೆನ್ನ ಪರಿವಾರಂ (ವಡ್ಡಾರಾ. ೧೪೦–೨೧); ಪೊನ್ನೊಳದ ಎಮ್ಮೆ ತುಱುಗಳೂ (ಮೈಆರಿ. ೧೯೩೦; ೧೨–೨; 961); ಕೋಳಿ ತಿಪ್ಪೆಯಂ ಪೊರ್ದಿದಂತೆ ಪಸಿದೆಮ್ಮೆ ಬಳೆದ ಕೆಯ್ಯಂ ಪೊಕ್ಕಂತೆ (ಧರ್ಮಾಮೃ. ೭–೯೫); ಪರಿವತಿಸಾರಂ ಪಿರಿದಾಗಿರೆ ಹೂಲಿಯ ಬೇರ ತ್ತಿಗುಡನೆಮ್ಮೆಯ ಮೊಸರೊಳ್ ಬೆರಸಿಟ್ಟು ಸೈಂಧವಂ ಕೂಡಿರೆ ಮೆಲುವುದು (ಕಲ್ಯಾಕ. ೪–೧೫); ಕಟ್ಟಬೇಕು ಕಾಟದೆಮ್ಮೆ ಅದಱ ಹಯನ ಎಷ್ಟಾದರೂ ಉಣಬೇಕು (ಪುರಂದ. ೨–೫೫ ಪಲ್ಲವಿ); ಎಮ್ಮೆಮೇಲೆ ಮಳೆಗರೆದಹಾಗೆ (ಗಾದೆ). ೨. (ಆಲಂ) ಸೋಮಾರಿ; ಜಡಸ್ವಭಾವದವನು: ಅವನು ಒಬ್ಬ ಎಮ್ಮೆ, ಬೇಗ ಬರುವುದಿಲ್ಲ (ರೂಢಿ). ೩. (ಆಲಂ)ಹಿರಿದು; ದೊಡ್ಡದು. 'ಎಮ್ಮೆಚೇಳು', 'ಎರ್ಮೆಗುಂಡು' ಪರಾ.

[ದೇ. ‖ ತಮಿ. ಎರುಮ್ಮೆ; ಮಲ. ಎರಿಮ, ಎರುಮ; ಕೊಡ. ಎಮ್ಮೆ; ತುಳು. ಎರ್ಮೆ; ತೆಲು. ಎನುಮು]

**ಎರ್ಮೆಕೊಳ್** (ಕ್ರಿ). (ಯುದ್ಧದಲ್ಲಿ)ಎಮ್ಮೆಯನ್ನು ಹಿಡಿ,—ಗ್ರಹಣ ಮಾಡು: ಸ್ವಸ್ತಿಶ್ರೀ ನಾಣ್ಣಿಱೆಯರಾ ಎರ್ಮೆಕೊಳ್ವಲ್ಲಿ ಸತ್ತೊ ನ್ ಕಾ ಸೂ ರ ನ್ (ಎಕ. X (S), ಚಿಂತಾಮ. ೩೪–೪; 8ನೆಯ ಶತ). 'ತುಱುಕೊಳ್' ಪರಾ. [ಎರ್ಮೆ + ಕೊಳ್₁]

**ಎರ್ಮೆಗುಂಡು, ಎಮ್ಮೆಗುಂಡು** (ನಾ). ದೊಡ್ಡ ಬಂಡೆ: ಸಿರಿಮಾರ ಹೊಲವೇರ್ ಎರ್ಮೆಗುಂಡಿನ ಮೂಡಣ ಮೆಯ್ಯ ಕವಿಲೆಯ ಕಲ್ (ಕಇಇ. ೧೨–೭೭–೫೪; 1170). **ಎಮ್ಮೆಗುಂಡು**: ಲಕ್ಕಿಗುಂಡದ ಬಟ್ಟೆಯ ಪಡುವಣ ಪಳ್ಳದೊಳಗಣೆಮ್ಮೆಗುಂಡಿನ ತೆಂಕ ಮೆಯ್ಯ ಲ್ ನಟ್ಟಕಲ್ಲು (ಸೌಇಇ. XX, ೧೪೪–೬೧; 1166); ಸಮಾಧಿಸ್ಥಳವ . . . ತರವಿಡಿದು ಭಿತ್ತಿಯಂ ಕಂಬಂಗಳಂ ಮೇಲೆ ಕವಿವ ಅಱೆಗಲ್ಲ ತರಿಸಿ ಹಿರಿಯದೊಂದೆಮ್ಮೆಗುಂಡದೆ ಅದಱ ಬಾಗಿಲಂ ವಿರಳವಾಗಿರಲೊಳಗೆ ತೋಡಿ (ಸಿದ್ಧರಾ. ೯–೫೫). [ಎರ್ಮೆ + ಗುಂಡು₂]

**ಎರ್ಮೆಯ** (ನಾ). ಒಬ್ಬಾತನ ಹೆಸರು: ಶ್ರೀಎರ್ಮ್ಮೆಯರ ಮಗ ಬೊಲ್ಲ ಗಂಗಗಾಮುಣ್ಡನಿಱಿದು ಬಿಟ್ಟಂ (ಎಕ. X, ಬೌರಿಂಗ್. ೧೩–೪; 890). [?]

**ಎರ್ಮೆಯನೂರು** (ನಾ). ಒಂದು ಊರಿನ ಹೆಸರು: ಪಶ್ಚಿಮತಃ ಎರ್ಮೆಯನೂರು ನಾಮ ಗ್ರಾಮಃ (ಮೈಆರಿ. ೧೯೩೫, ೪೦–೫೯; 951 ?). [ಎರ್ಮೆಯ + ಊರು₃ (< ಊರ್)]

**ಎರ್ಮೆವೋರಿ, ಎಮ್ಮೆವೋರಿ** (ನಾ). ಕೋಣ: ಕರ್ಬುಲಿಯ ಪಿಂಡಿನಂತೆಯುಂ ಸಿಂಗದ ಜಂಗುಳಿಯಂತೆಯುಂ ಜವನೆರ್ಮೆವೋರಿವಿಂಡಿನಂತೆಯುಂ (ಪಂರಾಮಾ. ೪–೫೪ ವ); ಉಭಯಬಲ ಧನುರ್ಧರ ಸೈನ್ಯಂ ಜವನೆರ್ಮೆವೋರಿಗಳ್ ತಾಗುವಂತೆ ತಾಗಿ (ಪಂರಾಮಾ. ೧೩–೫೩); ಆ ಭೀಮಕರ್ಮ್ಮಿಯಾ ಎರ್ಮೆವೋರಿಯ ಮೆಯ್ಯ ರಕ್ಕಸನ ಶಿಖರ ಸಮಕೋಡೆ ರಡನಿರ್ಕೆಯ್ಯಿಲಿಂದಡಸಿ ಪಿಡಿದೊತ್ತಿ ತಿರ್ರನೆ ತಿರುಪ್ಪಿ (ಶ್ರೀರಾಮಾ. ೨೯೭–೩೨೪). **ಎಮ್ಮೆವೋರಿ**: ನಿಚ್ಚಮೊಂದು ಮನೆಯೊಳೆರಡೆಮ್ಮೆವೋರಿಯೊಳ್ ಪೂಡಿದ ಪನ್ನಿರ್ಕಂಡುಗದಕ್ಕಿಯ ಕೂಳುಮ[ನ]ದರ್ಕೆತಕ್ಕ ಪರಿಕರಮುಮನೊರ್ವಮಾನಸಂ ಕೊಂಡು ಪೋಪಂ (ಪಂಪಭಾ. ೩–೨೫ ವ); ಮೂಗುರ್ಚಿದೆಮ್ಮೆವೋರಿಯುಂ ಪೆಱಮೆಟ್ಟಿದ ತಗರುಂ ತಾಗುವಂತೆ (ಶಾಂತಿಪು. ೬–೮೨ ವ); ಡೊಂಬಿನಾಳ್ ಧುರಧರೆಯೊಳ್ ಸಹಸ್ರಮಿದಿರಾದಡಮಂತಕನೆಮ್ಮೆವೋರಿಯಂತಿರೆ ಕೆಡೆವೊಯ್ವಂ (ಮಹಾನೇ. ೧೧–೧೩೭). [ಎರ್ಮೆ + ಪೋರಿ (< ಪೋರಿ)]

**ಎರ್ವಟ್ಟು** 'ಎಬ್ಬಟ್ಟು' ನೋ.

**ಎರ್ವಿಸು** 'ಎಬ್ಬಿಸು' ನೋ.

**ಎರ್ವು** 'ಎಬ್ಬು' ನೋ.

**ಎಲ₁, ಎಲಾ₁** (ಅ). ಆಶ್ಚರ್ಯವನ್ನು ಸೂಚಿಸುವ ಒಂದು ಮಾತು: ಎಲ! ಕಣ್ಣುಮುಚ್ಚಿ ತೆಗೆಯುವುದರೊಳಗಾಗಿ ಮಾಯವಾಗಿಬಿಟ್ಟ (ರೂಢಿ). **ಎಲಾ₁**: ಎಲಾ, ಇವನ! ಏನು ಅಸಾಧ್ಯವಾದ ಕೆಲಸಮಾಡ್ತಾ ಇದ್ದಾನೆ (ರೂಢಿ).

ಎಲಎಲ, ಎಲಾಎಲಾ (ದ್ವಿರುಕ್ತಿ): ಎಲ ಎಲ, ತೆಗೆ ಅದನ್ನು ಹೊರಗೆ (ಗಾಳಿಪ. ೨೩); ಎಲಾಎಲಾ, ಒಳ್ಳೇ ಆಸಾಮಿ ಕಣಯ್ಯ ಇವನು; ಇವನಾಳ ತಿಳಿಯಲಿಕ್ಕೆ ಆಗುವುದಿಲ್ಲ (ರೂಢಿ). [?]

**ಎಲ್ಲ$_2$, ಎಲ್ಲಾ$_2$** (ಅ). ಕೆಳದರ್ಜೆಯವರನ್ನು ಸಂಬೋಧಿಸುವಾಗ ಬಳಸುವ ಒಂದು ಅವ್ಯಯ: ತಡೆತಡೆಲ ಕೆಟ್ಟೋಡದಿರಿ (ಜನಭಾ. ೭೨-೧೧); ಎಲ ರಂಗಾ, ಇಲ್ಲಿ ಬಾ (ರೂಢಿ). **ಎಲ್ಲಾ**: ಜಾಂಬವಂತನು ಅದು ಯಾರೆಲಾ ಎಂದು ಈಚೆಗೆ ಬಂದು ಕೃಷ್ಣನೊಡನೆ ಯುದ್ಧಕ್ಕೆ ನಿಂತನು (ನೀತಿಚಿಂ. XI, ೨೩); ಏನೆಲಾ ನೀಚರಾ, ನಾನು ಸತ್ಯವಾದಿ ಯೆಂದು ನೀವು ಅರಿಯಿರೊ (ನೀತಿಚಿಂ. XI, ೯); ಎಲಾ ಸಿದ್ದ, ಎಲ್ಲಿ ಹೋಗಿದ್ದೆಯೋ (ರೂಢಿ). [?]

**ಎಲಂಚೆ** 'ಎಲಚಿ' ನೋ.

**ಎಲಂಚೆಕೊಂಟೆ** (ನಾ). ಎಲಚಿ ಮರದ ಬಳಿಯಿರುವ ಒಂದು ಕುಂಟೆ: ಈಶಾನ್ಯದ ಕಿಸುವಾಲಿಯಿನ್ದೆ ನಿಸ್ದ ಕಲ್ಲಿನ್ದೆ ಒಟ್ಟಿಯಿನ್ದೆ ಆಗ್ನೇಯದ ಎಲಂಚೆಕೊಣ್ಟೆಯಿನ್ದೆ ಪೂಲಿಕುಣ್ಟೆಯಿನ್ದೆ ಪೆರ್ಬಳದೊಳಗಣ ಚಾದು ಪೊಲದಿನ್ದೆ (ಎಕ. X (S), ಚಿಕ್ಕಬ. ೧೦೬-೭೧; 850).
[ಎಲಂಚೆ + ಕೊಂಟೆ (< ಕುಂಟೆ$_2$)]

**ಎಲಂವಳ್ಳಿ** (ನಾ). ಒಂದು ಊರಿನ ಹೆಸರು: ಮಹಾಜನಮುಂ ಮೋನಿಗೊರವರುಂ ಮೂಲಸ್ಥಾನದ ಮಹಾದೇವರಾಳ್ವೆಲಂವಳ್ಳಿಯ ಶಾಸನಮುಂ (ಎಇ. XII, ೨೦೧-೧೯; 865). ℙ ಈಗಿನ ಮಂತ್ರವಾಡಿ. [?]

**ಎಲಕಾ** (ನಾ). (ಕರಾ) ಒಂದು ಜಾತಿಯ ಮೀನು. [?]

**ಎಲಗುಡಿ** (ನಾ). ವೀಳೆಯದೆಲೆಯ ಬಳ್ಳಿ, —ಕುಡಿ: ಹಲಸು ಮೆಣಸು ಎಲಗುಡಿ ಮಾಲು ಕಬು ಕಲವೆ ಕುಮರಿ ಕೋಹು ಮಕ್ಕೆ ಹಕ್ಕಲು ಕಾಡಾ ರಂಭ ಮುಂತಾದ ಏನುಳ್ಳ ಬೆಳೆಯ ಬಿತ್ತಿ ಬೆಳೆದುಕೊಂಡು (ಮೈ ಆ ರಿ. ೧೯೩೪, ೫೮-೪೭; 1435) [< ಎಲೆ$_1$ + ಕುಡಿ$_2$]

**ಎಲಗೆ** 'ಎಲೆಗೆ$^2$' ನೋ.

**ಎಲಗೇ** 'ಎಲೆಗೆ' ನೋ.

**ಎಲಚಿ, ಎಗಚಿ, ಎಲಂಚೆ, ಎಲಚೆ, ಎಳಚಿ** (ನಾ). ಬೋರೆಮರ; "ಬಾರಿಗಿಡ" (ಉಕ): "ಕರ್ಕನ್ಧು=ಎಲಚಿ" (ನಾಚಿರಾ. ೬); ಮಾವಿನ ಹಣ್ಣು ನೇಱಿಳೆಹಣ್ಣು ಕಳವೆಯ ಹಣ್ಣುಯೆಲಚಿ [ಪಾಠಾಂ. ಚಿ]ಯ ಹಣ್ಣು . . . ಮಧುರೆ ಮಧುವುಂಟು (ಬಸವು. ೧೮-೧೬); ಸಾರಿ ದಡವನು ಬಳಿಕ ವನದೊಳಗಾರಿಸುತಲಂದೆಲಚಿ [ಪಾಠಾಂ. ರದ] ಹಣ್ಣನು ಸೇರಿಸುತ್ತಿಂಗುದಿಯ ಪಿಣ್ಯಾಕವನದರ ಜೊತೆಗೆ (ರಾಮಾಸಂ. ೨-೫-೧೦); ರತ್ನಮ್ಮ ಮಕ್ಕಳ ತಲೆಯ ಮೇಲೆ ಎಲಚಿಹಣ್ಣು ಕಾಸು ಎರೆದರು (ಕೀಲುಗೊಂ. ೧೧). **ಎಗಚಿ**: "ಎಗಚಿಗಿಡ" (ಜಾನಕೋ. ೨೩); (ಮೈಔಗಿ. ೧೧-೧೮೭). **ಎಲಂಚೆ**: 'ಎಲಂಚೆಕೊಂಟೆ' ಪರಾ. **ಎಲಚೆ**: "ದ್ವಿಕಂಟಕಃ— ಎ(ಯ)ಲಚೆ" (ಓಷಧಿ. ೭೬). **ಎಳಚಿ**: "ಕರ್ಕಂಧೂಃ, ಬದರೀ, ಕೋಲೀ, ಘೋಂಟಾ - ೪ ಎಳಚೀಗಿಡದ ಹೆಸರುಗಳು" (ಸಿದ್ಧಾಂತಿ. ೧೦೫); ಒಂದು ದೊಡ್ಡಕಾಡು. ಅಲ್ಲಿ . . . ಹೇರಿಳೆ ಎಳಚಿ ತಪಸಿ ಇಂತಹ ಮರಗಳು ಬೆಳೆದಿದ್ದುವು (ಕಂಕತಿ. ೮೯). [?]

**ಎಲಚೆ** 'ಎಲಚಿ' ನೋ.

**ಎಲಡಿಕೆ** 'ಎಲೆಯಡಕೆ' ನೋ.

**ಎಲತ್ತಿಕೆ** (ನಾ). ಒಂದು ಗಿಡದ ಹೆಸರು: "ಹಕ್ಕಳಿ [ಪಾಠಾಂ. ಹಕ್ಕಳ] ಯೆಲತ್ತಿಕೆಯೆನಿಕ್ಕು" (ಮಂಗರಾ. ೩೩-೮). [?]

**ಎಲಮ** 'ಎಲಮೆ' ನೋ.

**ಎಲಮುಗಿಲು** (ನಾ). ಒಂದು ಬಗೆಯ ಸಸ್ಯ: ದಾಸಾಳ ಹೂವು, ದಾಳಿಂಬ, ರಸಾಂಜನ, ಎಲಮುಗಿಲು, ಮುಟ್ಟಿದರೆ ಮುರುಟ . . . ಇವನ್ನು ಚೂರ್ಣಮಾಡಿ . . . ನೆತ್ತರು ಹೊಟ್ಟೆಬೇನೆ ಶಾಂತ (ವಿವೈವಿ. ೨೩). [?]

**ಎಲಮೆ, ಎಲಮ, ಎಲಮೇ** (ಅ). ಸ್ಮರಣ, ವಿಚಾರ, ಆಮಂತ್ರಣಗಳಲ್ಲಿ ಬಳಸುವ ಒಂದು ನಿಪಾತಾವ್ಯಯ: "ಎಲೆ, ಎಲೇ, ಎಲಮೆ, ಎಲಮೇ – ಸ್ಮರಣ ವಿಚಾರಾಮಂತ್ರಣೇಷು" (ಶಬ್ದಾನು. ೨೧ ವ್ಯಾಖ್ಯಾ). **ಎಲಮ**: ಅಂಜದಿರ್ಬಡವಾಗದಿರ್ ಚಿಂತಿಸದಿರೆಲಮ ಸಂಜೆಯಾದೊಡೆ ಯಿರಿಸಿ ಪೋಗೆ ನಿನ್ನೆಲಮೆಲಮ ಎಂದು ಕುಣಿದಾಡುತುಂ (ಕಣ್ಣರ. ೫-೨). **ಎಲಮೇ**: ಮೇಲಿನ 'ಶಬ್ದಾನು ೨೧ ವಾಖ್ಯಾನ'ದ ಪ್ರಯೋಗವನ್ನು ನೋಡಿ. [?]

**ಎಲಮೇ** 'ಎಲಮೆ' ನೋ.

**ಎಲರ್, ಎರಲ್, ಎರಲು, ಎಲರು** (ನಾ). ಗಾಳಿ; ವಾಯು: "ಕಂಪುವಳಂ, ಎರಲ್, ಮಿಗದೇರಂ, ಎಲರ್, ಗಾಳಿ—ಈ ೫ ವಾಯುವ ಪೆಸರ್" (ಕಶಸಾ. ೪-೩೮); ಊದುವ ತಂಬೆಲರಿಂ ಬಿಡಂಗುವೆತ್ತು (ಎಇ. XIII, ೩೩೧-೨೮; 929); ಕೋಗಿಲೆಯುಕ್ಕೆಲರಕ್ಕೆ ತುಂಬಿಯಕ್ಕರ ಗಿಳಿಯಕ್ಕೆ ಬಂದೊಡಮೊಱಲ್ದೆರ್ದೆಯಾಱುವರ್ (ಆದಿಪು. ೩-೮೬); ಅರವಿಂದೋತ್ಪಲ ಮಲ್ಲಿಕಾಪ್ರಸವ ಸೌರಭ್ಯಂಗಳಂ ಪೇಱಿ ಬರ್ಪೆಲರುಂ ನಿರ್ಭರಭಕ್ತಿಯಿಂದಮಿದಿರ್ವರ್ಪಂತಾಯ್ತು (ಸುಕುಮಾ. ೪-೪೪); ಎಲರ ಮೈಸೋಂಕಿಂದ ತುಂಬಿ ಕೋಗಿಲೆಯ ಗಿಳಿಗಳ ಮೃದುಧ್ವನಿಯ ಕೇಳುವೆಯಿಂದ (ಸೌಂದಪು. ೧೦-೯೧). **ಎರಲ್**: "ಕಂಪುವಳಂ ಮಿಗದೇರಂ ತಾಂ ಪರಿಕಿಸಲೆಲರು ಗಾಳಿಯೆರಲನಿಲನೆನಲ್" (ಕವಿಕಂ. ೩೮); "ಕಂಪುವುಳ ಗಾಳಿ ಮಿಗದೇರಯಲರೆರಲೆನಲ್ಕನಿಲನು" (ಶಬ್ದಮಂ. ೧೪); ಮಱೆದು ಮಲಗಿದ ಸೂತನನು ನಾಲ್ಕೆರಡು ಗಳಿಗೆಯು ಬೀಸಿ ಮೂಗಿನೊಳೆರಲ ಕಂಡನು ಪಾರ್ಥ (ಕುವ್ಯಾವಿ. ೮-೫೫). **ಎರಲು**: ಎರಲು ಸುಳಿದುದು ದೀಪಶಿಖಿ ಪರಿಹರಿಸಿದತಿ ಬಲದಬ್ಬರದ ನಿಷ್ಠುರತೆಗಂಜದೆ ಮಾಣದೆನೆ (ಕುವ್ಯಾಕ. ೮-೧೪). **ಎಲರು**: ದಕ್ಷಿಣ ದಿಶಾಂತದೊಳಗೆಲರು ತಣ್ಣನೆ ತೀಡೆ (ಭಾವಚಿಂ. ೪-೧೬); ಬಳಲಿಬಂದಾ ಲತೆವನೆಯೊಳುಜ್ಜಳಿಪ ನಲ್ಲರನಪ್ಪಿ ನಂದನದೊಳಗೆ ಸುಳಿದಾಡುವುದು ಬಾಳಕನಂದದೊಂದೆಲರು (ಸಾಳ್ವಭಾ. ೨-೫); ಆವುದೆಲರಿನ ನಿಲ್ಲದಲೆತಕ್ಕೆ ಗಡು ಸೀಮೆ (ಮಂಕುಕ. ೯೦). [?]

**ಎಲರಣುಗ** (ನಾ). "ವಾಯುಪುತ್ರ, ಹನುಮಂತ" (ಪ್ರಭಣ್ಣ).
[ಎಲರ್ + ಅಣುಗ (< ಅಣುಂಗ)]

**ಎಲರು** 'ಎಲರ್' ನೋ.

**ಎಲರುಣಿ, ಎರಲುಣಿ** (ನಾ). ವಾಯುವನ್ನು ಆಹಾರವಾಗುಳ್ಳದ್ದು; ಹಾವು; ಸರ್ಪ: "ಭುಜಂಗಕ್ಕೆಲರುಣಿ" (ಕವಿಕಂ. ೨೬೫); ಎಲರುಣಿಗಳ್ ಕಿನ್ನಾಡ ಬಿಲಂಬೊಕ್ಕವು (ಜಯಕಾ. ೭-೪೧); ಪರಿದೀಂಟಲ್ಕುರವಣಿಸುವ ಸಿರಿದೋಳೆಲರುಣಿಯ ನೀಳ್ದ ನಾಲಗೆಯುಕ್ಕುಂ (ಅಪ್ರತಿ. ೪೭-೨); ಎಲರುಣಿಯ ಪಾಸಿನೊಳ್ (ಶೇಷರಾ. ೨೧೪-೨೨). **ಎರಲುಣಿ**: "ಹಾವು" (ಪ್ರಭಣ್ಣ). [ಎಲರ್ + -ಉಣಿ]

**ಎಲರುಣಿಗ, ಎರಲುಣಿಗ** (ನಾ). = ಎಲರುಣಿ: ಎಲರುಣಿಗಳರಸ ಪೂವಡಿಗನೋಲ್ವಾಗ್ಬಲ (ಪ್ರಭುಪು. ೪-೬). **ಎರಲುಣಿಗ**: ಎರಲುಣಿಗನಲ್ಲಿ ನಿರ್ವಿಷವ ಕಂಬಳಿಯಲ್ಲಿ ಕುರುಲ ಶ್ವಪಚಾಧಮನೊಳತ್ಯಂತ ಶುಚಿಯ (ಮದೇಪು. ೨೯-೯). [ಎಲರ್ + -ಉಣಿಗ]

**ಎಲರುಣಿವಕ್ಕೆಗ** 'ಎಲರುಣಿವಟ್ಕೆಗ' ನೋ.

**ಎಲರುಣಿವಗೆಯ** (ನಾ). ಹಾವುಗಳ ಶತ್ರು; ಗರುಡ: "ಪಕ್ಕಿಗಳಾಣ್ಮಂ, ಎಲರುಣಿವಗೆಯಂ, ಪರ್ದು—ಈ ೩ ಗರುತ್ಮಂಗೆ ಪೆಸರ್" (ಕಶಸಾ. ೨-೧೨). "ಗರುಡಂಗೆಯೆಲರುಣಿವಗೆಯ ಪರ್ದುಪಕ್ಕಿಗಳರಸಂ" (ಶಬ್ದಮಂ. ೭). [ಎಲರುಣಿ + ಪಗೆ + -ಅ$_7$]

**ಎಲರುಣಿವಚ್ಚ** (ನಾ). ಹಾವನ್ನೇ ಆಭರಣವಾಗುಳ್ಳವನು; "ಸರ್ಪಭೂಷಣ; ಶಿವ" (ಪ್ರಭಣ್ಣ). [ಎಲರುಣಿ + ಪಚ್ಚ + -ಅ$_7$]

**ಎಲರುಣಿವಸಿಜ** (ನಾ). ಹಾವನ್ನು ಹೊಟ್ಟೆಯ ಸುತ್ತಲೂ ಸುತ್ತಿಕೊಂಡಿರುವವನು; ಗಣಪತಿ : "ಬಿಜ್ಜವಳನೆಡರ್ಗೇಡಿ ಮೇಣೆಲರುಣಿವಸಿಜನು ... ವಿನಾಯಕನ ನಾಮಂ" (ಕಬ್ಬಕೈ. ೫); ಎಲರುಣಿವಸಿಜ ನೆಡರ್ಗೇಡಿ ... ಸುಂಡಿಲವೊಗಂ ... ಕರಿಮೊಗನೆನಿಕ್ಕುಂ" (ಶಬ್ದಮಂ. ೫).
[ಎಲರುಣಿ + ಬಸಿಜ಼್ + -ಅ₇]

**ಎಲರುಣಿವಟ್ಕೆಗ**, ಎರಲುಣಿವಕ್ಕೆಗ, ಎಲರುಣಿವಕ್ಕೆಗ (ನಾ). ಹಾವನ್ನೇ ಹಾಸಿಗೆಯಾಗುಳ್ಳವನು; ಸರ್ಪಶಯನ; ವಿಷ್ಣು: "ಎಲರುಣಿವಟ್ಕೆಗ ಪಾಱುಂಬಳಿಗ್ಗೆಯಂ ಪರ್ದುದೇರನಕ್ಕುಂ" (ಕವಿಕಂ. ೨೫). **ಎರಲುಣಿವಕ್ಕೆಗ** : "ಸ ರ್ಪ ಶಾ ಯಿ, ವಿಷ್ಣು" (ಪ್ರಭಣ್ಣ). **ಎಲರುಣಿವಕ್ಕೆಗ** : "ಎಲರುಣಿವಕ್ಕೆಗಂ ಪರ್ದುದೇರನಿಂಗಡಲಳಿಯಂ ... ಉಪೇಂದ್ರನ ನಾಮಂ" (ಕಬ್ಬಕೈ. ೭); ಎಲರುಣಿವಕ್ಕೆಗನಪ್ಪಲರ್ವ[ರ್ಪೊ]ಕ್ಕಳನಂ ಪೂಜಿಸಿ ನಮಸ್ಕರಿಸಿ (ಮರಾಜ. ೬-೮೮ ವ).
[ಎಲರುಣಿ + ಪಟ್ಕೆ + -ಗ₃]

**ಎಲರುಣಿವೆದೆಯ**, ಎರಲುಣಿವೆದೆಯ (ನಾ). ಹಾವನ್ನು ಬಿಲ್ಲಿನ ಹಗ್ಗವನ್ನಾಗಿ ಉಳ್ಳವನು; ಶಿವ : "ಎಲರುಣಿವೆದೆಯಂ ಚಳಿವೆಟ್ಟಳಿಯಂ" (ಕ ವಿ ಕ ಂ. ೧೫); "ಎಲರುಣಿವೆದೆಯ ಬಾಣ್ಣವಿರ ಗೊಂದೆವಟ ವಿಗೆಯ" (ಶಬ್ದಮಂ. ೩); ಎಲರುಣಿವೆದೆಯಂ ಬೀರಂ, ಬಿಗುರ್ವರಿಜಂ ... ಮುಂತಪ್ಪ ಭೂತವೇತಾಳಂಗಳ ಮರುಳ್ವಡೆವೆರಸು (ರಾಮಾಶ್ವ. ೧೩೧-೧೬). **ಎರಲುಣಿವೆದೆಯ** : "ಶಿವ" (ಪ್ರಭಣ್ಣ).
[ಎಲರುಣಿ + ಪೆದೆ + -ಅ₇]

**ಎಲರ್ಗೆಳೆಯ**, ಎರಲ್ಗೆಳೆಯ (ನಾ). ಗಾಳಿಯ ಗೆಳೆಯ; ಬೆಂಕಿ; ಅಗ್ನಿ: "ಮರಗೂಟಂ ... ಎಲರ್ಗೆಳೆಯಂ - ಈ ೧೩ ಅಗ್ನಿ" (ಕಶಸಾ. ೩-೩೩); "ಎಲರ್ಗೆಳೆಯಂ ... ಮರಗೂಟಂ... ಅಗ್ನಿಯಭಿಧಾನಂಗಳ್" (ಕವಿಕಂ. ೩೪); "ಇಂ ಗ ಳ ನೆ ಲ ರ್ಗೆ ಳೆ ಯ ಪೊಗೆವಟವಿಗೆಯನಗ್ಗಿ" (ಕಬ್ಬಕೈ. ೨೦). **ಎರಲ್ಗೆಳೆಯ** : ಮೆಲ್ಗಾಡಿಯಿಂ ತಳೆದೆರಲ್ಗೆಳೆಯ ಕಯ್ಯಿಂ ಕೊರಲ್ಗಪ್ಪಿನಿಂ ಸಲ್ವ ... ನಿರಂಜನನ (ಪಾರ್ಸ್ವಪು. ೩-೧).
[ಎಲರ್ + ಗೆಳೆಯ]

**ಎಲರ್ಚು** (ಕ್ರಿ). ಚೇತನಗೊಳ್ಳು; ಚೈತನ್ಯವನ್ನು ಪಡೆ : "ಎಲರ್ಚು- ಚೇತನಕರಣೇ" (ಶಮಧಾ); ಮಗುಬ್ದಾ ಸತಿಯಿಕ್ಕಿದ ಕಣ್ಣನೀರ ಧಾರೆಗಳೊಳೆ ನಾಂದೆಲರ್ಚಿ ಪೊದಳ್ದೊರ್ಮೆಯೆ ಪಾಱಿದುವುನ್ಮದಾಳಿಗಳ್ (ಪಂಪಭಾ. ೫-೧೦); ಪಣ್ಣನೆ ತೊಟಲ್ದು ತೀಡುವ ತಣ್ಣೆಲರೊಳೆಲರ್ಚಿ ವನಚರವ್ರಜಮದಱೊಳ್ ತಣ್ಣನೆ ತಣಿದಿರೆ ಬನದೊಳ್ ಪಣ್ಣನೆ ತಿನುತಿರ್ದುವೆಳಸಿ ತರುಚರಕುಳಮುಂ (ಕಾವ್ಯಾವ. ೨೨೨).
[ಎಲರ್ + -ಚು₁./ ತಮಿ. ಇಲಿರ್, ಚಿಲಿರ್=ರೋಮಾಂಚಗೊಳ್ಳು; ತೆಲು. ಎಲರುಚು = ಮೇಲೇಳು]

**ಎಲರ್ಪಟ** (ನಾ). ಗಾಳಿಪಟ: ಆಗಸಕಡರ್ವರಗಿಳಿಗಳನಾಗಲ್ಪಿಟ್ಟಸಲ ದೊರ್ವಳಕ್ಷಿದ್ಯುಕ್ತಿ ಮೇಣ್ತಾಗೆ ವನಲಕ್ಷ್ಮಿಯಾಡಿಪ ಜಾಗದೆಲರ್ಪಟದ ರಾಗಮೆನೆ ಸೊಗಯಿಸುಗುಂ (ಉದ್ಭಟ. ೩-೨೪). [ಎಲರ್ + ಪಟ₂]

**ಎಲರ್ವಟ್ಟೆ**, ಎರಲ್ವಟ್ಟೆ (ನಾ). ವಾಯುಮಾರ್ಗ; ಆಕಾಶ: "ಎಲರ್ವಟ್ಟೆ ನಭೋಂಗಣಂ" (ಕರ್ಣಾನಿ. ೧೦); "ಪೆಸರಪ್ಪುದಂಬರಕೆ ಬಾನೆ [ಪಾಠಾಂ. ನ]ಲರ್ವಟ್ಟೆ" (ಶ ಬ್ದ ಮ ಂ. ೧೫); ಸುದತೀಮಣಿಯನಗಲಿ ಯೆಲರ್ವಟ್ಟೆಗೆ ವಿದಿತಯಶಸ್ಕಾಂತಂ ತವಕದಿ ಪಾಱಿದಂ (ಜಯಕಾ. ೪-೨೪); ಎಲರ್ವಟ್ಟೆಯನಡರ್ದು (ರೇವಣ. ೭೩-೫೭). ಛಳಿರೆ ಛಲಛಲರೆಂದೆಲರ್ವಟ್ಟೆಯವರೂ (ಚಂಪ್ರಸಾಂ. ೮-೪೩); **ಎರಲ್ವಟ್ಟೆ** : "ಆಗಸಂ, ಮಿಂಬಟ್ಟೆ, ಎರಲ್ವಟ್ಟೆ. . .ಬಾನ್-ಈ ೬ ಆಕಾಶಂ" (ಕಶಸಾ. ೪-೪೧).
[ಎಲರ್ + ಬಟ್ಟೆ₁]

**ಎಲರ್ವಟ್ಟೆಗ** (ನಾ). ವಾಯುಮಾರ್ಗದಲ್ಲಿ ಸಂಚರಿಸುವವನು; ಖಚರ (ಕಿ). [ಎಲರ್ವಟ್ಟೆ + -ಗ₃]

**ಎಲರ್ವಟ್ಟೆವಾವು**, ಎರಲ್ವಟ್ಟೆವಾವು (ನಾ). ಆಕಾಶದ ಹಾವು; ರಾಹು : "ಎಲ[ಪಾಠಾಂ. ಅಲ]ರ್ವಟ್ಟೆವಾವೆನೆ ರಾಹು" (ಶಬ್ದಮಂ. ೧೮). **ಎರಲ್ವಟ್ಟೆವಾವು** : "ರಾಹು" (ಪ್ರಭಣ್ಣ). [ಎಲರ್ವಟ್ಟೆ + ಪಾವು₁]

**ಎಲರ್ಪೊಯ್ಲು** (ನಾ). ಗಾಳಿಯ ಹೊಡೆತ: ಎಲರ್ಪೊಯ್ಲಿಂಪೊಸ ವಿರ್ಕಿಸ್ಸಿಕಾಂಡ ರಸದಿಂ [ನಾಂ]ದು (ವರ್ಧಪು. ೧-೪೩); ಎಲರ್ಪೊಯ್ಲಿಂದ ಮಲ್ಲೊಕ್ಕ ನವ್ಯಾಮಳ ಪುಷ್ಪಂಗಳ್ (ಕುಸುಮಾ. ೧-೧೦೩); ಎಲರ್ಪೊಯ್ಲ ನಾಂತ ತಾವರೆಯೆಲೆವೋಲ್ (ಕಬ್ಬಕಾ. ೨೯೯). [ಎಲರ್ + ಪೊಯ್ಲು]

**ಎಲವ**, ಎಲವು₁ (ನಾ). ಬೂರುಗದ ಮರ; ಶಾಲ್ಮಲೀವೃಕ್ಷ; ದೂದಿ ಮರ: "ಎಲವಂ ಸ್ಥಿರಾಯು ತಾಂ ಶಾಲ್ಮಲಿಯೆನಿಕ್ಕು" (ವಸ್ತುಕೋ. ೩೩-೨); ಬೆಳಲ್ಗಲವಂಗಮೆಲವಂ ಬಳ್ಳಾಲೆರಂ ಬಿಕ್ಕೆ (ಕಾವ್ಯಸಾ. ೧೦೯೦ ಶೂದ್ರಕ); ಮಧುಕರಿ ನವಾಮ್ರದೊಳ್ ಪಾಯ್ದುಮೆಲವದೊಳ್ ಪಾಯ್ದಪುದೇ (ಶಾಂತಿಪು. ೫-೧೫೬); ಸುರತರುವ ಬಿಟ್ಟು ಎಲವದ ಮರಕ್ಕೆ ನೀರೆನೆಱೆವಂತೆ (ಸಿದ್ಧೇವ. ೩೯೬); ಕಡಿದರೋ ಸುರತರುವನೆಲವದ ಮಿಡಿಯ ಬಯಕೆಗೆ (ತೊರರಾ. ೪-೫-೧೧). **ಎಲವು₁** : ಅಲರೆ ಮೇರೆ ದುವಟ್ಟಗೆ ನಿಱುಕಲ್ಲುಕೊವಳ್ಳದಾ ಪಿರಿಯ ಎಲವು ಅಲ್ಲಿಂ ಕುಡಿತ್ತು (ಎಕ. II, ೩೫-೬; 800); ದೇಗುಲಕ್ಕೆ ಕೊಟ್ಟೂದೂರ ಪೊಲಮೇರೆ ಮೂಡ್ಯೆದೆಸೆ ಎಲವೆ ಕಿಱುವಜ್ಜಕೆರ್ಱೆ ಎ ತೆಂಕಾ ಅದರುಳ್ಳಡುಗಲ್ಲೆ (ಎಕ. X (S). ಚಿಕ್ಕಬ. ೧೦೭-೬೩; 350).

ಎಲವದಮೇಣ, ಎಲವದಹಗಿನು = ಬೂರುಗದ ಮೇಣ : "ಪಿಚ್ಛಾ, ಶಾಲ್ಮಲೀವೇಷ್ಟಃ-೨ ಬೂರುಗಬಂಕೆ ಹೆಸರು, ಎಲವದಮೇಣ" (ಸಿದ್ಧಾಂತಿ. ೧೦೭); "ಮೋಚನಿರ್ಯಾಸಃ - ಎಲವದ ಹಗಿನು" (ಓಷಧಿ. ೧೩೦).
[ದೇ. II ತಮಿ. ಇಲವ, ಇಲವು; ಮಲ. ಇಲಿವ, ಇಲವು]

**ಎಲವರ** (ನಾ). ಒಂದು ಊರಿನ ಹೆಸರು : ಎಲವರದ ಕಥವ ಬೂರ ಮಾಯಗಾವುಣ್ಡರ ಮಗ (ಎಕ. X, ಮುಳಬಾ. ೨೫೬-೫; 1000). [?]

**ಎಲವರಿಗೆ** (ನಾ). ಒಂದು ಮೂಲಿಕೆ : ಸೂಷಾ (ಎಲವರಿಗೆ) . . . ಇವು ತ್ರಿದೋಷನಾಶಕ (ಅಷ್ಟಾಂಗ. ೧೩೩). [?]

**ಎಲವಸ್ತ್ರ** 'ಎಲೆವಸ್ತ್ರ' ನೋ.

**ಎಲವು₁** 'ಎಲವ' ನೋ.

**ಎಲವು₂** 'ಎಲ್ವು' ನೋ.

**ಎಲವೊ**, ಎಲವೋ (ಅ). ಕೋಪ ಅಥವಾ ತಿರಸ್ಕಾರದಿಂದ ಕೂಡಿ ಇತರರೊಡನೆ ಮಾತನಾಡುವಾಗ ಬಳಸುವ ಸಂಬೋಧನಾರ್ಥಕ ಅವ್ಯಯ : ನೆನೆಯೆಲವೊ ಗೋವುಗಾದುದು ಪುಸಿಯೇ (ಪಂಪಭಾ. ೬-೫೬); ಪೆಱರಂ ಪೊಗಟ್ಟಪೆಯೆಮ್ಮಂ ಕಿಱಿಯಂ ಮಾಡಿದಪೆಯೆಲವೊ ಸಂಜಯ (ಗದಾಯು. ೩-೫೬); ಪೊಂಗಿ ಜಱಿವುತ್ತೆಲವೊ ಸಾಕ್ಷಾತ್ ಲಿಂಗವಲ್ಲದೆ ಬಳ್ಳವೇ ಅದು (ಬಸವು. ೯-೧೦); ಎಲವೊ ಕೌರವ . . . ಆಳವನಱಿಯದೆ ಅಧಮ ರಥಿಕರ ಕೂಡೆ ತೊಡಕುವರೆ (ಕುವ್ಯಾದ್ರೋ. ೯. ೫-೪೨). **ಎಲವೋ** : ಎಲವೋ ಮ್ಲೇಚ್ಛರುಗಳಿರಾ ಬ್ರಾಹ್ಮಣೋತ್ತಮರಪ್ಪ ನಾವೊಂದು ಪಾಪ ನಿವಾರಣಾರ್ಥ ಮಾಗಿ ಗೋವಿನ ಜಠರಂ ಪೊಕ್ಕಿರ್ದೆವು (ಪಂಚತಂ. ೧೯-೧೪); ಅಯ್ಯಾ ಎಂದಡೆ ಸ್ವರ್ಗ ಎಲವೋ [ಪಾಠಾಂ. ಲೊ] ಎಂದಡೆ ನರಕ (ಬಸವ. ೨೪೦); ಶಿಶುತನದ ಸಾಮರ್ಥ್ಯ ಸಾಕಿನ್ನೆಸದಿರೆಲವೋ ಮರಳು (ಕುವ್ಯಾದ್ರೋ. ೬-೮).

ಎಲವೆಲವೊ, ಎಲವೆಲವೋ (ದ್ವಿರುಕ್ತಿ) : ಫಡಫಡೆಲವೆಲವೊ ತೊಲತೊಲಗೆನುತ ರೋಷದಿಂ ಘುಡಿಘುಡಿಸಿ (ಜೈಮಿಭಾ. ೧೨-೩೪); ಎಲವೆಲವೋ ರಜಕಾ ನಿಲ್ಲೆಲೊ (ಜಗನಿ. ೬-೪). [?]

ಎಲವೋ 'ಎಲವೊ' ನೋ.

ಎಲಸೆ (ನಾ). ಒಂದು ಊರಿನ ಹೆಸರು : ಎಲಸೆಯ ಮಹಾಜನಕ್ಕೆ ಕೊಟ್ಟ (ಮೈಆರಿ. ೧೯೨೯, ೬೮–೧೨ ; 964) ; ಅರಸನೆಲಸೆಯೊಳಿಪ್ಪತ್ತುನಾಲ್ಕು ಹೇರ ದ್ರಮ್ಮಮನಲ್ಲಿಯ ಮಹಾಜನದ ಕಾಲಂ ಕಚ್ಚಿ ಬಿಟ್ಟ (ಎಕ. VIII, ಸೊರಬ. ೪೭೯–೭ ; 991). [?]

ಎಲಹುರಿ, ಎರವುರಿ, ಎಲೆವುಲಿ, ಎಲೆಹುರಿ, ಎಲೆಹುಲಿ (ನಾ). ಒಂದು ಗಿಡದ ಹೆಸರು : "ಎಲಹುರಿಯ ಕರ್ಕಶಂ ಕತಕವಕ್ಕುಂ" (ಮಂಗರಾ. ೪೦–೩೧) ; "ಕಾ(ಸಾ)ಸರಿ, ಕಾಸಮರ್ದ – ಈ ಯೆರಡುಂ ಎಲಹುರಿ" (ಓಷಧಿ. ೨೯) ; ಬೆರಸೆಲವದ ಹಗಿನೆಲಹುರಿಯಿರವಂತಿಗೆಯೆಂಬಿವಂ ಲಸದ್ದುಗ್ಧದೊಳಂ . . . ವಿಷಮುಡುಗುಂ (ಖಮದ. ೫–೮೮) ; ಎಲಹುರಿ, ಗಜಹಿಪ್ಪಲಿ . . . ಇಷ್ಟನು ಕಷಾಯದಲ್ಲಿ ಹಾಕಿ ಕಾಸಿ ಪಾನಮಾಡಲು ಶ್ವಾಸಕಾಸ . . . ಪರಿಹರ (ವೈದ್ಯಸಾ. I, 130). **ಎರವುರಿ** : ಎರವುರಿಯಂ ಮೂಱುದಿನಂಬರೆಗಂ ಕೇಳ್ ಕಱಿಯಲಿಕ್ಕಿ ಜವೆ ತಿಲಮುರ್ದಿಂಗರಿಸಿನ ಮೆಂಬಿವನಿಂಬಾಗರೆದಿಕ್ಕ (ಲೋಕೋಪ. ೮–೧೬). **ಎಲೆವುಲಿ** : ಬರಿವದಣೆ ಲೊಕ್ಕಯೆಲೆವುಲಿಯರಸಾಡುಳಿಯಮುರ್ದುವಳ್ಳಿಯೆಂಬಿವರೊಳಗಂ ದೊರೆಕೊಂಡುದೊಂದನಾಜ್ಯದೆ ಕರಿದಲ್ಲದೊಡುಪ್ಪುವೆರಸಿ ತಿನೆ ಖಾಸಹರಂ (ಲೋಕೋಪ. ೯–೯೫). **ಎಲೆಹುರಿ** : "ಉನ್ಮಾದಘ್ನೀ–ಕರಿಯ ಹಿಟ್ಟಳಿಕೆ, ಎಲೆಹುರಿ, ಇಲಿ" (ಓಷಧಿ. ೧೬). **ಎಲೆಹುಲಿ** : ಒಪ್ಪುವ ಕೊಳುಗುಳಿಕೆ ಯೆಲೆಹುಲಿ (ರಿ) ಯ ತನಿರಸಮಂ ತಪ್ಪದೆ ಮರ್ದಿಸಿ ತನುವಿಂಗಪ್ಪಣೆಯಾ ದಂತೆ ಕೊಳಲಖಿಳ ಕೃತ್ರಿಮಮುಡುಗುಂ (ಖಮದ. ೧೪–೬೧).

[< ಎಲೆ + ಹುರಿ$_2$]

ಎಲಾ$_1$ 'ಎಲ$_1$' ನೋ.

ಎಲಾ$_2$ 'ಎಲ$_2$' ನೋ.

ಎಲಿ (ನಾ). ಹೆಗ್ಗಣ ಮುಂತಾದ ಪ್ರಾಣಿಗಳ ಜಾತಿಗೆ ಸೇರಿದ ಒಂದು ಸಣ್ಣ ಪ್ರಾಣಿ (ಕಿ). 'ಇಲಿ$_1$' ಪರಾ.

[ದೇ. ‖ ತಮಿ. ಮಲ. ಕೊಡ. ಎಲಿ ; ತುಳು. ಇಲಿ, ಎಲಿ ; ತೆಲು. ಎಲಿಕ, ಎಲುಕ ; ಕೋಲಾ. ನಾಯ್ಕಿ. ಎಲ್ಕ ; ಪರ್ಜಿ. ಎಲ್ ; ಗೊಂಡಿ. ಅಲ್ಲೀ, ಎಲ್ಲಿ ; ಬ್ರಾಹೂಈ. ಹಲ್]

ಎಲಿಬಾಲ (ನಾ). ಇಲಿಯ ಬಾಲದ ಆಕಾರಕ್ಕೆ ಬಟ್ಟೆಯೊಂದನ್ನು ಹೊಸೆದುಕಟ್ಟಿ ಅದನ್ನು ಕಾಲಿಂದ ಚಿಮ್ಮಿಸಿ ಎರಡು ಪಕ್ಷದವರು ಆಡುವ ಒಂದು ಆಟ : (ಸ್ಯಾಂಡರ್). [ಎಲಿ+ ಬಾಲ]

ಎಲಿಯಾಲ (ನಾ). ಒಂದು ಬಗೆಯ ಗಿಡ : "ಚಿತ್ರಾ, ಉಪಚಿತ್ರಾ . . . ಎಲಿಯಾಲದ ಮರಕ್ಕೆ ಹೆಸರು" (ಸಿದ್ಧಾಂತಿ. ೧೧೬). 'ಇಲಿವಾಲ' ಪರಾ. [ಎಲಿ$_0$ + ಆಲ$_1$]

ಎಲು$_1$ 'ಎಲ್ಬು' ನೋ.

ಎಲು$_2$ (ನಾ). ಕಾಂತಿ; ಪ್ರಕಾಶ. 'ಎಲುವಡೆ' ಪರಾ.

[?. / ತಮಿ. ಎಲ್ = ಪ್ರಕಾಶ, ಕಾಂತಿ]

ಎಲುಗಟ್ಟು 'ಎಲ್ಗಟ್ಟು' ನೋ.

ಎಲುಗಯ್ಯ (ನಾ). ತಲೆಬುರುಡೆಯನ್ನು, ಕಪಾಲವನ್ನು ಕೈಯಲ್ಲಿ ಹಿಡಿದವನು ; ಶಿವ : "ಎಲುಗೈಯ ಬೂದಿಮೆಯ್ಯಂ ಬೆಳರ್ವಣ್ಣಂ ನೆತ್ತಿ ಗಣ್ಣನೆನುತಂ ಜತ್ತುಗದಲೆಯನೆನೆ ಸತ್ಕವೀಂದ್ರರ್ ಸಲೆ ಪೇೞ್ವರ್ ಸ್ಮರಹರಂಗೆ ನಾಮಂ" (ಕವಿಕಂ. ೧೮).

[ಎಲು$_1$ (< ಎಲ್ಬು) + ಕೈ$_2$ (< ಕೆಯ್$_2$) + –ಅ$_7$]

ಎಲುದಲೆ (ನಾ). ತಲೆಯ ಬುರುಡೆ ; ಕಪಾಲ : ಗೋಣ್ಮೊದಲನೆಲು ದಲೆಯ ಬಿಣ್ಮಾಲೆಗಳ್ಗಿತ್ತ ತಣ್ಮಯ್ಯವೆಟ್ಟಮುಗಳಾಣ್ಮನೆನಿಸಿದ (ನಂದಿಮಾ. ೧೮–೧೫). [ಎಲು$_1$ (< ಎಲ್ಬು) + ತಲೆ$_1$]

ಎಲುದೋಱು (ಕ್ರಿ). ೧. ಮೂಳೆತೋರು ; ಎಲುಬು ಕಾಣು : ಬಲಗಣ್ಣೊಳಡರೆ ಕೆಂಪು ಬಿಡದೆ ಮೆಯ್ಯೆಲುದೋಱೆ ಮಲಿನ ಕಂಠ ದೊಳುಣ್ಕೆ ತಡೆಯದಂಗದ ಸಮ್ಮನೊಣಗಿತೆಮ್ಮಯ್ಯಂಗೆ (ಭಾವಚಿಂ. ೧–೨). ೨. ಎಲುಬನ್ನು ತೋರಿಸು ; ನಿಸ್ಸಾರವಾದುದನ್ನು ತೋರಿಸು : ಕೂಡಲ ಸಂಗಮದೇವ ಎಲುದೋಱಿ ಸರಸವಾಡುವನು ಸೈರಿಸದನ್ನಕ್ಕ ಅಪ್ಪುದೆ ಭಕ್ತಿ (ಬಸವ. ೨೧೦) ; ಎಲುದೋಱಿ ಸರಸ ವಾಡುತ್ತಿರ್ಪರೇ ತಂದೆ, ಕೊಲುವುದೈ ಇದಱಿಂದ ಕಾಡಲೇಕೆಲೆ ತಂದೆ (ನಂಬಿರ. ೧೫–೧೩೬).

[ಎಲು$_1$ (< ಎಲ್ಬು) + ತೋಱು$_1$ (< ತೋಱ್)]

ಎಲುಬು 'ಎಲ್ಬು' ನೋ.

ಎಲುಬುಗೈ (ನಾ). (ಸೊರಗಿ) ಮೂಳೆಬಿಟ್ಟುಕೊಂಡ ಕೈ : ನೆಕ್ಲೋಸ್ ಮೇಲಿದ್ದ ಸೋಫಿಯಾವ್ನಾಸಿಲ್ಯೇವ್ನಾಳ ಉಂಗುರತುಂಬಿದ ನುಣುಪಾದ ಎಲುಬುಗೈಯನ್ನು ಅದುಮುತ್ತಾ (ಪುನರು. ೧೨೬).

[ಎಲುಬು (< ಎಲ್ಬು) + ಕೈ$_2$ (< ಕೆಯ್$_2$)]

ಎಲುಮಾಲೆ (ನಾ). ಮೂಳೆಯ ಮಾಲಿಕೆ ; ರುಂಡಮಾಲೆ : ವಿಷ ಕಂಠದಿಂ ದೆಸೆಗೆ ಮಿಂಚುವೆಲುಮಾಲೆಯಿಂ (ಚೆಬಪು. ೨–೨೫) ; ಲೀಲೆ ಯಿಂದೆಲುಮಾಲೆಯುಂ ತಾಳ್ದ ಮಾಂಗಲ್ಯಶೀಲದಿಂ (ನಂದಿಮಾ. ೧೭–೪೪).

[ಎಲು$_1$ (< ಎಲ್ಬು) + ಮಾಲೆ]

ಎಲುಮಾಲೆಗೊರಲ (ನಾ). ರುಂಡಮಾಲೆಯನ್ನು ಕೊರಳಲ್ಲಿ ಧರಿಸಿ ದವನು ; ಶಿವ : ಮಸಣಗಾಹಿ ಹಾವಾಡಿಗನೆಲುಮಾಲೆಗೊರಲ ಗೊರವಂ ನೋಡೆನೆಗೆ ಪಾಸಟಿಯೆ (ಚೆಬಪು. ೩೦–೩೩).

[ಎಲುಮಾಲೆ + ಕೊರಲ್ + –ಅ$_7$]

ಎಲುಮುಂಚಿ (ನಾ). ನಿಂಬೆಗಿಡ, —ಹಣ್ಣು : ಎಲುಮುಂಚಿಯ ಹಣ್ಣಿನ ರಸದಲ್ಲಿ ಬಂಗಾರ ೧ ಪಲ ನೆನೆಯಿಕ್ಕಿ ಮೂರು ದಿನ ಇರಿಸಿ . . . ಮೂರು ತೂಕ ಪರ್ಯಂತರ ಶರೀರಧಾತು ನಷ್ಟಕ್ಕೆ ಜೇನುತುಪ್ಪದಲ್ಲಿ ಗುಳಿಗೆಯಾಗಿ ಕೊಡುವುದು (ವಿವೈವಿ. ೩೯). 'ಇಲಿಮಿಂಚಿ' ಪರಾ.

[ದೇ. ‖ ತಮಿ. ಎಲುಮಿಚ್ಚೈ ; ಮಲ. ಎಲುಮಿಚ್ಚ]

ಎಲುವಡೆ (ಕ್ರಿ). ಕಾಂತಿಯನ್ನು ಹೊಂದು; ಪ್ರಕಾಶಗೊಳ್ಳು; ಹೊಳೆ: ಹಿಮಸಮಯದೊಳಾಧಿಪಂ ತಾ[ಪಾಠಾಂ. ದೀಪಂ] ಹಿಮದಿಂದೆಲುವಡೆಯೆ ಬಗೆಯ ಬಕ್ಕಂಬಯಲೊಳ್ ಹಿಮನಿಧಿಯೆಮನಿಧಿ[ಸಲೆ]ಧೈರ್ಯ ಮಹಾಂಬುಧಿ ನೆಲಸಿ ಬೆಳ್ಪಾಸದೊಳಿರ್ದಂ (ಅಜಿಪು. ೧೨–೩).

[ಎಲು$_2$ + ಪಡೆ$_1$]

ಎಲುವು 'ಎಲ್ಬು' ನೋ.

ಎಲುವುಸಂಧಿ (ನಾ). ಮುರಿದ ಮೂಳೆಯನ್ನು ಕೂಡಿಸಲು ಬಳಸುವ ಒಂದು ಗಿಡ ; ವಿಶಲ್ಯೆ : "ವಿಶಲ್ಯಾ – ಜಾಪಾಳದ ಗಿಡ . . . ಹಾವು ಮೆಕ್ಕೇ ಗಿಡ, ಎಲುವುಸಂಧಿ ಗಿಡ, ಹುಚ್ಚುಹರಳು ಗಿಡ" (ಸಿದ್ಧಾಂತಿ. ೩೫೪); ಎಲುವ[ವು] ಸಂಧಿಯುಂ ತಂಬು ಕುಡಿಯ ಕುಡಲು ಗರ್ಭಶೂಲೆ ಮಾಣ್ಗುಂ (ವಿವೈವಿ. ೧೫೧). [ಎಲುವು (< ಎಲ್ಬು) + ಸಂಧಿ]

ಎಲೆ$_1$ (ನಾ). ೧. ಮರಗಿಡಗಳ ಪತ್ರ, —ಪರ್ಣ : ಮಲಯಾನಿಲ ನೊಯ್ಯನೆ ಪಚ್ಚೆಲೆಯುಂ ನೆಲೆಯಿಂ ಕಬಿಲ್ಪುಗುಂ ವಿಟಪಿಗಳೊಳ್ (ಕವಿರಾ. ೩–೫೪) ; ಬೇರನಱಿವರ್ಗೆಲೆಯುಂ ತೋಱಿದರೆಂಬಂತೆ (ಧರ್ಮಾಮೃ. ೮–೪೪) ; ಕಸವು ಸನೆಯೆಲೆ ಸೊಪ್ಪುಸೊಡಗುವಿನಿಸುವಱಿಸಿ ಕಾಣದೆ ವಿಚಾರಿಸಿ (ಬಸಪು. ೧೬–೨೨) ; ತಾವರೆಯೆಲೆಯ ಮಱೆಗಳಲಾಜಡಿಗಳಡಗಿದವು ಕೋಳಾಹಳಕೆ ಪವನಜನ (ಕುವ್ಯಾಅ. ೧೦–೫೩) ; ಊಟಕ್ಕೆ ಎಲೆಗಳನ್ನು ಉಪಯೋಗಿಸುವುದು ಕೆಲವು ದೃಷ್ಟಿಗಳಿಂದ ಹೆಚ್ಚು ಆರೋಗ್ಯಕರ (ಅಡುಸಾ. ೧೨೦) ; ನೆಲದಲ್ಲಿ ಉಣ್ಣುವವನಲ್ಲಿ ಎಲೆ ಕೇಳಿದ ಹಾಗೆ (ಗಾದೆ).

೨. ವೀಳೆಯದೆಲೆ: ಕರ್ಪೂರದ ಸಮ್ಮಿಶ್ರಮಪ್ಪ ನೆಲವತ್ತಿಯಡಕೆಯ ಪೊಟ್ಟಳುಮಂ ಕೈತೀವಿದೆಲೆಯುಮಂ (ವಡ್ಡಾರಾ. ೭೮-೨೩); ಕಯ್ಯೊಳೆ ಕಯ್ಯೊಳೆ ಬಾಯ ತಂಬುಲಂ ಬಾಯೊಳೆ ತೋಱಿ ಮೆಯ್ಮಱಿದು ನೋಡಿದಳ್ (ಶಂಪಥಾ. ೪-೩೭); ಎಲೆಯಿಂ ಬಾಯ್ ಮುಡಿಯಿಂದಂ ತಲೆ ಸೀರೆಯಿನಂಗಮೆಸೆಗುಂ (ಧರ್ಮಾಮೃ. ೭-೧೪೩); ಹನ್ನೆರಡು ಅಡಕೆ ಇಪ್ಪತನಾಲ್ಕು ಎಲೆ (ಎಕ. VII, ಶೊಪ್ಪ. ೧೧-೨೦; 1337); ಮಡಿಸಿದೆಲೆ ಬೆರಳೊಳಗೆ ಬಾಯೊಳಗಡಸಿದೆಲೆ ಬಾಯೊಳಗೆ ಸಚಿವರ ನುಡಿಯ ಕೇಳರು (ಕುವ್ಯಾಅ. ೧೩-೬೭). ೩. ಇಸ್ಪೀಟು ಆಟದ ಪತ್ರ: ಆಟ ನಡೆದಂತೆ ನೀಲನು ತನ್ನ ಎಲೆಗಳನ್ನು ಕೆಳಗಿಟ್ಟು (ಬಂಗಾಹೆ. ೫೨). ೪. ಎಸಳು; ದಳ. 'ನೂರೆಲೆ' ಪರಾ. ೫. ಚಾಕುವಿನ ಅಲಗು: (ದಕ. ೯).

**ಎಲೆಹಾಕು**=೧. ಊಟಕ್ಕೆ ಬಡಿಸು: ಎಲೆಹಾಕುವುದು ಇನ್ನೂ ಮುಕ್ಕಾಲುಗಂಟೆ ತಡವೆಂದಮೇಲೆ ಇಸ್ಪೀಟನ್ನು ಆಡಲು ಕುಳಿತರು (ಕಲಾಸಾ. ೫೫); ಎಲೆಹಾಕಿದೆ ಬನ್ನಿ (ರೂಢಿ). ೨. ವೀಳೆಯದೆಲೆಯನ್ನು ಸೇವಿಸು: ಎಲೆಹಾಕ್ಕೋ ಬನ್ನಿ (ರೂಢಿ). ೩. ಇಸ್ಪಿಟ್ ಎಲೆ ಹಾಕು, —ಆಡು: ಎಲೆಹಾಕು, ಒಂದು ಆಟ ಆಡೋಣ (ರೂಢಿ).

[ದೇ. ‖ ತಮಿ. ಇಲ್ಲೈ; ಮಲ. ಇಲ; ತುಳು. ಎಲೆ]

**ಎಲ್ಚೆ, ಎಲೇ₁, ಎಲ್ಬೈ** (ಅ). ಸಂಬೋಧನಾರ್ಥಕ ಅವ್ಯಯ: ಅರಸರೊಳೆಲೆ ನೀಂ ಸರಸಮನರಸಿಯವೋಲಾಡುತಿರ್ಪೆ ನಿನಗಿದು ಗುಣಮೇ (ಕವಿರಾ. ೩-೨೩೨); ಎಲೆ ಗಳಾ ಯಮದಂಡಾ ನೀನುಮಾನುಂ ಕೆಱೆಯಂದೊರ್ವರುಪಾಧ್ಯಾಯರ ಪಕ್ಕದೊಳೋದುವಂದು ನಂದನವನದೊಳಗೆ ನೀನೆನ್ನ ಪೂಣ್ದ ಪ್ರತಿಜ್ಞೆಯಂ ನೆನೆವಾ (ವಡ್ಡಾರಾ. ೧೨೫-೪); ಎಲೆ ಸುಖಾವತಿ ನೀಂ ಕುಮಾರನನಂಜದೆ ಬಿಟ್ಟುಪೋಗು (ಚಾವುಂಪು. ೧೧೯-೨); ಎಲೆ ಭಾವ ಏಂ ಬಡವಾದಿರಿ (ಪಂಚತಂ. ೪೦-೨೦); ನೀನಾಕರ್ಣಿಸಯ್ಯ ಮದೀಯ ವಿಜ್ಞಾಪನವನೆಲೆ ಬಸವ (ಬಸವು. ೫-೧); ಜೋಡಿ ನಿನಗಹುದೆಲೆ ಮರುಳೆ (ಕುವ್ಯಾದ್ರೋ. ೩-೬೫); ಎಲೆ ಬಾಲೆ, ನೀನು ಸತ್ಯವಂತೆ (ನೀತಿಚಿಂ. VI, ೧೬). **ಎಲೇ₁**: ಎಲೇ ಅಜ್ಞಾ (ಭಾಷಾಭೂ. ೨೬೧ ಉದಾ); ಏಂ ಪಡಿವಾತಲೇ ರವಿಯೆಲೇ ಮಾದೇವಲೇ ಬೊಮ್ಮ ಕೇಳ್ದಿರೆ (ಜಗವಿ. ೧೩-೪೯). **ಎಲ್ಬೈ**: ಕೇಳು ಎಲ್ಬೈ ರಾಯನೆ, ಅಬಳಿಕ ದ್ರೋಣಾಚಾರ್ಯನು ... ಮೆರೆಯುತಿರಲು (ಕೃವಾಉ. ೧೧೦); ಎಲ್ಬೈ ಚರಕಾರಿಕನೆ, ನೀನು ಬಹು ಆಲೋಚನಾಪರನಾದ್ದರಿಂದ ಈ ಕೆಟ್ಟಕೆಲಸದ ಪಾಪವು ನಮ್ಮಿಬ್ಬರಿಗೂ ತಪ್ಪಿತು (ನೀತಿಚಿಂ. VII, ೧೪).

[?]

**ಎಲ್ಚೆ, ಎಲೇ₂** (ಅ). ನೆನಹು, ವಿತರ್ಕ, ಆಶ್ಚರ್ಯ ಮುಂತಾದ ಭಾವಗಳನ್ನು ಸೂಚಿಸುವ ನಿಪಾತಾವ್ಯಯ: "ಎಲೇ ವಿತರ್ಕಭಾವನಾಮಂತ್ರಣೇಷು" (ಭಾಷಾಭೂ. ೨೬೧); "ಸ್ಮರಣ ವಿಚಾರಾಮಂತ್ರಣ ಪರಿಗತವೆನಿಸಿರ್ಪುವೆಲೆಲೆ ಏ ಎಂಬಿವು" (ಶಮದ. ೩೧೧). (i) ವಿತರ್ಕಕ್ಕೆ: ಎಲೆ ಚಂದ್ರಾತಪರುಚಿಯಂ ಗೆಲೆವಂದೀ ಧವಳಿಮಕ್ಕೆ ಕಾರಣವೀ ನಿರ್ಮಳ ತಾರಹಾರಮಿಂತೀಗಳೆಂದು ಬಗೆದಂ (ಕಾದಂಉ. ೧೦೭). (ii) ಆಶ್ಚರ್ಯಕ್ಕೆ: ಎಲೆ ಪೊಣ್ಮಿತ್ತು ಮುರಾರಿಗಾಂತರಿಚಮೂ ಭಂಭಾ ರವಂ ಭಾರವಂ (ಜಗವಿ. ೧೫-೧೬). **ಎಲೇ₂**: (iii) ನೆನಹಿಗೆ: ಎಲೇ ಬಗೆದೆನೀಗಳೇ ಬರೆದ ಕಲ್ಪಮಿಾಶಾನಂ (ಆದಿಪು. ೪-೭); ಎಲೇ ಇದಲ್ತೆ ತುಹಿನಕ್ಷೋಣೀಧ್ರದುತ್ತುಂಗಸಾನುಗಳೊಳ್ ಭೋರೆನೆ ಬಂದು ಪಾಯ್ವುದದೆ ನೋಡಾಕಾಶ ಗಂಗಾಜಲಂ (ಕಾವ್ಯಾವ. ೪೮); ಎಲೇ ವಿತರ್ಕಭಾವನಾಮಂತ್ರಣೇಷು ... ಎಲೇ ಇದಾವುದು, ಎಲೇ ಅದಕ್ಕುಂ, ಎಲೇ ಅಜ್ಞಾ (ಭಾಷಾಭೂ. ೨೬೧, ಉದಾ).

ಎಲೆಎಲೆ (ದ್ವಿರುಕ್ತಿ): "ಫಡ ಫಡ[ಪಢ ಪಢ] ಯೆನಲು ಯಲೆಯಲೆ[ಎಲೆಎಲೆ]ಯೆನಿಕುಂ" (ಶಬ್ದಮಂ. ೬೧); "ಫಡ ಫಡಯೆನಲ್ಕೆಲೆಯೆಲೆಯೆನಿಪ್ಪರ್ಥಮಕ್ಕುಂ" (ಶಬ್ದಕೈ. ೪೨); ಎಲೆಎಲೆ ದೇವ ದೇವ ಪಿರಿದದ್ಭುತಮದ್ಭುತಮೇನನೆಂದಪೆಂ (ರಾಜಶೇ. ೬-೩೪). **ಎಲೆಲೆ** = ೧. ಆಕ್ಷೇಪವನ್ನು ಸೂಚಿಸುವ ಅವ್ಯಯ: ಎಲೆಲೆ! ನೀನು ಯಾರು ನನ್ನನ್ನು ಕೇಳಲಿಕ್ಕೆ (ರೂಢಿ). ೨. ಸಂಭ್ರಮದಿಂದ ಕರೆಯುವಾಗ ಬಳಕೆಯಾಗುವ ಅವ್ಯಯ: ಎಲೆಲೆ ನಿಲ್ಲು ನಿಲ್ಲು (ಬಸವು. ೯-೩೧); ಎಲೆಲೆ ಕರುಣಾಸುಲಭ ಹೋಗಲದೆಂತು ನಾ ಬಲ್ಲೆ (ಬಸವು. ೨೦-೮).

[?]

**ಎಲೆಅಡಿಕೆ** 'ಎಲೆಯಡಕೆ' ನೋ.

**ಎಲೆಕಣಿಕೆ** (ನಾ). ಎಲೆಗೆಣ್ಣು: ಎಲ[ಲೆ]ಕಣಿಕೆ, ಉತ್ತರಣಿಯ ಕಣಿಕೆ, ಆಡುಸೋಗೆಯ ಕಣಿಕೆ ... ತಂದು (ವಿವೈವಿ. ೯). [ಎಲ್₁ + ಕಣಿಕೆ₁]

**ಎಲೆಕಪ್ಪಲಿ** 'ಎಲೆಗಪ್ಪಲಿ' ನೋ.

**ಎಲೆಕಮ್ಮಿರ** (ನಾ). = ಎಲೆಗಪ್ಪಲಿ: ಎಲೆಕಮ್ಮಿರವನ್ನೂ ತುತ್ತವನ್ನೂ ಶುದ್ಧಿಸಿ ಹಾಕಬೇಕು (ವಿವೈವಿ. ೧೩೫). [?]

**ಎಲೆಕಳ್ಳಿ** 'ಎಲೆಗಳ್ಳಿ' ನೋ.

**ಎಲೆಕಾವು** (ನಾ). ಎಲೆಗಳನ್ನು ಕಾಯಿಸಿಕೊಡುವ ಶಾಖ,—ಕಾವು: ಗಾಯಕ್ಕೆ ಎಲೆಕಾವು ಕೊಡಬೇಕು (ರೂಢಿ).

[ಎಲೆ₁ + ಕಾವು₁ (< ಕಾಯ್ಪು)]

**ಎಲೆಕೊಟ್ಟು** (ನಾ). = ಎಲೆಗುದ್ದಲಿ (ದಕ). [ಎಲೆ₁ + ಕೊಟ್ಟು ?]

**ಎಲೆಗಟ್ಟು** (ಕ್ರಿ). ೧. ಎಲೆಯಿಂದ ಕಟ್ಟು, —ಪೊಟ್ಟಣ ಕಟ್ಟು: ತಣ್ಣಾಟಿಂ ಪಡವಿನೊಳೆಲೆಗಟ್ಟ ಮುಟ್ಟುಪಡೆದಚಿಸುವುದೇ (ಲೀಲಾವ. ೨-೧೧೫). ೨. ಎಲೆಯ ಕಟ್ಟು, —ಪೆಂಡಿ: ಎಲೆಗಟ್ಟೊಂದನ್ನು ಹೊತ್ತು ತಂದನು (ರೂಢಿ). [ಎಲೆ₁ + ಕಟ್ಟು₁]

**ಎಲೆಗತ್ತರಿ** (ನಾ). ೧. (ಕುರಿಗಳ ಮೈಯಿಂದ) ಉಣ್ಣೆಯನ್ನು ಕತ್ತರಿಸುವ ಕತ್ತರಿ (ದಕ. ೯). ೨. ಚೌಲದ ಸಮಯದಲ್ಲಿ ಉಪಯೋಗಿಸುವ ಕತ್ತರಿಯಾಕಾರಕ್ಕೆ ಕತ್ತರಿಸಿದ ಎಲೆ (ಉಕ. ೯).

[ಎಲೆ₁ + ಕತ್ತರಿ₁]

**ಎಲೆಗಪ್ಪಲಿ, ಎಲೆಕಪ್ಪಲಿ** (ನಾ). ಒಂದು ಬಗೆಯ ತುತ್ತ; ಖರ್ಪರ; ಹಾಲುತುತ್ತ: ಗಂಧಕ, ತಾಲಕ, ಹೊಸಸುಣ್ಣ, ಎಲೆಗಪ್ಪಲಿ ಇವಷ್ಟನು ಅಡಿನ ಮೂತ್ರದಿಂದ ಅರೆದು ಲೇಪನಮಾಡಿಕೊಂಡು ಬಿಸಿಲಲ್ಲಿ ಕ್ಷಣಮಾತ್ರವಿರೆ ಆಕ್ಷಣದಲ್ಲಿಯೇ ರೋಮಖಂಡನವಹುದು (ವೈದ್ಯಸಾ. II, ೧೪೪); ಎಲೆಗಪ್ಪಲಿ ೩ ತೂಕವನ್ನು ನುಚ್ಚಲಕ್ಕಿ ಹಾಗೆ ಮಾಡಿ ದಿನ ಒಂದಕ್ಕೆ ೫ ವೇಳೆ ನಿಂಬೆ ಹುಳಿಯಲ್ಲಿ ತೊಳೆದು ಆರಿಸಿ (ವಿವೈವಿ. ೨೯). **ಎಲೆಕಪ್ಪಲಿ**: ನೇತ್ರವಾಯುವಿಗೆ: – ಎಲೆಕಪ್ಪಲಿ, ಪಚ್ಚೆತುತ್ತ ... ಕಾರ್ತಿಕೇಯ ಕರಿ, ಇವು ಎಲ್ಲವೂ ಸಮಭಾಗ, ಸಣ್ಣನಾಗಿ ತಿರುಹಿ (ವಿವೈವಿ. ೧೩೫). [ಎಲೆ₁ + ಕಪ್ಪಲಿ₂ (< ಕಪ್ಪರಿ)]

**ಎಲೆಗಳ್ಳಿ, ಎಲೆಕಳ್ಳಿ** (ನಾ). ಒಂದು ಬಗೆಯ ಕಳ್ಳಿ: "ವಜ್ರಿಯೆಂದೊಡೆಲೆಗಳ್ಳಿಯಕ್ಕು" (ಮಂಗರಾ. ೪೧-೩೪); "ಸಿತದೊಳಿಂದ್ರನೊಳು ಗಿರಿಮಲ್ಲಿಗೆಯೊಳೆಲೆಗಳ್ಳಿಯೊಳು ಶಕ್ರವಕ್ಕು" (ಮಂಗರಾ. ೧೫೧-೫೩); "ಶ್ವಾನಜಿಹ್ವಾದಳಃ –ಎಲೆಗಳ್ಳಿ" (ಓಷಧಿ. ೧೬೪); "ತಿಸ್ರೋಧಾರ –ಎಲೆಗಳ್ಳಿ" (ಓಷಧಿ. ೬೯). **ಎಲೆಕಳ್ಳಿ**: (೯). [ಎಲೆ₁ + ಕಳ್ಳಿ₁]

**ಎಲೆಗಾರ** (ನಾ). ವೀಳೆಯದೆಲೆಯನ್ನು ಮಾರುವವನು (೯).

[ಎಲೆ₁ + –ಗಾರ (< –ಕಾಱ)]

**ಎಲೆಗಾರ್ತಿ** (ನಾ). ವೀಳೆಯದೆಲೆಯನ್ನು ಮಾರುವವಳು (೯).

[ಎಲೆಗಾರ + –ತ್ತಿ (< –ಇತ್ತಿ)]

**ಎಲೆಗುಂಪಲು** (ನಾ). ಎಲೆಗಳ ರಾಶಿ,—ಗುಚ್ಛ: (Foliage. ಇಂಗ್ಲಿ).
[ಎಲೆ$_1$ + ಗುಂಪಲು]

**ಎಲೆಗುದ್ದಲಿ** (ನಾ). ಎಲೆಯಂತೆ ಅಗಲವಾದ ಹಲ್ಲೆಯುಳ್ಳ ಗುದ್ದಲಿ; ಮಮಟಿ; ಸನಿಕೆ: ಅದರಲ್ಲಿ ತಂತಿಗಳ ಸುರುಳಿಗಳೂ, ಗಡಾರಿ, ಗುದ್ದಲಿ, ಎಲೆಗುದ್ದಲಿ, ಪಿಕಾಶಿಗಳೂ ಇದ್ದುವು (ಬನ್ನಬೇ. ೧೨೧).
[ಎಲೆ$_1$ + ಗುದ್ದಲಿ]

**ಎಲೆಗುಳಿ** (ನಾ). ವೀಳೆಯದೆಲೆಯ ಗಿಡದ ಪಾತಿ: ಹಿರಿಯ ಕೆರೆ ಕಟ್ಟಿ ಕೆರೆ ಕೋಳಿಗೆರೆ ಕೆಳಗುಳ್ಳ ಎಲೆಗುಳಿ ಸ್ಥಳ ತೊಟ್ಟಸ್ಥಳ ಗದ್ದೆ ಹೊಲಗದ್ದೆ (ಎಕ. XII, ಮಳವ. ೧೨೧–೧೬೩; 1424). [ಎಲೆ$_1$ + ಕುಳಿ (< ಕುೞಿ)]

**ಎಲೆಗೆ, ಎಲಗೆ, ಎಲಗೇ, ಎಲೆಗೇ** (ಅ). ಹೆಂಗಸರನ್ನು ಸಂಬೋಧಿಸುವಾಗ ಬಳಸುವ ಮಾತು: ನೀನಿದಂ ವಿವೇಕವಿಕಳರ್ಕಳಂತೆಲೆಗೆ ಚಿತ್ತದೊಳ್ ತಾಳ್ದುವೋ (ಆದಿಪು. ೩–೩೨); ಇಲ್ಲಿಗೆ ನಾವಜಿಯವೆಲೆಗೆ ನೀಂ ಪುಟ್ಟಮಿರಾ (ಧರ್ಮಾಮೃ. ೨–೫೦); ಹೇಳಿ ಕರತಾರೆಲೆಗವ್ವಾ (ಮಹಾದೇ. ೩೪–೩); ಎಲೆಗೆ ಕರೆ ಪಾಪಿ ಕೌರವ ಕುಲಕುಠಾರನ (ಕುವ್ಯಾಸ. ೧೨–೫೭). **ಎಲಗೆ**: ಅಗಲುರಮನೆನಗೆ ಪಡೆದಜನೊಗಸುಗಮಲ್ತೆಲಗೆ ನಿನ್ನನೆನಗೆಯೆ ಪಡೆದಂ (ಪಂಪಭಾ. ೮–೬೭); ನಿನ್ನ ಮುರವೈರಿಯಳವುಮನೆನ್ನಳವುಮನೆಲಗೆ ಕಾಣ್ಬೆ (ಗದಾಯು. ೯–೧೪); ಎಲಗೆ ತರುವಲಿ ಮೂಲಹಾಲಂ ಸಲೆಯಭವನಿಂದೇಕೆ ಪೊಲ್ಲನು (ಬಸವಪು. ೧೪–೩೦); ಎಲಗೆ ನಾಳೆ ಪ್ರತ್ಯಕ್ಷಮದಂ ನಾಡಿದಲ್ಲದೆ ಮಾಡೆನು (ಜೈಮಿಭಾ. ೧೦–೨೬). **ಎಲಗೇ**: ಅರಸರೊಳೆಲಗೇ [ಪಾಠಾಂ. ಎಲಗೀ] ಸರಸಮನರಸಿಯವೋಲಾಡುತಿರ್ಪೆ ನಿನಗಿದು ಗುಣವೇ (ಶಬ್ದಾನು. ೨೦೨ ಪ್ರಯೋ). **ಎಲೆಗೇ**: ಎಲೆಗೇ ಗರುವತನವಿದು ಹಿಂದೆ ಸಲುವುದು ಸಲ್ಲದಿಧು ಕುರುರಾಜ ಭವನದಲಿ (ಕುವ್ಯಾಸ. ೧೪–೬೩); ಏ ಸಾವಿತ್ರಿ ಎಲೆಗೇ ಅರುಂಧತಿ (ಸುಗುಗಂ. ೭–೧೫); ನಿಲ್ಲೆಲೆಗೇ ಎನುತ್ತೆ ಗುರುಶಿಷ್ಯಂ ಕೋಪದಿಂ ಗರ್ಜಿಸಲ್ (ಶಾಕುಂತ. ೮೫–೧೪೦). [ಎಲೆ$_2$ + -ಗೆ$_3$]

**ಎಲೆಗೇ** 'ಎಲಗೆ' ನೋ.

**ಎಲೆಗೊಬ್ಬರ** (ನಾ). ಎಲೆಗಳಿಂದ ಮಾಡಿದ ಗೊಬ್ಬರ.
[ಎಲೆ$_1$ + ಗೊಬ್ಬರ]

**ಎಲೆಗೊೞೆ** (ನಾ). ಎಲೆಗಳು ಕೊಳೆತು ಉಂಟಾದ ಕಶ್ಮಲ: ಪಲವುಂ ಬಣ್ಣದೆಲೆಗೊೞೆಯ ನೀರ್ಗಳಮನಪ್ಪುಕೆಯ್ದುಂ (ಕಾದಂಉ. ೨೬೭).
[ಎಲೆ$_1$ + ಕೊೞೆ$_2$]

**ಎಲೆಗೋಮೆ** (ನಾ). ಊಟಮಾಡಿದ ಮೇಲೆ ಎಲೆಯನ್ನು ಎತ್ತಿ ಆ ಸ್ಥಳಕ್ಕೆ ಸಗಣಿಯನ್ನು ಹಚ್ಚಿ ಶುದ್ಧಿಮಾಡುವ ಕೆಲಸ: ಇಲ್ಲಿ ಅವಳು ಕೆಲಸಮಾಡಿ ಕಂಡರಿಯಳು. ಇಲ್ಲಿ ಎಲೆಗೋಮೆ, ಉಪಕರಣೆ, ಸುತ್ತಲಿನ ಕೆಲಸವೇ ಬೇಕಾದಹಾಗಿರುತ್ತೆ (ಕೀಲುಗೊಂ. ೩೩).
[ಎಲೆ$_1$ + ಗೋಮೆ]

**ಎಲೆಚಂಚಿ** (ನಾ). ೧. ಎಲೆ ಚೀಲ. ೨. ದೇವತಾವಿಗ್ರಹಕ್ಕೆ ಉತ್ಸವದಲ್ಲಿ ಅರ್ಪಿಸುವ ತಾಂಬೂಲದ ಉಪಹಾರ: ಶಂಭುಲಿಂಗನಿಗೆ ಹಣ್ಣುಕಾಯಿ ಮಾಡಿಸಿ ಎಲೆಚಂಚಿಯ ಸೇವೆಸಲ್ಲಿಸಿ (ಗಂಗಾಸಾ. ೧೩).
[ಎಲೆ$_1$ + ಚಂಚಿ (< ಸಂಚಿ$_3$)]

**ಎಲೆಚೇಳು** (ನಾ). ಒಂದು ಬಗೆಯ ಚೇಳು; ದೊಡ್ಡ ಚೇಳು; ಎಮ್ಮೆ ಚೇಳು: "ಎಮ್ಮೆಚೇಳೆಂದು ವೃಶ್ಚಿಕ, ಶೂಕಕೀಟ, ಎಲೆಚೇಳೆಂದೂ ಎಂಬರು" (ನಾಚಿರಾ. ೬). [ಎಲೆ$_1$ + ಚೇಳು (< ತೇೞ್)]

**ಎಲೆತಳಲ್** (ಕ್ರಿ). ಎಲೆ ಹುಟ್ಟು; ಚಿಗುರು: "ಎಲೆತಳಲ್ [ಪಾಠಾಂ. ಎಲೆದೊಳ(ೞ)ಲ್, ತಳಲ್, ತೊವಲ್] ಪಲ್ಲವ ಪ್ರಾಪ್ತೌ (ಎಲೆಚಿಗುರು)" (ಶಮುಧಾ). [ಎಲೆ$_1$ + ತಳಲ್]

**ಎಲೆತುಂಬು** (ನಾ). ಎಲೆಯ ತೊಟ್ಟು,—ಕಾವು,—ಹಿಡಿ: (ಕ).
[ಎಲೆ$_1$ + ತುಂಬು$_3$]

**ಎಲೆತೊಟ್ಟು** (ನಾ). = ಎಲೆತುಂಬು: "ವೃಂತಂ, ಪ್ರಸವಬಂಧನಂ– ೨ ತೊಟ್ಟಿನ ಹೆಸರು. ಎಲೆ ತೊಟ್ಟು, ಹಣ್ಣಿನ ತೊಟ್ಟು" (ಸಿದ್ಧಾಂತಿ. ೧೦೦).
[ಎಲೆ$_1$ + ತೊಟ್ಟು]

**ಎಲೆತೋಟ** 'ಎಲೆದೋಂಟ' ನೋ.

**ಎಲೆತೋಟ್ಟ** 'ಎಲೆದೋಂಟ' ನೋ.

**ಎಲೆದಟ್ಟೆ** (ನಾ). ವೀಳೆಯದೆಲೆ ಅಡಿಕೆಯನ್ನು ಇಡುವ ತಟ್ಟೆ; ತಾಂಬೂಲದ ತಟ್ಟೆ (ಕ). [ಎಲೆ$_1$ + ತಟ್ಟೆ$_1$]

**ಎಲೆದಾಣ** (ನಾ). ಎಲೆಗಳ ಸ್ಥಳ; ಎಲೆಬಿಡುವ ಜಾಗ: ಎಳಮಾವುಗಳ ಬೀಡೆ ಹೊಳೆ ಕೋಗಿಲೆಯ ಕೊರಲೊಳಗು ತೆಱಪಾಗೆ ಮಾಧವಿಗಳೆಲೆದಾಣ ಹೊಪ್ಪಳಿಸೆ ತೆಂಕಣ ದಿಶಾಭಾಗದೊಳು ಗಾಳಿ ಹೊಡಕರಿಸೆ (ಹಚಕಾ. ೩–೧೪). [ಎಲೆ$_1$ + ತಾಣ$_1$]

**ಎಲೆದುಱುಗಲ್** (ನಾ). ಎಲೆಗಳ ಗೊಂಚಲು; ಪತ್ರಗುಚ್ಛ: ಎಲರಲೆಪದಿಂ ನಡುಗುವೆಲೆದುಱುಗಲಿಂ ಕದಳೀವನಂಗಳುಮ್ಮೈಕಿಲಡರ್ದು ನಡುಗಿದಪುವೆಂಬಂತೆಯುಂ (ಕಾದಂಉ. ೨೧೯); ಕಮಲವನದೆಲೆದುಱುಗಲಿಱುಂಬಿನೊಳ್ (ಗಿರಿಕ. ೩–೧೦೩ ವ). [ಎಲೆ$_1$ + ತುಱುಗಲ್]

**ಎಲೆದೋಂಟ, ಎಲೆತೋಟ, ಎಲೆತೋಟ್ಟ, ಎಲೆದೋಟ** (ನಾ). ವೀಳೆಯದೆಲೆ ಬೆಳೆಯುವ ತೋಟ: ಬಚ್ಚಲನೆಲೆದೋಂಟದೊಳ್ ಪರಿಯಿಸಲ್ (ಅಜಿಪು. ೬–೪೫). **ಎಲೆತೋಟ**: ಎಳಲಾರದವನಿಗೆ ಏಳೂರು ಆರಂಭ ಮೇಲೊಂದು ಎಲೆತೋಟ (ಗಾದೆ). **ಎಲೆತೋಟ್ಟ**: ಕಂಡುಗದಯ್ಗಳ ಕಟನಿಯುಂ ಚನ್ನಕಟನಿವೆಲೆತೋಟ್ಟಪಟ್ಟು ಸಮಸ್ತಾಚಾರ್ಯ್ಯಲೆಯಣ್ಣಣ್ದುಗಂ (ಎಕ. X, ಮುಳಬಾ. ೮೦–೭; 767). **ಎಲೆದೋಟ**: ಎಲೆದೋಟಗಳನ್ನು ಬಹುಶಃ ತಿಗಳರೇ ಮಾಡುತ್ತಾರೆ (ಮುಂಬಯಿ. ೫–೧೯೮). [ಎಲೆ$_1$ + ತೋಂಟ]

**ಎಲೆದೋಟ** 'ಎಲೆದೋಂಟ' ನೋ.

**ಎಲೆದೋಱು** (ಕ್ರಿ). ಎಲೆಕಾಣಿಸಿಕೊ; ಚಿಗುರು: ಸಸಿಗೆ ಹೊಸಬೇರು ಬಿಟ್ಟಲ್ಲದೆ ಎಲೆದೋಱದು (ಮೋಳಮಾ. ೧೪೦–೫೪೦); ಬೇರಂ ಬಲ್ಲರ್ಗೆಲೆದೋಱಲೇಕೆ ನೀನೆನುತೊಲವಿಂ ಪರಿಮಳದ ಬೇರ್ಗಳಂ ಬರೆತೆಗೆದಳ್ (ಗಿರಿಕ. ೫–೪೫). [ಎಲೆ$_1$ + ತೋಱು$_1$ (< ತೋಱ್)]

**ಎಲೆನಾಗರ, ಎಳನಾಗರ** (ನಾ). ನಾಗರಹಾವಿನಲ್ಲಿ ಒಂದು ಬಗೆ: "ಎಲೆನಾಗರ – ಮಿಡಿನಾಗರ" (ಜಾನಕೋ. ೨೬). **ಎಳನಾಗರ**: ಮುಡಿದ ಮಲ್ಲಿಗೆಯ ದಂಡೆಯೊಳಡಗಿದ್ದ ಕಿರುಸೂಜಿಯುದ್ದದೆಳನಾಗರವನು (ಒಲುಮೆ. ೩೫–೨೦). [ಎಲೆ$_1$ + ನಾಗರ$_1$]

**ಎಲೆಪಟ್ಟೆ** (ನಾ). ೧. ವೀಳ್ಯ; ತಾಂಬೂಲ; ಪಾನಪಟ್ಟೆ; ಬೀಡಾ: ರಾಯರ ಕೈಯಲ್ಲಿ ಒಂದು ಎಲೆಪಟ್ಟೆ (ತಿರುಗು. ೩೧). ೨. ಎಲೆಯಿಂದ ಸುತ್ತಿದ ಹೊಗೆಬತ್ತಿ. [ಎಲೆ$_1$ + ಪಟ್ಟೆ$_2$]

**ಎಲೆಪಸರ** (ನಾ). ವೀಳೆಯದೆಲೆಯ ಅಂಗಡಿ: ಬೇಳೆ ಎಲೆಪಸರ ಒಂದಕ್ಕೆ ದಿನ ಒಂದಕ್ಕೆ ಎಲೆ ಒಂದು ಅಡಿಕೆಯ ಪಸರ ಒಂದಕ್ಕಂ (ಎಕ. V, ಬೇಲೂರು. ೭೫–೧೦೩; 1382). [ಎಲೆ$_1$ + ಪಸರ]

**ಎಲೆಪಿಂಡಿ** 'ಎಲೆಪೆಂಡಿ' ನೋ.

**ಎಲೆಪಿಲ್ಲಿ** (ನಾ). ಪಿಲ್ಲಿಯಲ್ಲಿ ಒಂದು ಬಗೆ; ಒಂದು ಒಡವೆ: ಮದುವೆ ಹೆಣ್ಣಿನ ಕಾಲಿಗೆ ಎಲೆಪಿಲ್ಲಿ ಗೆಜ್ಜೆಪಿಲ್ಲಿ ತೊಡಿಸುತ್ತಾರೆ (ರೂಢಿ).
[ಎಲೆ$_1$ + ಪಿಲ್ಲಿ$_1$]

**ಎಲೆಪೆಂಡಿ, ಎಲೆಪಿಂಡಿ** (ನಾ). ೧. ವೀಳೆಯದೆಲೆಯ ಕಟ್ಟು. ೨. ಊಟದ ಎಲೆಯ ಕಟ್ಟು. **ಎಲೆಪಿಂಡಿ**: (ಕ). [ಎಲೆ$_1$ + ಪೆಂಡಿ]

**ಎಲೆಬಣಜಿಗ** (ನಾ). ವೀಳೆಯದೆಲೆಯನ್ನು ಮಾರುವವನು (ಎಸಮ್ಮೆ. XXX, ೪). [ಎಲ್$_1$ + ಬಣಜಿಗ]

**ಎಲೆಬತ್ತಿ** (ನಾ). ಹೊಗೆ ಸೇದುವುದಕ್ಕಾಗಿ ಎಲೆಯನ್ನು ಸುತ್ತಿ ಮಾಡುವ ಹೊಗೆಬತ್ತಿ: ಅವನು ಮನೆಗೆ ಬಂದಾಗ ಗುಡುಗುಡಿಯ ಬದಲು ಎಲೆಬತ್ತಿಯ ತಂಬಾಕ ಕೊಟ್ಟರೂ ಅವನಿಗೆ ಚಕಾರ ಶಬ್ದ ತೆಗೆಯಲು ಬಂದಿರಬಾರದು (ಇಪ್ಪಕ. ೪೪೭). [ಎಲ್$_1$ + ಬತ್ತಿ]

**ಎಲೆಬಿಜ್ಜಳ** (ನಾ). ೧. ಎಲೆಯ ಬೀಸಣಿಗೆ. ೨. ಎಲೆಯಿಂದ ಗಾಳಿ ಹಾಕುವಿಕೆ: ಪಳಿಗಪ್ಪುರವನನೀರ್ ಪೊಸವಾಳೆಯ ಸುಳಿ ಕಮ್ಮಿದು ವಾದೆಲರೆಳೆಯಸುಗೆಯ ತಳಿರೆಲೆಬಿಜ್ಜಳ ತಣ್ಣದಿರ್ಗಲ್ ಕನ್ನೆಯ್ದಿಲ ನವ ನಾಳಂ (ಜಯಕಾ. ೪–೪೦). [ಎಲ್$_1$ + ಬಿಜ್ಜಳ$_1$]

**ಎಲೆಮದ್ದು** (ನಾ). ೧. ಅಫೀಮು; ಅಪಿನಿ ಮದ್ದು: ಜಾಯಿಕಾಯಿ, ಹಿಪ್ಪಲಿ, ಎಲೆಮದ್ದು, ಭಂಗಿಯಹುಡಿ . . . ಜೇನುತುಪ್ಪದಲ್ಲಿ ಕೊಡಿಸಲು ಸಕಲಾತಿಸಾರ . . . ಪರಿಹರ (ವೈದ್ಯಸಾ. I, ೨೧೫). ೨. ಎಲೆಗಳಿಂದ ಮಾಡಿದ ಮದ್ದು. [ಎಲ್$_1$ + ಮದ್ದು$_1$ (< ಮರ್ದು)]

**ಎಲೆಮನೆ** 'ಎಲೆವನೆ' ನೋ.

**ಎಲೆಮರಿಗೆ** (ನಾ). ವೀಳೆಯದೆಲೆಯ ತಟ್ಟೆ; ತಾಂಬೂಲದ ತಟ್ಟೆ: ಗೋದಮ್ಮ ಊಟತೀರಿಸಿ ಬಂದು ಎಲೆಮರಿಗೆಯೊಂದಿಗೆ ಮಂಚದ ಕೆಳಗಡೆ ಕುಳಿತುಕೊಂಡಳು (ತ್ಯಾಗಮು. ೩). [ಎಲ್$_1$ + ಮರಿಗೆ (< ಮರಗೆ)]

**ಎಲೆಮರೆ** 'ಎಲೆಮಱೆ' ನೋ.

**ಎಲೆಮರೆಕಾಯಿ** (ನಾ). ೧. ಎಲೆಯಮರೆಯಲ್ಲಿ ಕಾಣಿಸದಂತೆ ಇರುವಕಾಯಿ. ೨. (ಆಲಂ) ಸದ್ದುಗದ್ದಲವಿಲ್ಲದೆ ಕೆಲಸಮಾಡುವವನು: ಕೆಲವರು ಎಲೆಮರೆಕಾಯಿಯಂತೆ ಕೆಲಸಮಾಡಿಕೊಂಡಿರುತ್ತಾರೆ (ರೂಢಿ). [ಎಲೆಮರೆ (< ಎಲೆಮಱೆ) + ಕಾಯಿ$_4$ (< ಕಾಯ್$_4$)]

**ಎಲೆಮಱೆ, ಎಲೆಮರೆ** (ನಾ). ಎಲೆಯ ಮರೆ; ಎಲೆಯ ಹಿಂದುಗಡೆ: ಪೊಳೆವೆಲೆಮಱೆ[ಪಾಠಾಂ. ವಱೆ]ಯೊಳ್ ತಲೆಯಂ ಗಿಳಿ ತೋಱುತ್ತಿರ್ದೊಡದಱ ಚಂಚೂಪುಟಮಂ ಕಳಿಕೆಯೆಗೆತ್ತುಕೊಳಲ್ಕೊರ್ವಳಬಲೆ ಕೈನೀಡಿ ನಗಿಸಿದಳ್ ಕೆಳದಿಯರಂ (ಚಂದ್ರಪು. ೭–೧೦೪). **ಎಲೆಮರೆ:** ಎಲೆಗೆ ಕಾಯಿಮರೆ ಕಾಯಿಗೆ ಎಲೆಮರೆ (ಗಾದೆ). [ಎಲ್$_1$ + ಮಱೆ$_2$]

**ಎಲೆಮಿಡುಕು** (ಕ್ರಿ). ಎಲೆಯಂತೆ ಅಲ್ಲಾಡು; ಅಲುಗಾಡು: ಪುಲಿಗಳೆ ಧರ್ಮ್ಮಶ್ರವಣಮನೆಲೆಮಿಡುಕದೆ ಕೇಳುತಿಪ್ಪುರ್ಪ್ಪರಗಿಳಿಗಳ್ (ಎಇ. XVI, ೩–೧೦; 980); ದೇವತೆ ನಮ್ಮಂ ತೊಲಗಿದೊಡೆ ಪಿಡಿದು ಕೊಲ್ಲೆಂದೆಲೆಮಿಡುಕದೆ ನಿಂದು ಪೊರ್ದಿ ಬಂದು (ಧರ್ಮಾಮೃ. ೩–೯೨); ಎಲೆಮಿಡುಕದೆರಡೊಡ್ಡು ಲೆಪ್ಪದ ಬಲದವೊಲು . . . ಝೊಂಪಿಸಿದುದು (ಕುವ್ಯಾದ್ರೋ. ೧೭–೧೨); ಎಲೆಮಿಡುಕದೆ ತಾವರೆಯು ಎಲೆಯೊಳೊಱಗಿ ನಿದ್ರೆಗೆಯ್ವ ರಾಯಂಚೆ (ಕುರಾಸಾಂ. ೨–೯೬). [ಎಲ್$_1$ + ಮಿಡುಕು$_2$]

**ಎಲೆಯಡಕೆ, ಎಲಡಿಕೆ, ಎಲೆಅಡಿಕೆ, ಎಲೆಯಡಿಕೆ** (ನಾ). ವೀಳೆಯದೆಲೆ ಮತ್ತು ಅಡಿಕೆ; ತಾಂಬೂಲ: ಊಟವಾದಮೇಲೆ ಎಲೆಯಡಕೆ ಹಾಕಿಕೊಂಡು ಹೋಗಿ (ರೂಢಿ). **ಎಲಡಿಕೆ:** "ಓಹೋ" ಎಂದು ಎಲಡಿಕೆ ಹಾಕಲುದ್ಯುಕ್ತರಾದರು (ಆಮನಿ. ಹಿನ್ನೆಲೆ). **ಎಲೆಅಡಿಕೆ:** ಎಲೆ ಅಡಿಕೆಯನ್ನು ಮೆಲ್ಲುತ್ತಿರುವಾಗ ರಾಯರು ನಿಧಾನವಾಗಿ ತಮ್ಮ ಕುಲ, ಗೋತ್ರ . . . ವಿವರಿಸಿದರು (ರಾಯಕ. ೪); ಮಗು ಎಲೆ ಅಡಿಕೆ ಚೀಲವನ್ನು ತಲೆ ಕೆಳಗು ಮಾಡಿ ಹೊಗೆಯ ಸೊಪ್ಪನ್ನು ಕೆಳಗೆ ಚೆಲ್ಲಿತು (ರಾಮಾಸೆ. ೧೧೧). **ಎಲೆಯಡಿಕೆ:** ಎಲೆಯಡಿಕೆ ಸುಣ್ಣದಿಂ ಪಲ್ ಕಱೆಯಪ್ಪುದು (ಧರ್ಮಾಮೃ. ೯–೧೦೮); ಗುಡಿಯ ಹಾದಿಯ ಮೇಲಿನ ಎಲೆಯಡಿಕೆ ಅಂಗಡಿಗಳಲ್ಲಿ ತೂಗುಹಾಕಿದ ಆ ವಿಲಾಯಿತಿ ಸೀಮೆ ಚಿತ್ರ (ನಿರಾಭ. ೩೬). [ಎಲ್$_1$ + ಅಡಕೆ$_1$]

**ಎಲೆಯಡಿಕೆ** 'ಎಲೆಯಡಕೆ' ನೋ.

**ಎಲೆಯಪಸುಂಡಿ** (ನಾ). ಒಂದು ಊರಿನ ಹೆಸರು: ಬೆಳ್ವೊಲ ಮೂನ್ನೂಱಱೊಳಗಣ ಭತ್ತಗಾವೆ ಎಲೆಯಪಸುಣ್ಡಿಯಂ ದುಷ್ಟನಿಗ್ರಹ ವಿಶಿಷ್ಟ ಪ್ರತಿಪಾಳನದಿನಾಳ್ದು (ಸೌಇಇ. XI–i, ೩೩–೯; 1026); ಸೌಚಯ್ಯನಾಯಕ . . . ಭತ್ತಗಾವೆ ಎಲೆಯಪಸುಣ್ಡಿಯಂ (ಸೌಇಇ. XI–i, ೮೯–೮; 1053). [ಎಲ್$_1$ + ಪಸುಂಡಿ]

**ಎಲೆಯಪೊಸವೂರ್** (ನಾ). ಒಂದು ಊರಿನ ಹೆಸರು: ಸೂರ್ಯ ಗ್ರಹಣದನ್ದು ಮುಳುಗುನ್ದ ಪನ್ನೆರಡಱೊಳಗೆವೆಲೆಯಪೊಸವೂರೊಳ್ಳಾಳ್ಗಾವುಣ್ಡಂ ಕೊಱಲಗುನ್ದಂ ತನ್ನ ಕೊಡ[ಂ]ಗೆಯ್ಯೆರಡು ತೋಂಟಕಂ ದೃವ್ಯ[ಪೂ]ರ್ವಕಂಗೊಣ್ಡು (ಸೌಇಇ. XI–i, ೪೭–೧೩; 995). [ಎಲ್$_1$ + ಪೊಸ + ಊರ್]

**ಎಲೆಯಪ್ಪ** (ನಾ). ಎಲೆಯಲ್ಲಿ ಹಿಟ್ಟನ್ನುತಟ್ಟಿ ಮಾಡುವ ಒಂದು ಬಗೆಯ ರೊಟ್ಟಿ; ಕೆಂಡರೊಟ್ಟಿ. [ಎಲ್$_1$ + ಅಪ್ಪ$_6$]

**ಎಲೆಯಬೊಜಂಗ, ಎಲೆಯಬೊಜಗ** (ನಾ). ಎಲೆಯ ವ್ಯವಸಾಯ ಮತ್ತು ವ್ಯಾಪಾರ ಮಾಡುವವರ ಸಂಘ (?): ಈ ಧರ್ಮಮಂ ಗಾವುಣ್ಡನುಂ ಮೂವದಿಂಬರುವೆಲೆಯಬೊಜಂಗರ್ ನೂಱನಾಲ್ವರುಂ . . . ಪ್ರತಿಪಾಳಿಸುವರ್ (ಎಇ. XVI, ೮೫–೩೭; 1067). **ಎಲೆಯಬೊಜಗ:** ಬ್ರಹ್ಮೇಶ್ವರ ದೇವರ್ಗ್ಗುರಗುರಮೂನೂರ್ವ್ವರುಂ ಯೆಲೆಯಬೊಜಗರಯ್ನೂಱ ನಾಲ್ವರುಮಶೇಷಮಿರ್ದ್ದು (ಮುಂಬರಾ. XI, ೨೫೪–೨೮; 1144); ಕೊಯಿಲಾಳಿ ಕೊಯ್ದುಕುಡುವರ್ ಯೆಲೆಯಬೊಜಗರಿಂದು ಕುಡುವರ್ ಅರಸಧಿಕಾರಿಗಳ್ ಸುಂಕವಂ ಮನ್ನಿಸುವರ್ (ಮುಂಬರಾ. XII, ೧೫–೪೮; 1223). [ಎಲ್$_1$ + ಬೊಜಂಗ]

**ಎಲೆಯಬೊಜಗ** 'ಎಲೆಯಬೊಜಂಗ' ನೋ.

**ಎಲೆಯಿಕ್ಕು** (ಕ್ರಿ). ಎಲೆಬಿಡು; ಚಿಗುರು: ತಳ್ತ ಬಣ್ಣವಣ್ಣದ ಗುಡಿತೊಂಬೆ ಗೊಂಚಲೆಸೆ[ಲೆ]ಯಿಕ್ಕಿದ ಕಾವಣಮೆಲ್ಲಿಯುಂ ಪೊದೆಱ್ದೊದವಿರೆ (ಪಂಪಭಾ. ೩–೩೮); ಕಾಡುಂ ದಲೆಲೆಯಿಕ್ಕಿ ಘಳಿಲೆನೆ ನಿಂದುವು ತಣಿದುವು ಮೃಗಂಗಳೆತ್ತಲುಂ (ಪಂಪಭಾ. ೫–೩೭); ಎಲೆಯಿಕ್ಕಿದ ಪೆರ್ಮರಗಳಿಡಿದಡವಿಯೊಳದೇಂ ಕರೆದುವೊ ಸೀರುಡುಗಳ್ (ಜಗವಿ. ೧೭–೬೦). [ಎಲ್$_1$ + ಇಕ್ಕು]

**ಎಲೆಯಿಡು** (ಕ್ರಿ). (ಊಟಕ್ಕೆ) ಎಲೆಯನ್ನು ಹಾಕು; ಎಲೆಯನ್ನು ಹಾಸಿ ಊಟಕ್ಕೆ ಸಿದ್ಧಮಾಡು: ಸರಸ್ವತಿ ಊಟಕ್ಕೆ ಎಲೆಯಿಟ್ಟು ಕರೆದಳು (ಮಂಗಾಮು. ೬೪). [ಎಲ್$_1$ + ಇಡು$_1$]

**ಎಲೆಯುಗುರು** (ನಾ). ವೀಳೆಯದೆಲೆಯನ್ನು ಕೊಯ್ಯಲು ಉಪಯೋಗಿಸುವ ಉಗುರಿನ ಆಕಾರದ ಉಕ್ಕಿನ ಉಪಕರಣ: ಎಲೆಯುಗುರು ಹಾಕಿಕೊಂಡು ಎಲೆ ಕೊಯ್ಯುತ್ತಾರೆ (ರೂಢಿ). [ಎಲ್$_1$ + ಉಗುರು (< ಉಗುರ್$_1$)]

**ಎಲೆವಡೆ** (ಕ್ರಿ). ಎಲೆಬಿಡು; ಚಿಗುರು: ಮೊಳೆತುದಾ ಮನುವಿಂ ವಿಕುಕ್ಷಿಯೊಳೆಳೆಸಸಿ ಯನ್ನೈದಿತು ದಿಲೀಪನೊಳೆಲೆವಡೆದುದಾ ರಘುವಿನಿಂ ಪಲ್ಲವಿಸಿತಜನಿಂದ . . . ಸತ್ಯತರು (ತೊರರಾ. ೨–೩–೨೪). [ಎಲ್$_1$ + ಪಡೆ$_1$]

**ಎಲೆವನಿ** (ನಾ). ೧. ಎಲೆಗಳಿಂದ ಉದುರುವ ನೀರಿನ ಹನಿ,—ಇಬ್ಬನಿ: ಚಳಿಗಾಱದೆ ಪೇರಾಲದ ಕೆಳಗಿರ್ಪನಿತಱೊಳೆ ಚಪಲಕಪಿ ನಿಡುಗೋಡಂ ಸೆಳೆದಲುಗೆ ಸೂಸುವೆಲೆವನಿಗಳಿನೊರ್ವಂ ನೆನೆದು ನಡುಗಿ ಸಿಡಿಮಿಡಿಗೊಂಡಂ (ರಾಜಶೇ. ೯–೨೪). ೨. ಎಲೆಯಮೇಲೆ ಕುಳಿತ ನೀರಿನ ಹನಿ: ಆವ ಮರಮಿದು? . . . ಬಿರಿನನೆ ನಾರು ಬೀರದೇಂ? ತಟಕದೀ ಎಲೆವನಿ ಇದೇನು? (೧೪ವಿಂ. ೨೮–೪೦). [ಎಲ್$_1$ + ಪನಿ$_2$]

ಎಲೆವನೆ, ಎಲೆಮನೆ (ನಾ). ಎಲೆಗಳನ್ನು ಛಾವಣಿಯಾಗಿ ಹೊದಿಸಿ ಮಾಡಿದ ಮನೆ; ಪರ್ಣಶಾಲೆ: ಚಾಪವ ತೆಗೆದುಕೊಳುತೆಲೆವನೆಯ ಹೊಱವಂಟನು ರಘುಪ್ರಭವ (ತೊರರಾ. ೬-೬-೫); ಸೀತೆ ಮೈದುನನೆಲೆ ವನೆಗೆ ಕರೆಯಿಸಿದಳು (ಶೇಷರಾ. ೨೭೮-೪). ಎಲೆಮನೆ: ಮೃಕಂಡುವಿ ನೆಲೆಮನೆಯ [ಪಾಠಾಂ. ವನೆಯ]ಕಂಡವರು ಹೊಕ್ಕರು (ತೊರರಾ. ೪-೧೧-೧). [ಎಲೆ$_1$ + ಮನೆ]

ಎಲೆವನೆಗಾತಿ (ನಾ). ಪರ್ಣಶಾಲೆಯಲ್ಲಿರುವವಳು; ತಾಪಸಿ: ನನೆ ಗೋಲನುಪಟಳದಲಿ ಭ್ರಾಂತಿಗೊಂಡಿರ್ದ ವನಚರ ಪೂತ ಸಂಪಗೆಯ ಕೊನೆಗಳ ಮುಱಿದಿಡಲಂಜಿ ತಾಪಸರೆಲೆವನೆಗಾತಿಯರನಪ್ಪಿದರು (ಮೋಹತ. ೭-೧೫). [ಎಲೆವನೆಗಾಱ$_0$ + -ತಿ$_1$ (< -ಇತ್ತಿ)]

ಎಲೆವರದ (ನಾ). ವೀಳೆಯದೆಲೆಯ ವ್ಯಾಪಾರಿ: ಕುಡತಕ್ಕುದೆನಿತದನೆ ಇರ್ಮಡಿಸಿ ಕುಡಲ್ಕುದುವೆ ಕೊಂಬ ಕೋವಿದರ್ಗಂದಂ... ಕುಡುವೆನಿದೇ ಕೊಳ್ಳೈ ನೀಂ ನಡುವೀದಿಯೊಳೊಪ್ಪಲಾರ್ಪರೇ ಎಲೆವರದರ್ (ಚಿಕವಿ. ೬-೫೬). [ಎಲೆ$_1$ + ಪರದ$_1$]

ಎಲೆವರದು (ನಾ). ವೀಳೆಯದೆಲೆಯ ವ್ಯಾಪಾರ: ಗಟಿವಿಡಿದಾಡುವ ದೀವಿಗೆವಿಡಿವ ಎಲೆವರ [ಪಾಠಾಂ. ವಿಡಿ, ವರಿ, ವೊರಿ] ದಾಡುವನೊಳಂ ಅಟಿಗಪ್ರತ್ಯಯಮುಕ್ಕುಂ (ಶಮದ. ೨೦೪ ವೃತ್ತಿ). [ಎಲೆ$_1$ + ಪರದು]

ಎಲೆವಸರ (ನಾ). ವೀಳೆಯದೆಲೆಯ ಅಂಗಡಿ: ಅಡರ್ದೆಲೆವಳ್ಳಿಗಳೆಲೆಯಂ ಪಿಡಿದಿರ್ಪೆಳಗೌಂಗಿನಲ್ಲಿ ತರತರದಿಂ ನೇರ್ಪಡೆ ಸಮದೆಲೆವಸರದವೊಲ್ಕಡು ಚೆಲ್ವಂ ಪಡೆದು ತೋರ್ಪುರ್ವೀ ಬನದೆಡೆಯೊಳ್ (ಕಬ್ಬಿಕಾ. ೧೦೩). [ಎಲೆ$_1$ + ಪಸರ]

ಎಲೆವಸ್ತ್ರ, ಎಲವಸ್ತ್ರ (ನಾ). ಬಣ್ಣದ ಕರವಸ್ತ್ರ, —ಚೌಕ; ಸಣ್ಣವಸ್ತ್ರ; ವಲ್ಲಿ: ನೆತ್ತಿಗೆ ಎಲೆವಸ್ತ್ರವನ್ನು ಸುತ್ತಿಕೊಂಡು (ನಡೆವಾ. II, ೧೧೨೪); ಎಲೆವಸ್ತ್ರ ಹೊದೆದು ... ಕೈಯಲ್ಲಿ ನಾಗರಬೆತ್ತ ಹಿಡಿದು ಅರಸುಮರ್ಜಿಯಿಂದಲೇ ಹೊರಟದ್ದರು (ದೇವಹಂ. ೧೧೦). ಎಲವಸ್ತ್ರ: ಕಿಸೆಯಿಂದ ಎಲವಸ್ತ್ರವನ್ನು ತೆಗೆದು ಮೊಗದ ಬೆವರನ್ನೊರೆಸಿದೆ (ಸೀತಾರ. ೨೫). [ಎಲೆ$_1$ + ವಸ್ತ್ರ. / ತುಳು. ಎಲತ್ರ, ಎಲಸ್ತ್ರ]

ಎಲೆವಳ್ಳ (ನಾ). ಒಂದು ಹಳ್ಳದ ಹೆಸರು: ಶ್ರೀಮತ್ಸರಟವುರದ ಮಹಾ ಜನವಿನ್ನೂರ್ವ್ವರುಮಿಟ್ಟು ಎಲೆವಳ್ಳದಿಂ ಮೂಡಲು ಪನ್ನಿರ್ಮ್ಮತ್ತರ್ಕೆಯ್ಯ (ಸೌಇಇ. XI-i, ೧೧೧-೩೦; 1071). [ಎಲೆ$_1$ + ಪಳ್ಳ]

ಎಲೆವಳ್ಳಿ (ನಾ). ವೀಳೆಯದೆಲೆಯ ಬಳ್ಳಿ; ಎಲೆಹಂಬು: ಸೊಗಯಿಸಿ ಬಂದ ಮಾಮರನೆ ತಳ್ತೆಲೆವಳ್ಳಿಯೆ ... ಅವ ನಂದನವನಂಗಳೊಳಂ (ಪಂಪಭಾ. ೪-೨೪); ಪಾರಿಜಾತ ಪುನ್ನಾಗವಶೋಕೆ ಕೆತ್ತಲಿಸುತಿಪ್ಪೆಲೆ ವಳ್ಳಿಗಳಿಂ ಮುದಾಳಿಯಿಂ ಶ್ರೀಗಿದು ಜನ್ಮಭೂಮಿಯೆನಿಕುಂ (ಕಇ. I, ೭೦-೯; 1222); ಮಿಂಡಿಯರಿಗೆ ಬುದ್ಧಿಗಲಿಸುವಂತೆಲೆವಳ್ಳಿ ಮುಂಡಿಗೆಗಳ ನಡರಿದುವು (ಮೋಹತ. ೨೪-೫೩). [ಎಲೆ$_1$ + ಬಳ್ಳಿ]

ಎಲೆವಚ್ಚೆ (ನಾ). ಎಲೆಯ ಹಾಸಿಗೆ; ಪರ್ಣಶಯ್ಯೆ: ಶರನಿಧಿಯಲ್ಲಿ ಯೂಲದೆಲೆವಟ್ಟೆಯೊಳಿರ್ದಪೆ ಭೀತಿನಾಶನಾ (ವಸ್ತವಂ. ೩-೨೨). [ಎಲೆ$_1$ + ಪಟ್ಟೆ$_2$]

ಎಲೆವಾದುರ (ನಾ). ಒಂದು ಬಗೆಯ ಸೊಪ್ಪಿನಿಂದ ಮಾಡಿದ ಪಲ್ಯ ದಂತಹ ಅಡಿಗೆ: ಮೂಲಗೆ ಬಳ್ಳೆ ಕೆಂಬರುಹೆ ಮೊದಲಾದ ನಾಳಮನು ಳ್ಳೆಲ್ಲಾ ಎಲೆವಾದುರಂಗಳು (ಪಸಾರ. ೬೩೪-೨೦); ಅನೇಕ ತೆಱದ ಪರಿ ಪರಿಯ ಭಕ್ಷ್ಯಮಂ ತಾಳಿದ ಎಲೆವಾದುರ ಪಲ್ಲೆಹ ಸೀಕರಣೆ ಪೋಲಿಕೆ ಪಾನ ಪಳಿದ್ಯಮೆಂಬ ನಾನಾ ಭಿನ್ನರುಚಿಯ ಶಾಕಂಗಳುಂ (ಧರ್ಮಪ. ೨-೫೬ ವ); ಸುರುಚಿರ ಚಕ್ಕವತಂ ಚಿಲಿಕಿಱಿಕೆ ರಾಜಗೀಱಿಕೆ ಕೆಸವುಂ ಸುಗ್ಗೆ ದೊಗ್ಗಳೆ ಯೆಲೆವಾದುರಮಂ ಬಡಿಸಿದರ್ (ಧರ್ಮಪ. ೨-೫೭). [ಎಲೆ$_1$ + ಮಾದುರ]

ಎಲೆವಾಸು (ನಾ). = ಎಲೆವಟ್ಟೆ: ಪೊಂಬಾಳೆಯ ಕಂಗೊಳಿಪ್ಪ ತಿರುಳೊ ಳ್ಪಿಲೆವಾಸಿನೊಳಂ ಸರ್ವಭೂಪಾಳಕ ಮಸ್ತಕಸ್ಥಿತಪದಾಂಬುಜನುದ್ಭಟ ದೇವನೊಪ್ಪಿದಂ (ಉದ್ಭಟ. ೨-೧೦೩). [ಎಲೆ$_1$ + ಪಾಸು$_2$]

ಎಲೆವಿಜ್ಜಣಿಗೆ (ನಾ). ಎಲೆಯ ಬೀಸಣಿಗೆ: ಮಿಳಿರ್ವೆಲೆ [ಪಾಠಾಂ. ಳ] ವಿಜ್ಜಣಿಗೆಗಳಿಂ ಕಿರ್ದೆಲಗಗಂ ಕಾಂತೆ ಕರಮೆ ಹಂಗಿಗೆಯಾದಳ್ (ಚಂದ್ರಪ್ರ. ೫-೧೨೨); ಈಯೆಲೆವಿ [ಪಾಠಾಂ. ಯಲರ್ವಿ]ಜ್ಜಣಿಗೆಯನಿನಿ ತಾಯಾಸದೆ ಬೀಸುವೆಳೆ (ಚಂದ್ರಪ್ರ. ೮-೯೦). [ಎಲೆ$_1$ + ಬಿಜ್ಜಣಿಗೆ]

ಎಲೆವುಲಿ 'ಎಲಹುರಿ' ನೋ.

ಎಲೆವೇಱು, ಎಲೆಹೇಱು (ನಾ). ಎಲೆಯ ಪೆಂಡಿ, —ಮೊಟ್ಟೆ; ವೀಳೆಯದೆಲೆಯ ಹೇರು, —ಪೆಂಡಿ: ಬಣ್ಣವೇಱಿಗೆ ಅಯ್ದುವಿ[ೞ] ಸಮಂ ಎಲೆವೇಱಿಗೆ ಅಯ್ವತ್ತು (ಇಆ. VIII, ೨೮೬-೫೮; 732). ಎಲೆಹೇಱು: ಕಲವೊಱಿಗೆ ೫ ಎಲೆಹೇಱಿಂಗೆ ೧೦೦ ಉಪ್ಪುಹೇಱಿಂಗೆ ಮಾನ ೨ (ಎಇ. VII, ಶಿವಮೊ. ೮೮-೫೦; 1203). [ಎಲೆ$_1$ + ಪೇಱು$_2$ (< ಪೇಱ್$_2$)]

ಎಲೆಸವುಟು (ನಾ). ಸೌಟನಲ್ಲಿ ಒಂದು ಬಗೆ; ಕಡಚಿ (ಕ). [ಎಲೆ$_1$ + ಸವುಟು]

ಎಲೆಸುಜ್ಜಲಬಾಗೆ (ನಾ). ಒಂದು ಗಿಡದ ಹೆಸರು: (ನೈಘಗಿ. ೪-೬೩). [ಎಲೆ$_1$ + ಸುಜ್ಜಲ + ಬಾಗೆ$_1$]

ಎಲೆಹಾವು (ನಾ). ಹಾವುಗಳಲ್ಲಿ ಒಂದು ಬಗೆ: ನಮ್ಮ ದೇಶದ ಪುಟ್ಟ ಹಾವುಗಳಲ್ಲಿ ಕಿಡಂಬಳ, ಎಲೆಹಾವು, ನೀರೊಳ್ಳೆಗಳು ಮುಖ್ಯ (ಬಾಲಪ್ರ. I, ೧೬). [ಎಲೆ$_1$ + ಹಾವು (< ಪಾವು$_1$)]

ಎಲೆಹುರಿ 'ಎಲಹುರಿ' ನೋ.

ಎಲೆಹುಲಿ 'ಎಲಹುರಿ' ನೋ.

ಎಲೆಹೇಱು 'ಎಲೆವೇಱು' ನೋ.

ಎಲೆಹೊನ್ನೆ (ನಾ). ಒಂದು ಗಿಡದ ಹೆಸರು: ಎಲೆಹೊನ್ನೆಯ ಬೇರಂ ಅಂಬಿಲದಲ್ಲಿ ಅರೆದು ಮಂತ್ರಿಸಿ ಕುಡಿಯೆ ನಿರ್ವಿಷ (ವಿಷ್ವೈನಿ. ೯೩). [ಎಲೆ$_1$ + ಹೊನ್ನೆ (< ಪೊನ್ನೆ)]

ಎಲೇ$_1$ 'ಎಲ್ವೆ' ನೋ.

ಎಲೇ$_2$ 'ಎಲ್ವೆ' ನೋ.

ಎಲ್ವೆ 'ಎಲ್ವೆ' ನೋ.

ಎಲೊ, ಎಲೋ (ಅ). ತಿರಸ್ಕಾರದಿಂದ ಗಂಡಸರನ್ನು ಸಂಬೋಧಿಸು ವಾಗ ಬಳಸುವ ಮಾತು: ಎಲವೆಲವೊ ರಜಕಾ ನಿಲ್ಲೆಲೊ ಪೋಡೊಡೆ ಕಂಸನಾಣೆ (ಜಗು. ೬-೪); ಎಲೊ ಶ್ರವಣ ಇದು ಧರ್ಮವೇ (ಬಸವು. ೪೯-೯); ಹಲವು ಕಾಲ್ನಡೆ ಇವನಿಗುಂಟಲೊ, ಸುಲಿದು ತಿನ್ನಲು ಬಂದಿಹ (ಕವಪು. ೧೯-೪). ಎಲೋ: ಎಲೋ ಹುಡುಗಾ ಏನು ಮಾಡು ತ್ತಿರುವೆ? (ರೂಢಿ). [?]

ಎಲೋ 'ಎಲೊ' ನೋ.

ಎಲ್ಗಟ್ಟು, ಎಲುಗಟ್ಟು (ನಾ). ಎಲುಬಿನ ಕಟ್ಟು; ಮೂಳೆಯ ಸೇರುವೆ; ಎಲುಬಿನ ಜೋಡಣೆ: ಷಡ್ವಿಧ ಸಂಹನನ ನಾಮೋದಯಂ ಯಥಾಕ್ರಮದಿಂ ವಜ್ರದೇ[ದೆ]ಲ್ಗಟ್ಟುಂ ವಜ್ರದ ಸುತ್ತುಂ ... ನಾರಾಚ ವಿದ್ಧಮುಮಪ್ಪೆಲ್ಗಟ್ಟುಳ್ಳ ತೃತೀಯ ನಾರಾಚ ಸಂಹನನಮಂ ... ಮಾಱ್ಕುಂ (ತತ್ತ್ವಪ್ರ. ೫೯೬). ಎಲುಗಟ್ಟು: ಅಸಂಪ್ರಾಪ್ತ ಸೃಪಾಟಿಕಾ ಸಂಹನನ ನಾಮೋದಯಮೊಂದೊಂದಂ ಮುಟ್ಟದೆಲುಗಟ್ಟಂ ಮಾಳ್ಪುದು (ಪಸಾರ. ೨೮-೧೦). [ಎಲ್$_0$ (< ಎಲ್ವು) + ಕಟ್ಟು$_2$]

ಎಲ್ಲ 'ಎಲ್ಲದು' ನೋ.

ಎಲ್ಲಂ 'ಎಲ್ಲದು' ನೋ.

**ಎಲ್ಲದು** (ಸ). ರೂಪಗಳು (ಬಹುವ). ಎಲ್ಲರು, ಎಲ್ಲರೂ, ಎಲ್ಲವರು, ಎಲ್ಲವು, ಎಲ್ಲಾರು, ಎಲ್ಲಾವರು (ವಿಶೇ). ಎಲ್ಲ, ಎಲ್ಲಂ, ಎಲ್ಲಮುಂ, ಎಲ್ಲಾ; ಎಲ್ಲಾದು; ಎಲ್ಲಾನು; ಸಕಲವನ್ನು ಸೂಚಿಸುವ ಸರ್ವನಾಮ; ಸರ್ವ; ಅಖಿಲ; ಸಮಸ್ತ: ಅದುವಿದುವುದುವಾವುದುವೆಲ್ಲದು ಪೆಜತೇನ್ ಪೆಜದೆನಿಪ್ಪ ಶಬ್ದಂಗಳ್ ತಪ್ಪದೆ ಸರ್ವನಾಮಮುಮಕ್ಕುಂ (ಶಮದ. ೭೮); ಎಲ್ಲದಕ್ಕೆ ಬಡತನವಾದರೆ ಹಿಡಿತುಂಬ ಗಡ್ಡಕ್ಕೂ ಬಡತನವೇ (ಗಾದೆ). **ಎಲ್ಲರು**: "ಸರ್ವಂ – ಎಲ್ಲರು" (ಕಾಶಕ್ಕ. ೩೦); ಧರ್ಮವಜೆವವರೆಲ್ಲರುವೊಡೆಯರಾಗಿ (ಇಆ. XVIII, ೧೩೯–೨೫; 999); ಕೆಲಬಲದ ಭಟರೆಲ್ಲರಿಗೆ ಕೈವೀಸಿ (ಕುವ್ಯಾದ್ರೋ. ೨–೩೦); ಅಲ್ಲದೆ ಕೆನೆಮೊಸರಶನವ ಕರೆಕರೆದೆಲ್ಲರಿಗುಣಬಡಿಸುವರು (ಮೋಹತ. ೨–೩೨). **ಎಲ್ಲರೂ**: ಎಲ್ಲರೂ ನಕ್ಕರೆ ಹುಚ್ಚ ತಾನೂ ನಕ್ಕ (ಗಾದೆ); ಎಲ್ಲರೂ ಪಾಲಕೀಲಿ ಕೂತರೆ ಹೊರೋರು ಯಾರು (ಗಾದೆ); ಎಲ್ಲರೂ ಹೆಣ್ಣು ಹೆತ್ತರೆ ಮಾರಮ್ಮ ಮರಿಗೆ ಹೆತ್ತಳು (ಗಾದೆ). **ಎಲ್ಲವರು**: ಎಲ್ಲವರನು ಮೆಚ್ಚಿಸುವರೆ ನಾ ಪೇಳ್ವುದಿಲ್ಲ (ಶ್ರೀಪಾಲ. ೧–೧೯); ದಾಸಿಯರು ನಿನಗೆ ತನ್ನ ವಿಳಾಸಿನಿಯರೆಲ್ಲವರು (ನಿಭಾಗ. ೪–೧೭–೨೭); ಎಲ್ಲವರು ಕುಶಲಿಗಳೆ (ತುರಂಗ. ೩೯–೩೦); ಇಳೆಯ ಪಾಲಕರೆಲ್ಲವರ ನಿಶ್ಚಲ ಪ್ರೇಮ (ರಘುವಂ. ೧೪೭–೬೨). **ಎಲ್ಲವು**: ಅದುಳ್ಳುವು ಸಂಜ್ಞೆಗಳೆಂದೆಂಬೊಡೆ ಎಲ್ಲವಕ್ಕಂ ಅತಿ ಪ್ರಸಂಗಂ (ತತ್ತ್ವಪ್ರ. ೯೯); ಅಲ್ಲಿ ನೀನೊಲಿದಂತೆ ಮಾಡಿನ್ನೆಲ್ಲವೇತಕೆ (ಕುವ್ಯಾದ್ರೋ. ೪–೧೦). **ಎಲ್ಲವೂ**: ತುಪ್ಪ ಮೊಸರು ಮೊದಲಾದ ಅವೆಲ್ಲವೂ (ನಾಚಿರಾ. ಕಿ). **ಎಲ್ಲಾರು**: (ಕಿ). **ಎಲ್ಲಾವರು**: ಪ್ರಸಿದ್ಧವಾಗಿಯೆಲ್ಲಾವರಿಗೂ ತಿಳಿಸಿದ ಕಾಲದಲ್ಲಿ ಬರೆಸಿದ ಪ್ರಕಾರ (ರಾಜೇಂದ್ರ. ೮೮). **ಎಲ್ಲ**: ಎಲ್ಲಮಾನ್ ಸರ್ವ್ವಪರಿಹಾರಂ (ಎಕ. VI, ಕೊಪ್ಪ. ೩೮–೬; 675); ಪಗೆವರೆಲ್ಲಮನ್ (ಎಇ. I, ೩೫೦–೩; 900); ಎಲ್ಲ ಕೂಟಣ ಉಣ್ಬೊದು (ಎಕ. III, ಶ್ರೀರಂಗ. ೧೩೪–೧೮; 910); ಕಾಲಮೇಘ ಸಮೂಹಂ ದೆಸೆಯೆಲ್ಲಮಂ ಕವಿದುದೋ (ಪಂಪಭಾ. ೪–೪೯); ಗಣಪ್ರಧಾನರ್ನಿರ್ದೆಲ್ಲಮಂ ಕೇಳ್ದು (ಪಂಚತಂ. ೧೨–೧೭); ಬ್ರಹ್ಮ ವಿಷ್ಣು ರುದ್ರರಿವರೆಲ್ಲ ಒಂದು ಬ್ರಹ್ಮಾಂಡದೊಳಗಣ ಬಾಲಕರು (ಆದವ. ೪); ಅರೆಮೆಯ್ಯೆಣ್ಣರೆಭೋಗಮೆಲ್ಲ ಸೊಗಮುಂ ವೇಶ್ಯಾಜನಕ್ಕೆ (ಸೋಮೇಶ. ೬೦); ಎಲ್ಲ ತೆಱದಿಂ ನಿಮಗೆ ದೂರವಪ್ಪೆಂ ದೇವ (ಬಸರ. ೧–೭೪); ಬಲವೆಲ್ಲ ನೀರಲಿ ನೆರೆದುದೋ (ಕುವ್ಯಾದ್ರೋ. ೩–೧೭); ಪಾಪವ ಕೆಡಿಸಿ ಪುಣ್ಯವ ಮಾಡಿ ಸ್ವರ್ಗಕೆ ಪೋಪೆವೆಂಬುವರೆಲ್ಲ ಕೇಳಿ (ಭರತ. ೧–೧೭). **ಎಲ್ಲಂ**: ದಕ್ಷಿಣಾ ದೆಸೆಗೆಲ್ಲಂ ತೋಱಿಎ (ಮೈಆರಿ. ೧೯೩೬, ೫೩–೨೬; 550); ಅರ್ಥಶೂನ್ಯಮೆಂಬುದು ದುರುಕ್ತಮಿದನಿಂತು ಪೇೞ್ವುದೆಲ್ಲಂ ಹೀನಂ (ಕವಿರಾ. ೧–೮೦); ಒಡನೆ ದರಿದ್ರರೆಲ್ಲಮಭಿಮಾನಿಗಳಪ್ಪೊಡಂ (ಕಾವ್ಯಸಾ. ೪೨೩ ಶೂದ್ರಕ); ನಾನಾ ವಿಧದ ಪದೆಪಿನೊಳ್ ಹರಿಗಾವಗಮಾಜಿದುದು ಪಥಪರಿಶ್ರಮಮೆಲ್ಲಂ (ಪಂಪಭಾ. ೯–೨೮); ಎಲ್ಲಂ, ಅಲ್ಲಂ (ಶಬ್ದಾನು. ೨೦ ಉದಾ). **ಎಲ್ಲಮುಂ**: ಅಗ್ಗದರಣ್ಯಮೆಲ್ಲಮುಂ ನೆಲಸರಿಯಪ್ಪಿನಂ (ರಾಜಶೇ. ೬–೩೪). **ಎಲ್ಲಾ**: "ಎಲ್ಲಾ ಎಂಬರ್ಥಮಪ್ಪುದೆಲ್ಲೆನ್ನಲ್ ತಾಂ" (ಕವಿಕಂ. ೨೬೮); ಎಲ್ಲಾ ಕಾಲಕ್ಕಂ (ಎಕ. I, ೩–೯; 890); ಈತನನೆಮಗೊಪ್ಪಿಸಿಮೆಲ್ಲಾಶಾಸ್ತ್ರಂಗಳುಮಂ ಕಲ್ಪಿಸಿ (ವಡ್ಡಾರಾ. ೭೪–೬); ಎಲ್ಲಾ ಕವೀಂದ್ರರ್ ಪೊಗಳೆ (ಗಿರಿಕ. ೧–೪೨); ಎಲ್ಲಾ ದೋಷ ಬೆಲ್ಲದಲ್ಲಿ ಪರಿಹಾರ (ಗಾದೆ); ಎಲ್ಲಾ ಬಣ್ಣ ಮಸಿ ನುಂಗಿತು (ಗಾದೆ). **ಎಲ್ಲಾದು**: ಎಲ್ಲಾದರಲ್ಲು (ಸಿದ್ಧಾಂತಿ. ೩೪೯ ಕಿ). **ಎಲ್ಲಾನು**: (ಕಿ).

ಎಲ್ಲಾಗ, ಎಲ್ಲಾಗಲೂ, ಎಲ್ಲಾಗಳೂ = ಎಲ್ಲಾ ಕಾಲದಲ್ಲಿ; ಯಾವಾಗಲೂ; ಸದಾ: ಎಲ್ಲಾಗವೂ ಆತ್ಮೀಯವಾದ ತನುತ್ರಯದಲ್ಲಿ ತೊಳಗದಿರ್ದಾತನಾಗಿಯೇ ಪೂಜಿಸುತಿರ್ಪರು (ಪರಮಾ. ೪); ಸದಾ–ಎಲ್ಲಾಗಲೂ (ಬಾಹಟೀ. ೨–೧–೪೩); ಎಲ್ಲಾಗಳೂ ಶಿವನೊಬ್ಬನೇ ಎರಡನೆಯವನು ಮತ್ತೊಬ್ಬನಿಲ್ಲ (ಮಹಾದೇ. ೧೩೭). ಎಲ್ಲರಮರುಳಂ = ಎಲ್ಲರನ್ನೂ ಮರುಳುಮಾಡಬಲ್ಲವನು; ಒಂದು ಬಿರುದು: ಮಹಾರಾಜಾಧಿರಾಜ ಪರಮೇಶ್ವರನೆಲ್ಲರಮರುಳಂ ತೆರಿವಿಳಾಸ ಮದಗಜಮಲ್ಲನಾನೆವೆಡಂಗ ಶ್ರೀಕನ್ನರದೇವ (ಸೌಇಇ. IX–i, ೭೬–೫; 991).

[ದೇ. ‖ ತಮಿ. ಮಲ. ಎಲ್ಲಾಂ; ಕೊಡ. ಎಲ್ಲಾ; ತೆಲು. ಎಲ್ಲ, ಎಲ್ಲವಾಡು, ಎಲ್ಲರು; ಕೋಲಾ. ಇತ್ತರ್ಎಲ್].

**ಎಲ್ಲಭಟರಿ** (ನಾ). ಒಬ್ಬಾತನ ಹೆಸರು: ಪಶುಪತಿ ನಾಮಧೇಯನಾ ಸರಕ್ಕೆಲ್ಲ ಭಟರಿಯಾ ಪ್ರೇಮಾಲಯಸುತನ್ಗೆ (ಮೈಆರಿ. ೧೯೩೬, ೧೬–೯; 450).

[ಎಲ್ಲ₀ + ಭಟರಿ]

**ಎಲ್ಲಮುಂ** 'ಎಲ್ಲದು' ಪರಾ.

**ಎಲ್ಲಮ್ಮ** (ನಾ). (ಉಕ) ಶಕ್ತಿದೇವತೆಯಾದ ಪಾರ್ವತಿಯ ಒಂದು ರೂಪ: ಎದೆಯಲ್ಲಿ ಎಲ್ಲಮ್ಮನ ನಗಾರಿಯ ಹೊಡೆತ ಮಾತ್ರ ಎದ್ದಿದ್ದುವು (ಜಯಂತ. ೪೩); ಜಗದಂಬ ಸವದತ್ತಿ ಎಲ್ಲಮ್ಮ (ರೂಢಿ).

[ಎಲ್ಲ₀ + ಅಮ್ಮ₂]

**ಎಲ್ಲರು** 'ಎಲ್ಲದು' ಪರಾ.

**ಎಲ್ಲರೂ** 'ಎಲ್ಲದು' ಪರಾ.

**ಎಲ್ಲವರು** 'ಎಲ್ಲದು' ಪರಾ.

**ಎಲ್ಲವು** 'ಎಲ್ಲದು' ಪರಾ.

**ಎಲ್ಲವೂ** 'ಎಲ್ಲದು' ಪರಾ.

**ಎಲ್ಲಾ** 'ಎಲ್ಲದು' ಪರಾ.

**ಎಲ್ಲಾಗ** 'ಎಲ್ಲದು' ಪರಾ.

**ಎಲ್ಲಾಗಲೂ** 'ಎಲ್ಲದು' ಪರಾ.

**ಎಲ್ಲಾಗಳೂ** 'ಎಲ್ಲದು' ಪರಾ.

**ಎಲ್ಲಾದು** 'ಎಲ್ಲದು' ಪರಾ.

**ಎಲ್ಲಾನು** 'ಎಲ್ಲದು' ಪರಾ.

**ಎಲ್ಲಾಯಿ** (ನಾ). = ಎಲ್ಲಮ್ಮ: ಎಲ್ಲಾಯಿ ಯಕನಾತಿ ಬನದ ಶಂಕರಿ ಮಲ್ಲಗ ಜಟ್ಟಂಗ ಮಾಳಿಗೆ ಮನಿದೇವಿ (ವಿಸಾಸು. ೫೮–೨).

[ಎಲ್ಲ₀ + ಅಯ್ಯ₃]

**ಎಲ್ಲಾರು** 'ಎಲ್ಲದು' ಪರಾ.

**ಎಲ್ಲಾವರು** 'ಎಲ್ಲದು' ಪರಾ.

**ಎಲ್ಲಿ₁** (ನಾ). = ಎಲ್ಲಮ್ಮ: ಎಲ್ಲಿ, ಎಕ್ಕನಾದಿ, ಹುಲಿಗೆ, ಹೊಸೂರಿ, ಸತ್ತವರು, ಹೆತ್ತವರು ಇಂತೀ ಹಲವು ಪಿಶಾಚಿಗಳ ಹೆಸರಿಂದ (ವಚಶಾ. I, ೩೩೧). [?]

**ಎಲ್ಲಿ₂** (ನಾ). ಪ್ರಶ್ನಾರ್ಥಕ ದಿಗ್ವಾಚಿ; ಯಾವ ಸ್ಥಳ; ಯಾವ ಸನ್ನಿವೇಶ: ಭೂತಳದೊಳೆಲ್ಲಿಯು ಸೋನ್ನತೆ ಪುಗೆ (ಮೈಆರಿ. ೧೯೩೯, ೨೩–೧೨; 740); ಎಲ್ಲಿ ಕೊಳನೆಲ್ಲಿ ತಣ್ಪುಜಲೆಲ್ಲಿ ಲತಾಭವನಮೆಲ್ಲಿ . . . ರಮಿಯಿಸಿದಳಾಕೆ ಮರು[ದಾ]ತ್ಮಜನೊಳ್ (ಪಂಪಭಾ. ೩–೧೯); ಸುಭಕ್ತಿಯ ಸಮತೆ ಎಲ್ಲಿಹುದಲ್ಲಿ ತಾನಿಹಂ (ಬಸವು. ೧೦–೧೫).

ಎಲ್ಲಾದರು, ಎಲ್ಲಾದರೂ = ಎಲ್ಲಿಯಾನುಂ: ಎಲ್ಲಾದರೂ ಇರು; ಎಂತಾದರು ಇರು; ಎಂದೆಂದಿಗು ನೀ ಕನ್ನಡವಾಗಿರು (ಕೋಗಿಲೆ. ೪೩). ಎಲ್ಲಿಯದು = ಯಾವಸ್ಥಳದ್ದು; ಯಾವ ಕಡೆಯದು: ಮೃತ್ಯು ನಿನಗೊಲಿದಿಹಳು ಬಳಿಕಿನ್ನುತ್ತರೋತ್ತರವೆಲ್ಲಿಯದು (ಕುವ್ಯಾದ್ರೋ. ೧–೨). ಎಲ್ಲಿಯವ = ಯಾವ ಸ್ಥಳದವನು: ಅಯ್ಯನಾರೆನಗಪ್ಪೆ ಯಾರ್ ಪಿರಿಯಯ್ಯನಾರ್ ನೀನೆಲ್ಲಿಯವ (ಬಸವು. ೩–೮೨); ಇಂತೆಂದಂ ನಯದೊಳೆಲ್ಲಿಯ ಕನಕವೀ ಕೆಳ್ಳನೆಲ್ಲಿಯವ (ಬಸವು. ೩೧–೧೬).

ಎಲ್ಲಿಯವಳು = ಯಾವ ಸ್ಥಳದವಳು : ಅವಳೆಲ್ಲಿಯವಳು (ರೂಢಿ). ಎಲ್ಲಿಯಾದರೂ = ಯಾವಸ್ಥಳದಲ್ಲಾದರೂ : (ಮುಂಬಯಿ. ೨-೪೮). ಎಲ್ಲಿಯಾನುಂ = ಎಲ್ಲಿ ಯಾದರೂ : ಸ್ಥಾನಕ್ಕೆ – ಎಲ್ಲಿಯಾನುಂ (ಶಮುದ. ೩೦೩ ಪ್ರಯೋ). **ಎಲ್ಲೆಲ್ಲಿ (ದ್ವಿರುಕ್ತಿ)**: ಎಲ್ಲೆಲ್ಲಿ ಆಡಬಂದೆ ಹೇಳಯ್ಯ ರಂಗ (ಪುರಂದ. ೫-೧೭-೧). **ಎಲ್ಲೆಲ್ಲಿಯುಂ** = ಎಲ್ಲ ಕಡೆಗಳಲ್ಲಿಯೂ : ಎಲ್ಲೆಲ್ಲಿಯುಂ ಶಿವಾಲಯದ ಬಾಗಿಲ್ಗಳವು ಕಲ್ಲಿಂದೆ ಮುಚ್ಚಿದುವು (ಚೆಬಪು. ೩-೧೦). [?]

**ಎಲ್ಲಿತು** 'ಎಲ್ಲಿತ್ತು' ನೋ.

**ಎಲ್ಲಿತ್ತು, ಎಲ್ಲಿತು (ನಾ).** ೧. ಯಾವ ಸ್ಥಳದ್ದು ; ಎಲ್ಲಿಯದು. ೨. ಎಲ್ಲಿ ಇರುವುದು ; ಎಲ್ಲಿಹೋದುದು : ಎಲ್ಲಿದಳೊ ಭಾನುಮತಿ ತಾನೆಲ್ಲಿತ್ತೋ ಲಗಡ ಸೂಳೆಯರ್ಕಳ ತಂಡಂ ಎಲ್ಲಿತ್ತೊ ಗೀತ ವಾದ್ಯಂ ಸಲ್ಲಲಿತ ವಧೂಜನಪ್ರವೃತ್ತಂ ನೃತ್ತಂ (ಗದಾಯು. ೫-೪೩) ; ಇವರಲ್ಲಿ ಧೀರೆಗುಣಮೆಲ್ಲಿತ್ತು (ಎಕ. VII, ಶಿಕಾರಿ. ೧೨೪-೨೧ ; 1077). **ಎಲ್ಲಿತು** : ಮುನ್ನಮಿತ್ತರೆಲ್ಲಿದರಿವರೀಯೆ ಪೆತ್ತವರುಮೆಲ್ಲಿದರಾ ಧನಮೆಲ್ಲಿತಿಂದ್ರಜಾಲದ ಸಿರಿಗೇಕೆ ಮೆಚ್ಚುಡುವಿರ್ (ಗದಾಯು. ೧-೩೫) ; ಈಗಳೆಲ್ಲಿತನಿತೊಂದಾಳಾಪವಾ ವೀರವೃತ್ತಕಂ (ಜಗವಿ. ೧೪-೧೨).

ಎಲ್ಲಿದುವು (ಬಹುವ) : ಎಲ್ಲಿದುವೊ ಧವಳಚಾಮರಮೆಲ್ಲಿತ್ತೋ ಕಾತಪತ್ರಮಹಿಕೇತನ ಮತ್ತೆಲ್ಲಿತ್ತೊ ಮೃಗೇಂದ್ರಾಸನಮೆಲ್ಲಿದುವೋ ಲೋಲಪಾಳಿಕೇತನ ತತಿಗಳ್ (ಗದಾಯು. ೫-೪೨). [ಎಲ್ಲಿ$_2$ + -ತು$_1$]

**ಎಲ್ಲಿದ (ನಾ).** ೧. ಯಾವ ಸ್ಥಳದವನು ; ಎಲ್ಲಿ ಹುಟ್ಟಿದವನು ; ಎಲ್ಲಿಯವನು : ಅಲ್ಲಿಯಾದಂ ಪುಟ್ಟಿದಂ ಮೇಣ್ ಅಲ್ಲಿಯಣಂ ಅಲ್ಲಿದಂ ಏವಂ ... ಎಲ್ಲಿಯಣಂ ಎಲ್ಲಿದಂ (ಶಬ್ದಾನು. ೪೨೨ ಪ್ರಯೋ). ೨. ಎಲ್ಲಿದ್ದಾನೆ : ಮದನನ ಕೈದುವೆಲ್ಲಿದನನಂಗನ ಕೈಪೊಡೆಯೆಲ್ಲಿದಂ (ಆದಿಪು. ೩-೧೫) ; ದಾರಕಮಲ್ಲನೆಲ್ಲಿದನಮಾನುಷಖೇಳನದೆಲ್ಲಿದಂ ವ್ರಜಾಂಭೋರುಹಮಿತ್ರನೆಲ್ಲಿದಂ ... ಎಲ್ಲಿದನಬ್ಜಲೋಚನಂ (ಜಗವಿ. ೩-೯೦).

ಎಲ್ಲಿದಳ್ = ಎಲ್ಲಿಯಿರುವವಳು : ಅಲ್ಲಿದಳ್, ಇಲ್ಲಿದಳ್, ಎಲ್ಲಿದಳ್ (ಶಬ್ದಾನು. ೧೮೨ ಪ್ರಯೋ). 'ಅಲ್ಲಿದ', 'ಇಲ್ಲಿದ' ಪರಾ.

[ಎಲ್ಲಿ$_2$ + -ದ$_3$]

**ಎಲ್ಲಿಯಣ (ನಾ).** ೧. = ಎಲ್ಲಿದ ೧ : ಎಲ್ಲಿಯಣಂ, ಎಲ್ಲಿದಂ (ಶಬ್ದಾನು. ೪೨೨ ಪ್ರಯೋ). ೨. ಎಲ್ಲಿಯ : ಇನ್ನೆಲ್ಲಿಯಣ ಭವಬಂಧನವು ತನ್ನ ಮೂಲವ ಕಂಡು ಸುಖಿಯಾದ ಬಳಿಕ (ಕೈಕವ. ೫-೧೫-೧).

[ಎಲ್ಲಿ$_2$ + -ಅಣ್$_3$ + -ಅ$_0$]

**ಎಲ್ಲೆ (ನಾ).** ಮೇರೆ ; ಸರಹದ್ದು ; ಗಡಿ ; ಅವಧಿ : ಕಳ್ಳುಗಾಜಗೆಲ್ಲೇ ಪೊಲ ಎಲ್ಲೇ ಪುಣುಸವ ಬಟ್ಟೆ ಪುಣುಸ ಯೇ ಬೆಳನೆ ಬನ್ದು (ಇಆ. XII. ೧೭-೮೭ ; 735) ; ಅಂತಕನ ಪುರದೆಲ್ಲೆಯಲಿ ಹೆಕ್ಕಳದ ಖುಡುಗದ ಘಲ್ಲಣೆಯ ಖಣಖಣಿಲ ಗಾಢಿಕೆ ಕಂಟಿಸಿತು ನಭವ (ಕುವ್ಯಾಅ. ೧೪-೩೫) ; ಪೊಡರ್ಪಿನಿಂ ಪಿಡಿದುದು ನಿಲ್ಲದಲ್ಲಿಯುಪಶಲ್ಯದ ಬಲ್ವೊಲದೆಲ್ಲೆಯೆಲ್ಲಮಂ (ಚಿಕವಿ. ೨-೧೦೫).

ಎಲ್ಲೆಮಿಾರು = ಹದ್ದುಮಿಾರು ; ಪರಿಮಿತಿಯನ್ನು ಮಿಾರಿ ವರ್ತಿಸು, —ನಡೆ : ಅವನು ಎಲ್ಲೆಮಿಾರಿ ನಡೆಯುತ್ತಿದ್ದಾನೆ (ರೂಢಿ).

[ದೇ. ‖ ತಮಿ. ಎಲ್ಲೈ ; ಮಲ. ತೆಲು. ಎಲ್ಲ]

**ಎಲ್ಲೆಕಟ್ಟು** 'ಎಲ್ಲೆಗಟ್ಟು' ನೋ.

**ಎಲ್ಲೆಗಟ್ಟು, ಎಲ್ಲೆಕಟ್ಟು (ನಾ).** ಎಲ್ಲೆ ; ಅವಧಿ ; ಮೇರೆ ; ಸೀಮೆ ; ಗಡಿ : ಚಾಮುಂಡಿಯ ಗಿರಿಯ ಪಿರಿದೆಲ್ಲೆಗಟ್ಟಗೋಸ್ಕರ ನೆಜಕೆ ವೈರವ ಬೆರಸಿದರೀ ಭೂಪರೊಡನೆ (ಕಂನವಿ. ೩-೧೬) ; ಪಟ್ಟದಯ್ಯ ಪಿರಿದು ಗರ್ವಿಸಿಯೆಲ್ಲೆಗಟ್ಟಗೆ ಮೈಸೂರ ದೊರೆಯೊಳು ಧುರವನೆಸಗಿಹ (ಕಂನವಿ.೧೭-೨). **ಎಲ್ಲೆಕಟ್ಟು** : ಚಟುಃಸೀಮೆಯೆಲ್ಲೆಕಟ್ಟನಲ್ಲಿಯಿರುವ (ಎಕ. I, ೧೩-೨೧, 1796) ; ನೀವು ನಮ್ಮ ರಾಜ್ಯದ ಎಲ್ಲೆಕಟ್ಟು ಪರ್ಯಂತವೂ ಹೋಗಿಬಿಟ್ಟು ಬನ್ನಿ (ಕೃವಾಸ. ೧೦೮) ; ಎಲ್ಲೆಕಟ್ಟು ಇಲ್ಲದಾ ಬಾನ ಬಟ್ಟೆಯಲ್ಲಿದೊ (ಗರಿ. ೧೨೭-೧). [ಎಲ್ಲೆ + ಕಟ್ಟು$_2$]

**ಎಲ್ಲೆಗಲ್ಲು (ನಾ).** ಮೇರೆಯನ್ನು ಗೊತ್ತುಪಡಿಸುವ ಕಲ್ಲು ; ಗಡಿಗಲ್ಲು : ಸಂಗರವನಂಗಜನ ಮುದ್ರಧಾರಿಗಳೆನಿಪ ಪೆಂಗಳುಜಕೆ ಬಿಡಿಸಿ ಬಳಸಿಟ್ಟೆಲ್ಲೆಗಲ್ಲೆನಲು ರಂಗು ಮಾಣಿಕದ ಮಿಸುನಿಯವೊಡ್ಡಿಯಾಣವುಂ ತಂದಿಟ್ಟರಬುಜಾಕ್ಷಿಗೆ (ಚೀರಮು. ೫-೩೨) ; ಎನ್ನಾಳ್ದ ನೆಲನ ಮುಸುಕಿದಿರು ಕೆರೆಯಿಂದಲನ್ನುತ ನೆಟ್ಟೆಲ್ಲೆಗಲ್ಲೊ (ವರ್ಧಸಾಂ. ೭-೫೩).

[ಎಲ್ಲೆ + ಕಲ್ಲು (< ಕಲ್$_3$)]

**ಎಲ್ಲೆಗೂಡಿರು (ಕ್ರಿ).** ಮೇರೆಯಿಂದ ಕೂಡಿರು ; "ಸೇರಿಕೊಂಡಿರು ; ಹೊಂದಿಕೊಂಡಿರು" (Abut. ೩೦೪೧).

[ಎಲ್ಲೆ + ಕೂಡು$_1$ + ಇರು$_1$ (< ಇರ್$_1$)]

**ಎಲ್ಲೆಗೆಡು (ಕ್ರಿ).** ೧. ಮೇರೆಯನ್ನು ಮಿಾರು ; ದಡವನ್ನು ಅತಿಕ್ರಮಿಸು ; ಹದ್ದುಮಿಾರು : ಜುಚ್ಚುಹೊಳೆಯ ದೆಸೆಯಿಂದ ಎಲ್ಲೆಗೆಟ್ಟು ಹರಿದ ನದಿಯ ನೀರು ಹಳ್ಳತಿಟ್ಟುಗಳನ್ನೆಲ್ಲಾ ಜಲಮಯವಮಾಡಿತು (ರೂಢಿ). ೨. (ಆಲಂ) ಮರ್ಯಾದೆ ಮಿಾರು ; ಮಿಾರಿನಡೆ : ಅವನ ಎಲ್ಲೆಗೆಟ್ಟ ನಡೆ ಎಲ್ಲರಿಗೂ ಬೇಸರವನ್ನುಂಟುಮಾಡಿತು (ರೂಢಿ). [ಎಲ್ಲೆ + ಕೆಡು]

**ಎಲ್ಲೆಗೆರೆ (ನಾ).** ಅವಧಿಯನ್ನು ತೋರಿಸುವ ಗೆರೆ ; ಸೀಮಾರೇಖೆ : "(ವ್ಯಾಯಾಮದ ಆಟಗಳಲ್ಲಿ ಆಟದ ಅಂಗಳದ ಅಥವಾ ಅದರ ವಿಶೇಷಭಾಗಗಳ ಎಲ್ಲೆಯನ್ನು ಗುರುತಿಸುವ) ಎಲ್ಲೆಗೆರೆ" (Line – work. ೩೦೪೧). [ಎಲ್ಲೆ + ಗೆರೆ (< ಗೆಜೆ)]

**ಎಲ್ಲೆಗೊಳ್ಳು (ಕ್ರಿ).** ಕೊನೆಯನ್ನು ಮುಟ್ಟು ; ತೀರು : ಎದೆಯೊಲವು ಅಪ್ಪರಿಂದಲೂ ಎಲ್ಲೆಗೊಳ್ಳಲಿಲ್ಲ (ನಾಡೋಜ. ೧೯೨).

[ಎಲ್ಲೆ + ಕೊಳ್ಳು (< ಕೊಳ್$_1$)]

**ಎಲ್ಲೆನಾಡು (ನಾ).** ೧. ಗಡಿಯಲ್ಲಿರುವ ಪ್ರದೇಶ. ೨. ಗಡಿಯ ಸಮಿಾಪದ ನೆರೆಯ ಪ್ರದೇಶ : ಸುತ್ತುಮುತ್ತಲಿನ ಸಾಮಂತರ, ನಾಯಕರ, ಹೆಗ್ಗಡೆಗಳ ಪರಿಚಯವನ್ನೂ ಎಲ್ಲೆನಾಡುಗಳ ಪರಿಚಯವನ್ನೂ ಚೆನ್ನಾಗಿ ಮಾಡಿಕೊಂಡ (ಶಾಂತಲಾ. ೧೪೨). [ಎಲ್ಲೆ + ನಾಡು]

**ಎಲ್ಲೆವೊಲ (ನಾ).** ಎಲ್ಲೆಕಟ್ಟನಲ್ಲಿರುವ ಪ್ರದೇಶ ; (ಒಂದು ಸೀಮೆಯ) ಗಡಿಯಲ್ಲಿರುವ ಪ್ರದೇಶ : ಇಂತಿರ್ಪಮಗೆ ಎಲ್ಲೆವೊಲ ದೆತ್ತಣಿಂ ಆ ರಾಜನೃಪನೊಳ್ ಪಗೆತನಂ ಬಳೆದು ಎಡೆವಿಡದೆ ಕಾದುವೆಡೆಯೊಳ್ (ಚಿಕವಂ. ೧೧-೮). [ಎಲ್ಲೆ + ಪೊಲ]

**ಎಲ್ವು, ಎಲವು, ಎಲು, ಎಲುಬು, ಎಲುವು (ನಾ).** ಮೂಳೆ ; ಅಸ್ಥಿ : "ಅಸ್ಥಿ, ಧಾತು, ಕೀಕಸಂ, ಕುಲ್ಯಂ – ಈ ೪ ಎಲ್ವು" (ಹಲಾಯು. ೧೦೪-೧೦) ; ಮುಜಿದುವು ನಿಟ್ಟೆಲ್ವು (ಎಕ. IV, ಹೆಗ್ಗಡ. ೧೧೬-೧೫ ; 930) ; ಬಿಸುನೆತ್ತರ್ ನೆಣನಡಗೆಲ್ವು ಸಮಸ್ತಂ ಸುರಿಯೆ ಕೈಗೆ ತೊವಲುಜಿಯಲ್ (ಪಂಪಭಾ. ೮-೭೭) ; ನರವಿನ ಪುತ್ತಮೇಧ್ಯದ ತವರ್ಮನೆ ಕೀವಿನ ಕೊಂಡ ಮೆಲ್ವಿನಾಗರಂ ... ಕಳೇವರಂ (ಸಮುಪ. ೬-೩೪). **ಎಲವು** : ಬಗ್ಗಿ ಬಾರೊ ಶಿವನೆ ಹೆಬ್ಬಾಗಿಲ ಬಡಿದಾವು ಮುಗ್ಗಲದ ಎಲವು ಮುರಿದಾವು (ಲೋಕಗೀ. ೧೨೭-೭೭). **ಎಲು** : "ಎಲುಯೆಲುಬು" (ಕಶರ. ೧೭) ; ನೆತ್ತರಿಂದಡಗಿನಿಂ ಮಿದುಳಿಂದೆಲುವಿಂದಮೇಧ್ಯದಿಂ ಬಟಿಕದು ತೀವಿ (ಸಮುಪ. ೧೫-೯೯) ; ಹೊಲೆಯರ ಬಾವಿಯಲೊಂದು ಎಲು ನೆಟ್ಟದ್ದಡೆ ಹೊಲೆಹೊಲೆಯೆಂಬುದು (ದೇವಾವ. ೨೮-೪೭) ; ಬಾಯೆಂಬುದೆಲುವಡಿಸಿದೋವರಿ (ಸಿಂಡೋರ. ೧-೨೨) ; ಉಡಿದವೆಲು ಬಾಣಂಗಳೆಲು ವಾಗಡಸಿದವು (ಕುವ್ಯಾಭೀ. ೧೦-೮) ; ಎಲು ಇಲ್ಲದ ನಾಲಗೆ ಹ್ಯಾಗೂ ಬೊಗಳುತ್ತದೆ (ಗಾದೆ).

**ಎಲುಬು :** ಎಲುಬುಗಳವ ಮಾಡಿ ನರದ ಬಳ್ಳಿಯಲ್ಲಿ ಬಿಗಿಯುತ (ಪುರಂದ. ೧-೧೭೬-೨); ಎಲುಬುಗಳೆಲ್ಲ ಜತೆಯುಮಾಡಿ ನರಬಿಗಿದು ತೊಗಲಿನ್ಹೊದಿಸಿದವನು ನೀನಲ್ಲವೆ (ವಾದಿಕೀ. ೧೫೪-೨); ಪೆಟ್ಟುತಿಂದು ಎಲುಬು ಹುಡಿಮಾಡಿಸಿಕೊಳ್ಳಬೇಕೆಂದು ಬ್ರಹ್ಮ ನಿಮ್ಮ ಹಣೆಯಲ್ಲಿ ಬರೆದಿದ್ದ (ಕುರುಕಾ. ೧೧೯). **ಎಲುವು :** "ಎಲುವಸ್ಥಿ ಕೀಕಸಂ ಮೆಯ್ಯೆಲುವದು" (ವಸ್ತುಕೋ. ೭೨-೨೯); ಎಲುವಿನ ತಡಿಕೆ ಕೀವಿನ ಹಡಿಕೆ ಸುಡಲೀ ದೇಹವ (ಮಹಾದೇ. ೧೪-೩೩); ಮೆಯ್ಯೆಲ್ಲ ಎಲುವಾಗಿ ನಿಲಲು (ಕಾರಿರ. ೨೯೧); ಉರುಳ್ವ ತಲೆಗಳ ಬಸಿವ ಮಿದುಳಿನ ಸುರಿವ ಕರುಳಿನ ಸೂಸುವೆಲುವಿನ (ಕುವ್ಯಾಕ. ೧೦-೯); ಸುಂದರಾಂಗನೆ ಬಂದು ಮುಂದೆ ತಾ ನಿಂದಿರಲು ಸಂದಜೀವನಜೀದ ಜ್ಞಾನಿಯು ಎಲುವಿನ ಹಂದರವ ಕಾಂಬ (ಸರ್ವಜ್ಞ. ೩೯೯); ಎಲುವು ಗಂಟಲಲ್ಲಿ ಸಿಕ್ಕಿತು (ಅಶ್ರಮ. ೯೦).

ಎಲ್ವಡಗಾಗು = ಬರಿಯ ಮೂಳೆ ಮತ್ತು ಮಾಂಸದ ಮುದ್ದೆಯಾಗಿ ಪರಿಣಮಿಸು : ಕರಿಗಳ್ ಭೀಮಂ ಪಿಡಿದಡರ್ದೊಡೆ ಬಾಯ್ವಿಟ್ಟೆಲ್ವಡಗಾದುವು (ಪಂಪಭಾ. ೨-೫); ತನ್ನೆಚ್ಚ ನಿಶಿತಶರಸಂಹತಿಯಿಂದೆಲ್ವಡಗಾಯ್ತು ನಿತು ಮದನೆ ಬಿಲ್ವಲ್ಮೆಯ ಮಾತಮಾನುಷಂ ಮಾಧವನಾ (ಕಾವ್ಯಾವ. ೬೯); ಕಡೆಗೆ ಮುಳಿಸಿಂದ ಎಲ್ವಡಗಾಗುವಂತೆ ಎದುರಾಳಿಯನ್ನು ಮೋದಲೆಳಸಿದನು (ಛಾಮಣಿ. ೭).

[ದೇ. ‖ ತಮಿ. ಎನ್ಪು, ಎಲುಮ್ಬು; ಮಲ. ಎಲ್ಲು, ಎಲುಮ್ಬು; ತುಳು. ಎಲು; ಕೊಡ. ಎಲೀಂಬೀ; ತೆಲು. ಎಮ್ಮು, ಎಮ್ಮುಕ, ಎಮುಕ]

**ಎಲ್ವುದೊಡವು** (ನಾ). ಎಲುಬಿನ ಆಭರಣ : ಗಳದ ರುಂಡಮಾಲೆಯಂ ಕೆಯ್ಯ ಎಲ್ವುದೊಡವಂ ನಿಟ್ಟಿಸಲಾಗದು (ಅದ್ಭುತ. ೫೧-೨೪).
[ಎಲ್ವು + ತೊಡವು]

**ಎವಂಗಲ್** (ನಾ). ಒಂದು ಊರಿನ ಹೆಸರು : ಬೆಳ್ವಣಿಗೆಯಳೊನ್ದು ಮಟವಿಜ್ಞ[ಕಾ]ಗುಡಿದ ಎವ(ಂ)ಙ್ಗಲ್ಲಳೊನ್ದು ದೇಗುಲಕೆ ಒನ್ದುಗದ್ಯಾಣ (ಸೌಇಇ. XI-i, ೩೫-೮; 933). ℙ ಈಗಿನ ಯಾವಗಲ್ ಎಂಬ ಊರು. [?]

**ಎವರ್ಣ** (ನಾ). ಎಕಾರ ಮತ್ತು ಏಕಾರ : ಅತ್ವದಿನಿವರ್ಣದಿಂ ಮತ್ತೋತ್ವದಿನ್ನೆತ್ವದಿನೆವರ್ಣದಿಂ ಮುಂದಕ್ಕುಂ ಯತ್ವಮುದವಧಾರಣೆ ಪರಮತ್ವಂ ಪಿಂತಾಗೆ ಷಷ್ಠಿನಿಯಮದೆ ಯತ್ವಂ (ಶಮದ. ೫೩). [ಸಂ.]

**ಎವುಡು** 'ಎಬಡ' ನೋ.

**ಎವುಟ್** (ನಾ). ೧. ಎಂಜಲು; ಉಚ್ಛಿಷ್ಟ : "ಎವುಟ್ (ಎರೆ) = ಎಂಜಲವುಳು" (ಶಮದ. ಪರಿ. ೨); "ಎವುಟೆಂಜಲುಮೆನುತ್ತುಂ ತಾವೇನುಂ ಪತ್ತಟೆನ್ನಲುಚ್ಛಿಷ್ಟಕ್ಕಂ" (ಕವಿಕಂ. ೨೦೭). ೨. ಅಗುಳು : ತಾವಿರ್ಬರುಂ ತಿರಿದು ತಂದಿಕ್ಕಿದೆಂಜಲೆವುಟುಮಂ ತಿಂದು (ಆದಿಪು. ೩-೩೪ ವ). [← ತಮಿ. ಅವಿಟ್]

**ಎವೆ₁** 'ಎಮೆ' ನೋ.

**ಎವೆ₂** (ನಾ). ಯವ ಧಾನ್ಯ; ಜವೆ : "ಯವ, ಸಿತಶೂಕ – ಎವೆ" (ನಾಚಿರಾ: ೩). [< ಸಂ. ಯವ]

**ಎವೆಗುಟ್ಟು** (ಕ್ರಿ). ರೆಪ್ಪೆಯನ್ನು ಬಡಿ; "ರೆಪ್ಪೆಬಡಿ" (ಪ್ರಭಣ್ಣ).
[ಎವೆ₁ (< ಎಮೆ) + ಕುಟ್ಟು₁]

**ಎವೆಗೂದಲು** (ನಾ). ರೆಪ್ಪೆಯ ಕೂದಲು : ಇಬ್ಬನಿ ನೋಡ! . . . ಧ್ಯಾನಿಯ ಕಣ್ಣೆವೆಗೂದಲಿನಂಚೊಳ್ ಹೊಂಚುವ ಬಾಷ್ಪದ ಬಿಂದುವಿನಂತೆ (ಅನಿಕೇ. ೩೩-೧೦).
[ಎವೆ₁ (< ಎಮೆ) + ಕೂದಲು (< ಕೂಂದಲ್)]

**ಎವೆದುಱುಗಲ್** 'ಎಮೆದುಱುಗಲ್' ನೋ.

**ಎವೆದೆಱೆ** (ಕ್ರಿ). ರೆಪ್ಪೆಯನ್ನು ತೆರೆ; ಕಣ್ಣುಬಿಡು : ಅವನಿಪತಿ ಕಿಱಿದಾನು ಪೊತ್ತಿನೊಳೆವೆದೆಱೆದು ಬಿಸುಸುಯ್ದು ಮದ್ದುಗರು ಕವಡಿಕೆಯ ಮಣಿಯೆಂದೆ ಕೊಟ್ಟರು ಶಿರೋಮಣಿಯ (ಸಾಳ್ವಭಾ. ೪-೨೦).

ಎವೆದೆಱೆದಹೆಂಗಳು = ಕಣ್ಣಿನ ರೆಪ್ಪೆಯನ್ನು ಬಿಚ್ಚಿದ ಸ್ತ್ರೀಯರು; ದೇವತಾಸ್ತ್ರೀಯರು : ಮುಡಿಯ ಹಿಕ್ಕುವ ಮಾಲೆ ಗಟ್ಟುವ . . . ಮುಡಿಯ ನಡಯಿಸುವಿಸುವೆಸನೆಯೆವೆದೆಱೆದ ಹೆಂಗಳಲಿ (ಸಾಳ್ವಭಾ. ೨೦-೨೩). [ಎವೆ₁ (< ಎಮೆ) + ತೆಱೆ₁]

**ಎವೆದೆಱೆಯಿಸು, ಎವೆದೆಱೆಸು** (ಕ್ರಿ). ಕಣ್ಣು ತೆರೆಯುವಂತೆ ಮಾಡು; ರೆಪ್ಪೆಯನ್ನು ಬಿಚ್ಚಿಸು, —ಅರಳಿಸು : ಅಬ್ಜಂಗಳನೆವೆದೆಱೆಯಿಸುತುಂ ದೆಸೆಗಳನೆಳ್ಚಿಸುತಿರ್ದುವಾಗಳಿನನ ಕರಂಗಳ್ (೧೦ಕ. ೫-೬). **ಎವೆದೆಱೆಸು :** ಅವಳನವರುಚಿತೋಪಚಾರದಲೆವೆದೆಱೆಸುತಿರಲು (ಸಾಳ್ವಭಾ. ೮-೪೩). [ಎವೆದೆಱೆ + -ಇಸು₃]

**ಎವೆದೆಱೆಸು** 'ಎವೆದೆಱೆಯಿಸು' ನೋ.

**ಎವೆಬಡಿಸು** (ಕ್ರಿ). ಕಣ್ಣುರೆಪ್ಪೆ ಬಡಿಯುವಂತೆ ಮಾಡು : ಎವೆಬಡಿಸಿ ಕೆಡವು, ಬಿರಿಗಣ್ಣು ಬ್ಯಾಡ, ತುಟಿ ಕಚ್ಚಿ ಹಿಡಿಯದಿರು ಬಿಕ್ಕ (ನಾದಲೀ. ೫೮-೨೨). [ಎವೆ₁ (< ಎಮೆ) + ಬಡಿ₁ + - ಇಸು₃]

**ಎವೆಮಿಸುಕು** (ಕ್ರಿ). ಕಣ್ಣುರೆಪ್ಪೆಯನ್ನು ಅಲುಗಿಸು, —ಬಡಿ : ಕುವರಿ ಕುಳ್ಳಿಹ ತಾಣದೊತ್ತಿನಲವನಿಪನನಿರಿಸಿದನು ನೋಡಿದನೆವೆಮಿಸುಕದಾತನ ಸುರೂಪನು (ಸಾಳ್ವಭಾ. ೮-೪).
[ಎವೆ₁ (< ಎಮೆ) + ಮಿಸುಕು₁]

**ಎವೆಯಲುಗು** (ಕ್ರಿ). = ಎವೆಮಿಸುಕು : ಕಟ್ಟೊಲ್ಮೆಯೊಳೆವೆಯಲುಗದೆ ನೀಡುಂ ನಿಟ್ಟಿಪ ನೀಜನ ಬಗೆ (ಜಯಕಾ. ೪-೧೦); ಅಲಿಗಳೆವೆಯಲುಗದೆ ಬಕುತಿಯಲಿ ತ್ರಿಶೂಲಿಯ ಮೇಲೆ ಕಣ್ಮನವ ಕೀಲಿಸಿದನು (ಮೋಹತ. ೨೧-೩೫). [ಎವೆ₁ (< ಎಮೆ) + ಅಲುಗು₁]

**ಎವೆಯಾಟ** 'ಎಮೆಯಾಟ' ನೋ.

**ಎವೆಯಿಕ್ಕು** 'ಎಮೆಯಿಕ್ಕು' ನೋ.

**ಎವೆಯಿಡು** 'ಎಮೆಯಿಡು' ನೋ.

**ಎವೆವೊಯ್** (ಕ್ರಿ). ಕಣ್ಣುರೆಪ್ಪೆಯನ್ನು ಬಡಿ : ತನ್ನನೆವೆವೊಯ್ಯದೀಕ್ಷಿಸುವ ಲಲಿತಾಂಗಿಯರು ಕನಕ ಪರ್ವತದ ಮೇಲೆ ಕಣ್ಗೊಳಿಸುವಚ್ಚರಿವೆಣ್ಗಳಂತಚ್ಚರಿಯ ಬೀಱೆ (ಸೌಂದಪು. ೫-೯೬).
[ಎವೆ₁ (< ಎಮೆ) + ಪೊಯ್₁]

**ಎವೆಹಳಚು** (ಕ್ರಿ). = ಎವೆವೊಯ್ : ರಾಘವಮಹೀಪತಿ ಮಾಗಧೀಸುತರೆವೆಹಳಚದೀಕ್ಷಿಸಲು ಕಾದಿದರಖಿಳ ಚಿತ್ರದಲಿ (ತೊರರಾ. ೪-೪-೨೬).
[ಎವೆ₁ (< ಎಮೆ) + ಹಳಚು (< ಪಳಂಚು₁)]

**ಎವೆಹೊತ್ತು** (ನಾ). ಕಣ್ಣುರೆಪ್ಪೆ ಹೊಡೆಯುವಷ್ಟು ಸಮಯ; ನಿಮೇಷ ಮಾತ್ರ : ಕನ್ನಡದ ಆ ನೋಟ, ದೇವಿಯಾ ದರ್ಶನಂ ಪೊಳೆದು ಬಯಲಾಯ್ತು! ಎವೆಹೊತ್ತಿನಾ ನೋಟ, ಸವಿನೋಟ, ಸವೆಯದೆದೆ ಚಿಮ್ಮುತಿಹುದಿನ್ನೂ! (ಹೊಂಗಳು. ೧೬-೨೪).
[ಎವೆ₁ (< ಎಮೆ) + ಹೊತ್ತು (< ಪೊೞ್ತು)]

**ಎವ್ವನ** (ನಾ). ಹರೆಯ; ಯೌವನ : ಅಮರ ಸತಿಯರು ಹೋಲಲರಿಯರು ಭ್ರಮರಕುಂತಳೆಯವದಿರೆವ್ವನ ಪ್ರಾಯದಬಲೆಯರು (ಕೌಶಿರಾ. ೧-೨೫); ಜನನಿ ತನುಜೆ ಅತ್ತಿಗೆ ನಾದುನಿ ಅತ್ತೆ ಮಿಕ್ಕಾ ಜನರ ಸಂಗ ಡೆವ್ವನದಲ್ಲಿ ನೀನು ಕನಸಿನೊಳಗೆ ಏಕಾಸನದಲ್ಲಿರದಿರು (ವಿಸ್ತಾಸು. ೫೫-೨). [< ಸಂ. ಯೌವನ]

**ಎಶ** 'ಎಸ' ನೋ.

ಎಷ್ಟು₂, ಎಟ್ಟು₃, ಏಟ್ಟು₃ (ನಾ). ಯಾವ ಪ್ರಮಾಣ; ಯಾವ ಅಳತೆ: "ಎಷ್ಟು ಇತ್ಯತ್ರ ಚ ಅವುದೋಃ ಪರಿಮಾಣೇ ಟು ಪ್ರತ್ಯಯಃ ಪ್ರಕೃತೇಃ ಯಷ್ಟ್ವಾದೇಃ" (ಶಬ್ದಾನು. ೪೪೧ ವ್ಯಾಖ್ಯಾ); ಲೆಕ್ಕವಿಲ್ಲದ ವ್ರತ ಕಟ್ಟಳೆಯಿಲ್ಲದ ನೇಮಯಿವನೆಷ್ಟು ಮಾಡಿದರೂ ಏನು (ಏಲೇಶ್ವ. ೮೧); ಎಷ್ಟು ಮಾತಾಡಿದಡೇನು (ಅಂಬಿವ. ೨೫); ನಕ್ಷತ್ರವೆಷ್ಟಾದೊಡಂ ದೊರೆಯೇ ಚಂದ್ರಗೆ (ಸೋಮೇಶ. ೧೦); ಈ ದಿನ ಎಷ್ಟು ಜನರು ಊಟಕ್ಕೆ ಬರುತ್ತಾರೆ (ಮಧ್ಯಮ. ೪೬). **ಎಟ್ಟು₃**: ಭ್ರಷ್ಟ ಭಾಷ್ಯಳ ಭಕ್ತಿ ಮುಕ್ತಿ ವಿನಷ್ಟ ಸಾದೆನ್ನವಗುಣಂಗಳನೆಟ್ಟು [ಪಾಠಾಂ. ಷ್ಟು]ವಂ ಮಱಿದುಳುಹೆನುತ್ತೆ ಜಗಿದನು ಪಿತರಡಿಗೆ (ಮದೇಪು. ೩–೩೬). **ಏಟ್ಟು₃**: ತೇಟಿಗಂಜಿ ಕುಡಿಯೋವನಿಗೆ ಏಟೇಟು ಪಾರುಪತ್ಯ (ಗಾದೆ).

ಎಷ್ಟರವನು = ಯಾವ ಲೆಕ್ಕಕ್ಕೆ ಸೇರುವವನು; ಲೆಕ್ಕಕ್ಕೆ ಬಾರದವನು: ನನ್ನನ್ನು ಕೇಳಲಿಕ್ಕೆ ಅವನೆಷ್ಟರವನು (ರೂಢಿ). ಎಷ್ಟರು = ಎಷ್ಟುಮಂದಿ: ಪುಂಸ್ತ್ರೀ ಬಹುವಚನದಲ್ಲಿ ಅಷ್ಟರು, ಇಷ್ಟರು, ಎಷ್ಟರು ಎಂಬ ಕಾರಕ ರೂಪಗಳನ್ನು ಉಪಯೋಗಿಸುವುದುಂಟು (ಮಧ್ಯಮ. ೪೬). ಎಷ್ಟುಮಾತ್ರಕ್ಕೂ = ಎಷ್ಟು ಮಾತ್ರವಾದರೂ; ಏನೇ ಆದರೂ: ಎಷ್ಟುಮಾತ್ರಕ್ಕೂ ನೀನು ಹೇಳಿದಂತೆ ನಡೆಸಲಿಕ್ಕಾಗುವುದಿಲ್ಲ (ರೂಢಿ). ಎಷ್ಟುಮಾತ್ರದವನು = ಎಷ್ಟರವನು: ನನ್ನ ಮಗನ ಜತೆಯಲ್ಲಿ ನೀನು ಕುಳಿತುಕೊಳ್ಳುವುದಕ್ಕೆ ಎಷ್ಟುಮಾತ್ರದವನು (ನೀತಿಚಿಂ. V, ೨೨). ಎಷ್ಟೆಲ್ಲ = ಬಹಳ; ಅನೇಕ: ನೀನು ಏನಾದೆಯೋ ಎಂದು ಎಷ್ಟೆಲ್ಲಾ ಸಂಕಟ ಪಟ್ಟೆ (ಹೊಸಕ್ಷಿ. ೪೧); ಈ ವಿಚಾರಸರಣಿಯನ್ನು ಇನ್ನಷ್ಟು ವಿಶಾಲಗೊಳಿಸಲು ಎಷ್ಟೆಲ್ಲ ತತ್ತ್ವಜ್ಞಾನಿಗಳು ಯತ್ನಿಸಲಿಲ್ಲ (ಬಾಳ್ವೆಬೆ. ೯೦). ಎಷ್ಟೋ = ಬಹಳ: ಅಂದಿನ ಪ್ರವಾಹದಲ್ಲಿ ಎಷ್ಟೋ ಮನೆಗಳು ಕೊಚ್ಚಿಹೋದವು (ರೂಢಿ). ಎಷ್ಟೋಮಂದಿ = ಬಹಳಮಂದಿ: ಜಾತ್ರೆಯಲ್ಲಿ ಎಷ್ಟೋಮಂದಿ ಸೇರಿದ್ದರು (ರೂಢಿ).

[ಏಸು₃ + -ಟು ?. / ತುಳು. ಏತ್]

**ಎಸೆ, ಎಶ** (ನಾ). ಕೀರ್ತಿ; ಖ್ಯಾತಿ; ಯಶಸ್ಸು: ಬಸವಂ . . . ಸಕಲ ಸಂಪದ್ವೈಭವಾಭಾರ್ಯರೊಂದೆಸವಂ ಬಿಜ್ಜಳರಾಯನಿಂದೆ ಪಡೆದಂ (ಬಸರ. ೬–೧); ಹಸನಾಯ್ತು ನಿನ್ನ ಮನ ಪರವಶವಾಯಿತು ಭಕ್ತಿ ಮುಕ್ತಿ ತತ್ತ್ವವನಱಿವೊಂದೆಸವಾಯಿತು ಕಂಡತಿ ಸಂತಸವಾಯಿತು ನಿನಗೆ ವಿಶ್ವನಾಥನ ಕೃಪೆಯಿಂ (ದೀಕ್ಷಾಬೋ. ೧೨೬–೧೫). **ಎಶ**: ಬಹು ಭುಜೋಜ್ವಲನಶೋ ನವಚೂತ ಪಲ್ಲೈಸಿ ತಾ ವಾವ ಲೋಕಕುಂ ಶಾಖೆವಡೆದು (ಪರಶು. ೧೨–೬). [< ಸಂ. ಯಶಸ್]

**ಎಸಕ₁** (ನಾ). ೧. ಕಾಂತಿ; ಪ್ರಕಾಶ; ತೇಜಸ್ಸು: ಉಱಿದವರಾರಾತನ ಮಸೆಪ ಮಸಕದೆಸಕಮನಿಳಿಪರ್ (ಕಾವ್ಯಸಾ. ೨೩೪ ಶೂದ್ರಕ); ಅವರಿಸಿತೊ ನಭೋಂತರ್ಭೂವಿವರಮನಮರ್ದಿನೆಸಕಮೆನೆ . . . ಬೆಳಗಿದಂ ತುಹಿನಕರಂ (ಪಂಪಭಾ. ೪–೫೨); ತೃಣದ ಹಸಿರಿನ ಹುಟ್ಟು ತಾರೆಯೆಸಕದ ಗುಟ್ಟು ದಣಿಯದದನರಸು ನೀಂ (ಮಂಕುಳ. ೧೨೧). ೨. ಸೊಬಗು; ಶೋಭೆ; ವೈಭವ: ಅನಿಮಿಷ ಚಾಪದಂತೆ ಸಿರಿ ಶಾರದನೀರದ ಕಾಂತಿಯಂತೆ ಯೌವನದೆಸಕಂ (ಪಂಚತಂ. ೫೯–೧೫); ಇಂತಾದೆಸಕಂ ಕೆಯ್ಗಣ್ಮೆ ಸೋಮೇಶ್ವರ ನೃಪತಿ ಮಹೀಚಕ್ರಮಂ ಪಾಳಿಸುತ್ತಂ (ಎಕ. VII, ಶಿಕಾರಿ. ೧೩೬–೧೩; 1068); ನಿರುಪಮ ಮೃದೂಕ್ತಿಯಿಂ ಪ್ರೌಢಿಯಿಂ ರೀತಿಯಿಂ ವರಗಮಕದೆಸಕದಿಂದೊಪ್ಪಿಂ . . . ಒಪ್ಪುವೀ ಕೃತಿಯುವತಿ (ಪದ್ಮರಾ. ೧–೪೦); ಒದವಿದ ನಾಥವಂಶದೆಸಕಂ ಕುರುವಂಶದ ಮೈಮೆಯಿಕ್ಷುವಂಶದ ಜಸಮುಗ್ರವಂಶದುದಯಂ . . . ಪೊಗಟ್ಚೆಗಳುಂಬಂ (ಪುಷ್ಪಪು. ೧೨–೯೮). ೩. ರೀತಿ; ಸ್ಥಿತಿ: ವಸುಮತಿಯೆಂಬ ಕಾಮಿನಿಯ ಚಾರು ಸುವರ್ಣದ ಕುಂಡಲಂ ದಲೆಂಬೆಸಕಮನೆಯ್ದಿ ಸಂಗಡಿಸುತಿರ್ಪುದು (ಬಾಧಪು. ೪–೨೮); ರಸವಿದು ಭಾವವಿದು . . . ಗುಣದೋಷಗಳ ಎಸಕವಿದೆಂದಱಿಯದೆ ಮನಬಂದ ಪೊಱುಸಿರ್ವ ಕುಕವಿಯಲ್ಲಾನು (ಕುರಾಸಾಂ. ೧–೭೪); ದೆಸೆವೆಣ್ಗಳ್ ಬಿಸುವಿಸಿಲಿಂ ಬಸವಳಿದುಃಪೆಂದು ಸುಯ್ದ ಬಿಸುಸುಯ್ಯೆಲರೆಂಬೆಸಕಮನೊಳ್ಕೊ ಬೀಸಿದುದಸದೃಶ ಸೋಷ್ಣ ಪ್ರಭಂಜನಂ ಬೇಸಗೆಯೊಳ್ (ರಾಜಶೇ. ೫–೩೨). ೪. ಅತಿಶಯ; ಆಧಿಕ್ಯ; ಹೆಚ್ಚಳ: ಓರೋರ್ಮೆ ಪೆರ್ಚುಗೆ ಬಿಸುಪಿನೆಸಕದಿಂ ಪೊಕ್ಕನೀರ್ಕದಡಿ ಕುದಿವಿನಂ (ವರ್ಧಪು. ೪–೫೭ ವ); ವಿಷಮತರದೋರ್ದಂಡ ಸಾಹಸದೆಸಕದಲಿ ಸೆಳೆದಾ ಮಹಾಧನು (ತೊರರಾ. ೩–೧–೨೦); ಎಸೆವಾ ಮಹಾಗಿರಿಯ ಮಸ್ತಕದ ವಿಸ್ತಾರದೆಸಕಮಂ ಕಂಡು (ನಂದಿಮಾ. ೧೧–೩೮); ಜಸವಡೆದುದು ಶ್ರೀರಂಗಪಟ್ಟಣ ಭಾಗ್ಯದೆಸಕದೊಳತಿರಯ್ಯಮಾಗಿ (ಕಂಠವಿ.೫–೨). ೫. ಪ್ರತಾಪ; ಪರಾಕ್ರಮ: ಒಸಗೆಯನೆನಗೀವುದು ನಿನ್ನೆಸಕದ ಮಸಕಮನೆ ಪೋಲ್ವ ನುಗನಂ ಮಘವಾ (ಪಂಪಭಾ. ೧–೧೩೪); ತಚ್ಛೋಣಾವನಿಪ ಪ್ರಭೂಪದೆಸಕಂ ತನ್ನುರ್ವರಾಮಂಡಲಕ್ಕಚ್ಚಂಬೊಯ್ದಪರಂಜಿಯಾದುದು (ಉದ್ಭಟ. ೧೨–೭೩); ಎಸಕವುಳ್ಳರು ನೀವು ನಿಮಗನಿಮಿಷರು ಸರಿಯೇ ಫಣವ ಪಿಡಿವುದು ನಿಸುಕಲಾಗದು ನೀವು ಬಾಲವನು (ಸಂಭಪ. ೫–೧೦೬).

ಎಸಕಾಗು = ಸೊಗಸಾಗು; ಶೋಭೆಯುಂಟುಮಾಡು: ತೀವಿದುದು ದಶರಸವಾಕೆಗೆ ಭೂವನಿತೆಗೆಸಕಾದನಾತನು (ಕುವ್ಯಾ ಅ. ಓರಿ೫. ೨೬–೮೩). [< ಎಸ₂ + -ಕ₃. / ತೆಲು. ಎಸಕ]

**ಎಸಕ₂** (ನಾ). ೧. ಕೆಲಸ; ವ್ಯವಹಾರ; ಉದ್ಯೋಗ: ಧರ್ಮಮನು ರೇಂದ್ರಗತಿಯನಧರ್ಮಮಧೋಗತಿಯನೆಸಗುವೆಸಕದೊಳೀಗುಂ (ಆದಿಪು. ೫–೭೮); ನಯಮುಂ ವಾಗ್ವೃತ್ತಿಯೊಳ್ ತೋಱಿ ನೋಟದೊಳಾದಟ್ಕ ಜನಪ್ಪುಕೆಯ್ದೆಸಕದೊಳ್ ಮೆಲ್ಪಂ ಪಳಂಚಲ್ವಿ ಕಣ್ಬದಿರೊಳ್ ಕಾಮಿನಿಕಾಮರಾಗರಸವಂ ತಳ್ಕೈಸಿ (ಸುಕುಮಾ. ೭–೧೧); ಆಜಿ ದರ್ಪದ ಕೂರ್ಪೀಱಿರೆ ಬೀಱದೊಂದೆಸಕಮಂ ಕೈಕೊಂಡನಬ್ಜೋದರಂ (ಜಗವಿ. ೧೮–೬); ಗಾವಿಲರೆಸಕಕ್ಕೆ ನಗದೆ ಮಾಣ್ಬರೆ ಚದುರರ್ (ಸಮುಪ. ೧೧–೧೩೬); ಮಾನವನ ಬದುಕು ಮತ್ತು ಎಸಕಗಳು ನನ್ನ ಮನವನ್ನು ಸೂರೆಗೊಂಡಿದ್ದುವು (ಧೂಮಮ. ೭೧). ೨. ತೀಡುವಿಕೆ; ಬೀಸುವಿಕೆ: ಚಂಡಪವನನೆಸಕದ ಮಿನುಗುವಾ ಚೆಂದದಂತೆ (ಪದ್ಮರಾ. ೧೨–೫೧).

[< ಎಸಗು₂ + -ಕ₃]

**ಎಸಕೆಂಗಾಯ್** (ಕ್ರಿ). ಕರ್ತವ್ಯವನ್ನು ಮಾಡು; ಭಾಷೆಯನ್ನು ಉಳಿಸಿಕೊ; ಪ್ರಭಾವವನ್ನು ಕಾಯ್ದುಕೊ: ತನ್ನೆಸಕಂ[ಗಾ]ಯದ ಧರ್ಮಯುದ್ಧದೆ ನರಂ ಕೊಲ್ವಲ್ಲಿ ಕಂಡಿಂತುಪೇಕ್ಷಿಸಿ ನೀಮುಂ ನಡೆನೋಡುತಿರ್ದಿರೆನೆ (ಪಂಪಭಾ. ೧೧–೮೩).

[ಎಸಕ₂ + ಕಾಯ್₁ (< ಕಾ₁)]

**ಎಸಕೆಂಗಿಡು₁** (ಕ್ರಿ). ಕಾಂತಿಹೀನವಾಗು; ಕಳೆಗುಂದು: ಬಿಸಿಲೆಸಕಂಗಿಡೆ ಕಟ್ಟಲೆ ಪಸರಿಸೆ . . . ಕಱಿದನಂಬಿನ ಮಱಿಯಂ (ಪಂರಾಮಾ. ೧೩–೧೨೩). [ಎಸಕ₁ + ಕಿಡು (< ಕೆಡು)]

**ಎಸಕೆಂಗಿಡು₂** (ಕ್ರಿ). ಕಾರ್ಯಕೆಟ್ಟುಹೋಗು; ಕಾರ್ಯಹೀನವಾಗು: ಬಲವೆಂದು ಬಾಹುಬಲಿಯನಣಂ ಭೇದಿಸಲಾಱದುದಱನಿರ್ದುದು ಮಸುಳ್ದೆಸಕಂಗೆಟ್ಟು ಬಲದ ಮುಯ್ಪಿನ ಕೆಲದೊಳ್ (ಆದಿಪು. ೧೪–೧೧೭). [ಎಸಕ₂ + ಕಿಡು (< ಕೆಡು)]

**ಎಸಕೆಂಬಡೆ** (ಕ್ರಿ). ಕಾಂತಿಯನ್ನು ಹೊಂದು; ವೈಭವವನ್ನು ಪಡೆ: ಆಲಘುಭುಜಂ ವಿಜಯಜಯಂತಾವರಜರೊಳಿನಿಸುಂ ಬಿಡದೆ ಸಲೆ ನೇಹಂ ಬಡೆದೆಸಕಂಬಡೆದ ಲಲನಾಜನ ಸುಮನಶ್ಚಾಪಂ (ಜಯಕಾ. ೨–೭೨).

[ಎಸಕ₁ + ಪಡೆ₁]

**ಎಸಕಂಬೆಱು** (ಕ್ರಿ). ಕಾಂತಿಯನ್ನು ಹೊಂದು, —ಪಡೆ: ಎಸಕಂಬೆತ್ತನ್ನ ಗಾರ್ಹಸ್ಥ್ಯಮಾ ದಿನದೊಳ್ ಸೌಖ್ಯವಮಾದುದು (ಅನಂಪು. ೯–೯೨). [ಎಸಕ$_1$ + ಪೆಱು$_1$]

**ಎಸಗ** (ನಾ). ಒಂದು ಗಿಡ; ಉಪ್ಪಿಗಿಡ; ಕುಂಡಲಿ: ಎಸಗದ ತಾಱಿಯಿಂ ಪಡುವ ಪುತ್ರಿರಲ್ (ಜಟ್ಟಮ. ೧೧–೧೯); ಮೊಲ್ಲೆಯಾಶ್ವರಿ ಚಂಪಕಂ ಮೆಕ್ಕೆ ನಾಂಗುಲಿ ಕಟ್ಟವತ್ತಿಗೆಯುಂ ಸಮಂತೆಸಗಂ (ಖಮದ. ೫–೬೯); ಎಸಗದ ಬೇರು, ಎಲಹುರಿಯ ಬೇರು . . . ಪಾನವ ಮಾಡಲು ಶ್ವಾಸ, ಕಾಸ, ಕ್ಷಯ ಕಾಸಗಳು ಪರಿಹಾರ (ವೈದ್ಯಸಾ. I, ೧೫೦); ಎಕ್ಕದ ಹಾಲಿಂ ಎಸಗನ ಬೇರನೂದಿ ಹಲ್ಲುಸಂಧಿಯ ಗಿರಿಯೆ ಹಲ್ಲುಹುಳು ತೀರ್ಗುಂ (ವಿಪ್ಪೆವಿ. ೯೨). [?]

**ಎಸಗಳೆ** (ನಾ). ಒಂದು ಗಿಡ: ಬಿಳೀ ಉಪ್ಪಿಗಿಡ, ಎಸಗಳೆ, ಎಗಚಿ (ಮೈಔಗಿ. ೧೧–೧೮೭).                [?]

**ಎಸಗಿಸು** (ಕ್ರಿ). ೧. ಮಾಡಿಸು: ನನ್ನಿಯಿಂ ಹತ್ತುಸಾವಿರ ಮಂದಿ ಹರಿಯಶ್ವರಂ ನಲಿದು ಪಡೆದು ಸೃಷ್ಟಿಯನೆಸಗಿಸಲ್ ನಾರದಂ ನೋಡಿ ಸಂಸಾರ ಬಂಧಕೊಳಗಾಗಬೇಡೆಂದು ತಪಕ್ಕೆ ದಿಸಿದನು (ಚಬಪು. ೧೪–೨). ೨. ಬೀಸು; ಉಂಟುಮಾಡು: ಬಿಸಿಲೆಸಕದಿಂದೆ ಕೊರಗಿದ ದೆಸೆವೆಣ್ಗಳ ಬಿಸುಪನಾಱಿಪಂತಿರೆ ಗಿಳಿಗಳ್ ಪಸುರೆಜಕೆಯೆಂಬ ಬಾಱಿಯ ಪೊಸ ಬಿಜ್ಜಣಿಗೆಗಳಿನೆಸಗಿಪುವು ತಣ್ಣೆಲರಂ (ಕಾದಂಪೂ. ೧೩೦).

[ಎಸಗು$_1$+ -ಇಸು$_3$]

**ಎಸಗು$_1$** (ಕ್ರಿ). ೧. ಮಾಡು: "ಎಸಗು—ಉದ್ಯೋಗೇ (ಮಾಡು)" (ಶಮಧಾ); ಅ ನೆಗಟ್ದಾದಿಕ್ಷತ್ರಿಯರೊಳಮಿಲ್ಲೆನಿಸಿದುದೀ ತ್ರಿಜಗದೊಳೆಸಗಿದೆಸಕಮರಿಕೇಸರಿಯಾ (ಪಂಪಭಾ. ೧–೨೧); ಪಿಂತಣ ಭವದೊಳಾನೆಸಗಿದ ಪಾತಕಸಂತತಿ . . . ಕೆಡಲೆಂದೆಜಗುವೆ (ಅಂಜಜ. ೧–೯); ಉಚಿತೋಪಚಾರವೆಸಗುವುದೇಕಚಿತ್ತದೊಳು (ಹದಿಬ. ೩–೧೬); ಕರ್ಮವಿಮೋಚನೆ ಮಾಡಿಕೊಳ್ಳುವ ಸಲುವಾಗಿ ಮಾಡುವ ಕರ್ಮಗಳನ್ನು ಎಸಗಬೇಕಾದರೆ ಶರೀರ ಅಗತ್ಯ (ಜಗದಾ. ೨೮೮). ೨. ಉಂಟುಮಾಡು; ಒದಗಿಸು: ತತ್ಕುಮಾರಂಗೆ ನಿತಾಂತಂ ಪ್ರೀತಿಯಿಂ ಸ್ಯೆತೆಸಗುವೆವೆನಲಿನ್ನಾತನಿಂ ಖ್ಯಾತನಾವೊಂ (ದಶಕು. ೨–೬೯); ವಾಣಿಯೋ ಮೇಣವಳ್ ಲಕ್ಷ್ಮಿಯೋ ಎಂಬ ಸಂಕಯುರಸಮನೊಸೆದೆಸಗುತೆ (ಪದ್ಮರಾ. ೮–೯೬). ೩. ಉಂಟಾಗು; ಒದಗು: ಅನುಮಚ್ಛೋದಮಂ ಸಾರ್ವುದದೆತ್ತಂತಲ್ಲಿಗೊಂದಿಂಚರಮೆಸಗುವುದೆತ್ತಾ ಮಹಾಶ್ವೇತೆಯಂ ಕಾಣ್ಬುದದೆತ್ತ (ಕಾದಂಉ. ೩೬೨); ಬಂದು ತೊಡೆವೊಯ್ದು ಬೋಧಿಸಿದಂದದಿನೆಸಗಿತ್ತು ಸುಪ್ರಭಾತಾತೋದ್ಯಂ (ಯಶೋಚ. ೨–೬೫); ನೃತ್ತಗೀತಂಗಳೆಸಗೆ ಶಿವೆವೆರಸಿ ಬಂದು (ಪದ್ಮರಾ. ೧೧–೧೪೭). ೪. ಆಚರಿಸು; ನಡೆದುಕೊ; ವ್ಯವಹರಿಸು: ಮುಂಪೊಣ್ದ ನನ್ನಿಗೆ ಬನ್ನಂ ಬರಲೀಯದಾರ್ತೆಸೆಗಿದೀ ವಿಖ್ಯಾತಿಯುಂ ಕೀರ್ತಿಯುಂ ಮುಗಿಲಂ ಮುಟ್ಟಿದುದಲ್ತೆ (ಪಂಪಭಾ. ೧–೮೧); ತಪದೊಳೆಸಗಿದಂ ಸೂರ್ಯಮಿತ್ರ ಬ್ರತೀಂದ್ರಂ (ಸುಕುಮಾ. ೪–೧೬); ಕೈಕೊಂಡೆಸಗುಗೆ ತಾಂ ಬಱಿಕಮ್ಮೆದಣುವ್ರತ ತತಿಯಂ (ಧರ್ಮಾಮೃ. ೧–೬೯); ಈ ಪರಿ ಜೀವಭಾವದೊಳೆಸಗುವವರು ನೀವ್ ಪಶುಗಳು (ಕುವ್ಯಾಕ. ೭–೩೦). ೫. (ರಥವನ್ನು) ನಡೆಸು: ಪಿಂದೆ ಕಡಂಗಿ ತೇರನೆಸಗೆಂಬವನಂಬಿಗಂ (ಪಂಪಭಾ. ೧೨–೪೪); ತಾನಾತನ ರಥಮನೆಸಗಿ ಧರ್ಮಜನನುಜನ ನೆವದಿಂದಮುರಸುಗೆಯ್ವಂ ಕೃಷ್ಣಂ (ಗದಾಯು. ೩–೪೨); ದಾರುಕನು ನಿಜರಥವನೆಸಗಲು (ಕುವ್ಯಾದ್ರೋ. ೧೧–೪). ೬. (ಗಾಳಿ) ಬೀಸು: ತಣ್ಣೆರಲೆಸಗೆ ಕುಸುಮವರ್ಷಂ ದೊರೆಕೊಳೆ (ಅಜಿಪು. ೭–೩); ಸುರದುಂದುಭಿ ಮೊಱಿಗೆ ತೆಂಕಣೆಲರೆಸಗೆ (ಧರ್ಮಾಮೃ. ೪–೨೬೧); ಎಸಗುವೆಲರಿನೊಡೆದೊಸರ್ವ ಪೊಸವಣ್ಣ ಪಸರದಿಂ (ಕಬ್ಬಿಕಾ. ೩೦). ೭. ಉದ್ಯೋಗಿಸು; ಯತ್ನಿಸು: ಸುಱಿಗಾಳಿಗೆ ಸುಱಿಯೆ ನೆಗೆದು ಪಾಱುವ ತಱಗೆಲೆಯ ತುಱುಗಲಂ ಕಿಱುವಕ್ಕಿವಿಂಡೆಂದು ಕೊಱಂಡುಗಳಂ ಮಱು ಮಿಡಿವಿಲ್ಲೊಳೆಸಲೆಸಗಿ ಮಱುಗುವ ತುಱುಗಾವ ಕಿಱುಕುಳದ ಕೆಳೆಯರುಮಂ ನೋಡುತ್ತುಂ (ಕಬ್ಬಿಕಾ. ೨೩೪). ೮. ಹೊರಸೂಸು; ಚೆಲ್ಲು; ಪ್ರಕಟವಾಗು: ಕುಸುಮದಲ್ಲಿ ವಾಸನೆ ಇದ್ದಡೇನು ಅದು ಎಸೆಯದನ್ನಕ್ಕ ಕುಶಲದಲ್ಲಿ ರಸಿಕರಿದ್ದಡೇನು ಅದು ಎಸಗದನ್ನಕ್ಕ (ಮೋಳಿಮಾ. ೧೧೭–೪೬೦). ೯. ರಚಿಸು: ಸುಧಾವೃಷ್ಟಿಯನೆಸಪ ಮಹಾಯಂತ್ರಯಷ್ಟಿವ್ರಜಂ (ಕುಸುಮಾ. ೧–೧೧೧); ವೀರಣಯ್ಯನ ಬೆಸನೊಳೆಸಗುವೆನು ನಂಬಿಯ ಸುಚಾರಿತ್ರವೀ ಕಾವ್ಯವ (ಸೌಂದಪು. ೧–೧೩).

ಎಸಗಿಕಟ್ಟು = ಬಿಗಿದು ಕಟ್ಟು: ಹಸಿವಾದಡುಂಬುದುಬ್ಬಸಬಂದರೋಡುವದು ಪಸರಿಸುತ ಸಿರಿಯ ಮೆಱಿಯುವ ಕುದುರೆಯನೆಸಗಿ ಕಟ್ಟಿಂದ (ಸರ್ವಜ್ಞ. ೭೫೩).                [?]

**ಎಸಗು$_2$** (ನಾ). ೧. ಕೆಲಸ; ಉದ್ಯೋಗ: ತವಕಿಗನ ಬಲಹೆಗಲು ಕಣ್ಣು ಹುಬ್ಬುಗಳೆ, ಕುಣಿಕುಣಿದು ಹಾರದಿರಿ; ನಿಮ್ಮೆಸಗು ಬೇಡ (ವಗಡ. ೫೯–೧೬). ೨. ಬೀಸುವಿಕೆ: ಅ ಗಾಳಿವೆಸ [ಪಾಠಾಂ. ರ] ಗಿನಿಂದಮೆ ಪೋಗಿ ಪರಿಶ್ರಮುವಶಾತುರಂ ವಸುದೇವಂ (ಅರ್ಧನೇ. ೫–೯೯).

[< ಎಸಗು$_1$]

**ಎಸಗೆ** 'ಎಸುಗೆ' ನೋ.

**ಎಸಡಿ** 'ಎಸಡು$_1$' ನೋ.

**ಎಸಡು$_1$**, ಎಸಡಿ (ನಾ). ೧. ನಳ್ಳಿ; ಕರ್ಕಟಕ: "ಪಂಕವಾಸಃ –ಎಸ(ಡು) ಡಿ" (ಒಷಧಿ. ೯೨); ಕಪ್ಪೆಗಳುಮೆಸಡುಗಳುಮಿಲಿಗಳುಮೊಂತಿಗಳುಂ ಮೊದಲಾಗೊಡೆಯ ಜೀವರಾಶಿಗಳಂ (ವಡ್ಡಾರಾ. ೧೪೦–೪); ನೀರೊಳಗೆಸಡಿ [ಪಾಠಾಂ. ಸೆದಿ]ರ್ಕುಂ ಮಾನಿರ್ಕುಂ ಕಪ್ಪೆಯಿರ್ಕುಮಿರ್ಪರೆ ಗಂಡರ್ (ಗದಾಯು. ೭–೬). ೨. ಆಮೆ; ಕೂರ್ಮ: ಮಾನಾದನೆಸಡುಮಾದಂ ಮಾನವಕೇಸರಿಯುಮಾಗಿ ಪಂದಿಯುಮಾದಂ (ಸಮಪ. ೮–೧೩೭). **ಎಸಡಿ**: ೧. "ಕುಳೀರಃ, ಕರ್ಕಟಕಃ – ಈ ೨ ಎಸಡಿ" (ಹಲಾಯು. ೧೦೮–೩೬); ಪಿರಿದುಂ ಲಂಪಟನಪ್ಪೊಂದು ಬಕಂ . . . ಬಂದೆಸಡಿಯಂ ತಿಂಬೆನೆಂದು ಕೊಂಡೊಯ್ಯುತ್ತುಮಿರಲಾಯೆಸಡಿ ತನ್ನ ಗೋಣನಿಱಿಂಕಿ ಕೊಂದುದು (ಪಂಚತಂ. ೮೬–೧); ತನ್ನನಾ ಶುಂಡಾಲಂ ಮೆಟ್ಟಿ ಸತ್ತೆಸಡಿಯಾಗಿ ಪುಟ್ಟಿ ಅ ಶುಂಡಾಲಂ ಸತ್ತು ಕಾಗೆಯಾಗಿ ತನ್ನಂ ತಿನೆ ಸತ್ತೆಸಡಿ ಕುಕ್ಕುಟನಾಯ್ತು (ಪಂಚಾಮಾ. ೧೫–೩೭ ವ). ೨. ಮಾನಾಗಿಯುಮೆಸಡಿಯಾಗಿಯೇನಾಗಿರೆಯುಂ (ಶಮುದ. ೬೯ ಪ್ರಯೋ).

[ದೇ.॥ ತೆಲು. ಎಂಡ್ರಿ; ಕೋಲಾ. ಎಂಡೆ, ಎಂದೆ; ನಾಯ್ಕಿ. ಎಂಡೆ; ಪರ್ಜಿ. ಇರ್ಡಿ; ಗೊಂಡಿ. ಏಟೀ]

**ಎಸಡು$_2$** (ನಾ). ಕರ್ಕಾಟಕಶೃಂಗಿ ಎಂಬ ಮೂಲಿಕೆ: ಎಸಡಿನ ಪಾಲಂ ದುಗ್ಧಾಜ್ಯಸಮನ್ವಿತಮಟ್ಟು ತೊಡೆಯೆ ಪಲ್ದಿಂಬುದನೋಡಿಸುಗುಂ (ಲೋಕೋಪ. ೯–೩೧).                [?]

**ಎಸರ್**, ಎಸರು$_2$ (ನಾ). ೧. ಅಡಿಗೆಗಾಗಿ ಕುದಿಯಲಿಟ್ಟ ನೀರು; ಕುದಿನೀರು: ಒಲೆಯ ಕಿಚ್ಚಿನ ಮೃದ್ಭಾಜನದೆಸರ ನೀರ ಬಾಣಸಿಗರುರಿಪುವ ಗಾಳಿಯ ಸಂಯೋಗದೊಳ್ ಚೈತನ್ಯಮದೇಕೆ ಪುಟ್ಟದು (ಶಾಂತಿಪು. ೮–೧೩೭ ವ); ಎಸರನಿಡುವಕ್ಕಿಗರ್ಚುವ ಬೆಸನಂ . . . ಬೆಸನಲ್ಲದೆ ಪುತ್ಸ್ನನ ಬಾಣಸಿಗಂಗಾರಿತ್ತರೆಲವೊ ನಿನಗೀ ಬೆಸನಂ (ಗದಾಯು. ೭–೩೭); ಅಕ್ಕಿಯ ನಿಂಬಾಗಿ ಮೂಱು ಸೂಱ್ ಕರ್ಚಿ ಪೊಯ್ದೊಡೆ [ಕುದಿವೆ]ಸರೊಳುತ್ತಮಮಕ್ಕುಂ (ಲೋಕೋಪ. ೮–೨); ನದನದ್ಯುದ್ಭೂತ ವಾರಿ ಪ್ರಸರಮೆಸರನೀರಂದದಿಂ ಕಾಯ್ದುದು (ಸುಕುಮಾ. ೪೧–೧೩); ನೀರಜಲಿಂ ಸರಸ್ತಟಾಕದ ಶಫರಾಳಿ ಕುತ್ತೆಸರ ಮಾನವೊಲಿ ದುರ್ಗದು (ಚಂದ್ರಪು. ೯–೬೯).

ಎಸರ್ು$_2$ : ೧. ಒಲೆಗೆ ಬೆಂಕಿಹತ್ತಿಸಿ ಎಸರು ಇಟ್ಟು ಹೊರಗೆ ಬಂದಳು (ಮುತ್ತೈದೆ. ೨೫). ೨. ನೀರಿನ ಕುದಿತ : ಒಲೆಯ ಮೇಲಿನ ನೀರು ಇನ್ನೂ ಎಸರು ಬಂದಿಲ್ಲ (ರೂಢಿ). ೩. ಸಾರು ; ಪಲ್ಯದ ರಸ : ಅವಾವ ಸೊಪ್ಪು ಕಾಯ್ಗಳನುಕ್ಕರಿಸಿದೆಸರುಮಂ ಬಸಿದು ಬೇಱೆಬೇಱೆಕೊಳೆಗೆತ್ತಿ ಸವಿಯನಱಿದು (ಸೂಪಶಾ. ೨-೪೬). 'ಉಪ್ಪೆಸರ್' ಪರಾ. ೪. ಹಸಿಯ ವಸ್ತುಗಳನ್ನು ಹಿಂಡಿ ತೆಗೆದ ರಸ ಅಥವಾ ಬೇಯಿಸಿ ತೆಗೆದ ಕಷಾಯ, —ಸಾರ, —ರಸ, —ತಿಳಿ : ಅಱಿದೋಗರದೊಳಿಕ್ಕಿ ಪಲ ಭಾಗೆಯಂ ಮುದದಿಂದೆ ಮಾಡಿಯೊಂದಕ್ಕುಪ್ಪುನೆಲ್ಲಿಯೆಸರೊಂದಕ್ಕೆ ಹುಳಿಹಿಂಡಿ . . . ಒಂದಕ್ಕೆ ಮಾಗುಳಿ ಯೆಸರು ಬೆಲ್ಲವತ್ತದ ಕಾಯಿ ಮೊದಲಾದ ಕಾಯರಸಗಳನಿಕ್ಕಿ ಕಟ್ಟಶನಮಂ ಮಾಳ್ಪುದು (ಸೂಪಶಾ. ೩-೨೧). ೫. ತೇವ : ಬಿಸಲಿಗೆ ಬಾಯಾಗ ಎಸರಿರಲಿಲ್ಲ ಜನಕೆ ಕೂಸು ಸಿದ್ಧನು ನೀರಿಗೆ ಬಾಯಿ ತೆರೆದಿಲ್ಲ ಅಸಮ ಮಲ್ಲೇಶನ ನೆನೆಯೂತ (ಸಿದ್ಧವು. ೫-೩೭).

[ದೇ. ॥ ತಮಿ. ಎಶರ್ ; ತೆಲು. ಎಸರು ; ಕೋಲಾ. ನಾಯ್ಕಿ. ಎಸರ್ ; ಕುಇ. ಏಜು]

ಎಸರಿಡು (ಕ್ರಿ). ಅಡಿಗೆಗಾಗಿ ಒಲೆಯ ಮೇಲೆ ನೀರನ್ನು ಕುದಿಯಲಿಡು ; ಕುದಿಯಲು ಒಲೆಯ ಮೇಲೆ ನೀರಿಡು : ಅನ್ನಕ್ಕೆ ಎಸರಿಟ್ಟೆ (ಮುಸಕೂ. ೪೦) ; ಚಹಾಕ್ಕೆ ಎಸರಿಡಲೆಂದು ತಾನೇ ಸ್ಟವ್ ಹಚ್ಚಿ (ವಾತ್ಸಲ್ಯ. ೩೫೪) ; ಎಸರಿಡಲು ಬೆಂಕಿಹೊತ್ತಿಸಲೇ (ಚಂದ್ರಸ. ೨೧-೧೬).

[ಎಸರು$_2$ (< ಎಸರ್) + ಇಡು$_1$]

ಎಸರು$_1$ (ಕ್ರಿ). ಕುದಿ ; ತಳಮಳಿಸು : ಉಗೆಯಿಲ್ಲ ನಗೆಯಿಲ್ಲ ಹೊಗೆಯಿಲ್ಲದೀ ನೀರು ಬಿಸಿಲುಗುದುರೆಯ ಹಾಗೆ ಎಸರುತಿಹುದು (ಅರಳು. ೩೪೪-೮). [< ಎಸರ್]

ಎಸರು$_2$ 'ಎಸರ್' ನೋ.

ಎಸರೆತ್ತು (ಕ್ರಿ). ಕುದಿನೀರು ಚೆಲ್ಲು (?) : ಮೊನೆಯಲ್ಲಿ ಮೊಮ್ಮಗಳು ಹುಟ್ಟಿ ಹೆತ್ತೆಯ ತಿಂದು ತಾಯಿಗೆ ಎಸರೆತ್ತುತ್ತೈದಾಳೆ ಅವಳ ಕೊಲ್ಲುವ ಧೀರರನಿನ್ನಾರನು ಕಾಣೆ (ಅಱಿಮಾ. ೨೬-೩೧). [ಎಸರ್ + ಎತ್ತು$_1$]

ಎಸರ್ಗೊಳ್ (ಕ್ರಿ). ಕುದಿಯುವುದಕ್ಕೆ ಮೊದಲಾಗು ; ಮರಳುವಂತೆ ಕಾಯು : ಸಮಸಂದೌರ್ವಾನಳಂ ಪರ್ಬಿದವೊಲುದಧಿ ಕಾಯ್ದುರ್ಕೆಸರ್ಗೊಂಡುದು . . . ಏಂ ತೀವ್ರಮೋ ಗ್ರೀಷ್ಮತಾಪಂ (ಕುಸುಮಾ. ೮-೧೧೯).

[ಎಸರ್ + ಕೊಳ್$_1$]

ಎಸರ್ಮುಚ್ಚಿ (ನಾ). ಎಸರಿನ ಪಾತ್ರೆಯ ಮುಚ್ಚಳ ; ಮಣ್ಣಿನ ಶ್ರಾವೆ : "ಎಸರ್ಮುಚ್ಚಿಯುಪಿಧಾನಮದುದಂಚನಮೆನಿಕ್ಕು" (ಮಂಗರಾ. ೭೨-೨೩) ; ಕುಲನಗೌಘಂ ನುರ್ಗಿದತ್ತಾನೆ ಮೆಟ್ಟಿದೆಸರ್ಮುಚ್ಚಿವೊಲಾಗಿ ಕೂರ್ಮನೊಡೆದಂ . . . ಖಳನೃಪಾಲಾಕ್ರಾಂತಿಹಿಣೀ ಭಾರದಿಂ (ಜಗವಿ. ೧-೩೦). [ಎಸರ್ + ಮುಚ್ಚಿ$_1$]

ಎಸವಂತೆ (ನಾ). ಕೀರ್ತಿಶಾಲಿ ; ಯಶವಂತ : ಏನೆಸವನ್ತನೊ ಪುಣ್ಯವಂತನೊ (ಎಇ. XIX, ೨೨೦-೨೫ ; 1037). [< ಯಶೋವಂತ]

ಎಸವು (ಕ್ರಿ). ಉಬ್ಬು ; ದೊಡ್ಡದಾಗು : ಬಸಿವ ನಿಡುಗೇಶಗಳ ರವಕೆಯ ನೆಸವಿ [ಪಾಠಾಂ. ನೊಸವಿ] ಹೊಮ್ಮಿದ ಮೊಲೆಯ ತಂಗಲವಸನದೊಳು ತುಂಬಿಸೆವ ಜಘನದ ಪೊಳೆವ ಕಿರುದೊಡೆಯ (ಅಂಬಿಕಾ. ೮-೨೭).

[?. / ತೆಲು. ಎಸಗು, ಎಸವು]

ಎಸಹ ? (ನಾ). ಸವಿ (?) : ವಿಷದಲ್ಲಿ ತಪಿಸುತಾ ವಸುಧಿಯೊಳಗಿರುತಿರೆ ವಸುದೇವಸುತನೆಂಬೊ ರಸದಾಳಿಕಬ್ಬು ಕೂಲಿಗೆ ಎಸಹ ಮೆದ್ದಂತೆ ಕಾಣೊ ಅಸುರಾರಿ ನಿನ್ನ ನಾಮಸುಧೆಯ ಕುಡಿಸಿ (ವಿಸ್ತೋಸು. ೪೫-೫) ; "ತೃಪ್ತಿಯಾಗುವಂತೆ" (ವಿಸ್ತೋಸು. ಅಡಿಟ). [< ಎಸಿ ?]

ಎಸಳ್ 'ಎಸಟ್' ನೋ.

ಎಸಳು$_1$ 'ಎಸಟ್' ನೋ.

ಎಸಳು$_2$ (ನಾ). ಬೀಗದ ಕೈ : ಬೀಗದ ಎಸಳು ಹಲವಾದಡೇನು ಒಂದು ದ್ವಾರದಲ್ಲಿ ಅಡಗಿ ಓತಂತೆ ಇಷ್ಟ ತೆಱ ನೀನಾಗಿ (ಶಿವಮುಂ. ೨೫) ; ಅವಾವ ಸ್ಥಲಂಗಳನಾದರೂ ನಡವಲ್ಲಿ ಘಟವೇ ಬೀಗವಾಗಿ ಎಸಳೇ ಆತ್ಮವಾಗಿ ಅಱಿವೇ ಕೈಯಾಗಿ (ಮೋಳಿಮಾ. ೯-೩೦) ; ಬೀಗದ ಎಸಳು ಎಲ್ಲಿದೆ, ಬೇಗಕೊಡು (ರೂಢಿ). [?]

ಎಸಳುಗಣ್ 'ಎಸಟ್ಗಣ್' ನೋ.

ಎಸಳುಗಣೆ 'ಎಸಳ್ಗಣೆ' ನೋ.

ಎಸಳುಗಣ್ಣು 'ಎಸಟ್ಗಣ್' ನೋ.

ಎಸಳೆ (ನಾ). ಒಂದು ಜಾತಿಯ ಮರ : ಅರಳಿ ಕಡವೊಡವು ತಂಡಸಿಯರನೆಲ್ಲಿ ಬಿದಿರ್ ಪತಂಗಂ . . . ತೇಗು ಪನೆ ಕಮ್ಮರಮೆಸಳೆಯೆನಿಪ್ಪ ವಿರ್ಪುವಾ ಪೆರ್ಗಾಡೊಳ್ (ರಾಜಶೇ. ೫-೫೮). [< ಯಸಗಲೆ ?]

ಎಸಳ್ಗಣ್ 'ಎಸಟ್ಗಣ್' ನೋ.

ಎಸಳ್ಗಣೆ, ಎಸಳುಗಣೆ (ನಾ). ಹೂವಿನ ಬಾಣ ; ಹೂಗಣೆ : ಅವನ ಸೌಂದರ್ಯಮುಮನಾ ಧವಳಸರಸಿಜೇಕ್ಷಣೆ ಕಂಡುಯೆಸಳ್ಗಣೆಗೆ ಗುಱಿಯಾಗಲು (ರಾಘಾಕ. ೧೩-೨೫). ಎಸಳುಗಣೆ : ಮಾನಿನಿಯ ಕಾಣುತೆಸಳುಗಣೆಗೀಡಾಗಿ (ಸೌಂದಪು. ೧೨-೩೯).

[ಎಸಳ್ (< ಎಸಟ್) + ಕಣೆ$_1$]

ಎಸಳ್ಗಣ್ಣು 'ಎಸಟ್ಗಣ್' ನೋ.

ಎಸಳ್ಚಾಪ (ನಾ). ಹೂವಿನ ದಳಗಳಿಂದ ಮಾಡಿದ ಚಾಪ : ಅಮಳ್ವಂತ್ರಂ, ಎಸಳ್ಚಾಪ (ಶಬ್ದಾನು. ೭೩ ಪ್ರಯೋ).

[ಎಸಳ್ (< ಎಸಟ್) + ಚಾಪ$_1$]

ಎಸಳ್ದೊಂಗಲ್ (ನಾ). ಹೂವಿನ ಗೊಂಚಲು : ನೂತನ ಚಂಪಕದೆಸಳ್ದೊಂಗಲ್ದೊರ್ವಿಡಿದಾ ಕೆಂಗಣ್ಣಕ್ಕಿಯ ಸರಮೆಂಬ ಪೊಸಗಂಟಿಯ ನಲುಗಿಸೆ (ಜಯುಕಾ. ೧-೫೦). [ಎಸಳ್ (< ಎಸಟ್) + ತೊಂಗಲ್]

ಎಸಳ್ಪುಗುಡಿ (ನಾ). ಎಸಳಿನ ಆಕಾರದಲ್ಲಿರುವ ಬುಗುಡಿ : ಮೊಗವೆರೆಯಮೃತಗೊಳ್ವ ಕಣ್ಮೊನ್ನಗಳವಕ್ಕಿಗಳುಣ್ವ ಪೊಂಬಡಲಿಗೆಯ ತೆರೆದೆಸಳ್ಪುಗುಡಿ ಮುತ್ತಿನವಿಟ್ಟು ಸ್ಮರರಾಜಾ (ಜಿರಾಮಾ. ೮೦-೫೫).

[ಎಸಳ್ (< ಎಸಟ್) + ಬುಗುಡಿ$_2$]

ಎಸಳ್ವಲಿ (ನಾ). ಹೂವನ್ನು ಸೂಸುವುದು : ಚಳಿಯಂಗೊಟ್ಟಂಗಣದೊಳ್ ಕಡೆಯಂಗುಡುವಾ ಎಸಳ್ವಲಿಗೆದರ್ವ ಲಸದ್ಭಿತ್ತಿಗಳೊಳು ರಸಚಿತ್ರಾವಳಿಯಂ ಚಿತ್ರಿಪ ಸಂತಸದ ಜನದ ಸಂದಣಿ . . . ಸೊಗಸಿದುದು (ಜಯುಕಾ. ೮-೨). [ಎಸಳ್ (< ಎಸಟ್) + ವಲ್ಲಿ$_1$]

ಎಸಳ್ವಸೆ (ನಾ). ಹೂವಿನ ಹಸೆ ; ಹೂವಿನ ದಳಗಳ ಹಾಸಿಗೆ : ಶಾಂತಕ್ಕೆ . . . ಎಸಳ್ವಸೆ, ಅಮಳ್ವಂತ್ರಂ (ಶಮದ. ೪೩ ಪ್ರಯೋ).

[ಎಸಳ್ (< ಎಸಟ್) + ಪಸೆ$_3$]

ಎಸಟ್, ಎಸಳ್, ಎಸಳು$_1$ (ನಾ). ೧. ಹೂವಿನ ದಳ, —ರೇಕು, —ಪತ್ರ, —ಎಲೆ, —ಪಕಳೆ : ಜಟಾಂತಕ್ಕೆ–ಅಗಟ್ಗಳ್, ಎಸಟ್ಗಳ್ (ಶಮದ. ೪೨ ಪ್ರಯೋ) ; ಪೊಸಗಂಪಂ ಪುದಿದೊಪ್ಪಿ ತೋಱುವೆಸಟ್ಗಳ್ ಮೂವತ್ತೆರಟ್ ಚೆಲ್ವನಪ್ಪಿಸಟ್ಟೋರೋಂದಱ ಮೇಲೆ ಲೀಲೆ ಮಿಗೆ ಮೂವತ್ತಿರ್ವರೋರಂತೆ ನರ್ತಿಸೆ (ಆದಿಪು. ೭-೫೩) ; ಉಡಮೊಗಮೆಂಬ ತಾವರೆಯ ನೀಳ್ದೆಸಟ್ಗೊಳ್ ಮಱಿದುಂಬಿ ಪಾಯ್ದೊಡಂಬಡನೊಳಕೊಂಡು (ಪಂಪಭಾ. ೪-೭೮) ; ನೆಯ್ದಿಲೆಸಟ್ವಱ ಪೋಲ್ವೆಯ ನೆಯ್ದಿಲೆ ದಲ್ ಪಡೆದುವಿಲ್ಲ (ಕಾವ್ಯಾವ. ೫೩೨) ; ನೆಱೆ ನೂಱೆಸಟಂ ಪಡೆವಂತಿರೆ ಪದ್ಮಿನಿ ತಾಂ ಪಡೆದಳ್ ಗಾಂಧಾರಿ ನೂರ್ವರಂ ನಂದನರಂ (ಅರ್ಧನೇ. ೪-೧೦೬) ; ಅರೆಬಿರಿದ ಪೊಸ ಎಸಟ್ಕೃಳನ್ ಬಡಿದು (ಅಶ್ವತ್ಥಾ. ೮-೧೫೯).

**ಎಸಳ್** : ೧. ಕಿಸಲಯದೆಸಳ ಮಾಣಿಕ್ಯದ ಸಿಂಪಿಂ ಪಳಿರಸದ ಪಾಲ ನೆಜ್ಜಿವು (ಗಿರಿಕ. ೨–೭೧ ವ); ಪ ದಾಂ ಭೋ ರು ಹ ದೆ ಸ ಳ್ ಸಡಿಲದೆ (ನಂದಿಮಾ. ೮–೧೦). **ಎಸಳು**$_1$ : ೧. ಎಸಳು ಮೊನೆ ಮೇಲಾಗಿ ತಾವರೆ ಮುಸುಕುತಿರೆ (ಕು ವ್ಯಾ ವಿ. ೧೧–೬೭); ಎಸಳುಗಳೊಡೆಯದಚ್ಚಸಿಯ ಮಲ್ಲಿಗೆಯಿಂದ (ಅಂಜಜ. ೨–೯೦). ೨. ವಿಭಾಗ; ಹೋಳು; ಕವಲು; ಸೀಳು : ಬದನೆಯೆಳೆವದದ ಕಾಯ್ಗಳನು ನಾಲ್ಕೆಸಳಾಗಿ ಕುಯಿದು ತುಪ್ಪ ದೊಳಗುಕ್ಕರಿಸಿಯವು ಹಿಸಿಯದಂದದಿ ಹಿಕ್ಕಿ (ಸೂಪಶಾ. ೪–೯); ನರ್ಮದಾ ನದಿಯ ಎರಡು ಎಸಳುಗಳ ನಡುವಿನ ಭೂಮಿಯಲ್ಲಿ ಕಬೀರಬುಡ ಎಂಬ ಹೆಸರಿನ ಆಲದಮರವುಂಟು (ಮುಂಬಯಿ. ೪–೨೯೩); ದೊಡ್ಡವರಿಗೆ ಒಂದೊಂದು ಎಸಳು ಹೂಗೆಸೊಪ್ಪು (ರಕ್ತರೂ. ೨೮). ೩. ಪದರ; ಹಾಳೆ; ಪಟಲ : ಎಸಳು ಎಸಳಾಗಿ ಬಿಡಿಸು (ರೂಢಿ). ೪. ಕಿವಿಯಾ ಭರಣ : (ಸ್ಯಾಂಡರ್).

**ಎಸಳಾಗು** = ಸೀಳಾಗು; ಭಾಗವಾಗು : ಶರಾವತಿ ಈ ಜಿಲ್ಲೆಯೊಳಗೆ ಸೇರಿದ ಬಳಿಕ ನಾಲ್ಕುಯೆಸಳಾಗಿ ಸಹ್ಯಾದ್ರಿಯ ಮೇಲಿಂದ . . . ತಡಸಲಾಗಿ ಬೀಳುತ್ತದೆ (ಕಭಾಗೆ. ೧೨).

[**ದೇ. ‖ ತಮಿ.** ಇದಟ್, ಅದಟ್; **ಮಲ.** ಇದಳ್; **ತುಳು.** ಎಸಳ್]

**ಎಸಲ್ಗಣ್**, ಎಸಳುಗಣ್, ಎಸಳುಗಣ್ಣು, ಎಸಳ್ಗಣ್, ಎಸಳ್ಗಣ್ಣು (ನಾ). ಎಸಳಿನಂತೆ ನೀಳವಾದ ಕಣ್ಣು; ಹೂವಿನ ದಳದಂತಹ ಕಣ್ಣು : ಒಂದೊಂದಱ ಸೌಂದರ್ಯಮನೊಂದೊಂದೀಕ್ಷಿಸಲೊಡರ್ಚೆ ನಾಸಿಕಮಡ್ಡಂಬಂದಂದಮನೀಕ್ಷಿಸಿ ಪೆಱನಿಂ[ದಂ]ದೀಕ್ಷಿಸು[ವು]ವವಳ ನಿಡಿಯೆಸಲ್ಗಣ್ಗಳ್ (ಕವಿರಾ. ೩–೨೩). **ಎಸಳುಗಣ್** : ಎಸಳುಗಂಗಳ ಕೊಳಗಿ ಬೆಳಗುವ ಮುಸುಡ ಕಾಂತಿಯ (ಕುವ್ಯಾಆ. ೧೩–೧೩); ಹೊಳೆವೆಸಳುಗಂಗಳ ಬಳ್ಳಿಮಿಂಚನು . . . ಪಸರಿಸುತ ಬಂದು(ಸಾಳ್ವಭಾ. ೧೭–೨). ಎಸಳುಗಂಗಳ ದಿಟ್ಟಿಯ ಕೂರಿಟ್ಟಿಯ ಮಿಸುಪ ಸೆಳ್ಳುಗುರ ಸುರಗಿಯ . . . ಕುಸುಮಶರನ ಪಡೆಯಂತೆ (ಕಂನವಿ. ೨೪–೮). **ಎಸಳುಗಣ್ಣು** : ಕನ್ನೈದಿಲುಗಳೆಸಳುಗಣ್ಣಕಾಂತಿಯಿಂದುನ್ನತವಹ ಮಿಂಚುಗಣ್ಣ . . . ಹೆಣ್ಣುಗಳೈದಿತೊಗ್ಗಿನಲಿ (ಕಂನವಿ. ೯–೮೨). **ಎಸಳ್ಗಣ್** : ಎಸಳ್ಗಣ್ಣಾಡಿದೊಡೆವೆಯಿನಿತಲುಗಿದೊಡುಸಿರ್ವೊಯ್ದೊಡೆಯುಲುಕಿದೊಡಧರಂ ಮೆಯ್ಸುಸು ಮಿಡುಕಿದೊಡೆ ದಿಟದ ಮಾನಿಸೆಯೆಂದೇ ಬಗೆದಂಗಭವಂ (ಜಯಕಾ. ೪–೨೨); ಎಸಳ್ಗಣ್ಣೊಳುತ್ಪಲವನುಗುರ್ಗಳೊಳ್ ಕೇತಕಿಯ ನೊಸೆದಿರಿಸಿಕೊಂಡು (ಜೈಮಿಭಾ. ೬–೧೬). **ಎಸಳ್ಗಣ್ಣು** : ಸಂಪಾದಿಸಿಯೆ ಕನ್ನೆಯರೊಲಿದು ಶಪಥಗಳ ತಳೆದರು ಕನ್ನೈದಿಲೆಸಳ್ಗಣ್ಣವರು (ಜೀವಂಸಾಂ. ೧೨–೧೫); ಚೆಲ್ಲೆಗಣ್ಣವರರಳ್ಗಣ್ಣವರ್ ನಿಡಿಗಣ್ಣ ಹುಲ್ಲೆಗಣ್ಣವರೆಸಳ್ಗಣ್ಣ ಲಲ್ಲೆಗಣ್ಣವರ್ ನಗೆನೋಟದ ತೋರ ಧಮ್ಮಿಲ್ಲೆಯರೆಯ್ದಿತೊಗ್ಗಿನಲಿ (ಮೋಹತ. ೨೪–೧೨). [ಎಸಟ್ + ಕಣ್]

**ಎಸಳ್ಮಸಗು** (ಕ್ರಿ). (ಹೂವಿನ ದಳದ ಹಾಗೆ) ಕೆದರು; ಉಬ್ಬು; ಪೊಸ ವಿಸಿಲೊಳ್ ಮುಗುಳ್ಗಳ್ ಸಿಡಿಲ್ದುಸಿರ್ವಂತೆಸಳ್ಮಸಗಿ ಮುಗುಳ್ಗೆ ನಕ್ಕು ತೋಱೆ ಮದಾಳಿಗಳ್ (ಕಾವ್ಯಾವ. ೯೧೭); ಎಸಳ್ಮಸಗಿದಲರ ಗೊಂಚಲ್ಗಳೆ ನಿಳಿಪ ಚಂಚರೀಕ ಸಂಚಯದಂತೆ (ಅನಂಪು. ೨–೩೪ ವ).

[ಎಸಟ್ + ಮಸಗು$_1$]

**ಎಸಳ್ಮಿಸುಗು** (ಕ್ರಿ). ೧. ದಳ ಅಲುಗಾಡಿಸು, —ಅಲ್ಲಾಡಿಸು : ಎಲರಲೆಪಿಂದೆಸಳ್ಮಿಸುಪ ನೆಯ್ದಿಲನೋಪಳಿಗೆತ್ತು (ಅನಂಪು. ೭–೭೧). ೨. ಹೊಳೆ; ಪ್ರಕಾಶಿಸು : ಪಸುಳೆವಿಸಿಲ ಮಸಕದಿನೆಸಳ್ಮಿಸುಪ ಪೊಸ ದಾವರೆಯ ಪಸೆಯೊಳಸದಳಮೆಸೆವ ಸರಸತಿಯಡಿದಳಿರ್ಗೆ (ಕಬ್ಬಿಕಾ. ೩೯೯). [ಎಸಟ್ + ಮಿಸುಗು$_1$]

**ಎಸಳ್ಬಳಿಸು** (ಕ್ರಿ). ಎಸಳಿನ ಆಕಾರದಲ್ಲಿ ರಂಗೋಲಿ ಬಳಿ (?) : ಘುಸೃಣರಸಗಳಿಂದೆ ಚಳಿಯಂಗುಡುವಂತರುಣಾಬ್ಜಪತ್ರದಿಂದೆಸಳ್ಬಳಿ ಪಂತೆ ಬರ್ಪಮರರಾಜನಧೂಜನ (ಅನಂಪು. ೧೦–೩೫).

[ಎಸಟ್ + ಬಳಿಸು]

**ಎಸಳ್ಬಟಿ** (ನಾ). ದಳದ ಅಂಚು ಅಥವಾ ರೇಕಿನ ಜಾಡು : ನಲವಿಂ ಪೊರಳ್ದು ನೀಳ್ದೆಱಗಿದ ಕೀಟಿಕೆಸಳ್ಬಟಿಯನೊಯ್ಯನೆ ಜಾಱೆ ಪರಾಗಪುಂಜದೊಳ್ ಪರಿವಡಿಸಿತ್ತು ಭೃಂಗಶಿಶು ನೀರಜದೊಳ್ ನಿಜಪಾಂಸು ಕೇಳಿಯಂ (ಚಂದ್ರಪು. ೭–೭೦). [ಎಸಟ್ + ಬಟ್ಟಿ$_3$]

**ಎಸಳ್ಪಾಸು** (ನಾ). ಹೂವಿನ ದಳಗಳಿಂದ ಮಾಡಿದ ಹಾಸಿಗೆ : ಕಟಿಲ್ದ ಪದ್ಮದಳಸಂಕುಳದಿಂದೆಸಳ್ಪಾಸನೊತ್ತಿ (ಅನಂಪು. ೭–೬೧).

[ಎಸಟ್ + ಪಾಸು$_2$]

**ಎಸಳ್ಪೊರೆ** (ನಾ). ಹೂವಿನ ಪದರ, —ರಾಶಿ : ತಳ್ತೆಸಳ್ಪೊರೆಯೊಳ ಡಂಗಿ ನುಣ್ಚರದಿನಾಣತಿಮಾಡಿದುದುನ್ಮದಾಳಿ ತಾವರೆಯೊಳಗಿದರ್ದ ಲಕ್ಷ್ಮಿಯ ಮನಂಬಡೆವೆಕ್ಕಲಗಾಣನೆಂಬಿನಂ (ಮಲ್ಲಿಪು. ೬–೯೮); ಉರದಿಂ ಬರಿಯಿಂದಗ್ರಂಬರೆಗಂ ಕೆಂಪೆಸೆಯೆ ನೀಳ್ದ ನಖರೇಖೆಯೆಸಳ್ಪೊರೆಯೆನಿಸಿ ಪದ್ಮಕುಟ್ಮಲದಿರವಂ ಪರಿಭವಿಸಿತೀಕೆಯುತ್ತುಂಗಯುಗಳಂ (ಕಾವ್ಯಸಾ. ೬೭೪). [ಎಸಟ್ + ಪೊರೆ$_6$]

**ಎಸಿಸು** (ಕ್ರಿ). ಬಾಣಪ್ರಯೋಗ ಮಾಡಿಸು; ಬಾಣವನ್ನು ಎಸೆಯಿಸು : ತಡೆಯದೆ ರಾಯ ಚಿತ್ತೈಸು ನಿಮ್ಮವರನೆಮ್ಮೊಡನೆ ಸಿಂಗಾಡಿಯ ನಿದನು ಕುಡಿವೆರಲಿಂ ತೆಗೆಯಿಸಿ ಕೊಪ್ಪರಿಗೆಯೇಳ ತಡಹಾಯಲೆಸಿ[ಪಾಠಾಂ. ಸ] ಸಿ ತೋಱುವೆವು (ಕುರಾಸಾಂ. ೧೮–೬೫). [ಎಸೆ$_1$ + –ಇಸು$_3$]

**ಎಸು**$_1$ (ಕ್ರಿ). ಎಚ್ಚು$_2$ (ಭೂತಕೃ). ಬಾಣಪ್ರಯೋಗ ಮಾಡು; ಅಂಬನ್ನು ಎಸೆ : ಮತ್ತಿವಜಾ ಬಲದಿನಗಲ್ದರನೆಚ್ಚಾ ತ್ರಿಲೋಕಮಂ ಕಂತು ಬಸಕೆ ಬರಿಸುವನೆಂತುಂ (ಕವಿರಾ. ೩–೧೨೧); ತತ್ಪರದೂಷಣ ರ್ಕಳಂ ಕೊಂದೆಡೆ ಪೋಗಿ ಪೊಮ್ಮರೆಯನೆಚ್ಚೆಡೆ ತಪ್ಪದಿದಪ್ಪುದೆಂದು (ಪಂಪಭಾ. ೪–೧೯); ಬಿಡದೆಸುವ ಕಾಮಂಗೆ ಗುಱಿಮಾಡಿರೀತನಂ (ನಂಬಿರ. ೧೫–೮೮); ಅಪರಭಾಗದಲಿ ನೀ ಬಂದೆಸು ಕುಮಾರನ ಕರದ ಕಾರ್ಮುಕವ (ಕುವ್ಯಾದ್ರೋ. ೬–೨೮); ಕಬ್ಬುವಿಲ್ಲಗೆ ಕಣೆದೊಟ್ಟು ಹೆಂಗಳನೆಸುವುಬ್ಬಸವೇಕೆಂದು ಕರೆದು (ಭರಜ. ೬–೪೫).

**ಎಚ್ಚಾಡು** = ಬಾಣಪ್ರಯೋಗ ಮಾಡು : ಗೆಲ್ದತುಳ ಬಲದ ಮಲ್ಲನುಮೆಚ್ಚಾಡಿದ ಬಿಲ್ಲುಮಿರ್ದತ್ತು (ಶಾಂತಿಪು. ೨–೪೫); ಕಾಮುನೆಚ್ಚಾಡುವ ಬಲ್ಸರಲ್ಗೆ ಗುಱಿಯಾಗಿ (ದಶಕು. ೯–೩೮). 'ಇಸು$_1$' ಪರಾ.

[**ದೇ. ‖ ತಮಿ.** ಎಯ್, ಏಚು; **ಮಲ. ತುಳು.** ಎಯ್ಯು; **ತೆಲು.** ಎಗುಚು; **ಪರ್ಜಿ.** ಎಯ್, ಎಯ್ಕ್; **ಗೊಂಡಿ.** ಎಸ್ನಾ; **ಕುರುಖ್.** ಇಜ್ನಾ]

**ಎಸು**$_2$ 'ಎಚ್ಚು' ನೋ.

**ಎಸುಕೋಡು** (ನಾ). ಒಂದು ನಾಡಿನ ಹೆಸರು : ಎಸುಕೋಡೆ ಪ್ಪತ್ತುಮಂ . . . ರಾಜ್ಯಂಗೆಯ್ಯುತ್ತಮಿರ್ದ್ದು (ಎಕ. VII, ಶಿಕಾರಿ. ೩೨೩–೧೦; 1046). [ಎಸು ? + ಕೋಡು$_6$]

**ಎಸುಗೆ**, ಎಸಗೆ (ನಾ). ಎಸೆತ; ಎಸೆಯುವಿಕೆ; ಬಾಣಪ್ರಯೋಗ; ಅಂಬಿನ ಹೊಡೆತ : ಕೈಚಳಕದೆಸುಗೆಯ ಕೇಣದಳತೆಯನಱಿಯೆ ನಾನೆಂದ (ಕುವ್ಯಾಕ. ೧೨–೨೪); ಓರ್ವ ಶಬರನ ತನುವಿನೆಸುಗೆಗೆ ಥರಿಸಿರ್ದ ಬಿಲ್ಲಂಬುಗಳ ಬಿಸುಟು(ಸೌಂದಪು. ೧೮–೨೧); ಕೊಚ್ಚುವರ್ ಪೊಸಮಸೆಯ ಸರಳ್ಗಳಿಂದೆಸುಗೆಯಂ ಮೆಚ್ಚುವರ್ ಹೃದಯದಲಿ (ಚಿಬಪು. ೨೪–೧೮). **ಎಸಗೆ** : ಒಂದು ಕಲ್ಲು ಎಸಗೇ ದೂರದಲ್ಲಿ ಜೋಡಾಗಿ ಎರಡು ಬೃಂದಾವನಗಳು ಕಾಣುವುವು (ಮಾಮುರಾ. ೧೧೫). 'ಇಸುಗೆ' ಪರಾ.

[ಎಸು$_1$ + – ಗೆ$_1$]

**ಎಸುಗೆಗುಂದು** (ಕ್ರಿ). ಬಾಣ ಪ್ರಯೋಗ ಕಡಮೆಯಾಗು,—ಕುಗ್ಗು: ಎಸುಗೆಗುಂದದೆ ಕೊರಳ್ ನಡುಗಳಿಕ್ಕಡಿಸಲೆಚ್ಚಾಡಿದರ್ ಬಿಲ್ಲಬಿನ್ನಣಿಗರಂದು (ಚಬವು. ೪೮–೪೯). [ಎಸುಗೆ + ಕುಂದು$_1$]

**ಎಸುಗೆವಡೆ** (ಕ್ರಿ). (ಬಾಣದ) ಹೊಡೆತವನ್ನು ಪಡೆ; ಪೆಟ್ಟನ್ನು ತಿನ್ನು: ಒರ್ವನಂ ಚೋರರಿಂದೆಸುಗೆವಡೆದಳಿವನಿತ್ತಜೊಳ್ ಶಬರರಾ ಪಥದೊಳೆಯ್ದುತಿರೆ (ಪದ್ಮರಾ. ೧೧–೧೩೪); ಕುಸುಮಶರನುರವಣೆಯ ಗಾಯದಲೆಸುಗೆವಡೆದನು ಕೀಚಕನು (ಕುವ್ಯಾವಿ. ೨ ಸೂಚನೆ). [ಎಸುಗೆ + ಪಡೆ$_1$]

**ಎಸುವಡೆ** (ಕ್ರಿ). = ಎಸುಗೆವಡೆ: ಎಸುವಡೆದು ಮಸಣದೊಳಗಸುಗಳೆವವನ ನೊಸಲೊಳಸವಸದಿನಡಿಯಿಟ್ಟ ನಾಯ್ವಜ್ಜಿಯ (ಸಾನಂಚ. ೩–೧೨೨). [< ಏಸುವಡೆ]

**ಎಸುವೆಱು** 'ಏಸುವೆಱು' ಪರಾ.

**ಎಸೆ$_1$, ಎಚೆ** (ಕ್ರಿ). ೧. ಬಾಣವನ್ನು ಪ್ರಯೋಗಿಸು, —ಬಿಡು: ಎಸೆಯದಿರು ಎಸೆಯದಿರು ಕಾಮ ನಿನ್ನ ಬಾಣ ಹುಸಿಯಲೇಕೋ (ಅವಚಂ. ೩೪–೧೪೭); ಎಸೆವರ ಬಲ್ಲೆ ಎಚ್ಚಬಾಣ ತಿರುಗಿಬಪ್ಪಂತೆ ಎಸೆವರ ಕಾಣೆ (ಮೋಳಿಮಾ. ೧೦೫ ಪ್ರಸ್ತಾ); ಹರನವನ ಕೊಲುವಂದು ಎರಳೆಯನು ಎಸೆವಂದು... ಪುರಹರಗೆ ಸರಿಯಾರ ಕಾಣೆ (ಸರ್ವಜ್ಞ. ೨೧೭); ದುರುಳನಿಷಾದ, ಕೊಂಚೆಯೆಣೆಯಿಂದಂ ಕಾಮಮೋಹಿತನನಿಯನನ್ನೆಸೆದೆ (ಗಿಳಿಎಂ. ೩೨–೨). ೨. ಬಿಸುಡು; ಬಿಸಾಡು: ಎಸೆಯಲೆ ಚಿಂತೆಯ ಆ ಕೊಳದಲ್ಲಿ (ನಡೆದಾ. I, ೪೨೪); ಎಲ್ಲರೂ ಕೂಗುತ್ತಾ, ಖುರ್ಚಿಗಳನ್ನು ಎಸೆಯುತ್ತಾ, ಬೈಯುತ್ತಾ ಹೊರಗೆ ಬಂದರು (ರಾಯಕ. ೭೭). **ಎಚೆ: ೧.** ಬಾಣವನೆಚೆದು ಬಿಲ್ಲ ನಡುಗಿಸುವಂತೆ (ಪ್ರಸಕೀ. ೬–೨); ಅಂಬುಗಳನ್ನು ಎಚೆಯುವಾಗ ಬಿಲ್ಲುಗಳಿಂದುಂಟಾಗುವ ಟಣತ್ಕಾರವೂ (ಮುಂಬಯಿ. ೫–೩೦೪).

**ಎಸೆದುಬಿಡು** = ದೂರ ಬಿಸಾಡು; ದೂರಕ್ಕೆ ಎಸೆ: ಕೈ ಕಡಗವನ್ನು ಸಮುದ್ರಕ್ಕೆ ಎಸೆದುಬಿಡು (ಆರ್ಯಕ. ೩೯). [< ಎಸು$_1$]

**ಎಸೆ$_2$** (ಕ್ರಿ). ಶೋಭಿಸು; ಒಪ್ಪು: "ಎಸೆ – ಶೋಭಾಯಾಂ" (ಶಮಧಾ); ನವೋದಿತ ಚಂದ್ರಬಿಂಬಮಂ ಧರಿಯಿಸಿದಿಂದ್ರದಿಗ್ವನಿತೆಯಂತೆಸೆದಳ್ (ಕಾವ್ಯಸಾ. ೯೬೨ ಶೂದ್ರಕ); ಮೃಗದ ಮೆಯ್ಯೊಳ್ ನಿಸದಮೆಸೆವುದು ಬಲ್ಲಾಳ ಬಿಲ್ಬಲ್ಮೆ (ಪಂಪಭಾ. ೫–೪೭); ಎಸೆವ ಸಭಾಮಂಟಪಮ[೦] ವಸುಧೆಗೆ ಕಡು ಚೋದ್ಯವೆನೆ ಜಗಂ ಬಣ್ಣಿಸೆ ಚೆಲ್ವೆಸೆದಿರೆ ಕರಮೊಪ್ಪುವ ಬ[ಕ]ಲುವೆಸದಿಂ ಮಾಡಿಸಿದನೆಸೆವಿನಂ ಮಾರ್ತ್ತ(೦)ಣ್ಡಂ (ಸೌಇಇ. IX–i, ೧೯೭–೩೮; 1119); ಕವಿ ಸುಮನೋಬಾಣನ ಯಾದವಕಟಕಾಚಾರ್ಯನೆಸೆವ ದೌಹಿತ್ರನೆ ನಾಂ (ಶಮದ. ೨); ಅಬಲೆಯರು ಕಣ್ಗೆಸೆದಿರ್ದರು (ಭಾವಚಿಂ. ೬–೩೧). [ದೇ. ‖ ತೆಲು. ಎಸಂಗು]

**ಎಸೆ$_3$** (ನಾ). ಎಸೆಯುವಿಕೆ: ಕೇಳ್ವುದೇನಹುದಲ್ಲವೆಂದು ಪುಟಚೆಂಡು? ನೆಗೆವುದೆಡಬಲಕೆಸುಗನೆಸೆಯ ಕೆಯ್ಕೊಂಡು (ಗಿಳಿಎಂ. ೧೨೨–೩೬). [< ಎಸೆ$_1$]

**ಎಸೆ$_4$** (ನಾ). ಒಂದು ಬಗೆಯ ತೆರಿಗೆ (?): ಆ ಮೂಲಿಗರೀ [ತೆ]ಱುಸಿದ್ಧಾಯ ನಟ್ಟುಬೆಡೆ ಯೆಸೆ ಒಸಗೆ ಜೋಡಿಯಿವನೆಲ್ಲವನೂ ಆ ಮೂಲಿಗರೇ ನಡೆಸಿ (ಸೌಇಇ. IX–ii, ೪೧೬–೧೧; 1377); ಕಾಣಿಕೆ ಖಡಾಯ ಬೆಳಾಕರಣ ಬೆಳುದಂಡ ಎಸೆ ಒಸಗೆ ಬಿಜ್ಜ ಬಿಡಾರ ವತ್ತುಗಾಯಿ ಮೊದಲಾಗಿ (ಕಇ. I, ೫೪–೫; 1433); ಶಾಸನಗಳಲ್ಲಿ ಬರುವ ತೆರುವಣಗಳು :– ತೆರು... ಬೆಳುದಂಡ, ಎಸೆ, ಒಸಗೆ (ತುಳುನಾ. ೨೭೧). [?]

**ಎಸೆಗುಂಡು** (ನಾ). ಎಸೆಯಲು ಉಪಯೋಗಿಸುವ ಗುಂಡು, —ಕಲ್ಲು: (ವ್ಯಾಯಾಮದ ಅಭ್ಯಾಸವಾಗಿ) ಎಸೆಗುಂಡನ್ನು (ಕೈಯಿಂದ ಭುಜದ ಹತ್ತಿರಕೆ ತಂದು) ಎಸೆ (Put. ಇಂಕನಿ). [ಎಸೆ$_1$ + ಗುಂಡು$_2$]

**ಎಸೆಗುದ್ದಲಿ** (ನಾ). (ಮಣ್ಣು ಮೊದಲಾದುವನ್ನು) ಎಸೆಯಲು ಅನುಕೂಲವಾಗಿರುವ ಒಂದು ಸಾಧನ: ಬೆಂಕಿಯ ಲೋಹ ಸಲಕರಣೆಗಳು : ತಂಡಸ, ಚುಚ್ಚುಗೋಲು, ಎಸೆಗುದ್ದಲಿ (Fire–Irons. ಇಂಕನಿ). [ಎಸೆ$_1$ + ಗುದ್ದಲಿ]

**ಎಸೆಚಕ್ರ** (ನಾ). ಎಸೆಯಲು ಉಪಯೋಗಿಸುವ ಚಕ್ರ: 'ಒಲಿಂಪಿಕ್' ವ್ಯಾಯಾಮಗಳಲ್ಲಿ, ಎಸೆದಾಡುವ, ಭಾರವಾದ ಚಕ್ರ: ಎಸೆಚಕ್ರ; ಚಕ್ರಾಯುಧ; ಪಾರುಂಬಳೆ (Discus. ಇಂಕನಿ). [ಎಸೆ$_1$ + ಚಕ್ರ]

**ಎಸೆತ** (ನಾ). ಎಸೆಯುವಿಕೆ: ದಿವ್ಯಾಸ್ತ್ರಗಳೇನೋ ಇವೆ. ಆದರೆ ನನ್ನ ಬಲಕ್ಕೆ ತಕ್ಕಂಥ ಬಿಲ್ಲು ಇಲ್ಲ; ನನ್ನ ಎಸೆತ ಬಲುವೇಗ... ಎಂದನು (ವಚಭಾ. ೭೩). [ಎಸೆ$_1$ + –ತ$_2$]

**ಎಸೆಯಿಾಟಿ** (ನಾ). ಎಸೆಯಲು ಉಪಯೋಗಿಸುವ ಈಟಿ: ಹಗುರವಾದ ಎಸೆಯಿಾಟಿ, ಭಲ್ಲೆಯ (Javelin. ಇಂಕನಿ). [ಎಸೆ$_1$ + ಈಟಿ (< ಇಟ್ಟಿ$_2$)]

**ಎಸೆವಾರ** (ನಾ). ವಿವಿಧ ನಾದಗಳ ಸಮೂಹ: ಪೊಸತಪ್ಪ ಗೀತಮಂ ಪಾಡುತಾಡುತ್ತಿರ್ಪರಲ್ಲಿ ವಾದ್ಯದ ಗಾನದ ಎಸೆವಾರಕನುಗುಣಂ ಬರ್ಪಂತೆ (ಅರಾಚ. ೧೦–೨೪). [ಎಸೆ$_0$ + ವಾರ. P ತಮಿ. ಇಶೈ = ನಾದ; ವಾರಂ = ಗುಂಪು, ಸಮೂಹ]

**ಎಹಂಗೆ** 'ಎಹಗೆ' ನೋ.

**ಎಹಗೆ**, ಎಹಂಗೆ, ಎಹೆಗೆ, ಹೆಂಗೆ, ಹೇಂಗೆ, ಹೇಗೆ (ಅ). ಯಾವ ರೀತಿಯಾಗಿ; ಯಾವ ಕ್ರಮದಲ್ಲಿ; ಎಂತು: ಆಹಗೆ ಮಾಡಿದವಂ ಕಿಡುವಂ ಅದು ಎಹಗೆಂದೊಡೆ ಕಚದ್ರುಮನೆಂಬರಸಿನಹಗೆ (ಪಂಚತಂ. ೨೭–೧೫); ಬಳಿಕ್ಕೆಹಗಡಗಿ ಹೋದನೋ ತಾನೆ ಬಲ್ಲಂ ಕುಱುಹುತಪ್ಪದೆನುತಾರ್ಯೆದನು (ಸಿದ್ಧರಾ. ೨–೩೫); ಶಿವಶಿವಾಯಿಂತಹ ಶಿವದ್ರೋಹವನೆಹಗೆ ಸೈರಿಸುವೆನಿನ್ನೇಗುವೆನು (ಬಸವು. ೧೮–೪೩); ಶಲ್ಯ ಕೌರವರೆಹಗೆ ನೆಗಳೆದರದನು ವಿಸ್ತರವಾಗಿ ಹೇಳೆಂದ (ಕುವ್ಯಾಶ. ೧–೬). **ಎಹಂಗೆ**: ಸಹಜವಾಗಲೆಹಂಗೆ [ಪಾಠಾಂ. ಉಹಾಂಗೆ]ಸಂಧಿಸಬಹುದು (ಬಸವು. ೩೭–೫೭); ಎಹಂಗೆ ನುಡಿಸುವೆನ್ (ಶ್ರೀರಾಮಾ. ೪೭೩–೨೨). **ಎಹೆಗೆ**: ಬಿರಿದು ಪಾಡು ಎಹೆಗೆಯಿದ್ದುತು ಆ ಒಪಾದಿಯಲಿ (ಎಕ. VIII, ನಗರ. ೨೯–೨೦; 1228). **ಹೆಂಗೆ**: ಕಾಯದ ಮಱೆಯ ಜೀವ ಹೆಂಗಿಹುದೆಂಬುದೇನಱಿ (ಬಬ್ಬಬಾ. ೧೫); ಅದು ಹೆಂಗೆಂದಡೆ ಮುಖದಿಂದುತ್ಪತ್ಯವಾದ ಬ್ರಾಹ್ಮಣನು ಆ ಋಷಿಯರ ಶಾಖೆಯಾದನು (ಉರಿಪೆ. ೨೦೭); ಅಱಿದಪನ್ಯಸೆಯಾತ್ಮನದನೋಯಾರಮುಮುನಱಿಯನದು ಹೆಂಗೆಯಂಬೆಯ (ವೀಶೈವು. ೪–೪–೧೦). **ಹೇಂಗೆ**: ಬಳಿಕ ನೀ ಹೇಂಗಿ [ಪಾಠಾಂ. ನೆಹಗೆಯಿ]ರಿಸಿದಂತೆ ಇರಿಸಾ (ಬಸವ. ೫೦೧); ಪಶುವರ್ಗಕೆಲ್ಲಾ ಹೇಂಗೆ ಸಕಲ ತತ್ತ್ವಂ ಗೋಪ್ಯವಾಗಿರ್ಪವು (ವೀಶೈವು. ೭–೧–೩೫). **ಹೇಗೆ**: ಬಳಿಕಲದು ಹೇಗೆಂಬೆಯಾ (ವೀಶೈವು. ೪–೪–೧೩); ನನಗೆ ಹೇಗೆ ಹೇಗೋ ಆಯಿತು (ಸುವಸಂ. ೨೧). [ಏ$_2$ + ಪಾಂಗು + –ಎ$_3$]

**ಎಹೆಗೆ** 'ಎಹಗೆ' ನೋ.

**ಎಳ್**, ಎಳ್ಳು (ನಾ). ಎಣ್ಣೆಯನ್ನು ತೆಗೆಯಲು ಉಪಯೋಗಿಸುವ ಒಂದು ಜಾತಿಯ ಸಣ್ಣ ಕಾಳು; ತಿಲಧಾನ್ಯ: ಮತ್ತಂ ತತ್ಪಾರ್ಶ್ವಬಲದೊಳ್ ಗಾಣದೆಳ್ಳೋರೊಂದೆ ಬದುರ್ಂಕುವಂತೆ (ಶಾಂತಿಪು. ೧೧–೨೪ ವ); ಬೆಳೆದೆಳ್ಳಂ ಬಿಚರ್ ರಾಶಿಸ್ಥಿತಿಯನಿರಿಸಿ (ಸುಕುಮಾ. ೫–೩೪); ತೈಲಮೆಳ್ಳೊಳ್ ತುಪ್ಪಂ ಪಾಲೊಳ್ ಮಕ್ಕಳ್ವನಿತೆಯರೊಳ್ ... ಪುಟ್ಟುವಂತೆ (ಧರ್ಮಾವ್ಯ. ೮–೮೩); ಹಳೆ ಎಳ್ಳಿಂ ಹಿಳಿದ ತೈಲಮಂ (ಸಮುಪ. ೬–೯); ದಶಸಂಗಳ ನಲಿಗರೆಗಳಲ್ಲದೆಳ್ಳಿಕ್ಕಲ್ಕಿಲ್ಲಂಗಮೆನೆ ಸಂದ ಸೊಬಗಿನ ಜಂಗಮಶಾಸನಂ (ಅನಂಪು. ೧–೫೯); ಪೂವಿನೊಳ್ ಕಂಪು ಎಳ್ಳೊಳ್ ಎಣ್ಣೆ (ಶಮದ. ೧೩೩ ಪ್ರಯೋ).

ಎಳ್ಳು : "ತಿಳಮೆಳ್ಳು" (ವಸ್ತುಕೋ. ೯೫–೧೮) ; "ತಿಲಮೆನಲ್ಕೆಳ್ಳು" (ಮಂಗರಾ. ೧೧೦–೫) ; ಪಾತಕ ಜೀವಂಗಳ್ ಎಳ್ಳಿನಂತೆ ಗಾಣಕ್ಕೆವಂದು (ಧರ್ಮಾಮೃ. ೩–೭೭) ; ಎಳ್ಳಿಲ್ಲದೆ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ (ಬಸವ. ೩೮೩) ; ತೈಲಧಾನ್ಯಗಳೆಂದರೆ ಎಳ್ಳು, ಬಿಳೀಎಳ್ಳು, ಎರಡು ತಿಂಗಳದ ಎಳ್ಳು, ಕೆಂಪು ಎಳ್ಳು, ಕಾರೆಳ್ಳು ಅಂದರೆ ಗೂರೆಳ್ಳು ಇವುಗಳನ್ನು ಬಿತ್ತಬೇಕು (ಕೃಷಿಪ್ರ. ೪೭) ; ಎಳ್ಳು ಕಿತ್ತು ಹುರುಳಿ ಚೆಲ್ಲಿದ ಹಾಗೆ (ಗಾದೆ) ; ಎಳ್ಳುಕೊಂಡ ಹಾಗೆ ಎಣ್ಣೆಮಾರು (ಗಾದೆ).

**ಎಳ್ಳುನೀರುಬಿಡು** = ತಿಲಾಂಜಲಿಯನ್ನು ಬಿಡು ; ಆಸೆ ಬಿಡು ; ತ್ಯಜಿಸು : "ಈ ಹಾಳು ಸರ್ಕಾರೀ ಕೆಲಸಕ್ಕೆ ಎಳ್ಳುನೀರು ಬಿಟ್ಟುಬಿಡಲೇ?" ಎಂದು ಒಂದೊಂದು ವೇಳೆ ಹಾರಾಡುತ್ತಿದ್ದರು (ರಾಗಿಣಿ.೨). 'ಅಗಸೆಳ್ಳು', 'ಊರೆಳ್ಳು', 'ಕರೆಯೆಳ್ಳು', 'ಕಾರೆಳ್ಳು', 'ಹುಚ್ಚೆಳ್ಳು' ಪರಾ.

[ದೇ. ‖ ತಮಿ. ಎಳ್, ಎಙ್ ; ಮಲ. ಎಳ್, ಎಳ್ಳು ; ಕೊಡ. ಎಳ್ಳೀ ; ತುಳು. ಎಣ್ಮ]

**ಎಳ್‌ನೆಯ್** (ನಾ). ಎಳ್ಳಿನಿಂದ ತೆಗೆದ ಎಣ್ಣೆ ; ಎಳ್ಳೆಣ್ಣೆ : ಅಯ್ಮನ ಮೆಯ್ಮನೆಳ್‌ನೆಯ್ಯದೋಣಿಯಿಂ ತೆಗೆಯೆ (ಶ್ರೀರಾಮಾ. ೧೧೮–೧೭೭) ; ಒಣಹಿಂಡಿಯ ಕೂಳುಣ್ಣುವೆ ಎಳ್‌ನೆಯ್ ರಸ ಬಿಟ್ಟು (ಸೂರ್ಯಪಾ. ೩೭–೧೬). [ಎಳ್ + ನೆಯ್$_2$]

**ಎಳ್$_1$** 'ಎಟ್$_1$' ನೋ.

**ಎಳ್$_2$** 'ಎಳದು$_1$' ನೋ.

**ಎಳಅಂಚೆ**, ಎಳೆಯಂಚೆ (ನಾ). ಎಳೆಯ ಹಂಸ; ಮರಿಹಂಸ : ಎಳಮಾವು, ಎಳಅಂಚೆ (ಭಾಷಾಭೂ. ೧೫೪ ಉದಾ) ; **ಪೊಸಆನೆ, ಎಳಅಂಚೆ** (ಶಬ್ದಾನು. ೪೭ ಪ್ರಯೋ). **ಎಳೆಯಂಚೆ** : ಎಳೆಯಂಚೆಯನೇಳಿಪ ಗಮನದ ಮಱಿಗಿಳಿಯಂ ಮಱಸುವ ನುಣ್ಮಾತಿನ (ಜಯಕಾ. ೩–೨೨) ; ಎಳೆಯಂಚೆನಡೆಯ ಯೇಱುಂಜವ್ವನದಾ ಲಲನೆಯ ನಡೆ ನೋಡಿದೆನು (ಪ್ರಭಂಜ. ೪–೧೮). [ಎಳ್$_2$ (< ಎಳದು$_1$) + ಅಂಚೆ$_3$]

**ಎಳಅರಸ** (ನಾ). ಯುವರಾಜ : ಲೋಕಾದಿತ್ಯ ಎಳಅರಸರ್ ಮಗಂದಿರ್ ಮಲ್ಲದಿಯುವರ್ (ಎಕ. X, ಕೋಲಾರ. ೭–೫ ; 760).

[ಎಳ್$_2$ (< ಎಳದು$_1$) + ಅರಸ$_1$. / ತಮಿ. ಇಳೈಅರಶ; ಮಲ. ಎಳೆಯರಾಜ]

**ಎಳಂಗೊಡಲೂರ್** (ನಾ). ಒಂದು ಊರಿನ ಹೆಸರು : ವಾಜಸನೇಯ ವೇದವಿದೇ ಎಳಂಗೂಡಲೂರ್ಮಱಿಯಾಚಿಗೂಡಲೂಪ್ರ್ವಱವಿ ಶ್ರೀಪುರಮಿತಿ (ಎಕ. X, ಗೋರೀಬಿ. ೪೭–೪೭ ; 762).

[ಎಳಂಗೂಡಲ್$_0$ + ಊರ್]

**ಎಳಂದವಾಡಿ** (ನಾ). ಒಂದು ಊರಿನ ಹೆಸರು : ಎಳನ್ದವಾಡಿಯ ಕೊಂಗಣಿಗಾವುಣ್ಡನ ಮಮ್ಮ ಮಾರವಡೆಯನ ಮಗಂ ರಾಚಮ್ಮನ ಬಿಯಳಬ್ಬೆಯ ಮಗಂ (ಎಕ. IV, ಗುಂಡ್ಲುಪೇ. ೯೩–೨೮ ; 1049).

[ಎಳಂದ$_0$ + ವಾಡಿ]

**ಎಳಂಬುಣುಸೆ** (ನಾ). ಒಂದು ಪ್ರದೇಶದ ಹೆಸರು : ಅಗ್ರಹಾರಮೆಳಮ್ಬುಣುಸೆ ಪ್ರಹ್ಮಾದೇಯಮಾಸಾಮಿಗ (ಮೈಆರಿ. ೧೯೪೪, ೭–೨ ; 808).

[ಎಳ ? + ಪುಣುಸೆ]

**ಎಳಕ್$_1$** (ನಾ). ಸಂಚಲತೆ; ತರಳತೆ; ಸ್ಪಂದನ; ಕಂಪನ : ಪುಷ್ಯರಾಗ ಘಟರಾಗ ಘಟಿಯಿಂ ಚೂತರಸಮುಜ್ಜನಮನುಜ್ಜೀವಿಸುವಂತೆಯುಂ ಪಳಿಕಿನ ಕಲಶದ ತೆಳುವೆಳಗಿನೆಳಕದಿನೆಳನೀರ ಪೊನಲೊಳ್ ಮುಱುಗಿಸುವಂತೆಯುಂ (ಅನಂಪು. ೫–೭೧ ವ). [ಎಳ್$_0$ (< ಎಳದು$_3$) + –ಕ್$_2$]

**ಎಳಕ್$_2$** (ನಾ). "ಎಳೆಯುವ ಸಾಧನ; ಎಳಕ" (Tracker. ಇಂಕನಿ).

[ಎಳ್$_1$ (< ಎಟ್$_1$) + –ಕ್$_2$]

**ಎಳಕ್$_3$**, ಎಳಕು (ಗು). ೧. ಎಳೆಯದಾದ ; ಬಲಿಯದ; ಸಣ್ಣ : ಇಲ್ಲಿಯ ಕೃಷ್ಣ ದೇವತಾಸಹಾಯದಿಂದ ಬೆಳೆದ ಎಳಕನಾದ ವ್ಯಕ್ತಿಯಾಗಿರದೆ ಸ್ವಾರ್ಜಿತ ಯಶ, ಅಸಹಾಯ ಶೂರನಾಗಿದ್ದಾನೆ (ಕಸಾಚ. ೧೯೦). **ಎಳಕು** : ೧. ಬಹಳ ಎಳಕು ಅಡಿಕೆಗಳನ್ನು ಕುದಿಸಿದರೆ ಚಲೋ ಚೇಣಿಯಾಗುವುವು, ಮಧ್ಯ ಎಳಕಾದರೆ ರಾಶಿ ಚಿಕ್ಕಣಿಯಾಗುವುವು (ಕೃಷಿಪ್ರ. ೧೫೨) ; ಎಳ್ಳೂ(ನೆ) ಹೊಲದಾಗೆ ಎಳಕಿನ ಟಗರ ಸಾಕಿ (ನಾಪದ. ೩೩). ೨. ಅಪಕ್ವವಾದ : ಇನ್ನೂ ಎಳಕು ಬುದ್ಧಿ (ರೂಢಿ).

[ಎಳ್$_2$ (< ಎಳದು$_1$) + –ಕ್$_2$]

**ಎಳಕೆಂದು** (ನಾ). ಎಳೆಯ ಬಾಳೆ : ಕದಳಿಯೆಳಕೆಂದಿನಿಂ ಸಿಡಿಲಂ ತಡೆಯಲಹುದೆ (ಶ್ರೀರಾಮಾ. ೨೯–೩೬). [ಎಳ್$_2$ (< ಎಳದು$_1$) + ಕೆಂದು$_2$]

**ಎಳಕೆರು** 'ಎಳಗಱು' ನೋ.

**ಎಳಕು** 'ಎಳಕ್$_3$' ನೋ.

**ಎಳಕುರಿ** (ನಾ). ಕುರಿಮರಿ ; ಸಣ್ಣಕುರಿ : ತೃಷೆಯ ಕಳೆಯಲು ನೀರಗಿಳಿಯೆ ಎದುರಾಗಿ ಎಸೆದುದೆಳಕುರಿಕೂಸು ಕುಡಿಯುತಿರೆ ಬಾಗಿ (ಕಎವು. ೧–೧೨). [ಎಳ್$_2$ (< ಎಳದು$_1$) + ಕುರಿ$_2$ (< ಕುಱು$_2$)]

**ಎಳಕುಳಿ** 'ಎಟೆಕುಳಿ' ನೋ.

**ಎಳಕುಳಿಗೊಳ್** 'ಎಟೆಕುಳಿಗೊಳ್' ನೋ.

**ಎಳಕೊಳಿಸು** (ಕ್ರಿ). ಆಕರ್ಷಿಸು ; ಮನಸ್ಸನ್ನು ಸೆಳೆ : ಸತಿಯ ಬಟ್ಟಮುಡೊಡೆಗಳದಿನ್ನೆಳಕೊಳಿಸುವುದರಿಂದೇ (ಪುಷ್ಪಪು. ೩–೩೧).

[ಎಳಕೊಳ್$_0$ (< ಎಟೆಕೊಳ್) + – ಇಸು$_3$]

**ಎಳಕೊಳು** 'ಎಳೆಕೊಳ್' ನೋ.

**ಎಳಗ** 'ಏಟಗ' ನೋ.

**ಎಳಗಂತಿ** 'ಎಳಗಂದಿ' ನೋ.

**ಎಳಗಂದಿ**, ಎಳಗಂತಿ, ಎಳೆಗಂತಿ, ಎಳೆಗಂದಿ (ನಾ). (ಹೊಸದಾಗಿ) ಕರು ಹಾಕಿರುವ ಹಸು ಅಥವಾ ಎಮ್ಮೆ; ಈದು ಸ್ವಲ್ಪದಿನಗಳಾದ ಹಸು ಅಥವಾ ಎಮ್ಮೆ : "ಧೇನುಃ, ನವಪ್ರಸೂತಾ – ಈ೨ ಎಳಗಂದಿ" (ಹಲಾಯು. ೪೫–೧೧೫) ; "ಎಳಗಂದಿ ಧೇನುವಕ್ಕು" (ಮಂಗರಾ. ೫೪–೪) ; ಎಳಗಂದಿಯಂತಾಗಳ್ಪುಟ್ಟಿದ ತನ್ನ ಕಱುವಿಂಗತಿ ಸ್ನೇಹಿತೆಯಕ್ಕುಮಂತೆ (ಚಾವುಂಪು. ೧೧೧) ; ತಾಯ ಶಿಶುವಿನಂತೆ ಕಱುವಿನೆಳಗಂದಿಯಂತೆ (ಧರ್ಮಾಮೃ. ೫–೧೨೫) ; ಕಱುವನೆಳಗಂದಿ ತಾನಱಸಿಕೊಂಡ್ಯೆತರ್ಪ ತೆಱದಿಂದೆ (ಜೈಮಿಭಾ. ೧೧–೪) ; ಎಳಗಂದಿ ಕರುವಿದ್ದೆಡೆಗೆ ಬರುವಂತೆ ತಾನು ಇಲ್ಲಿಗೆ ಬಂದಾನು (ಮುದ್ರಾಮಂ. ೩೩೩) ; ಎಮ್ಮೆಯು ಎಳಗಂದಿ ನಮ್ಮವ್ವ ಬಾಣಂತಿ (ನಾಪದ. ೭೯). **ಎಳಗಂತಿ** : (ಕ). **ಎಳೆಗಂತಿ** : ಎಳೆಗಱುವಿನ ಎಳೆಗಂತಿ [ಪಾಠಾಂ. ಗಂದಿ]ಯನೆಳೆದೊಯ್ಯರೆ ಭಕ್ತರು (ಶೂನ್ಯಸಂ. ೩೯೮–೬೦). **ಎಳೆಗಂದಿ** : ಎಳೆಗಱು ತುಡುಕೆ ಕೆಚ್ಚಲ ಚಾಚಿ ನಕ್ಕುತಲಿಳುಹಿ ಸೊರಹನು . . . ಎಳೆಗಂದಿಯ ದೆಲೊಡುನಿಱಿ (ವರ್ಧಚ. ೩–೨೦) ; ನವವಿಧದ ಭಕ್ತಿಯಿಂ ಧ್ಯಾನಿಸಲ್ಕೆಳೆಗಂದಿ ಜವದೊಳುಂ ಶಿಶುವಿನೆಡೆಗೆಳ್ಕರಿಂ ಬಪ್ಪಂತೆ ರಾಗದಿಂದ್ಯೆತಂದುದು (ಪರಶು. ೨೨–೧೨). [ಎಳ್$_2$ (< ಎಳದು$_1$) + ಕಂದಿ$_1$]

**ಎಳಗಂದಿಯಾವು** (ನಾ). (ಹೊಸದಾಗಿ) ಕರುಹಾಕಿದ ಹಸು ; ಆಗತಾನೆ ಈದ ಆಕಳು : ಎಳಗಂದಿಯಾವೆಂತು ತನ್ನ ಕಱುವಂ ಕಂಡಾಗಳ್ ರಾಗಿಸುವಂತೆ ರಾಗಿಸಿ (ಪಸಾರ. ೯೬೭–೧೫). [ಎಳಗಂದಿ + ಆವು]

**ಎಳಗಂಪು** (ನಾ). ಎಳಸಾದ ವಾಸನೆ ; ನಸುಗಂಪು : ನನೆಯೆಳಗಂಪನೆತ್ತಿಯುಮಱಿಂ ನನೆನಾಱದರಲ್ದನೇಕ ಕೋಕನದ ವನಂಗಳೊಳ್ ಸುಱಿದು . . . ತೀಡಿದುದು ತೆಂಕಣಗಾಳಿ (ಪಂಪಭಾ. ೫–೩೪).

[ಎಳ್$_2$ (< ಎಳದು$_1$) + ಕಂಪು]

**ಎಳಗಣ್** (ನಾ). ಎಳೆಯ ಕಣ್ಣು: ಕಂದನೆಳಗಣ್ಣಳಿಗೆ ಹಿಂದಾವ ಮುದಿಯ ಮೈಯ್ಯಳ್ಕರೆಯ ತೊಟ್ಟಲೋಲ್ (ಶ್ರೀರಾಮಾ. ೧೧೮-೧೮೬). [ಎಳ್$_2$ (< ಎಳದು$_1$) + ಕಣ್]

**ಎಳಗರಿಕೆ** 'ಎಳಗಱುಂಕೆ' ನೋ.

**ಎಳಗರು** 'ಎಳಗಱು' ನೋ.

**ಎಳಗವುಂಗು**, ಎಳಗೌಂಗು, ಎಳಿಕೌಂಗು, ಎಳೆಗೌಂಗು (ನಾ). ಎಳೆಯದಾದ ಅಡಕೆಮರ: ತೆಂಗೆಳಗವುಂಗು ಪನಸಂ ದ್ರಾಕ್ಷೆ ಜಂಬು ನಾರಂಗ ಜಂಬೀರ ... ತೊಂಗುವ ಫಲಾವಳಿಯ (ಜೈಮಿಭಾ. ೧೯-೬). **ಎಳಗೌಂಗು**: ಬಳ್ವಳ ಬೆಳೆದೆಳಗೌಂಗಿನಂತೆ ಲೋಕದ ಚೆಲ್ವೆಲ್ಲಮನೊಳಕೊಂಡು ರೇಖೆಗೊಂಡ ಲಾಟೀಲಲಾಮನ ಪರಿಣದ್ಧ ಕಂಧರಂ (ಪಂಪಭಾ. ೨-೩೯ ವ); ನಾಗವಲ್ಲಿಗೆ ಕೈಗೊಟ್ಟೆಳಗೌಂಗು ಮಾಧವಿಯ ಸೋಂಕಿಂ ತಳ್ತ ಕಂಕೆಲ್ಲಿ (ಅನಂಪು. ೧-೯೩); ಪಸುರೆಳಗೌಂಗು ಪೆರ್ಚಿದೆಳನೀರ್ವೊಱೆ ಯೊಟ್ಟಲ ತೆಂಗು (ನಳಚಂ. ೧೫). **ಎಳಿಕೌಂಗು**: ಎಳಿಕೌಂಗಿನ ಬಾಗಿಲ್ವಾಡದ ಕಾಪಿನ ಚಾಂಪೇಯ ನಿರ್ಮಿತಮಾದ ಜಂತ್ರದ ಪುತ್ಥಳಿಗಳಿಂ (ರಾಜಶೇ. ೧೦-೩೧ ವ). **ಎಳೆಗೌಂಗು**: ಕ್ರುರುವಕದ ವಕುಳದೆಳೆಗೌಂಗಿನ ಹೊಂಗೇದಗೆಯ ಬಳಸಿನೊಳಂ (ಕಾದಂಪೂ. ೯೬); ಎಳೆಗೌಂಗ ನಶರ್ದ ಲತೆ (ವರ್ಧಪು. ೯-೨೪). [ಎಳ್$_2$ (< ಎಳದು$_1$) + ಕವುಂಗು]

**ಎಳಗಳ್ತಲೆ** (ನಾ). ಸ್ವಲ್ಪಕತ್ತಲೆ; ನಸುಗತ್ತಲೆ: ಸಿರಿಮೊಗಮೆಂಬ ಶಶಾಂಕನ ನೆಮ್ಮಿದ ಕುರುಳೆಂಬೆಳಗಳ್ತಲೆ ಮುತ್ತಿದುದೆನುತ (ಜಯಕಾ. ೮-೬೦). [ಎಳ್$_2$ (< ಎಳದು$_1$) + ಕಳ್ತಲೆ (< ಕಟ್ತಲೆ)]

**ಎಳಗಱು**, ಎಳಕರು, ಎಳಗರು, ಎಳೆಗಱು (ನಾ). ಎಳೆಯ ಕರು; ಚಿಕ್ಕವಯಸ್ಸಿನ ಕರು: ಎಳಗಱು ಭಯಮಱಿಯದು (ಧರ್ಮಾಮೃ. ೧-೧೩೬); ಎಳ [ಪಾಠಾಂ. ಳೆ]ಗಱುಂ ಎತ್ತಾಗದೇ (ಸೋಮೇಶ. ೩೫); ಸಿದ್ಧೇಂದ್ರನೆಳಗಱುಗಳಂ ಬಿಡಿಸಿ (ಸಿದ್ಧರಾ. ೪-೪೧). **ಎಳಕರು**: "ಎಳ ಕರುಗಳ ಹಿಂಡು ವಾತ್ಸಕ" (ಸಿದ್ಧಾಂತಿ. ೨೫೦). **ಎಳಗರು**: ಎಳಗರು ಭಯವನ್ನೇ ಕಾಣದು (ಕೊನಪ್ಪೈ. ೧೧೩). **ಎಳೆಗಱು**: "ಕರವೆಳೆಗಱು ವತ್ಸ ಶಕೃತ್ಕರಿ ನಾಮಂ" (ವಸ್ತುಕೋ. ೮೯-೩). [ಎಳ್$_2$ (< ಎಳದು$_1$) + ಕಱು$_2$]

**ಎಳಗಱುಂಕೆ**, ಎಳಗರಿಕೆ, ಎಳಗಱುಕೆ, ಎಳೆಗಱುಂಕೆ (ನಾ). ಎಳೆಯ ಕರಿಕೆ, —ಹುಲ್ಲು: ಹರಿಣೀಗಣದ ಕಡೆವಾಯೊಳರೆಮೆಲ್ದುಱಿದೆಳ [ಪಾಠಾಂ. ಳೆ]ಗಱುಂಕೆಯೆಸಟ್ಟಳಂ ಸೆಳೆದು (ಚಂದ್ರಪು. ೮-೪ ವ). **ಎಳಗರಿಕೆ**: ಎಳೆಯರೆ ತಂದಿರೆ ಹಸುರೆಳಗರಿಕೆ ... ಬೆನಕನ ಬಳಿಗೋಡುತ ಬೆರಗಿಂದೆ (ಗಣೇಶ. ೧೨-೩೧೨). **ಎಳಗಱುಕೆ**: "ಶಷ್ಪಂ – ಎಳಗಱುಕೆ" (ಓಷಧಿ. ೧೫೯); ಪುತ್ತದ ಮೇಲೆಳಗಱುಕೆಯೆ ಮುತ್ತಂ ಕುಶೆಯುಂ ಸಮಂತು ಸಮನಿಸಿದೊಡಮತ್ತುತ್ತರ ದಿಗ್ಭಾಗದೊಳೆರ್ಪತ್ತೊಂದು ನರಪ್ರಮಾಣದೊಳ್ ನೀರಕ್ಕುಂ (ಲೋಕೋಪ. ೫-೩೪). **ಎಳೆಗಱುಂಕೆ**: ಮೇಲಿನ 'ಎಳಗಱುಂಕೆ' ಶಬ್ದದ ಪ್ರಯೋಗದ ಪಾಠಾಂತರವನ್ನು ನೋಡಿ. [ಎಳ್$_2$ (< ಎಳದು$_1$) + ಕಱುಂಕೆ]

**ಎಳಗಱುಕೆ** 'ಎಳಗಱುಂಕೆ' ನೋ.

**ಎಳಗಾಮುಂಡ** (ನಾ). ಒಬ್ಬಾತನ ಹೆಸರು: ದೋಣಗಾಮುಣ್ಡರುಂ ಎಳಗಾಮುಣ್ಡರುಂ ಮಳ್ಳೆಯರುಂ (ಇಅ. XI, ೬೦-೧೬; 567). [ಎಳ್$_0$ + ಗಾಮುಂಡ]

**ಎಳಗಾಯ್**, ಎಳೆಗಾಯ್, ಎಳೆಗಾಯಿ (ನಾ). ೧. ಎಳೆಯ ಕಾಯಿ; ಹೀಚು: "ಶಲಾಟುಃ, ಕೋಮಳಂ – ಈ ೨ ಎಳಗಾಯ್" (ಹಲಾಯು. ೩೧-೩೫); ಪುದಿದೆಳಗಾಯ್ ಬಸಂತದ ಮೊದಲ್ ನೆರೆದೊಪ್ಪುವ ದೋರೆಗಾಯ್ ಬಸಂತದ ನಡು ಪಣ್ ಬಸಂತದ ಸೆಱಂಗು (ಶಾಂತಿಪು. ೭-೧೪೩); ಪಣ್ಣನೆ ಬಂದೆಳಗಾಯರೆಪಣ್ಣನೆ ಪಱಿಪಱಿದು ತಿಂಬ ಬಲಿಮುಖಕುಲಮಂ (ಕಾವ್ಯಾವ. ೩೦೬); ಪೊದೆಱೆದ್ದಿಸೆವ ನೂವೆಳಗಾಯ್ವೊಱೆ ತಳ್ತ ತೆಂಗು (ಜಗವಿ. ೨-೧೫); ಪೊದೆಱೆದ್ದೆಳಗಾಯ್ ನಸುದೋಱೆ ದೋರೆವಣ್ ಕಳೆತೆಸೆವಚ್ಚವಣ್ಣಿಡಿದು ಬೀಗಿದ ಬಿಣ್ಪೊನೆ (ಶಬಶಂ. ೧-೫೧). ೨. ಎಳೆಯ ತೆಂಗಿನ ಕಾಯಿ; ಎಳನೀರು; ಸೀಯಾಳ: ಘಳಿಲನೊಡೆದೆಳಗಾಯಿಂದೆಡೆವಿಡಿದೊಸರ್ವೆಳನೀರ್ಗಳ್ ಮಡುಗೊಂಡೋವುತ್ತುಮಿರ್ಪುವಲ್ಲಿಯ ಬನಮಂ (ಕಬ್ಬಿಕಾ. ೨೨); ಎಡೆಗಿಡಿದು ಚೆಂದೆಂಗಿನೆಳಗಾಯೊಡೆದು ಝೋರೆನೆ ಪೊಸವರ್ಪ ಪೊನಲಿಂ (ಸಾಳ್ವಭಾ. ೧-೬೦); ಒಡೆಯ ಮಲ್ಲಯ್ಯ ಕುಣಿಗಾಲ ಕುದುರೆಗೆ ಒಡೆದಿಡಿ ತೆಂಗಿನೆಳಗಾಯ (ಕನ್ನಸು. I, ೨). **ಎಳೆಗಾಯ್**: ೧. "ಎಳೆಗಾಯ್ಗೆ ಮಿಡಿಯೆಂಬ ಪೆಸರು" (ಕಬ್ಬಕೈ. ೨೨). ೨. ತೆಂಗಿನ ಎಳೆಗಾಯೊಳಗಿನ ನೀರು (ಮುಂಬಯಿ. ೨-೪ ಕಿ). **ಎಳೆಗಾಯಿ**: ೧. "ಎಳೆಗಾಯಿ ಮಿಡಿ ಹದಿರು ಹೀಚುಮೆಂದೀ ತೆಱದೆ" (ಶಬ್ದಮಂ. ೨೩); "ಎಳೆಗಾಯಿ ಮಿಡಿಯಕ್ಕು" (ಕಶರ. ೧೬); ರಸರಹಿತವಾಗಿಹುದು ಇಂದು ಜೀವನವು ಒಣಗಿದೆಳೆಗಾಯಿನೊಲು, ಅಳಿದನೆದೆಗೂಡಿನೊಲು (ವಿಸೀಗೀ. ೬೮-೨). ೨. "ನೀರ ತೆಂಗಿನ ಕಾಯಿ" (ಜಾನಕೋ. ೨೬); ಎಳೆಗಾಯಿಗೆ ಸೀಯಾಳವೆಂತಲೂ ಅನ್ನುತ್ತಾರೆ (ಮುಂಬಯಿ. ೨-೪೧ ಕಿ). [ಎಳ್$_2$ (< ಎಳದು$_1$) + ಕಾಯ್$_4$]

**ಎಳಗಾರ್**, ಎಳೆಗಾರ್ (ನಾ). ಮುಂಗಾರು ಮಳೆ; ಮಳೆಗಾಲದ ಪ್ರಾರಂಭ: ಶಶಿಕಳೆಯ ಮುಱಿಗಳಂ ಮುಕ್ಕುಳಿಸಿದೆಳಗಾರ ಕಿಱುಮುಗಿಲ ಜವಳಿಗಳೆವೆನಿಸಿ (ವರ್ಧಪು. ೫-೬೩ ವ). **ಎಳೆಗಾರ್**: ಕಱೆದುವು ಸುಣ್ಣನಿಯನೊಗೆದ ಮುಗಿಲೆಳೆಗಾರೊಳ್ (ಚಂದ್ರಪು. ೪-೩೮). [ಎಳ್$_2$ (< ಎಳದು$_1$) + ಕಾರ್$_2$]

**ಎಳಗಾವಿ** (ನಾ). ನಸುಕಾವಿ ಬಟ್ಟೆ: ಪಟ್ಟದರಸಿ ಗಂಗಾದೇವಿಗೆ ಈ ಸುದ್ದಿ ಮುಟ್ಟಲೊಡನೆ ವೇಷಭೂಷಣಗಳನ್ನೆಲ್ಲ ತೆಗೆದು ಎಳಗಾವಿಯನ್ನುಟ್ಟು ಭಸಿತ ರುದ್ರಾಕ್ಷಿ ಧರಿಸಿ ಗಂಡನ ಬೆಂಬತ್ತಿದಳು (ಮೋಳಿಮಾ. ೬೬ ಪ್ರಸ್ತಾ). [ಎಳ್$_2$ (< ಎಳದು$_1$) + ಕಾವಿ]

**ಎಳಗಾವು$_1$** (ನಾ). ಸ್ವಲ್ಪಕಾವು: ಗಾಯಕ್ಕೆ ಎಳಗಾವು ಕೊಡಬೇಕು (ರೂಢಿ). [ಎಳ್$_1$ (< ಎಳದು$_2$) + ಕಾವು$_2$ (< ಕಾಯ್ಪು$_1$)]

**ಎಳಗಾವು$_2$** (ನಾ). ಕೋಮಲವಾದ ಕಾವು, —ಕಾಂಡ, —ತೊಟ್ಟು: ಬಿಳಿಯ ತಾವರೆಯೆಳಗಾವಿನಸಿಯ ನೂಲೊಳ್ ಕೋದ ತೋರಮಲ್ಲಿಗೆಯ ಬಿರಿಮುಗುಳ ಸರಿಗೆಯುಮಂ (ಪಂಪಭಾ. ೫-೬ ವ). [ಎಳ್$_2$ (< ಎಳದು$_1$) + ಕಾವು$_3$]

**ಎಳಗಾಳಿ**, ಎಳೆಗಾಳಿ (ನಾ). ಮೃದುವಾಗಿ ಬೀಸುವ ಗಾಳಿ; ಮಂದಮಾರುತ: ಅರಲ ನವಪರಿಮಳಂಗಳಿಂದಂ ಜಡಿಯದೆಳಗಾಳಿಯೆಳಗಾಳಿಯಿಲ್ಲದಿಹ ಬನಮಿಲ್ಲವಾ ನಾಡೊಳು (ಚಬಪು. ೧೧-೫); ಧರೆಯೊಳೆಳಗಾಳಿಯಂ ಶೀತಳದ ವಾರಿಯಂ (ಜೈಮಿಭಾ. ೧೮-೨೩). **ಎಳೆಗಾಳಿ**: ಎತ್ತೆತ್ತೆತ್ತಲುಂ ಕಾಮದೂತನಂತೆಳೆಗಾಳಿ ತೆಂಕಣಿಂ ಸುಳಿದುದು ವಸಂತಾಗಮದ ಮೊದಲೊಳೆನೆಂಬೆನು (ಚಬಪು. ೪೫-೧೨); ನಱುಗಂಪಿಂ ತೀಡುವೆಳೆಗಾಳಿಯುಂ (ರಾಜಶೇ. ೧೨-೨೩). [ಎಳ್$_2$ (< ಎಳದು$_1$) + ಗಾಳಿ]

**ಎಳಗಿಸೆಟ್ಟಿ** (ನಾ). ಒಬ್ಬಾತನ ಹೆಸರು: ಬಿಟ್ಟಿಸೆಟ್ಟಿ ಬೀಚಿಸೆಟ್ಟಿ ಎಳಗಿಸೆಟ್ಟಿ ಪಞ್ಚ ಉಯಮುಸೆಟ್ಟಿ (ಎಕ. II, ೨೩೫-೧೨; 1185). [ಎಳಗಿ? + ಸೆಟ್ಟಿ]

**ಎಳಗಿಳಿ** (ನಾ). ಎಳೆಯ ಗಿಳಿ; ಗಿಳಿಯ ಮರಿ. 'ಎಳಗಿಳಿವಿಂಡು' ಪರಾ. [ಎಳ್$_2$ (< ಎಳದು$_1$) + ಗಿಳಿ]

**ಎಳಗಿಳಿವಿಂಡು** (ನಾ). ಎಳೆಯ ಗಿಳಿಗಳ ಗುಂಪು; ಮರಿಗಿಳಿಗಳ ಸಮೂಹ: ಎಳಗಿಳಿವಿಂಡಿನಂತೆ ಮಿಳಿರ್ದಾಡುವ ತುಂಬಿಯ ಬಂಬಲಂತೆ ಕೆಂದಳಿರ್ಗಳ ತೊಂಗಲಂತೆ (ಶಬ್ದಕಾ. ೧೪). [ಎಳಗಿಳಿ + ಪಿಂಡು$_2$]

**ಎಳಗುಡಿ$_1$** (ನಾ). ಎಳೆಯಕುಡಿ, —ಮೊಳಕೆ: ಮಱುಹುಲ್ಲೆ ಸಿಂಹದ ಮುಸಕಕಿದಿರೇ ಲತೆಯ ಎಳಗುಡಿ ಮಾಳಿಗೆಗೆ ತೊಲೆಯೆ (ಕುವ್ಯಾಭೀ. ೩-೮೪). [ಎಳ್$_2$ (< ಎಳದು$_1$) + ಕುಡಿ$_2$]

**ಎಳಗುಡಿ$_2$** (ನಾ). ಸಕ್ಕರೆಯಲ್ಲಿ ಒಂದು ಬಗೆ: ಪುಡಿ ಸಕ್ಕರೆಯಲ್ಲಿ ಚಿನ್ನೀ ರಾಜಾಪುರೀ ಎಳಗುಡೀ ಹುರಿಸಕ್ಕರೆ ಮುಗದುಮ್ಮಿ ಎಂದು ಹಲ ತರವುಂಟು (ಮುಂಬಯಿ. ೩-೪೫). [?]

**ಎಳಗುತ್ತಿ** (ನಾ). ಎಳೆಯ ಕೂಸು: ದೊಡ್ಡವರಿಗೇ ಅವನ ಇಂಜಕ್ಷನ್ ತಡೆಯಲಾಗುವುದಿಲ್ಲ. ಅಂಥಾದ್ದರಲ್ಲಿ ಐದುತಿಂಗಳ ಎಳಗುತ್ತಿಗೆ ಇಂಜಕ್ಷನ್ ಅಂದರೇನು (ಬಾಗಿನ. ೯೨). [ಎಳ್$_2$ (< ಎಳದು$_1$) + ಕುತ್ತಿ$_1$]

**ಎಳಗುರಿ** (ನಾ). ಎಳೆಯದಾದ ಕುರಿ; ಕುರಿಮರಿ; ಚಿಕ್ಕಕುರಿ: (ಮೊದಲಬಾರಿಯೂ ಉಣ್ಣೆ ಕತ್ತರಿಸಿಲ್ಲದ) ಚಿಕ್ಕಕುರಿ; ಎಳಗುರಿ (Hog. ಇಂಕನಿ). [ಎಳ್$_2$ (< ಎಳದು$_1$) + ಕುರಿ$_2$ (< ಕುಱಿ$_2$)]

**ಎಳಗೂಸು**, ಎಳೆಗೂಸು (ನಾ). ಎಳೆಯಕೂಸು; ಚಿಕ್ಕಮಗು: ತಾಯುಂ ಮನಂ ನೋಗುಮೆಂದೇನಟ್ಟಿರ್ತೆಳಗೂಸುಗಳ್ ಕುಡಿಗುಮೇ ಸಂತೋಷದಿಂ ಪಾಲ್ಗಳಂ (ಧರ್ಮಾಮೃ. ೭-೧೬೬); ಎಳಗೂಸಾದಂದೆ ಈತಂಗೊದವಿದುವೆಡರ್ಗಳ್ (ವಸ್ತುವಂ. ೯-೭೦). **ಎಳೆಗೂಸು**: ಕನಿಕರ – ದಯೆ – ಸಹಾನುಭೂತಿ ಇವು, ಹಸಿದ ಎಳೆಗೂಸಿಗೆ ತಾಯಿಯ ಹಾಲು ಇದ್ದ ಹಾಗೆ (ವೀರಯೋ. ೩೮). [ಎಳ್$_2$ (< ಎಳದು$_1$) + ಕೂಸು]

**ಎಳಗೆಂಪು**, ಎಳೆಗೆಂಪು (ನಾ). ಸ್ವಲ್ಪ ಕೆಂಪು; ನಸುಗೆಂಪು: ಎಳಗೆಂಪ ನುಗುಳ್ವ ಮೃದುಕೋಮಳ ಪದಕಮಳಂಗಳ್ (ಗಿರಿಕ. ೯-೧೦೨); ಎಳಗೆಂಪಿಂ ಪುದಿದೀ ಕರಜಳಜಂ ನೆನೆಯಿಪುದು ಮೂಡುಸಂಜೆಯ ಚೆಲ್ವಂ (ವಸ್ತುವಂ. ೧೧-೮೬); ಆ ಪೆಟ್ಟಿಗೆಯ ಮೇಲೆ . . . ಎಳಗೆಂಪು ಮೋರೆಯ ಹೆಣ್ಣೊಂದರ ಚಿತ್ರವಿತ್ತು (ಪುನರು. ೧೪೪). **ಎಳೆಗೆಂಪು**: "ಸ್ವಲ್ಪಕೆಂಪು" (ಜಾನಕೋ. ೨೬). [ಎಳ್$_2$ (< ಎಳದು$_1$) + ಕೆಂಪು]

**ಎಳಗೊಂಬು**, ಎಳೆಗೊಂಬು (ನಾ). ಎಳೆಯ ಕೊಂಬೆ, —ಶಾಖೆ: ಬಂದ ಮಾಮರಂಗಳನಡರ್ದು ತೊಡರ್ದೆಳಗೊಂಬುಗಳ್ವಿಡಿದು ಮರದಿಂ ಮರಕ್ಕೆ ದಾಂಗುಡಿವಿಡುವ ಮಾಧವೀಲತೆಗಳುಂ (ಪಂಪಭಾ. ೨-೧೨ ವ). **ಎಳೆಗೊಂಬು**: ತೋರ ಹೆಗ್ಗೊಂಬುಗಳ ಖಗಕುಲವೇಱಿದೆಳೆಗೊಂಬುಗಳ (ನಿಭಾಗ. ೪-೩-೨೫). [ಎಳ್$_2$ (< ಎಳದು$_1$) + ಕೊಂಬು$_2$]

**ಎಳಗೊನರ್** (ನಾ). ಎಳೆಯ ಕುಡಿ, —ಮೊಳಕೆ: ತಳಿರಿಂ ತಳ್ತಿತ್ತಶೋಕದ್ರುಮವೆಳಗೊನರಿಂದೊಂದಿತಿಮ್ಮಾವು (ಕಾದಂಉ. ೭೮೦). [ಎಳ್$_2$ (< ಎಳದು$_1$) + ಕೊನರ್$_2$]

**ಎಳಗೊವನೂರು** (ನಾ). ಒಂದು ಊರಿನ ಹೆಸರು: ಎಳಗೊವನೂರ ಬಡಗಣ ಸಿ(ಸೀ) ಮೆಯುಳಿಕು(ಕೂ)ಡಿ (ಇಆ. XVIII, ೩೬೭-೨೩; 8ನೆಯ ಶತ). [ಎಳ ? + ಗೊವ್ವ$_0$ + ಊರು$_3$ (< ಊರ್)]

**ಎಳಗೌಂಗು** 'ಎಳಗವುಂಗು' ನೋ.

**ಎಳಚಿ** 'ಎಲಚಿ' ನೋ.

**ಎಳಚೆಯ್ಯಾಟ** (ನಾ). ಮಗು ತನ್ನ ಎಳೆಯ ಕೈಗಳಿಂದ ಆಡುವ ಆಟ: ತೂಕಡಿಪ ಜೋಗುಳವಾಡು ಕಂದನೆಳಚೆಯ್ಯಾಟಮಪ್ಪೆಯಾನನ್ದಮುಂ (ಸಂಸಪ. ೩೧-೯). [ಎಳ್$_2$ (< ಎಳದು$_1$) + ಚೆಯ್ (< ಕೆಯ್$_2$) + ಆಟ]

**ಎಳಚೌಗಪಳ್ಳಿ** (ನಾ). ಒಂದು ಹಳ್ಳಿಯ ಹೆಸರು: ಎಳಚೌಗಪಳ್ಳಿಯ ಮಾರಯ್ಯ (ಎಕ. III, ನಂಜನ. ೯೮-೩; 898 ?). [ಎಳಚೌಗ$_0$ + ಪಳ್ಳಿ$_1$]

**ಎಳಜವ್ವನೆ** (ನಾ). ಎಳೆಯ ಪ್ರಾಯದವಳು; ಯುವತಿ: ಬಂದ ರಾಮುಳಕಕುಚಂಗಳ ನಾರಂಗಕುಚಂಗಳ ನಳಿನೀಕುಟ್ಮಳಕುಚಂಗಳೆಳಜವ್ವನೆಯರ್ (ಜಗವಿ. ೪-೧೨೧). [ಎಳ್$_2$ (< ಎಳದು$_1$) + ಜವ್ವನೆ]

**ಎಳಜಾದಗೆ** (ನಾ). ಎಳೆಯ ಚಾತಕ ಪಕ್ಷಿ; ಮರಿಚಾತಕ: ನಱುಗಂಪಂ ಕಂಡ ಮಱುದುಂಬಿಯಂತೆ ಮುಱಿಗಾಲಮಂ ಕಂಡೆಳೆ[ಳ]ಜಾದಿ[ದ]ಗೆಯಂತೆ (ಉದ್ಭಟ. ೧೧-೫೫ ವ). [ಎಳ್$_2$ (< ಎಳದು$_1$) + ಜಾದಗೆ]

**ಎಳಜೊನ್ನ**, ಎಳೆಜೊನ್ನ (ನಾ). ಎಳೆಯ ಬೆಳುದಿಂಗಳು: ಪಗಲಿರುಳೆಳಜೊನ್ನಂ ಕಾಳಮೆಂಬುಕ್ತಿ ಚಿತ್ತಂಬುಗೆ (ಅಜಿಪು. ೧೦-೨೦). **ಎಳೆಜೊನ್ನ**: ನಗೆವೆಳ್ಪಂಬೆಳೆಜೊನ್ನಮುಂ ಪರಪಿ ಕಾಂತಾಸ್ಯಾಂಬುಜಾತಂಗಳಂ ನಗಿಪರ್ (ರಾಜಶೇ. ೧೧-೮೦). [ಎಳ್$_2$ (< ಎಳದು$_1$) + ಜೊನ್ನ]

**ಎಳತ** 'ಎಳೆತ' ನೋ.

**ಎಳತಟ** 'ಎಟಿತಟ' ನೋ.

**ಎಳತಟಂಗೊಳ್**, ಎಳತಟಗೊಳ್ (ಕ್ರಿ). ಎಳೆದಾಟಕ್ಕೆ ಒಳಗಾಗು; ಹಿಂಸೆಗೆ ಸಿಕ್ಕು: ಭವದೊಳಗೆ ಎಳತಟಂಗೊಳುತಿರ್ಪುದೀ ತನು (ಸದ್ಗುರು. ೭-೨೭). **ಎಳತಟಗೊಳ್**: ಸಂಸಾರದ ದಂದುಗದಲ್ಲಿ ಸಿಕ್ಕು . . . ಎಳತಟಗೊಂಡು ಅತ್ತ ಇತ್ತ ತೊಳಲಿ ಬಳಲಿದಂತೆ (ಮೋಳಮಾ. ೧೨೭ ಪ್ರಸ್ತಾ). [ಎಳತಟ (< ಎಟಿತಟ) + ಕೊಳ್$_1$]

**ಎಳತಟಗೊಳ್** 'ಎಳತಟಂಗೊಳ್' ನೋ.

**ಎಳತಟಗೊಳಿಸು** (ಕ್ರಿ). ಹಿಂಸಿಸು: ಭಕ್ತಿಗೆ ಅನುಭಾವವೇ ಆಚಾರ ಕಾಣಿರೋ ಭಕ್ತಿಗೆ ಅನುಭಾವವೇ ಬೀಜ ಕಾಣಿರೋ . . . ಅನುಭಾವವಿಲ್ಲದವನ ಭಕ್ತಿ ಎಳತಟಗೊಳಿಸಿತ್ತು (ಚೆನ್ನವ. ಕ. ೮೪೦). [ಎಳತಟ (< ಎಟಿತಟ) + ಕೊಳ್$_1$ + -ಇಸು$_3$]

**ಎಳತಟಮಾಡು** (ಕ್ರಿ). ಹಿಂಸಿಸು: ಎನ್ನ ಘನಪಾಶವು ನಿನ್ನ ಬೆರಸಲೀಯದೆ ಎನ್ನ ಎಳತಟಮಾಡಿ ಕಾಡುತಿಹುದೈ ಎನ್ನ (ಅಷ್ಟಾಸ್ತೋ. ೧೦). [ಎಳತಟ (< ಎಟಿತಟ) + ಮಾಡು$_1$]

**ಎಳತನ**, ಎಳೆತನ (ನಾ). ಚಿಕ್ಕವಯಸ್ಸು; ಬಾಲ್ಯ: ಎಳತನದ ಸುಖವನ್ನು ಪುನಃ ಸವಿಯಲು ಆತುರಳಾಗಿದ್ದಳು (ನಿರಾತ. ೩). **ಎಳೆತನ**: ಯಕ್ಷಗಾನ ಬಯಲಾಟವು ಬಹು ಎಳೆತನದಿಂದಲೂ ನನ್ನ ಮನಸ್ಸನ್ನು ಆಕರ್ಷಿಸಿದ್ದೊಂದು ಕಲೆ(ಯಕ್ಷಬ. ೧ ಮುನ್ನುಡಿ); ನನ್ನ ಎಳೆತನದ ಆರಂಭದಿಂದ ಈ ಕ್ಷೇತ್ರದಲ್ಲಿ ಅವನತಿಯನ್ನು ಕಾಣತೊಡಗಿದೆ (ಯಕ್ಷಬ. ೨೫). [ಎಳ್$_2$ (< ಎಳದು$_1$) + -ತನ]

**ಎಳತರ್** 'ಎಟಿತರ್' ನೋ.

**ಎಳತು** 'ಎಳದು$_1$' ನೋ.

**ಎಳತೆಗೆ** 'ಎಳೆತೆಗೆ' ನೋ.

**ಎಳದಳಿರ್**, ಎಳೆದಳಿರ್ (ನಾ). ಎಳೆಯ ಚಿಗುರು; ಪಲ್ಲವ: "ಎಳದಳಿರು ಪಲ್ಲವಂ ಕಿಸಲಯಮೆನಿಕ್ಕು" (ಮಂಗರಾ. ೩೨-೪); ಪಿರಿಯ ಮರಂಗಳೆ ಮಾಡಮಾಗೆ ಪೊಳೆವೆಳದಳಿರ್ಗಳೆ ಸೆಜ್ಜೆಯಾಗೆ (ಪಂಪಭಾ. ೭-೨೮); ಚಂದನಪಲ್ಲವದೆಳದಳಿರ್ಗಳಂ ಕರತಳದಿಂ ಪಿಟಿದು (ಕಾದಂಪೂ. ೮೫೫); ಪೊಳೆವ ದುಕೂಲದ ಗುಡಿಯುಂ ಮುಳಿಯಜದೆಳದಳಿರ ತೋರಣಂಗಳ್ (ಧರ್ಮಾಮೃ. ೩-೨೫೧). **ಎಳೆದಳಿರ್**: ಎಳೆದಳಿರ ನೆಳಲಿನಲಿ ಪರಿಮಳದಲರ ಪನ್ನೀರಿನಲಿ . . . ಸತಿಯನುಪಚರಿಸಿದರು (ನಳಚ. ೧-೩೯); ಕೊಳವೇರ್ಗಳ ಕೇರ್ಗಳೊಳಗೆ ತಮಾಲದೆಳೆದಳಿರಂ ಕೊಱೆದು ಚಿತ್ರಪತ್ರಮಪ್ಪಂತೆ ಪತ್ತಿಸಿ (ರಾಜಶೇ. ೧೦-೩೧ ವ). [ಎಳ್$_2$ (< ಎಳದು$_1$) + ತಳಿರ್$_2$]

**ಎಳದಳಿಸು**, ಎಳೆದಳಿಸು (ಕ್ರಿ). ಕೋಮಲವಾಗಿರು; ನಳನಳಿಸು: ಪೂತಚೂತವನನು ಬಾಚ್ಚೇಲಿಯಾಗೆ ಪೊರ್ದರ್ತಗುಳ್ದು ಕವಲ್ತೆಳದಳಿಸುವ ಲಸದಶೋಕೋದ್ಯಾನ ಮಧ್ಯದೊಳ್ (ಶಾಂತಿಪು. ४-೯೫ ವ); ಕಳಶಂ ಕನ್ನಡಿ ತೋರಣಮೆಳದಳಿಸುವ ಕಜುಕ ಸೇಸೆ ಬಾಸಿಗಮಿವು (ಸಮುಪ. ೧-೬४). **ಎಳೆದಳಿಸು**: ಬಳಸಿದ ಮಾಧವೀಲತೆಯ ಬಳ್ಳಿವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ಳಳ ಬಳೆದೆಳೆದಳಿಸುವ ಪೊಸಗೆಂದಳಿರ ಗೊಂದಳದೊಳ್ (ಆದಿಪು. ೧೧-೬೩ ವ). [ಎಳದಳ್ $_0$ + -ಸು $_1$]

**ಎಳದಾಟ** 'ಎಳೆದಾಟ' ನೋ.

**ಎಳದಾವರೆ** (ನಾ). ಎಳೆಯ ತಾವರೆ, —ಕಮಲ: ನಳನಳಿಸಿ ಬೆಳೆದ ಬೆಳ್ದಾವರೆಯ ತೊಳಗುವೆಳದಾವರೆಯ [ಪಾ ಠಾ ಂ. ಗಾವಿನ] ಬಳಗಮಂ ತಳೆದು (ಕಬ್ಬಿಗಕಾ. ೩೧೫).

[ಎಳ್ $_2$ (< ಎಳದು $_1$) + ತಾವರೆ (< ತಾಮರೆ)]

**ಎಳದಿಂಗಳ್**, ಎಳೆದಿಂಗಳು (ನಾ). ಎಳೆಯ ಚಂದ್ರ; ಬಾಲಚಂದ್ರ: ಪೊಳೆವೆಳದಿಂಗಳೊಳ್ಮುಜಿಗಳಿಂ ಸುರಸಿಂಧುವ ಶೀಕರಂಗಳಿಂ (ಕಾದಂಬ. ೧೦೬); ಎಳನೇಸಜಂತೆ ಜಗಮಂ ಬೆಳಗಿದನೆಳದಿಂಗಳಂತೆ ಸಕಲ ಧರಿತ್ರೀತಳಮನೆಜಗಿಸಿದನೆಳವೆಯೊಳೆಳೆ ಬಣ್ಣಿಸೆ ದಶರಥಂ (ಪಂರಾಮಾ. ೩-೨); ಎಳದಿಂಗಳನ್ನುನುದಿನಂ ಬಳೆದಂ ಪಿರಿದುಂ ವಿ ಭೂ ತಿ ಯಿ ಂ (ಎಕ V, ಬೇಲೂರು. ೧೭-೬೬; 1136); ಎಳದಿಂಗಳ ನೊಸಲ ನವೀನ ಕುಸುಮಶರದ . . . ರೊಪನದೇನಂ ಬಣ್ಣಿಪೆನು (ಜಯಕಾ. ೩-೬೧). **ಎಳೆದಿಂಗಳು**: ಗಂಗೆಯುಮಂ ಜಡೆಗಳೊಳೆಳೆದಿಂಗಳುಮಂ ತಾಳ್ದಿ ರುದ್ರನಿಪ್ಪಂ (ಸಮುಪ. ೧೦-೬೩). [ಎಳ್ $_2$ (< ಎಳದು $_1$) + ತಿಂಗಳ್]

**ಎಳದು** $_1$, ಎಳ್ $_1$, ಎಳತು, ಎಳ್ $_3$, ಎಳೆದು, ಎಳೆಯ (ಗು). **೧.** ಎಳೆಯದಾದ; ಚಿಕ್ಕದಾದ; ಮೃದುವಾದ: ಎಳದೆನಿಸಿರ್ದ ಪಾವಸೆಯ ತಣ್ಣೆಳೆಯಿಂದಮೆ ನೆಯ್ದ ಸೀರೆ (ಕಾದಂಬ. ४೫); ಪೊಸತು ಪಟದೆಳದು ಪೊಜಗೊಳಗು ಸಮುಮೆನಿಪ್ಪವಜೊಳತ್ವಮಂತಕ್ಕೆ (ಕಾ ವ್ಯಾ ವ. ೨೩೯); ಆರ್ಧೆದು ಕಣು ನೋಡುತಿವೆ ಎಳದು ಬಾಯ್ ನಸುನಗುತ್ತಿದೆ (ಸಿ ದ್ಧ ರಾ. ೨-೫). **ಎಳ್** $_2$: ಸಮಾಸದ ಪೂರ್ವಪದವಾಗಿದ್ದಾಗ 'ಎಳದು' ಶಬ್ದಕ್ಕೆ ಆದೇಶವಾಗಿ ಬರುವ ರೂಪ. 'ಎಳಅಂಚೆ', 'ಎಳನೀರ್' ಪರಾ. **ಎಳತು**: "ಪಲ್ಲವಂ - ಎಳತಾದ ಎಲೆ" (ಸಿದ್ಧಾಂತಿ. ೧೦೦); ಭೀಮ ಹಳಿದುದಂ ತಮ್ಮ ಕುಲಬಲಗಳಿಗೆ ಹೇಳಲೆಳತಾದುದಂ ಕೇಳ್ದು ಮನ ತುಳುಕುತಿದೆ (ತುರಂಗ. ೧೨-೨೧). **ಎಳ್** $_3$: **೧.** ಕತ್ತಲಿಸಿ ಬೆಳೆದೆಳೆ ನಂದನಗಳಿನೂರುಕೇರಿಗಳಿಂ (ಸಾಳ್ವಭಾ. ೧-೫೮). (ನಾ). **೨.** ವಯಸ್ಸಾಗಿಲ್ಲದುದು; ಎಳೆತನ; ಹರೆಯ: ಎಸಗಿಯೆಡೆಗೆಡೆಗೊಡನೆ ಜಾಗ್ರತೆ ಬಿಸುಲಕಾಯ್ದಪಳರಸ ಕೇಳ್ಳೆ ಗ ರ್ಭ ದೆ ಳೆ ಯ ಲ್ಲಿ (ಅಂಬಿಕಾ. ४-೬). **ಎಳೆದು**: **೧.** ಎಳೆದು ಬಿಳಿದು ಚಂದ್ರಗಾವಿ ಸಂಪಗೆವಣ್ಣ ಹಳದಿ ತನ್ನದು ನನ್ನದೆನುತ (ಕುಠಾಸಾಂ. ೧೧-೧೯). **ಎಳೆಯ**: **೧.** ಹಳೆ(ಳೀ)ಯ ಹುತ್ತದೊಳಗೊಂದು ಎಳೆಯ ಸರ್ಪನ ಕಂಡೆ ಆ ಎಳೆಯ ಸರ್ಪ ಹೊರಟು ಬೆಳಗು ಕತ್ತಲೆ ಎರಡನೂ ನುಂಗಿತ್ತು (ಸರ್ವವ. ೧೩೮-೬४); ಅಗಸಕೆ ಪರ್ಬಿದೆಳೆಯ ವಲ್ಲಿ (ಜೈಮಿಭಾ. ೩೦-೧೫). ℙ ಗಮಕ ಸಮಾಸದಲ್ಲಿ ಪೂರ್ವಪದವಾಗಿದ್ದಾಗ 'ಎಳದು' ಶಬ್ದಕ್ಕೆ ಆದೇಶವಾಗಿ ಬರುವ ರೂಪ.

ಎಳೆಯ = ಚಿಕ್ಕವನು; ಬಾ ಲ ಕ; ಮಗು: ಅಂದಿಂಗೆಳೆಯ ನೀನು ಹಳೆಯ ನಾನು ಮಹಾದಾನಿ ಕೂಡಲಸಂಗಮದೇವಾ (ಬಸವ. ೨); ಎಳೆಯನ ಪುಟ್ಟಬಾಯೊಳು ಮೆಲ್ಲಮೆಲ್ಲನೆ ಮೊಳೆವಲ್ಲಳೊಡೆದು ಮೂಡಿದುವು (ಮೋಹತ. ೧೭-೬೦); ನಾನು ತೀರ ಎಳೆಯನಿದ್ದಾಗ . . . ಕರ್ನಾಟಕಿ ಸಂ ಗೀ ತ ವೆಂ ಬು ದು ಅಪೂರ್ವದ ವಸ್ತುವಾಗಿತ್ತು (ಯಕ್ಷಬ. ೬४).

**ಎಳೆಯರ್**, ಎಳೆಯರು (ಬಹುವ): ನೆರೆಮನೆ ತವರ್ಮನೆಯೊಳಿಹಳೆಳೆಯರಂ ಚುಂಬಿಸುವಳೊಲಿದು ಪಾಡುವಳ್ (ಜೈಮಿಭಾ. ೫-೫೭); ಮುಂನೆಯ ಒಡಮರಸಂ ತಂನ ನಡಪಿದ ಎಳೆಯರು ಅಗಚಿ ತಡಕೆ ತಸುಪಟ್ಟವಳಿಯೆ (ಎಕ. VII, ಶಿವಮೊ. ೨೩-೯; 1115). **ಎಳೆಯರಲುಣಿ** = ದುಂಬಿಯ ಮರಿ: ಎಳೆಯರಲುಣಿಯಲರ್ಗೊಳದಮಲ್ದೆರೆಯೆಡೆಯೊಳಗರಸಂಚಿಯ ಮಜು (ಜಯಕಾ. ೨-೬೨). **ಎಳೆಯಳ್, ಎಳೆಯುವಳ್** = ಚಿಕ್ಕವಳು; ಬಾಲೆ: ಬೇಟದುರುಳಿಯ ಬಳಗಮಿದೆಂದೆಳೆಯಳೆಳಸಿ ತಳವೆಳಗಾದಳ್ (ಪಂಪಭಾ. ೫-೩); ಪ್ರಿಯಂಗೆಳೆಯಳ ರೂಪು ಭಾವಿಪೊಡೆಯಂಗಜರಾಜನ ದುರ್ಗಮೆನ್ನಿರೇ (ಗದಾಯು. ೮-೫೯); ಇರ್ಕೆಲದ ಪರಿಕಾಲ್ಗಳಿಂ ತಣ್ಣಲೆ ನೆಳವಸಲೆಗಳನೆಳಸಿ ಸುಚಿವೆಳೆಯವಳಂ (ವರ್ಧಪು. ४-೬೫).

[ದೇ. ‖ ತಮಿ. ಇಳ, ಇಳಂ, ಇಳೈ, ಇಳೈದು; ಮಲ. ಇಳ; ತುಳು. ಎಳಿ, ಎಳತ್ತ್, ಲತ್ತ್; ಕೊಡ. ಏಳೀ = ಯೌವನ; ತೆಲು. ಎಲ, ಲೇ, ಲೇತ; ಕೋಲಾ. ನಾಯ್ಕಿ. ಲೇಜ್ = ಕರು; ಗೊಂಡಿ. ಲಯೊರ್ = ಎಳೆಯ, ಲೆಯಾ = ಎಳೆಯಳು]

**ಎಳದು** $_2$ (ಅ). ಚಂಚಲವಾಗಿ; ಅಲುಗಾಟದಿಂದ ಕೂಡಿ: "ತರಲಾರ್ಥದಲ್ಲಿ - ಎಳದೆಂಬರ್ಥದಲ್ಲಿ" (ಶಮದ. ಕಿ. ೩೧೨ ಟೀಕು); ಮನಮೆಳದಾಗೆ ವೈರಿಗೆ ಮ ನೀ ಷಿ ಜ ನ ಂ ಮನಮಿಾಯೆ ಮಾನಿನೀಜನಮಭಿಮಾನಮುಂ ಮಜಿಯೆ (ಪಂರಾಮಾ. ೩-೯); ಜಲಜನಾಭನ ಕರುಣವೆಮ್ಮೊಳಗೆಳದಹುದೆ (ಕೋಗಯ. ೧೫-೫೮).

[ದೇ. ‖ ತಮಿ. ಮಲ. ಇಳಗು, ಇಳಕ್ಕು = ಅಲುಗು; ಕಂಪಿಸು]

**ಎಳದುಂಬಿ**, ಎಳೆದುಂಬಿ (ನಾ). ಎಳೆಯತುಂಬಿ; ದುಂಬಿಯ ಮರಿ: ಪಾಡುವೆಳ [ಪಾ ಠಾ ಂ. ಳೆ]ದುಂಬಿಗಳ್ಮೊರೆಯೆ (ಜೈ ಮಿ ಭಾ. ೨-೬೫). **ಎಳೆದುಂಬಿ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಎಳ್ $_2$ (< ಎಳದು $_1$) + ತುಂಬಿ $_1$]

**ಎಳದುಪ್ಪುಳ** (ನಾ). ಎಳೆಯದಾದ ತುಪ್ಪಟ: ಕೇದಗೆಯೆಸಳೊಳ್ಗೊಳೆಯಲೆನುತ್ತೆ ಜವಾದಿಯನಣ್ಪಿಸುತೆಳದುಪ್ಪುಳಮಂ ಸೋದಿಸಲೆನುತೊರ್ವಳ್ಕಿಜುವೆರಲುಗುಗುರ್ಗೊನೆಯಿಂ ಕರ್ದುಕುತಿರೆ (ಜಯಕಾ. ೧-೬೧).

[ಎಳ್ $_2$ (< ಎಳದು $_1$) + ತುಪ್ಪುಳ (< ತುಪ್ಪುೞ್)]

**ಎಳದುವರಿ** 'ಎಟು' ಪರಾ.

**ಎಳದೆಂಗು** (ನಾ). ಎಳೆಯದಾದ ತೆಂಗು: ಎಳದೆಂಗಿನೆಳೆಯೆಲೆಯನ ಮರ್ಕೆವಡೆಯೆ ಪಿಡೆದು (ಚಂದ್ರಪು. ೭-೯೫ ವ).

[ಎಳ್ $_2$ (< ಎಳದು $_1$) + ತೆಂಗು $_2$]

**ಎಳದೆನೆ** (ನಾ). **೧.** (ಮೊದಲನೆಯ) ಗರ್ಭ. 'ಎಳದೆನೆಯಾವು' ಪರಾ. **೨.** ಎಳೆಯದಾದ (ಧಾನ್ಯದ) ತೆನೆ: ರಾ ಗಿ ಯ ಎಳದೆನೆ ತಿನ್ನಲು ರುಚಿ (ರೂಢಿ). [ಎಳ್ $_2$ (< ಎಳದು $_1$) + ತೆನೆ $_1$]

**ಎಳದೆನೆಯಾವು** (ನಾ). ಮೊ ದ ಲ ಸಾ ರಿ ಗರ್ಭವಾದ ಹಸು: "ಪಲ್ಕಿನೀ, (ಪಲಿಕ್ನೀ) ಬಾ ಲ ಗ ರ್ಭಿ ಣೀ - ಈ ೨ ಎಳದೆನೆಯಾವು" (ಹಲಾಯು. ४೬-೧೧೮). [ಎಳದೆನೆ + ಆವು]

**ಎಳದೊಳಸಿ** (ನಾ). ಎಳೆಯದಾದ ತುಳಸಿ: ಪಣೆಯ ಕತ್ತುರಿಯ ತಿಲಕದ ಮುರಿದ ಪುರ್ಬುಗಳ ಸುಳಿಗುರುಳ ಮಣಿಮಕುಟದೆಳದೊಳಸಿಯ ಕೊರಳ ವನಮಾಲೆಗಳ (ಜೈಮಿಭಾ. ೨೬-೬೮). [ಎಳ್ $_2$ (< ಎಳದು $_1$) + ತೊಳಸಿ]

**ಎಳದೋಂಟ**, ಎಳದೋಟ (ನಾ). ಎ ಳೆ ಯ ತೋಟ: ಬಸದಿಯ ಪಡುವಣ ಎಳದೋಣ್ಟಮುಂ (ಎಕ. X, ಕೋ ೞ ಲಾ ರ. ೯೦-೮೭; 903). **ಎಳದೋಟ**: ಪ್ರಜೆಯುಂ ಇಟ್ಟು ಮಾಡಿದ ಸ್ತಿತಿ ಎಳದೋಟ್ಟೊದೆಳೆ ಪಡಿದ ಬಟಿಕೆ ಎರಡು ಕೊಯಿಲು (ಸೌಇಇ. XI-i, ೧೨-೨೦; 867).

[ಎಳ್ $_2$ (< ಎಳದು $_1$) + ತೋಂಟ]

**ಎಳದೋಟ** 'ಎಳದೋಂಟ' ನೋ.

**ಎಳನಗರ** (ನಾ). ಒಂದು ನಗರದ ಹೆಸರು: ಆವನ್ಯದೊಳ್ನೊಱಂಬ ನಾರಾಯಣೇಶ್ವರಮುಮ್ಮಾಡಿಸಿ ಯೀದೇವರ್ಗ್ಗೆಳನಗರಮಂ ಸರ್ಬ್ಬಬಾಧಾ ಪರಿಹಾರಮಾಗಿ ಕೊಟ್ಟರ್ (ಎಕ. X, ಮುಳಬಾ. ೩೮–೬೨ ; 980).
[ಎಳ್$_0$ + ನಗರ]

**ಎಳನಗೆ, ಎಳೆನಗೆ** (ನಾ). ಮೃದುವಾದ ನಗೆ; ಕಿರುನಗೆ; ಮಂದ ಹಾಸ: ಎಳನಗೆಯ ಸಿರಿಮೊಗದ ಚೆಲುವಿನ ಹೊಳೆಹೊಳೆವ ನಿಟ್ಟೆಸಳು ಗಂಗಳ . . . ಮುನ್ನಿನ ರೂಪ ತೋ ಱ ೞ ಂ ದ (ಕುವ್ಯಾಭೀ. ೩–೭೬) ; ಎಳ [ಪಾಠಾಂ. ಳೆ]ನಗೆಯ ಬಾಯ್ದೆಱೆಯ ಮಿಱುಗುವ ದಂತಪಂಗ್ತಿಗಳ (ತೊರರಾ. ೧–೮–೮೦) ; ಆವಗಂ ಸರಸಕರುಣಾಮೃತದ ಕಳೆಗಳಿಂ ತೀವಿ ದೆಳನಗೆಯ ಬೆಳ್ದಿಂಗಳಂ ಪಸರಿಸುವ ದೇವಪುರ ಲಕ್ಷ್ಮೀರಮಣನಾಸ್ಯ ಚಂದ್ರಂ (ಜೈಮಿಭಾ. ೧–೧) ; ನಿಶೆಯಿಂದ ಉಷೆಯ ಎಳನಗೆಯ ಬಗೆಗೆ ಸೋತಿರಲು (ಅರಳು. ೧೧೭–೫). **ಎ ಳೆ ನ ಗೆ :** ನಲಿವು ಮಿಗೆ ತಾನವರಡಿ ಗಳಂ ತೊಳೆದು ವಂದಿಸುವೆಡೆಯೊಳೆಳೆನಗೆ ಮೊಳೆಯಲಾ ಮೃಡ ಮೂರ್ತಿ ಭೋಗಯ್ಯಗಳಿಗಿಂತೆಂದ (ಬಸಪು. ೫೩–೩೩).
[ಎಳ್$_2$ (< ಎಳದು$_1$) + ನಗೆ]

**ಎಳನನೆ** (ನಾ). ಎ ಳೆ ಯ ದಾ ದ ನನೆ, —ಮೊಗ್ಗು : ಎಳನನೆ ತೀವಿ ತೋರ್ಪ ಮೊನೆಮಲ್ಲಿಗೆ ತಾವರೆ ತೀವಿತೋರ್ಪ ತಂಗೊಳಂ . . . ತದ್ವನ ಮಧ್ಯದೇಶದೊಳ್ (ರಾಜಶೇ. ೨–೩೭).
[ಎಳ್$_2$ (< ಎಳದು$_1$) + ನನೆ$_3$]

**ಎಳನವಿಲ್** (ನಾ). ಎಳೆಯದಾದ ನವಿಲು ; ಮರಿನವಿಲು : ಎಳನವಿಲ ಕಲಾಪಂಗಳನಳವಡೆ ತಳೆದುಂ ಮದೇಭ ಮಸ್ತಕ ಮುಕ್ತಾಫಳ ವಿಲಸಿತ ಸಾಪತ್ನೀಕುಳದೊಳ್ ಗರ್ವಿಸುವ ಶಬರಿಯಿರವತಿಚಿತ್ರಂ(ಗಿರಿಕ.೧–೧೧೯).
[ಎಳ್$_2$ (< ಎಳದು$_1$) + ನವಿಲ್]

**ಎಳನಾಗ, ಎಳೆನಾಗ** (ನಾ). ೧. ಎಳೆಯದಾದ ನಾಗರಹಾವು; ಮರಿನಾಗರಹಾವು: ಸಿಂಗಡ ಮೊಲೆಯುಂಬ ಮಱಿಯಾನೆ ವ್ಯಾಘ್ರ ಕುಚಂಗಳ ಪೀರುವ ಹರಿಣ ಮುಂ ಗು ರಿ ಯೊ ಡ ನಾ ಡು ವೆ ಳ ನಾ ಗ ನ ಕಂಡಂಗಜ ವಿಸ್ಮಿತನಾದ (ಮೋಹತ. ೬–೫೩). ೨. ಒಂದು ಮೂಲಿಕೆ : ಕಕ್ಕೆಯೆಳನಾಗ ಮ ಹಾ ಮೆ ಕ್ಕೆ ಯ ಗು ಳು ಶುಂಠಿ ನಿಂಬಿ ಮೂಗೊಱೆ ಕರಂ (ಖಮದ. ೧೯–೫೭). **ಎಳೆನಾಗ :** ೧. ನಾ ಲೀ ಗೇ ಮೇಲೇ ಗೆಜಲಿಕ್ಕಿ ಹುತ್ತಿಕ್ಕಿ ನಿ ನ್ನೆ ತ್ತೀ ಲ್ಯಾ ಡಾ ನೇ ಎ ಳೆ ನಾ ಗಾ ಸುಳಿನಾಗಾ ಮುತ್ತೀನ ನಾಮಾದ ಮುದಿನಾಗಾ (ಹುಟ್ಟಹ. ೫೭).
[ಎಳ್$_2$ (< ಎಳದು$_1$) + ನಾಗ]

**ಎಳನಾಗರ** 'ಎಲೆನಾಗರ' ನೋ.

**ಎಳನಾಯ್** (ನಾ). ಎಳೆಯ ನಾಯಿ ; ನಾಯಿಮರಿ : ಕಪ್ಪಕಪ್ಪನೆಯ ಗಿರಿಗಳ ಪರ್ಬುಗೆಗಳಂತೆ ಬಪ್ಪ ಬ ಪ್ಪೆ ಳ ನಾ ಯ್ಗ ಳ ಂ ಹಾಸೊಳಾಂತು ಬಂದುದು ಶಬರಸೇನೆ (ಜೈಮಿಭಾ. ೨೮–೪೧).
[ಎಳ್$_2$ (< ಎಳದು$_1$) + ನಾಯ್]

**ಎಳನೀರ್, ಎಳನೀರು, ಎಳೆನೀರ್, ಎಳೆನೀರು** (ನಾ). ಎಳೆಯದಾದ ತೆಂಗಿನಕಾಯಿಯ ನೀರು ; ಸೀಯಾಳ: ಎಳನೀರೊತ್ತಿನೊಳೊತ್ತಿ ಬರ್ಪ ಪೊನಲೊಳ್ (ಆದಿಪು. ೧–೬೪) ; ತೆಂಗಿನೆಳನೀರುಮಂ ಕೊಳಲಿಂ ಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ಮರಂಗಳುಮಂ (ಪಂಪಭಾ. ೫–೪೭ ವ); ಉಗುವೆಳನೀರಿಂದ್ದಂ ಕದಳಿಗಳಾ ಕದಳಿಗಳ ಪಣ್ಣರಸದಿಂ ಪುಂಡ್ರೇಕ್ಷು ಗಳಿಕ್ಷುರಸದಿನಾ ಕಳವೆಗಳಾ ಕಳವೆಗಳ ಕಣಿಶದಿಂ ಗಿಳಿ ಬಳೆಗುಂ (ಗಿರಿಕ. ೨–೧೪) ; ಇಂಗಿನೊಳು ನಾತವನು ತೆಂ ಗಿ ನೊ ಳ ಗೆ ಳ ನೀ ರ ಭೃಂಗ ಕೋಕಿಲೆಯ ಕಂಠದೊಳು ಗಾಯನವ ತುಂಬಿದವರಾರು (ಸರ್ವಜ್ಞ.೧೯೩). **ಎಳನೀರು :** ಎಳೀಎಳನೀರಿಗೆ ಚೂರಿಯ ಮೊನೆಯಿಂದ ಚುಚ್ಚುವಂತೆ (ನಿಷ್ಕಾಮ. ೨೦). **ಎಳೆನೀರ್ :** ಚಂಚಚ್ಚಕೋರಾಕ್ಷಿಯರ್ ತಾಮೆಳೆ ನೀರ್ ಬೆಳ್ದಿಂಗಳೊಳ್ ಬೆಂಚೆಗೆ (ಅರ್ಧನೇ. ೧–೬೫) ; ಎಳೆನೀರ್ಗಳಿಂ ಬೆಳೆದ ಕರ್ಬುದೋಂಟಂಗಳಿಂ (ತಿರುರ. ೨–೯) ; ಎರಡು ಸಾಸಿರ ಬಾಳೆ ಬಲುವಣ್ಗಳಂ ಎಂಟುನೂರಮೆಳೆನೀರ್ಗಳಂ ನೆಲದ ಪಂಕದೊಳಿರಿಸುತಂ (ಮಹಾವಿ. ೧೪–೯೦). **ಎ ಳೆ ನೀ ರು :** ಗಾಣದೊಳಿಟ್ಟ ಕಣೆಯದೊಳು ಎಳೆ[ಪಾಠಾಂ. ಳ]ನೀರು ಸಹಿತ ಹುಯಿದಾಡಿಸುತ್ತಾ ಯೆಣ್ಣೆಯಂ ತೆಗೆದು ಬೈಚಿಡುವುದು (ಸೂಪಶಾ. ೨–೨೩).
[ಎಳ್$_2$ (< ಎಳದು$_1$) + ನೀರ್$_1$. / ತಮಿ. ಮಲ. ಇಳನೀರ್; ತೆಲು. ಎಡನೀರು]

**ಎಳನೀರು** 'ಎಳನೀರ್' ನೋ.

**ಎಳನೀರ್ವೂ** (ನಾ). ಎಳೆಯದಾದ ತಾವರೆಯ ಹೂವು ; ಎಳೆಯ ಕಮಲದ ಹೂ : ನೀರ್ವಡಿಸಿ ಪಿಡಿದ ಕರಿಯೆಳನೀರ್ವೂವಂ [ಪಾಠಾಂ. ಅಳಿನೀರ್ವೂವಂ, ಎಳೆನೀರ್ವೂವಂ] ಚುಂಬಿಸುತ್ತೆ ನಾರಿಯ ನಾಣಂ ಸಾರ್ವ ಮೊಗಂ ಕ ಟ್ಟ ಲೆ ಯ ಂ ಪೀರ್ವಮೃತಕರಂಬೊಲೋಪನಂ ನುಡಿಯ ಲೊಡಂ (ಅರ್ಧನೇ. ೧–೧೧೫). [ಎಳ್$_2$ (< ಎಳದು$_1$) + ನೀರ್ಪೂ]

**ಎಳನೀರ್ವೊನಲ್** (ನಾ). ಎಳನೀರಿನ ಪ್ರವಾಹ : ಬೇರ್ವರಸು ಕಾಯ್ತು ಪಲಸೆಳನೀರ್ವೊನಲಂ ಕಱೆವ ತೆಂಗು (ಶಮದ. ೬೭ ಪ್ರಯೋ) ; ಬೇರ್ವ ರಸಿ ತುದಿವರಂ ಕಾಯ್ತು ಪನಸಂಗಳೆಳನೀರ್ವೊನಲುಮಂ ಕಱೆವ ತೆಂಗು (ಚೆಬಪು. ೧೧–೨೨). [ಎಳನೀರ್ + ಪೊನಲ್]

**ಎಳನೀಲ, ಎಳೆನೀಲ** (ನಾ). ೧. ರಾಜಾವರ್ತವೆಂಬ ನೀಲರತ್ನ : "ಎಳನೀಲಮತಿ ಭಾವಿಸೆ ರಾಜಾವರ್ತಮೆಂದು ಪೇೞ್ವರ್" (ಕವಿಕಂ. ೫೨). **ಎಳೆನೀಲ :** ೧. "ರಾಜಾವರ್ತಂ – ಎಳೆನೀಲಂ" (ಶಮದ. ಪರಿ. ೨). ೨. ನಸುನೀಲಿಬಣ್ಣ : (*). [ಎಳ್$_2$ (< ಎಳದು$_1$) + ನೀಲ$_2$]

**ಎಳನೇಸರು** 'ಎಳನೇಸಱ್' ನೋ.

**ಎಳನೇಸಱ್, ಎಳನೇಸರು, ಎಳೆನೇಸಱ್, ಎಳೆನೇಸಱು** (ನಾ). ಎಳೆಯ ಸೂರ್ಯ; ಬಾಲರವಿ: ಎಳನೇಸಱ ತೇಜದೊಳೋರಂತಪ್ಪನಂ (ವಡ್ಡಾರಾ. ೪೪–೨೩) ; ತೊಳಗುವೆಳನೇಸಱೋ ಎಂಬಂತೆ ಕಣ್ಗೆ ಮಂಗಳ ವಾದ (ಸಿದ್ಧರಾ. ೧–೫೭) ; ಥಳಥಳಿಪುದಯಾಚಲಾಗ್ರದೊಳಗೆ ಮೂಡು ವೆಳನೇಸಱಂತೆ ರಾಜಿಸುತ (ಕಂನವಿ. ೭–೭೮). **ಎಳನೇಸರು :** ಜಗುಲಿ ಯಲ್ಲಿ ಕುಳಿತೆಳನೇಸರು ಮೂಡುವೆಟ್ಟವನ್ನೇರುವ ಸ ಂ ಭ್ರ ಮ ವ ನ್ನು ನೋಡುತ್ತಾ ಮೈಮರೆತಿದ್ದನು (ಮಣಿಸ. ೧). **ಎಳೆನೇಸಱ್ :** ಪೊಳೆ ವೆಳೆನೇಸಱಿಂ ತೆಗೆದ ರಶ್ಮಿಗಳಂತೆ ಮಡಲ್ತು (ಕಾದಂಪೂ. ೬೬೯) ; ಮೂಡು ವೆಳೆನೇಸಱಿಂದುಱೆ ನಮಿಸಿ ಕೊಳ್ವ ಮೆಯ್ಯಾಡಿ (ಪದ್ಮರಾ. ೨–೬೪). **ಎಳೆನೇಸಱು :** ಎ ಳೆ ನೇ ಸ ಱು ವಿಯೋಗದಭಿಸಾರಿಕೆಯರತಿದೂಸರು (ಸೌಂದಪು. ೧೭–೫೫). [ಎಳ್$_2$ (< ಎಳದು$_1$) + ನೇಸಱ್]

**ಎಳನೊಮ್ಮದಿವ್ವೆ** (ನಾ). ಒಬ್ಬಾತನ ಹೆಸರು : ಎಳನೊಮ್ಮದಿವ್ವೆಯ ಮಗನಯ್ಯ ಪಣಮೆಯನ ಕೊಟ್ಟ ಮಣ್ಣ (ಎಕ. X, ಕೋಲಾರ. ೯೦–೯೧; 903). [?]

**ಎಳಪು** (ನಾ). ೧. ಎಳೆಯತನ; ಬಾಲ್ಯ : ಸ್ವಲ್ಪವಾದರೂ ವ್ಯವಹಾರ ಜ್ಞಾನವಿಲ್ಲ. ಶುದ್ಧ ಎಳಪು (ಉಮಾಶಿ. ೮೨). (ಗು). ೨. ಎಳೆಯ ; ವೃದ್ಧಿಹೊಂದದ : ಈ ಎಳಪು ಕಂಪನಿ ಹೇಗಿದೆ ನೋಡೋಣಾಂದ್ರೆ (ಕಲ್ಯಾಣಿ. ೨೨೨). [ಎಳ್$_2$ (< ಎಳದು$_1$) + –ಪು$_2$]

**ಎಳಬುಳಿಪುಳಿ** (ನಾ). ಒಂದು ಸ್ಥಳದ ಹೆಸರು : ಅ × ಕ್ಕೆ ಎಳಬುಳಿ ಪುಳಿಯಿ[ಂ] ನೊ[ಱ][ಂಬ]ಸಮುದ್ರಕ್ಕೆ ಬ ಪ ರ್ ಪಳ್ಳಂ (ಎಇ. X, ೬೭–೮೨ ; 892). [?]

**ಎಳಬ್ಬೆ** (ನಾ). ಒಬ್ಬಾಕೆಯ ಹೆಸರು : ಮೊಳೆವೆಡೆ ಏಱ್ಕಣ್ಣಂಗಂ ಆದಿತ್ಯ ಭಟಾರಜ್ಗೆ ಎಳಬ್ಬೆಯಾ ಕೊಟ್ಟ ಮಣ್ಣು (ಎಕ. IV, ಎಳಂದೂ. ೨೫–೬ ; 925 ?). [ಎಳ ? + ಅಬ್ಬೆ$_1$]

**ಎಳಬ್ಬೆನಾಯ್** (ನಾ). ಒಂದು ನಾಯಿಯ ಹೆಸರು (?) : ಆ ಅರಸು ಬನ್ದು ಎಳಬ್ಬೆನಾಯ ಮುಟ್ಟ ಪೋಗೆ ಬೆಂಕೊಣ್ಡುಕ್ಕೆಳಿಕ್ಕಾಟಿಯಾ ಕಾದಿ ಸತ್ತಂ (ಎಕ. XV, ಅರಸೀ. ೨೧೫–೭ ; 890). [ಎಳ ? + ಅಬ್ಬೆ$_1$ + ನಾಯ್]

**ಎಳಭಟ** (ನಾ). ಎಳೆಯ ವಯಸ್ಸಿನ ಭಟ, —ಸೈನಿಕ : ತೊಲ ತೊಲಗು ಕಲಿಭೀಷ್ಮ ವೃದ್ಧರಿಗೆಳಭಟರ ಕೊಡಾವುದಂತರ (ಕುವ್ಯಾ ಭೀ. ೬–೧೪). [ಎಳ್$_2$ (< ಎಳದು$_1$) + ಭಟ]

**ಎಳಮಗ** (ನಾ). ಎಳೆಯ ಮಗು ; ಕೂಸು ; ಬಾಲಕ : ಪಾಪಿಗಳೆಳ ಮಗನ ನೂಕಿದರು ಕಾಳಿಗೆಕೆಂದುದಮರಗಣ (ಕುವ್ಯಾಭೀ. ೪–೪೯).

**ಎಳಮಕ್ಕಳ್** (ಬಹುವ): ಹಳ್ಳಿಮರಿಗ ಕುಪ್ಪಣ್ಣಗಂ ಎಳಮಕ್ಕಳ್ಗ ಮೆಚ್ಚಿ ಬುಗೆವೆಗೆಯು ತಾಱಿಯು ಬಿಟ್ಟ (ಎಕ. III, ನಂಜನ. ೯೭–೮ ; 898 ?); ಆಡುವೆಳಮಕ್ಕಳೊಡನಾಡುವಂ ಲೀಲೆ ಮಿಗೆ ನೋಡುವಚ್ಚರಿಗಳಂ ನೋಡುವಂ (ಜೈಮಿಭಾ. ೨೮–೨೨). [ಎಳ್$_2$(< ಎಳದು$_1$)+ಮಗ]

**ಎಳಮನ, ಎಳೆಮನ** (ನಾ). ಎಳೆಯ ಮನಸ್ಸು ; ಮೃದುವಾದ ಮನಸ್ಸು ; ಕೋಮಲ ಹೃದಯ : ಬಿಸತಂತುವಿನೊಳ್ದೊರೆಯೆನಿಪೆಳ ಮನದೆನ್ನಂ ಪರಿಭವಿಪುದೆ ಕಂಡು ಕನ್ನೆಯಂ ಯುವರಾಜಂ (ಕಾದಂಉ. ೩೦೧). **ಎಳೆಮನ** : ಕುಲಜನ್ಮಕರ್ಮಂಗಳಂ ಜ್ಞಾನದಿಂದರಿದು ಎಳೆಮನವ ಮಾಡಿಯಾಕೆಯು ಮೇಲೆ (ತುರಂಗ. ೯–೩೪). [ಎಳ್$_2$ (< ಎಳದು$_1$) + ಮನ್$_2$]

**ಎಳಮಾದಳ** (ನಾ). ಎಳೆಯದಾದ ಮಾದಲ : ಸೊಗಸುವೆಳಮಾದಳದ ಸುಮನೋನುರಾಗದಿಂ ಪಲವು ಬಣ್ಣಂಗಳಂ ತೆಗೆದುಟ್ಟು ರಂಜಿಸಿದರು (ಜೈಮಿಭಾ. ೩೦–೧೬). [ಎಳ್$_2$ (< ಎಳದು$_1$) + ಮಾದಳ (= ಮಾದಲ)]

**ಎಳಮಾಮರ** (ನಾ). ಎಳೆಯದಾದ ಮಾವಿನ ಮರ : ಪೊಸವೇಟಮೆಂಬ ಚೆಲ್ವಿಡಿದೆಳಮಾಮರಂ ಪುಳಕಮೆಂಬ ನವಾಂಕುರದಿಂ . . . ಸುಸಿಲೆಂಬ ಬಸಂತದೊಳೀಂ ಪೊದಟ್ಟುವೋ (ಆದಿಪು. ೧೨–೩೯). [ಎಳ್$_2$ (< ಎಳದು$_1$) + ಮಾಮರ]

**ಎಳಮಾವು, ಎಳೆಮಾವು** (ನಾ). ಎಳೆಯದಾದ ಮಾವಿನ ಮರ, —ಹಣ್ಣು : ಮೃದುಮಧುರಸ್ವನಂ ನೆಗೞೆ ಬಂದೆಳಮಾವಿನೊಳಿರ್ದು ಕೂಡೆ ಪಾಡಿದುದು ಮದಾಳಿಮಾಲೆ (ಪಂಪಭಾ. ೧೪–೧೨) ; ಎಳಮಾವೇ ತಳಿರುಯ್ಯಲೇ ಕೊಳೆ ತಗುಳ್ದಿಂದೋಳಮೇ ಕೋಗಿಲೇ (ಕಾವ್ಯಾವ. ೧೨೯). **ಎಳೆಮಾವು** : ಮಧುಮಾಸದ ಗೋಸನೆ ತುಂಬಿಯಿಂಚರಂ ಬಂದೆಳೆ ಮಾವಿನೇಳ್ಗೆ ಬಗೆದಂದು ನಿರರ್ಥಕಮಾಗದಿರ್ಕುಮೇ (ಕಾದಂಉ. ೫೫೬). [ಎಳ್$_2$ (< ಎಳದು$_1$) + ಮಾವು]

**ಎಳಮಿಂಚು, ಎಳೆಮಿಂಚು** (ನಾ). ಎಳೆಯ ಮಿಂಚು; ಸಣ್ಣ ಮಿಂಚು: ಪೊಳವೆಳಮಿಂಚಿನಂತೆಸೆದು ಗಾಡಿಯೊಳೊಂದಿದ ತನ್ನ ರೂಪು ಕಣ್ಗೊಳೆ (ಆದಿಪು. ೨–೭೧) ; ಮುದ್ದುಗಣ್ಗಳ ಬೆಳಗೆಂಬೆಳಮಿಂಚಿನ ಗೊಂಚಲಿಂ ಮುಂದಾಡುತ್ತಂ (ಅರ್ಧನೇ. ೧–೯೨ ವ) ; ಮಲಯಜಮಿಕ್ಕಿ ಮುಡಿದು ಮಲ್ಲಿಗೆಯಂ ಬಿಳಿದುಟ್ಟೊರಾಣಿಯ ಮುತ್ತಂ ತೊಟ್ಟೆಳಮಿಂಚಿಂ ಕಂಡರಿಸಿದ ಕಾಂತೆಯೆನಲ್ ಕಡುಸೊಗಸಿದಳು (ಜಯಕಾ. ೨–೪೯). **ಎಳೆಮಿಂಚು** : ಪುದಿದೆಳೆಮಿಂಚುಗಳ್ ಪೊಳೆದವೊಲ್ ಸುಲಿಪಲ್ಗಳ ಕಾಂತಿ ಪೊಣ್ಮೆ (ಕಾದಂಪೂ. ೫೮೨); ಎಳೆಮಿಂಚುಗಳೆನಿಪುವು ಬಾಳ ತಮಾಳ ಗಹನದೊಳ್ ಸುೞಿವ ಶಬರಿಯರ ಕಡೆಗಣ್ಗಳ್ (ವರ್ಧಪು. ೧೦–೧೮) ; ಎಳೆಮಿಂಚಂ ಕಡೆಗೈದು ಕಂಡರಿಸಿ ನೀಳ್ದಿಟ್ಟಂತೆ . . . ಪೊಱತ್ತುಂಗ ತಾರಾಚಳಂ (ಉದ್ಭಟ. ೧೨–೧೧೯) ; ಅಡಿಗಡಿಗುರ್ವಿ ಮಿಂಚುವೆಳೆಮಿಂಚು (ರಾಜಶೇ. ೮–೧೦೨). [ಎಳ್$_2$ (< ಎಳದು$_1$) + ಮಿಂಚು$_3$]

**ಎಳಮಿಾನ್, ಎಳಮಿಾನು, ಎಳೆಮಿಾನು** (ನಾ). ಎಳೆಯ ಮೀನು ; ಮರಿಮೀನು : "ಎಳಮಿಾಂಗಳ್ ಶಕುಲಂಗಳ್ ನಳಮಿಾನಂ ಚಿಲಿಚಿಮಾಭಿಧಾನಮದಕ್ಕುಂ" (ವಸ್ತುಕೋ. ೨೩–೬); ಇವು ಮಗುಳ್ದುಪ್ಪರಿಸುವೆಳಮಿಾನ್ ಬಿದಿರ್ವ ಶ್ರೀಕರಮಲ್ಲ . . . ಎನಿಸಿದವು ಕಡಲೊಳು(ಜೈಮಿಭಾ. ೬–೬). **ಎಳಮಿಾನು** : ಬಂಡುಣಿಪಸುಳಿಯ ತಿರುವಿಲ್ಲಾಳಿನ ಪಳವಿಗೆ ಯೆಳಮಿಾನೆರಡಂ ಕೊಂಡು (ಜಯಕಾ. ೪–೩೪). **ಎಳೆಮಿಾನು** : ಒಸೆದು ನೋಡಿದನಕ್ಷಿಯಿಂದೆವೆಮಿಸುಕದೆಳೆಮಿಾನುಗಳ (ತೊರರಾ. ೩–೧೨–೩೯) ; ಎಳೆಮಿಾನೆಣೆವಕ್ಕಿ ಕಳಹಂಸಗಳು ನಾಚಿ ಮುಳುಗಿದುವಿರದೆ ಪಾಱಿದುವು (ಕಂನವಿ. ೨೫–೧೨೦). [ಎಳ್$_2$ (< ಎಳದು$_1$) + ಮಿಾನ್$_2$]

**ಎಳಮಿಾನು** 'ಎಳಮಿಾನ್' ನೋ.

**ಎಳಮುತ್ತು, ಎಳೆಮುತ್ತು** (ನಾ). ಚಿಕ್ಕಮುತ್ತು ; ಸಣ್ಣಮುತ್ತು : ಮತ್ತಹಸ್ತಿಗಳ ಮಸ್ತಕದಿಂ . . . ಎಳಮುತ್ತನಾಯ್ದುತ್ತುಮಿರ್ಪ ಶಬರಪ್ರಿಯಕಾಮಿನಿಯರ್ಕಳಿಂ (ಶಮದ. ೧೩೫ ಪ್ರಯೋ) ; ಕಡುಮಿಱುಪ ಸೆಳ್ಳುಗುರ್ವೆಳಗಿಡಿಯಲ್ಬೇಡಿತಿಯರಾಯ್ದರೆಳಮುತ್ತುಗಳಂ (ಉದ್ಭಟ. ೨–೬೦) ; ಎಳಮುತ್ತಿನ ಶಂಖದ ಬೆಳ್ವಳಗಂ ಮುಕ್ಕುಳಿಸಿದಂತೆ ತೊಳತೊಳಗುವ ಸ್ಫಪಳವಡೆ (ಶಬಶಂ. ೫–೭). **ಎಳೆಮುತ್ತು** : ತಿವಿದುವೆಳೆ [ಪಾಠಾಂ. ದವೆಳ] ಮುತ್ತುಗಳ ಚಂದ್ರಿಕೆ ಜವಳಿಸಿದವೊಂದೊಂದನೌಕಿದವವಿರಳಿತ ಮಣಿಕಿರಣ ವೇಣೀಬಂಧ ಬಂಧುರದಿ (ಕುವ್ಯಾಸ. ೧೩–೨೬). [ಎಳ್$_2$ (< ಎಳದು$_1$) + ಮುತ್ತು$_6$]

**ಎಳಮೆ$_1$, ಎಳವಿ, ಎಳವೆ** (ನಾ). ಎಳೆಯತನ ; ಬಾಲ್ಯ : ಎಳಮೆಯ ಕಳಿದು ಜೌವನದುಬ್ಬಿನಿಂ (ಕರ್ಣಾವೃ. ೮–೧೮) ; ಎಳಮೆಯ ತೆಜನಿಂತಿದೆಂದು (ಗೀತಗೋ. ೮–೧೯) ; ಎಳವೆಣ್ಣಳೀ ಕೃತಿಗೇಳೆ ತಮ್ಮಿನಿಯರ ನೆಳಮೆಯೊಳಳವುಗೆಡಿಸದೆ (ಹದಿಬ. ೧–೫೩) ; ತಂದೆಯೊಡನೆಳಮೆಯೊಳೆ ನಿಮ್ಮೊಳೊಂದಾದೆನ್ (ಅಶ್ವತ್ಥಾ. ೨೫–೮). **ಎಳವಿ** : ಎಲೇ ಮಗನೇ ನಿನ್ನೆಳವಿಯ ಮುದ್ದಾಟವನು ಎಳಸಿ ನೋಡುವ ಭಾಗ್ಯವೆನಗಿಲ್ಲವಾಯ್ತು (ನೇಮಿಸಂ. ೨೦–೪೫) ; ಎಳವಿಯ ಬಾಲಕರ ಮೇಲೆ ಮಮತೆಯಂ ಪಿರಿದಾಗಿ ಮಾಳ್ಪಂದ (ಸಮ್ಯಕೌ. ೧೦–೭). **ಎಳವೆ** : ಉರ್ಚಿಸುವಂ ಶೈಲಶಿಲಾತಳಮನೆಳವೆಯೊಳ್ ನೃಪತನಯಂ (ಕಾದಂಪೂ. ೬೩೪) ; ಎಳವೆಯೊಳೆ ತನ್ನ ವೈರಿಯ ಮೊಳೆಯುಮನೊಗೆತಪ್ಪ ರುಜೆಯ ಮೊಳೆಯುಮನೊಗೆದಾಗಳೆ ಕಳೆಗೆ ಗೆಡ್ಡೆಗಟ್ಟದ ಬೞಿಕ್ಕೆ ಕಳೆಯಲ್ಕೆ ಬಾರದೆಂಬುದುಮಾಗಳ್ (ಸುಕುಮಾ. ೧೧–೩೫); ತೊಟ್ಟಿಲೊಳರಸುಮಗಂ ಬಳೆದಂ ಮಿಗೆ ಸೊಗಯಿಸುತುಂ ತನ್ನೆಳವೆಯೊಳು (ಜಯಕಾ. ೨–೬೨) ; ೨೩ ವರ್ಷವೆಂದರೆ ಹೀಗೆ ಹಣ್ಣೂ ಅಲ್ಲ ಹಾಗೆ ಹದಿರೂ ಅಲ್ಲ, ಎಳವೆ ಇನ್ನೂ ತೀರ ದಾಟಲ್ಲದ ಎಡಪ್ರಾಯ (ಮೂರುಉ. ೩೨).
[ಎಳ್$_2$ (< ಎಳದು$_1$) + -ಮ್ಮೆ$_3$. / ತಮಿ. ಇಳಮೈ, ಇಳೈ ; ಮಲ. ಇಳದು]

**ಎಳಮೆ$_2$** (ನಾ). (?) : ಬಿದಿರೆಯ ನಗ[ರ]ದಲು ಎಂಟು ಮಾನಿಸ ಸೆಟ್ಟಿಕಾರರುಂ [ನಾಲ್ವರು] ಎಳಮೆಗಳುಂ ಅಸೇಸ[ಹೊ]ಲಾರ ಧವರುಂ (ಸೌಇಇ. VII, ೨೧೩–೧೫ ; ?). [?]

**ಎಳಮೆಯ್** (ನಾ). ಎಳೆಯ ದೇಹ, —ಶರೀರ.

**ಎಳಮೆಯ್ಯಳ್** = ಎಳೆಯದಾದ ದೇಹವಿರುವವಳು; ಕೋಮಲೆ: ಮುನ್ನಿದನೇ ತಾನ್ ತಾಳ್ದಳ್ ದನಯೋ ಪೆಣ್ ಎಳಮೆಯ್ಯಳ್ (ಅಂತಿಗೂ. ೪೨–೮೭೬). [ಎಳ್$_2$ (< ಎಳದು$_1$) + ಮೆಯ್]

**ಎಳಮೇಲ** (ನಾ). ಒಂದು ಪ್ರದೇಶದ ಹೆಸರು: ಮಣ್ಡಳಿಕ ನಾಯಿ ಮರಸ ಎಳಮೇಲ ಬಡಗವೊಲದಲು ಬಿಟ್ಟ ಮತ್ತ ೧೦೦ (ಸೌಇಇ. XX, ೫೯–೪ ; 1086). [ಎಳ್$_0$ + ಮೇಲ ?]

**ಎಳಮೊಳಗು** (ನಾ). ಮೃದುವಾದ ಧ್ವನಿ: ಮೇಳದ ಕೆಳದಿಯರು ಕೈಗೂಡಲು ನೇವುರದೆಳಮೊಳಗು ಮೋಹಿಸಲು ಮಾನಿನಿ ಬಂದಳಾಯೆಡೆಗೆ (ಕುವ್ಯಾಕ. ೧೯–೬೪); ಒಲವಿಂದುಗುರಿಪ ವನಿತೆಯ ಕಂಕಣದುಲಿಪಂ ಬೆಳಮೊಳಗಂ ಕೇಳುತ (ಜಯುಕಾ. ೫–೩); (ಜಯುಕಾ. ೪–೨೪ ನೋ).
[ಎಳ್$_2$ (< ಎಳದು$_1$) + ಮೊಳಗು$_2$]

**ಎಳಯಿ** (ನಾ). ಒಂದು ಪಂಗಡ (?): ಇ ಧರ್ಮ್ಮಾರ್ಣವ ಮಾಣಿಕ ನಕರಂಗಳುಂ ಎಳಯಿಗಳುಂ ಆರ್ಯ್ಯವರು ಮಂಗಳ ಮಹಾ ಶ್ರೀಶ್ರೀ (ಇಆ. VIII, ೨೧–೫೦ ; 1077). [?]

**ಎಳರು** 'ಎಳಱು' ನೋ.

**ಎಳಲ್** 'ಎಱಲ್' ನೋ.

**ಎಳಲತೆ, ಎಳಲತೆ** (ನಾ). ಎಳೆಯದಾದ ಲತೆ, —ಬಳ್ಳಿ: ಎಳಲತೆಯ ಗಣಿಕಾವಾಸಂಗಳೊಳಮಿಂಬಱಿದು ಬೀಡಂ ಬಿಡಿಸಿದಾಗಳ್ (ಆದಿಪು. ೪–೯೨ ವ); ಬಳಸಿದೆಳಲತೆಯ ತಂಪಿಂಗೆ ಕಂಪಿಂಗೆ ಕೆಂದಳಿರಿಂಗೆ ಕರ್ಣಿಕೆಗಳೆಸೆವ ಕುಸುಮಕೆ (ಹಜಕಾ. ೫–೫೬); ಎಳಲತೆಯೊಲ್ ಮಿಗೆ ಹಳುಕುವ ದಿವ್ಯಾಂಗ (ಕಂಸವಿ. ೨೧–೮೦). **ಎಳಿಲತೆ**: ಮರದಿಂ ಮರಕ್ಕೆ ದಾಂಗುಡಿವರಿಪೆಳಿಲತೆಯಂತೆ ನೀತಿಮಾಂಧಾತನೊಳಾವರಿಸಿರ್ದು (ಕಾದಂಪೂ. ೫೮೧). [ಎಳ್$_2$ (< ಎಳದು$_1$) + ಲತೆ]

**ಎಳಲಿಕ್ಕು** 'ಎಱಲಿಕ್ಕು' ನೋ.

**ಎಳಲಿಡು** (ಕ್ರಿ). ನೇತುಹಾಕು; ತೂಗುಹಾಕು; ಇಳಿಯಬಿಡು: ಮೊಲೆಯ ಮೇಲೆಳಲಿಟ್ಟ ಮುತ್ತಿನೇಕಾವಳಿ (ರೇವಣ. ೯೮–೪೨); ಆ ವ್ಯಾಘ್ರಪಾದಪದಬಿಸಜಮಂ ತಾಳ್ದಂತಿರೆಳಲಿಟ್ಟ ಪುಲಿಯುಗುರಿನೆಸಕದಿಂ (ಭಾವಚಿಂ. ೪–೯); ಎಳಲಿಟ್ಟ ಜಡೆಯಿಂದೆ ಕರತಳದೊಳಾಂತ ವೀಣಾ ದಂಡದಿಂದೆ ನಾರದಮುನೀಶಂ (ಸಿದ್ಧೇಪು. ೧–೪೬).
[ಎಳಲ್ (< ಎಱಲ್) + ಇಡು$_1$]

**ಎಳಲಿಸು** (ಕ್ರಿ). "ತೊಂದರೆ ಪಡಿಸು" (ಪ್ರಸಕೀ. ಅಡಿಟ): ಪರಜಾರ ಗೊಲಿದು ಸ್ವಪುರುಷನ ಎಳಲಿಸಿರುವವಳೆ ಕುಲಗೇಡಿ ಹೊಲೆತಿ (ಪ್ರಸಕೀ. ೭೩–೨). 'ಅಱಲಿಸು' ಪರಾ. [ಎಳಲ್ (< ಎಱಲ್) + -ಇಸು$_3$]

**ಎಳಲು** 'ಎಱಲ್' ನೋ.

**ಎಳಲುಂಗೊನೆ** (ನಾ). ನೇತಾಡುವ ಕೊನೆ; ತೂಗಾಡುವ ಕೊನೆ: (ಶ್ರೀರಂಗರಾಯನ ಕಯ್ಯ ಗಟ್ಟನಗ್ಗರಣೆಯುಎಳಲುಂಗೊನೆಯುನ್ನು ತುಡುಂಕಿಕೊಂಡು) (ಮಂತ್ರಶ. ೧೧೨–೨೧). [ಎಳಲು (< ಎಱಲ್) + ಕೊನೆ$_3$]

**ಎಳಲೆ** (ನಾ). ಒಂದು ಬಗೆಯ ಗಿಡ: ಕಾಡುಶೀಗೆಸೊಪ್ಪು ಒಂದು ಹಿಡಿ ಎಳಲೆ ಒಂದು ಹಿಡಿ ಇವಂ ತುಳಿದು ಹುಳ್ಳಿಳಿಯಲ್ಲಿ ಕಲಸಿ ಕವಳವಿಕ್ಕುವುದು (ಅಶ್ವಟೀ. ೧೧೩–೫). [?]

**ಎಳವಕ್ಕಿ** (ನಾ). ಎಳೆಯ ಹಕ್ಕಿ; ಮರಿಹಕ್ಕಿ: ಎಳವಕ್ಕಿಯನು ಸಲಹೆ ಕೊಳುಗುಳವ ನಿಲಿಸಿದಾ ಕೊಳಲಿನಾ ಕರುಣಾಳು ಕಾಯುವನು ನಿಮ್ಮ (ಕವಪು. ೩೩–೨೩). [ಎಳ್$_2$ (< ಎಳದು$_1$) + ಪಕ್ಕಿ$_1$]

**ಎಳವಗಲು, ಎಳಿವಗಲು, ಎಳಿಹಗಲು** (ನಾ). ಬೆಳಗಿನ ಸಮಯ; ಪ್ರಾತಃಕಾಲ; ನಸುಕು: ನಸುದೋಱಿತು ನಾಕಾಧಿಪ ದಿಕ್ಕಿನೊಳೆಳವಗಲಿನ ಚಿಹ್ನಂ (ಜಯುಕಾ. ೧೪–೮೭). **ಎಳಿವಗಲು**: ಎಳಿವಗಲ ತಿಳಿಯಾಳದಾಗಸದ ಹೊಗಲೆಳಸಿ (ವಿಸೀಗೀ. ೨೨–೧೪). **ಎಳಿಹಗಲು**: ಗರುಡಿಯಿಂದ ಸಾಧಕರ ಕಲಕಲಾಟ ಆಗಾಗ್ಗೆ ಕೇಳಿಸುತ್ತಿದೆ. ಹೊತ್ತು ಎಳಿಹಗಲು (ಹಬ್ಬಕ. ೮–೪). [ಎಳ್$_2$ (< ಎಳದು$_1$) + ಪಗಲು (< ಪಗಲ್)]

**ಎಳವರ** (ನಾ). ಎಳೆಯದಾದ ಮರ; ಚಿಕ್ಕಮರ: ಎಳವರನಂ ಕಾಟ್ಗಿಚ್ಚಿರದಳುರಲ್ ಬೆವರುಣ್ಮೆ ಪೊಣ್ಮುವಂತಿರಲ್ (ಕಾದಂಉ. ೭೬೧). [ಎಳ್$_2$ (< ಎಳದು$_1$) + ಮರ$_1$]

**ಎಳವರೆ** (ನಾ). ಒಂದು ಊರಿನ ಹೆಸರು: ಎಳವರೆಯ ತೆಲ್ಲಿಗ ಮಲ್ಲೆಯ ನಾಯಕನ ಮಗ (ಎಕ. V, ಅರಸೀ. ೧೩೭–೭ ; 1211); ಸಮಸ್ತ ಗುಣಗಣಸಂಪನ್ನರಪ್ಪ ಕೇಶವಪುರವಾದೆಳವರೆಲ್ಲಂ ಅಶೇಷ ಮಹಾಜನಂಗಳು ತಂಮಗೆ ಕಾಲುವಳ್ಳಿಯಾದ ಗೀಜಹಳ್ಳಿಯ (ಮೈಆರಿ. ೧೯೨೮, ೧೯–೨೭ ; 1227); ಚವುಗಾವೆ ಎಳವರೆಯ ಬೂವಗೌಡನ ಮಗ (ಎಕ. V, ಅರಸೀ. ೧೦೮–೬೭ ; 1255). [?]

**ಎಳವರೆಯ, ಎಳಿವರೆಯ, ಎಳಿಹರೆಯ** (ನಾ). ಎಳೆಯ ಪ್ರಾಯ; ತಾರುಣ್ಯ; ಯೌವನ: ಸೌಂದರ ಮಹೀಪಾಲನೆಳವರೆಯದಲಿ ಕಂಗೊಳಿಸಿದನು ಸಮಕ್ಷದಲಿ (ಸೌಂದಪು. ೪–೬); ಎಳವರೆಯದ ಸಿಂಹಮಧ್ಯದಂತೊಪ್ಪುವ ಸೆಳೆನಡುವೆಲ್ಲಿಗೆ ಹೋಯ್ತು (ಮೋಹತ. ೮–೧೫); ಎಳವರೆಯದೊಳ್ ನಲ್ಲೂಸಂ ಪೆತ್ತು (ರಾಮಾಶ್ವ. ೧೮–೧೦). **ಎಳಿವರೆಯ**: ಚೆಂಡನಾಡುತಿರ್ದಳೆಳಿವರೆಯದಂಗನೆ (ಸೌಂದಪು. ೧೬–೨೭); ನಿರ್ಮಲ ಸೆಟ್ಟಿಗಂತೂ ಎಳಿವರೆಯದಿಂದಲೂ ಅದೊಂದು ನಿತ್ಯಕ್ರಮವಾಗಿತ್ತು (ಗರಿನ. ೨೮). **ಎಳಿಹರೆಯ**: ಪರಿಮಳವನು ಕೊಳ್ವೊಡೆಳಿಹರೆಯದ ಏಟ ಬರಲಾತಗೆ ಮನಸೋತು (ಕಂಸವಿ. ೬–೮೦); ಆ ವ್ಯಕ್ತಿಯು ಹತ್ತಿರ ಬಂದಾಗ ಎಳಿಹರೆಯದ ಹೆಂಗುಸೆಂದು ಅವನಿಗೆ ಸ್ಪಷ್ಟವಾಯಿತು (ಮಣಿಸ. ೭೫). [ಎಳ್$_2$ (< ಎಳದು$_1$) + ಪರಯ ?]

**ಎಳವರ್ದು** (ನಾ). ಬಾಲಪ್ರೌಢಿಮೆ: ವಿಳಸನ್ಮಾತೆ ಮಹಾಷಡಕ್ಷರಿ ಮಹೇಶಂ ತಂದೆ ಸದ್ಭಕ್ತಿ ಬೆನ್ನೊಳೆ ಬಂದಳ್ ನವನೀತಮಾಶಚರಣಧ್ಯಾನಂ ಶಿವಜ್ಞಾನಮುಜ್ಜ್ವಳ ಪೀಯೂಷ ರಸಂ ತೊದಳ್ ಶ್ರುತಿ ಶಿರೋವಾಕ್ಯಂ ಶಿವಾಚಾರಮಿಂಪೆಳವರ್ದ [ಪಾಠಾಂ. ಸಿರ್ದ]ರ್ಭಕಲೀಲೆಯಾಗೆ ಬಳೆದಂ ನಂದೀಶನಾನಂದದಿಂ (ವೃಷವಿ. ೨–೨). [ಎಳ್$_2$ (< ಎಳದು$_1$) + ಬರ್ದು$_4$]

**ಎಳವಲಸು** (ನಾ). ಎಳೆಯ ಹಲಸು: ಎಳವಲಸು ನಿಜಸ್ಕಂಧಾವಳಂಬಿಯೆನಿಸಿರ್ದ ತೋರವಣ್ಣೊನೆಯಿಂ ಕಣ್ಗೊಳಿಸಿತ್ತು (ಚಂದ್ರಪು. ೭–೮೫). [ಎಳ್$_2$ (< ಎಳದು$_1$) + ಪಲಸು]

**ಎಳವಸಲೆ, ಎಳಿವಸಲೆ** (ನಾ). ಎಳೆಯ ಹುಲ್ಲು; ಚಿಗುರುಹುಲ್ಲು: ಎಳವಸಲೆಯ ಮೇಲೊಯ್ಯನೆ ತಳರ್ದಾಡುವ ರಾಜಹಂಸಬಾಳಕನೆಂಬೊಂದಳತೆಗೆವಂದಂ (ಚಂದ್ರಪು. ೧೩–೩); ಎಳವಸಲೆಯ ಮೇಲೆ ಮರಲ್ದೆಳವಿಸಿಲಂ ಕಾಯುತಿರ್ಪ ಫಣಿಗಳ ಫಣಮಂಡಳಮಂ ಮಲಂಗಿ ಮೆಲ್ಪಂ ತಳೆದುವು . . . ನಕುಳಂ (ಅನಂಪು. ೩–೪೦). **ಎಳಿವಸಲೆ**: ಅಳುರ್ವತನು ಸಂತಾಪಕುಳ್ಳಿಳ್ಕಿ ನಲ್ಲವಳಿಂಬುಕೆಯ್ವೆಳಿವಸಲೆಯಂ ಕೇಳೀಶೈಲಂಗಳಂ . . . ಸೆಱಗೆಯ್ದು (ವರ್ಧಪು. ೪–೭೦). [ಎಳ್$_2$ (< ಎಳದು$_1$) + ಪಸಲೆ]

**ಎಳವಸಿಱ್, ಎಳಿವಸಿಱ್** (ನಾ). ಎಳೆಯ ಗರ್ಭ; ಗರ್ಭದ ಪ್ರಾರಂಭ: ಹರಿನೀಲ ಶಲಾಕೆಯಂತೆ ಬಾಸಿಗೆ ನಿಶೇಷಮೆನೆ ಪಸರಿಸಿತ್ತು ಕರ್ಪೆಳವಸಿಱೊಳ್ (ಪಂರಾಮಾ. ೪–೩); ವಿರಚಿಸುವೀ ಬಯಕೆ ದೇವಿಗಾಯ್ತೆಳವಸಿಱೊಳ್ (ಪುಷ್ಪಪು. ೪–೮); ಬಾಯ ಸವಿಗೆ ನಾನೀ ಬಳಿಯೊಳು ನಿಲಲಾಯೆಳವಸಿಱಂ ತಾಳಿದ ಪೆಣ್ಗಳ (ಜಯುಕಾ. ೨–೩೪). **ಎಳಿವಸಿಱ್**: ಸುರಪಥೇನುವಂ ಜಂಗಮದ ನಿವಹಕೆಡೆಮಾಡುವೀ ಬಯಕೆಯಲ್ಲದೆ ಮಿಕ್ಕ ಬಯಕೆಯಿಲ್ಲೆಳಿವಸಿಱೊಳು (ಚಬಪು. ೪–೧೫). [ಎಳ್$_2$ (< ಎಳದು$_1$) + ಬಸಿಱ್]

**ಎಳವಳಿಕು** (ನಾ). ಎಳೆಯ ಪಳಿಕು: ಎಳವಳಿಕಿನ ಬೆಳ್ವೆಳಗಂ ಬಳಲ್ಚಿ ಶಶಿರುಚಿಯೊಳೆರಕವಿಟ್ಟಂದದಿನೇಂ ತೊಳಗಿದುದೊ (ಶಬಶಂ. ೫–೩). [ಎಳ್$_2$ (< ಎಳದು$_1$) + ಪಳಿಕು]

**ಎಳವಳ್ಳಿ**, ಎಳೆವಳ್ಳಿ (ನಾ). ಎಳೆಯದಾದ ಬಳ್ಳಿ, —ಲತೆ: ಪಣ್ಣಡಕೆ ಬಾಯ್ದೆಱೆ ಯಾದೆಳವಳ್ಳಿಯೋಳೆ ನೂತನ ತನುವಾದ ಮಲ್ಲಿಗೆಯ ತುಂಬಿಯ ಕೊಟಮೆ ಸೋಟಮಾದ ನಂದನವನಲಕ್ಷ್ಮಿ ಕಣ್ಗೆಸೆದು ತನ್ನನೆ ನೋಡಿಸಿದಳ್ (ಶಾಂತಿಪು. ೬–೧೦); ಎಳವಳ್ಳಿಯ ಬಳಸಿಂಗೊಳಗಾದಸುಗೆಯ (ಕಬ್ಬಕಾ. ೧೨೫). **ಎಳೆವಳ್ಳಿ**: ಚಿಗುಳಿದುಳಿದನು ಬನದೊಳೆಳೆವಳ್ಳಿಗಳ (ತೊರರಾ. ೫–೪–೧೨); ಮೊಳೆಮೊಲೆ ಸೆಳೆನಡು ಸುಳಿನಾಭಿಯಲರು ಕಣ್ಣೆಳೆವಳ್ಳಿ ದಿವ್ಯಾಂಗವಾಗೆ (ಕಂನವಿ. ೬–೧೦೭); ಹರಿವ ನೀರೆಳೆವಳ್ಳಿ ತುರಗ ಭೈತ್ರವು ಬಂಡಿ ಅರಸಿನ ಮನವು ಬೆಲೆವೆಣ್ಣು ಇವು ಏಳು ತಿರುಹುವವರಿಚ್ಛೆ (ಸರ್ವಜ್ಞ. ೧೫೦೧). [ಎಳ್$_2$ (< ಎಳದು$_1$) + ಬಳ್ಳಿ]

**ಎಳವಳ್ಳಿಮೆಯ್**, ಎಳೆವಳ್ಳಿಮೆಯ್ (ನಾ). ಎಳೆಯ ಲತೆಯಂತಿರುವ ದೇಹ; ಲತಾಂಗ: ಸುಡುವ ಮರುದಾಪ್ತನೊಳ್ ತುಪ್ಪವೆರೆದೆಲರ ನೂದಿದೊಡೆ ತರಹರಿಪುದೇ ಮುನ್ನಮೆಳವಳ್ಳಿಮೆಯ್ ವರ್ತನ ತನುವಿರಹದೊಳುರಿವರಂ (ಚಿಬಪು. ೧೯–೩೬). **ಎಳೆವಳ್ಳಿಮೆಯ್**: ಕುಚಾಗ್ರಂ ನೀಲಮಾದುದೆಳೆವಳ್ಳಿಮೆಯ್ ಬೆಳ್ಪಡರ್ದುದು (ಪದ್ಮರಾ. ೪–೨೯).
[ಎಳವಳ್ಳಿ + ಮೆಯ್]

**ಎಳವಱಿ**, ಎಳೆಮರಿ, ಎಳೆವಱಿ (ನಾ). ಎಳೆಯಮರಿ; ಸಣ್ಣಮರಿ; ಪಿಳ್ಳೆ: ಪೊಂಗಿ ಮಿಡುಕುವ ಮಾನಗುದಿಗಳಂ ಬೆಳೆದ ಸಾರಂಗದೆಳವಱಿಯನೆರಳೆಯ ತೊಡೆಯಂ (ಹಚಕಾ. ೫–೩). **ಎಳೆಮರಿ**: ಬೆಕ್ಕಿನ ಎಳೆಮರಿ ತುಂಬ ಮುದ್ದಾಗಿರುತ್ತದೆ (ರೂಢಿ). **ಎಳೆವಱಿ**: ಕೊಳದೊಳಂ ಬುಜಪತ್ರದೊಳಗೊಂದು ರಾಯಂಚೆಯೆಳೆವಱಿಯೊಱಗಿರೆ ಕಂಡು ತಿಳದು (ಕುರಾಸಾಂ. ೩೨–೨೬). [ಎಳ್$_2$ (< ಎಳದು$_1$) + ಮಱಿ]

**ಎಳವಾರ**, ಎಳೆವಾರ (ನಾ). ಅತ್ತಿ, ಅರಳಿಮರಗಳ ಸಣ್ಣಕೊಂಬೆಗಳ ಕಂತೆ: ಒಬ್ಬನು "ಎಳವಾರ" ವನ್ನು ತರುವನು (ಅತ್ತೀಮರದ ಸಣ್ಣ ಕೊಂಬೆಗಳ ಕಂತೆ) (ಹುಟ್ಟಹ. ೩೨). **ಎಳೆವಾರ**: (ಎಸಸ್ಮೈ. XV, ೧೫). [?]

**ಎಳವಾಸು** (ನಾ). ಕೋಮಲವಾದ ಹಾಸು, —ಹಾಸಿಗೆ: ಎಳ [ಪಾಠಾಂ. ಳೆ] ವಾಸೆ [ಪಾಠಾಂ. ಸು] ತೊಡರ್ದುದೆನೆ ಮಿಸುಪೆಳೆವಾಸೆಯ ದೆಸೆಯೆ ನಿಂದಳಂ ಕೈವಿಡಿದೊಲ್ದೆಳೆವಾಸೆಯೊಂತನಂಬುಜದೆಳ [ಪಾಠಾಂ. ಳೆ] ವಾಸೆಡೆಗೊಂಡ ಪುಳಿನದೆಡೆಗವನೀಶಂ (ರಾಜಶೇ. ೧೦–೯೮).
[ಎಳ್$_2$ (< ಎಳದು$_1$) + ಪಾಸು$_2$]

**ಎಳವಾಸೆ$_1$** (ನಾ). ಎಳೆಯ ಬಾಸೆ; ಮೃದುವಾದ ರೋಮರಾಜಿ: ಅಡಿಯುಮವಳಾಸ್ಯಮುಂ ಕಮಲಮಂ ಕಮಲಮಂ ನಡೆಯುಮೆಳವಾಸೆಯುಂ ನಾಗಮಂ ನಾಗಮಂ (ಜೈಮಿಭಾ. ೬–೨೩); ಪೊಕ್ಕಳ ಪುತ್ತಿನಿಂದಾಸ್ಯಶಶಿಯ ಮಂಡಲದ ವಾಲ್ಮೀಕಕ್ಕೆ ಪೋಪಸಿತಮಱಿಯುರಗನೆಂಬಂತೆಯೆಳವಾಸೆಯೆಸೆದುದು (ನವಮೋ. ೨೪–೨೨).
[ಎಳ್$_2$ (< ಎಳದು$_1$) + ಬಾಸೆ$_1$]

**ಎಳವಾಸೆ$_2$** (ನಾ). ಎಳೆಯ ಹಾವಸೆ: ಎಳ[ಪಾಠಾಂ. ಳೆ]ವಾಸೆ [ಪಾಠಾಂ. ಸು] ತೊಡರ್ದುದೆನೆ ಮಿಸುಪೆಳೆವಾಸೆಯ ದೆಸೆಯೆ ನಿಂದಳಂ ಕೈವಿಡಿದೊಲ್ದೆಳೆವಾಸೆಯೊಂತನಂಬುಜದೆಳ [ಪಾಠಾಂ. ಳೆ] ವಾಸೆಡೆಗೊಂಡ ಪುಳಿನದೆಡೆಗವನೀಶಂ (ರಾಜಶೇ. ೧೦–೯೮).
[ಎಳ್$_2$ (< ಎಳದು$_1$) + ಪಾಸೆ (< ಪಾವಸೆ)]

**ಎಳವಾಳೆ$_1$** 'ಎಳವಾೞಿ' ನೋ.

**ಎಳವಾಳೆ$_2$**, ಎಳೆವಾಳೆ$_2$ (ನಾ). ಎಳೆಯ ಬಾಳೆ ಮೀನು; ಸಣ್ಣಬಾಳೆ ಮೀನು: ವಾರ್ಧಿಯೊಳ್ ಪೊಳೆವೆಳವಾಳೆಗಳ್ ಕರ್ದುಕೆ (ಕಾವ್ಯಸಾ. ೬೬ ಶೂದ್ರಕ); ಲಲಿತಾಂಗಿಯರ ಕಣ್ಗೆ[ಸೋಲ್ತಿರಲೀ]ಕಣ್ಗೆಳೆದಮಾಗಿರೆವಂದೆಳವಾಳೆಗಳೋಡಿದುವು ಬಾಲೆಯರ್ ಪುಗುಪಾಗಳ್ (ಪಂಪಭಾ. ೫–೬೧); ಎಳವಾಳೆಯ ಬೆಡಂಗನೊಳಕೊಂಡುವಕ್ಷಿಗಳ್ ಜಾನಕಿಯಾ (ಪಂರಾಮಾ. ೫–೬೯). **ಎಳೆವಾಳೆ$_2$**: ಲಲಿತವಿದ್ಯುಲ್ಲತಾ ರುಚಿರ ರುಚಿಮಾಳೆಯಂ ಮಿಳಿರ್ವ ಜಳದೊಳಗೆ ಪೊಳೆವೆರಡುವೆಳೆವಾಳೆಯಂ (ಆದಿಪು. ೬–೨೭ ರ); ಮಗನಂ ಕಾಣದಾ ಬಾಳೆ ಕಾದ ಪುಡಿಯೊಳ್ ಬಿರ್ದೆಳೆ[ಪಾಠಾಂ. ಳ] ವಾಳೆಯಂತೆ ಬಂಬಳ ಬಾಡಿ (ಸುಕುಮಾ. ೧೨–೨೪ ವ)
[ಎಳ್$_2$ (< ಎಳದು$_1$) + ಬಾಳೆ$_2$]

**ಎಳವಾಳೆಗಣ್** (ನಾ). ಎಳೆಯ ಬಾಳೆಯ ಮೀನಿನಂತಿರುವ ಕಣ್ಣು: ತ[ತೊ]ಳಪಗಣ್ಣೆಳವಾಳೆಗಣ್ಣ ಬೆಳತಿಗೆಗಣ್ಣ ಬೆದಱುಗಣ್ಣ ಬಾಲೆಯರೆಳಸಿ ನಡೆದರವಳೊಡನೆ (ಕುರಾಸಾಂ. ೨೧–೪೪). [ಎಳವಾಳೆ$_2$ + ಕಣ್]

**ಎಳವಾೞಿ**, ಎಳವಾಳೆ$_1$, ಎಳೆವಾಳೆ$_1$, ಎಳೆವಾೞಿ (ನಾ). ಎಳೆಯ ಬಾಳೆಗಿಡ: ತೊಳಗುವ ಕಿಱುದೊಡೆಗಳುಡುವಡರ್ದನ್ನಮಾರೂಢ ಸರ್ವಜ್ಞನ ದೊಡ್ಡಮಾರ್ಗಂಗಳೆಳವಾೞಿಯ ದಿಂಡಿನೊಳ್ ಸಾಣೆಗಟ್ಟಿದಂತಾದುವು (ಪಂಪಭಾ. ೨–೩೯ ವ); ಅಲ್ಲಲ್ಲಿಗೆಳವಾೞಿಯ ತಿರುಳೆಲೆಗಳೊಳಂ ತಾವರೆಯ ತಳಿರೆಲೆಗಳೊಳಂ . . . ಸಮೆದ ಬಿಜ್ಜಣಿಗೆಗಳುಮಂ (ಕಾದಂಉ. ೨೧೬); ನೇರಿತೆಳವಾೞಿಗಂಬವನೋರಂತಿರೆ ನುಣ್ಪುವೆತ್ತು ಸೋಲಿಪ ಚೆಲ್ವಿಂ . . . ಇರ್ದುವಾಕೆಯ ತೊಡೆಗಳ್ (ಕಬ್ಬಕಾ. ೭೫). **ಎಳವಾಳೆ$_1$**: ಎಳವಾಳೆಯ ಸುಳಿಯೆಲೆಯೊಳ್ ನಳನಳಿಸುವ ಕಂದಮೂಲಮಂ (ಗಿರಿಕ. ೯–೯೧); ಎಳವಾಳೆ ಬಳ್ಳಿಗೆ ಬಂದರೆ ಸೀಗೆಯ ಮೆಳೆಯೊಳು ಮಥನವೆ ಮಗನೆ (ಮೋಹತ. ೩೪–೨೩). **ಎಳೆವಾಳೆ$_1$**: ಎಳೆವಾಳೆಯೆಲೆಯಿಂ ತನ್ನಂ ಬೀಸುತ್ತಗ್ರಭಾಗದೊಳ್ (ಉದ್ಭಟ. ೫–೨ ವ); ಎಳೆವಾಳೆಯ ಸಸಿಯನು ಕಡಿದಂತೆ (ಕುವ್ಯಾದ್ರೋ. ಪರಿ. ೨೮೪). **ಎಳೆವಾೞಿ**: ತಿಳಿನೀರ ತುಂತುರ್ವನಿಗಳಿಂ ಪೊರೆದೆಳೆವಾೞಿಯ ಸುಳಿಯ ಬಿಜ್ಜಣಿಗೆಗಳಿನಡಿಗಡಿಗೆ ಬೀಸಿಯುಂ (ಕಾದಂಪೂ. ೮೫೫). [ಎಳ್$_2$ (< ಎಳದು$_1$) + ಬಾೞಿ$_2$]

**ಎಳವಿ** 'ಎಳವೆ$_1$' ನೋ.

**ಎಳವಿಡು** (ಕ್ರಿ). ನೇತುಹಾಕು; ತೂಗುಹಾಕು; ಇಳಿಯಬಿಡು: ಗಗನಾಂಗನೆ ಸಂತಸದಿಂ ಕೊಡಲೆಂದೆಳೆ[ಳ]ವಿಟ್ಟ ಪೊಚ್ಚಪೊಸ ಪೊಂಜರಿಗೆ (ಉದ್ಭಟ. ೩–೨೩ ವ); ಥಳಥಳಿಸಿಯುಜ್ವಳಿಪ ಕೆಂಜೆಡೆಯನೆಳವಿಟ್ಟು ಶಿವತತ್ತ್ವಾನುಭಾವಿಯಾಗಿರ್ಪ (ಸಿದ್ಧೇಪು. ೧೫–೩೯). ℙ ಇದು 'ಎಳಲಿಡು' ಎಂಬುದರ ಅಪಲಿಖಿತವಿರಬಹುದು. [< ಎೞಲ್ + ಇಡು$_1$]

**ಎಳವಿದಿರ್**, ಎಳೆವಿದಿರ್ (ನಾ). ಎಳೆಯ ಬಿದಿರು: ಎಳವಿದಿರ ಬಣ್ಣಮೊಳ್ನುಡು ಕಳಶಮನವ್ವಳಿಪ ಮೊಲೆ ಪೊದಱಿದ್ದಳಸುವ ಬಾಯ್ (ಆದಿಪು. ೪–೪೪); ಎಳವಿದಿರಂದಮಂ ತನು ಸರೋರುಹದಂದಮನಾನನಂ (ಧರ್ಮಾಮೃ. ೩–೧೮೦); ನುಣ್ಣಿತಪ್ಪೆಳವಿದಿರ ಬಣ್ಣಮುಂ ತಳೆದ ನೀರ್ವಣ್ಣಂತಿರ್ಪಳ್ (ಕಬ್ಬಕಾ. ೩೧೫). **ಎಳೆವಿದಿರ್**: ಎಳೆವಿದಿರ ಕೋಮಲತ್ವಮನಾಂತು ನಳನಳಿಪ ನಳಿತೋಳು (ಸೌಂದಪು. ೭–೩).
[ಎಳ್$_2$ (< ಎಳದು$_1$) + ಬಿದಿರ್$_2$]

**ಎಳವಿಲ್** (ನಾ). ಎಳೆಯ ಬಿಲ್ಲು; ಕೋಮಲವಾದ ಬಿಲ್ಲು: ಬೇಱೊಂದು ವಿಸ್ತರದಿಂ ಮೀನಪತಾಕೆ ಕಬ್ಬಿನೆಳವಿಲ್ ಪುಷ್ಪೇಷುಗಳ್ ಭಾವಿಸಲ್ (ಧರ್ಮಾಮೃ. ೮–೨೦೦ ಅಡಿಟ).
[ಎಳ್$_2$ (< ಎಳದು$_1$) + ಬಿಲ್$_2$]

**ಎಳವಿಸಿಲ್**, ಎಳೆಬಿಸಿಲ್ಲು, ಎಳೆವಿಸಿಲ್ (ನಾ). ಎಳೆಯ ಬಿಸಿಲು; ಬೆಳಗಿನ ಬಿಸಿಲು: ರಸೆಯಿಂದಮೊಗೆದು ಪೆಡೆಗಳ ಪೊಸಮಾಣಿಕದೆಳವಿಸಿಲ್ಗಳೊಳ್ ಪೊಸದಳಿರೊಳ್ ಮುಸುಕಿದ ತೆಱದಿಂದೆಸೆದಿರೆ (ಪಂಪಭಾ. ೧೨–೧೪೧); ಎಳವಿಸಿಲೊಲವಿಂ ಬೆಳ್ದಿಂಗಳ ಬೞಿಯಂ ಬರುತಮಿರ್ದುದೆಂಬಂತೆ (ಕಾದಂಪೂ. ೮೧೩); ವಿಮಳೇಂದುಮುಖಿಯರಂ ವಿಭ್ರಮದಿಂ ನಡೆದಿಟ್ಟು ಕೆಂಡರೆಳವಿಸಿಲೊಳ್ಪಂ (ಗಿರಿಕ. ೯–೨೭).

**ಎಳಿಬಿಸಿಲು :** ಎಳಿಬಿಸಿಲಿನಲ್ಲಿ ಅಡ್ಡಾಡಿಕೊಂಡುಬರುವಾಗ (ಗೃ ಹ ವಿ. ೧೦೦) ; ಎಳಿಬಿಸಿಲು ಮೈಗೆ ಮಾರಿ ; ಹುಸಿನಗೆ ಮನೆಗೆ ಮಾರಿ (ಗಾದೆ). **ಎಳಿವಿಸಿಲ್ :** ಸುಳಿದು ಸುತ್ತುವಳು ನಾಟ್ಯದೊಳು ಸಮ್ಮೋಹನ ಜಲಧಿಯ ಸುಳಿವೋ ಎಂಬಂತೆ ಬಲಕೆಡಕೊಲೆದು ಹರಿವಳೆಳೆವಿಸಿಲಲ್ಲಿಯೆಳೆನಾಗ ಹರಿವಂತೆ ಮುರಿದು (ಭರಚ. ೧೨–೭೬). [ಎಳ್₂ (< ಎಳದು₁) + ಬಿಸಿಲ್]

**ಎಳವು₁** (ಕ್ರಿ). ಆಜ್ಞೆಮಾಡು ; ವಿಧಿಸು (?) : "ಎಳವು – ವಿಧೀಕರಣೇ (ಆಜ್ಞೆಮಾಡು, ಕ್ರಮಪಡಿಸು)" (ಶಮುಧಾ). ℙ ಈ ಶಬ್ದ (ಶಮುಧಾನ). ಮುದ್ರಣದಲ್ಲಿ "ಎಳವು – ವೀಧಿಕರಣೇ" (= ಸಾಲಾಗಿಡು ; ಓರಣಗೊಳಿಸು) ಎಂದಿದೆ. [?]

**ಎಳವು₂** 'ಎಱವು' ನೋ.

**ಎಳವು₃** (ನಾ). ೧. ಎಳೆಯುವಿಕೆ ; ಸೆಳೆಯುವಿಕೆ. ೨. ಮಕ್ಕಳಿಗೆ ಬರುವ ಒಂದು ರೋಗ ; ಸೆಳವು : ಮಕ್ಕಳಿಗೆ ತುಂಬಾ ಜ್ವರ ಬಂದಾಗ ಅಥವಾ ವಿಪರೀತ ಆಯಾಸವಾದಾಗ ಎಳವು ಬರುವುದುಂಟು (ಗೃ ಹ ವಿ. ೧೪೯). [ಎಳ್₀ (< ಎಱ್₁) + –ವು]

**ಎಳವುಲ್,** ಎಳಿವುಲ್, ಎಳಿಹುಲ್ಲು (ನಾ). ಎಳೆಯಹುಲ್ಲು ; ಚಿಗುರು ಹುಲ್ಲು : "ಶಷ್ಪಂ, ಬಾಲತೃಣಂ – ಈ ೨ ಎಳವುಲ್" (ಹ ಲಾ ಯು. ೩೧–೩೬) ; ಪೊಳೆವಮರೇಂದ್ರಗೋಪದ ಪಸುರ್ತೆಳವುಲ್ಗಳ ತಳ್ತ ಕಾರ್ಮುಗಿಲ್ಗಳ ಕಿಱುಗೊಂಕು ಕೊಂಕಿದ ಪೊನಲ್ಗಳ ಕೆಂಪು (ಪಂಪಭಾ. ೬–೨೫) ; ಮೃಣಾಳನಾಳದಂತೆ ಸೊಗಯಿಸುವೆಳವುಲ್ಲ ಕವಳಮಂ ನೀಡುತ್ತುಂ (ಕಾದಂಉ. ೧೯೬) ; ಎಳವುಲ್ಗಳಂ ಮೇದು ತಿಳಿನೀರನೀಂಟಿ ನೆಳಲೊಳ್ ಪಟ್ಟಿರ್ದು (ಗಿರಿಕ. ೧–೧೨೮ ವ). **ಎಳಿವುಲ್ :** ಬೆಳೆದೆಳಿವುಲ್ಕರಮೆಸೆದತ್ತಿಳೆ ಮಳೆಯಿಂ ನಾಂದು (ರಾಜಶೇ. ೮–೧೨೫). **ಎಳಿಹುಲ್ಲು:** ಎಳಿಹುಲ್ಲ ಸವಿದು ನೀರ್ಗುಡಿವ ತಾಪಸಸನಂದಲರಂಬಿಗೆ ಗುಜುಮಾಡಿ ಎಳೆತಂದರಬಲೆಯರು (ಕಂಸವಿ. ೯–೧೪೬). [ಎಳ್₂ (< ಎಳದು₁) + ಪುಲ್]

**ಎಳವುಲ್ಲೆ,** ಎಳಿವುಲ್ಲೆ, ಎಳಿಹುಲ್ಲೆ (ನಾ). ಎಳೆಯ ಹುಲ್ಲೆ ; ಜಿಂಕೆಯ ಮರಿ : ಪೆಱತೊಂದೆಡೆಯೊಳೆಳವುಲ್ಲೆಗಳ ಪಾಱುಗೆಯ್ತಮ್ಮಂ ನೋಟದ ಬೆದಱುಮಂ ತವಕದೋಟಮುಮಂ (ನಂಬಿರ. ೧೮–೭) ; ಪೆಂಡಿರ ನುಣ್ಣರಕ್ಕೆ ಮೆಯ್ಗೊಟ್ಟೆಳವುಲ್ಲೆಗಳ್ ಪಲವುಮಾಲಿಸೆ (ಕಬ್ಬಿಕಾ. ೨೨೦). **ಎಳಿವುಲ್ಲೆ :** ಮುನಿಕುಮಾರಕರನೆಳಸಿ ಮೆಲ್ಲಮೆಲ್ಲನೆ ನಕ್ಕು ನೆಳಿವುಲ್ಲೆಗಳಂ (ಕಾದಂಪೂ. ೨೨೨) ; ಹೆಬ್ಬುಲಿಯ ಕಂಗೆದುರು ಸಿಕ್ಕಿದೆಳಿವುಲ್ಲೆಗರುವಂದದಿಂ ತಲ್ಲಣಿಪ (ಗಿರಿಎಂ. ೧೬–೩). **ಎಳಿಹುಲ್ಲೆ :** ನಲ್ಲನ ನೋಡಲಂಜುತ ಲಜ್ಜೆಗೊಳುತೆಳಿಹುಲ್ಲೆಯಂತಿದ್ದಳೀನೆಂಬೆ (ಭರಚ. ೯–೧೩೩). [ಎಳ್₂ (< ಎಳದು₁) + ಪುಲ್ಲೆ]

**ಎಳವುಱಿಲ್ದಾಣ** (ನಾ). ಎಳೆಯ ಮರಗಳ ತೋಪಿನ ಸ್ಥಳ : ಹಂಸರಥಾಂಗಂಗಳಿನಿರ್ಪುವೆತ್ತೆಳವುಱಿಲ್ದಾಣಂಗಳಿಂ ಕಣ್ಗೆವಂದಿರೆ ಶಿಪ್ರಾತಟನೀತಟಸ್ಥಲಿಗಳೊಳ್ (ಕಾದಂಉ. ೩೫೬). [ಎಳ್₂ (< ಎಳದು₁) + ಪುಱಿಲ್ + ತಾಣ₂]

**ಎಳವೆ** 'ಎಳಮೆ₁' ನೋ.

**ಎಳವೆಣ್,** ಎಳವೆಣ್ಣು, ಎಳಿವೆಣ್, ಎಳಿವೆಣ್ಣು (ನಾ). ಎಳೆಯ ವಯಸ್ಸಿನ ಹೆಣ್ಣು ; ಯುವತಿ : ಬಳಸಿ ಬಲವಂದು ನೋಡುವೆಯೆಳವೆಂಡಿರನವರೊಳಜ್ಜ ನಿನಗೇಕಜ್ಜಂ (ಅಜಿಪು. ೨–೯೫) ; ಎಳವೆಣ್ಗಳ ಕಣ್ಬೆಳಗು (ಉದ್ಭಟ. ೨–೧೭). **ಎಳವೆಣ್ಣು :** ಬಣ್ಣಗುಂದಿದ ದೇಹದೊಳಗೆಳವೆಣ್ಣುಗಳ ಸೌಖ್ಯವನು ಮಱೆದಳು ಮದನನಿಸುಗೆಯಲಿ (ನಳಚ. ೧–೩೮) ; ಅಬ್ಜನೇತ್ರೆಯರು ಎಳವೆಣ್ಣುಗಳ ಚಿತ್ರೈಸೆಂದು ಸತಿಯರ ನಿಳಯಕೆ ಬೀಳ್ಕೊಡಿಸಿದರು (ಮೋಹತ. ೨೨–೧೫). **ಎಳಿವೆಣ್ :** ಸಿಂಗರದ ಸೀಮೆಗೆಳೆವೆಣ್ಗಳರಸಿಗೆ ಮೋಹನಾಂಗಿಗೀ ಸಿಂಗರದ ಹಂಗುಂಟೆ (ಪದ್ಮರಾ. ೩–೪೨) ; ಎಳಿವೆಂಗಳಿಗೆ ನಾಟ್ಯ ಕಲಿಸುವ ಭರತಜ್ಞರುಲುಹೊಪ್ಪಿತಾ ಬೀದಿಯೊಳಗೆ (ಕಂಸವಿ. ೬–೧೬೬) ; ಎಳಿವೆಣ್ಗಳೀ ಕೃತಿಗೇಳೆ ತಮ್ಮಿನಿಯರನೆಳಮೆಯೊಳವುಗೆಡಿಸದೆ ಬಳಿಸಂದು ಬಾಳುವರು (ಹದಿಬ. ೧–೫೩). **ಎಳಿವೆಣ್ಣು :** ಎಳಿವೆಣ್ಣ ದನಿಗೊಂದು ವೃಕ್ಷ ಗುಂಡಾಕ್ರಿಗೆ ಶಿಲೆವೊಸಜು ವುದಿದು ಘನವೆ (ಭರಚ. ೧–೫೮) ; ಎಳಿವೆಣ್ಣ ಬಿಂಕಂ ಬಿಗುರ್ಪಾದುದು (ಶ್ರೀರಾಮ. ೫–೫೫).

ಎಳವೆಂಡಿರ್, ಎಳಿವೆಂಡಿರ್ = ಎಳೆಯ ವಯಸ್ಸಿನ ಸ್ತ್ರೀಯರು, —ಯುವತಿಯರು : ಎಡೆಯಾಡುವೆಳವೆಂಡಿರ ನೂಪುರದ ನುಣ್ಣರಕ್ಕೆಳಸಿ ಪರಿವ ವಲ್ಲಭ ಹಂಸನಂ (ಕಾದಂಉ. ೨೫) ; ಎಳವೆಂಡಿರುಟ್ಟ ದುಗುಲಮೆ ತಳೆವುದು ಕಡೆಗಣ್ಣ ಬೆಳಗು (ಕಬ್ಬಿಕಾ. ೧೨) ; ಮುದುಪರೆಳೆವೆಂಡಿರಂ ಬಯಸಿಪೊಂದಿಸಕದಿಂ (ಕಾದಂಉ. ೨೭೧) ; ಸುರರೆಳೆವೆಂಡಿರುತ್ಸಾಹಿಸಲು ಹೊಯ್ದಾಡಿದರು ಓಕುಳಿಯ (ತೊರರಾ. ೧–೧೬–೫೩). [ಎಳ್₂ (< ಎಳದು₁) + ಪೆಣ್]

**ಎಳವೆಣ್ಣು** 'ಎಳವೆಣ್' ನೋ.

**ಎಳವೆರಲ್,** ಎಳವೆರಳು (ನಾ). ಎಳೆಯ ಬೆರಳು ; ಮೃದುವಾದ ಬೆರಳು : ತನ್ನಯ ರೂಪಿಂಗೆ ಸೆಣಸುವ ಸತಿಯರ ಬೆನ್ನ ಪಟ್ಟಿಯನೆತ್ತುವಂತೆ ರನ್ನದುಂಗುರವನಿಟ್ಟೆಳವೆರಲುಗುರಿಂದೆ ಪರ್ಣದ ನಾರನೆತ್ತಿದಳು (ಮೋಹತ. ೧೬–೩೨). **ಎಳವೆರಳ್ಗು :** ಎಡದೆಳವೆರಳ ಸೆಳ್ಳುಗುರ್ಗೆಯ್ದ ಸೌಖ್ಯವ ಪಡೆದು ಪೆರ್ಮೊಲೆಯ ಮೇಲಿರಲು (ಮೋಹತ. ೨೬–೪೦). [ಎಳ್₂ (< ಎಳದು₁) + ಬೆರಲ್]

**ಎಳವೆರಳು** 'ಎಳವೆರಲ್' ನೋ.

**ಎಳವೆಱೆ₁** 'ಎಳವೆಱೆ' ನೋ.

**ಎಳವೆಱೆ₂** (ನಾ). "ಒಂದು ವಿಧವಾದ ಸೊಪ್ಪು" (?) (ಘನವ. ಕೋಶ): ಹನ್ನೊಂದು ನೂಱುದಳದ ಪತ್ರದಲ್ಲಿ . . . ಸಿದ್ಧಪ್ರಸಾದವೆಂಬ ಎಳವೆರೆ [ಪಾಠಾಂ. ವರೆ] ತಳಿರಾಯಿತ್ತಯ್ಯ (ಘನವ. ೫೪). [ಎಳ್₀ + ?]

**ಎಳವೆಳಗು** (ನಾ). ನಸುಬೆಳಕು ; ಸೌಮ್ಯವಾದ ಕಾಂತಿ : ಎಳವೆಳಗಂ ಸುರಿವ ನಖಕಿಣಕರದಿಂದಂ ಕರಮೆಸೆದುವು ಕಮಳಮುಖಿಯ ಕರಕಮಲಂಗಳ್ (ಕಾದಂಉ. ೧೪) ; ಲಲನೆಯ ನುಡಿಯಿಂ ಹರ್ಷಂ ನೆಲೆವೆರ್ಚೆ ಸುಧಾಂಶುರೇಖೆಯೆಳವೆಳಗಿಂದಂ ನೆಲೆವೆರ್ಚುವ ಪಾಲ್ಗಡಲಂ ಗೆಲೆವಂದುದು (ಮಲ್ಲಿಪು. ೪–೮೮). [ಎಳ್₂ (< ಎಳದು₁) + ಬೆಳಗು₂]

**ಎಳವೆಳುದಿಂಗಳು** 'ಎಳವೆಳ್ದಿಂಗಳ್' ನೋ.

**ಎಳವೆಳ್ದಿಂಗಳ್,** ಎಳವೆಳುದಿಂಗಳು (ನಾ). ಎಳೆಯ ಬೆಳುದಿಂಗಳು : ಪೊಸಪರಿಮಳವನೊಕ್ಕಲಿಕ್ಕಲ್ ಬರ್ಪ ಮಧುಕರನಂತೆ ಎಳವೆಳ್ದಿಂ [ಪಾಠಾಂ. ಯೆಳೆವೆಳದಿಂ, ಬೆಳುದಿಂ, ಬೆಳುತಿಂಯೆಳೆವೆಳ್ದಿ]ಗಳಂ ಬಳಸಲ್ ಬರ್ಪ ಚಕೋರನಂತೆ ಸೌಂದರಂ (ನಂಬಿರ. ೧೦–೫೨). **ಎಳವೆಳುದಿಂಗಳು:** ಹೊಳೆವ ಕೆಂಜೆಡೆಗಳ ಮೇಲೆ ಎಳ[ಪಾಠಾಂ. ಳೆ]ವೆಳುದಿಂಗಳು ಫಣಿಮಣಿಕರ್ಣ ಕುಂಡಲದವ ನೋಡವ್ವ (ಮಹಾದೇ. ೮೬). [ಎಳ್₂ (< ಎಳದು₁) + ಬೆಳ್ದಿಂಗಳ್]

**ಎಳವೆಱೆ,** ಎಳವೆಱೆ₁, ಎಳಿವೆಱೆ (ನಾ). ಎಳೆಯ ಚಂದ್ರ ; ಬಾಲಚಂದ್ರ : "ಎಳವೆಱೆಯೆಂದು ಬಾಲಚಂದ್ರಂ" (ಕಶಸಾ. ೩–೨೭) ; ತೊಳಪೆಳವೆಱೆಯುಂ ಮೊರೆವಳಿಕುಳಂಗಳುಂ ಮೆಲ್ಲನೆಸಪ ಮಳಯಾನಿಳನುಂ (ಕವಿರಾ. ೨–೬೯) ; ಎಳವೆಱೆ ದಾಡೆ [ಪಾಠಾಂ. ದೆಳಿರ್ದಾಡೆ] ಕೆಂದಳಿರೆ ನಾಲಗೆ . . . ಎಂಬಿನಂ ಮನಂಗೊಳೆ ಮಧುಮಾಸಕೇಸರಿ (ಅಜಿಪು. ೬–೨೩) ; ತೊಳಗುವ ವಿಮಳಾಕಾಶದೊಳೆಳವೆಱೆ ಪುಗುವಂತೆ (ಗಿರಿಕ. ೪–೨೦) ; ಬಾಂದೊಱೆಯನೆಳವೆಱೆಯ ಧರಿಸಿದ ಸೊಬಗನು (ಸೌಂದಪು. ೪–೩೮).

ಎಳವೆರೆ₁ : ಕುಮಾರಂ ಪಾಡಿವದೆಳವೆರೆಯಂತೆ ಬಳೆಯುತ್ತಿರ್ದ೯ಂ (ಮರಾಹ. ೮೦–೩); ಶಿವನ ಕಳೆಹೊಳಹಿಂ ಮುಡಿಯೆಳವೆರೆ ತೇಜಗೊಳೆ (ಗಣೇಶ. ೧೧–೨೯೦). ಎಳವೆಱೆ : ಎಳೆವೆಱೆಯ ನಡುವಿದ್ದ ರಾಹು ವೊಲು (ಕುವ್ಯಾಅ. ೫–೯೧); ಸುಳಿಗುರುಳೆಳೆವೆಱೆನೊಸಲಿಂದಲಾ ಹೆಣ್ಣು ಸೆಳೆವಳು ಭೂಪನ ಮನವಾ (ವರ್ಧಚ. ೨–೪೫).

[ಎಳ₂ (< ಎಳದು₁) + ಪೆಱೆ]

ಎಳವೆಱೆದಲೆಯ (ನಾ). ತಲೆಯಲ್ಲಿ ಚಂದ್ರನನ್ನು ಧರಿಸಿದವನು ; ಶಿವ : ಲೋಕದ ಜನರಂ ಪೊಗಟ್ಬು ಪಾತಕಂಬಡೆಯದೆ ಸನ್ಮುದದಿಂದೆಳ ವೆಱೆದಲೆಯನ ಪದವಂ ಕೀರ್ತಿಸುವೆನುತ್ತಮರ್ ಮೆಚ್ಚುವಿನಂ (ಉದ್ಭಟ. ೧–೨೮). [ಎಳವೆಱೆ + ತಲೆ₁ + –ಅ₇]

ಎಳವೆಱೆನೊಸಲು (ನಾ). ಎಳೆಯ ಚಂದ್ರನಂತಿರುವ ಹಣೆ : ಏಱುಂಜೌವನದೆಳವೆಱೆನೊಸಲರನೇಱೆಲ ದೋ ೯ ರೆ ದು ಟಿ ಯ . . . ಮನೋಹರ ರೂಪದ ಸೀಱೆಯು ನವಲಾವಣ್ಯದ ಸಿರಿಯನದೇನಂ ಬಣ್ಣಿಪೆನು (ಜಯನೃಕಾ. ೩–೬೩). [ಎಳವೆಱೆ + ನೊಸಲು (< ನೊಸಲ್)]

ಎಳವೊನಲ್ (ನಾ). ಚಿಕ್ಕ ಪ್ರವಾಹ; ಚಿಕ್ಕತೊರೆ : ಒಂದೆಡೆಯೊಳೆಳ ವೊನಲೊಳಾಡುವ ಕಾಡೆರ್ಮೆಯ ತೆಕ್ಕೆಯೊಳ್ (ತ್ರಿಷುವಿ. ೨೭–೬೩ ವ).

[ಎಳ₂ (< ಎಳದು₁) + ಪೊನಲ್]

ಎಳಸಸಿ₁, ಎಳೆಸಸಿ (ನಾ). ಎಳೆಯ ಸಸಿ; ಚಿಕ್ಕಪೈರು : ಸುರಪತಿಯ ನಂದನದೊಳಗೆ ಸುರತರುವಿನೆಳಸಸಿ . . . ಬೆಳೆವಂದದಲಿ (ಸಾಳ್ವಭಾ. ೪–೨). ಎಳೆಸಸಿ : ಮೊಳೆತುದಾ ಮನುವಂ ವಿಕುಕ್ಷಿಯೊಳೆಳೆಸಸಿಯ ನ್ಯೆದಿತು ದಿಲೀಪನೊಳೆಲೆವಡೆದುದಾ ರಘುವಿಂ ಪಲ್ಲವಿಸಿತಜನಿಂದ (ತೊರರಾ. ೨–೩–೨೮). [ಎಳ₂ (< ಎಳದು₁) + ಸಸಿ₃]

ಎಳಸಸಿ₂ (ನಾ). ಎಳೆಯ ಚಂದ್ರ; ಬಾಲಚಂದ್ರ : ವಿರತಿಯಿಂದೆಂ ಬೆಳಸಸಿ ಬೆಳೆವಂತೆ (ಉದ್ಭಟ. ೧೧–೩೭); ನಳಿನಾಕ್ಷಿಯ ನೆಲೆಮೊಲೆಗಳ ತನ್ನಯ ಬಳಗವೆನುತ ಚಕ್ರವಾಕ ತಳುವದಲ್ಲಿಗೆ ಬಂದು ನಖರೇಖೆಯ ಕಂಡೆಳಸಸಿಯೆಂದಂಜಿದುದು (ಕಂಸವಿ. ೫–೧೦೮).

[ಎಳ₂ (< ಎಳದು₁) + ಸಸಿ₂]

ಎಳಸಿಂಗ (ನಾ). ಎಳೆಯಸಿಂಗ; ಸಿಂಹದ ಮರಿ : ಆರಾದೊಡೇ ನಶ್ವಮಂ ಬಿಡುವನಲ್ಲ ಮದವಾರಣಂ ಪಿರಿದಾದೊಡಮೆಳಸಿಂಗಮಂಜಿ ಕೆಲಸಾರುವುದೆ (ಜೈಮಿಭಾ. ೪–೩೩). [ಎಳ₂ (< ಎಳದು₁) + ಸಿಂಗ₁]

ಎಳಸಿಕೆ (ನಾ). ಬಯಸಿದುದು ; ಬಯಕೆ ; ಆಸೆ : ಈ ಬಗೆಯ ಕನ್ನೆ ವೆಣ್ಗೆ ಈ ಪರಿಯ ರಾಯಗುವರನೊಳೆಳಸಿಕೆಗೊಳ್ವುದು ಚಿತಮಕ್ಕುಂ (ಮಿತ್ರಗೋ. ೨೧–೨); ಹೊಮ್ಮುವೆನು ಕೋಟರೂಪದಲಿ ನಾನೆಂದು ಬೊಮ್ಮನೆಳಸಿದನಂತೆ. ಆಯೆಳಸಿಕೆಯೆ ಮಾಯೆ (ಮಂಕುಕ. ೭೪).

[ಎಳಸು₁ + –ಇಕೆ]

ಎಳಸು₁ (ಕ್ರಿ). ೧. ಬಯಸು; ಅಪೇಕ್ಷಿಸು; ಆಶಿಸು : "ಎಳಸು – ಇಚ್ಛಾಯಾಂ" (ಶಮುಧಾ); ಬಳ್ಳಳ ಬಳೆದ ಬೇಟದುರುಳಿಯ ಬಳಗಮಿ ದೆಂದೆಳೆಯೆಳೆಳಸಿ ತಳವೆಳಗಾದಳ್ (ಪಂಪಭಾ. ೫–೩); ಎಳಸುತ್ತಿರ್ದಪೆ ಪುಷ್ಪಮಂಜರಿಗೆ ಕೊಳ್ಳೀ ಸುತ್ತಿದೇಕೆಂದು ಸಂಚಳಿಸುತ್ತಂ ನಿಜಕರ್ಣದಿಂ ತೆಗೆದು (ಕಾದಂಪೂ. ೭೬೯); ನಳಕೂಬರನ ಕುಲಾಂಗನೆ ವಿಳಾಸವತಿ ರಾವಣಂಗೆ ಪಲಕಾಲಂ ಮುನ್ನೆಳಸಿರ್ಪ ಕಾಮಕಾತರೆ ಕೆಳದಿಗೆ ತಿಳಿವಂತು ತನ್ನ ತೆಱನಂ ಪೇಟ್ದಳ್ (ಪಂರಾಮಾ. ೧೦–೧೮೮). ೨. ಕಡಮೆಯಾಗು ; ಕುಂದು : ಕೆಳದ ಹಗಲ ತಾವರೆಯಂತೆ ಜೌವನಗಳಿದ ಹೆಣ್ಣಿನ ನೇಹದಂತೆ ಸುಳಿವಿಂದ್ರಚಾಪದ ಸಿರಿಯಂತೆ ಕಲಿತನವೆಳಸಿತೂರೊಳಗಣ ಬಲಕೆ (ಕಂಸವಿ. ೧೮–೧೨೦). ೩. ಯೋಚಿಸು; ಬಗೆ : ಬೆಂಗಳೂರ ಗಳಿಲನೆ ಸಹ ಜಗೆ ಕೊಟ್ಟಾಗ ಖಾನ ಮುಂದೆಳಸಿದ ರಾಜಕಾರಿಯವ (ಕಂಸವಿ. ೧೧–೬೬). ೪. ಹರಡು; ವ್ಯಾಪಿಸು : ಅಪಮಾನಿಸಿದಂ ಬಾಲಾತಪಮೆಳಸಿದ ಪುಂಡ ರೀಕಷಂಡದ ಸೊಬಗಂ (ಪಂರಾಮಾ. ೫–೧೩೧); ಎಳಸೆ ತದಾಸ್ಥಾನಮಂ ದಿವ್ಯಗಂಧಂ (ಪಂರಾಮಾ. ೯–೧೭೧). [ದೇ. ?]

ಎಳಸು₂ 'ಎಟಿಸು' ನೋ.

ಎಳಸು₃ (ನಾ). ೧. ಚಿಕ್ಕವನು; ಸಣ್ಣವಯಸ್ಸಿನವನು : ಇಬ್ಬರೂ ಮರಕ್ಕೆ ನೇತುಹಾಕಿಕೊಂಡು ಸತ್ತರಂತೆ ದಡ್ಡರು ! ಬಾಳಲಾರದವರು ! ಎಳಸುಗಳು (ಸುವಸಂ. ೧೫). (ಗು). ೨. ಎಳೆಯ ; ಬಲಿಯದ : ಅದೊಂದು ಆಲೋಚನಾರಹಿತವಾದ ಎಳಸು ಹುಡುಗಿ (ಪುನರು. ೫೩೧); ಈ ಕಾಯಿ ತುಂಬ ಎಳಸು (ರೂಢಿ). 'ಎಳಸುತನ' ಪರಾ.

[ಎಳ₂ (< ಎಳದು₁) + –ಸು₂]

ಎಳಸುತನ (ನಾ). ಎಳೆಯತನ; ಬಾಲ್ಯ : ತನ್ನ ಎಳಸುತನವನ್ನು ನೋಡಿ ತಿರಸ್ಕಾರದಿಂದ ನಗುತ್ತಿದ್ದನು (ಉದರಾ. ೯೦).

[ಎಳಸು₃ + –ತನ]

ಎಳಸುಯ್ (ನಾ). ಸ್ವಲ್ಪವಾದ ಉಸಿರು : ಗಂಧಸಮೀರಣನಂ ಸಗಂ ಧಮಂದಿಳವೆಳೆ[ಳ]ಸುಯ್ ಸಮಂತು ಸೆಱೆಗೆಯ್ಯದೆ (ರಾಜಶೇ. ೧೨–೫೬). [ಎಳ₂ (< ಎಳದು₁) + ಸುಯ್₂]

ಎಳಹೂಟೆ 'ಎಳೆಹೂಟೆ' ನೋ.

ಎಳಹೂಟ 'ಎಳೆಹೂಟೆ' ನೋ.

ಎಳಹೂಟೆ 'ಎಳೆಹೂಟೆ' ನೋ.

ಎಳಱು, ಎಳರು (ಕ್ರಿ). ಹೆದರು; ಭಯಪಡು : ದೇವ ಭವತ್ಪುತ್ರಂ ಕರಮೋವದೆ ಸಂಕಿಸದೆ ಮಿಂಡುವಡೆವೆರಸದಟಂದೋವೋವೆಂದೆಳಱೆ ಜನಂ ದಾವಾನಲನಂತೆ ಸುಡುವನಿರುಳುಂ ಪಗಲುಂ (ಧರ್ಮಾಮೃ. ೨–೬೪); ಪಳಕಲ್ಲರನೆದೆ × × × ಲು ಎಳಱದ ಕೊಳ್ಗಳಕೊ × × × ಮುನಿಯರ್ ಕೊಂಡ ಕೊಳಮಂ (ಎಕ. IX, ಕಾನಕಾ. ೧೪–೩ ; ?). ಎಳರು : ಕ್ಷೋಣೀಶ ಎನೆ ಎಳರಿನ್ನೆಂತು ಬಸವ ಬಹುಜಾಣ ನೀಂ ಬಲ್ಲೆಯಿದರಂತಸ್ಸು (ಪ್ರಭುಪು. ೭–೮೬). ℙ ಈ ಶಬ್ದ ಅಳಱು ಎಂಬುದರ ಅಪಲಿಖಿತ.

[?]

ಎಳಾಆಲಕ್ಕೊವಾಡಿ (ನಾ). ಒಂದು ಪ್ರದೇಶದ ಹೆಸರು (?): ತೊಱುಕೊಲ್ವಳಿ ಪೆರಿಯವನ್ ಕೋಲ್ಗಳಾಂ[ತು] ಭಿಳ್ದನ್ ಎಳಾಆಲ ಕ್ಕೊವಾಡಿ ತಾಳೆಯೋನ್ (ಸೌಇಇ. IX–i, ೨–೧೦; 9ನೆಯ ಶತ). [?]

ಎಳೆ₁ 'ಎಟಿ₁' ನೋ.

ಎಳೆ₂ 'ಎಟಿ₂' ನೋ.

ಎಳೆ₃ 'ಎಳದು₁' ನೋ.

ಎಳೆ₄ (ನಾ). (ಉಕ) ಛಾವಣಿಗೆ ಹಾಕುವ ತೊಲೆ, —ತೀರು : ಬೆಲಗುಗಳೂ ಎಳೆಗಳೂ . . . ತಲೆಹಂಚಿಗೂ ಬೇಕಾಗುತ್ತವೆ; ಅಡ್ಡ ಬೆಲುಗುಗಳ ಮೇಲೆ ಎಳೆಗಳನ್ನು ಹಾಕಿ (ಮುಂಬಯಿ. ೪–೧೧೩). [?]

ಎಳೆ₅ (ನಾ). ಭೂಮಿ; ಧರಣಿ : "ಎಳೆ, ಪೊಡವಿ . . . ಬುವಿ – ಈ ೭ ಭೂಮಿ" (ಕಶಸಾ. ೧೦–೨೧೦); "ಎಳೆ ಬೂವಿ ಬುವಿ ದರೆ ನೆಲಂ" (ಶಬ್ದಮಂ. ೩೮); ಅಡಿಯಿಟ್ಟನೆಳೆಯೊಳವನೆಂಬೆಡೆಯೊಳ್ ಪರಿಜನ ಸಮೇತಮಿದಿರೆಟ್ಬರಸಂ ಪೊಡೆವೆಡೆ ತಪಸ್ವಿ . . . ಪರಸಿದಂ (ಪಂಪಭಾ. ೬–೧೧); ಎಳೆಯಂ ಧರಿಯಿಸಿದುದು ಕೂರ್ಮಮೆಂಬರ್ (ವರ್ಧಪು. ೪–೩೦); ಜಸಮೆಳೆಯೆಲ್ಲಮಂ ಬಳಸೆ (ಕಬ್ಬಿಕಾ. ೪೬).

ಎಳೆದಾಳ್ದಕುವರಿ = ಪರ್ವತರಾಜನ ಮಗಳು; ಪಾರ್ವತಿ : ಅಳವಳಿವುತತಿಚಿಂತೆಯಿಂದ ಮೊಗಬಾಡಿರ್ದ ಎಳೆದಾಳ್ದಕುವರಿಯಿರವಂ ನೋಡಿ (ಪ್ರೌಢರಾ. ೬–೫೯). 'ಎಳದೇರ' ಪರಾ.

[< ಸಂ. ಇಳಾ]

**ಎಳೆಅಷ್ಟಮಿ** (ನಾ). ಭಾದ್ರಪದ ಶುದ್ಧ ಅಷ್ಟಮಿ. ಆ ಅಂದು ಸ್ತ್ರೀಯರು ಲಕ್ಷ್ಮೀಪೂಜೆ ಮಾಡಿ ವ್ರತಸೂಚಕವಾಗಿ ದಾರವನ್ನು ಕಟ್ಟಿಕೊಳ್ಳುವ ಸಂಪ್ರದಾಯವಿದೆ.
[ಎಳ್$_2$ (< ಎೞ್$_2$) + ಅಷ್ಟಮಿ]

**ಎಳೆಕಟ್ಟು** (ಕ್ರಿ). ಮುಡುಪಿನ ದಾರ ಕಟ್ಟು: ಬಾಳೆ ತೋಟಕ್ಕೆ ಹೋಗಿ ಚೆನ್ನಾಗಿ ಬೆಳೆದ ಒಂದು ಕರಿಬಾಳೆಗೊನೆಗೆ ಎಳೆ (ಮುಡಿಪು) ಕಟ್ಟಿದೆವು (ಮಲೆಜ. ೬೪). [ಎಳ್$_2$ (< ಎೞ್$_2$) + ಕಟ್ಟು$_1$]

**ಎಳೆಕುಕಿಲು** (ನಾ). ಎಳೆಯ ಕೋಗಿಲೆ; ಮರಿಕೋಗಿಲೆ: ಕಾಗೆಗಳ ಕೊತ್ತಳಂ ಕುಕ್ಕುವೆಳೆಕುಕಿಲಂತೆ, ಕೆಂಡಗಳ ಕೋವೆಯಲಿ ಕಾವ ಕಾಂಚನದಂತೆ (ಗೂಲ್ಗೊಥಾ. ೯–೨೫೨).
[ಎಳ್$_3$ (< ಎಳದು$_1$) + ಕುಕಿಲು$_2$ (< ಕುಕಿಲ್$_2$)]

**ಎಳೆಕುಣಿಕೆ** (ನಾ). ಎಳೆಯಲು ಅನುಕೂಲವಾದ ಕುಣಿಕೆ: ಮೋಜ ವನ್ನು ಹಾಕಿಕೊಳ್ಳುವಾಗ ಮೇಲಕ್ಕೆ ಎಳೆಯುವುದಕ್ಕಾಗಿ ಅದರ ಬೆನ್ನ ತುದಿಯಲ್ಲಿರುವ ಕುಣಿಕೆ; ಮೋಜದ ಎಳೆಕುಣಿಕೆ (Tag. ೩೦೩೬).
[ಎಳ್$_1$ (< ಎೞ್$_1$) + ಕುಣಿಕೆ$_2$]

**ಎಳೆಕುಳಿ** 'ಎೞಕುಳಿ' ನೋ.

**ಎಳೆಕುಳಿಗೊಳ್** 'ಎೞಕುಳಿಗೊಳ್' ನೋ.

**ಎಳೆಕೊನೆ** (ನಾ). (?): ಸೆಱೆಯುಮೇೞುಂ ನೆತ್ತಮಾಡುವರೊಳ್ ಲೋಭಮುಂ ಎಳೆಕೊನೆಯೊಳ್ಪಿನೊಳ್ (ಎಇ. XIII, ೩೩೨–೪೪ ; 929).
[ಎಳೆ? + ಕೊನೆ ?]

**ಎಳೆಕೊಳು, ಎಳಕೊಳು, ಎಳೆಗೊಳ್ಳು** (ಕ್ರಿ). ಎಳೆದು ಕೊ; ಸೆಳೆದುಕೊ; ಆಕರ್ಷಿಸು: ಪಱಿದ ಮಸ್ತಕವೂಡಿದ ಬಾಹು ಹಸ್ತದಿ ಮುಱಿದ ಕಾಲ್ಗಳನೆಳೆಕೊಳುತೆ ಇಱಿದಾಡುವಾಕಾಶವೀರರ ಕಂಡಳು (ಮೋಹತ. ೨೯–೧೨). **ಎಳಕೊಳು**: ನೆಗೆದು ನೀರ್ದೂವಟ್ಟೆಕೊಳುತೆ ಮೃಣಾಲ ಲತೆಗಳನು ನಿಗಳವೆನಲೆಳಕೊಳುತೆ (ಸಾಳ್ವ ಭಾ. ೬–೧೧). **ಎಳೆಗೊಳ್ಳು**: ಮನಮನವ ಎಳೆಗೊಂಡು ಮುಡಿವ ಮೂರ್ತಿ ನಮ್ಮರ್ತಿ ಮಡುಗೊಳುವ ಗುಡಿಯೊಳೇ ನಿನ್ನ ಕೀರ್ತಿ (ಮಲೆದೇ. ೯–೯).
[ಎಳ್$_1$ (< ಎೞ್$_1$) + ಕೊಳು (< ಕೊಳ್$_1$)]

**ಎಳೆಕೋಗಿಲೆ** (ನಾ). = ಎಳೆಕುಕಿಲು: ಬೀಱುತಿರ್ದುವು ನಯಸರವ ಮದವೇಱಿದೆಳೆಕೋ[ಪಾಠಾಂ. ಗೋ]ಗಿಲೆಗಳೊಳು ನುಡಿದೋಱುತಿರ್ದುವು ರಾಜಕೀರ ಮಯೂರ ನರ್ತನವ (ತೊರರಾ. ೫–೧–೩೯).
[ಎಳ್$_3$ (< ಎಳದು$_1$)+ ಕೋಗಿಲೆ]

**ಎಳೆಕೌಂಗು** 'ಎಳಗವುಂಗು' ನೋ.

**ಎಳೆಗಂಟಲು** (ನಾ). ಎಳೆಯ ಗಂಟಲು: ಅವನ ಬಿಳಿಯ ಎಳೆಗಂಟಲಿ ನಲ್ಲಿ ಏನೋ ಅದುರಿದಂತಾಯಿತು (ಪುನರು. ೫೦೫).
[ಎಳ್$_3$ (< ಎಳದು$_1$) + ಗಂಟಲು (< ಗಂಟಲ್)]

**ಎಳೆಗಂತಿ** 'ಎಳಗಂದಿ' ನೋ.

**ಎಳೆಗಂದಿ** 'ಎಳಗಂದಿ' ನೋ.

**ಎಳೆಗನ್ನ** (ನಾ). ಭೂಮಿಯಲ್ಲಿರುವ ರಂಧ್ರ; ಹುತ್ತ: ಮುನ್ನಿಲ್ಲದ ಸಾಹಿತಿಯೆಳೆಗನ್ನದೊಳಂದೊಗೆದ ಮುನಿಯಿನುಣ್ಮಿದ ತೇಜದಿಂ ಮುನ್ನಿಲ್ಲದ ಸಂಗೀತಮುಮಿನ್ನೆಗಮಾ ಚಿಕ್ಕದೇವನಿಂ ನೆಗಟ್ದುದು ದಲ್ (ಚಿಕವಿ. ೪–೧೩೦). [ಎಳ್$_5$ + ಕನ್ನ$_1$]

**ಎಳೆಗನ್ನಡವಕ್ಕಿ** (ನಾ). ಎಳೆಯ ಕನ್ನಡವಕ್ಕಿ, —ಗಿಳಿಯ ಮರಿ: ಸೊಬಗಾಂತು ದಟ್ಟಡಿಯನಿಟ್ಟೆಳೆಗನ್ನಡವಕ್ಕಿಯಂತೆ ನುಣ್ಚರೆದ ತೊದಳ್ ತೊಡಂಕೆ ನುಡಿದಾಡುವ ಕಂದನನೆಂದು ಕಾಣ್ಬೆನೋ (ವೃಷವಿ. ೨–೩೧).
[ಎಳ್$_3$ (< ಎಳದು$_1$) + ಕನ್ನಡವಕ್ಕಿ]

**ಎಳೆಗಪ್ಪು** 'ಎಳೆಗರ್ಪು' ನೋ.

**ಎಳೆಗರ್ಪು, ಎಳೆಗಪ್ಪು** (ನಾ). ಸ್ವಲ್ಪ ಕಪ್ಪು; ತುಸು ಕಪ್ಪು: ಅರವಿಂದ ಕರ್ಣಿಕೆಯಿಪ್ಪಾ ಅಂದದಿಂ ವಿಜಯಾವಕ್ತ್ರಯೊಳು ಎಳೆಗರ್ಪಿಂ ದಂದವಡೆಯಿತು ನೃಪಾಲಾ (ಜೀವಂಸಾಂ. ೪–೬೩). **ಎಳೆಗಪ್ಪು**: ಎಳೆ[ಪಾಠಾಂ. ಳ]ಗಪ್ಪುದೋಱೆ ಪ್ಪೆರಂ (ಮಂಗರಾ. ೮೧–೧೪).
[ಎಳ್$_3$ (< ಎಳದು$_1$) + ಕರ್ಪು$_1$]

**ಎಳೆಗಲ್ಲು** (ನಾ). ಗಡಿ ಕಲ್ಲು; ಎಳೆ ಎಳೆದಿರುವ ಕಲ್ಲು: ಅನೆ ದಲೊಗೆಱೆವ ಪುಲ್ಪದಿಯ ಎಳೆಗಲ್ಲೆ ಪುಲಿವಾರದ ಗೆಱೆ ಮುಕೂಡಲ್ ತತಃ ಪೂರ್ವತಃ (ಎಕ. XII, ಗುಬ್ಬಿ. ೬೧–೯೪ ; 812).
[ಎಳೆ ? + ಕಲ್ಲು (< ಕಲ್$_3$)]

**ಎಳೆಗಱು** 'ಎಳಗಱು' ನೋ.

**ಎಳೆಗಱುಂಕೆ** 'ಎಳಗಱುಂಕೆ' ನೋ.

**ಎಳೆಗಾಯ್** 'ಎಳಗಾಯ್' ನೋ.

**ಎಳೆಗಾಯಿ** 'ಎಳಗಾಯ್' ನೋ.

**ಎಳೆಗಾರ್** 'ಎಳಗಾರ್' ನೋ.

**ಎಳೆಗಾಳಿ** 'ಎಳಗಾಳಿ' ನೋ.

**ಎಳೆಗುಬ್ಬಿ** (ನಾ). ಎಳೆಯ ಗುಬ್ಬಿ; ಗುಬ್ಬಿಮರಿ: ಉಜುಬುಗೊಂಡೆಳೆ ಗುಬ್ಬಿ ಕುಡಿದರೆ ಬಱಿವುದೇ ಜಲರಾಶಿ (ತೊರರಾ. ೬–೩೪–೧೨).
[ಎಳ್$_3$ (< ಎಳದು$_1$) + ಗುಬ್ಬಿ$_2$]

**ಎಳೆಗುರುಳು** (ನಾ). ಮೃದುವಾದ, ಕೋಮಲವಾದ ಕೂದಲು: ಸುರುಳಿಗುರುಳೊ ಸುಕ್ಕುಗುರುಳೆಳೆಗುರುಳೊ ಮೇಘಾಕೃತಿಯೊ ನೀಲದ ಮೆರುಗೊ (ಜಿರಾಮಾ. ೭೫–೬೧).
[ಎಳ್$_3$ (< ಎಳದು$_1$) + ಕುರುಳು$_1$ (< ಕುರುಳ್$_1$)]

**ಎಳೆಗೂಸು** 'ಎಳಗೂಸು' ನೋ.

**ಎಳೆಗೆಂಪು** 'ಎಳಗೆಂಪು' ನೋ.

**ಎಳೆಗೊಂಬು** 'ಎಳಗೊಂಬು' ನೋ.

**ಎಳೆಗೊನೆ** (ನಾ). ಎಳೆಯ ಗೊನೆ: ಉನ್ನತದೆಳೆಗೊನೆಗಳು ಫಾಳಿಯಿಂದೆ ಕೈಸನ್ನೆಗೈವಂದದಿ ತೂಗೆ (ಭರತಜ. ೨೨–೫).
[ಎಳ್$_3$ (< ಎಳದು$_1$) + ಗೊನೆ$_1$]

**ಎಳೆಗೊಳಿಸು** (ಕ್ರಿ). ೧. (ಸೂಜಿ ಮೊದಲಾದುವುಗಳಲ್ಲಿ) ದಾರವನ್ನು ಪೋಣಿಸು (ಸ್ಯಾಂಡರ್). ೨. ದಾರವನ್ನು ಹೊಸೆ, —ನುಲಿ (ಸ್ಯಾಂಡರ್). [ಎಳ್$_2$ (< ಎೞ್$_2$) + ಕೊಳ್$_1$ + –ಇಸು$_3$]

**ಎಳೆಗೊಳ್ಳು** 'ಎಳೆಕೊಳು' ನೋ.

**ಎಳೆಗೌಂಗು** 'ಎಳಗವುಂಗು' ನೋ.

**ಎಳೆಜೀವ** (ನಾ). ಚಿಕ್ಕವಯಸ್ಸಿನ ವ್ಯಕ್ತಿ: ಅಗ ನೋಡಬೇಕು – ಆ ಎಳೆಜೀವಗಳ ಉತ್ಸಾಹ, ಕೇಕೆ (ಒಡ್ಡಿಉ. ೨).
[ಎಳ್$_3$ (< ಎಳದು$_1$) + ಜೀವ]

**ಎಳೆಜೊನ್ನ** 'ಎಳಜೊನ್ನ' ನೋ.

**ಎಳೆತ, ಎಳತ** (ನಾ). ೧. ಎಳೆಯುವಿಕೆ; ಸೆಳೆಯುವಿಕೆ: ವಸ್ತುಗಳು ಚಲಿಸುವುದರಿಂದ ಅಗಾಧವಾಗಿ ಬಿಗಿತ ಎಳೆತಗಳ ಸಮೂಹದಿಂದ ಭೂಕಂಪಗಳುಂಟಾಗಿವೆ (ಭೂಹುಟ್ಟು. ೯೪); "ಒಂದೆರಡು ಸಿಗರೇಟು ಸಂಪಾದಿಸಿಕೊಂಡು ಒಂದೆಳೆತ ಎಳೆಯುವುದಾದರೆ" ಎಂದವಳು ಒಳಗೊಳಗೆ ಮಂಡಿಗೆ ಸವಿದಳು (ಪುನರು. ೧೩೬). **ಎಳತ**: ೨. (ಆಲಂ) (ಮನಸ್ಸಿನ) ಆಕರ್ಷಣೆ; ಒಲವು: ಏಟಾದರೂ ಆ ಎಳತ ಬ್ಯಾರೇ, ನಂದ ಬ್ಯಾರೇನ (ದೀಪಹ. II, ೧೬೬).
[ಎಳ್$_1$ (< ಎೞ್$_1$) + –ತ$_2$]

**ಎಳೆತಟ**, ಎಳತಟ (ನಾ). ಎಳೆದಾಟ; ಆಕರ್ಷಣೆ; ಸೆಳೆತ; ತೊಂದರೆ; ಕಿರುಕುಳ: ಬಳಿವಿಡಿದು ಬೇಂಟೆಗೆಯ್ತಂದ ಭೂಪಾಲಕನ ನೆಳೆತಟಂಮಾಡಿ ತೆಗೆದೆನ್ನಾಶ್ರಮಕ್ಕೊಯ್ದು (ಹಚಕಾ. ೩-೧೧); ಸತ್ವಗುಣವ ನಿಜವದನದೊಳ್ ತೋರ್ಪಂಬಿಕೆ ತೊಳತೊಳಗಲಬ್ಜಭವ ಶಿವ ರಮಾಧವರರ್ಚಿಪೆಳೆತಟಮಿದೇತಕಾಗಿ . . . ಬರುತಿರ್ದನು (ನಂದಿಪು. ೯-೧೦). **ಎಳತಟೆ**: ಭೀಮನ ಸುಳಿವಿನಲಿ ಸೊಪ್ಪಾದೆವರ್ಜುನನೆಳತಟಕೆ ನಿಲವೆಂತೆನುತ ನೆಗ್ಗಿದುದು ದುಗುಡದಲಿ (ಕುವ್ಯಾಕ. ೧೮-೨೫); ರಾಹುವಿನ ಎಳತಟದ ಶಶಿರೇಖೆಯಂತೆ (ತೊರರಾ. ೨-೨-೨); ಸಕಲ ಜೀವವ್ರಾತವಾಳುತ ಮುಳುಗುತೀ ಭವವೈತರಣಿಯೆಳತಟದಲಿಂತಾಯಾಸಗೊಳುತಿರಲು (ನಿಭಾಗ. ೭-೯-೩೯); ಮೃಗದಟ್ಟುಳಿಗೆ ಬೇಂಟೆಯನಾಡ ಬಂದರೆ ತೆಗೆದೆಳತಟವ ಮಾಡುವೆನು (ಹರಿಸಾಂ. ೧೧-೫೩); ಪರದೊಳು ಮತಿನಿಶ್ಚಯಗೊಂಡಗೆ ಬಹುಪರಿ ಸಂಶಯದೆಳತಟಮುಂಟೇ (ಕೃಕವ. ೫-೪೮-೫).

ಎಳತಟವಾಗು = ಕೋಟಲೆಗೊಳ್ಳು: ಗುರುವಿನ ಕೈಯಲ್ಲಿ ಎಳತಟ [ಪಾಠಾಂ. ಕೈಯಯೆಳತಟ, ಕೈಯಲೆಳತಟ]ವಾಗದ ಮುನ್ನ ಅರ್ಪಿತವ ಮಾಡಬೇಕೆಂದು (ಅವಚಂ. ೩೮-೧೬೫); ಅನುಭಾವವಿಲ್ಲದೆ ಈ ತನು ಎಳತಟವಾದುದಯ್ಯ (ದೇದಾವ. ೨೪-೪೧); ದಮನಮುನಿ ಆ ವಿಪಿನವಂ ಹೊಕ್ಕು ತನ್ನಯ ಜೀವಕೆಳತಟವಾಯ್ತು (ಬಸವು. ೫೨-೧೭).

[ಎಳೆ$_1$ (< ಎಟಿ$_1$) + -ತಟ$_3$]

**ಎಳೆತನ** 'ಎಳತನ' ನೋ.

**ಎಳೆತರ್** 'ಎಟಿತರ್' ನೋ.

**ಎಳೆತರಿಸು** (ಕ್ರಿ). ಎಳೆದು ತರುವಂತೆ ಮಾಡು; ಸೆಳೆಯಿಸು: ಕೊಲಿಸುದವರರಸಿಯರನೆಲ್ಲರನೆಳೆತರಿಸಿ (ಕುವ್ಯಾಆ. ಓಗಿಇ. ೨೫-೪೦); ನಳಿನಾಕ್ಷಿಯೊರ್ವಳೀಕ್ಷಣರಜ್ಜುವಿಂ ವಿಧುವನೆಳೆತರಿಸಿ ಕುಣಿಸಿದಪಳೊಯೆನಲ್ (ಚಿಬಪು. ೧೦-೧೭). [ಎಳೆತರ್ (< ಎಟಿತರ್) + -ಇಸು$_3$]

**ಎಳೆತಳಿರ್** (ಕ್ರಿ). ಚಿಗುರು; ಮೊಳಕೆಯೊಡೆ: "ಎಳೆತಳಿರ್ [ಪಾಠಾಂ. ಎಲೆತೊಳ(ಟ)ಲ್]-ಪಲ್ಲವ ಪ್ರಾಪ್ತೌ (ಎಲೆ ಚಿಗುರು)" (ಶಮುಧಾ).

[ಎಳೆ$_3$ (< ಎಳದು$_1$) + ತಳಿರ್]

**ಎಳೆತೆಗೆ**, ಎಳತೆಗೆ (ನಾ). ತನ್ನಕಡೆಗೆ ಎಳೆದುಕೊಳ್ಳುವುದು; ಜಗ್ಗಾಟ: ಎಳೆತೆಗೆಯಾಗುತಿರ್ದಪುದು ಪೇಚರರ್ಗಂ ಹರಿ ಕೇಳ ನಿನ್ನ ಕೈಯಳವಿಯ ಕನ್ನೆಯಲ್ಲಿವಳಾದಡವೆನ್ನಳಿಮೋಹದಿಂದಂ (ಮಹಾನೇ. ೭-೪೫). **ಎಳತೆಗೆ**: ಚರಣಗಳು ಸುರಪಗೆಳತೆಗೆಯಾಯ್ತು ಪಯಣವು ವೆರೆದ ಚತುರ ನಿಕಾಯವಾಗಸದೆಜಿವೆದುಂಬಲು ಮೆಲ್ಲನೈರಾವತವ ನೇಜಿಸಿದನು (ಸಾಳ್ವಭಾ. ೨೧-೧೧೦). [ಎಳೆ$_1$ (< ಎಟಿ$_1$) + ತೆಗೆ]

**ಎಳೆತೊಗಲ್** (ನಾ). ಎಳೆಯದಾದ ಚರ್ಮ; ಮೃದುವಾದ ಚರ್ಮ: (ಮುಂಬಯಿ. ೫-೨೬ ಕ). [ಎಳೆ$_3$ (< ಎಳದು$_1$) + ತೊಗಲ್]

**ಎಳೆದಳಿರ್** 'ಎಳದಳಿರ್' ನೋ.

**ಎಳೆದಳಿಸು** 'ಎಳದಳಿಸು' ನೋ.

**ಎಳೆದಾಟ**, ಎಳದಾಟ (ನಾ). ೧. (ಪರಸ್ಪರ) ಎಳೆದು ಆಡುವಿಕೆ; ಸೆಳೆಯುವಿಕೆ; ಜಗ್ಗಾಟ: "ಆಮಾತಿಗೇಕೆ ಸುಮ್ಮನೆ ಎಳೆದಾಟ?" (ತೇಮೋಡ. ೪). ೨. (ಅಲಂ) (ಮನಸ್ಸಿನ) ತುಯ್ದಾಟ, —ಹೊಯ್ದಾಟ: ಅವಳಿಗಾಗಿ ದಾರಿಕಾಯಬೇಕೋ ಬೇಡವೋ ಎಂಬ ಎಳೆದಾಟದಲ್ಲಿ . . . ವಸಂತನ ಮನಸ್ಸು ವಿವೇಕವನ್ನು ಸೋಲಿಸಿಬಿಟ್ಟಿತ್ತು (ಕಮುನಿ. ೪). ೩. ತಡ; ನಿಧಾನ (ಕ). **ಎಳದಾಟ**: (ಕ).

[ಎಳೆ$_1$ (< ಎಟಿ$_1$) + ಆಟ]

**ಎಳೆದಾಡು** (ಕ್ರಿ). (ಪರಸ್ಪರ) ಎಳೆ; ಸೆಳೆ; ಜಗ್ಗು: ಅಲ್ಲಿ ಅವರು ಎಳೆದಾಡುತ್ತಿದ್ದಾರೆ (ವಚಭಾ. ೩೯). [ಎಳೆ$_1$ (< ಎಟಿ$_1$) + ಆಡು$_1$]

**ಎಳೆದಾಳ್ದಕುವರಿ** 'ಎಳೆ$_5$' ಪರಾ.

**ಎಳೆದಿಂಗಳು** 'ಎಳದಿಂಗಳ್' ನೋ.

**ಎಳೆದು** 'ಎಳದು$_1$' ನೋ.

**ಎಳೆದುಂಬಿ** 'ಎಳದುಂಬಿ' ನೋ.

**ಎಳೆದೇರ** (ನಾ). ಭೂಮಿಯನ್ನೇ ತೇರನ್ನಾಗಿ ಉಳ್ಳವನು; ಈಶ್ವರ: "ಎಳೆದೇರನೀಸನುಂ . . . ಸ್ಮರಹರಂಗೆ ನಾಮಂ" (ಕವಿಕಂ. ೧೫); ಎಳೆದೇರನನೋಡಿಪೆನೆಂದು ಪೂಸರಂ (ಕಬ್ಬಿಕಾ. ೧೯೫).

[ಎಳೆ$_5$ + ತೇರು + -ಅ$_7$]

**ಎಳೆನಗರ್ನಾಡು** (ನಾ). ಒಂದು ನಾಡಿನ ಹೆಸರು: ಶ್ರೀಮಾಧವ ಮುತ್ತರಸರೆಳೆನಗರ್ನಾಡೆಪ್ಪತ್ತುಮೂವನ್ನನಾಡು ಮೂವತ್ತು ಂ ಪೊಂಕುನ್ದು ಪನ್ನೆರಡುಮಾಳುತ್ತು[ಮಿ]ರೆ (ಎಕ. X, ಬಾರಿಂಗ್. ೧೩-೨; 890). [ಎಳೆನಗರ್$_0$ + ನಾಡು]

**ಎಳೆನಗೆ** 'ಎಳನಗೆ' ನೋ.

**ಎಳೆನಡಿಗೆ** (ನಾ). ಕುದುರೆಯ ಒಂದು ನಡಿಗೆ: "ಅಸ್ಕಂದಿತಂ - ಎಳೆನಡಿಗೆ" (ಸಿದ್ಧಾಂತಿ. ೨೧೫).

[ಎಳೆ$_3$ (< ಎಳದು$_1$) ? + ನಡಿಗೆ (< ನಡಗೆ)]

**ಎಳೆನಡು** (ನಾ). ಬಡನಡು; ಸಣ್ಣನಡು: ತುಂಗಕುಚದುತ್ತುಂಗ ಕಬರಿಯ ಸಿಂಗರದೆಳೆ [ಪಾಠಾಂ. ಸೆಳೆ] ನಡುವಿನಮಳ ನರಾಂಗನೆಯರೆಸೆದಿರ್ದರಾ ಸ್ಮರಭಟನ ಬಲದಂತೆ (ತೊರರಾ. ೫-೨-೭೨).

[ಎಳೆ$_3$ (< ಎಳದು$_1$) + ನಡು$_2$]

**ಎಳೆನಾಗ** 'ಎಳನಾಗ' ನೋ.

**ಎಳೆನಾರಿ** (ನಾ). ಎಳೆಯ ವಯಸ್ಸಿನ ಹೆಂಗಸು; ತರುಣಿ: ಕರದ ಕರಕುಶಲದಲಿ ಚಲುವನು ಮೆಜೆಸಿದಳೆಳೆನಾರಿ (ಬಜ್ಜಪು. ೨೯-೧೦).

[ಎಳೆ$_3$ (< ಎಳದು$_1$) + ನಾರಿ$_2$]

**ಎಳೆನಾರು** (ನಾ). ಎಳೆಯ ನಾರು; ಮೃದುವಾದ ನಾರು (ಕ).

[ಎಳೆ$_3$ (< ಎಳದು$_1$) + ನಾರು$_2$ (< ನಾರ್$_2$)]

**ಎಳೆನಿಂಬೆ** (ನಾ). ಎಳೆಯ ನಿಂಬೆ; ನಿಂಬೆಯ ಹೀಚು.

ಎಳೆನಿಂಬೆಕಾಯಿ = (ಅಲಂ) ಬುದ್ಧಿ ಪಕ್ವವಾಗಿಲ್ಲದವನು: ವಯಸ್ಸು ಹದಿನೆಂಟೇ ಆದರೂ 'ಹುಡುಗಬುದ್ಧಿ', 'ಎಳೆನಿಂಬೇಕಾಯಿ' ಎಂದು ಯಾರೂ ರಾಮಕೃಷ್ಣನನ್ನು ದುರ್ಲಕ್ಷ್ಯ ಮಾಡುತ್ತಿರಲಿಲ್ಲ (ಬನಶಂ. ೪೫); ಅವರ ಸಹೋದ್ಯೋಗಿಗಳು ಅವರನ್ನು ಕೆಲಸಕ್ಕೆಬಾರದ ಎಳೆನಿಂಬೆಕಾಯಿ ಅನ್ನುತ್ತಿದ್ದರು (ಪಂಜಪಂ. ೧೬೨).

[ಎಳೆ$_3$ (< ಎಳದು$_1$) + ನಿಂಬೆ]

**ಎಳೆನೀರ್** 'ಎಳನೀರ್' ನೋ.

**ಎಳೆನೀರು** 'ಎಳನೀರ್' ನೋ.

**ಎಳೆನೀಲ** 'ಎಳನೀಲ' ನೋ.

**ಎಳೆನೂಲು** (ನಾ). ಹಸಿಯ ನೂಲು; ನೂಲಿನ ಎಳೆ (?): ತಳಿರು ಪೊಂಬಾಳೆ ಕೆಂದಾವರೆ ದಂಟುಗಳೆಳೆನೂಲು ಲಲಿತತಮಾಲ ಬೆಳಗಾಯ ನೆಯ್ದಿಲು ಹೆಂಗಳ ದಿವ್ಯಾಂಗಲಲಿತ ನಂದನದೊಳೊಪ್ಪಿದುವು (ಕಂನವಿ. ೨೪-೯); ಸೂಜಿಗೂ ಹದನು ಎಳೆನೂಲಿಗೂ ಮಿದು (ಉಯ್ಯಾಲೆ. ೩೭-೭).

[ಎಳೆ$_2$ (< ಎಟಿ$_2$) + ನೂಲು$_2$ (< ನೂಲ್$_2$)]

**ಎಳೆನೇಸಱ್** 'ಎಳನೇಸಱ್' ನೋ.

**ಎಳೆನೇಸಱು** 'ಎಳನೇಸಱ್' ನೋ.

**ಎಳೆಪಾಕ$_1$** (ನಾ). (ದಾರದ) ಎಳೆಯಂತೆ ಬರುವ ಪಾಕ; ಹದವಾದ ಪಾಕ: ಎಳೆಪಾಕ ಬಂದಿದೆ (ರೂಢಿ).

[ಎಳೆ$_2$ (< ಎಟಿ$_2$) + ಪಾಕ$_1$]

**ಎಳೆಪಾಕ್ಕೆ** (ನಾ). ಹದಕ್ಕೆ ಬರದಿರುವ ಪಾಕ: ಎಳೆಪಾಕ ಆಗಿದೆ, ಹದಕ್ಕೆ ಬಂದಿಲ್ಲ (ರೂಢಿ). [ಎಳ್$_3$ (< ಎಳದು$_1$) + ಪಾಕ್$_1$]

**ಎಳೆಪ್ರಾಯ** (ನಾ). ಎಳೆಯ ಪ್ರಾಯ; ತಾರುಣ್ಯ: ನಾನು ಗುರುವನ್ನು ಎಳೆಪ್ರಾಯದಿಂದಲೂ ಸೇವಿಸುತ್ತಿರುವೆನು (ಮಣಿಸ. ೬೩).
[ಎಳ್$_3$ (< ಎಳದು$_1$) + ಪ್ರಾಯ]

**ಎಳೆಬಣ್ಣ** (ನಾ). ಎಳಸಾದ ಬಣ್ಣ; ಅತಿ ಗಾಢವಲ್ಲದ ಬಣ್ಣ.
[ಎಳ್$_3$ (< ಎಳದು$_1$) + ಬಣ್ಣ]

**ಎಳೆಬಲೆ** 'ಎಳೆವಲೆ' ನೋ.

**ಎಳೆಬಿಸಿಲು** 'ಎಳವಿಸಿಲ್' ನೋ.

**ಎಳೆಬಿಳುಪು** (ನಾ). ಎಳೆಯ ಬಿಳುಪು; ನಸುಬಿಳುಪು: ಧೂಸರಃ –ಎಳೆಬಿಳುಪು ಅಂದರೆ ಸ್ವಲ್ಪ ಶುಭ್ರವಾದದ್ದು" (ಸಿದ್ಧಾಂತಿ. ೪೫).
[ಎಳ್$_3$ (< ಎಳದು$_1$) + ಬಿಳುಪು]

**ಎಳೆಮನ** 'ಎಳಮನ' ನೋ.

**ಎಳೆಮರಿ** 'ಎಳವಱ' ನೋ.

**ಎಳೆಮಾವು** 'ಎಳಮಾವು' ನೋ.

**ಎಳೆಮಿಂಚು** 'ಎಳಮಿಂಚು' ನೋ.

**ಎಳೆಮೀನು** 'ಎಳಮೀನ್' ನೋ.

**ಎಳೆಮೀಸೆ** (ನಾ). ಎಳೆಯ ಮೀಸೆ; ಚಿಗುರು ಮೀಸೆ; ಮೊಗಮೀಸೆ: ಹುಬ್ಬಿನಂತೆಸೆವೆಳೆಮೀಸೆ ಹುಬ್ಬುಮೀಸೆಯ ನೋಡಿ ನಲಿವ (ಭರತೇ. ೧–೪೦); ಮೊಳೆದೋಱುತಾ ಪುಟ್ಟುತಿಹೆಳೆಮೀಸೆ (ಕಂಸವ. ೯–೧೧೫); ರಾವಣನ ಎಳೆಮೀಸೆ (ಹುಟ್ಟುಹ. ೬೨).
[ಎಳ್$_3$ (< ಎಳದು$_1$) + ಮೀಸೆ]

**ಎಳೆಮುತ್ತು** 'ಎಳಮುತ್ತು' ನೋ.

**ಎಳೆಮುದ್ದು** (ನಾ). ಚಿಕ್ಕವರ ಮುದ್ದು; ಸಣ್ಣಮಕ್ಕಳ ಮುದ್ದು: ಸುಳಿದಾಡಿ ಕಳಾಳಾಪದಿನೆಳೆಮುದ್ದಂ ತೋಱೆ ಮೊಲೆಯನುಣ್ಬಾತ್ಮಜರೆನೆ ಗಿಳಿಗಳ ಪಿಂಡುಗಳುಂಡುವು ಕಳವೆಯ ಪಾಲ್ದೆನೆಯ (ಬಾಧವು. ೪–೬೯).
[ಎಳ್$_3$ (< ಎಳದು$_1$) + ಮುದ್ದು]

**ಎಳೆಮುಳ್ಳು** (ನಾ). ಎಳೆಯ ಮುಳ್ಳು: ನೂಕಿದವು ಶರಜಾಲ ಹನುಮನ ಸೋಕಿನಲಿ ಮದಗಜವನೆಳೆಮುಳ್ಳುಕುವವೊಲಂಜನೆಯ ಸುತನಂಜುವನೆ ಶರಹತಿಗೆ (ತೊರರಾ. ೫–೬–೨೨).
[ಎಳ್$_3$ (< ಎಳದು$_1$) + ಮುಳ್ಳು (< ಮುಳ್$_3$)]

**ಎಳೆಮೇವು** (ನಾ). ಎಳೆಯ ಮೇವು; ಚಿಗುರು ಮೇವು; ಹಸಿಮೇವು: ಓತು ಗೋವೆಳೆಮೇವ ಬಿಟ್ಟೋಡಿತಜಗ ಬಾಯ್ದಾತು ಮೇವುದ ಕಂಡೆನೆನಲು (ಭರತೇ. ೬೧–೩೫). [ಎಳ್$_3$ (< ಎಳದು$_1$) + ಮೇವು (< ಮೇಪು)]

**ಎಳೆಮೊಗರು** (ನಾ). ಎಳೆಯ ಹೀಚು.
[ಎಳ್$_3$ (< ಎಳದು$_1$) + ಮೊಗರು (< ಮೊಗಱು)]

**ಎಳೆಯ** 'ಎಳದು$_1$' ನೋ.

**ಎಳೆಯಂಚೆ** 'ಎಳಅಂಚೆ' ನೋ.

**ಎಳೆಯಕೆಱೆ** (ನಾ). ಒಂದು ಪ್ರದೇಶದ ಹೆಸರು: ಅಲ್ಲಿಂ ತೆಂಕಲೆಳೆಯ ಕೆಱೆಯ ಬಿಳಿಯ ಕಲ್ಲು (ಸೌಇಇ. XX, ೧೪–೩೮; 980).
[ಎಳೆಯ ? + ಕೆಱೆ]

**ಎಳೆಯಸುಗೆ** (ನಾ). ಎಳೆಯ ಅಶೋಕ ವೃಕ್ಷ: ಪೊಸವಾಳೆಯ ಸುಳಿ ಕಮ್ಮಿದುವಾದೆಲರೆಳೆಯಸುಗೆಯ ತಳಿರೆಲೆ ಬಿಜ್ಜಳ . . . ಬಾವನ್ನದಿ ನಾಳಿಯರೆಳೆಸಿ ಕರಂ ಸತ್ಕರಿಸಲು (ಜಯಶಾ. ೪–೪೦).
[ಎಳ್$_3$ (< ಎಳದು$_1$) + ಅಸುಗೆ]

**ಎಳೆಯಿಸು** 'ಎಱೆಯಿಸು' ನೋ.

**ಎಳೆಯೊಡೆಯ** (ನಾ). ಭೂಮಿಯ ಒಡೆಯ; ಅರಸ; ರಾಜ: ಎಱಗು ಪಿರಿಯವರ್ಗೆಳೆಯೊಡೆಯಾ (ಕಬ್ಬಿಗಕಾ. ೨೩೧).
[ಎಳ್$_6$ + ಒಡೆಯ]

**ಎಳೆರಂಡೆ** (ನಾ). ಚಿಕ್ಕವಯಸ್ಸಿನ ವಿಧವೆ; ಬಾಲವಿಧವೆ: ಇರೆ ರವಿಯೇಱಿಬಱೆಯೊಳ್ ಬಿಸುಡುಗಾರ್ತಿಯೆನಿಕ್ಕುಮಿಳಾತನೂಜನಲ್ಲಿರೆಯೆಳೆರಂಡೆ [ಪಾಠಾಂ. ಮೊಳೆಗಾ ರಂಡೆ]ಯಕ್ಕುಂ (ಜಾತತಿ. ೨೨–೧೩).
[ಎಳ್$_3$ (< ಎಳದು$_1$) + ರಂಡೆ]

**ಎಳೆಲತೆ** 'ಎಳಲತೆ' ನೋ.

**ಎಳೆವಗಲು** 'ಎಳವಗಲು' ನೋ.

**ಎಳೆವಯಸ್ಸು** (ನಾ). ಎಳೆಯ ವಯಸ್ಸು; ಚಿಕ್ಕವಯಸ್ಸು: ಅಲ್ಲಿ ವಿದ್ಯಾರ್ಥಿಯರು ಎಳೆವಯಸ್ಸಿನಲ್ಲಿ ಸೇರಿ, ತಮ್ಮ ಕೌಮಾರ್ಯಾವಸ್ಥೆಯನ್ನು ವಿದ್ಯಾಭ್ಯಾಸದಲ್ಲಿಯೇ ಕಳೆದು (ಮಣಿಸ. ೬೧).
[ಎಳ್$_3$ (< ಎಳದು$_1$) + ವಯಸ್ಸು]

**ಎಳೆವರೆಯ** 'ಎಳವರೆಯ' ನೋ.

**ಎಳೆವಲ್** (ನಾ). ಎಳೆಯ ಹಲ್ಲು: ಮೊಳೆವ ಮುತ್ತಿನ ಪೊಳೆವೆಳೆವಲ್ಲ ಕಿಱುನಗೆ (ಶ್ರೀಪಾಲ. ೨–೩೪). [ಎಳ್$_3$ (< ಎಳದು$_1$) + ಪಲ್]

**ಎಳೆವಲೆ, ಎಳೆಬಲೆ** (ನಾ). ಎಳೆಯುವ ಬಲೆ: ಎರಳೆವಲೆ ಹಂದಿವಲೆ ಹೊಯಿವಲೆ ಹರಹುವಲೆಗಳೆಳೆವಲೆ ಹುಡಿಕೆವಲೆ (ಸಾಳ್ವಭಾ. ೫–೧೯).
**ಎಳೆಬಲೆ**: ಎಳೆಯುವ ಬಲೆ; ಎಳೆಬಲೆ (Drag-net. ಇಂಕಣಿ).
[ಎಳ್$_1$ (< ಎೞ್$_1$) + ಬಲೆ$_1$]

**ಎಳೆವಸಲೆ** 'ಎಳವಸಲೆ' ನೋ.

**ಎಳೆವಸಿಱ್** 'ಎಳವಸಿಱ್' ನೋ.

**ಎಳೆವಳ್ಳಿ** 'ಎಳವಳ್ಳಿ' ನೋ.

**ಎಳೆವಳ್ಳಿಮೆಯ್** 'ಎಳವಳ್ಳಿಮೆಯ್' ನೋ.

**ಎಳೆವಱ** 'ಎಳವಱ' ನೋ.

**ಎಳೆವಾತು** (ನಾ). ೧. ಎಳೆತನದಲ್ಲಿಯ ಮಾತು. ೨. ಸರಳವಾದ ಮಾತು: ಎಲ್ಲರುಮಱಿವಂತೆಳೆ [ಪಾಠಾಂ. ಳ]ವಾತುಗಳಿಂದ ಸೊಲ್ಲಿಸುವೆನು ಸೊಗಸುವೊಲು (ಹದಿಬ. ೧–೪೯).
[ಎಳ್$_3$ (< ಎಳದು$_1$) + ಮಾತು$_1$]

**ಎಳೆವಾರ** 'ಎಳವಾರ' ನೋ.

**ಎಳೆವಾಳಿ$_1$** 'ಎಳವಾೞಿ' ನೋ.

**ಎಳೆವಾಳಿ$_2$** 'ಎಳವಾಳಿ$_2$' ನೋ.

**ಎಳೆವಾಱಿ** 'ಎಳವಾಱಿ' ನೋ.

**ಎಳೆವಿದಿರ್** 'ಎಳವಿದಿರ್' ನೋ.

**ಎಳೆವಿಸಿಲ್** 'ಎಳವಿಸಿಲ್' ನೋ.

**ಎಳೆವೀಲಿ** (ನಾ). ಎಳೆಯ ನವಿಲುಗರಿ: ವಿಳಸಿತ ಮಧುಕರನಿಕರ ಎಳಸಿದುದೆಳೆವೀಲಿ [ಪಾಠಾಂ. ನೀಲಿ]ಯ ನಿಡುದೊಂಗಲನೆಳಲಿಕ್ಕಿದಂತಾನೆಗಳ (ಕುರಾಸಾಂ. ೧೧–೩೦). [ಎಳ್$_3$ (< ಎಳದು$_1$) + ಪೀಲಿ]

**ಎಳೆವುಲ್** 'ಎಳವುಲ್' ನೋ.

**ಎಳೆವುಲ್ಲೆ** 'ಎಳವುಲ್ಲೆ' ನೋ.

**ಎಳೆವೆಟ್ಟು** (ನಾ). ಎಳೆಯ ಬೆರಳು: ಪಂಬಲಿಸುತ ಪಾಲ್ಗೊಲೆವೇಡುತೆಳೆವೆಟ್ಟ ಚುಂಬಿಸುತವೆ ಮೊಗನೋಡಿ (ಶ್ರೀಪಾಲ. ೨–೩೫).
[ಎಳ್$_3$ (< ಎಳದು$_1$) + ಬೆಟ್ಟು$_3$]

**ಎಳೆವೆಣ್** 'ಎಳವೆಣ್' ನೋ.

**ಎಳೆವೆಣ್ಣು** 'ಎಳವೆಣ್' ನೋ.

**ಎಳೆವೇಱ** 'ಎಳವೇಱ' ನೋ.

**ಎಳೆವೇಡಿತಿ** (ನಾ). ಎಳೆಯ ಬೇಡಿತಿ, —ಪುಳಿಂದಿ: ತೆರೆವಿಡಿದೀಸುವೆಳೆವೇಡಿತಿಯ ಗುರುತರ ನಿತಂಬಬಿಂಬಮಂ ಮುಳುಂಗಿ ತೋರ್ಪ ಕರಿಣಿಯ ಶಿರಂಗೆತ್ತು ಕುಡುಂಕುತೊಡರ್ಚಿ ತಡಿಯೊಳ್ನಿಂದು (ರಾಜಶೇ. ೬–೨೪ ವ). [ಎಳೆ$_3$ (< ಎಳದು$_1$) + ಬೇಡಿತಿ]

**ಎಳೆಸಸಿ** 'ಎಳಸಸಿ$_1$' ನೋ.

**ಎಳೆಸಸಿಲೆ** (ನಾ). ಎಳೆಯ ಸಸಿಲೆ, —ಮೀನು: ಸಲಿಲೇರಿನ ಕುಲ್ಲೆಯೊಳೊಂದೇ ಭಲ್ಲೆಯೊಳೆಳೆಸಸಿಲೆಯನಿಕ್ಕಡಿಗೆಯ್ವೆ (ಹ ಬ್ಬ ರ. ೧–೧೩). [ಎಳೆ$_3$ (< ಎಳದು$_1$) + ಸಸಿಲೆ (< ಸಸಿಲ್)]

**ಎಳೆಸು** 'ಎಟಿಸು' ನೋ.

**ಎಳೆಹಗಲು** 'ಎಳವಗಲು' ನೋ.

**ಎಳೆಹದ** (ನಾ). ಹದಕ್ಕೆ ಬರದಿರುವ ಪಾಕ. [ಎಳೆ$_3$ (< ಎಳದು$_1$) + ಹದ (< ಪದ$_1$)]

**ಎಳೆಹದಿರು** (ನಾ). ಎಳೆಯ ಕಾಯಿ. [ಎಳೆ$_3$ (< ಎಳದು$_1$) + ಹದಿರು$_1$ (< ಪದಿರ್$_1$)]

**ಎಳೆಹಬ್ಬ** (ನಾ). ೧. ಶ್ರಾವಣಮಾಸದಲ್ಲಿ ಜಟ್ಟಿಗಳು ಕೆಮ್ಮಣ್ಣನ್ನು (ಹುತ್ತದಂತೆ) ಗುಡ್ಡೆಮಾಡಿ ಪೂಜಿಸಿ ಸೊಂಟಕ್ಕೂ ಕೈಗೂ ದಾರ ಕಟ್ಟಿಕೊಳ್ಳುವ ಹಬ್ಬ (ಕಿ). ೨. ಭಾದ್ರಪದ ಶುದ್ಧ ಅಷ್ಟಮಿ. [ಎಳೆ$_2$ (< ಎಟ್ಟಿ$_2$) + ಹಬ್ಬ (< ಪರ್ಬ)]

**ಎಳೆಹರೆಯ** 'ಎಳವರೆಯ' ನೋ.

**ಎಳೆಹೀಚು** (ನಾ). = ಎಳೆಹದಿರು (ಕಿ). [ಎಳೆ$_3$ (< ಎಳದು$_1$) + ಹೀಚು$_2$ (< ಪೀಚು$_2$)]

**ಎಳೆಹುಲ್ಲು** 'ಎಳವುಲ್' ನೋ.

**ಎಳೆಹುಲ್ಲೆ** 'ಎಳವುಲ್ಲೆ' ನೋ.

**ಎಳೆಹೂಟೆ** 'ಎಳೆಹೂಟಿ' ನೋ.

**ಎಳೆಹೂಟಿ, ಎಳಹೂಟ, ಎಳಹೂಟೆ, ಎಳಹೂಟಿ, ಎಳೆಹೂಟ** (ನಾ). ವ್ಯವಸಾಯದ ಒಂದು ಉಪಕರಣ; ಹಲಬೆ: ಮೊಟೆಯಿಟ್ಟರಾಗಿ ಕರುಣಿಸಿ ಬಿಟ್ಟನಲ್ಲದಿರ್ದಡೆ ಕೆಡಹಿ ಮೂಗನರಿದೆಳೆಹೂಟಿಯಂ ಕಟ್ಟಿ ಹೆಟ್ಟಿ ವೆಳಸುವೆ ಬಟ್ಟಬಯಲೊಳೆನಲು (ಹಚಕಾ. ೮–೧೩); ಹುರಿದ ಮರಳನೆ ಚೆಲ್ಲುತ ಗಾಳಿಯೊಳುಯೆಳೆಹೂಟಿಯಂ ಕಟ್ಟಿಯಿಂಡದೊಳು ಘೋಳಿಡಿಸು ತೆಳಿವ ಯಮದೂತರಂ ಮುಟಿದೊತ್ತಿ (ಗುಭಚ. ೨–೪); ಹರಳ ಮಧುವರ ಸಯ್ಯನವರನು ನಿಲ್ಲದೆಳೆಹೂಟಿಯನು ಕಟ್ಟಿಪನಲ್ಲಿ ಫಾಲ್ಗುಣದಿ (ಶರಲೀ. ೪೫೧–೮); ಬಸವೇಶ ಕೂಡಲಸಂಗನೋಳ್ಬೆರದ ಶರಧಿಯೆಳೆಹೂಟಿ ಕಟ್ಟಿ ಸಲುಯಾ ಶರಣರಂ ಹರಪುರಿಗೆ ಪೋದರಣುಗಾ (ಚೋರಬ. ೧೦ ಸೂಚನೆ). **ಎಳಹೂಟ**: ನಿರುತದಿಂದವರನೆಳಹೂಟಮಂ ಕಟ್ಟಿಸಾ ಗಿರಿಯ ಸುತ್ತಂ ಯೆಳಸೆ (ಪಾಸೋಪು. ೫–೧೮). **ಎಳಹೂಟೆ**: ಇನಿತು ನೀರಂ ತೋಟಿರೇ ಥಿಕ್ಕನೆ ಇದಕೆ ಆರಾದೊಡೇ ನಿಮ್ಮಿನಿಬರಂ ಪಟ್ಟಣದ ಸುತ್ತೆಳಹೂಟ ಹೂಡಿಸುವೆ (ಬ ಸ ಪು. ೫೭–೮೦); ಹಳ್ಳಯ್ಯ ಮಧುವಯ್ಯಗಳನೆಳಹೂಟಿಯಂ ಕಟ್ಟಿಸೆ (ಚೆಬಪು. ೬೨–೨೦); ಗಡಿಯೆಲ್ಲೆಯಿಂದ ಹೊರಗಣ್ಣೆ ಎಳಹೂಟ ಹೊಡಿಸಿ ತೊಲಗಿಸಿಬಿಟ್ಟು (ಮಂತ್ರಶ. ೧೩೩–೧೦). **ಎಳಹೂಟಿ**: ಎಳಹೂಟಿಗವರ ಕಟ್ಟಿಸುವುದಕ್ಕಿಂತ ಎಳಸಿದುದಿಲ್ಲವೆ ಶಿನ್ನನು (ಬ ಜ್ಞ ರಾ. ೭–೯೨). **ಎಳೆಹೂಟ**: ಶೈಲದಕ್ಷಣ ಲಸತ್ತ್ರಿಪುರಾಂತಕಸ್ಥಲದೊಳಾ ಲಸದ್ಗೋವ ಕೊಂದಂತ್ಯಜರನೆಳೆಹೂಟಮಂ ಕಟ್ಟಿ ಕೊಲಲು (ವೀಶೈಪು. ೮–೭–೩೨); ಪಿಡಿದಿರ್ದ ಖಡ್ಗ ಪಿನಾಕ ಹಲಗೆ ಬಾಣ ಜಡಿವ ಕಾಸೆಯು ಝುಲ್ಲಿ ಎಳೆಹೂಟ ನುಡಿವ ಮದ್ದಳೆ ಮಲಹರಿಯೆಂಬ ವಾದ್ಯದಿಂ ನಡೆವನ್ನೆವೀರ ಶಿವಪುರಿಗಾಗಿ (ಶ ರ ಲೀ. ೯೭–೧೦). [ಎಳೆ$_1$ (< ಎಟಿ$_1$) + ಹೂಟಿ (< ಪೂಟ)]

**ಎಳ್ಕಳ** (ನಾ). ಏಳುಯುದ್ಧ; ಯುದ್ಧ ರಂಗ (?): ಎಳ್ಕಳದೊಳು ನಿಮ್ಮ ಬಲವಾರಾಸಿಯ ಳ್ಳಾಡುವೆನು ತೋಳಬಲದಿ ನಿಳ್ಕರಿಸುವುದೇನು ನಿನ್ನನೆಲವೊ ದೂತ ನೋಳ್ಕಮ್ಮ ಸಮರಭೂಮಿಯೊಳು (ವರ್ಧಚ. ೬–೬೮). [ಎಳ್ (< ಏಟ್$_2$) + ಕಳ$_3$ ?]

**ಎಳ್ಚರಿಸು** 'ಎಚ್ಚಱಿಸು' ನೋ.

**ಎಳ್ಚರು** 'ಎಚ್ಚಱ್$_2$' ನೋ.

**ಎಳ್ಚಱಿಕೆ** 'ಎಚ್ಚಱಿಕೆ' ನೋ.

**ಎಳ್ಚಱಿಸು** 'ಎಚ್ಚಱಿಸು' ನೋ.

**ಎಳ್ಚಱು** 'ಎಚ್ಚಱ್$_2$' ನೋ.

**ಎಳ್ತರ್** 'ಎಟ್ತರ್' ನೋ.

**ಎಳ್ತರ** 'ಎಟ್ತರ' ನೋ.

**ಎಳ್ತರು** 'ಎಟ್ತರ್' ನೋ.

**ಎಳ್ತಿಯಮ್ಮ** (ನಾ). ಒಬ್ಬಾತನ ಹೆಸರು: ತಣ್ಡೆಯದ ಎಳ್ತಿಯಮ್ಮನ ಮಗಂ ಮಾದಯ್ಯ (ಮೈಆರಿ. ೧೯೩೬, ೫೫–೩; 1054). [ಎಳ್ತಿ$_0$ + ಅಮ್ಮ$_1$]

**ಎಳ್ತು** 'ಎಟ್ತು$_1$' ನೋ.

**ಎಳ್ಪದಿಂಬರ್** 'ಎಟ್ಪತ್ತು' ಪರಾ.

**ಎಳ್ಪಟ್ಟು** 'ಎಟ್ಪಟ್ಟು' ನೋ.

**ಎಳ್ಪಸು** 'ಎಟ್ಪಸು' ನೋ.

**ಎಳ್ಮಡಿಯರ್** (ನಾ). ಒಂದು ಹೆಸರು: ಸಾಕ್ಷಿ ಕೂಡಲೂರ್ ಪೊಲ್ಗಲರು ಎಳ್ಮಡಿಯರು ಬದಿರಿಯರುಮ್ (ಮೈಆರಿ. ೧೯೧೬, ೧೩–೯; 726). [?]

**ಎಳ್ಳಗಸೆ** (ನಾ). ಅಗಸೆ ಗಿಡದಲ್ಲಿ ಒಂದು ಜಾತಿ: "ಅತಸೀ, ಉಮಾ, ಕ್ಷುಮಾ – ಈ ೩ ಎಳ್ಳಗಸೆ" (ಹಲಾಯು. ೯೫–೪೨೮); "ಉಮೆಯೆನಲ್ಕೆಳ್ಳಗಸೆ" (ಮಂಗರಾ. ೧೧೦–೫); ಎಳ್ಳಗಸೆ ಖಂ ೨ಕ್ಕೆ . . . ಎಳ್ಳಗಸೆ ಖಂ ೫೦ಂಕ್ಕೆ (ವ್ಯವಹಾ. ಅನುಬಂ. ೧೭). [ಎಳ್ಳು (< ಎಳ್) + ಅಗಸೆ$_3$]

**ಎಳ್ಳನಿತು** (ಅ). ಎಳ್ಳನಷ್ಟು; ತೀರಸ್ವಲ್ಪ; ತುಸು: ನಿನ್ನೊಳೆಳ್ಳನಿತುಂ ದೋಷಮನುಂಟುಮಾಡದಿರೆಯುಂ ಕಣ್ಣಂತೆ ಸಂದಪ್ಪುದೊಂದನೆ ಕೇಳ್ದು (ಪಂಪಭಾ. ೪–೯೩); ಸಂಪದದೊಳೆಳ್ಳನಿತಂ ಕುಡೆ ಕುಬೇರನಾದಂ (ಬಸರ. ೮–೧೩೪); ಒಡಲಮೇಲೆಳ್ಳನಿತು ಮೋಹವ ಹಿಡಿಯದಿವರಾಕಿದರು (ಕುಮ್ಮಾದ್ರಾ. ೩–೨೮); ಜಾಣಸೇಕರ ಶಿನ್ನೆಡೆಯೊಳಗೆಳ್ಳ[ಳ್ಳ]ನಿತೊಹೆಯವಿಡಿದ ಕಾರ್ಯಗಳ ಕಾಣಿಸಿಕೊಂಡೆನಾದೊಡೆ (ಕಂನವಿ. ೬–೧೬೮); ನಾನಿಟ್ಟ ಶಾಸನವ ಎಳ್ಳನಿತು ಲಂಘಿಸವು (ಕವಿಸೋ. ೨೦). [ಎಳ್ + ಅನಿತು (< ಅನಿತ್ತು)]

**ಎಳ್ಳಮಾಸೆ** (ನಾ). ಮಾರ್ಗಶಿರ ಮಾಸದ ಅಮಾವಾಸ್ಯೆ. [ಎಳ್ಳು (< ಎಳ್) + ಅಮಾಸೆ (< ಅಮಾವಾಸ್ಯೆ)]

**ಎಳ್ಳಷ್ಟು** (ಅ). = ಎಳ್ಳನಿತು: ಎಳ್ಳಷ್ಟು ತಪ್ಪಿದರೆ ಯಮನಾಳು ನರಕಕ್ಕೆ ಎಳೆದೊಯ್ವರೆಚ್ಚಱಿಕೆ (ಪುರಂದ. ೧–೧೬೦–೨); ಇದರಲ್ಲಿ ಎಳ್ಳಷ್ಟೂ ಸಂಶಯವಿರಬಾರದು (ಪಿಶಾಪ. ೯). [ಎಳ್ಳು (< ಎಳ್) + ಅಷ್ಟು]

**ಎಳ್ಳಿದಿಕೆ** 'ಏಳಿದಿಕೆ' ನೋ.

**ಎಳ್ಳಿದು** 'ಏಳಿದ' ನೋ.

**ಎಳ್ಳು** 'ಎಳ್' ನೋ.

**ಎಳ್ಳುಂಡೆ** (ನಾ). ಎಳ್ಳಿನಿಂದ ಮಾಡಿದ ಉಂಡೆ; ಚಿಗುಳಿಉಂಡೆ: ರಿಸಿಯರಂ ನಂದಿಮಿತ್ರಂ ಕಂಡು ಕಾರುಣ್ಯದಿಂ ನಿಜಿಸಿ ಎಳ್ಳುಂಡೆಯನಿಕ್ಕಿದೊಡೆ (ವಡ್ಡಾರಾ. ೧೫೭–೨); ಎಳ್ಳುಂಡೆ ಜೇನುತುಪ್ಪ ಗಣನಾಯ್ಕ ನಮಗೆ ವಿದ್ಯಾವ ಕಲಿಸಯ್ಯ ಗಣನಾಯ್ಕ (ಜಗೀಶ. ೧). [ಎಳ್ + ಉಂಡೆ]

**ಎಳ್ಳುಚಟ್ಣಿ** (ನಾ). ಎಳ್ಳನ್ನು ಹಾಕಿ ಮಾಡಿದ ಚಟ್ಣಿ : ರಾಗಿರೊಟ್ಟಿಗೆ ಎಳ್ಳುಚಟ್ಣಿ ಬಲುರುಚಿ (ರೂಢಿ). [ಎಳ್ಳು (< ಎಳ್) + ಚಟ್ಣಿ]

**ಎಳ್ಳುಚಿಗಳಿ** (ನಾ). ಎಳ್ಳು ಮತ್ತು ಬೆಲ್ಲ ಸೇರಿಸಿ ಮಾಡಿದ ಸಿಹಿ ತಿಂಡಿ. [ಎಳ್ಳು (< ಎಳ್) + ಚಿಗಳಿ (< ಚಿಗುಳಿ)]

**ಎಳ್ಳುನೀರು** (ನಾ). ತರ್ಪಣ ಕೊಡುವಾಗ ಬಿಡುವ ಎಳ್ಳು ಮತ್ತು ನೀರು; ತರ್ಪಣ ಕೊಡುವಿಕೆ.

ಎಳ್ಳುನೀರುಬಿಡು = ೧. ತಿಲಾಂಜಲಿಯನ್ನು ಬಿಡು; ತರ್ಪಣ ಕೊಡು. ೨. (ಅಲಂ) ಆಸೆಬಿಡು : "ಈ ಹಾಳು ಸರ್ಕಾರೀ ಕೆಲಸಕ್ಕೆ ಎಳ್ಳುನೀರು ಬಿಟ್ಟುಬಿಡಲೆ?" ಎಂದು ಒಂದೊಂದು ವೇಳೆ ಹಾರಾಡುತ್ತಿದ್ದರು (ರಾಗಿಣಿ. ೨). [ಎಳ್ಳು (< ಎಳ್) + ನೀರು$_1$ (< ನೀರ್$_1$)]

**ಎಳ್ಳುನೀರೆರೆ** 'ಎಳ್ಳುನೀರೆಱೆ' ನೋ.

**ಎಳ್ಳುನೀರೆಱೆ, ಎಳ್ಳುನೀರೆರೆ** (ಕ್ರಿ). ೧. ಎಳ್ಳುನೀರುಬಿಡು. ೨. (ಅಲಂ) ಆಸೆಬಿಡು ತೊರೆ : ಪಾರ್ವರೆಲ್ಲರುಂ "ಗೃಹಿಣೀ ಗೃಹಮುಚ್ಯತೇ" ಎಂಬುದು ಗರತಿಯಲ್ಲದೆ ಗೃಹಮಲ್ತೆಂದು ಗಾರ್ಹಸ್ಥ್ಯಕ್ಕೆಳ್ಳುನೀರೆಱೆದು (ಅರ್ಧನೇ. ೫-೩ ವ). **ಎಳ್ಳುನೀರೆರೆ**: ೨. ಅವರ ಸುಖ ಸಂತೋಷಗಳಿಗೆ ಎಳ್ಳುನೀರೆರೆದು (ಪುನರು. ೧೮೦).
[ಎಳ್ಳು (< ಎಳ್) + ನೀರ್$_1$ + ಎಱೆ$_1$]

**ಎಳ್ಳುರೇವಡಿ** (ನಾ). = ಎಳ್ಳುಚಿಗಳಿ (ಕ).
[ಎಳ್ಳು (< ಎಳ್) + ರೇವಡಿ]

**ಎಳ್ಳೆಣಿಸು** (ಕ್ರಿ). ಅಲ್ಪವಾಗಿ ಭಾವಿಸು : ಪಲರ್ ಮುನಿಯೆ ಫಲವಿಲ್ಲದುವ ಸೊಲ್ಪನೆಲ್ಲರುಮೆಳ್ಳೆಣಿಸಪಡುಗುಂ (ಕುಜಲ್. ೧-೨೦-೧).
[ಎಳ್ + ಎಣಿಸು]

**ಎಳ್ಳೆಣ್ಣೆ** (ನಾ). ಎಳ್ಳಿನಿಂದ ತೆಗೆದ ಎಣ್ಣೆ : ತಪ್ಪದೆ ಅಭ್ಯಂಗದ ಯೆಳ[ಳ್ಳೆ]ಣ್ಣೆ ಅಂಬಲದ (ಬೊಂಕಶಾ. ೧೯೦, ಕುಮುಟ. ೧೧೩-೩೨ ; 1475); ಎಲೆ ೫೦ ಎಳ್ಳೆಂಣೆ ತೇವರವೊಣಯಕ ರಂಗ ಪೂಜೆಗೆ (ಎಕ. VI, ಮೂಡಗೆ. ೮೦-೧೮ ; 1552); ತೈಲಂ - ಕುಂದುರುಷ್ಕ, ಎಳ್ಳೆಣ್ಣೆ (ಓಷಧಿ. ೬೨).
[ಎಳ್ಳು (< ಎಳ್) + ಎಣ್ಣೆ]

**ಎಳ್ಳೈಸು** (ಅ). ಎಳ್ಳಿನಷ್ಟು; ತೀರಸ್ವಲ್ಪ; ತುಸು : ಘಾಸಿಯಾದನು ಪವನಸುತನೆಳ್ಳೈಸು ಮಿಡುಕದು ಬಾಲ ಊರ್ಧ್ವಶ್ವಾಸ ಲಹರಿಯಲಡಿಗಡಿಗೆ (ಕುವ್ಯಾಅ. ೧೦-೧೮); ದನುಜರಿವರೆಳ್ಳೈಸು ಮಿಡುಕದ ತೆರದೊಳಸುವನು ಸೂರೆಗೊಳ್ಳುವನು (ರಾಮಾಸಂ. ೬-೧-೬೪).
[ಎಳ್ಳು (< ಎಳ್) + ಐಸು (< ಅಯ್ಸು)]

**ಎಱಂಕೆ, ಎರಂಕೆ, ಎರಕೆ$_1$, ಎಱಕೆ, ರೆಂಕೆ, ರೆಕ್ಕೆ, ಱೆಂಕೆ, ಱೆಕ್ಕೆ** (ನಾ). ೧. ಹಾರಲು ಸಹಾಯವಾಗುವ ಪಕ್ಷಿಗಳ ಪಕ್ಕ; ಛದ : "ತನೂರುಹಂ . . . ವಾಜಃ, ಪಕ್ಷಃ - ಈ ೯ ಎಱ(ಂ)ಕೆ" (ಹಲಾ ಯು. ೪೦-೮೬); "ಎಱಂಕೆಯೆಂದು ಪಕ್ಕಮೆಂದು ಪಕ್ಷ" (ಕಶಸಾ. ೬-೧೧೧); ಬಲರಿಪು ತನ್ನದೊಂದು ಬಲಗರ್ವದಗುರ್ವಿನೊಳೆಮ್ಮೆಱಂಕೆಯಂ ಕುಲಿಶದಿನೊರ್ಮೆ ಖಂಡಿಸಿದಂ (ಕಾವ್ಯಸಾ. ೪೬೪ ಶೂದ್ರಕ); ನೀರ್ವಕ್ಕಿಗಳೆಱಂಕೆಯಿಂದುದಿರ್ದ ಪನಿಗಳಿಂ ನಾಂದು (ಕಾದಂಪೂ. ೧೧೬); ಇಱುಂಪೆಗೆಱಂಕೆ ಮೂಡಿದಂತೆ (ಧರ್ಮಾಮೃ. ೯-೨೧೧); ಬಾಲವಿಹಂಗಂಗಳನೆಱಂಕೆಯೊಳಿಱುಂಕಿಕೊಂಡು ಪಾಱಲನುವಾಗಿ (ಗಿರಿಕ. ೧-೧೨೮ ವ); ಎಱಂಕೆಗಳ ಱಪಱಪದ ಕುಱುವು ತಾನ್ ಸ್ಪಷ್ಟಮಾಗಿರ್ದತ್ತು (ಅಂಶಿಗೊ. ೪೫-೯೨೬). **ಎರಂಕೆ**: ೧. "ಎರಂಕೆಯೆನಲ್ . . . ರೆಕ್ಕೆ" (ಕಶರ. ೯೬); ನಿಂದಿರು ಕುಲುಂಕದಿರೆರಂಕೆಗಳ (ಗಿಶಿಎಂ. ೧-೧). **ಎರಕೆ$_1$** : "ಎರಕೆ (=ಎರಂಕೆ)- ರೆಕ್ಕೆ, ಪಕ್ಕ" (ರಮ್ಯಾಕಾಂ. ೧೧೫). **ಎಱಕೆ**: ೧. ಅಲ್ಲಲ್ಲಿಗೆ ನಾಂದೆಱಕೆಗಳಂ ಬಿದಿರೆ ಕೆದಱುವ ತುಂತುಱುಂ ಮಂಜು ಮಸಗೆ (ಕಾದಂಉ. ೨೧೬); ತುಂತುಱುಂದೆಱಕೆ ನಾಂದಾಂದೋಳಿತಾಶೋಕಮಂಜರಿಯಂ (ಮಲ್ಲಿಪು. ೨-೩೬); ಹುಲಿಗೆ ಧೈರ್ಯವನೆಱಕೆಗಳನಹಿಗಳಿಗೆ ಖಳರಿಗೆ ಲಕ್ಷ್ಮಿಯನು (ಕುವ್ಯಾಕ. ೬-೬). **ರೆಂಕೆ**: ನಿಮ್ಮ ನೆನೆದೊಡಮನ್ನ ಗಾನದ ಹಕ್ಕಿ ರೆಂಕೆಯಂ ಮುದುರಿ, ಕಣ್ಣವೆ ಮುಚ್ಚಿ, ಕಾವು ಕೂರುವುದಳಲ ಮೊಟ್ಟೆಯ ಮೇಲೆ (ಭಾವಗೀ. ೩೬). **ರೆಕ್ಕೆ**: ಕಾಲಿಗೆ ರೆಕ್ಕೆ ಬಂದಿರುವಂತೆ ಹೋಗುತ್ತಿದ್ದೆ (ಬಾಣಅ. ೨೦); ರೆಕ್ಕೆಗಳನ್ನು ಮುದುರಿಕೊಂಡು ಆಕಾಶದಿಂದಿಳಿದು (ಜ್ಯೋತಿರ್ವಿ. ೭೪). **ಱೆಂಕೆ**: ನವಿಲ ಱೆಂಕೆಗಳ ಪಿಡಿದು ಕಿಳಲೀರ್ವರುಂ (ವೀಶೈಪು. ೨-೬-೧). **ಱೆಕ್ಕೆ** : ೧. ಖೇಚರರಾಜ ಱೆಕ್ಕೆಯನಳುರ್ಕೆಯಿನೆನ್ನೊಡನಾರುಮೆಯ್ದಿ (ನೇಮಿಪು. ೧-೧೨೦) ; ಱೆಕ್ಕೆಯ ಕೊಡಹಿ ಹಾರಿತು (ನಳಚ. ೨-೨೧) ; ಱೆಕ್ಕೆಪಂತಂ ಗರುಡಂ (ಶಬ್ದಾನು. ೪೦೨ ಪ್ರಯೋ). ೨. ತೋಳು; ರಟ್ಟೆ (ದಕ. ಪ್ರಾದೇ).

[ದೇ. ॥ ತಮಿ. ಇಱಕೈ, ಇಱಕು, ಇಱಕರ್, ಇಱಕ್ಕೈ; ಮಲ. ಇಱಕು, ಚಿಱಕು; ಕೊಡ. ರೆಕ್ಕೆ; ತುಳು. ಎಡಂಕೆ, ರೆಂಕೆ; ತೆಲು. ಎಱಕ, ಱೆಕ್ಕ, ರೆಕ್ಕ; ಕೋಲಾ. ರೆಡಪ, ರೆಪ್ಪಾ; ನಾಯ್ಕಿ. ರೆಕ್ಕ, ರೆಪ್ಪ; ಪರ್ಜಿ. ರೆಕ್ಕ]

**ಎಱಂಕೆವನಿ** (ನಾ). ರೆಕ್ಕೆಯಿಂದ ಉದುರಿದ ಹನಿ, —ತುಂತುರು: ಪಾಱುವ ಹಂಸಂಗಳೆಸೆವೆಱಂಕೆವನಿ (ಎಇ. XIII. ೩೩೧-೩೦ ; 929).
[ಎಱಂಕೆ + ಪನಿ$_1$]

**ಎಱಂಕೆವಿಡಿ** (ಕ್ರಿ). ರೆಕ್ಕೆಯನ್ನು ಅನುಸರಿಸಿ ಹಿಡಿ : ಪಾಱುವ ಪಕ್ಕಿಗಳೆಱಂಕೆ[ವಿಡಿದುದಿರ್ವ] ತಂಪನೀವ ತುಂತುರ್ವನಿಯ ತುಱುಗಲುಮಂ (ಕಾದಂಉ. ೫೨೬).
[ಎಱಂಕೆ + ಪಿಡಿ$_1$]

**ಎಱಂಗುಹ** 'ಎಱಗುಹ' ನೋ.

**ಎಱಕ$_1$, ಎರಕ$_1$** (ನಾ). ಪ್ರೀತಿ; ಪ್ರೇಮ; ಅನುರಾಗ : "ಎಱಕದಲಿ ಪ್ರಾರ್ಥ್ಯವೆಂದೆಂಬಭಿಧಾನಮಕ್ಕುಂ" (ಮಂಗರಾ. ೧೪೪-೨೪); "ತಕ್ಕು, ಅಚ್ಚಱು . . . ಎಱಕಂ, ಓವು - ಈ ೮ ಸ್ನೇಹಕ್ಕೆ ಪೆಸರ್" (ಕಶಸಾ. ೧೯-೩೯೦); ದರಹಸಿತಮುಪಱಾಯೆ ಪೇಟ್ಟುಮೆಱಕಮನೆರ್ದೆಯೊಳ್ (ಕವಿರಾ. ೩-೧೨೦); ದಿನಕರನುಮಿಂದ್ರನುಂ ನಿಜತನಯರ ದೆಸೆಗೆಱೆದೆಱಕದಿಂ ಗೆಲವಿನ ಮಾತನೆ ನುಡಿಯೆ (ಪಂಪಭಾ. ೧೨-೧೪೨); ಪಾಂಡವರೆಱಕನಿಮ್ಮೊಳು ಹಿರಿದು (ಕುವ್ಯಾಉ. ೧-೩೬); ಶ್ರೀರಘುಪ್ರವರಂ ಕಾಂತೆವೆರಸು ಕಟ್ಟೆಱಕದ ಸಲ್ಲಾಪದಿಂ ಬೈಗಿನೊಳ್ (ರಾಮಾಶ್ವ. ೨೧-೨೦). **ಎರಕ$_1$** : ಮರುಗುವ ಮರಿಗಾಗಿ ಎರಕವನೆರೆಯದ ಮರುಕವು ಮರುಕವೆ ರಾಮ ರಾಮಾ (ಸೂರ್ಯಪಾ. ೮೨-೩); ಒಂದು ಜತೆ ನಾಯಿಗಳಿದ್ದುವು . . . ಎಷ್ಟು ಎರಕವಿತ್ತು (ಬಾಳ್ವೆಬೆ. ೧೨).

ಎಱಕದವ = ಪ್ರೀತಿಪಾತ್ರನಾದವನು; ನಲ್ಲ; ಇನಿಯ : ಅರಸ ತಾನೇ ಹರಿಹರಿದು ತನ್ನೆಱಕದವರನು ಬಿಡದೆ ಸಲಹುವ ಕರುಣವೆಂತುಟೊ ರಾಯ ಗದುಗಿನ ವೀರನರಯಣನ (ಕುವ್ಯಾಅ. ೧೫-೩೧). [?]

**ಎಱಕ$_2$** (ನಾ). ಬಾಗುವುದು; ನಮಸ್ಕರಿಸುವುದು. 'ತಲೆಯೆಱಕ' ಪರಾ. [ಎಱಗು$_1$ + -ಕ$_3$]

**ಎಱಕಂಬೆಱು** (ಕ್ರಿ). ಪ್ರೀತಿಯುಕ್ತವಾಗು ; "ಎಱಕಂಬೆತ್ತು = ಎರಕ ಹೊಯ್ದು" (ಪಂಪಭಾ. ಕೋಶ) : ಪೃಥೆಯುಂ ಮದೀಯ ಸುತರೊಳ್ ವೈಕರ್ತನಂ ನನ್ನಿಯಂ ನಿಱಿಸಲ್ಕಾರ್ಕುಮಮೋಘಮೆಂದು ಮನದೊಳ್ ನಂಬಿರ್ದಳಿನ್ನಿಲ್ಲಿ ಪೆಂಪೆಱಕಂಬೆತ್ತಿರೆ ಕಾವೆನೆನ್ನ ನುಡಿಯಂ ಕೆಯ್ಕೊಂಡ ಕಟ್ಟಾಯಮಂ (ಪಂಪಭಾ. ೧೨-೧೯೮). [ಎಱಕ$_1$ + ಪೆಱು$_1$]

**ಎಱಕಲು** (ನಾ). ಸುರಿತ; ಜಲಪಾತ; ನೀರ್‌ಬೀಳು : ದೊಡ್ಡಗುಡ್ಡೆಯ ನೀರ ಎಱಕಲಿಂಪಂ ಪಡುವಲು (ಮೈಅರಿ. ೧೯೦, ೨೮-೧೬ ; 1509).
[< ಎಱಗು$_1$ + -ಕಲು$_2$ (< -ಕಲ್$_4$)]

**ಎಱಕು** (ನಾ). ನಾಳ; ಟೊಳ್ಳುಕಾಂಡ; "ದೊನ್ನೆ ; ಜೀರ್ಕೊಳವೆ" (ಪ್ರಭಣ್ಣ): ಕೈರವದೆಱಕಿನೊಳು ಲಸತ್ಕೈರವದ ಮಕರಂದಮಂ ಶೀವಿ (ಸಂದಿಮಾ. ೬–೩೨). [?. / ತಮಿ. ಇಱಕು = ಗರಿಯ ಕಾಂಡ]

**ಎಱಕುಮತಿ** (ನಾ). ಆಮದಿನ ಮೇಲೆ ಹಾಕುವ ತೆರಿಗೆ; ಆಯಾತ ತೆರಿಗೆ: ಕಪ್ಪಲಿಱೋಗು ಸಂಬಾನು ಮುಂತಾದ ಊರುಮೇಗಳ ಯೆತ್ತುಮತಿ ಎಱಕುಮತಿ ಸಹ ಪಡನಾಡ ಸುಂಕ (ಸೌ ಇ ಇ. IX–ii, ೫೫೧–೩ ; 1532). 'ಎತ್ತುಮತಿ' ಪರಾ. [← ತಮಿ. ಇಱಕ್ಕುಮತಿ]

**ಎಱಕೆ** 'ಎಱಂಕೆ' ನೋ.

**ಎಱಕೆವೆಟ್ಟು** (ನಾ). ರೆಕ್ಕೆಯುಳ್ಳ ಪರ್ವತ: ಗುಱಿವಂ ಪಕ್ಕಂ ನಿಜಕರ ಮೆಬಲ್ಪ ಪೆರ್ವಾವು ಕೋಡೆ ಕೋಡುಂಗಲ್ ಮತ್ತಿಱಿವ ಮದಮರ್ಬಿ ಯೆನೆ ಕಣ್ದೊಬಲಿಗೆ ನೆಲೆಯಾದುದೆಱಕೆವೆಟ್ಟನೆ ಕರಿಗಳ್ (ಚಂದ್ರ ಪು. ೧೦–೮೨). [ಎಱಕೆ (< ಎಱಂಕೆ) + ಬೆಟ್ಟು]

**ಎಱಗ**$_1$ (ನಾ). ಒಬ್ಬಾತನ ಹೆಸರು: ಕು[ಮಾ]ರ ಎಱಗನುಂ (ಎಇ. IX, ೨೧–೧೦ ; 800); ಕಾಮಶ್ರೀ ಎಱಗರ್ (ಎಕ. VII, ಶಿವಮೊ. ೪–೪೪ ; 1177); ಮಱಿದುಂ ಪರಸತಿಯರ್ಗಟ್ಟೆಱೆಳೊಳಚ್ಯುತನಲ್ಲದನ್ಯ ದೈವಕ್ಕಾರ್ಪಂ ಮಱಿಯಿಪ ನಿಜಧನಲೋಭಕ್ಕೆಱಗನೆಱಗನೆಱಗನೆಱಗನೃಪ ನೆನೆ ನೆಗಳ್ದಂ (ಎಕ. VIII, ಸೊರಬ. ೧೪೦–೨೨ ; 1198); ಎಱಗನೃಪತಿ ಯಾತ್ಮೋದ್ಭವಂ ಬಿಟ್ಟದೇವಂ (ಸೂಕ್ತಿಸು. ೧–೧೪). [?]

**ಎಱಗ**$_2$ (ನಾ). ಮರುಳ; ದಡ್ಡ ; ಎಗ್ಗ : ಎಱಗ ಹೋಗೇನೆಂದೊಡ ಱಿಯೆ ಪರಮಾತ್ಮನೇ ನೆಱೆ ನಿರ್ವಿಕಾರ ನಿರವಯವನಚಲ (ಮನೋವಿ. ೫–೧೮). [ಎಱಗು$_2$ + -ಅ$_7$]

**ಎಱಗಲ** (ನಾ). ನೊಣ (?): ಎಱಗಲನಾ ಪೇಲಿದೊರ್ಡಮೆಱಗುಗು ಮಱಿಯಲ್ಕೆ ಮೇಲೆ ಮತ್ತೆಱಗದು ಸಂದಱಿಕೆಯ ಕರ್ಪುರದಮಿರ್ದೊಡ ಮಱಿವಿಲ್ಲದ ಜಡರುಮದಱ ಸಮನಾಗಿರ್ಪರ್ (ಧರ್ಮಾಮೃ. ೨–೨೨೬). [?]

**ಎಱಗಲಿಭಂಡಿ** (ನಾ). ಒಂದು ಬಿರುದು (?): ತೊಱಹರ ಕುಳಕ್ಕೆ ತಿಳಕಂ ಬಱಿಸಿಡಿಲಿದಿರಾಂತ್ರ ವೈರಿಗಂ ಕೂರ್ಪರ ಜನಕ್ಕೆಱಗಲಿ ಭಂಡಿಯೆ ನಿಪ್ಪಂ ಕಟಿಮಱಿಯಿಲ್ಲದೊಳ್ಗಂಡ ಕಾವಗವುಂಡಂ (ಕಇ. I, ೨೪–೧೫ ; 1148). [?]

**ಎಱಗಾರಿ** 'ಎಱೆಗಾರಿ' ನೋ.

**ಎಱಗಿಸು, ಎರಗಿಸು**$_1$ (ಕ್ರಿ). ಎರಗುವಂತೆ ಮಾಡು; ನಮಸ್ಕರಿಸುವಂತೆ ಮಾಡು; ಬಾಗಿಸು: ಕೀಱಿ ನೆತ್ತಿಯೊಳ್ ಬಾಳಂ ನಿರ್ವರ ಮೂಱಿ ಚಲದಿನೆಱಗಿಸಲಿರೆ ಭರತಂಗೆಱಗುವೆಱಕಮಂಜಮೆಯಲ್ತೇ (ಆದಿಪು. ೧೪–೬೫); ಅರಿರಾಜ ಮಧುಕರ ಕದಂಬಮಂ ನಿಜ ಪದಾಂಬುಜಕ್ಕೆಱಗಿಸುವಂ (ಪಂಚತಂ. ೨೧೧–೧೩); ಮುಂಕೊಂಡ ಮಹಾವ್ರತಮಂ ಪಱಿಪಡಿಸದ ತೀವ್ರ ಪರಿಗ್ರಹಕ್ಕೊಂದಿನಿಸುಂ ಚಿತ್ತವನು ಎಱಗಿಸದ (ಜಯಕಾ. ೧–೫); ಅಗ್ರಜನ್ನ ಭಯದಲ್ಲಿದ್ದ ಸುಗ್ರೀವನ್ನ ತಂದು ಲಕ್ಷ್ಮಣಾಗ್ರಜನ್ನ ಪಾದಕಮಲಗಳಿಗೆಱಗಿಸಿ (ಪುರಂದ. ೧–೨೨೪–೧); ನಿಂದು ಪಂಚಾಗ್ನಿ ಮಧ್ಯದೆ ತಪಗೆಯ್ವರ ತಂದು ನಿನ್ನಡಿಗೆಱಗಿಸುವೆ (ಕಂಸವಿ. ೧೦–೫). **ಎರಗಿಸು**$_1$: "... ಬರಿಮೋಸ, ಬರಿವೇಷ. ಈ ಜನರ ಯಾವುದಕೆ ಎರಗಿಸಿದೆ !" ಎಂದು ಅವರೊಳಗೆ ತಳಮಳಿಸಿದರು (ನವರಾ. II, ೩೨).

ಎಱಗಿಸಿಕೊಳ್ = ನಮಸ್ಕಾರ ಮಾಡಿಸಿಕೊಳ್ಳು: ಹರಕೆಯ ನಭಿಷೇಕವ ಸೇಸೆಯನುಡುಗೊಱೆಯಂ ಭರವಸದಿಂ ಕೈಕೊಳುತಿನ್ನುಳಿದಾ ಸುರಪರಿವೃತ ಪರಮನನೆಱಗಿಸಿಕೊಂಬಾಸಕ್ತಿಯೊಳೆಯ್ದಿದನಾ ಸಭೆಗೆ (ವೀರೇಶ. ೧–೧೯). [ಎಱಗು$_1$ + -ಇಸು$_3$]

**ಎಱಗು**$_1$, **ಎರಗು, ಎರ್ಗು**$_1$ (ಕ್ರಿ). ೧. ಬಾಗು; ನಮಸ್ಕಾರಮಾಡು; ಅಡ್ಡಬೀಳು: "ಎಱಗು – ಪ್ರಣತೇ (ನಮಸ್ಕರಿಸು)" (ಶಮುಧಾ); ಪರಿಗತ ನಗೆಯಿಂದಿರ್ದಂ ಗುರು ನಾಣ್ಚುರದಿಂದಮೆಱಗಿ ಮುಖತಾವರೆಯಂ (ಕವಿರಾ. ೧–೫೯); ಮಹಾದೇವಿ ತಾನೆ ಕಾಲಂ ಕರ್ಚಿ ಭಟಾರಕರ್ಗೆಱಗಿ ಕುಳ್ಳಿರಿಸಿ (ವಡ್ಡಾರಾ. ೬೮–೧೨); ನಿಚ್ಚಂ ಪಿರಿದುಂ ಸದ್ಭಕ್ತಿಯಿಂ ಬಂದೆಱಗುವ ತೆಱದಿಂ (ಕಾದಂಪೂ. ೩೦೧) ; ಸಂಗಶರಣೆಂದವರ ಪದತಳಕ್ಕೆಱಗುತಂ (ಬಸರ. ೩–೧೩೨); ಗುರುವಿಂಗೆಱಗಿ ಕಲಿತರು ಸಕಲ ವಿದ್ಯೆಗಳ (ಕುವ್ಯಾಆ. ಓರಿಇ. ೧೬–೧೨೬). ೨. ಬೀಳು: ತಾನುಂ ಪಲವು ಎಸುವೆತ್ತು ಎಯ್ದೊದೊದಪ್ಪಿದಪ್ಪೊಲ್ಕಪಂಜರದೊಳೆಱಗಿ ಭೀಷ್ಮನ್ನಿಬ್ದನ್ತೆ ನೆಲಮುಟ್ಟದೆ ಬಿಱ್ದೋನಾನ್ (ಎಕ. VIII, ಸೊರಬ. ೧೦–೮ ; 800). ೩. ಮೇಲೆ ಬೀಳು; ಮುತ್ತು; ಆವರಿಸು: ಕಳ್ಳರ್ ಬಟ್ಟೆಗಟ್ಟಿ ಮೇಲ್ವಾಯ್ದೆಱಗಿ [ಪಾತಾಂ. ಇಱಿ]ದೊಡೆ (ವಡ್ಡಾರಾ. ೬೬–೧೪); ಅಳಿಯೆಱಗದನಿಲನಲುಗದ ರವಿಕರಂ ಪುಗದ ... ಮಾಸಲ ಮೊಗ್ಗೆಯಂ ಕೊಂಡು (ಬಸರ. ೩–೧೯); ಕಮಲಮನುಱಿದುಂ ಮಧುಭ್ರಾಂತಿಯಿಂಕಿಂಶುಕಕ್ಕೆಱಗುವ ಭ್ರಮರನಂತಿರೆ (ರಾಮಾಶ್ವ. ೩೪–೯). ೪. (ಮೇಲೆಬಿದ್ದು) ಹೊಡೆ; ಬಡಿ: "ಮೋದೆಂದುಂ ಮಾಱೆಂದುಂ ಎಱಗಿ ದನೆಂದುಂ ಎಱಗೆಂದುಂ ಪೊಯ್ವುದು" (ಕಶಸಾ. ೩೦–೬೪೪); "ಎಱಗೆನೆಮೋದೆನೆ ಪೊಯ್ದುದು" (ಕವಿಕಂ. ೨೫೧); ಎಱಗಿದಸುರನ ಗದೆಯ ಘಾಯಕೆ ತರಹರಿಸಿ (ಕುವ್ಯಾಆ. ಓರಿಇ. ೧೯–೯). **ಎರಗು**: ೧. ಎರಗುವೆ ನಿನಗೆ ಈಗಲೆ ಹೊರಗೆ ಪೋಪೋಪೋಪೋ (ಕಪಪು. ೨–೩೧); ಈಚಣ್ಣ ತಂದೆಯ ಅಡಿಗಳಿಗೆ ಎರಗಿದ (ಹಾಹುತ್ತ. ೯೪). ೨. ಉರುಬಿನಿಂದಾ ಬರುವ ಕುರಿಗಳು ಎರಗಿ ಬರುತಿಹ ಗಂಡುಮೃಗಗಳು . . . ಬಳಸಿ ಮೆರೆದವರಣ್ಣದಿ (ಗೋಹಾಡು. ೩–೧೫); ಬರಸಿಡಿಲುಗಳು ಎತ್ತೆತ್ತಲೂ ಎರಗಲಾರಂಭಿಸಿದುವು (ಬದುಕಿ. ೧೪). **ಎರ್ಗು**$_1$: ೧. ಮಾರ್ಗಸಂಸರ್ಗ ನೃಪರೊರ್ಗದಿಂ ಕಾಣ್ಕೆ ಸಹಿತೆರ್ಗುತಂ ಸಹಕಾರ ಸಾರ್ಗುತಂ (ಜಿನಮು. ೩೨–೮).

ಎರಗಿಬೀಳು = ಮೇಲೆ ಬೀಳು; ಆಕ್ರಮಿಸು: ಅಣ್ಣನ ಮೇಲೆ ಹೀಗೆ ಎರಗಿ ಬೀಳುವನೆಂದು ಕಲ್ಪಿಸಿಕೊಳ್ಳುತ್ತಲೂ ಇರಲಿಲ್ಲ (ಅಲಹೂ. ೬೬).

[ದೇ. ‖ ತಮಿ. ಇಱಞ್ಚು, ಇಱಕ್ಕು ; ಮಲ. ಇಱಕ್ಕು ; ತುಳು. ಎರಗು ; ಕೊಡ. ಎರಂಗ್ ; ತೆಲು. ಎರಗು, ಎಱಗು ; ಕುವಿ. ರೆಚಲಿ, ರೇನ್ಸ ; ಬ್ರಾಹೂಈ. ದರಿಂಗ್, ದಾರಿಂಗಿಂಗ್, ದಾರಂಗಿಂಗ್]

**ಎಱಗು**$_2$ (ನಾ). ಮೂರ್ಖತನ; ದಡ್ಡತನ: "ಪಡಿವಡಿಕೆ ಗಾಂಪತನವೆಱಗು" (ಶಬ್ದಮಂ. ೮೫). 'ಎಗ್ಗು' ಪರಾ. [?]

**ಎಱಗುಹ, ಎರಗುಹ, ಎಱಂಗುಹ** (ನಾ). ಮೇಲೆ ಬೀಳುವಿಕೆ: "ತೆಂಗುಹಂ = ಹಕ್ಕಿಯೆಱಗುಹಂ" (ಶಮುದ. ಪರಿ. ೨). **ಎರಗುಹ**: ಗರುಡದೇವನೆರಗುಹಕ್ಕೆ ಹೆದರಿದ ಮೂಷಕ (ಬಿಟ್ಟಅ. ೧೮೯–೨೬). **ಎಱಂಗುಹ**: "ತೇಂಗುಹಮೆಂದೆನೆ ಪಕ್ಕಿಯೆಱಂಗುಹಂ" (ಚತುನಿ. ೧೦೨). [ಎಱಗು$_1$ + -ಹ$_2$]

**ಎಱಚಟ್ಟಿ** (ನಾ). ಒಬ್ಬಾತನ ಹೆಸರು: ನಾಗರಖಣ್ಡ ಎಪ್ಪತ್ತಕ್ಕೆ ಎಱಚಟ್ಟಂ ನಾಱ್ಗಾವುಣ್ದುಗೆಯ್ಯಲ್ (ಎಕ. VIII, ಸೊರಬ. ೪೦೮–೪ ; 951). [ಎಱ ? + ಚಟ್ಟ$_4$]

**ಎಱಚು, ಎರಚು** (ಕ್ರಿ). ಚಿಮುಕಿಸು; ಚೆಲ್ಲು; ಸುರಿ: ತಣ್ಣನಿರ್ಪ ನೀರಂ ಪೊಕ್ಕಿರಲುಂ ಮೇಲೆಱಚಿಕೊಳಲುಂ ಮನಮಾಗಿ ವಿರಹಾನಳನಿಂದಿರಲಾಱದೆ (ಧರ್ಮಾಮೃ. ೧೩–೧೦೬). **ಎರಚು**: ಮನೆಯ ದಿರೇ ಹೊಲದಲಿ ಎರಚಿದವೋಲಿದೆ ಬಿಳಿ ಅಕ್ಕಿ (ಅನಿಕೇ. ೪೬–೪); ಎಣಿಕೆಗಳು ಮೇಲೆರಚಿದ ಭತ್ತದ ಕಾಳುಗಳಾದವು (ನಡೆದಾ. I, ೪೪೪); ತಲೆಯ ಮೇಲೆಮಣ್ಣು ಎರಚಿಕೊಂಡನು (ಪುಟ್ಟರ. ೬೩).

ಎರಚಾಡು =(ಒಬ್ಬರ ಮೇಲೊಬ್ಬರು) ಎಸೆದಾಡು; ಚೆಲ್ಲಾಡು : ರಂಗದ ಬೀದಿಯಲ್ಲೇ ಇರುವ ಓಕುಳಿಗುಂಡಿಯಲ್ಲಿ ಅರತಿ ನೀರು (ವಸಂತ) ಮಾಡಿ ತುಂಬಿ ಪರಸ್ಪರ ಎರಚಾಡುವರು (ಹುಟ್ಟ ಹ. ೫೦); ಭೀಮಸೇನನು ಓಟ, ಆಟ, ಊಟ—ಕೊನೆಗೆ ಮಣ್ಣೆರಚಾಡುವುದು—ಎಲ್ಲದರಲ್ಲಿಯೂ ಎಲ್ಲರನ್ನೂ ಮೀರಿಸಿದ್ದನು (ವಚಭಾ. ೧೬).
[ದೇ. ‖ ತಮಿ. ಇಱೈ, ಎಱು; ಮಲ. ಎಱು]

**ಎಱತಿ** (ನಾ). ಒಡತಿ; ಯಜಮಾನಿ; ಪ್ರಿಯೆ : ಎನ್ನೆಱತಿ! ಇಂತಾಡಿದ ಮಕ್ಕಳ ಮಾತಂ ಕೇಳ್ದು ಸೀತೆ (ರಾಮಾಶ್ವ. ೧೫೫–೧೦).
[ಎಱೆಯ + -ತಿ$_1$ (< -ಇತ್ತಿ)]

**ಎಱನಾಗ** (ನಾ). ಒಬ್ಬಾತನ ಹೆಸರು : ಕೂಡಲೂಪ್ಪಾರ್ಡಿ ಒಡೆಯನನ್ದಿಕಾದನಾ ಎಱನಾಗನಾ ವ್ಯವಹಾರದನ್ತರಂ ಸಾಲಮಿಲ್ಲಾವ್ (ಎಕ. X, ಕೋಲಾರ. ೬–೩; 760). [?]

**ಎಱಪೊೞ್** (ಕ್ರಿ). (?) : ಸುರಿವುತ್ತಿೞ್ದುದಂ ಕಣ್ದು ಕೀೞ್ಗುಣ್ಯೆಯಾಗಲ್ಕ[ಡ]ದುದಮಂ ಕುಡುವೆನೆನ್ದು ಪಿಡಿಖಣ್ದ[ಂ]ಗೊಣ್ದು ದೆಸೆವಲಿಗೆಱಪೊೞ್ದು ಕ[ರು]ಳ ಬೋ[ನಿಡಿ]ಗಲ್ಲೊಳಿಕ್ಕಿ ಎೞ್ದಿ[ಯ]ಮಗೆ ಪಲ [ಮ್ಮಾರ್]ಡಿ (ಸೌಇಇ. XI–i, ೧೧–೨೧; 865). ☞ ಈ ಪ್ರಯೋಗ 'ದೆಸೆವಲಿಗೆದಱು ಪೋೞ್ದು' ಎಂದಿರಬಹುದು. [?]

**ಎಱಮ್ಮ** (ನಾ). ಒಬ್ಬಾತನ ಹೆಸರು : ವಿಜಯಾದಿತ್ಯರ ಈ ನಾಡು ಆಳ್ವನ್ದು ಆವರಾಳ್ಗಣ್ಣವೂರೊಳೆ ಎಱಮ್ಮನಾಸನ್ದಿ ಅಳೆ ಆ ಎಱಮ್ಮನುಂ ಆಯ್ವದಿಮ್ಬರುಂ (ಎಕ. VI, ಕಡೂರು. ೧೪೫–೪; 750).
[ಎಱ ? + ಅಮ್ಮ$_1$]

**ಎಱಯಪ** 'ಎಱೆಯಪ' ನೋ.

**ಎಱವಟ್ಟು** 'ಎಱೆವಟ್ಟು' ನೋ.

**ಎಱವಿಕ್ಕು** (ಕ್ರಿ). ಎರಕವಿಕ್ಕು, —ಹಾಕು; ಅಚ್ಚಿನಲ್ಲಿ ಹೊಯ್ಯು : ಎಱವಿಕ್ಕಿದ ಬೆಲ್ಲದವೊಲಪೂರ್ವಮಾಗೆ ಪೇೞ್ದಂ ಕೃತಿಯಂ (ಛಂದೋಂಬು. ೧–೮). [ಎಱ$_0$ + ಇಕ್ಕು]

**ಎಱವೆಟ್ಟು** 'ಎಱೆವಟ್ಟು' ನೋ.

**ಎಱು** (ಕ್ರಿ). ೧. ಮೊನಚಾದ ಸಾಧನದಿಂದ ತಿವಿ; ಚುಚ್ಚು; ನೋಯಿಸು; ಹೊಡೆ: ಕೇಕಯ ಪಲ್ಲವರಂ ಕಾದೆಱುದು ಪೆತ್ತಜಯನಾ ವಿಜ ಅರಸನ್ಗೆ (ಮೈಆರಿ. ೧೯೩೬, ೧೬–೧೧; 450); ದೇವದಣ್ದದಿಂದೆಱುವೆಪ್ಪಡು ವೋರುಂ (ಎಕ. VI, ಕೊಪ್ಪ. ೩೮–೧೧; 675). ೨. ಯುದ್ಧಮಾಡು; ಹೋರಾಡು : ಜತ್ತ ತಳವಾರ ಪೊಗುಣ್ದಿ ಕಾಳೆಗದುಳ ಎಱುದು ಸತ್ತ (ಎಕ. IX, ನೆಲಮಂ. ೩೪–೫; 750); ಇನ್ದಿರಾನ್ ಎಱುದೊಡೆ ಪರಸುರಾಮನ್ ಎಱೆದು ಬಿಟ್ಟನ್ (ಸೌಇಇ. IX–i, ೪೦೦–೩; 8ನೆಯ ಶತ). 'ಇಱು$_1$' ಪರಾ. [ದೇ. ‖ ತಮಿ. ಮಲ. ಎಱು]

**ಎಱುಗಾರಿ** 'ಎಱೆಗಾರಿ' ನೋ.

**ಎಱುಗಲು** (ನಾ). ಗಾಢತೆ; ಸಂಮರ್ದ (?): ನೆಳಱುಮಂ [ಪಾಠಾಂ. ನಳಿರುಮಂ] ಕಳಱುಮನೆಱುಗಲುಮಂ [ಪಾಠಾಂ. ತಳಿರುಮಂ ನರಗಲುಮಂ, ತಳಱುಮನೆಱಗಲುಮಂ, ತಳಿರುಮಂ ನೆರೆಗಲ್ಲುಮಂ] ಗಿಡುದುಱುಗಲುಮಂ ದರಿಯುಮಂ ಕುಮ್ಮರಿಯುಮಂ (ಲೀಲಾವ. ೬–೧೯ ವ).
[?]

**ಎಱೆ$_1$, ಎರೆ$_1$** (ಕ್ರಿ). ೧. (ದ್ರವ ಪದಾರ್ಥವನ್ನು) ಸುರಿ; ಹೊಯ್ಯು; ಹಾಕು : "ಎಱೆ – ದ್ರವದ್ರವ್ಯದಾನೇ (ಸುರಿ) ಪತಿತ್ವೇಚ (ಒಡೆತನ)" (ಶಮಧಾ); ಈತಂಗೆ ನೀಂ ಬಸಿಱ್ ತೀವೆ ಬಡ್ಡಿಸದಿರ್ ಎಣ್ಣೆಯಂ ತಿಣ್ಣಮೆಱೆಯದಿರ್ (ವಡ್ಡಾರಾ. ೭೭–೬); ತಗುಳ್ದು ಪಾಲನೆಱೆವಿರ್ ಪಾವಿಂಗೆ ದಾಯಾದ್ಯರಂ ಪಿರಿಯರ್ಮಾಡಿದಿರ್ (ಪಂಪಭಾ. ೨–೮೯); ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿನೀರನೆಱೆದವರಾರಯ್ಯ (ಮಹಾದೇ. ೧–೧); ಗರುಡನೂರವರೆಱೆವರೇ ನಾಗರಿಗೆ ಕ್ಷೀರನಿಯನು (ಕುವ್ಯಾದ್ರೋ. ೮–೫೪). ೨. ಅಭ್ಯಂಜನ ಸ್ನಾನಮಾಡಿಸು : ಇಡೆ ತೊಟ್ಟಿಲಿಲ್ಲಾಡಿಸುವರಿಲ್ಲ . . . ಬಿಡದೆಱೆವ ನೀರ್ಕುಡಿವಾಲ್ಗಳೆಣ್ಣೆಬೆಣ್ಣೆಗಳಿಲ್ಲ (ಜೈಮಿಭಾ. ೨೮–೧೭). **ಎರೆ$_1$** : ೧. ಧಾರೆಯನೆರೆದು ಪಾಲಿಸ್ತವಾಗಿ (ಮೈಆರಿ. ೧೯೩೪, ೫೧–೧೯; 1640); ಕೆನೆಯನೆರೆದು ಸಲಹಿರೆ (ವಿಸೀಗೀ. ೬೩–೧೮). ೨. ವೇಣಕ್ಕ ವಸಂತರಾಯನಿಗೆ ಮೈಯೆಲ್ಲ ಎಣ್ಣೆ ತಿಕ್ಕಿ ಎರೆದಳು (ಗಂಮಾಯಿ. ೭೨); ಎರೆಯೆ ನೀರಿಲ್ಲ; ಕುಡಿಸೆ ಹಾಲಿಲ್ಲ (ಚಂದ್ರಸ. ೧೭–೧೫).

**ಎಱೆಕೊಳ್** = ಸ್ನಾನಮಾಡು; ಎಣ್ಣೆ ಸ್ನಾನ ಮಾಡು : ತುರುಕರ ನೀರ ಎಱೆಕೊಂಡು ನಮ್ಮದೇವ ಎಱೆಕೊಂಡ ನೀರೆಲ್ಲ ಸನಕಾದಿಗಳಿಗೆ (ಪುರಂದ. ೧–೧೭೯–೭). [ದೇ. ‖ ತಮಿ. ಎಱು, ಇಱೈ; ಮಲ. ಇಱೆ]

**ಎಱೆ$_2$** (ಕ್ರಿ). ಮೀರು; ಅತಿಶಯವಾಗು; ಪ್ರಧಾನವಾಗು : ಬೆಳುಗರೆನಾಡೊಳ್ ಪುಟ್ಟಿದ ಬಳೆಗಾಱರ ಕುಲದೊಳೆಱೆದ ಜಿನಶಾಸನಮಂ ಬೆಳಗುವ . . . ಕವಿರತ್ನಂ (ಅಜಿಪು. ೧೨–೪೫). [?. / ತಮಿ. ಇಱ]

**ಎಱೆ$_3$** (ನಾ). ಆಶ್ರಯ. 'ಎಱೆವಟ್ಟು', 'ಎಱೆವಿಡಿ' ಪರಾ. [?]

**ಎಱೆ$_4$** (ನಾ). ೧. ಪ್ರಭುತ್ವ; ಒಡೆತನ: "ಎಱೆ – ದ್ರವದ್ರವ್ಯದಾನೇ (ಸುರಿ) ಪತಿತ್ವೇಚ (ಒಡೆತನ)" (ಶಮಧಾ); ಕಾಮನೆಱೆ ಮೆಯ್ವೆರ್ಚಿತ್ತು (ಪಂಪಭಾ. ೪–೪೨). ೨. ಒಡೆಯ; ಯಜಮಾನ; ಅಧಿಪತಿ : ಶಾನ್ತಿಸೇನ ಮುನೀಶನಾಕ್ಕಿಎ ವೆಳ್ಗೊಳ ಅದ್ರಿಮೇಲಶನಾದಿವಿಟ್ಟು ಪುನರ್ಭವಕ್ಕೆಱೆ ಆಗಿ (ಎಕ. II, ೩೧–೪; 650).

**ಎಱೆಅಪ್ಪೋರ್** = ಒಬ್ಬಾತನ ಹೆಸರು : ದುರ್ವಿನೀತೆಱೆ ಅಪ್ಪೋರ್ ಕೊಸರು ಪುೞ್ಕೆಱುದಿದಿರುಪಯ್ದುಗಿದಿಡಿದಿರುದರಿನ್ (ಮೈಆರಿ. ೧೯೩೦, ೩೬–೪; 800). ☞ 'ಎಱೆಯಪ್ಪ$_2$' ಎಂಬುದರ ಹಿಂದಿನ ರೂಪ. [ದೇ. ‖ ತಮಿ. ಇಱೈ; ಮಲ. ಇಱಾನ್, ಱಾನ್]

**ಎಱೆಗಂಗ** (ನಾ). ಒಬ್ಬಾತನ ಹೆಸರು : ಎಱೆಗಙ್ಗ ನಾಮಧೇಯಃ (ಇಆ. XIV, ೨೩೨–೪೯; 9ನೆಯ ಶತ); ಎಱೆಗಙ್ಗಮಹಾಮಾತ್ಯಂ (ಎಕ. II, ೧೫೦–೩; 950). [ಎಱೆ ? + ಗಂಗ$_2$]

**ಎಱೆಗಂಗಗಾಮುಂಡ** (ನಾ). ಒಬ್ಬಾತನ ಹೆಸರು : ಮುದುಗುಪ್ಪೆಯ ಮಾರಸಿಙ್ಗಗಾಮುಣ್ಡರುಂ ಎಱೆಗಙ್ಗಗಾಮುಣ್ಡರುಂ (ಎಕ. XIV, ಶ್ರೀರಂಗ. ೧೬೦–೧೮; 800). [ಎಱೆಗಂಗ + ಗಾಮುಂಡ]

**ಎಱೆಗಂಗಯ್ಯ** (ನಾ). ಒಬ್ಬಾತನ ಹೆಸರು : ಬರಗೂರೊಳೆ ಎಱೆಗಙ್ಗಯ್ಯ ಸಗ್ಗಮೇಱುದೊಡೆ (ಸೌಇಇ. IX–i, ೪೦–೮; 977).
[ಎಱೆಗಂಗ + ಅಯ್ಯ$_1$]

**ಎಱೆಗಗೊಳ್ಳಿನಾಡು** (ನಾ). ಒಂದು ಪ್ರದೇಶದ ಹೆಸರು : ಬಿಟ್ಟಗ ಎಱೆಗಗೊಳ್ಳಿನಾಡ ನಾೞ್ಗಾಮಿಗರ್ (ಎಕ. VIII, ಸೊರಬ. ೫೪೨–೨; 800). [ಎಱೆಗಗೊಳ್ಳಿ ? + ನಾಡು]

**ಎಱೆಗಾರಿ, ಎಱಗಾರಿ, ಎಱುಗಾರಿ** (ನಾ). ಒಬ್ಬಾತನ ಹೆಸರು : ಎಱೆಗಾರಿಯ ಓಜಂ ಬೆಸಗೆಯ್ದ (ಎಕ. VIII, ಸೊರಬ. ೪೫೭–೮; 972). **ಎಱಗಾರಿ** : -ಬೆಸಗೆಯ್ದ ಎಱಗಾರಿ ಓಜಕ (ಎಕ. VIII, ಸೊರಬ. ೪೫೪–೯; 973). **ಎಱುಗಾರಿ** : ಶ್ರೀಮತ್ ಪೆರ್ಮ್ಮಾನಡಿಗಳ್ ರಾಜಾದಿತ್ಯನ ಕಾಳಗದೊಳೆ ದೇವಯ್ಯನಳಿಯ ಎಱುಗಾರಿ ಸತ್ತೊಡೆ (ಎಕ. V, ಚನ್ನರಾ. ೨೬೨–೧೪; 971). [?]

**ಎಱೆಗೋಲು** (ನಾ). (ಮಳೆಯಂತೆ) ಸುರಿಯುವ ಬಾಣ : ಅನುಂಟು ತೋಳ್ವಲರ್ ನೀಮುಂಟು ಇಂತಿದೆನ್ನ ಸಜ್ಜಿನೆಱೆಗೋಲ ಸವಿಯಂ ಇನಿಸಿನಿಸುಂ ಕಾಣಿಮೆಂದು (ರಾಮಾಶ್ವ. ೧೪೫–೧೫).
[ಎಱೆ$_1$ + ಕೋಲು$_1$ (< ಕೋಲ್$_1$)]

**ಎಱೆತನ, ಎಱೆತ್ತನ** (ನಾ). ದೊರೆತನ; ಒಡೆತನ: ಒಳವೆನಿತೊ ಭಾಗ್ಯಂಗಳೆಱೆತನಕೆ (ಅಂತಿಗೊ. ೨೩–೪೮೩). **ಎಱೆತ್ತನ:** ದೇವ ಮಣ್ಣು ವಾನ್ಪಾರ ಎ ಜೆ ತ್ತ ನಮೆ ಅದಾನ್ ಅಱೆತ್ತೋನ್ (ಎಕ. IV, ಹೆಗ್ಗಡ. ೮೭–೮ ; 780 ?). [ಎಱೆ$_4$ + –ತನ. / ತಮಿ. ಇಱೈತ್ತನಂ]

**ಎಱೆತನಿಗ** (ನಾ). ಪ್ರಭುತ್ವದಲ್ಲಿ ವ್ಯವಹರಿಸುವವನು; ರಾಜ ಸಂಬಂಧಿ: ಸಾಮಂತ ಮಹಾಸಾಮಂತ ಪರಿವಾರದೆಜ[ಱೆ]ತನಿಗರ ಪಾರ್ವರ ಪರದರೊಳ್ವೆಂಡಿರ್ಕಳೆಲ್ಲರುಮಂ (ವಡ್ಡಾರಾ. ೧೬೬–೬).
[ಎಱೆತನ + – ಇಗ]

**ಎಱೆತಿಮಸ** (ನಾ). ಒಬ್ಬಾತನ ಹೆಸರು: ಇಸದಿಗಳ್ಗೆ ಕೊಟ್ಟೊದು ಎಱೆತಿಮಸ ಕೊಟ್ಟುದು (ಎಕ. VII, ಶಿಕಾರಿ. ೪೫–೬೩; 890).
[ಎಱೆ$_4$ + ತಿಮಸ$_0$ (< ತಿಮ್ಮರಸ)]

**ಎಱೆತ್ತನ** 'ಎಱೆತನ' ನೋ.

**ಎಱೆಪ್ಪರಸ, ಎಱೆಪ್ಪೆರಸ** (ನಾ). ಒಬ್ಬಾತನ ಹೆಸರು: ಶ್ರೀಮದೆಱೆಪ್ಪರಸರ್ ಸತ್ಯವಾಕ್ಯಪೆರ್ಮ್ಮಾನಡಿಗಳ್ಪೃಥುವೀ ರಾಜ್ಯಂಗೆಯ್ಯೆ ಎಱೆಪ್ಪರಸರ ಗೋವಿನ್ದರಸರು(ಎಕ. V, ಚನ್ನರಾ. ೨೫೧–೬; 925). **ಎಱೆಪ್ಪೆರಸ:** ಶ್ರೀಮದೆಱೆಪ್ಪೆರಸರ್ ನುಗುನಾಡು ನವಲೆನಾಡುಮೂನಾಳುತ್ತಮಿರೆ (ಎಕ. IV, ಹೆಗ್ಗಡ. ೧೦೩–೫; 910). [ಎಱೆ$_4$ + ಅಪ್ಪ$_1$ + ಅರಸ$_1$]

**ಎಱೆಪ್ಪೆರಸ** 'ಎಱೆಪ್ಪರಸ' ನೋ.

**ಎಱೆಬೀರಯ್ಯ** (ನಾ). ಒಬ್ಬಾತನ ಹೆಸರು: ಶ್ರೀ ಗೊಗ್ಗಿಯ ಮನೆವಗತಿ ಎಱೆಬೀರಯ್ಯ (ಎಕ. III, ಮೈಸೂರು. ೪೧–೧; 990).
[ಎಱೆ$_4$ + ಬೀರ + ಅಯ್ಯ$_1$]

**ಎಱೆಯ, ಎರೆಯ** (ನಾ) ೧. ಒಡೆಯ; ಯಜಮಾನ; ಪ್ರಭು: "ಆಣ್ಮಂ, ಎಱೆಯಂ, ಬಲ್ಲಹಂ— ಈ ೩ ಅಧಿಪತಿಗೆ ಪೆಸರ್" (ಕಶಸಾ. ೧೬–೩೨೦); "ಆಣ್ಮೆಱೆಯ ಬಲ್ಲಹಂ ವಲ್ಲಭ ತಾನಧಿಪತಿಗೆ ನಾಮಮಕ್ಕುಂ" (ಕವಿಕಂ. ೧೪೮); ಉಜ್ಝರಾಧಾ (?ವಾ) ಸವೆಱೆಯರುಂ (ಇಆ. XI, ೭೦–೧೭; 567); ಸುರಗೆಯೂರಾ ದೆಸೆಮ್ಮೆಱೆಯರ್ (ಎಇ. VI, ೧೬೧–೩; 765); ಎಣ್ಬಾಸಿರ್ವರ್ ಅರಸಿಯರ್ಕಳ್ಗಮೆಱೆಯನಪ್ಪೊಂ (ವಡ್ಡಾರಾ. ೧೫೭–೧೧); ಬಿಡುಗಣ್ಣರೆಱೆಯಂ ವಿಶ್ವನಾಥಂ (ಪದ್ಮರಾ. ೭–೩೫). ೨. ಪ್ರೀತಿಪಾತ್ರ; ಇನಿಯ: ತನ್ನೆಱೆಯನೊಳೊಲ್ದು ಕೋಪಿಸುವ ಕಾಮಿನಿಗೀ ಮುನಿಸೊಂದೆ ಸಾಲದೇ (೧೦ಕ. ೪–೧೪೮). **ಎರೆಯ:** ೧. ಚೆಲುವರೆರೆಯನು ನಿನಗೆ ವಲ್ಲಭನಾಗಲಿಯೆಂದರು ಸೇಸೆಯಿಟ್ಟು (ಕರ್ಣಾಕ. ೨೨೬). ೨. "ಎರೆಯನೆನಲಿನಿಯನ್" (ಕಶಕ. ೧೧೮); ನನ್ನೆರೆಯನಾ ರೂಪು ನನ್ನೆರೆಯನಾ ನೋಟ . . . ಎಲ್ಲ ಇಲ್ಲಿಹವು (ಯಶೋಧ. ೩).

ಎಱೆಯಳ್ = ಒಡತಿ; ನಲ್ಲೆ; ರಾಣಿ: ಮನಸಿಜನೆಱೆಯಳ್ ಮಕರಂದ ಸಾರದಿಂ ನುಣ್ಣಿಪ್ಪವೊಲ್ (ಉದ್ಭಟ. ೮–೧೬); ಅಱಿದನನಿತಱ ಮೇಲೆ ನಭದಲಿ ಮೊರೆಯಿಡುತ ಹೋದರಸಿ ರಘುನೃಪನೆಱೆಯಳೆಂಬುದ ನೊಯ್ದವನು ದಶಕಂಠನೆಂಬುದನು (ತೊರರಾ. ೪–೨–೫).
[ಎಱೆ$_4$ + –ಅ$_7$. / ತಮಿ. ಇಱೈವನ್]

**ಎಱೆಯಂಗ** (ನಾ). ಒಬ್ಬಾತನ ಹೆಸರು: [illegible]ಱೆಯಂಗನುಂ (ಎಕ. III, ನಂಜನ. ೧೩೦–೨; 900); ಅದಟನೆಱೆಯಂಗ ನ್ರಿಪಂ (ಎಕ. II, ೧೪೩–೧೪; 1131); ವಿಶ್ವಮೇದಿನಿಯಂ ತಾಳ್ದಿದನಾಜಿವೀರನೆಱೆಯಂಗಂ (ಸೂಕ್ತಿಸು. ೧–೧೩). [?]

**ಎಱೆಯಂಗಗಾಮುಂಡ** (ನಾ). ಒಬ್ಬಾತನ ಹೆಸರು: ಮಿಂದೆಯ ಉಮ್ಮಾಧಗಾಮುಣ್ಡರುಂ ಎಱೆಯಙ್ಗಗಾಮುಣ್ಡರುಂ (ಎಕ. IV, ಎಡತೊ. ೩೦–೭೦; 390). [ಎಱೆಯಂಗ + ಗಾಮುಂಡ]

**ಎಱೆಯಂಗಪ್ಪ** (ನಾ). ಒಬ್ಬಾತನ ಹೆಸರು: ಗಂಗರ ವಂಶಾಧಿಪತಿ ಮಾದಿವರ್ಮ್ಮವಟ್ಟಕ್ಕರ್ಹನಪ್ಪ ಸಯ್ಯಾಂತ ಎಱೆಯಂಗಪ್ಪನ ಮಗಂ ಮಾಚಿಗಂ (ಎಕ. IV, ಹೆಗ್ಗಡ. ೧೧೦–೧೦; 900).
[ಎಱೆಯಂಗ + ಅಪ್ಪ$_1$]

**ಎಱೆಯಣ್ಣಪೆರ್ಮಾಡಿ** (ನಾ). ಒಬ್ಬಾತನ ಹೆಸರು: ಪುಟ್ಟಗಾವುಣ್ಡನುಂ ಎಱೆಯಣ್ಣಪೆರ್ಮಾಡಿ ಕೆಱೆಯ ಕಟ್ಟೆ (ಮೈಆರಿ. ೧೯೩೨, ೧೧–೪; 886) [ಎಱೆ$_4$ + ಅಣ್ಣ$_0$ (< ಅಣ್ಣ$_1$) + ಪೆರ್ಮಾಡಿ]

**ಎಱೆಯನಕಾಡಿಯೂರ್** (ನಾ). ಒಂದು ಊರಿನ ಹೆಸರು: ℙ ಈಗಿನ ಧಾರವಾಡಜಿಲ್ಲೆಯ ಕಳಸ: ಎಱೆಯನ ಕಾಡಿಯೂರಂ (ಎಇ. XIII, ೩೩೧–೨೪; 929). [ಎಱೆಯ + ಕಾಡಿಯೂರ್]

**ಎಱೆಯನಾಗಮ್ಮ** (ನಾ). ಒಬ್ಬಾತನ ಹೆಸರು: ಎಱೆಯನಾಗಮ್ಮಱ್ಗೆ ಗೊಟ್ಟ ಮಣ್ಣು ಪತ್ತುಂ ಮತ್ತರ್ (ಎಕ. VI, ಚಿಕ್ಕಮ. ೧೩೩–೧೨; 893).
[ಎಱೆಯ + ನಾಗ + ಅಮ್ಮ$_1$]

**ಎಱೆಯಪ, ಎಱಯಪ, ಎಱೆಯಪ್ಪ$_2$** (ನಾ). ೧. ಒಂದು ಕ್ಷುದ್ರ ದೇವತೆಯ ಹೆಸರು; "ಮರುಳ್, ಪಿಶಾಚಿ" (ಪ್ರಭಣ್ಣ): ಕೃತ್ಯೆಯ್ಯನೆಱೆಯಪಂ ಮನೆಯದೈವಂ ಜಲಜಕ್ಕಿಯರ್ ಸೋಂಕಿದರೆಂದು (ಮದತಿ. ೮–೪೭); ಚಂಡಿಕೆ ನುಂಗುಗೆ ಮಿಟ್ಟು ತುತ್ತುಗಟ್ಟುಸುಗೆ ಕಾಳಿ ಕೊಳ್ಗೆಱೆಯಪಂ ಮುಱಿದಿಕ್ಕುಗೆ (ಲೀಲಾವ. ೨–೧೦೬); ಉಂತೆಯಾಡುವಂಗೆಱೆಯಪನಾದೊಡಂ ಉಂತೆ ಕೊಲ್ವ ಜವಂಗೆ ಪಾಪಂ ನೆರಮಾದೊಡಂ (ಜೀವಸಂ. ೧–೧೯ ವ); ಕೆಱು ತಡೆದತ್ತು ಕಂಭನುಣಲೂಮನೆಯೂಕೆಗಳುಯ್ದರಕ್ಕಮಿಂದೆಱೆಯಪನಾಱಿದಪ್ಪನಸಗಂ ಮಡಿದಾರನೆ ಕೂಸನೇತಕೆಂದಱಿಯೆನದೊಂದು ಸೋಂಕಿದುದು (ಸೂಕ್ತಿಸು. ೮–೧೩೪); ಎಱೆಯಪಂಗೆ ಮರಂಗಳಂ ಪರಸಿಯುಂ (ಶಬ್ದವಿ. ೫೧). ೨. ಒಬ್ಬಾತನ ಹೆಸರು. 'ಎಱೆಯಪಗಾಮುಂಡ' ಪರಾ. **ಎಱಯಪ:** ೨. ಪೆರ್ಮ್ಮಾಡಿಯುಂ ಮಹಾದೇವಿಯುಂ ಎಱಯಪನು ಅಯ್ಯಾವುನ್ತರು ಮಿಟ್ಟು ಆದಿರಾಜು ಪನ್ನೆರಡುಮ ಕಲ್ನಾಡಿತ್ತರ್ (ಎಕ. III, ನಂಜನ. ೧೩೦–೭; 900). **ಎಱೆಯಪ್ಪ$_2$:** ೧. ಉಂತೆ ಕುಣಿವಂಗೆಱೆಯಪ್ಪನಾದಂತೆ (ಅರ್ಧನೇ. ೭–೯೧ ವ). [ಎಱೆ$_4$ + ಅಪ್ಪ$_1$]

**ಎಱೆಯಪಗಾಮುಂಡ** (ನಾ). ಒಬ್ಬಾತನ ಹೆಸರು: ಶ್ರೀಮತ್ ಎಱೆಯಪಗಾಮುಣ್ಡನು ಮುದ್ದಯ್ಯನು ಬನ್ದಿಲ್ಲಿ ವ್ರತ ಕೊಣ್ಡರ್ (ಎಕ. II, ೪೬೮–೧; 950). [ಎಱೆಯಪ + ಗಾಮುಂಡ]

**ಎಱೆಯಪಮಂಗಳ** (ನಾ). ಒಂದು ಊರಿನ ಹೆಸರು: ಎಱೆಯಪಮಂಗಳದ ಮಹಾಜನ ಸಾಕ್ಷಿ (ಎಕ. IX, ಬೆಂಗಳೂ. ೪೦–೧೦; 820).
[ಎಱೆಯಪ + ಮಂಗಳ (= ಮಂಗಲ)]

**ಎಱೆಯಪೆರ್ಮಾಡಿ** (ನಾ). ಒಬ್ಬಾತನ ಹೆಸರು: ಎಱೆಯಪೆರ್ಮ್ಮಾಡಿಯ ಸಾನ್ತ ಕಾಮಪನ ಮಗಮ್ಬಿನಮಿತಂ (ಎಕ. VII, ಶಿಕಾರಿ. ೨೮೪–೨; 902). [ಎಱೆಯ + ಪೆರ್ಮಾಡಿ]

**ಎಱೆಯಪ್ಪ$_1$, ಎರೆಯಪ್ಪ** (ನಾ). ಅಕ್ಕಿ, ಬೆಲ್ಲ, ಕೊಬ್ಬರಿ ಇವನ್ನು ಕುಟ್ಟಿ ಅಂಗೈಯಗಲ ಬಿಲ್ಲೆಯ ಆಕಾರದಲ್ಲಿ ಮಾಡುವ ಸಿಹಿ ದೋಸೆ: ತುಪ್ಪದೊಳಗಡಲು ಚಿಲುಮುರಿಯಾದುದು ಎಱೆಯಪ್ಪದಂತೆ ಬೇಯಿಸಲು ಬಾಬರಮಾಯ್ತು (ಸೂಪಶಾ. ೧–೩೩); ಸಣ್ಣ ಸೇವಗೆಯ ಮೆದೆ ಎಱೆಯಪ್ಪದಡಕಿಲಿಡ್ಡಲಿಗೆಗಳ ಬೋನ ದೋಸೆಯು ಲಗ್ಗೆ ಬೆಲ್ಲ ಗಾರಿಗೆಯ ಬಣಬೆ (ಸಮ್ಯಕೌ. ೭–೨೫); ಹುಗ್ಗಿ ಕಿಚ್ಚಡಿ ಎಱೆಯಪ್ಪ ಸೇವಗೆ ಹಿಂಡಿ ಗುಗ್ಗುರಿ ಸೂಸಲುಂಡಲಿಗೆ (ಭರಚ. ೨೦–೧೨೮). **ಎರೆಯಪ್ಪ:** ಎರೆಯಪ್ಪ ತುಂಬಾ ರುಚಿಕರವಾದ ತಿಂಡಿ (ರೂಢಿ). 'ಊತಪ್ಪ' ಪರಾ,
[ಎಱೆ$_1$ + ಅಪ್ಪ$_1$]

**ಎಱೆಯಪ್ಪ₂** 'ಎಱೆಯಪ' ನೋ.

**ಎಱೆಯಪ್ಪರಸ** (ನಾ). ಒಬ್ಬಾತನ ಹೆಸರು : ಶ್ರೀಮತ್ ಪೆರ್ಮ್ಮಾನಡಿಗಳುಂ ಎಱೆಯಪ್ಪರಸರುಂಮಿಬ್ಬು ಚಾಗಿ ಪೆರ್ಮ್ಮಾನಡಿಗಳ ಕಲ್ಲಬಸದಯ್ಕರ್ ಪ್ಪರಪಿಂಗೆ ಕೊಮಾರಸೇನಭಟಾರರ್ (ಎಕ. III, ಶ್ರೀರಂಗ. ೧೪೭–೧೧ ; 900). [ಎಱೆಯಪ್ಪ₂ (< ಎಱೆಯಪ) + ಅರಸ₁]

**ಎಱೆಯಬ್ಬೆ** (ನಾ). ಒಬ್ಬಾಕೆಯ ಹೆಸರು : ಪಡಿವಳ್ಳ ಅರಿಗನುಂ ಎಱೆಯಬ್ಬೆಯುಂ (ಎಕ. VIII, ಸೊರಬ. ೫೧–೬ ; 958). [ಎಱೆ₄ + ಅಬ್ಬೆ₁]

**ಎಱೆಯಮ** 'ಎಱೆಯಮ್ಮ' ನೋ.

**ಎಱೆಯಮಯ್ಯ** (ನಾ). ಒಬ್ಬಾತನ ಹೆಸರು : ಸೋಮಯ್ಯರಸರ ಮಗನೆಱೆಯಮಯ್ಯ (ಎಕ. XI, ಚಿತ್ರದು. ೪೯–೬೪ ; 947). [ಎಱೆಯಮ (< ಎಱೆಯಮ್ಮ) + ಅಯ್ಯ₁]

**ಎಱೆಯಮ್ಮ**, ಎಱೆಯಮ (ನಾ). ಒಬ್ಬಾತನ ಹೆಸರು : ಕಿಡಲೆ ಗಧಿಪಾಣ್ಣನ್ ಎಱೆಯಮ್ಮಂ [ಸಿ]ವುದಿ ತೊಱುಗೊಳೊಳ್ಕಾದಿ ಸತ್ತೋನ್ (ಸೌಇಇ. XI–i, ೧೯–೩ ; 983) ; ಶ್ರೀಮನ್ಮಹಾಸಾಮನ್ತನೆಱೆಯಮ್ಮ ನಿರಲ್ (ಸೌಇಇ. XI–i, ೭೪–೧೪; 1041). **ಎಱೆಯಮ** : ಮಹಾಪ್ರಧಾನಂ ಕುಮಾರಂ ಎಱೆಯಮ (ಎಕ. VII, ಶಿವಮೊ. ೧೧೬–೧೪ ; 1173). [ಎಱೆ₄ + ಅಮ್ಮ₁]

**ಎಱೆಯಮ್ಮಗಾವುಂಡ** (ನಾ). ಒಬ್ಬಾತನ ಹೆಸರು : ಎಱೆಯಮ್ಮಗಾವುಣ್ಡಂ ವಿದ್ಯಾದಾನಕ್ಕೆ ಬಿಟ್ಟ ಕಲ್ಲಬಾವಿಯ ತೋಣ್ಟ (ಸೌಇಇ. XI–i, ೪೭–೧೭ ; 994). [ಎಱೆಯಮ್ಮ + ಗಾವುಂಡ (< ಗಾಮುಂಡ)]

**ಎಱೆಯಮ್ಮದೀಕ್ಷಿತ** (ನಾ). ಒಬ್ಬಾತನ ಹೆಸರು : ಎಱೆಯಮ್ಮದೀಕ್ಷಿತರವೋಲ್ಮತ್ತಾರ್ದ್ಧರಾಭಾಗದೊಳ್ (ಸೌಇಇ. XI–i, ೪೫–೪೫; 980). [ಎಱೆಯಮ್ಮ + ದೀಕ್ಷಿತ]

**ಎಱೆಯಮ್ಮರಸ** (ನಾ). ಒಬ್ಬಾತನ ಹೆಸರು : ಎಱೆಯಮ್ಮರಸ ರ್ವ್ವನವಾಸಿ ನಾಡಾಳೆ (ಎಕ. VIII, ಸೊರಬ. ೯–೧ ; 800) ; ಎಱೆಯಮ್ಮರಸರಾ ಬೆಣ್ಣತೂರಾಳ್ಗೆ (ಎಕ. X, ಗೋರಿಬಿ. ೧೩–೫ ; 1000). [ಎಱೆಯಮ್ಮ + ಅರಸ₁]

**ಎಱೆಯಮ್ಮವೆಳಚಿಗವುಂಡ** (ನಾ). ಒಬ್ಬಾತನ ಹೆಸರು : ಎಱೆಯಮ್ಮವೆಳಚಿಗವುಣ್ಡನ ಪಟ್ಟದಳ ಪೊನ್ನಚರಿ ಮಾಡಿದಂ (ಎಕ. IX, ಹೊಸಕೋ. ೮೭–೪; 750). P ಎಱೆಯಮ್ಮನ ಮಗ ವೆಳಚಿಗವುಂಡ. [ಎಱೆಯಮ್ಮ + ವೆಳಚಿ + ಗವುಂಡ (< ಗಾಮುಂಡ)]

**ಎಱೆಯಮ್ಮಸೆಟ್ಟಿ** (ನಾ). ಒಬ್ಬಾತನ ಹೆಸರು : ಎಡದೊಱೆನಾಡ ಭೀಕನಂ ಬರವಿಯ ಪೇಂಠೆಯ ಎಱೆಯಂಮ್ಮಸೆಟ್ಟಿಯು (ಕಇ. IV, ೫೫–೨೫; 1000 ?). [ಎಱೆಯಮ್ಮ + ಸೆಟ್ಟಿ]

**ಎಱೆಯವೆ** (ನಾ). ಒಬ್ಬಾಕೆಯ ಹೆಸರು : ಎಱೆಯವೆ ದೇಗುಲ ಮಾಡಿಸಿ ಮಣ್ಣೊಟ್ಟೊಳ್ (ಎಕ. VII, ಶಿಕಾರಿ. ೪೫–೨೮ ; 890 ?). [ಎಱೆ₄ + ಅವ್ವೆ₀ (< ಅಪ್ಪೆ)]

**ಎಱೆಯಲ್** 'ಎೞೆಯ' ಪರಾ.

**ಎಱೆಯಾರ್ಮ್ಮ** (ನಾ). ಒಬ್ಬಾತನ ಹೆಸರು : ಚೋಱಗಮೊಟವೆಱೆಯಾರ್ಮ್ಮಂಗೆ ಕೆಱೆಗೊಡಗೆಯ ರಾಜಾಮಾನಂ (ಎಕ. XII, ಮಧ್ಗಗಿ. ೧೧೨–೧೪ ; 900). [ಎಱೆಯ + ಅರ್ಮ್ಮ₀]

**ಎಱೆಯಿತಿಯಡಿ** (ನಾ). ಒಬ್ಬ ರಾಜನ ಹೆಸರು : ಆ ಊರ ಸರ್ವ್ವ ಪಾದಪರಿಹಾರಮಪ್ಪನ್ತು ಎಱೆಯಿತಿಯಡಿಗಳ್ಪ್ರಸಾದಂಗೆಯ್ದು ಪೂರ್ವಾವತಾರ ಬಾಣರಾಜಜ್ಗೆ ಣ್ಕಾರಂ ವಿಜ್ಞಪ್ಪಂಗೆಯ್ದೊಡೆ (ಸೌಇಇ. IX–i, ೪೬–೯ ; 8ನೆಯ ಶತ). [?]

**ಎಱೆಯಿಸು**, ಎರೆಯಿಸು, ಎಱೆಸು (ಕ್ರಿ). ೧. ಸುರಿ : ಅಸುರನ ಗಡೆ ಭೂತಪಿಶಾಚ ಸಮಿತಿಗೆಱೆಯಿಸುವ ನೆತ್ತರಜವಟ್ಟಿಗೆ (ಜಗವಿ. ೯–೬೦) ; ದಮಯಂತಿಯನು ಮದುವೆಯ ಧಾರೆಯೆಱೆಯಿಸಿ ಬಂದೆವೆನೆ ಖತಿಗೊಂಡ ಕಲಿರಾಯ (ನಳಚ. ೪–೫). **ಎರೆಯಿಸು** : ೧. ಹೆಂಡಿರ ಕೈಯಿಂದ ನೀರ ಎರೆಯಿಸಿಕೊಂಡು (ನೀತಿಚಿಂ. VII, ೯). **ಎಱೆಸು** : ೧. ನಾಲಿಗೆ ನಲಿನಲಿದೋಲಾಡುವನ್ನಕ್ಕ ನಿಮ್ಮ ನಾಮಾಮೃತವ ತಂದೆಱೆಸು ಕಂಡಯ್ಯ ಎನಗೆನ್ನ ತಂದೆ (ಬಸವ. ೪೮೬) ; ಧಾರೆಯೆಱೆಸುವೆನು ನಿಮಗಿಬ್ಬರಿಗೆ (ಭರಚ. ೯–೧೨೯). ೨. ಎಣ್ಣೆಸ್ನಾನ ಮಾಡಿಸು ; ಅಭ್ಯಂಜನ ಮಾಡಿಸು : ಗಂಗೋದಕ ತನ್ನಿರೆ ಗಂಗಾಳದಲ್ಲಿ ಬೆರಸಿರೆ ರಂಗವಲ್ಲಿಯ ಹಾಕಿರೆ ರಂಗಗೆ ಬೇಗ ಎಱೆಸಿರೆ (ಪುರಂದ. ೧–೧೧೭–೨).

ಎಱಿಸಿಕೊಳ್ = ಧಾರಾಪೂರ್ವಕವಾಗಿ ದಾನವನ್ನು ಸ್ವೀಕರಿಸು : ಪರಿಚ್ಛೇದವಾಗಿಯೆಱೆದುಕೊಟ್ಟರು ಶಂಭುದೇವರುಯೆಱಸಿಕೊಂಡರು (ಕಇ. I, ೩೭–೨ ; 1414). [ಎಱೆ₁ + –ಇಸು₃]

**ಎಱೆವಟ್ಟು**, ಎರೆವೆಟ್ಟು, ಎಱವಟ್ಟು, ಎಱವೆಟ್ಟು, ಎಱೆವೆಟ್ಟು (ನಾ). ಮೂಲಸ್ಥಾನ; ಆಶ್ರಯ : ಸದ್ಗುಣಾಕರಮೊಪ್ಪಿಂಗೆಱೆ [ಪಾಠಾಂ. ಗೆಸೆವಱೆ]ವಟ್ಟು (ಸುಕುಮಾ. ೧–೬) ; ಸತ್ಕದ ಜನ್ಮಭೂಮಿ ಮಾಂತನದೆಱ[ಱೆ]ವಟ್ಟು ಪೆಂಪಿನ ದಗುನ್ತಿ ವಿವೇಕದ ಬೀಡು (ಎಕ. VII, ಶಿಕಾರಿ. ೧೨೪–೨೭ ; 1077) ; ಧರ್ಮಕ್ಕೆಱೆವಟ್ಟಾಗಿರ್ದಯ್ ನೀಂ (ಕಾವ್ಯಾವ. ೪೬೬) ; ಬೆಟ್ಟವಕ್ಕಿಗಳ ಗೂಡಿಳನೇಸಱ ತೊಟ್ಟಿಲುದಗ್ರದಾನವ ರೆಱೆವಟ್ಟು . . . ಮಹಾರ್ಣವಂ (ಸೂಕ್ತಿ ಸು. ೨–೩೮) ; ನಂದಿದಗೆಱೆ ವಟ್ಟಾಗು(ಸೌಇಇ. IV, ೨೩೭–೪೫; 1380). **ಎರೆವೆಟ್ಟು**: ಮೂರನೆಯಸಾಕುರುಸ್, ಸೌಭಾಗ್ಯದೆರೆವೆಟ್ಟು (ಪಾರಸಿ. ೨೯–೬೫೮). **ಎಱವಟ್ಟು**: ಅಱವಿಂಗಾಗರಮೊಳ್ಗುಣಕ್ಕೆ ಕಣಿ ಶೌಚಕ್ಕಾಸ್ಪದಂ ಜಾಣ್ಮಿನಕ್ಕೆಱವಟ್ಟೊಳ್ಪುಡಿಗಾಣ್ಮಂ (ಪಂಚತಂ. ೧೧–೫) ; ಚತುರಾನನಂಗಱವನೀವೆಱವಟ್ಟೆನಿಸಿರ್ಪ್ಪ ದೆಂದು ವಂದಿತತಿ ನಿರಂತರಂ ಪಡೆದು ಬಣ್ಣಿಪುದೀ ಮಹದೇವಮಂತ್ರಿಯಂ (ಎಕ. VIII, ಸೊರಬ. ೧೪೦–೬೦ ; 1198) ; ಅಱಸುತಱಸುತೆಯ್ದೆ ಬಂದು ಸುಜ್ಞಾನದ ಗುಱಿಯ ಶೀಲದ ಗೊತ್ತದ ಮೆಯ್ಯ ಎಱವಟ್ಟನಾ ಮುನಿನಾಥನ ಕಂಡು (ವರ್ಧಚ. ೧೧–೭೧). **ಎಱವೆಟ್ಟು** : ಪೊಸಸಿರಿಗೆಱವೆಟ್ಟನೆ ಪೂಗಣೆಯನಿರ್ಪ ನೆಲೆಮಾಡದವೋಲ್ (ಕಬ್ಬಿಕಾ. ೧೧೭) ; ಸಮ್ಮೋಹನ ರಸಪೂರಿತದಿಂಗಡಲೊಳಗಣ ಬುದ್ಬುದವೋ ಸಿಂಗರದೆಱವೆಟ್ಟುಗಳೋ (ಜಯುಕಾ. ೧–೬೨). **ಎಱೆವೆಟ್ಟು** : ರಮಣೀ ರಮಣಾಕುಳ ಕಳಕಳದಿಂ ದಂಗಜ ವಿಳಾಸದೆಱೆವೆಟ್ಟು ನೆಟ್ಟನಿದೆ ಪೆಱತುಂಟೇ (ಶಾಂತಿಪು. ೩–೧೦) ; ಸತ್ಕದ ಬಿೞ್ತು ಧರ್ಮದೊಂದಾಣ್ಮನೆ ಮಾಂತನದೆಱೆವೆಟ್ಟಱವಿನ ಕಣಿಯೆನೆ ಪೆಂಪಂ ತಳೆದನಿಳೆಯೊಳ್ (ಲೋಕಓಪ. ೧–೧೫) ; ಸುಖದುಃಖಂಗಳ್ಗಿದು ತಮರ್ ನಿರಯಕ್ಕೆಱೆವೆಟ್ಟು (ರಾಮಾಶ್ವ. ೧೩೮–೨೩).
[ಎಱೆ₃ + ಪಟ್ಟು₃ (< ಪಟ್ಟ). P ತಮಿ. ಪಟ್ಟು = ನಗರ, ಊರು]

**ಎಱೆವಾಲು** (ನಾ). ಎರೆಯುವ ಹಾಲು ; (ಕೈಯಿಂದ) ಹಾಕುವ ಹಾಲು ; ಹೊಯ್ಯುವ ಹಾಲು : ತಾಯ ಮೊಲೆವಾಲನೊಲ್ಲದೆಱೆವಾಲಿಂಗೆಳಸುವಂತೆ (ಆದಪ. ೫೩) ; ಶಿಶುಗಳಿಗೆ ಮಿಗೆ ಮೊಲೆವಾಲೆ ಜೀವನವಾದಡೆಯು ಎಱೆವಾಲ [ಪಾಠಾಂ, ಎರೆಪಾಲ, ಎಱೆಪಾಲ] ನೆಱೆವುತ ಮೆಲ್ಲಮೆಲ್ಲನೆ ಅಶನವುಣಕಲಿಸಿ (ಪ್ರಭುಲೀ. ೧೨–೧೬).
[ಎಱೆ₁ + ಪಾಲು₁ (< ಪಾಲ್₁)]

**ಎಱೆವಿಡಿ** (ಕ್ರಿ). ಆಶ್ರಯವನ್ನು ಹೊಂದು ; ರಕ್ಷಣೆಯನ್ನು ಪಡೆ (?) : ದುಂತಾರಿಯೊಡಮಡಿದೆಱೆವಿಡಿದಘುಹರನನಚ್ಯುತೇಂದ್ರನೆನಾದಂ (ಶಾಂತಿಪು. ೭–೮೪) ; ಎಱೆಯನೆಱೆವಿಡಿದು ಮಂಗಿಯನುಱದನವೊಲ್ ತಂದು (ನೇಮಿಪು. ೬–೨೪). [ಎಱೆ₃ + ಪಿಡಿ₁]

**ಎಱೆವಿಱನಾಗು** (ಕ್ರಿ). ಅಸ್ತವ್ಯಸ್ತವಾಗು ; ಕೆದರಿಹೋಗು ; "ಬಾಡು, ಕಾಂತಿಹೀನವಾಗು" (ಆದಿಪು. ಕೋಶ) : ಪಯಣದೊಳೆಳ್ಳಿ ವಿಳ್ಳಿಯಾಗಿ ಬಂಬಲಬಾಡಿದ ತನುಲತೆಗಳುಂ ಎಱೆವಿಱನಾದ ತಲೆದುಡುಗೆಗಳುಂ . . . ಬೆರಸು (ಆದಿಪು. ೧೧-೭೦ ವ).
[ಎಱೆವಿಱ + ಆಗು$_1$. P ತಮಿ. ಇಱ್ಱೆ = ಎರಚು]

**ಎಱೆವೆಟ್ಟು** 'ಎಱೆವಟ್ಟು' ನೋ.

**ಎಱೆವೆಸ** (ನಾ). ಒಡೆಯನ ಕಾರ್ಯ; ಸ್ವಾಮಿಕಾರ್ಯ: ತುಳುಗೋ[ಳೊಳ್]ಪೆಣ್ಬುಯ್ಯಲೊ[ಳೆಱೆ] [ಪಾಠಾಂ. ಱು]ವೆಸದೊಳ್ ನಂಟನೆಡಱೊಳೂರಱಿವಿನೊಳಂ ತಱಿಸಂದು ಗಂಡುತನಮನೆ ನೆಱ ಪದವಂ ಗಂಡನಲ್ಲನೆಂತುಂ ಷಂಡಂ (ಗದಾಯು. ೨-೨೪) ; ಸುರಪತಿಯೆಱೆವೆಸನರ್ಹತ್ಪರಮೇಶ್ವರ ಪಾದಸೇವೆ ಪಾಲಾ ಅಮರ್ದಾ ಪಿರಿದು ಗಡಿದೆನಿಸಿ ತಂದರ್ ಸುರವಟುಕರ್ ಪುಲ್ಲವಟುಕರಂತಿರೆ ಪೂವಂ (ಅಜಿಪು. ೫-೬೭) ; ಒಂದೋರಗೆಯಂಗನೆಯರ್ ತವರೂರ್ಗೆಂದೆಯ್ದುದರಿಱ[ರೆಱೆ]ವೆಸದಿಂ ದಾಣ್ಮಂ ಬಂದುದುಮಿಲ್ಲಿರುಳ್ ಕಣ್ಣಲ್ಲತ್ತೆಗೆ (ಜಯಕಾ. ೧೩-೭೧).
[ಎಱೆ$_4$ + ಬೆಸ$_1$]

**ಎಱೆವೆಸನ$_1$** (ನಾ). ನೀರೆರೆಯುವ ಕೆಲಸ; ಅಭಿಷೇಕಮಾಡುವ ಕೆಲಸ: ಎಱ[ಱೆ]ವೆಸನಾದೊಡಮಕ್ಕೆಮುಗೆಱ[ಱೆ]ವೆಸನೆನೆ ಜಿನನ ಸವನಮಿಂದ್ರನ ಬೆಸನಿರ್ತ್ತೆಱದಿಂ ನಿಷ್ಫಲಮಲ್ತು (ಪುಷ್ಪಪು. ೧೧-೮).
[ಎಱೆ$_1$ + ಬೆಸನ$_2$]

**ಎಱೆವೆಸನ$_2$** (ನಾ). ರಾಜಕಾರ್ಯ; ರಾಜನ ಅಪ್ಪಣೆ: ಇವರೆನ್ನನೆನ್ನ ಪುಣ್ಯೋದಯದಿಂದೆಱ[ಱೆ]ವೆಸನಾಗಿಯುಮಿಂತಿದು ಕಿಱುವೆಸನೆನಗೆಂದು ನಿಶ್ಚಯಂ ಬಿನ್ನವಿಸಿಂ (ಶಾಂತಿಪು. ೩-೫೯) ; ಎಱ[ಱೆ]ವೆಸನಾದೊಡಮಕ್ಕೆ ಮುಗೆಱ[ಱೆ]ವೆಸನೆನೆ ಜಿನನ ಸವನಮಿಂದ್ರನ ಬೆಸನಿರ್ತ್ತೆಱದಿಂ ನಿಷ್ಫಲಮಲ್ತು (ಪುಷ್ಪಪು. ೧೧-೮).
[ಎಱೆ$_4$ + ಬೆಸನ$_2$]

**ಎಱೆಸು** 'ಎಱೆಯಿಸು' ನೋ.

**ಎಱೆಹಂಬಾಳ್** (ನಾ). ಒಂದು ಊರಿನ ಹೆಸರು: ಸೆಲಬ್ಬೆಯರ ಕೊಡಗ್ಗೆ ಎಱೆಹಂಬಾಳಿಂ ಆನೆಯರ ಕೊಡಗ್ಗೆಂ ಕೊಡಕೆ ಎಡೆನಟ್ಟ ಕಲ್ಲಂ (ಎಕ. III, ನಂಜನ. ೧೯೯-೧೧; 189 ?).
[ಎಱೆಹಂ ? + ಬಾಳ್$_4$]

**ಎಱೆಹವೆಮ್ಮಡಿ** (ನಾ). ಒಬ್ಬಾತನ ಹೆಸರು: ಅಂಗಿರ ಸಂವತ್ಸರದ ಎಱೆಹವೆಮ್ಮಡಿಯರ ರಾಜ್ಯದನ್ದು (ಎಕ. III, ನಂಜನ. ೧೯೯-೪; 189?).
[ಎಱೆಹ$_0$ + ಪೆಮ್ಮಡಿ]

**ಎಬಕುಳಿ** 'ಎಱೆಕುಳಿ' ನೋ.

**ಎಬಕುಳಿಗೊಳ್** 'ಎಱೆಕುಳಿಗೊಳ್' ನೋ.

**ಎಬಗ** 'ಏಬಗ' ನೋ.

**ಎಱಿತೆ** (ನಾ). ಜೋಲಾಡುವಿಕೆ ; ನೇತಾಡುವಿಕೆ : ಕುಡುಮಿಂಚಾಶ್ಚರ್ಯಮಂ ಪುಟ್ಟಿಸುತಿರೆ ಭಯಮಂ ಮಾಡೆ ಮೇಘಸ್ವನಂ ನೇರ್ಪಡೆ ಪಾವಂ ವ್ಯೋಮದಿಂದಂ ತಡೆಯದೆಬತೆಯೊಳಿಕ್ಕಿದಂತೆಲ್ಲಿಯುಂ . . . ಮಱೆ ಘೋರೆಂದು ಕೇಳ್ ಪೊಯ್ಯೆ (ಧರ್ಮಾಮೃ. ೧೧-೨೦೩). [ಎಬಲ್ + -ತೆ]

**ಎಬಲ್, ಎಳಲ್, ಎಳಲು** (ಕ್ರಿ). ೧. ಜೋಲು ಬೀಳು ; ನೇತಾಡು ; ತೂಗಾಡು : "ಎಬಲ್ – ಆಲಂಬನೇ (ತೂಗಬೀಳು, ತೂಗಹಾಕು)" (ಶಮುಘಾ) ; "ನೆಬಲೆಂದುಂ ಎಬಲೆಂದುಂ ನೇಲ್ವುದು" (ಕಶಸಾ. ೩೦-೬೪೯) ; ನಿಡಿಯ ಮರದ ತುತ್ತತುದಿಯೊಳಿರ್ದೆಬಲ್ವ ಗುಂಡಿಗೆಯಂ ಕಂಡು (ವಡ್ಡಾರಾ. ೯೧-೧೩) ; ಮುತ್ತಿನ ಮುಱಿದ ಲಂಬಣಂಗಳ್ವೆರಸೆಬಲ್ವ ಪಚ್ಚೆಯ ಸರದ ಹಾರದ ತೋರಣಂಗಳಂ (ಆದಿಪು. ೪-೨೫ ವ) ; ನೊಸಲೊಳಗಿಟ್ಟ ಚೆಲ್ವ ತಿಲಕಂ . . . ಎಬಲ್ವ ಧೋತ್ರಂ (ದಶಕು. ೩-೧೧). ೨. ಬಳಲು ; ಆಯಾಸಹೊಂದು ; ಕುಗ್ಗು ; ಸೊರಗಿಬೀಳು : "ಎಬಲ್ದಂ – ಜೋಲ್ದಂ, ಬಬಲ್ದಂ" (ಶಮದ. ಪರಿ. ೧) ; ಆ ರಾಜಸುತಂ . . . ಕೋರೈಸಂ ಕೊರಗನಬಲನೆಬಲಂ ಬಬಲಂ (ಅಜಿಪು. ೫-೮೮). ೩. ಬಡವಾಗು ; ಕೃಶವಾಗು : ಜಗುಳೆಯ ಮಾಱ್ಕೆಯಂ ತಳೆದ ಕೆಯ್ . . . ಪೊಱಪೊಣ್ಮ(ಣ್ಮ)ದ ಮುಷ್ಕಮೆಬಲ್ವ ಪೇಚಕಂ ಮಿಗೆ ಪಲವುಂ ಕರಂ ಕೆಲವುಮಪ್ಪುಗುರಾಗೆ ಗಜಾಳಿ ನಿಂದಿತಂ (ಲೋಕೋಪ. ೧೧-೭೨). ೪. ಮೇಲೆ ಬೀಳು ; ಎರಗು : ಬಱಸಿಡಿಲ್ದೋರ್ದರ್ಪದಿಂದುರ್ಕ್ಕಿ ಮಚ್ಚರಿಪಂಗಚ್ಚರಿಯಿಂ ಕೊಳಲ್ಕೆಬಲ್ದ ಸಿಂಹಂ ಗಣ್ಡ ಕಾಳಾನಳಂ (ಎಕ. VII, ಶಿಕಾರಿ. ೧೫೧-೪೬; 1047). ೫. ಮೋಹಿಸು ; ಸೋಲು : ಬಱಸಂದು ಮುಂದೆ ಕಂಪಿಂಗೆಬಲೆ ಮನಂ (ಅರ್ಧನೇ. ೧-೮೩). **ಎಳಲ್** : ೧. ಎಳಲ್ವ ಕಿವಿ ಮುಗಿದ ಕಣ್ ಎತ್ತಿದ ಮೊಗಂ ಮೆಱೆಯೆ (ಆನಾರ. ೧೮೨) ; ಪಕ್ಷಯುಗಮೆಳಲೆ ರಸಂದೆಗೆವ ದನಿ ನಿಮಿರೆ ನಾಲಗೆ ಚಿಗುರುತ್ತಿರೆ (೧೦ಕ. ೨-೩೯) ; ಮಾಲೆ ಸರಪಳಿಯಂತೆ ಬಳ್ಳಿಗುರುಳ್ಪಿಂಗಾಲೊಳೆಳಲ್ದು ಬರೆ (ರಾಜಶೇ. ೬-೮೬ ವ). **ಎಳಲು** : ೧. ಬಿಡುಮುಡಿಯು ಸುರಿವ ಕಂಬನಿಪೊನಲ ಕಳೆದೆಳಲುವುಡುಗೆಗಳ (ಹಚಕಾ. ೭-೨೬) ; ಹಾಯಿದುವು ನರಿನಾಯಿಗಳು ಕಟವಾಯಲೆಳಲುವ ಕರುಳಿನಲಿ (ಕುವ್ಯಾದ್ರೋ. ೧-೨೦) ; ನಿಡುಜಡೆಯ ಗೊಂದಣದಿಂ ತಲೆಮಾಲೆಯೊಳೆಳಲುವ ಬಾಸುಗಿ ಗೊಣಸುಗಳಿಂ (ಉದ್ಭದೇ. ೬-೨೦).

**ಎಳಲೆವಿಡು, ಎಬಲೆಬಿಡು** = ತೂಗುಬಿಡು ; ಇಳಿಯಬಿಡು : ಮಾಣಿಕ್ಯದ ತಲೆಮಾಲೆಯ ಪರಿಸರದೊಳೆಳಲೆವಿಟ್ಟ ಕನಕದರಳೆಲೆಮಾಲೆ (ರಾಜಶೇ. ೬-೧೧ ವ) ; ನಸುನಳಿದು ನಿಮಿರೆ ತೋಳ್ಗಳ್ ಲಸಿತ ತ್ರಿಪತಾಕದಿಂ ಲತಾಕರಮೆಸೆಯಲ್ ಪೊಸದಳಿರಂ ಪೊತ್ತೆಳಲತೆ ಮಿಸುಗುವ ಕುಡಿಯೆರಡನೆಬಲೆಬಿಟ್ಟವೊಲೆಸೆದಳ್ (ಲೀಲಾವ. ೪-೧೩೧). [?]

**ಎಬಲಿಕ್ಕು, ಎಳಲಿಕ್ಕು** (ಕ್ರಿ). ನೇತುಹಾಕು ; ತೂಗಾಡಿಸು ; ಜೋತುಬಿಡು : ಕೈಯನೆಬಲಿಕ್ಕಿಯರ್ಧಗಪ್ಪಡಮನೆಡದಮುಯ್ಪಿನ ಮೇಗಿಕ್ಕಿ (ವಡ್ಡಾರಾ. ೯೨-೧೬) ; ಮಱಿದುಂಬಿಗಳಿಂದ್ರನೀಲಮಂ ಮುತ್ತುಮನೋಳಿಯೊಳ್ ಕೋದೆಬಲಿಕ್ಕಿದ [ಪಾಠಾಂ. ಎಳೆದಿಕ್ಕಿದ] ಮಾಲೆಯಂತೆವೋಲ್ (ಪಂಪಭಾ. ೧೧-೮೧) ; ಮುಡಿಯೊಳೆಬಲಿಕ್ಕಿದಸುಕೆಯ ಕುಡಿದಳಿರಿಂದೆಸೆದಳಾಕೆ (ಲೀಲಾವ. ೪-೮೭) ; ಪೇರುರಮಂ ಧೊಕ್ಕನೆ ಕುತ್ತಿ ಚಕ್ಕನೆ ಭುಜದ್ವಂದ್ವಂಗಳಿಂದೆತ್ತಿ ಬಲ್ಗರುಳಂ ಕೋದೆಬಲಿಕ್ಕಿ ಬೀರಸಿರಿಗೆತ್ತಂ ತೋರಣಂಗಟ್ಟನೇ (ಎಕ. VI, ತರೀಕೆ. ೪೨-೨೦; 1205). **ಎಳಲಿಕ್ಕು** : ತೋರ ಮಲ್ಲಿಗೆಯ ಮುಗುಳ ಮೂಗುತಿಯನು ಸೇರಿಸಿ ನಾಶಿಕಾಗ್ರದೊಳು ಹಾರಮನೆಳಲಿಕ್ಕಿ ಬಕುಳದೊಳ್ಪಲರಿಂದ ವಾರನಾರಿಯರಿಹರಲ್ಲಿ (ಕುರಾಸಾಂ. ೩-೩೭). [ಎಬಲ್ + ಇಕ್ಕು]

**ಎಬಲ್ಚು** (ಕ್ರಿ). = ಎಬಲಿಕ್ಕು : "ಎಬಲ್ಚು – ಆಲಂಬನೇ" (ಶಮಧಾ) ; ಪರಚಾಯುಧದ ಪುಲ್ಲಿಗೆಯ ತೊಂಗಲ ಸೆಱಂಗುನಾಂದು ಪಿಣಿಲೇಱಿದೆಬಲ್ಚಿದ ವೇಣಿಯೊಳ್ಪೆಸೆದು (ಅನಂಪು. ೨-೨೯ ವ) ; ಲತಾಜಾಳಕಜಾಳಕಂಗಳನೆಬಲ್ಚುತವಳ್ಳಿಱಿದಭ್ರದಭ್ರಮಂ ಚಾಳಿಸುತುಂ (ಪುಷ್ಪಪು. ೧೦-೬೭). [ಎಬಲ್ + -ಚು]

**ಎಬಲ್ತರ್** (ಕ್ರಿ). ಜೋಲು ಬೀಳು ; ನೇತಾಡು : ನಡುಕಂ ಮೆಯ್ವೆರ್ಚಿ ಗಂಟಲ್ ಕುಸಿದು ಕಿವಿಯೆಬಲ್ತಂದು (ಚಂದ್ರಪು. ೪-೪೭) ; ಕಾಮಿನೀಜನದ ಕಣ್ಗಳೆಬಲ್ತರೆ [ಪಾಠಾಂ. ಕಣ್ಗಳಲಲ್ತರೆ] ತನ್ನನುರ್ಬಿದಾ ಪೂಗಣೆ ಪಲ್ಲವಂಬಿಡಿದು ಮಾಲೆಯನೇಱಿಸಿ ಮೇಲೆ ಸೂಸುವಂತೆ . . . ಮಾಲೆ ಸೂಡಿದಳ್ (ಅರ್ಧನೇ. ೩-೯೬) ; ಮುದಶ್ರುಗಳ್ ಸುರಿಯೆ ಪಕ್ಷಮೆಬಲ್ತರೆ ಕಣ್ಣಲರ್ ಮುಗುಳ್ತರೆ ನೆರೆಯುತ್ತುಮಿರ್ದುದು ರಥಾಂಗಶತಂ (ಕುಸುಮಾ. ೧೦-೮೧). [ಎಬಲ್ + ತರ್]

**ಎೞಲ್ಮುಡಿ** (ನಾ). ಜೋಲಾಡುವ ಮುಡಿ; ಇಳಿಬಿಟ್ಟ ಮುಡಿ: ಕುಡುವುಗುರಿಂದೆೞಲ್ಮುಡಿಯ ಗಂಟು ಸಡಿಲ್ಚಿಸಿ ಗಂಧತೈಲಮಂ ಕುಡಿತೆಯೊಳಾಂತು ನೆತ್ತಿಯೊಳಗೊತ್ತಿ ಬಿದಿರ್ಚುತೆ ಕೇಶಪಾಶಮಂ (ಕಾವ್ಯಸಾ. ೬೩೧). [ಎೞಲ್ + ಮುಡಿ₃]

**ಎೞವ** (ನಾ). (?): ಸಕಪಾದಿಗೆೞವ ಪೊಗೞ್ಕೆಲ್ಲೆ ನಂಬೇಮಗಂ ನೊೞಂಬಸೆಟ್ಟಿ (ಎಕ. X, ಮುಳಬಾ. ೧೨೨–೬; 969). [?]

**ಎೞವಾಡು** (ಕ್ರಿ). (ಮುದ್ದಿಗಾಗಿ) ನೀವು; ಸವರು: ದಾಡಿಂಬದ ಬಿತ್ತುಗೆತ್ತು ಸೋವುವ ಶುಕಶಿಶುಗೆ ಮಣಿಮುದ್ರಿಕೆಯಂ ಕಳೆದು ನೀಡಿ ನೀಡಿಯೆೞ [ಪಾಠಾಂ. ಳ] ವಾಡಿ ಮಱೆದೀಡಾಡಿ ಪೋಪುದುಂ (ಅರ್ಧನೇ. ೪–೮೪ ವ). [ಎೞವು + ಆಡು₁]

**ಎೞವಿಸು** (ಕ್ರಿ). ಸವರು; ನೇವರಿಸು: ಕರತಲದಿಂ ಲಲಿತಾಂಗಮನೆೞವಿಸಿ ಕೋಮಲ ಹಸ್ತಮನೆತ್ತಿ (ಕುಸುಮಾ. ೧೦–೪೫).

[ಎೞವು + –ಇಸು₃]

**ಎೞವು, ಎಳವು₂** (ಕ್ರಿ). ನೀವು; ಸವರು; ಲೇಪಿಸು; ಬಳಿ: "ಎೞವು–ಅಪಮಾರ್ಜನೇ" (ಶಮಧಾ); "ಎೞವಿದನೆಂದು ನೀವಿದಂ" (ಶಮದ. ಪರಿ. ೧); ಪೊರೆಯೊಳ್ಕುಳ್ಳಿರ್ದೊರ್ಯ್ಯನೆ ಕರತಳದಿಂದೆೞವಿ ತನುವಂ (ಕಾದಂಪೂ. ೮೪೧); ಉಂಗುಟಮನೆೞವಿ ಕರಚರಣಂಗಳನಿನಿಸೆೞವಿ ಮೆಲ್ಲಮೆಲ್ಲನೆ ಲೀಲಾಪಾಂಗದೊಳ್ ನೋಡಿದಳ್ (ಅಜಿಪು. ೫–೫೫); ಅೞಲನೆರ್ದೆಯೊಳ್ ತಿಣ್ಣಂ ತಱ್ಕೈಸಿ ಪುತ್ರವಿಮೋಹದಿಂದೆೞವಿ ತನುವಂ (ಕಾವ್ಯಾವ. ೮೧೫); ಎೞವಿ ಮುಳಪಿಕ್ಕಿ ಕಳಲುಂ ಕೆೞಗಂ ತರಹರಿಸಿಕೊಳಲುಮಿಕ್ಕಿದ ಕಯ್ಯಂ ಕಿೞಲುಮಣಮಾಱದಸುರಂ (ಅರ್ಧನೇ. ೮–೧೦೧). **ಎಳವು₂**: ಸುಳಿದುದು ಬಾಳೆನುಣ್ಡೊಡೆಯನಪ್ಪುತೆ ಕಂಪನಮಂ ನಿಮಿರ್ಚಿ ಸಾರ್ದೆಳವಿ . . . ಕಾಮುಕನಂತಿರೆ ಮಂದಮಾರುತಂ (ಶಬಶಂ. ೨–೫೦); (ಮುದುಕಿಯ ತಲೆ ಎಳವಿ ಸಂತೈಸುತ್ತಾ) (ಚಂದ್ರಸ. ೧೬–೨೪).

**ಎಳವಿಕೊಳ್** = ಸವರಿಕೊ; ನೇವರಿಸಿಕೊ: (ತಲೆಯನ್ನು ಮುಟ್ಟಿ ನೋಡಿ ಎಳವಿಕೊಳ್ಳುತ್ತ) (ಬಿಟ್ಟಅ. ೩೫–೨).

[ದೇ. ‖ ತಮಿ. ಇೞುಪ್ಪು, ಇೞಿಚು; ಮಲ. ಇೞುಕ]

**ಎೞಾದೆಱೆ** (ನಾ). ಒಂದು ಬಗೆಯ ತೆರಿಗೆ (?): ಎೞಾದೆಱೆ ಎತ್ತುಪೊನ್ಗೆ ಬಿತ್ತುಂ ಪೊತ್ತಿಮ್ಮರ್ಕ್ಕಳು ಪುಟ್ಟಾದೆ ಕೆಡುವೊನ್ (ಎಕ. XIV, ತಿರುಮ. ೨೫೩–೧೦; 800). [ಎೞ್₀ + ತೆಱೆ₃]

**ಎೞಿಗುಟ್ಟೆ** (ನಾ). ಒಬ್ಬಾತನ ಹೆಸರು: ಪಾಣ್ಡಯನ ಮೇಗೆ ಎೞ್ದು ಪಱೆಯಱಾಱಿದೊ ಶ್ರೀವಲ್ಲೆಯರಸರ್ × × ಎೞಿಗುಟ್ಟೆ ಅರಸನ್ × × × ಪೋಪಲ್ಲಿ ತನ್ನಾ ಆಳ್ಪೋಪಲ್ಲೆ ವಿಸಸೆ ಆನೆಯೂರ್ ತಾಗಿ ಎಱ್ದು ಕ.. ಕಾದು ಸತ್ತ (ಎಕ. X, ಶ್ರೀನಿವಾ. ೩೦–೧೦; 800). [?]

**ಎೞ್₁, ಎಳ್₁, ಎಳೆ₁** (ಕ್ರಿ). (ತನ್ನ ಕಡೆಗೆ) ಸೆಳೆದುಕೊ; ಆಕರ್ಷಿಸು; ಸೆಳೆ: "ಎೞ್–ಆಕ್ರಮಣಾಕರ್ಷಣೇ [ಪಾಠಾಂ. ಗಾಢಾಕರ್ಷಣೇ] ತಂತುಮಾತ್ರೇ ಚ(ದಾರದೆಳೆ), ಭೂವಾಚಕೇ ಕ್ಷಳಂ" (ಶಮಧಾ); ಪಿರಿದೊಂದು ಮಱಕೊಂಡು ಪೂರಂ ಬಂದವರನೆೞ್ದುಕೊಂಡು ಪೋಗಿ ಪಿರಿದೊಂದು ಮಡುವಿನೊಳಿಕ್ಕಿದೊಡೆ (ವಡ್ಡಾರಾ. ೧೦೧–೧೫); ಎಮ್ಮಂ ಪಿಡಿದೆೞ್ವಂದಿನ ನಿಮ್ಮದಟುಗಳೀಗಳೆತ್ತವೋದುವೊ (ಪಂಪಭಾ. ೭–೩೯); ಈ ಪುಸಿವನಂ ಕುಸಿಯೆತ್ತಿ ಬಟ್ಟೆಯೊಳ್ ಪೆಟ್ಟಮೆೞ್ದು ಬಳಸಿದ ದಸಿಯೊಳ್ತಿಗೆಯಿಮೆಂದು (ಸುಕುಮಾ. ೭–೫ ವ). **ಎಳ್₁**: 'ಎಳಕುಳಿ' ಪರಾ. **ಎಳೆ₁**: ಮನವೆನ್ನಂ ದುರ್ವಿಕಾರಕ್ಕೆಳೆದಪುದು ಮನಂ ಮಾನಮಂ ನುರ್ಗಿದತ್ತು (ರಕ್ಷಾಶ. ೧೨); ನೆಲಕೆ ಮುಂಜೆಜಗೆಳೆಯಲುಟ್ಟನು ದೇಸಿ ಪರಿಮಱೆಯೆ (ಕುವ್ಯಾಕ. ೭–೧೧); ಚದುರಂಗವಾಡುವ ಬಾರೆಂದೊರ್ವನ ಪದುಮಾಕ್ಷಿ ಪಿಡಿದೆಳೆದೊಯ್ದು (ಕಂಸವಿ. ೨–೯೬). 'ಈೞ್' ಪರಾ.

**ಎಳ[ೞ್]ದುವರಿ** = ಆಕರ್ಷಿತವಾಗು; ಸೆಳೆಯಲ್ಪಡು: ಅಂತು ಮನಮೆಳ[ೞ್]ದುವರಿಯೆ (ಪಂರಾಮಾ. ೯–೮೬ ವ); ಕಣ್ಣೆಳ[ೞ್]ದುವರಿಯೆ ಕಂಡು ಮನಮೆಳ[ೞ್]ದುವರಿಯೆ ನಿರವಿಸಿ (ಲೀಲಾವ. ೧೪–೯೧ ವ); ಪಾಂಡುರಾಜಂ ಪುಂಡರೀಕದಂತೆ ವನಮೆ ಭವನಮಾಗಿರ್ಪುದುಮೊಂದು ದಿವಸಮಾ ವಸಂತವಾಸವೆಂಬ ಭವನದ ಮನೋಹರಕೆ ಮನಮೆಳ[ೞ್]ದುವರಿಯೆ (ಅರ್ಧನೇ. ೪–೮೪ ವ). **ಎೞ್ವಬೆಡಂಗ** = ಎಳೆಯುವುದರಲ್ಲಿ ಬೆಡಗನ್ನು ಉಳ್ಳವನು; ಒಂದು ಬಿರುದು: ಇದೇಂ ಕಡುಜಾಣನ ಬದಿಕಯ್ವರಮಡರ್ದ್ದಪುಳೆನೆ ಬಿದ್ದ ಮೆೞ್ರುಮೆೞ್ವಬೆ[ಡೆ]ಡಂಗಂ . . . ಪೊಗೞಿಸಲ್ಕ ಪೆಱವು ದುಷ್ಕರದೆಱಪಂಗಳನಶ್ರಮದಿನೆೞ್ಯೊಳ್ ಜಗದೊಳೆೞ್ವಬೆ[ಡೆ]ಡಂಗನೊರ್ವ್ವನೆ ಬಲ್ಲ (ಎಕ. II, ೧೩೩–೧೧೦; 987).

[ದೇ. ‖ ತಮಿ. ಇೞು; ಮಲ. ಇೞು, ಇೞ್; ತುಳು. ಇಗ್ಗು; ಕೊಡ. ಈಳ್; ತೆಲು. ಈಡುಚು, ಈಡ್ಚು; ಗೊಂಡಿ. ಈಸಾನಾ; ಕುಇ. ಡ್ರಿಪ; ಕುರುಖ್. ಈಚ್ನಾ; ಮಲ್ತೊ. ಇಚೆ; ಬ್ರಾಹೂಈ. ರೂಸಿಂಗ್]

**ಎೞ್₂, ಎಳೆ₂** (ನಾ). ನೂಲಿನ ಎಳೆ; ದಾರ; ಸೂತ್ರ: "ಎೞ್–ಆಕ್ರಮಣಾಕರ್ಷಣೇ, ತಂತುಮಾತ್ರೇ ಚ (ದಾರದೆಳೆ), ಭೂವಾಚಕೇ ಕ್ಷಳಂ" (ಶಮಧಾ); "ಎೞ್ = ನೂಲೆೞ್; ಬರೆಸೆೞ್ವುದು (ಭೂಮ್ಯರ್ಥದೊಳ್ ಕುಳಂ)" (ಶಮದ. ಪರಿ. ೧). "ನೂತ ನೂಲೆೞ್ಯಲ್ಲಿ ನಿಚಯಂಗಳಲ್ಲಿ ತಂತುವದು" (ಮಂಗರಾ. ೧೫೪–೬೬); ಸೊಗಯಿಪ್ಪೊಳ್ದೊಡೆ ನೋಯೆ ಸೂತ್ರದೆೞ್ವೋಲ್ ನೀಳ್ದಿರ್ದ ಬಾರಂತೆ ತೋರ್ಪುಗಿಯಂ ಪುಣ್ಯಯಮಾಗಿ ಮಾಡಿ ಬಿದಿ ಮುಂ ಜಂಘಾಪ್ರಮಾಣಕ್ಕೆ ನೂಲ್ದಿಗೆ ದಂತಿರ್ಪ ನಖವ್ರಣಾವಳಿಗಳಂ ನಲ್ಲಂಗೆ ಕಣ್ಗೆತ್ತುತುಂ ನಗುತುಂ ಸಾರ್ದು ಸವಂಗಮಂ ಕಳೆಯಿಸುತ್ತಿರ್ಪಾಕೆ ಕಣ್ಗೊಪ್ಪಿದಳ್ (ಕಾವ್ಯಾವ. ೮೧೧). **ಎಳೆ₂**: ಕೊರಳಲ್ಲಿಯ ಬೆಳ್ಳಿಎಳೆಯಲ್ಲಿದ್ದ 'ಪಿನ್ನ'ನ್ನು ಹಾಕಿ 'ಫಿಟ್' ಮಾಡಿದಳು (ಹೊಸಕ್ಷಿ. ೪೬); ಅವಸರವಸರವಾಗಿ ಮಾತಿನ ಎಳೆಯನ್ನು ಮುಂದುವರಿಸಿದಳು (ಪುನರು. ೪೮); ಹೊನ್ನಪ್ಪನಿಗೆ, ಈಗ ಇದೊಂದು ಎಳೆ ಸಿಕ್ಕಂತಾಯಿತು (ಪ್ರಣಸ. ೧೦).

[ದೇ. ‖ ತಮಿ. ಇೞೈ; ಮಲ. ಇೞ; ಕುವಿ. ಇಸ]

**ಎೞ್₃** (ನಾ). ಎಳೆದ ಗುರುತು; ಜಾಡು; ಗೆರೆ: ತಾನ್ ಬೆಟ್ಟತ್ತಾಗಿರ್ದತ್ತು ಬೞನೆಲನ್. ಬಿರಿಕಿಲ್ಲ, ತೇರ್ ಗಾಲಿ ಎೞ್ಯಿಲ್ಲ (ಅಂತಿಗೊ. ೧೨–೨೩೨).

[< ಎೞ್₁]

**ಎೞ್ಕುಳಿ, ಎಳಕುಳಿ, ಎಳೆಕುಳಿ, ಎೞಕುಳಿ** (ನಾ). ಎಳೆಯುವಿಕೆ; ಆಕರ್ಷಣೆ; ಸೆಳೆತ; 'ಎೞ್ಕುಳಿಗೊಳ್' ಪರಾ. **ಎಳಕುಳಿ**: 'ಎಳಕುಳಿಗೊಳ್' ಪರಾ. **ಎಳೆಕುಳಿ**: 'ಎಳೆಕುಳಿಗೊಳ್' ಪರಾ. ಎೞಕುಳಿ: 'ಎೞಕುಳಿಗೊಳ್' ಪರಾ. [ಎೞ್₁ + –ಕುೞಿ?]

**ಎೞ್ಕುಳಿಗೊಳ್, ಎಳಕುಳಿಗೊಳ್, ಎಳೆಕುಳಿಗೊಳ್, ಎೞಕುಳಿಗೊಳ್** (ಕ್ರಿ). ಆಕರ್ಷಿಸು; ಸೆಳೆ: ಅತ್ಯಾನಂದಮೊದವಲ್ಕೆ ಪರಿಜನಮೆಂದೆೞ್ಕುಳಿಗೊಳ್ವ ಸ್ಸೈಪು ಸಮನಿಸಿದಪುದೋ (ಕಾದಂಪೂ. ೩೫೩); ತಳವೆಳಗಾದಂ ವನಿತಾತಿಳಕದ ಪೆಱನೊಸಲ ರೋಚನಾ ತಿಲಕದ ಚೆಲ್ವೆೞ್ಕುಳಿ[ಪಾಠಾಂ. ಎೞಕುಳಿ]ಗೊಳೆ ಸಮ್ಮೋಹನತಿಳಕದವೋಲ್ ಮನಮನವನಿಪಾಲಕತಿಲಕಂ (ಪಂರಾಮಾ. ೫–೬೧). **ಎಳಕುಳಿಗೊಳ್**: ತುಳುನಾಡು ನೊಳಂಬವಾಡಿ ಗಂಗಮಹೀಮಣ್ಡಳಮಂ ಬನವಸಿಯೆಂಬಿವನೆಳಕುಳಿಗೊಣ್ಡಂ ಜಿತಾರಿ ವಿಷ್ಣುನೃಪಾಳಂ (ಸೌಇಇ. IX–i, ೧೧೮–೭೪; 1107); ಪ್ರಸೂನಕುಲಮನಂಡಲೆದು ಬಂಡುಂಬಲ್ಲಿ ಬಾಯಕುಟುಕನೆಳಕುಳಿಗೊಂಡು (೧೦ಕ. ೨–೭೧ ವ); ನೋೞ್ಪವರ ಮನವನೆಳಕುಳಿಗೊಳುತ್ತೊಂದು ಬನವೆಸೆದಿರ್ಪುದು (ಸಿದ್ಧೇಪು. ೯–೭)

**ಎೞೆಕುೞಿಗೊಳ್**: ಪತಿಭಕ್ತಿಯಿಂದ ರಾಯನೆದೆಯನೆೞೆ[ಪಾಠಾಂ. ಎಳ] ಕುೞಿಗೊಳುತಾ ಹರಿಣಾಯತೇಕ್ಷಣೆಯೊಪ್ಪಿದಳು (ಕುರಾಸಾಂ. ೫-೨೯). **ಎೞಕುೞಿಗೊಳ್**: "ಎೞಕುೞಿಗೊಂಡುದು ತಾನೀೞ್ಕುೞಿಗೊಂಡುದು ಕವರ್ದುದೀೞ್ದುದೆನೆ . . . ಸೆಳೆದುಕೊಂಡರ್ಥಮುದು" (ಕವಿಕಂ. ೧೯೬); ಬೇಡಿದ ಕಾಡೊಳೆ ಮೞೆಗೊಂಡುದೆೞಕುೞಿಗೊಳ್ವಂಗೆರಂಗೊಟ್ಟಂತಾಯ್ತು (ಅರ್ಥನೇ. ೬-೬೧ ವ); ಚೆಲ್ವಿಡಿದು ಜಡಿವ ಪಡಿಯಱರ ಕಳಕಳಮನೆೞ ಕುೞಿಗೊಂಡು (ಅನಂಪು. ೩-೯೫ ವ). [ಎೞ್ಕುೞಿ + ಕೊಳ್₁]

**ಎೞ್ಕೇಸಿ** (ನಾ). ಒಬ್ಬಾತನ ಹೆಸರು: ಶ್ರೀ ಆದೆಪ ಮುದ್ದಪ್ಪರಾ ಮಗನ ಎೞ್ಕೇಸಿಗಳಾ ಪೆಣ್ಡಿರ ಮದಕ್ಕೆ ಗೌತಮೇಶ್ವರಕೆ ಕೊಟ್ಟುದು (ಎಕ. VII, ಶಿಕಾರಿ. ೪೫-೨೧; 890 ?). [?]

**ಎೞ್ತರ್, ಎಳತರ್, ಎೞೆತರ್** (ಕ್ರಿ). ಎಳೆದುಕೊಂಡು ಬರು; ಸೆಳೆದು ತಾ: ದಿಟದಿಂ ಮುಪ್ಪಾಡಿ ಮಾತಾಡಿ ಸಕ್ಕಜವೇನಿತ್ತಪರೆಂದು ಕೊಟ್ಟೆೞ್ತರುತ್ತುಂ ನೋಡಿ (ರಸರ. ೧-೮೨). **ಎಳತರ್**: ಪಾತಕಿಗ ಳೊಡಲೊಳಿಹ ಪರಮಾತ್ಮನಂತೆ ಯಮದೂತರೆಳತಂದಜಾಮಿಳನಂತೆ (ಜೈಮಿಭಾ. ೨೮-೩೧); ಇಲ್ಲಿಗೇಕೆ ಎಳತಂದಿರಿ? (ದೌಲತ್. ೨೯೧). **ಎೞೆತರ್**: ಏಕೆನ್ನ ಈ ರಾಜ್ಯಕೆೞೆತಂದೆ ಹರಿಯೆ (ಪುರಂದ. ೩-೧೨೨-೧); ಎೞೆಹುಲ್ಲ ಸವಿದು ನೀರ್ಗುಡಿವ ತಾಪಸನನಂದಲರಂಬಿಗೆ ಗುಱಿಮಾಡಿ ಎೞೆತಂದರಬಲೆಯರು (ಕಂನವಿ. ೯-೧೪೬). [ಎೞ್₁ + ತರ್]

**ಎೞ್ಪ** (ನಾ). ಎಳೆಯುವಿಕೆ; ಸೆಳೆದುಕೊಳ್ಳುವುದು (?): ಅಣುಗಿ ನೊಳೆ ರಾಜಚೂಡಾಮಣಿಮಾರ್ಗ್ಗಡೆ ಮಲ್ಲನೀಯೆ ಗೆಲ್ವೆೞ್ಪದ ಬಿನ್ನಣ (ಎಕ. II, ೧೩೪-೫೮; 982); ಪೊಗೞ್ಸಲ್ತಕ್ಕ ಪೆಂಪು ದುಷ್ಕರದೆೞ್ಪಂಗ ಳನಶ್ರಮದಿನೆೞ್[ಳ್]ಯೊಳ್ ಜಗದೊಳೆೞ್ವಬೆಡಂಗನೊರ್ವನೆ ಬಲ್ಲ (ಎಕ. II, ೧೩೩-೧೧೪; 987). [ಎೞ್₁ + -ಪ₃]

**ಎೞ್ಯಿಸು, ಎೞೆಯಿಸು** (ಕ್ರಿ). ಎಳೆಯುವಂತೆ ಮಾಡು; ಸೆಳೆಯಿಸು: ಆತನನಟ್ಟೆ ಕಳೆಯಿಮೆಂದಟ್ಟಿದನೆಂದು ಪೇೞ್ದು ಪಡಿಯಱನಿಂದ ಮೆೞ್ಯಿಸಿ ಪೆಡತಲೆಯಂ ಪಿಡಿದು ನೂಂಕುತ್ತ (ವಡ್ಡಾರಾ. ೧೮೬-೨). **ಎೞೆಯಿಸು**: ಗಾಡಿಯನ್ನು ಎತ್ತುಗಳಿಂದ ಎೞೆಯಿಸುತ್ತಾರೆ (ರೂಢಿ). [ಎೞ್₁ + -ಇಸು₃]

**ಎೞ್ಸು, ಎಳಸು₂, ಎೞೆಸು** (ಕ್ರಿ). = ಎೞ್ಯಿಸು: ಪಾದರಿಗನಿವಂ ಕಷ್ಟನೆಂದು ಕುಱಿಯಂ ಕೊಲ್ವಂತಿರೆ ಕೊಂದು ಪೊಲೆಯರಿಂ ಬೆಚ್ಚರಮೆೞ್ ಸುವರಟ್ಟೆ ದೂಱುವರ್ಪರ್ವಡಿಯೊಳ್ (ಧರ್ಮಾಮೃ. ೬-೧೪೨). **ಎಳಸು₂**: ಮಾರ್ಮಲೆತವಂದಿರ ಸಂದಿಸಂದಿಗೆ ಮುಱಿದು ಕಡಿಸುವೆನೆಳ[ಪಾಠಾಂ. ೞೆ] ಸುವೆನು ನಿಮಿಷದೊಳಧೋಗತಿಗೆ (ಬಸವು. ೫೮-೬೬); ನಿರುತದಿಂ ದವರನೆಳ ಹೂಟಮಂ ಕಟ್ಟಿಸಾ ಗಿರಿಯ ಸುತ್ತರೆಯೊಳಸೆ (ಪಾಸೋಪು. ೫-೧೮). **ಎೞೆಸು**: ರಾಗಿಯ ತೆನೆಯನ್ನು ಕಣಕ್ಕೆೞೆಸಬೇಕು (ರೂಢಿ). [< ಎೞ್ಯಿಸು]

**ಎೞ್ಕುಂಡೆ** (ನಾ). ಒಂದು ಊರಿನ ಹೆಸರು: ದುಗ್ಗೊ ನೆಲ್ಮಲ್ಲಿ ಗೞಂಜ ವಾಗಿಲು ಸಱಮು ಎೞ್ಕುಣ್ಡೆ ಪರವೂರು ಕೂಡಲೆ ಇನಿತುಮವ್ ಪೊಲ ಮೇರೆ ಸಹಿತಮಿತ್ತನ್ (ಎಕ. IX. ಬೆಂಗಳೂ. ೮೩-೧೪; 890). [?]

**ಎೞ್ಕುಪ್ಪೆ** (ನಾ). ಒಂದು ಊರಿನ ಹೆಸರು: ಎೞ್ಕುಪ್ಪೆ (ಎಇ. I, ೩೫೦-೧೪; 900). [< ಏೞ್₂ + ಕುಪ್ಪೆ₁]

**ಎೞ್ಕೆಗಾಡಿಗಾಲ** (ನಾ). ಒಂದು ಪ್ರದೇಶದ ಹೆಸರು: ಅನ್ತೆ ಬನ್ದು ಎೞ್ಕೆಗಾಡಿಗಾಲ ತೆಂಙ್ಕಣ ಬೇಲಿಯಿಂ ಬಗದತಿಪುಣೆಯಿಂ (ಎಕ. III, ನಂಜನ. ೧೩೯-೨೧; 915 ?). [ಎೞ್ಕೆ₀ + ಗಾಡಿ ? + ಗಾಲ]

**ಎೞ್ಚತ್ತೆ** 'ಎೞ್ಚಱ್₁' ಪರಾ.

**ಎೞ್ಚತ್ತು** 'ಎೞ್ಚಱ್₁' ಪರಾ.

**ಎೞ್ಚಱ್₁, ಎಚ್ಚರು₁, ಎಚ್ಚಱ್₁, ಎಚ್ಚಱು₁, ಎೞ್ಚಱು** (ಕ್ರಿ). ೧. ನಿದ್ರೆಯಿಂದ ಏಳು; ಜಾಗರಗೊಳ್ಳು; ಎದ್ದೇಳು: ಎೞ್ಚತ್ತ, ಎಚ್ಚತ್ತ (ಭೂತಕೃ); ಎೞ್ಚತ್ತು, ಎಚ್ಚತ್ತು, ಎಚ್ಚತ್ತರ್ (ಭೂತನ್ಯೂ): ಮಂಗಳಪಾಠಕರವಂಗಳೊಳ್ ಭೋಂಕನೆೞ್ಚತ್ತಂ (ಪಂಪಭಾ. ೪-೧೧೦ ವ); ಪಿರಿದುಂ ಪಯಣಂ ಬಂದು ಬೞಲ್ದು ಕೋರ್ಕೈಸಿ ನಿದ್ರೆಗೆಯ್ದುವರ್ ತೊಟ್ಟನೆ ನಿದ್ರೆಯಿಂದೆೞ್ಚತ್ತು (ಗದಾಯು. ೯-೩೨ ವ); ನಿದ್ರೆಯಿನೆೞ್ಚತ್ತಾರಂ ಕಾಣದೆ (ದಶಕು. ೨-೯೬). ೨. ಜಾಗರೂಕತೆಯಿಂದಿರು; ಎಚ್ಚರಿಕೆಯಿಂ ದಿರು: ಪರಿಜನ ಸಂಭ್ರಮಕೃತ ಹಿಮಕರಣದಿನೆೞ್ಚಱುತುಮಕಟೆದೇನಂ ನೆಗೞ್ದೈ (ವರ್ಧಪು. ೯-೬೨). ೩. ರೋಗದಿಂದ ಅಥವಾ ಮೂರ್ಛೆ ಯಿಂದ ಚೇತರಿಸಿಕೊಳ್ಳು; ಪ್ರಜ್ಞೆಯನ್ನು ಹೊಂದು: "ಎೞ್ಚತ್ತೆ ನೆಂದು ನಿದ್ರೆತಿೞಿದನುಂ ಕುತ್ತಮೋಸರಿಸಿದವನುಂ ಮಱವೆ ಪಿಂಗಿದವನು ಮಕ್ಕುಂ" (ಶಮದ. ಸ. ೩೩ ವೃತ್ತಿ); ಚೇತನೆ ಪುಟ್ಟೆ ಮೂರ್ಛೆ ತಿೞಿದೆೞ್ದಂ ತಾನುಮೆಂತಾನುಮೆೞ್ಚತ್ತಿರ್ದಂ (ಶಾಂತಿಪು. ೨-೨೫). **ಎಚ್ಚರು₁**: ೨. ನಾವುಯಾವಾಗಲೂ ಎಚ್ಚತ್ತು ವರ್ತಿಸಬೇಕು (ರೂಢಿ). **ಎಚ್ಚಱ್₁**: ೧. ಮನೋಹರಿಯೆಂಬ ನಯನ ಮನೋಹರಿ ಬೆಳಗಾದಾಗಳೆಚ್ಚತ್ತರ್ ನಿಜವಲ್ಲಭನಂ ಕಾಣದೆ (ಸುಕುಮಾ. ೧೨-೧೮ ವ). ೩. ಕಂದಿ ಕುಂದುತ್ತೆ ಕೂಡೆಚ್ಚತ್ತರ್ ನಸುನಗುತೆ (ಪದ್ಮರಾ. ೭-೩೨). **ಎಚ್ಚಱು**: ೧. ಮೂಡು ವೆಳಗಾಯಿತೆಚ್ಚಱು ಮುದ್ದುಗೋಪಾಲಾ (ಗೀತಗೋ. ೬ ಪಲ್ಲವಿ). ೩. ಮುನ್ನೆ ಮಱಲುಂದಿದನೆಚ್ಚಱುವಂತೆ ಪುಟ್ಟಿದಂ (ಆದಿಪು. ೨-೬೨). **ಎೞ್ಚಱು**: ೧. "ಎೞ್ಚಱು – ಜಾಗರಣೇ ನಿದ್ರಾಭಾವೇ" (ಶಮಧಾ). [< ಏೞ್₁ + ಚಱು₀. / ತಮಿ. ಎಚ್ಚರಿ; ಪರ್ಜಿ. ಎೞಿಪ್; ಕುರುಖ್. ಎಜ್ನಾ, ಎಜ್ನಾರ್; ಮಲ್ತೊ. ಎಜ್ರೆ]

**ಎೞ್ಚಱ್₂, ಎಚ್ಚರ, ಎಚ್ಚರು₂, ಎಚ್ಚಱ್₂, ಎಚ್ಚಱು₂, ಎಳ್ಚರು, ಎಳ್ಚಱು** (ನಾ). ನಿದ್ರೆಯಿಂದ ಏಳುವುದು; ಎಚ್ಚರಗೊಳ್ಳುವುದು; ಜಾಗೃತನಾಗಿರುವಿಕೆ: ದೂರದೊಳೆ, ಮೇಡ ಕೋಡಿನ ಮೇಲೆ, ಕುಳ್ಳಿ ರ್ದವರ್; ಎೞ್ಚಱಿರ್ದಾಳನಾಳ್ ಬಿಱುನುಡಿಗಳಿಂದ ತಿವಿದೆೞ್ಚಿಸುತೆ (ಅಂತಿಗೊ. ೧೯-೪೦೦). **ಎಚ್ಚರ**: ಮೈಮೇಲೆ ಸ್ವಲ್ಪ ಎಚ್ಚರ ಬಂತು (ಸ್ಕೂಲವಿ. ೨೨೬). **ಎಚ್ಚರು₂**: ಹೊಂದಿ ನಡೆವುದು ಕೇಳು ಯೆಚ್ಚರು (ಅಂಬಿಕಾ. ೬-೪೯). **ಎಚ್ಚಱ್₂**: "ಜಾಗರಮವಕ್ಷೆಯೆನಲೆಚ್ಚಱಕ್ಕುಂ" (ಮಂಗರಾ. ೧೩೪-೩೪); ಅವಧಾನಮೆಚ್ಚ [ಪಾಠಾಂ. ಚ್ಚೆ]ಱೆಂದುಲಿವ ವಂದಿಸಂದೋಹದುಲಿಯನಾಲಿಸುತುಂ (ಶಬ್ದಾನು. ೯೧ ಪ್ರಯೋ). **ಎಚ್ಚಱು₂**: ಅವನ ಮಱವೆ ನಮ್ಮ ಬದುಕವನೆಚ್ಚಱು ಜವನಗರಿಯ ದಾರಿ ನಮಗೆ (ಕುರಾಸಾಂ. ೧೭-೧೫೭); ಎಚ್ಚಱು ಪಲ್ಲಟವಾಗಿರೆ ಕಣ್ದೆಱೆ ದೆಚ್ಚತ್ತು ರತಿಯ ನಿಟ್ಟಿಸಿದ (ಮೋಹತ. ೧೦-೧೨). **ಎಳ್ಚರು**: ಆರ್ಗೆಳ್ಚ ರೆಂಬಂಗಿಯಿಲ್ಲಂ ಅವಂ ದೋಷಂಗಳೀಡಹಂ (ಸೌನಂದ. ೧೪-೩೮). **ಎಳ್ಚಱು**: ಧುರದೊಳ್ ತನ್ನಯ ವೀರರೊಳ್ ಪ್ರಜೆಗಳೊಳ್ ದಾಯಾದ ರೊಳ್ ವಿದ್ವಾಂಸರೊಳ್ ಸ್ತ್ರೀಯರೊಳ್ ದೊರೆಗಳ್ಗೆಳ್ಚಱು ಬೇಕೆಲ್ಬೆ (ಸೋಮೇಶ. ೫೭).

ಎಚ್ಚರವಾಗು, ಎಚ್ಚರಾಗು = ನಿದ್ದೆಯಿಂದ ಏಳು; ಜಾಗೃತ ನಾಗು: ಸ್ವಲ್ಪಹೊತ್ತು ಎಂದು ಅಡ್ಡವಾದ ಅವರಿಗೆ ಸೂರ್ಯನು ಪಡು ಗಡಲಿಗೆ ಸಮೀಪಿಸಿದಾಗಲೇ ಎಚ್ಚರವಾಗಿತ್ತು (ಕಂಬಹು. ೧೩); ಮಾಯಾ ದೇವಿಯು ಏನನ್ನೋ ಗುಯ್‌ಗುಡುತ್ತ ವಹಿಯನ್ನು ಅವಲೋಕಿಸುತ್ತ ಕುಳಿತುಕೊಂಡಿರುವಳು. ಮತ್ತೆ ಎಚ್ಚರಾಗುವಳು (ತುಂಗಭ. ೫೦). ಎಚ್ಚರವುಳ್ಳವನು = ಅಪ್ರಮಾದಿ: ಸಕಲ ಶಾಸ್ತ್ರಂಗಳ ತಿಳಿದವನಾಗಿ ಮೋಸವಿಲ್ಲದೆ ಎಚ್ಚರವುಳ್ಳವನು ಚಿಕಿತ್ಸಕನೆನಿಸಿಕೊಂಬನು (ವೈದ್ಯಸಾ. I, ೨೭). [< ಎೞ್ಚಱ್₁]

**ಎೞ್ಚಱಿಕೆ, ಎಚ್ಚರಿಕೆ, ಎಚ್ಚಱಿಕೆ, ಎಳ್ಚಱಿಕೆ** (ನಾ). ಎಚ್ಚರದಿಂದಿರುವಿಕೆ; ಜಾಗರೂಕತೆ: ಇದೊಂದು ಪಗಲ್, ಆ ರುದ್ರನಾಗ್ರಹಂ ಬಡಿವುದು, ಎೞ್ಚಱಿಕೆ! ಎಂದನ್ (ಅಶ್ವತ್ಥಾ. ೩೦-೫೯). **ಎಚ್ಚರಿಕೆ:** ಈ ಮುನಿಕುಮಾರನು . . . ವಯೋಧರ್ಮದಲ್ಲಿ ಬಾಲಕನಾದರೂ ಎಚ್ಚರಿಕೆ ಜ್ಞಾನದಿಂದ ವೃದ್ಧನೆಂದು ನನ್ನ ಮನಸ್ಸಿನಲ್ಲಿ ತೋರುತ್ತಿದೆ (ಕೃವಾಆ. ೮೦); ಪಿತೂರಿ ನಡೆಸಿ ತನ್ನನ್ನು ಅಧಿಕಾರಭ್ರಷ್ಟನನ್ನಾಗಿ ಮಾಡದಿರುವಂತೆ ಬಹಳ ಎಚ್ಚರಿಕೆ ವಹಿಸಿದನು (ಕೃದೇವ. ೪); ಕಳ್ಳರಿದ್ದಾರೆ ಎಚ್ಚರಿಕೆ (ರೂಢಿ). **ಎಚ್ಚಱಿಕೆ:** ಸತ್ಯಂಗಳೆಚ್ಚಱಿಕೆ ಶಂಕರನ ಸಭೆಯೊಳಗೆ (ಶಿರುರ. ೩-೭); ಚಚ್ಚರದಿಂ ನಿದ್ರಿತ ನರನೆಚ್ಚಱಿಕೆಯನೆಯ್ದೆ ಪಡೆದವೋಲಹಮಿಂದ್ರಂ (ಬಾಧಪು. ೫-೯೦); ತುರಗದ ವೈದ್ಯಕತಿಯೆಚ್ಚಱಿಕೆಯಲಿ ಸಂತೈಸಿದರು ವಾಜಿಗಳ ವೇದನೆಯ (ಕುವ್ಯಾಭೀ. ೫-೩೯); ಎಚ್ಚಱಿಕೆ ಎಚ್ಚಱಿಕೆ ಮನವೆ ಅಚ್ಯುತನ ಪಾದಾರವಿಂದದಲ್ಲಿ (ಪುರಂದ. ೧-೧೬೦ ಪಲ್ಲವಿ). **ಎಳ್ಚಱಿಕೆ:** ಶಂಭುವಿನೆಳ್ಚಱಿಕೆಯೆಂಬ ಚಂದ್ರೋದಯಮಪ್ಪನ್ನಂ ಸೈರಿಸದೆ ಪರಿದು ಮುತ್ತುವ ಚಕೋರಿಗಳಂತೆಯುಂ (ಗಿರಿಕ. ೮-೪೨ ವ).

ಎಚ್ಚರಿಕೆಕೊಡು = ಜಾಗರೂಕತೆ, ಜೋಪಾನ ಇತ್ಯಾದಿಗಳನ್ನು ತಿಳಿಸು: ಆಗಾಗ್ಗೆ ವೈದ್ಯ ಪರೀಕ್ಷೆ ಮಾಡಿಸಿಕೊಳ್ಳಬೇಕೆಂದೂ ಪೋಲೀಸಿನವರು ಅವಳಿಗೆ ಎಚ್ಚರಿಕೆಕೊಟ್ಟರು (ಪುನರು. ೧೧).

[ಎೞ್ಚಱ್$_1$ + -ಇಕೆ. / ತಮಿ. ಎಚ್ಚರಿಕ್ಕೈ, ಎಚ್ಚರಿಪ್ಪು; ತುಳು. ಎಚ್ಚರಿಕೆ; ತೆಲು. ಎಚ್ಚರಿಕ]

**ಎೞ್ಚಱಿಸು, ಎಚ್ಚರಿಸು, ಎಚ್ಚಱಿಸು, ಎಳ್ಚರಿಸು, ಎಳ್ಚಱಿಸು** (ಕ್ರಿ). ಎಚ್ಚರವಾಗುವಂತೆ ಮಾಡು; ಎಬ್ಬಿಸು; ಜಾಗೃತಗೊಳಿಸು: ಅತಿವಿಶದವಿಶಾಲೋರುಕ್ಷತದಿಂದೊಱಿದನಿತು ಜಡೆಯುಮಂ ನಾಂದಿ ಮನಃಕ್ಷತಮೊಡನೆೞ್ಚಱಿಸಿದುದುತ್ಥಿತಮಾವಂದಸ್ರಮಿಶ್ರಗಂಧಂ ಮುನಿಯಂ (ಪಂಪಭಾ. ೧-೧೦೫); ಇಱಿಯೆಂ ಬಿಟ್ಟನನೆಂಬೀ ಬಿಱುದಿಂದಂ ಬೀಸೆ ಗದೆಯ ಗಾಳಿಯ ಕೋಳೆೞ್ಚಱಿಸಿದುದು ಭೀಮನಂ (ಗದಾಯು. ೮-೩೨). **ಎಚ್ಚರಿಸು:** "ನೀವು ನಮ್ಮ ಮಾತಿನಲ್ಲಿ ಮೂಗುಹಾಕುವುದು ಬೇಡ" ಎಂದು ಸುಂದರಿ ಅವರಿಗೆ ಎಚ್ಚರಿಸಿದಳು (ಹಳ್ಳಿಹಾ. ೧೦೮); "ಆದರೂ ತುಸು ಎಚ್ಚರದಿಂದಿರಬೇಕು" . . . ಎಂದೇನೋ ಎಚ್ಚರಿಸಿದ್ದರು (ಜೀವರಂ. ೮೫). **ಎಚ್ಚಱಿಸು:** ಆ ರಾತ್ರಿಯೊಳ್ ಮದನವಿಹ್ವಲತೆಯಿಂ ಮೂರ್ಛೆವೋದೆನ್ನನೆಚ್ಚಱಿಸಲೆಂದು ನೊಸಲೊಳಿಕ್ಕಿದ ಮಂದವಪ್ಪ ಚಂದನದಣ್ಪಿನಿಂ (ಕಾದಂಪೂ. ೮೯೦); ಪರಿತಂದು ಕಣ್ಣೊಳಂ ಬಾಯೊಳಂ ನೀರಂ ತಳಿದೆಂತಕ್ಕೆಚ್ಚಱಿಸೆ ಎತ್ತುವರ ಕಯ್ಯ ಬಾಯೊಳೆ ಜೀವಂ ಹಿಡಿಯಬಾರದು (ನಂಬಿರ. ೬-೪೯). **ಎಳ್ಚರಿಸು:** ಮೊಳಗು! ಮೊಳಗು ದುಂದುಭಿಯೆ! ನಿದ್ರೆ ಸಾಕಿನ್ನೇಳಿರೆಂದು ಎಳ್ಚರಿಸು (ವಿಸೀಗೀ. ೫೨-೨). **ಎಳ್ಚಱಿಸು:** ಹೋಮಸ್ಥಳದೊಳ್ ಭಾಸಿಪವೊಲಂತು ಮಿಂತುಂ ಬೀಸುತ್ತೆಳ್ಚಱಿಸಿ ಕುಡುವುದಾ ಶಿಖಿ ಶಿಖಿಯಂ (ಗಿರಿಕ. ೧-೬೬); ಮೂರ್ಛೆಗೆ ಸಲಲಾಯಿಂದೀವರಲೋಚನೆ ಸತ್ಕೃತಿಯಿಂದೆಳ್ಚಱಿಸಿದಳು (ಜಯಕಾ. ೨-೩೪).

[ಎೞ್ಚಱ್$_1$ + -ಇಸು$_3$. / ತುಳು. ಎಚ್ಚರಿಪು, ಎಚ್ಚರಿಸು; ತೆಲು. ಎಚರಿಂಚು, ಎಚ್ಚರಿಂಚು, ಎಚ್ಚರಿಕಿಂಚು]

**ಎೞ್ಚಱು** 'ಎೞ್ಚಱ್$_1$' ನೋ.

**ಎೞ್ಚಱುಗೆಡು** (ಕ್ರಿ). ಎಚ್ಚರಿಕೆ ಇಲ್ಲದಂತಾಗು; ಮೂರ್ಛೆಹೋಗು: ಪಟದ ಪೆಣ್ಣಂ ನೋಡಿ ಸೋಲ್ತುಂಗದೆೞ್ಚಱುಗೆಟ್ಟಂ ಗಡ ದೇವ ವಿಸ್ಮಯವಿದೇನೆಂತಾಯ್ತುದಂ ಬೇಗದಿಂದಱಿಯಲ್ವೇೞ್ಪುದು (ಕುಸುಮಾ. ೯-೮೨).

[ಎೞ್ಚಱು (< ಎೞ್ಚಱ್$_1$) + ಕೆಡು]

**ಎೞ್ತಗ** (ನಾ). ಒಂದು ಊರಿನ ಹೆಸರು (?): ಬರಡಕೆಱೆಯ ಮೂಡ ಕಡೆಗೋಡೆ ಬಳ್ಳವಗೆಱೆಯ ಮೂಡಣ ಕಡೆಗೋಡೆ ಎೞ್ತಗದ ಪಳ್ಳದಂ ಕುಡಿದ ಕೂಡಲೆ (ಮೈಆರಿ. ೧೯೧೯, ೧೦-೬೭; 900). 'ಎತ್ತಕ' ಪಾಠಾ. [?]

**ಎೞ್ತರ್, ಎಳ್ತರ್, ಎಳ್ತರು, ಏಳ್ತರ್, ಏೞ್ತರ್** (ಕ್ರಿ). ೧. ಎದ್ದು ಬರು; ಸಮೀಪಕ್ಕೆ ಬರು; ಹತ್ತಿರಕ್ಕೆ ಬರು: "ಎೞ್ತರ್ – ಸಮೀಪಾಗಮನೇ" (ಶಮಧಾ); ನೆರೆದು ಬಂದಪರವರ್ ಸಯಲೋಬಲವೆಲ್ಲಮೆೞ್ತರಲೆ ಕೊಂದಪನಿವಂದಿರನೀಗಳೆ (ಕವಿರಾ. ೧-೧೩೦); ಕಜ್ಜಂ ಪುಟ್ಟಿದೊಡೆಮಗೆ ಬೞಿಯಟ್ಟದೀ ಪೊೞ್ತಿದಾವುದು ಮನೆವಾೞ್ತೆಗೆೞ್ತಂದೆ (ಪಂಪಭಾ. ೧೦-೫ ವ); ಆ ಬಾಲೆ ಲೀಲೆಯಿಂ ಮಾಲೆಯನಿಕ್ಕಲೆೞ್ತರೆ (ನೇಮಿಪು. ೧-೧೧೯ ವ); ಕಾಮಧೇನುವಂ ಮೆಚ್ಚಿಸೆನಲ್ಲಾನಂದಂ ಮಲ್ಲಣನೊಸೆದಾ ನಲ್ಲಳ್ಳೆರಸಭವಭವನಕ್ಕೆೞ್ತಂದರ್ (ಉದ್ಭಟ. ೧೨-೬೨). ೨. ದಂಡೆತ್ತಿಬರು; ಆಕ್ರಮಿಸು; ಮುತ್ತು: ಅಳ್ವ ಪ್ರಭುಮೇರು ಬೆಸಸೆ ಮವಿನ್ದ ಊಱುಳ್ಳಾಡುವಟ್ಟೆಯ ಸಮಸ್ತ ಬಲಮುಮೇಗೆೞ್ತರೆ (ಎಕ. X, ಶ್ರೀನಿವಾ. ೬-೭; 780); ನೊಱಮ್ಬನ ದಣ್ಡು ಪುಲಿನಾಡೊಮೇಗೆೞ್ತರೆ (ಸೌಇಇ. IX-i, ೪-೫; 9ನೆಯ ಶತ). **ಎಳ್ತರ್:** ೧. ಜನಂನಿಂದಲ್ಲಿಗೆಳ್ತಂದಳು (ಭಾವಚಿಂ. ೮-೨೫). **ಎಳ್ತರು:** ೧. ಅತ್ತಿತ್ತ ಚಲಿಸದ ಚಲಂ ನಡೆದು ಬರುತಿರ್ದ ಉತ್ತಮೋತ್ತಮ ಭಕ್ತಿಯುಕ್ತನೆಳ್ತರುತಿರ್ದ (ಬಸರ. ೩-೩೮); ಬಾಯ್ಗೆಂತು ಬಂತಂತೆ ಬಣ್ಣಿಸುತೆ ಚದುರರೆಯ್ತರೆ ಪೆಂಡಿರೆಳ್ತಂದರು (ಉದ್ಭದೇ. ೫-೨೩). **ಏಳ್ತರ್:** ೧. ರಾಮಚಂದ್ರನಾತನ ವಿನಯವಚನಮಂ ಮನದೆಗೊಂಡೇಳ್ತರುತ್ತಿರೆ (ಕುಮುರಾ. ೬-೫೬); ಉಟ್ಟ ಸೀರೆಗಳುರಿಯಲಕಟಾ ಕೆಟ್ಟೆವೆನುತೇಳ್ತಂದು (ಬಸಪು. ೫೬-೩೯); ಸುರಗಿ ಪ್ರಸೂನಮಂ ಕೊಂಡು ಧೃತರಕ್ತಕರವೀರನೇಳ್ತಂದು (ಭಾವಚಿಂ. ೪-೧೭); ಸ್ಮರಭದ್ರಗಜಯೂಥದಂತೆ ವಿಳಾಸಿನೀ ಚರಣದ ನಿಗಳವೇಳ್ತರಲು (ಮೋಹತ. ೨೪-೩೮). **ಏೞ್ತರ್:** ೧. ಸುದತೀರತ್ನಮದೋರ್ವಳೇೞ್ತರುತಮಿರ್ದಳ್ (ಕಾದಂಪೂ. ೫೧೫); ಧನಶ್ರೀವನಿತೆ ಮನಃಪ್ರಿಯಂ ಕೆಲಕ್ಕೇೞ್ತರೆ ಧಾತ್ರೀವಲ್ಲಭಂ (ಮಲ್ಲಿಪು. ೪-೧); ಪೊೞ್ತು ದಪ್ಪಿದಪುದೆಂದು ದಿವಾಕರನಲ್ಲಿಗಾಗಳೇೞ್ತಂದವನೊಂದುಮಾಡಿ ನಿಱಿಸಲ್ (ಸಮಪ. ೨-೭೧); ಸಲೆ ಕಾಲಂಪಿಡಿದೇೞ್ತರಲ್ (ಜಗವಿ. ೨-೫).

[ಎೞ್$_0$ (< ಏೞ್$_1$) + ತರ್]

**ಎೞ್ತರ, ಎತ್ತರ, ಎರ್ತರ, ಎಳ್ತರ, ಏಳ್ತರ, ಏೞ್ತರ** (ನಾ). ಉನ್ನತಿ; ಅತಿಶಯ; ಹೆಚ್ಚುಗೆ; ಏಳಿಗೆ; ಉದಯ: ಬೆಡಂಗಿನೊಳ್ ಪುದಿದುದೆೞ್ತರಮುದ್ಗತಚಂದ್ರಸಿಂಹದಾ (ಆದಿಪು. ೧೨-೫); ಕಳವಿಂ ಪೊಲ್ಲಮೆ ಪೆಱತೊಳವೆ ಪಾಪದೆೞ್ತರಮಲ್ತೇ (ಧರ್ಮಾಮೃ. ೧೨-೨೩೪); ಕೀರ್ತಿಲಕ್ಷ್ಮಿ ಬಿಡುಗುಂ ಕಿಡುಗುಂ ಕಡುಪೆಂಪಿನೆೞ್ತರಂ (ಪುಷ್ಪಪು. ೭-೬೮); ಎೞ್ತರದಿಂದೀ ಪರಿ ಮನೆವಾೞ್ತೆಯವೊಲ್ ವಸುಧೆಯೆಲ್ಲಮಂ ಗೆಲ್ದೊಡೊಳೇ ಪೊೞ್ತು ಪೊರೆಯುತ್ತುಂ (ಚಿಕವಿ. ೪-೩). **ಎತ್ತರ:** ಬೇಕು ಜೀವದುತ್ತರ ಜೀವನದೊಳು ಎತ್ತರ (ಸೂರ್ಯಪಾ. ೧೨-೧೧); ಅತ್ತಿತ್ತ ಕದಲದಿರು; ಚಿತ್ತವನು ಸ್ಥಿರಗೊಳಿಸು ಎತ್ತರದೊಳಿದೆ ತಾರೆ ಉತ್ತಮದಿ ನಡಿಸಲ್ (ಕವಪು. ೨-೧೩). **ಎರ್ತರ:** ಶಾಸ್ತ್ರವಿಜ್ಞಾನದೊಂದೆರ್ತ್ತರವುಂ ತನ್ನಿಂದೆ ಲೋಕೋತ್ತಮರೆನೆ (ಎಇ. XV, ೩೫೨-೨೮; 1098). **ಎಳ್ತರ:** "ಎಳ್ತರಮೆನಲಧಿಕಾರ್ಥಂ" (ಶಶರ. ೧೧೮); ಭಂಡಾರಂ ಸೂಱೆವೋದುದು ರಾಜ್ಯದೆಳ್ತರಂ ಭಕ್ತರ್ಗೆ ಬಱಿದಾಯಿತ್ತು (ಬಸರ. ೮-೮೯); ಪಾರದೆ ಕೊಂಡ ಗಂಡಗುಣದೆಳ್ತರಮಂ ನ್ರಿಪ ಮೆಚ್ಚಿಕೊಟ್ಟ (ಎಕ. XVI, ಚಿಕ್ಕನಾ. ೬೨-೩೧; 1242); ತಳಿವ ಪೊಸಗಪ್ಪುರದೊಳ್ಪುಡಿ ಪೊತ್ತಿದುದಾ ವಿರಹಾನಲನೊಳಗದಱಿಳ್ತರಮಂ ತದ್ವನಿತೆಯವಸ್ಥೆಯನೇನಂ ಬಣ್ಣಿಪೆನು (ಜಯಕಾ. ೪-೪೧).

ಏಳ್ತರ: ಸುರತಾಬ್ಧಿಯೊಳಾಳುತೇಳುತುಂ ಕಡೆಮೊದಲಿಲ್ಲದೇಳ್ತರದ ಕಾಮಿಗಳೆರ್ದರನೂನ ಸಂಗದೊಳ್ (ಗಿರಿಕ. ೪-೧೪೪); ಉತ್ತರಕೆ ಉತ್ತರೋತ್ತರವಾಯ್ತು, ದಕ್ಷಿಣದ ಏಳ್ತರಕೆ ಎಡೆಯಾಯ್ತು (ಉದ್ಯಾಲೆ. ೨೬); ಕವಿ ತನ್ನ ಸೊಬಗಿನ ಏಳ್ತರವನ್ನು ಹೇಳಿಕೊಂಡಿದ್ದಾನೆ (ತವನಿ. ೧೨೨). **ಏಟ್ತರ:** ವದನ ವಿಕಾಸದಿಂ ಬರವಿನೇಟ್ತರದಿಂದಮ ಕಾರ್ಯಸಿದ್ಧಿಯಾದುದು (ಪಂರಾಮಾ. ೧೨-೧೬೨); ಇದೇನೆಂಬ ಸೊಬಗಿನೇಟ್ತರವವನಾ (ಕಬ್ಬಿಕಾ. ೧೨); ಲೋಕಾಪವಾದದೊಂದೇಟ್ತರದ ಬಲ್ಮೆಯೇ (ರಾಮಾಶ್ವ. ೪೫-೧೧).

[ಎಟ್$_0$ (< ಏಟ್$_1$) + ತರ$_1$]

**ಎಟ್ತರಂ** 'ಎಟ್ತರವು' ನೋ.

**ಎಟ್ತರದಿಟ್ಟಿ** (ನಾ). ಉನ್ನತವಾದ ದೃಷ್ಟಿ: ನರಗಟ್ಟು, ನೆರವಾನಿಸಂ, ಬರವಟ್ಟೆ, ತೆಜವೊನ್, ಬಡನಡು, ನೊಳಗಾಡು, ಎಟ್ತರದಿಟ್ಟಿ (ಶಬ್ದಾನು. ೩೩೨ ವ್ಯಾಖ್ಯಾ). [ಎಟ್ತರ + ದಿಟ್ಟಿ]

**ಎಟ್ತರವು,** ಎಟ್ತರಂ, ಏಟ್ತರವು (ನಾ). (ಎದ್ದು) ಬರುವುದು; ಹತ್ತಿರ ಬಂದು ಸೇರುವುದು; ಆಗಮನ: ಈ ಮದದಂತಿಯೆಟ್ತರವು ಮಿಾತನ ಶೌರ್ಯಮುಮಿಾ ಮಹೋಗ್ರ ಸಂಗ್ರಾಮದೊಳಿನ್ನುಮಂ ಚಳಿಯಿಸಲ್ ಬಗೆದಪ್ಪುದು (ಪಂಪಭಾ. ೧೨-೮೪); ಅಜಿವೀರನಭಿಮನ್ಯು ಕುಮಾರನನೆಟ್ತರವುಗಂಡಾಗಳ್ (ನೇಮಿಪು. ೧೨-೩೪ ವ); ಉತ್ತುಂಗ ಪೀಠಾಗ್ರದೊಳ್ಕುಳ್ಳಿರಿಸಿ ಬಟಿಯ ನಿಮ್ಮೊಂದೆಟ್ತರಂ ನಮ್ಮದೊಂದೆಟ್ತರವು ಪೊಸತದೆಂದಿಂದಿತ್ತ ಚಿತ್ತೈಸಿ ಬಂದಿರ್ (ಅನಂಪು. ೧೩-೨೪). **ಎಟ್ತರಂ:** "ಎಟ್ತರಂ = ಬರುವಿಕೆ" (ಶಮದ. ಸ. ೫೬ ಟೀಕ). **ಏಟ್ತರವು:** ಓರಂತೆ ವಸಂತದೇಟ್ತರವುದೋಱುವವೋಲ್ ನನೆದೋಱಿದತ್ತು ವಾಸಂತಿ (ಜಗವಿ. ೧೪-೨೧). [< ಏಟ್$_1$ + ತರ$_1$ + -ಉ$_4$]

△ **ಎಟ್ತು$_1$,** ಎತ್ತು$_2$, ಎರ್ತು, ಎಳ್ತು (ನಾ). ೧. ಬಸವ; ವೃಷಭ; ಗೂಳಿ: "ಎಟ್ತು = ಗೂಟಿ; ಹೊರಸಿನ ನೆಯ್ಗೆ; ಊಕೆಯ ನುಲಿ" (ಶಮದ. ಪರಿ. ೧); ಕಿಟ್ಟೂನೇಶ್ವರದಾ ದೇವರು ಪರವರಿಯೆ ಭಕ್ತನುಂ ಕವಿಲೆಯ ಪಾಲುಂ ಎಟ್ತುಂ (ಎಕ. VI, ಕೊಪ್ಪ. ೩೭-೩; 675); ಬಂಡಮುಮೆಟ್ತುಗಳುಂ ಮೊದಲಾಗೆಲ್ಲಮಂ ಕಳ್ಳರ್ ಕೊಂಡುಪೋದರ್ (ವಡ್ಡಾರಾ. ೭೭-೧೫); ಸೌಂತೆಯ ಬಳ್ಳಿಯೊಳೆಟ್ತು ಪೊಕ್ಕಂತೆ (ಧರ್ಮಾವ್ಯ. ೭-೯೫); ಸಾಯಿರ ಸಾಯಿರ ಲೆಕ್ಕದ ಹೇಱುಗಟದಾನೆಗಳೊಟ್ಟೆಗಳೆಟ್ತುಗಳ (ರಾಮಾಶ್ವ. ೧೧೯-೧೯). ೨. (ಆಲಂ) ದಡ್ಡ; ಬುದ್ಧಿಯಿಲ್ಲದವನು: ಪದಮುಂ ಪ್ರಾಸಮುಮಂ ತಪ್ಪದೆ ಬಲ್ಲಂ ಬೇಱೆಹೋದ ಹೊಲನಂ ರಸಭಾವದೊಳಱಿಯನವನನೆಟ್ತಿನ್ನದೆ ಮತ್ತೇನೆಂದು ಕರೆದೊಡೇಯುಂದಪ್ಪಂ (ಅನಂಪು. ೧-೪೩). **ಎತ್ತು$_2$:** ೧. "ಉಕ್ಷಾ, ಅನಡ್ವಾನ್ . . . ಶಾಕ್ವರಃ—ಈ ೧೧ ಯೆ (ಎ)ತ್ತು" (ಹಲಾಯು. ೪೪-೧೦೮); "ವೃಷಭವಾ ಗೋಬಾಡಬೇಯಮೆನೆಯೆತ್ತೆನಿಕ್ಕುಂ" (ಮಂಗರಾ. ೫೩-೧); ಎತ್ತಿಂಗೆ ಪಿಣಿಲೊಪ್ಪುಗುಮಲ್ಲದೆ ಕೆಚ್ಚಲೊಪ್ಪದು (ಧರ್ಮಾಮೃ. ೬-೨೨೫); ಹೊಱಗಣಿಂ ಬಂದೆತ್ತು ಕತ್ತೆ ಕೋಣ ಭಂಡಿ (ಕಇ. II, ೨೧-೨೨; 1147); ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ (ಬಸವ. ೩೮೩); ಎಳಗಱುಂ ಎತ್ತಾಗದೇ . . . ದೈವದೊಲ್ಮೆಯಿರಲ್ (ಸೋಮೇಶ. ೩೫); ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯಿತು (ಗಾದೆ); ಎತ್ತಿನ ಮುಂದೆ ಕೆಂಗಿನಕಾಯಿ ಒಡೆದ ಹಾಗೆ (ಗಾದೆ). **ಎರ್ತು:** ೧. 'ಎರ್ತುಗಾಣ' ಪರಾ. **ಎಳ್ತು:** ೧. ಎಳ್ತಿರದೀದುದೆನುತ್ತೆ ಪೇಳ್ದಿಱಕದೆ ಕಟ್ಟು ಕೊಟ್ಟಗೆಯೊಳೆಂಬವೊಲ್ (ವೃಷವಿ. ೧೭-೩೧).

[ದೇ. ‖ ತಮಿ. ಮಲ. ಎರುದು; ಕೊಡ. ಏತ್ತೀ; ತೆಲು. ಎದ್ದು; ಕೋಲಾ. ಎಡ್; ನಾಯ್ಕಿ. ಹೆಡ್ಡ್; ಕುರುಖ್. ಅಡ್ಡೋ]

**ಎಟ್ತು$_2$** (ನಾ). ಮಂಚದ ನೇಯ್ಗೆಯ ನುಲಿ: "ಎಟ್ತು = ಗೂಟಿ; ಹೊರಸಿನ ನೆಯ್ಗೆ; ಊಕೆಯ ನುಲಿ" (ಶಮದ. ಪರಿ. ೧); "ಅನಡ್ವಾಹದೊಳ್ ಗೂಳಿಯಲ್ಲಿ ಹೊರಸಿನ ನೆಯ್ಗೆಯೂಕೆಯೊಳಮೆಟ್ತೆನಿಸುಗುಂ" (ಸಂಜೀವ. ೧೬). [?]

**ಎಟ್ತು$_3$** (ನಾ). ಬರೆಹ; ಅಕ್ಷರ: ಮಾಣಿಗ ಬಸುಣ್ಣ ಪೇಸ ಚಲಭೂಷಣ ನೆಟ್ತು (ಎಕ. X, ಶಿಡ್ಲಘ. ೧೨-೩; ಸು. 800); ಸಿರಿಗಾವುಣ್ಣನ ಎಟ್ತು ಪುದಿದುದು (ಇಅ. XII, ೨೧೯-೨೩; 866). [ದೇ. ‖ ತಮಿ. ಮಲ. ಎಱುತ್ತು]

**ಎಟ್ತುಗೊಲುಗಸಣಿ** (ನಾ). ಒಬ್ಬಾತನ ಹೆಸರು: ವಿಷುಪದುಳ್ ಎಟ್ತುಗೊಲುಗಸಣಿಯಾ ಇತ್ತೊಡು (ಇಅ. VIII, ೨೮೫-೩; 706).

[ಎಟ್ತು? + ಗೊಲು? + ಗಸಣಿ?]

**ಎಟ್ತುವೊಜಂಗ** (ನಾ). ಗೂಳಿಯಂತಹ ವಿಟ; ವೃಷಭ ಜಾತಿಯ ವಿಟ: ಮೆಯ್ವಿಸದಿಂ ಕೆಯ್ವಿಸದಿಂ ಬಾಯ್ವಿಸದಿಂ ಮಂತ್ರತಂತ್ರದಿಂದಂ ಸುಖಮಂ ಮೆಯ್ವಿಡೆ ವನಿತೆಗೆ ಪಡೆದಾ ಮೆಯ್ಯೋಗಕ್ಕೆಳಸಿ ಸೋಲ್ವನೆಟ್ತುವೊಜಂಗಂ (ಕಾವ್ಯಾವ. ೬೭). [ಎಟ್ತು$_1$ + ಬೊಜಂಗ]

**ಎಟ್ತೊಂಬು** (ನಾ). ಏಳು ತೂಬುಗಳ ಒಂದು ಮಾನ, —ಅಳತೆ: ನಲ್ಲತ್ತೂರೊಡೆ ಒಗ್ಗ ಮನೆಬಳೆಗಮುಂ ಅಯ್ದೊಮ್ಬುವೋದ ಕಟಣಿಯು ಎಟ್ತೊಮ್ಬು ಬಾಳೆ ತೊಟ್ಟ ಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X, ಕೋಲಾರ. ೨೩೧-೫; 800). [ಎಟ್$_0$ (< ಏಟ್$_2$) + ತೂಂಬು]

**ಎಟ್ದಾಡು** 'ಏಟ್$_1$' ಪರಾ.

△ ಎಟ್ದೆ 'ಎರ್ದೆ' ನೋ.

△ ಎಟ್ದೆಗಿಡು 'ಎರ್ದೆಗೆಡು' ನೋ.

**ಎಟ್ಪತ್ತು,** ಎಪ್ಪತ್ತು, ಎರ್ಪತ್ತು, ಏಳ್ಪತ್ತು, ಏಟ್ಪತ್ತು (ನಾ). ಒಂದು ಸಂಖ್ಯೆ; ಏಳು ಹತ್ತುಗಳ ಮೊತ್ತ: ಈರೆಟ್ಪತ್ತುಱುಳಂ ಒಕ್ಕಲ್ತನಂ ಕೆಯ್ವೊನ್ (ಇಅ. XIX, ೧೫-೧೪೫; 680); ಕಿಸುಕಾಡೆಟ್ಪತ್ತುಮಂ (ಸೌಇಇ. XI-i, ೪೧-೬; 969); ಅಗಳದ ನಿವೇಶನವು ಎಟ್ಪತ್ತು ಅದೇಗುಲದಿಂ (ಹೈಆಸಿ. ೭-೩೩; 1056). **ಎಪ್ಪತ್ತು:** ಶ್ರೀಮನ್ಮಹಾಮಂಡಳೇಶ್ವರಂ ಪೆರ್ಮಾಡಿದೇವರಸರ್ ಕಿಸುಕಾಡೆಪ್ಪತ್ತುಂ . . . ರಾಜ್ಯಂಗೆಯುತ್ತಮಿದ್ದು (ಸೌಇಇ. XI-ii, ೧೧೯-೩೪; 948); ಮಿಸುಪ ಪದಿನೇಱು ಲಘುರಸದಿನೆಪ್ಪತ್ನಾಲ್ಕು ಕುಸುಮಷಟ್ಪದಿಗಿಂತು (ಛಂದೋಂಬು. ೫-೨೧ ಅಡಿಟ); ಏಳೇ ಮರುಳೋ ಎಪ್ಪತ್ತೇ ಮರುಳೋ (ಗಾದೆ). **ಎರ್ಪತ್ತು:** ಕೆಳವಾಡಿ [ಮೂ] ನೂಱುಂ ಬಾಗಡಗೆ ಎರ್ಪ್ಪತ್ತು ನರಯಂಗಲು ಪನ್ನೆರಡು . . . ರಾಜ್ಯಂಗೆಯುತ್ತಮಿದ್ದು (ಸೌಇಇ. XI-ii, ೧೧೯-೩೯; 948); ಕಿಸುಕಾಡೆರ್ಪ್ಪತ್ತಂ . . . ಆಳುತ್ತಮಿರೆ (ಇಅ. XVIII, ೨೭೪-೨೮; 994); ಎರ್ಪ್ಪತ್ತೊಂದು ಚತುಯ್ಯುಗಂ ಬರಂ (ಎಇ. XIII, ೪೨-೧೫; 1112). **ಏಳ್ಪತ್ತು:** ಏಳ್ಪತ್ತೇಟ್ಸಾಸಿರದ ಪ್ರಭು ಪೃಥ್ವಿಸೆಟ್ಟಿ (ಎಇ. XIX, ೩೭-೧೨; 1144). **ಏಟ್ಪತ್ತು:** ಏಟ್ಪತ್ತು, ಏಟ್ಕಡಲ್ (ಶಮದ. ೧೮೯ ಪ್ರಯೋ).

**ಎಳ್ಪದಿಂಬರ್, ಎಟ್ಪದಿಂಬರ್** = ಎಪ್ಪತ್ತು ಜನ, —ಮಂದಿ: ಎಳ್ಪದಿಂಬರು ಪ್ರಭುಗಳಱಿಯಲು (ಎಕ. VI, ಚಿಕ್ಕಮ. ೧೫-೧೨; 1074); ಊರ ಎಟ್ಪದಿಂಬರು ಸಾಕ್ಷಿ (ಎಕ. III, ನಂಜನ. ೧೯೯-೨೦; 189?); ಮಾರೆಯನುಂ ಬೆಳ್ಗೆಱೆಯೊಡೆಯರುಂ ಮೊದಭಾಗೆ ಎಟ್ಪದಿಮ್ಬರುಂ . . . ಸಾಕ್ಷಿ (ಎಕ. XII, ಗುಬ್ಬಿ. ೬೧-೯೮; 812); ಎಟ್ಪದಿಂಬರುಂ ಮೂನೂರ್ಬ್ಬರುಂ (ಎಕ. VII, ಶಿಕಾರಿ. ೨೧೯-೧೪; 918).

[ಎಟ್$_0$ (< ಏಟ್$_2$) + ಪತ್ತು$_4$. / ತಮಿ. ಮಲ. ಎಱುಪದು; ತುಳು. ಎಳ್ಪ, ಏಳ್ಪ, ಎರ್ಪ; ಕೊಡ. ಏಳುವದೀ; ತೆಲು. ಡೆಬ್ಬದಿ, ಡೆಬ್ಭೈ, ಡಬ್ಭೈ]

**ಎಟ್ಟಿದಿಂಬರ್** 'ಎಟ್ಟಿತ್ತು' ಪರಾ.

**ಎಬ್ಬಿಣಸೆ** (ನಾ). ಒಂದು ಊರಿನ ಹೆಸರು : ಎಬ್ಬಿಣಸೆಯ ನಾಲ್ವ ದಿವ್ಯಬ್ರಾಹ್ಮಣಜನಮುಂ (ಎಇ. VII, ೨೦೧–೭ ; 865).

[ಎಬ್ $_0$ (< ಏಬ್ $_2$) + ಪುಣಸೆ]

**ಎಬ್ಬಟ್ಟು, ಎಬ್ಬಟ್ಟು, ಎರ್ಬಟ್ಟು, ಎರ್ವಟ್ಟು, ಎಳ್ಬಟ್ಟು** (ಕ್ರಿ). ಎಬ್ಬಿಸಿ ಓಡಿಸು ; ಬೆನ್ನಟ್ಟು ; ಹಿಂಬಾಲಿಸು : "ಎಬ್ಬಟ್ಟು (ಎಬ್ಬು + ಅಟ್ಟು) – ಅನುಧಾವನೇ " (ಶಮಧಾ) ; "ಎಬ್ಬಟ್ಟಿಂದುಂ, ತೂಳೆಂದುಂ, ಅಱೆ ಯಟ್ಟುವುದೆಂದುಂ, ಬೆನ್ನಟ್ಟುವುದು " (ಕಕಸಾ. ೨೮–೫೮೮) ; ಬಟ್ಟೆ ಯೊಳ್ ಪೋಪ ಬರ್ಪ ಜನಂಗಳನ್ನೆಬ್ಬ[ಪಾಠಾಂ. ಬ್ಬ್ರ್]ಟ್ಟಿ ಕೊಲುತ್ತ ಮಿರ್ಪುದಂ (ವಡ್ಡಾರಾ. ೧೫೬–೧೯) ; ಛಲದಿಂದರಸಂ ತಾಂ ಬೆನ್ನೊಳೆ ಪರಿದೆಬ್ಬಟ್ಟಿ ಪಿಡಿಯಲನುಗೆಯ್ವುದುಂ (ಕಾದಂಪೂ. ೬೨೨) ; ಅಂತವರ ನೆಱೆದುಕೊಂಡೊಯ್ವಾಗಳೊಂದು ಕಾಡಾನೆ ಕಂಡೆಬ್ಬಟ್ಟಿ (ಜೀವಸಂ. ೯–೩೪ ವ) ; ದೋಷಾಸ್ಪದ ತನುವುಮನೆಬ್ಬಟ್ಟಿ (ಚಿಕವಿ. ೧–೬೫) ; ಎಬ್ಬಟ್ಟಿ ಪೆಣ್ಗಳನ್ ಪೋಟ್ದನ್ (ಅಶ್ವಶಾ. ೩–೧೫). **ಎಬ್ಬಟ್ಟು** : ಆರ್ಪಿನಿಂ ದುರಿತ ರಿಪುಕುಲವನೆಬ್ಬಟ್ಟುವಂ (ಸೇದಿರ. ದೇ. ೫೮–೧೧); ಕನಲ್ದ ಕೇಸರಿ ಗಂಧಸಿಂಧುರ ಘನಘಟೆಯನೆಬ್ಬಟ್ಟುವಂದದಿನಿನಿಬರುಮನಂತಕನ ಬಾಣಸಕಿಲ್ಲಿ ಸಲಿಸುವೆನು (ಕುಮುರಾ. ೨–೪೭) ; ಯಕ್ಷರಂ ಬಿಡದೆ ಪೊಯ್ದು ಎಬ್ಬಟ್ಟಲ್ (ಶೇಷರಾ. ೧೮೨–೨೨). **ಎರ್ಬಟ್ಟು** : ಮಾರ್ಬಲಮಂ ಸುರಸೈಸಕಮೆರ್ಬ[ಪಾಠಾ. ಬ್ಬ]ಟ್ಟಿದುದಳ್ಕಿ ಬಳ್ಕಿ ಬೆಂಗೊಡುವಿನೆಗಂ (ಪಂರಾಮಾ. ೧೦–೨೦೦). 'ಎರ್ಬಟ್ಟಿಸು' ಪರಾ. **ಎರ್ವಟ್ಟು** : ಆದರಮನೌದಾಸೀನ್ಯಮೊಳ್ಪಂ ಕೃತಘ್ನತೆಯೆಂಬಂತಿರೆ ತದ್ಗುಣೋತ್ಕರಮನೆರ್ವಟ್ಟಿತ್ತು ದೋಷೋತ್ಕರಂ (ಕಾದಂಉ. ೪೦೧) ; ಚಂಡಾಂಶು ಪ್ರತಿಭಾಸಿ ಪೊಯ್ಸಳನದಾರ್ದೆರ್ವಟ್ಟಿದಂ ಗೋವೆಯಂ ಕೊಂಡಂ (ಮುಂಬರಾ. XI, ೨೩೯–೧೧ ; 1060) ; ಬೆಂಕೊಳ್ವ ವೀರದರ ನೆರ್ವಟ್ಟಿ ಬಡಿವ ಬೀರದ ಘರಟ್ಟ (ಎಕ. XVI, ತುಮಕೂ. ೧೧೦–೨೦ ; 1163). **ಎಳ್ಬಟ್ಟು** : ಭಾಷೆಯಂ ಬಱಿಗಂಟಕ್ಕುವನೆಂದು ತಾಯ ಹೊಸೆ ಬಿಟ್ಟೆಳ್ಬಟ್ಟಿ ಕೊಂಡಾಡುತಂತಿರುವಳ್ ತಾಂ ನೆಱೆ ಸೂಳೆಯ್ಯೆ (ಸೋಮೇಶ. ೭೩) ; ಈತನನೆಳ್ಬಟ್ಟಿ ಸಕಲರಂ ರಕ್ಷಿಸುವೆಂ (ವಿಷ್ಣುಪು. ೫–೨–೮೧).

[ಎಬ್ಬು + ಅಟ್ಟು $_2$]

**ಎಬ್ಬಿಸು, ಎಬ್ಬಿಸು, ಎರ್ಬಿಸು, ಎಳ್ಬಿಸು** (ಕ್ರಿ). ೧. ನಿದ್ರೆಯಿಂದ ಎಚ್ಚರಗೊಳಿಸು, —ಏಳಿಸು : "ಎಬ್ಬಿಸಿದನೆಂದು ನಿದ್ರೆತಿಳಿಯಿಸಿದನುಂ ಎತ್ತಿಕಳೆದನುಮಕ್ಕುಂ" (ಶಮದ. ನ. ೩೩ ವೃತ್ತಿ) ; ಎಬ್ಬಿಸಿ ಬಿಸರುಹನಾಭನೊಳಿಂತುಸಿರ್ದರ್ (ಗೀತಗೋ. ೬–೧೬) ; ಬಿಜುನುಡಿಗಳಿಂದೆ ತಿವಿದೆಬ್ಬಿಸುತೆ, ಕಟ್ಟಿಸಕಮನಸಡ್ಡೆ ಮಾಟ್ಟಿವನ್ (ಅಂತಿಗೂ. ೨೦–೪೦೧). ೨. ಮೇಲಕ್ಕೆ ಎತ್ತು : "ಎಬ್ಬಿಸಿದನೆಂದು ನಿದ್ರೆತಿಳಿಯಿಸಿದನುಂ ಎತ್ತಿಕಳೆದನುಮಕ್ಕುಂ" (ಶಮದ. ನ. ೩೩ ವೃತ್ತಿ). **ಎಬ್ಬಿಸು** : ೧. ತೊಡೆವೊಯ್ದು ಮೆಲ್ಲನೆಬ್ಬಿಸೆ (ಬಸರ. ೯–೧೪೯) ; ಸತ್ತವರನೆಬ್ಬಿಸುವ ವಿದ್ಯೆ (ಸಂಭಪ. ೫–೮೩). ೩. ಮೇಲಕ್ಕೆ ಏಳುವಂತೆ ಮಾಡು : ಯಾರೋ ಬಂದು ನನ್ನನ್ನು ತಟ್ಟಿ ಎಬ್ಬಿಸಿದಂತಾಯಿತು (ಪ್ರತಾಪ. ೪೩) ; ಹಾಲು ಬತ್ತಕೆ ಕವಿವರಗಿಳಿಗಳ ಹಿಂಡ ಮೇಲಕೆಬ್ಬಿಸುವ ನಾರಿಯರ ಪೇಳಲಳವೆ (ಕಂನವಿ. ೫–೬೪). ೪. ಅಪಹರಿಸು ; ಎತ್ತಿ ಹಾಕು; ಲಪಟಾಯಿಸು : ಪರರ ಬಂಗಾರ ಮೊದಲಾದ ದ್ರವ್ಯಂಗಳ ನೆಬ್ಬಿಸಿ ಹಂಗಿನವನಲ್ಲನಿವನೆಂಬೊ ತೆರದಿ (ವಿಸಾಸು. ೮೭–೧). **ಎರ್ಬಿಸು** : ೩. ಉರ್ವರೆಯ ಶಾಲಿಗಳ ಪಾಲ್ದೆನೆಗೆ ನಭದಿಂ ಮುಸುರ್ವ ಗಿಳಿವಿಂಡುಗಳ ನುಲಿಯಿಂದೆ ಪಾಮರಿಯರೆರ್ಬಿಸಿದೊಡಿರದೆ ಬಾಂದಳಕೆ ಮಗುಳೇಳ್ವವೊಲ್ (ಜೈವಿಭಾ. ೩–೫). **ಎಳ್ಬಿಸು** : ೩. ಪುಳಕಮನೆಳ್ಬಿಸುತ್ತೆ ಹರನಂ ಪರಿದಪ್ಪುತೆ ಸಂತಸಂಗಳಂ ಬಳೆಯಿಸುತುಂ (ಗಿರಿಕ.೧–೭); ದುಷ್ಟಾಹಿಯಂ ಲೀಲೆಯಿಂದೆಳ್ಬಿಸೆ ಸೌಖ್ಯಂ ಸಾರ್ವುದೆ (ಪಾಪ್ರಾಶ. ೬೨).

[ಎಬ್ಬು + –ಇಸು $_3$. / ತಮಿ. ಎಟುಪ್ಪು ; ಮಲ. ಏಟುಮ್ಬು ; ತುಳು. ಎರ್ಪು ; ಕೊಡ. ಏಪ್, ಏಪ್ಪಿ]

**ಎಬ್ಬು, ಎಬ್ಬು, ಎರ್ಬು, ಎರ್ವು** (ಕ್ರಿ). ೧. ಮೇಲಕ್ಕೆ ಎಬ್ಬಿಸು : "ಎಬ್ಬು – ಉತ್ಸರ್ಪಣೇ" (ಶಮಧಾ) ; ತಂದೆಯ ಮಱಲುಂದಿದಲ್ಲಿಗೆ ವೋಗಿ ಬರುಂಟಿ ಎಬ್ಬಿ ಪೊಟ್ಟಳಿಗೆಯಂ ತಂದೆಗೆ ಕೊಟ್ಟಳ್ (ವಡ್ಡಾರಾ. ೧೭–೨೪) ; ತಿರುಮಲರಾಜೇಂದ್ರನನತಿತರ ಕುಶಲೋಪಾಯದಿಂದೆ ಗೆಲ್ದೆಬ್ಬಿ ರಮಾವರ ರಂಗನಾಥ ಕೃಪೆಯಿಂ (ದಿವ್ಯಚ. ೧–೭೨). **ಎಬ್ಬು** : ಪೊಗಿಸಿ ಪಾಳು ಬಾವಿಗಳೊಳು ತುಂಬಿವಿಂಡನೆಬ್ಬಿ ಬಿಡದೆ (ಸಾನಂಚ. ೬–೯೩ ರ) ; ವಿರಹದವಾನಳಂ . . . ವಿವಿಧ ಸಾಧ್ವಸಬುದ್ಧಿ ಮೃಗಂಗಳಂ ಪೊದಬ್ದುರಿಗಳಿನೆಬ್ಬೆ (ನಳಚಂ. ೧೬೭) ; ಅವನ್ನು ಎಬ್ಬುತ್ತಾ ಪಾರೋತಿಯ ಸವಾರಿಯು ಮನೆಗೆ ಹೊರಟಿತು (ಮರಮ. ೨೬) ; ಕಲ್ಲು ಚಪ್ಪಡಿಗಳನ್ನು ಎಬ್ಬುವ ಸಣ್ಣ ಬೆಟ್ಟವೊಂದು ದಾರಿಗರಿಗೆಲ್ಲ ಕಾಣಿಸುತ್ತದೆ (ಮಹಾಗ. ೧೯೧). ೨. ಅಟ್ಟು ; ಓಡಿಸು : ಮುನಿದು ಪುರದಿಂದೆಬ್ಬಲಾತಂ ಬಂದು (ಫಣಿಚ. ೩–೫೪). **ಎರ್ಬು** : ೧. ಸಾಲ್ವಿಡಿದು ಸೂಸುವ ಧವಳಚಾಮರಂಗಳಿಂದಂಚೆವಿಂಡ ನೆರ್ಬಿದಂತೆಯುಂ (ರಾಜಶೇ. ೧೩–೭೭ ವ). **ಎರ್ವು** : ೧. 'ಎರ್ಬಿಸು' ಪರಾ.

[ದೇ. ‖ ತಮಿ. ಎಟುಪ್ಪು, ಎಟುಪ್ಪಿ ; ಮಲ. ಎಟುಮ್ಬು ; ತುಳು. ಎರ್ಪು ; ಕೊಡ. ಏಪ್, ಏಪ್ಪಿ]

**ಐ$_1$** (ನಾ). ಕನ್ನಡ ವರ್ಣಮಾಲೆಯ ಹನ್ನೆರಡನೆಯ ವರ್ಣ; ಐಕಾರ: ಎ ಏ, ಒ ಓ ಎಂಬೀ ಯುಗಳಾಕ್ಷರಂಗಳ್ (ಶಮದ. ೮ ವೃತ್ತಿ).

**ಐ$_2$** (ಸ). ಪ್ರಶ್ನಾರ್ಥಕ ಸರ್ವನಾಮ 'ಏನ್' ಎಂಬುದಕ್ಕೆ ಸಮಾಸದಲ್ಲಿ ಆದೇಶವಾಗಿ ಬರುವ ರೂಪ: ಜನಮೆಲ್ಲಂ ನೆರೆದಕ್ಕಟಣ್ಣರಿಂದೇವಂದರೇವೋದರೆಂಬಿನಂ (ಪಂಪಭಾ. ೩–೬೫); ನೆಗಟ್ದ ಸುಮಿತ್ರನೆಂಬ ಪರದಂಗೆ ಮಗಳ್ವಸುಕಾಂತೆಯೆಂಬೊಳೇವೊಗಟ್ಟುದಶೇಷ ರೂಪವತಿ (ಸುಕುಮಾ. ೭–೮); ಐವೊಗಳ್ವೆನವಗಾಹವಿರ್ದು ಸರೋವರದಿನೊಂದಾನೆಯೆದ್ದುದು (ಸಾಳ್ವಭಾ. ೬–೧೦). [< ಏನ್]

**–ಐ$_3$** (ಪ್ರ). ಸಂಬೋಧನೆಯಲ್ಲಿ ಬರುವ ಪ್ರತ್ಯಯ: ತಳಿರೇ ತಾವರೆಯೇ ಮದಾಳಿಕುಲಮೇ ಕರ್ನೆಯ್ದಿಲೇ ಮತ್ತಕೋಕಿಳಮೇ ಕಂಡಿರೆ ಪಲ್ಲವಾಧರೆಯಂ (ಪಂರಾಮಾ. ೯–೧೧೮).

**ಐ$_4$** (ಅ). ಸ್ಮರಣ, ಆಕ್ಷೇಪ, ವಿಶಂಕೆ, ಪ್ರಶ್ನೆಗಳನ್ನು ಸೂಚಿಸುವ ಒಂದು ನಿಪಾತಾವ್ಯಯ: "ಎ ಏ ಒ ಓ ಎಂಬಿವು ಪದಾಂತದೊಳಿರ್ದು ವಿಶಂಕೆ, ಪ್ರಶ್ನೆ, ಆಕ್ಷೇಪ – ಈಯರ್ಥಂಗಳೊಳ್ ವರ್ತಿಸುಗುಂ" (ಶಮದ. ೩೧೪ ವೃತ್ತಿ); ನಿನಗೀವುದನೇಂ ನುಡಿದನೆ ಐ ಅದು ಕೆಯ್ಯದು (ಕಾವ್ಯಾವ. ೪೯).

**–ಐ$_5$** (ಪ್ರ). ಅವಧಾರಣಾರ್ಥದಲ್ಲಿ ಬರುವ ಪ್ರತ್ಯಯ: ಚೆಲ್ವನಪ್ಪುದೇ ಕನಕ ಪದ್ಮಿನೀ ನಿಳಯಮೆನ್ನ ಲೀಲಾರಸಂ (ಆದಿಪು. ೪–೮). '– ಎ$_4$' ಪರಾ.

**ಐಂ** 'ಏಮ್' ನೋ.

**ಐಂಕು** (ಕ್ರಿ). ಬಿಕ್ಕುಳಿಸಿಕೊಂಡು ಅಳು; ಉಮ್ಮಳಿಸಿ ಅಳು: "ನನ್ನ ಮಗಳು ಜಕಣಿಯಾದಳೆ . . . " ಎಂದು ಗಿರಿಜ ಮಂಡಿಯ ಮೇಲೆ ತಲೆಯಿಟ್ಟು ಮತ್ತೆ ಐಂಕಿದಳು (ದೇವಹಂ. ೮೭).

**ಐಂಕಿಐಂಕಿ ಅಳು** = ಬಿಕ್ಕಿ ಬಿಕ್ಕಿ ಅಳು; ಉಮ್ಮಳಿಸಿ ಅಳು: ಗಿರಿಜ ಐಂಕಿ ಐಂಕಿ ಅಳುವುದಕ್ಕೆ ಆರಂಭಿಸಿದಳು (ದೇವಹಂ. ೮೩); ವೆಂಕಮ್ಮನಿಗೆ ಏನು ಕಂಡಿತೊ . . . ಏನನ್ನ ಎಣಿಸಿಕೊಂಡರೊ . . . ಐಂಕಿ ಐಂಕಿ ಅಳುತ್ತಾ ಸೆರಗಿನಿಂದ ಮುಖ ಮುಚ್ಚಿಕೊಂಡರು (ಪದ್ಮಸ. ೨೬೦). [ದೇ. ‖ ತಮಿ. ಏಙ್ಕು$_1$; ಮಲ. ಏಙ್ಙು]

**ಐಂಡಿಗೆ** (ನಾ). ರಹದಾರಿ: ಈ ಒಂದು ವೃತ್ತಿಗೆ ಸಲ್ಲುವ ಆ ಸಕಲ ಸಾಮಾನ್ಯವನ್ನು ಧ್ರುವ ಐಂಡಿಗೇ ಮೇರೆ ರೂ (ಯು) ಧಿಸಿಕ್ಕೊಂಡು (ಹುಟ್ಟಹ. ೩). 'ಧ್ರುವಐಂಡಿಗೆ' ಪರಾ. ℙ ಉಂಡಿಗೆ ಎಂಬುದರ ಇನ್ನೊಂದು ರೂಪ ಇರಬಹುದು. [?]

**ಐಕ್‌ದಂ** 'ಏಕದಂ' ನೋ.

**ಐಕ** (ನಾ). ೧. ಒಂದು: "ಏಕಮೊಂದರ ನಾಮಂ" (ವ್ಯವಹಾ. ೯–೧); ಐಕಮಂ, ಐಕದಿಂ (ಶಬ್ದಾನು. ೧೧ ಪ್ರಯೋ). ೨. ಅದ್ವಿತೀಯ; ಅಸಮಾನ; ಶ್ರೇಷ್ಠ; ಮುಖ್ಯ; ಪ್ರಧಾನ: ಶಾರದೈಕವನ್ಯಕುಸುಮದ ಚಿತ್ರಪೂರ ಕೇಯೂರ ಕರ್ಣಪೂರದ ಭೂಷಣಂಗಳೊಳಂ ಪಟ್ಟಪಟ್ಟಾವಳಿಯ ಗಂಡುಡಿಗೆಯೊಳಮೆಸೆದು ಪಸದನಂಗೆಯ್ದು (ಜಗವಿ. ೪–೮೦ ವ); ಏಕಂ ಕೂಟಸ್ಥಂ ನಿನ್ನಾಕಾರ ತ್ರಿತಯವಾದ ವಿಭುತೆ ಸಮಗ್ರಂ (ಜಗವಿ. ೪–೧೦೪). ೩. ಸಮಾನ. ೪. ಸಂಖ್ಯಾಗಣನೆಯಲ್ಲಿ ಒಂದನೆಯ ಸ್ಥಾನದ ಹೆಸರು: "ಏಕಂತು ಪ್ರಥಮಂ ಸ್ಥಾನಂ" (ವ್ಯವಹಾ. ೫೮). ೫. ಒಂಟಿ; ಒಬ್ಬಂಟಿಗ; 'ಏಕಾಂಗಿ' ಪರಾ. ೬. [ಸಂಗೀತ] ಸಪ್ತತಾಳಗಳಲ್ಲಿ ಒಂದು ಬಗೆ: ಬಳಿಕ ಧ್ರುವ ಮಟ್ಟರೂಪಕ ಜಂಪೆ ತ್ರಿಪುಟ ಅಟ್ಟೆ ಐಕವೆಂಬ ಸಪ್ತತಾಳಭೇದಂಗಳಂ (ವಿವೇಕ ೨೩೮). ೭. [ವ್ಯಾಕ] ಒಂದೇ ವಸ್ತುವನ್ನು ಹೇಳುವುದು: ಏಕ ದ್ವಿತ್ವ ಬಹುತ್ವಮನೇಕ ದ್ವಿಬಹುತ್ವ ವಸ್ತುಗಳೊಳಾಚರಿಪರ್ ಸ್ವೀಕಾರ್ಯಂ ಕನ್ನಡದೊಳಗೇಕ ಬಹುತ್ವಂ ದ್ವಿವಚನಮುಚಿತದೆ ಬರ್ಕುಂ (ಶಮದ. ೯೪).

**ಐಕಮಾಗು** = ಒಂದಾಗು: ತ್ರಿಭುವನೇಶ್ವರನಾಗಿಯಜಾರಿಯಾಗಿಯುಂ ಗಿರಿಜೆಯೊಳೇಕಮಾಗಿಯಜಿಯಲ್ಕೆಯಶಕ್ಯಮೆನಿಪ್ಪ (ಉಮಾಶ. ೩). **ಐಕಮಾಡು** = ಮುಟ್ಟು ಮೈಲಿಗೆ ಒಂದು ಮಾಡು: ದೇವರ ಪೂಜೆ ಆಗುವವರೆಗೆ ಐಕಮಾಡಬೇಡ (ರೂಢಿ). [ಸಂ.]

**ಐಕಕ** (ಗು). ೧. ಒಂದೇ ಒಂದಾದ; ಒಂಟಿಯಾದ. ೨. ಸಮಾನವಾದ. [ಸಂ.]

**ಐಕಕಣ** (ನಾ). ಒಂದೇ ಒಂದು ಕಣ, —ಅಣು. [ಐಕ + ಕಣ$_3$]

**ಐಕಕರ್ತೃಕ** (ನಾ). [ವ್ಯಾಕ] ಒಂದೇ ಕರ್ತೃವನ್ನು ಉಳ್ಳದು: ಧಾತುಗಳಿಗೆ ಕೆಲವು ಆಖ್ಯಾತ ಪ್ರತ್ಯಯಗಳು ಸೇರಿ ಪೂರ್ಣ ಕ್ರಿಯಾಪದಗಳಾಗುತ್ತವೆ . . . ಇವುಗಳಲ್ಲಿ ಏಕಕರ್ತೃಕ, ಭಿನ್ನಕರ್ತೃಕ ಎಂದು ಎರಡು ವಿಧಗಳಿವೆ. ಕಾದುತ್ತುಂ ಬಂದಂ ಎಂಬಲ್ಲಿ ಕಾದುವುದು ಬರುವುದು ಎಂಬ ಎರಡು ಕ್ರಿಯೆಗಳೂ ಒಬ್ಬನಿಂದಲೇ ಉಂಟಾದುವು ಎಂದರೆ ಏಕಕರ್ತೃಕವಾದುವು (ಕೈಪಿಡಿ. ೪೯). [ಐಕ + ಕರ್ತೃಕ]

**ಐಕಕಾಲ** (ನಾ). ಒಂದೇ ಸಮಯ, —ಕಾಲ: ಅವರ ಬಗ್ಗೆ ಸಹಾನುಭೂತಿಯೂ, ಅವರನ್ನಿಲ್ಲಿ ತಂದಿಟ್ಟ ಜನರ ಬಗ್ಗೆ ಭಯಕಳವಳಗಳೂ ಏಕಕಾಲದಲ್ಲಿ ಮೂಡಿದುವು (ಪುನರು. ೨೩೪). [ಐಕ + ಕಾಲ$_1$]

**ಐಕಕುಂಡಲ** (ನಾ). ೧. ಒಂದೇ ಕುಂಡಲವನ್ನು ಉಳ್ಳವನು. ೨. ಕುಬೇರ. ೩. ಬಲರಾಮ ೪. [ಜೈನ] ಶ್ರೀರಾಮ: ಎಜಗುವುದೂರ್ಧ್ವಜ್ವಲನಮೆ ತೆಜನೆನಿಸಿದ ದೀಪವರ್ತಿ ನಿಧಿಗಾ ನಿಧಿಯಂ ಕೊಜಿದಂದಲೆಂದೊಡಾರ್ಪಿನ ತಜಿಸಲವಂ ಕಂಡನೇಕಕುಂಡಲನೆ ವಲಂ (ಪಂರಾಮಾ. ೬–೧೩೫). ೫. ಒಂದು ಪಟ್ಟಣದ ಹೆಸರು: "ಧನಾಧೀಶ್ವರಂ ಬಲನುಂ ಪಟ್ಟಣಮೇಕಕುಂಡಲಮೆನಿಕ್ಕುಂ" (ನಾನಾರ. ೧೪೮). [ಐಕ + ಕುಂಡಲ]

**ಐಕಕೂಟ** (ನಾ). ಒಂದುಗೂಡುವಿಕೆ; ಒಂದೇ ಕೂಟ: ಅವರಿವರುಯೆನದಿನ್ನೆಲ್ಲರೊಂದೇ ಲಿಂಗಧಾರಿಗಳೇಕಕೂಟದಲಿ (ಬಜ್ಜಪು. ೯೭–೨೭). [ಐಕ + ಕೂಟ$_1$]

**ಐಕಕ್ರಿಯೆ** (ನಾ). ೧. ಒಟ್ಟುಗೂಡಿಸುವುದು; ಒಂದು ಮಾಡುವುದು: "ಒಟ್ಟು – ಏಕಕ್ರಿಯಾಯಾಂ" (ಶಮಧಾ). ೨. ಒಂದೇ ಕೆಲಸ. ೩. [ವ್ಯಾಕ] ಒಂದೇ ಒಂದು ಕ್ರಿಯಾಪದ: ಇಡುಕುಂ ಗಬ್ಬಂ ಮುಕ್ತಕಮೊಡಂಬಡಲ್ ನೆಗಟಿ ಪಲವುಮೇಕಕ್ರಿಯೆಯೊಳ್ ಪಡೆಗುಂ ಕುಳಕಾಖ್ಯೆಯಂ (ಕಾವ್ಯಾವ. ೯೫೧). [ಐಕ + ಕ್ರಿಯೆ]

**ಐಕಗುಣೋಪಾಸಕ** (ನಾ). [ದ್ವೈತ] "ಭಗವದ್ರೂಪವನ್ನು ಆತ್ಮತ್ವವೆಂಬ ಒಂದೇ ಗುಣದಿಂದ ಅಂದರೆ ಅಂತರ್ಯಾಮಿಯೆಂದು ಉಪಾಸನೆ ಮಾಡುವರು ಕೆಲವರು. ಇವರು ಏಕಗುಣೋಪಾಸಕರು" (ಹಿಂದಸಾ. ೨೯೦). [ಐಕಗುಣ$_0$ + ಉಪಾಸಕ]

**ಏಕಗುರು** (ನಾ). ೧. ಒಬ್ಬನೇ ಒಬ್ಬಗುರು. ೨. ಒಬ್ಬನೇ ಗುರುವಿನ ಬಳಿ ವ್ಯಾಸಂಗ ಮಾಡಿದವರು; ಸತೀರ್ಥ್ಯ; ಸಹಾಧ್ಯಾಯಿ: "ಸತೀರ್ಥ್ಯಃ, ಏಕಗುರುಃ – ಒಂದು ಗುರುವಿನ ಬಳಿಯಲ್ಲಿ ಯಾವ ಉತ್ತಮ ವಿದ್ಯೆಯನ್ನಾದರೂ ಓದಿ ಕಲಿತುಕೊಂಡವರೊಳಗೊಬ್ಬರಿಗೊಬ್ಬರು ಸತೀರ್ಥ್ಯರು, ತಮ್ಮೆಲ್ಲರಿಗೂ ಒಬ್ಬನೇ ಗುರುವಾಗಿವುಳ್ಳವರು" (ಸಿದ್ಧಾಂಶಿ. ೧೮೬). [ಏಕ + ಗುರು₂]

**ಏಕಗ್ರಾಹಿ** (ನಾ). ಒಂದನ್ನೇ ಹಿಡಿದಿರುವವನು; ಒಂದೇ ಪಟ್ಟು ಹಿಡಿದವನು; ಹಟವಾದಿ: ಆಗಳಂಗರಾಜಂಗೆ ಶಲ್ಯಂ ಕಿನಿಸಿ ಮುಳಿಸಿನೊಳೆ ಕಣ್ಣಾಣದಿಂತಪ್ಪೇಕಗ್ರಾಹಿಗಮೊಜಂಟಂಗಂ ರಥಮನೆಸಗೆನೆಂದು ವರೂಥದಿಂದಿೞಿದು ಪೋಗೆ (ಪಂಪಭಾ. ೧೨–೨೦೫ ವ); ಏಕಗ್ರಾಹಿ ಭಾವಭೇದವಿಲ್ಲವಾಗಿ ಮನಃಪ್ರವೇಶಿಯಾ ಶರಣನು (ಬಸವ. ೭೬೫).
[< ಸಂ. ಏಕಗ್ರಾಹಿನ್]

**ಏಕಗ್ರೀವ** (ನಾ). ಒಂದೇ ಕೊರಳು; ಏಕಕಂಠ (*). [ಏಕ+ಗ್ರೀವ]

**ಏಕಚಕ್ರ** (ನಾ). ೧. ಒಬ್ಬನೇ ರಾಜನಿಂದ ಆಳಲ್ಪಟ್ಟದ್ದು: ಸಂತಮಿಂತಾದೆಸಕಂ ಕಯ್ಗಣ್ಮೆ ತದ್ಭೂಪತಿಗಖಿಳಧರಾಚಕ್ರಮಾಯ್ತೇಕಚಕ್ರಂ (ಸುಕುಮಾ. ೯–೭೩). ೨. ಒಂದು ಪಟ್ಟಣದ ಹೆಸರು: ವಿಕಟ ಭುಜಬಲರೇಕಚಕ್ರದೊಳಕುಟಿಲರು ಭೂಸುರರರಕ್ಷಿಸಿ ಬಕನ ಮುಱಿದರು (ಕುವ್ಯಾಅ. ೧೦ ಸೂಚನೆ). [ಏಕ + ಚಕ್ರ]

**ಏಕಚಕ್ರವರ್ತಿ** (ನಾ). ಸಮಸ್ತ ಭೂಮಿಗೂ ಒಬ್ಬನೇ ಆದ ಒಡೆಯ (*). [ಏಕ + ಚಕ್ರವರ್ತಿ]

**ಏಕಚಟ್ಟುಗ** (ನಾ). [ಜೈನ] ಮಠದ ಒಂದು ಶಾಖೆಯ ಹೆಸರು (?): ಕುಣ್ಡಕುನ್ದಾನ್ವಯದ ಏಕಚಟ್ಟುಗದ ಭಟಾರರ ಶಿಷ್ಯರ್ ಶ್ರೀ ಸರ್ವನನ್ದಿ ಭಟಾರರ್ (ಕಇಅ. ೭೧–೩–೨; 881). [ಏಕ + ಚಟ್ಟುಗ]

**ಏಕಚರ** (ಗು). ೧. ಒಂಟಿಯಾಗಿ ಸಂಚರಿಸುವ ಅಥವಾ ವಾಸಿಸುವ. ೨. ಒಟ್ಟಾಗಿ ಹೋಗುವ; ಗುಂಪುಕೂಡಿ ಚಲಿಸುವ; ಸಂಘಜೀವಿಯಾದ. ೩. ಭೂಮಿಯ ಮೇಲೆ ಮಾತ್ರ ವಾಸಿಸುವ (*).
[ಏಕ + ಚರ₂]

**ಏಕಚಿತ್ತ** (ನಾ). ಒಂದೇ ಮನಸ್ಸು; ಒಮ್ಮನ: ಕೇಳಿಮೇಕಚಿತ್ತದಿಂ (ಜೀವಸಂ ೩೭–೨೧ ವ). [ಏಕ + ಚಿತ್ತ₂]

**ಏಕಚ್ಛತ್ರ** (ನಾ). ೧. ಒಂದೇ ಕೊಡೆ; ಒಂದು ಛತ್ರಿ. ೨. ಒಬ್ಬನೇ ರಾಜನ ಆಳ್ವಿಕೆ, ಏಕಚ್ಛತ್ರದಿಂದ ರಾಜ್ಯಮನಾಳ್ವ ಸೌಭಾಗ್ಯವೆಂದು (ಪೀಠಿಪು. ೨–೬–೧೮). [ಏಕ + ಛತ್ರ₁]

**ಏಕಚ್ಛತ್ರಚ್ಛಾಯೆ** (ನಾ). ಒಂದೇ ಕೊಡೆಯ ನೆರಳು; ಒಬ್ಬನೇ ರಾಜನ ರಕ್ಷಣೆ: ಅಂತು ಭರತಂ ಭರತಮಂಡಳಮನೇಕಚ್ಛತ್ರಚ್ಛಾಯೆಯಿಂದಂ ಪ್ರತಿಪಾಲಿಸುತ್ತಮಿರೆಯಿರೆ (ಆದಿಪು. ೧೫–೪ ವ); ಪನ್ನಿಚ್ಛಾಸಿರಮುಮನೇಕಚ್ಛತ್ರಚ್ಛಾಯೆಯಿನಾಳ್ದು (ಎಕ. VIII, ಸೊರಬ. ೪೬೫–೯; 968). [ಏಕಚ್ಛತ್ರ + ಛಾಯೆ]

**ಏಕಚ್ಛತ್ರಾಧಿಪತಿ** (ನಾ). ಸರ್ವಾಧಿಕಾರಿ; ಸಾಮ್ರಾಟ (*).
[ಏಕಚ್ಛತ್ರ + ಅಧಿಪತಿ]

**ಏಕಚ್ಛತ್ರಾಧಿಪತ್ಯ** (ನಾ). ಸರ್ವಾಧಿಕಾರಿತ್ವ; ಸಾಮ್ರಾಟನ ಪ್ರಭುತ್ವ (*). [ಏಕಚ್ಛತ್ರ + ಅಧಿಪತ್ಯ]

**ಏಕಚ್ಛತ್ರಿ** (ನಾ). ಒಬ್ಬನೇ ರಾಜ ಅಥವಾ ಒಡೆಯನಿಗೆ ಒಳಪಟ್ಟದ್ದು; ಅಂಥ ಒಂದು ದೇಶ (*). [< ಸಂ. ಏಕಚ್ಛತ್ರಿನ್]

**ಏಕಚ್ಛತ್ರೀಕೃತ** (ಗು). ಒಂದೇ ಕೊಡೆಯ ಕೆಳಗೆ ತರಲ್ಪಟ್ಟ; ಒಂದೇ ಆಳ್ವಿಕೆಗೆ ಒಳಪಡಿಸಿದ: ಅಂತೇಕಚ್ಛತ್ರೀಕೃತ ಭಾರತವರ್ಷನುಂ (ಚಂದ್ರಪು. ೭–೩೫ ವ). [ಸಂ.]

**ಏಕಚ್ಛಾಯ** (ನಾ). ನೆರಳನ್ನು ಮಾತ್ರ ಹೊಂದಿರುವುದು; ಪೂರ್ತಿ ಕತ್ತಲಾಗಿರುವುದು. [ಸಂ. (ಏಕ + ಛಾಯಾ + – )]

**ಏಕಛತ್ರ** (ನಾ). = ಏಕಚ್ಛತ್ರ ೨: ಆ ಭೇದವನಱಿತಲ್ಲಿ ಅಭೇದ್ಯಮೂರ್ತಿ ಏಕಛತ್ರಕ್ಕೆ ನೀನೇ ಅರಸು (ಮೋಳಿಮಾ. ೧೪೯–೫೩೯); ನಿಮ್ಮೇಕಛತ್ರದೀ ನೆಳಲನೆಮಗೀಯೆಂದು ಬೇಡುವೆವೆ? (ಗೊಲ್ಲೊಥಾ. ೭–೧೬೮).
[< ಸಂ. ಏಕಚ್ಛತ್ರ]

**ಏಕಜಾತಿ** (ಗು). ೧. ಒಂದು ಬಾರಿ ಹುಟ್ಟಿದ. ೨. ಒಂದೇ ಜಾತಿಯ, —ಬಗೆಯ. (ನಾ). ೩. ಶೂದ್ರ [ಏಕ + ಜಾತಿ]

**ಏಕಜೀವ** (ನಾ). ೧. ಒಂದೇ ಜೀವ. ೨. ಸಮರಸವಾದುದು; ಅನ್ಯೋನ್ಯವಾದುದು: ತಾನು ಏಕಜೀವರಾದ ತನ್ಮಯ ದಂಪತಿಗಳನ್ನು ಕಂಡು ತನ್ನನ್ನೇ ಅವರಲ್ಲಿ ಆರೋಪಿಸಿ ಸುಖಸ್ವಪ್ನಗಳನ್ನು ಕಾಣುವಳು (ಜಯಂತ. ೨೭೦). [ಏಕ + ಜೀವ]

**ಏಕಜೋಯಿ** (ನಾ). (?): "ತಾಣಾಂತರಮೆಂದೆನಲದು ಕಾಣಯವೇಕಜೋಯಿ [ಪಾಠಾಂ. ಎಕಚೋಯಿ, ಎಕಜಾಯಿ, ಎಕಜೊಯಿ] ಚಪ್ಪೆಯಂ [ಪಾಠಾಂ. *. ಚಾಂಪೆಯ]" (ಚತುನಿ. ೧೦೯). [?]

**ಏಕಟ** (ನಾ). ಒಂದುಗೂಡುವಿಕೆ; ಒಟ್ಟಾಗುವಿಕೆ: ಕುಟಿಲದ ಮಾಯೆಯ ಹರಿಸಿ ತಮಸ್ಸಿನ ಪಟಲಕೆ ಜ್ಞಾನದ ಜ್ಯೋತಿಯು ಬೆಳಗಿಸಿ ಪಟುಗೊಳಿಸುತ ಮದಮಾರುತರಂ ತಾನೇಕಟ ಮಾಡುತಲಿ (ಸುಸಾರ. ೧೧೦–೪). [< ಸಂ. ಏಕತ್ರ]

**ಏಕಟಾಕಿ** (ನಾ). (ಉಕ). ಒಂದೇ ಸಮನಾದುದು: "... ಎಲ್ಲಾರ್ನೂ ಸಮನಂತ ಏಕಟಾಕಿಗೆ ಮಾಡಾಕ ಹ್ಯಾಂಗ ಪುರೋಸತತಿ ... ನೀವ ಹೇಳರಿ" (ಬಾಬಲ. ೩೧).
[← ಮರಾ. ಏಕಟಾಕೀ = ಒಂದೇ ಆಕಾರದ, ಒಂದೇ ಸಮನಾದ]

**ಏಕಠಾಣ** (ನಾ). ಒಂದೇ ಸ್ಥಾನ, —ಜಾಗ: ಭಕ್ತಿಮುಖ ಗುರುಮೂಲದಲಿ ಬಹುಶಕ್ತಿಯುಪವಾಸೇಕಠಾಣದಿ (ಬಜ್ಜಪು. ೧೮–೧೦).
[ಏಕ + ಠಾಣ]

**ಏಕತ** (ನಾ). ಏಕಾಂತ: "ಏಕತಮೆನಲ್ಕೇಕಾಂತ" (ಕರ್ಣಾನಿ. ೯೪); ಕೋಕಕುಚೆ ನಾಂ ಬಂದೊಡೇನಂತೇಕತವೆ ನೀ ಹೋಗೆನುತ (ಬಸಪು. ೫–೩೨). [< ಸಂ. ಏಕಾಂತ]

**ಏಕತಂತ್ರ** (ನಾ). ಒಂದೇ ಆಳ್ವಿಕೆ; ಸರ್ವಾಧಿಕಾರ. 'ಏಕತಂತ್ರಾಧಿಕಾರ' ಪರಾ. [ಏಕ + ತಂತ್ರ]

**ಏಕತಂತ್ರಸ್ವತಂತ್ರ** (ನಾ). ಒಂದೇ ಆಳ್ವಿಕೆಯನ್ನು ನಡೆಸುವುದರಲ್ಲಿ ಸ್ವಾತಂತ್ರ್ಯವುಳ್ಳವನು; ಸರ್ವಾಧಿಕಾರಿ. [ಏಕತಂತ್ರ + ಸ್ವತಂತ್ರ]

**ಏಕತಂತ್ರಾಧಿಕಾರ** (ನಾ). ಒಬ್ಬನದೇ ಅಧಿಕಾರ; ಸರ್ವಾಧಿಕಾರ: ಭಾಷಾಪ್ರಪಂಚದಲ್ಲಿ ಏಕತಂತ್ರಾಧಿಕಾರಕ್ಕೆ ಅವಕಾಶವಿಲ್ಲ (ಭಾಷಾಶಾ. ೧೨೫). [ಏಕತಂತ್ರ + ಅಧಿಕಾರ]

**ಏಕತಾನ** (ಗು). ೧. ಒಂದೇ ವಸ್ತುವಿನ ಮೇಲೆ ಗಮನವಿಟ್ಟ. (ನಾ). ೨. ಏಕಾಗ್ರಚಿತ್ತ; ಒಮ್ಮನಸ್ಸು: "ಏಕಾಯನಂ, ಏಕಾಗ್ರಂ, ಏಕತಾನಂ, ತದ್ಗತಂ— ಈ ೪ ಒಂದೆಮನಂ" (ಹಲಾಯು. ೮೮–೩೮೦); ಅರುಹೆನಗೆ ನಿನ್ನ ಮನಮರಿತ ಹರುಷದೊಳರೆಯ, ನೆರಮೇಕತಾನಮಾಂತೊರೆಯ ತೂಣಂ (ಗಿಳಿವಿಂ. ೯–೧೨೩). ೩. ಒಂದೇ ತಾನ, —ಶ್ರುತಿ: ಎರಡು ಸ್ವರಗಳಿಗೂ ಆವರ್ತಸಂಖ್ಯೆಯಲ್ಲಿ ಭೇದವಿಲ್ಲದೆ ಇದ್ದು, ಕಂಪನಗಳಿಲ್ಲದಿದ್ದರೆ ಅವೆರಡೂ ಏಕತಾನದಲ್ಲಿ (Unison)ವೆ ಯೆಂದೂ ಅವುಗಳ ಶ್ರುತಿಯು ಸೇರಿದೆಯೆಂದೂ ಹೇಳುತ್ತೇವೆ. ಹೀಗೆ ಏಕತಾನದಲ್ಲಿರುವ ಸ್ವರಗಳು ಬಹು ಇಂಪಾಗಿ ಕೇಳುತ್ತವೆ (ಭೌತವಿ. ೧೨೬); ಕವಿಯ ಏಕತಾನ ಕವನದಂತೆ ನಾದಲೀನಾ (ನಾದಲೀ. ೮೪–೭). [ಏಕ + ತಾನ₁]

**ಏಕತಾರ** (ನಾ). ಒಂದೇ ತಂತಿಯುಳ್ಳ ಒಂದು ಬಗೆಯ ತಂತ್ರೀ ವಾದ್ಯ; ಕಿನ್ನರಿ; ದಂಡಿ: (ಕಿಸಂಗ್ಲಾ. ೧೨೫).
[ಏಕ + ತಾರ]

**ಏಕತಾರಿ,** ಏಕತಾರೆ, ಏಕದಾರಿ (ನಾ). = ಏಕತಾರ: ತಪಸ್ವಿಯು ಎದ್ದು ಶುಚಿರ್ಭೂತನಾಗಿ ಏಕತಾರಿಯನ್ನು ತೆಗೆದುಕೊಂಡು ಪರಮೇಶ್ವರನ ಸ್ತೋತ್ರವನ್ನು ಮಾಡಲಿಕ್ಕೆ ಪ್ರಾರಂಭಿಸಿದನು (ಸುನಂದಿ. ೨೧); ಏಕಾಂತ ವಾಸದಲಿ ಏಕಾಕಿ ಜೀವಕ್ಕೆ ಏಕತಾರಿಯು ದೊರೆಯಲೆನಿತು ಹರುಷ (ಭಾವಜೀ. ೧೮-೩೪೬). **ಏಕತಾರೆ:** ಭಕ್ತರ ಗುಂಪೊಂದು ಭಜನೆಯಲ್ಲಿ ಮಗ್ನವಾಗಿತ್ತು. ಒಬ್ಬರು ಏಕತಾರೆಯನ್ನು ಹಿಡಿದಿದ್ದರು (ಸಮಜೀ. ೩೦೧). **ಏಕದಾರಿ:** ದಾಸಯ್ಯನ 'ಏಕದಾರಿಯ' ನಾದದ ಸೇವೆಯೂ ಸಲ್ಲುತ್ತದೆ (ಬನಸಿ. ೨೧೦). [← ಮರಾ. ಏಕತಾರೀ]

**ಏಕತಾರೆ** 'ಏಕತಾರಿ' ನೋ.

**ಏಕತಾಲ,** ಏಕತಾಳ (ನಾ). **೧.** ಸ್ವರಮೇಳ; ಸ್ವರಮೈತ್ರಿ. **೨.** [ಸಂಗೀತ] ಸಪ್ತತಾಳಗಳಲ್ಲಿ ಒಂದು. **ಏಕತಾಳ:** **೨.** ಆದಿತಾಳದಿಂದ ಧ್ರುವ, ಮಟ್ಟ, ರೂಪಕ, ಝಂಪೆ, ತ್ರಿವುಡೆ, ಅಷ್ಟ, ಏಕತಾಳಗಳು ಹುಟ್ಟಿದವು (ಯಕ್ಷಗಾ. ೨೩); ಏಕತಾಳ, ತ್ರಿವುಡೆ, ರೂಪಕ ಹೀಗೆ ಆರೆಂಟು ತಾಳಗಳನ್ನು ಈ ನರ್ತಕನು ಅನುಕರಿಸಬಹುದು (ಬಾಲಪ್ರ. II, ೯೮೦). 'ಏಕ್ಕತಾಳ' ಪರಾ. [ಏಕ + ತಾಲ]

**ಏಕತಾಲರಗಳೆ** (ನಾ). [ಛಂದ] ಒಂದು ಜಾತಿಯ ಛಂದಸ್ಸು (ಕಿ).
[ಏಕತಾಲ + ರಗಳೆ]

**ಏಕತಾಳ** 'ಏಕತಾಲ' ನೋ.

**ಏಕತೆ** (ನಾ). **೧.** ಒಗ್ಗಟ್ಟು: ವ್ಯಕ್ತಿಗೌರವವನ್ನೂ, ರಾಷ್ಟ್ರದ ಏಕತೆಯನ್ನೂ . . . ವೃದ್ಧಿಗೊಳಿಸುವುದಕ್ಕಾಗಿ (ಭಾಧಾನ. ೧. ಪ್ರಸ್ತಾ). **೨.** [ವ್ಯಾಕ] ಏಕವಚನ: ಏಕತೆಯೆ ತನಗೆ ಬಹುತೆಯನಾಕರಿಸದು ಜಾತಿ ತಾಂ (ಶಮದ. ೧೩೮). [ಸಂ. ಏಕತಾ]

**ಏಕತ್ರ** (ಅ). ಒಂದೇ ಜಾಗದಲ್ಲಿ, —ಕಡೆಯಲ್ಲಿ: ಆಕಾಶಪಥ ಮೀಜಿದೇಕವಸ್ತುವ ತಿಳಿದು ಸಾಕಾರವಳಿದು ನಿಜವಾದ ಐಕ್ಯಂಗೆ ಏಕತ್ರ ನೋಡ (ಸರ್ವಜ್ಞ. ೧೪೬). [ಸಂ.]

**ಏಕತ್ರಘರಾಣೆ** (ನಾ). ಅವಿಭಕ್ತ ಕುಟುಂಬ; ಒಟ್ಟುಕುಟುಂಬ.
[ಏಕತ್ರ + ಘರಾಣೆ]

**ಏಕತ್ರಯ** (ನಾ). **೧.** ಒಂದೇ ಆಗಿರುವುದು. **೨.** ಮೂರನ್ನೂ ಒಂದೇ ಎಂದು ಭಾವಿಸುವುದು: ಗುರುಲಿಂಗಜಂಗಮವ ಏಕತ್ರಯವಾಗಿ ಕಾಣಲರಿಯದಿದ್ದರೆ ಶುದ್ಧ ಸಿದ್ಧ ಪ್ರಸಿದ್ಧ ಒಡನೆ ನಗುತ್ತಿದಾವೆ (ಬಸವ. ೬೮೩). [ಏಕ + ತ್ರಯ]

**ಏಕತ್ವ** (ನಾ). **೧.** ಒಂದೇ ಒಂದಾಗಿರುವಿಕೆ: ನಿನಗೆ ಸ್ವಕೀಯರಪ್ಪ ಕಳತ್ರ ಪುತ್ರಾದಿಗಳುಮನ್ಯರಪ್ಪ ಪರಿವಾರಜನಮುಂ ಸಹಾಯರಲ್ತೆಂದು ಬಗೆದು ತದ್ವ್ಯಾಮೋಹಮಂ ಬಿಟ್ಟೇಕತ್ವಮಂ ಭಾವಿಸಲ್ವೇಳ್ಕುಂ (ಜೀವಸಂ. ೪೪-೧ ವ); ಸಾಂಖ್ಯ ಪ್ರತಿಪಾದಿಸುವುದು ಪುರುಷನ ಅನೇಕತ್ವವನ್ನು, ಪ್ರಕೃತಿಯ ಏಕತ್ವವನ್ನು (ಭಾರದ. ೧೧೩). **೨.** ಹೋಲಿಕೆ; ಸಾಮ್ಯ. **೩.** [ವ್ಯಾಕ] ಏಕವಚನ: ಭಾಷೆಯೊಳೇಕತ್ವಕ್ಕವಿಶೇಷದಿನೇದಂತಮಲ್ಲಿ ವರ್ತಿಸುಗುಮಿರಾಶ್ಲೇಷಂ ತಾನಕ್ಕುಂ (ಕಾವ್ಯಾವ. ೧೨೮); ಆಕ್ಕುಂ ಜಾತಿಯೊಳೇಕತ್ವಕ್ಕೆ ಬಹುತ್ವಂ ಬಹುತ್ವದೆಡೆಗೇಕತ್ವಂ (ಶಮದ. ೧೩೬). **೪.** [ಜೈನ] ದ್ವಾದಶ ಅನುಪ್ರೇಕ್ಷೆಗಳಲ್ಲಿ ನಾಲ್ಕನೆಯದು: ಅನಿತ್ಯಾಶರಣ ಸಂಸಾರೈಕತ್ವಾನ್ಯತ್ವಾಶುಚಿತ್ವಾಸ್ರವ ಸಂವರ ನಿರ್ಜರಲೋಕ ಬೋಧಿದುರ್ಲಭ ಧರ್ಮಮೆಂಬೀ ದ್ವಾದಶಾನುಪ್ರೇಕ್ಷೆಗೆಯ್ಯುತ್ತುಂ (ಸುಕುಮಾ. ೩-೩೯ ವ). [ಸಂ.]

**ಏಕತ್ವಭಾವನೆ** (ನಾ). ಒಂದೇ ಎಂಬ ಭಾವನೆ: ಪೆಜವು ಸಂಬಂಧದೊಳೇಂ ಪುಣ್ಯಬಂಧಮೊಂದನೆ ಪಡೆವೆನೆಂಬೇಕತ್ವಭಾವನೆಯಂ ಭಾವಿಪುದು (ಜೀವಸಂ. ೪೪-೨ ವ). [ಏಕತ್ವ + ಭಾವನೆ]

**ಏಕದಂ,** ಏಕ್‌ದಂ (ಅ). ಒಮ್ಮೆಲೆ; ಇದ್ದಕ್ಕಿದ್ದಂತೆ; ಕೂಡಲೆ; ತಕ್ಷಣವೆ: ಆದರೆ ಪೀಠಿಕೆಯಿಲ್ಲದೆ "ಏಕದಂ" ವಿಷಯಕ್ಕೆ ಬರುವುದು ಹೆಸರಾಂತ ಬರಹಗಾರನ ಲಕ್ಷಣವಲ್ಲ (ನಾಡಿಗೇ. ೨೪೦). **ಏಕ್‌ದಂ:** ಮರ್ಜಿ ನೋಡಿ ಒಂದು ಮಾತು ಹೇಳಿಬಿಟ್ಟರೆ ಮುಗಿಯಿತು "ಏಕ್‌ದಂ" ವ್ಯಾಪಾರ (ಚಿಗುಬ. ೮೩).
[← ಹಿಂ. ಮರಾ. ಏಕ್‌ದಂ; ಪಾರ. ಯಕ್‌ದಂ. / ಸಂ. ಏಕಪದಂ]

**ಏಕದಂಡಿ** (ನಾ). ಶಿಖೆ ಹಾಗು ಯಜ್ಞೋಪವೀತಗಳನ್ನು ತ್ಯಜಿಸಿ, ಒಂದು ದಂಡವನ್ನು ಮಾತ್ರ ಉಳ್ಳ ಸಂನ್ಯಾಸಿ: ಆಗಳವರ್ಗಳ್ . . . ಜಟಾಧರರುಂ ಏಕದಂಡಿ ತ್ರಿದಂಡಿಗಳಪ್ಪ ಪರಿವ್ರಾಜಕರುಮಾಗಿ (ಆದಿಪು. ೯-೯೩ ವ); ಅನ್ತೆನಿಸಿದೇಕದಂಡಿಬ್ರತಿಗಳಪ್ಪ ಗೋವಿಂದಪ್ರಿಯಸ್ವಾಮಿಗಳು (ಸೌಇಇ. V, ೮೫೬-೨೬ ; 1162).
[< ಸಂ. ಏಕದಂಡಿನ್]

**ಏಕದಂತ** (ನಾ). ಒಂದೇ ಹಲ್ಲನ್ನು ಉಳ್ಳವನು; ಗಣೇಶ: "ಹೇರಂಬಃ . . . ಏಕದಂತಃ, ವಿನಾಯಕಃ . . . ವಿಘ್ನರಾಜಃ – ಈ ೯ ಬೆನಕನ ಪೆಸರ್" (ಹಲಾಯು. ೪-೧೯); ಗಜಮುಖನೆ ಮೆಱೆವೇಕದಂತನೆ . . . ಮಾಳ್ಪುದು ಮತಿಗೆ ಮಂಗಳವ (ಕುವ್ಯಾಅ. ೧-೪).
[ಏಕ + ದಂತ]

**ಏಕದಂತಪಿತ** (ನಾ). ಗಣೇಶನ ತಂದೆ; ಶಿವ: ಹೃನ್ನಿಶಾಂತ್ಯೇಕದಂತಪಿತ ಶಾಂತಮಲ್ಲೇಶ ಪಾಹಿ (ಉಭ್ಯದೇ. ೬-೪೫).
[ಏಕದಂತ + ಪಿತ]

**ಏಕದಲ,** ಏಕದಳ (ನಾ). **೧.** ಜೊತೆ ಜೊತೆಯಾದ ಎಲೆಗಳಿಲ್ಲದೆ, ಬಿಡಿಬಿಡಿಯಾದ ಒಂದೊಂದೇ ಎಲೆಗಳುಳ್ಳ ಗಿಡ; ಒಂದೆಲಗ: **ಏಕದಳ:** **೧.** "ಏಕದಳ [ಪಾಠಾಂ. ಲ]ವೆಂದೆನಲ್ಕಾವೊಂದೆಲಗನಕ್ಕು" (ಮಂಗರಾ. ೪೦-೩೦). **೨.** ಬೇಳೆಮಾಡಲು ಬಾರದುದು; ಅಖಂಡವಾದುದು. 'ಏಕದಳಧಾನ್ಯ' ಪರಾ. [ಏಕ + ದಲ]

**ಏಕದಳ** 'ಏಕದಲ' ನೋ.

**ಏಕದಳಧಾನ್ಯ** (ನಾ). ಗೋಧಿ, ರಾಗಿ, ಭತ್ತ ಮೊದಲಾದ ಒಂದು ದಳವುಳ್ಳ ಧಾನ್ಯ: ಗೋಧಿ, ರಾಗಿ, ಭತ್ತ ಮೊದಲಾದ ಏಕದಳಧಾನ್ಯ (Cereals)ಗಳನ್ನು ಬೆಳೆದ ನಂತರ ಎರಡನೆಯ ಬೆಳೆಗೆ ನಾವು ದ್ವಿದಳ ಧಾನ್ಯ (Leguminous) ಗಳನ್ನು ಬೆಳೆಯುವುದು ಒಳಿತು (ಬಾಲಪ್ರ. I, ೨೯೨). [ಏಕದಳ (= ಏಕದಲ) + ಧಾನ್ಯ]

**ಏಕದಾಡ** (ನಾ). **೧.** ಒಂದೇ ದಾಡೆ. **೨.** ಒಂದು ಬಿರುದು: ಪತಿಗೇಕದಾಡಂ (ಎಇ. XV, ೩೩೯-೪ ; 1071). [ಏಕ + ದಾಡ$_0$]

**ಏಕದಾರಿ** 'ಏಕತಾರಿ' ನೋ.

**ಏಕದೃಕ್ಕು** (ನಾ). **೧.** ಒಂದೇ ಕಣ್ಣು ಉಳ್ಳವನು. **೨.** ಶ್ರೇಷ್ಠವಾದ ಕಣ್ಣು ಉಳ್ಳವನು. **೩.** ಕಾಗೆ. **೪.** ಶಿವ.
[< ಸಂ. ಏಕದೃಶ್]

**ಏಕದೃಷ್ಟಿ** (ನಾ). ಒಂದೇ ದೃಷ್ಟಿ, —ನೋಟ: ಎರಡು ಕಣ್ಣುಗಳ ಏಕದೃಷ್ಟಿಯು ಮಗುವಿನ ಭಾವೀಜೀವನದ ಅಮೂಲ್ಯವಾದ ಸಂಪತ್ತು (ನಿಮ್ಮದೃ. ೬೯). **೨.** ಒಂದೇ ಕಣ್ಣು ಉಳ್ಳವನು; ಒಕ್ಕಣ್ಣ. **೩.** ಕಾಗೆ: ಕಾಕಃ . . . ಏಕದೃಷ್ಟಿಃ, ಮೌಕಳಿಃ, ಪಿಕವರ್ಧನಃ – ೧೪ ಕಾಗೆಯ ಹೆಸರು (ಸಿದ್ಧಾಂಶಿ. ೧೩೯). [ಏಕ + ದೃಷ್ಟಿ]

**ಏಕದೇಶ** (ನಾ). ಒಂದು ಭಾಗ, —ಅಂಶ, —ಅವಯವ: "ಪ್ರತೀಕಂ, ಅವಯವಂ, ಅಪಘನಂ, ಅಂಗಂ, ಏಕದೇಶಂ – ಈ ೫ ಅವಯವಂ" (ಹಲಾಯು. ೧೨೩–೫೯); ನಿನ್ನನಾನಿನಿತಂ ಪ್ರಾರ್ಥಿಸುವೆನಭಿಮನ್ಯು ನಿಜಸಾಹಸೈಕದೇಶಾನುಮರಣಮೆಮಗಕ್ಕೆ ಗಡಾ (ಗದಾಯು. ೪–೫೬). [ಏಕ + ದೇಶ]

**ಏಕದೇಶಿ** (ಗು). ೧. ಒಂದೇ ದೇಶಕ್ಕೆ ಸೇರಿದ. ೨. ಭಾಗ ಅಥವಾ ಪಾಲನ್ನು ಉಳ್ಳ. [< ಸಂ. ಏಕದೇಶಿನ್]

**ಏಕದೇಶೀಯ** (ಗು). ೧. ಒಂದೇ ದೇಶಕ್ಕೆ ಸೇರಿದ. ೨. ಅಂಶ ಅಥವಾ ಭಾಗಮಾತ್ರವಾದ: ಒಂದು ಮಗ್ಗಲು ಖಾಲಿ ಇರುವುದರಿಂದ, ಖಾಲಿ ಕಾಗದಕ್ಕಿರುವ ಎಲ್ಲ ಉಪಯೋಗವನ್ನೂ ಅದು ಏಕದೇಶೀಯವಾಗಿ ನಿರ್ವಹಿಸಬಲ್ಲುದು (ಗಾಳಿಪ. ೬೦). [ಸಂ.]

**ಏಕದೇಹ** (ಗು). ೧. ಒಂದೇ ಒಂದು ಶರೀರವನ್ನು ಹೊಂದಿರುವ. ೨. ಅತ್ಯುತ್ತಮವಾಗಿ ರೂಪುಗೊಂಡ, —ಆಕೃತಿಗೊಂಡ. (ನಾ). ೩. ಬುಧ ನಕ್ಷತ್ರ. [ಏಕ + ದೇಹ]

**ಏಕದೇಹನ್ಯಾಯ** (ನಾ). ಚೆನ್ನಾಗಿ ಹೊಂದಿಕೊಂಡ ಸ್ನೇಹ: ಇಷ್ಟು ಅನ್ಯೋನ್ಯವಾಗಿ, ಏಕದೇಹನ್ಯಾಯವಾಗಿ ಏಕಾತ್ಮವಾಗಿಯೇ ಬೆಳೆಯಿತು ಈ ಮಕ್ಕಳ ಸಖ್ಯ (ಶಾಂತಲಾ. ೧೧). [ಏಕದೇಹ + ನ್ಯಾಯ]

**ಏಕಧುರ** (ನಾ). ಒಂದು ಭಾರವನ್ನು ಹೊರುವ ಎತ್ತು: ಏಕಧುರೀಣಃ, ಏಕಧುರಃ, ಏಕಧುರಾವಃ – ೩ ಬಂಡಿ ಮುಂತಾದ ಹೊರೆಗಳಲ್ಲಿ ಯಾವುದನ್ನಾದರೂ ಒಂದನ್ನೇ ಹೊರುವುದಕ್ಕೆ ಬಳಕೆಯಾಗಿರುವ ಎತ್ತು (ಸಿದ್ಧಾಂತಿ. ೨೫೨). [ಸಂ. (ಏಕ + ಧುರಾ + –)]

**ಏಕನಾಥ** (ಗು). ೧. ಒಬ್ಬನೇ ಒಡೆಯನನ್ನು ಉಳ್ಳ. (ನಾ). ೨. ಸಂಪೂರ್ಣ ಅಧಿಕಾರವುಳ್ಳವನು; ಒಡೆಯ. ೩. ಒಬ್ಬಾತನ ಹೆಸರು (ಕ). [ಏಕ + ನಾಥ]

**ಏಕನಾದ** (ನಾ). ಒಂದೇ ತಂತಿಯುಳ್ಳ ಒಂದು ಬಗೆಯ ತಂತ್ರೀವಾದ್ಯ; ಕಿನ್ನರಿ; ದಂಡಿ: ಅವನು ಏಕನಾದ ಹಿಡಿದು ಊರೂರು ಅಲೆಯುತ್ತಿದ್ದನು (ಮಲ್ಲಿ. ೯). [ಏಕ + ನಾದ]

**ಏಕನಾದತೆ** (ನಾ). ಒಂದೇಬಗೆಯ ನಾದವನ್ನು ಹೊಂದಿರುವುದು: ಮುಂದುಮುಂದಕೆ ಪರಿಯಲೇಕನಾದತೆಯಾಯ್ತು ಕಿವಿಗೆ ಸದ್ದಿಲಿತನಂ ಮಸಣದಾ (ಶ್ರೀರಾಮಾ. ೩೭೬–೩೯೩). [ಸಂ. ಏಕನಾದತಾ]

**ಏಕನಾಮು** (ನಾ). ಒಂದು ವಿಧವಾದ ಬಹುಮಾನ, —ಉಡುಗೊರೆ: ಸಿಪಾಯಿ ಜನರು ಇನಾಂ, ಏಕನಾಮು ಮೊ[ದ]ಲಾದ್ದನ್ನು ತೆಗೆದುಕೊಳ್ಳತಕ್ಕ ದಂಡಕವಿಲ್ಲ (ಚಿತ್ರಪಾ. ೯೫). [← ಅರ. ಹಿಂ. ಇಕರಾಮ್ = ಪಾರಿತೋಷಿಕ]

**ಏಕನಿಷ್ಠತೆ** (ನಾ). ಒಂದರಲ್ಲಿಯೇ ನಿಷ್ಠೆಯಿರುವುದು; ನಂಬಿಕೆಯಿರುವುದು; ಅನನ್ಯಶ್ರದ್ಧೆ: ಇಂಥ ಏಕನಿಷ್ಠತೆಗೆ ಮಾತ್ರ ಮೇನಕೆಯು ಮೆಚ್ಚುವಳೆಂದು ಅವನಿಗೆ ಗೊತ್ತಿತ್ತು (ಸಮಜೀ. ೭೩೨). [ಸಂ. ಏಕನಿಷ್ಠತಾ]

**ಏಕಪಕ್ಷ** (ನಾ). ೧. ಒಂದೇ ಒಂದು ರೆಕ್ಕೆ: ವಿಮಾನಕ್ಕೆ ಇಂಥ ಒಂದು ರೆಕ್ಕೆಯಿದ್ದರೆ ಅದು ಏಕಪಕ್ಷವಿಮಾನ (ಬಾಲಪ್ರ. II, ೯೪೫). ೨. ಒಂದೇ ಗುಂಪು, —ಪಂಗಡ: ಏಕಪಕ್ಷವು ನಾಯಕತ್ವ ಸಿದ್ಧಾಂತವನ್ನು ಅತಿಶಯವಾಗಿ ಮನ್ನಿಸಿದೆ ಎಂದು ಈ ಮೊದಲೇ ತಿಳಿಸಿದೆ (ರಾಜಪ. ೩೭). [ಏಕ + ಪಕ್ಷ]

**ಏಕಪಕ್ಷೀಯ** (ಗು). ಒಂದೇ ಪಕ್ಷದ; ಒಂದೇ ಪಕ್ಷಕ್ಕೆ ಅನ್ವಯಿಸುವ: ಯಾವುದನ್ನೂ ಏಕಪಕ್ಷೀಯವಾಗಿ ನಿರ್ಣಯಿಸುವುದಲ್ಲ. . . ಎಂದು ಅವನಲ್ಲಿ ಬಿನ್ನವಿಸಿಕೊಂಡಿದ್ದರು (ಹೊಸಕ್ಷಿ. ೨೩). [ಸಂ.]

**ಏಕಪತಿ** (ನಾ). ೧. ಒಬ್ಬನೇ ಒಡೆಯ, —ಸ್ವಾಮಿ: ಸುಖಸಂಕಥಾವಿನೋದದಿನಖಂಡ ಭೂಮಂಡಲೈಕಪತಿ ದಕ್ಷಿಣದೊಳ್ ಸುಖಮಿರಸುಗೆಯ್ಯೆ (ಶಾಂತಿಪು. ೯–೧೬೧). ೨. ಒಬ್ಬನೇ ಗಂಡ, —ಪತಿ. 'ಏಕಪತಿತ್ವ' ಪರಾ. [ಏಕ + ಪತಿ]

**ಏಕಪತಿತ್ವ** (ನಾ). ಒಬ್ಬನೇ ಗಂಡನನ್ನು ಹೊಂದಿರುವುದು. [ಸಂ.]

**ಏಕಪತ್ನ** (ನಾ). ಒಬ್ಬಳೇ ಹೆಂಡತಿಯನ್ನು ಉಳ್ಳವನು (ಕ). [ಸಂ. ?]

**ಏಕಪತ್ನಿ** (ನಾ). ೧. ಒಬ್ಬಳೇ ಹೆಂಡತಿ (ಕ). ೨. ಪತಿವ್ರತೆ. [ಏಕ + ಪತ್ನಿ]

**ಏಕಪತ್ನಿತ್ವ** (ನಾ). ಒಬ್ಬಳೇ ಹೆಂಡತಿಯನ್ನು ಹೊಂದಿರುವಿಕೆ. [ಸಂ.]

**ಏಕಪತ್ನೀವ್ರತ** (ನಾ). ೧. ಒಬ್ಬಳೇ ಹೆಂಡತಿಯನ್ನು ಹೊಂದಿರುವ ವ್ರತ: ಆ ನರಾಧಿಪತಿ. . . ತನ್ನ ನಗರದೊಳೇಕಪತ್ನೀವ್ರತದೊಳಿರದೊಡೆ ಸ್ವೈರಿಸಂ (ಜೈಮಿಭಾ. ೧೧–೩೯). ೨. ಒಬ್ಬಳೇ ಹೆಂಡತಿಯನ್ನು ಹೊಂದಿರುವ ವ್ರತವುಳ್ಳವನು: ಏಕಪತ್ನೀವ್ರತರನಂತಪೂಜಾರತರ್ (ಜೈಮಿಭಾ. ೧೧–೪೦). [ಸಂ. (ಏಕಪತ್ನೀ + ವ್ರತ)]

**ಏಕಪತ್ನೀವ್ರತಸ್ಥ** (ನಾ). = ಏಕಪತ್ನೀವ್ರತ ೨: ಇವನೇಕಪತ್ನೀವ್ರತಸ್ಥನಾಗಿಹುದರಿಂ . . . ಬವರದೊಳ್ ಮಣಿವನಲ್ಲ (ಜೈಮಿಭಾ. ೧೩–೩೩). [ಸಂ.]

**ಏಕಪತ್ರ** (ನಾ). ಜೊತೆಜೊತೆಯಾದ ಎಲೆಗಳಿಲ್ಲದೆ, ಬಿಡಿಬಿಡಿಯಾದ ಒಂದೊಂದೇ ಎಲೆಗಳುಳ್ಳ ಗಿಡ; ಒಂದೆಲಗ. [ಏಕ + ಪತ್ರ]

**ಏಕಪದ** (ನಾ). ೧. ಒಂದು ಹೆಜ್ಜೆ: ಜಯಜಯ ವಿಳಾಸ ಕೃತವಿದಿತೈಕಪದಲೀಲ (ರಾಜಶೇ. ೧೪–೧೬೯ ರ). ೨. ಒಂದು ಶಬ್ದ. [ಏಕ + ಪದ]

**ಏಕಪದಂ** (ಅ). ತಕ್ಷಣ; ಕೂಡಲೆ: "ತತ್ಕ್ಷಣಂ, ಏಕಪದಂ, ಸದ್ಯಃ, ಸಪದಿ— ಈ ೪ ಅಗಲಂತೆ" (ಹಲಾಯು. ೧೨೪–೬೭). [ಸಂ.]

**ಏಕಪದಿ** (ಗು). ೧. ಒಂದೇ ಪಾದವನ್ನುಳ್ಳ; ಒಂದೇ ಕಾಲಿನ. (ನಾ). ೨. ದಾರಿ; ಮಾರ್ಗ: "ಅಧ್ವಾ, ಪಂಥಾಃ, ಪದ್ಧತಿಃ, ಏಕಪದೀ . . . ನಿಗಮಃ – ಈ ೧೨ ಬಟ್ಟೆ" (ಹಲಾಯು. ೪೩–೧೮೫); "ಏಕಪದಿ ವರ್ತ್ಮಮೆನೆ ಬಟ್ಟೆ" (ಮಂಗರಾ. ೫೫–೧೦). [ಸಂ. ಏಕಪದೀ]

**ಏಕಪಾಠಿ** (ನಾ). ಒಂದೇಬಾರಿ ಓದಿ ಅಥವಾ ಕೇಳಿ ವಿಷಯವನ್ನು ಗ್ರಹಿಸಿ ನೆನಪಿನಲ್ಲಿಟ್ಟುಕೊಳ್ಳಬಲ್ಲವನು: ಏಕಪಾಠಿಯಾದ ಈ ಕುಮಾರಂ ಕುಮಾರನಂತೆ ಚತುರ್ದಶವಿದ್ಯೆಯೊಳುಂ ಚತುಷಷ್ಟಿಕಲೆಗಳೊಳಂ ಪ್ರವೀಣನಾಗಲ್ (ಅದ್ಭುತ. ೫–೧೬). [< ಸಂ. ಏಕಪಾಠಿನ್]

**ಏಕಪಾದ** (ಗು). ೧. ಒಂದೇಒಂದು ಕಾಲನ್ನು ಉಳ್ಳ. ೨. ಒಂದೇ ಒಂದು ಕಾಲನ್ನು ಬಳಸುವ. (ನಾ). ೩. ಒಂದೇ ಕಾಲು: ತೊಡರ್ದೇಕಪಾದದೊಳ್ ಬಲಿದುಪವಾಸದೊಳ್ ನಮೆದು (ಪಂಪಭಾ. ೧–೧೩೭). ೪. ಒಂದೇ ಕಾಲಿನಮೇಲೆ ನಿಂತಿರುವುದು: "ಏಕಪಾದ [ಪಾಠಾಂ. ಪಾದಂ] ಕಟಿ ವೃತ್ತ ತ್ರಿಭಂಗಿ ಬಾಗೆನಲು ನಿಲುಕಡೆಯಕ್ಕು" (ಮಂಗರಾ. ೬. ೨೫–೯); ಶಿವನೇಕಪಾದವಾದಾ ಮೂರ್ತಿಯಂ ವಿವರಿಸಿದ ನಂದೀಶ್ವರಂ (ಲಶಿಚಿಂ. ೨೫ ಸೂಚನೆ). ೫. ಒಂದು ದೇಶದ ಹೆಸರು: ಹಮ್ಮೀರ ಗುಜ್ಜರನೇಕಪಾದ ಮಾಳವ ಮತ್ಸ್ಯ (ರುಕ್ಮಾಂಗ. ೯–೩೩). ೬. ಒಂದೇ ಪಾದದ ಮೇಲೆ ನಿಂತ ಶಿವನ ಮೂರ್ತಿ. [ಏಕ + ಪಾದ]

**ಏಕಪಾದಗತಿ** (ನಾ). ಒಂದೇ ಕಾಲಿನಿಂದ ನಡೆಯುವುದು: "ದೂಂಟು —ಏಕಪಾದಗತೌ" (ಶಮಧಾ). [ಏಕಪಾದ + ಗತಿ]

**ಏಕಪಾದವ್ರತಸ್ಥ** (ನಾ). ಒಂದೇ ಕಾಲಿನಲ್ಲಿ ನಿಂತು ವ್ರತವನ್ನು ಮಾಡುವವನು : ಸಂಸಾರ ಸಾಗರಮನೀಯಂದದಿಂ ದಾಂಟುವುದೆಂದು ಕೋಟುವಂದದಿಂದೊಂದೆ ಕಾಲೊಳ್ ನಿಂದಿರ್ದೇಕಪಾದವ್ರತಸ್ಥರುಮಂ (ಪಂಚತಂ. ೧೧೯–೧೫). [ಸಂ.]

**ಏಕಪಾರ್ಶ್ವನಿಯಮ** (ನಾ). ಒಂದೇ ಮಗ್ಗುಲಲ್ಲಿ ಮಲಗುವ ನಿಯಮ, —ವ್ರತ : ಸಂನ್ಯಸನಮಂ ಕೈಕೊಂಡು ಏಕಪಾರ್ಶ್ವ ನಿಯಮದಿಂ . . . ದೇವಲೋಕಕ್ಕೆ ಸಂದಳು (ಎಕ. II, ೧೧೪–೩೫ ; 1120). [ಏಕಪಾರ್ಶ್ವ$_0$ + ನಿಯಮ]

**ಏಕಪಿಂಗ** (ನಾ). ಹಳದಿ ಬಣ್ಣಕ್ಕೆ ತಿರುಗಿದ ಒಂದು ಕಣ್ಣನ್ನು ಉಳ್ಳವನು ; ಕುಬೇರ (೬). [ಏಕ + ಪಿಂಗ]

**ಏಕಪಿಂಗಲ** (ನಾ). = ಏಕಪಿಂಗ (೬). [ಏಕ + ಪಿಂಗಲ]

**ಏಕಪೀಠ** (ನಾ). ಶ್ರೇಷ್ಠವಾದ ಆಸನ; ಮೀಸಲಾದ ಪೀಠ : ಹೃದಯಕಮಳ ಮಧ್ಯದ ಅಂತರಾಳದ ಏಕಪೀಠದ ಸಿಂಹಾಸನದ ತೆಜಹ ಕೊಡು (ಬಸವ. ೮೪೪). [ಏಕ + ಪೀಠ]

**ಏಕಪ್ರಕಾರ** (ನಾ). ಒಂದೇ ವಿಧ, —ತೆರ : ಅಲ್ಲಿ ಮುಕ್ತಿಜೀವಮೇಕಪ್ರಕಾರಮೇ (ಆದಿಪು. ೧೦–೬೧ ವ) ; ಜ್ವರ ಏಕಪ್ರಕಾರವಾಗಿರುತ್ತದೆ (ಕಲರೋ. ೭೪). [ಏಕ + ಪ್ರಕಾರ]

**ಏಕಪ್ರಸಾದ** (ನಾ). [ವೀಶೈ] ಏಕಾದಶ ಪ್ರಸಾದಗಳಲ್ಲಿ ಒಂದು : ಪ್ರಾಣಲಿಂಗಕ್ಕೆ ಕಾಯವೆಂಬ ಭಕ್ತನು . . . ಕ್ರಿಯೆ ಲಿಂಗಕ್ರಿಯೆಯಾಗಿ ಏಕಾದಶ ಮುಖವಜಿದು ಅರ್ಪಿಸಿ ಲಿಂಗಭೋಗೋಪಭೋಗಿಯಾಗಿ ಇಹುದೆ ಏಕಪ್ರಸಾದ (ಉಂಪಿ. ೧೪೭). [ಏಕ + ಪ್ರಸಾದ]

**ಏಕಪ್ರಾಣತತ್ತ್ವ** (ನಾ). [ವೀಶೈ] (?) : ಅಂಗಸ್ಥಲವಾಜು ಉಭಯ ಲಿಂಗಸ್ಥಲ ಮೂಜು ಏಕಪ್ರಾಣತತ್ತ್ವ ಇಪ್ಪತ್ತೈದು (ಮೋಳಿಮಾ. ೧೨೫–೪೮). [ಏಕ + ಪ್ರಾಣ + ತತ್ತ್ವ]

**ಏಕಭಾಜನ** (ನಾ). ೧. ಒಂದೇ ಪಾತ್ರೆ : ೨. [ವೀಶೈ] ಒಂದೇ ಪಾತ್ರೆಯಿಂದ ಎಲ್ಲರೂ ಒಟ್ಟಾಗಿ ಪ್ರಸಾದವನ್ನು ಸ್ವೀಕರಿಸುವುದು : ಬಾಯಿಗೆ ಬಂದಂತೆ ತಿಂಬುವ ಜೀವಗಳ್ಗೆ ಭವಭಾರಕರಿಗೆ ಏಕಭಾಜನ ವೆಲ್ಲಿಯದಯ್ಯಾ (ಅಖಂಡೇ. ೩೧೯–೧೨). [ಏಕ + ಭಾಜನ]

**ಏಕಭಾವ** (ನಾ). ಒಂದೇ ಮನಸ್ಸು ; ಒಮ್ಮತ : ಶ್ರೀಮನ್ಮಹಾಮಂಡಳೇಶ್ವರಂ ಎಳಮೇಲ ಸಿಂಗಿದೇವರಸನುಂ ತಾನುಂ ಏಕಭಾವದಿಂ ಸುಮನಸ್ಸರಾಗಿ (ಸೌಇಇ. XX, ೧೫೪–೪೯ ; 1172). [ಏಕ + ಭಾವ$_2$]

**ಏಕಭುಕ್ತ** (ನಾ). ಒಪ್ಪೊತ್ತು ಊಟಮಾಡುವಿಕೆ : ಉಪಾಸಕವಾಸದೊಳೇಕಭುಕ್ತಮಂ ಸಲಿಸುವ (ಸುಕುಮಾ. ೩–೨೯) ; ರಾಜಸೂಯಾಧ್ವರ ಮಹಾವ್ರತದೇಕಭುಕ್ತಾದಿಯಲಿ ಬಳಲಿದಿರಿ (ಕುವ್ಯಾಸ. ೧೨–೮೫). [ಏಕ + ಭುಕ್ತ]

**ಏಕಭುಕ್ತಿ** (ನಾ). ಒಂದೇ ಊಟ ; ಒಪ್ಪೊತ್ತು ಮಾತ್ರ ಊಟ : ಭೂಶಯ್ಯೆಗೆ ಜಾಗರಕ್ಕನಶನಕ್ಕೇ ಕಾಂತರಕ್ಕೇಕಭುಕ್ತಿ ನಿಯಾಮಕ್ಕೊಡಲಂ ನಿಯೋಜಿಸಿದಳ್ (ಮಲ್ಲಿಪು. ೪–೪೭). [ಏಕ + ಭುಕ್ತಿ]

**ಏಕಭೋಗ** (ನಾ). ೧. ಬೇರೆ ಯಾರೂ ಅಧಿಕಾರಿಗಳಿಲ್ಲದೆ ಒಬ್ಬನಿಗೇ ಇರುವ ಒಂದು ಪ್ರದೇಶದ ಮೇಲಿನ ಸರ್ವಾಧಿಕಾರ : ಸಕಲ ಅಷ್ಟಭೋಗ ತೇಜಸ್ಸ್ವಾಮ್ಯ ಸಹಿತಮಾಗಿ ಏಕಭೋಗದಿಂ ಭಾ(ಭೋ)ಗಿಸುವರೆಂದು ಕೊಟ್ಟವು (ಮುಂಬರಾ. XII, ೩೪೭–೪೧). ೨. ಒಂದೇ ಬೆಳೆ. [ಏಕ + ಭೋಗ]

**ಏಕಭೋಗಸ್ಥ** (ನಾ). ಒಬ್ಬನೇ ಅನುಭವಿಸುವುದು: ಪದ್ಮಶಿವದೇವರಿಗೆ ಏಕಭೋಗಸ್ಥವಾಗಿ . . . ಬಿಟ್ಟ ದತ್ತಿ (ಎಕ. VII, ಹೊನ್ನಾಳಿ. ೧೪–೨೧ ; 1076). [ಸಂ.]

**ಏಕಭೋಗ್ಯ** (ಗು). ಒಬ್ಬನಿಗೇ ಸೇರಿದ ; ಒಬ್ಬನಿಂದಲೇ ಅನುಭವಿಸಲ್ಪಡುವ: ಅಕ್ಷಿಣ್ಯಾಗಾಮಿ ಸಂಯುಕ್ತಮೇಕಭೋಗ್ಯ(ಗ್ಯಂ)ನಿರಂತರಂ (ಮುಂಬರಾ. XII, ೩೪೯–೧೩೫). [ಏಕ + ಭೋಗ್ಯ]

**ಏಕಭೋಗ್ಯಗ್ರಾಮ** (ನಾ). ಒಬ್ಬನಿಂದಲೇ ಅನುಭವಿಸಲ್ಪಡುವ ಗ್ರಾಮ : ತಿರ್ಮಲಾಪುರವೆಂಬ ಸರ್ವಮಾನ್ಯಾಗ್ರಹಾರ ಏಕಭೋಗ್ಯ ಗ್ರಾಮವನು(ನ್ನು) ಪುತ್ರ ಪೌತ್ರ ಪಾರಂಪರ್ಯವಾಗಿ ಅನುಭವಿಸಿ (ಮುಂಬರಾ. XII, ೩೪೯–೧೩೫). [ಏಕಭೋಗ್ಯ + ಗ್ರಾಮ]

**ಏಕಮತ** (ನಾ). ಒಂದೇ ಅಭಿಪ್ರಾಯ ; ಏಕಾಭಿಪ್ರಾಯ : ತ್ರಿಜಗದೇಕಮತಂ . . . ತ್ರಿಜಗದೀಶನುತಂ ಕಥೆ ಶಾಂತಿನಾಥನಾ (ಶಾಂತಿಪು. ೧೨–೫೫ . [ಏಕ + ಮತ]

**ಏಕಮತಿ** (ಗು). ೧. ಒಮ್ಮತವಾದ. (ನಾ). ೨. ಒಂದೇ ವಿಷಯದ ಮೇಲೆ ನೆಟ್ಟಿರುವ ಮನಸ್ಸು ; ಏಕಾಗ್ರಚಿತ್ತ. [ಏಕ + ಮತಿ$_1$]

**ಏಕಮತ್ಯ** (ನಾ). ಒಂದೇ ಅಭಿಪ್ರಾಯವನ್ನು ಹೊಂದಿರುವುದು ; ಒಗ್ಗಟ್ಟು ; ಒಮ್ಮತ : ಏಕಮತ್ಯ ಕಾಕಮಾಡದು (ಗಾದೆ). [< ಸಂ. ಐಕಮತ್ಯ]

**ಏಕಮನಸ್ಸು** (ನಾ). = ಏಕಮತಿ ೨. [ಏಕ + ಮನಸ್ಸು]

**ಏಕಮಾತ್ರ$_1$** (ಗು). ಒಂದೇ ಒಂದಾದ : ವ್ಯಾಯಾಮವೊದಗಿಸುವುದೇ ಅವುಗಳ ಏಕಮಾತ್ರ ಪ್ರಯೋಜನ (ಪುನರು. ೨೦೦). [ಸಂ.]

**ಏಕಮಾತ್ರ$_2$** (ನಾ). [ಛಂದ] ಒಂದೇ ಮಾತ್ರೆಯುಳ್ಳದ್ದು ; ಅತ್ಯಂತ ಕಡಮೆ ಕಾಲಾವಕಾಶದಲ್ಲಿ ಉಚ್ಚರಿಸುವ ವರ್ಣ, —ಸ್ವರ : ಸ್ವರ ವ್ಯಂಜನದಿನೇಕಮಾತ್ರಮಾದೊಡೆ ಹ್ರಸ್ವಂ (ಶಮುದ. ೧೦ ವೃತ್ತಿ). [ಸಂ. (ಏಕ + ಮಾತ್ರಾ + –)]

**ಏಕಮಾತ್ರಕ** (ನಾ). = ಏಕಮಾತ್ರ$_2$ : ಹ್ರಸ್ವಮುದೇಕಮಾತ್ರಕಂ ದೀರ್ಘಮುಭಯಮಾತ್ರಂ (ಶಮುದ. ೧೦). [ಸಂ.]

**ಏಕಮಾತ್ರೆ** (ನಾ). ಒಂದೇ ಗುಳಿಗೆ ; ಎಲ್ಲ ರೋಗಗಳಿಗೂ ಔಷಧಿಯಾಗಿ ಕೊಡುವ ಒಂದೇ ಒಂದಾದ ಮಾತ್ರೆ : ಗಂಗಾಧರ ಪಂಡಿತನ ಏಕಮಾತ್ರೆ ವೈಕುಂಠಯಾತ್ರೆ (ಗಾದೆ). [ಏಕ + ಮಾತ್ರೆ]

**ಏಕಮಾನ** (ನಾ). ೧. ಲೆಕ್ಕಮಾಡುವಾಗ ಮೊತ್ತವನ್ನು ನಿರ್ದೇಶಿಸಲು ಪ್ರಮಾಣವಾಗಿ ಹಿಡಿಯುವ ಅಳತೆ, —ಮಾನ : ಅಳತೆ ಮತ್ತು ಅದಕ್ಕೆ ಬೇಕಾಗುವ ಏಕಮಾನಗಳನ್ನು (Units) ತಿಳಿಯಬೇಕು (ಭೌತವಿ. ೨೨). ೨. [ಗಣಿತ] ತ್ರೈರಾಶಿಯಲ್ಲಿ ಒಂದು ಪದ್ಧತಿ. [ಏಕ + ಮಾನ]

**ಏಕಮುಖ** (ನಾ). ೧. ಒಂದೇ ಮುಖ : ಏಕಮುಖದ ರುದ್ರಾಕ್ಷಿಯನೊಂದನೆ ಶಿಖಿಯಲ್ಲಿ ಧರಿಸುವುದಯ್ಯಾ (ಆದವ. ೩೦) ; ಪಂಚಮುಖನೇಕಮುಖದಿಂದೊಗೆದಂ (ಸಿದ್ಧರಾ. ೧–೫೧). ೨. ಒಂದೇ ಅಭಿಪ್ರಾಯಕ್ಕೆ ಅಥವಾ ಒಂದೇ ಪಕ್ಷಕ್ಕೆ ಸೇರಿದುದು ; ಏಕಪಕ್ಷೀಯವಾದುದು : ಏಕಮುಖವಾದ ಸಿದ್ಧಾಂತದಲ್ಲಿ ಸದಾ ಏನಾದರೊಂದು ದೋಷ ಸೇರಿಕೊಂಡೇ ಇರುತ್ತದೆ (ಜೀವಾತ್ಮ. ೧೦೬). [ಏಕ + ಮುಖ]

**ಏಕಮುಖಕರ** (ನಾ). ಒಮ್ಮುಖವಾದ ತೆರಿಗೆ : ಜಾರ್ಜ್ನ ಏಕಮುಖಕರ ವಿಧಾನವನ್ನು ಕುರಿತು ವಿವರಿಸಲಾರಂಭಿಸಿದನು (ಪುನರು. ೩೦೫). [ಏಕಮುಖ + ಕರ$_3$]

**ಏಕಮುಖತೆ** (ನಾ). ನಿರ್ದಿಷ್ಟ ಮಾರ್ಗವನ್ನು ಅನುಸರಿಸುವುದು ; ಒಮ್ಮುಖತೆ : ಸ್ವಾಮಿದಾಸರು ಕಾದಂಬರಿಯಲ್ಲಿ ಏಕಮುಖತೆಯು ಒಂದು ಮಹತ್ವದ ಸಾಧನವಾಗಿದ್ದಾರೆ (ಸಮುಜೀ. ೧೭ ಪೀಠಿಕೆ). [ಸಂ. ಐಕಮುಖತಾ]

**ಏಕಮುಖಸಂಚಾರ** (ನಾ). ಒಂದೇ ದಿಕ್ಕಿಗೆ ಹೋಗುವುದು ; ಒಂದೇ ದಿಕ್ಕಿನ ಸಂಚಾರ: ಅವಿನ್ಯೂರಸ್ತೆಯಲ್ಲಿ ಏಕಮುಖಸಂಚಾರವಿದೆ (ರೂಢಿ). [ಏಕಮುಖ + ಸಂಚಾರ]

**ಏಕಮುಖಿ** (ಗು). ಒಂದೇ ಕಡೆ ಹೋಗುವ ; ಒಮ್ಮುಖವಾದ : ಜನರೊಲುಮೆ ನಿಜವೆ ? ವಾಸನೆ ಏಕಮುಖಿಯೆ ? (ಕವಿವು. ೨೧–೯೯). [< ಸಂ. ಏಕಮುಖಿನ್]

**ಏಕಮೂಲ** (ಗು). ಒಂದೇ ಮೂಲವನ್ನು ಉಳ್ಳ : "ಒಂದೇ ಪದಾರ್ಥದ; ಮೂಲತಃ ಒಂದೇ ಆದ: ಏಕಮೂಲ; ಸಹಭಾವಿ" (Co-essential. ಇಂಕನಿ). [ಏಕ + ಮೂಲ]

**ಏಕಮೂಲಿಕೆ** (ನಾ). ಯಾವ ರೋಗವನ್ನಾದರೂ ಗುಣಪಡಿಸುವ ಒಂದೇ ಮೂಲಿಕೆ, —ಔಷಧಿ : ಮದ್ದಿನ ಗುಳಿಗೆಯೆಂದರೆ ಎಲ್ಲವಕ್ಕೂ ಏಕಮೂಲಿಕೆಯಂತೆ (ನಡೆದಾ. I, ೪೩೮). 'ಏಕಮಾತ್ರೆ' ಪರಾ. [ಏಕ + ಮೂಲಿಕೆ]

**ಏಕಮೇವ** (ಗು). ಒಂದೇ ಒಂದಾದ : ಏಕಮೇವ ಭಾರತೀಯ ಸದಸ್ಯಳೆಂದು ಮನ್ನಣೆಯನ್ನು ಪಡೆದಿದ್ದ ಈ ಕವಯಿತ್ರಿ (ಪ್ರಬಂಧ. ೯೧). ℙ ಸಂಸ್ಕೃತದಲ್ಲಿ ಏಕಂ ಏವ ಇವೆರಡೂ ಭಿನ್ನಶಬ್ದಗಳು. [ಸಂ.]

**ಏಕಯಷ್ಟಿ** (ನಾ). ಒಂದೇ ಎಳೆಯ ಮುತ್ತಿನ ಹಾರ; ಕಂಠಿಕೆ. 'ಏಕ್ಸಸರ$_1$' ಪರಾ. [ಏಕ + ಯಷ್ಟಿ]

**ಏಕಯಷ್ಟಿಕೆ** (ನಾ). = ಏಕಯಷ್ಟಿ : "ಏಕಾವಳೀ, ಏಕಯಷ್ಟಿಕಾ—ಒಂಟಿಸರ, ಏಕಲಡೀ, ಒಂದುಸರ, ಏಕಾವಳೀಸರ" (ಸಿದ್ಧಾಂತಿ. ೧೭೪). [ಸಂ. ಏಕಯಷ್ಟಿಕಾ]

**ಏಕರತ್ನಿ$_1$** (ನಾ). ಒಂದೇ ರತ್ನವನ್ನು ಉಳ್ಳದ್ದು : "ಒಂಟಿರತ್ನದ ಕಿವಿಕಡುಕು, ಹರಳಿನ ಗುಂಡಿ, ಮೊದಲಾದುವು ; ಏಕರತ್ನಿ" (Solitaire. ಇಂಕನಿ). [< ಸಂ. ಏಕರತ್ನಿನ್]

**ಏಕರತ್ನಿ$_2$** (ನಾ). ಒಂದು ಗುದ್ದುಮೊಳ. [ಏಕ + ರತ್ನಿ]

**ಏಕರಥಿಕ** (ನಾ). ೧. ಒಂದೇ ರಥದಲ್ಲಿ ಯುದ್ಧವನ್ನು ಮಾಡುವವನು. ೨. ಅದ್ವಿತೀಯನಾದ ರಥಿಕ ; ಏಕಾಂಗಶೂರ : ಭೀಷ್ಮ . . . ಏಕರಥಿಕನಾಗಿ ರಾಜರನ್ನೆಲ್ಲಾ ಗೆದ್ದು ಕನ್ಯೆಯರನ್ನು ಹಾರಿಸಿಕೊಂಡು ಬಂದ ವೀರ (ವಚಥಾ. ೩೫೮). [ಏಕ + ರಥಿಕ]

**ಏಕರದನ** (ನಾ). ಒಂದೇ ಹಲ್ಲನ್ನು ಉಳ್ಳವನು ; ಗಣೇಶ : ಪಂಚವದನನ ಮುದದ ನವ್ಯಸದನ ಜಿತಮದನ ಭವಕದನ ಕನದೇಕರದನ (ಉದ್ಭದೇ. ೨–೬). [ಏಕ + ರದನ]

**ಏಕರಸ** (ನಾ). ೧. ಒಂದೇ ರಸ. ೨. ಒಂದಾಗಿರುವಿಕೆ ; ಸಮರಸ : ಸೌಜನ್ಯಕಂದಾಂಕುರನುಮಪ್ಪ ವಜ್ರಾಯುಧಂ ಪ್ರಮತ್ತನುಮೇಕರಸನುಮಾಗಿ (ಶಾಂತಿಪು. ೮–೪೭ ವ). [ಏಕ + ರಸ]

**ಏಕರಾಜ** (ನಾ). ೧. ಶ್ರೇಷ್ಠನಾದ ರಾಜ. ೨. ಏಕೈಕ ಪ್ರಭುತ್ವ ; ಸರ್ವಾಧಿಕಾರಿತ್ವ : ಆಕೆಯ ಮದವೆದ್ದ ಜವ್ವನ ಮನ್ಮಥಗೇಕರಾಜವ ಮಾಳ್ಪುದೆನಲು (ಭರಚ. ೨–೯೯). [ಏಕ + ರಾಜ]

**ಏಕರಾಜಕ** (ನಾ). ನಿರಂಕುಶಾಧಿಕಾರ ; ಏಕಸ್ವಾಮ್ಯ. [ಸಂ.]

**ಏಕರಾತ್ರ** (ನಾ). ೧. ಒಂದು ರಾತ್ರಿ. ೨. ಒಂದೇ ರಾತ್ರಿಯಲ್ಲಿ ಮುಗಿಯುವ ಸಮಾರಂಭ : ಏಕರಾತ್ರವಿವಾಹವನ್ನು ಮಾಡಬಾರದು (ಲಕ್ಷ್ಮೀಪ್ರ. ೧೯೪). [ಸಂ. (ಏಕ + ರಾತ್ರಿ + –)]

**ಏಕರೂಪ** (ಗು). ೧. ಒಂದೇ ರೀತಿಯ ; ಸಮಾನವಾದ (ನಾ). ೨. ಒಂದೇ ರೂಪ, —ಆಕಾರ : ಚಂದ್ರಪ್ರಭಾಪುಷ್ಪದಂತರೆನಲ್ . . . ಏಕರೂಪಮೆ ಜಗಕ್ಕಾಶ್ಚರ್ಯಮಂ ಪುಟ್ಟಿಸುತ್ತಿರೆ (ಆದಿಪು. ೧೬–೫). [ಏಕ + ರೂಪ]

**ಏಕರೂಪತೆ** (ನಾ). ಒಂದೇ ರೂಪದಲ್ಲಿರುವಿಕೆ ; ಭಿನ್ನತೆಯಿಲ್ಲದಿರುವಿಕೆ : ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಪೈಪೋಟಿ ಪರಿಸ್ಥಿತಿಯಲ್ಲಿದ್ದ ಏಕರೂಪತೆಗೆ (Homogeneity) ಭಂಗ ಉಂಟಾಗಿ ಅದರ ಪ್ರತಿಯಾಗಿ ಭಿನ್ನತೆ (Heterogeneity) ಪ್ರಾಪ್ತವಾಯಿತು (ಅಂತಸಂ. ೨೧೪). [ಸಂ. ಏಕರೂಪತಾ]

**ಏಕರೂಪಾಧೀನ** (ಗು). ಒಂದೇ ರೂಪಕ್ಕೆ ಒಳಪಟ್ಟಿರುವ ; ಒಂದೇ ಆಕಾರಕ್ಕೆ ಒಳಗಾದ : ನಾನಾರ್ಥಮೇಕರೂಪಾಧೀನ ವಚೋರಚಿತ ಮಪ್ಪೊಡಕ್ಕುಂ ಶ್ಲೇಷಂ (ಕವಿರಾ. ೩–೧೦೮). [ಏಕರೂಪ + ಅಧೀನ]

**ಏಕಲಡಿ** (ನಾ). ಒಂದೇ ಎಳೆಯ ಮುತ್ತಿನಹಾರ ; ಕಂಠಿಕೆ : "ಏಕಲಡೀ, ಒಂದು ಸರ, ಏಕಾವಳೀಸರ" (ಸಿದ್ಧಾಂತಿ. ೧೭೪). [ಏಕ + ಲಡಿ]

**ಏಕಲಿಂಗ** (ಗು). ೧. ಒಂದೇ ಲಿಂಗವುಳ್ಳ. (ನಾ). ೨. ಕುಬೇರ. [ಏಕ + ಲಿಂಗ]

**ಏಕಲಿಂಗದೇವ** (ನಾ). ೧. ಒಂಟಿಯಾದ ಲಿಂಗ (*). ೨. ಕುಬೇರ. [ಏಕಲಿಂಗ + ದೇವ]

**ಏಕವಚನ** (ನಾ). [ವ್ಯಾಕ] ಒಂದೇ ವಸ್ತುವನ್ನು ಹೇಳುವುದು : "ಒಂದು ವಸ್ತುವನ್ನು ಹೇಳುವುದಕ್ಕೆ ಏಕವಚನವೆಂದೂ, ಒಂದಕ್ಕಿಂತ ಹೆಚ್ಚಾದ ವಸ್ತುಗಳನ್ನು ಹೇಳುವುದಕ್ಕೆ ಬಹುವಚನವೆಂದೂ ಹೆಸರು" (ಮಧ್ಯಮ. ೩೫) ; ಏನೆಂಬ ಸರ್ವನಾಮಂ ತಾನದು ದಲ್ಲಿಂಗದೇಕವಚನಂ ನಿಜದಿಂ (ಶಮದ. ೭೯). [ಏಕ + ವಚನ]

**ಏಕವರ್ಣ** (ನಾ). ೧. ಒಂದೇ ಬಣ್ಣ : ಜಗಜ್ಜನಕನೊಟ್ಟದ ಪೊನ್ನ ರಾಶಿಗಳಂ ಜಗಜ್ಜನಕಿತ್ತು ತತ್ಕನಕವರ್ಣದಿನೇಕವರ್ಣಮ ಮಾಡಿದಂ ಜಗಮೆಲ್ಲಮಂ (ಆದಿಪು. ೮–೬೫). ೨. ಒಂದು ಅಕ್ಷರ. ೩. ವರ್ಣಸಂಕರ. [ಏಕ + ವರ್ಣ]

**ಏಕವಸ್ತು** (ನಾ). ಪರಮಾತ್ಮ : ಆಕಾಶಪಥ ಮಿಾಱಿದೇಕವಸ್ತುವ ತಿಳಿದು ಸಾಕಾರವಳಿದು ನಿಜವಾದ ಐಕ್ಯಂಗೆ ಏಕತ್ರ ನೋಡ (ಸರ್ವಜ್ಞ. ೧೪೭). [ಏಕ + ವಸ್ತು]

**ಏಕವಸ್ತ್ರ** (ನಾ). ಒಂದೇ ವಸ್ತ್ರ, —ಬಟ್ಟೆ : ಭೀಕರವನಕಾಯವು ಏಕವಸ್ತ್ರವು ಇಲ್ಲ (ಸಿದ್ಧವು. ೬–೧೬). [ಏಕ + ವಸ್ತ್ರ]

**ಏಕವಾಕ್ಯ** (ನಾ). ೧. ಒಂದೇ ಮಾತು. ೨. ಒಂದೇ ಮಾತನಾಡುವವನು ; ಸತ್ಯವಂತ : ಅಷ್ಟಾದಶಧರ್ಮಶಾಸ್ತ್ರಕುಶಳರ್ ಏಕವಾಕ್ಯರಚಳಿತಧೈರ್ಯರ್ (ಕಇ. II, ೧೧–೭ ; 1080) ; ಪ್ರಾಕೃತನಲ್ಲನೀ ದಶರಥಾಗ್ರತನೂಭವನೇಕವಾಕ್ಯನಾಶಾಕರಿಕರ್ಣಚಾಮರಯಶಂ (ಪಂರಾಮಾ. ೫–೭೨) ; ಏಕವಾಕ್ಯರಹಿತವಿಧ್ವಂಸಕರಾಶ್ರಿತಜನಕಲ್ಪವೃಕ್ಷರ್ (ಸೌಇಇ. XX, ೭೦–೪೩ ; 1108). [ಏಕ + ವಾಕ್ಯ]

**ಏಕವಾಕ್ಯತೆ** (ನಾ). ಒಂದೇಮಾತು ; ಒಕ್ಕೊರಲು ; ಒಪ್ಪಿಗೆ ; ಸಮ್ಮತಿ : ನೀವನ್ನುವದು ಸತ್ಯವೆಂದು ಅಲ್ಲಿ ನೆರೆದವರೆಲ್ಲರೂ ಏಕವಾಕ್ಯತೆಯಿಂದ ಸಮರ್ಥಿಸಿದರು (ಕಳ್ಳಕಾ. ೪೫) ; ಅವರಿಬ್ಬರಲ್ಲಿ ಏಕವಾಕ್ಯತೆಯಿದೆ (ರೂಢಿ). [ಸಂ. ಏಕವಾಕ್ಯತಾ]

**ಏಕವಾರ** (ಅ). ಒಂದೇ ಒಂದು ಬಾರಿ, —ಸಲ : ಏಕವಾರವೆ ನಿನಗೆ ಶರಣೆಂದರಿಗೆ ಭಯದ ಸೋಕುಂಟೆ ಎಲ್ಲ ಬಗೆ ಪೊರೆವ ಶ್ರೀರಾಮ (ಕುಮಾಕ್ಯ. ೬೯). [ಏಕ + ವಾರ$_3$]

**ಏಕವಾಸ** (ನಾ). ಒಂಟಿಯಾಗಿ ವಾಸಿಸುವುದು : ಏಕವಾಸದಲಿರದಡೆನ್ನನು ನೂಕಲಱಿಯದು ದಿನವನೊಂದನು (ನಿಭಾಗ. ೫–೨–೨೦). [ಏಕ + ವಾಸ$_1$]

**ಏಕವಿಹಾರಿ** (ನಾ). ಒಂಟಿಯಾಗಿ ಸಂಚರಿಸುವವನು: ಗಣಘೋಷಣಾನಂತರಂ ಏಕವಿಹಾರಿಯಾಗಿ ವಿಹಾರಿಸುತ್ತುಂ (ಶಾಂತಿಪು. ೯-೨೭ ವ). [< ಸಂ. ಏಕವಿಹಾರಿನ್]

**ಏಕವೇಣಿ** (ನಾ). ೧. ಒಂದೇ ಜಡೆಯುಳ್ಳವಳು. ೨. (ಪತಿ ವಿರಹ ಸೂಚಕವಾಗಿ) ಜಡೆ ಕಟ್ಟಿಕೊಳ್ಳದವಳು: ದುಃಖಕೆ ಭಯಕೆ ನಿರಶನಕೆ ತತ್ತರಿಸಿ ಕುಸಿದಳ್ ರಘೂದ್ವಹನ ರಾಣಿ, ಆ ಏಕವೇಣಿ (ಶ್ರೀರಾಮಾ. ೪೮೯-೮೫). [ಏಕ + ವೇಣಿ]

**ಏಕವ್ಯತಿರೇಕ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು: ಉದಾ: ಶ್ರೀವನಿತಾ ಪ್ರಸವದಿನಾ ಲಾವಣ್ಯದಿನತಿಗಭೀರ ಭಾವದೆ ನೀನಿಂತಾ ವಾರಿಧಿಯಂ ಪೋಲ್ವೈ ಕೇವಲಭೇದಂ ದ್ವಿತೀಯ ಲಲಿತಾಕಾರಂ ॥ ಏಕವ್ಯತಿರೇಕಂ (ಕವಿರಾ. ೩-೪೦). [ಏಕ + ವ್ಯತಿರೇಕ]

**ಏಕಶಃ** (ಅ). ಒಂದೊಂದಾಗಿ: "ಏಕಶಃ – ಒಂದೊಂದಾಗಿ" (ತತ್ತ್ವಪ್ರ. ೧೦೨). [ಸಂ.]

**ಏಕಶೇಷ** (ನಾ). ಒಂದೇ ಒಂದು ಉಳಿದುಕೊಂಡಿರುವುದು: ಭವದೇಕಶೇಷಮಾದುದು ಯುವರಾಜಾದಿಗಳ ಸಾಯೆ (ಗದಾಯು. ೩-೮೩). [ಏಕ + ಶೇಷ]

**ಏಕಸಂಧಿ** (ನಾ). ಒಂದು ಸಲ ಕೇಳಿದ ವಿಷಯವನ್ನು ಗ್ರಹಿಸಿ ಪುನಃ ಅದನ್ನು ತಪ್ಪದೆ ಹೇಳಬಲ್ಲವನು: ಕಪಿಲನೆಂಬೊನೇಕಸಂಧಿಯಪ್ಪ ದಙಿಂ. . .ಶ್ರುತಿ ಸ್ಮೃತಿ ಶಾಸ್ತ್ರೋಕ್ತಮುಖನಾಗೆ (ಶಾಂತಿಪು. ೧-೬೨ ವ). [ಏಕ + ಸಂಧಿ]

**ಏಕಸಂಧಿಗ್ರಾಹಿ** (ನಾ). = ಏಕಸಂಧಿ (ಕಿ). [< ಸಂ. ಏಕಸಂಧಿಗ್ರಾಹಿನ್]

**ಏಕಸಂಧಿಗ್ರಾಹಿತ್ವ** (ನಾ). ಒಂದೇ ಬಾರಿ ಓದಿ ಅಥವಾ ಕೇಳಿ ವಿಷಯವನ್ನು ಗ್ರಹಿಸುವುದು (ಕಿ). [ಸಂ.]

**ಏಕಸತ್ತೆ** (ನಾ). ನಿರಂಕುಶಾಧಿಕಾರ; ಏಕಸ್ವಾಮ್ಯ: ಸರಂಜಾಮಿ ಏಕಸತ್ತೆ (ರಾಜಸತ್ತೆ) ವಿರುದ್ಧ ಧರ್ಮದ ಅಂಧಸತ್ತೆಯ ವಿರುದ್ಧ . . . ಸಂಘಟಿತ ಕ್ರಾಂತಿಯನ್ನು ಹೂಡಿ . . . ಮತಸ್ವಾತಂತ್ರ್ಯವನ್ನೂ ಸ್ಥಾಪಿಸಿಕೊಂಡಿತು (ಮಾವಾದ. ೧೫೨). 'ಪ್ರಜಾಸತ್ತೆ' ಪರಾ. [ಸಂ. ಏಕಸತ್ತಾ]

**ಏಕಸರ**$_1$ (ನಾ). ಒಂದೇ ಧ್ವನಿ; ಹೊಂದಿಕೊಂಡ ಧ್ವನಿ: ಮುಂಬೆಳಗ ಕಿರಣವೆ ಅರುಣಾಚಲದಿಂದಿಳಿದು ರಮಣವಾಣಿಯಲೇಕಸರವಾಗಿದೆ (ಅರಳು. ೯೭-೧೪). [ಏಕ + ಸರ$_3$]

**ಏಕಸರ**$_2$ (ನಾ). ಒಂದೇ ಎಳೆಯ ಹಾರ: ನಿಂಗಿಯ ಕೊರಳಲ್ಲಿ ತಾನು ಎಂದೂ ಕಾಣದ ಒಂದು ಏಕಸರವು ಅವನ ಕಣ್ಣಿಗೆ ಮಿಂಚಿತು (ರಕ್ತಧ್ವ. ೮೨). [ಏಕ + ಸರ$_6$]

**ಏಕಸರ**$_3$ (ನಾ). ಒಂದೇ ಪಟ್ಟು (?): ಹನ್ನೆರಡು ಘಟನವಳಗೆ ವಂದೊಂದರಿಂದ ಸಾಧನೆಯನ್ನು ಅನ್ಯೋನ್ಯವಾಗಿ ಮಾಡಲುಪಟ್ಟದ್ದರೆ ಅದೇಯೇಕಸರಾ ಎಂದು ಹೇಳುವದು (ಖಡ್ಗಟೀ. ೫-೭೧). [?]

**ಏಕಸರ್ಗ** (ನಾ). ಏಕಾಗ್ರಚಿತ್ತ: "ಏಕತಾನಃ . . . ಏಕಸರ್ಗಃ, ಏಕಾಗ್ರಃ, ಏಕಾಯನಗತಃ – ೭ ಏಕಾಗ್ರಚಿತ್ತನ ಪೆಸರು" (ಸಿದ್ಧಾಂತಿ. ೨೯೬). [ಏಕ + ಸರ್ಗ]

**ಏಕಸಱಿ** (ನಾ). ಒಂದೇ ಬಂಡೆ: ಭದ್ರಬಾಹುಭಟ್ಟಾರರ್ ಕಟ್ಟುವ್ಪ ನಾಡಡವಿಯ ಬೆಟ್ಟದ ಮೇಗಣೇಕಸಱಿ [ಪಾಠಾಂ. ಜೆಕಸಱಿ, ಜೆಕಸಿಲೆ, ಜೆಕಶಿಲೆ]ಯ ಮೇಗಿರ್ದು ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಜಾವಜ್ಜೀವಂ ನಿವೃತ್ತಿಪೂರ್ವಕಂ ಸಂನ್ಯಸನಂಗೆಯ್ದರ್ (ವಡ್ಡಾರಾ. ೮೮-೨೭). [ಏಕ + ಸಱಿ$_3$]

**ಏಕಸಾ** 'ಏಕಸಾನು' ನೋ.

**ಏಕಸಾನು, ಏಕಸಾ** (ಅ). ಎಡೆಬಿಡದೆ; ಒಂದೇ ಸಮನೆ; ಸಂತತವಾಗಿ: ದರಿದ್ರಮಳೆ ಏಕಸಾನು ಹೊಡೆದು, ಮುಂಗುಬಂದ ಸಸಿಗಳೂ ಕೊಳೆತುಹೋದವು (ಮರಮು. ೩೨). **ಏಕಸಾ**: (ಕಿಸಂಗ್ಲಾ. ೧೧೯). [← ಪಾರ. ಯಕ್ಸಾನ್; ಹಿಂ. ಏಕಸಾ = ಸಮಾನವಾದ, ಒಂದೇ ರೀತಿಯಾದ; ಮರಾ. ಏಕಸಾ, ಏಕಸಹಾ, ಏಕಸಾಹಾ]

**ಏಕಸಾರ** (ನಾ). [ವೀಶೈ] (?): ನವಸಾರ ಅಷ್ಟಸಾರ ದಶಸಾರ ಪಂಚಸಾರ ಚತುಸ್ಸಾರ ಏಕಸಾರ ಇಂತಿವನತಿಗಳೆದ ಮಹಾಮಹಿಮನ ನಿಲವು ಲಿಂಗದಲ್ಲಿ ಸಂಪೂರ್ಣ (ಪದಗೋ. ೧೩). [?]

**ಏಕಸಿಕ್ಥ** (ನಾ). ಒಂದೇ ಒಂದು ಅಗುಳು ಅನ್ನ: ಏಕಕಬಳೋನಾದ್ಯೇಕಸಿಕ್ಥ ಪ್ರಮಾಣಾಹಾರಂಬರಂ ಬರ್ಪವಮೋದರ್ಯಮೆಂಬೆರಡನೆಯ ತಪದೊಳಂ (ಆದಿಪು. ೬-೩೦ ವ). [ಏಕ + ಸಿಕ್ಥ]

**ಏಕಸೂತ್ರತೆ** (ನಾ). ಒಂದು ಕಟ್ಟಿಗೆ ಒಳಪಟ್ಟಿರುವಿಕೆ; ಹೊಂದಾಣಿಕೆ: ಹೀಗೆ ಬಳ್ಳಿವಳ್ಳಿಯಾಗಿ ಈ ಸಂಬಂಧಗಳು ಬೆಳೆದುಕೊಂಡು ಕಥಾನಕದ ಏಕಸೂತ್ರತೆಯನ್ನು ಕಾಯುತ್ತವೆ (ಸಮುಜೀ. ೧೪ ಪೀಠಿಕೆ). [ಸಂ. ಏಕಸೂತ್ರತಾ]

**ಏಕಸ್ಥ** (ಗು). ಒಂದೇ ಆಗಿರುವ: ನಮ್ಮ ನತ್ತಾಗ್ರಹದಿಂ ಶಿಕ್ಷಿಸಿ ಸಾಕ್ಷರಿಕರಂ ಮಾಡಿಟ್ಟೊಡೆ ನಮ್ಮೊಳ್ಳದುದಾವುದೆಂದು ತಮ್ಮಿರ್ವರುಮೇಕಸ್ಥರಾಗಿ ಸೂರ್ಯಮಿತ್ರನ ನುಡಿಗೊಡಂಬಟ್ಟು (ಸುಕುಮಾ. ೨-೫೫ ವ). **ಏಕಸ್ತರಾಗು, ಏಕಸ್ಥರಾಗು** = ಒಟ್ಟಾಗು; ಒಂದುಗೂಡು: ಪ್ರಮುಖಮಹಾಜನಂಗಳೆಂಭತ್ತನಾಲ್ವರುಮೇಕಸ್ತರಾಗಿರ್ದು (ಸೌಇಇ. IX–i, ೨೪೮-೧೯; 1147); ಪೊಗಳ್ತೆವಡೆದೈವತ್ತೊಕ್ಕಲ್ಗಳೇಕಸ್ಥರಾಗಿ (ಎಇ. XX, ೧೨-೩೬; 1167); ನಾಗರಸರು ತಾವು ಏಕಸ್ಥರಾಗಿ (ಎಇ. XXI, ೨-೫೪; 1260). [ಸಂ.]

**ಏಕಸ್ಥಲ** (ನಾ). ಒಂದೇ ಸ್ಥಲ, —ಜಾಗ: ಸ್ಥಲದ ನೆಲೆ ಒಂದೆಂತಱಿ ಏಕಸ್ಥಲಮೂರ್ತಿ ನೀನೆ (ಪೋಳಿಮಾ. ೨೦೦-೭೪೫). [ಏಕ + ಸ್ಥಲ]

**ಏಕಸ್ಥಾನ** (ನಾ). ೧. = ಏಕಸ್ಥಲ. ೨. [ಗಣಿತ] ಸಂಖ್ಯೆಗಳಲ್ಲಿ ಬಲಗಡೆಯಿಂದ ಮೊದಲನೆಯ ಸ್ಥಾನ: ೧೨೫ ಎನ್ನುವಲ್ಲಿ ೫ ಏಕಸ್ಥಾನದಲ್ಲಿದೆ (ರೂಢಿ). [ಏಕ + ಸ್ಥಾನ]

**ಏಕಸ್ಥಾನಿ** (ಗು). ಒಂದೇ ಸ್ಥಳದಲ್ಲಿ ಹುಟ್ಟುವ: ಏಕಸ್ಥಾನಿಗಳನಱಿದು ವರ್ಣಾವೃತ್ತಿಯಂ ಮಾಡ್ಪುದು (ಶಮದ. ೩೦ ವೃತ್ತಿ). [< ಸಂ. ಏಕಸ್ಥಾನಿನ್]

**ಏಕಸ್ಥಾನೀಯ** (ಗು). = ಏಕಸ್ಥಾನಿ: ಳಕಾರವೂ ಲಕಾರವೂ ಏಕಸ್ಥಾನೀಯಗಳೆಂದು ಕೇಶಿರಾಜನು ಹೇಳಿದ್ದರೂ, ನಿಜವಾಗಿ 'ಳ' ಮೂರ್ಧನ್ಯ (ಕೈಪಿಡಿ. ೫). [ಸಂ.]

**ಏಕಸ್ಥಿತಿ** (ನಾ). ಒಂದೇ ಸ್ಥಿತಿ; ಬದಲಾವಣೆಯಿಲ್ಲದಿರುವಿಕೆ: ನಿನಗಲ್ಲದೇಕಸ್ಥಿತಿಯುಲ್ಲಾಗರ್ಗಂ ಸ್ವಭಾವಸೌಂದರರೂಪಾ (ಜನಾಲೆ. ೩೧-೨೧). [ಏಕ + ಸ್ಥಿತಿ]

**ಏಕಸ್ವ** (ನಾ). ಒಬ್ಬನಿಗೇ ಇರುವ ಅನುಭವದ ಹಕ್ಕು, —ಅಧಿಕಾರ: ಏಕಸ್ವಗಳು, ನವನಿರ್ಮಿತಿಗಳು ಮತ್ತು ನಕ್ಷೆಗಳು (ಭಾಧಾನ. ೩೪೨). [ಏಕ + ಸ್ವ]

**ಏಕಸ್ವರ** (ನಾ). ಒಂದೇ ಸ್ವರ, —ವರ್ಣ: ಬೆರಸಿರೆ ಮುಂದಂ ಯೋಗಾಕ್ಷರಂಗಳೇಕಸ್ವರಂಗಳಿಂ ಸುಪ್ರಾಸಂ ನೆರೆದು ವಿಪರ್ಯಾಸಕ್ರಮಮಿರೆ ಸತತಂ ಶಾಂತಪೂರ್ವಮಕ್ಕುಂ ಪ್ರಾಸಂ (ಛಂದೋಂಬು. ೧-೫೦). [ಏಕ + ಸ್ವರ$_2$]

**ಏಕಸ್ವಾಮ್ಯ** (ನಾ). ಒಬ್ಬನಿಗೇ ಇರುವ ಅನುಭವದ ಹಕ್ಕು, —ಗುತ್ತಿಗೆ: (ಯಾವುದಾದರೂ ಸರಕಿನ ವ್ಯಾಪಾರ ಮಾಡುವುದರಲ್ಲಿ) ಏಕಸ್ವಾಮ್ಯ (Monopoly. ಇಂಕನಿ). [ಏಕ + ಸ್ವಾಮ್ಯ]

**ಏಕಸ್ವಾಮ್ಯತೆ** (ನಾ). = ಏಕಸ್ವಾಮ್ಯ: (ಸರ್ಕಾರವು ವಿಶೇಷ ಹಕ್ಕಾಗಿ ಒಬ್ಬನಿಗೆ ಕೊಟ್ಟ) ಏಕಸ್ವಾಮ್ಯತೆ (Monopoly. ಇಂಕನಿ). [ಸಂ. ಏಕಸ್ವಾಮ್ಯತಾ]

**ಏಕಹಸ್ತ** (ನಾ). ಒಂದೇ ಕೈಯನ್ನು ಉಳ್ಳವನು; ಒಕ್ಕೈಯ್ಯ: "ಏಕ [ಪಾಠಾಂ. ಏಕಳ] ಹಸ್ತಂ ಏಕಳ ಪಾಣಿಯೊಕ್ಕೈಯನಕ್ಕು" (ಮಂಗಳಾ. ೧೧೫–೬). [ಏಕ + ಹಸ್ತ]

**ಏಕಹಾಯನ** (ನಾ). ಒಂದು ವರ್ಷ: ಅಹಿತಾಲಯಮನಿಪಷ್ಟಮ ಗೃಹದೊಳ್ ಸೌಮ್ಯೇತರಗ್ರಹಂ ನಿಲೆ ಪಾಪಗ್ರಹಮದನಾಳೋಕಿಪೊಡೇಕಹಾಯನದಿನತ್ತಲರ್ಭಕಂ ನಿರ್ವಹಿಸಂ (ಜಾತತಿ. ೬–೧೭). [ಏಕ + ಹಾಯನ]

**ಏಕಹಾಯನಿ** (ನಾ). ಒಂದು ವರ್ಷದ ಕರು. [ಸಂ. ಏಕಹಾಯನೀ (ಏಕ + ಹಾಯನ + –)]

**ಏಕಾಏಕಿ, ಏಕಾಯೇಕಿ** (ಅ). ಒಮ್ಮೆಲೇ; ಇದ್ದಕ್ಕಿದ್ದಂತೆ: ಪಟ್ಟಣಕ್ಕೆ ಬಂದು ಏಕಾಏಕಿ ರಾಜನ ಸಭೆಯನ್ನು ಪ್ರವೇಶಿಸುವುದಕ್ಕೆ ಭಯಪಟ್ಟು (ಕಥಾಮಂ. IV, ೬೩); ಏಕಾಏಕಿ ಮೇಲೆ ಬಿದ್ದ ಭಟರನ್ನು ನೋಡಿ ಶತ್ರುಗಳು ನಿರುಪಾಯರಾಗಿ ... ಭಟರ ಖಡ್ಗಗಳಿಗೆ ತುತ್ತಾದರು (ಕಥವಿ. ೨೧೭); ಅವನಿಗೆ ಮೈಸೂರುಪಾಕು ಕಂಡರೆ ಬಹಳ ಆಸೆ. ಆದರೆ ಅವನ ಸ್ವಾಭಿಮಾನ ಅದನ್ನು ಏಕಾಏಕಿ ಮುಟ್ಟಗೊಡಿಸಲಿಲ್ಲ (ಸಾವಿಸ. ೨೫). **ಏಕಾಯೇಕಿ**: ಆಗ ದೊರೆಯು ಏಕಾಯೇಕಿ ಬಂದೇಬಿಟ್ಟನು (ಕಂಕಥೆ. ೧೭); ಏಕಾಯೇಕೀ ಆ ಮುದುಕ ಶಿವಾಜಿರಾಯನ ಬಂದನಂತ (ಅಪನಾ. ೨೧೪). [← ಹಿಂ. ಏಕಾಏಕ್; ಪಾರ. ಯಕಾಯಕ್]

**ಏಕಾಂಗ** (ನಾ). ೧. ಒಬ್ಬಂಟಿಗ: ವನ್ಯದ್ವಿಪಘಟೆಯನಿಭೇಂದ್ರಾರಿ ಪೊಕ್ಕಂತೆಪೋಲ್ಮೆಯ್ಗಲಿ ಪೊಕ್ಕೇಕಾಂಗದಿಂದಿಕ್ಕಿದ ನೀರಜವನಂ ವೀರಮಾರ್ತಂಡ ದೇವಂ (ಕಇಅ. ೨–೨–೫೨; 1058) ೨. ಅಂಗರಕ್ಷಕ; ಮೈಗಾವಲಿನವನು. ೩. ಮಂಗಳಗ್ರಹ; ಅಂಗಾರಕ. ೪. ಬುಧಗ್ರಹ. ೫. ವಿಷ್ಣು. ೬. ಗಂಧದ ಮರ. [ಏಕ + ಅಂಗ$_2$]

**ಏಕಾಂಗವಿಜಯ** (ನಾ). ೧. ಒಬ್ಬನೇ ಯುದ್ಧಮಾಡಿ ಪಡೆಯುವ ಗೆಲವು. ೨. ಏಕಾಂಗಿಯಾಗಿ ಹೋರಾಡಿ ವಿಜಯವನ್ನು ಪಡೆದವನು: ಗೋಗ್ರಹಣದ ಕಲಹದೊಳೇಕಾಂಗವಿಜಯನಾದಂ ವಿಜಯಂ (ಗದಾಯು. ೨–೩೯). [ಏಕಾಂಗ + ವಿಜಯ]

**ಏಕಾಂಗವೀರ** (ನಾ). ೧. ಏಕಾಂಗಿಯಾಗಿ ಕಾದುವ ವೀರ; ಅಸಹಾಯ ಶೂರ: ಪಠಾಣರ ಪಡೆಯೊಡನೆ ಏಕಾಂಗವೀರನಾಗಿ ಕಾದಬೇಕಾಯಿತು (ಬಂಕಿಮ. ೧೫೨). ೨. ಹೊಯ್ಸಳರಾಜರ ಒಂದು ಬಿರುದು: ಅಸಹಾಯಶೂರನೇಕಾಂಗವೀರ ಶನಿವಾರಸಿದ್ಧಿ ಗಿರಿದುರ್ಗ್ಗಮಲ್ಲ (ಎಕ. V, ಹಾಸನ. ೬೧–೨೭; 1218). [ಏಕಾಂಗ + ವೀರ]

**ಏಕಾಂಗಿ** (ನಾ). ೧. ಒಬ್ಬಂಟಿಗ; ಏಕಾಕಿ: ಏಕಾಂಗಿಯಾಗಿ ಮೈಮೇಲಿನ ಹುಪ್ಪು ಬಾಡದಂತೆ ಊರ ಮಂದಿ ಬರುವವರೆಗೆ ಅವರನ್ನು ತಡೆದದ್ದು ಅವನಿಗೆ ಸೋಜಿಗವಾಯಿತು (ಸವತಿ. ೫೭). ೨. ಏಕಪಕ್ಷೀಯವಾದುದು; ಅಪೂರ್ಣವಾದುದು: ಕುಮುದಳ ಪಕ್ಷ ನಿರೂಪಿತವಾಗದೆ ಇರುವದರಿಂದ ಭಾವಚಿತ್ರಣ ಏಕಾಂಗಿಯಾದಂತೆನಿಸುತ್ತದೆ (ಹೊಸಕ್ಷಿ. ೨೮೧). [< ಸಂ. ಏಕಾಂಗಿನ್]

**ಏಕಾಂಘ್ರಿ** (ನಾ). ಒಂದೇ ಕಾಲು ಉಳ್ಳವನು; ಕುಂಟ: "ಏಕಾಂಘ್ರಿಯೆನೆ ಕುಂಟನಕ್ಕು" (ಮಂಗರಾ. ೧೧೫–೬). [ಏಕ + ಅಂಘ್ರಿ]

**ಏಕಾಂತ** (ಗು). ೧. ಒಂಟಿಯಾದ. ೨. ಗುಟ್ಟಾದ; ರಹಸ್ಯವಾದ. ೩. ಒಂದೇ ವಿಷಯ ಅಥವಾ ವಸ್ತುವಿನಮೇಲೆ ಗಮನವನ್ನು ಹರಿಸಿದ: ಅಂತು ಬಿಟ್ಟ ತೇಜದಿಂ ವರಗೀತ ಗುಣೋದಯೈಕಾಂತ ಕಾಂತ ವಿಷಯಾಶಯರಾಗಿ (ಕವಿರಾ. ೩–೨೨೪). ೪. ಅಧಿಕವಾದ; ಹೆಚ್ಚಾದ. (ನಾ). ೫. ಯಾರೂ ಇಲ್ಲದ ಸ್ಥಳ; ಗುಟ್ಟಾದ ಸ್ಥಳ: ಅಂತೇಕಾಂತದೊಳ್ ತಮ್ಮ ತಂದೆಯ ಮನೋಗ್ಲಾನಿಯಂ ಪಱಿಪಡೆ ನುಡಿದು (ಸುಕುಮಾ. ೭–೯ ವ); ಕೈಕೇಯಿಯು ಸರ್ವಾಭರಣಭೂಷಿತಳಾಗಿ, ಉತ್ತಮವಾದ ರೂಪುಳ್ಳವಳಾಗಿ, ನಗುನಗುತ್ತ, ಏಕಾಂತದಲ್ಲಿ ಗಂಡನನ್ನು ಕಂಡು (ವಚಭಾ. ೪೦೫). ೬. ಬೇರೆಯಾರೂ ಇಲ್ಲದಿರುವಿಕೆ: ತನ್ನಲ್ಲಿಗೆ ವಂದೊಳನೇಕಾಂತಂ ಸಮನಿಸಿದೊಡಾಕೆಗಳಿಪದೆ ಪೋಗವೇಟ್ಟ ಧನದತ್ತನೊಳ್ಪಿದಂ (ವಡ್ಡಾರಾ. ೧೭–೧೩); ಲಗ್ನವಾದ ಮೊದಲ ಕೆಲವು ದಿನಗಳ ಮಟ್ಟಿಗಾದರೂ ಗಂಡಹೆಂಡಿರಿಬ್ಬರಿಗೆ ಪೂರ್ಣ ಏಕಾಂತದ ಅವಶ್ಯಕತೆ ಇರುತ್ತದೆ (ಆಬೋಲೀ. ೧೩೦). ೭. ಕಿವಿಮಾತು; ರಹಸ್ಯ; ಗುಟ್ಟು: ತಳರಲೇತಕೆ ನೀವು ಕುಳ್ಳಿರಿರೈ ನಿಮ್ಮ ಕಳಿದೆನಗುಂಟೆಯೇಕಾಂತಾ (ಭರಜ. ೪೯–೩೬); ಏಕಾಂತ ಹೋಗಿ ಲೋಕಾಂತವಾಯಿತು (ಗಾದೆ); ಇಬ್ಬರಿದ್ದರೆ ಏಕಾಂತ ಮೂವರಿದ್ದರೆ ಲೋಕಾಂತ (ಗಾದೆ). ೮. ಮಂತ್ರಾಲೋಚನೆ: "ಮಂತಣಮೆಂದುಸಿರಲ್ಕೇಕಾಂತಂ" (ಕವಿಕಂ. ೨೦೪). ೯. ಬದಲಾಗದ ವೃತ್ತಿ, —ನಿಯಮ: "ಏಕಾಂತವೆಂದರೆ ಒಂದೇ ಸ್ವಭಾವದಲ್ಲಿರುವುದು. ಸರ್ವಸ್ವಭಾವ ಧರ್ಮದಲ್ಲೂ ಇರುವುದಕ್ಕೆ ಅನೇಕಾಂತವೆಂದು ಅರ್ಥ" (ಹಿಂದಸಾ. ೬೭).

ಏಕಾಂತದ ಅವಸರ = ಏಕಾಂತದಲ್ಲಿ ನಡೆಸುವ ಪೂಜೆ; ರಹಸ್ಯಪೂಜೆ: ಮಲ್ಲಿಕಾರ್ಜುನ ದೇವರಿಗೆ ಏಕಾಂತದ ಅವಸರಕೂ ಕೂಡಿ ಕೊಟ ಗ್ರಾಮ (ಮೈಆರಿ. ೧೯೪೩, ೨೧–೧೦; 1532). **ಏಕಾಂತದವಳ್** = ಮಂತ್ರಾಲೋಚನೆಗೆ ತಕ್ಕವಳು: "ಪಚ್ಚುಗೆಗಾರ್ತಿ, ಮಂತಣಗಾರ್ತಿ– ಈ ೨ ಏಕಾಂತದವಳ್" (ಕಶಸಾ. ೧೯–೩೭೯); "ಪಚ್ಚುಗೆಗಾರ್ತಿಯೆಂದಡೇಕಾಂತದವಳ್" (ಕಬ್ಬಕೈ. ೨೭). [ಏಕ + ಅಂತ$_2$]

**ಏಕಾಂತಗೃಹ** (ನಾ). ರಹಸ್ಯವಾದ ಮನೆ; ಮಂತ್ರಾಲೋಚನಾ ಮಂದಿರ: ರಾಮನು . . . ಏಕಾಂತಗೃಹಕ್ಕೆ ಹೋಗಿ, ತಮ್ಮಂದಿರನ್ನು ಕರೆಸಿ–ಅಯ್ಯಾ ನನಗೆ ದೊಡ್ಡ ಅಪವಾದವು ಬಂತು. . . ಎಂದು ಹೇಳಿದನು (ನೀತಿಚಿಂ. XI, ೨೦). [ಏಕಾಂತ + ಗೃಹ]

**ಏಕಾಂತತೆ** (ನಾ). ಒಂಟಿಯಾಗಿರುವಿಕೆ: ಏಕಾಂತತಾವ್ಯಣಿಕಂ ಮಿಡಿವನೊ ವಿಯದ್ವಿಪಂಚಿಕೆಯ ನಿಶ್ಶಬ್ದತಾ ತಂತ್ರಿಯನೆನಲ್ಕೆ (ಶ್ರೀರಾಮಾ. ೧೦–೩೦೦). [ಸಂ. ಏಕಾಂತತಾ]

**ಏಕಾಂತದ್ರೋಹಿ** (ನಾ). ಗುಟ್ಟಾಗಿ ಮನಸ್ಸಿನಲ್ಲಿ ದ್ರೋಹವನ್ನು ಬಗೆಯುವವನು: ಏಕಾಂತದ್ರೋಹಿ ಗುಪ್ತಪಾತಕಿ ಯುಕ್ತಿಶೂನ್ಯಂಗೆ ಸಕಳೇಶ್ವರದೇವರು ಒಲಿ ಒಲಿ ಎಂದರೆ ಎಂತೊಲಿವನಯ್ಯ (ಸಮಾವ. ೨). [ಏಕಾಂತ + ದ್ರೋಹಿ]

**ಏಕಾಂತನಿಕೇತನ** (ನಾ). = ಏಕಾಂತಗೃಹ: ಏಕಾಂತನಿಕೇತನಕ್ಕೆ ಧರಣೀಪತಿ ಬಂದೊಳಪೊಕ್ಕು ನೋಡಿದಂ (ರಾಜಶೇ. ೩–೫೩ ವ). [ಏಕಾಂತ + ನಿಕೇತನ]

**ಏಕಾಂತಪ್ರಣಯ** (ನಾ). ರಹಸ್ಯಪ್ರಣಯ: ಒರೆದೇಕಾಂತಪ್ರಣಯದ ಪರಿಯಂ ವಿಸ್ಮರಣದಾರುಣಂ ತಿಳಿಯದೊಡಾಂ (ಶಾಕುಂತ. ೬೦–೧೩). [ಏಕಾಂತ + ಪ್ರಣಯ]

**ಏಕಾಂತಬಂಧನ** (ನಾ). ಒಬ್ಬನನ್ನೇ ಪ್ರತ್ಯೇಕವಾಗಿ ಬಂಧನದಲ್ಲಿಡುವುದು: ಏಕಾಂತಬಂಧನ ಚಿಕ್ಕವರಿಗೆ ತುಂಬ ಅಪಾಯಕಾರಿಯಾಗುತ್ತದೆ (ಪುನರು. ೩೪೮). [ಏಕಾಂತ + ಬಂಧನ]

**ಏಕಾಂತಭಕ್ತ** (ನಾ). ಅಂತರಂಗಭಕ್ತ: ಋಷಿಗಣದೊಡನೆ ಸಂಚರಿಸುತೇಕಾಂತಭಕ್ತರಂ ಪೊರೆದು ದುಷ್ಟರನರಿದು (ವೆಂಕಾರಾ. ೨-೩-೨೬). [ಏಕಾಂತ + ಭಕ್ತ]

**ಏಕಾಂತವಂತ** (ನಾ). ಅಂತರಂಗದ ಮಿತ್ರ; ಮಂತ್ರಾಲೋಚನೆ ಮಾಡುವವನು: ನಿಮ್ಮೇಕಾಂತವಂತಂ ಧರೆಗೆ ರಾಮಯ್ಯಂ ಮಡಿವಳಂ ಶರಣ ಮಾಚಯ್ಯಂ (ಬಸವು. ೯-೪೬). [< ಸಂ. ಏಕಾಂತವತ್]

**ಏಕಾಂತವಾಸ** (ನಾ). ೧. ಒಂಟಿಯಾಗಿ ವಾಸಿಸುವುದು; ಒಬ್ಬನೇ ಇರುವುದು (ಕಿ). ೨. ಆಶ್ರಮ. ೩. ರಾಣಿವಾಸ (ಕಿ). [ಏಕಾಂತ + ವಾಸ₂]

**ಏಕಾಂತವಾಸಿ** (ನಾ). ಒಂಟಿಯಾಗಿ ವಾಸಿಸುವವನು; ಸಂನ್ಯಾಸಿ. [< ಸಂ. ಏಕಾಂತವಾಸಿನ್]

**ಏಕಾಂತವೆಸ** (ನಾ). ಏಕಾಂತದಲ್ಲಿ ನಡೆಸುವ ಸೇವೆ; ಒಂಟಿಯಾಗಿ ಮಾಡುವ ಕಾರ್ಯ: ಶ್ರೀ ಜನಾರ್ದನ ದೇವರ ಏಕಾಂತವೆಸಕ್ಕೆ ಶೆಲವಾಗಿ (ಮೈಆರಿ. ೧೯೪೨, ೩೮-೧೫; 1535). [ಏಕಾಂತ + ಬೆಸ₁]

**ಏಕಾಂತಸಂಗಮ** (ನಾ). ರಹಸ್ಯವಾದ ಸಂಗಮ: ಮಿಗೆ ಪರಿಕಿಸಿ ಮಾಳ್ಪುದು ತಾನೇಕಾಂತಸಂಗಮವ (ಶಾಕುಂತ. ೭೧-೪). [ಏಕಾಂತ + ಸಂಗಮ]

**ಏಕಾಂತಸ್ಥಾನ** (ನಾ). ರಹಸ್ಯವಾದ ಸ್ಥಳ, —ಜಾಗ: ಪ್ರತಿಯೊಬ್ಬರೂ ಏಕಾಂತಸ್ಥಾನದಲ್ಲಿ ಪ್ರಾರ್ಥಿಸಬೇಕೆಂದು ಕಲಿಸಿದ್ದನು (ಪುನರು. ೧೭೯). [ಏಕಾಂತ + ಸ್ಥಾನ]

**ಏಕಾಂಶು** (ನಾ). ಒಂದು ಕಿರಣ: ಶಿವನೇಕಾಂಶುವ ತೋರ್ವನು ಭಕ್ತಪೂರ್ಣಾಂಶುವ ಬಿಂಬಿಸುವನು (ಗಣೇಶ. ೧೦-೨೫೭). [ಏಕ + ಅಂಶು]

**ಏಕಾಕಿ** (ನಾ). ಒಬ್ಬಂಟಿಗ; ಏಕಾಂಗಿ: ಏಕಾಕಿಯಿನಟ್ಟಿದುದು ಕೋಟಾಕೋಟಿ ವಿಯಚ್ಚರೇಂದ್ರವಾಹಿನಿ (ಶಾಂತಿಪು. ೪-೨೮); ಮಾತೆಯನ್ನು ಏಕಾಕಿಯಾಗಿ ಬಿಟ್ಟು ನಾನು ಹೋದರೆ ಅವಳು ಬಹಳ ದುಃಖಪಡುವಳು (ಶ್ರೀರಾಯ. ೧೨೭). [< ಸಂ. ಏಕಾಕಿನ್]

**ಏಕಾಕಿತನ** (ನಾ). ಒಂಟಿಯಾಗಿರುವಿಕೆ: ಎತ್ತಣೀಯೇಕಾಕಿತನ ತಾನೆತ್ತ ಗಜಹಯ ರಥ ಸುಖಾಸನದತಿಶಯದ ಸುಳಿವು (ಕುವ್ಯಾಗ. ೩-೨೨); ನಿಮ್ಮ ಗಾಂಭೀರ್ಯ, ಏಕಾಕಿತನ - ಮುದುಡಿಕೊಳ್ಳುವ ವೃತ್ತಿ ನೋಡಿ ನನಗಂತೂ ಹೇಗೆ ಹೇಗೋ ಅನಿಸುತ್ತದೆ (ಹೊಸಕ್ಷಿ. ೧೩೭). [ಏಕಾಕಿ + -ತನ]

**ಏಕಾಕಿನಿ** (ನಾ). ಒಬ್ಬಳೇ ಒಬ್ಬಳು; ಒಬ್ಬಂಟಿಗಿತ್ತಿ: ಸಮಸ್ತ ಸನಾಭಿ ಸಂಯುಕ್ತೆಯಾಗಿಯುಮೇಕಾಕಿನಿಯಂತೆಯುಂ (ಚಂದ್ರಪು. ೩-೫೦ ವ). [< ಸಂ. ಏಕಾಕಿನೀ]

**ಏಕಾಕೃತಿ** (ನಾ). ಒಂದೇ ಆಕಾರ; ಸಮಾನ ಸ್ವರೂಪ: ನಾಕಸುಖಶೇಷಮಂ ನಾಕೌಕರ್ ಬಂದದಱೊಳನುಭವಿಪ್ಪುದಱಿಂದೇಕಾಕೃತಿ ಕುರುಜಾಂಗಲಮಂ ನಾಕಮುಮದು ಕಿಱುಕುಳಂಗೆ ಬಣ್ಣಿಸಲರಿದೇ (ಶಾಂತಿಪು. ೯-೧೩೭). [ಏಕ + ಆಕೃತಿ]

**ಏಕಾಕ್ಷ** (ಗು). ೧. ಒಂದೇ ಒಂದು ಕಣ್ಣುಳ್ಳ. ೨. ಶ್ರೇಷ್ಠವಾದ ಕಣ್ಣನ್ನು ಉಳ್ಳ. (ನಾ). ೩. ಕಾಗೆ. ೪. ಶಿವ: ಅನಂತೇಶನೇ ನವ್ಯಸೂಕ್ಷ್ಮನೇಯುತ್ತಮನೆ ಏಕಾಕ್ಷನೇ ಏಕರುದ್ರನೆ (ವೀಶೈಪು. ೩-೧೬-೭೦). ೫. ಶುಕ್ರಾಚಾರ್ಯ. [ಸಂ. (ಏಕ + ಅಕ್ಷಿ + -)]

**ಏಕಾಕ್ಷರ** (ನಾ). ೧. ಒಂದೇ ಅಕ್ಷರ. ೨. [ಕಾವ್ಯಮೀ] ಒಂದೇ ಅಕ್ಷರವನ್ನು ಬಳಸಿ ಬರೆದ ಪದ್ಯ: ಅಕ್ಷರ ಬಿಂದುಚ್ಯುತಕಂ ದ್ವ್ಯಕ್ಷರಿಯೇಕಾಕ್ಷರಂ ನಿರೋಷ್ಠ್ಯಮತಾಲವ್ಯಾಕ್ಷರಮೆನೆ ನಿಜನಾಮಸದೃಶಂ ಲಕ್ಷಣಮದಾಗೆ ನೆಗಟ್ಟುಂ ಪಲವುಂ (ಕಾವ್ಯಾವ. ೫೭೦). ೩. ಒಂದೇ ಅಕ್ಷರವನ್ನುಳ್ಳದ್ದು. ೪. (ಅಲಂ) "ಅತಿಸುಲಭ" (ಶಾಪಮಂ. ಕೋಶ): ಚಾಂದ್ರಂ ಕಾತಂತ್ರಂ ಜೈನೇಂದ್ರಂ ಶಬ್ದಾನುಶಾಸನಂ ಪಾಣಿನಿ ಮತ್ತೈಂದ್ರಂ ನರೇಂದ್ರಸೇನಮುನೀಂದ್ರಂಗೇಕಾಕ್ಷರಂ ಪೆಱಂಗಿವು ಮೊಗ್ಗೇ (ಎಇ. XVI, ೫೫-೨೫; 1053). [ಏಕ + ಅಕ್ಷರ]

**ಏಕಾಕ್ಷರಧಾತು** (ನಾ). [ವ್ಯಾಕ] ಒಂದೇ ಒಂದು ಅಕ್ಷರದ ಧಾತು. ಬಾ, ಕೀ, ಪೂ ಮೊದಲಾದ ದೀರ್ಘಸ್ವರಯುಕ್ತವಾದ ಕೆಲವು ಏಕಾಕ್ಷರ ಧಾತುಗಳಿಗೂ . . . ಭೂತಕಾಲ ಸೂಚಕವಾಗಿ ತ ಪ್ರತ್ಯಯವು ಸೇರುತ್ತದೆ (ಕೈಪಿಡಿ. ೪೬). [ಏಕಾಕ್ಷರ + ಧಾತು]

**ಏಕಾಕ್ಷರಪದ** (ನಾ). ಒಂದೇ ಒಂದು ಅಕ್ಷರವನ್ನು ಉಳ್ಳ ಪದ: ಆಕಾರಕ್ಕೆ ಲಘೂಕೃತಮೇಕಾರಂ ಬಹುಳಮಕ್ಕುಮಾದೊಡಂತಕ್ಕೇಕಾಕ್ಷರ ಪದಮುಱೆಯೆ ನಿರಾಕುಳದಿಂ ಹ್ರಸ್ವಮಕ್ಕುಮೆಲ್ಲೆಡೆಗಳೊಳಂ (ಕಾವ್ಯಾವ. ೧೭೦). [ಏಕಾಕ್ಷರ + ಪದ₂]

**ಏಕಾಕ್ಷರಿ** (ನಾ). ೧. ಒಂದೇ ಒಂದು ಅಕ್ಷರವನ್ನು ಉಳ್ಳದ್ದು: ಭಾಷೆಗಳೂ ಧಾತುವಿನಿಂದಲೇ ಮೊದಲಾದುವಲ್ಲದೆ, ಅವು ಮೂಲತಃ ಏಕಾಕ್ಷರಿಗಳೇ ಆಗಿದ್ದವು (ಭಾಷಾಶಾ. ೨೭೮). ೨. [ಸಂಗೀತ] ಋಷಭಸ್ವರದಿಂದ ಜನಿಸಿದ ಮೂರು ಶ್ರುತಿಗಳಲ್ಲಿ ಒಂದು: ಮಧುರೆ ಅವಳೀ ಏಕಾಕ್ಷರಿಯೆಂಬ ಮೂಱು ಶ್ರುತಿಗಳೇ ಋಷಭಸ್ವರದಿಂ ಜನಿಸಿದವು (ವಿವೇಕ. ೨೩೨). ೩. ಒಂದೇ ಅಕ್ಷರವುಳ್ಳ ಮಂತ್ರ: ಏಕಾಕ್ಷರಿ, ದ್ವ್ಯಕ್ಷರಿ, ತ್ರ್ಯಕ್ಷರಿ, ಚತುರಾಕ್ಷರಿ, ಪಂಚಾಕ್ಷರಿ, ಷಡಕ್ಷರಿ ಮುಂತಪ್ಪ ಪ್ರಸಿದ್ಧಮಂತ್ರಂಗಳೊಳವಲ್ತೆ (ರಾಮಾಶ್ವ. ೧೧೬-೧). [ಸಂ. ಏಕಾಕ್ಷರೀ]

**ಏಕಾಕ್ಷರಿಭಾಷೆ** (ನಾ). ಏಕಾಕ್ಷರ ಘಟಿತವಾದ ಮೂಲ ಶಬ್ದಗಳನ್ನುಳ್ಳ ಭಾಷೆ: ಇವುಗಳಿಗೆ ಏಕಾಕ್ಷರೀಭಾಷೆಗಳೆಂತಲೂ ಅನ್ನುವರು; ಯಾಕೆಂದರೆ ಇವುಗಳಲ್ಲಿಯ ಮೂಲಶಬ್ದಗಳು ಏಕಾಕ್ಷರಘಟಿತವಾಗಿರುತ್ತವೆ (ಮುಂಬಯಿ. ೫-೨೩೬). [ಏಕಾಕ್ಷರಿ + ಭಾಷೆ]

**ಏಕಾಗ್ರ** (ಗು). ೧. ಒಂದೇ ಕಡೆ ಗುರಿಯಿಟ್ಟಿರುವ; ಒಂದೇ ಗುರಿಯುಳ್ಳ: ಮನದಿಂ ತನುವಿಂ ವಚನದಿನೇಕಾಗ್ರಚಿತ್ತನಾಗಿ ಪೊಡವಟ್ಟಂ (ಶಾಂತಿಪು. ೧೦-೫೬). (ನಾ). ೨. = ಏಕಾಗ್ರತೆ: ಪುರಾಂತಕಧ್ಯಾನದಲಿ ವಿಮಲಸ್ವಾಂತನೇಕಾಗ್ರದಲಿ ಭಜಿಸಿದನಿಂದುಶೇಖರನ (ಕುವ್ಯಾಅ. ೨೨-೪೩). [ಏಕ + ಅಗ್ರ₁]

**ಏಕಾಗ್ರಚಿತ್ತ** (ನಾ). ಒಂದೇ ಕಡೆಗೆ ಇರುವ ಮನಸ್ಸು, —ಚಿತ್ತ: ಸುಪ್ರಾಸುಕ ಪ್ರದೇಶಮಂ ಕಂಡು ಯೋಗಯೊಗ್ಯ ಪ್ರದೇಶಮಪ್ಪುದೆಂದೇಕಾಗ್ರಚಿತ್ತದೊಳೇಕಪಾರ್ಶ್ವದೊಳ್ ಮೆಯ್ಯನಿಕ್ಕಿ (ಸುಕುಮಾ. ೧೨-೧೮ ವ); ಅವ್ಯಗ್ರನೇಕಾಗ್ರಚಿತ್ತಂಬಡೆದಿರ್ದಂ . . . ರಾಮಚಂದ್ರಂ (ಪಂರಾಮಾ. ೧೪-೧೭೬). [ಏಕಾಗ್ರ + ಚಿತ್ತ₂]

**ಏಕಾಗ್ರತೆ** (ನಾ). ಒಂದೇ ವಿಷಯದಲ್ಲಿ ಗಮನವನ್ನು ಕೇಂದ್ರೀಕರಿಸುವುದು: ಏಕಾಗ್ರತೆಯಿನಾ ಮನದ ಮಚ್ಚಿಕೆಯದೆಂಬುದೇ ಕಣಾ ಧ್ಯಾನ (ವೀಶೈಪು. ೫-೧೭-೧೬); ನರಹರಿಯು ತನ್ನ ಏಕಾಗ್ರತೆಯನ್ನು ಇನ್ನಿಷ್ಟು ಉತ್ಕಟವಾಗಿಸಲು ಹವಣಿಸಿದನು (ಸಮುಜೀ. ೩೦೩). [ಸಂ. ಏಕಾಗ್ರತಾ]

**ಏಕಾಗ್ರಮನ** (ಗು). ಒಂದೇ ವಿಷಯದಲ್ಲಿ ಮನಸ್ಸು ಇಟ್ಟ: ಉರ್ವೀಕಾಂತನಲ್ಲಿಗಟ್ಟಿದನೇಕಾಗ್ರಮನಂ ಮಹೇಂದ್ರನೆಂಬ ನರೇಂದ್ರಂ (ಚಂದ್ರಪು. ೫-೧೧೧). [ಸಂ. ಏಕಾಗ್ರಮನಸ್ (ಏಕಾಗ್ರ + ಮನಸ್)]

**ಏಕಾಗ್ರಮನಸ್ಕ** (ಗು). = ಏಕಾಗ್ರಮನ: ಒಂದು ಕಟ್ಟಿಗೆಯಿಂದ ಬೂದಿಯಲ್ಲಿ ಏಕಾಗ್ರಮನಸ್ಕನಾಗಿ ಲೆಕ್ಕ ಬಿಡಿಸುತ್ತಿದ್ದನು (ಇಪ್ಪಕ. ೩೪೦). [ಸಂ. (ಏಕಾಗ್ರ + ಮನಸ್ + -)]

**ಏಕಾಣುಜೀವಿ** (ನಾ). ಒಂದೇ ಒಂದು ಅಣುವಿನಿಂದ ಕೂಡಿದ ಪ್ರಾಣಿ. 'ಏಕಾಣುಜೀವಿಶಾಸ್ತ್ರ' ಪರಾ. [ಏಕ + ಅಣು + ಜೀವಿ]

**ಏಕಾಣುಜೀವಿಶಾಸ್ತ್ರ** (ನಾ). ಒಂದೇ ಒಂದು ಅಣುವಿನಿಂದ ಕೂಡಿದ ಪ್ರಾಣಿಯನ್ನು ಕುರಿತ ಶಾಸ್ತ್ರ: 'ಏಕಾಣುಜೀವಿಶಾಸ್ತ್ರ' ಅಂದರೆ 'ಬೆಕ್ಟೀರಿಯಾಲಜಿ'ಯಲ್ಲಿ . . . ನನ್ನ ಪರೀಕ್ಷೆ ಯಶಸ್ವಿಯಾಗಿ ಮುಗಿಯಿತೆಂದರೆ ನಾನುಪದವೀಧರನಾಗುವೆ(ಹೊಸಕ್ಷಿ. ೩). [ಏಕಾಣುಜೀವಿ+ಶಾಸ್ತ್ರ]

**ಏಕಾತಪತ್ರ** (ನಾ). ಒಂದೇ ಕೊಡೆ; ಒಂದೇ ಛತ್ರಿ: ಏಕಾತಪತ್ರಮೆಸೆದಿರೆ ಕರಮಿಂಬಾಗಿರೆ ಚಾಮರಯುಗ್ಮಮುವಾಗಳೆ ನಿಲೆ ದಿವ್ಯವಿಷ್ಟರಂ ಮಣಿಖಚಿತಂ (ಆದಿಪು. ೧೪–೧೪೬). [ಏಕ+ ಆತಪತ್ರ]

**ಏಕಾತ್ಮ** (ನಾ). ಒಂದೇ ಆತ್ಮ; ಏಕಜೀವ: ಅವಳ ಮದುವೆಗೆ ಮುಂಚೆ ಅವರಿಬ್ಬರೂ ಸಮಾನಸ್ಕಂಧರಂತೆ ಏಕಾತ್ಮರಾಗಿ ಬಾಳುತ್ತಿದ್ದರು (ಪುನರು. ೪೧೬). [ಏಕ + ಆತ್ಮ]

**ಏಕಾತ್ಮಜ** (ನಾ). ಒಂದೇ ಆತ್ಮದಿಂದ ಹುಟ್ಟಿದ್ದು: ಏಕಾತ್ಮಜಂ ಜೀವಮೆಂಬುದಾದುದೆನೆ (ಶಾಂತಿಪು. ೮–೧೪೨ ವ). [ಸಂ.]

**ಏಕಾದಶ** (ಗು). ೧. ಹನ್ನೊಂದನೆಯ. ೨. ಹನ್ನೊಂದನ್ನು ಒಳಗೊಂಡ. ೩. ಹನ್ನೊಂದನೆ ತಿಂಗಳು ನಡೆಯುವ. (ನಾ). ೪. ಹನ್ನೊಂದು ಎಂಬ ಸಂಖ್ಯೆ.

**ಏಕಾದಶದಿವಾಕರರ್** = ಹನ್ನೊಂದು ಜನ ಸೂರ್ಯರು: ವಸುಗಳೆಂಟು ನವಪ್ರಜೇಶರು ಶ್ವಸನಗಣವೈವತ್ತು ಏಕಾದಶದಿವಾಕರರನಿತು ರುದ್ರರು ಅಶ್ವಿನಿಗಳೆರಡು (ಹಸಾರ. ೮–೨೬). [ಸಂ.]

**ಏಕಾದಶಧಾರಿ** (ನಾ). [ಜೈನ] ದ್ವಾದಶಾಂಗಗಳಲ್ಲಿ ಹನ್ನೊಂದು ಅಂಗಗಳನ್ನು ಮಾತ್ರ ಬಲ್ಲವನು: ಏಕಾದಶಧಾರಿಗಳೀವೇಕಾದಶನಿಳಯದ ಸಂಪದಂಗಳಕ್ಕೆಮಗೆಂದುಂ (ಪುಷ್ಪಪು. ೧–೧೫).
[< ಸಂ. ಏಕಾದಶಧಾರಿನ್]

**ಏಕಾದಶನಿಳಯ** (ನಾ). [ಜೈನ] ಶ್ರಾವಕರು ಆಚರಿಸಬೇಕಾದ ಹನ್ನೊಂದು ಪ್ರತಿಮೆಗಳು; ದರ್ಶನ, ವ್ರತ, ಸಾಮಾಯಿಕ, ಪ್ರೋಷದೋಪವಾಸ, ಸಚಿತ್ತವಿರತಿ, ರಾತ್ರಿಭುಕ್ತಿತ್ಯಾಗ, ಬ್ರಹ್ಮಚರ್ಯೆ, ಆರಂಭತ್ಯಾಗ, ಪರಿಗ್ರಹತ್ಯಾಗ, ಅನುಮತಿತ್ಯಾಗ, ಉದ್ದಿಷ್ಟತ್ಯಾಗ ಎಂಬ ಐದನೆಯ ಗುಣಸ್ಥಾನದ ಹನ್ನೊಂದು ನಿಲಯುಗಳು: ಭೂಭುವನದೊಳಂ ಪರೆದೇಕಾದಶನಿಳಯಮುನರಸನನು ಕ್ರಮದಿನಿನಿತುಮಂ ಕೈಕೊಂಡಂ (ಆದಿಪು. ೬–೧೧).
[ಏಕಾದಶ + ನಿಳಯ (= ನಿಲಯ)]

**ಏಕಾದಶರುದ್ರ** (ನಾ). ೧. ಹನ್ನೊಂದು ಸಲ ರುದ್ರಮಂತ್ರವನ್ನು ಜಪಿಸುತ್ತ ಲಿಂಗಕ್ಕೆ ಸ್ನಾನವನ್ನು ಮಾಡಿಸುವ ವಿಧಿ (ಕ). ೨. ಹನ್ನೊಂದು ಜನ ರುದ್ರರು: ಏಕಾದಶರುದ್ರರನಷ್ಟವಸುಗಳಂ ನೆಜೆ ಕಂಡಂ (ಜಗವಿ. ೫–೧೦೯). [ಏಕಾದಶ + ರುದ್ರ]

**ಏಕಾದಶಸ್ಥ** (ನಾ). ೧. ಹನ್ನೊಂದನೆಯ ಸ್ಥಾನದಲ್ಲಿರುವವನು. ೨. [ಜೈನ] ಶ್ರಾವಕರಲ್ಲಿ ಹನ್ನೊಂದನೆಯ ಪ್ರತಿಮೆಯಲ್ಲಿರುವವನು: ನಿಶಿತಮತಿಯುಕ್ತನೇಕಾದಶಸ್ಥನುದ್ದಿಷ್ಟ ದೇಶವಿರತಂ ಪೆಸರಿಂ (ಸುಕುಮಾ. ೬–೩೬). 'ಏಕಾದಶನಿಳಯ' ಪರಾ. [ಸಂ.]

**ಏಕಾದಶಸ್ಥಾನ** (ನಾ). = ಏಕಾದಶನಿಳಯ: ಆರ್ಯಕರ್ಮಂಗಳಂ ನೆಗಟ್ಟಿ ಗೃಹಸ್ಥಾಶ್ರಮವೃತಿಗೆ. . . ಏಕಾದಶಸ್ಥಾನಂಗಳಕ್ಕುಂ (ಸುಕುಮಾ. ೬–೨೫ ವ). [ಏಕಾದಶ + ಸ್ಥಾನ]

**ಏಕಾದಶಾಂಗಧರ** (ನಾ). = ಏಕಾದಶಧಾರಿ: ಹರಿವರ್ಮನರಪತಿ. . . ಸಂಯಮಮಂ ಕೈಕೊಂಡೇಕಾದಶಾಂಗಧರಂ ಷೋಡಶಭಾವನೆಗಳಿಂ ತೀರ್ಥಕರ ಪುಣ್ಯಮಂ ಕಟ್ಟಿ (ಚಾವುಂಉ. ೨೮೮–೧೮). [ಸಂ.]

**ಏಕಾದಶಾಂಗಧಾರ** (ನಾ). = ಏಕಾದಶಧಾರಿ: ದಶಕುಶಲ ಧರ್ಮನಿಪುಣನುಂ ಏಕಾದಶಾಂಗಧಾರನುಂ ದ್ವಾದಶವಿಧ ತಪೋನುಷ್ಠಾನನಿಷ್ಠಿತನುಂ (ಅಜಿಪು. ೩–೧ ವ). [ಸಂ.]

**ಏಕಾದಶಾಂಗಧಾರಿ** (ನಾ). = ಏಕಾದಶಧಾರಿ: ದಶಪೂರ್ವಧರರುಮೇಕಾದಶಾಂಗಧಾರಿಗಳುಮೆನಿಪ ಮುನಿಪದ ನಖದೀಪ್ತಿ ಶರಚ್ಚಂದ್ರಿಕೆ ದರ್ಶನವಿಶುದ್ಧಿಯಂ ಮಾಡುಗಘತಮೋವಿಘಟನಮಂ(ಪಂರಾಮಾ. ೧–೯).
[< ಸಂ. ಏಕಾದಶಾಂಗಧಾರಿನ್]

**ಏಕಾದಶಿ** (ನಾ). ಚಾಂದ್ರಮಾನದ ಹನ್ನೊಂದನೆಯ ತಿಥಿ: ದಶಮಿಯ ಮಹೋತ್ಸವಂ ಪೆರ್ಚಿತೇಕಾದಶಿಯೊಳಶನಮಂ ತೊಜೆದು (ಜೈಮಿಭಾ. ೨೯–೧೩); ಏಕಾದಶಿಯ ಮನೆಗೆ ಶಿವರಾತ್ರಿ ಔತಣಕ್ಕೆ ಬಂದ ಹಾಗೆ (ಗಾದೆ). [ಸಂ. ಏಕಾದಶೀ]

**ಏಕಾದಶೀವ್ರತ** (ನಾ). ಏಕಾದಶಿಯ ನಿಯಮವನ್ನು ಅನುಸರಿಸುವುದು: ತಂದು ಫಲವರ್ಗಮಂ ಪೂಜೆಗೈದುಪವಾಸದಿಂದೆ ಜಾಗರಣದಿಂದೇಕಾದಶೀವ್ರತವನಂದದಿಂದಾಚರಿಪನಖಿಳ ಜನಕುಪದೇಶಿಪಂತೆ ಹರಿಮಹಿಮೆಗಳನು (ಜೈಮಿಭಾ. ೨೯–೬). [ಸಂ. (ಏಕಾದಶೀ + ವ್ರತ)]

**ಏಕಾಧಿಪತಿ** (ನಾ). ಸರ್ವಾಧಿಕಾರಿ (ಕ). [ಏಕ + ಅಧಿಪತಿ]

**ಏಕಾಧಿಪತ್ಯ** (ನಾ). ಒಂದೇ ಆಡಳಿತಕ್ಕೆ ಒಳಪಟ್ಟಿರುವುದು: ಕೌರವನೊಳೆಮಗೀ ವಸುಧೆ ಹುದುವಲ್ಲ ನೆಲನೇಕಾಧಿಪತ್ಯವಲೆ (ಕುವ್ಯಾಶ. ೨–೫೫).
[ಏಕ + ಅಧಿಪತ್ಯ]

**ಏಕಾಬ್ದ** (ನಾ). ಒಂದು ವರ್ಷದ ಕರು (ಕ).
[ಸಂ. ಏಕಾಬ್ದಾ (ಏಕ + ಅಬ್ದ$_2$ + –)]

**ಏಕಾಭಿಮುಖ** (ಗು). ಒಂದೇ ಕಡೆಗೆ ಅಭಿಮುಖವಾಗಿರುವ; ಒಂದು ಬಿಂದುವಿನ ಕಡೆಗೆ ಹಾಯುವ; ಏಕಾಭಿಮುಖ (Concurrent. ಇಂಕನಿ). [ಏಕ + ಅಭಿಮುಖ]

**ಏಕಾಮಿಷ** (ನಾ). ಅನೇಕರ ಬಯಕೆಗೆ ಪಾತ್ರವಾದ ಒಂದೇ ವಸ್ತು: ಮೇದಿನಿಯೊಳೇಕಾಮಿಷಸ್ಥಿತಿಯಾದಿಯಿದು ವಿಗ್ರಹಕೆ ತಮ್ಮೊಳು ಕಾದಿದರು (ಕುವ್ಯಾಅ. ೧೮–೨೬). [ಏಕ + ಆಮಿಷ]

**ಏಕಾಮಿಷವಿರೋಧ** (ನಾ). ಒಂದೇವಸ್ತುವಿಗಾಗಿ ಹಲವರಲ್ಲಿ ಉಂಟಾಗುವ ವಿರೋಧ: ಬಂದುದೇಕಾಮಿಷವಿರೋಧದ ಕಂದು ಪಾರ್ಥನ ಚಿತ್ತದಲಿ ಬಾಲೇಂದುಧರನೆಂದೆತ್ತ ಬಲ್ಲನು ಕೆಣಕಿದನು ಶಿವನ (ಕುವ್ಯಾಅ. ಒರಿಇ ೬–೪೭). [ಏಕಾಮಿಷ + ವಿರೋಧ]

**ಏಕಾಯತ** (ಗು). ಒಂದೇ ಕಡೆಯಿರುವ. 'ಏಕಾಯತಮಾನಸ' ಪರಾ. [ಏಕ + ಆಯತ$_4$]

**ಏಕಾಯತಮಾನಸ** (ನಾ). ಒಂದೇ ಕಡೆ ಮನಸ್ಸಿಟ್ಟವನು: ವಸುಧೆಯನೇಕಾಯತಮಾನಸನಜಿವಿಂ ನೆಜೆದು ರಾಜಧರ್ಮದಿನಧಿರಕ್ಷಿಸೆ ಪೋಯ್ತು ಕಾಲಂ (ಶಾಂತಿಪು. ೬–೬೯).
[ಏಕಾಯತ + ಮಾನಸ$_2$]

**ಏಕಾಯತ್ತ** (ಗು). ಒಂದೇ ಒಂದಕ್ಕೆ ಅಧೀನವಾದ, —ವಶವಾದ: ಮದನಪರಿವಾದಿನೀನಾದದಿನಗ್ಗಳಮೆನಿಪ ನಿನ್ನ ನುಣ್ನುಡಿ ಪೊಜಪೊಣ್ಮೆದೊಡೇಕಾಯತ್ತಮದಾಗದೆ ಕಳರವಲಕ್ಷ್ಮಿ ಸಮದಕೋಕಿಲ ಕುಲದೊಳ್ (ಚಂದ್ರಪು. ೩–೬೧). [ಏಕ + ಆಯತ್ತ$_2$]

**ಏಕಾಯನ** (ಗು). ೧. ಒಂದೇ ಒಂದು ವಿಷಯದ ಮೇಲೆ ಮನಸ್ಸು ನೆಟ್ಟಿರುವ; ಏಕಾಗ್ರಚಿತ್ತದಿಂದ ಕೂಡಿರುವ. (ನಾ). ೨. ಏಕಾಂತವಾದ ಪ್ರದೇಶ; ರಹಸ್ಯವಾದ ಸ್ಥಳ. ೩. ಆಲೋಚನೆಗಳ ಹೊಂದಾಣಿಕೆ. [ಏಕ + ಅಯನ]

**ಏಕಾಯೇಕಿ** 'ಏಕಾಏಕಿ' ನೋ.

**ಏಕಾರ** (ನಾ). [ವ್ಯಾಕ] ಕನ್ನಡ ವರ್ಣಮಾಲೆಯ ಹನ್ನೆರಡನೆಯ ಅಕ್ಷರ: ಸಂಧ್ಯಕ್ಷರಮೆನೆ ಯಥಾರ್ಥದಿಂ ವ್ಯವಹರಿಸುಗುಮೇಕಾರಮಾದಿಯಾಗಿರೆ ನಾಲ್ಕುಂ (ಕಾವ್ಯಾವ. ೧೨). [ಸಂ.]

**ಏಕಾರಣ** (ನಾ). ಯಾವ ಕಾರಣ: ನಮ್ಮ ಕೆಮ್ಮನಿರ್ಪಿರವಿದೇಕಾರಣಂ (ಪಂಪಭಾ. ೭-೧೭ ವ). [ಏ₂ (< ಏನ್) + ಕಾರಣ]

**ಏಕಾರತಿ** (ನಾ). ಒಂದೇ ಕಡೆಯಲ್ಲಿ ಬತ್ತಿಯುಳ್ಳ ದೀಪದ ಆರತಿ: ಏಕಾರತಿಯ ನೋಡುವ ಬನ್ನಿ ನಮ್ಮಲೋಕನಾಥ ಸಿರಿಪಾದಕ್ಕೆ ಬೆಳಗುವ (ಪುರಂದ. ೧-೨೧೮-೧). 'ಪಂಚಾರತಿ' ಪರಾ. [ಏಕ + ಆರತಿ₁]

**ಏಕಾರ್ಣವ** (ನಾ). ಒಂದೇ ನೀರಾಗಿರುವಿಕೆ; ಎಲ್ಲೆಲ್ಲೂ ನೀರೇ ನೀರಾಗಿರುವಿಕೆ; ಮಹಾಪೂರ: ಸೋನೆಯಿಂ ಸರಿಗಳಿಂ ತಂದಲ್ಗಳಿಂದಂದು ಭೂತಳಮೇಕಾರ್ಣವಮಾಗೆ ಚಕ್ರಿಯ ಬಲಕ್ಕಾತಂಕಮಂ ಮಾಡಿದರ್ (ಆದಿಪು. ೧೩-೫೫); ಏಕಾರ್ಣವವಾಗಿ ಅತಿವೃಷ್ಟಿಯಾಗಿ ಕೆರೆಗಳೆಲ್ಲಾ ತುಂಬಿದವು (ಚತ್ರಸಾ. ೬). [ಏಕ + ಅರ್ಣವ]

**ಏಕಾರ್ಥ** (ನಾ). ೧. ಒಂದೇ ಒಂದು ಅರ್ಥ: ನಿರುಪಮದ ಸುಖಕಿರುವ ನಾಮಗಳಿರುವುದೆಲೆ ಶಿವಮುಕ್ತಿ ಮೋಕ್ಷೆಂದುರು ಸುಖವು ನೆಲೆ ನಿತ್ಯವೆನಲೇಕಾರ್ಥವೆಲ್ಲವನು (ಬಜ್ಜವು. ೭೪-೯೮). ೨. ಒಂದೇ ವಿಷಯವನ್ನು ಹೇಳುವುದು, —ಅಭಿಪ್ರಾಯಹೊಂದಿರುವುದು. ೩. ಒಂದೇ ಅರ್ಥವನ್ನು ಹೊಂದಿರುವುದು: ಇರೆ ಶಬ್ದಾರ್ಥಂಗಳ್ ತತ್ಪರತೆಯಿನದು ಕಾವ್ಯಮದಜಿಸೊಳುಚಿತ್ತೈಕಾರ್ಥಾಂತರವಾಚಿ ಶಬ್ದಮವಭಾಸ ರೂಪ ಮಾಹ್ಲಾದಕಾರಿಯುಪ್ಪುದದರ್ಥಂ (ಕಾವ್ಯಾವ. ೪೩೦). ೪. = ಏಕಾಮಿಷ: ಉಭಯಜನಮೇಕಾರ್ಥಕೆಳಸಿದೊಡೆ ಮತ್ತೆ ಲೇಸಾದಪುದೆ (ಜೈಮಿಭಾ. ೨೮-೪೮). [ಏಕ + ಅರ್ಥ]

**ಏಕಾರ್ಥಗತಿ** (ನಾ). ಒಂದೇ ಅರ್ಥವನ್ನು ಹೊಂದಿರುವುದು: ಸಂಗತಿಯಿಂದಂ ನಾಮಪದಂಗಳವೇಕಾರ್ಥಗತಿಯೊಳಾಗೆ ಸಮಾಸಂ (ಕಾವ್ಯಾವ. ೧೯೯). [ಏಕಾರ್ಥ + ಗತಿ]

**ಏಕಾವಲಿ, ಏಕಾವಳಿ** (ನಾ). ೧. ಒಂದೇ ಒಂದು ಎಳೆಯ ಸರ; ಎಕ್ಕಾವಳಿ. ಏಕಾವಳಿ: ೧. "ಒಂದುಸರಮಾಗಿರ್ದ ಹಾರಮೇಕಾವಳಿಯು ಕಂಠಿಕೆಯೆನಿಕ್ಕು" (ಮಂಗರಾ. ೧೧೦-೨೪); "ಎಕ್ಕಸರಮೇಕಾವಳಿ" (ಚತುನಿ. ೯೦); ಉರದೊಳ್ ಹಾರಶ್ರೀಯಿಂ ಕೊರಲೊಳಮೇಕಾವಳೀವಿಳಾಸದಿನಾಗಲ್ ಕರಮೆಸೆದಿರ್ದುವು (ಅಜಿಪು. ೪-೬೦); "ಬಳ್ಳಿಯ ಕವಲಿನಲ್ಲಿ ನನ್ನ ಏಕಾವಳೀ ಹಾರವು ಸಿಕ್ಕಿಕೊಂಡಿತು" (ಕಾವ್ಯಸ. ೧೨). ೨. [ಕಾವ್ಯಮೀ] ಒಂದು ಅಲಂಕಾರದ ಹೆಸರು: ಸಮಾಸೋಕ್ತಿ ... ಕಾರಣಮಾಲೆ ಏಕಾವಳೀ ವ್ಯಾಘಾತ ... ಉದಾತ್ತಾದ್ಯಲಂಕಾರಗಳೊಡಗೂಡಿ (ವಿವೇಕ. ೨೨೫). [ಸಂ. ಏಕಾವಲೀ (ಏಕ + ಆವಲೀ)]

**ಏಕಾವಳಿ** 'ಏಕಾವಲಿ' ನೋ.

**ಏಕಾವಳಿಸರ** (ನಾ) = ಏಕಾವಲಿ ೧: ಕತ್ತಿನಲ್ಲಿ ಅಡ್ಡಿಕೆ, ಅಸಲಿ, ಬಂದಿ, ಜೋಮಾಲೆ, ಏಕಾವಳಿಸರ, ಹನುಮನ ತಾಳಿ, ಹುಲಿಯುಗುರು (ಮಲ್ಲಿ. ೪೦). [ಏಕಾವಳಿ ( = ಏಕಾವಲಿ) + ಸರ₆]

**ಏಕಾವಳ್ಯಲಂಕಾರ** (ನಾ). = ಏಕಾವಲಿ ೨.: ಮೊದಲು ಗೃಹೀತವಾಗಿ ಅನಂತರ ತ್ಯಕ್ತವಾಗುವ ಪದಾರ್ಥಪರಂಪರೆಯ ವರ್ಣನೆ ಏಕಾವಳ್ಯಲಂಕಾರವೆನ್ನಿಸಿಕೊಳ್ಳುವುದು (ಕೈಪಿಡಿ. ೨೮೨). [ಏಕಾವಳಿ ( = ಏಕಾವಲಿ) + ಅಲಂಕಾರ]

**ಏಕಾಶ್ರಯ** (ನಾ). ೧. ಒಂದೇ ಆಶ್ರಯ. ೨. [ವ್ಯಾಕ] ಸಮಾನವಾದ ಪ್ರಾಧಾನ್ಯ: ಪರಪದದೊಳರ್ಥವರ್ತನಮಿರೆ ತತ್ಪುರುಷಂ ಸಮಂತದೇಕಾಶ್ರಯಮಾಗಿರೆ ಕರ್ಮಧಾರಯಂ (ಶಮದ. ೧೬೪). ೩. ಒಂದೇ ದೇವತೆಯ ರಕ್ಷಣೆ, —ಕಾವಲು. [ಏಕ + ಆಶ್ರಯ]

**ಏಕಾಹ₁** (ನಾ). ಒಂದು ದಿವಸಕಾಲ. [ಸಂ.]

**ಏಕಾಹ₂** (ನಾ). ಸತ್ತವರಿಗೆ ಹನ್ನೊಂದನೆಯ ದಿನ ಮಾಡುವ ಉತ್ತರಕ್ರಿಯೆ: ಸತ್ತವನಿಗೆ ೧೧ನೆಯ ದಿವಸ ಏಕಾಹ ಎಂಬ ಒಂದು ಕರ್ಮವನ್ನು ಮಾಡಬೇಕು (ನಮ್ಮೂರ. ೨೭). [< ಸಂ. ಏಕಾದಶಾಹ]

**ಏಕೀಕರಣ** (ನಾ). ಒಂದುಗೂಡಿಸುವುದು; ಒಟ್ಟಾಗಿ ಸೇರಿಸುವುದು: ಕರ್ಣಾಟಕದ ಎಲ್ಲಾ ಸಮಸ್ಯೆಗಳಿಗೆ ಏಕೀಕರಣವೇ ಹಿರಿಮದ್ದು (ಎತ್ತಿಕ್ಕೈ. ೬೯). [ಸಂ.]

**ಏಕೀಕರಮಾರ್ಗ** (ನಾ). ಒಂದೇ ಎನ್ನುವ ಭಾವನೆ, —ರೀತಿ: ನೀವು ನಮಗೆ ಸ್ವಕೀಯಸ್ಥರೇ ಹೊರ್ತು ಬೇರೊಂದಲ್ಲಾಯೆಂಬದಾಗಿ ಯೇಕೀಕರಮಾರ್ಗದಿಂದ (ರಾಜೇಂದ್ರ. ೭). [ಏಕೀಕರ₀ (< ಸಂ. ಏಕೀಕರಣ) + ಮಾರ್ಗ]

**ಏಕೀಕರಿಸು** (ಕ್ರಿ). ಒಂದುಗೂಡಿಸು; ಒಟ್ಟುಗೂಡಿಸು: ಶರಣನು ಸದ್ವಿವೇಕ ಸ್ವರೂಪವಾದ ಪರಮಾನಂದಜಲವ ಆ ನಿರಾಳ ಪರಬ್ರಹ್ಮದಲ್ಲಿ ಯೇಕೀಕರಿಸಿದ (ಅಜಿಮಾ. ೧೫-೫೪); ಶಿವನೊಳೇಕೀಕರಿಸಿದ ಸುಕುಮಾರ ಪದ್ಮರಸಾರ್ಯರೀ ಕೃತಿಯನೋವುಗನಿಶಂ (ಪದ್ಮರಾ. ೧-೨೦). [ಏಕೀಕರಣ + -ಇಸು₃]

**ಏಕೀಕೃತ** (ಗು). ಒಂದಾದ; ಒಟ್ಟುಗೂಡಿದ: ಆಯತ್ತಸರಿತ್ಪತಿ ಮಹಿಮೆಗಂ ಏಕೀಕೃತ ಧರಾಧಿಪಾಭಿರಾಮತೆಗಂ ... ತಾನೊರ್ವನೆ ನಿರುಪಮ ಜನ್ಮಭೂಮಿಯಾಗಿ (ಶಾಂತಿಪು. ೩-೯೯ ವ). [ಸಂ.]

**ಏಕೀನಿ** (ನಾ). ಪ್ರಾಮಾಣಿಕತೆ; ನಿಯತ್ತು (ಕ); "ನಂಬಿಗೆ, ಪ್ರಾಮಾಣಿಕತೆ" (ಸಿಂಕೋ. ೭೫).
[← ಅರ. ಹಿಂ. ಯಕೀನ್; ಮರಾ. ಏಕೀನ್, ಯಕೀನ್ = ಖಂಡಿತವಾಗಿ, ನಿಶ್ಚಯವಾಗಿ; ತುಳು. ಏಕೀನಿ, ಏಖೀನಿ]

**ಏಕೀಭವಿಸು** (ಕ್ರಿ). ಒಂದಾಗು; ಒಟ್ಟಾಗು: ವಿವಿಧ ಶಕ್ತಿರಸಂಗಳೇಕೀಭವಿಸೆ ಜೀವ ಅವಿತರ್ಕ್ಯ ಸೂಕ್ಷ್ಮವದು (ಮಂಕುಕ. ೧೧೮); ವಿಚಾರ ಮಾಡತಕ್ಕ ಶಕ್ತಿಯೊಂದಿಗೆ ಏಕೀಭವಿಸತಕ್ಕ ... ಒಂದು ಅಂಗವಾದರೂ ಶರೀರದಲ್ಲಿಲ್ಲ (ಜೀವಾತ್ಮ. ೮೮). [ಏಕೀಭವನ₀ + -ಇಸು₃]

**ಏಕೀಭಾವ** (ನಾ). ಒಂದಾಗುವಿಕೆ; ಒಟ್ಟುಗೂಡುವಿಕೆ. [ಸಂ.]

**ಏಕೀಭೂತ** (ಗು). ಒಂದಾದ; ಒಟ್ಟುಗೂಡಿದ: ಏಕೀಭೂತ ಸಕಳ ಭುವನ ಶಿಶಿರದ್ರವ್ಯ ಸಂಚಾರ ದ್ರವ ಶಂಖಾಕಾರ ಶಿಖರಿಣೀ ರಮಣೀಯ ಮುಮಂ (ಆದಿಪು. ೧೧-೨೮ ವ). [ಸಂ.]

**ಏಕು** (ನಾ). (ಉಕ). ಒಂದು ಬಗೆಯ ಹುಲ್ಲು: ನಟ್ಟು, ಕರಿಕೆ, ಕಣಗಿಲು, ಏಕು, ಜೇಕು (ಕಂನುಹು. ೮೬); ಔರಂಗಜೇಬ ಮಾರಜುಮ್ಲಾರು ... ಪರಮ ಸ್ನೇಹಿತರಾದರು ... ಏಕು ಜೇಕುಗಳೊಂದಾದವು (ಔರಂಗ. ೧೨೩). 'ಗೇಕು', 'ಜೇಕು' ಪರಾ. [?]

**ಏಕೆ** 'ಏನ್' ಪರಾ.

**ಏಕೇಶ್ವರ** (ನಾ). ೧. ಒಬ್ಬನೇ ಒಬ್ಬ ಪರಮಾತ್ಮ. ೨. ಒಬ್ಬನೇ ಒಬ್ಬ ಒಡೆಯ. [ಏಕ + ಈಶ್ವರ]

**ಏಕೇಶ್ವರವಾದ** (ನಾ). ಜಗತ್ತಿಗೆ ಒಬ್ಬನೇ ಪರಮಾತ್ಮ ಎಂಬ ವಾದ: ಏಕೇಶ್ವರವಾದದಲ್ಲಿ ನಿತ್ಯರಾದ, ಮುಕ್ತರಾದ ಅನಂತ ಜೀವಾತ್ಮರು ಇದ್ದರೂ ಅವರಲ್ಲಿ ಪರಸ್ಪರ ಹೇಗೆ ಸೌಹಾರ್ದವಿರುವುದೊ (ಹಿಂದಸಾ. ೪೯). [ಏಕೇಶ್ವರ + ವಾದ₃]

**ಏಕೇಶ್ವರವಾದಿ** (ನಾ). ಜಗತ್ತಿಗೆಲ್ಲಾ ಒಬ್ಬನೇ ಒಬ್ಬ ಪರಮಾತ್ಮನೆಂದು ವಾದಮಾಡುವವನು: ಪ್ರಪಂಚ ಏಕೇಶ್ವರವಾದಿಗಳು ಕೆಲವರು, ಪ್ರವಾಹೇಶ್ವರವಾದಿಗಳು ಕೆಲವರು (ಹಿಂದಸಾ. ೪೯). [< ಸಂ. ಏಕೇಶ್ವರವಾದಿನ್]

**ಐಕ್ಯೈಕ** (ಗು). ಒಂದೇ ಒಂದಾದ: ತದನಂತರಮಾಯೆಡೆಗತ್ತಲೇಕ್ಯೈಕ ಪ್ರದೇಶೋತ್ತರಮಾಗೆ (ಸುಕುಮಾ. ೬-೬ ವ). [ಏಕ + ಏಕ]

**ಐಕ್ಯೈಕಪಂಡಿತ** (ನಾ). ಒಬ್ಬನೇ ಒಬ್ಬನಾದ ಪಂಡಿತ: ಐಕ್ಯೈಕಪಣ್ಡಿತಗ್ರ್ರಾಮನಾಮೋತ್ತಮಪ್ಪೈರ್ಯಷ್ಣವ ಗೀತಿ ಮನೋಹರರ್ (ಕಇ. II, ೧೦-೯; 1080). [ಐಕ್ಯೈಕ + ಪಂಡಿತ]

**ಐಕ್ಯೈಕವೀರ** (ನಾ). ಏಕಾಂಗಿಯಾಗಿ ಕಾದುವ ವೀರ; ಅಸಹಾಯ ಶೂರ: ನೂಕಿ ನೋಡಾ ಸೈಂಧವನನೇಕ್ಯೈಕವೀರರು ಕಾವೆವೆಂದುದ್ರೇಕ ಮಿಗೆ ಗರ್ಜಿಸಿತು ಕರ್ಣಾದಿಗಳು ತಮತಮಗೆ (ಕುವ್ಯಾದ್ರೋ. ೮-೬೭). [ಐಕ್ಯೈಕ + ವೀರ]

**ಐಕ್ಯೈಕೆ** (ನಾ). ಒಬ್ಬಳೇ ಒಬ್ಬಳು: ಏಕಾಕಿ ಪರಮುತಿಗಿಲ್ಲವದೇಕ್ಯೈಕೆ ತೋಱುವ ಸುಪತಿಯುಂದದಲೆಂದನಸುರಾರಿ (ನಿಭಾಗ. ೧೧-೩೪-೧೨). [ಸಂ. ಐಕ್ಯೈಕಾ (ಏಕಾ + ಏಕಾ)]

**ಐಕೋಕ್ತಿ** (ನಾ). ೧. ಒಂದೇ ಒಂದು ಪದ, —ಮಾತು, —ಶಬ್ದ. ೨. [ವ್ಯಾಕ] ಏಕವಚನ: ನೆಗಟ್ದಾ ನಪುಂಸಕೈಕೋಕ್ತಿಗೆ ಕೆಲರಿತು ವಿತ್ತುವತ್ತುವೆಂದುಸಿರ್ವರ್ (ಶಮದ. ೨೨೬). [ಏಕ + ಉಕ್ತಿ]

**ಐಕೋಕ್ತಿಗೀತ** (ನಾ). ಸ್ವಗತವಾದ ಹಾಡು; ಸ್ವಾಲಾಪ: ದೃಶ್ಯ ಕಾವ್ಯ-ಭಾವಗೀತಗಳ ವಿಧಾನಗಳು ಬೆರೆತಾಗ 'ಐಕೋಕ್ತಿಗೀತ' ತಲೆ ಯೆತ್ತುತ್ತದೆ (ನವ್ಯಕಾ. ೪). [ಐಕೋಕ್ತಿ + ಗೀತ]

**ಐಕೋತ್ತರ** (ನಾ). ೧. ಒಂದು ಹೆಚ್ಚಾದದ್ದು. 'ಐಕೋತ್ತರ ಶತಸ್ಥಲ' ಪರಾ. ೨. (?) : ಸರ್ವಜನ ಸುಕ್ಷೇಮವನು ಕೇಳ್ದೂರ್ವಿ ನಾಥನೆಗೇಳ್ದು ಕರಗಳನಿರ್ವನೇಕೋತ್ತರದಿ ನಿಲಿಸಿದ ಧರ್ಮಪಾಲಕನು (ಬಜ್ಜಪು. ೬೬-೧೪). [ಏಕ + ಉತ್ತರ]

**ಐಕೋತ್ತರವೃದ್ಧಿ** (ನಾ). ಒಂದೊಂದಾಗಿ ಹೆಚ್ಚುವಿಕೆ: ಇರ್ಪತ್ತೊಂದು ದಿವಸಮೇಕೋತ್ತರವೃದ್ಧಿಯಿಂ ಮನಂ ತವದೆ ತನು ತವೆ ನೋಣುತ್ತಿರ್ಪಿನಂ (ಶಾಂತಿಪು. ೪-೬೬ ವ). [ಐಕೋತ್ತರ + ವೃದ್ಧಿ]

**ಐಕೋತ್ತರಶತಸ್ಥಲ** (ನಾ). [ವೀಶೈ] ನೂರರ ಮೇಲೆ ಒಂದು ಸ್ಥಲ; ಒಂದುನೂರ ಒಂದು ಸ್ಥಲ: ಇವರೊಳಗಾದ ಐಕೋತ್ತರಶತಸ್ಥಲ ಮೊದಲಾದ ಭಾವವು ನಿಮ್ಮಲ್ಲಿಯೇ ... ನಿಃಕಳಂಕ ಮಲ್ಲಿಕಾರ್ಜುನಾ (ಮೋಳಿಮಾ. ೧೪೮-೫೬೧). [ಐಕೋತ್ತರ + ಶತ + ಸ್ಥಲ]

**ಐಕೋದಕ** (ನಾ). ೧. ಒಂದೇ ನೀರು, —ಸಮುದ್ರ: ವರ ಕಮಠ ಮತ್ಸ್ಯಂಗಳಂ ನಿಜಕರದಿನೇಕೋದಕದೊಳೊಡರಿಚಿ ಪಿರಿಯ ಗಾಣವ ನಿಕ್ಕುವಾ ಬಲೆಗಾಱನುಂ ತಾನೆ (ಬಸವು. ೨೧-೨೪). ೨. ಪಿತೃವಿಗೆ ತರ್ಪಣ ಕೊಡುವುದರಲ್ಲಿ ಸಮಾನಾಧಿಕಾರಿಯಾದವನು; ಜ್ಞಾತಿ; ದಾಯಾದಿ (ಕಿ). [ಏಕ + ಉದಕ₂]

**ಐಕೋದರ** (ನಾ). ಒಂದೇ ಗರ್ಭದಿಂದ ಬಂದವನು; ಸಹೋದರ; ಅಣ್ಣ ಅಥವಾ ತಮ್ಮ: ಏಕೋದರರರ್ ಸುರೂಪನುಂ ಕರುಪನು ಮೆಂಬರ್ (ಪಂರಾಮಾ. ೮-೫೪ ವ). [ಏಕ + ಉದರ]

**ಐಕೋದೇವ** (ನಾ). ಒಬ್ಬನೇ ಒಬ್ಬ ದೇವರು; ಪರಮಾತ್ಮ: ಪಶುಪತಿ ಜಗಕ್ಕೆ ಐಕೋದೇವ (ಬಸವ. ೫೨೪). ☞ ಸಂಸ್ಕೃತದಲ್ಲಿ ಏಕಃ ದೇವಃ ಇವೆರಡೂ ಭಿನ್ನಶಬ್ದಗಳು. [ಸಂ.]

**ಐಕೋನಿತ** (ಗು). ಒಂದು ಕಡಮೆಯಾಗಿರುವ: ಪರಮಾಯುಷ್ಯಂ ... ಇಪ್ಪತ್ತಯ್ದು ಬೆಳ್ಗತ್ತಿಗಂ ಕರಭಕ್ಕಂ ಮಹಿಷೋಕ್ಷಜಾತಿಗದೆ ತಾನೇ [ಕೋ]ನಿತಂ (ಜಾತತಿ. ೮-೧೦). [ಏಕ + ಊನಿತ]

**ಐಕೋಭಾವ** (ನಾ). ಒಂದೇ ಭಾವ, —ಅಭಿಪ್ರಾಯ: ಐಕೋಭಾವ ಎನಗುಳ್ಳರೆ ಏಕೆ ನೀ ಕರುಣಿಸೆ (ಬಸವ. ೨೪೬). ☞ ಸಂಸ್ಕೃತದಲ್ಲಿ ಏಕಃ ಭಾವಃ ಇವೆರಡೂ ಭಿನ್ನಶಬ್ದಗಳು. [ಸಂ.]

**ಐಕೋಮಾರ್ಗ** (ನಾ). ಒಂದೇ ಒಂದು ಮಾರ್ಗ, —ದಾರಿ: ಪರಮ ಸತ್ಯ ಸುಶೀಲ ... ಆಚರಣನಾಗನವರತಲೇಕೋಮಾರ್ಗದಿಂ ಧರೆಯಾ ಪೊರೆವ (ಬಜ್ಜಪು. ೨೬-೪೮). ☞ ಸಂಸ್ಕೃತದಲ್ಲಿ ಏಕಃ ಮಾರ್ಗಃ ಇವೆರಡೂ ಭಿನ್ನಶಬ್ದಗಳು. [ಸಂ.]

**ಐಗಂ₁** (ಅ). ನಿಶ್ಚಯವಾಗಿ; ನಿಜವಾಗಿ: "ಐಗಂ ನಿಶ್ಚಯೇ" (ಭಾಷಾಭೂ. ೨೪೩); "ಐಗಂ ವಲಂ ವೆಱಂ ದಲ್ ತಾ ಗುಗು ಮತಿ ನಿಶ್ಚಯಾರ್ಥಮಂ" (ಶಮದ. ೩೦೬); ಆಗಳಿನ ಕಜ್ಜಮನೇಗಮೆ ಗೈದಪುದೆಂದು (ಶಮದ. ನ. ೧೯೯ ಪ್ರಯೋ); ಐಗಂ ನುಡಿದಂ (ಶಬ್ದಾನು. ೬೦ ಪ್ರಯೋ). [?]

**ಐಗಂ₂** 'ಐಗಳ್' ನೋ.

**ಐಗಡಿಸು** (ಕ್ರಿ). ಓಕರಿಕೆ ಬರು; ಅಸಹ್ಯವಾಗು: ಹಸಿವಿಲ್ಲದವನು ಅನ್ನವನು ತೆಗೆದುಕೊಂಡಡೆ ಐಗಡಿಸುವುದು ಎಂಬ ಹಾಗೆ ಅಂಗಕ್ಕೆ ಸಲ್ಲದು (ವಚಶಾ. I, ೨೨೭). 'ಒಗಡಿಸು', 'ಓಗಡಿಸು' ಪರಾ. [ಐಗಡ್ಡು₀ + -ಇಸು₃. / ತೆಲು. ಏಗುಡು = ಅಸಹ್ಯ]

**ಐಗಣಜು** (ನಾ). ದೊಡ್ಡ ಉಗ್ರಾಣ; ದೊಡ್ಡ ಕಣಜ (?): "ಎಂಥ ಕಣಜ ?" (ಶಾಪಮಂ. ಕೋಶ): ಕಣಿ ವಿದ್ಯಾವಿಭವಕ್ಕುದಾ ಹರಣೆಯರ್ಥೋಪಾರ್ಜನಕ್ಕೆಕ್ಕಲಾವಣಮುದ್ಯದ್ಗುಣ ರತ್ನರಾಜಿಗೆ ಜೀವಟ್ಟಾದಾರ್ಯಸಂಪತ್ತಿಗೇಗಣಜೆಂದೀ ಗುಣಿ ಶಂಕನಂ ಪೊಗಟುಗುಂ ... ಉರ್ವೀತಳಂ (ಎಇ. XV, ೯೦-೫೦; 1060). ☞ ಈ ಶಬ್ದ 'ಐಗಣಜು' ಎಂಬುದರ ಅಪಲಿಖಿತವಿರಬಹುದು. [ಐ₂ ? + ಕಣಜು (<ಕಣಂಜ)]

**ಐಗಯ್** 'ಐಗೆಯ್' ನೋ.

**ಐಗಳ್, ಐಗಂ₂, ಐಗಳುಂ** (ಅ). ೧. ಯಾವಾಗ; ಯಾವಕಾಲದಲ್ಲಿ: ನೀಮೊಂದಂ ಮುನ್ನೇಗಳ್ ಕಂಡಿರೆಂಬುದವಿಶಾನೇಂದ್ರಂ ಬಿಣ್ಣಿಸೆ (ಶಾಂತಿಪು. ೯-೧೦೧ ವ). ೨. ಯಾವಾಗಲೂ; ಸದಾಕಾಲ: ಉಱಿ ಕೊಳ್ವುದು ಕಟ್ಟುವುದೇಗಳ್ ನೆತ್ತಾಟದ ದಿನದಂಗಳೊಳು (ಉದ್ಭದೇ. ೨-೧೨) **ಐಗಂ₂**: ೨. ಪರಧನಾಕಾಂಕ್ಷೆಯಂ ಮಾಡದೇಗಂ ಪರದೈವ ಸ್ತೋತ್ರಕಿಂಬಾಗದೆ (ಪಾಪ್ರಾಶ. ೫೯); ಕಾರ್ಯಕಾರಣಮೆಂಬುದೇಗ ಮೊಂದೇ ಕಣಾ (ವೀಶೈಪು. ೬-೫-೩೫). **ಐಗಳುಂ**: ೨. "ಏಗಳು ಮೆನಲ್ಕೆ ನಿರಂತರಂ" (ಕಶರ. ೧೧೪); ದೊರೆವೆತ್ತ ಯಕ್ಷಿ ಬಗೆದೀಕ್ಷಿಸಿ ರಕ್ಷಿಸುಗೆಮ್ಮನೇಗಳುಂ (ಶಾಂತಿಪು. ೧-೬); ಉಱದೇಗಳುಂ ತಲೆಯ ನೇಱಿರಲ್ ನೆರೆಹೊರೆಯರುಂ ಸರ್ವರುಂ (ಉದ್ಭದೇ. ೪-೨); ಏಗಳುಂ, ನೀನ್, ನೋಟ್ಪಿನ್ ಅಜಗುಲಿಗಳನ್ ಮುಱಿವ ನೋಂಪಿಯನ್ ನೋಂತಿರ್ಪೆ (ಅಶ್ವತ್ಥಾ. ೧-೩). [?]

**ಐಗಳುಂ** 'ಐಗಳ್' ನೋ.

**ಐಗಾದಿಐಗೋತ್ತರವಾಗು** (ಕ್ರಿ). ಒಂದಕ್ಕಿಂತ ಒಂದು ಹೆಚ್ಚಾಗು; ಅಭಿವೃದ್ಧಿಯಾಗು (?) : ಶ್ರೀಭಂಡಾರದ ಹನ್ನಿರ್ ಧಾನ್ಯಮುಂ ತಮ್ಮ ರಾಜ್ಯಮುಂ ಗೋಬ್ರಾಹ್ಮಣರಿಗಂ ಐಗಾದಿಐಗೋತ್ತರವಾಗಲು ಶಕವರ್ಷ ಸಾಸಿರದ ... ಸೋಮವಾರದಲು ಸುಪ್ರತಿಷ್ಠೆ ಮಾಡಿದ ಕೊಟ್ವಾರಂ (ಎಕ. V, ಬೇಲೂರು. ೨೦-೪; 1180). [ಐಗಾದಿ₀ (< ಸಂ. ಏಕಾಧಿಕ ?) + ಐಗೋತ್ತರ + ಆಗು₁]

**ಐಗು₁** (ಕ್ರಿ). ಸಾಗಿಸು; ನಿಭಾಯಿಸು; ಜಯಿಸು: ಭೀಷ್ಮನು ನಾನು ಜೀವಸಹಿತವಾಗಿರುವಾಗ ಯುದ್ಧದಲ್ಲಿ ನೀವು ಐಗಲಾರಿರಿ ... ಎಂದನು (ವಚಭಾ. ೨೬೪); ದ್ರೋಹ ಕಟ್ಟಿದ್ದು, ಪಾಪ, ದ್ರೋಹ ಮಾಡಿದವನು ಎಂದೂ ಐಗಿಲ್ಲ (ಬಂಕಿಮು. ೨೬೧); ಇಂಥ ಗಂಡನ್ನ ಕಟ್ಟಿಕೊಂಡು ನಾನು ಐಗಬೇಕಾಗಿದೆ (ಮುಹಾಗ. ೫೧). [?]

**ಏಗು**$_2$ (ಕ್ರಿ). ಏನನ್ನುಮಾಡು ; ಏನು ಪ್ರಯೋಜನವಾಗು : ಹಿರಣ್ಯ ದಾನಗುಣಮೊನ್ದುಮದೇಗುವುವೆನ್ದು ಮೆಚ್ಚದೆ (ಎಕ. VII, ಶಿಕಾರಿ. ೧೫೧–೨೮ ; 1047) ; ಮುನ್ನಮೆನ್ನ ಮಾಡಿದ ಪಾಪಫಲಮಿಾ ನೆವದಿಂ ಫಲಮನೀಯಲೆಂದು ಬಂದುದಕ್ಕೆ ನೀವೇಗುವಿರಿ (ಧರ್ಮಾಮೃ. ೭–೧೧೯) ; ಜವನಂ ಜಕ್ಕುಲಿಪಂತೆ ಮಾರಿಗಿದಿರಂ ಪೋಪಂತೆ ಕಾಳಾಹಿಯೇಗುವು ದೆಂದೇಂ ಪಿಡಿವಂತೆ ಸಿಂಹಮನದಂ ಪೊಯ್ದೋಡುವಂತೀತನೇಗುವನೆಂ ದಿನ್ತೆನಲಂತೆ ಮೃತ್ಯುವಿನವೊಲೆಲ್ಲಿದೊರ್ಡಂ ಕೊಲ್ವನ್ (ಮುಂಬರಾ. X, ೨೪೩–೨೮ ; 1219) ; ಬಾಲವ ಬೆಳೆಸಿ ಮಾರುತಿ ವನವ ಮುಱಿದೀಡಾಡ ತೊಡಗಿದ ವನವದೇಗುವುದಸುರ ಸಂಗದಿ ಕೇಡು ಬಂದುದಲ (ಕೌಶಿರಾ. ೧೧–೧೫) ; ಕೋಲ ಕೊಂಬನೆ ಭೀಮ ಸಿಡಿಲುರಿ ನಾಲಗೆಗೆ ನೀರೇಗು [ಪಾಠಾಂ. ಜು]ವುದು ಮೇಲಾಳ ಮುಱಿದನು ವಿವಿಧ ಶಸ್ತ್ರಾಸ್ತ್ರ ಪ್ರಹಾರದಲಿ (ಕುವ್ಯಾಕ. ೧೦–೧೬). [?]

**ಏಗು**$_3$ (ಕ್ರಿ). ಬೇಯು ; ಸುಡು ; ದಹಿಸು : ಒಳಗುಡಿದ ನಾರಾಚದೇಱಿ ನಂದದಿ ಹೊಜಗ ಬಳಸದೊಳಗೊಳಗೇಗುವಾವುಗೆಯ ಶಿಖಿಯಂತೆ . . . ಸತಿಯಳಲು ಸೀಗೆಯೊಳಗಣ ಬಾಳೆಗೆಣೆಯಾದುದು (ಹಚಕಾ. ೧೨–೧೩) ; ಏಗುವುದೇ ಕುಮಾರಿಕೆಯನಪ್ಪಿದ ದರ್ಪಕವಹ್ನಿಯುಗ್ರದೀ ಬೇಗೆಯೊನಿತ್ತೆ ನಿತ್ತು ಶಿಶಿರಾಧಿಕಮಾದುಪಚಾರದೊಳ್ಪನಿಂಬಾಗಿರೆ ಮಾಟ್ಪವಿಂದನಿತು ತಾಪಮುದುರ್ವಿಸುತಿರ್ಪುದು (ಉದ್ಭಟ. ೭–೬೪).

[←ತೆಲು. ವೇಗು = ಹುರಿ, ವ್ಯಥೆಪಡು]

**ಏಗು**$_4$ 'ಏದು$_1$' ನೋ.

**ಏಗುಱು** (ನಾ). [ಕಾಮುಶಾ] (?) : ಪೊಱಮಡಲೊಂದು ಕಾಯ್ಪೆರಡು ಕೊಳ್ಕೆ ಮೊಗಂದೆಗೆಯಲ್ಕೆ ಮೂಱು ಮತ್ತಱ ಮುನಿಯಲ್ಕೆ ನಾಲ್ಕು ನುಡಿ ಗೇಳದವೋಲಿರಲಯ್ದು ಮರ್ಮಮಂ ಕುಱಿಪಿಡಿಲಾಱು ಬಚ್ಚಬಱಪಾಡಿ ನೋಳೇೞತಿನಿದ್ರೆಯೆಂಟುಯೇಗುಱು ನಿಲಲೊಂಬತದ್ರವರತಿತ್ವದೆ ಪತ್ತಿವು ಪೋದ ನಲ್ಮೆಗಳ್ (ಮನ್ಮವಿ. ೮–೧೩). [?]

**ಏಗೆಡು** (ಕ್ರಿ). ಏನು ಹಾಳಾಗು ; ಏನು ನಷ್ಟವಾಗು : ಎನಗರಸಿ ಯಾಣೆ ನಿನ್ನೊಡನೆನಗೇಗೆಟ್ಟಪುದಿದೆಂದು ಱೋಡಾಡಲ್ ಕೆಮ್ಮನೆ ನುಡಿ ದೊಡೆನ್ನ ಕಣ್ಗಂ ಮನಕ್ಕೆವಂದಿರ್ದ ನಿನ್ನೊಳೆನಗೆರಡುಂಟೇ (ಪಂಪಭಾ. ೮–೬೮) ; ಏಗೆಟ್ಟತ್ತೆಂದೇಳಿಸಿಯೊಂದಱೊಳಂ ಕೀೞಾದೊಡೆ ತನಗೆ ಪರದ ಸುಖಮದು ಕಿಡುಗುಂ (ಧರ್ಮಾಮೃ. ೫–೮೭) ; ಕೆಮ್ಮನೇಗೆಟ್ಟತ್ತೆಂಬ ವೊಲಟ್ಟಿ ಕೊಂದಪನಿವಂ ಮಾಯ್ದಂತಕಂ ಪಾತಕಂ (ಜೀವಸಂ. ೧೦–೧೩).

[ಏ$_2$ (< ಏನ್) + ಕೆಡು]

**ಏಗೆಯ್, ಏಗಯ್, ಏಗೆಯು, ಏಗೈಯು** (ಕ್ರಿ). ಏನನ್ನು ಮಾಡು; ಏನುಮಾಡು : ಕಾಣನೇಗೆಯ್ದುಂ ತನ್ನ ದೋಷಮುಂ ಕಾಣದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯಂ (ಕವಿರಾ. ೧–೪೫) ; ಸಹೋದರ ವಿಯೋ ಗೋದ್ವೇಗಮೇಗೆಯ್ಯದೋ (ಆದಿಪು. ೩–೫೨) ; ಏಗೆಯ್ದುತ್ತಿರ್ದಪ ನೆಂದು ಕುತೂಹಲಂಬೆರಸು ಮುನ್ನಿನೆಡೆಗೆ ಬಂದು ನೋಡಿ ಕಾಣದೆ ವ್ಯಗ್ರ ಮನನಾಗಿ (ಕಾದಂಪೂ. ೮೨೨) ; ಮುಳಿದಾಂಪರ್ಧರಣೀಶ್ವರರ್ಮಿಗೆ ಪೆಱರ್ಬಿಲ್ಗೊಂಡುಮೇಗೆಯ್ವರ್ (ಗದಾಯು. ೨–೧೨). **ಏಗಯ್** : ಈ ಗರುವೆಯ ನಿಡುಪುರ್ಬಿರಲೆನಗಿನ್ನದೇಗಯ್ಯಬಲ್ಲುದೆಂದೆನುತ ಬೇಗ ಬಿಸುಟನಂಗಜ ಕರ್ಪುರವಿಲ್ಲನು (ಕುರಾಸಾಂ. ೭–೩೯). **ಏಗೆಯು** : ಪರ ಮನಂ ಮತ್ತೆ ಪೂಜಿಸಬಾರನೋಹಿಲನೇಗೆಯುವೆವಿದಕೆ (ಬಸವು. ೪೩–೩೭). **ಏಗೈಯು** : ತಿರುತಿರುಗಿ ಬಾಯಾರಿ ಬಾ[ಬ]ಸವಳಿದು ಬೇವಸಂಬಡೆದು ಕಂಗೆಡುತೆ ಮುಂದೇಗೈಯಲೆಂದೆಣಿಸುತಿರಲು ಕಟ್ಟೆದಿರೊಳೇ ಮೆರೆವ ಹೂದೋಂಟವೊಂದನು ಕಂಡೆನು (ಕವಿಕಾ. ೪೬).

[ಏ$_2$ (< ಏನ್) + ಕೆಯ್$_1$]

**ಏಗೆಯು** 'ಏಗೆಯ್' ನೋ.

**ಏಗೈಯು** 'ಏಗೆಯ್' ನೋ.

**ಏಗೊಳ್, ಏಗೊಳು** (ಕ್ರಿ). ಅಂಗೀಕರಿಸು ; ಒಡಂಬಡು ; ಸಮ್ಮತಿಸು ; ಒಪ್ಪು : ನಂಟರೀತನ ನಣ್ಪಂ ಬಿಸುಡೆಂದೊಡಾ ನುಡಿಯನಾನೇಗೊಂಡೆನೇ (ಆದಿಪು. ೧೨–೩೭) ; ನಿಮ್ಮ ನಾಂ ಕಯ್ಯನೊಡ್ಡಿ ಬೇಡಿದೆ ನೆಂಬುದುಂ ಮುನೀಶ್ವರರೇಗೊಂಬುದುಂ ಯಶೋಭದ್ರೆಯುಂ ನಿಶ್ಚಿತಾಂತ ರಂಗೆಯಾಗಿ ಸಂತೋಸದಿಂ ನಿಜಾವಾಸಕ್ಕೆ ಪೋದಳ್ (ಸುಕುಮಾ. ೧೧–೩೮ ವ) ; ಸಳನೆಂಬಂ ಜಿನಮುನಿ ಹೊಯ್ ಸಳೆಯಿಂದಂ ಪುಲಿಯನೆಂದೊಡೆ[ೕ]ಗೊಂಡು ಮಹೀತಳವಾಪ್ಪನೆಗಂ ಪೊಯ್ ಪೊಯ್ಸಳಪೆಸರಂ ತಳೆದುದಿತ್ತ ಯಾದವ ವಂಶಂ (ಎಕ. III, ತಿರುಮ. ೧೦೬–೩ ; 1180 ; ಶಾಶಮು. ೯೩೪ ನೋ) ; ಈ ಮದುವೆಗಾನೇಗೊಂಡೊಡೇಮಾಕೊನೆಟ್ಟಗೆ ದುಷ್ಕರ್ಮಫಳಪ್ರಸೇವನೆಗಮಾನೇಗೊಂಡೆನೇನಾಗೆನೇ (ಪಾರ್ಶ್ವಪು. ೧೫–೪೬). **ಏಗೊಳು** : ಮೇಲೇಳ್ದನಿಲ್ಲ, ತನ್ನಂ ಜೊತೆಗೆ ಬನಕುಯ್ಯೆ ರಾಮನೇಗೊಳುವನ್ನೆಗಂ (ಶ್ರೀರಾಮಾ. ೩೦–೩೪೩).

[ಏ$_2$ (< ಏನ್) + ಕೊಳ್$_1$]

**ಏಗೊಳಿಸು** (ಕ್ರಿ). ಸಮ್ಮತಿಸುವಂತೆ ಮಾಡು; ಒಡಂಬಡಿಸು: ಕದಪಂ ಪೊ[ಯ್ವ]ನ್ದುದರ್ಕೇಗೊಳಿಸಿ ತಿವುಳನಂ (ಮೈಆರ್. ೧೯೨೯, ೬೫–೧೮ ; 1081). [ಏಗೊಳ್ + –ಇಸು$_3$]

**ಏಗೊಳು** 'ಏಗೊಳ್' ನೋ.

**ಏಗೋತ್ತರ** (ಗು). ಒಂದಕ್ಕಿಂತ ಹೆಚ್ಚಾದ: ಶ್ರೀ ಭಂಡಾರದ ಹನ್ನಿರ್ ಧಾನ್ಯಮುಂ ತಮ್ಮ ರಾಜ್ಯಮುಂ ಗೋಬ್ರಾಹ್ಮಣರಿಗಂ ಏಗಾದಿ ಏಗೋತ್ತರವಾಗಲು ಸಕವರ್ಷ ಸಾಸಿರದ . . . ಸೋಮವಾರದಲು ಸುಪ್ರತಿಷ್ಠಂ ಮಾಡಿದ ಕೊಟ್ಟಾರಂ (ಎಕ. V, ಬೇಲೂರು. ೨೦–೪ ; 1180).

[< ಸಂ. ಏಕೋತ್ತರ]

**ಏಚ** (ನಾ). ಒಬ್ಬಾತನ ಹೆಸರು : ಗೊಟ್ಟಿಗಡಿಯ ಭದ್ರಯ್ಯನ ಕಲ ಕನ್ನಯ್ಯ ಕಟ್ಟಿಸಿದ ಎಱದನೇಚ (ಎಕ. VIII, ಸೊರಬ. ೪೪–೧೨ ; 971). 'ಆಚ$_2$' ಪರಾ. [< ಸಂ. ಆದಿತ್ಯ]

**ಏಚಗವುಡ** 'ಏಚಗಾವುಂಡ' ನೋ.

**ಏಚಗಾವುಂಡ, ಏಚಗವುಡ** (ನಾ). ಒಬ್ಬಾತನ ಹೆಸರು: ನಿಡುವಾನಿಯ ತುಱುಗೊಳೊಳ್ ಬಿದಿರ್ಹಕದ ಏಚಗಾವುಣ್ಡನ ತಮ್ಮ ಕೆಞ್ಚ (ಎಕ. XV, ಹೊಳೆನ. ೧೨೯–೫ ; 970) ; ಶ್ರೀಮತ್ಪೆರ್ವ್ವಯ್ಯಲನ್ನಾಡ ಗಾವುಣ್ಡುಗಳ್ಕ್ಕಪ್ಪನ್ದ ಪೆರ್ಮ್ಮಡಿಗಾವುಣ್ಡಂ ಏಚಗಾವುಣ್ಡನ್ಕೊಂಗುಣಿ ಗಾವುಣ್ಡನ್ (ಎಕ. IV, ಹೆಗ್ಗಡ. ೧೦೪–೧೩ ; 1037). **ಏಚಗವುಡ** : ಏಚಗವುಡನ ಮಗ ಹಿರಿಯ ಬೊಂಮಯ (ಎಕ. XVI, ಚಿಕ್ಕನಾ. ೫೮–೨೦ ; 1260).

[ಏಚ + ಗಾವುಂಡ (< ಗಾಮುಂಡ)]

**ಏಚಬ್ಬೆ** (ನಾ). ಒಬ್ಬಾಕೆಯ ಹೆಸರು : ಕೀರ್ತಾರ್ಥಿಯೆನ್ದು ಕುಡುವಳೆ ದಾನಮನೇಚಬ್ಬೆಯತ್ತಿಮಬ್ಬರಸೆಯವೊಲ್ (ಎಕ. II, ೩೮೪–೪೪; 1135).

[ಏಚ + ಅಬ್ಬೆ$_1$]

**ಏಚಮ್ಮ** (ನಾ). ಒಬ್ಬಾತನ ಹೆಸರು : ಬೆಳ್ಪೊಡೆವೆಸಕ ಏಚಮ್ಮನೂ ಎರೆವಾಸನೂ ಗೋಸಹಸ್ರ ಕೊಟ್ಟೋನ್ (ಸೌಇಇ. XI–i, ೬–೪ ; ?).

[ಏಚ + ಅಮ್ಮ$_1$]

**ಏಚಯ್ಯ** (ನಾ). ಒಬ್ಬಾತನ ಹೆಸರು : ಸಂಧಿವಿಗ್ರ[ಹಿ] ಏಚಯ್ಯನುಂ (ಮೈಆರ್. ೧೯೩೨, ೧೧–೩ ; ಸು. 9ನೆಯ ಶತ) ; ಊರೊಡೆಯ ಮಾರಮಯ್ಯನ ಮಗ ಏಚಯ್ಯನಿಱಿದುಕೊಣ್ಡು ಪೆರ್ಗ್ಗಡೆ ಗುಣ್ಡಯ್ಯಂಗೆ ಕ್ಷಮೆ ಗೊಟ್ಟಸ್ತ್ತಿತಿಯೆನ್ತೆನ್ದೊಡೆ (ಎಕ. XI, ಹಿರಿಯೂ. ೧–೨೩ ; 975).

[ಏಚ + ಅಯ್ಯ$_1$]

**ಏಚಿಕಬ್ಬೆ** (ನಾ). ಒಬ್ಬಾಕೆಯ ಹೆಸರು : ನೆಗಳ್ದಳೇಚಿಕಬ್ಬೆ ಭೂಮಣ್ಡಳದೊಳ್ (ತೆಕ. XVI, ಚಿಕ್ಕನಾ. ೬೫–೩೦ ; ?). [ಏಚಿಕ$_0$ + ಅಬ್ಬೆ$_1$]

**ಏಚುಪೇಚು** (ನಾ). ಮುಚ್ಚುಮರೆ : ನಮ್ಮ ನಾಯಕನ ಸತಿಯು ಎಷ್ಟೂ ಏಚುಪೇಚರಿಯದವಳು. ಯಾರಾದರೂ ಅತ್ತುಕರೆದು ಏನಾದರೂ ಹೇಳಿದರೆ ಎಲ್ಲಾ ಮರೆಯುವವಳು (ಕಾಳರಾ. ೮೦). [ಏಚು$_0$ + ಪೇಚು$_2$]

**ಏಟವಿಟ, ಏಟವೀಟ** (ನಾ). ದಾಸನಾದ ವಿಟ; ಅಲ್ಪನಾದ ವಿಟ : ನಾಣಿಲಿ ನಿಟ್ಟುರಂ ಸಿತಗನೇಟವಿಟಂ [ಪಾಠಾಂ. ನಾಟವಿಟಂ] ತುದಿಗೋಡ ಪಾಜಿ ನಿನ್ನಾಣೆ ಗಡ (ಲೀಲಾವ. ೨–೧೨೩). **ಏಟವೀಟ** : ಕಲಿಕಾಲ ಕರ್ಣನ ವಿನೋದದ ಚಾಗದ ಬೀರದಾಪ್ಪರ್ನೀಗಡಿನ ನಿಕೃಷ್ಟ ನಿರ್ಗ್ಗುಣ ನಿಕೃತ್ಯ ನಿರಾಚರಣೇಟವೀಟರಂ ಕಡು ಜಡರೆಂತು ಪೋಲಿಪರೆ ಧನ್ಯನೆನಿಪ್ಪ ವಚೋಗ್ರಗಣ್ಯನಂ (ಎಕ. IV, ಹೆಗ್ಗಡ. ೧೮–೬ ; 1067). 'ಆಟವಿಟ' ಪರಾ. [ಏಟ$_0$ (< ಸಂ. ಚೇಟ) + ವಿಟ]

**ಏಟವಿಟಂಬರ್** (ಕ್ರಿ). ದಾಸವಿಟನಾಗು ; ಸೇವಕವಿಟನಾಗು : ಅಮೃತದ ಕಂಡಸಕ್ಕರೆಯ ಕೂಟಮುಮೊಲ್ವಳ ಕೂಟಮುಂ ಸಮಾನಮೆ ವಲಮೊಲ್ಲದಳ್ಗೆ ವಿಟನೇಟವಿಟಂಬರೆ ಕೂಟಮಿಂಪನೀಗುಮೆ (ಕಾವ್ಯಾವ. ೧೪೪). [ಏಟವಿಟ + ಬರ್]

**ಏಟವೀಟ** 'ಏಟವಿಟ' ನೋ.

**ಏಟು$_1$, ಎಟ್ಟು$_2$** (ನಾ). ೧. ಹೊಡೆತ ; ಪೆಟ್ಟು : ಒಬ್ಬರಿಗೊಬ್ಬರು ಚಿತ್ತರಮಾಗಿ ಬೀಸುತ್ತ ಮೊನೆಗಳಂ ತೋರುತ್ತ ಯೇಟುಗಳಂ ತಪ್ಪಿಸಿಕೊಳ್ಳುತ್ತ ವೃತ್ರಾಸುರನು ದೇವೇಂದ್ರನು ಕಾಳಗವಂ ಮಾಡುವಂತೆ ಕಾಣುತ್ತ (ಸೌಗಂಧಿ. ೩೫೨–೧೯) ; ಖುರಪುಟಗಳೇಟಿಂದಲೇಳುತಲಿರುವ ರಜವನು (ಶ್ರೀರಾಜ. ೫೦ ಪೀಠಿಕೆ) ; ಶತ್ರುಗಳು ದುರ್ಗದವರ ಏಟನ್ನು ತಡೆಯಲಾರದೆ ದಿಕ್ಕುಮುರಿದು ಓಡಿದರು (ಚಿತ್ರಪಾ. ೫೩); ಈ ಮಾತುಗಳು ರಾಧಕ್ಕನನ್ನು ಚಾಟಿಯ ಏಟನಂತೆ ಬಲವಾಗಿ ನೋಯಿಸಿದವು (ಅಬೋಲೀ. ೬೫). ೨. (ಕರಾ) ಪಗಡೆಯ ಆಟದಲ್ಲಿ ಒಂದು ಬಗೆ: "ಒಂದು ಜೂಜಾಟ" (ರಮಾಕಾಂ. ೧೧೮). **ಎಟ್ಟು$_2$** : (+).

ಏಟುತಿನ್ನು = ಸೋಲು : 'ಏನಾದರೂ ಆಗಲಿ' ಪರೀಕ್ಷೆಯಲ್ಲಿ ಏಟು ತಿನ್ನುವುದು ಬೇಡ ! (ಕಮನೆ. ೩೨). ಏಟುಹಾಕು = ಹೊಂಚುಹಾಕು (?) : ಅಲ್ಪಸ್ವಲ್ಪ ಭೂಮಿಕಾಣಿಗಳನ್ನು ಅತಿಸುಲಭವಾಗಿ ದಕ್ಕಿಸಿಕೊಳ್ಳಬಹುದೆಂದು ಏಟುಹಾಕಿದ – ಅಣ್ಣ ವರದರಾಜಾರಾಯ (ಕತ್ತಬೆ. ೩೬).

[ದೇ. ‖ ತಮಿ. ಮಲ. ಎಜ್ಞು ; ತೆಲು. ಏಟು]

**ಏಟು$_2$** 'ಎಷ್ಟು' ನೋ.

**ಏಟುಗಾರ** (ನಾ). ಚೆನ್ನಾಗಿ ಹೊಡೆಯುವವನು ; ಗುರಿಕಾರ. [ಏಟು$_1$ + -ಗಾರ (< -ಕಾಱ)]

**ಏಟುಪಟ್ಟು** (ನಾ). "ಜೂಜಾಟ" (ರಮಾಕಾಂ. ೧೧೮). [ಏಟು$_1$+ಪಟ್ಟು$_1$]

**ಏಟುಪಾವಡೆ** 'ಏಟುಪಾವುಡೆ' ನೋ.

**ಏಟುಪಾವುಡೆ, ಏಟುಪಾವಡೆ** (ನಾ). ಒಂದು ಬಿರುದು ; ಒಂದು ರಾಜಚಿಹ್ನೆ. ರಾಜಾಸ್ಥಾನದಲ್ಲಿ ಗಿರ್ರನೆ ತಿರುಗಿಸುವ ಬಣ್ಣದ ವಸ್ತ್ರ : ತಮ್ಮ ಭುಜಪರಾಕ್ರಮದಿಂದ ಸಂಪಾದಿಸಿದ ಹನುಮಧ್ವಜ, ಗರುಡಧ್ವಜ, ಮಕರಟೆಕ್ಕೆ, ಸತ್ತಿಗೆ, ಸೂರೆಪಾನ, ಚೌರಿ, ಏಟುಪಾವುಡೆ ಮುಂತಾದ ಬಿರುದುಗಳಿಂದಲೂ. . . ವಾದ್ಯಗಳ ಧ್ವನಿಗಳಿಂದಲೂ ಆಸ್ಥಾನವು ಕಣ್ಗೊಳಿಸುತ್ತಿರಲು (ಮಹಾವಂ. I, ೩೪); ಹಾವುಗೆ ಏಟುಪಾವುಡೆ ಇವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಹಿಡಿದುಕೊಂಡಿರುವ ಚೇಟಿಕಾಸ್ತ್ರೀಯರು (ಮಹಾವಂ. I, ೩೫). **ಏಟುಪಾವಡೆ** : ಛತ್ರಚಾಮರ ಸೀಗುರಿ ಏಟುಪಾವಡೆ ಹಗಲ್ದೀವಟಿಗೆ ಮುಂತಾದ ರಾಜಚಿಹ್ನಗಳು (ಭಿರುಗಂ. ೨೬–೧೦). [ಏಟು$_0$ + ಪಾವುಡೆ$_2$]

**ಏಡ** (ನಾ). ೧. ಕಿವುಡ ; ಬಧಿರ : "ಬಧಿರನೇಡಂ ಕಿವುಡನೆನಿಸಿಕ್ಕು" (ಮಂಗರಾ. ೧೧೪–೫) ; ಕವಿತಾರಹಸ್ಯಮಂ ಸತ್ಕವಿಯಱಿಗುಮನೇಕ ಮೂಕನೇಡಂ ಜಡನೆಂಬವನಱಿಗುಮೆ (ಆದಿಪು. ೧–೨೦). ೨. ಒಂದು ಜಾತಿಯ ಕುರಿ ; ಕಾಡುಕುರಿ : ನೋಡು ಬೇಱಿವನಿತ್ತಲಿವೆ ಹರಿಕ್ರೋಡ ಖಡ್ಗಿ ಕುರಂಗಿ ಚಿತ್ರಕನೇಡ ಕಡವಮ್ಮಾವು ಸೈರಿಭ ಶರಭ ಸಾರಂಗ (ತೊರರಾ. ೩–೧–೩೦). ೩. ಕಿವುಡು ಹಸು (?) : ಏಡಂ ಪೊಕ್ಕೊಡೆ ಚಿತ್ರವೃಷ್ಟಿ ಕುರುಡಂ ಮುಂ ಪೊಕ್ಕೊಡರ್ಘ್ಯಕ್ಷಯಂ (ಜಟ್ಟಮ. ೪–೬). [ಸಂ.]

**ಏಡಕ** (ನಾ). ಒಂದು ಜಾತಿಯ ಕುರಿ : ಜಂಗಮ ಏಡಕನನೇಱಿ ಬರುತಿರೆ ಯುರಸ ಪಿಂಗದೇ ಗೂಳಿಯಂ ಮಾಡೆನಲು ಮಾಡಿದಂ (ಪ್ರಭುಪು. ೬–೬೧). [ಸಂ.]

**ಏಡಕೆ** (ನಾ). ಹೆಣ್ಣುಕುರಿ : "ಏಡಕ – ಏಡಕೆ" (ಹೊಸುಗ. ೧೦). [ಸಂ. ಏಡಕಾ]

**ಏಡಮೂಕ** (ನಾ). ೧. ಕಿವುಡ ಮತ್ತು ಮೂಕ. ೨. ಮೂರ್ಖ ; ವಕ್ರ. ೩. ಕುರುಡ. [ಏಡ + ಮೂಕ]

**ಏಡಿ$_1$** (ನಾ). ಒಂದು ಜಲಚರ ಪ್ರಾಣಿ; ಎಸಡು; ನಳ್ಳಿ : ಏಡಿ [ಪಾಠಾಂ. ಎಸಡಿ] ಬರ್ದುಂಕಿದೆನೆಂದು ಮುಂದೆ ನಿಲೆ (ಪಂಚತಂ. ೮೫–೨) ; ಏಡಿ ಒಂದು ಅಜನ ತಲೆಯ ಏಡಿಸಾಡಿ ತಿಂದು ತೇಗಿ ಓಡಿನಲ್ಲಿ ನೀರಕುಡಿದು ಒಲೆಯ ಸೇರಲು (ಅವಚಂ. ೨೯೯–೧೩೧೪) ; ಏಡಿ ಮೊಸಳೆಯು ನೆಗಳು (ಸಂಧಪ. ೬–೨೫); ನಿನ್ನನ್ನು ನನ್ನ ಸಮೀಪದಲ್ಲಿರಿಸಿಕೊಂಡರೆ. . . ಏಡಿ ಗರ್ಭವಂ ಧರಿಸುವ ಹಾಗೂ ಹಾನಿಬರುವುದು (ಕೃವಾವಿ. ೬೬) ; ಹಾಡಿಗೆ ಹಾಡಿಲ್ಲ ಏಡಿಗೆ ತಲೆಯಿಲ್ಲ ಮೋಡ ಬಂದಲ್ಲಿ ಬಿಸಿಲಿಲ್ಲ (ಜನಗೀ. ೪೧). 'ಎಸಡಿ' ಪರಾ.

[ದೇ. ‖ ತೆಲು. ಎಂಡ್ರಿ, ಎಂಡ್ರಿಕ ; ಕೋಲಾ. ನಾಯ್ಕಿ. ಎಂಡೆ ; ಪರ್ಜಿ. ಇರ್ದ ; ಗೊಂಡಿ. ಏಟೀ]

**ಏಡಿ$_2$** (ನಾ). ಕಿವುಡು ಹಸು (?) : ಏಡಿಯೊಳಲ್ಪವೃಷ್ಟಿ ಕರಿಯಾವಿನೊಳೊಳ್ಪೆಱಿ (ಜಟ್ಟಮ. ೪–೮). [< ಏಡ ?]

**ಏಡಿಕಾಯಿ** (ನಾ). = ಏಡಿ$_1$ : "ಕುಳೀರಃ, ಕರ್ಕಟಃ – ಈ ೨ ಏಡೀ ಪೆಸರುಗಳು ಅಂದರೆ ನೀರುಬೊಕ್ಕೆಗಳಲ್ಲಿರುವ ಏಡೀ[ಡಿ]ಕಾಯಿ, ನಳ್ಳಿಗಳು" (ಸಿದ್ಧಾಂತಿ. ೬೪). [ಏಡಿ$_1$ + ಕಾಯಿ$_4$ (< ಕಾಯ್$_4$). / ತೆಲು. ಎಂಡ್ರಕಾಯ]

**ಏಡಿಸಾಡು** (ಕ್ರಿ). ಅವಹೇಳನ ಮಾಡು ; ನಿಂದಿಸಿ ಮಾತನಾಡು ; "ಸತಾಯಿಸು" (ಶಿವಗೀ. ಕೋಶ) : ಏಡಿ ಒಂದು ಅಜನ ತಲೆಯ ಏಡಿಸಾಡಿ ತಿಂದು ತೇಗಿ ಓಡಿನಲ್ಲಿ ನೀರಕುಡಿದು ಒಲೆಯ ಸೇರಲು ಹಾಡಿ ಹೊಗಳಿ ಹರಸಿಕೊಂಡು ಮಾಡಲೊಬ್ಬ ಮಡಕೆಗಳನು ನೋಡನೋಡನೊಬ್ಬ ಗಾಡಿಕಾಱನು (ಅವಚಂ. ೨೯೯–೧೩೧೪). [ಏಡಿಸು + ಆಡು$_1$]

**ಏಡಿಸು, ಎಡ್ಡಿಸು** (ಕ್ರಿ). ಅವಹೇಳನ ಮಾಡು ; ನಿಂದಿಸು ; ಹೀಯಾಳಿಸು : ಮುಂದೆ ಬಂದೇಡಿಸುವಂತಿರಾಡಿದುದದೊಂದು ಮರುಳ್ ಫಣಿರಾಜಕೇತುವಂ (ಪಂಪಭಾ. ೧೩–೫೪) ; ಮುಸುಮೊಗಮಾಯ್ತು ಮೊಗಂ ಕಾಲ ಸುತ್ತುಗಂ ಪೋಯ್ತು ಪಲ್ಗಳಿಳ್ಪಾಡಿದುವೇಡಿಸುವಂತಿರ್ದಪಿರಿನ್ನುಂ ಬಿಸುಡಿರೆ ನೀವಜ್ಞ ನಿಮ್ಮ ನಿರ್ಲಜ್ಜಿಕೆಯಂ (ಅಜಿಪು. ೨–೧೦೦) ; ಮುನಿವನಿತೆಯರೊಳ್ ಕೂಡಿದನೆಂಬೀ ನುಡಿಯದನೇಡಿಪುದೆಲೆ ವಿನಯನಂದಿದೇವರ ಚರಿತಂ (ಎಕ. IV, ನಾಗಮಂ. ೧೯–೧೧ ; 1118) ; ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ (ಬಸವ. ೨೩೪) ; ಬೇಡಿದ್ವೈದೂರುಗಳ ಕೊಡುಯೆನಲೇಡಿಸಿದಲ್ತೆ (ಕುವ್ಯಾಗ. ೫–೧೬) ; ಬಂಜೆಯೆನುತೇಡಿಪಂತಿರೆನ್ನಿದಿರೊಳ್ ಪಿಳ್ಳೆಯಂ ಮುದ್ದುಗೆಯ್ಯುಂ (ರಾಮಾಶ್ವ. ೧೮–೫). **ಎಡ್ಡಿಸು** : "ನಿಂದಿಸು, ಗೇಲಿಮಾಡು" (ಜಾನಕೋ. ೨೪). 'ಏಳಿಸು' ಪರಾ.

ಎಡ್ಡೆಡ್ಡಿಸು (ದ್ವಿರುಕ್ತಿ): ಸುಂದರಕ್ಕ ಆಗಾಗ ನನ್ನನ್ನು ಬಹಳ ಕೆಣಕಬೇಕು. ನನ್ನ ಹೊಟ್ಟೆಯೊಳಗಿನಿಂದ ಏನೋ ಕಿಳಿದುಕೊಳ್ಳಬೇಕೆಂದು ಎಡ್ಡೆಡ್ಡಿಸಿ ಮಾತನಾಡಬೇಕು (ವೈಸಿ. ೩೯೩). [? + –ಇಸು₁]

**ಏಡಿಹುಣ್ಣು** (ನಾ). ದುರ್ಮಾಂಸ ಬೆಳೆದುಕೊಳ್ಳುವ ಒಂದು ಬಗೆಯ ವ್ರಣ, —ರೋಗ; ಅರ್ಬುದ; ಕ್ಯಾನ್ಸರ್ ರೋಗ: ತಾನಿರುವ ದೇಹಭಾಗವನ್ನು ತಿಂದು ಹಾಕಿ, ಮಿತಿಯಿಲ್ಲದೆ ಹರಡುತ್ತ, ತೆಗೆದುಹಾಕಿದಲ್ಲಿ ಮತ್ತೆ ಮತ್ತೆ ಬೆಳೆಯುತ್ತ ಹೋಗುವ, ಕೆಟ್ಟಕುರು; ಏಡಿಹುಣ್ಣು; ಅರ್ಬುದ ರೋಗ (Cancer. ಇಂಕನಿ). [ಏಡಿ ? + ಹುಣ್ಣು (< ಪುಣ್)]

**ಏಡು₁** (ನಾ). ಸಮಯ; ಕಾಲ(ಕ). 'ಇಯಾಂಡು', 'ಮೊನೆಯೇಡು' ಪರಾ. [?. / ತಮಿ. ಆಣ್ಡು = ವರುಷ; ತೆಲು. ಏಡು = ವರುಷ]

**ಏಡು₂** (ನಾ). ೧. ಕೊಳೆ; ಕಲ್ಮಷ; ಹೊಕ್ಕಳಿಕೆ(?): ಕಡುಬಿಸಿಲೊಳ್ ಕಱಂಗಿ ಬೆಮರುಣ್ಚಿ ಸಮಂತು ಜಿಗಿಲ್ತು ಮೆಯ್ಯೊಳಾವೆಡೆಯೊಳ ಮೇಡು ಕೂಡೆ ಕೊರಟಾದುರಿಗೇಶದೊಳಿರ್ದ ಪೇನ್ಗಳಂದದರ್ದಿಱಿದೋಡೆ (ನೇಮಿಪು. ೩–೧೧೨). ೨. "ಗುರುತು, ಮಚ್ಚೆ" (ಜಾತತಿ. ಪರಿ. ೩): ಆ ಲಗ್ನಮನೆನಿತು ಗ್ರಹಮಾಲೋಕಿಪುವನಿತೆ ಮೆಯ್ಯೊಳೇ [ಪಾಠಾಂ. ಳೆರ] ಡಕ್ಕುಂ ದ್ಯೂನಾಲಯಗತಮೆನಿತು ಗ್ರಹಮಾ ಲೆಕ್ಕದಲೇ[ಪಾಠಾಂ. ಲೆರ]ಡು ಬೆನ್ನಲಾ ಪಶುಗಕ್ಕುಂ (ಜಾತತಿ. ೫–೫). [?. / ತಮಿ. ಏಡು = ದೋಷ]

**ಏಡೂಕ** (ನಾ). ಎಲುವುಗಳನ್ನಿಟ್ಟು ನಿರ್ಮಿಸಿದ ಗೋಡೆ: "ಏಡೂಕಂ – ಘಟ್ಟಿಯಾಗಿರುವುದಕ್ಕೂ ಕನ್ನಾಕೊರೆಯುವುದಕ್ಕೆ ಅಸಾಧ್ಯವಾಗಿಯೂ ಇರುವಂತೆ ಗೋಡೆಯೊಳಗಿಡಲ್ಪಟ್ಟ ಎಲುವಿನ ಗೋಡೆ" (ಸಿದ್ಧಾಂತಿ. ೮೮). [ಸಂ.]

**ಏಣ್**, ಏಣು (ನಾ). ಅಂಚು; ತುದಿ; ಮೊನೆ: ಏಣುಂಟು (ಶಮದ. ೬೯ ಪ್ರಯೋ). **ಏಣು**: ದಿಕ್ಕುಗಳೇಣು ಮುಱಿಯಲು ಹೊಕ್ಕೆಸುವ ಬಿಲುಜಾಣರುರವಣೆ ಲಜ್ಜಿಸಿತು ಲೋಕದ ಧನುರ್ಧರರ (ಕುವ್ಯಾಭೀ. ೪–೧೬); ವಜ್ರವನ್ನು ವಜ್ರದಿಂದಲೇ ತಿಕ್ಕಿ ನುಣುಪುಮಾಡುವರು ಅಥವಾ ಅದಕ್ಕೆ ಏಣುಗಳನ್ನು ಮಾಡುವರು (ಮುಂಬಯಿ. ೬–೪೪). [ದೇ. ॥ ತಮಿ. ಏಣ್, ಏಣೆ; ಮಲ. ಏಣು]

**ಏಣ** (ನಾ). ಗಂಡು ಜಿಂಕೆ; ಎರಳೆ; ಹುಲ್ಲೆ: "ಹರಿಣಂ ಕುರಂಗಂ ಮೃಗಮೇಣಮೆನೆ ಹುಲ್ಲೆಯಕ್ಕುಂ" (ಮಂಗರಾ. ೪೮–೧೦); ನೋಡ ಆ ಏಣಮಂ, ಹಿಡಿಯ ಬಾ (ಶ್ರೀರಾಮಾ. ೨೩೩–೧೩೫). [ಸಂ.]

**ಏಣಗೋಣ** 'ಎಣಗೋಣ' ನೋ.

**ಏಣಗೋಣತನ** (ನಾ). ಕೊಂಕುಮಾತು; ಗರ್ವದ ಮಾತು: ಸುಚರಿತ್ರದೊಂದೆಸಕಮಂ ಪುಣ್ಯಾಂಗನಾನೀಕದೊಳ್ಕೆಲಗೊಂಡಾಡುತ ವೇಣಗೋಣತನದಿಂ ಮಾತಾಡುತುಂ ರಾಗದಿಂ ಸುಱಿವುತ್ತಿಪ್ಪವರಂತಿ ರಾರ್ಹತರದೇನೇಗೆಯ್ದೊಡಂ ಬಲ್ಲರೆ (ಸಮುಪ. ೬–೩೯). [ಏಣಗೋಣ (< ಎಣಗೋಣ) + –ತನ]

**ಏಣಧರ** (ನಾ). ಜಿಂಕೆಯನ್ನು ಧರಿಸಿದವನು; ಚಂದ್ರ. [ಸಂ.]

**ಏಣಧರಧರ** (ನಾ). ಚಂದ್ರನನ್ನು ಧರಿಸಿದವನು; ಶಿವ: ಏಣಧರಧರ ಸೇವೆಯಧಿಕ (ವೀಶೈಪು. ೪–೧೫–೭). [ಸಂ.]

**ಏಣಧರಮೌಳಿ** (ನಾ). ತಲೆಯಲ್ಲಿ ಚಂದ್ರನನ್ನು ಧರಿಸಿದವನು; ಶಿವ: ಏಣಧರಮೌಳಿ ನಿಮ್ಮಡಿರೇಣುವನಾಂ ಸಿರದೊಳಾಂತುಕೊಂಡಿಹಸುಖಮಂ ಮಾಣದೆ ಕೊಡು (ಶಂಕಕಂ. ೩೩). [ಏಣಧರ + ಮೌಳಿ₂ (= ಮೌಲಿ)]

**ಏಣನಯನೆ** (ನಾ). ಜಿಂಕೆಯ ಕಣ್ಣಿನಂತಿರುವ ಕಣ್ಣುಗಳನ್ನು ಉಳ್ಳವಳು: ಮಾಣದಾಳ್ದು ಮೂಡಿ ನಿನ್ನ ಏಣನಯನೆ ಕಮಲವದನೆ ಕಾಣೆನೆಂತೆ ನುತ್ತೆ (ಜನವ. ೧೨–೧೨). [ಸಂ. ಏಣನಯನಾ (ಏಣ + ನಯನ + –)]

**ಏಣನಿಭಾಯತೇಕ್ಷಣೆ** (ನಾ). ಜಿಂಕೆಯ ಕಣ್ಣಿನಂತೆ ಅಗಲವಾದ ಕಣ್ಣುಗಳನ್ನುಳ್ಳವಳು: ಏಣನಿಭಾಯತೇಕ್ಷಣೆ ಕೇಳು ಪಾರ್ವತಿ ಬಾಣ ಪಂಚಕನ ಕುಸ್ತರಿಸಿ (ಮೋಹತ. ೬–೩೦). [ಸಂ. ಏಣನಿಭಾಯತೇಕ್ಷಣಾ (ಏಣನಿಭ + ಆಯತ + ಈಕ್ಷಣ + –)]

**ಏಣಲಾಂಛನ** (ನಾ). ಜಿಂಕೆಯನ್ನು ಗುರುತಾಗಿ ಉಳ್ಳವನು; ಚಂದ್ರ. 'ಏಣಲಾಂಛನಲಾಂಛನ' ಪರಾ. [ಏಣ + ಲಾಂಛನ]

**ಏಣಲಾಂಛನಲಾಂಛನ** (ನಾ). ಚಂದ್ರನನ್ನು ಧರಿಸಿರುವವನು; ಶಿವ: ಪ್ರಾಣದಾನವನೀಯಲಳವೇ ಕ್ಷೋಣಿಯೊಳಗಿಂತಾರಿಗಾದೊಡೆ ಏಣಲಾಂಛನಲಾಂಛನಂಗಂ ತಾನಿದರಿದೆನಲು (ಬಸವು. ೩೨–೪೮). [ಏಣಲಾಂಛನ + ಲಾಂಛನ]

**ಏಣವಳಿಕೆ** 'ಎಣವಳಿಕೆ' ನೋ.

**ಏಣವಾಹನ** (ನಾ). ಜಿಂಕೆಯನ್ನು ವಾಹನವಾಗಿ ಉಳ್ಳವನು; ವಾಯು: ಎಮ್ಮರೆಸಂ ಕಂಸದೇವಂ . . . ಈ ಬಾಣದಿಂದೇಣವಾಹನನ ನೀ ಪರೆಕುವಿಂ ಗಿರಿಶಬಂಧುವನೀ ಶೂಲದಿಂ ನೀಲಲೋಹಿತನಂ ಗೆಲ್ದಂ (ಜಗವಿ. ೬–೨೮ ವ); ರಣದೊಳ್ ನಿಂದಿರ್ಪವನೇಣವಾಹನಂ ಪವಮಾನಂ (೧೧ಕ. ೬–೬೨). [ಏಣ + ವಾಹನ]

**ಏಣಾಂಕ** (ನಾ). ಜಿಂಕೆಯನ್ನು ಗುರುತಾಗಿ ಉಳ್ಳವನು; ಚಂದ್ರ: ಏಣಾಂಕ ಗಗನದೊಳಿರ್ದು ತಾ ಪುಟ್ಟಿದ ತಾಣವ ನೋಡುವಂದದಲಿ ಕೇಣವಿಲ್ಲದೆ ಕಡಲೀಳಿವಂತೆ ಮತಿ ಪಂಚಬಾಣ ನೀರೊಟ್ಟಿಲೊಳ್ ಬಿದ್ದ (ಮೋಹತ. ೧೧–೨೮). [ಏಣ + ಅಂಕ₁]

**ಏಣಾಂಕಜೂಟ** (ನಾ). ಚಂದ್ರನನ್ನು ಜಟೆಯಲ್ಲಿ ಧರಿಸಿದವನು; ಶಿವ: ಜಗತ್ಪ್ರಾಣಾಪ್ತನಯನ ಕನದೇಣಾಂಕಜೂಟ . . . ವರಮುನಿ ಹೃದಯಶೋಣ ಜಲಜಾರ್ಕ ಕಲ್ಯಾಣ ನಿರ್ವಾಣಪ್ರದ (ಉದ್ಭದೇ. ೫–೩೧). [ಏಣಾಂಕ + ಜೂಟ]

**ಏಣಾಂಕಧರ** (ನಾ). ಚಂದ್ರನನ್ನು ಧರಿಸಿದವನು; ಶಿವ: ಈ ನುಡಿಗೆ ಏಣಾಂಕಧರ ಮುಚ್ಚಿ ಕರವಿತ್ತು ಧ್ಯಾನಿಸದೆ ಮತ್ತೆ ಬೇಡೆನೆ (ಪ್ರೌಢರಾ. ೨–೪೩). [ಸಂ.]

**ಏಣಾಂಕಾಂಕ** (ನಾ). = ಏಣಾಂಕಧರ: ಹೂಣಿಸಿ ಪೆಣ್ಣುಸುರಿದೊಡದ ನಾಲಿಪುದೇಣಾಂಕಾಂಕನವರ್ಗಿಸ್ಸೀ ಸುಡು ನಾಣಿಲಿತನವಿದೆನುತೆ ಮಾನ ನಿಧಾನಂ ಮನದನ್ನೆಯೊಳು ಮಾಣದೆ ಮಾಜುತ್ತರವಿತ್ತಂ (ಉದ್ಭದೇ. ೩–೭೨). [ಏಣಾಂಕ + ಅಂಕ₂]

**ಏಣಾಂಚಿತಧರ** (ನಾ). = ಏಣಾಂಕಧರ: ಏಣಾಂಚಿತಧರ ಜನತೂಣಾ ಶರಣಜನಪ್ರಾಣಾ (ಉದ್ಭದೇ. ೪–೩). [ಸಂ.]

**ಏಣಾಕ್ಷಿ** (ನಾ). ಜಿಂಕೆಯ ಕಣ್ಣಿನಂತಿರುವ ಕಣ್ಣುಗಳನ್ನುಳ್ಳವಳು: ಪೊರ್ದಿದೊಡೇಣಾಕ್ಷಿಯರಂ ಸರಾಗಮಾಗದುದುಂಟೇ (ಪುಷ್ಪಪು. ೭–೨೮). [ಸಂ. ಏಣಾಕ್ಷೀ (ಏಣ + ಅಕ್ಷಿ + –)]

**ಏಣಿ₁** (ನಾ). ೧. ನಿಚ್ಚಣಿಕೆ: "ಅಧಿರೋಹಿಣೀ ನಿಶ್ರೇಣಿಯೆನಲೇಣಿಯಕ್ಕುಂ" (ಮಂಗರಾ. ೫೯–೧೨); ಕಡಲ ಗುಣ್ಪನಾರಯ್ಯಲುಂ ದಿವಕ್ಕಡರಲೇಣಿಯುಂ ಸಮೆಯಲುಂ ವಲಂ ಬಾಱಿಸಿಯೆಂಬವೊಲ್ ಬೆಳೆದು ನಿಂದ ಪರ್ವಿದಿರ ಸುರ್ವ ಗುರ್ವೆಲ್ಲಿಯುಂ (ಕಾವ್ಯಾವ. ೧೯೩); ಶಿಷ್ಯರಿಬ್ಬರು ಬಂದು ಮಧ್ಯರಾತ್ರಿಯೊಳಂದು ಅಸ್ಥಮರದಿಂ ಮಾಡಿದೊಂದೇಣಿಯಂ ತಂದು (ವಾಗೀರ. ದೇ. ೨೫೮–೨); ಜಾಣನಲ್ಲಾ ಪರಮತತ್ವದೊಳೇಣಿಯಲ್ಲಾ ಮುಕ್ತಿಗೇಱುವ ನಿಮ್ಮ ಬಸವಣ್ಣ (ಬಸವು. ೩೭–೪೯); ಹಿಂದು ಹಿಂದಿನಲೇಣಿಯ ಮೇಲೇಱಿ ಮುಂಕೊಂಡುಱುಬುವ ರಿಪುಬಲವ ಖಂಡಿಸಿ (ಕಂಸವಿ. ೧೪–೬೦); ಬೆಂಕಿಯನ್ನುಕೊಂಡೊಯ್ದು ಏಣಿಯ ಮೂಲಕ ಕೆಳಕ್ಕಿಳಿದಳು(ದೇವೀಚೌ.೩೭).

೨. ಎಲೆಕೊಯ್ಯುವಾಗ ಉಪಯೋಗಿಸುವ ಏಣಿಯ ಮೇಲೆ ಹಾಕುವ ತೆರಿಗೆ: ಉಗುರಮೂನೂರ್ವರುವಿದ್ದರ್ ಏಣಿಯುಲೊನ್ದು ಪಣಮುಂ ಬಿಟ್ಟರು (ಸೌಇಇ. XI–ii, ೧೫೨–೪೦ ; 1103) ; ಏಣಿಯುಲು ಅಡ್ಡವನಾಚಂದ್ರಾರ್ಕ್ಕತಾರಂಬರಂ ಬಿಟ್ಟರು (ಸೌಇಇ. XI–ii, ೧೬೨–೪೪; 1121) ; ಸಮಸ್ತ ಕೊಯ್ಲಾಳಿಗಳೆಲ್ಲರು ಮೆತ್ತಕಾಜರು ದೇವರ್ಗ್ಗೆ ನನ್ದಾದೀವಿಗೆಗೆ ಬಿಟ್ಟ ಧರ್ಮ್ಮ ಏಣಿಗೆ ಹಾಗ (ಸೌಇಇ. IX–i, ೧೪೧–೩೫ ; 1136). [ದೇ. ‖ ತಮಿ. ಮಲ. ತುಳು. ಏಣಿ. / ಸಂ. ಶ್ರೇಣಿ]

**ಏಣಿ$_2$** (ನಾ). ಹೆಣ್ಣು ಜಿಂಕೆ; ಹರಿಣಿ : ಮಾಣದೆ ನೀನದನಂದು ತದೇಣೀಲೋಚನೆಯೊಳೊಂದು ದಿನದೊಳ್ ವನದೊಳ್ ನಾಣಂ ಬಿಟ್ಟು ಕರಂ ಕಣ್ಗಾಣದೆ ನೀಂ ಕ್ರೀಡಿಸುತ್ತುಮಿರಲ್ (ನೇಮಿಪು. ೩–೫೩).
[ಸಂ. ಏಣೀ]

**ಏಣಿತುರುಬು** (ನಾ). ಹೆಂಗಸರು ಕೂದಲನ್ನು ಗಂಟುಕಟ್ಟುವ ಒಂದು ರೀತಿ : ಓರಣವಾಗಿ ಬಾಚಿಕೊಂಡು ಹಿಂದೆ ಕಟ್ಟಿದ ಏಣಿತುರುಬಿನ ಹಿಂದೆ ಕಮಲದಂತಹ ಒಂದೇ ಒಂದು ಬಂಗಾರದ ಹೂ (ಹಬ್ಬಬ. ೬). ☞ 'ವೇಣೀ' ಎಂಬುದು ಏಣಿ ಆಗಿರಬಹುದು.
[ಏಣಿ$_0$ + ತುರುಬು$_2$ (< ತುಱುಂಬು$_2$)]

**ಏಣಿದೀವಟಿಗೆ** (ನಾ). ಏಣಿಯ ಎರಡು ಮಗ್ಗುಲಲ್ಲೂ ಸಿಕ್ಕಿಸಿರುವ ದೀಪಗಳ ಸಾಲು (ಕ). [ಏಣಿ$_1$ + ದೀವಟಿಗೆ]

**ಏಣಿಮಲೆ** (ನಾ). ಒಂದು ತೆರಿಗೆ (?): ಮಠದ ಮಾಟಕ್ಕೆ ಬರಿಸಕ್ಕೆ ಏಣಿಮಲೆ ಪಣವೊನ್ದು (ಇಎ. ೧೯೪೮, ಹಾನಗಲ್. ೨೨೮–೪೦ ; ?).
[ಏಣಿ$_1$ + ಮಲೆ ?]

**ಏಣು** 'ಏಣ್' ನೋ.

**ಏಣುಬಾಳೆ** (ನಾ). ಒಂದು ಜಾತಿಯ ಬಾಳೆ: ಸೊನ್ನಿಬಾಳೆ, ಏಣುಬಾಳೆ ಎಂದು ಈ ಪ್ರಕಾರ ಹಲವು ವಿಧವಾದ ಬಾಳೆಯ ಕುಲಗಳುಂಟು (ಕೃಷಿಪ್ರ. ೧೫೬). [ಏಣು ? + ಬಾಳೆ$_1$ (< ಬಾೞೆ)]

**ಏಣೆ** (ನಾ). = ಏಣೆಲು : ಮಳೆ ಬಂದೊಡನೆ ಏಣೆಯ ಬೆಳೆಯ ಸಾಮುಗ್ರಿಗಳನ್ನೆಲ್ಲ ಸಿದ್ಧಪಡಿಸಿ ನೇಜಿನೆಟ್ಟು ಪುನಃ ಗಟ್ಟಕ್ಕೆ ಮರಳುವ (ರಕ್ತರೂ. ೧೧).
[?]

**ಏಣೆಲು** (ನಾ). (ಕರಾ) ಮುಂಗಾರಿನ ಬೆಳೆಗೆ ಸಂಬಂಧಪಟ್ಟದ್ದು : ಕಾಣಿಸುತ್ತಿರುವ ಹೊರಗಣ ಚಾವಡಿಯಲ್ಲಿ 'ಏಣೆಲು' ಬೆಳೆಯ ಬತ್ತದ ರಾಶಿ ಹರಡಿತು (ಚಿಟ್ಟಜೀ. ೬). [← ತುಳು. ಎಣೆಲ್]

**ಏಣ್ಬ** (ನಾ). ತಂದೆ (?) : ದತ್ತ ಪರಿಹಾರಾನ್ ಪಿತೇವಾನುಗೃಹ್ಣೀಯಾತ್ ಪರಿಹಾರದಿಂದೇಣ್ಬನಂ [ವಂ] ಮಕ್ಕಳಂ ಕಾಣ್ಬಂತೆ ಕಾಣ್ಗೆಂಬುದು ತಾತ್ಪರ್ಯಂ (ನೀತಿವಾ. ೧೮–೧೬). [?]

**ಏತ$_1$, ಯಾತ** (ನಾ). ೧. ಮೇಲೆ ಏರುವಿಕೆ : ಏಱುತಕ್ಕೆ ಏತಂ; ಓದಿಂಗೆ ಓತಂ (ಶಮುದ. ೨೦೯ ಪ್ರಯೋ). ೨. (ಬಾವಿಯಿಂದ) ನೀರನ್ನು ಮೇಲೆತ್ತುವ ಸಾಧನ : "ಚುರಿಚುಂಡಿ ಮಾನಂಗಿಯಾಕರ್ಷಿಯೇತವು" (ಮಂಗರಾ. ೧೨೫–೧೯) ; ನೆಗಟಿಲ್ತಿಯ ಸೆಟ್ಟಿ ಲಕ್ಕಣಯ್ಯನೆನ ಯಿಪ್ಪದಿನ್ನಿವಕೆ ಬಡ್ಡಿಯೊಳೇತಮನೆನ್ದು ಪತ್ತು ಗದ್ದಿನ ಪೊಸವೊನ್ನನಿತ್ತನ್ (ಸೌಇಇ. XX, ೫೫–೨೯ ; 1082) ; ಇವಂಬುನಿಧಿಕೂಪದಿಂದಮರನಂದನಕ್ಕೇತಮೆತ್ತುವಲ್ಲಿ ಗಚಿಯಾಗಲುಂ ಕಡಲ ಗುಣ್ಪನಾರಯ್ಯಲುಂ (ಕಾವ್ಯಾವ. ೧೯೩) ; ಏತ ತಲೆವಾಗಿದರೇನು ಗುರುಭಕ್ತನಾಗಬಲ್ಲುದೆ (ಬಸವ. ೧೨೫) ; ಜಳಜಾತದ್ವಯಮೇತಮೆತ್ತಿದಪುವಂಭೋಜಾಳಿಗೆಂಬಂತೆ (ಅನಂಪು. ೭–೩೬) ; ಕಿತ್ತುಱುಬಿ ಕನಕದ್ರೋಣಿಗಳನೊದೆದಿದಿರಿನೇತಗಳ . . . ಬನದಲಿ ಬೀದಿವರಿದಾಡಿದನು ಕಲಿಹನುಮ (ತೊರರಾ. ೫–೪–೧೪) ; ಏತದಿಂದ ಎಳೆದು ನೀರನ್ನು ಗದ್ದೆಗೆ ಸುರಿಯ ಬೇಕಾಗಿಲ್ಲ (ಚಿಗುಬ. ೨೪). ೩. ಬತ್ತವನ್ನು ಕುಟ್ಟಲು ಉಪಯೋಗಿಸುವ ಒಂದು ಸಾಧನ : ಬತ್ತ ಕುಟ್ಟುವಾಗ ಏತವನ್ನು ತುಳಿದೂ ತುಳಿದೂ ತೊಡೆ ನೋಯುತ್ತಿದೆ (ರೂಢಿ). **ಯಾತ** : ೨. ಯಾತದ ಜಾಟಾಳದ ಕೊನಿಯಂತೆ ಭವಪಾಶದಲ್ಲಿ ಬಿದ್ದು ಘಾಸಿಯಾದ ಮತ್ತೆ ನಿನಗಿನ್ನೇತಜ ಭಾಷೆಯೋ (ಮೋಳಿಮಾ. ೪೮–೨೦೦) ; ಯಾತದ ಮೇಲೆ ಹೋತಮೇವುದ ಕಂಡೆ (ಪುರಂದ. ೨–೧೨–೫) ; ಯಾತ ತಲೆ ತೂಗಿದರೆ ಪಾತಾಳದ ನೀರು ಬಂತು, ತಾತ ತಲೆ ತೂಗಿದರೆ ಪಗಡಿ ಬಿತ್ತು (ಗಾದೆ). ೩. ತರಂಗಿಣಿ, ಮಾತಂಗಿನಿ ಎಂಬ ಭಗಿನಿಯರಿಬ್ಬರು ಒನಕೆ ಯಾತವನ್ನು ತುಳಿಯುತ್ತಿದ್ದಾರೆ (ಕಮುಕ. ೧೨೬).
[ದೇ. ‖ ತಮಿ. ಏಱ್ಱ ; ಮಲ. ಏತ್ತ ; ತೆಲು. ಏತ]

**ಏತ$_2$** (ನಾ). ಚಿತ್ರವಿಚಿತ್ರವರ್ಣ; ಮಿಶ್ರವರ್ಣ : "ಚಿತ್ರಃ, ಕಿರ್ಮ್ಮೀರಃ, ಕಲ್ಮಾಷಃ, ಶಬಲಃ, ಏತಃ, ಕರ್ಬುರಃ – ೬ ನಾನಾವರ್ಣಗಳುಳ್ಳ ಚಿತ್ರ ಬಣ್ಣದ ಹೆಸರು" (ಸಿದ್ಧಾಂತಿ. ೪೫). [ಸಂ.]

**ಏತಕೋಲು** (ನಾ). ಏತದಲ್ಲಿ ಬಾನಿಯನ್ನು ಸೇರಿಸಿ ಕಟ್ಟಿರುವ ಕೋಲು (ಕ).
[ಏತ$_1$ + ಕೋಲು$_1$ (< ಕೋಲ್$_1$). / ತಮಿ ಏಱ್ಱಕ್ಕೋಲ್]

**ಏತರಹ** (ನಾ). ಯಾವತರಹ; ಯಾವರೀತಿ : ಸುಂವ ಮಳೆಯ ಸುರಿಸದಿದ್ದರೆ ಪಯಿರ್ಸೈದದಿರೆ ಆವರೇತರಹದಲ್ಲಿ ನೀಡುವರಯ್ಯ ರಾಮನಾಥ (ದೇದಾಪ್ರ. ೧೧೫–೬೧). [ಏ$_2$ (< ಏನ್$_1$) + ತರಹ]

**ಏತಹಾಕು** (ಕ್ರಿ). ೧. ಏತವನ್ನು ತುಳಿ; ಏತವನ್ನು ಎತ್ತು. ೨. ಒಂದು ವಿಧವಾದ ದಂಡನೆ ವಿಧಿಸು : ಐಗಳು ಕಠೋರಶಿಕ್ಷೆಯನ್ನು ವಿಧಿಸುತ್ತಿದ್ದರು. ಒಂಟಿಕಾಲಿನಲ್ಲಿ ನಿಂತುಕೊಳ್ಳುವುದು, ಟೊಂಕಹಾಕುವುದು, ಏತಹಾಕುವುದು, ಫರಂಗಿ ಮಣೆಯಲ್ಲಿ ಕುಳಿತುಕೊಳ್ಳುವುದು (ಕುರುಕಾ. ೬೮). [ಏತ$_1$ + ಹಾಕು (< ಪಾಯ್ಕು$_1$)]

**ಏತಿಪ್ರೀತಿ** (ನಾ). ಸರಸ ವಿರಸ; ಅನುಕೂಲ ಪ್ರತಿಕೂಲ : ನಿತ್ಯದ್ದೊಂದೂಟ ತಗೊಳ್ಳೀ; ಗಂಡಹೆಂಡತೀರ ವ್ಯವಹಾರ ತಗೊಳ್ಳಿ ; ಏತಿಪ್ರೀತಿಗಳಿಲ್ಲದೆ ಪ್ರಪಂಚದ ವ್ಯವಹಾರವೇ ಇಲ್ಲ (ಉಮಾಶಿ. ೮೩).
[ಸಂ. (ಏತಿ + ಪ್ರೀತಿ)]

**ಏತ್ವ** (ನಾ). [ವ್ಯಾಕ] ಏ ಎಂಬ ವರ್ಣ : ಮೊದಲಿತ್ವಕ್ಕೇತ್ವಮುಮುತ್ವದೊಳೋತ್ವಮುಮೆಸೆವ ದೀರ್ಘಮುಂ ಚರಮಕ್ಕತ್ವದ ವಿಧಿಯುಂ ಧಾತುಗೆ ಭಾವದೊಳಕ್ಕುಂ ಧಾತು ನಿಜದೆ ಭಾವಮುದಕ್ಕುಂ (ಶಮುದ. ೨೧೩).
[ಸಂ.]

**ಏದಟ್ಟು** (ಕ್ರಿ). ಮೇಲುಸಿರುಬಿಡುವಂತೆ ಅಟ್ಟಿಸಿಕೊಂಡು ಹೋಗು ; ಆಯಾಸಗೊಳ್ಳುವಂತೆ ಬೆನ್ನಟ್ಟು : ಆತನ ಏದಟ್ಟುತ್ತುಂ ಪರಿತಪ್ಪ ವಸುದೇವನ ರಥಕ್ಕೆ ತನ್ನೀಱಿದಾನೆಯುನಣೆದು ನೂಕುವುದುಂ (ಮಹಾನೇ. ೫–೫೦ ವ). [ಏದು$_1$ + ಅಟ್ಟು$_1$]

**ಏದು$_1$**, ಏಗು$_4$ (ಕ್ರಿ). (ಆಯಾಸದಿಂದ) ಮೇಲುಸಿರುಬಿಡು ; ಬಿರುಸಾಗಿ ಉಸಿರಾಡು ; ತೇಕು : ದಣಿವಿಂದೇದುತಿಹುದನು ಕಂಡು ಕನಿಕರಗೊಂಡು (ರಾಮಾಸಂ. ೬–೨–೬೧) ; ಏದಿಸುರಿದಿಂತು ದಿವ್ಯಹರ್ಷಾವೇಶಮುಂ (೧೪ವಿಂ. ೭–೭೭) ; ಏದುತ್ತ ತೇಕುತ್ತ ಅಲ್ಲಿ ಬಂದು ತಲುಪಿದ ಸುರೇಶ (ಆಬೋಲೀ. ೯೬). **ಏಗು$_4$** : ಏಗುತ್ತ ತೇಕುತ್ತ ಘಾಟಿಯ ಏರಿ ಹತ್ತಿದ ಬಾಬುಶೇಟರ ಎತ್ತಿನಗಾಡಿ (ಮೂರುದಾ. ೧೧೪). [?]

**ಏದು$_2$** (ನಾ). ಮುಳ್ಳುಹಂದಿ. 'ಏದುಪಂದಿ' ಪರಾ.
ಏದಿನಮುಳ್ಳು = ಮುಳ್ಳುಹಂದಿಯ ಮುಳ್ಳು : "ಶಲ, ಶಲಲ– ಏದಿನಮುಳ್ಳು" (ಗಂಗಾಮ. ೩೦೪). [?. / ತೆಲು. ಏದು./ ಸಂ. ಸೇಧಾ]

**ಏದುಪಂದಿ** (ನಾ). = ಏದು$_2$ : ಏದುಪಂದಿ (ಶಮುದ. ೬೫ ಪ್ರಯೋ).
[ಏದು$_2$ + ಪಂದಿ]

**ಏದುಮುಳ್ಳು** (ನಾ). ಮುಳ್ಳು ಹಂದಿಯ ಮುಳ್ಳು (ಸ್ಯಾಂಡರ್).
[ಏದು$_2$ + ಮುಳ್ಳು (< ಮುಳ್)]

**ಏದುಮೃಗ** (ನಾ). = ಏದು$_2$ (ಸ್ಯಾಂಡರ್). [ಏದು$_2$ + ಮೃಗ]

**ಏದುಸಿರು,** ಏದುಸುರು (ನಾ). (ಆಯಾಸದಿಂದ ಬಿಡುವ) ನೋಲು ಸಿರು; ಬಿರುಸಾದ ಉಸಿರಾಟ: ಎದೆ ಈಗ ಹೊಯ್ದುಕೊಳ್ಳಲಾರಂಭಿಸಿತು. ಏದುಸಿರು ಬಂದಿತು (ರಂಗನಾ. ೨೨೨); ಏದುಸಿರು ಬಿಡುತ್ತಾ ಹೆಂಗಸಿನತ್ತ ಬಂದ (ಹೊ ಸ ಕ್ಷಿ. ೬೪). **ಏದುಸುರು:** ಉಸ್ ಉಸ್ ಎನ್ನುತ್ತ ಏದುಸುರು ಬಿಡುತ್ತ ನಡೆಯುತ್ತಿದ್ದೆ (ಅನಾಥೆ. ೧೦೫); ಆಯಾಸದಿಂದ ಏದುಸುರು ಕರೆಯುತ್ತಾ ಬಿದ್ದುಕೊಂಡನು (ಯೋಧಪು. ೭೬).
[ಏದು$_1$ + ಉಸಿರು$_2$ (< ಉಸಿರ್$_2$)]

**ಏದುಸುರು** 'ಏದುಸಿರು' ನೋ.

**ಏದೊರೆತು** (ನಾ). ಯಾವ ಬಗೆಯದು; ಯಾವ ಯೋಗ್ಯತೆಯುಳ್ಳುದು; ಎಂತಹುದು: ಷೋಡಶರಾಜರಿರ್ಪತೆಜನೇನೆಮ್ಮನ್ನಯ ಕ್ಷ್ಮಾಪರಾವ ವಿಳಾಸಂಗಳೊಳೇರ್ಪರೇದೊರೆತು ತಾನೆಮ್ಮಯ್ಯನೈಶ್ವರ್ಯಂ (ಪಂಪಭಾ. ೬–೧೫). [ಏ$_3$ (< ಏನ್$_1$) + ದೊರೆತು (< ದೊರೆಯದು)]

**ಏಧ** (ನಾ). ಕಟ್ಟಿಗೆ; ಸೌದೆ; ಅಡುಗಬ್ಬು. [ಸಂ.]

**ಏಧಿತ** (ಗು). ಬೆಳೆದ; ಅಭಿವೃದ್ಧಿಹೊಂದಿದ. [ಸಂ.]

**ಏಧೆ** (ನಾ). ಏಳಿಗೆ; ಅಭಿವೃದ್ಧಿ. [ಸಂ. ಏಧಾ]

**ಏನ್$_1$,** ಏನು (ಸ). ಪ್ರಶ್ನಾರ್ಥಕ ಸರ್ವನಾಮ; ಯಾವುದು. ℙ ಇದರ ಏಳು ವಿಭಕ್ತಿಗಳು. ಏನ್, ಏನು; ಏನಂ, ಏನನ್ನು; ಏತರಿಂದ, ಏತಱಿಂದ, ಯಾತರಿಂದ; ಏತರ್ಕೆ, ಏತಕ್ಕೆ, ಏತಕೆ, ಏಕೆ, ಯಾಕೆ; ಏತಱತ್ತಣಿಂ, ಏತರ, ಏತಱ, ಯಾತರ; ಏತರಲಿ, ಏತರಲ್ಲಿ, ಏತಱಲಿ, ಏತಱಲ್ಲಿ, ಏತಱೊಳ್, ಯಾತರಲ್ಲಿ: ಕೇಳೋಯ್ಪಿನ್ನಟವಪ್ರಶ್ನೆಲಮಡಱ್ದೇನಮ್ಮಾ ಕಳನ್ನೂರನಂ ಬಾಲೇ ಪೆರ್ಗ್ಗೊರವಂ ಸಮಾಧಿ ನೆಱೆದೊನ್ (ಎಕ. II, ೨೨–೩; 700); ಏನಂ ಕಂಡಿರಾರುಳ್ಳುದ ನುಳ್ಳಂತೆ ಪೇೞಿಯಪ್ಪೊಡೆ ನಿನಗೆನ್ನಾಣೆ (ವಡ್ಡಾರಾ. ೪೬–೨೪); ಅಂತವರಾಗಿ ಪುಟ್ಟಲೇನಾಗಿಯುಮೇನೊ ತೀರ್ದಪುದೆ (ಪಂಪಭಾ. ೪–೨೯); ತಮ್ಮಱೆತಮಿದೇತಕೆಂದು ಗುರುಸಂಕುಳಮಂ ಮಱೆದು (ಕಾದಂಪೂ. ೫೪೪); ತಾನೇನಂ ಬೇಡಿದೊಡಂ ಬೇಡಿದುದಂ ಕುಡುವುದು ಪುಸಿಯೇ (ಧರ್ಮಾಮೃ. ೧–೧೨೯); ಏನೇತಱೆನಿಕುಮಾದಿಯೊಳಾ ನೆಗಟ್ದ ಚತುರ್ಥಿಗಕ್ಕುಮೇತರ್ಕೆಕೆಂಬೀ ನುಡಿಯೇತಱ್ ಪ್ರಕೃತಿಯೆ ತಾನಕ್ಕುಂ ತತ್ತೃತೀಯೆ ಮೊದಲಾದುವಱೊಳ್ . . . ಪ್ರಥಮೆಗೆ – ಅಂದಿನ ನಿಜಭುಜ ವಿಕ್ರಾಂತಮೇನಾದುದು . . . ಗತಿಯಂಬಡೆದೇತಱಾತನೆ . . . ಚತುರ್ಥಿಗೆ –ಏತರ್ಕೆ, ಏಕೆ: ಏತರ್ಕೆ ಮುನಿಸೆಂದು ನೊಂದು ನುಡಿದಂ . . . ತೃತೀಯಾದಿಗೆ – ಏತಱಿಂ, ಏತಱತ್ತಣಿಂ, ಏತಱ, ಏತಱೊಳ್ (ಶಮದ. ೧೧೨, ಪ್ರಯೋ). **ಏನು:** ಏನನೋದಿ ಏನಕೇಳಿ ಏನ ಮಾಡಿಯೂ ಫಲವೇನು ನಿಮ್ಮವರೊಲಿಯದನ್ನಕ್ಕ (ಬಸವ. ೨೯೬); ಗಣಿಕಾಸ್ತ್ರೀ ಗುಣವೇತಕ್ಕೆ (ಸೋಮೇಶ. ೭೩); ಪೊಯ್ಲುಂಗೊಱಲುತೇತಕ್ಕೆ ಪೊಯ್ದಪಿರೆನ್ನನಣ್ಣಣ್ಣ ಕ್ಕಱಿಂದಂಬರದೊಳೆಯ್ದುವ ಶಿವನೆಡೆಯೊಳಿರ್ದು (ಬಸಪು. ೫೦–೭); ಭಾರಿ ಧನುವಿದ್ದೇನು ತೋಳಿನ ತೋಲದಲಿ ಫಲವೇನು ಕೈದುಗಳಾರನಂಜಿಸಲಾ ಹವಾಹವರಂಗ ಮಧ್ಯದಲಿ (ಕುವ್ಯಾಕ. ೫–೭); ನಿಮ್ಮಭಿಮತವದೇನೆಂದರಸ ಬೆಸಗೊಂಡ (ತೊರರಾ. ೧–೫–೧); ಏನು ಮಾಡಿದರೇನು ಭವ ಹಿಂಗದು (ಪುರಂದ. ೨–೧೮ ಪಲ್ಲವಿ); ಬಡವನೀತನೇನಕೆ ತನ್ನ ಹುಟ್ಟು ಬಡಗಿಯ ಕೆಲಸಬಿಟ್ಟು ಹೊಸಧರ್ಮವಂ ಸಾರ್ವನೆಂದು (ಗೊಲ್ಗೊಥಾ. ೨–೭); ಬಾಲಕರಿಲ್ಲದ ಬಾಲಿದ್ಯಾತರ ಜನ್ಮ ಬಾಡೀಗಿ ಎತ್ತು ದುಡಿದಂಗ (ಗರತಿ. ೧೦೬); ಇಕ್ಕುವವರಿಗೆ ಇಕ್ಕಿದರೆ ಮಕ್ಕಳಿಗೇನು (ಗಾದೆ).

ಏಕೆ, ಯಾಕೆ ℙ ಇದು ಪ್ರಶ್ನಾರ್ಥವನ್ನು ಸೂಚಿಸುವ ಅವ್ಯಯದಂತೆ ಪ್ರಯೋಗವಾಗುತ್ತದೆ: ವ್ಯಾಕುಳನಲ್ಲದನೇಕೆ [ಪಾಠಾಂ. ಕ] ವಿವೇಕ ಬೃಹಸ್ಪತಿಯ ನಗರಮಂ ಪುಗುತರ್ಪ೦ (ಕವಿರಾ. ೧–೬); ಮೂಱು ತಿಂಗಳ ಬಸಿಱೇಕೆ ಪಾಯ್ವುದೆಯೆನಗೊತ್ತಿ (ಕಾವ್ಯಸಾ. ೯೯೪ ಶೂದ್ರಕ); ನಿನ್ನನೇಕೆ ಕಾಷ್ಠಕೂಟಂ ಬಡಿದನಬ್ಬಾ (ವಡ್ಡಾರಾ. ೭೭–೧೭); ನೀನಾರ್ಗೇನೆಂಬೆಯೇಕೆ ಬಂದೆಯೆಂದೊಡೆ (ಪಂಪಭಾ. ೩–೧೪); ಬತ್ತಿದ ಕೆಱೆಯೊಳಗೆ ಬಲೆಯೇಕೆ (ಕುವ್ಯಾದ್ರೋ. ೧–೭); ಇನ್ನೇಕೆ ಚಿಂತೆ (ಕಎಪು. ೧೬–೪); ಯಾಕೆ ನಿರ್ದಯನಾದೆ ಎಲೊ ದೇವನೆ (ಪುರಂದ. ೪–೯೪ ಪವಿಲ್ಲ); ಜೂಜಾಡುವವನಿಗೆ ಜಂಗಮದ ಸುದ್ದಿ ಯಾಕೆ (ಗಾದೆ). ಏತಱದು = ಯಾವ ರೀತಿಯದು; ಎಂತಹುದು: ಕೀಳುಜಾತಿಯ ಮನೆಯ ಉಂಬುದು ಮೇಲೆ ತಂದೆಯ ತಲೆಯನರಿವುದು ಚಾಳಿಯೇ ಭಕ್ತರಿಗೆ ಭಕ್ತರ ಭಕ್ತಿ ಏತಱದು [ಪಾಠಾಂ. ಯಾತಱದು] (ಬಸಪು. ೨೮–೩೧). ಏತಱವ = ಎಷ್ಟರವನು: ಗಿರಿಶನಂ ಭಜಿಸಲ್ಕೆ ಮೌೞೀಯೊಳಿರುತ ಮಿಹನಿಂತಪ್ಪವರ್ಗಿಶ್ವರ ಸಮಯವತಿಗಹನವೆಂದೊಡೆ ಯಿಾತನೇತಱವ (ಬಸಪು. ೪೩–೪೩). ಏನಾನು, ಏನಾನುಂ = ಏನನ್ನಾದರೂ: ಅವಧರಿಸಿ ಮನದೊಳೇನಾನುವನಾಗಳ್ಕನ್ನೆ ನುಡಿಯಲೊಡರಿಸಿ (ಕಾದಂಉ. ೨೮೭); ಮೋಕ್ಷದ ಸುಖದಿಂದೇನಾನುಂ ಕುಂದುಗುಮದು ತಾನೆನೆ ಬಣ್ಣಿಸುವನಾವನಲ್ಲಿಯ ಸುಖಮಂ (ಆದಿಪು. ೬–೪೬); ದೋಷವಿದಱೊಳೇನಾನುಮುಳ್ಳೊಡಂ ಪ್ರಿಯದಿಂ ತಿರ್ದುವುದು (ಶಮದ. ೪ ಪೀಠಿಕೆ); ಇವರ ತಾತಂಗೇನಾನುಂ ಶಾಪಮಿತ್ತಪರೆಂದು ತಳಮಳಗೊಂಡು (ಅದ್ಭುತ. ೧೨–೧೯). ಏನಿಲ್ಲೆಂತಿಲ್ಲ = ಏನೂ ಇಲ್ಲ ಹೇಗೂ ಇಲ್ಲ: ಏನಿಲ್ಲೆಂತಿಲ್ಲದೆಯೇ ಜನ ಸಲ್ಲದ ಅಪವಾದ ಹೊರಿಸುತ್ತಿರುವಾಗ (ಕುಸುಸಂ. ೯೯). ಏನುಂಟಾದ = ಏನಿದೆಯೊ ಅದನ್ನೆಲ್ಲ; ಇದ್ದದ್ದನ್ನೆಲ್ಲ: ಚತುರ್ಗಡಿಗೆ ನೆಟ್ಟ ಗಡೀಕಲ್ಲಿನ ಒಳಗುಳ ಯೇನುಂಟಾದ ಸರ್ವಸಾಂಮ್ಯವನೂ (ಎಕ. VII, ಶಿವಮೊ. ೩–೧೭; 1671). ಏನೊಂದು = ಯಾವುದೇ ಆಗಲಿ: ಏನೊಂದುಕಾರ್ಯಮುಮಂ ನಾಂ ಪೊಜಗಿರ್ದು ನೋಡು ತಿರ್ಪುದೆ ಸಾಲ್ಗುಂ (ಪಂಚತಂ. ೩೯–೪).
[ದೇ. ‖ ತಮಿ. ಏನ್; ಮಲ. ಏನ್, ಏವ, ಎ, ಏ; ತುಳು. ದಾನೆ; ತೆಲು. ಏಮಿ; ಕೊಡ. ಎನ್ನೀ; ಕೋಲಾ. ಎನಜ್; ನಾಯ್ಕಿ. ತಾ, ತಾನೆ; ಪರ್ಜಿ. ಎತೆ, ಎತೆನ್; ಗದಬ. ಎನಾ, ಏನ; ಕುಇ. ಅನ್; ಕುವಿ. ಎನ; ಕುರುಖ್. ಎಂದ್ರಾ; ಮಲ್ತೊ. ಇಂದ್ರಿಕ್; ಬ್ರಾಹೂಈ. ಅನ್ತ್]

**ಏನ್$_2$** 'ಏವರ್' ನೋ.

**ಏನ** (ನಾ). ಪಾಪ: ತಾನಿಂದುವರೆಗಮೊದವಿಸಿದೇನಂಗಳ್ಗೆ . . . ನರಪತಿ ಬೞೀಕ ದೀಕ್ಷೆಯಂ ಕೈಕೊಂಡಂ (ಯಶೋಚ. ೪–೭೬); ಏನಾಪರಾಶಿಬಡಬಾನಾಥಬಾಂಧವ ಸದಾ ನಾರದಪ್ರಿಯ ಜ್ಞಾನಾಧಿಕಾರ ಕರುಣಾನಾಕ ಮುನಿವರಧ್ಯಾನಾದಿಗಮ್ಯ ಜಯ (ಗುರುಚಾ. ೧–೪).
[< ಸಂ. ಏನಸ್]

**ಏನಸ್ಸಂತಾನ** (ನಾ). ಪಾಪಗಳ ಸಮೂಹ: ಏನಸ್ಸಂತಾನಮೆಂಟುಂ ಕಿಡೆ ನಿಜಗುಣಮೆಂಟುಂ ಮೊಗಂದೋಱೆ ಮೆಯ್ಯಿಂದೇನಾನುಂ ಕುಂದೆ . . . ಗಣನಾತೀತರಾಗಿರ್ದ ಮುಕ್ತಿಶ್ರೀನಾಥರ್ ಸಿದ್ಧರಾತ್ಯಂತಿಕಸುಖಪದವೀಸಿದ್ಧಿಯಂ ಮಾಳ್ಕೆ ನಮ್ಮೊಳ್ (ಪಂರಾಮಾ. ೧–೨).
[ಸಂ. (ಏನಸ್ + ಸಂತಾನ)]

**ಏನು** 'ಏನ್$_1$' ನೋ.

**ಏನುಜಾರಿಗ** (ನಾ). ಒಂದು ಔಷಧಿಗಿಡದ ಹೆಸರು: ರಾಮಿ, ಮುಕುಡಕ, ಮುಕುತೆ, ಏನುಜಾರಿಗ (ವೈಔನಿ. ೪೯–೯೮೦). [?]

**ಏನೆನ್**, ಏನೆನ್ನು (ಕ್ರಿ). ಏನೆಂದು ಹೇಳು ; ಏನೆಂದು ಕರೆದುಕೊಳ್ಳು : ಕೃಷ್ಣೆಯ ರೂಪಂ ಕಂಡು ಚೋದ್ಯಂಬಟ್ಟು ಸಾಮಾನ್ಯೆಯಲ್ಲೆ ನೀನಾರ್ಗೇನೆಂಬೆಯೆಂದು ಬೆಸಗೊಳೆ (ಪಂಪಭಾ. ೮-೫೫ ವ) ; ಆತನ ವಿಳಾಸ ವದನೇನೆಂಬೆನೆಸೆದಿರಲು ನೂತನ ವಿಳಾಸದಿಂ ಗಿರಿಜೆ ವಾಮದೊಳಿರಲು (ಬಸರ. ೧-೭). **ಏನೆನ್ನು** : ವರಸುಕ್ಷೇತ್ರವೆಸೆವುವೇನೆಂಬೆ (ಕಂನವಿ. ೨-೨೩). [ಏನ್$_1$ + ಎನ್$_1$]

**ಏನೆನ್ನು** 'ಏನೆನ್' ನೋ.

**ಏನೋಹರ** (ನಾ). ಪಾಪವನ್ನು ನಾಶಮಾಡುವವನು : ಜ್ಞಾನ ಬೀಜಂ ಭೋಗ ಮೋಕ್ಷದಮಸಂದಿಗ್ಧಮೇನೋಹರಂ ಪರಮಪದ ವಾಯುರಾರೋಗ್ಯದಾನಿ (ಪದ್ಮರಾ. ೧೧-೧೨೪). [ಸಂ.]

**ಏಪರಿ** (ನಾ). ಯಾವರೀತಿ ; ಹೇಗೆ : ರೂಪಿಸಿ ಪದಾರ್ಥ ಬಂದುದ ಲಿಂಗಕಿತ್ತು ತಾನಾ ಪ್ರಸಾದವನಲ್ಲದೊಲ್ಲೆಂಬ ಭಕ್ತನಿಂದೇಪರಿಯನರ್ಪಿತವ ನೆನೆಯಬಹುದೇ (ಶಿವಗೀ. ೯೨-೪೫೧) ; ಜನನಿ ರಕ್ಕಸಿಯಾದಡಕಟಾ ತನಯನೇಪರಿಯಿಂದೆ ಬಾಳ್ವನು (ಬಸವ. ೧೫-೧೩).

[ಏ$_3$ (< ಏನ್$_1$) + ಪರಿ$_3$]

**ಏಪಿ** (ನಾ). ಮಹಾಗನಿ ಜಾತಿಗೆ ಸೇರಿದ, ಭಾರವಾದ ಒಂದು ಮರ (ಶಿ). [?]

**ಏಪೊತ್ತು** 'ಏವೊಟ್ಟುಂ' ನೋ.

**ಏಪೊತ್ತುಂ** 'ಏವೊಟ್ಟುಂ' ನೋ.

**ಏಪೊಳ್ತು** 'ಏವೊಟ್ಟುಂ' ನೋ.

**ಏಪೊಳ್ತುಂ** 'ಏವೊಟ್ಟುಂ' ನೋ.

**ಏಪೊಟ್ತು** 'ಏವೊಟ್ಟುಂ' ನೋ.

**ಏಪೊಟ್ತುಂ** 'ಏವೊಟ್ಟುಂ' ನೋ.

**ಏಬಂಡ**, ಏಭಂಡ (ನಾ). **೧.** ಯಾವ ಸರಕು ; ಯಾವ ವಸ್ತು. **೨.** ಏನು ಪ್ರಯೋಜನ; "ಏನು ಲೆಕ್ಕ" (ಪಂಪಭಾ. ಕೋಶ) : ಆ ಸಮುದ್ರಮೇ [ಪಾಠಾಂ. ಮೇಂ]ಬಂಡಮೊ ಪಾಯ್ದೊಡೆಂದು ನಿಜ ಸಾಯಕದೊಳ್ ಬರೆದೆಚ್ಚು ಕಪ್ಪಮಂ ಕೊಂಡನವುಂಕಿ ಲಂಕೆಯ ವಿಭೀಷಣನಂ ಪರಸೈನ್ಯಭೈರವಂ (ಪಂಪಭಾ. ೬-೩೩); ನ್ಯಾಯಾರ್ಜಿತಮಲ್ಲದೆನಿಪ ಧನಮೇಬಂಡಂ (ಪಂರಾಮಾ. ೬-೧೨೬). **ಏಭಂಡ** : **೨.** ಖಂಡಿತಮೆನಿಪ್ಪ ಪರಮಹಿಮಂಡಲಧವಳಾತಪತ್ರಸಂಪದಮೆನಗೇಭಂಡಮದನೊಲ್ಲೆನೊಲ್ಲೆಂ (ಗದಾಯು. ೫-೫೩); ತನ್ನ ತೋಳ್ಗಳೇಭಂಡಮೆನುತ್ತೆ ಮಾಂಕರಿಪನಗ್ಗದ ಹೈಹಯನಂ ಸುರದ್ವಿಷಂ (ಜಗವಿ. ೧೮-೮೨).

[ಏ$_3$ (< ಏನ್$_1$) + ಬಂಡ$_2$]

**ಏಬರಾಸಿ**, ಎಪ್ರಾಸಿ, ಎಬರೇಸಿ, ಎಬ್ರಾಸಿ (ನಾ). ಅವಿವೇಕಿ; ಕೆಲಸಕ್ಕೆ ಬಾರದವನು : ಥೀ ಏಳೊ ಏಬರಾಸಿ. (ಬೀರಬ. ೧೬೭). ಎಪ್ರಾಸಿ: "ಎಪ್ರಾಸಿ – ಎಬಡ; ಹುಚ್ಚ" (ಜಾನಕೋ. ೨೫). ಎಬರೇಸಿ : (ಉಕ). ಎಬರೇಸಿ ನಮ್ಮ ದರವೇಸಿ ಕಂಡಿರಾ (ಗಾದೆ). ಎಬ್ರಾಸಿ: (ಶಿ). [?. / ತಮಿ. ಏಪ್ಪಿರಾಸಿ ; ತುಳು. ಎಬುಳಂತೆ ; ತೆಲು. ಎಬ್ಬೆರಾಸಿ, ಎಬ್ರಾಸಿ = ಅಸಹ್ಯವಾಗಿ ಇರುವವನು, ಕೊಳಕ]

**ಏಬಾತ್ತೆ** 'ಏವಾಟ್ತಿ' ನೋ.

**ಏಬಿಜ್ಜೆ** (ನಾ). ಯಾವ ವಿದ್ಯೆ : ಏ ಪಬ್ಬವೆಸಗುವನೇಬಿಜ್ಜೆಗಳ ಕಲ್ವನೇಪಸ ಜಾತ್ರೆಗೆಯ್ದುವನು ಆ ಪರಿಗಳ ತಿಳಿದದಟ ಗುಣಂಗಳನೇಪೊಳ್ತು ಮೊಲ್ದೆಣಿಸುವುದು (ಚಿಕವಿ. ೬-೧೫೭ ಸಾಂಗತ್ಯ ೨೩). [ಏ$_3$ (< ಏನ್$_1$) + ಬಿಜ್ಜೆ$_1$]

**ಏಬೆಸನ** (ನಾ). ಏನು ಅಪ್ಪಣೆ : ಬಾಯಿತುಂಬ ಮಾತನಾಡಿ ಏಗುವುದು ಏಬೆಸನೆಂದು ತನುಕರಗಿ ಮನಕರಗಿ ನೋಡಿ ಮಾಡುವುದು ಭಕ್ತಿಸ್ಥಲ (ಬಸವ. ೮೬೪). [ಏ$_3$ (< ಏನ್$_1$) + ಬೆಸನ]

**ಏಭಂಡ** 'ಏಬಂಡ' ನೋ.

**ಏಮ್**, ಏಂ, ಏನ್$_2$ (ಅ). ಮೆಚ್ಚುಗೆ ಆಶ್ಚರ್ಯ ಮೊದಲಾದುವನ್ನು ಸೂಚಿಸುವ ಅವ್ಯಯ : ಕ್ರಮದಿ[ನ]ಳುರ್ಕೆವೆತ್ತು ನಿಬಿಡೋನ್ನತಮಾಗಿ ಬೆಡಂಗಿಸೇವೆಮ್ ಚತುಸ್ಸಮಯದ ದೇವತಾನಿಲಯಮೊಪ್ಪುಗುಮ್ (ಎಇ. XIII, ೩೨೯-೩೩ ; 930). **ಏಂ** : ಏಂ ನಡೆದುದೊ ಪೆರ್ಬಡೆ ಗಂಗೆಯ ತಡಿವಿಡಿದೆರಡನೆಯ ಗಂಗೆ ನಡೆವಂತಾಗಳ್ (ಆದಿಪು. ೧೨-೬೪) ; ಶಾಂತಿ ಪುರಾಣಮೇಂ ಕರಂ ನವರಸಮೇಂ ಸಮರ್ಥಯುತಮೇಂ ಮೃದುಬಂಧನಮೇಂ ಪ್ರಸನ್ನಮೋ (ಶಾಂತಿಪು. ೧-೩೭). **ಏನ್$_2$** : ಏನ್ ! ಪೇಟ್ಕೆ ಪೇಟ್ದೆ ನೀನ್, ಮುತ್ತಬ್ಬೆ, ಘೋರಂ ! (ಅಶ್ವತ್ಥಾ. ೧೦-೧೯೬).

[< ಏನ್$_1$]

**ಏಮಾತು** (ನಾ). ಏನು ಮಾತು ; ಇನ್ನೇನು ಮಾತು : ಪೆಜತೇ ಮಾತೀ ಕೂಸಿನಂದಮಿಾತನ ಪೆಸರುಂ ಭೀಮನೆ ಪೋಗೆನೆ (ಪಂಪಭಾ. ೧-೧೨೮) ; ಕಾಮದುಬ್ಬರವಲ್ಲಿ ಕೋಪದಬ್ಬರವಲ್ಲಿ ಏಮಾತೊ ಲೋಭ ಮೋಹಂಗಳೂಳಿಗವಲ್ಲಿ (ಸಂಬರ. ೧-೬೨).

[ಏ$_2$ (ಏನ್$_1$) + ಮಾತು$_1$]

**ಏಮಾರಿಕೆ** (ನಾ). ಮೋಸ ; ಮೋಸಹೋಗುವುದು : ಊರ್ಮಿಳೆಯ ವದನವು ಏಮಾರಿಕೆಯಿಂದಲೂ, ಅಸಮಾಧಾನದಿಂದಲೂ ಬಿಸಿ ತಗುಲಿದ ಬಾಳೆಯ ಎಲೆಯಂತೆ ಬಾಡಿತು (ಮೊಗ್ಗ. ೪೧). [ಏಮಾರು + -ಇಕೆ]

**ಏಮಾರಿಸು** (ಕ್ರಿ). ಮೋಸಗೊಳಿಸು ; ವಂಚಿಸು : ಒಂಟಿಯಾಗಿ ಮೇಯುತ್ತಿದ್ದ ಮೇಕೆಯನ್ನು ಏಮಾರಿಸಿ ಹಿಡುಕೊಂಡು ಹೋಗಿ (ಕಥಾಮಂ. ೩೫). [ಏಮಾರು + -ಇಸು$_3$]

**ಏಮಾರು** (ಕ್ರಿ). **೧.** ಮೋಸಹೋಗು : ಅವಳು ಇಂಥದುದರಲ್ಲೆಲ್ಲ ಏಮಾರುವ ಹಾಗಿರಲಿಲ್ಲ (ಮೂಲಾನ. ೧೯೧). **೨.** ಉಪೇಕ್ಷಿಸು; ಅಲಕ್ಷಿಸು. 'ವೇಮಾಜು' ಪರಾ.

ಏಮಾರಿಹೋಗು = ಮೋಸಹೋಗು : ಆಗಲೆ ಇವಳು ಈ ತಂತ್ರ ಮಾಡಿದಂತೆ ತೋರುತ್ತದೆ. ನಾನು ಏಮಾರಿಹೋದೆ (ಮಧುಸಂ. ೧೧೭).

[ದೇ. ‖ ತಮಿ. ಏಮಾಜ್ಜು = ಮೋಸಗೊಳಿಸು, ವಂಚಿಸು ; ತೆಲು. ಏಮಾಜು = ಉಪೇಕ್ಷಿಸು, ಅಲ್ಯಕ್ಷ್ಯಮಾಡು]

**ಏಯ್$_1$** (ಕ್ರಿ). ಎಸೆ; ಬಿಡು; ಹೊಡೆ (ಶಿ). [← ತೆಲು. ಏಯು, ವೇಯು]

**ಏಯ್$_2$** (ಅ). ಕೆಳದರ್ಜೆಯವನನ್ನು ಸಂಬೋಧಿಸುವಾಗ ಬಳಸುವ ಮಾತು (ಶಿ). [?]

**ಏಯಾರಸೆ**, ಏಯೋದಸಿ (ನಾ). ಚಾಂದ್ರಮಾನದ ಹನ್ನೊಂದನೆಯ ತಿಥಿ : "ಏಕಾದಶಿ – ಏಯಾರಸೆ" (ಶಬ್ದಾನು. ೧೬೦ ಪ್ರಯೋ). ಏಯೋದಸಿ: "ಏಕಾದಶಿ – ಏಯೋದಸಿ, ಏಕಾಶಿ" (ಹೊಸುಗ. ೧೧೯).

[< ಸಂ. ಏಕಾದಶೀ]

**ಏಯೋದಸಿ** 'ಏಯಾರಸೆ' ನೋ.

**ಏರ್**, ಏರು$_3$ (ನಾ). **೧.** ನೊಗವನ್ನು ಹೂಡಿ ದನಗಳನ್ನು ಕಟ್ಟಿದ ನೇಗಿಲು ; ಆರು : ಕುರುಧರೆಯಂ ನಿಜೋಗ್ರಗದೆಯೇರ್ಗಳಿಸುತ್ತುಗಿಯುತ್ತೆ . . . ತಾರ ಭೂಧರ ಸಿತ [ಕೀರ್ತಿ]ಯೆಂಬ ಬೆಳಸಂ ಬೆಳೆದಂ ಪರಸೈನ್ಯಭೈರವಂ (ಗದಾಯು. ೧೦-೪) ; ಕಜ್ಜದೇರ್ ನೊಗಕೆ ಮಣಿದಾಂಪರೊ ಪೆಗಲ್ಗಳಂ (ಶ್ರೀರಾಮಾ. ೬೩೪-೨೪೫). **೨.** ಹೋರಿಗಳನ್ನು ಪಳಗಿಸುವುದಕ್ಕಾಗಿ ನೊಗದಂತೆ ಉಪಯೋಗಿಸುವ ಮರ. 'ಆರ್$_3$' ಪರಾ. **ಏರು$_3$** : **೧.** ಆಮೇಲೆ ಒಂದೇರಿನ ಆರಂಬಮಾಡಿ . . . ಸರ್ಕಾರಕ್ಕೆ ಕಂದಾಯ ಕಟ್ಟುತ್ತಾ ಇದ್ದನು (ಕಥಾಮಂ. ೧೯). **೩.** ಎತ್ತಿನ ಜೊತೆ ; ಒಂದು ಏರು (ಎತ್ತಿನ ಜತೆ) ಇರುವುದು ಹತ್ತು ಏರು ಆಗುತ್ತದೆ (ಹಳ್ಳಿಬಾ. ೩೨).

[ದೇ. ‖ ತಮಿ. ಮಲ. ಏರ್; ತೆಲು. ಏರು; ಕೋಲಾ. ಚೇರ್; ಪರ್ಜ. ಚೆರಿಯಾ ಕುಲ್ = ಎತ್ತುಗಳ ಜೊತೆ; ಗೊಂಡಿ. ಸೇರ್; ಕುಇ. ಸೇರು; ಕುವಿ. ಹೇರು]

**ಐರಂಡ** (ನಾ). ಹರಳುಗಿಡ; ಔಡಲಗಿಡ: "ಗ್ರಾಮರುಹಮೇರಂಡ ಮೆಂದೊಡವುಡಲ" (ಮಂಗರಾ. ೪೧-೩೪); ಅಗಳಾ ವಿಷಮಕೋದಂಡಮ ನೇರಂಡಕಾಂಡಮಂ ಬಗೆವಂತೆ ಬಗೆದು (ಪಂರಾಮಾ. ೫-೮೬ ವ); ಕಲ್ಲು ಕುದುರೆಯ ಕಾಲಿಗೆ ತಾಗಿ ಅದು ಐರಂಡದ ಕಡ್ಡಿಯಂತೆ ಮುರಿಯಿತು (ಬುದ್ಧ ಪ. ೪೨). [ಸಂ.]

**ಐರಂಡಕಿಟ್ಟ** (ನಾ). ಹರಳಿನಿಂದ ಎಣ್ಣೆಯನ್ನು ತೆಗೆದ ಮೇಲೆ ಉಳಿಯುವ ಹರಳಿನ ಅವಶೇಷ; ಹರಳು ಮಡ್ಡಿ, —ಹಿಂಡಿ: "ಐರಂಡ ಕಿಟ್ಟದೊಳು ಹೆಟ್ಟಂ" (ಶಬ್ದಮಂ. ೯೦). [ಐರಂಡ + ಕಿಟ್ಟ]

**ಐರಂಡಲ** (ನಾ). ಮೇಲಕ್ಕೆ ಏರುವುದು (?): ಶರಧಿ ಮೇರೆಯ ಮೀರೆ ಸೂರ್ಯನಿಳಿಯೊಳ್ ಚರಿಸೆ ಧರಣಿಯೇರಂಡಲಂಮಾಗೆ ಸತ್ವವ ಬಿಡೆನು (ಲಕ್ಷ್ಮೀಭಾ. ೫-೧). 'ಓರಂಡಲ', 'ಮಾಱಂಡಲ' ಪರಾ. [ಐರು$_2$ (< ಏಱು$_2$) + ಅಂಡಲ$_0$]

**ಐರಕೆ** (ನಾ). ಒಂದು ಜಾತಿಯ ಹುಲ್ಲು (ಕಿ). [ಸಂ. ಐರಕಾ]

**ಐರಗಟ್ಟು** (ಕ್ರಿ). (ಉಕ). (ಕೆಲಸ) ತಡೆದು ನಿಲ್ಲು; ಹರಕತ್ತಾಗು: ಆ ಶ್ರೀಮಂತನಿಂದ ನಮಗ ಐರಗಟ್ಟಿದ್ದರೇ ಏನು. ನೀವು ಇದ್ರ ನಮಗೆಲ್ಲಾ ಇದ್ಹಾಂಗ ಅನ್ನಿರಿ (ತಿಡುಗು. ೪೪). [ಐರ? + ಕಟ್ಟು$_1$]

**ಐರಣ** (ನಾ). ಕರುವಿನ ಸಗಣಿ: "ಐರಣಮೆಂದು ಕಱುವಿನ ಸೆಗಣಿ" (ಕಶಸಾ. ೭-೧೩೨); "ಐರಣಮೆ ವತ್ಸವಿಷ್ಟಿಯೆನಿಕ್ಕುಂ" (ಕವಿಕಂ. ೮೭). [?]

**ಐರಣಿಗ** (ನಾ). ಚಿನ್ನದ ಕೆಲಸ ಮಾಡುವವನು; ಅಕ್ಕಸಾಲೆ: ಆ ಐರಣಿಗನುಂ ಪೆಂಡತಿಯ ವಿಯೋಗದೊಳ್ ... ಬೇ[ಯು]ತ್ತಂ (ವಡ್ಡಾರಾ. ೫೧-೧೧); ಐರಣಿಗೆಱಿಗನಂ ಧಾರಿಣಿಯೊಳಗೆಲ್ಲಂ ಪೋರನ್ತೆ ಪೊಗಳ್ವರಳವಲ್ಲ ಗಂಡಿನೊಳಾರುಂ ದೊರೆಯೆ ಭುವನವಳಯದೊಳ್ (ಸೌಇಇ. IX-i, ೩೧-೭; 966); ವಾಸ್ತವ ದಿಕ್ತಟಂ ಸಮೆದ ಮೂಷೆ ತಮಂ ಸುರಿದಿರ್ದಲಬ್ಧಸಂಪಾಸಿ ಸಮೀರನೇರಣಿಗನಾಗೆ ನಿದಾಘದ ದೀಪವರ್ತಿಯೊಳ್ ಕಾಸೆ ತೆರಳ್ದ ಪಿಂಜರಿಯವೋಲ್ ಕಿಸುಸಂಜೆ ತೆರಳ್ವಿನಂ (ಅಜಿಪು. ೬-೭೦); ಐರಣಿಗರ ಕಮ್ಮಱರ ಸಾಲ್ಗಳ ಭಿರಾಜಿಸುಗುಂ (ಕುಸುಮಾ. ೨-೧೦೮); ಐರಣಿಗರ್ಗೀ ಮಸಿಯಂ ಭೋರನೆ ಕೊಟ್ಟವರ್ಗ ಳಿತ್ತ ಗೋರಸಮಂ ದೊರಕಿಸಿಕೊಂಡೋರಂತಿರೆ ಬರ್ಪುದೆಂದು ಕಳಿಪಿದಳವಳಂ (ದಶಕು. ೧೨-೧೨೪).

[ಪಾಲಿ. ಹೇರಣಿಕ (< ಸಂ. ಹೈರಣ್ಯಕ)]

**ಐರಹಾಕು** (ಕ್ರಿ). ಗುಡ್ಡೆಹಾಕು; ಒಡ್ಡುಹಾಕು: ಕೆಟ್ಟಗದ್ದೆಗೆ ಮನೇ ನೆಲ್ಲು ಐರಹಾಕಿದರು (ಗಾದೆ).

[ಐರ$_0$ (< ಏಱ್$_1$) + ಹಾಕು (< ಪಾಯ್ಕು$_1$)]

**ಐರಹೊತ್ತು** (ನಾ). ಸೂರ್ಯೋದಯದಿಂದ ಮಧ್ಯಾಹ್ನದ ವರೆಗಿನ ಕಾಲ: ಸಜ್ಜನರ ಸ್ನೇಹವು ಇಳಿಹೊತ್ತಿನ ನೆರಳಂತೆ ಹೆಚ್ಚಾಗುತ್ತದೆ. ಕೀಳರ ಸ್ನೇಹವು ಐರಹೊತ್ತಿನ ನೆರಳಿನಂತೆ ಕಡಿಮೆಯಾಗುತ್ತದೆ (ಮುಂಬಯಿ. ೨-೧೬). 'ಇಳಿಹೊತ್ತು' ಪರಾ.

[ಐರ$_0$ (< ಏಱ್$_1$) + ಹೊತ್ತು$_2$ (< ಪೊೞ್ತು)]

**ಐರಾಟ** 'ಏಱಾಟ' ನೋ.

**ಐರಾಟಿಕೆ** 'ಏಱಾಟಿಕೆ' ನೋ.

**ಐರಾಡು** (ಕ್ರಿ). ಮೇಲೆಬರು, —ಬೀಸು: ಐರಾಡೆ ಗಾಳಿ ಉಕ್ಕಿ ಹಾರಾಡು ಕಾವ ಹಕ್ಕಿ (ಗಂಗಾತ. ೧೮-೯). [ಐರು$_1$ (< ಏಱ್$_1$) + ಆಡು$_1$]

**ಐರಿ$_1$**, ಏಱಿ (ನಾ). ೧. (ನೀರನ್ನು ನಿಲ್ಲಿಸುವುದಕ್ಕಾಗಿ ಹಾಕುವ) ಎತ್ತರವಾದ ಕಟ್ಟೆ; ಎತ್ತರವಾದ ದಂಡೆ, —ದಿಣ್ಣೆ: ತಾಯೂರ ಪಱಿಕೆಱಿ ಬಸವಯತನ್ನ ಪರ ಏರಿಯ ಜೋಳದ ಕೆಯ್ಯು ಪಱಿ ಕಮ್ಮಳದೆಡ ಕೆಯ್ಯಿ (ಎಕ. III, ನಂಜನ. ೯೭-೬; 898 ?); ನೆಱೆದಿರ್ದೇರಿಯನೇಱಿತ ಪ್ಪೆಡೆಗಳೊಳ್ (ಪಂಚತಂ. ೩೦೪-೧೩); ಏರಿಯ ಕೆಳಗೆ ಬಿದ್ದ ನೀರು ಪೂರ್ವದ ತಟಾಕಕ್ಕೆ ಏಱಬಲ್ಲುದೆ (ಏಲೇಶ್ವ. ४೧); ಏರಿಯನೀಡಿಱಿವೋಳಿಯೆ ನೀರುಣ್ಬ ಕನಲ್ವ ಪೋರ್ವ ... ಗೋರಾಜಿಯ ಲೀಲೆ ಕಣ್ಗೆ ಪಡೆದುದು ಚೆಲ್ವಂ (ಚಂದ್ರಪ್ರ. ೨-೨೭); ಬಾಗಿಲ ಹನುಮ ಭಕ್ತರ ಪಾಲಿಪ ಬಲವಾಗಿ ತಟಾಕದೇರಿಯಲಿ (ಕಂಸವ. ೨-೧೧೧); ಗಾಡಿಯು ಕೆರೆಯ ಏರಿಯ ಮೇಲೆ ಬಂದಿತ್ತು (ಮುನಿಮಾ. ೧೫). ೨. ಎತ್ತರವಾದ ಪ್ರದೇಶ: ಘಾಟಿಯ ಏರಿಯ ತುದಿಯಿಂದ ಕುಹೂ ಹು ಎಂಬ ಕೂಗು ಹೊರಟಿತು (ಮೂರುದಾ. ४). ३. ಕೆರೆ: ತನುವೆಂಬ ಏರಿಗೆ ಮನವೆಂಬ ಕಟ್ಟೆಯ ಮಾಡಿ ಬಲಿದು ಷಡ್ವಿಧಭಕ್ತಿಯೆಂಬ ಸೋಪಾನದಿಂದ ಪರಮಾನಂದ ಜಲವ ತುಂಬಿ ಕೆಱೆಯ ಕಟ್ಟಬಲ್ಲವರನಾರನೂ ಕಾಣೆ (ಅವಚಂ. ೧೭೨-೭೭೩). **ಏಱಿ**: ೧. ಸ್ವಸ್ತಿ ಶ್ರೀ ಪೃಥುವಿ ಕೊಙ್ಗುಣಿ ಅರಸರಾ × × × ಏಱಿ ತೊರೆಕಳ ವೃತ್ತಿ ಕಱಿವೊನ್ಪಞ್ಚಮಹಾಪಾತಕನಕ್ಕುವರ್ (ಎಕ. XVI, ತುಮಕೂ. ೧೦೨-೩; 780); ನೆಯ್ದಿಲ್ಗೆಱೆಯಾ ಏಱಿ ಮೂಡಣ್ಣಾ ಸೀಮೆ ಇಡೆವೆಟ್ಟದಾ ವಡಗಣ್ಣಾ ನೀರಿಜಗ (ಎಇ. XXI, ೨೯-೧೩; 8ನೆಯ ಶತ). ℙ 'ಏಱಿ' ಇಲ್ಲಿ ರೇಫಕ್ಕೆ ಬದಲಾಗಿ ಶಕಟರೇಫ ಬಂದಿದೆ.

[ದೇ. ‖ ತಮಿ. ಏರಿ = ಕೆರೆ, ಜಲಾಶಯ; ಮಲ. ಏರಿ=ದಡ; ತುಳು. ಏರಿ = ತರಕಾರಿ ಬೆಳೆಯುವ ಮಡಿ; ಕೊಡ. ಏರಿ = ಗದ್ದೆಯ ಬದು]

**ಐರಿ$_2$** (ನಾ). (ಕರಾ). ಒಂದು ಜಾತಿಯ ಬಾಳೆ ಮೀನು; ಬೆನ್ನು ಮತ್ತು ಹೊಟ್ಟೆಯ ಅಡಿಯಲ್ಲಿ ಮಾಂಸದ ರೋಮಗಳುಳ್ಳ ಉರುಟು ಮೀನು.

[ದೇ. ‖ ತಮಿ. ಏರಿವಾಳೈ; ಮಲ. ತುಳು. ಏರಿ]

**ಐರಿಕಟ್ಟು** (ಕ್ರಿ). ಒಡ್ಡು ಕಟ್ಟು; ಅಡ್ಡಗಟ್ಟೆ ಕಟ್ಟು: ಮಕ್ಕಳ . , . ವರ್ತನೆಗಳನ್ನು ಅದುಮಿಡಲು ಯತ್ನಿಸಿದರೆ ಆ ಶಕ್ತಿಯ ಪ್ರವಾಹಕ್ಕೆ ಅಡ್ಡಲಾಗಿ ಏರಿಕಟ್ಟಿದಂತೆ (ಶಿಕ್ಷದ. ೭೫೫). [ಐರಿ$_1$ + ಕಟ್ಟು$_1$]

**ಐರಿಕೆ** 'ಏಱಿಕೆ' ನೋ.

**ಐರಿಕ್ಕು** 'ಏಱಿಕ್ಕು' ನೋ.

**ಐರಿಡು** (ಕ್ರಿ). ಒನಕೆಯಿಂದ ಪೆಟ್ಟು ಹಾಕು; ಕುಟ್ಟು: ಅರುತಪ ದೊಳೊಣಗಿಸಿ ದೇಹದೊರಳೆಳಟ್ಟುಯೇರಿಟ್ಟು ಧ್ಯಾನದೊನಕೆಯಾ (ಪೂಜ್ಯಜ. ೧೨-೮೯). [ಐರು$_2$ (< ಏಱು$_2$) + ಇಡು$_1$]

**ಐರಿಪಟ್ಟಿ** (ನಾ). ಏರಿಯ ಕೆಲಸಕ್ಕಾಗಿ ಬಿಟ್ಟ ಜಮೀನು; ದತ್ತಿ: ಏರಿಪಟ್ಟಿ (ಮೈಎಂ. ೧೯೩೨, 185; ?). [ಐರಿ$_1$ + ಪಟ್ಟಿ]

**ಐರಿಸು** 'ಏಱಿಸು' ನೋ.

**ಐರಿಹೊಡೆ** (ಕ್ರಿ). ಮಣ್ಣನ್ನು ಒಂದೆಡೆಗೆ ಎತ್ತರವಾಗಿ ಹಾಕು; ಕಟ್ಟೆಹಾಕು; ಒಡ್ಡುಹಾಕು: ನೆಲದಲ್ಲಿ ಏರಿಹೊಡೆದು ಅವನ್ನು ನಡುವುದು (ಮರಮ. ೧೧). [ಐರಿ$_1$ + ಹೊಡೆ$_1$ (< ಪೊಡೆ$_1$)]

**ಐರಿಳಿತ** (ನಾ). ೧. ಉಬ್ಬರ ಮತ್ತು ಇಳಿತ; ಏರು ತಗ್ಗು; ಉನ್ನತಿ ಅವನತಿ: ಸಮುದ್ರದ ಏರಿಳಿತಗಳು ಸೂರ್ಯನ ಉದಯಾಸ್ತಗಳಂತೆ ಯಾವಾಗಲೂ ತಪ್ಪದೆ ನಿಯಮದಿಂದ ನಡೆಯುತ್ತವೆ (ಮುಂಬಯಿ. ೫-೧೯೯). ೨. ವ್ಯತ್ಯಾಸ; ಬದಲಾವಣೆ; ಹೆಚ್ಚು ಕಡಮೆ: ಸಾರವಿಲ್ಲದ ಬದುಕು ಏರಿಳಿತವಿಲ್ಲದ ಮೇಲೆ ಈ ಉದ್ಯೋಗದಲ್ಲಿ ರಸವಿಲ್ಲ (ಕಾವೇರಿ. ೭).

[ಐರು$_2$ (< ಏಱು$_2$) + ಇಳಿತ (< ಇೞಿತ)]

**ಏರಿಳಿವು** (ನಾ). ದಿಣ್ಣೆ ಮತ್ತು ಹಳ್ಳ; ದಿಬ್ಬ ಮತ್ತು ತಗ್ಗು.
[ಏರು$_2$ (< ಏಱು$_2$) + ಇಳಿವು$_0$ (< ಇೞಿವು)]

**ಏರು$_1$** 'ಏಱ್$_1$' ನೋ.

**ಏರು$_2$** 'ಏಱು$_2$' ನೋ.

**ಏರು$_3$** 'ಏರ್' ನೋ.

**ಏರುಂಬಳ್ಳಿ** (ನಾ). ೧. ಏರುತ್ತಿರುವ ಬಳ್ಳಿ. ೨. ಒಂದು ಜಾತಿಯ ಗಿಡ, —ಬಳ್ಳಿ (ಕಿ). [ಏರು$_1$ (< ಏಱ್$_1$) + ಬಳ್ಳಿ]

**ಏರುಂಬಿಸಿಲು, ಏರುಬಿಸಿಲು** (ನಾ). ಮೇಲೆ ಏರುತ್ತಿರುವ ಬಿಸಿಲು: ಏರುಂಬಿಸಿಲ ಹಿಮದ ಹನಿಯಂತೆ . . . ಮಾಯವಾಗಿ ಹೋಗುವವನು (ಮಂತ್ರಶ. ೧೩೬–೬). **ಏರುಬಿಸಿಲು**: ಅಲ್ಲಲ್ಲಿ ನಕ್ಷತ್ರಗಳಂತೆ ಅರಳಿದ ದೇವಗಣಿಗಿಲೆ ಹೂವಿನ ಪರಿಮಳ, ಏರುಬಿಸಿಲಿನ ಹಗಲಿನಲ್ಲೂ ಹೃದಯಕ್ಕೆ ತಂಪು ನೀಡಿತ್ತು (ಹಂಗೀತೆ. ೧೮).
[ಏರು$_1$ (< ಏಱ್$_1$) + ಬಿಸಿಲು (< ಬಿಸಿಲ್)]

**ಏರುಕಂದಾಯ** (ನಾ). ನೇಗಿಲು ಅಥವಾ ಏರಿನ ಮೇಲೆ ಹಾಕುವ ಸುಂಕ (ಕಿ). [ಏರು$_3$ (< ಏರ್) + ಕಂದಾಯ]

**ಏರುಕಟ್ಟು** 'ಏರ್ಕಟ್ಟು' ನೋ.

**ಏರುಕಾಣಿಕೆ** 'ಏರುಗಾಣಿಕೆ' ನೋ.

**ಏರುಗಚ್ಚೆ** (ನಾ). ಏರಿಸಿ ಕಟ್ಟಿದ ಕಚ್ಚೆ; ಅಂಡು ಕಚ್ಚೆ: ಬೀದಿಯಲ್ಲೆಲ್ಲ ನೀರು ಹರಿಯುತ್ತಲಿದೆ. ಏರುಗಚ್ಚೆ ಹಾಕಿಕೊಂಡೇ ಹೋಗಬೇಕು (ರೂಢಿ). [ಏರು$_1$ (< ಏಱ್$_1$) + ಕಚ್ಚೆ]

**ಏರುಗಟ್ಟು** 'ಏರ್ಗಟ್ಟು' ನೋ.

**ಏರುಗಡಲ್** (ನಾ). ಮೇಲೆ ಉಕ್ಕಿಬರುತ್ತಿರುವ ಕಡಲು: ಏರುಗಡಲಿಳಿತವಾಯ್ತು ಮತ್ತೆ ತಲೆಯೆತ್ತದಾಯ್ತು (ಪಾರಸಿ. ೩೪–೧೧).
[ಏರು$_1$ (< ಏಱ್$_1$) + ಕಡಲ್]

**ಏರುಗಾಣಿಕೆ, ಏರುಕಾಣಿಕೆ** (ನಾ). ನೇಗಿಲು ಅಥವಾ ಏರಿನ ಮೇಲೆ ಹಾಕುವ ಸುಂಕ: ನಿಮಗೆ ನಾವು ಕೊಟ್ಟುಯಿರುವ ದೇವಾಪುರಕೆ ಏರುಗಾಣಿಕೆ ಕಾಣಿಕೆ (ಎಕ. IX, ಹೊಸಕೋ. ೪–೯; 1581); ಎತ್ತಿನ ಒಡೆಯ ದೇವರಿಗೆ ಏರುಗಾಣಿಕೆಯನು ಬಿಟ್ಟುಕೊಟ್ಟರು (ಮೈಆರಿ. ೧೯೨೯, ೩೧–೭; ?). **ಏರುಕಾಣಿಕೆ**: ಈ ವೃತ್ತಿಗೆ ಸಲ್ಲುವ . . . ಈಚಲ ಪೈರು ಪುರವರ್ಗ ಏರುಕಾಣಿಕೆ ಗುರುಕಾಣಿಕೆ ಕಾಣಿಕೆ ಬೀಡಿಕೆ (ಹುಟ್ಟಿಹ. ೩); (ರೈಸ್‌ಗ. ೫೪೭ ನೋ). [ಏರು$_3$ (< ಏರ್) + ಕಾಣಿಕೆ]

**ಏರುಗಾವು** (ನಾ). (ಬೆಣ್ಣೆಕಾಸುವಾಗ) ಹೆಚ್ಚಾದ ಕಾವು; ಕಾವು ಏರುವಿಕೆ: ಸ್ವಲ್ಪಹೆಚ್ಚಾದರೆ ಏರುಗಾವು, ಕೊಂಚ ಕಡಿಮೆಯಾದರೆ ಇಳಿಗಾವು (ದಾಬುತ್ತಿ. ೧೪). [ಏರು$_1$ (< ಏಱ್$_1$) + ಕಾವು$_2$]

**ಏರುಗೊರಳು** (ನಾ). ಎತ್ತಿದ ಕೊರಳು; ಜೋರಾದ ಧ್ವನಿ: ವನಮಾಲಿ ಎಚ್ಚತ್ತದ್ದು ನೋಡಿ ಹರಿದಾಸನು ಒಮ್ಮಿಗೇ ಏರುಗೊರಳಿನಿಂದ ಕೇಳಿದನು (ಇಪ್ಪಕ. ೪೨೫).
[ಏರು$_1$ (< ಏಱ್$_1$) + ಕೊರಳು (< ಕೊರಲ್)]

**ಏರುಗೋಲ್** (ನಾ). (ಬೆಟ್ಟ) ಹತ್ತಲು ಬಳಸುವ ದೊಣ್ಣೆ: ಏರುಗೋಲ್ಗಳೆಲ್ಲಿ? (ಪರಿವಾರದವರಲ್ಲಿ ಒಬ್ಬನು ಎಲ್ಲರಿಗೂ ಏರುಗೋಲ್ಗಳನ್ನೀಯುವನು) (ಸುಗುಗಂ. ೫೧–೧). [ಏರು$_1$ (< ಏಱ್$_1$)+ಕೋಲ್]

**ಏರುಜವ್ವನ** 'ಏಱುಂಜವ್ವನ' ನೋ.

**ಏರುಜವ್ವನೆ** 'ಏಱುಂಜವ್ವನೆ' ನೋ.

**ಏರುಜೀರು** (ನಾ). [ಸಂಗೀತ] ತಾರಧ್ವನಿ; ತಾರಸಪ್ತಕ: ಏರುಜೀರಿನಲಿ ರಾಗ ನಡೆದಿರಲು ತಂತಿ ಹರಿಯುವಂತೆ (ಹೃದಸ. ೭೪–೧೫).
[ಏರು$_1$ (< ಏಱ್$_1$) + ಜೀರು]

**ಏರುತೆ** (ನಾ). (?): ಪಱಿಗೋಲು, ಪಡಗು . . . ಕೆಱಿ, ಏರುತೆ, ಏತ . . . ಕರೆ, ಎಲ್ಲೆ –ಮುಂತಾದುವು ಅವರು ನೀರ್ಬಟ್ಟೆಯನ್ನು ತಿಳಿದವರಾಗಿದ್ದರೆಂದೂ . . . ಸಾರುತ್ತವೆ (ಭಾಷಾಶಾ. ೨೫೬). [?]

**ಏರುದಾಣ** (ನಾ). ಎತ್ತರವಾಗಿರುವ ಸ್ಥಾನ, —ಜಾಗ; ದಿಣ್ಣೆ: ಊರವರು ದೇಗುಲಕೆ ಹೋಗಿ ಪೂಜಿಪರು ಊರಹೊರಗಣ ಬಯಲಿಗಾವು ಸಾರುವೆವು ಏರುದಾಣಕೆ ಹೋಗಿ ದೂರದಗ್ರವ ಸೇರಿ (ವಿಸೀಗೀ. ೬೦). [ಏರು$_2$ (< ಏಱು$_2$) + ತಾಣ]

**ಏರುದಿಣ್ಣೆ** (ನಾ). ಎತ್ತರವಾದ ದಿಣ್ಣೆ, —ಗುಡ್ಡ: ಏರುದಿಣ್ಣೆಯ ಬೆನ್ನೇಣಿ (Chine. ಇಂಕನಿ). [ಏರು$_2$ (< ಏಱು$_2$) + ದಿಣ್ಣೆ]

**ಏರುಪೇರು** (ನಾ). ೧. ಹಳ್ಳತಿಟ್ಟು; ಸಮನಾಗಿಲ್ಲದಿರುವುದು: ದಾರಿಯಲ್ಲಿ ಏರುಪೇರುಗಳಿರುವುದರಿಂದ ತಮ್ಮ ಪ್ಪವು ನೆರವೇರಲಾರದು (ಚಿನ್ನಬೇ. ೧೬೬). ೨. ಹೆಚ್ಚು ಕಡಮೆ; ಏರಿಳಿತ: ಕಮಲ ತುಂಬ ಸೂಕ್ಷ್ಮವಾಗಿ ನನ್ನ ಮನಸ್ಸಿನ ಏರುಪೇರುಗಳನ್ನು ಅವಲೋಕಿಸುತ್ತಿದ್ದಳು (ಬದುಜ. ೨೨೧); ವಿಧಿಗೆ ಸಂಸಾರದಲ್ಲಿ ಏರುಪೇರುಗಳನ್ನು ಗಂಟುಹಾಕುವುದು ತುಂಬ ಪ್ರಿಯ (ಬಂಕಿಮ. ೨೧೯). ೩. (ತಕ್ಕಡಿ) ಸಮತೂಕವಿಲ್ಲದಿರುವಿಕೆ.

ಏರುಪೇರುಕಟ್ಟು = ತಕ್ಕಡಿ ಸಮತೋಲವಿಲ್ಲದಿರುವಾಗ ಭಾರ ಕಡಮೆಯಿರುವ ಕಡೆಗೆ ಪೇರುಕಟ್ಟಿ ಸಮಪಡಿಸು (ಕಿ).
[ಏರು$_2$ (< ಏಱು$_2$) + ಪೇರು]

**ಏರುಪ್ರಾಯ** (ನಾ). ಏರುತ್ತಿರುವ ಯೌವನ; ಹೊಸಪ್ರಾಯ: ಏರುಪ್ರಾಯದ ಹೆಣ್ಣಿಗೆ ಮನಸ್ಸೇ ಸಲುಗೆಯಿಂದ ನಡೆಯುವಂತೆ ಅವಕಾಶ ಕೊಟ್ಟದ್ದೂ ನಾವೇ ತಾನೆ? (ಮರಳಿ. ೮೨).
[ಏರು$_1$ (< ಏಱ್$_1$) + ಪ್ರಾಯ]

**ಏರುಬಾಚು** (ಕ್ರಿ). ಮೇಲೆ ಎತ್ತಿ ಬಾಚು: ಆಕೆ ಕುರೂಪಿ; ನಂದಿಯ ಕೋಲಿನಂತೆ ಉದ್ದವಾದ ಸೊರಗಿದ ದೇಹ . . . ಏರುಬಾಚಿದ ಕೂದಲು ಇತ್ಯಾದಿ ಆಕೆಯ ಕುರೂಪತ್ವದ ಸೊತ್ತುಗಳು (ಭೂಮಿತಾ. ೭೨).
[ಏರು$_1$ (< ಏಱ್$_1$) + ಬಾಚು$_1$ (< ಬಾರ್ಚು$_1$)]

**ಏರುಬಿಸಿಲು** 'ಏರುಂಬಿಸಿಲು' ನೋ.

**ಏರುಬೆಟ್ಟ** (ನಾ). ಬೆಟ್ಟವನ್ನು ಏರಿಕೊಂಡುಹೋಗುವ ದಾರಿ: ಆ ದಾರಿ ಏರುಬೆಟ್ಟದ ಮೇಲೆ ಹಾದುಹೋಗುತ್ತಿತ್ತು (ಪುನರು. ೫೧೯).
[ಏರು$_2$ (< ಏಱು$_2$) + ಬೆಟ್ಟ]

**ಏರುಬ್ಬಸ** (ನಾ). ಹೆಚ್ಚಾಗುತ್ತಿರುವ ಉಬ್ಬಸ; ಕಷ್ಟದಿಂದ ಉಸಿರಾಡುವುದು; ಕಠಿಣ ಶ್ವಾಸೋಚ್ಛ್ವಾಸ (ಕಿ).
[ಏರು$_1$ (< ಏಱ್$_1$) + ಉಬ್ಬಸ]

**ಏರುಮಣೆ** 'ಏರ್ಮಣೆ' ನೋ.

**ಏರುಮಣ್ಣು** (ನಾ). ಏರಿಸಿದ ಮಣ್ಣು; ಒಡ್ಡಿದ ಮಣ್ಣು: ಶಿವರಾಯನ ಕಾಲು ಗೋರಿಯ ಏರುಮಣ್ಣಿಗೆ ತಗಲಿದೆ. ಒಂದಿಷ್ಟು ಮಣ್ಣು ಜಾರಿತು (ವಾಸನಾ. ೧೪). [ಏರು$_1$(< ಏಱ್$_1$) + ಮಣ್ಣು (< ಮಣ್$_3$)]

**ಏರುಮಾರು** 'ಏಱುಮಾರು' ನೋ.

**ಏರುಮೊಳೆ** (ನಾ). ಎತ್ತರವಾದ ಮೊಳೆ: ಪಾದರಕ್ಷೆಗಳಿಗೆ ತೊಡಿಸಿದ ಏರುಮೊಳೆ (Spur. ಇಂಕನಿ). [ಏರು$_2$ (< ಏಱು$_2$) + ಮೊಳೆ$_2$]

**ಏರುವಡೆ** 'ಏರ್ವಡೆ' ನೋ.

**ಏರುವೆ** (ನಾ). ಏರುವಿಕೆ: ಏಕರಸದೇರುವೆಯೊಳೆಸೆಯಲೀಯೆಡೆ ಎಲ್ಲ ಜೀವರತಿ (ಮಲೆದೇ. ೩೮–೧೧). [ಏರು$_1$ (< ಏಱ್$_1$) + –ವೆ]

**ಏರುವೋರೆ** (ನಾ). "ಏರುದಿಣ್ಣೆ; ಗುಡ್ಡದ ಅಥವಾ ಬೆಟ್ಟದ ಏರುವೋರೆ" (Acclivity, ಇಂಕನಿ). [ಏರು$_2$ (< ಏಱು$_2$) + ಓರೆ$_1$]

**ಏರುಸುಂಕ** (ನಾ). ನೇಗಿಲು ಅಥವಾ ಏರಿನ ಮೇಲೆ ಹಾಕುವ ಸುಂಕ (ಕ). [ಏರು$_3$ (< ಏರ್) + ಸುಂಕ]

**ಏರುಸುತ್ತು** (ನಾ). ಸುತ್ತುತ್ತಾ ಮೇಲೆ ಹೋಗುವುದು : ಆ ಕೊಟಡಿಯ ಬಲಬದಿಯಲ್ಲಿ ದೊಡ್ಡ ದೊಂದು ಬಾಗಿಲ ಗೂಡೂ, ಒಂದು ಮೇಜೂ ಮತ್ತು ಎಡಬದಿಯಲ್ಲಿ ಏರುಸುತ್ತಿನ ಮೆಟ್ಟಲೂ ಇದ್ದುವು (ಪುನರು. ೩೫೮). [ಏರು$_1$ (< ಏಱ್$_1$) + ಸುತ್ತು$_2$]

**ಏರೇರಿಕೆ** (ನಾ). ಮೇಲೆ ಮೇಲೆ ಹೋಗುವಿಕೆ; ಜೋರು ಜೋರು : [ಒಬ್ಬೊಬ್ಬರು ಒಂದೊಂದು ನಾಮಗರ್ಜನೆಯನ್ನು ಏರೇರಿಕೆಯ ಮೇಲಾಟದ ದನಿಯಲ್ಲಿ ಹೇಳುವರು] (ಹೊಸಂಸಾ. ೨೧).
[ಏರು$_3$ (< ಏಱು$_1$) + ಏರಿಕೆ (< ಏಱಿಕೆ)]

**ಏರ್ಕಟ್ಟು**, ಏರುಕಟ್ಟು (ಕ್ರಿ). ನೇಗಿಲನ್ನು ಕಟ್ಟು; ಆರು ಹೂಡು : ಊರ ಮುಂದಿರುವ ಬಸವನ್ಗೆ ಕೈಮುಗಿದು ಏರ್ಕಟ್ಟೋ ಮುದ್ದು ಮೊಕದವನೆ (ಹಳ್ಳಿಯ. ೪೧). **ಏರುಕಟ್ಟು** : ಊರಿಗೆ ಮಳೆ ಹುಯ್ದು ಏರು ಕಟ್ಟೊ ಕಂದಯ್ಯ (ಹಳ್ಳಿಹಾ. ೯). [ಏರ್ + ಕಟ್ಟು$_1$]

**ಏರ್ಕೆ** 'ಏಱಿಕೆ' ನೋ.

**ಏರ್ಗಟ್ಟು**, ಏರುಗಟ್ಟು (ಕ್ರಿ). ಮೇಲೆ ಎತ್ತಿ ಕಟ್ಟು : ಪಿರಿದುಂ ಥಟ್ಟು ಮಗುಳ್ಚುವುಳ್ಳಲರನಾಯ್ದೇರ್ಗಟ್ಟುವಾ ಚಿತ್ರಮಂ ಬರೆವಾ (ಚಂದ್ರಪ್ರಭು. ೧೫-೬೪). **ಏರುಗಟ್ಟು** : ನೋಡೋಣ ಈಕೆ ಏನು ಮಾಡ್ತಾಳೋ, ಹೇಗೆ ಬಯ್ತಾಳೊ ಅಂತ ನಾನೂ ಪಂಚೆ ಏರುಗಟ್ಟಿ, ತಲೆಗೆ ಟವಲ್ ಸುತ್ತಿಕೊಂಡು ತೋಳು ಮುದುರಿಕೊಂಡು ವೇಷ ಬದಲಿಸಿದೆ (ಬೆಳುಮ. ೨೪೦). [ಏರ್$_0$ (< ಏಱ್$_1$) + ಕಟ್ಟು$_1$]

**ಏರ್ಗಡೆ** (ನಾ). ಮೇಲ್ಭಾಗ; ಮೇಲ್ಗಡೆ : ನಾರಿಯರ ಲಂಪಟದಿ ಕ್ರೀಡಿಸುತ್ತಿರ್ದಪಂ ಬಲದ ಪರಿವೇಷ್ಟಿಯಿಂದೇರ್ಗಡೆಯೊಳು (ಪರಶು. ೧೩-೩೩). [ಏರ್$_0$ (< ಏಱು$_2$) + ಕಡೆ]

**ಏರ್ಜವ್ವನೆ** 'ಏಱುಂಜವ್ವನೆ' ನೋ.

**ಏರ್ತೆ** (ನಾ). ಉಬ್ಬರ; ಅಲೆ. [← ತುಳು. ಏರ್ತೆ]

**ಏರ್ದಳೆ** (ಕ್ರಿ). ಗಾಯಗೊಳ್ಳು : ಏರ್ದಳೆದು ನೊಂದ ಕಾಳ್ಪಂದಿಯಂತವನಾ ಧನುರ್ದಂಡ ಶರಮನೊರ್ಕೆಗೊಂಡು ಗುಡುಗುಡಿಸಿ (ಚಬಪು. ೪೯-೪೨). [ಏಱ್$_4$ + ತಳೆ$_1$]

**ಏರ್ನಾಡು** (ನಾ). ಎತ್ತರವಾದ ಪ್ರದೇಶ : ಏರ್ನಾಡಿನಲ್ಲಿ ಚಳಿಮಳೆಗಳು ಬಹಳ (ರೂಢಿ). [ಏರ್$_0$ (< ಏಱು$_2$) + ನಾಡು]

**ಏರ್ಪಟ**(ನಾ). ವಿಶೇಷ(?): ಉಂಡಮನೆಗೆರಡನೆಣಿಸಿದೇರ್ಪಟದ ದ್ರೋಹದಿಂದೆಳಿಯದಿಹೆ (ಪರಶು. ೩೧-೧೯); ಹಿರಣ್ಯಾಕ್ಷನಂ ಸೀಳಿದಂ ವರಹನಾಗೇರ್ಪಟದೊಳು ಸುಮತಿ ಪ್ರಹ್ಲಾದನಂ ಪತಿಕರಿಸಿ (ಪರಶು. ೩೮-೧೫). [?]

**ಏರ್ಪಡಿಸು** (ಕ್ರಿ). ೧. ನೇಮಿಸು : ನೀಂ ಕವಲ್ಮನಮನುಱಿದು ಗೋವಂ ಪೂಜಿಸೆಂದು ವಿಧಿಯನೇರ್ಪಡಿಸಿ ಜಾಬಾಲಿತಾಂ ಬೀೞ್ಕೊಂಡಂ(ರಾಮಾಶ್ವ. ೧೦೭-೨೩). ೨. ರಚಿಸು; ನಿರ್ಮಿಸು; ಸ್ಥಾಪಿಸು : ನಿನಗೆನ್ನೊಳ್ ದಯೆಯಿರ್ಕುಮಪ್ಪೊಡೆ ಲೋಗರಸುವಿಗೊಂದು ದಮ್ಮಣಿಯನೇರ್ಪಡಿಸ್ಕೆ (ರಾಮಾಶ್ವ. ೩೮-೨೩); ಶ್ರೀಮಧ್ವಾಚಾರ್ಯರು ಏರ್ಪಡಿಸಿದ ಎಂಟು ಮಠಗಳ ಪೂಜಾಕಾಲದ ಅವಧಿಯನ್ನು ಎರಡು ತಿಂಗಳಿಂದ ಎರಡು ವರ್ಷಕ್ಕೇರಿಸಿ (ಜಗದಾ. ೯೭). ೩. ಸಮಾಧಾನ ಮಾಡು; ಸಂತೈಸು : ಕಾರ್ಪಣ್ಯ ದೀನತೆಯೊಳಗಿಬರಂಡಲೆಯಲ್ಕೆ ಏರ್ಪಡಿಸಿ ಚಿತ್ತಮಂ ತರಳಾಕ್ಷಿ ನಿಸಿನಸಿದ ನೀರ್ಪೂವಿನಲರಂತೆ (ಪರಶು. ೭-೨೬). [ಏರ್ಪಡು$_1$ + -ಇಸು$_3$]

**ಏರ್ಪಡು**$_1$ (ಕ್ರಿ). ಕ್ರಮುಗೊಳ್ಳು; ವ್ಯವಸ್ಥಿತವಾಗು. [ಏರ್$_0$ (< ಏಱ್$_3$) + ಪಡು$_1$]

**ಏರ್ಪಡು**$_2$ (ಕ್ರಿ). "ಗಾಯಗೊಳ್ಳು" (ಕಸಾ. ಕೋ. ೧೩೬). [ಏರ್$_0$ (< ಏಱ್$_4$) + ಪಡು$_1$]

**ಏರ್ಪಸವಿಗ**(ನಾ). ಕಾಳಗದಲ್ಲಿ ಆಸಕ್ತಿಯುಳ್ಳವನು; ಯುದ್ಧವ್ಯಸನಿ: ಮಾರ್ಪಡಿಯೆ ಮಾಣನೀ ಭಟನೇರ್ಪಸವಿಗ [ಪಾಠಾಂ. ಏರ್ಪಸದಿಗೆ]ನೀತನಿದಿರ್ಗೆ ಬರಲಾರ್ಪವರಾರ್ (ಕಾವ್ಯಾವ. ೩೦೦). [ಏಱ್$_5$ + ಪಸವಿಗ]

**ಏರ್ಪಾಟು** 'ಏರ್ಪಾಡು' ನೋ.

**ಏರ್ಪಾಡು**, ಏರ್ಪಾಟು (ನಾ). ವ್ಯವಸ್ಥೆ; ಸಿದ್ಧತೆ : '...ಆಗ ಏನೇನು ಏರ್ಪಾಡು ಮಾಡಬೇಕು? ಏನು ಯೋಚನೆ ಮಾಡಿದ್ದೀರಿ?' ಎಂದು ಕೇಳಿದನು (ಕಿಂಕಥೆ. ೨೧); ಏರ್ಪಾಡಂತೂ ಹೇಗೋ ಆಗೇ ಆಗುತ್ತದೆ (ಬಾಣಅ. ೭೪). **ಏರ್ಪಾಟು** : ಎಳೆಂಟು ದಿನಗಳ ಮುಂಚೆಯೇ ಅದರ ಏರ್ಪಾಟು ಮಾಡಿದ್ದಾಗಿದೆ (ಆಶ್ರಮು. ೮೫); ತಕ್ಕ ಶಿಕ್ಷಣವನ್ನು ಪಡೆಯುವ ಏರ್ಪಾಟು ನಡೆಯಿತು (ಕ್ರಿಯಾಶಿ. ೯೬).

**ಏರ್ಪಾಟಾಗು** = ಸಿದ್ಧವಾಗು : ಭೋಜನ ಏರ್ಪಾಟಾಗಿತ್ತು (ಕಂಬಹು. ೧೨೭). [< ಏರ್ಪಡು$_1$]

**ಏರ್ಪೂ ?** (ಕ್ರಿ). (?) : "ಏರ್ಪೂತುದು = ತಡಂಬೊಯ್ದುದು" (ಶಮುದ. ಕ. ಪಂ. ೨). ℙ ಇಲ್ಲಿ ಏನೋ ತಪ್ಪು ಪಾಠವಿರಬಹುದು. ಕಿಟೆಲ್ ಅವರು 'ಏರ್ಪೂನ್[ಣ್]' ಎಂದು ಬಿಡಿಸಿ ಪ್ರತಿಭಟಿಸು ಎಂದು ಅರ್ಥೈಸುತ್ತಾರೆ. 'ಏರ್ಪೂತುದು' ಎಂದಿದ್ದರೆ ಎಲಚಿ ಹೂಬಿಟ್ಟಿತು ಎಂದಾಗುತ್ತದೆ. [?]

**ಏರ್ಪೆಱು** (ಕ್ರಿ). ಗಾಯ ಪಡೆ, —ಹೊಂದು : ಏರ್ಪೆತ್ತರೇರ್ಪೆತ್ತರಂ ಪದುಳಂ ಮಾಱ್ಪುದುಚಿತಂ (ಶಮುದ. ೯೬ ಪ್ರಯೋ). [ಏಱ್$_4$ + ಪೆಱು$_1$]

**ಏರ್ಬೆಸನ** 'ಏರ್ವೆಸನ' ನೋ.

**ಏರ್ಮಣೆ**, ಏರುಮಣೆ (ನಾ). ಎತ್ತರವಾದ ಮಣೆ, —ಪೀಠ: ಸಿಂಹಾಸನದ ಬಳಿಯ ಮನ್ನಣೆಯ ಮನ್ನೆಯರ ಏರ್ಮಣೆಗಳಿರ್ದೆಡೆಗೆ (ಶ್ರೀರಾಮಾ. ೫೬೭-೪೧೫). **ಏರುಮಣೆ** : ತಾನು ಕುಳಿತಿದ್ದ ಏರುಮಣೆಯನ್ನು ಪಕ್ಕಕ್ಕೆ ಸರಿಸಿ "ಕುಳಿತುಕೊಳ್ಳಿ ..." ಎಂದಳು (ದೇವಹಂ. ೧೫೫). [ಏರ್$_0$ (< ಏಱು$_2$) + ಮಣೆ]

**ಏರ್ಮರ** (ನಾ). ಬೆಳೆಯುತ್ತಿರುವ ಮರ (ಸ್ಯಾಂಡರ್). [ಏರ್$_0$ (< ಏಱ್$_1$) + ಮರ]

**ಏರ್ಮಳಲು** (ನಾ). ಮರಳಿನ ಒಡ್ಡು (ಸ್ಯಾಂಡರ್); "ಉಸುಬಿನ ರಾಶಿ"(ಗಂಗಾವು. ೫೪). [ಏರ್$_0$(< ಏಱ್$_1$) + ಮಳಲು(< ಮಳಲ್)]

**ಏರ್ಮಾಣ್** (ಕ್ರಿ). ಗಾಯ ವಾಸಿಯಾಗು; ಗಾಯ ಮಾಯ್ದು ಹೋಗು : ಕೆಸರ್ಮಸಗಿದುದು; ಏರ್ಮಾಣ್ದುದು (ಶಮುದ. ೧೮೩ ಪ್ರಯೋ). [ಏಱ್$_4$ + ಮಾಣ್$_1$]

**ಏರ್ಮೊಗ್ಗೆ** (ನಾ). ಮೊಳೆಯುತ್ತಿರುವ ಮೊಗ್ಗು (ಸ್ಯಾಂಡರ್). [ಏರ್$_0$ (< ಏಱ್$_1$) + ಮೊಗ್ಗೆ]

**ಏರ್ಮೊಳೆ** (ನಾ). ಮೇಲೆ ಬರುತ್ತಿರುವ ಮೊಳಕೆ (ಸ್ಯಾಂಡರ್). [ಏರ್$_0$ (< ಏಱ್$_1$) + ಮೊಳೆ$_2$]

**ಏರ್ವಡೆ**, ಏರುವಡೆ, ಏಱುವಡೆ (ಕ್ರಿ). ಗಾಯವನ್ನು ಹೊಂದು; ಗಾಯಗೊಳ್ಳು : ಬಡವೊಡಲಂತೆ ಜೋಲ್ದು ಏರ್ವಡೆದ ಪಂದೆಯಂತೆ ತಲ್ಲಣಿಸಿ (ಧರ್ಮಾಮೃ. ೧-೧೬೪); ಇಂತು ದೇವ ಕಾಮನ ಪರಿವಾರದಿಂದೇರ್ವಡೆದು ... ಪುಲ್ಲೆ ಬಸವಳಿದು ಬಿರ್ದಂತೆ (ನಂಬಿರ. ೧೨೭-೧); ವಿಗಡರೇರ್ವಡೆದು ಸೈಗೆಡೆದರಿಳೆಯೊಳ್ (ಜೈಮಿಭಾ. ೨೩-೬). **ಏರುವಡೆ** : ತೇರ ಕುದುರೆಗಳ್ ಧರಣಿಗೊರಗಿದವೇರುವಡೆದಸುವಳಿದನಸುರನ ಸಾರಥಿಯು (ಅರ್ಜಾವಿ. ೮-೩೮). **ಏಱುವಡೆ** : ಏಱುವಡೆದನು ಶಲ್ಯ ರಕುತವ ಕಾಱಿದನು ದುಶ್ಶಾಸನನು (ಕುಮ್ಮಾಭೀ. ೬-೧೯). [ಏಱ್$_4$ + ಪಡೆ$_1$]

**ಏರ್ವರಿ** (ನಾ). ಪಕ್ಕದ ಮೇಲ್ಭಾಗ; ಪಕ್ಕೆಯ ಮೇಲುಭಾಗ: ನಿರಯ ನಿಕರದೊಳ್ ಕೂಟ ಶಾಲ್ಮಲೀ ವೃಕ್ಷ ವಕ್ತ್ರಕಂಟಕಾವಳಿಯೊಳಿದಿರುಂ ಬಱಿಯುಂ ಕಿಡಿವಿಡೆ ಕಾಯ್ದು ಕರ್ಬೊನ್ನ ಹಳಿಗಳಿಂದೇರ್ವರಿಯನಮರ್ಚುವುದುಂ ಉರಿಮಣಲ ಹಸರದೊಳ್ ಪೊರಳ್ಚುವುದುಂ (ಶಾಂತೀಶ್ವ. ೯–೧೧೦ ವ). [ಏಱ್$_0$ (< ಏಱು$_1$) + ಬರಿ]

**ಏರ್ವಲ** (ನಾ). ಯುದ್ಧ ಮಾಡುವ ಶಕ್ತಿ, —ಸೈನ್ಯ: ಭೃತ್ಯಹಯದೋರ್ಬ್ಬಲಮುಳ್ಳಡಮೇರ್ವಲಂಗಳಿಲ್ಲಾಳ್ವೆಸಗೆಯ್ಯದೇಕೆ ಬಲಿವರ್ (ಎಕ. VII, ಶಿಕಾರಿ. ೧೩೬–೨೬; 1098).
[ಏಱ್$_5$ + ಬಲ]

**ಏರ್ವಾಯ** (ನಾ). (?) ಧನಂಜಯಂ ತದ್ವೇಣುಪುಂಜಂ ತನಗೆ ದುರಾರೋಹಣಮುಪ್ಪುದಱಿನೇರ್ವಾಯಮುಪ್ಪಿಸುವಿಂದಿಸುವುದುಂ (ನೇಮಿಪು. ೧೦–೫೧ ವ). ℙ ಇಲ್ಲಿ "ದುರಾರೋಹಣಮುಪ್ಪುದಱಿನಿರ್ವಾಯ" ಎಂದು ಇರಬಹುದು. ಇರ್ವಾಯ = ಎರಡು ಬಾಯ, —ಅಲಗಿನ.
[ಏಱ್ ? + ಬಾಯ್$_1$]

**ಏರ್ವೆಸ** (ನಾ). ಯುದ್ಧ ಕಾರ್ಯ; ಯುದ್ಧ ಮಾಡುವ ಪ್ರಯತ್ನ: ಪೂರ್ವಾಪರ ಜಳನಿಧಿಗಳಗುರ್ವಿಸುವಿನಮೊಂದನೊಂದು ತಾಗುವವೊಲ ಗುರ್ವುರ್ವಿರೆ ಪರ್ವಿ ಚತುರ್ಬಲಮೇರ್ವೆಸದಿಂದಂದು ಬಂದು ತಾಗಿತ್ತಾಗಳ್ (ಪಂಪಭಾ. ೧೦–೬೬); ದೆಸೆದೆಸೆಗೆಸೆವುದುಮದನಾಲಿಸಿ ಚಕ್ರಿಗೆ ಸುರನೊ ದನುಜನೋ ಮೇಣ್ ಪೇೞ್ ಮಾನಸನೊ ರಥಾಂಗಾಯುಧದೇರ್ವೆಸಕ್ಕೆ ಪಕ್ಕಾದನೆನುತುಮಾಱುಂ ಬಲಮುಂ (ಶಾಂತಿಪು. ೩–೯೬).
[ಏಱ್$_5$ + ಬೆಸ]

**ಏರ್ವೆಸನ, ಏರ್ಬೆಸನ** (ನಾ). = ಏರ್ವೆಸ: ಕೊಳಲ್ಕಾಗದೆಂಬೆಸಕಂ ಚಿತ್ತದೊಳುಳ್ಳೊಡೀಗಳಿವರೆಮ್ಮಾಚಾರ್ಯರೆಂದೋವದೇರ್ವೆಸನಂ ಮಾಣದೆ ಕೈದುಗೊಳ್ (ಪಂಪಭಾ. ೧–೭೪); ಅರ್ಕಕೀರ್ತಿಯನೇರ್ವೆಸನಂ ಬೇಡಿತಾಗುವಪ್ಪ ಚಂದ್ರರೆಂಬಂಬರಚರರಿಸುವಂಬುಗಳ್ ನಿಜಶರಂಗಳಂ ಖಂಡಿಸೆ (ಚಾವುಂಪು. ೮೦–೮), ಸೂಚಿಸಿದನೇರ್ವೆಸನಂ ಶಿಶುಬಾಲಕೇಳಿಯೊಳ್ (ಪುಷ್ಪಪು. ೪–೫೩). **ಏರ್ಬೆಸನ**: ನಿಜಾಧಿಪಂ ಬೆಸಸಿದೇರ್ಬ್ಬೆಸನಂ ಕುಸಿದಿರ್ಮ್ಮೆ ಕೇಳ್ದು ಬಾಜ್ವುೞಿಪನವ್ಯವಸ್ಥಿತನನೊರ್ಬ್ಬೆಸಕಳ್ಕುವ ಜೋಳಗಳ್ಳರಂ ಪಱಿಯೆ (ಎಕ. II, ೧೩೪–೨೯; 982).
[ಏಱ್$_5$ + ಬೆಸನ]

**ಏಳ** 'ಏಲ' ನೋ.

**ಏಲಂ, ಏಲ** (ನಾ). ಹರಾಜು; ಲಿಲಾವು: ಸಾಲಗಾರರು ಆಸ್ತಿಯನ್ನು ಏಲಂ ಮಾಡಿದರು (ಭ್ರಮಾನ. ೧೫೪); "... ನಿನ್ನ ಕೋಣ ಭತ್ತದ ಬೀಜ ಮೊದಲಾದ ಸೊತ್ತುಗಳನ್ನು 'ಏಲಂ' ಮಾಡಿಸಿ, ನಮಗೆ ಆದ ನಷ್ಟದ ಹಾನಿಯನ್ನು ತುಂಬಿ ಬರುವಂತೆ ಮಾಡದೆ ಬಿಡುವುದಿಲ್ಲ ..." (ಪರಾವ. ೯೫); ಎದುರಿಗೆ ಶೀನಪ್ಪ ಸೇರೆಗಾರರನ್ನು ನಿಲ್ಲಿಸಿಕೊಂಡು ಗುತ್ತೆ ಏಲಂ ಆವನೇ ಪಡೆದನು (ಹಹಸ. ೨೭). **ಏಲ**: ವಾಸುದೇವಯ್ಯ ವ್ಯಾಜ್ಯ ಹೂಡುವರು. ಕೊನೆಗೆ ಆಸ್ತಿ ಏಲವಾಗುವುದು (ತ್ಯಾಗಮ. ೭೪).
[ದೇ. ‖ **ತಮಿ. ಮಲ. ತುಳು.** ಏಲಮ್; **ತೆಲು.** ಏಲಮು, ಯಾಲಮು, ವೇಲಮು. / ಹಿಂ. ನೀಲಾಮ್; **ಮರಾ.** ಲೀಲಾವ್, ಲಿಲಾವ್, ಲಿಲಾವ್; **ಪೋರ್ಚು.** ಲೇಇಲಾವ್]

**ಏಲಕ್ಕಿ, ಏಳಕ್ಕಿ, ಯಾಲಕ್ಕಿ** (ನಾ). ಸುವಾಸನೆಯ ಸಣ್ಣ ಕಾಳುಗಳನ್ನುಳ್ಳ ಒಂದು ಜಾತಿಯ ಕಾಯಿ: "ಏಲೆ ಕೋಳಾಂಗಿಯೆನಲೇ ಲಕ್ಕಿಯಕ್ಕುಂ"(ಮಂಗರಾ. ೪೨–೩೯); ಹಸನಾಗಿಯುದುರುದುರುವಂತಟ್ಟಕೊಳಸಾಱಿಸಿ ಹಲವು ಭಾಗೆಸುಂ ಮಾಡಿ ತನಿವಾಲ ಕೆನೆಮೊಸರ ಕೆನೆಯುಪ್ಪುಳ್ಳಿ ಹಸಿಯಲ್ಲಿಯೇ[ಪಾಠಾಂ. ಯಾ]ಲಕ್ಕಿಯಿಕ್ಕುವುದು (ಸೂಪಶಾ. ೩–೧೫). **ಏಳಕ್ಕಿ**: ಸಾಯಿರಬಳ್ಳಿಯ ಏಳೆ[ಳ]ಕ್ಕಿಯ ತೋಣ್ಣಮುಮಂಕೊಟ್ಟರ್ (ಎಕ. XI, ಚಿತ್ರದು. ೨೬–೧೬; 946 ?). **ಯಾಲಕ್ಕಿ**: ಕಡು ಬಿಳಿದು ಮಾಡಿದೆಳ್ಳಂ ಹುರಿದು ಹಸನಾದ ಗುಡಪಾಕದಲ್ಲಿ ಯಾಲಕ್ಕಿ ನವಕರ್ಪೂರವಿಡುತ ಲಡ್ಡುಗೆಗಳಂ ಕಟ್ಟಿ (ಸೂಪಶಾ. ೧–೫೬); ಯಾಲಕ್ಕಿಯ ಬೀಜಗಳನ್ನು ಹಾಕಬೇಕಾದರೆ ಅಂಗಡಿಗಳಲ್ಲಿರುವ ಕಾಯಿಗಳನ್ನು ತಂದು ಹಾಕಬಾರದು (ಕೃಷಿಪ್ರ. ೧೯೩).
[**ದೇ.** ‖ **ತಮಿ.** ಏಲಂ, ಏಲಕ್ಕಾಯ್; **ಮಲ.** ಏಲಂ; **ತುಳು. ಕೊಡ.** ಏಲಕ್ಕಿ; **ತೆಲು.** ಏಲ, ಏಲಕಿ. / **ಗುಜ.** ಏಲಚೀ; **ಬಂಗಾಳಿ.** ಇಲಾಯಚ; **ಹಿಂ.** ಇಲಾಯಚೀ; **ಮರಾ.** ಏಲಚೀ, ಏಲಾಚೀ. / **ಸಂ.** ಏಲಾ, ಏಲೀಕಾ]

**ಏಲಕ್ಕಿಬಾಳೆ** (ನಾ). ಬಾಳೆಯಲ್ಲಿ ಒಂದು ವಿಧ: ಬಾಳೆಗಳಲ್ಲಿ ಅನೇಕ ಜಾತಿಗಳಿವೆ – ರಸಬಾಳೆ, ಚಂದ್ರಬಾಳೆ, ರಾಜಬಾಳೆ, ಪುಟ್ಟುಬಾಳೆ, ಏಲಕ್ಕಿಬಾಳೆ (ವ್ಯವಮ. ೫೭). [ಏಲಕ್ಕಿ + ಬಾಳೆ$_1$ (< ಬಾೞೆ)]

**ಏಲಪಿತ** (ನಾ). ಏನು ಮಾತು: ಏಲಕ್ಕಿ ಕಟ್ಟುಮೊಸರೊಳ್ ಸಾಲದೆ ಕಟಿಲಾಗಿ ಕುಡಿಸಲಣಲೆಯ ವಿಷಮಂ ಸೋಲಿಸುಗುಂ ಕಣಕಾಂಜಿತ ಮೇಲ [ಪಾಠಾಂ. ಮೇಲಾ] ಪಿತಮುದರ್ಕೆ ಬೇಱೆ ಮರ್ದುಗಳೊಳವೇ (ಖಮುದ. ೨–೯೫). [ಏ$_2$ (< ಏನ್$_1$) + ಲಪಿತ]

**ಏಲಾಗೀತೆ** (ನಾ). ಏಳೆ ಜಾತಿಯ ಒಂದು ಗೀತೆ: ಏಲಾಗೀತೆ (ಗಂಗಾತ. ೧೦೬–೧). [**ಸಂ.** (ಏಲಾ + ಗೀತೆ)]

**ಏಲಾಡು** (ಕ್ರಿ). "ತೂಗಾಡು" (ಜಾನಕೋ. ೨೭).
[ಏಲು + ಆಡು$_1$. / **ತೆಲು.** ವ್ರೇಲಾಡು]

**ಏಲಾಪದ** (ನಾ). = ಏಲಾಗೀತೆ: ಏಲಾಪದ, ಲೀಲಾಪದ, ಆಲಾಪದ ಸರಣಿ (ಗಂಗಾತ. ೧೦೬–೪). [**ಸಂ.** (ಏಲಾ + ಪದ್ಯ$_3$)]

**ಏಲು** (ಕ್ರಿ). ತೂಗಾಡು; ನೇತಾಡು (ಕಿ).
[< ಎಟಲ್. / **ತೆಲು.** ವ್ರೇಲು]

**ಏಲೆ** (ನಾ). ಏಲಕ್ಕಿ: ಘನಮೇಲೆ ಲವಂಗಂ ಚಂದನಂ ಜಟಾಮಾಂಸಿ ಬಾಳಮಿಭಕೇಸರಮೆಂಬನಿತಱ ಕಷಾಯತೋಯಂ ವಿನೂತ ಗಂಧೋದಕಂ ಸಮಸ್ತದೊಳಕ್ಕುಂ (ಲೋಕೋಪ. ೭–೫); ಕಮ್ಮನೆ ಕೆನೆಗೊಂಡ ಗೆಣ್ಣೆಮೊಸರಂ ಸುರಿದೇಲೆಯ ಚೂರ್ಣವಿಕ್ಕಿ ಪೊಯ್ದೊಗುಮಿಗೆ ಬೇಳೆಗೆಯ್ದ ಮೆಱಿಸಂ ತಳಿದು (ಲೀಲಾವ. ೫–೭೦). [**ಸಂ.** ಏಲಾ]

**ಏಲ್ಲಸಿತ** (ನಾ). ಮಂದಪ್ರಕಾಶ; ತೆಳುಗಾಂತಿ: ಸುಗಂಧಮಹೀಂದ್ರನೆ ಗಾಢವೆಂದು ಏಲ್ಲಸಿತವೆಂದು ಪೇಶಲವೆಂದು ಪಿತ್ತೆಕವೆಂದು ಮುಗ್ಧವೆಂದು ಪೃಥುಕವೆಂದು ಆರು ಬಗೆಯಾಗಿಯಿರುವದು ಅದೆಂತೆಂದರೆ ಗಾಢವೆಂಬುವದು ದೂರ್ವಾದಳದ ವರ್ಣವಾಗಿಯಿರುವದು ಏಲ್ಲಸಿತವೆಂಬುವದು ಮಿಂಚುಹುಳುವಿನ ಕಾಂತಿಯಿಂದಿರುವದು ನಿಚ್ಚಳವಾಗಿಯಿರುವದು (ಸೌಗಂಧಿ. ೩೭೭–೧೩). [?]

**ಏವ$_1$** (ನಾ). ೧. ತಿರಸ್ಕಾರ; ಅನಾದರ; ಉಪೇಕ್ಷೆ; ಜುಗುಪ್ಸೆ: ತನಗೆರಡಱಿಯದೊಲ್ದು ನಲ್ಲಳನೇತಱಿಕೊಳಪೊಡಮೇವಮಂ ಮಾಡದೆ ಬೇಟಮಂ ಸಲಿಸುವುದರ್ಕೆ ಸಂತಸಂಬಟ್ಟು (ಪಂಪಭಾ. ೪–೯೨ ವ); ಏತರ್ಕೀಕೆ ಮದೀಯ ವಾಸಗೃಹಮಂ ತಾಂ ಪೊಕ್ಕಳೆಂದೇವದಿಂದಾ ತಾಮ್ರಾಕ್ಷಿಯನೀಕ್ಷಿಸುತ್ತುಮಿರೆ (ಕಾವ್ಯಾವ. ೮೧೦). ೨. ವ್ಯಥೆ; ದುಃಖ: ಅನಾಳ್ವನಾಳ್ಗಳಿವರೆನಗೇನಾಯ್ತೆಂದಱಿದುಮಱಿಯದುದಱಿದಾಂ ನುಡಿದೊಂದೇನಾನುಮೇವಮುಳ್ಳೊಡಮಾ ನುಡಿಯಂ ಮಱೆಯಿಮೆಲ್ಲಮಿಂ ನಿಶ್ಶಲ್ಯಂ (ವಡ್ಡಾರಾ. ೧೩೩–೧೦); ನಿಜನೇತ್ರಾಧ್ವದೊಳಾಗಳಾಗಳದಟಂ ಶ್ರೀಮಾಲಿ ಸತ್ತೇವಮುಂ ನಿಜವಂಶ ಪ್ರಭುವಪ್ಪ ಮಾಲಿಯನಿವಂ ಮುಂಕೊಂದನೆಂಬೇವಮುಂ ನಿಜ ಕೋಪಾಗ್ನಿಗೆ ಕೊರ್ವನೀಯೆ (ಪಂರಾಮಾ. ೧೦–೨೦೯).

೩. ಮತ್ಸರ; ವೈರ; ಕೋಪ: ಪಾರ್ಥನೊಳಗೇವಮೆಂಬ ಬಗೆಯುಳ್ಳೊಡೆ ನಿನ್ನಯ ಪುತ್ರಂ (ಪಂಪಭಾ. ೫–೧೦೨); ಏವದೊಳ್ ಪುದಿದ ತಮ್ಮನ ಚಿತ್ತದೊಳಾಯ್ತು ಸಂತಸಂ (ಶಾಂತಿಪು. ೪–೪); ಲೋಕತ್ರಯಿಜಿಷ್ಣುವನೆನ್ನಂ ಭೂಪನಂದಂ [ತೃಣ] ವೆನೆ ಲಘುವಂ ಮಾಡಿತೆಂದೇವದಿಂ ಕಂತುವೆ ತಾಂ ಪದ್ಮೋದ್ಭವತ್ವಂಬಡೆದು (ಪುಷ್ಪಪು. ೩–೨೩). ೪. ನಾಚಿಕೆ; ಅಪಮಾನ: ಚಿಂತಿಸುವ ಚಿಂತೆಯೊಳತಿಬಳ ನೃಪಾಸ್ಥಾಯಿಕೆಯೊಳ್ ಪುಲ್ಲಿಂ ನೊಚ್ಚದರಾದೆವೆಂಬೇವದೊಳಂ ತಮ್ಮನು ಱಿ ಸೆಱಿಗೆಯ್ದು (ಸುಕುಮಾ. ೨–೩೨ ವ); ಈಕೆಯ ಪೊಕ್ಕುೞ ಚೆಲ್ವೀ ಲೋಕದೊಳತಿ ಸೇವ್ಯಮಿದಱ ಪೊರೆಯೊಳ್ ನಾವಿನ್ನೇಕಿರ್ಪ್ಪೆಮೆಂದು ನೆಱೆ ನೀರಾಕರಮಂ ಪೊಕ್ಕುವೇವದಿಂ ಶಂಖಂಗಳ್ (ಧರ್ಮಾಮೃ. ೩–೧೪೭). ೫. ದೋಷ: ಕಾವರಕ್ಕಸನಂ ಪ್ರಜೆಯಂ ಪರಿವಾರಮಂ ಏವ [ಪಾಠಾಂ. ನು]ಮಂ ಬಗೆಯದಂತಿರೆ ಪೇೞ್ದ (ಕವಿರಾ. ೧–೧೩೨). 'ಹೇವ' ಪರಾ. ℙ ಇಲ್ಲಿ 'ಏವ' ಎನ್ನುವುದನ್ನು ಸಂಸ್ಕೃತವೆಂದು ಭಾವಿಸಿ ಕ್ರಮ,ರೂಢಿ ಎಂದೂ ಅರ್ಥಮಾಡಬಹುದು.

[ದೇ. ‖ ತಮಿ. ಏವ = ಕುಂದು, ತಪ್ಪು; ತೆಲು. ಏವ]

**ಏವ$_2$** (ನಾ). ಪದ್ಧತಿ; ರೂಢಿ; ಮಾರ್ಗ. [ಸಂ.]

**ಏವಂ** 'ಏವು' ಪರಾ.

**ಏವಂಗೊಳ್** (ಕ್ರಿ). ಕೋಪಗೊಳ್ಳು; ಸಿಟ್ಟಾಗು: ನೀಮುಂ ಮನದೊಳೇವಂಗೊಳ್ಳದೆ ಕ್ಷಮಿಯಿಸಿಮೆಂದು ನುಡಿದು (ವಡ್ಡಾರಾ. ೯೧–೨೦); ನಿನ್ನೊಳೇಂ ಸಯ್ದವನಲ್ಲನೆ ಧರ್ಮತನೂಜಂ ಪೇೞ್ದುದನಿನ್ನೆಮಗಿಂಬುಕೆಯ್ ಸ[ಯ್ದನೆ ಅ]ಗುೞಿದಾರೊಳಮೇವಂಗೊಳ್ಳದಿರಿಂ ಫಣಿಕೇತನಾ (ಪಂಪಭಾ. ೧೩–೮೬). [ಏವ$_1$ + ಕೊಳ್$_1$]

**ಏವಂಚ** (ಅ). ಒಟ್ಟಿನಲ್ಲಿ; ಅಂತೂ: ತೈಲಪನು ಆಳುತ್ತಿದ್ದ ತರ್ದವಾಡಿ ಅಲ್ಲಿಂದ ತಕ್ಕಷ್ಟುದೂರ ಉತ್ತರದಲ್ಲಿದೆ; ಏವಂಚ ಇವಲ್ಲಿ ಯಾವೊಂದೂ ಆತನು ಹುಟ್ಟಿದ ಮುಧೋಳವನ್ನು ಒಳಕೊಂಡಿರಲಿಲ್ಲ (ಮೂರುಉ. ೩೭); ಏವಂಚ ಏಕೇಶ್ವರವಾದಿಗಳು ಕೆಲವರು, ಪ್ರವಾಹೇಶ್ವರವಾದಿಗಳು ಕೆಲವರು (ಹಿಂದಸಾ. ೪೯); ಏನೇನು ಮಾತನಾಡಿದರೂ ಏವಂಚ ಅವನ ಸಿಟ್ಟು ಇಳಿಯಲಿಲ್ಲ (ರೂಢಿ). [ಸಂ. (ಏವಂ + ಚ)]

**ಏವಂಬಡೆ** (ಕ್ರಿ). ಮತ್ಸರಗೊಳ್ಳು: ಧರಣೀನಾರಿಗೆ ಪಾಂಡುವಿಂ ಬೞಿಯಮಿಲ್ಲಾರುಂ ಪೆಱರ್ ಗಂಡರಂತಿರಲೇವಂಬಡೆದಿರ್ದೊಡೆಟ್ಟು ಕಿಡುಗುಂ ಸಪ್ತಾಂಗಂ (ಪಂಪಭಾ. ೪–೮). [ಏವ$_1$ + ಪಡೆ$_1$]

**ಏವಣ್ಣಿಸು** (ಕ್ರಿ). ಏನೆಂದು ವರ್ಣಿಸು; ಯಾವರೀತಿ ಹೇಳು: ಜಿತವಿದ್ಯುತ್ಪ್ರಭೆಯಂ ಸ್ವಯಂಪ್ರಭೆಯನಿನ್ನೇವಣ್ಣಿಪೆಂ ಬಣ್ಣಿಪೆಂ (ಆದಿಪು. ೨–೭೬); ಕೃತಿಯಂ ವಿರಚಿಸಿದನಲಂಕೃತಿಯಂ ಕವಿರತ್ನನೆಂದೊಡೇವಣ್ಣಿಪುದೋ (ಗದಾಯು. ೧–೩೨); ನಿಖಿಲದೇಶಂಗಳ ಸ್ವರೂಪವನೇವಣ್ಣಿಸುವೆನು (ಮೋಹತ. ೨–೧೩); ಏವಣ್ಣಿಪೆನುಣ್ಬುದು ಕಲ್ಪಾವನಿಜ (ಶಬ್ದಾನು. ೫೪೨ ವ್ಯಾಖ್ಯಾ). [ಏ$_2$ (< ಏನ್$_1$) + ಬಣ್ಣಿಸು]

**ಏವನ್$_1$** 'ಏವು' ಪರಾ.

**ಏವನ್$_2$** 'ಏವುದು' ಪರಾ.

**ಏವಯಿಸು, ಏವಯ್ಸು, ಏವಿಸು, ಏವೈಸು** (ಕ್ರಿ). ೧. ಅಸಮಾಧಾನಪಡು; ಕೋಪಗೊಳ್ಳು: ಪತ್ತೆಂಟು ಪಲಗೆಯಂ ಮೆಟ್ಟಿಡಿಸಲೆಂದು ಸೋಲ್ತು ಸೋಲದೊಳೇವಯಿಸಿಯಿನ್ನೊಡ್ಡಂ ಕೊಳ್ಳಿಮೆಂದು (ಪಂಪಭಾ. ೬–೭೧ ವ). ೨. ಅಸಹ್ಯಪಡು; ಹೇಸು: ಆ ಮಹಾನುಭಾವನಾ ಜವಂಜವ ವಿಭಾವಕ್ಕೇವಯಿಸಿ ವಜ್ರಜಂಘನೊಳಾತ್ಮೀಯ ಧರಾಭಾರಮಂ ನಿಱಿಸಿ (ಆದಿಪು. ೪–೬೭); ಕಂಡೇವಯಿಸಿ ವರುಣನೆಂಬ ನೈಮಿತ್ತಿಕನಂ ಕರೆದು ಬೆಸಗೊಳ್ವುದುಂ . . . ತನ್ನೊಳಿಂತೆಂದಂ (ಅರ್ಥನೇ. ೭–೬೬ ವ); ಆವರಿಸುವ ಘನದುರಿತಕ್ಕೇವಯಿಸದೆ ದುರ್ಯಶಕ್ಕೆ ಸೆಡೆಯದೆ ಪಿಡಿದಂ (ಶಾಂತೀಶ್ವ. ೫–೧೬೪). ೩. "ವ್ಯಥೆಪಡು" (ಪಂರಾಮಾ. ಕೋಶ): ಜನಪದದ ಪೞಿಗೇವಯಿಸಿ ನೀವಾ ಪರಮೇಶ್ವರಿಯ ಗರ್ಭದೊಳಿರ್ದಂದು ತೊಱೆದು (ಪಂರಾಮಾ. ೧೬–೭ ವ). **ಏವಯ್ಸು**: ೧. ತನ್ನಿನಿಯನಂ ತಡೆದುಬಂದುದರ್ಕೇವಯ್ಸಿ (ಪುಷ್ಪಪು. ೮–೧೧೪ ವ). **ಏವಿಸು**: ೪. "ಹೇವಮಾಡು, ದ್ವೇಷಮಾಡು" (ಕಸ್ತೂಕೋ. ೧೩೬). **ಏವೈಸು**: ೧. ಚಿತ್ರಸೇನಂ ಕೃತವರ್ಮನ ಕೈಯೊಳತೀತನಾದುದರ್ಕೇವೈಸಿ (ಪಂಪಭಾ. ೧೨–೬೧ ವ); ಕಂಜನಾಭನ ಸಮಂಜಿಸಿಕೆಯೊಳೆನ್ನಂ ತೆಗಳ್ದು ನುಡಿದುದರ್ಕೇವೈಸಿ (ಗದಾಯು. ೭–೪೮ ವ). ೨. ಮುಟ್ಟಿದ ಸೀಯನಪ್ಪ ದನಿಯುಂ ಮೇಲ್ವಾಯ್ದುಮೇವೈಸಿಯುಂ ಕಿರಿದುಂ ಉಂದುವ ಬೇಟದೊಂದು ಸುಸಿಲುಂ ನೋಯಿಕ್ಕುಮಾಱಿಕ್ಕುಮುಗ್ಗಲಿಕ್ಕುಂ ಕಬ್ಬದಗೇಯದೊಂದು ಸುಸಿಲೊಂದಿಂಪೆಂಬುದೇಗೆಯ್ಯದೋ (ಆದಿಪು. ೧೨–೨೪); ಕೆಲದೊಳಿರ್ದ ಕಿಸುಗುಳಮಂ ಕಂಡೇವೈಸುವ ಜೀವಂ ಪರಿಭಾವಿಸನೇ ಕೊಡಲನಕಟಶುದ್ಧದ ಮಡಲಂ (ಧರ್ಮನಾ. ೫–೯೮). 'ಹೇವಯಿಸು' ಪರಾ. [ಏವ$_1$ + –ಇಸು$_3$]

**ಏವರ್$_1$** (ಕ್ರಿ). ಏನುಬರು; ಏನುದೊರಕು: ಎನಿಬರರಸುಗಳುಮೆಱಗಿದೊಡೆನಗೇವಂದಪುದೊ ಬಾಹುಬಲಿ ಪೊಱಗೆನೆ (ಆದಿಪು. ೧೪–೨೮); ನಿನ್ನ[ಂ] ಪರಿಭವಕ್ಕೆ ತಂದು ನಿನ್ನ ಯಶಮಂ ಕಿಡಿಸಿದೆವಿಂ ಕೊಂದೊಡೇವಂದಪುದು (ಪಂಪಭಾ. ೭–೩೨). [ಏ$_2$ (< ಏನ್$_1$) + ಬರ್$_1$]

**ಏವರ್$_2$** 'ಏವು' ಪರಾ.

**ಏವರ್$_3$** 'ಏವುದು' ಪರಾ.

**ಏವರಂ** (ಅ). ಎಲ್ಲಿಯವರೆಗೆ, —ತನಕ: ಈ ಬಯಕೆ ಏವರಂ ನೆರೆಯದಾವರಂ ನನಗಕಟಾ ಬಾರದು ನಿದ್ದೆ (ಹೆಬ್ಬೆರ. ೬–೬); ಶ್ರೀ ಕರ್ಣಾಟಕಮೇವರಂ, ನೆನವು ನಿನ್ನಾಚಾರ್ಯ ಮುನ್ನಾವರಂ (ಗೀವಿಂ. ೫೩–೧೪).

[ಏ$_0$ (< ಎದು) + –ವರಂ]

**ಏವಳ್** 'ಏವು' ಪರಾ.

**ಏವಱಿ** (ಕ್ರಿ). ಕುಂದನ್ನು ತಿಳಿ; ದೋಷವನ್ನು ಅರಿ: ಜಾತಿಸ್ಮರತೆ ತನುವನು ತೊಟ್ಟವೊಲೇವಱಿಯದಱಿವಿನ ಘಟ್ಟಿಯಂತಿರೆ ಜನಿಸಿದನು ಶುಭಚರಿತನಾ ಭರತ (ನಿಭಾಗ. ೫–೬–೨). [ಏವ$_1$ + ಅಱಿ]

**ಏವಾಳ್ತೆ** 'ಏವಾೞ್ತೆ' ನೋ.

**ಏವಾೞ್ತೆ, ಏಬಾರ್ತೆ, ಏವಾಳ್ತೆ** (ನಾ). ಏನು ಬಾಳು; ಏನು ಪ್ರಯೋಜನ: ಕಿಡುಗು ಘು ರಾಜ್ಯಂ ರಾಜ್ಯದ ತೊಡರ್ಪದೇವಾೞ್ತೆ ಬಾೞ್ತೆ (ಪಂಪಭಾ. ೧–೮೨). **ಏಬಾರ್ತೆ**: ಬೆಸನಂ ಪಾರ್ವವು ಮಂತ್ರದೇವತೆಗಳಾದೇಬಾರ್ತೆ [ಪಾಠಾಂ. ಳ್ತೆ] ಗಂ ಬೇಗಮಾಗಸದೊಳ್ ವಿದ್ಯೆಗಳೆಯ್ದೆ ಬರ್ಪವು (ಆದಿಪು. ೧–೬೯); ನುಡಿಯದೆಂತುಮೇಬಾರ್ತೆಯೆಂದು ಮೇಣ್ಬಿಡುಗುಮೊ ಪೇೞೆನುತೆ ಬಗೆಯುತಿರ್ದಂ (ಶ್ಯಾದಂಉ. ೭೫೩). **ಏವಾಳ್ತೆ**: ನಿಂದಂಗಪ್ರಭೆ ಮಗುಳ್ದು ತೆಱೆವಿಡಿದಂತಾಗೆ ನಿಜಕಟಾಕ್ಷಮಿರ್ದಂತೆ ಮುಗುಳ್ಗಣೆಗಳೇವಾಳ್ತೆಯೆಂದು ಕಾವನ ಕರತಳದಿನವಂ ಕವರ್ತೆಗೊಂಡು (ರಾಜಶೇ. ೫–೯ ವ). [ಏ$_2$ (< ಏನ್$_1$) + ಬಾೞ್ತೆ]

**ಏವಿರಿದು** (ನಾ). ಏನು ದೊಡ್ಡದು; ಏನು ಮಹತ್ತ್ವದ್ದು: ಇಱಿಯದೆ ಕೆಮ್ಮನುಂತೆ ಭುವನಂಗಳಸುಂಗೊಳೆ ತಕ್ಕುದೆಂದೊಡೇಮಱುಕಮನೆಂಬುದೇವಿರಿದೆನ್ನ ಭುಜಾಸಿಗೆ ತೇದು ಪೂಸಲುಂ ನೆಱೆಯದು (ಕಾವ್ಯಸಾ. ೪೧೧ ಶೂದ್ರಕ); ಅಂತವರಿರ್ಪೆಡೆಯುಂ ವಿರಾಟನಿರ್ಪಱಿಕೆಯ ಪಟ್ಟಣಂ ನಮಗಿದೇವಿರಿದಪ್ಪುದು (ಪಂಪಭಾ. ೮–೮೯); ನಿನ್ನಯ ತನುಜನನಿಕ್ಕಿದುದೆನ್ನ ಪರಾಕ್ರಮದಳುರ್ಕೆಗೇವಿರಿದೀಗಳ್ ನಿನ್ನುಮನಿಕ್ಕಿದಪೆಂ (ನೇಮಿಪು. ೧೨–೭೭). [ಏ$_2$ (< ಏನ್$_1$) + ಪಿರಿದು]

**ಏವಿಸು** 'ಏವಯಿಸು' ನೋ.

***ಏವು** (ಕ್ರಿ). ಆಖ್ಯಾತರೂಪಗಳು. ಏವೆಂ, ಏವೆನ್, ಏವೆನು, ಏವೆವು, ಏವಂ, ಏವನ್$_1$, ಏವಳ್, ಏವರ್$_2$, ಏವುದು, ಏವುವು$_1$. ಏನುಮಾಡು: **ಏವೆಂ** : ಕೂಡೆ ಕಣ್ಣಾಲಿಗಳ್ ಸುಡುವಂತಾದವುದೇವೆಂ (ಕಾದಂಪೂ. ೮೫೩); ಭಾವೋದ್ಭವಂ . . . ಸುಡುತಿರ್ದಪನೇವೆಂ ಚಿಂತಿಸದೆ ಪೇೞ್ ಪರಾರ್ಥಚರಿತ್ರಾ (ದಶಕು. ೬–೧೨೧). **ಏವೆನ್** : ತನಯ ವಿಮೋಹಮೆಂಬ ನಿಗಳಂ ತೊಡರ್ದಿರ್ದಪುದೇವೆನೆಂದು ಕಾಮಿನಿ ನಿಜಜೀವಿತೇಶ್ವರನಗಲ್ಕೆಯೊಳಂ ತನುಜನ್ಮಮೋಹ ಬಂಧನದೊಳೆ ಸಿಲ್ಕಿ (ಸುಕುಮಾ. ೧೦–೩೨). ಇನ್ನೇವೆನಿನ್ನೇವೆನಯ್ಯೋ ಮಹಾದೇವ (ಶಿರುರ. ದೇ. ೨೧–೧). **ಏವೆನು** : ಹೊಱಗೆ ಹೂಸಿ ಏವೆನಯ್ಯಾ ಒಳಗೆ ಶುದ್ಧವಾಗದನ್ನಕ್ಕ (ಬಸವ. ೪೬೫). **ಏವೆವು$_1$** : ಸಕಳಜ್ಞಾನ ಸುಖೈಕಮೂರ್ತಿ ಜಿನ ನಿನ್ನಂ ಕೀರ್ತಿಸಲ್ ನಾಕನಾಯಕರುಂ ಶಕ್ತಿ ವಿಮುಕ್ತರಾದರದಱಿಂದಾವೇವೆವೆಂಬೀ ನಿರರ್ಥಕ ವಾಗ್ವಾಚಿಣಕೆವೇಡ (ಪುಷ್ಪ ಪು. ೯–೪); ವಿಶ್ವಾಸಘಾತಕರೊಯ್ದುರ್ ಮಱಪಿಕ್ಕಿ ನಮ್ಮರಸನಂ ತಮ್ಮಲ್ಲಿಗಿನ್ನೇವೆವೋ (ಪುಷ್ಪಪು. ೧೩–೮೯). **ಏವಂ** : ಘಟಿಉಲನೆ ತಾಂ ಕೊಲಲೆೞ್ದಂತಱಿದೊಡೆ ನಾವೇವಮಿಾತನೇವಂ ಪೇೞಿಂ (ನೇಮಿಪು. ೧೦–೧೨೬). **ಏವನ್$_1$** : ಎನಿತನೊಱಲ್ದು ಪೇೞ್ವ ಕವಿಯೇವನದಂ ಪೆಸರಿಟ್ಟು ಮೆಚ್ಚಬಲ್ಲನನಜಸಲ್ಕೆವೇೞ್ಪುದು (ಅನಂಪು. ೧–೪೫). **ಏವಳ್** : ಭಿನ್ನಂ ಬಂದಿಪ್ಪನಂತಿನ್ನುಂ ತನ್ನಿಂ ತನಗಮೇವಳೊ (ಕವಿರಾ. ೨–೧೧೫). **ಏವರ್$_2$** : ತ[ಳ್ದ]ದೇವರ ಕಾಪಿನಾಳ್ ದೇವಕಿನ್ನರ ಪನ್ನಗಾವಳಿ ಮೊಟ್ಟೆನಪ್ಪಿನಮೆಚ್ಚು ಕೊಂದೇವರ್ (ಪಂಪಭಾ. ೫–೯೪). 'ಏಗು' ಪರಾ. [?]

**ಏವುದು** (ಸ). ರೂಪಗಳು (ಪುಂ. ಏಕ). ಏವನ್$_2$ (ಬಹುವ) ಏವರ್$_3$, ಏವುವು$_2$. ಯಾವುದು : ದ್ರುಪದನಂ ತಱಿದೊಟ್ಟದೆ ಕೆಮ್ಮಗಾನಿದಂ ಕಡೆಗಣಿಸಿರ್ದೊಡೆನ್ನ ಕಡುಗೊರ್ವಿದ ತೋಳ್ಗಳ ಕೊರ್ವದೇವುದೋ (ಪಂಪಭಾ. ೩–೬೬); ಪೇೞೇವುದೊ ಶುಚಿಯಿಲ್ಲದವನ ಗಂಡುಂ ತೊಂಡುಂ (ಪಂಪಭಾ.೮–೮೨); ದಯವಿಲ್ಲದ ಧರ್ಮವದೇವು [ಪಾಠಾಂ.ದಾವು]ದಯ್ಯಾ (ಬಸವ. ೨೪೭); ಮಧುರ ಮಧುವಿಲ್ಲದ ಪೂ ದಧಿಯಿಲ್ಲದುಣಿಸದೇವುದೊ ಬುಧರಿಲ್ಲದಸಭೆ ಸರಸ್ವತೀಮುಖತಿಲಕಾ (ಶಮದ. ೫೫ ಪ್ರಯೋ). **ಏವನ್$_2$**: ಜವನಿವನೇವನೆಂಬನದಟಂ (ಎಇ. XVIII, ೨೧೫–೩೧; 1162). **ಏವರ್$_3$** : ಬಂಧುಜನಮುಂ ತಾಯ್ತಂದೆಯುಂ ಪತ್ತುವಿಟ್ಟೆನಗಿನ್ನೊರ್ವರುಮೇವರೆಂಬ ಬಗೆಯುಂ ನಿಶ್ಚೈಸಿ (ಕಾದಂಪೂ. ೯೫೩). **ಏವುವು$_2$** : ಬೃಹದ್ಬಳಂ ಪುತ್ರೋತ್ಪತ್ತಿ ನಿಮಿತ್ತಮಪ್ಪೊಂದು ದಿವ್ಯಪಿಂಡಮಂ ತನ್ನಿರ್ವರರಸಿಯರ್ಗೆ ಪಚ್ಚುಕೊಟ್ಟೊಡೆ ಪುಟ್ಟಿದೆರಡು ಪೋೞುಮನಿವೇವುವೆಂದು ಬಿಸುಡೆ (ಪಂಪಭಾ. ೬–೨೬ ವ). [ಏ$_0$ (< ಎದು) + –ಉದು$_0$]

**ಏವುವು$_1$** 'ಏವು' ಪರಾ.

**ಏವುವು$_2$** 'ಏವುದು' ಪರಾ.

**ಏವೆಂ** 'ಏವು' ಪರಾ.

**ಏವೆನ್** 'ಏವು' ಪರಾ.

**ಏವೆನು** 'ಏವು' ಪರಾ.

**ಏವೆವು** 'ಏವು' ಪರಾ.

**ಏವೇಳು** 'ಏವೇೞ್' ನೋ.

**ಏವೇೞ್**, ಏವೇಳು (ಕ್ರಿ). ಏನನ್ನು ಹೇಳು ; ಏನು ಹೇಳು : ಅಕ್ಕರಗೊಟ್ಟಯುಂ ಚದುರರೊಳ್ವಾತುಂ ಕುಳಿರ್ಕೊೞ್ವ ಜೊಂಪಮುಮೇವೇೞ್ಪುದನುಳ್ಳಮೆಯ್ಸುಕಮುಂ(ಪಂಪಭಾ.೪–೩೧);ನಿನಗೇವೇೞ್ದಪಳೀಕೆಕೇಳಿಸಿದೆನಾಂ ಮದ್ದುಃಖಮಂ ಮುನ್ನೆ ನಿನ್ನ ನದುಃಖಶ್ರವಣಾರ್ಹನಂ (ಕಾದಂಉ. ೫೪೫) ; ಏವೇೞ್ವೆನವನ ಚಾಗದ ಪೆಂಪಂ (ಶಮದ. ೧೭೭ ಪ್ರಯೋ). **ಏವೇಳು** : ರಿಪುಸಾರಥಿಯ ಮೈಯಲಿ ಘಾಯ ತುರಗವ್ಯಥೆಯನೇವೇಳುವೆನು ಟಿಕ್ಕೆಯುವ್ವೆದೆ ಬಾಣಮಯ (ಕುವ್ಯಾಕ. ೩–೨೩) ; ಏವೇಳುವೆನೆನ್ನ ಮನದಾನಂದವ (ಹದಿಬ. ೧–೪೩). [ಏ$_2$ (< ಏನ್$_1$) + ಪೇೞ್]

**ಏವೈಸು** 'ಏವಯಿಸು' ನೋ.

**ಏವೊಗೞ್** (ಕ್ರಿ). ಏನೆಂದು ಹೊಗಳು : ಇಂ ಸುಖಮನೇವೊಗೞ್ದಪ್ಪುದೊ ಭೋಗಭೂಮಿಯಾ (ಆದಿಪು. ೫–೩೦); ಏವೊಗೞ್ವೆನೆನ್ನಱಿಯಂ ಚಲದುತ್ತರಂಗನಂ (ಎಕ. II, ೫೯–೮೬ ; 974) ; ಸೇನಾಂಗದೊಳ್ ಗಣನಾತೀತಮಿದೆಂದೊಡೇವೊಗೞ್ವುದೋ ಬಿಲ್ಬಲ್ಮೆಯಂ (ಗದಾಯು. ೩–೩) [ಏ$_2$ (< ಏನ್$_1$) + ಪೊಗೞ್]

**ಏವೊತ್ತು** 'ಏವೊೞ್ತುಂ' ನೋ.

**ಏವೊೞ್ತು**, ಯಾವತ್ತು$_1$ (ನಾ). ೧. ಯಾವ ಹೊತ್ತು ; ಯಾವ ಕಾಲ. 'ಏವೊೞ್ತುಂ' ಪರಾ. **ಯಾವತ್ತು** : ೧. ಯಾವತ್ತಿನಿಂದಲೂ ಹೀಗೇ ಹೇಳುತ್ತ ಬಂದಿದ್ದೀರಿ (ಮುರಳ. ೫). ೨. ಯಾವ ದಿನ ; ಎಂದು : ನೀವು ಯಾವತ್ತು ಊರಿಗೆ ಹೋಗುವಿರಿ ? (ರೂಢಿ). [ಏ$_0$ (< ಎದು) + ಪೊೞ್ತು]

**ಏವೊೞ್ತುಂ**, ಏಪೊತ್ತು, ಏಪೊತ್ತುಂ, ಏಪೊಳ್ತುಂ, ಏಪೊೞ್ತುಂ, ಏವೊತ್ತು, ಯಾವತ್ತೂ (ಅ). ಎಲ್ಲಾ ಕಾಲದಲ್ಲಿಯೂ ; ಯಾವಾಗಲೂ ; ಸದಾ : ಪ್ರಾಣಿಹಿತಮಪ್ಪುದಱಿಂದೇವೊೞ್ತುಂ ಮೆಲ್ಲನೆ ನೋಡಿ ಪೋಗಿಮೆನೆ ಮನದೊಳಾದ ದಯೆಗೆ ಮೆಚ್ಚಿ (ಧರ್ಮಾಮೃ. ೫–೨೦೧). **ಏಪೊತ್ತು** :ಆ ಪಟ್ಟಣದಾ ದಕ್ಷಿಣ ದೆಸೆಯೊಳಗೆ ಶಚೀಪತಿಪುರದ ಚೆಲ್ವಿಕೆಯ ಏಪೊತ್ತು ನಗುವಂತೆ ಮೈಸೂರು ಕೀರ್ತಿ ಪ್ರತಾಪದೆ ಮೆಱೆವುದೊಲ್ಮೆಯಲಿ (ಕಂಠನಿ. ೨–೨೫). **ಏಪೊತ್ತುಂ** : ಸಲೆ ನಿಕ್ಷೇಪದ ಪೊನ್ನಂ ಕೈಕೊಂಡೇಪೊತ್ತುಂನೋಡುತಿರ್ಪ ಪಾವಿನ ತೆಱದಿಂ (ಧರ್ಮಾಮೃ. ೨–೧೧೩). **ಏಪೊಳ್ತುಂ** : ಏಪೊಳ್ತುಂ ಗಾತ್ರಮಂ ಶೋಷಿಸುತೆ ಕರಣಮಂ ಕುಂದಿಸುತ್ತುಂ (ರಕ್ಷಾಶ. ೭) ; ಶೇಷಾಹ್ವಯದಿಂದೇಪೊಳ್ತುಂ ಸುಪ್ರಕಾಶದಿ ನಿರ್ಮಿಂ ವಿಮಳಂ (ವಿಷ್ಣುಪು. ೭–೧೬೧). **ಏಪೊೞ್ತುಂ** : ಅದಱ ಗುಣಂಗಳನೇಪೊೞ್ತುಮೊಲ್ದೆಣಿಸುವುದು (ಚಕವಿ. ೩–೨೩). **ಏವೊತ್ತು** : ಒಪ್ಪುವ ಚೈತ್ಯಬಿಂಬಗಳನೇವೊತ್ತು ತಪ್ಪದೆ ಅಭಿವಂದಿಸುವೆನು (ಶ್ರೀಪಾಲ. ೧–೮). **ಯಾವತ್ತೂ** : ನೀನು ಯಾವತ್ತೂ ಹೀಗೇ (ರೂಢಿ). [ಏವೊೞ್ತು + –ಉಂ$_3$]

**ಏವೋಗು** (ಕ್ರಿ). ಏಕೆ ಹೋಗು ; ಯಾಕೆ ಹೋಗು : ಜನಮೆಲ್ಲಂ ನೆರೆದಕ್ಕಟಣ್ಣರಿವರಿಂದೇವಂದರೇವೋದರೆಂಬಿನಮೇಂ ಪೋಪಮೆ (ಪಂಪಭಾ. ೩–೬೫) ; ಏತರ್ಕೆಪೋದಂ, ಏವೋದಂ, ಏವಂದರೇವೋದರೆನ್ನದೆ (ಶಮದ. ೧೭೭ ಪ್ರಯೋ). [ಏ$_2$ (< ಏನ್$_1$) + ಪೋಗು$_1$]

**ಏಷಣ** (ನಾ). ೧. ಹುಡುಕುವಿಕೆ ; ಅರಸುವಿಕೆ. ೨. ಆಸೆ ; ಇಚ್ಛೆ ; ಬಯಕೆ. ೩. ಬಾಣ. ೪. ಬೇಡುವಿಕೆ. [ಸಂ.]

**ಏಷಣಾಸಮಿತಿ** (ನಾ). [ಜೈನ] ಜೀವದಯಾಪರನೂ ಮೋಕ್ಷಸಾಧಕನೂ ಆದವನು ರತ್ನತ್ರಯಭಾವನೆಯಿಂದ ತಪೋವೃದ್ಧ್ಯರ್ಥವಾಗಿ ಚರ್ಯಾಮಾರ್ಗದಿಂದ ಶೀತೋಷ್ಣ ಸ್ನಿಗ್ಧರೂಕ್ಷ ಗುಣ ಕಲಿತ ಪರಕೃತ ಪ್ರಾಸುಕಾಹಾರವನ್ನೂ ರಾಗದ್ವೇಷವನ್ನೂ ಬಿಟ್ಟು ಸಮಚಿತ್ತದಿಂದ ಊಟಮಾಡುವುದು : ಭಟಾರರಱಿದ ಕಿತ್ತ್ಯಂಗಳ್ಗೆ ಏಷಣಾಸಮಿತಿ ಮೊದಲಾಗೊಡೆಯ ವ್ರತಂಗಳಂ ಮತ್ತಂ ಸಂಕ್ಷೇಪದಿಂ ಪೇೞ್ದು (ವಡ್ಡಾರಾ. ೭೯–೨೬). [ಸಂ. (ಏಷಣಾ + ಸಮಿತಿ)]

**ಏಷಣಿಕೆ** (ನಾ). ಅಕ್ಕಸಾಲೆಯವನು ಬಳಸುವ ತಕ್ಕಡಿ : "ನಾರಾಚೀ, ಏಷಣಿಕಾ – ೨ ತ್ರಾಸಿನ ಪೆಸರು" (ಸಿದ್ಧಾಂತಿ. ೨೭೦). [ಸಂ. ಏಷಣಿಕಾ]

**ಏಷಣೆ** (ನಾ). = ಏಷಣ (೪). [ಸಂ. ಏಷಣಾ]

**ಏಸಮ್ಮದ** (ನಾ). "ಏನುಸಂಬಂಧ" (ಶಾಪಮಂ. ಕೋಶ): ಘೋರ ದೊಳ್ಗೋನುಗ ಭೂಪ ನಿಂನ ನಿಸಿತಾಸ್ತ್ರಾಘಾತದಿಂ ಸತ್ತ ಭೂಪರ ಪೆಂಡಿರ್ ಬಿಸುಸುಯ್ಯೆ ನೀಳ್ವಶಿಖಿ ತಂನಂ ಮುಟ್ಟೆ ನೊಂದಿಂದು ನಿತ್ತರಿಸಲ್ತಾನಱ ಮಾಱದೀಶ್ವರ ಜಟಾಜೂಟಾಟವೀ ಸಿಂಧು ಸೀವರಮಂ ಸೇವಿಸಲಿರ್ದ್ದ ನುಂತು [ಶ]ಶಿಗಂ ದೇವಂಗಮೇಸಂಮುದಂ (ಎಕ. VIII, ಸಾಗರ. ೧೦೯–೩೬ ; 1042). [ಏ$_2$ (< ಏನ್$_1$) + ಸಮ್ಮದ]

**ಏಸಾಡು** (ಕ್ರಿ). ಬಾಣ ಪ್ರಯೋಗಮಾಡು: "ಏಸಾಡು (ಏಸು + ಆಡು)= ಶರಗತೌ" (ಶಮಧಾ); ಅನಿತುಂ ಬಲಮಂ ಮುತ್ತಿ ಬಳಾಕಾವರ್ತರ್ ಸುತ್ತಲುಮೇಸಾಡಿ ಪಿರಿದು ತಿಣಿಕಂ ತಂದರ್ (ಆದಿಪು. ೧೪–೭೦) ; ನೋಡಲೊಡಂ ಮನಂ ಬೆದಱೆ ಕಲ್ಲೆರ್ದೆಯಂ ಕಡುಪಿಂದೆ ಕಾಮನೇಸಾಡೆ ಲತಾಂಗಿ ನೊಂದು (ಕಾದಂಉ. ೯೫) ; ನಡುವಟ್ಟೆಯೊಳೆ ಬರ್ಪ ಕಣೆಗಳಂ ಮುಕ್ಕಡಿಗೆಯ್ದು ಮೇಲಂಬುಗಳನೇಸಾಡುವುದುಂ (ರಾಮಾಶ್ವ. ೧–೨೭). [ಏಸು$_1$ + ಆಡು$_1$]

**ಏಸು$_1$** (ಕ್ರಿ). ಬಾಣ ಪ್ರಯೋಗಮಾಡು ; ಅಂಬನ್ನು ಎಸೆ : ಮಾಕಂದ ತಾ ಶಿರದಿನೇಸಲು ಕಾವ ಪೊರಳ್ದಳವಳಿಗತಿ ವಿರಹವೆಂಕೆಗೆ ತನುಗೊಟ್ಟೊ (ಭೈರವೇ. ೨–೧೧೩) ; ಕಡುಗಲಿಯು ವಿಂಧ್ಯಕನು ಕಾಣುತೆ ಸಡಿಫಡಂಜದಿ ರೋಡದಿರಿಮೊಗ್ಗೊಡೆಯದಿರಿ ಆರ್ದೇಸಿಯಿಱಿ ಯಿಕ್ಕಡಿಗಡಿ ಯಿಮೆನುತ (ಸಾಳ್ವಭಾ. ೫–೩೩). 'ಇಸು$_1$', 'ಎಸು$_1$' ಪರಾ.

[ದೇ. ‖ ತಮಿ. ಎಯ್, ಎವ್ವು, ಏವು; ಮಲ. ತುಳು. ಎಯ್ಯು ; ತೆಲು. ಎಗುಚು ; ಪರ್ಜಿ. ಎಯ್ಕ್ ; ಕುರುಖ್. ಇಂಜ್ನಾ]

**ಏಸು$_2$** (ನಾ). ೧. ಬಾಣ ಪ್ರಯೋಗಮಾಡುವುದು ; ಅಂಬಿನ ಎಸೆತ: ಪಾತಂ ಲಕ್ಷ್ಯಂ ಶೀಘ್ರಂ ಘಾತಂ ಬಹುವೇಗಮೆಂಬಿವಯ್ದೇಸಿನೊಳಂ ತೀತನ ದೊರೆಯಿಲ್ಲೆನಿಸಿದುದಾತನ ಬಿಲ್ಬಲ್ಮೆ (ಪಂಪಭಾ. ೧೨–೧೮೫) ; ನುಡಿದುದೆ ನನ್ನಿ ಮಾಡಿದುದೆ ಶಾಸನಮಿತ್ತುದೆ ರಾಮರೇಸು ಮಾಪ್ಪಿರ್ದುದೆ ವಜ್ರಲೇಪಂ (ಎಕ. VII, ಶಿವಮೊ. ೧೦–೨೪ ; 1085) ; ಒಲ್ದವರೊಳ್ ನವಭೋಗದುಜ್ಜುಗಂ ಮೊಳೆತುವು ಕಾಮನೇಸು ಗುಱಿಗಂಡುದು ತಂಡದೆ ನಿಂದ ನಂದನಂ ತಳೆದುದು (ಗಿರಿಕ. ೭–೩೯) ; ವಿದ್ಯಾಯುದ್ಧದಿಂದಾ ವಿಯಚ್ಚರರಂ ಭಂಗಿಸುತುಂ ಪ್ರತಾಪರರಂ ತನ್ನೇಸಿನಿಂದಂತಕೋದರಮಂ ಪೊರ್ದಿಸುತಿರ್ದಂ (ಮಹಾನೇ. ೧೨–೧೨೯). ೨. ಹೊಡೆತ; ಪೆಟ್ಟು : ನೊಂದರಂಗಜಬಾಣದೇಸುಗತಿ ನಾರಿಯರವ್ಯಂದ ಬೆಱಗಾಗಿ (ತುರಂಗ. ೭–೩೦). [< ಏಸು$_1$]

**ಏಸು$_3$** (ನಾ). ಎಷ್ಟು; ಯಾವ ಪ್ರಮಾಣ: ಏಸುಕಾಲಮೋಲೈಸಿದೊಡಂ ತನ್ನೊಡೆಯಂಗಂಜಬೇಕು (ಪಂಚತಂ. ೧೩೩–೧೭) ; ಹುತ್ತಕ್ಕೆ ಏಸು ಬಾಯಾದರೇನು ಸರ್ಪನಿರ್ಪುದು ಒಂದೇ ಸ್ಥಾನ (ಬಸವ. ೯೫೧) ; ಈಸು ನಿರ್ದಯನೆಂಬುದನು ನಾವೀಸುದಿನವಱಿಯೆವು ಮಹಾದೇವೇಸು ಪರಿಯಂತಿದ್ದುದೋ ನಿನ್ನಂತರಂಗದಲಿ ಏಸನೋದಿದೊಡೇನು ಪಾಪ ವಿಳಾಸ ರಚನಾರೌರವಾತ್ಮರ ವಾಸನೆಗಳವು ಬೇಱೆ (ಕುವ್ಯಾಕ. ೧೭–೨೨) ; ಏಸು ದಿನಕೂ ನಿನ್ನ ಪಾದದಾಸನು ನಾನೆ (ಪುರಂದ. ೧–೧೫–೧) ; ಹಾಡಬೇಕೆಂದೇಸೊ ದಿನ ಬಯಸಿ ಬೇಡಿದರೆ ಒಂದು ನುಡಿಯೂ ಕೂಡ ಮೂಡಲಿಲ್ಲ (ನನಲ್ಲ. ೩–೧೦).

ಏಸೇಸು (ದ್ವಿರುಕ್ತಿ) : ಭೂಸುರಂ ನಿಮುಗಿತ್ತ ದಾನಫಲದೊಳ್ಸರಿಯನೇಸೇಸು ಪರಿಯಿಂದ ಬೇಡಿಕೊಂಡೊಡೆ ನನಗೆ ವೋಸಳಿಕನೇ ಮಾಡಿಕೊಂಡ ಕಾರಣಮನನುನಯದಿಂದ ನಿರವಿಸೆನಲು (ಸಮ್ಮಕೌ. ೭–೪೪) ; ಕ್ಲೇಶಕೊಳಗಾಗಿ ಹೊನ್ನುಗಳ ಏಸೇಸು ತಂದದ್ದು ಏನಾಯಿತೋ (ವಿದಾಕ್ಯ. ೪೮–೧೦). ಏಸಱ = ಎಷ್ಟರ : ವರಮಹಾಗಣತಿಂತಿಣಿಯೊಳನಿಬರೊಳು ಗಣಿಸುವೊಡಾನದೇಸಱ ಹುರುಳು ಹೇಳಾ ದೇವ (ಪ್ರಭುಲೀ. ೧೮–೧೦). ಏಸಱದು = ಎಷ್ಟರದು : ಮೇಲುನೋಟದಲೇ ವಿಪತ್ತೇಸಱದು (ಕುವ್ಯಾಅ. ೫–೧೪). ಏಸಱವ = ಎಷ್ಟರವನು : ಈ ಶರೀರದ ರೋಮಕೂಪ ನಿವಾಸಿಗಳಲಾ ದೇವ ತಾ ನಿನಗೇಸಱವನಂಬೇಕೆ ದಾಟಲು ಬಾರದೇಯೆಂದ (ತೊರರಾ. ೬–೪–೫೪); ಈಸು ಸಿಂಗರವೇಕೆ ರಾಮುನನೊಲಿಸುವಡೇಸಱವನು (ಕುರಾಸಾಂ. ೨೯–೧೨೬). ಏಸಱವಳು, ಏಸರವಳು = ಎಷ್ಟರವಳು : ಕೃಷ್ಣನಂ ಜಱೆಯೆ ನೀನೇಸಱವಳೊಡನಾಡಿತನದಿಂದೆ ಬೆಱೆಯ ಬೇಡತ್ತ ಹೋಗೆಂದು ದೇವಕಿ ಸತ್ಯಭಾಮೆಯುಂ ಗರ್ಜಿಸಿದಳು (ಜೈಮಿಭಾ. ೬–೪೮) ; ಅಲ್ಪಜ್ಞೆ, ಪತಿತೆ, ಪಾಮರೆ ನಾನು ಉಪದೇಶ ಪಡೆವುದಕೆ ಏಸರವಳಾಗುವೆನು (ಯಶೋಧ. ೪೯) ; ತಂಗೀ ಭಗವಂತನಿಲ್ಲದಿರೆ ನಾನೇಸರವಳು (ಚಂದ್ರಸ. ೧೭). ಏಸಾನು = ಎಷ್ಟೊಂದು : ಪರಿಕಿಸೆ ಮೂರ್ತಿಧ್ಯಾನದ ಬಳಿಕೆ . . . ಏಸಾನೋ ನೆಱೆಮಿಗಿಲದಱಿಂದ (ಪರಗೀ. ೧೦–೬). ಏಸೊಂದು = ಎಷ್ಟೊಂದು : ಚಂದ್ರನ ಬರವ ಪಾರ್ದುವೇಸೊಂದು ಜೊನ್ನವಕ್ಕಿಗಳ ಬಳಗವೊ (ಮದೇಪು. ೧೫–೫). [?]

**ಏಸು$_4$** (ನಾ). ಕ್ರೈಸ್ತಮತ ಪ್ರವರ್ತಕನಾದ ಏಸುಕ್ರಿಸ್ತ : ಶಿಲುಬೆಯ ಮತ್ತೊಂದು ಮಗ್ಗುಲಿಗೆ ಶಿಲುಬೆಯನ್ನು ಹೊತ್ತುಕೊಂಡು ಏಸುವು ಹೋಗುತ್ತಿರುವ ಮತ್ತು ಆತನ ವಿರೋಧಿಗಳು ಅವನ ಹಿಂದೆ ಬರುತ್ತಿರುವ ಚಿತ್ರ (ಧರ್ಮಶ್ರೀ. ೨೨೮) ; ಏಸುಕ್ರಿಸ್ತರು ಶಿಲುಬೆಗೆ ಹಾಕುವಾಗ ಮಾಡಿದ ಪ್ರಾರ್ಥನೆಯನ್ನು ಪಾದ್ರಿ ವಿವರಿಸಿದ (ರಕ್ತರೂ. ೫೩).

[?. /. ಲ್ಯಾಟಿನ್. ಏಸೂಸ್]

**ಏಸುದಿನ** (ನಾ). ಎಷ್ಟು ದಿವಸ : ಅಕಟನ್ನೇಸುದಿನ ಬನದೊಳಗೆ ಸೆಱೆ (ತೊರರಾ. ೫–೩–೪೭) ; ಆ ಸುರನದೇಸುದಿನ ತಪಗಳಾಚರಿಸಿದನೋ (ವೆಂಕಾರಾ. ೫–೮–೨೯). [ಏಸು$_3$ + ದಿನ]

**ಏಸುಮಡಿ** (ನಾ). ಎಷ್ಟುಸಲ, —ಬಾರಿ : ಕಡೆಯಲಿನ್ನರೆಜಾವದವಧಿಯಿದು ತಪ್ಪಿತಾದೊಡೆ ಬಳಿಕ್ಕೇಸು [ಪಾಠಾಂ. ಯೇಸು] ಮಡಿಯಿತ್ತೊಡಂ ಮೂರ್ಖಮುನಿ ಕೆಡೆನುಡಿವಂ (ಹಚಶಾ. ೧೧–೧೫). [ಏಸು$_3$ + ಮಡಿ]

**ಏಸುವಡೆ** (ಕ್ರಿ). = ಏಸುವೆಱು. [ಏಸು$_2$ + ಪಡೆ$_1$]

**ಏಸುವಾರ್** (ಕ್ರಿ). "ಬಾಣ ಪ್ರಯೋಗಕ್ಕೆ ಸಮಯುವನ್ನು ನಿರೀಕ್ಷಿಸು" (ಪ್ರಭಣ್ಣ). [ಏಸು$_2$ + ಪಾರ್]

**ಏಸುವೆಸ** (ನಾ). ಬಾಣ ಪ್ರಯೋಗ : ಇಂದು ಪಯೋಜಜಂಗೆ ಕೃತಕೃತ್ಯತೆ ಸಾರ್ದುದು ಪುಷ್ಪಸಾಯಕಂಗಿಂದೊಳಸೋರ್ದುದೇಸುವೆಸನಿಂದು ಸನಾಭಿಜನಕ್ಕೊಡರ್ಚಿತಾನಂದ ಪರಂಪರಾ ಜನನಂ (ಚಂದ್ರಪು. ೬–೭೯) ; ವಿವಿಧ ವಿಚಿತ್ರದೇಸುವೆಸದೊಳ್ ಪಿರಿದುಂ ಪರಿಭಾವಿಸಲ್ಕೆ (ಕುಸುಮಾ. ೭–೬೫). [ಏಸು$_2$ + ಬೆಸ]

**ಏಸುವೆಸನ** (ನಾ). = ಏಸುವೆಸ : ನೂಪುರೋಲ್ಲಪನವ್ಯಾಜದಿನಾಗಳೇಸುವೆಸನಂ ಕಾಮುಂಗೆ ಪೇೞ್ವಂದದಿಂ (ಚಂದ್ರಪು. ೫–೧೧೪). [ಏಸು$_2$ + ಬೆಸನ]

**ಏಸುವೆಱು** (ಕ್ರಿ). ಬಾಣದ ಪೆಟ್ಟನ್ನು ಹೊಂದು : ಮಱುವಕ್ಕದವರ ಮೆಯ್ಮೆಯ್ಯವ್ಯಾಗೆ ಎಚ್ಚೋಡಿಸಿ ಆ ಕಯ್ಯಂ ಗೆಲ್ದು ತಾನುಂ ಪಲವುಂ ಎ[ಏ]ಸುವೆತ್ತು ಎಯ್ವೊದೊದಪ್ಪಿದಪೊಲ್ಲಕಣೆಪಂಜರದೊಳೆಱಗಿ ಭೀಷ್ಮನ್ವಿಟ್ಟಂತೆ ನೆಲವುಟ್ಟದೆ ಬಿೞ್ದೋನಾನ್ (ಎಕ. VIII, ಸೊರಬ. ೧೦–೮ ; 800) ; ರೂಪಿನೊಳ್ ಮಚ್ಚರಿಸುವನೆನಗೆಂದೆಂಬನಂಬಟ್ಟುವನ್ನಂ ಪಲ ಕಾಲಕ್ಕೇಸುವೆತ್ತಂ ದಶಮುಖನೆನುತುಂ ಮನ್ಮಥಂ ಮಾಣದೆಚ್ಚಂ (ಪಂರಾಮಾ. ೯–೮೩). [ಏಸು$_2$ + ಪೆಱು$_1$]

**ಏಸುಸಲ** (ನಾ). ಎಷ್ಟುಸಲ, —ಬಾರಿ : ಏಸುಸಲ ತಪವಗೈದೇಸು ಬಿನ್ನವನಾಂತು (ಮಂಕುಕ. ೧೫೭). [ಏಸು$_3$ + ಸಲ]

**ಏಸೆ** (ಗು). ದುಷ್ಟ ; ವಕ್ರ ; ಒರಟು (ಕಿ). [ದೇ. ‖ ತೆಲು. ಏಚ, ಏಸ]

**ಏಹದ** (ನಾ). ೧. ಏನು ಹದ ; ಯಾವ ಹದ. ೨. ಏನು ಕಾರಣ ; ಏನು ವಿಚಾರ : ಸುರಸ್ತ್ರೀಯರೆನ್ನನು ವಿಘಪೆಯೆಂಬರೇಹದಂ ಮದನ ನಿನ್ನಂಗಮಂ ಮೃಡನ ಘಾಳಾಗ್ನಿಗೇಕಿತ್ತೆ (ಲಶಿಚಂ. ೧೪–೫೬).
[ಏ$_2$ (< ಏನ್$_1$) + ಹದ (< ಪದ$_1$)]

**ಏಹೂರು** (ನಾ). ಒಂದು ಊರಿನ ಹೆಸರು : ಪಿರಿದುಂ ಕಾರುಣ್ಯದಿಂದಾ ನರಪತಿ ತನಗೊಲ್ದೀಯೆ ಮುಕ್ಕುನ್ದಿ ಗಂಗಾಪುರಮೇಹೂರೆಂಬ ಮಿಕ್ಕೂರ್ಗಳನೆ ಪಡೆದು (ಎಇ. XII, ೨೪೧–೧೬೯ ; 1077) ; ಆವರ್ಮ್ಮಾಡಿಸಿದ ಏಹೂರ ಶ್ರೀಸ್ವಯಂಭು ದೇವರ್ಗೆ (ಇಅ. VIII, ೨೦–೫೦ ; 1077).
[? + ಊರು$_3$ (< ಊರ್)]

**ಏಹೊ** (ಅ). ತಿರಸ್ಕಾರ, ವ್ಯಂಗ್ಯ, ಆಶ್ಚರ್ಯ ಮುಂತಾದುವುಗಳನ್ನು ಸೂಚಿಸುವ ಅವ್ಯಯ : ವಾಹನಂ ವೃಷಭೇಂದ್ರನಿರೆ ನರವಾಹನವನೇಱಿದೊಡೆ ನಿನ್ನುವನೇಹೊವೋಹೋಯೆಂದು ನಗರೇ ನೋಡುವವರೆನುತ (ಬಸವು. ೩೨–೧೫). [?]

**ಏಳ್$_1$** 'ಏೞ್$_1$' ನೋ.

**ಏಳ್$_2$** 'ಏೞ್$_2$' ನೋ.

**ಏಳಕ್ಕಿ** 'ಏಲಕ್ಕಿ' ನೋ.

**ಏಳಗ, ಎಳಗ** (ನಾ). ಟಗರು ; ತಗರು ; ಮೇಷ : ಸಾನಂದಕನೆಂಬರಸನಭಯಘೋಷಣೆಯಂ ಮಾಡಿದೊಡೆ ಅರಸನೇಳಗಮುಂ ಕಳ್ದು ತಿಂದಂಕನೆಂಬೊಂಗೆ ಕರೆಚ್ಪೇದನಮಂ ಮಾಟ್ಪುದು (ಚಾವುಂಪು. ೯೬–೧೪) ; ಏಳಗಮೆಂಬುದು ಏಡಕಕ್ಕೆ ಪುಟ್ಟಿಯುಂ ಕುಳಂ (ಶಮುದ. ೨೦ ವೃತ್ತಿ). **ಎಳಗ** : ವಸುಧಾಧೀಶನ ಸುಕುಮಾರಂ ಮನಮೊಸೆದೆಳಗನ ಬೆನ್ನೇಱಿ ಕರಂ ರಂಜಿಸಿದಂ (ಜಯಕಾ. ೨–೬೪) ; ಎಳಗನನೇಱಿಯೆಸೆವ ರನ್ನದೊಡವು ಪಜ್ಜಳಿಪರಮಗ (ಶ್ರೀಪಾಲ. ೨–೮೩) ; ಎಳಗನನೇಱಿ ಕೌಸಾಂಬ ವಸ್ತ್ರವ ಹೊದ್ದು (ಚಂಪ್ರಸಾಂ. ೪–೭೮) ; ಜನರು ಎತ್ತು, ಕೋಣ, ಟಗರು, ಎಳಗಗಳನ್ನು ಕೆಲಮಟ್ಟಿಗೆ ಉಪಯೋಗಿಸಿಕೊಳ್ಳುತ್ತಿರಬಹುದು (ಸಾಹಿಸಂ. ೧೩೦). 'ಏಟಿಗ' ಪರಾ. [< ಸಂ. ಏಡಕ. / ತಮಿ. ಏಟಗ]

**ಏಳಡಿ** 'ಏಟಡಿ' ನೋ.

**ಏಳಾಗಂಧ** (ನಾ). ಏಲಕ್ಕಿಯ ವಾಸನೆ : ಪುದಿದೆಸೆದುವು ನಿಜಪಿತೃವಂಕದ ಕರಿಗಳ ಮದದ ಸೊವಡು ಮುನ್ನಿನ ಸಪ್ತಚ್ಛದಗಂಧದಿನೇಳಾಗಂಧದಿನೆಸೆವುದು ದೇವ (ಪುಷ್ಪವು. ೫–೬೩). [ಸಂ. ಏಲಾಗಂಧ (ಏಲಾ + ಗಂಧ)]

**ಏಳಾಲ** 'ಏಳಿಲ' ನೋ.

**ಏಳಾವನ** (ನಾ). ಏಲಕ್ಕಿಯ ವನ, —ತೋಟ : ಚೂತ ಸಪ್ತಚ್ಛದೈಳಾವನ ಸುರಭಿ ಮದಾಸಾರಾಸವಾಸಕ್ತ ಭೃಂಗೀನಿನದ ಮುಖರಿತಾಶಾಚಕ್ರ ಗಂಧೇಭಚಕ್ರಂ (ಆದಿಪು. ೧೧ ೩೦). [ಸಂ. ಏಲಾವನ (ಏಲಾ + ವನ)]

**ಏಳಿಕೆ** (ನಾ). ಅಪಹಾಸ್ಯ ; ತಿರಸ್ಕಾರ : ಕಲ್ಲಾದರು ಸರಿ ಹುಲ್ಲಾದರು ಸರಿ ಎಲ್ಲಂದದ ಏಳಿಕೆ ಸಾಕು (ನನಲ್ಲ. ೩೨–೯). [< ಏಳಿಸು$_1$ + -ಕೆ]

**ಏಳಿಕೆಗೆಯ್** (ಕ್ರಿ). ಅಪಹಾಸ್ಯಮಾಡು ; ತಿರಸ್ಕರಿಸು : ಕುಡದರನೇನೇಳಿಕೆಗೆಯ್ವರ್ ಪೆಣ್ಗಳ್ (ಸೌನಂದ. ೮–೩೯). [ಏಳಿಕೆ + ಕೆಯ್$_1$]

**ಏಳಿಗೆ** 'ಏೞ್ಗೆ' ನೋ.

**ಏಳಿಗೆತನ** (ನಾ). ಅಭಿವೃದ್ಧಿ ಹೊಂದುವಿಕೆ : ಭಾಳದೊಳಿರಿಸೆ ಭಕ್ತಿಯ ಭರದಿಂದಲೆ ಬೀಳುತಲವನಿಯಲವರು ಪೇಳಿದರಾದೀಶ್ವರನೊಳು ಖಳನದೊಂದೇಳಿಗೆತನದೊಂದೂಳಿಗವ [ಪಾ ಠಾ ೦. ದೊಂದೂಳಿಗವನು ತಮತಮಗೆ] (ತ್ರಿಪುಸಾಂ. ೮–೯೦). [ಏಳಿಗೆ (< ಏೞ್ಗೆ) + -ತನ]

**ಏಳಿಗೆವೆಱು** (ಕ್ರಿ). ಅಭಿವೃದ್ಧಿಹೊಂದು : ಯಾದವಕುಲವೇಳಿಗೆವೆತ್ತಿರ್ಪುದು ಮೇದಿನಿಯೊಳು ಮೈಮೆವಡೆದು (ಹದಿಬ. ೧–೩).
[ಏಳಿಗೆ (< ಏೞ್ಗೆ) + ಪೆಱು$_1$]

**ಏಳಿದ, ಎಳ್ಳಿದು** (ನಾ). ೧. ತಿರಸ್ಕಾರ ; ಅವಮಾನ : ದೂತರನಟ್ಟಿದೊಡೇಳಿದವಾತಂಗೆ (ಜಗವಿ. ೯–೧೮) ; ಬಾಳಿಕೆಯ ನೀನೊಲ್ಲೆ ಭೀಷ್ಮರು ಹೇಳಿದನು ಕೈಕೊಳ್ಳೆ ನೀತಿಯನೇಳಿದವ ಮಾಡುವನೆ ಜನಪತಿಯೆಂದನಾ ವಿದುರ (ಕುವ್ಯಾವಿ. ಓರಿಇ. ೫–೧೪). ೨. ತಿರಸ್ಕರಿಸಲ್ಪಟ್ಟವನು ; ಅಪಹಾಸ್ಯ ಮಾಡಲ್ಪಟ್ಟವನು ; ಅಲ್ಪ ; ನಿರ್ಗತಿಕ : ಏಳಿದನಂತೆ ಬಾಯಬಿಡದು ಚಿಂತಿಸುವಂದಮಿದಾವುದುರ್ವರಾಪಾಳನಿನಿಟ್ಟೆ ವಾಸರ ಚತುಸ್ತ್ರಿಕಮಾತ್ರಮೊಳಾವುಪಾಯದಿಂ ಮೇಳಿಸಿ ತಂದುಕೊಂಡು ಕುಡುವೆಂ (ಸುಕುಮಾ. ೭–೯) ; ಪಾದಮಾರ್ಗದಿಂ ಜಾನಕಿಯುಂ ಬಲಾಚ್ಯುತರುಮೇಳಿದರಂದದೆ ಬರ್ಪುದಾವುದೊ (ಪಂರಾಮಾ. ೬–೧೭೯); ಏಳಿದರ ಪುಣ್ಯಾಲಂಕರೆದಾಕೊೞಚಿಸಿ ತಿರ್ದಿ ಸಂತಸಂಬಡಿಸದೆ (ಧರ್ಮಾಮೃ. ೨–೮೮). **ಎಳ್ಳಿದು** : ೧. "ಅಲ್ಪೋಪಿ = ಎಳ್ಳಿದುದಾಗಿಯುಂ" (ನೀತಿವಾ. ೨೮–೭೭). 'ಇಳಿದು', 'ಏಳಿಲ' ಪರಾ.

**ಏಳಿದುನುಡಿ** = ತಿರಸ್ಕಾರದಿಂದ ಮಾತನಾಡು : ಋಷಿಯರಂ ಏಳಿದುನುಡಿದಂ ಪಾಪದ ಫಲದಿಂ (ವಡ್ಡಾರಾ. ೧೦–೧೨).

[ದೇ. ॥ ತಮಿ. ಏಳಿದ ; ಮಲ. ಎಳುದು ; ತುಳು. ಎಲ್ಲಿ, ಎಲ್ಲ್ಯ, ಎಳ್ಯ ; ತೆಲು. ಎಲ್ಲಿದ]

**ಏಳಿದಂಗೆಯ್** (ಕ್ರಿ). ತಿರಸ್ಕಾರಮಾಡು ; ಕಡೆಗಣಿಸು : ಹಿತ್ತಲಗಿಡು ಮರ್ದಲ್ಲ ಎಂದೇಳಿದಂಗೆಯ್ದೆಯಕ್ಕುಂ (ಪಂಚತಂ. ೨೮೦–೮) ; ಸಮಸ್ತಜೀವರಾಶಿಗಳ್ಗಭಯದಾನಮನೇಳಿದಂಗೆಯ್ಯದೆ ಮಾಡಲುಂ ಸುಖಮನೆಯ್ದುಗುಂ (ಧರ್ಮಾಮೃ. ೬–೧೧೬); ಏಳಿದಂಗೆಯಲಿಮಾಗಡೆ ನಮ್ಮೊಳ್ಳಾಳನೊಳ್ಳುದುರೆಯಂ (ಕಾವ್ಯಾವ. ೩೧೪) ; ಶಾಳಿಗೆಜಗಿದ ಗಿಳಿಗಳಂ ಸೋವ ಪಾಮರೀಜಾಳದೊಂದುಲಿಪುಮಂ ಕೋಕಿಲನಿನಾದಮೆಂದೇಳಿದಂಗೆಯ್ದು ತೊಲಗದೆ ನಿಂದ ಕೀರಾಳಿ ಸಲೆ ಕಂಗೊಳಿಸಿತೆಂದೆನೆ (ಚಬವು. ೧೧–೯). [ಏಳಿದ + ಕೆಯ್$_1$]

**ಏಳಿದಂಬಗೆ** (ಕ್ರಿ). ಹೀನವಾಗಿ ಕಾಣು ; ಕೀಳಾಗಿ ಕಾಣು : ಶಲ್ಯನನಂದಶಲ್ಯನಂ ಬಗೆವವೋಲೇಳಿದಂಬಗೆದು ದಂತಿಯನಾಗಡೆ ತೋಱಿಕೊಟ್ಟು ತೊಟ್ಟಗೆ ರಥಮಂ ಪಡಲ್ವಡಿಸಿ ಪೂಣ್ದನರಾತಿಯನಸ್ತ್ರಕೋಟಿಯಿಂ (ಪಂಪಭಾ. ೧೦–೧೧೧) ; ಕಾಲನನೇಳಿದಂಬಗೆವರೀ ನೆಲನಂ ವಿಜಿಗೀಷುವೃತ್ತಿಯಿಂ ಪಾಲಿಸುವರ್ (ಪಂರಾಮಾ. ೧೦–೨೨೯).
[ಏಳಿದ + ಬಗೆ$_1$]

**ಏಳಿದಂಮಾಡು** (ಕ್ರಿ). = ಏಳಿದಂಗೆಯ್ : ನೋಡನೋಡಲ್ಕೆ ಮಾನಸನೆ ಮಾನಸ ರೂಪುಗೊಂಡಮರನೆಂದೆನ್ದೇಳಿದಂಮಾಡಿರಾಡಿಸುವ ನಾಡಱಿಯಲು ವಿವೇಕ ನಿಧಿಮಾರ್ತ್ತಣ್ಡಂ ಜಗನ್ಮಂಡನ (ಸೌಇಇ. IX–i, ೧೯೭–೨೯ ; 1119) ; ಎನ್ನನೇಳಿದಂಮಾಡಿ ಮೂಗನರಿದು ಕನ್ನಡಿಯಂ ತೋಱುವಂತೆ (ಧರ್ಮಾಮೃ. ೯–೨೧೧). [ಏಳಿದ + ಮಾಡು$_1$]

**ಏಳಿದಿಕೆ, ಎಳ್ಳಿದಿಕೆ, ಏಳಿದಿಕ್ಕೆ** (ನಾ). ೧. ಹೀನಾವಸ್ಥೆ ; ಅವಮಾನದ ಸ್ಥಿತಿ ; ತಿರಸ್ಕಾರ : ಜಸಮುಂ ಧರ್ಮಮುಮಱಿವಂದೆಸಗುವುದೇಳಿದಿಕೆಯೆಂದು (ಪಂರಾಮಾ. ೧೫–೬೮) ; ಅನಮೃತೆಯ ಉದ್ಧತಿಯ ಏಳಿದಿಕೆಯ ದ್ರೋಹದ ನಡೆನುಡಿಗಳ್ಗೆ . . . ಉಜ್ಜುಗಿಸುವೆಯಾದರೆ (ಬಿಟ್ಟಅ. ೩೫–೯). **ಎಳ್ಳಿದಿಕೆ** : ೧. "ಅವಜ್ಞಯಾಪಿ = ಎಳ್ಳಿದಿಕೆಯಿಂದಮುಂ" (ನೀತಿವಾ. ೨೮–೭೭). **ಏಳಿದಿಕ್ಕೆ** : ೧. ಪಾಂಚಾಲರಾಜತನೂಜೆ ಪಗೆವರ ಕಟ್ಟುವಟ್ಟರ್ದೇಳಿದಿಕ್ಕೆಗೆ ಸಂತಸಂಬಟ್ಟು ಸ್ವೈರಿಸಲಾಱದಿಂ ತೆಂದಳ್ (ಪಂಪಭಾ. ೭–೩೮ ವ). ೨. ಅಪಹಾಸ್ಯ ; ನಿಂದೆ : ಪಾಂಡ್ಯನನಂಡಲೆಗುಂ ತೆಲುಂಗ ಭೂಪಾಲನನೇಳಿದಿಕ್ಕೆಯನೆ ಮಾಡುವುದೀ ಕುಱುಗೋಡ ಕೋಟೆ ತಾಂ (ಸೌಇಇ IX–i, ೨೯೬–೧೪ ; 1176).
[ಏಳಿದ + -ಇಕೆ]

**ಏಳಿದಿಕೆಗಾಣ್** (ಕ್ರಿ). ಹೀನವಾಗಿ ಕಾಣು; ಕಡೆಗಣಿಸು: ಕೂರ್ಪನೆ ಕಳೆ ಕೂರನೇಳಿದಿಕೆಗಂಡು [ಪಾಠಾಂ. ದಕೆಡಂಗು, ದಕೆಗಂಡು] ಬಿಸುಟ್ಪನೆ ಉಃ ಬಿಸುಟ್ಪನಿಂತಿನಿತು (ಕಾವ್ಯಾವ. ೫೨). [ಏಳಿದಿಕೆ + ಕಾಣ್]

**ಏಳಿದಿಕ್ಕೆ** 'ಏಳಿದಿಕೆ' ನೋ.

**ಏಳಿದಿಟ** (ನಾ). ಅವಮಾನ; ತಿರಸ್ಕಾರ; ಲಾಘವ: ಕೃಷ್ಣನನು ದಿಟಗೋಪಾಲನೆಂದೇ ಬಗೆದು ನಮ್ಮೊಳಗೇಳಿದಿಟವನು ಮಾಡದಿರಿ (ನಿಭಾಗ. ೧೦–೨೪–೨೦); ಇದನೇಳಿದಿಟವನು ಮಾಡುವರು ಪಾಪಾತ್ಮರವರೆಂದ (ನಿಭಾಗ. ೧೦–೨೮–೩೫). [ಏಳಿದ + –ಇಟ]

**ಏಳಿಬ್ಬಳ್ಳ** (ನಾ). ಏಳು ಎರಡು ಬಳ್ಳ; ಹದಿನಾಲ್ಕು ಬಳ್ಳ: ಇಲ್ಲಕುಳ್ಗೇಳಿಬ್ಬಳ್ಳ [ಪಾಠಾಂ. ಕೊಟ್ಗೇಡಿಬ್ಬಳ್ಳ] ಮೇಲಕ್ಕಿ (ಎಕ. IV, ಚಾಮರಾ. ೯೫–೯; 750). [ಏಳ್$_2$ (< ಏೞ್$_2$) + ಇರ್$_2$ (< ಎರಡು) + ಬಳ್ಳ]

**ಏಳಿಲ, ಏಳಾಲ, ಏಳಿಲು** (ನಾ). ತಿರಸ್ಕಾರ; ಅವಮಾನ: ಮರುಳನಿವನತ್ತಡೇನೆಂದೇಳಿಲವ ಮಾಡದೆ (ಸಿದ್ಧರಾ. ೨–೬೦); ಒಂದರಳು ಪಱಿದು ಬೀಳೆ ಕಳೆದುಕೊಳಲ್ಕೆ ಲಜ್ಜಿಸಿಯೇಳಿಲದೊಳಾ ಕುಸುಮವಂ ಶಶಿಮೌಳಿಗರ್ಪಿತವೆನುತ ಮನದೊಳು ನೆನೆಯಲಣುಮಾತ್ರ (ಬಸಪು. ೪೧–೧೦); ಕಾಳಗವನೇ ಬಲಿದು ತಹೆನಿವರೇಳಿಲವ ಮಾಡಿದೊಡೆ ರಿಪುಗಳ ಸೀಳಿ ಕರುಳನು ಮುಡಿಸದಿಹೆನೇ ನಿನ್ನ ಕಬರಿಯಲಿ (ಕುವ್ಯಾಉ. ೭–೧೨); ಒಂದಾವೃತ್ತಿ ಪ್ರೀತಿಸಿದವಳೀಕೆ; ಆದರಿಂದ ವಸುಮತೀದೇವಿಯ ಹೊರತಾಗೂ ಏಳಿಲವನಾಂತೆನೆಂದು ತಿಳಿದೆನು (ಶಾಕುಂತ. ೬೦–೧೬). **ಏಳಾಲ:** ಆಳು ಗೆದ್ದರೆ ನೋಡು ಅರಸಗೆ ಜಯಪ್ರದ ಆಳು ನುಡಿದದ್ದು ಅರಸು ನುಡಿದದ್ದು ಏಳಾಲ ಮಾಡದೆ ಯಾದವ ಕುಲಮಣಿ ಪಾಲಿಸಬೇಕಯ್ಯ (ಮೋಕ್ಷದೀ. ೩–೧೪). **ಏಳಿಲು:** ಇಂದು ನಾ ಬಂದಂತೆ ಹೋದರೆ ಮುಂದೆ ಖಳರಿಗೆ ರಾಮನೇಳಿಲು ಕೊಂದು ಕೂಗುವೆ ದನುಜನಳವಱಿತವನ ಲಂಕೆಯನು (ಕೌಶಿರಾ. ೧೧–೧೩).

**ಏಳಿಲಮಾಡು** = ತಿರಸ್ಕಾರಮಾಡು; ಕಡೆಗಣಿಸು: ಎಲೆ ದುರಿತವೆ ನೀಯೆನ್ನ ಎ[ಏ] ಳಿಲಮಾಡದೆ ಸಾಗಿನ್ನೆ ಕಡುಛಲ ಮಾಡಲಿ ಬನ್ನಬಡುವೆ ನಮ್ಮ ನಳಿನಾಕ್ಷನಾಣೆ ನೀ ಕಿಡುವೆ (ಪ್ರಸಕೀ. ೩೬ ಪಲ್ಲವಿ). 'ಏಳಿದ' ಪರಾ. [?]

**ಏಳಿಲಂಗೆಯ್, ಏಳಿಲಗೆಯ್** (ಕ್ರಿ) = ಏಳಿದಂಗೆಯ್: ಅಮೃತರುಚಿಯುನಿರದೇಳಿಲಂಗೆಯ್ದತುಳ ಸೌಮ್ಯಕೃತಿ ಕರ್ತುವಿಗೆ (ಸೌಂದಪು. ೧–೧೫). **ಏಳಿಲಗೆಯ್:** ಪ್ರಳಯಕಾಲಾಬ್ಧಿಗಂಭೀರರವವನೇಳಿಲಗೆಯ್ವ ನಿಸ್ವನಂ (ರಾಘಚ. ೧೪–೯). [ಏಳಿಲ + ಕೆಯ್$_1$]

**ಏಳಿಲಗೆಯ್** 'ಏಳಿಲಂಗೆಯ್' ನೋ.

**ಏಳಿಲು** 'ಏಳಿಲ' ನೋ.

**ಏಳಿಸು$_1$** (ಕ್ರಿ). ಅವಹೇಳನ ಮಾಡು; ನಿಂದಿಸು; ಹೀಯಾಳಿಸು: "ಏಳಿಸಿದುದು ಕಡೆಗಣಿಸಿದುದಕ್ಕು" (ಕವಿಕಂ. ೧೩೮); ಕಿಱಿದೆಂದೇಳಿಸಿ ಪಗೆಯಂ ಪಱಿಪಡೆ ಕಿಡಿಸದೊಡೆ ಪೆತ್ತು ಕಾಲದ ಬಲಮಂ ನೆಱಿದಿಱಿಗುಂ (ಕವಿರಾ. ೩–೧೪೯); ದಿವಮನೇಳಿಪಂತು ಮಿಳಿರ್ವ ವಿವಿಧ ಕೇತನಂಗಳಿಂ ಸದಾ ನಿಕೇತನಂಗಳಿಂ (ಪಂಪಭಾ. ೧–೫೮); ಸಂಸಾರಸುಖಕ್ಕೆ ದರ್ಪ್ಪವಿಷಯಂಗಳನೇಳಿಸಿ ಕಾಡಿಯಾಡಿ ಕಾಮಾರಿಯನರ್ಚ್ಚಿಸಲ್ಕೆ ನಲಿದಿರ್ಪ್ಪ ಮುನೀಶ್ವರನೀ ಧ್ರುವೇಶ್ವರ (ಸೌಇಇ. XI–i, ೯೭–೩೩; 1062); ಕೆಮ್ಮಿಸೆ ಗುಜುಜುದಲೆ ಬಳೆದ ಕಾಳೋರಗನನೇಳಿಸುವ ತೋಳ್ (ಹಚಕಾ. ೫–೨); ಬಾಲಕನ ಘಾಯವನು ನಸುನಗುತೇಳಿಸುತ ದಂಡೆಯಲಿ ತಡೆದನು ತಿವಿದನವನುರವ (ಕುವ್ಯಾದ್ರೋ. ೬–೫೮); ರಜಕನೆನ್ನ ನೇಳಿಸಿದನಿಲ್ಲಮಾದಮೆಟ್ಟುಱಿಸಿದಂ (ರಾಮಾಶ್ವ. ೨೪–೨೮).
[ಏಳ್$_0$ + – ಇಸು$_1$. / ತಮಿ. ಮಲ. ಎಳಿ = ಲಘುವಾಗು, ಕುಗ್ಗು]

**ಏಳಿಸು$_2$** 'ಏಱಿಸು' ನೋ.

**ಏಳು$_1$** 'ಏೞ್$_1$' ನೋ.

**ಏಳು$_2$** 'ಏೞ್$_2$' ನೋ.

**ಏಳುಂಮಲೆ, ಏಳುಮಲೆ** (ನಾ). ಏಳುಬೆಟ್ಟ; ತಿರುಪತಿ: ನೀಳಗಿರಿ ಹಡಿಯಘಟ್ಟಂ ಯೇಳುಂಮಲೆ ಕಂಚಿ ತುಳುವ ರಾಜೇಂದ್ರಪುರಂ ಕೋಳಾಲ ಬಯಲು ನಾಡುಮನಾಳಾಪದೆ ಕೊಂಡ ವಿಷ್ಣುವರ್ದ್ಧನದೇವಂ (ಎಕ. VII, ಶಿವಮೊ. ४೦–೫೨; 1180); ನೀಳಾದ್ರಿಯಘಟ್ಟಂ ಏಳುಂಮಲೆ ಕಂಚಿ ತಳ್ವರಾಜೇಂದ್ರ ಪುರಂ(ಎಕ. XVI, ಚಿಕ್ಕನಾ. ೬೨–೧೦; 1242). **ಏಳುಮಲೆ:** ಪುಲಿಗೆಱಿ ಕನ್ದರೇಳುಮಲೆ ಕಾಸವಳಂ ಬನವಾಸೆನಾಡು (ಮೈಆರಿ. ೧೯೨೯, ೬೫–೩೮; 1081).
[ಏಳು$_2$ (< ಏೞ್$_2$) + ಮಲೆ$_4$]

**ಏಳುಕೋಟಿ** 'ಏೞ್ಕೋಟಿ' ನೋ.

**ಏಳುನೂಱು** 'ಏೞ್ನೂಱು' ನೋ.

**ಏಳುನೆಲೆ** (ನಾ). ಏಳು ಅಂತಸ್ತು: ಏಳುನೆಲೆಯ ಕರುಮಾಡದುಪ್ಪರಿಗೆ (ಆದವ. ೭೬); ಕಲ್ಲುಬರಗೆಯ ತುರಕ ಗಂಗ ಶಲಾರನು ಬಂದು ಮುಱಿದು ಸುಡಿಸಿದಂಥಾ ಬಾಗಿಲುವಾಡದ ಗೋಪುರವನು ಏಳುನೆಲೆಯಾಗಿ ಮಾಡಿಸಿ (ಎಕ. V, ಬೇಲೂರು. ೩–೧೨೫; 1397 ?).
[ಏಳು$_2$ (< ಏೞ್$_2$) + ನೆಲೆ]

**ಏಳುಬೆಸನ** 'ಏೞ್ಬೆಸನ' ನೋ.

**ಏಳುಮಲೆ** 'ಏಳುಂಮಲೆ' ನೋ.

**ಏಳುಸ್ವರ** (ನಾ). ಏಳು ವಿಧವಾದ ಧ್ವನಿ, —ಸ್ವರ; ಸಪ್ತಸ್ವರ: ಎಳೆಯ ಕಂದನ ಕೂಗು ಸೀಳಿಸಿ ಬೆಟ್ಟವನೆ ಏಳುಸ್ವರದ ನಿನಾದವು ತುಂಬಿತು ಭಾಳಚಂದ್ರನಿಗೆ ಕೇಳಿತು (ಸಿದ್ಧಪು. ೫–೯೧).
[ಏಳು$_2$ (< ಏೞ್$_2$) + ಸ್ವರ]

**ಏಳುಹ** (ನಾ). ಏಳುವಿಕೆ: "ಇದಿರೇಳುಹ (ಪ್ರತ್ಯುತ್ಕ್ರಮ, ಪ್ರಯೋಗಾರ್ಥ)" (ನಾಚಿರಾ. ೬). [ಏಳು$_1$ (< ಏೞ್$_1$) + –ಹ$_2$]

**ಏಳೆ$_1$** (ನಾ). [ಛಂದ] ಒಂದು ಜಾತಿಯ ಛಂದಸ್ಸು: ಭುಜಗಪಕ್ಷಪುರಗಣ ವ್ರಜದೊಳಾಜಱೊಳಕ್ಕುಮಜಗಣೇಳೆಗಿಭಗತೀ (ಛಂದೋಂಬು. ೫–೧೩); ಮದನವತಿಯಕ್ಕರಂ ಚೌಪದಿ ಗೀತಿಕೆಯೇಳೆ ತಿವದಿಯುತ್ಸಾಹಂ ಷಟ್ಪದಿ (ಛಂದೋಂಬು. ೧–೫೬); ನಾಗವರ್ಮನು ಹೇಳಿರುವ ಅಕ್ಕರಿಕೆ, ಮದನವತಿ, ಛಂದೋವತಂಸ, ಚೌಪದಿ . . . ಏಳೆ ಇವು ಏಳೂ ಅಕ್ಕರದ ಪ್ರಸ್ತಾರದೊಳಗೇ ಸೇರುತ್ತವೆ (ಕೈಪಿಡಿ. ೧೩೦).
[?. / ತೆಲು. ಏಲ. / ಸಂ. ಏಲಾ]

**ಏಳೆ$_2$** (ನಾ). (?): ವನರುಹಮೆಡ್ಡಮುಪ್ಪ ಮೊಗಮಾದ ತಳಿರ್ತಳಮಾದ ಕೋಕಿಳಧ್ವನಿ ಸರಮಾದ ಪಣ್ಣಡಕೆ ಬಾಯ್ದೆಱಿಯಾದೆಳವಳ್ಳಿಯೇಳೆ ನೂತನತನುವಾದ ಮಲ್ಲಿಗೆಯ ತುಂಬಿಯ ಕೂಟಮೆ ನೋಟಮಾದ ನಂದನವನಲಕ್ಷ್ಮಿ ಕಣ್ಗೆಸೆದು ತನ್ನನೆ ನೋಡಿಸಿದಳ್ ತಯಾರ್ಯರಿಂ (ಶಾಂತಿಪು. ೭–೧೦). [?]

**ಏಳೆರಡು** 'ಏೞ್$_2$' ಪರಾ.

**ಏಳೆಲೆಬಾಳೆ** 'ಏೞೆಲೆವಾೞೆ' ನೋ.

**ಏಳೆಲೆವಾಳೆ** 'ಏೞೆಲೆವಾೞೆ' ನೋ.

**ಏಳೆಳೆ** (ನಾ). ಏಳು ಎಳೆ; ಏಳು ನೂಲು: "ಸಪ್ತಕೀ–ಏಳೆಳೆಗಳ ಡಾಬು" (ಸಿದ್ಧಾಂತಿ. ೧೭೫).
[ಏಳು$_2$ (< ಏೞ್$_2$) + ಎಳೆ$_2$ (< ಎೞೆ$_2$)]

**ಏಳೆಳೆಕಟ್ಟಾಣಿ** (ನಾ). ಏಳು ಎಳೆಗಳ ಅಥವಾ ಸಾಲುಗಳ ಗುಂಡಿನ ಸರ (೬). [ಏಳೆಳೆ + ಕಟ್ಟಾಣಿ]

**ಏಳ್ಕರಿಸು** (ಕ್ರಿ). ಏಳುವಂತೆ ಮಾಡು ; ಎತ್ತಿಕೊಳ್ಳು ; ಆಲಿಂಗಿಸು (?) : ಮಯ್ದಡವುತ್ತೊಲವಿಂದಂ ಬಾಯ್ದಂಬುಲಗೊಟ್ಟು ಪಿಡಿದು ರಂಜಿಪ ಮುಮ್ಮೊನೆಗೆಯ್ದುವನಿತ್ತೊಲವಿಂದೀರಯ್ದು ಭುಜದಿನಾಗಳೇಳ್ಕರಿಸಿ ಪೆರ್ಚುರ್ತ್ತುಂ (ವೀರವಿ. ೧೨–೧೨೫). [ಏಳ್$_1$ (< ಏೞ್$_1$) + ಕರಿಸು?]

**ಏಳ್ಕೆ** (ನಾ). ಏಳುವುದು : ಮಾರ್ನುಡಿಯೆ ಮಾರ್ಮಲೆತುದವನೇಳ್ಕೆಯೊಳ್ (ಶ್ರೀರಾಮಾ. ೫೬೨–೨೬೭). [ಏಳ್$_1$ (< ಏೞ್$_1$) + -ಕೆ]

**ಏಳ್ಗಡಲು** 'ಏೞ್ಕಡಲ್' ನೋ.

**ಏಳ್ಗೆ** 'ಏೞ್ಗೆ' ನೋ.

**ಏಳ್ಗೆವಾಡಿವ** 'ಏೞ್ಗೆವಾಡಿವ' ನೋ.

**ಏಳ್ಗೆವೆಱು** 'ಏೞ್ಗೆವೆಱು' ನೋ.

**ಏಳ್ಜಡಧಿ** (ನಾ). ಏಳು ಸಮುದ್ರ ; ಸಪ್ತಸಾಗರ : ವಡಬಶಿಖಿಯಲ್ಲಾಯೆನುತಯೇಳ್ಜಡಧಿಗಳು ಕದಡಿದವು (ಬಸವು. ೫೮–೬೨).
[ಏಳ್$_2$ (< ಏೞ್$_2$) + ಜಡಧಿ]

**ಏಳ್ತರ್** 'ಎೞ್ತರ್' ನೋ.

**ಏಳ್ತರ** 'ಎೞ್ತರ' ನೋ.

**ಏಳ್ನೂರು** 'ಏೞ್ನೂಱು' ನೋ.

**ಏಳ್ನೂಱು** 'ಏೞ್ನೂಱು' ನೋ.

**ಏಳ್ಪದೆ** (ನಾ). ದಡ್ಡತನ (ಸ್ಕ್ಯಾಂಡರ್).
[?. / ತಮಿ. ಏೞ್ಮೈ = ಮೂರ್ಖ, ಮೂರ್ಖತ್ವ]

**ಏಳ್ಬಿಸನ** 'ಏೞ್ಬಿಸನ' ನೋ.

**ಏಳ್ಮಡಿ** (ನಾ). ಏಳರಷ್ಟು ; ಏಳುಮಡಿಯುಷ್ಟು : ಅಗೋ ಬಂಗಾರದ ಮೂಡಲದಿಂದ ಬೀಸಿತು ಉರಿಗಾಳಿ ಏಳ್ಮಡಿ ಮಧ್ಯಾಹ್ನದ ಉಸಿರಿಂದ ನನ್ನಾತ್ಮಕೆ ದಾಳಿ (ಅರಳು. ೨೦೭–೨). [ಏಳ್$_2$ (< ಏೞ್$_2$) + ಮಡಿ$_2$]

**ಏಳ್ಮೆ** 'ಏೞ್ಮೆ' ನೋ.

**ಏಳ್ವತ್ತು** 'ಎೞ್ಪತ್ತು' ನೋ.

**ಏಳ್ವರೆಲಕ್ಕೆ** (ನಾ). ೧. ಏಳೂವರೆಲಕ್ಷ. ೨. ಏಳೂವರೆಲಕ್ಷದೇಶ ; ರಟ್ಟನಾಡು ; ಚಾಲುಕ್ಯರ ರಾಜ್ಯ : ಕೇಳ್ವನ ಕಿವಿಯೊಳು ಗೂಂಟಮು ನಾಳ್ವಿನೆಗಂ ಬೆಟ್ಟತೆಸಿಸುಯೊಟ್ಟಜೆವಿರುದಿಂದೇಳ್ವರೆಲಕ್ಕೆಯೊಳದಟುರ್ವೇಳ್ವಿನೆಗಂ ನಿಗಳವಿಕ್ಕಿದಂ ಭೂತಸ್ನಿ[ನ್ರಿ]ಪ (ಇಆ. XII, ೯೬–೧೧ ; 1187).
[ಏಳ್$_2$ (< ಏೞ್$_2$) + ಅರೆ$_3$ + ಲಕ್ಕೆ]

**ಏಱ್**$_1$, ಏರು$_1$, ಏಱು$_1$ (ಕ್ರಿ). ೧. ಮೇಲಕ್ಕೆ ಹೋಗು ; ಹತ್ತು ; ಆರೋಹಿಸು : ಕುದುರೆಯೇರ್ದ ಕುಱುಂಬನಂತೆ ನಡುಗುತ್ತುಂ (ಧರ್ಮಾಮೃ. ೧–೧೮೪) ; ಉತ್ತಮತೇಜಿಯಿರಲು ಧರೆಯೊಳು ಹದ್ದನೇರ್ವರೆ (ಪುರಂದ. ೨–೭೫–೧೫). ೨. ಮೇಲೆಬೀಳು ; ಯುದ್ಧಮಾಡು : ಉಱಿದ ನಿನ್ನ ಮಕ್ಕಳ ನಿನ್ನೇರ್ದೊಡಮುಱಿಯೆಂ ಪೆರ್ಜಸಮನೆ ಪಿಡಿದೆನ್ನನೆ ರಣದೊಳಱಿವೆಂ (ಪಂಪಭಾ. ೯–೮೭). **ಏರು**$_1$ : ೧. ನಿರ್ಜರಪಾಲನೈರಾವತವನೇರ್ದು (ರಾವಣೋ. ೮) ; ತಾರಮ್ಮಯ್ಯ ತಂದು ತೋರಮ್ಮಯ್ಯ ದೂರದ ಬಾನಿಗೆ ಏರಿದ ಚಂದ್ರನ (ಕಎಪು. ೮–೨) ; ಕುದುರೆ ಏರಿ ನೋಡ ಹತ್ತಿದನು (ಬಂಗಾಸೆ. ೬೦). **ಏಱು**$_1$ : ೧. "ಏಱು – ಆರೋಹಣೇ, ಸಮಗ್ರತ್ವೇ, ಕ್ಷತೇ ಚ" (ಶಮುಧಾ) ; ಕಟ್ಟಿಪ್ಪಿನುಳ್ ತೋಱದಾರಾಧನೆ ನೋಸ್ತು ತೀರ್ತ್ಥಗಿರಿ ಮೇಲ್ಸ್ವರ್ಗಾಲಯಕ್ಕೇಱಿದಾರ್ (ಎಕ. II, ೭೬–೪ ; 700) ; ಕೊಲ್ಲೆಂ ಬಿಸುಡಾಯುಧಮಂ ಪುಲ್ಲಂ ಕರ್ಚೇಱು ಪುತ್ತನಡಿಗೆಱಗೆನ್ನಾ (ಕವಿರಾ. ೩–೨೦೦) ; ವಿಮಾನಮನೇಱಿ (ವಡ್ಡಾರಾ. ೮೩–೨೧) ; ಕಾಮಂ ಕಳನೇಱುವಂತೆ ಸೆಜ್ಜೆಯನೇಱಿ (ಪಂಪಭಾ. ೩–೮೧ ವ) ; ಮೇರುವನೇಱಿ ನೋಡಿದವರ್ಗೀ ಧರೆ ತಾಂ ಕಿಱಿದಾಗಿ ತೋಱದೆ (ಧರ್ಮಾಮೃ. ೧–೧೭೯) ; ಎತ್ತಿನ ಬೆನ್ನನೇಱಿದವರು ಬುದ್ಧಿವಂತರೇ (ಪುರಂದ. ೨–೭೫–೧೬).

೨. ಚಾತುರಂಗದ ಚರಣಹತಿ ನಿರ್ಧೂತ ಧೂಳೀಮಯಮಖಿಳ ದಿಗುಜಾತವೆನೆ ಥಟ್ಟಣೆಯಲೇಱಿತು ಪಾಂಡುಸುತಸೇನೆ (ಕುವ್ಯಾದ್ರೋ. ೧೮–೨೫) ; ತುಡುಕಿ ಲಗ್ಗೆಯನೇಱಿಂದು ವಜೀರರ್ಗೆ ಕಡುಗಲಿ ಖಾನ ಬೆಸಸಿದ (ಕಂನವಿ. ೧೩–೪೫). ೩. ಉಬ್ಬು ; ಸಂತೋಷಪಡು ; ಅಭಿವೃದ್ಧಿ ಹೊಂದು : ರಾಯ ಮನವೊಲಿದೇಱಿಸಿದರೇಱುವುದು ದೊರೆ ಮನ ಮುಱಿಯೆ ಕುಂದುವುದು (ಕುವ್ಯಾಕ. ೧–೨೪). ೪. ಗಣನೆಗೆ ಬರು ; ಮೆಚ್ಚಿಕೆಯಾಗು : ಕಸವರದ ಸವಿಯುಮಂ ಭಯರಸಕದ ಸವಿಯು ಮನದೆಂತುಮಾನಱಿಯದುದಂ ವಸುಮತಿಯಱಿವುದು ನೀಂ ಪುರುಡಿಸಿ ನುಡಿದೊಡೆ ನಿನ್ನ ನುಡಿದ ಮಾತೇಱುಗುಮೇ (ಪಂಪಭಾ. ೧೨–೧೮೦) ; ನಿಮಗಾವುವು ಮನಕೇಱುವುವಱ್ಕಱಿನವನಾಯ್ದುಕೊಳ್ಗೊಳ್ಳಿಂ (ಶಮುದ. ೯೫ ಪ್ರಯೋ). ೫. ಹತ್ತು ; ಉಂಟಾಗು ; ಒದಗು : ಕುದಿವ ಕೂಱಂತೆ ಕುದಿದು ದಗೆಯೇಱಿದ ಕೋಡಗದಂತೆ ಬೆಱಗಾಗಿ (ಧರ್ಮಾಮೃ. ೩–೬೫) ; ಸುಧರ್ಮ್ಮದಿಂ ಪ್ರತಿಪಾಳಿಸುವರು ಉಪೇಕ್ಷಿಸಿದಡಾ ದೋಷಂ ನೂಱಿರ್ಪದಿಂಬರಿಗೇಱುವುದು (ಸೌಇಇ. IX–i, ೨೫೪–೧೯ ; 1148) ; ಪಿರಿದು ಬಯಸುತವರಿರ್ವರೆಸೆದರಾಗ ಸ್ಮರಮೋಹನದ ಸೊಕ್ಕೇಱಿ (ಕಂನವಿ. ೧೦–೫೨).

**ಏರಗತ್ತು** = ಏರಿದ ಗತ್ತು ; ಮೇಲೇರಿದ ಧ್ವನಿ : ಏರಗತ್ತಿನ ಕಾಳಿ ಕೂಗಿತೊ ಜಯಭೇರಿ ಕೇಳಿ ಸಿಡಿದ್ಯೋತ ಫಿರಂಗಿ ದಂಡ (ಲೋಕಗೀ ೨೨೪–೩). **ಏರಸಲ್ಲು** = ಗಮನಕ್ಕೆ ಬರು : ನಿನ್ನಂತಹ ಪರಮ ನಾಗರಿಕನ ಲಕ್ಷ್ಯಕ್ಕೆ ಏರಸಲ್ಲದ ಅಲ್ಪವಿಷಯ (ಬೆಟ್ಟಅ. ೫೬–೨೩). **ಏರಿಬರು** = ಮೇಲೆ ಬೀಳು ; ಅಡರು : ಮಿಂಚುತಿದೆ ಆಗೀಗ ಇರುಳಿಗೆ ಏರಿ ಬರಲಿವೆ ಮೋಡವು (ನೆಲಮು. ೪೭). **ಏರಿಹೋಗು** = ಏರಿಬರು : ಸಿಂಹಿಣಿಯಂತೆ ಗೌಹರಳ ಮೇಲೆ ಏರಿ ಹೋದಳು (ಕೊತಕಾ. ೬೫) ; ಸೋಮಣ್ಣನ ಮೇಲೆ ಏರಿಹೋಗಿ (ತುಂಗಭ. ೫೩). **ಏರುಹಾಕಿಕೊಡು** = ಮೇಲೆ ಹಾಕಿಕೊಳ್ಳು ; ಪಕ್ಷವಹಿಸು : ನೀವು ಹೀಗೆ ಏರುಹಾಕಿಕೊಡುವುದರಿಂದಲೇನೆ ಅವಳಿಗೂ ನನ್ನ ಕಂಡರೆ ಅಷ್ಟು ದ್ವೇಷ (ನಂದನೆ. ೪೪). **ಏಱಲಿಕ್ಕು** = ಪೀಠವನ್ನುಕೊಡು : ಆಸ್ಥಾಯಿಕಾಜನಕ್ಕೆ ಲಕ್ಕಿತೆಱದಿಂ ಪೊಗಟ್ದು ಸಾರೆ ಕರೆದೇಱಲಿಕ್ಕಲ್ವೇೞ್ದು ಕರೆದು ಕುಳ್ಳಿರಿಸಿ (ಶಾಂತಿಪು. ೩–೫೩ ವ). **ಏಱಲ್ವೇೞ್** = ಮೇಲೆ ಹತ್ತುವುದಕ್ಕೆ ಹೇಳು : ಆ ರಥಮಂ ಮನೋರಥಮಂ ಬೆರಸೇಱಿ ಚೂತಲತಿಕೆವೆರಸು ಸುಭದ್ರೆಯನೇಱಲ್ವೇೞ್ದು (ಪಂಪಭಾ. ೫–೨೦ ವ). **ಏಱಿಕೊಳ್** = ಮೇಲೇರು ; ಹತ್ತಿಕೊ : ಮುಕ್ಕಣ್ಣನರಸಿಯ ಬೀಳ್ಕೊಂಡು ರತಿದೇವಿ ದುಕ್ಕದಿಂದಾಯಾಸಗೊಳುತೆ ಅಕ್ಕರಿಗನನೇಱಿಕೊಂಡು ತೀವ್ರದಿ ಬಂದು ಹೊಕ್ಕಳು ಕುಸುಮಾವತಿಯ (ಮೋಹತ. ೮–೪೯). **ಏಱಿನೂಂಕು** = ಮೇಲಕ್ಕೆ ತಳ್ಳು : ಉಳಿತಾಳಕಜಾಳಮಂ ಕೊಡಂಕೆಗೆ ತೆಗೆದೇಱಿನೂಂಕಿ ಮಣಿಕಂಕಣಮಂ ಕಳಶೋತ್ಕರಂಗಳಂ ತೆಗೆದಭಿಷೇಕ ದೇವತೆಯರಂದದಿನೊಪ್ಪಿದರ್ (ಕಾದಂಪೂ. ೭೧).

[ದೇ. ‖ ತಮಿ. ಮಲ. ಏಱು ; ತುಳು. ಏರು ; ಕೊಡ. ಏರ್ ; ತೆಲು. ರೇಗು, ರೇನು, ರೇಯು, ರೇವು]

**ಏಱ್**$_2$ (ಕ್ರಿ). ಯೋಗ್ಯವಾಗು ; ತಕ್ಕುದಾಗು ; ಸಾಧ್ಯವಾಗು. 'ಏರ್ಪಡು$_1$' ಪರಾ.

[ದೇ. ‖ ತಮಿ. ಏಲ್ ; ಮಲ. ಏಲು, ಏಲುಕ ; ತೆಲು. ಏಲಯು]

**ಏಱ್**$_3$ (ಕ್ರಿ). ಆಯ್ದುಕೊ ; ಆರಿಸಿಕೊ (ಕಿ).

[?. / ತುಳು. ಸಾರು ; ತೆಲು. ಏಱು]

**ಏಱ್**$_4$, ಏಱು$_4$ (ನಾ). ೧. ಗಾಯ ; ಹುಣ್ಣು ; ವ್ರಣ : ಕೆಲರೇಗರ್ಳಿಂದೆ ವೇದನೆಗಳಂ ಸೈರಿಸದೆ ಗಳದಸುವನು ಪಿಡಿದವರ್ (ಜೈಮಿಭಾ. ೧೬–೪೦). 'ಏರ್ಪೆಱು', 'ಏರ್ವಡೆ' ಪರಾ.

**ಏಱು$_4$** : ೧. "ಏಱು ಘಾಯಂ" (ಕರ್ಣಾನಿ. ೬೯); ಕಾರ್ತಿಕ ಋಷಿಯರಂ ಮನದೊಳು ಬಗೆದೇಱುಂ ಪುಣ್ಣುಂ ವ್ಯಾಧಿಯುಂ ಪಸಿವು ನೀರೞ್ಕೆ (ವಡ್ಡಾರಾ. ೧೧೯-೪); ಏಱಿನೊಳ್ ಸತ್ತು ಕಲೆವೆರಸು ಪುಟ್ಟುವುದುಮಂ (ಚಾವುಂಪು. ೧೯-೧೬); ಪೇಱಿನ ಮೇಲೆ ಪಾಸಱೆಯೇಱಿನ ಮೇಲೆ ಬಡಿಗೋಲ್ (ಧರ್ಮಾಮೃ. ೧-೧೭೨); ಬಾಣಂಗಳೆಡೆಯಿಂದ ಸುರಿವ ಬಿಸಿ ನೆತ್ತರೇಱುಗಳ (ಹಚಕಾ. ೬-೬೭); ಏಱ ನೋವಿನೊಳಾದ ತೃಷ್ಣೆಯ ನಾಱಿಸುವರಿವಱಳವೆ (ಕುವ್ಯಾಭೀ. ೧೦-೨೬). **೨.** ಪೆಟ್ಟು; ಹೊಡೆತ; ಏಟು: ಕಿಱ್ತು ಬಾಳ್ವೆರಸು ಬಂದೆಱಗಿ ಇಱಿದಾತನೇಱಂ ಬಂಚಿಸಿ ಸಿಂಹಲಂಘನದಿಂ ಮೇಗೆ ನೆಗೆದು ವಜ್ರಸಮಾನಮಪ್ಪ ಕೈಯಿಂದಂ ಕುಮಾರನಾತನ ತೆಗಲೆಯಂ ತಿವಿದೊಡೆ (ವಡ್ಡಾರಾ. ೫೯-೨೮); ಸುಪ್ರತೀಕ[ಂ] ಕೆಯ್ಯಕಾಲ ಕೋಡೇಱಿನೊಳ್ ಬಲಮನೆಲ್ಲಂ . . . ತೊೞ್ತುೞಿದುೞಿದು (ಪಂಪಭಾ. ೧೧-೭೨ ವ); ಅಗಣಿತ ಬಾಣದೇಱಿನೊಳೊಱೆದ ರಕುತದ ಧಾರೆ ನಾದಿತು ರಥದ ಹಲಗೆಗಳ (ಕುವ್ಯಾದ್ರೋ. ೬-೨೭). [?]

**ಏಱ್$_5$**, ಏಱು$_5$ (ನಾ). ಯುದ್ಧ; ಸಮರ; ಕಾಳಗ; ಹೋರಾಟ: 'ಏರ್ಪಸವಿಗ', 'ಏರ್ವಲ', 'ಏರ್ವೆಸ' ಪರಾ. **ಏಱು$_5$** : ಮೂಱ್ತಿ ಅರಸರಾಳ್ ಮಾರಿದಾಸ ಕರಿಯ ತಮ್ಮನ್ ನಾಗತರಾಸರಾ ಮನೆ ಮಗವು ಬಾಗೆ ಊರುಳ್ ಬಲ್ಲಹನ್ ಏಱಿನುಳ್ ಎಱಿದು ವಿಟ್ಟನ್ (ಎಕ. XVI, ತುಮಕೂ. ೯೫-೫; 780); ಕರ್ಣಾರ್ಜುನರೇಱಂ ನೋಡಲ್ಕೆ ಭೂತನಾಥಂ ಬಂದಂ (ಪಂಪಭಾ. ೧೨-೧೩೯); ಮೂಱು ಕೊಡೆ ಅಣ್ಣೆಯರ್ಪಿಞ್ಞನೂರಾ ಏಱಿನುಳ್ಳೆಱಿದು ಬಿೞ್ದಾರ್ (ಎಕ. XVI, ತುಮಕೂ. ೮೬-೪; ?); ರಿಪು ಬಲದೇಱ ನಾಲಗೆ ಹೊಗಳಲಮ್ಮದು ನೃಪತಿ ಕೇಳೆಂದ (ಕುವ್ಯಾಕ. ೧೧-೫೧). [< ಏಱ್$_1$]

**ಏಱುಕಟ್ಟು** 'ಏಱುಗಟ್ಟು' ನೋ.

**ಏಱುಕಾಸು** (ಕ್ರಿ). ಏರುಗಾವು ಕೊಡು: ಪಯವ ಕೂಡಿದ ನೀರಿನಂತೆ ಮಧುರವ ಕೂಡಿದ ಅಂಭಸಿಯಂತೆ ತೈಲವ ಕೂಡಿದ ಉದಕದಂತೆ ನೋಡಿ ಏಱುಕಾಸಲಿಕ್ಕೆ ಅಲ್ಲಿಯೇ ಅಱತಂತೆ ಸ್ಥಲ ಬೇಱಾಗಲಿಲ್ಲ (ನೋ ೪ ಮಾ. ೧೩೯-೫೩೫). [ಏಱು$_0$ (< ಏಱ್$_1$) + ಕಾಸು$_1$]

**ಏಱುಕುದುರೆ** (ನಾ). ಏರುವ ಕುದುರೆ; ಸವಾರಿ ಕುದುರೆ: ಪಲ್ಲವಾದಿತ್ಯ ನೊಱಂಬಪ್ಪಸೆಟ್ಟಿಯೆನ್ದು ಪೆಸರಂ ಡಯೆಗೆಯ್ದು ಪಟ್ಟಂಗಟ್ಟಿ ಏಱುಕುದುರೆ ಕೊಡೆ ಆಳಪಣ್ಣುವಕೆ ಕುಞ್ಞನ್ತಳಿಗೆ ಕೀೞ್ವಟ್ಟ ಅಡ್ಡಣಿಗೆ ಗದ್ದಿಗೆ ರಾಜಚಿನ್ನವ ಕೊಟ್ಟು (ಸೌಇಇ. IX-i, ೪೧-೧೩; 11ನೆಯ ಶತ). ℙ ಏಱಲ್ (= ಹತ್ತುವುದಕ್ಕೆ) ಕುದುರೆ ಎಂದಿರಬಹುದು. [ಏಱು$_1$ (< ಏಱ್$_1$) + ಕುದುರೆ]

**ಏಱುಗಟ್ಟು**, ಏಱುಕಟ್ಟು (ಕ್ರಿ). ಎತ್ತರವಾಗಿ ಕಟ್ಟು; ಎತ್ತರದಲ್ಲಿ ಕಟ್ಟು: "ಉಚ್ಚಂಡಮುಮಾಪ್ರಲಂಬಮೆನಲೇಱುಗ[ಪಾಠಾಂ. ಱಿಕ]ಟ್ಟಿದುದಕೆ ನಾಮಂ" (ಮಂಗರಾ. ೧೩೫-೩೭); ಕೊಂದಡೆ ಕೊಲು ಹಣಮೆಂದಿಲ್ಲವೆನೆ ಕಾಲಬಂಧಿಸಿ ಬಿಗಿದೇಱಗಟ್ಟಿ ಮುಂದುವರಿವ ಕೋಪದಿಂದ ಪೊಯ್ಯಲು ಬಾಲಚಂದಿರಧರ ನಿಜದೋಱೆ (ಭೈರಸೂ. ೨೦೭-೨೯೨). **ಏಱುಕಟ್ಟು** : "ಉಚ್ಚಂಡಂ, ಅಪ್ರಲಂಬಂ – ಈ ೨ ಏಱುಕಟ್ಟಿದುದು" (ಹಲಾಯು. ೧೨೯-೯೮). [ಏಱು$_1$ (< ಏಱ್$_1$) + ಕಟ್ಟು$_1$. **P** ಏಱೆ + ಕಟ್ಟು, ಏಱಲ್ + ಕಟ್ಟು ಎಂದೂ ಬಿಡಿಸಬಹುದು]

**ಏಱುತಿರುಹು** (ಕ್ರಿ). ಎತ್ತಿ ತಿರುಗಿಸು; ಏರುವಂತೆ ತಿರುಗಿಸಿ ಹೊಸೆ: ಭೂರಿ ಹೂಂಕಾರದಲಿ ಮೀಸೆಯನೇಱುತಿರುಹಿ ಮಹೋಗ್ರವಿಕ್ರಮನಾರುಭಟಿಯಲಿ ಮೊಳಗುತೆದ್ದನು ನೋಡಿ ಕೆಲಬಲನ (ನಿಭಾಗ. ೧೦-೮೫-೩೫). [ಏಱು$_1$ (< ಏಱ್$_1$) + ತಿರುಹು$_1$ (< ತಿರುವು$_1$)]

**ಏಱುದೆಗೆ** (ಕ್ರಿ). ಮೇಲಕ್ಕೆ ಎತ್ತು, —ಸೇದು: ಸುಗಿದ ತೊಗಲೇಱುದೆಗೆದಳ್ಳೆ [ಪಾಠಾಂ. ಳೆರೆದೆಗೆದಾಳೆಲ್ಲ, ಲೇದುದೆಗೆದೈಸೆ] ದಿಗ್ವಸನವೆತ್ತಿದ ಕತ್ತಿಯೊಡ್ಡಿದ ಕಪಾಲವೆರಸು (ಸಿದ್ಧರಾ. ೬-೧); ಉಬ್ಬಿದುರದೇಱು [ಪಾಠಾಂ. ಱೆ] ದೆಗೆಮೊಡಲ ಬಾಗಿದ ಬೆನ್ನ (ಜೈಮಿಭಾ. ೨೮-೪೬). [ಏಱು$_1$ (< ಏಱ್$_1$) + ತೆಗೆ]

**ಏಱುನೂಂಕು** (ಕ್ರಿ). ಮೇಲಕ್ಕೆ ಸರಿಸು: ಬಲದ ಕರಾಂಭೋಜದಿಂದೇಱುನೂಂಕುತೊಡನುತ್ತುಂಗಸ್ತನಾಗ್ರಕ್ಕಿಳಿವ ಮುಡಿಯನಾಂತೌಂಕುತುಂ (ರಾಜಶೇ. ೩-೫೪). [ಏಱು$_0$ (< ಏಱ್$_1$) + ನೂಂಕು$_1$]

**ಏಱಾಗು** (ಕ್ರಿ). ಗಾಯವಾಗು; ಪೆಟ್ಟಾಗು: ಅಣೆಯೆಂಬಲಗಿನೇಱೂಗಲಾತನ ಕಿವಿಗೆ (ತಿರುರ. ೮-೯). [ಏಱು$_4$ (< ಏಱ್$_4$) + ಆಗು$_1$]

**ಏಱಾಟ**, ಏರಾಟ (ನಾ). ೧. ಏರುವಿಕೆ; ಹತ್ತುವಿಕೆ: ತುರಗದೇಱಾಟ ಗಜಾರೋಹಣ ಮುಖ್ಯ ವರಧನುರ್ವೇದ ಮುಂತಾದ . . . ಆಯುಧಸಾಧನೆಗಳನಾಗ ಪರಿಪೂರ್ಣದಲಿ ಸಾಧಿಸಿದರು (ಕಂನವಿ. ೪-೮೫); ನೀಱೆ ನೀಱನ ಕೂಟ ನೃಪನ ಸಾಂಬ್ರಾಣಿಯ ಏಱಾಟದಂತಿಹುದಕ್ಕಾನೀಱನು ಜಡಸತಿಯೊಳು ಕೂಡೆ ನೃಪನೆತ್ತಿನೇಱೂಟದಂತಿಹುದಲ್ತೆ (ಭರಚ. ೭-೧೫). **೨.** ಯುದ್ಧ; ಕಾಳಗ: ವರರೇವಂತನೇಱಾಟವನು ನಸುನಗುತ ಬಲಿದ ದೃಢವಾಘೆಗಳು ದೃಷ್ಟಾವಳಿಯ ಹಯ ಪ್ರೌಢ ಪ್ರತಾಪರು ಹೊಳೆವ ಮಕುಟದ ಸಾಲುಗಳಲೊಪ್ಪಿದರು ರಾವುತರು (ಕುವ್ಯಾಉ. ೮-೪೧). **ಏರಾಟ** : ೧. ಜರ್ಮನಿಯು ತನ್ನ ಏರಾಟವನ್ನು ಜೋರಿನಿಂದ ಸಾಗಿಸಿದ್ದರಿಂದ (ಮೇದಿಮ. ೧೯೭). **೩.** ಸ್ಪರ್ಧೆ; ಪೈಪೋಟಿ; ಮೇಲಾಟ: ಸತ್ಯಸೌಂದರ್ಯಗಳ ಏರಾಟದಲ್ಲಿ ಬಣ್ಣಕ್ಕಿಂತಲೂ ಕಣ್ಣೇ ಮೇಲು (ವಿಚಾಮಂ. ೯೯). [ಏಱು$_1$ (< ಏಱ್$_1$) + ಆಟ]

**ಏಱಾಟಿಕೆ**, ಏರಾಟಿಕೆ (ನಾ). ೧. ಆರೋಹಣ; ಮೇಲೆ ಹತ್ತುವಿಕೆ: ತುರಗದೇಱಾಟಿಕೆಯ ಭಟರಿಗೆ ದುರುವಲಾ (ತೊರರಾ. ೬-೩೦-೩೦). **ಏರಾಟಿಕೆ** : ೨. ಸ್ಪರ್ಧೆ; ಪೈಪೋಟಿ: ಗದ್ದಲದಲ್ಲಿ ನುಗ್ಗಿ ಸ್ಥಲಮಾಡಿಕೊಳ್ಳಬೇಕು. ಈ ಏರಾಟಿಕೆಯಲ್ಲಿ ಭಾಗವಹಿಸದವರಿಗೆ ಗಾಡಿಯು ಸಿಕ್ಕುವುದಿಲ್ಲ (ಜಯಂತ. ೩೩೭). [ಏಱಾಟ + -ಇಕೆ]

**ಏಱಾಳಿ** (ನಾ). ಯುದ್ಧವೇ ಶೀಲವಾಗುಳ್ಳವನು; ಯೋಧ: ಮಾಱಾಳಿಯುಮೋದಾಳಿಯುಮೇಱಾಳಿಯುಮಪ್ಪನಾಗಿ ಪಡೆಪಾಳಿಯೆ ಕೇಳ್ (ಕಾವ್ಯಾವ. ೩೫೩). [ಏಱ್$_5$ + -ಆಳಿ$_3$]

**ಏಱಿ** 'ಏರಿ$_1$' ನೋ.

**ಏಱಿಕೆ**, ಏರಿಕೆ, ಏರ್ಕೆ (ನಾ). ೧. ಮೇಲೆ ಏರುವಿಕೆ; ಹೆಚ್ಚುವಿಕೆ. **೨.** ಎತ್ತರ; ಔನ್ನತ್ಯ: ಕೇಡಾಯ್ತೆನುತ ಧವಳಾರ ಗೋಪುರದೇಱಿಕೆಯ ನೋಟಕರು ಮುಱಿಗೆಡೆದು ದೂರದಲಿ ನಿಂದಿಹರು (ತೊರರಾ. ೫-೭-೧೭); ಹುಸಿಹೊಲ್ಲ ಕೂರ್ಪರೆಡೆಯಲ್ಲಿ ಏಱಿಕೆಯ ಬಿಸಿಲು ಹೊಲ್ಲೆಂದ (ಸರ್ವಜ್ಞ. ೧೧೫೫). **ಏರಿಕೆ** : ೧. ಬೆಲೆಗಳ ಏರಿಕೆ ವಿಷವೇರಿದಂತೆ ಏರುತ್ತಿದೆ (ರೂಢಿ). **ಏರ್ಕೆ** : ೧. ಸ್ಯಂದನಗಳೇರ್ಕೆ ಸಂಪರ್ಕದಿಂ ಬರುತಿರ್ದುದುತ್ಸವದೊಳೇನೆಂಬೆನು (ಪರಶು. ೧೧-೨೧). [ಏಱು$_1$ (< ಏಱ್$_1$) + -ಇಕೆ]

**ಏಱಿಕ್ಕು**, ಏರಿಕ್ಕು (ಕ್ರಿ). ಕುಟ್ಟು; ತೊಳಸು; ಥಳಿಸು: ವನಚರಿಯೇಱಿಕ್ಕುತ ಸುವ್ವಿಸುವ್ವಿಯೆಂದೆನುತ ಬಿಡುವ ನಿಡುಸುಯ್ಲ ತನಿಗಂಪು ಸೋಂಕಲೊಡನೆ ಸಿಂದುವಾರದೊಂದೊನಕೆ ಕೊನರ್ತುದಾಕ್ಷಣದಿ (ಶ್ರೀಪಾಲ. ೭-೪೧). **ಏರಿಕ್ಕು** : ಅಕ್ಕಿ ಏರಿಕ್ಕಬೇಕು (ರೂಢಿ). [ಏಱು$_2$ + ಇಕ್ಕು$_1$]

**ಏಱಿಟ್ಟೆ** (ನಾ). ಯುದ್ಧದ ಈಟಿ: ಏಱಿ ಭುಜಂಗಶಯ್ಯೆಯನಾಶಾರ್ಙಮನೇಱಿಸಿಯಾ ಶಂಖವನು ಹಾಱಲೂದಿದ ಹರಿಯನು ಕಂಡು ಕಂಸಗೆ ಏಱಿಟ್ಟೆಗೊಂಡಂತಾಯ್ತು (ನೇಮಿಸಂ. ೧೬-೫೪). [ಏಱು$_5$ (< ಏಱ್$_5$) + ಇಟ್ಟೆ]

**ಏಱಿಸು, ಏರಿಸು** (ಕ್ರಿ). ೧. ಮೇಲಕ್ಕೆ ಹೋಗುವಂತೆ ಮಾಡು; ಮೇಲಕ್ಕೆ ಹತ್ತಿಸು; ಮೇಲೇರಿಸು : ನಿಜವಿಜಯಗಜೇಂದ್ರಮನೇಱಿಸಿ ಮುಂದಿಟ್ಟೊಡಗೊಂಡು ಬರೆ (ಆದಿಪು. ೪–೨೪ ವ); ಖಚರರನಡರ್ದೇಱಿ ಸುವನೊ ಮೇರುಗಿರಿಯ ತೂಂಟಿಲ ತುದಿಯಂ (ಗದಾಯು. ೬–೧೭). ೨. ಮುಡಿಸು; ಧರಿಸು : ಶೈವಾಗಮಂಗಳೊಳು ಕೇತಕೀಕುಸುಮಮಂ ಭೂತೇಶ್ವರಂಗೇಱಿಸಲಾಗದೆಂಬುದಂ ಮಾಣ್ದು (ಬಸರ. ೬೩–೬೩). ೩. ಬಿಲ್ಲಿಗೆ ಹಗ್ಗವನ್ನು ಕಟ್ಟು; ಹೆದೆಯನ್ನು ಬಿಗಿ : ದ್ರೋಣಂ ಬಾಜಿಸ್ಗಿಂದು ಮಹಾಪ್ರಚಂಡಗಾಂಡೀವಮಂ ಕೊಂಡೇಱಿಸಿ ನೀವಿ ಜೇವೊ ಡೆದು (ಪಂಪಭಾ. ೧೦–೬೪ ವ); ಪೂವಿನ ಬಿಲ್ಲ ಕೊಪ್ಪನೊಡೆದೇಱಿಸಿ ತಾವರೆ ನೂಲ ನಾರಿಯಂ (ಶಮದ. ೫೫ ಪ್ರಯೋ); ಬಿಲ್ಲ ಗೊಲೆಗೇಱಿ ಸುತ ಚೌಪಟಮಲ್ಲ ಹೊಕ್ಕನು (ಕುವ್ಯಾದ್ರೋ. ೩–೨೦). ೪. ಹೆಚ್ಚಿಸು; ಅಧಿಕಗೊಳಿಸು; ಉಬ್ಬಿಸು; ಅಭಿವೃದ್ಧಿ ಪಡಿಸು: ಬೆಸಗೊಂಡುದಯಂ ಮೊದಲಾಗಿ ಸುರೇಜ್ಯಂ ನಿಂದ ರಾಶಿವರಮೆಣಿಸಿ ವಿಚಾರಿಸಿ ಭಗಣಂಗಳ ನವನೇಱಿಸಿ ವಯಸಮನಱಿ ವಯೋನುಮಾನಕ್ರಮದಿಂ (ಜಾತಕ. ೨೪–೩); ಶ್ವಸಿತದ ಕಂಪು ಕಂಪನಭಿವರ್ಧಿಸೆ ಬಣ್ಣದ ಸೊಂಪು ಬಣ್ಣ ವೇಱಿಸೆ (ಪುಷ್ಪಪು. ೨–೮೦); ರಾಯ ಮನವೊಲಿದೇಱಿಸಿದರೇಱುವುದು ದೊರೆ ಮನಮುಱಿಯೆ ಕುಂದುವುದು (ಕುವ್ಯಾಕ. ೧–೨೪). ೫. ಆರೋಪಿಸು; ಅನ್ವಯಿಸು : ಅದಲ್ಲದೆಯುಂ ಪಲವುಂ ದೋಷಂಗಳಂ ಗುಣಂಗಳಾಗೇಱಿಸಿ ತಮ್ಮೊಳ್ಕಯ್ಯೊಯ್ದು ನಗುತ್ತಂ (ಕಾದಂಪೂ. ೫೬೭); ತನ್ನ ವರೆಂದರತ್ತಲೆ ಹರಹಿಕೊಂಬನು ಕೃಷ್ಣನದು ತನಗೇಱಿಸಿದ ಬಿರುದು (ಕುವ್ಯಾದ್ರೋ. ೨–೬೪). ೬. ಪಡೆ; ಸ್ವೀಕರಿಸು; ಕೈಗೊಳ್ಳು : ಅರಿಂಜಯರುಮೆಂಬವಧಿಜ್ಞಾನಿಗಳ್ ಬರೆ ಭಕ್ತಿಪೂರ್ವಕಮಿದಿರ್ಗೊಂಡು ವಂದಿಸಿ ವ್ರತಮನೇಱಿಸಿಕೊಂಡು ಧರ್ಮಶ್ರವಣಾನಂತರಮಾದಿತ್ಯಗತಿ ಗಳ್ಗಿಂತೆಂದು ಬಿನ್ನಪಂಗೆಯ್ದಂ (ಚಾವುಂಪು. ೨೨–೨೧); ಸಮ್ಯಕ್ತ್ವ ಪೂರ್ವಕಮಣುಬ್ರತಂಗಳನೇಱಿಸಿ (ಸುಕುಮಾ. ೬–೪೨ ವ). **ಏರಿಸು:** ೧. ಏರಿಸಿ, ಹಾರಿಸಿ, ಕನ್ನಡದ ಬಾವುಟ (ಕನ್ನಬಾ. XI); ತೋರಿಸಿಕೊಟ್ಟ ಗುರು ಏರಿಸಲಿಕ್ಕೆ ಬಲ್ಲನೇ (ಗಾದೆ). ೨. ಹೆಚ್ಚೇನು ಹೇಳಲಿ? ನಿನ್ನ ಜೀವನ ಮಾಡು ಅವನಿಗೇರಿಸಿದಂಥ ಹೂವಾಗಿ ತಂಗಿ (ಪಯಣ. ೧೧೫); ನೆಲದ ಮೇಲೆ ಹಾವುಗಳನ್ನು ಬರೆದು ಅರಿಸಿನ–ಕುಂಕುಮವನ್ನು ಏರಿಸಿ ಪಂಚಮಿಯ ಪ್ರಥಮಸಂಸ್ಕಾರವನ್ನು ನೆರವೇರಿಸಿದಳು (ಜಯಂತ. ೧). ೫. ನಾನೇನೂ ಏರಿಸಿ ಮಾತನಾಡುವುದಿಲ್ಲ (ಬದುಕಿ. ೧೯೧).

ಏಱಿಸಿಕೊಳ್ = ೧. ಮೇಲೆ ಹತ್ತಿಸಿಕೊ, —ಕೂಡಿಸಿಕೊ : ಸಾಹಸಾಭರಣನ ಸಾಹಸಮನಳವಲ್ಲದೆ ಪೊಗಟ್ದು ತೊಡೆಯನೇಱಿಸಿಕೊಂಡು ಬಾಯೊಳ್ ತಂಬುಲಂಗೊಟ್ಟಂ (ಪಂಪಭಾ. ೬–೩೪ ವ). ೨. ಪಡೆದುಕೊಳ್ಳು; ಸ್ವೀಕರಿಸು : ಭಟಾರರಂ ವಂದಿಸಿ ಸದ್ಧರ್ಮಮಂ ಕೇಳ್ದು ಶ್ರಾವಕಬ್ರತಂಗಳನೇಱಿಸಿಕೊಂಡು ವಂದಿಸಿ ತನ್ನರಮನೆಗೆ ಪೋದಂ (ವಡ್ಡಾರಾ. ೮೫–೯). ೩. ಪಕ್ಷವಹಿಸು; ಸಮರ್ಥಿಸು : ಲೇಸನಾಡಿದೆ ರಾಮ ಬಳಿಕೇನಾ ಸುಯೋಧನನಧಮನೇ ನೀನೀಸನೇಱಿಸಿಕೊಂಡು ನುಡಿವಾ ಮತ್ತೆ ಕೆಲಬರಲಿ (ಕುವ್ಯಾಉ. ೧–೭). ಏಱಿಸಿನುಡಿ = ಆರೋಪಿಸಿ ಮಾತನಾಡು; ತೆಗಳು : ಚಾಪತಂತ್ರಪಿನಾಕಿಯೇಱಿಸಿ ನುಡಿದ ನುಡಿಗಳು ಕಾಕಹುದೆ (ಕುವ್ಯಾದ್ರೋ. ೧–೪೨). [ಏಱ್$_1$ + –ಇಸು$_3$]

**ಏಱಿಳಿ** 'ಏಱಿಟಿ' ನೋ.

**ಏಱಿಟಿ, ಏಱಿಳಿ** (ಕ್ರಿ). ಮೇಲಕ್ಕೆ ಹೋಗಿ ಕೆಳಗೆ ಬರು; ಉಬ್ಬರವಿಳಿತವಾಗು : ಅಡಿಗಡಿಗೆ ಬರ್ಪ ಬಲ್ದೆರೆಗಳೇ ರೋಗಂಗಳೊಡನೇಟ್ವ ಕಲ್ಲೋಲಮಾಲೆಯೆ ಬೆದರ್ಕೆ ಸಂಗಡಿಸಿರ್ಪ ಸುೞಿಗಳೇ ರಾಗಂಗಳೇಱಿೞಿಯೆ ಪಿರಿತನಂ ಬಡತನ ವಲಂ (ಶ್ರೀರಾಮ. ೩–೨೮). ಏಱಿಳಿ : ಅಗಲಾ ಸೌಮಿತ್ರಿ ಸಕಳ ಗುಣಾಗಮಜ್ಞನ ನುಡಿಗೆ ಗಿರಿದುದಿಗಾಗಿ ಬಂದೇಱಿಳಿದು ಬಿನ್ನೈಸಿದನು ರಘುಪತಿಗೆ (ತೊರರಾ. ೩–೫–೧೧).

[ಏಱು$_1$ (< ಏಱ್$_1$) + ಇೞಿ$_1$]

**ಏಱು$_1$** 'ಏಱ್$_1$' ನೋ.

**ಏಱು$_2$, ಏರು$_2$** (ನಾ). ೧. ಏರುವಿಕೆ; ಮೇಲೆ ಹತ್ತುವಿಕೆ : ಸೆಱೆಯು ಮೇಱುಂ ನೆತ್ತವಾಡುವರೊಳ್ (ಎಇ. XIII, ೩೩೨–೪೪; 929). ೨. ಎತ್ತರವಾದದ್ದು; ಎತ್ತರವಾದ ಭೂಮಿ. ೩. ವಾಹನ : ಬೆಳ್ಳಂಚೆಯೇಱು ಪರ್ದೇಱು ಮುಗಿಲೇಱುಗಳನುಳ್ಳರುಂ ಸಗ್ಗಿಗರ ಮೊಗ್ಗರಂ ನಡೆವೆಡೆಯೊಳೆಳ್ಳನಿತು ಕುಂದಿಲ್ಲವೆಂದುರ್ವಿ ದಳ್ಳುರಿಯ ಕಣ್ಣ ನೊಳ್ಕಟ್ಟಕೊಳಲು (ಉದ್ಭದೇ. ೩–೨). **ಏರು$_2$ :** ಅ ಮಹಾನಾಟ್ಯದೇರಂ ತೀರಂ ಅ ನಲ್ಮೆಯ ಮುನ್ನೀರಿನ ಮಾರಂ ಭಾವಿಸಿ ಬಾಹ್ಯಸ್ಪರ್ಶವಿಮುಕ್ತಂ ದಿವ್ಯಾದ್ಭುತ ಸದ್ದರ್ಶನಯುಕ್ತಂ ನಾನಾಗಿರೆ (ಗಣೇಶ. ೨೩–೬೦೧); "...ಮಣಿಪಾಲದ ಏರು ಮುಟ್ಟುತ್ತೇನೋ ಇಲ್ಲವೊ ಅಂತ ಅನುಮಾನ" (ಹೊಸಕ್ಷಿ. ೫೩). [ದೇ. ‖ ತಮಿ. ಮಲ. ಏಱು]

**ಏಱು$_3$** (ನಾ). (ಚುಚ್ಚುವ) ಒಂದು ಆಯುಧ; ಈಟಿ : ಸದ್ದರ್ಶನಾಂತರಾಯಮೆಂಬೇಱುಗಳಿಂ ಖುಷಿದೂಷಣಮೆಂಬ ಬಡಿಗಳಿಂ ಕೆಡೆಯ ಮೋದುತ್ತುಂ (ಧರ್ಮಾಮೃ. ೧೦–೮೭); ಒಱೆವೆರಸಿದೇಱುಂ ಕುಪ್ಪಸ ವೆರಸಿದ ಮಾಹಮಂ ... ಮಳಲ್ವೆರಸಿದ ಕೊಱುಮೆಂತುಂ ಲೇಸಲ್ಲ (ಧರ್ಮಾಮೃ. ೧೪–೧೩೪). [?]

**ಏಱು$_4$** 'ಏಱ್$_4$' ನೋ.

**ಏಱು$_5$** 'ಏಱ್$_5$' ನೋ.

**ಏಱುಂ** (ಅ). ಮೇಲಕ್ಕೆ : ಪೊಂಗಳಸದೊಳ್ ಪನಿನೀರಂ ತುಂಬಿ ಏಱುಮೆತ್ತಿ ಪಿಡಿದು (ರಾಮಾಶ್ವ. ೮–೨೧). [< ಏಱ್$_1$]

**ಏಱುಂಜವ್ವನ, ಏರುಜವ್ವನ, ಏಱುಂಜೌವನ, ಏಱುಜವ್ವನ** (ನಾ). ಏರುತ್ತಿರುವ ಯೌವನ; ಹೊಸ ಪ್ರಾಯ : ವನಜಾನನೆ ಏಱುಂಜವ್ವನದೊಳ್ ವನದೊಳ್ ನಿರೋಧದೊಳ್ ಪೇಳಿಂತಾವನನುದ್ದೇಶಿಸಿ ತಪಮಿದ ನೆನಗಱುಪಿದೊಡೇನೊ ದೋಷಮೆ (ಗಿರಿಕ. ೯–೧೦೭); ಅಂಗಜಲಕ್ಷ್ಮಿಗಿದುವೆ ಪುದಿದೇಱುಂಜವ್ವನ (ಪುಷ್ಪಪು. ೮–೬೯); ಏಱುಂಜವ್ವನದೊಳ್ ಸೊಕ್ಕೇಱಿದ ನೀಱೆಯರ (ಶಮದ. ನ. ೧೭೦ ಪ್ರಯೋ). **ಏರುಜವ್ವನ :** ಈ ಏರುಜವ್ವನದ ವಿರಕ್ತಿಯನ್ನು ಪರೀಕ್ಷಿಸಿ ಗೌರವಿಸಿದರು (ಕಾವ್ಯಸ.೧೦೨). **ಏಱುಂಜೌವನ :** ಏಱುಂಜೌವನಂ ಚಂದ್ರಿಕೆಯನೆಳಸಿದತ್ತು (ಮಲ್ಲಿಪು. ೫–೩); ಶಿಶುತನವುಳಿದೇಱುಂಜೌವನವ (ಜಯಕಾ. ೨–೬೭); ವಾರಗೇರಿಯೊಳೇಱುಂಜೌವನದ ನೀಱೆಯರ (ರಾಮಾಶ್ವ. ೨–೧೭). **ಏಱುಜವ್ವನ:** ರತಿಮದನರನೋಱೆಯಿಂ ಪೂಜಿಸಲ್ಕೆ ಪುದಿಱಿಯಲೇಱಿದೇಱುಜವ್ವನ [ಪಾಠಾಂ. ಏಱುಂಜವ್ವನ]ದ ಸೊಂಪೆಸೆವ ಕಿಂಪುರುಷ ನಿತಂಬಿನಿ (ಶಬಶಂ. ೩–೩೫ ವ). [ಏಱು$_1$ (< ಏಱ್$_1$) + ಜವ್ವನ]

**ಏಱುಂಜವ್ವನೆ, ಏರುಜವ್ವನೆ, ಏರ್ಜವ್ವನೆ** (ನಾ). ೧. ಹೊಸ ಪ್ರಾಯದವಳು; ತುಂಬುಹರೆಯದವಳು : "ಏಱುಂಜವ್ವನೆಯೆಂದು ನವಯೌವನೆ" (ಕಶಸಾ. ೧೮–೩೭೩); ಏಱುಂಜವ್ವನೆಯ ರೂಪಾತಿಶಯಮನೆಮೆಯಿಕ್ಕದೆ ಶೂದ್ರಕಂ ನೋಡುತ್ತಮತಿವಿಸ್ಮಿತ ಚಿತ್ತನಾಗಿ (ಕಾದಂಪೂ. ೪೯); ಏಱುಂಜವ್ವನೆಯರಾದ ಗೋಪಿಯರ್ (ಪದ್ಮರಾ. ೮–೧೫). **ಏರುಜವ್ವನೆ :** ೧. ದಿನದಿನಕ್ಕೆ ಮೈತುಂಬಿಕೊಳ್ಳುತ್ತಿದ್ದ ಏರುಜವ್ವನೆ ರೋಷನ್ನಳನ್ನು ಕಂಡಾಗಲೆಲ್ಲಾ ಅವನ ಬಾಯಲ್ಲಿ ನೀರೂರುತ್ತಿತ್ತು (ರೂಪಸ. ೨೫). **ಏರ್ಜವ್ವನೆ :** ೨. ರತಿ : "ಇಳೆಗೇರ್ಜವ್ವನೆಯು ಮಿಚ್ಚೆಗಾರ್ತಿಯು ರತಿಯೊಳ್" (ಕವಿಕಂ. ೨೮).

[ಏಱುಂಜವ್ವನ + –ಎ$_2$]

**ಏಱುಂಜೊಡರ್** (ನಾ). ಎತ್ತರವಾದ ದೀಪ : ಕಜ್ಜೊಕ್ಕಿದಳಾ ಕಂಜಾಸ್ತ್ರನ ಮೋಹನದೇಱುಂಜೊಡರಂ ಪಿಡಿದು ತೋರ್ಪ ಪೊಂಬುತ್ಥಳಿಯೋಲ್ (ಉದ್ಭಟ. ೫-೬೪). [ಏಱು$_1$ (< ಏಱ್$_1$) + ಸೊಡರ್]

**ಏಱುಂಜೌವನ** 'ಏಱುಂಜವ್ವನ' ನೋ.

**ಏಱುಂಪುಂದಲೆ** (ನಾ). ಒಂದು ಊರಿನ ಹೆಸರು : ಏಱುಂಪುನ್ದಲೇ ಗ್ರಾಮಮಧಿವಸತಿ (ಇಇ. VI, ೮೯-೨೬ ; 692). [ಏಱು ? + ಪುಂದಲೆ]

**ಏಱುಂಬೆಱೆ** (ನಾ). ಅಭಿವೃದ್ಧಿಯಾಗುತ್ತಿರುವ ಚಂದ್ರ : ಮುದ್ದಿನ ಪುಟ್ಟ ಕುವರಂ ಬೆಳ್ವಕ್ಕದೇಱುಂಬೆಱೆಯಂತೆ ದಿನದಿನಕ್ಕೆ ಕಳೆಯೇಱಿ ಬಳೆಯುತಿರ್ದಂ (ರಾಮಾಶ್ವ. ೬೫-೧೫). [ಏಱು$_1$ (< ಏಱ್$_1$) + ಪೆಱೆ]

**ಏಱುಂಮನ** (ನಾ). ಏರಿದ ಮನಸ್ಸು, — ಉತ್ಸಾಹ : ನಾರದನಂಗೆ ತುಂಬರನಂ ಗೆಲ್ವುದೆಂಬ ಏಱುಂಮನಮಿಱಿದುದು (ಅದ್ಭುತ. ೨೮-೨).
[ಏಱು$_1$ (< ಏಱ್$_1$) + ಮನ]

**ಏಱುಗಲ್ಲು** (ನಾ). ಎತ್ತರವಾದ ಕಲ್ಲು : ಎತ್ತುಗಲ್ಲುಗಳೇಱುಗಲ್ಲು ಕವಣೆಗಲ್ಲು ಬಿತ್ತರದಱೆಗಲ್ಲುಗಳು ಮೊತ್ತದಸಿಯಕಲ್ಲು ಕೊರಳಿಗೆ ಬೀಱುವ ಜೊತ್ತಿಗೆ ಮೆಱೆದುವರ್ತಿಯಲಿ (ಕಂನವಿ. ೧೧-೧೩೫).
[ಏಱು$_1$ (< ಏಱ್$_1$) + ಕಲ್ಲು (< ಕಲ್$_3$)]

**ಏಱುಗಾಣ್** (ಕ್ರಿ). ೧. ಗಾಯವನ್ನು ಕಾಣು, — ನೋಡು : ವಾರಿಜಾಕ್ಷೋಜ್ವಳ ಪದತಳದಾದೇಱುಗಂಡಳ್ಕಿ (ನೇಮಿಪು. ೧೯-೯೭). ೨. ಗಾಯವನ್ನು ಹೊಂದು, — ಪಡೆ : ತಿರುಪಿನೊಳಱದು ಕಳಚುವರೇಱುಗಾಣದೆ ಮಧ್ಯಸಂಚಕೆ ನಿಲುಕಿ ಕೈಮಾಡಿ (ಕುವ್ಯಾಭೀ. ೪-೨೨).
[ಏಱು$_4$ (< ಏಱ್$_4$) + ಕಾಣ್]

**ಏಱುಗಾಣಿಸು** (ಕ್ರಿ). ಗಾಯವನ್ನುಂಟುಮಾಡು; ಗಾಯಗೊಳಿಸು : ಹೇಱುವ ಬಿಱುಗಲ್ಲು ಬಳದಡಿ ವರಶಕ್ತಿ ಪಾಱುಂಬಳೆ ಶೂಲದಿಂದೆ ಏಱುಗಾಣಿಸಿ ಕುವರನ ಕೊರ್ಗಡೆಯಿಂದೆ ಗಾಱುಮಾಡಿದರು ರಕ್ಕಸರು (ಮೋಹತ. ೩೪-೨೩) ; ಹರಿಯೊಡಲೊಳೇಱುಗಾಣಿಸಿ ಮಹಾನಾಭನುಱೆ ಬೆಂಕೊಂಡ ನರಿಬಲವನು (ಚಿಬವು. ೩೯-೧೬). [ಏಱುಗಾಣ್ + -ಇಸು$_3$]

**ಏಱುಗೊಳ್** (ಕ್ರಿ). ಗಾಯಗೊಳ್ಳು : ಏಱುಗೊಂಡೆಕ್ಕಲನ ದಾಂಟುಗೊಟ್ಟ ಪಾಪಿನ ಪೊಸವಗೆಯೊಂದು ಮಸಕದಿಂ ಕಿಡಿಕಿಡಿವೋಗಿ (ರಾಮಾಶ್ವ. ೮೫-೧೮). [ಏಱು$_4$ (< ಏಱ್$_4$) + ಕೊಳ್$_1$]

**ಏಱುಜವ್ವನ** 'ಏಱುಂಜವ್ವನ' ನೋ.

**ಏಱುದಂಡಿಗೆ** (ನಾ). ಏರುವ ಅಂದಣ, — ಪಲ್ಲಕ್ಕಿ ; ಮೇನ : ಏಱುದಂಡಿಗೆ ನೂಱಾಱು ಸಾವಿರ ಮೂಱು ದಿನದ ಭಾಗ್ಯ ಝಣಝಣವು (ಕವಿಚ. II, ೧೫೨ ಶ್ರೀಪಾದರಾಯ). [ಏಱು$_1$ (< ಏಱ್$_1$) + ದಂಡಿಗೆ]

**ಏಱುಬೊಜಂಗ** (ನಾ). ಏರಿಕೆಯ ವಿಟ (?) : ತಾನರುಮೆ ಮೆಚ್ಚು ಪೊನ್ನನ್ನ ಮೆಚ್ಚದೆ ಪೊಱಮ್ಪೇಱುಬೊಜಙ್ಗರ (ಸೌಇಇ. IX-i, ೧೭-೪೫ ; 900). [ಏಱು ? + ಬೊಜಂಗ]

**ಏಱುಮಾಱು, ಏರುಮಾರು** (ನಾ). ಬೆಲೆ ತುಂಬ ಹೆಚ್ಚಿಸಿ ಮಾಡುವ ಮಾರಾಟ : ವಾರನಾರಿಯರೊತ್ತೆ ಧರಣಿಯ ಸಾರವಂಬಿಗಗೂಲಿ ವಿತರಣ ಬಾರಗುತ್ತ ನಿಯೋಗ ಜೂಜಿನ ಧನ ಸುಭಾಷಿತವು ಏಱುಮಾಱು ವಿವಾಹ ರತಿಯುಪಕಾರ ನೆಗಳಿದ ರಾಜಕಾರ್ಯವಿವಾರನಾ ಪದ ತಪ್ಪಿ ತಪ್ಪುಗುಂ (ಜೀವಂಚ. ೪-೬೭) ; ಎಲೆ ತಾತ ಕೇಳೆನ್ನ ಮನದೊಳುಮ್ಮಳಿಕೆಯಿನಿಸಿಲ್ಲೇಱುಮಾಱು ಸಜ್ಜನ ದೂಷಣತ್ವಮಾಯಿಲದೊತ್ತುಜೊತ್ತು ಪರದಾರ ಮಾಜಡಿವಿಗ್ರಹ (ಸಮ್ಯಕೌ. ೬-೩೩). **ಏರುಮಾರು** : ಮದುವೆ ಪರೋಪಕಾರ ನೃಪಸೇವೆ ಸುಭಾಷಿತಮೇರುಮಾರು ಲಂಚದ ಧನ ಜೂಜಿನಾಯತಿಕೆ . . . ಹದ ತಪ್ಪಿದೊಡಂತೆ ತಪ್ಪುಗುಂ (ನೀತಿಸಾ. ೧೫೪).
[ಏಱು$_1$ (< ಏಱ್$_1$) + ಮಾಱು]

**ಏಱುಮುಡಿಗೆ** (ನಾ). ಒಂದು ಬಗೆಯ ಸವಾಲು : ಅವನಂಗಸಂಗದಲ್ಲಿರ್ದ ಕಾರಣ ಗೆಲವು ಸೋಲಕ್ಕೆ ಇಕ್ಕುಮುಡಿಗೆ ಏಱುಮುಡಿಗೆ ಎಂಬ ಮತ್ಸರಕ್ಕೆ ಮುಂದುವಿಡಿದು ಮುಡುಹಿಕ್ಕಿ ಕೆಲೆದಾಡುವರನ್ನೆಲ್ಲ ತಮ್ಮ ಮನದಲ್ಲಿ ತಾವಱಿದು ಒಯ್ಯನೆ ತೊಲಗುವರು (ವಚಶಾ. I, ೧೭೫-೧೯). 'ಇಕ್ಕುಮುಡಿಗೆ' ಪರಾ. [ಏಱು$_1$ (< ಏಱ್$_1$) + ಮುಡಿಗೆ]

**ಏಱುವಡೆ** 'ಏರ್ವಡೆ' ನೋ.

**ಏಱುಸೂಱೆ** (ನಾ). ಯುದ್ಧವನ್ನು ಸೂರೆಗೊಳ್ಳುವುದು, — ಹಿಡಿಯುವುದು : ಸರ್ವಲಗ್ಗೆಯಲೇಱಿತೀ ದಳ ದಳವುಳಿಸಿ ದಳಪತಿಯ ನೇಮದಲಿ ಏಱು [ಪಾಠಾಂ. ಏ] ಸೂಱೆಗೆ ಹಾರಿ ಮಾಸಲಿನೇಱು ನಮ್ಮದು ತಮ್ಮದೆನುತುಬ್ಬೇಱಿ ಭೀಮನ ಮುತ್ತಿದರು ಮೆತ್ತಿದರು ಸರಳಿನಲಿ (ಕುವ್ಯಾಕ. ೧೫-೨೦). [ಏಱು$_4$ (< ಏಱ್$_4$) + ಸೂಱೆ]

**ಏಱುಸೋಪಾನ** (ನಾ). ಹತ್ತುವ ಸೋಪಾನ, — ಮೆಟ್ಟಲು : ತಗ್ಗು ಸೋಪಾನದೊಳಿಳಿವಾಗ ಮುಸಿಗಳ್ಗೆ ಬೊಗ್ಗನೆ ಕೈಲಾಗುಗೊಡುವಾ ಉಗ್ಗಡದೊಳೇಱುಸೋಪಾನದೊಳವರಾ ಕೈಯೊಗ್ಗಿ ಹಿಡಿದು ಮೇಲೆ ನೆಗೆವಾ (ಭರತ. ೩-೬೮).
[ಏಱು$_1$ (< ಏಱ್$_1$) + ಸೋಪಾನ]

**ಏಱೆರ್ದೆ** (ನಾ). ಉಬ್ಬಿದ ಎದೆ : ಪಲರ್ಗೆ ಬಿರಿದಲೆ, ಸುರಿವಾಯ್ ಪಲರ್ಗೆ, ಏಱೆರ್ದೆಯರೆಬರ್ಗೆ, ಅರೆಬರ್ಗೆ ಪೇರೊಡಲ್ (ಅದ್ಭುತ. ೨೫-೨೭). [ಏಱ್$_1$ + ಎರ್ದೆ]

**ಏೞ್$_1$, ಏಳ್$_1$, ಏಳು$_1$** (ಕ್ರಿ). ಎರ್ದ, ಎರ್ದ, ಎಟ್ಟಿ (ಭೂತಕೃ); ಎರ್ದು, ಎರ್ದು, ಎಟ್ಟು (ಭೂತನ್ಯೂ). ೧. ನಿಲ್ಲು; ಮೇಲೇಳು; ಮೇಲಕ್ಕೆ ಬರು : "ಏೞ್—ಉತ್ಥಾನೇ" (ಶಮುಧಾ); ಮಹಾದೇವನ್ಮುನಿಪುಂಗವನ್ನದರ್ಪ್ಪಿ ಕಳುಪೆರ್ದ್ದಪಂ (ಎಕ. II, ೮೦-೧ ; 700); ಮದನಂ ಬೆಳ್ಮುಗುಳಂಬಿನಿಂದಿಸೆ ಜಿಗಿಲ್ತಿರ್ದಂಬುಗಳ್ ಚಿತ್ತದೊಳ್ ಮೊದೆಯಂ ಬೈತವೊಲಾಗೆ ಮನ್ಮಥಶಿಖಿಜ್ವಾಲಾಳಿ ತಳ್ತೇೞೆ (ಕಾವ್ಯಸಾ. ೫೮೮ ಶೂದ್ರಕ) ; ಬರೆ ಬಂದು ನಡೆಯೆ ನಡೆದಿರ್ದಿರೆ ಕುಳ್ಳಿರ್ದೆೞ್ದೊಡೆೞ್ದು ನಿಂದೊಡೆ ನಿಂದಾಳರಸೆನಿಸಿ ನೆಗೞ್ದು (ಆದಿಪು. ೯-೯೨); ನವಿಲೆರ್ದು ಕರಿಣಿ ಕರ್ಣಂಗಳನೆಚ್ಚೞಿಸಿದುವಾಗಳ್ (ಕಾದಂಪೂ. ೧೯೨) ; ಕೆಚ್ಚೆೞ್ದೊಡೆ ಬಾವಿ ತೋಡುಪವಂ (ಸಮಪ. ೬-೪೦); ಏೞಿಂ ಬಿಜಯಂಗೆಯ್ಯಿಂ (ನೇಮಿಪು. ೪-೫೦). ೨. ಎಚ್ಚರವಾಗು ; ನಿದ್ರೆತಿಳಿ : "ಏೞ್ಮನೆನೆ ನಿದ್ರೆದಿಳಿದಂಗೆ ನೆಗೆದಂಗೆ ಪೆಸರ್" (ಸಂಜೀವ. ೧೨). ೩. (ಆಲಂ) ಜೀವವನ್ನು ಪಡೆ : ಕೞಿದವರ್ಗೞ್ವುದೞ್ದೊಡವರೇೞ್ವರೆ (ಆದಿಪು. ೩-೫೩); ಸತ್ತವರೇೞ್ವರೆ ಪೇೞೆಸೊಡಸತ್ತರೆ ತಮ್ಮಬಿಲಿನಳವಿಯಂ ಮೞ್ದಿಸಲೆಂದುತ್ತವಳಿಕೆಯೊಳೆ ಸಾವರ್ (ಕಾದಂಪೂ. ೯೬೧). ೪. ದಂಡೆತ್ತಿಹೋಗು : ಕಾಕರಾಸರುಮೆೞ್ದು ಪೆರ್ಗ್ಗಂಜಿಯ ಕೋಟೆಯಾನ್ ರೋಹಿಸಿ ಬಿಟ್ಟು (ಎಕ. VIII, ಸೊರಬ. ೧೦-೪ ; ಸು. 800). **ಏಳ್$_1$** : ೧. ಕೊನೆಗೌಡ ಬದಿಯಣ್ಣ . . . ಏಳುತ್ತ ಓಡೆ (ಎಕ. VIII, ಸೊರಬ. ೪೫೭-೫ ; 972) ; ತನುಜ ಏಳ್ಮಗನೆ ಹರನುಣಲೊಲ್ಲಂ (ಇಳರ. ದೇ. ೫೫-೧೪). **ಏಳು$_1$** : ೧. ಕಾಳೆಗವ ತೆಗೆಸಿದರು ಕೌರವರೇಳು ಫಲುಗುಣ ಎನುತ (ಕುವ್ಯಾದ್ರೋ. ೮-೧) ; ಮಂಧರಗಿರಿಯನೆತ್ತುವಡೆ ನುಗ್ಗಿಯ ದೊಣ್ಣೆಯಿಂದೆ ಮಿಂಟಿದೊಡೇಳುವುದೆ (ಮೋಹತ. ೨೯-೩೪) ; ತರುಣಿ ನಾನುಸಿರಿದ ಚಲುವರೆಱೆಯ ನೀಗ ಬರುತಿಹನೇಳು ಸಿಂಗರಿಸು (ಕಂನವಿ. ೯-೬೭). ೩. ಅರಸಿ ನಿಜಾಂಗುಲಿಯಿಂದೊಂದೆರಡುಂ ಮೂಱ್ನೈದೆ ನಾಲ್ಕುಮೈದಾಱೇಳೆಂದಿರದೆಣಿಪುದು ಮಾಗಳೆ ನಿಜಶಿರಂಗಳೇಳ್ದಂಗದೊಂದುಗೂಡಿದುವಾಗಳ್ (ರಾಜಶೇ. ೧೧-೯೨). ೪. ತಲೆಯೆತ್ತು ; ಉಜ್ಜೀವಿಸು : ಹಳ್ಳಿಯೇನೋ ಮತ್ತೆ ಏಳುತ್ತದೆ. ಬಹುಕಾಲ ಪಾಳಾಗಿರುವುದಿಲ್ಲ (ಯೋಧಪು. ೨).

**ಏಳೇಳು** (ದ್ವಿರುಕ್ತಿ) : ಬವರಕೇಳೇಳಿಂದು ಜಙಿದರು ದೂರತರರ್ಜುನನ (ಕುವ್ಯಾದ್ರೋ. ೪–೨೫). **ಎದ್ದಾಡು, ಎಟ್ದಾಡು** = ಕುಣಿದಾಡು ; ನರ್ತಿಸು : ಕೃತಕಗಿರಿಯೊಳ್ ನವಿಲೆದ್ದಾಡುವುದಂ ಪಥಿಕರ್ ನಡೆನೋಡುವರ್ (ವರ್ಧಪು. ೨–೧೯) ; ನರಕದಿಂದೆತ್ತಿ ಸಂಗಿರನಂ ಸತಾನಂದ ಶರಣನಜ ಹರಿಗಳೆದ್ದಾಡೆ ಮುದದಿಂ (ಸಾನಂಚ. ೩–೫೦); ಇಂದ್ರನಚ್ಚರಸೆಯರೆಟ್ದಾಡುವರೆಂದೊಡೆ ಪೊಗಟಲ್ವೇಡ ಗುಣಾರ್ಣವನ ಜನ್ಮದಿನದ ಬೆಡಂಗಂ (ಪಂಪಭಾ. ೧–೧೪೮); ಬಿಟ್ಟರುಮನಿಱಿವೆ ನೀನುಂ ಬಿಟ್ಟರುಮಂ ಕೊಲ್ವೆ ಕಲಹದೊಳ್ಗೊಟಂಗಂದೆಟ್ದಾಡಿಯೆ ಮುನಿದಿಸುವೈ (ಗದಾಯು. ೭–೫೨) ; ರವಿಬಿಂಬ ಶಿರೋಮಣಿ ಪಾಱಿ ವಾರ್ಧಿಯೊಳ್ ಬೀೞೆ ಖಚರವಿಳಯಕ್ಕೆಟ್ದಾಡುವ ಕಾಳರಾತ್ರಿಯೊಳ್ಗುರುಳಿವೆ ಕೆದಱಿದವೆನಿಸಿ ನೆಗೆದುವಳಿ ಬಹಳರವಂ (ವರ್ಧಪು. ೮–೨೭). **ಎದ್ದಾಸರು** = ಅತಿಯಾದ ಆಯಾಸ, —ಬಳಲಿಕೆ, —ಬಾಯಾರಿಕೆ (ಕರಾ): ನನಗೆ ಮೊದಲೇ ಮುಳ್ಳುಸೌತೆಯ ಮಿಡಿಯೆಂದರೆ ಇಷ್ಟ. ಆದರ ಮೇಲೆ ಎದ್ದಾಸರು, ಒಂದು ಮಿಡಿಯನ್ನಾರಿಸಿ ಕ್ರಯ ಕೇಳಿದೆ (ಪಳಮ. ೧೮). **ಎದ್ದಾಳು** = ೧. ಎತ್ತರವಾದ ಆಳು. ೨. ದೊಡ್ಡಮನುಷ್ಯ : ಅವನು ಧೈರ್ಯಶಾಲಿ, ಚತುರ, ಗಂಭೀರ ಪ್ರಕೃತಿಯ ಎದ್ದಾಳು (ಪುನರು. ೫೬೫). ೩. ಎದ್ದು ಕಾಣುವ ವ್ಯಕ್ತಿ : ಸಭೆಯಲ್ಲಿ ಅವರು ಎದ್ದಾಳು (ರೂಢಿ). **ಎದ್ದುಕಾಣಿಸು** = ಸ್ಪಷ್ಟವಾಗಿ ತೋರು: ಕೆಂಪುಬಣ್ಣ ಕಣ್ಣಿಗೆ ಎದ್ದುಕಾಣಿಸುತ್ತದೆ (ರೂಢಿ). **ಎದ್ದುಕಾಣು** = ಸ್ಪಷ್ಟವಾಗಿ ತೋರು, —ಕಾಣು : ಒಳ್ಳೆಯ ಭಾಷೆ, ಭಾಷೆಗೆ ತಕ್ಕ ಭಾವ, ಇವರ ಕಾವ್ಯಗಳಲ್ಲಿ ಎದ್ದುಕಾಣುವ ಗುಣ (ಜಗದಾ. ೯೬); ಶಾಂತಲಾದೇವಿಯಾದ ಮೇಲೆ ಎದ್ದುಕಾಣುವವಳು ಅವಳೇ (ಸವತಿ. ೫ ಪ್ರಸ್ತಾ). **ಏಳುಬೀಳು** = ಏಳುವಿಕೆ ಮತ್ತು ಬೀಳುವಿಕೆ; ಉಬ್ಬರವಿಳಿತ : ಆಳ ಕೈಯಲಿ ತಾಳಬಹುದೇ ಏಳುಬೀಳಿನ ಕಡಲದು (ಇಂಗೀತ. ೬೭–೧೬) ; ಹಿಂದೂಸ್ಥಾನದಲ್ಲಿ ಅರಸೊತ್ತಿಗೆಯ ಏಳುಬೀಳುಗಳ ಕ್ರಮವು ಪ್ರಾಚೀನಕಾಲದಿಂದ ನಡೆದಿರುವುದು (ಹಿಂಮುಸ. ೮೫).

[ದೇ. ‖ ತಮಿ. ಎೞು ; ಮಲ. ಎೞು, ಏೞು ; ತುಳು. ಎರ್ಗ್ = ನೀರು ಮೇಲಕ್ಕೆ ಬರು ; ಕೊಡ. ಏಳ್]

**ಏಟ್₃, ಏಳ್₂, ಏಳು₂, ಏೞು** (ನಾ). ಒಂದು ಸಂಖ್ಯಾವಾಚಕ; ಆರರ ಮೇಲೆ ಒಂದು ; ಸಪ್ತ. 'ಏಟ್ಕಡಲ್', 'ಏಟ್ಕೋಟೆ', 'ಏಟ್ಗಯ್ಯ', 'ಏಟ್ನೂಱು', 'ಏಟ್ಬಿಸನ' ಪರಾ. **ಏಳ್₂** : ಪಟ್ಟಂಗಟ್ಟದೇಳನೆಯ ವರಿಷದನ್ದು (ಎಕ. IV, ಹೆಗ್ಗಡ. ೧೧೦–೫ ; ಸು. 900) ; ಶ್ರೀಮದಿಱಿವನೊಟಂಬ ಪಟ್ಟಂಗಟ್ಟದ ಇಪ್ಪತ್ತೇಳನೇ ವರಿಷದನ್ದು (ಮೈಆರಿ. ೧೯೪೧, ೧೯–೮ ; 951) ; ಸಾಸಿರದೇಳ್ನೂಱು ಗವಱೆಗಳುಂ . . . ಏಳ್ಪತ್ತೇಳ್ಪಾಸಿರದ ಪ್ರಭು ಪೃಥ್ವಿಸೆಟ್ಟಿ (ಎಇ. XIX, ೩೭–೯, ೧೨; 1144); ಕಡಲೇಳಂ ಮಗುಚಿಟ್ಟೊಡಂ (ಸೋಮೇಶ. ೨೮). **ಏಳ್ಳು** : ಮೋಹ ರಾಗ ದ್ವೇಷ ತಾಪ ಶೋಕ ಹರುಷ ವೈಚಿಂತ್ಯವೆಂಬ ಏಳು ಮಲಂಗಳ ನೊಂದಾಗಿ ಕಲಸಿ ತಿನ್ನುತ್ತ (ಅದವ. ೨೬) ; ಏಳು ಕಡಲೊಡಲೆಡೆಯಲಡ ಗಿರ್ದ ಶೈಲಮಂ (ಸಿದ್ಧರಾ. ೧–೨೦) ; ನೀನೇಳನೆಯ ಭವದಲಿ ಬಂಧುತನದಲಿ ನಮ್ಮನೈದುವುದು (ತೊರರಾ. ೧–೮–೨೦). **ಏೞು** : ಏೞನೆಯಾ ನರಕದಾ ಪುೞು ಆಕ್ಕುಂ (ಇಆ. X, ೬೦–೪ ; 678) ; ಇದಾನ್ ಅೞಿತ್ತೋನ್ ಬಾರಣಾಸಿ ಏೞುಕವಿಲೆ ಕೊನ್ದ ಕೊಲೆಯ್ದುವೊನ್ (ಎಕ. XIV, ತಿರುಮ. ೨೩೪–೯ ; 8ನೆಯ ಶತ) ; ಪ್ರಥಮಾದಿ ಭೇದ ನಿರ್ಧಾರಣದಿಂದದಂ ಪಿಡಿದು ನಿಲ್ವ ವಿಭಕ್ತಿಗಳೇೞನಿಕ್ಕುಂ (ಕವಿರಾ. ೧–೧೧೪) ; ಏೞನೆಯ ದಿವಸದಂದು ನೇಸಱ್ ಮೂಡಿದೊಡೆ (ವಡ್ಡಾರಾ. ೮೨–೧೯) ; ಏೞುಂ ಮಾಳಮುಮಂ ಪಾಱೆೞೆ ತಗುಳ್ದಱಿದು (ಪಂಪಭಾ. ೧–೩೫) ; ಏೞುಂ ಬೆಸನಮುಮಂ ನರಪಾಲನುೞಿಗೆ (ಶಮುದ. ೮ ಪ್ರಯೋ).

**ಎಟ್ಬರ್, ಏರ್ವರ್, ಏಟ್ಬರ್, ಏಟ್ವರ್** = ಏಳುಮಂದಿ,—ಜನ : ಶ್ರೀಮಂತು ಎಟ್ಬರಗಂಡ ಮರುಳೋಜನ (ಎಕ. VIII, ಸಾಗರ. ೧೦೩–೧ ; 1089) ; ತತ್ಪುತ್ರರಗ್ನೀಧ್ರ ಮುಖ್ಯ ನರೇಂದ್ರೋತ್ತಮರೇರ್ವರ್ (ಎಇ. XIII, ೪೧–೭ ; 1113) ; ಸಹೋದರರಾದೇರ್ವರುಂ (ಎಇ. XIX, ೨೩೦–೨೬ ; 1179) ; ಭರತಕುಮಾರಂಬೆರಸು ಏಟ್ಬರ್ ಕುಮಾರರಾದಿಯಾಗಿ (ಆದಿಪು. ೮–೪೪ ವ) ; ಪನ್ನಿರ್ವ್ವರಾ ಏಟ್ವರಾ ಪೊಯ್ದು ಧರ್ಮಂ (ಎಕ. IV, ಚಾಮರಾ. ೬೩–೧೦ ; 750) ; ವಿಶ್ವವಿಖ್ಯಾತರೆನಿಪ್ಪೇಟ್ವರುಂ ಧಾತ್ರೀತಿಲಕರ್ (ದಶಕು. ೧–೪೮). **ಎಟ್ಬರಗಂಡ** = ಒಂದು ಬಿರುದು. ಮೇಲಿನ 'ಎಟ್ಬರ್' ಶಬ್ದಕ್ಕೆ ಕೊಟ್ಟಿರುವ ಪ್ರಯೋಗವನ್ನು ನೋಡಿ. **ಏಳಕ್ಕಿಅನ್ನ** = ಏಳುವಿಧವಾದ ಧಾನ್ಯಗಳಿಂದ ಮಾಡಿದ ಅನ್ನ : ಆ ದಿನ ರಾತ್ರಿ ಹೊಸಬತ್ತದಿಂದ ತೆಗೆದ ಅಕ್ಕಿಯನ್ನು ಸ್ವಲ್ಪಸೇರಿಸಿ ಏಳಕ್ಕಿ ಅನ್ನವನ್ನು ಮಾಡುತ್ತಾರೆ (ಕಎಪು. ೪–೭೪). **ಏಳರಾಟ** = ಏಳೂವರೆವರ್ಷಗಳ ಶನಿಕಾಟ : ಸುಸಿಲ್ಗೈವಲ್ಲಿ ನಾಹ್ಗೋಡದುತ್ಪ್ಪಳಕಂ ಮೂಡದೆ ದೈನ್ಯಮಾಡದೆ ನಿತಂಬಂ ಮುಂಬದಂಗೂಡದಿರ್ಪಳ ಕೂಟಂ ಬಿಡದೇಳರಾಟಮುದನಾವಂ ನಚ್ಚುವಂ (ರಾಜಶೇ. ೧೧–೧೫೪). **ಏಳುಕೆರೆಯನೀರುಕುಡಿ** = (ಆಲಂ) ಊರೂರು ತಿರುಗು ; ಕಷ್ಟಪಡು. **ಏಳುಕೆರೆಯನೀರುಕುಡಿಸು** = (ಆಲಂ) ಕಷ್ಟವನ್ನು ಕೊಡು ; ತೊಂದರೆ ಪಡಿಸು : ಬಿಡು ನೀ ಈ ದಿಮಾಕೆಲ್ಲಾ ಏಳುಕೆರಿ[ರೆ]ಯ ನೀರು ಕುಡಿಸೇನು (ಮಣ್ಣುಹ. ೨೦೭). **ಏಳುಮಿಗಿಲು** = ಏಳುಪಟ್ಟು ಜಾಸ್ತಿ : ಪಾಲಿಸಿದ ಧರಣಿಯಂ ಪಾಂಡವರ ಜಯಸಿರಿಗೇಳುಮಿಗಿಲೆನಿಸಿ ಶೌರ್ಯದಿ ಬಾಲಕನು (ತುರಂಗ. ೯೩–೨೪). **ಏಳುಸುತ್ತಿನಮಲ್ಲಿಗೆ** = ಮಲ್ಲಿಗೆಯಲ್ಲಿ ಒಂದು ಬಗೆ : ನೋಡು ಇದೊ ಇಲ್ಲರಳಿ ನಗುತಿದೆ ಏಳು ಸುತ್ತಿನ ಮಲ್ಲಿಗೆ (ಚಲುಒ. ೧). **ಏಳೆರಡು, ಏಟೆರಡು** = ಎರಡು ಏಳು ; ಹದಿನಾಲ್ಕು : ಏಳೆರಡು ಲೋಕಗಳನೀಗಳೆ ಬೇಳುವೆನು (ಕುವ್ಯಾಅ. ಒರಿಇ. ೨೫–೩೨) ; ಕೆಳಗೆ ಮೇಲೇಳೆರಡು ಲೋಕಕ್ಕಧಿಕ ಶಿಖಾಮಣಿಯೆನಿಪ ಕೈಲಾಸದಲ್ಲಿ (ಪ್ರಾಢರಾ. ೨–೨) ; ಈರೇಟ್ಗಾಲಮೇಟಿರಟ್ಗೀಗಿಯೆನೆ . . . ತೋರ್ದುದು (ಶ್ರೀರಾಮ. ೫–೧೨).

[ದೇ. ‖ ತಮಿ. ಮಲ. ಏೞು ; ತುಳು. ಏಳ್ ; ಕೊಡ. ಏಳೀ ; ತೆಲು. ಏಡು ; ಕೋಲಾ. ಎಡ್, ಏರ್ ; ಕುಇ. ಒದ್ಗಿ, ಒಡ್ ; ಗೊಂಡಿ. ಏರುಂಗ್, ಏರೂಙ್]

**ಏಟಿಗ** (ನಾ). ೧. ಟಗರು ; ತಗರು ; ಮೇಷ : ಪೊನ್ನೆಲ್ಲಮುನೊರ್ಬುಳಿ ಪೊಯ್ದುನ್ನತನೇಟಿಗನನೇಱಿ ನೋಡುತ್ತಿರೆಯಾ ಪೊನ್ನಿಂದಾ ದೆಸೆಯವರಂ ಸನ್ನಿದಮೆನೆ ಕಾಣದನಿತಱೊ(ನೊ)ಡೆಯವನೇಟಿಂ(ನೆಟಿಗಂ) (ಜೀವಸಂ. ೧೦೫–೨೯). ೨. ಏಳು ಬೆಟ್ಟ : ೧, ೨. ನೆಗಟ್ದ ಹಿತಮಹಿಪರೊಡನೇಟಿಗಮಂ ಬಂದೇಱಿ ತನ್ನ ಕೀರ್ತ್ಯಂಗನೆಯೇಟಿಗಮನೊಸೆದೇಱಿ ಮಿಗೆ ಬಂಧುಗಳುಮನಾ ತಂದೆಯೊಡನೆ ಪೊರೆಯೇಱಿಸಿದಂ (ಪಾರ್ಶ್ವಪು. ೭–೯೪). 'ಏಳಗ' ಪರಾ.

[< ಸಂ. ಏಡಕ. / ತಮಿ. ಏೞಗ ; ಏಟ್₃ + ಅಗ್₂]

**ಏಟಿಡಿ, ಏಳಡಿ** (ನಾ). (ಎದುರುಗೊಳ್ಳುವಾಗ, ಬೀಳ್ಕೊಡುವಾಗ ಹೋಗುವ) ಏಳುಹೆಜ್ಜೆ ; ಸ್ವಲ್ಪದೂರ : ನಡೆದೇಟಿಡಿಯಂ ಜಿನನಿರ್ದೆಡೆಗೆಱಗಿ ಬಟಿಕ್ಕೆ ಮಚ್ಚುಗೊಟ್ಟಂ (ಶಾಂತಿಪು. ೧–೮೩) ; ನೀನಾವ ಪ್ರಾಣಿಗಾದೊಡಂ ಮುನಿವಲ್ಲಿ ಪೆಱಗೇಟಿಡಿಯಂ ಪಿಂಗಿ ಬಟಿಕ್ಕಂ ನಿನ್ನ ಮೆಚ್ಚಿದಂತೆ ಮಾಡೆಂಬುದುಂ (ಧರ್ಮಾಮೃ. ೨–೨೦೬). **ಏಳಡಿ** : ಕೆಲಜನರ ನಾಂತುಬರಲೊನಪಾಲನದ ಕಂಡಂತದೆಲ್ಲವ ತಂದು ನೃಪಗೆರಗಂತದು ಸುರಿದ ಕ್ಷಣವೆ ನೃಪ ನಡೆದೆದ್ದು ಏಳಡಿಯ (ಬಜ್ಜಪು. ೮೨–೩೦).

[ಏಟ್₃ + ಅಡಿ₁]

**ಏೞಿಸು**, ಏಳಿಸು$_2$ (ಕ್ರಿ). ೧. ಎಬ್ಬಿಸು; ಮೇಲಕ್ಕೆ ಏಳುವಂತೆ ಮಾಡು: ಅವನನ್ನು ಏಳಿಸಬೇಕಾದರೆ ಸಾಕುಬೇಕಾಯ್ತು (ರೂಢಿ). ೨. ಮಾಡು; ಒದಗಿಸು. 'ಕರಿಂಕೇೞಿಸು' ಪರಾ. **ಏಳಿಸು$_2$:** ೧. ಅವರವರ ಕರ್ಮಸಂಸ್ಕಾರ ಅವರವರನ್ನು ಏಳಿಸುತ್ತದೆ ಇಳಿಸುತ್ತದೆ (ಭಾಮಣಿ. ೧೪೮). ೩. ತೆಗೆಸು; ಹೋಗಾಡಿಸು: ರಾಜನು ಆ ಸಂಗತಿಯನ್ನು ಕೇಳಿ ಷೇರ್‌ಖಾನನನ್ನು ಕರೆದುಕೊಂಡು ಆ ಮುತ್ತಿಗೆಯನ್ನು ಏಳಿಸಲುಹೋಗಿ ಬಾರೆಗುಡ್ಡಗೆ ಹೋಗಿ ಸೇನೆಯೊಡನೆ ಇಳಿದುಕೊಂಡನು (ಚಿತ್ರಪಾ. ೨೮). [ಏೞ್$_1$ + -ಇಸು$_3$]

**ಏೞು** 'ಏೞ್$_2$' ನೋ.

**ಏೞೆರಡು** 'ಏೞ್$_2$' ಪರಾ.

**ಏೞೆಲೆವಾೞೆ**, ಏಳೆಲೆಬಾಳೆ, ಏಳೆಲೆವಾಳೆ (ನಾ). ೧. ಬಾಳೆಯಲ್ಲಿ ಒಂದು ಬಗೆ; ಏಳು ಎಲೆಗಳುಳ್ಳ ಬಾಳೆ: ಏೞೆಲೆವಾೞೆಯ ಕೞಗೆ ಷಷ್ಠೋಪವಾಸ ಸಹಿತಂ ಮಾಘಮಾಸದ . . . ಅಪರಾಹ್ಣದೊಳು (ಚಾವುಂಉ. ೧೨೪); ಎಲೆವಳ್ಳಿಯ ತಳ್ಪಿಂದೇೞೆಲೆವಾೞೆಯ ಪರಪಿನಿಂದ ಶೋಕೆಯ ಪೊದೞಿಂ (ಕಾವ್ಯಾವ. ೩೨೦). **ಏಳೆಲೆಬಾಳೆ:** ೧. "ಸಪ್ತಪರ್ಣಃ, ವಿಶಾಲತ್ವಕ್, ಶಾರದಃ, ವಿಷಮಚ್ಛದಃ – ೪ ಏಳೆಲೆಬಾಳೆಗಿಡ ದ್ವೀಪಾಂತರದೊಳಗಿರುವ ಧೂಳೀ ಪಚ್ಚಕರ್ಪೂರ" (ಸಿದ್ಧಾಂತಿ. ೧೦೨); ನೆಳಲಿಂದ ತಂಪಾದ ಈ ಏಳೆಲೆಬಾಳೆಯ ಬುಡದ ಜಗಲಿಯಲ್ಲಿ ಕುಳಿತು ಒಂದು ಮುಹೂರ್ತ ವಿಶ್ರಮಿಸಿಕೊಳ್ಳತಕ್ಕದು (ಶಾಕುಂತ. ೧೨-೧೮). **ಏಳೆಲೆವಾಳೆ:** ೧. ಮಲಯಜವೃಕ್ಷವನೇಳೆಲೆವಾಳೆಗಳೊಲಿದಡರ್ದಂತೆ ತೋಱುತದೆ (ಭರಚ. ೭-೧೦). ೨. ಒಂದು ಸುಗಂಧ: ಏಲಾಪಕ್ವಫಲಂಗಳನೇಳೆಲೆವಾಳೆಯ ಪೊಸ ಹಗಿನಿಂ ಮುಡಿಪಾಳದ ಮೂಳಮುಮಂ ಕಾಶ್ಮೀರದ ಪೂವಂ ಮರುಗದ ಕೆಱುಗೊನರಂ (ಜಯಕಾ. ೧೧-೧೬).

[ಏೞ್$_2$ + ಎಲೆ$_1$ + ಬಾೞೆ]

**ಏೞ್ಕಟ್ಟು** (ನಾ). ವರ್ಷಗಳ ಕಟ್ಟು, —ಗಡು, —ಅವಧಿ: ಏೞ್ಕಟ್ಟನೆ [ಪಾಠಾಂ. ಟ್ಟನೆ, ಟ್ಟಮೆ, ಟ್ಟಮೆ]ೞಿದು ನಿಮ್ಮಂ ನಾೞ್ಕಡಿಗೞಿದೊಡೆ ಮದೀಯನಾಥಂ ಬೇರಂ ಬೞ್ಕಿಯನೆ ತಿಂದ ದೆವಸದೊಳೞ್ಕಡಿದ ಬೀರಮಿಾಗಳೇಂ ಪೊಸತಾಯ್ತೇ (ಪಂಪಭಾ. ೧೨-೧೭೮).

[ಏೞು$_0$ (< ಏೞು$_1$) + ಕಟ್ಟು$_2$]

**ಏೞ್ಕಡಲ್**, ಏಳ್ಗಡಲು (ನಾ). ಏಳು ಸಮುದ್ರ, —ಸಾಗರ: ಏೞ್ಕಡಲ್, ಏೞ್ಕರಿ, ಏೞ್ಕೋಟಿ (ಶಮದ. ೧೮೯ ಪ್ರಯೋ). **ಏಳ್ಗಡಲು:** ದಿಗ್ಗಜದ ಮಂಡೆಯ ಮೆಟ್ಟಿ ಸುಜ್ಜನೆ ಸುಱಿವೆನೇಳ್ಗಡಲ ತಿಜ್ಜನೆ ತಿರುಹುವೆ ಧರಣಿಯ (ಮೋಹತ. ೧೨-೧೧).

[ಏೞ್$_2$ + ಕಡಲ್$_2$]

**ಏೞ್ಕೋಟಿ**, ಎಕ್ಕೋಟಿ, ಏಳುಕೋಟಿ (ನಾ). ಒಂದು ಸಂಖ್ಯೆ; ಸಪ್ತಕೋಟಿ: ಇದನೞಿದಾತಂ ವಾರಣಾಸಿಯೊಳಂ ಪ್ರಯಾಗೆಯೊಳಂ ಸಾಸಿರಂ ಕವಿಲೆಯುಂ ಸಾಸಿರ್ಬರ್ಬ್ರಾಹ್ಮಣರನೇೞ್ಕೋಟಿ ತಪೋಜನ[ಮು]ಮನೞಿದ ಪಞ್ಚಮಹಾಪಾತಕನ ಪೋದ ಲೋಕಕ್ಕೆ ಪೋಕುಂ (ಇಅ. XII, ೨೫೬-೨೨ ; 873). **ಎಕ್ಕೋಟಿ:** ಇದನಳಿದ[ಂ] ಬಾಣರಾಸಿಯೊಳು ಪನ್ನಿಚ್ಛಾರ್ಸಿರ ಬ್ರಾಹ್ಮಣರುಮನೆ[ಕ್ಕೋ]ಟಿ ತಪೋಧನರುಮಂ ಸ[ಹಸ್ರ]ಕವಿಳೆಯುಮಂ ನಳಿದ[ಂ] (ಸೌಇಇ. XI-i, ೬೨-೧೩; 1024); ಎಕ್ಕೋಟಿತಪೋಧನರ್ಗ್ಗೆ (ಎಇ. XIII, ೧೬೨-೫೩ ; 1055); ಸೋಮೇಶ್ವರದೊಳೆಕ್ಕೋಟಿ ತಪೋಧನರುಮನೞಿದ ಮಹಾಪಾತಕನಕ್ಕು (ಇಅ. XIII, ೯೩-೩೩ ; 1084); ಅಳಿದವನಿದನೆಕ್ಕೋಟಿಯುನಳಿದಂ ತೀರ್ಥಂಗಳನಿತುವನೋರನ್ತೞಿದಂ (ಎಕ. XI, ದಾವಣ. ೧೩೪-೫೯ ; 1108 ?); ಅ ಪಂಚಮಠದ ತಪೋಧನಮುಖ್ಯವಾದ ಎಕ್ಕೋಟಿಗಳುಂ (ಎಕ. XI, ದಾವಣ. ೧೦೫-೩೦; 1218); ಕಂಬದ ಹಳ್ಳಿ ತೀರ್ತ್ಥವ ಎಕ್ಕೋಟಿ ಜಿನಾಲಯವೆಂದು ಹೆಸರುಂ . . . ಎಕ್ಕೋಟಿ ಮಹಾರುದ್ರರಿಳ್ದು ಕೊಟ್ಟರು (ಎಕ. XIV, ನಾಗಮಂ. ೧೩೧-೩ ; ಸು. 1200). **ಏಳುಕೋಟಿ:** ಏಳುಕೋಟಿ ಮಹಾಮಂತ್ರ ಉಪಮಂತ್ರಂಗಳಿಗೆ ಲೆಕ್ಕವಿಲ್ಲ (ಮಹಾದೇ. ೧೦-೨); ಅಂನದಾನ ಸುವರ್ಣ್ನದಾನವಿನೋದರುಂಮಪ್ಪ ಏಳುಕೋಟಿ ಶ್ರೀರುದ್ರರಿಪ್ಪರ್ ಶ್ರೀಮೂಲಸಂಘ ದೇಸಿಗಣದ ಪೊಸ್ತಕಗಚ್ಛದ ಕಂಬದಹಳ್ಳಿ ತೀರ್ತ್ಥವ . . . ಎಕ್ಕೋಟಿ ಮಹಾರುದ್ರರಿಳ್ದು ಕೊಟ್ಟರು (ಎಕ. XIV, ನಾಗಮಂ. ೧೩೧-೨ ; ಸು. 1200). [ಏೞ್$_2$ + ಕೋಟಿ]

**ಏೞ್ಗಯ್ಯ** (ನಾ). ಏಳು ಕೈಗಳನ್ನು ಉಳ್ಳವನು; ಅಗ್ನಿ: ಏೞ್ಗಯ್ಯಂ, ಏೞುಕಯ್ಯಂ (ಶಬ್ದಾನು. ೩೫೬ ಪ್ರಯೋ).

[ಏೞ್$_2$ + ಕಯ್$_2$ (< ಕೆಯ್$_2$) + – ಅ$_7$]

**ಏೞ್ಗೆ**, ಏಳಿಗೆ, ಏಳ್ಗೆ (ನಾ). ಮೇಲೇರುವಿಕೆ; ಬೆಳವಣಿಗೆ; ಅಭಿವೃದ್ಧಿ; ಆಧಿಕ್ಯ; ಔನ್ನತ್ಯ: ಕೆಲನಂ ಕೊಬ್ಬುರ್ತ್ತೆಸೆದು ಬಿದಿರ್ದಾರ್ದುರ್ಮೇೞ್ಗೇೞ್ಗೆ [ಪಾಠಾಂ. ಮೆಳ್ದಳ್ಳೆ]ಸಮುಂಜಸನಿಕ್ಕಿ ಮಿಕ್ಕನರಿವಾಹಿನಿಯಂ (ಕವಿರಾ. ೧-೬೬); ಏೞ್ಗೆಯಂ ಪರಬಲಂ ಪೊಗೞಲ್ (ಎಕ. II, ೧೩೮-೧೩ ; ಸು. 940); ಒಲಿಸುವ ರೂಪು ಗಾಡಿಯೊಳೊಡಂಬಡೆ ಗಾಡಿ ವಿಳಾಸದೇೞ್ಗೆಯೊಳ್ ನೆಲಸೆ (ಆದಿಪು. ೧-೭೨); ಪೊಸಜವ್ವನದೇೞ್ಗೆ (ಕಾದಂಪೂ. ೬೯೮); ಶೌಚದೇೞ್ಗೆ (ಸಮಪ. ೬-೨). **ಏಳಿಗೆ:** ಆಳೋಚಿಸಿ ತನ್ನೊಳೆಂದನು ಸಂಸಾರದೇಳಿಗೆ ಈತೆಱನೆಂದು (ಅಂಜಚ. ೧೫-೩೮); ಬಾಲಸೂರ್ಯನವೊಲ್ ಪ್ರತಿಕ್ಷಣದೇಳಿಗೆಯ ತೇಜದ ವಿಕಾರ ಚಡಾಳಿಸಿತು (ಕುವ್ಯಾದ್ರೋ. ೧೮-೩೦); ತುಂಗ ತರಂಗದೇಳಿಗೆಯಿಂದ ಕಾವೇರಿ-ಮಂಗಳಗಾತ್ರೆಯಾಗಿಹಳು (ಕಂನವಿ. ೫-೪೬); ಈ ವಿಧದೇಳಿಗೆ ವಡೆದೀಯೊಡಲೊಳೆ ದೇವರೊಳಗವೆಸಗುವೆನು (ಹದಿಬ. ೧-೪೦). **ಏಳ್ಗೆ:** ನಗರಾಜಂ ಧೈರ್ಯದೊಂದೇಳ್ಗೆಯನೆ (ಎಇ. XIII, ೩೩೦-೭ ; 979); ಶೌರ್ಯದೇಳ್ಗೆಯಂ ಮೆಱೆದು (ಸೌಇಇ. XI-ii, ೧೫೨-೨೨; 1103); ಕಾರುಣ್ಯದೇಳ್ಗೆಯಿಂ ಸವಿನುಡಿಯೊಳಿಂತೆಂದನು (ಭಾವಚಂ. ೯-೪೫); ನಾಡೊಳಗುಳ್ಳ ನಾನಾವಿದ್ಯದೇಳ್ಗೆಯ ನೋಡ ಚಿತ್ತೈಸಿದ ಬಳಿಕ (ಮೋಹತ. ೪-೧೮); ಈ ಪಾತಿವ್ರತ್ಯದೇಳ್ಗೆಯನಾಲಿಸೆ ಪಾಪಗಳೆದ್ದು ಪಾಱುವುವು (ಹದಿಬ. ೨-೫೧).

ಏಳಿಗೆಯಾಗು = ಅಭಿವೃದ್ಧಿಹೊಂದು: 'ನಿಮ್ಮಿಂದೆಲ್ಲಾ ಹಣ ತೆಗೆದುಕೊಂಡರೆ ನಮಗೆ ಏಳಿಗೆಯಾಗುವುದಿಲ್ಲ' ಎಂದುಬಿಡುತ್ತಿದ್ದರು (ಕುಸುಸಂ. ೬೪). [ಏೞ್$_1$ + -ಗೆ$_1$]

**ಏೞ್ಗುಂದು** (ಕ್ರಿ). ಅಭಿವೃದ್ಧಿ ಇಳಿಮುಖವಾಗು; ಬೆಳವಣಿಗೆ ಕಡಮೆಯಾಗು: ಮೊದಲೊಳ್ ನೀಳ್ದು ಪೊದಳ್ದು ಪರ್ಬಿ ಪದಪಂ ಕೈಕೊಂಡು ಮುಂದೈಸಿ ಮಾಣದೆ ತನ್ನಂದದೊಳೇೞ್ಗುಂದದೆ ನಿರುದ್ಧೋಚ್ಛ್ವಾಸಮಪ್ಪನ್ನೆಗಂ ಪುದಿದಾ ದಂಪತಿಯಂ ಪುದುಂಗೊಳಿಸಿ (ಆದಿಪು. ೫-೨೩). [ಏೞ್ಗೆ + ಕುಂದು]

**ಏೞ್ಗೆಡು** (ಕ್ರಿ). = ಏೞ್ಗುಂದು: ಬಡವಾಗಿರ್ದೊಡಲೇೞ್ಗೆಟ್ಟು ನಡು ನೀರ್ ಭೋರೆಂದು ಪಾಯ್ವಕ್ಷಿ (ಧರ್ಮಾಮೃ. ೪-೭೪).

[ಏೞ್ಗೆ + ಕೆಡು]

**ಏೞ್ಗೆವಡಿಸು** (ಕ್ರಿ). ಏಳಿಗೆಯಾಗುವಂತೆ ಮಾಡು: ನಾರಾಯಣನಂತೇೞ್ಗೆವಡಿಸಿಯಾಳ್ಗುಂ ಸೊಗದೊಳ್ (ಅಪ್ರತಿ. ೩೩-೧೪).

[ಏೞ್ಗೆ + ಪಡು$_1$ + -ಇಸು$_3$]

**ಏೞ್ಗೆವಡೆ** (ಕ್ರಿ). ಏಳಿಗೆಯನ್ನು ಹೊಂದು: ಏೞ್ಗೆವಡೆದ ಪಾಡಿವದ ಚಂದ್ರನಂತೆ ಚಂದ್ರಾಪೀಡಂ ಪ್ರತಿದಿನಂ ಪ್ರವರ್ಧಮಾನನಾಗೆ (ಕಾದಂಪೂ. ೪೩೩). [ಏೞ್ಗೆ + ಪಡೆ$_1$]

**ಏೞ್ಗೆವಾಡಿವ**, ಏಳ್ಗೆವಾಡಿವ (ನಾ). ಶುಕ್ಲಪಕ್ಷದ ಪಾಡ್ಯ : ಅಯ್ವರ್ ಕೂಸುಗಳುಮೇೞ್ಗೆವಾಡಿವದ ಚಂದ್ರನಂತುತ್ತರಾಭಿವೃದ್ಧಿಯೊಳ್ ಸೊಗಯಿಸಿ ಬಳೆಯೆ (ಪಂಪಭಾ. ೨–೩ ವ). **ಏಳ್ಗೆವಾಡಿವ :** ಕಾಸ್ಯಪಗೋತ್ರಪವಿತ್ರನೇಳ್ಗೆವಾಡಿವದೆಳದಿಂಗಳನ್ತನುದಿನಂ ಬಳೆದಂ ಪಿರಿದುಂ ವಿಭೂತಿಯಿಂ (ಎಕ. V, ಬೇಲೂರು. ೧೭–೬೪ ; 1136). [ಏೞ್ಗೆ + ಪಾಡಿವ]

**ಏೞ್ಗೆವೆಱು**, ಏಳ್ಗೆವೆಱು (ಕ್ರಿ). ಅಭಿವೃದ್ಧಿ ಹೊಂದು ; ಏಳಿಗೆಯನ್ನು ಪಡೆ : ವಿಶ್ವಜಗಜ್ಜನ ಕೀರ್ತನಾರವಂಗಳಿನಿನಿಸೇೞ್ಗೆವೆತ್ತು . . . ಪುಗುತಂದನಚ್ಯುತಂ (ಜಗವಿ. ೧೦–೧೩೧). **ಏಳ್ಗೆವೆಱು :** ಮೂಡುವೆಳನೇಸಱಿಂದುಱೆ ನಮಿಸಿಕೊಳ್ವ ಮೆಯ್ಗಾಡಿವಣ್ಣದಿನೇಳ್ಗೆವೆತ್ತು ಥಳಥಳಿಪ ಶಿಶುಚೂಡಾಮಣಿಯನೀಕ್ಷಿಸುತೆ (ಪಮ್ಮರಾ. ೨–೬೪). [ಏೞ್ಗೆ + ಪೆಱು$_1$]

**ಏೞ್ತಗ** (ನಾ). ಒಂದು ಸ್ಥಳದ ಹೆಸರು : ಮುಕೂಡಲ್ ದಕ್ಷಿಣಾದಿಗ್ವಿಭಾಗಮವಲೋಕ್ಕ ಏೞ್ತಗ ಕೊಡಲ ಮೂಡಗ ಕೆಲಬನ್ದು (ಇಆ. XII, ೧೬–೧೩ ; 413). [?]

**ಏೞ್ತರ್** 'ಎೞ್ತರ್' ನೋ.

**ಏೞ್ತರ** 'ಎೞ್ತರ' ನೋ.

**ಏೞ್ತರವು** 'ಎೞ್ತರವು' ನೋ.

**ಏೞ್ನೂಱು**, ಏಳುನೂಱು, ಏಳ್ನೂರು, ಏಳ್ನೂಱು (ನಾ). ಏಳುನೂರರ ಮೊತ್ತ : ಶಕನ್ರಿಪ ಕಾಲಾತೀತ ಸಂವತ್ಸರಙ್ಗಳ್ ಏೞ್ನೂಱಱೆಂಭತ್ತೆಣ್ಟನೆಯ ವ್ಯಯಮೆಂಬ ಸ[ಂ]ವತ್ಸರಂ ಪ್ರವರ್ತ್ತಿಸೆ (ಇಆ. XII, ೨೧೯–೧೫ ; 866). **ಏಳುನೂಱು :** ಅಱಿದೇಳುನೂರ್ವರುಷವಱಿಯದೇಳ್ನೂಱು ವರುಷ ಸಂದ ರೇವಣಸಿದ್ಧ ನಾಡಿ ತಪ್ಪುವನೆ (ಸಿದ್ಧರಾ. ೧–೪೫). **ಏಳ್ನೂರು :** ನನಗೆ ಆತನು ಏಳ್ನೂರು ರೂಪಾಯಿಗಳನ್ನು ಕೊಡಬೇಕು (ರೂಢಿ). **ಏಳ್ನೂಱು :** ಉಕ್ಕುವತಿಶಯ ವೀರರಸದೊಳು ಸೊಕ್ಕಿನೊಳು ಲಂಕಾಪುರವನೆಡಕಿಕ್ಕಿ ಹಾಱಿದನೆತ್ತ ಮೇಲೇಳ್ನೂಱು ಯೋಜನವ (ತೊರರಾ. ೫–೧–೨೪). [ಏೞ್$_2$ + ನೂಱು]

**ಏೞ್ಪತ್ತು** 'ಎೞ್ಪತ್ತು' ನೋ.

**ಏೞ್ಪೊರೆ** (ನಾ). ಏಳು ಪೊರೆ, —ಪದರ : ಪರಿಮರ್ದಿಸುವುದು ದುತ್ತೂರರಸಮನಿಂಬಾಗಿ ಪಿೞಿದು ನೆಲದೊಳ್ ಲವಣಂ ಬೆರಸೊರಸಿಕೊಂಡು ಪೂಸುಗೆ ಕರಗುಗುಮೇೞ್ಪೊರೆಯೆನಿಪ್ಪ ಕುರುವುಂ ಕ್ಷಣದೊಳ್ (ಕಾವ್ಯಾವ. ೨೭೧). [ಏೞ್$_2$ + ಪೊರೆ$_3$]

**ಏೞ್ಬರ್** 'ಏೞ್$_2$' ಪರಾ.

**ಏೞ್ಬೆಸನ**, ಏಳುಬೆಸನ, ಏಳ್ಬೆಸನ (ನಾ). ಬೇಟೆ, ದ್ಯೂತ, ಸ್ತ್ರೀಯರಲ್ಲಿ ಅತ್ಯಾಸಕ್ತಿ, ಮದ್ಯಪಾನ, ವಾಕ್ಪಾರುಷ್ಯ, ಅರ್ಥದೂಷಣ, ದಂಡಪಾರುಷ್ಯ ಎಂಬ ಏಳುವಿಧವಾದ ವ್ಯಸನ ; ಸಪ್ತವ್ಯಸನ : "ತಱಿಸಂದೇೞ್ಬೆಸನಮೆಣ್ದೆಸೆಯುಮೆನುತಂದೇೞ್ನೂಱೊಂಭೈನೂಱರ್ಭಾಸಿರಮಿವು ಸಂಖ್ಯಾಪದಂಗಳಕ್ಕುಂ" (ಕವಿಕಂ. ೨೧೪). **ಏಳುಬೆಸನ :** ದುರ್ಗೋಕ್ತಿಯೊಳಿರ್ಪರೇಳುಬೆಸನಕ್ಕೀಡಪ್ಪರಾಚಾರಮಂ ಬಗೆಯರ್ ಸ್ವಾರ್ಥವಿಚಾರಕಲ್ಪಮತಿಗೀವರ್ ಧರ್ಮಮಂ ಪಾಲಿಸರ್ (ಸೋಮೇಶ. ೪೬). **ಏಳ್ಬೆಸನ :** ಭವಲತೆಯಂ ಕೊಯ್ದೇಳ್ಬೆಸನವ ಕೊಯ್ದಿಕ್ಕೆ ಭರಂಗೆಯ್ದುತ್ತುಸ್ಸುಖದಿಂದೆ (ಉದ್ಭದೇ. ೩–೯). [ಏೞ್$_2$ + ಬೆಸನ]

**ಏೞ್ಮೆ**, ಏಳ್ಮೆ (ನಾ). ಏಳುಸಲ, —ಬಾರಿ : ಏೞ್ಮೆ, ಏೞ್ವರ್ (ಶಬ್ದಾನು. ೩೫೬ ಪ್ರಯೋ). **ಏಳ್ಮೆ :** ಅರಸರನು ಮೂರೇಳ್ಮೆ ತರಿದ ಗಣನೆಯಕ್ಷಸರದ ನೆವದಿಂದ ಬಲಗಿವಿಯ ಮೇಲೆ ಧರಿಸಿರುವ ರೀತಿಯಿಂ ಮೆರೆವ ಮೂರೇಳ್ಮಣಿಗಳ್ (ಶ್ರೀರಾಚ. ೨–೬೬). [ಏೞ್$_2$ + -ಮೆ]

**ಏೞ್ವರ್** 'ಏೞ್$_2$' ಪರಾ.

**ಏೞ್ನೊಡೆವಾಳಿಸು** (ಕ್ರಿ). (?) : ಉದಧಿವೃತಾವನೀತಳದೊಳೇೞ್ನೊಡೆ(?)ವಾಳಿಸೆ ಕಾಡಿಯೂರನೆಯ್ದಿದಪುವೆ ಮತ್ತಿನೂರ್ (ಎಇ. XIII, ೩೩೨–೪೭ ; 929). [?]

# ಐ



**ಐ$_1$** (ನಾ). ಕನ್ನಡ ವರ್ಣಮಾಲೆಯ ಹದಿಮೂರನೆಯ ವರ್ಣ; ಐಕಾರ: ಸ್ವಭಾವದಿಂದೇಕಾರಂ ಮೊದಲಾದ ಸಂಧ್ಯಕ್ಷರಂಗಳವು್ವು; ಅವಾವುವೆಂದೊಡೆ–ಏ ಐ, ಓ ಔ (ಶಮದ. ೧೦ ವೃತ್ತಿ).

**ಐ$_2$**– 'ಅಯ್–' ನೋ.

**ಐಂಗುದ** (ನಾ). ಇಂಗುದೀ ಮರದ ಹಣ್ಣು (ಕ). [ಸಂ.]

**ಐಂದ** (ಅ). ಇಲ್ಲಿಂದಾಚೆಗೆ; ಮುಂದಕ್ಕೆ. [← ತುಳು. ಐಂದ]

**ಐಂದವ** (ಗು). ೧. ಚಂದ್ರನಿಗೆ ಸಂಬಂಧಿಸಿದ. (ನಾ). ೨. ಚಂದ್ರಿಕೆ; ಬೆಳುದಿಂಗಳು: ಅಂಚೆ ಸಂಚಳಿಪನಂಗನ ಜಂಗಮಕಲ್ಪವಲ್ಲಿ ಮಂಜುಳ ಕರಪುಂಜವಂ ಕೆದಱುವೈಂದವ ಕೋರಕಜಾಲಮೆಂಬಿನಂ ಬಳಸಿದುದಾ ಮಹೀಪತಿಗೆ ಚಾಮರವಿಕ್ಷ್ವಿವ ಕಾಮಿನೀಜನಂ (ಅನಂಪು. ೨–೨೦). ೩. ಚಂದ್ರನ ಮಗ; ಬುಧ: ಸಕಳಗ್ರಹಂಗಳೈಂದವ ದಿವಸಾಧಿನಾಥ ಸುತರೀಕ್ಷಿಸುವಂದು (ಜಾತತಿ. ೩–೧೭). ೪. ಚಾಂದ್ರಮಾನದ ತಿಂಗಳು. [ಸಂ.]

**ಐಂದವಕಲೆ** (ನಾ). ಚಂದ್ರನ ಕಲೆ: ಪರಮ್ಮೆಂದವಕಲೋಪಮಂಗಾಂಗ ಮಾಗಿ ವಿಸ್ಫುರಿತಾತ್ಮಶಕ್ತಿಯಮೃತಪ್ಲವಂ ಪೊಣ್ಮೆ (ಪದ್ಮರಾ. ೧೦–೨೦೩). [ಐಂದವ + ಕಲೆ$_3$]

**ಐಂದವಬಿಂಬ** (ನಾ). ಚಂದ್ರಬಿಂಬ: ಮರ್ಚಿನಿಪ ಗೊಬ್ಬರವಂ ತಳೆದಲ್ಲಿ ಚೆಲ್ಲಿ ತಾರಗೆಗಳೆನಿಪ್ಪ ಬಿಳ್ತುಗಳನಂತವಕೈಂದವಬಿಂಬ ರೌಪ್ಯ ಕುಂಭಗತ ಸುಧಾಮರೀಚಿಜಳಮಂ ಸುರಿದಂ ಸಲೆ ಕಾಲಪಾಮರರಂ (ರಾಜಶೇ. ೧೧–೬೮); ಮಿನುಗುವ ಮುತ್ತಿನೊಳ್ಪೆಱೆಯಿದೆಂಬಿನಮ್ಮೆಂದವ ಬಿಂಬಮೊಪ್ಪುಗುಂ (ವಿಷ್ಣುಪು. ೫–೩–೧೧೧). [ಐಂದವ + ಬಿಂಬ]

**ಐಂದವಾಱೆ** (ನಾ). ಒಂದು ಬಗೆಯ ಬಾಳೆ; ಇಂದ್ರಬಾಳೆ: ಅಧ್ವಗಾಲೋಕನಕ್ಕಾಶ್ಚರ್ಯಮನಧಿಕಂ ಮಾೞ್ಪೈಂದವಾಱೆಗಳಿಂ (ಮಹಾನೇ. ೧–೬೬). [ಐಂದ್ಯ (< ಐಂದ್ರ) + ಬಾಱೆ]

**ಐಂದ್ರ** (ಗು). ೧. ಇಂದ್ರನಿಗೆ ಸೇರಿದ, –ಸಂಬಂಧಿಸಿದ: ಬಱಿಕ್ಕೈಂದ್ರಮೈಹಿಕ ಪಾರತ್ರಿಕಭೋಗಮಂ ಕುಡುವಿನಂ (ಆದಿಪು. ೧೬–೮). (ನಾ). ೨. ಒಂದು ನೃತ್ಯ: ಮನಂಗೊಳೆ ಮಾಡಿದನೈಂದ್ರ ಮೆಂಬ ನಾಟಕವಿಧಿಯಂ (ಅಜಿಪು. ೫–೬). ೩. ಗಮಕಿ. ೪. ಇಂದ್ರನಿಂದ ಪ್ರಣೀತವಾದ ಒಂದು ವ್ಯಾಕರಣ: ಕಾಶಕೃತ್ಸ್ನ ವ್ಯಾಕರಣವೇ ಕಾಲಾಪವ್ಯಾಕರಣವೆಂದೂ ಇದು ಐಂದ್ರವ್ಯಾಕರಣದ ಗುಂಪಿಗೇ ಸೇರಿದ್ದೆಂದೂ ಅನೇಕರು ಹೇಳುತ್ತಾರೆ (ಕಾಶಕೃ. ೧೧ ಪೀಠಿಕೆ). ೫. [ಯೋಗಶಾ] ಯೋಗಗಳಲ್ಲಿ ಒಂದು ಬಗೆ: ಐಂದ್ರ . . . ವೈಧೃತಿಗಳೆಂಬಿಪ್ಪತ್ತೇಳುಯೋಗಂಗಳುಂ (ವಿವೇಕ. ೩೨೦). [ಸಂ.]

**ಐಂದ್ರಕ** (ನಾ). ಇಂದ್ರನ ದಿಕ್ಕು; ಪೂರ್ವದಿಕ್ಕು: ಅರುಣವರ್ಣದ ಬೊಟ್ಟಿನೆ ಐಂದ್ರಕದೊಳು ಮಿರುಗುತಿಹುದು ಚಂದ್ರಬಿಂಬ (ಜ್ಞಾನಚ. ೩೮–೭೧). [ಸಂ.]

**ಐಂದ್ರಜಾಲ** (ನಾ). ಯಕ್ಷಿಣಿ; ಗಾರುಡಿ; ಕಣ್ಕಟ್ಟು. 'ಐಂದ್ರ ಜಾಲಿಕ' ಪರಾ. [ಐಂದ್ರ + ಜಾಲ]

**ಐಂದ್ರಜಾಲಿಕ** (ನಾ). ಯಕ್ಷಿಣಿಮಾಡುವವನು; ಗಾರುಡಿಗ: ರತ್ನಾವಳೀನಾಟಕೆಯಲ್ಲಿ ಐಂದ್ರಜಾಲಿಕನ ದೃಶ್ಯದಲ್ಲಿ ಬರುವಂತೆ ಶೃಂಗಾರ–ಅದ್ಭುತಗಳಿಗೂ ಅವಿರೋಧ ಸಾಧ್ಯ (ಧ್ವನ್ಯಾಲೋ. ೧೭೮ ಅಡಿಟ). [ಸಂ.]

**ಐಂದ್ರದಿಶೆ** (ನಾ). ಇಂದ್ರನ ದಿಕ್ಕು; ಪೂರ್ವದಿಕ್ಕು: ಆ ನಗೇಂದ್ರ ದೈಂದ್ರದಿಶಾಭಾಗದೊಳ್ (ಚಂದ್ರಪು. ೧–೭೫). [ಐಂದ್ರ + ದಿಶೆ]

**ಐಂದ್ರಧ್ವಜ** (ನಾ). ೧. ಇಂದ್ರನ ಧ್ವಜ. ೨. [ಜೈನ] ಇಂದ್ರಾದಿ ಗಳು ಮಾಡುವ ಜಿನಪೂಜೆ: ನೇಮಿತೀರ್ಥಂಕರ ಪರಮದೇವ ನಿರ್ವಾಣಕಾಲದೊಳು ಐಂದ್ರಧ್ವಜವೆಂಬ ಪೂಜೆಯಂ ಮಾಡೆ (ಎಕ. VII, ಶಿವಮೊ. ४–೧೪; 1122). 'ಇಂದ್ರಧ್ವಜ' ಪರಾ. [ಐಂದ್ರ + ಧ್ವಜ]

**ಐಂದ್ರಲುಪ್ತಿಕ** (ನಾ). (ಕಾಯಿಲೆಯಿಂದ) ತಲೆಕೂದಲುದುರಿದ ವನು; ತಲೆಬೋಳಾದವನು: "ಖಳತಿಃ, ಶಿಪಿವಿಷ್ಟಃ, ಐಂದ್ರಲುಪ್ತಿ [ಪಾಠಾಂ. ಪ್ರ]ಕಃ – ಈ ೩ ತರಟದಲೆ(ಯಂ)" (ಹಲಾಯು. ೯೯–೪೫४). 'ಇಂದ್ರಲುಪ್ತಕ' ಪರಾ. [ಸಂ.]

**ಐಂದ್ರಶರ** (ನಾ). (ಇಂದ್ರನ ಶಕ್ತಿಯುಳ್ಳ) ಬಾಣ; ವಜ್ರಾಸ್ತ್ರ: ಅದ್ರಿಬಾಣಮಂ ಪೂಡಿದಂ ಕಲಿ ಸುಧನ್ವಂ ತೊಟ್ಟನೈಂದ್ರಶರಮಂ ಫಲುಗುಣಂ (ಜೈಮಿಭಾ. ೧೩–೧೫). [ಐಂದ್ರ + ಶರ]

**ಐಂದ್ರಾಸ್ತ್ರ** (ನಾ). = ಐಂದ್ರಶರ: ಅಂದಿನ ಯುದ್ಧವು ಅರ್ಜುನನ ದಾಯಿತು. ಅವನ ಐಂದ್ರಾಸ್ತ್ರದ ಪೆಟ್ಟನ್ನು ತಡೆಯಲಾರದೆ . . . ಹಿಮ್ಮೆಟ್ಟಿ ದರು (ವಚಭಾ. ೨೭೨). [ಐಂದ್ರ + ಅಸ್ತ್ರ]

**ಐಂದ್ರಿ** (ನಾ). ೧. ಇಂದ್ರನ ಹೆಂಡತಿ; ಶಚೀದೇವಿ: ಚಂದ್ರಲೇಖೆ ಚಂದ್ರಾದಿತ್ಯಪ್ರತಿಮರನ್ಯೆಂದ್ರಿಯವೋಲಪ್ರತಿಮಪ್ರಭರಂ ಪ್ರಸಿದ್ಧರಂ ವಧು ಪಡೆದಳ್ (ಪಂರಾಮಾ. ೧೦–೭೦). ೨. ಪೂರ್ವದಿಕ್ಕು; ಮೂಡಲು: "ಐಂದ್ರೀ, ಪೂರ್ವಾ, ಪ್ರಾಚೀ – ಈ ೩ ಮೂಡಣ ದೆಸೆ" (ಹಲಾಯು. ೧೭–೧೧೧). [ಸಂ. ಐಂದ್ರೀ]

**ಐಂದ್ರಿಯ** (ಗು). ೧. ಇಂದ್ರಿಯಗಳಿಗೆ ಸಂಬಂಧಿಸಿದ. ೨. ಇಂದ್ರಿಯ ಗಳನ್ನುಳ್ಳ: ಶರೀರವಿರಹಿತಾನಂತಜ್ಞಾನಾದಿಗುಣಸಂಪನ್ನ ನಿಶ್ರೇಯಸ ಸುಖಪ್ರಾಪ್ತಿನಿಮಿತ್ತಂ ಐಂದ್ರಿಯಂ ದೇಹಂ (ತತ್ತ್ವಪ್ರ. ೩೨೮). [ಸಂ.]

**ಐಂದ್ರಿಯಕ** (ಗು). = ಐಂದ್ರಿಯ ೧: ಐಂದ್ರಿಯಕ ಜೀವನಕ್ಕೆ ಬುದ್ಧಿಯ ನಿಯಂತ್ರಣ ಬೇಕು (ನವ್ಯಕಾ. ೧೧). [ಸಂ.]

**ಐಂದ್ರೋತ್ಸವ** (ನಾ). ಒಂದು ಬಗೆಯ ಉತ್ಸವ: ವಕ್ಖಣಶಾಲೆ ಯಲು ಐಂದ್ರೋತ್ಸವದ ಪೂಜೆಯಂ ಮಾಡಿ ಸರಸ್ವತಿಯ ಭೋಜನಕ್ಕೆಂದು ಬಿಟ್ಟ ಗದ್ಯಾಣಂ ೨೦೦ (ಸೌಇಇ. XI–ii, ೧೫೯–೩४; 1111). [ಐಂದ್ರ + ಉತ್ಸವ]

**ಐಕಮತ್ಯ** (ನಾ). ಏಕಾಭಿಪ್ರಾಯ; ಒಗ್ಗಟ್ಟು: ಸೋದರರ ಸಹಕಾರ ಮತ್ತು ಐಕಮತ್ಯಗಳ ಫಲವಾಗಿ ವಿಜಯನಗರದ ಜನನವಾಯಿತು (ಕೃದೇವ. ೧). [ಸಂ.]

**ಐಕಾಗಾರಿಕ** (ನಾ). ೧. ಒಂದೇ ಮನೆಯಿರುವವನು. ೨. ಒಂಟಿ ಯಾದ ಮನೆಗಳಿಗೆ ನುಗ್ಗುವವನು; ಕಳ್ಳ. [ಸಂ.]

**ಐಕಾಗ್ರ್ಯ** (ನಾ). ಏಕಾಗ್ರತೆ: ಪ್ರತ್ಯಾಹಾರದಿಂದ ಮನಶ್ಚಾಂಚಲ್ಯವನ್ನು ನಿವಾರಿಸಿ ವೈರಾಗ್ಯವನ್ನು ಐಕಾಗ್ರ್ಯವನ್ನು ಸಾಧಿಸಲು ದಾರಿತೋರಿದೆ (ಭಾರದ. ೧೬೬). [ಸಂ.]

**ಐಕಾರ** (ನಾ). [ವ್ಯಾಕ] 'ಐ' ಎಂಬ ವರ್ಣ: ಅಕಾರಮುಂ ಏಕಾರಮುಂ ಕೂಡಿ ಸಂಧಿಯಾಗೆ ಐಕಾರಂ ಪುಟ್ಟುಗುಂ (ಶಮದ. ೧೦ ಅಡಿಟ). [ಸಂ.]

**ಐಕಿಲ್** 'ಅಯ್ಕಿಲ್' ನೋ.

ಐಕಿಲೆಲರ್ 'ಅಯ್ಕಿಲೆಲರ್' ನೋ.
ಐಕಿಲ್ಗದಿರ 'ಅಯ್ಕಿಲ್ಗದಿರ' ನೋ.
ಐಕಿಲ್ವೆಟ್ಟಣುಗಿ 'ಅಯ್ಕಿಲ್ವೆಟ್ಟಣುಗಿ' ನೋ.
ಐಕಿಲ್ವೆಟ್ಟಳಿಯ 'ಅಯ್ಕಿಲ್ವೆಟ್ಟಳಿಯ' ನೋ.
ಐಕಿಲ್ವೆಟ್ಟು 'ಅಯ್ಕಿಲ್ವೆಟ್ಟು' ನೋ.
ಐಕಿಲ್ವೆಳಗ 'ಅಯ್ಕಿಲ್ವೆಳಗ' ನೋ.

**ಐಕ್ಕಿರು** (ನಾ). ಐಕ್ಯವಾಗಿರು; ಸೇರಿಕೊಂಡಿರು: ಈಶ್ವರನ ದೇಹದೊಳು ಐಕ್ಕಿರೆ ಯೀಶ್ವರನ ಸಾಯುಜ್ಯವೆನಿಪುದು (ಜ್ಞಾನಸಿಂ. ೩೧–೧೬). [< ಐಕ್ಯ + ಇರು$_1$ (< ಇರ್$_1$)]

**ಐಕ್ಯ** (ನಾ). ೧. ಏಕವಾಗಿರುವಿಕೆ; ಒಗ್ಗಟ್ಟು: ವ್ಯಾಸಮಹರ್ಷಿ ಭರತಖಂಡದ ಐಕ್ಯ ಮತ್ತು ಸಂಘಟನೆಗೆ ಪ್ರೇರಕನಾದನು (ಯುಕ್ತಾರ. ೧೦೨ ಪೀಠಿಕೆ). ೨. ಪರಮಾತ್ಮನಲ್ಲಿ ಒಂದಾದವನು,—ಬೆರೆತವನು: ಪಂಚೇಂದ್ರಿಯ ನಾಸ್ತಿಯಾಗದನ್ನಕ್ಕ ಐಕ್ಯನೆಂತೆಂಬೆನಯ್ಯಾ (ಬಸವ. ೫೧೯); ಆಕಾಶಪಥ ಮೀಜಿದೇಕವಸ್ತುವ ತಿಳಿದು ಸಾಕಾರವಳಿದು ನಿಜವಾದ ಐಕ್ಯಂಗೆ ಏಕತ್ರ ನೋಡ (ಸರ್ವಜ್ಞ. ೧೪೭). ೩. ಒಟ್ಟು; ಮೊತ್ತ. ೪. ಒಂದು ಎಂಬ ಸಂಖ್ಯೆಯ ಸಂಕೇತ: ಗಗನಾಂಬರಂ ವ್ಯೋಮ ಸಿಂಧುರಂ ಲೋಚನಂ ನಗಮೈಕ್ಯಮೆಂಬ ಸಂಖ್ಯೆಗಳು ಕೃತಯುಗಮಕ್ಕುಂ (ಮಂಗರಾ. ೨೨–೧೪). ೫. [ಕಾವ್ಯಮೀ] ನಾಲ್ಕು ಬಗೆಯ ಕವಿಸಮಯಗಳಲ್ಲಿ ಒಂದು: ಕವಿ ಸಮಯವನ್ನು– ೧. 'ಅಸದಾಖ್ಯಾತಿ', ೨. 'ಸದಕೀರ್ತನ', ೩. 'ನಿಯಮ', ೪. 'ಐಕ್ಯ' ಎಂದು ನಾಲ್ಕು ಭಾಗಮಾಡಬಹುದು (ಕೈಪಿಡಿ. ೨೪೩); 'ಐಕ್ಯ'ವೆಂದರೆ ವಸ್ತುತಃ ಭೇದವಿರತಕ್ಕ ಕಡೆಗಳಲ್ಲಿಯೂ ಭೇದವನ್ನು ಹೇಳದೆ ಎಲ್ಲಾ ಒಂದನ್ನಾಗಿಯೇ ಗಣಿಸುವುದು (ಕೈಪಿಡಿ. ೨೪೬).

ಐಕ್ಯಮಾಗು, ಐಕ್ಯವಾಗು = ಒಂದಾಗು; ಕೂಡು: ಭೂಲೋಲಕೇಳೈಕ್ಯಮಾಗಿರ್ದುದಾ ಕಲ್ಲೋಳಾ ಲಲಿತವಾಜಿ (ಜೈಮಿಭಾ. ೧೦–೧೧); ಸಮಸ್ತಭಕ್ತರ ಹೃದಯಗಳೂ ಆ ಮಧುರಲಯದಲ್ಲಿ ಮಧುರನಾದಬ್ರಹ್ಮದಲ್ಲಿ ಐಕ್ಯವಾದುವು (ಶಾಂತಲಾ. ೧೩೧); ಈ ಸಾಗರದಲ್ಲಿ ಐಕ್ಯವಾಗದೆ ಇರುವ ಸಂಸ್ಕೃತಿ ಯಾವುದೂ ಇಲ್ಲ (ಯುಕ್ತಾರ. ೧೨೩ ಪೀಠಿಕೆ). [ಸಂ.]

**ಐಕ್ಯಕೂಟಸ್ಥ** (ನಾ). ಐಕ್ಯಸ್ಥಲವನ್ನು ಸೇರಿದವನು: ರುದ್ರತತ್ತ್ವ ಲಿಂಗಮೂರ್ತಿಯಾಗಿ ಈಶ್ವರತತ್ತ್ವ ಶರಣಮೂರ್ತಿಯಾಗಿ ಸದಾಶಿವತತ್ತ್ವ ಐಕ್ಯಕೂಟಸ್ಥನಾಗಿ ನಾಮ ರೂಪು ಭಾವವಳಿದಲ್ಲಿ ಪರಶಿವಮೂರ್ತಿ ಪರಾಪರದೊಳಗಾಯಿತ್ತು (ಮೋಳಿಮಾ. ೧೪೮–೫೬೩). [ಸಂ.]

**ಐಕ್ಯಭಾವ** (ನಾ). ಒಂದಾಗಿರುವಿಕೆ; ಕೂಡಿರುವಿಕೆ: ಅಗಮಪ್ರೌಢಿಯಂ ಸಕಲರತಿಕಲೆಗಳಿಂಪಾಗಲ್ ಪರಸ್ಪರ ವಿಚಾರಮಂ ಮಱೆ ದೈಕ್ಯಭಾವದಿಂ ಸೊಗಸುಗೊಳಿಸಿ (ಜೈಮಿಭಾ. ೧೮–೩೧). [ಐಕ್ಯ + ಭಾವ]

**ಐಕ್ಯವರ್ಣ** (ನಾ). ಐಕ್ಯವಾದ ವರ್ಣ; ಕೂಡಿಕೊಂಡ ಬಣ್ಣ (ಕ). [ಐಕ್ಯ + ವರ್ಣ]

**ಐಕ್ಯಸೂತ್ರ** (ನಾ). ಒಂದಾಗಿ ಕಟ್ಟುವ ಸೂತ್ರ: ಅವುಗಳನ್ನೊಂದು ಐಕ್ಯಸೂತ್ರದಿಂದ ಒಂದುಗೂಡಿಸಲಾರದವನಾಗಿದ್ದೇನೆ (ಪುನರು. ೪೩೧). [ಐಕ್ಯ + ಸೂತ್ರ]

**ಐಕ್ಯಸ್ಥಲ**, ಐಕ್ಯಸ್ಥಳ (ನಾ). [ವೀಶೈ] ಷಟ್‌ಸ್ಥಲಗಳಲ್ಲಿ ಒಂದು; ಕೊನೆಯ ಸ್ಥಲ; ಲಿಂಗಾಂಗ ಸಾಮರಸ್ಯ: "ನಾನು ನೀನು . . . ಈ ಭೇದವು ನನ್ನಲಿಲ್ಲವೆಂಬ ಶಿವಾದ್ವೈತ ಭಾವದಿಂದ ಸಮರಸಭಕ್ತಿಯನ್ನು ಸುಖಸ್ವರೂಪವನ್ನು ಪಡೆದಿರುವುದೇ ಐಕ್ಯಸ್ಥಲದ ಲಕ್ಷಣ" (ಶಿವಾಸೂ. ೧೪); ಬೀಜವೃಕ್ಷ ಯೋಗದಂತೆ ಭಕ್ತಸ್ಥಲ . . . ಕರಕವಾರಿಯೋಗದಂತೆ ಶರಣಸ್ಥಲ ಶಿಖಿ ಕರ್ಪುರಯೋಗದಂತೆ ಐಕ್ಯಸ್ಥಲ (ಆದವ. ೩೫೭); ಕಿಚ್ಚನುರಿಗೋಲಲ್ಲಿ ಬಚ್ಚಿಟ್ಟಂತಿರಬೇಕು ಅಚ್ಚಳಿದು ಐಕ್ಯಸ್ಥಲವಾದ ಶರಣಂಗೆ ನಿಚ್ಚಟದ ನಿಲವು (ಸರ್ವಜ್ಞ. ೧೫೨). ಐಕ್ಯಸ್ಥಳ: ಚೆನ್ನಬಸವಣ್ಣನವರು ಕೈಕೊಂಡ ಯೋಗಸಾನ್ನಿಧ್ಯ ಮತ್ತು ಐಕ್ಯಸ್ಥಳಗಳನ್ನು ಬಣ್ಣಿಸಿದ್ದಾರೆ (ಶರೀಫ. ೬೯). [ಐಕ್ಯ + ಸ್ಥಲ]

ಐಕ್ಯಸ್ಥಳ 'ಐಕ್ಯಸ್ಥಲ' ನೋ.

**ಐಕ್ಯಸ್ಥಿತಿ** (ನಾ). ಏಕವಾಗಿರುವಿಕೆ; ಕೂಡಿರುವಿಕೆ: ಶರಣಸ್ಥಿತಿಯಲ್ಲಿ ಪೂಜ್ಯ ಪೂಜಕ ಭೇದ ಇದ್ದರೂ ಅದನ್ನು ಗಮನಿಸದೆ ಐಕ್ಯಸ್ಥಿತಿಯಲ್ಲಿ ಪೂರ್ಣಾನಂದದಲ್ಲಿ ಮಗ್ನನಾಗಿ ಜೀವನು . . . ತೋರಿಕೆಗೆ ಮಾನವನಾಗಿ ಕಾಣುವನು (ಶಕ್ತಿವಿ. ೯೭). [ಐಕ್ಯ + ಸ್ಥಿತಿ]

**ಐಕ್ಷವ** (ಗು). ೧. ಕಬ್ಬಿಗೆ ಸಂಬಂಧಿಸಿದ; ಕಬ್ಬಿನಿಂದ ಉಂಟಾದ. (ನಾ). ೨. ಸಕ್ಕರೆ. [ಸಂ.]

**ಐಕ್ಷವರಸ** (ನಾ). ಕಬ್ಬಿನ ರಸ,—ಹಾಲು: ಸುಧೆ ದಧಿ ಘೃತಂ ಮಧು ಸದೈಕ್ಷವರಸಂಗಳಿಂ (ರಾಜಶೇ. ೧೩–೫೧ ರಗಳೆ). [ಐಕ್ಷವ + ರಸ]

ಐಗಂಚಿ 'ಐಗಂಚು' ನೋ.

**ಐಗಂಚು**, ಐಗಂಚಿ (ನಾ). ಬಹಳದೂರ; ಅತಿದೂರ (?): ಪರ್ಲಾಂಗೆಂದರೇನು ಐಗಂಚಾ? ಇಲ್ಲೆ ಮೂರು ನಾಲ್ಕು ಮೈಲು (ಹೊಸಕ್ಷಿ. ೫೬). **ಐಗಂಚಿ**: "ದೂರ ಏನು ಬಂತು? ಸೊಲ್ಲಾಪುರ ಏನೂ ಐಗಂಚಿ ಅಲ್ಲ . . ." (ಭೀಮಕಾ. ೨೨೫). [< ಐದು$_2$ (< ಅಯ್ದು$_2$) + ಕಂಚು ?]

ಐಗಂಡುಗ 'ಅಯ್ಗಂಡುಗ' ನೋ.
ಐಗಣೆ 'ಅಯ್ಗಣೆ' ನೋ.
ಐಗಳ$_1$ 'ಅಯ್ಗಳ' ನೋ.
ಐಗಳ$_2$ 'ಅಯ್ಗಳ$_2$' ನೋ.
ಐಗಳು 'ಅಯ್ಯ$_1$' ಪರಾ.
ಐಗಾವುದ 'ಅಯ್ಗಾವುದ' ನೋ.
ಐಗುಳ 'ಅಯ್ಗುಳ' ನೋ.
ಐಗೇಣು 'ಅಯ್ಗೇಣು' ನೋ.
ಐಗೊಳ 'ಅಯ್ಗುಳ' ನೋ.
ಐಗೊಳಗ 'ಅಯ್ಗೊಳಗ' ನೋ.
ಐಗೋಲ್ 'ಅಯ್ಗೋಲ್' ನೋ.
ಐಗೋಲ 'ಅಯ್ಗೋಲ' ನೋ.
ಐಚರು 'ಅಯ್ಚರು' ನೋ.

**ಐಚ್ಛಿಕ** (ಗು). ಇಚ್ಛೆಗೆ ಸಂಬಂಧಿಸಿದ; ತಾನೇ ಆರಿಸಿಕೊಂಡ: ಭೌತಶಾಸ್ತ್ರ ಅವನ ಐಚ್ಛಿಕ ವಿಷಯ (ರೂಢಿ). [ಸಂ.]

**ಐಚ್ಛಿಕವಿಷಯ** (ನಾ). ಇಚ್ಛೆಯಿಂದ ತೆಗೆದುಕೊಂಡ ವಿಷಯ; ತಾನೇ ಆರಿಸಿಕೊಂಡ ವಿಷಯ: ಪಾಠಶಾಲೆಗಳಲ್ಲಿ ಒಂದೋ ಎರಡೋ ಐಚ್ಛಿಕ ವಿಷಯಗಳಿದ್ದು ಅಭಿರುಚಿಯಿರಲಿ, ಇಲ್ಲದಿರಲಿ ಅದನ್ನೇ ಕೊಡುವುದುಂಟು (ಶಿಕ್ಷದ. ೧೧೭). [ಐಚ್ಛಿಕ + ವಿಷಯ]

ಐಜಡೆ 'ಅಯ್ಜಡೆ' ನೋ.
ಐಜಡೆವೆಳಸು 'ಅಯ್ಜಡೆವೆಳಸು' ನೋ.
ಐಟಕ್ಕು 'ಐಠಕ್ಕು' ನೋ.

**ಐಟಿದಾರ** (ಗು). ಒನಪುಳ್ಳ; ಒಯ್ಯಾರವುಳ್ಳ: ಈ ಬಂಗಾರಕಡ್ಡಿ ಯಾರಿವಳು? ಕಣ್ಣಾಗ ತುಂಬು ಹಾಂಗ ಐಟದಾರ ಇದ್ದಾಳ (ಬಾಂಡಾಯ. ೮). [← **ಮರಾ.** ಐಟದಾರ್; ಹಿಂ. ಐಡ್‌ದಾರ್]

**ಐಟು** (ನಾ). ಠೀವಿ; ಬಿಂಕ; ಸಡಗರ; ಡೌಲು: ಒಬ್ಬೊಬ್ಬ ಗೆಳೆಯರನ್ನು ಕೂಡಿಕೊಂಡು ಐಟನಿಂದ ಕನ್ನೆಯನ್ನು ನೋಡಲು . . . ಬಂದಿದ್ದನು (ಅನ್ನ. ೩೧); ಆ ಠೀವಿ, ಆ ಐಟು, ಅವರಿಗೆ . . . ವರದಾನವಾಗಿ ಬಂದಂತಿವೆ (ದೀಪಹ. I, ೧೨); ಅವರ ಉಡುಪು ಒಳ್ಳೆ ಐಟಾಗಿತ್ತು (ಬರುಗಾ. ೧೧೦).

[← ಮರಾ. ಆಯಟ್, ಆಯಟಾ, ಆಯಟೀ, ಐಟ್, ಐಟಾ, ಐಟೀ; ಹಿಂ. ಐಠ್]

**ಐಠಕ್** 'ಐಠಕ್ಕು' ನೋ.

**ಐಠಕ್ಕು**, ಐಟಕ್ಕು, ಐಠಕ್ (ನಾ). = ಐಟು: ರಾಜಒಡೆಯರು ಒಳ್ಳೆಯ ಐಠಕ್ಕಿನ ರಾಜತ್ವವನ್ನು ನಡೆಸುತ್ತಿದ್ದರು (ಶ್ರೀರಾಯ. ೩೧). **ಐಟಕ್ಕು**: ಸ್ಥಿತಿ; ರೀತಿ; ಲಕ್ಷಣ; ಅಚ್ಚುಕಟ್ಟು; ಒಪ್ಪು; ಓರಣ; ಐಟಕ್ಕು (Fettle. ಇಂಕನಿ). **ಐಠಕ್**: ರಂಗರಾಯರ ಮನೆ ಏನು? ನಮ್ಮ ಮನೆಯಂತೆಯೇ ಬಹಳ ಐಠಕ್ ಇದೆ . . . ಎಂದರು (ಚಿತ್ರಕೂ. ೭೪). [< ಐಟು]

**ಐಡವಿಡ** (ನಾ). ಕುಬೇರ (ಕ). [ಸಂ.]

**ಐಡೂಕ** (ನಾ). ಎಲುವುಗಳನ್ನಿಟ್ಟು ನಿರ್ಮಿಸಿದ ಗೋಡೆ: ಕಾಂತಚಂದ್ರಕಾಂತೋಪಲೈಡೂಕ ಭಾಗ ವಿಭ್ರಾಜಿತಮುಂ (ಬೇಳವಂ. ೨-೧೧೪ ವ). 'ಏಡೂಕ' ಪರಾ. [ಸಂ.]

**ಐಣ** (ಗು). ಜಿಂಕೆಗೆ ಸಂಬಂಧಿಸಿದ, —ಸೇರಿದ. [ಸಂ.]

**ಐಣೇಯ** (ಗು). ಹೆಣ್ಣುಜಿಂಕೆಗೆ ಸಂಬಂಧಿಸಿದ, —ಸೇರಿದ. [ಸಂ.]

**ಐತಂಡ** 'ಅಯ್ತಂಡ' ನೋ.

**ಐತನ** 'ಅಯ್ಯತನ' ನೋ.

**ಐತರ್** 'ಎಯ್ತರ್' ನೋ.

**ಐತರವು** 'ಎಯ್ತರವು' ನೋ.

**ಐತವಾಡೆ** (ನಾ). ಒಂದು ಊರಿನ ಹೆಸರು: ಉತ್ತರತಃ ಐತವಾಡೀ ಗ್ರಾಮಃ (ಇಆ. XI, ೧೧೩-೪೦; 753). [ಐತ$_0$ + ವಾಡೆ]

**ಐತಾಳ** (ನಾ). (ಕರಾ) ಕೋಟಬ್ರಾಹ್ಮಣರಲ್ಲಿ ಕಂಡುಬರುವ ಅಷ್ಟಗೃಹ ಭೇದಗಳಲ್ಲಿ ಒಂದು: ತುಳುಬ್ರಾಹ್ಮಣರಲ್ಲಿ ಬರುವ ಉಡುಪ, ಹೆಬ್ಬಾರ, ಐತಾಳ (ತುಳುನಾ. ೧೫೫). [?]

**ಐತಿಹಾಸಿಕ** (ಗು). ಇತಿಹಾಸಕ್ಕೆ ಸಂಬಂಧಿಸಿದ, —ಸೇರಿದ: ಸಂಸ್ಕೃತ ಮಹಾಕಾವ್ಯಗಳಲ್ಲಿ ಸಾರ್ವಜನಿಕ ಮಹಾಕಾವ್ಯ (Secular Poetry) ಐತಿಹಾಸಿಕ ಮಹಾಕಾವ್ಯ (Historical Poetry) ಮತೀಯ ಮಹಾಕಾವ್ಯ (Religious Poetry) ಎಂಬ ಮೂರುಭಾಗಗಳಿವೆ (ಭಾರದ. ೪೫೦); ನಾಟಕದ ವಸ್ತು . . . ಐತಿಹಾಸಿಕವಾಗಿದ್ದರೆ ಹಿಂದಿನವರ ಅನುಭವಗಳ ಪ್ರಭಾವವನ್ನು . . . ಮನಸ್ಸಿನಲ್ಲಿ ಮೂಡಿಸುತ್ತವೆ (ಶಿಕ್ಷದ. ೫೪). [ಸಂ.]

**ಐತಿಹಾಸಿಕತೆ** (ನಾ). ಇತಿಹಾಸಕ್ಕೆ ಸೇರಿದುದು, —ಸಂಬಂಧಿಸಿರುವುದು: ಇಂತಹ ಗೋಷ್ಠಿಗಳ ಐತಿಹಾಸಿಕತೆಯನ್ನು ಪ್ರಶ್ನಿಸುವ ಅವಶ್ಯಕತೆಯಿಲ್ಲ (ಶೂನ್ಯಕು. ೧೪೨). [ಸಂ. ಐತಿಹಾಸಿಕತಾ]

**ಐತಿಹ್ಯ** (ನಾ). ೧. ಪರಂಪರೆಯಿಂದ ಬಂದಿರುವುದು; ಪುರಾಣ; ಚರಿತ್ರೆ: "ಪ್ರಮಾಣವಿಲ್ಲದೆ ಪಾರಂಪರೆಯಿಂದ ಬಂದ ಮಾತ ಹೇಳುವುದು ಐತಿಹ್ಯಂ ಇತಿಹಾಸಯೆನಿಸುಗುಂ" (ನಾಚರಾ. ೧೨೬); ಈ ಪುಣ್ಯಕ್ಷೇತ್ರದಲ್ಲಿ ಒಂದು ಐತಿಹ್ಯವುಂಟು (ಪಾಳಗಾ. ೧); ಕ್ರಿ.ಶ. ಏಳನೆಯ ಶತಮಾನದ ಹೊತ್ತಿಗೆ ಮುಸ್ಲಿಮರು ಹೆಚ್ಚು ಸಂಖ್ಯೆಯಲ್ಲಿ ಮಲಬಾರಿನಲ್ಲಿ ನೆಲಸಿದ್ದರೆಂದು . . . ಐತಿಹ್ಯವಿದೆ (ಭಾರದ. ೩೨೫). ೨. [ತತ್ತ್ವಶಾ] ಪ್ರಮಾಣದಲ್ಲಿ ಒಂದು ಬಗೆ: ಪ್ರಮಾಣವು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿ, ಸಂಭವ, ಐತಿಹ್ಯ, ಲಿಪಿ, ಲೋಕಪ್ರಸಿದ್ಧಿ, ಚೇಷ್ಟೆ, ಪ್ರಾತಿಭ ಎಂದು ಹನ್ನೆರಡು ವಿಧವೆಂದು ಕೆಲವರು ಹೇಳುತ್ತಾರೆ (ಹಿಂದಸಾ. ೧೩೩). [ಸಂ.]

**ಐತಿಹ್ಯಪ್ರಮಾಣ** (ನಾ). = ಐತಿಹ್ಯ ೧: ಈ ವಟವೃಕ್ಷದೊಳು ಯಕ್ಷನಿಪ್ಪನೆಂಬ ಲೋಕವಾರ್ತೆಯಿಂದ ಯಕ್ಷವಿಷಯ ಜ್ಞಾನವೇ ಐತಿಹ್ಯ ಪ್ರಮಾಣಮಕ್ಕುಂ (ವಿವೇಕ. ೧೯). [ಐತಿಹ್ಯ + ಪ್ರಮಾಣ]

**ಐತೀರ್ಪು** (ನಾ). (ಪಂಚರ, ಪಂಚಾಯಿತರ) ನ್ಯಾಯನಿರ್ಣಯ, —ತೀರ್ಮಾನ: ಹರಿಜನರನ್ನು ಹಿಂದುಗಳಿಂದ ಪ್ರತ್ಯೇಕಿಸುವಂಥ ಐತೀರ್ಪನ್ನು ಸಾರಿದ್ದು ಕೇಳಿ . . . ಈಗ ಪ್ರಕಟವಾದ ಜಾತೀಯ ಐತೀರ್ಪನ್ನು ಪುನರ್ವಿಮರ್ಶಿಸಿ . . . ರದ್ದಾಗದಿದ್ದರೆ ನಾನು ಉಪವಾಸಮಾಡಿ ಪ್ರಾಣಾರ್ಪಣ ಮಾಡುವೆ (ಕರವೀ. ೨೧೬). [ಐ$_2$ - (< ಅಯ್-) + ತೀರ್ಪು]

**ಐತೆ** 'ಅಯ್ತೆ' ನೋ.

**ಐತೆರ** 'ಅಯ್ತೆರ' ನೋ.

**ಐತ್ವ** (ನಾ). 'ಐ' ಎಂಬ ವರ್ಣ: ಐತ್ವಕ್ಕಮುಂತೆ - ಭೈಕ್ಷ - ಬೈಕ (ಶಮದ. ೨೬೧ ಪ್ರಯೋ). [ಸಂ.]

**ಐದಂಬ** 'ಅಯ್ದಂಬ' ನೋ

**ಐದಂಬು** 'ಅಯ್ದಂಬು' ನೋ.

**ಐದಕ್ಕರ** (ನಾ). ೧. ಐದು ಅಕ್ಷರಗಳು. ೨. ಐದು ಅಕ್ಷರಗಳ ಮಂತ್ರ; ಪಂಚಾಕ್ಷರೀ ಮಂತ್ರ: ಮಣಿಖಚಿತವಹ ಕಂಗೋಳಿಪ ಕಳಸಮುಮನಿಟ್ಟು ವಸ್ತ್ರಸುವರ್ಣರತ್ನಗಳನ್ನೈದಕ್ಕರಿಂ ಮಂಗಳೋದಕವ ಶೋಧಿಸಿ (ಪ್ರೌಢರಾ. ೭-೪೨). [ಐದು$_2$ (< ಅಯ್ದು$_2$) + ಅಕ್ಕರ]

**ಐದಲಗೋಲು** (ನಾ). ಐದು ಹೂವಿನ ಬಾಣಗಳು; ಪಂಚಪುಷ್ಪಬಾಣಗಳು: ಒಂದು ಬಿಲ್ಲೈದಲಗೋಲಿನ ಮೊನೆಯೊಳ್ಳೆತಂದು ಮೂಜಗವ ಶಿಕ್ಷಿಸುವ ಕಂದರ್ಪ (ಮೋಹತ. ೭-೪೦).

[ಐದು$_2$ (< ಅಯ್ದು$_2$) + ಅಲರ್$_2$ + ಕೋಲು$_1$ (< ಕೋಲ್$_1$)]

**ಐದಲೆಯ** 'ಅಯ್ದಲೆಯ' ನೋ.

**ಐದಳ** 'ಅಯ್ದಳ' ನೋ.

**ಐದಿವರ್** 'ಎಯ್ದು' ಪರಾ.

**ಐದಿಸು** 'ಎಯ್ದಿಸು' ನೋ.

**ಐದು$_1$** 'ಎಯ್ದು' ನೋ.

**ಐದು$_2$** 'ಅಯ್ದು$_2$' ನೋ.

**ಐದುಗುಂದು** 'ಅಯ್ದುಗುಂದು' ನೋ.

**ಐದುಧಾರೆ** (ನಾ). ಕುದುರೆಯ ಐದು ಬಗೆಯ ನಡೆಗಳು: ಐದುಧಾರೆಗಳಿಂದ ತಿದ್ದುವಡೆವುದು ಐದುಧಾರೆಗಳು ಆವುವೆಂದರೆ ಆಸ್ಕಂದಿತ, ಧೌರಿತಕ, ರೇಚಕ, ವಲ್ಗಿತ, ಪ್ಲುತ (ಅಶ್ವಟೀ. ೨೪-೭). [ಐದು$_2$ (< ಅಯ್ದು$_2$) + ಧಾರೆ]

**ಐದುಭೂತ** (ನಾ). ಪೃಥ್ವಿ, ಅಪ್, ತೇಜ, ವಾಯು, ಆಕಾಶ ಎಂಬ ಪಂಚಭೂತಗಳು: ಒಂದಾಗಿಹವೈದುಭೂತ ಚಂದ್ರಸೂರ್ಯರು ನಂದಿವಾಹನ ನಿಮ್ಮ ತನುವಲ್ಲವೇ (ದೇದಾವ. ೨೭-೪೫).

[ಐದು$_2$ (< ಅಯ್ದು$_2$) + ಭೂತ]

**ಐದುವೆಟ್ಟು** (ನಾ). (?).

ಐದುವೆಟ್ಟಿನಪದತಳ = ಕತ್ತಿವರಿಸೆಯಲ್ಲಿ ಒಂದು ಪಟ್ಟು: ನಾಲ್ಕು ವೆಟ್ಟುಗಳ ಕಡೆಯಲ್ಲಿ ಕೆಳಗಡೆಯಲ್ಲಿ ಹೊರಗೆ ಒಂದು ಏಟು ಅವುದು ಮಾಡಲ್ಪಡುವದೂ ಅದು ಐದುವೆಟ್ಟಿನಪದತಳ ನುಡಿಯಲ್ಪಡುವದು (ಖಡ್ಗಟೀ. ೫-೪೧). [ಐದು$_2$ (< ಅಯ್ದು$_2$) + ವೆಟ್ಟು]

**ಐದೈ₁** 'ಎಯ್ದೈ₁' ನೋ.
**ಐದೈ₂** 'ಅಯ್ದೈ₂' ನೋ.
**ಐದೆತನ** 'ಅಯ್ದೆತನ' ನೋ.
**ಐದೆದಾಳಿ** 'ಅಯ್ದೆದಾಳಿ' ನೋ.
**ಐದೆವರ್** 'ಎಯ್ದು' ಪರಾ.
**ಐದೆವಸ** 'ಅಯ್ದೆವಸ' ನೋ.
**ಐನ್**, ಅಯಿನ, ಅಯಿನು, ಐನ, ಐನು (ನಾ). ೧. ಮುಖ್ಯ; ಪ್ರಧಾನ; ಆಯಕಟ್ಟು. ೨. ಸರಿ; ಶುದ್ಧ; ಪಕ್ಕಾ; ಆಯತ: ಭಗವಂತನೂ ಕಪ್ಪು. ಆದರೆ ದೇವರ ಕಪ್ಪು ಶ್ಯಾಮವರ್ಣ. ದೊಡ್ಡವರ ಕಪ್ಪು ಎಣ್ಣೆಗೆಂಪು. ಬೆಸ್ತರ ಕರಿಯನದು ಐನ್ ಟಾರು (ಬೆಸ್ತಕ. ೬); ಐನ್ ಘಾಟಿಗಳೂ ರಾಯರೇ ಐನ್ ಘಾಟಿಗಳೂ! (ಕ೦ಕಕೂ. ೪೨). **ಅಯಿನ**: ಅಯಿನಮಟ್ಟಿಗೆ ಪೆಟ್ಟು (ಜಾನಕೋ. ೧೩). **ಅಯಿನು**: ೧. (ಕ). **ಐನ**: ೨. "... ಫೋಟೋಕೆಗೆಯಲಿಕ್ಕೆ ರಂಗಪ್ಪನಿಗೆ ನಾಲ್ಕುದಿನಗಳ ಮೊದಲೇ ಹೇಳಿಟ್ಟಿದ್ದನಂತೆ. ಆದರೆ ಐನ ಹೊತ್ತಿಗೆ ಎಲ್ಲಿ ಮರತೇಹೋದಾನೋ..." (ಮೂರುದಾ. ೬೬). **ಐನು**: ೧. ನನಗೆ ಐನು ಬೇಕಾದ್ದು ಚಪ್ಪರ (ಮರಮ. ೬೯); ಐನು ಜನವೆಲ್ಲಾ ನನ್ನ ಗಾಡಿಯಲ್ಲಿ ಕುಳಿತುಕೊಳ್ಳಿರಿ (ಔದಾಉ. ೭).
[← ಮರಾ. ಐನ್; ಹಿಂ. ಐನ್ = ಸರಿಯಾದ]
**ಐನ್‌ಜಮಾ**, ಐನುಜಮಾ, ಐನುಜಮೆ (ನಾ). ಪ್ರಧಾನವಾಗಿ ಸೇರಿದ್ದು, —ವಸೂಲಾದದ್ದು (ಕೈಸ್‌ಗೆ. ೫೪೧). **ಐನುಜಮಾ**: (ಮೈಗೆಜೆ. IV, ೭೬೧). **ಐನುಜಮೆ**: ಜಮಾಬಂದಿ ಪ್ರಕಾರ ಐನುಜಮ್ಮೆ ಶಿವಾಯಿಜಮೆಯೂ ಗುದಸ್ತಾಬಾಕಿ ಸುದಾ ದಾಖಲುಮಾಡಿ ಏಕಂದರ ಜಮೆಗೆ ಯಿರಸಾಲು ಫರಮಾಯಿಷಿ ವಗೈರೆ (ಮಹಾವಂ. II, ೬೪).
[ಐನ್ + ಜಮಾ]
**ಐನ್‌ಷೆ**, ಐನಶಿ (ನಾ). ಒಂದು ಬಗೆಯ ಗಿಡ: ಹಳದಿಪಾವಟಿ, ಐನ್‌ಷೆ, ಮೆಡ್ಡಿ (ಮೈಔಗಿ. ೫೫–೧೧೯೬). **ಐನಶಿ**: ಅಕ್ಕ (ಐನಶಿ)– ಮಧ್ಯಮ ಅಕಾರದ್ದು; ಕಟ್ಟಿಗೆ ಮಿಂಚುಳ್ಳ ಹಳದಿ; ಆದರಿಂದ ಹರಿವಾಣಗಳನ್ನು ಮಾಡುವರು (ಕಛಾಗಿ. ೩೫). [?]
**ಐನ** 'ಐನ್' ನೋ.
**ಐನವೇಳೆ** (ನಾ). ಸರಿಯಾದ ಸಮಯ; ಆಯತ ಹೊತ್ತು: ಎಂಥಾ ಐನವೇಳೆಯಲ್ಲಿ ಅಗಲಿದರು (ಸಮುಜೀ. ೧೨೬೬). [ಐನ (< ಐನ್) + ವೇಳೆ]
**ಐನಶಿ** 'ಐನ್‌ಷೆ' ನೋ.
**ಐನಹರೆ** (ನಾ). ತುಂಬು ಪ್ರಾಯ, —ಯೌವನ: ನನಗಿನ್ನೂ ಐನಹರೆ ಆಗ (ಅಮನಿ. ೪). [ಐನ (< ಐನ್) + ಹರೆ (< ಹರೆಯ)]
**ಐನಾ** (ನಾ). ೧. ಕನ್ನಡಿ. ೨. ಕನ್ನಡಕ.
[← ಪಾರ. ಐನಾ, ಅಈನಾ; ಹಿಂ. ಐನಕ್, ಅಇನಾ, ಆಈನಾ; ಮರಾ. ಐನಾ]
**ಐನಾತಿ**, ಅಯಿನಾತಿ (ಗು). ಮುಖ್ಯವಾದ; ಪ್ರಧಾನವಾದ: "ಎಲ್ಲಾ ಹಾಕಿ ಐನಾತಿ ಪಾತ್ರವನ್ನೇ ಬಿಟ್ಟಿದ್ದೀರಲ್ಲಾ ಸ್ವಾಮಿ" (ಕನಿಸಂ. ೧೨); "... ತಾಮ್ರದ ನಾಣ್ಯಗಳನ್ನೂ ಒಂದು ಐನಾತಿ ಮೂಲಿಕೆಯನ್ನೂ ಇಡುತ್ತೇನೆ..." (ಸ್ವಾಮಿಸ್ನೇ. ೭೮). **ಅಯಿನಾತಿ**: (ಕ).
[← ಪಾರ. ಮರಾ. ಐನಾತೀ]
**ಐನೀರು** (ನಾ). ಮುಟ್ಟಾದವಳು ಐದನೆಯ ದಿನ ಎರೆದುಕೊಳ್ಳುವ ನೀರು, —ಮಾಡುವ ಸ್ನಾನ: ಪುಷ್ಪವತಿಯಾಗಿ ಐನೀರಿನ ಸ್ನಾನ ಮಾಡಿದಳು (ಸಂಸ್ಕಾರ. ೧೩೨).
[< ಐದು₂ (< ಅಯ್ದು₂) + ನೀರು (< ನೀರ್₁)]
**ಐನು** 'ಐನ್' ನೋ.
**ಐನುಜಮಾ** 'ಐನ್‌ಜಮಾ' ನೋ.
**ಐನುಜಮೆ** 'ಐನ್‌ಜಮಾ' ನೋ.
**ಐನುತಾಳಿ** (ನಾ). "ಸುಮಂಗಲೆಯ ತಾಳಿ — ಕೊರಳ ಆಭರಣ" (ಕಸೂತ್ರಕೋ. ೧೩೮). [< ಅಯ್ದೆದಾಳಿ]
**ಐನುಹೊತ್ತು** (ನಾ). ಯೋಗ್ಯ ಸಮಯ; ತಕ್ಕಸಮಯ; ಸರಿಯಾದ ವೇಳೆ: ಮಳೆಯು ಐನುಹೊತ್ತಿನಲ್ಲಿ ಬೀಳದೆ ಇದ್ದುದರಿಂದ ಅಲ್ಲಿಯ ಒಕ್ಕಲಿಗರು ತಮ್ಮ ಬೆಳೆಗಳು ಒಣಗುವವೆಂದು (ರಾಪಹಂ. ೪೮).
[ಐನು (< ಐನ್) + ಹೊತ್ತು₂ (< ಪೊೞ್ತು)]
**ಐನೂರು** 'ಅಯ್ನೂಱು' ನೋ.
**ಐನೂರ್ವರ್** 'ಅಯ್ನೂಱು' ಪರಾ.
**ಐನೂರ್ವಾರ್ಚಾರಿ** 'ಅಯ್ನೂರ್ವಾರ್ಚಾರಿ' ನೋ.
**ಐನೂಱು** 'ಅಯ್ನೂಱು' ನೋ.
**ಐಪತ್ತು** (ನಾ). ಸಾಂಪತ್ತಿಕ ಸುಸ್ಥಿತಿ: ಧೊಂಡೋಪಂತನ ಮನೆತನವು ತಕ್ಕಷ್ಟು ಪ್ರಸಿದ್ಧವಾದದ್ದಿತ್ತು ಮತ್ತು ಅವನಲ್ಲಿ ಐಪತ್ತಾದರೂ ನೆಟ್ಟಗಿತ್ತು (ಉತ್ತಗ್ರ. ೮೦). [← ಮರಾ. ಐಪತ್ < ಅರ. ಅಫಿಯತ್]
**ಐಪು** (ನಾ). ಲೋಪ; ದೋಷ: ಐಪಡಗಿದಷ್ಟಾಂಗಯೋಗ ಶಿವಕಳ್ಜದಿಂ ಮೈಪಳೆದ ಪೂಗೋಲಮಥನ ಪ್ರಸಂಗದಿಂ (ಲಿಂಗಪು. ೩–೧೬).
[?. / ತೆಲು. ಐಪು]
**ಐಬಿರುದು** (ನಾ). ಐದು ಬಿರುದು: ಐಬಿರುದರಾಯರಾಹುತ ವೇಶ್ಯಕ ಭುಜಂಗ ಬಿರುದಭರಿತಸ್ಯ (ಎಕ. XII, ತುಮಕೂ. ೧–೧೦೦; 1571).
[ಐ₂ –(< ಅಯ್ –) + ಬಿರುದು]
**ಐಬು**, ಅಯಿಬು (ನಾ). ೧. ಕುಂದು; ಕೊರತೆ; ಲೋಪ; ದೋಷ: ಪುರೋಚನನು ಕಂಡಾನೆಂದು ಆದರೆ ಬಾಯಿಯನ್ನು ಐಬುಕಾಣದಂತೆ ಮುಚ್ಚಿದನು (ವಚಭಾ. ೩೩); ಇದರಲ್ಲಿ ಏನೋ ಐಬು ಇರಬೇಕು (ಚೆಂಗೂಲಿ. ೧೦೭). ೨. ಗುರುತು; ಪತ್ತೆ: ಭಾಷಣಕಾರರು ವಿಷಯದ ಐಬು ಹತ್ತಗೊಡದೆ ಮೂರುತಾಸು ಭೀಕರವಾದ ಭಾಷಣದ ಮಳೆ ಸುರಿಸಿದರು (ಕಿಂಪುತ. ೩೩). **ಅಯಿಬು**: ೨. ದಣಿಗಳ ರಸ್ತಿನ ಹಣ ಕದು ಕೊಂಡುಹೋಗಿ ತಂನ ಶೂಳಿಗೆ ವಡಿವೆ ವಸ್ತ ಮಾಡಿ ಕೊಟ ಅಯಿಬು ಸಿಕಲಾಗಿ (ಎಕ. XI, ಮೊಳಕಾ. ೨೫–೧೦೫; 1665).
[← ಮರಾ. ಐಬ್; ಅರ. ಅಯಬ್, ಅಇಬ್]
**ಐಬೆರಳು** 'ಅಯ್ಬೆರಳು' ನೋ.
**ಐಭೋಗ** (ನಾ). ವೈಭವ: ಮೂಡಲ್ ಮುತ್ತಿನ ಕೆರೆ ನೋಡೋರಿಗೊಂದೈಭೋಗ ಮೂಡಿ ಬರ್‍ತಾನೆ ಚಂದ್ರಾಮ (ಹಳ್ಳಿಯ. ೪೭); ಕನ್ನಂ ಬಾಡಿಯೊಳಗೆ ಏನೇನು ಐಭೋಗ (ಹಳ್ಳಿಯ. ೩೩). 'ವೈಭೋಗ' ಪರಾ. [< ಸಂ. ವೈಭವ]
**ಐಮುಡಿ** 'ಅಯ್ಮುಡಿ' ನೋ.
**ಐಮಣಿಗ** 'ಅಯ್ಮಣ್ಣಿಗ' ನೋ.
**ಐಮಣ್ಣಿಗ** 'ಅಯ್ಮಣ್ಣಿಗ' ನೋ.
**ಐಮಾನ** 'ಅಯ್ಮಾನ' ನೋ.
**ಐಮುಖ** (ನಾ). ಐದು ಮುಖ; ಪಂಚವಕ್ತ್ರ: ಪಂಚೇಂದ್ರಿಯಂಗಳೆಂಬ ಐಮುಖವಪ್ಪ ಪುಲಿಗೆಜೆಯಲ್ಲಿ ನೆಲಸಿ ಪುಲಿಗೆಜೆಯರಸನಾದ (ಆದವ. ೨). [ಐ₂ – (< ಅಯ್ –) + ಮುಖ]
**ಐಮುಸುಡ** 'ಅಯ್ಮುಸುಡ' ನೋ.
**ಐಮೂಲೆ** 'ಅಯ್ಮೂಲೆ' ನೋ.
**ಐಮೊಗ** 'ಅಯ್ಮೊಗ' ನೋ.

**ಐಯ** 'ಅಯ್ಯ$_1$' ನೋ.
**ಐಯಂಗಾರ್** 'ಅಯ್ಯಂಗಾರ್' ನೋ.
**ಐಯಂಬ** 'ಅಯ್ಯಂಬ' ನೋ.
**ಐಯವೊಳೆ** 'ಅಯ್ಯಾವೊಳೆ' ನೋ.
**ಐಯ್ಯ** 'ಅಯ್ಯ$_1$' ನೋ.
**ಐರಗಡಗ** 'ಅಯ್ರಗಡಗ' ನೋ.
**ಐರಣಿ** 'ಅಯ್ರಣಿ' ನೋ.
**ಐರಣೆ** 'ಅಯ್ರಣೆ' ನೋ.
**ಐರದಾಲಿ** 'ಅಯ್ರದಾಳಿ' ನೋ.
**ಐರದಾಳಿ** 'ಅಯ್ರದಾಳಿ' ನೋ.
**ಐರನ್ನ** 'ಅಯ್ರನ್ನ' ನೋ.
**ಐರಾಣಿ** 'ಅಯ್ರಣಿ' ನೋ.
**ಐರಾಣಿಗಡಿಗೆ** (ನಾ). (ಸೌಭಾಗ್ಯ ಸೂಚಕವಾಗಿ) ಮದುವೆಯಲ್ಲಿ ಚಿತ್ರ ಬರೆದಿಡುವ ಗಡಿಗೆ: ಸುಮಂಗಲಿಯರು ಐರಾಣಿಗಡಿಗೆಯಲ್ಲಿ ನೀರನ್ನು ತರುತ್ತಾರೆ (ರೂಢಿ). [ಐರಾಣಿ (< ಅಯ್ರಣಿ) + ಗಡಿಗೆ]
**ಐರಾಣಿಹಾಡು** 'ಅಯ್ರಾಣಿಹಾಡು' ನೋ.
**ಐರಾಲ** (ನಾ). (?): ಹರ[ವ]ಜೆಯೆಂಟು ಮೂಡೆಲದಕೆ ಬಂದ ಮನೆ ನೆಲ ಐರಾಲ ಅಂಗೋಡು ಸಹಿತ (ಕಇ. III–i, ೬–೧೨; 1348). [?]
**ಐರಾವಣ** (ನಾ). ೧. ಇಂದ್ರನ ಆನೆ; ಪೂರ್ವದಿಕ್ಕಿನ ಆನೆ: ಐರಾವಣಾರೂಢ ಶಚೀಸಮೇತನುಂ (ಪುಷ್ಪವ. ೧೦–೫ ವ); ಐರಾವಣಕುಲಸಂಭವವಾರಣಘಟೆ ನೆರೆದು ಪತ್ತಿ ಶೀಕರಜಲಮಂ ಧಾರಿಣಿಗೆ ಸೂಸಿದಪುವೆನೆ ಶಾರದ ಘನಘಟೆಯಿನೆಜಗಿದುವು ಬೆಳ್ಸರಿಗಳ್ (ಜಗವಿ. ೪–೬೭). ೨. ಒಬ್ಬ ರಾಕ್ಷಸನ ಹೆಸರು: ಅಲ್ಲಿ ಗರಸಾಗಿಹನಸುರರಿಗೆ ಬಲ್ಲಿದನು ಐರಾವಣನು (ಕೌಶಿರಾ. ೩೯–೧೧). ೩. ನಾಗಕುಲದ ಮುಖ್ಯಸ್ಥರಲ್ಲಿ ಒಬ್ಬ. [ಸಂ.]
**ಐರಾವತ** (ನಾ). ೧. ಇಂದ್ರನ ಆನೆ; ಪೂರ್ವದಿಕ್ಕಿನ ಆನೆ: "ಐರಾವತಃ, ಅಭ್ರಮಾತಂಗಃ (ಸಚಉಚ್ಯತೇ), ಐರಾವಣಃ–ಈ ಮೂಱು ಇಂದ್ರನ ಆನೆ" (ಹಲಾಯು. ೧೧–೬೧); ನೆಗಟ್ದಿಂ ದೇವೇಂದ್ರನೈರಾವತದ ಕೆಳೆಯಂ (ಪಂಪಭಾ. ೧೧–೬೯). ೨. [ಜೈನ] ಏಳು ಜನಪದಗಳಲ್ಲಿ ಒಂದು: ಭರತ ಹೈಮವತ ಹರಿವರ್ಷ ವಿದೇಹ ರಮ್ಯಕ ಹೈರಣ್ಯವತ್ತೈರಾವತಗಂಳೆಂಬೇೞುಂ ಜನಪದಂಗಳಿಂ (ಆದಿಪು. ೧–೪೮ ವ). [ಸಂ.]
**ಐರಾವತಿ** (ನಾ). ೧. ಐರಾವತ ಎಂಬ ಆನೆಯ ಹೆಂಡತಿ. ೨. ಮಿಂಚು: "ಶಂಪಾ . . . ಕ್ಷಣರುಚಿ, ಐರಾವತೀ (ಚ ವಿಜ್ಞೀಯಾ) – ಈ ೧೧ ಮಿಂಚು" (ಹಲಾಯು. ೧೧–೬೦); "ವಿದ್ಯುದೈರಾವತಿ. . . ಮಿಂಚೆನಿಕ್ಕುಂ" (ಮಂಗರಾ. ೧೩–೪). ೩. ಕಿತ್ತಳೆಯ ಮರ. [ಸಂ. ಐರಾವತೀ]
**ಐರಾವತೀಶ** (ನಾ). ಮೇಘ; ಮೋಡ: "ಜೀವನವಾಹಮೈರಾವತೀಶ . . . ಮೇಘಕ್ಕೆ ನಾಮಂ" (ಮಂಗರಾ. ೧೩–೩). [ಐರಾವತಿ + ಈಶ]
**ಐರಿ** 'ಅಯ್ರಿ' ನೋ.
**ಐರೆದಾಲಿ** 'ಅಯ್ರದಾಳಿ' ನೋ.
**ಐರೆದಾಳಿ** 'ಅಯ್ರದಾಳಿ' ನೋ.
**ಐಲಕ** (ನಾ). [ಜೈನ] ಸಂನ್ಯಾಸಿಗಳಲ್ಲಿ ಒಂದು ಬಗೆ: ಮುನಿಗಳು . . . ಕ್ಷುಲ್ಲಕರೂ, ಐಲಕರೂ ಎನಿಸುತ್ತಾರೆ (ರತ್ನಕ. ೨೫೨). [ಸಂ.]
**ಐಲಕಸ್ಥಿತಿ** (ನಾ). [ಜೈನ] ಸಂನ್ಯಾಸಿಯು ಕ್ಷುಲ್ಲಕಸ್ಥಿತಿಯನ್ನು ದಾಟಿದ ಮೇಲೆ ಬರುವ ಅವಸ್ಥೆ: ಸಂಯಮವು ಸಾಗಿದಂತೆಲ್ಲಾ ಈತನ ತಪಸ್ಸಿನ ಪರಿಣಾಮದಂತೆ ಐಲಕಸ್ಥಿತಿಗೆ ಬರುತ್ತಾನೆ– ಅಂದರೆ ಈ ಅವಸ್ಥೆಯಲ್ಲಿ ಈ ಸಾಧುವು ಕೌಪೀನವನ್ನು ಮಾತ್ರ ಧರಿಸಿರುತ್ತಾನೆ (ಭಾರದ. ೧೮೫). [ಐಲಕ + ಸ್ಥಿತಿ]

**ಐಲಪೈಲ**, ಐಲುಪೈಲು (ನಾ). ೧. ಸಾಮಾನ್ಯವಾದದ್ದು; ನಾಡಾಡಿ; ಅಲ್ಪ: ಶಯ್ಲುಹತಿಗಳ ಭಾರಣೆಯ ಬಿಜುವೊಯ್ಲು ಬೆಳೆ ಸಿರಿವಂತರಿವರೆನಲೈಲ [ಪಾಠಾಂ. ಲಯ್ಲು] ಪೈಲದ ಜರಡುಗಳೆ ನರನಾಥ ಕೇಳೆಂದ (ಕುವ್ಯಾಅ. ಓರಿಇ. ೭–೩೩); ಕೈಲುಳಿಯ ಕಣೆಗಳಲಿ ಕೋದನಲ್ಲೈ ಲಘು ಪ್ರಕರಪ್ರಯೋಗದಲ್ಲೈಲಪೈಲದ ವೀರನೇ ವಿಬುಧೇಂದ್ರಜಿತುವೆಂದ (ತೊರರಾ. ೫–೬–೨೩). **ಐಲುಪೈಲು**: ೨. ಹುಚ್ಚು; ಮರುಳು: ನೀವು ಹೀಗೆ ಐಲುಪೈಲಾಗಿ ನಡಕೊಂಡ್ರೆ ನಾನು ಸತ್ತೋಗ್ತೀನೆ (ಹೊಸಕ್ಷಿ. ೯೬). [ಐಲ$_1$+ ಪೈಲ. / **ಮರಾ.** ಐಲ್‌ಪೈಲ್ = ಕ್ಷುಲ್ಲಕವಾದ (ವಸ್ತು, ಕೆಲಸ, ಶಬ್ದ, ಮನುಷ್ಯ ಇತ್ಯಾದಿ)]
**ಐಲಬಿಲ**, ಐಳಬಿಳ (ನಾ). ಕುಬೇರ: ಅಳಕಾನಗರದಂತಗಣ್ಯಪುಣ್ಯಜನ ಮಿಳಿತಮುಂ ಧನಸನಾಥ್ಯೈಲಬಿಲೋಪಯುಕ್ತಮುಂ (ರಾಜಶೇ. ೨–೨೮ ವ). **ಐಳಬಿಳ**: "ಕಪರ್ದಿಸಖನೈಳಬಿಳಂ ಧನದಂ ಕುಬೇರಂ" (ವಸ್ತುಕೋ. ೮–೪೬); "ಐಳಬಿಳನರ್ಥಪಂ . . . ಕುಬೇರನೆನಿಸಿಕ್ಕು" (ಮಂಗರಾ. ೧೬–೧೫). [< ಸಂ. ಐಲವಿಲ]
**ಐಲಬಿಲಸೋದರ** (ನಾ). ಕುಬೇರನ ತಮ್ಮ; ರಾವಣ: ಅಱುಗ ವಿಹಂಗಮವ ತುಂಡರಿಸಲೆಂದೈಲಬಿಲಸೋದರಂ ಕರೆದ ವಿಶಿಖಗಳನಿತುಮಂ ಲೆಕ್ಕಿಸದೆ (ಶ್ರೀರಾಪಾ. ೮೦೨–೫೩). [ಐಲಬಿಲ + ಸೋದರ]
**ಐಲವಿಲ** (ನಾ). = ಐಲಬಿಲ (ಃ). [ಸಂ.]
**ಐಲಾಂದ್ರ** (ನಾ). ಐದು ದೀಪಗಳು: ಐಲಾಂದ್ರಕಂಬದಿಂದ ಮನುವನ ಪಾರ್ಕಿನವರೆಗೆ ಓಡಾಟ ಬಹಳ ಕಡಿಮೆಯಾಗಿರುತ್ತಿತ್ತು (ಕಂಕಣ. ೧೧೭). [ಐ$_2$– (< ಅಯ್–) + ಲಾಂದ್ರ]
**ಐಲು** (ನಾ). ಹುಚ್ಚು; ಮರುಳುತನ: ಎಲಾ ಐಲುಮುದುಕ, ಒಂದೊಂದು ಹಿಡಿ ಮರಳನ್ನು ಹಾಕಿದರೆ ಗಂಗಾನದಿ ಮುಚ್ಚಿಹೋಗುವುದುಂಟೆ (ನೀತಿಚಿಂ. XII, ೧೭). [?. / ತೆಲು. ಅಯಿಲು]
**ಐಲುಗಾರ** (ನಾ). ಐಲು ಇರುವವನು; ಬುದ್ಧಿನೆಟ್ಟಗಿಲ್ಲದವನು; ಹುಚ್ಚ: ನಾನು ಅವನನ್ನು ಐಲುಗಾರನೆಂದೇ ತಿಳಿದಿದ್ದೆನು (ರಾವಿಜ. ೩೦). [ಐಲು + –ಗಾರ (< –ಕಾಱ)]
**ಐಲುಪೈಲು** 'ಐಲಪೈಲ' ನೋ.
**ಐಲುಮೀನು** (ನಾ). ಒಂದು ಬಗೆಯ ಮೀನು: "... ಒಳ್ಳೇ ಮೀನು ತಂದಿದ್ದೇನೆ, ಐಲುಮೀನು . . . ಒಳ್ಳೆ ವ್ಯಾಪಾರಮಾಡಿ ಸಾಬ್ರ್ಯೇ..." (ಚಿಗುಬ. ೮೫). [ಐಲು? + ಮೀನ್ನು (< ಮೀನ್$_2$)]
**ಐಲೇಯ**, ಐಳೇಯ (ನಾ). ೧. ಸುರಸುರಕಿ ಗಿಡ; ಕರಿ ಏಲಕ್ಕಿ: "ಏಲಾವಾಲುಕಂ [ಪಾಠಾಂ. ಏಳುವಾಲುಕಂ], ಐಲೇಯಂ, ಸುಗಂಧೀ, ಹರಿವಾಲುಕಂ, ವಾಲುಕಂ — ೫ ಸುರಸುರಕೀ ಹೆಸರು. ಕರಿಯಾಲಕ್ಕೀ ಹೆಸರೆಂತಲೂ ಅನ್ನುವರು" (ಸಿದ್ಧಾಂತಿ. ೧೨೨). ೨. "ಸವತೀಕಾಯಿ" (ಗಂಗಾಮು. ೫೫). **ಐಳೇಯ**: ೧. "ಏಳಾವಾಳುಕ ಸಂಜ್ಞಿಕಮೈಳೇಯಂ ಭದ್ರಮುಸ್ತೆ ಗುಂದ್ರಾವಚನಂ ಬಾಳಮುಶೀರಂ ವಾರಿ ಮೃಣಾಳಮುದೀಚ್ಯಾಭಿಧಾನಕಂ ಹ್ರೀವೇರಂ" (ವಸ್ತುಕೋ. ೩೭–೨೪). [ಸಂ.]
**ಐಲೇಯಕ** (ನಾ). ಏಲಕ್ಕಿ. 'ಐಲೇಯಕಚೂರ್ಣ', 'ಐಲೇಯಕಲೇಹ್ಯ' ಪರಾ. [ಸಂ.]
**ಐಲೇಯಕಚೂರ್ಣ** (ನಾ). ಏಲಕ್ಕಿಯ ಚೂರ್ಣ: ಐಲೇಯಕಚೂರ್ಣ . . . ಸೇವಿಸುವುದರಿಂದ ತಲೆತಿರುಗು ಮೂತ್ರಕೃಚ್ಛ್ರ . . . ಗುಣವಾಗಿ ಧಾತುವೃದ್ಧಿಯಾಗುವುದು (ಸಕವೈ. ೪೧೭ ಪರಿ). [ಐಲೇಯಕ+ ಚೂರ್ಣ$_1$]
**ಐಲೇಯಕಲೇಹ್ಯ** (ನಾ). ಏಲಕ್ಕಿಯ ಲೇಹ್ಯ: ಐಲೇಯಕಲೇಹ್ಯ– . . . ಕರ್ಷಮಾತ್ರ ಸೇವಿಸಲು ಪಿತ್ತೋನ್ಮಾದ, ತಲೆತಿರುಗು . . . ಇವೆಲ್ಲಾ ಗುಣವಾಗುವುವು (ಸಕವೈ. ೪೧೧ ಪರಿ). [ಐಲೇಯಕ + ಲೇಹ್ಯ]

**ಐವಗಲ್** 'ಅಯ್ವಗಲ್' ನೋ.

**ಐವಗೆ** (ನಾ). ಐದು ಬಗೆ, —ರೀತಿ : ಯೋಗಂಗಳು ಜಗತ್ತಿನೊಳಗಣಿತ ಗಳುಂಟವರೊಳೈವಗೆಯ ಯೋಗಂಗಳೆ ಪ್ರಚಾರವು (ಗಗತಾ. ೧೦–೧೮). [ಐ₂ –(< ಅಯ್–) + ಬಗೆ₃]

**ಐವಜಿ** (ನಾ). ಪ್ರತಿ ; ಬದಲು (ಕ). [← ಮರಾ. ಐವಜೀ]

**ಐವಜು, ಅಯಿವಜು, ಐವೆಜು, ಐವೇಜು** (ನಾ). ೧. ಉತ್ಪನ್ನ ; ಬೆಳೆ : ಸದರ್ರಿ ಜಮೀನಿನಲ್ಲಿ ಉತ್ಪತ್ತಿಯಾದ ಯೈವಜು ಪೈಕಿ (ಮೈಅರಿ. ೧೯೪೨, ೩೯–೨೬ ; 1813). ೨. ಹಣ ; ಕಿಮ್ಮತ್ತು : ರುಜು ಆದ ಐವಜು ಬೇಬಾಕಿಯಾಗಿ ವಸೂಲುಮಾಡಿಕೊಳ್ಳಬೇಕು (ಮಹಾವಂ. II, ೫೯). **ಅಯಿವಜು** : ೨. ಸಂಗಡಲೇ ಹುಂಡಿ ಅಯಿವಜನ್ನೂ ಬರಮಾಡಿ ಕೊಂಡು (ಕಥಾಮಂ. ೭೩). **ಐವೆಜು** : ೧. ಅದೆಲ್ಲಾ ಐವೆಜು ನಮಗೆ ಉಸೂಲಿ ಬರಬೇಕು (ಜಾರುದಾ. ೧೫೫). **ಐವೇಜು** : ೨. ಸಾಲಗಾರರು ಬಡ್ಡಿ ಐವೇಜನ್ನೂ ತೆಗೆದುಕೊಂಡುಹೋಗಿ ಕೊಟ್ಟರೆ, ರಶೀದಿ ಕೊಡಲು ಅವರಿಗೆ ಸಮಯವೇ ಇರುತ್ತಿರಲಿಲ್ಲವೇನೋ (ಪಂಚಥ. ೪೯). [← ಪಾರ. ಇವಝ್; ಮರಾ. ಐವಜ್. / ತುಳು. ಐವಜಿ, ಐವೆಜಿ]

**ಐವಜುದಾರ** (ನಾ). "ಸಂಪತ್ತುಳ್ಳವ, ಸಿರಿವಂತ" (ಕಸೂ.ಕೋ. ೧೩೯). [ಐವಜು + –ದಾರ್₂]

**ಐವಡಿ** 'ಅಯ್ವಡಿ' ನೋ.

**ಐವಡಿಗಣೆಯ** 'ಅಯ್ವಡಿಗಣೆಯ' ನೋ.

**ಐವಡಿಸು** 'ಅಯ್ವಡಿಸು' ನೋ.

**ಐವಣ್ಣ** 'ಅಯ್ವಣ್ಣ' ನೋ.

**ಐವತ್ತಿಬ್ಬರು** 'ಅಯ್ವತ್ತು' ಪರಾ.

**ಐವತ್ತು** 'ಅಯ್ವತ್ತು' ನೋ.

**ಐವದಿಂಬರ್** 'ಅಯ್ವತ್ತು' ಪರಾ.

**ಐವಾಗಿಲು** 'ಅಯ್ವಾಗಿಲು' ನೋ.

**ಐವಾಯ್** 'ಅಯ್ವಾಯ್' ನೋ.

**ಐವಾಯ** 'ಅಯ್ವಾಯ' ನೋ.

**ಐವಾಯಹುಲಿ** 'ಅಯ್ವಾಯ್ಪುಲಿ' ನೋ.

**ಐವಾಯ್ಪುಲಿ** 'ಅಯ್ವಾಯ್ಪುಲಿ' ನೋ.

**ಐವೆಜು** 'ಐವಜು' ನೋ.

**ಐವೆಡೆ** 'ಅಯ್ವೆಡೆ' ನೋ.

**ಐವೆರಲ್** (ನಾ). ಐದು ಬೆರಳು : ಶರಣಂಬಡೆದೀ ಜಂತುವ ದುರಿತದ ಹೊಣೆಗೊಡವಿಸೆಜಿಕೆಯ ಕೈಯ್ಯೈವೆರಲಂ (ವಸ್ತುವಂ. ೧೧೭). [ಐ₂–(< ಅಯ್–) + ಬೆರಲ್]

**ಐವೇಜು** 'ಐವಜು' ನೋ.

**ಐಶಾನ** (ನಾ). [ಜೈನ] ಈಶಾನ ಕಲ್ಪ : ದೀರ್ಘವಾದ ಕಲ್ಪನಿಳಿಂಪರುಂ, ಆ ಐಶಾನಾತ್–ಈಶಾನಕಲ್ಪಂಬರಂ ಅಪ್ಪರ್ (ತತ್ತ್ವಪ್ರ. ೧೮೨). [ಸಂ.]

**ಐಶಾನಿ** (ನಾ). ೧. ಈಶಾನ್ಯಮೂಲೆ; ಶಿವನ ದಿಕ್ಕು. ೨. ದುರ್ಗೆಯ ಹೆಸರು. [ಸಂ. ಐಶಾನೀ]

**ಐಶ್ಯಭವ** (ನಾ). ೧. ಈಶನೆಂಬ ದಿಕ್ಪಾಲಕನ ಮಗ (?). ೨. ಈಶನ ಮಗ; ಪ್ರಭುವಿನ ಮಗ (?). ೧, ೨ : ವಿಭವೇಂದ್ರಂ ಖಳವಹ್ನಿ ದಂಡಧರನತ್ಯುದ್ವೃತ್ತ ದೈತ್ಯಾಧಿಪಂ ಶುಭರತ್ನಾಗರ ನಾಯಕಂ ನತಜಗ ತ್ರಾಣಂ ಬುಧ ಶ್ರೀದನೈಶ್ಯಭವಂ ತಾನೆನೆ ಲೋಕಪಾಳತೆಯನೇಕಾಯ ತ್ತಮಂ ಮಾಡಿ ನಿಂದಭಿರೂಪಂ ಸುತನಾದನಲ್ತೆ ನರಸಿಂಹ ಕ್ಷೋಣಿ ಪಾಳೋತ್ತಮಂ (ಎಕ. IV, ನಾಗಮಂ. ೭೦–೨೦ ; 1177). [< ಸಂ. ಐಶಭವ]

**ಐಶ್ವರಿ** 'ಐಸಿರಿ' ನೋ.

**ಐಶ್ವರಿಯ** 'ಐಸಿರಿ' ನೋ.

**ಐಶ್ವರ್ಯ** (ನಾ). ೧. ಪರಮಾಧಿಕಾರ : ಉಮಾಕಾಮಿನೀ ಜೀವಿತೇಶಂ ಪರಮೈಶ್ವರ್ಯಾಸ್ಪದಂ ರಕ್ಷಿಸುಗೆ ವಸುಧೆಯಂ (ಜಗವಿ. ೧–೩). ೨. ದೈವೀಶಕ್ತಿ. ೩. ಸಂಪತ್ತು ; ಭಾಗ್ಯ : ಪುತ್ರಕಳತ್ರ ಪರಿಗ್ರಹಗಾತ್ರ ಧನೈಶ್ವರ್ಯಮೆಂಬಿವಾರ್ಗಮನಿತ್ಯಂ (ಪುಷ್ಪವ. ೧೩–೨೭). ೪. ಬೆರಣಿಯ ಬೂದಿ ; ವಿಭೂತಿ (ಕ). [ಸಂ.]

**ಐಶ್ವರ್ಯಗೇಡಿ** (ನಾ). ೧. ಐಶ್ವರ್ಯವನ್ನು ಕಳೆದುಕೊಂಡವನು. ೨. ಐಶ್ವರ್ಯವನ್ನು ಹಾಳುಮಾಡುವವನು : ವಾಸವನೈಶ್ವರ್ಯ ಗೇಡಿ ಶಾಪಿಸಲಂಬರೀಷನ ಬಿಡದೆ ರಕ್ಷಿಸಿದ ಶ್ರೀಶನ ಪಾದಪದ್ಮವ ಕೂರ್ತು ಕೃತಿವೇಳು (ಮೋಹತ. ೩೭–೧). [ಐಶ್ವರ್ಯ + ಕೇಡು + –ಇ₃]

**ಐಶ್ವರ್ಯಮತ್ತ** (ನಾ). ಐಶ್ವರ್ಯದಿಂದ ಮದಿಸಿದವನು ; ಧನ ಮದದಿಂದ ಕೂಡಿದವನು : ಅತಿಶಯಮಾವರಿಸಿರ್ಕುಂ ಕ್ಷಿತಿಯೊಳ ಗೈಶ್ವರ್ಯಮತ್ತರೊಳಗೀ ದೋಷಂ (ಶಾಕುಂತ. ೬೭–೧೧೮). [ಐಶ್ವರ್ಯ + ಮತ್ತ]

**ಐಶ್ವರ್ಯಲೋಭ** (ನಾ). ಧನದ ಅತ್ಯಾಸೆ : ಅವಿವೇಕದಿಂದಲೂ ಐಶ್ವರ್ಯಲೋಭದಿಂದಲೂ ಅವನಿಗೆ ಪಾಪದಲ್ಲಿ ಬುದ್ಧಿಹೋಯಿತು (ವಚಭಾ. ೧೬). [ಐಶ್ವರ್ಯ + ಲೋಭ]

**ಐಶ್ವರ್ಯವಂತ** (ನಾ). ಐಶ್ವರ್ಯವುಳ್ಳವನು ; ಧನಿಕ : ಆರೋಗ್ಯ ವಂತನೇ ಐಶ್ವರ್ಯವಂತ (ರೂಢಿ). [ಐಶ್ವರ್ಯ + –ವಂತ]

**ಐಶ್ವರ್ಯವಂತೆ** (ನಾ). ಐಶ್ವರ್ಯವುಳ್ಳವಳು ; ಧನವಂತೆ (ಕ). [ಐಶ್ವರ್ಯವಂತ + –ಎ₂]

**ಐಶ್ವರ್ಯವಡೆ** (ಕ್ರಿ). ಐಶ್ವರ್ಯವನ್ನು ಹೊಂದು ; ಸಂಪತ್ತನ್ನು ಪಡೆ : ನುಡಿಗೆ ಗೋಚರಿಸದೆ ನಾನಾವಸ್ತುಗಳಿಡಿಗಿಜೀದೈಶ್ವರ್ಯವಡೆದ ಪಡಿಗಟ್ಟಬಾರದ ರತ್ನಂಗಳಡಸಿದಂಗಡಿಗಳೊಪ್ಪಿರ್ದುವಿಕ್ಕೆಲದಿ (ಮೋಹತ. ೨೦–೧೯). [ಐಶ್ವರ್ಯ + ಪಡೆ₁]

**ಐಶ್ವರ್ಯವತಿ** (ನಾ). = ಐಶ್ವರ್ಯವಂತೆ : ಒಬ್ಬ ಕನ್ಯೆಯು ಐಶ್ವರ್ಯ ವತಿಯಾಗಿರುವಳೆಂದೂ ಅವಳನ್ನು ಮದುವೆಯಾಗುವುದರಿಂದ ತಾನು ಧನಿಕನಾಗಬಹುದಾದ ಕಾರಣ ಅವಳನ್ನು ಕೈಹಿಡಿಯಬೇಕೆಂದೂ (ಕವಿಕ. ೨). [ಸಂ. ಐಶ್ವರ್ಯವತೀ]

**ಐಷಆರಾಮು** 'ಐಷಾರಾಮು' ನೋ.

**ಐಷಾರಾಮು, ಐಷಆರಾಮು** (ನಾ). ವಿಷಯಾಸಕ್ತಿ; ಭೋಗಲೋಲು ಪತೆ ; ಸುಖಜೀವನ : ಯುವಕರು ಸ್ವಾರ್ಥದ ಐಷಾರಾಮಿನ ಬೆನ್ನು ಹತ್ತಿದ್ದಾರೆ (ಅನ್ನ. ೭೫) ; ಐಹಿಕ ಜೀವನದ ಐಷಾರಾಮನ್ನು ದಾಟಿ ಅವರ ದೃಷ್ಟಿ ಮುಂದೆ ಹಾಯುವುದಿಲ್ಲ (ಸಮಜೀ. ೪೨ ಪೀಠಿಕೆ) ; ಅದು ತಮ್ಮದೇ ಮಾಡಿಕೊಂಡು ಐಷಾರಾಮುವಾಗಿ ಇದ್ದು ಬಿಟ್ಟಿದ್ದಾರೆ (ಬೀಟನಾ. ೪೫). **ಐಷಆರಾಮು** : ಅವನ ಆಳಿಕೆಯಲ್ಲಿ 'ಐಷಆರಾಮು'ದ ಜನರು ಹೆಚ್ಚಿದರು (ಹಿಂದುಇ. ೧೯೨) ; ನವಾಬನ ಹೆಂಡತಿಗೆ ಸಲ್ಲುವುದಕ್ಕಿಂತಲೂ ಹೆಚ್ಚು "ಐಷಆರಾಮು"ದ ಸಾಧನಗಳು ಆಕೆಯ ಸ್ವಾಧೀನದಲ್ಲಿದ್ದವು (ಪ್ರೇಮವಿ. ೮೭). [← ಅರ. ಮರಾ. ಐಶಾರಾಮ್, ಐಷ್‌ರಾಮ್, ಐಶ್‌ಆರಾಮ್]

**ಐಷೀಕ** (ನಾ). ಜೊಂಡಿನಿಂದಾದ ಅಸ್ತ್ರ : ದರ್ಭೆಯನ್ನೆಳೆದು ಐಷೀಕ ವನ್ನು ಅಭಿಮಂತ್ರಿಸುತ್ತಿರುವನು (ಅಗ್ರಹ. ೫೫). [ಸಂ.]

**ಐಷೀಕಾಸ್ತ್ರ** (ನಾ). = ಐಷೀಕ : ಆಹಾರದ ವಿಷಯದಲ್ಲಿ . . . ಉಪ ವಾಸವು ಅವರ ಐಷೀಕಾಸ್ತ್ರವಾಗಿತ್ತು (ಆರ್ಯಧ. ೨೧೭). [ಐಷೀಕ + ಅಸ್ತ್ರ]

**ಐಷ್ಟು** (ನಾ). ಆ ಪರಿಮಾಣ; ಆ ಅಳತೆ; ಅಷ್ಟು: ದುಷ್ಟಪಾವನಮೂರ್ತಿ ನಂಬಿಯೆಯ್ತರೆ ಕಾಣುತ್ತೈಷ್ಟಜಕೊಳಗಿದಿರೆದ್ದು (ಜೀರಮ. ೧೦–೨೪). 'ಅಷ್ಟು' ಪರಾ. [< ಅಷ್ಟು]

**ಐಸಂಬರ** 'ಅಯ್ಸಂಬರ' ನೋ.

**ಐಸರ** 'ಅಯ್ಸರ$_1$' ನೋ.

**ಐಸರಲ** 'ಅಯ್ಸರಲ' ನೋ.

**ಐಸರಳ** 'ಅಯ್ಸರಲ' ನೋ.

**ಐಸಲೆ**, ಐಸಲೇ (ಅ). ಅಷ್ಟೇ; ಅಲ್ಲವೇ: ಸಂದಣಿ ತವಕಿಸಲಿ ತಾವನಿ ಬರುಜಿ ಮಗುಳವಗಡಿಸಲಿ ವಿನೋದವೈಸಲೆಯೆನುತ ನರನೆಚ್ಚ (ಕುವ್ಯಾಭೀ. ೮–೫೦); ಹದಿಬದೆಯರ ಪೆಸರ್ಗೊಂಡು ಪೊಗಳ್ವುದು ವಿದಿತವೈಸಲೆ ವೈದಿಕರಿಗೆ (ಹದಿಬ. ೨–೧೫); ಪುತ್ಥಳಿ ನಸುನಕ್ಕು ಮುಖವಂ ನೋಡಿ– ಐಸಲೆ! ನಿಮ್ಮ ರಾಯರ ಉದಾರ ಇದೆ! ಎಂದು ಹಾಸ್ಯವಂ ಮಾಡಿ (ಬತ್ತೀಪು. ೧೨). **ಐಸಲೇ**: ಐಸಲೇ ತಪ್ಪೇನೆನುತ ತನಗೇಸು ಬಲವುಂಟೈಸಜಲಿ ಕಟ್ಟಾಸುರದಲೌಂಕಿದನು ಬಾಲವನು (ಕುವ್ಯಾಅ. ೧೦–೧೮); ಐಸಲೇ ಪಿತನಿತ್ತ ಸತ್ಯದ ಭಾಷೆ ಸಂದರೆ ಸಾಕು (ಕೌಶಿರಾ. ೩–೪೯); ಚಿತ್ತದ ಚಿಂತೆಯಿದು ತಾನೈಸಲೇ ನಿನಗಂತಕನ ಭಯವಿಲ್ಲ (ತೊರರಾ. ೧–೪–೧೧). [ಐಸು (< ಅಯ್ಸು) + ಅಲ್$_4$]

**ಐಸಲೇ** 'ಐಸಲೆ' ನೋ.

**ಐಸಾಯಿ** (ನಾ). ಕ್ರೈಸ್ತಧರ್ಮದವನು: ಮಗು ಸಹ ಹಲವೇ ದಿನಗಳಲ್ಲಿ ಸತ್ತಿತೆಂತಲೂ ಯಾರೋ ಐಸಾಯಿಗಳಿಗೆ ಮಲ್ಲಾರಿಭಟ್ಟರೇ ಕೊಟ್ಟುಬಿಟ್ಟರೆಂತಲೂ ನಾನಾ ರೀತಿಯಲ್ಲಿ ಜನರು ಆಡಿಕೊಳ್ಳುವ ವಾಡಿಕೆ (ದಾಕೂಟ. ೪೧). [← ಪಾರ. ಹಿಂ. ಈಸಾಈ]

**ಐಸಾವಿರ** 'ಅಯ್ಸಾಸಿರ' ನೋ.

**ಐಸಾಸಿರ** 'ಅಯ್ಸಾಸಿರ' ನೋ.

**ಐಸಿರಿ**, ಐಶ್ವರಿ, ಐಶ್ವರಿಯ, ಐಸಿರಿಯ (ನಾ). ಸಂಪತ್ತು; ಭಾಗ್ಯ: "ಐಶ್ವರ್ಯದೊಳಗೆಯ್ಸಿರಿಯಿರ್ಕು" (ಕಶರ. ೧೧೯); ಹರನ ಕಾಬರೆ ಭೋಗ ಭಾಗ್ಯ ಐಸಿರಿ ಎಂಬ ನೆರವಿ ಸಲ್ಲದು (ಹರಿಸಾಂ. ೩–೨೯); ಉನ್ನತಿವೆತ್ತೆಸೆವ ಬಿಜ್ಜೆಸಿರಿಯೈಸಿರಿಗಳ್ (ಅಪ್ರತಿ. ೧೩೯–೧೪); ನಂದನವನದ ಐಸಿರಿ ಒದವಿಸಿದ ಹಣದ ಒಡೆಯನಿಗೆ ಮನಸ್ಸಿನಲ್ಲಿಯೆ ಕೃತಜ್ಞತೆ ಸಲ್ಲಿಸಿದಳು (ಕೊಸೆಕಾ. ೪). **ಐಶ್ವರಿ**: ಈಯದನೈಶ್ವರಿ ಮಜಿ ಹೊಗೆ ಕಾಯದನ ಮಹತ್ವಂ (ನೀತಿಸಾ. ೧೮೯). **ಐಶ್ವರಿಯ**: ಐಸು ಬಲವೆನಿತ್ತೈಶ್ವರಿಯವಿದ್ದೇಸು ಭಟರೆನಿತಗ್ಗಳೆಯರಿದ್ದೇಸಜಲಿ ಫಲವೇನು ದೈವವಿಹೀನರಿವರೆಂದ (ಕುವ್ಯಾಗ. ೩–೪); ನರಸಿಂಹನೆಂಬ ನಾಲ್ಕಕ್ಷರವಾದನ ಸುರುಚಿರ ಜಿಹ್ವಾಗ್ರದೊಳಗೆ ಹರುಷದೆ ನೆಲಸಿರಲವನೈಶ್ವರಿಯಕ್ಕೆ ಸರಿಯುಂಟೆ ಮೂಲೋಕದಲಿ (ಕಂಸವಿ. ೨೨–೬೫). **ಐಸಿರಿಯ**: ನೆರೆದು ಶೋಭಿಸುವಷ್ಟಮಹದೈಸಿರಿಯ ಮೊದಲಾಗಿರ್ದ ನಾನಾಪರಿಯ ಸಂಪದ ಸಂದಣಿಸಿದುದು ಶಿವನ ಭವನದಲಿ (ಪ್ರಭುಲೀ. ೨–೮). [< ಸಂ. ಐಶ್ವರ್ಯ]

**ಐಸಿರಿಯ** 'ಐಸಿರಿ' ನೋ.

**ಐಸು** 'ಅಯ್ಸು' ನೋ.

**ಐಸುಫೈಸು** (ನಾ). ಪ್ರಶಸ್ತವಾದದ್ದು; ವಿಸ್ತಾರವಾದದ್ದು.
ಐಸುಫೈಸಾಗು = ಪ್ರಶಸ್ತವಾಗು: ಆ ಹೆಂಗಸು ಪರೆಬಿಟ್ಟ ಹಾವಿನಂತೆ ಐಸುಫೈಸಾಗಿ ಮೈಚಳಿಬಿಟ್ಟು ಕುಳಿತುಕೊಂಡಳು (ದೀಪನಿ, ೧೩೫); ನನ್ನನ್ನು ನೋಡಿ ತಾನೂ ಲೋಡಿಗೆ ಐಸುಫೈಸಾಗಿ ಕೂಡುತ್ತ (ದೀಪಹ. II, ೧೧). [← ಮರಾ. ಐಸ್‌ಪೈಸ್]

**ಐಸೆ** 'ಅಯ್ಸು' ಪರಾ.

**ಐಹಿಕ** (ಗು). ಇಹಲೋಕಕ್ಕೆ ಸಂಬಂಧಿಸಿದ; ಲೌಕಿಕವಾದ: ಬಚಿಕ್ಕೆಂದ್ರಮೈಹಿಕ ಪಾರತ್ರಿಕ ಭೋಗಮಂ ಕುಡುವಿನಂ (ಆದಿಪು. ೧೬–೮). (ನಾ). ೨. ಇಹಲೋಕ: ಭರತವಾಕ್ಯಮಿಾ ಐಹಿಕದ ನಾಟಕಕೆ ತಾನಾದೊಡಂ ಮೃತ್ಯು ತಾಂ ನಾಂದಿಯ್ಯೆಸಲೆ ಪೇಳ್ ಅಲೌಕಿಕಕೆ (ಶ್ರೀರಾಮಾ. ೧೧೯–೨೦೫). [ಸಂ.]

**ಐಹಿಕಸೌಖ್ಯ** (ನಾ). ಇಹಲೋಕಕ್ಕೆ ಸಂಬಂಧಿಸಿದ ಸುಖ; ಪ್ರಾಪಂಚಿಕ ಸುಖ: ದುರ್ಮತೋಕ್ತಿಯಪ್ಪೈಹಿಕ ಸೌಖ್ಯಮಂ ಬಿಸುಡು ಮಾಣ್ದಿರಲಾಗದೆ ಭವ್ಯಜೀವನೇ (ಜೀವಸಂ. ೨೮–೫೧). [ಐಹಿಕ + ಸೌಖ್ಯ]

**ಐಹೊಳೆ** 'ಅಯ್ಯಾವೊಳೆ' ನೋ.

**ಐಳಬಿಳ** 'ಐಲಬಿಲ' ನೋ.

**ಐಳೀಯ** 'ಐಲೀಯ' ನೋ.

**ಒ$_1$** (ನಾ). ಕನ್ನಡ ವರ್ಣಮಾಲೆಯ ಹದಿನಾಲ್ಕನೆಯ ವರ್ಣ; ಒಕಾರ: ಸವನಿಸಿದೆ ಏ ಒ ಓ ಎಂಬಿವು ಕನ್ನಡದೊಳ್ ಸ್ವಭಾವದಿಂದೊಳವು (ಶಮದ. ೮); ಅ, ಇ, ಉ, ಋ, ಎ, ಒ ಎಂಬುವಕ್ಕೆ ಹ್ರಸ್ವ ಸ್ವರಗಳೆಂದೂ . . . ಹೆಸರು (ಮಧ್ಯಮ. ೧೩).

**ಒ$_2$** (ಅ). ೧. ಒಂದು ಅನುಕರಣಾವ್ಯಯ: ಅನುಕರಣ ವಿಸಂಧಿಗೆ–ಕೆವಕ್ಕವ ಎಲೆ ಎಲೆ ಒಒ [ಪಾಠಾಂ. ಉಊ] (ಶಮದ. ಕ. ೬೧ ಪ್ರಯೋ). [?]

**ಒ$_3$, ಓ$_3$** (ಅ). ಪ್ರಶ್ನೆ, ಆಶ್ಚರ್ಯ, ವಿಶಂಕೆ, ಮೆಚ್ಚಿಕೆ ಮೊದಲಾದುವುಗಳನ್ನು ಸೂಚಿಸುವ ಅವ್ಯಯ: ಇದೇಂ ಚೋದ್ಯಮೊ (ವಡ್ಡಾ. ಶಾ. ೫೭–೧೩); ಒತ್ತುವೆನೊ ರಸಾತಳಕ್ಕೆ ನೆಲನಂ ದೆಸೆಯಂ ಪತ್ತುವೆನೊ ಪಗೆಯ ಬೆನ್ನಂ ಪತ್ತುವೆನೊ ದಿಶಾಗಜಂಗಳಂ ತುತ್ತುವೆನೋ (ಗದಾಯು. ೬–೧೮); ವಿಶಂಕೆಗೆ– ಇನಿಯನೆ? "ಬೆಲ್ಲದಿಂದಿನಿಯಂ. . ." ಆನೆಯೊ ಅದ್ರಿಯೊ ? (ಶಮದ. ೫೭ ಪ್ರಯೋ). ಓ$_3$: "ಎ ಏ ಒ ಓ ಎಂಬಿವು ಶಬ್ದಮನಪ್ಪಿ ವಿಶಂಕಾ ಪ್ರಶ್ನ ಮಂಡಲಾಕ್ಷೇಪಕಾರ್ಥದೊಳ್ ವರ್ತಿಸುಗುಂ" (ಶಮದ. ೩೧೪); ಓವೋ ಪೆಜತೇನೋ ನೀನೆ ಭುವನಕ್ಕಾರಾಧ್ಯನೈ (ಆದಿಪು. ೧೧–೯೬); ಇದಾವ ದೋಷಮೋ (ಪಂಪಭಾ. ೧–೧೩); ಎಂತೆಂತೋ ಈ ಕಬ್ಬಮೊಳ್ಳಿತಾಯ್ತು; ಏನೇನೋ ಓದಿನ ಪರಿ ಲೇಸು ಲೇಸು (ಶಮದ. ೫೭ ಪ್ರಯೋ); ಎನ್ನ ದೋಷಕ್ಕೆ ಆವುದೋ ವಿಧಿ (ಬಸವು. ೮೦–೫೭); ಓ ಓ! ಇಂತುಟೆ ಮಂತ್ರದೊಂದು ಮೈಮೆ (ರಾಮಾಶ್ವ. ೧೧೭–೧೭). [?]

**ಒ$_4$, ಓ$_4$** (ಅ). ಸಂಬೋಧನೆಯಲ್ಲಿ ಬರುವ ಶಬ್ದ: ಆಕಳ ಕಳ್ಳರು ಕೊಂಡರೆನಬೇಡೆಲವೊ ಸಂಗ ಕೊಂಡನೆಂಬೊ ಮಾತಾಡದಿರೆಲವೊ (ಸಿಂಗಿರಾ. ೧೦–೪). ಓ$_4$: "ಓ ಎನಲ್ ಸಂಬೋಧನಾರ್ಥದೊಳ್ ಸಲೆ ತೋರ್ಪುದು" (ಕಶರ. ೧೧೯); ಅಯ್ಯಾ ಎಂದಡೆ ಸ್ವರ್ಗ ಎಲವೋ ಎಂದಡೆ ನರಕ (ಬಸವ. ೨೪೦); ಓ ಕೆಂಚ ಬಾ ಇಲ್ಲಿ (ರೂಢಿ).

**ಒಂಕಿರು** (ಕ್ರಿ). ಒದಗು; ಉಂಟಾಗು (?): ಧರಣೀಪಾಳಕರ್ಕಳುಂ ಮಂತ್ರಿಗಳುವಿತರರಿಲ್ಲೆಂದು ಬೊಟ್ಟಿತ್ತಿದೆಂ ರಾಯರೊಳಂತಾ ನಾರಸಿಂಹಂ ಸಚಿವರೊಳೆಸಕಂವೆತ್ತ ಪೋಲಾಳ್ವನೀಯಿರ್ಬ್ಬರೆ ಶೌರ್ಯ್ಯಂ ಕಾರ್ಯ್ಯ ಪೊಂಕಿರ್ದ್ದೆಡೆಯೊಳದಟಿನಿಂ ಗೆಲ್ದರಾರ್ (ಎಕ. XI, ದಾವಣ. ೨೫–೫೮; 1224). "ಒಂಕಿರ್ದ = ಘಟಿಸಿರ್ದ" (ಶಾಪಮಂ. ೧೩೦೦ ಕೋಶ). ℙ ಈ ಶಬ್ದ 'ಔಂಕಿರು' ಎಂಬುದರ ಅಪಲಿಖಿತವಿರಬಹುದೆ? [?]

**ಒಂಕುಂದ** 'ಒರ್ಕುಂದ' ನೋ.

**ಒಂಟಂಗ** (ನಾ). ಏಕಾಂಗ (ಸಾಹಸ); ಅಸಹಾಯತೆ: ಅಂಟದ ಜಗಳದೊಳಗೆ ಮಾರ್ಬಲವನು ಪಂಟಿಸಿ ಮುಜಿಯಿಜಿದಾಗ ಒಂಟಂಗದಲಿ ಮೆಜಿದರ ಕೇರಿಯೆಸೆದುವು (ಕಂಸವಿ. ೬–೬೦). [ಒಂಟಿ$_1$ + ಅಂಗ$_2$]

**ಒಂಟಿ$_1$** (ನಾ). ೧. ಒಂದು; ಒಬ್ಬ; ಏಕಾಕಿ: ಏಕಕಿಂತು ಒಂಟಿ ನಿಂತು ತಪಿಸುತಿರುವೆ, ತರುಗುರೂ (ಅನಿಕೇ. ೧೪–೧೦); ಎಲ್ಲವೂ ಒಂಟಿ–ನಾನೂ ಒಂಟಿ ಆದರೆ ಈ ಒಂಟಿತನದಲ್ಲಿ ನನಗೆ ಭಯವಿಲ್ಲ (ರಾಮಾಸಿ. ೧೦೩). ೨. ಒಂಟಿಯಾಗಿರುವಿಕೆ; ಏಕಾಕಿಯಾಗಿರುವಿಕೆ; ಏಕಾಂತ: ಒಂಟಿಯಲಿ ಹೆಂಡತಿಯ ಬಿಡುವಾತನೇ ಮೂರ್ಖ (ಪುರಂದ. ೧–೬೨–೧); ಒಂಟಿಯೊಳೆಂದೆಂದು ದೇವರೀಕ್ಷಿಸಲು ನಿಷ್ಕಂಟಕದೊಳು ನಟಿಸುವೆವು (ಭರತ. ೧೪–೨೩).

ಒಂಟಿಯಾಗು = ಒಬ್ಬನೇ ಆಗು; ಏಕಾಕಿಯಾಗು: ರಾತ್ರಿ ಹೊತ್ತು ಆವಳು ಒಂಟಿಯಾಗಿ ಹೋಗುವುದೆಂದರೆ (ದೇವಹಂ. ೨೨೭).

[ದೇ. ‖ ತಮಿ. ಒಣ್ಟು, ಒಟ್ಟೈ; ತುಳು. ಒಂಟಿ: ತೆಲು. ಒಂಟಿ, ಒಂಟರಿ; ಕುರುಖ್. ಒಂಟಾ]

**ಒಂಟಿ$_2$** (ನಾ). ಒಂದು ಬಗೆಯ ಕಿವಿಯ ಆಭರಣ; ಹತ್ತಕಡುಕು: ಹಸ್ತವಲಯಗಳಂತೆ ಮುತ್ತಿನೊಂಟಿಗಳಂತೆ (ಜಿನಮು. ೪–೩೫); ನೀಲದೊಂಟಿಯ ಧರಿಸಿ (ಗೋಹಾಡು. ೨೮); ಒಬ್ಬನ ಕಿವಿಯಲ್ಲಿ ಒಂಟಿ ಇತ್ತು, ಮತ್ತೊಬ್ಬನ ಕಿವಿಯಲ್ಲಿ ಹತ್ತಕಡುಕು ಇತ್ತು (ಕಥಾಮಂ. ೯೧); ಕಿವಿಯಲ್ಲಿ ವಜ್ರದ ಒಂಟಿಗಳನ್ನು ತೊಟ್ಟಿದ್ದರು (ಪರಾವ. ೨೯); ನಿನ್ನಿಂದ ಎತ್ತು ಮಾರಿತು, ನನ್ನಿಂದ ಒಂಟಿ ಮಾರಿತು (ಗಾದೆ); ಕುಂಟನಾದರೂ ಒಂಟಿಯ ಜೋಕೆ ಬಹಳ (ಗಾದೆ).

[ದೇ. ‖ ತಮಿ. ಒಟ್ಟುಕ್ಕಡುಕ್ಕನ್; ತುಳು. ಒಂಟಿ; ತೆಲು. ಒಂಟು]

**ಒಂಟಿಕಾಱಿಕೆ** (ನಾ). ಒಬ್ಬನೇ ಇರುವಿಕೆ; ಏಕಾಕಿತನ: ಒಂಟ [ಪಾಠಾಂ. ವಂಟಿ] ಕಾಱಿಕೆಯ ತೀರ್ಕಣಿಸಿ ಮಂತ್ರಿಜೆ ತಂದು ಗಂಟಿಕ್ಕಿದಳು ತಮ್ಮ ಸೆಱಗ (ಮೋಹತ. ೩೨–೮). [ಒಂಟಿ$_1$ + –ಕಾಱ + –ಇಕೆ]

**ಒಂಟಿಕೊಂಬು** (ನಾ). ಒಂಟಿಯಾದ ಕೊಂಬು, —ಕೋರೆ (ಕ). [ಒಂಟಿ$_1$+ ಕೊಂಬು]

**ಒಂಟಿಕೋಡೊಲೆ** (ನಾ). ಒಂದೇ ಒಂದು ಕೋಡೊಲೆ ಇರುವ ಒಲೆ (ಕ). [ಒಂಟಿ$_1$+ ಕೋಡೊಲೆ]

**ಒಂಟಿಕೋಣೆ** (ನಾ). ೧. ಒಂದೇ ಆದ ಕೊಠಡಿ; ಬಿಡಿಯಾದ ಕೋಣೆ. ೨. (ಆಲಂ) ಒಬ್ಬನನ್ನೇ ಕೂಡಿಹಾಕುವ ಕೊಠಡಿ; ಸೆರೆಮನೆ; ಜೈಲು: ತಾನೇನೂ ತಪ್ಪುಮಾಡಿಲ್ಲವಾದ್ದರಿಂದ ಒಂಟಿ ಕೋಣೆಗೆ ಹೋಗುವುದಿಲ್ಲ (ಪುನರು. ೨೦೮). [ಒಂಟಿ$_1$ + ಕೋಣೆ]

**ಒಂಟಿಗ** (ನಾ). ಒಬ್ಬನೇ ಮಾತ್ರ; ಏಕಾಕಿ; ಒಂದೇ ಒಂದು: ಅವು ಒಂಟಿಗವಾಗಿ ಇರದೆ ಹಿಂಡುಗಟ್ಟಿಕೊಂಡು ಇರುತ್ತವೆ (ಮುಂಬಯಿ. ೫–೮೬); ಪಡುಮಲೆಯ ಕಾಡೊಳೊಂಟಿಗ ಪಂದಿ ಮಲೆವುದು (ಶ್ರೀರಾಮಾ. ೬೪೪–೭೩); ಬೇಂಟೆನಾಯ್ಗಳೊಂಟಿಗನ ತಡೆಯಲದು ಹೂಂಕರಿಸಿ (ಶ್ರೀರಾಮಾ. ೬೮೫–೨೦೬); ಒಂಟಿಗನಾದರೂ ತಂಟೆ ಮಾಡೋದು ಬಿಡಲಿಲ್ಲ (ಗಾದೆ). [ಒಂಟಿ$_1$ + –ಗ$_2$. / ತುಳು. ಒಂಟಿಗೆ]

**ಒಂಟಿಗಣ್ಣು** (ನಾ). ಒಂದೇಕಣ್ಣು; ಒಕ್ಕಣ್ಣು: ತನಗೆ ಉಳಿದಿದ್ದ ಒಂಟಿಗಣ್ಣಿನಿಂದ ಹಳ್ಳಿಯನ್ನು ನೋಡುತ್ತ ಬಹಳ ಹೊತ್ತು ನಿಂತನು (ಯೋಧಪು. ೧). [ಒಂಟಿ$_1$ + ಕಣ್ಣು (< ಕಣ್)]

**ಒಂಟಿಗತನ** (ನಾ). ಒಬ್ಬನೇ ಇರುವಿಕೆ; ಏಕಾಕಿತನ: ಬೇರೆ ಬೇರೆಯಾಗಿ ಒಕ್ಕಲುತನವನ್ನು ಸಾಗಿಸುವ ರೈತರ ಬಾಳು ಬಿಂದು ಒಂಟಿಗತನದ ಗೋಳು (ಮಾವಾದ. ೧೪೯). [ಒಂಟಿಗ + –ತನ]

**ಒಂಟಿಗಾರ** (ನಾ). = ಒಂಟಿಗ. [ಒಂಟಿ$_1$ + –ಗಾರ (< –ಕಾಱ)]

**ಒಂಟಿಗಾಲು** (ನಾ). ಒಂದೇ ಕಾಲು: ಒಂಟಿಗಾಲಿನಿಂದ ನಿಂತ ವಿಶ್ವಾಮಿತ್ರನಿಗೆ ಈಗ ಎರಡೂ ಕಾಲ್ಗಳು ಸಾಲದಂತಾಗಿವೆ ಓಡಲು (ಅಶ್ವಮೇ. ೩೧).

ಒಂಟಿಗಾಲಮೇಲೆನಿಲ್ಲು = (ಆಲಂ) ಆತುರನಾಗಿರು; ಉತ್ಸುಕತೆಯಿಂದ ಕೂಡಿರು: ಊರಿಗೆ ಹೋಗಲು ಒಂಟಿಗಾಲ ಮೇಲೆ ನಿಂತಿದ್ದಾನೆ (ರೂಢಿ). [ಒಂಟಿ$_1$ + ಕಾಲು (< ಕಾಲ್)]

**ಒಂಟಿಗಿತ್ತಿ** (ನಾ). ಒಂಟಿಯಾಗಿರುವವಳು; ಏಕಾಕಿನಿ: ಹೆಂಗಸೊಬ್ಬಳು ಒಂಟಿಗಿತ್ತಿಯಾಗಿ ನಿಂತಿದ್ದಳು (ಕೋಹಿನೂ ೨೫).
[ಒಂಟಿಗ + -ಇತ್ತಿ]

**ಒಂಟಿಗೆಯ್ಯ** (ನಾ). ಒಂದೇ ಕೈಯುಳ್ಳವನು; ಒಕ್ಕೈಯ್ಯ.
[ಒಂಟಿ$_1$ + ಕೆಯ್$_2$ + -ಅ$_7$]

**ಒಂಟಿಜೀವ** (ನಾ). ಒಬ್ಬನೇ ಒಬ್ಬ; ಏಕಾಕಿ: "ನಿನಗೇನು ಧಾಡಿ ನರ್ಸಿ, ಮಗ ಬೊಂಬ್ಯಾಯಲ್ಲಿದ್ದಾನೆ. ಒಂಟಿಜೀವ. ದೈತ್ಯಳ ಹಾಗೆ ಮಾನು ಮಾರಿ ಕಾಸುಮಾಡುತ್ತಿ . . ." (ಹೊ ಸ ಕ್ಷಿ. ೫೮); ನಮ್ಮದೇನು ಒಂಟಿಜೀವ (ನಡೆದಾ. II, ೯೧೨).
[ಒಂಟಿ$_1$ + ಜೀವ]

**ಒಂಟಿತನ** (ನಾ). = ಒಂಟಿಗತನ: ಬರುವ ಬೇನೆಗಳೆಲ್ಲ ಬರಲಿ, ಒಂಟಿತನಗಳು ಕಾಡಲಿ (ದ್ರಾಕ್ಷಿದಾ. ೨೩-೨); ನಾನೂ ಜೈಲಿನಲ್ಲಿ ಒಂಟಿತನದ ಕಿರುಕುಳವನ್ನನುಭವಿಸಿದ್ದೇನೆ (ಪುನರು. ೫೪೬).
[ಒಂಟಿ$_1$ + -ತನ]

**ಒಂಟಿದೋತ್ರ** (ನಾ). ಒಂದೇ ಒಂದು ಪಂಚೆ (*).
[ಒಂಟಿ$_1$ + ದೋತ್ರ]

**ಒಂಟಿದೋಳೆ** (ನಾ). ಒಂದೇ ಒಂದಾದ ತೋಳ (*).
[ಒಂಟಿ$_1$ + ತೋಳ]

**ಒಂಟಿದೋಳು** (ನಾ). ಒಂದೇ ಕೈ; ಏಕಹಸ್ತ (*).
[ಒಂಟಿ$_1$ + ತೋಳು (< ತೋಳ್)]

**ಒಂಟಿನಡಿಗೆ** (ನಾ). ಒಬ್ಬನೇ ನಡೆಯುವಿಕೆ: ಇಹದ ಭಂಡಕಥೆ ಮುಗಿಸಿದಂತೆ ಪಾಳಿನಲಿ ಒಂಟಿನಡಿಗೆ (ಚೈತ್ಯಾಲ. ೨೨-೪).
[ಒಂಟಿ$_1$ + ನಡಿಗೆ (< ನಡಗೆ)]

**ಒಂಟಿಬಟ್ಟೆ** (ನಾ). ಒಂದೇ ಬಟ್ಟೆ; ಏಕವಸ್ತ್ರ: ಒಂಟಿಬಟ್ಟೆಯಲ್ಲಿದ್ದ ಕೃಷ್ಣೆಯನ್ನು ಸಭೆಗೆ ತಂದಾಗ ಧರ್ಮ ಏಕೆ ಬೇಡವಾಯಿತು? (ವಚಭಾ. ೩೦೦).
[ಒಂಟಿ$_1$ + ಬಟ್ಟೆ$_2$]

**ಒಂಟಿಬಾಳು** 'ಒಂಟಿಬಾಟ್' ನೋ.

**ಒಂಟಿಬಾಟ್**, ಒಂಟಿಬಾಳು (ನಾ). ಒಬ್ಬನೇ ಇರುವುದು; ಏಕಾಂಗಿಯಾಗಿ ವಾಸಿಸುವುದು: ಎಲೆ ಚೆನ್ನೆ . . . ನಿನ್ನ ಕನ್ನೆತನದೊಂಟಿಬಾಟಿನ್ ನಿಡುಗಾಲಮಿಂತು ಕಾಪಿಟ್ಟಪಯಿಗ್ (ಬದ್ಧ ಪ್ರ. ೩೪-೬೩೬). **ಒಂಟಿಬಾಳು**: ಜೈಲಿನಲ್ಲಿ . . . ಒಂಟಿಬಾಳು ಸಹನೀಯವಾಯಿತು (ಪುನರು. ೫೪೬).
[ಒಂಟಿ$_1$ + ಬಾಟ್$_3$]

**ಒಂಟಿಮುರಿಗೆ** (ನಾ). ಒಂದು ಕಡೆಗೆ ತಿರುಗುವುದು; ಒಂದು ಬಾಗು: ಒಂಟಿಮುರಿಗೆಯಲಿ ಹಳ್ಳಹಿಡಿದು ಹೋಗುತ್ತಲಿತ್ತು ನೀರು (ಅರಳು. ೬೪-೪).
[ಒಂಟಿ$_1$ + ಮುರಿಗೆ]

**ಒಂಟಿರಿಗಾರ** 'ಒಂಟೆಱಗಾಱ' ನೋ.

**ಒಂಟಿಶೂರ** (ನಾ). ಏಕಾಂಗವೀರ; ಪರಾಕ್ರಮಿ: ಪರಶುರಾಮಪ್ಪ ನಾಯಕನು ಆ ಒಂಟಿಶೂರನನ್ನು ನೋಡಿ ಬಹಳ ಸಂತೋಷಪಟ್ಟನು (ಚಿತ್ರಪಾ. ೮೬).
[ಒಂಟಿ$_1$ + ಶೂರ]

**ಒಂಟಿಸರ** (ನಾ). ಒಂದೆಳೆಯ ಸರ: "ಏಕಾವಳೀ-ಏಕಯಷ್ಟಿಕಾ-ಒಂಟಿಸರ" (ಸಿದ್ಧಾಂತಿ. ೧೬೪).
[ಒಂಟಿ$_1$ + ಸರ$_6$]

**ಒಂಟಿಸಲಗ** (ನಾ). ೧. ಹಿಂಡಿಗೆ ನಾಯಕನಾದ ಒಂದೇಪ್ರಾಣಿ. ೨. (ಹಿಂಡಿನಿಂದ ಅಗಲಿದ) ಒಂದೇ ಒಂದಾದ ಗಂಡಾನೆ.
[ಒಂಟಿ$_1$ + ಸಲಗ]

**ಒಂಟಿಸು** (ಕ್ರಿ). ಹೊಂದಿಸು; ಸೇರಿಸು.

**ಒಂಟಿಸಿಕೊಳ್** = ಹೊಂದಿಸಿಕೊ; ಕೂಡಿಸಿಕೊ: ಒಂಟಿನೀನೊಳಜಗಕೆ ಭಂಟ ಹೊರಜಗಕಾಗಿ ಒಂಟಿಸಿಕೊ ಜೀವನವ (ಮಂಕುತಿ. ೭೩).
[ಒಂಟು + -ಇಸು$_3$]

**ಒಂಟಿಹುಟ್ಟು** (ನಾ). (ದೋಣಿ ನಡೆಸುವ) ಒಂದೇ ಒಂದು ಹುಟ್ಟು: ಒಂಟಿಹುಟ್ಟಿನ ಹರಗೋಲಿನಂತೆ ಎನ್ನ ಪಾಡು (ಅಂತರಾ. ೪೫).
[ಒಂಟಿ$_1$ + ಹುಟ್ಟು$_3$ (< ಪುಟ್ಟು$_3$)]

**ಒಂಟೆಱಗಾಱ**, ಒಂಟಿರಿಗಾರ (ನಾ). ಒಂಟಿಗನಾಗಿ ಇರಿಯುವವನು; ಏಕಾಂಗವೀರ: ಕಂಠೀರವೇಂದ್ರನ ಹಳೆಯ ಪೈಕರ ಬಲು ವೊಂಟೆಱಗಾಱ ನಾಯಕರು (ಕಂನವಿ. ೧೮-೧೦೪). **ಒಂಟಿರಿಗಾರ**: ಅಸುರರ ಗಂಟಲಗಾಣನೊ ಎಂಟುದಿಕ್ಕಿನೊಳು ವಂಟಿರ[ಒಂಟಿರಿ]ಗಾರ ವೈಕುಂಠ ಶೈಲವಾಸ (ತೀರ್ಥಮ. ೧೩೮-೨).
[ಒಂಟಿ$_1$ + ಇಱ್$_1$ + -ಗಾಱ (< -ಕಾಱ). / ತೆಲು. ಒಂಟರಿಕಾಡು]

**ಒಂಟು** (ಕ್ರಿ). ಸರಿಹೊಂದು; ಒಗ್ಗು; ಸೇರು: ಯಾವ ದೇಶದಲ್ಲಿ ಹುಟ್ಟಿರುತ್ತಾರೋ ಅವರಿಗೆ ಆ ದೇಶದ ಬೆಳೆಯು ಆಹಾರವು ಬಹು ಒಂಟುವದೆಂದೂ ಅನುಭವಸಿದ್ಧವಾಗಿದೆ (ನೀಗಟ್ಟು. ೫೬).

**ಒಂಟುತಪ್ಪು** = (ಆಹಾರ) ಒಗ್ಗದೆ ಹೋಗು: "ತಂಗಿ, ಮಗುವಿಗೆ ಒಂಟುತಪ್ಪಿರುವಾಗ ನಾವು ನೂರು ಸಲ ಬರಬೇಕಾಗುತ್ತದೆ . . ." (ಸವತಿ. ೧೮೧).
[ದೇ. ‖ ತೆಲು. ಒಂಟು]

**ಒಂಟುಕಟ್ಟು** (ಕ್ರಿ). ಹೊಂದುವಂತೆ ಕಟ್ಟು; ಒಟ್ಟಾಗಿ ಕಟ್ಟು; ಒಂಟಿಯಾಗಿ ಧರಿಸು (?): ರುದ್ರಾಕ್ಷಮಂ ಬಳಕೊಣ್ಬುಕಟ್ಟಿ [ತ್ರಿ]ಶೂ[ಲ]ಮ ನಿಟ್ಟು ಕೊಟ್ಟೂಬ[ನ]ನೆದಿಜ್ಜಿ (ಸೌಇಇ. XI-i, ೨೧-೯; 893).
[ಒಂಟು + ಕಟ್ಟು$_1$]

**ಒಂಟೆ** 'ಒಟ್ಟೆ$_2$' ನೋ.

**ಒಂಟೆತ್ತು** (ನಾ). ಒಂಟಿಯಾದ ಎತ್ತು: ನಗರತ್ತರು ಭೇರೀಯವರು ವ[ಒ]ಂಟೆತ್ತಿನ ಗಾಣಿಗರು (ಎಕ. XII, ಮದ್ದಗಿ. ೩೧-೧೬; 1656).
[ಒಂಟಿ$_1$ + ಎತ್ತು$_2$ (< ಎಱ್ತು$_2$)]

**ಒಂಟೆರಾವುತ** (ನಾ). ಒಂಟೆಯ ಸವಾರ: ಭೋರನೆ ಬರುತಿರ್ದರೊಂಟೆರಾವುತರಂದಾರಯ್ಯದಾ ದಂಡಿನೊಳು (ಶ್ರೀಪಾಲ. ೧೩-೯೩).
[ಒಂಟೆ (< ಒಟ್ಟೆ$_2$) + ರಾವುತ]

**ಒಂಟೆಲುವು** (ನಾ). ಒಂದೇ ಮೂಳೆ.

**ಒಂಟೆಲುವಿನವ** = ಬರಿ ಮೂಳೆಗಳುಳ್ಳವನು; ತೆಳ್ಳಗಿರುವವನು; ಸಣಕಲ (*).
[ಒಂಟಿ$_1$ + ಎಲುವು (< ಎಲ್ವು)]

**ಒಂಟೋಲೆ** (ನಾ). ಒಂಟಿಯಾದ ಒಲೆ; ಬಿಡಿಯಾದ ಒಲೆ (*).
[ಒಂಟಿ$_1$ + ಒಲೆ$_5$]

**ಒಂಡು** (ನಾ). ಕೆಸರು; ರಾಡಿ: ಕೆಱೆಯೊಂಡ ಪೀರ್ವ ಭೇಕಂ ಕ್ಷೈದ್ರವೀಂಟಿಪುದೆ ತಱಗ ಮೇಯುವ ಮೇಕೆ ತುಪ್ಪಕಾಸಿಪುದೆ (ಕೈಕವ. ೨-೧-೨); ಈ ನದಿಗಳಿಂದ ಇವರಿಗೆ ನೀರು ಮಾತ್ರ ದೊರೆಯುತ್ತಿದ್ದುದಲ್ಲದೆ ಒಂಡು ಮತ್ತು ಉಸುಕು ಬಿಟ್ಟು ಭೂಮಿ ಇನ್ನೂ ಕಸುವುಳ್ಳದ್ದಾಗುತ್ತಿತ್ತು (ಮತಂಒ. ೬೧). 'ವಂಡು' ಪರಾ.
[ದೇ. ‖ ತಮಿ. ವಂಟಲ್; ಮಲ. ವಂಟಱು = ಕೊಳೆ, ಕಶ್ಮಲ; ತೆಲು. ವಂಡ, ವಂಡಲಿ, ವಂಡು]

**ಒಂಡುಬಾರು** (ಕ್ರಿ). ಕೆಸರಾಗು; ರಾಡಿಯಾಗು: "ಕಲುಷ, ಅನಚ್ಛ, ಆವಿಲ - ೩ ವಂಡಾಗಿರುವದಕ್ಕೆ ಹೆಸರುಗಳು. ಕೆಸರು ಕದಡಿ ಕಾಲಕ್ಕಾಗಿ ವೊಂ[ಒಂ]ಡುಬಾರಿಕೊಂಡಿರುವಿಕೆ" (ಸಿದ್ಧಾಂತಿ. ೭೨).
[ಒಂಡು + ಬಾರು ?]

**ಒಂಡೈ$_1$** (ನಾ). ಒಡ್ಡು; ಕಟ್ಟೆ (ಜಾನಕೋ. ೨೯). 'ಒಡ್ಡು$_2$' ಪರಾ. [?]

**ಒಂಡೈ$_2$** (ನಾ). ಸೊಂಟ; ಟೊಂಕ; ಕಟಿ: ಗಿಡುಮರ ಬಳ್ಳಿಗಳ ನಾರು ಬೇರುಗಳ ಶರೀರದೊಂಡೆಯಲ್ಲಿ ಧರಿಸಿದಡೆ ರೋಗಿಯ ಹಲವು ರೋಗಗಳು ನಷ್ಟವಪ್ಪ ಪರಿಯಂತೆ (ಚೆನ್ನವ. ಕ. ೪೧). [?. / ತುಳು. ಒಂಟ]

**ಒಂಡೆಲ** (ನಾ). ಒಂದು ತೆರಿಗೆ (?): ಒಂದು ಗಾಣದ ಜೊಂಕೆವಣ ಕಾರುಕದೆಱೆಯೊಂಡೆಲಯೊಕ್ಕಲ ಕಾರುಕದೆಱೆ ಯಿನಿತುಮಂ ಸರ್ವ ಬಾಧಾ ಪರಿಹಾರವಾಗಿ ಕೊಟ್ಟರು (ಕಇ. IV, ೧೩-೬೬; 1165).
[ಒಂದು ? + ?]

**ಒಂಡೆಹಿಡಿ** (ಕ್ರಿ). ದಡಹಿಡಿ; ತೀರಹಿಡಿ: ಈ ಕೆರೆಯ ದಕ್ಷಿಣ ದಿಕ್ಕಿನ ಒಂಡೆಹಿಡಿದು . . . ಹೋದಳು (ಅಂಬಿಕೆ. ೧೦).
[ಒಂಡೆ$_1$ + ಹಿಡಿ$_1$ (< ಪಿಡಿ$_1$)]

**ಒಂತು$_1$** (ನಾ). ೧. ಬಾರಿ; ಸರದಿ; ಸಲ (ಶ). ೨. ಭಾಗ; ಅಂಶ: ಅಲಘುಲಘು ತೋರಿ ತೋರಿಸಿ ಕೊಂತದೊಂತುಗಳ ನುಲಿನುಲಿದು ಯೆಸೆದೆಸೆದು (ಜಿನಮು. ೧೩-೨೫). 'ವಂತು' ಪರಾ.
ಒಂತಿನವ = ಸರದಿಯವನು (ಶ).
[ದೇ. ‖ ತುಳು. ಒಂತಿ, ಒಂತು; ತೆಲು. ಒಂಟು, ವಂತು]

**ಒಂತು$_2$** 'ಒತ್ತು$_2$' ನೋ.

**ಒಂದರಿ** 'ಒನಲಿ' ನೋ.

**ಒಂದವಿಂದ** (ನಾ). ಒಂದು ಸೋಜಿಗ, —ಆಶ್ಚರ್ಯ: ಮಱುಗುವೆನಾ ನಿವಳ್ಗೆ . . . ಮಱುಗುವಳೆಂದಡೇಂ ತಿಳಿವನಾತನನಾಕೆಯನೆನ್ನ ನೋಡು ಕಾಯ್ದಿಱಿಯೆ ವಿಧಾತ್ರನೇಂ ಪಡೆದನೋ ಬಿಸವಂದಮನೊಂದವಿಂದಮಂ [ಪಾಠಾಂ. ವಿಂತಿದಂ, ವಿಂದದುಂ] (ಆದಿಪು. ೧೨-೩೦). P ಈ ಶಬ್ದ 'ಒಂದು + ವಿಂದ' ಎಂಬೆರಡರ ಎಂದರೆ 'ಒಂದುವಿಂದ'ದ ಅಪಲಿಖಿತವಿರಬಹುದು.
[< ಒಂದು$_3$ + ವಿಂದ$_0$. P ತಮಿ. ವಿನ್ದೈ; ತೆಲು. ವಿಂತ]

**ಒಂದವಿಂದಿ** (ನಾ). ಒಂದು ಗುಂಪಿನದು, —ಸಮೂಹದ್ದು: ಮಿಱು ಮಿಱುಗುವ ತಲೆದುಡುಗೆಯುಂ ತಲೆದುಡುಗೆಯೊಳೊಡಂಬಡಂ ಪಡೆದು ಮಿಳಿರ್ದುವ ಪೊಳೆವ ಪೊಂದಳಿರುಂ ಪೊಂದಳಿರೊಳೊಂದ [ಪಾಠಾಂ. ಒಂದ] ವಿಂದಿಯಲ್ಲದೊಂದಿ ನಾಡೆಯುಮಂದಂಬಡೆದು (ಆದಿಪು. ೪-೪೧ವ); ಎಕ್ಕಲಾವಣಂ ಪೊಸೆಯಿಪ ಕಮ್ಮಯಿಪ್ಪ ಸಮುಕಟ್ಟುವ ಬಿನ್ನಣಮಿಲ್ಲದಕ್ಕೆ ರಂಜಿಸುವೆರ್ದೆಗೊಳ್ಳದೀಗಡಿನ ಕಬ್ಬಿಗವಂದಿಗಳೊಂದವಿಂದಿಗಳ್ (ಶಾಂತಿಪು. ೧೨-೬೬). [< ಒಂದು$_3$ + ವಿಂದಿ$_0$ (< ಸಂ. ವೃಂದ)]

**ಒಂದವಿಂದಿಗ** (ನಾ). ಒಂದು ಗುಂಪಿನವನು, —ತಂಡದವನು: ಒಂದೆಸೆಯೊಳಬ್ಬರಮಾದೊಡೊಂದೆಸೆಗೆ ಪರಿವ ಒಂದವಿಂ [ಪಾಠಾಂ. ವಂ] ದಿಗರುಮಂ (ಲೀಲಾವ. ೫-೧೩೪). [< ಒಂದು$_3$ + ವಿಂದಿಗ]

**ಒಂದಾಗಿಸು** (ಕ್ರಿ). ಒಂದು- ಮಾಡು; ಕೂಡಿಸು: ಎಂದಿಂತೀ ಗ್ರಾಮ್ಯೋಕ್ತಿಯೊಳೊಂದಾಗಿಸದದನೆ ಪೇೞ್ವುದಿಂತೀ ಸ್ಥಿತಿಯೊಳ್ (ಕವಿರಾ. ೨-೮೨); ಒಲ್ಲದ ಹೆಣ್ಣುಗಂಡುಗಳನೊಂದಾಗಿಸಬಲ್ಲ ಭಾವಜ್ಞರ ತೋಱು (ಮೋಹತ. ೮-೩೨). [ಒಂದು$_1$ + ಆಗು$_1$ + -ಇಸು$_3$]

**ಒಂದಾವಣೆ** (ನಾ). ಒಂದುಗೂಡುವಿಕೆ; ಸೇರುವಿಕೆ; ಐಕ್ಯ: ಜೀವದೇವನೊಂದಾವಣೆ ಇಲ್ಲದ ನೀರಿಲ್ಲದ ನೆಲ ಬರಡಲ್ಲಾ (ಸೂರ್ಯಪಾ. ೧೧೫-೩). [ಒಂದು$_1$ + -ವಣೆ]

**ಒಂದಿಕೆ** (ನಾ). ಒಂದಾಗುವುದು; ಸಮರಸವಾಗುವುದು: ಆರವತ್ತು ವರುಷಗಳಿಂದ ನಡೆದುಬಂದಿದ್ದ ಒಂದಿಕೆ – ಹೊಂದಿಕೆ ಬಹಳ ಸಡಿಲವಾಗಿ ಬಿಟ್ಟಿತು (ಪ್ರೇಮಾಶ್ರ. ೭). [ಒಂದು$_1$ + -ಇಕೆ]

**ಒಂದಿಗ** (ನಾ). ೧. ಸೇರಿದವನು; ಅಂಥವನು; ಒಬ್ಬನಂತೆ ಇರುವ ಇನ್ನೊಬ್ಬನು: ಕಿಱುಕುಳನಪ್ಪೆನ್ನೊಂದಿಗನೊಳನುಚಿತಮಿದು ನಿಮ್ಮಡಿಬೆಸಸಿ ಕೆಳೆಯ ಮತ್ಸಂಶಯಮಂ (ಶಾಂತಿಪು. ೫-೯); ಸದುಪದೇಶಂಗಳ್ಗೆ ನಿನ್ನೊಂದಿಗರೆ ಭಾಜನರಪ್ಪರ್ (ಕಾದಂಪೂ. ೫೩೮); ಎಮ್ಮೊ [ಪಾಠಾಂ. ಮ್ಮ]ಂದಿಗನೀತನ ಮನದುಮ್ಮಳಮಂ ಕಳೆವುದೆಂದು (ಪಂಪರಾಮಾ. ೧೦-೧೪); ಅಖಿಳಕೀರ್ತಿಯನು ತನಗೆ ತಂದ್ಯೆ ನಿನ್ನವ[ ಒ]ಂದಿಗರನುಜರನು ಜನ್ಮಾನು ಶತದಲಿ ಘನತಪಂಗಳ ಮಾಡಿ ಕಾಣೆನು (ಕೊಂಗಯ. ೨೭-೧೦೭). ೨. ಜೊತೆಯಾಗಿರುವವನು: ತರುತಪಸ್ವಿ, ಮೌನವಾಂತೆ; ನೀನಿಂದೆನಗೊಂದಿಗಂ! (ಅನಿಕೇ. ೧೪-೨೧). [ಒಂದು$_2$ + -ಇಗ]

**ಒಂದಿಗೆ** (ಅ). ಜೊತೆಯಲ್ಲಿ; ಸಂಗಡ; ಒಡನೆ: ಆ ಜಟ್ಟಿಯೊಂದಿಗೆ ಹೋರಾಡಿದವರಲ್ಲಿ ಒಬ್ಬನಾದರೂ ಅಲ್ಲಿಯತನಕ ಗೆದ್ದಿರಲಿಲ್ಲ (ಮಧ್ಯಮ. ೧೫೯). [ಒಂದು$_2$ + -ಇಗೆ]

**ಒಂದಿನ** (ನಾ). ಒಂದು ದಿನ, —ದಿವಸ: ಹರನನೊಂದಿನವಾದೊಡಂ ತಾಂ ಧರಿಸಲಾಱದ ಮಾನಸೋತ್ತಮ ಗಿರಿಯ ನಿಲವೆನಿತು (ಬಸವು. ೧೯-೨೯); ಒಂದಿನ ಪರಮಸುಂದರಿಯೆನ್ನ ಕನಸಿನೊಳ್ ಸಂದಿಸಿ ರತಿ ಸುಖವಡೆದು (ಮೋಹತ. ೩೧-೧೮); ಒಂದಿನಂ ಮುಚ್ಚಂಜೆ ಹಸಿಮಣ್ಣು ನುಂಡೆ ಗುದ್ದುವೊರುವೊಡ್ಡನನು ಸಂತೆಯಲಿ ಕಂಡೆ (೧೯ವಿಂ. ೧೨೦-೨೧). 'ಒಂದೆವಸ' ಪರಾ. [< * ಒರ್ದಿನ]

**ಒಂದಿರ್** (ಕ್ರಿ). ಒಟ್ಟಾಗಿ ಸೇರು; ಕೂಡಿರು: ದಾನಸದ್ಗುಣ × × ಎಲ್ಲಮೊ[ನ್ದಿ]ರ್ಪ್ಪರೆಂ[ಬೀ ಕ್ಷಿತಿ]ಯೊಳ × × × [ಗು]ಣನಿಧಿ (ಸೌಇಇ. XI-i, ೪೫-೨೭; 980); ನಸುಮುರಿದಕ್ಷಿ ನಾಸಿಕದೊಳೊಂದಿರೆ (ದಶಕು. ೨-೬೩); ವರಯೋಗನಿದ್ರಾಸ್ಪದದಲೊಂದಿಹುದೊಂದಖಿಳ ವಿಶ್ವ (ಕುಮ್ಮಾದ್ರೌ. ೩-೬೯). [ಒಂದು$_1$ + ಇರ್$_1$]

**ಒಂದಿಲು** (ನಾ). ಒಂದು ಜಾತಿಯ ಬಳ್ಳಿ; ಭ್ರಮರ: "ಭ್ರಾಮರ – ಒಂದಿಲು" (ಒಷಧಿ. ೧೧೧). [?]

**ಒಂದಿವಸ** 'ಒಂದೆವಸ' ನೋ.

**ಒಂದಿಸು** (ಕ್ರಿ). ಕೂಡಿಸು; ಬೆರಸು; ಸೇರಿಸು; ಹೊಂದಿಸು: ಒಂದಜ ನೀರ್ಮಿಟಲೊಂದಕೊರ್ಂದಿಸುತುಂ ಮೇಗೆ ಕೊಂಡು ನೆಗೆವುದಿದೇಂ ಮತ್ತೊಂದಜ ನೀರದಿಗರ್ದುವುದೇಂದತಿ ವಿಸ್ಮಯದೆ ನೋಡಿದಂ ಭರತೇಶಂ (ಆದಿಪು. ೧೩-೫೧); ಕೆಂದಾವರೆಯಲರ್ದಲರೊಳಗೊಂದಿಸುವಂತಳಿಕುಳಂಗಳಂ ರತ್ನದ ಸತ್ಸುಂದರ ಪಟಳಿಕೆಯೊಳಗೆ ಪುರಂದರ ನಂದೊಟ್ಟಿಕೊಂಡು ತತ್ಕ್ಷಣದಿಂದಂ (ನೇಮಿಪು. ೧೩-೭೭); ಒಂದು ಪಡಿಯುದಕದೊಳಗೊಂದು ಪಡಿ ಸಕ್ಕರೆಯನೊಂದಿಸಿದ ಬಳಿಕ ಸೋದಿಸಿ (ಸೂಪಶಾ. ೧-೪೦); ನಾಸಾಪುಟಗೆಲದಿ ನಿಂದಿಹ ರೋಹಿಣಿ ನಕ್ಷತ್ರವೆಂಬಂತೆಯೊಂದಿಸಿದರು ಮೂಕುತಿಯ (ಮೋಹತ. ೨೩-೩೪).
[ಒಂದು$_1$ + -ಇಸು$_3$]

**ಒಂದು$_1$** (ಕ್ರಿ). ೧. ಕೂಡು; ಸೇರು; ಬೆರೆ: "ಒಂದು – ಸಮ್ಮೇಲನೇ, ಸಂಖ್ಯಾಯಾಂಚ" (ಶಮಧಾ); ತಪಮಾನ್ ದ್ವಾದಶದಾ ವಿಧಾನಮುಖದಿನ್ ಕೆಯ್ದೊಂದು ತಾ ಧಾತ್ರಿಮೇಲ್ (ಎಕ. II, ೯೮-೧; 700); ಒಂದಾಗಿರೆ ಸಕ್ಕದಂಗಳುಂ ಕನ್ನಡಮುಂ ಸುಂದರಮಕ್ಕುಂ ಕವಿಪದಮೊಂದಿದವೋಲ್ ಕನಕರಚನೆಯೊಳ್ ಮಣಿನಿಕರಂ (ಕವಿರಾ. ೧-೬೧); ಕುಸುಮಂಗಳಾಂತ ಪುಷ್ಪಾಂಜಲಿಗಳೊಂದಿ ಕಿಕ್ಕಿಱಿದ ಪೆರ್ಗೊನೆಗಳಿಂದೆ (ಜೈಮಿಭಾ. ೩-೨೭). ೨. ಪಡೆ; ಹೊಂದು; ಅನುಭವಿಸು: ತನ್ನ ಶಿರಕ್ಕೆ ಮುನಿಯಲು ಮುಂದೆ ತದ್ದೇವಂ ಪ್ರಮೋದವನೊಂದಿ ಸನ್ನಿಧಿಯಾಗಿ ಪೇಳ್ದನು (ಬಸವು. ೫೦-೫೬); ವಿನೋದಕೇಳಿಯಂ ತೊಱೆವಾತಂ ಪಂದೆಯವನೆಂಬ ನಿಂದೆಯನೊಂದುವನಿದು ರಾಜಧರ್ಮಮೇ (ರಾಜಶೇ. ೩೩-೨೦).

ಒಂದಿಕೊಳ್ = ಒಂದಾಗು; ಕೂಡು; ಸೇರು: ಕಂದ ಕೇಳ್ವೆ ಬಳಿಕ ಸಮಯವಿದೆಂದು ಸಾರಿದನವರ ಶಾಪದಲೊಂದಿಕೊಂಡಿದ್ದಾ ಜಯಂತನು ಕಾಕರೂಪದಲಿ (ತೊರರಾ. ೨-೭-೮). ಒಂದಿಬರ್ = ಕೂಡಿಬರು; ಸೇರು: ಒಂದಿಬಾರದನುಮಂಕದ ಕರ್ಣನೆ (ಪಂಪಭಾ. ೯-೬೧); ಮುನ್ನಮೊರ್ಮೆ ರಾಮದೂತನೊಳೊಂದಿಬಂದೆನ್ನ ನುಡಿದೆ (ಕಗವಿ. ೫೧-೨೩ ಚಾವುಂಪು).

ಒಂದಿಱವಾತನ್=ಎಕ್ಕಟಗಲಿ; ಅಸಹಾಯಶೂರ: ಓಟಕ್ಕೆ ನಾಣ್ಚುವನ್ ಒಂದಿಱವಾತನ್ ಹಿರುಡವನ್ (ಮೈಆರ್. ೧೯೧೩, ೧೩–೧೦ ; 900); ಅಯ್ಯನ ಸಿಂಗಂ ಗೇಣಿಕಾಱರ ದೇವನೊನ್ದಿಱವಾತಂ ಲೋಕವಿಖ್ಯಾತಂ (ಸೌಇಇ. IX–i, ೭೮–೮೪ ; 1045).

[ದೇ. ‖ ತಮಿ. ಒನ್ಱು, ಒನ್ಱಿ; ಮಲ. ಒನ್ನ್, ಒನ್ನಿ; ತುಳು. ಒಂದು]

**ಒಂದು$_2$** (ನಾ). ೧. ಹೊಂದಿಕೊಂಡು ನಡೆಯುವಿಕೆ; ಸ್ನೇಹ: ವಿನಯಕ್ಕಂ ವಯಸಕ್ಕವಾಕೃತಿಗ[ಮೊಂದಿಂಗಂ] [ಪಾಠಾಂ. ಪುಟ್ಟುಗುಮಿಂತಿದಂ]ಗುರುವ್ರಾತ ಶಾಸನಕಂ ಕೂರ್ಮೆಗವಲ್ಲದಂತುಟನಿದೊಂದಂ ಮಾಡೆ ನೀಂ (ಕಾದಂಉ. ೪೭೭); "ಒಂದಿಂಗಂ – ಸ್ನೇಹಕ್ಕೊ" (ಕಾದಂಉ. ೮೩೬). ೨. (ಸಾರು ಹೊಂದಿಕೊಳ್ಳಲು ಕಲಸಿ ಬಿಡುವ) ಅಕ್ಕಿಯ ಹಿಟ್ಟಿನ ತಿಳಿ: ಸಾರಿಗೆ ಒಂದು ಬಿಡಬೇಕು (ರೂಢಿ). [< ಒಂದು$_1$]

**ಒಂದು$_3$** (ನಾ). ಒಂದು ಸಂಖ್ಯಾವಾಚಕ; ಏಕ: "ಒಂದು – ಸಮ್ಮೇಲನೇ, ಸಂಖ್ಯಾಯಾಂ ಚ" (ಶಮುಧಾ); "ಓರೆಕ್ಕಮೊಂದೆನಿಕ್ಕುಂ" (ಕವಿಕಂ. ೨೧೨); ಉಗ್ರಸೇನ ಗುರವಡಿಗಳ್ ಒನ್ದು ತಿಙ್ಗಳ್ ಸನ್ನ್ಯಸನಂ ನೋನ್ತು ಮುಡಿಪ್ಪಿದಾರ್ (ಎಕ. II, ೨೫–೭ ; 700); ಅಮರ್ದಂ ಮುಕ್ಕುಳಿಪಂತುಟಪ್ಪ ಸುಸಿಲೊಂದಿಂಪುಂ ತಗುಳ್ದೊಂದು ಗೇಯಮುಂ (ಪಂಪಭಾ. ೪–೩೧); ಒಂದೆಂಬೆನೆ ಎರಡಾಗಿದೆ ಎರಡೆಂಬೆನೆ ಒಂದಾಗಿದೆ ಒಂದೆರಡಜ ಸಂದೇಹವಿದೇನೋ (ಅವಚಂ. ೨೦೮–೯೩೫); ಚರಿಪಾರಣ್ಯದ ಪಕ್ಷಿಗೊಂದು ತರು ಗೊಡ್ಡಾಗಲ್ ಫಲಂ ತೀವಿದಾ ಮರಗಳ್ ಪುಟ್ಟವೆ (ಸೋಮೇಶ. ೨೬); ಬಾಳುವವನಿಗೆ ಒಂದು ಮಾತು, ಬಾಳೆಗೆ ಒಂದು ಗೊನೆ (ಗಾದೆ).

ಒಂದೊಂದು (ದ್ವಿರುಕ್ತಿ): ಒರ್ವರೊರ್ವರೊಂದೊಂದನೆ ನುಡಿಯುತ್ತುಂ ಪೋಗೆ (ಪಂಪಭಾ. ೨–೮೭ ವ); ಒಂದೊಂದು ವೇಳೆ ಮಳೆ ಹೆಚ್ಚಾಗುತ್ತದೆ (ರೂಢಿ). ಒಂದಕಾರು = ಒಂದಕ್ಕೆ ಆರು: ಗ್ರಾಮಕ್ಕೆ ಹಣವನು ಒಂದಕಾರನು ತೆಗೆದುಕೊಂಬನು ಕುಂಭಿಣಿಯ ನೃಪನು (ಕಾಲಸಂ. ೨೪–೨೦). ಒಂದಕ್ಕೆಹೋಗು = ಮೂತ್ರವಿಸರ್ಜನೆಗೆ ಹೋಗು: ಒಂದಕ್ಕೆ ಹೋಗಿ ಬರುತ್ತೇನೆ (ರೂಢಿ). ಒಂದನೆಯ = ಮೊದಲನೆಯ; ಪ್ರಾಥಮಿಕ: ಒಂದನೆಯಂ, ಎರಡನೆಯಂ (ಶಮುದ. ೨೦೭ ಪ್ರಯೋ); ಪ್ರಾಥಮಿಕ ಶಾಲೆಯ ಒಂದನೆಯ ತರಗತಿ (ರೂಢಿ). ಒಂದಲ್ಲೊಂದು = ಯಾವುದಾದರೂ ಒಂದು: ಒಂದಲ್ಲೊಂದು ಕಾರಣದಿಂದ ಬೆಳೆ ಕಡಿಮೆಯಾಗಿದೆ (ರೂಢಿ). ಒಂದಾಗು = ಒಟ್ಟುಗೆಸೇರು; ಕೂಡು: ಅತನೊಡನೊಂದಾಗಿ ಹೋಗದದೇತಕಿರ್ದಹನು (ಬಸವು. ೩೭–೧೧); ಶಬರರೊಂದಾಗಿ ಬಂದಂ ಪುಳಿಂದಂ (ರಾಜಶೇ. ೫–೫೧). ಒಂದಾನುಮೊಂದು, ಒಂದಾನೊಂದು = ಯಾವುದೋ ಒಂದು: ಒಂದಾನುಮೊಂದು ಆಶ್ರಮಸ್ಥಾನದೊಳ್ (ತತ್ತ್ವಪ್ರ. ೨); ಒಂದಾನೊಂದು ದಿನ ದರ್ಪಣದ ನೋಟದಲಿ ತಾಳಿದನು ಚಿಂತೆಯನು (ತೊರರಾ. ೧–೪–೧); ಒಂದಾನೊಂದು ದೇಶದೊಳಗೆ (ಮುಂಬಯಿ. ೫–೧೦೩). ಒಂದಾರುಭುಜವಾಗು = (ಅಲಂ) (ಅತಿಯಾದ) ಸಂತೋಷ ಹೊಂದು: ತಿರುಜ್ಞಾನ ಸಂಬಂಧಿಗಳು ಚೋಳಮಂಡಲಕೆ ಬಂದಿಹರೆನಲು ಒಂದಾರುಭುಜವಾಗಿ ಭೂಪನಂ ಬೀಳ್ಕೊಂಡು (ಪ್ರೌಢರಾ. ೧೮–೪೦); ಪಕ್ಷಿಯು ಪೇಳೆ ಆನಂದದಿಂದಾಲಿವಂದಾರುಭುಜವಾಗಿ ಮನದಿ (ಯುನಳ. ೨೩); (ನವಮೋ. ೨೪–೫೯ ನೋ). ಒಂದಿನಿತು, ಒಂದಿನಿಸು, ಒಂದಿಷ್ಟು = ಒಂದು ಸ್ವಲ್ಪ; ಕೊಂಚ: ಶಂಕರನ ಕೊರಳಿಂದ ಮಿಱುಗುವ ಕಾಳಕೂಟವದೊಂದಿನಿತು ಮಿಡುಕಿದೊಡೆ ಸಾವೆನೆನುತ್ತ ನಿಶ್ಚಯಿಸಿ (ಬಸವು. ೧೩–೧೭); ಸುದತಿ ಪೆಱತೊಂದು ನೆವದಿಂ ಕೆದಱದಳೊಂದಿನಿಸು ಮಂದಹಾಸದ್ಯುತಿಯಂ (ಕಾದಂಉ. ೨೪೯); ಸುಮ್ಮನೇತಕೆ ಮುನಿಸು? ನಿಮ್ಮನಾನೊಂದಿನಿಸು ಅಮ್ಮಮ್ಮ ಕೆಣಕುವವಳಲ್ಲ (ಕಏಪು. ೩೨–೧೯); ಕೂಷ್ಮಾಂಡ ಲೇಹ್ಯ ಕಗ್ಗುಂಬಳಕಾಯಿ ಒಳಹೊರಗಂ ಕೆತ್ತಿ ಕಳೆದು ಬಲಿತ ತಿರುಳು ಸೇರು ೨೫ನ್ನು ಒಂದಿಷ್ಟು ಕುದಿಸಿ ಆ ಬಳಿಕ ಹಸುವಿನ ತುಪ್ಪ ಒಂದು ಬಳ್ಳವನೆರೆದು (ಸಕವೈ. ೨೨೨); ಹಾಗೆ ಹೇಳುವ ಮೊದಲೊಂದಿಷ್ಟು ತಾಳಿರಿ (ಇಂಚಾಪ. ೭೨–೪೭). ಒಂದಿಲ್ಲೊಂದು = ಒಂದಲ್ಲೊಂದು: ಬಹಳ ಮಾತನಾಡುವುದರಿಂದ ಒಂದಿಲ್ಲೊಂದು ತರದ ಅಪರಾಧವಾಗದೆ ಇರದು (ಮುಂಬಯಿ. ೪–೪೯). ಒಂದುಕೈತೋರಿಸು = (ಅಲಂ). (ತನ್ನ) ಬಲವನ್ನು ಪ್ರಕಟಿಸು; ಬಿಸಿತೋರಿಸು: ಪ್ರಸಂಗ ಬಂದಾಗ ಅವಳಿಗೂ ಒಂದು ಕೈತೋರಿಸಬೇಕೆಂದು ಆ ದಿನವೇ ನಿಶ್ಚಯಮಾಡಿದನು (ರಂಗರೋ. ೩೧). ಒಂದುಕೈನೋಡು = ೧. ಸೇಡು ತೀರಿಸಿಕೊ: ಆಗಲಿ ನಾನೂ ಒಂದುಕೈ ನೋಡುತ್ತೇನೆ (ಕಾವೇರಿ. ೮೯). ೨. ಪ್ರಯತ್ನಿಸು: ನಿಮಗೆ ಸಾಧ್ಯವಾಗದಿದ್ದರೆ ಹೇಳಿ, ನಾನೊಂದು ಕೈ ನೋಡುತ್ತೇನೆ (ರೂಢಿ). ಒಂದುತ್ತರ = ಉತ್ತರೋತ್ತರ: ಭಟಾರರ ರಾಜ್ಯಂ ಒನ್ದುತ್ತರಮಭಿವೃದ್ಧಿಸಲೆ (ಸೌಇಇ. XI–i, ೫–೪ ; 751); ಭಟಾರರೊನ್ದುತ್ತರಂ ರಾಜ್ಯಂಗೆಯ್ಯುತ್ತಿರೆ (ಎಇ. VII, ೨೧೨–೩ ; 854). ಒಂದುಪಕ್ಷ = ಒಂದುವೇಳೆ: ಒಂದು ಪಕ್ಷ ಅವನು ಮನೆಯಲ್ಲಿ ಇಲ್ಲದಿದ್ದರೆ ಅವನ ಮನೆಯಲ್ಲಿ ಹೇಳಿ ಬಾ (ರೂಢಿ). ಒಂದುಬೀಸು = ಖಡ್ಗ ಯುದ್ಧದಲ್ಲಿ ಒಂದುವರಿಸೆ, —ಪಟ್ಟು: ನಿಲುವ ನಿಲುಗಡೆಯಲ್ಲಿ ನಿಂತು ಶೀಘ್ರಗಮನ ಮುಂತಾಗಿ ಬಂಡಿಗೋಲಿನ ಬೀಸುಯಾವುದು ಅದು ಒಂದು ಬೀಸು ಯಂದು ನುಡಿಯಲ್ಪಡುವುದು (ಖಡ್ಗಟೀ. ೫–೨೦). ಒಂದುವೇಳೆ = ಹಾಗಾದ ಪಕ್ಷದಲ್ಲಿ: ಒಂದು ವೇಳೆ ಅವನು ಬಾರದಿದ್ದರೆ ನೀನು ಹೋಗು (ರೂಢಿ). ಒಂದುಹೊತ್ತು = ೧. ಒಪ್ಪೊತ್ತು: ಒಂದುಹೊತ್ತು ಉಂಡವ ಯೋಗಿ ಎರಡು ಹೊತ್ತು ಉಂಡವ ಭೋಗಿ ಮೂರು ಹೊತ್ತು ಉಂಡವ ರೋಗಿ (ಗಾದೆ); ಶನಿವಾರ ಒಂದು ಹೊತ್ತು ಶಾಲೆ (ರೂಢಿ). ೨. ಒಂದು ಹೊತ್ತು ಮಾತ್ರ ಊಟ ಮಾಡುವ ವ್ರತ: ಅವನು ಸೋಮವಾರ ಒಂದುಹೊತ್ತು ಮಾಡುತ್ತಾನೆ (ರೂಢಿ). ಒಂದೂವರೆ = ಒಂದು ಮತ್ತು ಅರ್ಧ; ಅರ್ಧಾಧಿಕ: ಚೀಲ ಒಂದಕ್ಕೆ ಒಂದೂವರೆ ಆಣೆಯಂತೆಯೂ (ಮುಂಬವ್ಯಾ. ೩). ಒಂದೆಗೆಯ್ = ಒಂದು ಮಾಡು; ಕೂಡಿಸು: ಪುರ್ವಿಗರಾದ್ದೊಡಮಾರೊರ್ವರೊನ್ದೆಗೆಯ್ದು ಸಾಮ್ಯಮನಾಳ್ವುದು (ಸೌಇಇ. XI–i, ೬೪–೩೫ ; 1028). ಒಂದೇಸಮನೆ, ಒಂದೇಸವನೆ = ಎಡೆಬಿಡದೆ; ನಿರಂತರವಾಗಿ; ಏಕಪ್ರಕಾರವಾಗಿ: ಜೂಜಿನ ಕುದುರೆಯಂತೆ ಒಂದೇ ಸಮನೆ ತಕಪಕ ಕುಣಿಯುತ್ತಿತ್ತು (ಮುರುಕು. ೩೮); ಮಳೆ ಒಂದೇ ಸಮನೆ ಬರುತ್ತಿದೆ (ರೂಢಿ); ಕೂಸು ಒಂದೇಸವನೆ ಅಳುತ್ತಿತ್ತು (ರೂಢಿ). ಒಂದೊಪ್ಪತ್ತು = ಒಂದುಪಕ್ಷ, —ಸಮಯ: ಒಂದೊಪ್ಪತ್ತು ನಾನೇ ಹೇಳಿದಂತೆ ಇದೆಯೆಂದು ತಿಳಿದರೂ . . . ಪೂರ್ವಾಪರಸಂಬಂಧ ತಿಳಿಯುವಂತಿಲ್ಲ (ನಿರಾಭ. ೧೨೯).

[ದೇ. ‖ ತಮಿ. ಒನ್ಱು, ಒಣ್ಣು; ಮಲ. ಒನ್ನು, ಒಱ್ಱು; ತುಳು. ಒಂಜಿ, ಒರ್; ಕೊಡ. ಒಂದೀ; ತೆಲು. ಒಂಡು, ಒಕ; ಕೋಲಾ. ನಾಯ್ಕಿ. ಒಕ್ಕೊದ್; ಪರ್ಜಿ. ಒರ್; ಗದಬ. ಒಕುಟ್; ಗೊಂಡಿ. ಉಂಡೀ, ಒಂಡ್; ಕುಇ. ರೊ; ಕುವಿ. ರೊಂಡಿ, ರೋ; ಕುರುಖ್. ಒಂಟಾ; ಮಲ್ತೊ. ಓನ್ಡ್, ಒರ್ತ್]

**ಒಂದುಗಾಣ್** (ಕ್ರಿ). ಒಂದನ್ನು ನೋಡು; ಯಾವುದಾದರೊಂದನ್ನು ನೋಡು: ನುಡಿವರ್ಬಿರಮನೊನ್ದುಗಣ್ದು ಸೆಡೆವರ್ ಚಾಗಕ್ಕೆ ಮುಯ್ವಾಂ ಪರೀವಡೆ ಪಲ್ಗಡ್ಡುವರ್ (ಎಕ. II, ೧೩೩–೬೬ ; 982).

[ಒಂದು$_3$ + ಕಾಣ್]

**ಒಂದುಗುಂದು** (ಕ್ರಿ). ಒಂದು ಕಡಮೆಯಾಗು, —ಕೊರತೆಯಾಗು: ದೊರೆಯಾಗಿರ್ಪಿನಮೊಂದುಗುಂದದಖಿಲಂ ವಿಜ್ಞಾನದಿಂದಂ ಜಗದ್ಗುರುವಾದಂ (ಗದಾಯು. ೧-೩); ಮಸ್ತಕಾಂಬುರುಹಮನೊಂದುಗುಂದದೆ ಕ[ಕಿ]ಮುಟ್ಟಿ (ಸೌ ಇ ಇ. XI-i, ೧೦೩-೮; 1070); ತನ್ನ ಕಾರ್ಯಭರಮಂ ವಿಶ್ವಾಸುಲೋಮಂಗೆ ವಿಸ್ತರದಿಂದೆಲ್ಲಮನೊಂದುಗುಂದದಜೀಪಿರ್ದು (ಧರ್ಮಾಮೃ. ೨-೧೯೬). [ಒಂದು$_3$ + ಕುಂದು$_1$]

**ಒಂದುಗೂಡಿಸು** (ಕ್ರಿ). ಒಟ್ಟಾಗಿ ಸೇರಿಸು; ಒಟ್ಟುಗೂಡಿಸು: ಪಾಠೀಣಮಂತ್ರ ಬುದ್ಧಿಯಲಿ ಓರಂತೊಂದುಗೂಡಿಪ ಮಂತ್ರಿಗಳ ಶೃಂಗಾರ ಗೃಹಗಳೊಪ್ಪಿದುವು (ಕಂಸವ. ೬-೪೩); ನಮ್ಮ ಜನರನ್ನು ಪುನಃ ಒಂದುಗೂಡಿಸಿ ಒಂದು ಪತಾಕೆಯ ಆಶ್ರಯದಲ್ಲಿ ನೆಲೆಗೊಳಿಸಬೇಕು (ಚಿದೇವ.೫೪). [ಒಂದುಗೂಡು + -ಇಸು$_3$]

**ಒಂದುಗೂಡು** (ಕ್ರಿ). ೧. ಒಟ್ಟಾಗಿ ಸೇರು; ಜೊತೆಯಾಗಿ ಕೂಡು: ಜಗದ ಕಂಟಕರೆಲ್ಲ ನಿಮಿಷದೊಳೊಂದುಗೂಡಿದರು (ಕೌಶಿರಾ. ೩೨-೧೨); ಸುರಾಸುರರೊಂದುಗೂಡಿ ಪನ್ನಗರಶ್ಮಿಯಿಂದ ಪಾಲ್ಗಡಲ ನಗವಿಟ್ಟು ಕಡೆದೊಡೆ (ಮೋಹತ. ೪೦-೨೦); ಅದು ಹಾರುವಾಗ ಆ ಬಂಡೆಕಲ್ಲುಗಳು ಒಂದುಗೂಡುತ್ತವೆ (ಮಣಿಸ. ೮೧). ೨. ಒಟ್ಟಾಗಿ ಸೇರಿಸು; ಜೊತೆಯಾಗಿ ಕೂಡಿಸು: ನಾಗರತುಪ್ಪ ಕ್ಷೀರ ಲಶುನಂ ರಸರಾಮಠಮೆಂಬಿವೆಲ್ಲಮಂ ರಾಗದೊಳೊಂದುಗೂಡಿ ಜಲದಿಂ ನೆಜಿಸಿಮಾಡಿದ ನಸ್ಯದಿಂದೆ (ಖಮದ. ೬-೫); ಗೊಂದಣದ ವಾಘೆಗಳನೆಲ್ಲಮನೊಂದುಗೂಡೆ (ಕುವ್ಯಾಆ. ೮-೧೮); ಅಮೃತಜಂಬೀರ ರಸವನೊಂದುಗೂಡಲು ರೋಗಾಂತ್ಯವಹುದೆ (ಮೋಹತ. ೪೦-೩೦). [ಒಂದು$_3$ + ಕೂಡು$_1$]

**ಒಂದುಗೊಳ್** (ಕ್ರಿ). ಒಂದನ್ನು ತೆಗೆದುಕೊ,— ಪಡೆ: ಕರಿಯಂ ನುಂಗಿ ಕಳಿಂಗನಂ ನೊಣೆದ ದರ್ಪಕ್ಕೊಂದುಗೊಳ್ ಮತ್ತಹೋದರರಂ ಕೋಪದೆ ತಿಂದುದರ್ಕೆರಡುಗೊಳ್ (ಗದಾಯು. ೮-೧೮). [ಒಂದು$_3$+ ಕೊಳ್$_1$]

**ಒಂದುಗೊಳಿಸು** (ಕ್ರಿ) ಒಟ್ಟುಗೂಡಿಸು: ದೀಪ್ತಿಸಾಗರದ ಬೃಹದ್ಗರ್ಭದಲಿ ಸ್ತಂಭದಂತೆ ನಿಂತೆ ಮೂಲದಗ್ನಿಯನು ಮೇಲಿನಗ್ನಿಯಲಿ ಒಂದುಗೊಳಿಸುವಂತೆ! (ಅರಳು. ೧೮೨-೧೪).

[ಒಂದು$_1$ + ಕೊಳ್$_1$ + -ಇಸು$_3$]

**ಒಂದುತನ** (ನಾ). ಏಕರೂಪತೆ; ಸಮಾನತೆ: ಉಡುಪಿಯ ನಮ್ಮ ಕನ್ನಡ ಬಂಧುಗಳ ಕೃಪೆಯಿಂದ ನಮ್ಮ ಆಹಾರದಲ್ಲಿ ಒಂದುತನ ಬರಲಾರಂಭಿಸಿದೆ (ಕನ್ನಸು. ೧-೧೯). [ಒಂದು$_1$ + -ತನ]

**ಒಂದುಮಾಡು** (ಕ್ರಿ). ಒಂದುಗೂಡಿಸು; ಒಟ್ಟಾಗಿ ಸೇರಿಸು; ಬೆರೆಸು: ಕನ್ನಡಂಗೊಳೊಳಗಣಿತ ಗುಣವಿದಿತ ಸಂಸ್ಕೃತೋಕ್ತಕ್ರಮಮಂ ಬಗೆದೊಂದುಮಾಡಿ ಪೇಟ್ದೊಡೆ (ಕವಿರಾ. ೧-೫೭); ಆಗಳಾಜುಂ ಋತುಗಳ ಪೂಗಳನೊಂದುಮಾಡಿ (ಪಂಪಭಾ. ೪-೮೦ ವ); ಊರ ಮುಖಂಡರು ಬಂದು ಪಂಚಾಯ್ತಿಮಾಡಿ ಗಂಡಹೆಂಡಿರನ್ನು ಒಂದುಮಾಡಬೇಕು (ಸುವಸಂ. ೩೧). [ಒಂದು$_1$ + ಮಾಡು$_1$]

**ಒಂದುವಣೆ** (ಕ್ರಿ). ಒಂದುಗೂಡು; ಸೇರು: ಒಂದೊರೆಯೊಳಗತಿನಿಸಿತ ಮಪ್ಪಸಿ ಎರಡೊಂದುವಣೆಯವದಜಂತೆ ಒಂದೂರೊಳಗೀರ್ವರರಸುತನವನಾಳ್ವುದಂದವಹುದೆ (ನೇಮಿಸಂ. ೨೩-೫೧). [ಒಂದು$_1$+ - ಅಣೆ$_1$]

**ಒಂದುವೆರಸು** (ಕ್ರಿ). = ಒಂದುಗೂಡು ೧: ಬಿಸಿ ಪನ್ನೆರಡಾದ ಬಳಿಕಾರೊಳಮೊಂದುವೆರಸದೆ ಪೆಜದೆಗೆದಿಹುದು (ಹದಿಬ. ೪-೩೪).

[ಒಂದು$_1$ + ಬೆರಸು$_1$]

**ಒಂದೆನಿಸು** (ಕ್ರಿ) ಒಟ್ಟಾಗಿ ಸೇರು; ಜೊತೆಯಾಗಿ ಕೂಡು: ಬೇರ್ವರಿದಿರ್ಪ ವೈರದ ಬೇರ ಪಜಿದಿಟ್ಟರ್ವರೊಂದೆನಿಸಿಯೊಪ್ಪುವರು (ಹದಿಬ. ೧-೫೯). [ಒಂದು$_1$ + ಎನಿಸು$_1$]

**ಒಂದೆರಳ್ಮುರಿ** (ಕ್ರಿ). ಒಂದೆರಡುಬಾರಿ (ರೆಪ್ಪೆ) ಮಿಟುಕಿಸು: ಎನಲೊಡನಜಿದಾಗಳೆ ಕಣ್ಣ ತಿಕ್ಕುತೊಯ್ಯನೆ ಯೆವೆವೊಂದೆರಳ್ಮುರಿಯೆ ಅನಿತಜಿಕೊಳಗೆ ಕಣ್ಣನೀರೊಕ್ಕುವುದ ಕಂಡು (ಭರತ. ೯-೭೩).

[ಒಂದು$_3$ + ಎರಳ್ (< ಎರಡು) + ಮುರಿ$_1$]

**ಒಂದೆಲಗ** (ನಾ). ಬಿಡಿಬಿಡಿಯಾಗಿ ಒಂದೊಂದೇ ಎಲೆಯಿರುವ ಗಿಡ; ಇಲಿಕಿವಿಗಿಡ; ಬ್ರಾಹ್ಮಿ: ಹುಲಿಗಿಲು ಹುಣಸೆಯ ಸೊಪ್ಪೊಂದೆಲಗಂ ಭೂತಾಂಶಿ ತರಣಿ ಎಂಬಿನಿತಜಿಕೊಳಂದಲಸದೆ ಬೆರಸಂಕೋಲೆಲೆಯನೊಲವಿಂದಂ ಬೇದುಗಟ್ಟಲಖಿಳ ವಿಷಘ್ನಂ (ಖಮದ. ೧೦-೫೬); ಒಂದೆಲಗಮೆಲ ಹೊಲ್ಲ ನಿಂದಕರ ನೆರೆ ಹೊಲ್ಲ (ಸರ್ವಜ್ಞ. ೧೯೦೦); ಒಂದೆಲಗ: ಇದು ಗದ್ದೆಯ ಅಂಚುಗಳಲ್ಲಿಯೂ ತೋಟಗಳಲ್ಲಿಯೂ ಬೆಳೆಯುತ್ತದೆ (ಸಸ್ಯಶಾ. ೧೩೬). [ಒಂದು$_3$+ ಎಲೆ$_1$ + -ಗ$_2$]

**ಒಂದೆಲೆವೊನ್ನೆ** (ನಾ) = ಒಂದೆಲಗ: "ಚಿತ್ರಪರ್ಣೀ – ಒಂದೆಲೆವೊನ್ನೆ" (ಓಷಧಿ. ೫೭); "ವಿದಾರಿಗಂಧಾ – ನರಿವಾಲ, ಒಂದೆಲೆವೊನ್ನೆ" (ಓಷಧಿ. ೧೫೪). [ಒಂದೆಲೆ$_0$+ ಪೊನ್ನೆ]

**ಒಂದೆವಸ,** ಒಂದಿವಸ (ನಾ). ಒಂದು ದಿನ: ಅನುಂ ವಿಧೇಯನಲ್ಲಂ ನೀನುಂ ಗುರುವಲ್ಲಮಿಂದಿನೊಂದೆವಸದೊಳ್ (ಗದಾಯು. ೬-೨೫). ಒಂದಿವಸ: ದಾಸಿಯರೊಳೊಂದಿವಸಮಿಪ್ಪುದಘಟಿತಮಪ್ಪುದು (ಚಿಬವು. ೧೯-೪೫). [ಒರ್ (< ಒಂದು$_3$) + ದೆವಸ]

**ಒಂದೆಸೆ** (ನಾ). ಒಂದು ದಿಕ್ಕು, —ಕಡೆ, —ಪಕ್ಕ: ರಥವಾಜಿಗಳೊಂದೆಸೆಯೊಳ್ ರಥಂಗಳೊಂದೆಸೆಯೊಳುರುಳ್ದು ಕೆಡೆದುವು (ಗದಾಯು. ೩-೬); ನೆಲದೊಂದೆಸೆಗೊಲೆದು (ಕಬ್ಬಕಾ. ೨೮೮); ರಥವದೊಂದೆಸೆ ಹಯವದೊಂದೆಸೆ ರಥಿಕರೊಂದೆಸೆ ಚಾಪ ಶರಸಾರಥಿಗಳೊಂದೆಸೆಯಾಗೆ ಕೊಂದರು (ಕುವ್ಯಾಭೀ. ४-೯೮). [ಒರ್ (< ಒಂದು$_3$) + ದೆಸೆ]

**ಒಂಬತು** 'ಒಂಬತ್ತು' ನೋ.

**ಒಂಬತ್ತು,** ಒಂಬತು, ಒಂಭತ್ತು (ನಾ). ಒಂದು ಸಂಖ್ಯಾವಾಚಕ; ಹತ್ತಕ್ಕೆ ಒಂದು ಕಡಮೆ; ಎಂಟರ ಮೇಲೆ ಒಂದು; ನವ: ಅಲ್ಲಿಯಜುಮತ್ತಕ್ಕೆಯ್ಯಂ ಒಂಬತ್ತು ಗಯ್ಯ (ಸೌಇಇ. XI-i. ೧೦-೩೨; 894); ಒಂಬತ್ತು ತಿಂಗಳ ಗರ್ಭಿಣಿಯಂ (ವಡ್ಡಾರಾ. ೧೦೬-೨); ಸಹದೇವಕನನೊಂಬತ್ತಜಲಿ ಭೀಮನನೆಂಟುಕೋಲಿನಲಿ (ಕುವ್ಯಾಕ. ೧೧-೧೧); ಹಿಂದಿದೊಡೊಂಬತ್ತು ಬಣ್ಣ ಸೋರುವ (ಮೋಹತ. ೨೫-೨೧). **ಒಂಬತು:** ಒಂಬತುಂ ನಿಧಿ ಬರಲ್ ಮತಿ ಪತ್ತದು ದೃಷ್ಟಿ ಸೌಖ್ಯಮುಂ (ಜಗವಿ. ೯-೫೨); ಒಂಬತುಂ ಗರಮನೆಂಟುಂ ಗೊಂಟನೊಳ್ ಕಟ್ಟಿ ತೂಗುವೆಂ (ಕಬ್ಬಕಾ. ೧೫೪). **ಒಂಭತ್ತು:** ಕರಿಗಳ್ ಭೃಂಗಕುಳಾಕುಳೀಕೃತಕಟೋಪೇತಂಗಳೊಂಭತ್ತುಸಾಸಿರಂ (ಪಂಪಭಾ. ೯-೯೫); ಒಂಭತ್ತು ಬಾಗಿಲ ಮನೆ (ಪುರಂದ. ೧-೧೧೨-೬); ಪುತ್ರರಿಲ್ಲದಿದ್ದರೊಂದು ಕಷ್ಟ, ಪುತ್ರರಿದ್ದರೆ ಒಂಭತ್ತು ಕಷ್ಟ (ಗಾದೆ).

ಒಂಬದಿಂಬರ್ = ಒಂಬತ್ತುಮಂದಿ, —ಜನ: ಪ್ರತಿಷ್ಠೆಗೆ ಒಮ್ಬದಿಮ್ಬರುಂ (ಎಕ. IX, ಬೆಂಗಳೂ. ४೨-೧; 870). **ಒಂಭತ್ತುಪಣದವರು** = ೧. ಎಡಗೈ ಜಾತಿಯವರು; ಹೊಲೆಯರು(ಕಿ). ೨. "ವೀರಶೈವ ಗುರುತ್ವ ಒಪ್ಪದ ಕುಲಾಚಾರದವರು." (ಶರಸಾ. ೨४-೬).

[ದೇ.॥ ತಮಿ. ಒನ್ಬದು, ಒಮ್ಬದು, ಒಮ್ಬೋದು; ಮಲ. ಒಮ್ಪದು; ತುಳು. ಒರ್ಮ್ಬ; ಕೊಡ. ಒಯ್ಮ್ಬದೀ; ಗೊಂಡಿ. ಉನ್ಮಾ, ಉನ್ಮಾಕ್]

**ಒಂಬದಿಂಗಳು** (ನಾ). ಒಂಬತ್ತು ತಿಂಗಳು; ನವಮಾಸ: ತಿಂಗಳಾಜೀಳು ನೆಜಿದೊಂಬದಿಂಗಳಾದುದು ಕಂತುವಿಗೆ (ಮೋಹತ. ೧೧-೫೮).

[< ಒಂಬತ್ತು + ತಿಂಗಳು (< ತಿಂಗಳ್)]

**ಒಂಬಯ್**, ಒಂಭಯ್, ಒಂಭೈ (ನಾ). ಸಮಾಸದಲ್ಲಿ ಒಂಬತ್ತು ಎಂಬುದಕ್ಕೆ ಆದೇಶವಾಗಿ ಬರುವ ರೂಪ: ಪತ್ತು ಪರಮಾಗಲೊಡ ಮೊಂಬತ್ತು ತೊಮಂದಕ್ಕುಮುಗ್ರದೊಳ್ ನೂ ಱಿ ರೆ ಮೇಣ್ ಮತ್ತಂ ಸಾಸಿರಮಿರೆ ನೆಲೆಸಿತ್ತೊಂಬಯ್ಕೆಂದು ವಿಬುಧರಿಂದಾದೇಶಂ (ಶಮದ. ೧೯೦). 'ಒಂಬಯ್ನೂಱು' ಪರಾ. **ಒಂಭಯ್** : 'ಒಂಭಯ್ನೂಱು' ಪರಾ. **ಒಂಭೈ** : 'ಒಂಭೈನೂಱು' ಪರಾ. [< ಒಂಬತ್ತು]

**ಒಂಬಯ್ನೂಱು**, ಒಂಭಯ್ನೂಱು, ಒಂಭೈನೂಱು (ನಾ). ಸಂಖ್ಯಾವಾಚಕಗಳಲ್ಲಿ ಒಂದು; ಒಂಬತ್ತುನೂರು: ಒಂಬಯ್ನೂಱು (ಶಮದ. ೧೯೦ ಪ್ರಯೋ). **ಒಂಭಯ್ನೂಱು** : "ಎಣ್ದೆಸೆ, ಒಂಭಯ್ನೂಱು, ಪಯಿಂಛಾಸಿರಂ – ಇವು ಸಂಖ್ಯಾನಂಗಳ್" (ಕಶಸಾ. ೨೬–೫೩೯). **ಒಂಭೈನೂಱು** : ರಾಜ್ಯಂಗೆಯ್ಯುತ್ತಿರೆ ಸಖಕಾಲಮೊಂಭೈನೂಱ ಪದಿನಾಱನೆಯ ವಿಜಯಸಂವತ್ಸರ (ಮೈಆರಿ. ೧೯೩೧, ೪೩–೨; 993). [ಒಂಬಯ್ (< ಒಂಬತ್ತು) + ನೂಱು$_1$]

**ಒಂಭತ್ತು** 'ಒಂಬತ್ತು' ನೋ.

**ಒಂಭಯ್** 'ಒಂಬಯ್' ನೋ.

**ಒಂಭಯ್ನೂಱು** 'ಒಂಬಯ್ನೂಱು' ನೋ.

**ಒಂಭೈ** 'ಒಂಬಯ್' ನೋ.

**ಒಂಭೈನೂಱು** 'ಒಂಬಯ್ನೂಱು' ನೋ.

**ಒಕತನ** 'ಒಕ್ಕತನ' ನೋ.

**ಒಕಲು** 'ಒಕ್ಕಲ್$_2$' ನೋ.

**ಒಕಾರ** (ನಾ). [ವ್ಯಾಕ] 'ಒ' ಎಂಬ ವರ್ಣ: ಕೆಲಬರುಪಾಂತ್ಯದಕಾರದ ನೆಲೆಯೊಳೊಕಾರಂ . . . ಅಕ್ಕುಮದೆಂಬರ್ (ಕಾವ್ಯಾವ. ೩೦೨). [ಸಂ.]

**ಒಕುಳಿ** 'ಒಕುಳಿ' ನೋ.

**ಒಕ್ಕು**$_1$ 'ಉಗು$_1$' ಪರಾ.

**ಒಕ್ಕು**$_2$ 'ಒಗು$_1$' ಪರಾ.

**ಒಕ್ಕು**$_3$ (ನಾ). ಒಂದು ಪ್ರದೇಶ (?): ತಮ್ಮ ಮೊದಲೊಕ್ಕದೊಳ್ಪತ್ತು ಕೊಳಗ ಗದ್ದೆ (ಎಕ. XIV, ಮಳವ. ೧೨೪–೧; 1014). [?]

**ಒಕ್ಕಂಡುಗ** 'ಒರ್ಕಂಡುಗ' ನೋ.

**ಒಕ್ಕಂದಿ** (ನಾ). ೧. ವರ್ಷಕ್ಕೊಮ್ಮೆ ಕರು ಹಾಕುವ ಹಸು; ವರ್ಷಕ್ಕೊಂದು ಬಾರಿ ಈಯುವ ಹಸು. ೨. ಒಂದು ಕರುವನ್ನು ಹಾಕಿದ ಹಸು. [ಒರ್ (< ಒಂದು$_3$) + ಕಂದಿ$_1$]

**ಒಕ್ಕಟ್ಟು**, ಒಗ್ಗಟ್ಟು (ನಾ). ಒಂದು ಕಟ್ಟಿನಲ್ಲಿರುವುದು; ಐಕ್ಯ; ಐಕಮತ್ಯ: "ಒಕ್ಕಟ್ಟು ತಪ್ಪಿದರೆ ಇಕ್ಕಟ್ಟಿನಲ್ಲಿ ಬೀಳುವರು" (ನೀಗಟ್ಟು. ೯೧). **ಒಗ್ಗಟ್ಟು** : ಒಗ್ಗಟ್ಟಿನಲ್ಲಿ ಬಲವಿದೆ (ರೂಢಿ). [ಒರ್ (< ಒಂದು$_3$) + ಕಟ್ಟು$_2$]

**ಒಕ್ಕಡಿ** (ನಾ). ೧. ಒಂದು ತುಂಡು. ೨. (ಕರಾ) ತುಂಡು ಅರಿವೆ, —ಬಟ್ಟೆ. [ಒರ್ (< ಒಂದು$_3$) + ಕಡಿ$_4$]

**ಒಕ್ಕಡೆ** (ನಾ). ಒಂದು ಕಡೆ, —ಭಾಗ, —ಮಗ್ಗುಲು: ರಕ್ಕೆಯಂದದೊಳೆನ್ನ ರಕ್ಷಣೆಗೊಕ್ಕಡೆಯೊಳನುಜಾತನಿರ್ಪನು (ರಾಮಾಸಂ. ೬–೧–೧೩); ತೇಪೆಹಾಕಿದ ಹಳದಿ ಹತ್ತಿಯ ಕೋಟನ್ನೂ, ಒಕ್ಕಡೆ ಸವೆದ ಬೂಟುಗಳನ್ನೂ ಧರಿಸಿದ್ದನು (ಪುನರು. ೩೦೧). [ಒರ್ (< ಒಂದು$_3$) + ಕಡೆ$_3$]

**ಒಕ್ಕಣ್** 'ಒರ್ಕಣ್' ನೋ.

**ಒಕ್ಕಣ**$_1$ 'ಒಕ್ಕಣೆ$_1$' ನೋ.

**ಒಕ್ಕಣ**$_2$ (ನಾ). ಒಂದು ಆಯುಧ: ಜೋಡು ಮೊಚ್ಚೆಯಂ ಭಲ್ಲಿಹ ಸೀಸಕಂ ಕವಚಡಾಯುಧವೊಕ್ಕಣವುದ್ದುವಾರೆಯುಂ . . . ಸಂಭ್ರಮ ಮುಬ್ಬರಮಾಯ್ತು ದಂಡಿನೊಳ್ (ಸೂಕ್ತಿಸು. ೧೮–೨೮). [?]

**ಒಕ್ಕಣ**$_3$ (ನಾ). ೧. ತಗುಣಿ (ಕ). ೨. ಹೇನು (ಕ). [< ಸಂ. ಓಕಣ]

**ಒಕ್ಕಣಿಕೆ**$_1$ (ನಾ). = ಒಕ್ಕಣೆ$_1$. [ಒಕ್ಕಣೆ$_1$ + –ಇಕೆ]

**ಒಕ್ಕಣಿಕೆ**$_2$ (ನಾ). ವ್ಯಾಖ್ಯಾನ; ಬರಹ; ಆಜ್ಞೆ: ಈ ಬಾವಿಯ . . . ನೀರಿನಿಂದ ಬೆಳೆದ ಕಾಯಿಪಲ್ಯಗಳನ್ನು ಧರ್ಮಕ್ಕೆ ನೀಡಬೇಕೆಂದು ಒಕ್ಕಣಿಕೆಯಿದೆ (ಹಬ್ಬಬ. ೯); ". . . ಎಲ್ಲರೂ ನಮ್ಮ ಅಜ್ಞಾನುವರ್ತಿಗಳಾಗಿ ಹೈದರನಿಗೆ ಅನುಕೂಲರಾಗಿರತಕ್ಕದ್ದು" ಎಂಬ ಒಕ್ಕಣಿಕೆಯು . . . ಹೊರಟಿತು (ಒಡೆಕ. ೯೧). [ಒಕ್ಕಣೆ$_2$ (< ವಕ್ಕಾಣ) + –ಇಕೆ]

**ಒಕ್ಕಣಿಸು** 'ವಕ್ಕಾಣಿಸು' ನೋ.

**ಒಕ್ಕಣೆ**$_1$, ಒಕ್ಕಣ$_1$ (ನಾ). ಪೈರಿನಿಂದ ಕಾಳನ್ನು ಬೇರ್ಪಡಿಸುವ ಕೆಲಸ; ಒಕ್ಕುವಿಕೆ; ಕಣಗೆಲಸ: ಒಕ್ಕಣೆಮಾಡುವುದು — ಪೈರನ್ನು ಕೊಯ್ದು ಒಣಗಿಸಿದ ಮೇಲೆ ಅದನ್ನು ಹೊಡೆದೊ ತುಳಿಸಿಯೊ ಕಾಳನ್ನು ಬೇರೆಮಾಡಿ, ಆಮೇಲೆ ಗಾಳಿಯಲ್ಲಿ ತೂರಿ . . . ದಾಸ್ತಾನು ಮಾಡಬೇಕು (ವ್ಯವಮು. ೨೩). **ಒಕ್ಕಣ**$_1$ : ಕೊಯ್ಲಾದಂತೆ ಸೂಡಿನಂತೆ ಕಳಕ್ಕೆ ವರ್ಪಂತೆ ಒಕ್ಕಣ [ಪಾಠಾಂ. ಭಕ್ಷಣ] ದಂತೆ ರಾಶಿಯಂತೆ (ಧರ್ಮಾಮೃ. ೧೨–೨೪). [ಒಕ್ಕು$_1$ + –ಅಣೆ ?]

**ಒಕ್ಕಣೆ**$_2$ 'ವಕ್ಕಾಣ' ನೋ.

**ಒಕ್ಕಣೆಯಂತ್ರ** (ನಾ). ಒಕ್ಕಣೆ ಮಾಡುವ ಯಂತ್ರ; ಪೈರಿನಿಂದ ಕಾಳನ್ನು ಬೇರ್ಪಡಿಸುವ ಯಂತ್ರ: ನೇಗಿಲು, ಕುದುರೆ, ಒಕ್ಕಣೆ ಯಂತ್ರ ಮತ್ತು ಉಳಿದೆಲ್ಲ ಉಪಕರಣಗಳು ಊರೊಟ್ಟಿನ ವಶದಲ್ಲಿರಬೇಕು (ಪುನರು. ೩೦೪). [ಒಕ್ಕಣೆ$_1$ + ಯಂತ್ರ]

**ಒಕ್ಕಣ್ಣ** (ನಾ). ಒಂದು ಕಣ್ಣುಳ್ಳವನು; ಏಕಾಕ್ಷ; "ಒಂದು ಕಣ್ಣುಳ್ಳವ" (ಜಾನಕೋ. ೨೮). [ಒಕ್ಕಣ್ (< ಒರ್ಕಣ್) + –ಅ$_7$]

**ಒಕ್ಕಣ್ಣಡಕ** (ನಾ). ಒಂದೇ ಕಣ್ಣಿಗೆ ಹಾಕಿಕೊಳ್ಳುವ ಕನ್ನಡಕ (Monocle. ಇಂಕನಿ). [ಒರ್ (< ಒಂದು$_3$) + ಕಣ್ಣಡಕ]

**ಒಕ್ಕಣ್ಣಿ** (ನಾ). ಒಂದು ಕಣ್ಣುಳ್ಳವಳು; ಏಕಾಕ್ಷಿ: ಮಠವನ್ನು ಗುಡಿಸುತ್ತಿದ್ದ ಒಕ್ಕಣ್ಣಿಯಾದ ಒಬ್ಬ ಮುದುಕಿ (ನಗೆಗ. ೧೩). [ಒಕ್ಕಣ್ (< ಒರ್ಕಣ್) + –ಇ$_2$]

**ಒಕ್ಕಣ್ಣಿವಲೆ** (ನಾ). ಒಂದೇ ಕಣ್ಣಿಯಿಂದ ಮಾಡಿದ ಬಲೆ: ಕಣ್ಣಿವಲೆ ಹೊಡೆವಲೆ ಹೊಸೆದ ಕಾಲ್ಗಣ್ಣಿವಲೆ ತೆಳ್ಳುವಲೆ ಪುರಿಯೊಕ್ಕಣ್ಣಿವಲೆ ಹಾಸುವಲೆ ಬೀಸುವಲೆಯು (ಸಾಳ್ವಭಾ. ೫–೧೮). [ಒರ್ (< ಒಂದು$_3$) + ಕಣ್ಣಿ + ಬಲೆ$_1$]

**ಒಕ್ಕಣ್ಣು** 'ಒರ್ಕಣ್' ನೋ.

**ಒಕ್ಕತನ**, ಒಕತನ, ಒಗತನ, ಒಗೆತನ (ನಾ). ಕೂಡಿಬಾಳುವೆ ಮಾಡುವುದು; ಸಂಸಾರ ಮಾಡುವುದು: ಮಕ್ಕಳಿಗೆ ಮನವಾಯ್ತು ವರಸತಿಯೊಕ್ಕತನದಲು ಶಾಂತಪತ್ನಿಗೆ ನಿಷ್ಕಳಂಕದ ಗರ್ಭವಾಯಿತು (ಸಂಭಪ. ೧೩–೩೦); ಸುರರ ಹೆಂಡಿರನೊಕ್ಕತನವನು ಬಿಡಿಸಿ ಸುರಪಾಲಕನ ಪರಿಭವಿಸಿ (ನಿಭಾಗ. ೭–೩–೩). **ಒಕತನ** : ಇಂದೆನ್ನ ಒಕ [ಪಾಠಾಂ. ಗ]ತನ ಹೋದರೆ ಹೋಗಲಿ ಮರಗಾಲ ಬಿಟ್ಟೆನಾದರೆ ಕೂಡಲಸಂಗ ನಿಮ್ಮಾಣೆ (ಬಸವ. ೭೨೦); ದೇವನ ದೇವತ್ವ ಕೆಟ್ಟಿತ್ತು ದೇವಿಯ ಒಕತನ ಮುಱಿಯಿತ್ತು (ವಚಸಂ. ೫೮೦–೨೧); ಒಲ್ಲೆನೊಕತನವ ಒಲ್ಲೆ ನಾನಾಱಿಕೆ ಕೊಲ್ಲಬಂದಾನೆನೆ ಕೋಪದಲಿ ನಲ್ಲ (ಶಿವಗೀ. ೧೩೪–೬೬೩). **ಒಗತನ** : ಮೇಳವಿಲ್ಲದವನ ಒಗತನ [ಪಾಠಾಂ. ಒಕತನ] ಅಳಿಯಬಾಳುವೆ (ಅವಚಂ. ೧೩೩–೬೦೭); ಬಸವಣ್ಣ ಮೆಚ್ಚಲು ಒಗ [ಪಾಠಾಂ. ಗೆ]ತನವ ಮಾಡುವೆ (ಮಹಾದೇ. ೧೧–೧); ಸಾಕು ಸಂಸಾರ ಸಜ್ಜಾಗಿಲ್ಲ ಒಲ್ಲೆ ಒಗತನವ (ಪುರಂದ. ೨–೪೩–೧); ಒಗತನ ಬಿಟ್ಟು ಹೋಹಾಗ ಹಾಲಿಗೆ ಹೆಪ್ಪ ಮೊಗೆದಿಕ್ಕಿದವರಾರುಂಟು (ಮೋಹತ. ೯–೧೯).

**ಒಗೆತನ**: ತೀರಿತ್ತು ತಿದ್ದದಿಹ ವಿಲಗವಮರರ್ಗಮರನಾರಿಯರ್ಗೊಗೆತನಂ ನೆಲೆಯಾಯ್ತು ನಾಕದೊಳ್ (ಚಬಪು. ೪೦-೩೪); ಅರಸನ ಒಗೆತನಕ್ಕೆ ಬೇಸತ್ತು ಸತ್ತಾ ಎಂದು ಸ್ಯೆಗೆಡೆದಿತು (ಬದುರಿ. ೫೪).

ಒಗೆತನಮಾಡು = ಸಂಸಾರಮಾಡು; ಕೂಡಿಬಾಳು: ನಯ, ವಿನಯ, ಅನುನಯಗಳಿಂದ ನಲ್ಲೆಯನ್ನು ಒಲಿಯಿಸಿ ಒಗೆತನ ಮಾಡಿಕೊಂಬುವ ಅರಿವು ಅವನಲ್ಲಿ ಅಂಕುರಿಸಲೇ ಇಲ್ಲ (ಭೂಮಿತಾ. ೨೪).

[< ಒಕ್ಕಲ್₂? + -ತನ. / ತಮಿ. ಮಲ. ಒಕ್ಕ = ಸಂಗಡ, ಒಡನೆ]

**ಒಕ್ಕಯ್** 'ಒರ್ಕೆಯ್' ನೋ.

**ಒಕ್ಕಯಿಸು** 'ಒರ್ಕೆಯ್ಸು' ನೋ.

**ಒಕ್ಕರ** (ನಾ). ಕೊಂಕು; ಡೊಂಕು; ವಕ್ರ: ಊರಿಂದ ಊರಿಗೆ ಪೋಗುವುದೆ ಲೀಲಿ ದಾರಿ ಒಕ್ಕರವಲ್ಲದೆ ನೀಟು ಉಂಟೆ (ಮೋಕ್ಷದೀ. ೭೧-೬); ಒಲಿದು ಒಕ್ಕರ ಪರಿಹರಿಸಿ ಭೀಕರವ ತೊಲಗಿಸು ಶ್ರೀಕರ ಮೂರುತಿ (ಮೋಕ್ಷದೀ. ೧೭೭-೨). [< ಸಂ. ವಕ್ರ]

**ಒಕ್ಕರಗಣ್ಣು** (ನಾ). ಸೊಟ್ಟಗಣ್ಣು: "ಆಪ್ಪಟಿ ಮೂಗಿನ ಬಿಬ್ಬಿರಿವಲ್ಲಿನ ಸೊಟ್ಟನ ನಾವೊಲ್ಲೆ; ಒಕ್ಕರಗಣ್ಣಿನ ಕರಡಿಯ ತೊಗಲಿನ ಗಂಡನ ನಾವೊಲ್ಲೆ" (ಬಳ್ಳಾಬೆ. ೩೧-೧೧). [ಒಕ್ಕರ + ಕಣ್ಣು (< ಕಣ್)]

**ಒಕ್ಕರಣೆ** 'ಪೊಕ್ಕರಣೆ' ನೋ.

**ಒಕ್ಕರಿಸು** 'ವಕ್ರಿಸು' ನೋ.

**ಒಕ್ಕರೆ** (ನಾ). ಕೊಳ; ಪುಷ್ಕರಿಣಿ: "ಆಖಾತಂ, ದೇವಖಾತಕಂ - ೨ ದೇವತೆಗಳಿಂದ ತೋಡಲ್ಪಟ್ಟ ದೊಣೆ, ವ[ಒ]ಕ್ಕರೆ ಮುಂತಾದ ಮಹಾ ಜಲವುಳ್ಳ ದೇವನಿರ್ಮಿತ ಪುಣ್ಯತೀರ್ಥಗಳ ಹೆಸರುಗಳು" (ಸಿದ್ಧಾಂತಿ. ೭೬); ನಮಗೆಯತಿಹಿತವನಂತುಸುರಿ ಬಹುದುಃಖದೊಕ್ಕರಿ[ರೆ]ಗೆ ವಶ ಮಾಡಿದಕಟಾ (ನವಮೋ. ೩೦-೪೪). [< ಹೊಕ್ಕರ$_0$ < ಸಂ. ಪುಷ್ಕರ]

**ಒಕ್ಕಲ್**₁, ಒಕ್ಕಲು₁ (ನಾ). ಒಕ್ಕುವಿಕೆ; ಒಕ್ಕಣೆ: ಒಕ್ಕಲೊಳೊನ್ದು ಪೊಜೆಯುಂ ಕೆಯುಂ ಪದಿಕೊಳಂ ಭತ್ತಮುಂ ಮಿಾಸಲುಂ ಬಳಿವತ್ತಮುಂ ಸಲ್ವುದು (ಎಕ. III, ನಂಜನ. ೧೮೩-೧೦; 977); ತೆಂಕಲ್ ಘಟ್ಟಮಂ ದಾಂಟಿ ಸಾನುವಿನೊಳ್ ರಾಜಿಗನೊಕ್ಕಲಂ ಬಡಿದು ತಂದೊಕ್ಕಲ್ ಜವಂ ನಟ್ಟ ಮೇಟಿವೊಲಾದತ್ತೆನೆ (ಮೈಆರಿ. ೧೯೩೦, ೭೬-೨೬; 1080); ಒಕ್ಕಲಲೊನ್ದು ಪೊಜೆಯು (ಎಕ. III, ನಂಜನ. ೧೬೪-೧೮; 1098). **ಒಕ್ಕಲು**₁: ಒಕ್ಕಲು ಪೆಜುವೊಕ್ಕಲು ಪೇಜಬನ್ದ ಸೂಳೊಳ್ ಒಕ್ಕಲಲು ಬಳ್ಳವೊನ್ದು (ಸೌಇಇ. XI-i, ೧೧೨-೧೩; 1072).

[ಒಕ್ಕು₁ + -ಅಲ್₂]

**ಒಕ್ಕಲ್**₂, ಒಕಲು, ಒಕ್ಕಲು₂, ಒಕ್ಕೆಲು, ಒರ್ಕಲು (ನಾ). ೧. ಮನೆ; ವಾಸಸ್ಥಾನ. ೨. ಮನೆತನ; ಕುಲ; ಕುಳ; ಸಂಸಾರ: ಒಕ್ಕಲುಳ್ಪೊತ್ತಿನ್ಮಕ್ಕಳ್ಪುಟ್ಟಿಲ್ಕಂ ಪುಟ್ಟದೊವುಂ ಪುರಿಗರ (ಎಕ. IV, ಹೆಗ್ಗಡ. ೮೭-೧೨; 700); ದುರ್ಯೋಧನನೊಕ್ಕಲ ಪುಡಿಯೊಳ್ ಪೊರಳ್ಚುವಂತೆ ಪಾಸಂಗೆಯುಂ ಪೊರಳ್ಚಿ (ಪಂಪಭಾ. ೬-೭೧ ವ); ತಮ್ಮೊಕ್ಕಲೊಳಗಾರುಂ ಸಾಯದರ ಮನೆಯ ಪುಲ್ಲಂ ಕಿರ್ಚುಮಿ ತರ್ಪುದುಯೆಂದೊಡೆ (ಜೀವಸಂ. ೨೧-೩೮ ವ). ೩. ಬೇಸಾಯಗಾರ; ರೈತ; ಒಕ್ಕಲಿಗ: ಪಿರಿದು ತೆತ್ತೊಕ್ಕಲಂತೆ (ಧರ್ಮಾಮೃ. ೫-೧೨೫); ಇಲ್ಲಿಯ ಪುರದ ಒಕ್ಕಲಿವರು ಇಲ್ಲಿಯ ಬೆಸಮಕ್ಕಳಾರೆನ್ದೊಡೆ (ಎಕ. III, ನಂಜನ. ೧೩೯-೮; 915). **ಒಕೆಲು**: ೪. ನಿವಾಸಿ; ಪ್ರಜೆ: ಮುನೂಜುಮೊಕಲೊಳ × ಆಚಲರೆಂಬಡೆ ಕಲುಳ್ಳಗಟ್ಟುವರ ಸರಸ ಬೇತಿಯ ಬೇಗಳ ಮಗ (ಕಇಅ. ೧೧೭-೨೧-೮; 792). **ಒಕ್ಕಲು**₂: ೨. ಯಮದೇವರ ಒಕ್ಕಲು ನಿತ್ಯಮರಣಸಿದ್ಧರು (ಶೂರ್ಯಪಾ. ೬೩-೭); ಕುಮಾರವ್ಯಾಸನೂ ಚಾಮರಸನೂ ಒಂದೇ ಒಕ್ಕಲಿನವರು (ಕಸಾಚ. ೩೩೬). ೩. ತೋಟವನೂ ಒಕ್ಕಲುಗಳ ಕಯಿಯಿಂದ ನಾವೇ ಗುತ್ತಗೆಯಾಗಿ ಮಾಡಿಸಿ (ಎಕ. VIII, ತೀರ್ಥಹ. ೩೨-೪೪; 1418 ?). ೪. ಇಕ್ಕುವವನೂರಿಗೊಂದೊಕ್ಕಲೆಂದೆನಬೇಡ ಅಕ್ಷಯ ಪದವ ಪಡೆದು ಕೈಲಾಸದಿಂದೊಕ್ಕಲಿರಬಂದ (ಸರ್ವಜ್ಞ. ೬೦೦). ೫. ಹೆಂಡತಿ; ಪತ್ನಿ: ಮಕ್ಕಳ ಪೆಚ್ಚುಗೆಯಲ್ಲದೆ ರತಿಸುಖ ಒಕ್ಕಲ ಸಂಗದೊಳುಂಟೆ ರೊಕ್ಕದ ಹೋಕಲ್ಲದೆ ರತಿಸುಖವುಂಟೆ ಠಕ್ಕಿನ ಗಣಿಕೆಯರೊಡನೆ (ಕುರಾಸಾಂ. ೨೫-೯೫). ೬. "ಜಮೀನನ್ನು ಗುತ್ತಿಗೆಗೆ, ಮನೆಯನ್ನು ಬಾಡಿಗೆಗೆ, —ಪಡೆದು ಅನುಭವಿಸುತ್ತಿರುವವನು: ಒಕ್ಕಲು, ಗೇಣಿದಾರ, ಗುತ್ತಿಗೆದಾರ, ಬಾಡಿಗೆದಾರ" (Tenant. ಇಂಕನಿ). **ಒಕ್ಕೆಲು**: ೧. ಜಗತಿಯ ಬೂವುಗಳೊಳ್ಪಣ ೧ ಆವರೊಕ್ಕೆಲೊಳ್ ವೀಸ ೧೦ (ಎಕ. VII, ಶಿಕಾರಿ. ೯೪-೩೨; 1094). △ **ಒರ್ಕಲು**: ೩. ಎಪ್ಪತ್ತೊರ್ಕಲು ಮಿಬ್ದು (ಕಇ. II, ೮-೩೫; 1072).

ಒಕ್ಕಲಮಕ್ಕಳು, ಒಕ್ಕಲುಮಕ್ಕಳು = ವ್ಯವಸಾಯ ಮಾಡುವ ರೈತರು; ಒಕ್ಕಲಿಗರು: ಒಕ್ಕಲಮಕ್ಕಳ ಕಸವರಮೆಲ್ಲಮಂ ಕಳ್ದೊಡೆ (ವಡ್ಡಾರಾ. ೧೨೩-೧೮); ಅಂದು ಒಕ್ಕಲುಮಕ್ಕಳು ಉಳಿಯ ಮೂನೂರ್ವರುಂ (ಸೌಇಇ. IX-i, ೧೪೧-೪೮; 1174); ಸೇವಕರಿಗೆನ್ನೊಕ್ಕಲುಮಕ್ಕಳಿಗೆನಗೆ ತಕ್ಕನಿತುಂಬಳಿಗೊಟ್ಟರಿಸ್ಯೆ ನಾಡೆ ಕಕ್ಕುಲತೆಗಳೆನಗಿಲ್ಲ (ಭರಚ. ೫೨-೧೦೯). ಒಕ್ಕಲುತೆಗೆ, ಒಕ್ಕಲುತೆರಳು = ಊರುಬಿಟ್ಟು ಹೋಗು; ಗುಳೇಹೋಗು: ಕಾಡಿನಲ್ಲಿ ಹುಲಿ ಕೂಗಿದರೆ ಊರಿನಲ್ಲಿ ಒಕ್ಕಲು ತೆಗೆದರಂತೆ (ಗಾದೆ); ಚಿಕ್ಕಮ್ಮನಿಂದಂತಕನ ರಾಜಧಾನಿಗಾನೊಕ್ಕಲುತೆರಳಬೇಕಾಯ್ತು (ಕುರಾಸಾಂ. ೩೩-೯೮).

[ಒಕ್ಕು? + -ಅಲ್₂. / ತಮಿ. ಒಕ್ಕಲ್; ತುಳು. ಒಕ್ಕೆಲ್; ಕೊಡ. ಒಕ್ಕ]

**ಒಕ್ಕಲಗಿತ್ತಿ** 'ಒಕ್ಕಲಿಗಿತಿ' ನೋ.

**ಒಕ್ಕಲಡಿ** (ನಾ). (ಕರಾ) ಜಮೀನುದಾರನು ತನ್ನ ಒಕ್ಕಲಿಗಾಗಿ ಕಟ್ಟಿಸಿಕೊಟ್ಟ ಮನೆ (ಕ). [ಒಕ್ಕಲ್₂ + ಅಡಿ₁]

**ಒಕ್ಕಲತನ** 'ಒಕ್ಕಲ್ತನ' ನೋ.

**ಒಕ್ಕಲಾಗು** (ಕ್ರಿ). ಜೀವಿಸು; ನೆಲಸು; ಏಳಿಗೆಹೊಂದು; ಸಂಸಾರವಾಗು: "ಬಟ್ದಂ (ಬಾಟ್ದಂ) = ಜೀವಿಸಿದಂ, ಒಕ್ಕಲಾದಂ" (ಶಮದ. ಪರಿ. ೧); ಲೆಕ್ಕವಿಲ್ಲದೆ ಬಾಳ್ವ ಧನಿಕನನಕ್ಕಜಿಂದೀರ್ವೈದು ಸಾಸಿರದೊಕ್ಕಲಾಗಿ ಬದುರ್ಕಿಂಕು ನೀನೆಂದುಜಿ ಪರಸಿದಂತೆ (ಬಸಪು. ೧-೩೪); ಕೂಡಿಕೊಳ್ ಕೂಡಿಕೊಳ್ ನಿನಗೊಕ್ಕಲಪ್ಪೆನ್ (ಅಶ್ವತ್ಥಾ. ೧೮-೩); ಬೇಗಬೇಗ ಹುಟ್ಟಿ ಮಕ್ಕಳು ಮನೆಗೆ ಒಕ್ಕಲಾದರು (ಬಾಳಿಗ. ೨೬).

[ಒಕ್ಕಲ್₂ + ಆಗು₁]

**ಒಕ್ಕಲಿಕ್ಕು**₁ (ಕ್ರಿ). ೧. ಬಡಿ; ಹೊಡೆ; ಥಳಿಸು; ಒಕ್ಕು; ನಾಶಮಾಡು; ಕೊಲ್ಲು: ಅಂತು ತನ್ನ ಬಲಮೆಲ್ಲಮಂ ಜವನಂತೊಕ್ಕಲಿಕ್ಕಿ ಕೊಲ್ವ ಕಳಶಕೇತನನಂ ಯಜ್ಞಸೇನನೇನುಂ ಮಾಣದೆ (ಪಂಪಭಾ. ೧೨-೨೧ ವ); ಮಾಳವಸೇನೆಯನೊಕ್ಕಲಿಕ್ಕಿ (ಮೈಆರಿ. ೧೯೩೦, ೧-೩೫; 1173); ಸಕಲ ಸುಭಟರನೊಕ್ಕಲಿಕ್ಕಿದನೊಂದು ನಿಮಿಷದಲಿ (ಕುವ್ಯಾಕ. ೨೦-೬); ಮಲೆವರನೊಕ್ಕಲಿಕ್ಕ (ಅಪ್ರತಿ. ೧೪-೪). ೨. ಅಸ್ತವ್ಯಸ್ತವಾಗಿಸು; ಕೆದರು; ಚೆಲ್ಲು: ಆಲಂಪಿನಿಂದೆಸೆವಲೋಲ ಕುರುಳ್ಗಳನೊಕ್ಕಲಿಕ್ಕಿ ಮೆಯ್ಯುಜಿಯದೆ ಸೂಳೆಗೇರಿಯೊಳೆ ಸಂಚರಿಪಂ ವಿಟನಂತೆ ಮಾರುತಂ (ಸೂಕ್ತಿಸು. ೪-೧೪೨); ಜಕ್ಕುಲಿಪ ನೇಮದಿಂ ಕರಗುವೆರ್ದೆಯಿಂದೊಕ್ಕಲಿಕ್ಕಿ ಪೊಣ್ಮುವ ಗದ್ಗದಾಲಾಪದಿಂದೆ (ಪದ್ಮರಾ. ೫-೨೫); ಹೊಕ್ಕು ಮೈಕೈಗೂಡಿ ಸುರತಸುಖಾತಿರೇಕದಲಿ ಒಕ್ಕಲಿಕ್ಕಿ ಸಮಸ್ತಭೋಗವ ಮಿಕ್ಕು (ಪ್ರಭುಲೀ. ೫-೪೯). [ಒಕ್ಕಲ್₁ + ಇಕ್ಕು]

**ಒಕ್ಕಲಿಕ್ಕು₂** (ಕ್ರಿ). ೧. ನೆಲಸು ; ಬೀಡುಬಿಡು. ೨. ಸ್ಥಿರವಾಗಿ ನಿಲ್ಲು ; ಬೇರೂರು : ಹೃದಯದೊಳೊಕ್ಕಲಿಕ್ಕಿತು ಶೋಕ (ಕುವ್ಯಾ.ಅ. ೨೧-೫೩).
[ಒಕ್ಕಲ್₂ + ಇಕ್ಕು]

**ಒಕ್ಕಲಿಗ** (ನಾ). ೧. ಒಕ್ಕಲತನ ಮಾಡುವವನು ; ವ್ಯವಸಾಯಗಾರ ; ರೈತ : "ಕೃಷಿಕಂ ಕುಟುಂಬಿ ಕ್ಷೇತ್ರಾಜೀವಿ ಕರ್ಷಕಂ ಕೃಷಿಯ ಮಾಳ್ಪೊಕ್ಕಲಿಗನಕ್ಕು" (ಮಂಗರಾ. ೧೧೯-೧) ; ಒರ್ವನೊಕ್ಕಲಿಗನೊಂದು ಪೇಱು ಮಣ್ಣಂ ತಂದು ಶ್ರೀಪರ್ವತದ ಮೇಗೊಟ್ಟಿದೊಡೆ (ವಡ್ಡಾರಾ. ೧೮೭-೨೩) ; ಮಱಿಯಂ ಪಾರ್ವೊಕ್ಕಲಿಗನಂತೆ ಗಗನಮಂಡಲಮಂ ನೋಡುತ್ತುಂ (ಧರ್ಮಾಮೃ. ೧-೧೮೦) ; ಅಸವಸದಿಂ ಪಱಿಗೆಯ್ಯಂ ಕೆಸವಂ ಸೋದಿಸದೆ ಬಿತ್ತಿದೊಕ್ಕಲಿಗನವೊಲ್ ಸಸಿಯಂ ನೋಡಿ ತಳೋದರಿ ಬಿಸುಸುಯ್ಗುಂ (ಕಾವ್ಯಾವ. ೪೫೪) ; ಒಕ್ಕಲಿಗ ಮುದ್ದಯ್ಯನಕ್ಕಱಿನ ಮಗನಾನಯ್ಯ (ಲಿಂಗಾರ. ೧೧-೩) ; ಬೇಸಾಯವಿಲ್ಲದೆ ಒಕ್ಕಲಿಗ ಕೆಟ್ಟ (ಗಾದೆ). ೨. ಚತುರ್ಥ ಜಾತಿಯವನು: "ಕುಡಿಯನಲ್ಲೊಕ್ಕಲಿಗಂ" (ಕಬ್ಬಿಕೈ. ೩೩) ; ಈಶ ಬ್ರಾಹ್ಮಣ ವಿಷ್ಣು ಕ್ಷತ್ರಿಯಂ ಅಜವೈಶ್ಯ ಆ ಸುರಪನೊಕ್ಕಲಿಗ ನೆನ್ನುವೆ ನಿಗಮಭಾಷ್ಯ (ದೀಕ್ಷಾಬೋ. ೧೦೨-೧೮) ; ಇಷ್ಟರಲ್ಲಿ ಒಕ್ಕಲಿಗರ ಸಿಪಾಯಿ ಗೌಡನು ಬಂದ (ಚೆಂಗಾಳ್ವ. ೧೧).
[ಒಕ್ಕಲ್₂ + -ಇಗ. / ತಮಿ. ಒಕ್ಕಿಲಿಯನ್]

**ಒಕ್ಕಲಿಗಿತಿ, ಒಕ್ಕಲಗಿತ್ತಿ, ಒಕ್ಕಲುಗಿತ್ತಿ** (ನಾ). ೧. ಒಕ್ಕಲಿಗನ ಹೆಂಡತಿ : ಇತಿಗೆ - ಚಾಮುರಿಗಿತಿ . . . ಚಿಪ್ಪಿಗಿತಿ, ಒಕ್ಕಲಿಗಿತಿ ; ಒಕ್ಕಲಿತಿ (ಶಮದ. ೨೦೮ ಪ್ರಯೋ). **ಒಕ್ಕಲಗಿತ್ತಿ** : ೧. ರಸ್ತೆಯ ಅಂಚಿನಲ್ಲಿ ಒಕ್ಕಲಗಿತ್ತಿಯರು ಕೆಲವರು ಕಾಯಿಪಲ್ಲೆ ಮಾರಲು ಕುಳಿತಿದ್ದರು (ಮೂರುದಾ. ೧೩೭). ೨. ಕೆಲಸದವಳು; ಸೇವಕಿ: [. . . ತಂದೆಯ ಮನೆಯೊಳಿರ್ದ ಕನ್ನಿಕೆ ಮದುವೆಯಾಗದ ಮುನ್ನವೆ ಮೈನೆಱಿದೊಡಾಕೆ ಸೂಳೆಯೋಪಾದಿಯಲ್ಲಿ ಒಕ್ಕಲಗಿತ್ತಿಯಿಂದಂ ಕಪ್ಪೆ] (ಪಂಚತಂ. ೨೫೭-೪) ; ರಾಯರ ಹೆಂಡತಿ ಮನೆಯ ಒಕ್ಕಲಗಿತ್ತಿಯೊಡನೆ ಜಗಳವಾಡುತ್ತಿರಬೇಕು (ಹುಚ್ಚಾಟ. ೧೪). **ಒಕ್ಕಲುಗಿತ್ತಿ** : ೨. ತನ್ನ ಮನೆಯ ಒಕ್ಕಲುಗಿತ್ತಿಯನ್ನು ಕರೆದು (ಮುಂಬಯಿ. ೪-೬೨) ; ಅವಳು ಬಹುತರವಾಗಿ ಒಕ್ಕಲುಗಿತ್ತಿ ಇರಬಹುದು (ರಕ್ತಧ್ವ. ೧೪). [ಒಕ್ಕಲಿಗ + -ಇತಿ₁ (< -ಇತ್ತಿ)]

**ಒಕ್ಕಲಿತಿ** (ನಾ). = ಒಕ್ಕಲಿಗಿತಿ ೧: ಒಕ್ಕಲಿತಿ ಜೋಡೆಯಾದಂತಕ್ಕುಮವಳ್ ಸಿತಗೆ ಪತಿಗೆ ಮಿಗೆ ಕಾಯ್ವಳ್ (ಕಾವ್ಯಾವ. ೩೩೩) ; ಪೊಸತಿಲ ಪೂಜಿಸಿ ಕೊಱವಟ್ಟುಹೋದ ಒಕ್ಕಲಿತಿ [ಪಾಠಾಂ. ಒಕ್ಕಲಿಗಿತ್ತಿ] ಯಂತಾಯಿತ್ತೆನ್ನ ಭಕ್ತಿ (ಬಸವ. ೪೨೧). [ಒಕ್ಕಲ್₂ + -ಇತಿ₁ (< -ಇತ್ತಿ)]

**ಒಕ್ಕಲಿರು** (ಕ್ರಿ). ವಾಸಿಸಿರು ; ನೆಲಸಿರು : ಇಕ್ಕುವವನೂರಿಗೊಂದೊಕ್ಕಲೆಂದೆನಬೇಡ ಅಕ್ಷಯ ಪದವ ಪಡೆದು ಕೈಲಾಸದಿಂದೊಕ್ಕಲಿರಬಂದ (ಸರ್ವಜ್ಞ. ೬೦೦) ; ಈ ಮನೆಯಲ್ಲಿ ಒಕ್ಕಲಿರಬೇಕು (ರೂಢಿ).
[ಒಕ್ಕಲ್₁ + ಇರು₁ (< ಇರ್₁)]

**ಒಕ್ಕಲು₁** 'ಒಕ್ಕಲ್₁' ನೋ.

**ಒಕ್ಕಲು₂** 'ಒಕ್ಕಲ್₂' ನೋ.

**ಒಕ್ಕಲುಗಿತ್ತಿ** 'ಒಕ್ಕಲಿಗಿತಿ' ನೋ.

**ಒಕ್ಕಲುಗುತ್ತಗೆ** (ನಾ). ಒಂದು ಬಗೆಯ ಸುಂಕ: ಶಾಸನಗಳಲ್ಲಿ ಬರುವ ತೆರುವಣಗಳು:— ತೆರು . . . ನೊಗಹಣ, ಒಕ್ಕಲುಗುತ್ತಗೆ, ಕಾಣಿಕೆ (ತುಳುನಾ. ೨೭೧). [ಒಕ್ಕಲು₂ (< ಒಕ್ಕಲ್₂) + ಗುತ್ತಗೆ]

**ಒಕ್ಕಲುಗೇಱಿ** 'ಒಕ್ಕಲ್ಗೆಱಿ' ನೋ.

**ಒಕ್ಕಲುಗೊಳ್ಳು** (ಕ್ರಿ). = ಒಕ್ಕಲಿರು : ಮಿಕ್ಕಲಿ, ಒಕ್ಕಲುಗೊಳ್ಳಲಿ ಅ ನಾವೂ ನೀವೂ (ಸೂರ್ಯಪಾ. ೮-೧೬).
[ಒಕ್ಕಲು₂ (< ಒಕ್ಕಲ್₂) + ಕೊಳ್ಳು (< ಕೊಳ್₁)]

**ಒಕ್ಕಲುತನ** 'ಒಕ್ಕಲ್ತನ' ನೋ.

**ಒಕ್ಕಲುದೆಱಿ** 'ಒಕ್ಕಲ್ದೆಱಿ' ನೋ.

**ಒಕ್ಕಲುಬರು** (ಕ್ರಿ). ನೆಲಸುವುದಕ್ಕೆ ಬರು ; ವಾಸವಾಗು : ಅನಿಲನ ಹುಲ್ಲು ಹೊದಿಸಿ ಮನೆ ಹೊಲಬಾಯಿತ್ತು ನೆಲಗಟ್ಟು ಶುದ್ಧವಿಲ್ಲ ಎಂದು ಗೋರಕ್ಷಪಾಲಕ ಮಹಾಪ್ರಭು ಸಿದ್ಧ ಸೋಮನಾಥಲಿಂಗವು ಆ ಮನೆಗೆ ಒಕ್ಕಲುಬಾರ (ಸರ್ವವ. ೫೭-೨೯೭).
[ಒಕ್ಕಲು₂ (< ಒಕ್ಕಲ್₂) + ಬರು₁ (< ಬರ್₁)]

**ಒಕ್ಕಲುವೋಗಿಸು** (ಕ್ರಿ). ಒಕ್ಕಲು ಹೋಗುವಂತೆ ಮಾಡು ; ಗುಳೇಹೋಗಿಸು : ನಿನ್ನಯ ತಾಯನೊಯ್ವಪದದೊಳ್ಗವನಕ್ಕಟ ನೋಡುಕಂದ ಬಂದೆನ್ನುಮನಂತೆ ಕೂಡಿದೊಡನೊಕ್ಕಲುವೋಗಿಸನೇಕೆ (ಕಾದಂಪೂ. ೧೮೨) ; "ಒಕ್ಕಲುವೋಗಿಸಂ - ಸಂಸಾರ ಸಹಿತವಾಗಿ ಕೊಲ್ಲಲಿಲ್ಲ" (ಕಾದಂಪೂ. ಅಡಿಟಿ).
[ಒಕ್ಕಲುವೋಗು (< ಒಕ್ಕಲ್ವೋಗು) + -ಇಸು₃]

**ಒಕ್ಕಲುವೋಗು** 'ಒಕ್ಕಲ್ವೋಗು' ನೋ.

**ಒಕ್ಕಲುಹೋಗು** 'ಒಕ್ಕಲ್ವೋಗು' ನೋ.

**ಒಕ್ಕಲೆತ್ತು** (ಕ್ರಿ). ಸಂಸಾರ ಸಹಿತನಾಗಿ ಮನೆಬಿಟ್ಟು ಹೋಗು : ಆ ಕಾಗೆ ಬಂದು ಮನೆಯ ಹೊಕ್ಕೊಡೆ ಒಕ್ಕಲೆತ್ತಿ ಹೋದ ಮರ್ಕಟನ ಭಕ್ತಿಯಂತಾಯಿತ್ತಯ್ಯಾ (ಚೆನ್ನವ. ಕ. ೫೦೦).
[ಒಕ್ಕಲ್₂ + ಎತ್ತು₁]

**ಒಕ್ಕಲೇಳಿಸು** (ಕ್ರಿ). ೧. ವಾಸವಾಗಿರದಂತೆ ಮಾಡು; ಊರು ಬಿಡಿಸು. ೨. (ಆಲಂ) ನಿರ್ಗತಿಕನನ್ನಾಗಿ ಮಾಡು ; ದರಿದ್ರನನ್ನಾಗಿ ಮಾಡು : ಧನಿಗಳು ಒಕ್ಕಲೇಳಿಸದಂತೆಯೂ ಪಡಕೊಂಡ ಸಾಲವನ್ನು ಮರುಪಾವತಿ ಮಾಡದಂತೆಯೂ . . . ಮಾಡುವುದು (ದೇಶಭು. ೧೪).
[ಒಕ್ಕಲೇಳು + -ಇಸು₃]

**ಒಕ್ಕಲೇಳು** (ಕ್ರಿ). ಕುಟುಂಬ ಸಹಿತ ಊರುಬಿಡು ; ಗುಳೇಹೋಗು : ಕ್ರಿ.ಶ. ದ ಆದಿಭಾಗದಲ್ಲೇ ಸಯಾಂ ಪ್ರದೇಶಕ್ಕೆ ದಕ್ಷಿಣ ಭಾರತೀಯರು ಒಕ್ಕಲೆದ್ದು ಬಂದರೆಂಬುದನ್ನು ಸೂಚಿಸುತ್ತದೆ (ದಭಾಇ. ೨೩೫).
[ಒಕ್ಕಲ್₂ + ಏಳು₁ (< ಏೞ್₁)]

**ಒಕ್ಕಲ್ಗೆಲಸ** (ನಾ) = ಒಕ್ಕಲ್ತನ ೨ : ವೀರಾರಿಗಳ್ . . . ಶರಣ್ಬೊಕ್ಕು ಮೂವಿಟ್ಟಿಯೊಕ್ಕಲ್ಗೆಲಸಕ್ಕಾಂತಿರ್ದ್ದರ್ (ಮುಂಬರಾ. XI, ೨೪೮-೧೫ ; 1121). [ಒಕ್ಕಲ್₂ + ಕೆಲಸ]

**ಒಕ್ಕಲ್ಗೆಱಿ, ಒಕ್ಕಲುಗೆಱಿ** (ನಾ). ಒಂದು ಊರಿನ ಹೆಸರು : ಊರ್ವ್ವೊಕ್ಕಲ್ಗೆಱಿಯೊಳು ಶಿವಾಲಯಮುಮಂ ಮಾಡಿಸಿ ಧರ್ಮ್ಮ ಪ್ರತಿಷ್ಠೆಯುಂ ಯಶಪ್ರತಿಷ್ಠೆಯುಂ ಮಾಡಿಸಿ (ಎಕ. VI, ಕಡೂರು. ೩೭-೬೬ ; 1187). **ಒಕ್ಕಲುಗೆಱಿ** : ಒಕ್ಕಲುಗೆಱಿಯಲು ಗದ್ದೆ ಸಲಗೆವೊಂದು (ಎಕ. VI, ಕಡೂರು. ೩೭-೭೨ ; 1187). [ಒಕ್ಕಲ್₀ + ಕೆಱಿ]

**ಒಕ್ಕಲ್ತನ, ಒಕ್ಕಲತನ, ಒಕ್ಕಲುತನ** (ನಾ). ೧. ಕುಟುಂಬಜೀವನ ; ಗೃಹಸ್ಥತನ ; ಸಂಸಾರ : ಒಕ್ಕಲ್ತನಮುಮನಱಿವಿನ ತಕ್ಕುಮನಱಿವವ ಗುಣಂಗಳೆಮಗೇವುವೆಂದೊಕ್ಕು ಮಿಗಿಲಪ್ಪ ಗುಣದೊಳು ಪೊಕ್ಕು (ಬಂಹರಿ. ೧-೧೯). ೨. ಬೇಸಾಯ ; ಉಳುಮೆ : ಇದಾನ್ಕೊಳೆ ಈರೆ ಬ್ಬಿತ್ತರುಳಂ ಒಕ್ಕಲ್ತನಂ ಕೆಯ್ವೊನಾ ವಿತ್ತಿದಲ್ಲಿ ವೆಳೆಯಾದೆ ಕೆಡುಗ (ಎಕ. VII, ಶಿಕಾರಿ. ೧೫೪-೧೫ ; 685) ; ಸಸಿ ಪುಟ್ಟಿದಂದೆ ಪುಲ್ಲುಂ ತಗುಳ್ವ ಕೆಯ್ಯುಮಂ ಜೀವಂ ಪುಟ್ಟಿದಂದೆ ಸಾವು ತಗುಳ್ವ ಮೆಯ್ಯುಮನಱಿದಾಕೆಯ್ಯಂ ಬೇಗಂ ಮಗುಟ್ದುಟ್ಟು ಬಿತ್ತಿಸುವುದು ಈ ಮೆಯ್ಯುಮಂ ಬೇಗಂ ಧರ್ಮದೊಳ್ ಪತ್ತಿಸುವುದು ಅಲ್ಲದೊಡೊಕ್ಕಲ್ತನದ ಬುದ್ಧಿಯುಂ ಅಱಿವಿನ ವೃದ್ಧಿಯುಮೆಂತೆಸೆಯಲಾರ್ಕುಂ (ಜೀವಸಂ. ೧-೧೪ ವ).

**ಒಕ್ಕಲತನ**: ೨. ಒಕ್ಕಲತನದ ಅಭಿವೃದ್ಧಿಗೆ ಫಲಪ್ರದವಾದ ಮಣ್ಣು, ಸಾಕಷ್ಟು ಮಳೆ . . . ಇವು ಅತ್ಯಾವಶ್ಯಕ (ಕೀಟಪಿ. VI, ಅರಿಕೆ); ನೀರಾವರಿ ಸೌಕರ್ಯವನ್ನು ಹೆಚ್ಚಿಸಿ ಒಕ್ಕಲತನಕ್ಕೆ ಹೆಚ್ಚು ಉಪಯುಕ್ತವಾಗುವಂತೆ (ಕರ್ಮವೀ. ೮-೧೧; 1959); ಒಕ್ಕಲತನದ ವ್ಯಾಸಂಗಮಾಡಿ ಆದರಲ್ಲಿ ಬಲ್ಲಿದರೆಂದು ಮೆಚ್ಚುಪಡೆದು ಮುಂದುವರಿಯುತ್ತಿದ್ದಾರೆ (ಭೂವಿುತಾ. ೩ ಮುನ್ನುಡಿ). **ಒಕ್ಕಲುತನ**: ೨. ಅವರು ಶಿವನೊಕ್ಕಲು. ಒಕ್ಕಲುತನವೆ ಅವರ ಕಾಯಕ (ತುಂಗಭ. ೬೨); **ಊರ** ಕಾರಭಾರದಲ್ಲಿ ನಿರತನಾದ ಒಕ್ಕಲುತನ ಯಾರದೋ ಪಾಲಾಯಿತು (ಗ್ರಾಮಾಯ. ೧೧); ಒಕ್ಕಲು ತನದ ಕಾಲೇಜು ಬೇಕೆ? (ಚಿಂದುಟ. ೫೪).

[ಒಕ್ಕಲ್$_2$ + -ತನ]

**ಒಕ್ಕಲ್ತನಂಗೆಯ್** (ಕ್ರಿ). ವ್ಯವಸಾಯಮಾಡು; ಉಳು: ಎಱಗ ನಾಗನುಂ ಕುಪ್ಪನುಂ ಮಾದನುಂ ಒಕ್ಕಲ್ತನಂಗೆಯ್ಯೆ (ಎಇ. XXVI, ೪-೧೬; 996?). [ಒಕ್ಕಲ್ತನ+ ಗೆಯ್ (< ಕೆಯ್$_1$)]

**ಒಕ್ಕಲ್ದೆಱೆ, ಒಕ್ಕಲುದೆಱೆ** (ನಾ). ಒಕ್ಕಲುತನದ ಮೇಲೆ ಹಾಕುವ ಸುಂಕ, —ತೆರಿಗೆ: ಪೆರ್ಜುಂಕಂ ಬಿಲ್ಕೊಡೆ ಎರಡೊಕ್ಕಲ್ದೆಱೆ ಕೋಡವೀಸವ ಸಹಿತಂ (ಸೌಇಇ. XX, ೩೪-೧೯; 1053); ವಣ್ಣರಾಪುರದ ಒಕ್ಕಲ್ದೆಱೆಯ ಕಾಣಕೆ ಗದ್ಯಾಣಂ (ಕಇ. IV, ೩೪-೨೩; 1109); **ಎಲೆ** ಮಾಱು ವೊಕ್ಕಲ ಒಕ್ಕಲ್ದೆಱೆ ಕೊಡಬಿಸಮುಮಂ (ಎಕ. VIII, ಸೊರಬ. ೨೯೯-೩೨; 1074); ಪೆರ್ಗ್ಗಡೆ ಸುಬ್ಬಣಯ್ಯಂ ತಮ್ಮೊಕ್ಕಲ್ದೆಱೆವೊಳಗೆ (ಬೊಂಕಶಾ. ೧೯೩೪, ಹಿರೇಕೆ. ೨೨-೪೮; ?). **ಒಕ್ಕಲುದೆಱೆ**: ನಂದಾದೀವಿಗೆಗೆ ವೊಂದೊಕ್ಕಲ ವೊಕ್ಕಲುದೆಱೆಯಂ ಬಿಟ್ಟರು (ಇಎ. ೧೯೫೦, ಹಾನಗಲ್. ೮೬-೧೦; 840). [ಒಕ್ಕಲ್$_2$ + ತೆಱೆ$_3$]

**ಒಕ್ಕಲ್ವೋಗು, ಒಕ್ಕಲುವೋಗು, ಒಕ್ಕಲುಹೋಗು** (ಕ್ರಿ). ಒಕ್ಕಲು ತೆಗೆ; ವಲಸೆಹೋಗು: ಗೂಳೆಯದೆಗೆಯುತೊಕ್ಕಲ್ವೋಪ ಹಕ್ಕಿಯ ಹಿಂಡು (ಶ್ರೀರಾಮಾ. ೫೪೪-೧೦೨). **ಒಕ್ಕಲುವೋಗು**: 'ಒಕ್ಕಲು ವೋಗಿಸು' ಪರಾ. **ಒಕ್ಕಲುಹೋಗು**: ಎನಗೆ ಸಿರಿಯಾಳನ ಮನೆಗಟ್ಟ ಬೇರೂರಿಗೆ ಒಕ್ಕಲುಹೋದ ದಾಸಿಮಯ್ಯನ ಮನೆಗಟ್ಟ (ಶೂನ್ಯಸಂ. ೮೯-೨೬). [ಒಕ್ಕಲ್$_2$+ ಪೋಗು$_1$]

**ಒಕ್ಕಸೂಂಡಿ** (ನಾ). ಒಂದು ಪ್ರದೇಶ: ಬಯತಲನುಕ್ರಮಂಬಿಡಿದು ಮಾಡಿಸಿ ಮಾಡಿಸಲಾಜದೊಕ್ಕಸೂಂಡಿಯಲಿರೆ ದೇವತಾಲಯಮನೀಕ್ಷಿಸೆ (ಸೌಇಇ. IX–i, ೧೬೧-೫೦; 1092). [ಒಕ್ಕ$_3$ + ಸೂಂಡಿ?]

**ಒಕ್ಕಳ** 'ಒಕ್ಕಳ' ನೋ.

**ಒಕ್ಕಳಿಸು** (ಕ್ರಿ). ಸಂಪೂರ್ಣ ನಾಶಮಾಡು (?) : ಸುಳಿಸಿದರ್ ಭೂತ ಬೇತಾಳರಂ ದೆಸೆದೆಸೆಯೊಳಳಿಸಿದರ್ ಪ್ರಾಕಾರದಸುರರಂ ಜಡಿವುತಪ್ಪಳಿಸಿದರ್ ಡೊಳ್ಳಾದ ಋತ್ವಿಕ್ಕುಗಳ ಹೊಗೆವ ಹೋಮದೊಳ್ ಹೋಮಿಸಿದರು ಬಳಸಿದರ್ ಯಜ್ಞಸಾಹಿತ್ಯಮಂ ತಮ್ಮೊಳೊಕ್ಕಳಿಸಿದರ್ ಮಾರಣ ಧ್ವರವ ಹನುಮ ಪ್ರಮುಖರುಳಿಸಿದರ್ ಶಕ್ರಾರಿಗೊಬ್ಬನಂ (ಇಂದ್ರಜಿ.೧೧).

[< ಒಕ್ಕಲ್$_1$ + -ಇಸು$_3$. / **ತೆಲು.** ವಕ್ಕಳಿಂಚು = ವಿರೋಧಿಸು, ತಡೆ]

**ಒಕ್ಕಳ್ಳಿ** (ನಾ). ಪ್ರತ್ಯೇಕವಾಗಿ ಇರುವವಳು (?) : ಗಂಡನನ್ನು ಮುಂದುಮಾಡಿ ಪಾಲುಪಡೆದು ಒಕ್ಕಳ್ಳಿಯಾಗಿ ತಾನು ಸಂಸಾರಸುಖಿಸಬೇಕು ಎಂದುಕೊಂಡಿದ್ದಳು (ಹೊಸಕ್ಷಿ. ೨೦). [?]

**ಒಕ್ಕಾಲ** 'ಒಕ್ಕಾಲ' ನೋ.

**ಒಕ್ಕಾಲು$_1$** (ನಾ). ಒಂದುಕಾಲು; ಏಕಪಾದ: ಒಕ್ಕಾಲ ಹುರಿಗೆಜ್ಜೆ ಒಕ್ಕಾಲ ಕಿರುಗೆಜ್ಜೆ. . . ಹಾಕಿದ ಕುದುರೆ (ನಾಪದ. ೮೬).

[ಒರ್ (< ಒಂದು$_3$) + ಕಾಲು$_1$ (< ಕಾಲ್$_1$)]

**ಒಕ್ಕಾಲು$_2$** (ನಾ). ಒಂದು ಕಾಲುಭಾಗ; ನಾಲ್ಕರಲ್ಲಿ ಒಂದು ಅಂಶ: ಅನುಭವಬಲದಿಂದ ಮುಕ್ಕಾಲುಪಾಲು ಕಾವ್ಯಬರೆದು ಸಮಯಬಲದಿಂದ ಒಕ್ಕಾಲುಪಾಲು ಹೊಡೆದು ಹಾಕಿದ್ದಾನೆ (ಸಾಹಿಸಂ. ೪೫); ರಜಾಚೀಟಿಗಳಲ್ಲಿ ಮುಕ್ಕಾಲುಭಾಗ ರೋಗೋದ್ಭವ. ಒಕ್ಕಾಲು ತರಾಂತುರಿಯ ಗೃಹಕೃತ್ಯದಿಂದ ಬರೆಯಲ್ಪಟ್ಟವು (ಗಾಳಿಪ. ೫೧); ಓದು ಒಕ್ಕಾಲು ಬುದ್ಧಿ ಮುಕ್ಕಾಲು (ಗಾದೆ). [ಒರ್ (< ಒಂದು$_3$) + ಕಾಲು$_3$ (< ಕಾಲ್$_3$)]

**ಒಕ್ಕಿಡು** (ಕ್ರಿ) ಬಡಿ; ಹೊಡೆ; ಥಳಿಸು; ಒಕ್ಕು; ನಾಶಮಾಡು; ಕೊಲ್ಲು: ಆ ಚಂಡರಣದೇವನೆಮಗೆ ನೆರಮಾಗಿ ಉೞಿದವರನೊಕ್ಕಿಟ್ಟನುದ್ದಂಡನಾಗಿ (ಅಂತಿಗೊ. ೬-೧೨೫). [ಒಕ್ಕು$_1$ + ಇಡು$_1$]

**ಒಕ್ಕಿರು** (ಕ್ರಿ). ಸುರಿದಿರು: ಪಲ್ಲವಮಂ ತಿನಲ್ಕೆಳಸಿ ವಕ್ತ್ರಾಗ್ರಂಗಳಂ ನೀಡಿ ಪೀವರಫೇನಂಗಳ ಲೇಶಪಿಂಡಮದಜಲ್ಲೊಕ್ಕಿರ್ದುದೆಂಬಂದದಿಂ (ಬಾಧಪು. ೩-೩೪). [ಒಕ್ಕು$_3$ (< ಉಗು$_1$) + ಇರು$_1$ (< ಇರ್$_1$)]

**ಒಕ್ಕಿಲ್** (ನಾ). ಒಕ್ಕುವಿಕೆ; ಒಕ್ಕಣೆ: "ವಿಭೇದಮೆನಲೊಕ್ಕಿಲ್" (ಮಂಗರಾ. ೧೦೯-೩); ಮಾಸರಕುಟ್ಟಿಯರು ಅತ್ತಾಣಿಯುಮೊಸೆದು ಆಯ್ಗುಳ ಕೆಯ್ಯು ಒಕ್ಕಿಲುಳೊಕ್ಕುಳಮುಮಾಗೆ ಕೊಟ್ಟಾರ್ (ಎಕ. X, ಮುಳಬಾ. ೯೨-೯; 780); ಹೊಕ್ಕು ಹೊಯ್ದರು ರಥವನಳವಿಗೆ ಮಿಕ್ಕು ಕೈಮಾಡಿದರು ಕಾಲ್ದುಳಿಯೊಕ್ಕಿಲಲಿ ಬೇಸಱಿಸಿದರು ಪವಮಾನನಂದನನ (ಕುವ್ಯಾಕ. ೧೫-೨೬). [ಒಕ್ಕು$_5$+ -ಇಲ್$_3$]

**ಒಕ್ಕಿಲಿಕ್ಕು** (ಕ್ರಿ). ೧. ಬಡಿ; ಒಕ್ಕು; ನಾಶಮಾಡು; ಕೊಲ್ಲು: ತರತರದಿಂದೆ ವಾದ್ದಿರ್ಸುವ ಪೊಯ್ವಿಡುವೋಕುವ ನೂಂಕುವಾಂಕೆಗೊಳ್ವರ ನದಟಂ ಕಱುತ್ತಿಱಿದು ಸಂಗರದೊಳ್ ಜವನೊಕ್ಕಿಲಿಕ್ಕಿದನ್ನಿರೆ ನೆಱೆ ಮಾಡಿ ದಂಗರಿಕ ಕಲ್ಲೆಯನಾಯಕನಂ (ಎಕ. VII, ಹೊನ್ನಾಳಿ. ೫೧-೫; 1195); ಮುರಹರ ಪದ್ಮಸದ್ಮ ಮುಖನಿರ್ಜರಕೋಟಿಯನೊಕ್ಕಿ[ಪಾಠಾಂ. ಕರ]ಲಿಕ್ಕಿ (ರಾಜಶೇ. ೧-೫); ಕೊಳುಗುಳದಿ ಕಾದಿ ಶಸ್ತ್ರಗಳನೊಕ್ಕಲಿಕ್ಕಿ ಕಡಿದು ಜಯಕಾಂತಾಶಿರೋಮಣಿಯ ಮುಂದಲೆಯ ಪಿಡಿಯೆನಲ್ (ಲಕ್ಷ್ಮಭಾ. ೩-೧೧); (ಎಕ. VIII, ಸಾಗರ. ೧೪೬-೩; 1250 ನೋ). ೨. ಚೆಲ್ಲು; ಸೂಸು: ಕತ್ತುರಿ ಚಂದನಂಗಳೋಕುಳಿ ಪನಿನೀರ್ಗಳೋಕುಳಿಯನಾಡಿದನುಬ್ಬಿದನೊಕ್ಕಲಿಕ್ಕಿದಂ (ಗಿರಿಕ. ೩-೬೨). ೩. ಸೇರು; ಹೊಂದಿಕೊಳ್ಳು: ನಾಲ್ಕಯ್ದು ವತ್ಸರಂಬರಂ ನೆಱೆದು ನೆರೆಹೊರೆಯ ಕೆಲದ ಕೇರಿಯ ಸಕ್ಕಜದ ಮಕ್ಕಳೊಡನೊಕ್ಕಿಲಿಕ್ಕಿ ನಲಿನಲಿದು ನರ್ತಿಸುತ್ತಿರಲ್ (ನಂಬಿರ. ೨-೧೩). 'ಒಕ್ಕಲಿಕ್ಕು$_1$' ಪರಾ. [ಒಕ್ಕಿಲ್ + ಇಕ್ಕು]

**ಒಕ್ಕಿಸು** (ಕ್ರಿ). ಒಕ್ಕುವಂತೆ ಮಾಡು: ಸುಧಾಮಕನೆಂಬೊಂ . . . ತನ್ನಾರಂಭದ ಕೆಯ್ಗಳನೊಕ್ಕುವೆೞ್ತುಗಳ ಬಾಯಂ ಕಟ್ಟಿಯೊಕ್ಕಿಸುಗುಂ (ವಡ್ಡಾರಾ. ೧೭೦-೧೧); ಕೊಯ್ದಡಂ ತವೆಯರ್ ಒಕ್ಕಿಸು ರಾಶಿಗಳಂ ವಿನಿರ್ಮಿಸಲ್ (ಬಾಧಪು. ೪-೧೮). [ಒಕ್ಕು$_1$ + -ಇಸು$_3$]

**ಒಕ್ಕು$_1$** (ಕ್ರಿ). ೧. ಬೆಳೆದ ಬೆಳೆಯಿಂದ ಕಸಕಡ್ಡಿಗಳನ್ನು ಬೇರ್ಪಡಿಸು; ಒಕ್ಕಣೆಮಾಡು: "ಒಕ್ಕು – ಖಲಕರಣೇ, ಶಕುನೇ ಚ" (ಶಮಧಾ); "ಖಲಕರಣ ಶಕುನದೊಳೊಕ್ಕು" (ಶಬ್ದಮಂ. ೭೮); ಬಯಲ ಬಿತ್ತಲಿಲ್ಲ ಬೆಳೆಯಲಿಲ್ಲ ಒಕ್ಕಲಿಲ್ಲ ತೂಱಲಿಲ್ಲ (ಅವಚಂ. ೧೩೮-೬೩೫); ಒಡ್ಡನ್ನು ಹಾಕಿ ತುಳಿಸಿ ಹಸನಮಾಡಿ ಒಕ್ಕಿ ತೂಱಿ ರಾಶಿಯಂ ಮಾಡಿ (ವಚಶಾ. II, ೭೬); ಒಕ್ಕಿದಾ ಅಣ್ಣಯ್ಯಾ ಸೊಕ್ಕಿ ಸೂಳೆಗೆ ಹೋದೆ ಒಕ್ಕಿದಾ ಭತ್ತ ಆಳಕೊಟ್ಟು (ಹಳ್ಳಿಯ. ೧೨೦); ನಾಲ್ಕು ತೆನೆಹೊರೆಗಳನ್ನು . . . ಒಕ್ಕಿದರು, ತೂರಿದರು, ಒಡೆದರು (ಪುಟ್ಟರ. ೮೮). [ದೇ. ‖ **ಕೊಡ.** ಒಕ್]

**ಒಕ್ಕು$_2$** 'ಒಬ್ಬು$_1$' ನೋ.

**ಒಕ್ಕು$_3$** 'ಉಗು$_1$' ಪರಾ.

**ಒಕ್ಕು$_4$** 'ಒಗು$_1$' ಪರಾ.

**ಒಕ್ಕು**$_5$ (ನಾ). ಪೈರಿನಿಂದ ಕಾಳನ್ನು ಬೇರ್ಪಡಿಸುವ ಕೆಲಸ; ಒಕ್ಕುವಿಕೆ; ಕಣಗೆಲಸ (ಕ). [< ಒಕ್ಕು$_1$]

**ಒಕ್ಕು**$_6$ (ನಾ). ಶುಭ ಮತ್ತು ಅಶುಭಗಳ ಮುನ್ಸೂಚನೆ; ಶಕುನ: "ಒಕ್ಕು – ಖಲಕರಣೇ, ಶಕುನೇ ಚ" (ಶಮಧಾ); "ಖಲಕರಣ ಶಕುನದೊಳೊಕ್ಕು" (ಶಬ್ದಮಂ.೭೪); ಒಕ್ಕಾಗೆಬಲನಾದಡೊಕ್ಕದುವೆ ಕಡುಲೇಸು ಒಕ್ಕಿನ ಮೇಲೆ ಒಕ್ಕಾಗೆ ನಾಯ್ನೀರ ನೆಕ್ಕಿದಂತಕ್ಕು (ಸರ್ವಜ್ಞ. ೧೬೦೨). [?]

**ಒಕ್ಕುಂದ** 'ಒರ್ಕುಂದ' ನೋ.

**ಒಕ್ಕುಗೋಲು** (ನಾ). ಒಕ್ಕುವ ಕೋಲು; ತೆನೆಬಡಿಯಲು ಉಪಯೋಗಿಸುವ ಕೋಲು; ಬಡಿಗೋಲು: ತೆನೆಬಡಿಯುವ ಕೋಲು; ಬಡಿಗೋಲು; ಒಕ್ಕುಗೋಲು (Flail. ಇಂಕನಿ).
[ಒಕ್ಕು$_1$ + ಕೋಲು$_1$ (< ಕೋಲ್$_1$)]

**ಒಕ್ಕುಡಿತೆ** 'ಒರ್ಕುಡಿತೆ' ನೋ.

**ಒಕ್ಕುಡಿತೆಗಣ್** (ನಾ). ಒಂದು ಬೊಗಸೆಯಷ್ಟಿರುವ ಕಣ್ಣು; ಅಗಲವಾದ ಕಣ್ಣು: ಒಕ್ಕುಡಿತೆಗಂಗಳ ಬಗೆಯ ಸುಕ್ಕುಂಗುರುಳವಳ ಪಲ್ಲವಾಧರದವಳಂ ಕಕ್ಕಸಕುಚದವಳಂ ತಾಂ ತಕ್ಕೈಸಲು ಮಾಗಿ ಗೀಗಿಯೇಗೆಯ್ದಪುದೋ (ಸೂಕ್ತಿಸು. ೧೦–೨೫೪).
[ಒಕ್ಕುಡಿತೆ (< ಒರ್ಕುಡಿತೆ) + ಕಣ್]

**ಒಕ್ಕುಡುತೆ** 'ಒರ್ಕುಡಿತೆ' ನೋ.

**ಒಕ್ಕುತಿಳಿ** (ನಾ). (ಕರಾ) ಮಜ್ಜಿಗೆ ಮತ್ತು ಅನ್ನದ ತೆಳ್ಳಗಿನ ತಿಳಿಯಿಂದ ತಯಾರಿಸುವ ಸಾರು. [ಒಕ್ಕು ? + ತಿಳಿ$_2$]

**ಒಕ್ಕುಮಿಗು** (ಕ್ರಿ). ಉಂಡು ಬಿಸಾಡು; ಶೇಷಪ್ರಸಾದವಾಗು: ಬಸವನ ಒಕ್ಕುಮಿಕ್ಕ ಮಹಾಪ್ರಸಾದವನುಣಲು ಕ್ಷಣದೊಳಗೆ ತಕ್ಕ ಶಿವತತ್ತ್ವ ಸ್ವರೂಪವೆ ಸಿಕ್ಕಿ ಬೆಳೆದುದಯಿಸಲು ಕಾಣುತಲಕ್ಕನಾ ಬಸವೇಶ್ವರನ ಹೆಸರಿಟ್ಟಳಾ ಶಿಶುಗೆ (ಪ್ರಭುಲಿ. ೯–೨೩); ಸದ್ಭಕ್ತರೇ ತಮ್ಮ ಒಕ್ಕುಮಿಕ್ಕುದನಿಕ್ಕಿ ಸಲಹಿದರಾಗಿ (ಅಖಂಡೇ. ೮೧–೭೨).
[ಒಕ್ಕು$_0$+ ಮಿಗು. P ತಮಿ. ಒಕ್ಕು= ಮುಕ್ಕುಳಿಸು, ತಿಂದು ಉಳಿಸು]

**ಒಕ್ಕುಮಿಗೆ** 'ಒಗುಮಿಗೆ$_1$' ನೋ.

**ಒಕ್ಕುಳ** 'ಒರ್ಕುಳ' ನೋ.

**ಒಕ್ಕೂಗು** (ನಾ). ಒಂದೇಕೂಗು; ಏಕಕಂಠ: ಒಕ್ಕೊರಲಲೆಲ್ಲರೂ ಕೂಗಿ ಈ ಒಕ್ಕೂಗ (ಹೊಂಗಳು. ೨೧–೪).
[ಒರ್ (< ಒಂದು$_3$) + ಕೂಗು$_2$]

**ಒಕ್ಕೂಟ** (ನಾ). ೧. ಒಂದಾಗಿರುವುದು; ಕೂಡಿರುವುದು: ಕನ್ನಡ ನಾಡಿನ ಒಕ್ಕೂಟಕ್ಕೂ ಶ್ರೇಯಸ್ಸಿಗೂ ಸಾಧನವಾಗಿ ಪರಿಣಮಿಸುತ್ತಿರುವುದು ಶುಭಚಿಹ್ನೆ (ಕನ್ನಸು. ೧–೧೫). ೨. ಸಂಯುಕ್ತ ರಾಜ್ಯ: ಭಾರತ ಒಕ್ಕೂಟದಲ್ಲಿಯೇ ಉಳಿಯಲು ನಾಗಾಗಳು ಇಚ್ಛಿಸುವರೇ (ಬೆಸಂಕ. ೮–೨–೬೫). [ಒರ್ (< ಒಂದು$_3$) + ಕೂಟ$_1$]

**ಒಕ್ಕೂಡು** 'ಒರ್ಗೂಡು' ನೋ.

**ಒಕ್ಕೂವೆ** (ನಾ). ಒಂದೇ ಒಂದು ಕಂಬ: ಸಣ್ಣಪಟದ ಒಕ್ಕೂವೆಯ ಹಡಗು (Jigger. ಇಂಕನಿ). [ಒರ್ (< ಒಂದು$_3$) + ಕೂವೆ$_2$]

**ಒಕ್ಕೆತ್ತುಗಂಡ** (ನಾ). ಒಂದು ಬಿರುದು (?): ಮಚ್ಚರಿಪ ವೈರಿಘನ ಭುಂಭುಕನೊಕ್ಕೆತ್ತುಗಣ್ಡಂ ಕದನಪ್ರಚಣ್ಡಂ (ಎಕ. XI, ಚಿತ್ರದು. ೮೨–೧೪; 1074); ನಂದ ಗಿರಿನಾಥ ಪಱುಳಿಪುರವರೇಶ್ವರ ಬಾ[ಣ]ಕುಲಾದಿತ್ಯರೊಕ್ಕೆತ್ತುಗಣ್ಡ (ಸೌಇಇ. IX–i, ೧೫೬–೩೦; 1088).
[ಒಕ್ಕೆತ್ತು$_0$+ ಗಂಡ$_1$]

**ಒಕ್ಕೆಯ್** 'ಒರ್ಕೆಯ್' ನೋ.

**ಒಕ್ಕೆಲು** 'ಒಕ್ಕಲ್$_2$' ನೋ.

**ಒಕ್ಕೆಲ್ಮೆ** (ನಾ). ಒಕ್ಕಲಿಗ: ನಮ್ಮ ನಾಡಿನ ಒಕ್ಕೆಲ್ಮೆ (ನಾಡವರು) ಎಂಬವರು ಈ ಕುಡುವರೇ ಆಗಿದ್ದಾರೆ (ತುಳುನಾ. ೪೩).
[← ತುಳು. ಒಕ್ಕೆಲ್ಮೆ]

**ಒಕ್ಕೈ** 'ಒರ್ಕೆಯ್' ನೋ.

**ಒಕ್ಕೈಗೊಳ್** 'ಒರ್ಕೈಗೊಳ್' ನೋ.

**ಒಕ್ಕೈಸು** 'ಒರ್ಕೆಯ್ಸು' ನೋ.

**ಒಕ್ಕೊಂಡಿ** (ನಾ). ಒಂದು ಕೊಂಡಿ: ಒಕ್ಕೊಂಡಿ; ಏಕಬಂಧನಿ (Solitaire. ಇಂಕನಿ). [ಒರ್ (< ಒಂದು$_3$) + ಕೊಂಡಿ]

**ಒಕ್ಕೊಂಬು** (ನಾ). ಒಂದು ಕೊಂಬೆ, —ರೆಂಬೆ: ಒಂದು ಕೊಂಬಶ್ವತ್ಥಮುಂ ವಟವೊಂದು ಕೊಂಬು ಕ್ರಮುಕಶಾಖೆಯದೊಂದು ನೇಱಿಲದೊಂದು ಶಾಖೆಯಶೋಕವೊಕ್ಕೊಂಬು (ಬಸಪು. ೧೯–೬೪).
[ಒರ್ (< ಒಂದು$_3$) + ಕೊಂಬು$_2$]

**ಒಕ್ಕೊಯ್ತ** (ನಾ). ಒಂದು ಸಾರಿ ಕೊಯ್ಯುವಿಕೆ: ಒಕ್ಕೊಯ್ತದ ಆರ (Float. ಇಂಕನಿ). [ಒರ್ (< ಒಂದು$_3$) + ಕೊಯ್ತ]

**ಒಕ್ಕೊರಲು** 'ಒರ್ಕೊರಲ್' ನೋ.

**ಒಕ್ಕೊರಳು** 'ಒರ್ಕೊರಲ್' ನೋ.

**ಒಕ್ಕೊವೆ** (ನಾ) = ಒಕ್ಕೂವೆ: ಒಂದೇ ಪಟದ ಒಕ್ಕೊವೆಯ ದೋಣಿ (Cat–boat. ಇಂಕನಿ). [ಒರ್ (< ಒಂದು$_3$) + ಕೊವೆ$_2$]

**ಒಕ್ಕೊಳ** 'ಒರ್ಕುಳ' ನೋ.

**ಒಕ್ಕೊಳಗ** (ನಾ). ಒಂದು ಕೊಳಗ: ಒಕ್ಕೊಳಗ ಹೊನ್ನಿದ್ದವೇಳೆ ಊರೆಲ್ಲ ನಂಟರು ಜನವೆಲ್ಲ ಬಂಟರು (ಇಂಚಾಪ. ೧೨೨–೯೭).
[ಒರ್ (< ಒಂದು$_3$) + ಕೊಳಗ$_1$]

**ಒಕ್ಕೋಣೆ** (ನಾ). ಒಂದು ಕೋಣೆ.
[ಒರ್ (< ಒಂದು$_3$) + ಕೋಣೆ$_2$]

**ಒಕ್ಕೋಲ್** 'ಒರ್ಕೋಲ್' ನೋ.

**ಒಕ್ಕಾಣಿಸು** 'ವಕ್ಕಾಣಿಸು' ನೋ.

**ಒಗಂಟು**, ಒಗಂಟೆ, ಒಗಟು, ಒಗಟೆ (ನಾ). ಸುಲಭವಾಗಿ ತಿಳಿಯಲು ಅಥವಾ ಬಿಡಿಸಲು ಸಾಧ್ಯವಾಗದ ಮಾತು; ಗೂಢವಾದ ಮಾತು; ಪ್ರಹೇಳಿಕೆ; ಒಡಪು. 'ಒಗಂಟುವೇಟ್' ಪರಾ. **ಒಗಂಟೆ**: "ಪ್ರವ(ಲ್ಹಿ)ಲ್ಹೀಕಾ, ಪ್ರಹೇಳಿಕಾ – ಈ ೨ ಒಗಂಟೆ" (ಹಲಾಯು. ೨೫–೧೫೧); "ಅಖ್ಯಾಯಿಕೆ ಕಥೆಯೆಂಬುವಿವಾಖ್ಯಾನಮೊಗಂಟೆ ತಾಂ ಪ್ರಹೇಳಿಕೆಯಕ್ಕುಂ" (ವಸ್ತುಕೋ. ೮೧–೩೬). **ಒಗಟು**: ಭ್ರಾಂತಿಯಲಿ ಪೇಳ್ದೊಗಟು ಪದ್ಯವೆನಲು (ಪ್ರಾಥರಾ. ೧–೪೮); ಹೆಂಗಸರಿಗೆ ಒಗಟನಂತೆ ಮಾತಾಡುವುದೆಂದರೆ ಆಸೆ (ಶೇಪ್ರಕ್ಷೆ. ೩೦೭). **ಒಗಟೆ**: ನೆರೆದ ವಿಶ್ವದ ಒಳಗೆ ಹೊಱಗೆ ನಾರಣನೆಂದ ಮಱೆನುಡಿಯ ವೇದದೊಗಟೆಯರ್ಥವಂ ಅಱಿದದಱ ಹೃದಯಮಂ ತೆಱೆದು (ಸಾನಂಚ. ೨–೧೬೩); ಒಗಟೆಯೇನೀ ಸೃಷ್ಟಿ? ಬಾಳಿನರ್ಥವದೇನು? ಬಗೆದು ಬಿಡಿಸುವರಾರು (ಮಂಕುಕ. ೬). 'ಓಗಟೆ' ಪರಾ.

ಒಗಟಾಗು, ಒಗಟೆಯಾಗು = (ಬಿಡಿಸಲಾಗದ) ಸಮಸ್ಯೆಯಾಗು; ಕಗ್ಗಂಟಾಗು: "... ನಿಮ್ಮ ಮಾತೇ ನನಗೆ ಒಗಟಾಗಿದೆ" (ಪದ್ಮಸ. ೨೫೭); ಇವರ ಮೌನ ಅವಳಿಗೆ ಒಗಟಾಯಿತು (ರಂಗನಾ. ೧೯೦); ಅಂತೂ ನಿಮಗೊಂದು ಭಾರಿ ಒಗಟೆಯಾಗಿಬಿಟ್ಟನಲ್ಲ ಇವನು (ವೀರಯೋ. ೯). ಒಗಟುಹಾಕು = ಒಡಪು ಹೇಳು: ಒಗಟುಹಾಕಿ ಹೆಸರು ಕೇಳುವ ರೂಢಿ ನನಗೆ ಮರೆತಿದೆ (ವೈದ್ಯರಾ. ೭೧).
[ದೇ. ‖ ತುಳು. ಒಗಟ್]

**ಒಗಂಟುವಡು** (ಕ್ರಿ). ಸಮಸ್ಯೆಯನ್ನು ಹೊಂದು : ಶ್ರೀರಂಗರಾಯ :– (ಹರವಸದ ಕರುವಿಯನ್ನಭಿಮುಖನಾಗಿ, ಒಗಂಟುವಟ್ಟರುವನು) (ಮಂತ್ರಶ. ೧೨೩–೨೨). [ಒಗಂಟು + ಪಡು₁]

**ಒಗಂಟುವೇೞ್** (ಕ್ರಿ). ೧. ಒಗಟೆಯನ್ನು ಒಡ್ಡು. ೨. ಗೂಢವಾಗಿ ಹೇಳು : ಕಾಬ್ಬಿರಮೂಗೆ ಕಾವ್ಯರಸಮರ್ಥಮುಮಕ್ಕರಮುಂ ಪ್ರತೀತಿಯಂ ಮಾೞ್ಪಿನೆಗಂ ಜಲಕ್ಕನಿರೆ ಪೇೞಿವೆ ಕೆಮ್ಮ[ನೊಗಂಟು] [ಪಾಠಾಂ. ನೆಗಂಟು, ನೊಜಂಟು]ವೇೞ್ದು ಚಿಃ ನೋೞ್ಪುದೆ ಮುಯ್ಯನಾ ಕೃತಿಗೆ ಪಂಚಿಕೆವೇೞ್ಪುದದರ್ಕೆ ಟಿಪ್ಪಣಂಬೇೞ್ಪುದು ಟೀಕುವೇೞ್ಪುದೆನೆ ಪೇೞ್ದವನುಂ ಕವಿಯೆಂಬ ಲೆಕ್ಕಮೇ (ಕಾವ್ಯಾವ. ೨೯೯); ಅರ್ಥಮಂ ಪ್ರಕಟಿಸಿ ಪೇೞಿದೊಗಂಟುವೇೞ್ವ ಕವಿಯುಂ ಕವಿಯೇ (ಪಾರ್ಶ್ವಪು. ೧–೭೫). [ಒಗಂಟು + ಪೇೞ್]

**ಒಗಂಟೆ** 'ಒಗಂಟು' ನೋ.

**ಒಗಚು** (ನಾ). ಒಗರು : ಹುಳಿಯಲ್ಲ, ಒಗಚಲ್ಲ, ಸಿಹಿಯಲ್ಲ, ಕಹಿಯಲ್ಲ; ಅದರಲ್ಲಿ ಧ್ವನಿಯಿಲ್ಲ, ವಾಸನೆಯಿಲ್ಲ, ಆಕಾರವಿಲ್ಲ (ವಚಭಾ. ೩೫೦); ಉಚ್ಚಧ್ಯೇಯಸಾಧನೆಯ ಹಂಬಲ ಸಿಹಿ – ಇವುಗಳ ನಿಕಟ ಮಿಶ್ರಣದಲ್ಲಿ ವ್ಯಕ್ತಿಯ ಬಾಳು ತನ್ನ ಒಗಚನ್ನು ಕಳೆದುಕೊಳ್ಳುವುದು (ಏಳಜೀ. ೬೧); ವರ್ಣನೆಗಳಲ್ಲಿ ದುಂದುಗಾರಿಕೆ ಕಂಡರೂ ಒಗಚಿಲ್ಲ (ನಂಜುಂಡ. ೧೫೧). [< ಒಗರ್]

**ಒಗಟು** 'ಒಗಂಟು' ನೋ.

**ಒಗಟೆ** 'ಒಗಂಟು' ನೋ.

**ಒಗಡಿಕೆ** (ನಾ). ವಾಂತಿ; ವಮನ : ಬಯಲಿಂಗೆ ಕಡೆಯಿಲ್ಲ ಮರುತಂಗೆ ತಡೆಯಿಲ್ಲ ರುಚಿಗೆ ಖಂಡಿತವಿಲ್ಲ ಸುಖಕ್ಕೊಗಡಿಕೆಯಿಲ್ಲ (ಅವಚಂ. ೨೫೬–೧೧೬); ಒಗಡಿಕೆಯಂಗವೊಳಿರ್ದರೇನಾತ್ಮನ ಬಗೆಯೆಂಬುದದು ಸುಪವಿತ್ರಾ (ಭರಚ. ೬೯–೯೪). [ಒಗಡು₀ + -ಇಕೆ]

**ಒಗಡಿಸು** (ಕ್ರಿ). ೧. ವಾಂತಿಮಾಡು; ಕಾರು : ಉಟ್ಟು ಕಳೆದ ಮೆಯ್ಲಿಗೆಗೆ ಸವಿದೊಗಡಿಸಿದ ಕೂೞ್ಗೆ ಕಯ್ಯಾಂತವಂ ಬೇೞ್ ಸಂದೆಗವಿಲ್ಲೆನಿಪ್ಪಾ ಪ್ರತಿಜ್ಞೆ ಹಂಪೆಯ ರಾಘವಾಂಕ ನಿನಗಲ್ಲದಹುದೇ (ಹಚಕಾ. ೧೧–೨೮); ಗಡಣದೊಳುಂಬವರೆಲ್ಲಂ ಹಡಿಕೆಯ ನಾತಕ್ಕೆ ಪೇಸಿಯೊಗಡಿಸಿ ಮೂಗಂ ಪಿಡಿದುಣಿಸಂ ತೊಱೆದಿರೆ (ಧರ್ಮಪ. ೨–೫೯); ನೊಗವನೀಡಾಡಿದವು ಕುದುರೆಗಳೊಗಡಿಸಲು ರಕುತವನು (ಕುವ್ಯಾಕ. ೩–೨೪). ೨. ಹೊರಸೂಸು; ಉಗುಳು : ಮದ್ಬಾಣಮಹಿಮೆಯನೊಗಡಿಸಿತು ಕಾಲಾಗ್ನಿ (ಕುವ್ಯಾಅ. ೧೨–೩೮). ೩. (ಅಲಂ) ಜುಗುಪ್ಸೆಯಾಗು; ಹೇಸಿಕೆಯೆನಿಸು; ಅಸಹ್ಯವೆನಿಸು : ಇನ್ನು ನಾನೊಗಡಿಸಿದೆನಾದಡನಿಮಿತ್ತ ಹುಸಿ ಬಂದಪುದು (ಹಚಕಾ. ೧೧–೨೩); ಒಗಡಿಸದೆ ನಾನಾವರ್ಣದೆಂಜಲ ತಿಂದು ಬಾಳುವ ಗನ್ನಗತಕದ ವೇಶ್ಯೆಯರ ಸುಡಲಿ (ಜೀವಂಜ. ೩–೩೬); ಮಗನೆ ಮದುವೆಯನೊಲ್ಲದೇತಕ್ಕೊಗಡಿಸುವೆ ಗಾರ್ಹಸ್ಥ್ಯವನು (ಸಭಾಗ. ೫–೧–೬); ಬುದ್ಧಿವಂತರ ಮಾತು ಮನಸಿಂಗೆಯೊಗಡಿಸುವುದು ದುರಾತ್ಮರಿಗೆ (ಮೋಹತ. ೪೧–೧೩). [ಒಗಡು₀ + -ಇಸು₃]

**ಒಗಡು** (ಕ್ರಿ). ಹೊರಚೆಲ್ಲು; ಕಾರು; ಕಕ್ಕು : ಹೋಮದಿ ಹೊತ್ತಿದಳ್ಳುರಿ ಸಭವನಡರಿತು ತುತ್ತನೊಗಡಿದನನಲ (ಕೌಶಿರಾ. ೧೯–೩೭); ಹಬ್ಬವಾಯಿತು ಮಾರಿಮಸಣಿಯರಡಗನೊಗಡಿದರು (ಕೌಶಿರಾ. ೨೧–೪೪). 'ಒಗಡಿಸು' ಪರಾ. [?]

**ಒಗಡುಗಿಡಿ** (ನಾ). ಹೊರಹೊಮ್ಮಿದ ಕಿಡಿ; ಹೊರಸೂಸಿದ ಕಿಡಿ : ಒಗಡು [ಪಾಠಾಂ. ತಗಡು, ಬಗಡು, ಹೊಗರು]ಗಿಡಿಗಳ ಸೂಸುವುರಿಧಾರೆಗಳ ಘೃತಲೇಪನದ ಬಂಧದ ಹೊಗರುಗಣೆ ಹೂಳಿದುವು (ಕುವ್ಯಾಶ. ೩–೫). [ಒಗಡು + ಕಿಡಿ₁]

**ಒಗತನ** 'ಒಕ್ಕತನ' ನೋ.

**ಒಗತನಗೆಡು** (ಕ್ರಿ). ಬಾಳುವೆ ಹಾಳಾಗು; ಸಂಸಾರ ಕೆಡು : ಇಂತಿವಳ ಮನೆವಾರ್ತೆಯ ಕಂಡು ಒಗತನಗೆಟ್ಟ ಬದುಕು ಬೇಡ ಎಂದೆ (ಮೋಳಿಮಾ. ೨೬೬–೮೧೮). [ಒಗತನ (< ಒಕ್ಕತನ) + ಕೆಡು]

**ಒಗನಿ** 'ಒಗುನಿ' ನೋ.

**ಒಗಬಳ್ಳಿ** (ನಾ). ಒಂದು ಊರಿನ ಹೆಸರು : ಪುಲಿಕಡ್ಡ ಅರಸರ್ ಸಿಯಗೆಲ್ಲಕ್ಕಾಗಿ ಕೊಮಾರನ್ ಕಿಕ್ಕೊರ್ಳತ್ತು ಒಗಬಳ್ಳಿಯುಳೆಱಿದುವಿಟ್ಟೊಂ (ಎಕ. XVI, ತುಮಕೂ. ೯೧–೧೨; 775). [ಒಗ್₀ + ಬಳ್ಳಿ]

**ಒಗರ್, ಒಗರು** (ನಾ). ೧. ಆರು ವಿಧವಾದ ರಸಗಳಲ್ಲಿ ಒಂದು; ಕಷಾಯ : "ತುವರಮೆನಲೊಗರಕ್ಕು" (ಮಂಗರಾ. ೬೫–೫); ಘನಮಧುರವಾ ತಿಕ್ತ ಕಟುವಾಮ್ಲವೊಗರ್ಸೈದಿವೆನಿಪ ರಸದಿಂ (ವೀಶೈಪು. ೮–೧೬–೪೧); ಒಗರುಪ್ಪು ಕಹಿಸಿಹಿ ಹುಳಿಕಾರಗಳ ತೆಗೆತೆಗೆದೀವುತಿಹನು ನಾಲಗೆಗೆ (ಭರಚ. ೪–೯೩). **ಒಗರು** : ೧. ಫಲಪತ್ರ ಕುಸುಮರಸ ಗಂಧಕಾರ ಒಗರು ಹುಳಿಮಧುರವೆಲ್ಲಕೆ ಜಲ ಒಂದೇ ಹಲವು ತೆಜನಾದಂತೆ (ವಚಶಾ. II, ೩೨೩–೮); ಗುಳ್ಳದೆಳಗಾಯ ಹರಳಂತೆ ಕತ್ತರಿಸಿಯೊಗರು ಹೋಹಂತುಕ್ಕರಿಸಿಕೊಂಡು (ಸೂಪಶಾ. ೪–೩೨); ಉದುರಿದೆಲೆಗಳಿಂದ ಒಗರಾಗಿ ಬೆಚ್ಚಗಿರುವ ಬೆಟ್ಟದ ಜೋಗಿನ ನೀರುಗಳನ್ನೆಲ್ಲಾ ಕುಡಿದುದಾಯಿತು (ಶಾಕುಂತ. ೫–೧೯). ೨. (ಅಲಂ) ಅನುಭವವಿಲ್ಲದ; (ಕಚೇರಿಯ) ಕೆಲಸದಲ್ಲಿ ಅಪಕ್ವವಾದ : ಹುಡುಗ ಇನ್ನೂ ಒಗರಾಗಿದ್ದಾನೆ (ರೂಢಿ). ೩. (ಅಲಂ) ಅಹಂಕಾರ; ಮದ : ಇಂದುಮತಿ . . . ತನ್ನ ಒಗರಿನಲ್ಲಿಯೇ ಇದ್ದಳು (ಅಪನಾ. ೫೩); ಕಲ್ಲಪ್ಪ ಒಗರಿನಿಂದಲೇ ಕೇಳಿದ (ಮನೆಬೆ. ೯೪). 'ತೊಗರ್', 'ತೊವರ್' ಪರಾ. [ದೇ. ‖ ತಮಿ. ಉವರ್; ಮಲ. ಓರ್, ಉವರ್; ತುಳು. ಒಗರ್, ಉಗರ್, ಉಬರ್, ಉಬಾರ್; ತೆಲು. ಒಗರು, ವಗರು; ಗೊಂಡಿ. ಸವ್ವೊರ್; ಕುಇ. ಸಾರು = ಉಪ್ಪು; ಕುವಿ. ಹಾರೂ = ಉಪ್ಪು]

**ಒಗರ** (ನಾ). (?) : ಆ ಪಾರದ ಒಗರವ ಹೋಹನು (ಸೌಇಎ. ೧೯೨೫, ಉಡುಪಿ. ೪೯೭–೩೨; 1310). [?]

**ಒಗರಡಕೆ** (ನಾ). ಬೇಯಿಸದ ಅಡಕೆ; ಹಸಿಯಡಕೆ; ಸೊಕ್ಕಡಕೆ : ಭೋಜನಮಂ ಮಾಡಿಸಿ ಒಪ್ಪಿಡಿವೊಗರಡಕೆಯ ಭಾಗವನು ಯೆರಡೆಲೆಯೊಳು ನಿಂಬೆಯ ಹಣ್ಣಿನ ಪ್ರಮಾಣದ ಸುಣ್ಣಮನಿಕ್ಕಿ ವೀಳಯಮುಂ ನೀಡಲ್ (ಪುಣ್ಯಾಸ್ರ. ೩–೧೯ ವ); ಒಗರಡಕೆಯನ್ನು ಎರಡು ಹೋಳಾಗಿ ಕೊಯ್ದು (ವಿವೈವಿ. ೧೧೦). [ಒಗರ್ + ಅಡಕೆ₁]

**ಒಗರು** 'ಒಗರ್' ನೋ.

**ಒಗರುಕಾಯಿ** (ನಾ). ಎಳಗಾಯಿ; ಕಸುಗಾಯಿ : ಪಶುವು ಒಗರು–ಕಾಯಿ; ಮಾನವನು ಹುಳಿ–ಕಾಯಿ, ದೇವನು ಹಣ್ಣು (ವಿಚಾಮಂ. ೮೨). [ಒಗರು (< ಒಗರ್) + ಕಾಯಿ₄ (< ಕಾಯ್₄)]

**ಒಗರುಜೋಳ** (ನಾ). ಒಂದು ಬಗೆಯ ಜೋಳ : ಒಗರುಜೋಳದ ಕಡ್ಡಿಯನ್ನು ದನ ಅಷ್ಟಾಗಿ ತಿನ್ನುವುದಿಲ್ಲ (ರೂಢಿ). 'ಸೀಜೋಳ' ಪರಾ. [ಒಗರು (< ಒಗರ್) + ಜೋಳ]

**ಒಗಸ** (ನಾ). ಒಂದು ತೆರಿಗೆ (?) : ನನ್ದಾದೀವಿಗೆಗೆ ಬಿಟ್ಟ ಒಗಸ ಹಾಗ ೧ ಮತ್ತವಾ ದೇವರ ತೋಂಟದ ಹೆಜ್ಜುಂಕಮುವ ಸರ್ವನಮಸ್ಯಮಾಗೆ ಬಿಟ್ಟರು (ಸೌಇಇ. XI–ii, ೧೫೨–೩೯; 1103). [?]

**ಒಗಸು₁** 'ಒಗೆಯಿಸು' ನೋ.

**ಒಗಸು₂** (ಕ್ರಿ). ಸೇರು; ಒಗ್ಗು; ಹಿತವಾಗು : ರೂಪಾತಿಶಯಮುಮನರಿಂಜಯಂ ಕಂಡು ಕೇವಣಿಸದ ಮಾಣಿಕಮುಂ ಕೂಡದ ಕೂಸುಮಿನ್ನಾರ್ಗೊಗಸುಗುಂ [ಪಾಠಾಂ. ಗೊರ್ಗೀಸುಗಂ] (ಅರ್ಧನೇ. ೩–೧೧ ವ). [?]

**ಒಗಸುಗಂ** (ಅ). ಹೆಚ್ಚಳವಾಗಿ ; ಅತಿಶಯವಾಗಿ ; ಅಧಿಕವಾಗಿ : ಮೆಲ್ಪಿನ ತೊದಳ್ನುಡಿಗಪ್ಪೊಡಮೆಯ್ದೆ ವಾರವೇ ನೊಗಸುವ[ಗ]ಮೆಂದು [ಪಾಠಾಂ. ನೊಗಸುಗನೆಮೊಲ್ದು, ನೊಗಸುಗುಮಂತೆ]ತಳ್ತಗಲನಾಕೆಯನಾ ಲಲಿತಾಂಗವಲ್ಲಭಂ (ಆದಿಪು. ೨-೭೫) ; ಬಿಗಿದೊಗೆದ ನಿನ್ನ ಮೊಲೆಗಳ ಮೃಗ ಮದದ ಪುಳಿಂಚುಗಳ್ ಪನಿತ್ತಿರಲೆಡೆಯಾದಗಲುರಮನೆನಗೆ ಪಡೆದಜ ನೊಗಸುಗಮಲ್ತೆಲೆಗೆ ನಿನ್ನನೆನಗೆಯೆ ಪಡೆದಂ(ಪಂಪಭಾ. ೮-೬೭); ಅಗಣಿತ ಗುಣಂಗೆ ಕರ್ಣಂಗೊಗಸುಗಮೇ ಕಟ್ಟು ಬೀರವಟ್ಟಮನರಸಾ (ಪಂಪಭಾ. ೧೨-೪೯) ; ಒಗಸುಗಮಲ್ಲದುಳ್ಳುವನೆ ಪೇಟ್ದು ಪೆನೆನ್ದುಮತರ್ಕ್ಯ ವಿಕ್ರಮಂ (ಎಕ. II, ೧೩೩-೩೦ ; 982) ; ಮೃಗಮದತಿಲಕಕಲಂಕಂ ಮೊಗಸಿದುದಿಲ್ಲೇಕೆ ನಿಟಲ ಮೃಗಧರಖಂಡಕ್ಕೊಗಸುಗಮದಿಲ್ಲವೇಕೆಲೆ ಮೃಗಲೋಚನೆ ಬಂದುದಳಕ ರಾಹುಗ್ರಹಣಂ (ಅನಂಪು. ೧೨-೫೭). [?]

**ಒಗಿಸು** (ಕ್ರಿ). ಚೆಲ್ಲಿಸು ; ಸುರಿಯಿಸು ; ಹೊರಸೂಸುವಂತೆ ಮಾಡು : ನಾಲ್ಕೊಗನ ಕರಕಲಶದಲಿ ಗೂಢದಿ ಮುಗಿದ ಗಂಗಾಜಲವ ಪೊರವಡಿ ಸಿಯೆ ಭಗೀರಥನು ವ[ವೊ]ಗಿಸಿ ಭೂಮಿಗೆ ತಂದು ಹರಹಿದ (ಗಗತಾ. ೧೦-೧೪). [ಒಗು$_1$ + -ಇಸು$_3$]

**ಒಗು$_1$** (ಕ್ರಿ). ಒಕ್ಕು$_3$ (ಭೂತಕೃ) ; ಒಕ್ಕು$_4$ (ಭೂತನ್ಯೂ). ೧. ಹೊರ ಸೂಸು ; ಚೆಲ್ಲು ; ಸುರಿ : ಮಂಗಳ ಲಾಜಾವರ್ಷದಂತೆ ಹಾರ ನಿಕರಂ ಗಳಿಂದುಚ್ಚಳಿಸುತ್ತಮಲ್ಲೊಗುವ ವರ್ಮೌಕ್ತಿಕ ನಿಕಾಯದ ನಡುವೆ(ಕಾದಂಪೂ. ೫೮೮) ; ಅಕ್ಷಿಗಳನೊಗುವ ಹರ್ಷಾಶ್ರುಗಳ್ಗಿತ್ತು (ಉದ್ಭಟ. ೧೧-೩) ; ಬಯಲಾಯ್ತು ಗಡ ಗಂಧರ್ವರಾಟೋಪ ನೆಲದೊಳೊಕ್ಕೊಡೆ ಶೋಣಿತಕೆ ಜೂಟಳವ ಹಿಡಿ ಬರಹೇಳು ಶಾಕಿನಿ ಕುಲವ (ಕುವ್ಯಾಅ. ೨೦-೮) ; ಮುತ್ತ ನೊಗುವವರಿ ಮೊಜನ ತೌಡಿಗೆ (ಕೌಶಿರಾ. ೨೩-೩೦). ೨. ಹರಡು ; ಆವರಿಸು ; ಮುತ್ತು : ಒಳಗೊಳಗೆ ಹೊಯಿವಾಡಿ ಹೊರಳುವ ಭಟರನಗಿ ದೊಗುವ ಬಲುಗತ್ತಲೆಯ ಕೋಳಾಹಳವ (ಕುವ್ಯಾದ್ರೋ. ೧೭-೪) ; ಮಿಕ್ಕ ಮಾತೇನಾ ನೃಪನ ಸುಕೀರುತಿ ದಿಕ್ಕುಗಳನು ನೆಜಿತೀವಿ ಒಕ್ಕುದಂಬರವ (ಅಂಜಚ. ೪-೬) ; (ಕುವ್ಯಾಅ. ೨೪-೧೫ ನೋ). 'ಉಗು$_1$' ಪರಾ. [?]

**ಒಗು$_2$** (ನಾ). ೧. ಹೊಮ್ಮುವಿಕೆ ; ಉನ್ಮೇಷ. 'ಒಗುಮಿಗೆ$_1$' ಪರಾ. ೨. ಉತ್ಸಾಹ ; ಸಂತೋಷ. 'ಒಗುಗೊಳ್' ಪರಾ.

[< ಒಗು$_1$. / ತಮಿ. ಒಗೈ = ಸಂತೋಷ]

**ಒಗುಗೊಳ್** (ಕ್ರಿ). ಸಂತೋಷಪಡು (?) : ಕೊಣ್ಣದೊಳ್ ಕಿಚ್ಚಂ ಪುಗುವೆನೆನ್ದೊಗುಗೊಣ್ಡು ಕಿಚ್ಚುಪೊಕ್ಕು ಸುರಲೋಕಮೇಜಿದೊನ್ (ಸೌಇಇ. IX-i, ೯-೬ ; 9ನೆಯ ಶತ). [ಒಗು$_2$ + ಕೊಳ್$_1$]

**ಒಗುನಿ, ಒಗನಿ** (ನಾ). ಒಂದು ಬಗೆಯ ಮರ ; ಪೀಲುವೃಕ್ಷ : ವೊ[ಒ]ಗುನಿಯ [ಪಾಠಾಂ. ಉಗುನಿಯ]ಮರನಿಂದೀಶಾನ್ಯದಿಗ್ಭಾಗ ದೊಳ್ ಪುತ್ತೊಗೆಯೆ ಪಡುವಲಯ್ಗೆಯ್ಯಂತರಂಬೋಗಿ ಕೆಯ್ಯೊಂಡಗುಱಿ ಪುರುಷಷಟ್ಕಾಕಾರದೊಳ್ ತೋಯಮಕ್ಕುಂ (ಲೋಕೋಪ. ೫-೩೨). **ಒಗನಿ**: ಬೆಟ್ಟದಲ್ಲಿ ಹುಟ್ಟಿದಂಥಾ ಆ ಒಗನಿಯಲ್ಲಿ ಅಕ್ಷೋಟ, ಕರ್ಪರಾಲ ಎಂಬ ಎರಡು ಶಬ್ದಂಗಳು ನೆಗಟ್ಟು (ನಾಚಿರಾ. ೩) ; ನಗರಿಯೆಲೆ ಕನಕ ಪತ್ರಮುಮೊಗನಿಯ ತಿಗುಡಿಂತಿವೆಲ್ಲಮಂ ಕೊಟ್ಟದೊಳಿಕ್ಕುಗೆ (ಅಶ್ವಶಾ. ೧೧-೪೪). 'ಉಗುನಿ' ಪರಾ. [< ಉಗುನಿ]

**ಒಗುನೆತ್ತರು** (ನಾ). ಸುರಿಯುವ ರಕ್ತ ; ಬಸಿಯುವ ನೆತ್ತರು : ಅಱಿದ ಕೊರಳಿನ ಬಸಿದ ಬಂಬಲುಗರುಳ ಜರಿವ ಕಪಾಲದೊಗುನೆತ್ತರ ರಣಾವನಿ ಕಜಿವುತಿರ್ದುದು ರೌದ್ರಮಯ ರಸವ (ಕುವ್ಯಾದ್ರೋ. ೧೫-೬೪) ; ತೊಲಗುವಜ್ಜೆಯನುದಿರ್ದ ತುಪ್ಪಳ ಬಳಿಯ ಮಲಗಿದು ಮೆಲುಕಿಜಿದ ನೊರೆವಳಿಯ ನೊಣವಿಜಿದಾಡಿದೊಗುನೆತ್ತರಿನ ಬೆಂಬಳಿಯ (ತೊರರಾ. ೩-೩-೧೧). [ಒಗು$_1$ + ನೆತ್ತರು (< ನೆತ್ತರ್)]

**ಒಗುಮಿಗಿಸು** (ಕ್ರಿ). ಅತಿಶಯವಾಗಿಸು ; ಹೆಚ್ಚಾಗಿಸು : ಬಗೆಯೊಳಿಹ ಜಗವೆ ನೀನು ಒಗುಮಿಗಿಸಿ ಬಾರೆ ಬಾ ಆಗಿ ಭಾನು (ಹೃದಸ. ೧೨-೧೦) ; ಸುಪ್ತಮಾನಸದಾಸೆ ಪ್ರಜ್ವಲಿಸಿ ಕಿಡಿಕಾರಿ ನೈಜ ಸತ್ವವನೆಲ್ಲ ಒಗುಮಿಗಿಸಲಿ (ಪಿಪಾಸೆ. ೫೬). [ಒಗುಮಿಗು$_0$ + -ಇಸು$_3$]

**ಒಗುಮಿಗೆ$_1$, ಒಕ್ಕುಮಿಗೆ** (ನಾ). ಆಧಿಕ್ಯ ; ಹೆಚ್ಚಳ ; ಅತಿಶಯ : "ಒಗುಮಿಗೆಯೆನೆ ಬಹಳ" (ಭಾರನಿ. ೧೮) ; ಒಗುಮಿಗೆಯ ಕೋಪದಲಿ ಕೋದನು ಸರಳಿನಲಿ ನರನ (ಕುವ್ಯಾಭೀ. ೬-೨೦) ; ಒಗುಮಿಗೆಯುಪ ಚರದಿಂ ಸಂತೋಷಂಬಡಿಸುತ (ಜಯಕಾ. ೮-೧) ; ಒಗುಮಿಗೆಯ ಹರುಷದೊಳಡರ್ದಳಂಗನೆ ಮಣಿವರೂಥಮಂ ನಿಜಮಿದೆಂದು (ಜೈಮಿಭಾ. ೧೮-೬೩). **ಒಕ್ಕುಮಿಗೆ**: ಜಕ್ಕವಕ್ಕಿಗಳೆಲ್ಲ ತಕ್ಕೆಯನುಳಿದು ಪ್ರಾಣಕ್ಕೆ ವಲ್ಲಭರಾದವರಂ ಒಕ್ಕುಮಿಗೆಯ ದುಃಖದಿಂ ಪೋದವು ದಿಕ್ಕುದಿಕ್ಕಿಗೆ (ಅಂಜಚ. ೭-೧೪೩). [ಒಗು$_2$ + ಮಿಗೆ ?]

**ಒಗುಮಿಗೆ$_2$** (ಅ). ಹೆಚ್ಚಾಗಿ ; ಅಧಿಕವಾಗಿ : ದುಗುಲನಿವಾಳಿಯ ನಿಟ್ಟಂಘ್ರಿಗೆಜಗಲೆಂದೊಗುಮಿಗೆ ತಲೆವಾಗುವಾಗ (ಭರಜ. ೯-೩೨) ; ಪುರಾತನರು ಒಗುಮಿಗೆ ಧೂಪವನೆಸಗಿದರು (ಮೋಳಪು. ೫-೧೫೩).

[< ಒಗುಮಿಗೆ$_1$]

**ಒಗೆ$_1$** (ಕ್ರಿ). ೧. ಹುಟ್ಟು ; ಕಾಣಿಸಿಕೊಳ್ಳು ; ಸಂಭವಿಸು : "ಒಗೆ-ಜನನ ವಸ್ತ್ರಪ್ರಕ್ಷಾಳನಯೋಃ" (ಶಮುಧಾ) ; "ಜನನದೊಳಗೊಗೆ" (ಶಬ್ದಮಂ. ೮೦) ; ಬಗೆಬಗೆದು ಕೇಳ್ದು ಬುಧರೊಲವೊಗೆದಿರೆ ಹೃದಯದೊಳ್ (ಕವಿರಾ. ೧-೧೩) : ಅಹಿತಾಗ್ನಿಗಳ ಮೆಯ್ಯೊಳೊಗೆದ ಶ್ರಮಸ್ವೇದಬಿಂದುಗಳ್ (ಪಂಚತಂ. ೧೧೮-೧೨) ; ಜವಳಿವೆಜಿ ಮನುಜರೂಪದಿನವನಿಯೊಳೊಗೆ ದಂತೆ (ಯಶೋಚ. ೧-೬೨) ; ತನ್ನಯ ಮನದೊಳೊಗೆದ ಹರುಷದಲಿ (ತ್ರಿಪುಸಾಂ. ೧೯೮) ; ಕಾಡಿನಲಿ ಕಿಚ್ಚು ಒಗೆವಾಗ ಮಾರುತನ ಕೂಡಿಕೊಂ ಡಂತೆ (ಸರ್ವಜ್ಞ. ೮೭೪). ೨. (ಮೇಲಕ್ಕೆ) ನೆಗೆ ; ಹಾರು : ಅಂತು ಪೊಯ್ದೊಡೆ ಪೊಡೆಸೆಂಡಂ ಪೊಯ್ದಂತೆ ಮೇಗೊಗೆದು ಸಣಸೆ (ಪಂಪಭಾ. ೩-೩೦ ವ) ; ಖಲನಾಕಾಶಕ್ಕೆ ತೊಟ್ಟೆಂದೊಗೆದಂ (ಜಗವಿ. ೧೫-೨) ; ಬೇಗದಿಂ ಮಡದಿಯಂ ಪಿಡಿದುಕೊಂಡು ಗಗನಕ್ಕೊಗೆದು (ವರ್ಧಪು. ೧೫-೪೯ ವ). ೩. ಎಸೆ ; ಬಿಸಾಡು : ಬಗೆಗೊಳ್ಳದೆ ಬಾವನ್ನರ ಸಂಗವ ನೊಗೆದು ಈಡಾಡುವ ಓಜೆವಂತರನು (ಶಿವಗೀ. ೧೫೩-೭೮೫) ; ಸೂಸುವ ಮನವನ್ನು ಹೇಸದಲೆ ಹರಿದೊಗೆದು ಲೇಸಾಗಿ ಇಪ್ಪ ಶಿವಯೋಗಿ ಗುರು ವಿನ ಕೂಸು ತಾನಿರುವ (ಸರ್ವಜ್ಞ. ೫೪೫). ೪. ಹೊಡೆ ; ಕುಟ್ಟು : "ಒಗೆವ ಪೆಟ್ಟಿನೆಗೆ ಕರಪೀಠವಕ್ಕು" (ಮಂಗರಾ. ೪೭-೬) ; "ವಸ್ತ್ರಮಂ ಕುಸುಕುವಲ್ಲಿಯು ತಾಡನದೊಳು ಜನನದೊಳಗೊಗೆ" (ಶಬ್ದಮಂ. ೮೦).

ಒಗೆದುಬಿಡು = ಎಸೆ ; ಬಿಸಾಡು : "ತಿನ್ನದಿದ್ದರೆ ಹೋಗಲಿ . . . ಒಗೆದುಬಿಡಬಹುದಾಗಿತ್ತಲ್ಲಾ" ಎಂದ (ಭಾರತಿ. ೯) ; ಜಯಸೇನನು ಅವಳನ್ನು ನೋಡಿದ ಕೂಡಲೇ ಆ ಕಲ್ಲನ್ನು ಒಗೆದುಬಿಟ್ಟನು (ಮಣಿಸ. ೮೪). [?]

**ಒಗೆ$_2$** (ಕ್ರಿ). (ನೀರಿನಲ್ಲಿ ಅದ್ದಿ) ಬಟ್ಟೆಯನ್ನು ತೊಳೆ ; ಸೆಣೆ ; ಸೆಳೆ : "ಒಗೆ-ಜನನ ವಸ್ತ್ರಪ್ರಕ್ಷಾಲನಯೋಃ" (ಶಮುಧಾ) ; "ವಸ್ತ್ರಮಂ ಕುಸುಕು ವಲ್ಲಿಯು ತಾಡನದೊಳು . . . ಒಗೆ" (ಶಬ್ದಮಂ. ೮೦) ; ಮುನಿಜನಂ ಗಳೊಗೆದಾಜಲಿಕ್ಕಿದ ತಳಿರ್ಗಾಸೆಗಳ [ಸೋರ್ದ ಬಣ್ಣದಿಂ ಬೆಳರ್ಗಂ ಪಿಡಿದು . . .] (ಕಾದಂಪೂ. ೧೧೭) ; ಯಜ್ಞದತ್ತೆ ಕೊಸಿಗೆ ಪಾಸುವ ಸೀರೆಗಳ ನೊಗೆಯಲೆಂದು ಪೋಗುತ್ತುಂ (ಪಂಚತಂ. ೧೮೮-೧೪) ; ಕುದಿಸಿ ಉದಕದೊಳಲೆದು ಬೀಸುತೊಗೆದು ಪರಡಿ ತೆಗೆತೆಗೆದು ಘಳಿಗೆಯನೊದ ಗಿಪುದು (ಬಸಪು. ೩೭-೪೭) ; ಬಟ್ಟೆ ಒಗೆಯಲು ಕೆರೆಗೆ ಹೋಗಿದ್ದಾರೆ (ರೂಢಿ).

ಒಗೆದುಕೊಳ್ಳು = (ಬಟ್ಟೆಯನ್ನು) ಮಡಿಮಾಡಿಕೊ, —ಶುಭ್ರಗೊಳಿಸಿಕೊ: "ನನ್ನ ಬಟ್ಟೆ ನಾನೇ ಒಗೆದುಕೊಳ್ಳಬೇಕಂತೆ . . ." (ಪುನರು. ೩೩೧). [?]

**ಒಗೆ$_3$** (ನಾ). (ಬಟ್ಟೆ) ಒಗೆಯುವಿಕೆ; ಸೆಣೆತ; ಸೆಳೆಯುವಿಕೆ: ಈ ಬಟ್ಟೆಗೆ ಈಗಾಗಲೇ ನಾಲ್ಕು ಒಗೆ ಆಗಿವೆ (ರೂಢಿ). [< ಒಗೆ$_2$]

**ಒಗೆತ$_1$** (ನಾ). ೧. ಹುಟ್ಟುವಿಕೆ; ಕಾಣಿಸಿಕೊಳ್ಳುವಿಕೆ: ಪಸಿಯೊರಟು ತಂದೆಗೊಗೆದಾ ಮಗಳ ಪಸಿಯೊರಟನೊಗೆತವಮ್ ತೋೞುಗುವರ್ (ಅಂತಿಗೊ. ೨೨-೪೫). ೨. ಎಸೆಯುವಿಕೆ; ಹೊಡೆಯುವಿಕೆ: ಒಂದೇ ಒಗೆತಕ್ಕೆ ಎದೆಯನ್ನು ಸೀಳಿ ಹೋಗುವಂತಹದದೆ – ಚೂರಿ (ಬಂಗಾಪ. ೨೫). ೩. ಸಾವು (ಉಕ). [ಒಗೆ$_1$ + –ತ$_2$]

**ಒಗೆತ$_2$** (ನಾ) = ಒಗೆ$_3$: ಬಟ್ಟೆ ಒಗೆತದಲ್ಲಿಯೇ ಮುಪ್ಪಾಯಿತು (ರೂಢಿ). [ಒಗೆ$_2$+ –ತ$_2$]

**ಒಗೆತನ** 'ಒಕ್ಕತನ' ನೋ.

**ಒಗೆತರ್** (ಕ್ರಿ). ಹುಟ್ಟಿಬರು; ಕಾಣಿಸಿಕೊಳ್ಳು; ಹೊರಬೀಳು: ಒಗೆತರ್ಪ ಪಲ್ಲಳಾ ನಗೆಮೊಗೆದ ಸರಸ್ವತಿಯನಾಗಳರ್ಚಿಸಿದ ಪೊದಳ್ದಗಲದ ಚೆಲ್ವಿನ ಮೊಲ್ಲೆಯ ಮುಗುಳ್ಗಳನಿಳಿಸಿರೆ ಗುಣಾರ್ಣವಂ ಸೊಗಯಿಸಿದಂ (ಪಂಪಭಾ. ೨-೯); ಅಧಿಕ ಶ್ರೀನಿಳಯಂ ಸುಪುತ್ರನೊಗೆತರ್ಕುಂ ನಿವ್ಮೊಳುರ್ವೀಶ್ವರಾ (ಪುಷ್ಪವು. ೩-೧೨೨); ಮೃಗನಯನೆ ನೋಡಿ ಸಂತಸನೊಗೆತರೆ ಪೊಗಳ್ದಪ್ಪುತೆಯ್ದೆ ಮುದ್ದಿಸುತಿರ್ದಳ್ (ವೃಷವಿ. ೩-೨೩). [ಒಗೆ$_1$ + ತರ್$_1$]

**ಒಗೆಯಿಸು**, ಒಗಸು$_1$, ಒಗೆಸು$_1$ (ಕ್ರಿ). ೧. ಹುಟ್ಟಿಸು; ಉಂಟಾಗಿಸು: ಮೆಯ್ಯೊಗೆಯಿಪ್ಪುದಗ್ಗಲಿಪ ಪಾಂಡುಚ್ಛಾಯೆಯುಂ ಭಸ್ಮಮಿಲ್ಲದೆಯುಂ (ಕಾದಂಉ. ೩೦೯). ೨. ಎಸೆಯುವಂತೆ ಮಾಡು; ಬಿಸಾಡು. ೩. ಸಾಯು: ಅವನು ಒಗೆಯಿಸಿದ (ರೂಢಿ). **ಒಗಸು$_1$**: ೧. ಲಿಂಗಗಳ ಕೀಳಿಸಿ ಚರಣದಡಿಯೊಳು ಹೊಸಕಿ ತಿಪ್ಪೆಯೊಳೊಗಸಿ ತುಳಿಸುತಲಿ (ಬಿಜ್ಜಪು. ೬೫-೧೦). **ಒಗೆಸು$_1$**: ೨. ಬಾಡಿಗೆ ಕೊಡದಿದ್ದರೆ ಸಾಮಾನುಗಳನ್ನೂ ಒಗೆಸಿಬಿಡುತ್ತೇನೆ (ರೂಢಿ). [ಒಗೆ$_1$ + –ಇಸು$_3$]

**ಒಗೆಸು$_1$** 'ಒಗೆಯಿಸು' ನೋ.

**ಒಗೆಸು$_2$** (ಕ್ರಿ). (ಬಟ್ಟೆ) ಒಗೆಯುವಂತೆ ಮಾಡು; ಸೆಣೆಸು; ಮಡಿಮಾಡಿಸು: ಬಟ್ಟೆ ಒಗೆಸಬೇಕು (ರೂಢಿ). [ಒಗೆ$_2$ + –ಸು$_1$]

**ಒಗೆಹ** (ನಾ). ಒಗೆಯುವಿಕೆ; ಒಗೆತ: ಮಡಿಸೀರೆಯಂತೆ ಗಟ್ಟಣಿಗೆವಂದು ಮೈಲಿಗೆಯಂತೊಗೆಹಕ್ಕೆವಂದು (ಧರ್ಮಾಮೃ. ೩-೭೭). [ಒಗೆ$_2$ + –ಹ$_2$]

**ಒಗ್ಗ** (ನಾ). ಒಬ್ಬಾತನ ಹೆಸರು: ಪುತ್ತೂರುಡೆ ಶಿವಮಾರಮ್ಮಂ ದುಣ್ಡಗೆಗ್ಗಂ ನಲ್ಲತ್ತೂರೊಡೆ ಒಗ್ಗ ಮನೆ ಬಳಿಗಮುಂ ಅಯ್ದೂಮ್ಬು ಮೆದೆ ಕಟಿನಿಯು (ಎಕ. X, ಕೋಲಾರ. ೨೩೧-೩; 800 ?). [?]

**ಒಗ್ಗಟ್ಟು** 'ಒಕ್ಕಟ್ಟು' ನೋ.

**ಒಗ್ಗಡ** (ನಾ). ಸಮೂಹ; ಗುಂಪು: "ಒಗ್ಗಡಮೆನಲ್ಕೆ ಸಮೂಹಂ" (ಕಶರ. ೯೯). [?]

**ಒಗ್ಗಡಿಸು** (ಕ್ರಿ). ಒಟ್ಟಾಗು; ಒಂದಾಗು; ಸೇರು: ನಡೆ ನೋಡುವ ಕನ್ನಿಕೆ[ಯರ ಕಡೆಗಣ್ಣಂ] ಸಾರ್ದು ಪರಿವ ಕರಿಯಾಲಿಗಳೊಗ್ಗಡಿಸಿದವ ತಂಸ ಮಧುಕರದೊಡನಾಡುವ ಮಧುಕರಂಗಳೆನಿಸಿದುವಾಗಳ್ (ಕಾದಂಉ. ೪೫); ಒಡೆದು ಕಟವೆರಡುಮೊಡನೊಗ್ಗಡಿಸದೆ ಮದವುಣ್ಮೆ ಪೊಣ್ಮಿರಲ್ ಮಲೆಗಳ್ ಗಂಡಡರೆ ಮುರಿದಿಂತು ಮೊಱಗುತ್ತಡಸಿರೆ ಗಜಗಮನೆ ವಿಜಯಗಜಮಂ ಕಂಡಳ್ (ಸೂಕ್ತಿಸು. ೭-೩೬). 'ಒಗ್ಗುಡಿಸು' ಪರಾ. [ಒಗ್ಗಡ + –ಇಸು$_3$]

**ಒಗ್ಗಯ್** 'ಒರ್ಕೆಯ್' ನೋ.

**ಒಗ್ಗರ** (ನಾ). ಸಮೂಹ: ಸಿಡಿಲೊಗ್ಗರದ ಬೊಬ್ಬೆಯಿಂ ಶೂರ್ಪನಖಿ ಬಂದಾಳಾ ಕಾನನಕೆ (ವಾಲಿಕಾ. ೬); ಸೇವಿಪ ಭಾವಿಪ ಸಂದ ದೇವರ್ಕಳೊಂದೊಗ್ಗರಂ (ರಾಮಾಶ್ವ. ೭೭-೧). 'ಮೊಗ್ಗರ' ಪರಾ. [?]

**ಒಗ್ಗರಣೆ**, ಒಗ್ಗರಣೆ (ನಾ). ೧. (ಆಹಾರದಲ್ಲಿ ರುಚಿಯುಂಟುಮಾಡಲು) ಸಂಬಾರ ಪದಾರ್ಥಗಳನ್ನು ತುಪ್ಪ ಅಥವಾ ಎಣ್ಣೆಯಲ್ಲಿ ಕರಿದು ಕೂಡಿಸುವುದು: ಪರಿಪರಿಯ ಬಹುಭಕ್ಷ್ಯಪಾಕದ ಪರಿಮಳದ ಶಾಕಾದಿಗಳ ವೊಗ್ಗರಣೆಗಳ ಸೌರಭಕೆ ತಿಳಿದುದು ನಿದ್ರೆ ಪವನಜನ (ಕುವ್ಯಾಆ. ೧೦-೨೩); ಹುಳಿದಾಳಿದ ಸಾಱು . . . ಗಳಿಲನೆ ಬಡಿಸಲೊಗ್ಗರಣೆಯಿಂಗಿನ ಕಂಪು ಸುಳಿದುದು ಬಹಿಸ್ಥಳಕೆ (ಮೋಹತ. ೩-೫೩); ಶಾಕಶೀಕರಣೆಯ ಗಾಡಪೋಡನೆಯ ಸುಪಾಕವೊಗ್ಗರಣೆ ಪಾಯಸವಾ (ಭರಚ. ೪-೭೪); ಒಗ್ಗರಣೆಯ ಅವಲಕ್ಕಿ ಸಲಕಿಯಂತಹ ಚಮಚೆಗಳು ಇವರ ಸೇವೆಗಾಗಿ ಬಾಯ್ದೆರೆದು ಕೂತಿದ್ದುವು (ಅಪನಾ. ೨೨). ೨. (ಅಲಂ) ಸ್ವಾರಸ್ಯವಾದ ವಿಷಯವನ್ನು ಕೂಡಿಸುವುದು: ಎಲ್ಲವುಗಳಲ್ಲಿ ಸಿರ್ಸಿಯ ಪ್ರಿಯಾಗಿಯ ಕತೆ ಅತ್ಯಂತ ರುಚಿಕರವಾಗಿತ್ತು. ಹಿಂದೆ ಹೇಳಿದುದಕ್ಕೆ ಈಗ ಒಂದೆರಡು ಒಗ್ಗರಣೆಗಳು ಹೆಚ್ಚೇ ಬಿದ್ದಿದ್ದುವು (ಮೂರುದಾ. ೧೪೧); ಮಾತಿಗೆ ಒಗ್ಗರಣೆ ಹಾಕಬೇಡ (ರೂಢಿ). **ಒಗ್ಗರಣೆ**: ೧. ದೆಕ್ಕಾಳಂ, ಸುಗ್ಗಿ, ಒಗ್ಗರಣೆ, ಅಚ್ಚು, ಮುಚ್ಚಂ (ಶಬ್ದಾನು. ೬೬ ವ್ಯಾಖ್ಯಾ).

ಒಗ್ಗರಣೆಮಜ್ಜಿಗೆ = ಒಗ್ಗರಣೆ ಹಾಕಿದ ಮಜ್ಜಿಗೆ; ಹದಮಾಡಿದ ಮಜ್ಜಿಗೆ: ಈ ನಗೆ-ಹಾಡುಗಳು, ಹುಳಿಯಾದರೂ ಖಾರವಾದರೂ ನೀರಾದರೂ ರುಚಿಕಟ್ಟಾದ ಒಗ್ಗರಣೆ – ಮಜ್ಜಿಗೆಯಂತೆ, ರಸದೂಟದಿಂದ ತಣಿದು ದಣಿದ ರಸಿಕರಿಗೆ ರುಚಿಕೊಡುವವು (ನಿರಾಭ. ೬ ಮುನ್ನುಡಿ). 'ಅಗ್ಗರಣೆ' ಪರಾ.

[ದೇ. ॥ ತುಳು. ಒಗ್ಗರಣೆ. / ಮರಾ. ಓಗರಣೀ, ಓಘರಣೀ]

**ಒಗ್ಗರಣೆಯಿಸು** (ಕ್ರಿ). ಒಗ್ಗರಣೆಯನ್ನು ಹಾಕು: ಜಲಚರಂಗಳ ಪೊಟ್ಟೆ ಸೀಳಿ ನೀರಿಂ ತೊಳೆದುವ[ವೊ]ಗ್ಗರಣೆಯಿತ್ತಾಂಬ್ರಮಾ (ನವಮೋ. ೯-೬). [ಒಗ್ಗರಣೆ + ಈ$_2$]

**ಒಗ್ಗರಿಸು**, ಒಗ್ಘರಿಸು (ಕ್ರಿ). ೧. ಒಗ್ಗರಣೆ ಹಾಕು: ಉದ್ದು ಬಿಳಿಯುಳ್ಳಿ ಮೆಣಸು ಸಕ್ಕರೆಯಿಕ್ಕಿಯೊಗ್ಗರಿಪುದೊಂದು ತೆಱ (ಸೂಪಶಾ. ೪-೮); ಆಗಾಗಳೊಗ್ಗರಿಸಲು ಬಿಸಿವಡೆದ ಮೇಲೋಗರವ ಪಳಿದ್ಯ ಪಲ್ಯಗಳ (ಮೋಹತ. ೧೪-೯); ಪುಟ್ಟಿಗೆಯೊಳೊಗ್ಗರಿಸಿದ ಕಡಲೆಯಂತೆ (ರಾಮಾಶ್ವ. ೧೩೪-೧೩). ೨. (ಅಲಂ) ಹುರಿದುಬಿಡು; ಧ್ವಂಸಮಾಡು: ಅಲ್ಲ ಕಲ್ಲೋಲಮಾಡಂಬುಧಿಯನು ಒಗ್ಗರಿಸು ಸಚರಾಚರೋರ್ವಿಯ ಪದಾರ್ಥಮಂ ನಿಗ್ಗರಿಸು ನಿಟಿಲಲೋಚನನ (ಸಮ್ಯಕೌ. ೫-೩೬). 'ಅಗ್ಗರಿಸು' ಪರಾ. **ಒಗ್ಘರಿಸು**: ೧. ಎಲೆ ಜೀರಗೆ ಸಾಸಿವೆ ಮೆಣಸು ಲವಂಗಂ ಧಾನ್ಯಕಂಗಳೆಂಬಿವನರೆದಂಬಿಲದೊಳೊಡಗೂಡೆ ನಿರುತಂ ಕಳೆದೊಗ್ಘರಿಸಿದೊಡೆ ತ[ಕ]ಱ ಕರಂ ಸವಿಯಕ್ಕುಂ (ಲೋಕೋಪ. ೮-೫೫). [ಒಗ್ಗರಣೆ + –ಇಸು$_3$]

**ಒಗ್ಗಳಿಗೆ** (ನಾ). ಒಂದುಗಳಿಗೆ, —ಕ್ಷಣ: ಒಗ್ಗಳಿಗೆಯನಿತೆ ಪ್ರಳಯದ ಪಾಳಿನಲ್ಲಿ, ಒಗ್ಗಳಿಗೆ ಬಾಳ್ವೆಯೊರತೆಯಿನೀಂಟುವಲ್ಲಿ; ಕಂತುತಿವೆ ತಾರೆ (ಗೀವಿಂ. ೧೨೧-೨೯). [ಒರ್ (< ಒಂದು$_3$) + ಗಳಿಗೆ$_1$ (< ಗಟಿಗೆ$_1$)]

**ಒಗ್ಗಱಿ** (ನಾ). ಒಂದು ಗರಿ, —ತುಪ್ಪುಳು: ಗಜರಥಹಯ ಪಾದಚರಮುಖ್ಯ ಬಹುಬಲ ವ್ರಜವನೊಗ್ಗಱಿಯೊಳೆತ್ತುವೆನು (ಮೋಹತ. ೩೬-೩೬). [ಒರ್ (< ಒಂದು$_3$) + ಗಱಿ]

**ಒಗ್ಗಾಲಿ$_1$** (ನಾ). ೧. ಒಂದುಗಾಲಿ. ೨. (ಆಲಂ) ಒಂದೇ ಕಡೆಗೆ ವಾಲುವುದು; ವಾಟ: ಗಾಲಿ ಒಗ್ಗಾಲಿಯಾಗಿ ಕೀಲು ಕಳಚಿ ಜೀವನ ರಥ ಬೀಳಲು (ಅಲ್ಪವಿ. ೮); ದಾರಿಯ ಉಬ್ಬುಗಲ್ಲೊಂದರ ಮೇಲೆ ಗಾಡಿಯ ಒಂದು ಗಾಲಿಯು ಹಾಯ್ದು ಅದು ಒಗ್ಗಾಲಿಯಾಯಿತು (ಪ್ರೇಮುತ. ೮೬). [ಒರ್ (< ಒಂದು$_3$) + ಗಾಲಿ]

**ಒಗ್ಗಾಲಿ$_2$** (ನಾ). ಒಂದೇ ಕಾಲಿರುವವನು; ಕುಂಟ: ಒಗ್ಗಾಲಿಯೂ ಸೊಟ್ಟಗಾಲು ಹಾಕಿಕೊಂಡು ಬೀಸ ಬೀಸ ನಡೆಯುತ್ತಿದ್ದನು . . . ಒಮ್ಮೆ ಒಂದು ಕಾಲದಲ್ಲಿ ಆ 'ನಾಗರಬೆತ್ತ'ವನ್ನು ಒಗ್ಗಾಲಿ ತಂದಿದ್ದನು (ಕಂಬಹು. ೧೨). 'ಒಗ್ಗಾಲಿತನ' ಪರಾ. [ಒಗ್ಗಾಲು + –ಇ$_3$]

**ಒಗ್ಗಾಲಿತನ** (ನಾ). ಕುಂಟತನ: ಒಗ್ಗಾಲಿತನದಿಂದ (ಕುಂಟತನದಿಂದ) ಬಂಧನಕ್ಕೀಡಾದ ಒಗ್ಗಾಲಿಗೆ ಹಲವಾರು ಸಲ ಎದ್ದು ಓಡಾಡಿ ಅಡಿಗೆ ಮಾಡುವುದು ಕಷ್ಟದಾಯಕವಾಗುತ್ತಿತ್ತು (ಕಂಬಹು. ೧೩). [ಒಗ್ಗಾಲಿ$_2$ + –ತನ]

**ಒಗ್ಗಾಲು** (ನಾ). ಒಂದು ಕಾಲು, —ಪಾದ. 'ಒಗ್ಗಾಲಿ$_2$' ಪರಾ. [ಒರ್ (< ಒಂದು$_3$) + ಕಾಲು$_1$ (< ಕಾಲ್$_1$)]

**ಒಗ್ಗಿಸು** (ಕ್ರಿ). ಒಗ್ಗುವಂತೆ ಮಾಡು; ಸೇರುವಂತೆ ಮಾಡು; ಹೊಂದಿಕೊಳ್ಳುವಂತೆ ಮಾಡು: ತಲೆಯ ಮೇಲಿಜೀದವನನೊಗ್ಗಿಸಿ ಸಲಹುವರು ಪುರುಷಾರ್ಥಜೀವರನಿಳಿಕೆಗಾಂಬರು ಸ್ವಾಮಿದ್ರೋಹರನೊಲಿದು ನಂಬುವರು (ಕುವ್ಯಾಸ. ಒರಿಣ. ೧–೧೦೮); ಅಗುಳಿಸುವ ಬಾಯ ಸವರಿಯೊಗ್ಗಿಸುತ ಕರ್ಮೂರಗಿಂದ ನೆಲನ ವಾಸನಿಸಿ ಮೇಘಾಳಿಯನಾರ್ಬಿವ ಚತುಷ್ಪದಿ ವೇಗದಿ ನಡೆದುವಾ ಕ್ಷಣದಿ (ಮೋಹತ. ೧೯–೧೩); ರಿಪುಬಲವ ನೆಗ್ಗಿಸಿತು ಮುರಿ ಮುರಿದು ಕರಚರಣದಿಂದ ನೆಲಕೊಗ್ಗಿಸಿತು ಮುರಿವಿಂದ ಕಿರುವಿಂದ (ತುರಂಗ. ೪೯–೪೪). [ಒಗ್ಗು$_2$ (< ಒಟ್ಟು$_1$) + –ಇಸು$_3$]

**ಒಗ್ಗು$_1$** 'ಒಟ್ಟು$_1$' ನೋ.

**ಒಗ್ಗು$_2$** 'ಒಟ್ಟು$_1$' ನೋ.

**ಒಗ್ಗು$_3$** (ಕ್ರಿ). ೧. (ಒಂದು ಕಡೆಗೆ) ತಿರುಗು: ಕೊರಳುದ್ದ ನೀರೊಳ್ ನಿಂದು ಕಾಲೊಂದ ಧರೆಯೊಳೂಜಿ ನಭಕ್ಕೆ ಮುಖಪಂಕರುಹಮೊಗ್ಗಿ ನಿಗುಳ್ದು ಭೋರನೆ ಸುರಿವ ಪೆರ್ಮಳೆಯೊಳಗೆ ತಾಂ ಕಂಪಿಸದೆ ನಿಂದಿರ್ದು (ಬಸವು. ೨–೧೨). ೨. ಚಾಚು; ನೀಡು; ವಿಸ್ತರಿಸು: ಮುಸುಡೊಗ್ಗಿ ಮುದ್ದಂ ಬೇಡುವಳು (ಬಸವು. ೧೫–೧೪); ಉಗ್ಗಡದೇಜುಸೋಪಾನದೊಳವರ ಕೈಯೊಗ್ಗಿ ಹಿಡಿದು ಮೇಲೆ ನೆಗೆವಾ (ಭರಚ. ೩–೭೮); ವರಗೌತಮನ ಮನೆಯ ಮುಂಗಡೆಯೊಳಿಳಿವಾಗ ಯೆರಡು ಕೈಗಳನೊಗ್ಗೆ ಹನುಮನಂಗವ ನೆಲ್ಲ ಹರನಡಿಗಳುಂ ಸೋಂಕುತಿರೆ (ಗುರುಚಾ. ೭–೫೬). ೩. ಪರವಶವಾಗು; ಒಳಗಾಗು; ಅಧೀನವಾಗು (?). ೪. ಸಂತೋಷಿಸು; ಹಿಗ್ಗು: ಬಾಲಕರಿಂ ರಾಮಾಯಣಮನೊಪ್ಪಿಸಿದಂ. ದೇವರ್ಕಳ್ ಹಿಗ್ಗಿದರ್; ದೇವಾಂಗನೆಯರೊಗ್ಗಿದರ್ (ರಾಮಾಶ್ವ. ೧೬೩–೨). [< ಮೊಬ್ಬು ?. / ತೆಲು. ಒಗ್ಗು]

**ಒಗ್ಗು$_4$** (ಕ್ರಿ). ತೊದಲು; ತಡವರಿಸು; ಬಿಕ್ಕು: ನುಡಿಯಿಸಲೆಡೆಗುಡದಿರ್; ನುಡಿಯೊಗ್ಗುಗುಂ (ರಾಮಾಶ್ವ. ೧೮–೧೪). [< ಉಗ್ಗು$_1$]

**ಒಗ್ಗು$_5$** 'ಒಟ್ಟು$_2$' ನೋ.

**ಒಗ್ಗುಗೆಡು** (ಕ್ರಿ). ಸೇರುವೆ ತಪ್ಪಿಹೋಗು; ಬೇರೆಬೇರೆಯಾಗು; ಗುಂಪು ಚೆದುರು: ನಿಂವೆಡ್ಡಮಾಗಿ ಲಗ್ಗಿಸಿ ಮೊಗ್ಗರಿಸುತೊಗ್ಗುಗೆಡದೆ ನಡೆಗೋಂಟೆಯಂತೆ ನೆಲವೆರ್ಚಿ ನಿಂದು (ಗಿರಿಕ. ೩–೫೫ ವ); ಮಸಗಿ ಬೊಬ್ಬಿಟ್ಟು ದೆಸೆದೆಸೆಗೆ ಪರಿದು ಮೂದಲಿಸಿ ಮುಂಗುಡಿಗೆದಜಿ ಮೊಗ್ಗರಂಬೊಯ್ದುಗ್ಗಲಿಸಿ ನಡೆದು ಬಗ್ಗಿಸಿ ಬಯ್ದೊಗ್ಗುಗೆಡದೆ ಮುಂಕಣಿಸಿ (ಗಿರಿಕ. ೩–೬೩ ವ). [ಒಗ್ಗು$_5$ (< ಒಟ್ಟು$_2$) + ಕೆಡು]

**ಒಗ್ಗುಗೊಳ್** (ಕ್ರಿ). ಒಟ್ಟಾಗಿ ಸೇರು; ಗುಂಪಾಗು: ಅಲ್ಲಿಂದ ಶಿವಭಕ್ತರೊಗ್ಗುಗೊಂಡು ಕಳಸಕನ್ನಡಿವಿಡಿದು ಕೊಡಗೂಸವೆಣ್ಣಳುಜ್ವಲ ಮಂಗಳಾನಕಂ ಸಹಿತಿದಿರುವಂದು (ಸೌಂದಪು. ೫–೯೫). [ಒಗ್ಗು$_5$ (< ಒಟ್ಟು$_2$) + ಕೊಳ್$_1$]

**ಒಗ್ಗುಡಿಸು** 'ಒರ್ಗುಡಿಸು' ನೋ.

**ಒಗ್ಗುವಡೆ** (ಕ್ರಿ) = ಒಗ್ಗುಗೊಳ್: ನೆಲನೇ ತೇರ್ ಸಸಿ ಬಿಸುಗದಿರರೆ ಗಾಲಿ ಒಗ್ಗುವಡೆದ ಸುತಿಯೇ ಕುದುರೆಗಳಿನಿತಾರ್ಗಿಲ್ಲೆನೆ ಮೂಜಗ ಚಾಂಬೊಳಲರ ಮೊಗ್ಗರಮಂ ಮುಗ್ಗಿಸಿದುರಿಗಣ್ಣಂ ಬಗ್ಗಂ ಕುಡುಗೆಮುಗೆ (ಉದ್ಭದೇ. ೪–೪೬). [ಒಗ್ಗು$_5$ (< ಒಟ್ಟು$_2$) + ಪಡೆ$_1$]

**ಒಗ್ಗುವಿಡಿ** (ಕ್ರಿ) = ಒಗ್ಗುಗೊಳ್: ಗಡಣವಿಡಿದೊಗ್ಗುವಿಡಿದೋರಣಂ ಬಿಡಿದು ತರವಿಡಿದು ಸರಿಸಂಬಿಡಿದು ಸಾಲ್ವಿಡಿದು ಪರಿಪಂತಿವಿಡಿದು ಕವಿಗಳ ಗಮಕಿಗಳ ವಾದಿಗಳ ವಾಗ್ಮಿಗಳ (ಹಚಕಾ. ೩–೫೯). [ಒಗ್ಗು$_5$ (< ಒಟ್ಟು$_2$) + ಪಿಡಿ$_1$]

**ಒಗ್ಗೂಡಿಸು** 'ಒರ್ಗೂಡಿಸು' ನೋ.

**ಒಗ್ಗೂಡು** 'ಒರ್ಗೂಡು' ನೋ.

**ಒಗ್ಗೇಣ್** 'ಒರ್ಗೇಣ್' ನೋ.

**ಒಗ್ಗೈ** 'ಒರ್ಕೆಯ್' ನೋ.

**ಒಗ್ಗೊಡಸು** (ಕ್ರಿ). ಗುಂಪನ್ನು ಚದುರಿಸು, —ಕದಲಿಸು: ಸಾಮತಂತ್ರಕೊಳಗಾಗದ ರಿಪುಗಳ ಭೀಮುಮುನ್ನೆಯರನೊಗ್ಗೊಡಿ[ಡ]ಸಿ (ಮುನಿವಂ. ೧–೪೧). [ಒಗ್ಗೊಡೆ (< ಒರ್ಗೊಡೆ) + –ಸು$_1$]

**ಒಗ್ಗೊಡೆ** 'ಒರ್ಗೊಡೆ' ನೋ.

**ಒಗ್ಗೊರಲ್** 'ಒರ್ಕೊರಲ್' ನೋ.

**ಒಗ್ಗೊರೆ** (ನಾ). (ಕುಂತದಂತಹ) ಒಂದು ತಿವಿಯುವ ಆಯುಧ: ಕುದುರೆಯ ಕೊಂಡು ಚೌದಂತಿಯ ಮಾವುತ ಮೇಲೆ ವದಗಿ ವಾ[ಒ]ಗ್ಗೊರೆಯಿಂ ತಿವಿದು (ಸೌಂದಕಾ. ೭–೫೦). [?]

**ಒಗ್ಗೋಲು** 'ಒರ್ಕೋಲ್' ನೋ.

**ಒಗ್ಗರಣೆ** 'ಒಗ್ಗರಣೆ' ನೋ.

**ಒಗ್ಗರಿಸು** 'ಒಗ್ಗರಿಸು' ನೋ.

**ಒಚಕ** (ನಾ). ಮಾತು (?): ನೋಡಿಯದರಾಕಾರವ ನೃಪನಾಡಿದೊಚಕ ಲ್ಯೆದಿ ಮೃತವಡಗೂಡದರನರಿದಾದಿಯಿಂದಿನ್ನೂರು ಜನ ಮೃತವಾ (ಜಿರಾಮಾ. ೧೨೪–೫೨). [< ಸಂ. ವಚಕ ?]

**ಒಚ್ಚಗುಣ** (ನಾ). ಶ್ರೇಷ್ಠಗುಣ: ಭಾಗವತರೆಂಬೊಚ್ಚಗುಣವುಂಟಾದರ ವರಿಂಗೊಚ್ಚತೆಜಗುವುದೆನ್ನ ಶೀಲ (ನಿಭಾಗ. ೪–೧೬–೧೨). [< ಒಚ್ಚತ$_1$ + ಗುಣ$_2$]

**ಒಚ್ಚಡಿ** 'ಒರ್ಚವಡಿ' ನೋ.

**ಒಚ್ಚಣ** (ನಾ). ಒಂದು ಕ್ಷಣ: ಸೆರೆವಿಡಿದುಕೊಂಡು ಬಹೆವೊಚ್ಚಣದೊಳ ವನನೆಂದುರುವೀರವಾದಮುಂಗೆಯ್ಯುತಾ ಕುಸುಮಸಾಯಕನ ಪಡೆ ನಡೆತಂದುದು (ಶೀಪರಾ. ೭೦–೨೬). [ಒರ್ (< ಒಂದು$_3$) + ಚಣ]

**ಒಚ್ಚತ$_1$**, ಒಚ್ಚಿತ (ನಾ). ೧. ಮಿಗಸಲು; ಒಂದಕ್ಕೆ ಸೇರಿದುದು: ಕಮಳಕ್ಕಾವಗಮುಲ್ತು ಲಕ್ಷ್ಮಿಯಿರವಾಸ್ಯಾಬ್ಜಕ್ಕಮುಂಟಗ್ಗದಿಂಪಮರ್ದಿಂ ಗೊಚ್ಚತಮುಲ್ತು ಮತ್ತಿವರ ವಾಕ್ಪೀಯೂಷ ಪೂರಕ್ಕಮುಂಟು (ಅರ್ಧನೇ. ೧–೩೨); ಸಂಸರಣ ಸಮುದ್ರದಿಂ ತೆಗೆದು ಮುಕ್ತಿನಿವಾಸಮನೆಯ್ದಿಪಾಪುರ್ಬಾಹ್ವುರೆ ನಿಜಪಾದಪದ್ಮಯುಗ ಭಕ್ತಿಗಿದೊಚ್ಚತಮಲ್ತೆ ಧೀರಧೀ (ವರ್ಧಪು. ೧೬–೭೬); ಶಶಿಕಳಾಲಂಕಾರವೆಂತಾ ಶಶಿಧರಂಗಳವಟ್ಟುದಂತಾ ಶಶಿಕಳಾಮೃತಸೇವನಾಸದ್ಭಕ್ತಿಸಾರಾಯ ಬಸವ ನಿನಗೊಚ್ಚತವಲಾ (ಪ್ರಭುಲೀ. ೧೬–೫೫); ಛಲ ನಿನಗೊಚ್ಚತವಲ್ಲೆ ವೈರಿಭಟರಲಿ (ಕುವ್ಯಾಗ. ೫–೪೫).

೨. ನಿಶ್ಚಿತ: ಬ್ರತಮುಯ್ದುಂ ತನಗೊಚ್ಚತಂ ಸಮಿತಿಯಯ್ದುಂ ತನ್ನೊಳತ್ಕ್ಕನ್ನತಂ (ವರ್ಧಪು. ೧೩–೨೩); ಕೊಲೆಗಡಿಗನಿದಿರಲಿ ಕೆಚ್ಚು ಮನದವರಾರು ಸೋಲವಿದೊಚ್ಚತವಲೇ ನಿಮ್ಮ ಸೇನೆಗೆ (ಕುವ್ಯಾದ್ರೋ. ೨–೭೬); ಮಱಿ ಯಾಕೆ ಮಾಱಿದೆನೊಚ್ಚತೆನ್ನನು ನಿನಗೆ ತನ್ನೀ ಪ್ರಾಣವಲ್ಲಭೆಗೆ (ನಿಭಾಗ. ೬–೧೬–೭). ೩. ಹಿತವಾದುದು; ಪ್ರಿಯವಾದುದು: ಇಂತು ಸರ್ವೇಂದ್ರಿಯಂಗಳ ಲಿಂಗಾರ್ಪಿತಂ ಸಂತತಂ ಲಿಂಗಪ್ರಸಾದ ನಿನಗೊಚ್ಚತಂ (ದೀಕ್ಷಾಬೋ. ೧೩೪–೧೦); ತೊನ್ನನ ಕೂಟದಿನಾದುದು ತೊನ್ನೀರೋಗಕ್ಕೆ ಬಾಡು ಕಳ್ ವಿಷಮೆನೆಯುಂ ಮನ್ನಿಸಳೆ ಮಗನ ಮಾತ ನಿದೇಂ ನಾಯಕನರಕಮಿಾಕೆಗೊಚ್ಚತಮಾಯ್ತೋ (ಯಶೋಚ. ೩–೭೪); ಕರುಣಾಸಾಗರನು ತನ್ನೊಚ್ಚತದ ಭಕ್ತನನು ಪಾಲಿಸಿ (ನಿಭಾಗ. ೧೧–೧–೪೭). ೪. ಕೊಂಕು; ವಕ್ರ: ಚೆನ್ನಾಗಿ ಬಾಯ್ದೆಱಿದು ಮಾತಾಡು ಮೂಗಿಗೆ ತಾವರೆಯಾಂಕೆಗೊಟ್ಟೀಕೊಚ್ಚತಾಗಿ ನುಡಿವೆ (ಭರಚ. ೪೨–೨೨). ೫. ಸೇರಿ ಹೋಗುವುದು; ಸಾಮರಸ್ಯ; ಐಕ್ಯ: ಒಳಗು ಹೊಱಗೆಂದೆಂಬಿವೆರಡ ಕೆಡಿಸಿ ಕಳೆಯ ಲಿಂಗದೊಳೊಚ್ಚತವನೊಪ್ಪುಗೊಳಿಸಿದಾ ಕರುಣಿ ಗುರು (ಕವಿಚ. II, ೧೨೪ ಪುರದಮಲ್ಲಯ್ಯ). ೬. ಒಪ್ಪವಾಗಿರುವಿಕೆ; ಅಚ್ಚುಕಟ್ಟು; ಓರಣ: ಮೆಚ್ಚಿದನು ಪವನಜನ ಬಿನ್ನಹದೊಚ್ಚತಕೆ ಹಿರಿದಾಗಿ ಮನದಲಿ (ತೊರರಾ. ೬–೪–೧೩). ೭. ಒಂದೇ ಕಾಲ; ಏಕಕಾಲ: ಘಂಟೆಗಳೊಚ್ಚತದಿ ಘಣಲೆಂದುದಾತನ ರಥದ ಬಿಱಿಸಿಂಗೆ (ಕೌಶಿರಾ. ೧೯–೧೨). ೮. ನೆಮ್ಮದಿ; ಸೌಖ್ಯ: ಶೂರವೀರನರಪಂ ತನ್ನನ್ವಯಂ ಪೆರ್ಚಲೊಚ್ಚತದಿಂ ವಿಸ್ತೃತಪೂಜ್ಯರಾಜ್ಯಪದದೊಳ್ ಸಾನಂದದಿಂದಿರ್ದನಂ (ಸೇವಿಪು. ೨–೧೧೦). ೯. ಮನೋಹರವಾದುದು; ಸುಂದರವಾದುದು; ಅಂದವಾದುದು: ಜ್ಞಾನದೃಷ್ಟಿಯ ನೆರಮೊ ಪೊಱನೋಟಮೇವುದೆಂದು ಮುಱಿದು ನೋೞ್ಪನೆನೆ ತುಱುಗೆಮೆಯರೆದೆಱೆದ ಕಣ್ಣೊಚ್ಚತಮಾಗೆ (ರಾಮಾಶ್ವ. ೪೦–೨೧). ೧೦. ಅಂದ; ಸೊಬಗು; ಸೌಂದರ್ಯ; ಮನೋಹರತೆ: ಎಬ್ಬಱಿಕೊಳೊಚ್ಚತಮಿರ್ಪ ದೃಷ್ಟಿ (ಅಪ್ರತಿ. ೪೫–೨೧); ನಾಡೊಳಚ್ಚದ ಪಚ್ಚೆಯೊಚ್ಚತಮನೇ ಕೊಂಡಾಡೆ ನಾಡಾಡಿಗರ್ (ಮೈಸೂಮ. ೧-೨೭). ೧೧. ಒಪ್ಪಿಸುವಿಕೆ; ಸಮರ್ಪಣೆ. 'ಒಚ್ಚತಂಗೊಡು' ಪರಾ. ೧೨. ಅವಕಾಶ; ಆಸ್ಪದ; ಇಂಬು. 'ಒಚ್ಚತಂಗೊಡು' ಪರಾ. ೧೩. ಅತಿಶಯ; ಹೆಚ್ಚಳ. 'ಒಚ್ಚತಂ' ಪರಾ. ಒಚ್ಚಿತ: ೩. ಮೊಮ್ಮಗನ ಕರದು . . . ಮುಂಡಾಡಿ ಯದುರಾಜರೊಚ್ಚಿತವನುಂಟುಮಾಡುವ ಕುವರನಹುದೆಂದು ಮುಚ್ಚುತಂ (ನವಮೋ. ೧೫–೬೦).

ಒಚ್ಚತವಾಗು = ಐಕ್ಯವಾಗು; ಕೂಡಿಕೊಳ್ಳು: ಅನುಶ್ರವಣ ಮನನದ ನಿಧಿಧ್ಯಾಸನದಲೊಚ್ಚತವಾಗಿ [ಪಾಠಾಂ. ನಾಗಿ] ತನ್ನಯ ತನು ಮನೋವಾಕ್ಕಾಯ ಕರ್ಮಗಳೊಂದು ಹುರಿಯಾಗಿ (ಪ್ರಭುಲೀ. ೧೮–೧೪).

[?. / ಪ್ರಾ. ವೋಚ್ಚತ್ಥ < ಸಂ. ವ್ಯತ್ಯಸ್ತ= ವಿಪರೀತ]

**ಒಚ್ಚತ್ತ$_2$** 'ಒಚ್ಚತಂ' ನೋ.

**ಒಚ್ಚತಂ, ಒಚ್ಚತ್ತ$_2$** (ಅ). ೧. ಚೆನ್ನಾಗಿ; ಹೆಚ್ಚಾಗಿ; ಅತಿಶಯವಾಗಿ; ಎಡೆಬಿಡದೆ; ಗಾಢವಾಗಿ: ಪಲತೆಱದ ರಮಣೀಯಪ್ರದೇಶಂಗಳೊಳಮೊಂದು ಪೊತ್ತಗಲದೆ ಮೆಯ್ಗೆ ಮೆಚ್ಚಿದಂತೊಚ್ಚತಂ ಕಾದಂಬರಿಯೊಳ್ನೆರೆದು (ಕಾದಂಉ. ೫೨೬); ವೆಟ್ಟನಿಂದೆಚ್ಚ ಬಿಚ್ಚರಿಕೆಗೊಚ್ಚತಂ ಕೆಳದರ್ (ಅನಂಪು. ೧೪–೧೮ ವ); ಪೋ ಪುಗಲ್ ಪುಗಲೆಂದೊಚ್ಚತಮೂಳ್ವ ಕೋಗಿಲೆಯುಂ (ಶಮದ. ನ. ೭೧ ಪ್ರಯೋ); ದಯಾಬ್ಧಿಯಂ ಘನತಪಂಗೆಯ್ದೊಚ್ಚತಂ ಮೆಚ್ಚಿಪೆಂ (ಶಬಶಂ. ೨–೮೯). ೨. ಒಂದೆಡೆಯಲ್ಲಿ; ಒಂದು ಸ್ಥಳದಲ್ಲಿ: ವೇದವೇದಾಂತಪರರೊಚ್ಚತಮೊಡಗೂಡಿ ಚರ್ಚೆಯಿಂ ಪರತತ್ತ್ವಮನಱಿಕೆಗೆಯ್ವ ಜಾಣರೊಂದು ನೆರವಿಯಿಂ (ರಾಮಾಶ್ವ. ೨೩–೭). ೩. ಸಂತೋಷವಾಗಿ; ಪ್ರೀತಿಯಿಂದ: ಭಕ್ತರ ಭಾವದಿಚ್ಚೆಗೊಚ್ಚತಮಾಗಿ ನೆಲಸಿರ್ಪ ನೆಲೆಯನಿಳೆಗಱುಪುವೆನೆನುತ್ತವಳ ನಿಲಯಮುಂ ಸಾರ್ದು ವತ್ಸಂಗಳಂ ಭಕ್ತವತ್ಸಲನಡವಿಗಂದೊಯ್ಯನೆ (ಕೊಟ್ಟೂಬ. ೮–೯). ೪. ಇಷ್ಟಬಂದಂತೆ; ಯಥೇಚ್ಛವಾಗಿ; ಮನಬಂದಂತೆ; ಧಾರಾಳವಾಗಿ; ನಿಸ್ಸಂಕೋಚವಾಗಿ: ಮೆಚ್ಚಿದೆನೊಚ್ಚತಂ ವರಮುಂ ಬೇಡೆನೆ ಭಕ್ತಂ ಪದಾರವಿಂದಕ್ಕೆಱಗಿ ಕರಾಂಜಲಿಗೆಯ್ದು (ವೃಷವಿ. ೯–೪೬ ವ); ಮೆಚ್ಚಿದೊಡೆ ಲೇಸು ನಿನ್ನರಸಿಸಹಿತಂ ಮನೆಯೊಳೊಚ್ಚತಂ ಬಂದು ಸೆಱೆಯಿರಿಮೆನಲ್ (ಚೆಬಪು. ೨೫–೩೬); ಓರೊಂದೆಡೆಯೊಳ್ ಅಚ್ಚರಿಯರನೊಚ್ಚತಂ ಕೊಂಡುಯ್ವಂ (ಅದ್ಭುತ. ೨೯–೨೦). ೫. ಏಕಕಾಲದಲ್ಲಿ; ಒಂದೇ ಸಮಯದಲ್ಲಿ: ಸುವೃಷ್ಟಿ ಸೊಂಪಚ್ಚರಿಯಾಗೆ ಸಸ್ಯಚಯಮುಂ ಪರಿವರ್ಧಿಸುತಿರ್ಪುದಣ್ಣ ಪೇೞಿಕೊಚ್ಚತಮಾಗೆ ಪೆರ್ಚಿಸದೆ ಮಿಕ್ಕ ತೃಣಾಂಕುರಸಂಕುಳಂಗಳಂ (ಪುಷ್ಪಪು. ೧–೫೦); ಹರಿಹಂಸಂ ರವಿಹಂಸನಂಚೆ ಖಗರಾಜಂ ನಾಮದಿಂ ಹಂಸನೆಂಬರವಂ ತಾಳ್ದಿವನೊಚ್ಚತಂ ಪರಮಹಂಸಂ (ಮೈಅರಿ. ೧೯೪೨, ೧–೪೭ ; 1300). ೬. ದಿಟವಾಗಿ; ಸತ್ಯವಾಗಿ; ಖಂಡಿತವಾಗಿ: ಮುಚ್ಚುಮಱಿಯಿಂದೇಕೆ ನಿನ್ನೀ ಜನನಿನಿನ್ನೊಚ್ಚತಮಿಾ ರಾತ್ರಿಯೊಳು ಬೆಚ್ಚದೆ ಕೊಲ್ವನೆಂದಾಡಿಯೊಳು ತಾನು ಪಚ್ಚುನುಡಿಯನಾಡಿದಳು (ಪ್ರಭಂಜ. ೨–೫೭); ಒಚ್ಚತಂ ತನಗುಳ್ಳ ರಾಜ್ಯದೊಳಗರ್ಧವಂ ಪಚ್ಚುಗೊಡುವೆಂ ತತ್ತುರಂಗಮುಂ ತಂದರ್ಗೆ ಮುಚ್ಚುಮಱಿಯೇಕೆ (ಸಮ್ಯಕೌ. ೧೧–೪೪). ೭. ಒಂದೇಸಮನೆ; ನಿರಂತರವಾಗಿ: ಮಾಣ್ಮಾಣೆಂಬೊಂದು ನೆವದಿಂದೊಚ್ಚತಮುಣ್ಮುವ ಕಾಮಿನಿಯ ಕಂಠರುತಿಯ ಹೂಂಕೃತಿಯುಪಚಾರಮಾಗೆ (ರಾಮಾಶ್ವ. ೬೦–೧೩). ೮. ಸ್ವಲ್ಪಮಟ್ಟಿಗಾದರೂ; ಸಾಕಷ್ಟು: ಮಾಡುವುದರ್ಕೆ ಶಕ್ತಿ ಎನಗೊಚ್ಚತಮಿಲ್ಲದೊಡೊಲ್ದು ಧರ್ಮಮಂ ಮಾಡುವರಲ್ಲಿ ನೋಡಿ ಪರಿಣಾಮಮನೆಯ್ದುವುದು (ಅಪಶ. ೩೩). **ಒಚ್ಚತ್ತ$_2$**: ೧. ಅಚ್ಚುಪಡಿಯಚ್ಚಿನೊಳಗೊಚ್ಚತಂ ತೋರ್ಪಂತೆ ಬಿಚ್ಚದಾ ನಿದ್ರೆಯೊಳಗಿರ್ದ ಸಂಸ್ಕಾರವೆಚ್ಚೆತ್ತ ಬುದ್ಧಿಯೊಳು ತೋರ್ಕು (ಅನುಸಾ. ೫–೫–೧೬); ಮುಳ್ಳಲಿ ಚುಚ್ಚಿದಳು ತಾನಱಿಯದವಳಿಂತೊಚ್ಚತಿಳಿದುದು ರಕ್ತವವನಿಗೆ (ನಿಭಾಗ. ೯–೨–೪); ಮಱಿಚಂದರೆ ಹಚ್ಚನನೊಚ್ಚತ ಮುಚ್ಚಿದ ಬಿಚ್ಚತದಿಂ ತುತಿಸೆ (ಉದ್ಭದೇ. ೩–೩೯). ೭. ನಿನ್ನಂಗವೆನ್ನ ಸರ್ವಾಂಗವಂ ಪರ್ಬಿರಲು ನಿನ್ನ ನೆನಹೆನ್ನೆದೆಯೊಳೊಚ್ಚತಂಗೊಂಡಿರಲು ಇಂತು ನೀವೆನ್ನನೊಚ್ಚತವಾಗಿ ಕೈಕೊಂಡು ಸಂತಸದೊಳಾಂ ನಿನ್ನನಗಲದೆ ಮನಂಗೊಂಡು (ಪುಷ್ಪರ. ಹ. ೫೨೭–೩೨); ಭಾಗವತರೆಂಬೊಚ್ಚಗುಣವುಂಟಾದರವರಿಂಗೊಚ್ಚತೆಱಗುವುದೆನ್ನ ಶೀಲ (ನಿಭಾಗ. ೪–೧೬–೧೨). ೯. ಕೂಡಲೆ; ಒಡನೆ: ಎಚ್ಚನುಚ್ಚಳಿಸುವ ತುರಂಗವನೊಚ್ಚತವೆ ಕೊಂದನು ರಥೌಘವ (ಕುವ್ಯಾದ್ರೋ. ೧೨–೨೧). ೧೦. ಸ್ವಲ್ಪವೂ; ಎಷ್ಟೆಷ್ಟೂ: ಇದು ಎನಗೆ ಸುಖಕ್ಕಚ್ಚುಗ ಎಂದು ಬೆಚ್ಚದೆ ಇವಳ ಕೂಟ ಒಚ್ಚತ ಬೇಡ (ಕಲ್ಯಾಶಾಂ. ೫೬); ಹೆಚ್ಚಿದ ಕೌರವ ನೃಪರ ತಮ್ಮಂದಿರನೊಚ್ಚತವುಳಿಯದಂದದೊಳು ಅಚ್ಚಾಳು ಪವನಜನಾ ಗದೆಯಿಂ ಪೊಯ್ದು ನುಚ್ಚುನುಱಿಯ ಮಾಡಿದನು (ನೇಮಿಸಂ. ೨೯–೪೦). ೧೧. ಸ್ವಲ್ಪಕಾಲದವರೆಗೆ: ತೃಷೆಯಾಗಿ ಅಪ್ಪುವಿನಲ್ಲಿ ಒಚ್ಚತ ಮುಳುಗಿದಡೆ ಆಪ್ಯಾಯನ ಅಱತುದುಂಟೇ (ಮೋಳಿಮಾ. ೧೫೧–೫೭೧); ಒಚ್ಚತ ಅಗಲಿರೆ [ಪಾಠಾಂ. ಒಚ್ಚತ್ತ ಅಗಲಿದರೆ] ಕಾಣದೆ ಇರಲಾರೆ (ಮಹಾದೇ. ೩೫–೧೧); ಒಚ್ಚತ ಅಜಹರಿರುದ್ರರು ಮೊದಲಾದ ಇವರೆಲ್ಲರೂ ಸಿಕ್ಕಿದರೇಕೆ ಮಾಯೆಗೆ (ಸರ್ವವ. ೩೭–೧೮೫); ಬೆಚ್ಚನೆ ಬಿಸಿಲತ್ತ ಹಚ್ಚನೆ ಹಾಸತ್ತ ಒಚ್ಚತ ನೀನು ವಿರಮಿಸು (ಇಂಚಾಪ. ೧೧೧–೪೦).

[< ಒಚ್ಚತ$_1$]

**ಒಚ್ಚತಂಗುಡು** 'ಒಚ್ಚತಂಗೊಡು' ನೋ.

**ಒಚ್ಚತಂಗೊಡು**, ಒಚ್ಚತಂಗುಡು, ಒಚ್ಚತಗೊಡು (ಕ್ರಿ). ೧. ಸಮರ್ಪಿಸು; ಪೂರ್ತಿಯಾಗಿ ಕೊಡು : ನಿಮಗೆನ್ನಂ ಸೂಱೆ ಗೊಟ್ಟೆಂ ನಿಮಗೆ ಹರುಷದಿಂದೊಚ್ಚತಂಗೊಟ್ಟೆನಾಹಾ (ರಕ್ಷಾಶ. ೭೮); ಮೂವತ್ತಾಱುಸಾವಿರ ಚರಕೆ ತನ್ನನೊಚ್ಚತಂಗೊಟ್ಟು ಸಮಯಾಚಾರ ಕೆಂದೆನುತ (ಮಡಿಕ್ಯಾ. IV, ೮೨೩ ಬಸವಸ್ತೋತ್ರ); ತನ್ನನೊಚ್ಚತಂಗೊಟ್ಟಾನಂದಿಸಿ (ವೃಷವಿ. ೫-೬೭ ವ). ೨. ಇಂಬುಗೊಡು; ಆಸ್ಪದವೀಯು : ಎಚ್ಚಬಾಣವ ಕಡಿದಡೆಯು ಮಗುಳೆಚ್ಚೊಡಾ ಶರ ನಾಂಟಿ ಕೀಳ್ವುದಕೊಚ್ಚತಂಗೊಡವು (ಕೋಗಯ. ೨೫-೫೯). **ಒಚ್ಚತಂಗುಡು** : ೧. ತಾರುಣ್ಯವತಿ . . . ಶರೀರದ ಸಹಜಸುರಭಿಗಂಧಮುಂ ಗಂಧವಹಂಗೊಚ್ಚತಂಗುಡುವಂತಿರೆ ಲಜ್ಜೆಯಿಂದಿರೆ ಕಂಡು (ಚಂದ್ರಪು. ೮-೭೧ ವ). **ಒಚ್ಚತಗೊಡು**: ೧. ಎನ್ನ ಸರ್ವಸ್ವಾಯತವನೊಚ್ಚತಗೊಟ್ಟೆ [ಪಾಠಾಂ. ಒಚ್ಚಗೊಟ್ಟು] (ಸಿದ್ಧವ. ೧೫೩; ಶೂನ್ಯಸಂ. ೨೦೭-೫ ನೋ); ಮಾನಸ ವಚನ ಕಾಯದೊಳು ಸಂದಳಿದು ನಿಮಗಾನೊಲಿದು ಎನ್ನನೊಚ್ಚತಗೊಟ್ಟೆನು (ಶಿವಗೀ. ೨೮-೧೨೫); ಗನ್ನಕಾಜನು ಕೃಷ್ಣನವರಿಗೆ ತನ್ನನೊಚ್ಚತಗೊಟ್ಟನು (ಕುವ್ಯಾ ದ್ರೋ. ೧-೨೮); ಮನಸಿಜನ ಬಾಣಕ್ಕೆ ತನುವನೊಚ್ಚತಗೊಟ್ಟು ನಿಲಿಸಲಾಱದೆಯಾಗಳು (ಪಾಸೋಪು. ೧೦-೪೨).

[ಒಚ್ಚತ$_1$ + ಕೊಡು]

**ಒಚ್ಚತಂಗೊಳ್**, ಒಚ್ಚತಗೊಳ್ (ಕ್ರಿ). ೧. ಪೂರ್ಣವಾಗಿ ಹೊಂದು, —ಸ್ವೀಕರಿಸು; ಚೆನ್ನಾಗಿ ಪಡೆ : ವಿಭವಮನಂತೊಚ್ಚತಂಗೊಂಡು (ಸೌಇಇ. XI-ii, ೧೧೯-೨೨; 948); ಕರುಣಪ್ರಸಾದಮಂ ಪ್ರೀತಿಯಿಂ ಕೈಕೊಂಡು ಹರನ ಕಾರುಣ್ಯಮಂ ತಾನೊಚ್ಚತಂಗೊಂಡು (ಚನ್ನರ. ೬೨-೧೦); ಹೂವಿನ ಬಿಲ್ಲನೊಚ್ಚತಂಗೊಂಡರ್ಚಿಸುತಿರ್ಪ ಕುಡುವುರ್ವಿನ ನೀಱೆಯರಿಂ (ಗಿರಿಕ. ೭-೧೧ ವ). ೨. ಆಕರ್ಷಿಸು; ಸೆಳೆ : ಈ ಮೂವ ಱೆನ್ನಯ ಕುವರರವರಿಂದಮುಂ ನಚ್ಚಿನಣುಗಂ ಸೌಂದರಂ ಚೆಲ್ವನವನಂ ಕಂಡೊಚ್ಚತಂಗೊಂಡರಾರ್ ಚಿತ್ತಮುಂ ಪೆಣ್ಗಳೊಳಗೆ (ಸೌಂದಪು. ೧೩-೧೮); ಅಚ್ಯುತನ ಮಂಗಳ ಶ್ರೀಮೂರ್ತಿ ಕಣ್ಮನವನೊಚ್ಚತಂಗೊಳಲೇಳ್ವ ರೋಮಪುಳಕದೊಳೆ (ಜೈಮಿಭಾ. ೫-೭). ೩. ಸಂತೋಷಪಡು; ಆನಂದಿಸು : ಎಲೆ ಮುನೀಂದ್ರಾ ನಿಮ್ಮಡಿಗಳನೊಚ್ಚತಂಗೊಂಡುಚ್ಚಾಸನದೊಳಿರಿಸಿ ಪಾದೋದಕಮನಾದರದಿಂ ಕೊಂಡು (ಗಿರಿಕ. ೪-೪೮ ವ). ೪. ಇಚ್ಛಿಸು; ಬಯಸು : ನಿಚ್ಚ ಸಾವಿರ ಹೊನ್ನ ಪಡಿಯಂ ವೆಚ್ಚ ಕುಡುಗದೆ ಕೊಡುವನಾತನೊಳೊಚ್ಚತಂಗೊಂಡೇನನಾದೊಡೆ ಬೇಡಿದುದನೀವ (ಬಸವು. ೨೬-೧೮). ೫. ಹೊಂದಾಣಿಕೆಯಿಂದಿರು: ದೃಷ್ಟಿಗೊಚ್ಚತಂಗೊಂಡು ರಂಜಿಪ ಕೃಷ್ಣರೂಪಮಿರಲನ್ಯಮಿನ್ನೇಕೆಂದಳು (ಜೈಮಿಭಾ. ೨೬-೧೯). **ಒಚ್ಚತಗೊಳ್** : ೧. ಸತ್ಯಕ್ಕೆ ತಕ್ಕ ನುಡಿಯಲ್ಲದಿರ್ದಡೆ ಅದ ಒಚ್ಚತಗೊಂಬರೇ (ಮೋಳಿಮಾ. ೫೪-೨೨೩); ಬಲುಗಲಹ ಬಲಿದುದು ವಿಲಯರುದ್ರನ ನಿಲವನೊಚ್ಚತಗೊಂಡ ಪರಬಲದೊಳಗೆ ಗಾಂಗೇಯ (ಕುವ್ಯಾಭೀ. ೬-೬); ಪರಿಪರಿಯ ಶಿವಲಿಂಗಭಕ್ತಿಯ ಪರುಠವಿಸಿ ಕಾಲನ ನಿವಾರಿಸಿ ಹರನನೊಚ್ಚತಗೊಂಡ ಶಿವಶರಣರಿಗೆ ಶರಣಾರ್ಥಿ (ಪ್ರಭುಲೀ. ೧-೭). ೨. ಪಚ್ಚೆದವನ ಮುರುಗವು ಮೊದಲವನು ವಿಯಚ್ಚರಸತಿಯರ ತೆಱದಿಂ ಮಚ್ಚರದಿಂ ಮಾಱುತವಳು ವಿಟರ ಮನ ಒಚ್ಚತಗೊಳುತಿಹಳಲ್ಲಿ (ಅಂಜಚ. ೩-೬೫). [ಒಚ್ಚತ$_1$ + ಕೊಳ್$_1$]

**ಒಚ್ಚತಗೊಡು** 'ಒಚ್ಚತಂಗೊಡು' ನೋ.

**ಒಚ್ಚತಗೊಳ್** 'ಒಚ್ಚತಂಗೊಳ್' ನೋ.

**ಒಚ್ಚತವಿರು** (ಕ್ರಿ). ಕೂಡಿರು; ಸೇರಿರು : ಬೆಚ್ಚಂತೊಚ್ಚತವಿಹ ತಾ ತನ್ನಂ ಎಚ್ಚರಿಸುವನಿಚ್ಚೆಯ ಸಂಪನ್ನಂ (ದೀಕ್ಷಾಬೋ. ೧೦೮-೧೪).

[ಒಚ್ಚತ$_1$ + ಇರು$_1$ (< ಇರ್$_1$)]

**ಒಚ್ಚತವೋಗು**, ಒಚ್ಚತಹೋಗು (ಕ್ರಿ). ೧. ಅಧೀನವಾಗು; ವಶವಾಗು. ೨. ಸೇರು; ಐಕ್ಯವಾಗು : ನೀನು ಸದ್ಭಕ್ತದೇಹಿಕನಾಗಿ ಸದ್ಭಕ್ತರಲ್ಲಿ ಒಚ್ಚತವೋಗಿ [ಪಾಠಾಂ. ವಾಗಿ] ಇಪ್ಪೆಯಾಗಿ (ಸಿದ್ಧವ. ೧೫೩; ಶೂನ್ಯಸಂ. ೨೦೭-೨ ನೋ); ನಚ್ಚಿ ಮನಮಚ್ಚಿ ಒಚ್ಚತವೋಗಿ ಲಿಂಗದೊಳು ಬೆಚ್ಚಂತೆ ಪ್ರಾಣಪದ ಸಂಗವಾಗಿ (ಶಿವಗೀ. ೨೮-೧೨೬). **ಒಚ್ಚತಹೋಗು** : ೧. ಇದ ನನ್ನದೆಂದು ನಚ್ಚಿ ಮಚ್ಚಿ ಹೆಚ್ಚಿ ಕೆಚ್ಚುಗೊಂಡು ಒಚ್ಚತಹೋದ ಎನ್ನಮನಕ್ಕೆ ಇನ್ನಾವುದು ಗತಿಯೊ (ಆದವ. ೩೪); ನಿಶ್ಚಿಂತ ನಿರಾಳನಿಗೊಲಿದು ಒಚ್ಚತಹೋಗಿ ಅಪ್ಪಿ ಅಗಲದಿಪ್ಪ (ಸಿದ್ದೇವ. ೧೪೮). [ಒಚ್ಚತ$_1$ + ಪೋಗು$_1$]

**ಒಚ್ಚತಹೋಗು** 'ಒಚ್ಚತವೋಗು' ನೋ.

**ಒಚ್ಚಯ$_1$**, ಒಚ್ಚೆಯ (ನಾ). ೧. ಸೌಹಾರ್ದ; ಸ್ನೇಹ; ಹೊಂದಾವಣೆ : ಒಡಲ ಕಳವಳಕೆ ಕುದಿವವಸರದೊಳು ಬೆಚ್ಚದೆವೊಚ್ಚಯವಿಲ್ಲದ ಮನದಿಂ ನಿಚ್ಚಯವಿಡಿದೆಚ್ಚಱಿಕೆಯ ಬಲದಿಂ (ದೀಕ್ಷಾಬೋ. ೧೨೬-೬); ಹೆಚ್ಚುಕುಂದುಗಳೊಚ್ಚ [ಪಾಠಾಂ. ಚ್ಚೆ]ಯಂಗಳ ಮಚ್ಚುಗಳು ಜನರಚ್ಚರಿಗಳೆದೆಗಿಚ್ಚುಗಳು ವಿಟರ (ಬಸವು. ೪೦-೬೧). **ಒಚ್ಚೆಯ** : ೨. ಅಪಮಾನ; ಸೋಲು : ಬೆಚ್ಚುವೊಚ್ಚೆಯವಿಲ್ಲದಚ್ಚೊತ್ತಿದಂತಾಯ್ತು ಕೆಚ್ಚುಗಟ್ಟಿತ್ತುಭಯಸಂಗ ವಿಸ್ಮಯವಾಯ್ತು (ದೀಕ್ಷಾಬೋ. ೧೪೩-೨೦); ಮಚ್ಚರಿಪ ದಕ್ಷನ ಮುಖಕುರಿಗಿಚ್ಚನಿಕ್ಕಿದನಾದಿತೇಯಸಮುಚ್ಚಯವನೊಚ್ಚೆಯವನೈದಿಸಿ ಬಾಧಿಸಿದನಂದು (ಬಸವು. ೧೬-೨).

[← ತಮಿ. ಒಚ್ಚಿಯ = ನಾಚಿಕೆ, ಪ್ರೀತಿಯ ಮಾತು, ತಿರಸ್ಕಾರ; ತೆಲು. ಒಚ್ಚಮು, ಒಚ್ಚೆಮು. / ಸಂ. ವತ್ಸಲ]

**ಒಚ್ಚಯ$_2$** (ನಾ). ಏಳಿಗೆ; ಅಭಿವೃದ್ಧಿ : ಒಚ್ಚಯಕೆ ಬದುಕಬೇಕೆಂಬ ನೀತಿಯ ಬಿಟ್ಟು ತುಚ್ಛತನಕೀಡಾಗಿ ಬದುಕುವರೆ ದೊಡ್ಡವರು (ಸಮ್ಯಕೌ. ೮-೨೧). [< ಸಂ. ಉಚ್ಛ್ರಾಯ]

**ಒಚ್ಚರ** 'ಒರ್ಚರ' ನೋ.

**ಒಚ್ಚರಮುತ್ತು** (ನಾ). ಒಂದೆಳೆಯ ಮುತ್ತಿನ ಸರ; ಏಕಾವಳಿ : ಮಲಯಜದಡ್ಡಬೊಟ್ಟೊಚ್ಚರಮುತ್ತಿಂದ ಕುಲವಧುಗಳು ಬಂದರಾಗ (ಭರಚ. ೧೬-೨೨). [ಒಚ್ಚರ (< ಒರ್ಚರ) + ಮುತ್ತು$_5$]

**ಒಚ್ಚರೆ** 'ಒರ್ಚೇರೆ' ನೋ.

**ಒಚ್ಚರೆಗಣ್** 'ಒರ್ಚೇರೆಗಣ್' ನೋ.

**ಒಚ್ಚವಡಿ** 'ಒರ್ಚವಡಿ' ನೋ.

**ಒಚ್ಚಾಡು** (ಕ್ರಿ). ಬಾಣಗಳನ್ನು ಪ್ರಯೋಗಿಸು (?): ಕಾಡಬೇಡ ನೀಯೆನ್ನ ಕಾಡಬೇಡವೆಂದು ನಿನ್ನ ಕಾಡಿದೆ ತರತರದೊಚ್ಚಾಡಿ ಕೊರಚಾಡಿ ಸಿರಿಮುಡಿವಿಡಿದೆಳದಾಡಿ (ಇಂದ್ರಕೀ. ೨೬೫). ℙ ಇದು 'ಎಚ್ಚಾಡು' ಎಂಬುದರ ಅಪಲಿಖಿತವಿರಬಹುದೆ? [?]

**ಒಚ್ಚಾರಿ**, ಒಚ್ಚೋರಿ (ನಾ). ೧. ಒಂದು ಕಡೆ, —ಪಕ್ಕ : ಹೊಡೆದ ಗುಂಡು ಯದೆಗೆ ತಾಗುವದು ಕೂಗುತ್ತಾ ವ[ಒ]ಚ್ಚಾರಿ ಮಗ್ಗುಲಾಗಿ ಬಿದ್ದಾ (ರಾಜೇಂದ್ರ. ೧೪೬). ೨. ಒಂದೇ ಬಗೆಯ ಅಭ್ಯಾಸ; ಒಂದೇ ಕಡೆ ನಡೆಯುವಿಕೆ. **ಒಚ್ಚೋರಿ** : ೧. ನಗುತಾ ಒಚ್ಚೋರಿ ನಿಂತಿದ್ದಳು (ಅದೂಟ. ೧೫೪). [ಒರ್ (< ಒಂದು$_3$) + ಚಾರಿ$_2$]

**ಒಚ್ಚಿ** (ನಾ). ೧. ತುಸು ಹೊತ್ತು; ಸ್ವಲ್ಪ ಕಾಲ : ಒಂದರ ಮೋಱೆಯನೊಂದು ಮೂಸಿನೋಡಿ ಮತ್ತೊಚ್ಚಿ ಹೊತ್ತಿಂಗೆ ಕಚ್ಚಿಯಾಡಿ ಹೋದಂತಾಯಿತ್ತು (ಅವಚಂ. ೭೨-೩೧೮); ಇಂದು ನಾಳ್ಪೆಗೀಗಳೇ ಮಾ[ಣಿಂ]ದು ಭಾಗಿಲ್ಲೊಚ್ಚಿ ಚಿರಕಾಲ್ಬಂದು ಕೊಟ್ಟಹೆ (ಕುಮುರಾ. ೫-೬೨); ಅಚ್ಚರಿಯೆ ಮಱೆದೊಮ್ಮೆ ನಾಮವನುಚ್ಚರಿಸೆ ಮೇಣ್ ನೆನೆಯೆ ಕೇಳಿದೊಚ್ಚಿ ವರಚರಿತಾಮೃತವ (ನಿಭಾಗ. ೧೦-೬-೮).

೨. ಒಂದು : ಅಚ್ಚುಕ್ಕಿಹಾಸೆಯ ಸ್ವಚ್ಛಾಗಿ ಹೊಯಿರೆವ್ವ ಒಚ್ಚಿಕಾಳಕ್ಕಿ ಸಿಡಿದಂಗ (ಲೋಕಗೀ. ೧೬–೧೨). 'ಒಚ್ಚಿಹೊತ್ತು' ಪರಾ. ೩. ಸ್ವಲ್ಪ; ತುಸು; "ಮುದ್ದು ಮಾತು" (ಸಿದ್ಧರಾ. ಕೋಶ): ಎಳಸಿತನಯಂ ಹುಟ್ಟಿ ಹುಟ್ಟಿತ್ತು ಸಂಪದಂ ಬೆಳೆಯ ತೊಡಗಿದೊಡೆ ಧರೆ ಬೆಳೆಯತೊಡಗಿತ್ತೊಚ್ಚಿ ಸು[ಪಾಠಾಂ. ಚಿತ್ಸು]ಳಿಯ ತೊಡಗಲು ಸುಳಿಯತೊಡಗಿತ್ತು ತಾಯ್ತಂದೆಗಳ ಕೀರ್ತಿ ದಿಕ್ತಟದಲಿ (ಸಿದ್ಧರಾ. ೨–೧೧). 'ಒಪ್ಪಚ್ಚಿ' ಪರಾ. [?]

**ಒಚ್ಚಿತ** 'ಒಚ್ಚತ$_1$' ನೋ.

**ಒಚ್ಚಿತ್ತು** (ನಾ). ಒಂದೇ ಮನ; ಒಮ್ಮನ: ಎಚ್ಚಱಂದವನಾವ ಯತಿಯಾದಡೆಮ್ಮ ಮನಮೆಚ್ಚಿ ಮುಂಗಾಣದನುಚರನಂತೆ ಚರಿಸುವಂ ತೊಚ್ಚಿತ್ತಿನಲಿ ತೋರ್ಪೆನೆಂದೊರ್ವ ಜರಡ ಕುಂಟಣಿ ಪೇಳ್ದರವರೆಡೆಯೊಳು (ವೆಂಕಾರಾ. ೧–೬–೪೧). [ಒರ್ (< ಒಂದು$_3$) + ಚಿತ್ತು$_2$]

**ಒಚ್ಚಿಹೊತ್ತು** 'ಒಚ್ಚೊತ್ತು' ನೋ.

**ಒಚ್ಚುಟು**, **ಒಚ್ಚೋಟು** (ನಾ). ಒಂದು ಅಳತೆ; ಒಂದು ಚೋಟು ಉದ್ದ: "ಪ್ರಾದೇಶಮೆಂಬುದು ಒಚ್ಚುಟು [ಪಾಠಾಂ. ಒಚ್ಚೋಟು]" (ಹಲಾಯು. ೮೯–೩೮೪). **ಒಚ್ಚೋಟು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [?]

**ಒಚ್ಚೆಯ** 'ಒಚ್ಚಯ$_1$' ನೋ.

**ಒಚ್ಚೆಯಗೊಡು** (ಕ್ರಿ). ಒಪ್ಪು; ಸಮ್ಮತಿಸು: ಮೆಚ್ಚಿರುತಿಹಳು ಭಾವನ ರೂಪು ಕುಲಶೀಲ ಹೆಚ್ಚೆಂದು ತನ್ನೆದೆಯೊಳಗೆ ಒಚ್ಚೆಯಗೊಡದಾಗ ತವರೂರ ಮೇಲಣ ಹೆಚ್ಚುಗಾರಿಕೆಗಾಡುತಿಹಳು (ಭರಚ. ೯–೮೪).
[ಒಚ್ಚೆಯ (< ಒಚ್ಚಯ$_1$) + ಕೊಡು]

**ಒಚ್ಚೆರೆ$_1$** 'ಒರ್ಚೆರೆ' ನೋ.

**ಒಚ್ಚೆರೆ$_2$** (ನಾ). ಒಂದೇ ಧಮನಿ, —ರಕ್ತನಾಳ: ಒಚ್ಚೆರೆಯ ನೆತ್ತರನ್ ಪಾಲ್ಗೊಂಡ ತಂಗೆ (ಅಂತಿಗೂ. ೧–೧). [ಒರ್ (< ಒಂದು$_3$) + ಸೆರೆ$_3$]

**ಒಚ್ಚೆರೆಗಣ್** 'ಒರ್ಚೆರೆಗಣ್' ನೋ.

**ಒಚ್ಚೆಱಂಗು** 'ಒರ್ಚೆಱಂಗು' ನೋ.

**ಒಚ್ಚೆಱಗು** 'ಒರ್ಚೆಱಂಗು' ನೋ.

**ಒಚ್ಚೇರಿಸು** (ಕ್ರಿ). ಒಂದು ಕಡೆ ಸೇರಿಸು, —ಕೂಡಿಸು: ದಳವಾಯಿ ವಿಕ್ರಮರಾಯರ ರುಂಡಮುಂಡಗಳನ್ನು ಒಚ್ಚೇರಿಸಿ ಈ ಒಡನೆಯೇ ಹೊರಟು ಕ್ರಮಪ್ರಕಾರವಾಗಿ ಶವಸಂಸ್ಕಾರಮಾಡಿ (ವಿಗಡ. ೮೧–೧೫).
[ಒರ್ (< ಒಂದು$_3$) + ಸೇರಿಸು]

**ಒಚ್ಚೇರೆ** 'ಒರ್ಚೇರೆ' ನೋ.

**ಒಚ್ಚೇರೆಗಣ್** 'ಒರ್ಚೇರೆಗಣ್' ನೋ.

**ಒಚ್ಚೇರೆಗಣ್ಣು** 'ಒರ್ಚೇರೆಗಣ್' ನೋ.

**ಒಚ್ಚೊತ್ತು**, **ಒಚ್ಚಿಹೊತ್ತು** (ನಾ). ಒಂದುಹೊತ್ತು: ನಿತ್ಯಸುಖಿಯಾದ ಮತ್ತೆ ಒಚ್ಚೊತ್ತಿಗೊಂದು ಪರಿಯೇಕೊ (ಮೋಳಮಾ. ೧೧೨–೪೧೫); ನಚ್ಚಿದಂತರಸಿನ ಇಚ್ಛೆಯಂತಿರುವುದದು ಒಚ್ಚೊತ್ತು ತಪ್ಪಿ ನಡೆದಿಹರೆ ಹೊತ್ತಾರೆ ಕಿಚ್ಚುಕಾದಂತೆ (ಸರ್ವಜ್ಞ. ೬೩೦). **ಒಚ್ಚಿಹೊತ್ತು** : ಶಿವನ ಮುಂದುಂಡಿಗೆಯನೊತ್ತಿದೆ ಶಿವನ ಲಾಂಛನವಿದು ಬಳಿಕ್ಕಾ ಕುವಿಟ ನೆಲ್ಲಿಂದೊಚ್ಚಿಹೊತ್ತಿನೊಳಿಲ್ಲಿಗೈತಂದು (ಬಸಪು. ೨೮–೪೧); ಬೆಂದ ವಿಷಯಂಗಳಂ ಬಿಟ್ಟುಬಿಡದೀ ಮನಂ ಒಚ್ಚಿಹೊತ್ತಿಗೆ ಭಕ್ತಿಯಿಚ್ಚೆಯಹುದೀ ಮನಂ ಬೆಚ್ಚಿ ಮತ್ತೊಲ್ಲೆನೆಂದಚ್ಚಱಿವುದೀ ಮನಂ (ಕವಿಚ. I, ೨೪೮. ದೀಕ್ಷಾಬೋಧೆ); ಒಚ್ಚಿಹೊತ್ತತಿಪಾನಮಂ ಕೇಳೊಚ್ಚಿಹೊತ್ತತಿ ಧ್ಯಾನಮಂ ಮಗುಳೊಚ್ಚಿಹೊತ್ತು ಸುಮುದ್ರೆ ಮುಖ್ಯಾನ್ನವನು ಚರ್ವಿಸುತೆ (ಶಂಕದಾ. ೧೪–೧೬). [ಒಚ್ಚಿ + ಹೊತ್ತು$_2$ (< ಪೊಟ್ಟು)]

**ಒಚ್ಚೋಟು** 'ಒಚ್ಚುಟು' ನೋ.

**ಒಚ್ಚೋಡಿ** 'ಒರ್ಚವಡಿ' ನೋ.

**ಒಚ್ಚೋರಿ** 'ಒಚ್ಚಾರಿ' ನೋ.

**ಒಜ್ಜರ$_1$**, **ಒಜ್ರ** (ನಾ). ಬೆಟ್ಟದ ಝರಿ; ಅಬ್ಬಿ: ತರತರದಿಂದೆ ತೋರ್ಪ ಸರುವಿಂ ದರುವಿಂ ಪರಿವೊಜ್ಜರಂಗಳಿಂ (೧೧೮. ೧–೬೦); ನಗ ಲಕ್ಷ್ಮಿಯುಟ್ಟ ಹಳಮೈಲಗೆಗಳನೊಜ್ಜ[ಪಾಠಾಂ. ಜ್ಜ]ರಮೆನಿಪ್ಪ ಮಡಿವಾಳಂಗಂ [ವಗೆ]ವಱಿಯೊಳ್ ತೆಗೆಬಿಸುಟವೊಲಗತಟದೊಳ್ [ಪೊರಳು] ತಿರ್ಪುವಜಗರನಿಕರಂ (ಸೂಕ್ತಿಸು. ೩–೮೨); ಗಿರಿಯ ಸಾನುಗಳಿಂದ ಪರಿವ ರಸದೊಜ್ಜರದ ಪಾನೀಯದಿಂಪಿನಿಂ (ಜೈಮಿಭಾ. ೩೩–೮). **ಒಜ್ರ** : ಹರಿವ ವ[ಪೊ]ಜ್ರದ ನೀರನು ತಾವರೆಯೆಲೆಗಳಲ್ಲಿ ಪೊಟ್ಟಣಗಳ ಕಟ್ಟಿ ಅರ್ಘ್ಯಪಾದ್ಯಾಚಮನೀಯಗಳನ್ನು ಕುಡಲಾಗಿ (ವಚಕಾ. ೧೧).
[ಪ್ರಾ. ಓಜ್ಝರ. / ತುಳು. ಉಜ]

**ಒಜ್ಜರ$_2$** (ನಾ). ವಜ್ರ: ಕೆಂಧೂಳಿಡರ್ದು ನಭಮಂ ಮುಸುಕಿತಾಗ ಸುರಸಿಂಧುಪ್ರವಾಹಮುತ್ತುಂಗ ಶೋಣಾಚಲದ ಬಂಧುರತಟಪ್ರದೇಶದೊಳೊಪ್ಪುವೊ [ಪಾಠಾಂ. ವ]ಜ್ಜರದ ನಿಧಿ [ಪಾಠಾಂ. ನದಿ]ಯೆಂಬ ತೆಜನಾಗಲು (ಜೈಮಿಭಾ. ೨೨–೫). [< ಸಂ. ವಜ್ರ]

**ಒಜ್ಜರ$_3$**, **ಒಜ್ಝುರ**, **ಒಜ್ಝುರ** (ನಾ). ಒಂದು ರಾಜ ಚಿಹ್ನೆ: ಗಜಢಕ್ಕೆಯ ಪಾಟಿ ಮಹಾಧ್ವಜದೊಜ್ಜರದೇಕಶಂಖ ರವಿಶಶಿಬಿಂಬಧ್ವಜದ ಧವಳಾತಪತ್ರವ್ರಜದೊಳಗನೆ ನಡೆಯೆ ಪೊನ್ನಸಿರಿವಟಿಯಿಗೆಯೊಳ್ (ಶಾಂತಿಪು. ೧೦–೧೫೦); ಗುಡಿ ಚಮರವೊಜ್ಜರಂ ಬೆಳ್ಗೊಡೆ ಹಡಪಂ ಘಳಿಗೆಯುಭಯ ಶಂಖಂ ಮೊದಲಾಗೊಡೆಯ ಮಹಾಮಹಿಮೆಯನೂರೊಡೆಯ ಶ್ರೀಮಂಗಳಾರ್ಣವಂ ಕುಡೆ ಪಡೆದರ್ (ಎಇ. XVIII, ೧೯೨–೨೬ ; 1184). **ಒಜ್ಝುರ** : ಎತ್ತಿದ ಮೇಘಡಂಬರಂಗಳ ಮುಂದೆ ಪಾಳಿಕೇತನಂಗಳ ಪೋರಾಯದೊಜ್ಝುರಂ[ಪಾಠಾಂ. ಒಬ್ಬರಂ]ಗಳ ಕೂಡಿ ನಡೆವ ಕುಂತಂಗಳಂ (ಮಹಾನೀ. ೧೨–೯ವ). **ಒಜ್ಝುರ** : ರವಿದಣ್ಣನಾಯಕಂ ಶ್ರೀಮದಿಳೇಶನಿಯೋಗದಿನ್ದ ತಳೆದಂ ಬೆಳ್ಗೊಡೆ ಮಹಾಡಂಬರಂ ಚಾಮರಮೊಜ್ಝುರಂ ಕುರುಳಕೊಂತ ಮೆನಿಪ್ಪ ಮಹೀಶಚಿನ್ಹಮಂ (ಸೌಇಇ. IX–i, ೧೫೮–೨೧ ; 1090). [?]

**ಒಜ್ಜರಂಬರಿ** (ಕ್ರಿ). (ಬೆಟ್ಟದ) ಝರಿಯಂತೆ ಹರಿ: ಮಳೆಯಮಂಡಳದೊಳ್ ವೇಳೆಗೊಂಡು ನೆಲಸಿ ಗುಜ್ಜರಮಂಡಳದೊಳೊಜ್ಜರಂಬರಿದು ಮಱುಮಂಡಳದೊಳ್ ಪರೆಪುವಡೆದು (ಅನಂಪು. ೧೪–೪೬ವ).
[ಒಜ್ಜರ$_1$ + ಪರಿ$_1$]

**ಒಜ್ಜರಿಸು** (ಕ್ರಿ). ಪ್ರವಿಸು; ಉಕ್ಕು: ಲಿಂಗದಲ್ಲಿ ಒಜ್ಜರಿಸಿ ಸುರಿವ ಶಿವಸುಖರತಿಯೊಳೋಲಾಡುತ್ತ (ಮಹಾದೇ. ೩೬–೨); ಮತ್ತಮತಂಗ ಮದಂಗದೊಳ್ಪೊಜ್ಜರಿಸುತ್ತ ನೆಲಕೆ ಜಲ್ಲಿಱದುಗುತಹ ಬಿಸುನೆತ್ತರ ಪೊನಲೆಸೆದುದು (ಜಯಕಾ. ೬–೨೨); ಬಂಧಕೀಜನದೊಡಲೊಳು ಒಜ್ಜರಿಸೆ ರಾಗರಸ (ಸಮ್ಯಕೌ. ೧–೩೬). [ಒಜ್ಜರ$_1$ + –ಇಸು$_3$]

**ಒಜ್ಜಲು** (ನಾ). ತೇವ; ಒದ್ದೆ; ಕೆಸರು: ಮಜ್ಜನಗೆಯ್ದ ಕುಂಕುಮರಸಧಾರೆಯಿಂತೊಜ್ಜಲಾದುದು ನಿಂದೆಡೆಯು (ಮೋಹತ. ೩೮–೫೬).
[< ಸಂ. ಉದ್ರಲ]

**ಒಜ್ಝುರ** 'ಒಜ್ಜರ$_3$' ನೋ.

**ಒಜ್ರ** 'ಒಜ್ಜರ$_1$' ನೋ.

**ಒಟಕೆರು** (ನಾ). (ಉಕ) ಒಣಗಿರುವ ಸ್ಥಿತಿ; ಹೆಕ್ಕಳಿಕೆ: ಯಾವುದೀ ಉರಿಗಾಲ ನೆತ್ತಿಗೇರಿದ ಸೂರ್ಯ ಕಾಲು ಇಟ್ಟಲ್ಲಲ್ಲಿ ಕಾದಹಂಚು ಗಾಳಿಯೇ ಮಟಮಾಯ ಮಾತಾಡ ಮಳೆರಾಯ ಒಟಕರಾಗಿದೆ ಒಣಗಿ ನೀರ ಅಂಚು (ಅರಳು. ೩೪೪–೪).
[?. / ತಮಿ. ಒಟ್ಟು, ವಱ್ಱು = ಬತ್ತು, ಒಣಗು]

**ಒಟ್ಟೆ₁** 'ಒಡ್ಡ₁' ನೋ.

**ಒಟ್ಟೆ₂** (ನಾ). ತುಟಿ; ಅಧರ: ಸುಸಿಲ ಸೊಕಕ್ಕೆ ಸೊರ್ಕಡರೆ . . . ತೋಳ ತಳ್ಪನಾಳಿಸುವಿರದೊಟ್ಟೆಮುಂ ಸವಿವ ಬಾಯ್ಬಿಡುತಂದೊಡೆಮೆಚ್ಚಿದಂತೆ ಚುಂಬಿಸುವ (ಚಂದ್ರವು. ೮-೭೭). [ಪ್ರಾ. ಒಟ್ಠ < ಸಂ. ಓಷ್ಠ]

**ಒಟ್ಟೆಂದ** (ನಾ). ಸಮುದಾಯ ಶೋಭೆ; ಪೂರ್ಣ ಅಂದ: ರಾಗ-ಭಾವಗಳ ಮಿಲನಕ್ಕೆ ಒಟ್ಟಂದ ಕೊಟ್ಟು ಭವ್ಯಶೋಭೆಯನ್ನೂ ಸಂಪೂರ್ಣತೆಯನ್ನೂ ಒದಗಿಸುವ ಆಧಾರಸಾಮುಗ್ರಿಯೇ ತಾಳ (ಸಂಗೀತ. ೫೧); ಜೀವನವೇ ಲಯಬದ್ಧವಾಗಿ ಒಟ್ಟಂದದಿಂದ ಶೋಭಿಸಬೇಕು (ಸಾಹಿಜೀ. ೧೩). [ಒಟ್ಟು₃ + ಅಂದ]

**ಒಟ್ಟೆಂಬಾರ** (ನಾ). ಸರ್ಕಾರಕ್ಕೂ ರೈತನಿಗೂ (ಭಾಗಮಾಡದಿರುವ) ಪೂರ್ಣ ಧಾನ್ಯರಾಶಿ (ಸ್ಯಾಂಡರ್). [ಒಟ್ಟು₃ + ಅಂಬಾರ]

**ಒಟ್ಟೆಜ₁** (ನಾ). ೧. ಕಪ್ಪ; ಕಾಣಿಕೆ; ತೆರಿಗೆ: "ಒಟ್ಟಜವು ಕಪ್ಪಮೆನಿಸುಗು" (ಶಬ್ದಮಂ. ೩೯). ೨. ಒತ್ತೆ: ತಾನೊತ್ತೆಯಿಡಲ್ವೇಡೊಡೆ ನೀನಿನ್ನೆಮಗೆನ್ನ ತಂದೆಯ್ಯೊತ್ತೆಗೆ ಕಯ್ಯಾನೆಮೆನೆ ಮೆಚ್ಚಿ ಸುಚಿವಂ ಮಾನಿನಿಯರನಜ್ಜನೊಟ್ಟಜಂ ಮಚ್ಚಿದವೊಲ್ (ಆಜಿಪು. ೨-೯೯). 'ಒಟ್ಟೆಜಂಗುಡು' ಪರಾ. [< ಕೊಟ್ಟಜ ?]

**ಒಟ್ಟೆಜ₂** 'ಒಟ್ಟಜೆ' ನೋ.

**ಒಟ್ಟೆಜಂಗುಡು** (ಕ್ರಿ). ಕಪ್ಪಕೊಡು; ಕಾಣಿಕೆ ಸಲ್ಲಿಸು: ರಜತಶೈಲೇಂದ್ರ ಮುನ್ನೀತಭಂಗಂ ಗಿರಿರಾಜಂಗೊಟ್ಟಜಂಗೊಟ್ಟವೊಲೆಸೆದುದೇಂ ದಿವ್ಯಮೋ ಜೈನಗೇಹಂ (ಶಾಂತಿಪು. ೨-೧೧೭) [ಒಟ್ಟಜ₁ + ಕುಡು₁ (< ಕೊಡು)]

**ಒಟ್ಟೆಜವೆಱು** (ಕ್ರಿ). ಪರಾಕ್ರಮವನ್ನು ಹೊಂದು; ಸಾಹಸವನ್ನು ತಾಳು: ಒಟ್ಟಜವೆತ್ತು ಬಾಹುಬಲದಿಂದೋಡಿ ನಿರ್ಮ್ಮಳ × × × ನ್ತಿಯಾದಿಟ್ಟಳ × × ಯಿನಾಳ್ದನ ಚಿತ್ತವೃತ್ತಿಯಂ ನೆಟ್ಟನೆ ಗೆಲ್ದ (ಸೌ ಇ ಇ. IX-i, ೧೫೮-೨೧; 1090). [ಒಟ್ಟಜ₂ (< ಒಟ್ಟಜೆ) + ಪೆಱು₁]

**ಒಟ್ಟೆಜಿ** 'ಒಟ್ಟಜೆ' ನೋ.

**ಒಟ್ಟೆಜಿಕಾಱ** 'ಒಟ್ಟಜೆಕಾಱ' ನೋ.

**ಒಟ್ಟೆಜಿಕೆ** (ನಾ). ಪರಾಕ್ರಮ; ಸಾಮರ್ಥ್ಯ: ನೆಟ್ಟನೊಟ್ಟಜಿಕೆಯಿಂ ತಂಬಂ ಜಯಸ್ತಂಭಮಂ (ಮೈಆರಿ. ೧೯೩೦, ೭೭-೨೭; 1080); ಕೊಟ್ಟಂ ಮಣಿಂಗವಳ್ಳಿಯನೊಟ್ಟಜಿಕೆಗೆ ಕಳಸವಿಡುವ ತೆಜದಿಂ ತೈಲ[೦] (ಎಇ. V, ೧೭-೧೭; 1148). [ಒಟ್ಟಜ₂ (< ಒಟ್ಟಜೆ) + -ಇಕೆ]

**ಒಟ್ಟೆಜೆ, ಒಟ್ಟಜ₂, ಒಟ್ಟಜಿ** (ನಾ). ೧. ಅತಿಶಯ; ವಿಶೇಷ; ಹಿರಿಮೆ; ಮೇಲ್ಮೆ: "ಒಟ್ಟಜೆಯೆಂದತಿಶಯಂ" (ಕಶಸಾ. ೨೯-೬೧೫); "ಒಟ್ಟಜೆಯೆನಲತಿಶಯಾರ್ಥಮಕ್ಕುಂ" (ಕವಿಕಂ. ೨೩೦); ಸಲ್ಗೆವೆರಸಿದ ತನ್ನ ನಣ್ಪನೊಟ್ಟಜೆಯಿಂ ತೋಱಿ ವಜ್ರಬಾಹುಮಹೀಪತಿಯಂ ಕರೆದು (ಆದಿಪು. ೪-೫೨ ವ); ಪರಿಖೆಯ ಪರ್ವಿನೊಟ್ಟಜೆಯೊ ಪುರದ ಪರಿವೇಷವೊ ಎನಿಸಿತು (ಹಚಕಾ. ೧-೩೮). ೨. ಸಮೂಹ; ರಾಶಿ; ಮೊತ್ತ: "ಒಟ್ಟಜೆಯು ತಿಂತಿಣಿ ಗೊಂದಣಿ ಲಾವಣಿಯು" (ಕವಿಕಂ. ೧೧೫); ಬೇಡರ್ ಚಲದಿಂ ಮಾರ್ಕೊಂಡರಿಲ್ಲೊಟ್ಟಜೆವೆರಸು ಕುಱುಂಬರ್ ತಱುಂಬಿರ್ದರಿಲ್ಲ (ಸುಕುಮಾ. ೧-೮೦); ದಿಕ್ಕರಿಗಳ ಮೇಲೆ ಮಿಕ್ಕು ಬರ್ಪ ದೇವಾಂಗವಸ್ತ್ರ ವಿತಾನದ ಪಟ್ಟಿಗಳೊಟ್ಟಜೆಯ (ಗಿರಿಕ. ೧೦-೭೭ ವ). ೩. ಪರಾಕ್ರಮ: ಪುಟ್ಟಿದೊಡಾತನೊಳಱಿವೊಡವುಟ್ಟಿದುದಱಿವಿಂಗೆ ಪೆಂಪು ಪೆಂಪಿನೊಳಾಯಂ ಕಟ್ಟಾಯದೊಳಳವಳವಿನೊಳೊಟ್ಟಜೆ ಪುಟ್ಟಿದುದು ಪೋಲ್ವರಾರ್ ಬದ್ದೆಗನಂ (ಪಂಪಭಾ. ೧-೨೪); ಕುತ್ತುವ ಬಲ್ಪುಗ್ಗಡ ಪೊಟ್ಟಜೆಯಿಂ ಚಟ್ಟಿಯನೊಡನಾರ್ ಮಾರ್ಕೊಲೀಲನಿಲ್ಲಿ ಬಿಡಲೊಡರಿಸುವರ್ (ಎಕ. V, ಬೇಲೂರು. ೧೯೩-೭೭; 1160); ಮನಕೆ ಬರಲೊಟ್ಟಜೆಯಿನಿರ್ದನಿತಱೊಳಿದಾಗಳಂತೆ ಜಾಣ್ಣುಡಿವಂ (ಶೃಂಗಾರ. ೩-೧೭). ೪. ಆವೇಶ; ಆವೇಗ; ರಭಸ: ತೊಟ್ಟಿಲೊಳು ತನ್ನ ಕೂಸಂ ಪಟ್ಟರಿಸಿ ಉತಾಂಗಿ ಪೊತ್ತುವೋಗಿಂಗೆ ಮನಂ ಮುಟ್ಟಿದೆಡೆವೋದಳನ್ನೆಗಮೊಟ್ಟಜೆಯಿಂ ಪಾವು ನಿದ್ರೆಗೆಯ್ದಾ ಮಗುವಂ ಬಂದು ಕೊಲಲಿರ್ಪುದುಂ (ಧರ್ಮಾಮೃ. ೧೨-೧೬೨, ೧೬೩); ತೊಟ್ಟನೆ ಕೋಪಜ್ವಲನಂ ಪುಟ್ಟಿ ಭುಗಿಲ್‌ಭುಗಿಲೆನುತ್ತೆ ಮನದೊಳ್ ಕುವರಂ ಕಟ್ಟಾಳ್ ಕಡುಕೆಯ್ದಿಯ್ದಿದನೊಟ್ಟಜೆಯಿಂ ಬನಕೆ ಜನಕೆ ಜನಿಯಿಸೆ ರಾಗಂ (ವರ್ಧಪು. ೨-೪೭); ಒಟ್ಟಜೆಯಿಂದೆ ಸಿಂಹಬಲನೆಂಬ ವಿರೋಧಿ ಕಡಂಗಿ ಮುತ್ತಿದಂ ತೊಟ್ಟನೆ ಬಂದು ಪದ್ಮಪುರಿಯಂ (ಕುಸುಮಾ. ೧೧-೨೦). ೫. ಸಹನೆ; ಸಮಾಧಾನ: ಪಟ್ಟರ್ದರನಜಿಯದರ್ವೊಲ್ ಮೆಟ್ಟುವುದುಂ ಕಾಲೊಳಾದ ಕೆಸಱಿಲ್ಲಂ ಮೇಲೊಟ್ಟದ ತೆಱದಿಂ ಪತ್ತಿದೊಡೊಟ್ಟಜೆಯಿಂದಿರ್ದು ಗಜಱಿ ಗರ್ಜಿಸದಿನಿಸುಂ (ಧರ್ಮಾಮೃ. ೫-೨೦೦); ಒಟ್ಟಜೆಯಿಂದಂ ಪಸಿದರ್ಗಟ್ಟಿದ ನುಣಲಿಕ್ಕಿ ಬಱಿಕಮುಣ್ಬನನೆಂದು ಮುಟ್ಟಲ್ಕಣ್ಮದು (ನೀತಿಮಂ. II, ೧೮೭). ೬. [ಸಂಗೀತ] ಸ್ವರವಿನ್ಯಾಸದಲ್ಲಿ ಒಂದು ಬಗೆ(?): ಶ್ರುತಿಯಂ ಪಲ್ಲಟಿಸದೆಯುಂ ಮತ್ತಂ ಪರಿಚ್ಛೇದಂಗಳನಱಿದುಮೊಟ್ಟಜೆಯ ರಾಜಿಯಿಂ ಕಣ್ಗಳಿಂಚರದೊಳಂ(?) ಪೋಂಪುಱಿವೋಗೆ ಮಂಗಳಪಾಠಕರ್ . . . ಓದಿದರ್ (ಪಂಪಭಾ. ೧೪-೩೦ ವ); ಕಳೆಯಂ ಪತ್ತಿಸಿ ರಾಗಮಂ ನಿಲಿಸಿ ನುಣ್ಪಂ ನಣ್ಪುಗೆಯ್ದಂಪನಿರ್ಕುಳಿಗೊಂಡೊಟ್ಟಜೆಯಂ ನಿಮಿರ್ಚಿ . . . ಗೋವಳರಾಯಂ ಕೊಱಲೂದಿದಂ (ಜಗವಿ. ೫-೨). **ಒಟ್ಟಜ₂**: ೨. "ಒಟ್ಟಜಮೆನಲ್ಕೆ ಸಮೂಹಂ" (ಕಶರ. ೯೯); ನೆಲೆವಟ್ಟುಗಳೊಟ್ಟಜದಂತೆ ಮುಗಿಲೊಡ್ಡಿನ ದಡ್ಡಿಯಂತೆ (ರಾಮಾಶ್ವ. ೯೪-೮). **ಒಟ್ಟಜಿ**: ೩. ಒಳಿಯ ಕೋಪು ಪಲ್ಲವರ ಪನ್ದಲೆಯೆಲ್ಲಮನೆಯ್ದೆ ದಟ್ಟಿ ಕಾಪಾಳಿಕ ರೂಱಿ ಸಾಱಿ ಪರಮಣ್ಡಳಿಕರ್ಕ್ಕಳನಮ್ಮ ನೀವು ಈಯೋಳಿಗೆ . . . ಓಳಿಯಳೆಂಬಿನಂ ನೆಗಟ್ಟುದೊಟ್ಟಜಿ ಮಣ್ಡಳಿಕತ್ರಿಣೇತ್ರನಾ (ಎಕ. II, ೫೯-೯೦; 974); ಬೀರಮುಚ್ಚಱಿವಿನಮಾಮೆ ತಳ್ತಿಱಿದು ಗೆಲ್ದವರಾತಿಯ ನೆನ್ದು ಪೊಚ್ಚಱಿ ನುಡಿವಱಿಗಣ್ದರಂ ನಗುವುದೊಟ್ಟಜಿ ಮಾವನಗನ್ಧಹಸ್ತಿಯಂ (ಎಕ. II, ೧೩೪-೫೫; 982). [?]

**ಒಟ್ಟೆಜೆಕಾಱ, ಒಟ್ಟಜಿಕಾಱ** (ನಾ). ಶೌರ್ಯವುಳ್ಳವನು; ಪರಾಕ್ರಮಶಾಲಿ: ಬಿಟ್ಟರನಾಂತು ಪರಿವೊಟ್ಟಜೆಕಾಱರುಮಂ ಇಟ್ಟಿಯನೆತ್ತಿ ಪರಿವ ಜಟ್ಟಿಗರುಮಂ (ಲೀಲಾವ. ೫-೧೩೪). **ಒಟ್ಟಜಿಕಾಱ**: ಕಡೆಗಾಲದ ಭೈರವನಂತೆ × × ಕಯ್ದುಗೊಂಡೊಟ್ಟಜಿಕಾಱರಟ್ಟಿಗಳನಾಡಿಸಿದಂ ಕಿಡಿಕೆಯ್ದು ವೀರರಂದೊಟ್ಟಿ ಸಿಗುಳ್ದು ಕೊಂದು ಮೆಱೆದಂ (ಎಕ. VIII, ಸೊರಬ. ೨೦೭-೨; ?). [ಒಟ್ಟಜಿ + -ಕಾಱ]

**ಒಟ್ಟೆಜೆಗಿಡು** 'ಒಟ್ಟಜೆಗೆಡು' ನೋ.

**ಒಟ್ಟೆಜೆಗೆಡು, ಒಟ್ಟಜೆಗಿಡು** (ಕ್ರಿ). ೧. ಚೆದರಿಹೋಗು; ಚಲ್ಲಾಪಿಲ್ಲಿಯಾಗು: ಬೆದಱಿದುದಭ್ರಮೂರಮಣನೊಟ್ಟಜೆಗೆಟ್ಟುದು ಪುಂಡರೀಕಂ (ಪುಷ್ಪಪು. ೫-೮); ಕಟ್ಟಾಳ್ಗಳೆನಿಪ ರಕ್ಕಸರೊಟ್ಟಜೆಗೆಟ್ಟಬಲೆ (ಕಬ್ಬಿಕಾ. ೩೦೮). **ಒಟ್ಟಜೆಗಿಡು**: ೨. ಶೌರ್ಯಕೆಡು; ಶಕ್ತಿಗುಂದು: ಒಟ್ಟಜೆಗೆಟ್ಟು ಕಾರ್ಯವಶದಿಂ ಖಚರಂ ಪಿಡಿಪಟ್ಟು . . . ಮುಖಲೀನ ಖಲೀನ ಕಶಾಭಿಘಾತದಿಂ ತೊಟ್ಟನೆ ನೋವನೆಯ್ದಿದಂ (ಪಂರಾಮಾ. ೪-೧೧೫); ಅಂತೆರಟ್ಟಲಮುಮೊಟ್ಟಜೆಗಿಡದೆ ತಳ್ತಿಱಿದು ಪಾಱಿಯನಸಕಱಿಯದಱಿಯೆ (ಪಂರಾಮಾ. ೧೩-೧೧೯ ವ). [ಒಟ್ಟಜೆ + ಕೆಡು]

**ಒಟ್ಟೆಪ್ಪಣೆ** (ನಾ). ಎಲ್ಲರೂ ಪಾಲಿಸಬೇಕಾದ ಅಪ್ಪಣೆ, —ಆಜ್ಞೆ; ಸಾಮೂಹಿಕಾಜ್ಞೆ: ಯಾರೆದುರಿಗೆ ಯಾರು ಸಿಕ್ಕುವರೊ ಅವರು ಅವರಿಗೆ ಪ್ರತಿಭಟರಾಗಬೇಕೆಂದು ಒಟ್ಟಪ್ಪಣೆಯನ್ನು ಕೊಟ್ಟು (ಕೃವಾಲು. ೨೫೭). [ಒಟ್ಟು₃ + ಅಪ್ಪಣೆ₁]

**ಒಟ್ವೈಯಿಸು** 'ಒಟ್ಟೈಸು' ನೋ.

**ಒಟ್ವೈಯ್ಸು** 'ಒಟ್ಟೈಸು' ನೋ.

**ಒಟ್ವೈರಿಸು** (ಕ್ರಿ). ಒತ್ತರಿಸು; ನುಗ್ಗಿಬರು: ಒತ್ತಿ ಒಟ್ವೈರಿಸಿ ಹೊರ ಹೊಮ್ಮುತ್ತಿರುವ ನಗೆಯ ತರಂಗಗಳಿಂದ ಅವರ ಅಂಗಗಳೆಲ್ಲವೂ ಕಂಪಿಸುತ್ತಿದ್ದುವು (ಪ್ರಣಸ. ೨); ಹಡೆದ ತಾಯಿಗೆ ಹುದುಗಿದ ದುಃಖವು ಒಟ್ವೈರಿಸಿ, ಕಣ್ಣೀರು ತುಂಬಲು (ಕನ್ನಜಾ. ೧೧೦). [< ಒತ್ತರಿಸು]

**ಒಟ್ವೈರೆ** 'ಒಟ್ವಾರೆ' ನೋ.

**ಒಟ್ವೈಲು** 'ಒಟ್ಟೈಲ್' ನೋ.

**ಒಟ್ವೈಲುಕೊಳಗ** (ನಾ). ಒಂದು ಅಳತೆ (?): ಚೈತ್ರ ಪವಿತ್ರದಲಿ ವೊಕ್ಕಲಿಗೆ ಹಾಗ ವೊಟ್ವೈಲು ಕೊಳಗ ಹನೆಗೆ ಮಾನವತ್ತ ಸೊಂಟಿಗೆಯಣ್ಣೆ ಹೊಂಗೆ ದವಸ ವಿಕ್ರಿಯಕ್ಕೆ ಅರೆವೀಸ (ಸೌಇಇ. XV, ೪೩–೩೨ ; ?). [ಒಟ್ವೈಲು (< ಒಟ್ಟೈಲ್) + ಕೊಳಗ$_1$]

**ಒಟ್ವೈಲುಪಾತಿ** (ನಾ). "ನಾಟಿ ಹಾಕುವುದಕ್ಕಾಗಿ ಗಿಡಗಳನ್ನು ಬೆಳೆಸುವ ಪಾತಿ, ಮಡಿ" (Nursery. ಇಂಕಪ). [ಒಟ್ವೈಲು (< ಒಟ್ಟೈಲ್) + ಪಾತಿ$_1$]

**ಒಟ್ವೈವಿಸು** 'ಒಟ್ಟೈಸು' ನೋ.

**ಒಟ್ವೈಳೆ** (ನಾ). ಗಲಭೆ; ಕೋಲಾಹಲ (?): ಕಡೆಸಿರಗೆಯ್ದು ನೂಂಕುದಳಿಯಿಕ್ಕುವ ಬಲ್ದಸಿ ಭೀತಿಯಂ ಮನಕ್ಕೊಡರಿಸೆ ಲಗ್ಗೆಯೊಟ್ವೈಳದೊಳೊಟ್ವೈಳವಾದುದು ಕೋಂಟೆಗಾಳಿಗಂ (ಚಂದ್ರಪು. ೫–೧೦೫). ℙ ಇದು 'ಅಟ್ವೈಳ' ಎಂಬುದರ ಅಪಲಿಖಿತವಿರಬಹುದು. [?]

**ಒಟ್ವಾರೆ, ಒಟ್ವೈರೆ** (ಅ). ೧. ಇಡಿಯಾಗಿ; ಪೂರ್ತಿಯಾಗಿ: ಒಟ್ವಾರೆ ಬ್ಯಾಂಕು ದೊಡ್ಡದು. ಅನೇಕ ಕಾರಕೂನರಿದ್ದಾರೆ (ಹುಚ್ಚುಹು. ೭೧); ಅವನ್ನೆಲ್ಲಾ ಒಟ್ವಾರೆ ಪರಿಶೀಲಿಸಿ (ಶಿಕ್ಷದ. ೩೨೯). ೨. ಒಟ್ವೈನಲ್ಲಿ: ಒಟ್ವಾರೆ ಇದರ ಅರ್ಥ ಏನು? (ರೂಢಿ). **ಒಟ್ವೈರೆ**: ೨. ಒಟ್ವೈರೆ ಈ ಕೆಲಸ ಮುಗಿಯಿತಲ್ಲ (ರೂಢಿ). [ಒಟ್ವು$_3$ + –ಅರೆ ?. / ತುಳು. ಒಟ್ಟಾರೆ]

**ಒಟ್ವೈ$_1$** (ನಾ). ಅಂಚು; ತುದಿ: ಒ [ಪಾಠಾಂ. ವ]ಟ್ವೈ ಮುಱಿದುದು ಸೀಸಕದ ಗದೆ ನಟ್ವುದರಸನ ನೊಸಲ ರುಧಿರದ ಕಟ್ವೈಯೊಡೆದಂದದಲಿ ಕವಿದುದು ನೃಪನ ತನು ನೆನೆಯೆ (ಕುವ್ಯಾಗ. ೭–೨೨); ಒಟ್ವೈ ಮುಱಿದುದು ಸೀಸಕದ ತಲೆಯಟ್ವೈ ಗಾಂತುದು ಬಗೆವನೇ ಜಗಜಟ್ವೈ ರಕ್ಕಸರಾಯ (ತೊರರಾ. ೬–೨೨–೧೬); ಒಟ್ವೈಯ ಪಾಲ್ಗೊಡದೊಳು ಜೇನುತುಪ್ಪವಿಂಬಿಟ್ವೈನಿತಡಗುವಂದದೊಳು (ಭರಚ. ೬೭–೧೮೪); ಎಲ್ಲರೂ ಗಾಡಿಯ ಒಟ್ವೈಯನ್ನು ಹಿಡಿದಿದ್ದಾರೆ (ಅನಾವಿ. ೬೬). [?]

**ಒಟ್ವೈ$_2$** (ನಾ). ಮೊಂಡ; ಹಟಮಾರಿ (ಉಕ. ಕಿ). [< ಒರಟು ?]

**ಒಟ್ವೈ$_3$** (ನಾ). ೧. ಹುರಿ, ಹಗ್ಗ ಮೊದಲಾದುವುಗಳನ್ನು ಹೊಸೆಯಲು ಬಳಸುವ ಯಂತ್ರ (ಕಿ). ೨. ಅವಯವಗಳ ಸೆಳೆತ, —ಹಿಡಿತ: ಕಾಲಿಗೆ ಒಟ್ವೈಹಿಡಿಯಿತು (ರೂಢಿ). ೩. ತೊಟ್ವೈಲನ್ನು ತೂಗಹಾಕಲು ಸಹಾಯವಾಗುವ ಅದರ ಚೌಕಟ್ವೈನಲ್ಲಿರುವ ಬಳೆ (ಕಿ). 'ಉಟ್ವೈ$_1$' ಪರಾ. [< ಉಟ್ವೈ$_1$]

**ಒಟ್ವೈಕದೇವರು** (ನಾ). ಒಬ್ಬಾತನ ಹೆಸರು (?): ಒಟ್ವೈಕದೇವರು ಒನ್ದುಪೊಱಿನ್ದೊಬ್ಬ ಪಾರ್ವ್ವನುಣ್ಡ ಧರ್ಮ್ಮಂ ನಡವುದು (ಎಕ. X, ಬೌರಿಂಗ್. ೨–೮ ; 943). [ಒಟ್ವೈಕ$_0$ + ದೇವರು]

**ಒಟ್ವೈಕೆಯ್** (ಕ್ರಿ). ಒಟ್ವೈಲುಮಾಡು; ರಾಶಿ ಮಾಡು (?): ಕುದುರೆಗೆ ಪಾಗಿಲ್ಲಾಗೆ ಕುದುರೆ ಇನ್ದಿಱಿದು ನಡ್ಡಿದಿಱಿದೊಟ್ವೈಕೆಯ್ದು ಬಿಟ್ದಾನ್ (ಎಕ. X, ಶ್ರೀನಿವಾ. ೫–೯ ; 970); ಶ್ರೀರಾಜಕೇಸರಿವರ್ಮ್ಮ ಪೆರ್ಮ್ಮಾನಡಿಗಳ್ ನಿಲ್ಲದೆ ಪನಸೋಗೆಯ ಕಾಳೆಗದಲೊಟ್ವೈಕೆಯ್ದಂ (ಎಕ. IX, ಕೊಡಗು. ೪೬–೫ ; 1005). [< ಒಟ್ಟೈಲ್ ? + ಕೆಯ್$_1$]

**ಒಟ್ವೈಗೆ** (ಅ). ಜೊತೆಯಲ್ಲಿ: ನಿಮ್ಮನ್ನೂ ಒಟ್ವೈಗೆ ಕರೆದುಕೊಂಡು ಬಾ ಎಂದು ಬರೆದಿದ್ದಾರೆ (ದೇವಸಾ. ೧೧೫); ಒಟ್ವೈಗೆ ಪ್ರಾರ್ಥನೆಯನ್ನೂ ಹವಿಸ್ಸನ್ನೂ ಸಲ್ಲಿಸುತ್ತಿದ್ದರು (ಭಾರದ. ೨೩೭). [ಒಟ್ವು$_3$ + –ಇಗೆ]

**ಒಟ್ವೈತೊಟ್ವೈ** (ನಾ). ಸಿಡುಬಿನ ಕಲೆ (?): ಪುತ್ಥಳಿಯಂಥಾ ಶ್ರೀಮದ್ರಾಮಾಯಣನಿಗೆ ಒಟ್ವೈತೊಟ್ವೈಹಿಡಿದ ಕುರೂಪಿ ಹೆಣ್ಣು ಸಿಕ್ಕಬಾರದೆಂದೇ ನಾನು ಎಚ್ಚರಿಸುವುದು (ಮೊಮುಗು. ೭೧). [ಒಟ್ವು$_0$ + ತೊಟ್ವೈ ?]

**ಒಟ್ವೈಲ್, ಒಟ್ವೈಲು, ಒಟ್ವೈಲು** (ನಾ). ರಾಶಿ; ಗುಂಪು; ಸಮೂಹ: "ಬಂಬಲ್ . . . ಒಟ್ವೈಲ್ . . . ಗೊಂದಣ (ಉಂಡಲ್)— ಈ ೪೦ ಸಮೂಹಂ" (ಕಶಸಾ. ೧೧–೨೨೨); ಕತ್ತುರಿಯ ಭಾಂಡಂಗಳ ಬಾವನ್ನದೊಟ್ವೈಲ್ಗಳ ರತ್ನಾಭರಣ ರಾಶಿಗಳ (ಗಿರಿಕ. ೧೦–೬೭ ವ). **ಒಟ್ವೈಲು**: ಆಯತದ ಹೆಣನೊಟ್ವೈಲಿನ ಮುಱಿದಾಯುಧದ ಸಂದಣಿಯೆ (ಕುವ್ಯಾಕ. ೧೧–೨೨). **ಒಟ್ವೈಲು**: ಸೀರೆಯೊಟ್ವೈ [ಪಾಠಾಂ. ಟ್ವೈ]ಲು ಗಗನವನು ಗಾಹಿಸಿತು (ಕುವ್ಯಾಸ. ೧೬–೨); ಶಿಲೆಗಳೊಟ್ವೈಲು ಪುಡಿಪುಡಿಯೋದವೆನಲಾ ಬಲದ ಬಹಳವೇನನೆಂಬೆ (ಕುರಾಸಾಂ. ೪೧–೭೭); ಬೆರಣಿಯ ಒಟ್ವೈಲಲ್ಲಿ ಆ ಮುದ್ದೆಯ ಇರಿಸಿ ಪುಟವ ಹಾಕಿ (ವೈದ್ಯಸಾ. I, ೧೫೭).

ಒಟ್ವೈಲಬೆನಕ = ರಾಶಿಯ ಮೇಲಿಡುವ ಬೆನಕ: ಮಾಲೆಗಾಱನೇಸು ಭಕ್ತನಾದರೆಯೂ ಬಾವಿಯ ಬೊಮ್ಮನ ಹಂಗ ಬಿಡ ಬಣಜಿಗನೇಸು ಭಕ್ತನಾದರೆಯೂ ಒಟ್ವೈಲಬೆನಕನ ಹಂಗ ಬಿಡ (ಬಸವ. ೪೫೦). [ಒಟ್ವು$_1$ + –ಇಲ್$_3$]

**ಒಟ್ವೈಲು** 'ಒಟ್ಟೈಲ್' ನೋ.

**ಒಟ್ವೈಸು, ಒಟ್ವೈಯಿಸು, ಒಟ್ವೈಯ್ಸು, ಒಟ್ವೈವಿಸು, ಒಟ್ವೈಸು** (ಕ್ರಿ). ೧. ಒಟ್ವುಗೂಡಿಸು; ಕೂಡಿಸು; ರಾಶಿಮಾಡು: "ಒಟ್ವೈಸು–ಪುಂಜೀಕರಣೇ" (ಶಮಧಾ); ಸೀತದೊಳ್ ಸೆಡೆಗುಂ ಸೇದೆಗೆಡುವರದಱಿಂ ಬಳಸಿಯುಂ ಪಿರಿದುಂ ಗೊಬ್ಬರಮನೊಟ್ವೈಮೆಂದು ಪಕ್ಕದಿರ್ದೊಟ್ವೈಸಿ (ವಡ್ಡಾರಾ. ೧೯೨–೧); ಪುಲಿಯಿರ್ದ ಗುಹೆಯ ಬಾಗಿಲೊಳ್ ಬೆಟ್ವಾಗಿ ಪುಳ್ಳಿಯನೊಟ್ವೈಸಿ ಕಿಚ್ಚನಿಕ್ಕುವುದುಂ (ಧರ್ಮಾಮೃ. ೧೪–೧೧೯); ಕಳನ ಚೌಕದ ಸುತ್ತಲೊಟ್ವೈಸಿ ತಳಿಗಳನು (ಕುವ್ಯಾಗ. ೧೨–೨೩). ೨. ಏರ್ಪಡಿಸು; ಒದಗಿಸು: ಪಟ್ಟಣ ಮೊದಲಾದ ಗಡಿಯ ದುರ್ಗಂಗಳಿನೊಟ್ವೈಸಿ ಸಂವರಣೆಗಳ ಕಟ್ವೈಚ್ಚಱೊಳಿರಿಸೆಂದು . . . ನೇಮಿಸಿದ (ಕಂನವಿ. ೧೧–೧೨೯). **ಒಟ್ವೈಯಿಸು**: ೩. ಒಂದಾಗು; ಕೂಡು; ಸೇರು; ಒಟ್ವಾಗು: ಪಾರ್ವರ ಪರದರೊಳ್ವೆಂಡಿರ್ಕಳೆಲ್ಲರುಮನೆಱಿದು ಬಗ್ಗಿಸಿಯುಮೊಟ್ವೈಯಿಸಿಯುಂ ಕೊಂಡವರೊಳ್ ಬಾಳುತ್ತುಂ (ವಡ್ಡಾರಾ. ೧೬೬–೯); ಒರ್ವಂ . . . ಎನ್ನ ಮಗಳಂ ಬಲ್ಲಾಳ್ತನಂಗೆಯ್ದು ನಿನ್ನ ನರಾಧೀಶ್ವರನಕ್ಕೆ ಬರ್ಕೆ ಕುಡೆನೆಂದೊಟ್ವೈಯಿಸಿ [ಪಾಠಾಂ. ಒಟ್ವೈಸಿ] ಕೈಕೊಂಡು ನಿಂದು (ಸುಕುಮಾ. ೭–೪೨). ೪. ಮುತ್ತು; ಆವರಿಸು: ಕುಷ್ಠಕ್ಷಯ ಗಂಡ ಶಿರೋವೇದನಾದಿಗಳಾಗಿ ರೂಪಱಿಯದಂತಿರೆ ವ್ಯಾಧಿಗಳಿಂದಮೊಟ್ವೈಯಿಸೆ ಪಟ್ವೈನಾಗಿ (ವಡ್ಡಾರಾ. ೧೭೧–೧೨). ೫. ಅಲಕ್ಷ್ಯ ಮಾಡು; ಕಡೆಗಣಿಸು: ಕಟ್ಟದಿರ ಸೀತಿಹರೆ ನೆಟ್ವೈನೆಯೆ ನಿಲಬೇಕು ಒಟ್ವೈಯಿಸಿ ಮಿಱಿ ನಡೆದಿಹರೆ ಗುಱಿನೋಡಿ ತೊಟ್ವೈನೆಚ್ಚಂತೆ (ಸರ್ವಜ್ಞ. ೧೫೯೬). ೬. ಠೀವಿಯನ್ನು ತೋರು; ವಿಜೃಂಭಿಸು: ಸೂಕ್ತಿಯೊಡನೆ ಸೂಸುವ ಸುಲಿಪಲ್ಲ ಬೆಳಗುಬೀದಿವರಿಯೆ ನಡೆತಂದೊಡ್ಡೋಲಗಮನೊಟ್ವೈಯಿಸಿ ಪೊಕ್ಕು (ಗಿರಿಕ. ೨–೧೦೫ ವ). **ಒಟ್ವೈಯ್ಸು**: ೧. ಎಷ್ಟು ಬಗೆಯಾರತಿಯನೊಟ್ವೈಯ್ಸಿ ಫಲವೇನು ನಿಷ್ಠೆಯಿಲ್ಲದನ ಶಿವಪೂಜೆ ಹಾಳೂರಕೊಟ್ವೈಗುರಿದಂತೆ (ಸರ್ವಜ್ಞ. ೧೬೯). ೩. ನಡುವಿರುಳ್ ಪೋಗಿ ವಣಿಜರನೊಟ್ವೈಯ್ಸಿ ವಂಚಿಸಿ ಕುಱಿದಂದೆನೆಂದನೊರ್ವಂ (ಸುಕುಮಾ. ೭–೧೫). ೫. ಪಂಡಿತೆ ಒಟ್ವೈಯ್ಸಿಪುಗುವುದುಂ ದಾರವಟ್ವೈಗಂ ದಟ್ವೈಸಿ ಕೊರಳಂ ಪಿಡಿದು ನೂಂಕೆ (ಪುಣ್ಯಾಸ್ರ. ೫–೨೭).

೬. ರಿಪುಸೇನೆಯನೋಡಿಸಿ ಗೆಲ್ದು ವೋಕ್ಷಮನೊಟ್ಟಯ್ಸಿ ಕೈಕೊಣ್ಡ ಕಲಿ (ಎಕ. VIII, ಸೊರಬ. ೯೦–೧೬; 912). **ಒಟ್ಟವಿಸು :** ೫. ಇಟ್ಟಣಿಸಿ ನಗುತವಳು ರಾಮುನನೊಟ್ಟವಿಸಿ ಮುಂಬರಿದು ಮುನಿಪನ ತೊಟ್ಟಿಲಕೆಯಲಿ ಚಾಚಿದಳು ಚಾಪಳ ಚಪೇಟಕವ (ತೊರರಾ. ೧–೧೦–೧೨). ೬. ಪ್ರತಿಭಟಿಸು; ಎದುರು ಬೀಳು : ತಾಗಿದರು ಚೂಣಿಯಲಿ ನಾಯಕರು ಒಟ್ಟವಿಸಿ (ಕುವ್ಯಾಅ. ೬೦೪. ೨೫–೬); ಮೆಟ್ಟಿ ನಡೆವುದು ವೈರಿ ಸುಭಟರೊಳೊಟ್ಟವಿಸದರಿಸೈನಿಕವನಡಗಟ್ಟುವುದು (ತೊರರಾ. ೬–೨೯–೧೫). ೮. ತಿಳಿ; ಗ್ರಹಿಸು (?): ದೃಷ್ಟಿಗೋಚರವಲ್ಲವಾರಿಂಗೊಟ್ಟವಿಸಲರಿದಮಳಲೋಕದ ಸೃಷ್ಟಿಗತಿಶಯವು (ನಿಭಾಗ. ೪–೮–೨೩). ೯. ತಿಳಿಸು; ನಿರೂಪಿಸು : ಅಟ್ಟಿದನೆನ್ನಂ ಮಂತ್ರಿಪನೊಟ್ಟವಿಸಿದೆನೆಂದು ನಿನಗೆ ವಿಷಯಮನೆಲ್ಲಂ (ಚಂದ್ರಛಛ್ಯು. ೧೫–೩೬). **ಒಟ್ಟೈಸು :** ೧. ತನ್ನ ನಚ್ಚಿನ ಕುಲಧನಂಗಳ ವೃಪಾಯನಂಗಳಂ ತರಿಸಿ ನೃಪನ ಮುಂದೊಟ್ಟೈಸಿ ಮುಕುಳಿತ ಕರಸರೋಜನಾಗಿ (ಪುಷ್ಪಪು. ೬–೩೧ ವ); ಕಂಪನೊ[ಪಾಠಾಂ. ದ]ಟ್ಟೈಸಿ ತುಱುಗಿದ ಕದಂಬ ಕುಸುಮಕ್ಕೆಱಗಿ ಮಂಡಳಿಪ ಮಱಿದುಂಬಿಯ (ಹಚಕಾ. ೪–೩); ಒಂದೊಂದು ಖಂಡದಿ ನಾನೂಱು ಪೆಂಗಳು ಬಂದಿರ್ದರಂಬ ರೇಚರರು ತಂದಿರ್ದರೆಂಟುನೂಱಿಳೆವೆಣ್ಣನೊಟ್ಟೈಸುವಂದೆರಳ್ಪಾವಿರವೆಂದ (ಭರಚ. ೩೭–೧೦). ೩. ಸ್ನೇಹಮೊಟ್ಟೈಸೆ ತಮ್ಮಿರ್ದಡೆಗೀಗಳ್ ಮುಕ್ತಶಾಪಂ ನಿಜತನುವೆರಸಾನಂದದಿಂ ಬಂದಂ (ಕಾದಂಉ. ೮೦೩); ತಚ್ಚಿತ್ರರೂಪದೊಳೊಟ್ಟೈಸಿಯೆ [ಪಾಠಾಂ. ಳೆಟ್ಟಿಸೆಯೆ] ದಿಟ್ಟಿ ಬೀಱೆ (ಕುಸುಮಾ. ೧೨–೧೫೪). ೪. ಜಗದೀಶಂ ಲಯವಾರ್ಧಿಯಂತೆ ಕವಿತಂದೊಟ್ಟೈಸಿ ಬಂದಲ್ಲಿಯುಂ ಪುಗುವಾಗಳ್ ಪುಗಲೀಯೆವೆಂದನಿಬರುಂ ವೀರರ್ಕಳೇಂ ಕಾವರೇ (ಕಾವ್ಯಸಾ. ೪೩೬ ಶೂದ್ರಕ); ಜರೆ ಬಂದೊಟ್ಟೈಸೆ ಮಾಣ್ದಿರ್ದಳಿಪೆನಗಿದೆ ಮುಂ ಸಾಲದೇ ಕಾಳರಾಜಂ ಬರೆಯುಂ ಮಾಣ್ದಿರ್ದನೇ (ಆದಿಪು. ೨–೯೯). ೫. ತಿಳಿಪಲ್ ವಾಸಂತಿಯಂ ಸಂದಿಸೆ ಪುಗಿಲೆನೆ ಪುಂಸ್ಕೋಕಿಲಂ ಧಾರ್ಷ್ಟ್ಯದಿಂ ಪಿಂದೊಳವೊಕ್ಕೊಟ್ಟೈಸಿ . . . ತಿಳಿಪಿದಂ ಪ್ರೇಮುಕಾಂತಂ ವಸಂತಂ (ಅನಂಪು. ೬–೭೪); ಉಪಾಧ್ಯಾಯನನೊಟ್ಟೈಸಿ ಓದಲೊಲ್ಲದೆ ಸಪ್ತವ್ಯಸನಾಭಿಭೂತನಾಗಿರಲ್ (ಪುಣ್ಯಾಸ್ರ. ೨–೨೦ ವ). ೬. ಪುಟ್ಟಂ ಸಟ್ಟುಗಮಂ ಕೊಂಡಟ್ಟಾಱಿಸಿ ಬೋನಮಿಟ್ಟು ಬಂದೆಯೊ ಗದೆಗೊಂಡೊಟ್ಟೈಸುವಂತುಟಾದುದೆ ತೊಟ್ಟನೆ ಕೊಳೆ ನಿನಗೆ ಗಂಡಗರ್ವಮುಮಾಯ್ತೇ (ಗದಾಯು. ೬–೩೬); ಅಳುತನದಂಗದಲಿ ಪರರಿಗೆ ಸೋಲನವನೊಟ್ಟೈಸಿ ದ್ರುಪದನೃಪಾಲಕನ ಹಿಡಿದೊಪ್ಪಿಸಿದರೆಮಗಹುದು ಪರಿತೋಷ (ಕುವ್ಯಾಆ. ೭–೬೨). ೧೦. ನೂಕು; ತಿವಿ; ತಳ್ಳು : ಮೇಲುದನೊಟ್ಟೈಸಿ ಕುಚಂ ಕದಕ್ಕದಿಸೆ . . . ಎಟ್ಟಿಲ್ (ಪಂರಾಮಾ. ೩–೭೮); ತುರಗಮೊಡಂಬಡೆ (ಡ) ದನ್ಕರಿಪುಬಲಾಬ್ಧಿಯ ಕಡೆವರಮೊಟ್ಟೈಸಿ ಗೆಲ್ಗುಪರ(ರಿಪು) ಮಂಡಲಮಂ (ಅಶ್ವಶಾ. ೭–೬೭). ೧೧. (?) "ವಂಚಿಸು, ವಂಚಿಸಲ್ಪಡು" (ಪ್ರಭಣ್ಣ): ಒಟ್ಟೈಸಿ ಕರ್ಮವಶದಿಂ ತೊಟ್ಟನೆ ಮತಿಗೆಟ್ಟು ದೂತಿ ಕಟ್ಟಿಸಿಕೊಂಡಳ್ ಮುಟ್ಟುಗೆಡೆ ತಾನೆ ತನ್ನಂ ಕಟ್ಟಿದುದಂ ಕಳೆಯಲಾರ್ಗಮೇಂ ಬಂದಪುದೇ (ಪಂಚತಂ. ೭೫–೭).

ಒಟ್ಟಿಸಿಕೊಳ್ = ಹಾಕಿಸಿಕೊ; ಸುರಿಸಿಕೊ : ಬಟ್ಟಲ್ಗಳೊಳು ಪಾಯಸಮನೊಟ್ಟಿಸಿಕೊಂಡುಣುತ್ತಿರಲ್ (ಪುಣ್ಯಾಸ್ರ. ೧೨–೨೧ ವ); ಜಂಗಮವು ಉಂಡರೆ ಮನದಲ್ಲಿ ಮಱುಗುವನೇ ಪ್ರಸಾದಿ ಜಂಗಮಕ್ಕೆ ತಳಿಗೂಳ ತಳಿದು ತಾ ಗಂಗಳ ತುಂಬಿ ಒಟ್ಟಿಸಿಕೊಂಡು ಕೊಂಬನೇ ಪ್ರಸಾದಿ (ಸಿದ್ಧೇವ. ೩೦೨). [ಒಟ್ಟು₁+ -ಇಸು₃]

**ಒಟ್ಟು₁** (ಕ್ರಿ). ೧. (ಒಂದಾಗುವಂತೆ) ಕೂಡಿಸು; ರಾಶಿಮಾಡು; ಏಕತ್ರಗೊಳಿಸು: "ಒಟ್ಟು– ಏಕತ್ರೀಯಾಯಾಂ" (ಶಮಧಾ); ತಱಿಯ ಪುಳ್ಳಿಗಳಂ ಕಡಿದೊಟ್ಟಿ ಕಿಚ್ಚನಿಕ್ಕಿಸುಟ್ಟು (ವಡ್ಡಾರಾ. ೧೧೪–೧೧); ಕುರುಕ್ಷೇತ್ರದೊಳ್ ಸತ್ತರಸುಮಕ್ಕಳೆಲ್ಲರುಮನೊಂದಾಗಿ ತಂದು ಬೆಟ್ಟಾಗೊಟ್ಟಿ (ಪಂಪಭಾ. ೧೪–೧೦ ವ); ನಿಟ್ಟಿಸಲಮಲವಸ್ತ್ರವ ನಿವಾಳಿಸಿ ತೆಗೆದೊಟ್ಟಿದರುಭಯಪಕ್ಷದಲಿ (ಮೋಹತ. ೪೨–೪೬); ಕಸಕಡ್ಡಿಗಳನ್ನೆಲ್ಲಾ ಆರಿಸಿ ಅಲ್ಲಲ್ಲಿ ಒಟ್ಟಿದನು (ಬಿವಂ. ೨೮೧). ೨. ತುರುಕು; ತುಂಬು : ಆ ತರಗೆಲೆಯಿಂದಲೇ ಅಡುಗೆಯ ಒಲೆ, ಅಕ್ಕಚ್ಚಿನ ಒಲೆಗಳನ್ನು ಒಟ್ಟಬೇಕು (ಮರವು. ೭); ಒಲೆಗೆ ಸೌದೆ ಒಟ್ಟಬೇಕು (ರೂಢಿ). ೩. ಕೂಡು; ಸೇರು; ಒಗ್ಗು : ಶೌರಿ ಪುರೋಭಾಗದೊಳೊಟ್ಟ ನಿಲ್ವುದಂ (ಮಹಾನೀ. ೬–೯೮ ವ); ಪಟೇಲ್ ಸುಬ್ಬೇಗೌಡನಿಗೆ ಹೆಂಡವು ಎಷ್ಟರ ಮಟ್ಟಿಗೆ ಮೈಗೆ ಒಟ್ಟಿದ್ದಿತೆಂದರೆ ಎಷ್ಟು ಕುಡಿದರೂ ಅವನಿಗೆ ಪ್ರಜ್ಞೆಯೇ ತಪ್ಪುತ್ತಿರಲಿಲ್ಲ (ಬೈಸರ್ವೆ. ೩).

ಒಟ್ಟಿಕೊಳ್ = ೧. ಮೈಮೇಲೆ ಹಾಕಿಕೊ; ಮೈಮೇಲೆ ಸುರಿದುಕೊ : ಕೊಳದಿಂದಂ ತೆಗೆದೊಟ್ಟಿಕೊಂಡ ಕುಮುದಾಂಭೋಜಾತ ಕಲ್ಹಾರ ಕುಟ್ಮಲ ಶಾಲೂಕ ಮೃಣಾಳಜಾಲಮನಿಡುತ್ತೀಡಾಡುತಂ (ಕಾದಂಪೂ. ೬೩೦); ತರುವಲಿಗಳಂತೆ ಸಿರಿಯಂ ಬಿಟ್ಟು ಪಂದಿಯಂತೆ ಕೆಸಱನೊಟ್ಟಿಕೊಂಡು (ಧರ್ಮಾಮೃ. ೮–೫೦). ೨. ರಾಶಿಯಾಗಿ ಬೀಳು; ಕೂಡಿಬೀಳು : ಅಲಸಿಗರು ಸಾವು, ನಮಗೊಟ್ಟಿಕೊಂಡಿವೆ ಬೆಟ್ಟ ಹಗಲಿರುಳು ಕಡಿದರೂ ತೀರದಷ್ಟು (ನೆಲಮು. ೫೧).

[ದೇ. ॥ ತಮಿ. ಮಲ. ತುಳು. ಒಟ್ಟು = ಒಕ್ಕಟ್ಟು]

**ಒಟ್ಟು₂** (ಕ್ರಿ). ಹಚ್ಚು; ಲೇಪಿಸು (?): ಆ ತೈಲವ . . . ಎದೆಗೆ ಲೇಪಿಸೆ ಪಿತ್ತ ಶಮನವಹುದು; ಅಂಗಾಲಿಗೆ ನಿಂಬೆಹಣ್ಣಂ ಒಟ್ಟಿ ಕಾಲಂ ತೊಳೆಯೆ ನಿಲ್ಲುವುದು (ಸಕವೈ. ೩೦೫). [ದೇ. ॥ ತಮಿ. ಮಲ. ಒಟ್ಟು]

**ಒಟ್ಟು₃** (ನಾ). ೧. ರಾಶಿ; ಗುಂಪು; ಸಮೂಹ : "ಚಿತ್, ಚಯನಂ . . . ಚಯಃ, ಈ ೫ ಒಟ್ಟು" (ಕಾಶಕ್ಕ. ೨೦೭); ಕೊಣ ಮಿರುಗಜ್ಜ ದುರದುಳ್ ದುಗ್ಗಮಾರರ ಪಡೆ ಒಟ್ಟಿ ಎಱಿದು ಬಿದ್ದ (ಎಕ. IX, ದೇವನ. ೬೭–೫; 780); ಕುಸುಮರಸಂಗಳೊಟ್ಟಿ ತನಿವಣ್ಣರಸಂಗಳ ಸೋನೆ (ಮಲ್ಲಿಪು. ೨–೩೫); ಈಶಾನ್ಯದಿಶಾಭಾಗದೊಳ್ ಬೆಳಗಿಲೊಟ್ಟಿನಂತೆ ದಿಟ್ಟಿ ಕೋರೈಸುವ ಜಿನಭವನಮಂ ಕಂಡು (ಪುಣ್ಯಾಸ್ರ. ೮–೯ ವ); ಕೋಟಿ ಕೋಟಾಕೋಟಿ ಯಳೆನೇಸಱೊಟ್ಟನಿಂ ಮಿಗಿಲಾದ ಭಾಸವಡಿ ಮಸ್ತಕಾವೃತದಿ (ಜಿನಮು. ೧–೨೩). ೨. ಮೊಳೆ; ಅಂಕುರ : "ಒಗ್ಗರ ಮೊಳಕೆಗಳೊಟ್ಟು" (ಶಬ್ದಮಂ. ೮೯). ೩. ಮೊರಸು ಒಕ್ಕಲಿಗರಲ್ಲಿ ಒಂದು ಪಂಗಡ (ಎಸಮೈ. XV, ೪೫). ೪. ಮೊತ್ತ : ಒಟ್ಟು ಎಷ್ಟು ಜನರು (ರೂಢಿ).

[< ಒಟ್ಟು₁. / ತುಳು. ತೆಲು. ಒಟ್ಟು]

**ಒಟ್ಟು₄** (ನಾ). ಶಪಥ; ಪ್ರತಿಜ್ಞೆ.

ಒಟ್ಟಿಟ್ಟುಕೊಳ್ಳು = ಶಪಥಮಾಡು; ಆಣೆಯಿಡು : "ಶಪನಂ, ಶಪಥಃ – ಈ ೨ ಒಟ್ಟಿಟ್ಟುಕೊಳ್ಳುವುದು ಅಂದರೆ ಆಣೆ ಇಟ್ಟುಕೊಳ್ಳುವುದರ ಹೆಸರುಗಳು" (ಸಿದ್ಧಾಂತಿ. ೪೮).

[ದೇ. ॥ ತಮಿ. ತೆಲು. ಒಟ್ಟು; ಕುಯಿ. ಒಡ; ಕುವಿ. ಒಟ್ಟನಯ್ = ಶಪಥಮಾಡು]

**ಒಟ್ಟುಕುಟುಂಬ** (ನಾ). ಸಾಮೂಹಿಕವಾಗಿ ವಾಸಿಸುತ್ತಿರುವ ಸಂಸಾರ; ಅವಿಭಕ್ತ ಕುಟುಂಬ; ಏಕತ್ರ ಕುಟುಂಬ : ಒಡೆದು ಹೋಗುತ್ತಿರುವ ಒಟ್ಟುಕುಟುಂಬದ ವಿಷಮ ಚಿತ್ರ ಕಾದಂಬರಿಗಳಲ್ಲಿ ಬಂದಿದೆ (ಸಾಸಮಾ. ೧೨). [ಒಟ್ಟು₃+ ಕುಟುಂಬ]

**ಒಟ್ಟುಗಟ್ಟಲೆ** 'ಒಟ್ಟುಗಟ್ಟಳೆ' ನೋ.

**ಒಟ್ಟುಗಟ್ಟಳೆ,** ಒಟ್ಟುಗಟ್ಟಲೆ (ನಾ). ಚಿಲ್ಲರೆಯಲ್ಲದ್ದು; ಠೋಕ್ (ಉಕ) : ಒಟ್ಟುಗಟ್ಟಳೆ ವ್ಯಾಪಾರಿಗಳು (ರೂಢಿ). **ಒಟ್ಟುಗಟ್ಟಲೆ:** ಒಟ್ಟುಗಟ್ಟಲೆ ವ್ಯಾಪಾರ (ರೂಢಿ). [ಒಟ್ಟು₃ + ಕಟ್ಟಳೆ₁]

**ಒಟ್ಟುಗುತ್ತಿಗೆ** (ನಾ). ಸಂಪೂರ್ಣವಾಗಿ ಗುತ್ತಿಗೆ ಪಡೆದಿರುವುದು ; ಏಕಸ್ವಾಮ್ಯ : ಹೊಲವನ್ನು ಒಟ್ಟುಗುತ್ತಿಗೆ ಹಿಡಿದಿದ್ದೇವೆ (ರೂಢಿ). [ಒಟ್ಟು$_3$ + ಗುತ್ತಿಗೆ$_1$ (< ಗುತ್ತಗೆ)]

**ಒಟ್ಟುಗೂಡಿಕೆ** (ನಾ). ಒಟ್ಟುಗೂಡಿರುವುದು ; ಒಂದಾಗಿರುವುದು. [ಒಟ್ಟುಗೂಡು + -ಇಕೆ]

**ಒಟ್ಟುಗೂಡಿಸು** (ಕ್ರಿ). ಒಂದೆಡೆಗೆ ಸೇರಿಸು, —ಕೂಡಿಸು; ಏಕತ್ರಗೊಳಿಸು ; ಜಮಾಯಿಸು. [ಒಟ್ಟುಗೂಡು + -ಇಸು$_3$]

**ಒಟ್ಟುಗೂಡು** (ಕ್ರಿ). ೧. ಒಂದಾಗಿ ಸೇರು; ಒಗ್ಗಟ್ಟಿನಿಂದಿರು: ದೇಶದ ರಕ್ಷಣೆಗೆ ಜನರೆಲ್ಲ ಒಟ್ಟುಗೂಡಿರಬೇಕು (ರೂಢಿ). ೨. ಒಂದೆಡೆ ಸೇರಿಸು, —ಕೂಡಿಸು : "ಬೆರಂಜು – ಚಯನೇ (ಒಟ್ಟುಗೂಡು) " (ಶಮುಧಾ). [ಒಟ್ಟು$_3$ + ಕೂಡು$_1$]

**ಒಟ್ಟುಜಾತಿ** (ನಾ). ಜಾತಿಸಂಕರ : ಕಟ್ಟ ರಾಜಾತ್ಮಜಗೆ ಲಿಂಗವ ಪಟ್ಟದೊಡೆಯನಗೈದು ಪುರಜನರೊಟ್ಟುಜಾತಿಯಗೈದ ಬಸವನ ಕೊಂದನಾ ಸುತನು (ಬಿಜ್ಜಪು. ೯೧ ಸೂಚನೆ). [ಒಟ್ಟು$_3$ + ಜಾತಿ]

**ಒಟ್ಟುಪಟ್ಟಿ** (ನಾ). ಬಿಕರಿಯ ಬೇರೆ ಬೇರೆ ದಿನಗಳಲ್ಲಿ ಕೊಂಡುಕೊಂಡ, ಅಥವಾ ಬಿಕರಿಮಾಡಿದ ಸಾಮಾನುಗಳ ಬೆಲೆಯ ವಿವರವನ್ನುಳ್ಳ ಯಾದಿಗಳನ್ನು ಒಂದು ನಿಯಮಿತ ಅವಧಿಯ ಕೊನೆಯಲ್ಲಿ ಶೇಖರಿಸಿ ಒಟ್ಟಿಗೆ ತಯಾರಿಸಿದ ಪಟ್ಟಿ ; ಜಮಾಪಟ್ಟಿ ; ಜುಮ್ಲಾಪಟ್ಟಿ : ವರುಷದ ಕೊನೆಯಲ್ಲಿ ಒಟ್ಟುಪಟ್ಟಿ ಮಾಡುವಾಗ (ಮುಂಬವ್ಯಾ. ೫). [ಒಟ್ಟು$_3$ + ಪಟ್ಟಿ$_2$]

**ಒಟ್ಟುಬೇರೀಜು** (ನಾ). ೧. ಒಟ್ಟು ಮೊತ್ತ ; ಪೂರ್ಣಮೊತ್ತ. ೨. ಒಟ್ಟು ಕಂದಾಯ. [ಒಟ್ಟು$_3$ + ಬೇರೀಜು]

**ಒಟ್ಟುರಾಶಿ** (ನಾ). ಅಸ್ತವ್ಯಸ್ತವಾಗಿ ಹಾಕಿರುವ ವಸ್ತುಗಳ ರಾಶಿ : ಮನೆಯಲ್ಲಿ ಒಟ್ಟುರಾಶಿ ಬಿದ್ದಿದೆ (ರೂಢಿ). [ಒಟ್ಟು$_3$ + ರಾಶಿ]

**ಒಟ್ಟುಲೆಕ್ಕ** (ನಾ). ಒಟ್ಟು ಮೊತ್ತ : ನೀನು ತಂದ ಸಾಮಾನುಗಳ ಒಟ್ಟುಲೆಕ್ಕ ಎಷ್ಟಾಯಿತು ? (ರೂಢಿ). [ಒಟ್ಟು$_3$ + ಲೆಕ್ಕ]

**ಒಟ್ಟುಸಾಸುವೆ** (ನಾ). (ವಧೂವರರಿಗೆ) ಎಲ್ಲರೂ ಒಟ್ಟಿಗೆ ಸೇರಿ ಹಾಕುವ ಆಶೀರ್ವಾದದ ಅಕ್ಷತೆಕಾಳು ; ಒಟ್ಟುಸೇಸೆ : ಅರಿಸಿಣ ಎಣ್ಣೆ ಇಟ್ಟ ಐದು ಜನ ಒಟ್ಟಿಗೆ ಕೈಹಿಡಿದುಕೊಂಡು 'ಸೋಬ ಸೋಬಾನ . . . ಸೋಬಸೋಬಾನ' ಎಂದು ಹೇಳುತ್ತ ಒಟ್ಟುಸಾಸುವೆ ಇಡುತ್ತಾರೆ (ನನ್ನೂರು. ೮೧). [ಒಟ್ಟು$_3$ + ಸಾಸುವೆ (< ಸೇಸೆ)]

**ಒಟ್ಟೆ$_1$** 'ಒಟ್ಟೆ$_3$' ನೋ.

**ಒಟ್ಟೆ$_2$, ಒಂಟೆ** (ನಾ). ಮರುಭೂಮಿಯಲ್ಲಿ ವಾಸಿಸುವ ಉದ್ದನೆಯ ಕತ್ತುಳ್ಳ ಒಂದು ಚತುಷ್ಪಾದ ಪ್ರಾಣಿ : "ದಾಸೇರಕಃ . . . ಶೃಂಖಳಕಃ – ಈ ೭ ಒಟ್ಟೆ" (ಹಲಾಯು. ೪೭–೧೨೫) ; ಕುದುರೆ ನಾಯೊಟ್ಟೆಯು ಮುಡುವುಂ (ವಡ್ಡಾರಾ. ೯೭–೪) ; ಗುಡಿ ಗೂಡಾರ ಸರಾತಿ ಪೆಟ್ಟಿಗೆ ಗಿಂಡಿ ಪಡಿಗ ಮೇಲ್ಕಟ್ಟು ತೇಜಿಗಳಾ ಗಡಣವೆಯ್ದಿತು ಬಿಡದೊಟ್ಟೆವೆಸ್ನೊಳಗಾ [ಪಾಠಾಂ. ಬಿಡದೊಟ್ಟೆಗಡುಪಿನೊಳಾ] ಮಡದಿಯ ಹಿಂದೆ ಸಾಲಿಟ್ಟು (ಕುರಾಸಾಂ. ೪೧–೪೭) ; ಸಾಯಿರ ಸಾಯಿರ ಲೆಕ್ಕದ ಹೇಱೂಟವಾನೆಗಳೊಟ್ಟೆಗಳೆಟ್ಟುಗಳ ಸಾಲ ಮುಂಗಡಿಯೊಳ್ (ರಾಮಾಶ್ವ. ೧೯–೧೯). **ಒಂಟೆ** : ಒಂಟೆಯ ಕೊರಲಂತೆ ನೀಳ್ದ ಕೊರಲುಂ (ಧರ್ಮಾಮೃ. ೪–೭೫) ; ಉಕಾರಕ್ಕೆ ಒತ್ವಂ – ಉಷ್ಟ್ರ – ಒಟ್ಟೆ, ಒಂಟೆ (ಶಮುದ. ೨೭೦ ಪ್ರಯೋ) ; ಹೇಱಿಸಿದನೊಂಟೆಗಳಲಾ ಧನವ (ಕುಮ್ಯಾಸ. ೬–೭) ; ಡೋಳಿನಕುದುರೆ ಡಮಾನದ ಮದಕರಿ ಸೂಳೈಪ ಟುಮುಕುಗಳೊಂಟೆ (ಕಂನವಿ. ೧೯–೨೩) ; ಒಂಟೆಗೆ ಸೊಂಟವೇನು ಕುತ್ತಿಗೆಯೇನು ? (ಗಾದೆ).

ಒಂಟೆಹಿಡಿತ = ಬಿಗಿಯಾದ ಹಿಡಿತ : ತಂದೆಯ ಒಂಟೆ–ಹಿಡಿತದಿಂದ ಬಿಡಿಸಿಕೊಂಡು ಹೋಗುವುದು ಹೇಗೆ (ಬೆಳುವ. ೨೨೯) ; ನಮ್ಮ ಸಿದ್ದಪ್ಪಂದೂ ಬಲೆ ಒಂಟ[ಟೆ]ಹಿಡಿತ ನೋಡು (ಹೊಸಂಸಾ. ೧೪). ಒಟ್ಟೆಯಪಟ್ಟಸಾಹಣಿ=ಒಂಟೆಯನ್ನು ಪಳಗಿಸುವವರ ಮೇಲಧಿಕಾರಿ (?) : ಒಟ್ಟೆಯಪಟ್ಟಸಾಹಣಿ ಅಚ್ಚಯ ಸಾಹಣಿ ಸುರಲೋಕ ಪ್ರಾಪ್ತನಾದನು (ಮೈಆರಿ. ೧೯೩೭, ೩೧–೯ ; 1310).

[ಪ್ರಾ. ಉಟ್ಟ. / ತಮಿ. ಒಟ್ಟೈ ; ತುಳು. ತೆಲು. ಒಂಟೆ / ಸಂ. ಉಷ್ಟ್ರ]

**ಒಟ್ಟೆಗಿಣ್ಣು** (ನಾ). ಒಂದು ಬಗೆಯ ಮರ (?) : "ಖದಿರವಃ – ಒಟ್ಟೆಗಿಣ್ಣು" (ಓಷಧಿ. ೪೩). [ಒಟ್ಟೆ$_0$ + ಗಿಣ್ಣು$_3$]

**ಒಟ್ಟೆಗುತ್ತ** (ನಾ). ನ್ಯಾಸವಾಗಿ ಅಥವಾ ಹೊಣೆಯಾಗಿ ಇಟ್ಟ ಒಡವೆ, —ಆಸ್ತಿ, —ವ್ಯಕ್ತಿ (?) : ರಸಂ ಬಂದೊಡೆ ತಂಬುಲಮಂ ಎಳ್ ಬಂದೊಡೆ ಕೊಡಳಿಯಂ ಬೆಳಸು ಬಂದೊಡೆ ನೆಲನಂ ಸಾಲಂ ಬಂದೊಡೆ ಒಟ್ಟೆಗುತ್ತನಂ ಕೊಟಿನುಂಡೊಡೆ ಪುಲ್ಲಿಗೆಯಂ ಬಿಡುವಂತೆ (ಧರ್ಮಾಮೃ. ೧೪–೧೩೪).

[ಒಟ್ಟೆ$_0$ + ಗುತ್ತ. P ತಮಿ. ಮಲ. ಒಟ್ಟಂ ; ತೆಲು. ಒಡ್ಡಿಮಿ. / ಪ್ರಾ. ಹುಡ್ಡ]

**ಒಟ್ಟೆಬೀಳು** (ಕ್ರಿ). ಬಿರುಕುಬಿಡು ; ತೂತುಬೀಳು (ಕ). [ಒಟ್ಟೆ$_1$ (< ಓಟೆ$_3$) + ಬೀಳು$_1$ (< ಬೀೞ್$_1$)]

**ಒಟ್ಟೆಬುಲ್ಲು** (ನಾ). ಒಂದು ಬಗೆಯ ಮರ; ಮೊಕ್ಕೆ ಮರ : "ಮುಷ್ಕಕಃ – ಮೊಬಗಿನ ಮರ, ಒಟ್ಟೆಬುಲ್ಲು" (ಓಷಧಿ. ೧೨೬). [ಒಟ್ಟೆ$_0$ + ಪುಲ್ಲು (< ಪುಲ್)]

**ಒಟ್ಟೆಮರ** (ನಾ). ಒಂದು ಬಗೆಯ ಮರ : "ಕಂಕಟಕೋಶಿಲಃ – ಒಟ್ಟೆಮರ" (ಓಷಧಿ. ೨೭). [ಒಟ್ಟೆ$_0$ + ಮರ$_1$]

**ಒಟ್ಟೆಮೃಗ** (ನಾ). = ಒಟ್ಟೆ$_2$ : ಒಂಟೆಯನ್ನು ಒಟ್ಟೆಮೃಗವೆಂತಲೂ ಉಷ್ಟ್ರಮೃಗವೆಂತಲೂ ಕರೆಯುವುದುಂಟು (ಪ್ರಾಣಿಪ್ರ. ೩೭). [ಒಟ್ಟೆ$_2$ + ಮೃಗ]

**ಒಟ್ಟೈಸು** 'ಒಟ್ಟೆಸು' ನೋ.

**ಒಟ್ಟೊಟ್ಟಗ** (ನಾ). ಒಂಟೆಯಂತೆ ತುಟಿಗಳುಳ್ಳವನು (?) : ರತಿವರ್ಮಂಗಂ ಕನಕಶ್ರೀಗಂ ಭವದೇವನೆಂಬೊಂ ಮಗನಾದೊಡೆ ಆತಂ ವಿರೂಪನಪ್ಪುದಱಿಂದೆ ಒಟ್ಟೊಟ್ಟಗನುಂ ದುಶ್ಚರಿತ್ರನಪ್ಪುದಱಿಂದೆ ದುರ್ಮುಖನುಮೆಂಬ ಪೆಸರ್ಗಳಾಗೆ (ಚಾವುಂಪು. ೮೮–೪) ; ಸುಕಾಂತಂಗೆ ರತಿವೇಗೆಯಂ ಕುಡುವುದುಮೊಟ್ಟೊಟ್ಟಗಂ ಬಂದು ಮುಳಿದು ಕೊಲ್ವೆನೆನೆ ಭಯಸ್ಥರಾಗಿ ವಧೂವರರ್ ಪೋಗಿ ಶಕ್ತಿಷೇಣನ ಮಱಿಯಂ ಪುಗುವುದುಮೊಟ್ಟೊಟ್ಟಗನುಂ ಬಱಿಯನೆ ತಗುಳ್ದು ಶಕ್ತಿಷೇಣಂಗಳ್ಕಿ ಮಗುಬ್ದಂ (ಚಾವುಂಪು. ೮೮–೧೦). [ಒಟ್ಟೆ$_2$ + ಒಟ್ಟ$_2$ + -ಇಗ]

**ಒಟ್ಟೊಟ್ಟೆಗಿಡ** (ನಾ). ಒಂದು ಬಗೆಯ ಗಿಡ (ಕ). [ಒಟ್ಟೊಟ್ಟೆ$_0$ + ಗಿಡ (< ಗಿಡು)]

**ಒಟ್ಟೊಟ್ಟೆ** (ನಾ). ಒಂದು ಬಗೆಯ ಮರ; "ಮರುಳುಮ್ಮತ್ತಂ" (ಲೋಕೋಪ. ಟೀಕು) ; ತವೆ ಕಿಱುಕುಸಾಲೆ ನಿಜ ಸೈಂಧವಂ ಬಿಲ್ವಂ ಲೊಕ್ಕಿಯಾಲಮೊಟ್ಟೊಟ್ಟೆ ಸರೋಜವಸಲೆ ಬಸರಿಯ(ಯೊ)ವರೆಯೆಂಬಿವು ಮಾಣಿಸುಗಿರದೆ ಪಶುಗೆ ಬಸಿಱುರ್ಚುವುದಂ (ಲೋಕೋಪ. ೯–೨೦೩). [?]

**ಒಡ$_1$** 'ಒಡೆ$_1$' ನೋ.

**ಒಡ$_2$** 'ಒಡಂ' ನೋ.

**ಒಡಂ, ಒಡ$_2$** (ಅ). ೧. ಸಹಿತವಾಗಿ ; ಜೊತೆಯಾಗಿ. 'ಒಡಂಬಡಿಕೆ' ಪರಾ. ೨. ಕೂಡಲೇ. ಒಡ$_2$ : ೧. 'ಒಡಬಡಿಕೆ' ಪರಾ.

[ದೇ. ‖ ತಮಿ. ಮಲ. ಉಡನ್, ಉಡನೇ]

**ಒಡಂಗೊಳ್**, ಒಡಗೊಳ್, ಒಡಗೊಳ್ಳು (ಕ್ರಿ). ಜೊತೆಯಲ್ಲಿ ಕರೆದುಕೊಂಡು ಹೋಗು; ತನ್ನೊಡನೆ ಸೇರಿಸಿಕೊಳ್ಳು, —ಕೂಡಿಸಿಕೊಳ್ಳು: ವಿದುರನಂ ಕರೆದಾಳೋಚಿಸಿ ಪೃಥಾತನೂಜರಂ ನಿನ್ನ ಬಲ್ಲ ಮಾಳ್ಕೆಯಿಂ ನುಡಿದೊಡಂಗೊಂಡು (ಪಂಪಭಾ. ೪–೩ ವ); ಎಂದು ಪೇಳುತ್ತೊಡಂಗೊಂಡು ಹರುಷಂಮಿಕ್ಕು (ಅರಿರ. ದೇ. ೧೭೫–೧೩); (ಕಯ್ಯ ಕಡತವನ್ನು ಕಾಲ್ಮಣೆಗಿರಿಸಿ, ಕರವಾಲಗಿಳ್ತು, ಸನ್ನೆಗೆಯ್ದ ದ ಎಣ್ಬರು ಸೈನಿಕರನ್ನೊಡಂಗೊಂಡು . . . ಹೋಗುವನು) (ಮಂತ್ರಶ. ೨೦–೧೦). **ಒಡಗೊಳ್** : ಅವರ ಮನೆಗೊಡಗೊಂಡು ಪೋಗಿ (ವಡ್ಡಾರಾ. ೬೮–೪); ಅತನನೊಡಗೊಂಡು . . . ಪರಾಶರಂ ಪೋದಂ (ಪಂಪಭಾ. ೧–೬೮); ಗಂಗೆ ಹೋದಳು ಮಗನನೊಡಗೊಂಡು (ಕುವ್ಯಾಆ. ೧೨–೪೨). **ಒಡಗೊಳ್ಳು** : ಮರುಳಲಾ ರಘುನಾಥ ಸೀತೆಯ ಖರೆಯದಿಂದೊಡಗೊಳ್ಳು ನೀ ಮನದಿರುಹಿದರೆ ಶಿವನಾಣೆಯೆಂದಳು ಗಿರಿಜೆ (ಕಾಶಿರಾ. ೪೩–೫೦); ಮಹಾಯಜ್ಞವು ನಾಲ್ಕುವೇದಗಳ ಪ್ರಯೋಗವನ್ನು ಒಡಗೊಂಡಂತಿತ್ತು (ವಚಭಾ. ೬೨). [ಒಡಂ + ಕೊಳ್$_1$]

**ಒಡಂಬಡಿಕೆ**, ಒಡಬಡಿಕೆ (ನಾ). ೧. ಸಮ್ಮತಿ; ಒಪ್ಪಂದ; ಕರಾರು: ಕೊತ್ತಮಂಗಲದ ಮಹಾಜನರ ಒಡಂಬಡಿಕೆಯಿಂದ ಶುದ್ಧಿಕುಣ್ಟೆಯ ಛತುಸೀಮೆ ಭೂಮಿಯನು (ಮೈಆರಿ. ೧೯೨೩, ೬೭–೪; ?); ಒಡಬಟ್ಟನದಕೆ ಮಂತ್ರಿಗಳಾಪ್ತರವನೊಡಂಬಡಿಕೆಗೆ ಬಂದುದಕೊಲಿದು (ಭರಚ. ೨೪–೬೪); ಒಡಂಬಡಿಕೆಯಿಂದ ಆಗುವುದು ದಡಂಬಡಿಕೆಯಿಂದ ಆದೀತೇ? (ಗಾದೆ). ೨. ಕ್ರೈಸ್ತರ ಪವಿತ್ರ ಗ್ರಂಥವಾದ ಬೈಬಲ್ಲಿನಲ್ಲಿರುವ ವಿಧಾಯಕ ವಾಕ್ಯ: (ಬೈಬಲ್) ಒಪ್ಪಂದ, ಒಡಂಬಡಿಕೆ, ವಿಧಾಯಕ ವಾಕ್ಯ (Testament. ಇಂಕನ); ಬೈಬಲ್ಲಿನ ಒಡಂಬಡಿಕೆಗಳು (ರೋಮನ್ ಲಿಪಿಯಲ್ಲಿ) ಈ ಭಾಷೆಗೂ ಅನುವಾದವಾಗಿವೆ (ದ್ರಾವಿವಿ. ೧೬೮). ೩. ಸಮಾಧಾನಪಡಿಸುವುದು; ಸಂತೈಸುವುದು: "ಚಪ – ಸಾಂತ್ವನೇ, ಒಡಂಬಡಿಕೆಯೊಳ್" (ಕಾಶಕ್ರ. ೨೮). **ಒಡಬಡಿಕೆ** : ೧. ಫಡಫಡೆಲವೋ ಪಾರ್ಥ ಜೂಜಿಂಗೊಡಬಡಿಕೆ ನಿಮಗೆಮಗೆ ಹಾರುವ ರೊಡನೆ ಹೆಕ್ಕಳವೇಕೆ (ಕುವ್ಯಾಕ. ೨೪–೫೦); ಕಡುಗಲಿತನದಿಂದಿಲ್ಲಿಗೆ ಬಂದು . . . ಪಲತೆಜದೊಡಬಡಿಕೆಯ ಮಾತನಾಡೆ (ನೇಮಿಸಂ. ೨೫–೯೧).

[ಒಡಂಬಡು$_1$ + –ಇಕೆ. / **ತಮಿ.** ಉಡಮ್ಬಡಿಕ್ಕೈ; **ಮಲ.** ಉಡಮ್ಪಡಿ; **ತುಳು.** ಒಡಂಬಡಿಕೆ, ಒಡಂಬಡಿಗೆ; **ತೆಲು.** ಒಡಬಡಿಕ]

**ಒಡಂಬಡಿಸು**, ಒಡಬಡಿಸು (ಕ್ರಿ). ಒಪ್ಪಿಸು; ಸಮ್ಮತಿಸುವಂತೆ ಮಾಡು: ತಾಯ್ತಂದೆಗಂ ಸಂತೋಷಂಮಾಡಿಯವರಂ ಬಿಡಿಸಿಯೊಡಂಬಡಿಸಿ ಬಂದೊಡೆ ತಪಮಂ ಕುಡಲಕ್ಕುಂ (ವಡ್ಡಾರಾ. ೬೪–೧೬); ಧೃತರಾಷ್ಟ್ರಂ ಮಗನಲ್ಲಿಗೆವಂದು ಜಡಿದು ನುಡಿದುಮೇಗೆಯ್ದುಮೊಡಂಬಡಿಸಲಾಜದೆ (ಪಂಪಭಾ. ೬–೨ ವ); ತಾಯ್ತಂದೆಗಳನೊಡಂಬಡಿಸಿ ಶುಭಲಗ್ನಮಂ ವಿಭವದಿಂ ಕೈಕೊಂಡು (ನಂಬಿರ. ೪–೮೫); ಅಜ್ಜರನೊಡಂಬಡಿಪ ಕೃತ್ಯಮಂ ತಿಳಿದು (ಚಿಬಪು. ೪–೨೬). **ಒಡಬಡಿಸು** : ನೃಪ ನಿನ್ನ ಕಾಂತೆ ಸುತ ಮಂತ್ರಿಗಳ ಮತ ಬೇಹುದವರುಗಳನೊಡಬಡಿಸು ಬೇಗವೆನಲು (ಹಚಕಾ. ೮–೪೩); ಈತನನುಪಾಯದ ಭೇದದಿಂದೊಡಬಡಿಸಿ ಭಕ್ತಿಯ ಹಾದಿಯನು ಹತ್ತಿಸುವೆ (ಪ್ರಭುಲೀ. ೧೧–೬); ಚಂಡವಿಕ್ರಮ ಧೈರ್ಯವನಾಂತುಕೋ ಎಂದು ಗಂಡನನೊಡಬಡಿಸಿದಳು (ಮೋಹತ. ೧೦–೩೫). [ಒಡಂಬಡು$_1$ + –ಇಸು$_3$]

**ಒಡಂಬಡು**$_1$, ಒಡಬಡು (ಕ್ರಿ). ೧. ಅನುಮತಿಕೊಡು; ಒಪ್ಪು; ಅಂಗೀಕರಿಸು: "ಒಡಂಬಡು (ಒಡಂ + ಪಡು) –ಅಭ್ಯುಪಗಮೇ" (ಶಮುಧಾ); ನುಡಿಗಳೊಡಂಬಡಲ್ ಬಗೆದವೊಲ್ ಬಗೆಯಂ ಮಿಗಲೀಯದೊಂದೆ ನಾಣ್ನುಡಿಯ ಬೆಡಂಗೆ ಕನ್ನಡದ ಮಾತಿನೊಳ್ (ಕವಿರಾ. ೧–೧೪೯); ಜಿನಶಾಸನಕ್ಕೊಡಂಬಡದಡವುನ್ನನಾರಿಗೆರೆದಟ್ಟಿದದಂ . . . ಕಿಡುಗುಂ ಕುಲಕ್ರಮಂ (ಎಕ. VII, ಶಿವನೊ. ೪–೩೨; 1122); ಪರವೆಂಗಳಿಗೆ ಹೇಡಿ ಕದನಕ್ಕೆ ಕಡುಗಲಿ ಪರಮತಕ್ಕೊಡಂಬಡೆ ಮೂರ್ಖ (ಭರಚ. ೨–೧೩); ಯಾರಿಗೂ ಮನಸ್ಸು ಒಡಂಬಡುತ್ತಿರಲಿಲ್ಲ (ಸೋಕ್ರಮು. ೧೯). ೨. ಹೊಂದಿಕೆಯಾಗು; ಅನ್ವಯವಾಗು: ದನಿಯಿಂಪು ಬೀಣೆಯಂ ಮಿಡಿದವೊಲಾಗೆ ರಾಗದೊಳೊಡಂಬಡೆ ಮೇನಕೆ ಮುಂದೆ ಪಾಡಿದಳ್ (ಪಂಪಭಾ. ೬–೮೯). ೩. (ಬಾಯಿಗೆ) ರುಚಿಸು; ಸೇರು; ಒಗ್ಗು: ಈ ಕಲ್ಕಗಳು ಒಡಂಬಡಲು ಎರಡುಹೊತ್ತು ಕೊಡುವುದು (ಸಕವೈ. ೧೬೬); ವಿರುದ್ಧವಾದ ಆಹಾರ, ಒಡಂಬಡದಿರ್ಪ ಆಹಾರಾದಿಗಳಿಂದಲೂ . . . ಮೂಲವ್ಯಾಧಿ ಮೂರು ಪ್ರಕಾರವಾಗಿ . . . ಕಾಣಿಸಿಕೊಂಬುದು (ಸಕವೈ. ೨೮೬). **ಒಡಬಡು** : ೧. ಪರಪುರುಷರನು ದುರ್ಮತಿಯೊಡಬಡುವವಳು ಸತಿಯೇ (ಕುವ್ಯಾಆ. ೩–೩೩); ಸುಜನರುಪಹತಿಗೊಡಬಡನು (ತೊರರಾ. ೧–೮–೧೪); ಮನದೊಲವಱಿತೊಡಬಟ್ಟುದನೊಡರಿಸಿ ಮನಬಾರದುದನು ಮಱೆವುದು (ಹದಿಬ. ೩–೨೦).

[ಒಡಂ + ಪಡು$_1$. / **ತಮಿ.** ಉಡಮ್ಬಡು; **ಮಲ.** ಉಡಮ್ಬೆಡು; **ತುಳು.** ಒಡಂಬಡಿ; **ತೆಲು.** ಒಡಬಡು]

**ಒಡಂಬಡು**$_2$ (ನಾ). ೧. ಒಪ್ಪುವಿಕೆ; ಅಂಗೀಕಾರ; ಸಮ್ಮತಿ: ಕನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀಗಡಿನ ನೆಗಱ್ತೆಯ ಕಬ್ಬದೊಳೊಡಂಬಡಂ ಮಾಡಿದರ್ ಪುರಾತನ ಕವಿಗಳ್ (ಕವಿರಾ. ೧–೩೨); ಬಸನದೊಡಂಬಡಿಂಗಲಸಿ ಮಾಣ್ದೊಡಂ (ಪಂಪಭಾ. ೪–೯೨); ನಯದಿಂ ನಿನ್ನೊಳೊಡಂಬಡಂ ಪಡೆಯದಿಂದೌತ್ಸುಕ್ಯದಿಂ ತಂದ ಸಲ್ಗೆಯುಂ (ಅನಂಪು. ೧೧–೮೮). ೨. ಹೊಂದಿಕೆ: ವರ್ಣಕಂ ಕತೆಯೊಳೊಡಂಬಡಂ ಪಡೆಯೆ . . . ಪೇೞಲೊಡರ್ಚಿದೆನೀ ಪ್ರಬಂಧಮಂ (ಪಂಪಭಾ. ೧–೧೧). ೩. ಹೋಲಿಕೆ; ಸಾದೃಶ್ಯ: ಕುಡುಮಿಂಚಿನ ಸಿಡಿಲುರುಳಿಯೊಳೊಡಂಬಡಂಪಡೆಯೆ ಕರ್ಣನೊಡಲಿಂದಾಗಳ್ ನಡೆ ನೋಡೆ ನೋಡೆ ದಿನಪನೊಳೊಡಗೂಡಿದುದೊಂದು ಮೂರ್ತಿ ತೇಜೋರೂಪಂ (ಪಂಪಭಾ. ೧೨–೨೧೫); ಒಳ್ನುಡಿಯುಂ ನಡೆಯುಂ ನೋಟ್ಪೊಂದೊಡಂಬಡಿಲ್ಲೆನಿಸಿ ನೆಗೞ್ವುದಾರ್ಹತಭಕ್ತರ್ (ಸಮುಪ. ೫–೧೫೬).

[< ಒಡಂಬಡು$_1$. / **ತಮಿ.** ಉಡಮ್ಬಾಡು; **ಮಲ.** ಉಡಮ್ಪಡಿ; **ತೆಲು.** ಒಡಬಾಟು]

**ಒಡಂಬಡುಕಾಱ** (ನಾ). ಸಮಾಧಾನಮಾಡುವವನು; ರಾಜಿಮಾಡುವವನು: ದೂಱುವನಂ ನಿಕೃಷ್ಟನನೊಡಂಬ [ಪಾಠಾಂ. ನೆರಂಬಿ] ಡುಕಾಱಜನನೀನನೆಂದೊಡಂ ಮಿಾಱುವನಂ ಕಡಂಗಿ ಸಲೆ ಬೇಡುವನಂ ನೃಪನಾಳಲಕ್ಕುಮೇ (ಸೂಕ್ತಿಸು. ೧೬–೪೫). ℙ ಈ ಶಬ್ದದ ಸರಿಯಾದ ರೂಪ 'ಎಡಂಬಡುಕಾಱ' (= ಎಡವಟ್ಟು ಕೆಲಸಮಾಡುವವನು) ಎಂದಿರಬಹುದು. 'ಎಡಂಬಡು' ಪರಾ.

[ಒಡಂಬಡು$_2$ + –ಕಾಱ]

**ಒಡಂಬಿ** 'ಒಡಂಬು' ನೋ.

**ಒಡಂಬು**, ಒಡಂಬಿ, ಒಡಮು (ನಾ). ಶರೀರ; ದೇಹ: ತೋರದ ತೋಳುಳ್ಳರ್ ಭಂಗಾರದ ಕಂಭದವೊಲಪ್ಪೊಡಂಬುಳ್ಳವರ್ (ಸೌನಂದ. ೧–೧೯). **ಒಡಂಬಿ** : "ಒಡಂಬಿ = ಶರೀರಂ" (ಶಮುದ. ಪರಿ. ೨); ವಿವಿಧಪದಂ ಸ್ವರಂ ಪರಿಜು ಬಣ್ಣಮೊಡಂಬಿಯ ದೇಸಿಯಂಗಕೊಪ್ಪುವ ಚಲನಂ (ಸಂಸಪ. ೬–೮); ನಿನ್ನ ಒಡಂಬಿಯಲ್ಲಿರುವ ಒಂದೊಂದು ಮೂಳೆಯನ್ನೂ ಮುರಿಮುರಿದು (ಮಂತ್ರಶ. ೬೦–೧೮). **ಒಡಮು** : ಒಡಮೇ ಶಾಶ್ವತ ಮತ್ತದು (ಸೌಇಎ. ೧೯೪೬, ಹಾನಗಲ್. ೨೧೪–೩೨; 943). 'ಒಡಲ್' ಪರಾ. [ದೇ. ‖ ತಮಿ. ಮಲ. ಉಡಮ್ಬು]

**ಒಡಕ** (ನಾ). ೧. (ಆಲಂ) ಒಡಕನ್ನುಳ್ಳವನು; ಧೈರ್ಯವಿಲ್ಲದವನು. 'ಎದೆವೊಡಕ' ಪರಾ. ೨. (ಆಲಂ) ಒಡಕನ್ನುಂಟುಮಾಡುವವನು; ಒಗ್ಗಟ್ಟನ್ನು ಮುರಿಯುವವನು. 'ಮನೆಯೊಡಕ' ಪರಾ. [ಒಡಕು + -ಅ$_7$]

**ಒಡಕಲ** 'ಒಡಕಲು' ನೋ.

**ಒಡಕಲು,** ಒಡಕಲ (ನಾ). ೧. ಒಡೆದಿರುವಿಕೆ; ನುಚ್ಚು; ತರಿ: ತೊಗರಿ ಒಡಕಲು (ರೂಢಿ). (ಗು). ೨. ನುಚ್ಚಾದ; ಚೂರಾದ; ಒಡೆದ: 'ಪಣತ' ದಿಂದ ಒಡಕಲು ಅಕ್ಕಿ ಸ್ವಲ್ಪ ತೆಗೆದು ಒಂದು ಒಣ ಹಾಳೆಗೆ ಹಾಕಿಕೊಂಡು (ಬಾಳಿವೈ. ೧೧). **ಒಡಕಲ**: ೧. (ಕಿ). [ಒಡ$_1$ (< ಒಡೆ$_1$) + -ಕಲು$_2$ (< -ಕಲ್$_4$)]

**ಒಡಕವಿಸು** (ಕ್ರಿ). ಕೂಡಲೇ ಆವರಿಸುವಂತೆ ಮಾಡು; ಮುಚ್ಚಿಸು; ಹೊದೆಸು: ತಡೆಗಡಿದು ಬಿಡಲವಂ ಕೋಪದಿಂ ಚಾಪದಿಂದೊಡಕವಿಸಿದ ವನಿಹುಸ್ತೋಮಮಂ ವ್ಯೋಮಮಂ ತಾಳದಿರಲಖಿಳ ಜನರು (ಚಿ ಬ ಪು. ೫೦-೯೨). [ಒಡ$_2$ (< ಒಡಂ) + ಕವಿ$_1$ + -ಇಸು$_1$]

**ಒಡಕು** (ನಾ). ೧. ಬಿರುಕು; ಸೀಳು: ಒಡಕು ಬಿರಿಕು ಕಲೆ ಕಾಳಿಕೆಯಿಲ್ಲದ ಇಂತಪ್ಪ ಕುಂಭಾನ್ (ಪ್ರಕಟೀ. ೩೮-೧೦). ೨. ಒಡೆದ ಭಾಗ; ಚೂರು; ತುಂಡು; ಖಂಡ: ಉಡುಗಡಣದೊಡೆಯನೊಡಲೊಡಕು ನಡನಡುಗಿ ಬ [ಪಾಠಾಂ. ಪೊ] ಡಕರಿಸಿ ಮಿಡುಮಿಡುಕಲಡಿಗಡಿಗೆ (ಹಚಕಾ. ೧-೨); ಭೇದಿ ನೀರುನೀರಾಗಿ ಒಡಕು ಒಡಕಾಗಿದ್ದರೆ ಮಗುವಿಗೆ ಆರೋಗ್ಯ ಸರಿಯಾಗಿಲ್ಲವೆಂಬುದು ಸಿದ್ಧ (ಗೃಹವಿ. ೧೪೪). ೩. (ಆಲಂ) ಒಗ್ಗಟ್ಟಿಲ್ಲದಿರುವುದು; ವೈರ; ಜಗಳ; ವೈಮನಸ್ಯ; ಮನಸ್ತಾಪ: ಕಾಂಗ್ರೆಸ್‌ನಲ್ಲಿ ಮಿತ್ರವಾದಿಗಳಿಗೂ ಉಗ್ರವಾದಿಗಳಿಗೂ ಆದ ಒಡಕನ್ನು ಸರಿಪಡಿಸಲು ಬೆಸೆಂಟ್ ಯತ್ನಿಸಿ (ಸ್ವಾವೀರ. ೧೦೭); ಅವರಲ್ಲಿ ಬೇಗನೆ ಒಡಕು ಬಾರದಿರದೆಂದು ನಿಶ್ಚಯಿಸಬಹುದು (ಮೂರುಉ. ೯೦). [ಒಡ$_1$ (< ಒಡೆ$_1$) + -ಕು$_1$]

**ಒಡಕುಕಾಸು** (ನಾ). ೧. (ಉಕ) ಒಡಕಲು ಕಾಸು; ಸವೆದ ಕಾಸು; ಸವಕಳಿ ನಾಣ್ಯ. ೨. ಅಲ್ಪಬೆಲೆಯ ನಾಣ್ಯ: ಕುಡಿದೆನೆಂದರ ಗಂಜಿ ಒಡಕುಕಾಸಿನಗಿಲ್ಲ (ಜನಗೀ. ೬೨-೧೭); ಒಡಕುಕಾಸು ಸಹ ಪ್ರಾಪ್ತಿಯಿಲ್ಲದ ಆ ಹಾಳು ಗದ್ದೆಗೆ (ದಾಸಹು. ೬೨). [ಒಡಕು + ಕಾಸು$_2$]

**ಒಡಕುದನಿ** (ನಾ). ೧. ಒಡೆದುಹೋದ ಧ್ವನಿ; ಇಂಪಿಲ್ಲದ ಕಂಠ; ಬಿರಿದ ಧ್ವನಿ. ೨. (ಆಲಂ) ಕೆಟ್ಟಧ್ವನಿ; ಅಪಸ್ವರ: ಆ ನಗೆಯ ಒಡಕುದನಿಯಲ್ಲಿ ವಿಕಟಸಂತೋಷ ಕಾಣಿಸುತ್ತಿತ್ತು (ಆಲಹೂ. ೧೦೦). ೩. (ಆಲಂ) ಕೆಟ್ಟ ಸುದ್ದಿ, —ವದಂತಿ: ಅವರ ಪ್ರಾಮಾಣಿಕತೆಯ ಬಗ್ಗೆ ಇತ್ತೀಚೆಗೆ ಒಡಕುದನಿ ಎದ್ದಿದೆ (ರೂಢಿ). [ಒಡಕು + ದನಿ$_2$]

**ಒಡಕುದೋಣಿ** (ನಾ). ಒಡೆದಿರುವ ದೋಣಿ; ಸೀಳಿರುವ ದೋಣಿ: ಒಡಕುದೋಣಿಗೆ ಗಿಡ್ಡ ಜಲ್ಲು (ಗಾದೆ). [ಒಡಕು + ದೋಣಿ]

**ಒಡಕುಬಾಯಿ** (ನಾ). ೧. ಒಡೆದುಹೋದ ಬಾಯಿ. ೨. (ಆಲಂ) ಗುಟ್ಟು ನಿಲ್ಲದ ಬಾಯಿ; ಗುಟ್ಟನ್ನು ಬಯಲುಮಾಡುವ ಬಾಯಿ: ಅಡಿಕೆಯಿಲ್ಲದ ವೀಳೆ ಕಿಡಿಕೆಯಿಲ್ಲದ ಮನೆಯು ಒಡಕುಬಾಯವಳ ಮನೆವಾರ್ತೆ ಎಣ್ಣೆಯ ಕುಡಿಕೆಯೊಡೆದಂತೆ (ಸರ್ವಜ್ಞ. ೧೭೨೦); ಒಡಕುಬಾಯಿಯ ವಿದೂಷಕ (ಕಾವ್ಯಸ. ೧೨).

**ಒಡಕುಬಾಯವ** = ಗುಟ್ಟನ್ನು ರಟ್ಟುಮಾಡುವ ಬಾಯುಳ್ಳವನು; ಗುಟ್ಟನ್ನು ಅಡಗಿಸಿಕೊಳ್ಳಲು ಸಾಧ್ಯವಿಲ್ಲದವನು; "ಒದರ ಬಡಕ; ಮುಚ್ಚುಮರೆ ಇಡದವ" (ಜಾನಕೋ. ೨೯). [ಒಡಕು + ಬಾಯಿ$_1$ (< ಬಾಯ್)]

**ಒಡಕುಮಡಕೆ** (ನಾ). ಒಡೆದ ಮಡಕೆ; ದದ್ದುಮಡಕೆ: ಮರ್ಮವಿಲ್ಲದ ಮಾತು ಒಡಕುಮಡಕೆಯ [ಪಾಠಾಂ. ಒಡಮಡಕೆ, ಒಡಮೊಗೆಯ] ತೂತು (ಕನಕ. ೩೩-೨). [ಒಡಕು + ಮಡಕೆ]

**ಒಡಕುಮನೆ** (ನಾ) ೧. ಒಡೆದಿರುವ ಮನೆ; ಶಿಥಿಲವಾದ ಮನೆ; ಭಗ್ನಮಂದಿರ. ೨. (ಆಲಂ) ವೈಮನಸ್ಯಕ್ಕೆ ಆಸ್ಪದವಾದ ಜಾಗ; ಒಳಜಗಳಕ್ಕೆ ಆಶ್ರಯವಾದ ಸ್ಥಾನ: ಸಕಲ ಧರ್ಮಗಳ ತವರೂರಾದ ಭಾರತವಂತೂ ಭಿನ್ನಭಿನ್ನ ಧರ್ಮಗಳ ತಿಕ್ಕಾಟದ ಒಡಕುಮನೆಯಾಗಿದೆ (ಧರ್ಮಸಾ. ೨) [ಒಡಕು + ಮನೆ]

**ಒಡಕುಮಾತು** (ನಾ). ೧. ಕೆಟ್ಟಮಾತು; ಅಪಶಬ್ದ: ಈ ಮಕ್ಕಳಿಂದಾಗಿ ತಾನು ಜನರಿಂದ ಒಡಕುಮಾತು ಕೇಳಬೇಕಾಯಿತು (ಕುಸುಸಂ. ೨೭೫). ೨. ವಿರೋಧವನ್ನು ಸೂಚಿಸುವ ಮಾತು: ಕೆಲವು ದಿನಗಳಾದ ಮೇಲೆ ಅವನ ಹೆಂಡತಿಯ ಬಾಯಿಂದ ಒಡಕು ಮಾತು ಹೊರಟಿತು (ಯೋಧಪು. ೨೬). [ಒಡಕು + ಮಾತು$_1$]

**ಒಡಕುಸದ್ದು** (ನಾ). ಒಡಕಲು ವಾದ್ಯದಿಂದ ಹೊರಡುವ ಸದ್ದು; ಇಂಪಿಲ್ಲದ ಧ್ವನಿ: ಬಾರಿಸುವ ಗಂಟೆ . . . ಲೊಡಲೊಡ ಒಡಕುಸದ್ದು ಮಾಡುತ್ತಿದ್ದರೂ ನಮ್ಮ ಕಿವಿ ನೆಮ್ಮದಿಯಾಗಿಯೇ ಇರುವುದು (ಸಾಹಿಜೀ. ೧೩). [ಒಡಕು + ಸದ್ದು$_3$]

**ಒಡಕುಹಣೆ** (ನಾ). ೧. ಒಡೆದುಹೋದ ಹಣೆ. ೨. (ಆಲಂ) ಅದೃಷ್ಟದ ಗೆರೆಯಿಲ್ಲದ ಹಣೆ: "ಒಡಕುಹಣೆಯಿದು ಕೆಡುಕು ಗ್ರಹವಿದು ಕುಡಿ ಕತನದಾ ಫಲವಿದು" (ಕಎಪು. ೧೮-೧೫). [ಒಡಕು + ಹಣೆ$_1$ (< ಪಣೆ$_2$)]

**ಒಡಕುಹರವಿ** (ನಾ). ಒಡೆದುಹೋದ ಹರವಿ, —ಮಡಕೆ: ಪಂಡಿ ಗಂಜುವ ಬಂಟ ಒಡಕುಹರವಿ[ಪಾಠಾಂ. ಒಡೆದ ಹರವಿ]ಯ ಕಂಟ (ಕನಕ. ೧೩೧-೪). [ಒಡಕು + ಹರವಿ (< ಪರವಿ)]

**ಒಡಕುಹಿಡಿಕೆ** (ನಾ). (ಒಂದು ವಸ್ತುವಿನ) ಒಡೆದುಹೋಗಿರುವ ಹಿಡಿ, —ಕೈ: ಒಡಕುಹಿಡಿಕೆಯ ಎರಡು ಕಪ್ (ಕುಂಹಿಂ. ೧೧೫). [ಒಡಕು + ಹಿಡಿಕೆ]

**ಒಡಕುಹುಟ್ಟಿಸು** (ಕ್ರಿ). ಭೇದೋಪಾಯ ಮಾಡು; ಒಗ್ಗಟ್ಟು ಮುರಿ: ನುಡಿವ ಗಂಭೀರ ಬೋಧಿಪ ಬೋಧೆ ತಮ್ಮನೆಂದೊಡಕುಹುಟ್ಟಿಸದೊಂದು ಪ್ರೀತಿ (ಧರಚ. ೫೦-೧೨೭); ದುರ್ಯೋಧನನು ಕುಶಲರಾದ ಬ್ರಾಹ್ಮಣರನ್ನು ಕಳುಹಿಸಿ ಪಾಂಡವರಲ್ಲಿ ಒಡಕುಹುಟ್ಟಿಸಬಹುದು (ವಚಭಾ. ೬೨). [ಒಡಕು + ಹುಟ್ಟಿಸು (< ಪುಟ್ಟಿಸು)]

**ಒಡಗಚ್ಚು** (ಕ್ರಿ). ಮರಳಿ ಕಚ್ಚು; ಪ್ರತಿಯಾಗಿ ಕಚ್ಚು: ನಾಯ್ ಕಚ್ಚಿದೊಡೊಡಗಚ್ಚಲ್ ಬೊಗುಟೆ ಬೊಗುಟಲೇಂ ಬಂದಪುದೇ (ಧರ್ಮಾಮೃ. ೯-೧೮೫). [ಒಡ$_2$ (< ಒಡಂ) + ಕಚ್ಚು$_1$ (< ಕರ್ಚು$_1$)]

**ಒಡಗತೆ** 'ಒಡಗಥೆ' ನೋ.

**ಒಡಗಥೆ,** ಒಡಗತೆ (ನಾ). ಒಡೆದು ಅರ್ಥ ಹೇಳಬೇಕಾದ ಕಥೆ; ಒಗಟಿನಂತಹ ಕಥೆ: ಒಡಗಥೆಗಳಂತಿರುವ ಅವರ ಸ್ವಪ್ನಗಳ ವಿಷಯ ವಿನ್ಯಾಸದಲ್ಲಿ ವೇಧಕತೆಯಿದೆ (ವಿಚಾಮುಂ. ೭೯). **ಒಡಗತೆ**: (ಕಿ). [ಒಡ$_1$ (< ಒಡೆ$_1$) + ಕಥೆ]

**ಒಡಗಲಸು,** ಒಡಗಲಿಸು (ಕ್ರಿ). ೧. ಜೊತೆಗೆ ಸೇರು; ಒಂದಾಗು; ಕೂಡು; ಬೆರೆ; ಐಕ್ಯವಾಗು: ಪೊಲೆಯರೊಡಗಲಸದೆ ದಿವ್ಯಾರ್ಚನೆಯಂ ಸಕಳ ಸುರೇಂದ್ರಾರ್ಚಿತಚರಣಕ್ಕೆ ಕೊಟ್ಟು ಪಡೆವುದು ಸುಖಮಂ (ಸಮಪ. ೯-೧೨೪); ಕರುಣರಸಾಮೃತದೊಡಗಲಸಿದಮಳ ಕೇಕರರುಚಿಯ ಬೀಜಿ ಕಾತ್ಯಾಯಿನಿಯೊಳ್ (ಸೌಂದಪು. ೧-೯೩); ಕುಲಶೇಖರಪಾಂಡ್ಯಂ ಶಿವಾರ್ಚನಂಗೆಯ್ಯುತ್ತೆ . . . ಮೂಲಲಿಂಗದೊಳೊಡಗಲಸಿದನೆಂತೆನೆ (ಹಾಲಾಸ್ಯ. ೪-೧೧೧. ವ).

೨. ಜೊತೆಯಲ್ಲಿ ಸೇರಿಸು ; ಬೆರಸು ; ಕೂಡಿಸು : ಕಡಲೀಳ ನೊಡಗಲಸಲೋ (ಸಾಳ್ವಭಾ. ೧೫–೩) ; ಸಕ್ಕರೆಯ ಪಾಲ್ಗೆನೆಯ ಘೃತವ ಕದಳೀಫಲದೊಳಿಕ್ಕಿಯೊಡಗಲಸಿ (ಗುರುಚಾ. ೭–೩) ; ಜಲವಂ ಸುರಿಸಿ ಮಾಂಸದಿಂದೊಡೆ[ಡ]ಗಲಸಿ ರಣಪಿಶಾಚಿಯರಿಂಗೆ ಭೋಜನಂಗೊಡಿಸು (ತುರಂಗ. ೬೫–೬). **ಒಡಗಲಿಸು : ೧.** ತನ್ನ ಭಕ್ತಿಪಿಂಡವೆಂಬ ಪದಾರ್ಥವನ್ನು ಸಮರಸ ಪಾಕಮಾಡಿ . . . ಒಡಗಲಿಸಿ (ಅವಚಂ. ೪೧೭–೫೬೮) ; ದೇವಕಾಂತೆಯರ್ ನಿವಳಿಸುವ ಮಂಗಳದೀಪಮಂಜರೀ ಮರೀಚಿಗಳೊಳ್ ಮಿಂಚಿನ ಗೊಂಚಲ್ಗಳೊಡಗಲಿಸೆ ಸೂಸುವ ಮುತ್ತಿನ ಸೇಸೆಗಳೊಳ್ (ಅರ್ಥನೇ. ೭–೪೩ ವ) ; ಒಡೆ[ಡ]ಗಲಿಪ ಪರಬಲವ ಮಾಣದೆ ಕಡಿದು (ನಿಭಾಗ. ೧೦–೪೯–೩೨). [ಒಡ್$_2$ (< ಒಡಂ) + ಕಲಸು$_1$]

**ಒಡಗಲಿಸು** 'ಒಡಗಲಸು' ನೋ.

**ಒಡಗವಿ** (ಕ್ರಿ). ಒಡನೆ ಕವಿ, —ಮುತ್ತು : ಬಳಿಯಲೊಡಗವಿಯಿತ್ತು ಚಾತುರ್ಬಲ (ಕುವ್ಯಾದ್ರೋ. ೮–೫೫) ; ಒಡಗವಿವ ಸಮರಥಜಾಲವನು ಮುಱಿಯೆಚ್ಚು (ಕುವ್ಯಾಕ. ೧೩–೧೫). [ಒಡ್$_2$ (< ಒಡಂ) + ಕವಿ$_1$]

**ಒಡಗಳೆ** (ಕ್ರಿ). ಜೊತೆಯಲ್ಲಿ ಕಳೆ, —ಬಿಡು : ಬಿಡದೆ ಪೊಗೆ ಸುತ್ತೆ ತೋಳಂ ಸಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮನಂದೊಡೆ[ಡ]ಗಳೆದರ್ (ಆದಿಪು. ೫–೨೪). [ಒಡ್$_2$ (< ಒಡಂ) + ಕಳೆ$_1$]

**ಒಡಗಾಣ್** (ಕ್ರಿ). ಜೊತೆಯಲ್ಲಿ ಕಾಣು ; ಜೊತೆಜೊತೆಯಾಗಿರುವುದನ್ನು ಕಾಣು : ಪಸರಿಸಿದ ತೋರಹಾರದ ಪೊಸವೆಳ್ದಿಂಗಳುಮನಮರ್ದಪೆರ್ದುಡುಗೆಗಳೊಳ್ ಮಿಸುಗುವ ಪೊಸಮಾಣಿಕದೆಳವಿಸಿಲುಮನೊಡಗಾಣಲಾದುದಾಸ್ಥಾಯಿಕೆಯೊಳ್ (ಆದಿಪು. ೯–೫).

[ಒಡ್$_2$ (< ಒಡಂ) + ಕಾಣ್]

**ಒಡಗಾದು** (ಕ್ರಿ). ಸಂಗಡ ಯುದ್ಧಮಾಡು ; ಜೊತೆಯಲ್ಲಿ ಕಾದು : ಅಸುರರೊಳ್ ಹರಿ ಕಾದುವುದಲ್ತು ವಿಸ್ಮಯಂ ಸುರರೊಡಗಾದುವಂದ ಮಿದು ವಿಸ್ಮಯಮಾನಿದನಿಂದು ನೋಟ್ಪಿಂ (ಜಗವಿ. ೧೩–೩೬).

[ಒಡ್$_2$ (< ಒಡಂ) + ಕಾದು$_1$]

**ಒಡಗು$_1$** 'ಒಡುಗು' ನೋ.

**ಒಡಗು$_2$** (ನಾ). "ಒಡಕು, ಭೇದ, ಭಾಗ" (ಮೋಳಿವಾ. ಕೋಶ) : ಮೂಱಕ್ಕಾಱು ಸತಿಪತಿಭೇದವನಱಿದು ಆ ಆಱಱ ಒಡಗು ಇಪ್ಪತ್ತೈದಱ ಬೀಜದ ಭೇದವನಱಿದು ಮತ್ತೆ ನೂಱೊಂದು ಆಱಱೊಳಗಡಗಿ ಆಱು ಐದಱಲ್ಲಿ ನಿಂದು . . . ಮೂಱು ಒಂದಱಲ್ಲಿ ನಿಂದು ಸಂದೇಹವಳಿಯಿತ್ತು (ಮೋಳಿವಾ. ೧೫೨–೫೭೩). [ಒಡ್$_1$ (< ಒಡೆ$_1$) + –ಗು]

**ಒಡಗು$_3$** (ನಾ). ಗದ್ದೆಯಲ್ಲಿ ನೀರುಹಾಯಿಸಲು ಮಾಡಿರುವ ಕಾಲುವೆ ; ಪಿಳ್ಳಕಾಲುವೆ : ತೋಟದ ಕಪ್ಪುಗಳಲ್ಲಿಯೂ ಗದ್ದೆಯ ಒಡಗುಗಳಲ್ಲಿಯೂ ನೀರು ಹಸುಳೆಯಂತೆ ಯಾವಾಗಲೂ ಗಳಹುತ್ತ ತೊದಲುತ್ತ ಪರಿದಾಡುತ್ತಿತ್ತು (ಕಾನೂರು. ೩೫೩). [?]

**ಒಡಗೂಟ** (ನಾ). ಬೆರೆಯುವಿಕೆ ; ಕೂಡುವಿಕೆ : ಒಡಲುಂ ಜೀವಮುಮೊಂದಿದಂತೆ ಮಲರುಂ ಕಂಪುಂ ಮಲರ್ದಂತೆ ಒಡಗೂಟಂ ಸಮಸಂದ ನಮ್ಮೊಳಗೆ (ಸೂಕ್ತಿಸು. ೮–೩೫೨) ; ತನುವಿಗೆ ವನಿತೆಯೊಡಗೂಟದಲಿ ಭೋಗಾಸಕತಿಯಾಗಿರಲು (ಅಮೃತ. ೧–೩೩).

[ಒಡ್$_2$ (< ಒಡಂ) + ಕೂಟ$_1$]

**ಒಡಗೂಡಿಸು** (ಕ್ರಿ). **೧.** ಈಡೇರಿಸು ; ಸಲ್ಲಿಸು : ಉಮೆಯ ಭಾವನೆಯನೊಡಗೂಡಿಸುವ ಸಕಲ ಸುರರ ಸಂಭಾವನೆಯ ಕೈಕೊಳ್ವ (ಜೈಮಿಭಾ. ೧–೨). **೨.** ಜೊತೆಯಲ್ಲಿ ಸೇರಿಸು : ಒಡೆದ ಕೆರೆಯ ಕಟ್ಟದಂತೆ ನನ್ನ ಪತಿಯಲ್ಲಿ ಒಡಗೂಡಿಸಬೇಕು ಎಂದು ಬಲುಬಗೆಯಲ್ಲಿ ಬೇಡಿಕೊಳ್ಳಲು (ಬತ್ತೀಸ. ೪೯). [ಒಡಗೂಡು + –ಇಸು$_3$]

**ಒಡಗೂಡು** (ಕ್ರಿ). **೧.** ಜೊತೆಯಲ್ಲಿ ಕೂಡು ; ಬೆರೆ ; ಸೇರು ; ಒಂದಾಗು : ತಡೆಯದೆ ತಗುಳ್ಚಿ ಮನದಳಿಪೊಡಗೂ[ಡಿದು]ದಂ ತಗುಳ್ಚುಗುಂ ಕಾಮಿಗಳಾ (ಕವಿರಾ. ೩–೨೦೨) ; ಕಾಗೆಯ ಮಱಿಯೆಂದಱಿಯದೆ ಕೋಗಿಲೆ ಕೈಗೊಂಡು ಕೂರ್ಮೆಯಿಂ ನಡಪಿದೊಡಂ ಕಾಗಾಯೆಂದುದು ಮತ್ತಂ ಕಾಗೆಗಳೊಡಗೂಡಿತೆಂಬವೋಲ್ (ಧರ್ಮಾಮೃ. ೨–೧೦೪) ; ಮಹಿಳೆಯೊಬ್ಬಳೊಳೈವರೊಡಗೂಡಿಹರು (ಕುವ್ಯಾಅ. ೮–೩೦) ; ಮುದುಕ ಜವ್ವನೆಯನೊಡಗೂಡೆ ಮುದಿಗೂಬೆಯೊದಱಿಕೊಂಡಂತೆ (ಸರ್ವಜ್ಞ. ೧೮೦೩) ; ಸುವರ್ಣ ರಜತ ಕಾಂತಿಗಳಿಂದೊಡಗೂಡಿ (ಜ್ಯೋತಿರ್ವಿ. ೧). **೨.** ಜೊತೆಗೆ ಸೇರಿಸು ; ಕೂಡಿಸು : ಒಡಗೂಡಿ ಬಿಲ್ವಮೂಲಂ ಕಡಲೆ ತೊವರಿ ಶುಂಠಿ ಎಂಬಿವಂ (ಕಲ್ಯಾಕಾ. ೩–೨೭) ; ತನ್ನ ನೆಳಲ(ನ್ನು) ತನ್ನ ಹಜ್ಜೆಯಲ್ಲಿ ಅಳೆದುಕೊಂಡು ಅದಷ್ಟನು ಯಿಮ್ಮಡಿಸಿ ಅದಱೊಳಗೆ ೧೧ ಒಡಗೂಡಿ ಮೇಲೆಯಿಟ್ಟು (ವ್ಯವಹಾ. ಅನುಬಂ. ೧–೧೧).

**ಒಡಗೂಡುವರು** = ಸಂಗಾತಿಗಳು ; ಜೊತೆಗಾರರು : ಕಡುಗಲಿ ಬಂಟ ಕತ್ತಲೆಗಂಜಿ ಒಡಗೂಡುವರು ಬೇಕೆಂದು ಅಡಿಗಡಿಗಂಜುವುದ ಕಂಡೆ (ಮೋಳಿವಾ. ೧೯೯–೭೪೨). [ಒಡ್$_2$ (< ಒಡಂ) + ಕೂಡು$_1$]

**ಒಡಗೊಳ್** 'ಒಡಂಗೊಳ್' ನೋ.

**ಒಡಗೊಳ್ಳು** 'ಒಡಂಗೊಳ್' ನೋ.

**ಒಡಚು** (ಕ್ರಿ). ಬಿಡಿಸು ; ಸ್ಪಷ್ಟಪಡಿಸು : '. . . ಒಂದಷ್ಟು ಒಡಚಿ ಹೇಳಬೇಕು' ಎಂದು, ಮೈಯೆಲ್ಲಾ ಕಿವಿಯಾಗಿ ಕುಳಿತಳು ರೇವಕ್ಕ (ಬೆಳುಮ. ೩೩). [ಒಡ$_1$ (< ಒಡೆ$_1$) + –ಚು]

**ಒಡತಣ** (ನಾ). **೧.** ಜೊತೆಯಲ್ಲಿ ಕೂಡಿರುವಿಕೆ ; ಸೇರಿರುವಿಕೆ ; ಸಹವಾಸ ; ಗೆಳೆತನ : ಮನವೇ ಸರ್ಪ ತನುವೇ ಹೇಳಿಗೆ ಹಾವಿನೊಡತಣ ಹುದುವಾಳಿಗೆ (ಬಸವ. ೧೬೦) ; ನಿನ್ನ ಶಿಶುವಿನೊಡತಣ ತೇಜಹುಮಱಹ ವಸುಧೆಯೊಳಗಣ ಪ್ರಮಥರು ಮೆಚ್ಚುವರೆ (ಅವಚಂ. ೨೨೬–೧೦೨೩) ; ಚದುರನಹೆ ನೀ ನಿನ್ನವೊಡತಣ ಕೂಟವರಿದೆನಗೆ (ಬಸಪು. ೪೦–೩೦) ; ಶಿವಶರಣರೊಡತಣ ವೈರ ನಿನಗೆಂತೆನೆ (ಮನೋವಿ. ೧–೯). **೨.** ಜೊತೆಗಾರ ; ಸಂಗಡಿಗ : ತನ್ನೊಡತಣ ಶಬರರಂ ಪಿಂದಿರಿಸಿಯೊರ್ವನೆ ಬರುತ (ಬಸಪು. ೧೮–೫) ; ಒಡತಣ ಬೇಂಟೆಕಾಱರುವೆರಸಿ ನಿಚ್ಚಂ ಬೊಮ್ಮಯಂ ಬೇಂಟೆಗಳನಾಡುತ್ತ (ಬಸಪು. ೩೪–೩೦).

[ಒಡ್$_2$ (< ಒಡಂ) + –ತಣ$_2$ ?]

**ಒಡತರು** (ಕ್ರಿ). ಜೊತೆಯಲ್ಲಿ ತೆಗೆದುಕೊಂಡುಬರು ; ಸಂಗಡತರು : ಬೊಕ್ಕಸವನ್ನು ಮಾತ್ರ – ಆತನ ವಶದಲ್ಲಿ ನಮಗೇ ಕಳಿಹಿ ಕುಡಬೇಕು ; ಸೀನೇ ಒಡತರುವ ವಿಷಮಿಕೆಗೆ ಉದ್ಯೋಗಿಸಬೇಡ (ಚಿಟ್ಟಅ. ೫೮–೨೩).

[ಒಡ್$_2$ (< ಒಡಂ) + ತರು$_1$ (< ತರ್$_1$)]

**ಒಡತರೆ** (ನಾ). ಒಂದು ಗಿಡದ ಹೆಸರು : ವಡುವಾರದ ಗಿಡ, ಎಡತರಿ, ವಾಡುವರಡು, ಒದವಿನ, ಒಡತರೆ (ಮೈಔಗಿ. ೩೦–೫೮೧).

[ಒಡ ? + ತರೆ ?]

**ಒಡತಿ** (ನಾ). **೧.** ಯಜಮಾನಿ; ಸ್ವಾಮಿನಿ: ಒಡತಿ ಗಡ ಬಹುಸಂಪದಕೆ ಬಾಯ್‌ಬಡಿಕೆ ಹೆಂಗುಸ ಕೊಲುವೆನೆನುತ (ತೊರರಾ. ೫–೩–೫೮) ; ಅಮ್ಮನೊಡತಿಯೈಸೆ ಸಿರಿಗೆ (ಭರಚ. ೧೯–೧೩೭) ; ತನ್ನ ತವರುಮನೆಗೆಲ್ಲ ತಾನೊಡತಿಯೆಂಬುನ್ನತಿವಡೆವುದಱಿಂದ (ಹದಿಬ. ೩–೩೫) ; "ಒಂದುಕ್ಷಣ ಪುರಸೊತ್ತಿಲ್ಲ ಒಡತಿ . . ." (ಪದ್ಮಸ. ೧೯). **೨.** ಹೆಂಡತಿ ; ಪತ್ನಿ (?) : ಬೂದಿಗನ ಕಾಳೆಗದೊಳ್ ಪೊಲುಕೇಶಿಯೊಡತಿ ಕುದುರೆಕಾಱನ ಕೊನ್ದು ಸತ್ತ (ಮೈಆರಿ. ೧೯೧೬,೪–೯ ; 900).

[< ಒಡೆಯ$_1$ + –ತಿ$_1$ (< –ಇತ್ತಿ)]

**ಒಡತಿರುಗು** 'ಒಡದಿರುಗು' ನೋ.

**ಒಡದಿ** (ನಾ). ಒಬ್ಬಾತನ ಹೆಸರು : ಕುಳತ್ತೂರ್ ಒಡದಿ ಕಿಱು ಕೆಟ್ಟಿಗ ರಾಳೆ (ಮೈಆರಿ. ೧೯೧೨, ೩-೩ ; ?). [?]

**ಒಡದಿರುಗು,** ಒಡತಿರುಗು (ಕ್ರಿ). ಜೊತೆಯಲ್ಲಿ ತಿರುಗು, —ಸುತ್ತು : ಸೂಜಿಗಲ್ಲಿದಿರ ಕಾರ್ಬೋನ್ನಂತೆ ತಿರುಗಿದೆಡೆಗಾ ಜನದೊಳೊಡದಿರುಗಿ ಬೆಂಡಾಗಿ ನಾರೀಸಮಾಜಮೆಸೆದುದು (ಚಿಬಪು. ೨೪-೨೧). **ಒಡತಿರುಗು :** ಎಲ್ಲವರ ನಲ್ವರಂ ಜ್ಯೋತಿಯೊಡತಿರುಗುವಾಕಾಶಮೇ (ಬದ್ಧಪ್ರ. ೫೭-೧೨೫೭). [ಒಡ$_2$ (< ಒಡಂ) + ತಿರುಗು$_1$]

**ಒಡದೊಱೆ** (ಕ್ರಿ). ಕೂಡಲೆ ತೊರೆ, —ಬಿಡು (?): ಒಡದೊಱೆ ದಾಳ್ದನುಳ್ಳೊಡಮೆಯಂ ಕವರ್ದಾದೆಡರಲ್ಲಿ ತಂಮ ನಾಣಡಿಗಿಡೆ ಕೊಟ್ಟ ಭಾಷೆಗೊಡವಲ್ಲಣಮಾಜದೆ ಪಿಂತೆ ಬಾಳ್ವ ನಿಗ್ಗಡಿ ಸಚಿವರ್ಕ್ಕಳಂ ನಗುವ ಪೋಲಿಸೆದಿರ್ಪ್ಪುದು ವೀರಶಾಸನಂ (ಎಕ. V, ಬೇಲೂರು. ೧೧೨-೧೦೦ ; 1220) ; "ಒಡದೊಱೆದು = ಸಂಗಡ ಸನ್ಯಾಸಗೈದು" (ಶಾಪಮಂ. ೧೨೫೫ ಕೋಶ). [ಒಡ$_2$ (< ಒಡಂ) + ತೊಱೆ$_1$]

**ಒಡನಡಪು** (ಕ್ರಿ). ಜೊತೆ ಜೊತೆಯಾಗಿ ನಡೆಯಿಸು ; ಸಮಾನವಾಗಿ ಸಲಹು, —ಸಾಕು : ಸಕ್ಕದಂ ಕನ್ನಡಮೆಂಬೆರಡುಂ ಕವಿತೆಯನಮ ಳ್ವೆತ್ತರಂತಿರೊಡನಡಪಿದಂ ಕುರುಳ್ಗಳ ಸವಣಂ (ಶಾಂತಿಪು. ೧-೧೦). [ಒಡ$_2$ (< ಒಡಂ) + ನಡಪು$_1$]

**ಒಡನಲಿ** (ಕ್ರಿ). ಜೊತೆಯಲ್ಲಿ ಸಂತೋಷಪಡು ; ಸಂಗಡ ನಲಿ: ಆವಳೊ ಬಳಿರಿಪುವೊಡನಲಿವ ಧನ್ಯೆಯೆಂದಳವೊರ್ವಳ್ (ಜಗನ್ನಿ. ೫-೨೬). [ಒಡ$_2$ (< ಒಡಂ) + ನಲಿ$_1$]

**ಒಡನಾಟ** (ನಾ). ಸಹವಾಸ ; ಜೊತೆಯಲ್ಲಿ ಇರುವಿಕೆ : ಪಾಪಾನು ರಾಗಮಂ ಪತ್ತುವಿಟ್ಟು ದುರ್ಜನರೊಡನಾಟಮಂ ಮಾಣ್ಬುದೆ ನ್ಯಾಜ (ಧರ್ಮಾಮೃ. ೨-೯೧) ; ಕೋಟಿ ಕದನಕೆ ಲೇಸು ಬೇಟೆಯರಸಿಗೆ ಲೇಸು ನೀಟಾದ ಹೆಣ್ಣು ತರಲೇಸು ಸುಜನರೊಡನಾಟವೇ ಲೇಸು (ಸರ್ವಜ್ಞ. ೭೨೦) ; ಎದೆಯ ಕೊರೆಯುವ ಕೀಟ, ಸಂದೇಹದೊಡನಾಟ (ಪಾಂಚಜ. ೪೭). [ಒಡನೆ + ಆಟ]

**ಒಡನಾಡಿ** (ನಾ). ಜೊತೆಯಲ್ಲಿ ಆಡುವ ವ್ಯಕ್ತಿ ; ಜೊತೆಗಾರ ಅಥವಾ ಜೊತೆಗಾತಿ : ಒಡನುಂಡೊಡನಿರ್ದೊಡವಳೆದೊಡನಾಡಿಗಳಾಗಿ (ಕಾದಂಪೂ. ೯೭೭) ; ಬಂಬಲ್ಗುರುಳೊಡನಾಡಿಗೆ ತುಂಬಿಗೆ ತಾನೆಂದು ಮುಳಿದು (ಅನಂಪು. ೭-೧೪) ; ನಿಮ್ಮ ಒಡನಾಡಿಯಾದ ಶಕುಂತಳೆಯು ಹೊರಟುಹೋದಳು (ಶಾಕುಂತ. ೫೯-೫). [ಒಡನಾಡು + —ಇ$_3$]

**ಒಡನಾಡಿಕೆ** (ನಾ). = ಒಡನಾಟ : ಇಪ್ಪತ್ತೈದು ಸಾವಿರದಾ ಇಪ್ಪತ್ತೈದುನೂರಾ ಇಪ್ಪತ್ತೈದು ರೂಪಾಯಿಗಳನ್ನು ಕೊಡುತ್ತೇನೆಂದರೂ ನಿನ್ನ ಒಡನಾಡಿಕೆಯು ಬೇಡ (ಕಗದ್ಯ. ೩೯). [ಒಡನಾಡು + —ಇಕೆ]

**ಒಡನಾಡಿಗ** (ನಾ). = ಒಡನಾಡಿ : ಅಂತುಭಯಮಾರ್ಗಂಗಳಭಿನಯಂಗಳಿಂ ಸಭೆಯಂ ಸಾಶ್ಚರ್ಯಕ್ಕೆ ಪಕ್ಕಾಗಿಸಿ ಸುರದಾರಕರನೆ ಪರಮೇಶ್ವರನೊಡನಾಡಿಗರ್ಮಾಡಿ ಸುರಪುರಂಧ್ರಿಯರನೆ ದಾದಿಯರ್ಮಾಡಿ (ಮಹಾನೀ. ೯-೧೪ ವ). [ಒಡನಾಡು + —ಇಗ]

**ಒಡನಾಡಿತನ** (ನಾ). = ಒಡನಾಟ : ದೇವ ಕರುಣಿಸು ಕರುಣಿಸೈ ಮೈದೋಱು ತನ್ನೊಡನಾಡಿತನದನುವ (ಕುವ್ಯಾಭೀ. ೩-೭೮) ; ಬಿಡು ನಿನ್ನ ಕೇಡು ನಿನ್ನಯ ತವರೂರ ಕೇಡೊಡನಾಡಿತನದ ಸೊಕ್ಕಿಂದ ನುಡಿವುತಿದ್ದಪೆ (ಭರಚ. ೯-೯೭). [ಒಡನಾಡಿ + —ತನ]

**ಒಡನಾಡಿಸು** (ಕ್ರಿ). ಜೊತೆಯಲ್ಲಿ ಆಡುವಂತೆಮಾಡು ; ಸಹವಾಸವನ್ನು ಒದಗಿಸು : ಎಚ್ಚನುಚ್ಚಳಿಸುವ ತುರಂಗವನೊಚ್ಚತವೆ ಕೊಂದನು ರಥೌಘವನಚ್ಚರಿಯರೊಡನಾಡಿಸಿದನುರವಣಿಪ ಕಾಲಾಳ (ಕುವ್ಯಾದ್ರೋ. ೧೨-೨೧). [ಒಡನಾಡು + —ಇಸು$_3$]

**ಒಡನಾಡು** (ಕ್ರಿ). ಜೊತೆಯಲ್ಲಿ ಆಡು ; ಸಹವಾಸಮಾಡು : ಒಡನಾಡಿಯುಮೊಡನೋದಿಯುಮೊಡವಳೆದುಂ (ಪಂಪಭಾ. ೨-೩೦) ; ಭಕ್ತರೊಡಗೂಡುವುದು ಭಕ್ತರೊಡನಾಡುವುದು (ಸರ್ವಜ್ಞ. ೨೮೧) ; ಒಳಗುವೇಳುವುದೊಡನಾಡುವುದೊಲಿದೊಲ್ಮೆಗೆಳಸುವುದೇಕವೆನಿಪುದು (ಹದಿಬ. ೩-೪೨).

ಒಡನಾಡಬಿಡು = ಜೊತೆಯಲ್ಲಿ ಬೆರೆಯಲು ಅವಕಾಶಕೊಡು : ಎಷ್ಟೆಷ್ಟು ಸಜ್ಜನರೊಡನಾಡಬಿಟ್ಟರು ಖಳನಿಗೆ ಸದ್ಬುದ್ಧಿ ಬರದು (ಇಂಚಾಪ. ೨೨೧-೯೪). [ಒಡನೆ + ಆಡು$_1$]

**ಒಡನಿಡು** (ಕ್ರಿ). ಜೊತೆಯಾಗಿಡು ; ಸೇರಿಸು : ಕಸ್ತೂರಿಯೊಡನಿಟ್ಟು ಕುಟ್ಟಿ ತೆಗೆದಿಟ್ಟರು ಲಶುನಕೆ ಸೌರಭ ಬರದು (ಇಂಚಾಪ. ೨೨೧-೯೪). [ಒಡನೆ + ಇಡು$_1$]

**ಒಡನಿರ್,** ಒಡನಿಱ್ (ಕ್ರಿ). ಜೊತೆಯಲ್ಲಿರು ; ಕೂಡಿರು : ತಾಮುಮಾಮುಮೊಡನಿರ್ಪ ಬರ್ಪುದೆಂಬೀಶಶಾಸನಮಂ ನೆತ್ತಿಯೊಳಾಂತು (ಆದಿಪು. ೧೪-೩೧) ; ಬಿಡದೆ ನಮ್ಮೊಡನಿಪ್ಪ ನಾವೀಯೆಡೆಯೊಳಿರೆ ನಂದನನು ಮತ್ತೊಂದೆಡೆಯೊಳಿರಂ (ಬಸಪು. ೪೮-೨೫). △ **ಒಡನಿಱ್ :** ಪೆರ್ಮಾಡಿನಡಿಗಾಮುಣ್ಡನ ಮಗಂ ರಾಮನಲ್ಲಿ ಸತ್ತೊಡೆ ಪೆರ್ಮಾಡಿನಡಿಯು ಮೆಱೆಯಪ್ಪನುಮೊಡನಿಱ್ದು (ಎಕ. IV, ಹೆಗ್ಗಡ. ೧೦೩-೧೦ ; 910). [ಒಡನೆ + ಇರ್$_1$]

△ **ಒಡನಿಱ್** 'ಒಡನಿರ್' ನೋ.

**ಒಡನುಡಿ$_1$** (ಕ್ರಿ). ಜೊತೆಯಲ್ಲಿ ಮಾತನಾಡು ; ಸಂಭಾಷಿಸು : ನಿಸ್ತ್ರಪಾಗ್ರೇಸರೆಯೊಡನುಡಿವಲ್ಲಿಂದಮೇಂ ಕಷ್ಟಮುಂಟೇ (ಕಾದಂಪೂ. ೯೩೩) ; ಬಡವಂ ಗುಣಿಯಾದೊಡಮುವನೊಡನುಡಿಯಂ (ಸಮುಪ. ೪-೫೯). [ಒಡ$_2$ (< ಒಡಂ) + ನುಡಿ$_1$]

**ಒಡನುಡಿ$_2$** (ಕ್ರಿ). ೧. ಸ್ಪಷ್ಟವಾಗಿ ಹೇಳು ; ಬಿಡಿಸಿ ಹೇಳು : ನಿನ್ನ ಮನಸ್ಸೇನು ? ಒಡನುಡಿ, ಸಂಕೋಚ ಬೇಡ (ರೂಢಿ). ೨. ಸಾರು ; ಘೋಷಿಸು : ತುಂಗಭದ್ರೆ . . . ಅಂದಿನ ಭಕ್ತಿ, ಪ್ರೇಮ, ತ್ಯಾಗಗಳನ್ನು ಒಡನುಡಿಯುತ್ತ ಇಂದಿಗೂ ಸಾಗಿಹಳು (ಕುಂಕುಮ. ೪೭). [ಒಡ$_1$ (< ಒಡೆ$_1$) + ನುಡಿ$_1$]

**ಒಡನುಡಿ$_3$** (ನಾ). ಸ್ಪಷ್ಟವಾದ ಮಾತು ; ಬಿಚ್ಚುನುಡಿ : ಅರವಿಂದರ ಮಕರಂದವ ಕುಡಿವಾ ನುಡಿಬೇಕು ಒಡನುಡಿಬೇಕು (ಹೃದಸ. ೩೩-೧೬). [< ಒಡನುಡಿ$_2$]

**ಒಡನೆ** (ಅ). ೧. ಜೊತೆಯಲ್ಲಿ ; ಸಂಗಡ ; ಒಟ್ಟಿಗೆ : "ಸಹಾರ್ಥಮೊಡನೆನೆ" (ಶಮುದ. ೩೦೯) ; ಕುಡಿಯೆ ಅಱೊಡನೂರೊರೊಳ್ (ಎಕ. I, ೧-೧೯ ; 466) ; ನುಡಿವಲ್ಮೆಯಲ್ಲದೇಂ ಕಲ್ತೊಡನೋದುವುವಲ್ತೆ ಗಿಳಿಗಳುಂ ಪುರುಳಿಗಳುಂ (ಕವಿರಾ. ೧-೧೦) ; ಒಡನೆ ದರಿದ್ರರೆಲ್ಲಮಭಿಮಾನಿಗಳಪ್ಪೊಡಂ (ಕಾವ್ಯಸಾ. ೪೨೩ ಶೂದ್ರಕ) ; ಒಡನೆ ಹುಟ್ಟಿದುದಲ್ಲ ಒಡನೆ ಬೆಳೆದುದಲ್ಲ (ಬಸವ. ೭೭೫) ; ಘನಸಂಗರದೊಳಗೆ ನನ್ನೊಡನೆ ತುಡುಕಿ ದಡಜಱಿಯಬಹುದೆಂದ (ಕುವ್ಯಾದ್ರೋ. ೪-೪೩). ೨. ಕೂಡಲೆ ; ತಕ್ಷಣ ; ಬೇಗನೆ : ಅಮಿತತೇಜನುಂ ಶ್ರೀವಿಜಯನುಮಂತೆ ಬೞಿಯನೆ ತಗುಳ್ದು ಮಾನಸ್ತಂಭಮಂ ಕಾಣಲೊಡನೆ ಪರಸ್ಪರ ವಿರೋಧಮಂ ಪತ್ತುವಿಟ್ಟು (ಚಾವುಂಪು. ೫೭-೯) ; ಪಟ್ಟೆರ್ದ ನಾಯ ನಡುವಂ ಮೆಟ್ಟೆ ಕನಲ್ದೊಡನೆ ಮೇಲೆ ಪಾಯ್ದದು ತಿನೆ (ಧರ್ಮಾಮೃ. ೨-೫೬) ; ಜಕ್ಕಿಯ ಕೊಡಹಿ ಹಾಱಿತು ಪೊಡನೆ ಮರಳಿತು ಧರೆಗೆ (ನಳಚ. ೨-೨೧).

ಒಡನೊಡನೆ (ದ್ವಿರುಕ್ತಿ) : ತನ್ನ ಪವಡಿಸುವ ಮಾಡಕ್ಕೊಡನೊಡನೋಲಗಿಸುತ್ತುಂ ಬಂದ ಪಂಡಿತರ್ಕಳುಮನುಚಿತ ಪ್ರತಿಪತ್ತಿಗಳಿಂ ವಿಸರ್ಜಿಸಿ (ಪಂಪಭಾ. ೪-೬೯ ವ).

[ದೇ. ॥ ತಮಿ. ಮಲ. ಉಡನ್, ಉಡನೇ]

**ಒಡನೆಗೆ** (ಕ್ರಿ). ಕೂಡಲೆ ಚಿಮ್ಮು; ಒಡನೆ ಹಾರು : ಬಿಗಿವರು ಬಿನ್ನಣಿಸುವರು ತೆಗೆವರು ಕೆಳಗುಮೇಲಾಗುವರೊಡನೊಡನೆಗೆವರು ನಿಂದು ಕಾದುವರು (ಮೋಹತ. ೧೨–೮೬).

[ಒಡ$_2$ (< ಒಡಂ) + ನೆಗೆ$_1$]

**ಒಡನೆರೆ** (ಕ್ರಿ). ಜೊತೆಯಲ್ಲಿ ಕೂಡು, —ಸೇರು : ದಿವ್ಯಾಪ್ಸರಸೆಯರೊಡನೆರ[ರೆ]ದು ಸಮ್ಪು ಸನ್ತೋಸದಿಟ್ಟಂ (ಇಅ. XX, ೭೦–೧೬; 9ನೆಯ ಶತ). [ಒಡ$_2$ (< ಒಡಂ) + ನೆರೆ$_1$]

**ಒಡನೋದಿ** (ನಾ). ಜೊತೆಯಲ್ಲಿ ಓದುವವನು; ಸಹಪಾಠಿ : ಒಬ್ಬರ ಹೃದಯವನ್ನೊಬ್ಬರು ಚೆನ್ನಾಗಿ ಅರಿತುಕೊಂಡಿರುವ ಈ ಮಕ್ಕಳು ಒಡನೋದಿಗಳು ಒಡನಾಡಿಗಳು ಮಾತ್ರ ಅಲ್ಲ (ಶಾಂತಲಾ. ೬೧).

[ಒಡನೋದು + –ಇ$_3$]

**ಒಡನೋದು** (ಕ್ರಿ). ಜೊತೆಯಲ್ಲಿ ಓದು, —ಅಭ್ಯಾಸಮಾಡು : ಒಡನಾಡಿಯುಮೊಡನೋದಿಯುಮೊಡವಳೆದುಂ (ಪಂಪಭಾ. ೨–೩೦).

[ಒಡನೆ + ಓದು$_1$]

**ಒಡಪಡು** (ಕ್ರಿ). ಜೊತೆಯಲ್ಲಿ ಮಲಗು: ನಲಿದೊರೆವುದೊಡನಿರ್ಪುದಲಸದೊಡಪಡುವುದೊಡನಲಿದುಂಬುದೆಂಬ ಜಾಬಾಲಶ್ರುತಿಯುಂ (ಸಾನಂಚ. ೩–೮೫). [ಒಡ$_2$ (< ಒಡಂ) + ಪಡು$_1$]

**ಒಡಪಾಟ** (ನಾ). ಒಡಪಿನ ಆಟ; ಒಗಟೆಯನ್ನು ಇಕ್ಕುವ ಹಾಗೂ ಬಿಡಿಸುವ ವಿನೋದ : ವಧೂವರರ ಒಡಪಾಟ ಆಡಿಸುವವಳೂ ಅವಳೆ (ಕನ್ನಜಾ. ೬೯). [ಒಡಪು$_1$ + ಆಟ]

**ಒಡಪು$_1$** (ನಾ). **೧.** ಒಡೆದಿರುವಿಕೆ; ಒಡಕು : ಪುರದ ಕೆಱೆಯ ಒಡಪುಗಳನೂ ಕಟ್ಟಿ ರೂಪುಮಾಡಲಾಗಿ (ಎಕ. IX (S), ಹೊಸಕೋ. ೧೮೪–೧೮; 1433). **೨.** ಒಡೆದಿರುವ ಹಾಲಿನ ಗಟ್ಟಿಭಾಗ : ವಡೆಯ ಬೇಯಿಸಿಕೊಂಡು ಚೆನ್ನಾಗಿ ನುಱುಕಿಸಿದ ಪುಡಿಯುಮಂ ತುಪ್ಪದೊಳು ಹುರಿದು ಹಾಲೊಡಪಿನಿಂದೊಡವೆರಸಿ ನೀರುಳ್ಳಿ ಶುಂಠಿಯುಂ ಹಾಕಿ ಹೆಱೆದುಪ್ಪದೊಳು ಕಲಸಿಕೊಂಡು (ಸೂಪಶಾ. ೧–೬೭). **೩.** ಒಡೆದ ತುಂಡು; ಖಂಡ (?) : ಮಿಕ್ಕಾದ (ಮೀರಿದ) ಅವಧೂತರುಗಳೆಲ್ಲಾ ಎನ್ನ ಉಳಿಯೊಳಗಣ ಒಡಪು (ಸರ್ವವ. ೧೨೧–೬೨೩). **೪.** (ಉಕ) ಒಗಟೆ; ಸಮಸ್ಯೆ; ಪ್ರಹೇಳಿಕೆ : ಈ ಒಡಪಿನ ಅಂದವನ್ನು ಸೂಕ್ಷ್ಮವಾಗಿ ವಿಶಾಲವಾಗಿ ತಿಳಿದು ಬಿಡಿಸಬೇಕಾಗಿದೆ (ನವ್ಯಕಾ. ೧೬).

ಒಡಪಿಡು = ಒಗಟು ಹಾಕು : ಬಂದ ಐದೇರೆಲ್ಲ ಚಂದದಾರುತಿ ಬೆಳಗೆ ಒಡಪಿಟ್ಟು ಮಂಗಳ ಪಾಡ್ಯಾರೆ (ಲೋಕಗೀ. ೮೫). ಒಡಪುಹಾಕು= ಒಡಪಿಡು : ನಾಚಿದಂತೆ ನಟಿಸುತ್ತ 'ಒಡಪುಹಾಕಿ' ಪತಿಯ ಹೆಸರು ಹೇಳಿದಳು (ಕರಿಹಾ. ೧೪).

[ಒಡ$_1$ (< ಒಡೆ$_1$) + –ಪು. / ತಮಿ. ಉಡೈಪ್ಪು]

**ಒಡಪು$_2$** (ನಾ). ಮೀಸಲಾದುದು; ಒಡವೆ (?) : ಇನ್ನು ನಿನ್ನ ದೇಹ ಮುಡಿಪು ಧರ್ಮಕೆ, ಸಂಘಕ್ಕೆ ಒಡಪು (ಕ್ರೌಂಚಧ್ವ. ೭೮). [?]

**ಒಡಪುಟ್ಟು** 'ಒಡವುಟ್ಟು$_1$' ನೋ.

**ಒಡಬಂದಿ** (ನಾ). ಕೂಡಿ ಬಂಧಿಸಲ್ಪಟ್ಟ ವ್ಯಕ್ತಿ; ಜೊತೆಯ ಸೆರೆಯಾಳು (?) : ಹರಿದು ಹತ್ತಿ ಮುತ್ತಿ ಹಿಡಿದಹೆನೆಂದು ಜಾಱಿ ಉರುಳಿ ಬಿದ್ದರು ಅನಂತರು ಹಿಡಿದವರೆಲ್ಲ ಹೆಣನುಂಡು ಹೋದರು ನಾ ಹಿಡಿದ ಬಂದಿ [ಪಾಠಾಂ. ಬಂಡಿ]ಒಡಬಂದಿಯಾಯಿತ್ತು (ಅವಚಂ. ೧೦೫–೪೭೬; ಪ್ರಭುವ. ೨೯–೧೬೬ ನೋ); ನುಡಿಗೆಡೆಗೊಡದ ಘನವ ಹಿಡಿದು ಒಡಬಂದಿಯಾದಳು ಎಡೆಯಿಲ್ಲದ ಪರಿಪೂರ್ಣದೊಳಗೆ ನಡೆನುಡಿಗೆಟ್ಟಳು (ಅವಚಂ. ೨೪೩–೧೧೦೮). [ಒಡ$_2$ (< ಒಡಂ) + ಬಂದಿ$_1$]

**ಒಡಬಡಿಕೆ** 'ಒಡಂಬಡಿಕೆ' ನೋ.

**ಒಡಬಡಿಸು** 'ಒಡಂಬಡಿಸು' ನೋ.

**ಒಡಬಡು** 'ಒಡಂಬಡು$_1$' ನೋ.

**ಒಡಬಾಳು$_1$** 'ಒಡವಾೞ್' ನೋ.

**ಒಡಬಾಳು$_2$** (ನಾ). ಕೂಡಿ ಬಾಳುವಿಕೆ; ಸಹಜೀವನ : ಒಡನೆ ಬೆಳೆದು ಒಡಬಾಳು ನಡೆಸುತ್ತಿರುವ ಪಂಥ (ತುಂಗಭ. ೭).

[ಒಡ$_2$ (< ಒಡಂ) + ಬಾಳು$_2$ (< ಬಾೞ್$_2$)]

**ಒಡಬಾಳು$_3$** (ನಾ). ಒಡಕು ಬಾಳು; ವ್ಯರ್ಥವಾದ ಬಾಳು, —ಜೀವನ : ಏನೂ ತಿಳಿಯದ ಒಂದು ದಿಕ್ಕಿಲ್ಲದ ಜೀವದ ಮೇಲೆ ಈ ಒಡಬಾಳಿನ ಭಂಗ ಹೊರಿಸಬೇಕೆ? (ಸುಖವಿ. ೫೨); ಈ ಒಡಬಾಳು ಸಾಕಾಗಿ ಹೋಗಿದೆ (ಪುನರು. ೨೭೮).

[ಒಡ$_1$ (< ಒಡೆ$_1$) + ಬಾಳು$_2$ (< ಬಾೞ್$_2$)]

**ಒಡಬೆಸು** (ಕ್ರಿ). ಒಟ್ಟಾಗಿ ಕೂಡಿಸು; ಬೆಸೆದು ಕೂಡಿಸು : ಕುಲದ ಮಲಿನವ ತೊಳೆದು ಕೌರವಕುಲದೊಳೊಡಬೆಚ್ಚವನಿಪಾಲಕತಿಲಕ ಕುರುಪತಿಗಾಪ್ತರಿಲ್ಲೆಂದಳಲಿದನು ಕರ್ಣ (ಕುವ್ಯಾಕ. ೨೭–೬).

[ಒಡ$_2$ (< ಒಡಂ) + ಬೆಸು (< ಬೆಸೆ$_1$)]

**ಒಡಮಡಕೆ** (ನಾ). ಒಡೆದುಹೋದ ಮಡಕೆ : ಮರ್ಮವಿಲ್ಲದ ಮಾತು ಒಡಮಡಕೆ [ಪಾಠಾಂ. ಒಡಕುಮಡಕೆ, ಒಡಮೊಗೆಯ]ತೂತು (ಕನಕ. ೩೩–೨). [ಒಡ$_1$ (< ಒಡೆ$_1$) + ಮಡಕೆ]

**ಒಡಮಡಿ** (ಕ್ರಿ). ಜೊತೆಯಾಗಿ ಸಾಯು : ಕಡುಗಡುಪಿನಂಕದಾಂತೊಡಮಡಿದುವು ಗಿರಿವರದೊಳುಗ್ರಕರಿಯುಂ ಹರಿಯುಂ (ಶಾಂತಿಪು. ೨–೧೦೭). [ಒಡ$_2$ (< ಒಡಂ) + ಮಡಿ$_1$]

**ಒಡಮನೆ** (ನಾ). ಕೂಡಿ ಇರುವ ಮನೆ; ಸಹವಾಸದ ಮನೆ (?) : ಇಂಬಪ್ಪ ಶರಧಿಯ ಸಂಭ್ರಮದ ಮೊರಹಿನಲಿ ಶಂಭುವೆ ನಿನ್ನನೊಡಗೂಡಿದೆನಯ್ಯಾ ಬೇಱೊಂದ ಕೇಳೆ ಬೇಱೊಂದ ಕಾಣೆ ಮಹಾ ಉಲುಹೆ ಒಡಮನೆಯಾದೆನಯ್ಯಾ (ಸಿದ್ಧವ. ಕ. ೧೯೬). [?]

**ಒಡಮರಸ** (ನಾ). ಒಬ್ಬಾತನ ಹೆಸರು : ಆತನ ತಂಮ ಮಂನೆಯ ಒಡಮರಸಂ ತಂನ ನಡಪಿದ ಎಳೆಯರು (ಎಕ. VII, ಶಿವಮೊ. ೨೩–೮; 1115). [ಒಡಮ$_0$ + ಅರಸ$_1$]

**ಒಡಮರುಕ** 'ಒಡಮಱುಕ' ನೋ.

**ಒಡಮಱುಕ, ಒಡಮರುಕ** (ನಾ). ಜೊತೆಯವರಿಗಾಗಿ ಪಡುವ ಅನುಕಂಪೆ, —ಸಂತಾಪ : ಕೇಳ್ವರ ಕಣ್ಗಳೊಳ್ ಒಡಮಱುಕದಶ್ರುಗಳ್ (ಬದ್ಧಪ್ರ. ೩೪–೭೨೦). **ಒಡಮರುಕ** : "ಇತರರ ದುಃಖಕ್ಕೆ ಸಮಾಧಾನ ಹೇಳುವುದು; ಸಂತಾಪ" (Condolence. ಇಂಕನಿ) : ಒಡಮರುಕದ ಒಳಗುದಿಯೇಳುವುದು (ಬದ್ಧಪ್ರ. XXX ಪೀಠಿಕೆ).

[ಒಡ$_2$ (< ಒಡಂ) + ಮಱುಕ]

**ಒಡಮಱುಗು** (ಕ್ರಿ). (ಜೊತೆಗೆ) ಅನುಕಂಪಿಸು; ಸಂತಾಪಪಡು : ನಿನ್ನಯ ಮಱುಕಕೆ ಒಡಮಱುಗಿದೆ ನಾನ್ (ಬದ್ಧಪ್ರ. ೧೭–೩೩೯).

[ಒಡ$_2$ (< ಒಡಂ) + ಮಱುಗು]

**ಒಡಮು** 'ಒಡಂಬು' ನೋ.

**ಒಡಮುರಿ$_1$** (ಕ್ರಿ). ಕೂಡಲೇ ತಿರುಗು : ದೇವ ದಿಟ ನೀನೊಡಮುರಿದು ನೋಡಿದೊಡ ನಾ ಥಂಗೊಡೆತನವನಿದನಾರು ಕೊಟ್ಟರು (ನಿಭಾಗ. ೧೦–೭೧–೫೨); ಕೆಡೆದನು ಖಗರಾಜ ನಂದೀಶ ನೆಗ್ಗಿದನೊಡೆ[ಡ]ಮುರಿದೆದ್ದರಾಕ್ಷಣದಿ (ಮೋಹತ. ೩೮–೩೭); ಸೆಱಗುವಿಡಿಯೆ ಸಾರ್ಸಾರೆಂಬ ಕರವನು ಭರದೆ ತುಡುಕಲೊಡೆ[ಡ]ಮುರಿವ (ಕಂನವಿ. ೬–೧೭೫).

[ಒಡ$_2$ (< ಒಡಂ) + ಮುರಿ$_1$]

**ಒಡಮುರಿ$_2$** 'ಒಡೆಮುಱಿ' ನೋ.

**ಒಡಮುರಿಕೆ** (ನಾ). (ಉಕ) ಹಸಿಮೆಣಸಿನ ಕಾಯಿ, ಕಡಲೆಬೇಳೆ ಮೊದಲಾದುವನ್ನು ಕೂಡಿಸಿ, ಒಡಒಡಕಲಾಗಿ ರುಬ್ಬಿದ ಒಂದು ಬಗೆಯ ಪಚ್ಚಡಿ. [ಒಡ$_1$ (< ಒಡೆ$_1$) + ಮುರಿಕ]

**ಒಡಮೂಡಿಸು** (ಕ್ರಿ). ೧. ಸ್ಪಷ್ಟವಾಗಿ ಬಿಂಬಿಸು, —ರೂಪಿಸು; ಪ್ರಕಟಗೊಳಿಸು: ದೇವರಿದ್ದರೇನು? ದೇವತೆಗಳಿದ್ದರೇನು? ಮನೋಭಾವನೆಗಳ ತಾಕಲಾಟದ ವ್ಯಾಪಾರಗಳನ್ನು ಅವರಲ್ಲಿ ಒಡಮೂಡಿಸಿ ಮಾನವರಂತೆ ಮಾತಾಡಲು ಹಚ್ಚಿದೆ (ಕನ್ನಜಾ. ೧೭೪); ಬಟ್ಟೆಯ ಮೇಲೆ ಅಳತೆಕೋಲಿನ ಆಧಾರದಿಂದ ಪ್ರತಿರೂಪವನ್ನು ಒಡಮೂಡಿಸಿ (ರಂಗವ. ೧೦೬). [ಒಡಮೂಡು + -ಇಸು$_3$]

**ಒಡಮೂಡು** (ಕ್ರಿ). ಆವಿರ್ಭವಿಸು; ಪ್ರಕಟವಾಗು; ಕಾಣಿಸಿಕೊಳ್ಳು: ನೆತ್ತರೊಡ ಮೂಡಿದೊಡವು ವನೊಂದು ಮಾತನೆತ್ತಿಲ್ಲ (ಗೊಲ್ಲೊಧಾ. ೯–೨೫೦); ಆಗ ಅವನಲ್ಲಿ ವಿರಕ್ತಿ ಒಡಮೂಡಿ ಮನದೊಳಗೇ ನಾಚಿದ (ಬದುರಿ. ೧೯); ಹಿಂದಿನ ಸಂತೋಷಸಮಯದ ದಿನಗಳು ಅವರ ಹೃದಯದಲ್ಲಿ ಒಡಮೂಡಿದಂತೆ ತೋರಿತು (ನವನೀ. ೭೮); ಕಡೆದುಮಾಡಿದ್ದೊ ಒಡಮೂಡಿದ್ದೊ (ಗಾದೆ). [ಒಡ$_1$ (< ಒಡೆ$_1$) + ಮೂಡು$_1$]

**ಒಡಮೆ, ಒಡವೆ, ಒಡೆಮೆ** (ನಾ). (ಹೊಂದಿರುವ) ವಸ್ತು; ಆಸ್ತಿ; ಆಭರಣ; ದ್ರವ್ಯ; ಐಶ್ವರ್ಯ: ಚಿಂತಿಪಳ್ ಕಳವಳಿಪಳ್ ಕರಂ ಕಳಿಯೆ ನಂಬಿಪಳಿಂಬಳಿಪಳ್ ಕಡಂಗಿ ಕಾಲ್ಗಳೊಳೆ ಪೊರಳ್ವಳುಳ್ಳೊಡಮೆಯಂ ಕೊಳಲೆಂದವಳೊರ್ವಳೊರ್ವನಂ (ಕಾವ್ಯಸಾ. ೯೯೩ ಶೂದ್ರಕ); ಪೆಱರೊಡಮೆಯನುಱೆ ಸೆಱೆವಿಡಿದಿರ್ಪರಿನ್ನರುರ್ವಿಯೊಳೊಳರೇ (ಪಂಪಭಾ. ೮–೧೮); ಕಿಡುವೊಡಮೆಯನೊನ್ದನೆ ಕೊಟ್ಟಡೆಮುಡಗದಿಹಂ ಪರಂಗಳೆಂಬೆರಡುಮನಂಗಡಿಯೊಳ್ಕೊಡಿದೊಡಮೆಯನಡಿಗಡಿಗಾರ್ಜ್ಜಿಪರ್ (ಎಕ. VII, ಶಿಕಾರಿ. ೧೦೦–೪೧; 28); ಆಯ್ಯೊ! ದೇವರ್ಕ್ಕಳೊಸೆದಿತ್ತು ನಟ್ಟಪರ್ ಮಾನವರೊಳಜೀವನ್; ಎಮ್ಮನಿತುಮೊಡಮೆಯೊಳ್ ಮಿಗಿಲ ಪೇರೊಡಮೆಯದು (ಅಂತಿಗೊ. ೩೧–೬೩೮). **ಒಡವೆ**: ಮಗಳನೀವೆನ ಪ್ಪೊಡೆ ಕೊಡಗೂಸೆಂಬುದು ಪೆಱರೊಡವೆ (ಪಂಪಭಾ. ೩–೨೫ ವ); ಒಡವೆಯನೊಡಲಂ ದೇವಗ್ಗೊಡನೊಡನೆ ನಿವೇದಿಸುತ್ತು ಶಿವಸನ್ನಿಧಿಯಂ ಪಡೆದಂ (ಎಇ. XIV, ೨೭೨–೩೫; 1173); ಆವೊಬ್ಬರೊಡವೆಗಳುಪುವರಲ್ಲ (ತಿರುರ. ದೇ. ೧೧–೧೩); ಮಡದಿಮಕ್ಕಳಿಗೆ ಒಡವೆಯನೀಯದಗೆ ಕಡುದಾರಿದ್ರ್ಯವೆ ಸಾಕ್ಷಿ (ಪುರಂದ. ೨–೧೬–೨). **ಒಡೆಮೆ**: ಅರ್ಗಂ ಸಲ್ಲದೀ ಬಸದಿಯೊಡೆಮೆ (ಸೌಇಇ. XI–i, ೫೧–೬೬; 1007).

ಒಡವೆವಸ್ತು = ಆಭರಣ ಮೊದಲಾದ ವಸ್ತು: ಆಕೆ ತನ್ನ ಒಡವೆ ವಸ್ತುಗಳನ್ನೆಲ್ಲಾ ಮಾರಿ . . . ಅಪೀಲು ಹಾಕಿದಳು (ಬಂಕಿಮು. ೧೩೨).

[ದೇ. ‖ ತಮಿ. ಉಡ್ಮೈ, ಉಡ್ಮೈಮೈ; ಮಲ. ಉಡಮ; ತುಳು. ಒಡವೆ; ತೆಲು. ಒಡಮಿ, ಒಡಮ]

**ಒಡಮೆವಡೆ** (ಕ್ರಿ). ಐಶ್ವರ್ಯವನ್ನು ಹೊಂದು: ಪನ್ನೆರಡು ವರ್ಷಮನವಧಿಮಾಡಿ ಒಡಮೆವಡೆಯಲ್ ಪೋಗಿ ಅವಧಿಗೆ ಬಾರದಿರ್ದೊಡೆ (ಚಾವುಂಪು. ೧೮–೮). [ಒಡಮೆ + ಪಡೆ$_1$]

**ಒಡರ್, ಒಡರು, ಒಡಱು** (ಕ್ರಿ). ೧. ಮಾಡು; ರಚಿಸು: ಮೃಡಶರಣನತಿ ಲಿಂಗಪೂಜೆಯನೊಡರಿ ಸಂತೋಷದೊಳು ಭಕ್ತರ ಗಡಣದಿಂದೈತಂದು (ಶಂಕದಾ. ೫–೪೫). ೨. ನೀಗು; ಸಾಧ್ಯವಾಗು: ಸನ್ನಸಾಚಿಯು ಮಿತ್ರನಿಲ್ಲಿಲ್ಲ ತನಗಧ್ವರ ವ್ಯಸನಮೆಂತೊಡರ್ವುದು ಪೇಳಿಂ (ಜೈಮಿಭಾ. ೨–೩೧). ೩. ಒದಗು; ಉಂಟಾಗು: ಗುರುದ್ರೋಹಕೆಂತೊಡರ್ದುದು ನಿನ್ನ ಮನಂ (ಜೈಮಿಭಾ. ೧೭–೩೨); “ . . . ಲೋಗರ್ಗೆ ಕಲ್ಯಾಣಮುಮೊಡರ್ಗುಂ . . . .” (ರಾಮಾಶ್ವ. ೧೫–೧). ೪. (?): ಎಮ್ಮ ಮುದ್ದುಗುವರನಂ ಕಟ್ಟಿದಿರೊಳ್ ಕಂಡು ಸೊಂಡಿಲೊಂದು ಚೆಲ್ವಿನ ಪಲ್ಲಮುಱೆ ಬಗೆಯೊಳೊಡರ್ವಂತು ಪೊತ್ತ ನಾಲ್ದೋಳ ಶೋಭೆಯ ಕಂದನೊಂದಿರಂ ಮನಂಬುಗಲೊಡಂ (ರಾಮಾಶ್ವ. ೬೭–೧೨).

**ಒಡರು**: ೫. ತೊಡಗು; ಕೈಕೊಳ್ಳು; ಆರಂಭಿಸು: ಪ್ರಣಯಕಲಹವನೊಡರಿ [ಪಾಠಾಂ. ಒಡರ್ಚಿ] . . . ಮುನಿದೊಡೆ ಸೋಲ್ತು (ಬಸಪು. ೪೨–೧೪). **ಒಡಱು**: ೫. ಎನ್ನೊಡಱುವರೆನ್ನು ಪಾಯಿಸುವರೆನ್ನು ತಱುಂಬುವರೆನ್ನು ನಿಲ್ವರೆನ್ನೊಡಱುವರೆನ್ನು ಲಕ್ಷ್ಮಣನೊಳಾಸ್ತು ಬರ್ದುಂಕುವರನ್ಯಭೂಭುಜರ್ (ಎಇ. XV, ೩೪೦–೧೨; 1071). [?]

**ಒಡರಿಚು** ‘ಒಡರ್ಚು’ ನೋ.

**ಒಡರಿಸು** (ಕ್ರಿ). ೧. ಮಾಡು; ರಚಿಸು; ನಿರ್ಮಿಸು; ನೆರವೇರಿಸು: ತಡೆಯದೆ ಮಹಾಧ್ವ ಕೃತಿಗಳನೊಡರಿಸಲಾರ್ಪಾತನೆಲ್ಲರಿಂದಂ ಬಲ್ಲಂ (ಕವಿರಾ. ೧–೧೬); ಅಂದು ವೃಷಭಾದಿ ಜಿನರ್ಗೆ ಪುರಂದರನೊಡರಿಸಿದ ಸೂಚೀಯಾನಕ್ರಮದಿಂ (ಅನಂಪು. ೫–೫೩); ಒಡರಿಸಿದನಭಿನವನಿಘಂಟನಭಿನವ ಮಂಗಂ (ಮಂಗರಾ. ೨–೬); ಕಡುರಯ್ಯಮಾಗಿದೆ ಭಾವಚಿತ್ರವನಿದನೊಡರಿಸಿದನ ಜಾಣ್ಮೆಯೆಂತೊ (ಕುರಾಸಾಂ. ೨೬–೩೧). ೨. ಪ್ರಯತ್ನಿಸು; ಹೆಣಗು: ಪಿಡಿವಾರ್ಪ ಭರದಿನೆತ್ತಲ್ಕೊಡರಿಸಿದೊಡೆ ನೆಲದಿನಣಮೆ ತಳರದೆ ಬಿಲ್ ನಿಲ್ತೊಡೆ (ಪಂಪಭಾ. ೩–೫೯); ಧಮ್ಮಂಗಳಿಗೊಡರಿಸುವವರೆಲ್ಲವೊಡೆಯರ್ (ಇಅ. XVIII, ೧೪೯–೧೬೩; 999); ಒಡನೇಱೆ ಸವತಿ ನೂಂಕಲ್ಕೊಡರಿಸೆ ತೊಱೆಯೊಳಗೆ ಪಱುಗಲತ್ತಿತ್ತಲಣಂ ಮಿಡುಕದೆ ತಿರಿಯುತ್ತಿರೆ (ಸೌಇಇ. XI–i, ೫೨–೨೪; 1008); ಕಾದಲೆಂದೊಡರಿಸು ವಾತನೇಂ ಭುಜಗಮರ್ದ್ದನನೇ ಕಲಿಗೊನಭೂಪನೊಳ್ (ಎಕ. VIII, ಸಾಗರ. ೧೯೯–೩೭; 1042). ೩. ತೊಡಗು; ಆರಂಭಿಸು; ಉಪಕ್ರಮಿಸು: ವಾರಿಯನಾ ನೃಪತಿ ಕುಡಿಯಲೊಡರಿಸಿದಾಗಳ್ (ಪಂಪಭಾ. ೮–೪೬); ದಿವಿಜರ್ ನಡುಗಲ್ಕೊಡರಿಸುವಿನಂ ಜಟಾಸುರ ಹಿಡಿಂಬ ಬಕವೈರಿ ಸಿಂಹನಾದಂಗೆಯ್ದಂ (ಗದಾಯು. ೭–೧೬); ನಡೆದುದೆ ಮಾರ್ಗಂ ಪದವಿಡಲೊಡರಿಸಿದುದೆ ಭಂಗಿ ಕೇಶವಂಗಿಧಿರುಂಟೇ (ಶಮುದ. ನ. ೩೩೮); ತನ್ನವರೊಡರಿಸಿದ ವೈರವನು ಮುಱಿದೆಯಲಾ (ನಿಭಾಗ. ೪–೯–೪೧). ೪. ಒದಗಿಸು; ಉಂಟುಮಾಡು: ಜ್ಯೋತಿರ್ಲೋಕಕೆ ಮಿದೊಂದುಂಟೆಂಬ ವಿವೇಕಮನೊಡರಿಸಿದುದಮರ ಸಮಿತಿಯ ಮನದೊಳ್ (ಆದಿಪು. ೭–೯೪); ಆದಂ ದಾದಿಗಾಯಾಸಮನೊಡರಿಪ ಮುದ್ದಾತ್ಮಜಂಗೆಂದು ತೋರ್ಕುಂ (ಕಾದಂಪೂ. ೩೫೮); ಖಲನೆನಿತು ಪಟಿಯನಾದೊಡಮಿಳೇಶ್ವರಂಗೆಱೆವನೊಡರಿಕುಂ ದುಷ್ಟತೆಯಿಂ (ಪಂಚತಂ. ೧೯೬–೨೯); ಧರ್ಮಕ್ಕೇನಾನುಂ ಬಾಧೆಯನೊಡರಿಸಿದ ಪಾತಕಂ [ಪು]ಗುಗುಂ . . . ಅಧೋಭುವನವಂ (ಸೌಇಇ. IX–i, ೧೫೮–೫೬; 1090). ೫. ಒದಗು; ಬರು; ಉಂಟಾಗು: ಬಸವಲ್ಲದಟ್ಟು ಕೆಂಪೊಡರಿಸೆ ತೀವಿರೆ ಬಾಷ್ಪಸಲಿಲಂ (ಕಾದಂಪೂ. ೮೪೩); ನಿರ್ವೇಗಂ ತನ್ನಂತರಂಗಕ್ಕೊಡರಿಸೆ (ಸುಕುಮಾ. ೮–೩೪); ದುಷ್ಕೀರ್ತಿ ಒಡರಿಸಲಿ ಪುನರುಕ್ತಿ ನಮ್ಮಯ ನುಡಿಗೆ ಹೊಗದು (ತೊರರಾ. ೨–೨–೪೬); ನಿಮ್ಮಂಘ್ರಿಗಳ ದರುಶನವೊಡರಿಸಿದದಾಕ್ಷಣವೆ ಪಾತಕದಡವಿ ಬೇವುದು (ನಿಭಾಗ. ೧೦–೭೫–೧೫). ೬. ನೀಡು; ಸೇರಿಸು; ಸಲಿಸು (?): ಒಡಲಹಂಕೃತಿಯೆಂಬ ಕುಳಿಯಲಿ ಕೆಡೆದು ಕಂಗೆಟ್ಟಂತಕನ ಬಾಯ್ಗೊಡರಿಸಿದ ತುತ್ತಾಗದಿಹುದೆ (ನಿಭಾಗ. ೬–೧೪–೧೦). ೭. ಮಿಡಿ; ಮೀಟು (?): ಎಡಗೈಯೊಳಮರಿಸಿ ವೀಣೆಯನಾಂತು ಮೇಗಡೆ ಮೆಟ್ಟನೊಳು ಬೆರಳಾಡೆ ಒಡನೆ ಕೀಳ್ಗಡೆ ತಂತಿಯೊಳು ಬಲಗೈವೆರಳೊಡರಿಸೆ ಪಾಡಿದಳೊಲಿದು (ಭರಚ. ೧೧–೩). [ಒಡರ್ + -ಇಸು$_3$]

**ಒಡರು** ‘ಒಡರ್’ ನೋ.

**ಒಡರ್ಚಿಸು** (ಕ್ರಿ). ೧. ಉಂಟುಮಾಡು : ತಾರಕಾಸುರನಂ ತೀರ್ಚಿಸಿ ಸಕಲಲೋಕಕ್ಕೆ ಸಂತಸಮನೊಡರ್ಚಿಸಿ (೧೦ಕ. ೩ ಕಥಾಗರ್ಭ). ೨. ಆರಂಭಿಸು; ಹೂಡು : ಅರಸನುಮರಸಿಯುಂ ನೆತ್ತಮನೊಡರ್ಚಿಸಿ (ಬಸಪು. ೪೩–೨). [ಒಡರ್ಚು + –ಇಸು$_3$]

**ಒಡರ್ಚು, ಒಡರಿಚು** (ಕ್ರಿ). ೧. ತೊಡಗು; ಆರಂಭಿಸು; ಉಪಕ್ರಮಿಸು: "ಒಡರ್ಚು – ಉದ್ಯಮೇ" (ಶಮಧಾ); ಒಂದೊಂದಱ ಸೌಂದರ್ಯಮನೊಂದೊಂದೀಕ್ಷಿಸಲೊಡರ್ಚಿ ನಾಸಿಕಮಡ್ಡಂಬಂದಂದಮನೀಕ್ಷಿಸಿ ಪೆಱಗಿಂ[ದಂ]ದೀಕ್ಷಿಸು[ವು]ವವಳ ನಿಡಿಯ ಸಬ್ಗಣ್ಗಳ್ (ಕವಿರಾ. ೩–೨೩೪); ಪಂಡಿತರೆ ತಗುಳ್ದು ಬಿಚ್ಚಳಿಸೆ ಪೇೞಲೊಡರ್ಚಿದೆನೀ ಪ್ರಬಂಧಮಂ (ಪಂಪಭಾ. ೧–೧೧); ಕೆತ್ತಲೊಡರ್ಚಿದತ್ತು ಬಲಗಣ್ಮಲರ್ (ಕಾದಂಪೂ. ೩೯೧); ನುಡಿದುದೆ ನಂನಿ ನೋಡಿದುದೆ ಸಾಧ್ಯವೊಡರ್ಚ್ಚಿತೆ ಕಾರ್ಯ್ಯಸಿದ್ಧಿ (ಕಇ. I, ೨೫–೩೯ ; 1186); ತೂಗಿಸಲೊಡರ್ಚಿದರು ಜೋಗುಳವ (ಮೋಹತ. ೧೭–೫೦). ೨. ಪ್ರಯತ್ನಿಸು; ಹೆಣಗು; ಉದ್ಯೋಗಿಸು : ಇಕ್ಕಿ ವಿಷಾನ್ನಮುಂ ಮರುತ್ಸುತನನುಪಾಯದಿಂ ಕೊಲಲೊಡರ್ಚಿದನೆಲ್ಲಿದಂ (ಗದಾಯು. ೬–೨೯); ಕೊಲಲೊಡರ್ಚುವ ಮಿತ್ತುವಿನ ಗಂಡನ ಪಾದ ಜಲರುಹಯುಗವ ನೋಡಿದರು (ಮೋಹತ. ೪೨–೩೯). ೩. ಮಾಡು; ರಚಿಸು; ನೆರವೇರಿಸು : ಸಾಮಾದ್ಯುಪಾಯಂಗಳುಮನೊಡರ್ಚಿ ತದ್ವ್ಯಾಜದಿನಂತರಂಗ ಗವೇಷಣನಿಮಿತ್ತಂ ದೂತಚ್ಛದ್ಮಪ್ರಣಿಧಿಯಂ (ಶಾಂತಿಪು. ೨–೫೧ ವ); ಒದವಿದ ಸಿಗ್ಗಿಂದಮಾರುಮೇನನೊಡರ್ಚರ್ (ಕಾದಂಪೂ. ೮೨೫); ಅವಮಾನಿತನಪ್ಪುದಱಿಂ ದವನಕನೆತ್ತಾನುಮೆನಗವಕ್ರಿಯೆಯನೊಡರ್ಚುವನೋ (ಪಂಚತಂ. ೪೩–೭); ಏನ ನೆನೆದಾವುದನೊಡರ್ಚಿದೆನೇನ ಹೇಳುವೆನೆನ್ನ ಪುಣ್ಯದ ಹಾನಿಯನು (ಕುವ್ಯಾಭೀ. ೧೦–೨೦). ೪. ಒದಗಿಸು; ಉಂಟುಮಾಡು: ಮೊದಲೊಳೆ ಕೆತ್ತಿದತ್ತು ಬಲಗಣ್ಣೆನಗೇನನೊಡರ್ಚಲಿರ್ದುದೋ ಬಿದಿ (ಕಾದಂಪೂ. ೮೯೯); ಸರೋಜಪತ್ರವೀಜನ ಪವನಂ ವಿಕಾಸಮನೊಡರ್ಚೆ (ಮಲ್ಲಿಪು. ೪–೧೦೯); ಇದೇನನೊಡರ್ಚಿದಂ ಶಿವಂ ತಾನೆನುತ (ನಂಬಿರ. ೭–೧). ೫. ನೀಡು; ಒಡ್ಡು; ಒಪ್ಪಿಸು; ಕೊಡು : ಪಂದಿಗೆ ಬೆನ್ನನೊಡರ್ಚಿ ಬಾಗೆ ಚಚ್ಚರಮುಱಿದೆಚ್ಚಂ (ಸೂಕ್ತಿಸು. ೩–೧೨೭); ಮನಗೊಂಬ ಪೃಥ್ವೀಪತಿಯ ಭಾಗ್ಯವ ಬ್ರಹ್ಮಜನಕೊಡರ್ಚಿದ ರಾಮ ಜಯತು (ಮೋಹತ. ೫–೭). ೬. ಉಂಟಾಗು; ಹುಟ್ಟು; ಒದಗು : ಅಗಳಾಗಳೆಗಱಿವೊಯ್ವ ಕಂದೆಱೆವ ತುಪ್ಪುೞಿಯೊಡರ್ಚುವ ಕೆಂಪನಾಳ್ವ ಕೋಮಳ ಶುಕಶಾಬಕಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ (ಕಾದಂಪೂ. ೧೭೮); ರಣಕೇಳಿ ಕಾಮನೊಳ್ ಕಲಹಮೊಡರ್ಚಿತೆಂಬ ನಲವೇಱಿರೆ (ಜಗವಿ. ೧೮–೨). ೭. ಉಪಯೋಗಿಸು; ಬಳಸು (?) : ಪೆರ್ಗೊಡಪಾಸಿ ಕೊಪ್ಪರಿಗೆಗಳ ಅಡಲೊಡರ್ಚುವ ಪೊಂಭಾಂಡಗಳ ಕರಬೋನ ಗಡಣವ ಕೊಟ್ಟನುತ್ಸವದಿ (ಮೋಹತ. ೧೫–೧೯). ೮. ಕೂಡಿಸು; ಕಲೆಹಾಕು : "ಒಡರ್ಚು – ಸಂಘೀಕರಣೇ" (ಕಥಾಪ್ರ). **ಒಡರಿಚು** : ೧. ಒಯ್ಯನೊಯ್ಯನಾಗಳ್ ಇನನಪಗತತೇಜಮುಡುಗಲೊಡರಿಚಿತಾಗಳ್ (ಕಾದಂಪೂ. ೨೭೧). ೩. ನಿಗರಗತ್ತುರಿಯಣ್ಪನೊಡರಿಚಿದ ಪಾಂಗಿನಿಂ (ಸೌಂದಪು. ೧೭–೬೮); ಪಡೆದ ಮಕ್ಕಳನಱಂ ಕರೆದು ಸೃಷ್ಟಿಯನೊಡರಿಚಿಮೆನಲ್ಕೆ (ಚಿಬಪು. ೧೩–೧೪); ಭಕ್ತಾವಳಿಯ ಬಗೆಯನೊಡರಿಚುವೆಡೆಯೊಳು (ಜೈಮಿಭಾ. ೨–೪೬). ೫. ಈ ಭೂಮಿಯನು ಕೊಂಡಾಗಲಾ ಸುತ್ರಾಮಗೊಡರಿಚಿ [ಪಾಠಾಂ. ಸಿ]ದಂದವನು ವಿರಚಿಸಿದನಾ ಮುನಿಪ (ತೊರರಾ. ೧–೧೧–೪). ೮. ವರಕಮಠ ಮತ್ಸ್ಯಂಗಳಂ ನಿಜಕರದಿನೇಕೋದಕದೊಳೊಡರಿಚಿ ಪಿರಿಯಗಾಳವನಿಕ್ಕುವಾ ಬಲೆಗಾಱನುಂ ತಾನೆ (ಬಸಪು. ೪೨–೨೮). ೯. ಕೂಡು; ಸೇರು; ಬೆರೆ : ಜಡೆಯ ಶಂಕರ ದೇವರಂಗದೊಳೊಡರಿಚಿದನೊಲವಿಂದೆ ತನ್ನಯ ಮಡದಿ ಶಿಷ್ಯಂ ಸಹಿತ ಶಂಕರ ದಾಸಿಮಯ್ಯಗಳು (ಶಂಕದಾ. ೧೬ ಸೂಚನೆ). [ಒಡರ್ + –ಚು]

**ಒಡಲ್, ಒಡಲು** (ನಾ). ೧. ಮೈ; ಶರೀರ; ದೇಹ : ತನ್ನೊಡಲುಮಂ ಪೂಜಿಸಿ ಪೋದಂ (ವಡ್ಡಾರಾ. ೧೭೩–೬); ಒಡಲೆರಡೊಂದೆ ಜೀವಮಿವರ್ಗೆಂಬುದನೆಂಬುದು ಲೋಕಮೀಗಳಾ ನುಡಿ ಪುಸಿಯಾಯ್ತು (ಪಂಪಭಾ. ೧೩–೪); ಒಡಲೊಡಮೆಯೆಂಬಿವೆರಡುಂ ಕೆಡಲಿರ್ಪುವು ಕೆಡದ ಕಸವರಂ ಜಸಮದಱಿಂ ಕೆಡುವೊಡಲೊಡಮೆಯನೆಂದುಂ ಕೆಡದೊಡಮೆಗೆ ಮಾಱುಗುಡುವುದಿಱಿವಬೆಡಂಗಾ (ಗದಾಯು. ೨–೨೪). ೨. ಹೊಟ್ಟೆ : "ಒಡಲೆನಲ್ಕುದರಂ" (ಕಶರ. ೧೭); ಪೊರೆದೇಂ ಬಾಳವೆ ಪಂದಿನಾಯ್ಗಳೊಡಲಂ (ಸೋಮೇಶ. ೧೮). **ಒಡಲು** : ೧. ತಲೆಯಿಲ್ಲದ ತಲೆಯಾತಂಗೆ ಕರುಳಿಲ್ಲದ ಒಡಲು ನೋಡಾ (ಅವಚಂ. ೩–೯); ಕ್ಲೇಶ ಒಡಲೊಳಗಿರಲು ತೀರ್ಥಯಾತ್ರೆಗಳೇಕೆ (ಪುರಂದ. ೨–೬೨–೩); ಜ್ಞಾನವುಳ್ಳವನೊಡಲು ಭಾನುಮಂಡಲದಂತೆ ಜ್ಞಾನವಿಲ್ಲದನ ಬಱಿಯೊಡಲು ಹಾಳೂರ ಸ್ಥಾನದಂತಿಕ್ಕು (ಸರ್ವಜ್ಞ. ೪೨೭). ೩. ಸೀರೆಯ ಅಂಚು ಸೆರಗುಗಳನ್ನು ಬಿಟ್ಟು ಉಳಿದ ಭಾಗ.

**ಒಡಲಂಟು** = ದೇಹದಲ್ಲಿ ಅಂಟು, —ಕೂಡು, —ಸೇರು : ನಿದ್ದೆಯಿಲ್ಲದೆಯೆ ಬೇಸರಿಕೆಯೊಡಲಂಟ . . . ಜಾಗರಂಗೆಯ್ವುದದು ಪಾಡು (ಬದ್ಧಪ್ರ. ೨–೩೬). **ಒಡಲಜರ** = ಒಂದು ಬಗೆಯ ಜ್ವರ; ಒಳಜ್ವರ : ಆವನಿಗೆ ಮೊದಲೇ ಒಡಲಜರ ಅಂತಿದ್ರು (ಮಲೆಮ. ೭೪೨). **ಒಡಲಪೊಗು** = ಶರಣಾಗು : ಬಂದು ಒಡಲಪೊಕ್ಕವರಿಗಾಧಾರನೆ (ಪ್ರಸಕೀ. ೫). **ಒಡಲಮಾತು** = ಹೊಟ್ಟೆಯೊಳಗಿನ ಮಾತು; ಅಂತರಂಗದ ಮಾತು : ಭೀಕರದಡವಿಯಲಿ ಬಿಸುಟಿರ್ದೊಡೆಮ್ಮವನೊಡನೆ ತಂದೆನಗೀಯೆ ಸಾಕಿದೆ ನೈಸೆ ಮಗನಲ್ಲ ಒಡಲಮಾತಿದು ನಂಬೆನಲು (ಸಾಳ್ವಭಾ. ೧೬–೧೦). **ಒಡಲವೆಱು** = ಶರೀರವನ್ನು ಪಡೆ; ದೇಹವನ್ನು ಹೊಂದು : ದೇವಮಾನವ ಮೃಗನಗರೂಪದ ವಾಸುದೇವನ ವಿಭವಂಗಳನು ಆ ವಿಧದೊಡಲವೆತ್ತನುಸರಿಸುವ ಲಕ್ಷ್ಮೀವಧುವನು ವಂದಿಪೆನು (ಹದಿಬ. ೩–೨). **ಒಡಲಳಿದವ** = ದೇಹನಾಶವಾದವನು : ಒಡಲಳಿದವಂಗೆ . . . ಆತ್ಮನಲ್ಲಿ ಘಟಿಸಿದವಂಗೆ ಬೇಱೊಂದೆಡೆ ಇಲ್ಲ (ಮೋಳಿಮಾ. ೧೧೧–೪೩೮).

[ದೇ. ‖ ತಮಿ. ಮಲ. ಉಡಲ್, ಉಡಲಂ; ತುಳು. ಉಡಲ್, ಉಡಾಲ್, ಒಡಾಲ್; ತೆಲು. ಒಡಲು, ಒಳ್ಳು]

**ಒಡಲಾಗು** (ಕ್ರಿ). ೧. ಆಶ್ರಯವಾಗು; ಗುರಿಯಾಗು : ಸುರರಾಜಂ ಕಣ್ಣ ಮೆಯ್ಯಿಂ ನನೆಗಣೆಗೊಡಲಾದಂ ಜವಂ ಛಾಯೆಯೊಳ್ ಮೆಯ್ಗರೆದಂ (ಸೂಕ್ತಿಸು. ೪–೧೩೨). ೨. ಕಾಣಿಸಿಕೊಳ್ಳು; ಅಭಿವ್ಯಕ್ತವಾಗು : ಅರುಣೋದಯಕ್ಕೆ ಒಡಲಾಗದ ಮುನ್ನವೇ ಖಗವಿಹಂಗಾದಿಗಳ. . .ಉಲುಹಿಂಗೆ ಮುನ್ನವೇ ಧ್ಯಾನಾರೂಢರಾಗಿ (ಸರ್ವವ. ೩೪–೧೭೩). [ಒಡಲ್ + ಆಗು$_1$]

**ಒಡಲಿಚ** (ನಾ). ೧. ಒಡಲಿನಲ್ಲಿ ಹುಟ್ಟಿದವನು; ಮಗ : ಅಯ್ಯನೊಡಲಂ ತಬ್ಬಿ ಬಿಗಿದಪ್ಪಿ ಬಾಳ್ಗೆ ಜೇನಂ ಸೂಸುವೊಡಲಿಚಂ (ಶ್ರೀರಾಮಾ. ೧೧೮–೧೭೦). ೨. ಮನ್ಮಥ : "ಒಡಲಿಚನೆನಲ್ಕೆ ಮನ್ಮಥನಕ್ಕುಂ" (ಕಶರ. ೯೯); ಒಡಲಿಚನ ಬಿಲ್ಲ ಪೊಂಗಿಱುಗಂಟೆಗಳ ರಣಿತಂ (ಶೀಷರಾ. ೬೯–೨೩). 'ಅಲರಿಚ' ಪರಾ. [ಒಡಲ್ + –ಇಚ]

**ಒಡಲಿಚವಗೆಯ** (ನಾ). ಮನ್ಮಥನ ಶತ್ರು; ಶಿವ : ಒಡಲಿಚವಗೆಯ ಪೊಡವಿಯುಚ್ಚಿ ಜೊನ್ನೊಡಲ ಕೆಂಗಿಡಿಗಣ್ಣ ಬಾಂಬೊಚ್ಚದಲೆಯ ಪಿರಿದಿನಿವಡೆಯ ಮಿಡ ನಿರಂಜನಲಿಂಗ (ಪಾಸೋಪು. ೧೩–೧). [ಒಡಲಿಚ + ಪಗೆ + –ಅ$_7$]

**ಒಡಲಿಡು** (ಕ್ರಿ). ದೇಹವನ್ನು ತಾಳು ; ಮೈದಾಳು : ಅಂಗಜನ ಪಂಚ ಬಾಣಂಗಳೊಂದೊಡಲಿಟ್ಟು ನಿಂದುದೆನಿಪ ಮಾನಿನಿ ನಿಧಾನವನು (ಸಾಳ್ವಭಾ. ೧೪–೧೫). [ಒಡಲ್ + ಇಡು$_1$]

**ಒಡಲಿಲಿ** (ನಾ). ದೇಹವಿಲ್ಲದವನು ; ಮನ್ಮಥ; ಅನಂಗ : ತಳಿಯ ಲ್ಕತಿ ಚಂಚಳೆ ಮಗಳಳಿಯಂ ಪೂಗಣ್ಣನಾತ್ಮಜಂ ಕ್ಷಯಿ ಮೊಮ್ಮ ಒಡಲಿಲಿಯೆನುತುಂ ಚಿಂತಿಸಿ (ಕಳನ್ನ. ೧–೫). [ಒಡಲ್ + -ಇಲಿ$_3$]

**ಒಡಲು** 'ಒಡಲ್' ನೋ.

**ಒಡಲುಗಿಚ್ಚು** 'ಒಡಲ್ಗಿಚ್ಚು' ನೋ.

**ಒಡಲುಗೊಳ್** (ಕ್ರಿ). ಶರೀರವನ್ನು ಹೊಂದು ; ರೂಪವನ್ನು ಧರಿಸು ; ಸಾಕಾರವಾಗು : ಉನ್ಮತ್ತ ಚಿತ್ತಜನು ಬೇವನೇ ಇನ್ನೊಡಲುಗೊಂಡೊಡೆ ಅವ ಕಣ್ಣೊಳು ನೋಡಿದೊಡೆ ಯಿಬ್ಬೇವನೇ ಯಮರಾಜನುಂ ಮರಿಯಾದೆ ತಪ್ಪಿದೊಡೆ (ಬಸವು. ೧೮–೮೮) ; ಹರನ ಹಣೆಗಿಚ್ಚೊಡಲುಗೊಂಡಂಕುರಿತ ವಾಯಿತೊ (ನಿಭಾಗ. ೩–೮–೮೮). [ಒಡಲು (< ಒಡಲ್) + ಕೊಳ್$_1$]

**ಒಡಲುದೋಱು** (ಕ್ರಿ). ಮೈದೋರು; ಕಾಣಿಸಿಕೊ ; ಸ್ವರೂಪವನ್ನು ತೋರಿಸು : ಅಖಿಳಾತುಮನೆನಿಪ ನಾನಾ ಹೃದಯದಲ್ಲಿ ಒಡಲುದೋಱು ವನು (ನಿಭಾಗ. ೧೧–೨೭–೩೦). [ಒಡಲು (< ಒಡಲ್) + ತೋಱು$_1$ (< ತೋಱ್$_1$)]

**ಒಡಲುರಿ** (ನಾ). ೧. ಕಳವಳ; ದುಃಖ; ಸಂತಾಪ : ಕೆಲದೊಳ್ಕೆಡೆದ ಕರ್ಣಜಂಗೊಡಲುರಿಯೊಳಕಟ ಸುತ ಹಾಯೆಂದು ಮಱುಗಿದರುಲೂಪಿ ಚಿತ್ರಾಂಗದೆಯರು (ಜೈಮಿಭಾ. ೨೩–೬೦). ೨. ಹೊಟ್ಟೆಯುರಿ ; ಹೊಟ್ಟೆ ಕಿಚ್ಚು : ಒಡಲುರಿ ಒಂದು ಕಡೆ ಬ್ರಹ್ಮೇತಿ ಒಂದು ಕಡೆ (ಗಾದೆ). [ಒಡಲ್ + ಉರಿ$_2$]

**ಒಡಲುರಿಕೆ** (ನಾ). ದೇಹವನ್ನು ಸುಡುವವನು : ನೆಲದಳೆದವಿಲ್ಲ ಪುಷ್ಪಂಬನೊಡಲುರಿಕ ಬಾಂದಲೆಯ (ನವಮೋ. ೩೩–೧). [ಒಡಲ್ + ಉರಿಕೆ]

**ಒಡಲುರಿಸು** (ಕ್ರಿ). ೧. ದೇಹ ಉರಿಯುವಂತೆ ಮಾಡು. ೨. ಹೊಟ್ಟೆ ಯುರಿಸು ; ದುಃಖಕೊಡು; ಸಂತಾಪಪಡಿಸು : ಸೋದರದ ಹೆಣ್ಣ ಒಡಲುರಿಸಿ ಕೊಲ್ಲೋನ ಸಾಧಿಸಿ ಕಡಿಯೋ ಎಳೆನಾಗ (ನನ್ನೂರು. ೨೪). [ಒಡಲುರಿ + -ಇಸು$_3$]

**ಒಡಲುವಿಡಿ** (ಕ್ರಿ). ೧. ದೇಹವನ್ನು ಹಿಡಿ, —ತಾಳು, —ಧರಿಸು : ಆವ ತೆಱದಿಂದೊಡಲುವಿಡಿದರೆ ಮರಣ ತಪ್ಪದು ಸುರರಿಗೊಳಗಾಗಿ (ಕುವ್ಯಾಭೀ. ೩–೩೧). ೨. ದೇಹವನ್ನು ನಚ್ಚು, —ನಂಬು : ಒಡಲು ವಿಡಿದು ಕೆಡದಿರು (ಮಹಾದೇ. ೪–೧೨). [ಒಡಲು (< ಒಡಲ್) + ಪಿಡಿ$_1$]

**ಒಡಲುಹೊರಕೆ** (ನಾ). ಒಡಲನ್ನು ಸಾಕುವವನು, —ಹೊರೆಯು ವವನು : ಹೊಟ್ಟೆಹೊರಕತನಕ್ಕೆ ಒಡಲುಹೊರಕರೆಲ್ಲ ಜಂಗಮವೇ (ಪೋಳಿಮಾ. ೧೯೫–೭೨೬ ಅರ್ಥ). 'ಹೊಟ್ಟೆಹೊರಕ' ಪರಾ. [ಒಡಲು (< ಒಡಲ್) + ಹೊರೆ$_1$ (< ಪೊರೆ$_1$) + -ಕ$_3$]

**ಒಡಲೂಟ** (ನಾ). ಹೊಟ್ಟೆ ತುಂಬ ಮಾಡುವ ಊಟ : ಉಂಡಾನ ಒಡಲೂಟ ಹಿಡಿದಾನ ಎಲಿ ಅಡಕಿ (ಲೋಕಗೀ. ೧೬೭) ; ಶಿವನಾಣೆ ಕುಚ್ಚ ಉಣಿಸುವೆ ಒಡಲೂಟ (ಲೋಕಗೀ. ೧೮೧). [ಒಡಲು (< ಒಡಲ್) + ಊಟ]

**ಒಡಲೊಡೆ** (ಕ್ರಿ). ಒಡಲನ್ನು ಸೀಳು, —ಭೇದಿಸು : ಭಕ್ತನಾದಲ್ಲಿ ಬ್ರಹ್ಮನ ಒಡಲೊಡೆಯಬೇಕು (ಪೋಳಿಮಾ. ೧೧೪–೫೪೯). [ಒಡಲ್ + ಒಡೆ$_1$]

**ಒಡಲ್ಗಂದು** (ನಾ). ಮೈಮೇಲಿರುವ ಕಪ್ಪು, —ಕಳಂಕ : ಹಣೆಗೆ ಕಪ್ಪಿನ ಬೊಟ್ಟನಿಟ್ಟರು ಉಡುಪತಿಯೊಡಲ್ಗಂದಿನಂತೆ (ಮೋಹತ. ೧೭–೪೪). [ಒಡಲ್ + ಕಂದು$_4$]

**ಒಡಲ್ಗಿಚ್ಚು,** ಒಡಲುಗಿಚ್ಚು (ನಾ). ಮೈಯ ಒಳಗಿನ ಕಿಚ್ಚು, —ಉರಿ ; ಸಂತಾಪ : ಆಳಿಯರ್ ಬೀಸುವ ಚಮರಾಲವಟ್ಟ ತಣ್ಣಾಳಿ ಯಿಂದವಳೊಡಲ್ಗಿಚ್ಚು . . . ಭಡಾಳಿಸಿತುಷ್ಣ ಸಂಘಟಿಸಿ (ಮೋಹತ. ೨೭–೬೨). **ಒಡಲುಗಿಚ್ಚು** : ಒಡಲುಗಿಚ್ಚಿದ್ದರೆ ಆ ತನುವೆ ಗುಱಿ ಕಾಲಾಗ್ನಿ ಎದ್ದರೆ ಲೋಕಂಗಳೆ ಗುಱಿ (ಅವಚಂ. ೨೧೪–೯೩೬). [ಒಡಲ್ + ಕಿಚ್ಚು]

**ಒಡಲ್ಗೆಡುಕೆ** (ನಾ). ಒಡಲು ಅಳಿದವನು ; ಅನಂಗ ; ಮನ್ಮಥ : ಬೆದಕಿ ಬೆದಕಿಯುಸುವನೊಡಲ್ಗೆಡುಕನವಂ ಮೂಡಿಗೆಯಿಂ ತೆಗೆದೆಸೆವಂ (ಉದ್ಭದೇ. ೨–೨೭). [ಒಡಲ್ + ಕೆಡು + -ಕ$_3$]

**ಒಡಲ್ಗೊಳಿಸು** (ಕ್ರಿ). ದೇಹಕ್ಕೆ ಸೇರಿಸು ; ಸೇವಿಸುವಂತೆ ಮಾಡು : ಪುಟ್ಟಸ್ವಾಮಿಗೂ ಈಗಳಿನಿಂದಲೇ ಔಷಧವನ್ನು . . . ಒಡಲ್ಗೊಳಿಸಿ ಒಗ್ಗಿಸಿ ಪಳಗಿಸಿ (ಚಿಟ್ಟಅ. ೧೪೭–೬). [ಒಡಲ್ + ಕೊಳ್$_1$ + -ಇಸು$_3$]

**ಒಡಲ್ವೊಗರ್** (ನಾ). ದೇಹದ ಕಾಂತಿ; ಮೈಯ ಹೊಳಪು : ಅವ ಳೊಡಲ್ವೊಗರ್ ಭಜಕ ಚಕ್ರಕೆ ಪೊಂಬಿಸಿಲಂತೆ ತೋರ್ಕುಗಂ (ದಿವ್ಯಚ. ೧–೪). [ಒಡಲ್ + ಪೊಗರ್]

**ಒಡವ,** ಒಡವು$_1$ (ನಾ). ಒಂದು ಬಗೆಯ ಮರ : ಅರುಟಾಳಂ ಹಾರಿ ವಾಳಂ ತುಡು ತಡಸೊಡವಂ ಲೊಕ್ಕಿ (ಗಿರಿಕ. ೧–೬೨) ; ಒಡವತ್ತಿಯ ತೊಕ್ಕಿನೊಳಂದೊಡಗೂಡಾಡುಳಿಚ ಶುಂಠಿ ನೆಲಗುಳ್ಳಮಿವಂ ಕಿಡುಗುಂ ನೀರಿಂ ಪಾನಂಗುಡೆ ಪೆರ್ಗಣದುಗ್ರಮುಪ್ಪ ವಿಷಂ (ಖಮುದ. ೧೨–೫೨). **ಒಡವು**$_1$ : ಜಾಲವಾಲಂ ನೆಲ್ಲಿ ಕನ್ನೆಲ್ಲಿ ಕಡವೊಡವು [ಪಾಠಾಂ. ವ] ಹಾಲೆ ಯಂಕೋಲೆ ದಿಂಡಂ (ಹಚಕಾ. ೫–೧೫) ; ಒಡವು . . . ತರುಗಳ್ (ರೇವಣ. ೩೭–೧೩). [?]

**ಒಡವಡು** (ಕ್ರಿ). ಕೂಡಲೇ ಹೊಂದು : ಕೋಟಲೆಯನೊಡವಟ್ಟು ಬಳಲುವ ತುಂಬಿಯಂದದಲಿ (ಗಗತಾ. ೧೦–೮). [ಒಡ್$_2$ (< ಒಡಂ) + ಪಡು$_1$]

**ಒಡವಡೆ** (ಕ್ರಿ). ಜೊತೆಯಲ್ಲಿಯೇ ಪಡೆ, —ಹೊಂದು : ಪಡೆದೊಡೆ ತಪಮುಂ ಶ್ರುತಮುಂ ಪಡೆಯರ್ . . . ಎರಡುಮನೊಡವಡೆದ ನರೇಂದ್ರ ಸೇನಮುನಿಪನೆ ಧನ್ಯಂ (ಧರ್ಮಾಮೃ. ೧–೨೦). [ಒಡ್$_2$ (< ಒಡಂ) + ಪಡೆ$_1$]

**ಒಡವರ್,** ಒಡವರು (ಕ್ರಿ). ಜೊತೆಯಲ್ಲಿ ಬರು ; ಅನುಸರಿಸು : ಅಸ್ತಮಯಸಮಯದೊಳ್ ಸಂಜೆ ಕರಂ ಪಿಂದುಱಿದುದಂತೆ ಕೆಲರೊಡ ವಂದಾದುದಯದೊಳೆ ಸಾರ್ವರೆಡೆಱೊಳಗಲ್ವರ್ (ಕಾವ್ಯಸಾ. ೮೯೯ ಶೂದ್ರಕ) ; ಅರಸನುಮರಸಿಯುಂ ಭಟ್ಟಾರರೊಡವಂದ ಬ್ರಹ್ಮಚಾರಿ ತಪಂ ಬಟ್ಟನೆಂಬುದಂ ಕೇಳ್ದು (ವಡ್ಡಾರಾ. ೭೯–೧೦) ; ಅಗ್ರಜನೊಡವರ ಲಕ್ರೂರನೊಡನೆ ಹರಿ ಪೊಱಮಡಲ್ (ಜಗವಿ. ೫–೯೮). **ಒಡವರು** : ಒಲೆದೊಲೆದು ಮಿಡಿದು ಬಾಜಿಸಿ ಪಾಡುತಿರೆ ಪುಲ್ಲೆಗಳುಮಿನಿತು ತೊಲಗ ದೊಡವರಲು [ಪಾಠಾಂ. ಎಡಬಲವರಲು] (ರಾಘಚ. ೧೭–೬೬). [ಒಡ್$_2$ (< ಒಡಂ) + ಬರ್$_1$]

**ಒಡವರ** 'ಒಡವಾರ್ಕ' ನೋ.

**ಒಡವರಿ** (ಕ್ರಿ). ಕೂಡಿ ಹರಿ ; ಒಂದಾಗಿ ಹರಿ, —ಪ್ರವಹಿಸು : ಮೊರೆವ ನೆತ್ತರ ತೊಱೆಗಳ್ ಸುಱಿಸುಱಿದೊಡವರಿದುವು ಕಲ್ವಱಿಯೊಳ್ ಭೋರ್ಗ ರೆದು ಪರಿವ ತೊಱೆಗಳ ತೆಱದಿಂ (ಪಂಪಭಾ. ೧೧–೩೭). [ಒಡ್$_2$ (< ಒಡಂ) + ಪರಿ$_1$]

**ಒಡವರಿಸು** (ಕ್ರಿ). ಒಡನೆ ಬರಿಸು; ಜೊತೆಯಲ್ಲಿ ಬರಿಸು: ಕಡು ನಿರೋಧಂಗೊಳಿಸಿ ದೇಶದಿಂ ಪರದೇಶಕೊಡವರಿಸಿತಲ್ಲದಾನಿರ್ದು ನಿಮ್ಮಂ ಮಾಜುಗೊಡಲಾಪೆನೇ (ಹಚಕಾ. ೧೧-೪). [ಒಡವರ್ + -ಇಸು$_3$]

**ಒಡವರು** 'ಒಡವರ್' ನೋ.

**ಒಡವರೆ** (ಕ್ರಿ). ಕೂಡಲೇ ಹರಡು: ಮಾಣಿಕದೋರಣದ ಬೆಳಗಿನಂತೆ ಪೊಡವರೆದುದು ಸಂಜೆಗೆಂಪು (ಶ್ರೀಪಾಲ. ೪-೧೪). [ಒಡ್$_2$ (< ಒಡಂ) + ಪರೆ$_1$]

**ಒಡವರೆಯ** (ನಾ). ಸಮವಯಸ್ಸು, —ಪ್ರಾಯ; ಓರಗೆ: ಒಡನಾಡಿಗಳೆನಿಬರ್ ಕಿಱುವಡಿಗಾಲದ ಕೆಳೆಯರೆನಿಬರೊಡವರೆಯದ ತನ್ನೆಡೆಗಳೆನಿಬರ್ ಪಸಾಯಂಬಡೆವರೆಸರ ಮಕ್ಕಳೆನಿಬರನಿಬರುಮೆಯ್ದರ್ (ಶಾಂತಿಪು. ೮-೧೧). [ಒಡ್$_2$ (< ಒಡಂ) + ಪರೆಯ$_0$]

**ಒಡವಳೆ** (ಕ್ರಿ). ಜೊತೆಯಲ್ಲಿ ಬೆಳೆ: ಜಯಪೊಡವುಟ್ಟಿದುದು ನಯೋದಯಮೊಡವಳೆದುದು ವಿಳಾಸಮೊಡನಾಡಿದುದು (ಶಾಂತಿಪು. ೧-೭೮); ಒಡವಳೆದುದಜಿಂ ವಾಗ್ವಧುಪೊಡನೋದಿದಳ್ (ಚಾವುಂಪು. ೩-೧೨); ಶೋಕರಸಮುಂ ಕ್ರೋಧರಸಮುಮೊಡವಳೆಯೆ (ಪಂಚತಂ. ೨೧೯-೧೪). [ಒಡ್$_2$ (< ಒಡಂ) + ಬಳೆ$_1$]

**ಒಡವಾಯ್**, ಒಡಹಾಯ್, ಒಡಹಾಯು (ಕ್ರಿ). ೧. ಜೊತೆಯಾಗಿ ನುಗ್ಗು: ಪೆರ್ಬಲಮೊಡವಾಯ ಕಪ್ಪು ಕವಿವಂತಿರೆ (ಕಾವ್ಯಸಾ. ೪೬೩ ಊದ್ರಕ). ೨. ಕೂಡಲೆ ನುಗ್ಗು: ಬಿಡದೆ ಕೇಸರಿಯೆಂಬ ದೇವತೆ ... ಕೆರಳಿಬಂದು ಪೊಡೆಯುರಲನೊಡೆ[ಡ]ವಾಯೆ (ಸಾಳ್ವಭಾ. ೧೧-೯೬). **ಒಡಹಾಯ್**: ೨. ಅರಿನೃಪರಿಗೆ ಕಟ್ಟುವಡೆದ ವೀರರಣೀಗ ತರದೆ ಮಾಣೆನು ನಾನೆನುತ ಉರವಣಿಸುತಲೊಡಹಾಯ್ದನು ನಿದ್ರಾವರಣೀಯನತಿ ಖಾತಿಯಲಿ (ತ್ರಿಪುಸಾಂ. ೨೦-೨೨೨). **ಒಡಹಾಯು**: ೩. (ಉಕ) ಬರು; ಆಗಮಿಸು: ಮನೆಯ ಕಡೆಗೆ ಒಡಹಾಯುವ ಪರಿಪಾಠವಿಟ್ಟು ಕೊಂಡಿದ್ದ (ಗಂಗಾಸಾ. ೩೭). [ಒಡ್$_2$ (< ಒಡಂ) + ಪಾಯ್$_1$]

**ಒಡವಾರ$_1$** (ನಾ). ಕೂಡಿ ಸಮನಾಗಿ ಹಂಚಿಕೊಳ್ಳುವ ಉತ್ಪತ್ತಿ (?): ಅಡಕೆಯ ತೋಟವನೂ ಪೊಡವಾರ ಸಹಿತವಾಗಿ ಕೊಟ (ಎಕ. X, ಗೌರೀಬಿ. ೫೯-೧೦; 1408). [ಒಡ್$_2$ (< ಒಡಂ) + ವಾರ$_2$]

**ಒಡವಾರ$_2$**, ಒಡವರ (ನಾ). ಒಂದು ಬಗೆಯ ಮರ: ಒಡವಾರದ ಮರದ ಮಱೆಯಲ್ಲಿ ಕುಳಿತು (ಶರಲೀ. ೪೦೭-೧೬ ವ); ಮುಳ್ತುಗ ಸಸಿದಾರೊಡವಾರ ಕಂಚಿಯಾಲದ ... ತರುಗಳ್ (ಹಮ್ಮೀರ. ೪-೬೮). **ಒಡವರ**: ಬೇಲ ಸೆಳ್ಳು ಸೀಗುರಿಯೊಡವರ ಬನ್ನಿ ... ಪೆರ್ಮರಗಳ್ (ಪುಣ್ಯಾಸ್ರ. ೭-೬೪). [?]

**ಒಡವಾಱು** (ಕ್ರಿ). ಒಡನೆ ಹಾರು; ಕೂಡಲೆ ನೆಗೆ: ಮುಳಿಸಿಂದಿಸಲೊಡವಾಱುವ ಶಿಲೀಮುಖಂಗಳೆ ಶಿಲೀಮುಖಂ (ಜಗವಿ. ೭-೫೫). [ಒಡ್$_2$ (< ಒಡಂ) + ಪಾಱು$_1$]

**ಒಡವಾೞ್**, ಒಡಬಾಳು$_1$ (ಕ್ರಿ). ಒಡನೆ ಬಾಳು; ಕೂಡಿಬಾಳು: ಅತಿಬಳನಾತ್ಮರಾಜಗೃಹಮಂ ಪುಗಲೀಯನೆ ಕಂಡರಾರುಮನ್ವಿತರುಜನೆಂದು ಸಾರಲಣಮಿಾಯರೆ ಮುನ್ನೊಡವಟ್ಟು ತನ್ನ ಪೆಂಡತಿ ಮೊದಲಾಗಿ ಪೊರ್ದಲಣಮಿಾಯಳೆ (ಸುಕುಮಾ. ೫-೧೨); ಕಾಲುಗುರ್ಗಳ್ ಮೊದನಂತಿರೆ ಮೇಲೆ ಕರಂ ಸೆರೆಗಳಾಗೆ ಕೊಂಕಿದ ಬೆರಲಾ ಬಾಲಿಕೆ ವರನೊಡವಾೞಲುಮಾ ಲಕ್ಷಣದಾಕೆ ಯೋಗಿಯೆನಿಸುತೆ ತೊಜಲ್ವಳ್ (ಲೋಕೋಪ. ೧೧-೬೨). **ಒಡಬಾಳು$_1$**: ಉದಯಾದಿತ್ಯನ ಮರಣದ ವರೆಗೂ ಅವರಿಬ್ಬರೂ ಪ್ರೀತಿ ಮೈತ್ರಿಗಳಿಂದ ಒಡಬಾಳಿದರು (ಸವಕಿ. XIII ಪ್ರಸ್ತಾ). [ಒಡ್$_2$ (< ಒಡಂ) + ಬಾೞ್$_1$]

**ಒಡವು$_1$** 'ಒಡವ' ನೋ.

**ಒಡವು$_2$** (ನಾ). ಒಡೆದು ಹೋದ ಭಾಗ; ಒಡಕು; ಬಿರುಕು: ಮಣ್ಣಿಯ ಗಾಮುಣ್ಣನ ಮಗಂ ಪ್ರಿಥುವೀರಾವ ಸೆಟ್ಟಿ ಒಡವಂ ಕಟ್ಟಿಸಿದೊಡೆ (ಎಕ. X, ಮುಳಬಾ. ೨೦೮-೨೫; 1000); ಸೋಮೇಶ್ವರದೇಗುಲವಂ ಮಾಡಿಸಿ ಒಡವಂ ಕಟ್ಟಿಸಿ (ಎಕ. XII, ಶಿರಾ. ೭-೪೫; 1128); ಕೆಱೆಯ ಹಳೆ ಪೊಡವುಗಳಂ ಹೂಳಿಸಲು ಸಾವಿರಹೊನ್ನಂ ಕೊಟ್ಟು (ಮೈಆರಿ. ೧೯೩೭, ೨೨೮-೫೮; 1148); ಕೆರೆಯ ಒಡವಿನ ಹತ್ತಿರ ಗಾಡಿ ಸರಿಯಾಗಿ ಹೊಡೆಯಬೇಕು (ರೂಢಿ). [ಒಡ್$_1$ (< ಒಡೆ$_1$) + -ವು]

**ಒಡವುಗು** (ಕ್ರಿ). ಜೊತೆಯಲ್ಲಿ ಪ್ರವೇಶಿಸು; ಸಂಗಡ ಹೋಗು: ಒಡವುಗುವರಸಿಯರ ನೆಬಲ್ ಬೆಡಂಗುವೆತ್ತಿರ್ದುವು (ಶಾಂತಿಪು. ೮-೨೭). [ಒಡ್$_2$ (< ಒಡಂ) + ಪುಗು (< ಪೊಗು)]

**ಒಡವುಟ್ಟಿ** (ನಾ). ಒಡಹುಟ್ಟಿದವಳು; ಸಹೋದರಿ: ಕಾದಿ ಹಲರಂ ಕೊಂದು ಸುರಲೋಕಕ್ಕೆ ಸಂದ ವೀರಗಲ್ಲನು ಯೀತನ ಒಡವುಟ್ಟಿ ಕಳವ್ವೆ ಪರೋಕ್ಷವಿನಯಮಂ ಮಾಡಿ ಕಲ್ಲಂ ನಿಲಿಸಿದಳು (ಮೈಆರಿ. ೧೯೩೮, ೪೦-೯; 1223); ಒಡವುಟ್ಟಿಯೇಂ ಸಮಗು ××× ದಳದೇನ ಬಣ್ಣಿಪೆಂ (ಎಕ. VII, ಶಿವಮೊ. ೮೭-೩೫; 1245). [ಒಡವುಟ್ಟು$_2$ + -ಇ$_2$]

**ಒಡವುಟ್ಟು$_1$**, ಒಡಪುಟ್ಟು, ಒಡಹುಟ್ಟು$_1$ (ಕ್ರಿ). ಜೊತೆಯಲ್ಲಿ ಹುಟ್ಟು, —ಜನ್ಮತಾಳು: ಒಡವುಟ್ಟದ ಮಣಿಕುಂಡಲಮೊಡವುಟ್ಟದ [ವಜ್ರ] ಕವಚಮುಮ[ರ್ದುಂ] ತನ್ನೊಳ್ (ಪಂಪಭಾ. ೧-೯೫); ಅಗಣಿತಪುಣ್ಯನಬ್ಬೆಯೊಡವುಟ್ಟಿದ ಮಾವಂ (ಸುಕುಮಾ. ೨-೬೩); ಇಂದುಗೆ ಪಾರಿಜಾತ ಪೊಡವುಟ್ಟಿದವೋಲೊಡವುಟ್ಟಿದಂ (ವರ್ಧಪು. ೧-೯೦); ಐವರೊಡವುಟ್ಟಿದರು ಸನ್ನುತರು (ಸಾಳ್ವಭಾ. ೧-೪೬). **ಒಡಪುಟ್ಟು**: ××× ಒಡಪುಟ್ಟಿದ ××× (ಎಕ. VII, ಶಿವಮೊ. ೮೭-೩೯; 1245). **ಒಡಹುಟ್ಟು$_1$**: "ಪಿತೃವಿನೊಡಹುಟ್ಟಿದಾತಂ ಪಿತೃವ್ಯಂ" (ವಸ್ತುಕೋ. ೫೫-೨೦); ಒಡಹುಟ್ಟಿದ ಅಕ್ಕತಂಗಿಯರಂತಿದ್ದೆವು (ಕುಂಕುಮ. ೨೮).

ಒಡವುಟ್ಟಿದರ್, ಒಡಹುಟ್ಟಿದರು = ಜೊತೆಯಲ್ಲಿ ಹುಟ್ಟಿದವರು; ಸೋದರರು; ಸೋದರಿಯರು: ಒಡವುಟ್ಟಿದರಂ ಕೊಂದವರಡಗಂ ತಿಂದವರ ನೆತ್ತರಂ ಬೆಸಲಗೆಯೊಳ್ ಕುಡಿವೀ ನಿಸ್ತ್ರಿಂಶತೆಯಂ (ಗದಾಯು. ೩-೨೮); ಒಡಹುಟ್ಟಿದರ ಕೈಯಾರ ಕೊಂದರೆ ಮುಟ್ಟದೇ ಕಡುಪಾಪ (ಕುವ್ಯಾಭೀ. ೩-೨೬). ಒಡವುಟ್ಟಿದಳ್, ಒಡಹುಟ್ಟಿದವಳು = ಜೊತೆಯಲ್ಲಿ ಹುಟ್ಟಿದವಳು; ಸೋದರಿ: ಧೃತರಾಷ್ಟ್ರಂಗೆ ... ಗಾಂಧಾರಿಯಂ ಶಕುನಿಯೊಡವುಟ್ಟಿದಳಂ ತಂದು ಕೊಟ್ಟು (ಪಂಪಭಾ. ೧-೮೭ ವ); ಒಡಹುಟ್ಟಿದವಳ ಕೈಯಂ ಪಿಡಿವಂ (ಸಮುಪ. ೫-೩೧). [ಒಡ್$_2$ (< ಒಡಂ) + ಪುಟ್ಟು$_1$]

**ಒಡವುಟ್ಟು$_2$**, ಒಡಹುಟ್ಟು$_2$ (ನಾ). ಸಹೋದರ ಅಥವಾ ಸಹೋದರಿ: ಒಲಿದು ತನ್ನೊಡವುಟ್ಟು ಸೊಸೆ ಮಗಳೆಂದೆಂಬ ಪಲರು ಮುನ್ನಿನ ಬಾಂಧವರು (ಹದಿಬ. ೧-೪೧). **ಒಡಹುಟ್ಟು$_2$**: ಕಟ್ಟಿಡವಿಯ ವಾಸವನ್ನು ಒಡಹುಟ್ಟು ಮಡದಿಯ ಕೂಡಿ ಕಳೆದ ಮೇಲೆ ಸಿರಿಯು ಕೈಗೂಡಿತು ಅಂತೆ (ಜೋಗಿಹಾಡು. ೬-೭ ಕ); ಒಡಹುಟ್ಟುಗಳೊಂದಿಗೆ ವಿಚಾರಿಸಿ ತೀರ್ಮಾನ ಮಾಡಿದೆ (ಕುರುಕಾ. ೧೫೨). [< ಒಡವುಟ್ಟು$_1$]

**ಒಡವೆ** 'ಒಡಮೆ' ನೋ.

**ಒಡವೆಗೇಡು** (ನಾ). ಐಶ್ವರ್ಯಹಾನಿ, —ನಷ್ಟ: ಕೆಡುಪೊಡಲಿಗೀ ಮನೆಯ ಕಟ್ಟುವುದೊಡವೆಗೇಡು (ನಿಭಾಗ. ೧೧-೧೬-೨೯); ಒಕ್ಕಲಿಗನ ನೆಂಟು ಒಡವೆಗೇಡು (ಗಾದೆ). [ಒಡವೆ (< ಒಡಮೆ) + ಕೇಡು]

**ಒಡವೆಗೊಡು** (ಕ್ರಿ). ವಸ್ತುವನ್ನು ಕೊಡು; ಐಶ್ವರ್ಯವನ್ನು ನೀಡು: ಮುನಿದೊಡೆ ಕಡುತವಕದಿಂ ತಿಳಿಪುವಂ ಸೇವೆಗೈವನಿವನೊಡವೆಗೊಡದಿರ್ದೊಡಂಪರಾಧಿಯಾದೊಡಂ ಬಿಡದೀ ಮನಂ ದುಷ್ಪನಾಯಕನಂ (ಚಿಬಪು. ೧೦-೨೯). [ಒಡವೆ (< ಒಡಮೆ)+ ಕೊಡು]

**ಒಡವೆರಸು** (ಕ್ರಿ). ೧. (ಜೊತೆಯಲ್ಲಿ) ಕೂಡಿಸು; ಸೇರಿಸು: ನಿಗುರುವ ತುರಗದಳವೊಡವೆರಸಿದುವು ಕುರುಪಾಂಡುಸೈನ್ಯದಲಿ (ಕುವ್ಯಾಭೀ. ೪-೫೪); ಪಾಲೊಳಗಯಿದಾರೆಯ ಸಕ್ಕರೆಯಂ ಓತೊಡವೆರಸುವ ತೆಜದಿಂ (ಜಯಕಾ. ೧-೨೭). ೨. ಒಂದಾಗು; ಕೂಡು; ಬೆರೆ; ಐಕ್ಯವಾಗು: ಲಿಂಗವನೊಡವೆರಸುವೆನೆಂದು ಉಚ್ಛ್ವಾಸನಿಶ್ವಾಸಂಗಳಂ ಪಿಡಿದು ನಿಲಿಸಿದರೂ ಲಿಂಗಸಾಹಿತ್ಯವಿಲ್ಲ (ಆದವ. ೨೧).
[ಒಡ್$_2$ (< ಒಡಂ) + ಬೆರಸು$_1$]

**ಒಡವೆರೆ** (ಕ್ರಿ). ೧. ಒಂದಾಗು; ಕೂಡು: ಮನ ನಿಮ್ಮಲ್ಲಿ ಒಡವೆರೆದ ಬಳಿಕ ಎನಗೆ ಭವವುಂಟೆ (ಮಹಾದೇ. ೧೮-೨); ಮಿಸುಪ ಕರ್ಪುರಂ ಶಿಖಿಯೊಳೊಡವೆರೆದಂತೆ (ಚೆಬಪು. ೧-೧೧); ಎಂದಿಗವನೊಳೊಡವೆರೆದೊಂದೆನಿಸುವೆ (ಹದಿಬ. ೭-೩೧). ೨. ಜೊತೆಯಲ್ಲಿ ಬೆರೆ; ಮಿಶ್ರವಾಗು: ಉರಗಪತಿಯ ನಿಜಸುತೆಯೊಡನಾದರದಿಂ ಜಯಲಕ್ಷ್ಮಿಯೊಳೊಡೆ[ಡ]ವೆರೆದಂ ಕೀರ್ತಿಯೊಳಮೊಂದೆ ಪಸೆಯೊಳೆ ಪಾರ್ಥಂ (ಗದಾಯು. ೨-೪೨); ಚದುರೆಯ ಚಟುಲ ಚಕೋರಾಕ್ಷಿಗಳೊಳಗೊದವಿದ ಮೂವಣ್ಣದ ರುಚಿಯವಳಿಜೆವುದಕದೊಳೊಡವೆರೆಯಲು ಮತ್ತದನೀಂಟುವ ಪಥಿಕರ ಕಣ್ಗೆ ಇದು ಕಸ್ತೂರಿವಿಮಿಶ್ರಿತಜಲಂ . . . ಎಂಬಂತೆ ವಿರಾಜಿಸಿತು (ಜಯಕಾ. ೧-೪೨).
[ಒಡ್$_2$ (< ಒಡಂ) + ಬೆರೆ]

**ಒಡವೆರ್ಚು** (ಕ್ರಿ). ಕೂಡಲೇ ಹೆಚ್ಚಾಗು; ಅಭಿವೃದ್ಧಿಯಾಗು: ಅವಯವಶೋಭಿಯಂ ಸಸಿನೆಗೆಯ್ವುಮಿತಾಶನಮಿಕ್ಕಿ ಧಾತುದೋಷವನೊಡವೆರ್ಚದಂತೆಸಗುವಾಪ್ತಜನಂಗಳಿನೆಮ್ಮ ವಿದ್ಯೆಯಂ ನವವಿಧವಾಗೆ ಕಲ್ಪಿಸುವ ಜೋಯಿಸರಿಂ (ದಶಕು. ೮-೧೬).
[ಒಡ್$_2$ (< ಒಡಂ) + ಪೆರ್ಚು$_1$]

**ಒಡವೆಳೆಸು** (ಕ್ರಿ). ಜೊತೆಯಲ್ಲಿಯೇ ಬೆಳೆಯಿಸು: ಒಡನೂಡುತ್ತೊಡವೆಳಸುತ್ತೊಡನಾಡಿಸಿದೆನ್ನ ಚೆನ್ನಕುನ್ನಿಯಂ (ಗಿರಿಕ. ೧-೧೦೪).
[ಒಡ್$_2$ (< ಒಡಂ) + ಬೆಳಸು$_1$]

**ಒಡವೆಳೆ** (ಕ್ರಿ). ಜೊತೆಯಲ್ಲಿ ಬೆಳೆ; ಸಂಗಡ ವೃದ್ಧಿಯಾಗು: ಪಡೆದೊಡೆ ಕಂಪಂ ಬಣ್ಣಂಬಡೆಯವು ಬಣ್ಣಮನೆ ಪಡೆದುವಪ್ಪೊಡೆ ಕಂಪಂ ಪಡೆಯವು ಬೆಾದಲರ್ಗಳೆರಡುಮನೊಡೆ[ಡ]ವೆಳೆದೀ ಚಂಪಕಕ್ಕೆ ಪೂಗಳ್ದೊರೆಯೇ (ಆದಿಪು. ೧೧-೧೧೪); ಒಡವೆಳೆಯೆ ಶಾಂತಿ ದಮೆ ಒಡವೆಳೆಯೆ ನೀತಿ ದಯೆ ಒಡವೆಳೆಯೆ ಕಾರುಣ್ಯತತಿಗಳವನಾ ಒಡವೆಳೆಯೆ ವೈರಾಗ್ಯ ಒಡವೆಳೆಯೆ ಭಕ್ತಿ ತನ್ನೊಡವೆಳೆಯೆ ಮುಕ್ತಿ ಬಳೆಯಲ್ಕೆ ಬಳೆದಂ (ಸಾನಂಚ. ೧-೫೨); ಸಿತಪಕ್ಷದೊಳು ಬೆಳೆವ ಸುಧಾಕರನವೊಲು ಕಳೆಗಳೊಡವೆಳೆಯಲು ಬೆಳೆವನಾತ (ಸಾಳ್ವಭಾ. ೪-೩).
[ಒಡ್$_2$ (< ಒಡಂ) + ಬೆಳೆ$_1$]

**ಒಡವೇಱು** (ಕ್ರಿ). ಜೊತೆಯಲ್ಲಿ ಹೇರು, —ತುಂಬಿಕೊಡು: ಪಸರಿಸಿ ದುಗ್ಧಾಬ್ಧಿಜಳಪ್ರಸರಮನೊಡವೇಱಿ ಬಂದು ಕಱೆವುವು ಮೇಘಪ್ರಸರಂಗಳಲ್ಲಿಯೆನೆ ರಸಮೊಸರ್ವುವು ಪುಂಡ್ರೇಕ್ಷುವಾಟಕೋಟಿಗಳದಱೊಳ್ (ಆದಿಪು. ೧-೫೯).
[ಒಡ್$_2$ (< ಒಡಂ) + ಪೇಱು$_1$]

**ಒಡವೋಗು** (ಕ್ರಿ). ಜೊತೆಯಲ್ಲಿ ಹೋಗು; ಅನುಸರಿಸು: ಆತನೊಡವೋಯ್ತು ಪಗೆ (ಪಂಪಭಾ. ೧೪-೭). [ಒಡ್$_2$ (< ಒಡಂ) + ಪೋಗು$_1$]

**ಒಡಸಲ್**, ಒಡಸಲ್ಲು (ಕ್ರಿ). ಜೊತೆಯಲ್ಲಿ ಬರು; ಸಂಗಡ ಬರು: ಆನುಂ ತೊಡೆಯೆಡೆಯೊಳಿರ್ದೊಡಸಂದು ಸುಟ್ಟುರೆಯ ತಱಗೆಲೆಯಂತೆ ತಿಱ್ಱನೆ ತಿರುಗಿ (ಕಾದಂಪೂ. ೧೮೬); ನುಡಿದನೇಮಾತೊ ನಿರ್ವಾಣಮಾರ್ಗಕ್ಕೊಡಸಲ್ವೆಂ (ಪಂರಾಮಾ. ೨-೭೫); ಸುಪ್ರಯತ್ನೋಪಾರ್ಜಿತ ಧನಾನೀಕಮುಂ ಭವಾಂತರಕ್ಕೊಡಸಲ್ಲದು (ತತ್ತ್ವಪ್ರ. ೩೨೭). **ಒಡಸಲ್ಲು**: ವನಿತೆ ತನುಜಮಿತ್ರರಾದಿ ತನಗನ್ಯವಲ್ಲವೆ ತನ್ನ ಶರೀರವೇ ತನಗೊಡಸಲ್ಲದೆಂಬಾಗ (ಶಾಂತೀಚ. ೮-೯೫).
[ಒಡ್$_2$ (< ಒಡಂ) + ಸಲ್$_1$]

**ಒಡಸಲ್ಲು** 'ಒಡಸಲ್' ನೋ.

**ಒಡಸಾಯ್** (ಕ್ರಿ). ಜೊತೆಯಲ್ಲಿ ಸಾಯು; ಸಹಗಮನ ಮಾಡು; ಸಂಗಡ ಮರಣಹೊಂದು: ಬಿಡವೆ ಪೊಗೆ ಸುತ್ತಿ ತೋಳಂ ಸಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮನಂದೊಡೆಗಳೆದರೋಪರೋಪರೊಳೊಡೆ[ಡ] ಸಾಯಲ್ಪಡೆದರಿನ್ನವೇಂ ಸೈಪೊಳವೇ (ಆದಿಪು. ೫-೨೪); ಜಕ್ಕಬ್ಬೆ ಒಡಸತ್ತು ಸುರಲೋಕಕೆಯ್ದಿದಂ (ಎಕ. VIII, ಸೊರಬ. ೪೫೭-೬; 972); ಸತ್ತವರೇಬ್ಬರೆ ಪೇಟಿಯೊಡಸತ್ತರೆ ತಮ್ಮುಬಲಿನಳವಿಯಂ ಮುಟ್ಟಿಸಲೆಂದುತ್ತವಳಿಕೆಯೊಳೆ ಸಾವರ್ (ಕಾದಂಪೂ. ೯೬೧); ಆತನ ಸಾಯ್ಯೂಣಿಗನೆಂಬುದು ಪಂದಿಯುನ್ನಾನುವೊಡಸತ್ತತ್ತು (ಸೌಇಇ. IX-i, ೩೭-೧೩; ?).
[ಒಡ್$_2$ (< ಒಡಂ) + ಸಾಯ್]

**ಒಡಹಾಯ್** 'ಒಡವಾಯ್' ನೋ.

**ಒಡಹಾಯಿಸು**, ಒಡಹಾಯ್ಸು (ಕ್ರಿ). ಕೂಡಲೇ ಹೊಗಿಸು, —ನುಗ್ಗಿಸು: ಕುದುರೆಕಾಜರು ಮೇಲುವಾಯಲಿ ರಥಿಕರೊಡೆ[ಡ]ಹಾಯಿಸಲಿ ತೇರುಗಳ (ಕುವ್ಯಾದ್ರೋ. ೧೫-೭೦). **ಒಡಹಾಯ್ಸು**: ಗಿರಿಧರನ ತುರಗದಳವೊಡಹಾಯ್ಸಿ ಪೊಕ್ಕು (ಸಾಳ್ವಭಾ. ೧೬-೨೬); ಬೇಱೆ ಬೇಱೂಚೆಯೊಳ್ ಪಿಂದಣಿಂ ಬಲ್ಗುದುರೆಗಾಜರಂ ಕಂಡು ಫೌಜಂ ಕಾಣುತೊಡಹಾಯ್ಸಿ ತಾಜುತಟ್ಟಿಂ ಮಾಡಿ (ಚೆಬಪು. ೪೮-೨೬).
[ಒಡಹಾಯ್ (< ಒಡವಾಯ್) + -ಇಸು$_3$]

**ಒಡಹಾಯು** 'ಒಡವಾಯ್' ನೋ.

**ಒಡಹಾಯ್ಸು** 'ಒಡಹಾಯಿಸು' ನೋ.

**ಒಡಹುಟ್ಟು$_1$** 'ಒಡವುಟ್ಟು$_1$' ನೋ.

**ಒಡಹುಟ್ಟು$_2$** 'ಒಡವುಟ್ಟು$_2$' ನೋ.

**ಒಡಱು** 'ಒಡರ್' ನೋ.

**ಒಡಿ** (ನಾ). ಉಡೆ; ಸೊಂಟ; ಮಧ್ಯ; ಕಟಿ (ಕ). [< ಉಡೆ$_1$]

**ಒಡಿಗಟ್ಟು** (ಕ್ರಿ). (ಬಟ್ಟೆ ಮುಂತಾದುವುಗಳಿಂದ) ಗಾಳಿಸು, —ಶೋಧಿಸು, —ಸೋಸು: ಸೂಕ್ಷ್ಮರಂಧ್ರಗಳ ಮೂಲಕ (ದ್ರವವನ್ನು, ಪುಡಿಯನ್ನು) ಸೋಸು; ಒಡಿಗಟ್ಟು; ಬಸಿ (Percolate. ಇಂಕನಿ). [← ತಮಿ. ವಡಿಕಟ್ಟು; ತೆಲು. ವಡಿಗಟ್ಟು, ವಡಿಯಗಟ್ಟು]

**ಒಡಿಪೊಡಿಸು** (ಕ್ರಿ). ಒಡೆಯುವಂತೆ ಹೊಡೆ, —ಇರಿ: ತೇಜಸಾಗರನ್ ತ್ರೈಲೋಕಪರ್ಚತನ್ ವಾರಾಹರೂಪನ್ ಒಡಿಪೊಡಿಸಿ ಅರಮನೆ ಪುಗುವರಾ ಅಬ್ಬೆ ಅಳ್ಮನ್ (ಸೌಇಇ. IX-i, ೧೬-೧೬; 9ನೆಯ ಶತ).
[< ಒಡೆ$_1$ + ಪೊಡೆ$_1$ + -ಇಸು$_3$. P ತೆಲು. ಪೊಡುಚು=ಇರಿ, ಕಾದಾಡು]

**ಒಡಿಯಾಣ** 'ಒಡ್ಯಾಣ' ನೋ.

**ಒಡಿಲಗೆಱೆ** (ನಾ). ಒಂದು ಕೆರೆಯ ಹೆಸರು: ಅಂತೆ ಬರೆ ಒಡಿಲಗೆಱೆಗೆ ಬಂದ ಬಾಗೆ ಆ ಕೆಱೆಯೊಳಗಣ ಬಲ್ಲೇರಿಯೆ ಆ ಕೆಱೆಯ ತೆಂಕಣ ಕೋಡಿಯೆ (ಎಕ. XI, ದಾವಣ. ೧೯-೧೬; 1043). [ಒಡಿಲು$_2$ + ಕೆಱೆ$_3$]

**ಒಡಿಲು$_1$** (ನಾ). (ಮಾಳಿಗೆಯ) ಹೆಂಚು: ಕುಂಭಾರ್ಱರಿಗೆ ದೇವಸ್ಥಾನಗಳು ಸೋರಿದ ಬಳಿ ಪೊಡಿಲ ಹೊದಿಸುವದಕೆ ಕೊಡವೀ × × (ಎಕ. VIII, ತೀರ್ಥಹ. ೧೯-೧೧೦; 1573).
[← ತುಳು. ಓಡಿಲ್ = ಮಡಕೆಯ ಚೂರು, ಹೆಂಚು]

**ಒಡಿಲು$_2$** (ನಾ). ಒಡೆದಿರುವಿಕೆ; ಭಂಗವಾಗಿರುವಿಕೆ: ಮಹಾದೇವರ ಚೆಂಬಿನ ಒಡಿಲು ಹೊನ್ನ ಕಳಶಕೆ ಮಾಡಿದ ಧರ್ಮ (ಸೌಇಇ. IX-ii, ೪೫೦-೨೨; 1444). [< ಒಡೆ$_1$]

**ಒಡಿವೆಚ್ಚೆರಾಯಿಳ** (ನಾ). ಒಂದು ಬಿರುದು (?): ಊನರ ವೈಶಿಕನ್ ಒಡಿವೆಚ್ಚೆರಾಯಿಳನ್ನಿಗ್ಗೊಳನ್ನನುಜಾಗರನ್ (ಮೈಆರಿ. ೧೯೩೯, ೨೨-೧೩; 8ನೆಯ ಶತ). [?]

**ಒಡಿಸೆ** (ನಾ). ಆಕ್ರಮಣ; ಮುತ್ತಿಗೆ (?): ಬಲ್ಲಾಳುದೇವನ ಒಡಿಸೆಯಲ್ಲಿ ಊರಳಿವಿನಲು ಹಲಂಬರುಮಂ ಕಾದಿ ಕೊಂದು ಸುರಲೋಕಪ್ರಾಪ್ತನಾದನು (ಎಕ. XV, ಹೊಳೆನ. ೧೧೭–೧೦ ; 1172). [?]

**ಒಡುಗಂಪಲಿ** (ನಾ). ಒಂದು ಬಗೆಯ ಗಿಡ: "ಕಪ್ಪಲಿಕುತ್ತ – ಒಡುಗಂಪಲಿ?" (ಒಷಧಿ. ೨೬). [?]

**ಒಡುಗು**, ಒಡಗು$_1$ (ಕ್ರಿ). (ಕರಾ)(ಕಸವನ್ನು) ಗುಡಿಸು; ಉಡುಗು: (ಸಿರಿಕೊ. ೮೦). **ಒಡಗು$_1$**: ಆಮೇಲೆ ಮನೆ ಒಡಗಿ, ನೆಲ ಗುಡಿಸಿ ಆಯಿತೆಂದರೆ, ಒಂದೆರಡು ಕ್ಷಣ ನಿಟ್ಟುಸಿರಿಗೆ ಅವಕಾಶವಾಗುತ್ತದೆ (ಮರವು. ೬). 'ಉಡುಗು$_2$' ಪರಾ. [< ಉಡುಗು$_2$]

**ಒಡೆ$_1$**, ಒಡ$_1$ (ಕ್ರಿ). **೧.** ಸೀಳು; ಬಿರಿ; ಭಿನ್ನವಾಗು; ಸ್ಫೋಟಿಸು: "ಒಡೆ – ಸ್ಫೋಟನೇ, ದ್ರವ್ಯೇಚ" (ಶಮಧಾ); ಪನ್ನೆರಡು ತಲೆಯ ಪಾವುಮಂ ಚಂದ್ರನೊಡೆದುದುಮಂ . . . ಕನಸುಗಳಂ ಕಂಡು (ವಡ್ಡಾರಾ. ೮೫–೨೭). **೨.** ಚೂರುಮಾಡು; ಛಿದ್ರಿಸು; ಹೋಳುಮಾಡು; ಭೇದಿಸು; ಸೀಳು: ಸಾಹಸದರಿಚಕ್ರವ್ಯೂಹಮನೊಡೆದೊನ್ (ಎಇ. IX, ೧೮–೧೩ ; 800); ಕುಮಾರನೆರಡುಂ ಕಣ್ಗಳುಮನೊಡೆದು ಕುರುಡಂ ಮಾಡಿದ (ವಡ್ಡಾರಾ. ೭೫–೨೩); ನುಚ್ಚುನೂಱಾಗೊಡೆವೆಂ ತದ್ರತ್ನರಶ್ಮಿಪ್ರಕಟಮುಕುಟಮಂ (ಪಂಪಭಾ. ೭–೧೩); ಮಣ್ಣಕೋಂಟೆಯಂ ನಂಬಿ ಕಲ್ಲಕೋಂಟೆಯನೊಡೆವ ಮನ್ನೆಯನುಮಂ (ಧರ್ಮಾಮೃ. ೮–೫೧). **೩.** ಬಿಡು; ಹೊರಬರು; ಕಾಣಿಸಿಕೊಳ್ಳು; ಹುಟ್ಟು: ತಳಿರೊಡೆದ ಮಾಮರನ (ತೊರರಾ. ೬–೧೨–೨೦); ಮೊಗ್ಗೊಡೆದ ತಾವರೆಯ ಮೊಗ್ಗೆಗೆ ಸಮವಹ ಮೊಲೆ (ಅಂಜಚ. ೮–೫೦); ಒಡೆದಿಲ್ಲ ಇನ್ನು ಮಕ ಮಿಸಿ (ಗರಿ. ೮೮–೧೨). **೪.** ಬೇರ್ಪಡಿಸು; ವಿಭಾಗಿಸು; ಬಿಡಿಸು: ಮಡದಿಯರಿಲ್ಲ ಮಂಡೆಯ ಸಿಕ್ಕನೊಡೆವರೆನ್ನೊಡೆಯ ಕೋ ಎನುತೆ ನೀರೆಱೆದ (ಮೋಹತ. ೨೧–೨೫); ಪಾದವನ್ನು ಗಣವಾಗಿ ಒಡೆಯುವುದೇ ಅಲ್ಲದೆ ಅಂಶವಾಗಿಯೂ ಒಡೆಯುವ ಹಾಗಿರಬೇಕು (ಕೈಪಿಡಿ. ೧೪೭). **೫.** (ಸ್ವರೂಪ) ಕೆಟ್ಟುಹೋಗು: ಒಡೆದ ಪಾಲಂತೆ ಮೂಲಗುಣಂ ಕಿಡದೆ (ಧರ್ಮಾಮೃ. ೫–೯೯); ಒಡೆವ ಸಮಯದೊಳು ಹಾಲೊಳಗೆ ಸುಣ್ಣದ ತಿಳಿಯ ಬಿಡಲು ಚುಮ್ಮನೆ ತಿಳಿವುದದು (ಸೂಪಶಾ. ೨–೫). **೬.** ಬಿಚ್ಚು; ತೆರೆ: ವಾಗ್ದೇವಿಯ ಭಂಡಾರದ ಮುದ್ರೆಯನೊಡೆದಂ . . . ಕವಿರತ್ನಂ (ಗದಾಯು. ೧–೩೮); ಲಕ್ಕೋಟಿ ಒಡೆ (ರೂಢಿ). **೭.** ಅರ್ಥವನ್ನು ಹೇಳು; ಬಿಡಿಸಿಹೇಳು: ಒಗಟನ್ನು ಒಡೆ (ರೂಢಿ). **೮.** ನೀರೂರು; ಸ್ರವಿಸು: ಆಸೆಯಿಂದ ಮಗುವಿನ ಬಾಯಲ್ಲಿ ನೀರೊಡೆಯಿತು (ರೂಢಿ). **೯.** ಬೇರ್ಪಡು; ಬೇರೆಯಾಗು; ವಿಭಾಗವಾಗು; ಬಿಟ್ಟುಹೋಗು: "ಸುಮಾರು ಕ್ರಿ.ಶ. ೧೦೫೭ರ ಹೊತ್ತಿಗೆ ಕನ್ನಡ – ತೆಲುಗು ಲಿಪಿಗಳು ಬೇರೆ ಬೇರೆ ಎಂಬ ಭಾವನೆ ಬರುವಷ್ಟು ಎರಡಾಗಿ ಒಡೆದಿದ್ದವು ಎಂದು ಭಾವಿಸಬಹುದು" (ಸಂಶೋಧ. ೪).

**ಒಡ$_1$**: ೧. 'ಒಡಮುಡಕೆ' ಪರಾ.

ಒಡೆದಾಡು = ಬಿಚ್ಚಿಹೇಳು: ನೇರ್ವಟ್ಟ ವಸ್ತ್ರ ತೊಲಗಿದ ಮೇಲಾದು ದನುರ್ವಿಯೊಳೊಡೆದಾಡಬಹುದೆ (ಭರಚ. ೧೧–೯೧). **ಒಡೆದುಮೂಡು** = **೧.** ಒಡೆದುಕೊಂಡು ಹುಟ್ಟು; ಸೀಳಿಕೊಂಡು ಹೊರಬರು: ಚೇಳ ಬೆನ್ನಿನೊಳೊಡೆದುಮೂಡುವ ಬಾಲವೃಶ್ಚಿಕದಂತೆ ಮಸೆದಿಹ ಬೋಳೆಯಂಬುಗಳು (ಕುವ್ಯಾಭೀ. ೧೦–೯). **೨.** ಸ್ಪಷ್ಟವಾಗಿ ಮೂಡು; ಪ್ರಕಟವಾಗು: ಹೃದಯದೊಳೊಡೆದುಮೂಡಿದ ಜ್ಞಾನದೃಷ್ಟಿಗಳೊದಗಿತು ಪರಶಿವನಾಮ (ಮೋಹತ. ೨೧–೩೭).

[ದೇ. ‖ **ತಮಿ.** ಒಡಿ, ಉಡೈ; **ಮಲ.** ಒಡಿ, ಉಡ, ಉಡೆ; **ತುಳು.** ಒಡಿ, ಒಡೆ; **ಕೊಡ.** ಒಡೆ, ಒಡ; **ತೆಲು.** ಒಡಪಿ = ಬಿರುಕು; **ಕೋಲಾ. ನಾಯ್ಕಿ. ಪರ್ಜಿ.** ಓಡ್; **ಗಡಬ.** ಒರ್; **ಗೊಂಡಿ.** ಓರ್]

**ಒಡೆ$_2$** (ನಾ). **೧.** ಒಡೆದಿರುವಿಕೆ; ಚೂರಾಗಿರುವಿಕೆ; ಭಂಗ. **೨.** ಮುರಿದ ವಸ್ತು; ಮುರುಕಲು: "ಒಡೆ – ಸ್ಫೋಟನೇ, ಭಿನ್ನದ್ರವ್ಯೇಚ" (ಶಮಧಾ. ನ). **೧, ೨**: ಒಡೆಯೆಂಬುದು ಬೇಡೆಂಬುದು ಕಾಡೆಂಬುದು ಭಾಂಡಶಕಲ ಪಕ್ಕಣದವಱೊಳ್ ಕೂಡಿದ ನುಡಿಯಲ್ಲದೆಯಾ ನಾಡೊಳಗಿಲ್ಲ (ಹವ್ಯಾರ. ೧–೪೬). 'ಒಡೆಗಂಚು' ಪರಾ.
[< ಒಡೆ$_1$]

**ಒಡೆ$_3$** 'ವಡೆ$_2$' ನೋ.

**ಒಡೆ$_4$** (ನಾ). ಪ್ರಭು; ಯಜಮಾನ; ಸ್ವಾಮಿ: ಪುತ್ತೂರುಡೆ ಶಿವಮಾರಮ್ಮಂ ದುಣ್ಣಗೆರ್ಗ್ಗಂ ಸಲ್ಲತ್ತೂರೊಡೆ ಒಗ್ಗ ಮನೆಬಳಿಗಮುಂ (ಎಕ. X. ಕೋಲಾರ. ೨೩೧–೨ ; ಸು. 800); ಬೋಗಣ್ಣನು ಗೋಪಣ್ಣನು ತಮ್ಮಿಬ್ಬರೊಡೆ ಆವೂರ ಹಸಯಮೂ (ಎಕ. XIV, ತಿರುಮ. ೧೫೩–೨ ; ?). 'ಒಡೆಯ$_1$' ಪರಾ. [ದೇ. ‖ **ತಮಿ.** ಉಡೈ = ಆಸ್ತಿ, ಸಂಪತ್ತು]

**–ಒಡೆ$_5$**, –ಅಡೆ$_9$, –ಅರೆ$_9$ (ಪ್ರ). ಪಕ್ಷಾರ್ಥವನ್ನು ಸೂಚಿಸುವ ಪ್ರತ್ಯಯ: "ಪಕ್ಷಾರ್ಥವನ್ನು ತಿಳಿಸುವಾಗ ಧಾತುವಿಗೆ ಸಾಮಾನ್ಯವಾಗಿ ಭೂತ ಭವಿಷ್ಯತ್ ಕಾಲಸೂಚಕ ಪ್ರತ್ಯಯಗಳ ಮುಂದೆ ಒಡೆ ಎಂಬ ಪ್ರತ್ಯಯವು ಸೇರುತ್ತದೆ" (ಕೈಪಿಡಿ. ೫೦); ಅವೊನಾನುಂ ಕಿಡಿಪೊನುಳ್ಳೊಡೆ (ಇಆ. VIII, ೨೮೬–೫ ; 732); ಇದಂ ಕೆಡಿಸಿದರೊಳರಪ್ಪೊಡೆ (ಇಆ. XI, ೧೨೭–೧೩ ; 804); ಶ್ರುತದೊಳ್ ಭಾವಿಸಿ ನೋೞ್ಪೊಡೆ (ಕವಿರಾ. ೧–೫); ಮಿಡಿದೊಡೆ ತನಿಗ[ವು]ರ್ ರಸಂ ಬಿಡುವುವು (ಪಂಪಭಾ. ೧–೫೬); ಕಾದುವೊಡೊರ್ವನೆ ಬಲ್ಲಿದಂ . . . ನುಡಿವೊಡೆಲ್ಲರುಂ ಮುಂತಱಿಯರ್ (ಶಮದ. ೨೫೦ ಪ್ರಯೋ). **–ಅಡೆ$_9$**: ಬೆಸೆವೊಡೊಸೆದಡೆ ಕೊಲಲ್ ರಕ್ಷಿಸಲಂತಕರಾಜನಬ್ಜಸಂಭವನೆನಲ್ (ಎಇ. XIII, ೩೩೦–೧೧ ; 929); ಸುಗುನಾಡರಾಮನೆಂದಡೆ (ಎಇ. VI, ೧೬–೭ ; 1057); ಇಱಿದಡೆ ಪನ್ನೆರಡು ಪಣಂ (ಸೌಇಇ. XI–i, ೧೨೭–೩೨; 1082); ಎಲ್ಲಿ ನೋಡಿದಡಲ್ಲಿ ಮನವೆಳಸಿದರೆ ಆಣೆ (ಬಸವ. ೪೪೫); ಆ ದೇಶಾಧೀಶ್ವರನ ಭುಜಪ್ರತಾಪಮೆಂತೆಂದಡೆ (ಎಇ. XIX, ೨೨೯–೧೭ ; 1179). **–ಅರೆ$_9$**: ಪಞ್ಚ ಮಹಾಪಾತಕನ ಪೋದ ಲೋಕಕ್ಕಾತನ್ಪ್ಪಾಂ ಪೋಕುಮೆನ್ದರದುವೇಮ್ಬಿರಿದೇ (ಕಇ. II, ೪–೧೪ ; 918); ಹಸಿವಾದರೆ [ಪಾಠಾಂ. ಡೆ] ಊರೊಳಗೆ ಭಿಕ್ಷಾನ್ನಗಳುಂಟು (ಮಹಾದೇ. ೧೯೯); ನಿಮ್ಮ ಚಿತ್ತಕೆ ಬಹರೆ ತನ್ನಭಿಮತವನವಧರಿಸು (ಕುವ್ಯಾಆ. ೮–೧೧). [?]

**ಒಡೆಕುಟ್ಟು** 'ಒಡೆಗುಟ್ಟು' ನೋ.

**ಒಡೆಗಂಚು** (ನಾ). ಒಡೆದುಹೋದ ಕಂಚು: ಒಡೆಗಂಚ [ಪಾಠಾಂ. ಒಡಹಂಚ] ಹೊಯಿದೊಡೆ ದನಿ ಭಿನ್ನವಾದಂತೆ ಅದಱಿಂದ ಉಭಯ ಭಿನ್ನವಾವುದು ಹೇಳಿರಣ್ಣಾ (ಕೋಲಶಾಂ. ೯).
[ಒಡೆ$_2$ + ಕಂಚು]

**ಒಡೆಗಚ್ಚು** (ಕ್ರಿ). ಒಡೆಯುವಂತೆ ಕಚ್ಚು; ಬಲವಾಗಿ ಕಚ್ಚು: ಔಡನೊಡೆಗಚ್ಚಿದಳು ಬೊಬ್ಬಿಱಿದೆದ್ದಳೊಳಗಂದು (ನಿಭಾಗ. ೫–೬–೩೧).
[ಒಡೆ$_1$ + ಕಚ್ಚು$_1$ (< ಕರ್ಚು$_1$)]

**ಒಡೆಗಲಸು** (ನಾ). ಚೂರುಗಳನ್ನು ಬೆರಸಿದುದು; ಚೂರುಗಳಿಂದ ಮಿಶ್ರವಾದದ್ದು: ಬಲುಸರಳ ಸರಿವಳೆಯ ಮಿದುಳೊಡೆಗಲಸುಗಳಡಾಯುಧದ ತಳುಕಿನ ಕೊಳುಗುಳದ ಜಯಸಿರಿಯ ಕಾಹಿನೊಳಾರು ನೀನೆಂದ (ಕುವ್ಯಾಸ. ೨–೭೮). [ಒಡೆ$_2$ + ಕಲಸು$_2$]

**ಒಡೆಗಲ್ಲು** (ನಾ). (ಕಾಳು ಮೊದಲಾದುವನ್ನು) ಒಡೆಯುವ ಬೀಸುಕಲ್ಲು: ಕಲ್ಲೇ ಬೀಸೋಕಲ್ಲೆ ಸಕ್ಕರೆ ಒಡೆಗಲ್ಲೆ (ಜಗೀತೆ. ೩); ಅಕ್ಕಿ ಬೀಸೋಕಲ್ಲೆ ಸಕ್ಕರೆ ಒಡೆಗಲ್ಲೆ (ನಾಪದ. ೬೪).
[ಒಡೆ$_1$ + ಕಲ್ಲು (< ಕಲ್$_3$)]

**ಒಡೆಗಾರಳು** (ನಾ). ಒಡ್ಡತಿ ; ಯಜಮಾನಿ (ಕಿ).
[ಒಡೆ$_4$ + -ಗಾರ (< -ಕಾಱ) + -ಅಳು$_4$ (< -ಅಳ್$_5$)]

**ಒಡೆಗಾರ್ತಿ** (ನಾ). ಒಡತಿ ; ಯಜಮಾನಿ (ಕಿ).
[ಒಡೆ$_4$ + -ಗಾರ (< -ಕಾಱ) + -ತಿ$_1$ (< -ಇತ್ತಿ)]

**ಒಡೆಗುಟ್ಟು, ಒಡೆಕುಟ್ಟು** (ಕ್ರಿ). ಒಡೆಯುವಂತೆ ಕುಟ್ಟು, —ಬಡಿ : ಬಿಟ್ಟಮಂಡೆಯಲೊಡೆಯನೊಡಲಲಿ ಥಟ್ಟುಗೆಡಹಿದರೊಡಲುಗಳನೊಡೆಗುಟ್ಟಿದರು ಬಸುಱುಗಳನಡಿಗಡಿಗವನಿಯಲಿ ಹೊರಳಿ (ನಿಭಾಗ. ೭-೨-೨೩); ವಸುದೇವನುದರದಿ ಪುಟ್ಟಿದನೆ ಪಲ್‌ಮಸೆವ ದನುಜರೊಡೆಗುಟ್ಟಿದನೆ (ಕನಕ. ೧೧೩-೩). **ಒಡೆಕುಟ್ಟು :** ನಾಲಗೆಯ ಮೊಟ್ಟಮೊದಲಿಗೆ ಕೊಯ್ದು ಸತಿಯೊಡನಟ್ಟಹಾಸಂ ಮಿಗುವ ವದನವನಿಟ್ಟೊರಸಿ ತಲೆಯೆತ್ತಿ ನೋಡಿದ ತಲೆಯನೊಡ[ಡೆ]ಕುಟ್ಟಿ (ಬಸವು. ೪೫-೩೦) ; ಕವಿಕವಿದು ಬಸದಿಗಳನಧಿಕಾರವದಿ ಹಿರಿದೊಡ[ಡೆ]ಕುಟ್ಟಿ (ಬಸವು. ೫೨-೪೮).
[ಒಡೆ$_1$ + ಕುಟ್ಟು$_1$]

**ಒಡೆಗೆಱೆ** (ನಾ). ೧. ಒಡೆದಿರುವ ಕೆರೆ; ಭಗ್ನತಟಾಕ : ಒಡ[ಡೆ]ಗೆಱೆ ಜೀರ್ಣಕೂಪದೆಡೆ ಬಿಟ್ಟಸುರಾಲಯ ನೀರಸದ್ರುಮಂ . . . ಎಂಬೆಡೆಗಳೊಳಿರ್ದ ಪಾವು ಕೊಳಲಪ್ಪುದಸಾಧ್ಯಮಿಳಾತಳಾಗ್ರದೊಳ್ (ಖಮದ. ೩-೪೧) ; ಒಡೆಗೆಱೆಯಂ ನಂಬಿ ಮನಂಬಿಡೆ ಬೆಳಸಿಂಗಾಸೆಗೆಯ್ವನುಂ (ಧರ್ಮಾಮೃ. ೧೧-೮೩). ೨. ಒಂದು ಊರಿನ ಹೆಸರು: ಒ[ಡೆ]ಗೆಱೆಯ ತೆಜ್ಜಣಂ ಕಲ್ಲು[ಣ್ಣಂ] (ಸೌಇಇ. XI-i, ೯-೩೨ ; 862) ; ಸ್ವಸ್ತಿ ಸಮಸ್ತ ಗುಣಸಂಪನ್ನನ್ರುಡಿದು ಮತ್ತೆನ್ನರೊಡ[ಡೆ]ಗೆಱೆ ಮಲ್ಲ[ರಸ]ಮ ಪರಾಕ್ರಮರ್ (ಕಇ. II, ೮-೧೧ ; 1071). [ಒಡೆ$_1$ + ಕೆಱೆ]

**ಒಡೆತ** (ನಾ). ೧. ಒಡೆಯುವಿಕೆ. ೨. ನರಗಳ ತುಡಿತದಿಂದ ಆಗುವ ನೋವು : ಆರೋಚಕ, ಅತಿದಾಹ . . . ಸಂದುಗಳಲ್ಲಿ ಒಡೆತ, ಬಳಲಿಕೆ, ಬಹಳವಾಗಿ ಮೂತ್ರ ವಿಸರ್ಜನೆಯಾಗುವುದು ಈ ಲಕ್ಷಣಗಳಿರುವುದೇ ಆಮಜ್ವರವೆನಿಸಿಕೊಳ್ಳುವುದು (ಸಕವೈ. ೯೭) ; ನನಗೆ ಆರೋಗ್ಯವಿಲ್ಲ. ಒಡೆತ ಮತ್ತು ಸಂಧಿವಾತಗಳಿಂದ ಸಂಕಟಪಡುತ್ತಿದ್ದೇನೆ (ಪುನರು. ೧೫೪).
[ಒಡೆ$_1$ + -ತ$_2$]

**ಒಡೆತನ** (ನಾ). ಒಡೆಯನಾಗಿರುವಿಕೆ ; ಯಜಮಾನತ್ವ ; ಪ್ರಭುತ್ವ : ಭೂಭಾಗದೊಡೆತನ ಕೌಶಿಕಂಗಾದುದು (ಹಚಕಾ. ೧೦-೧೮) ; ಬಡವ ನಿಧಾನವ ಪಡೆದಂತು ಮೂಜಗದೊಡೆತನ ತನಗಾದಂತು (ಅಂಜಚ. ೪-೧೩೪) ; ಯಿ ಧರ್ಮದ ಸ್ವಾಸ್ಥಿಯ ವಕಲುವಡೆ[ಒಡೆ]ತನ ಯಿ ಧರ್ಮದ (ಎಕ. VIII, ತೀರ್ಥಹ. ೧೭೭-೫೪ ; 1619) ; ಬಡತನ ಒಡೆತನ ಕಡೆತನಕುಳಿದಾವೇನ ಎದೆಹಿಗ್ಗು ಕಡೆಮುಟ್ಟ ಬಾಳಿನ ಕಡಲಾಗ ಅವನ ಮುಳುಗಿಸಬ್ಯಾಡ (ಗಂ. ೧೦೩-೧೩) ; ಬಡತನ ಒಡೆತನಗಳು ಸ್ಥಿರವಲ್ಲ (ಸಮಾಲೋ. ೩೪). [ಒಡೆ$_4$ + -ತನ]

**ಒಡೆತಿವಿ** ‘ಒಡೆದಿವಿ’ ನೋ.

**ಒಡೆತು** ‘ಒಡೆಯದು’ ನೋ.

**ಒಡೆತುಳಿ** ‘ಒಡೆದುಳಿ’ ನೋ.

**ಒಡೆದಿವಿ, ಒಡೆತಿವಿ** (ಕ್ರಿ). ಒಡೆಯುವಂತೆ ಚುಚ್ಚು, —ತಿವಿ : ತೋರಹತ್ತದ ಬಿಗಿಯುರಗಬಂಧದಲಿ ಬಿಚ್ಚುವ ಬೀಸುವೊಡೆದಿವಿ [ಪಾಠಾಂ. ಎಡೆಗವಿ]ವ ಬಿಗಿದು ಬೀಳುವ ಭರದಲೇಳುವ (ನಿಭಾಗ. ೧೦-೩೯-೯). **ಒಡೆತಿವಿ :** ಬಿಲನ ದ್ವಾರವನು ಬಳಿಕಲ್ಲಿ ಕಾಣದೆ ಥಾರುಣಿಯನೊಡೆತಿವಿದು ವಿಲಯದ ಭೈರವನವೊಲು ಬಂದು (ತೊರರಾ. ೪-೨-೨೯) ; ದೆಸೆಗಳ ಬಸುಱನೊಡೆತಿವಿದು (ನಿಭಾಗ. ೪-೯-೩೧) ; ಕದನದೆ ಕಾಲಾಳ ಮೇಲೆ ಕೈಯಿಕ್ಕದೆ ಮದಕರಿಗಳನೊಡೆತಿವಿದು (ಕಂನವಿ. ೧೮-೩೦). [ಒಡೆ$_1$ + ತಿವಿ]

**ಒಡೆದುಳಿ, ಒಡೆತುಳಿ** (ಕ್ರಿ). ಒಡೆಯುವಂತೆ ತುಳಿ, —ಮೆಟ್ಟು : ಪುರದ ನಾರಿಯರ ಕಣ್ಮನವನೊಡೆದು [ಪಾಠಾಂ. ಕಣ್ಮನಗಳಂ ತು]ಳಿವುತುಂ (ನಂಬಿರ. ೩-೬೭) ; ದಳವ ಬಗಿದು ಮಹಾರಥರನೊಡೆದುಳಿದು (ಕುವ್ಯಾಕ. ೯-೩) ; ಉರವಣಿಸಿ ನೃಪಭಟರ ಬಲುಮೋಹರವನೊಡೆದುಳಿದು (ನಿಭಾಗ. ೧೦-೫೯-೪೬). **ಒಡೆತುಳಿ :** ಬಿದ್ದವರನೊಡೆತುಳಿದು ಮೇಲುಬ್ಬಿದ್ದು ಕವಿಕವಿದಾಳು ಕುದುರೆಯ ಬಿದ್ದಿನಲಿ ಬೇಸಱಿಸಿದರು (ಕುವ್ಯಾಕ. ೧೧-೩೮) ; ಅನ್ಯಗಜವೆಂದೀಕ್ಷಿಸುತ್ತುತ್ಪನ್ನರೋಷದಲೊಡೆತುಳಿವನಪ್ಪಳಿಸಿ ಸುಂಡಿಲಲಿ (ನಿಭಾಗ. ೮-೨-೨೮). [ಒಡೆ$_1$ + ತುಳಿ$_1$ (< ತುಱಿ$_1$)]

**ಒಡೆಬಡಿ** (ಕ್ರಿ). ಒಡೆಯುವಂತೆ ಬಡಿ, —ಹೊಡೆ : ಅಡುವ ಕಿಚ್ಚಿನ್ನ ಬಹುದೆ ಮನೆಯ ಸುಡುವಾಗ . . . ಜೀವ ತನ್ನದೆನ್ನಬಹುದೆ ಮಿಕ್ಕು ಹೋಹಾಗ ಇವನೊಡೆಬಡಿದು ಕಳೆ (ವಚಸಂ. ೭೨-೬೯) ; ಬಾಯನೊಡೆಬಡಿ ಮಿಾಸೆಗೀಳ್ ಕುರುಳ್ಗೊಯ್ (ಚಿಬವು. ೪೦-೪೯). [ಒಡೆ$_1$ + ಬಡಿ$_1$]

**ಒಡೆಬೀಳ್** (ಕ್ರಿ). ಒಡೆಯುವಂತೆ ಬೀಳು : ನಮಃಶಿವಾಯಯೆಂಬ ವೃದ್ಧಧ್ವನಿ ಪುಟ್ಟೆ ಕೊಡಂಗಳಮೇಲೊಡೆಬಿಳ್ದು [ಪಾಠಾಂ. ಒಡಬಿರ್ದು, ಒಡಂಬೀಳ್ದು]ಕುಳ್ಳಿರ್ದರ ಮುಖದೊಳಂ ಕಣ್ಣೊಳಂ ಮೆಯ್ಯೊಳಂ ತುಪ್ಪಂ ಚೆಲ್ಲೆ (ನಂಬಿರ. ೬-೪೧). [ಒಡೆ$_1$ + ಬೀಳ್$_1$ (< ಬೀಱ್$_1$)]

**ಒಡೆಮುಗುಚು** (ಕ್ರಿ). ಒಡೆದು ತಲೆಕೆಳಗಾಗು : ಬ್ರಹ್ಮಾಂಡವೊಡೆ ಮುಗುಚುವಂದದಿಂ ಬೊಬ್ಬಿರಿದು ಸುರಿದನವನಂಬುಗಳ (ತುರಂಗ. ೭೭-೨೦). [ಒಡೆ$_1$ + ಮಗುಚು (< ಮಗುಟ್ಚು)]

**ಒಡೆಮುರಿ** (ಕ್ರಿ). ಭಂಗಿತನಾಗಿ ಹಿಂದಿರುಗು : ನಾವು ರಕ್ಕಸನಾಯ ಕಯ್ಯಳಿ ಸಾಯೆವೆನುತೊಡೆಮುರಿದರತಿರಥರು (ಕುವ್ಯಾದ್ರೋ. ೧೭-೧೫).
[ಒಡೆ$_1$ + ಮುರಿ$_1$]

**ಒಡೆಮುರುಚು** (ಕ್ರಿ). ಒಡೆಯುವಂತೆ ತಿರುಗಿಸು : ರಾಣಿ ಹಲುಬಿದ ಳೊಡೆಮುರುಚಿ ಹೆಣಗಿದಳು ಖಳನೊಡನೆ (ಕುವ್ಯಾಸ. ೧೫-೨೩) ; ದುರುಳ ನೀಸರಿಯಿಂದಲಾಕೆಯ ಕರವಿಡಿಯಲೊಡೆಮುರುಚಿ ಭಯದಿಂದಿರದೆ ಬಾಗಿಲ ದಾಟಿ (ಯವಿಪ. ೧೫). [ಒಡೆ$_1$ + ಮುರುಚು (< ಮುರಿಚು)]

**ಒಡೆಮುರುಹು** (ಕ್ರಿ). = ಒಡೆಮುರುಚು : ಹಿಡಿವ ಮಿಗಂಗಳ ಬಿಡದಿರೆ ಬಾಯೊಳು ಬಡಿಗೋಲ್ಗಳನಿಕ್ಕಿ ಕಿವಿಯ ಒಡೆಮುರುಹಿದೊಡೊದಱುವ ಶಬ್ದ ವಿಪಿನದೊಳೆಡೆಗೊಂಡುದು (ಮೋಹತ. ೧೯-೨೦).
[ಒಡೆ$_1$ + ಮುರುಹು]

**ಒಡೆಮುಱಿ, ಒಡಮುರ್ಿ** (ಕ್ರಿ). ೧. ಚೂರಾಗುವಂತೆ ಮುರಿ ; ಹೋಳಾಗಿ ಸೀಳು ; ಭಂಗಿಸು : ಕಡಲ ಕಡುಹಿನ ಬಹಳ ಲಹರಿಯ ನೊಡೆಮುಱಿವ (ಕುವ್ಯಾದ್ರೋ. ೨-೬೭) ; ನಲ್ನುಡಿಯೊಳೆ ಹಯಮುಮಂ ಚಲಮಂ ಬಿಡು ಅಲ್ಲದೊಡಿಗಳೆ ಪಡೆಯನೊಡೆಮುಱಿವೆಂ (ರಾಮಾಶ್ವ. ೯೨-೧೪). **ಒಡಮುರಿ$_2$ :** ೨. ಭೇದಿಸಿಕೊಂಡು ಹೊರಬರು ; ಮೊಳಕೆಯೊಡೆ : ಹರಿದಾರಿ ಹಬ್ಬಿದೆರಿಹೊಲದ ಎದಿಯಮ್ಯಾಲ ಕಟ್ಟೆ ತೇನೊ ಕವನ ಒಡಮುರಿದು ಎದ್ದ ದವನ (ಹಾಡುಪಾ. ೧೦-೧೧) ; ಒಡಮುರಿದೆದ್ದು ನಾಲ್ಕೂ ಕಡೆಗೆ ಕೈಚಾಚಿ ನಿಂತಲ್ಲೆ ಬೇರು ಬಿಟ್ಟಿವೆ ವೃಕ್ಷ (ನೆಱಮು. ೩೧). [ಒಡೆ$_1$ + ಮುಱಿ$_1$]

**ಒಡೆಮೆ** ‘ಒಡವೆ’ ನೋ.

**ಒಡೆಮೆಟ್ಟು** (ಕ್ರಿ). = ಒಡೆದುಳಿ : ಆರೋಹಕರ ಮುಂದಲೆಯ ಸೆಳೆದೊಡ[ಡೆ]ಮೆಟ್ಟಿದನು (ಕುವ್ಯಾಗ. ೧-೫೪) ; ತುಂಡಿಸಿದನಾ ದ್ರೋಣ ಮಂಚದ ಕಾಲೊಳೊಡೆಮೆಟ್ಟೆ (ಸಂಭಪ. ೧೮-೯೯) ; ಕೆಡೆಮೆಟ್ಟಿ ಕರ್ಮಮುಮ ನೊಡೆಮೆಟ್ಟಿ ಬೊಮ್ಮಮುಮನೆಡೆಗಲಿಸಿ ದಾಂಟಿ ಸಂಸೃತಿ ಜಲಧಿಯಂ (ಸಾನಂಚ. ೧-೪೦) ; ಅಘವನೊಡೆಮೆಟ್ಟಿ ಕಾಮನ ನಿಟ್ಟೆಲುವ ಮುಱಿದು (ಜೀವಂಚ. ೧-೧೧). [ಒಡೆ$_1$ + ಮೆಟ್ಟು$_1$]

**ಒಡೆಯ$_1$** (ನಾ). ೧. ಪ್ರಭು; ಯಜಮಾನ; ಸ್ವಾಮಿ: ಕೆಸುಗೊಳ ಮೊಡೆಯ ಬಿನಾಮ್ಮಜಿಗ್ಗೆ (ಎಕ. IV, ಹೆಗ್ಗಡ. ೪–೩; 750); ಒಡೆಯ [ರ]ದೇವರೆಂದು ನಿನಗಿತ್ತೊಡೆ ಪಟ್ಟಮನುರ್ಕಿದಪ್ಪೆ (ಪಂಪಭಾ. ೪–೬); ಒಡೆಯರ ಮನೆಗೆ ಬಂದ ಬಂಟರಂತೆ (ಧರ್ಮಾಮೃ. ೧೦–೩೬); ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ (ಬಸವ. ೯೭); ಒಡೆಯ ಬಂದರೂ ಒಡೆದ ಪಾತ್ರೆ ಕೂಡಲಿಲ್ಲ (ಗಾದೆ). ೨. ಉಳ್ಳವನು; ಹಣವಂತ; ಐಶ್ವರ್ಯವಂತ: ಸ್ವಾಮಿ ಭೃತ್ಯಸಂಬಂಧಮುಮನೊಡೆಯ ಬಡವರೆಂಬ ದೇಶಭಾಷೆಯುಮಂ (ಸು ಕು ಮಾ. ೧೧–೩೪ ವ); ಬಡವನೊಡೆಯರೆಂಬಿರ್ವರೊಳಂ ಸುಖಮಿಲ್ಲದೊಡಂ (ಜೀವಸಂ. ೮೩–೧೬ ವ). ೩. [ವೀಶೈ] ಜಂಗಮ: ಒಡೆಯರಿಗೆ ಉಂಡೆಯ ಮುಜಿದಿಕ್ಕಿ ಭಕ್ತನಾದೆನೆಂಬ ಮಾತ ಸಮ್ಯಕ್ ಶರಣರು ಮೆಚ್ಚುವರೆ (ಅವಚಂ. ೨೨೦–೧೧೧೬); ಒಡೆಯರಂ ಕರೆದು ಕರದೊಳಗುದಕವಿತ್ತು ನಿನ್ನಡಿಗಳಂ ಪ್ರಕ್ಷಾಳನಂಗೆಯ್ದುಕೊಳ್ಳೆಂದು (ಸಿದ್ಧೇಪು. ೨೨–೫೨). 'ಉಡೆಯ' ಪರಾ.

**ಒಡೆಯರ್** = ಮೈಸೂರು ಅರಸು ಮನೆತನದ ಹೆಸರು: ಈ ವಿಜಯನೇ ಒಡೆಯರ ವಂಶದ ಮೂಲಪುರುಷನಾದ ಯದುಒಡೆಯರು (ಒಡೆಕ. ೩).

[ಒಡೆ$_4$ + –ಅನ್. / ತಮಿ. ಉಡೈಯವನ್, ಉಡೈಯಾನ್; ಮಲ. ಉಡಯವನ್, ಉಡಯದು, ಉಡಯಾನ್; ತುಳು. ಒಡಯಿ, ಒಡೆಯಿ; ಕೊಡ. ಒಡೆವೇ; ತೆಲು. ಒಡಯಡು, ಒಡಯುಡು]

**ಒಡೆಯ$_2$** (ಪ್ರ). ಉಳ್ಳ; ಇರುವ: "ಇದಜಿಳಿದುಂಟೆಂಬರ್ಥದೊಳು ದಯಿಪುದುಳ್ಳೊಡೆಯ ವಂತ ಶಬ್ದಂ" (ಶಮದ. ೨೦೬); ಪಸಿವುಂ ನೀರಟ್ಟೆ ಮೊದಲಾಗೊಡೆಯ ಇಪ್ಪತ್ತೆರಡು ಪರೀಷಹಂಗಳುಮಂ ಸೈರಿಸಿ (ವಡ್ಡಾರಾ. ೧–೫); ಒಡೆಯ ಪ್ರತ್ಯಯಕ್ಕೆ – ಪೆರ್ಮೆಯೊಡೆಯಂ . . . ಜಾಣೊಡೆಯಂ (ಶಮದ. ೨೦೬ ಪ್ರಯೋ). [?]

**ಒಡೆಯಕಾರ** (ನಾ). ಯಜಮಾನ; ಪ್ರಭು: ಅಂಥ ರಾಸುಗಳನ್ನು ಮೇಲೆ ಹೇಳಿದ ಒಡೆಯಕಾರರು ಹಿಡಿದು ಅಥವಾ ಹಿಡಿಸಿ ದೊಡ್ಡಿಗೆ ದಾಖಲ್ಮಾಡುವರು (ಗ್ರಾಮಾಕ. ೧೦೬).

[ಒಡೆಯ$_1$+ –ಕಾರ (< –ಕಾಱ)]

**ಒಡೆಯಚ್ಚಸೆಟ್ಟಿ** (ನಾ). ಒಬ್ಬಾತನ ಹೆಸರು: ಆದಿಸೆಟ್ಟಿ ಪ೧ ಒಡೆಯಚ್ಚಸೆಟ್ಟಿ ಜಕ್ಕಿಸೆಟ್ಟಿ (ಎಕ. II, ೨೫೨–೫೮; 1184).

[ಒಡೆಯ$_1$ + ಅಚ್ಚ$_0$ + ಸೆಟ್ಟಿ]

**ಒಡೆಯದು,** ಒಡೆತು (ನಾ). ಉಳ್ಳುದು: ದಸಕಣ್ಣಗ ಮಣ್ಣದಜಾ ಒಡೆಯದು ತನಗೆಯುಂ (ಎಕ. X (S), ಚಿಕ್ಕಬ. ೧೦೪–೧೪; 500 ?); ಇಂದ್ರನೀಲ ಮಾಣಿಕದೊಳೋರಂತಪ್ಪ ಬಣ್ಣಮನೊಡೆಯದು ಮಲಯ ಸುಂದರನೆಂಬಾನೆಯುಂಟು (ವಡ್ಡಾರಾ. ೩೪–೧೯). **ಒಡೆತು:** ಕಱಿಗೊರಲಾತನಾತ್ಮ ವಿಟ ತತ್ತ್ವಮನುಂಟೊಡೆತಾಗಿ ಮಾಡಿ ಬಾಂದೊಱೆಯನೆ ಪೊತ್ತು ಗಾರಿಗೆ ಕ[ವ]ಲ್ದೊಡೞ[ಗೆಯ್ಸಿ]ದನ್ (ಪಂಪಭಾ. ೭–೭೫). [?]

**ಒಡೆಯವಚು,** ಒಡೆಯವುಚು (ಕ್ರಿ). ಒಡೆಯುವಂತೆ ತಬ್ಬು, —ಅದುಮು, —ಹಿಸುಕು: ಮಿಡುಕಿದನು ಸಾತ್ಯಕಿ ವೃಕೋದರನೊಡೆಯವಚಿದನು (ಕುವ್ಯಾದ್ರೋ. ೧೯–೨೯). **ಒಡೆಯವುಚು:** ಕುಸಿದರೆ ಕಾಲೊಳೊಡೆಯವುಚಿ (ಕುವ್ಯಾದ್ರೋ. ೩–೩೬).

[ಒಡೆ$_1$ + ಅವಚು$_1$ (< ಅಮರ್ಚು)]

**ಒಡೆಯವುಚು** 'ಒಡೆಯವಚು' ನೋ.

**ಒಡೆಯಿಕ್ಕು** (ಕ್ರಿ). ಒಡೆದುಹಾಕು; ಚೂರುಮಾಡು: ತನ್ನನೆತ್ತಿಕೊಂಡಾಗ್ರಹಮನೊಡೆಯಿಕ್ಕುವಂತಿಕ್ಕಿ ಪೋಪುದುಂ (ಚಂದ್ರಪು. ೫–೪೧ ವ).

[ಒಡೆ$_1$ + ಇಕ್ಕು]

**ಒಡೆಯಿಡು** (ಕ್ರಿ). = ಒಡೆಯಿಕ್ಕು: ವಿಷ್ಣುಗುಪ್ತನೀಶನ ಬರವೀಪುದಂ ತಡೆದನೆಂದು ಕನಲ್ದೊಡೆಯಿಟ್ಟೊಡೊಂದು ಪೋಟಿನಿತಱಿಳಿದಿರ್ದುದೊಂದು ಕಡಿ ಪೀಠದೊಳಿರ್ದಪುದೆಂಬರೆಲ್ಲರುಂ (ಸಮಪ. ೯–೮); ಅಲುಗಿ ಕೊಂಬಂ ಕಿತ್ತು ಪುಲಿಯ ತಲೆಯೊಡೆಯಿಟ್ಟು ಸುಲಿದು ಚರ್ಮವನು (ರಾಘಚ. ೧೭–೭೦).

[ಒಡೆ$_1$ + ಇಡು$_1$]

**ಒಡೆಯಿಸು,** ಒಡೆಸು (ಕ್ರಿ). ೧. ಒಡೆಯುವಂತೆಮಾಡು; ಚೂರುಮಾಡು; ಮುರಿ: ನುಡಿನೋಟ ಸರಸಗಳಿಂದ ಅಡಿಗಡಿಗಬಲೆಯರಂತರಂಗದ ತಡೆಯೊಡೆಯಿಸುತಿಹನೇನನೆಂಬೆ (ಭರಚ. ೬–೭೯); ಮನೆ ಕಟ್ಟಲು ಕಲ್ಲು ಒಡೆಯಿಸಬೇಕು (ರೂಢಿ). ೨. (ಹಾಲು) ಸ್ವರೂಪ ಕೆಡುವಂತೆ ಮಾಡು; ಹುಳಿಯಾಗಿಸು: ಕಡುಹಸನಂಬಡೆದ ಹಾಲೊಳಗೆ ನೆಲ್ಲಿಯ ಕಾಯ ಪುಡಿಯುಮಂ ಹೊಯ್ದು ಒಡೆಯಿಸಿ ನೀರುಮಂ ಬಸಿವುತಡಕೆಯಂದದೊಳುಂಡೆಯಂ ಮಾಡಿ (ಸೂಪಶಾ. ೬–೧೬). **ಒಡೆಸು:** ೧. ಹನುಮಂತದೇವರಿಗೆ ಒಡೆಸಿದ ತೆಂಗಿನಕಾಯಿ (ಗಂಮಾಯಿ. ೧೫).

[ಒಡೆ$_1$ + –ಇಸು$_3$]

**ಒಡೆಯಿಱಿ** (ಕ್ರಿ). ಒಡೆಯುವಂತೆ ಕುಕ್ಕು, —ಹೊಡೆ: ಮದ್ಯಭಾಂಡವನು ಕಲ್ಲಮೇಲೊಡೆಯಿಱಿದು ಬಲವನು ತಲ್ಲಣಿಸಲಪ್ಪಳಿಸಿ (ನಿಭಾಗ. ೧೦–೮೫–೧).

[ಒಡೆ$_1$ + ಇಱಿ$_1$]

**ಒಡೆಯುಚ್ಚು** (ಕ್ರಿ). ಒಡೆಯುವಂತೆ ಸೀಳು; ಭೇದಿಸು: ಒಡಿಮೊಲಂಗೊಂಡೊಡೆಯುಚ್ಚಿಕೊಂಡು [ಪಾಠಾಂ. ಡೊಡೆವುಚ್ಚೆಗೊಂಡು, ಡುವೊಡೆಯುಚ್ಚಿಕೊಂಡು, ಡುವೊಡೆವುಚ್ಚಿಕೊಂಡು, ಡೆಡೆ ಉಚ್ಚಿಕೊಂಡು] ನಂಬಿಯುಂ ತುಂಬರನು ಮುಳಿಯೆ ಪೆರ್ಬಲವೆಲ್ಲವಂ ಮರ್ಬಿನೊಳಡಂಗಿಸೆ (ನಂಬಿರ. ೧೮–೩೮).

[ಒಡೆ$_1$ + ಉಚ್ಚು$_1$ (< ಉರ್ಚು)]

**ಒಡೆಯೆಸು** (ಕ್ರಿ). ಒಡೆಯುವಂತೆ, ಸೀಳುವಂತೆ ಬಾಣವನ್ನು ಬಿಡು, —ಪ್ರಯೋಗಿಸು: ಚಂದ್ರಾರ್ಧ ಶರದಲಿ ನೊಸಲನೊಡೆಯೆಚ್ಚ (ಕುವ್ಯಾದ್ರೋ. ೧–೫೬); ಮುನಿದು ನೋಡಲುಕಿದೊಡೆ ನಿನ್ನ ಕಿಂಕರನಲ್ಲೆನುತೆ ರಥವನೊಡೆಯೆಚ್ಚ (ಜೈಮಿಭಾ. ೧೩–೩೪).

[ಒಡೆ$_1$ + ಎಸು$_1$]

**ಒಡೆಯೇಳ್** (ಕ್ರಿ). ಒಡಕು ಕಾಣಿಸಿಕೊಳ್ಳು; ಒಡೆದು ಮೇಲಕ್ಕೆ ಏಳು: ಮೇಲೆ ನಿಚ್ಚಂ ಪರಿವ ದಿನಮಣಿಯ ಮಣಿರಥದ ಗಾಲಿಗಳ ನೇಮಿಗಳ ಪೊಯ್ಲಿಂದಲೊಡೆ[ಪಾಠಾಂ. ದೆ ಪುಡಿವಡೆದ]ಯೆದ್ದ ಸಾಲ ಹೊಂಗೋಟೆದೆನೆ ಗೊನೆಗಳಿಂದೇಳ್ವ ದೂಳಲ್ಲಿಗಲ್ಲಿಗೆ ನಭದೊಳು (ಜೈಮಿಭಾ. ೩–೨೧).

[ಒಡೆ$_1$ + ಏಳ್$_1$ (< ಏೞ್$_1$)]

**ಒಡೆಯೊತ್ತು** (ಕ್ರಿ). ಒಡೆದು ಹೋಗುವಂತೆ ಒತ್ತು, —ಅದುಮು: ಅಂತು ಪೊಕ್ಕುದನಾ ಸಿಂಹಂ ಪಾಯ್ದು ಗಂಟಲನೊಡೆಯೊತ್ತಿ ಕೊಂದು (ಪಂಚತಂ. ೨೮೪–೧೩); ಖಾತಿಯೊಳಂಕುಶದಿನೊಡೆಯೊತ್ತಿ ಬಿಟ್ಟನು ಗಜವಂ (ಕುವ್ಯಾದ್ರೋ. ೩–೫೩).

[ಒಡೆ$_1$ + ಒತ್ತು$_1$]

**ಒಡೆವರಿ** (ಕ್ರಿ). ಒಡೆಯುವುದಕ್ಕೆ ಹೋಗು, —ಪ್ರಯತ್ನಿಸು: ತನ್ನ ತಾ ಬೀಳುವುದ ಕಂಡು ತಳ್ಳಿ ಹಗೆಯಾಗಲೇಕೆ ಒಡೆದುದ ಕಂಡು ಒಡೆವರಿಯಲೇಕೆ (ಸರ್ವವ. ೩೮–೧೯೫).

[ಒಡೆ$_1$ + ಪರಿ$_1$]

**ಒಡೆವಾಯ್,** ಒಡೆಹಾಯ್ (ಕ್ರಿ). ಒಡೆದು ಹಾಯು; ಸೀಳಿಕೊಂಡು ಹೋಗು: ನಡೆನೆತ್ತ ನೀಲಾಚಲಶಿಖರದ ಕಲ್ಲ ಪಡಿಯೊಳಗಿದ್ದ ಕೆನ್ನೀರು ಒಡೆವಾಯ್ವಂತೆ ರೋಹಿತಧಾರೆ ಸುರಿದು ಕಿಗ್ಗಡಲಲ್ಲಿ ಪಾಹಿನಿಯಾಯ್ತು (ಮೋಹತ. ೧೨–೭೦). **ಒಡೆಹಾಯ್:** ಜೋಡನೊಡೆಹಾಯ್ದಂಬು ಧರಣಿಯೊಳಾಡಿದವು (ಕುವ್ಯಾಭೀ. ೮–೪೭); ಜೀವವ ತೆರಳಿಚಿದನೊಡೆ ಹಾಯ್ದುದಾತ್ಮಜ್ಯೋತಿ (ತೊರರಾ. ೩–೫–೧೯); ಪರಬಲವನೊಡೆ ಹಾಯ್ದು (ನಿಭಾಗ. ೬–೧೦–೨೩).

[ಒಡೆ$_1$ + ಪಾಯ್$_1$]

**ಒಡೆವೊಯ್**, ಒಡೆಹೊಯ್ (ಕ್ರಿ). ಒಡೆಯುವಂತೆ ಹೊಡೆ: ಧುರದೊಳರುಹಪ್ಪಾಸರಾಯನ ವರ ಕೃಪಾಣದ ಪೊಗರು ಪೊಗರಿಲ್ಲರಿನೃಪಾಲರ ಶಿರವನೊಡೆವೊಯ್ದಿದೆತ್ತೆ (ಸಾಳ್ವಭಾ. ೨-೨೩). **ಒಡೆಹೊಯ್** : ಕವಿದು ಮುಂದಲೆವಿಡಿದು ರಾವ್ತರ ತಿವಿದು ಜೀವವ ಕಳಚಿ ಕೆಲಬಲದವರ ಕೆಡೆಹೊಯ್ದು ಹಿತಘಾಯವ ನೋಟದೊಡೆಹೊಯ್ದು (ಕುವ್ಯಾಭೀ. ೪-೬೪); ನುಡಿ ಹೆಣ್ಣೆಯೆಂಬರು ಸುಮ್ಮನಿಹಳು ನಮ್ಮನೊಡೆಹೊಯ್ದು ಹೋಗೆಂಬರದಕೆ ಮುಡಿ ಬಾಗಿ ನಗುತಿಹಳು (ಭರಚ. ೪೧-೪೮).

[ಒಡೆ₁ + ಪೊಯ್₁]

**ಒಡೆಸೀಳ್**, ಒಡೆಸೀಳು (ಕ್ರಿ). ಒಡೆದು ಸೀಳು; ಭಾಗಮಾಡು: ಹರನಿಭದೈತ್ಯನಂ ಸಂಹರಿಸಿ ಸೀಳುವ ಮಾರ್ಗದಿಂದೊಡೆಸೀಳ್ದನುರ್ಬಿನಲಿ (ಬಸವು. ೨೧-೪೩). **ಒಡೆಸೀಳು** : ಹರಿಯದಿಜ ಬಿಜಿಗಾಯ್ಗೆ ತನ್ನಯ ಕರವ ಸಂಧಿಸಿ ನಾರ ಸೀಳಿದ ಪರಿಯಲೊಡೆಸೀಳಿದನು ಕೃಷ್ಣನು ತೋಳಬಲುಹಿನಲಿ (ಸಾಳ್ವಭಾ. ೧೧-೫೮). [ಒಡೆ₁ + ಸೀಳ್₁]

**ಒಡೆಸೀಳು** 'ಒಡೆಸೀಳ್' ನೋ.

**ಒಡೆಸು** 'ಒಡೆಯಿಸು' ನೋ.

**ಒಡೆಹಾಯ್** 'ಒಡೆವಾಯ್' ನೋ.

**ಒಡೆಹೊಮ್ಮು** (ಕ್ರಿ). ಒಡೆದು ತಲೆದೋರು, —ಪ್ರಕಟವಾಗು: ಕಪ್ಪುಹೆಪ್ಪಿನ ಕುರುಳ ಕರ್ಮುಗಿಲ ಬಸಿರಿಂದ ತೊಟ್ಟನೊಡೆಹೊಮ್ಮಿ (ಹೊಂಗಳು. ೧೭-೫). [ಒಡೆ₁ + ಹೊಮ್ಮು (< ಪೊಣ್ಮು)]

**ಒಡೆಹೊಯ್** 'ಒಡೆವೊಯ್' ನೋ.

**ಒಡ್ಡ₁**, ಒಟ್ಟ₁ (ನಾ). ೧. ಕಲ್ಲು, ಮಣ್ಣಿನಕೆಲಸಗಳನ್ನು ಮಾಡುವವನು; ಒಡ್ಡುವವನು: ಕೆಱೆಯ ಕಟ್ಟಿಸುವ ಒಡ್ಡನ ಪ್ರತಾಪವನೇನೆಂಬೆನಯ್ಯ (ಶೂನ್ಯಸಂ. ೩೭-೧೯); ಕರೆಯೋ ಒಡ್ಡರೆಱೆಯನಂ (ಸಿದ್ಧರಾ. ೯-೩೯); ಕುಳಿ ತೆವರ ತಳಪಟವ ಮಾಡುವ ಪದಾಗ್ರದ ಸಲಿಕೆ ಗುದ್ದಲಿ ಹಾರೆಗಳ ಬಲುಗೆಲಸದೊಡ್ಡರ ಕಳಕಳದಿ ಬರುತಿರ್ದುದಸುರರಥ (ತೊರರಾ. ೫-೭-೧೨). ೨. ಒರಟು ಕೆಲಸ ಮಾಡುವವನು; ನಯನಾಜೂಕಿಲ್ಲದವನು: ಒಡ್ಡರಲ್ಲಿ ದಡ್ಡನಾಗಬಾರದು (ಗಾದೆ). ೩. ಒರಿಸ್ಸಾ ದೇಶದವನು: ಚೇರಮ ವೈರಮಂ ಬಿಸುಡು ಪಾಂಡ್ಯ ಕಡಂಗದಿರಂಧ್ರ ರಂಧ್ರಮಂ ಪಾರದಿರೊಡ್ಡ ಗೊಡ್ಡಮನದಂ ಬಿಡು (ಎಕ. XII, ತಿಪಟೂ. ೧೨೮-೮; 1202). **ಒಟ್ಟ₁** : ೧. ಕಟ್ಟದಯೊಟ್ಟಜಿಗ್ಗಿ ಪನ್ನಿರ್ಚಣ್ಣಗ ಮಣ್ಣು (ಎಕ. XII, ತುಮಕೂ. ೫-೭; 995).

ಒಡ್ಡರಗಾಡಿ, ಒಡ್ಡರಬಂಡಿ = ಆರೆಕಾಲುಗಳಿಲ್ಲದ ಚಕ್ರದಿಂದ ಕೂಡಿದ ಕಡಮೆ ಎತ್ತರದ ಬಂಡಿ, —ಗಾಡಿ: ಒಡ್ಡರಗಾಡಿಯಿಂದ ಜಾರಿ ಬಿದ್ದರೆ ಅಪಾಯ ಕಡಿಮೆ; ಮೈಲ್ ಟ್ರೈನಿಂದ ಬಿದ್ದರೆ ಯಮಲೋಕ ಪ್ರಾಪ್ತಿಯೇ (ಜೀವಾತ್ಮ. ೨೬೪); ನಕ್ಷತ್ರಗಳೆಲ್ಲ ಒಡ್ಡರಬಂಡಿಯ ಗಾಲಿಯಂತೆ ಇರುವ ವಿಶ್ವಕ್ಕೆ ಸೇರಿದುವು (ವಿಜ್ಞಾಕ. ೬೨); ಅವನ ಮನಸ್ಸಿನ ಆತುರಕ್ಕೆ ವಿಮಾನದ ವೇಗ ಒಡ್ಡರಬಂಡಿಗಿಂತಲೂ ಕಡೆಯಾಗಿ ಕಂಡಿತು (ರಾಗಿಣಿ. ೨೬೩).

[ಪ್ರಾ. ಓಡ್ಡ (< ಸಂ. ಓಡ್ರ). / ತಮಿ. ಒಟ್ಟಯನ್; ಮಲ. ಒಟ್ಟನ್; ತೆಲು. ಒಡ್ಡೆ]

**ಒಡ್ಡ₂** (ನಾ). ಮೂರ್ಖ; ದಡ್ಡ: ನೀನು ಶುದ್ಧ ಒಡ್ಡ (ರೂಢಿ).

[ಪ್ರಾ. ವೊಡ್ಡ]

**ಒಡ್ಡ₃** (ನಾ). ೧. ರಾಶಿ; ಗುಂಪು; ಸಮೂಹ. ೨. (ಜೂಜಿನಲ್ಲಿ) ಪಣಕ್ಕೆ ಇಡುವ ದ್ರವ್ಯ: ಒಡ್ಡಮಂ ಪೇೞಿಮೆನೆ . . . ಸಾಯಿರ ಗದ್ಯಾಣದ ಪೊನ್ನೇ ಸಾಲ್ಗುಂ (ಪಂಪಭಾ. ೬-೭೧ ವ); ಜೂದಿಂಗೆ ಪಲಗೆಗೆ ಪತ್ತುಸಾಸಿರ ವಿತ್ತಮೆ ಸಾಲ್ಗುಮೆಂದೊಡ್ಡಮಂ ನುಡಿದು (ನೇಮಿಪು. ೧೦-೨೮ ವ); ಕಬ್ಬಿನ ಹಣಿದವನಾಡುವರಲ್ಲದೆ ಕಾಯದ ಹಣಿದವನಾಡುವರೆ ಮೇಲೊಡ್ಡವಾಯಿತ್ತೆಂದು . . . ನೀನಿಕ್ಕಿದ ಜೂಜಿಂಗೆ ಹೊಯಿದು ಗೆದ್ದ ಸಿರಿಯಾಳ (ಬಸವ. ೬೭೯); ತಡೆಯದೊಡ್ಡವನಿಕ್ಕಿ ಭಂಡಾರವೆಲ್ಲವ ಪೊಡವಿಪ ಸೋತನೇನೆಂಬೆ (ನಾಗಕು. ೯-೧೧೬).

ಒಡ್ಡಮಾಗು = ಗುಂಪಾಗು; ಸಂದಣಿಸು: ನಿನ್ನಿನಿತು ಸೈನ್ಯಮನೊಡ್ಡಮಾಗಿರಲೊಡ್ಡಿ ನಿಂದು (ನೇಮಿಪು. ೧೧-೧೩೨).

[< ಒಡ್ಡು₁. / ತಮಿ. ಮಲ. ಒಟ್ಟ; ತೆಲು. ಒಡ್ಡು, ಒಡ್ಡಿಮಿ]

**ಒಡ್ಡಂತಿ** (ನಾ). ಹುಟ್ಟಿದ ದಿನ; ಜನ್ಮದಿನ: "ಒಡ್ಡಂತಿ – ವರ್ಧಂತಿ = ಹುಟ್ಟುಹಬ್ಬ" (ತದ್ಭಕೋ. ೫); ಕಂತು ಮಹೋತ್ಸವಂ ರತಿಯ ನೋಂಪಿ ವಸಂತನೃಪಾಲ ಪೂಜೆಯೊಡ್ಡಂತಿಯ ಪೂರ್ವದಾನತಿಥಿ (ದಶಕು. ೮-೧೭); ಆ ವಿಭುವಿನಪರಿಮಿತ ಸಂಭ್ರಮೋತ್ಕರ್ಷದಿಂ ತೀವಿದೊಡ್ಡಂತಿಯುತ್ಸವದ ವರ್ಣನೆ (ವರ್ಧವ. ೧-೬). 'ವಡ್ಡಂತಿ' ಪರಾ. [< ಸಂ. ವರ್ಧಂತಿ]

**ಒಡ್ಡಣ₁** 'ಒಡ್ಡವಣೆ₁' ನೋ.

**ಒಡ್ಡಣ₂** 'ಒಡ್ಯಾಣ' ನೋ.

**ಒಡ್ಡಣೆ** 'ಒಡ್ಡವಣೆ₁' ನೋ.

**ಒಡ್ಡಣೆಗೊಳ್** (ಕ್ರಿ). ರಾಶಿಯಾಗು; ಗುಂಪಾಗು: ಕಂಡಖಂಡಜ್ವಾನದಿಕ್ಕೆಯ ಪರಿಯನಿದಿರಿಟ್ಟು ಮಂಡಳಿಸಿ ಕಲುಮರನಲೊಡ್ಡಣೆಗೊಂಡು ಮಾಡಿಸಿ ಹೆಸರುವಡೆದುದ್ದಂಡ ರೀತಿಯ (ಪ್ರಭುಲೀ. ೧೩-೩).

[ಒಡ್ಡಣೆ (< ಒಡ್ಡವಣೆ₁) + ಕೊಳ್₁]

**ಒಡ್ಡತನ** (ನಾ). ಒರಟುತನ; ನಯವಿಲ್ಲದಿರುವಿಕೆ: ಅವನ ತುಂಟತನ, ಒಡ್ಡತನ ಅವಳಿಗೆ ಬೇಸರವನ್ನುಂಟುಮಾಡುತ್ತಿರಲಿಲ್ಲ (ಮುನಿಮಾ. ೬೨); ಈಗಲೇ ಅಷ್ಟೊಂದು ಒಡ್ಡತನ ಮಾಡಬಾರದು (ಮುನಿಮಾ. ೧೦೫).

[ಒಡ್ಡ₁ + -ತನ]

**ಒಡ್ಡದೆಱೆ** (ನಾ). ಒಡ್ಡರಮೇಲೆ ಹಾಕುವ ತೆರಿಗೆ: ಅಸಗದೆಱೆ ತೊತ್ತುದೆಱೆ ಭಂಡಿದೆಱೆ ವೊಡ್ಡದೆಱೆ (ಎಕ. IV, ಹುಣಸೂ. ೧೩೭-೪೦; 1162). [ಒಡ್ಡ₁ + ತೆಱೆ₃]

**ಒಡ್ಡಮರಸ** (ನಾ). ಒಬ್ಬಾತನ ಹೆಸರು: ಈ ಧರ್ಮಮಂ ತಪ್ಪದೆ ಪ್ರತಿಪಾಳಿಸುವ ಒಡ್ಡಮರಸ (ಎಕ. VII, ಶಿವಮೊ. ೨೩-೧೪; 1115).

[ಒಡ್ಡಮ್ಮ₀ + ಅರಸ₁]

**ಒಡ್ಡಮ್ಮ** (ನಾ). ಒಬ್ಬಾತನ ಹೆಸರು: ಸಾನ್ತಳಿಗೆ ಸಾಯಿರದರಸನೊಡ್ಡಮ್ಮ (ಎಕ. VII, ಶಿಕಾರಿ. ೧೯೪-೩; 1007); ದಣ್ಣನಾಯಕೊಡ್ಡಮ್ಮನ ಅಯ್ದುಂ ಮನ್ದಿನ ಸಾಸಿವರ್ (ಮೈಆರಿ. ೧೯೩೧, ೭೪-೬೮; 1053).

[ಒಡ್ಡ ? + ಅಮ್ಮ₁]

**ಒಡ್ಡಯಿಸು** 'ಒಡ್ಡಿಸು' ನೋ.

**ಒಡ್ಡಯ್ಸು** 'ಒಡ್ಡಿಸು' ನೋ.

**ಒಡ್ಡವ** (ನಾ). ವಿನ್ಯಾಸ; ರಚನಾಕ್ರಮ: ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ . . . ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ (ಕುವ್ಯಾಆ. ೧-೧೫); ಪರರ ಬಗೆ ಪರರುಕ್ತಿ ಪರರುತ್ಕರುಷ ಪರರುನ್ನತಿಯ ಕೃತಿಯಪಹರಣೆ ಪರರುಪಮಾನ ಪರರೊಡ್ಡವದ ಪರುಠವದ ಹರಹು ಹೊಗದಗ್ಗಳಿಕೆ (ತೊರರಾ. ೧-೧-೧೨). [< ಒಡ್ಡು₁ + -ವ₃]

**ಒಡ್ಡವಣೆ₁**, ಒಡ್ಡಣ₁, ಒಡ್ಡಣೆ (ನಾ). ೧. ಗುಂಪು; ರಾಶಿ; ಸಮೂಹ: ಮುಗಿಲೊಡ್ಡವಣೆಯಾಕ್ಷಣ ಹರಿದು ನಿರ್ಮಲವಾಗದೇ (ಪ್ರಭುಲೀ. ೨೪-೩೯). ೨. ಸನ್ನಾಹ; ಸಜ್ಜು: ಲಗ್ಗೆಯ ದೆಸೆಯ ದಿವಸ ಸದರನಿದರಮುಮಂ ಜಂತ್ರದೊಡ್ಡವಣೆಗಳುಮಂ ಭೂಮಾನಮುಮಂ ಪುಗುವ ಪೋಗುಮುಡುವ ನೀರಕಂಡಿಯ ಕುದುರೆಗಂಡಿಯ ತೆಱಪುಗಳುಮಂ ವಸುಷೇಣಂ ಬಳಸಿನೋಡುತ್ತುಂ (ಅನಂಪು. ೧೧-೮೨ವ).

ಒಡ್ಡಣ$_1$ : ೧. ಮಿಸುಪಸಿಧೇನು ಮೀನ ನಿವಹಂ ಪೊಳೆವಡ್ಡಣದೊಡ್ಡಣಂ ವಿರಾಜಿಸುವುರು ಕೂರ್ಮ ಕೋಟಿಯಿಂ (ವರ್ಧಪು. ೮–೧೨); ಮರವೆಯೊಡ್ಡಣ ಕಲಹದೆಟ್ಟವಶುಚಿಯ ಬೆಸುಗೆ . . . ಈ ದೇಹವು (ಕೈಕವ. ೧–೧೮–೧) ; ಒಡ್ಡಿಹ ರಾವುತರುಗಳ ಒಡ್ಡಣದಿಂದಾ ರಾಯನೋಲಗ ಕಣ್ಗೆಡ್ಡಮಾಯ್ತು (ಕುರಾಸಾಂ. ೧೮–೪೩). ೩. ಪಡೆ; ಸೈನ್ಯ : ಪೊಜವುಟ್ಟೊಡ್ಡ[ಪಾಠಾಂ. ಟ್ಟುರ]ಣಮನೊಡ್ಡೆ ಬಿಲ್ ಬಿಲ್ಲೊಳ್ . . . ತಾಗಿ (ವಡ್ಡಾರಾ. ೧೪೮–೫) ; ಮನೋಭವನೊಡ್ಡಣದಂತೆ ತಂಡತಂಡದೆ ಪರಿತಂದು (ಪಂಪಭಾ. ೪–೩೫) ; ಬಹುಭಂಜನೆಯೊಡ್ಡಣದಿಂದಹಮಹಮಿಕೆ ಮಿಕ್ಕು (ಅನಂಪು. ೧೧–೫೯). ೪. ಯುದ್ಧರಂಗ : ತಟತಟ ನೇಸಜ್ ಮೂಡುವುದುಮೊಡ್ಡಣಕ್ಕೆಟ್ಟಂದರ್ (ಪಂಪಭಾ. ೧೧–೬). **ಒಡ್ಡಣೆ** : ೧. ಮುಗಿಲೊಡ್ಡಣೆಯೊಡ್ಡಿತುಕಾರ ಕೊರ್ವಿನೊಳ್ (ಗಿರಿಕ. ೯–೩೬) ; ಮೇಲನಜಿಯದ ನೃಪನ ಬಾಳಿಕೆಗಾಳಿಗೊಡ್ಡಿದ ಸೊಡರು ನೀರದ ಜಾಲದೊಡ್ಡಣೆ ಸುರಧನುವಿನಾಕಾರ ಶವದುಡಿ ('ಚುವ್ಯಾಸ. ೧–೫೧). ೫. ಒಡ್ಡುವಿಕೆ; ಒಟ್ಟುವಿಕೆ. 'ಈಡೊಡ್ಡಣೆ' ಪರಾ. ೬. "ಡಂಭ, ಡೌಲು" (ಪ್ರಭಣ್ಣ). [ಒಡ್ಡು$_1$ + –ಅಣೆ$_4$]

**ಒಡ್ಡವಣೆ**$_2$ (ನಾ). ಸಂಗೀತದ ಒಂದು ಪರಿಭಾಷೆ (?): ನವ ರೀತಿಯೊಡ್ಡಯಿಸೆ ಒಡ್ಡವಣೆ ಮೇಲಡರೆ ಪೊಸದೇಸಿ ಪಜ್ಜಳಿಸೆ ಪಂಜಳಂ ಪಲ್ಲಯಿಸೆ (ಅನಾರ. ದೇ. ೧೮೨–೫). [?]

**ಒಡ್ಡವಿಸು** 'ಒಡ್ಡಿಸು' ನೋ.

**ಒಡ್ಡವೊಡಿಗೆ** (ನಾ). ಒಂದು ಊರಿನ ಹೆಸರು : ಇಂಗಳಿಸರ ಬಾಗೆವಾಡಿ ಸಾಮಳವಾಡಿಗೆ ಒಡ್ಡವೊಡಿಗೆ ಮಧ್ಯವರ್ತಿ[ರ್] ಪಿಪ್ಪರಗೆ ನಾಮುಗ್ರವೋ (ಸೌಇಇ. XI–i, ೮–೧೯ ; 862). [?]

**ಒಡ್ಡಳಿ** 'ಒಡ್ಡಱಿ' ನೋ.

**ಒಡ್ಡಳಿಸು** (ಕ್ರಿ). ಸೈನ್ಯವನ್ನು ನಾಶಮಾಡು : ದಶಶತಕಂಗಳಿಂದೆ ಪರರಾಳ್ಕೆಗೆ ಸಂದಿಹ ಸ್ವರ್ಣಭೂಮಿಯಂ ವಿಸಸನಕೊಡ್ಡದೊಡ್ಡಳಿಸಿ ವೈರಿಯನನ್ನಿಯ ನಲ್ಮೆಗಾಳೆಗಂ ಪೊಸತೆನೆ ಧಾತ್ರಿಗೆಂಬೊಲೆಸೆದಂ (ಅಮತಂ. ೨೬).

[ಒಡ್ಡಳಿ (< ಒಡ್ಡಱಿ) + –ಇಸು$_3$]

**ಒಡ್ಡಱಿ, ಒಡ್ಡಳಿ** (ಕ್ರಿ). ೧. ಒಡ್ಡು ಕೆಡು; ಸತ್ತ್ವಗುಂದು; ಕ್ರಮತಪ್ಪು; ರೀತಿಗೆಡು: ಇವಂದಿರ ಪಾಡೆಱಿವಂದಮಂತಿರವೆ[ಱೊ]ಡ್ಡಱಿಯದಂತಿರೆ ನಮ್ಮವರೆಲ್ಲರಂ (ಕವಿರಾ. ೧–೧೩೦) ; ಬರ್ಕೆ ನಿನ್ನ ಪಿರಿಯಣ್ಣನೆ ಪಣ್ಣನೆ ನೋಟ್ಪುಮಾತನೊಡ್ಡಱಿಯುದ ಗಂಡವಾತಂ (ಪಂಪಭಾ. ೩–೧೬); ನೆಟಲಂ ನೋಡಿದ ರೂಪಿನ ಪೊಟಪದು ಕನ್ನಡಿಯನೊರ್ಮೆ ನೋಡಿದೊಡಿರದೊಡ್ಡಱಿವುದು ನರೆತೆರೆಯಿಂ (ಅನಂಪು. ೩–೭೮). ೨. ನಾಶಮಾಡು ; ಅಂದಗೆಡಿಸು : ಪೆಡೆಯಂ ಬೆಳಿಪ ಬಿರುದಪ್ಪವರ ಬಿರುದನೊಡ್ಡಱಿವೊನ್ (ಎಇ. XXIV, ೨೫–೧೦ ; 885). **ಒಡ್ಡಳಿ** : ೧. ಹೆಡ್ಡರೆನ್ನೊಡೆವುಟ್ಟದವರೀತನೋಲೆಗೇಳೊಡ್ಡಳಿದೋಡಿದರ್ ತಪಕೆ (ಭರಚ. ೪೮–೪೨).

[ಒಡ್ಡು$_2$ + ಅಱಿ$_1$]

**ಒಡ್ಡಾಯ** (ನಾ). ಒಂದು ಬಗೆಯ ವರಸೆ (?) : ರಕ್ಕಸನ ಕಂಡೊಡನೆ . . . ಮುಂಬರಿದು ಪಿಡಿದು ಘಾರಾಘಾರಿಯೊಡ್ಡಾಯವೆಂಬುತ್ಕಳಿಕೆಯೊಳ್ ನೋಡುವ ಕಣ್ಗೆ ಇಂಬಾಗೆ (ಲಕ್ಷ್ಮಭಾ. ೩೪–೨೬). [ಒಡ್ಡು$_1$ + ಆಯ$_1$]

**ಒಡ್ಡಾರ** (ನಾ). ೧. ಸಮಸ್ಯೆ ; ಸ್ಪರ್ಧೆ : ದೊಡ್ಡಣ್ಣ ಚಿಕ್ಕಣ್ಣ ವೃಷಭಣ್ಣ ನಿಮ್ಮಯ ದೊಡ್ಡಮಾವನಿಗೆನಗೊಂದು ಒಡ್ಡಾರವೊಡ್ಡಿದೆಯಿದ ನೀವು ತಿದ್ದಿಕೊಟ್ಟಡ್ಡಾಕೆ ಬಿಡಿಸಿರ್ರೆಯೆಂದ (ಭರಚ. ೪೩–೯೩). ೨. ವಿರೋಧ ; ಹಗೆತನ : ಕೊರ್ಬು ಸೂರುಳೊದವಿತ್ತಾಸರ್ಬೆಸಂಬೆತ್ತುದಾವರಿಸಿತ್ತಾಸೆಕನಲ್ಕೆ ಮಿಕ್ಕುದುರುಬಿತ್ತೊಡ್ಡಾರಮುಣ್ಮಿತ್ತು ಕಾತರಮಿನ್ನೆಂತುಟು ಬಣ್ಣಿಪೆಂ (ಚಿಕವಿ. ೬–೭೫). [← ತೆಲು. ಒಡ್ಡಾರ]

**ಒಡ್ಡಾಸರ** (ನಾ). [ಸಂಗೀತ] ವಾದ್ಯಪ್ರಬಂಧಗಳಲ್ಲಿ ಒಂದು ಬಗೆ : ಮಲಪುರಿಗ್ಗವಣೆ ಒಡ್ಡಾಸರ ಪಡಿಸಣ ಚಮತ್ಕಾರ ಶಬ್ದ ಶೃಂಗಾರ ಝೋಂಕಾರಂ ಮೊದಲಾದ ವಾದ್ಯಪ್ರಬಂಧಂಗಳಲ್ಲಿ ತನ್ನ ಸೇರುವೆಯ ನಾರ್ಪೆವುತ್ತೆ (ವಿರೂಪಾ. ೮೧ ವ). [?]

**ಒಡ್ಡಾಳು** (ನಾ). ದಪ್ಪನೆಯ ಆಳು; ಸ್ಥೂಲಮನುಷ್ಯ: ಹೆಡ್ಡಾಳಾದರೂ ಒಡ್ಡಾಳಾಗಿರಬೇಕು (ಗಾದೆ). [ಒಡ್ಡ$_1$ + ಆಳು$_3$ (< ಆಳ್$_3$)]

**ಒಡ್ಡಿ**$_1$ (ನಾ). ೧. ಜೂಜಿಗೆ ಒಡ್ಡುವ ಪಣ; ಪಂದ್ಯದಲ್ಲಿ ಒಡ್ಡುವ ವಸ್ತು : "ಗ್ಲಹವೆಂಬುದು ಜೂಜಿನ ಒಡ್ಡಿ" (ಹಲಾಯು. ೧೨೫–೭೪). ೨. ಸ್ಪರ್ಧೆಯ ಮಾತು ; ಹುರುಡಿನ ಮಾತು : ಒಡ್ಡಿದ ಭೈರವ ಬಲರಾಮನ ಪೆಟ್ಟುದೊಡ್ಡಿತೆನುತ್ತೆ ನಿಷ್ಠುರದಿ ಒಡ್ಡಿಯ ನುಡಿದು ಕೃಷ್ಣಾಗ್ರಜಾತನಮೇಲೆ ಜಡ್ಡಿದ ಗದೆಯ ಗಾಯವನು (ಮೋಹತ. ೩೯–೧೩). ೩. ದೊಡ್ಡಿ ; ರೊಪ್ಪ : ಅವರಿಗೆ ಕೋಳಿ ಒಡ್ಡಿ, ಕುರಿ ಒಡ್ಡಿ, ಹಂದಿ ಒಡ್ಡಿಗಳೆಂದರೆ ಗದ್ದೆ ತೋಟಗಳಷ್ಟೆ ಮುಖ್ಯವಾಗಿದ್ದವು (ಮಲೆಮ. ೩೮).

[< ಒಡ್ಡು$_1$]

**ಒಡ್ಡಿ**$_2$ (ನಾ). ನಾಲ್ಕರ ಗುಂಪು; ಚತುಷ್ಟ : ಮೀನು . . . ಎಂದರೆ ಹತ್ತು ಒಡ್ಡಿ ಮತ್ತೊಂದು ಮಾತ್ರ. ಒಡ್ಡಿಗೆ ಮೂರುಪಾವಲಿ . . . ಚಂಪಿಯ ಲೆಕ್ಕ ಈ ಒಡ್ಡಿ – ಪಾವಲಿಗಳ ಮಿತಿಯಲ್ಲೇ ಇತ್ತು (ಚಿಗುಬ. ೮೬). 'ಉಡ್ಡಿ$_1$' ಪರಾ. [ದೇ. ‖ **ತುಳು.** ಉಡ್ಡಿ; **ತೆಲು.** ಉಡ್ಡ]

**ಒಡ್ಡಿಕೆ** (ನಾ). ಒಡ್ಡುವುದು ; ಎದುರಾಗಿ ಚಾಚುವುದು (ಕ).

[ಒಡ್ಡು$_1$ + –ಇಕೆ]

**ಒಡ್ಡಿಗಜುಗ** (ನಾ). ನಾಲ್ಕು ಗಜ್ಜುಗದ ಗುಂಪು (ಕ). '**ಉಡ್ಡಿಗಜುಗ**' ಪರಾ. [ಒಡ್ಡಿ$_2$ + ಗಜುಗ (< ಗರ್ಜುಗ)]

**ಒಡ್ಡಿತು** (ಗು). (?) : ಮೊಜನಂದವುಪ್ಪ ಕಾಲೊರಸುವೊಡೊಡ್ಡಿತಪ್ಪ ಪರಡಂತಸಿದುಂ ಮಿಗೆ ದೊಡ್ಡಿತಾದಮೇಣ್ ಕರಮುಸಿದಾದ ಜಂಘೆ (ಲೋಕೋಪ. ೧೧–೫೨). ℙ ಈ ಪ್ರಯೋಗದಲ್ಲಿ 'ಒರಸುವ ದೊಡ್ಡಿತಪ್ಪ ಪರಡು' ಎಂದಿರಬಹುದು. [?]

**ಒಡ್ಡಿಪಾಡಿ** (ನಾ). ಒಂದು ಸ್ಥಳದ ಹೆಸರು (?) : ಅಱಮಣ್ಣಮೆಗಾಲು ಮಗೊಕೆಮೊಗೆಯು ಒಡ್ಡಿಪಾಡಿಯುಂ ಗೊಯ್ಯಿನ್ದಮ್ಮಗಳ್ (ವೈಅರಿ. ೧೯೩೨, ೫೮–೩ ; ಸು. 825). [ಒಡ್ಡಿ ? + ಪಾಡಿ]

**ಒಡ್ಡಿಯ** (ನಾ). ಓಡ್ರ ದೇಶದವನು : ತುಳುವ ಮಗಧ ಮಾಳವ ಕೇರಳ ಒಡ್ಡಿಯ ಜಿನ ಜೊನೆಗ ಅರಿಮಣ ಕೊಂಕಣ (ಎಕ. V, ಬೇಲೂರು. ೩–೯೨; 1397 ?) ; ಒಂದು ದೆಸೆಯೊಳೊಡ್ಡಿಯರು ಖನ್ನೋಜಿಗಳೊಂದು ದೆಸೆಯೊಳು . . . ರಾಮನ ಮುಸುಕಿದರು (ಕುರಾಸಾಂ. ೨೦–೨೬).

[ಪ್ರಾ. ಓಡ್ಡಿಅ < ಸಂ. ಓಡ್ರೀಯ]

**ಒಡ್ಡಿಸು, ಒಡ್ಡಯಿಸು, ಒಡ್ಡಯ್ಸು, ಒಡ್ಡವಿಸು, ಒಡ್ಡೈಸು** (ಕ್ರಿ). ೧. ಒಡ್ಡುವಂತೆ ಮಾಡು ; ಚಾಚಿಸು : ಪೆರ್ಚುಂ ಕುಂದುಮನಱಿದು ಕಾಣಲುಂ ಕಾಣಿಸಲುಂ ಕಡಂಗಲುಂ ಕಡಂಗಿಸಲುಮಡಂಗಲುಮಡಂಗಿಸಲುಮೊಡ್ಡಲುಮೊಡ್ಡಿಸಲುಂ . . . ಜಾಣನಾಗಿ (ಪಂಪಭಾ. ೫–೪೩ ವ) ; ಪೂಣಿಸಿ ತನ್ನಂ ಬಿಡೆ ಪೊಯ್ದು ಪೋಪವಳನೊಡ್ಡೊಡ್ಡೆನುತ್ತೊರ್ವಳೊಡ್ಡಿಸಿ ಪೊಯ್ಯಲ್ (ಅನಂಪು. ೭–೨೯) ; ಮನೋಜನ ಕೂರಲಗಿಗೊಡಲೊಡ್ಡಿಸಿದರಾ ಮುಗ್ಧಮುನಿವರನಾ (ತೊರರಾ. ೧–೫–೫೨). ೨. ಆವರಿಸು ; ಕವಿ; ಮುತ್ತು : ಈಯುಪಾಯದೊಳೆ ಕೀರ್ತಿಗೆಯೊಡ್ಡಿಸೆ ಕಾದೆ ನಾಂ (ಪಂಪಭಾ. ೮–೪೮) ; ಘೋರತಮಮೊಡ್ಡಿಸುವೊಡಾ ತಾರಕ ಮಂಡಳಮನೊಡ್ಡಿಕುಂ (ಅಜಿಪು. ೧೦–೫೧). ೩. ಸ್ಪರ್ಧಿಸು ; ಹುರುಡಿಸು : ಬಿಗಿದೊಗೆದಾತ್ಮತುಂಗಕುಚ ಕುಂಭಮನೊಡ್ಡಿಪ ಪೂರ್ಣಕುಂಭಮಂ ಸೊಗಯಿಸುವಾತ್ಮಕೇಳಿ (ಪುಷ್ಪಪು. ೯–೧೦೦).

೪. ಪ್ರೇರಿಸು; ಒತ್ತಾಯಿಸು : ಬಿಸುಟಾ ಧರಾಧಿಪತಿಯಂ ನಾರಾಯಣಾದೇಶಮೊಡ್ಡಿಸೆ ಪಾಂಡುಪ್ರಿಯಪುತ್ರರೊಳ್ ನೆರೆಯಲೆಂದಿಂತೀಗಳಾಂ ಪೋದಪೆಂ (ಪಂಪಭಾ. ೧೩–೧೦೦); ವಿರಹಿಮೃಗಂ ದಲೊಡ್ಡಿಸುವವಂ ಮಧು ದಲ್ ಬಲೆಗಳ್ ಲತಾಳಿ ದಲ್ (ಶಾಂತಿಪು. ೭–೧೨೪). ೫. ಅಡ್ಡ ಹಾಕು; ಅಡ್ಡವಾಗಿ ಇಡು; ತಡೆಯುಂಟುಮಾಡು: ಪಾಯ್ವ ಕೂರ್ಗಣೆಗೆ ಬದ್ದರಮೊಡ್ಡಿಪ (ಚಂದ್ರಪು. ೫–೧೦೬); ಸಿರಿ ಬರಲ್ ಮೊಳಕಾಲನೊಡ್ಡಿಸಿದ ಕಡು ಹೆಡ್ಡರಿರವಾಯ್ತು ನಿನ್ನ ತೇಜನು (ಸಮ್ಯಕೌ. ೧೦–೫೦). ೬. ಎದುರಾಗು; ಪ್ರತಿಭಟಿಸಿ ನಿಲ್ಲು: ಅತಿಭೀಮರ್ ಜಿತಕಾಮರ್ ನುತನಾಮರ್ ಮದನನಿದಿರೊಳಿಲ್ಲೆನೆ ಹೋಹೋ ಸತಿ ಕಾಮಿತ ಮನದಿಂ ಪಾರ್ವತಿ ಬಳೆವನ್ನೆವರಮಿರ್ದ ತಪಮೊಡ್ಡಿಪುದೇ (೧೦ಕ. ೭–೭೧). ಒಡ್ಡಯಿಸು : ೬. ಬಿಡುತೋಡಿ ಬೇಡರೊಳ್ ನೆರೆದಿರಲ್ಲಲ್ಲದೊಡ್ಡಯಿಸಿ ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೊ (ಪಂಪಭಾ. ೮–೮೫). ೭. ಪ್ರದರ್ಶಿಸು; ತೋರಿಸು: ಭರತಶಾಸ್ತ್ರನಿರತೆಯರಪ್ಪ ಕೆಲಂಬರ್ ದೇವಿಯರ್ ಪಿರಿದಾಗಿ ರಾಗರಸಮಂ ತುಂಬಿ ತುಳ್ಕಾಡುತ್ತು ಮಿರೆ ನಾಟ್ಯಮನೊಡ್ಡಯಿಸಿದಾಗಳ್ (ಬಾಧಪು. ೬–೮೫ ವ); ನುಡಿವ ಸಗಾಡಿಕೆಯನೊಡ್ಡಯಿಸಿ ತಮ್ಮಯ ಖೋಡಿಯನು ತಾವಱಿಯರೆಂದನು ನಗುತ ಪ್ರಭುರಾಯ (ಪ್ರಭುಲೀ. ೧೪–೨೭). ೮. ಸೇರಿಸು: ಇನ್ನೇನು ಕವಿದು ಬಹ ಕತ್ತಲೆಗಾಗಿ ಎದೆಯ ಹಣತೆಗೆ ಎಷ್ಟು ಬತ್ತಿಗಳನೊಡ್ಡಯಿಸಿ ಸೊಡರು ಹೊತ್ತಿಸಿಕೊಳುವ ಹೊತ್ತಾಗಲಿಲ್ಲೇನು, ಹೇಳಿ ಮುದುಕಯ್ಯ (ಕೋಗಿಲೆ. ೭೦–೫). ಒಡ್ಡಯ್ಸು : ೯. ಕಡೆಗಣಿಸು; ಅಲಕ್ಷ್ಯ ಮಾಡು: ಮನೆಯೊಳ್ಮಯ್ಮೆಗೆ ಬಾತುಕೊಂಡು ಸಿರಿಯೊಳ್ಕಣ್ಗಾಣದೊಡ್ಡ [ಪಾಠಾಂ. ಟ್ಟ]ಯ್ಸುವಂದಿನ ನೀಮಾರ್ಗೆಲೆ ನಿಮ್ಮನಾವಱಿಯೆಮಂದೆಮ್ಮಂ ಕೊಡಂಕಿಕ್ಕುವಂದಿನ . . . ಸೊರ್ಕಕ್ಕಟ ಮುಕ್ಕುವೋಗಿ ಕಡೆಯೊಳ್ ಭೈಕ್ಷಕ್ಕೆ ಪಕ್ಕಾದಿರೇ (ಸುಕುಮಾ. ೪–೨೬). ಒಡ್ಡವಿಸು : ೨. ಮುಗಿಲೊಡ್ಡವಿಸುವಂತೆ ಮಳೆ ಭೋರನೆಱಗುವಂತೆ . . . ಸಂಗೀತಮಂ ಪಾಡಿ (ಭಕ್ತಾಚ. ೨–೪೧). ೧೦. ಶೋಭಿಸು; ಮನೋಹರವಾಗು : ರಾಗರಸಂಬಡೆದೊಡ್ಡವಿಸೆ ರೀತಿ ನೂತನಂಬಡೆಯೆ ವಳಿ ವಿಳಾಸಂಬಡೆಯೆ (ಶಾಂತೀಶ್ವ. ೧೬–೬೭ ವ). ೧೧. ಪ್ರದರ್ಶಿತವಾಗು; ತೋರಿಬರು: ಒಡ್ಡವಿಸಿತೆನ್ನಾಟ ನಗೆಯೊಳಗಡ್ಡಬಿದ್ದಳು ಪಾಂಡುಪುತ್ರರ ಬೊಡ್ಡಿ ಬಿಂಕದಲವರು ಬಿರಿದರು ಭೀಮ ಫಲುಗುಣರು (ಕುವ್ಯಾಸ. ೧೨–೪೩). ಒಡ್ಡೈಸು: ೬. ಬರೆಯಲ್ಬಾರದು ಬಚ್ಚಿಸಲ್ಕರಿದು ಮಾಡಲ್ಕೂಡದೊಡ್ಡೈಸದಚ್ಚರಿ (ಅನಂಪು. ೧–೧೧೪); ಕಾಳಕೂಟದ ಬಹಳ ಧಾಳಿಗೆ ಶೂಲಿಯೊಡ್ಡೈಸುವವೊಲವನೀಪಾಲಕನ ಹಿಂದಿಕ್ಕಿ ತಡೆದನು ಕಳಶಜನ ರಥವ (ಕುವ್ಯಾದ್ರೋ. ೧–೬೪). ೭. ಕಂತುವನೆ ಕಂಗೆಡಿಸಿಯೊಳಪೊಕ್ಕಂತರಂಗ ವಿಚಾರವೆಲ್ಲವ ಸಂತೆಯಂಗಡಿಯಂತೆ ಸೊನ್ನಲಪುರದೊಳೊಡ್ಡೈಸಿ (ಪ್ರಭುಲೀ. ೧–೪). ೧೧. ನವರೀತಿ ಒಡ್ಡೈಸಿ [ಪಾಠಾಂ. ಯೊಡ್ಡಯಿಸೆ] ಯೊಡ್ಡವಣೆ ಮೇಲಡರೆ ಪೊಸದೇಸಿ ಪಜ್ಜಳಿಸೆ ಪಜ್ಜಳಂ ಪಲ್ಲವಿಸೆ (ಅನಾರ. ಹ. ೧೩೦–೨೬); ಹೊಳೆವ ಹಲ್ಲಣ ಪಕ್ಕರಕ್ಕೆ . . . ಸೌಂದರಾಧೀಶ್ವರನ ಸನ್ನಿಧಿಯೊಳೊಡ್ಡೈಸಿ ರಂಜಿಸಿದವು (ಸೌಂದಪು.೧೮–೧೨). ೧೨. ಧಾವಿಸು; ಮೇಲೆನುಗ್ಗು; ಅರೆಯಟ್ಟು: ನಿಲ್ಲದೊಡ್ಡೈಸೆನುತ ಸಾಹಸಮಲ್ಲ ಸಾರಥಿ ಗಜುಹೆ (ಕುವ್ಯಾದ್ರೋ. ೨–೩೪). [ಒಡ್ಡು₁ + –ಇಸು₃]

ಒಡ್ಡಿಹಟ್ಟಿ (ನಾ). ಒಂದು ಊರಿನ ಹೆಸರು : ಶ್ರೀ ಕಾಳೇಶ್ವರ ದೇವರ್ಗ್ಗೆ ಹುಗ್ಗಿಗಲ್ಲಿಂದ ತೆಂಕಲು ಒಡ್ಡಿಹಟ್ಟಿಯ ಹೊಲವೇರೆಯಿಂ (ಸೌಇಇ. IX–i, ೨೪೯–೭೯; 1147); ಹಟ್ಟಣದ ದಾರಿಯಿಂ ತೆಂಕಲು ತಕ್ಕಿಲು ಒಡ್ಡಿಹಟ್ಟಿಯ ಗಡಿಂಬದ ಘಳೆಯಲು (ಸೌಇಇ. IX–i, ೨೯೭–೪೩; 1177). [ಒಡ್ಡಿ₀ + ಹಟ್ಟಿ₁ (< ಪಟ್ಟಿ₁)]

ಒಡ್ಡಿಱಿ (ಕ್ರಿ). ಗುಂಪಾಗು : ಪೆಸರ್ ನಿನಗೆ ಕೇಳ್ ಮೊಸರ್ ಪೆಱರ್ಗೆ ನಿನ್ನ ಮೆಯ್ಯೊಳ್ವ ದಡ್ಡಿಸಕ್ಕೆ ಗುಱಿಯಪ್ಪುದೊಡ್ಡಿಱಿದು ತಿಂಬರನ್ಯರ್ ಕ್ರಿಯಾವಸಾನ ವಿರಸಂಗಳಿಂದ್ರಿಯ ಸುಖಂಗಳ್ (ಆದಿಪು. ೩–೬೦). [ಒಡ್ಡು₂ + ಇಱಿ₁]

ಒಡ್ಡು₁ (ಕ್ರಿ). ೧. ಅರ್ಪಿಸು; ಈಡುಮಾಡು : ಅಣಿಯುಳ್ ದಾವಣಮೊಡ್ಡುವನ್ (ಎಇ. IX, ೧೮–೧೧; 800); ಉರಿಗೊಡ್ಡಿ ಮೆಯ್ಯನಳ್ಕದೆ (ಇಆ. XIV, ೭೦–೧೫; 9ನೆಯ ಶತ); ನೀನಾರ್ಗೆ ನಿನ್ನ ಪೆಸರೇನೀ ನಿಯಮಕ್ಕೆಂತು ಮೆಯ್ಯನೊಡ್ಡಿದೆ (ಪಂಪಭಾ. ೮–೩). ೨. ಪ್ರತಿಭಟಿಸು; ಎದುರಿಸು; ವಿರೋಧಿಸು; ಅಡ್ಡಿಮಾಡು: "ಒಡ್ಡು – ಪ್ರತೀಕಾರೇ, ವ್ಯೂಹೇಚ" (ಶಮುಧಾ); ಪೊಲನ ಕೊಳ್ವನೆನ್ದು ಬನ್ದೊಡ್ಡಿ ನಿನ್ದಾನೆಂಬ ಮಾತಂ ಕೇಳ್ದು (ಸೌಇಇ. XI–i, ೨೧–೬; 893); ಬಲ್ಲಿದಂಗೆ ಪೊಣರ್ದೊಡ್ಡಿದನಂತೆ ಕೆಟ್ಟೋಡುಗುಂ (ಧರ್ಮಾಮೃ. ೧೪–೧೦೨); ತರ್ಕಶಾಸ್ತ್ರದೊಳೊಡ್ಡಿ ತಗರು ತಗರಿನಂತೆ ಮಾರ್ಕೊಂಡು ಹೊಡೆದಾಡಬಹುದು (ಭರಚ. ೨–೯೧). ೩. ಇಡು; ಮಡಗು; ಇರಿಸು : ಒಂದು ಮರದ ಕೆಟಗೆ ಪೊನ್ನ ಮಡಕೆಯೊಳ್ ಬೋನಮನೊಡ್ಡಿ (ವಡ್ಡಾರಾ. ೮೯–೧೩); ಸಹದೇವನನ್ನು ಪಂಥಕ್ಕೆ ಒಡ್ಡುವುದು ಯುಕ್ತವಲ್ಲ (ಕೃವಾಸ. ೧೩೩). ೪. ಉಬ್ಬು; ಮೇಲೇಳು: ಬಟ್ಟತಪ್ಪ ಬಾಯ್ದೆಱ ತನುರೇಖೆಗೊಂಡ ಕೊರಲೊಡ್ಡಿದ ಪೆರ್ಮೊಲೆ ತೆಳ್ವಸಿಱ್ (ಪಂಪಭಾ. ೧–೧೦೮); ಮಿಂಚುವ ನಖಮಾದಮೊಂದಿದ ಬೆರಲ್ಗಳಡಂಗಿದ ಗುಲ್ಫಮೊಡ್ಡಿ ತೋಱುವ ಮಡಂ (ಲೋಕೋಪ.೧೧–೩); ಮಡಿದ ಕೊಡಕೆಗಳೊಡ್ಡಿದುರದೊಪ್ಪಿಡಿಯ ನಡುವಿನ ಕೊಂಕಿದುಗುರಿನ ನಿಡುವೊಡಲ . . . ನಾಯ್ಗ್ (ಕುವ್ಯಾಅ. ೧೩–೨೦). ೫. ಮುಂದಿಡು; ಎದುರಿಗೆ ಹಿಡಿ: ನೀನಿನ್ನಾವ ನೆವವನೊಡ್ಡುವೆ ಪಾಪಿ (ಹಚಕಾ. ೮–೮); ಸಮರದ ಜಯವನವರಿಗೆ ಮಾಡಿ ನಿಮ್ಮಭಿಮತವನೀಡಾಡಿ ನಯವ ನೀವೊಡ್ಡುವರೆ ನಿಮ್ಮನು ನಿಯಮಿಸುವರಾರುಂಟು (ಕುವ್ಯಾಭೀ. ೧–೨೪). ೬. (ವ್ಯೂಹರಚನೆ) ಮಾಡು; ರಚಿಸು; ಸಿದ್ಧಮಾಡು: ಕುಲಧನಸಂಕುಲಂಗಳನೆ ತಂದಿಡೆ ಯಿಟ್ಟವನಾಡಿ ಸೋಲ್ತನಾಕುಲಮತಿ ಮುಂದೆ ಭಾರತದೊಳೊಡ್ಡುವುದುಂ ಕಡು ನನ್ನಿಮಾಟ್ಪವೋಲ್ (ಪಂಪಭಾ. ೭–೭೨); ಬಲುಹ ನೀ ನೋಡುವರೆ ಪರಮಂಡಳಿಕರ ತಂದೊಡ್ಡು ಬಳಿಕೆನ್ನಳವನೀಕ್ಷಿಸು (ಕುವ್ಯಾಭೀ. ೩–೪೦). ೭. ಹಾಯಿಸು; ಬಿಡು : ತೋಟಕ್ಕೆ ನೀರೊಡ್ಡು (ರೂಢಿ). ೮. ಚಾಚು; ನೀಡು : ಪೂಣಿಸಿ ತನ್ನರ ಬಿಡೆ ಪೊಯ್ದು ಪೋಪವಳನೊಡ್ಡೊಡ್ಡೆನುತ್ತೊರ್ವಳೊಡ್ಡಿಸಿ ಪೊಯ್ಕಲ್ (ಅನಂಪು. ೭–೨೯); ಧರೆಯ ದಾನಕೆ ಕೈ ಒಡ್ಡುವನೆ (ಪುರಂದ. ೨–೪೮–೧೦); ಒಡ್ಡಿದ ದಕ್ಷಿಣ ಹಸ್ತವೀ ಹಸ್ತವನೊಡ್ಡುವನಲ್ಲವೈ ಪೆಱರ್ಗೆ (ನಾಗಕು. ೧೦–೫೦); ಅರಮನೇ ತುಪ್ಪಕ್ಕೆ ಸೆರಗು ಒಡ್ಡು (ಗಾದೆ).

ಒಡ್ಡಿಕೊಳ್, ಒಡ್ಡಿಗೊಳ್ = ೧. ಚಾಚಿಕೊಳ್ಳು; ನೀಡು: ಚಲಿಸದದಿರದೆ ಬೆನ್ನನೊಡ್ಡಿಕೊಂಡಿರೆ ಕಂಡು (ಸೇದಿರ. ದೇ. ೬೪–೧೪). ೨. ಅಡ್ಡವಾಗಿ ಇಟ್ಟುಕೊ: ಸಲೆ ಸೇರಿಸಿದೇಣಿಗಳ ಮೇಲೆ ಸುಭಟರು ತಲೆವರಿಗೆಯನೊಡ್ಡಿಕೊಳುತ (ಕಂನವಿ. ೧೪–೪೭). ೩. ಗುಂಪಾಗು; ದಟ್ಟವಾಗಿ ಸೇರು : ವೀರಭಟ ಕುಣಪಂಗಳಿಂ ಪೆಣೆದ ಪೆರ್ಮುಱಿಯಂ ಕಱಿವ ವಿಳಯಜಳಧರದೊಡ್ಡಿನಂತೆ ಒಡ್ಡಿಗೊಂಡಿದುರ್ದು (ಅನಂಪು. ೧೧–೮೪ ವ). ಒಡ್ಡಿನಿಲ್ = ಎದುರಾಗಿ ನಿಲ್ಲು; ಪ್ರತಿಭಟಿಸು: ಪೊಗ್ಗೊಡೆಯದಿರಗಲದಿರ್ದೈ ನುಗ್ಗಿಸಲೆಡೆಗುಡದೆ ನಿಂದು ಮೊನೆಗೊಡಿರನುವಿಂ ಹಿಗ್ಗಿ ಪೆಱಸಾರದಿರಿಯೆಂದುಗ್ಗಡ ವಜ್ಜೀರರೊಡ್ಡಿನಿಂದರ್ (ಹವ್ಯಾರ. ೩–೩೯). 'ಉಡ್ಡು' ಪರಾ.

[ದೇ. ‖ ತುಳು. ತೆಲು. ಒಡ್ಡು; ಪರ್ಜಿ. ಒಡ್ಡೈತಿ = ಎಸೆ]

**ಒಡ್ಡು**$_2$ (ನಾ). ೧. ರಾಶಿ; ಗುಂಪು; ಸಮೂಹ: "ಒಡ್ಡನೆ ಮೊತ್ತಂ" (ಭಾರನಿ. ೪೪); "ಸಮೂಹದೊಳೊಡ್ಡು" (ಕಶಠ. ೧೧೯); ಮೃಗವ್ರಜದೊಡ್ಡೇಂ ಮೃಗರಾಜನಂ ನೆಱೆವುದೇ ತಾಂಗಲ್ಕೆ (ಆದಿಪು. ೧೩–೫೭); ಆಕಾಶದೊಳಗೊಂದು ವಿಸ್ಮಯವಾದ ಮಹಾಕಾಂತಿಯೊಡ್ಡು ಕಾಣಿಸಿತು (ಭರಚ. ೩–೫೦); ನಿಂದ ಚಂದ್ರಿಕೆಯೊಡ್ಡೆನೆ ಬೆಳ್ಮುಗಿಲದೇಂ ಮನಂಗೊಳಿಸಿದುದೋ (ರಾಜಶೇ. ೬–೫). ೨. ವ್ಯೂಹ; ಸೈನ್ಯ; ಪಡೆ: "ಒಡ್ಡು–ಪ್ರತೀಕಾರೇ, ವ್ಯೂಹೇಚ" (ಶಮಧಾ); "ಪಡೆಯೊಡ್ಡು ಪೌಜು ಬಲ ಸೈನ್ಯಂ" (ಕವಿಕಂ. ೧೨೭); ಬಹುವಿಧ ವ್ಯೂಹರಚನೆಯಿನೊಡ್ಡಂ ಬಲಿದು ನಿಲ್ವಿನಂ (ವರ್ಧಪು. ೮–೩೯ವ); ಗಜದೊಡ್ಡು ತುರಗ ರಥದೊಡ್ಡುಗಳವಲ್ಲಲ್ಲಿ (ಇಹರ. ಹ. ೧೩೫–೨೩); ಮುರುಹಿದನು ಮುರವೈರಿ ರಥವನು ಮುಂದಣೊಡ್ಡಿಗೆ (ಕುವ್ಯಾದ್ರೋ. ೧೦–೧). ೩. ಎದುರಾಗಿ ಕಟ್ಟಿರುವುದು; ಅಡ್ಡಗಟ್ಟೆ; ಅಣೆ: ನಾಲ್ಕೂರುಮಿಬ್ಬು ನಡೆದ ಕೆಲ್ಲಿಗೊಡಂಗೆಯೊಡ್ಡಿನ ಕೆಱಗೆ (ಸೌಇಇ. IX–i, ೨೭–೧೩; 950); ಅಕ್ಕನ ಜೀವನದ ಪ್ರವಾಹಕ್ಕೆ ಒಂದು ದೊಡ್ಡ ಒಡ್ಡೇ ಎದುರು ನಿಲ್ಲುತ್ತದೆ (ಮಹಾಸಾ. ೩); ಅಖಂಡವಾಗಿ ಉಕ್ಕುಕ್ಕಿ ಬರುವ ಹುಚ್ಚು ಹೊಳೆಯನ್ನು ಒಂದು ಸಣ್ಣ ಒಡ್ಡು ತಡೆಯಬಲ್ಲುದೆ? (ಘಾಟೀಮು. ೪೨). ೪. ನೀರು ನಿಂತಿರುವ ಕಟ್ಟೆ; ಕುಂಟೆ. ೫. ರಚನಾಕ್ರಮ; ವ್ಯವಸ್ಥೆ: ಅಂದಿನ ದಿವಸದೋಲಗದೊಡ್ಡು ಚೆಲುವಾಯ್ತು (ಕುವ್ಯಾಸ. ೧೪–೩೨). ೬. ಜೂಜಿನಲ್ಲಿ ಒಡ್ಡುವ ಪಣ: ಅದು ಸೋಲುತೊಂದು ಲಕ್ಕದ ಪೊಡ್ಡನೊಡ್ಡಿ ಮೇಲಿದರೊಡ್ಡು ಕೋಟಿಯೆಂದೆನುತ (ಸೋಳಪು. ೨–೧೪೪); ಧರ್ಮರಾಯನು ಒಡ್ಡಿನ ಮೇಲೆ ಒಡ್ಡನಿಟ್ಟು ಪರಾಭವವನ್ನು ಪಡೆದನು (ರಾಜಸೂ. ೯೪). ೭. ಒಕ್ಕಣೆಗಾಗಿ ಕಣದಲ್ಲಿ ತುಳಿಸಲು ಹಾಕಿದ ಧಾನ್ಯದ ತೆನೆ: ಕಣನ ಮಾಡಿ ಮೇಟಿಯನ್ನೆಟ್ಟಿ ಒಡ್ಡನ್ನು ಹಾಕಿ ತುಳಿಸಿ ಹಸನಮಾಡಿ ಒಕ್ಕಿ ತೂಱಿ ರಾಶಿಯಂ ಮಾಡಿದ ಬಳಿಕ (ವಚಶಾ. II, ೭೩); ಇಂದು ಒಡ್ಡಿಗೆ ಎಣೆ ಕಟ್ಟಬೇಕು (ರೂಢಿ). ೮. ಠೀವಿ; ಬೆಡಗು; ಬಿಂಕ: ಅತ್ಯಕುಟಿಲಮಾಸ್ಯದೊಡ್ಡಭಿಮತಂ ಕುಟಿಲಂ ಋಜು ಬಾಹ್ಯವೃತ್ತಿ ವಕ್ರಕಲುಷಮಂತರಂಗಮೆನೆ (ಶಾಂತಿಪು. ೨–೫೨). ೯. [ಗಣಿತ] ಮೂಲಸಂಖ್ಯೆ (?): ಎರಡೊಡ್ಡಿನ ಬಣ್ಣವನು ಹಾಗವ ಮಾಡಿ ತೂಕದಿಂ ಗುಣಿಸಿ (ವ್ಯವಹಾ. ೯–೧೦). ೧೦. ಅಂದ; ಚಂದ; ಅಚ್ಚುಕಟ್ಟು: ಮುನಿಯಿಸೆ ಮಾಣದಾಂ ಮುನಿದು ತೊಟ್ಟನೆ ಮುಂಚದಿನೆಬ್ಬುಪೋಗೆ ನಾಣೆನಗಳವಟ್ಟ ಬರ್ದನಗೆ ಪೆಂಪೆನಗಣ್ಮನಗಾಗಳಾಯದೊಳ್ಪೆನಗೆ ಮಹಾಪ್ರಸಿದ್ಧಿಯೆನಗುರ್ಕೆನಗೊಡ್ಡೆನಗೆನ್ನ [ಬೆನ್ನ] ಬೆನ್ನನೆ ಪರಿತಂದ ದೈನ್ಯಮರಿದಾದುದು ಮಾಜಲತರ್ಕ್ಯರೂಪೆಯಾ (ಶಾಂತಿಪು. ೮–೯೪).

ಒಡ್ಡುಒತ್ತಲು = ಪ್ರವಾಹವನ್ನು ತಡೆಯುವ ಅಣೆ: ಕಾಲುವೆಗಳಿಗೆ ಸಂಕ ಕಟ್ಟಿಸಿದರು. ಅಲ್ಲಲ್ಲಿ ಒಡ್ಡು–ಒತ್ತಲುಗಳಾದವು (ಪ್ರೇಮಾಶ್ರ. ೧೭೭). ಒಡ್ಡುಹಾಕಿಸು = ಮಣ್ಣಿನ ಏರಿ ಕಟ್ಟಿಸು; ಅಣೆಹಾಕಿಸು: ಹೊಲದ ಬಾಂದಿನ ಹದ್ದುಹಿಡಿದು ಒಂದು ಮೊಳ ಅಥವಾ ಎರಡು ಮೊಳ ಎತ್ತರವಾಗಿ ನಾಲ್ಕುಕಡೆಗೂ ಸುತ್ತಲೂ ಒಡ್ಡುಹಾಕಿಸುವುದು ಅವಶ್ಯವಾಗಿದೆ (ಕೃಷಿಪ್ರ. ೩೨); ಹೊಲ ಹಸನುಮಾಡಿಸಲು, ಕೆರೆ ಕಡಿಸಲು, ಬಾವೀತೋಡಲು, ಒಡ್ಡುಹಾಕಿಸಲು ಅದು ಹಣ ಪೂರೈಸುತ್ತದೆ (ಮಣ್ಣಮ. ೪೧). ಒಡ್ಡುಹಾಕು = ಕಟ್ಟೆಯನ್ನು ಕಟ್ಟು; ಅಣೆಹಾಕು: ಹಳ್ಳಕ್ಕೆ ಒಡ್ಡುಹಾಕುತ್ತಿದ್ದಾರೆ (ರೂಢಿ). [< ಒಡ್ಡು$_1$]

**ಒಡ್ಡುಂಗಯ್** (ಕ್ರಿ). ಚಾಚಿದ ಕೈ; ನೀಡಿದ ಕೈ: (ಅದನ್ನೋದಿ ಕೊಂಡು, ಅತನ ಒಡ್ಡುಂಗಯ್ಗಿರಿಸಿ) (ಮಂತ್ರಶ. ೯೭–೨೦).
[ಒಡ್ಡು$_1$ + ಕಯ್$_2$ (< ಕೆಯ್$_3$)]

**ಒಡ್ಡುಂಗಲ್**, ಒಡ್ಡುಗಲ್, ಒಡ್ಡುಗಲ್ಲು (ನಾ). ೧. ಚಾಚಿಕೊಂಡಿರುವ ಕಲ್ಲು; ವಿಸ್ತಾರವಾದ ಬಂಡೆ: ಕಲ್ಲೆನ್ನದೆ ಬೆಳೆದ ಪಸುರ್ವುಲ್ಲೆಂದಾಸೆಯೊಳೆ ಸಾರ್ದು ಮರಕತದೊಡ್ಡುಂಗಲ್ಲನೆ ಕಾರ್ದು ಮೃಗಂಗಳ್ (ಅಜಿಪು. ೯–೨೩); ಪರಿದಡರ್ದ ಪಂಚರತ್ನದ ಮರೀಚಿಯಿಂ ನೀಳ್ದ ಪಳಿಕಿನೊಡ್ಡುಂಗಲ್ಗಳ್ ಬರೆದಿರ್ದ ಭಿತ್ತಿಯಂತಿರೆ (ಲೀಲಾವ. ೯–೩೬). ಒಡ್ಡುಗಲ್: ೨. ಕೋಟೆಯ ಮೇಲಿನಿಂದ ನೂಕುವ ಕಲ್ಲು, —ಗುಂಡುಕಲ್ಲು: ಕುತ್ತುವ ಕೊಂತಮುರುಳ್ಚುವೊಡ್ಡುಗಲ್ ಕಡೆಸಿರಗೆಯ್ದ ನೂಂಕುದಳೆಯಿಕ್ಕುವ ಬಲ್ದಸಿ (ಚಂದ್ರಪು. ೫–೧೦೫). ಒಡ್ಡುಗಲ್ಲು: ೩. ಮುಡ್ಡಜೀವಿಗಳ ಕೈಯಲ್ಲಿ ದೊಡ್ಡಲಿಂಗವಿರ್ದಡೇನು ಆ ಲಿಂಗದಲ್ಲಿ ಮಹಾಘನಪರಮ ಕಳೆಯನಱಿಯದ ಬಳಿಕ ಅದು ಒಡ್ಡುಗಲ್ಲಿನಂತೆ (ಅಖಂಡೇ. ೨೬೮–೧೦); ಬಟ್ಟೆಯಂ ತೊಡೆದು ಮುಂದೊಡ್ಡುಗಲ್ಲುಗಳ ತಂದಿಟ್ಟು (ಹಚಕಾ. ೯–೩೩).
[ಒಡ್ಡು$_1$ + ಕಲ್$_3$]

**ಒಡ್ಡುಂಗಾಡಿ** (ನಾ). ಸಮುದಾಯ ಶೋಭೆ; ಒಟ್ಟಂದ: ಬಲ್ಲಾಳಿ ಕೆಯಿಂ ಬಣ್ಣವಿಟ್ಟಂತೆ ತಿಣ್ಣಮಾದೊಡ್ಡುಂಗಾಡಿ ಸಭೆಯ ಕಣ್ಗಳಂ ಕವ್ವರೆಗೊಳಿಸೆ (ಅನಂಪು. ೨–೨೬ವ). [ಒಡ್ಡು$_2$ + ಗಾಡಿ$_1$]

**ಒಡ್ಡುಗಟ್ಟು** (ಕ್ರಿ). ಗುಂಪುಕೂಡು; ಸಂದಣಿಸು: ಗುಡಿ ತೋರಣಂ ಸಸಿ ಮೊಸರ್ ಪಸೆ ಸೇಸೆ ವಿಳಾಸಿನೀಜನಂ ಚದುಕಮಿದೊಡ್ಡುಗಟ್ಟೆ (ಅರ್ಧನೇ. ೨–೩೯). [ಒಡ್ಡು$_2$ + ಕಟ್ಟು$_1$]

**ಒಡ್ಡುಗಲ್** 'ಒಡ್ಡುಂಗಲ್' ನೋ.

**ಒಡ್ಡುಗಲ್ಲು** 'ಒಡ್ಡುಂಗಲ್' ನೋ.

**ಒಡ್ಡುಗಾಣ್** (ಕ್ರಿ). ಸೈನ್ಯವನ್ನು ನೋಡು: ಸೆಣಸು ಮಣ್ಣಳಿಕ ತಲೆಯ ಕರವತ್ತನೊಡ್ಡುಗಣ್ಣು ಸುತ್ತಂ ಬಳಸುವ ಮಣ್ಣಳಿಕರ ಮಣ್ಣೆಯ ನಡೆವಂ (ಸೌಇಇ. IX–i, ೧೪೩–೮; 1079). [ಒಡ್ಡು$_2$ + ಕಾಣ್]

**ಒಡ್ಡುಗೆಡು** (ಕ್ರಿ). ಗುಂಪು ಕೆಟ್ಟುಹೋಗು; ವ್ಯೂಹ ಒಡೆದುಹೋಗು: ತಮಮೊ [ಪಾಠಾಂ. ದೊ] ಡ್ಡುಗೆಟ್ಟು ತಾನುಗಿಯೆ ಕರಂಗಳಂ ಸ್ಮರಕರಂಗಳೆ ಗೆತ್ತು ವಿಯೋಗಿಸಂಕುಳಂ ಸುಗಿಯೆ (ಅಜಿಪು. ೬–೪೦).
[ಒಡ್ಡು$_2$ + ಕೆಡು]

**ಒಡ್ಡುಗೊಳ್** (ಕ್ರಿ). ಗುಂಪಾಗು; ರಾಶಿಯಾಗು: ಅಂಚೆವಿಂಡನೊಳಕೊಂಡಂಭೋಜಷಂಡಂ ತಳಿರ್ವುದಿದೇಲಾವನವೊಡ್ಡುಗೊಂಡ ಕದಳೀ ಕಾಂಡಂ ತರಂಗೊಂಡ ಚೂತದ ಸಾಲ್ ಚಂದನವೀಧಿ (ಪಂಪರಾಮಾ. ೧–೧೧೦); ಸೌಧರ್ಮೇಂದ್ರ ಸೇನಾಭರದಭಿಮುಖದೊಡ್ಡೊಡ್ಡುಗೊಂಡೊಡ್ಡಿ ನಿಂದರ್ (ಅನಂಪು. ೫–೧೩). [ಒಡ್ಡು$_2$ + ಕೊಳ್$_1$]

**ಒಡ್ಡುಗೋಡೆ** (ನಾ). ಒಡ್ಡಿನಂತಿರುವ ಗೋಡೆ; ತಡೆಗೋಡೆ: ಮನೆಯಲ್ಲಿ ಆದ ಅನಂದಕ್ಕೆ ಒಡ್ಡುಕೋ[ಗೋ]ಡೆಗಳು ಅಡ್ಡವಾಗಲಿಲ್ಲ (ಧೂಮಿತಾ. ೨೪). [ಒಡ್ಡು$_1$ + ಗೋಡೆ]

**ಒಡ್ಡುದಾರಿ** (ನಾ). ಹಳ್ಳಕ್ಕೆ ಕಟ್ಟೆ ಕಟ್ಟಿಸಿ ಮಾಡಿದ ದಾರಿ, —ಮಾರ್ಗ: (ತಗ್ಗು, ಜೌಗು, ಅಥವಾ ನೀರುನಿಂತಿರುವ, ಪ್ರದೇಶದಲ್ಲಿ) . . . ಎತ್ತರಿಸಿ ಮಾಡಿರುವ ಕಾಲುದಾರಿ: ಒಡ್ಡುದಾರಿ (Causeway. ಇಂಕನಿ). [ಒಡ್ಡು$_2$ + ದಾರಿ$_1$]

**ಒಡ್ಡುದೋಱು** (ಕ್ರಿ). ಬಿಂಕತೋರು: ನನ್ನ ಮಾತುಳನ ಪುತ್ರಿಯ ನನಗೀವಾಗ ತನ್ನುದ್ದದೊಡ್ಡುದೋಱಿದನು (ಭರಚ. ೪೩–೧೧೧).
[ಒಡ್ಡು$_2$ + ತೋಱು$_1$ (< ತೋಱ್)]

**ಒಡ್ಡುವಲಗೆ** (ನಾ). ಗುರಾಣಿ: ಮುಗಿಲೊಳ್ಪಳಂಚುವ ಪಳವಿಗೆಯ ಸುವರ್ಣದೊಡ್ಡುವಲಗೆಯ ನೆಗಪಿ (ರಾಜಶೇ. ೬–೧೧ವ).
[ಒಡ್ಡು$_1$ + ಪಲಗೆ]

**ಒಡ್ಡೈಸು** 'ಒಡ್ಡಿಸು' ನೋ.

**ಒಡ್ಡೊಗು** (ಕ್ರಿ). ಒಡ್ಡನ್ನು ಪ್ರವೇಶಿಸು; ಸೈನ್ಯವನ್ನು ಪ್ರವೇಶಿಸು: ಬಡ್ದು ಅರಸಿನ ಬಂಟನ್ ಒಡ್ಡೊಕ್ಕರೇನು (ದಾಸಪ. ೧೪೮ ಕಿ).
[ಒಡ್ಡು$_2$ + ಪೊಗು]

**ಒಡ್ಡೊಡೆ** (ಕ್ರಿ). ೧. ಗುಂಪು ಒಡೆ; ಚೆದರಿ ಹೋಗು: ಒಡವಂದಂಕದ ಕೌರವರ್ ದ್ರುಪದನಂಬೇಱಿಂಗೆ ಮೈಯೊಡ್ಡದೊಡ್ಡೊಡೆದೋಡುತ್ತಿರೆ (ಪಂಪಭಾ. ೨–೬೨); ಅಡ್ಡವಿಸಿ ಸೋಹಿದರು ಕೋಣನ ದೊಡ್ಡುಗಳ ದಂತಿಗಳ ಮರೆಗಳನೊಡ್ಡೊಡೆಯದವೊಲಾ ಸುಮಿತ್ರಾಸುತನ ಸರಿಸದಲಿ (ತೊರರಾ. ೩–೩–೧೨). ೨. ಕಟ್ಟೆಯೊಡೆ; ಕಟ್ಟೊಡೆ: ಅವನ ಚರಣ ಯುಗಲವನ್ನು ಚುಂಬಿಸುತ್ತಲೆ ಬಹು ದಿನಗಳ ನನ್ನ ನಿರುದ್ಧ ಅಶ್ರುರಾಶಿ ಒಡ್ಡೊಡೆದು ಹೊರನುಗ್ಗಿತು (ಇಪ್ಪಕ. ೧೯೦). [ಒಡ್ಡು$_2$ + ಒಡೆ$_1$]

**ಒಡ್ಡೋಲಗ** (ನಾ). ದೊಡ್ಡ ದರ್ಬಾರು, —ಆಸ್ಥಾನ, —ಸಭೆ: ಸುಯೋಧನನೊಡ್ಡೋಲಗವಿಂದ್ರನೋಲಗಮುಮಂ ಕೀೞ್ಮಾಡಿ ಕಣ್ಗೊಪ್ಪುಗುಂ (ಪಂಪಭಾ. ೯–೨೯); ಮಿಗೆ ಸಂಧಿವಿಗ್ರಹಿಗಳಿಂದೊಪ್ಪಿರ್ದುರ್ದೊಡ್ಡೋಲಗಂ (ದಶಕು. ೮–೬೧); ಅರಸನೊಡ್ಡೋಲಗದಿ ಸರಿಸವನು ಅಗಲದಿರು (ಸರ್ವಜ್ಞ. ೭೪೨); ಒಡ್ಡೋಲಗದಲ್ಲಿ ದೇವೇಂದ್ರನು . . . ಕೇಳಿಧನು (ನೀತಿಚಿಂ. V, ೧೪).
[ಒಡ್ಡ$_0$ (< ಪ್ರಾ. ವುಡ್ಢ < ಸಂ. ವರ್ಧ) + ಓಲಗ. / ತಮಿ. ಒಟ್ಟೋಲಗ; ತೆಲು. ಒಡ್ಡೋಲಗ]

**ಒಡ್ಡೋಲಗಂಗೊಡು, ಒಡ್ಡೋಲಗಗೊಡು** (ಕ್ರಿ). ದರ್ಬಾರು ನಡೆಸು; ಸಭೆ ಸೇರಿಸು, —ಕೂಡಿಸು: ವಿರಾಜಮಾನ ಧವಳಚ್ಛತ್ರ ಚಾಮರ್ರಸಹಸ್ರ ಸಂಭಾದಿತನುಮಾಗಿ ವಿಕ್ರಾಂತತುಂಗನೊಡ್ಡೋಲಗಂ ಗೊಟ್ಟಿರೆ (ಪಂಪಭಾ. ೧೪–೨೧); ಮಹಾವಿಭೂತಿಯಿಂದೊಡ್ಡೋಲಗಂ ಗೊಟ್ಟು ಮಹೀಪಾಲನಿರ್ಪುದುಂ (ಪಂಚತಂ. ೧೬–೬). **ಒಡ್ಡೋಲಗಗೊಡು:** ಸಿಂಹವಿಷ್ಟರದೆ ಲಪನಪಂಚಕನೊಡ್ಡೋಲಗಗೊಟ್ಟಿರೆ ಚಪಲಾಕ್ಷಿಯರು ನೋಡಿದರು (ಮೋಹತ. ೨೪–೭೦). [ಒಡ್ಡೋಲಗ + ಕೊಡು]

**ಒಡ್ಡೋಲಗಗೊಡು** 'ಒಡ್ಡೋಲಗಂಗೊಡು' ನೋ.

**ಒಡ್ಡಾರ** (ನಾ). (?): ಅಡ್ಡಿಕೆ, ಒಡ್ಡಾರಂ (ಶಬ್ದಾನು. ೬೭ ವ್ಯಾಖ್ಯಾ). [?]

**ಒಡ್ತಲಿ** (ನಾ). (ಕರಾ) ಒಂದು ಬಗೆಯ ಮೀನು. [?]

**ಒಡ್ಯಾಣ, ಒಡಿಯಾಣ, ಒಡ್ಡಣ$_2$** (ನಾ). ೧. ನಡುವಿಗೆ ಹಾಕಿಕೊಳ್ಳುವ ಬೆಳ್ಳಿ ಅಥವಾ ಚಿನ್ನದ ಪಟ್ಟಿ; ಮೇಖಲೆ; ಡಾಬು: "ಒಡ್ಯಾಣ – ನಡುಪಟ್ಟಿ, ಕಟಸೂತ್ರ, ಡಾಬು" (ಜಾನಕೋ. ೨೯); ಆಕಾಶವೆ ಕೊಪ್ಪರ ಅಜಾಂಡ ಬ್ರಹ್ಮಾಂಡವೆ ಕರ್ಣಕುಂಡಲ ಆದಿಯಾಧಾರವೆ ಕಕ್ಷಪಾಳ ಅನಾಹತವೆ ಒಡ್ಯಾಣ [ಪಾಠಾಂ. ಒಡಿಯಾಣ] ಅದ್ವೈತವೆ ಯೋಗವಟ್ಟಿಗೆ (ಅವಚಂ. ೮೩–೩೭೪); ರತ್ನಕೀಲಿತ ಸ್ವರ್ಣದೊಡ್ಯಾಣವ ತಂದಿಕ್ಕಿದರು (ಮೋಹತ. ೨೩–೪೪). ೨. ಸೊಂಟಪಟ್ಟಿ; ನಡುಕಟ್ಟು: ಒಡ್ಯಾಣದಲ್ಲಿದ್ದ ಬಗನಿಕತ್ತಿ ಗಣಿಗಣಿ ಸದ್ದುಮಾಡುವಂತೆ ಓಡಿದನು (ಕಾನೂರು. ೭೨); ಕತ್ತಿಯನ್ನು ತನ್ನ ಸೊಂಟದಲ್ಲಿದ್ದ ಒಡ್ಯಾಣಕ್ಕೆ ಸಿಕ್ಕಿಸಿ ಮರದಿಂದ ಕೆಳಕ್ಕಿಳಿಯುತ್ತಿದ್ದನು (ಪಂಜಪಂ. ೨೪). **ಒಡಿಯಾಣ:** ೧. ಅನಾಹತವೆ ಒಡಿಯಾಣ [ಪಾಠಾಂ. ಒಡ್ಯಾಣ] (ಅವಚಂ. ೮೩–೩೭೪). **ಒಡ್ಡಣ$_2$:** ೧. (ಕಿ). 'ವಡ್ಯಾಣ' ಪರಾ.
[ದೇ. ‖ ತಮಿ. ಒಟ್ಟಿಯಾಣ; ಮಲ. ಉಡನ್ನಾಣ್; ತುಳು. ಒಡ್ಯಾಣೊ; ತೆಲು. ಒಡ್ಡಾಣ, ಒಡ್ಡಿಯಾಣ]

**ಒಡ್ಯಾಣಗಿತ್ತಿ** (ನಾ). ಒಡ್ಯಾಣವನ್ನು ಧರಿಸಿದವಳು: ಬಡ್ಡೀ ಕೊಡೆಂದು ಗಂಡೈಯ್ಯ ಒದೆವಾಗ ಒಡ್ಯಾಣಗಿತ್ತೀ ನೀ ಹೊಣೆಯಾಗು (ಹುಟ್ಟಿಹ. ೧೫೪). [ಒಡ್ಯಾಣ + –ಗಿತ್ತಿ]

**ಒಡ್ವಾಚಾರಿ** (ನಾ). ಒಬ್ಬಾತನ ಹೆಸರು: ಅತಿಕುಸಲ ಒಡ್ವಾಚಾರಿ ಲಿಖಿತ (ಇಆ. VIII, ೯೫–೩; 444).
[ಒಡ್ಡು ? + ಆಚಾರಿ]

**ಒಣ** 'ಒಣಗು$_1$' ನೋ.

**ಒಣಕ** (ನಾ). ಒಣಗಿಹೋಗಿರುವವನು; ಬಡವಾಗಿರುವವನು: ಕುಂಚಢ ಕನಿಷ್ಟರುಂ ತರಟಿನ ವಿಡಂಗರುಂ ಮಿಂಚುದಲೆ ವೊಣಕರುಂ ನಿಡುಗಯ್ಯ ದಡಿಗರುಂ (ವಾಗೀರ. ೬೬–೪); ಕ ಪ್ರತ್ಯಯಕ್ಕೆ – ಬಡಕಂ, ನಿಡುಕಂ, ಒಣಕಂ, ಕಿಡುಕಂ (ಶಮದ. ೨೦೫ ಪ್ರಯೋ).
[< ಒಣಗು$_1$ + –ಕ$_3$]

**ಒಣಕಲು** (ನಾ). ಒಣಗಿಹೋಗಿರುವುದು; ಶುಷ್ಕವಾದುದು: ಕುಡಿಕೆ, ಒಣಕಲು, ಬೀಸಣಿಗೆ (ಹೊನುಗ. ೭೯).
ಒಣಕಲಾಗು = ಸೊರಗು; ಕೃಶವಾಗು: ಅವನ ಬಾಗಿದ ಶರೀರವು ಒಣಕಲಾಗಿತ್ತು (ಯೋಧಪು. ೫೩); ಗುಲಾಬಿ ಕಂಟಿಯೊಂದು ಒಣಕಲಾಗಿ ನೀರು ಕಾಣದೆ ಜೀವಹಿಡಿದುಕೊಂಡಿದೆ (ಆಮನಿ. ೩೦).
[ಒಣಗು$_1$ + –ಕಲು$_2$ (< –ಕಲ್$_4$)]

**ಒಣಕು** (ನಾ). ಒಣಗಿರುವಿಕೆ; ಬತ್ತಿರುವಿಕೆ: ಮಧುವ ಕುಡಿಯದೊಣಕಾದ ನಯನ (ಕಮ್ಮೇಘ. ೨೬–೧೪). [< ಒಣಗು$_1$]

**ಒಣಕುಟ್ಟೆ[ತ್ತೆ]** (ನಾ). ಒಣಕಲಾಗಿಸುವ ರೋಗ: ಈಕೆ ಹುಟ್ಟುಗೆಟ್ಟ ಹುಟ್ಟಗೆಯಂತೆ ಹಡಣಮೊಣಗಿದ ಹಱಿಯ ಸಿದ್ಧಿಗೆಯಂತೊಣಕುಟ್ಟೆ[ತ್ತೆ]ದೆ [ಪಾಠಾಂ. ಯಂತಣ ಕಟ್ಟಿಗೆ] ಪತ್ತಿದ ಹಾಱೂರ ನಾಯಂತೆಯೊಡಲಂ ಪತ್ತಿದ ತೊನ್ನರ ತುಟಿಯಂತೆ ಕಣ್ಣಂಬು ಬಿರ್ದ ಕರ್ಬಾಳೆಯಂತೆ ಕಾಗೆ ಹಱಿದ ಹಱುಗಲಂತೆ (ಲೀಲಾವ. ೨–೧೧೭).
[ಒಣ (< ಒಣಗು$_1$) + ಕುತ್ತ]

**ಒಣಕೆಮ್ಮು** (ನಾ). ಕಫ ಬಾರದ ಕೆಮ್ಮು; ಬರೀಕೆಮ್ಮು; ಶುಷ್ಕಕಾಸ: ರಾತ್ರಿಯೆಲ್ಲಾ ಒಣಕೆಮ್ಮಿನಿಂದ ಆ ಮಗು ತೀರಾ ಸುಸ್ತಾಗಿದೆ (ರೂಢಿ). [ಒಣ (< ಒಣಗು$_1$) + ಕೆಮ್ಮು$_2$]

**ಒಣಕೆಯ್** (ನಾ). ಒಣಗಿದ ಕೈ; ಸೊರಗಿದ ಹಸ್ತ (ಕಿ).
[ಒಣ (< ಒಣಗು$_1$) + ಕೆಯ್$_2$]

**ಒಣಕೆಲಸ** (ನಾ). ಉಪಯೋಗವಿಲ್ಲದ ಕೆಲಸ (ಕಿ).
[ಒಣ (< ಒಣಗು$_1$) + ಕೆಲಸ]

**ಒಣಗಲ್** (ನಾ). ಒಣಗಿದುದು; ಶುಷ್ಕವಾದುದು: ಉಣದಿರ್ಪಾಧನಮಿರ್ದೊಡೇನು ಸುತನಿರ್ದೇಂ ಮುಪ್ಪಿನಲ್ಲಾಗದಾ ಒಣಗಲ್ ಪೈರಿಗೆ ಬಾರದಿರ್ದ ಮಳೆ ತಾಂ ಬಂದೇನು (ಸೋಮೇಶ. ೧೬).
[ಒಣಗು$_1$ + –ಅಲ್$_2$]

**ಒಣಗಾಯಿ** (ನಾ). ಒಣಗಿಹೋದ ಕಾಯಿ; ನೀರು ಇಂಗಿಹೋದ ಕಾಯಿ: "ಶುಷ್ಕಂ–ಒಣಗಾಯಿ, ಒಣಗಿದ ಮಿಡಿ" (ಸಿದ್ಧಾಂತಿ. ೧೦೦).
[ಒಣ (< ಒಣಗು$_1$) + ಕಾಯಿ$_4$ (< ಕಾಯ್$_4$)]

**ಒಣಗಿ** (ನಾ). (ಉಕ) ರೊಟ್ಟಿಯ ಜೊತೆಗೆ ತಿನ್ನಲು ಉಪಯೋಗಿಸುವ ಒಣಪಲ್ಯ ಅಥವಾ ಬೇಯಿಸಿ ಒಣಮಾಡಿದ ಬೇಳೆ: ಒಣರೊಟ್ಟಿ ತುಣುಕು ಒಣಗೀ ಕೊಡತಿದ್ದರು (ನಾಧಾರಿ. ೨೬).
[ಒಣಗು$_1$ + –ಇ$_3$]

**ಒಣಗಿಕ್ಕು** (ಕ್ರಿ). ಒಣಗುಹಾಕು; ಒಣಗಲು ಬಿಡು: ರಥ್ಯಾಮಾರ್ಗದೊಳ್ ದೇವತಾಗೃಹದ ಕುಕ್ಕುಟಂ ಬಿಸಿಲೊಳೊಣಗಿಕ್ಕಿದ ಧಾನ್ಯಮಂ ತಿಂದೊಡೆ (ಚಾವುಂಪು. ೯೫–೨೪); ಗಾವಿಲನದೊರ್ವ ಪಾರ್ವಂ ದೋವತ್ತಿಯಂ ಪಿಳಿದು ನಭದೊಳೊಣಗಿಕ್ಕಿದೊಡೆ (ಸಮಪ. ೧೨–೩೨). [< ಒಣಗು$_1$ + ಇಕ್ಕು]

**ಒಣಗಿಲು** (ನಾ). ಒಣಗಿರುವಿಕೆ; ಶುಷ್ಕವಾಗಿರುವಿಕೆ: ಇಂತು ಪುಸಿಯೊಳವೆ ವೇದಮನಂತಂ ಗಡಿವೆಂಬರೀಗೊಣಗಿಲುಗುಂದಿರ್ದಂತವು ಮೂಱಾದವೊ ಪೇೞ್ (ಸಮಪ. ೧೧–೧೩); ಉಜುಬಿದವು ಕೇಸುರಿಗ ಉದಕವ ಸುರಿದುವೊಣಗಿಲುಗಿಡಿಯ ಹಬ್ಬುಗೆ ಹೊಱಗೆ ಮಸಗಿತು (ಕುವ್ಯಾದ್ರೋ. ೧೯–೪೮) [ಒಣಗು$_1$ + -ಇಲ್ಲು$_2$ (< -ಇಲ್$_3$)]

**ಒಣಗಿಸು** (ಕ್ರಿ). ಒಣಗುವಂತೆ ಮಾಡು; ಶುಷ್ಕವಾಗಿಸು: ಕಡಿದೊಣಗಿಸಿದಾಮುಮಾಂಸಮದುವಲ್ಲೂರಂ (ವಸ್ತುಕೋ. ೯೪–೧೪); ಒಗೆದ ಧನಿಯನಾಲಿಸಿದರ ಪಾಪ ಓಡಿ ಹೋಗಲೊಗೆದ . . . ಏಕನಭವನೆಂಬ ದಿಟದ ಬಿಸಿಲೊಳೊಣಗಿಸುತ್ತ ಮತ್ತೆ ಪುರಹರಪ್ರಸಾದದಿಂದೆ ರಂಜಿಸಲ್ಕೆ ಗಂಜಿಯಿಟ್ಟು (ತಿರುತೊಂ. ಹ. ೧೧೭–೨೫); ಬಟ್ಟೆಯ ನೀರೊಳಗದ್ದಿ ಒಣಗಿಸಿ ಉಟ್ಟುಕೊಂಡರೆ ಅದು ಮಡಿಯಲ್ಲ (ಪುರಂದ. ೧–೧೧೪–೧); ಒದ್ದೆಕಟ್ಟಿಗೆಯನ್ನು ಒಣಗಿಸುವ ಬಗ್ಗೆ ಒಲೆಯ ಬದಿಯಲ್ಲಿ ಜಾಗಮಾಡಬಹುದು (ಅಡುಸೌ. ೨೭) [ಒಣಗು$_1$ + -ಇಸು$_3$]

**ಒಣಗು$_1$, ಒಣ** (ಕ್ರಿ). (ನೀರಿಲ್ಲದಂತೆ) ಆರಿಹೋಗು; ಶುಷ್ಕವಾಗು: "ಒಣಗು – ಶೋಷಣೇ" (ಶಮಧಾ); ಮರದೊಣಗಿದ ಕೊಂಬುಗಳೊಳ್ (ವಡ್ಡಾರಾ. ೧೫೭–೩); ವಿರಹಿಗಳ ಸುಯ್ಯ ಬೆಂಕೆಯೊಳೆರದೊಣಗಿ (ಪಂಪಭಾ. ೫–೯೦); ತಳಿತ ಮರನೊಣಗಿದುದು (ಕುವ್ಯಾಸ. ೧೧–೬೩); ಗಂಟಲು ಒಣಗಿ, ಒಣಗಿ ಕಾದು ಹೋಗಿದೆ (ಅಶ್ವಮೇ. ೫). **ಒಣ** : ಸಮಾಸದ ಪೂರ್ವಪದವಾಗಿದ್ದಾಗ 'ಒಣಗು' ಶಬ್ದಕ್ಕೆ ಆದೇಶವಾಗಿ ಬರುವ ರೂಪ. 'ಒಣಕೆಮ್ಮು' ಪರಾ.

ಒಣಹಾಕು = ಒಣಗಲು ಹಾಕು: ಬಟ್ಟೆಗಳನ್ನು ಒಂದೊಂದಾಗಿ ಒಗೆದು. . . ಮರಳಿನ ಮೇಲೆ ಬಿಸಿಲಲ್ಲಿ ಒಣಹಾಕುತ್ತಿದ್ದ (ಕುಸುಸಂ. ೧೮೪).
[ದೇ. ‖ ತಮಿ. ಉಣಙ್ಗು; ಮಲ. ಉಣಙ್ಙು; ಕೊಡ. ಒಣಙ್ಗ್]

**ಒಣಗು$_2$** (ನಾ). ಒಣಗಿಸುವಿಕೆ; ಶೋಷಣ: "ಶುಠಿ–ಶೋಷಣೇ, ಒಣಗಿನೊಳ್" (ಕಾಶಕ್ಕ. ೨೨); "ಸ್ರಿವು–ಗತಿಶೋಷಣಯೋಃ, ನಡೆಯೊಳಂ, ಒಣಗಿನೊಳಂ" (ಕಾಶಕ್ಕ. ೧೮೧). 'ಒಣಗುದೋಱು' ಪರಾ. [< ಒಣಗು$_1$]

**ಒಣಗುದೋಱು** (ಕ್ರಿ). ಶುಷ್ಕತೆಯನ್ನು ತೋರಿಸು; ಒಣಕಲಾಗು: "ತಿರುಳುದೋರ್ವ ಮಿಡಿಗಾಯಿ ಕೋಮಳಂ ಶಲಾಟುಗಳೊಣಗುದೋರ್ವ ಕಾಯಿ ವಾನಂಗಳಕ್ಕೆ" (ಮಂಗರಾ. ೩೩–೭).
[ಒಣಗು$_2$ + ತೋಱು]

**ಒಣಗುಪುಲ್** (ನಾ). ಒಣಗಿದ ಹುಲ್ಲು: ಆಚ್ಛೋತ್ತಿದಂತೆ ನಿಜದೊಳು ಯೆಚ್ಚರಿಕೆಯೊಳಿರ್ದಡವಗೆ . . . ಕರ್ಮವು ಕಿಚ್ಚಂ ಪಿಡಿದೊಣಗುಪುಲ್ಲ ಬೆಟ್ಟಕೆ ಸದೃಶಂ (ಭವ್ಯಾಮೃ. ೩೦). [ಒಣಗು$_1$ + ಪುಲ್]

**ಒಣಗೆಮ್ಮಲು** (ನಾ). ಒಣಕೆಮ್ಮು: ಒಣಗೆಮ್ಮಲನ್ನು ತಪ್ಪಿಸಿ ಶ್ಲೇಷ್ಮ ಬರುವಂತೆ ಮಾಡು (loosen. ಇಂಕನಿ). [ಒಣ (< ಒಣಗು$_1$) + ಕೆಮ್ಮಲು]

**ಒಣಚರ್ಚೆ** (ನಾ). ಹುರುಳಿಲ್ಲದ ಚರ್ಚೆ; ವ್ಯರ್ಥವಾದ ವಾದ: 'ಹೋಗಲಿ ಬಿಡಿ, ಸುಮ್ಮನೆ ಒಣಚರ್ಚೆ ಏಕೆ? . . . ' (ಹೇಮುಕೂ. ೧೧).
[ಒಣ (< ಒಣಗು$_1$) + ಚರ್ಚೆ]

**ಒಣಜಂಬ** (ನಾ). ಹುರುಳಿಲ್ಲದ ಜಂಬ; ವ್ಯರ್ಥ ಪ್ರತಿಷ್ಠೆ: ಏಕಾದಶಿ ದಿನ ನೀರೂ ಸಹ ಮುಟ್ಟುವುದಿಲ್ಲ ಎಂದು ಒಣಜಂಬ ಮಾಡಿದಳು (ಮಹಾಗ. ೧೪೪); ಅವನ ಧ್ವನಿಯಲ್ಲಿ ಒಣಜಂಬ ತುಂಬಿಕೊಂಡಿತ್ತು (ಕತ್ತಬೆ. ೩೦). [ಒಣ (< ಒಣಗು$_1$) + ಜಂಬ$_1$]

**ಒಣಜ್ಞಾನ** (ನಾ). ಹುರುಳಿಲ್ಲದ ಜ್ಞಾನ: ಕೇವಲ ಒಣಜ್ಞಾನದಿಂದ ಮುಕ್ತಿಯೆಂದೂ ಅದು ಹೇಳುವುದಿಲ್ಲ ಅಥವಾ ಮೂಢಭಕ್ತಿಯಿಂದ ಮುಕ್ತಿಯೆಂದೂ ಅದು ಹೇಳುವುದಿಲ್ಲ (ಗೀತಾಸಂ. ೧೧).
[ಒಣ (< ಒಣಗು$_1$) + ಜ್ಞಾನ]

**ಒಣತಳಿಗು** (ನಾ). ಒಣಗಿದ ಎಲೆ: ಓತು ಗೋವಳೆಮೇವ ಬಿಟ್ಟೊಣತಳಿಗಂ ಬಾಯ್ವಾತು ಮೇವುದ ಕಂಡೆ (ಭರಚ. ೬೧–೩೫).
[ಒಣ (< ಒಣಗು$_1$) + ತಳಿಗು]

**ಒಣತಿಂಡಿ** (ನಾ). (ಉಕ) ಒಳಗೊಳಗೆ ಉಂಟಾಗುವ ನವೆ: "ಕಂಡೂ, ಕಂಡೂಯಿ, ಒಣತಿಂಡಿ, ಒಣಹುರಕು" (ಗಂಗಾಮ. ೬೩).
[ಒಣ (< ಒಣಗು$_1$) + ತಿಂಡಿ$_2$]

**ಒಣನಗು** (ನಾ). ತೋರಿಕೆಯ ನಗು; ಹುಸಿನಗು: ಹೊಸಬನು . . . ಒಣನಗು ನಗುತ್ತಾ ಬಂದ (ಮಹಾತ್ಮಾ. ೭೬).
[ಒಣ (< ಒಣಗು$_1$) + ನಗು$_2$]

**ಒಣನಗೆ** (ನಾ). ೧. = ಒಣನಗು: ". . .ನಾನು ಆರಾಮಿದ್ದೇನೆ" ಎಂದು ಒಣನಗೆಯನ್ನು ಬೀರುತ್ತಿದ್ದಳು (ಕುಂಕುಮ. ೬೦). ೨. ಶುಷ್ಕವಾದ ನಗೆ: ಒಣನಗೆಯ ಮಗುವಿನ ಚಿತ್ರ ಮಾತ್ರ ಅವನ ಕಣ್ಮುಂದೆ ಕಟ್ಟಿದಂತಿತ್ತು (ಪುನರು. ೩೦೯). [ಒಣ (< ಒಣಗು$_1$) + ನಗೆ]

**ಒಣನುಡಿ** (ನಾ). = ಒಣಮಾತು: ಒಣನುಡಿಯಲ್ಲೇ ಕಾಲಕಳೆಯಬೇಡಿ (ರೂಢಿ). [ಒಣ (< ಒಣಗು$_1$) + ನುಡಿ$_2$]

**ಒಣನೆಲ** (ನಾ). ಒಣಗಿದ ನೆಲ; ಬತ್ತಿದ ನೆಲ: ಪ್ರತಿಯೊಂದು ಗೋಲಾರ್ಧದಲ್ಲೂ ಒಣನೆಲವೂ ನೀರೂ ಉಂಟು (ಮುಂಬಯಿ. ೪–೯೪).
[ಒಣ (< ಒಣಗು$_1$) + ನೆಲ]

**ಒಣನೆವ** (ನಾ). ತಿರುಳಿಲ್ಲದ ನೆವ; ಸುಳ್ಳುನೆವ; ಕುಂಟುನೆಪ: ನಾಲ್ಕೈದು ಸಾರೆ ಒಣನೆವವನ್ನು ಹೇಳಿ ಪಾರಾಗಿದ್ದನು (ಜಯಂತ. ೫೭).
[ಒಣ (< ಒಣಗು$_1$) + ನೆವ (< ನೆಪ)]

**ಒಣಪಡಿ** (ನಾ). ೧. ಒಣ ಧಾನ್ಯಗಳನ್ನು ಕೊಡುವುದು; ಅಕ್ಕಿಪಡಿ (ಕ). ೨. (ತೂಕದಲ್ಲಿ) ಕಡಮೆಯಾದ ಭಾಗ (ಕ).
[ಒಣ (< ಒಣಗು$_1$) + ಪಡಿ$_3$]

**ಒಣಪಾಂಡಿತ್ಯ** (ನಾ). ಕೆಲಸಕ್ಕೆ ಬಾರದ ಪಾಂಡಿತ್ಯ; ಶುಷ್ಕ ಪಾಂಡಿತ್ಯ: ಒಣಪಾಂಡಿತ್ಯಕ್ಕೆ, ಲಕ್ಷಣಕ್ಕೆ ಕಟ್ಟುಬಿದ್ದು ಬರಿಯ ವರ್ಣನೆಗಳಲ್ಲಿಯೇ ಮುಳುಗಿ ಕಾವ್ಯದ ಮಗ್ಗವನ್ನು ನೆಯ್ದವರೂ ಇದ್ದಾರೆ (ಕಬಸಾ. ೮೧). [ಒಣ (< ಒಣಗು$_1$) + ಪಾಂಡಿತ್ಯ]

**ಒಣಬಟ್ಟೆ** (ನಾ). ಒಣಗಿದ ದಾರಿ; ಕಾದ ದಾರಿ: ಒಟ್ಟೈಸಿ ಪೋಗಲರಿದೊಣದೊಣಬಟ್ಟೆ [ಒಣಬಟ್ಟೆ]ಯ ಕಿಱುಗಲ್ಲ ಬಡಿಯ ಕೋಳಿಂದಂ ಕಾಲ್ ಕೆಟ್ಟುವು ಜವಜವನಾದುವು ನೆಟ್ಟನೆ ಮೈ ಸತ್ತನೆಂದು ಕಡುಭಯದಿಂದಂ (ಧರ್ಮಾಮೃ. ೬–೮೯). [ಒಣ (< ಒಣಗು$_1$) + ಬಟ್ಟೆ$_1$]

**ಒಣಬರಲು** (ನಾ). ಒಣಗಿದ ಬರಲು: ಆ ಒಣಬರಲು! ಆ–ಮುದುಕಿ! (ಬೆಟ್ಟಅ. ೯೪–೧೨). [ಒಣ (< ಒಣಗು$_1$) + ಬರಲು]

**ಒಣಬಾಯಿ** 'ಒಣವಾಯ್' ನೋ.

**ಒಣಬಾಳು** (ನಾ). ನೀರಸವಾದ ಜೀವನ; ವ್ಯರ್ಥವಾದ ಬಾಳು: ನನ್ನ ಒಣಬಾಳನ್ನು ಮೈತ್ರಿಯಿಂದ ತುಂಬಿದ್ದೀರಿ (ಕಬಸಾ. ೧೪೧).
[ಒಣ (< ಒಣಗು$_1$) + ಬಾಳು$_2$ (< ಬಾೞ್$_2$)]

**ಒಣಮಾತು** (ನಾ). ಕೆಲಸಕ್ಕೆ ಬಾರದ ಮಾತು; ವ್ಯರ್ಥವಾದ ಮಾತು; ಗೊಡ್ಡುಹರಟೆ: ಹಣವ ಕಂಡರೆ ಬಾಯ ಹೆಣ ಬಿಡುವುದೆಂದಿರಲು ಹಣನೋಡಿ ಆಣಿಯ ಮಾಡುವಳು ಇಲ್ಲದಿರೆ ಒಣಮಾತಿನವಳು (ಸರ್ವಜ್ಞ. ೧೯೨೩); ಸಾಗಲೆ ಸಚಿವನೆ, ಭಕ್ತರು ಭವಿಗಳು ಸರಿಯಲ್ಲೀ ಒಣಮಾತೇಕೆ (ಕರ್ನಾಕ. ೭೨). [ಒಣ (< ಒಣಗು$_1$) + ಮಾತು$_1$]

**ಒಣಮುಖ** (ನಾ). ಬಾಡಿದ ಮುಖ; ಕಳೆಗೆಟ್ಟ ಮುಖ; ಸೊರಗಿದ ಮುಖ: ಬಿಸಿಲಲ್ಲಿ ತಿರುಗಾಡಿ ಒಣಮುಖಹಾಕಿಕೊಂಡು ಬಂದ (ರೂಢಿ).
[ಒಣ (< ಒಣಗು$_1$) + ಮುಖ]

**ಒಣಮೇವು** (ನಾ). ಒಣಗಿದ ಮೇವು, —ಆಹಾರ : ಹುಲ್ಲುಗಾವಲಿಗೆ ಭಾರಿ ನಷ್ಟವಾಗಿದೆ. ನಾನೀಗ ತಪ್ಪು ವಸೂಲು ಮಾಡದಿದ್ದರೆ ನಾಳೆ ಒಣ ಮೇವಿಗೆ ಸೊನ್ನೆ ಬೀಳುತ್ತದೆ (ಪುನರು. ೨೮೬).
[ಒಣ (< ಒಣಗು$_1$) + ಮೇವು (< ಮೇವು)]

**ಒಣಮೊಱಡಿ** (ನಾ). ಏನೂ ಬೆಳೆಯದ ಕಲ್ಲುಗುಡ್ಡ : ಉರಗೇಂದ್ರನ ಪದಮಂ ಭೂನಾಗದ ಮಱಿ ಸುರಗಿರಿಯ ಮಹತ್ವಮನೊಣಮೊಱಡಿ ಭಾಸುರತೆಯನಡವಿಯ ಕಿಱುಗೆಱೆ . . . ಪಡೆಯಲ್ಬಯಸುವವೋಲ್ (ವೀರೇಜ. ೧–೩೪). [ಒಣ (< ಒಣಗು$_1$) + ಮೊಱಡಿ]

**ಒಣಮೋರೆ** (ನಾ). = ಒಣಮುಖ ; "ಅಳುವೋರೆ" (ಜಾನಕೋ. ೨೯) : ಅವಳು ಒಣಮೋರೆ ಮಾಡಿಕೊಂಡು ಅವನ ಕಾಲದಿಸೆಯಲ್ಲಿ ಕುಳಿತುಕೊಂಡಳು (ಎರಸೆ. ೧೪೬).
[ಒಣ (< ಒಣಗು$_1$) + ಮೋರೆ (< ಮೋಱೆ)]

**ಒಣರ್** (ಕ್ರಿ). ೧. ಭಾವಿಸು ; ತಿಳಿ : ಮನದೊಳವರದಿಂದೀ ಯಮ ತನಯನ ಕುಡುವಗ್ರಪೂಜೆ ಮತ್ಸನ್ನಿಧಿಯೊಳೆ ನಿನಗೆಶನಿಯ ಮಿಱುವ ನಂಜಿನ ದೊರೆಯೆಂದೊಣರ ನಂದಗೋಪಾಲಸುತಾ (ಪಂಪಭಾ. ೬–೫೧) ; ಮಳಯಗಿರಿಯೋಳಿರ್ಪಂ ಬಲಂ ಕೇಳಿರೇ ನೀಮೊಣರಿರ್ ಮತ್ತೆ ಮ್ಮಾತಂ (ಕಾವ್ಯಾವ. ೯೦೦) ; ಚತುರ ಯಶಶ್ರೀಯಂತಮಳ ಮುಕ್ತಿಯಂತೇಕಾಂತಮನೋಹರಿಯಿವಳ್ ಪಲೆಂದೊಣರ್ದಪರೇ (ಚಂದ್ರಪ್ರ. ೧೩–೨೫) ; ಒಣರ್ವೊನ್, ತಪ್ಪನೊಣರ್ವುದಿದು ಶೋಕಮ್ (ಅಂತಿಗೊ. ೧೫–೩೦೦). ೨. ಹೇಳು ; ನಿರೂಪಿಸು : ಪೊಣರ್ದಿರ್ೀ ಧೂರ್ತ ಜನೋಪಸರ್ಗಮನಿಶಂ ಬೆಂಬತ್ತೆ ಬೆಂದೀಳದಾನೊಣರ್ದೆಂ ಗೊಮ್ಮಟಸಾರವೃತ್ತಿಯ ನಿದಂ ಕರ್ಣಾಟಕವಾಕ್ಯಂಗಳಿಂ (ಕವಿಚ. 1, ೪೧೬ ಗೊಮ್ಮಟಸಾರ). ೩. ಕೂಡು ; ಸೇರು : ಪ್ರತ್ಯಯಮೊಣರ್ದು ಸಮಂತೊಂದಿ ತೋಱುಗುಂ ತದ್ಧಿತದೊಳ್ (ಕಾವ್ಯಾವ. ೩೬೮).
[ದೇ. ‖ ತಮಿ. ಮಲ. ಉಣರ್]

**ಒಣರಗಳೆ** (ನಾ). ಕೆಲಸಕ್ಕೆ ಬಾರದ ವ್ಯವಹಾರ ; ವ್ಯರ್ಥವಾದ ಕಲಾಪ : ಈ ಒಣರಗಳೆಯಿಂದ ತನಗೆ ಪ್ರಯೋಜನವೇನು ? (ಮುಂಬಯಿ. ೪–೫೩) ; ತಿರುತಿರುಗಿ ತೊಳಲುವುದು . . . ಕೆರಳುವುದು ನರಳುವುದು ಇರವಿದೇನೊಣರಗಳೆ ? (ಮಂಕುಕ. ೨೩).
[ಒಣ (< ಒಣಗು$_1$) + ರಗಳೆ]

**ಒಣರವದಿ** (ನಾ). (ಉಕ) ಒಣಗಿದ ಜೋಳದ ಸೊಪ್ಪೆ (ಕಿ).
[ಒಣ (< ಒಣಗು$_1$) + ರವದಿ]

**ಒಣರೆಂಬೆ** (ನಾ). ಒಣಗಿದ ಕೊಂಬೆ : ಗಿಡವನ್ನು ನಾಶಮಾಡುವ ಒಣ ರೆಂಬೆಗಳನ್ನು (dead wood) ಕತ್ತರಿಸಿ ಗಿಡಕ್ಕೆ ಜೀವರಸ ಬರುವಂತೆ ಕಸಿಮಾಡಿ (ಕಬಸಾ. ೧೪೩). [ಒಣ (< ಒಣಗು$_1$) + ರೆಂಬೆ]

**ಒಣರೊಟ್ಟಿ** (ನಾ). ೧. ಒಣಗಿದ ರೊಟ್ಟಿ. ೨. ಬರಿರೊಟ್ಟಿ ; ನಂಜಿಕೊಳ್ಳಲು ಜೊತೆಗೆ ಏನೂ ಇಲ್ಲದ ರೊಟ್ಟಿ : ಒಣರೊಟ್ಟಿ ತುಣುಕು (ನಾಥಾರಿ. ೨೬) ; ಗಾಣಿಗನ ಸಂಗಡ ಗುದ್ದಾಡಿ ಒಣರೊಟ್ಟಿಯನ್ನು ತಿಂದರಂತೆ (ಗಾದೆ). [ಒಣ (< ಒಣಗು$_1$) + ರೊಟ್ಟಿ]

**ಒಣರ್ಚು** (ಕ್ರಿ). ಸೇರಿಸು ; ಒಂದುಗೂಡಿಸು : ಸ್ಫಾರಶರೀರಕಾಂತಿ ಜನನೀ ನಯನಾಬ್ಜಮನುಳ್ಳಲರ್ಚಿ ವಿಸ್ತಾರಮನೋರಥಾಂಗಮನೊಣರ್ಚಿ ಬೆಳರ್ಪಿಳನೇಸಱಂತೆ (ಪುಷ್ಪಪು. ೧೦–೧೬). [ಒಣರ್ + –ಚು]

**ಒಣವಸಿಱು** (ನಾ). ಒಣಗಿದ ಹೊಟ್ಟೆ ; ಕೃಶವಾದ ಒಡಲು : ಪೆಡತಲೆಯೊಳ್ ಪೊಕ್ಕ ಕಣ್ ತೋರ್ಪ ಕೆಯ್ಕಾಲ್ಸೆರೆ ಪಾತಾಳಕ್ಕೆ ಪೊಕ್ಕಿರ್ದೊಣವಸಿಱುಡುಗಿರ್ದೊಂದುರಂ ಪೊಟ್ಟು ಬಾಯ್ (ಅರ್ಥನೇ. ೭–೧ ವ).
[ಒಣ (< ಒಣಗು$_1$) + ಬಸಿಱು]

**ಒಣವಾದ** (ನಾ). ಕೆಲಸಕ್ಕೆ ಬಾರದ ವಾದ ; ಶುಷ್ಕವಾದ ತರ್ಕ : ವಾದನುಳಿ ಕರ್ತೃತ್ವವುಂಟೆಂಬೋದದುಳ್ಳೊಡೆ ತೋಱು ಬಱಿ ಒಣವಾದ ವೇಕುದೋ ಸಾಕು ಬೋಧಕ ಬೋಧೆಗಳ್ಗವಿನ್ನು (ಸಾಸಂಚ. ೯–೧೨೩).
[ಒಣ (< ಒಣಗು$_1$) + ವಾದ$_3$]

**ಒಣವಾಯ್**, ಒಣಬಾಯಿ (ನಾ). ೧. ಒಣಗಿದ ಬಾಯಿ ; ಆರಿದ ಬಾಯಿ : ಬೀರ್ವರಿದ ಭಯದ ಪಿನ್ನೋಟದೊಣವಾ [ಪಾಠಾಂ. ಮ್ಮೆ]ಯ ಕಡುಪಾರ್ವದೆಯ (ಚಿಬಪು. ೪೯–೨೪). **ಒಣಬಾಯಿ** : ೨. ಬರಿ ಬಾಯಿ ; ಏನೂ ತಿನ್ನದ ಬಾಯಿ : ಖೋಡಿ ಬೆಕ್ಕು ಎಲ್ಲಾ ಕುಡಿದು ಹೋಯ್ತು. ಇನ್ನ ಕೂಡು ಒಣ[ಣ]ಬಾಯಿಲೆ, ಮತ್ತ ಮಾಡೋತನಕಾ (ಹೊಸಂಸಾ. ೧೧೯) ; ಹಸಿತುಳಸಿದಳ ನೀರ ಒಣಬಾಯೊಳೂಡಿ (ಕಎಪು. ೪೪–೫).
[ಒಣ (< ಒಣಗು$_1$) + ಬಾಯ್]

**ಒಣವುಲ್**, ಒಣಹುಲ್ಲು (ನಾ). ಒಣಗಿದ ಹುಲ್ಲು : ಸಂಜೆಯ ಕೆಂಪು ಸೊಬಗುವೊಣವುಲ್ಲ ಧನಂಜಯನೇಳ್ಗೆ ಸಕಲ ಬಂಧುಜನಂ ಮಳೆಯ ಮಹಿಮೆ (ಜಯಕಾ. ೧೩–೩೭). **ಒಣಹುಲ್ಲು** : ಬರಗಾಲದಲ್ಲಿ ಒಣ ಹುಲ್ಲೂ ಸಿಕ್ಕದು (ರೂಢಿ). [ಒಣ (< ಒಣಗು$_1$) + ಪುಲ್]

**ಒಣವೇದಾಂತ** (ನಾ). ಕೆಲಸಕ್ಕೆ ಬಾರದ ವೇದಾಂತ ; ಶುಷ್ಕ ವೇದಾಂತ : "ಸರಿ ತೆಗೆದೆಯಲ್ಲಾ ಒಣವೇದಾಂತ . . . " (ಹೊಸಕ್ಷಿ. ೧೦೬). [ಒಣ (< ಒಣಗು$_1$) + ವೇದಾಂತ]

**ಒಣವ್ಯವಸಾಯ** (ನಾ). ಮಳೆಯ ನೀರಿನ ಆಶ್ರಯದಿಂದ ಮಾಡುವ ವ್ಯವಸಾಯ ; ಖುಷ್ಕಿ : ಮಳೆಯ ನೀರನ್ನು ಉಳಿಸಿಕೊಂಡು ಸರಿಯಾದ ಪೈರನ್ನು ಬೆಳೆಯುವುದಕ್ಕೆ 'ಒಣವ್ಯವಸಾಯ' (Dry farming) ಎಂದು ಹೆಸರು (ವ್ಯವಮು. ೬೦). [ಒಣ (< ಒಣಗು$_1$) + ವ್ಯವಸಾಯ]

**ಒಣಶೊಂಠಿ** (ನಾ). ಒಣಗಿದ ಶುಂಠಿ : "ಶುಂಠಿ – ಒಣಗಿದ ಶೊಂಠಿ, ಒಣಶೊಂಠಿ" (ಸಿದ್ಧಾಂತಿ. ೨೪೪). [ಒಣ (< ಒಣಗು$_1$) + ಶೊಂಠಿ]

**ಒಣಸಂಗತಿ** (ನಾ). ಕೆಲಸಕ್ಕೆ ಬಾರದ ವಿಚಾರ ; ನೀರಸ ಸಂಗತಿ : ಗೃಹಸಂಸಾರದ ಒಣಸಂಗತಿಗಳನ್ನಲ್ಲ ; ಅವರ ವಿಚಾರಸಂಸಾರದ ಹಸಿ ಸಂಗತಿಗಳನ್ನು (ಜಗದಾ. ೧೭೪). [ಒಣ (< ಒಣಗು$_1$) + ಸಂಗತಿ]

**ಒಣಸಂಶಯ** (ನಾ). ಆಧಾರವಿಲ್ಲದ ಸಂಶಯ ; ತಳಬುಡವಿಲ್ಲದ ಸಂಶಯ (ಕಿ). [ಒಣ (< ಒಣಗು$_1$) + ಸಂಶಯ]

**ಒಣಸಗಣಿ** (ನಾ). ಒಣಗಿದ ಸಗಣಿ : "ಕರೀಷಃ – ಒಣಸಗಣಿ" (ಸಿದ್ಧಾಂತಿ. ೨೪೮). [ಒಣ (< ಒಣಗು$_1$) + ಸಗಣಿ (< ಸೆಗಣಿ)]

**ಒಣಸರಸ** (ನಾ). ವ್ಯರ್ಥವಾದ ಚೇಷ್ಟೆ, —ಕ್ರೀಡೆ : ಮಾರ್ಪೊಳೆಯೆ ತಮ್ಮಯ ಪ್ರತಿಬಿಂಬಮೆಂಬುದನು ತಿಳಿಯದೆ . . . ಚಂಚುವಿಂದಲಿ ಕುಕ್ಕಿ ಒಣಸರಸದಿಂದಲಸಿ ಬಳಲ್ವ ಕಳಹಂಸಕಂಗಳೆಸೆದಿರ್ದವು (ನವಮೋ. ೮–೩೨). [ಒಣ (< ಒಣಗು$_1$) + ಸರಸ]

**ಒಣಸಾಹಸ** (ನಾ). ಹುರುಳಿಲ್ಲದ ಪರಾಕ್ರಮ ; ತೋರಿಕೆಯ ಸಾಹಸ : ಬಂಕಿಮನಿಗೆ . . . ಶಕ್ತಿ ಇತ್ತು, ಧೈರ್ಯವಿತ್ತು, ಅದು ಒಣಸಾಹಸದ ಬಡಾಯಿಯಲ್ಲ (ಬಂಕಿಮು. ೪೯೨).
[ಒಣ (< ಒಣಗು$_1$) + ಸಾಹಸ]

**ಒಣಸೋಗು** (ನಾ). ವ್ಯರ್ಥವಾದ ವೇಷ, —ನಟನೆ : ಒಮ್ಮೊಮ್ಮೆ ಹೆಣ್ಣು ಹೊಯ್ಕಾಲಿಯಾಗಿ ಒಣಸೋಗು ಮಾಡಿ, ಹಾಸ್ಯಕ್ಕೆ ಗುರಿಯಾಗುವುದೂ ಉಂಟು (ಕನ್ನಜಾ. ೫೯).
[ಒಣ (< ಒಣಗು$_1$) + ಸೋಗು]

**ಒಣಹರಟೆ** (ನಾ). ಕೆಲಸಕ್ಕೆ ಬಾರದ ಮಾತು ; ಗೊಡ್ಡು ಹರಟೆ (ಕಿ). 'ಒಣಹರಟೆಗಾಱ' ಪರಾ.
[ಒಣ (< ಒಣಗು$_1$) + ಹರಟೆ]

**ಒಣಹರಟೆಗಾಱ** (ನಾ). ಕೆಲಸಕ್ಕೆ ಬಾರದ ಮಾತನ್ನಾಡುವವನು ; ಗೊಡ್ಡುಹರಟೆ ಹೊಡೆಯುವವನು : ಒಣಹರಟೆಗಾಱರ ಶಿವಾನುಭಾವಿಗಳೆಂತೆಂಬೆನಯ್ಯಾ (ಅಖಂಡೇ. ೧೯೨–೧೦).
[ ಒಣಹರಟೆ + –ಗಾಱ (< –ಕಾಱ)]

**ಒಣಹುಲ್ಲು** 'ಒಣವುಲ್' ನೋ.

**ಒಣಹೆಮ್ಮೆ** (ನಾ). ಹುರುಳಿಲ್ಲದ ಜಂಬ ; ವ್ಯರ್ಥವಾದ ಪ್ರತಿಷ್ಠೆ : "ಢಂಬಾಚಾರ – ಒಣಹೆಮ್ಮೆ " (ಗಂಗಾಮು. ೧೪೫) ; ನಮ್ಮ ಮೂಢತನವನ್ನೂ ಒಣಹೆಮ್ಮೆಯನ್ನೂ ನೋಡಿ ನಗುವರು (ಮುಂಬಯಿ. ೪–೪೯).
[ಒಣ (< ಒಣಗು₁) + ಹೆಮ್ಮೆ (< ಪೆರ್ಮೆ)]

**ಒಣಿಗೆ** (ನಾ). ಬಾಯಿ ತುಂಬುವ ತುತ್ತು ; ಕವಳ (ಸ್ಯಾಂಡರ್).
[< ವಳಿಗೆ]

**ಒಣೆ**(?). (?) : ನೆಲನನಿತುಂ ತೆರಳ್ದಡಸಿ ಬಿಟ್ಟೊಣೆಯಂ ತವದೊಂದ ಮಾಱ್ಕೆಯಿಂ ನೆಲೆ ನೆಲೆವೆರ್ಚೆ ಮುಂ ಪರಿವ ಪೆರ್ದೊಱೆಗಳ್ ನೃಪನೀತಿಮಾರ್ಗ ಭೂತಲಪತಿಪೋಲ್ ಕಱುತ್ತೆಱಗೆ ತಾಗಿದರಾತಿವೊಲಂತೆ ಮಾಣ್ದು ಪೆರ್ಬಲಮೊಡವಾಯೆ ಕಪ್ಪುಕವಿವಂತಿರೆ ಕಾಲೊಳೆ ತಪ್ಪವೆಲ್ಲಿಯುಂ (ಕಾವ್ಯಸಾ. ೪೬೩).
[?]

**ಒತ್ತಂಡ** (ನಾ). ಒಂದು ತಂಡ, —ಗುಂಪು : ಜೋಡು ಸೀಸಕವಾಂತ ಸಬಳಿಗರೊತ್ತಂಡ ಚೂಡಾಯ್ತು ಹರಿಗೆ ಬಿಲ್ಲವರ ಖೇಡೆಯವಡೆದ ರಾವುತ ಜೋದ ರಥಿಕರ ನೋಡ ಚಿತ್ರೈಸಲೆ ದೇವ (ಮೋಹತ. ೨೦–೫೪).
[ಒರ್ (< ಒಂದು₃) + ತಂಡ]

**ಒತ್ತಂಬ** (ನಾ). ೧. ಒತ್ತುವಿಕೆ ; ಬಲಾತ್ಕಾರ ; ಒತ್ತಾಯ : ಗುಣಮನ್ನಾನ್ನೆಲೆಸಿರ್ಪ ಬಟ್ಟೆಕೆಱೆಯಂ ಮರ್ಯಾದೆಯನ್ನಪ್ಪಿ ಭೀಷಣ ವಿದ್ವಿಷ್ಟ ಬಲಂಗಳೊಟ್ಟೆಕೊಳಲೆಂದೆಟ್ಟಿನ್ದೊದೊತ್ತಂಭ[ಬ]ದಿಂ (ಎಇ. XIII, ೧೪೯–೫ ; 888) ; ದ್ರೋಣನೊತ್ತಂಬದಿಂದೊಳಗಂ ಪೊಕ್ಕು ದ್ರುಪದನಂ ಕಂಡು (ಪಂಪಭಾ. ೨–೪೭ ವ) ; ಅವಂದಿರ್ ಅತಿವರ್ತಿಯಪ್ಪ ಮತ್ತಗಜಂ ಕಂಭಕ್ಕೆ ತರ್ಪಂತೊತ್ತಂಬದಿಂ ಬಂದುಂ (ಪಂಚತಂ. ೧೮–೨೦) ; ಹೊಸಹೋರಿಯೆತ್ತುಗಳನೊತ್ತಂಬದಿಂ ಹೂಡಿದ ಗಾಡಿವಡೆದು (ಸಿದ್ಧರಾ. ೬–೧೯) ; ಒತ್ತಂಬದೆ ವಿರಹಿಗಳಂ ಚಿತ್ತಭವಂ ಬಂದಿವಿಡಿದು ಗಂಟಲಬಳೆಯಂ ಪತ್ತಿಸಿದ ಚಂದ್ರಕಾಂತದ ಕತ್ತರಿಯೆನೆ ತೊಳಗಿ ಬೆಳಗಿತೆಳವೆಱೆ ನಭದೊಳ್ (ಸೂಕ್ತಿಸು. ೮–೨೫೬) ; ನಾಡಿನರಸುತನಮಂ ಒತ್ತಂಬದಿಂದೆಳಸುತಿರ್ದ (ಮರಾಚ. ೫–೨೯). ೨. ಸಮೂಹ ; ಮೊತ್ತ : ಪೆತ್ತುದು ಪೂರ್ಣಶಶಾಂಕರ ಮೊತ್ತಮನೆನೆ ಮಧುಪಮಿಳಿತ ಸರಸಿಜ[ಕುಲ]ದೊಂದೊತ್ತಂಬದಿಂದಮೆನಸುಂ ಬಿತ್ತರಿಸುತ್ತಿರ್ದುದಾ ಸರೋರುಹಷಂಡಂ (ಕುಸುಮಾ. ೯–೩೭); ಕುಸುಮಾ. ೨–೪೪ ನೋ). ೩. ಭಾರ : ಎಡಗೈಯಿಂ ನೀವಿಯಂ ಸಾರ್ಚುತುಮುರಸಿಜದೊತ್ತಂಬದಿಂ ಬಳ್ಕುತುಂ ಸೋರ್ಮುಡಿಯಂ ಸೈತೊತ್ತುತುಂ (ಕುಸುಮಾ. ೪–೩೪). [< ಸಂ. ಉಪಸ್ತಂಭ]

**ಒತ್ತಂಬಂ** (ಅ). ಗಾಢವಾಗಿ ; ಚೆನ್ನಾಗಿ ; ಬಲವಾಗಿ : ಮತ್ತಾಕಲ್ಲನೆ ಸೋದಿಸಲ್ ಕನಕಮಂ ಕಾಣ್ಬಂತೆ ಪಾಲಂ ಕ್ರಮಂಬೆತ್ತೊಳ್ಪಿಂ ಮಥನಂಗೆಯಲ್ ಘೃತಮುಮಂ ಕಾಣ್ಬಂತೆ ಕಾಷ್ಠಂಗಳಂ ಒತ್ತಂಬಂ ಪೊಸೆದಗ್ನಿಗಾಣ್ಬ ತೆಜದಿಂ ಮೈಬೇಱೆ ಬೇಱಾನೆನುತ್ತಿತ್ತಭ್ಯಾಸಿಸಲೆನ್ನ ಕಾಣ್ಬುದರಿದೇ (ರತ್ನಾಶ. ೬).
[< ಒತ್ತಂಬ]

**ಒತ್ತಂಬರ**, ಒತ್ತಬರ (ನಾ). ಆತುರ ; ರಭಸ ; ಆವೇಗ ; ಗಡಿಬಿಡಿ : ಸುತ್ತಿ ಕುದಿದಾ ಬೋನವುಕ್ಕುತಿರೆ ಕೈಯಿಂದಲೊತ್ತಂಬರವ [ಪಾಠಾಂ. ಭರವಂ]ನಿಲಿಸೆ (ಲಶಿಚಂ. ೩೭–೧೭೦) ; ಕೃತಿಯ ಒತ್ತಂಬರದಿಂದೊರೆವ ಕವಿಗಳನಜ ಪೆತ್ತನೇಕೆಂದಾನಱಿಯೆ (ಕುರಾಸಾಂ. ೧–೮೨) ; ಭಕ್ತ ಲಾಂಛನವನೊತ್ತಂಬರದಿನಳವಡಿಸಿ (ಪಾಸೋಪು. ೯–೧೨೨); ಸುತ್ತಂ ಪರಿವ ತೇರ್ಗಳೊತ್ತಂಬರದೆ ತಾರಕಾಸುರನಾಹವಕೆ ನಡೆವ ಸಂಭ್ರಮುವನೇನೆಂಬೆನು (ಚಿಬಪು. ೩೮–೨೮). ಒತ್ತಬರ : ಮೇಗೆ ಬರಲದಱಿಂದ ಬಂದುದ ಭೋಗಿಸುವೆಯೆನುತೊತ್ತಬರದ ವಿರಾಗದಲಿ ಹರಿಶರಣ ಬಂದನು ತಾಯ ಮಂದಿರಕೆ (ತೊರರಾ. ೬–೨–೫೦).
[< ಒತ್ತು₁ + ಬರ (< ಬರವು)]

**ಒತ್ತಂಬರಿ** (ಕ್ರಿ). ಒತ್ತಿ ಹರಿ; ವೇಗವಾಗಿ ಹರಿ: ಇವು ಮುನ್ನಾರಾರ ಬಲ್ಪಂನೆಲೆಗಿಡಿಸವಿವಾರಾರ ತಕ್ಕಂ ನೆಲಕ್ಕಿಕ್ಕವಿವಾರಾರುರ್ಕನೊತ್ತಂಬರಿದು [ಪಾಠಾಂ. ಬಡೆದು] ಕಿಡಿಸವು (ಕಬ್ಬಿಕಾ. ೩೦೩). [< ಒತ್ತು₁ + ಪರ್ಿ]

**ಒತ್ತಂಬರಿಸು**, ಒತ್ತಬರಿಸು (ಕ್ರಿ). ೧. ಅವಸರಪಡಿಸು ; ಆತುರಪಡಿಸು : ವೀರಭಟವಿತತಿಯಂ ಹತ್ತಿಹತ್ತಿಯೆನುತೊತ್ತಂಬರಿಸುತಿರ್ದರು (ಸಮ್ಯಕಾ. ೮–೩೧). ೨. ಆವರಿಸು ; ಆಕ್ರಮಿಸು ; ಮುತ್ತು : ಪರವಶೆಯಾದಳು ಪರಿತೋಷವೊತ್ತಂಬರಿಸಲಂತಃಕರಣವನು (ಕುರಾಸಾಂ. ೪೦–೬೫). ೩. ತೀವ್ರಗೊಳಿಸು ; ಉತ್ಕಟಗೊಳಿಸು ; ವೇಗಗೊಳಿಸು : ನಿಜನಿಧನ ಸೂಚಕೋತ್ಪಾತ ಕೌತುಕರಸಮನಾತ್ಮೋದಾರ ವೀರರಸದಿನೊತ್ತಂಬರಿಸುತ್ತುಂ (ಜಗವಿ. ೧೫–೧೦ ವ) ; ಅಳಿಬಲರ ತಲೆಗಾಯ್ದು ಲಂಕೆಗೆ ಕಳುಹುತೊತ್ತಂಬರಿಸಿ ಜನಪದದೊಳಗೆ ನಡೆದುದು ರಘುವರೂಥಿನಿ ರಾವಣಾಸುರನ (ತೊರರಾ. ೬–೬–೧೭). ಒತ್ತಬರಿಸು : ೨. ಒತ್ತಬರಿಸುವ ಪಡಿತಳದ ಸುಭಟೋತ್ತಮರ ಸದೆಬಡಿದನನಿಲಜ (ತೊರರಾ. ೫–೪–೨೩) ; ಕಠಾರಿಯನು ತೆಗೆದೊತ್ತಬರಿಸಿದನಳುಕೆ ಭುವನಚಯ (ತೊರರಾ. ೬–೨೮–೪೭).
[ಒತ್ತಂಬರ + –ಇಸು₃]

**ಒತ್ತಂಬಿಸು** (ಕ್ರಿ). ೧. ಪ್ರೋತ್ಸಾಹ ಹೊಂದು ; ನೆರವು ಪಡೆ : ನೃಪನ ಮೇಲೆತ್ತಿ ಪ್ರತ್ಯಂತ ಭೂವರರು ಒತ್ತಂಬಿಸಲಾ ಬಲಿಯಾ ಬೆಸನನು ಹೊತ್ತವರ್ಗಿದಿರಾಗಿ ನಡೆದು (ನೇಮಿಸಂ. ೧೧–೨೮) ; ನಾನಾ ಬಿತ್ತರದೊಳೊತ್ತಂಬಿಸಂಡಲೆಯುತ್ತು ಯಾಚಿಸಿದಾ (ಜರಾಮಾ. ೧೯೪–೧೭). ೨. ಕೂಡಿಬರು ; ಒದಗು : ಮತ್ತಿನಿಸಱಿಯೊಳತಿ ಶುಭತರವಹ ಲಗ್ನವೊತ್ತಂಬಿಸೆ ಲಗ್ನಿಗರಾ ಮೊತ್ತವಾಗಳ್ ಆಯತವಾಯತಮೆಂದು ಬಿತ್ತರದಿಂ ಘೂರ್ಣಿಸಿದುದು (ಶ್ರೀಪಾಲ. ೧೦–೮೫). ೩. ಹೆಚ್ಚಾಗು : ಇತ್ತ ಕೊಂತಿಗೆ ಗರ್ಭಚಿಹ್ನವು ದಿನದಿನಕೊತ್ತಂಬಿಸಿ ಗೂಢಮಿರ್ದು (ನೇಮಿಸಂ. ೫–೧೦೪).
[ಒತ್ತಂಬ + –ಇಸು₃]

**ಒತ್ತಕರಡು** 'ಒತ್ತುಕರಡು' ನೋ.

**ಒತ್ತಕ್ಕರ** (ನಾ). ಒತ್ತುಳ್ಳ ಅಕ್ಷರ ; ಸಂಯುಕ್ತಾಕ್ಷರ ; ದಡ್ಡಕ್ಕರ : "ದ್ವಿತ್ವಂಗಳ್ = ಒತ್ತಕ್ಕರಂಗಳಾಗಿರ್ಪುವು " (ಶಮದ. ೩೬ಟೀಕೆ) ; ಗುರುವಕ್ಕುಂ ಮುಂತೊತ್ತಕ್ಕರ [ಪಾಠಾಂ. ದಡ್ಡಕ್ಕರ]ಮಾಗಿರೆ (ಛಂದೋಂಬು. ೧–೩೪). 'ದಡ್ಡಕ್ಕರ' ಪರಾ. [ಒತ್ತು₂ + ಅಕ್ಕರ₂]

**ಒತ್ತಕ್ಷರ** (ನಾ). = ಒತ್ತಕ್ಕರ : "ಎರಡು ಅಥವಾ ಅದಕ್ಕಿಂತ ಹೆಚ್ಚಾದ ಸಂಖ್ಯೆಯ ವ್ಯಂಜನಗಳು ಒಟ್ಟಿಗೆ ಕೂಡಿಕೊಂಡಿದ್ದರೆ ಸಂಯುಕ್ತಾಕ್ಷರ ಅಥವಾ ಒತ್ತಕ್ಷರ ಎಂದು ಹೆಸರು " (ಮಧ್ಯಮ. ೧೫) ; ಹಳಗನ್ನಡದಲ್ಲಿ ರೇಫಯುಕ್ತವಾಗಿದ್ದ ಒತ್ತಕ್ಷರಗಳು ಈಗ ಸಜಾತೀಯ ಸಂಯುಕ್ತ ವ್ಯಂಜನಗಳಾಗಿವೆ (ಕೈಪಿಡಿ. ೬). [ಒತ್ತು₂ + ಅಕ್ಷರ]

**ಒತ್ತಟ್ಟೆ** (ನಾ). ಭಯಂಕರ ಸ್ವಪ್ನ. 'ಒತ್ತಡೆ' ಪರಾ.
[ಒತ್ತು₂ + ಅಟ್ಟೆ₂]

**ಒತ್ತಟ್ಟು** (ನಾ). ಒಂದು ಕಡೆ, —ಪಕ್ಕ, —ಎಡೆ : ಒತ್ತಟ್ಟು ಕಾಣ್ಬುದು ಕಂಚಿನ ಮುಕುರ ಹಿಂದೊತ್ತಟ್ಟು ಕಾಣದಂತಲ್ಲ ಇತ್ತಟ್ಟಿನೊಳು ಕಾಣ್ಬ ರನ್ನಗನ್ನಡಿಯಂತೆ ಸುತ್ತಲಱಿವು ಕಾಣ್ಕೆ ಜಿನಗೆ (ಭರತಚ. ೬೬–೯೫) ; ಇಡಿ ಅಗಡಿ ಊರು ಒತ್ತಟ್ಟು, ಗಳಗನಾಥರು ಒತ್ತಟ್ಟು (ಗಳಗ. ೨೯) ; ಒತ್ತಟ್ಟಿಗೆ ಸುಂದರವಾದ ಕೈತೋಟವಿದೆ (ಕಪಪು. V, ೧).

ಒತ್ತಟ್ಟಿಗಿಡು = ಒಂದು ಕಡೆಗಿಡು : ಚಂದ್ರಿ ಹಾಸಿಗೆಯನ್ನು ಸುತ್ತಿಟ್ಟು ಬಟ್ಟೆಗಳನ್ನೆಲ್ಲಾ ಮಡಿಸಿ ಒತ್ತಟ್ಟಿಗಿಟ್ಟು (ನಿಶಲು. ೪೨).

[ಒರ್ (< ಒಂದು$_3$) + ತಟ್ಟು$_5$]

**ಒತ್ತಡ** (ನಾ). ೧. ಒತ್ತುವಿಕೆ; ಭಾರ: ಗಾಳಿಯ ಒತ್ತಡ ಎಲ್ಲ ಕಡೆಗಳಲ್ಲಿಯೂ ಒಂದೇ ಸಮನಾಗಿರುವುದಿಲ್ಲ (ಭೂವಿವ. ೪೫); ಆ ಬೊಗಸೆ ಧರಿಸಿಹುದು ಮನುಜ ಜೀವಿತವನದರೊತ್ತಡದೆ ಪರಿದಾಟ ನಮಗೆಲ್ಲಾ (ಮಂಕುಕ. ೧೫೮). ೨. ಉಗಿಯ ಕಾವು ಕೊಡುವುದು (ಕಿ). ೩. (ಆಲಂ) ಬಾಹುಳ್ಯ; ಹೆಚ್ಚಳ: ಅಭ್ಯಾಸದ ಒತ್ತಡ (ರೂಢಿ); ಕೆಲಸದ ಒತ್ತಡ (ರೂಢಿ).

ಒತ್ತಡತರು = ಒತ್ತಾಯ ಮಾಡು; ಬಲಾತ್ಕಾರ ಮಾಡು: ವಿಶೇಷ ರೀತಿಯ ಒತ್ತಡತರುವುದಾದರೆ ಅದನ್ನು ಬುಧವಾರವೇ ಪರಿಶೀಲಿಸುವ (ಪುನರು. ೩೩೯).

[ದೇ. ॥ ತಮಿ. ಒಜ್ಜಡ, ಒತ್ತಡ, ಒತ್ತಣ; ತೆಲು. ಒತ್ತಡ]

**ಒತ್ತಡಚೌಕಟ್ಟು** (ನಾ). ಒತ್ತಡವನ್ನುಂಟುಮಾಡಲು ಇರುವ ಚೌಕಟ್ಟು: ಕಾಗದದ ಮೇಲೆ ಸಮವಾಗಿ ಒತ್ತಡವು ಬೀಳುವಂತೆ ಒತ್ತಡ ಚೌಕಟ್ಟನ್ನು (ಟಿಂಪಾನ್) ಸೇರಿಸಲಾಯಿತು (ಮುದ್ರಕ. ೮೬).

[ಒತ್ತಡ + ಚೌಕಟ್ಟು]

**ಒತ್ತಡವೆ** (ನಾ). ಒಂದು ಸಲ; ಒಂದುಬಾರಿ : ಒತ್ತಡವೆ ಅದರ ಬುಡದಲ್ಲಿ ಹೀಗೆ ತಿರುಗಿದನು (ಕಪಾಕುಂ. ೧೨); ಮಿಂಚಿನ ಹಾಗೆ ಒತ್ತಡವೆ ಹೊಳೆದು (ದೇವೀಚೌ. ೫೮). [ಒರ್ (< ಒಂದು$_3$) + ತಡವೆ]

**ಒತ್ತಡಿಕೆ** (ನಾ). ಒತ್ತಿಕೊಂಡ ಅಡಕೆ; "ಕೊರೆದ ಅಡಿಕೆ" (ಸರ್ವಜ್ಞ. ಕೋಶ): ಹತ್ತಕಟ್ಟದ ಮುತ್ತು ಒತ್ತಡಿಕೆ ಬಿಳಿ ಎಲೆಯು ಹೊತ್ತೇರಿ ಹಲ್ಲ ಸುಲಿವಾಕೆ ಕಾಮನೊಲಿದೆತ್ತಿದ ಬಾಣ (ಸರ್ವಜ್ಞ. ೧೮೨೮).

[ಒತ್ತು$_2$ + ಅಡಿಕೆ (< ಅಡಕೆ$_1$)]

**ಒತ್ತಡೆ** (ನಾ). = ಒತ್ತಟ್ಟೆ (ಸ್ಯಾಂಡರ್). [?]

**ಒತ್ತಬರ** 'ಒತ್ತಂಬರ' ನೋ.

**ಒತ್ತಬರಿಸು** 'ಒತ್ತಂಬರಿಸು' ನೋ.

**ಒತ್ತಮಿಸು, ಒತ್ತವಿಸು** (ಕ್ರಿ). ಮೀರು; ಅತಿಕ್ರಮಿಸು : ಚಿತ್ತಭವಂ ತನ್ನಾಜ್ಞೆಯನೊತ್ತಮಿಸಲ್ಬಾರದೆಂದು ಮುದ್ರೆಯನಿಟ್ಟಂತುತ್ತಮೆಯ ಮೂಗಿನೊಳ್ಮಿಗೆ ಮುತ್ತಿನ ಮೂಕುತಿಯನಿಕ್ಕಿದಳ್ ಕಡುನಲವಿಂ (ಬಾಥಪು. ೬-೭೫). ಒತ್ತವಿಸು : ಕತ್ತಲೆಯ ಮೊತ್ತ ಮುಂಬರಿದು ಬರುತಿರೆ ಬೆಳಗನೊತ್ತವಿಸಿ ಕವಿದು ಕೆಲಸಾರಿಸುತ್ತೈದು ಬರೆ (ವೆಂಕಾರಾ. ೫-೩-೨).

[< ಒತ್ತು$_1$ + -ಇಸು$_3$]

**ಒತ್ತಯ್ಯ** (ನಾ). ಒಬ್ಬಾತನ ಹೆಸರು : ಭೀಮರಾಜಂ ಬನವಾಸಿ ಪನ್ನಿಚ್ಛಾಸಿರವಂನಾಳ್ತಿರೆ ಒತ್ತಯ್ಯ ನಾಟಿಬ್ಗಾವುಣ್ದು ಗೆಯ್ಯೆ (ಎಕ. VII, ಶಿಕಾರಿ. ೭೧-೫; 1007 ?). [?]

**ಒತ್ತರ$_1$** (ನಾ). ೧. ಒಂದೇ ರೀತಿ : ಒತ್ತರದಿನೆತ್ತಿ ನಡೆವೆಡೆಯೊಳ ಮರಿರಾಯರ ಗುಹೆಗಹ್ವರಂ ಬೆಟ್ಟಗಟ್ಟಬಿದಿರ್ಬೆತ್ತದಿಂದೆತ್ತಲುಂ ಮುತ್ತಲರಿದೆನಿಸಿದತಿಬಿರುದಿನ ಗಿರಿದುರ್ಗಂಗಳಂ (ಗಿರಿಕ. ೨-೧೦೫ ವ). ೨. ಒಂದು ಸಾಲು : ಚರಿಪ ಖಗಮೃಗಂಗಳ್ಗೆ ತಚ್ಚೊಳನೊಂದು ಭ್ರಾಂತಿಯಂ ಪುಟ್ಟಿಸಿ ಒತ್ತರದಿನಿಂಬುಗೊಂಡ ಕರ್ಮಣಿಯ ಪಾಸಜಿಯಿಂ (ರಾಮಾಶ್ವ. ೭೨-೧೮). ೩. ಒಂದಾಗಿ ಸೇರಿದುದು; ಗುಂಪು : ಮುಂಬಗಲ್ವರಂ ತೊಲಗದನಾಕುಳಂ ಮೊಸಳೆಗಳ್ ನೆಜಿದೊತ್ತರಮಾಗಿ ಮಾಗೆಯೊಳ್ (ಕುಸುಮಾ. ೭-೧೮); ಚಿತ್ತರದ ಬಿತ್ತರಿಗೆಯೊಳೊತ್ತರದ ಗಾಡಿಯಿನೊಪ್ಪಿರ್ದ ರಾಯಂ (ರಾಮಾಶ್ವ. ೧೪೨-೮).

[ಒರ್ (< ಒಂದು$_3$) + ತರ$_1$]

**ಒತ್ತರ$_2$** (ನಾ). ವೇಗ; ರಭಸ; ಒತ್ತಡ : ಕಿಡಿಕಿಗಳೊಳಗಿಂದ ಉರಿಯು ಒತ್ತರದಿಂದ ಹೊರಗೆ ಹಾಯುತ್ತಿತ್ತು (ಮುಂಬಯಿ. ೫-೧೨೮).

[< ಒತ್ತಡ]

**ಒತ್ತರ$_3$** (ನಾ). (?) : ತಕ್ಕನಂತೆ ನಂಬಿಸಿಯುಮೊತ್ತರದಂತೊತ್ತಿಯುಂ (ಪಂಪಭಾ. ೫-೪೬ ವ).

**ಒತ್ತರಮೊತ್ತು, ಒತ್ತರವೊತ್ತು** = ರಭಸದಿಂದ ಮುನ್ನುಗ್ಗು (?) : ಭೀಕರತರಮಾದುದುತ್ತರನ ಕಣ್ಗೆ ಸುಯೋಧನ ಸೈನ್ಯಸಾಗರಂ ಆಗಳದಂ ಕಂಡುತ್ತರನೊತ್ತರಮೊತ್ತಿದಂತೆ ಬೆರ್ಚಿ ಬೆಗಡುಗೊಂಡು (ಪಂಪಭಾ. ೮-೯೯, ವ); ಒತ್ತರಮೊತ್ತಿದಂತೆ ಬೆಜಗಾದ ಕೃಪಾದಿಗಳೊತ್ತೆ (ಶಮದ. ೮ ಪ್ರಯೋ); ಆ ಮಾತುಗೇಳಿಯೊತ್ತರವತ್ತಿದಂದದಿ ತಾಮಿಂತೆಂದಾಡಿದರು (ನೇಮಿಸಂ. ೫-೩೩); ಎತ್ತಣಿಂದೆತ್ತ ಬಂದಿತ್ತು ಎನಗಭಿಜ್ಞತೆಯೆನುತ್ತ ವೊತ್ತರವೊತ್ತಿದಂತೆ ಬಾಳ್ದವನಲ್ಲ (ಸಮ್ಯಕೌ. ೯-೨೫).

[?]

**ಒತ್ತರಂಗೊಳ್, ಒತ್ತರಗೊಳ್** (ಕ್ರಿ). ರಭಸಗೊಳ್ಳು (?) : ಬಾಲೆಯರ ಬಣ್ಣಕ್ಕೆ ಸೋಲದೆ ಕಾಳುಶರೀರವೆಂಬ ಒತ್ತರಂಗೊಳ್ಳದೆ ಗತಿಮತಿ ಗುಣಸಂಸರ್ಗ ವಿಪಿನಕಂಟಕಕ್ಕೊಳಗಾಗದೆ (ಮೋಳಿಮಾ. ೧೦೦-೩೯೬). **ಒತ್ತರಗೊಳ್** : ಮಿಜುಗುವ ದಾಡೆಯಿಂದಣೆದು ಪೆರ್ದರಿಯಂ ಕರದಿಂದ ಮೆತ್ತುತುಂ ತುಜುತುಜುತಿಂಬ ಕೆಂದರಮನೊತ್ತರಗೊಂಡು [ಪಾಠಾಂ. ನಿತ್ತರಗೊಂಡ] ಮಹಾಮಹೀಜದೊಳ್ ತಜತಜನಾಗಿ ಮಾಜಿಕೊರಸುತುಂ ಮಲೆಯುತ್ತೊಲೆಯುತ್ತಂ (ಸೂಕ್ತಿಸು. ೩-೩೩).

[ಒತ್ತರ$_2$ + ಕೊಳ್$_1$]

**ಒತ್ತರಗೊಳ್** 'ಒತ್ತರಂಗೊಳ್' ನೋ.

**ಒತ್ತರಿಸು** (ಕ್ರಿ). ೧. ಒಂದು ಕಡೆಗೆ ತಳ್ಳು, —ನೂಕು, —ದಬ್ಬು: ಹರನೊಳೆ ಪತ್ತೆತ್ತಿಸಿದ ಚಿತ್ತಮನಿರ್ಬಗೆಯಾಗೆ ಮೋಹಮೊತ್ತರಿಸೆ (ಪಂಪಭಾ. ೧೩-೬೩); ನಿಚ್ಚಂ ತಪೋದ್ಯೋಗಮಂ . . . ವಿಘ್ನಸಂಘಾತಮೊತ್ತರಿಸುತ್ತಿರ್ದೊಡಮಾರ್ಹತಂ ಬಿಡುವನೇ ನಿರ್ಯಾಣಕಾಲಂಬರಂ (ಸಮಪ. ೭-೨೧); ಶಶಿಬಿಂಬಂ ತನ್ನಯ ಕಜಿಯಂ ಉರದಿಂ ಕಿಳ್ತರಿಗೊತ್ತರಿಸಲ್ಕದು ಕರಮೊಪ್ಪುವವೊಲ್ ನವಮೃಗಮದದಿಂ ಬರೆದ ಮಕರಿಕಾಪತ್ರಮುವಳ ನುಣ್ಗದಪಿನೊಳೊಪ್ಪಿದುದು (ಜಯಕಾ. ೫-೧೦); ಸಂಸ್ಕೃತವು ದೇಶಭಾಷೆಯನ್ನು ಹೇಗೆ ಮೂಲೆಗೆ ಒತ್ತರಿಸಿತ್ತೊ (ಕಸಾಚ. ೧). ೨. ಕಡೆಗಣಿಸು; ಅವಜ್ಞೆ ಮಾಡು; ಮೀರು; ನಿರಾಕರಿಸು : ಘೂರ್ಣಿತಾರ್ಣವಮನೊತ್ತರಿಸಿತ್ತು ಚತುರ್ಬಲಾರ್ಣವಂ (ಪಂಪಭಾ. ೧೦-೨೮); ಚೈತ್ರರಥೋದ್ಯಾನದ ಚೆಲ್ವನೊತ್ತರಿಸಿ . . . ಕೇಳೀನಂದನಂ ರಂಜಿಕುಂ (ಜಗವಿ. ೯-೧೨೨); ಸುಕೃತದೊದವಿನಿಂ ಕೈಸಾರ್ದ ಪೆಣ್ಮಣಿಯನು ಒತ್ತರಿಸಬೇಡವೆನಲ್ (ಸಮ್ಯಕೌ. ೬-೩೦); ಇದಿರಾಡದೆ ಒತ್ತಿನುಡಿಯದೊತ್ತರಿಸದೆ ಮತ್ತವರಿತ್ತಾಣತಿಯ ಮಸ್ತಕದೊಳು ಪೊತ್ತು ಪೂಜಿಸುತೆಸಗುವುದು (ಹದಿಬ. ೪-೯). ೩. ಹೋಗಾಡಿಸು; ತೊಲಗಿಸು; ನಿವಾರಿಸು: ಕತ್ತಲೆ ಬೆಳಗನೊತ್ತರಿಸಿ ಹತ್ತೆ ಸಾರಿ ನಿಂದ ಪರಿಯ ನೋಡಾ (ಆದವ. ೯೮); ಭವನದ ನೆಳಲನೊತ್ತರಿಸುತ ಬಂದರು ದಿವಿಜಲತಾಂಗಿಯರಂತೆ (ಧರಜ. ೩-೭೫). ೪. ಮುತ್ತು; ಹಬ್ಬು; ಕವಿ; ಆಕ್ರಮಿಸು : ಪತಂಗಂ ಪಶ್ಚಿಮಾಬ್ಧಿಯೊಳೀಳಿದಂ . . . ಕಳ್ತಲೆಯೊತ್ತರಿಸಿತ್ತು (ಗಿರಿಕ. ೪-೧೦೩ ವ); ಒತ್ತರಿಪ ಸಂಸಾರಮಂ ಬೆಂಬತ್ತಿ ಪಾಜಿತಗುಳ್ದು ನಲಿದಾಡುತ್ತಮಿರ್ಪವೊಲೆರಡು ಕಯ್ಯಂ ಬಿರ್ಚಿಯಾಡುವನು (ಬಸಪು. ೩-೩೬); ಪರಿಮಳದ ಮೊತ್ತಮೊತ್ತರಿಸಲೆಣ್ದೆಸೆಯೊಳಂ (ನಂದಿಮಾ. ೧೮-೧೧); ಸುಭಟರು ಸರ್ವಸನ್ನಾಹದಿಂದೊತ್ತರಿಸಿತೆತ್ತಣ ಚತುರ್ಬಲಮೊ ಕಮಲಜನ ಸೃಷ್ಟಿಯೊಳದೃಷ್ಟಮೆನೆ (ಜೈಮಿಭಾ. ೨೨-೨).

೫. ಸೀಳು; ಒಡೆ; ಭೇದಿಸು: ಚಳಜ್ಝಳದಮನೊತ್ತರಿಪ್ಪ ಘನದೀರ್ಘ ಸುಕೋಮಳ ವಂಶ ವಂಶದಿಂ (ಗಿರಿಕ. ೧–೫೨); ಧ್ಯಾನಂ ಬಲಿದು ಶಿವ ಲಿಂಗಂ ಮೂರ್ತಿಗೊಂಡು ನಂದಿಯ ಹೃದಯಕಮಳಮನೊತ್ತರಿಸಿ ಪೋಜ ಮಡೆ (ಬಸರ. ೪–೬೯). **೬.** ಅನುಸರಿಸು; ಹಿಂಬಾಲಿಸು; ಜೊತೆಗೂಡು: ರೂಪು ಜವ್ವನಮನೊತ್ತರಿಸುತ್ತಿರೆ ವಜ್ರಜಂಘನಾ (ಆದಿಪು. ೩–೧೦); ಅಂದದಿಂ ಸತ್ತಿಗೆಗಳಂ ಸತ್ತಿಗೆಗಳೊತ್ತರಿಸೆ (ಬಸವು. ೫೬–೧೩). **೭.** ಅಡಗಿಸು; ಪ್ರಕಟಿಸದಿರು; ಗುಟ್ಟಾಗಿ ಇಟ್ಟುಕೊ: ಬಾದುರಗೆ ತಾವೆಲ್ಲ ಬೆನ್ನಿತ್ತೋಡಿ ಬಂದ ಸುದ್ದಿಯನು ಒತ್ತರಿಸಿಂತು ನುಡಿದರು (ಕುರಾಸಾಂ. ೧೯–೧). **೮.** ರಾಶಿಹಾಕು; ಸೇರಿಸು; ಒಟ್ಟು: ಉತ್ತಮ ಕವಿಗಳೊತ್ತರಿಸಿದ ನುಡಿಗಳನೆತ್ತಿಕೊಂಡದರಿಂದ ಕೃತಿಯ ಒತ್ತಂಬರದಿಂ ದೊರೆವ ಕವಿಗಳನಜ ಪೆತ್ತನೇಕೆಂದಾನರಿಯೆ (ಕುರಾಸಾಂ. ೧–೮೨). **೯.** ಹೆಚ್ಚಾಗು; ಅಧಿಕವಾಗು: ರೌದ್ರರಸ ವೀರರಸಪೂರಂಗಳೊರ್ಮೊದಲೆ ಮೇರೆಯಂ ಮೀಱುವಿನಮೊತ್ತರಿಸೆ (ವರ್ಧಪು. ೭–೪೧ ವ); ಹರುಷಮೊತ್ತರಿಸಿದುದು ಶೋಕವಿಮ್ಮಡಿಸಿದುದು ಬೆರಸಿದುದು ಲಜ್ಜೆ ಭೂಮಿಜೆಗಂದು (ಜೈಮಿಭಾ. ೧೯–೪೦); ಕಂಪೊತ್ತರಿಸುವ ಬಾವನ್ನಮನಿತ್ತಂ (ರಾಜಶೇ. ೫–೨೫). **೧೦.** ಹಾಯು; ನುಗ್ಗು; ಧಾವಿಸು; ವೇಗವಾಗಿ ಚಲಿಸು: ಸರುವಂ ಕಟ್ಟೆಂಬ ಮುಟ್ಟೆಂಬ ಪಿಂದಡಸೆಂಬೊತ್ತರಿಸೆಂಬ . . . ಪೊಡೆಯೆಂಬೊಂದು ಪುಳಿಂದವೃಂದನಿನದಂ ಪೊಣ್ಮಿತ್ತು ಕಾಂತಾರದೊಳ್ (ಗಿರಿಕ. ೧–೮೨); ಗುಡಿಯೊಳಗೊತ್ತರಿಸಿ ಪೋಗುವವನು ಪೂಜೆಯನತ್ತ ನೂಕುತ ತನ್ನ ಮೆಚ್ಚಿನ ಪೂಜೆಯಂ ಮಾಳ್ಪ (ಬಸವು. ೪೩–೩೭); ದಿಕ್ಪತಿಗಳೊತ್ತರಿಸದಿರಿ . . . ದನುಜನಿಕರ ಗಜಬಜಿಸದಿರಿಯೆಂದು ಗರ್ಜಿಸುತ್ತಜಕಪಾಲಿಯ ಮುಂದೆ ದಡಿವಿಡಿದು ನಿಂದಿರ್ದರಾ ಮಾಕಾಳರು (ಪಾಸೋಪು. ೧–೪೫); ಕಾಲ್ಗಳಿಂದೊದೆದು ಕೆಡಪುವ ಭರದೊಳೊತ್ತರಿಸಲಾಗ ತೊಡೆ ಜಾನುಪಾದಂಗಳಂ ಕುಶನೆಚ್ಚು ತುಂಡಿಸಿದನು (ಜೈಮಿಭಾ. ೨೦–೨೪); ಮೂಡಗಾಳಿ ಒತ್ತರಿಸಿ ಬೀಸಹತ್ತಿತು (ಇಪ್ಪಕ. ೧೪೦). **೧೧.** ಒತ್ತಾಗು; ದಟ್ಟವಾಗು; ಸಂದಣಿಸು; ಕಿಕ್ಕಿರಿ: ಒತ್ತರಿಸಿ ಸಕಳಾಗಮಶ್ರುತಿವೆತ್ತ ಸದ್ವಿಜರೊಂದು ಕೋಟಿ (ಬಸವು. ೫೫–೫೫); ಅತ್ತಲಾ ಗೋವಳರು ಬಾಜಿಪ ತಿತ್ತಿರಿಯ ಕೊಂಬುಗಳ ಕೊಳಲುಗಳೊತ್ತರದ ಕಂಕಲಿಯ ಜುಂಜೆಯ ಯೆಕ್ಕಮದ್ದಳೆಯ ಒತ್ತರಿಪ ದನಿ ಕೇಳುತಾ ಪುರುಷೋತ್ತಮನು (ಸಾಳ್ವಭಾ. ೧೨–೫೭); ಮತ್ತೊಂದೆಡೆಯೊಳೊತ್ತರಂಬಿಡಿದೊತ್ತರಿಸಿ ಬೆಳೆದಕ್ಷೇಣ ವೇಣುಕುಂಜಮಂಜುಳ ಸ್ಥಾನದಲ್ಲಿ (ರಾಜಶೇ. ೧–೧೩೩ ವ). **೧೨.** ಅಲುಗಾಡು; ಕಂಪಿಸು; ಕದಕ್ಕದಿಸು: ಬೆಮರ್ ಮಿಗೆ ಮೂಡೆ ಸುಯ್ಯೊಲರ್ ಮಿಳಿರೆ ಕುಚಂಗಳೊತ್ತರಿಸೆ . . . ಗಟ್ಟಿಗಳನಂದು ಮಗುಳ್ಚಿದರಿಂದುವಕ್ತ್ರೆಯರ್ (ಗಿರಿಕ. ೨–೪೦). **೧೩.** ಎಳೆದುಕೊ; ಕೈವಶಪಡಿಸಿಕೊ: ಇತ್ತವನೆ ಎತ್ತಿದನು! ಕೇಳು, ಪುತ್ಥಳಿಯೇ! ಬಿತ್ತಿದವ ಒತ್ತರಿಸಿದನು ತನ್ನ ಬಳಿಯೆ (ಕಎಪು. ೪೫–೨೨). **೧೪.** ಬೆರಸು; ಸೇರಿಸು; ಮಿಶ್ರಮಾಡು: ಗಾರಿಗೆಯ ಹಿಟ್ಟಗುತ್ತಮದ ಕಿಱುಸೂಜ್ಜಿಗೆಯನು ಬರಬರನಟ್ಟು ಚಿತ್ತಣಿಸಿ ಕತ್ತರಿಸಿದಲ್ಲ ನೀರುಳ್ಳಿ ಸಹಿತಂ ಕಲಸಿ ಯಾಲಕ್ಕಿ ಸಿರಿಪಚ್ಚೆಯ ಒತ್ತರಿಸಿ (ಸೂಪಶಾ. ೧–೨೫); ಓಗರವ ಹತ್ತೆಂಟು ಬಗೆಮಾಡಿ . . . ಒಂದಕ್ಕೆ ಹುರಿಯಕ್ಕಿ ಹುರಿಗಡಲೆಗಳ ಹುರಿಯನು ಒತ್ತರಿಸಿ (ಸೂಪಶಾ. ೩–೧೭). **೧೫.** [ವ್ಯಾಕ](ಅಕ್ಷರವು) ಆಗಮವಾಗಿ ಸೇರು: ಮತ್ವಾ ದ್ವಿತೀಯೆಗಂ ಮನಮೊತ್ತರಿಸಿರ್ಕುಂ ವಿಭಾಷೆಯಿಂ ನಿಧನದೊಳಂ (ಶಾ ವ್ಯಾ ವ. ೧೦೭). **೧೬.** ಉಂಟಾಗು; ಏರ್ಪಡು: ಪತ್ತಿರೆ ಕಾರಕದೊಳ್ ಮುಂದೊತ್ತಿ ಸಮರ್ಥ ಕ್ರಿಯಾಪದಂ ಪದವಿಧಿ ತಾನೊತ್ತರಿಸುಗುಂ (ಕಾವ್ಯಾವ. ೨೧೪); ಉತ್ತರಪದಂ ವಿಶೇಷ್ಯದೊಳೊತ್ತರಿಸಿರೆ (ಕಾವ್ಯಾವ. ೨೧೬).

ಒತ್ತರಿಸಿಬರು = ತಳ್ಳುತ್ತ ಬರು; ನೂಕುತ್ತ ಬರು: ಒತ್ತರಿಸಿ ಬಂದರಾಪತ್ತುಗಳು ಸೇನೆಯೊಲು, ನಿತ್ತರಿಸಿ ಅಳುಕನು (ಕಎಪು. ೫೨–೧೧). [ಒತ್ತರ್$_2$ + –ಇಸು$_3$]

**ಒತ್ತಲಿಕ್ಕು** (ಕ್ರಿ). ಪಕ್ಕಕ್ಕೆ ತಳ್ಳು, –ಸರಿಸು: ಮತ್ತೆ ಜೋಡಿಸಿ ಕೌರವೇಂದ್ರನನೊತ್ತಲಿಕ್ಕಿ ಮಹಾರಥರು (ಕುವ್ಯಾಕ. ೧೩–೩೫). [< ಒತ್ತರ್$_2$ + ಇಕ್ಕು]

**ಒತ್ತಲೆ** 'ಒರ್ತಲೆ' ನೋ.

**ಒತ್ತವಿಸು** 'ಒತ್ತಮಿಸು' ನೋ.

**ಒತ್ತಾಟ** (ನಾ). **೧.** ಒತ್ತುವಿಕೆ; ನೂಕುವಿಕೆ: ಒತ್ತಾಟವನ್ನು ಹೆಚ್ಚಿಸುವ ಸಲಕರಣೆಗಳು ಕೆಲವು (ಬಾಲಪ್ರ. I, ೬೯೩). **೨.** (ವಿದ್ಯುತ್ತಿನ) ಬಲ; ಶಕ್ತಿ: ಬಂಡಿಯನ್ನು ಚಲಿಸುವ ಮೋಟಾರಿಗೆ ದೊರೆಯುವ ವಿದ್ಯುತ್ತು ಒಂದೇ ಒತ್ತಾಟ (Voltage) ದ್ದಿರಬೇಕು (ಬಾಲಪ್ರ. I, ೪೦೯). [ಒತ್ತು$_1$ + ಆಟ]

**ಒತ್ತಾನೆ** (ನಾ). ಕಾಡಾನೆಯನ್ನು ಹಿಡಿಯುವಾಗ ಬಳಸುವ ಪಳಗಿದ ಆನೆ (ಕಿ). [ಒತ್ತು$_1$ + ಆನೆ$_1$]

**ಒತ್ತಾಯ** (ನಾ). ನಿರ್ಬಂಧ; ಬಲವಂತ; ಬಲಾತ್ಕಾರ: "ಪೀಡಾ, ಪೀಡನಂ, ಪೀಡನೀಯಂ, ಈ ೩ ಒತ್ತಾಯಂ" (ಕಾಶಕೃ. ೨೫೪); ಆಯುಷ್ಯಮುಟ್ಟಲಾಯ್ತುದಱಿಂದ ಧರೆಯನೊತ್ತಾಯದಿಂದೆನಗಯ್ಯ ಹೊಱಿಸಿ ವಾಯುವೇಗದಿ ಕರ್ಮಗಳ ಸುಟ್ಟು ಕೈವಲ್ಯಶ್ರೀಯನೆಯ್ದಿದ ನಣ್ಣ (ಭರಚ. ೬೯–೨೬); ಚಿತ್ತಚಂಚಲ ಹೊಲ್ಲ ವಿತ್ತ ಯೋಗಿಗೆ ಹೊಲ್ಲ ತೊತ್ತಿನ ಮಾತು ನಿಜವಲ್ಲ ಸತಿಯರಿಗೆ ಒತ್ತಾಯ ಹೊಲ್ಲ (ಸರ್ವಜ್ಞ. ೧೬೯೭); ನಾನೇ ಒತ್ತಾಯದಿಂದ ಕೇಳಿದೆ (ಬಾಣಅ. ೧೧೯). [ಒತ್ತು$_1$ + –ಆಯ್$_4$]

**ಒತ್ತಾಯಿಸು** (ಕ್ರಿ). ನಿರ್ಬಂಧಿಸು; ಬಲಾತ್ಕಾರಮಾಡು: "ಕೆರೆದಲ್ಲಿ ಹೋಗಿಬಂದರೆ ಸಾಕು" ಎಂದು ವನಜೆ ಒತ್ತಾಯಿಸಿ ನುಡಿದಿದ್ದಳು (ತ್ಯಾಗಮ. ೧೭೨); ಕೆಲಸ ಪ್ರಾರಂಭಿಸಲು ತಂದೆ ಅವನನ್ನು ಒತ್ತಾಯಿಸುತ್ತಲೇ ಇದ್ದರು (ಮಸಕೂ. ೬೭). [ಒತ್ತಾಯ + –ಇಸು$_3$]

**ಒತ್ತಾವತ್ತಿ** (ನಾ). "ಒತ್ತಡ; ತ್ರಾಸು" (ಜಾನಕೋ. ೨೯). [?]

**ಒತ್ತಾಸೆ** (ನಾ). **೧.** ಸಹಾಯ; ನೆರವು; ಆಸರೆ; ಬೆಂಬಲ: ಪತ್ತುದೆಸೆಯಂ ಬೆಳಗಿಸುವ ಪನ್ನೆರಡು ರಾಶಿಗೊತ್ತಾಸೆಯಾಗಿರ್ಪ ಶತಪತ್ರಮಿತ್ರನಹೆ (ಜೈಮಿಭಾ. ೨೦–೪೨); ಕರುಣಿಸುವುದೆನಗೆ ನಿನ್ನೊತ್ತಾಸೆಯಂ (ಶೇಷರಾ. ೧೬೯–೬); ಇದುವರೆಗೂ ಕೊಟ್ಟ ಒತ್ತಾಸೆ ನಮ್ಮ ಜನ್ಮದಲ್ಲಿ ಮರೆಯೋಹಾಗಿಲ್ಲ (ಅವತಂ. ೧೯೨). **೨.** ಒಳಗಿನ ಆಸೆ. [ದೇ. ‖ ತಮಿ. ಒತ್ತಾಚೈ; ಮಲ. ಒತ್ತಾಶ]

**ಒತ್ತಾಸೆಗಾರ** (ನಾ). ನೆರವಾಗತಕ್ಕವನು; ಸಹಾಯ ಮಾಡುವವನು; ಆಶ್ರಯದಾತ (ಕಿ). [ಒತ್ತಾಸೆ + –ಗಾರ (< –ಕಾಱ)]

**ಒತ್ತಾಸೆಗಾರ್ತಿ** (ನಾ). ನೆರವಾಗತಕ್ಕವಳು; ಸಹಾಯ ಮಾಡುವವಳು; ಆಶ್ರಯದಾತೆ (ಕಿ). [ಒತ್ತಾಸೆಗಾರ + –ತಿ$_1$ (< –ಇತ್ತಿ)]

**ಒತ್ತಾಳಿಕೆ** (ನಾ). ಬಲಾತ್ಕಾರದ ಆಡಳಿತ; ದಬ್ಬಾಳಿಕೆ: ಜಾಗಿರದಾರರು ತಮ್ಮ ಹಳ್ಳಿಯ ಜನರ ಮೇಲೆ ನಡೆಸುವ ಕ್ರೂರವಾದ ಒತ್ತಾಳಿಕೆ (ಸಾಸಮಾ. ೬೮). [ಒತ್ತು$_1$ + ಆಳಿಕೆ (< ಆಳ್ಕೆ)]

**ಒತ್ತಾಳು** (ನಾ). = ಒತ್ತಾಸೆಗಾರ (ಕಿ). [ಒತ್ತು$_1$ + ಆಳು$_3$ (< ಆಳ್$_3$)]

**ಒತ್ತಿಕೆ** (ನಾ). ಒತ್ತುವಿಕೆ; ಅದುಮುವಿಕೆ (?): ವಿದ್ಯಾಸಾಗರರಾಜಮಂಡಲಾರ್ಚಿತಾ . . . ವೇದಶಾಸ್ತ್ರದೊತ್ತಿಕೆಯಿರಿಸಿ ಕೈಯೊಳು (ಸೌಗಂಧಿ. ೨೧–೨). [ಒತ್ತು$_1$ + –ಇಕೆ]

**ಒತ್ತಿಡಿ** (ಕ್ರಿ). ರಭಸದಿಂದ ಧ್ವನಿಮಾಡು (?): ಒತ್ತಿಡಿದ ವಾದ್ಯ ಘೋಷದೊಳು . . . ವಾಜಿಶಿರಮಂ ಛೇದಿಸುತ್ತಿರಲ್ (ಜೈಮಿಭಾ. ೩೪-೧೭). [ಒತ್ತು$_1$ + ಇಡಿ$_2$]

**ಒತ್ತಿಡು$_1$** (ಕ್ರಿ). ಒತ್ತೆಯಿಡು ; ಆಧಾರವಾಗಿಡು : ಒತ್ತೆ + ಇಟ್ಟಂ = ಒತ್ತಿಟ್ಟಂ (ಅಥವಾ) ಒತ್ತೆಯಿಟ್ಟಂ ; ಒತ್ತಿಟ್ಟಿರುಳೀಕೆಯ ಕೈತವಕಂಜಿ ಪೊಜಮಟ್ಟೆರ್ದಂ (ಶಮದ. ೫೫ ಪ್ರಯೋ). [ಒತ್ತೆ$_1$ + ಇಡು$_1$]

**ಒತ್ತಿಡು$_2$** (ಕ್ರಿ). ಅದುಮಿ ಇಡು. [ಒತ್ತು$_1$ + ಇಡು$_1$]

**ಒತ್ತಿರಿಸು** (ಕ್ರಿ). = ಒತ್ತಿಡು$_1$: ಪೂರ್ಣಮೆಯೊಳೊಂದು ನೇವಳನೊತ್ತಿರಿಸಿ ಶಿವಭಕ್ತರ್ಗೆ ಸಂತುಷ್ಟಿಯಂ ಮಾಡಳೇ (ಅರಾಚ. ೭-೯). [ಒತ್ತೆ$_1$ + ಇರಿಸು]

**ಒತ್ತಿಸು** (ಕ್ರಿ). ೧. ಆಚೆಗೆ ಸರಿಸು, —ತಳ್ಳು, —ನೂಕು : ಒತ್ತಿಸಿದ ಕಸಕಿಂತ ಅತ್ತತ್ತ ಈದೇಹ (ಪುರಂದ. ೧-೧೫೨-೧೧) ; ಬಲುಸಂದಣಿಯ ಕೆಲಕೊತ್ತಿಸುತ (ನಳಚ. ೩-೫೮). ೨. (ಮೈಯನ್ನು) ಹಿಸುಕಿಸು ; ತಿಕ್ಕಿಸು : ಆಲಿನೀರ್ಗಳಂ ಚೆಲ್ಲಿಸಿಕೊಳುತ್ತೆ ಪದ್ಮಪತ್ರಂಗಳಿಂದೊತ್ತಿಸಿ [ಪಾಠಾಂ. ಒರಿಸಿ, ಒವಿಸಿ]ಕೊಳುತ್ತೆ (ನಂಬಿರ. ೧೨-೧೧೭) ; ತೊಡೆ ಕೈ ಕಾಲನೊತ್ತಿಸಿಕೊಂಡು ನಿನ್ನಯ ಪಡಿದಂಡಿಯ ಮಾಡು ಮಗಳೆ (ಕಂನವಿ. ೬-೧೫೮). ೩. ಊದಿಸು : ಕಾಹಳೆಗಳನೊತ್ತಿಸಿಯುಂ ಪಂಚಮಹಾ ವಾದ್ಯಂಗಳಂ ಬಾಜಿಸಿಯುಂ (ಗದಾಯು. ೭-೧ ವ). [ಒತ್ತು$_1$ + -ಇಸು$_3$]

**ಒತ್ತು$_1$** (ಕ್ರಿ). ೧. ಆಕ್ರಮಿಸು ; ಮುತ್ತು ; ಕವಿ : "ಒತ್ತು- ಆಕ್ರಮಣೇ, ನದೀತೀರೇ ಚ" (ಶಮಧಾ) ; ಅತಿತುಮುಲ ಕಾಳಗ ಪೆಚ್ಚಿ ಬಲದ ಕಯ್ಯಂ ಚಿತ್ರವಾಹನನೊತ್ತಿ ಪುಗುತ್ತನ್ದು ಕಾದಿಸೆ (ಎಕ. VIII, ಸೊರಬ. ೧೦-೬ ; 800) ; ಧರಿತ್ರಿಯಂ ಜೀಯೆನೆ ಬೇಡಿಕೊಳ್ಳದೆ ವಿರೋಧಿ ನರೇಂದ್ರರನೊತ್ತಿಕೊಂಡುಂ (ಪಂಪಭಾ. ೧-೧). ೨. (ಬಿಗಿಯಾಗಿ) ಚುಚ್ಚು ; ತಿವಿ ; ನಾಟು : ಗಂಡರ ನೆತ್ತಿಯೊಳೊತ್ತಿ ಬಾಳನಿನ್ನೂಱುಗು ಮೆಂದೊಡೇಂ ಪಿರಿದೊ ತೇಜದ ದಳ್ಳುರಿ ಪಾಂಡುರಾಜನಾ (ಪಂಪಭಾ. ೧-೧೦೯); ಮುಳಿದು ತಿಮಿರೇಭಕುಂಭಸ್ಥಳಮಂ ಶಶಿಸಿಂಹಮೊತ್ತಿ ಸೀಳಲ್ (ಕಾದಂಪೂ. ೮೭೭) ; ಗುಲ್ಮದಂತೊತ್ತುವರ್ ಪೊಱಿಕಾಜನಂತೆ ಬಿಗಿದು ಕಟ್ಟುವರ್ (ಧರ್ಮಾಮೃ. ೩-೭೩); ಸುರಲತೆಯೆಳೆಯಕುಡಿ ಮುಱಿದೊತ್ತ ಲಾಪುದೇ ವಜ್ರಧಾರೆಗಳ (ಕುವ್ಯಾದ್ರೋ. ೪-೪೮). ೩. (ಆಲಂ) ಚುಚ್ಚಿ ಮಾತನಾಡು ; ವ್ಯಂಗ್ಯವಾಗಿ ಹೇಳು : ಮಗಳೊಬ್ಬಳುಂಟೆ ನಮ್ಮ ತ್ಯಾಜಿಯರಿಗೆಂದು ನಗುತ ರಾಜೇಂದ್ರ ನುಡಿದನು ಜಗಕತಿಕುಟಿಲನಲ್ಲವೆ ನೋಡು ನೋಡೆಂದು ಬಗೆಯಱಿದೊತ್ತಿದಳ್ಮತ್ತೆ (ಭರಚ. ೩೭-೭೯) ; ನಾಲಗೆಯೊಳಗಿಲ್ಲ ನಿನ್ನೆದೆಯೊಳಗೆ ವಿಶಾಲಾಕ್ಷಿಯಿದ್ದು ನೀನೆನ್ನಾ ಚಾಳಿಸುತಿದ್ದೆಯಾ ಠಕ್ಕರ ದೇವಯೆಂದಾ ಲೇಸುಗಾತಿಯೊತ್ತಿದಳು (ಭರಚ. ೩೭-೮೦). ೪. ನೂಕು ; ತಳ್ಳು ; ಸರಿಸು : ಕುರುಕ್ಷೇತ್ರದಿಂದತ್ತ ಪನ್ನೆರಡುಯೋಜನಂಬರಮೊತ್ತುವುದುಂ (ಪಂಪಭಾ. ೧೧-೭೮ ವ). ೫. (ಗಾಳಿಯನ್ನು ತುಂಬಿ) ಊದು ; ಬಾರಿಸು : ಪಗೆವರ ಗಂಟಲನೊತ್ತುವಂತೆ ಪೌಂಡ್ರವೆಂಬ ಶಂಖಮನೊತ್ತಿ (ಪಂಪಭಾ. ೧೦-೯೭) ; ಬಲದ ಕೆಯ್ಯೊಳ ಯ್ಯಾಯಶಂಖಮಂ ಕೊಂಡೊತ್ತಿದಾಗಳ್ (ಬಂಹರಿ. ೬-೩೫ ವ). ೬. ಮೈಯನ್ನು ಹಿಸುಕು, —ತಿಕ್ಕು ; ಅಂಗಮರ್ದನಮಾಡು: ಕರತಳಪದ್ಮಂಗಳಿಂ ಪಾದಪದ್ಮಂಗಳನೊತ್ತುತ್ತಿರಲ್ (ಕಾದಂಪೂ. ೮೦) ; ಚರಣದ್ವಯಂಗಳಂ . . . ಮೆಲ್ಲನೆ ಕಾಸಿ ವೊತ್ತುತಿರೆ (ಇಳರ. ಹ. ೫೩-೧೩); ಅರಸ ನೊಂದೈ ಮರ್ದನಕೆ ಮಲ್ಲರುಗಳಿಲ್ಲೆಮಗೊತ್ತುವೊಡೆ (ಕುವ್ಯಾಅ. ೨೨-೭). ೭. ಲೇಪಿಸು ; ಬಳಿ ; ಸವರು ; ತಟ್ಟು : ಒತ್ತಿದ ತಳ್ಕೆತ್ತಿದ ತಱಿ ಮುತ್ತಿನ ಪೊಸದುಡುಗೆ ತಳಿರ ಸೋರ್ಮುಡಿ ಮನಮಂ ಪತ್ತಿಸಿ ಚೊತ್ತಿಸೆ ಮದನೋನ್ಮತ್ತೆಯರೆವಯವದೆ ಬಂದರ್ (ಪಂಪಭಾ. ೫-೫೯) ; ದಮಯಂತಿಗೆಣ್ಣೆಯನೊತ್ತಿದರು ಶೋಭಾನಗಳ ಪಾಡುತ ಮುತ್ತೈದೆಯರು (ನಳಚ. ೩-೫೩) ; ಗಾಂಧಾರಿಸೊಪ್ಪಿನ ರಸವಂ ನಸುಬಿಸಿಯಂ ಮಾಡಿ ನೆತ್ತಿಗೊತ್ತೆ ವಾತಜ್ವರ ಪರಿಹಾರವಾಗುವುದು (ಸಕವೈ. ೭೦) ; ಎಣ್ಣೆ ಒತ್ತಿ ಸ್ನಾನಮಾಡು (ರೂಢಿ). ೮. ನುಗ್ಗಿ ನಡೆ ; ಹಾಯು ; ಆಕ್ರಮಿಸು: ವಿಕ್ರಮದಿಂದೆ ನಿಂದಗುರ್ವೆನಲಿಱಿದಾಂತರಂ ಮೊಸಳೆಯಂ ಪಿಡಿವಂತಿರೆ ನೀರೊಳೊತ್ತಿ ಭೀಮನನತಿಗರ್ವದಿಂ ಪಿಡಿಯೆ (ಪಂಪಭಾ. ೧-೨೬) ; ಅರಿವಿಜಿಗೀಷುಗಳೊರ್ವರೊರ್ವರ ಮೇಲೆತ್ತಿಯೊತ್ತ [ಪಾಠಾಂ. ಯೆತ್ತ] ಲಾಱದೆ ನಿಲ್ವುದು ಆಸನಮೆಂಬುದಕ್ಕುಂ (ಪಂಚತಂ. ೨೧೯-೧೭) ; ಕೆಡೆವ ಮರದಿಂ ನೂಂಕುತ್ತೊತ್ತುತ್ತೆ ಬರ್ಪ ಪೊನಲ್ಗಳಿಂ (ಧರ್ಮಾಮೃ. ೨-೨೩೦). ೯. ಮುದ್ರೆಯೊತ್ತು : ನಾಗಭೂಷಣನಂತಿರಲಿ ನಿರ್ಜರರೊಳು ಭೋಗದೇವೇಂದ್ರನ ಮೇಲೆ ಡಾಗನೊತ್ತಿದೆ ನೋಡು ನನ್ನಿಂದೆ ಬಂಡಾಗಿ ಹೋಗದ ವೀರರಾರೆಲವೊ (ಮೋಹತ. ೩೮-೧೧). ೧೦. ಕಾಡು ; ಪೀಡಿಸು ; ಹಿಂಸಿಸು : "ಪೀಡಯತಿ – ಒತ್ತಿಧಪಂ" (ಕಾಶಕೃ. ೨೫೪) ; ದರಿದ್ರತೆಯಿನೊತ್ತುವ ಕುತ್ತದಿನೆಂತುಮಕ್ಕುಮಚ್ಚರಿಯೆ ಮಹೋಗ್ರ = ದುಃಖತತಿ (ಧರ್ಮಾಮೃ. ೪-೧೨೪) ; ಕುತ್ತದಮೊತ್ತಮೊತ್ತುತಿರೆಯುಂ ಮತ್ತಂ ಚಿರಂ ಜೀವಿಪರ್ (ವರ್ಧಪು. ೧೧-೪೭) ; ಈ ಮರ್ದಿಂದೀ ಕುತ್ತಂ ಕಿಡುಗುಮೆಂದಾ ಮರ್ದಂ ಮಾಡದೊಡೆ . . . ಆತನ ಕುತ್ತಮೊತ್ತದೆ ಮಾಣ್ಗುಮೆ (ಜೀವಸಂ. ೮-೬ ವ) ; ವಿಷದ ಸೋಕಿಗೆ ಗರುಡನಳವಳಿಯೆ ಮತ್ತೆ ರಕ್ಷೆಗೆ ಮಂತ್ರಿಸುವರಾರು ಭೂಪ ನೀನೊತ್ತುವನುತಾಪಕೆಡೆಗೊಟ್ಟಡಾರ್ ಬಿಡಿಸುವರ್ (ಜೈಮಿಭಾ. ೨-೧೬). ೧೧. ಒರಸು ; (ಮೃದು ಸ್ಪರ್ಶದಿಂದ) ಹೋಗಲಾಡಿಸು, —ಕಳೆ : ಪೊಱಪೊಣ್ಮುವ ನಯನಜಲಂಗಳನುತ್ತರೀಯ ವಲ್ಕಲವಸನೋಪಾಂತದೊಳೊತ್ತುತ್ತುಂ (ಪಂಪಭಾ. ೮-೨ ವ) ; ಅವರ . . . ಕಣ್ಣನೀರನೊತ್ತುವ (ಅನಂಪು. ೪-೪) ; ಮುತ್ತುವೊಲ್ ಬೀಳುತಿದಾರ್ಸ್ರಮುದುದಕವನೊತ್ತಿ ಬೇಗದೆ ಸೆಱಗಿಂದ (ಕಂನವಿ. ೧೦-೫೦). ೧೨. ಅವಚು ; ಅಪ್ಪು ; ತಬ್ಬಿಹಿಡಿ : ತಕ್ಕನಂತೆ ನಂಬಿಸಿಯುಮೊತ್ತರದಂತೊತ್ತಿಯುಮುರಿಯಳುವರ್ಂತ ಳುದುರ್ಕೊಳ್ವುದಿದು ಪಂದಿವೇಂಟೆಯ ನಾಯ್ (ಪಂಪಭಾ. ೫-೪೬ ವ) ; ನವಲಜ್ಜಾಭಾರ ನಮ್ರಾನನೆಯನುರದೊಳೊತ್ತಂಬದಿಂದೊತ್ತಿ (ಕಾದಂಉ. ೫೨೨). ೧೩. (ಲಟ್ಟಣಿಗೆಯಿಂದ ಅದುಮಿ) ಅಗಲಮಾಡು; ಲಟ್ಟಿಸು: ನವನೀತಮಂ ಕಿನೆಯುಮಂ ಬೆರಸಿ ಕಣಿಕಮಂ ಸವೆವಂತೆ ಕುಟ್ಟಿ ಬಟ್ಟಲಂ ಮಾಡಿ ಹಪ್ಪಳದ ಸಮನಾಗಿವೊತ್ತಿ ಇರ್ಮೆಯ್ಗೆ ಬೆಣ್ಣೆಯಂ ತೊಡೆದು (ಸೂಪಶಾ. ೧-೧೨ ; ಸೂಪಶಾ. ೧-೧೧ ನೋ). ೧೪. (ಚೆನ್ನಾಗಿ) ಬೆರಸು ; ಮಿಶ್ರಮಾಡು : ಕಾಯೊಳಗೆ ಉತ್ತಮದ ಕಡಲೆ ಹೆಸರುದ್ದು . . . ಸಕ್ಕರೆಯನಿಕ್ಕಿ ವೊತ್ತಿ ಪೂರೈಸಿ (ಸೂಪಶಾ. ೪-೨೦). ೧೫. [ಗಣಿತ] ಗುಣಿಸು ; ಗುಣಾಕಾರಮಾಡು : ಬಿಡೆನೂಂಕೊತ್ತು ನೆರೆ ಮೋದು ಬಳಯಿಸು . . . ಎಲ್ಲ ಗುಣಿಯಿಸೆಂಬುದು ನಿರತಂ (ವ್ಯವಹಾ. ೧೧-೧೧). ೧೬. ನೆರವಾಗು ; ಸಹಕರಿಸು : ಧರಣಿಪನನೊತ್ತಲಿಕೆ ತೆರಳಿದ ಪರಿಗಣಿತವೈವತ್ತುಕೋಟಿಯ ಕರಿಯ ಘಟೆಗಳ ಕೊಯ್ದು ಹಾಯ್ದನು ಸಮಿಧೆಗೊಡಲಿಯಲಿ (ಕುವ್ಯಾಅ. ಓರಿಇ. ೨೬-೨೪). ೧೭. (ಮಾಗಿಸಲು) ಹುಲ್ಲಿನಲ್ಲಿ ಹುದುಗಿಸು ; ಅಡೆ ಹಾಕು : ಉತ್ತುತ್ತೆ ಖರ್ಜೂರ ದ್ರಾಕ್ಷಿ ಸಕ್ಕರೆ ಬೆಲ್ಲ ಮೆತ್ತೈಸಿದ ಕಾಯ ಭಾಗ ಒತ್ತದೆ ಕಳಿತ ಸಮಸ್ತಪಣ್ಪಸರಂಗಳೆತ್ತೆಱದಲಿ ಮಾಱುತಿಹವು (ಮೋಹತ. ೩-೨೦). ೧೮. ಕುಟ್ಟು; ಬಡಿ; ಹೊಡೆ : ಪಟಸಾಲೆಯ ಮೇಲೆ ಕುಟಿಲ ಕುಂತಳೆ ನೆಱೆ ಪುಟಚೆಂಡನಾಡುವ ಭರಕೆ ನಟಿಸಲು ನೆಲೆಮೊಲೆಗಳು ನೋಡಿ ನಗುತಾಗ ವಿಟರು ಕೈತಾಳವೊತ್ತುವರು (ಕಂನವಿ. ೨-೯೨).

೧೯. ಒತ್ತಾಯಪಡಿಸು : ಹಸಿವಿಲ್ಲದವನೊಬ್ಬ ಬಂಧುಗಳೊತ್ತಿ ಪ್ರಾರ್ಥಿಸಲು ದಾಕ್ಷಿಣ್ಯಕುಂಬಂತೆ . . . ಉಂಡನು (ಭರಚ. ೪–೯೬). ೨೦. ಅದುಮು ; ಅಮುಕು : ಶೋಭಿಸಿದಂ ಕುಮಾರನಾನಂದಿತ ರೂಪ ನಂದೆಸೆಯೆ ತಂದೆಯೊಳಚ್ಚಿನೊಳೊತ್ತಿದಂತೆವೋಲ್ (ಆದಿಪು. ೮–೪೩) ; ಕದಂಪಿನೊಳೊತ್ತುವ ರನ್ನದ ಕನ್ನಡಿಗಳೊಳಂ (ಕಾದಂಉ. ೬೬೫) ; ಅಡಿಯನೂಡದೆ ಕೆಚ್ಚನಿಹ ಕೇಸಡಿಗಳೊತ್ತದೆ ನಿಱಿವಿಡಿದ ಕುರುಳಡಸಿ ವರದಸಿಯಾಗಿ ಕೊಂಕಿದ ನಿಡಿಯ ಪುರ್ವುಗಳು (ಸಾಳ್ವಭಾ. ೨೦–೧೬). ೨೧. ಪರೀಕ್ಷಿಸು ; ಒಳಹೊಕ್ಕು ನೋಡು : ಬತ್ತಲೆಯ ಬಗೆಗೊಂಡು ಹೆಂಗೂಸಿತ್ತಲೇತಕೆ ಬಂದೆ ಕಾಮದ ಕತ್ತಲೆಯ ಕಳೆಯದೆ ವೃಥಾ ವೈರಾಗ್ಯ ವೇಷದಲಿ ಹತ್ತಿರಿದ್ದರೆ ನಮ್ಮ ಶರಣರು ಚಿತ್ತದಲಿ ಕೆರಳುವರು ಕೇಳೆನುತೊತ್ತಿನೋಡಿದನಾಕೆಯಂತಸ್ಥವನು ಪ್ರಭುರಾಯ (ಪ್ರಭುಲೀ. ೧೬–೬). ೨೨. ಮುಂದುವರಿ; ಹೆಚ್ಚಾಗು : ಮತ್ತಮವಾಸೆಗಳೊಳ್ ಮೂವತ್ತು ದಿನಂಗಳನೆ ಕಂಡೊಡೊಳ್ಳಿತು ದಿನಮಂತೊತ್ತಿದೊಡೆ ಕುಸಿಗು ಮಿಱಿದಂತೊತ್ತಿರಿಸುಗುಮರ್ಘಮೆಂದನೊಳ್ಪಿನ ಜಟ್ಟಂ (ಜಟ್ಟಮ. ೬–೨೯). ೨೩. ಬಳಸು; ಪ್ರಯೋಗಿಸು ; ಉಪಯೋಗಿಸು: ಸ್ಯೂಸ್ ದೇವನೆಂದುಂ ಎನ್ನೆರ್ದೆಯ ಬಯಕೆಯಂ ತುಱಿದಿಕ್ಕಲೆಂದು ತನ್ನಯಾ ಬಲ್ಮೆಯನ್ ಒತ್ತದಿರ್ಕೆಂದುಂ (ಬದ್ಧಪ್ರ. ೨೮–೫೯೬). ೨೪. ಹೇರು ; ಭಾರಹಾಕು : ಈ ಅಲೆತಗಳನವಳ ಮೇಲ್ ಒತ್ತಿರ್ಪನೆಂಬುದನ್ ನೋಡ (ಬದ್ಧಪ್ರ. ೩೯–೮೪೮). ೨೫. ಚಿಮ್ಮಿಸು ; ಎರಚು : ಜೀಕೊರ್ಟಿವೆಯಂ ತೆಗೆದೆತ್ತಿದ ಕೆಯ್ಯೊಳೊರ್ವರೊರ್ವರನಿರದೊತ್ತೆ (ಅನಂಪು. ೬–೨೮) ; ಮಡದಿಯ ಮೇಲಿಳಾಧಿಪತಿ ಕತ್ತುರಿ ನೀರ್ಗಳನೊತ್ತೆ (ಅನಂಪು. ೬–೪೧). ೨೬. ದಾರಿಬಿಡು ; ಪಕ್ಕಕ್ಕೆ ಸರಿ (ಕ).

ಒತ್ತಿಕಟ್ಟು = ಅದುಮಿ ಕಟ್ಟು ; ಬಿಗಿಯಾಗಿ ಕಟ್ಟು : ಅದನವನ ತೋಳ್ಗಿಟ್ಟು ನಿನ್ನ ಸುತ್ತಿಗೆಯಿಂದ ಬೆಟ್ಟಿತೆನೆ ಕುಟ್ಟು ; ಅಱಿಗೊತ್ತಿಕಟ್ಟು (ಬದ್ಧಪ್ರ. ೪–೬೫). ಒತ್ತಿಕೊಳ್ = ಅಪ್ಪಿಕೊ ; ಹಿಡಿದುಕೊ ; ಅವಚಿಕೊ : ವಿಯೋಗಿಯಂತೆ ನಳಿನದಳಂಗಳನುರದೊಳೊತ್ತಿಕೊಂಡು (ಕಾದಂಪೂ. ೬೪೮) ; ಬಲ್ಮೊಲೆಗೊತ್ತಿಕೊಂಡು ತಳ್ಕೈಸಿ ಹಾಯೆಂದು ಸಂತಸದೆ ಹಿಗ್ಗಿದಳು (ಮೋಹತ. ೩೦–೩೪) ; ಪದೆದು ಹೆಂಗಳು ಕಣ್ಣಿಗೊತ್ತಿಕೊಂಡರು (ಭರಚ. ೩೯–೫೩). ಒತ್ತಿಡು = ಅದುಮಿ ಇಡು ; ಹತ್ತಿಕ್ಕು : ಮೇಣಪಜ ರೂಕ್ಷಮಯ ಅಱಿಬರಿಯ ಅಪ್ಪುಗೆಯಲೊತ್ತಿಟ್ಟಪನ್ ಬಯ್ತೊಡಲ್ ನಿನತನ್ (ಬದ್ಧಪ್ರ. ೫೪–೧೧೬೯). ಒತ್ತಿತೆಗೆ=ಅದುಮಿ ತೆಗೆ: ಹೆತ್ತವಳು ಮಾಳಿಯೆನ್ನೊತ್ತಿತೆಗೆದವಳು ಬೆನ್ನೊತ್ತಿ ಹಿಡಿದವಳು ಕಾಳಿ (ಸರ್ವಜ್ಞ. ೧೧). ಒತ್ತಿನುಡಿ = ೧. ಸ್ವರಭಾರಹಾಕಿ ಮಾತನಾಡು, —ಹೇಳು. ೨. ಆಕ್ಷೇಪಿಸು; ನಿಷೇಧಿಸಿ ಮಾತಾಡು : ಆರೊತ್ತಿನುಡಿದರೆ ಏಕೆ ನಾ ನಿಮ್ಮ ಬಿಡುವೆ ಶಂಭುಜಕ್ಕೇಶ್ವರಾ (ಸರ್ವವ. ೯೫–೫೨೪). ಒತ್ತಿನೋಡು = ಪರೀಕ್ಷಿಸು : ಉತ್ತರದರಸಿನ ಮಗ ಭೂಲೋಕದ ಮತ್ತಗಾಮಿನಿಯರ ಸೊಬಗವೊತ್ತಿನೋಡುವೊಡೈತಂದನೆಂಬೊಲು (ಕಂನವಿ. ೯–೧೩೨). ಒತ್ತಿಪಿಡಿ, ಒತ್ತಿವಿಡಿ = ಒತ್ತಿತೆಗೆ : ಒತ್ತಿಪಿಡಿದು ಅಸುರನ ನೆತ್ತಿಯನೊಡೆದು ಮುತ್ತಸರಗೆಯ್ದು ಪರಿಯ ನೋಡಾ (ಆದವ. ೯೮) ; ಸುತನಂ ನೋಡಿ ಬೈದನೆಲವೆಲವೊ ಪೋಗತ್ತ ನಿನ್ನಂ ಮಾಳ್ಪುದೇನಮಲ ತುಲಸಿಯಂವೊತ್ತಿ[ಪಾಠಾಂ. ದುತ್ತಿ]ವಿಡಿದಬ್ಜಮಂ ಮಾಣ್ದು ದುತ್ತುರದ ಕುಸುಮದ ತೊಡವುಗಟ್ಟುವಂತೆ (ಜೈಮಿಭಾ. ೨೫–೬೧). ಒತ್ತಿಬರ್, ಒತ್ತಿಬರು = ಮೇಲೇರಿ ಬರು ; ಮುನ್ನುಗ್ಗಿ ಬರು ; ಆಕ್ರಮಿಸು ; ಮುತ್ತು : ಕಪ್ಪಮಿಾಯದೆ ಚಪ್ಪರಿಸುವ ಮಂಡಳಿಕರುಮಂ ಅಡಂಗದಾಟವಿಕರುಮಂ ಒತ್ತಿ [ಪಾಠಾಂ. ಎತ್ತಿ] ಬರ್ಪ ಪಾರ್ಷ್ಣಿಗ್ರಾಹಕರುಮಂ ಅಱಿದು (ಆದಿಪು. ೪–೮೨ ವ ; ಆದಿಪು. ೧–೬೪ ನೋ) ; ಒಂದು ಘನತರಸಿಂಹವಬ್ಬರಿಸಿ . . . ಒತ್ತಿಬರುತಿರೆ (ನಳಚ. ೨–೧೩). ಒತ್ತಿಬಿಡು = ಆವರಿಸು ; ಮುತ್ತು : ಸೌಬಲನ ಥಟ್ಟನೊಳೊತ್ತಿಬಿಟ್ಟವು ನಾಲ್ಕು ಸಾವಿರ ಕುದುರೆ ರಥಸಹಿತ (ಕುವ್ಯಾಕ. ೧೩–೨೪). ಒತ್ತಿಹಾಕು = ಅದುಮಿಹಾಕು : ಸೆರಗನ್ನು ಕೈಯಮೇಲೆ ಹಾಕಿಕೊಂಡು ಕುಪ್ಪಸದ 'ಚಿಟಿಕೆಗುಬ್ಬಿ'ಯನ್ನು ಒತ್ತಿಹಾಕಿಕೊಂಡಳು (ಹೊಸಕ್ಷಿ. ೪೩). ಒತ್ತಿಹೇಳು = ೧. ಸ್ಪಷ್ಟಪಡಿಸಿ ಹೇಳು ; ಮನಸ್ಸಿಗೆ ನಾಟುವಂತೆ ಹೇಳು: ಏನಾದರೂ ಮಾಡಬೇಕೆಂಬ ಅವಳ ಮನದ ಸಂಕಲ್ಪವನ್ನು ಒತ್ತಿಹೇಳಿದ ಹಾಗಾಯಿತು (ಕಣ್ಮಣಿ. ೩೫). ೨. ಸ್ವರಭಾರಹಾಕಿ ಉಚ್ಚರಿಸು, —ಹೇಳು : ಒಮ್ಮೆ ಒತ್ತಿಹೇಳುತ್ತೇನೆ ; ಇನ್ನೊಮ್ಮೆ ತೇಲಿಸಿ ಹೇಳುತ್ತೇನೆ (ದ್ರಾವಿವಿ. ೩೨೪).

[ದೇ. ‖ ತಮಿ. ಒಱ್ಱು, ಒತ್ತು ; ತುಳು. ಒಟ್ಟು, ಒತ್ತು = ರಾಶಿ ಮಾಡು ; ತೆಲು. ಒತ್ತು]

**ಒತ್ತು₂, ಒಂತು₂** (ನಾ). ೧. ಒತ್ತಡ; ಅದುಮುವಿಕೆ : ಉಸಿರೊತ್ತಿಂ ತಿದಿಯಂತಿರೊತ್ತಿದ ಬಸಿಱ್ ಪೋತಂದ ಕಣ್ ಬಿಟ್ಟ ಬಾಯ್ (ಪಂಪಭಾ. ೧೨–೧೪೨) ; ನೆಲೆಮೊಲೆಯೊತ್ತಿನಿಂದೊಗೆವ ಕೋರಕಮುಂ ಪುಳಕಂಗಳುಂ ತಡಂಗಲಿಸೆ (ವರ್ಧಪು. ೪–೬೪). ೨. ಸ್ಪರ್ಶ; ಸೋಕು : ಅನುರಾಗದಿ ಲಿಖಿಸುವೆನೆಂಬರ ಕಯ್ಗನಿಮಿಷನೇತ್ರೆಯ ಘನಕುಚಯುಗದೊತ್ತೆನಲಾದುದು ಸತ್ರಭುರಾಜನ ಸತ್ಕವಿತೆಯ ಸವಿಮಾತು (ಜಯಕಾ. ೧–೨೫). ೩. ನದಿಯ ತೀರ, —ಕರೆ: "ಒತ್ತು–ಆಕ್ರಮಣೇ, ನದೀತೀರೇ ಚ" (ಶಮಧಾ). ೪. ನದೀಮುಖದಲ್ಲಿ ಸಮುದ್ರದ ಒತ್ತಡದಿಂದ ನೀರು ಒತ್ತಿಕೊಂಡು ಬರುವ ಪ್ರದೇಶ : ಸಮುದ್ರದ ವೊತ್ತುಗಳು ಅಲ್ಲಲ್ಲಿಗೆ ಅಡ್ಡಬರುವ ಕಾರಣ ಛಕಡಿಯ ಮಾರ್ಗಗಳನ್ನು ಮಾಡಲಿಕ್ಕೆ ಬರುವ ಹಾಗಿಲ್ಲ. ಆದರೆ ಆ ವೊತ್ತುಗಳಲ್ಲಿ ನಾವೆಗಳು ಆಡುತ್ತಿರುತ್ತವೆ (ಕಭಾಗ. ೨೯೬) ; ಒತ್ತುಗಳಿದ್ದಲ್ಲಿ ಮಾತ್ರ ಕೆಲವು ಬಂದರುಗಳಿರುತ್ತವೆ (ಮುಂಬಯಿ. ೩–೬೨). ೫. ಕೆರೆ ; ಜಲಾಶಯ : "ಒತ್ತೆನೆ ತಟಾಕ" (ಕರ್ಣಾನಿ. ೩೮). ೬. ಸಮಿಾಪ ; ನೆರೆ ; ಜೊತೆ : ಮುಡಿ ಮಕರಧ್ವಜಂಬೊಲೆಟಿಲುತ್ತಿರೆ ಬೆಂಬಿಡದೊಯ್ಯನೊಯ್ಯನುಳ್ಳುಡೆ ಕಟಸೂತ್ರದೊತ್ತಿನೊಳೆ ಜೋಲ್ದಿರೆ (ಪಂಪಭಾ. ೪–೯೦) ; ನೀನು ನಾನು ಸುತ್ತಿ ಬಪ್ಪ ಠಾವೆಲ್ಲವಂ ನೀನು ಒತ್ತಿಲೆ ತೋಱುತಿರ್ಪೆ (ವಚಶಾ. II, ೧೦೩) ; ಶಕ್ರನಾ ಕ್ರತುತುರಗವನು ಕದ್ದೊಯ್ದು ಕಪಿಲಮುನೀಂದ್ರನೊತ್ತಿನಲಿ ಇರಿಸಿದನು ಪಾತಾಳದಲಿ (ತೊರರಾ. ೧–೧೨–೧೨). ೭. ಜತಿ ; ಲಯ (?) : ಒಂದೊತ್ತಂ ನಡೆಯಿಸುವುದದೊಂದೊತ್ತಿನ ಲಯಕ್ಕೆ ಲಕ್ಕಿತೆಱನಾಡುವುದೇನೆಂದಾಂ ಬಣ್ಣಿಸುವೆನೊ ಸುರಸೌಂದರಿಯ ವಿಳಾಸವಿಭ್ರಮ ಭ್ರೂಲತೆಯಂ (ಆದಿಪು. ೯–೩೩). ೮. (ಸಂಯುಕ್ತಾಕ್ಷರವನ್ನು ಬರೆಯುವಾಗ) ಒಂದಕ್ಷರಕ್ಕೆ ತಳಭಾಗದಲ್ಲಿ ಸೇರಿಸುವ ಅಕ್ಷರದ ಚಿಹ್ನೆ : ಗುರುವೊತ್ತುಗಳಿಂದಪ್ಪುದು (ಛಂದೋಂಬು. ೧–೩೪). 'ಒತ್ತಕ್ಷರ' ಪರಾ. ೯. ಆಸರೆ ; ಸಹಾಯ ; ಬೆಂಬಲ ; ಊರೆ : ವಿಳಸದುರುಕುಚ ಭಾರಕ್ಕೆ ಸೆಳೆನಡುವಿನ ಕೃಶತೆಗಂಜಿ ನಳಿನಾಸನನಿಟ್ಟೆಳನೀಲದಂಡದೊತ್ತೆನೆ ತಳತಳಿಪುದು ನೀಳ್ದಬಾಸೆ ಕುಸುಮಾವಳಿಯಾ (ಕುಸುಮಾ. ೧೨–೫೨) ; ಹರಿಯ ನೆಮ್ಮುಗೆ ಕಮಲಜನ ಸಹಾಯಂ ದಿಶಾವರರೊತ್ತು ತರಣಿ ವಸುದನುಜ ಮನುಗಳ ಕಾವಲೆರವೆ (ಚೆಬಪು. ೩೦–೩೩). ೧೦. ದಟ್ಟವಾದುದು ; ನಿಬಿಡವಾದುದು : ತುರಗರಥ ಬಿಲ್ಲಾಳನೊತ್ತಾಗಿರಿಸಿ ಲಗ್ಗೆಯ ಲಹರಿಯಲಿ ಮೋಹರಿಸಿದರು (ಕುವ್ಯಾಕ. ೨೧–೧೧). ೧೧. ರಾಶಿ ; ಗುಂಪು : ತಳಿವ ಸೇಸೆಯ ಪೂಗಳೊತ್ತುಗಳ ಮುತ್ತುಗಳ ವಿಭವದಿಂ ಪೊಳಲೆಸೆದುದು (ಜೈಮಿಭಾ. ೨೪–೬೨).

೧೨. ಬತ್ತಳಿಕೆ; ದೊಣೆ: "ಹೊದೆಯೊತ್ತು ಡೊಣೆ ಶರಧಿ ತೂಣಂ ಶರಾಶ್ರಯಮುಪಾಸಂಗಂ ನಿಷಂಗಮಕ್ಕುಂ" (ಮಂಗರಾ. ೮೭-೩೪). ೧೩. ನದಿಯ ಅಥವಾ ಸಮುದ್ರದ ಉಬ್ಬರ; ಭರತ (ಕಿ). ಒಂತು$_2$: ೬. ಜಾಹ್ನವಿಯ ಜನಕ ಕೇಳಂತರಮಿದೇನಿಲ್ಲಿ ನಡೆಪೋಪೆವೆನಂತಾತನೊಂತಿನಿಂ ಶಂಕರಂ ಸಭಾಸ್ಥಳಕ್ಕೈದಿ (ಪರಶು. ೨೦-೨೦).

ಒಂತಾಗು = ದಟ್ಟವಾಗು; ಗುಂಪಾಗು: ಸಂತತ ಹಿರಿಯೂರ ತಮ್ಮಣನಾಯಕನೊಂತಾದ ಬಲವೈದಿದುದು (ಕಂನವಿ. ೧೧-೧೫). ಒತ್ತಾಗು = ೧. ಒಂತಾಗು: ತಾರೆಗಳು ನಭೋಂಗಣದಲ್ಲಿ . . . ಅಸಂಖ್ಯಾತವಾಗಿಯೂ ಒತ್ತಾಗಿಯೂ ಕಾಣುತ್ತವೆ (ಜೋತಿರ್ವಿ. ೨೧); ಒತ್ತಾಗಿ ಇದ್ದ ಆ ಕೂದಲನ್ನು ಬಲವಾಗಿ ಬಿಗಿದುಬಿಟ್ಟಿದ್ದರು (ಗಲಿಪ್ರ. ೫). ೨. ಬೆಂಬಲವಾಗು; ಸಹಾಯವಾಗು: ತೇರಿನ ದಳಕೆ ತಾನೊತ್ತಾಗಿ ರಣದಗ್ಗಳೆಯರಿದ್ದುದು ರಾಯನೊಡಹುಟ್ಟಿದರು ಸಂದಣಿಸಿ (ಕುವ್ಯಾದ್ರೋ. ೪-೧೭); ಈ ಮೂಱುದಳಕೊತ್ತಾಗಿ ನಿಂದನು ಕೌರವರ ರಾಯ (ಕುವ್ಯಾಗ. ೧-೫). ಒತ್ತಿಗಿರು, ಒತ್ತಿಲಿರು = ಪಕ್ಕದಲ್ಲಿರು; ಮಗ್ಗುಲಲ್ಲಿರು: ನನ್ನ ಊರಿನ ಒತ್ತಿಗಿರುವ ವಡ್ಡರಸೆ ಎಂಬ ಹಳ್ಳಿಗೆ ಸಂಚಾರಕ್ಕೆ ಹೋದೆ (ಕರ್ಮವೀ. ೮-೧೧-೫೯); ಒತ್ತಿಲಿರ್ದನು ಸಾಣೆಯನೂಱಿ ಭೂಭುಜನತ್ತ ನೋಡುತ ಗಾಡಿಕಾಱ (ನಾಗಕು. ೬-೫೦). ಒತ್ತಿಗೆ ಹಾಕು = ಅಡೆ ಹಾಕು; ಮಾಗಲು ಹಾಕು (ಕಿ). ಒತ್ತೊತ್ತೆ = ೧. ಒತ್ತಾಗಿರುವಿಕೆ; ಗುಂಪು; ಸಮ್ಮರ್ದ; ಸಮೂಹ: ಸೇವ್ಯರ ತಿಂತಿಣಿಯಿಂ ಮುತ್ತೈದೆಯರೊತ್ತೊತ್ತೆಯಿಂ ಸುವಾಸಿನಿಯರ ಸಂದಣಿಯಿಂ (೧ರಿಕ. ೧೦-೨೮ ವ); ಹೆಣನ ತುಳಿದೊತ್ತೊತ್ತೆಯಲಿ ಸಂದಣಿಸಿ ಕವಿದುದು (ಕುವ್ಯಾಭೀ. ೮-೪೯); ಸುತ್ತಲುಂ ಮೇಲೆ ದಿಕ್ಪಾಲಕರ ನಗರಂಗಳೊತ್ತೊತ್ತೆಯಿಂ ರುದ್ರವಿಷ್ಣುಬ್ರಹ್ಮಾದಿಗಳ ಪತ್ತನಂಗಳನಾಂತ ಪೆರ್ಮೆಯಿಂ (ಚಿಬಪು. ೨-೯). ಒತ್ತೊತ್ತೆಯಾಗು = ಗುಂಪುಗುಂಪಾಗು: ಹೊತ್ತರ ನಿಬರನಸುರಭಟರೊತ್ತೊತ್ತೆಯೊದುದು ಬೆನ್ನಿನಲಿ ಬಿಗಿದೆತ್ತಿ ಹಾಯ್ದರು ಮುಗಿಲ ಥಟ್ಟಿನ ಪರಿಯ ಜೋಡಿನಲಿ (ಕುವ್ಯಾಅ. ೯-೩೭). [< ಒತ್ತು$_1$]

**ಒತ್ತುಂಗರಡೆ** (ನಾ). ಒತ್ತಿ ಬಾರಿಸುವ ಒಂದು ಬಗೆಯ ಚರ್ಮವಾದ್ಯ: ಬೆರಸಿರೆ ಕನ್ನಡದೊಳ್ಬಂಧುರಮಾಗದು ಕಾವ್ಯರಚನೆ ಪೇೞ್ದೊಡೆ ಪೀನಂ ಪರುಷತರಮಕ್ಕುಮೊತ್ತುಂಗರಡೆಯ [ಪಾಠಾಂ. ಮೋದುಂಕರಡೆಯ] ಮದ್ದಳೆಯ ಜರ್ಜ್ಝರಧ್ವನಿಗಳವೊಲ್ (ಕವಿರಾ. ೧-೫೩). [ಒತ್ತು$_1$ + ಕರಡೆ]

**ಒತ್ತುಂಗುರ** (ನಾ). "(ಇತರ ಉಂಗುರ ಬಿದ್ದುಹೋಗದಂತೆ ತಡೆಯುವ) ತಡೆಯುಂಗುರ" (Guard-ring. ಇಂಕನಿ). [ಒತ್ತು$_2$ + ಉಂಗುರ]

**ಒತ್ತುಂಬಲ** (ನಾ). ಬಲಾತ್ಕಾರ; ಒತ್ತಾಯ: ಲಳನೆಯರಬಲೆಯ ಲಜ್ಜಾವಿಳಸದ್ವ್ರಗ್ನಿಮ್ನಗೆಯನಾ ಕುಭೃದ್ವರ ಚೂಡಾಸ್ಥಳಿಗೆ ಪರಿಯಿಸಿದರೊತ್ತುಂಬಲ [ಪಾಠಾಂ. ಒತ್ತಂಬಳ]ದಿಂದದು ಕಂತುಯಂತ್ರಸೂತ್ರಿತಮಕ್ಕುಂ (ವರ್ಧಪು. ೭-೧೫). [ಒತ್ತು$_2$ + ಬಲ]

**ಒತ್ತುಕರಡು**, ಒತ್ತಕರಡು (ನಾ). ಹಸಿಮಸಿಯನ್ನು ಹೀರುವ ಕಾಗದ; ಒತ್ತುಕಾಗದ: ಒಂದು ಒತ್ತುಕರಡು (Blotting) ಕಾಗದವನ್ನು ಪರಿಶೀಲಿಸಿದರೆ ಬರೆಯುವ ಕಾಗದದಂತೆ ಅದು ನಯವಾಗಿಲ್ಲವೆಂದು ತಿಳಿದು ಬರುವುದು (ಬಾಲಪ್ರ. II, ೮೩೬). ಒತ್ತಕರಡು: ಸಣ್ಣವನಿದ್ದಾಗ ನಾನೊಂದು ಒತ್ತಕರಡದ ಸುರುಳಿಯನ್ನು ನುಂಗಿದೆ, ನಾನು ಬೆಳೆದ ಹಾಗೆ ಒಳಗೆ ಆ ಒತ್ತಕರಡು ಬೆಳೆದಿರಲಿಕ್ಕೇ ಬೇಕು (ನಿಹಾರ. ೬); ಒತ್ತಕರಡಿನೊಲು ಬಾನದ್ದಿತ್ತು ಮಶಿಗೊಜ್ಜೆಯವೊಲು ವನವೆದ್ದಿತ್ತು (ಮುಕ್ತಕಂ. ೫೬-೧೭). [ಒತ್ತು$_1$ + ಕರಡು]

**ಒತ್ತುಕಾಗದ** (ನಾ). = ಒತ್ತುಕರಡು: ಇಂಗ್ಲಿಷ್ ಶಬ್ದಗಳ ಸ್ವೀಕರಣದ ನಾಲ್ಕನೆಯ ರೀತಿಯೆಂದರೆ, ಆ ಶಬ್ದಗಳನ್ನು ತದ್ವತ್ತಾಗಿ ಕನ್ನಡದಲ್ಲಿ ಭಾಷಾಂತರಿಸುವುದು . . . Blotting-Paper ಒತ್ತು-ಕಾಗದ (ಭಾಷಾಶಾ. ೧೭೫). [ಒತ್ತು$_1$ + ಕಾಗದ]

**ಒತ್ತುಕೊಡು** 'ಒತ್ತುಗೊಡು' ನೋ.

**ಒತ್ತುಗ** (ನಾ). (ಹಳ್ಳಿಗರ ನಂಬಿಕೆಯಲ್ಲಿ) ತೊಲೆಯ ಕೆಳಗೆ ಅಂಗಾತ ಮಲಗಿದರೆ, ಎದೆಯ ಮೇಲೆ ಹತ್ತಿ ಉಸಿರು ಕಟ್ಟುವಂತೆ ಒತ್ತುವ ಒಂದು ಮರಿಪಿಶಾಚಿ, —ಅದರ ಬಾಧೆ; ಅಮುಕಾನ: ಅಂಗಾತನೆ ಮಲಗಿದ್ರೆ ಒತ್ತುಗ ಆಗ್ತದೆ (ಮಲೆಮ. ೬೯೮). 'ಒತ್ತಟ್ಟ' ಪರಾ. [ಒತ್ತು$_1$ + -ಗ$_3$]

**ಒತ್ತುಗಂಬ** (ನಾ). ಆಧಾರಕ್ಕಾಗಿ ಇಟ್ಟ ಕಂಬ; ಊರೆಗಂಬ (ಕಿ). [ಒತ್ತು$_2$ + ಕಂಬ]

**ಒತ್ತುಗಲ್ಲು$_1$** (ನಾ). (ಕಾಲಿಗೆ) ಒತ್ತುವ ಕಲ್ಲು: ಮೈಯಲಿ ಸುಱಿವ ಬೆಮರಿನ ಚರಣದೆಡಹುಗಳೊತ್ತುಗಲ್ಲುಗಳ (ಕುವ್ಯಾಅ. ಓರಿಇ. ೪೨-೧೨). [ಒತ್ತು$_1$ + ಕಲ್ಲು (< ಕಲ್$_3$)]

**ಒತ್ತುಗಲ್ಲು$_2$** (ನಾ). ಆಸರೆಯಾಗಿ ನಿಲ್ಲಿಸಿದ ಕಲ್ಲು; ಅಡಿಗಲ್ಲು: ಗೋಡೆ ಬೀಳದಂತೆ ಒತ್ತುಗಲ್ಲು ಕೊಟ್ಟಿದ್ದಾರೆ (ರೂಢಿ). [ಒತ್ತು$_2$ + ಕಲ್ಲು (< ಕಲ್$_3$)]

**ಒತ್ತುಗಾಱ** (ನಾ). ೧. ಚಲಿಸುವಂತೆ ಮಾಡುವವನು; ಸರಿಯುವಂತೆ ಮಾಡುವವನು: ಸಾಗರಕೆ ನೊರಜಿನ ಮುತ್ತಿಗೆಯಲೇನಹುದು ಪರಿಭವವಕಟ ಸುರಗಿರಿಗೆ ಒತ್ತುಗಾಱನೆ ಪವನಂ (ನಿಭಾಗ. ೫-೪-೧೦). ೨. (?): ಎತ್ತಿನ ಮಱಿಯ ಒತ್ತುಗಾಱರಂತೆ ಉಪ್ಪು ದೋಷವೆಂದು ಸಪ್ಪೆಯನುಂಡಡೆ ಮತ್ತೆ ರೊಟ್ಟೆಯ ಬಚ್ಚಲ ಮುಟ್ಟುತ್ತಿಪ್ಪ ಸತ್ತನಾಯಿಗೇಕೆ ವ್ರತ (ಸರ್ವವ. ೧೮೩-೮೩೮). [ಒತ್ತು$_1$ + -ಗಾಱ (< -ಕಾಱ)]

**ಒತ್ತುಗುಂಡಿ** (ನಾ). ಒತ್ತಿ ಅಥವಾ ಅದುಮಿ ಹಾಕುವ ಗುಂಡಿ: ಒತ್ತುಗುಂಡಿ, ಬ್ಲೇಡು ಮುಂತಾದ . . . ವಸ್ತುಗಳನ್ನು ಪೋಲೀಸರು ವಶಪಡಿಸಿಕೊಂಡಿದ್ದಾರೆ (ಹುಸಂಕ. ೧೯-೧೧-೫೯); ಅಂಗಿಗೆ ಒತ್ತುಗುಂಡಿ ಹಾಕು (ರೂಢಿ). [ಒತ್ತು$_1$ + ಗುಂಡಿ$_3$]

**ಒತ್ತುಗುಂದಣಿ** (ನಾ). ಕುಟ್ಟುವಾಗ ಧಾನ್ಯದ ಕಾಳು ಚೆಲ್ಲದಂತೆ ಇಟ್ಟುಕೊಳ್ಳುವ ಸಾಧನ; ಕುಂದಣಿ; ಕುಂದಲಿಕೆ: "ಕುಂದಳಿಯೆ ನಲ್ಕಾವೊತ್ತುಗುಂದಣಿ [ಪಾಠಾಂ. ಲ್ಕುವೆತ್ತುಗುಂಡಣಿ, ಲ್ಕೋವೊತ್ತುಗುಂದಣಿ]ಯೆ" (ಮಂಗರಾ. ೬೧-೨೦). [ಒತ್ತು$_2$ + ಕುಂದಣಿ]

**ಒತ್ತುಗುಡು** 'ಒತ್ತುಗೊಡು' ನೋ.

**ಒತ್ತುಗೊಡು**, ಒತ್ತುಕೊಡು, ಒತ್ತುಗುಡು (ಕ್ರಿ). ೧. ಊರೆಯನ್ನು ಕೊಡು; ಸಹಾಯವಾಗು; ನೆರವು ನೀಡು: ಒತ್ತುಗೊಡುವರೆ ಹಗೆಗೆ ಹಜ್ಜೆಯನಿತ್ತು ತೆಗೆವರೆ (ಕುವ್ಯಾಭೀ. ೯-೬); ನಾರಾಯಣ "ದಾಕ್ಷಿಣ್ಯ ಮಾಡಬೇಡ" ಎಂದು ಒತ್ತುಗೊಟ್ಟನು (ಮುಂಗಾಮು. ೬೫). ಒತ್ತುಕೊಡು: ೧. ಮಣೆ ಅಲುಗಾಡದಂತೆ ಒತ್ತುಕೊಡು (ರೂಢಿ). ೨. ಇನ್ನೊಂದು ಅಕ್ಷರದೊಂದಿಗೆ ಸೇರಿಕೊಂಡು ಬರುವ ಅಕ್ಷರದ ಚಿಹ್ನೆಯನ್ನು ಬರೆ: ಕಕಾರಕ್ಕೆ ಷಕಾರದ ಒತ್ತುಕೊಡು, ಕ್ಷ ಆಗುತ್ತದೆ (ರೂಢಿ). ಒತ್ತುಗುಡು: ೧. ಮೇಲ್ವಾಯ್ವ ಚೇಷ್ಟೆಗೆ ಪೌಲಸ್ತ್ಯನುಮೊತ್ತುಗೊಟ್ಟನೆನಲಾರಂ ದರ್ಪಕಂ ದಂಡಿಸಂ (ಪಂರಾಮಾ. ೯-೧೪೮); ಆಱಡಿಗೊತ್ತುಗೊಟ್ಟು ಮಧುವಂ ತವೆ ಪೀರ್ದು (ಪುಷ್ಪಪು. ೧೪-೨೬). [ಒತ್ತು$_2$ + ಕೊಡು]

**ಒತ್ತುಗೊಳ್** (ಕ್ರಿ). ೧. ಮರೆಯಾಗು; ಮರೆಮಾಡಿಕೊಳ್ಳು; ಆಶ್ರಯಿಸು: ಕೆಲಬರ್ ಕಂಡೊಡೆ ಕರೆಗುಮೆಂದು ಕೆಲದ ಮರಂಗಳ ನೊತ್ತುಗೊಂಡುಂ[ಪಾಠಾಂ. ಒಳಕೊಂಡುಂ] (ಆದಿಪು. ೯-೯೨ ವ); ನಡುತನುವನೆಳಸಲಿದೆ ನುಡಿ ಮೌನಪ್ರಾಂತಮನೊತ್ತುಗೊಳಲ್ಕಿದೆ ಕಾಂತಿ ಶರೀರಮನಮರ್ಚಲಿದೆ ಪಾರ್ವತಿಯಾ (ಗಿರಿಕ. ೪-೭). ೨. ದಟ್ಟವಾಗು; ಸಾಂದ್ರವಾಗು: ರಸಮೊಸರ್ವಂತು ಪಾಡುತಿರೆ ಶುದ್ಧಮನೋಮಣಿದೀಪ್ತಿ ಪೊಣ್ಮಿ ರಾಜಿಸಿದಪುದೋ ಸ್ತುತಿಪ್ರಕರ ನಿರ್ಮಳವರ್ಣಸಮೂಹಮೊ[ತ್ತುಗೊಂಡೆಸೆವುದೊ] ಪೇಟಿನಲ್ (ಕಾದಂಪೂ. ೬೭೩).

[ಒತ್ತು₂ + ಕೊಳ್₁]

**ಒತ್ತುಗೋಡೆ** (ನಾ). ೧. "(ಗೋಡೆಗೆ ಅಥವಾ ಮಾಳಿಗೆಗೆ ಆಧಾರವಾಗಿರುವ) ಊರೆಗೋಡೆ, ಆನಿಕೆಗೋಡೆ" (Counter fort. ಇಂಕನಿ). ೨. ಎರಡು ಕೂಡುಮನೆಗಳಿಗೆ ಸಮಾನವಾಗಿರುವ ಗೋಡೆ; ಹುದುವಿನ ಗೋಡೆ. [ಒತ್ತು₂ + ಗೋಡೆ]

**ಒತ್ತುಬಯಸು** (ನಾ). ನೆರವಾಗಿ ಕೊಟ್ಟ ಹಯನು, —ಹಸು: ಅತ್ಸತ್ರಕ್ಕೆ ಕೊಂಡುಕೊಟ್ಟ ಎಂಮೆ ಮಾಣ್ಸಕೊಂಡಡೆ × × × ಎಂದು [ಒತ್ತು]ಬಯನಾಗಿ ಒಂದು ಎಂಮೆಯನೂ ಮಠಕ್ಕೆ ನಡಸಿ ಬಹನು (ಸೌಇಇ. IX-ii, ೪೧೭-೪೭; 1377). [ಒತ್ತು₂ + ಪಯನು]

**ಒತ್ತುಬರ್** (ಕ್ರಿ). ಸಹಾಯವಾಗಿ ಬರು; ನೆರವಾಗಿ ಬರು: ದಲ್ ಸನ್ನಿದಮಾದುದಿಂದೆನಗೆ ನಿನ್ನಸುವಂ ನೆಜೆ ಪೀರ್ವೆನಾವದೇವಂ ನಿನಗೊತ್ತು [ಪಾಠಾಂ. ಒತು, ಓತು]ಬರ್ಪನವನಂ ಸದೆದಿಕ್ಕುವೆನೀ ಕ್ಷಣಾರ್ಧದೊಳ್ (ಶಬಶಂ. ೪-೧೦೬). [ಒತ್ತು₂ + ಬರ್₁]

**ಒತ್ತುಬಿದರು** (ನಾ). ಒತ್ತಾಗಿರುವ ಬಿದುರು: ಈಶಾನ್ಯ ಹೊಳೆ ತೋಡಿಗೆ ತೆಂಕ ಒತ್ತುಬಿದರು ತಾಳತೋಡಿ ತೆವರಿನಮಲ ಪಡುವ ಮುಖವಾಗಿ ನೆಟ್ಟ ಕಲ್ಲು (ಎಕ. III, ತಿರುನು. ೬೩-೨೫ ; 1748).

[ಒತ್ತು₂+ ಬಿದರು (< ಬಿದಿರ್₂)]

**ಒತ್ತುಬೆರಳು** (ನಾ). (ಹೆಬ್ಬೆರಳಿನ) ಪಕ್ಕದ ಬೆರಳು: "ಪ್ರದೇಶಿನೀ – ಹೆಬ್ಬೆಟ್ಟಿನ ಒತ್ತುಬೆರಳು" (ಸಿದ್ಧಾಂತಿ. ೧೬೯).

[ಒತ್ತು₂ + ಬೆರಳು (< ಬೆರಲ್)]

**ಒತ್ತುಬೇಲಿ** (ನಾ). ೧. ಊರ ಸುತ್ತಲೂ ಹಾಕಿರುವ ಬೇಲಿ; "ಪ್ರಾಚೀನ" (ನಾಚಿರಾ. ೩). ೨. ಒಂದು ಜಮಾನಿನ ಹದ್ದುಬಸ್ತನ್ನು ಮೀರಿ ಇನ್ನೊಂದರಲ್ಲಿ ಹಾಕಿದ ಬೇಲಿ: ಒತ್ತುಬೇಲಿಯನ್ನು ಕಡಿದು ಹಾಕಬೇಕು (ರೂಢಿ). ೩. ಒತ್ತಾಗಿರುವ ಬೇಲಿ; ದಟ್ಟವಾದ ಬೇಲಿ.

[ಒತ್ತು₂ + ಬೇಲಿ]

**ಒತ್ತುಮಱೆ** (ನಾ). ಮೇಲುಹೊದಿಕೆ; ಅವಕುಂಠನ (?): ಕುಳ್ಳಿರ್ದ ಸೌಂದರನ ವಾಮಭಾಗದ ತಳ್ಪಶೇಷದೊಳ್ ತವರಾಜದ ಸಸಿಯ ಮೇಲೆ ಸವಿಯ ಬಳ್ಳಿಯನಡರಿಸುವಂತೆ ಒತ್ತುಮಱೆಸಹಿತಂ [ಪಾಠಾಂ. ಪೊವುಕ್ತಮಿರ್ದ್ದ ಸಖಿಯರು, ಪೊತ್ತುಮಱೆಸಹಿತ, ಪೊತ್ತುಳ (?) ವಿಸತಂ] ಸಂಕಿಲಿಯಂ ಹತ್ತಿರೆ ಕುಳ್ಳಿರಿಸಿ (ನಂಬಿರ. ೧೪-೩೪).

[ಒತ್ತು₂ + ಮಱೆ₂]

**ಒತ್ತುಮಾಡು** (ಕ್ರಿ). ಆಕ್ರಮಿಸು; ಒತ್ತರಿಸು; ಒತ್ತುವರಿ ಮಾಡು: ಯಿಾ ಬಾಳಮೇಲೆ ಆರೊಬ್ಬರೂ ಒತ್ತುಮಾಡಿದರೆ ಹಲರು ಸೆಟ್ಟಿಕಾಱರು ನಿಲಿಸಿಕೊಡುವರು (ಸೌಇಇ. IX-ii, ೪೪೯-೫೯ ; 1444).

[ಒತ್ತು₂ + ಮಾಡು₁]

**ಒತ್ತುಯಂತ್ರ** (ನಾ). ಒತ್ತಿ ಮುದ್ರೆಬೀಳಿಸುವ ಯಂತ್ರ; ಅಚ್ಚು ಮಾಡುವ ಯಂತ್ರ; ಪ್ರೆಸ್ಸು: ಮುದ್ರಣಕ್ಕೆ ಬೇಕಾದ ನಾಲ್ಕನೆಯ ಸಾಧನ ಒತ್ತುಯಂತ್ರ (ಮುದ್ರಕ. ೮೭). [ಒತ್ತು₁ + ಯಂತ್ರ]

**ಒತ್ತುವಣ್ಣು** (ನಾ). ಒತ್ತಿಮಾಡಿದ ಹಣ್ಣು; ಬಲವಂತದಿಂದ ಮಾಡಿದ ಹಣ್ಣು.

ಒತ್ತುವಣ್ಣುಮಾಡು = ಒತ್ತಿ ಹಣ್ಣಾಗುವಂತೆ ಮಾಡು; ಹಿಸುಕಿ ಹಣ್ಣುಮಾಡು: ಪಣ್ಣಾಗಿ ತಾನೆ ಸೋರ್ವಂತೆ ಮುತ್ತೊಂದೊತ್ತುವಣ್ಣು ಮಾಡಿದರೆ ಸೋರ್ವಂತೆ ಬಣ್ಣಗೆಟ್ಟತ್ತೆಜನಾಗಿ ಕರ್ಮಗಳೆಂಬ ಮಣ್ಣು ಕರಗಿ ಸೋರುತಿಹುದು (ಭರಚ. ೬೮-೭೬).

[ಒತ್ತು₁ + ಪಣ್ಣು₃ (< ಪಣ್₃)]

**ಒತ್ತುವರಿ** (ನಾ). ಆಕ್ರಮಣ; ಬಡಾವಣೆ: ಇದು ಒತ್ತುವರಿ ಜಮಾನು (ರೂಢಿ).

ಒತ್ತುವರಿಮಾಡು = ಒತ್ತರಿಸು; ಆಕ್ರಮಿಸು: ತಮ್ಮ ಜಮಾನನ್ನು ಪಕ್ಕದ ಜಮಾನಿನವನು ಒತ್ತುವರಿಮಾಡಿಕೊಂಡಿದ್ದಾನೆಂದು ಮೋಜಣೀದಾರನನ್ನು ಕರೆಸಿ . . . ಬಾಂದುಕಲ್ಲು ನೆಡಿಸಿದ್ದನವನು (ಅನಾಮಿ. ೫೩); ಸರ್ಕಾರಿ ಜಮಾನಿನಲ್ಲಿ ಒತ್ತುವರಿಮಾಡಿ ಅಶ್ವತ್ಥಕಟ್ಟೆ ಕಟ್ಟಿಸಿರುವರೆಂದು ತಿಳಿದುಬಂದಿದೆ (ಕನ್ನಸು. I, ೪೬). [ಒತ್ತು₂ + –ವರಿ₂]

**ಒತ್ತುವಿಡಿ** (ಕ್ರಿ). ನೆರೆಯಲ್ಲಿರು; ಮಗ್ಗುಲಲ್ಲಿರು; ಒರಗು: "ಪರಿಸರ್ಯೆ, ಪರೀಸಾರ– ಗಿರಿನಗರಾದಿಗಳ ಒತ್ತುವಿಡಿದು ಪೋಪುದು" (ನಾಚಿರಾ. ೩); ಕರುಮಾಡದ ಮತ್ತವಾರಣದೊತ್ತುವಿಡಿದು ಕುಳ್ಳಿರ್ದ (ಅನಂಪು. ೫-೫ ವ); ಧರಣಿಪಾಲಕ ರಾಮಚಂದ್ರನ ಶ್ರೀಪದಸರಸಿರುಹದೊಳೊತ್ತುವಿಡಿದು ಪಿರಿದು ಭಕುತಿಯೊಳಗಿರುತಿಪ್ಪ ಲಕ್ಷ್ಮೀಧರನಿರುವನು ಸುಗ್ರೀವ (ಅಂಜಚ. ೧೩-೨೫). [ಒತ್ತು₂ + ಪಿಡಿ₁]

**ಒತ್ತುವೋಗು** (ಕ್ರಿ). ಒತ್ತುವರಿಯಾಗಿರು: ಗುಡಿಗೆಱೆಯ ಭೂಮಿಯೊಳಗೆ ಪಡುವಣ ಪೊಲ ವೊತ್ತುವೋಗಿಟ್ಟಡೆ ಕಾಲಡಿಯ ನಾಯಿಮ್ಮರ ಸಂಗೆ ಶಾಸನಮಂ ತೋಱೆ (ಇಆ. XVIII, ೩೯-೨೨ ; 999).

[ಒತ್ತು₂ + ಪೋಗು₁]

**ಒತ್ತುಸೇವಗೆ** (ನಾ). (ಒರಳಿನಲ್ಲಿ) ಒತ್ತಿಮಾಡಿದ ಸೇವಗೆ: ನನ್ನ ತಲೆಮಾರಿನವರಿಗೆ ಇಷ್ಟವಾಗಿದ್ದ ಒತ್ತುಸೇವಗೆಯು ಹಾಗೆ ನನ್ನ ಬರವಣಿಗೆ (ನಂಟರು. ೬ ಅರಿಕೆ). [ಒತ್ತು₁ + ಸೇವಗೆ]

**ಒತ್ತುಹ** (ನಾ). ಒತ್ತುವಿಕೆ (೩). [ಒತ್ತು₁ + –ಹ₂]

**ಒತ್ತುಹಂಜರ** (ನಾ). ಛಾವಣಿಯ ಕೆಳಮುಖಕ್ಕೆ ಹೊದಿಸಿದ ಹಂದರ, —ಹೊದಿಕೆ (೩). [ಒತ್ತು₂ + ಹಂಜರ (< ಪಂದರ)]

**ಒತ್ತುಹೆಣೆ** (ಕ್ರಿ). ಒತ್ತಾಗಿ ಹೆಣೆ: ಉದ್ದ ಸೂಜಿಗಳಿಂದ ಒತ್ತುಹೆಣೆ (Knit. ಇಂಕನಿ). [ಒತ್ತು₂ + ಹೆಣೆ₁ (< ಪೆಣೆ₁)]

**ಒತ್ತುಳಿ** (ನಾ). ಆಕ್ರಮಣಮಾಡುವವನು; ಒತ್ತರಿಸಿಕೊಳ್ಳುವವನು: ಇಂತಹ ಒತ್ತುಳಿಯ ಮನುಷ್ಯರಿಂದಲೇ ಗ್ರಾಮದಲ್ಲಿ ಪುಂಡು ಹೆಚ್ಚಾಗಿದೆ ಎಂದು ಇಬ್ಬರಿಗೂ ಶಿಕ್ಷೆ ವಿಧಿಸುತ್ತಿದ್ದರು (ಹುಟ್ಟಿಹ. ೨೧).

[ಒತ್ತು₁ + –ಉಳಿ₉]

**ಒತ್ತೆ₁** (ನಾ). ೧. ಆಧಾರವಾಗಿ ಕೊಡುವ ವಸ್ತು; ಅಡವು: ಒತ್ತೆಯಗೂಂಟಂ ಸೊಡರಿಟ್ಟೀಱುವಂತೆರವಿನ ಸಿರಿಯನಱಿದು (ಅರ್ಥನೀ. ೫-೨ ವ); ಪೊಱಬೇಡಂಗಡಿ ಸಾಲ . . . ತೆಱಬೇಡೊತ್ತೆಗೆ ಬಡ್ಡಿಯಂ (ಸೋಮೇಶ. ೮೨); ಒತ್ತೆಯಿಲ್ಲದೆ ಸಾಲಕೊಡುವವನು ಮೂರ್ಖ (ಪುರಂದ. ೧-೬೨-೬); ಹಣಪಡೆದೊತ್ತೆಯನು ಹಿಂದೆ ಕೊಡದವ ಹೊಲೆಯ (ಗಿಳಿವಿಂ. ೧೬-೬). ೨. ಜೂಜಿನಲ್ಲಿ ಇಡತಕ್ಕ ಪಣ: ರಪಣಮಂ ತೋಱಿಯುಮೊತ್ತೆಯನುಗ್ಗಡಿಸಿಯುಮಾಡಿಮೆನೆ ಪೆಱತೇನು ಮುಪಾಯಮಿಲ್ಲದೆಮ್ಮಾಳ್ವ ನೆಲನೊತ್ತೆಯೆಂದೊಡೆ (ಪಂಪಭಾ. ೭-೩ ವ); ಶ್ರೀಭೂತಿಯಂ ಕರೆದು ಜೂಜಾಡುತ್ತುಮುವನ ಜನ್ನಿವರಮುಂ ಸಾಭಿಜ್ಞಾನದುಂಗುರಮಂ ನಗೆಯೊಳೊತ್ತೆಯೆಂದುಕೊಂಡು (ಚಾವುಂಉ. ೩೫).

೩. (ಸೂಳೆಯರಿಗೆ) ಭೋಗಕ್ಕಾಗಿ ಕೊಡುವ ಹಣ ಅಥವಾ ವಸ್ತು; ವೇಶ್ಯೆಗೆ ತೆರುವ ಹಣ: ಸೂಳೆಗೇರಿಗಳಂ ತೊೞಲ್ದು ತನ್ನಂ ಮೆಱೆಯುತ್ತಂ ಮನಕ್ಕೆವಂದಗ್ಗಳದೊಳ್ವೆಂಡಿರೊಳೊತ್ತೆಯ್ಯನಿಟ್ಟು ಭೋಗೋಪಭೋಗಂಗಳ್ಗೆ ಕಸವರಮಂ ಕೊಟ್ಟು (ವಡ್ಡಾರಾ. ೧೨೩-೩); ಕೂಸುಳ್ಳ ಸೂಳೆ ಧನವಾಸೆಗೆ ಒತ್ತೆಯ ಕೊಂಡರೆ ಕೂಸಿಂಗಲ್ಲ ಬೊಜಗಂಗಲ್ಲ (ಬಸವ. ೧೦೧); ಒಲ್ವ ಬೊಜಗನುೞಿದುಮ್ಮಳದಿನೊತ್ತೆಗೆ ಮೆಯ್ಯೊಡ್ಡಲಾಱದೆ ನೆತ್ತದ ನೆವದಿಂ ಪೊತ್ತುಗಳೆವ ಮಗಳ್ಗೆ (ಅನಂಪು. ೮-೧೪ ವ); ತನ್ನಯ ಸಖನ ಕೈಯಿಂದ ಸೌಂದರಿಗೆ ಸಲುವೊತ್ತೆಯಂ ನಯದಿಂದ ಕಳುಹಲು (ಬಸಪು. ೩೮-೧೧); ನೆತ್ತ ವಿತ್ತಕೆ ಬಲವು ಒತ್ತೆ ಸೂಳೆಗೆ ಬಲವು ಕತ್ತಲೆಯು ಬಲವು ಕಳ್ಳಂಗೆ ಅರಸಿಂಗೆ ಸತ್ಯವೇ ಬಲವು (ಸರ್ವಜ್ಞ. ೬೨೫). ೪. ಮೂಲಧನ: ಇ ಹೊಂನನು ಪ್ರಸಾದದ ವೊತ್ತೆಗೆ ಕೊಟ್ಟು ಆ ವೊತ್ತೆಯ ಪ್ರಸಾದದ ತೊಡುವಡ್ಡಿಯಲ್ಲಿ ಸತ್ರದ ಧರ್ಮ ಭೂಚಂದ್ರಾರ್ಕಸ್ಥಾಯಿಯಾಗಿ ನಡವಂತಾಗಿ (ಎಕ. V, ಬೇಲೂರು. ೨೫೩-೧೨; ?). ೫. ಆಹಾರ; ಬಲಿ; ಎರೆ: ಮೇಲಣ ಕೋಣೆಯೊಳಗಿರ್ಪ ಕಪ್ಪೆ ಒತ್ತೆಯ ನುಂಗುವುದಮ್ಮ (ಶಿವಗೀ. ೧೬೪-೮೦೩ ವ).

ಒತ್ತೆಗೆ ನಿಲ್ = ಮಾರಾಟಕ್ಕೆ ನಿಲ್ಲು: ಮನೋಭವಂ ನನೆಗಣೆದೊಟ್ಟು ನಿಲ್ವನೆಗವೊತ್ತೆಗೆನಿಂದೆಳವೆಂಡಿರೊಪ್ಪಿದರ್ (ಜಗವಿ. ೧೬-೧೧೧); ಒತ್ತೆಗೆ ನಿಲ್ವುದೆಂದುೞಿಯವೇಟ್ಟುಪಳೋಪಳನೆನ್ನಂ (ಸೂಕ್ತಿಸು. ೮-೪೧೯). ಒತ್ತೆಬೀಳ್ = ಅಡವುಬೀಳು; ಆಧಾರವಾಗಿ ಸಿಕ್ಕಿಕೊಂಡಿರು: ಅವನ ಹೊಲಗಳೆಲ್ಲ ಒತ್ತೆಬಿದ್ದಿವೆ (ರೂಢಿ). ಒತ್ತೆಯ ಕೊಡು = ಒಬ್ಬಳಲ್ಲಿಗೆ ಬರುವೆನೆಂದು ಮುಂಗಡ ಹಣ ಕೊಟ್ಟು ವ್ಯವಸ್ಥೆ ಮಾಡು: ಕೂಸಿನ ತಾಯಿಗೆ ಹೇಸದೊತ್ತೆಯಕೊಟ್ಟು ಕೂಸತ್ತೆನ್ನಯ ನಲ್ಲ ಬೇಸತ್ತುಹೋದೆ (ಶಿವಗೀ. ೧೬೦-೮೨೬). ಒತ್ತೆಯ ಕೊಳ್ = (ವೇಶ್ಯೆ) ಒಪ್ಪಿಗೆ ಸೂಚಿಸಿ ಹಣ ತೆಗೆದುಕೊಳ್ಳುವುದು: ಕಾಡೊಳಗೊಬ್ಬ ಸೂಳೆ ಕರೆಕರೆದೊತ್ತೆಯಕೊಂಬುದ ಕಂಡೆ (ಅವಚಂ. ೧೨-೪೯). [ದೇ. ‖ ತಮಿ. ಮಲ. ಒಱ್ಱಿ; ತುಳು. ಒತ್ತಿ]

**ಒತ್ತೆ$_2$** (ನಾ). ಒಂದು; ಒಂಟಿ; ಏಕಾಂಗಿ. 'ಒತ್ತೆಸರ' ಪರಾ. [← ತುಳು. ಒತ್ತೆ]

**ಒತ್ತೆಗೊಡು** (ಕ್ರಿ). (ವೇಶ್ಯೆಗೆ) ಒತ್ತೆಯನ್ನು ಕೊಡು: ಮನಸಿಜನ ಕಯ್ಯ ಮಸೆದಸಿಯನನುಕರಿಸುವ ಅನಂಗಸೌಂದರಿಯೆಂಬ ಸೂಳೆಯಂ ಕಂಡು ಕಣ್ಬೇಟಂಗೊಂಡೊತ್ತೆಗೊಟ್ಟು (ಧರ್ಮಾಮೃ. ೨-೧೧೨); ಗಿರಿಜಾವಲ್ಲಭನೊತ್ತೆಗೊಟ್ಟ ಪೆಱೆಯಂ ಸೈತಿಕ್ಕವೇೞ್ (ಸೂಕ್ತಿಸು. ೪-೧೩೩); ಒಪ್ಪುವ ಪಲಿತ ಕಾಯದ ವಿಟರೂಪ ಕಂದರ್ಪನೊರ್ವಳಿಗೊತ್ತೆಗೊಡಲು (ಕಂನವಿ. ೬-೧೬೪). [ಒತ್ತೆ$_1$ + ಕೊಡು]

**ಒತ್ತೆಗೊಳ್, ಒತ್ತೆಗೊಳ್ಳು** (ಕ್ರಿ). ೧. ವಿಟಪುರುಷನಿಂದ ಹಣವನ್ನು ಮುಂಗಡ ಪಡೆ: ನಿಱಿಗಳನಿಕ್ಕಿ ದಾಂಟಿಸದೆ ದುಂಡಿಸುವಾಕೆಯನೊತ್ತೆಗೊಳ್ಳದಂತೆಱಿಯದೆ ತೇಪೆಗುಳ್ಳ ಬಳಿನೀರ್ಗಳನಗ್ಗದ ಪೆಣ್ಗೆ (ಲೀಲಾವ. ೨-೯೩); ಇಂದು ಹುಟ್ಟಿದ ಕೂಸಿಂಗೆ ಇಂದೇ ಜವ್ವನವಾಯಿತ್ತಯ್ಯಾ ಆ ಕೂಸು ಬೀದಿಯಲ್ಲಿ ಒತ್ತೆಗೊಳ್ಳಲು ನಿಂದಿತ್ತಯ್ಯಾ (ಬಸವ. ೫೧೬); ಒಂದೆಡೆಯೊಳಗೊರ್ವ ಮುದಿವಿಟನಬಲೆಯ ಸಂಧಿಸಿಯೊತ್ತೆಗೊಳ್ಳೆನಲು (ಕಂನವಿ. ೨-೧೦೨). ೨. ವಶಪಡಿಸಿಕೊಳ್ಳು; ತನ್ನದನ್ನಾಗಿ ಮಾಡಿಕೊಳ್ಳು: ನಾಗಭೂಷಣ ನಿಮ್ಮ ದಿವ್ಯದೇಹದೊಳೊಂದು ಭಾಗ ದೇಹವನೊತ್ತೆಗೊಂಡ ಶ್ರೀಗೌರಿದೇವಿಯ ಪದಯುಗಳವ ಕಂಡು ಪೋಗಲ್ಕೆ ಬಂದೆವು ಜೀಯ (ಮೋಹತ. ೨೫-೧೨). **ಒತ್ತೆಗೊಳ್ಳು:** ೩. ವಶವಾಗು: ಚಿತ್ತವು ಅನ್ಯದಲ್ಲಿ ಒತ್ತೆಗೊಳ್ಳುವುದು (ಬಾಳಬ. ೪೨). [ಒತ್ತೆ$_1$ + ಕೊಳ್$_1$]

**ಒತ್ತೆಗೊಳ್ಳು** 'ಒತ್ತೆಗೊಳ್' ನೋ.

**ಒತ್ತೆಣ್ಣೆ** (ನಾ). ಒತ್ತುವ ಎಣ್ಣೆ: ನೆತ್ತಂಬು ಭಾವದೊಳು ಒತ್ತೆಣ್ಣೆ[ಣ್ಣೆ] ಉಗುರೆಣ್ಣೆ . . . ಭುಜವೆಂಬು ಭಾವದೊಳು ಒತ್ತೆಣ್ಣೆ[ಣ್ಣೆ] ಉಗುರೆಣ್ಣೆ ನಡದೊಳು ಹರಿದು ಇಳಿದಾಳು (ಲೋಕಗೀ. ೧೨೯). [ಒತ್ತು$_1$ + ಎಣ್ಣೆ]

**ಒತ್ತೆಬಡುಹ** (ನಾ). ಒತ್ತೆಬಿದ್ದಿರುವುದು; ಅಧೀನವಾಗಿರುವುದು; "ಬಂಧಕ, ಆಧಿ" (ನಾಚಿರಾ. ೬). [ಒತ್ತೆ$_1$ + ಪಡು$_1$ + -ಹ$_2$]

**ಒತ್ತೆಬಿಡಿಸು** 'ಒತ್ತೆವಿಡಿಸು' ನೋ.

**ಒತ್ತೆಮಣ್** (ನಾ). ಒತ್ತೆಯಿಟ್ಟ ಹೊಲ, —ಗದ್ದೆ, —ತೋಟ: ಅರಸಣ್ಣಂ ಆಯ್ದೊನ್ದಿ ಒತ್ತೆಮಣ್ವೆತ್ತು ಪಾದಂ ತೆತ್ತುನ್ಮೊರ ಬಿಟ್ಟಂ (ಎಕ. IV, ತಿರುಮ. ೨೫೩-೬; 800). [ಒತ್ತೆ$_1$ + ಮಣ್]

**ಒತ್ತೆಯಾಳು** (ನಾ). ಆಧಾರವಾಗಿಟ್ಟ ಆಳು: ಕಾನಿಷ್ಕನಿಗೆ ಹೆದರಿ ಇವನ ಆಸ್ಥಾನಕ್ಕೆ ತನ್ನ ಮಗನನ್ನು ಒತ್ತೆಯಾಳನ್ನಾಗಿ ಕಳುಹಿಸಿದನು (ಪ್ರವಾಇ. I, ೨೧೬). [ಒತ್ತೆ$_1$ + ಆಳು$_3$ (< ಆಳ್$_3$)]

**ಒತ್ತೆಯಿಡು** (ಕ್ರಿ). ಅಡವಾಗಿಡು; ಗಿರವಿ ಹಾಕು; ಆಧಾರವಾಗಿಡು; ನ್ಯಾಸವಾಗಿಡು: ಸಮಂತಾವಗಂ ತಲೆಯಂ ಮೂಗುಮನೊತ್ತೆಯಿಟ್ಟು ನೆರೆವಂತುಂತೇನವರ್ ಗಾಂಪರೇ (ಪಂಪಭಾ. ೪-೮೪); ಅಕ್ಷಲೀಲಾ ವ್ಯಸನಕೋಸುಗ ವೊತ್ತೆಯಿಟ್ಟರು (ಕುವ್ಯಾಅ. ೧೮-೧೧); ನನ್ನ ಮತ್ತು ತಾಯಿಯ ಆಭರಣಗಳನ್ನು ಬ್ಯಾಂಕಿನಲ್ಲಿ ಒತ್ತೆಯಿಟ್ಟು ಎರಡುಸಾವಿರಗಳ ಗಂಟನ್ನು ಅವನ ಕೈಗಿತ್ತು (ಮುಸಕೂ. ೬೬). [ಒತ್ತೆ$_1$ + ಇಡು$_1$]

**ಒತ್ತೆಯೀ** (ಕ್ರಿ). = ಒತ್ತೆಗೊಡು: ವಿಮಲಾಂಗಿಯುನ್ನತದ ರೂಪನೀಕ್ಷಿಸಿ ಮೊಗಸಿ ಜನನಿಯೆಂಬುದನಱಿಯದೊತ್ತೆಯಿತ್ತು (ಪಾಸೋಪು. ೧೦-೫೦). [ಒತ್ತೆ$_1$ + ಈ$_2$]

**ಒತ್ತೆರ** (ನಾ). ಒಂದುವಿಧ, —ರೀತಿ: ಅನುಜರಂ ಭೇದಮಣಮಿಲ್ಲದೊತ್ತೆರದ ಭಾವನೆಯಿಂ ತ್ರಿವರ್ಗಮಂ ಕಾಂಬಂತೆ ಕಾಣುತ್ತ (ಶೇಷರಾ. ೫-೨). [ಒರ್ (< ಒಂದು$_3$) + ತೆರ$_1$ (< ತೆಱ$_1$)]

**ಒತ್ತೆವಿಡಿ, ಒತ್ತೆಹಿಡಿ** (ಕ್ರಿ). ೧. ಜೂಜಿನಲ್ಲಿ ಇಡುವ ಪಣವನ್ನು ಒಪ್ಪು: ಅಂತಲ್ತು ನಿನ್ನ ನನ್ನಿಯೊಳಂ ವರ್ಷಾವಧಿಯೊಳಲ್ಲದೆ ನೆಲನನೊತ್ತೆವಿಡಿಯೆನೆಂದೊಡೆ (ಪಂಪಭಾ. ೬-೩ ವ). **ಒತ್ತೆಹಿಡಿ:** ೨. ನ್ಯಾಸವನ್ನು ಸ್ವೀಕರಿಸು, —ಒಪ್ಪಿಕೊಳ್ಳು (೬). [ಒತ್ತೆ$_1$ + ಪಿಡಿ$_1$]

**ಒತ್ತೆವಿಡಿಸು, ಒತ್ತೆಬಿಡಿಸು** (ಕ್ರಿ). ಒತ್ತೆಯಿಂದ ಬಿಡಿಸು; ಗಿರವಿಯಿಂದ ಬಿಡುಗಡೆ ಮಾಡು: ಸುಣ್ಣದೆಲೆಯನೊತ್ತೆಯಿಟ್ಟು ಮದದಾನೆಯುಮಂ ಮಾಣಿಕಮುಮನೊತ್ತೆವಿಡಿಸಲಟ್ಟುವ ಚಿಕ್ಕಪೋರ್ಕುಳಿ ಬೊಜಂಗರುಮಂ (ಪಂಪಭಾ. ೪-೮೬ ವ). **ಒತ್ತೆಬಿಡಿಸು:** (೬). [ಒತ್ತೆ$_1$ + ಬಿಡಿಸು]

**ಒತ್ತೆವೆಣ್** (ನಾ). ಒತ್ತೆ ಪಡೆಯುವವಳು; ಸೂಳೆ; ವೇಶ್ಯೆ; ಬೆಲೆವೆಣ್ಣು: ಶ್ರುತಿಯಖಿಳ ಶಾಸ್ತ್ರಾರ್ಥವತಿಬೆಳುಕನಾಗಿ ಸಂತತವೊತ್ತೆವೆಣ್ಗಳಂತಿರ್ಪವೆಂದು (ಸಾನಂಚ. ೩-೪); ಮೊತ್ತವ ಸೊಬಗಿಂದ ಸೋಲಿಸಿ ವಶಮಾಳ್ಪವೊತ್ತೆವೆಂಗಳ ತಂಡವಿಹವು (ಗೋಮಟೇ. ೧-೯೫). [ಒತ್ತೆ$_1$ + ಪೆಣ್]

**ಒತ್ತೆವೋಗು** (ಕ್ರಿ). ಒತ್ತೆಯಾಗಿ ಹೋಗು; ವಶವಾಗು; ಅಧೀನವಾಗು: ದಾಯಿಗಂಗೆ ನೆಲಂ ಜೂದಿನೊಳೊತ್ತೆವೋಗೆ ಬನಮಂ ಪೊಕ್ಕಣ್ಣಂ (ಪಂಪಭಾ. ೮-೫); ಮಾಱುವೋಗನೊತ್ತೆವೋಗ ನಮ್ಮ ಕೂಡಲಸಂಗಮದೇವ (ಬಸವ. ೫೫೯). [ಒತ್ತೆ$_1$ + ಪೋಗು$_1$]

**ಒತ್ತೆಸರ** (ನಾ). ಒಂದೆಳೆಯ ಸರ (?): ಕಾಂತಾಜನಂ . . . ಮುತ್ತಿನೊತ್ತೆಸರದ ತೊಡವಿನುಳ್ಳಲರ್ದ ಬೈಗು ಮಲ್ಲಿಗೆಯ ಚೊಲ್ಲೆಯದ ತುಱುಬಿಂ (ರಾಮಾಶ್ವ. ೫೨-೯). [ಒತ್ತೆ$_2$ + ಸರ$_6$]

**ಒತ್ತೆಸೂಳೆ** (ನಾ). = ಒತ್ತೆವೆಣ್: ಮತ್ತೆ ಕೇಳ್ ಮನೆವೆಂಡಿತಿಯೊ ನಾನೊತ್ತೆಸೂಳೆಯೊ ನಿನಗೆ ಸೋದರದತ್ತಿಗೆಯೊ ನಾದುನಿಯೊ ತೊತ್ತಿನ ಮಗಳೊ ನಿನ್ನವರ (ಬಸವು. ೪೦-೪೬). [ಒತ್ತೆ$_1$ + ಸೂಳೆ]

**ಒತ್ತೆಹಿಡಿ** 'ಒತ್ತೆವಿಡಿ' ನೋ.

**ಒತ್ತೇರು** (ಕ್ರಿ). ಹೆಚ್ಚಾಗು ; ಅಧಿಕವಾಗು ; ದಟ್ಟವಾಗು: ಆಕೆಯ ಶೋಕವೆಲ್ಲವಡಗಿತು ಸಮಾಧಾನವೊತ್ತೇರಿದುದು (ಮಲ್ಲಚ. ೧೪-೩೧).
[ಒತ್ತು$_1$ + ಏರು$_1$ (< ಏಱು$_1$)]

**ಒತ್ತೈಸು** (ಕ್ರಿ). ಒತ್ತಾಗು ; ರಾಶಿಯಾಗು : ಸುಖದೊಳೈತಂದರೊತ್ತೈಸಿದಗಣಿತವಸ್ತುಸಹಿತಖಿಳನೃಪರೊಡನೆ ಬಹಳ ವಿಭವದೊಳು (ಜೈಮಿಭಾ. ೩೩-೧೨). [ಒತ್ತು$_2$ + -ಇಸು$_3$]

**ಒತ್ತೊರಳು** (ನಾ). ಒತ್ತುವ ಒರಳು ; ಚಕ್ಕುಲಿ ಅಥವಾ ಶಾವಿಗೆ ಒರಳು (೯). [ಒತ್ತು$_1$ + ಒರಳು$_2$ (< ಒರಲ್$_1$)]

**ಒತ್ತೊಸಗೆ** (ನಾ). ಒಡಗೂಡಿದ ಸಂತೋಷ ; ಹೆಚ್ಚಿನ ಸಂತೋಷ; ಆ ಒಸಗೆಗೆ ಒತ್ತೊಸಗೆಯಾಗಿ ವಸಂತಮಾಸವೂ ಪ್ರಾಪ್ತವಾಯಿತು (ನಾಡೋಜ. ೨೯೯). [ಒತ್ತು$_2$ + ಒಸಗೆ]

**ಒತ್ತೋಳು** (ನಾ). ಒಂದು ತೋಳು ; ಒಂದು ತೋಳಿನಷ್ಟು ಅಳತೆ : ಮೊದಲೇರಿಯ ಗದೆ ನಾಲ್ಕುಮಾರು ಒತ್ತೋಳ ಗಳೆಯಲು ಕಂಬ ೬೦ (ಎಕ. VII, ಚನ್ನಗಿ. ೬೪-೫೪ ; 1214) ; ಆಯ್ದು ಮಾರುಂ ಒತ್ತೋಳು ಬೆದ್ದಲಿ ಗಳೆಯೋಳು ಮಾರುಂ ಒತ್ತೋಳು ಮನೆ (ಎಕ. XV, ಅರಸೀ. ೨೧೬-೬೯ ; 1232) ; ಒಳತೋಟಗೊತ್ತೋಳ[ಪಾ ಠಾಂ. ತ್ತಾಳ]ಹುದು ನಾಲಗೆಯಾಗಳೇನಾಯ್ತು (ಕುವ್ಯಾವಿ. ೮-೨೯); ಒತ್ತೋಳನುತ್ತರಿಸಲೊತ್ತೋಳ ಸತ್ತ್ವದಿಂ ಮತ್ತಾತನುರವಣಿಸಿ . . . ಒತ್ತಿಗೈತರೆ (ಜೈ ಮಿ ಭಾ. ೧೪-೧೫). [ಒರ್ (< ಒಂದು$_3$) + ತೋಳು (< ತೋಳ್)]

**ಒತ್ವ** (ನಾ). [ವ್ಯಾಕ] 'ಒ' ಎಂಬ ಅಕ್ಷರ: ಪದಮಧ್ಯವತ್ವಯತ್ವಕ್ಕೊದವುಗುಮಾತ್ವೈತ್ವವಿಧಿಯದಂತಕ್ಕೌತ್ವಂ . . . ಒತ್ವಕ್ಕೆ - ಆವಂ, ಆವೊಂ (ಶಮುದ. ೧೫೬, ಪ್ರಯೋ.). [ಸಂ.]

**ಒದಗಣೆ** (ನಾ). ೧. ದೊರಕುವಿಕೆ ; ಸಿಗುವಿಕೆ ; ಲಭಿಸುವಿಕೆ : ಆ ದೇಶದ ಮನೋಭೂಮಿಯಲ್ಲಿಯೂ ರಸದ ಒದಗಣೆ ಇಂದು ಕೊನೆಗಾಣುತ್ತ ಬಂದಿದೆ (ನಿಬಂಧ. I, ೩೨೧). ೨. ಒದಗುವಿಕೆ ; ಒದಗಾಗಿರುವಿಕೆ : ಈ ಅಕ್ಕಿ ಹಳೆಯದು ; ಅನ್ನದ ಒದಗಣೆ ಚೆನ್ನಾಗಿದೆ (ರೂಢಿ).
[ಒದಗು$_1$ + -ಅಣೆ$_4$]

**ಒದಗಿ** 'ಒದವಿ' ನೋ.

**ಒದಗಿಸು** (ಕ್ರಿ). ೧. ಒದಗುವಂತೆ ಮಾಡು; ಉಂಟುಮಾಡು; ದೊರಕಿಸಿಕೊಡು ; ಸಿದ್ಧಪಡಿಸು : ತೂಕದುರುಗುಗ್ಗುಳಮಂ ಕಡಿಕಡಿದು ಕಂಬಿಯೊಳ್ ಪಿಡಿಪಿಡಿದೊದಗಿಸಿ ಪೊತ್ತು ತಂದನೋಹಿಲದೇವಂ (ಉದ್ಭಟ. ೧೧-೬೩); ರುದ್ರಪಶುಪತಿ ಒದಗಿಸುವನೀ ಕಥೆಯನೋದುವಂಗಭೀಷ್ಟವನು (ಬಸವು. ೧೩-೧೮); ಏಳುಲಕ್ಷವನೊದಗಿಸಿದನಂತಕನ ಪುರಿಗವನೀಶ (ಕುವ್ಯಾದ್ರೋ. ೧೮-೫೦); ಮತಿಯುಳ್ಳೊಡಿವನಸುರಬಲಿಗೊದಗಿಸಿದ ಕೂಳನತಿಮಹೋದರಕಡಸಿಕೊಂಬನೇ (ಜೈಮಿಭಾ. ೨-೫೮); ಕೊಬ್ಬು ಮತ್ತು ತೈಲಗಳು :—ಇವು ಮುಖ್ಯವಾಗಿ ದೇಹಕ್ಕೆ ಕಾವನ್ನು ಒದಗಿಸುತ್ತವೆ (ಅಡುಸಾ. ೫೮). ೨. ಲೇಪಿಸು ; ಬಳಿ: "ನಿದಿಗ್ಧ, ಉಪಚಿತ - ಒದಗಿಸಲ್ಪಟ್ಟುದು" (ನಾಚಿರಾ. ೯).
[ಒದಗು$_1$ + -ಇಸು$_3$]

**ಒದಗು$_1$** (ಕ್ರಿ). ೧. ಉಂಟಾಗು ; ದೊರಕು; ಲಭಿಸು; ಪ್ರಾಪ್ತವಾಗು : ಲಿಂಗಾಣತಿಯಿಂದ ಬಂದೊದಗಿದ ಪರಿಣಾಮೋದಕ (ಮಹಾದೇ. ೨೯-೬) ; ಸುದತಿ ನೀನೆನ್ನಾಜ್ಞೆಯೊಳು ಪದ ತಪ್ಪದಿರ್ದ ಕಾರಣ ನಿನ್ನ ಸೇವೆಗಾನೊದಗಿದೆ ಕೇಳಾಯತಾಕ್ಷಿ (ಮೋಹತ. ೨೬-೩೬) ; ಬದುಕಿಗೆ ಅತ್ಯಗತ್ಯವಾದ ಎಲ್ಲ ವಸ್ತುಗಳೂ ಕಳಸಾಪುರದಲ್ಲೇ ಒದಗುತ್ತಿದ್ದವು (ಕಳಹು. ೯೩). ೨. ನೆರವಾಗು ; ಅನುಕೂಲವಾಗು : ಬಡತನದೊಳೊದಗಿದವ ಹಗೆಯಾದಡೆಯು ನಂಟನು (ಕುವ್ಯಾಉ. ೩-೬೩) ; ಹೊತ್ತಿಗೊದಗಿದ ಮಾತು ಸತ್ತವನು ಎದ್ದಂತೆ (ಸರ್ವಜ್ಞ. ೧೩೫೧). ೩. ಅಟ್ಟಿಸಿಕೊಂಡು ಹೋಗು ; ಬೆನ್ನಟ್ಟು ; ತರುಬು : ಬಿಡಿಸೆ ನಾಯ್ಗಳನಾಗಳವು ಮುಂಗುಡಿಯೊಳೊಟ್ಟದುವೊದಗಿದವು ಮಿಗೆ ತುಡುಕಿದವು ಮುಸಕಿದವು ಕಂಗೆಡಿಸಿದವು ಪೆರ್ಬುಲಿಯ (ಸಾಳ್ವಭಾ. ೫-೩೩) ; ಓಡುವವನೂ ಬತ್ತಲೆ ಒದಗಿಕೊಂಡು ಹೋಗುವವನೂ ಬತ್ತಲೆ (ಗಾದೆ). ೪. ಪಕ್ಕಕ್ಕೆ ಸರಿ; ಆರುಗಾಗು : ಬೆದಱಿ ಶಬರಿಯರಪ್ಪಿದರು ಬಿಯದರನರೆಬರುಂ ಮರನನೇಱಿದರೊದಗಿದರು ಹಿಂದಕ್ಕೆ ಕೆಲರು (ಸಾಳ್ವಭಾ. ೫-೩೨); ಒದಗಿ ನಿಲ್ಲು (ರೂಢಿ). ೫. ಸಾಕಾಗು : ನಕುಲನ ಹೊಱಿಗೆಯೊದಗದು ಸೈರಿಸದು ಸಹದೇವನಾಟೋಪ ಇಱಿವಡಾ ಮಾದ್ರೇಶನನು (ಕುವ್ಯಾಶ. ೧-೩೧) ; ಅನ್ನ ಒದಗುವುದಿಲ್ಲ (ರೂಢಿ). ೬. ಸೇರು ; ಬಳಿಗೆಬರು ; ಉಪಸ್ಥಿತವಾಗು : ಕೆಣಕಿ ಗೋವುಗಳೊದಗೆ ಬೆನ್ನೊಳತಿಕೋಪದಿಂ ಪರಿದೆಡಪಿ ಕೆಡೆದುಡಿದ ಪುಸ್ತಕ ಕಳಾಪದಿಂ (ಕಾದಂಉ. ೨೬೧) ; ನಿಡುದೆಱೆಯ ಧವಳಛತ್ರಚಮರದೊಳೊದಗಿತತಿರಥರು (ಕುವ್ಯಾಕ. ೩-೧೩) ; ಕಣ್ಣಿಗೆವೆಯಂದದಲಿ ಕೈ ಮೈ ತಿಣ್ಣಗೊದಗುವ ತೆಱದಿ . . . ಲಕ್ಷ್ಮಣನಣ್ಣನೊದಗುವ ಛತ್ರರವಸರಕಮರಗಣಸಹಿತ (ಹಸಾರ. ೨-೨೬). ೭. ಮುಂದಾಗು ; ಮುಂದುವರಿ : ಕಡುಗಲಿ ಸೆಣಸುವ ಭಟರಾರ್ ಒಡೆಯಂಗತಿಹಿತವರಾರ್ ಧುರಕ್ಕೊದಗುವರಾರ್ (ಶಮುದ. ೧೪೫ ಪ್ರಯೋ.) ; ಸವಗ ಖಂಡಿಸಲೊದಗಿದರು ಬಿಲ್ಲವರು ಕಟ್ಟೆಱಿಕಾಱರಾತನ ಜವಗೆಡಿಸಿದರು (ಕುವ್ಯಾಕ. ೧೨-೨೨) ; ಕುದುರೆಗಳೊಂದು ಸಾಸಿರ ಮತ್ತದಂತಿಗಳೊದಗೆ ಮೂವತ್ತಱೊಗ್ಗಿನಲಿ (ಕಂನವಿ. ೩-೨೫). ೮. ವಶವಾಗು ; ಸಾಧ್ಯವಾಗು ; ಬಗ್ಗು : ಈ ಮಹಾಧನು ಮೈಗೊಡುವುದಾ ವ್ಯೋಮಕೇಶಂಗಲ್ಲದಿರೆ ಲಕ್ಷ್ಮೀಮುಖಾಂಬುಜತರಣಿಗೊಲಿವುದು ಮಿಕ್ಕ ನಿರ್ಜರರ ಕೈಮೆಗೊದಗುವುದಲ್ಲ (ತೊರರಾ. ೧-೧೩-೧೬).

ಒದಗಿದವ = ನೆರವಾದವನು ; ಸಹಾಯ ಮಾಡಿದವನು : ಸಮಯಕ್ಕೆ ಆದವ ನಂಟ ಕೆಲಸಕ್ಕೆ ಒದಗಿದವ ಬಂಟ (ಗಾದೆ). ಒದಗಿಬರು = ಉಂಟಾಗು ; ಪ್ರಾಪ್ತವಾಗು : ಅವರಿಗೆ ಮರಣ ಕಾಲವು ಒದಗಿಬಂದಿಲ್ಲ ಎಂದು ಅಶರೀರವಾಣಿಯಾಯಿತು (ವಚಭಾ. ೮೪).

[ದೇ. ‖ ತಮಿ. ಉದವು; ಮಲ. ಉದಗು; ತುಳು. ಒದಗು; ತೆಲು. ಒದವು]

**ಒದಗು$_2$** (ನಾ). ೧. ದೊರೆತುದು ; ಕೈವಶವಾದುದು ; ಪ್ರಾಪ್ತಿ ; ಲಭ್ಯ : ಮನಘನದೊದಗ ಕಂಡೆಯಾ ಸಂಗನಬಸವಣ್ಣ (ಅವಚಂ. ೨೬೦-೧೨೪೧). ೨. ರಕ್ಷೆ ; ಸಹಾಯ ; ನೆರವು : ಕಲಿದೇವರದೇವನ ಒದಗು ಕಾಣಾ ಚಂದಯ್ಯ (ಶೂನ್ಯಸಂ. ೨೫೨-೧೧). ೩. ಸಾಮರ್ಥ್ಯ ; ಪರಾಕ್ರಮ : ತಮ್ಮೊದಗಿಗೆ ಲಂಘನಕ್ಕೆ ಬಿನ್ನಾಣಕ್ಕೆ ತಮ್ಮೊಳು ತಾವುಬ್ಬಿ ನಗುತ (ಭರಚ. ೬೩-೬೦). ೪. ಉತ್ಸಾಹ ; ಹುರುಪು : ಜಲಚರನಿಚಯವನೊಯ್ದಂಗಡಿಯೊಳಗೆ ಮಾಱಿ ಅದಱ ಲಬ್ಧಿಯೊಳಾದೊದಗಿನಿಂ ಪೆಂಪುಳದಿಂ ಜಂಗಮಕುಲಕೆ ಮಾಣದೆ ದಿನಂಪ್ರತಿ ಮಾಡುತಿಂತುಂ ಕಿಱುದಿನವು ಸವೆಯೆ (ಬಸವು. ೨೬-೨೧) ; ಒದಗಿಂದ ರಾಮಕಾರ್ಯಾರ್ಥ ಕೈದುವ ಕಪಿಯ ಮುದದೊಳೀಕ್ಷಿಸಿ (ವೆಂಕಾರಾ. ೫-೧-೨೯).

೫. ದೋಸೆ, ಕಡುಬು ಮೊದಲಾದುವುಗಳು ಮೆದುವಾಗಿ ರುಚಿಯಾಗಿರಲು ಅಕ್ಕಿಯೊಡನೆ ಸೇರಿಸುವ ಉದ್ದು, ಮೆಂತ್ಯ ಮೊದಲಾದುವು. ೬. ಹದ; ಹವಣು: ಉದಯದೊಳು ಸೆಕೆಯಳಗೆಯಲ್ಲಿ ಪಾವಡೆಗಟ್ಟಿಯುದಱೊಳಗೆ ಸುಳಿವಾಳೆಯಂ ಹರಹಿ ಸಂಪಳೆಯನೊದಗಾಗಿ ಯೆಱೆದು ಮಡಕೆಯ ಮುಚ್ಚಿಯಟ್ಟೊಡುದ್ದಿನಕಡುಬುವೆಸರ ಹಡೆದುದು (ಸೂಪಶಾ. ೧–೬೨). ೭. ಗಳಿಸಿಕೊಂಡ ಅನುಭವ, —ತಿಳಿವಳಿಕೆ; ಪಾಂಡಿತ್ಯ: ಜನ್ನನೊದಗು ಗುಣವರ್ಣನ ಚಾತುರ್ಯ ರನ್ನನ ಗುಣ ಪೊನ್ನನಿಂಪು ಎನ್ನಯ ಮತಿದರ್ಪಣವನು ಪ್ರಸನ್ನವೃತ್ತಿಯನೆಯ್ದಿಸುಗೆ (ನಾಗಕು. ೧–೨೬). ೮. ವೇಗ; ರಭಸ; ತೀವ್ರತೆ: ಹಿಡಿವ ಕಡಿವ ಕೈಯ್ಯೊದಗಿನಿಂ ಹತ್ತುಕೋಟಿ ಶರಾಸನಂ ತೀರಲ್ (ಚಿಬಪು. ೪೦–೧೪); ಪದುಳದಿಂ ಮಗ್ಗವನೊದಗಿಂದಲನುಮಾಡಿ ಕದಲು ನಿನ್ನೂರಿಗೆಂದೆನಲು (ಅಮುಸಾಂ. ೬–೪). ೯. ಗುಂಪು; ನೆರವಿ; ಸಮೂಹ: ತಾಪಸವಧುಗಳು ಮನನೊಂದು ಮರುಗಿ ಬೈವುತ ವಿಧಿಯಂ ಒದಗಿಲಿ ಕೈಕಸೆ ಬಳಿಗೈದಿದು ಮರುಗುತ ಪೇಳ್ದರಾಗ ನಿಜ ಕಾತುರವಂ (ರಾವಣೋ. ೧೭). ೧೦. ಅಚ್ಚುಕಟ್ಟು; ಹಸನು: ಫಲುಗುಣಂ ಮುದದಿ ಪೊಂಗಳಶ ಜಲವಂ ತರಿಸಿ ಮೈಕೈಗೆ ಲೇಪಿಸಿದ ಶೋಣಿತವನು ಒದಗಿನಿಂ ತೊಳೆದೊರಸಿ (ತುರಂಗ. ೬೮–೧೭). ೧೧. ಸನ್ನಾಹ; ಕಾರ್ಯಸಿದ್ಧತೆ (?): ಒದಗಿಲಿ ನಿಜಾಮುಶಾಹಂಗಿದಿರಾಗುವುದೆಂದು ಮತ್ತೆ ರಾಯರ್ಮುದದಿಂ ಇದೆವುದುಗೊರೆಯೆನುತಿತ್ತರ್ ಕದನಕೆ ಕಲಿಭೀಮ ಘಂಟಿನೃಪವರಗಾಗಳ್ (ಬೀಳವಂ. ೧–೬೬). ೧೨. ಹೆಚ್ಚಾಗುವಿಕೆ; ವೃದ್ಧಿ: "ವಹಿ, ಮಹಿ – ವೃದ್ಧೌ, ಒದಗಿನೊಳ್" (ಕಾಶಕ್ಯ. ೧೨೨); ಹಳೆಯ ಅಕ್ಕಿಯ ಅನ್ನ ಒದಗಾಗುತ್ತದೆ (ರೂಢಿ); ಸೊಪ್ಪಿನ ಪಲ್ಯ ಒದಗಾಗುವುದಿಲ್ಲ (ರೂಢಿ). 'ಒದವು$_1$' ಪರಾ.

ಒದಗಿನಪುಡಿ = "ರೊಟ್ಟಿ ಉಬ್ಬುವುದಕ್ಕಾಗಿ ಉಪಯೋಗಿಸುವ ಪುಡಿ: ಒದಗಿನ ಪುಡಿ" (Baking-powder. ಇಂಕನಿ).

[ದೇ. ‖ ತಮಿ. ಉದವಿ. ಮಲ. ಉದಕ್ಕ, ಉದವಿ]

**ಒದಗುನಾಳೆ** (ನಾ). "ಸರಬರಾಯಿನಾಳ; ಒದಗುನಾಳ; ಊಡುನಾಳ" (Feed-pipe. ಇಂಕನಿ). [ಒದಗು$_1$ + ನಾಳ]

**ಒದಗೆ** (ನಾ). ಪ್ರಣಾಳಿ; ಕೊಳವೆ: ಅತ್ತಿಂದಿತ್ತ ಇತ್ತಿಂದತ್ತ ಹೃದಯದಿಂದ ಹೃದಯಕ್ಕೆ ಹರಿಯುವ ಬೇಟದ ಒದಗೆಗಳಾಗಿದ್ದುವು ಆ ನೋಟಗಳು! (ಮಲೆಮ. ೧೯೩). [ಒದಗು$_1$ + –ಎ$_4$]

**ಒದಡು** 'ಒಸಡು' ನೋ.

**ಒದರಾಟ$_1$** (ನಾ). ಅಲುಗಾಟ; ನಡುಗುವಿಕೆ: ಸಾಯುವಾಗ ಒದರಾಟ ಹೆಚ್ಚು (ರೂಢಿ). [ಒದರು$_1$ (< ಒದಱು$_1$) + ಆಟ]

**ಒದರಾಟ$_2$** (ನಾ). (ಉಕ) ಕೂಗಾಟ; ಕಿರುಚಾಟ: ಗೂಳಿಯ ಒದರಾಟವನ್ನು ಕೇಳಿ ಗಾಬರಿಯಾದನು (ಬಂಗಾಹೆ. ೪೧); ನಿತ್ಯದ ಒದರಾಟ (ವಾತ್ಸಲ್ಯ. ೩೬೫). [ಒದರು$_2$ (< ಒದಱು$_2$) + ಆಟ]

**ಒದರಾಡು$_1$** (ಕ್ರಿ). ೧. ಚಡಪಡಿಸು; ಒದ್ದಾಡು; ಸುಸ್ತಾಗಿ ಕೈಕಾಲು ಅಲುಗಿಸು: ಹತ್ತುಜನ ಹಿಡಿದರೂ ಜಗ್ಗದ ಗಂಗಣ್ಣ ಒದರಾಡುತ್ತಾನೆ. ಕೊನೆಗೆ ಅವನ ಶಕ್ತಿಯೆಲ್ಲಾ ಕುಗ್ಗಿ ಸುಸ್ತಾಗುತ್ತಾನೆ (ನನ್ನೂರು. ೬೫). ೨. ನಡುಗು: ಪಾಪ! ನಾಯಿ ಚಳಿಯಿಂದ ಒದರಾಡುತ್ತಿದೆ (ರೂಢಿ). [ಒದರು$_1$ (< ಒದಱು$_1$) + ಆಡು$_1$]

**ಒದರಾಡು$_2$** (ಕ್ರಿ). (ಉಕ) ಕೂಗಾಡು; ಕಿರುಚಾಡು: ಎರಡನೆಯವರ ಮನೆಯಲ್ಲಿ ಒದರಾಡುವುದು ಒಳ್ಳೆಯದಲ್ಲವೆಂದು ಬಾಯಿ ಬಿಗಿಹಿಡಿದುಕೊಂಡು ಸುಮ್ಮನಿದ್ದೆ (ಚೆಂದುಟಿ. ೮೨). [ಒದರು$_2$ (< ಒದಱು$_2$) + ಆಡು$_1$]

**ಒದರು$_1$** 'ಒದಱು$_1$' ನೋ.

**ಒದರು$_2$** 'ಒದಱು$_2$' ನೋ.

**ಒದರು$_3$** (ನಾ). ತುಟಿ; ಓಷ್ಠ (ಕ). [?. / ತಮಿ. ಉದಡು]

**ಒದರುತಲೆ** 'ಒದರುದಲೆ' ನೋ.

**ಒದರುದಲೆ,** ಒದರುತಲೆ (ನಾ). ಅಲುಗಾಡುವ ತಲೆ: ಒದರುದಲೆಯ ಆ ಮುದುಕ ಊಟಮಾಡಲು ಎಷ್ಟು ಕಷ್ಟಪಡುತ್ತಿದ್ದಾನೆ (ರೂಢಿ).

**ಒದರುತಲೆ:** (ಕ). [ಒದರು$_1$ (< ಒದಱು$_1$) + ತಲೆ$_1$]

**ಒದರುಬಡಕ** (ನಾ). ಕೂಗಾಡಿಕೊಂಡು ಬಹಳ ಮಾತಾಡುವವನು; ಬಹಳ ಕೂಗಾಡುವವನು: ಸಾಹೇಬರು ಒದರ[ರು]ಬಡಕರಾದರೂ ಸಹೃದಯರು (ಸ್ಮೃತಿಚಿ. ೩೪೨). 'ಬಾಯ್ಬಡಿಕ' ಪರಾ. [ಒದರು$_2$ (< ಒದಱು$_2$) + –ಬಡಕ (< –ಬಡಿಕ)]

**ಒದರುವಿಕೆ** (ನಾ). ಅರಚುವಿಕೆ; ಬೊಬ್ಬೆ: "ಬಗುಳ್ತೆ, ಬಗುಳಿಕೆ = ಒದರುವಿಕೆ" (ಗಂಗಾಮ. ೨೨೭). [ಒದರು$_2$ (< ಒದಱು$_2$) + –ಇಕೆ]

**ಒದವಳೆ** (ನಾ). ಕೂಡುವಿಕೆ; ಸೇರುವಿಕೆ; ಹೆಚ್ಚಳ: ಅಂತು ಸಮಸ್ತ ಗುಣಂಗಳುಮೊದವಳೆಯಿಂ ಬಳೆವುದು ಮನ್ವಯಾಗತ ಪ್ರಧಾನ ಸಂತತಿಯುಂ ತನಗೆ (ಎಕ. V, ಬೇಲೂರು. ೧೭–೬೬; 1136). [ಒದವು$_1$ + –ವಳೆ (< –ವಳಿ)]

**ಒದವಿ, ಒದಗಿ** (ನಾ). ಕೊಡುಗೆ; ದಾನ: ಪದುಳದಿಂ ಸಾಯುಜ್ಯ ಪದವಿಯನೊದವಿ [ಪಾಠಾಂ. ೧] ಪಡೆದನು ನಿಮಿಷದಲಿ (ಬಸವು. ೫೩–೫೪).

**ಒದಗಿ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[< ಒದವು$_1$. / ತಮಿ. ಮಲ. ಉದವಿ]

**ಒದವಿನ** (ನಾ). ಒಂದು ಗಿಡ: ವಡುವಾರದ ಗಿಡ, ಎಡತರಿ, ವಾಡುವರಡು, ಒದವಿನ, ಒಡತರೆ (ಮೈಔಗಿ. ೩೦–೫೮೧). [?]

**ಒದವಿಸು,** ಒದಹಿಸು (ಕ್ರಿ). ೧. ಸೇರಿಸು; ಕೂಡಿಸು; ಹೊಂದಿಸು: ಮೊದಲೊಳ್ ಸಮಾಸಪದಮುಮನೊದವಿಸಿ ಪೇೞ್ದದಱ ತುದಿಯೊಳ ಸಮಾಸಪದಾಸ್ಪದಮಾಗಿ ನಿಱಿಸೆ ಕರ್ವಿನ ತುದಿಯಂತಿರೆ ವಿರಸಮಕ್ಕುಂ (ಕವಿರಾ. ೨–೮೮). ೨. ಉಂಟುಮಾಡು; ದೊರಕಿಸು; ಪೂರೈಸು: ಭೋಗಂಗಳ್ ಸಲೆ ಮನದೊಳ್ ರಾಗಮನೊದವಿಸುಗುಂ (ಆದಿಪು. ೩–೩೦); ಭಯಮಂ ಚಿತ್ತಕ್ಕೊದವಿಸಿ ಬಲಗಣ್ ಕೆತ್ತಲ್ ಮೊದಲಿಕ್ಕಿತು (ಕಾದಂಪೂ. ೮೬೮); ನಂದನನಾನಂದಮನೇನೊದವಿಸಿದನೊ (ಇಆ. XXVIII, ೫–೬; 1083); ಅನ್ನಪಾನಾದಿಗಳನೊದವಿಸುವುದು (ಚಿಬಪು. ೫೮–೨೫); ತಾಂ ಮೃಗದ ಕೊಲೆಗೆ ಹರಿತಂದ ಪಾಪಮತಿ ಪುಣ್ಯಮೊದವಿಸಿತು (ಜೈಮಿಭಾ. ೨೮–೫೪); ಭಾರತೀಯ ಸಂಸ್ಕೃತಿಗೆ ಕನ್ನಡ ಸಂಸ್ಕೃತಿ ತನ್ನ ಉತ್ತಮಿಕೆಯನ್ನು ಒದವಿಸಿಕೊಟ್ಟಿದೆ (ತವನಿ. ೯). ೩. (ಹುಟ್ಟುವಂತೆ) ಮಾಡು; ನಡೆಸು: ಶುಭಕರ್ಮಮನೊದವಿಸುತಿರೆ ಶುಭಮಕ್ಕುಂ (ಸಮುಪ. ೪–೯); ತಾನಿಂದುವರೆಗಮೊದವಿಸಿದೇನಂಗಳ್ಗಳ್ಕಿ (ಯಶೋಚ. ೪–೭೭); ಉದಯದೊಳು ಗುರುಲಿಂಗ ಸದಮಳ ಪೂಜೆಗಳನೊದವಿಸಿ (ಸಾನಂಚ. ೧–೯೩); ಬದರಿಯ ಬನದೊಳು ಮುನಿಗಳು ಪೂಜೆಯನೊದವಿಸಲಾಂತವರೊಡನೆ (ಕರ್ಣಾಕ. ೨೧೮). ೪. ಅಣಿಮಾಡು; ಸಿದ್ಧಪಡಿಸು: ಸಾಂಗದಿಂದೊದವಿಸಿದ ಬಹುಪಾಕಂಗಳ ಹಿರಿದೋಗರಂಗಳ (ಬಸವು. ೮–೧೪); ರಾಯಂಗೆ ವರ್ಷವರ್ಷಕ್ಕೆ ನಾವು ಕುಡುವ ಸಿದ್ಧಾಯಮಂ . . . ತತ್ಕಾಲಕೀಯಬೇಕೆಲೆ ಮಗನೆ ಧನವನೊದವಿಸಿಕಳುಹು (ಜೈಮಿಭಾ. ೨೯–೧೭). **ಒದಹಿಸು:** ೩. ನಹುಷನು ಮದದೆ ಪದದಿಂದೊದೆಯಲಾತನ ಸರ್ಪಯೋನಿಯಲಿ ಒದಹಿಸಿದನಾ ಮುನಿ (ರಘುವಂ. ೧೩–೩೬). [ಒದವು$_1$ + –ಇಸು$_3$]

**ಒದವು$_1$**, ಒದಹು (ಕ್ರಿ). ೧. ಉಂಟಾಗು ; ಪ್ರಾಪ್ತವಾಗು : ಒದವುಗೆ ನಿನ್ನ ಸಂತತಿಗೆ ನೂರ್ವರುದಗ್ರಸುತರ್ಕಳೊಂದೆ ಗರ್ಭದೊಳೆನೆ ಕೆಮ್ಮನಿಂತು ಪೊಸೆದಿಕ್ಕಿದೆ (ಪಂಪಭಾ. ೧–೧೩೧) ; ವರ್ಣಾಂಕಂ ಸವರ್ಣಸಂಜ್ಞೆಯೊಳಮೊದವುಗುಂ (ಶಮದ. ೮) ; ಪುಣ್ಯಗೌರವದಿಂ ಪರಮ ವೈರಾಗ್ಯಮೊದವಿ ಬೆರ್ಚಿ ಬಿಸುಸುಯ್ದು ಸನತ್ಕುಮಾರಂ (ಸಾನಂಚ. ೧–೨೩ರಗಳೆ) ; ಸತತ ಕೃಷಿ, ಬೀಜಗುಣ, ಕಾಲವರ್ಷಗಳೊದವೆ ಪ್ರತಿಭೆ ವಿಕಸಿತವಹುದೊ (ಮಂಕುಕ. ೫೬೯). ೨. ಸಮಯಕ್ಕೆ ಒದಗಿ ಬರು : ಕೆಡಿಸಿದೊನು ಕೆಡುವೇಡಿದೋನು ಓತೋನು ಒದವಿದೋನು (ಮೈಅರಿ. ೧೯೧೬,೧೩–೧೪ ; 726). ೩. ವಯಸ್ಸಿಗೆ ಬರು ; ಪ್ರೌಢವಾಗು : ಒದವಿದ ಲತೆಗಂಕುರ ಗರ್ಭದ ಚಿಹ್ನಂ ಮೂಡುವಂದದಿಂ ದೇವಕಿಗುರ್ವಿದ ಗರ್ಭದ ಚಿಹ್ನಂ ಮೂಡಿದುದಾ ಕಂಸಂಗೆ ಮಿಟ್ಟು ಮೂಡುವ ತೆಱದಿಂ (ಅರ್ಧನೇ. ೭–೩೭). ೪. ತೋಡು ; ಬಗಿ ; ಅಗೆ : ಒದವಿದರೆ ಬಿಳಿದೆನಿಪ ಬರಿವದಣೆಯ ಕಿಱುದೆಂಗು ನೆಲ್ಲಿಯೆಂಬಿನಿತಱ ಮೂಲದಿನಿರ್ಕೆಯ್ಯೆಡೆಯೊಳ್ ತೆಂಕದೆಸೆಯೊಳಱಿ ಮೂಱು ಪುರುಷದೊಳ್ ನೀರಕ್ಕುಂ (ಲೋಕೋಪ. ೫–೧೭). ೫. ಸಿದ್ಧವಾಗು ; ಅಣಿಯಾಗು : ಒದವಿದ ಭಕ್ಷ್ಯಭೋಜ್ಯಕೆ ಬಪ್ಪರೆ ಭಾದ್ರಪದ ಶುದ್ಧ ಚೌತಿಯಿದಲ್ಲ ಕದನಕಪೂಪವ ತೋಱೆಂದು ಸಾಮಜವದನಂಗೆ ಪೆಟ್ಟನಿಕ್ಕಿದನು (ಮೋಹತ. ೩೮–೪೫). ೬. ಪ್ರಯೋಜನಕ್ಕೆ ಬರು ; ಉಪಯುಕ್ತವಾಗು (?) : ಶ್ರೀವಿಜಯನೊಳಮುರ್ವರಾಸ್ಯತಿಲಕನೊಳಮನಿಬರ್ ನೆಱೆದುಂ ಕಾದಿಯುಮೊದವಲಾಱದುದಱಿಂ (ಶಾಂತಿಪು. ೬–೩ ವ) ; ಜಲವಿದ್ದೊಡೇನೊ ಪಾನಕೆ ಯೋಗ್ಯವಲ್ಲ ಸತ್ಫಲ ಭೋಗಕೊದವುವುದಲ್ಲ (ಮೋಹತ. ೨–೩೭). ೭. ಏಳಿಗೆ ಹೊಂದು ; ವರ್ಧಿಸು ; ಸಮೃದ್ಧವಾಗು : "ಒದವು – ಸಮೃದ್ಧೌ" (ಶಮಧಾ). ೮. ಗುಂಪಾಗು ; ಸೇರು ; ನೆರೆ : ಹತ್ತುದಿನದೊಳಗೆ ವಿದಿತದಿಂ ಪನ್ನೆರಡುಸಾವಿರ ಒದವಿದೀಶ್ವರಭಕ್ತರುಂ (ಬಸವು. ೫೧–೬೮) ; ಒದವಿದ ಸಮಸ್ತ ಜನಮಾಗ ವಿಸ್ಮಿತ ಮಾದುದು (ಜೈಮಿಭಾ. ೧೦–೧೩). ೯. ಸಾಮರ್ಥ್ಯದಿಂದ ಕೂಡಿರು ; ದಕ್ಷತೆಯಿಂದ ಕೂಡಿರು ; ನುರಿತವನಾಗು : ಮೊದಲೊಳಭಿನವತುರಂಗಮನೊದವಿದ ಸಹಣಿಗಳಿನ್ನೆದೆ ತಿರ್ದಿಸಿ ಬಸಮಾದುದನಱಿದೇಱುವುದು (ರಾಜಶೇ. ೧೩–೫). ೧೦. ಫಲಿಸು ; ಸಿದ್ಧಿಸು ; ಸಫಲವಾಗು : ಪಾಂಡವರಿಗಗ್ನಿಯಲೊಮ್ಮೆ ಹಱಿವನು ನೆನೆವೆನೊದವಿದಡೆಮ್ಮ ಸುಕೃತೋದಯದ ಫಲವೆಂದನು ಸುಯೋಧನನು (ಕುವ್ಯಾ ಆ. ೮–೫೫). ೧೧. ಸಲಹು ; ಕಾಪಾಡು : ಮನುಜರನೊದವಲೋಸುಗ . . . ಮಾಡಿದ ಲವಣಸಾಗರವ (ಸಂಭಪ. ೬–೧೨). **ಒದಹು** : ೩. ವ್ರಜೇಶ್ವರ– . . . ಬೇರೆಸ್ಥಳದಲ್ಲೆನಗೆ ಹಣವು ದೊರಕಿತು. ಹರವಲ್ಲಭ– ಒದಹಿತೆ ? ಮೊದಲೇಕೆ ಹೇಳಲಿಲ್ಲ ? (ದೇವೀಚಾ. ೧೧೫). 'ಒದಗು$_1$' ಪರಾ.

[**ದೇ.** ‖ **ತಮಿ.** ಉದವು ; **ಮಲ.** ಉದಗು ; **ತುಳು.** ಒದಗು ; **ತೆಲು.** ಒದವು, ಒದಲು, ಒದುಗು, ಒದುವು]

**ಒದವು$_2$** (ನಾ). ೧. ಅಭಿವೃದ್ಧಿ ; ಏಳಿಗೆ ; ಆಧಿಕ್ಯ ; ಹೆಚ್ಚಳ : ಕಱೆಯಿಲ್ಲದ ತಪದೊದವಂ ಪೆಱೆಯಲ್ತಪದಂಕಕಾಱರನ್ನರುಮೊಳರೇ (ಎಕ. VII, ಶಿಕಾರಿ. ೯–೫೭; 1072); ಮಾಗಿಯೊಳಾದ ಶೀತದೊದವಿಂಗಿರಲಾಱದೆ (ಧರ್ಮಾಮೃ. ೭–೭೮) ; ಏನೆಂಬುದೊ ಚಕ್ರಲಾಂಛನನ ಪುಣ್ಯದೊದವುಮಂ ತೇಜಮುಮಂ (ವರ್ಧಪು. ೭–೬೭) ; ಪುರದ ಸಿರಿಯನು ಯಾಗದೊದವನು (ಕುವ್ಯಾ ಸ. ೧೩–೧೪). ೨. ಸಾಮರ್ಥ್ಯ ; ಹಿರಿಮೆ : ಹಾವಿದಿರಾದಾ ಕೋಣನನು ಅದಿರದೆ ನುಂಗಲಂತದ ಕಂಡು ದುಷ್ಕರ್ಮದೊದವಿಗೆ ತಲೆತೂಗುತವೆ (ನೇಮಿಸಂ. ೧೦–೨೩೭) ; ಬೆದಱುಗಾಗೆಯ ನೋಟ ಸಾಳುವನೊದವು ಮಿಾಂಗಳ ಝಳಕೆ ಕೇಸರಿಯುದಟು (ಸಾಳ್ವಭಾ. ೧೨–೭೭).

೩. ನೆರವು ; ಸಹಾಯ : ಅದಱಿಂ ನಿಶ್ಶಲ್ಯಮಪ್ಪಂತು ನಿನ್ನೊದವಿಂ ಮಾಡ್ಪುದಗಾಧಸಾಗರಪರೀತಾಶೇಷಭೂಭಾಗಮಂ (ಪಂಪಭಾ. ೧೩–೩೧) ; ಶಕಟವ್ಯೂಹವದಱಗ್ರದಲಿ ದುಶ್ಶಾಸನನು ಕೆಲಬಲದೊದವಿನಲಿ ಬಾಹ್ಲಿಕನು ಸೌಬಲ ಸಿಂಧುಮಾಗಧರು (ಕುವ್ಯಾ ದ್ರೋ. ೯–೧೮). ೪. ಕೂಡುವಿಕೆ ; ಜೋಡಣೆ : ಅದು ತನ್ನೊಳಿರ್ದ ಪಲವಾತ್ಮರಿಗೆ ಭೋಗದೊದವೀಯದಿರದು ನಿಜವಿದುವೆ (ಅನುಸಾ. ೩–೨–೯) ; ಪುಲಿವಾಲದಲಿ ವಿರಚಿಸಿದಾ ಹೊದಱುಗೆಂಕಣ ಖಡೆಯ ಪೆಂಡೆಯದೊದವಿನಿಂ ನಿಗ್ಗವದ ಬಡಿಕೋಲ್ಪಡೆವಡೆದ ಬಿಲ್ಲಂಬು ಬಲೆವಿಡಿದಿಹರು ಬೀಯದರು (ಸಾಳ್ವ ಭಾ. ೫–೬). ೫. ಉಂಟಾಗುವಿಕೆ ; ಪ್ರಾಪ್ತಿ : ಕಿಡಿಸಿ ಕಳಂಕ ಪಂಕದೊದವಂ . . . ಶರದಾಗಮಂ ನೆನೆಯಿಸಿತ್ತು ಜಿನಾಗಮದಿವ್ಯಯೋಗಿಯಂ (ಮಲ್ಲಿಪು. ೮–೧೮೦); ಸೋಂಕಿದಡೆ ಮಹಾಲಿಂಗ ಗಜೇಶ್ವರನ ಒಲುಮೆ . . . ಸುಖದ ಒದವು ನೋಡಾ (ಸರ್ವವ. ೭೩–೪೦೩) ; ಆನಂದವನಮದೊದವಿರೆ ನಿಜಮುಕ್ತಿಮಂಟಪ ಕಂಗೊಳಿಕುಂ (ಹಾಲಾಸ್ಯ. ೧–೩೨). ೬. ಸಂಗೀತದ ಒಂದು ಪರಿಭಾಷೆ (?) : ಗತಿ ಚಾಲನಂ ಗಮಕಮೊದವೊಯ್ಯಾರವಂಗಂ ಸ್ವರಾಳಿ. . . ಜಾತಿಗ್ರಹಾದಿಗಳಿವು ಮೇಳಯಿಸಿ (ಪದ್ಮರಾ. ೮–೬೧). [< ಒದವು$_1$]

**ಒದಹಿಸು** 'ಒದವಿಸು' ನೋ.

**ಒದಹು** 'ಒದವು$_1$' ನೋ.

**ಒದಱಿಸು$_1$** (ಕ್ರಿ). ಅಪ್ಪಳಿಸು ; ತಟ್ಟು ; ಶಬ್ದವಾಗಿಸು : ಭುಜವನೊದಱಿಸಿ ಸಿಂಹರವದಲಿ ಗಜಱಿ ಗದೆಯನು ತಿರುಹಿ (ಕುವ್ಯಾ ಭೀ. ೫–೭); ಹಾಱಿದನನಿಲಪಥದಲಿ ಭುಜವನೊದಱಿಸಿ ಲೀಲೆಯುಬ್ಬಿನಲಿ (ತೊರರಾ. ೬–೩೬–೬೩) ; ಬಿಡದೆ ಜಟ್ಟಿಗಳೆಲ್ಲರುಂ ಸಂಗಡದೆ ತೋಳ್ಗಳನೊದಱಿಸಲು ಕಿಚ್ಚಡಸಿತೊ ಪೆರ್ವಿದಿರ ಮೆಳೆಗೆನೆ ಪರ್ವಿತಾ ರವವು (ಸಾಳ್ವಭಾ. ೧೨–೬೩).

[ಒದಱು$_1$ + –ಇಸು$_3$]

**ಒದಱಿಸು$_2$** (ಕ್ರಿ). ೧. ಧ್ವನಿಮಾಡಿಸು ; ಕೂಗಿಸು : ಮಾರ್ದನಿ ದಿಗಂತರವೊದಱಲೊದಱಿಸಿದನು ಮಹಾಧನುವ (ಕುವ್ಯಾ ಆ. ೧೪–೩) ; ಸುರವಿಭಾಡನು ಸುರಭಯಂಕರ ಧನುವನೊದಱಿಸಿದ (ಕೌಶಿರಾ. ೨೮–೨೦); ಪುದಿದರರೆಬರು ಕೊಂಬು ಸನ್ನೆಯನೊದಱಿಸಿದರರೆಬರು ಪಿಡಿದ ಚಾಪದ ಸರಳಿನೊಡೆತನವನುಳಿದರು (ಸಾಳ್ವಭಾ. ೫–೩೨). ೨. (ನೋವಿನಿಂದ) ಕ್ಲೇಶಗೊಳಿಸು ; ನರಳುವಂತೆ ಮಾಡು : ನೆಲಗೋಣಿ ಪು(ಹು)ಣಿಸೆ ಪಾಪಟೆ ಹುಲಿಗಿಲ್ ದೊಗ್ಗಳೆಯ ಹಱುಹೆ ಯೆಂಬಿವಱಿಲೆಯುಂ ಕಱಿಯೊಳುಱೆ ಕಾಸಿ ಕಟ್ಟಲ್ ತೊಲಗುಗುಮೊದಱಿಸುವ ಮುಳ್ಳ ವಿಷಮೆನಿತನಿತುಂ (ಖಮದ. ೨–೨೧೧). [ಒದಱು$_2$ + –ಇಸು$_3$]

**ಒದಱು$_1$**, ಒದರು$_1$ (ಕ್ರಿ). ೧. ಭುಜಗಳನ್ನು ಅಥವಾ ಕೈಗಳನ್ನು ತಟ್ಟು; ಭುಜಾಸ್ಫಾಲನೆ ಮಾಡು ; ಕೈ ಚಪ್ಪಾಳೆ ತಟ್ಟು: "ಒದಱು– ಆಸ್ಫೋಟನೇ" (ಶಮಧಾ). ೨. ಕೊಡಹು ; ಜಾಡಿಸು : ಹಿಂಡದಿರು ಹಿಳಿಯದಿರು ಹಿಕ್ಕಿಕೂಡೊದಱದಿರು ಪುಂಡರೀಕೇಕ್ಷಣೇ (ಭಾವಚಿಂ. ೩–೩೭); ಪಿಡಿದಳು ಬಂದು ಪಿಡಿದಡೊದಱಿದೆನು (ಕುರಾಸಾಂ. ೩೫–೧೨೮) ; ಉರಿಗೊಳೆ ಪಾಂಡುಪುತ್ರ ಸೇನೆಯೊಳೆಲ್ಲರುಂ ಬೆದಱಿದರ್ ಕೆಟ್ಟು ಕೆದಱಿದರ್ ಕಿಡಿಯನೊದಱೆ[ಪಾಠಾಂ. ಯುರುಬೆಗೆ] (ಜೈಮಿಭಾ. ೮–೩೮). ೩. ಅಲುಗಾಡು ; ನಡುಗು : ಹೆದಱಿತುಭಯಸೇನೆ ಕೆದಱಿತು ಸುರಸ್ತೋಮಮೊದಱಿತಿನಮಂಡಲಂ (ಜೈಮಿಭಾ. ೧೩–೪೭). ೪. ನಿಂದಿಸು ; ಹೀಯಾಳಿಸು ; ತಿರಸ್ಕರಿಸು : ನಗೆಮೊಗದಚೆಲ್ವು ಶಶಿಬಿಂಬಶತಮಂ ಕೆದಱೆ ಬಿಗಿದೊಗೆದ ತೋರಮೊಲೆ ಕನಕ ಕಳಶಮನೊದಱೆ (ಪುಷ್ಪಪು. ೯–೫೯ ರಗಳೆ) ; ಮೃಡನ ಭಜನೆಯನುಡುಗಿ ತಮ್ಮೊಳು ಬುದ್ಧಿಯಂ ಕೇಳ್ದು ಬದುಕು ನೀನೆಂದೆನಲು ಭುಗಿಲೆಂದೊದಱುತವದಿರನು (ಬಸವು. ೫೧–೮೦).

**ಒದರು$_{1}$ :** ೨. ಕುದುರೆ ಕಂದದ ಕೂದಲುಗಳನು ಒದರಿ ಬಾಲವನು ಮುರಿದುಕೊಂಬಾಗ ಕಿಡಿಗಳು ಕಾಣಲು (ಅಶ್ವಟೀ. ೨೦-೮) ; ಅವಳನ್ನು ಒದರಿ ಅವನು ಮುಂದರಿದನು (ಚಕರಾ. ೯); ಒಂದೊಂದನ್ನಾಗಿ ಕೊಡವಿ ಒದರಿ ಚೇಳು ಹಾವು ಯಾವುವೂ ಇಲ್ಲವೆಂದು ನಿಶ್ಚಯಮಾಡಿಕೊಂಡು (ಪಂಯಾತ್ರ. ೧).

ಒದಱುಕೊಳ್ = ಕೊಡಹಿಕೊಳ್ಳು : ಬೆದಱಿದಂತಾದರು ಪೆಂಗಳ ತ್ತಿತ್ತ ಮೈಯೊದಱಿಕೊಂಬರು ಲಲ್ಲೆಯಿಂದ (ಭರಚ. ೮-೩೫) ; ಕುದುರೆಯಂ ಮುದದಿಂದೆ ಮುಟ್ಟಲದು ಬಿಟ್ಟು ನಡೆದುದು ಮುಂದಕೊದಱಿ ಕೊಳುತೆದ್ದು ನರನಂ ಕಂಡು ಚಂಡಿ ತಪಕಾಗಿ ಕಳುಹಿಸಿಕೊಂಡಳು (ಜೈಮಿಭಾ. ೧೦-೩೩).

[ದೇ. ‖ ತಮಿ. ಮಲ. ಉದಱು ; ತುಳು. ಉದೇ ; ತೆಲು. ಉದರು, ಉದುರು, ಉದಿಲು ; ಗಡಬ. ಊದುರ್ಪ್]

**ಒದಱು$_{2}$, ಒದರು$_{2}$ (ಕ್ರಿ).** ೧. ಕಿರುಚು ; ಗರ್ಜಿಸು ; ಧ್ವನಿ ಮಾಡು : ಕಾಳಿಂಗನಾಗಂಗಳ್ ಪೆಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತುಂ ಬಂದೊಡೆ ನೀವೊದಱಿಯ [ಪಾಠಾಂ. ಮೆಳಱಿಮ, ಮೆಲ್ಲಱಿಯದ]ವಂ ಬಗ್ಗಿಸಿದೊಡದೃಶ್ಯಂಗಳಾಗಿ ಪೋಕುಂ (ವಡ್ಡಾರಾ. ೧೦೦-೮) ; ಪೋ ಪೋಗಲೆಂದೊದಱುತ್ತುಂ ಪರಿತಂದು ತಾಗಿ ತಗರ್ದಂ ಗಂಗಾಸುತಂ ಭೀಮನಂ (ಪಂಪಭಾ. ೧೧-೧೦) ; ಜಲಧಿ ಕೇಳ್ ಸಪ್ತಾರ್ಚಿ ಕೇಳ್ . . . ಎಂದು ಪೊಣ್ಮೊದಱಿದಂ ಕೌರವ್ಯಕೋಳಾಹಳಂ (ಗದಾಯು. ೭-೨೩) ; ಒದಱಿದವು ನರಿ ಮುಂದೆ ಕರ್ಣನ ಕುದುರೆಗಳು ಮುಗ್ಗಿದವು (ಕುವ್ಯಾಕ. ೮-೨೭) ; ಒದಱಿದುವು ದೇಗುಲದ ವಾದ್ಯಂಗಳು (ಜೈಮಿಭಾ. ೧೭-೪೦). ೨. ಉಚ್ಚರಿಸು ; ಹೇಳು : ಚೋಳ ತಱಿದ ತಲೆ ಪಂಚಾಕ್ಷರಿಯನೊದಱಿ (ಭಾವಚಿಂ. ೯-೫೭). ೩. ಕಪಟದ ಮಾತನಾಡು ; ಮೋಸದ ಮಾತನಾಡು : ಹರಿ ಉದಧಿಯಲಿ ಹುಗನೇ ಧರೆಯನುಳಿದೊದಱಿ ಬಲಿಯಂ ಕಟ್ಟಯಿಳಿಯಂ ಕೊಂಡ ಪಾಪದಲಿ (ಬಸವು. ೫೪-೩೮).

**ಒದರು$_{2}$ :** ೧. "ಯಾರಾದರೂ ನನ್ನನ್ನು ರಕ್ಷಿಸಿರಿ" ಎಂದು ಒದರಿದ್ದು ಕೇಳಿಬಂತು (ಮುಂದಾಕಿ. ೨). ೪. ಕರೆ ; ಕೂಗು : ಒಂದೆರಡು ಸಾರೆ ಮೆಲ್ಲಗೆ ಒದರಿದನು, ಎಚ್ಚರಾಗಲಿಲ್ಲ (ಮುಂಜುಕ. ೭೧).

ಒದರಿಕೊಳ್ಳು = ಕೂಗಿಕೊಳ್ಳು ; ಅರಚಿಕೊಳ್ಳು : ಕೂಸು ಒದರಿಕೊಳ್ಳುತ್ತಿದೆ (ರೂಢಿ). ಒದರ್ವಂ = ಕೂಗಾಡುವವನು ; ಕಿರುಚಾಡುವವನು : "ಕ್ಷವನ್, ಕ್ಷವಕಃ, ಕ್ಷಾವಕಃ, ಕ್ಷವಣಃ, ಕ್ಷಾವಣಃ, ಈ ೫ ಒದರ್ವಂ" (ಕಾಶಕ್ಯ. ೧೭೪).

[ದೇ. ‖ ತಮಿ. ವದಱು ; ತೆಲು. ವದರು, ವದುರು]

**ಒದೆ$_{1}$ (ಕ್ರಿ).** ೧. ಕಾಲಿನಿಂದ ಹೊಡೆ, —ಘಟ್ಟಿಸು ; ಮೆಟ್ಟು ; ತುಳಿ : "ಒದೆ – ಪಾದಪ್ರಹರಣೇ" (ಶಮುಧಾ) ; ಕಾಲಿಂದಂ ತಲೆಯನೊದೆದು (ವಡ್ಡಾರಾ. ೮-೧೭) ; ಊರುಗಳನುಡಿವನೊದೆವಂ ಕೌರವಪರಿಬೃಢನ ಮಕುಟಮಂ (ಗದಾಯು. ೧-೭೦) ; ಪೂವಿನ ಬಿಲ್ಲ ಕೊಪ್ಪನೊದೆದೇಱಿಸಿ ತಾವರೆ ನೂಲ ನಾರಿಯಂ (ಶಮದ. ೫೫ ಪ್ರಯೋ) : ಎಡಗಾಲಲಿದೆಯೆನು ತೊದೆದು ನಿಜರಥವ (ಕುವ್ಯಾಕ. ೪-೧) ; ಎದ್ದು ಹೋಗು ಅಂದರೆ ಒದ್ದು ಹೋಗುತ್ತೇನೆ ಅಂದ (ಗಾದೆ). ೨. ಹಿಂದಕ್ಕೆ ಅಥವಾ ಪಕ್ಕಕ್ಕೆ ತಳ್ಳು, —ನೂಕು : ಏಸಪಾಯವನೊದೆದು ಕಳೆಯರು ಕೃಷ್ಣಭಕ್ತರು (ಕುವ್ಯಾದ್ರೋ. ೩-೬೦). ೩. ಚಿಮ್ಮಿಬರು : ಹದವಿಲುಗಳೊದೆದವು ಹೆದೆಯ ಹರವಿನಲಿ (ಕುವ್ಯಾಅ. ೧೩-೨೧). ೪. (ನದಿ ಮೊದಲಾದುವು) ಅಪ್ಪಳಿಸು ; ಬಲವಾಗಿ ಹೊಡೆ ; ಕೊಚ್ಚು : ಆ ಮಹಾನದಿ ಮೆಱೆದುದುಭಯದ ಸೀಮೆಗಳನೊದ[ದೆ]ದುರುತರಂಗಸ್ತೋಮ ದುಬ್ಬರದಬ್ಬರದ ಸಲಿಲಪ್ರವಾಹದಲಿ (ತೊರರಾ. ೧-೧೨-೫).

ಒದ್ದಾಟ = ೧. ಪರಸ್ಪರ ಒದೆಯುವುದು (ಕಿ). ೨. (ಆಲಂ) ಕಷ್ಟ ; ತೊಂದರೆ ; ಪರದಾಟ : ಆದಿನ ನಾನು ಪಟ್ಟ ಒದ್ದಾಟ ಹೇಳುವುದು ಕಷ್ಟ (ಆಲಹೂ. ೮೦). ೩. ನೋವಿನಲ್ಲಿ ಅಥವಾ ಕಷ್ಟದಲ್ಲಿ ಕಾಲು ಒದರಿಕೊಳ್ಳುವುದು (ಕಿ). ಒದ್ದಾಡು = ೧. ಪರಸ್ಪರ ಒದೆ (ಕಿ). ೨. (ಆಲಂ) ಕಷ್ಟದಲ್ಲಿ ಸಿಕ್ಕಿಕೊಳ್ಳು ; ಪರದಾಡು ; ಪೇಚಾಡು : ದುಡ್ಡಿಗಾಗಿ ಒದ್ದಾಡಬೇಡಿ (ಕೊನೆಭೇ. ೧೮೨). ೩. (ಆಲಂ) ಹೆಣಗು : ಬುಸುಗುಟ್ಟುತ್ತಾ ಗುಂಪಿನಿಂದ ಬಿಡಿಸಿಕೊಳ್ಳಲು ಒದ್ದಾಡಿದ (ಶಾಲೆಮ. ೫). ಒದ್ದುಬಿಡು = (ಆಲಂ) ನಿರಾಕರಿಸು ; ತಿರಸ್ಕರಿಸು : ಬಾಗಿಲಿಗೆ ಬಂದ ಲಕ್ಷ್ಮಿಯನ್ನು ಆ ಮೂರ್ಖ ಒದ್ದುಬಿಟ್ಟ (ರೂಢಿ).

[ದೇ. ‖ ತಮಿ. ಉದೈ ; ಮಲ. ಉದಯು, ಉದೆಕ್ಕ ; ತುಳು. ಉದೆ, ಒದೆ = ಎಸೆ, ಕಂಪಿಸು ; ಮಲ್ತೊ. ಉತೆಸೆ, ಉಸೆತೆ]

**ಒದೆ$_{2}$ (ನಾ).** ೧. ಒದೆಯುವುದು ; ಪಾದಪ್ರಹಾರ : ಒಂದು ಒದೆ ಒದ್ದೆ (ರೂಢಿ). ೨. ಪಕ್ಕದಲ್ಲಿಯ ಆಧಾರ, —ಊರೆ.

[< ಒದೆ$_{1}$. / ತಮಿ. ಉದೈ ; ಮಲ. ಉದ]

**ಒದೆಕಲು (ನಾ).** ಒದೆಯುವುದೇ ಸ್ವಭಾವವಿರುವುದು : ಆ ಎತ್ತುಗಳಲ್ಲಿ ಒಂದು ಒದೆಕಲೆತ್ತು (ರೂಢಿ).

[ಒದೆ$_{2}$+ -ಕಲು$_{2}$ (< -ಕಲ್$_{4}$)]

**ಒದೆಕೊರಡು (ನಾ).** ಆಧಾರವಾಗಿಕೊಟ್ಟ ಕೊರಡು ; ಊರೆ : ಮನೆಗೊಂದು ಮುದಿಗೊರಡು ಒಲೆಗೊಂದು ಒದೆಕೊರಡು (ಗಾದೆ) ; ಕದ ತೆಗೆಯಲು ಬರದಂತೆ ಒದೆಕೊರಡು ಕೊಡು (ರೂಢಿ).

[ಒದೆ$_{2}$ + ಕೊರಡು (< ಕೊಱಡು)]

**ಒದೆಗಂಬ (ನಾ).** = ಒದೆಕೊರಡು : ಗೋಡೆ ಬೀಳದಂತೆ ಒದೆಗಂಬ ಕೊಟ್ಟಿದ್ದಾರೆ (ರೂಢಿ). [ಒದೆ$_{2}$ + ಕಂಬ$_{1}$ (< ಕಂಭ)]

**ಒದೆಗಲ್ಲು (ನಾ).** ಆಧಾರವಾಗಿರಿಸಿದ ಕಲ್ಲು : ಶ್ರವಣಬೆಳುಗೊಳದಲ್ಲಿ ಒದೆಗಲ್ಲು ಬಸದಿಯುದೆ (ರೂಢಿ).

[ಒದೆ$_{2}$ + ಕಲ್ಲು (< ಕಲ್$_{3}$)]

**ಒದೆಗೆಡಹು (ಕ್ರಿ).** ಒದೆದು ಬೀಳಿಸು : ಅವನನ್ನು ಈ ಬಲಿಮರಕ್ಕೆ ಒದೆಗೆಡಹಿಕೊಂಡು (ಮಂತ್ರಶ. ೪೯-೨೭).

[ಒದೆ$_{1}$ + ಕೆಡಹು (< ಕೆಡಪು)]

**ಒದೆತ (ನಾ).** ೧. ಕಾಲಿನಿಂದ ಒದೆಯುವಿಕೆ; ಪಾದತಾಡನ. ೨. ಬಲವಾದ ಪೆಟ್ಟು, —ಏಟು : ಒದೆತಗಳು ಬೀಳುವ ಸಂಭವವನ್ನು ನೋಡಿ ಒಡವೆಗಳನ್ನೆಲ್ಲಾ . . . ಅರ್ಪಿಸಿದೆ (ಬಂಕಿಮ. ೧೦೭).

[ಒದೆ$_{1}$ + -ತ$_{2}$]

**ಒದೆಮರ (ನಾ).** = ಒದೆಕೊರಡು : ಹಲ್ಲು ನಾಲಿಗೆಗಳೆಂಬ ಒದೆಮರದಿಂ ಕೂಡಿದ (ಗಣಭಾ. ೧೩-೬) ; ಕೋಟೆಯ ಆ ಹೆಗ್ಗದಗಳನ್ನು ಲಾಳವಿಂಡಿಗೆ ಸರಪಣಿ ಒದೆಮರಗಳಿಂದ ಬಿಗಿ ಭದ್ರಮಾಡಿಕೊಂಡು (ಬೆಟ್ಟಅ. ೬೭-೨೦).

[ಒದೆ$_{2}$ + ಮರ$_{1}$]

**ಒದೆವಡೆ (ಕ್ರಿ).** ಒದೆತವನ್ನು ಪಡೆ; ಏಟುತಿನ್ನು : ಲಲನೆಯರಿಂದೊದೆವಡೆದಾ ನಲವಂ ತಳೆದ (ಕುಸುಮಾ. ೫-೪೩).

[ಒದೆ$_{2}$ + ಪಡೆ$_{1}$]

**ಒದ್ದಾಟ** 'ಒದೆ$_{1}$' ಪರಾ.

**ಒದ್ದಾಡು** 'ಒದೆ$_{1}$' ಪರಾ.

**ಒದ್ದಿಗಾಂಕ (ನಾ).** ಒದ್ದಿಗನೆಂಬ ಹೆಸರಿನವನು : ಸಾಮಂತಾಧಿಪನೊದ್ದಿಗಾಂಕನಿದಿರೊಳ್ ಮಾಱಾಂತುನಿ × × ನರ್ (ಎಕ. XI, ಚಿತ್ರದು. ೧೩-೨೨ ; 1124 ?).

[ಒದ್ದಿಗ$_{0}$ + ಅಂಕ$_{2}$. P ಒದ್ದಿಗ < ಉದೆಗ ~ ಉದಯಾದಿತ್ಯ]

**ಒದ್ದೆ** (ನಾ). ನೆನೆದಿರುವುದು ; ತೇವ; ಆರ್ದ್ರತೆ: ದೇವದುಂದುಭಿರವದೊಂದುದ್ಧಾನಿ ನೆಗೞ್ದ ಮುಗುಳಲರೊದ್ದೆ ಕರಂ ಸಿದ್ಧಮಾದುದಂಬರತಲದೊಳ್ (ಪಂಪಭಾ. ೧೨–೨೧೮) ; ಒಗೆದ ಕೈಗಳೊದ್ದೆಯಾಱುವದಕೆ ಮುನ್ನವೆಯ್ದಿ ಬಂದು (ತಿರುತೊಂ. ೬೨–೧೪) ; ಮಳೆಯಿಂದ ಬಟ್ಟೆಗಳೆಲ್ಲಾ ಒದ್ದೆಯಾದುವು (ರೂಢಿ).

[ದೇ. ‖ ತಮಿ. ಮಲ. ಓದಂ ; ತುಳು. ಒದ್ದೆ, ವೆದ್ದೆ = ಒದ್ದೆಯಾದ ; ಕುವಿ. ಊದಲಿ = ಒದ್ದೆಯಾಗು, ಊಥಲಿ = ಒದ್ದೆಮಾಡು. / ಸಂ. ಉದ್ರ = ನೀರು]

**ಒದ್ದೆಕಟ್ಟು$_1$** (ಕ್ರಿ). ಬಟ್ಟೆಗಳನ್ನು ಒಗೆಯಲು ನೀರಿನಲ್ಲಿ ನೆನೆಯಿಸು : ಬಟ್ಟೆ ಒಗೆಯಲು ಒದ್ದೆಕಟ್ಟಬೇಕು (ರೂಢಿ).

[ಒದ್ದೆ + ಕಟ್ಟು$_1$]

**ಒದ್ದೆಕಟ್ಟು$_2$** (ನಾ). "ಊತವನ್ನಿಳಿಸುವುದಕ್ಕಾಗಿ ಕಟ್ಟುವ ಒದ್ದೆ ಬಟ್ಟೆಯನ್ನೊಳಕೊಂಡ ನೀರಿಳಿಯದ ಆವರಣವುಳ್ಳ ಕಟ್ಟು" (Compress. ಇಂಕನಿ). [ಒದ್ದೆ + ಕಟ್ಟು$_2$]

**ಒದ್ದೆಡೆ** (ನಾ). ಒಂದು ಔಷಧಿಗಿಡದ ಹೆಸರು : ಒದ್ದೆಡೆಯ ಬೇರು, ಉತ್ತರಣೆಯ ಬೇರು, ನುಗ್ಗೆಬೇರು, ಸೈಂಧವ ಇವಂ ಸಮಚೂರ್ಣಂಗೆಯ್ದು ತೆಗೆದುಕೊಳ್ಳೆ ಅಜೀರ್ಣಶೂಲೆ ಮಾಣ್ಗುಂ (ಸಕವೈ. ೩೬೫).

[?]

**ಒದ್ದೆಬಟ್ಟೆ** (ನಾ). ನೆನೆದ ಬಟ್ಟೆ : ಮೈ ಮೇಲೆ ಒದ್ದೆಬಟ್ಟೆಗಳನ್ನು ಒಂದು ಕ್ಷಣ ಸಹ ಇರಗೊಡಬಾರದು (ಮುಂಬಯಿ. ೪–೧೫).

[ಒದ್ದೆ + ಬಟ್ಟೆ$_2$]

**ಒದ್ದೆಹಿಂಡು** (ಕ್ರಿ). ನೆನೆಸಿದ ಬಟ್ಟೆಯಲ್ಲಿನ ನೀರನ್ನು ಹಿಂಡು (ಕ).

[ಒದ್ದೆ + ಹಿಂಡು$_1$ (< ಪಿಂಡು$_1$)]

**-ಒನ್, -ಒಂ** (ಪ್ರ). ಕೃಲ್ಲಿಂಗಗಳಿಗೆ ಹತ್ತುವ ಪುರುಷಸೂಚಕ ಪ್ರತ್ಯಯ: ಆದಾನಱಿವೊನ್ಗೆ ಮಹಾಪಾತಕಮಕ್ಕುಂ (ಮೈಆರ್. ೧೯೩೬, ೧೬–೧೫ ; 450). **-ಒಂ** : ರಾಜಗೃಹಮೆಂಬುದು ಪೊಬಲದನಾಳ್ವೊಂ ಸುಬಲನೆಂಬರಸಂ (ವಡ್ಡಾರಾ. ೩–೩) ; ಮಲ್ಲಪನಲ್ಲದೊಂ ಪ್ರಭುವೆ ಮಲ್ಲಪನಲ್ಲದೊನತ್ಯುದಾತ್ತನೇ (ಶಾಂತಿಪು. ೧–೪೮). ℙ ಇದು ಸಾಧಾರಣನಾಗಿ ಭೂತ ಭವಿಷ್ಯತ್ ಕೃಲ್ಲಿಂಗಗಳಿಗೆ ಹತ್ತುತ್ತದೆ. '-ಅನ್' ಪರಾ.

**ಒನ** (ನಾ). ೧. ಕಾಡು. ೨. ಉದ್ಯಾನವನ ; ತೋಟ : ನೆರೆ ಪದ್ಮರಾಜಿಯುಂತೊನದೊಳಿಹ ಕೊಳಗಳಂತೇನೆಂಬೆನಚ್ಚರಿಯನು (ಪರಶು. ೧೨–೩). [< ಸಂ. ವನ]

**ಒನಕೆ** (ನಾ). ಬತ್ತ ಮೊದಲಾದುವನ್ನು ಕುಟ್ಟಲು ಉಪಯೋಗಿಸುವ ಹಾರೆಯಂತಹ ಮರದ ಒಂದು ಸಲಕರಣೆ; ಮುಸಲ: "ಒನಕೆ ಮುಸಲಮೆನಿಕ್ಕುಂ" (ಮಂಗರಾ. ೬೨–೨೨) ; ಮುನಿದಿರದೆ ಪರಿದು ಪಿರಿದೊಂದೊನಕೆಯೊಳಾನವಳ ತಲೆಯನೀ ತೆಱದಿಂ ಪೊಯ್ವೆಂ (ಪಂಚತಂ. ೧೮೭–೧೨) ; ಚಂದನದೊರಲಲ್ಲಿ ಪೊಯ್ದು ಬಿದಿರಕ್ಕಿಯನುನ್ಮದದಂತಿದಂತದೊನಕೆಯನೆತ್ತಿ ನುಣ್ದನಿಯ ಸುವ್ವಿಯ ಗಾವರದೊಳ್ ತೊಡರ್ಚಿ (ಲೀಲಾವ. ೮–೩೦) ; ಇಂದುಮುಖಿಯರಿಂದುಕಾಂತದೊರಳನಿಕ್ಕಿ ಚಂದನದೊನಕೆಯ ಪಿಡಿದು ಛಂದದೆ ಬಿದಿರಕ್ಕಿಯ ಥಳಿಸುತ (ಅಂಜಚ. ೨–೬೩) ; ಮಹೇಶನ ಕೃಪೆಯಿನಲ್ಲದೆಂತೆನಲೆತ್ತು ಒನಿ[ನ]ಕೆ ಕಂಬಳಿ ಕುಡುಗಲೂ (ವೀರಶೈವ. ೮–೫–೫೬).

[ದೇ. ‖ ತಮಿ. ಉಲಕ್ಕೈ ; ಮಲ. ಉಲಕ್ಕ ; ಕೊಡ. ಒಳಕೆ. / ಸಂ. ಉಲೂಖಲ ?]

**ಒನಕೆಗಾರ** 'ಒನಕೆಗಾಱ' ನೋ.

**ಒನಕೆಗಾಱ, ಒನಕೆಗಾರ** (ನಾ). ಒನಕೆಯನ್ನೇ ಆಯುಧವಾಗಿ ಉಳ್ಳವನು ; ಬಲರಾಮ : ಒನಕೆಗಾಱನೆ ಧುರಕೆ ನಿಲ್ಲನುವಾಗು ಘಡ ಕೈದುಗೊಳ್ (ನಿ ಭಾ ಗ. ೧೦–೫೭–೬೭). **ಒನಕೆಗಾರ** : ಒನಕೆಗಾರನೆ ಮಝು ಭಾಪೆಲಾ ನಿನ್ನ ರಣದ ಕೌಶಲ್ಯವ ತೋರೆಲಾ (ಯಾದವಾ. ೪೨).

[ಒನಕೆ + -ಗಾಱ (< -ಕಾಱ)]

**ಒನಕೆಪೆಟ್ಟು** (ನಾ). ಒನಕೆಯಿಂದ ಕೊಡುವ ಪೆಟ್ಟು, —ಏಟು : ಒನಕೆಪೆಟ್ಟಿನ ಗಡುಸು ಶಬ್ದವದೆಲ್ಲಿಯೆಲ್ಲಿಯದಿಂದಿನ ನಾಡ ಚಲುವೆಯರೊಸೆದು ಪಾಡುವ ಮಧುರವಾದೀ ಗಾನವು ! (ಧ್ವನ್ಯಾಲೋ. ೧೬೧) ; ಒರಳಲ್ಲಿ ಕೂತರೆ ಒನಕೆಪೆಟ್ಟು ತಪ್ಪೀತೇ ? (ಗಾದೆ). [ಒನಕೆ + ಪೆಟ್ಟು$_2$]

**ಒನಕೆಬಂಡೆಹುಳು** (ನಾ). ಮುಟ್ಟಿದರೆ ಕೋಡಬಳೆಯಂತೆ ತಿರುಚಿಕೊಳ್ಳುವ, ಸಾವಿರಕಾಲಿನ, ಉದ್ದವಾದ ಒಂದು ಬಗೆಯ ಹುಳು : "ಕರ್ಣಜಲೂಕಾ . . . ವನಿಕೇ [ಒನಕೆ]ಬಂಡೇಹುಳುವೆಂಬುವರು" (ಸಿದ್ಧಾಂತಿ. ೧೩೭). [ಒನಕೆಬಂಡೆ$_0$ + ಹುಳು (< ಪುೞು$_1$)]

**ಒನಕೆವಾಡು** (ನಾ). (ಬತ್ತ ಮುಂತಾದ ಧಾನ್ಯವನ್ನು) ಕುಟ್ಟುವಾಗ ಹಾಡುವ ಹಾಡು : ಎನಿತೋದನೋದಿಯುಂ ಮನದನಿತೆ ವಲಂ ಬುದ್ಧಿಯಕ್ಕುಮೆಂದು ಸಮಸ್ತಾವನಿಯ ಜನಮೊನಕೆವಾಡಪ್ಪಿನೆಗಂ ಸಲೆ ನುಡಿದ ನುಡಿ (ಪಂಚತಂ. ೧೭–೧೭) ; ಏವೇೞ್ಪುದೊ ಶಿವಮಾರ ಮಹೀವಳಯಾಧಿಪನ ಸುಭಗ ಕವಿತಾಗುಣಮಂ ಭೂವಳಯದೊಳ್ ಗಜಾಷ್ಟಕಮೋವನಿಗೆಯುಮೊನಕೆವಾಡುಮಾದುದೆ ಪೇೞ್ಗುಂ (ಎಕ. VIII, ನಗರ. ೩೫–೩೩ ; 1077) ; ಸೂಳೆಸಿದ್ಧಾಂತಮನೊನಕೆವಾಡಂ ಮಾಡಿ ಪಾಡುವ ಪೆಂಡಿರ ವಿನೋದಕ್ಕೆ (ಲೀಲಾವ. ೨–೩೫ ವ) ; ಒನಕೆವಾಡಂ ಹಾಡುವರು ತಮತಮಗೆ ಸತಿಯರು (ಬಸಪು. ೨೫–೨೧) ; ಈಕೆಯು ಕಟ್ಟಿದ ಒಂದು ಒನಕೆವಾಡು ಬಹು ಸ್ವಾರಸ್ಯವುಳ್ಳುದಾಗಿದೆ (ಕಮಿಂಚಿ. ೧೦೫).

[ಒನಕೆ + ಪಾಡು$_2$]

**ಒನಕೆವಿಡಿ** (ಕ್ರಿ). ಒನಕೆಯನ್ನು ಹಿಡಿ : ಕಲ್ಲಿನೊರಳೊಳಿಕ್ಕಿಯಿಕ್ಕಿ ಒನಕೆ ವಿಡಿದು ಇಡಿವರಯ್ಯೊ (ಸಾನಂಚ. ೬–೯೨ ರಗಳೆ). [ಒನಕೆ + ಪಿಡಿ$_1$]

**ಒನಕೆಹುಳು** (ನಾ). = ಒನಕೆಬಂಡೆಹುಳು : ತಣ್ಣಗಾಗಿ ಒನಕೆಹುಳು ಮುದುರಿದಂತೆ ಮುದುರಿಕೊಂಡರು (ದಿಲ್ಲಿಪ. ೨೨).

[ಒನಕೆ + ಹುಳು (< ಪುೞು$_1$)]

**ಒನಗೂಡು** (ಕ್ರಿ). ಒಂದಾಗು ; ಕೂಡು : ಯುಕ್ತಿಯಿಂದೊನಗೂಡದಿಹುದು ಬಲದಿಂದಕ್ಕುಮೇ (ವೆಂಕಾರಾ. ೬–೨೬–೩೦).

[< ಒಡಗೂಡು]

**ಒನಪು** (ನಾ). ಬೆಡಗು ; ಬಿನ್ನಾಣ ; ಒಯ್ಯಾರ : ಒತ್ತಿ ಕಟ್ಟಿದ ಟೀಕೆ ಕೆತ್ತಿಸಿದ ಹರಳೋಲೆ ನಿತ್ಯವು ಒನಪ ಮಾಡುವಳು ಕಾಮ ತಾನೆತ್ತಿದ ಬಾಣ (ಸರ್ವಜ್ಞ. ೧೮೨೯) ; ಕಣ್ಣಿನ್ಯಾಗ ಬಣ್ಣದ ನೋಟ ತಕತಕ ಕುಣಿದಾಡತಿತ್ತ ಕುಣೀತಿತ್ತ ಮಣೀತಿತ್ತ ಒನಪಿಲೆ ಒನದಾಡತಿತ್ತ (ಗಂ. ೬೨–೧೨) ; ಅವಳು ಒನಪು ಒಯ್ಯಾರ ಬೆಡಗುಗಳಲ್ಲಿ ತನ್ನ ಜೊತೆಗಾತಿಯರಿಗಿಂತ ಮೇಲ್ಮಟ್ಟದಲ್ಲಿದ್ದಳು (ಪುನರು. ೯೩). 'ಒಲಪು' ಪರಾ.

[< ಒನೆ + -ಪು$_1$]

**ಒನಪುಗಾರ್ತಿ** (ನಾ). ಒನಪುಮಾಡುವವಳು ; ಒಯ್ಯಾರಿ (ಕ).

[ಒನಪು + -ಗಾರ (< -ಕಾಱ) + -ತಿ$_1$ (< -ಇತ್ತಿ)]

**ಒನಮಾಲೆ** (ನಾ). ಕಾಡುಹೂಗಳ ಹಾರ : ನೆಣವಸೆಯ ಪರಿತಿಂಬ ಮಾಂಸವನಣೆದು ಕರುಳೊನಮಾಲೆಗಳ ತಾವೆಣಿಸಿ ಕೊರಳಲಿ ಧರಿಸಿ (ಕೋಗಯು. ೨೧–೩೨). [< ಸಂ. ವನಮಾಲಾ]

**ಒನರ್** (ಕ್ರಿ). ಉಂಟಾಗು. 'ಒನರಿಸು' ಪರಾ.

[ದೇ. ‖ ತೆಲು. ಒನರು]

**ಒನರಿಸು** (ಕ್ರಿ). ಉಂಟುಮಾಡು; ಒಡರಿಸು: ಕೊನೆವೆರಳ ನೆಲಕೊಱು ತಪಗಳನೊನರಿಸುವ (ಕೋಗಯು. ೩–೩೪); ವನಜನಾಭನ ಪದಕೆ ದ್ರೋಹವನೊನರಿಸಿದೆ ನೀನು (ಕೋಗಯು. ೧೧–೫೨); (ಕೋಗಯು. ೨೧–೪ ನೋ). [ಒನರ್ + –ಇಸು₃. / ತೆಲು. ಒನರಿಂಚು]

**ಒನಲ್**, ಒನಲು (ಕ್ರಿ). (ಅವಮಾನದಿಂದ) ಕೋಪಿಸಿಕೊಳ್ಳು; ಸಿಟ್ಟಿಗೇಳು; ಕೆರಳು: "ಒನಲ್ – ಅಪಹಸನ ಕ್ರೋಧೇ (ನಗೆಯಿಲ್ಲದೆ ಸಿಟ್ಟುಗೊಳ್ಳು)" (ಶಮಧಾ); ಕಾಯ್ಪುಕೊನಲ್ದು ಚಿಂತಿಪಳ್ ಕಳವಳಿಪಳ್ ಕರಂ ಕಟಿಯೆ ನಂಬಿಪಳಿಂಬಱಿಪಳ್ ... ಉಳ್ಳೊಡಮೆಯಂ ಕೊಳಲೆಂದವಳೊರ್ವಳೊರ್ವನಂ (ಕಾವ್ಯಸಾ. ೯೯೩ ಶೂದ್ರಕ); ಬಿರಯಿಸಿ ಬೀಟದೊಳ್ ಬಿರಿವ ನಲ್ಲರಗಲ್ದು ಕನಲ್ದೊನಲ್ದು (ಪಂಪಭಾ. ೪–೧೧೧); ಉಭಯಬಲಮುಂ ... ಕನಲ್ದೊನಲ್ದು ಕದನಕೇಳೀಕುತೂಹಲರಾಗಿರ್ಪುದುಂ (ಪಂರಾಮಾ. ೩–೧೫). **ಒನಲು**: ಇನಿಯನನು ಬಿಡಲಾಱದೊನಲಿದಳು (ಸಾಳ್ವಭಾ. ೬–೩೭). [ದೇ. ‖ ತಮಿ. ಉಡಱು, ಉಲಱು]

**ಒನಲಿ**, ಒಂದರಿ (ನಾ). (ದವಸ ಧಾನ್ಯಗಳನ್ನು ಹಸನು ಮಾಡಲು ಉಪಯೋಗಿಸುವ) ತೂತುಗಳಿರುವ ಒಂದು ಸಲಕರಣೆ; ಜರಡಿ; ಸಾರಣಿಗೆ: ಒನಲಿಯವೊಲ್ [ಪಾಠಾಂ. ಜನಲಿವ, ಬನಲಿವಲಂ] ಛಿದ್ರಂ ಮಾಡೆಪಟ್ಟ ಮೆಯ್ಯನೊಡೆಯನಾಗಿ (ವಡ್ಡಾರಾ. ೧೬೨–೬); ಎಲ್ಲಿಯುಂ ಪಡೆಯದ ಬೀಟಮಂ ಪಡೆದದಂ ಕಿಡಿಸಲ್ ತೊಱೆಯೊಳ್ ಪೊದಟ್ದು ಮುಳ್ಗಿಡು ಗಡಿಸಟ್ಟುಗಕ್ಕೊನಲಿಗಂ ದೊರೆಯಪ್ಪರೆ ಕೀಳರಪ್ಪವರ್ (ಶಾಂತಿಪು. ೮–೮೧); ಒನಲಿಯಂತೆ ಪೊಲ್ಲಮೆಯಂ ಪಿಡಿಯದೆ ಕೋಣನಂತೆ ಕದಡದೆ (ಧರ್ಮಾಮೃ. ೧–೧೮೩). **ಒಂದರಿ**: ಒಂದರಿಯಿಂದ ಯವಧಾನ್ಯವನ್ನು ಶೋಧಿಸುವಂತೆ (ಮಕ್ಸಾರ. ೨೦೩). 'ವಂದರಿ' ಪರಾ. [ದೇ. ‖ ಕೊಡ. ಒನಲಿ]

**ಒನಲಿಸು** (ಕ್ರಿ). ಕೋಪ ಬರುವಂತೆ ಮಾಡು; ಕೆರಳಿಸು: ಭೋಂಕನೆ ಮನಮಂ ಕದಡಿ ಕಲಂಕಿದವುದು ಬಿಡದೆ ಮನಮನೊ[ನಲಿ] [ಪಾಠಾಂ. ನೂಱಿ, ನೂಲಿ, ಮಾಲಿ] ಸಿದಪುದು (ಪಂಪಭಾ. ೪–೬೭); ಕನಕಶ್ರೀ ಜನಕನ ಮರಣಮುಂ ... ಮಿಕ್ಕು ಮನಮನೊನಲಿಸೆ ಕಲ್ಲನೆ ಕನಲುತ್ತುಮಿರಲ್ (ಶಾಂತಿಪು. ೪–೫೭ ವ); (ಪಂಪಭಾ. ೬–೬೩ ವ; ೭–೪೬ ನೋ). [ಒನಲ್ + –ಇಸು₃]

**ಒನಲು** 'ಒನಲ್' ನೋ.

**ಒನಲ್ಚು** (ಕ್ರಿ). = ಒನಲಿಸು: ಮನಮನೊನಲ್ಚು [ಪಾಠಾಂ. ಒಜಲ್ಚು] ವಂ ಶರಣಜಾಲದಿನಂತವು ಪೋಗೆ ಮುಟ್ಟುಗೆಟ್ಟನಿತಱೊಳೆಟ್ದಡಂಗಿದಪನಂತದಱಿಂದೆರೆದಪ್ಪನೇಣಲಾಂಛನನ ಕರಂಗಳುಳ್ಳನಿತುಮಂ (ಕಾವ್ಯಾವ. ೮೬೦). [ಒನಲ್ + –ಚು]

**ಒನೆ** (ಕ್ರಿ). ೧. ಮೊರದಲ್ಲಿ ಧಾನ್ಯವನ್ನು ಹಾಕಿಕೊಂಡು ಕಲ್ಲು, ಮಣ್ಣು ಹಿಂದೆ ನಿಲ್ಲುವಂತೆ ಅಲುಗಾಡಿಸು; ಹಸನುಮಾಡು; ಶುದ್ಧಿಮಾಡು: "ಒನೆ – ಶೂರ್ಪಕರಣೇ" (ಶಮಧಾ); ಒನೆದ ಶಿಕ್ಷಣದೆಡೆಗೆ ಬಗೆಯನೆಳೆದೊಯ್ವೆ (ಇಂಗೀತ. ೯೩–೧೮); ಹೆಂಗಸರುಗಳು ಕುಳಿತುಕೊಂಡು ಅಕ್ಕಿ ಒನೆಯುವುದು ... ಮಾಡುತ್ತಿದ್ದರು (ಮೂಲಾನ. ೧೧೦); ಮೋಡಗಳ ಮೊರದಲ್ಲಿ ತಾರೆಗಳ ತಂಡುಲವ ಒನೆವ ವನಿತೆಯ ಹಾಗೆ ತೊನೆಯೆ ಗಾಳಿ (ಕರುಶ್ರಾ. ೧೬). ೨. ಅಲುಗಾಡು; ತೂಗಾಡು: ಮಣಿವುತೊನೆವುತೊಲಿದು ನಲಿದು ಕೆಲೆದು ಮಿಱೆ ಮಲೆತು ನೋಡಿ (ನಮರ. ದೇ. ೧೯೫–೨೧); ನೋಟದ ಮೊನೆ ಮುಱಿದು ಝೊಂಪಿಸುವ ಮುಂದಣಿಗೊನೆದು ಬಿದ್ದನು ಭೀಮ (ಕುವ್ಯಾಕ. ೩–೨೬). ೩. ಅಲುಗಾಡಿಸು; ತೂಗಾಡಿಸು: ವನಜಬಾಂಧವಪ್ರತೀಕಾಶವದನದೆ ವೀರವನು ತುಳುಕಿ ತನುವನೊನೆದಡೆ ಶೈಲ ಸೆಳೆಮಿಂಚದಂತಾದುದು (ವೆಂಕಾಥಾ. ೫–೧–೧೦). ಒನೆದಾಡು = ಅಲುಗಾಡು; ಅಲ್ಲಾಡು: ಹರಿದೇವನೊಲವಿಂ ಪೊಕ್ಕು ತೂಗಾಡುತೊನೆದಾಡುತಾಹಾ ವಿರೂಪಾಕ್ಷ (ಪುಷ್ಪರ. ೯–೮); ಮರ ಒನೆದಾಡುತ್ತಿದೆ (ರೂಢಿ). [< ಒಲೆ₁]

**ಒನೆಕಲ್ಲು** (ನಾ). ೧. ಅಣ್ಣೆಕಲ್ಲು (?): ನೆನೆಯದಿರಿ ಪುತ್ರರು ಕಳತ್ರ ಸನ್ಮಿತ್ರ ಶಿರದೊನೆಕಲ್ಲನಾಡುವತಿಭಾರಮಂ ಪೊರಲಾರದೆನಗಗ್ರರಾದಿರೆಂದೆತ್ತಿ (ಜಿನಮು. ೯–೨೦). ೨. ಒನೆದಾಗ ಬರುವ ಕಲ್ಲು. 'ಹೆಗ್ಗಲ್ಲು' ಪರಾ. [ಒನೆ + ಕಲ್ಲು (< ಕಲ್₃)]

**ಒಪ** 'ಒಪ್ಪು₁' ನೋ.

**ಒಪಾದಿ** (ನಾ). ಸಂಬಂಧಿಸಿದ್ದು; ಲಗತ್ತಾದದ್ದು: ಸಂಕರದೇವರಸರ ಮಾನ್ಯದ ವಟ್ಟರದಿಂ ಮೂಡಲು ಮಧ್ಯಕದಂಗಡಿಯ ನಿವೇಶನ ಒಂದುವಂ ಪ್ರಭುಮುಖ್ಯ ಮಹಾಜನಂಗಳಿಗೆ ಪಾದಪೂಜೆಯಂ ಕೊಟ್ಟು ಊರೊಡೆಯರ ಅಂಗಡಿಯ ಒಪಾದಿಯಾಗಿ ಆಯಸಹಿತಂ ಸರ್ಬ್ಬಮಾನ್ಯವಾಗಿ ಹಡದು ಬಿಟ್ಟರು (ಸೌಇಇ. XV, ೧೧೧–೫೦; 1165). [< ಸಂ. ಉಪಾಧಿ]

**ಒಪ್ಪು₁**, ಒಪ (ನಾ). ೧. ಸಮ್ಮತಿ; ಒಪ್ಪಿಗೆ: ತಪ್ಪುಮನೆ ನುಡಿಯೆನೆಂಬುದಿದೊಪ್ಪದು ನಿನಗಹಿತರೆಯ್ದೆ ತಪ್ಪಿರ್ದರವರ್ ತಪ್ಪಿದ ಬಱಿಕ್ಕೆ ತಪ್ಪಿದ ತಪ್ಪೇಂಗಳ ನನ್ನಿಗೊಪ್ಪಮಲ್ಲದ [ಪಾಠಾಂ. ದೆ] ತಪ್ಪೇ (ಪಂಪಭಾ. ೭–೫೨). ೨. ಸಹಿ; ರುಜು: ಒಪ್ಪ ಅರಿರಾಯ ಮಸ್ತಕತಲಪ್ರಹಾರಿ (ಇಅ. VIII, ೯೫–೩; 444); ಶ್ರೀ ವೀರಬಲ್ಲಾಳದೇವರೊಪ್ಪ ... ವಿರುಪಾದೇವರಾಣೆಯರೊಪ್ಪ (ಎಕ. XVI, ಚಿಕ್ಕನಾ. ೬೮–೩೧; 1318); ಸ್ವಹಸ್ತದ ಒಪ್ಪ (ಸೌಇಇ. IX–ii, ೪೨೩–೩೩; 1400); ಅರಸಿನೊಪ್ಪದೊಳು ಸಂಗತವಾದ ರಾಯಸದವೋಲು (ಅನುಸಾ. ೧–೩–೧೫); ಒತ್ತಾಯದಿಂದ ಒಪ್ಪಹಾಕಿಸಿಕೊಂಡ ಲೇಖವು ಹೇಗೆ ಸುಳ್ಳೋ (ಯಕ್ಷಪ್ರ. ೧೫೯). ೩. ಒಪ್ಪುವಂತಹ ಮಾತು; ಅಂಗೀಕರಿಸುವಂತಹ ಮಾತು: ಒಪ್ಪವ ನುಡಿವರಯ್ಯ ತುಪ್ಪವ ತೊಡೆದಂತೆ ಶರಣ ತನ್ನ ಮೆಱೆವನೆ ಬಿನ್ನಾಣಿಯಂತೆ (ಬಸವ. ೭೭೫). **ಒಪ**: ೨. ಆಗುವಿಲಗವಿಲಚಿನಾಯಕನ ಒಪ ಶ್ರೀಭೈರವಗೌಡ ಒಪ (ಎಕ. IX, ಬೆಂಗಳೂ. ೬೧–೨೩; 1332). [ದೇ. ‖ ತಮಿ. ಮಲ. ತುಳು. ತೆಲು. ಒಪ್ಪು]

**ಒಪ್ಪು₂** (ನಾ). ೧. ಚೆಲುವು; ಸೊಗಸು; ಮೆರುಗು; ಕಾಂತಿ: ಮಾನಿಸರೊಳ್ಪಂ ಬಾಱುಮ [ದೇನೊಪ್ಪ] ಮುದೇನಸಾರ ವಿಸ್ತಾರಮದೇಂ ಮಾನಮುದೇಂ ವಿಪುಳಮದೇಂ (ಶಾಂತಿಪು. ೯–೧೦೨); ರಮಣೀಯಮಾಗೆ ರಮಣೀನಿಕರಂ ನೆರೆದಿರ್ದುದೊಪ್ಪದಿಂ (ಧರ್ಮಾಮೃ. ೪–೧೩೭); ಮುಪ್ಪಿಂದೊಪ್ಪವಳಿಯದ ಮುನ್ನ ... ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೧೬೧); ಬೆಳ್ಳಿಂಗಳನು ಕಾಸಿ ಮಿಂಚು ಹೆಪ್ಪನು ಹಾಕಿ ಕಪ್ಪಿನೊಪ್ಪವನಿಟ್ಟ ಕಣ್ಣು (ಕರುಶ್ರಾ. ೮). ೨. ಅಚ್ಚುಕಟ್ಟು; ಓರಣ: ಜೀಯನೆ ಬಲ್ಲವರ್ ನೆಱೆಯೆ ಸತ್ಕೃತಿವೇಱದೆ ... ಅಂಥಲಾವುಕನ್ಯಾಯದೆ ಭಾವಮೊಂದೆರಡು ಲೇಸೆನೆ ಪೇೞ್ದುದಿರ್ಪುದೊಪ್ಪಮೇ (ಚಂದ್ರಪು. ೧–೪೮); ಅಗಧರನ ಮನೆಯೊಪ್ಪವನು ಕಾಣುತ್ತ ಬೆಱಗಾದ (ನಿಭಾಗ. ೩–೪–೧೪); ಅವಳ ಕೆಲಸ, ಜಾಣತನ, ಒಪ್ಪ ಎಲ್ಲನೋಡಿ ... ಆದರಿಸಬೇಕಪ್ಪ (ಮಹಾಗ. ೩೨೭). ೩. ಸ್ಥಿತಿ; ರೀತಿ; ಇರುವಿಕೆ: ದಯಾಪರೆ ಭುವನೈಕಮಾತೆ ಪದೆದೀಕ್ಷಿಪುದೆನ್ನಯ ದುಃಖದೊಪ್ಪಮಂ (ಗಿರಿಕ. ೮–೭೮); ನಂಬುಗೆಯ ಒಪ್ಪದಲಿ ಕೊಂಡಾ ಪುರಕೆ ಕೈತಪ್ಪುಮಾಡದೆ ತಿರುಗಿದನು ನಿಮ್ಮಪ್ಪ (ತೊರರಾ. ೪–೯–೩೪); ಒಱೆವ ಕಣ್ಣೀರೊಪ್ಪದಿಂದೊಳ್ಗೆಳದಿಗೆ ಮಱುಕವ ಮನಗೊಳಿಸುವಳು (ಹದಿಬ. ೭–೧೬). ೪. ರೂಪ; ಆಕಾರ: ದರ್ಪ[ಣ]ದ ಒಪ್ಪ ಅತ್ತರೆ ಅತ್ತು ನಕ್ಕರೆ ನಕ್ಕು ತಾನಾಡಿದಂತೆ ಆಡುವುದು (ಅಱಿಮಾ. ೨೦೭). ೫. ಆಭರಣ (ಕ).

ಒಪ್ಪಓರಣ = ಅಚ್ಚುಕಟ್ಟುತನ : ಮಡದಿಯು ಒಲವಿನಿಂದ ತಯಾರಿಸಿದ್ದ ತಿಂಡಿ - ತಿನಿಸು ; ಮನೆಯ ಒಪ್ಪ - ಓರಣ (ನಡೆದಾ. II, ೯೬೬). ಒಪ್ಪದಚೀಟು = (?) : ಮಾಟಕೂಟ ನಷ್ಟವಾದಲ್ಲಿ ಮಹಾಮನೆಯ ಯೆಡೆಯಾಟವುಂಟಿ ಪಟ್ಟಿಯನೊಪ್ಪಿಸಿದವಂಗೆ ಮತ್ತವೊಪ್ಪದ ಚೀಟುಂಟಿ ಭಕ್ತನಾಗಿ ಮಾಡಿಕಂಡೆ ಭೃತ್ಯನಾಗಿ ಕಾಯಿದು ಕಂಡೆ (ಕೋಲಶಾಂ. ೯೬). ಒಪ್ಪಮಾಡು = ೧. ಅಚ್ಚುಕಟ್ಟುಮಾಡು ; ಸರಿಪಡಿಸು : ದಂಡಮೊತ್ತುವ ಮೃಗಾಜಿನಮಂ ಪೊಲುತಿರ್ಪ ಮುಂಜ ಮೇಖಲೆಗಳನೊಪ್ಪಮಾಡುವ . . . ವ್ಯವಸಾಯಮೆತ್ತಲುಂ (ಕಾದಂಪೂ. ೩೨೪). ೨. (ಆಲಂ) ಅಂತ್ಯಸಂಸ್ಕಾರಮಾಡು : ಒಡಲ ಪೇಳಿಗೆಯಲಿ ಒಪ್ಪಮಾಡಲು ಇಲ್ಲ, ಬಟ್ಟೆ ದುಪ್ಪಟಿಯಲಿ ಸುತ್ತಲು ಇಲ್ಲ ; ನಿದ್ದೆ ಹೋಗುವ ವೀರನಂದದಿ ಬಿದ್ದಿದ್ದ (ಇಂಗೀತ. ೧೯-೯). ಒಪ್ಪವಾಗಿಡು = ಅಂದವಾಗಿಡು ; ಅಚ್ಚುಕಟ್ಟಾಗಿಡು : ಹೆಂಡತಿ ಮನೆಯನ್ನು ಒಪ್ಪವಾಗಿಟ್ಟುಕೊಂಡು (ನನ್ನ ಪ. ೧೧೨). ಒಪ್ಪವಾಗು = ಅಂದವಾಗು ; ಅಚ್ಚುಕಟ್ಟಾಗು : ಜಿಡ್ಡಾದ ಪಾತ್ರೆಗಳನ್ನು ಕಡಲೆಹಿಟ್ಟು ಸೀಗೆಪುಡಿ ಮಿಶ್ರಮಾಡಿ ಉಜ್ಜಿದರೆ ಒಪ್ಪವಾಗುವುವು (ಗೃಹವಿ. ೧೮೮). ಒಪ್ಪಾನೆ = ೧. ಒಪ್ಪವಾಗಿ (*). ೨. ಒಪ್ಪ ; ಓರಣ (*). [< ಒಪ್ಪು$_2$?]

**ಒಪ್ಪಂಗಿಡಿಸು** 'ಒಪ್ಪಂಗೆಡಿಸು' ನೋ.

**ಒಪ್ಪಂಗಿಡು** 'ಒಪ್ಪಗೆಡು' ನೋ.

**ಒಪ್ಪಂಗುಂದು** (ಕ್ರಿ). ಅಂದ ಕೆಟ್ಟುಹೋಗು ; ಕಾಂತಿಗುಂದು : ಬಾಳ ಬಾಯ್ದಾರೆಯ ಸೋಂಕೆಂದು ಕದಳೀದಳ ಸ್ಪರ್ಶನಕ್ಕೆ ದರ್ಪಂಗೆಟ್ಟೊಪ್ಪಂ ಗುಂದುತ್ತುಂ (ಗಿರಿಕ. ೪-೧೯ ವ).
[ಒಪ್ಪ$_2$ + ಕುಂದು$_1$]

**ಒಪ್ಪಂಗೆಡಿಸು**, ಒಪ್ಪಂಗಿಡಿಸು, ಒಪ್ಪಗೆಡಿಸು (ಕ್ರಿ). ಸೊಗಸುಕುಂದಿಸು ; ಅಂದಗೆಡಿಸು ; ಕ್ರಮತಪ್ಪಿಸು : ಅನುಪಮಬಲಂ ಬಭ್ರುವಾಹನಂ ಕಾದಲವನನುವನೊಪ್ಪಂಗೆಡಿಸಿ [ಪಾಠಾಂ. ಗಿಡಿಸಿ] ಹಂಸಧ್ವಜನ ಜಯವನನುಕರಿಸಿ (ಜೈಮಿಭಾ. ೨೫-೩೦). **ಒಪ್ಪಂಗಿಡಿಸು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಒಪ್ಪಗೆಡಿಸು** : ನಿಮಿಷದೊಳೊಪ್ಪಗೆಡಿಸಿದವರಿಕದಂಬವನೀತನಂಬುಗಳು (ಕುವ್ಯಾದ್ರೌ. ೨-೫೩) ; ತಪ್ಪುವನೆ ರವಿಕುಲದ ರಾಘುವನೊಪ್ಪಗೆಡಿಸಿದ ಶೂರ್ಪನಖಿಯನು ಮುಪ್ಪುರಿಯ ದಾನವರನೊರಸಿದ (ಕೌಶಿರಾ. ೧೦-೨೩). [ಒಪ್ಪ$_2$ + ಕೆಡಿಸು]

**ಒಪ್ಪಂಗೆಯ್** (ಕ್ರಿ). ಸರಿಪಡಿಸು ; ತಿದ್ದು ; ಸೊಗಸಾಗಿಸು : ತಪ್ಪುಳ್ಳೊಡೊಪ್ಪಂಗೆಯ್ವುದಾರ್ತ ಮಿಗೆ ಕವಿಮುಂಗನಂಗಮಂ ಪದಬಂಧಬಂಧುರಮನವಧರಿಪುದು (ಮಂಗರಾ. ೨-೩) ; ಕವಡಿಂದಂ ಕರುವಿಕ್ಕಿ ಕಕ್ಕನೆಜಿದೊಪ್ಪಂಗೆಯ್ದು (ಚಕವಿ. ೬-೮೮).
[ಒಪ್ಪ$_2$ + ಗೆಯ್ (< ಕೆಯ್$_1$)]

**ಒಪ್ಪಂಗೊಳಿಸು** (ಕ್ರಿ). ಸರಿಪಡಿಸು ; ಅಳವಡಿಸು : ಬೊಟ್ಟಂ ನೊಸಲಲ್ಲಿಟ್ಟು ಬೈತಲೆಯನೊಡನಮರ್ಚಿ ಪೊಳೆವ ಸೂಸಕಮನೊಪ್ಪಂಗೊಳಿಸಿ ಕೋಮಲೆಯರಳಿಕುಳಾಳಕಿಗೆ ಸೀಮಂತಮಣಿಯಂ ಧರಿಸಿ (ಪದ್ಮರಾ. ೩-೪೮). [ಒಪ್ಪ$_2$ + ಕೊಳ್$_1$ + -ಇಸು$_3$]

**ಒಪ್ಪಂದ** (ನಾ). ಸಮ್ಮತಿ ; ಒಪ್ಪಿಗೆ ; ಒಡಂಬಡಿಕೆ ; ರಾಜಿ : ಶ್ರೀರಂಗಪಟ್ಟಣದ ರಾಜ್ಯಸಿಂಹಾಸನಗಳನ್ನು ಯಾವ ಒಪ್ಪಂದಗಳ ಮೇಲೆ ರಾಜಒಡೆಯರಿಗೆ ಒಪ್ಪಿಸಿದನು ಎಂಬುದಕ್ಕೆ ಏನಾದರೂ ಶಾಸನಾಧಾರಗಳುಂಟೇ ಎಂದು ಶೋಧನೆಯಾಗುತ್ತಿದೆ (ಸಂಸಕ. ೧೦೯) ; ಸ್ವಂತತಾವಾಗಿ ಮಾಡಿದ ಒಪ್ಪಂದಗಳನ್ನು ಅವರು ಹೇಗೆ ಮುರಿದರು? (ಪ್ರಬಂಧ. ೫೬) ; ಮೂರುಸಲ ಒಪ್ಪಂದ, ನೂರುಸಲ ಯುದ್ಧ, ಆವರಿವರ ಸಂಧಾನ ಮೊದಲೇ ನಿಷಿದ್ಧ ! (ನೆಲಮು. ೫).

ಒಪ್ಪಂದಕ್ಕೆಬರು = ಏಕಾಭಿಪ್ರಾಯಕ್ಕೆ ಬರು : ಅವರು . . . ಒಪ್ಪಂದಕ್ಕೆ ಬಂದರು (ಝೂರಾಣಿ. ೪೨). ಒಪ್ಪಂದಮಾಡಿಕೊ = ಒಪ್ಪಿಕೊ ; ಕರಾರು ಮಾಡಿಕೊ : ಪರಸ್ಪರ ವಿಚಾರವಾಗಿ ಮಾತುಕತೆಗಳನ್ನು ನಡೆಸಿ ಒಪ್ಪಂದಮಾಡಿಕೊಂಡರು (ಕೃದೇವ. ೧೯).
[ದೇ. ‖ ತಮಿ. ಒಪ್ಪನ್ದ ; ತುಳು. ತೆಲು. ಒಪ್ಪಂದ]

**ಒಪ್ಪಂದಳೆ** (ಕ್ರಿ). ಚೆಲುವಾಗು ; ಕಾಂತಿಯನ್ನು ಪಡೆ : ಅಲಘುತರಾಕಾರಂ ಕಣ್ಗೊಪ್ಪಂದಳೆದನಮರಭೂಧರವೆಂಬಂತೆ (ಜಯಕಾ. ೪-೫೩) ; ಮೆಲ್ಕಾಡುತಂ ಕಾಡೊಳೊಪ್ಪಂದಳೆದಿರ್ದತ್ತಭ್ರಕಾಯಂ ಪೃಥು ಮಹಿಷನಿಕಾಯಂ (ರಾಜಶೇ. ೫-೮೯). [ಒಪ್ಪ$_2$ + ತಳೆ$_1$]

**ಒಪ್ಪಂಬಡು** (ಕ್ರಿ). ಸೊಗಸಾಗು ; ಅಂದವಾಗು : ತೊಡವು ವಸನಾದಿಗಳಲೊಪ್ಪಂಬಡುವ ಬಲಿಯುನು ಹರಿಯೊಳರ್ಪಿಸಿ (ಕುವ್ಯಾದ್ರೌ. ೯-೩).
[ಒಪ್ಪ$_2$ + ಪಡು$_1$]

**ಒಪ್ಪಂಬಡೆ**, ಒಪ್ಪವಡೆ (ಕ್ರಿ). ೧. ಚೆಲುವಾಗು ; ಸೊಗಸಾಗು : ಸಹಜಮಪ್ಪ ಕಾಂತಿಯೊಳೊಪ್ಪಂಬಡೆದು ಲೆಪ್ಪದಂತಿರ್ದ ಮುಗನಂ ಗೆಂಟೆನೊಳೆ ಕಂಡು (ಕಾದಂಉ. ೬೮೨) ; ಪೊಗಟ್ತೆವೆತ್ತು ಒಪ್ಪಂಬಡೆದ ಯಿರುಪಗ ದಂಡಾಧೀಶನ ಸತ್ಕೀರ್ತಿಯೆಂತೆಂದೊಡೆ (ಖಪುದ. ೧-೨೯ ವ) ; ಹೊಂದೊಡರ ಹಾರಾದಿಗಳಲೊಪ್ಪಂಬಡೆದು (ಕುವ್ಯಾದ್ರೌ. ೪-೪೯). ೨. ಅಚ್ಚುಕಟ್ಟಾಗಿರು ; ಓರಣವಾಗಿರು : ಉಜ್ ತಳೆದೊಪ್ಪಂಬಡೆದಿರೆ ತೇರ್ಗಳ ನಿವಹಂ (ಹಾಲಾಸ್ಯ. ೧-೨೦ ರಗಳೆ). **ಒಪ್ಪವಡೆ** : ೧. ದರ್ಪಕಮಡಗಿರ್ದ ದ್ರವ್ಯಪೂರಿತ ಹೇಮ ಕೊಪ್ಪರಿಗೆಯ ಕುಡಿರೆನಲು ಒಪ್ಪವಡೆದ ವೃತ್ತಕುಚ ತೋಱಿದುವು (ಮೋಹತ. ೧೮-೯೫) ; ಒಪ್ಪವಡೆದ ಯಾಗಶಾಲೆ (ಮೋಹತ. ೨೦-೩೦). [ಒಪ್ಪ$_2$ + ಪಡೆ$_1$]

**ಒಪ್ಪಂಬೂಸು** (ಕ್ರಿ). ೧. ಮೆರುಗುಹಾಕು ; ಹೊಳಪುಕೊಡು : ಒಪ್ಪಂ [ಪಾಠಾಂ. ತುಪ್ಪಂ] ಬೂಸಿದವೋಲ್ ತೆಱಂಬೊಳೆವ ಕೊಂಕುಂ (ಕಬ್ಬಿಕಾ. ೫) ; ಲೆಪ್ಪದ ಬೊಂಬೆಯನೆಱಕಂಬೊಯ್ದೊಪ್ಪಂಬೂಸಿದ ಪುತ್ತಳಿಯಂ (ರಾಮಾಶ್ವ. ೧೧-೨೦). ೨. (ಆಲಂ) ಮರುಳುಮಾಡು : "ದೇವ, ಇಂದೆಮಗಿರ್ವರ್ಗುಂ ಒಳ್ನುಡಿಯಿನೊಪ್ಪಂಬೂಸಿದ್ಯೆ . . ." (ಅದ್ಭುತ. ೧೩-೧೧). [ಒಪ್ಪ$_2$ + ಪೂಸು$_1$]

**ಒಪ್ಪಂಬೆಱು**, ಒಪ್ಪವೆಱು (ಕ್ರಿ). ಚೆಲುವಾಗು ; ಕಾಂತಿಯನ್ನು ಪಡೆ : ಏಂ ಪದಾಂಗುಳಿಗಳೊಪ್ಪಂಬೆತ್ತುವೋ ಕಾಂತೆಯಾ (ಕಾದಂಉ. ೬) ; ಗವೇಂದ್ರಕಂದರದಂತೆ ನಿಸ್ಥೂಲಾಕಾರದಿಂದೊಪ್ಪಂಬೆತ್ತಿರ್ದ ರೇಖಾತ್ರಯಾಂಕಿತ ಕಂಠಕಂದಳಮುಂ (ಬಾಧಪು. ೨-೧೨). **ಒಪ್ಪವೆಱು** : ಜೊನ್ನದೊಂದು ಪುತ್ತಳಿಯವೊಲೊಪ್ಪವೆತ್ತ ಬಿದುಗಲ್ಲಿನ ಪಾಂಗಿನಂತೆ (ಕಬ್ಬಿಕಾ. ೮೦). [ಒಪ್ಪ$_2$ + ಪೆಱು$_1$]

**ಒಪ್ಪಕಾಱ** (ನಾ). ಅಚ್ಚುಕಟ್ಟು ಮಾಡುವವನು ; ಓರಣವಾಗಿ ವ್ಯವಸ್ಥೆಗೊಳಿಸುವವನು : ಗಜಱುವ ಗಳೆಕಾಱರ ಚಪ್ಪರಿಸುವೊಪ್ಪಕಾಱರ ಕರೆವ ಪರಿಕಾಱರ . . . ನೆರವಿಗಳಂ (ಅನಂಪು. ೨-೨೯ ವ).
[ಒಪ್ಪ$_2$ + -ಕಾಱ]

**ಒಪ್ಪಗಾಣಿಸು** (ಕ್ರಿ). ಮೆರುಗನ್ನು ಕೊಡು ; ಒಪ್ಪಹಾಕು : ಸಾಣೆಯ ಮೇಲೆ ರನ್ನಗಳಿಟ್ಟು ಮಸೆದೊಪ್ಪಗಾಣಿಸಿ ಕುಡುವ ತೇಟಿಗರು (ಮೋಹತ. ೩-೨೬). [ಒಪ್ಪ$_2$ + ಕಾಣಿಸು]

**ಒಪ್ಪಗಾತಿ** (ನಾ). ೧. ಅಂದಗಾತಿ. ೨. ಅಚ್ಚುಕಟ್ಟುತನದವಳು : "ಎಲ್ಲರ ಹೆಂಡತಿಯರಿಗಿಂತ ನಿಶ್ಚಯವಾಗಿಯೂ ನನ್ನ ಹೆಂಡತಿಯೇ ಒಪ್ಪಗಾತಿಯು, ಸದ್ವರ್ತನವುಳ್ಳವಳು . . ." (ಕವಿಕ. ೯೧). ೩. ಮಿತವ್ಯಯ ಮಾಡುವವಳು: ಈ ಮಲ್ಲವ್ವನು ಒಪ್ಪಗಾತಿ; ಹೆಚ್ಚು ವೆಚ್ಚವನ್ನು ಮಾಡತಕ್ಕವಳಲ್ಲ (ನೀತಿಚಿಂ. XI, ೩೨). [ಒಪ್ಪಗಾರ$_0$ + -ತಿ$_1$ (< -ಇತ್ತಿ)]

**ಒಪ್ಪಗಿಸು** (ಕ್ರಿ). ಸಮರ್ಪಿಸು ; ಒಪ್ಪಿಸು : ರಘುನಂದನನ ಚರಣಮಂ ಪೊಂದಿ . . . ರಾಜ್ಯಮನ್ನೊಪ್ಪಗಿಸಿ ಸುಖದೊಳಿಹೆ ಸೇವೆವೆರಸಿ (ವೆಂಕಾರಾ. ೧–೨೭–೧೪) ; ರಾಘವಗೆ ಸೀತೆಯಂ ಚಳಕದಿಂದೊಪ್ಪಗಿಸಿ ಗೋತ್ರರಕ್ಷಣೆಗೈವುದುಚಿತ (ವೆಂಕಾರಾ. ೫–೧೭–೩೪) ; (ವೆಂಕಾರಾ. ೧–೨೭–೨೪ ; ೫–೯–೩೪ ನೋ). [< ಒಪ್ಪಯಿಸು$_1$ ?]

**ಒಪ್ಪಗೆಡಿಸು** 'ಒಪ್ಪಂಗೆಡಿಸು' ನೋ.

**ಒಪ್ಪಗೆಡು**, ಒಪ್ಪಂಗಿಡು (ಕ್ರಿ). ಅಂದಗೆಡು ; ಕಾಂತಿಗುಂದು : ಫಲ ಒಳಗೆ ಪಕ್ವವಾಗಿಯಲ್ಲದೆ ಹೊಱಗಣ ಸಿಪ್ಪೆ ಒಪ್ಪಗೆಡದು (ಮಹಾದೇ. ಬ. ೭೩–೧೮೩) ; ಕಳಲ್ದೋರಣದ ಒಪ್ಪಗೆಟ್ಟ ಉಡುಗೆತುಡುಗೆಗಳ ಈ ಶೃಂಗಾರ ಮುದ್ರೆಯಲ್ಲಿ (ಚಿಟ್ಟಅ. ೧೦–೧೭). **ಒಪ್ಪಂಗಿಡು** : ಧಾತ್ರೀತಳಂ ಬಿನ್ನಗಾದವೊಲೊಪ್ಪಂಗಿಡೆ ವಲ್ಲಭಾವಿರಹಿತಂ ಬೆಂದಿರ್ದನುರ್ವೀಶ್ವರಂ (ಲೀಲಾವ. ೧೪–೫೩). [ಒಪ್ಪ$_2$ + ಕೆಡು]

**ಒಪ್ಪಗೊಡು** (ಕ್ರಿ). ಒಪ್ಪಿಗೆ ಕೊಡು ; ಸಮ್ಮತಿಸು : ಮಾತಿಗೆ ಮೊದಲು ಹುಂದ ಒಪ್ಪಗೊಟ್ಟು ಕೊನೆಗೆ ಉಹುಂ ತರುವುದೂ ನಂಬಿಗೆಗೇಡಿಯಾಗುವುದಕ್ಕೆ ಸಂಚಕಾರ (ದಾಬುತ್ತಿ. ೨೧). [ಒಪ್ಪ$_1$ + ಕೊಡು]

**ಒಪ್ಪಚಿ** 'ಒಪ್ಪಚ್ಚಿ' ನೋ.

**ಒಪ್ಪಚ್ಚಿ**, ಒಪ್ಪಚಿ (ನಾ). ೧. ಸ್ವಲ್ಪ ; ತುಸು ; ಕೊಂಚ ; ಲೇಶ : "ನಸುವೆಂದೊಪ್ಪಚ್ಚಿ" (ಕರ್ಣಾನಿ. ೨೩) ; ಕೂಡಿ ಕೂಡುವ ಸುಖದಿಂದೊಪ್ಪಚ್ಚಿ ಅಗಲಿ ಕೂಡುವ ಸುಖ ಲೇಸು (ಮಹಾದೇ. ೩೫–೧೧) ; ಸತ್ತನಾಯ ತಂದಟ್ಟ ಮೇಲೆ ಇಳುಹಿ ಒಬ್ಬರೊಪ್ಪಚ್ಚಿ ಹಂಚಿಕೊಂಡು ತಿಂಬಂತೆ (ದೇದಾಪ್ರ. ೧೧೧–೫೧). ೨. ಒಮ್ಮೆ ; ಒಂದು ಸಲ : ಒಮ್ಮೆ ಧರಿಸಿ ಒಮ್ಮೆ ಇರಿಸಿ ಶುಚಿಯಾದೆನೆಂದು ಅಶುಚಿಯಾದೆನೆಂದು ಭವಿಯಾಗುತ್ತೊಮ್ಮೆ ಭಕ್ತನಾಗುತ್ತೊಮ್ಮೆ ಒಪ್ಪಚ್ಚಿ ಹೊಲೆ ಒಪ್ಪಚ್ಚಿಕುಲವೆಂದು ತೆಱನಱಿಯದಿಪ್ಪ (ಆದವ. ೭೭) ; ಬಾಲನಂತೊಪ್ಪಚ್ಚಿ ಹುಚ್ಚನಂತೊಪ್ಪಚ್ಚಿಯಾಲಲಿತ ಸದಗುಣಗ್ರಾಹಿಯೊಪ್ಪಚ್ಚಿ . . . ನೋೞ್ಪರ ಕಣ್ಗೆ ತೋಱುವ (ಗುರುಚಾ. ೧೪–೩೨). **ಒಪ್ಪಚಿ** : ೧. ಕೂಡಲಸಂಗನ ಶರಣರು ಬಂದರೆ ಏಗುವುದು ಏಬೆಸನೆಂಬುದು ಒಪ್ಪಚಿಯುಳವಡದು (ಬಸವ. ೩೦೨) ; ಗುಱುತಿನ ಹೊಂತಕಾಱಿಗಳೊಳೊರ್ವನನೊಪ್ಪಚಿ ತಾಣವಿಕ್ಕುವಂದುಱುಬಿನೊಳೊತ್ತಿ ಪಾಯ್ದುಱೆ ಮೊಗಂಗೆಡಿಸಲ್ (ಚಕವಿ. ೪–೧೪೦) ; ಅಂಗರೋಳಿಗೆಯ ಮುಳ್ಳಿಱಿದು ಒಪ್ಪಚಿ ತೆಂಗಿನಕಾಯಹಾಲು ಹಾಕಿ (ಭೀ ಮ ಸೂ. ೧೭–೫) ; ಸೊಡರು ಲಂಚವ ಕೊಂಡು ಕೊಡುವದೊಪ್ಪಚಿ ಬೆಳಗ ಪೊಡವಿಗೆ ಸೂರ್ಯ ಬೆಳಗೀವೊಲ್ಲಂಚವ ಹಿಡಿಯದವ ಧರ್ಮಿ (ಸರ್ವಜ್ಞ. ೧೩೧೭). ☞ ಈ ಶಬ್ದ ಸಾಮಾನ್ಯವಾಗಿ ಕ್ರಿಯಾವಿಶೇಷಣದಂತೆ ಅವ್ಯಯ ರೂಪದಲ್ಲಿ ಪ್ರಯೋಗವಾಗುತ್ತದೆ. [?]

**ಒಪ್ಪಟ್ಟು** (ನಾ). ಒಂದು ಪಟ್ಟು, —ಸಲ, —ಬಾರಿ : ನಿನ್ನ ಬಳಿಯಿರುವ ಹಣವನ್ನೆಲ್ಲ ಅವಳಿಗೆ ಕೊಟ್ಟುಬಿಟ್ಟು ನಮಸ್ಕಾರಹಾಕಿ ಒಪ್ಪಟ್ಟಿಗೆ ಅವಳ ಚಿಂತೆಯನ್ನು ಬಿಡುವುದು ತರವಲ್ಲವೆ? (ಪುನರು. ೧೯೫).
[ಒರ್ (< ಒಂದು$_3$) + ಪಟ್ಟು$_3$]

**ಒಪ್ಪಡಸು** (ಕ್ರಿ). ಕಾಂತಿಹೀನವಾಗು ; ಕಳೆಗುಂದು (?) : ತನತನಗೆ ಕರಚರಣನೊ[ವೊ]ಪ್ಪಡಸಿ ವಿರಹತಾಪದಿ ನೆಲದೊಳಂ ಕೆಡಹುತೆ (ನವಮೋ. ೨೬–೪೮). [ಒಪ್ಪ$_2$ + ಅಡಸು ?]

**ಒಪ್ಪಣ** (ನಾ). ಒಂದು ಪಣ (ಠ). [ಒರ್ (< ಒಂದು$_3$) + ಪಣ$_1$]

**ಒಪ್ಪಮಿಡು** 'ಒಪ್ಪವಿಡು' ನೋ.

**ಒಪ್ಪಯಿಸು$_1$** 'ಒಪ್ಪಿಸು' ನೋ.

**ಒಪ್ಪಯಿಸು$_2$** (ಕ್ರಿ). ಮೆರುಗುಕೊಡು ; ಬಣ್ಣಹಾಕು (ಠ).
[ಒಪ್ಪ$_2$ + -ಇಸು$_3$]

**ಒಪ್ಪಯ್ಸು** 'ಒಪ್ಪಿಸು' ನೋ.

**ಒಪ್ಪರ** (ನಾ). ಕಣ್ಣಿಗೆ ಕಟ್ಟುವ ಮರೆ, —ತೆರೆ : "ಒಪ್ಪರಮೆ ಕಣ್ಣಟೊಪ್ಪಿಗೆ" (ಭಾರನಿ. ೯). [?]

**ಒಪ್ಪರೆ** 'ಒಪ್ಪಾರು' ನೋ.

**ಒಪ್ಪಲ** 'ಒರ್ಪಲ' ನೋ.

**ಒಪ್ಪವಡೆ** 'ಒಪ್ಪಂಬಡೆ' ನೋ.

**ಒಪ್ಪವಳಿ** (ಕ್ರಿ). ಅಂದಕೆಟ್ಟುಹೋಗು ; ಕಾಂತಿಗುಂದು : ಮುಪ್ಪಿಂದೊಪ್ಪವಳಿಯದ ಮುನ್ನ . . . ಪೂಜಿಸು ನಮ್ಮ ಕೂಡಲ ಸಂಗಮದೇವನ (ಬಸವ. ೧೬೧) ; ಮಂಗಳದ ಮನೆದೈವವಾಗಿ ಮೆಱೆವಂತೆ ಜರೆಯಂಡಲೆಯೊಳೊಪ್ಪವಳಿದಂಗಸಮುದಾಯಶೋಭಿ ಯೋಗಿಪತಿ ಗರ್ಭದೊಳ್ ಮೊಳೆಯೆ (ಸಿದ್ಧರಾ. ೧–೪೮) ; ಶಿವಂ ಹೋಗೆ ಕುಳ್ಳಿರ್ದ ಮೆಳೆ ಇಂದು ತೊಲಗಿದ ರಾತ್ರೆಯಂತೊಪ್ಪವಳಿದಿರಲು ಕಂಡನಾ ಸಿದ್ಧೇಂದ್ರನು (ಸಿದ್ಧರಾ. ೨–೩೪). [ಒಪ್ಪ$_2$ + ಅಳಿ$_1$ (<ಅೞಿ$_1$)]

**ಒಪ್ಪವಿಕ್ಕು** (ಕ್ರಿ). ಮೆರುಗುಕೊಡು ; ಹೊಳಪುಕೊಡು : ಓಸರಿಸದೊಪ್ಪವಿಕ್ಕದ ರತ್ನದಂತೆ ನೆಲ ಹೇಸುವಂದದ ನಡೆಯನುಳಿದು ಸಚ್ಚಾರಿತ್ರಮಂ ಕಳೆದು ಮಯನೊಪ್ಪಿದಂ (ಸಮ್ಯಕೌ. ೧೦–೨೧) ; ಚೆನ್ನಾಗಿ ಪುಳಿದೊಡೆದೊಪ್ಪವಿಕ್ಕಿದ ಚೊಕ್ಕ ಚಿನ್ನದ ಪ್ರತುಮೆಗಳಂತೆ ರನ್ನದ ಮುತ್ತ ಹಾರವನಿಟ್ಟು ಸುಗುಣಸಂಪನ್ನೆಯರಿರ್ದರಿಕ್ಕೆಲದಿ (ಮೋಹತ. ೧೮–೩೬).
[ಒಪ್ಪ$_2$ + ಇಕ್ಕು]

**ಒಪ್ಪವಿಡಿ** (ಕ್ರಿ). ೧. ಒಪ್ಪಹಾಕು ; ಸೊಗಸುಗೊಳಿಸು : ಕೈರವದ ಸಬಳಮನೊಪ್ಪವಿಡಿವ ಕುಮುದಾಕ್ಷಿಯರಿಂ (ಗಿರಿಕ. ೭–೧೧ ವ). ೨. ಸೊಗಸಾಗಿರು : ಕಣ್ಣಗೆಸೆವಂತೊಪ್ಪವಿಡಿದಿಹ ಸುವರ್ಣವಲ್ಲಿಯ ಪುರಕ್ಕೆಯ್ತಂದರಾ ಗರುವ ಗಂಧರ್ವರು (ಸಿದ್ಧರಾ. ೧–೩೧).
[ಒಪ್ಪ$_2$ + ಪಿಡಿ$_1$]

**ಒಪ್ಪವಿಡು**, ಒಪ್ಪಮಿಡು (ಕ್ರಿ). ೧. ಮೆರುಗುಹಾಕು ; ಸೊಗಸಾಗಿಸು : ಬೆಳಗಂ ಬೆಳಸುವಂತೆ ಭಕ್ತಿಯನೊಪ್ಪವಿಡುವಂತೆ ಜೀವವನೋವುವಂತೆ (ನಂಬಿರ. ೨–೧೦೪) ; ಎಳಮಿಂಚಿಂಗೊಪ್ಪವಿಟ್ಟಂತಮೃತದ ಕಳೆ ರೂಪಾದುದೆಂಬಂತೆ . . . ಕಾಂತೆ ಕಣ್ಗೆಡ್ಡಮಾದಳ್ (ಸೂಕ್ತಿಸು. ೭–೨೮) ; ಪೊರೆಯೆತ್ತಿನ ಕುಡಿಮಿಂಚಿನ ತಿರುಳನಾದರದಿಂದೆ ಮಸೆದೊಪ್ಪವಿಟ್ಟಂತೆ . . . ಎಸೆವ ದೇವನ ಕಂಡ (ತ್ರಿ ಭು ತಿ. ೩–೩೩) ; ಅಂಗಜನ ಬಾಣವನೆ ಮಸೆದೊಪ್ಪವಿಟ್ಟಂತೆ ಕಂಗೆಡ್ಡಮಾದ ಕಾಂತೆ (ಸಾಳ್ವಭಾ. ೧೬–೪) ; ಒಪ್ಪವಿಟ್ಟು ವಚನವ ನುಡಿದೆನಲ್ಲದೆ ನಡೆಯಲ್ಲಿ ಒಪ್ಪವಿಟ್ಟು ನಡೆಯಲಿಲ್ಲವಯ್ಯ ನಾನು (ಅಖಂಡೇ. ೯೫–೧೩). ೨. ಯೋಗ್ಯವಾದ ಸ್ಥಾನದಲ್ಲಿರಿಸು ; ಉಚಿತವಾದ ಸ್ಥಳದಲ್ಲಿರಿಸು ; ಸರಿಯಾಗಿರಿಸು : ಇದೆ ಬಂದಪೆನೆನುತ ಬಿಗಿಯಪ್ಪಿಕೊಳುತಂ ಹಾಡು ಹಾಡುತ್ತೆನ್ನ ಮುದ್ದುಗಳ ಒಪ್ಪವಿಡುತ (ಬಸವು. ೪೭–೪೨) ; ಚಪ್ಪನ್ನ ದೇಶದ ಚೋದ್ಯ ವಿದ್ಯಾಧಿಕರೊಪ್ಪುವ ನೋಟಕ ಜನವ ತಪ್ಪದೆ ಸಾಲಱಿದಂತರಾಂತರದೊಳಗೊಪ್ಪವಿಟ್ಟರು ಮುದದಿಂದ (ಕಂನವಿ. ೨೧–೫೦). **ಒಪ್ಪಮಿಡು** : ೧. ತಿರುಳಮಿಂಚಿಂದೊಪ್ಪಮಿಟ್ಟಂತಿರುಜ್ಜ್ವಲಿಪಾಸ್ಯಂ (ಅನಂಪು. ೨–೧೪). ೩. (ಆಲಂ) ಅಂತ್ಯಸಂಸ್ಕಾರಮಾಡು : ನೀಮಂದು ಕಱಿದಂದು ನನ್ನ ಕಯ್ಯಾರವೇ ನಿಮ್ಮ ನಾನ್ ತೊಳೆದೆನೇ, ಮತ್ತೊಪ್ಪಮಿಟ್ಟೆನೇ (ಅಂತಿಗೊ. ೪೧–೮೪೯).
[ಒಪ್ಪ$_2$ + ಇಡು$_1$]

**ಒಪ್ಪವುಡುಗು** (ಕ್ರಿ). ಅಂದ ಕಡಮೆಯಾಗು : ಬಿಸಿಲ್ ಪೊಯ್ಯದೊಪ್ಪವುಡುಗದ ಹೂವನೆಡೆವಿಡದೆಯಱಿಸಿ ಕೊಯ್ದಂ ಸಿದ್ಧವಲ್ಲಭಂ (ಸಿದ್ಧರಾ. ೪–೩೭). [ಒಪ್ಪ$_2$ + ಉಡುಗು$_1$]

**ಒಪ್ಪವೆಱು** 'ಒಪ್ಪಂಬೆಱು' ನೋ.

**ಒಪ್ಪಸಲಗೆ,** ಒಪ್ಪಸಲಿಗೆ (ನಾ). ಒಪ್ಪಹಾಕಲು ಬಳಸುವ ಲೋಹದ ಕಡ್ಡಿ ; ಆಭರಣಕ್ಕೆ ಹೊಳಪು ಕೊಡಲು ಉಜ್ಜುವ ಸಣ್ಣ ಸಲಾಕೆ : ಮಿಸುಪಮೃತ ಕಿರಣಕಲೆಯಿಂ ಪೊಸಕಪ್ಪುರದೊಪ್ಪಸಲಗೆಯಿಂ ಮಿಸುಕೇಱ್ವಂತಸಮಶರನೊಪ್ಪವಿಟ್ಟವೊಲೆಸೆದುದು ನೃಪಸತಿಯ ಮೆಯ್ಯ ಪೊಳಪೆಳವಸಿಱುರೊಳ್ (ಶಾಂತೀಶ್ವ. ೪–೨೪). **ಒಪ್ಪಸಲಿಗೆ :** ದರ್ಪದಾಭರಣಕ್ಕೆ ಸೂಸಿದವೊಪ್ಪಸಲಿಗೆಗಳೆನಲು ಗಜಂಗಳು ಚಪ್ಪರಿಸಿ ತುಱುಗಿದುವು ರಿಪುಸೇನಾಸಮುದ್ರದಲಿ (ಕುವ್ಯಾದ್ರೋ. ೨–೫೩).
[ಒಪ್ಪ$_2$ + ಸಲಗೆ$_2$]

**ಒಪ್ಪಸಲಗೆಯಿಡು** (ಕ್ರಿ). ಒಪ್ಪದ ಸಲಾಕೆಯಿಂದ ಉಜ್ಜು ; ಮೆರುಗು ಕೊಡು : ಮಲಯರುಹದೊಪ್ಪಮನಲರ್ಗಣೆಗಳಿನೊಪ್ಪಸಲಗೆಯಿಡೆ ನಡೆತಂದಳ್ (ಅನಂಪು. ೪–೧೧೪). [ಒಪ್ಪಸಲಗೆ + ಇಡು$_1$]

**ಒಪ್ಪಸಲಿಗೆ** 'ಒಪ್ಪಸಲಗೆ' ನೋ.

**ಒಪ್ಪಹಾಕು$_1$** (ಕ್ರಿ). ಸಹಿಹಾಕು ; ರುಜುಮಾಡು : ಈ ಪತ್ರಕ್ಕೆ ಒಪ್ಪಹಾಕಿ ಗೌಡರೇ (ರೂಢಿ). [ಒಪ್ಪ$_1$ + ಹಾಕು (< ಪಾಯ್ಕು$_1$)]

**ಒಪ್ಪಹಾಕು$_2$** (ಕ್ರಿ). = ಒಪ್ಪವಿಡು ೧ : ಸೂಜಿಗಳನ್ನು ತಿಕ್ಕಿ ಒಪ್ಪ ಹಾಕುತ್ತಾನೆ (ಮುಂಬಯಿ. ೫–೨೫೪).
[ಒಪ್ಪ$_2$ + ಹಾಕು (< ಪಾಯ್ಕು$_1$)]

**ಒಪ್ಪಱಿ** (ನಾ). ಒಪ್ಪಿಗೆಯಾದ ಧರ್ಮ; ಸಮ್ಮತವಾದ ಧರ್ಮ (?); "ನಿಷ್ಕಪಟಮಾರ್ಗ" (ಸರ್ವಜ್ಞ. ಟೀಕ) : ಕಪ್ಪರದಲುಂಬುವರು ಒಪ್ಪಱಿ ನಡೆಯುವರು ತಪ್ಪಿದರೆ ಹಲ್ಲ ಕಳೆವರು ಮಹಾತ್ಮರ ಒಪ್ಪವಂ ನೋಡ (ಸರ್ವಜ್ಞ. ೪೦೧). [ಒಪ್ಪು$_2$ + ಅಱಿ$_2$]

**ಒಪ್ಪಾಚಾರ$_1$** (ನಾ). ಒಡಂಬಡಿಕೆ ; ಒಪ್ಪಂದ ; ಕರಾರು.
[ಒಪ್ಪ$_1$ + ಆಚಾರ. / ತಮಿ. ಒಪ್ಪಾಚಾರ]

**ಒಪ್ಪಾಚಾರ$_2$** (ನಾ). "ಉಪಚಾರ, ಗೌರವ" (ವಿಸ್ತೋಸು. ಅಡಿಟಿ) : ಅಪ್ಪ ತಿಮ್ಮಪ್ಪನ ನಾಮುವ ನೆನಿಸಲು ತುಪ್ಪ ಸಕ್ಕರೆ ಹಣ್ಣು ಹರಿವಾಣದಲ್ಲಿ ಒಪ್ಪಾಚಾರದಿಂದ ಸವಿದಂತೆ ಕಾಣಿರೊ (ವಿಸ್ತೋಸು. ೪೮–೪).
[ಒಪ್ಪ ? + ಆಚಾರ]

**ಒಪ್ಪಾನೆ** (ನಾ). ಒಂದು ಅಳತೆ; ಒಂದು ಹಾನೆ : ವೊ[ಒ]ಪ್ಪಾನೆ ತುಪ್ಪವನೂ ಕಾಲಕಾಲಕೆ ನಡಸಿ ಬಹರು (ಸೌಇಇ. IX–ii, ೪೪೮–೨೩ ; 1442) ; ಒಪ್ಪಾನೆ ಅಕ್ಕಿಗೆ ಇಪ್ಪಾನೆ ಉಪ್ಪೋ? (ಗಾದೆ) ; ನನಗೂ ನಿನಗೂ ಜೋಡು ಒಪ್ಪಾನಕ್ಕಿ ಕೇಡು (ಗಾದೆ). 'ಇಪ್ಪಾನೆ' ಪರಾ.
[ಒರ್ (< ಒಂದು$_3$) + ಪಾನೆ]

**ಒಪ್ಪಾರಿ** (ನಾ). ಹೊಂದಿಕೆ; ಸಾಮ್ಯವಾಗಿರುವಿಕೆ; ಒಂದೇ ಸಂಬಂಧವಿರುವುದು (ಕಿ).
ಒಪ್ಪಾರಿಗೋಡೆ = ಒಂದೇಕ್ರಮದಲ್ಲಿ ಕಟ್ಟಿದ ಗೋಡೆ ; ಸಮವಾಗಿರುವ ಗೋಡೆ (ಉಕ.ಕಿ).
[ದೇ. ‖ ತಮಿ. ಒಪ್ಪಾರಿ = ಹೋಲು, ಸಾಮ್ಯವಿರು]

**ಒಪ್ಪಾರು,** ಒಪ್ಪರೆ (ನಾ). ೧. ಒಂದು ಕಡೆ, —ಭಾಗ, —ಪಾರ್ಶ್ವ. ೨. ಒಂದೇಕಡೆಗೆ ಇಳಿಜಾರಾಗಿರುವ ಛಾವಣಿ, —ಮನೆ : ಬಲಗಡೆ ನೀರಮನೆ ಮತ್ತು ಚಿಲ್ಲರೆ ಸಾಮಾನುಗಳನ್ನು ಆಡಕಿದ್ದ ಒಪ್ಪಾರು (ರಂಗಕ. ೧೨೨) ; ಅಂಗಳದಲ್ಲಿದ್ದ ಒಪ್ಪಾರದ ಕಡೆಗೆ ನಡೆದ (ಪುನರು. ೨೬೬). ೩. ಒಂದು ಭಾಗದ ಗದ್ದೆ : ಗದ್ದೆ ಬೆದ್ದಲು ವೊಪ್ಪಾರು ಮಕ್ಕಿಮೊರಡಿ ಹಕ್ಕಲು ಸುರುಹು (ವೈಅರಿ. ೧೯೩೪, ೫೩–೪೨ ; 1405). **ಒಪ್ಪರೆ :** ೪. ಒಂದೇ ಕಡೆಗೆ ಬಂದ ಭಾರ : ಅವರಬ್ಬರ ಭಾರವೂ ದೋಣಿಯ ಒಂದೇ ಮಗ್ಗುಲಿಗೆ ಆದದ್ದರಿಂದ, ಅದು ಒಪ್ಪರಿ[ರೆ]ಯಾಗಿ ನೀರ ಕಡೆಗೆ ಒಲಿಯಿತು (ಧಾರ್ಮಿತೇ. ೪೫). [ಒರ್ (< ಒಂದು$_3$) + ಪಾರ್ಶ್ವ]

**ಒಪ್ಪಿ** (ನಾ). ಜೂಜಾಟದಲ್ಲಿ ಒಂದು ಬಗೆ : ಇವಿಷ್ಟೇ ಅಲ್ಲದೆ ಲೆತ್ತ, ಪಗಡೆ, ರಾಯಬೊಗರಿ, ಸೊಲ್ಲೆಹ, ಬಾರುಗುತ್ತ (?), ಒಪ್ಪಿ (?), ಸರಿಬೆಸ ಮೊದಲಾದ ಜೂಜಿನಾಟಗಳನ್ನಾಡಿ 'ವಿತ್ತನಾಶವ ಮಾಡುವ' ಜೂಜುಗಾರರೂ ಅಲ್ಲಿ ಇದ್ದರು (ಕರ್ಣಾಜ. ೧೦೪). [?]

**ಒಪ್ಪಿಕೆ** 'ಒಪ್ಪುಗೆ' ನೋ.

**ಒಪ್ಪಿಗೆ** 'ಒಪ್ಪುಗೆ' ನೋ.

**ಒಪ್ಪಿಗೆನಿರೂಪ** (ನಾ). ಸಮ್ಮತಿಸಿ ಕಳಿಸುವ ನಿರೂಪ : ನಮ್ಮ ಒಪ್ಪಿಗೆ ನಿರೂಪವೆಂದು ಕಾಣಿಸಿಕೊಂಡಿರುವ ಈ . . . ಹಣವನ್ನು ನಾವು ತೆರಲಾಗುವುದಿಲ್ಲ (ಬೆಟ್ಟಅ. ೬೦–೧೦).
[ಒಪ್ಪಿಗೆ (< ಒಪ್ಪುಗೆ) +ನಿರೂಪ]

**ಒಪ್ಪಿಗೆವಡೆ** (ಕ್ರಿ). ಅನುಮತಿಯನ್ನು ಪಡೆ ; ಸಮ್ಮತಿಯನ್ನು ತೆಗೆದುಕೊ : ಹುಡುಕಿದುದಾಯಿತು ಬೇರೊಂದು ಮನೆಯನು ಮನೆಯವರೊಪ್ಪಿಗೆವಡೆದು (ಇಂಚಾಪ. ೪೬–೧೮).
[ಒಪ್ಪಿಗೆ (< ಒಪ್ಪುಗೆ) + ಪಡೆ$_1$]

**ಒಪ್ಪಿಡಿ** 'ಒರ್ಪಿಡಿ' ನೋ.

**ಒಪ್ಪಿಡಿನಡು** (ನಾ). ಒಂದು ಹಿಡಿಯಷ್ಟು (ತೆಳುವಾದ) ನಡು ; ಸಣ್ಣನಡು : ಸಿಂಗ ನಡುವಿನೊಪ್ಪಿಡಿನಡುವುಗಳ ಸಣ್ಣನಡುವಿನಿಲ್ಲುಂಟೆಂಬ ನಡುವಿನಬಲೆಯರ್ಸೈದೆ ಬರುತಿರ್ದರು (ಚಿಬಪು. ೩೬–೪೨) ; ಕಂಗೊಳಿಸುತಿ ಹೊಪ್ಪಿಡಿನಡುವಿನ . . . ಮೋಹನಾಂಗಿಯರ್ಸೈತಂದರಾಗ (ಕಂನವಿ. ೯–೮೧). [ಒಪ್ಪಿಡಿ (< ಒರ್ಪಿಡಿ) + ನಡು$_2$]

**ಒಪ್ಪಿಡು$_1$** (ಕ್ರಿ). ೧. ಒಪ್ಪಿಗೆಕೊಡು ; ಸಮ್ಮತಿಸು : ವಾಚಕ ಮಹನೀಯರೂ ಒಪ್ಪಿಡಬಹುದು (ನಾಡೋಜ. ೮೪). ೨. ಮನ್ನಿಸು ; ಗೌರವಿಸು : ಯಾರಾದರೂ ಪ್ರೇಮದಿಂದ ಒಪ್ಪಿಟ್ಟು ಕರೆದಾಗ ನೀಡಿದ್ದೇ ಪ್ರಸಾದವೆಂದು ಸ್ವೀಕರಿಸುತ್ತಿದ್ದರು (ಶರೀಫ. ೬೨).
ಒಪ್ಪಿಟ್ಟುಕೊ = ವಹಿಸಿಕೊಳ್ಳು : ಅವ್ವ ನರಹರಿಯನ್ನು ಒಪ್ಪಿಟ್ಟು ಕೊಂಡು . . . ಸುಬ್ಬಯ್ಯನ್ನಾರ 'ನೋಡಸರಿ' ಎಂದಳು (ವೈನಿ. ೨೬).
[ಒಪ್ಪು$_1$ + ಇಡು$_1$]

**ಒಪ್ಪಿಡು$_2$** (ಕ್ರಿ). ಒಪ್ಪವನ್ನು ಇಡು ; ಮೆರುಗು ಕೊಡು : ಈ ಜ್ಞಾನಪೂರ್ಣಚಿಕ್ಕಗ್ರಂಥದಲ್ಲಿ ಕಾವ್ಯಸೌಂದರ್ಯ ಬೆರೆತು ವಜ್ರಕ್ಕೆ ಚಿನ್ನದ ಒಪ್ಪಿಟ್ಟಂತಾಗಿದೆ (ಧರ್ಮಸಾ. ೧೧೧). [ಒಪ್ಪ$_2$ + ಇಡು$_1$]

**ಒಪ್ಪಿತ** (ನಾ). ೧. ಸಮ್ಮತಿ ; ಅನುಮೋದನೆ : ವರವಿರೂಪಾಕ್ಷನೊಪ್ಪಿತದ ರಗಳೆಗಳನಾ ಪರಿಪರಿಯ ಶಿವಗಣಂಗಳ ಮೇಲೆ ಪೇಳ್ದು (ಚಿಬಪು. ೬೨–೫೫) ; ಅವರ ಮನೆಗೆ ಬೆಂಕಿಹಾಕಿ ಉರಿಸಿಬಿಡುತ್ತೇನೆ. ನಿನಗೆ ಇದು ಒಪ್ಪಿತವೋ ? (ಆರ್ಯಕ. ೨೬). ೨. ಸಹಿ ; ರುಜು ; ಅಂಕಿತ : ಬಯಿರಪ್ಪ ನಾಯಿಕನ ಒಪ್ಪಿತದ ಶಾಸನ (ಎಕ. XVI, ಚಿಕ್ಕನಾ. ೧–೪೧ ; 1677) ; ನೋಟುಗಳನ್ನು ಬರೆದು ಪ್ರಭುವು ಒಪ್ಪಿತ ಹಾಕಿದನು (ಬೆಟ್ಟಹೊ. ೬೧). [ಒಪ್ಪು$_1$ + –ಇತ ?]

**ಒಪ್ಪಿರ್** (ಕ್ರಿ). ಶೋಭಿಸು ; ಅಲಂಕಾರಪ್ರಾಯವಾಗಿರು ; ಅಂದವಾಗಿರು ; ಪ್ರಕಾಶಮಾನವಾಗಿರು : ಹೈಮಂ ಕರ್ಣಾವತಂಸಂ ತನಗೆನೆ ಕರಮೊಪ್ಪಿರ್ದಳ್ (ಅಜಿಪು. ೧–೧) ; ಮಹಾಚರಲಿಂಗ ಸಹಿತ ಸದ್ಗುರುವರಂ ಸಿದ್ಧವೀರೇಶನೊಪ್ಪಿರ್ದನು (ಚಿಬಪು. ೧–೨೧).
[ಒಪ್ಪು$_1$ + ಇರ್$_1$]

**ಒಪ್ಪಿರಿಸು** (ಕ್ರಿ). ಶಮನಗೊಳಿಸು ; ತಗ್ಗಿಸು : ಇಳಿವಶ್ರುಜಲಕೆ ಪುರುಡಿಸುತೆ ನಡೆನೋಡುತಂ ಗದ್ಗದವನೊಪ್ಪಿರಿಸಿ ಪೊಗ[ೞ]ೆ ಲಟಲಟಸುವಂ ಉದ್ಗತಾನಂದಮಂ ನೂಂಕಿ ನೆನೆದುಬ್ಬುವಂ (ಬಸರ. ೩–೧೪೮)
[ಒಪ್ಪು$_2$ + ಇರಿಸು]

**ಒಪ್ಪಿಸು**, ಒಪ್ಪಯಿಸು₁, ಒಪ್ಪಯ್ಸು, ಒಪ್ಪೈಸು (ಕ್ರಿ). **೧.** ಕೊಡು; ಅರ್ಪಿಸು: ರಾಮದೇವನು ಹೆಜ್ಜಣನಿಱಿದು ರಾಜಮಲ್ಲನ ಹೆಣ್ಣಿತಿ ಭಣ್ಡಾರವನು ಬಲ್ಲಳತಿನ್ದೊಪ್ಪಿಸಿದಲ್ಲಿಗೆ ಮೆಚ್ಚುಕೊಟ್ಟ ಭೂಮಿ (ಎಕ. VII, ಶಿಕಾರಿ. ೫೨-೧೩; 357 ?); ಈತನನೆಮಗೊಪ್ಪಿಸಿಮೆಲ್ಲಾಶಾಸ್ತ್ರಂಗಳುಮಂ ಕಲ್ಪಿಸಿ ಪಂಡಿತನಂ ಮಾಡಿ ನಿಮಗೊಪ್ಪಿಸುವೊಂ (ವಡ್ಡಾರಾ. ೭೪-೬); ಬೇಗಂ ತಂದೊಪ್ಪಿಸಲೊಡಂ (ಪಂಚತಂ. ೧೬೪-೧); ಪುಷ್ಪಸರನ ರಾಣಿಗೆ ಮೆಯ್ದೊಡವನುವೊಪ್ಪಿಸಿ ತುತಿಯ ಮಾಡಿದರು (ಮೋಹತ. ೧೭-೪೩); ಹಳುವಗಳ ಪರಿಮಳವ ಗಾಳಿಗೊಪ್ಪಿಸುತ (ಕವಿಪು. ೪೭-೭). **೨.** ತಿಳಿಸು; ನಿರೂಪಿಸು: ಬಗೆಯ ಬಯ್ಕೆಯನೊಪ್ಪಿಸುವಾಗಳ್ ನೀನೆ ವಲಂ ದೊರೆ ಪೇೞ್ದಪೆಂ ಬಗೆದು ಕೇಳ್ (ಆದಿಪು. ೩-೩೩). **೩.** ಸಮ್ಮತಿಸುವಂತೆ ಮಾಡು: ನಾನು ಅವರನ್ನು ಈ ಕಾರ್ಯಕ್ಕೆ ಒಪ್ಪಿಸುತ್ತೇನೆ (ರೂಢಿ). **೪.** ವಹಿಸು: ಇದರ ರಕ್ಷಣೆಯ ಭಾರವನ್ನು ನಿಮಗೆ ಒಪ್ಪಿಸಿದ್ದೇನೆ (ರೂಢಿ). **ಒಪ್ಪಯಿಸು₁**: **೧.** ಪರಿಪರಿಯ ವಸ್ತುಗಳ ತಂದಾ ತರಣಿವಂಶವರೇಣ್ಯಗೊಪ್ಪಯಿಸಿದರು ಕಾಣಿಕೆಯ (ಅನಂರಾ. ೭-೩-೨೫). **೪.** ಬಾಲೆಯರು ಹಿಡಿದಾಡುವೊಳ್ಳೆಯ ಕೀಲಬೊಂಬೆಯನದಱುಡಿಗೆಯಂ ಬಾಲೆ ತಂದಪೆವೆನುತ ಮನೆಯಿಂದೊಪ್ಪಯಿಸಿ [ಪಾಠಾಂ. ಯಿಂದಪ್ಪಯಿಸಿ] ಹೋಗೆ (ಬಸವು. ೧೪-೪). **ಒಪ್ಪಯ್ಸು**: **೩.** ಬೇಗ ಗುರು ಒಪ್ಪಯ್ಸಿ ತನು ಪ್ರಸಾದವೆಂದು ಕುಱುಹ ತ್ರಿಕಾಲ ಮಾಡಹೇಳಿದ (ಬಸಹೆ. ೧೩-೩೪). **ಒಪ್ಪೈಸು**: **೧.** ಶಿಶುವಿಂಗೆ ಗುಮ್ಮನಲ್ಲದೆ ದೆಸೆಯ ಬಲ್ಲವರಿಗುಂಟೀ ಭೀತಿ ನಿನ್ನ ಲಸದೊಲುಮೆ ಒಪ್ಪೈಸಿದವರಿಗುಂಟೇ (ಮೋಳಿಮಾ. ೬೫-೨೬೫). **೪.** ದಾನಮಂ ... ಭವ್ಯಜನಕ್ಕೆ ನಾನೆಂತು ಮಾಡುವೆನೆನ್ನ ಬರ್ಪಿನಮಂತೆ ಮಾಡಿ ನಿರಂತರಂ ಎಂದು ಕೈಮುಗಿದು ಬೇಡಿಕೊಂಡು ಭರದಿಂದೊಪ್ಪೈಸಿ ಪೊಜಮಟ್ಟು (ಧರ್ಮಾಮೃ. ೧-೧೦೧, ೧೦೨).

ಒಪ್ಪಿಸವೇೞ್ = ಅರ್ಪಿಸುವಂತೆ ಹೇಳು: ಮಗನಂ ಕರೆದೊಪ್ಪಿಸವೇೞ ಯುಧಿಷ್ಠಿರಂಗೆ ಮುಂ ಗೆಲ್ದ ವಸ್ತುವಾಹನಚಯಮುಮಂ (ಪಂಪಭಾ. ೬-೭೩). ಒಪ್ಪಿಸಿಕೊಡು = ಕೈವಶವಾಗಿ ಕೊಡು: ಬಾಲಿಕೆಯನೊಪ್ಪಿಸಿ ಕೊಟ್ಟರೇ ಮೃತ್ಯುವಿನ ತಾಳಿಗೆಗೆ (ಕುವ್ಯಾಸ. ೧೫-೯೫); ತನ್ನ ತನುಮನಧನವನೊಪ್ಪಿಸಿಕೊಡಬೇಕು (ಪುರಂದ. ೧-೧೮೪-೧). ಒಪ್ಪಿಸಿಕೊಳ್ಳು = ಸ್ವೀಕರಿಸು: ಒಂದು ಬಂಡೀಲಿ ರನ್ನ ಒಂದು ಬಂಡೀಲಿ ಚಿನ್ನ ಮುಂದಾಲ ಬಂಡೀಲಿ ರಣಭೇರಿ ದೊಡ್ಡಮ್ಮ ಒಪ್ಪಿಸಿಕೊಳ್ಳೇ ನಿನ್ನ ಹರಕೆಯ (ನನ್ನೂರು. ೫೧); ದೊರೆಗಳು ... ಆರೋಗಣೆಯನ್ನು ಒಪ್ಪಿಸಿಕೊಳ್ಳುತ್ತಿದ್ದರು (ಒಡೆಕ. ೫೨). [ಒಪ್ಪು₁ + -ಇಸು₃]

**ಒಪ್ಪು₁** (ಕ್ರಿ). **೧.** ಸಮ್ಮತಿಸು; ಅಂಗೀಕಾರ ಮಾಡು: "ಒಪ್ಪು - ಸೌಂದರ್ಯೇ, ಅಂಗೀಕಾರೇ ಚ" (ಶಮಧಾ); ಅವನೊರ್ಬಂ ಮೇಲಪ್ಪ ಕಜ್ಜವನಱಿದು ಮಾಡದಿರ್ದಪನವನನೊಪ್ಪಲಱಿಯೆಂ (ಪಂಚತಂ. ೩೯-೧); ತಪ್ಪದೇ ಸುರಲೋಕಕಾವಿನ್ನುಪ್ಪರಿಸಬೇಡವೆ ಕಕುಸ್ಥಜನೊಪ್ಪದಿರ್ದಡೆ ತೊಡಕು ನಿಮಗಹುದು (ತೊರರಾ. ೩-೯-೩೪); ಒಪ್ಪತಕ್ಕದ್ದಾದರೆ ಒಪ್ಪುತ್ತೇನೆ (ವಚಭಾ. ೩). **೨.** ಪ್ರಕಾಶಿಸು; ಶೋಭಿಸು; ಹೊಳೆ; ಸೊಗಯಿಸು: ಭದ್ರವಾಹು ಸಚನ್ದ್ರಗುಪ್ತಮುನೀಂದ್ರ ಯುಗ್ಮದಿನೊಪ್ಪೆ ವಲ್ (ಎಕ. II, ೩೧-೧; 650); ದಿವಿಜನೋ ಫಣಿನಾಯಕನೋ ಮನೋಭವನಿವಂ ಕರಮೊಪ್ಪಿದಂ (ಕವಿರಾ. ೧-೧೪೧); ಇಂತೊಪ್ಪುವಾದೇಶದೊಳಗೆ ಮೆಱೆದುದು ... ಶಿವಪುರಂ (ತಿರುರ. ದೇ. ೨-೧೫); ಭದ್ರಾಕೃತಿಯೊಳೊಪ್ಪುವ ... ವಿನಾಯಕ ಮಾಳ್ಪುದೆಮಗೆ ನಿರ್ವಿಘ್ನತೆಯನು (ಜೈಮಿಭಾ. ೧-೩). **೩.** ಯೋಗ್ಯವಾಗು; ಉಚಿತವಾಗು: ಎತ್ತಿಂಗೆ ಪಿಣಿಲೊಪ್ಪುಗುಮಲ್ಲದೆ ಕೆಚ್ಚಲೊಪ್ಪದಾವಿಂಗೆ ಕೆಚ್ಚಲೊಪ್ಪುಗುಮಲ್ಲದೆ ಪಿಣಿಲೊಪ್ಪದು (ಧರ್ಮಾಮೃ. ೬-೨೨೫); ಇಲ್ಲಿ ಭೀಷ್ಮನು ರಾಘವನ ಬಲದಲ್ಲಿ ಜಾಂಬವನುಭಯ ವೀರರು ಬಲ್ಲಿದರು ಬಳಿಕುಳಿದ ಸುಭಟರ ಶೌರ್ಯವೊಪ್ಪುವುದೇ (ಕುವ್ಯಾಭೀ. ೧-೩೬); ಎಷ್ಟು ಚನ್ನಾಗಿ ಒಪ್ಪಿತು ಅವನಿಗೆ ಆ ಬಿರುದು (ನನ್ನಜೊ. ೧೨). **೪.** ಬಳಕೆಯಲ್ಲಿರು; ಪ್ರಸಿದ್ಧವಾಗು: ವರುಷವೆರಡಾಗೊಪ್ಪುತಿಹ ಪುಷ್ಕರದ ನಡುವಣ ಮಾನಸೋತ್ತರ ಗಿರಿಯುದಯವೈವತ್ತು ಸಾವಿರ ಹರಹು (ಕುವ್ಯಾಅ. ೭-೫೮). **೫.** ಮೆಚ್ಚಿಕೆಯಾಗು; ಒಗ್ಗು; ಮನಸ್ಸಿಗೆ ಸರಿಬೀಳು; ಒಡಂಬಡಿಕೆಯಾಗು: "ಸಂಗತಂ, ಹೃದಯಂಗಮಂ - ೨ ಮನಸ್ಸಿಗೆ ಒಪ್ಪಿದ ಮಾತು" (ಸಿದ್ಧಾಂತಿ. ೫೧); ಹೂಗಳ ತಿರಿದೆನು ಹಿಗ್ಗಿ ಮಾಲೆಗಟ್ಟಹೆನಿಲ್ಲಿ ನಾನವುಗಳನಿಂತು ನನಗೊಪ್ಪುವಂತೆ ಸಮಂತು (ಇಂಚಾಪ. ೮೦-೮೮); ಅವನ ಮಾತು ನನಗೆ ಒಪ್ಪುವುದಿಲ್ಲ (ರೂಢಿ). **೬.** ವ್ಯಕ್ತವಾಗಿ ಕಾಣಿಸು; ಪ್ರಕಟವಾಗು; ವ್ಯೆದೋರು: ಏಕಾಳಿಯೆಂಬಾ ಮಡಿವಳನ ಭಕ್ತಿ ಛಲದ ಭಾಷೆಯುವೊಪ್ಪಿತಲ್ಲದೆ ಬಳಿಕವೀ ಸಾಮರ್ಥ್ಯವೀ ನಿಶ್ಚಲಭಕ್ತಿಯುಮಿಾ ಮಹತ್ವವ ನಾವಱಿಯೆವು (ಬಸವು. ೨೧-೧೨); ಎರಡು ತೆಜದೊಳಗೊಪ್ಪುವಂಗಡಿ ... ಕಣ್ಗೆಸೆದುದು (ಚಬಸು. ೪೨-೧೫); ಕಣ್ಗೊಪ್ಪಿದಂ ಶಂಕರಂ (ಶಬಶಂ. ೧-೭೩).

ಒಪ್ಪಿಕೊಳ್ = ಸಮ್ಮತಿಸು: ತಪ್ಪುಗಳನೆಲ್ಲ ನೀನೊಪ್ಪಿಕೊಳ್ಳೊನಮ್ಮಪ್ಪ ಕಾಯಬೇಕು ತಿಮ್ಮಪ್ಪ ನೀನೆ (ಪುರಂದ. ೧-೧೭೭ ಪಲ್ಲವಿ); ಹಣಕ್ಕಾಗಿ ತಮ್ಮ ವಿದ್ಯೆಯನ್ನು ಅವರು ಎಂದೂ ಮಾರಿಕೊಳ್ಳದಿದ್ದರೂ ಗೌರವದ, ವಿಶ್ವಾಸದ ಕೊಡುಗೆಯನ್ನವರು ಒಪ್ಪಿಕೊಳ್ಳಲೇ ಬೇಕಾಗುತ್ತಿತ್ತು (ಹೊಸಕ್ಷಿ. ೪೨); ತುಪ್ಪದಂಥ ಮಾತಿಗೆ ಒಪ್ಪಿಕೊಂಡು ತಿಪ್ಪೇ ಪಾಲಾದ (ಗಾದೆ).

[ದೇ. ॥ **ತಮಿ.** ಒಪ್ಪು; **ಮಲ.** ಒಕ್ಕು; **ತುಳು.** ಒಪ್ಪಿ; **ಕೊಡ.** ಒಪ್ಪ್; **ತೆಲು.** ಒಪ್ಪು]

**ಒಪ್ಪು₂** (ನಾ). **೧.** ಒಪ್ಪಿಗೆ; ಸಮ್ಮತಿ. 'ಒಪ್ಪುಗೊಳ್' ಪರಾ. **೨.** ಒಪ್ಪಿಸುವ ವಸ್ತು; ಕೊಡುವ ವಸ್ತು. 'ಒಪ್ಪುಗೊಡು' ಪರಾ. **೩.** ಚೆಲುವು; ಬೆಡಗು; ಸೌಂದರ್ಯ: ಕೊಸಗಿನ ಪೂವಿನೊಪ್ಪು ಸುರಹೊನ್ನೆಯ ಪುಷ್ಪದ ಚೆಲ್ವು ಪೆಂಪುವೆತ್ತೆಸಕದಿನಿರ್ದ ಸಂಪಗೆಯ ಪೂವಿನೊಳಾದ ಬೆಡಂಗು ನಾಡೆ ರಂಜಿಸೆ (ಧರ್ಮಾಮೃ. ೧೩-೧೩). **೪.** ಅತಿಶಯ; ಹಿರಿಮೆ; ಮೇಲ್ಮೆ; ಗೌರವ: ಉದಯಕುಧರದೊಪ್ಪೆ [ಪಾಠಾಂ. ಪ್ಪೆ]ನಿತು ಬಸುಱೊಳು ಪೊಕ್ಕ ಮಿತ್ರನ ತೇಜಮಂ ಕೆಡಿಸಿ ಕನಲುವಸ್ತಾಚಳದ ಗೌರವವೆನಿತು (ಬಸವು. ೧೯-೨೮). **೫.** ಯೋಗ್ಯವಾದುದು; ಉಚಿತವಾದುದು: ಹರಿಗೋಲನೇರಿಸಿ ಹರಿವ ಪ್ರವಾಹದೊಳು ರುಳಿಸುವುದು ನಿನಗೊಪ್ಪೆ ಕರವಿಡಿದುದೆ ತಪ್ಪೆ (ಶಾಕುಂತ. ೬೮ ಅಡಿಟ). [< ಒಪ್ಪು₁. / ತಮಿ. ಮಲ. ತುಳು. ತೆಲು. ಒಪ್ಪು]

**ಒಪ್ಪುಗೆ**, ಒಪ್ಪಿಕೆ, ಒಪ್ಪಿಗೆ (ನಾ). ಸಮ್ಮತಿ; ಅನುಮೋದನೆ (ಕಿ). **ಒಪ್ಪಿಕೆ**: (ಕಿ). **ಒಪ್ಪಿಗೆ**: ತಮ್ಮ ಒಪ್ಪಿಗೆ ಕೊಟ್ಟರೆ ಕಾರ್ಯ ಪ್ರಾರಂಭಿಸುತ್ತೇವೆ (ರೂಢಿ). 'ಒಪ್ಪಿಗೆನಿರೂಪ' ಪರಾ.

ಒಪ್ಪಿಗೆಯಾಗು = ಸಮ್ಮತಿಗೆ ಬರು; ಅಭಿಮತವಾಗು; ಇಷ್ಟವಾಗು: ಆ ರಾಮಭಟ್ಟರು ಅಂದೆ ಬೇಸಗೆಯೊಳು ತಂದೆಗೆ ಒಪ್ಪಿಗೆಯಾಗೆ ಬ್ರಹ್ಮೋಪದೇಶವನಿತ್ತರಾದರದೊಳು (ಇಂಚಾಪ. ೧೮-೭೬).

[ಒಪ್ಪು₁ + -ಗೆ₁]

**ಒಪ್ಪುಗೊಡು** (ಕ್ರಿ). ಒಪ್ಪಿಸು; ಸಮರ್ಪಿಸು: ಸಮಸ್ತರಾಜ್ಯಪದಮಂ ... ಒಪ್ಪುಗೊಟ್ಟು (ಕಾದಂಉ. ೫೯೦); ಆರಾಧನಂಗೆಯ್ದು ಸಂಪ್ರೀತಿಕೈಮಿಾಱಿ ಗೌರಪದದಾಯಕರ ಸಕಲಸಂಪತ್ಸಂತತಿಯನಂತಿರೊಪ್ಪುಗೊಟ್ಟು (ಪದ್ಮರಾ. ೪-೧೧); ಧುರದೊಳೊಡೆಯನನೊಪ್ಪುಗೊಟ್ಟೊಳಸರಿವ ಭಂಡನು ಪಿಸುಣನೇ (ಜೀವಂಚ. ೫-೭೫).

[ಒಪ್ಪು₂ + ಕೊಡು]

**ಒಪ್ಪುಗೊಳ್**, ಒಪ್ಪುಗೊಳು, ಒಪ್ಪುಗೊಳ್ಳು (ಕ್ರಿ). ೧. ತೆಗೆದುಕೊಳ್ಳು; ಸ್ವೀಕರಿಸು; ಅಂಗೀಕರಿಸು: ಭಾನುಮತಿಗೆ ನಿನ್ನಾಣ್ಮನುಮಂ ನಿನ್ನ ಮಯ್ದುನನುಮಂ ನೀನೊಪ್ಪುಗೊಳ್ಳೆಂಬುದುಂ (ಪಂಪಭಾ. ೬-೩೮); ಧರಣೀಚಕ್ರಮನೊಪ್ಪುಗೊಳ್ ಬಗೆಯದಿರ್ ವಿದ್ವೇಷಮಂ (ಗದಾಯು. ೬-೪೪); ಅರ್ಪಿಸಿದ ಪ್ರಸಾದಮುಮನೊಪ್ಪುಗೊಂಬ ಪ್ರಸಾದಿ (ದೀಕ್ಷಾ ಬೋ. ೧೩೧-೧೮); ಕದಡದಿರು ಹೆದಱದಿರು ಒಪ್ಪುಗೊಂಡಿಹ ನೀಶ್ವರಂ (ಬಸವು. ೨೪-೧೯); ಸಾತ್ವಿಕಮೂರ್ತಿ . . . ನಿತ್ಯತ್ವಮನೊಪ್ಪುಗೊಳ್ವೆ (ವಸ್ತವಂ. ೮೯). **ಒಪ್ಪುಗೊಳು**: ೨. ಒಪ್ಪು; ಸಮ್ಮತಿಸು: ಇಕ್ಕೆಯ್ಯ ಮುಗಿದು ಕಾಳಿಗ ಬೇಡ ಹೋಗೆನುತೊಕ್ಕಣಿಸಿದರೊಪ್ಪುಗೊಳದೆ (ಮೋಹತ. ೩೪-೩೮). **ಒಪ್ಪುಗೊಳ್ಳು**: ೧. ಕಂದನನು ಕೊಡುವೊಡೆ ಕೊಡಲ್ಲದೊಡಿಂದು ನೀನದನೊಪ್ಪುಗೊಳ್ಳೆಂದಿರಿಸಿ ನಡುಗುಳಿದನು(ಸಾಳ್ವಭಾ. ೧೧-೨೧). ೨. ಜನನದ ನೆಲೆಯನಱುಹಿದೊಡೊಪ್ಪುಗೊಂಬುದಕಲಸಿಕೆಯ ದೇನಿದ್ದುದು (ತೊರರಾ. ೧-೧೬-೨೬). [ಒಪ್ಪು₁ + ಕೊಳ್₁]

**ಒಪ್ಪುಗೊಳಿಸು** (ಕ್ರಿ). ೧. ಹೊಂದಿಸು; ಉಂಟುಮಾಡು: ಕಳೆಯ ಲಿಂಗದೊಳೊಚ್ಚತವನೊಪ್ಪುಗೊಳಿಸಿದಾ ಕರುಣಿ ಗುರು(ಕವಿಚ. II, ೧೨೪ ಪುರದಮಲ್ಲಯ್ಯನ ವಚನ). ೨. ಸ್ವೀಕರಿಸುವಂತೆ ಮಾಡು; ಒಡಂಬಡಿಸು; ಮನವೊಪ್ಪಿಸು: ಮಂತ್ರಿಪನಂ ಸಂಧಿಸಿ ಸಂಧಿಕಾರ್ಯೋಚಿತ ವಚನನಿಚಯದಿನೊಪ್ಪುಗೊಳಿಸಿ (ರಾಜಶೇ. ೬-೧೩೨ ವ).

[ಒಪ್ಪುಗೊಳ್ + -ಇಸು₃]

**ಒಪ್ಪುಗೊಳು** 'ಒಪ್ಪುಗೊಳ್' ನೋ.

**ಒಪ್ಪುಗೊಳ್ಳು** 'ಒಪ್ಪುಗೊಳ್' ನೋ.

**ಒಪ್ಪುದಾಳ್** (ಕ್ರಿ). ಸೊಗಸನ್ನು ತಾಳು; ಸೊಬಗನ್ನು ಪಡೆ: ಪಾಣಿಪಲ್ಲವಂಗಳ ಗೆಡೆಗೊಂಡ ಕೆಂಪು ಕರಮೊಪ್ಪಿರೆ ಶೋಭೆಯಿನೊಪ್ಪುದಾಳ್ದ ಕೋಮಳೆಯರ್ (ಧರ್ಮಾಮೃ. ೪-೧೪೫).

[ಒಪ್ಪು₂ + ತಾಳ್₁]

**ಒಪ್ಪುನುಡಿ** (ನಾ). ಒಪ್ಪುವ ಮಾತು; ಹೊಂದಿಕೆಯಾದ ನುಡಿ: ಕನ್ನಡದಿಂಪು ಸಕ್ಕಜದೊಪ್ಪುನುಡಿಗಳ ಬಿನ್ನಣಮುಚಿತರಸದ ಪೆಂಪು (ತ್ರಿಭುತಿ. ೧೮-೨). [ಒಪ್ಪು₁ + ನುಡಿ₂]

**ಒಪ್ಪುರುಷ** (ನಾ). ೧. ಒಬ್ಬ ಪುರುಷ. ೨. ಒಬ್ಬ ಪುರುಷನ ಪ್ರಮಾಣ; ಒಂದಾಳುದ್ದ: ಸೊಗಯಿಪ ನೇಱಿಲಿಂ ಬಡಗ ಮೂಱು ಮೊಱಂ ತರದಿಂದಮಾಗಿ ನೀನಗುಱಿಸೆ ಕಪ್ಪೆಯೊಪ್ಪುರುಷದೊಳ್ ಸಲೆ . . . ಇರ್ಪುರುಷಪ್ರಮಾಣದಿಂದೊಗೆವುದು ನೀರಧಾರೆ (ಜಟ್ಟಮ. ೧೧-೪); ಕುಱಿಮಾಟ್ಟುದೊಪ್ಪುರುಷದೊಳ್ ಪೊಗೆವರ್ಣದ ಪಾವು (ಜಟ್ಟಮ. ೧೧-೨೩). [ಒರ್ (< ಒಂದು₃) + ಪುರುಷ]

**ಒಪ್ಪುವಡೆ** (ಕ್ರಿ). ಚೆಲುವಾಗು; ಸುಂದರವಾಗು; ಅತಿಶಯವಾಗು: ತತ್ಪುರದಿನಸಿವಿಧಿಗಳುನ್ನತಿಕೆಯೊಳೊಪ್ಪುವಡೆದ ಪಗಡೆಯ ನಾಲ್ಗರ ದಂತೊಪ್ಪಿದುವು (ಜಯಕಾ. ೧-೫೫); ಒಪ್ಪುವಡೆದ ಮಾತಹುದಿದು (ಮೋಹತ. ೧೩-೧೦); ತನ್ನಿನಿಯನ ತಾಯ್‌ತಂದೆಯ ಕುಲಗಳನುನ್ನತಿಗೈದೊಪ್ಪುವಡೆದು ಮನ್ನಣೆವೆತ್ತ ಸಾಧ್ವಿಯರ ಮಹಿಮೆಗಳ ಸನ್ನುತಿಸುವಡೆನ್ನಳವೆ (ಹದಿಬ. ೨-೧೧). [ಒಪ್ಪು₂ + ಪಡೆ₁]

**ಒಪ್ಪುವಿಕೆ** (ನಾ). ಸಮ್ಮತಿ; ಅನುಮೋದನೆ: ಸಂವಿತ್, ಆಗೂಃ . . . ಪ್ರತಿಶ್ರವಃ, ಸಮಾಧಿಃ – ೧೦ ಅಂಗೀಕಾರದ ಹೆಸರುಗಳು. ಅಂದರೆ ನನಗಿರಲಿಯೆಂದೊಪ್ಪುವಿಕೆ (ಸಿದ್ಧಾಂತಿ. ೪೩).

[ಒಪ್ಪು₂ + -ಇಕೆ]

**ಒಪ್ಪುವೀಳ್ಯ** (ನಾ). (ಮದುವೆಯಲ್ಲಿ) ಒಪ್ಪಂದ ಸೂಚಕವಾಗಿ ಕೊಡುವ ವೀಳ್ಯ (ಎಸಮ್ಯೆ. XV, ೧೩). [ಒಪ್ಪು₂ + ವೀಳ್ಯ]

**ಒಪ್ಪುವೆಱು** (ಕ್ರಿ). ಚೆಲುವಾಗು; ಅಂದವಡೆ: ಪೊನ್ನ ತೋರಣದಿಂದುಕೂಲದ ಸೂಸಕಂಗಳಿನೊಪ್ಪುವೆತ್ತುನ್ನತಧ್ವಜದೋಳಿಯಿಂ ಬಿಡುಮುತ್ತಿನಿಂ ಕಡುಶೋಭೆವೆತ್ತು (ಧರ್ಮಾಮೃ. ೬-೪೮); ಪೊಳೆವ ಹೊಂಬೊಗರಿಗೆ ಬೆಣಟಿಕ್ಕಿ ಕೈಯಾರ ಬೆಳಗಿದೊಡೊಪ್ಪುವೆತ್ತ ಅಳಲುವ ರತಿಯುರಸ್ಥಳದೆ ಭಸ್ಮಾಂಕಿತ ಕಳಸಕುಚಂಗಳೊಪ್ಪಿದುವು (ಮೋಹತ. ೮-೨೨). [ಒಪ್ಪು₂ + ಪೆಱು₁]

**ಒಪ್ಪೆ₁** (ನಾ). ಮೆರುಗು; ಹೊಳಪು: ಆಗ ಅವಳ ಬಾಲ್ಯದಲ್ಲಿದ್ದ ನಿಷ್ಕಳಂಕ ಬುದ್ಧಿಯಿಂದ ಅವಳ ಚೆಲ್ವಿಕೆಗೆ ಕೊಡುತ್ತಿದ್ದ ಒಪ್ಪೆಯು ಈಗ ತಗ್ಗಿದೆ (ನಿಷ್ಕಾಮ. ೧೪). [< ಒಪ್ಪು₂]

**ಒಪ್ಪೆ₂** (ನಾ). ಸಣ್ಣ ಮಕ್ಕಳ ಹೊಟ್ಟೆ (ಕಿ). [?]

**ಒಪ್ಪೆಜ್ಜೆ** (ನಾ). ೧. ಒಂದು ಹೆಜ್ಜೆ. ೨. (ಅಲಂ) ಅತಿಸ್ವಲ್ಪ: ಉಪ್ಪವಳ್ಳಿಯವರಿಂಗೆಱೆಯಿಂ ಮೇಗೆ ಕೆಱೆಯ ಕೋಡಿಯಿಂ ಕೊಂಚಾಳದ ಹೊಳೆಯಿಂದತ್ತ ಹಡುವಲುಪಳ್ಳಿಯವರಿಂಗೊಪ್ಪೆಜ್ಜೆ ನೆಲಕ್ಕೆ ಸ್ವಾಮ್ಯವಿಲ್ಲ (ಮೈಆರಿ. ೧೯೩೨, ೧೨-೮; 1190).

[ಒರ್ (< ಒಂದು₃) + ಪೆಜ್ಜೆ (< ಪಜ್ಜೆ)]

**ಒಪ್ಪೈಸು** 'ಒಪ್ಪಿಸು' ನೋ.

**ಒಪ್ಪೊತ್ತು** 'ಒಪ್ಪೊರ್ಪು' ನೋ.

**ಒಬ್ಬ** 'ಒರ್ವ' ನೋ.

**ಒಬ್ಬಂಟಿ** 'ಒಬ್ಬೊಂಟಿ' ನೋ.

**ಒಬ್ಬಂಟಿಗ** 'ಒಬ್ಬೊಂಟಿಗ' ನೋ.

**ಒಬ್ಬಟ್ಟು** (ನಾ). ೧. ಹೂರಣ ಮತ್ತು ಕಣಕದಿಂದ ಮಾಡುವ ಒಂದು ಭಕ್ಷ್ಯ; ಹೋಳಿಗೆ: ಪರಿಪರಿಯ ಕಾಯ್ಪಲ್ಯ ಕಲಸೋಗರಗಳೊಬ್ಬಟ್ಟುಂಡೆ ಚಕ್ಕುಲಿ ಕರಜಿಕಾಯ್ಪಾಯಸಗಳಿಂದಲಿ ಬೀಗರೌತಣವಾ ಆದರದೊಳ್ ನೆರೆಮಾಡಿಸುತ (ಅಚಾರವಿ. ೧೭-೭೨, ೭೩); ನಿತ್ಯವೂ ಒಬ್ಬಟ್ಟು ಪಾಯಸ ತಿಂದುತಿಂದು ಅತ್ತೆಯ ಬಾಯಿ ಸಪ್ಪೆಬಿದ್ದು ಹೋಯಿತು (ಹುಟ್ಟಹ. ೫೩); ನಾನಿನ್ನು ಮಡಿ ಉಟ್ಟುಕೊಂಡು ಒಬ್ಬಟ್ಟು, ಕರಿಗಡಬು ಮಾಡಿ ಹಬ್ಬದ ಅಡಿಗೆ ಮಾಡಬೇಕು (ಕೀಲುಗೊಂ. ೧೭); ಲಕ್ಷ್ಮೀದೇವಮ್ಮನವರು ಹಬ್ಬದ ಅಡಿಗೆಯನ್ನೆಲ್ಲಾ ಮುಗಿಸಿ ಒಬ್ಬಟ್ಟು ತಟ್ಟುತ್ತಾ ಕುಳಿತಿದ್ದರು (ಇಬದು. ೬೪). ೨. (ಅಲಂ) ಏಟು; ಹೊಡೆತ: ಒಂದೆರಡು ಬಿಸಿಬಿಸಿ ಒಬ್ಬಟ್ಟು ಕೊಡಲೊ? (ರೂಢಿ).

[ದೇ. ‖ ತೆಲು. ಒಬ್ಬಟ್ಟು]

**ಒಬ್ಬಣ್ಣಿಗೆ** (ನಾ). ಒಂದೇ ಬಣ್ಣ (?): ಓಂ ಜಯ ಪರಮೇಶ್ವರ ಪರಮಾತ್ಮನೀಶ್ವರನುರ್ವೀ ಪರ್ವ್ವಯಡಂಗಿವನಾ ಕೊಂಡಿಪ್ಪನು ಒಬ್ಬಣ್ಣಿಗೆಯಾಗಿ ಯೋಗಿಮನದಳೆದ ಮನ (ಕಇ. II, ೪೧-೨; 1255).

[ಒರ್ (< ಒಂದು₃) + ಬಣ್ಣಿಗೆ]

**ಒಬ್ಬಳೆ** (ನಾ). ಒಂದು ಬಳ್ಳದ ಪ್ರಮಾಣ: ತಿಲಂ ನಿಸ್ತೈಲಮಾಗಿ ಪೊಡೊಬ್ಬಳಮೇಣಿಬ್ಬಳೆಮೆಣ್ಣೆಯಪ್ಪೊಡೆ ಭಯಂ (ಲೋಕೋಪ. ೪-೫೭); ಹೊಱಗಣ ಭತ್ತವಂ ತಂದಬಿವಲ್ಲಿ ಮೂಲೆವತ್ತ ಹೇಱಿಂಗೊಬ್ಬಳೆ ಪುಳಗಣ ಭಣ್ಣಿಗೆ ಮೂಗುಱಿ (ಸೌಇಇ. IX-i, ೨೦೦-೨೬; 1121); ಒಂದು ಕಱುವಿಂಗೊಬ್ಬಳಂ ಧಾನ್ಯಮಂ ಕೊಂಡು ಬಂದು ಜೀವಿಪ್ಪುದೆನಲಂತದಂ ಕೈಕೊಂಡು (ಚಂಡೇರ. ೬೩-೨೧); ಮನೆಯಿಂದಾವಗಂ ತಂದಣ್ಣಿವಾಲಂ ತೀವಿ ಬಟ್ಟಲೊಳೊಬ್ಬಳವನಿಂ ತಳೆದುಕೊಂಡೊಯ್ದು ಈವಂ (ಬಸವು. ೧೪-೨೫). [ಒರ್ (< ಒಂದು₃) + ಬಳ್₁ (< ಬಳ್ಳ)]

**ಒಬ್ಬಾಗುಂಟೆ** (ನಾ). ಒಬ್ಬಾತನ ಹೆಸರು: ಪ್ರಭುಮಲ್ಲನೊಬ್ಬಾಗುಣ್ಟನಳಿಯಮ್ಮಡಗಲು ಕೊಳ್ಳುತ್ತಿರೆ (ಎಕ. XII, ತಿಪಟೂ. ೪೭-೭; 880).

[?]

**ಒಬ್ಬಾಡಿ** (ನಾ). ಒಂದು ಊರಿನ ಹೆಸರು (?) : ವೊ[ಒ]ಬ್ಬಾಡಿಯ ನಿಭಗಿಯಲ್ಲಿ (ಬೊಂಕಶಾ. ೧೯೩೪, ಜಮುಖಂಡಿ. ೩೮–೧೯; ?). [?]

**ಒಬ್ಬಿ** (ಅ). ಒಮ್ಮೆ; ಒಂದುಸಲ (*). [?]

**ಒಬ್ಬುದ್ಧಿ** (ನಾ). ಒಂದೇ ಮನಸ್ಸು; ಏಕಚಿತ್ತ : ಇಬ್ಬರು ನಮಗೆ ಸ್ವಾಮಿಗಳೆಂದು ಸಖರೆಲ್ಲರೊಬ್ಬುದ್ಧಿಯಾಗಿ ನೋಡುವರು (ಭರಚ. ೫೨–೩೬) ; ಶ್ರದ್ಧೆಯಲ್ಲಿ ನೀವಿಂತು ಬಿಡದೊಬ್ಬುದ್ಧಿಯಲಿ ಭಜಿಸುವುದು (ನಿಭಾಗ. ೪–೧೬–೩೫) ; (ನಿಭಾಗ. ೧೦–೨೨–೨೦ ನೋ).

[ಒರ್ (< ಒಂದು$_3$) + ಬುದ್ಧಿ]

**ಒಬ್ಬುಳಿ$_1$** 'ಒರ್ವುಳಿ' ನೋ.

**ಒಬ್ಬುಳಿ$_2$** 'ಒರ್ವುಟಿ' ನೋ.

**ಒಬ್ಬುಳಿಕೆ** 'ಒರ್ಬುಳಿಕೆ' ನೋ.

**ಒಬ್ಬುಳಿಕ್ಕು, ಒಬ್ಬುಳಿಯಿಕ್ಕು** (ಕ್ರಿ). ಒಂದೆಡೆ ಇಡು ; ಕೂಡಿಡು : ಶ್ರೇಣಿಕಂ ನೋಡಿಯಾ ಪರಿಯಾಣಂಗಳನೊಬ್ಬುಳಿಕ್ಕಿ ಎಡದ ಕೈಯೊಳೊಂದು ತುತ್ತಂ ಸುನಕಂಗಳಿಗೀಡಾಡಿ (ಪುಣ್ಯಾಸ್ರ. ೩–೯ ವ) ; ಎಲಗತಿಡಾಳೆ ನೀಂ ತ್ರಿಜಗಲ್ಲೋಕದ ಚೆಲ್ವುಮನೊಬ್ಬುಳಿಕ್ಕಿದಂತಲಸದೆ ಪದ್ಮಜಂ ಸಮೆದನೆಂಬವೊಲೊಪ್ಪುವ ದೇಸಿಕಾರ್ತಿ (ಪುಣ್ಯಾಸ್ರ. ೫–೨೬) ; ನಾನಾ ವ್ಯವಹಾರದೊಳಂ ದೀನಾರಮನೊಬ್ಬುಳಿಕ್ಕಿ ನಾಮತಿಭರದಿಂ ತಾನದ ಭಕ್ಷಿಸಿ (ಪುಣ್ಯಾಸ್ರ. ೧೨–೧೪). **ಒಬ್ಬುಳಿಯಿಕ್ಕು** : ಕದಲಿದ ಕರಣಂಗಳನೊಬ್ಬುಳಿಯಿಕ್ಕಿ ಹೃದಯಾಂಬುಜಮಧ್ಯದೊಳಗೆ ಮದನಾರಿಯ ಮನೆಗೊಳಿಸಿ ಸಮಾಧಿಯೊಳೊದವಿರ್ದನಾ ರಾಯಕುವರ (ಕುರಾಸಾಂ. ೪೬–೪೩).

[ಒಬ್ಬುಳಿ$_2$ (< ಒರ್ವುಟಿ) + ಇಕ್ಕು]

**ಒಬ್ಬುಳಿಗೂಡು** 'ಒರ್ಬುಳಿಗೂಡು' ನೋ.

**ಒಬ್ಬುಳಿಗೆಯ್** 'ಒರ್ವುಳಿಗೆಯ್' ನೋ.

**ಒಬ್ಬುಳಿಗೊಳ್** 'ಒರ್ವುಳಿಗೊಳ್' ನೋ.

**ಒಬ್ಬುಳಿಯಿಕ್ಕು** 'ಒಬ್ಬುಳಿಕ್ಕು' ನೋ.

**ಒಬ್ಬುಳಿಸು** 'ಒರ್ಬುಳಿಸು' ನೋ.

**ಒಬ್ಬೆ$_1$** 'ಒಟ್ಟೆ' ನೋ.

**ಒಬ್ಬೆ$_2$** 'ಒರ್ಬೆ' ನೋ.

**ಒಬ್ಬೆರಕೆ** (ನಾ). (?) : ನೆಲ್ಲಿಚಟ್ಟನು ರಾತ್ರಿಯಲ್ಲಿ ನೀರಿನಲ್ಲಿ ನನೆಹಾಕಿ ಬೆಳಗಾಗೆ ಹಸುವಿನ ಹಾಲಿನೊಳರೆದು ಸಪ್ಪೆ ತುಪ್ಪವನೆತ್ತಿಕೊಂಡು ಆಮೇಲೆ ಈ ಹಾಲಿನಲ್ಲಿ ಅರೆದ ನೆಲ್ಲಿಚಟ್ಟನ್ನು ಬೆರಸಿ ಮೈಗೆ ಅಂಗೈಯಂಗಾಲಿಗೆ ಸಹ ತಿಕ್ಕಿ ಒಬ್ಬೆರಕೆ ಮಾಡಿದ ನೀರನು ಮಿಂದು ಹಾಲಿನಲ್ಲಿ ಪರಮಾನ್ನವ ಮಾಡಿ ಹೊಸತುಪ್ಪವ ಹಾಕಿಕೊಂಡು ಊಟಮಾಡಿ ಆಮೇಲೆ ಎಸರನ್ನವನುಣ್ಣಲು ದೇಹದ ಸಕಲ ಉಷ್ಣವೂ ಪರಿಹಾರಮಕ್ಕುಂ (ಸಕವೈ. ೧೪೧).

[ಒರ್ (< ಒಂದು$_3$) + ಬೆರಕೆ]

**ಒಬ್ಬೆರಲ್** 'ಒರ್ವೆರಲ್' ನೋ.

**ಒಬ್ಬೆರಳು** 'ಒರ್ವೆರಲ್' ನೋ.

**ಒಬ್ಬೆಸು** (ಕ್ರಿ). ವಿನಿಮಯ ಮಾಡು (?) : ಒಂದು ಕಾಲದಕ್ಕಿ ಸಿಕ್ಕಿದರೆ ಅಕ್ಕಿಯ ಕೊಟ್ಟು ಬಾಳ ಒಬ್ಬೆಸುವರು ತೋಟಕ್ಕೆ (ಸೌಇಇ. IX–ii, ೪೪೪–೩೭ ; 1433). [?]

**ಒಬ್ಬೊಂಟಿ, ಒಬ್ಬಂಟಿ** (ನಾ). ೧. ಏಕಾಕಿ : ಯಾರವನು ಒಬ್ಬೊಂಟಿ ಎಚ್ಚರಿರುವವನು (ನೆಲಮು. ೮೬). ೨. ಏಕಾಕಿನಿ : ಅವಳನ್ನು ಒಬ್ಬೊಂಟಿಯಾಗಿ ಮಾಡಿ ಈಗ ಪುನಃ ನೀವೇ ಬಂದು ಈ ಮಾತನ್ನು ಹೇಳುತ್ತೀರಿ (ದೇವೀಚಾ: ೨೮). **ಒಬ್ಬಂಟಿ** : ೧. ಅವರು ಬಹಳ ದಿನಗಳಿಂದಲೂ ಒಬ್ಬಂಟಿಯಾಗಿಯೇ ಇದ್ದಾರೆ (ರೂಢಿ).

[ಒಬ್ಬ (< ಒರ್ವ) + ಒಂಟಿ$_1$]

**ಒಬ್ಬೊಂಟಿಗ, ಒಬ್ಬಂಟಿಗ** (ನಾ). ಒಂಟಿಯಾಗಿರುವವನು ; ಏಕಾಕಿ : ಅವರ ಸಂಗವನ್ನು ಬಯಸದೆ ಒಬ್ಬೊಂಟಿಗನಾಗಿಯೇ ಕಾಲ ಕಳೆಯುತ್ತಿದ್ದನು (ಮಣಿಸ. ೨). **ಒಬ್ಬಂಟಿಗ** : ಮನೆಯಲ್ಲಿ ಅವನು ಒಬ್ಬಂಟಿಗನಾಗಿರುವನು (ಮುಂಗಾಮು. ೨೭); "ಆವತ್ತಿನಿಂದ ಹಾಗಾದರೆ" ನೀವು ಇಲ್ಲಿ ಒಬ್ಬಂಟಿಗರೇ ಇದ್ದೀರೀ ! (ಭಾರತಿ. ೩೭).

[ಒಬ್ಬ (< ಒರ್ವ) + ಒಂಟಿಗ]

**ಒಬ್ಬೊಟ್ಟು** (ನಾ). ಒಂದು ಬೆರಳು, —ಬೊಟ್ಟು : ಇಟ್ಟ ಕಬ್ಬಿನ ಜೂಜಿನೊಳಗೊಬ್ಬೊಟ್ಟನರ್ಧದೊಳಿನಿತುಳಿದಡಂ ದೃಷ್ಟಿಸಲ್ಕದು ಸೋಲವಲ್ಲಾ ಕೇಳ್ ನಿರಾಭಾರಿ (ಬಸವು. ೨೦–೨೩).

[ಒರ್ (< ಒಂದು$_3$) + ಬೊಟ್ಟು$_1$]

**ಒಮ್ಮಗ್ಗಲು** 'ಒಮ್ಮಗ್ಗುಲು' ನೋ.

**ಒಮ್ಮಗ್ಗುಲು, ಒಮ್ಮಗ್ಗಲು** (ನಾ). ಒಂದು ಮಗ್ಗುಲು, —ಭಾಗ : ಖಂಡಿಗಾರ ಪೀಠದ ಬಲತುದಿಯ ಏಣಿನಮೇಲೆ ಒಮ್ಮಗ್ಗುಲಾಗಿ ಕುಳಿತುಕೊಂಡನು (ಪುನರು. ೫೫೮). **ಒಮ್ಮಗ್ಗಲು** : ಜನರೆಲ್ಲ ಭೂಮಿಯ ಒಂದೇ ಭಾಗದಲ್ಲಿ ಕೂಡಿದ್ದರಿಂದ ಭೂಮಿಯು ನಾವಿನಂತೆ ಒಮ್ಮಗ್ಗಲಾದಂತೆ ತೋರುತ್ತದೆ (ಮುಂಬಯಿ. ೬–೨೨೨).

[ಒರ್ (< ಒಂದು$_3$) + ಮಗ್ಗುಲು (< ಮಗ್ಗುಲ್)]

**ಒಮ್ಮಟ್ಟ** (ನಾ). ಒಂದೇ ಮಟ್ಟ : ಯಂತ್ರದಲ್ಲಿ ಜೋಡಿಸಿದ ಮೊಳೆಗಳ ಸಮೂಹವು ಒಮ್ಮಟ್ಟವಾದ ಮೇಲ್ಮೈನಿಂದ ಕೂಡಿ ಹೊಳೆಯುತ್ತಾ ಅಂದವಾಗಿ ಕಾಣುತ್ತದೆ (ಮುದ್ರಕ. ೫೫).

[ಒರ್ (< ಒಂದು$_3$) + ಮಟ್ಟ$_1$]

**ಒಮ್ಮಡಿ** 'ಒರ್ಮಡಿ' ನೋ.

**ಒಮ್ಮಣ** (ನಾ). ಒಂದು ಮಣ (*). [ಒರ್ (< ಒಂದು$_3$) + ಮಣ]

**ಒಮ್ಮತ** (ನಾ). ಒಗ್ಗಟ್ಟು ; ಐಕ್ಯ : ನಾವಿಬ್ಬರೂ ಒಮ್ಮತ ಸಮ್ಮತವಾಗಿ ರೋಣ (ಆರ್ಯಕ. ೪); ಏಕಮುಖವಾದ ಮತ್ತು ಒಮ್ಮತವಾದ ಅಭಿಪ್ರಾಯಕ್ಕೆ ಬರುವುದು ತ್ರಾಸವೆನಿಸಿದೆ (ಕ್ರಿಯಾಶಿ. ೧೩೩).

[ಒರ್ (< ಒಂದು$_3$) + ಮತ]

**ಒಮ್ಮತ್ತರ್** 'ಒರ್ಮತ್ತರ್' ನೋ.

**ಒಮ್ಮತ್ತಲು** 'ಒರ್ಮತ್ತರ್' ನೋ.

**ಒಮ್ಮನ$_1$** 'ಒರ್ಮಾನ' ನೋ.

**ಒಮ್ಮನ$_2$** 'ಒರ್ಮನ' ನೋ.

**ಒಮ್ಮನನೇಮ** (ನಾ). ೧. ಏಕಚಿತ್ತದಿಂದ ಮಾಡುವ ನಿಯಮ, —ವ್ರತ; ಅತಿಶ್ರದ್ಧೆಯಿಂದ ಮಾಡುವ ವ್ರತ : ಸ್ವಾಮಿ ಬಿಜಯಂಗೈದು ಸಾಕ್ಷಾತ್ಸೋಮಶೇಖರ ನಿಮ್ಮನೊಮ್ಮನನೇಮವಂ ಸಲೆ ಸಲಿಸಿ ಸಲಹೈಯೆನುತ ಬಿನ್ನೈಸೆ (ಬಸವು. ೨೪–೫). ೨. ತನ್ನನ್ನೂ ಬೇರೆಯವರನ್ನೂ ಒಂದೇರೀತಿಯಲ್ಲಿ ಭಾವಿಸುವ ವ್ರತ; ಸ್ವಪರಭೇದವಿಲ್ಲದಿರುವ ವ್ರತ (*). [ಒಮ್ಮನ$_2$ (< ಒರ್ಮನ) + ನೇಮ]

**ಒಮ್ಮನವೆರಸು** (ಕ್ರಿ). ಒಂದೇ ಮನಸ್ಸಿನಿಂದ ಕೂಡಿರು ; ಏಕಚಿತ್ತವಾಗಿರು : ಒಮ್ಮನವೆರಸಿ ತಪೋನ್ನತಿವಡೆದಿರ್ದ ನಿರ್ಮಳಾತ್ಮಕ ಶಿವನೊಡಲದಿಮ್ಮೇಳೆ ಹೊಯ್ವೆನೆಂದೆನುತ ಮಂದಾನಿಲ ಕಮ್ಮಲರ್ಗೋಲಗೆ ನುಡಿದ (ಮೋಹತ. ೬–೨೩). [ಒಮ್ಮನ$_2$ (< ಒರ್ಮನ) + ಬೆರಸು$_1$]

**ಒಮ್ಮನಸೊಲಗೆ** (ನಾ). ಒಂದುಮಾನ ಮತ್ತು ಒಂದು ಸೊಲಗೆ : ತುರಗಕೊಮ್ಮನಸೊಲಗೆಯಾಗಲು ತಾಂ ಘೃತವೆಂಟುಲಕ್ಷಖಂಡುಗವಿರಲುಂ ಅರಮನೆಯ ಅಶ್ವವೆಲ್ಲಕೆ ಕರಣಿಕ ನೀ ತಿಳಿಯಪೇಳು ಗಣಿತವಿಳಾಸ (ಭಾಸ್ಕರ. ೨೨–೪).

[ಒಮ್ಮನ$_1$ (< ಒರ್ಮಾನ) + ಸೊಲಗೆ$_1$ (< ಸೊಲ್ಲಗೆ)]

**ಒಮ್ಮನಸ್ಕ** (ನಾ). ಒಂದೇ ಮನಸ್ಸಿರುವವನು; ಏಕಚಿತ್ತವುಳ್ಳವನು: ಕನ್ನಡಿಗರೆಲ್ಲರೂ ಒಮ್ಮನಸ್ಕರಾಗಿ ಕರ್ನಾಟಕ ಪ್ರಾಂತವನ್ನು ಸಾಧಿಸುವುದೊಂದೇ ಮದ್ದು (ಕನ್ನನು. I, ೫೮). [ಒರ್ (< ಒಂದು$_3$) + ಮನಸ್ಕ]

**ಒಮ್ಮನಸ್ಸು** (ನಾ). ಒಂದೇಮನಸ್ಸು; ಏಕಚಿತ್ತ: ಎಲ್ಲರೂ ಒಮ್ಮನಸ್ಸಿನಿಂದ ಅವರ ಸೇವೆಯಲ್ಲಿ ತೊಡಗುವರು (ಕಪಪು. VI, ೭); ಒಮ್ಮನಸ್ಸಿನಿಂದ . . . ಬದುಕುವವರು (ಸವತಿ. ೬೯); ಲುಕಾಷ್ಟನು ಕತ್ತನ್ನು ಮುಂದಕ್ಕೆ ಬಗ್ಗಿಸಿ ಅದನ್ನೇ ಒಮ್ಮನಸ್ಸಿನಿಂದ ಕಾದನು (ಮಲೆನಾ. ೧೫). [ಒರ್ (< ಒಂದು$_3$) + ಮನಸ್ಸು]

**ಒಮ್ಮಱ** (ನಾ). (?); "ಒಂದು ಮೊರ" (ಚನ್ನವ. ಕ. ಕೋಶ): ಮಹಾಘನ ಶ್ರೀಗುರುಲಿಂಗವೆ ಗುರುವಲ್ಲದೆ ಪಿತನೊಂದು ಗುರುವೆ ಮಾತೆಯೊಂದು ಗುರುವೆ ಭ್ರಾತನೊಂದು ಗುರುವೆ ಸತಿಯೊಂದು ಗುರುವೆ ಸುತನೊಂದು ಗುರುವೆ ಗುರುಗುರುವೆಂದೇನೋ ಒಮ್ಮಱ [ಪಾಠಾಂ. ಒಮ್ಮೊಱ] ಗುರುವೆ ಆ ಮಹಾಘನ ಗುರುಲಿಂಗಕ್ಕೆ ಇವೆಲ್ಲವ ಸರಿಗಂಡಡೆ ಅಘೋರನಾಯಕನರಕ ತಪ್ಪದು ಕೂಡಲ ಚೆನ್ನಸಂಗಮದೇವಾ (ಚನ್ನವ. ಕ. ೪೬೪). [ಒರ್ (< ಒಂದು$_3$) + ಮಱ (< ಮೊಱ ?)]

**ಒಮ್ಮಾನ** 'ಒರ್ಮಾನ' ನೋ.

**ಒಮ್ಮಾರು** 'ಒರ್ಮಾರ್' ನೋ.

**ಒಮ್ಮಾಲು** (ನಾ). ಒಂದು ಪಕ್ಕ, —ಮಗ್ಗುಲು.

ಒಮ್ಮಾಲಾಗು = ಒಂದು ಮಗ್ಗುಲಿಗೆ ವಾಲು, —ಸರಿ: ವೀರಭಟರು ತತ್ತರದಜೀವಿತ ಬರಲೋರಂತೆಯೊಮ್ಮಾಲಾಗಿ ತೇರ ಮಿಣಿಯ ಹಿಡಿದಂದದಿ ಪೌಜೆಲ್ಲ ಸೇರಿತು ಹೋಗಿ ಹೆನ್ನೆಲೆಯ (ನಾಗಕು. ೧೭-೭೪). [ಒರ್ (< ಒಂದು$_3$) + ವಾಲು$_2$]

**ಒಮ್ಮಾಳಿಗೆ** (ನಾ). ಒಂದೇ ಮಾಳಿಗೆ; ಒಂದಂತಸ್ತಿನ ಮನೆ: ಏಚಿಯಕ್ಕನು ಪರೋಕ್ಷವಿನಯಕ್ಕೆ ಕಬ್ಬಪ್ಪುನಾಡೊಳೊಮ್ಮಾಳಿಗೆಯ ಹಳಲು ಪಟ್ಟಸಾಲೆಯ ಮಾಡಿಸಿ (ಎಕ. II, ೧೪೧-೭೪; 1139). [ಒರ್ (< ಒಂದು$_3$) + ಮಾಳಿಗೆ]

**ಒಮ್ಮಿಸು**, **ಒಮ್ಮೈಸು** (ಕ್ರಿ). "ಕೂಡಿಸು; ಸೇರಿಸು" (ಉದ್ಭದೇ. ಕೋಶ): ಮುಮ್ಮಯ್ಯಂ ಹೆಮ್ಮಯ್ಯಂ ಕಮ್ಮದೊಳೊಮ್ಮಿಸಿ ಕಿಱುಮಯ್ಯಂ ಜೊಮ್ಮಿನ ಜಾನಮ್ಮಚ್ಚಿಸಿ (ಉದ್ಭದೇ. ೭-೪೬). **ಒಮ್ಮೈಸು**: ಒಮ್ಮೈಸಲ್ಪೊನ್ನ ಪಾಗುಂ ನವನವಮಣಿ ಮುಕ್ತಾದಿ ಭೂಷಾಂಗದಂಗಳ್ (ಮೈಸೂಮ. ೫-೧೭೭). [ಒಮ್ಮು$_1$ + -ಇಸು$_3$]

**ಒಮ್ಮು$_1$** (ಕ್ರಿ). ೧. ಅನುಸರಿಸು; ಹಿಂಬಾಲಿಸು; ಜೊತೆಗೂಡು: "ಒಮ್ಮು – ಅನುವರ್ತನೇ (ಒಪ್ಪು)" (ಶಮಧಾ); ಭಕ್ತಿಯೊಮ್ಮದು ನಮ್ಮ ಕುಲದಲಿ ಭಕ್ತರಾರುಂ ಬಾಳರಿಂತಹ ಭಕ್ತಿಗಂಜುವೆನು (ಬಸವು. ೨೭-೫೪). ೨. ಒಪ್ಪು; ಒಪ್ಪಿಕೊ; ಒಡಂಬಡು: ಆರೊಮ್ಮುವರಸುರರ್ಕಳ ಭಾರಿಯ ಭಯ ಪರಿಹರಿಸಲ್ (ಕುಮಾವಿ. ೯).

[ದೇ. ‖ ತಮಿ. ಒಪ್ಪು; ಮಲ. ಒಕ್ಕು; ತುಳು. ಒಂಬು; ತೆಲು. ಒಪ್ಪು]

**ಒಮ್ಮು$_2$** (ನಾ). ೧. ಮೇಳನ; ಹೊಂದಿಕೆ; ಸಾಮರಸ್ಯ; ಐಕ್ಯ (ಕಿ). ೨. ಏಕಾಕಿಯಾಗಿರುವಿಕೆ; ಒಬ್ಬಂಟಿಗನಾಗಿರುವಿಕೆ; ಅಸಹಾಯಕತೆ: ಕಂಪನನೆಂಬ ಭೂಪನ ಮಗನು ಮತ್ತೊಮ್ಮಿನಲಿ ಬಲುಗಾಳೆಗವಕಾದಿ ವಿರೋಧಿ ಸೇನೆಯೊಳಾನೆವರಿವರಿದು ಬಗೆಯೆ ನಿನ್ನಭಿಮನ್ಯುವಿನ ವೋಲಗಣಿತರನಸಿಯರೆದು ಸುರಪನ ನಗರಿಗೈದಿದನು (ಕುವ್ಯಾದ್ರೋ. ೯. ೭-೩೨). ೩. ಎಣೆಯಿಲ್ಲದಿರುವಿಕೆ; ಹೋಲಿಕೆಯಿಲ್ಲದಿರುವಿಕೆ.

[ದೇ. ‖ ತಮಿ. ಒರುಮ್ಮೈ; ಮಲ. ಒರುಮ; ತುಳು. ಒಟ್ಟೆ]

**ಒಮ್ಮುಕೆ** 'ಒಮ್ಮುಖ' ನೋ.

**ಒಮ್ಮುಕ್ಕುಳ್** (ನಾ). ಒಂದು ಬಾರಿ ಬಾಯಿ ತುಂಬುವಷ್ಟು; ಒಂದು ಮುಕ್ಕು, —ತುತ್ತು: ಇಕ್ಕಿದತ್ತು ಸಿರಿಯಂ ಸರಸೀಜಂ ಜಕ್ಕವಕ್ಕಿಗಳಗಲ್ದುವು ನೆಯ್ದಿಲ್ ನಕ್ಕುದೆಯ್ದೆ ತಮಮೆಂಬ ತಮಕ್ಕೊ [ಪಾಠಾಂ. ಮೆಕ್ಕೊ, ಮುಕ್ಕಂ]ಮ್ಮುಕ್ಕುಳಾದುದು ಜಗದ್ವಿಧುಬಿಂಬಂ (ಲೀಲಾವ. ೧೪-೧೦೩). [ಒರ್ (< ಒಂದು$_3$) + ಮುಕ್ಕುಳ್]

**ಒಮ್ಮುಖ**, **ಒಮ್ಮುಕ** (ನಾ). ೧. ಒಂದು ಮುಖ; ಒಂದು ದೃಷ್ಟಿ; ಐಕ್ಯತೆ: ನೆರವು ಬಹುದೋರಂದವೊಮ್ಮುಖವೊಂದು ಸಂಕೇತ (ಕುವ್ಯಾಶ. ೨-೧೯). ೨. ಒಂದು ದಿಕ್ಕು, —ದೆಸೆ; ಒಂದು ಪಕ್ಕ: ಮಾನವರುಗಳು ಭಾಗೀರಥಿ ಜಲದಲ್ಲಿ ಸ್ನಾನವಮಾಳ್ಪರೊಮ್ಮುಖದಿ (ಮೋಹತ. ೬-೩೮). **ಒಮ್ಮುಕೆ**: ೩. ಒಂದು ಭಾಗ, —ಅಂಶ: ಸರ್ವ್ವಮಾನ್ಯವಾಗಿ ಪೊಂಮುಕ ಸುಂಕಬಿಟ್ಟು (ಎಕ. IX, ಬೆಂಗಳೂ. ೨೬-೯; 1430).

ಒಮ್ಮುಖವಾಗು = ಒಂದು ಮುಖವಾಗು; ಒಂದು ದೃಷ್ಟಿಯುಳ್ಳದ್ದಾಗು: ಹೊಕ್ಕರೊಮ್ಮುಖವಾಗಿ (ಕೌಶಿರಾ. ೩೭-೨೮); ಅದರ ವೆಲ್ಲ ಒಮ್ಮುಖವಾಗಿ . . . ಬಂದರೆ (ಕನ್ನನು. I, ೧೮). [ಒರ್ (< ಒಂದು$_3$) + ಮುಖ]

**ಒಮ್ಮುಡಿ** (ನಾ). ಒಂದೇ ಕಿರೀಟ: ಮುಮ್ಮುಡಿಯ ನಾಲ್ಮಡಿಯ ದಿವ್ಯತೇಜಂಗಳಂ ಒಮ್ಮುಡಿಯೊಳಾಂತೆಸೆವ ಧೀರಂಗೆ ಮಂಗಳಂ (ಹೊಂಗಳು. ೩೫-೪). [ಒರ್ (< ಒಂದು$_3$) + ಮುಡಿ$_3$]

**ಒಮ್ಮೆ** 'ಒರ್ಮೆ' ನೋ.

**ಒಮ್ಮೆಯ್** 'ಒರ್ಮೆಯ್' ನೋ.

**ಒಮ್ಮೆರೆ** (ನಾ). ಒಂದು ಪ್ರದೇಶ (?): ಕೇಶವದೇವರ ಕೆಯಿಂ ಮೂಡಣ ಒಂಮೆರೆಯಲು ಯೆರೆ ಮತ್ತ ೫ ಯಾಕೆಯಿಂ ತೆಂಕಲು ಹತ್ತಿರ ಒಮ್ಮೆರೆಯಲು ಹರಳ ಕೆಯಿ ಮತ್ತ ೧ (ಸೌಇಇ. IX–i, ೨೭೬–೪೫; 1183). [?]

**ಒಮ್ಮೆಲೆ** (ಅ). ಒಂದೇ ಸಾರಿಗೆ; ಥಟ್ಟನೆ; ಇದ್ದಕ್ಕಿದ್ದಹಾಗೆ; ಒಮ್ಮಿಗೆ: ಈ ನದಿಯು ಒಮ್ಮೆಲೆಯೆತ್ತರವಾದ ಗುಡ್ಡದ ಕೆಳಗೆ ಬೀಳದೆ (ಕಭಾಗ. ೧೮); ಒಡ್ಡು ಒಮ್ಮೆಲೆ ಒಡೆದು ಬಿಟ್ಟಿತು (ಹಬ್ಬಬ. ೩); ಶರೀಘರು ಬಳಸಿದ ಗತಿ ಗತ್ತುಗಳು ಜನಮನವನ್ನು ಒಮ್ಮೆಲೆ ಹಿಡಿಯುವಂಥವುಗಳು (ಶರೀಘ. ೧ ಮೊದಲಮಾತು). [ಒಮ್ಮೆ (< ಒರ್ಮೆ) + -ಲೆ ?]

**ಒಮ್ಮೈಸು** 'ಒಮ್ಮಿಸು' ನೋ.

**ಒಮ್ಮೊಗ** (ನಾ). ೧. ಏಕಾಭಿಪ್ರಾಯ; ಒಂದೇ ಮನಸ್ಸು; ಒಂದೇ ದೃಷ್ಟಿ (ಕಿ). ೨. ಒಂದು ಪಕ್ಕ: ಮೊಗಸಿತರಿಬಲವನನುಸಾಲ್ವಕನ ಸೇನೆಯೊಮ್ಮೊಗದೊಳೆರೆಯುಗಿದ ಫಣಿಕುಲದಂತೆ (ಜೈಮಿಥಾ. ೧೨-೧೩). [ಒರ್ (< ಒಂದು$_3$) + ಮೊಗ$_2$]

**ಒಮ್ಮೊಗವೆಱು** (ಕ್ರಿ). ಒಂದೇ ಮುಖವಾಗು; ಒಟ್ಟಾಗು; ಕೂಡಿರು: ತಳಿರುಗಾಸೆಯ ಧೋತ್ರ ಬಹಿರ್ವಾಸ ಮೂಗಿನಿಂದಿಳಿದ ನಾಮಗಳ ವೈಷ್ಣವರುಗಳಿಲನೆ ನಿಳಯದಿಂ ಬಂದರೊಮ್ಮೊಗವೆತ್ತು (ಮೋಹತ. ೧೭-೩೦). [ಒಮ್ಮೊಗ + ಪೆಱು$_1$]

**ಒಮ್ಮೊತ್ತ** (ನಾ). ಒಂದೇ ಗುಂಪು, —ಸಮೂಹ: ಕಳವಳಿಸುತೊಮ್ಮೊತ್ತವಾದುದು ಸಕಲ ಮುನಿ ನಿಕರ (ಕುವ್ಯಾಅ. ೬-೧೫); ಗುಹೆಯೊಳಗೆ ಖಳನೊಮ್ಮೊತ್ತವನು ಮಾಡಿದನು (ನಿಭಾಗ. ೧೦-೩೨-೫೧). [ಒರ್ (< ಒಂದು$_3$) + ಮೊತ್ತ]

**ಒಮ್ಮೊನೆ** (ನಾ). ೧. ಒಂದು ಮೊನೆ, —ತುದಿ, —ಕೊನೆ: ಮನವ ನೊಮ್ಮೊನೆಯಲ್ಲಿ ನಿಲಿಸಿ (ವಿಸಿಣಿ. ೯೧). ೨. ಒಂದು ಯುದ್ಧ; ಸೈನ್ಯಾಗ್ರ: ಸೈನಿಕವ್ಯೂಹದಂತೆ ಸುಶಿಕ್ಷಿತವಾಗಿ ಒಮ್ಮೊನೆಗೆ ನುಗ್ಗುವ (ಕಬಸಾ. ೪೦). [ಒರ್ (< ಒಂದು$_3$) + ಮೊನೆ$_1$]

**ಒಮ್ಮೊಳ** 'ಒರ್ಮೊಟಿ' ನೋ.

**ಒಯ್$_1$**, ಒಯಿ, ಒಯ್ಯಿ, ಒಯ್ಯು (ಕ್ರಿ). ತೆಗೆದುಕೊಂಡು ಹೋಗು; ಹೊತ್ತುಕೊಂಡು ಹೋಗು; ಸಾಗಿಸು; ನಡೆಸು: ದಮ್ಮಮುಮಂ ಪೊನ್ನುಮಂ ಕೇಳಿ ಮಾಡಿ ಮುಂದೆ ಸೂಸುತ್ತುಮೊಯ್ವು [ಪಾಠಾಂ. ಉಯ್ವು]ದಂ (ವಡ್ಡಾರಾ. ೭೪–೨); ಕನಕಶ್ರೀಯುಂ ಗಗನಗಾಮಿನೀವಿದ್ಯೆಯಿನೊಯ್ದು (ಶಾಂತಿಪು. ೩–೬೦ ವ); ದ್ರೋಣನದಿರಾಗಿ ಧರಣಿಪನ ಸತ್ಕರಿಸಿ ನೆಲೆಯುಪ್ಪರಿಗೆಗೊಯ್ದನು (ಕುವ್ಯಾದ್ರೋ. ೮–೫೩); ಚಪಲಾಕ್ಷಿ ಸೀತೆಯನು ಖಳನು ಕದ್ದೊಯ್ವಾಗ ನಿಪುಣರಿವರಿದ್ದು ಇನ್ನೇನು ಮಾಡಿದರು (ಪುರಂದ. ೨–೬೦–೪). **ಒಯಿ**: ಇಂದೆ ಯಿಾಗಳೆ ಯಿಾತೆಜದೊಳೀ ಮಂದಿಯಂ ಕೊಂಡೊಯಿದಪೆಂ (ಬಸಪು. ೪೪–೬೫); ಕಡುದಿಟ್ಟನೆನಿಸುವ ಮಗನ ನೀನೊಯಿ ಹಾಲು ಬೆಣ್ಣೆಯನು ಕೊಟ್ಟು ಸಲಹೆನೆ (ಸಾಳ್ವಭಾ. ೧೧–೨೩). **ಒಯ್ಯಿ**: ಒಯ್ಯಿ ಒಯ್ಯಿ ಸೆಳೆದೊಯ್ಯಿ (ಗೋಕುನಿ. ೩೯–೧೦). **ಒಯ್ಯು**: ಪತ್ರಗಳನ್ನು ಒಯ್ಯುವುದಕ್ಕೂ ಮುಟ್ಟಿಸುವುದಕ್ಕೂ ತಕ್ಕ ಅನುಕೂಲತೆಯಾಯಿತು (ಮುಂಬಯಿ. ೪–೮೩); ವಿಶ್ವನಾಥನೆದುರು ತನ್ನ ಕೊನೆಯ ಅರಿಕೆಯನ್ನು ಒಯ್ಯುವುದಕ್ಕಾಗಿ ಕಿಟ್ಟಿಗೆ ಬರುವುದು ಸಾಧ್ಯವಿರಲಿಲ್ಲ (ಗಂಮಾಯಿ. ೧).

[ದೇ. ‖ ತಮಿ. ಒಯ್; ತುಳು. ಒಯಿ; ಕೊಡ. ಉಯ್ಯಾ = ರಭಸ; ಪರ್ಜಿ. ಗಡಬ. ಉಯ್; ಗೊಂಡಿ. ವೊಯ್ತ್ ಆನಾ; ಕುಇ. ಒಪ, ಓವ; ಕುವಿ. ಒಇಯಲಿ; ಮಲ್ತೊ. ಒಯೆ]

**ಒಯ್$_2$** (ಅ). ಸಂಕಟ, ವ್ಯಥೆ ಮುಂತಾದುವುಗಳನ್ನು ಸೂಚಿಸುವ ಅವ್ಯಯ: ಕಯ್ಯೇಟಿಬಿದೆ ಕಾಲೇಟಿಬಿದೆ ಮೆಯ್ಯೆಲ್ಲಂ ತೊನ್ನುಗೊಂಡು ದುಃಖಂಬಟ್ಟೊಯ್ವೊಯ್ಯೆಂದೊಳಜುತ್ತಿರ್ಪರ್ ಚಯಾರ್ದಿ ಜಿನೇಂದ್ರ ಧರ್ಮಮಂ ಪಟಿದವರ್ಗಳ್ (ಧರ್ಮಾಮೃ. ೬–೧೭೭). [?]

**ಒಯಕ್** (ಅ). ಓಕರಿಸುವಾಗ ಆಗುವ ಶಬ್ದ.

ಒಯಕ್‌ಅನಿಸು = (ಆಲಂ) ಸಾಯಿಸು; ಮರಣಹೊಂದುವಂತೆ ಮಾಡು: ಅವನನ್ನು ಇದ್ದಕ್ಕಿದ್ದಂತೆಯೇ ಒಯಕ್ ಅನಿಸಿಬಿಟ್ಟ (ರೂಢಿ). ಒಯಕ್ಕೆನ್ನು = ೧. ಒಯಕ್ ಎಂದು ಧ್ವನಿಮಾಡು; ಓಕರಿಸು (ಕ). ೨. (ಆಲಂ) ಸಾಯು; ಮರಣಹೊಂದು: ಅವನು ಒಯಕ್ಕೆಂದನು (ರೂಢಿ). [?]

**ಒಯಿ** 'ಒಯ್$_1$' ನೋ.

**ಒಯಿನ** (ನಾ). (ಕರಾ) ಉಪಾಯ. [← ತುಳು. ಒಯಿನೊ]

**ಒಯಿರಿ**, ಒಯ್ರಿ (ನಾ). ಹಗೆ; ಶತ್ರು: ಅಡಿಯಿಟ್ಟನೀ ವನವಾಸದೆಡೆಗ ವರೊಯಿರಿ ಕುರುರಾಯ (ಜಿನಭಾ. ೪೬–೨೧). **ಒಯ್ರಿ**: ಜನ್ಮದೊಯ್ರಿಯಹ ತಾಮರಸಕೊಲಿದೆನ್ನ ಕಡುಸುಕ್ಕಿಸಿ (ಪರಶು. ೧೨–೧೬).

[< ಸಂ. ವೈರಿ]

**ಒಯ್ಕನೆ** (ಅ). ನೆಟ್ಟನೆ; ನೇರಾಗಿ; ಸ್ಫುಟವಾಗಿ: "ಒಯ್ಕನೆಯೆನೆ ನೆಟ್ಟನೆಯೆನೆ ನೆಟ್ಟಗೆಯೆನೆ . . . ಪರಿಸ್ಫುಟಾರ್ಥವಿಧಾನಂ" (ಶಮದ.೩೦೭); ಮೃದುತರ ಮಾರ್ಗದೆ ಕೆನ್ನಂ ಮದನಶರಾನೀಕಮೊಯ್ಕನೊಲವಂ ಪಡೆಗುಂ (ಕವಿರಾ. ೩–೧೦೧); ಕಲ್ತ ನಿಮ್ಮ ಮಕ್ಕಳ ಮೆಯ್ಯೊಳ್ ಮೆಱೆದಪ್ಪೆನೆನ್ನ ವಿದ್ಯೆಯನಱಿದೊಯ್ಕನೆ ನೆರೆದು ನೋಟ್ಪುದನಿಬರುಮಾಗಳ್ (ಪಂಪಭಾ. ೨–೬೫); ಇಂತು ತೊಟ್ಟಿಂಬವೊಲೊಯ್ಕನೆ ನೆಗೆಟ್ದಪೆ (ರಸರ. ೩–೧೬೪).

[ಒಯ್ಕು$_0$ + -ಅನೆ$_1$]

**ಒಯ್ತರು** (ಕ್ರಿ). ತೆಗೆದುಕೊಂಡು ಬಾ: ನೋಡೆನ್ನನಟ್ಟಿದರೆಲ್ಲರ ಸಡುಗುಡನಾಡಿದಂತೊಯ್ತಹೆನೆನುತ ಔಡುಗಚ್ಚ ಕ್ರಿತ್ತ ಕೈಯೆತ್ತಿ ಹರಿದು ಮುಂದೋಡಿದನೊಬ್ಬನೊಬ್ಬೆಯೊಳು (ಭರಜ. ೫೩–೪೫).

[ಒಯ್$_1$ + ತರು$_1$ (< ತರ್)]

**ಒಯ್ನ** 'ವೈನ' ನೋ.

**ಒಯ್ಪುಚ್ಚ** (ನಾ). ಪಾಶ; ಉರುಲು: ಇಡಿ ಜನಾಂಗದ ಕೊರಳಿಗೇ ಒಯ್ಪುಚ್ಚ (ಉರುಳು)ವಾಗುವುದು (ಹಗಲಿ. ೬೧). [?]

**ಒಯ್ಯಗೆ** (ಅ). ಮೆಲ್ಲನೆ; ಮೃದುವಾಗಿ: ಒಯ್ಯಗೆ ಪಾರ್ದೆಚ್ಚ ವೃಷಾಂಕನಂಬು ತನುವಂ ಪಚ್ಚಂತೆ ಕೊಂಡತ್ತು (ಪಂಪಭಾ. ೮–೧೬); ಬಗೆಯದೆ ನಡೆವಳಿಗರಸಂ ಪಗೆವರ ಮನೆಗೆಯ್ದಿ ಬಱಿಕ ಜಾಱುವವೊಲ್ ಸಂಪಗೆಯ ನನೆಗೆಯ್ದಿ ಬಱಿಕೊಯ್ಯಗೆ ಜಾಱುವ ತುಂಬಿ ನಗಿಸಿದುದು ಮಲ್ಲಿಗೆಯಂ (ಕಬ್ಬಕಾ. ೫೪).

ಒಯ್ಯಗೊಯ್ಯಗೆ (ದ್ವಿರುಕ್ತಿ): ಒಯ್ಯಗೊಯ್ಯಗೆ ನಗೆಗಣ್ಣಳಾಲಿ ಮಗುಟ್ದಂತಿರೆ ಮುಚ್ಚಿರೆ (ಪಂಪಭಾ. ೨–೧೯); ಈ ತನ್ವಿಯರೊತ್ತಿನೊಳ್ ಸಡಸುಡಂಗೆಯ್ದಿರ್ಪನೆಂದೊಯ್ಯಗೊಯ್ಯಗೆ ಸಾರ್ವಂಗಜನೊಯ್ಯಗೊಯ್ಯಗೊಳಸಾರ್ದಿರ್ದು (ಅಜಿಪು. ೬–೩೪).

[ಒಯ್$_0$ + -ಅಗೆ$_3$]

**ಒಯ್ಯನೆ** (ಅ). ೧. ಮೆಲ್ಲನೆ; ಮೃದುವಾಗಿ; ಸಾವಕಾಶವಾಗಿ: ಮಲಯಾನಿಲನೊಯ್ಯನೆ ಪಣ್ತೆಲೆಯುಂ ನೆಲೆಯಿಂ ಕಟಲ್ಚುಗುಂ ವಿಟಪಿಗಳೊಳ್ (ಕವಿರಾ. ೩–೫೪); ಇನಿಯಳ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಟ್ದ ನಾಣ ಪೆಂಪಿನೊಳ್ (ಆದಿಪು. ೪–೪೯); ಬಿರುದಿನ ಕವಿಯೆನಿಪ್ಪ ಹಂಪೆಯ ರಾಘವಾಂಕನೊಯ್ಯನೆ ಪೇಟ್ದಂ (ಹಚಕಾ. ೧–೩೨); ಕಾಲ್ಗೆಟ್ಟೆಳೆಯುಲಾಜದೊಯ್ಯನೆ ನಡೆವ ತೇರ್ಗುದುರೆಯಂ ಕಂಡು (ಜೈಮಿಭಾ. ೩–೪೧); ನಲವಿನೊಳು ಒಸೆದೊಲವಱಿತೊಯ್ಯನುಚಿತೋಪಚಾರವನೆಸಗುವುದೇಕಚಿತ್ತದೊಳು (ಹದಿಬ. ೩–೧೬); ತಂಗಾಳಿಯೊಯ್ಯನೆ ಬೀಸುವಲ್ಲಿ (ವಿಸಿಣಿ. ೩೯–೧೦).

ಒಯ್ಯನೊಯ್ಯನೆ, ಒಯ್ಯೊಯ್ಯನೆ (ದ್ವಿರುಕ್ತಿ): ಅವರ ಸುಯ್ಯಗಳ ಗಾಳಿಯೊಳೊಯ್ಯನೊಯ್ಯನಳ್ಳಾಡುವುದಾಯ್ತು (ಪಂಪಭಾ. ೩–೮೩); ಆಕಾಶಗಂಗೆ ಧರೆಗಿಟಿವಾಕಾರದಿನೊಯ್ಯನೊಯ್ಯನವತರಿಸಿ (ಶಾಂತಿಪು. ೧೧–೧೦೨); ಪದಹತಿಯಿಂ ಮಡಿಗುಂ ಕ್ರಿಮಿಸಮಿತಿಯೆಂದು ಬಗೆದಾರಯ್ಯುತ್ತಡಿಯಿಡುವನೊಯ್ಯನೊಯ್ಯನೆ ಪೊಡವಿಯೊಳ್ (ವೃಷವಿ. ೨೬–೬); ಮಱಿದುಂಬಿಗಳ ಗಾನಕ್ಕೆ ಕೊರಳನೊಲೆದಾಡುವಂತೊಯ್ಯೊಯ್ಯನೊಲೆದಾಡುವ (ಜೈಮಿಭಾ. ೩–೬). ಒಯ್ಯನಾಗು = ಮೆಲ್ಲಗಾಗು; ಕಾಂತಿ ಕಡಮೆಯಾಗು; ನಿಸ್ತೇಜವಾಗು: ಸೊಡರ್ಗುಡಿಯೊ [ಪಾಠಾಂ. ಮೆ, ಮ್ಯೆ]ಯ್ಯನಾಗಿ ಪೊಸಮಲ್ಲಿಗೆ ಮೆಲ್ಲಗೆ ಕಂಪುನಾಱಿ ತಣ್ಪಿಡಿದೆಲರೂದೆ. . .ನಿಟ್ಟಿಸಿದಂ ಬೆಳಗಪ್ಪಜಾವಮಂ (ಪಂಪಭಾ. ೪–೧೧೦).

[ಒಯ್$_0$ + -ಅನೆ$_1$]

**ಒಯ್ಯರ** 'ಒಯ್ಯಾರ' ನೋ.

**ಒಯ್ಯರಂಗುಡು** (ಕ್ರಿ). ಸಮಾನವಾಗು; ಹೊಂದಿಕೆಯಾಗು; ಅನುಸಾರವಾಗು: ತೊದಳ್ನುಡಿ ವೀಣಾಧ್ವನಿಗೊಯ್ಯರಂಗುಡೆ (ಅನಂಪು. ೮–೮). [ಒಯ್ಯರ (< ಒಯ್ಯಾರ) + ಕುಡು$_1$ (< ಕೊಡು)]

**ಒಯ್ಯರಂಬಡೆ** 'ಒಯ್ಯಾರಂಬಡೆ' ನೋ.

**ಒಯ್ಯರವಾನ್** (ಕ್ರಿ). ಒಯ್ಯಾರವನ್ನು ತಾಳು, —ಹೊಂದು: ನೆಱಿ ಸೊಗವಾಂತು ಕಂತುನಿಭನೀ ಚಿಕದೇವನರೇಂದ್ರಚಂದ್ರಮಂ ಪೊಱಮಡೆ ಮಾಡವೇಱಿ ಪುರಯೌವತಮೊಯ್ಯರವಾಂತು ನಿಂದು (ಅಪ್ರತಿ. ೨೪–೧೭). [ಒಯ್ಯರ (< ಒಯ್ಯಾರ) + ಆನ್$_1$]

**ಒಯ್ಯಾರ,** ಒಯ್ಯರ (ನಾ). ೧. ಸೊಗಸು; ಅಂದ; ಚಂದ; ಬೆಡಗು; ಬಿನ್ನಾಣ: ಅಲ್ಲಿಯೊರ್ವರ್ಳ್ ಮಲ್ಲಿಗೆಯ ಮುಗುಳಹಾರ ಕ್ಕೊಯ್ಯಾರಮುಪ್ಪ ಪಚ್ಚೆಸಾರಮಂ ಸಮೆಯಲೆಂದು (ಪಾರ್ಶ್ವಪು. ೯-೪೭ ವ); ಪಚ್ಚೆಯ ಪರಿಗೆಯ ಪಸರದ ಪಾರಿಯದೊಯ್ಯಾರದ ಕೆಂದಟ್ಟಿನ ಪಂತಿಯ (ಗಿರಿಕ. ೬-೫೫ ವ); ಒಯ್ಯಾರದಲಿ ರಾವ್ತರು ಮುಂದೆ ತಲೆದೋಱಿದರು (ಕು ವ್ಯಾ ದ್ರೋ. ೧೨-೭); ಕಲ್ಲಡಿಯೊಳಗೊಯ್ಯಾರದಿಂ ಪಾಸಿದನು (ಶ್ರೀಪಾಲ. ೪-೪೫); ಜೀಯ ಚಿತ್ತಯ್ಸು ಬಹುರಚನೆಯಿಂದರಮನೆಯ ನೊಯ್ಯಾರದಿಂ ಗೆಯ್ದಿಂ (ಚಬಪು. ೫-೫೩); ಒನಪು ಒಯ್ಯಾರಮಾಡುತ್ತ ಸಂಗೀತ ಸಾಧನಗಳೊಡನೆ ಗಾಯನವನ್ನು ಪ್ರಾರಂಭಿಸಿದಳು (ಕುಂಕುಮ. ೭೧). ೨. ದಯೆ; ದಾಕ್ಷಿಣ್ಯ: ತಲೆವಿಡಿದು ತೆಗೆದು ವೀರೇಶನವರಂ ಒಯ್ಯಾರಮುಳಿದು ತಲೆಗಳನರಿವ ಸಮಯದೊಳ್ (ಪದ್ಮರಾ. ೧೦-೨೪೧). ೩. ಆಸೆ; ಪ್ರೀತಿ: ತೀರ್ಥಪ್ರಸಾದದಲ್ಲಿ ಒಯ್ಯಾರಮುಂಬಟ್ಟನೆ (ಘಸವ. ೨೪). **ಒಯ್ಯರ:** ೧. ಒಯ್ಯರಮಾಡುದಾಯ್ದು ಕಟ್ಟಿದ ಕರಂಬವಾಸಿಗದ ಕುಸುಮ ವಿಸರದ ಪಸರಂ (ಅನಂಪು. ೪-೭); ಒಯ್ಯರ ದೊಳೂಱಿದ ಗದೆಯುಂ (ಚಕವಂ. ೧೩೧-೧೪). 'ಓಯಾರ' ಪರಾ.
[ದೇ. ‖ ತಮಿ. ಒಯಿಲ್, ಒಯ್ಯಾರ; ತೆಲು. ಒಯಾರ, ಒಯ್ಯಾರ]

**ಒಯ್ಯಾರಂಬಡೆ,** ಒಯ್ಯರಂಬಡೆ (ಕ್ರಿ). ಒಯ್ಯಾರವನ್ನು ಹೊಂದು, —ಪಡೆ: ಓದಿನೊಳ್ ಮಾಧುರ್ಯಂಬಡೆದು ಪಾಡಿನೊಳ್ ಪರಿವಡೆದು ನುಡಿಯೊಳ್ ನಯಂಬಡೆದು ವೀಣೆಯೊಳ್ ಜಾಣಂ ಮೆಱೆದು ಉಪಚಾರ ದೊಳೊಯ್ಯಾ[ಪಾಠಾಂ. ಯ್ಯ]ರಂಬಡೆದು (ಗಿರಿಕ. ೨-೧೦೫ ವ). **ಒಯ್ಯರಂಬಡೆ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. 'ವೈಯಾರಂಬಡೆ' ಪರಾ. [ಒಯ್ಯಾರ+ ಪಡೆ$_1$]

**ಒಯ್ಯಾರಗಾತಿ** (ನಾ). ಬೆಡಗಿ; ಸೊಗಸುಗಾತಿ; ಒನಪಿನವಳು. 'ವೈಯಾರಗಾತಿ' ಪರಾ. [ಒಯ್ಯಾರಗಾರ+ -ತಿ$_1$ (< -ಇತ್ತಿ)]

**ಒಯ್ಯಾರಗಾರ** (ನಾ). ಅಂದಗಾರ; ಸೊಗಸುಗಾರ. 'ವೈಯಾರ ಗಾರ' ಪರಾ. [ಒಯ್ಯಾರ+ -ಗಾರ (< -ಕಾಱ)]

**ಒಯ್ಯಾರಗಿತ್ತಿ** (ನಾ). = ಒಯ್ಯಾರಗಾತಿ. 'ವೈಯಾರಗಿತ್ತಿ' ಪರಾ. [ಒಯ್ಯಾರ+ -ಗಿತ್ತಿ]

**ಒಯ್ಯಾರತನ** (ನಾ). ಅಂದಗಾರಿಕೆ; ಸೊಗಸುಗಾರಿಕೆ: "ಲಲಿತ-ಒಯ್ಯಾರತನ" (ಗಂಗಾಮಾ. ೨೭೭). 'ವೈಯಾರತನ' ಪರಾ. [ಒಯ್ಯಾರ+ -ತನ]

**ಒಯ್ಯಾರಿ** (ನಾ).=ಒಯ್ಯಾರಗಾತಿ: ನಿಡುದುಱುಬಿನೊಯ್ಯಾರಿ ಬೈತಲೆಯ ಶೃಂಗಾರಿ (ಮಹಾವಿ. ೬-೧೪); "ಆ ಒಯ್ಯಾರಿ ನಿಮ್ಮಲ್ಲಿ ಬಂದಳು ಹೇಗೆ?" (ಜೀವಪ್ರ. ೧೦). 'ವೈಯಾರಿ' ಪರಾ.
[ಒಯ್ಯಾರ+ -ಇ$_2$. / ತಮಿ. ತೆಲು. ಒಯ್ಯಾರಿ]

**ಒಯ್ಯಾರಿಸು** (ಕ್ರಿ). ೧. ಸವರು; ಲೇಪಿಸು: ಮುಂದಲೆಯನಲೆವ ನುಣ್ಗು ರುಳನೊಯ್ಯಾರಿಸುತೆ (ಪದ್ಮರಾ. ೫-೪೩); ಬೋಳಯಿಸಿ ಬಿಗಿದು ಬೆಂಗೆ ವಾಯ್ದೊಲವುತೊಯ್ಯಾರಿಸುತ ಪೋಗೆ (ಸಂಗರಾ. ೪-೨೨); ಕೃಷ್ಣನು ಪ್ರೇಮದಿಂ ತೊಡವುಗಳನೊಯ್ಯಾರಿಸುತ ನಿಂದಿರ್ದ (ಕೋಗಯ. ೫-೫). ೨. ಕ್ರಮಗೊಳಿಸು; ಅಚ್ಚುಕಟ್ಟಾಗಿಸು: ಸಕಲಬಲ ಮಾದ್ರೇಶ್ವರನ ಹೇಳಿಕೆಯಲೊಯ್ಯಾರಿಸಿತು (ಕುವ್ಯಾಕ. ೨-೯). 'ಓಯಾರಿಸು' ಪರಾ.
[ಒಯ್ಯಾರ + -ಇಸು$_3$]

**ಒಯ್ಯಾಳಿ** 'ವೈಯಾಳಿ' ನೋ.

**ಒಯ್ಯಾಳಿಗ** (ನಾ). (ವಿಹಾರಕ್ಕಾಗಿ) ಕುದುರೆ ಸವಾರಿಮಾಡು ವವನು (ಹ). [ಒಯ್ಯಾಳಿ (< ವೈಯಾಳಿ) + -ಗ$_3$]

**ಒಯ್ಯಿ** 'ಒಯ್$_1$' ನೋ.

**ಒಯ್ಯಿಕೆ** (ನಾ). ತೆಗೆದುಕೊಂಡು ಹೋಗುವಿಕೆ; ಸಾಗಿಸುವಿಕೆ (ಹ). [ಒಯ್$_1$ + -ಇಕೆ]

**ಒಯ್ಯು** 'ಒಯ್$_1$' ನೋ.

**ಒಯ್ರಿ** 'ಒಯಿರಿ' ನೋ.

**ಒಯ್ವಾಹ** (ನಾ). ಮದುವೆ; ಕಲ್ಯಾಣ: ಶಿವಬಿಜ್ಜಣಗೆಯನುರಾಗದಿಂ ದೊಯ್ವಾಹಗೈದನು ಹವಿಯ ಸಾಕ್ಷಿಯಲಿ (ಬಿಜ್ಜಪು. ೯೭-೨೪).
[< ಸಂ. ವೈವಾಹ]

**ಒರ್,** ಓರ್$_1$ (ನಾ). ಸಮಾಸದಲ್ಲಿ ಒಂದು ಎಂಬ ಸಂಖ್ಯಾವಾಚ ಕಕ್ಕೆ ಆದೇಶವಾಗಿ ಬರುವ ರೂಪ. 'ಒರ್ಕೆಯ್', 'ಒರ್ನುಡಿ', 'ಒರ್ಪಿಡಿ' ಪರಾ. ಓರ್$_1$: 'ಓರೊಂದು', 'ಓರೊರ್ಮೆ' ಪರಾ.
[ದೇ. ‖ ತಮಿ. ಮಲ. ಒರು, ಓರ್; ತುಳು. ಓರ್, ಒರು; ಕೊಡ. ಒರ್; ಕುಇ. ಕುವಿ. ರೋ]

**ಒರ** (ನಾ). ಬಯಕೆ; ಬಯಸಿದ ವಸ್ತು: ಬೇಡಿದೊರಗಳನೀವ ಪುರಂ ದರವಿಠಲ (ಪುರಂದ. ೫-೬೦-೩); ಮಹದೇವಗೊರವಿತ್ತು (ತೀರ್ಥಮ. ೩೭); ಕೈಕೆಗೊರವಿತ್ತು (ವಂಕಾರಾ. ೧-೬-೨೯); ಮೆಚ್ಚಿದೊರವಂ ಕೊಡುವುದುಂಟಾದರೆ... ಓಲೈಸಿ ಪೋಗಬೇಕೆಂದೊರಗಳಂ ಬೇಡ್ದರು (ತುರಂಗ. ೬೦-೧೪); ಪ್ರೇಮದಿಂ ದೇವರೊರವಿತ್ತಡಂ ಪೂಜಾರಿ ತಾ ಮುನಿವನೆಂದು ಪೇಳ್ವರು (ನವಮೋ. ೧-೧೧).
[< ಸಂ. ವರ]

**ಒರಂಕೆಲ್ವಾಯ್ಗರ್** (ನಾ). ಒಬ್ಬಾತನ ಹೆಸರು: ಕಣ್ಣಮ್ಮನ್ ಕೊಡಗೂರ್ನಾಡಾಳ ಒರಂಕಲ್ವಾಯ್ಗರುಮ್ ಸಿಂಪಾಲ್ವಾಯ್ಗರುಂ ಇರ್ವ್ವರುಂ (ಮೈಅರಿ. ೧೯೨೫, ೧೦೭-೨೭; ?). [?]

**ಒರಗಾಣೆ** (ನಾ). ಒಂದು ಕಾಣಿ, —ನಾಣ್ಯ: ಟಂಕಿಗೆ ಪೋಡಶ ದುಡ್ಡುಂ ಬಿಂಕದಿ ಸಸಿಗಾಣಿ ನಾಲ್ಕುಂ ಪೈಸಗಳೆಂಟಂ ಪಂಕಜಮಿತ್ರನ ಗಣ ನೆಗೆ ಭೋಂಕನೆ ತಾಂ ಒರಗಾಣಿ ದುಗ್ಗಾಣಿರಡಂ (ಭಾಸ್ಕರ. ೭೩-೧೦).
[ಒರ್$_0$ (< ಒರ್) + ಕಾಣಿ$_1$]

**ಒರಗಿಸು** 'ಒಱಂಗಿಸು' ನೋ.

**ಒರಗು$_1$** 'ಒಱಂಗು' ನೋ.

**ಒರಗು$_2$** 'ಒಱಗು$_2$' ನೋ.

**ಒರಗುದಿಂಬು** (ನಾ). ಒರಗಿಕೊಳ್ಳುವ ದಿಂಬು; ಲೋಡು: ನಮ ಸ್ಕಾರ ದಣಾಯಕರೆ. (ಒರಗುದಿಂಬುಗಳನ್ನು ಹಾಕಿದ್ದ ಕಡೆಗೆ ಕೈತೋ ರಿಸಿ) ಈ ಕಡೆಗೆ ಬನ್ನಿ (ತುಂಗಭ. ೧೨); ಕೂತು ಕೇಳುವವರಿಗೆ ಮೆತ್ತ ನೆಂದು ಒರಗುದಿಂಬುಗಳಿರಬೇಕು (ಸಾಹಿಜೀ. ೧೦).
[ಒರಗು$_1$ (< ಒಱಂಗು) + ದಿಂಬು]

**ಒರಗುಮೂಡೆ** 'ಒಱಗುಮೂಡೆ' ನೋ.

**ಒರಗುಲ್ಲಾರ** (ನಾ). ಒರಗಿಕೊಳ್ಳುವ ಮೆತ್ತೆ; ತಿವಾಸಿ (ಹ).
[ಒರಗು$_1$ (< ಒಱಂಗು) + ಉಲ್ಲಾರ]

**ಒರಚು** (ಗು). ವಕ್ರವಾದ; ಒಂದು ಕಡೆಗೆ ವಾಲುವ. 'ಒರಚು ಗಣ್ಣು' ಪರಾ. [?]

**ಒರಚುಗಣ್ಣು** (ನಾ). ವಾಲುಗಣ್ಣು; ಮೆಳ್ಳಗಣ್ಣು; ವಕ್ರದೃಷ್ಟಿ: ಒರಚುಗಣ್ಣಿನ ಸಿಂಗಪ್ಪಗೌಡರು ತಮ್ಮ ತಾರುಣ್ಯ ಸಹಜವಾಗಿದ್ದ ಸಂತೋಷದ ಮುಖಭಂಗಿಯಿಂದ ಗುತ್ತಿಯ ಕಡೆ ಒರೆನೋಟ ಬೀರಿ (ಮಲೆಮ. ೭೧೪). [ಒರಚು + ಕಣ್ಣು (< ಕಣ್)]

**ಒರಟೆ** 'ಒಱಂಟ' ನೋ.

**ಒರಟಾಡು** (ಕ್ರಿ). ಒರಟು ಮಾತನ್ನಾಡು; ಗಡುಸಾಗಿ ಹೇಳು: ನರಟುಗಾರನು ಒರಟಾಡುತ್ತಾನೆ (ಗಾದೆ).
[ಒರಟು (< ಒಱಂಟು) + ಆಡು$_1$]

**ಒರಟು** 'ಒಱಂಟು' ನೋ.

**ಒರಟುಗಂಬಳಿ** (ನಾ). ಮೃದುವಲ್ಲದ ಕಂಬಳಿ; ಉಜ್ಜುಗಂಬಳಿ: ಹೂಮಳೆ ತುಂತುರು ತುಂತುರಾಗಿ ಬಿದ್ದು . . . ಅವರ ಒರಟುಗಂಬಳಿಯ ತುಪ್ಪುಳದ ಮೇಲೆ ಕೂತಿರುತ್ತಿತ್ತು (ಪುನರು. ೨೬೯).
[ಒರಟು (< ಒಱಂಟು) + ಕಂಬಳಿ]

**ಒರಟುಗಟ್ಟು** (ಕ್ರಿ). ಗಟ್ಟಿಯಾಗು; ಜಡ್ಡುಗಟ್ಟು: ಮಳೆಬಿಸಿಲೆನ್ನದೆ ಬಹುಕಾಲ ತಿರುಗಿದ್ದರಿಂದ ಚರ್ಮ ಒರಟುಗಟ್ಟಿತ್ತು (ಯೋಧಪು. ೫೩).
[ಒರಟು (< ಒಱಂಟು) + ಕಟ್ಟು$_1$]

**ಒರಟುಗಲ್ಲು** (ನಾ). ನಯವಲ್ಲದ ಕಲ್ಲು; ಮೃದುವಲ್ಲದ ಕಲ್ಲು: ಚರಂಡಿಯ ಒರಟುಗಲ್ಲುಗಳ ಮೇಲೆ . . . ಅಂಗಾತನಾಗಿ ಮಲಗಿದ್ದನು (ಪುನರು. ೪೪೩) [ಒರಟು (< ಒಱಂಟು) + ಕಲ್ಲು (< ಕಲ್$_3$)]

**ಒರಟುತನ** 'ಒಱಂಟುತನ' ನೋ.

**ಒರಟುಮನುಷ್ಯ** (ನಾ). ನಯವಿಲ್ಲದ ಮನುಷ್ಯ; ಅನಾಗರಿಕ: ಅವನೊಬ್ಬ ಒರಟುಮನುಷ್ಯ (ರೂಢಿ).
[ಒರಟು (< ಒಱಂಟು) + ಮನುಷ್ಯ]

**ಒರಟುಸರಕು** (ನಾ). ಕಚ್ಚಾವಸ್ತು: ಅಂತರ್ರಾಷ್ಟ್ರೀಯ ಪೇಟೆಯಲ್ಲಿ ಹಿಂದಿ ಗಿರಾಕಿಗಳೆಂದರೆ, ಕೇವಲ ಒರಟುಸರಕುಗಳನ್ನು ಕೊಟ್ಟು, ತಯಾರಾದ ಸಾಮಾನುಗಳನ್ನು ಕೊಳ್ಳುವವರು (ತಕ್ಕಡಿ. ೨೮).
[ಒರಟು (< ಒಱಂಟು) + ಸರಕು]

**ಒರಟುಹಿಡಿ** (ಕ್ರಿ). ಒರಟಾಗು; ಜಡ್ಡುಹಿಡಿ; ಜೋಮ್ಮುಹಿಡಿ: ". . . ನಿನ್ನ ಬಲದ ಜಂಭ! ಹತ್ತು ನಿಮಿಷ ಕುಣಿತು ಕಾಲು ಒರಟು ಹಿಡಿಯಿತೆನ್ನುವ ಬಲಭೀಮ ನೀನು" (ರಕ್ತಧ್ವ. ೨೫೫).
[ಒರಟು (< ಒಱಂಟು) + ಹಿಡಿ$_1$ (< ಪಿಡಿ$_1$)]

**ಒರಟೆ** (ನಾ). (ಚಳಿ ಅಥವಾ ಬಲಹೀನತೆಯಿಂದ ಕೈಕಾಲುಗಳ) ಸೆಳೆತ; ಒರಟಾಗುವಿಕೆ: ಕೈಕಾಲಿಗೆ ಒರಟೆ ಬಂದು ಮನುಷ್ಯ ಗಾಬರಿಯಾಗುತ್ತಾನೆ (ಗೃಹವೈ. ೨೬). [ಒರಟು (< ಒಱಂಟು) + -ಎ ?]

**ಒರತೆ** 'ಒಱಂತೆ' ನೋ.

**ಒರತೆನೀರು** (ನಾ). ಚಿಲುಮೆಯ ನೀರು: ಅಸ್ತಿಯೆಂಬುದು ಒರತೆ ನೀರಿದ್ದಂತೆ (ತ್ಯಾಗಮು. ೬೨).
[ಒರತೆ (< ಒಱಂತೆ$_1$) + ನೀರು$_1$ (< ನೀರ್$_1$)]

**ಒರಪು** (ನಾ). ಉಜ್ಜುವುದು; ತಿಕ್ಕುವುದು: ತೊಡೆ ತೊಡೆಗಳ್ ಪತ್ತಿ ಪೆರ್ಬಾವುಗಳ್ ತಳ್ತುಂದಂ ಮೆಯ್ದ್ದೋಱಿ ಮುಂಬಾಯ್ದೆರ್ದೆಯೆರ್ದೆ ಯೊರಪಿಂ ಮೆಯ್ಮೆರೆಚ್ಚಿಚ್ಚಿರಲ್ (ಚಕವಿ. ೬-೧೬೫). [< ಒರ್ಸ್ತು + -ಪು]

**ಒರಲ್**$_1$, ಒರಲು$_3$, ಒರಳ್, ಒರಳು$_2$ (ನಾ). ಕುಟ್ಟುವುದಕ್ಕಾಗಲಿ, ರುಬ್ಬುವುದಕ್ಕಾಗಲಿ ಮಾಡಿರುವ ಗುಳಿಯುಳ್ಳ ಮರದ ಅಥವಾ ಕಲ್ಲಿನ ಸಾಧನ; ಒರಳುಕಲ್ಲು; ಉಲೂಖಲ: "ಮುಸಳಮಯೋಗ್ರ ಮೊರಲ್ಗಂ ಪೆಸರಕ್ಕುಮುಲೂಖಳಂ" (ವಸ್ತುಕೋ. ೫೦-೩೨); ಕೊರಲ ಸತ್ವಮಿಲ್ಲದೊರಲಂ ನುಂಗಿದರೆಂಬ ನಾಣ್ನುಡಿಯಂತೆ (ಧರ್ಮಾಮೃ. ೬-೧೬೩); ಮರಕತದೊರಲೊಳ್ ಮುತ್ತಿನಕ್ಕಿಯಂ ಪೊಯ್ದು (ಲೀಲಾವ. ೨-೩೪); ಶೀತಳ ಶಶಿಕಾಂತದಿಂ ಸಮೆದೊರಲ್ಗಳೊಳಂ ಬಿದಿರಕ್ಕಿಯಿಕ್ಕಿ (ಗಿರಿಕ. ೧-೧೩೨). ಒರಲು$_3$: (ಕ). ಒರಳ್: ಕೊರಳ ಶಕ್ತಿಯಿಲ್ಲದೊರಳಂ ನುಂಗುವೆನೆಂಬ (ಧರ್ಮಾಮೃ. ೧೨-೩೮); ಕಲ್ಲಿನೊರಲೊಳಿಕ್ಕಿಯಿಕ್ಕಿ ಒನಕೆವಿಡಿದು ಇಡಿವರಯ್ಯೋ (ಸಾನಂಚ. ೬-೯೨ ರಗಳೆ). ಒರಳು$_2$: ಸೇದಿಕಟ್ಟಿದೊರಳನೆಳೆದರೆ ಬೀದಿಯಲಿ ಮರ ಮುಱಿದುದು (ಕುವ್ಯಾಸ. ೯-೫೬); ಎಳೆಯ ಕಳಿಲೆಯ ಕುಡಿಯನೊಗರುಹೋಹಂತೆ ಕುದಿಗೊಳಿಸಿಯೊರಲೊಳು ತುಳಿದು ನೀರುಳ್ಳಿ ಕರಿಬೇವು ಯೆಳೆಯಲ್ಲಮಿಕ್ಕಿಯಿಂಗಂ ಬೆರಸಿ ನೀರಿಂದಲಟ್ಟಿಕೊಂಡಾ ವಡೆಯನು ಬಳಿಕುದುರೆಯಂ ಮಾಡಿ ತೆಂಗಾಯ ಹಸಿಯಕ್ಕಿ ಬಿಳಿಯುದ್ದನಿಕ್ಕಿ (ಸೂಪಶಾ. ೬-೧೦); ಒರಳಲ್ಲಿ ಕೂತರೆ ಒನಕೆಪೆಟ್ಟು ತಪ್ಪೀತೇ? (ಗಾದೆ); ಒರಳಲ್ಲಿ ಹರಳು ಹುರಿದರೆ ಆರಳು ಆದೀತೇ? (ಗಾದೆ); ಒರಳು ಹೋಗಿ ಮದ್ದಳೆ ಸಂಗಡ ಹೇಳಿದ ಹಾಗೆ (ಗಾದೆ).
[ದೇ. ‖ ತಮಿ. ಮಲ. ಉರಲ್; ತುಳು. ಉರಳ್, ಒರಲ್; ಕೊಡ. ಒರ; ತೆಲು. ರೋಲು, ಱೋಲು. / ಸಂ. ಉಲೂಖಲ]

**ಒರಲ್**$_2$ 'ಒಱಲ್$_4$' ನೋ.

**ಒರಲಿಕೆ** (ನಾ). ಕೂಗುವುದು: ಮಾದ್ರಿಯ ಒರಲಿಕೆ 'ಕೆಟ್ಟೆಂ' ಎಂಬುದರಿಂದ ಮೊದಲಾದುದೂ ಮುಂದೆ ಬರುವ ಓಕಾರದ ಅಂತ್ಯಪ್ರಯೋಗವೂ ಪಂಪನ ದೇಸಿಯ ಚೊಕ್ಕತನವನ್ನು ಒಕ್ಕಣಿಸುತ್ತವೆ (ತವನಿ. ೬೪).
[ಒರಲ್$_2$ (< ಒಱಲ್$_4$) + -ಇಕೆ]

**ಒರಲಿಸು** 'ಒಱಲಿಸು' ನೋ.

**ಒರಲು**$_1$ 'ಒಱಲ್$_2$' ನೋ.

**ಒರಲು**$_2$ 'ಒಱಲ್$_4$' ನೋ.

**ಒರಲು**$_3$ 'ಒರಲ್$_1$' ನೋ.

**ಒರಲೆ** 'ಒಱಲೆ$_1$' ನೋ.

**ಒರವ** (ನಾ). ಒಂದು ಬಗೆಯ ಮೀನು: ಕೊರವಂ ಗೋಜಳೆ ಸಣ್ಣ ಗಣ್ಣನೊರವಂ ಕಾಗೆಂಡೆ ಹೆಗ್ಗುರ್ಬುರ್ ಹೆಂಗರಿಗಂ . . . ಪಂದಿಗನೆಂಬ ಮೀನ್ದೆಗೆದನಾ ಭಕ್ತಂ ಮಹಾಲೀಲೆಯಿಂ (ತ್ರಿಪುವಿ. ೫೭-೮). 'ಕೊರವ' ಪಾಠ. [?]

**ಒರವಾರೆ** (ನಾ). ಕೈಗುದ್ದಲಿ. [< ಒರ್ಸ್ತು + ಪಾರೆ$_1$]

**ಒರವೆಯಕ್ಕಿ** (ನಾ). ಒಂದು ವಿಧದ ಅಕ್ಕಿ (?): ರುದ್ರಪೂಜೆಗೆ ವರುಷಂ ಪ್ರತಿ ಹಂಜೆಕೆರೆಯ ಹಾನೆಯಲಿ ಒರವೆಯಕ್ಕಿಯನೂ ನಡಸಿ ಬಹರು (ಸೌಇಇ. IX-ii, ೪೪೪-೩೬; 1433); ಹಾನೆವೊರವೆಯಕ್ಕಿ ನಾಘುಂಡುಗದಲೂ (ಸೌಇಎ. ೧೯೩೨, ಉಡುಪಿ. ೨೬೮-೯; ?). [ಒರವೆ? + ಅಕ್ಕಿ$_1$]

**ಒರಸಿಸು** (ಕ್ರಿ). ಒರಸುವಂತೆ ಮಾಡು (ಕ). [ಒರಸು$_1$ + -ಇಸು$_3$]

**ಒರಸು**$_1$ (ಕ್ರಿ). ೧. ತೀಡು; ತಿಕ್ಕು; ಉಜ್ಜು: "ಒರಸು - ಘರ್ಷಣೇ" (ಶಮಧಾ); ಬೆರಲೊಳ್ ಬೀಣೆಯ ತಂತಿಗಳೊರಸಿದ ಕೆಂಗಲೆಗಳಕ್ಷಮಾಲೆಯೊಳೆಸೆದಂತಿರೆ ಪೊಸಮುತ್ತುಂ ಪವಳಂ ಬೆರಸಿದವೋ[ಲಾಯ್ತು] ಚೆನ್ನ ತಪಸಿಯ ಕೆಯ್ಯೊಳ್ (ಪಂಪಭಾ. ೬-೧೦); ತುಱುಮುಂದೆಯೊಳಗೊಂದು ಗೋವುಗಲ್ನೆಟ್ಟಿರೆ ಕರುವಿಂಡು ಒರಸುವಂದದಲಿ (ಅಮುಸಾಂ. ೪-೬೪). ೨. ಬಟ್ಟೆಯಿಂದ ಒತ್ತಿ ತೆಗೆ, —ತೊಡೆ; ನಿವಾರಿಸು: ತಾಯ ಕಂಗಳ ಜಲವ ಸೆಱಗಿನೊಳೊರಸಿದನು (ಕುವ್ಯಾದ್ರೋ. ಪರಿ. ೨೬೮); ಸೆಱಗಿನೊಳೊರಸಿ ಕಂಬನಿಯ (ನಳಚ. ೫-೧೨); ಕಣ್ಣಿನಲ್ಲಿರುವ ಬಿಸಿನೀರನ್ನು ಸೆರಗಿನಿಂದ ಒರಸಿದಳು (ವಾರಾಕ್ಯ. ೪೧); ಬೆವರಿನ ಬಿಂದುಗಳನ್ನು ಒರೆ[ರ]ಸುತ್ತಿದ್ದಳು (ಜಾಣಅ. ೧೦). ೩. ಉಜ್ಜಿಕಳೆ; ಅಳಿಸು; ನಾಶಮಾಡು: ಪೂರ್ವಚಕ್ರವರ್ತಿಗಳ ವಿಜಯ ಪ್ರಶಸ್ತಿಯಂ ಕಂಡು ಗಳಿತ ಮದನಾಗಿ ಕಿಱಿದೆಡೆಯಂ ದಂಡರತ್ನದಿನೊರಸಿ ಕಳೆದು (ಚಾವುಂಪು. ೬೦-೧೮); ಬಿದಿ ಬರೆದಕ್ಕರಮನೊರಸಿ ಕಳೆದವರೊಳರೇ (ಧರ್ಮಾಮೃ. ೧೪-೨೩); ಬರೆಯಬಲ್ಲೆನು ಬರೆದ ಲಿಖಿತವನೊರಸಲಱಿಯೆನು (ತೊರರಾ. ೧-೮-೬೧); ಪಾತ್ರೆಯಲ್ಲಿ ಎಣ್ಣೆಯ ಪಸೆ ಅಂಟಿಕೊಂಡಿದ್ದರೆ ಅದನ್ನು ಕಾಗದದ ಚಿಂದಿಯಿಂದ ಒರಸಿ ತೆಗೆಯಬೇಕು (ಅಡುಸಾ. ೪೩).

೪. ಲೇಪಿಸು ; ಬಳಿ ; ಸವರು : ಸುರಕುಜದ ಬೀಜಂ ಮದ್ಯಂ ರಜನಿ ಮಾಗಧ ಕೌಂಗುಪ್ರೋದ್ಧರ ಸಿದ್ಧಾರ್ಥಂ ನಿಂಬಫಲಂ ಬಜೆ ಗುಂಜಾಫಳ ಮಿವಂ ಪರಿಕ್ಲಿನ್ನಂ ಮಾಡಿಟ್ಟೊರಸಿ ಮೊದಲೊಳ್ (ಲೋಕೋಪ. -೮೫) ; ತದ್ದುಗ್ಗಳಱಿಗುಂ ಬಱಟೆಯೊಳುದ್ದಿರ್ದ ನೆಲಾವರೆಯ ಬೇರ ನಾಮಳಕಮುಮಂ ಬದ್ದಿಲಿಮಿಂಚಿಯ ರಸದೊಳ್ ನಿರ್ದ್ದಯೆಯಿಂದೊರಸಿ ಪೂಸೆ ದಿನಪಂಚಕದೊಳ್ (ಶಮುದ. ೨೬೧ ಪ್ರಯೋ). ೫. ಮೆಲ್ಲಗೆ ಸೋಕು, —ತಾಗು, —ತಟ್ಟು : ಇಳಿಯೊರಸೆ ಮೈಯಿಕ್ಕಿ ಶಿವಗಣ ಕುಲಕೆ ತಂದು ವಿಭೂತಿ ವೀಳೆಯಗಳನೊಸೆದು ಮಾಡಲ್ಕೆ (ಬಸವು. ೪-೬). ೬. ತಿಕ್ಕಿ ಬೇರ್ಪಡಿಸು ; ತೆಗೆದುಹಾಕು : ಒರಸಿದುಮ್ಮಿಗೆಯು ಧಾನಾಖ್ಯಮೆನಿಸಿಕ್ಕು (ಮಂಗರಾ. ೧೧೦-೬).

ಒರಸಿಕೊಳ್ = ೧. ಬಳಿ ; ಸವರು ; ತೊಡೆ : ಪರಿಮರ್ದಿಸುವುದು ದತ್ತೂರರಸಮನಿಂಬಾಗಿ ಪಿರಿದು ನೆಲದೊಳ್ ಲವಣಂಬೆರಸೊರಸಿಕೊಂಡು ಪೂಸುಗೆ ಕರಗುಗುಮೇಚಿಟ್ಟೊರೆಯೆನಿಪ್ಪ ಕುರುವುಂ ಕ್ಷಣದೊಳ್ (ಕಾವ್ಯಾವ. ೨೬೧). ೨. ತಾಗಿಸು ; ಸ್ಪರ್ಶಿಸು : ಭೀಷ್ಮನ ಚರಣಕಮಲವ ಹಿಡಿದು ನೊಸಲಿನೊಳೊರಸಿಕೊಂಡನು (ಕುವ್ಯಾದ್ರೋ. ೧-೨೧).

[< ಒರೆ₂ + -ಸು₁. / ತಮಿ. ಉರ್ಸೈಚು ; ಮಲ. ಉರಸು ; ತುಳು. ಉರೆಸು, ಒರೆಸು ; ತೆಲು. ಒರಚು ; ಪರ್ಜಿ. ಉರ್ಚ್ ; ಗಡಬ. ಉರ್ಸ್]

**ಒರಸು₂** (ನಾ). ೧. ಒರಸುವಿಕೆ ; ಉಜ್ಜುವಿಕೆ. ೨. ಹಿಂಸೆ ; ಕಾಟ ; ತೊಂದರೆ : "ಗೋಣ್ಮಱಿ, ಇರ್ಕುಳ, ಒರಸು – ಈ ೩ ಹಿಂಸೆ" (ಕಶಸಾ. ೧೩-೨೬೦).

ಒರಸೊರಸು (ದ್ವಿರುಕ್ತಿ) = ೧. ಪರಸ್ಪರ ಉಜ್ಜುವಿಕೆ ; ತಿಕ್ಕಾಟ ; ಘರ್ಷಣೆ : ಕುರುಕುಳರ ಜನ್ಮಮಿದು ನಿಮ್ಮೊರಸೊರಸಿನ ದೆಸೆಯದಲ್ಲ ದುರುಸನ್ನೆಯೊಳೊಂದಿರೆ ತಸ್ಕರನುಕ್ಕವದಿಂದಿರದೋಡಿದನೆಂಬ ನುಡಿಗೆ ನೀವೆಡೆಯಪ್ಪಿರಿ (ಮಹಾನೇ. ೧೦-೪೫) ; ಅಲಗಿನೊರಸೊರಸಿಲ್ಲ ಕೈಮೈಗಳಳಿ ಮುಳುಗಿದ ಬಾಣವಿಲ್ಲ (ಕುವ್ಯಾಭೀ. ೩-೩೫) ; ಈರ್ವರೆರಸಿನ ಸುಕುಮಾರಕರು ಹಿರಿದು ಹೋರಟಿಗೊಂಡಾ ತಂತಮ್ಮೊಳಗೊರಸೊರಸಾಗುತಿಹರು (ನೇಮಿಸಂ. ೬-೫೬) ; ಭರದಿಂದೆ ನಡೆವರಸರಸುಗಳ ಕಂಠಮಾಲೆಗಳ ತೋರಮುತ್ತೊರಸೊರಸು ಮಿಗೆ (ಜೈಮಿಭಾ. ೧೨-೬). ೨. ಕೋಪ ; ರೋಷ : "ರೂಷಣಂ – ಒರಸೊರಸು" (ಕಾಶಕ್ಯ. ೫೮) ; "ಮುಳಿಸು ಕಿಸುಗಣ್ಣು ಸೆಣಸೊರಸೊರಸು ಕಾಯ್ಪೆನಲ್ . . . ಕೋಪದ ಪೆಸರು" (ಶಬ್ದಮಂ. ೪೧). [< ಒರಸು₁]

**ಒರಸುಹ** (ನಾ). ಒರಸುವಿಕೆ. [ಒರಸು₁ + -ಹ₂]

**ಒರಸುಹಣ** (ನಾ). = ಒರಸುಹ : "ಘೃತಿಃ, ಘೃತಂ . . . ಘಾರ್ಯಂ, ಈ ೭ ಒರಸುಹಣಂ" (ಕಾಶಕ್ಯ. ೧೭೬). [ಒರಸುಹ + -ಅಣ]

**ಒರಸೆ** 'ವರಸೆ' ನೋ.

**ಒರಸೊರಸುತನ** (ನಾ). ಘರ್ಷಣೆ ; ತಿಕ್ಕಾಟ ; ಮನಸ್ತಾಪ : ಭರತನಲಿ ರಾಮನಲಿ ದಾಯಿಗರೊರಸೊರಸುತನವುಂಟೆ (ತೊರರಾ. ೨-೧-೨೮). [ಒರಸು₂ + ಒರಸು₂ + -ತನ]

**ಒರಳ್** 'ಒರಲ್₁' ನೋ.

**ಒರಳಕ್ಕಿ** (ನಾ). ಒರಳು ಹಿಡಿಯುವಷ್ಟು ಅಕ್ಕಿ ; ಒಂದು ಅಳತೆ : ಮನದೊಳ್ಮನೋಹರನ ನೆನೆದು ನಲಿದಾಡುತಂ ಒರಳಕ್ಕಿವೊಯ್ದಲ್ಲಿ ಪರಮನಂ ಪಾಡುತಂ (ಕೋಳೂರ. ೯೭-೧೭).

[ಒರಳು₃ (< ಒರಲ್₁) + ಅಕ್ಕಿ₁]

**ಒರಳು₁** 'ಒಱಲ್₂' ನೋ.

**ಒರಳು₂** 'ಒರಲ್₁' ನೋ.

**ಒರಳುಕಲ್ಲು** (ನಾ). = ಒರಲ್₁ (೩).

[ಒರಳು₂ (< ಒರಲ್₁) + ಕಲ್ಲು (< ಕಲ್₃)]

**ಒರಳೆ** 'ಒಱಲೆ₁' ನೋ.

**ಒರಾತ** 'ವರಾತ' ನೋ.

**ಒರುಗು** (ನಾ). ಒಣಗಿದುದು ; ಒಣಕಲು : ವಿಧಿಯಿಲ್ಲದೆ ಓದಬೇಕಾಗಿ ಬಂದಾಗ ಪದ್ಯವನ್ನು ಹತ್ತು ದಿನ ಬಿಸಿಲಿನಲ್ಲಿ ಒಣಗಿಸಿದ ಬದನೆಯ ಒರುಗಿನಂತೆ ಮಾಡಿ, ಗದ್ಯಕ್ಕಿಂತಲೂ ನೀರಸವಾದ ರೀತಿಯಲ್ಲಿ ಗೊಣಗುವುದು ನಾಗರಕ ಆಚಾರವಾಯಿತು (ಗಾನಕ. ೧೨). [< ಬಱು./ ತಮಿ. ವಱ್ಱಲ್]

**ಒರೆ₁** (ಕ್ರಿ). ಹೇಳು ; ತಿಳಿಸು ; ನಿರೂಪಿಸು : "ತನೂಕರಣದೊಳಗು ಪದೇಶದೊಳಗೊರೆ" (ಶಬ್ದಮಂ. ೧೦೫) ; ಒರೆವ ಲಲ್ಲೆಯ ಮೆಲ್ನುಡಿ (ಪಂಪಭಾ. ೩-೮೩) ; ಕ[ಬ್ಬ]ಂಗಳನೊರೆದಂ ರವಿನಾಗಭಟ್ಟಂ (ಇಆ. XII, ೨೨೩-೧೮ ; 978) ; ಕಬ್ಬಿಗರ ಕಾವನೊಲವಿಂದೊರೆದೆಂ (ಕಬ್ಬಿಕಾ. ೧೬) ; ಹಿರಿದು ಮಮತೆಗಳಿಂದ ಬುದ್ಧಿಯನೊರೆವೆ ಕೇಳೌ ಸೀತೆ (ಕಾಶಿರಾ. ೩-೧) ; ಕಂಠೀರವನರಸೇಂದ್ರನೆಂದೊರೆದರು ನಾಮಕರಣವನು (ಕಂನವಿ. ೪-೬೯) ; ಫಲುಗುಣಗೆ . . . ಗೀತೆಯೊರೆವಂದು (ಗಿಳಿವಿಂ. ೨೨-೨೯).

[ದೇ. ॥ ತಮಿ. ಉರೈ ; ಮಲ. ಉರ, ಉರೆ ; ಕೊಡ. ಒರಡ್]

**ಒರೆ₂** (ಕ್ರಿ). ೧. ಬಳಿ ; ಸವರು ; ಹಚ್ಚು ; ಲೇಪಿಸು : ಮೈಯೊಳರಿಸಿನ ವೊರೆದೊರೆದು [ಪಾಠಾಂ. ವೊರದೊರದು] ತಾ ಮಿಾಯಲೆಱೆವಳು ಮೃಡಶಿಶುಗೆ ಬಿಜ್ಜಾಯಿ (ಬಸವು. ೧೫-೧೦) ; ಗುರುವಿಗೊರೆದ ಸುಗಂಧ ಲೇಪನ (ಪ್ರಭುಲೀ. ೨೩-೫೯) ; ಧರಿಸಿ ಲಿಂಗವ ಮೇಲೆ ಭಸಿತವನೊರೆದು ಅಂಗಾಂಗದಲಿ (ಬಿಜ್ಜಪು. ೪೫-೪೦) ; ಹರಿಣೋಪಮಾನ ನಯನಂಗಳಿಗೆಯಂಜನಮನೊರೆದು (ನವಮೋ. ೨೭-೭೦). ೨. (ಒರೆಗಲ್ಲಿನ ಮೇಲೆ) ಉಜ್ಜು ; ತಿಕ್ಕು : "ಒರೆ – ಕರ್ಷಣೇ (ಎಳೆಯು)" (ಶಮುಘಾ). ℙ ಇದು "ಒರೆ – ಕಷಣೇ" ಎಂದಿರಬಹುದು : ಒರೆದುಂ ಕಡಿದುಂ ಪೊಯ್ದುಂ ಕರಗಿಸಿಯುಂ ಪೊನ್ನನೆಂತು ನೋಡುವರು (ಸಮುಪ. ೧೫-೧೬) ; ಹರ ತನ್ನ ಭಕ್ತರ ತಿರಿವಂತೆ ಮಾಡುವ ಒರೆದು ನೋಡುವ ಸುವರ್ಣದಂತೆ ಆರೆದು ನೋಡುವ ಚಂದನದಂತೆ (ದೇದಾಪ್ರ. ೧೧೮-೮೬) ; ಒರೆದೊರೆದು ಕಾಯಿಸಿ ಬಡಿಬಡಿದು ಚಿನ್ನವ ಪರಿಕಿಸುವಂತೆ (ಇಂಚಾಪ. ೧೪೬-೧೯). ೩. ಪರೀಕ್ಷಿಸು ; ವಿಮರ್ಶಿಸು : ಅಧೊರೆಯೇದೊರೆಯೊಂ ತಾನೇದೊರೆ ತದ್ದೇಶ ಕಾಲಮೇದೊರೆಯೋ ಮೇಹೇದೊರೆ ತಾಂ ಕ್ಷಯ ವೃದ್ಧಿಗಳಾದೊರೆಯವಿವೊರೆದು ಮುನ್ನೆ ಪರಿಕಿಪುದಱಿದೊಂ (ಶಾಂತಿಪು. ೨-೪೦) ; ಗಿರಿಜೆಯ ಮನಮನೊರೆದುನೋಡುವ ಭರದಿಂ ಬಂದು ನಿಂದು (ಗಿರಿಕ. ೯-೮೩ ವ) ; ಒರೆದೊರೆದು ನೋಡಿದಳು ನೂತನ ಸಿರಿವೊಗದ ಕಾಂತಿಯನು (ನಳಚ. ೮-೪೪) ; ಕವಿರಾಜಮಾರ್ಗದ ಬೇರೆ ಕೃತಿಗಳು ದೊರೆಯದ್ದರಿಂದ ಇದನ್ನು ಒರೆದು ನೋಡಲು ಆಧಾರವಿಲ್ಲ (ಕಸಾಚ. ೬೮). ೪. ಹರೆ ; ತಿಕ್ಕಿ ನುಣುಪುಮಾಡು ; ನಯಮಾಡು ; ಮೆರುಗು ಕೊಡು : "ತನೂಕರಣದೊಳಗುಪದೇಶದೊಳಗೊರೆ" (ಶಬ್ದಮಂ. ೧೦೫) ; ಬಿಲ್ಲನೊರೆ ಕೂರಂಬ ಮಸೆ ಕೊಂಕನನುಮಾಡಿ ಗಣೆಗೆ ಗಱಿಗಳನು ಹಸನಾಗಿ ಕಟ್ಟು (ಸಮ್ಯಕೌ. ೧೦-೩೨) ; ತಿರುಗಱಿಗಟ್ಟುವ ಹೊದೆ ಹೊಡೆಗಣೆಗಾಜನಿರದೆ ಮಾಡುವ ಬಿಲ್ಲನೊರೆವ (ಕುರಾಸಾಂ. ೩೭-೫೭). ೫. (ತಗಣಿ, ಹೇನು ಮೊದಲಾದ ಸಣ್ಣ ಜಂತುಗಳನ್ನು) ತಿಕ್ಕಿ ಸಾಯಿಸು ; ಹಿಸುಕಿ ಕೊಲ್ಲು : ನಿನ್ನ ಹಾಸಿಗೆಯಲ್ಲಿ ಕಾಡುವ ತಗಣೆಗಳನ್ನು ಒರೆಯುವುದರಿಂದಲಾದರೂ ಸೇವೆ ಸಲ್ಲಿಸುತ್ತೇನೆ (ಮೈಲಿಮಾ. ೩೨). ೬. ಒಂದಕ್ಕೊಂದು ಅಂಟಿಕೊಳ್ಳು, —ಸೇರಿರು ; ಕೂಡಿಕೊಂಡಿರು : ತುರಗವರ್ಣಂ ಬಿಳಿಯದಾಗೆ ಕರ್ಕನೆನಿಕ್ಕು . . . ಬಿಳಿದು ಮಾಗೊರೆದ ಕೆಂಪಿರೆ ಜನ್ನಂ (ಮಂಗರಾ. ೬೦-೧೪).

ಒರಕೊಳ್ಳು = ೧. ಹತ್ತಿಕೊಳ್ಳು : ಉತ್ತರದ ದಿಕ್ಕಿನಲ್ಲಿ ಹತ್ತೀತು ಹೆಬ್ಬೇಗೆ ಸುತ್ತ ಒರಕೊಂಡು ಬರುವಾಗ ಜಗವೆಲ್ಲ ಕತ್ತಲಾದೀತು (ಸರ್ವಜ್ಞ. ೧೦೭೭). ೨. ಸವರಿಕೊಳ್ಳು ; ಬಳಿದುಕೊಳ್ಳು : ಕೋಣೆಲಿ ಗುಂಡಿ ಮೊಳದುದ್ದ ಬೀಗಿತ್ತಿ ಮಣ್ಣ ಕೊಟ್ಟೇನು ಒರಕೊಳ್ಳೆ ಸುಣ್ಣ ಕೊಟ್ಟೇನು ಸಾರಿಸಿಕೊಳ್ಳೆ (ಹಳ್ಳಿಬಾ. ೬೦).

[ದೇ. ‖ ತಮಿ. ಉರೈ ; ಮಲ. ಉರೆ ; ತುಳು. ಉರೆಪು ; ತೆಲು. ಒರಚು, ಒರಯು ; ಪರ್ಜಿ. ಉರ್ಚ್ ; ಗಡಬ. ಉರ್ಸ್]

**ಒರೆ$_{3}$** 'ಒಜ಼ೆ$_{1}$' ನೋ.

**ಒರೆ$_{4}$** (ನಾ). ಹೇಳಿಕೆ ; ನುಡಿ ; ಮಾತು : ಆದ್ಯರ ಗೀತದೊರೆಯನಾಲಿಸುವಂತೆ (ಪದ್ಮರಾ. ೨–೬೦) ; ಎಂಬೊರೆಯನವರೇಕಮಾನಸದೊಳಾಲಿಸಿ (ಕೊಟ್ಟೂಬ. ೫–೬೬). [< ಒರೆ$_{1}$. / ತಮಿ. ಉರೈ; ಮಲ. ಉರ, ಉರೆ]

**ಒರೆ$_{5}$** (ನಾ). ೧. (ಬಣ್ಣವನ್ನು ತಿಳಿಯಲು ಒರೆಗಲ್ಲಿನಲ್ಲಿ) ಚಿನ್ನವನ್ನು ಉಜ್ಜುವಿಕೆ: ಈ ಹಾಡುಗಳು ಒಂದಕ್ಕೊಂದು ಒರೆಗೆ ನಿಂತ ಬಂಗಾರದ ತುಂಡುಗಳಿದ್ದಂತೆ (ಕನ್ನಜಾ. ೮೪). ೨. ಉಜ್ಜುವುದರಿಂದ ಉಂಟಾಗುವ ಕಾಂತಿ, —ಮೆರುಗು, —ಬಣ್ಣ : ಬಲ್ಲವರೊಡಗೂಡಿ ಬಣ್ಣದಿಂದೊರೆಯಿಂ ತೂಕದಿಂ ಮರ್ಚಯಿಂದಂ ಪೊನ್ನೆಂತೊಪ್ಪುಗುಂ (ಧರ್ಮಾಮೃ. ೧೩–೫) ; ಎರಡರಿಸಿನ ನುಗ್ಗಿಗಳೊಳ್ ಬೆರಸಿದ ಕಟುಕತ್ರಯಂಗಳಂ ಪೂಸಲೊಡಂ ಪರಿಹರಿಕುಂ ಪಲ್ಲಿಯ ವಿಷಮರಿಸಿನದೊರೆ ಬಿಸಿಲೋಳಿರ್ದ ತೆಜದಂತಾಗಳ್ (ಖಮುದ. ೧೩–೯೪). ೩. (ಅಲಂ) ಗುಣದೋಷಗಳ ಪರೀಕ್ಷೆ; ಉತ್ತಮತೆಯ ಪರೀಕ್ಷೆ: ಇನ್ನುಂ ಒರೆಗೆ ವಂದಿರದ ಅಡಸಿಕೆಯ ಪೊಂಕಮುಂ ಪೊಸತೆ (ಬದ್ಧಪ್ರ. ೫೦–೧೦೯೯).

ಒರೆಗೆಹಚ್ಚು = ಚೆನ್ನಾಗಿ ಪರೀಕ್ಷಿಸು ; ವಿಮರ್ಶಿಸು : ಮಾನವರ ಸಮಯಗಳ ಸತ್ಯಾಸತ್ಯತೆಯನ್ನು–ಯುಕ್ತಾಯುಕ್ತತೆಯನ್ನು ಒರೆಗೆ ಹಚ್ಚುವ ಕಾರ್ಯವು, ನಿಸರ್ಗಸ್ಥ ಕಾಲದ ಮೂಲಕ ನಡೆಯುತ್ತದೆ (ಕರ್ನಾಟ. ೨೦೮). ಒರೆಗೆಹತ್ತು = ಪರೀಕ್ಷೆಗೆ ಗುರಿಯಾಗು : ನೀನು ಚೆನ್ನಾಗಿ ಒರೆಗೆಹತ್ತಿದೆ (ಮಭಾರ. ೬೦).

[< ಒರೆ$_{2}$. / ತಮಿ. ಉರೈ ; ಮಲ. ಉರ ; ತೆಲು. ಒರ]

**ಒರೆ$_{6}$** 'ಒಜ಼ೆ$_{2}$' ನೋ.

**ಒರೆ$_{7}$** (ನಾ). ಸಮಾನ ; ಸಾಟಿ ; ಸಾದೃಶ್ಯ ; ಸಾಮ್ಯ : "ತೋಡೊರೆ ದೊರೆ ತೊಡೆಯೆಣೆ ಪಾಸಟಿ ಪರಿಸಟಿ ಸಾಮ್ಯಾರ್ಥಮಪ್ಪುದು" (ಚತುನಿ. ೨೫) ; ಸಮುಕಟ್ಟೆಂಗೊರೆಗಾರುಮಿಲ್ಲರಿಗ ಕೇಳ್ ನಿನ್ನೊಳ್ ಸಮಂ ಧಾತ್ರಿಯೊಳ್ (ಪಂಪಭಾ. ೫–೭೬) ; ಭೂಪಾಟೋಪಂ ಬರ್ಕುಮೆ ವೃಜಿನವಿಲೋಪಿ ಜಿನೇಂದ್ರ ಪ್ರಶಾಂತಿಯೊರೆಗಂ ದೊರೆಗಂ (ಶಾಂತಿಪು. ೧೧–೮೯); ಆರುಂ ಬಲದೇವನೊರೆಗೆ ಬಂದಪರೇ (ಎಕ. VII, ಶಿಕಾರಿ. ೨೯೭–೨೯ ; 1080) ; ಸಾರಕವಿತ್ವಮನ್ಯಕಾವ್ಯರುಚಿರ ಪದ್ಯಮಂ ಪರಿಸಿ ಸತ್ಕವಿ ನಿರ್ಮಿತ ಪದ್ಯಮಿಂತಿದಕ್ಕೊರೆಯೆ (ರಾಜಶೇ. ೧–೩೬) ; '. . . ಈ ಘಟಿಂಗ ಹುಡುಗ ಅವರ ಒರೆಗೆ ಏರಿಯಾನೆ' (ಬೆಳುಮ. ೨೨೪). [?]

**ಒರೆಕಡ್ಡಿ** (ನಾ). "ಚಿನ್ನವನ್ನೂ ಬೆಳ್ಳಿಯನ್ನೂ ಒರೆಹಚ್ಚಿ ಬಣ್ಣ ನೋಡುವುದರಲ್ಲಿ, ಪ್ರಮಾಣವಾಗಿ ಉಪಯೋಗಿಸುವ ಆಯಾ ಲೋಹದ ಒರೆಕಡ್ಡಿ" (Needle. ಇಂಕನಿ). [ಒರೆ$_{2}$ + ಕಡ್ಡಿ]

**ಒರೆಗಟ್ಟು$_{1}$** (ಕ್ರಿ). ಪರೀಕ್ಷೆಗೆ ನಿಲ್ಲು : ರಣಕ್ಕೆ ಅಲಗೇರಿದಲ್ಲಿ ಹಲುಬಿದರೆ ಬಿಡುವರೆ ಭಕ್ತಿಗೊರೆಗಟ್ಟೆ ತಪ್ಪಿಹೆನೆಂದರೆ ಬಿಡುವರೆ (ಮೋಳಿಮಾ. ೪೯–೨೦೬). [ಒರೆ$_{5}$ + ಕಟ್ಟು$_{1}$]

**ಒರೆಗಟ್ಟು$_{2}$** (ಕ್ರಿ). ಸರಿತೂಗು ; ಸಮಜೋಡಿಯಾಗು : ಉದಧಿಗೊರೆಗಟ್ಟುವ ಚತುರ್ವೇದದ ಮಹಾಘೋಷದಲಿ ಮುಖಕುಂಡದ ತದಂತರ್ವೇದಿಗೈತಂದನು ಮಹೀಪಾಲ (ಕುವ್ಯಾಸ. ೭–೨೮). [ಒರೆ$_{7}$ + ಕಟ್ಟು$_{1}$]

**ಒರೆಗಲ್, ಒರೆಗಲ್ಲು** (ನಾ). ೧. ಚಿನ್ನ, ಬೆಳ್ಳಿಗಳನ್ನು ಪರೀಕ್ಷಿಸಲು ತಿಕ್ಕಿ ನೋಡುವ ಕಲ್ಲು ; ನಿಕಷ : ಪರುಸದೊರೆಗಲ್ [ಪಾಠಾಂ. ಕಿ. ಕಲ್] ಸುವರ್ಣಕ್ಕೊರೆಪಕ್ಕೆಡೆಯಾಗಿ ತೋರ್ಪವೊಲ್ (ಚಂದ್ರಪು. ೧–೪೬); ಬಾರೈ ನಿನ್ನ ದರ್ಪಕ್ಕೊರೆಗಲ್ ಇವನಿಂದುಕೇತು (ಉರಾಜ. ೯೧).

ಒರೆಗಲ್ಲು : ೧. "ಪರೀಕ್ಷಿತಂ ವೇತ್ತಿಯೆನಲೊರೆಗಲ್ಲು" (ಮಂಗರಾ. ೧೦೫–೧೪) ; ಮತ್ಕೃತಿ ಕಾಂಚನಕೆ ಪರುಷದೊರೆಗಲ್ಲೆನೆ ರಂಜಿಸುಗೆ (ಕುಮುರಾ. ೧–೪೧) ; ತ್ರಾಸುಗಟ್ಟಳೆವೊರೆಗಲ್ಲು ಮಚ್ಚರಗಡ್ಡಿ ಭಾಸುರವಹ ಚಿನ್ನವಲಗೆ (ಅಂಜಚ. ೩–೮೧). ೨. (ಅಲಂ) ಗುಣದೋಷಗಳನ್ನು ಪರೀಕ್ಷಿಸುವ ಸಾಧನ : ಕಾಯಕವ ಪಾಲಿಸಿದ ನಾಯಕನು ವೀರನವ ಮಾಯೆಗೊರೆಗಲ್ಲು ಮಾಚಯ್ಯ (ಕನ್ನಜಾ. ೨೪೫) ; ಜ್ಞಾನಿಗಳ ಅನುಭವವೇ ಯುಕ್ತಿಗೆ ಒರೆಗಲ್ಲು (ಭಾರದ. ೧೨೨) ; ಗೆಳೆಯನ ಸಹಾಯಕ್ಕೆ ಕಷ್ಟಕಾಲವೇ ಒರೆಗಲ್ಲು (ನೀಗಟ್ಟು. ೧೧೪).

[ಒರೆ$_{2}$ + ಕಲ್$_{3}$. / ತಮಿ. ಉರೈಕಲ್ ; ಮಲ. ಉರಕಲ್ಲು, ಉರವುಕಲ್ಲು ; ತುಳು. ಉರೆಕಲ್ಲು, ಒರೆಕಲ್ಲು ; ತೆಲು. ಒರಗಲ್ಲು]

**ಒರೆಗಲ್ಲು** 'ಒರೆಗಲ್' ನೋ.

**ಒರೆಗಳಚು** (ಕ್ರಿ). ಒರೆಯನ್ನು ಬಿಚ್ಚು ; ಕತ್ತಿಯನ್ನು ಹಿರಿ : ಸೈನಿಕರು ಒರೆಗಳಚಿದ ಕತ್ತಿಗಳನ್ನು ಹಿಡಿದು ಒಳಗೆ ಪ್ರವೇಶಿಸಿದರು (ಪುನರು. ೩೩). [ಒರೆ$_{6}$ (< ಒಜ಼ೆ$_{2}$) + ಕಳಚು (< ಕಟಿಲ್ಚು)]

**ಒರೆಗಳೆ** 'ಒಜ಼ೆಗಳೆ' ನೋ.

**ಒರೆಗಾಲ** (ನಾ). ಒಂದು ಊರಿನ ಹೆಸರು : ಒರೆಗಾಲಲ್ಪದಿರ್ಕ್ಕಣ್ಣುಗಂ ನೀಮ್ಮರ್ಣ್ಣು (ಎಕ. IV, ಎಳಂದೂ. ೪೧–೩ ; 982). [?]

**ಒರೆಗಾಜಿ** (ನಾ). ಒರೆದು ನೋಡುವವನು : ನೆತ್ತಗಾಜರ ಚದುರಂಗಕಾಜರರೊರೆಗಾಜರ ಬಾಜಿಪ ಬೀಣೆಗಾಜರಾಗರ ಮನೆ. . .ಸೂಳೆಗೇರಿಗಳ್ (ಕಬ್ಬಿಕಾ. ೪೨). [ಒರೆ$_{2}$ + –ಗಾಜಿ (< –ಕಾಜಿ)]

**ಒರೆಗೊಳ್** (ಕ್ರಿ). ಉಜ್ಜು ; ತಿಕ್ಕು ; ಪರೀಕ್ಷಿಸು : ಒಳ್ಳಿಹ ಮೊಳೆಯನೊರೆಗೊಂಬ [ಪಾಠಾಂ. ಒಳಕೊಂಬ] ಕ್ಕಸಾಲೆಯು ತಾನೆ (ಬಸಪು. ೨೧–೩೦). [ಒರೆ$_{2}$ + ಕೊಳ್$_{1}$]

**ಒರೆದೊರೆ** (ನಾ). ಸರಿಜೋಡಿ ; ಸಮ ; ಸಾಟಿ ; ಸರಿಸಮಾನ : ಗುರುಮಂತ್ರ ಹರವಾಕ್ಯಕೊರೆದೊರೆಯೆನಲ್ಬೇಕು (ದೀಕ್ಷಾಬೋ. ೯೪–೧೬) ; ಅಮರಾಚಲಕೊರೆದೊರೆಯುಹ ಮಹೇಂದ್ರ (ಅಂಜಚ. ೩–೨) ; ತಿರಿಯಂಚಗತಿಯೆಂಬಸುರ ಬೇಗ ತನಗಿನ್ನೊರೆದೊರೆಯಹರಿಲ್ಲೆಂದು ಗಿರಿಜಾವರನಲ್ಲದೆ ಮಿಕ್ಕಿನವರನು ಸರಕುಮಾಡೆನೆನುತಿಹನು (ತ್ರಿಪುಸಾಂ. ೬–೫೯).

ಒರೆದೊರೆಯಾಗು = ಸರಿಜೋಡಿಯಾಗು ; ಸಾಟಿಯೆನಿಸು : ಸಿಂಗನಾದದೆ . . . ಪ್ರಳಯದ ಸಿಡಿಲಿಂಗೊರೆದೊರೆಯಾಯಿತಂದು (ಅಂಜಚ. ೧೦–೨೦). ಒರೆದೊರೆಯೆನಿಸು = ಸರಿಜೋಡಿಯೆನಿಸು ; ಸಾಟಿಯೆನಿಸು : ಸೂರ್ಯಕುಲದ ರಾಯರ್ಗೆ ವಂಶದೊಳು ಕೀರ್ತಿಯೊಳು ಭುಜಬಲದೊಳೊರೆದೊರೆಯೆನಿಸಿ ಕನ್ನಿಕೆಯರಂ ಕುಡುವ ಭೂಪರಿಲ್ಲ (ಹಚಕಾ. ೭–೧೬). [ಒರೆ$_{7}$ + ದೊರೆ$_{2}$]

**ಒರೆಪ** (ನಾ). ಒರೆಯುವಿಕೆ : ಪರುಸದೊರೆಗಲ್ ಸುವರ್ಣಕ್ಕೊರೆಪಕ್ಕೆಡೆಯಾಗಿ ತೋರ್ಪವೊಲ್ ಕವಿಗಂ ಬಂಧುರ ಕಾವ್ಯರಚನೆ ತದ್ಗುಣ ಪರೀಕ್ಷೆ ನಿರಪೇಕ್ಷಮೆನಿಸೆ ನೆಜ಼ೆದಿರವೇಡಾ (ಚಂದ್ರಪು. ೧–೪೬). [ಒರೆ$_{2}$ + –ಪ$_{2}$]

**ಒರೆಬಣ್ಣ** (ನಾ). ಚಿನ್ನ ಅಥವಾ ಬೆಳ್ಳಿಯನ್ನು ಒರೆಗೆ ತಿಕ್ಕಿದಾಗ ತೋರುವ ಬಣ್ಣ : ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ ಒರೆಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ (ಬಸವ. ೨೫೧).

[ಒರೆ$_{5}$ + ಬಣ್ಣ]

**ಒರೆಮಣೆ** (ನಾ). ಒರೆಯುವ ಮಣೆ; ಮಸೆಯುವ ಮಣೆ: ಬೆಣಚು-ಕಲ್ಲುಗಳನ್ನು ಪುಡಿಮಾಡಿ ಅವನ್ನು ಒರೆ - ಮಣೆಗೆ ಸುರಿದು ಕೊಡಲಿ ಕತ್ತಿ ಹತ್ಯಾರುಗಳನ್ನು ತಿಕ್ಕಿ ಕಿಡಿ ಹಾರಿಸಿದರು (ಬಾಳಿಗ. ೬೫).
[ಒರೆ$_2$ + ಮಣೆ]

**ಒರೆಯಿಡು$_1$** (ಕ್ರಿ). ಪರೀಕ್ಷಿಸು; ಒರೆಹಚ್ಚು: ಕಟ್ಟಳೆಯ ಮಾಟಕ್ಕೆ ಯೊಳುಮಾಳ್ಕೆಯೊಳುಮೊರೆಯಿಟ್ಟು (ಅಂತಿಗೊ. ೯-೧೬೨).
[ಒರೆ$_5$ + ಇಡು$_1$]

**ಒರೆಯಿಡು$_2$** (ಕ್ರಿ). ಹೋಲಿಸು: ಹರಿಗಂ ನಿನಗಂ ಹರಿಗಂ ಹರಿಣಂಗಂ ಹರಿಗವುುಡುಗಮೊರೆಯಿಡಲೆಂತಂತಿರೆ (ಜಗವಿ. ೧೭-೩೦).
[ಒರೆ$_7$ + ಇಡು$_1$]

**ಒರೆಯಿಸು$_1$** (ಕ್ರಿ). ಹೇಳಿಸು; ಮಾತನಾಡುವಂತೆ ಮಾಡು: ಸ್ವಾಮಿ ನನ್ನಿಂದ ನೀನಿಂತೊರೆಯಿಸಿದೆ ಕೃಪಾದೃಷ್ಟಿಯಂ ಬೀಱಿ (ಸೋಮೇಶ. ೧೦೩); ಅನಂದ ಚರಿತಾಖ್ಯ ಶಾಸ್ತ್ರಮನತುಳ ಗುರುವರಂ ನಿಜಾತ್ಮಜನಿ ನೊರೆಯಿಸುತೆ (ಪದ್ಮರಾ. ೧೨-೫೬). [ಒರೆ$_1$ + -ಇಸು$_3$]

**ಒರೆಯಿಸು$_2$** (ಕ್ರಿ). ೧. ಗೆರೆಹಾಕು; ರೇಖೆಮಾಡು; ಪರೀಕ್ಷಿಸು: "ಒರೆಯಿಸು-ಕರ್ಷಣೇ (ಎಳೆಯುವಂತೆಮಾಡು)"(ಶಮಧಾ). ಟಿ. ಇಲ್ಲಿನ ಪಾಠ "ಒರೆಯಿಸು - ಕಷಣೇ" ಎಂದಿರಬಹುದು.
[ಒರೆ$_2$ + -ಇಸು$_3$]

**ಒರೆವರ್** (ಕ್ರಿ). ಸಮುಕ್ಕೆಬರು; ಸಮಾನವಾಗು: ಕುಂದಗಂಧಿಯ ವದನರುಚಿಗೊರೆವಂದು [ಪಾಠಾಂ. ಪೊಂದು] ಛಂದವೆನಿಪ್ಪುದೆಲೆವೆಱೆಯಿಂ ದವತಿ ಕಾಂತಿಯೊಳೆಸೆವುದಬಳೆಯ ಮಿಸುಪ ನೊಸಲು (ಬಸವು. ೪-೨೮).
[ಒರೆ$_7$ + ಬರ್$_1$]

**ಒರೆವುಡಿ** (ನಾ). ಒರೆಗೆ ಹಚ್ಚಿದಾಗ ಬೀಳುವ ಪುಡಿ: ಮೇಣದೊಳ್ ಪುದುಗಿದ ಚಿನ್ನದೊರೆವುಡಿಯಂತೆ (ಚಿಕಬಿ. ೧-೧೦). [ಒರೆ$_5$ + ಪುಡಿ]

**ಒರೆಹಚ್ಚು** (ಕ್ರಿ). ೧. (ಚಿನ್ನ ಮುಂತಾದುವುಗಳನ್ನು) ಬಣ್ಣ ತಿಳಿಯಲು ಒರೆಗಲ್ಲಿನಲ್ಲಿ ಉಜ್ಜು. ೨. (ಆಲಂ) ಪರೀಕ್ಷಿಸು; ಶೋಧಿಸಿ ನೋಡು; ಗುಣದೋಷ ಪರೀಕ್ಷೆ ಮಾಡು: ಇವುಗಳಲ್ಲಿ ಬಹುಪಾಲು ಘಟನೆಗಳ ಸತ್ಯವನ್ನು ನಾನೇ ಒರೆಹಚ್ಚಿ ತಿಳಿಯಲು ಕೂಡ ಸಾಧ್ಯವಾಗಿದೆ (ಸಂಗೀತ. ೬ ಪೀಠಿಕೆ); ಹಿಂದಿನ ಮತ್ತು ಇಂದಿನ ಬಾಳನ್ನೆಲ್ಲಾ ಒರೆ ಹಚ್ಚಿ ನೋಡಿದಳು (ಶಾಂಪಜೀ. ೯). [ಒರೆ$_2$ + ಹಚ್ಚು$_1$]

**ಒರ್ಕಂಡುಗ**, ಒಕ್ಕಂಡುಗ, ಒರ್ಖಂಡುಗ (ನಾ). ೧. ಒಂದು ಖಂಡುಗ; ಒಂದು ಅಳತೆ. ೨. ಒಂದು ಖಂಡುಗ ಬೀಜವರಿಯುಳ್ಳ ಭೂಮಿ: ಪಱಿಯಾ ಎಱೆನಲ್ಲೂರಾ ಉಪ್ಪಾರ್ಬು ಒರ್ಕಣ್ಡುಗಂ (ಎಕ. IV, ನಾಗಮಂ. ೮೫-೬೬; 776); ನಾಗಮ್ಮಯ್ಯ ಕಲ್ಲದೇಗುಲಮಮ್ಮಾಡಿ ಸಿದಡೆ ಸಲಿಸಲೆನ್ದು ಕೊಟ್ಟ ಮಣ್ಣು ಒರ್ಕಣ್ಡುಗ (ಎಕ. III, ಮಂಡ್ಯ. ೧೩-೧೨; 895). **ಒಕ್ಕಂಡುಗ**: ೨. ಕೊಟ್ಟುದು ಒಕ್ಕಂಡುಗ ಕಟನಿ (ಎಕ. X, ಶ್ರೀನಿವಾ. ೫೦-೧೨; 800 ?). **ಒರ್ಖಂಡುಗ**: ೨. ನಿಮಿತ್ತ ಮಾಗೆ ಕೊಟ್ಟಮಣ್ಣೊರ್ಖಣ್ಡುಗಂ (ಎಕ. XI(S), ಬೆಂಗಳೂ. ೧೫೧-೬೧; 474). [ಒರ್ (< ಒಂದು$_3$) + ಕಂಡುಗ]

**ಒರ್ಕಣ್**, ಒಕ್ಕಣ್, ಒಕ್ಕಣ್ಣು (ನಾ). ೧. ಒಂದು ಕಣ್ಣು. 'ಒರ್ಕಣ್ಗುರುಡಿ' ಪರಾ. **ಒಕ್ಕಣ್**: ೨. ಒಂದು ರಂಧ್ರ, —ತೂತು: ಉದ್ದಿಟ್ಟ ಸಂಪಳಿಯನೊಕ್ಕಣ್ಣ ಕರಟದೊಳ್ ತುಂಬಿ ಕೆಲವಂ ಕಾಯ್ದು ತುಪ್ಪದೊಳಗುರುಳಿಯಪ್ಪಂತು ಬಿಡೆ ಪೀಯೂಷಪಿಂಡ ಮಾದುದು (ಸೂಪಶಾ. ೧-೬೬). **ಒಕ್ಕಣ್ಣು**: ೧. ಗೌಡರು ತಮ್ಮ ಒಕ್ಕಣ್ಣನ್ನು ಇವನ ಕಡೆ ತಿರುಗಿಸಿದಾಗ (ಮುನಿಮಾ. ೪).
[ಒರ್ (< ಒಂದು$_3$) + ಕಣ್]

**ಒರ್ಕಣ್ಗುರುಡಿ** (ನಾ). ಒಂದೇ ಕಣ್ಣಿರುವವಳು; ಒಕ್ಕಣ್ಣಿ: ತನ್ನಿಘು ನಕ್ಕೆ ಪುಟ್ಟಿದರೊರ್ಕಣ್ಗುರುಡಿಯುಂ ಪೊರಂಡಿಯುಂ ಕೂಂಟೆಯುಂ ಪೆಟವೆಯುಂ ಕುಷ್ಠಿನಿಯುಂ ಕುಬ್ಜೆಯುಮಪ್ಪ ಮಗಳ್ದಿರ್ (ಶಾಂತಿಪು. ೪-೬೬ ವ). [ಒರ್ಕಣ್ + ಕುರುಡಿ]

**ಒರ್ಕಯ್ಸು** 'ಒರ್ಕೆಯ್ಸು' ನೋ.

**ಒರ್ಕಲು** 'ಒಕ್ಕಲ್$_2$' ನೋ.

**ಒರ್ಕಾಲ**, ಒಕ್ಕಾಲ (ನಾ). ೧. ಒಂದು ವರ್ಷ: ಈ ಸಂದರ್ಭದೊಳೊರ್ಕಾಲಂ ಸಮೆಯೆ (ಅದ್ಭುತ. ೨೭-೨೩). **ಒಕ್ಕಾಲ**: ೨. ಒಂದು ಹೊತ್ತು, —ಸಮಯ: ಆದಕ್ಕಾಗಿ ಒಲಿಯುವೆವು ಮದವೇರಿ ಒಕ್ಕಾಲ - ಆ ಕಾಲವಾವುದು ವಸಂತಕಾಲ (ಇಂಗೀತ. ೫೦-೧೧).
[ಒರ್ (< ಒಂದು$_3$) + ಕಾಲ$_1$]

**ಒರ್ಕುಂದ**, ಒಂಕುಂದ, ಒಕ್ಕುಂದ (ನಾ). ಒಂದು ಊರಿನ ಹೆಸರು: ಶ್ರೀಮದೊರ್ಕ್ಕುನ್ದದ ಚನ್ದರಸನಾ ದೆವಸಮೆ ಬಾದುಬ್ಬೆಯ ಪಾಳ ತನ್ನ ಮನ್ನೆಯ ಸಾಮ್ಯಮಂ ಸ್ವಯಂಭು ಕಲಿದೇವಸ್ವಾಮಿಗೆ (ಸೌಇಇ. XI-i, ೧೬೬-೫೦; 1075). **ಒಂಕುಂದ**: ಸದಭಿಸ್ತುತಮಪ್ಪೊಂಕುಂದದ ಸದು ವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೧-೩೭). **ಒಕ್ಕುಂದ**: ಒಂಕುಂದ = ಬೆಳಗಾವಿ ಜಿಲ್ಲೆಯಲ್ಲಿನ (ಈಗಿನ) ಒಕ್ಕುಂದ (ಕವಿರಾ. ಸೀ. ೧೩೪ ಟಿಪ್ಪಣಿ). [ಒರ್ (< ಒಂದು$_3$) + ಕುಂದ$_3$]

**ಒರ್ಕುಡಿತೆ**, ಒಕ್ಕುಡಿತೆ, ಒಕ್ಕುಡುತೆ (ನಾ). ಒಂದು ಕುಡಿತೆಯಷ್ಟು; ಒಂದು ಬೊಗಸೆ: ತುಂಬಿದ ಪೀನನಿತಂಬಬಿಂಬಮೊರ್ಕ್ಕುಡಿತೆಯೆನಿಪ್ಪ ಕಣ್ ಕರಮೆ ರಂಜಿಸೆ (ಕಾವ್ಯಾವ. ೯೩೪); ತೃಷ್ಣೆಗೊರ್ಕುಡಿತೆಯಿಂ ಕೊಂಡಚ್ಚವೆಳ್ದಿಂಗಳಂ ಕುಡಿಯಲ್ ಬರ್ಕುಮೆ (ಅರ್ಧನೇ. ೧-೩೧); ಒರ್ಕುಡಿತೆ ನೀರ್ಗೆ ಪಱಿಪಟ್ಟಿರ್ಕೆಯ ಪಣ್ಣೆಲೆಯ ಮುಱಿಗೆ(ಶಮದ. ೨೪ ಪ್ರಯೋ); ಎದೆಯ ಹೊಂಬಣ್ಣಲಲಿ ಪ್ರೇಮಪೀಯೂಷವಿರೆ ಒರ್ಕುಡಿತೆಯನು ಕುಡಿದರಿಲ್ಲ (ಭಾವಜೀ. ೧೫-೨೯೨). **ಒಕ್ಕುಡಿತೆ**: ಅಗಸ್ತ್ಯನ ತೆಱದಿನಬ್ಧಿಯನೊಕ್ಕುಡಿತೆ ಕುಡಿವಂ (ಕುಮುರಾ. ೨-೧೧೨); ಬಡಬ ಗೌತಣವಿಕ್ಕುವಡೆಯೊಕ್ಕುಡಿತೆ ಜಲವೇ ಮುಂಜು ಸುರಿಯಲ್ಕೊಡನೆ ಕೆಱೆ ತುಂಬುವುದೆ (ನಳಚ. ೨-೧೯); ಒಕ್ಕುಡಿತೆ ಅರೆಮುಕ್ಕು ಎನುತೆನುತೆ ಹಲಕೆಲವು ಪಾನಿಪತ್ರುಗಳನ್ನು ಮುಕ್ಕುಳಿಸುವೆ (ನಾದಲೀ. ೪೧-೧೧). **ಒಕ್ಕುಡುತೆ**: ನೀರನಾದೊಡೆ ಒಕ್ಕುಡು [ಪಾಠಾಂ. ಡಿ]ತೆಯಂ ಸೇರಿಕೊಂಡೊಡೆ ಸಾಕೆನುತ ಭಂಡಾರಿ ನುತಿಸುತ್ತಲೈದಿನನಿತ್ತಲೈಸರಲಿ (ಬಸಪು. ೩೦-೧೪); ಏಳು ಕಡಲನೊಕ್ಕುಡುತೆಯಂ ಮಾಡುವತಿ ಬಳವಂತರ್ (ವೀಶ್ವೆವು. ೨-೧೨-೬೨); ಮೋದದಿ ಒಕ್ಕುಡುತೆಯ ಪಾಲನೆ ಕೊಂಡು ಹಾದಿಲಿ ಹರಿಸಿದ್ದು ಎಲ್ಲಿ ಕಲಿತೆಯ್ಯ (ಪುರಂದ. ೧-೯೬-೮).
[ಒರ್ (< ಒಂದು$_3$) + ಕುಡಿತೆ]

**ಒರ್ಕುಡಿತೆಗೊಳ್** (ಕ್ರಿ). ಒಂದು ಕುಡಿತೆ ತೆಗೆದುಕೊ: ಒಕರಿಸು ತೊರ್ಕುಡಿತೆ[ಪಾಠಾಂ. ಒಕ್ಕುಡಿತೆ]ಗೊಂಡಡೆ ಸಾಕು ಮಿಕ್ಕಿನ ಪಾಲನಿರಿಸು (ಬಸವು. ೧೪-೧೦). [ಒರ್ಕುಡಿತೆ + ಕೊಳ್$_1$]

**ಒರ್ಕುಳ**, ಒಕುಳ, ಒಕ್ಕಳ, ಒಕ್ಕುಳ, ಒಕ್ಕೊಳ (ನಾ). ಒಂದು ಕೊಳಗ ಪ್ರಮಾಣ, —ಅಳತೆ: ಪದಿನಯ್ದು ಪಣಮುಂ ಪನ್ನಿರ್ಕುಳ ಮಿರಿಯುಂ ಒರ್ಕುಳತುಪ್ಪಮುನ್ದಿಱಿವೋನ್ (ಎಕ. III, ಮಂಡ್ಯ. ೧೪-೧೨; 907); ಒರ್ಕುಳ ಪಾಲೊಕ್ಕುಳಮೊಸರೊರ್ಕುಳಕುಂಬಳದ ಕುಸುರಿಯೊಳ್ ಸಮಯುಕ್ತಂ (ಅಶ್ವಶಾ. ೭-೫೪). **ಒಕುಳ**: ಆತಱಿಂ ಬಟಾರರು ಕೊಟ್ಟುದು ಇಱ್ಗಣ ಮೇಡಿನೊಳ್ ಒಕುಳಂ ಕಟನಿ (ಎಕ. X, ಶ್ರೀನಿವಾ. ೨೭-೨೭; 870); ಒಕುಳ ನೆಲ್ಲ ಕೊಡುವರು ಸ್ತನಿಕರು (ಎಕ. XIV, ಗುಂಡ್ಲುಪೇ. ೧೦೬-೧೩; ?).

**ಒಕ್ಕಳೆ :** ಉಪ್ಪಿಲ್ಲದೆ ಕೇಳೊಕ್ಕಳ ತುಪ್ಪವನೆಱೆದುಣ್ಬೆನೆಂಬೊಡುಂಬುಣಿಸೇಂ ಸ್ವಾದಪ್ಪುದೆ (ಧರ್ಮಾಮೃ. ೧–೫೦); ಒಕ್ಕಳಮೆನಲೆಣ್ಣೆಯುನಾ ಕಷಾಯದೊಳ್ ಕೂಡಿದುದಂ (ಅಶ್ವಶಾ. ೧೧–೬೧); ಘಟ್ಟದಲ್ಲಿ ಪಾವಲಿಗೆ ಒಕ್ಕಳ ಉಪ್ಪು (ಗಾದೆ). **ಒಕ್ಕುಳೆ :** ಕೆಯ್ಯ ಒಕ್ಕಿಲೊಳೊಕ್ಕುಳಮುಮಾಗೆ ಕೊಟ್ಟಾರ್ (ಎಕ. X, ಮುಳಬಾ. ೬೨–೯; 780); ಕುಳಕೆ ವೊಕ್ಕುಳ ಭತ್ತ (ಎಕ. VIII, ಸೊರಬ. ೨೪೭–೮; 1288); ಒಕ್ಕುಳೊಕ್ಕುಳ ಉದಕದಿಂ ತೀವಿದ (ಪ್ರಕಟೀ. ೩೮–೯). **ಒಕ್ಕೊಳೆ :** (ಓಷಧಿ. ೧೧೧).

[ಒರ್ (< ಒಂದು$_3$) + ಕುಳ$_3$ (< ಕೊಳಗ$_1$)]

**ಒರ್ಕೆತ್ತು** (ಕ್ರಿ). ಒಕ್ಕಿ ಎತ್ತು (?).

ಒರ್ಕೆತ್ತುಗಂಡ = ಒಂದು ಬಿರುದು : ಶ್ರೀಮತ್ ದಣ್ಡನಾಯಕಂ ಅಪ್ಪಿಮಯ್ಯನಪ್ಪ ಒರ್ಕೆತ್ತುಗಣ್ಡ ಗಣ್ಡನಾರಾಯಣ ಚೋೞನ ಸಿಂಘ ರಾಜೇನ್ದ್ರಚೋೞ ಬ್ರಹ್ಮಮಾರಾಯರ್ (ಎಕ. X, ಚಿಂತಾಮ. ೩೦–೫; 1047). [ಒಕುರ್$_0$ + ಎತ್ತು$_1$. / ತಮಿ. ಒರುಕ್ಕು = ಅಡಗಿಸು, ಕೊಲ್ಲು]

**ಒರ್ಕೆನ್ನೆ** (ನಾ). ೧. ಒಂದು ಕೆನ್ನೆ. ೨. (ಕರಾ) ಒಂದೇ ಕೆನ್ನೆಯ ನರ ಮಿಡಿಯುವಿಕೆ; ಅರೆದಲೆನೋವು. [ಒರ್ (< ಒಂದು$_3$) + ಕೆನ್ನೆ]

**ಒರ್ಕೆಯ್**, ಒಕ್ಕಯ್, ಒಕ್ಕೆಯ್, ಒಕ್ಕೈ, ಒಗ್ಗಯ್, ಒಗ್ಗೈ, ಒರ್ಕೈ (ನಾ). ಒಂದು ಕೈ; ಏಕಹಸ್ತ : ವೀಣಾವಾದ್ಯವೊರ್ಕೆಯ್ಯ ಮತ್ತೊರ್ಕೆಯ್ಯಿಂ ಬಾಣನ ಮುಡಿವಿಡಿದೆತ್ತಿ ಕ್ಷೀಣ ಸಂತೋಷದೆ ಹರಸಲ್ಕೆ ಕಿಂಕರವಾಣದೆ ಮುನಿಯನೀಕ್ಷಿಸಿದ (ಮೋಹತ. ೩೩–೧೧). **ಒಕ್ಕಯ್ :** ಒಕ್ಕಯ್ಯೊಳಾಂತ ಪೇರೊನಕೆಯಿಂದಿಕ್ಕಿದ ಸೊಕ್ಕಾನೆದಲೆಗನ ಮೇಲೆ (ಮೋಹತ. ೩೮–೫೯). **ಒಕ್ಕೆಯ್ :** ಅರಸನೊಕ್ಕೆಯ್ಯೋ [ಪಾಠಾಂ. ಕ್ಕೈಯೋ]ಗರಕೆ ತಾನರುಹನುಳಿದಂತೆ (ಬಸವು. ೫–೧೦). **ಒಕ್ಕೈ :** ಜನನಿಯುಪಚಾರಕ್ಕೆ ಕಟ್ಟಿದೊಕ್ಕೈ ತುಂಬಿದನಿತೋಗರವ (ಸಿದ್ಧರಾ. ೨–೧೭); ಒಕ್ಕೈಗೆ ಪೂತಳಿರ್ಗಳೊಂದೊಂದಱಿಂ ಮೇಲೆ ಸಿಕ್ಕಲಱಿಯವುಯೆಂಬ ಸಂದೆಗಂಗಳ್ ಸಲೆ ಮನಕ್ಕಾಗೆ (ಚೆಬಪು. ೪೫–೩೫). **ಒಗ್ಗಯ್ :** ಪಿಡಿ ನಡುವಿನ ಪೆರ್ಮೊಲೆವೆಣ್ಗಳು ಹೋಹಿಡಿನೊರೆಗಳಲೊಗ್ಗಯ್ಯ ಪಿಡಿದರನೇಕ ಸತ್ಪರಿಕರಗಳ ತಂದು ಬಡಿಸಿದರತಿಜಾಣ್ಮೆಯಲಿ (ಮೋಹತ. ೧೪–೧೦). **ಒಗ್ಗೈ :** ಧರೆಯನೊಗ್ಗೈಯುದ್ದ ಹಗಲುದ್ದ ತಲೆಯುದ್ದ ಮರದುದ್ದ ಮುಗಿಲುದ್ದಮಂ ಬಿಟ್ಟು (ಸಮ್ಯಕೌ. ೧೧–೩೫). **ಒರ್ಕೈ :** ಒರ್ಕೈ, ಒರ್ತಲೆ, ಒರ್ಪಿಡಿ (ಭಾಷಾಭೂ. ೨೯ ಉದಾ).

ಒರ್ಕೆಯ್ಯನ್ನ = ಒಂದು ತುತ್ತು ಅನ್ನ : ನಿತ್ಯಂ ವೇದಕೋವಿದರೊಂದು ಕೋಟಿಯುಂಡ ಫಲ ಸತ್ಯಂ ಶಿವಯೋಗಿಗೆ ನೀಡಿದೊರ್ಕೆಯ[ಯ್ಯ]ನ್ನಕೆಣೆಯಿಲ್ಲ (ಶಿವಗೀ. ೨೨–೯೧).

[ಒರ್ (< ಒಂದು$_3$) + ಕೆಯ್$_2$]

**ಒರ್ಕೆಯ್ಸು**, ಒಕ್ಕಯಿಸು, ಒಕ್ಕೈಸು, ಒರ್ಕಯ್ಸು, ಒರ್ಕೈಸು (ಕ್ರಿ). ಒಂದುಗೂಡಿಸು; ಒಂದುಮಾಡು : ಒರ್ಕೆಯ್ಸಿ [ಪಾಠಾಂ. ಒರ್ಕೈಸಿ] ಬಿಲ್ಲನಂಬುಮನುರ್ಕಾಳ್ಗಳ್ ಸುರಿಗೆಗಿೞ್ತು (ಕಾವ್ಯಾವ. ೫೮, ಶಮದ. ೬೬ ಪ್ರಯೋ ನೋ). **ಒಕ್ಕಯಿಸು :** ಫಳಕಮಂ ಕರವಾಳನೊಕ್ಕಯಿಸಿ ಪೊಡಮಟ್ಟು (ಏನಾರ. ದೇ. ೧೧೮–೯೨). **ಒಕ್ಕೈಸು :** ಉಭಯಕಟದ ಸೊರ್ಕುಕದಡಿನ ತೆರ್ಕೆಗಡಲ್ಗಳೊಕ್ಕೈಸಿ ಜಗಮನಿಕ್ಕಲೆಂದು ಮಹಾವ್ರತಮನೆತ್ತಿಕೊಂಡ ಕಲ್ಪಾಂತಕಾಳನ ಕೂರ್ಚಜಾಳಂ ಪೆರ್ಚಿಕ್ಕಿ ಬೇೞೆ ಬೆರ್ಚಿದಂತಿರ್ದಪುದು (ಅನಂಪು. ೧೩–೨೦ ವ). **ಒರ್ಕಯ್ಸು :** ಸುರಾಚಳಮನೊರ್ಕಯ್ಸಿಟ್ಟು (ಎಕ. VI, ಕಡೂರು. ೩೬–೨೪; 1203). **ಒರ್ಕೈಸು :** ಬಿಲ್ಲುಂ ಸರಳ್ಗಮುಣ್ಬುಗೆಟ್ಟುಮಿಟ್ಟೆಡೆಯುಮಾಗಿ ತೊಟ್ಟನೆ ನೆರೆದುರುಳೆ ನೂಂಕುವುದುಂ ಬಿಲ್ಲನಂಬುವನೊರ್ಕೈಸಿ (ಶಾಂತಿಪು. ೪–೩೩ ವ). [ಒರ್ (< ಒಂದು$_3$) + ಕೆಯ್ಸು]

**ಒರ್ಕೈ** 'ಒರ್ಕೆಯ್' ನೋ.

**ಒರ್ಕೈಗೊಳ್**, ಒಕ್ಕೈಗೊಳ್ (ಕ್ರಿ). ಒಂದು ಕೈಯಲ್ಲಿ ತೆಗೆದುಕೊ, —ಹಿಡಿ : ಏರ್ದಳಿದು ನೊಂದ ಕಾಳ್ಪಂದಿಯಂತವನಾ ಧನುರ್ದಂಡ ಶರಮನೊರ್ಕೈಗೊಂಡು ಗುಡುಗುಡಿಸಿ ದೋರ್ದಂಡಮಂ ನೀಡಿ (ಚೆಬಪು. ೪೯–೪೨). **ಒಕ್ಕೈಗೊಳ್ :** ಕಣೆಯನುಗಿದ ಭಟ ಬಿಲ್ಲನೊಕ್ಕೈಗೊಂಡು ರಣರಂಗವ ಪೊಗುವಂತೆ (ಶ್ರೀಪಾಲ. ೧೧–೬೫).

[ಒರ್ಕೈ (< ಒರ್ಕೆಯ್) + ಕೊಳ್$_1$]

**ಒರ್ಕೈಸು** 'ಒರ್ಕೆಯ್ಸು' ನೋ.

**ಒರ್ಕೊಡ** (ನಾ). ಒಂದು ಕೊಡ : ಎಂತು ನರಂ ಪೆರ್ಚಿದ ಪೆರ್ಗಡಲೀಸಲ್ ಪದೆವಂ ಕೈಯಾಂತಿರೆಯಾರದ ಸುಡದೊರ್ಕೊಡಮಂ (ಸೌನಂದ. ೯–೧೦). [ಒರ್ (< ಒಂದು$_3$) + ಕೊಡ$_1$]

**ಒರ್ಕೊರಲ್**, ಒಕ್ಕೊರಲು, ಒಕ್ಕೊರಳು, ಒಗ್ಗೊರಲ್ (ನಾ). ಒಂದೇ ಕೊರಳು; ಏಕಾಭಿಪ್ರಾಯ : ಒರ್ಕೊರಲಿಂದಾಂಪೆನಾಮುಮೀ ತಪಮಂ (ಶಬ್ದಾನು. ೪೭೧ ಪ್ರಯೋ). **ಒಕ್ಕೊರಲು :** ಕನ್ನಡಿಗರೆಲ್ಲರೂ 'ಕರ್ನಾಟಕ ಏಕೀಕರಣ' ದಿನವನ್ನು ಆಚರಿಸಿ ಒಕ್ಕೊರಲಿನಿಂದ ಸಾರಿದರು (ಕನ್ನನು. I, ೧೫); ಸುಭಟರೆಲ್ಲರೂ ಒಕ್ಕೊರಲಿನಿಂದ ಜಯನಿನಾದ ಮಾಡಿ (ಬಾಣಅ. ೧೭೧). **ಒಕ್ಕೊರಳು :** ವೇ.ವಾಡ ಶಾಸನ—ವಿ. ವಿಜಯಗಳೆರಡೂ ಒಕ್ಕೊರಳಾಗಿ ಸಾರುತ್ತಿವೆ (ನಾಡೋಜ. ೩೮). **ಒಗ್ಗೊರಲ್ :** ನವೀನ ದೊಗ್ಗೊರಲಾಗಿಯುರುತರ ಬ್ರಹ್ಮವನೆ (ವೀಶೈಪು. ೫–೧೭–೮); ನಾರದಾದಿಗಳೊಗ್ಗೊರಲೊಳು ಪಾಡುವ ಗಾನ (ಗೀತಗೋ. ೪–೧). [ಒರ್ (< ಒಂದು$_3$) + ಕೊರಲ್]

**ಒರ್ಕೋಡ** (ನಾ). ಒಂದು ಕೋಡುಳ್ಳ ಹಸು ಅಥವಾ ಎತ್ತು : ಏಡಂ ಪೊಕ್ಕೊಡೆ ಚಿತ್ರವೃಷ್ಟಿ ಕುರುಡಂ ಮುಂಪೊಕ್ಕೊಡರ್ಘಕ್ಷಯಂ . . . ಒರ್ಕೋಡಂ ಪೊಕ್ಕೊಡೆ ರಾಜ್ಯಹಾನಿ (ಜಟ್ಟಮ. ೪–೭).

[ಒರ್ (< ಒಂದು$_3$) + ಕೋಡು$_5$ + –ಅ$_7$]

**ಒರ್ಕೋಲ್**, ಒಕ್ಕೋಲ್, ಒಗ್ಗೋಲು (ನಾ). ೧. ಒಂದು ಕೋಲು; ಒಂದು ಅಳತೆ : ಒರ್ಕೋಲ್ ಪೊರಜೆಗೆ ಬಗೆವೊಡೆದಿರ್ಕುಂ ನಟ್ಟುಗಿಯೆ ಗಣಘನಂತಿಭಪತಿ ಕುಳ್ಳಿರ್ಕುಂ (ಶಾಂತಿಪು. ೩–೨೭); ಪಱು ಗೋಲ ಪನ್ನಿರ್ಕೋಲಿಂದಂ ದೋಣಿಯೊರ್ಕೋಲ್ [ಪಾಠಾಂ. ಒಕ್ಕೋಲ್] ಲೇಸೆಂಬಂತೆ (ಧರ್ಮಾಮೃ. ೭–೧೩೬). **ಒಕ್ಕೋಲ್ :** ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ಒಗ್ಗೋಲು :: ೨. ಒಂದು ಬಾಣ : ವಾಲಿಯನು ಒಗ್ಗೋಲಲೆಸೆದ ನೃಪಾಲನ ವೈರದಲಿ ಬಾಳ್ವರೆ (ಹನುಮ. ೭೭).

[ಒರ್ (< ಒಂದು$_3$) + ಕೋಲ್$_1$]

**ಒರ್ಖಂಡುಗ** 'ಒರ್ಕಂಡುಗ' ನೋ.

**ಒಗುರ್$_1$** 'ಒಱ್ಗು$_1$' ನೋ.

**ಒಗುರ್$_2$** 'ಒಱ್ಗು$_2$' ನೋ.

**ಒಗುರ್ಡಿಸು**, ಒಗ್ಗುಡಿಸು (ಕ್ರಿ). ೧. ಒಂದು ಕಡೆಗೆ ಹೊರಳು; ಓರೆಯಾಗು : ಎಡಗೆಯ್ಯನೂಱಿ ಪೀಠದ ಕಡೆಯೊಳ್ ಮುಯ್ಯುದ್ದಮಾಗೆ ಮುರಿದ ಬೆಡಂಗಚ್ಚುಡಿದಿರೆ ಹಾರಂ ಕೆಲಕೋ[ಕೊ]ಗುರ್ಡಿಸೆ ನಿಜಾನುಗರೊಳಾಗಳೊರ್ವಂ ನುಡಿದಂ (ಶಾಂತಿಪು. ೫–೧೦೩); ತೂಂಕಡಿಪ ಮಿಗಂ ಮುಂದಣ್ಗೋ[ಣ್ಗೊ]ಗುರ್ಡಿಸಿದುದೋ (ಲೀಲಾವ. ೩–೪); ಕಿವಿ ಕಣ್ಗಳ್ ಕೆತ್ತು ಬಾಯೊಗುರ್ಡಿಸಿ [ಪಾಠಾಂ. ಬಾಯ್ವಲ್ ಗುಡಿಸಿ]ಕರೆಯೆ ಪೆಗುರ್ಗಿಡುತ್ತೆಯೆ ಬಂದಿರ್ದವರಂಜಲ್ (ರಕ್ಷಾಶ. ೪೦); ನೀರೆಱೆವ ಕಾಮಿನಿಯುರುರುಬಾಹುಮೂಲದೆಡೆಗೆ ದಿಟ್ಟೆ ಪರಿಪರಿದು ಮೊಗಮೊಗುರ್ಡಿಸೆ ಸರಿಸಕಳವಟ್ಟೆ ಜಲಧಾರೆ ಪೊಱಸೂಸೆ (ಜೈಮಿಭಾ. ೩–೯).

೨. ಕುಸಿ; ಮುಗ್ಗರಿಸು : ಉರ್ವರೆಯೊಗ್ರುಡಿಸಿತ್ತು ಸಾಗರಂ ವೇಳೆಯಿನುರ್ಕಿ ಸೂಸಿದುದು ತೊಟ್ಟು ಕಟಿಲ್ದವು ತಾರಕಾಳಿಗಳ್ (ಅನಂಪು. ೧೧–೫೮); ಪೊಡವಿ ನಿಲಲಾಜದೊ[ದೊ]ಗ್ರುಡಿಸುಗುಂ (ಕಬ್ಬಿಕಾ. ೨೫೪); ಪೊಡೆವ ನಾನಾಭೇರಿದುಂದುಭಿಧ್ವಾನದಿಂ . . . ಭೂಮಿಯೊಗ್ರುಡಿಸೆ ದಿಗ್ದಂತಿ ಘೀಳಿಡೆ (ಲಶಿಚಂ. ೧೫–೨೩). ೩. ಒಂದು ಕಡೆಗೆ ಸೇರು; ಒಟ್ಟಾಗು : ನಡೆವೆಳವೆಣ್ಗಳುನ್ನತಕುಚಂಗಳ ಕುಂಕುಮರೇಣು ಸೂಸೆ ಸೋರ್ಮುಡಿಯೆಡೆಯಲ್ಲಿ ತಾಳ್ದ ಮೃಗನಾಭಿಜ ಪುಷ್ಪರಜಃಪ್ರತಾನಮೊಗ್ರುಡಿಸಿರೆ ಬೀದಿಯಲ್ಲಿ (ರಾಜಶೇ. ೨–೧೧೩). **ಒಗ್ಗುಡಿಸು :** ೧. ಮೇಲುಸುರು ಮಿಕ್ಕೇಳೆ ನುಡಿವ ನಾಲಗೆ ಬೀಳೆ ಕಾಲನವರನುವಾಗೆ ಬಾಯೊಳು ಸುರಿದ ಲೋಳೆ ಮೊಗವೊಗ್ಗು [ಪಾಠಾಂ. ಒಳ್ಗು]ಡಿಸಿ ಗೂರು ಹೆಗ್ಗೂರಿಡುತ್ತಮಿರೆ ಬಗೆಗೆಟ್ಟು (ಶಿಂಡೋರ. ೨–೨೨).

[ಒರ್ (< ಒಂದು$_3$) + ಕುಡಿಸು ?]

**ಒಗ್ರೂಡಿಸು,** ಒಗ್ಗೂಡಿಸು (ಕ್ರಿ). ಒಟ್ಟುಗೂಡಿಸು; ಒಂದುಗೂಡಿಸು: ನಿನ್ನ ಒಡ್ಡಣೆಯ ದಳಗಳನ್ನೆಲ್ಲ ಒಗ್ರೂಡಿಸಿ (ಬಟ್ಟಅ. ೫೫–೪). **ಒಗ್ಗೂಡಿಸು :** ಈಗಿನ ವೀಣೆ . . . ಬೇರೆ ಬೇರೆ ಮರದ ತುಂಡುಗಳಿಂದ ಸಿದ್ಧವಾಗಿ ಒಗ್ಗೂಡಿಸಲಾಗುತ್ತದೆ (ಸಂಗೀತ. ೬೬); ಜನರನ್ನೆಲ್ಲಾ ಒಗ್ಗೂಡಿಸಬೇಕು (ರೂಢಿ). [ಒಗ್ರೂಡು + –ಇಸು$_3$]

**ಒಗ್ರೂಡು,** ಒಕ್ಕೂಡು, ಒಗ್ಗೂಡು (ಕ್ರಿ). ಒಂದಾಗಿ ಕೂಡು, —ಸೇರು: ಈ ಲೋಕಾವಳಿಯೆಲ್ಲ ಮಾಡಿದ ಮಹತ್ಪುಣ್ಯಂಗಳೊಗ್ರೂಡಿಯುಂ ತೂಳಲ್ಕಾಜದ ಪಾತಕಕ್ಕೆ ನೆಲೆಯಪ್ಪೆನ್ನಂ (ವಸ್ತವಂ. ೧೨). **ಒಕ್ಕೂಡು :** ಸುಲ್ತಾನರ ಒಕ್ಕೂಡಿದ ಸೈನ್ಯ . . . ನುಗ್ಗಿ (ಆಳಾಕ. ೨೦). **ಒಗ್ಗೂಡು:** ಸಂಸ್ಕೃತಿಯ ದೃಷ್ಟಿಯಿಂದಲೂ, ಭಾಷಾದೃಷ್ಟಿಯಿಂದಲೂ, ಒಗ್ಗೂಡುವುದಕ್ಕೂ ಈ ನಾಡಹಬ್ಬ ಎಷ್ಟು ಸಹಕಾರಿಯಾಗಿದೆ (ಕನ್ನಸು. I, ೧೫). [ಒರ್ (< ಒಂದು$_3$) + ಕೂಡು$_1$]

**ಒಗ್ರೇಣ್,** ಒಗ್ಗೇಣ್ (ನಾ). ಒಂದು ಗೇಣು, —ಅಳತೆ: ನಾಲ್ಬೆರಲುಂಗುಟಮೆರಡಱಿಡೆಯುಮೊ[ಪಾಠಾಂ. ಮೂ]ಗ್ರೇಣಿಂಬಂತಿರೆ (ಅಜಿಪು. ೬–೧೦); ಎರಡುಂ ಮಡಂಗಳೆಡೆ ನಾಲ್ಬೆರಳುಂಗುಷ್ಠಂಗಳೆರಡಱಿಡೆಯೊಗ್ರೇಣಾಗಿರೆ (ಸುಕುಮಾ. ೮–೫೮). **ಒಗ್ಗೇಣ್:** ಎರಡು ಮಡಂಗಳೆಡೆ ನಾಲ್ಬೆರಲೆರಡುಂ ತೊಳಗುವುಂಗುಟಂಗಳ ಮಧ್ಯ ಪರಿಕಿಪೊಡೊಗ್ಗೇಣ್ ತೆಱಪಾಗಿರೆ (ವರ್ಧಪು. ೧೫–೬೦); ಇರದೊಗ್ಗೇಣುದ್ದವಿಗ್ಗೇಣಗಲದೊಡನೆ ಮೂವತ್ತು ಗೇಣ್ನೀಳದೈವತ್ತೆರಡು ಕಲ್ಗೆಂಟು ಗದ್ಯಾಣಮುಮಂ (ಭಾಸ್ಕರ. ೪೦–೩); ತಾರಾಂಗದರ ಕೂಡಿ ವಿಂಧ್ಯಪರ್ವತದಿ ದುಸ್ತಾರಮೆನಿಸುವ ಕೂಟಗಹ್ವರವ ಕೇಸರಿಕುಮಾರನರಸಿದ ನೆಲದಲೊಗ್ಗೇಣ ಬಿಡದೆ (ವೆಂಕಾರಾ. ೪–೧೭–೪೦). [ಒರ್ (< ಒಂದು$_3$) + ಗೇಣ್$_1$]

**ಒಗ್ರೊಡೆ,** ಒಗ್ಗೊಡೆ (ಕ್ರಿ). ಗುಂಪು ಒಡೆ; ಚದರು; ಚಲ್ಲಾಪಿಲ್ಲಿಯಾಗು : ನಡೆ ನಡೆಯಿದಿರ್ಚಿದಿರ್ಚೊಗ್ರೊಡೆಯದಿರೊಗ್ರೊಡೆಯದಿರ್ ಕರಂ ಕರವಾಳಿಂ ಪೊಡೆಪೊಡೆಯೆನುತ್ತೆ ನಾಲ್ಕುಂ ಕಡೆಯೊಳ್ ಕವಿದರ್ ಕಿರಾತರ್ (ರಾಜಶೇ. ೫–೧೨೧). **ಒಗ್ಗೊಡೆ:** ಮೋಹರವೊಗ್ಗೊಡೆದು ಹೆಣಗಿದುದು ಕೇಶಾಕೇಶಿಯುದ್ಧದಲಿ (ಕುಮ್ಮಾಭೀ. ೪–೯); ಉಭಯಬಲಗಳೊಗ್ಗೊಡೆಯದೆ . . . ಕಡುರಭಸದೆ ಮೋಹಿದುದಂದು (ಅಂಜಚ. ೬–೧೧೩); ಪಾರ್ವತಿಯಂ ನಡೆನೋಡಿ ಹಿಗ್ಗುತೊಗ್ಗೊಡೆಯದ ನೇಹದಿಂದೆ (ಉಮಾಶ. ೬); ಒಗ್ಗೊಡೆಯದೊತ್ತಿ ನಡೆತಹನು (ಪಾಂಡಚ. ೮೧–೧೬). [ಒಗ್ರು$_2$ (< ಒಟ್ಟು$_2$) + ಒಡೆ$_1$]

**ಒರ್ಚರ,** ಒಚ್ಚರ (ನಾ). ಒಂದೆಳೆಯ ಸರ; ಏಕಾವಳಿ: ನುಣ್ಮುತ್ತಿನೊರ್ಚರಮಂ ಪೆರ್ಮೊಲೆ ಚುನ್ನವಾಡೆ (ಕಬ್ಬಿಕಾ. ೬೯); ನವಮಾಲತೀತ್ರಿಸರಮೊಪ್ಪುವ ಸಂಪಗೆವೂವಿನೊರ್ಚರಂ (ರಾಜಶೇ. ೨–೧೦೪). **ಒಚ್ಚರ:** ವಿಶಾಲನೇತ್ರೆಯ ಕಂಬುಕಂಠದೊಳೊಪ್ಪುಗುಂ ರುಂದ್ರಶೋಭೆಯನೀವ ಮಲ್ಲಿಗೆಯಚ್ಚಮೊಗ್ಗೆಗಳೊಚ್ಚರಂ (ಉದ್ಭಟ. ೯–೭೮); ಉರದೊಳೆಳಮುತ್ತಿನೊಚ್ಚರವನೆಳಲಿಡುವಂತೆ (ಸೌಂದಪು. ೧೪–೪); ಪೂಣ್ದಣ್ಣಗಂಟಿನ ತೊಟ್ಟ ಜವಕೆಯ ಮುತ್ತಿನೊಚ್ಚರಕಂದವೊಂದಿಸುತ (ಜೀವಂಚ. ೧೭–೩೩). [ಒರ್ (< ಒಂದು$_3$) + ಸರ$_6$]

**ಒರ್ಚರೆ** 'ಒರ್ಚೇರೆ' ನೋ.

**ಒರ್ಚವಡಿ,** ಒಚ್ಚಡಿ, ಒಚ್ಚವಡಿ, ಒಚ್ಚೋಡಿ (ನಾ). ೧. ಒಂದು ಸವಡಿ, —ಪದರ, —ನಿರಿಗೆ: ನುಣ್ಚರಂ, ಇಂಚರಂ, ಒರ್ಚವಡಿ (ಭಾಷಾಭೂ. ೩೨ ಉದಾ); ಒಪ್ಪಿಸಿ ಮನಮಂ ಮಾನಿನಿಗೊಪ್ಪಿಸಿ ತನುವಂ ತಪಕ್ಕೆ ಮುನಿ ಮನಸಿಜನಿಂ ಸೊಪ್ಪಾಗಿದೊರ್ಚವಡಿ [ಪಾಠಾಂ. ಕೆ. ಒಚ್ಚವಡಿ, ಒರ್ಚಿವಡಿ]ಯ ಕುಪ್ಪಸಮಂ ಪೋಲ್ತು ಪೊಜಗೆ ನೇರಿದನಾದಂ (ಶಂರಾಮಾ. ೪–೧೩); "ಒರ್ಚವಡಿಯ – ಒಳಗೊಂದು ಹೊರಗೊಂದು ವಿಧದ" (ಶಂರಾಮಾ. ಕೋಶ). **ಒಚ್ಚಡಿ:** ೨. (ಆಲಂ) ತೆಳ್ಳನೆಯದು; ದಪ್ಪನಾಗಿಲ್ಲದ್ದು : ಗೋಪೀಚಂದನ, ಗೋರೋಚನ ಈ ಎರಡನ್ನೂ ಕಡದಿ ಒಚ್ಚಡಿ ಮೈಯ ಹೆಂಗಸಿಗೆ ಒಂದು ಬಟ್ಟಲು, ತುಂಬಿದ ಮೈಯ ವಳಿಗೆ ಅರಿಬಟ್ಟಲು, ಇಂತು ೮ ದಿನ ಕೊಳ್ಳಲು ಹೆನ್ನೆ ತೀರ್ಗೂಂ (ವಿವೈವಿ. ೮೬). **ಒಚ್ಚವಡಿ:** ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಒಚ್ಚೋಡಿ:** ೧. ಅಚ್ಚರಿವಡೆದ ಚೆನ್ನಿಗಬಂದ ಕೊಂಡಾಡಲೊಚ್ಚೋಡಿನಾಲಗೆಗರಿದು ಸ್ವಚ್ಛಪ್ರಳಿದಿರ್ಗೊಳ್ಳಬೇಕೆಂದು ಪೇಳಿದೊಡುಚ್ಛವಿಸಿದಳಂಬುಜಾಕ್ಷಿ (ಮೋಹತ. ೩೧–೩೪

[ಒರ್ (< ಒಂದು$_3$, ಸವಡಿ$_3$]

**ಒರ್ಚುತ್ತು** (ನಾ). ಒಂದು ಸುತ್ತು : ಕಂಚುಗಾಲುಂಗುರದ ಬಿಡದೆಸೆವ ಸಾಟುವಳಿಗಳ ಶಂಖಮಣಿಯರದುಡಿಯೊಳೊರ್ಚುತ್ತಿನೊಳ್ಪಟ್ಟುಗೆಯ ಕೊರಲ ಸರದಾಲಿಗಳ ಗುಂಜಿಸರದ (ಅರಾಜ. ೮–೩).

[ಒರ್ (< ಒಂದು$_3$) + ಸುತ್ತು$_2$]

**ಒರ್ಚೆಱಂಗು,** ಒಚ್ಚೆಱಂಗು, ಒಚ್ಚೆಱಗು, ಒರ್ಚೆಱಗು (ನಾ). ವಸ್ತ್ರದ ಒಂದು ಸೆರಗು, —ಅಂಚು. **ಒಚ್ಚೆಱಂಗು :** ಒಚ್ಚೆಱಂಗಿನ ಉಡಿಗೆವೊಳಗೆ ಕುಡುಗೋಲ್ಮೆಱೆಯೆ ಪಚ್ಚಪಸಿವೊಕ್ಕಲಮಗಂ ಭಕ್ತಿಕಂಡೆಱೆಯೆ (ಸಿಂಡೋರ. ೫೨–೨೨). **ಒಚ್ಚೆಱಗು :** ಜನಾರ್ಥಕನಂ ದುಕೂಲದೊಚ್ಚೆಱಗಿಂ ಪೊದೆಯಿಸುವಂತೆ ನಿಜನಯನಧವಳಾಂಶುವಿಂ ಪೊದೆಯಿಸಿ (ಶಾಂತೀಶ್ವ. ೧೪–೫೮ ವ); ಹೆಚ್ಚುನೀರೆಱೆದಿಟ್ಟು ತೊಟ್ಟಲೊಳೊಚ್ಚೆಱಗ ದುಗುಲದಲಿ ಹೊಕ್ಕುಳ ಮುಚ್ಚಿ (ಪ್ರಭುಲೀ. ೩–೨೬). **ಒರ್ಚೆಱಗು :** ಮಱೆಯದೆ ಬೆಚ್ಚುನೀರೆಱೆದು ತೊಟ್ಟಿಲೊಳಿಟ್ಟು ಬಸಿರ್ಗೆ ಚೀನದೊರ್ಚೆಱಗನೆ ತಂದು ಸೂನುಗೊಲವಿಂ ಸೊಡರ್ವಕ್ಕಿನ ಬೊಟ್ಟನಿಟ್ಟು (ಚಂದ್ರಪು. ೩–೪೫). [ಒರ್ (< ಒಂದು$_3$) + ಸೆಱಂಗು]

**ಒರ್ಚೆಱಗು** 'ಒರ್ಚೆಱಂಗು' ನೋ.

**ಒರ್ಚೇರೆ,** ಒಚ್ಚರೆ, ಒಚ್ಚೆರೆ$_1$, ಒಚ್ಚೇರೆ, ಒರ್ಚರೆ (ನಾ). ಒಂದು ಸೇರೆ, —ಬೊಗಸೆ. 'ಒರ್ಚೇರೆಗಣ್' ಪರಾ. **ಒಚ್ಚರೆ:** ಧರೆಗೋವಿನಡಿ ಮೇರುಗಿರಿಯೊಂದು ಕೊರಡೆಯೇಳು ಶರಧಿವಚ್ಚೋ[ಒಚ್ಚ]ರೆ ದಶದಿಕ್ಕು ಗೇಹಳಿ ನೆರದ ಜನವೇ ಚಿತ್ರದಿರವಜಾಂಡವೆ ಚೆಂಡು (ಕೈವಲ್ಯ. ೨–೨೦–೧). **ಒಚ್ಚೆರೆ$_1$:** ಒಚ್ಚೆರೆ ಸೊಲ್ಲಗೆ ಹಾಡಕ್ಕೆ ಹೊಱಗಳೊಳಗಣವಕ್ಕಂ (ಎಕ. XI, ದಾವಣ. ೫೯–೮೨; 1280); ಅರೆದ ಸಾಸುವೆಯ ಶುಂಠಿಯನಿಕ್ಕಿವೊಚ್ಚೆರೆ [ಪಾಠಾಂ. ವಚ್ಚರೆ] ಮೊಸರಿನಲ್ಲಿ ಮುಚ್ಚರೆಯನೀರ ಕದಡಿಯದನಿರದೆ ನರೆಗೊಟ್ಟು ನೀರೋಗರವನಿಕ್ಕಲು ಸುಗಂಧ ತಕ್ರೋದನ ಕಣಾ (ಸೂಪಶಾ. ೩–೨೭); ನಿನಗೆ ಬಿದಿರಕ್ಕಿಯೊಚ್ಚೆರೆಯನೋಗರಗೆಯ್ದು (ಪಾಸೋಪು. ೧೦–೧೧೯). **ಒಚ್ಚೇರೆ:** 'ಒಚ್ಚೇರೆಗಣ್' ಪರಾ.

**ಒರ್ಚರೆ**: ಮಹೋದಧಿಗೊರ್ಚರೆ ನೀರ್ ಸುರಾದ್ರಿಗೋರೆಂತರೆಗಾಣಿ ಕುಂದಿದೊಡೆ ಪೆರ್ಮೆಗೆ ಹಾನಿಯೆ (ವೀರವಿ. ೧೨–೪).

[ಒರ್ (< ಒಂದು$_3$) + ಸೇರೆ]

**ಒರ್ಚೇರೆಗಣ್**, ಒಚ್ಚರೆಗಣ್, ಒಚ್ಚೆರೆಗಣ್, ಒಚ್ಚೇರೆಗಣ್, ಒಚ್ಚೇರೆಗಣ್ಣು (ನಾ). ಒಂದು ಸೇರೆಯಷ್ಟು ದೊಡ್ಡದಾದ ಕಣ್ಣು; ಬೊಗಸೆಗಣ್ಣು : ಒರ್ಚೇರೆಗಣ್ (ಶಬ್ದಾನು. ೯೩ ಪ್ರಯೋ). **ಒಚ್ಚರೆಗಣ್** : ಚೆಚ್ಚರಮಿತ್ತು ಮಲ್ಲಣಕವೀಶ್ವರನಿಷ್ಟಮನಿತ್ತಳತ್ತಳಿಪ್ಪೊಚ್ಚರೆಗಣ್ಣ [ಪಾಠಾಂ. ಒಚ್ಚಿರೆಗಣ್] ನೀಱೆ ವರಮಲ್ಲಣ ದಶಾಬ್ದಮಾಳ್ದು ನೀನುಚ್ಚವದಿಂ ಧರಾತಳಮನ್ನೈದು (ಉದ್ಭಟ. ೧೨–೬೭). **ಒಚ್ಚಿರೆಗಣ್** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಒಚ್ಚೇರೆಗಣ್** : ಅಚ್ಚರಿವಡೆದ ಭ್ರೂಲತೆ ಸಿಂಗಾಡಿಗಳೊಚ್ಚೇರೆಗಣ್ಣ ಪೂಸರದಿ ಎಚ್ಚಱು ವರ ಜಿತೇಂದ್ರಿಯರೆರ್ದೆಯನು ತಟ್ಟುರ್ಚಲು ವನವಧೂಟಿಯರು (ಮೋಹತ. ೧೯–೮೨); ಕರುಮಾಡದೋರಣದ ನೆಲೆನೆಲೆಯೊಳೊಚ್ಚೇರೆ [ಪಾಠಾಂ. ಕಿ. ಒಚ್ಚಾರೆ]ಗಂಗಳೆಳವೆಂಗಳ ಕಟಾಕ್ಷದ ಮರೀಚಿಗಳ್ ಸೊಗಯಿಸಿದುವು (ಜೈಮಿಭಾ. ೬–೧೦); ಪಚ್ಚೆವಿಲ್ಲರಿಂ ಮಚ್ಚುವಡೆದಚ್ಚರಿ ಮಿಗೆ ತಳರ್ದೊಚ್ಚೇರೆ [ಪಾಠಾ. ಕಿ. ಒಚ್ಚಾರೆ]ಗಣ್ಣ ಪೆರ್ಚನಚ್ಚರಿಯರಿಂ (ರಾಜಶೇ. ೧–೧೩೫ ವ). **ಒಚ್ಚೇರೆಗಣ್ಣು** : ಆ ಒಚ್ಚೇರೆಗಣ್ಣುಗಳು ಅವಳ ಚೆಂದಕ್ಕೆ ಒಪ್ಪವಿಟ್ಟಂತಿದ್ದುವು (ಸವತಿ. ೧೦೦).

[ಒರ್ಚೇರೆ + ಕಣ್]

**ಒಱ್ದಂತ**, ಓಱ್ದಂತ (ನಾ). ಒಂದೇ ಒಂದು ಹಲ್ಲು ಉಳ್ಳವನು; ಏಕದಂತ; ಗಣಪತಿ : "ಸುಂಡಿಲಮೊಗಂ ಬಿಂಕಣಗಿವಿಯ ಬೆನಕನೊ [ಪಾಠಾಂ. ನೋ]ಱ್ದಂತನಿಲಿದೇರ ಬಿಜ್ಜವಳ ಕರಿಮೊಗನೆನಿಕ್ಕುಮಾ ಸಬ್ಬ ಮಂಗಳೆಯಣುಗನು" (ಶಬ್ದಮಂ. ೫). **ಓಱ್ದಂತ** : "ಓಜನೆನೆ ಗುರುವಕ್ಕು ವಿಘ್ನೇಶನೋಱ್ದಂತನು" (ಕಶರ. ೧೭).

[ಒರ್ (< ಒಂದು$_3$) + ದಂತ$_1$]

**ಒಜ್ಜರ** 'ಒಜ್ಜರ$_3$' ನೋ.

**ಒರ್ತಲೆ**, ಒತ್ತಲೆ (ನಾ). ಒಂದು ತಲೆ: ಒರ್ಕೈ, ಒರ್ತಲೆ, ಒರ್ಪಿಡಿ (ಭಾಷಾಭೂ. ೨೯ ಉದಾ); ಸಂತತಮೊಂಬತ್ತುಮಾಸಂ ಹೇಸಿಕೆಯ ನಡುವೆ ಕತ್ತಲೆಯ ಕರುಳೊಳಗೆ ಮರುಳಂದದಿಂ ಬೆಳೆದು ಒರ್ತಲೆ [ಪಾಠಾಂ. ವೊತ್ತಲೆ]ಯ ಹುಳುವಿನಂದೆಂತಕ್ಕೆ ಬೆಳಬೆಳದು (ಪಿಂಡೋರ. ೧–೮). **ಒತ್ತಲೆ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ಒರ್ (< ಒಂದು$_3$) + ತಲೆ$_1$]

**ಒರ್ತಳೆ** (ನಾ). ಒಂದೇ ಕೈ : ವಿಳಸತ್ಕಱ್ದಶಿರೀಷರೋಧಿ ಬೆಮರಾದಂ ವಕ್ತ್ರದೊಳ್ ನಿಂದುದಾಕುಲಮಾಯ್ತೊರ್ತಳೆಯಿಂದೆ ಕಟ್ಟಿದುದರಿಂ ಬಿರ್ಚಿರ್ದ ಕೇಶೋತ್ಕರಂ (ಶಾಕುಂತ. ೧೬–೩೦).

[ಒರ್ (< ಒಂದು$_3$) + ತಳ$_2$ (= ತಲ$_1$)]

**ಒರ್ತುತ್ತು** (ನಾ). ಒಂದು ತುತ್ತು : ಗಜೇಂದ್ರಮುಮನೊರ್ತುತ್ತಿಂ ಬಿನಂ ತುತ್ತಿ ದೇವಗಣಕ್ಕಚ್ಚರಿಯಾಗೆ ಪಾಱಿ ಸುರರಾಜಾವಾಸಮಂ ಮುಟ್ಟಿದಂ (ಕಾವ್ಯಾವ. ೫೯). [ಒರ್ (< ಒಂದು$_3$) + ತುತ್ತು$_2$]

**ಒರ್ತೊಲೆ** (ನಾ). ಒಂದು ತೊಲೆ, —ತೂಕ : ಒಸಗೆ ಉತ್ಸಾಹಂಗಳ್ಗೆ ಸಮೂಹಂ ಒರ್ತೊಲೆ (ಎಇ. XIV, ೧೯೧–೨೯; 725).

[ಒರ್ (< ಒಂದು$_3$) + ತೊಲೆ$_2$]

**ಒರ್ದೆಸೆ** (ನಾ). ಒಂದು ದೆಸೆ, —ದಿಕ್ಕು : ತೊಲಗುಗುಮೊ ಕೆಳೆಯ ನೊರ್ದೆಸೆಗೆ ಲಜ್ಜೆಯಿಂ ನಮ್ಮ ಬರವುಗೇಳ್ದೊಡೆನುತ್ತೆ (ಕಾದಂಉ. ೫೩೮); ಆತನನಂತೇನುಮನಾಂ ಬೆಸಗೊಳ್ಳದೆ ಮೌನದಿನೊರ್ದೆಸೆಗೆ ತೊಲಗಿದೆಂ ನೃಪತಿಲಕಾ (ಕಾದಂಉ. ೫೫೮). [ಒರ್ (< ಒಂದು$_3$) + ದೆಸೆ$_2$]

**ಒನ್ನುಡಿ** (ನಾ). ೧. ಒಂದು ನುಡಿ, —ಮಾತು : ಪೆಂಪಿನೊಳೆಸೆವ ಕರ್ಣನೊನ್ನುಡಿ [ಪಾಠಾಂ. ಳ್ನುಡಿ] ತನಗವು ನಿಜಮಾಗೆ ನೆಗೞ್ದನೀ ವಿಭು ವಿಕ್ರಯೊಳ್ (ಕಾವ್ಯಾವ. ೧೧೩); ಒಂದೆಂಬುದರ್ಕೊರಾದೇಶಂ—ಒನ್ನುಡಿ, ಒರ್ಪಸರ್ (ಶಮದ. ೧೮೭ ಪ್ರಯೋ); ಒನ್ನುಡಿಯುಂ, ಒಂದು ನುಡಿಯುಂ (ಶಬ್ದಾನು. ೩೫೮ ವ್ಯಾಖ್ಯಾ); ಪೆರ್ನೋಟದ ಕರ್ನಾಟಕ ದೊನ್ನುಡಿ ಸಿರಿಯೊಡೆಯ (ಹೊಂಗಳು. ೪೬–೩). ೨. [ಕಾವ್ಯಮೀ] ಶಬ್ದಾಲಂಕಾರ ಪ್ರಭೇದವಾದ ಹೇಳಿಕೆ(ಪ್ರಹೇಲಿಕೆ)ಗಳಲ್ಲೊಂದು; ಒಂದೇಮಾತಿನ ಉತ್ತರವನ್ನುಳ್ಳ ಎರಡು ಅಥವಾ ಅನೇಕ ಒಗಟುಗಳಿಂದ ಕೂಡಿದ ಹೇಳಿಕೆ. ಉದಾ : ಅವುದು ಬಾಗಿದುದುಮಧಿಕಂ ಬಸನಂ ಕೇವಳಮಾಗೆ ನೆಗೆವುದುಚಿತಾವಯವಂ ದೀವದಿಂ ನಿಂದು ಸಿತಗನಂ ನುಡಿದುವು ಭಾವಿಸಿ ಬಗೆಗೊಳ್ವೊಡಾಕೊನ್ನುಡಿಯಂ|| ಒನ್ನುಡಿ [ಪಾಠಾಂ. ಳ್ನುಡಿ] (ಕವಿರಾ. ೨–೧೪೮); ನುಸುಳೊನ್ನುಡಿ . . . ಕುಸುರಿಯ ನುಡಿಯೆಂಬಿವು ಭಾವಿಸೆ ಪೇಳಿಕೆಗಳೊಳೆ ಪೇೞ್ದ ಭೇದಮವಕ್ಕುಂ (ಕಾವ್ಯಾವ. ೫೪೪); ಒನ್ನುಡಿಗೆ|| ಒಂದು ಗಱಿಗೆಯೊಳೆ ಸಂಪುಟದಂದದೆ ಮಡಿದಿರ್ಪರಹಿತರೆರೆದ ನರಕೊರ್ಂಡೊಂದಱೊಳೆ ಮೆಱೆದು ಗಣಪತಿಯಂ ದದಿನೊಸೆದಿರ್ಪರಿದಿರ್ಗೆವಂದಿಂದಿರನಾ (ಕಾವ್ಯಾವ. ೫೪೬).

[ಒರ್ (< ಒಂದು$_3$) + ನುಡಿ$_2$]

**ಒನ್ನುಡಿಕಾಱ** (ನಾ). ಒಂದೇ ಮಾತನ್ನಾಡುವವನು; ಆಡಿದ ಮಾತಿಗೆ ತಪ್ಪದವನು : ಇತ್ತಱಿದೆರೆಯ್ಮಾತಾಡಿ ಬಱ್ದಿಂ ಜಗದ್ವಲಯ ಕ್ಕೊನ್ನುಡಿಕಾಱನಾದಂ (ಕಾವ್ಯಾವ. ೨೬೧). [ಒನ್ನುಡಿ + -ಕಾಱ]

**ಒನ್ನೋಟ** (ನಾ). ಒಂದು ನೋಟ : ಮೈಸೂರ ಮೈಸಿರಿಯ ಬಳವಿ ಕರ್ನಾಟದೊನ್ನೋಟದಳವಿ (ಹೊಂಗಳು. ೩೦–೨೧).

[ಒರ್ (< ಒಂದು$_3$) + ನೋಟ]

**ಒರ್ಪಂತಿ** (ನಾ). ಒಂದು ಪಂಕ್ತಿ, —ಸಾಲು : ಓರೆಂಜಲ್ಗೊರ್ಪಂತಿಗೆ ವಾರದೆ ಖಳರೊಡನೆ ಬೆರಸಿ ಮೇಳಂಗೊಂಡಂ (ಕಾವ್ಯಾವ. ೨೫೯).

[ಒರ್ (< ಒಂದು$_3$) + ಪಂತಿ]

**ಒರ್ಪದ** (ನಾ). ಒಂದು ಪದ, —ಹೆಜ್ಜೆ : ಅದಱಿಂದಂ ವಿಜಯಾರ್ಧ ಪರ್ವತ ತಟ್ಟೆಕೋದ್ದೇಶದಿಂದಿತ್ತಲೊರ್ಪದಮಂ ದಾಂಟಿದೆಂ (ಶಾಂತಿಪು. ೩–೬೫). [ಒರ್ (< ಒಂದು$_3$) + ಪದ$_2$]

**ಒರ್ಪನೆ** (ನಾ). ಒಂದು ಹಲ್ಲು. 'ಒರ್ಪನೆಯ' ಪರಾ.

[ಒರ್ (< ಒಂದು$_3$) + ಪನೆ$_1$]

**ಒರ್ಪನೆಯ** (ನಾ). ಒಂದೇ ಒಂದು ಹಲ್ಲುಳ್ಳವನು; ಏಕದಂತ; ಗಣಪತಿ : ಒರ್ಪನೆಯ ಬಿಂಕಣಗಿವಿಯ ಮೂಗೊಂಕುಮೂಗಿನ ಪೇರೊಡಲ ಇಲಿದೇರ ಬೆನಕ (ರಾಮಾಶ್ವ. ೮೪–೨೦).

[ಒರ್ಪನೆ + -ಅ$_7$]

**ಒರ್ಪಲ**, ಒಪ್ಪಲ (ನಾ). ಒಂದು ಪಲಪ್ರಮಾಣ, —ತೂಕ : ಅಂಗಾಡಿಯುಳಿವರ್ಮಾನ[ಮೆಣ್ಸಿಯ]ಮುಮರಿಸಿನಮುಂ ಮೇಣೊ ರ್ಪಲಂ ಸಕ್ಕರೆ ಇರ್ಪಲಂ (ಕಇ. I, ೨–೧೨; 699); ಒರ್ಪಲಮುಪ್ಪಂ ತ್ರಿಕಟುಕಮೊರ್ಪಲಮುಂ ಬೇವಿನೆಲೆಯುಮಂ ಸಮಯುಕ್ತಂ ಬರ್ಪಂತಾಗಿರೆ ತುಱಿದು ಸಮರ್ಪಿಸುವುದು ದಿವ್ಯಪಿಂಡಮಂ ಕಫಹರಣಂ (ಅಶ್ವಶಾ. ೭–೩೪). **ಒಪ್ಪಲ** : ಒಪ್ಪಲ ನೂಲನೊರ್ಮೊಟಿನ ಕಪ್ಪಡಮಂ (ಜಟ್ಟಮ. ೪–೧); ದಿನಂಪ್ರತಿಯು ಮಹಿಷಾಕ್ಷಿಯೊಪ್ಪಲವ ತಂದು ಮೂಜಣವಸರದೊಳುಂ ಬಾಲೇಂದುಮೌಳಿಗೆ ಕೊಡುತಿರಲು (ಬಸವಪು. ೪೪–೨೪); ನಿತ್ಯ ಒಪ್ಪಲವ ಕೊಯ್ದು ತಿಂದಂತೆ ಕಾಣಾ (ಗಣಭಾ. ೧೫೪–೧); ಸಮುದ್ರ ಸೋನೆಯ ಬೀಜದ ತಿರುಳನೊಪ್ಪಲವನೆ ಕೊಂಡು (ಸಾಳ್ವಸಾಂ. ೧೧).

[ಒರ್ (< ಒಂದು$_3$) + ಪಲ$_2$]

**ಒರ್ಪಾಲ್** (ನಾ). ಒಂದು ಪಾಲು; ಒಂದು ಭಾಗ, —ಅಂಶ: ನಿನ್ನ ಕೊಡುಗೆಯೊಳ್ ಎಮಗಮೊರ್ಪಾಲನೀವುದಯ್ (ಬದ್ಧಪ್ರ. ೩೩–೭೧೩).
[ಒರ್ (< ಒಂದು₃) + ಪಾಲ್₂]

**ಒರ್ಪಿಡಿ, ಒಪ್ಪಿಡಿ** (ನಾ). ಒಂದು ಹಿಡಿ, —ಮುಷ್ಟಿ: ಒರ್ತಲೆ, ಒರ್ಪಿಡಿ, ಇರ್ಕೆಯ್ (ಭಾಷಾಭೂ. ೧೨೮ ಉದಾ); ಪಿಡಿಯಿಂದಿಬ್ಬಿದಳ್ ಪೆಜಳೊರ್ಪಿಡಿಯಿಂ ನಡುಸಣ್ಣಮೆನಿಸ ವಧು (ಜಗವಿ. ೧೪–೫೭); ಸಂದೇಹ ಮಧ್ಯಂ ನೆಟ್ಟನೊರ್ಪಿಡಿಯೆಂಬ ನುಡಿಗೆ ಪಿಡಿವಗೆಯಾಗೆ (ಪದ್ಮರಾ. ೩–೨೮). **ಒಪ್ಪಿಡಿ**: ಹೂವಿನ ಸರ ೧೨ ಒಪ್ಪಿಡಿಯ ರಳು ಸೇವೆಯ ಬಾಡು (ಬೊಂಕಶಾ. ೧೯೩೦, ೧೦೭–೮; 1159); ಇಂಗಲೆಮದ್ದು ಶುಂಠಿ ವಿಳಂಗಂ ಪಿಪ್ಪಲಿಯ ಬೆರಸಿ ವೊಪ್ಪಿಡಿಯಂ ಚೂರ್ಣಂಗೆಯ್ದು (ಕಲ್ಯಾಕಾ. ೪–೧೯); ಭೋಜನಮಂ ಮಾಡಿಸಿ ವೊಪ್ಪಿಡಿವೊಗರಡಕೆಯ ಭಾಗವನುಯೆರಡೆಲೆಯೊಳು ನಿಂಬೆಯ ಹಣ್ಣಿನ ಪ್ರಮಾಣದ ಸುಣ್ಣಮನಿಕ್ಕಿ ವೀಳಯಮಂ ನೀಡಲ್ (ಪುಣ್ಯಾಸ್ರ. ೩–೧೯ ವ); ಹಿಡಿ ಎಂದು ಒಪ್ಪಿಡಿ ಅವಲಕ್ಕಿಯನ್ನು ಸಂಕೋಚದಿಂದ ಸ್ವಾಮಿಗೆ ಕೊಟ್ಟನು (ನೀತಿಚಿಂ. VIII, ೨೯).
[ಒರ್ (< ಒಂದು₃) + ಪಿಡಿ₂]

**ಒರ್ಪಿಡಿಗೂೞ್** (ನಾ). ಒಂದು ಹಿಡಿಯಷ್ಟು ಕೂಳು, —ಅನ್ನ: ಒರ್ಪಿಡಿಗೂೞನಿಕ್ಕಿ ಸಗ್ಗಂಬಡೆಯದ ನರನೆಗ್ಗನಲ್ತೆ ಭುವನಾಭರಣಾ (ಅರ್ಧನೇ. ೪–೪೮); ಒರ್ಪಿಡಿಗೂೞುಂ ಸಿತಗನ ಕಪ್ಪಡಮುಂ ರಾಜಸೇವೆಯಿಲ್ಲದೆ (ಶಮದ. ೧೮೭ ಪ್ರಯೋ). [ಒರ್ಪಿಡಿ + ಕೂೞ್₁]

**ಒರ್ಪೆಸರ್** (ನಾ). ಒಂದೇ ಹೆಸರು: ಒರ್ನುಡಿ, ಒರ್ಪೆಸರ್, ಒರ್ಮೊದಲ್ (ಶಮದ. ೧೮೭ ಪ್ರಯೋ). [ಒರ್ (< ಒಂದು₃) + ಪೆಸರ್]

**ಒರ್ಪೊೞ್ತು** 'ಒರ್ಪೊೞ್ತು' ನೋ.

**ಒರ್ಪೊೞ್ತು, ಒಪ್ಪೊತ್ತು, ಒರ್ಪೊೞ್ತು, ಒಳ್ಪೊತ್ತು** (ನಾ). ಒಂದು ಹೊತ್ತು. **ಒಪ್ಪೊತ್ತು**: ಬಸುಱು ದಣಿಯದೆ ನಿಚ್ಚಲುಂ ತಪ್ಪಿಸದೆ ತಾ ವೊಪ್ಪೊತ್ತು ಆರೋಗಿಸಿ ಬರುತ್ತಾ (ಬಸವು. ೩೦–೫); ಒಪ್ಪೊತ್ತು ಊಟಕ್ಕೆಂದು ರಾಯರ ಮನೆಗೆ ಹೋದ ನಾನು . . . ನಿಂತೆ (ರಾಯಕ. ೪). **ಒರ್ಪೊೞ್ತು**: ಕಿಱಿಯಂದೆನಗೆ ಪತಿಯಳಿದು ಪೊರೆವರಿಲ್ಲದೆ ಕೊಟ್ಟಣಂ ಗುಟ್ಟಿ ಕೊಡನೀರನಿರದೆ ತಂದೊರ್ಪೊೞ್ತುಪವಾಸಮೊರ್ಪೊೞ್ತು ಪಾರಣೆಯ ನೆಸಗಿ (ಪದ್ಮರಾ. ೧೩–೪). **ಒಳ್ಪೊತ್ತು**: ಪಂಚೇಂದ್ರಿಯ ನಿಗ್ರಹಕ್ರಿಯೆ ಸಮಂತೊಳ್ಪೊತ್ತು ನಿಂದುಣ್ಬುದಾರೆಯಮುಸ್ನಾನಮಚೇಳಸಂಯಮಮು ದಂತೋನ್ಮಾರ್ಜನಂ (ಸುಕುಮಾ. ೩–೪೬).

**ಒಪ್ಪತ್ತುಮಾಡು** = ಒಂದು ಹೊತ್ತು ಉಪವಾಸ ಮಾಡು: ಶನಿವಾರ ಕಟ್ಟುನಿಟ್ಟಾಗಿ ಒಪ್ಪತ್ತುಮಾಡುತ್ತಿದ್ದರು (ಅನಾಮಿ. ೫೯).
[ಒರ್ (< ಒಂದು₃) + ಪೊೞ್ತು]

**ಒರ್ಬ** 'ಒರ್ವ' ನೋ.

**ಒರ್ಬರಿಸ** (ನಾ). ಒಂದು ವರುಷ, —ಸಂವತ್ಸರ: ಇಂದುಮುಖಿ ದಮಯಂತಿಯೊಡನಾನಂದದಲಿ ನಳನೃಪತಿ ಮಾವನ ಮಂದಿರದೊಳೊರ್ಬರಿಸ ವಿದ್ದನು ಸಕಲವಿಭವದಲಿ (ನಳಚ. ೯–೧೫). [ಒರ್ (< ಒಂದು₃)+ಬರಿಸ]

**ಒರ್ಬಸ** (ನಾ). ಒಂದೇ ಆಸಕ್ತಿ; ಒಂದೇ ಗೀಳು: ಪಣಗೊಳ್ವಳ್ ಚೆಲ್ಲದಿಂದಂ ಚದುರನ ಚದುರಂ ಸೇಸೆಗೊಳ್ವಳ್ ರತಂ ತೋರಣವೆಂಬಂತಿಕೆ ಸೋಲ್ತೊರ್ಬಸದ ಬಸನಿಯಂ [ಪಾಠಾಂ. ಗೆಲ್ದು ಬಸದ ಬಸದಿಯಂ] ಕೂರ್ತನಂ ತೊಂಡಿನಿಂ ಕುಂಟಣಿ ಮಾೞ್ಪಳ್ ಕೇಣದಿಂ (ಲೀಲಾವ. ೨–೯೭). [ಒರ್ (< ಒಂದು₃) + ಬಸ₂]

**ಒರ್ಬಳಸು** (ನಾ). ಒಂದು ಸುತ್ತು, —ತಿರುವು: ವನದಹನಂ ವನಾಂತರಮನೊರ್ಬಳಸಾಗಿರೆ ಮುತ್ತಿ ಸುತ್ತಿ ಸುತ್ತಿನ ನಡುವಿರ್ದ ಮಾಮುರನ ನಟ್ಟುಮುದು (ಆದಿಪು. ೯–೫೯). [ಒರ್ (< ಒಂದು₃) + ಬಳಸು₃]

**ಒರ್ಬಿ, ಒಬ್ಬಿ₂** (ನಾ). ೧. ಒಂದು ತಂಡ, —ಪಂಗಡ, —ಗುಂಪು: ನಲವಿಂ ನರ್ತಿಪ ವೃದ್ಧಕಾಂತೆಯರುಮಂ ಬಂದೊರ್ಬಿಯೊಳ್ ಕೂಡೆ ಪೂವಲಿಯಂ ಚಿತ್ತರಿಪಂಗನಾ ತತಿಯುಮಂ . . . ನೋಡುತ್ತುಮಾನಂದದಿಂ ನೆಲೆವೆರ್ಚುತ್ತುಮಿಳೇಶನಿಂತು ಪುಗುತಂದಂ ಸೂತಿಕಾಸದ್ಮಮಂ (ಕುಸುಮಾ. ೬–೭೦). **ಒಬ್ಬಿ₂**: ೨. ಒರಳಿನಲ್ಲಿ ಒಂದು ಸಲಕ್ಕೆ ಹಿಡಿಯುವಷ್ಟು ಅಳತೆ; ಒಂದು ಅಳತೆ: ಮುಗ್ಧಪುಳಿಂದಿಯೋರ್ವಳಕ್ಕಿಯ ಛಳಿಸುತ್ತಂದು ಕಾಲಿಂದೊಬ್ಬಿಯಿಂದೊಬ್ಬಿ ನಖರೋಚಿಯಿಂದ (ನಂದಿಮಾ. ೧೪–೧೦); ಒರಳೊಳಗೆ ವೊಂದೊಬ್ಬಿ ಕೆಡಿಸಿದ ಪರಿಯು ತನಗಾಯಿತ್ತಿದೆನ್ನುತ (ಶರಲೀ. ೬೦೨–೪೪); ಒಂದಿಬ್ಬೆ ಕುಟ್ಟುವಾಗ ಒಬ್ಬಣ್ಣನುಣ ಬಂದ ಒಬ್ಬಿಗೆ ಒಬ್ಬೆ ನುರಿಯುವು (ನಾಪದ. ೮೯). 'ಇಬ್ಬೆ' ಪರಾ. [< ಒಂದು₃]

**ಒರ್ಬುಳಿ** 'ಒರ್ವುಳಿ' ನೋ.

**ಒರ್ಬುಳಿಕೆ, ಒಬ್ಬುಳಿಕೆ** (ನಾ). ಒಂದಾಗಿರುವಿಕೆ; ಒಂದುತನ: ಇರ್ಬಗೆಯನಳಿದು ತನ್ನೊರ್ಬುಳಿಕೆಯುಳಿವಂತೆ (ಮನೋವಿ. ೮–೨೮); ಕಿಚ್ಚು ಕೆಂಬಾಯ್ದೆಱೆ ಕೆಂಡದೊರ್ಬುಳಿಕೆ ಮೂಗೊಲೆ ಮೂಗೆನೆ ಪುರ್ವಿ ನಿರ್ಕುಳಿರಿ (ಶೃಂಗಾರ. ೪–೫೪). **ಒಬ್ಬುಳಿಕೆ**: ಬಂದ ಚಂದಣಗಿತ್ತಿಯರೆಲ್ಲರು ಓಗರವನುಂಡು ಹೋದರಲ್ಲದೆ ಮದವಣಿಗನ ಕಂಡು ಹೋದುದಿಲ್ಲ ನಿಬ್ಬಣ ಬಂದವರೆಲ್ಲರು ಅಧಿಗೆ ಹೋದರು ಮೇಲೆ ನೀರ ಮಿಂದುದು ಒಬ್ಬುಳಿಕೆ ಇಲ್ಲ (ಮೋಳಿಮಾ. ೧೯೫–೭೨೭); ತಳಮಳಲ ಮೊಗೆಮೊಗೆದು ಕದಡಿತು ಕೊಳನ ಜಲಚರನಿಚಯವೀ ಬೊಬ್ಬುಳಿಕೆ [ಪಾಠಾಂ. ದೊಬ್ಬುಳಿಕೆ]ಮಿಗಲೊಬ್ಬುಳಿಕೆ [ಪಾಠಾಂ. ಗೆ] ನೆಗೆದವು ವಿಗತ ವೈರದಲಿ (ಕುವ್ಯಾಗ. ೫–೨).

**ಒಬ್ಬುಳಿಕೆಯಮಾಡು** = ಒಂದು ಎಡೆಯಲ್ಲಿ ಸೇರಿಸು; ಗುಂಪು ಸೇರಿಸು: ಹೋತನ ಹೊಡೆದು ಅಡ ಕೂಡಿ ಕುಱಿಯ ನಿಲಿಸಿ ತಗರ ತಡೆದು ಹಿಂಡನೊಬ್ಬುಳಿಕೆಯಮಾಡಿ (ಸರ್ವವ. ೮೩–೪೬೧).
[ಒರ್ಬುಳಿ (< ಒರ್ವುಳಿ) + –ಕೆ]

**ಒರ್ಬುಳಿಗೂಡು, ಒಬ್ಬುಳಿಗೂಡು** (ಕ್ರಿ). ಒಟ್ಟಾಗು: ಒಂದೆಡೆ ಸೇರು: ಕೆಳದಿಯಭಿಮತಮುಮನೊರ್ಬುಳಿಗೂಡೆ [ಪಾಠಾಂ. ಗುಡೆ] ವಿದಗ್ಧೆ ಸುರತ ಸೇವನಮಂ ಮೊಕ್ಕಳಮವರ್ಗೆ ಮಾಡಲೆಂದು (ಕವಿರಾ. ೩–೧೩೩); ತಾಗಿ ತಟ್ಟುಗಿಯೆ ತಾರೆಗಳೊರ್ಬುಳಿಗೂಡಿ ತದ್ಧರಾವಳಯದ ಮೇಲೆ ತಾಂ ಪರಿದು (ರಾಜಶೇ. ೨–೧೦೦). **ಒಬ್ಬುಳಿಗೂಡು**: ಜ್ಞಾನ, ಕರ್ಮ, ವೈರಾಗ್ಯಗಳು ಒಬ್ಬುಳಿಗೂಡಿ ಆತನು ಪೂರ್ಣಯೋಗಿಯೇ ಆಗಿದ್ದಾನೆ (ಬಾಳಬ. XII ಅರಿಕೆ). [ಒರ್ಬುಳಿ (< ಒರ್ವುಳಿ) + ಕೂಡು₁]

**ಒರ್ಬುಳಿಗೊಳ್** 'ಒರ್ವುಳಿಗೊಳ್' ನೋ.

**ಒರ್ಬುಳಿನಿಲ್** (ಕ್ರಿ). ಒಂದೆಡೆ ನಿಲ್ಲು; ಒಟ್ಟಾಗಿ ನಿಲ್ಲು: ಗುರು ಶುಕ್ರಾಂಗಾರಕರೊರ್ಬುಳಿ(ವ್ವರ) ನಿಂದೆಡೆಗೊರ್ವರೊರ್ವಱೊಳ್ ನೆಲಸೆ ಬಱಂ (ಜಟ್ಟಮ. ೭–೪೮). [ಒರ್ಬುಳಿ (< ಒರ್ವುಳಿ) + ನಿಲ್]

**ಒರ್ಬುಳಿಸು, ಒಬ್ಬುಳಿಸು** (ಕ್ರಿ). ೧. ಒಂದೆಡೆ ಸೇರು; ಒಟ್ಟುಗೂಡು: ಒರ್ಬುಳಿಸಿದ ಸಮಸುಖದೊಳಗುರ್ಬಿಸುತಂತೊಲಿದು ನಲಿದು ಪಲತೆಱದಿಂ ನಿಂದುರ್ಬುತೆ ಕೊರ್ಬುತೆ ಪರ್ಬುತೆ ಗರ್ಬಿಸಿತಭಿಸಾರಿಕಾನಿಕಾಯಂ ನಿಶಿಯೊಳ್ (ಗಿರಿಶ. ೪–೮೮); ಸರ್ವಬಲಮೊರ್ಬುಳಿಸಿ ಬೊಬ್ಬಿಟ್ಟಬ್ಬರಿಸಿ ಪರ್ಬಿ ಪರಿದು ಶರ್ವನ ಸಮಾಧಿಪರ್ವತಮನೊತ್ತರಿಸಿ (ಗಿರಿಶ. ೮–೮೮). **ಒಬ್ಬುಳಿಸು**: ೧. ತಿರಿಗಿ ತಾಱುಂತಟ್ಟುವಾಯ್ದು ಬಲವೊಬ್ಬುಳಿಸಿ ಬೆಬ್ಬಳಿಸುತಲ್ಲಾಡಿ (ಇಹರ. ಹ. ೧೩೮–೩೧); ಕಿರೀಟಿ ಪಿಡಿದಂ ದೇವದತ್ತಮಂ ಸಪ್ತಾಬ್ಧಿ ರಭಸಮೊಬ್ಬುಳಿಸುವಂತೆ (ಜೈಮಿಭಾ. ೧೩–೪೩). ೨. ಒಂದೆಡೆ ಸೇರಿಸು: ಸುರುಚಿರದ ಸತ್ಕಥೆಯ ಸುಧಾರಸಮನೆಲ್ಲವೊಬ್ಬುಳಿಸಿಯೀ ಕಥೆಯ ಕೇಳೀ (ನವಮೋ. ೭–೪). [ಒರ್ಬುಳಿ (< ಒರ್ವುಳಿ)+ –ಇಸು₃]

**ಒಬ್ರ್ಬುಟಿ** 'ಒರ್ವುಟಿ' ನೋ.
**ಒಭ್ಭಾಗ** 'ಒರ್ವಾಗ' ನೋ.
**ಒರ್ಮಡಿ, ಒಮ್ಮಡಿ** (ನಾ). ೧. ಒಂದು ಮಡಿ, —ಪಾಲು: ಅಸದಳ ದಿಂಪು ಕಂಪು ಕಡೆಯಾಣಿಯ ಪೊನ್ನ ರಸಕ್ಕೆ ಕೂಡಿದಂತೆಸೆವುದಿದರ್ಕದೇ ನೊರೆವುದೊರ್ಮಡಿಗಿರ್ಮಡಿ ಬಂದೊಡಂ ಸುಧಾರಸಮನೆ ತೀವಿದೊಳ್ರಸದ ಮಾವಿನ ಪಣ್ಗಳ್ (ಜಗವಿ. ೧೭–೮೨). **ಒಮ್ಮಡಿ**: ೧. ಒಮ್ಮಡಿ ಪುಣ್ಯಂ ಪಾಪಂ ನೂರ್ಮಡಿಯೆನಿಸುವುದು ಧರ್ಮಂ (ಸಮುಪ. ೯–೧೧೦); ಒಮ್ಮಡಿ ಹೆಮ್ಮಿಟ್ಟಯೊಳಂತಿಮ್ಮಡಿ ಕಾಟ್ವೀರೆಯೆಸೆವ ಬಿತ್ತಿಬಜೆಯುಂ ಘಮ್ಮನೆ ಪಾನದೆ ನಸ್ಯದೊಳಮ್ಮಡಿದನೆನಿಪ್ಪ ಸರ್ಪದಷ್ಟಂ ಬಾಳ್ಗುಂ (ಖಮುದ. ೭–೪೮). ೨. ಒಗ್ಗಟ್ಟು; ಒಂದೇ ಗುಂಪು: ದೇವತೆಗಳು ಒಮ್ಮಡಿಯಾಗಿ ಕಾಣಿಸಿಕೊಂಡು ತಮ್ಮ ತಮ್ಮ ಆಯುಧಗಳಿಂದ ಗರುಡನಂ ತಿವಿಯಲು (ಕೃವಾಅ. ೫೫). [ಒರ್ (< ಒಂದು$_3$) + ಮಡಿ$_3$]

**ಒರ್ಮತ್ತರ್, ಒಮ್ಮತ್ತರ್, ಒಮ್ಮತ್ತಲು, ಒರ್ಮತ್ತಲ್** (ನಾ). ಒಂದು ಮತ್ತರು; ಭೂಮಿಯ ಒಂದು ಅಳತೆ: ಮದನಗಾರಸರ್ ಕೊಟ್ಟೋರ್ಮವ್ವೆಳ್ವ ಕೆಱೆಯ ತೆಙ್ಕಣ ಕೋಡಿಯ ಗೋಳಿಯ ಕೆಱೆಗೆ ಕಾಲ್ಗೆ ಒರ್ಮತ್ತರ್ಕ್ಕಯು ಉಂ (ಮೈಆರಿ. ೧೯೪೧, ೨೯–೩ ; 797); ಅತ ನಟ್ಟ ಕಲಕೆ ಒರ್ಮತ್ತು[ತ್ತರ್] ಕೆಯ್ಯ ಕೊಟ್ಟರ್ (ಎಕ. XI, ಚಳ್ಳಕೆ. ೩೩–೧೦ ; 815). **ಒಮ್ಮತ್ತರ್**: ರೇವನಕೆಱೆಯ ಕೆಱಗೊಮ್ಮತ್ತರ್ (ಎಕ. VII, ಶಿವಮೊ. ೧೧೫–೧೧ ; ?); ಮಹಾದೇವರ್ಗ್ಗೆ ಒಮ್ಮತ್ತರ್ಣ್ಣಮುಂ ಅಯ್ಮತ್ತಕ್ಕೆಯ್ಯು ಕೊಟ್ಟವರ್ (ಕಇ. I, ೧೫–೧೨ ; ?). **ಒಮ್ಮತ್ತಲು**: ಬಡಗಲು ಒಮ್ಮತ್ತಲು ಬೆದ್ದಲೆ (ಎಕ. VI, ಕಡೂರು. ೮೦–೧೮ ; 1139); ಸಿರಿಯಮ್ಮನ ಕೆಱೆಗೆ × ಗೆಯ್ಯ ಒಮ್ಮತ್ತಲೆ ಕೊಟ್ಟ (ಎಕ. VII, ಶಿವಮೊ. ೧೦೦–೬ ; ?). **ಒಮರ್ತ್ತಲ್**: ಕರಚುಗರ ಗುಜಯ್ಯಂಗೆ ಪೊನ್ನಳಱು ಒರ್ಮ[ತ್ತ]ಲಂ ಕೊಟ್ಟ (ಎಕ. VIII, ಸೊರಬ. ೪೧೩–೧೯ ; 986); ಮಹಾದೇವರ್ಗ್ಗೆ ನಿವೇದ್ಯಕ್ಕಂ ಒರ್ಮತ್ತಲ್ಕೆಯ್ಯನ್ ಕೊಣ್ಡು ಬಿಟ್ಟಂ (ಮೈಆರಿ. ೧೯೨೯, ೫೩–೮ ; 1019).
[ಒರ್ (< ಒಂದು$_3$) + ಮತ್ತರ್]

**ಒರ್ಮತ್ತಲ್** 'ಒರ್ಮತ್ತರ್' ನೋ.

**ಒರ್ಮನ, ಒಮ್ಮನ$_2$** (ನಾ). ೧. ಒಂದೇ ಮನಸ್ಸು; ಏಕಚಿತ್ತ: ಶಿವನಿಳಯದ ಚೆಲ್ವಂ ನಿರೀಕ್ಷಿಸಲ್ಕೊರ್ಮನದಿಂದಿಱಿದಂ . . . ಅವನಿಪ ಮದನಂ (ಕುಸುಮಾ. ೧೧–೧೮೪). **ಒಮ್ಮನ$_2$**: ೧. "ತದ್ಗತಮದೇಕ ತಾನವೊಮ್ಮನಮೆನಿಕ್ಕು" (ಮಂಗರಾ. ೯೭–೧೫); ಒಮ್ಮನದಿ ಮೋಕ್ಷ ಪದವಕ್ಕು ಜ್ಞಾನಿ ತಾನಿಮ್ಮನದಿ ಕೆಡುವ (ಸರ್ವಜ್ಞ. ೪೪೭); ಪಾಡಿದನು ಒಮ್ಮನದಿ ಸಿದ್ಧೇಶ ಶರಣರಿಗೆ (ಸಿದ್ಧಪು. ೩೯–೧); ಒಮ್ಮನದಿಂದ ಎಲ್ಲರೂ ಕೆಲಸಮಾಡುತ್ತಿದ್ದುದರಿಂದ ಸಮೃದ್ಧಿಯಾಗಿ ಬೆಳೆದು ಹತ್ತಾರು ಸಂಸಾರ ಗಳಿಗೆ ಆಶ್ರಯನೀಡಿದ್ದರು (ಕಳಹು. ೯೭). ೨. ಒಂದು ಅಳತೆ. ೧, ೨: ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ ಹರದ ಕುಳ್ಳಿರ್ದ ನಮ್ಮ ಮಹದೇವಸೆಟ್ಟಿ ಒಮ್ಮನವಾದರೆ ಒಡನೆ ನುಡಿವನು ಇಮ್ಮನವಾದರೆ ನುಡಿಯನು (ಬಸವ. ೧೧೫).
[ಒರ್ (< ಒಂದು$_3$) + ಮನ$_1$ ; ಒರ್ (< ಒಂದು$_3$) + ಮನ$_2$ (< ಮಾನ)]

**ಒರ್ಮಾನ, ಒಮ್ಮನ$_1$, ಒಮ್ಮಾನ** (ನಾ). ಒಂದು ಮಾನ; ಒಂದು ಅಳತೆ: ಒರ್ಮಾನಂ ಬ್ರಾಹ್ಮಿಯ ರಸಮೊರ್ಮಾನಂ ಕೈಪೆಸೊರೆಯ ರಸ ಮವಱೊಳ್ ಮತ್ತೊರ್ಮಾನಮೆಣ್ಣೆವೆರಸಿದ(ನಿ)ಗಿರ್ಮಿಸುವುದು ಪಾನವಿಧಿಯೊಳಾ ಕ್ರಿಮಿಕುಳಮಂ (ಅಶ್ವಶಾ. ೧೧–೪೨). **ಒಮ್ಮನ$_1$**: ಪಶು ಮೇವುತ್ತಿರಲಾಗಿ ಒಮ್ಮನವ ಮೇದು ಇಮ್ಮನವುಳಿಯಿತ್ತು (ಸರ್ವವ. ೧೦೮–೫೭೮); ನೆಲ್ಲು ಮೊದಲೆನಿಸಿದುಪ್ಪರದೆಲ್ಲಾ ಹೇಱಂಗೆ ಮೂಲೆಗೊಂಮನ (ಎಕ. XI, ದಾವಣ. ೫೯–೮೧ ; 1280); ಒಮ್ಮನ ಮದ್ದಿಗೆ ಬೆಂಕಿ ಒಮ್ಮೆಲೇ ಕೊಟ್ಟಾಂಗ (ಮಲ್ಲಿಗ. ೬೯). **ಒಮ್ಮಾನ**: ಆ ಒಬ್ಬಳವ ಕುಡಿಕೆಯಲ್ಲಿ ಹೊಯಿದು ನಿರುತದಿಂದ ನೋಡೆ ಮೂಱು ಮಾನವ ನುಂಗಿ ಒಮ್ಮಾನವಾಯಿತ್ತು (ಮೋಳಿಮಾ. ೨೧೭–೭೭೧); ಹೇಱಂ[ಗೆ] ಒಂಮಾನ ಉಪ್ಪು (ಸೌಇಇ. XX, ೨೦೪–೮ ; 1245); ತುಪ್ಪ ಸೊಲ್ಲಗೆ ಹಾಲೊಂಮಾನ ಮೊಸರೊಂಮಾನ (ಎಕ. V, ಹಾಸನ. ೮೨–೩ ; 1443); ಸಂಭ್ರಮದ ಸಮ್ಮಾನಕ್ಕೆ ಒಮ್ಮಾನಕ್ಕಿ ಸಜ್ಜಿಗೆ (ಗಾದೆ).
[ಒರ್ (< ಒಂದು$_3$) + ಮಾನ]

**ಒರ್ಮಾರ್, ಒಮ್ಮಾರು** (ನಾ). ಒಂದು ಮಾರು; ಒಂದು ಅಳತೆ: ಗುಣಮೆಂದೊಡಮು ದೋಷಕ್ಕೊರ್ಮಾರ್ನಿೞಳಂ ನಿಮಿರ್ದಪುದತಿ ವಾಚಾಳರ ನಾಲಗೆ (ಲೀಲಾವ. ೧–೩೨); ಚೇಲಾಂಚಲಮದು ಕೆಲ ಕೊರ್ಮಾರ್ ನೀಳ್ದು ಭಕ್ತಿಕೇತನ ಪಟದಂತಲರ್ದಿರೆ (ವೃಷವಿ. ೩೭–೪೩). **ಒಮ್ಮಾರು**: ಹಿಡಿಯ ಪೋಪುದಱಿಂದ ಮುನ್ನವೆ ಮೃಡನ ಹೊಱಗೊಮ್ಮಾರು ಸೀರೆಯ ಕಡೆಸೆಱಂಗಿರೆ ಲಿಂಗದೊಳಗಾತಂ ಪ್ರವೇಶಿಸಿದ (ಬಸಪು. ೫೩–೪೯); ಬೊಮ್ಮವೆಂಬುದು ತಾನು ಒಮ್ಮಾರು ದೂರವೆ ಒಮ್ಮೆ ಸದ್ಗುರುವಿನುಪದೇಶವಪ್ಪಡೆ ಗಮ್ಮನೆ ಮುಕ್ತಿ (ಸರ್ವಜ್ಞ. ೭೮).
[ಒರ್ (< ಒಂದು$_3$) + ಮಾರ್]

**ಒರ್ಮೆ, ಒಮ್ಮೆ** (ಅ). ಒಂದು ಬಾರಿ, —ಸಲ: "ಒರ್ಮೆಯಿರ್ಮೆ ಮೂರ್ಮೆ . . . ಎಣಿಕೆಗೆಯ್ವ ಸೂಱಿವು" (ಕವಿಕಂ. ೨೧೫); ಬಲರಿಪು ತನ್ನದೊಂದು ಬಲಗರ್ವದಗುರ್ವಿನೊಳೆಮ್ಮೆಱಂಕೆಯುಂ ಕುಲಿಶದಿನೊರ್ಮೆ ಖಂಡಿಸಿದ (ಕಾವ್ಯಸಾ. ೪೭೪ ಶೂದ್ರಕ); ಎಱಗಿಯುಮೊರ್ಮೆ ದಿವ್ಯ ಮುನಿಗಾತ್ರ್ಪವಾಸಮನಿರ್ದುಮೊರ್ಮೆ ಕೊಯ್ದಱಿಕೆಯ ಪೂಗಳಿಂ ಶಿವನನರ್ಚಿಸಿಯುಂ ಬಿಡದೊರ್ಮೆ (ಪಂಪಭಾ. ೧–೧೩೫); ಮಳರಹಿತನೊರ್ಮೆ ವಿಳಸನ್ಮಳನೊರ್ಮೆ ಪೆಱಂ ಸದಾಚ್ಛನೈ ನೀಂ ಬೇಗಂ (ಶಾಂತಿಪು. ೧೧–೯೫); ಒಂದು ಬಾರಿ, ಒರ್ಮೆ (ಶಬ್ದಾನು ೪೩೩ ಪ್ರಯೋ); ತಪ್ಪಿದರೆ ಏನೊರ್ಮೆ? ಅನುಭವಕೆ ಅದೆ ಪೆರ್ಮೆ (ಪಾಂಚಜ. ೪೩). **ಒಮ್ಮೆ**: ಮೇಗೆ ಪೆತ್ತನಿತಂ ಮೂವಡಿ ಮಾಳ್ಪುದೊಮ್ಮೆಯೆ ವಲಂ ದ್ವಿತ್ರ್ಯಾಹತಂ ಬಂದೊಡಂ (ಜಾತತಿ. ೮–೩); ರುಂಡಮಾಲೆಯ ಕೊರಳವನ ಕಂಡರೆ ಒಮ್ಮೆ ಬರಹೇಳವ್ವ (ಮಹಾದೇ. ೧೫–೪); ನುಡಿಗೊಮ್ಮೆ ಪುಳಕವೇಱುತ್ತೆ (ತಿರುರ. ದೇ. ೪–೧೫); ಒಮ್ಮೆ ಇವಳು ಒಮ್ಮೆ ಅವಳು ಕುಣಿಸುತಿರುವಳು (ಇಂಗೀತ. ೧–೨೧); ರಮಾ, ಒಮ್ಮೆಯೇ ದುಡುಕಬೇಡ (ಜೀವಮ. ೧); ಒಮ್ಮೆ ನಮ್ಮನೆಯ ಅಕ್ಕಿಕೊಟ್ಟು ಅಮ್ಮಾ ನಿಮ್ಮನೆಯ ಪ್ರಸಾದವೇ (ಗಾದೆ).

**ಒರ್ಮೊರ್ಮೆ, ಒಮ್ಮೊಮ್ಮೆ, ಓರೊರ್ಮೆ** (ದ್ವಿರುಕ್ತಿ): ಬಹುಕರ್ಮನಿರ್ಜರರಾಗಿಯೊರ್ಮೊರ್ಮೆ ಪರಿವಿಡಿಯಿಂ (ಅಜಿಪು. ೮–೨೮); ಅವಿಭಕ್ತಸ್ನೇಹೆಯುಂ ರೋಹಿಣಿಯ [ನೊಸೆಯಿಸುವ] ವ್ಯೋಮಲೋಕಕ್ಕದೊಮ್ಮೊಮ್ಮೆ . . . ಹೇಮಕೂಟಕ್ಕದೊಮ್ಮೊಮ್ಮೆ ವಿಶೇಷಸ್ನೇಹಮಂ ಮಾಡುವ (ಕಾದಂಉ. ೮೨೨); ಮೂಱುದಿನಕೊಮ್ಮೊಮ್ಮೆ ಫಲದಾಹಾರದಲಿ ನೂಕಿದನು (ಕುವ್ಯಾಅ. ೬–೩); ಧರೆಯಲೋರೊರ್ಮೆ ಕಾಲಿಟ್ಟಹಹ ನಿರುಕಿಸೈ ಬಾನೊಳೇ ಪಾರಿಪೋಕುಂ (ಶಾಕುಂತ. ೪–೭). ಒಮ್ಮಿಂದೊಮ್ಮೆ, ಒಮ್ಮಿಂದೊಮ್ಮೆಗೆ = ೧. ಇದ್ದಕ್ಕಿದ್ದಂತೆ; ಅನಿರೀಕ್ಷಿತವಾಗಿ; ಆಕಸ್ಮಿಕವಾಗಿ (ಕ). : ಒಮ್ಮಿಂದೊಮ್ಮೆಗೆ ಅವರು ಊರಿಗೆ ಹೊರಟು ಹೋದರು (ರೂಢಿ). ೨. ಕೆಲವು ವೇಳೆ (ಕ). ಒಮ್ಮಿಂದೊಮ್ಮೇಲೆ = ತುಂಬ ಆಕಸ್ಮಿಕವಾಗಿ; ಬಹಳ ಅನಿರೀಕ್ಷಿತವಾಗಿ (ಕ). ಒಮ್ಮೆಗೆ=ತಟಕ್ಕನೆ: ಅವನು ಒಮ್ಮೆಗೆ ಬಂದುಬಿಟ್ಟ (ರೂಢಿ).

ಒಮ್ಮೆಗೊಮ್ಮೆ = ಒಮ್ಮೊಮ್ಮೆ: ಮನ ವಚನ ಕಾಯಕರಣೇಂದ್ರಿಯಂಗಳು ಮುಂತಾದ ಭೇದಂಗಳಲ್ಲಿ ಒಮ್ಮೆಗೊಮ್ಮೆ ತುತ್ತನಿಡುವಲ್ಲಿ (ಸರ್ವವ. ೧೩೦-೬೫). ಒಮ್ಮೆಯುಂ, ಒಮ್ಮೆಯುಂ = ೧. ಒಂದು ಸಲವೂ; ಒಂದು ಸರತಿಯೂ: ಇತ್ತ ಲಿಂಗವನಗಲಿ ಖಳರಿಂದತ್ತ ಹೋದುದು ಮೊದಲು ಪಶುಗಳ ಮೊತ್ತವೊಮ್ಮೆಯು ಹುಲ್ಲನುದಕವನೊಲ್ಲದಿರ್ದುದಕೆ (ಬಸವು. ೬೦-೩೩); ಪರವನಿತೆಯರನೊಮ್ಮೆಯುಂ ನೀ ನೋಡದಿರು (ಬಸವು. ೪-೬೫). ೨. ಥಟ್ಟನೆ; ತಟಕ್ಕನೆ: ಕುತರ್ಕದಿಂ ಮಚ್ಚರಿಪ ಪರವಾದಿಗಳನೊಮ್ಮೆಯು ಸೋಲಿಸುವ ಭಾಷೆ ಪರಮನಂ ನಿಂದಿಸುವವರ ತಾನೊರಿಸಿ ಕಳೆವುದು ಭಾಷೆ (ಬಸವು. ೬-೪). ಒರ್ಮಿಂಗೆ = ಒಂದು ಸಲಕ್ಕೆ; ಒಂದು ಸರತಿಗೆ: ಅನಱಿಯದೆ ಪಂಚಮಹಾಪಾತಕನೆಂ ಪೊಲ್ಲಕೆಯ್ದೆನೆನಗೊರ್ಮಿಂಗೆ ಕ್ಷಮಿಯಿಸಿಮೆಂದು ನುಡಿದೊಡೆ (ವಡ್ಡಾರಾ. ೧೬೧-೧೧). [ಒರ್ (< ಒಂದು$_3$) + -ಮ್ಮೆ$_2$]

**ಒರ್ಮೆಯ್**, ಒಮ್ಮೆಯ್ (ನಾ). ೧. ಒಂದು ಶರೀರ; ಏಕಾಂಗ: ಭರದ ಮುಷ್ಟಿಯ ಬಿಲ್ಲೊಳಡಗಿತೊ ಶರೀರವೆನೆ ತಳಸಂಚದೊರ್ಮೆಯ್ಯೊರವಿನಿಂ ನೆಱೆ ನಿಂದು (ಸಾಳ್ವಭಾ. ೫-೨೬); ವೈರಿಗಳ ನಡುವೆ ನೇರ್ ನುರ್ಗಿ ಒರ್ಮೆಯ್ಯೆ ಮೂದಲಿಸಿ (ಅಶ್ವತ್ಥಾ. ೨೦-೧೬). **ಒಮ್ಮೆಯ್**: ೨. ಒಗ್ಗಟ್ಟು; ಒಕ್ಕಟ್ಟು: ಅವರೆಲ್ಲರೂ ಒಮ್ಮೆಯ್ಯಾಗಿ ಅವನಲ್ಲಿ ಹಗೆ ಕಟ್ಟಿಕೊಂಡಿದ್ದರೇ ಅಲ್ಲ (ಗೊಲ್ಲೊಥಾ. VI ಮುನ್ನುಡಿ).

[ಒರ್ (< ಒಂದು$_3$) + ಮೆಯ್]

**ಒರ್ಮೊದಲ್** (ಅ). ಒಂದೇ ಬಾರಿಗೆ; ಒಮ್ಮೆಗೇ; ಪ್ರಾರಂಭದಲ್ಲೇ: ಲೋಕಾಲೋಕಮನೆಲ್ಲಮನೊರ್ಮೊದಲೆ ಕಾಣುತ್ತುಮಱಿಯುತ್ತುಂ (ವಡ್ಡಾರಾ. ೯೯-೧೧); ಮಾಱಾಂತ ಬೀರರ ಸೊರ್ಕೊರ್ಮೊದಲೊಡೆ ಬಂದುದು (ಕಬ್ಬಿಗಕಾ. ೨೫೨). [ಒರ್ (< ಒಂದು$_3$) + ಮೊದಲ್]

**ಒರ್ಮೊಱೆ** (ನಾ). ಒಂದು ಮೊರ, —ಅಳತೆ: ಒಕ್ಕಲ್ದೊನ್ದು ಕಟ್ಟಳಂ ಒರ್ಮೊರ[ಱೆ] ಭತ್ತ (ಎಕ. XI, ಚಳ್ಳಕೆ. ೩೩-೧೯; 815); ಇವನ ಪೊಡೆ ತಾನೊರ್ಮರ[ರ್ಮೊಱೆ] ತವುಡಿಂಗಂ ಪೋಗಂ (ಧರ್ಮಾಮೃ. ೬-೧೧೯). [ಒರ್ (< ಒಂದು$_3$) + ಮೊಱ]

**ಒರ್ಮೊೞ**, ಒಮ್ಮೊಳ (ನಾ). ಒಂದು ಮೊಳ, —ಅಳತೆ: ಪಳುಕಿನ ಪಾಪೆಯನಮರ್ದಿರ್ದಂ ತೊಳೆದಂತೊರ್ಮೊೞದ ದಿವ್ಯ ವಪು (ಆದಿಪು. ೬-೩೯); ಸೊಗಯಿಸುವುದು ನಿರ್ಮಳಮೊರ್ಮೊೞದಿಂ ಶರೀರಮುದಾರಂ (ಶಾಂತಿಪು. ೯-೧೨೬); ನುಣ್ಣನೆ ಬೆನ್ನೊಳೊರ್ಮೊೞದಿಂ ಮೂಡಲ್ (ದಶಕು. ೪-೩೨೮). **ಒಮ್ಮೊಳ**: ಸತ್ಯಮೂರುತಿಯೇಱಿಸಿದನಾ ಫಲವನೊಮ್ಮೊಳನ (ಕುಮಾ. ಒರಿಣ. ೪-೩೮); ಹಸ್ತದ್ವಯೋದಯಾನ್ ಇಮ್ಮೊಳನುದಯಮನುಳ್ಳ ಹಸ್ತವಿಸ್ತಾರಸಂಯುತಾನ್ ಒಮ್ಮೊಳನಗಲಮನುಳ್ಳ (ಪ್ರಕಟೀ. ೧೫-೧೯). [ಒರ್ (< ಒಂದು$_3$) + ಮೊೞ]

**ಒರ್ವ**, ಒಬ್ಬ, ಒರ್ಬ (ನಾ). ೧. ಒಂದು. 'ಒರ್ವವಸ್ತು' ಪರಾ. ೨. ಒಬ್ಬ ವ್ಯಕ್ತಿ: ಒರ್ವ ಗೋವಳನನಿಬರ ಸಾವುಮಂ ಕಂಡು(ಪಂಪಭಾ. ೮-೯೫ ವ); ಮುಕ್ತಿಯ ಕೋಳುಗೊಂಬರು ಕೋಟಿಗೊರ್ವರು (ಗಗತಾ. ೧೨-೮೫). **ಒಬ್ಬ**: ೨. ನಿಚ್ಚಲೊಬ್ಬ ಮಾನಿಸನುಮನೊಂದು ಬಂಡಿ ಕೂೞುಮಂ ಕುಡುವಮೆಂದು ...ಮಾಡಿದೊಡೆ (ಚಾವುಂಪು. ೫೪-೧೬); ಬಾಹ್ಲಿಕ ದುರುಳ ಸೌಬಲ ಸೋಮದತ್ತರ ಹುರುಳುಗೆಡಿಸಿದನೊಬ್ಬ ಶಿಶು (ಕುಮಾದ್ರೋ. ೫-೨೬); ಒಬ್ಬ ಕೆಟ್ಟರೆ ಹಬ್ಬ ಕೆಟ್ಟೀತೇ? (ಗಾದೆ); ಒಬ್ಬ ಭೋಗಿ ಅದರೆ ಒಬ್ಬ ಜೋಗಿ (ಗಾದೆ). **ಒರ್ಬ**: ೨. ಇದನಾರೊರ್ಬ್ಬರ್ ಕಾದರವರ್ಗ್ಗೆ ಪಿರಿದು ಪುಣ್ಯಂ (ಇಆ. VI, ೧೦೨-೧೮; 777); ಒರ್ಬ್ಬ ಬ್ರಾಹ್ಮಣಂಗೆ ಭೋಜನ (ಕಇ. I, ೩೬-೧೦; ?); ಒರ್ಬ ತಾಯ್ಗಂ ತಂದೆಗಂ ಪುಟ್ಟಿದೆನಾದೊಡೆ (ಪಂಚತಂ. ೭೬-೧೧).

ಒಬ್ಬನು, ಒಬ್ಬವನು, ಒರ್ವನ್ = ಒಬ್ಬ ಮನುಷ್ಯ: ಒಬ್ಬನೆ ಹಸುಳೆ ಹೊಕ್ಕನು ವೈರಿಮೋಹರವ (ಕುಮಾದ್ರೋ. ೫-೫); ಅವರು ... ಒಬ್ಬವನಿಗೊಂದು ಒಬ್ಬವನಿಗೊಂದು ಮಾಡುತ್ತಾರೆ (ಮುಂಬಯಿ. ೪-೧೦೮); ಪೆಱನೊರ್ವ್ವನ್ ಕೊಳ್ವೋನುಂ ಕೊಡುವೋನುಂ (ಎಕ. VI, ಕೊಪ್ಪ. ೩೬-೧೧; 675). ಒಬ್ಬರಿಗೊಬ್ಬರ್, ಒಬ್ಬರಿಗೊಬ್ಬರು = ಪರಸ್ಪರ; ಅನ್ಯೋನ್ಯ: ನಾ ಬಲ್ಲಿದ ತಾ ಬಲ್ಲಿದನ್ ಎಂದು, ಒಬ್ಬರಿಗೊಬ್ಬರ್ ಅಹಂಕರಿಸುಹಂ ಅಹಮಹಮಿಕೆ ಎನಿಸುಗು (ನಾಚಿರಾ. ೩); ಅವರು ಒಬ್ಬರಿಗೊಬ್ಬರು ಸೇರದೆ ಇದ್ದರೆ ಈ ಕೆಲಸ ಆಗಲಾರದು (ರೂಢಿ). ಒಬ್ಬರೊಬ್ಬರು, ಒಬ್ಬೊಬ್ಬರ್, ಒಬ್ಬೊಬ್ಬರು, ಒರ್ವರೊರ್ವರ್ = ೧. ಒಬ್ಬನ ತರುವಾಯ ಇನ್ನೊಬ್ಬ: ಒಬ್ಬರೊಬ್ಬರು ಬಂದು ಕುಳ್ಳಿರಿ ನೀವು (ಬಸವು. ೩೬-೩೦); ಕಂಡುಬ್ಬುತೊಬ್ಬೊಬ್ಬರ ನಮಸ್ಕಾರಾಭಿಗಮನಾಲಿಂಗನಂಗಳಲಿ ಸರಸವೆಸೆಯಲು (ಬಸವು. ೩೬-೩೦). ೨. ಒಬ್ಬೊಬ್ಬನೂ; ಪ್ರತ್ಯೇಕವಾಗಿ: ಒಬ್ಬರೊಬ್ಬರುಘೇಯುಘೇ ಭಲರೇ ಎನುತ್ತಿರಲು (ಬಸವು. ೫೬-೧೪); ಪೊಡೆಗೆಡೆದರಾಕ್ಷಣದೊಳ್ ಪುರಂದರನ ವಜ್ರದಿಂ ಕಡಿವಡೆದು ಮೇದಿನಿಗೆ ಬೀಳ್ವ ಕುಲಗಿರಿಗಳಂತೊಬ್ಬೊಬ್ಬರೊಂದು ಕಡೆಗೆ (ಜೈಮಿಭಾ. ೬೨-೩೩). ೩. ಪರಸ್ಪರ; ಒಬ್ಬರಿಗೊಬ್ಬರು: ಹೊಯ್ಲಂ ತೋಱುತೊಬ್ಬೊಬ್ಬರಿಗೆ ವೇದನೆಗಾಱೆವಯ್ಯೋ ಕೆಟ್ಟೆವೆನುತಂ (ಬಸವು. ೫೨-೧೩); ಲೋಕದೊಳ್ ಕವಿಗಳುಂ ಚಾಗಿಗಳುಂ ಒರ್ವರೊರ್ವರ್ಗೆ ನಿಡಿಯರ್ಗೆ ನಿಡಿಯರೊಳರ್ (ಧರ್ಮಾಮೃ. ೪-೨೧೯). ಒಬ್ಬವಳು, ಒಬ್ಬಳು, ಒರ್ವಳ್ = ಒಬ್ಬ ಸ್ತ್ರೀ, —ಹೆಂಗಸು (೩): ಪರಪುರುಷರಿದ್ದೆಡೆಯೊಳೊಬ್ಬಳಿರಲು ಬಾರದು (ಪುರಂದ. ೨-೬೦-೧೦); ಒರ್ವಳ್ ಕರ್ವಿನ ಬಿಲ್ಲ ತಿರುವಿಂ ಬರ್ದುಂಕಿ ಬರ್ಪಲರಂಬು ಬರ್ಪಂತೆ ಬಂದು (ಪಂಪಭಾ. ೪-೩೬ ವ). ಒಬ್ಬಾಕೆ = ಒಬ್ಬಳು (೩). ಒಬ್ಬಾತನು = ಒಬ್ಬನು (೩). ಒಬ್ಬಾನೊಬ್ಬ = ಯಾವನೋ ಒಬ್ಬನು (೩).

[ದೇ. ‖ ತಮಿ. ಮಲ. ಒರುತ್ತ, ಒರುವ; ತುಳು. ಒರಿ, ಒರಿಯೆ; ಕುಣ. ರೊಅನ್ನು; ಕುವಿ. ರೂಸಿ; ಕುರುಖ್. ಒರ್ತ್; ಮಲ್ತೊ. ಒರ್ತೆ]

**ಒರ್ವಗಲ್** (ನಾ). ಒಂದು ಹಗಲು, —ದಿವಸ: ರತ್ನಂಗಳ್ಗೆ ಕರಂಡಮೆನಿಸುವ ದಶಧರ್ಮಮುಮಂ ಒರ್ವಗಲಪ್ಪೊಡಂ ತಪ್ಪಲೀಯದೆ ... ನಡೆಯಿಸುವ ಮಹರ್ಷಿಗಳ ಮನದ ಧೈರ್ಯಮಂ ಬಣ್ಣಿಪನಾವಂ (ಧರ್ಮಾಮೃ. ೧-೧೬೬). [ಒರ್ (< ಒಂದು$_3$) + ಪಗಲ್]

**ಒರ್ವನಿತೆ** (ನಾ). ಒಬ್ಬಳೇ ಹೆಂಗಸು; ಏಕಾಂಗಿನಿ: ಓಪನಂ ಕರೆಯುತೊರ್ವನಿತೆ ಕರ್ಪುರ ಸುತಾಂಬೂಲಮಂ ಬೆಡಗಿನಿಂದೀಯುತಿರ್ದಾ ಬೆಡಗನೇವೇಳ್ವೆನು (ಪರಶು. ೪-೩೩).

[ಒರ್ (< ಒಂದು$_3$) + ವನಿತೆ]

**ಒರ್ವವಸ್ತು** (ನಾ). ಒಂದು ವಸ್ತು, —ಪದಾರ್ಥ: ಒರ್ವವಸ್ತು ಮಗುಳೊಂದುತೆಱನಂ ಪಡೆದೊಡಂ ಮುನ್ನಿನ ಗುಣಂ ಎಂದಿನಂತಿರ್ಕುಮೆಂದು ಪೇಳ್ವುದುಂ ಪೂರ್ವರೂಪಾಲಂಕಾರಂ (ನರಚ. ೧೧೧-೨೬೯ ವೃತ್ತಿ). [ಒರ್ವ + ವಸ್ತು]

**ಒರ್ವಳ್ಳ$_1$** (ನಾ). ಉಳುವುದರಲ್ಲಿ ಒಂದು ಸಾಲು, —ಉಕ್ಕೆ: ಕೋಣಗಳು ನೇಗಿಲನ್ನು ಎಳೆದುಕೊಂಡು ಹೋದುವು. ಉದ್ದಕ್ಕೆ ಒರ್ವಳ ಹೂಡಿದ; ಅಡ್ಡಕ್ಕೆ ಇರ್ವಳ ಮಾಡಿದ. ಹೀಗೆ ಎರಡು ಮೂರುದಿನ ಉತ್ತಾಗ ಬೈಲುಗದ್ದೆ ಕೆಸರಿನ ರಸಾಯನವಾದಂತಾಯಿತು (ಬಾ೪ಗಿ. ೧೧೭).

[ಒರ್ (< ಒಂದು$_3$) + ?]

**ಒರ್ವಳ್ಳ$_2$** 'ಒರ್ವಳ್ಳ' ನೋ.

**ಒರ್ವಳ್ಳ**, ಒರ್ವಳ್ಳ$_2$ (ನಾ). ಒಂದು ಬಳ್ಳದ ಪ್ರಮಾಣ, —ಅಳತೆ : ಎಱಮ್ಮನುಂ ಅಯ್ವದಿಮ್ಬರುಂ ನಕರಮುಂ ಸೇಣಿಯುಂ ಬಿಟಿಸುವಿಟ್ಟು ಗೆಲ್ವಲ್ಲಿ ಮೂಲವ್ವೇಯಕ್ಕೆ ಒರ್ವ್ವಳ್ಳ ನೆಯ್ ನಿಱಿಸಿದ (ಎಕ. VI, ಕಡೂರು. ೧೪೫-೭ ; 750). **ಒರ್ವಳ್ಳ$_2$** : ದೀವಿಗೆಗೆ ವೊಂದೆತ್ತು ಗಾಣದ ಸುಂಕದ ತೆಱಿಯುಂ ತಿಂಗಳ ಪಡಿಯೊರ್ವ್ವಳಿಣ್ಣೆ ಚಂದ್ರಾರ್ಕ್ಕತಾರಂಬರಂ ಸಲುವಂತಾಗಿ (ಎಕ. XIV, ಶ್ರೀರಂಗ. ೨೨೩-೫ ; 1175).

[ಒರ್ (< ಒಂದು$_3$) + ಬಳ್ಳ]

**ಒರ್ವಾಗ**, ಒರ್ಭಾಗ (ನಾ). ಒಂದು ಭಾಗ,—ಪಾಲು : ಏಗೆಯ್ದು ಮೆನ್ನ ಧರೆಯೊರ್ವಾಗಮುಮಂ ನೀಮೆ ಬೆಸಸೆಯುಂ ಕುಡದಿನಿತಂ ಮೇಗಿಲ್ಲದೆ ನೆಗಟ್ಟಿದಿಱಿದಂ (ಪಂಪಭಾ. ೧೪-೬). **ಒರ್ಭಾಗ** : ಸಿಂದಗಿರಿ ವೊರ್ಭಾರ್ಗ(ರ್ಬ್ಬಾರ್ಗ)ಗದಿಂ ಸೂಂದಿಗೆಱಿಯ ನೀರ ತಟವೋರ್ಭಾರ್ಗ(ರ್ಬ್ಬಾರ್ಗ) ಗದಿಂ (ಇಆ. XVIII, ೩೧೨-೨೦ ; 11ನೆಯ ಶತ).

[ಒರ್ (< ಒಂದು$_3$) + ಭಾಗ]

**ಒರ್ವಾಯ** (ನಾ). ಒಂದು ಊರಿನ ಹೆಸರು : ನಳ್ವಿಡಿ ೧೨ ಱ ಕಂಪಣಂ ಒರ್ವಾಯಂ ಕುಡೆ ತ್ರೈಳೋಕ ಪಣ್ಡಿತರ ಸಿದ್ದಯ್ಯಂಗೆ (ಸೌಇಇ. IX-i, ೯೨-೧೭ ; 1036) ; ಒರ್ವಾಯ ಊರಿಂ ಮೂಡಲ್ (ಎಇ. XIV, ೨೭೩-೪೮ ; 1173). [?]

**ಒರ್ವಾರ** (ನಾ). ಒಂದು ಬಾರಿ, —ಸಲ.

[ಒರ್ (< ಒಂದು$_3$) + ವಾರ$_3$]

**ಒರ್ವುಳಿ**, ಒಬ್ಬುಳಿ$_1$, ಒರ್ಬುಳಿ (ನಾ). ಗುಂಪು; ಒಟ್ಟಿಲು; ಸಮೂಹ. 'ಒರ್ವುಳಿಗೊಳ್' ಪರಾ. **ಒಬ್ಬುಳಿ$_1$**: "ಗೊಂದಣಿ ತೆರಳ್ಕೆ ಸಾಲೊಬ್ಬುಳಿ ಹೊರಳಿ . . . ಎನೆ ಶ್ರೇಣಿಕಾಖ್ಯಂ" (ಶಬ್ದಮಂ. ೫೫) ; ಮಱಿದುಂಬಿಗಳಂತೆ ಮೇಗೆ ನೆಗೆದೊಬ್ಬುಳಿಯಿಂ ಬರುತಿರ್ಪ ಬಾಣಮಂ ಸೌಂದರರೂಪಂ ಕಂಡು (ಧರ್ಮಾಮೃ. ೧೩-೧೫೦, ೧೫೧) ; ಕೋರೈಸಿ ಫುಟವಿಟ್ಟ ಪುಣ್ಯದೊಬ್ಬುಳಿಯೊ ಪೇಳಾರಱಿವರೆಂಬಂತೆ (ಸಿದ್ಧರಾ. ೧-೧೪). **ಒರ್ಬುಳಿ** : ಪೆರ್ಬುಲಿಯೊರ್ಬುಳಿಯಂತೆ ಭೇರುಂಡನ ಹಿಂಡಿನಂತೆ (ಗಿರಿಕ. ೬-೫೫ ವ).

ಒಬ್ಬುಳಿಮಾಡು, ಒರ್ಬುಳಿಮಾಡು = ಒಟ್ಟುಗೂಡಿಸು : ಕಳವಳಿಸ ದಿರಿಯೆನುತಲಾ ಗೋವಳರನಾದೊಮ್ಮಳಿಸಿ ಬಹುಗೋಕುಲವನೊಬ್ಬುಳಿ ಮಾಡಿ (ಸಾಳ್ವಭಾ. ೧೧-೬೩) ; ಒಂದೊಂದಱೊಳೊಂದದುವಂ ತಂದೊ ರ್ಬುಳಿಮಾಡಿ ತದ್ವಿಶೇಷಾಂತರಮಂ ಸಂದೇಹಮಿಲ್ಲದಱಿಪುವುದೊಂದೆ ವಿರೋಧಾಭಿಧಾನಮದುಮಿಂತಕ್ಕುಂ (ಕವಿರಾ. ೩-೧೩೪). ಒಬ್ಬುಳಿ ಯಾಗು, ಒರ್ಬುಳಿಯಾಗು = ಒಟ್ಟಾಗು ; ಗುಂಪಾಗು : ದಿನಮಣಿಯ ಕೋಟಿಪ್ರಭಾಪುಂಜದೊಬ್ಬುಳಿಯಾದ ಮಾಳ್ಕೆಯೋಳ್ ಚಂದ್ರನ ಕೋಟಿ ತೇಜವನೊಳಕೊಳುತ್ತ (ಶೂನ್ಯಸಂ. ೩೯೫-೨೭) ; ನಡೆಯಲ್ ಬಸಮಲ್ಲದೆ ನಿಂದು ಕೈಗಳಂ ಲೀಳೆಯಿನಾಂತು ರಾಗರಸಮೊರ್ಬುಳಿಯಾದವೊಲೆಬ್ಬಿ ಮೆಟ್ಟಿ ಭಾರಾಳಸದಿಂದಂ (ಜಗವಿ. ೨-೯೭).

[ಒರ್ (< ಒಂದು$_3$) + -ಉಳಿ$_0$ (< ಪುಳಿ). P ತಮಿ. ಪುಳಿ = ಗುಂಪಾಗು, ದಟ್ಟೈಸು]

**ಒರ್ವುಳಿಗೆಯ್**, ಒಬ್ಬುಳಿಗೆಯ್ (ಕ್ರಿ). ಗುಂಪುಗೂಡಿಸು ; ಒಟ್ಟಿಗೆ ಸೇರಿಸು : ಪೊನ್ನೆಲ್ಲಮನೊರ್ವುಳಿಗೆಯ್ದು [ಪಾಠಾಂ. ನೊರ್ಬುಳಿವೊಯ್ದು, ನೋರ್ವುಳಿವೊಯ್ದು]ನ್ನತನೆಟಿಗನನೇಱಿ ನೋಡುತ್ತಿರಲ್ (ಜೀವಸಂ. ೧೦೫-೨೯). **ಒಬ್ಬುಳಿಗೆಯ್** : ಲಲನೆಯರೊಬ್ಬುಳಿಗೆಯ್ದಿತ್ತ ವೀಳ್ಯವ ಸಲೆ ಸಮರ್ಪಿಸಿದನೀಶ್ವರಗೆ (ಮೋಹತ. ೨೧-೪೨) ; ಧರೆ ಮೂಱಱೊಳ ಗುಳ್ಳ ಚೆಲ್ವನೊಬ್ಬುಳಿಗೆಯ್ದು ಸರಸಿಜಭವ ಚದುರಿನೊಳು . . . ರೂಹಿಟ್ಟ ವಿವರ (ನಾಗಕು. ೬-೪೧). [ಒರ್ವುಳಿ + ಕೆಯ್$_1$]

**ಒರ್ವುಳಿಗೊಳ್**, ಒಬ್ಬುಳಿಗೊಳ್, ಒರ್ಬುಳಿಗೊಳ್ (ಕ್ರಿ). ಒಟ್ಟಾಗು ; ಗುಂಪಾಗು : ಸಮುದ್ಗತ ಭೀತಿಯಿಂದಮಾ ಪೆರ್ವಲ ಮೆಯ್ದು ಸುತ್ತಱಿದು . . . ಸೈತೊರ್ವುಳಿಗೊಂಡು ಸಾರ್ದುದಿರದಾಗಳೆ ಸಿಂಹಬಳಾವನೀಶನಾ (ಕುಸುಮಾ. ೧೧-೪೭). **ಒಬ್ಬುಳಿಗೊಳ್** : ಬಂದು ಮನೆಯಂ ಪುಗಲು ಶರಣರೊಬ್ಬುಳಿಗೊಂಡು ಇರೆ ಕಂಡು ಮೈಯಿಕ್ಕಿ (ಕಲಿಕಾ. ದೇ. ೨೯೮-೨೦) ; ನಿಬ್ಬೆಱಗುವಟ್ಟು ಸೌಂದರಿ ಯೊಬ್ಬುಳಿಗೊಂಡಳದುಣ್ಮದೀಕ್ಷಿಸಿ ನೃಪನಂ (ಉದ್ಭಟ. ೧೧-೨೩). **ಒರ್ಬುಳಿಗೊಳ್** : ನಲಿನಲಿದು ಕಿರಾತಸ್ತ್ರೀಕುಲಮೊರ್ಬುಳಿಗೊಂಡು ನಿಂದು (ಗಿರಿಕ. ೧-೧೨೨) ; ಗಿರೀಶ್ವರನ ಗೌರವಮೊರ್ಬುಳಿಗೊಂಡು ಪುಟ್ಟಿದಂತೆವೊಲೊಗೆದಂ ತದೀಯ ಕರಕಂಜದೆ ರೇವಣಸಿದ್ಧ ದೇಶಿಕಂ (ರಾಜಶೇ. ೧-೬೧). [ಒರ್ವುಳಿ + ಕೊಳ್$_1$]

**ಒರ್ವುೞಿ**, ಒಬ್ಬುಳಿ$_2$, ಒರ್ಬುೞಿ (ನಾ). ಒಂದು ಸ್ಥಳ; ಒಂದೆಡೆ : ಪೂರ್ವಭವ ಸ್ನೇಹಮದೋರೊರ್ವರನಲೆದೊಂದು ಮಾಡೆ ತಮ್ಮನಿಬರು ಮಂದೊರ್ವುಳಿ[ೞಿ] ನೆರೆದು (ಆದಿಪು. ೬-೪) ; ಇರ್ವಿರ್ವರೆ ನವಮಾ ಸಾಂತದೊಳೊರ್ವುಳಿ[ೞಿ]ಯೊಳಮಳ್ಗಳಾಗಿ ಸಂಕ್ರಮಿಪರವರ್ (ಶಾಂತಿಪು. ೬-೧೦೫) ; ಬೆಳಗಾಗಲೊಡಂ ಮುರುಂಟೆ ಬಿದ್ದಿರ್ದಾಱುಂ ಪೆಣಂಗಳಂ ಕಂಡೊರ್ವುಳಿ[ೞಿ]ಗೆದಂದು (ಮಹಾನೇ. ೯-೫೭ವ). **ಒಬ್ಬುಳಿ$_2$** : ಮನವನೊಬ್ಬುಳಿಮಾಡಿದಲ್ಲದೆ ತನುವಿನೊಳಗನು ಕಾಣಬಾರದು (ಪ್ರಭುಲೀ. ೧೮-೧೮). **ಒರ್ಬುೞಿ** : ಜಾತಿಕ್ರಿಯಾಗುಣದ್ರವ್ಯಾತಿಶಯ ವಿಶೇಷಿ ಯಪ್ಪ ಪದಮೊರ್ಬುಳಿ[ೞಿ]ನಿಂದೀ ತೆಱದಿನುೞಿದ ಕಾವ್ಯಸಮೇತಿಗ ಮುಪಕಾರಯೋಗ್ಯದೀಪಕಮಕ್ಕುಂ (ಕವಿರಾ. ೩-೫೩).

[ಒರ್ (< ಒಂದು$_3$) + ಉೞಿ$_3$]

**ಒರ್ವೆ** (ನಾ). ಒಬ್ಬಳು ; ಒಬ್ಬಾಕೆ : ಜೀವೇಶ್ವರ ನನ್ನ ಬಿಟ್ಟೆಯ್ದಬೇ ಡೆಂದು ಕೋವಿದೆಯೊರ್ವೆಯಾ [ಪಾಠಾಂ. ರ್ವಳಾ]ಡಿದಳು (ಕುರಾಸಾಂ. ೧೧-೪೫) ; ಹೊಂಗಾಳಾಂಚಿಯ ಪಿಡಿದೊರ್ವೆಯಿಹಳು (ಮೋಹತ. ೪-೧೦) ; ವನಲಕ್ಷ್ಮಿಯಂತೊರ್ವೆ ಹರುಷದೊಳಗೆ ನಡೆತಂದು (ಕಂನವಿ. ೩೪-೫೦).

[ಒರ್ವ + -ಎ$_2$]

**ಒರ್ವೆರಲ್**, ಒಬ್ಬೆರಲ್, ಒಬ್ಬೆರಳು, ಒರ್ವೆರಳು (ನಾ). ಒಂದು ಬೆರಳು. **ಒಬ್ಬೆರಲ್** : ಧರೆಯನೊಬ್ಬೆರಲೊಳಾಳ್ವ ಮುನಿದೊಡೆ ಸಕಲ ಜಗವನೊಮ್ಮೆ ಸುಡುವ . . . ರುದ್ರಗಣಂ (ಚಬಪು. ೨-೨೪). **ಒಬ್ಬೆರಳು** : ಭೀಭತ್ಸು ಕಂಡೊಬ್ಬೆರಳನಲ್ಲಾಡಿ ಪೊಗಳಲ್ಕೆ ವೃಷಕೇತು ಫಲುಗುಣಂ ಗಿಂತೆಂದನು (ಜೈಮಿಭಾ. ೨೩-೨೧). **ಒರ್ವೆರಳು** : ನಾಲ್ವೆರಳು ಹಸ್ತಿನಿಗೆ ಮೂವೆರಳು ಚಿತ್ತಿನಿಗೆ ಇರ್ವೆರಳು ಕುಚಮಧ್ಯ ಶಂಖಿನಿಗೆ ಪದ್ಮಿನಿಗೆ ಒರ್ವೆರಳು ನೋಡ (ಸರ್ವಜ್ಞ. ೧೬೩೫). [ಒರ್ (< ಒಂದು$_3$) + ಬೆರಲ್]

**ಒರ್ವೆರಳು** 'ಒರ್ವೆರಲ್' ನೋ.

**ಒಲ್$_1$**, ಒಲಿ$_1$, ಒಲು$_1$ (ಕ್ರಿ). ೧. ಒಪ್ಪು ; ಸಮ್ಮತಿಸು ; ಅಂಗೀಕರಿಸು : ಉದೀಚ್ಯದುರುವಿಶೇಷಣಯುತಮಪ್ಪುದನೊಲ್ವರಿಂತು ಹೇಮಾಂಗದ ಲೀಲಾಂಬುಜ ವಿಚಿತ್ರ ಚಿತ್ರಾಧಿಕಮಂ (ಕವಿರಾ. ೨-೭೯) ; ಭುಜಬಲಿ ಸಕಲಾವನಿತಳವಲ್ಲಭನಂ ಭೋಂಕನೆತ್ತಿ ಪೊತ್ತಿರ್ದ ನಿಕ್ಕಲೊಲ್ಲದೆ ನೆಲದೊಳ್ (ಆದಿಪು. ೧೪-೧೧೧) ; ಯತಿಯೆಂಬುದು ಗಣನಿಯಮ ಪ್ರತೀತಮೆಂದರೆಬರೊಲ್ವರಂತದನೆ ಕೆಲರ್ ಶ್ರುತಿ ಸುಭಗಂ ಸ್ವಚ್ಛಂದಂ ಯತಿಯೆಂದಾ ಕಪಿಳ ಪಿಂಗಳಾದಿಗಳೊಲ್ಲರ್ (ಛಂದೋಂಬು. ೧-೪೪) ; ಒಲ್ಲನೋ ಹರಿ ಕೊಳ್ಳನೋ (ಪುರಂದ. ೨-೭೯ ಪಲ್ಲವಿ). ೨. ಬಯಸು ; ಅಪೇಕ್ಷಿಸು : ಬಿಡಿಸಿದನೆನ್ನಂತರಂಗದನುತಾಪಮ ನೊಲ್ದುಡಿಸಿದನೊಳ್ಪುಳ್ಪುಡೆಯಂ (ಕವಿರಾ. ೩-೨೩೪) ; ಎರಡಱಿಯ ದೊಲ್ದು ನಿನ್ನೊಳೆರಡಂ ನುಡಿಯಲಾಗದೆನಗೆ (ಪಂಪಭಾ. ೩-೧೪ ವ) ;

ಇಹಪರಮನೊಲ್ವೊಡಂ . . . ಆರೈದು ಪರೀಕ್ಷಿಸುವುದು ಸಮಸ್ತ ಕಾರ್ಯಸ್ಥಿತಿಯಂ (ಪಂಚತಂ. ೧೯೯–೧೪); ನಿಚ್ಚಂ ನಿಚ್ಚಂ ಒಲ್ದು ಭಾವಿಪುದ ಜೀವಂ (ಸಮುಪ. ೩–೩೬). **೩.** **ಶಕ್ತನಾಗು; ಸಮರ್ಥನಾಗು:** "ಒಲ್–ಶಕ್ತನಾಗು" (ಶಮುಧಾ). **ಒಲಿ$_1$ : ೧.** **ಪ್ರಾಣಪ್ರಿಯರ್ಗಾ** ಪ್ರಾಣಮನೊಲಿದೀವುದೆಂಬುದೊಂದಚ್ಚರಿಯೇ (ಕಾದಂಪೂ. ೯೧೦); ಚನ್ನಮಲ್ಲಿಕಾರ್ಜುನನೊಲಿದ ಶರಣಂಗೆ ಮಾಯೆಯಿಲ್ಲ (ಮಹಾದೇ. ೪–೧೪); ದೇವನೊಲಿದಾತನೇ ಜಾತ (ಸರ್ವಜ್ಞ. ೯೭೬). **೨.** ಬುಧಜನಂ ಪೇೞೆಮೆಂದೆಂದೊಡಾಂ ಸಾದರದಿಂ ಮದ್ವಾಕ್ಯಬಾಹಾಪ್ರಬಳದಿನೊಲಿದಂತೀಸಲುದ್ಯುಕ್ತನಾದೆಂ (ನೇಮಿಪು. ೧–೩೮); ಇತರ ಪಾಕವನೊಲಿಯದೆ (ಬಸಪು. ೩–೨); ಲಕ್ಷಣಮಱಿವ ಚತುರರೀಕೃತಿಗೊಲಿಯರೇ (ಪದ್ಮರಾ. ೧–೩೯); ಲೇಸಪ್ಪ ಮಣಿಮಂಚದಮೇಲೆ ಶಿಶುವೆಳನೇಸಱಂತೊಱಗಿರ್ದನೊಲಿದು (ಮೋಹತ. ೪–೭೩). **೪.** **ಮೆಚ್ಚು; ಇಷ್ಟಪಡು; ಪ್ರೀತಿಸು:** "ಸ್ವತಂತ್ರವೃತ್ತ್ಯಾನಂವಿವೃತ್ತಿಯೆನಲೊಲಿದಂತೆ ನಡಹಮುಕ್ಕುಂ" (ಮಂಗರಾ. ೧೩೩–೩೦); ನೀವೊಲಿದೆಲ್ಲಿ ಪುಟ್ಟಿ ಬಳೆದಿರೊ ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ (ಪಂಪಭಾ. ೨–೮೩); ಬಲ್ಲೆ ಚಿಕ್ಕಂದಿಂದ ನಿನ್ನುವನಲ್ಲದಱಿಯಳು ಕನ್ನೆಯಾಗಿರ್ದಲ್ಲಿ ಪೊಲಿದಳು ನಿನಗೆ (ಬಸಪು. ೮೨–೭); ಕುಳಿತು ಪಾಡಲು ನಿಲುವೆ ನಿಂತರೆ ನಲಿವೆ ನಲಿದರೆ ಒಲಿವೆ ನಿಮಗೆಂಬಾ (ಹಸಾರ. ೨–೫). **೫.** **ಯೋಗ್ಯವಾಗು; ಉಚಿತವಾಗು; ತಗು** (ಕ). **೬.** **ಮೋಹಗೊಳ್ಳು; ಮರುಳಾಗು:** ಸ್ತ್ರೀಯರಿಂಗೆ ಒಲಿಯುವನೆ ಯೋಗಿ (ಸರ್ವಜ್ಞ. ೫೪೯). **ಒಲು$_1$ : ೧.** ಅಖಿಳ ಜಗದ್ರಕ್ಷಾಮಣಿಯಂ ಪೊಗೞ್ದು ದಖಿಳಸೌಖ್ಯಮನೊಲುವಂ [ಪಾಠಾಂ. ಸೋಲ್ವಂ, ನೊಟವಂ] (ಸಮುಪ. ೧–೭).

**ಒಲಿದೊಲಿದು** (ದ್ವಿರುಕ್ತಿ): ಒಲಿದೊಲಿದು ನಲಿದೀ ಪ್ರಕಾರದಿ ಪಲವು ಲಿಂಗಂ ಭೋಗಿದೇವನ ಬಳಿವಿಡಿದು ನಡವುತ್ತಿರಲು (ಬಸಪು. ೫೭–೪೬). **ಒಲ್ದಂ = ಒಲಿದವನು; ಪ್ರಿಯಕರ:** "ಉಬುಗಿದನೆಂದು ಒಲ್ದಂ" (ಶಮುದ.ನ.೩೩ ವೃತ್ತಿ); ಪೆಱವೆಣ್ಗೊಲ್ದಂಗಮೇನಾಗದು (ಪಂಪಭಾ.೮–೮೧). **ಒಲ್ದರ್, ಒಲ್ವರ್** (ಬಹುವ): ತಮ್ಮೊಲ್ದರನೆ ಪಿಡಿದು ಬಲ್ಲಂದದಿಂ ನಲ್ಮೆಯಂ ಪತ್ತಿಸಿ (ಸಮುಪ. ೫–೪೮); ತನ್ನನೊಲ್ಲದರಂ ಪೞಿದು ಒಲ್ವರಂ ಪೊಗೞದೆ (ಧರ್ಮಾಮೃ. ೫–೯೯). **ಒಲ್ದಳ್ = ಒಲಿದವಳು; ಮೆಚ್ಚಿದವಳು:** "ಮೆಚ್ಚಿದಳೊಲ್ದಳೆಂದುಂ" (ಕಶರ. ೧೩). **ಒಲ್ದಿರು = ಪ್ರೀತಿಯಿಂದ ಇರು; ಮೆಚ್ಚಿರು:** ಸೂಳೆಯರೊಳೊಲ್ದಿರ್ಪಾಟಮಿಂತೆಲ್ಲಮುಂ ಸವಿಯಾಗಂತ್ಯದಿ ಕಷ್ಟವೈ (ಸೋಮೇಶ. ೨೪). **ಒಲ್ಲದಾಗು = ಬೇಡವಾಗು; ಮನಸ್ಸಿಲ್ಲದಿರು:** ಅಲ್ಲಿಗೆ ಹೋಗುವುದಕ್ಕೆ ಒಲ್ಲದಾದಳು (ಕನಕ. ೫೨).

[**ದೇ.** ‖ **ತಮಿ.** ಒಲ್ಲ, ಒಲ್ಲು; **ಮಲ.** ಒಲ್ಲು; **ತುಳು.** ಒಲವು, ಒಲಿಯು; **ತೆಲು.** ವಲಚು]

**ಒಲ್$_3$** 'ಪೋಲ್' ನೋ.

**ಒಲಕಾಡು** (ನಾ). **ಸುಡುಗಾಡು; ಶ್ಮಶಾನ:** ನಿಮ್ಮ ತರ್ಕಾರೀನೂ ಬೇಡ, ಒಲಕಾಡೂ ಬೇಡ. ಪೀಡೆ ಕಳೆಯಿತು (ನಡೆವಾ. I, ೫೨೧).

[← **ತೆಲು.** ಒಲ್ಲಕಾಡು, ವಲ್ಲಕಾಡು]

**ಒಲಪು, ಒಲವು$_2$, ಒಲಹು, ಒಲ್ಪು** (ನಾ). **೧.** **ಒಲೆತ; ತೂಗಾಟ; ಅಲುಗಾಡುವಿಕೆ.** **೨.** **ಒಯ್ಯಾರ; ಬೆಡಗು; ವಿಭ್ರಮ; ವಿಲಾಸ:** ಬಟ್ಟಜವ್ವನದೊಲಪಿಂದೆ . . . ಪೊಂಬಟ್ಟಲ ತಂದಿರಿಸಿದಳು (ಮೋಹತ. ೨೧–೧೧); ಚೆನ್ನ ಶಬರಿಯೊಲಪಿನೊಳು ಕಿನ್ನರಿವಿಡಿದು ಪಾಡಿದಳು (ನಾಗಕು. ೧೩–೬೧); ಅತಿಕುಟಿಲಾಂಗದೊಲಪುಗಳ ವಾರನಾರೀಜನಂ (ಜೈಮಿಭಾ. ೭–೬). **ಒಲವು$_2$ : ೧.** 'ಒಲವುದೋಱು' ಪರಾ.

**ಒಲಹು : ೧.** ಕುಸುಮಲತೆಗಳು ಸತಿಯರೆಲೆಯುಲುಹು ತಳದ ಕೆಂಸಾಳೆ ಮರನೊಲಹು ತಲೆದೂಂಕು (ಹಚಕಾ. ೩–೩೬); ತೂಗುವೆರಲಿನ ಮಕುಟದೊಲಹಿನೊಳಾ ಗರುವ ಭಟರುಲಿಯೆ (ಕುವ್ಯಾ ದ್ರೋ. ೧–೩೬); ಮಸ್ತಕದ ಮಣಿಮಕುಟದೊಲಹುಗಳ (ಚಿಬಪು. ೨೫–೨೯). **ಒಲ್ಪು : ೨.** ಕಲಿ[ತ]ನದುರ್ಕ್ಕೆ ಜೌವನದ ಚೆನ್ನಿಕೆ ರೂಪಿನೊಳೊಲ್ಪೆ (ಸೌಇಇ. XI–i, ೪೧–೩೫ ; 969). 'ಒನಪು' ಪರಾ.

[< ಒಲೆ$_1$ + –ಪು$_1$]

**ಒಲಪುಗಾತಿ** 'ಒಲಪುಗಾರ್ತಿ' ನೋ.

**ಒಲಪುಗಾರ** 'ಒಲಪುಗಾಱ' ನೋ.

**ಒಲಪುಗಾರ್ತಿ, ಒಲಪುಗಾತಿ** (ನಾ). **ಒಲಪುಮಾಡುವವಳು; ಒಯ್ಯಾರಿ** (ಕ). **ಒಲಪುಗಾತಿ :** ಒಲಪುಗಾತಿಗೆ ಮನೆಯೆಲ್ಲಾ ಹಿತ್ತಿಲು (ಗಾದೆ).

[ಒಲಪುಗಾಱ + –ತಿ$_1$ (< –ಇತ್ತಿ)]

**ಒಲಪುಗಾಱ, ಒಲಪುಗಾರ** (ನಾ). **ಸೊಗಸುಗಾರ; ಒಯ್ಯಾರದವನು** (ಕ). **ಒಲಪುಗಾರ :** (ಜಾನಕೋ. ೩೦).

[ಒಲಪು + –ಗಾಱ (< –ಕಾಱ)]

**ಒಲಭರ** (ನಾ). **ಒಂದು ಮನೆತನದ ಹೆಸರು:** ಎಡೆನಾಡ ಪರಿಯಹೊಟ್ಟದ ಪನ್ನಿರ್ಬರುಂ ಒಲಭರ ಶಿವಮಾರ ಗಾವುಣ್ಡರ ಮಗಂ ಅಯ್ಯಪಗಾವುಣ್ಡನುವಿಟ್ಟು (ಎಕ. III, ನಂಜನ. ೧೮೩–೫; 977). [?]

**ಒಲವಡಿಸು** (ಕ್ರಿ). **ಸಂತೋಷಪಡಿಸು; ಮೆಚ್ಚಿಸು:** ಆ ಸಮಯದಲಿ ಮೃಡನೊಡನೆ ಸನ್ನಿಧಿಯಾಗಿ ನಿಂದೊಲವಡಿಸಿ ತಾನೋಹಿಳನನಾ ಗಣನಾಥನಂ ಸಾರ್ದು (ಬಸಪು. ೪೪–೩೦).

[ಒಲವು$_1$ + ಪಡು$_1$ + –ಇಸು$_3$]

**ಒಲವರ** (ನಾ). **೧.** **ಬಯಕೆ; ಪ್ರೀತಿ; ಮೋಹ:** ಮನದೊಲವರಮುಳ್ಳೊಡೆ ಕುಡು ಮನೆಯೊಳ್ ಹರಿಗಗ್ರಪೂಜೆಯಂ (ಪಂಪಭಾ. ೬–೫೫); ಪಲವುಂ ವಸ್ತುಗಳೊಳ್ ತನಗೊಲವರಮಾಯ್ತೆಯ್ದೆ ಕಾಂತೆಗಂದೆಳವಸಿಱೊಳ್ (ಕಾದಂಪೂ. ೩೪೧); ಅಱಿವು ಶೂನ್ಯವೆಂದು ಬಿಡಲಿಲ್ಲ ಅದು ಶಿಲೆಯ ಮಱೆಯ ಪಾವಕ ತಿಲದೊಳಗಣ ತೈಲ ಅವರ ಒಲವರದಲ್ಲಿ ಕುಲವ ಕಾಣಬೇಕು ಬಸವಣ್ಣ ಪ್ರಿಯ ನಾಗೇಶ್ವರಲಿಂಗವನಱಿವುದಕ್ಕೆ (ಸರ್ವವ. ೫೨–೨೭೮); ಒಲವರವು ನಿನಗುಳ್ಳರಾಗಳೆ ನಿಲಿಸಿದಾ ನೀ ಬಂದು ಬಯಲಗ್ಗಳಿಕೆಯನೆ ಬಿಡೆ ಕೆದಱುತಿಹೆ (ಕುವ್ಯಾಕ. ೧೬–೨೬). **೨.** **ಮನೋಧರ್ಮ; ಮನಸ್ಸಿನ ಒಲವು; ಪ್ರವೃತ್ತಿ:** ಮೃಗದೊಲವರಮುಮನರಸನ ಬಗೆಯುಮನಱಿದೋಲಗಿಸಲ್ ನೆಟ್ಟಗೆ ಬಲ್ಲನುಳ್ಳೊಡವನಲ್ತೆ ಗುಣಾರ್ಣವ ಬೇಂಟೆಕಾಱನೋಲಗಕಾಱಂ (ಪಂಪಭಾ. ೪–೮೨). **೩.** **ಪಕ್ಷಪಾತ:** ಒಲಿದಿದನೊರ್ವಳ್ಗಿತ್ತಂದೊಲವರಮಾಗಿರ್ಕುಮೆಂದು ಸೊಸೆವಿರ್ಗೆಲ್ಲಂ ಸಲೆ ಚಮ್ಮಾವುಗೆಯನಾ ಲಲನೆ ಮಹೋತ್ಸಾಹದಿಂದೆ ಮಾಡಿಸಿಕೊಟ್ಟಳ್ (ಸುಕುಮಾ. ೧೦–೧೨೦); ಶಿಲೆ ಹಲವು ತೆಱದಲ್ಲಿ ಹೊಲಬಿಗರಿಂಗೆ ಹೊನ್ನಾಗಿ ಒಲವರವಿಲ್ಲದೆ ಅವರ ಭಾವದಲ್ಲಿ ನಿಲುವುದು ಶಿಲೆಯೋ ಮನವೋ (ಸರ್ವವ. ೬೬–೩೫೭); ಹಲವೆಲುವಿದ್ದ ಬಾಯಲ್ಲಿ ಒಲವರವ ನುಡಿದಡೆ ಅದು ಹೊಲೆಯರ ಬಾವಿಯಿಂದ ಕರಕಷ್ಟ (ವಚಸಂ. ೨೨೦–೭೧); ಒಲವರವಲಾ ಮುರಹರಂಗೀ ಬಲದೊಳಗೆ ಸಾಹಸವ ಸುಡುಸುಡಲೆನುತ ದುಗುಡವ ಹಿಡಿದು ಫಲುಗುಣನಿಳುಹಿದನು ಧನುವ (ಕುವ್ಯಾಕ. ೨೩–೧೮). [?]

**ಒಲವರಂಗೊಳ್** (ಕ್ರಿ). **ಪಕ್ಷವಹಿಸು; ಪಕ್ಷಪಾತ ಮಾಡು:** "ಒಲವರಂಗೊಳ್–ಪಕ್ಷಸ್ವೀಕಾರೇ" (ಶಮುಧಾ); "ಮನಂಗೊಳಿಸುಮುಳ್ಳೊಲವರಂಗೊಳ್ ಬಱಿಸಲೆಂಬಂತೆ ಮೇಣಱಿಗೆ ಸಹಜ ಕುಳನಂ" (ಸಂಜೀವ. ೨೮).

[ಒಲವರ + ಕೊಳ್$_1$]

**ಒಲವರಂಬಡು** (ಕ್ರಿ). ಸಂತೋಷಪಡು; ಮೆಚ್ಚು: ಹಿಮವನ್ನಗೇಂದ್ರನ ತನುಜೆ ತನ್ನ ನಱುಜವ್ವನದ ಪರಿಯ ಮುಂಗಾಣ್ಕೆಗುಡಲು ಬಿನ್ನಣದೊಳೊಲವರಂಬಡದೆ ಕೆಲಕೊತ್ತಿಸಿದೆ (ಉದ್ಭದೇ. ೨-೨). [ಒಲವರ + ಪಡು$_1$]

**ಒಲವಸ** (ನಾ). ಬೇಟ; ಪ್ರಣಯದ ಹಸಿವು (?): ಕೆಲದೊಳ್ ನೆಲವಾಳಿಗೆಯುಂ ನೆಲವಾಸುಂ ಕಾಂಡಪಟಮು ನಿಮಿರ್ದೊ[ಳ್]ಪ್ಪುವ ಸೀತಳವನಮುಂ ನವಿಲುಯ್ಯಲುಮೊಲವಸಮುಂ ಕೆಳೆದು ಪಡೆವುದಬಲೆಯರ್ಗೊಲವಂ (ಮದಶಿ. ೧೦-೩೧). [< ಒಲ್$_1$ + ಪಸ$_1$]

**ಒಲವಾನ್** (ಕ್ರಿ). = ಒಲವರಂಬಡು: ಇಂತು ವರಕೊಡಗೂಸು ಅಗಳೆ ದಂತಧಾವನಗೆಯ್ದು ಮಿಂದೊಲವಾಂತು ದಣಿಬವನುಟ್ಟು ಭಸಿತವನಿಟ್ಟು ಭಾಳದಲಿ (ಬಸವು. ೧೪-೫). [ಒಲವು$_1$ + ಆನ್$_1$]

**ಒಲವು$_1$** (ನಾ). ೧. ಸ್ನೇಹ; ಮೋಹ; ಪ್ರೀತಿ; ಆದರ: ಒಲವಿಂದಿಂತೆರ್ದೆಮುಟ್ಟೆ ಕೂರ್ತನೊಳನೇ ಕರ್ಣಂಗೆ ದುರ್ಯೋಧನಂ (ಪಂಪಭಾ. ೧೩-೬೦); ರವಿ ನುಡಿಸಿದನು ಕಂದನ ಮೇಲಣೊಲವಿನಲಿ (ಕುವ್ಯಾಭ. ೨೩-೧೦); ಶಿವ ನಿನ್ನೊಲವಿನಿಂದಾನಿನ್ನು ಬದುಕಿದೆನೆಂದಳಾ ಗಿರಿಜೆ (ಪ್ರಭುಲೀ. ೮-೨೨). ೨. ಆಸಕ್ತಿ; ಶ್ರದ್ಧೆ; ವಿಶೇಷ ಪ್ರವೃತ್ತಿ: ನಿನಗಿಂತಿನಿತೊಂದಲವುಳ್ಳೊಡೊಲ್ಲೆನೇ (ಪಂಪಭಾ. ೮-೬೩); ಪಿರಿದುಂ ನೀನೊಲವಿಂದೆ ಯತ್ನಿಸಿದೊಡಂ ಕಾದಂಬರೀದೇವಿಯಾ ಚರಣೋಪಾಸನ ಸೌಖ್ಯಮಾದೊಡೆನಗಾದತ್ತಲ್ಲಮೀ ಪುಟ್ಟಿನೊಳ್ (ಕಾದಂಉ. ೫೭೫); ಮನದೊಲವನಿತ್ತಲು ತಿದ್ದಬೇಹುದು (ಕುವ್ಯಾವಿ. ೨-೨೨); ವಿಮರ್ಶೆಯಲ್ಲಿ... ಒರೆಹಚ್ಚುವತ್ತ ಹೆಚ್ಚಿನ ಒಲವು ಕಾಣಬರುತ್ತದೆ (ಶ್ರೀಕೃಪ್ರ. ೬೯). ೩. ಉತ್ಸಾಹ; ಸಂತೋಷ; ಉಬ್ಬು: ಆತ್ಮಜೆಯನೊಲವಿಂದಿತ್ತು ಸಾಕ್ಷ್ಯಕ್ಕೆ ಕೈನೀರೆಱೆದಂ ಗಂಧರ್ವರಾಜಂ (ಕಾದಂಉ. ೮೧೦); ಮತ್ತಗಜ ಮಸ್ತಕದ ಪೊಸಮುತ್ತಂ ಬಲ್ಪಿಂದೆ ತಂದೆನೆಂದೊಲವಿಂದಂ... ಇತ್ತಂ (ಗಿಂಕ. ೧-೧೧೫); ಉಚ್ಚವದೊಲವೊಂದು ಮನದೊಳು ಮೊನೆದೋರ್ವ ಮಚ್ಚರವೊಂದು ಕಾಂತನಿಗೆ ಹೆಚ್ಚಳವಡಿಸಲ್ಕೆ (ಮೋಹತ. ೧೪-೬೪).

ಒಲವಿನಾಗಮ = ಕಾಮಶಾಸ್ತ್ರ: ಒಲವಿನಾಗಮದ ಗಣಿತದ ಗುಣಿತವ ತಾ ಕಲಿವೆನೆನುತ ಹರಿಸೂನು ನೆಲಸಿದ ಮೊದಲ ಮಗ್ಗಿಯ ಮೂರೇಱೆಯ ಗೆಲೆವಂದುವಾ ತ್ರಿವಳಿಗಳು (ಶ್ರೀಪಾಲ. ೩-೫೪). [< ಒಲ್$_1$ + -ವು]

**ಒಲವು$_2$** 'ಒಲಪು' ನೋ.

**ಒಲವುಣ್** (ಕ್ರಿ). ಪ್ರೀತಿಹುಟ್ಟು; ಪ್ರಣಯವುಂಟಾಗು: ಒಲವುಣ್ಮೆ ಸುಲಲಿತಾನ್ಯೋನ್ಯಪ್ರಿಯ ವಿನಯಕಲಿತಮತಿಯಿಂ ನವರಸಂ ಮಿಗೆ ಮಿಳಿತ ಸೌಖ್ಯಗಳು ಮೊಳೆಯೆ ವರ್ತಿಸುವ ಸಮಯದಲಿ (ಬಸವು. ೪೨-೧); ರಕ್ಷಿಸುವೆನೊಲವುಣ್ಮೆಯಿನಿತುಮಂ (ಬಸವು. ೫೩-೪೮). [ಒಲವು$_1$ + ಉಣ್]

**ಒಲವುದೋಱು** (ಕ್ರಿ). ಒಲೆತ ಅಥವಾ ಚಲನೆಯನ್ನು ತೋರು: ವಿಲಸಿತ ಕರಭೇದ ದೃಷ್ಟಿಭೇದವು ನೆಱೆಯೊಲವುದೋಱುವ ಶಿರಭೇದ ಸುಲಲಿತ ಸ್ಥಾನಕಭೇದ ಚಾರಿಯ ಭೇದದಲಿ ಭಾವಗಳ ತೋಱಿದರು (ಕಂನವಿ. ೮-೬೨). [ಒಲವು$_2$ (< ಒಲಪು) + ತೋಱು$_1$ (< ತೋಱ್)]

**ಒಲವೆರು** 'ಒಲವೆಱು' ನೋ.

**ಒಲವೆರೆ** (ಕ್ರಿ). ಪ್ರೀತಿಯನ್ನು ಎರೆ; ಬಹಳ ಅಕ್ಕರೆಯನ್ನು ತೋರಿಸು: "ಅವರನ್ನು ಕಟ್ಟಿಕೊಂಡು ನಮಗೇನು?" ಎಂದು ನಾನು ಹೇಳುವುದಕ್ಕಾಗುತ್ತದೆಯೆ? ಬಾಳಿತ್ತವರವರು; ಒಲವೆರೆದು ಬಾಳನ್ನು ಬೆಳಸಿದವರವರು (ರಾಮಾನೆ. ೭೧). [ಒಲವು$_1$ + ಎರೆ$_1$ (< ಎಱೆ$_1$)]

**ಒಲವೆಱು, ಒಲವೆರು** (ಕ್ರಿ). ಪ್ರೀತಿಯನ್ನು ಗಳಿಸು; ಆದರವನ್ನು ಹೊಂದು: ಮಾಚಯ್ಯಂ ಸಮುದ್ಧತ ವೃತ್ತಿಯಲಿ ನಡೆತಂದು ಸಾರ್ದೊಲವೆತ್ತಿ (ಬಸವು. ೩೭-೩೧); ಗುರುಸಿದ್ಧನಡಿವಿಡಿದು ಕೈವಲ್ಯದೊಲವೆತ್ತು ನಿತ್ಯ ಸುಖಿಯಾಗು ಮಾನವಾ (ಕೈಕವ. ೨-೨-೩); ಶಿವಾಧವನೊಲವೆತ್ತರಿಂದೆನುಗೆ ವಂದ್ಯರ್ (ರಾಜಶೇ. ೧-೧೫). **ಒಲವೆರು**: ಪಿರಿದುಂ ಚಿಂತಿಸಿ... ನಿನ್ನೊಳಗೀಕೆ ತಾನೆಯೊಲವೆತ್ತಾ ಪಾಂಗುಮಂ (ಶಾಕುಂತ. ೫೭-೧೪). [ಒಲವು$_1$ + ಪೆಱು$_1$]

**ಒಲವೇರು** (ಕ್ರಿ). ಆಸಕ್ತಿ ಹೆಚ್ಚಾಗು; ಪ್ರೀತಿಯಾಗು: ಚಾರುಮಣಿಶಿಲೆಯವಸುಗೆಸರಗಾರೆಯಲಿ ಒಲವೇರಿ ರಚಿಸಿದರೊಯೆಂಬಂತೆ (ನವಮೋ. ೨-೨೭). [ಒಲವು$_1$+ ಏರು$_1$ (< ಏಱ್$_1$)]

**ಒಲವೊಂದು** (ಕ್ರಿ). ಉತ್ಸಾಹಪಡು; ಹಿಗ್ಗು: ನಾವೊಲವೊಂದಿ ನಿಮ್ಮಿಂದವೆ ಮಡಿದೊಡಾ ನಿಮಿಷಮಾತ್ರದಲಿ ಕನಕದಿವ್ಯವಿಮಾನಗಳನುನಯಿಸಿ ಬಂದು... ರಜತಪರ್ವತಕೆ ಕೊಂಡೊಯ್ವವು (ಬಸವು. ೩೪-೧೦); ಶಿವನಾಜ್ಞಾಪನದಿನೊಲವೊಂದಿಯಾತನು ಪೋಗಲೂರಿಗೆ (ಬಸವು. ೪೯-೩೦). [ಒಲವು$_1$ + ಒಂದು$_1$]

**ಒಲಸು** (ನಾ). ಗುಳೆ ಎದ್ದು ಹೋಗುವುದು; ಸ್ಥಳಬಿಟ್ಟು ಹೋಗುವುದು: ಅಲರಂಬನ ದಾಳಿ ಬಪ್ಪ ವಾರ್ತೆಯ ಕೇಳ್ದಲಸದವನ ನಡೆನೋಳ್ಪ ಲಲನೆಯರೆದೆಯ ಬಲುಮೆ ನಾಣ್ಚಿಕೆಗೂಡಿ ಒಲಸು ತೆಗೆದು ಪೋದುದಾಗ (ನೇಮಿಸಂ. ೮-೩೦); ಪಱಿವಱಿವಲಸೊಲಸು ಕುತ್ತುಮಿಲ್ಲಾ ನಾಡೊಳ್ (ಶಬ್ದಾನು. ೧೪೦ ವ್ಯಾಖ್ಯಾ). [< ವಲಸೆ]

**ಒಲಸೆ** 'ವಲಸೆ' ನೋ.

**ಒಲಹು** 'ಒಲಪು' ನೋ.

**ಒಲಿ$_1$** 'ಒಲ್$_1$' ನೋ.

**ಒಲಿ$_2$** (ನಾ). ಓಲೆ; ಗರಿ; ಸೋಗೆ: ಗರಿಗಳ 'ಒಲಿ'ಯ ತುದಿಯಲ್ಲಿದ್ದ ಹಕ್ಕಿಗಳ ಗೂಡುಗಳು ಉಯ್ಯಾಲೆಯಂತೆ ತೂಗಲಾರಂಭಿಸಿದುವು (ಬಾಳಿಗಿ. ೧); 'ಹೊಗೆಸೊಪ್ಪು' ಎಂದು ತೆಂಗಿನ ಮಡಲಿನ ಒಲಿಯನ್ನು ಕೊಡುತ್ತಿದ್ದರಂತೆ (ಪರಾವ. ೧೨೭). [ದೇ. ‖ ತುಳು. ಒಲಿ]

**ಒಲಿಪಯ್ಯ** (ನಾ). ಒಬ್ಬಾತನ ಹೆಸರು: ಬಲ್ಲದ ತುಱುಗೊಳ್ಳೋಡೆ ಕೊಬ್ಬೆಯಯ್ಯಱಿದುಂ ಒಲಿಪಯ್ಯಂ ತುಱುವನಿಕ್ಕಿ ಬಿದಲ್ದ (ಎಕ. X, ಮುಳಬಾ. ೩೨-೩; 950). [ಒಲಿಪ$_0$ + ಅಯ್ಯ$_1$]

**ಒಲಿಯಿಸು** 'ಒಲಿಸು' ನೋ.

**ಒಲಿಸು, ಒಲಿಯಿಸು** (ಕ್ರಿ). ಒಲಿಯುವಂತೆ ಮಾಡು; ಮನವೊಪ್ಪಿಸು: ಒಲಿಸುವ ರೂಪು ಗಾಡಿಯೊಳೊಡಂಬಡೆ ಗಾಡಿ ವಿಳಾಸದೇಟಿಗ್ಗೆಯೊಳ್ ನೆಲಸೆ (ಆದಿಪು. ೧-೭೧); ಮುಕ್ತಿಲಲನೆಯನೊಲಿಸಲ್ ಕೈಗೈದು (ಅಜಿಪು. ೭-೪); ನೇಹವೆಂಬ ಕುಂಟಣಿ ಮಲ್ಲಿಕಾರ್ಜುನನೊಲಿಸಿದಿದ್ದರೆ ಇನ್ನೇವೆ ಸಖಿಯೆ (ಮಹಾದೇ. ೧೭-೧೦); ಭಕುತಿಯಲೊಲಿಸಿದರಲೈ ಪಾಂಡವರು ಯದುಕುಲಲಲಾಮನ (ಕುವ್ಯಾದ್ರೋ. ೧೫-೭೧). **ಒಲಿಯಿಸು**: ತರುಣಿ ದಮಯಂತಿಯನು ನೀಂ ಪರಿಚರಿಯದಲಿಯೆನಗೊಲಿಯಿಸಿರಿಯೆ[ಪಾಠಾಂ. ಯ ಮಾಡೆ]ಂದುರುತರದ ವಸ್ತುಗಳನಿತ್ತಬಲೆಯರ ಬೀಳ್ಕೊಟ್ಟು (ನಳಚ. ೩-೧೪).

ಒಲಿಸಿಕೊಳ್, ಒಲಿಸಿಕೋ = ಮೆಚ್ಚಿಸು: ಅವ ತಪದಲಿ ಬಳಲಿ ಕರುಣಾಳುಗಳ ದೇವನನೊಲಿಸಿಕೊಂಡನೊ ಶಿವಶಿವಾ (ಕುವ್ಯಾದ್ರೋ. ಪರಿ. ೫೧೧); ಒಲಿಸಿಕೋ ನೀನಾತನನು ಕಟ್ಟೊಲುಮೆಯವರಿಲ್ಲಾತ ನೀ ಹೋಗೊಲಿಯದಿರನು (ತೊರರಾ. ೩-೪-೧೪). [ಒಲ್$_1$ + -ಇಸು$_3$]

**ಒಲು$_1$** 'ಒಲ್$_1$' ನೋ.

**ಒಲು$_2$** 'ಪೋಲ್' ನೋ.

**ಒಲುನಗೆ** (ನಾ). ಪ್ರೀತಿಯ ನಗೆ; ಅಕ್ಕರೆಯ ನಗೆ: ಒಲು[ಪಾಠಾಂ. ನಲು]ನಗೆಯುಂ ಶುಭಂಕರನೊಳಲ್ಲುಗುತುಂ . . . ಯಕ್ಷಿಯಕ್ಷರೆಮುಗೀ ಗೊಲವಿಂದೆ ದಯಾವಲೋಕಮಂ (ಅರ್ಧನೇ. ೧–೯).
[ಒಲು$_1$ (< ಒಲ್$_1$) + ನಗೆ]

**ಒಲುಪೆ** (ನಾ). (ಮದುವೆ ಅಥವಾ ಪ್ರಯಾಣದ ಸಂದರ್ಭಗಳಲ್ಲಿ) ಉಚಿತವಾಗಿ ಕೊಡುವ ಆಹಾರ ಸಾಮಗ್ರಿ; ಭತ್ಯ; ಕಾಣಿಕೆ: ಹಡಪಗಾಣಿಕೆ ಬಿಟ್ಟಿ ಬಿಡಾರ . . . ಉಡುಗೊಱೆವೊಲುಪೆ ಮುಂತಾಗಿ (ಎಕ. VIII, ತೀರ್ಥಹ. ೧೨೯–೮೨; 1404). [< ಉಲುಪೆ]

**ಒಲುಮೆ** 'ಒಲ್ಮೆ' ನೋ.

**ಒಲುಮೆಕಟ್ಟು** (ನಾ). ಸ್ನೇಹದ ಬಂಧನ; ಪ್ರೀತಿಯ ಬಂಧನ: ಗೆಲಿದು ನಾಡನು ಬೆಸೆದಳು ನೆಲದೊಲುಮೆಕಟ್ಟನು ಹೊಸೆದಳು (ಹೊಂಗಳು. ೩–೮). [ಒಲುಮೆ (< ಒಲ್ಮೆ) + ಕಟ್ಟು$_2$]

**ಒಲುಮೆದೋಱು** (ಕ್ರಿ). ಪ್ರೀತಿಯನ್ನು ತೋರು: ಹುಸಿಯೊಲುಮೆ ದೋಱುವರಾ ಪರಿಯಲಿ ಹೃದಯಗೊಡರನೃತಗಳನಾಡುವರು (ನಳಚ. ೩–೨೫). [ಒಲುಮೆ (< ಒಲ್ಮೆ) + ತೋಱು$_1$ (< ತೋಱ್)]

**ಒಲುಮೆಮುದ್ದು** (ನಾ). ವಶಮಾಡಿಕೊಳ್ಳಲು ಪ್ರಯೋಗಿಸುವ ಮುದ್ದು; ಮೆಚ್ಚುಮುದ್ದು: ಅವಳು ಮಾಡಿದ ಪುಣ್ಯಫಲದಿಂದೋಪನ ವಳ ಕೈವಶವಾಗಲದಕೆ ಅವಳಾತಗೊಲುಮೆಮುದ್ದನು ತಿನಿಸಿದಳೆಂದು ತಮತಮಗೆಲ್ಲರಾಡುವರು (ನೇಮಿಸಂ. ೧೯–೪೪).
[ಒಲುಮೆ (< ಒಲ್ಮೆ) + ಮುದ್ದು$_1$ (< ಮುರ್ದು)]

**ಒಲುಮೆವಂಚಕ** (ನಾ). ಒಲಿದವರನ್ನು ವಂಚಿಸಿದವನು; ವಿಶ್ವಾಸ ಘಾತಕ: ಒಲುಮೆವಂಚಕರೆಲ್ಲಿ ದರೆಲ್ಲಿ ದರೆಂದಲರ್ಗೋಲಿಟ್ಟಂಗಭವನು ನಲವಿಂದ ನಡಸುವ ವೆಳ್ಳಿವಟ್ಟಲವೊಲುಜ್ಜಲಿಸಿದನಾ ಚಂದ್ರ (ಶ್ರೀಪಾಲ. ೨–೯೨). [ಒಲುಮೆ (< ಒಲ್ಮೆ) + ವಂಚಕ]

**ಒಲೆ$_1$** (ಕ್ರಿ). ೧. ತೂಗಾಡು; ತೊನೆ; ಬಳಕು: "ಒಲೆ– ಆಂದೋಲನೇ, ಅಶ್ಮಂತಕೇ ಚ" (ಶಮಧಾ); ಮಲೆಯುತ್ತೊಲೆಯುತ್ತೆ . . . ಸುತ್ತಿಬರು ತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೧೧೧೨ ಶೂದ್ರಕ); ಕಟ್ಟಲಿಸುತ್ತಿರ್ಪಲೆವಳ್ಳಿ ಪಣ್ತೊಲೆವ ನಾರಂಗಂ (ಆದಿಪು. ೧–೬೭); ಫಳಭಾರದಿಂದೊಲೆದು ತೂಗಿ ಬಾಗುವ ಮರಂ (ಹಚಕಾ. ೬–೪೭); ಕುಲಾದ್ರಿಗಳೊಲೆದವೆಡಬಲಕೆ (ಕುವ್ಯಾದ್ರೋ. ೧೪–೩೯). ೨. ಅಲ್ಲಾಡಿಸು; ಅತ್ತಿತ್ತ ಆಡಿಸು; ಚಲಿಸು: ಮುಖದಲಿ ಕಿಱುನಗೆಯ ಕೇವಣಿಸಿ ನುಡಿದನು ಬೆರಳನೊಲೆದೊಲೆದು (ಕುವ್ಯಾದ್ರೋ. ೬–೩೩); ತಂಬೆಲರ ಸೊಗಸಿಂಗೆ ತಲೆದೂಗುವಂತೆ ತಳದಂಬುಜದ ಪರಿಮಳಕೆ ಶಿರವ ನೊಲೆವಂತೆ (ಜೈಮಿಭಾ. ೩–೬). ೩. ಒಂದು ಪಕ್ಕಕ್ಕೆ ಬಾಗು; ಓರೆಯಾಗು; ವಾಲು: ಆ ಪುರದ ಶಿವಲಿಂಗವೊಲೆದಿಪ್ಪುದಂ ಕಂಡು (ಕೊಂಗುರ. ದೇ. ೧೫೪–೧); ಕೊರಳೊಲೆದು ರೋಹಿತವ ಉಗಿದವು ದಿಗ್ದಂತಿಗಳು (ಮೋಹತ. ೩೭–೪೭). ೪. ಆಗು; ಒದಗು: ಒಲೆಗುಂ ಕೆಳಗಣ್ಗೆ ಕಿಟ್ಟಿಕೆನೆಂಬಾದೇಶಂ (ಶಮುದ. ೧೭೬).

**ಒಲೆದಾಟ** = ತೂಗಾಟ; ತೊನೆಯುವಿಕೆ: ಶಿಶುವನಬ್ಜಪತ್ರದಲ್ಲಿರಿಸಿಯದಱೊಲೆದಾಟಕುರ್ವಿ ಸಂಚರಿಸುವರಸಂಚೆಗಳಿಂ (ಪದ್ಮರಾ. ೮–೩೯); ಸಾಲ ಸೀಗುರಿಗಳೊಲೆದಾಟದಿ೦ (ಚೆಬಪು. ೨೭–೧೦). **ಒಲೆದಾಡು** = ತೂಗಾಡು; ಓಲಾಡು: ಸೋರ್ಮುಡಿ ಲಂಬಿಸಿ ಕರ್ಣ ಪೂರಿತೋತ್ಪಲಮೊಲೆದಾಡೆ (ಗಿರಿಕ. ೨–೯೦); ಜಡೆಯೊಲೆದಾಡಲೆಡಬಲಕೆ (ಕುವ್ಯಾಅ. ೪–೪೮).
[ದೇ. ‖ ತಮಿ. ಉಲ್ಲೈ; ಮಲ. ಉಲಯು, ಉಲೆಕ್ಕು; ತುಳು. ಉಲಿ; ತೆಲು. ಉಲಿಯು, ನುಲಿಯು]

**ಒಲೆ$_2$** (ಕ್ರಿ). ಒಪ್ಪು; ಶೋಭಿಸು; ಪ್ರಕಾಶಿಸು: ಮೃಡನ ತೇಜದ ಲೊಲೆವ ದ್ರೋಣಗೆ ನುಡಿದಿಯರು ಹರಿವಾಣದಾರತಿ ಹಿಡಿದು ತಂದೆತ್ತಿದರು (ಕುವ್ಯಾದ್ರೋ. ಓರಿಇ. ೧–೩೭ ಅಡಿಟಿ); ಬೆನ್ನಂ ಮುಸುಂಕಿ ಮುಡಿಯಲೆಯೆ ಕಣ್ಬೆಳಗೊಲೆಯೆ ಚನ್ನೆಯರ್ (ಪದ್ಮರಾ. ೮–೪೪).
[ದೇ. ‖ ತುಳು. ಉಲೆ; ತೆಲು. ಒಲಯು]

**ಒಲೆ$_3$** (ಕ್ರಿ). ನುಡಿ; ಮಾತಾಡು: "ಬಗ್ಗು ಬಿಪ್ಪಂಡಮೊಲೆಯೆ ಚಪ್ಪರಣೆ" (ಕಬ್ಬಿಕೈ. ೪೨); ಬಾಯ್ದೆಱೆದೊಲೆಯುತ್ತೆ ಕೈನೆಗಪಿ ಜಾಗಿಸಿ ಕುರ್ಗುತೆಯೇಡಿಸುತ್ತೆ . . . ಅಲ್ಲಿಯದೊಂದು ಮರ್ಕಟಂ (ಗಿರಿಕ. ೫–೨೦); ಸುಭಟರಹುದೋ ಜಾಗು ಜಾಗೆನುತೊಲೆದನಾ ದ್ರೋಣ (ಕುವ್ಯಾದ್ರೋ. ೨–೧೧). [< ಉಲಿ$_1$]

**ಒಲೆ$_4$** (ನಾ). (ಅಡುಗೆ ಮಾಡುವುದಕ್ಕೂ ನೀರು ಕಾಯಿಸುವುದಕ್ಕೂ ಮಾಡಿದ) ಬೆಂಕಿ ಉರಿಸುವ ಸಲಕರಣೆ, —ಸ್ಥಳ; ಅಶ್ಮಂತಕ; ಅಧಿಶ್ರಯಿಣಿ: "ಒಲೆ– ಆಂದೋಲನೇ, ಅಶ್ಮಂತಕೇ ಚ (ಅಡಿಗೆಯೊಲೆ)" (ಶಮಧಾ); ಒಲೆಯ ಕಿಚ್ಚಿನ ಮೃದ್ಭಾಜನದೆಸರನೀರ ಬಾಣಸಿಗರುರಿಪುವ ಗಾಳಿಯ ಸಂಯೋಗದೊಳ್ ಚೈತನ್ಯಮದೇಕೆ ಪುಟ್ಟಿದು (ಶಾಂತಿಪು. ೮–೧೩೭ ವ); ಒಲೆ ಹತ್ತಿಯುರಿದೊಡೆ ನಿಲಬಹುದಲ್ಲದೆ ಧರೆ ಹತ್ತಿಯುರಿದೊಡೆ ನಿಲಬಾರದು (ಬಸವ. ೨೬); ಈ ಸಾವ ಕೆಡುವ ಗಂಡರ ನೊಯ್ದು ಒಲೆಯೊಳಗಿಕ್ಕು (ಮಹಾದೇ. ೧೬–೭); ಕೆಲನುಂ ಬಲನುಂ ನೆಲನುಂ ದವಾಗ್ನಿ ಸುಟ್ಟೊಲೆಯವೊಲಾಗೆ (ಗಿರಿಕ. ೯–೨೫); ಅಟ್ಟಮೇಲೆ ಒಲೆ ಉರಿಯಿತು ಕೊಟ್ಟಮೇಲೆ ಅಳಿಯ ಉರಿದ (ಗಾದೆ).

**ಒಲೆಹೂಡು** = ಒಲೆಯನ್ನು ಸಿದ್ಧಪಡಿಸು; ಅಡುಗೆಯ ಏರ್ಪಾಟುಮಾಡು: ಒಲೆಹೂಡಿ, ಅಡುಗೆ ಮಾಡುತ್ತಿದ್ದಾಗ ಮಾಡಿದ ಅನ್ನವೆಲ್ಲ ರಕ್ತವಾಯಿತು! (ನನ್ನೂರು. ೪೪). **ಒಲೆಹೊತ್ತಿಸು** = ಒಲೆಗೆ ಉರಿಹಾಕು: ಅಡಿಗೆಗೆ ಆಗಲೆ ಒಲೆಹೊತ್ತಿಸಿ ಆಗಿತ್ತು (ರೂಢಿ).
[ದೇ. ‖ ತಮಿ. ಉಲ್ಲೈ; ಮಲ. ಉಲ; ತುಳು. ಉಲೆ; ಕೊಡ. ಒಲೆ; ಕುವಿ. ಹೊಲ್ಲು]

**ಒಲೆ$_5$** (ನಾ). ಒಲೆದಾಡುವಿಕೆ; ತೂಗಾಟ; ಅಲ್ಲಾಟ: "ತೊನೆ, ಒಲೆ . . . ನಡುಕಂ– ಈ ೬ ಕಂಪನಂ" (ಕಶಸಾ. ೩೧–೬೬೦). [< ಒಲೆ$_1$]

**ಒಲೆ$_6$** (ನಾ). ಒಂದು ಊರಿನ ಹೆಸರು: ಭಟ್ಟವುತ್ತರ್ ಸಾಸಿರ್ವರು ಒಲೆಯ ಅಯ್ನೂರ್ವ್ವರುಬೆಯ ಮೂನೂರ್ವ್ವರುಂ . . . ಕೊಟ್ಟಸ್ಥಿತಿಯ ಕ್ರಮ (ಎಕ. XVI, ತುಮಕೂ. ೮೧–೮; 902). [?]

**ಒಲೆಕಲ್** 'ಒಲೆಗಲ್' ನೋ.

**ಒಲೆಗಲ್, ಒಲೆಕಲ್, ಒಲೆಗಲ್ಲು** (ನಾ). ಒಲೆಗೆ ಇಟ್ಟಕಲ್ಲು; ಒಲೆಯಗುಂಡು: ಬೀಡುವಿಡಲ್ ನೆಲನುಮೊಲೆಗಲ್ಲಳ್ಗೆ ಬೆಟ್ಟುಗಳುಂ . . . ಆ ಪಡೆಗೆ ನೆಱೆಯವೆನಿಸಿ (ಪಂಪಭಾ. ೯–೧೦೪ ವ); ಕಲ್ಲೊತ್ತಿಗರ್ಕದುಗ್ಧವ ಮೆಳ್ಳಿಸಿಯೊಲೆಗಲ್ಲ ಸೇಕಗೆಯ್ಯಲ್ ಮಾಣ್ಬುಂ (ಲೋಕೋಪ. ೯–೧೬೫); ಒಲೆಗಲ್ಲೊಲ್ಕಾಯ್ದುವೆಂಟು ದಿಗಿಭದ ಬಿದುಗಳ್ (ಜಗವಿ. ೧೭–೭೧). **ಒಲೆಕಲ್**: ಉರಿವ ಕಿಚ್ಚಿನಿಂದಾ ಗಿರಿಯೊಲೆಕಲ್ಲವೊಲಾಯ್ತು (ನೇಮಿಸಂ. ೧೧–೪೦). **ಒಲೆಗಲ್ಲು**: ನೆಲ ಕಾದ ಕಾವಲಿಯಂತಾಯ್ತು . . . ಬೆಟ್ಟುಗಳುವೊಲೆಗಲ್ಲಿನಂತಾದವು (ಚಂಪ್ರಸಾಂ. ೨೦–೬).
[ಒಲೆ$_4$ + ಕಲ್$_3$]

**ಒಲೆಗಲ್ಲು** 'ಒಲೆಗಲ್' ನೋ.

**ಒಲೆಗುಂಡು** (ನಾ). = ಒಲೆಗಲ್: ಒಲೆಗುಂಡನೊಬ್ಬನೆ ಮೆಲಬಹುದು ಎಂದಿಹರೆ ಮೆಲಬಹುದು ಎಂಬುವನೆ ಜಾಣ (ಸರ್ವಜ್ಞ. ೧೦೩೪); ರಸವನ್ನು ಕಬ್ಬಿಣದ ಕೊಪ್ಪರಿಗೆಗಳೊಳಗೆ ಹಾಕಿ ಒಲೆಗುಂಡಿನಮೇಲೆ ಇಟ್ಟು (ಮುಂಬಯಿ. ೩–೪೭). [ಒಲೆ$_4$ + ಗುಂಡು$_2$]

**ಒಲೆಗುಪ್ಪು** (ನಾ). ೧. ಒಲೆಯಮೇಲೆ ಪಾತ್ರೆಗಳು ಮಟ್ಟವಾಗಿ ಕೂಡಲು ಮಾಡಿದ ಕುಪ್ಪೆ. ೨. ಒಲೆಯ ಎಡಬಲಗಳಲ್ಲಿರುವ ಕೋಡುಗಳಲ್ಲಿ ಉರಿಹೋಗದಂತೆ ತಡೆಯಲು ಮಾಡಿದ ಮಣ್ಣಿನ ಉಂಡೆ (ಕಿ). [ಒಲೆ$_4$ + ಕುಪ್ಪು$_4$]

**ಒಲೆತ** (ನಾ). ತೂಗಾಟ; ಹೊಯ್ದಾಟ; ಕಂಪನ (ಕಿ). [ಒಲೆ$_1$ + -ತ$_2$]

**ಒಲೆಪ** (ನಾ). ತೂಗಾಟ; ಒಲೆದಾಟ: ಮುತ್ತಿನ್ನೆಸರಂ ಮೆಯ್ಯೊಲೆಪಕ್ಕೆ ರೆಯ್ಯಮೆನೆ ತೂಗೆ ವಿಲಾಸದಿನುಯ್ಯಲಾಡಿದಳ್ (ಚಂದ್ರಪ. ೮-೪೭); ಎಲರೊಲೆಪಕೆ ನನೆವೂದಳಿದೆಳಲತೆಯಲೆವಂತೆವೊಲು ಪಳಿಗೊಱಡು ಅಲುಗುವುದೆ (ಶ್ರೀಪಾಲ. ೧-೨೧); ಕೆಲರಂ ಸಿರಿದಲೆಯೊಲೆಪದಿಕಿಱಿದುಂ ಬೆರಲ ಕೊನೆಯ ಸನ್ನೆಯೊಳು . . . ಬೀಳ್ಕೊಟ್ಟಂ (ಜಯಕಾ. ೧೦-೬೩). [ಒಲೆ$_1$ + -ಪ$_2$]

**ಒಲೆಯಡುಕು** (ಕ್ರಿ). ಒಲೆಹೂಡು; ಅಡುಗೆಮಾಡು: ವಿಶಾಖನಂದನನುಂ ತನ್ನ ರಾಜ್ಯಮಂ ದಾಯಿಗನೆೞೆದುಕೊಳೆ ನೆಲೆಗೆಟ್ಟು ಪೆಜರ ಬೆಸನದೊಳೊಲೆಯಡುಕುವುದುಂ (ಚಾವುಂಪು. ೨೭-೧೦). [ಒಲೆ$_4$ + ಅಡುಕು]

**ಒಲೆಸರ** (ನಾ). ಒಲೆಯ ಸಾಲು, —ಪಂಕ್ತಿ; ಉದ್ದವಾದ ಒಲೆ: ಅಜ್ಜಿ ಒಲೆಸರದ ಹತ್ತಿರ ಬೆಂಕಿಗೆ ಬೆನ್ನುಮಾಡಿ ಸೊಂಟ ಕಾಯಿಸಿಕೊಳ್ಳುತ್ತಿದ್ದಳು (ಮಲೆಮ. ೭೫೧). [ಒಲೆ$_4$ + ಸರ$_6$]

**ಒಲ್ತರ್** (ಕ್ರಿ). ಒಲಿದು ಬರು; ಪ್ರೀತಿಯಿಂದ ಬರು: ಲಲನಾಪ್ರೇಮವಿಹಾರಮುಂ ಕವಿತೆಯುಂ ತಮ್ಮಿಂದೆ ತಾಮೊಲ್ತರಲ್ ಲಲಿತಂ ಸೇವನಯೋಗ್ಯಂ (ಸಂಸಪ. ೧೦-೧). [ಒಲ್$_1$ + ತರ್]

**ಒಲ್ದೆಱೆ** (ನಾ). ಒಂದು ಬಗೆಯ ತೆರಿಗೆ: ಪುನರ್ದ್ದತ್ತಿಯಾಗಿ ನಾಲ್ಕುಂ ಸುಂಕದೊಳವೆರಡೊಲ್ದೆಱೆ ಕೊಡವೀಸವ ಸಹಿತಮಾಗಿ (ಸೌಇಇ. XX, ೬೦-೨೪; 1088). [ಒಲ್$_0$ + ತೆಱೆ$_3$]

**ಒಲ್ವು** 'ಒಲವು' ನೋ.

**ಒಲ್ಮೆ**, ಒಲುಮೆ (ನಾ). ೧. ಪ್ರೀತಿ; ಪ್ರಣಯ; ಅನುರಾಗ; ಅಕ್ಕರೆ: ಸೊಬಗಂ ಒಲ್ಮೆಯುಂ ಧೈರ್ಯಮಂ (ವಡ್ಡಾರಾ. ೩೦-೧೦); ಬಾರೆನ್ನೊಲ್ಮೆಯೆ ಬಾರೆ ತತ್ತ್ವಸುಖಮೇ (ಗಿರಿಕ. ೩-೧೦೫); ಒಳಗುವೇಳುವುದೊಡನಾಡುವುದೊಲಿದೊಲ್ಮೆಗೆಳಸುವುದೇಕವೆನಿಪುದು (ಹದಿಬ. ೩-೪೨). ೨. ಅನುಗ್ರಹ; ದಯೆ: ದೈವದೊಲ್ಮೆಯಿರಲಾ ಕಾಲಾನುಕಾಲಕ್ಕೆ ತಾಂ ಬಡವಂ ಬಲ್ಲಿದನಾಗನೇ (ಸೋಮೇಶ. ೩೫); ಶಿಷ್ಟರನೊಲ್ಮೆಯಿಂ ಪೊರೆದು (ದಶಕು. ೧೪-೨೪). **ಒಲುಮೆ**: ೧. ಅಂಗ ಮಾಸಿದಲ್ಲಿ ಜಲದೊಲುಮೆ (ಕೋಲಶಾಂ. ೪೨); ಶರಣರೊಡನೊಲುಮೆಯಿಂ ಲಿಂಗಾರ್ಚನಂಗೆಯ್ದು (ಬಸರ. ೯-೧೨೩); ಎಡದಲ್ಲಿ ಗಣಿಕೆಯರೊಲುಮೆಯ ಕವಿಗಳು ಮುಂದೆ (ಭರಚ. ೧-೫೮); ಏರಿ ಮೇಲಣ ಪಂಜು ನೀರೊಳಗೆ ಉರಿದಂತೆ ನಾರಿಯರೊಲುಮೆ [ಪಾ ಠಾಂ. ವೆ] ತನಗೆಂಬ ಮರುಳಂಗೆ ಮಾರಿ ಹಿಡಿದಿಹುದು (ಸರ್ವಜ್ಞ. ೧೭೬೧). ೨. ನೀವೆಮಗೊಲುಮೆಯುಳ್ಳೊಡೆ . . . ಗಂಗಾದೇವಿಯುಟ್ಟಂಬರವನರ್ಥಿಸಿ ತಂದು ಕೊಟ್ಟುದ್ಧರಿಸು (ಬಸಪು. ೧೧-೨೮). [ಒಲ್$_1$ + -ಮೆ$_1$]

**ಒಲ್ಮೆಗ** (ನಾ). ಪ್ರೀತಿಯುಳ್ಳವನು; ಪ್ರಣಯಿ: ಒಂದುಸಮಯದೊಲ್ಮೆಗರೊಳು ಸಮಸುಖದಿಂದ ಕೂಟದಿನಿತು ಮುಂದಣ ಭವದ ಸಗ್ಗದ ಸಾಸಿರಸುಖದಂದವಲ್ಲವೆ ಮೋಹಿಗಳಿಗೆ (ನೇಮಿಸಂ. ೧೯-೭೭); ನನ್ನಿಗರಿಂಪುಗಾಱರಿನಿವಾತುಗರಿಚ್ಚೆಗರಾರ್ಪರೊಲ್ಮೆಗರ್ ಚೆನ್ನಿಗರ್ . . . ತನ್ನೊಡನಾಡೆ ನಾಡೆ ನಲಿಗುಂ ಚಿಕದೇವನೃಪಂ (ಚಿಕವಿ. ೫-೧೧೦). [ಒಲ್ಮೆ + -ಗ$_3$]

**ಒಲ್ಮೆನೋಟ** (ನಾ). ಪ್ರೇಮದ ನೋಟ; ಪ್ರಣಯದೃಷ್ಟಿ: ಓವೋ ಸುರನಪ್ಪೊನಾವನುಂ ಅವಗಂ ಒತ್ತಂಬದಿಂ ಒಳಪಡಿಸದಿರ್ಕೆನ್ನನ್, ಇದಿರಿಲ್ಲದೊಲ್ಮೆನೋಟದಿಂದೆನ್ನನ್ (ಬದ್ಧಪ್ರ. ೪೭-೧೦೩೬). [ಒಲ್ಮೆ + ನೋಟ]

**ಒಲ್ಮೆವೆಂಡಿತಿ** (ನಾ). ಪ್ರೀತಿಪಾತ್ರಳಾದ ಹೆಂಡತಿ: ಶತ್ರುಘ್ನಂಗೆ ಕೇಳ್ ಶ್ರುತಕೀರ್ತಿ ತಾನಾದಳೊಲ್ಮೆವೆಂಡಿತಿ (ಶ್ರೀರಾಮಾ. ೫೧-೬೩೨). [ಒಲ್ಮೆ + ಪೆಂಡಿತಿ]

**ಒಲ್ಮೆವೆಱು** (ಕ್ರಿ). ಅನುರಾಗ ಹೊಂದು: ಶಿವಾಕ್ಷಮಣಿಪ್ರತಾನಮುಂ ಧರಿಸುತ್ತಂಗದೊಳೊಲ್ಮೆವೆತ್ತು ಶಿವಮಂತ್ರಧ್ಯಾನಯುಕ್ತಂ (ವೃಷವಿ. ೨೩-೩). [ಒಲ್ಮೆ + ಪೆಱು$_1$]

**ಒಲ್ಲಗೆ** (ಅ). ಮೆಲ್ಲನೆ; ನಿಧಾನವಾಗಿ; ಸಾವಕಾಶವಾಗಿ: ನಿಲ್ಲೆಲೆ ಭವ್ಯಯೆಂಬರು ಯೋಗಿಗಳು ದೇವರೊಲ್ಲಗೆ ಚಿತ್ತೈಸಿಯೆನುತ (ಭರಚ. ೩-೧೨೨); ನಮಿರಾಜನೆಂದು ನೀನೊಲ್ಲಗೆ ಕರೆಯಬೇಕೆಂದು (ಭರಚ. ೩೯-೫೩). 'ಒಲ್ಲನೆ' ಪರಾ.

[ಒಲ್ಲ$_0$ + -ಅಗೆ$_3$. / ತೆಲು. ಒಲ್ಲ = ನಿಧಾನವಾದ, ನೇರವಾದ]

**ಒಲ್ಲಣಿಗೆ, ಒಲ್ಲವಣಿಗೆ** (ನಾ). ಒದ್ದೆಯಾದ ಬಟ್ಟೆ; ಸ್ನಾನಮಾಡುವಾಗ ಉಡುವ ಬಟ್ಟೆ: "ಸ್ನಾನವಸ್ತ್ರ – ಒಲ್ಲಣಿಗೆ" (ನೀತಿವಾ. ೧೭-೫೮); ಅವರ್ಗೆಲ್ಲಂ ನೀರನಿಡಿಸಿ ತಲೆಯಂ ಪೂಸಿಸಿಯೊಲ್ಲಣಿಗೆಯನುಡಿಸಿ ತಲೆಯೊಳ್ ಕಟಿಯಂ ಪೊಯ್ದಾಗಳ್ (ವಡ್ಡಾರಾ. ೧೮-೨೩); ತನ್ನಂ ಮುನ್ನೆ ಮುಯ್ಯೇಱ್ ಸೂೞ್ವರೆಮೊಲ್ಲಣಿಗೆಯಂ ಪಿೞಿದಂತೆ ಪಿೞಿದ ಪಗೆಗೆ ರಥಚಕ್ರಮಂ ನುಂಗುವುದುಂ (ಪಂಪಭಾ. ೧೨-೨೦೬ ವ); ಏನೀ ನಿನ್ನೊಲ್ಲಣಿಗೆಯ ನಾನೇ ಪಿೞಿವಂತೆ ಹೀನೆಯಲ್ಲಂ (ನೇಮಿಪು. ೧೩-೩೫); ಏಂ ಜಾಣನಯ್ ತಣ್ಪಲೊಳ್ ಪರಪಿದೊಡೆ ಬೇಗಮಾರುವುದಲ್ತೆ ಪೇಳೊಲ್ಲಣಿಗೆ (ಶ್ರೀರಾಮಾ. ೨೩೦-೫೪). **ಒಲ್ಲವಣಿಗೆ**: ಅಂತು ಕುಮಾರನೆನೆನೂ[ಯೊ]ಲ್ಲವಣಿಗೆಯಂ ಪೆಳದಿರಿಮೆಂದು ಸತ್ಯಭಾಮೆಗೆ ಪೇೞ್ದೊಡಾಕೆ ಕಡುಮುಳಿದು ನೋಡಿ, ಏನೇನೋ ನಿನ್ನುಟ್ಟೊಲ್ಲಣಿಗೆ ನಾನೇಂ ಪಿೞಿವುದೆ ಕರಂ ತಕ್ಕುದು (ಬಂಹರಿ. ೧೩-೭ ವ, ೮).

[ಪ್ರಾ. ಉಲ್ಲಣಿಯಾ (< ಸಂ. ಆರ್ದ್ರಯಣಿಕಾ)]

**ಒಲ್ಲನೆ** (ಅ). = ಒಲ್ಲಗೆ: ಅದಱ ನಡುಪಟ್ಟ ಕಟ್ಟಣಕದ ವಾದದ ಕಾಯ್ಪಿನೊಳೊಲ್ಲನೊನಲ್ದು ಕಲ್ಲನೆ ಕನಲ್ದು (ಅನಂಪು. ೧೩-೨೦ ವ); ತಮ್ಮ ಮಂದಿರಮಂ ಪೊಲ್ಲನೆ ಪೊಕ್ಕು (ಅಂಜಚ. ೫-೭೦); ಕಾಂವಂ, ಕಾವಂ; ಒಂಲನೆಯೊನಲ್ದು, ಒಲ್ಲನೆಯೊನಲ್ದು (ಭಾಷಾಭೂ. ೯ ವೃತ್ತಿ).

ಒಲ್ಲನುಲಿ= ಮೆಲ್ಲಗೆ ಮಾತಾಡು; ಮೃದುವಾದ ಸದ್ದುಮಾಡು: ಕೌರವಬಲಮೆಲ್ಲಮೊಲ್ಲನುಲಿದೋಡಿ ವೈಕರ್ತನನ ಮಱೆಯಂ ಪುಗುವುದುಂ (ಪಂಪಭಾ. ೧೨-೧೩೫ ವ); ವಾನರಬಲಮೆಲ್ಲಮೊಲ್ಲನುಲಿದೋಡಿ (ಪಂರಾಮಾ. ೧೩-೮೪ ವ); ಸುರಾಸುರ ನಿಕುರುಂಬವಂಬರದೊಳೊಲ್ಲನುಲಿಯೆ (ನೇಮಿಪು. ೧೨-೪೯ ವ). 'ಒಲ್ಲಗೆ' ಪರಾ.

[ಒಲ್ಲ$_0$ + -ಅನೆ$_1$. / ತೆಲು. ಒಲ್ಲನ]

**ಒಲ್ಲಭ** (ನಾ). ಒಡೆಯ; ಸ್ವಾಮಿ; ಪತಿ: ಬಲ್ಲತನವಿಲ್ಲದ ಬಱಿವಾಯಮಾತಿನ ಗೆಲ್ಲ ಸೋಲಕ್ಕೆ ಹೋರಿದಡೆ ಒಲ್ಲಭ ನಿಃಕಳಂಕ ಮಲ್ಲಿಕಾರ್ಜುನನವರನೊಲ್ಲನಾಗಿ (ಮೋಳಿಮಾ. ೧೮೮-೭೦೫); ಚಿತ್ತದೊಲ್ಲಭನಾರು ಶೋಕವಿದೆತ್ತಲು (ನಿಭಾಗ. ೧೦-೮೮-೧೮); ಲಂಕಾದ್ರಿಗೊಲ್ಲಭಂ ಬಳಿಕಾಗಿ ಸರ್ವಸನ್ನಾಹದಿಂ ದಿಗ್ಜಯಕ್ಕೈತಂದನು (ಪರಶು. ೧೪-೨೫).

[< ಸಂ. ವಲ್ಲಭ]

**ಒಲ್ಲಭೆ** (ನಾ). ಒಡತಿ; ಸ್ವಾಮಿನಿ; ಯಜಮಾನಿ: ಧರೆಯಾಣ್ಮನೊಲ್ಲಭೆಯು ಬರುವ ಮಾರ್ಗದಲಿ (ಹಮಚ. ೧೭೫). [< ಸಂ. ವಲ್ಲಭಾ]

**ಒಲ್ಲಮೆ** (ನಾ). ಒಲವಿಲ್ಲದಿರುವಿಕೆ; ಪ್ರೀತಿಯಿಲ್ಲದಿರುವಿಕೆ; ಅಪ್ರೀತಿ: ಕೂರ್ಪರೊಲ್ಲಮೆಯಂತೆ . . . ನಿಶ್ಚಯಕ್ಕೊಳಗೆ ಕಡುಲೇಸಪ್ಪ ಸನ್ಮಾರ್ಗಮಂ ಬಿಟ್ಟು ನರಕದೊಳ್ ತಿಜ್ಜನೆ ತಿರಿವಂತಪ್ಪ ಪಾಪಮಂ ನೆರಪಿದ ಮಾನಿಸರಂ (ಧರ್ಮಾಮೃ. ೮–೯೪).
[ಒಲ್₁ + -ಅಮೆ₂]

**ಒಲ್ಲಯಿಸು, ಒಲ್ಲೈಸು** (ಕ್ರಿ). ಹಿಂಜರಿ; ಹಿಮ್ಮೆಟ್ಟು: ರಣರಸಿಕರೊಡ್ಡು ವೊಡ್ಡಣವ ಕಂಡೊಲ್ಲಯಿಸುವಣಿಯರಕೆ ಹಿಂದಾಗಿ ನಡೆದು ಬರ್ಪಕ್ಕಟಿಗರು (ಸಮ್ಯಕೌ. ೮–೪೯); ಕೆಲಪೌಜು ನಿತ್ತರಿಸಲಾಜದೆ ಚೆಲ್ಲಪಿಲ್ಲಿಯಾದುದು . . . ಕೆಲವು ಪಿಂಡುಗೆದಱಿತು ಕೆಲವು ವೊಲ್ಲಯಿಸಿದತ್ತು (ಸಮ್ಯಕೌ. ೮–೫೧). **ಒಲ್ಲೈಸು**: ಎಲ್ಲಿಯ ಮಾರಿಯ ಬರಿಯ ಚಿವುಟಿ ಮತ್ತೆಲ್ಲಿಯ ಬಲುಮಿಳ್ತುವಿನ ಹಲ್ಲಟಿಗಾಡಿದವೆನುತೊಲ್ಲೈಸಿತು ಬಲ್ಲಿದ ನೃಪ ನಿಕುರುಂಬ (ನೇಮಿಸಂ. ೧೨–೮೨). [? + -ಇಸು₃]

**ಒಲ್ಲವಣಿಗೆ** 'ಒಲ್ಲಣಿಗೆ' ನೋ.

**ಒಲ್ಲಿ** 'ವಲ್ಲಿ' ನೋ.

**ಒಲ್ಲೈಸು** 'ಒಲ್ಲಯಿಸು' ನೋ.

**ಒವಂಜರೆ** (ನಾ). (?): ಇದರ್ಕೆ ಸಾಕ್ಷಿ ಅಗ್ಗಿ ಸರ್ವವ್ವಯರ್ಗೊಡುಮ ಕ್ಕೊರ್ಣಿನ್ದರ್ ಒಮುಜಾರ್ ಎನೆಬ್ಬರಾ × ನವಯಸನ್ಮದೊ ಅಳದೊನೊ ವಂಜರೆ ವನ್ಬರೆದೊನ್ನಗ (ಎಕ. XI, ಚಳ್ಳಕೆ. ೩೩–೪೯; 815). [?]

**ಒವಜ** 'ಒವಝು' ನೋ.

**ಒವಜಗೊತ್ತಳಿ** (ನಾ). ಶಿಲ್ಪಿಗಳ ಸಂಘ; ಕಾರುಕರ ಸಂಘ: ನಮ್ಮ ಶಿಲ್ಪಕಲೆಯನ್ನು ಪ್ರತಿಮೊನೆಯಲ್ಲಿಯೂ ಮೆರೆಯಬೇಕೆಂದು ನಮ್ಮ ಒವಜಗೊತ್ತಳಿ ನಿರ್ಧರಿಸಿದೆ (ಸವತಿ. ೪೫).
[ಒವಜ (< ಒವಝು) + ಕೊತ್ತಳಿ (< ಕೊತ್ತಟಿ₁)]

**ಒವಜು, ಓಜು₂** (ನಾ). ಉಪಾಧ್ಯಾಯನ ವೃತ್ತಿ; ಅಧ್ಯಾಪನ; ಕಲಿಸುವಿಕೆ. 'ಒವಜುಗೆಯ್' ಪರಾ. **ಓಜು₂**: ಮತಿಕ್ರಿತಿಗಳ್ಗೆ ದ್ರಿಷ್ಟಿಯೆನಿಸಿಪ್ಪುದು ತನ್ನಯ ಸೂಕ್ತಿ ಶಕ್ತಿ ಭಾರತಿಗೆ ವಿವೇಕವಂ ಕಲಿಸುವೋಜುವೊಲಿರ್ಪುದು ಚಾರುಸತ್ಕಳಾಜ್ಞತೆ (ಎಕ. VIII, ಸೊರಬ. ೧೪೦–೬೦; 1198). [ಒವಜ (< ಒವಝು) + -ಉ₄]

**ಒವಜುಗೆಯ್** (ಕ್ರಿ). ಕಲಿಸು; ಬೋಧಿಸು: ಬವರದೊಳೇಂ ಬಲ್ಲಂ ಕರಮೊವಜುಗೆಯಲ್ ಪೆಱರ್ಗೆ [ಕಂಡು] ತನಗಱಿಯಂ (ಪಂಪಭಾ. ೧೨–೩).
[ಒವಜು + ಕೆಯ್₁]

**ಒವಜೆ** 'ಓಜ₂' ನೋ.

**ಒವಜ್ಜ** 'ಒವಝು' ನೋ.

**ಒವಝು, ಒವಜ, ಒವಜ್ಜ, ಒವ್ವೈಜ್ಜ, ಓಜ₁, ಓಜು₁, ಓಝು, ಓವಜ** (ನಾ). ೧. ಉಪಾಧ್ಯಾಯ; ಗುರು; ಆಚಾರ್ಯ. ೨. ಶಿಲ್ಪಿ: ಕರುವೂರೆಮ್ಬ ಪೊಟಿಲ ಸ್ಥಾನಿಕ ಮಧುರೊವಝುನಗೞ್ದ ಶಾಸನಂ (ಎಕ. IX (S), ಬೆಂಗಳೂ. ೧೫೧–೬೧; 828). **ಒವಜ**: ೧. ಇನ್ನೊಲ್ವೊಡೆ ಶಸ್ತ್ರವಿದ್ಯೆಗೊವಜಂ ನೀನಾಗು (ಪಂಪಭಾ. ೨–೫೩); ಇನಿಸೊಳ್ಪಾಳೆಡೆಗೋದನೊದಱ ಚಟ್ಟನೊಳೊ [ಪಾಠಾಂ. ಳೋ]ವಜಂ (ಕಾವ್ಯಾವ. ೨೨೪); ಶಸ್ತ್ರವಿದ್ಯೆಗೊವಜಂ ಕಣಾ (ಹೆಬ್ಬೆರ. ೨–೨೧); ರಸಿಕತೆ ಗಿರ್ವರುಮೊವಜರೊಲಿರ್ಪರು (ಚಂದ್ರವೀ. ೧೬೧–೮೧). ೨. ವೆಂಕಟನಾಯಕನ ತಂದೆ ತನ್ನ ಮಂದಿರ ರಚನೆಗಾಗಿ ಬೇಲೂರತ್ತ ಕಡೆಯಿಂದ ಬಲ್ಲಿದರಾದ ಒವಜರನ್ನು ಕರೆಯಿಸಿಕೊಂಡು . . . ಮನೆಯನ್ನು ಕಟ್ಟಿದನು (ರಾಜಯೋ. ೮). **ಒವಜ್ಜ**: ೧. ಚಟ್ಟರ ರೆವಡಿ ಒವಜ್ಜರ್ (ಇಆ. X, ೧೬೦–೪; 500). **ಒವ್ವೈಜ್ಜ**: ೨. ಜಕ್ಕಿಯೊವ್ವೈಜ್ಜರ ಮಗ ಚನ್ದ್ರಶೇಕರ (ಎಕ. XII, ಪಾವುಗ. ೪೫–೩; ಸು. 900). **ಓಜ**: ೧. ಕನ್ನಡಕ್ಕೆ ನಾಡವರೋಜರ್ (ಕವಿರಾ. ೧–೪೨); ಓಜರ್ಗೆಱಗಿ ಪೊಡೆಮಟ್ಟು ವಿದ್ಯಾಪ್ರಾರಂಭಂಗೆಯ್ದರ್ (ವಡ್ಡಾರಾ. ೩–೨೪); ಮತ್ತಱಿದ ವಿದ್ಯೆಗಳೋಜರೆ ಚಟ್ಟರೆಂಬಿನಂ ನೆರೆದುವು ತನ್ನೊಳ್ (ಪಂಪಭಾ. ೨–೩೪); ಪಿಂದಣ ಸೋಲಮಂ ಮಱೆದು ಲಜ್ಜೆಯನೊಲ್ಲದೆ ಮತ್ತೆ ಬಂದನೇ ಪಂದೆಗಳೋಜಂ (ದಶಕು. ೨–೨೫). 'ನಾಡೋಜ' ಪರಾ. ೨. ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದೋಜನ ಸಾಲೆಯಿರ್ಪಂತಿರ್ದ ಪೂವಿನ ಸಂತೆಯೊಳ್ (ಪಂಪಭಾ. ೪–೮೦ ವ); ಗುಡ್ಡದಲ್ಲೆ ಗುಡಿ ಕೊರೆದರಲ್ಲ ಕಣ್ಗಂಡ ಓಜರೆಲ್ಲ (ಹೃದಸ. ೬೨–೧೩). ೩. ಮರಗೆಲಸದವನು: ಮತ್ತೊಂದು ದಿವಸ ಓಜರು ಕೂಡಿ ಮರದೊಳುಂ ಶಿವಲಾಂಛನವ ಮಾಡಿ (ಪ್ರಭುಪು. ೭–೪೩). ೪. ಅಕ್ಕಸಾಲೆ (ಕಿ). ೫. ಕಮ್ಮಾರ (ಕಿ). **ಓಜು₁**: ೧. ಹಂನೆರಡು ಹಳ್ಳಿಯ ಓಜುಗಳು ದೇವರ ನಂದಾದೀವಿಗೆ ಗ ೧ ಪ ೨ (ಎಕ. XI, ಹೊಳಲ್ಕೆ. ೫೬–೮೧; 1220). **ಓಝು**: ೧. ಮಠದ ಮಾಣಿಯರನೋದಿಸುವೋಝುರ್ಗೆ ಮತ್ತರೆಂಟು (ಎಇ. XV, ೮೯–೪೩; 1060); ಕಾಳಿಮೋಝುರ ಪುತ್ರರಪ್ಪ ಗೋವಿಂದಿಮಯ್ಯಗಳುಂ (ಕಇ. II, ೧೯–೧೫; 1130). **ಓವಜ**: ೧. ಚಾವುಣ್ಡೋಜಂಗಲ್ಲದೆ ಪೆಱರ್ಗೋವಜವೆಸರಿದೇನೊಪ್ಪುಗುಮೇ (ಸೌಇಇ. IX–i, ೧೦೨–೫೬; 1064).
[ಪ್ರಾ. ಉವಜ್ಝಯ, ಉವಜ್ಝಾಯ (< ಸಂ. ಉಪಾಧ್ಯಾಯ)]

**ಒವರ್ಣ** (ನಾ). [ವ್ಯಾಕ] ಒಕಾರ ಮತ್ತು ಓಕಾರ: ಅವಿಕೃತಿಗಳೆ ವರ್ಣಮೊ ವರ್ಣಮಂತ್ಯವೆನಿಸಿದ ನಿಪಾತಂ (ಶಮದ. ೫೬ ಪ್ರಯೋ). [ಸಂ.]

**ಒವೞ್** (ನಾ). ಸೌಳು; ಚೌಳು.
ಒವೞನೀರ್ = ಸೌಳುನೀರು; ಉಪ್ಪುನೀರು: ಪುತ್ತೂರ ಪೊಲೆಯರಿಪ್ಪ ಕೇರಿಯೊವೞನೀರ ಭೂಮಿಯಂ ಸಾರಭೂರುಹಮಾಗಲೋಳಿಯೊಳಗೆ ನೆಱದ ಕೆಱೆಯ . . . ಮಾಡಿಸಿ (ಎಇ. XXIX, ೨೦೮–೧೦; 10ನೆಯ ಶತ). ಒವೞನೆಲ = ಸೌಳು ನೆಲ; ಉಪ್ಪುನೆಲ: ಒವೞನೆಲನಂ ಪಿರಿದುಮಾಯಾಸದಿಂ ಸುಕ್ಷೇತ್ರಂ ಮಾಡಿಸಿ (ಎಇ. XXIX, ೨೦೮–೧೩; 10ನೆಯ ಶತ). 'ಸವಳ್' ಪರಾ.
[ದೇ. ‖ ತಮಿ. ಮಲ. ಉವರ್; ತುಳು. ಉಬರ್, ಉಬಾರ್; ಗೊಂಡಿ. ಒವರ್]

**ಒವೞುಪ್ಪುನೆಲ** (ನಾ). ಸೌಳುನೆಲ; ಉಪ್ಪುನೆಲ: ಒವೞುಪ್ಪುನೆಲದಾ ಭೂಮಿಯನೊಳಕೊಂಡಗೞನಗೞಿಸಿ (ಎಇ. XXIX, ೨೦೮–೧೬; 10ನೆಯ ಶತ). [ಒವೞ್ + ಉಪ್ಪು₁ + ನೆಲ]

**ಒವ್ವೈಜ್ಜ** 'ಒವಝು' ನೋ.

**ಒವ್ವೆ** 'ಒಟ್ವೆ' ನೋ.

**ಒಶ** (ನಾ). ಸ್ವಾಧೀನ; ಅಂಕೆಗೆ ಒಳಪಟ್ಟುದು: ನಾಲಗೆಯ ಸವಿಸುಖಕೆ ಚೀಲವನು ತುಂಬಿದರೆ. . .ರುಜೆಗಳಿಂ ಕಾಲನೊಶನಕ್ಕು (ಸರ್ವಜ್ಞ. ೨೦೧೫); ಸೂರೆಹೋಯಿತು ಪುಣ್ಯ ಮೀರಿತು ಎನ್ನೊಶಮಾರೊಬ್ಬರ ಕಾಣೆ ಆರು ಎನ್ನವರಿಲ್ಲ (ಮೋಕ್ಷದೀ. ೩೩–೧೬); ದೈವಾನುಗ್ರಹದ ನಿರಿಗೆಯುಂ ಮೀರ್ದಪರೆ ಮಾನವರಿಗೊಶವಹುದೆ (ಪರಶು. ೮–೩); ಭಟರು ತಮ್ಮೊಶವಿಲ್ಲದಾಗಿ ರಥದಿಂದಿಳಿದು (ತುರಂಗ. ೫೧–೯).
[< ಸಂ. ವಶ]

**ಒಸಗು** (ಕ್ರಿ). ಸಂತೋಷಪಡು; ನಲಿ; ಹಿಗ್ಗು: ಎಸೆದ ಶೂಲದ ಮುಂದೆ ಒಸಗಿ ಬಹುವೇಗದಿಂ ಹಾಯಬಹುದು ಕೆಟ್ಟು ನೆಂಟರ ಸೇರುವುದು ಬಹು ಕಠಿನ (ಪುರಂದ. ೩–೬೮–೧); ಕಿವಿಮಾತ ಸೊಗಸೇನು ಆಡಿದ್ದಾಡುವುದೇನು ಹಳೆ ಹೊಸ ಮುದ್ದಾಟ ಒಸಗುತಿರೆ (ಸಖೀಗೀ. ೩–೬೨). [?]

**ಒಸಗೆ** (ನಾ). ೧. ಶುಭ; ಮಂಗಳಕಾರ್ಯ; ಉತ್ಸವ: "ಉತ್ಸವಃ, ಮಹಃ, ಕ್ಷಣಃ – ಈ ೩ ಒಸಗೆ" (ಹಲಾಯು. ೧೨೬–೭೮); ಅಂತಪ್ಪ ಒಸಗೆ ಉತ್ಸಾಹಂಗಳ್ಗೆ (ಎಇ. XIV, ೧೯೧–೧೭; 725); ಜನಪತಿಗೆ ಪೊಸಗೆಯಂ ಪುರಜನಮೆಲ್ಲಂ ಬೀಱುತಿರ್ಪರ್ (ಕವಿರಾ. ೧–೯೬); ವಿವಾಹದೊಸಗೆಯೊಡನೆ ಪಟ್ಟಬಂಧದೊಸಗೆಯಂ ಮಾಡಿ (ಪಂಪಭಾ. ೧–೧೦೮ ವ). ೨. ಸಂತೋಷ; ಪ್ರಸನ್ನತೆ; ಅನುಗ್ರಹ: ತನ್ನ ಪ್ರಾಣವಲ್ಲಭೆಯೊಡನಿರ್ದಂದಿನ ಮುಳಿಸೊಸಗೆಗಳಂ ನೆನೆದು (ಪಂಪಭಾ. ೪–೧೦೬ ವ); ಚೋದ್ಯಮಿದೆನೆ ಮುನಿಸುಮನೊಸಗೆಯುಮನೊಡನೊಡನೆ ಮೆಱೆವಂ ಭೂಪಂ (ಪುಷ್ಪಪು. ೯–೩೯). ೩. ಕಾಣಿಕೆ; ಉಡುಗೊರೆ; ಗೌರವ: ಆರೊರ್ವರರಸಿಯಟ್ಟಿಯಂ ಮಟ್ಟಿಸಿ ದುಃಖಮುಂ ಮಱೆಯಿಸುವೊರ ವರ್ಗೊಸಗೆ[ಪಾಠಾಂ. ಗ್ರಾಸೆ]ಯಂ ಮಾಡುವೆಂ (ವಡ್ಡಾರಾ. ೧೧೮–೧೨); ನಿನಗೊಸೆದೇನಂ ಕುಡುವುದೆಂದೊಡೆಂದಳ್ ಮಕ್ಕಳೊಸಗೆಯನೆನಗೀವುದು (ಪಂಪಭಾ. ೧–೧೩೯). ೪. ಶುಭಸಮಾಚಾರ, —ಸಂದೇಶ, —ಸುದ್ದಿ: ಧನಂಜಯನ ಬರವಿನ ಸಂತಸದೊಸಗೆ ಪಡೆಮಾತಂ ಮುಂದುವರಿದಱಿವುವಂತೆ (ಪಂಪಭಾ. ೪–೩೨ ವ); ಚಿತ್ರೈಸು ದೇವ ದೊಡ್ಡೊಸಗೆ ಕುಮಾರ ನುತ್ಪತ್ತಿಯಾದನು ನಿಮಗೆಂದು (ಭರತ. ೨೫–೮೯). ೫. ಆಹ್ವಾನ; ಕರೆ: ಅಂದಿನ ಉತ್ಸವಕ್ಕೆ ಒಸಗೆ ಬಂದಿದೆಯೆಂದು ಶಾಂತಲೆಗೆ ಹಿಂದಿನ ದಿನವೇ ತಿಳಿದಿದ್ದಿತು (ಶಾಂತಲಾ. ೩೯). ೬. ಯಶಸ್ಸು; ಕೀರ್ತಿ: "ಒಸಗೆ ಜಸ ಕೀರ್ತಿಯಕ್ಕುಂ" (ಕವಿಕಂ. ೨೫೭); ಮಾಗಧನಂ ಗೆಲ್ದೊಸಗೆಗೆ ರಾಗಿಸಿ ಜಳರಾಶಿ ನಿನಗೆ ಸೇಸಿಕ್ಕುವವೋಲ್ (ಆದಿಪು. ೧೨–೧೨೧). ೭. (ಮದುವೆಯ) ತೆರಿಗೆ: ಪೆರಿಯಾ ಒಸಗೆಯುಂ ಅಲವಣವುಂ ಅಪುತ್ರಕ ಪೊರುದುಮಾನ್ನಿಟ್ಟಾರ್ (ಎಕ. VII, ಶಿಕಾರಿ. ೧೫೪–೫; 685); ಸೇಸೆ ಒಸಗೆ ಮನಕರೆ ಕೂಟಕ... ಯಿವೊಳಗಾಗಿ ಹಲವು ಮಹಿಮೆಗಳಂ (ಮೈಆರಿ. ೧೯೩೨, ೧೬–೩೦; 1069).

**ಒಸಗೆಕಳುಹಿಸು** = ಸುದ್ದಿ ಅಥವಾ ಸಂದೇಶವನ್ನು ಕಳಿಸು: ಎಲ್ಲ ಮಲೆಗಳಿಗೂ ಒಸಗೆಕಳುಹಿಸಿದ್ದ (ಕುಡಿಕೂ. ೩). **ಒಸಗೆಹಾಕು** = ಪ್ರಥಮಋತುವಾದವಳಿಗೆ ಆರತಿಮಾಡಿ ಕಾಣಿಕೆಕೊಡು.

[ದೇ.॥ ತುಳು. ಒಸಗೆ, ಒಸಯ, ಒಸಯೆ; ತೆಲು. ಒಸಗು, ಒಸವು]

**ಒಸಗೆಕಾಱ** (ನಾ). ೧. ಸಂತೋಷವನ್ನು ಉಂಟುಮಾಡುವವನು: ಜೀವದೊಡೆಯನೆ ರತಿರಾಗದೊಸಗೆಕಾಱನೆ (ವರ್ಧಚ. ೭–೨). ೨. ಸಂದೇಶ ಮುಟ್ಟಿಸುವವನು; ಸಂದೇಶವಾಹಕ. [ಒಸಗೆ + –ಕಾಱ]

**ಒಸಗೆದಮ್ಮಟೆ** (ನಾ). ಉತ್ಸವದಲ್ಲಿ ಬಾರಿಸುವ ತಮ್ಮಟೆ: ಭೂರಿಯ ನೀವರೆಂದೊಸಗೆದಮ್ಮಟೆವೊಯ್ಯುತೆ ಬೀದಿ ಬೀದಿಯೊಳ್ (ಮೈಸೂಮ. ೪–೬೫). [ಒಸಗೆ + ತಮ್ಮಟೆ]

**ಒಸಗೆದೇರ್** (ನಾ). ಉತ್ಸವದ ರಥ; ವೈಭವವುಳ್ಳ ರಥ: ಶ್ರೀರಾಮನೊರ್ವನೆಯೆ ತನ್ನೊಸಗೆದೇರಿಳಿದು ನಡೆದಂ (ಶ್ರೀರಾಮಾ. ೫೨–೬೬೮). [ಒಸಗೆ + ತೇರ್$_2$]

**ಒಸಗೆದೋರಣ** (ನಾ). ಉತ್ಸವಕಾಲದಲ್ಲಿ ಕಟ್ಟುವ ತೋರಣ: ಅಲ್ಲಲ್ಲಿಯೊಸಗೆವಾಡೊಸಗೆದೋರಣ ಮತ್ತಲ್ಲಲ್ಲಿಯೊಸಗೆಯ ವಾದ್ಯ ಅಲ್ಲಲ್ಲಿ ಮಂಗಳಗಾನವಿಲ್ಲದ ಮನೆಯಿಲ್ಲ (ರಾಮುವಿ. ೧೧–೫೫). [ಒಸಗೆ + ತೋರಣ]

**ಒಸಗೆದ್ರಮ್ಮ** (ನಾ). (ಮದುವೆಯ) ತೆರಿಗೆಯ ಹಣ: ಅನಿತಱೊಳೆಲ್ಲ ಮೊಸಗೆ ದ್ರಮ್ಮಂ ಮೂಱಂ (ಇಆ. XII, ೨೨೩–೭; 929). [ಒಸಗೆ + ದ್ರಮ್ಮ]

**ಒಸಗೆನೀರ್** (ನಾ). ಮಂಗಳೋದಕ; ಮಂಗಳಸ್ನಾನ: ಅತ್ತಲೊಸಗೆ ನೀರ ಮಿಂದ ಕೃಷ್ಣಗೆ ಸಖರೊತ್ತಿಲಿ ಕುಳಿತು ಸಿಂಗರಿಸೆ (ವರ್ಧಚ. ೫–೪೯). [ಒಸಗೆ + ನೀರ್$_1$]

**ಒಸಗೆನುಡಿ** (ನಾ). ಶುಭ ಸಮಾಚಾರ; ಸಂತೋಷದ ಸಂದೇಶ: ಒಸಗೆನುಡಿ ತಂದಿಹೆನು ನಾನೊಂದ (ಹೊಂಗಳು. ೧೫–೨). [ಒಸಗೆ + ನುಡಿ$_2$]

**ಒಸಗೆಯೋಕುಳಿ** (ನಾ). ಮಂಗಳ ಪ್ರಸಂಗದಲ್ಲಿ ಎರಚುವ ಓಕುಳಿ: ಇಳಿದು ಬಂದುದು ಬಯ್ಗು ಪಡುವಣ ಮುಗಿಲ ಮಂಚಕ್ಕೆ ಒಸಗೆಯೋಕುಳಿಯಾದುದಾ ದೆಸೆಗೆ ಕಡಲನೀರ್ (ಶ್ರೀರಾಮಾ. ೫೪೫–೧೨೯). [ಒಸಗೆ + ಓಕುಳಿ]

**ಒಸಗೆಯೋಲೆ** 'ಒಸಗೆವೋಲೆ' ನೋ.

**ಒಸಗೆವಡಿಸು** (ಕ್ರಿ). ಸಂತೋಷಪಡಿಸು: ಕಪೀಶನಾ ರಾಕ್ಷಸವಿಪಕ್ಷಿಯ ಬಂಧುಕೃತ್ಯದಲೊಸಗೆವಡಿಸಿದನುಚಿತ ಸೇವಾಭಾವ ಭಕ್ತಿಯಲಿ (ತೊರರಾ. ೪–೨–೧). [ಒಸಗೆ + ಪಡು$_1$ + –ಇಸು$_3$]

**ಒಸಗೆವರ್** (ಕ್ರಿ). ಶುಭವುಂಟಾಗು; ಹಬ್ಬವಾಗು: ಭುವನಕ್ಕೆಲ್ಲ ಮೊಸಗೆವರ್ಪಂತೆ ಬಂದ ವಸಂತದೊಳ್ (ಪಂಪಭಾ. ೫–೩೫ ವ). [ಒಸಗೆ + ಬರ್$_1$]

**ಒಸಗೆವಱೆ** (ನಾ). ಮಂಗಳವಾದ್ಯ; ಶುಭವಾದ್ಯ: "ಒಸಗೆವಱೆ ಬದ್ಧವಣಮದು" (ಕವಿಕಂ. ೧೭೮); ಅಲ್ಲಲ್ಲಿಗೊಸಗೆವಱೆ ಮತ್ತಲ್ಲಲ್ಲಿಗೆ ಶಂಖಪಟಹಭೇರೀರವಂ (ಧರ್ಮಾಮೃ. ೮–೨೧೬); ಅಮರರೊಸಗೆವಱೆ ಬಾಜಿಪಿನಂ (ಜಗವಿ. ೩–೬೯); ಅಖಿಳ ಲೋಕೇಶ್ವರರು ಹೊಯ್ಸಿದರೊಸಗೆವಱೆಗಳ ನಿಜಪುರಂಗಳಲಿ (ತೊರರಾ. ೬–೩೬–೬೬); ಪೊಱಮಟ್ಟನವನಿಪನೊಸಗೆವಱೆ ಮಸಗಲು (ಜೈಮಿಭಾ. ೫–೨). [ಒಸಗೆ + ಪಱೆ$_2$]

**ಒಸಗೆವಾಡು** (ನಾ). ಮದುವೆ ಮೊದಲಾದ ಸಂತೋಷ ಕಾಲದಲ್ಲಿ ಹಾಡುವ ಹಾಡು: ಮದವಕ್ಕಳನುತ್ಸಹನೊದವೆಯೊಸಗೆವಾಡಂ ಪಾಡುತ (ಜಯಕಾ. ೮–೪೦); ಕಿನ್ನರಕಾಂತೆಯರೊಸಗೆವಾಡನು ಪಾಡೆ (ನೇಮಿಸಂ. ೩೨–೬೧). [ಒಸಗೆ + ಪಾಡು$_2$]

**ಒಸಗೆವಾತು** (ನಾ). ಸಂತೋಷದ ಸಮಾಚಾರ; ಒಳ್ಳೆಯ ಸುದ್ದಿ; ಶುಭಸಮಾಚಾರ: ಪಾಂಡವರನಿಕ್ಕಿದೊಸಗೆವಾತನೀಗಳೆ ಕೇಳಿಸುವೆನೆಂದು (ಪಂಪಭಾ. ೧೩–೧೦೫ ವ); ಒಸಗೆವಾತಂ ಪೇೞ್ದವಂಗೆ ಮಚ್ಚುಗೊಟ್ಟು (ಕಾದಂಪೂ. ೪೨೪); ಅರ್ಜುನ ಬಂದನೆಂದೆಂಬೊಸಗೆವಾತಿನ ಲೂರ ಸುಳಿದರು ದೂತರಲ್ಲಲ್ಲಿ (ಕುಮಾಭಾ. ೩೬–೧೦೪). [ಒಸಗೆ + ಮಾತು$_1$]

**ಒಸಗೆವೆರಸು** (ಅ). ಸಂತೋಷದಿಂದ ಕೂಡಿ; ಉತ್ಸಾಹಗೊಂಡು; ಸಡಗರದಿಂದ: ದ್ರುಪದನಂದನಂಗೆ ಬೞಿಯನಟ್ಟಿ ಬರಿಸಿ ಪಿರಿದು ಮೊಸಗೆವೆರಸು ತಾನೆ ವೀರಪಟ್ಟಮುಮಂ ಕಟ್ಟಿ (ಪಂಪಭಾ. ೧೧–೫ ವ). [ಒಸಗೆ + ಬೆರಸು$_3$]

**ಒಸಗೆವೇಳ್** 'ಒಸಗೆವೇೞ್' ನೋ.

**ಒಸಗೆವೇೞ್**, ಒಸಗೆವೇಳ್, ಒಸಗೆಹೇಳು (ಕ್ರಿ). ಒಳ್ಳೆಯ ಸುದ್ದಿಯನ್ನು ತಿಳಿಸು; ಶುಭವನ್ನು ನುಡಿ: ಅರಗಿಳಿಗಳ ರವಮುಂ ಪಂಜರದೊಳಗಿದೊರ್ಸಗೆವೇೞ್ದು ಮಾಣಿಸೆನುತ್ತಂ (ಕಾದಂಉ. ೨೭). **ಒಸಗೆವೇಳ್**: ಲಂಕೆಯಂ ಸುಟ್ಟು ಬಂದೊಸಗೆವೇಳ್ದನಿಲಜನನಸುರಾರಿ ಮನ್ನಿಸಿದನು (ಜೈಮಿಭಾ. ೧೮–೬). **ಒಸಗೆಹೇಳು**: (೬). [ಒಸಗೆ + ಪೇೞ್]

**ಒಸಗೆವೋಲೆ**, ಒಸಗೆಯೋಲೆ (ನಾ). ಶುಭಸಮಾಚಾರವನ್ನು ತಿಳಿಸುವ ಓಲೆ: ರಾಯನು ಮನದಿ ಘನಹರುಷಮಂ ತಾಳಿ, ಕೆನೆವಾಲು ಸಕ್ಕರೆಯು ನೆರದವೋಲ್ ಆಯಿತೆನ್ದು, ರಸವಾಱಿಯ ಮೇಲೆ ಜೇನಿಟ್ಟವೋಲಾಯಿತೆನ್ದು, ಒಸಗೆವೋಲೆಗಳನ್ನು ದೆಸೆದೆಸೆಗೆ ಕಳುಹಿದನು (ಚೋರಕ. ೬). **ಒಸಗೆಯೋಲೆ**: (೬). [ಒಸಗೆ + ಓಲೆ]

**ಒಸಗೆಹೇಳು** 'ಒಸಗೆವೇೞ್' ನೋ.

**ಒಸಡು**, ಒದಡು (ನಾ). ೧. ಹಲ್ಲುಗಳಿಗೆ ಆಧಾರವಾಗಿರುವ ಮಾಂಸ ಖಂಡ; ದಂತಪೀಠ: ಬಿಡುವಾಯ್ ಮಿಕ್ಕುದ್ದಮಾಗಿರ್ಪೊಸಡು ಬೆರಳಿವಲ್ ಕೊಂಕುಮೂಗು . . . ಕೂಡೆ ನಿರ್ಭಾಗ್ಯೆಯಕ್ಕುಂ (ಲೋಕೋಪ. ೧೧–೫೮); ಪಲ್ಲಿಂಗೆ ಪಾಲಂ ಬಿಟ್ಟೊಡೊಸಡೆಲ್ಲಮಂ ದೈವಂ ತಿಂದುದೆಂಬಂತೆ (ಧರ್ಮಾಮೃ. ೨–೯೪); ಮೊಸಳೆಯೊಸಡುಗಳ ಕರ್ಣಿಕಾರಮಂ (ಅಟ್ಟಮು. ೮–೧೨); ತುಡುಗುಣಿಯ ನಾಯೊಂದುಯೆಲುವನು ಕಡಿಯುತಿರಲೊಸಡೊಡೆದು ನೆತ್ತರು ನಿಡುರಸನೆಗಿನಿದಾಗಲದು ಸವಿಯೆಂದು ಬಿಡದಂತೆ (ಸಾಳ್ವಭಾ. ೧೦–೫೦). **ಒದಡು**: ೧. (ಕ). ೨. ತುಟಿ (ಕ). [ದೇ. ‖ ತಮಿ. ಉದಡು]

**ಒಸರ್**$_1$, ಒಸರು$_1$ (ಕ್ರಿ). ಜಿನುಗು; ಸೋರು; ದ್ರವಿಸು; ಕರಗಿ ಹರಿ: "ಒಸರ್–ಸ್ರವಣೇ (ಸುರಿ)" (ಶಮಧಾ); ರಸವೊಸರ್ವನ್ನೆಗಂ ತಗುಳೆ ಪಾಡುವ ಗಾಣರ ಗೇಯಂ (ಪಂಪಭಾ. ೧೧–೪); ಮುತ್ತುಗಳೊಸರ್ದುವೆ ನಿಪ್ಪ ಹಿಮೋದಕಂಗಳಂ . . . ತೆಕ್ಕನೆ ತೀವಿ ತಂದು (ಕಾದಂಪೂ. ೧೬೩); ಧನಧಾನ್ಯ ಕ್ಷಯಮಕ್ಕು ಮಾಮರನೊಳಂ ಪಾಲ್ನೀರೊಸರ್ತಿರ್ಪಿನಂ (ಲೋಕೋಪ. ೪–೫೨); ಎಳಗಾಯಿಂದೊಸರ್ವೆಳನೀರ್ಗಳ್ (ಕಬ್ಬಿಕಾ. ೨೨). **ಒಸರು**$_1$: ಒಸರುತಿಹ ಕಂಬನಿಗಳ್ (ಕುವ್ಯಾಆ. ಓರಿ೩. ೨೦–೨೯); ಹಸುಳೆಮಾಯಣನುಸುರಿದ ಕೃತಿಯೊಳು ನವರಸ ಪರಿಪೂರಿತವಾಗಿ ಒಸರುವುದು (ಅಂಜಚ. ೧–೧೧೧); ಗುಂಡಾಕ್ರಿಗೆ ಶಿಲೆವೊಸರುವುದಿದು ಘನವೆ (ಭರಚ. ೧–೮೮); ಅವನ ಒಂದೇ ಕಣ್ಣಿನಲ್ಲಿ ನೀರು ಒಸರಿತ್ತು (ಹಳ್ಳಿಹಾ. ೮೫).

**ಒಸರಿಹೋಗು** = ಬಸಿದುಹೋಗು: ಬದುಕುವ ಶಕ್ತಿಯೇ ಒಸರಿ ಹೋಗಿ (ಮೂರುದಾ. ೧೭೯). 'ಊಱು$_2$' ಪರಾ.
[ದೇ. ‖ ತುಳು. ಒಸರ್]

**ಒಸರ್**$_2$, ಒಸರು$_2$ (ನಾ). ೧. ಜಿನುಗುವುದು; ಸ್ರಾವ; ದ್ರವಣ: ಆತಂಗಪರಾಜಿತನೆಂದಿಟ್ಟರಮರ್ದಿನೊಸರಂ ಪೆಸರಂ (ಅರ್ಧನೇ. ೨–೨೮). **ಒಸರು**: ೧. ಶಶಿಕಿರಣಗಳ ಶುಭ್ರಕೆ . . . ಪೊಸಕಗ್ಗಲ್ಲುಗಳೊಸರವು ಕಣ್ಗೆ ರಾಜಿಸಿದುದನೇನವಣ್ಣಿಸುವೆ (ಕಂಸವಿ. ೨೦–೫). ೨. ಚಿಕ್ಕಪ್ರವಾಹ: ಎರಡು ಗುಡ್ಡಗಳ ನಡುವೆ ಒಸರು ಸಿಕ್ಕಿತು (ದೇವಮ. ೬೬). ೩. (ಕರಾ) ಒರತೆ; ಚಿಲುಮೆ. [< ಒಸರ್$_1$. / ತುಳು. ಒಸರ್]

**ಒಸರಾಱು** (ಕ್ರಿ). ಹಸಿಯಿಲ್ಲದಾಗು; ಒಣಗು; ಆರಿಹೋಗು: ಎಚ್ಚು ಪಾಯ್ವ ಕಡೆಗಣ್ಣೊಸರಾಱುವ ಬಾಯ್ಗ (ಕಬ್ಬಿಕಾ. ೩೩೨).
[ಒಸರ್$_1$ + ಆಱು$_1$]

**ಒಸರಿಕೆ** (ನಾ). ಜಿನುಗುವುದು; ಸ್ರಾವ; ದ್ರವಣ: ಹಿಮರುಚಿಕಾಂತದೊಸರಿಕೆಯ ಕಾಲುವೆಯ ತಿದ್ದಿದನು ಕರ್ಪುರವಾಳೆಯೆಲೆಯಲಿ ಬೀಸಿದನು (ತೊರರಾ. ೩–೧೧–೪೬). [ಒಸರ್$_1$ + –ಇಕೆ]

**ಒಸರಿಸು** (ಕ್ರಿ). ಬಸಿ; ಒಸರುವಂತೆಮಾಡು. 'ಒಸರಿಸುಹ' ಪರಾ.
[ಒಸರ್$_1$ + –ಇಸು$_3$]

**ಒಸರಿಸುಹ** (ನಾ). ಜಿನುಗುವಂತೆ ಮಾಡುವುದು: "ಸ್ಯಂದ, ರೀತಿ – ಒಸರಿಸುಹ" (ನಾಚಿರಾ. ಕ). [ಒಸರಿಸು + –ಹ$_2$]

**ಒಸರು**$_1$ 'ಒಸರ್$_1$' ನೋ.

**ಒಸರು**$_2$ 'ಒಸರ್$_2$' ನೋ.

**ಒಸರುನೀರು** (ನಾ). ಚಿಲುಮೆಯ ನೀರು; ಒರತೆಯ ನೀರು: ಅಂಗಡಿ ವ್ಯಾಪಾರ ಒಸರುನೀರಿನ ಹಾಗೆ (ಗಾದೆ).
[ಒಸರು$_2$ (< ಒಸರ್$_2$) + ನೀರು$_1$ (< ನೀರ್$_1$)]

**ಒಸರ್ಗಣ್** (ನಾ). ನೀರು ಸುರಿಯುವ ಕಣ್ಣು; ಅಳುವ ಕಣ್ಣು. 'ಒಸರ್ಗಣ್ಣಿ' ಪರಾ. [ಒಸರ್$_1$ + ಕಣ್]

**ಒಸರ್ಗಣ್ಣಿ** (ನಾ). ನೀರು ಸುರಿವ ಕಣ್ಣುಗಳನ್ನುಳ್ಳವಳು; ನೀರುಗಣ್ಣವಳು: ಪೊಡಕರದಿರೊಸರ್ಗಣ್ಣಿ ನಿಟ್ಟುಸಿರಿ ನೋಡಿದಳ್ (ಸೌನಂದ. ೪–೧೯). [ಒಸರ್ಗಣ್ + –ಇ$_2$]

**ಒಸರ್ಗಲ್** (ನಾ). ಕರಗಿ ನೀರು ಬಿಡುವ ಕಲ್ಲು; ಚಂದ್ರಕಾಂತ ಶಿಲೆ: "ಚಂದಗಲ್ ಕುಳಿರ್ಗಲ್ಲೆನಲೊಸರ್ಗಲ್" (ಚತುನಿ. ೧೧೦); ಅನಂತರಮಾ ಕಾಂತೆಯರ್ ಸರಸ್ಸಿಗಿೞಿತಂದು ಪಾಸಿನೊಸರ್ಗಲ್ಲ ಮೇಲೆ ತಿಱಿತಂದ ಪೂಗಳಂ ಬೈತಿಟ್ಟು (ರಾಮಾಶ್ವ. ೧೨೩–೯). [ಒಸರ್$_1$ + ಕಲ್$_3$]

**ಒಸರ್ಚು** (ಕ್ರಿ). ಕರಗಿಸು; ನೀರಾಗಿಮಾಡು: ಚಂದ್ರಿಕೆಯೆಂಬ ಚಂದ್ರಕಾಂತಕಲಶಂಗಳನಾತ್ಮೀಯ ಮುಖಚಂದ್ರಸ್ಮೇರ ಚಂದ್ರಿಕೆಯಿನೊಸರ್ಚಿ (ಚಂದ್ರಪ್ರ. ೧೧–೧೪೫ ವ). [ಒಸರ್$_1$ + –ಚು]

**ಒಸರ್ತರ್** (ಕ್ರಿ). ಜಿನುಗು; ನೀರಾಗಿ ಸುರಿ: ರಸಮೊಸರ್ತರ್ಪ ಪಣ್ಗಳ್ ಸಮಂತಿಟ್ಟಳಮಪ್ಪಾಮ್ರಪ್ರತಾನಂ ಬನದೊಳವಿರಳಂ ಶೋಭಿಸುತಿರ್ಪುದೆತ್ತಂ (ಕುಸುಮಾ. ೧–೮೯). [ಒಸರ್$_1$ + ತರ್]

**ಒಸರ್ದಾಣ** (ನಾ). ನೀರು ಒಸರುವ ಸ್ಥಳ; ಒರತೆ: ಬತ್ತಿ ತೆರ್ಪಂಬಡೆದಱುಗೆಱೆಗಳ್ ಬೀಡೆವೋಗಿರ್ದ ತಣ್ಣೀರೊಸರ್ದಾಣಂ ಬಾವಿಯಾದತ್ತು (ಜಗವಿ. ೧೬–೬೨); ತಾಱಲೊಸರ್ದಾಣ ಮಹಾಗ್ರಹಂ ತೋಱಿ ಕೊಳಂ . . . ರಯ್ಯಮಾ ಬೆಟ್ಟದೊಳ್ (ಸೂಕ್ತಿಸು. ೩–೨). [ಒಸರ್$_1$ + ತಾಣ]

**ಒಸವಂತ** (ನಾ). ವಸಂತ: ಇಂತಿರಲ್ಕೊಸವಂತ ರುತುವಿನೊಳ್ ಭೂಪನಿಶ್ಚಿಂತೆಯೋಳ್ದೀಕ್ಷೆಯ ಧರಿಸಿರಲ್ಕೆ (ತುರಂಗ. ೮೧–೧೬).
[< ಸಂ. ವಸಂತ]

**ಒಸು** (ನಾ). ಅಷ್ಟವಸುಗಳಲ್ಲಿ ಒಬ್ಬ: ಹೇ ಕರುಣಿ ಭೀಷ್ಮನ್ನ ಜನನಿ ನಾಕೆರಡೊಸುಗಳ ಸಾಕಿ ನೀ ಗರ್ಭದಿ (ತೀರ್ಥಮ. ೧೯–೧೫).
[< ಸಂ. ವಸು]

**ಒಸೆ** (ಕ್ರಿ). ೧. ಒಲಿ; ಪ್ರಸನ್ನವಾಗು; ಮೆಚ್ಚು: "ಒಸೆ – ಪ್ರಸನ್ನತ್ವೇ (ಪ್ರೀತಿಸು)" (ಶಮಧಾ); ಒಸೆಗೆ ಮೇಣ್ ಮುನಿಗೆ ಮೇಣ್ (ಕವಿರಾ. ೧–೧೩೫); ಸಾರ್ತಂದವಂ ಕಾಲ್ವಿಡಿದೊಡಮೊಸೆಯಂ (ಕಾದಂಉ. ೫೮೩); ಒಸೆದು ಹುಟ್ಟಿಸುವ ಪಾಲಿಸುವ ಮರ್ದಿಸುವ ಸತ್ವಸಮರ್ಥನೆನಿಪ ನೀನೇ ತಪ್ಪ ಹೊಱಿಸಿ ದಟ್ಟಿಸುವಡೆ (ಹಚಕಾ. ೮–೧೦). ೨. ಅನುಗ್ರಹಿಸು; ದಯಪಾಲಿಸು: ಮಹಜ್ಜನಮೊಸೆದುಕೊಟ್ಟ ಕಟನಿ (ಎಕ. X (ಕ); ಮುಳಬಾ. ೧೫೬–೭; 8ನೆಯ ಶತ); ನಿನಗೊಸೆದೆಂ ಬೇಡಿಕೊಳ್ (ವಡ್ಡಾರಾ. ೧೨೮–೪); ಒಸೆದು ನಿನ್ನವರೆಂದು ಬಗೆವರೆ ಬಸಿದು ಬೀಳುವ ಕೃಪೆಯ ನೀ ತೋಱಿಸೆ (ಕುವ್ಯಾಸ. ೧೪–೧೨೭). ೩. ಹಿಗ್ಗು; ಸಂತೋಷಪಡು; ಆನಂದಿಸು: ಬ್ರಹ್ಮಚಾರಿ ತಪಂಬಟ್ಟನೆಂಬುದಂ ಕೇಳ್ದೊಸೆದು (ವಡ್ಡಾರಾ. ೭೯–೧೧); ನೀರೊಳಾ ಬಾಳನನಾದಮಾದರದೆ ಕಂಡೊಸೆದಂ ನಿಧಿಗಂಡನಂತೆ ವೋಲ್ (ಪಂಪಭಾ. ೧–೯೬); ಪರಮೇಶ್ವರಿ ಮಗನನಂದು ಪೆತ್ತಂಡೊಸೆದಳ್ (ಅಜಿಪು. ೩–೧೫); ಸಕಲ ರಾಗಂಗಳಿಂದೊಸೆದು ತುಂಬುರ ನಾರದರ್ ಪಾಡುತಿರ್ದರ್ (ಚಿಬಪು. ೨–೨೮). ೪. ಶೋಭಿಸು; ಸೊಗಸು: ತಮಸ್ತಮುಮಂ ತೆರಳ್ಚಿಬಂದೊಸೆದಿನನೇಱುವಂತುದಯಪರ್ಬ್ಬ(ರ್ವ್ವ)ತಮುಂ (ಇಆ. V, ೧೫–೧೪; 1019); ಕಪಾಲಿಯೆಂಬಂ ಗೊರವಂ . . . ಪಿರಿಯನೆಂದೊಸೆದಿರ್ದಂ (ಧರ್ಮಾಮೃ. ೧೨–೧೨೩); ದಿವಿಜನೊರ್ವಂ ತಳತಳಿಸುತ್ತೊಸೆದಿರದೆಯ್ದಿದನು (ಜಯಕಾ. ೩–೬೬).

ಒಸೆದೊಸೆದು (ದ್ವಿರುಕ್ತಿ): ತೆನೆಗಳಂ ತಿಱಿತಿಱಿದು ತಂದು ತಂದು ಒಸೆದೊಸೆದು ಹೊಸೆಹೊಸೆದು ರಸವುಳ್ಳ . . . ಅವಲನಿತ್ತು (ಸಿದ್ಧರಾ. ೨–೨೯); ಸುರುಚಿರೋಕ್ತಿಗಳಿಂದೊಸೆದೊಸೆದು ವರ ಸುಧಾಂಭೋರಾಶಿಯೊಳು ನೆಱೆ ತೋದು ನೆಱೆ ತೋದು (ಬಸಪು. ೩೩–೯).
[ದೇ. ‖ ತಮಿ. ಉಕ, ಉವ; ಮಲ. ಉವಕ್ಕ]

**ಒಸೆಮುಂಜು** (ನಾ). ಒಸರುವ ಮಂಜು; ಇಬ್ಬನಿ (?) : ಜೀವನಗುಣ ಮೇನೆಂದೊಡೆ ಕೇವಲ ದರ್ಶನ ಸುಬೋಧಮುದರಿಂದವನಿಗೆ ಆವಾವ ಶಾಸ್ತ್ರ ಕೇಳಲು ಭಾವಿಯೊಳೊಸೆಮುಂಜಿನುದಕ ಬಿದ್ದಂತಕ್ಕುಂ (ಭವ್ಯಾಮೃ. ೧೨).
[< * ಒಸರ್ಮುಂಜು ?]

**ಒಸೆಯಿಸು** (ಕ್ರಿ). ೧. ಒಲಿಸು; ಪ್ರಸನ್ನಗೊಳಿಸು; ಮೆಚ್ಚಿಸು: ಅವಿಭಕ್ತಸ್ನೇಹೆಯಂ ರೋಹಿಣಿಯ [ನೊಸೆಯಿಸ] [ಪಾಠಾಂ. ನೆನೆಯಿಸ] ಲ್ಕೋವುಲೋಕಕ್ಕದೊಮ್ಮೊಮ್ಮೆ ವಯಸ್ಯಂ . . . ಏಟ್ಟಂದು (ಕಾದಂಬ. ೮೨೨); ಜಲಕೇಳಿಯ ಬಿನದದೊಳೆ ಸತಿಯನವರೊಸೆಯಿಸಿದರ್ (ಪುಷ್ಪಪು. ೯-೮೨). ೨. ಕೊಡು; ದಯಪಾಲಿಸು; ಅನುಗ್ರಹಿಸು: ಕಂಪಂ ನಿನ ಗೊಸೆಯಿಸುವೆಂ ಕೊಡೆ ತಂಗಾಳಿಯೆನ್ನೋಪನನಿಂದಾರಯ್ದು ತಂದೆನ್ನೊಡ ನಿರಿಸಿದೊಡೆ (ಶಬ್ದಾನು. ೪೪೨ ಪ್ರಯೋ). [ಒಸೆ + -ಇಸು₃]

**ಒಳ್**₁, ಒಳ (ಅ). ಒಳಗು ಎಂಬುದಕ್ಕೆ ಸಮಾಸದಲ್ಲಿ ಬರುವ ಸಂಕ್ಷಿಪ್ತರೂಪ. 'ಒಳ್ಗರುಳ್', 'ಒಳ್ದೊಡೆ₁', 'ಒಳ್ಪೊಟ್ಟು' ಪರಾ. ಒಳ: 'ಒಳಅಂಗಳ' ಪರಾ. [< ಒಳಗು]

**ಒಳ್**₂, ಒಳು (ಗು). ಒಳಿತು, ಒಳ್ಳಿತು, ಒಳ್ಳಿತ್ತು ಎಂಬುವಕ್ಕೆ ಕರ್ಮಧಾರಯ ಸಮಾಸದ ಪೂರ್ವಪದವಾಗಿದ್ದಾಗ ಬರುವ ರೂಪ. 'ಒಳ್ಗನ್ನಡ', 'ಒಳ್ಗಬ್ಬ', 'ಒಳ್ಗುಣ' ಪರಾ. ಒಳು: 'ಒಳುಗೊರಳು' ಪರಾ. [< ಒಳ್ಳಿತ್ತು₁]

**-ಒಳ್**₃ (ಪ್ರ). ಸ್ತ್ರೀಲಿಂಗ ಸಾಧಕ ಪ್ರತ್ಯಯ: ಆತನ ಮಹಾದೇವಿ ಮನೋಹರಿಯೆಂಬೊಳ್ (ವಡ್ಡಾರಾ. ೨-೯).

**ಒಳ** 'ಒಳ್₁' ನೋ.

**ಒಳಂಗೊಳ್** (ಕ್ರಿ). ಮುದುಡಿಕೊಳ್ಳು; ಗಾಬರಿಗೊಳ್ಳು; ಹೆದರು (?): ಕಂಸನೊಳಂಗೊಂಡು (?) ನೋಡಿ ಗದಗಂಪಂಗೊಂಡು (ಅರ್ಥನೇ. ೮-೩೩ ವ). [ಒಳ ? + ಕೊಳ್₁]

**ಒಳಅಂಕ** (ನಾ). ಖಡ್ಗಯುದ್ಧದಲ್ಲಿ ಒಂದು ವರಿಸೆ: ಮೇಲುಗಡೆ ಯಲ್ಲಿ ವಳಗೆ ಯೇಕ ಘಾಯವನ್ನು ವಳಗಡೆಯ ವಳಗಡೆಯಲ್ಲಿ ವಂದು ಘಾತವು ಮೇಲುಗಡೆಯಲ್ಲಿ ಹೊರಗೆ ವಳಗೆ ಯೆರಡು ಘಾತವು ಆವದು ಉಂಟು ಆದು ವ[ಒ]ಳಅಂಕಯೆಂದು ನುಡಿಯಲ್ಪಡುವದು (ಖಡ್ಗಟೀ. ೫-೪೨). [ಒಳ (< ಒಳಗು) + ಅಂಕ₂]

**ಒಳಅಂಗಳ** (ನಾ). ೧. ಅಂಗಳದ ಒಳಭಾಗ: ಮನೆಯ ಒಳಅಂಗಳ (ರೂಢಿ). ೨. ಒಳಗಿನ ಅಂಗಳ: ಗಂಡಸರು ಹೊರಅಂಗಳದಲ್ಲೂ ಹೆಂಗಸರು ಒಳಅಂಗಳದಲ್ಲೂ ಕುಳಿತಿದ್ದರು (ರೂಢಿ).
[ಒಳ (< ಒಳಗು) + ಅಂಗಳ₂]

**ಒಳಅಗುಣಿ** (ನಾ). ಒಳಗಿನ ಅಗುಣಿ; ಬಾಗಿಲ ಒಳಮಗ್ಗುಲು ಹಾಕುವ ಅಗುಳಿ: ನಿತ್ಯ ನಡುಮನೆಯ ಒಳಅಗುಣಿಯನ್ನು ಹಾಕುತ್ತಿರ ಲಿಲ್ಲ (ಕಾವೇರಿ. ೧೬೦).
[ಒಳ (< ಒಳಗು) + ಅಗುಣಿ (< ಅಗ್ಗಣಿ₁)]

**ಒಳಅಗ್ನಿ** (ನಾ). ೧. ಒಳಗಿನ ಬೆಂಕಿ. ೨. (ಅಲಂ) ಅಂತರಂಗದ ತೇಜಸ್ಸು: ಪುಣ್ಯಪುರಮಂ ಕಟ್ಟಿ ಪುರುಷನೊಳಅಗ್ನಿಯಂ ಕಾವವರ ದೇವರ್ (ಹೊಂಗಳು. ೩೮-೧೧). [ಒಳ (< ಒಳಗು) + ಅಗ್ನಿ]

**ಒಳಅಟ್ಟ** (ನಾ). ೧. ಒಳಗಿನ ಅಟ್ಟ. ೨. ಅಟ್ಟದ ಒಳಭಾಗ: ಒಳ ಜಗಳಂ, ಒಳಅಟ್ಟಂ (ಭಾಷಾಭೂ. ೧೪೪ ಉದಾ); ಪೊಜಅಡಿ, ಒಳಅಟ್ಟಂ (ಶಮದ. ೫೮ ಪ್ರಯೋ). [ಒಳ (< ಒಳಗು) + ಅಟ್ಟ₁]

**ಒಳಅಟ್ಟೆ** (ನಾ). ದೇಹದ ಒಳಭಾಗ; ಒಳಮೈ: ತನ್ನಂ ಸೋಂಕಿ ಪಾಯ್ವ ಕಾದಲೆಯಂ ಬರಿಸೆಳೆದೊಳಅಟ್ಟೆ ನುರ್ಗುನುಚಿಯಪ್ಪಿನಂ . . . ತಳ್ಳೈಸಿಯುಂ (ರಾಮಾಶ್ವ. ೬೦-೨೨). [ಒಳ (< ಒಳಗು) + ಅಟ್ಟೆ₁]

**ಒಳಅನುಭವ** (ನಾ). ೧. ಒಳಗಿನಅನುಭವ. ೨. ಆಸ್ತಿಯಲ್ಲಿ ಖಾಸಗಿ ಯಾಗಿ ಮಾಡಿಕೊಂಡ ಪಾಲು. 'ಒಳಅನುಭವದಾರ' ಪರಾ.
[ಒಳ (< ಒಳಗು) + ಅನುಭವ]

**ಒಳಅನುಭವದಾರ** (ನಾ). ಆಸ್ತಿಯನ್ನು ಖಾಸಗಿಯಾಗಿ ಅನು ಭೋಗಕ್ಕಾಗಿ ಮಾಡಿಕೊಂಡ ಹಂಚಿಕೆದಾರ: ಗ್ರಾಮದ ಸರ್ವೆನಂಬರು ಒಂದು ಒಬ್ಬನ ಹೆಸರಿಗೆ ಪಟ್ಟೆಯಿರುತ್ತಾ ದಾಖಲೆಯಿಲ್ಲದೆ ಒಳಅನುಭವ ದಾರರು ಅನೇಕಮಂದಿ ಇರುತ್ತಾರೆ (ಭೂವಿಅ. ೩೬).
[ಒಳ (< ಒಳಗು) + ಅನುಭವದಾರ]

**ಒಳಅರಿವು** (ನಾ). ಸ್ವಯಂ ಪ್ರಕಾಶವಾದ ತಿಳಿವು; ಸಹಜಜ್ಞಾನ; ಅಂತರ್ಬೋಧೆ: ವಿಚಾರವಿಲ್ಲದೆ, ತರ್ಕಿಸದೆ, ಮನಸ್ಸು ಒಡನೆಯೇ ಗ್ರಹಿಸುವುದು . . . ಒಳಅರಿವು (Intuition. ಇಂಕನಿ).
[ಒಳ (< ಒಳಗು) + ಅರಿವು (< ಅಱಿವು)]

**ಒಳಅಸ್ತರಣ** (ನಾ). ಒಳಗಿನ ಪದರು: ಭ್ರೂಣಾವರಣದಲ್ಲಿ ಜೀವಕಣ ಗಳ ಒಳಅಸ್ತರಣ (Hypoblast. ಇಂಕನಿ).
[ಒಳ (< ಒಳಗು) + ಅಸ್ತರಣ]

**ಒಳಆಳ್** (ನಾ). ಒಳಗಿನ ಆಳು; ಅಂತಃಪುರದ ಸೇವಕ (?): ಎಳ ಅಂಚೆ, ಪೊಜಅಡಿ, ಒಳಆಳ್ (ಶಬ್ದಾನು. ೪೬ ಪ್ರಯೋ).
[ಒಳ (< ಒಳಗು) + ಆಳ್₃]

**ಒಳಈಜು** (ನಾ). ನೀರಿನ ಒಳಗೆ ಮುಳುಗಿ ಈಜುವುದು: ಅವನು ಒಳಈಜಿನಲ್ಲಿ ನಿಪುಣ (ರೂಢಿ).
[ಒಳ (< ಒಳಗು) + ಈಜು₂ (< ಈಸು₄)]

**ಒಳಉಗ್ರಾಣ** (ನಾ). ಒಳಗಿನ ಕೊಠಡಿ; ವಸ್ತುಗಳನ್ನು ಸಂಗ್ರ ಹಿಸಿ ಇಡುವ ಒಳಕೋಣೆ; ಕೋಠಿಖೋಲಿ (ಉಕ): ಬಿಡದೊಪ್ಪ ವೊಳಉಗ್ರಾಣ ನಾನಾಬಗೆ ಷಡುರಸಾನ್ನಗಳ ಪಾಕಗಳ ಕಡುಚೆಲ್ವ ಗೃಹ ಗಳಂದರಮನೆಯೊಳು ಬಲು ಬೆಡಗ ಬೀಜಿದುವರ್ತಿಯಲಿ (ಕಂನವಿ. ೬-೪೭). [ಒಳ (< ಒಳಗು) + ಉಗ್ರಾಣ]

**ಒಳಉಡುಪು** (ನಾ). ಒಳಗೆ ತೊಡತಕ್ಕ ವಸ್ತ್ರ: ಬದಲಾಯಿಸಿ ತೊಡು ವುದಕ್ಕೆ ಶುಭ್ರವಾದ ಒಳಉಡುಪು ಇಲ್ಲ (ನಂಟರು. ೧೦೨).
[ಒಳ (< ಒಳಗು) + ಉಡುಪು]

**ಒಳಉಸುಲು** (ನಾ). ಕಟ್ಟಡದ ಒಳಗಿನ ಅಳತೆ; ಒಳಾಯ: ತೋಪಿನ ಮುಂಭಾಗದವೊಳಉಸುಲಿನ ಉದ್ದಳತೆ ೧೨ ಫೂಟು ೧೦ ಇಂಚು (ಕಭಾಗೆ. ೫೨೭); ಕೋಠಿಯ ವೊಳಉಸುಲು ೪೦ ಫೂಟು (ಕಭಾಗೆ. ೫೩೩). [ಒಳ (< ಒಳಗು) + ಉಸುಲು]

**ಒಳಊಳಿಗ** (ನಾ). ಮನೆಯ ಒಳಗಿನ ಕೆಲಸ; ಅಂತಃಪುರಕ್ಕೆ ಸೇರಿದ ಕೆಲಸ: ಮುಂ ತಾಂ ಕಳುಪಿದ ಒಳಊಳಿಗದ ಕುವರನೊರ್ವನೆ ಯ್ತಂದು ಕೆಯ್ಮುಗಿದು ಕೆಲದೊಳ್ ನಿಂದು (ಚಿಕವಂ. ೧೪೭-೫).
[ಒಳ (< ಒಳಗು) + ಊಳಿಗ]

**ಒಳಎಳೆತ** (ನಾ). ಒಳಗಿನ ಸೆಳೆತ: ಮನದಲ್ಲಿ ಬೇಗುದಿಯಾಗಿ . . . ಎದೆಗೂಡಿನಲ್ಲಿ ಒಳಎಳೆತ ಹೆಚ್ಚಾಗುತ್ತದೆ (ಕೆಲರೋ. ೧೯).
[ಒಳ (< ಒಳಗು) + ಎಳೆತ]

**ಒಳಓಲಗ** (ನಾ). "ಅಂತರಂಗದ ಸಭೆ; ಏಕಾಂತದ ಚಾವಡಿ" (ಪ್ರಭಣ್ಣ). [ಒಳ (< ಒಳಗು) + ಓಲಗ]

**ಒಳಓವರಿ** (ನಾ). ಒಳಗಿನ ಕೋಣೆ; ಅಂತರ್ಗೃಹ: ರಾಣಿಯ ವಾಸದ ಈ ಒಳಓವರಿಗೆ– ಮನಸ್ಸಿನ ಪಯಣವೂ ಅಪಾಯಕರವೆಂದರಿತಿರುವ ನೀನು ಹೀಗೆ ಮೆಯ್ಮ್ಯಾರ್ತು ನಡೆತಂದಿರುವ ಸಾಹಸವು (ಬೆಟ್ಟಅ. ೨೯-೧೨).
[ಒಳ (< ಒಳಗು) + ಓವರಿ]

**ಒಳಕಂಪಣ** (ನಾ). ಕಂಪಣದ ಒಳಭಾಗ: ನಾಡೊಳಗೆ ಪೊಳಕಂಪಣ ಹೊಱಕಂಪಣವೆಂನದೆ ಏನು ನಾಡೊಳಗೆ ಹುಟ್ಟಿದಡೆ ಉ ಸಮಾನ ಭಾಗೆ ಯಲು ಹಚ್ಚುಕೊಂಡುಂಬರ (ಎಕ. VI, ಕಡೂರು. ೧೫೭-೭೪; 1191). [ಒಳ (< ಒಳಗು) + ಕಂಪಣ$_1$]

**ಒಳಕಡಿತ** (ನಾ). ೧. ಒಳಗೇ ಕಡಿಯುವುದು, —ಕತ್ತರಿಸುವುದು: ಒಳಕಡಿತದಲಿ ಕಡಿದು ಬೀಳುವ ಹಳುವವೋ ಕಾಲಾಳೊ ಎನೆ ದಿಗುವಳಯ ದಲಿ ಕೌತುಕವ ಮೆಱೆದವು ಹರಿಶರವ್ರಾತ (ನಿಭಾಗ. ೧೦-೪೯-೩೩). ೨. (ಆಲಂ) ಒಳಗಿನ ಬಾಧೆ, —ಕೊರೆತ. [ಒಳ (< ಒಳಗು) + ಕಡಿತ$_1$]

**ಒಳಕಡೆ** 'ಒಳಗಡೆ$_1$' ನೋ.

**ಒಳಕಣ್** 'ಒಳಗಣ್' ನೋ.

**ಒಳಕತ್ತರ** (ನಾ). ವಾದ್ಯಗಳನ್ನು ಬಾರಿಸುವ ಒಂದು ಕ್ರಮ ಅಥವಾ ಶೈಲಿ: ಅಳಗಂ ಸುಳಿಯಳಗಂ ಬೊಟ್ಟಳಮೊಳಕತ್ತರಮುಮೆಸೆವ ಹೊಱ ಕತ್ತರಮಗ್ಗಳಿಸಿರೆ ನಾನಾಭೇದಂಗಳ ಪಹರಣೆ ತುಡುಕು ಮೊಱೆಯಿಂ ಬಾಜಿಸಿದಂ (ಧರ್ಮಪ. ೨-೨೩); ಅವುಜಮನಳವಡಿಸಿಕೊಂಡು ... ಅಳಗಸುಳಿಯಳಗ ಬೊಟ್ಟಾಳಂ ಒಳಕತ್ತರ ಹೊಱಕತ್ತರ ವಿಷಮಕತ್ತರ ಮೆಂಬ ವಿಚಿತ್ರವಾದನರ (ಶಾಂತೀಶ್ವ. ೧೬-೬೭ ವ). 'ಹೊಱಕತ್ತರ' ಪರಾ. [ಒಳ (< ಒಳಗು) + ಕತ್ತರ]

**ಒಳಕಥೆ** (ನಾ). ಉಪಕಥೆ; ಉಪಾಖ್ಯಾನ: ಈ ಪೊಳಕಥೆಯ ತಾ ಹೇಳ್ವ ಕೇಳ್ವರ ದೇವನನವರತ ಒಲಿದು ರಕ್ಷಿಪನು (ಕುವ್ಯಾಆ. ಒರಿಜ. ೧೨-೯೭). [ಒಳ (< ಒಳಗು) + ಕಥೆ]

**ಒಳಕಯ್** 'ಒಳಕೆಯ್$_2$' ನೋ.

**ಒಳಕಾಲು** (ನಾ). ೧. ಅಂಗಾಲು; ಪಾದದ ಕೆಳಭಾಗ (ಕ). ೨. ನಡೆಯುವಾಗ ಕಾಲನ್ನು ಒಳಕ್ಕೆ ಎಸೆಯುವುದು: ಆ ಎತ್ತು ಒಳಕಾಲು (ರೂಢಿ). [ಒಳ (< ಒಳಗು) + ಕಾಲು$_1$ (< ಕಾಲ್$_1$)]

**ಒಳಕಿಸೆ** (ನಾ). (ಉಕ) ಒಳಗಿನ ಜೇಬು; ಒಳಮುಗ್ಗುಲಲ್ಲಿರುವ ಜೇಬು: ಮಾಸ್ತರು ಕವರನ್ನು ಒಳಕಿಸೆಯಲ್ಲಿ ತುರುಕಿಸಿದರು (ಕಾವೇರಿ. ೧೮೫). [ಒಳ (< ಒಳಗು) + ಕಿಸೆ]

**ಒಳಕುಪ್ಪಸ** 'ಒಳಗುಪ್ಪಸ' ನೋ.

**ಒಳಕುಪ್ಪುಸ** 'ಒಳಗುಪ್ಪಸ' ನೋ.

**ಒಳಕುರು** (ನಾ). "ದೇಹದೊಳಗಡೆ ಕೀವು ತುಂಬಿ ಆದ ಕುರು" (Abscess. ಇಂಕನಿ). [ಒಳ (< ಒಳಗು) + ಕುರು$_1$]

**ಒಳಕುಱುವ** (ನಾ). ದ್ವೀಪದ ಒಳಭಾಗ; ಅಂತರ್ದ್ವೀಪ: ಸಾರ ಲೋಹಿತನೆಂಬ ಸಾಗರತೀರವಾಸಿಗಳೊಳಕುಱುವದ [ಪಾಠಾಂ. ಒಳಗೆ ಕುರುಪದ] ವಿಕಾರ ಚೋನೆಗ ಚೀನ ಬೋಟಕರನು (ಕುವ್ಯಾಸ. ೪-೧೦). [ಒಳ (< ಒಳಗು) + ಕುಱುವ$_1$]

**ಒಳಕೆಯ್$_1$**, ಒಳಕೈ$_1$ (ಕ್ರಿ). ೧. ಪಡೆ; ಹೊಂದಿರು: ಅವರ ಹೃದಯಂಗಳುಂ ನದೀನದಂಗಳುಮೊಡನೊಡನುತ್ಕಲಿಕೆಗಳನೊಳಕೆಯ್ದುವು (ಕಾದಂಉ. ೫೩೧); ನಾಲ್ಕೊಗಮಿರದಚ್ಚದಾವರೆಯ ಚೆಂದಮನೊಳಕೆಯ್ಕೆ (ಕಬ್ಬಕಾ. ೧೬೪). ೨. ಒಳಗೊಳ್ಳು; ಆವರಿಸು: "ಒಳಕೆಯ್ – ಅಂತಃ ಕ್ರಿಯಾಯಾಂ" (ಶಮಧಾ); ಮಹಾಪ್ರಳಯಜಲಧಿಗಳ್ ಮೇರೆದಪ್ಪಿ ಕವಿದು ಭುವನಂಗಳೆಲ್ಲಮನೊಳಕೆಯ್ಯಲುಕ್ಕಿದುವೆಂಬಂತಿಡಿದಡರೆಗೊಂಡು (ಕಾದಂಪೂ. ೮೭೨). ೩. ಒಳಗುಮಾಡಿಕೊಳ್ಳು; ಒಲಿಸಿಕೊಳ್ಳು; ವಶಪಡಿಸಿಕೊಳ್ಳು: ಒಳಕೆಯ್ವಂತಮರ್ದಪ್ಪುವಂತೆ ... ಉತ್ಸವಾಕುಳದಿಂ ನೋಡಿದನಾಗಳರಸಿಯಂ ವಿಶ್ವಂಭರೋರ್ವೀಶ್ವರಂ (ಕುಸುಮಾ. ೪-೪); ಈಶ್ವರನನೊಳಕೆಯ್ವ ಗತಿಯಾವುದೆಂದು ನಿರ್ಧರಿಸಿ (ಚೆಬಪು. ೩೫-೩೫). **ಒಳಕೈ$_1$**: ೧. ಗುಣಮನೊಳಕೈದು ತೋರ್ಕುಂ ಮಣಿ ಮಹಿಯೊಳ ದೆಂಬುದುಚಿತಮವನೀಶ ಶಿರೋಮಣಿಯನೊಳಕೈದುದಾ ಪೆಣ್ಮಣಿಯ ಗುಣಂ (ರಾಜಶೇ. ೩-೨೧). ೩. ಆ ರಾಘವಂ ಕಟ್ಟಿ ಮೇಣ್ ತಡೆದಂ ಕಾಯ್ದೊಳಕೈದನೆಂದು ಪಗೆಯಂ (ಶಬಶಂ. ೧-೩೩). [ಒಳ (< ಒಳಗು) + ಕೆಯ್$_1$]

**ಒಳಕೆಯ್$_2$**, ಒಳಕಯ್, ಒಳಕೈ$_2$, ಒಳಗೈ$_1$ (ನಾ). ೧. ಕೈಯ ಒಳಗು; ಅಂಗೈ. ೨. (ಕರಾ) ಒಳಭಾಗ: ಅದನ್ನು ಒಳಕೆಯ್ಯಲ್ಲಿಡಿ (ರೂಢಿ). **ಒಳಕಯ್**: ೧. ಕಯ್ಯ ಒಳಗು, ಒಳಕಯ್ (ಶಬ್ದಾನು. ೩೪೮ ಪ್ರಯೋ). **ಒಳಕೈ$_2$**: ೧. ಭರದೊಳೊಳಕೈಯಿಂದ ಹೊಱಕೈಯಿಂದ ಹೊಡೆದೊಡೆದು (ಬಸವು. ೨೧-೪೩). ೩. ನಷ್ಟ: ಅವನ ವ್ಯಾಪಾರ ಒಳಕೈಯಾಯಿತು (ರೂಢಿ). ೪. ಜಿಪುಣ; ಕೃಪಣ: ಅವನೇನು ಒಳಕೈ (ರೂಢಿ). ೫. ಕಕ್ಕಸು, ಬಚ್ಚಲು ಎಲ್ಲವೂ ಒಳಗೇ ಇರುವುದು: ಮನೆ ಒಳಕೈಯಾಗಿದೆ (ರೂಢಿ). **ಒಳಗೈ$_1$**: ೧. ಒಳಗುಕೈ, ಒಳಗೈ (ಭಾಷಾಭೂ. ೧೫೧ ಉದಾ). 'ಹೊಱಕೈ' ಪರಾ. [ಒಳ (< ಒಳಗು) + ಕೆಯ್$_2$]

**ಒಳಕೆಯ್$_3$** (ನಾ). ಹೊಲದ ಅಥವಾ ಗದ್ದೆಯ ಒಳಭಾಗ: ಒಳಕೆಯ್ಯೊಳಿರ್ದು ಪಲ್ಲಿರಿದೊಳವಾಲಂಗೊಂಡು ಮೊರೆವ ಭಷಕನ ತೆಱದಿಂ ದೊಳಪೊಕ್ಕು ದುರ್ಗಮಂ (ಕಾವ್ಯಾವ. ೨೪೪). [ಒಳ (< ಒಳಗು) + ಕೆಯ್$_3$]

**ಒಳಕೆಯ್ಸು**, ಒಳಕೈಸು (ಕ್ರಿ). ೧. ಉಂಟುಮಾಡು; ಒದಗಿಸು: ನಳಿನನಾಳಮಂ ಬಳಸಿ ತಳ್ತಳಿಮಾಲೆಯ ಲೀಲೆಯನೊಳಕೆಯ್ಸಿ [ಪಾಠಾಂ. ಕೈಸಿ] ನೀಲರತ್ನದ ಕಡೆಯಮುಂ ಪದಾಗ್ರದೊಳಂ ದಂಗೊಳಿಸಿಯುಂ (ರಾಜಶೇ. ೧೩-೫೯ ವ). ೨. ವಶಪಡಿಸಿಕೊಳ್ಳು: ನಾಡ ನೀಱೆವೆಂಡಿರ ... ಇಂಬುಕೆಯ್ಸುವೊಳಕೆಯ್ಸುವನೇಕ ವಿಚಿತ್ರ ಚೇಷ್ಟೆಗಳ್ (ಶಬ್ದಾನು. ೯೭ ವ್ಯಾಖ್ಯಾ). **ಒಳಕೈಸು**: ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಒಳಕೆಯ್$_1$ + -ಸು$_1$]

**ಒಳಕೇರಿ** (ನಾ). ಒಳಗಡೆ ಇರುವ ಕೇರಿ, —ಓಣಿ: ಅದಱಿಂ ಮಿಗಿಲಾದ ಒಳಕೇರಿ ಹೊಱಕೇರಿಗೆ ಗಣನೆಯಿಲ್ಲ (ಚನ್ನವ. ಕ. ೩೫೭). 'ಹೊಱಕೇರಿ' ಪರಾ. [ಒಳ (< ಒಳಗು) + ಕೇರಿ]

**ಒಳಕೈ$_1$** 'ಒಳಕೆಯ್$_1$' ನೋ.

**ಒಳಕೈ$_2$** 'ಒಳಕೆಯ್$_2$' ನೋ.

**ಒಳಕೈಸು** 'ಒಳಕೆಯ್ಸು' ನೋ.

**ಒಳಕೊಳ್**, ಒಳಗೊಳ್ (ಕ್ರಿ). ೧. ಒಳಗಿಟ್ಟುಕೊಳ್ಳು; ಸೇರಿಸಿಕೊಳ್ಳು: ಈ ದೊರೆಯ ದುರಾತ್ಮನಂ ಖಳನನಾನೊಳಕೊಂಡೊಡೆ ಭೀಮನೀ ಸರೋವರಮುಮನೆಮ್ಮುಮಂ ಕದಡುಗುಂ (ಗದಾಯು. ೬-೧೨); ದುಷ್ಟರನೊಳಕೊಂಡು ಕೆಟ್ಟರ ಕಥೆಗಳಂ ಪೇೞ್ವೆಂ (ಪಂಚತಂ. ೧೨೨-೧೨); ರವಿಬಿಂಬಮನೊಳಕೊಂಡು ಪೊಳೆವ ಪರಿವೇಷದವೊಲ್ (ಮಲ್ಲಿಪು. ೧-೬೨); ಮಗನಂ ತೊಱೆದು ಕಳ್ಳನನೊಳಕೊಳ್ವಂತೆ (ಧರ್ಮಾಮೃ. ೧೩-೧೪೦); ತಲೆಗುತ್ತಿ ಹೊಗಲೊಳಕೊಳ್ಳದಂಬರವು (ಕುವ್ಯಾದ್ರೋ. ೧-೨). ೨. ಸ್ವೀಕರಿಸು; ಸಮ್ಮತಿಸು; ಒಪ್ಪಿಕೊಳ್ಳು: ಏಕೊಳಕೊಳ್ಳೆ ಜಡರಂತೆ ಶೋಕರಸಮಂ (ಆದಿಪು. ೧೬-೫೫); ನೀಂ ತಲೆವೀಸದುರ್ವರಾಶ್ರೀಯನಿವಾಗದೆನ್ನದೊಳಕೊಳ್ (ಪಂಪಭಾ. ೧೪-೧೭). ೩. ಉಂಟಾಗು; ಒದಗು; ಪ್ರಾಪ್ತವಾಗು: ಒಳಕೊಂಡುದವಳ್ಗೆ ಗರ್ಭಚಿಹ್ನಮೆ ಗಳಗರ್ಭದರ್ಭಕನ ಸೂಚಿಪ ಮುಂದಣ ರಾಜ್ಯಚಿಹ್ನಮಂ (ಪಂಪಭಾ. ೧-೧೨೦); ಒಳಕೊಂಡ ಪಂಚವಿಂಶತಿ ಮುಳದಿಂದಂ ಪಿಂಗಿ (ಸುಕುಮಾ. ೬-೯೬).

೪. ಒಳಸೇರು; ಅಡಕವಾಗಿರು : ಒಳಪೊಕ್ಕು ನೋಡೆ ಭಾರತದೊಳಗಣ ಕಥೆಯೆಲ್ಲಮೀ ಗದಾಯುದ್ಧದೊಳಂತೊಳಕೊಂಡಿತ್ತು (ಗದಾಯು. ೧-೪೫). ೫. ತಾಳು; ಪಡೆ; ಹೊಂದು: ನಿನ್ನ ಯಶೋರಾಶಿಯನಿಂದು ದ್ಯುತಿಯ ವಿಕಾಶಮನೊಳಕೊಳ್ಗುಂ (ಕವಿರಾ. ೩-೯೫); ಪವಣಿಲ್ಲದ ದೊಂದೌತ್ಸುಕ್ಯವನೊಳಕೊಂಡೆನ್ನ ಮನಮುಮಾರೂಢ ಮಹೋತ್ಸವಮಂ ಕೇಳಲ್ಪಡೆದಪುದು (ಕಾದಂಪೂ. ೩೮೮); ಶಾಂತರೂಪಂ ಬಿಟ್ಟು ಕ್ರೂರ ರೂಪಂ ಕೈಕೊಂಡು ನಗೆಯಂ ಬಿಟ್ಟು ಮುಳಿಸನೊಳಕೊಂಡು (ಧರ್ಮಾಮೃ. ೭-೬೩). ೬. ಆವರಿಸು; ಮುತ್ತು; ಸುತ್ತುಗಟ್ಟು: ಪ್ರಳಯಾಗ್ನಿ ಯನ್ತೆ ಕಟಕಮನೊಳಕೊಣ್ಡುಳುರ್ವಗ್ನಿ . . . ಉಪಶಮಿಸಿತು (ಸೌಇಇ. XI-i, ೫೨-೨೩; 1007). ೭. ಸಹಿಸು; ತಾಳಿಕೊಳ್ಳು: ಪಳಿಕೆಯ್ದು ಬಂದು ನಲ್ಲಳ ಮುನಿಸನೊಳಕೊಂಡು ಮುಖಮುಂ ಮುಗುಳ್ನಗೆವೆರಸು ನುಡಿದು ಗೆಂಟಾದಂ (ಆದಿಪು. ೧೨-೩೯ ವ); ಲೋಗರಂ ಪೊರೆಯಲೆನಿತು ಬನ್ನಮನೊಳಕೊಂಡೈ (ಅದ್ಭುತ. ೪೩-೨೧). **ಒಳಗೊಳ್** : ೧. ಸಮಸ್ತ ನದಿಗಳ ಸಡಗರದೊಳಗೊಳಗೊಂಡು ಮುಕ್ತಿಸ್ಥಾನಕೆಡೆಯಾಗಿಹಳು ಕಾವೇರಿ (ಕಂನವಿ. ೨-೧೯). ೭. ಕಿಚ್ಚಿನಂತೊಳಗೊಳಲರಿದಪ್ಪ ಬಲ್ಲಿದ ನಾಣೆಯಂತೆ ಮಿಾಜಲರಿದಪ್ಪ (ಧರ್ಮಾಮೃ. ೩-೧೮೭).

[ಒಳ (< ಒಳಗು) + ಕೊಳ್$_1$]

**ಒಳಕೋಂಟೆ,** ಒಳಗೋಟೆ (ನಾ). ಕೋಟೆಯ ಒಳಭಾಗ; ಒಳಗಿನ ಕೋಟೆ: ಒಳಕೋಂಟೆ, ಹೊಜವೇಲಿ (ಶಮದ. ೧೭೬ ಪ್ರಯೋ). **ಒಳಗೋಟೆ** : ಮುಙಿಯಲಿಙಿದು ಹೊಙಕೋಟೆಯ ಕೊಂಡು ಮತ್ತುಙುಬಿದರೊಳಗೋಟೆಗಂದು (ಕಂನವಿ. ೧೮-೧೫೫).

[ಒಳ (< ಒಳಗು) + ಕೋಂಟೆ]

**ಒಳಕೋಟಲೆ** (ನಾ). ಒಳಗಿನ ತೊಂದರೆ, —ಕಷ್ಟ; ಆಂತರಿಕ ಉಪದ್ರವ: ದ್ವೇಷದೊಳಕೋಟಲೆಗೆ ಕಡೆ ಕಾಣಿರಿ (ದ್ರಾಕ್ಷಿದಾ. ೧೪-೪).

[ಒಳ (< ಒಳಗು) + ಕೋಟಲೆ]

**ಒಳಕೋಣೆ,** ಒಳಗೋಣೆ (ನಾ). ಒಳಗಿನ ಕೋಣೆ: ಜೋಪಾನದಲಿ ಮಡಗುವುದಿನ್ನುಳಿದೇನುವನೂ ಕಡೆಗೆ ಬಿಡದೊಳಕೋಣೆಯಲಿ ಕಟ್ಟಿಡುವುದಾ ಸುಕುಮಾರಿ (ಪಶುಭಾ. ೫-೪೭); ವರದಿಯೊಪ್ಪಿಸಲು ಒಳಕೋಣೆಗೆ ಹೋದಾಗ ಅವರು ಶ್ರೀಧರನನ್ನು . . . ಸ್ವಾಗತಿಸಿ (ವಾತ್ಸಲ್ಯ. ೩೪೫); ಮನದೊಳಕೋಣೆಯ ಕಟ್ಟೆದಿಲ್ಲಣಗಳ ತೊಡೆದುಹಾಕುವುದಾಗಲಿಲ್ಲ (ಇಂಚಾಪ. ೨೧೯-೩೩). **ಒಳಗೋಣೆ**: ಅವರನ್ನು ಬೀಹಿನಜಾವಡಿ ಗುಯ್ಯುದ್ದ, ಪ್ರಶ್ನೆಯ ಒಳಗೋಣೆಯಲ್ಲಿ – ಹಿಂಡಿಕೊಳ್ಳಬೇಕು (ಮಂತ್ರಶ. ೨೨-೨೬).

[ಒಳ (< ಒಳಗು) + ಕೋಣೆ$_2$]

**ಒಳಕೋಹು** (ನಾ). ಒಳಗಡೆ; ಒಳಭಾಗ; ಒಳಪಾರ್ಶ್ವ: ಕೆಱೆಯ ಒಟ[ಳ]ಕೋಹಿನ ಕೆಲದ (ಎಕ. VI, ತರೀಕೆ. ೮೫-೪೫; 1173); ಹೊಸ ಕೆರೆಯ ವೊಳಕೋಹಿಂ ಮ್ಖೂಡಲು ಕೊಮ್ಮನ ಕೆಱೆಯ ಕೆಳಗೆ (ಎಕ. VI, ತರೀಕೆ. ೯-೧೮; 1279).

[ಒಳ (< ಒಳಗು) + ಕೋಹು$_1$. P ತೆಲು. ಕೋವು = ಪಕ್ಕ]

**ಒಳಗಂಟು** (ನಾ). ೧. ಒಳಗಿನ ತೊಡಕು: ಮೋಹರಾಗ ದ್ವೇಷ ಹಾಸ್ಯ ಮುಂತಾಗಾಱುಮೋಹದ ನಾಲ್ಕುಕಷಾಯಾ ಮೋಹಿವೆಣ್ಣಾಸೆಯಿಂತೀರೇಳ ಬಿಡಬೇಕು ಮೋಹಿಸಿದೊಳಗಂಟುಗಳನು (ಭರತೇ. ೭೦-೮೧). ೨. ಬಚ್ಚಿಟ್ಟ ಹಣ: ಮನೆಯ ಯಜಮಾನರು ಒಳಗಂಟು ಮಾಡಿಕೊಂಡು ಕುಟುಂಬಕ್ಕೆ ಅನ್ಯಾಯಮಾಡಿದರು (ರೂಢಿ).

[ಒಳ (< ಒಳಗು) + ಗಂಟು]

**ಒಳಗಡಿ** (ನಾ). ಒಳಗಿನ ಎಲ್ಲೆ, —ಗಡಿ: ಮಾಱುಪೊತ್ತೊಳಗಡಿ ಬದಲಗಟ್ಟ ಹಿರಿಯ ಕೆಱೆ (ಎಕ. VII, ಹೊನ್ನಾಳಿ. ೧೦೮-೪೮; 1203).

[ಒಳ (< ಒಳಗು) + ಗಡಿ$_1$]

**ಒಳಗಡೆ$_1$,** ಒಳಕಡೆ (ನಾ). ೧. ಒಳಗಿನ ಭಾಗ, —ಪ್ರದೇಶ: ಮನೆಯ ಒಳಗಡೆ (ರೂಢಿ). ೨. ಅಂತರಂಗ: ಮನುಷ್ಯ ಒಳಗಡೆ ಒಂದು ರೀತಿ, ಹೊರಗಡೆ ಒಂದು ರೀತಿ ನಡೆಯಬಾರದು (ರೂಢಿ). **ಒಳಕಡೆ**: ೩. ದನಕರುಗಳು ಮೇಯುವುದಕ್ಕಾಗಿ, ಕಾಡಿನ ಅಂಚಿನ ಹಕ್ಕಲುಗಳಲ್ಲಿ ಆಚೆ ಹೋಗದಂತೆ ಒಡ್ಡು ಹಾಕಿದ ಪ್ರದೇಶ: ಅದು ದನಗಳು ಮೇಯುವ ಕಾವಲಾಗಿಯೂ ಕರುಗಳ 'ಒಳಕಡೆ' ಯಾಗಿಯೂ ಉಪಯೋಗದಲ್ಲಿತ್ತು (ಮಲೆಮ. ೧೮೦).

[ಒಳ (< ಒಳಗು) + ಕಡೆ$_3$]

**ಒಳಗಡೆ$_2$** (ಅ). ಈ ನಡುವೆ; ಈ ಮಧ್ಯೆ: ಕುಲಿಮೆಯವರು – ಇವರ ಪೂರ್ವಜರು ಕಬ್ಬಿಣದ ಕಲ್ಲು ಕರಗಿಸಿ ಕಬ್ಬಿಣ ಮಾಡುವ ಹೋರೆಯನ್ನು ಮಾಡುತ್ತಿದ್ದರು. ಒಳಗಡೆಯಲ್ಲಿ ಆ ಹೋರೆ ಮುಗ್ಗಿದ್ದರಿಂದ ಇವರು ವೊಕ್ಕಲುತನವನ್ನು ಮಾಡುತ್ತಾರೆ (ಕಭಾಗೆ. ೧೨೭); ಈ ಗಿಡದ ಬೀಜಗಳು ಒಳಗಡೆಯಲ್ಲಿ ಮುಂಬಯಿಗೆ ಬಂದಿರುತ್ತವೆ (ಮುಂಬಯಿ. ೨-೪೧).

[< ಒಳಗಡೆ$_1$]

**ಒಳಗಣ್,** ಒಳಕಣ್, ಒಳಗಣ್ಣು (ನಾ). ೧. ಒಳಗಿನ ಕಣ್ಣು; ಅಂತರ್ದೃಷ್ಟಿ: ಒಳಗಣ್ಣು ಪಾರ್ವಯೆ! ನೆನೆಯಿರೆ ನಮ್ಮ ಪೊಲಸುಂ (ಹೊಂಗಳು. ೪೫-೧೮). **ಒಳಕಣ್**: ೨. ಗುಳಿಬಿದ್ದ ಕಣ್ಣು; ಗುಳಿಗಣ್ಣು: ಬಳ[ಳ]ಕಣ್ಬಿರ್ದುವು ಕಣ್ಪಾಯ್ಯಳೆಯಾಯ್ತು ಬರ್ದಯಳ ಪುವೆತ್ತುದ[ಟ]ವೋಪಿಸೆಗಂ ಬಳಸಿ ಬಲವಂದು ನೋಡುವ ಯೆಳವೆಂಡಿರ ನವರೊಳಜ್ಜ ನಿನಗೇಕಜ್ಜಂ (ಆಜಿಪು. ೨-೯೫). **ಒಳಗಣ್ಣು** : ೧. ಈ ಒಳಗಣ್ಣೆಂದರೆ ಕಲ್ಪನೆಯ ಕಣ್ಣಲ್ಲ (ಪರಪ. ೧೮೮); ಪಂಡಿತನು ತನ್ನ ಒಳಗಣ್ಣಿನಿಂದ ಅಲ್ಲಿ ನಡೆದಿರಬಹುದಾದ ವಿಷಯವನ್ನು ನೋಡತೊಡಗಿದ (ಜಡೀವ. ೨೬೦). ೩. (ಆಲಂ) ವಿಚಾರ: "ತಿಳು(ಳಿ)ವಳಿಕೆ, ಒಳಗಣ್ಣು, ವಿಚಾರ" (ಕಂನುಹು. ೮೫).

[ಒಳ (< ಒಳಗು) + ಕಣ್]

**ಒಳಗಣ್ಣು** 'ಒಳಗಣ್' ನೋ.

**ಒಳಗತ್ತರಿ** (ನಾ). ಒಳಗೇ ಕತ್ತರಿಸುವ ಸಾಧನ; ಕಾಣದೆ ಕತ್ತರಿಸುವಂಥದು: ಜ್ವರ ಗುಲ್ಮ ಕುಷ್ಠ . . . ಕೃಚ್ಛ್ರಾದಿ ರೋಗಗಳು ಕರುಳಿನೊಳಗತ್ತರಿಯ ಹಾಂಗೊಳಗು ಪುಟ್ಟಿಸುವ ಪರಿಪರಿಯ ವೇದೆಯಿಂ (ಕೈಕವ. ೧-೧೯-೩).

[ಒಳ (< ಒಳಗು) + ಕತ್ತರಿ$_1$]

**ಒಳಗದಡು** (ನಾ). ಒಳಗಿನ ಕೊಳೆ, —ರಾಡಿ: ಕಳೆದೊಳಗದಡಂ ಪೊಳೆಗಳ್ ತಿಳಿದುವು ಸಜ್ಜನರ ಮನಕೆ ಸಾಟಿಯೆನಲ್ (ಚಿಕವಿ. ೪-೭೮).

[ಒಳ (< ಒಳಗು) + ಕದಡು$_2$]

**ಒಳಗರುಡಿ** (ನಾ). ಒಳಗಿನ ಅಭ್ಯಾಸಮಂದಿರ: ಒದಱುವ ದಣಿಗೊಳಗರುಡಿಯ ಪದಮೇಳಮನುಱಿದು ಬಾಗಿಲೆಡೆಗೇಟ್ತಂದರ್ ಮದನನ ಕೇಳೀವನದಿಂ ಬಿದಱಿದ ಪೆಣ್ಬುಲ್ಲೆವಿಂಡವೋಲ್ ಬೆಲೆವೆಣ್ಗಳ್ (ಚಿಕವಿ. ೬-೧೨೧).

[ಒಳ (< ಒಳಗು) + ಗರುಡಿ]

**ಒಳಗವತೆ** (ನಾ). ಒಳಗಿಂದೊಳಗೇ ಸುಲಿದುಕೊಳ್ಳುವುದು; ಗುಟ್ಟಾಗಿ ಅಪಹರಿಸುವುದು: ಕಳವಳಿವು ಹಿಡಿ ಬಂದಿ ಜೂಜುಗಳೊಳಗವತೆ ಅನ್ಯಾಯವೆಂಬೀ ಬಳಕೆಯಲಿ ಕೀಳ್ಪೆಜ್ಜೊಳೊಂದಿರೆ ಕಾಮುವಶತೆಯಲಿ ಕಳೆದವೆಂಥತ್ತೆಂಟು ವರ್ಷಂ (ನಿಭಾಗ. ೬-೧-೧೫).

[ಒಳ (< ಒಳಗು) + ಕವತೆ$_1$ (< ಕವರ್ತೆ$_1$)]

**ಒಳಗಳಂತಿಗೆ** (ನಾ). ಒಳಗಿನ ಕೋಣೆ: (. . . ಕರವಾಲಗಿಳ್ತು, ಸನ್ನಿಗೆಯ್ದುದ ಎಣ್ಬರು ಸೈನಿಕರನ್ನೊಡಗೊಂಡು, ಒಳಗಳಂತಿಗೆಗಳ್ಗೆ ಅಗ್ರಗಮನದಿಂದ ಹೋಗುವನು) (ಮಂತ್ರಶ. ೨೦-೧೧).

[ಒಳ (< ಒಳಗು) + ಗಳಂತಿಗೆ$_2$]

**ಒಳಗಱಿ** (ಕ್ರಿ). ಒಳಗಿನ ವಿಷಯವನ್ನು ತಿಳಿ; ಮರ್ಮವನ್ನು ತಿಳಿ; ಅಂತರಂಗವನ್ನು ಅರಿ: ಒಳಗಱಿಯದೆ ಕೌರವಬಳಜಳಧಿ ಬೊಬ್ಬಿಱಿದು ಮೇಲುದಂ ಬೀಸಿದೊಡೆ (ಪಂಪಭಾ. ೧೨–೨೦೨); ಒಳಗಱಿಯ ದನಿತುಮಂ ಸಂಚಲಚಿತ್ತಂ ಮಾಟ್ಪೆನೆಂದು ಪೂಣ್ದಂ (ಧರ್ಮಾಮೃ. ೧–೧೩೬). [ಒಳ (< ಒಳಗು) + ಅಱಿ]

**ಒಳಗಱಿವು** (ನಾ). ಒಳಗಿನ ತಿಳಿವು; ಅಂತರ್ಜ್ಞಾನ: ಎನ್ನಱಿತಮದು ಕಣ್ಣಱಿವ ಮಿಾಱಿ ತಾನ್ ಒಳಗಱಿವನುಳ್ಳುದರ್ಕೆ (ಬದ್ಧಪ್ರ. ೪೪–೯೬೬). [ಒಳ (< ಒಳಗು) + ಅಱಿವು]

**ಒಳಗತ್ತಲೆ** (ನಾ). ೧. ಒಳಗಿನ ಕತ್ತಲೆ. ೨. (ಅಲಂ) ಅಜ್ಞಾನ: ಒಳಗತ್ತಲೆಯಂ ಜಾಱಿಸಿ ತಿಳಿವಿನ ತಾಮರೆ ಮಲರ್ವವೋಲ್ ಮಾಳ್ಪುದೞಂ ಎಳಗೆಂಪಿಂ ಪುದಿದೀ ಕರಜಳಜಂ ನೆನೆಯಿಪುದು ಮೂಡುಸಂಜೆಯ ಚೆಲ್ವಂ (ವಸ್ತುವಂ. ೮೬). [ಒಳ (< ಒಳಗು) + ಕತ್ತಲೆ]

**ಒಳಗಾಗಿಸು** (ಕ್ರಿ). ಅಧೀನ ಪಡಿಸು; ಗುರಿಮಾಡು; ಈಡಾಗಿಸು: ಉಣ್ಣದ ಊಟವನುಣಿಸಿ ವಿಧಿಗಳೊಳಗಾಗಿಸುವ ಕೇಳಿರಣ್ಣಾ (ಮಹಾದೇ. ೨೪–೨); ಎನ್ನ ಹಾನಿಗೊಳಗಾಗಿಸದೆ ನಿಜಮೂರ್ತಿಯಂ ತೋರ್ಪುದೋ ನನ್ನ ತಂದೆ (ಸೋಮಜ. ೩–೬೮). [ಒಳಗಾಗು + –ಇಸು₃]

**ಒಳಗಾಗು** (ಕ್ರಿ). ಒಳಪಡು; ಅಧೀನವಾಗು; ಗುರಿಯಾಗು; ಈಡಾಗು: ಅಳತೆಗೆ ತೂಕಕ್ಕೆಣಿಕೆಗಮೊಳಗಾದುವು ಸಕಳವಸ್ತುಗಳ್ (ಆದಿಪು. ೧೦–೫೫); ಕೊಳದೊಳೆ ಮುಳುಗಿರ್ದಕ್ಕಟಾ ಕೋಡಸೇಡಿಂಗೊಳಗಾದೈ (ಗದಾಯು. ೭–೧೩); ಮೃತ್ಯುವಿಂಗೊಳಗಾಗದ ಪ್ರಾಣಿಯೇ ಇಲ್ಲಂ (ಪಂಚತಂ. ೬೩–೬); ಆಯೆರಡೂರ ತಳಭಣ್ಣದ ಸುಂಕವೊಳಗಾಗಿ (ಎಕ. VII, ಶಿವಮೊ. ೯೭–೪೭; 1113); ಕಂದಯ್ಯ ಕಾದುವ ಹರಯವೆ ಖಳರೊಳು ಬಂಧನಕೊಳಗಾಗಬಹುದೆ (ಮೋಹತ. ೩೬–೨೨); ಕ್ರೋಧದಿಂದಲೆ ಯೋಗಿ ಬಾಧೆಗೊಳಗಾಗಿಹನು (ಸರ್ವಜ್ಞ. ೪೮೦). [ಒಳಗು + ಆಗು₁]

**ಒಳಗಾಣ್** (ಕ್ರಿ). ಒಳಗನ್ನು ಕಾಣು; ರಹಸ್ಯವನ್ನು ತಿಳಿದುಕೊಳ್ಳು: ಈ ಒಳಗಂಡ ಕಳ್ಳನ ಕೀಟಲೆಯಿಂದ . . . ಈ ಹಾಲಪ್ಪನೇ ಮತ್ತೆ ಜಗಳವನ್ನು ತಂದಿಟ್ಟವನು (ಚಿತ್ರಪಾ. ೧೧೧); ಚಿಲ್ಲರೆ ಪಾಳೆಯಗಾರರು . . . ದೊಡ್ಡ ಒಳಗಂಡ ಕಳ್ಳರಾಗಿ ಹಗೆತನವನ್ನು ಸಾಧಿಸಲು ನಿಂತರು (ಚಿತ್ರಪಾ. ೧೦೨). [ಒಳ (< ಒಳಗು) + ಕಾಣ್]

**ಒಳಗಿವಿ** (ನಾ). ೧. ಒಳಗಿನ ಕಿವಿ. ೨. ಕಿವಿಯ ಒಳಭಾಗ. ೩. ಧ್ಯಾನಬಲದಿಂದ ಒಳಗೇ ಕೇಳತಕ್ಕ ಶ್ರವಣಶಕ್ತಿ: ಕೇಳುತಿರಲು ಒಳಗಿವಿಯು ಕೊಳಲು ನನ್ನೊಳಗೆ ಮಾಯವಾದ (ಹಾಡುಪಾ. ೨೭–೨೧). [ಒಳ (< ಒಳಗು) + ಕಿವಿ₃]

**ಒಳಗು** (ನಾ). ೧. ಒಳಭಾಗ; ಒಳಗಿನ ಪ್ರದೇಶ: ಭಟ್ಟಾರರ್ ಬಸದಿಯಂ ಬಲಗೊಂಡು ಕಾಲಂ ಕರ್ಚೊಳಗಂ ಪೊಕ್ಕು (ವಡ್ಡಾರಾ. ೭೯–೧); ಒತ್ತಂಬದಿಂದೊಳಗಂ ಪೊಕ್ಕು (ಪಂಪಭಾ. ೭–೪ ವ). ೨. ಮನಸ್ಸು; ಹೃದಯ: ಬ್ರಹ್ಮಋಷಿಯಾದೊಡೊಳಗು ನಿರ್ಮಳವಹುದು (ಹಚಕಾ. ೨–೩೨); ಬೆಳಗ ನುಂಗಿದ ಗುರುವಿನೊಳಗ ನುಂಗಿದ ಶಿಷ್ಯ (ಸರ್ವಜ್ಞ. ೧೧೩). ೩. ಗುಟ್ಟು; ರಹಸ್ಯ; ಮರ್ಮ: ಅರಸನನೆಯ್ದಿ ಕಾರ್ಯದೊಳಗನಱಿವಂ (ಪಂಚತಂ. ೩೧–೫); ಅಯೋಗ್ಯನೆ ತತ್ತ್ವಂಗಳೊಳಗನಱಿಯದ ಮೂರ್ಖರ (ಸಮಪ. ೪–೩೨); ಒಂದೆ ಮನದಿಂ ನಿರುತಂ ಕೇಳ್ವವನೆ ಧರ್ಮದೊಳಗಂ ತಿಳಿಗುಂ (ಧರ್ಮಾಮೃ. ೧–೧೮೧); ನಿಮ್ಮ ನಿಜದೊಳಗನಾರು ಬಲ್ಲರಯ್ಯಾ (ಆದವ. ೪); ಆಲೋಚನೆಗೆಯ್ವುದು ಚಿತ್ತದೊಳಗನಾರೈವುದು (ಗಿರಿಕ. ೬–೧೭). ೪. ಅಧೀನ; ವಶ: ಕಂಜಾಸ್ತ್ರ ನೀವಿಕ್ಕಿದಾಜ್ಞೆಗೊಳಗು ಲಾಲಿಸು (ಭರಚ. ೪೮–೫೬).

ಒಳಗಂಬರ್ = ಒಳಕ್ಕೆ ಹೊಗು; ಗುಟ್ಟನ್ನು ಅರಿತುಕೊಳ್ಳು. ಆಡಲಾಡಿಸಲ್ ಪಾಱಿಯಂ ನಿಱಿಸಲುಂ ಪರಿಗೊಳಲ್ ತೊವಲಿಕ್ಕಲೊಳಗಂಬರಲ್ ಕಾಡಬೇಲಿಯಂ ಮಾರ್ಕಾಡನಱಿಯಲುಂ . . . ಕೇಳಾನೆ ಬಲ್ಲೆಂ (ಪಂಪಭಾ. ೫–೪೧); ಕಾಲಾಳೊಳಂ ಕುದುರೆಯೊಳಮೊಳಗಂಬರಲಾನೆ ಬಲ್ಲೆಂ (ಪಂಪಭಾ. ೫–೪೩ ವ). **ಒಳಗುಮಾಡಿಕೊಳ್ಳು** = ಅಳವಡಿಸು; ಸೇರಿಸಿಕೊಳ್ಳು: ಬಲವನು ಲೆಕ್ಕಕೊಳಗು ಮಾಡಿಕೊಂಡು ಸಿಕ್ಕದೆ ತಾನೊರ್ವನೆ ಬಹುದಿದು ನೇಮಿಯೊಕ್ಕಲೋಲೆಯ ಭಾಗ್ಯದಿರವು (ಕುರಾಸಾಂ. ೪೧–೧೪). **ಒಳಹಾಕಿಕೊಳ್ಳು** = ತನ್ನ ಪಕ್ಷಕ್ಕೆ ಸೇರಿಸಿಕೊಳ್ಳು; ಒಳಪಡಿಸಿಕೊಳ್ಳು: ರಾಜನನ್ನು ಒಳಹಾಕಿಕೊಂಡು ಇಲ್ಲಿರುವ ಕಡಲುಗಳ್ಳರು ಹಡಗುಗಳನ್ನು ಕೊಳ್ಳೆಹೊಡೆಯುತ್ತಾರೆ (ಪ್ರವಾಇ. II, ೪೩).

[ದೇ. ‖ ತಮಿ. ಉಳ್, ಉಳ್ಳಂ, ಉಳ್ಳಗಂ; ಮಲ. ಉಳ್ಳು, ಉಳ್ಳಂ, ಉಳ್ಳಗಂ; ತುಳು. ಉಳ, ಉಳಾಯಿ; ಕೊಡ. ಒಳೀ; ತೆಲು. ಉಲ್ಲಮು, ಲೋ]

**ಒಳಗುಂದುವಿಕೆ** (ನಾ). ಒಳಗಿನ ದುಃಖ; ಆಂತರಿಕ ವ್ಯಥೆ: "ಆಧಿಃ . . . ಮನಸ್ಸಂಬಂಧವಾದ ವ್ಯಥೆಗೆ ಹೆಸರು. ಅಂದರೆ ಒಳಗುಂದುವಿಕೆ, ಅಂತರ್ದುಃಖ, ಮನೋವ್ಯಸನ, ಮನೋರೋಗ (ಸಿದ್ಧಾಂತಿ. ೬೦). [ಒಳ (< ಒಳಗು) + ಕುಂದು₁ + –ಇಕೆ]

**ಒಳಗುಗಾಣ್** (ಕ್ರಿ). ಒಳಗಿನ ವಿಷಯವನ್ನು ತಿಳಿ; ತಿರುಳನ್ನು ಕಾಣು; ಅಂತರಂಗವನ್ನು ಅರಿ: ಮುಡಿ ಸೊಪ್ಪಾಗದ್ಕು ನೀವಿಬಿರ್ಚದು . . . ನೀನನ್ನರೊಳ್ ಕೊಡಗೂಸಿರ್ಪವೊಲಿರ್ಪೆ ನಿನ್ನೊಳಗು ಗಂಡರ್ ಗಂಡರಿನ್ನೇನುಮಂ ಕುಡರೆಂದಂದು ಕನಲ್ದು ತಾಯ್ ಮಗಳನೊರ್ವಳ್ ಪುರ್ವಿನಿಂ ಜರ್ವಿದಳ್ (ಜಗವಿ. ೧೬–೧೨೬); ಭೇದಕಶ್ ಬಹುವಿಧದೆ ಪರಿಕಿಸಲೊಳಗುಗಾಣದಂತೆ ಥಿದ್ರಿಸಿ ತೆಗೆವ ಜಾಣ್ಮೆ (ಚಿಬಪು. ೭–೭). [ಒಳಗು + ಕಾಣ್]

**ಒಳಗುಗುಡು** 'ಒಳಗುಗೊಡು' ನೋ.

**ಒಳಗುಗೆಯ್**, ಒಳಗುಗೈ (ಕ್ರಿ). ಒಳಪಡಿಸಿಕೊಳ್ಳು; ವಶಪಡಿಸಿಕೊಳ್ಳು; ಸ್ವಾಧೀನಗೊಳಿಸು: ಗೋಪಾಲನೆಲ್ಲಿದನಮ್ಮ ಒಳುವಗೆಯೊಳೆನ್ನನೊಳಗುಗೆಯ್ದನಮ್ಮ ಒಳಗುಗೆಯ್ದೋವಿದನಮ್ಮ (ಗೀತಗೋ. ೧೭–೩). ಒಳಗುಗೈ: ಉತ್ತಮಗುಣಗಳಿಂದೊಳಗುಗೈದವರೊಳು ಪತ್ತುಗೆವೆರಸಿ ಬಾಳುವರು (ಹದಿಬ. ೧–೫೮). [ಒಳಗು + ಕೆಯ್₁]

**ಒಳಗುಗೈ** 'ಒಳಗುಗೆಯ್' ನೋ.

**ಒಳಗುಗೊಡು**, ಒಳಗುಗುಡು (ಕ್ರಿ). ೧. ಅಧೀನವಾಗು; ವಶವಾಗು: ಸುರಕುಲದ ಲಲನೆಯರು ತೊತ್ತಿರು ಸುರೇಂದ್ರನ ಹೊಳಲ ಸುರತರು ಕಾಮಧೇನುಗಳೊಳಗುಗೊಟ್ಟಹವೆನಗೆ (ತೊರರಾ. ೩–೯–೩೬). ೨. ಗುಟ್ಟನ್ನು ಹೊರಗೆಡಹು; ಗುಪ್ತವಾಗಿ ಶತ್ರುವಿಗೆ ರಹಸ್ಯವನ್ನು ತಿಳಿಸು: "ಉಪಜಾಪಃ, ಭೇದಃ – ಈ ೨ ಒಳಗುಗೊ [ಪಾಠಾಂ.ಗು] ಡುವುದು" (ಹಲಾಯು. ೧೨೮–೯೫). **ಒಳಗುಗುಡು**: ೨. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಒಳಗು + ಕೊಡು]

**ಒಳಗುಗೊಳ್** (ಕ್ರಿ). ತಳೆ; ಪಡೆ. 'ಒಳಗುಗೊಳಿಸು' ಪರಾ. [ಒಳಗು + ಕೊಳ್₁]

**ಒಳಗುಗೊಳಿಸು** (ಕ್ರಿ). ಪಡೆಯುವಂತೆಮಾಡು; ತಳೆಯುವಂತೆ ಮಾಡು: ಅರಲ ಪರಾಗಪಟಲಂ ಮೇಲೆ ಪರಿಕಲಿಸಿ ಪರ್ಬಿ ಬಿತ್ತರಮಾಗಿ ಪತ್ತುಗೆಗೊಂಡೆತ್ತಿದ ಗೋವರ್ಧನಗಿರಿಯ ಪಿರಿಯ ಸಿರಿಯನೊಳಗುಗೊಳಿಸೆ ಸಾಕ್ಷಾತ್ ಕೃಷ್ಣನಂತೆ ಕಣ್ಗೆವಂದ ರಸಾಲ ರಸಾರುಹಮಂ (ಶಬಶಂ. ೨–೪೨ ವ). [ಒಳಗುಗೊಳ್ + –ಇಸು₃]

**ಒಳಗುಟ್ಟು** (ನಾ). ಒಳಗಿನ ಗುಟ್ಟು; ರಹಸ್ಯ: ಈ ಬಾಳಿನ ಒಳಗುಟ್ಟೇನು! (ಹಬ್ಬಿಬ. ೫); ನಿನ್ನಯ ಮಾತಿನ ಒಳಗುಟ್ಟೇನು (ಕಪವು. III, ೩೮); ತನ್ನ ಯಶಸ್ಸಿನ ಒಳಗುಟ್ಟೇ ಇಲ್ಲಿದೆಯೆಂಬ ಆತ್ಮವಿಶ್ವಾಸ ಕೂಡ ಆತನಲ್ಲಿತ್ತು (ವಾತ್ಸಲ್ಯ. ೩೪೩).
[ಒಳ (< ಒಳಗು) + ಗುಟ್ಟು]

**ಒಳಗುಡಿ** (ನಾ). ೧. ಗರ್ಭಗುಡಿ. ೨. ಗುಡಿಸಿಲಿನ ಒಳಭಾಗ: ಕೊಳಲ ರಾಗದ ರಹಿಯೊ ಕಲ್ಲಿಯ ಕಲಸುಗೂಳೋ ಹಳ್ಳಿಕಾತಿಯರೊಳಗುಡಿಯ ಹಾದರವೊ ತುಱುಗಾಹಿಗಳ ತೋಹುಗಳೊ (ಕುವ್ಯಾಸ. ೨–೬೮).
[ಒಳ (< ಒಳಗು) + ಗುಡಿ$_3$]

**ಒಳಗುದಿ** (ನಾ). ಒಳಗಿನ ಕುದಿ; ಅಂತಸ್ತಾಪ: ನಿನ್ನ ಮಾವನವರು ಒಳಗುದಿಯಲ್ಲಿಯೇ ಬೆಂದುಹೋಗುತ್ತಿದ್ದಾರೆ (ಮಹಾಗ. ೧೩೦); ಕಂಡ ಮೇಲೀಗಳ್ ಕುದಿವೆನೊಳಗುದಿಯಿಂದೆ ನಾನ್ (ಬದ್ಧಪ್ರ. ೧೪–೨೮೯). 'ಬೇಗುದಿ' ಪರಾ. [ಒಳ (< ಒಳಗು) + ಕುದಿ$_3$]

**ಒಳಗುದೋಱು** (ಕ್ರಿ). ರಹಸ್ಯವನ್ನು ತಿಳಿಸು; ಗುಟ್ಟು ಬಿಟ್ಟುಕೊಡು: ತಿಳಿಯಲೊಬ್ಬನ ರೋಮರೋಮದ ಕುಳಿಯೊಳಗೆ ಬ್ರಹ್ಮಾಂಡಕೋಟಿಯ ಸುಳಿವು ಗಡ ಶ್ರುತಿನಿಕರವೊಱಲಿದರೊಳಗುದೋಱಿ ಗಡ (ಕುವ್ಯಾಭೀ. ೨–೧೯); ನೆಳಲಂತೆ ಬೆಂಬಳಿವಿಡಿದು ಕಡಲಿನಂತೊಳಗುದೋಱಿ (ಅಜಚ. ೩–೧೫೪); ಒಳಗುದೋಱನಶೇಷಭುವನಾವಳಿಗೆ (ನಿಭಾಗ. ೪–೧೧–೫೪). [ಒಳಗು + ತೋಱು$_1$ (< ತೋಱ್)]

**ಒಳಗುದ್ದು** (ನಾ). ಮರ್ಮಸ್ಥಾನಕ್ಕೆ ಕೊಡುವ ಪೆಟ್ಟು; ಮುಷ್ಟಿಯುದ್ಧದ ಒಂದು ಪಟ್ಟು, —ಹೊಡೆತ (?): ಎದ್ದಿದಾರೋಯೆಂಬವರನೊಳಗುದ್ದಿನಲಿ ನಿರ್ಘ್ರಸಿ ಮೆಲ್ಲನೆ ಹೊದ್ದಿದನು . . . ಭದ್ರಭವನಾವಳಿಯನ್ (ತೊರರಾ. ೫–೨–೬೬); ಮೂದಲಿಸುತ್ತ ಮಲ್ಲರಿರದೆಯ್ದಿ ಹಿಡಿದು ದಿಂಡುಗೆಡೆವಂತೆ ಒಳಗುದ್ದು ಹೊಱಗುದ್ದಿಕ್ಕಿ ದಂಡಿಸಿ (ಸಮ್ಯಕೌ. ೪–೧೮). 'ಹೊಱಗುದ್ದು' ಪರಾ.
[ಒಳ (< ಒಳಗು) + ಗುದ್ದು$_2$ (< ಗುರ್ದ್$_2$)]

**ಒಳಗುಪ್ಪಸ**, ಒಳಕುಪ್ಪಸ, ಒಳಕುಪ್ಪುಸ (ನಾ). ಕುಪ್ಪಸದೊಳಗೆ ತೊಟ್ಟುಕೊಳ್ಳುವ ಒಳರವಿಕೆ: ಒಳಗುಪ್ಪಸವಲ್ಲದೆ ಅವರ ಮೈಮೇಲೆ ಬೇರೆ ಚಿಂದಿಯೇ ಇರಲಿಲ್ಲ (ಪುನರು. ೧೪೦). **ಒಳಕುಪ್ಪಸ**: (Smock. ಇಂಕನಿ). **ಒಳಕುಪ್ಪುಸ**: ವಿದೇಶೀಯ ಒಳಕುಪ್ಪುಸ ಇದೇ ಮೊದಲಾದ ವಸ್ತುಗಳನ್ನು ಸಂಗ್ರಹಿಸಲು ಅವನು ಚಿಂತಿಸುವ ಅವಶ್ಯವಿರಲಿಲ್ಲ (ಇಪ್ಪಕ. ೩೭೭). [ಒಳ (< ಒಳಗು) + ಕುಪ್ಪಸ]

**ಒಳಗುಬಡು** (ಕ್ರಿ). ಒಳಪಡು; ಈಡಾಗು: ಬಳಿಕ ಕೈ ಮೈ ಸೋಂಕಿಗಾಱದೆ ಸಿಲುಕಿದೆವು ಸೋಲದಲಿ ಬಂಧನಕೊಳಗುಬಟ್ಟುದು [ಪಾಠಾಂ. ಗೊಟ್ಟಿತು] ವಿಧಿ ಪುರಾಕೃತವಾರವಶವೆಂದ (ತೊರರಾ. ೫–೭–೨೯).
[ಒಳಗು + ಪಡು$_1$]

**ಒಳಗುಮಾಡಿಸು** (ಕ್ರಿ). ವಶಕ್ಕೆ ಕೊಡು; ಒಪ್ಪಿಸು: ಖಳನೃಪರ ಛತ್ರ ಚಾಮರ ಪತಾಕಾಳಿಯಂ ಕೆಲದವರ ಕೈಗೊಳಗುಮಾಡಿಸುತೆ (ಚೆಬವು. ೪೪–೪೫). [ಒಳಗುಮಾಡು + – ಇಸು$_3$]

**ಒಳಗುಮಾಡು** (ಕ್ರಿ). ೧. ಸ್ವಾಧೀನಪಡಿಸಿಕೊಳ್ಳು; ವಶಪಡಿಸಿಕೊಳ್ಳು; ತನ್ನ ಕಡೆ ಸೇರಿಸಿಕೊಳ್ಳು: ಮನೋವೇಗದಿನೆಯ್ದಿ ಪ್ರಭಾಕರೀಪುರಮನದಂ ಕಾವ ಚಿತ್ರಸೇನಾದಿ ಸೇನಾನಾಯಕರುಮನೊಳಗುಮಾಡಿ (ಶಾಂತಿಪು. ೪–೭೦); ಚರಿತದಿಂ ನೋಡಿ ತನ್ನೊಳಗುಮಾಡಿಯೆಕೊಂಡು (ನಂಬಿರ. ೧–೨೦); ಗುಪ್ತದಲಿ ಕೃಪನನೊಳಗುಮಾಡುವ ಮುದದಿ ಬಂದನು ಕೌರವೇಂದ್ರನು (ಕುವ್ಯಾಉ. ೧–೧೭); ಬಲು ದೈನ್ಯದಿಂದಲೊಳಗುಮಾಡಿ ಕಂತುಕೇಳಿಯನೊಲಿದಿತ್ತು (ಕಂನವಿ. ೨–೧೦೬).

೨. ಒಳಗೊಳ್ಳು; ಆವರಿಸು: ಸಲೆ ಪೂತ ಚೂತಲತೆಯನೊಳಗುಮಾಡಿ ಬಳಸಿದ ಮಾಧವೀಲತೆಯ ಬಳ್ಳಿವಳ್ಳಿಯ ಬಳ್ಳಿಗಾವಣದ ಮುಂದೆ (ಆದಿಪು. ೧೧–೭೩ ವ); ಬಡವಾಗ್ನಿಯ[ನನುವಿಸಿದಂತಾನುಂ] ಬಱಸಿಡಿಲ ಕಿಡಿಗಳ ಬಳಗಮನೊಳಗುಮಾಡಿದಂತಾನುಂ ಗೊಂದಣಿಸಿ ಸಂದಣಿಸಿ ನಿಂದಣಿಯುಂ (ಪಂಪಭಾ. ೧೦–೮೦ ವ); ಶಿಖಾಡಂಬರಮೆಯ್ದೆ ನೀಳ್ದೊಳಗುಮಾಡೆ ನಿಶಾಟರನುಂಡನಗ್ನಿ ಘುಮ್ಮೆಂಬ ಛಟಚ್ಛಟೆಂಬ . . . ರವಂ (ಕಾವ್ಯಾವ. ೨೮). ೩. ವಶವಾಗುವಂತೆ ಮಾಡು; ವಶಪಡಿಸಿಕೊಡು: ಎಲೆ ದೇವೇಂದ್ರ ನಿಮಗಾ ಮಂದಗಮನೆಯನೊಳಗುಮಾಡೆಂದೆನಗೆ ಪೇಳ್ವಿರಲಾ (ನಳಚ. ೩–೨೨). ೪. ಗುರಿಮಾಡು; ಈಡುಮಾಡು: ಸೊಕ್ಕಾನೆನಡೆವೆತ್ತ ಸೊಬಗಿಯರ್ ಪಿಟರೆರ್ದೆ ಬಿಕ್ಕನೆ ಬಿರಿಯುವಂದದಲಿ ಆಕ್ಕಱಿಂದಾಲೋಕನಗೆಯ್ದು ಮದನನ ಮೊಕ್ಕಳಕೊಳಗುಮಾಡಿದರು (ಮೋಹತ. ೨೪–೧೬). ೫. ಬರಮಾಡಿಕೊಳ್ಳು; ತಂದುಕೊಳ್ಳು: ಇಷ್ಟು ಅನರ್ಥವನ್ನೂ ಈತನು ಒಳಗುಮಾಡಿಕೊಂಡಂತೆಯೇ (ರಾಜಸೂ. ೯೩). [ಒಳಗು + ಮಾಡು$_1$]

**ಒಳಗುವರಿ** (ಕ್ರಿ). ಒಳಗೆ ನುಗ್ಗು: ಎಲೆ ದುರಾತ್ಮ ದ್ಯೂತಕೇಳೀಕಲಹಲಂಪಟ ನಿಲ್ಲುನಿಲ್ಲೆನುತೊಳಗುವರಿದಪ್ಪಳಿಸಿದನು ದುರ್ಯೋಧನನ ರಥವ (ಕುವ್ಯಾದ್ರೋ. ೨–೭೩). [ಒಳಗು + ಪರಿ$_2$]

**ಒಳಗುವೇಳು** (ಕ್ರಿ). ಅಂತರಂಗವನ್ನು ತಿಳಿಸು; ಗುಟ್ಟಿನ ವಿಷಯವನ್ನು ಹೇಳು: ಒಳಗುವೇಳುವುದೊಡನಾಡುವುದೊಲಿದೊಲ್ಮೆಗೆಳಸುವುದೇಕವೆನಿಪುದು (ಹದಿಬ. ೩–೪೨).
[ಒಳಗು + ಪೇಳು (< ಪೇೞ್)]

**ಒಳಗೃಹ** (ನಾ). ಮನೆಯ ಒಳಭಾಗ; ಒಳಮನೆ: ಕಡುಚೆಲ್ವರವರ ನೀವೊಮ್ಮೆ ನಡೆನೋಡಿದರೆ ಬಿಡಲಱಿಯಿರೆಂದನು ನಾಣ್ಚಿಸಿಡಿದೊಳಗೃಹ ಹೊಕ್ಕರವರು (ಭರಚ. ೪೩–೩೪). [ಒಳ (< ಒಳಗು) + ಗೃಹ]

**ಒಳಗೆ** (ಅ). ೧. ಒಳಗಡೆ: ಒಳಗೆ ಬೆಳಗು, ಪೊಱಗೆ ಕತ್ತಲೆ (ಭಾಷಾಭೂ. ೫೯ ಉದಾ); ಅತ್ತಿಯ ಪಣ್ಗಳಂತೊಳಗಶುದ್ಧನುಂ ವಟಫಲದಂತೆ ಪೊಱಗೆ ಸೇವ್ಯನುಂ (ಧರ್ಮಾಮೃ. ೬–೬೨). ೨. ಅಂತರಂಗದಲ್ಲಿ: ಒಳಗೆ ಶೋಧಿಸಿ ಹೂಱಗೆ ಶುದ್ಧವಿಸಿ (ಮಹಾದೇ. ೮–೧); ಸಲೆ ವಾಗ್ದೇವಿಯೆನ್ನೊಳಗಿರು ತಾಯೆ (ಮೋಹತ. ೧–೧೧). ೩. ಮುಂಚೆ; ಅಷ್ಟರಲ್ಲಿ: ಕೆಲವು ದಿವಸದಿಂದೊಳಗೆ ವ್ಯಾಕರಣಂ ಪ್ರಮಾಣಂ ಛಂದಮಲಂಕಾರ . . . ಶಾಸ್ತ್ರಂಗಳೆಲ್ಲಮಂ ಕಲ್ಪಿಸಿದೊಡೆ (ವಡ್ಡಾರಾ. ೭೪–೮); ಶಿರವನರಿವೆನು ನಾಳೆ ಬೈಗಿಂದೊಳಗೆ ಸೈಂಧವನ (ಕುವ್ಯಾದ್ರೋ. ೮–೩೬); ನಾಳೆಯೊಳಗೆ ಹಣ ಮುಟ್ಟಿಸಬೇಕು (ರೂಢಿ).

ಒಳಗೊಳಗೆ (ದ್ವಿರುಕ್ತಿ): ಒಳಗೊಳಗೆ ಮುಳಿದು (ತಿರುರ. ದೇ. ೭–೭); ಆಗಳಾಗಳ್ ಕಂಡ ಬಿನದಮನೊಳಗೊಳಗೆ ತಮ್ಮ ಬಳಗಕ್ಕೆ ತಿಳಿಪಿ (ರಾಮಾಶ್ವ. ೨೨–೧೫). ಒಳಗಿಕ್ಕು = ಮುಚ್ಚಿಡು; ಮರೆಮಾಡು: ಸುಲಿಪಲ್ಲ ಪುರ್ವಿನ ಕುಚಂಗಳ ಭಂಗಿಯನುರ್ವಿಗೆಲ್ಲಮಂ ತಳೆದೊಳಗಿಕ್ಕಿ ತೋಱುವವೊಲಂದೆಸೆದತ್ತು ವಿಳಾಸಿನೀಜನಂ (ವರ್ಧಪು. ೫–೪೦); ಮಕ್ಕಳವಗುಣ ತಾಯಿಗಳುವೊಳಗಿಕ್ಕಿ ಪಾಲಿಱಿವಂತೆ (ಬಜ್ಜಪು. ೬೯–೨೫). ಒಳಗುಗಿ = ಒಳಗೇ ಭಯಪಡು, —ಅಳುಕು: ಮಳಯ ಸಮೀರಣಂಗೆ ಶಶಿಯಂ ಮಱಿದೀಕ್ಷಿಸಲಟ್ಟುವಂಗಜಂಗೊಳಗುಗಿದಳ್ (ನಳಚಂ. ೧೯೮). ಒಳಗುರಿ = ಒಳಗೇ ಉರಿ, —ಸುಡು; ಒಳಗೇ ನೊಂದುಕೊಳ್ಳು: ಒಳಗುರಿವ ಹಸಿಮರನ ತುದಿಯಲಿ ಜಲವೊಗುವವೊಲು (ಕುವ್ಯಾದ್ರೋ. ೭–೮); ನಿನ್ನವೀ ಕೇಡುಗಳ್ಗೊಳಗುರಿದು ಮಱುಗದಾತನ್ ಕಲ್ಲ ಮಾಱ್ಕೆಯೋನ್ (ಬದ್ಧಪ್ರ. ೧೪–೨೮೬). [ಒಳಗು + –ಎ$_0$]

**ಒಳಗೆರೆ** 'ಒಳಗೆಱೆ' ನೋ.

**ಒಳಗೆಲಸ** (ನಾ). ಮನೆಯ ಒಳಗೆ ಮಾಡಬೇಕಾದ ಕೆಲಸ: ಅವರು ಒಳಗೆಲಸಕ್ಕೆ ಒಬ್ಬ ಆಳನ್ನು ಇಟ್ಟುಕೊಂಡಿದ್ದಾರೆ (ರೂಢಿ).
[ಒಳ (< ಒಳಗು) + ಕೆಲಸ]

**ಒಳಗೆಸರು** (ನಾ). ಒಳಗಿನ ಕೆಸರು; ಅಂತರಂಗದ ಕಶ್ಮಲ: "ಮಹತ್ವಾಕಾಂಕ್ಷೆಯೆಂಬ ಒಳಗೆಸರನ್ನೆಲ್ಲ ತೊಳೆದು ನಿರ್ಮಲಾಂತರಂಗನಾದ ಭರತನು ತನ್ನ ಅಯೋಧ್ಯಾನಗರಕ್ಕೆ ಅಭಿಮುಖನಾದನು" (ಕನ್ನ ಇ. ೬೧).
[ಒಳ (< ಒಳಗು) + ಕೆಸರು (< ಕೆಸಱ್)]

**ಒಳಗೆಱೆ**, ಒಳಗೆರೆ (ನಾ). ಕೆರೆಯ ಒಳಭಾಗ; ಕೆರೆಯ ಒಡಲು: ಬೆಳ್ಗಲ್ಲಿಗೆಱೆಯಾ ಒಳಗೆಱೆಯಾ ಪಳ್ಳದಾ ಕೂಡಲ್ (ಎಕ. IV, ನಾಗಮಂ. ೮೫–೬೨ ; 776) ; ಮೂದಗೆಱೆ ಎ ಬೊಜ್ಜಗೆಱೆಯ ಒಳಗೆಱೆ ಎ ಕೂಡಿತ್ತು ಸೀಮೆ (ಎಕ. IV, ಶ್ರೀರಂಗ. ೧೬೦–೨೫ ; ಸು 800) ; [ಒ]ಳಗೆಱೆಯ ಕೀೞ್ಕೆಱೆಯ ಕಳನಿ (ಸಾ ಇ ಇ. IX–i, ೨೪–೪೨ ; 936) ; ತಳುವದೆ ತುರುಗೆಱೆಗರೆಗಾವುದದೆ ಕೆಱೆಯೊಳಗೆಱೆಯಲಿ ಬೀಡಬಿಟ್ಟ (ಕಂನವಿ. ೧೯–೧೮). **ಒಳಗೆರೆ**: ಅಕ್ಕತಂಗೆಯ ಕಟ್ಟೆಯ ಒಳಗೆರೆಯೊಳಗಣ ಗುಡ್ಡದ ಪಡುವಣ ಕೋಡುಗಲ್ಲೇ ಗಡಿ (ಎಕ. VII, ಶಿವಮೊ. ೬೧–೩೭ ; 1431) ; ಕೊರಲಹಳ್ಳಿಯ ಗಡಿಯ ಹೊಸಕಟ್ಟೆ ಒಳಗೆರೆ (ಎಕ. VII, ಶಿವಮೊ. ೨೬–೨೪೭ ; 1524).
[ಒಳ (< ಒಳಗು) + ಕೆಱೆ]

**ಒಳಗೈ**$_1$ 'ಒಳಕೆಯ್$_2$' ನೋ.

**ಒಳಗೈ**$_2$ (ನಾ). "ಗುಪ್ತಚಾರ; ಪರರ ಗುಟ್ಟು ತಿಳಿಯುವವ" (ಸಿರಿಕೋ. ೮೨). [ಒಳ (< ಒಳಗು) + ಕೈ$_2$ (< ಕೆಯ್$_2$)]

**ಒಳಗೊಂಬು** (ನಾ). ಒಳಗಿನ ಕೊಂಬೆ: ಮರದಿಂ ಮರಕ್ಕೆ ತಿರುಗಿ ಪಾಯ್ದೊಳಗೊಂಬನಲ್ಲಾಡಿ ತಳಿಗಿ ತೊನೆದಳ್ಳಿಱಿದು (ಗಿರಿಕ. ೧–೧೨೮ ವ).
[ಒಳ (< ಒಳಗು) + ಕೊಂಬು$_2$]

**ಒಳಗೊಳ್** 'ಒಳಕೊಳ್' ನೋ.

**ಒಳಗೋಟೆ** 'ಒಳಕೋಂಟೆ' ನೋ.

**ಒಳಗೋಣೆ** 'ಒಳಕೋಣೆ' ನೋ.

**ಒಳಚಂದ** (ನಾ). ಒಳಗೇ ಇರುವ ಚೆಲುವು; ಹೊರಗೆ ಕಾಣದ ಚಂದ; ಅಂತರಂಗ ಶೋಭೆ: ಆಗಿನ ಕಾಲದ ಹೆಣ್ಣುಮಕ್ಕಳು ತುಂಬಾ ಒಳಚಂದದವರು (ಮೊಮುಗು. ೧೯). [ಒಳ (< ಒಳಗು) + ಚಂದ$_1$]

**ಒಳಚರಂಡಿ** (ನಾ). ಭೂಮಿಯ ಒಳಗೇ ಹರಿಯುವಂತೆ ಮಾಡಿದ ಚರಂಡಿ: ಈ ಮನೆಗೆ ಸ್ವಲ್ಪದೂರದಲ್ಲಿ . . . ಒಳಚರಂಡಿಗಳ ಮಾರ್ಗವಿದೆ (ಗೋಪುರ. ೧೨). [ಒಳ (< ಒಳಗು) + ಚರಂಡಿ]

**ಒಳಚಾಚು** (ಕ್ರಿ). ಒಳಗೆ ಸೇರಿಸು; ಒಳಕ್ಕೆ ನೂಕು: ಹರದ ಜಡೆಗಳ ಜಗುಳದವೊಲೊಳಚಾಚಿ ಚಾಪವ ತೆಗೆದುಕೊಳುತಲೆವನೆಯ ಹೊಱವಂಟನು ರಘುಪ್ರಭವ (ತೊರರಾ. ೩–೬–೫). [ಒಳ (< ಒಳಗು) + ಚಾಚು$_1$]

**ಒಳಚಾವಡಿ** (ನಾ). ಒಳಗಿನ ಹಜಾರ: ಹೊಱಸಭೆಯಿಂದೊಳಚಾವಡಿಗೆಯ್ದಿ ಚೆಲ್ವೆಱಕದೊಳೋಲಗವಾದ (ಭರಚ. ೩೭–೬೪).
[ಒಳ (< ಒಳಗು) + ಚಾವಡಿ]

**ಒಳಚಿತ್ತ** (ನಾ). ಮನಸ್ಸಿನ ಒಳಭಾಗ; ಹೃದಯದ ಅಂತರ್ಯ: ಒಳಚಿತ್ತವರಳುತಿರೆ ಕಾಯುತಿದ್ದೆ ನಿಶ್ಚಿಂತ ಚಿಂತೆಯಂತೆ (ಹೃದಸ. ೪–೪).
[ಒಳ (< ಒಳಗು) + ಚಿತ್ತ$_2$]

**ಒಳಚುಚ್ಚು** (ನಾ). ಒಳಗಿನ ಇರಿತ; ಮರ್ಮಘಾತ: ಮಚ್ಚರಂಗಳು ಕುಚ್ಚಿತಂಗಳು ಮುಚ್ಚುಮಱೆಗಳ ಕೆಚ್ಚುಗಳು ವೊಳಚುಚ್ಚುಗಳು (ಬಸವು. ೪೦–೬೧). [ಒಳ (< ಒಳಗು) + ಚುಚ್ಚು$_3$ (< ಚುಚ್ಚು$_3$)]

**ಒಳಚೌಕಿಗೆ** (ನಾ).=ಒಳಚಾವಡಿ: ಕಾಲ್ಗೆ ನೀರಂ ನೀಡಿ ಮತ್ತಂ ಕೈವಿಡಿದೊಳಚೌಕಿಗೆಗುಯ್ದು (ರಾಮಾಶ್ವ. ೪–೯). [ಒಳ(< ಒಳಗು) + ಚೌಕಿಗೆ]

**ಒಳಜಗಳ** (ನಾ). ತಮ್ಮ ತಮ್ಮಲ್ಲಿಯ ಜಗಳ; ಅಂತಃಕಲಹ: ಪೊಱಅಡಿ; ಒಳಜಗಳಂ, ಒಳಅಟ್ಟಂ (ಭಾಷಾಭೂ. ೧೪೪ ಉದಾ); ಅಲಗಿನಂಬಿನ ಹಕ್ಕೆ ನಮಗಾಯ್ತೊಳಜಗಳ ಸಾಕಿನ್ನು ಸೋದರರೊಳಗೆ ಸಂಪ್ರೀತಿಯಾಗಿ ಬದುಕುವದು (ಕುವ್ಯಾಭೀ. ೧೦–೩೦). [ಒಳ (< ಒಳಗು) + ಜಗಳ]

**ಒಳಜಗುಲಿ** (ನಾ). ಒಳಗಿನ ಕಟ್ಟೆ, —ವೇದಿಕೆ: ಈರ ಊಟ ತೀರಿಸಿ ಮಕ್ಕಳು ಮರಿಗಳನ್ನೊಳಜಗುಲಿಯಲ್ಲಿ ಒರಗಿಸಿದ (ಮುಂಗಾಮು. ೭೨).
[ಒಳ (< ಒಳಗು) + ಜಗುಲಿ]

**ಒಳಜ್ವರ** (ನಾ). ೧. ಹೊರಗೆ ತೋರದಿರುವ ಜ್ವರ. ೨. ಅಸ್ಥಿಗತ ಜ್ವರ: ಗುಳಿಗೆಗಳಂ ಮಾಡಿ . . . ತೆಗೆದುಕೊಳ್ಳಲು ಬಹುಕಾಲದಿಂದುಂಟಾದ ಕೆಮ್ಮು, ಒಳಜ್ವರ ಸಹ ಗುಣಮಹುದು (ಸಕವೈ. ೨೨೬).
[ಒಳ (< ಒಳಗು) + ಜ್ವರ]

**ಒಳಟ್ಟೆ** (ನಾ). ಒಳಗಿನ ಅಟ್ಟೆ; ಜೋಡು, ಮೋಜು ಮೊದಲಾದುವುಗಳಲ್ಲಿ ಹೊಂದಿಸಿರುವ ಚರ್ಮದ ಒಳಪದರ (ಕ).
[ಒಳ (< ಒಳಗು) + ಅಟ್ಟೆ$_2$]

**ಒಳಡೊಂಕುಕಾಲ್** (ನಾ). ಒಳಕ್ಕೆ ಬಗ್ಗಿದ ಕಾಲು; ತೊಟ್ಟೆಲುಗಾಲು; ಬಂಕಣಗಾಲು: ಒಱತ ಬಾಯ್ಗಳ ಗಂಟುಗೈಗಳ ಬಱತೆದೆಗಳೊಳಡೊಂಕುಕಾಲ್ಗಳ ಕಿಱುಕುಲರು ಬಂದರು ನೆರದು ಕಾಗೆಯ ಹಳವಿಗೆಯೊಲು (ಬಸವು. ೫೮–೪೯).
[ಒಳ (< ಒಳಗು) + ಡೊಂಕು + ಕಾಲ್$_1$]

**ಒಳತಂತ್ರ** (ನಾ). ಒಳಗಿನ ಗುಟ್ಟು, —ರಹಸ್ಯ: ಕರ್ಮಾ ಅಕರ್ಮದ ತಂತ್ರ ಫಲ ವಿಫಲತೆಯೊಳತಂತ್ರ ಈಶ್ವರೀಯಂತ್ರ (ಸೂರ್ಯಪಾ. ೪–೬).
[ಒಳ (< ಒಳಗು) + ತಂತ್ರ]

**ಒಳತಾಗು** (ಕ್ರಿ). ಒಳಕ್ಕೆ ತಾಗು, —ಸೇರು: ಗೇರಮರನ ಕಟ್ಟೆ ಬೀಸುವೊಳತಾಗಿ ಗಡಿಯುಂಕನ ಹಳ್ಳೀ ಮೇರೆಯ ಸುಂಕದವರ ಕಟ್ಟೆ (ಎಕ. VII, ಶಿವಮೊ. ೮೫–೧೦೦ ; 1527). [ಒಳ (< ಒಳಗು) + ತಾಗು$_1$]

**ಒಳತಿರುಗು** (ಕ್ರಿ). ಒಳಗೇ ಸುತ್ತು, —ತಿರುಗು: ತಿಱ್ರನೊಳತಿರುಗುಮೇ ಗುಡ್ಡೆಯೊಳ್ ಬಲ್ ಬಟಲ್ದ ಕಣ್ಣುಂ (ಬದ್ಧಪ್ರ. ೪೬–೧೦೧೦).
[ಒಳ (< ಒಳಗು) + ತಿರುಗು$_1$]

**ಒಳತೆಗೆ** 'ಒಳದೆಗೆ' ನೋ.

**ಒಳತೆರಿಗೆ** (ನಾ). ಸರಕುಗಳ ಮೇಲೆ ಒಳನಾಡಿನಲ್ಲಿ ಹಾಕುವ ತೆರಿಗೆ: ಆಮದು ಮಾಡಿದ ಅಥವಾ ದೇಶೀಯ ಸರಕುಗಳ ಮೇಲೆ ಒಳತೆರಿಗೆಗಳನ್ನು (Internal taxes) ವಿಧಿಸುವುದರಲ್ಲಿಯೂ (ಅಂತಸಂ. ೧೬೮). [ಒಳ (< ಒಳಗು) + ತೆರಿಗೆ (< ತೆಱಿಗೆ)]

**ಒಳತೋಟಿ**, ಒಳದೋಟಿ (ನಾ). ೧. ತಮ್ಮ ತಮ್ಮಲ್ಲಿಯ ಜಗಳ; ಒಳಜಗಳ; ಅಂತಃಕಲಹ: ಹೊಳಲು ತಲೆಕೆಳಕಾಯ್ತು ಹುಯ್ಯಲು ತಳಿತುದೊಳತೋಟಿಯಲಿ ಕೆತ್ತವು ನಿಳಯ ನಿಳಯ ಕವಾಟವುದ್ರೇಕಿಗಳ ಮಯವಾಯ್ತು (ಕುವ್ಯಾದ್ರೋ. ೭–೬); ಒಳತೋಟಿಯೊಡರಿಪ ಗಂಡಪೆಂಡಿರ ಮನೆವೆಳಲ ಸೇರರು ನೀತಿವಿದರು (ಹದಿಬ. ೬–೬); ಒಂದು ರಾಜಮನೆತನದ ಗೃಹಕೃತ್ಯದ ಒಳತೋಟಿಯಿಂದ ಕಥೆ ಆರಂಭವಾಗುತ್ತದೆ (ಭಾರದ. ೮೮). ೨. ಅಂತರಂಗದಲ್ಲಿ ಆಗುವ ಭಿನ್ನ ಭಾವಗಳ ತುಮುಲ; ಮನಸ್ಸಿನ ಹೊಯ್ದಾಟ: ಕಳಕಳದಲೊಳತೋಟಿ ಮಸಗಿತು ಹರುಷ ಲಜ್ಜೆಯಲಿ (ಕುವ್ಯಾಅ. ೧೫–೩೩); ಈ ಒಳತೋಟಿಯಲ್ಲಿ ಅವನ ಶ್ರದ್ಧೆಗಳು ಕಳಚಿಬಿದ್ದಿರಲಿಲ್ಲ (ಸಮಜೀ. ೨೫೮). **ಒಳದೋಟಿ**: ೨. ತಂದೆ ಶಂತನು ಒಳದೋಟಿಯಲ್ಲಿ ತೊಳಲಾಡುತ್ತಿರುವುದನ್ನು ಅರಿತು ಧೀರತ್ಯಾಗಿಯಾದ ಭೀಷ್ಮನು . . . ನಿಶ್ಚಯಿಸಿದನಂತೆ (ತವನಿ. ೬೮). [ಒಳ (< ಒಳಗು) + ತೋಟಿ$_1$]

**ಒಳದನಿ** (ನಾ). ೧. ಅಂತರಂಗದ ಮಾತು; ಹೃದಯದ ವಾಣಿ: 'ಅದು ಸಾಧ್ಯವೇ ಇಲ್ಲ' ಎಂದು ಒಳದನಿ ಹೇಳಿತು (ವಾತ್ಸಲ್ಯ. ೧೦); ಬಡವರ ಬಗ್ಗರ ತುತ್ತಿನ ಚೀಲದ ಒಳಗಿನ ಒಳಗಿನ ಒಳದನಿಯೊಂದು! (ಗರಿ. ೬೧-೧೬); ನಾನು ಇನ್ನೂ ತಾಯಿಯಾಗಲಿಲ್ಲವಲ್ಲಾ ಎಂದು ಒಳದನಿ ಮಿಡುಕುತ್ತಿತ್ತು (ಶೇನೋಡ. ೪೨). ೨. ಕೆಳ ದನಿ; ತಗ್ಗಿದ ದನಿ: ಅವನು ಒಳದನಿಯಲ್ಲಿ ಮಾತನಾಡುತ್ತಾನೆ (ರೂಢಿ).
[ಒಳ (< ಒಳಗು) + ದನಿ$_2$]

**ಒಳದವಡೆ** (ನಾ). ದವಡೆಯ ಒಳಭಾಗ: "ತಾಲು, ಕಾಕುದಂ – ೨ ದವಡೆಗಳು, ಒಳದವಡೆ, ಹೊರದವಡೆ, ಕೆಳದವಡೆ, ಮೇಲುದವಡೆ, ದಾಡೆ" (ಸಿದ್ಧಾಂತಿ. ೧೭೦). [ಒಳ (< ಒಳಗು) + ದವಡೆ]

**ಒಳದಸವಂದ** (ನಾ). ಹತ್ತಿರದಲ್ಲಿ ಒಂದು ಪಾಲು; ಒಂದು ತೆರಿಗೆ (?): ಆ ಕೆಱೆಯ ಕೆಳಗೆ ಹುಟೆದಂಥಾ ಗದೆಗೆ ವೊಳದಸವಂದವಾಗಿ ಹತಕೆ (ಸೌಇಎ. ೯೩೪, ತುಂಗನೂರ್. ೧೫೬-೯; 1419).
[ಒಳ? + ದಸವಂದ]

**ಒಳದಾರಿ** (ನಾ). ಒಳಗಿನ ದಾರಿ; ಹತ್ತಿರದ ದಾರಿ; ಸೀಳುದಾರಿ: ಉಡುವತ್ತುಮೊಟ್ಟೆ ಎಂಬಲ್ಲಿ ಒಂದು ಒಳದಾರಿ ಇದೆ (ನವಣೀ. ೬೬); ರೈಲಿನಗುಂಟ ಒಳದಾರಿಯಿಂದಲೇ ಹೋಗಬೇಕೆಂದಿದ್ದ ಆನಂದ (ಕಮನೆ. ೧೫೧). [ಒಳ (< ಒಳಗು) + ದಾರಿ$_1$]

**ಒಳದಿಶೆ** (ನಾ). ಒಳಗಿನ ದಿಕ್ಕು, —ಭಾಗ: ಒಳಸರಿಯೆ ಹಿಂಭಾಗ ಮುಂಗಾಲೊಳದಿಶೆಯದಿಂಬಾಗೆ ಭರಿಕ್ಕೆ ಬಲದುರದಲಿರೆ ವೊಲೆಯದಿರೆ ಕಿವಿಬಾಲ ಮಿಳ್ಳಿಸಿರೆ (ಸಾಳ್ವಭಾ. ೨೧-೧೦). [ಒಳ (< ಒಳಗು) + ದಿಶೆ]

**ಒಳದು** 'ಉಳ್$_1$' ಪರಾ.

**ಒಳದೂಡು** (ಕ್ರಿ). ಒಳಗೆ ನೂಕು, —ದಬ್ಬು: ಒಬ್ಬ ಇನ್ನೊಬ್ಬ ಮತ್ತೊಬ್ಬ ಮುಂತಾದವರು ಒಬ್ಬರನ್ನೊಬ್ಬರು ಒಳದೂಡುತ್ತಿದ್ದಾರೆ (ಹನ್ನೊಂದ. ೯೯). [ಒಳ (< ಒಳಗು) + ದೂಡು]

**ಒಳದೆಗೆ**, ಒಳತೆಗೆ (ಕ್ರಿ). ಒಳಗೆ ಎಳೆದುಕೊಳ್ಳು; ಒಳಕ್ಕೆ ಸೇದು: ನೀವೆಲ್ಲಮುಸುವೋದಂತುಸುರನೊಳದೆಗೆದು ಮಿಸುಕದಿರ್ಪುದು (ಪಂಚತಂ. ೨೦೦-೮); ಮುಂಕೊಳಿಸಿ ಕವಿದರ ಕೋಡಕ್ಕೆಯ ಲಿ ಪೊಳದೆಗೆದು ಮೋಹಿದರೆ [ಪಾಠಾಂ. ಕದನವ ಕೋಡಕ್ಕೆಯವರಳವಿಗೊಟ್ಟರೆ ನೋಡಿ] ಸಿಡಿಮಿಡಿಗೊಂಡು (ಕುವ್ಯಾಭೀ. ೪-೬೫); ತುಟಿಯೊಳದೆಗೆದುದೇನು ನಿಮಿತ್ತ (ನಿಭಾಗ. ೪-೩-೩). **ಒಳತೆಗೆ**: ಆ ಬಲೆಯೊಳುತ್ಪನ್ನಮತಿ ತೊಡರ್ದು ತನ್ನ ಪೆಸರಂ ನೆನೆದುಸಿರನೊಳತೆಗೆದಸುಪೋದಂತೆ ಮಿಸುಕ ದಿರ್ಪುದುಂ (ಪಂಚತಂ. ೧೫೯-೬). [ಒಳ (< ಒಳಗು) + ತೆಗೆ$_1$]

**ಒಳದೇಶ** (ನಾ). ದೇಶದ ಒಳಭಾಗ; ಒಳನಾಡು: ಬೊಂಬಾಯಿ (ಮುಂಬೈ) ಒಂದು ಸಣ್ಣ ದ್ವೀಪದ ಮೇಲಿದೆ. ಈ ದ್ವೀಪವೂ ಈಗ ಒಳ ದೇಶಕ್ಕೆ ಸೇರಿದೆ (ಭೂಗೋಳ. ೭೨). [ಒಳ (< ಒಳಗು) + ದೇಶ]

**ಒಳದೊಂಡು** (ನಾ). ದಂಟು ಅಥವಾ ನಾಳದೊಳಗಿನ ತಿರುಳು: ಒಳದೊಂಡಿನ ಪಾಲ್ಗಳುಮಂ ಪೀರ್ದಿಂಗೊರಲ್ಗಳಾದ ನೀರ್ವಕ್ಕಿಗಳ . . . ಇಂಚರಗಳುಮಂ (ಕಾದಂಉ. ೫೨೬). [ಒಳ (< ಒಳಗು) + ದೊಂಡು]

**ಒಳದೋಟ** 'ಒಳತೋಟ' ನೋ.

**ಒಳನ್** 'ಉಳ್$_1$' ಪರಾ.

**ಒಳನಂಟ** (ನಾ). ಅಂತರಂಗದ ಬಂಧು; ಆತ್ಮೀಯ ಬಂಧು: ನೆಂಟನೆನಿಸಿ ದೆಸೆಗುಗಿವ ಕಿಡಿಗಳ ಕುಂಟಣಿಯ ಪವಮಾನನೆಂಬೊಳನಂಟ [ಪಾಠಾಂ. ನೆಂಬುದನಂಟ]ನಲಿ ನಯವಡೆದ ನಾಲಿಗೆಗಳ ಸಮಗ್ರತೆಯ... ದೆಸೆಯಲಿ ಬಂದುದೊಂದೇ ಪರಿಯಲಾವರಿಸಿ (ನಿಭಾಗ. ೧೦-೧೮-೪೧).
[ಒಳ (< ಒಳಗು) + ನಂಟ]

**ಒಳನಡೆ** (ನಾ). ಹೊರಕಣ್ಣಿಗೆ ಕಾಣದಂತೆ ಒಳಗೇ ಆಗುತ್ತಿರುವ ವ್ಯವಹಾರ; ಆಂತರಿಕವಾದ ಗತಿ: ಬದಲಾವಣೆಯ ಕಾಲವನ್ನು ವಸ್ತುವಾದದ ದೃಷ್ಟಿಯಿಂದ ಗುರುತಿಸಿ ಅದರ ಒಳನಡೆಯ ಮರ್ಮವನ್ನು ವಿವರಿಸುವುದು (ವಂಶವೃ. ೨ ಹಿನ್ನುಡಿ). [ಒಳ (< ಒಳಗು) + ನಡೆ$_2$]

**ಒಳನಾಡು** (ನಾ). = ಒಳದೇಶ (ಸಿ). [ಒಳ (< ಒಳಗು) + ನಾಡು]

**ಒಳನಾರು** (ನಾ). ಒಳಗಿನ ನಾರು; ಬೆಂಡೆ ಮೊದಲಾದ ಕಾಯಿ ಗಳಲ್ಲಿರುವ ನಾರಿನಂತಹ ಎಳೆ: ತಿಳಿನೀರನರ್ಧ ಸಕ್ಕರೆಯಿಕ್ಕಿ . . . ಹುಣಿಸೆಯಹಣ್ಣು ಸುಟ್ಟ ಹುಳಿಯಂ ಹಾಕಿ ಬೆಂಡೆಯೊಳ [ಪಾಠಾಂ. ಳ] ನಾರಿನಿಂದೆ ತಿಳಿಹಿ ಸೋದಿಸಿ ಪಾದರಿಯ ಹೂವಿನಿಂದೆ ನೆಱೆ ಪಳಗಿಸಿದ ಮಡಕೆಯೊಳಗೆಱೆದು (ಸೂಪಶಾ. ೨-೨೬).
[ಒಳ (< ಒಳಗು) + ನಾರು$_2$]

**ಒಳನಿಟ್ಟು** (ನಾ). ಒಳಪಕ್ಕ: ಅಲ್ಲಿ ಇರುವಂಥಾ ಠಾಣ್ಯದ ಮಂದಿಗೂ ರೈತರಿಗೂ ಸಹ ತೆಗೆದು ಒಳನಿಟ್ಟಿನಲ್ಲಿ ಮಡುಗಿದನುಮಾನದಿಂದ ದಿಷ್ಟಿ ತಟ್ಟದಂತೆ ಮಾಡಿಕೊಂಡು ಇರುವುದು (ರಾಜೇಂದ್ರ. ೪೮).
[ಒಳ (< ಒಳಗು) + ನಿಟ್ಟು]

**ಒಳನಿಳಯ** (ನಾ). ಮನೆಯ ಒಳಭಾಗ; ಒಳಮನೆ: ಹೊಳಕು ವಂತಸ್ತ್ರಾಪದಲಿ ಮೂಗಳಿದ ರಕ್ಕಸಿ ಸಹಿತ ತನ್ನೊಳನಿಳಯವನು ಹೊಕ್ಕನುಜೆಯನು ಬೆಸಗೊಂಡನಸುರೇಂದ್ರ (ತೊರರಾ. ೩-೬-೧೫).
[ಒಳ (< ಒಳಗು) + ನಿಳಯ (= ನಿಲಯ)]

**ಒಳನುಡಿ** (ನಾ). ಅಂತರಂಗದ ವಾಣಿ: ನಿಮ್ಮ ನೀತಿ ನಿಮ್ಮನ್ನು ಯಾವ ಕಡೆಗೆ ಒಯ್ಯುವುದೆಂಬುದನ್ನು ಶೀಘ್ರದಲ್ಲಿಯೇ ನೀವು ಮನಗಾಣುವಿರೆಂದು ನನ್ನ ಒಳನುಡಿ ಹೇಳುತ್ತದೆ (ಮರಳ. ೧೬೬).
[ಒಳ (< ಒಳಗು) + ನುಡಿ$_2$]

**ಒಳನೂಕು** (ಕ್ರಿ). = ಒಳದೂಡು: ಹೊರಗೆ ಹೋದರೆ ಕತ್ತು ಹಿಡಿದು ಒಳನೂಕುವುದು ಗಾಳಿ (ನೆಲಮು. ೧೬).
[ಒಳ (< ಒಳಗು) + ನೂಕು$_1$ (< ನೂಂಕು$_1$)]

**ಒಳನೆಪ** (ನಾ). ಒಳಗಿನ ಕಾರಣ; ಆಂತರಿಕ ಕಾರಣ: ಅಡಿಗೆ ಯವಳನ್ನಿಡುವುದಕ್ಕೆ . . . ಗೋವರ್ಧನನ ಒಳನೆಪ ಇನ್ನೊಂದು – ಹೈಮವತಿಯ ಅಡಿಗೆಯ ದಾವತಿಯನ್ನು ತಪ್ಪಿಸುವುದು (ಎರಸ. ೧೦೧).
[ಒಳ (< ಒಳಗು) + ನೆಪ]

**ಒಳನೆರೆ** (ಕ್ರಿ). ಒಳಗೆ ತುಂಬು: ಜೀವ ಜಡರೂಪ ಪ್ರಪಂಚವನದಾವುದೋ ಆವರಿಸಿಕೊಂಡುಮೊಳನೆರೆದುಮಿಹುದಂತೆ (ಮಂಕುಕ. ೧೨).
[ಒಳ (< ಒಳಗು) + ನೆರೆ$_1$ (< ನೆಱೆ$_1$)]

**ಒಳನೋಟ** (ನಾ). ಒಳಗಿನ ನೋಟ; ಅಂತರ್ದೃಷ್ಟಿ: ಈ ಕವನ ದಲ್ಲಿ ನಮಗೆ ಯೋಗಶಾಸ್ತ್ರದ ಒಳನೋಟವು ಲಭಿಸುವುದು (ಪರಪ. ೯೪); ಆಸಕ್ತಿ ಬೆಳೆಯುವಂತೆ, ಒಳನೋಟ ಬಲಿಯುವಂತೆ ಹಿರಿಯಣ್ಣ ನವರು ಬೋಧಿಸುತ್ತಿದ್ದರು (ನಂಟರು. ೬೪).
[ಒಳ (< ಒಳಗು) + ನೋಟ]

**ಒಳಪಂಗಡ** (ನಾ). ಒಂದು ವರ್ಗದಲ್ಲಿಯ ಉಪವರ್ಗ, —ಉಪ ಭೇದ: ನಾಮಪದಗಳ ವಿಷಯವನ್ನು . . . ಇವುಗಳ ಒಳಪಂಗಡ ಗಳೆಷ್ಟು ಎಂಬುದನ್ನು ಈ ಅಧ್ಯಾಯದಲ್ಲಿ ವಿಚಾರಮಾಡೋಣ (ಮಧ್ಯಮ. ೨೪). [ಒಳ (< ಒಳಗು) + ಪಂಗಡ]

**ಒಳಪಟ್ಟು** (ನಾ). ಹಿಡಿತ; ವಶ: ಭಾರತವು ಈ ಉಭಯವ್ಯೂಹಗಳ ಒಳಪಟ್ಟಿಗೆ ಸಿಕ್ಕದೆ . . . ಮಧ್ಯಸ್ಥವಾದ ಅರ್ಥನೀತಿಯನ್ನು ಅನುಸರಿಸ ಬೇಕೆಂದೂ ಆಶಿಸುತ್ತಿದೆ (ಭಾರದ. ३೬३).
[ಒಳ (< ಒಳಗು) + ಪಟ್ಟು$_1$]

**ಒಳಪಡಿ** (ನಾ). ತಕ್ಕಡಿಯ ಎರಡೂ ಪರಡಿ ಸಮತೂಕವಾಗಲು ಕಟ್ಟುವ ಕಾಣಿ (ಕ). [ಒಳ (< ಒಳಗು) + ಪಡಿ]

**ಒಳಪಡಿಸು** (ಕ್ರಿ). **೧.** ವಶಪಡಿಸು ; ಅಂಕೆಗೊಳಿಸು; ಅಧೀನಗೊಳಿಸು: ಸುರನಪ್ಪೊನಾವನುಂ ಆವಗಂ ಒತ್ತಂಬದಿಂದೊಳಪಡಿಸದಿರ್ಕೆನ್ನನ್ (ಬದ್ಧಪ್ರ. ೪೬–೧೦೩೫); ಕೆಲವನ್ನು ನೆರೆಯ ಸಂಸ್ಥಾನಗಳ ಆಡಳಿತಾಧಿಕಾರಕ್ಕೆ ಒಳಪಡಿಸಿದರು (ರಾಜವ. ೫೦). **೨.** ತಪ್ಪುದಾರಿಗೆ ಎಳೆ; ಕೆಡಿಸು (ಕ). [ಒಳಪಡು + –ಇಸು$_3$]

**ಒಳಪಡು** (ಕ್ರಿ). **೧.** ಅಧೀನವಾಗು; ಅಂಕೆಯೊಳಗಿರು; ಕಟ್ಟುಬೀಳು: ಅವರೆಲ್ಲ ಒಂದೇ ಕರ್ತೃತ್ವಕ್ಕೆ ಒಳಪಟ್ಟವರು (ಜಗದಾ. ೨೦೧). **೨.** ಸೋಲು ; ಶರಣಾಗು (ಕ). [ಒಳ (< ಒಳಗು) + ಪಡು$_1$]

**ಒಳಪದರು** (ನಾ). ಒಳಗಿನ ಪೊರೆ ಅಥವಾ ಮಡಿಕೆ: ತನ್ನ ಚಿಂತೆಗಳ ಒಳಪದರುಗಳನ್ನು ಹಿಂಜುವುದರಲ್ಲಿ ಒಂದಾದಳು (ಮೂರುದಾ. ೫೧). [ಒಳ (< ಒಳಗು) + ಪದರು$_2$]

**ಒಳಪಹರಿ** (ನಾ). ಪಾಳೆಯದ ಒಳಗಡೆ ಇರುವ ಕಾವಲು: ಪೊತ್ತಿಸಿದ ಪಂಜುಗಳನೇಕದಿಂದೊಳಪಹರಿಗಳ್ ಮೆಱೆದುವು (ಚೆಬಪು. ೪೮–೩೩). [ಒಳ (< ಒಳಗು) + ಪಹರಿ (< ಪಹರೆ)]

**ಒಳಪಾವಡೆ** ‘ಒಳಪಾವುಡೆ’ ನೋ.

**ಒಳಪಾವುಡೆ,** ಒಳಪಾವಡೆ (ನಾ). ಹೆಂಗಸರು ಲಂಗದ ಒಳಗಡೆ ತೊಟ್ಟುಕೊಳ್ಳುವ ಲಂಗ ; ಒಳಲಂಗ: ಅವರ ಮೈಮೇಲೆ ಒರಟೊರಟಾದ ಒಳಪಾವುಡೆ ವಿನಾ ಬೇರೆ ಬಟ್ಟೆಯಿರಲಿಲ್ಲ (ಪುನರು. ೨೬೮). **ಒಳಪಾವಡೆ**: (Petticoat. ಇಂಕನಿ). [ಒಳ (< ಒಳಗು) + ಪಾವುಡೆ]

**ಒಳಪಿಡಿ** (ನಾ). ಪುಸ್ತಕದ ಪ್ರಕರಣಗಳನ್ನು ತಿಳಿಸುವ ಅನುಕ್ರಮಣಿಕೆ; ಪರಿವಿಡಿ: ಪೀಠಿಕಾಭಾಗಕ್ಕೆ ಸಂಬಂಧಿಸಿದ ಭಾಗಗಳಾವುವೆಂದರೆ . . . ಪ್ರವೇಶಿಕೆ, ಒಳಪಿಡಿ, ಚಿತ್ರಪಟ್ಟಿ (ಮುದ್ರಕ. ೪೨). [ಒಳ (< ಒಳಗು) + ಪಿಡಿ$_2$]

**ಒಳಪುಗಿಸು** ‘ಒಳವುಗಿಸು’ ನೋ.

**ಒಳಪುಗು** ‘ಒಳವೊಗು’ ನೋ.

**ಒಳಪೊಗು** ‘ಒಳವೊಗು’ ನೋ.

**ಒಳಪೊಯ್,** ಒಳಹುಯ್, ಒಳಹೊಯ್ (ಕ್ರಿ). **೧.** ಒಳಗೊಳ್ಳು ; ಒಳಗೆ ಸೇರ್ಪಡೆಮಾಡಿಕೊಳ್ಳು: ಅಪೂರ್ವಜಲಧರಕರ್ಬುರಾಭ್ರವಿಭ್ರಮಮನೊಳಪೊಯ್ದು ಕಟ್ಟಲೆಯ ಕಾರಾಗಾರದಂತೆ . . . ಪರ್ವಿದ ತಮಾಳಮಾಳಾಪರಂಪರೆಗಳುಂ (ಚಂದ್ರಪು. ೧–೧೦೫ ವ). **೨.** ಒಲಿಸಿಕೊಳ್ಳು: ಮುರಿರಾಯ ತಂಗೆಯನಪ್ಪುಕೆಯ್ದು ಚಚ್ಚರಮೊಳಪೊಯ್ದು ನೀಂ ನಿನಗೆ ಮಾಡುವುದು (ಪಂಪಭಾ. ೪–೩೪). **೩.** ವಶವಾಗಿಸಿಕೊಳ್ಳು ; ವಶಮಾಡಿಕೊಳ್ಳು: ಭೂಭಾರಮಂ ಕೂಡೆ ತನ್ನೊಳಪೊಯ್ದಾದಮೆ ರಕ್ಷಿಸಿರ್ದು ಸಿರಿಯಂ . . . ಲಕ್ಷ್ಮೀಧರಂ ಜಳಜಾಕ್ಷಂಗೆ ಮಹಾರ್ಣವಕ್ಕೆ ಸಮನಾಗಿರ್ದಂ (ನೇಮಿಪು. ೧–೩೨). **೪.** ಒಳಗೆ ಹಾಕಿಕೊ; ನುಂಗು: ತನಗೆ ಪತಿಯುಪ್ಪ ಯತ್ನತೆಗನುನಯದಿಂದವನಿವನಿತೆಯಟ್ಟಿದ ರಕ್ಷಾಂಜನಗುಟಿಕೆಯನೊಳಪೊಯ್ದು ಪಳಿನೆ ಮಾಡಿದಳರಸಿ ಸುರಭಿ ಮೃತ್ಸೇವನೆಯಂ (ಪುಷ್ಪಪು. ೪–೧೧). **೫.** ಭೇದಿಸು ; ಸೀಳು: ಅಶ್ವತ್ಥಾವನಿಜಂ ಶಶಿಕಾಂತಗ್ರಾವಮನೊಳಪೊಯ್ದು ಕಣ್ಗೆವಂದಿರೆ ಕಂಡಂ (ಅನಂಪು. ೧೦–೬೦). **ಒಳಹುಯ್**: **೬.** “ಗರ್ಭೀಕರಿಸು; ನಾಟುವಂತೆ ಹೊಡೆ”(ಪ್ರಭಣ್ಣ). **ಒಳಹೊಯ್** : **೭.** (ಭೇದೋಪಾಯದಿಂದ) ಒಳಗೆಹಾಕು, —ಒಳಪಡಿಸು: ಮನ್ನೆಯನಾಯಕರ ಸುವಿಚಾರದಿಂದೊಳಹೊಯ್ದುಕೊಂಡನುಪಾಯಕುಶಲದಲಿ (ಜೀವಂಚ. ೪–೪೬). [ಒಳ (< ಒಳಗು) + ಪೊಯ್$_1$]

**ಒಳಪೊಯ್ಸು** (ಕ್ರಿ). ವಶಪಡಿಸು (?) : ಒಸಯಿಸಲಿಂಬುಕೆಯ್ಸಲೊಳಪೊಯ್ಸಲೊಡಂಬಡಿಸಲ್ ಪ್ರಮೋದಮಂ ಪೊಸಯಿಸಲಾಱಿಸಲ್ ನೆಱೆದುಮೊಲ್ಲದೆ ಚಿತ್ತಮುದಾತ್ತಚಿತ್ತೆಯಾ (ಶಾಂತಿಪು. ೮–೧೦೩). [ಒಳಪೊಯ್ + –ಸು$_1$]

**ಒಳಪ್ರಚಾರ** (ನಾ). ಒಳಗಿಂದೊಳಗೇ ಪ್ರಚಾರಮಾಡುವಿಕೆ; ಗುಪ್ತಪ್ರಚಾರ: ಇಷ್ಟೊಂದು ಒಳಪ್ರಚಾರ ನಡೆಸುತ್ತಿದ್ದರೂ (ಮುನಿಮಾ. ೧೧೧). [ಒಳ (< ಒಳಗು) + ಪ್ರಚಾರ]

**ಒಳಪ್ರಾಂಗಣ** (ನಾ). ಅಂಗಳದ ಒಳಭಾಗ; ಒಳಅಂಗಳ: ನಾವು ದೇವಸ್ಥಾನದ ಒಳಪ್ರಾಂಗಣವನ್ನು ಹೊಕ್ಕೊಡನೆಯೆ (ಪಂಯಾತ್ರಿ. ೨೨). [ಒಳ (< ಒಳಗು) + ಪ್ರಾಂಗಣ]

**ಒಳಪ್ರಾಕಾರ** (ನಾ). = ಒಳಪ್ರಾಂಗಣ: ಹರಿಯುದರದೊಳಿಹ ಹದಿನಾಲ್ಕು ಜಗಗಳ ಪರಿಪರಿಯತುಳ ವಿಸ್ತಾರ ಹೊಱಹೊಮ್ಮಿ ತೋರ್ಪೊಲು ಬಹುಬಗೆ ಪುತ್ತಳಿ ಮೆಱೆದುವೊಳಪ್ರಾಕಾರದಲಿ (ಕಂನವಿ. ೬–೮೬). [ಒಳ (< ಒಳಗು) + ಪ್ರಾಕಾರ]

**ಒಳಬಗೆ** (ನಾ). ಒಳಮನಸ್ಸು ; ಹೃದಯ ; ಅಂತರಂಗ: ನನ್ನ ಒಳಬಗೆಯು ತುಟಿಯುತ್ತಾ ಇದೆ (ನಾಗಕಾ. ೩೫); ಘನಸ್ನೇಹಸನೊಳಬಗೆಯ ಉದ್ದೆಸಮನೆಂತುಂ ತಪ್ಪಿಸುತೆ ನುಗುಳಲ್ ದಾರಿಯೆನಗಾವುದಿನ್? (ಬದ್ಧಪ್ರ. ೪೬–೧೦೩೯). [ಒಳ (< ಒಳಗು) + ಬಗೆ$_2$]

**ಒಳಬಟ್ಟೆ$_1$** (ನಾ). **೧.** ಒಳಗಿನ ದಾರಿ. **೨.** (ಆಲಂ) ಆತ್ಮಜ್ಞಾನದ ಮಾರ್ಗ: ಅರಿವಿಗು ಮರೆವಿಗು ಇರವೆ ಆಧಾರವು ಆಪಾರ ಒಳಬಟ್ಟೆ ಮುಟ್ಟುವದು (ಮುಕ್ತಕಂ. ೩–೧೬). [ಒಳ (< ಒಳಗು) + ಬಟ್ಟೆ$_1$]

**ಒಳಬಟ್ಟೆ$_2$** (ನಾ). ಒಳಗಿನ ವಸ್ತ್ರ: ಬೆವರಿನಿಂದ ಒಳಬಟ್ಟೆ ನೆನೆದು ಹೋಯಿತು (ರೂಢಿ). [ಒಳ (< ಒಳಗು) + ಬಟ್ಟೆ$_2$]

**ಒಳಬದಿ** (ನಾ). ಒಳಮಗ್ಗುಲು; ಒಳಗಿನ ಪಕ್ಕ: ಭಗೀರಥಯತ್ನಮಾಡಿ ಒಂದು ಕೋಣೆಯನ್ನು ಹಿಡಿದಿದ್ದರು. ಅದು ಒಂದಿನಿತು ಒಳಬದಿಗಾದರೂ ತೀರ ಆಯಾಸವಿಲ್ಲ ತಾನೇ ? (ಚೆಂದುಟ. ೫೬). [ಒಳ (< ಒಳಗು) + ಬದಿ$_2$]

**ಒಳಬಳೆ** (ನಾ). (ಗಾಡಿಯ ಚಕ್ರದ) ಒಳಸುತ್ತಿನ ಬಳೆ: ಗಾಡಿಯ ಒಳಬಳೆ ಸವೆದಿದೆ (ರೂಢಿ). [ಒಳ (< ಒಳಗು) + ಬಳೆ$_3$]

**ಒಳಬಾಗಿಲು** ‘ಒಳವಾಗಿಲ್’ ನೋ.

**ಒಳಬಾಗು** (ನಾ). ಒಳಗಡೆಗೆ ಓಲಿರುವುದು, —ಬಾಗಿರುವುದು : ಈ ದೇವಾಲಯಗಳ ಶಿಖರವು ಒಳಬಾಗುಳ್ಳ (Curvilinear) ಆಕಾರವನ್ನು ಹೊಂದಿವೆ (ಭಾರದ. ೪೯೨). [ಒಳ (< ಒಳಗು) + ಬಾಗು$_3$]

**ಒಳಬಾಳು** (ನಾ). ಒಳಗಿನ ಬದುಕು; ಅಂತರಂಗದ ಜೀವನ: ಬಾಳಸಲೆಯ ನುಡಿಬೇಕು, ಬಣ್ಣದೊಳಬಾಳ ಆಳಬೇಕು (ಅರಳು. ೩೯–೧೮). [ಒಳ (< ಒಳಗು) + ಬಾಳು$_2$ (< ಬಾೞ್$_2$)]

**ಒಳಬೀಳ್** ‘ಒಳವೀಳ್’ ನೋ.

**ಒಳಬೀಳು** ‘ಒಳವೀಳ್’ ನೋ.

**ಒಳಬು** ‘ಒಳಬೆ’ ನೋ.

**ಒಳಬೆ,** ಒಳಬು (ನಾ). (ಕರಾ) ಬೆಟ್ಟದ ಕೆಳಗಿರುವ ಜೌಗು ಭೂಮಿ; ತೇವವುಳ್ಳ ಬಯಲುನೆಲ: ಬೆಟ್ಟದ ಒಳಬೆಯನ್ನು ಸೇರಿಸುವಂಥ ಹಂಬಲ ನನಗೆ (ಬೆಟ್ಟಜೀ. ೫೬). **ಒಳಬು**: ಅದು ತಿರುಗಿ ನಿಲ್ಲುವ ಮೂಲೆಯ ಭಾಗ ಒಂದು ಹಿರಿದಾದ ಒಳಬು (ಕುಡಿಕೂ. ೩೧೪). [← **ತುಳು.** ಒಳ್ಬೆ, ಒಳ್ಬೆ = ಮೂಲೆ]

**ಒಳಬೆಳಕು** ‘ಒಳಬೆಳಗು’ ನೋ.

**ಒಳಬೆಳಗು**, ಒಳಬೆಳಕು (ನಾ). ೧. ಒಳಗಿನ ಬೆಳಕು; ಅಂತರ್ಜ್ಯೋತಿ. ೨. (ಆಲಂ) ಅಂತರಂಗದ ಅರಿವು; ಆತ್ಮಜ್ಞಾನ: ಉಪವಾಸ ನಿಯಮದಲಿ ಜಗವ ಜಯಿಸುವರುಂಟು ಒಳಬೆಳಗ ಕಾಣ್ಬರುಂಟು (ಕವಿಸೋ. ೧೭–೮). **ಒಳಬೆಳಕು**: ೨. ದ್ರೋಣನ, ರಾಮುನ ಕಲ್ಕೆಯೊಳಾದನ್ ಒಳಬೆಳಕಿಲ್ಲದ ಕಣ್ ಕುರುಡಾದನ್ (ಅಶ್ವತ್ಥಾ. ೨೭–೪). [ಒಳ (< ಒಳಗು) + ಬೆಳಗು$_2$]

**ಒಳಬೇಟ** (ನಾ). ಅಂತರಂಗದ ಪ್ರಣಯ: ಕೋಟಲೆಗಳೀಯೆರೆಡ ಜವಜಿಕೊಳ[ಪಾಠಾಂ. ಜಿಕೊಳಗವ]ಬೇಟವನೆ ಬಲುವಿಡಿದು ಹೂಡಿದ ಘೋಟಕದ ಹೊಂದೇರಿನಲಿ ಹೊಜವಂಟನರಮನೆಯ (ತೊರರಾ. ೩–೭–೨೨). [ಒಳ (< ಒಳಗು) + ಬೇಟ$_2$ (< ಬೇಂಟ)]

**ಒಳಬೊಕ್ಕಸ** (ನಾ). ಒಳಗಿನ ಕೋಶ, —ಖಜಾನೆ: ಒಳಬೊಕ್ಕಸ ಪೂರ್ಣಭಂಡಾರದ ಪೊನ್ನನಿಳಯಗಳಕಿಸೊಬಗಿನಲಿ ತೊಳಗಿದುವರಸನ ಸೌಭಾಗ್ಯದ ಬಲುಬೆಳಸನದೇನ ಬಣ್ಣಿಸುವೆ (ಕಂಸವಿ. ೭–೪೬). [ಒಳ (< ಒಳಗು) + ಬೊಕ್ಕಸ]

**ಒಳಬೊಳ್ಳೆ** (ನಾ). ಒಳಗೆ ತಿರುಳಿಲ್ಲದುದು; ಜೊಳ್ಳಾದುದು: ನಿಮ್ಮ ನಿಜವನಱಿಯದ ಶರಣರು ಹೊಱಹಂಚು ಒಳಬೊಳ್ಳೆ (ಸಮಾವ. ೭೬); ಇದಱ ವಿಶೇಷಮೇನಿದಱ ದೊಡ್ಡಿತದೇನೊಳಬೊಳ್ಳೆಯಾದ ವೇಷದ ಬಲುಹೇನಿದಕ್ಕೆ ಹೊಱಹಂಚಿಯಲೇನಹುದು (ಶತಕ. ೧೬೬–೩೫). [ಒಳ (< ಒಳಗು) + ಬೊಳ್ಳೆ]

**ಒಳಬೊಳ್ಳೆತನ** (ನಾ). ಒಳಗೆ ತಿರುಳಿಲ್ಲದಿರುವುದು; ಟೊಳ್ಳಾಗಿರುವುದು: ಎನ್ನ ಭಕ್ತನೆಂದೆಂಬರು ಎನ್ನ ಹೊಱಹಂಚಿ ಒಳಬೊಳ್ಳೆತನವನಱಿಯರಾಗಿ (ಬಸವ. ೩೦೫). [ಒಳಬೊಳ್ಳೆ + –ತನ]

**ಒಳಭಾಂಡಾರ** (ನಾ). = ಒಳಬೊಕ್ಕಸ: ಅರಮನೆಯ ನೆಲವಾಳಿಗೆ ರಾಯಸೊಮ್ಮಿನ ಒಳಭಾಂಡಾರ (ಮಂತ್ರಶ. ೧೦–೨). [ಒಳ (< ಒಳಗು) + ಭಾಂಡಾರ]

**ಒಳಭಾಗ** (ನಾ). ಒಳಗಡೆಯ ಅಂಶ, —ಸ್ಥಳ: ಧಾನ್ಯದ ಒಳಭಾಗದಲ್ಲಿ ಸೇರಿಕೊಳ್ಳುವುದರಿಂದ . . . ಜೀವಾಣುಗಳು ಪೂರ್ಣವಾಗಿ ನಷ್ಟವಾಗುವುದಿಲ್ಲ (ಅಡುಸಾ. ೭೪); ಭೂಮಿಯ ಒಳಭಾಗ ಇನ್ನೂ ಆರಿದ ಮೇಲೆ ಅದರ ಗಾತ್ರ ಕಡಿಮೆಯಾಯಿತು (ಭೂಹುಟ್ಟು. ೯೪). [ಒಳ (< ಒಳಗು) + ಭಾಗ]

**ಒಳಮಗ್ಗಲು** (ನಾ). ಒಳಪಕ್ಕ; ಒಳಮೈ (ಕ). [ಒಳ (< ಒಳಗು) + ಮಗ್ಗಲು (< ಮಗ್ಗುಲ್)]

**ಒಳಮಟ್ಟೆ**, ಒಳಮಟ್ಟು (ನಾ). ನಡುವಿನ ಅಂತರ, —ಅವಕಾಶ (ಕ). **ಒಳಮಟ್ಟು**: (ಕ). [ಒಳ (< ಒಳಗು) + ಮಟ್ಟ$_1$]

**ಒಳಮಟ್ಟು** 'ಒಳಮಟ್ಟೆ' ನೋ.

**ಒಳಮನೆ** 'ಒಳ್ಮನೆ' ನೋ.

**ಒಳಮಬ್ಬು** (ನಾ). ೧. ಒಳಗಿನ ಕತ್ತಲೆ. ೨. (ಆಲಂ) ಅಜ್ಞಾನ: ಭಾವಿತಾತ್ಮನ ನುಡಿಗೇಳಿದಷ್ಟಕೆ ಚಿತ್ತದೋವರಿಯೊಳಮಬ್ಬು ಹೋಯ್ತು ದೀವಿಗೆ ಹೊತ್ತಿಸಿದಂತಾತ್ಮರೂಪು ಪ್ರಭಾವಿಸುತಿದ್ದುದಾ ಯತಿಗೆ (ಭರಚ. ೫೪–೫೧). [ಒಳ (< ಒಳಗು) + ಮಬ್ಬು (< ಮರ್ವು)]

**ಒಳಮರುಮ** 'ಒಳಮರ್ಮ' ನೋ.

**ಒಳಮರುಳ್** (ನಾ). ಒಳಗಿನ ಭ್ರಾಂತಿ; ಮನಸ್ಸಿನ ಭ್ರಮೆ. 'ಒಳಮರುಳ್ಗಟಿ' ಪರಾ. [ಒಳ (< ಒಳಗು) + ಮರುಳ್]

**ಒಳಮರುಳ್ಗಟಿ** (ಕ್ರಿ). ಭ್ರಾಂತಿ ನಿವಾರಣೆಯಾಗು; ಭ್ರಮನಿರಸನವಾಗು: ಅವನೊಳಮರುಳ್ಗಟಿವಂತೊರೆದನೊಸೆದು ನಿಗಮದ ನೆಲೆಯಂ (ಚಕವಿ. ೧–೬೧). [ಒಳಮರುಳ್ + ಕಟಿ$_1$]

**ಒಳಮರ್ಮ**, ಒಳಮರುಮ (ನಾ). ಒಳಗಿನ ಗುಟ್ಟು, —ರಹಸ್ಯ: ಅಲ್ಲೊಬ್ಬ ಗೂಢಚಾರ ಭಿಕ್ಷುಕನ ವೇಷ ಹಾಕಿಕೊಂಡು ಕೋಟೆಯ ಒಳಮರ್ಮವನ್ನು ತಿಳಿಯುತ್ತಿದ್ದನಂತೆ (ಚಿದೇವ. ೧೫೫). **ಒಳಮರುಮ**: ಸುಂದರತೆಯೆನಿಸುವುದೇಂ? ಜನಕೆ ಮೈಮರೆಯಿಪಾನಂದದೊಳಮರುಮಮೇಂ? (ಮಂಕುಕ. ೪೪೬). [ಒಳ (< ಒಳಗು) + ಮರ್ಮ$_2$]

**ಒಳಮಾಡು**$_1$ (ಕ್ರಿ). (ಕರಾ) ಒಳಗೆ ಬಿಜಯಮಾಡಿಸು: ದೇವರನ್ನು ಒಳಮಾಡಿ ಆಯಿತೆ? (ರೂಢಿ). [ಒಳ (< ಒಳಗು) + ಮಾಡು$_1$]

**ಒಳಮಾಡು**$_2$ (ನಾ). ಒಂದು ಪ್ರದೇಶ (?): ಧರ್ಮಕೆ ಬಿಟ ಬಾಳಿನ ವಿವರ ಒಳಮಾಡಿನ ಒಳಗೆ ಮುಡಲು ಗೋಗಿಯ ಬಳಿ (ಸೌಇಇ. IX–ii, ೪೨೪–೧೦; 1401); ಒಳಮಾಡಿನ ಒಳಗೆ ನಾಯಿನಾರೆಯ ಧರ್ಮದ ಬಳಿನ ಕಂಟ್ಟದ ಮೇಲಣ ತೆಂಗಿನಮರ (ಸೌಇಇ. IX–ii, ೪೭೩–೨೫; 1485). [?]

**ಒಳಮಾತು** (ನಾ). ಗುಟ್ಟಿನ ಮಾತು; ರಹಸ್ಯವಾದ ಮಾತು (ಕ). [ಒಳ (< ಒಳಗು) + ಮಾತು$_1$]

**ಒಳಮಾರು** 'ಒಳವಾಱು$_2$' ನೋ.

**ಒಳಮಾಳಿಗೆ** (ನಾ). ಮಾಳಿಗೆಯ ಒಳಗಿನ ಭಾಗ; ಛತ್ತು (ಕ). [ಒಳ (< ಒಳಗು) + ಮಾಳಿಗೆ]

**ಒಳಮುಖ** (ನಾ). ೧. ಅಂತರ್ಮುಖ. 'ಒಳಮೊಗ' ಪರಾ. ೨. ಒಳಭಾಗ; ಒಳಮೈ: ಹಾಲು ಶರ್ಕರೆಯಂ ಕಾಸಿದ ಮಡಕೆಯಂ ಶುದ್ಧೋದಕದಿಂದ ಒಳಮುಖವಂ ಚೆನ್ನಾಗಿ ತೊಳೆದು (ಸಕವೈ. ೩೪೩). [ಒಳ (< ಒಳಗು) + ಮುಖ]

**ಒಳಮುಚ್ಚಕ** 'ಒಳಮುಚ್ಚುಗ' ನೋ.

**ಒಳಮುಚ್ಚಗ** 'ಒಳಮುಚ್ಚುಗ' ನೋ.

**ಒಳಮುಚ್ಚಿಗೆ** (ನಾ). ಸೂರಿನ ಒಳಭಾಗದಿಂದ ಮುಚ್ಚುವ (ಗವಾಕ್ಷಿಯ) ಮುಚ್ಚಳ. [ಒಳ (< ಒಳಗು) + ಮುಚ್ಚಿಗೆ]

**ಒಳಮುಚ್ಚುಗ**, ಒಳಮುಚ್ಚಕ, ಒಳಮುಚ್ಚಗ (ನಾ). ಮುಟ್ಟಿದ ಕೂಡಲೆ ಒಳಕ್ಕೆ ಎಲೆಮುದುರಿಕೊಳ್ಳುವ ಒಂದು ಗಿಡ; ಒಳಮುನಿಗಿಡ; ಮುಟ್ಟಿದರೆಮುನಿ; ಲಾಜವಂತಿ; ಮುಟ್ಟಲಮುರುಕ (ಉಕ): ಆಕೆಯ ಮನ ಒಳಮುಚ್ಚುಗದ ಎಲೆಯಂತೆ (ಗಂಗಾಸಾ. ೪೮). **ಒಳಮುಚ್ಚಕ**: ಒಳಮುಚ್ಚಕದಂತಹ ಗಿಡಗಳಲ್ಲಿ (Mimosa pudica); ಸಸ್ಯದ ಒಂದು ಭಾಗಕ್ಕೆ ಸ್ವಲ್ಪ ಆಘಾತವಾದರೆ, ಅದರ ಪರಿಣಾಮ ಎಲ್ಲ ಭಾಗಗಳಿಗೆ ಕ್ಷಣಾರ್ಧದಲ್ಲಿ ಪಸರಿಸುತ್ತದೆ (ಸಸ್ಯಕ. ೧೦೩). **ಒಳಮುಚ್ಚಗ**: ಹೊರಮುಚ್ಚಗ ಒಳಮುಚ್ಚಗಗಳೆಂಬ ವನಸ್ಪತಿಗಳು ಕೈಹಚ್ಚಿದ ಕೂಡಲೆ ಎಲೆಗಳನ್ನು ಮುಚ್ಚಿಕೊಳ್ಳುತ್ತವೆ (ಮುಂಬಯಿ. ೬–೨೭೫). [ಒಳ (< ಒಳಗು) + ಮುಚ್ಚುಗ]

**ಒಳಮುನಿಗಿಡ** (ನಾ). = ಒಳಮುಚ್ಚುಗ: ಹಂಸಪಾದಿಯ ಸಹಮೂಲ ಒಳಮುನಿಗಿಡದ ಸಹಮೂಲ ಇವು ಎರಡನ್ನೂ . . . ಪಾನವ ಮೂಱು ಹೊತ್ತು ಮಾಡಲು ಪ್ರಮೇಹ ಗುಣವಹುದು (ವಿವೈವಿ. ೧೦೦). [ಒಳ (< ಒಳಗು) + ಮುನಿ$_1$ + ಗಿಡ (< ಗಿಡು)]

**ಒಳಮುಯ್ಪು** (ನಾ). ಹೆಗಲಿನ ಒಳಭಾಗ; ಭುಜದ ತುದಿಯಿಂದ ಕತ್ತಿನವರೆಗಿರುವ ಪ್ರದೇಶ: ಒಳಮುಯ್ಪಿನಮೇಲೆ ಬಿರ್ದ ಸೋರ್ಮುಡಿ ಬೆದಱುತ್ತೆ ಕೆಯ್ಯೊಳದನಂಗನೆ ಸಾವಗಿಸಲ್ (ಕಾದಂಊ. ೧೩೬). [ಒಳ (< ಒಳಗು) + ಮುಯ್ಪು$_1$]

**ಒಳಮೆಯ್**, ಒಳಮೈ (ನಾ). ೧. ಒಳಪಕ್ಕ; ಒಳಬದಿ: ಯಿಾಕಲ್ಲ ಒಳಮೆಯಲೂ ಬರದ ಬ್ರಸ ೭ (ಮೈಆರಿ. ೧೯೩೪, ೧೪–೧೨; 1516).

೨. ಅಂತರಂಗ; ಗರ್ಭ: ರಸಮುತ್ಪ್ರೇಕ್ಷೆಕೂಡಿದ ಕೃತಿವೆಸದೊಳ ಮೆಯ್ಯೊಳು ತೀವಿದ ತಪ್ಪಂ ರಸಿಕರ್ ಬಲ್ಲಂದದಿಂ ಬಲ್ಲರೆ ಕಾಲುರಿಚರ್ (ಜಯಕಾ. ೧-೧೬). **ಒಳಮೈ:** ೧. ಅದರ ಒಳಮೈ ನುಣುಪಾದದ್ದು (ಮುಂಬಯಿ. ೪-೭೧). ೨. ಕಡಲ ಹಾಲೊಳಮೈಯೊಳುದಿಸಿ ಮೇಲಕೆ ಪೊಱಮಡುವ ನಿರ್ಜರ ಕುಜದಂತೆ (ಶ್ರೀಪಾಲ. ೬-೬೧).

[ಒಳ (< ಒಳಗು) + ಮೆಯ್]

**ಒಳಮೈ** 'ಒಳಮೆಯ್' ನೋ.

**ಒಳಮೊಗ** (ನಾ). ತನ್ನ ಒಳಗೆ ನೋಡಿಕೊಳ್ಳುವ ಸ್ಥಿತಿ; ಅಂತರ್ಮುಖ: ಬಗೆಯೆ ಒಳಮೊಗವಾಗಿ ನಿಜ ಬೆರೆಯಲೆಂಬಾಗ ಬೇರೆ ಇಲ್ಲವು ತಾನೆ ನಿಜವಲ್ಲದೆ (ಮುಕ್ತಕಂ. ೫-೧೯). [ಒಳ (< ಒಳಗು) + ಮೊಗ$_2$]

**ಒಳಮೊಳೆ** (ನಾ). ಮೂಲವ್ಯಾಧಿಯಿಂದ ಗುದದ ಒಳಭಾಗದಲ್ಲಿ ಏಳುವ ಮೊಳೆ, —ದುರ್ಮಾಂಸಗ್ರಂಥಿ: ಬೋಳದರಗನ ಸೊಪ್ಪು, ಎಳ್ಳು . . . ಹಸುವಿನ ತುಪ್ಪದಲ್ಲಿ ಮೆಲ್ಲಲು ಮೂಲವ್ಯಾಧಿಯ ಒಳಮೊಳೆ ಮಾಣುವುದು (ಸಕವೈ. ೨೮೮). [ಒಳ (< ಒಳಗು) + ಮೊಳೆ$_2$]

**ಒಳಮೋಸ** (ನಾ). ವಿಶ್ವಾಸಘಾತ, —ದ್ರೋಹ. 'ಒಳಮೋಸಗೊಡು' ಪರಾ. [ಒಳ (< ಒಳಗು) + ಮೋಸ]

**ಒಳಮೋಸಗೊಡು** (ಕ್ರಿ). ವಿಶ್ವಾಸದ್ರೋಹ ಮಾಡು: ಖಳರಾಯನನುಜ ವಿಭೀಷಣ ಬಂದಿನ್ನು ಒಳಮೋಸಗೊಟ್ಟ ಕಾರಣದಿ (ಮೋಹತ. ೪೦-೨೫). [ಒಳಮೋಸ + ಕೊಡು]

**ಒಳಯ್** 'ಉಳ್$_1$' ಪರಾ.

**ಒಳಯಿಂಕೆ, ಒಳಯಿಕೆ, ಒಳಯಿಕ್ಕೆ** (ಅ). ಒಳಗಡೆ; ಒಳಭಾಗದಲ್ಲಿ: "ಒಳಯಿಂಕೆಯೆನಲು ಒಳಕಡೆ" (ಕಶರ. ೧೧೯); ಹುಸಿಯಿಂದ ಜನಿಸಿದೆನಯ್ಯಾ ಮರ್ತ್ಯಲೋಕದೊಳಯಿಂಕೆ (ಬಸವ. ೯೪೩); ಪರಿಚಾರಕಂ ಪುರದೊಳಯಿಂಕೆ ಕಳುಪಲ್ (ಬಸರ. ೧೨-೧೧೭); ರಾಕ್ಷಸನ ಅಪ್ಪಣೆಯಿಂದ ಕ್ಷಪಣಕನಂ ಒಳಯಿಂಕೆ ಬಿಡಲು ಆಗ ಕ್ಷಪಣಕನು "ಶ್ರೀಯೋಸ್ತು" ಎಂದು ಹರಸಿ, ಕುಳಿತನು (ಮುದ್ರಾಮಂ. ೮೧). **ಒಳಯಿಕೆ:** ಆ ಲತಾಂಗಿಯ ಕರೆದು ಒಳಯಿಕೆ ಕಾಲುದೊಳಸಿಯು (ಕುವ್ಯಾಆ. ಓರಿಇ. ೨೩-೩೦); ಒಂಬತ್ತು ಬಾಗಿಲು ಕದವನಿಕ್ಕಿ ಒಳಯಿಕೆ ಒಬ್ಬರನು ಬಿಡದಿರೆ (ಶಿವಗೀ. ೧೬೧-೮೦೧ ವ); ಸಮಯವಱಿದು ತಾನೊಳಯಿಕೈತಂದು (ಚೆಬಪು. ೫೬-೬೭). **ಒಳಯಿಕ್ಕೆ:** ಶಾಂತಶಾರೀರರು ದಿಗಂಬರರು ಹೇಳದೊಳಯಿಕ್ಕೆಯ್ದುತಿರಲಾ ಬಾಲಕರು ನಸುನಗುತ ಚಿತ್ತದ ಕೋಲನಡ್ಡೈಸಿದರು (ನಿಭಾಗ. ೩-೬-೧೧). [ಒಳ (< ಒಳಗು) + ಇಂಕೆ ?]

**ಒಳಯಿಕೆ** 'ಒಳಯಿಂಕೆ' ನೋ.

**ಒಳಯಿಕ್ಕೆ** 'ಒಳಯಿಂಕೆ' ನೋ.

**ಒಳಯುದ್ಧ** (ನಾ). ಒಳಜಗಳ; ಅಂತಃಕಲಹ; "ಪ್ರಜೆಗಳಲ್ಲಿಯೇ ಪ್ರತಿಕಕ್ಷಿಗಳಿಗೆ ಪರಸ್ಪರ ನಡೆಯುವ ಯುದ್ಧ: ರಾಷ್ಟ್ರಾಂತರ್ಯುದ್ಧ" (Civil war. ಇಂಕನಿ). [ಒಳ (< ಒಳಗು) + ಯುದ್ಧ]

**ಒಳರ್$_1$** 'ಒಳಱು' ನೋ.

**ಒಳರ್$_2$** 'ಉಳ್$_1$' ಪರಾ.

**ಒಳರಸ** (ನಾ). ಒಳಗಿನ ರಸ, —ತಿರುಳು; ಅಂತಃಸ್ಸಾರ: ಶೈಲಿ ಮಾರ್ಗ ಲಕ್ಷಣಗಳು ಬೇರೆಯಾಗಿದ್ದರೂ ...ಒಳಸಾರ, ಒಳರಸ, ಒಳಆತ್ಮ ಎಂದೆಂದಿಗೂ ಒಂದೇ ಆಗಿ (ಕಜಸಾ. ೬೪). [ಒಳ (< ಒಳಗು) + ರಸ]

**ಒಳರಾಣುವೆ** (ನಾ). ಅಂತಃಪುರ; ರಾಣಿವಾಸ: ನುಡಿದೇನು ಫಲವೆನ್ನೊಳರಾಣುವೆಗಾನೊಡತಿಯ ಮಾಡುವೆ ನಿನ್ನ (ಕುರಾಸಾಂ. ೨೭-೨೨); ಒಳರಾಣುವೆಯ ನಾರಿಯರ ರತ್ನದಾರತಿ ಹೊಳೆವ ಮುತ್ತಿನ ಸೇಸೆಗಳು ಸುಳಿದುವು (ಕಂನವಿ. ೨೨-೧೦೬). [ಒಳ (< ಒಳಗು) + ರಾಣುವೆ]

**ಒಳಲಂಚ** (ನಾ). ಗುಪ್ತವಾಗಿ ಕೊಡುವ ಲಂಚ; ಮುಚ್ಚಿಕೊಡುವ ಲಂಚ: ಕಲಹವಿಲ್ಲದೆ ನೂಲಿನೆಳೆಯಲಿ ತಲೆಯನರಿವ ವಿರೋಧಿರಾಯರ ನಳುಕಿಸುವ ಸಾಮದಲಿ ನಿಲಿಸುವ ನಿಖಿಳ ಭೂಭುಜರ ಒಲಿದರೊಳಲಂಚದಲಿ ಛಿದ್ರಿಸಿ ಕೊಲುವ . . . ಮಂತ್ರಿಗಳು (ಕುವ್ಯಾಉ. ೮-೩೫); ಗಡಿಯ ನಾಡಿನ ಸುಂಕ . . . ಒಳಲಂಚ ಇವು ನಾಲ್ಕು ಅಡಿಯಿಟ್ಟಡಿಲ್ಲ (ಸರ್ವಜ್ಞ. ೧೪೯೫). [ಒಳ (< ಒಳಗು) + ಲಂಚ]

**ಒಳಲು** (ನಾ). ಒಳತಿರುಳು: ತಾಯಿ ನಿನ್ನ ಒಳಲೊಡನೆ ಮಾತ್ರ, ಈ ಜೀವ ಸಾಮ್ಯವಿರಲಿ (ಹೃದಸ. ೬೩-೪).

[? . / ತಮಿ. ಉಳ್ಳಲ್ = ಉದ್ದೇಶ, ವಿಚಾರ]

**ಒಳಲೂಟಿ** (ನಾ). ಗುಟ್ಟಾಗಿ ನಡೆಸುವ ಸುಲಿಗೆ; ಗುಪ್ತದರೋಡೆ: ಬೇಟೆತೋಟಗಳೊಳಲೂಟ ದಾಟಿಯೊಳು ಜೂದಾಟ ನೋಟದೊಳಾ ಖಳನ ಆಟವನಡಗಿಸಿ ತೋಱುವೆನು (ಕುರಾಸಾಂ. ೩೫-೨೫).

[ಒಳ (< ಒಳಗು) + ಲೂಟಿ]

**ಒಳಲೆ** (ನಾ). ಹಾಲು ಮೊದಲಾದುವನ್ನು ಕುಡಿಸುವ ಚಿಕ್ಕ ಸಾಧನ; ಶಿಂಪೆ (ಉಕ): ಒಳಲೆಯಲಟ್ಟದ ಹಾಲ ಆ ಮಗುವಿನ ತಳದ ಏಣರೆ ಕುಡಿಯಿತ್ತು (ಮೋಳಮಾ. ೨೧೬-೭೭೦); ಒಡನೊಳಲೆಯ ಪಾಲಂ ಸವಿದೊಡನೆ ತೊದಳ್ನುಡಿದು ತಳರ್ದು ನಡೆನುಡಿಯಂ ಕಲ್ತು (ಚಿಕವಿ. ೫-೯೯); ಒಳಲೆಯಲ್ಲಿ ಔಷಧಿಯನ್ನು ಹಾಕಿ ಬಾಯಿಯ ಕೊನೆಗೆ ಒಳಲೆಯ ಮೂತಿಯನ್ನು ದೂಡಿದರೂ (ವಂಶವೃ. ೩೧೫). [?]

**ಒಳಲೊಟ್ಟೆ** (ನಾ). ೧. ಒಳಗೆ ತಿರುಳಿಲ್ಲದ್ದು; ಬರಿ ಟೊಳ್ಳು: ತನುವಂಚಕ ಮನವಂಚಕ ಧನವಂಚಕ ನಾನಯ್ಯ ಕೂಡಲಸಂಗಮದೇವಾ ಒಳಲೊಟ್ಟೆ ಎನ್ನ ಮಾತು (ಬಸವ. ೩೦೭). ೨. ಒಳಗೆ ಹುರುಳಿಲ್ಲದವನು; ನಿಸ್ಸಾರನಾದವನು: ಬಱಿಯ ನಚ್ಚುಮಚ್ಚಿನ ಭಕ್ತಿಯ ಭಕ್ತರು ಲಿಂಗವ ಮುಟ್ಟಿಯೂ ಮುಟ್ಟದ ಒಳಲೊಟ್ಟೆಗಳು [ಪಾಠಾಂ. ಲೊಟಿಗಳು, ಲಟ್ಟಗರು] ನೆರೆದು ಗಳಹುತ್ತಿಪ್ಪರು (ಅವಚಂ. ೪೧-೧೭೭). 'ಲೊಲ್ಲೊಟ್ಟೆ', 'ಲೊಳಲೊಟ್ಟೆ' ಪರಾ.

[ಒಳ (< ಒಳಗು) + ಲೊಟ್ಟೆ$_2$]

**ಒಳಪಕ್ಕ** (ನಾ). ಒಳಗಿನ ಪಕ್ಕ; ಒಳಮೈ: ಕೆಳ ಅಣಲ ಮೇಲೆ ಪಲ್ಲಂ ತೊಳಪಕ್ಕಂ [ಪಾಠಾಂ. ಪೊಳೆದಹ] ಗಂಡ(ಧ)ಮೆಂಬ ಪೆಸರಿಂ ತೋರ್ಕುಂ (ಅಶ್ವಶಾ. ೯-೩). [ಒಳ (< ಒಳಗು) + ಪಕ್ಕ]

**ಒಳವಗೆ** (ನಾ). ಒಳಗಿನ ಹಗೆ; ಕಾಮಕ್ರೋಧಾದಿಗಳಾದ ಅಂತಃಶತ್ರು: ಒಳವಗೆಗಳಾಱುಮನದಿರ್ಪಿದ್ದೆ ದೇವ ಮಗುಳ್ದುಮವು ಕೂಡದ ಪೊಲ್ (ಲೀಲಾವ. ೪-೪೭). [ಒಳ (< ಒಳಗು) + ಪಗೆ$_2$]

**ಒಳವರ್** (ಕ್ರಿ). ಒಳಗೆ ಬರು; ಪ್ರವೇಶಿಸು: ಪನಿ ಮೂಗಿನೊಳವರೆ ಸುಯಿದನೊರ್ಮೆ ಜಿನ (ಸಾಳ್ವಭಾ. ೨೧-೬೪).

[ಒಳ (< ಒಳಗು) + ಬರ್$_1$]

**ಒಳವರಿ** (ಕ್ರಿ). ೧. ಒಳಗೆ ನುಗ್ಗು; ಒಳಸೇರು: ಸುತದೋಹಳ ಕಾಂತೆಯ ಮನದೊಳವರಿದು ಭ್ರಾಂತುಗೊಳಿಸೆ (ಶ್ರೀಪಾಲ. ೨-೨೭). ೨. ಅಂತರ್ಮುಖವಾಗು; ಒಳಮೊಗವಾಗು: ಒಳವರಿದಾತ್ಮನ ನೋಳ್ಪುದು ಕರ್ಮವ ತುಳಿವುದು ಬಲ್ಲವರೆಲ್ಲ (ಭರಚ. ೫೦-೬೭).

[ಒಳ (< ಒಳಗು) + ಪರಿ$_2$]

**ಒಳವಸುಂಬೆ** (ನಾ). ಹಸುಬೆಯ ಒಳಪದರು, —ಒಡಲು: ಪೃಥ್ವಿಯೆ ಹಸುಂಬೆಯಾಗೆ ಅಷ್ಟಲೋಕಪಾಳಕರೇ ಗೋಂಟಾಗೆ ವಾಸುಗಿಯೇ ಬಳಸಾಗೆ ಫಣಿಕುಳಂಗಳೇ ದಾರವಾಗಿ ಬೊಕ್ಕಣವೊಳವಸುಂಬೆಯಾಗಿ ಚಕ್ರಮೇ ಬೆಳವಾಗಿ (ಎಕ. VII, ಶಿಕಾರಿ. ೧೧೮-೩೧; 1054).

[ಒಳ (< ಒಳಗು) + ಪಸುಂಬೆ]

**ಒಳವಸ್ತ್ರ** (ನಾ). ಒಳಗಿನ ವಸ್ತ್ರ : ಕಂಗೊಳಿಪೊಳವಸ್ತ್ರದೊಳಂದು ಕೆಂಪಿಂದ ಶುಭ್ರಾಂಗವಸ್ತ್ರಕೆ ಕೆಂಪು ರಮಿಸೆ (ಭರಚ. ೪೦–೬೪).
[ಒಳ (< ಒಳಗು) + ವಸ್ತ್ರ]

**ಒಳವಳಯ** (ನಾ). ಒಳಸುತ್ತು ; ಒಳಗಿನ ಪ್ರದೇಶ : ಶಶಿಕಾಂತದ ಮಂಟಪದೊಳವಳಯದೊಳೆಸೆವ ಮೃದುಳತಲ್ಪೋಪರಿಯೊಳ್ (ಹಾಲಾಸ್ಯ. ೧–೨೧). [ಒಳ (< ಒಳಗು) + ವಳಯ (= ವಲಯ)]

**ಒಳವಾಗಿಲ್, ಒಳಬಾಗಿಲು** (ನಾ). ೧. ಬಾಗಿಲಿನ ಒಳಗಡೆ : ಲಲಿತಾಂಗಿ ಧವಳಾಂಬರವನೊರ್ವಳುಟ್ಟು ತನ್ನೊಳವಾಗಿಲೊಳಗಿರಲ್ ಕಂಡು (ಚಿಬಪು. ೧೦–೨೨). ೨. ಒಳಗಿನ ಬಾಗಿಲು : ಬನ್ನೂರು ಲಿಂಗಣ್ಣ – ಒಳವಾಗಿಲ ಸಮ್ಮುಖದ ಗುರಿಕಾರ (ಬಿಟ್ಟಅ. ೬–೧೦). **ಒಳಬಾಗಿಲು** : ೧. ಕಣಜದ ಒಳಬಾಗಿಲಿನಲ್ಲಿ ನಿಂತು ಲಿಂಗ ಅವರಿಗೆ ಬೆಳಕು ತೋರಿಸುತ್ತಿದ್ದಾನೆ (ಮರಳಿ. ೧೯). ೨. ರಾಯನರಮನೆಯೊಳಬಾಗಿಲ ಕಾವಪಿರಿಯಳು ದಾದಿಯೊರ್ವಳನು ಬರಿಸಿಕೊಂಡು (ಕಂಸವಿ. ೧೧–೧೧೬).
[ಒಳ (< ಒಳಗು) + ಬಾಗಿಲ್]

**ಒಳವಾಯ್** (ನಾ). ಬಾಯ ಒಳಭಾಗ : ಬಿಸಿಲ್ಗುದುರೆಯನಂದ ಳವಟಿದು ಕಾಯ್ದ ಗುರ್ವಿಂದೊಳವಾಯಿಂ ಕರಿಸೆಯುಗುಟ್ಟುವೆಯ್ದೆ ಮೃಗಂಗಳ್ (ಜಗವಿ. ೧೬–೬೫). [ಒಳ (< ಒಳಗು) + ಬಾಯ್]

**ಒಳವಾಲ** (ನಾ). ಒಳಗೆ ಮಾಡಿಕೊಂಡ ಬಾಲ; ಮುದುರಿಕೊಂಡ ಬಾಲ. 'ಒಳವಾಲಂಗೊಳ್' ಪರಾ. [ಒಳ (< ಒಳಗು) + ಬಾಲ]

**ಒಳವಾಲಂಗೊಳ್** (ಕ್ರಿ). ೧. ಬಾಲವನ್ನು ಮುದುರಿಕೊಳ್ಳು. ೨. (ಆಲಂ) ಹೆದರು ; ಹಿಂಜರಿ : ಒಳಕೆಯ್ಯೊಳಿರ್ದು ಪಲ್ಗಿರಿದೊಳವಾಲಂಗೊಂಡು ಮೊರೆವ ಭಷಕನ ತೆಱದಿಂ (ಕಾವ್ಯಾವ. ೨೪೪).
[ಒಳವಾಲ + ಕೊಳ್$_1$]

**ಒಳವಾಲವಿಕ್ಕಿಸು** (ಕ್ರಿ). ೧. ಬಾಲವನ್ನು ಮುದುರಿಕೊಳ್ಳುವಂತೆ ಮಾಡು. ೨. (ಆಲಂ) ಹೆದರಿಸು ; ಹಿಂಜರಿಯುವಂತೆ ಮಾಡು : ಕಮಲಜನ ಮಾಹೇಶ ಶಕ್ರರ ಸಮರದೊಳಗೊಳವಾಲವಿಕ್ಕಿಸಿದಮರವಿಜಯಿಗಳಿರ್ದರೆಡಬಲದಲಿ ದಶಾನನನ (ತೊರರಾ. ೩–೬–೪).
[ಒಳವಾಲವಿಕ್ಕು + -ಇಸು$_3$]

**ಒಳವಾಲವಿಕ್ಕು** (ಕ್ರಿ). ೧. ಬಾಲ ಮುದುರಿಕೊಳ್ಳು. ೨. (ಆಲಂ) ಅಂಜು; ಹಿಂದೆಗೆ. 'ಒಳವಾಲವಿಕ್ಕಿಸು' ಪರಾ. [ಒಳವಾಲ + ಇಕ್ಕು]

**ಒಳವಾಲಹಾಕು** (ಕ್ರಿ). ಸೋಲು (ಕ).
[ಒಳವಾಲ + ಹಾಕು (< ಪಾಯ್ಕು$_1$)]

**ಒಳವಾಱು$_1$** (ಕ್ರಿ). ಒಳಗೆ ಇಂಗಿಹೋಗು, —ಆರಿಹೋಗು : ಆಕೆ ವಾಳರ ಬೀರಮುಱ್ಕಾಡೆ ಸೊರ್ಕುಸೋರೆ ಅಳವೊಳವಾಱೆ ಚಲಂ ನೆಲೆಗಿಡೆ ಬಲಂ ಬಯಲ್ವುಗೆ (ರಾಮಾಶ್ವ. ೯೭–೧೯). [ಒಳವು$_2$ + ಅಱು$_1$]

**ಒಳವಾಱು$_2$, ಒಳಮಾರು** (ನಾ). ೧. ಒಳನಾಡಿನಲ್ಲಾಗುವ ವ್ಯಾಪಾರ, —ವಾಣಿಜ್ಯ. ೨. ಒಳನಾಡಿನಲ್ಲಿ ಮಾರಾಟವಾಗುವ ಸರಕುಗಳ ಮೇಲಿನ ಸುಂಕ : ಕೊತ್ತಂಗೆಱೆಯ ಒಳವಾಱು ಹೊಱವಾಱು ತೋಟ ಎಮ್ಮೆ ಪಶು ತೊತ್ತು ಕಟ್ಟನ ಭಂಡಿ . . . ಒಳಗಾಗಿ ಸಮಸ್ತ ಸುಂಕ ಸರ್ವ್ವಾಯವ (ಎಕ. XII, ಕುಣಿಗ. ೧–೩೬ ; 1157) ; ಬಣ್ಣಿಗೆ ಮಗ್ಗಗಾಣ ವೊಳವಾಱು ಹೊಱವಾಱೊಳಗಾಗಿ ಸಮಸ್ತ ಸುಂಕವ (ಎಕ. V, ಹಾಸನ. ೧೯೯–೬೨ ; 1173) ; ಮಡುವೆದೆಱೆ ವೊಳವಾಱು ಆಲದೆಱೆ . . . ಯಿಪ್ಪೂ (ಎಕ. XIV, ಕೃಷ್ಣರಾ. ೮೧–೧೦ ; 1402). **ಒಳಮಾರು** : ೧. ಒಳಮಾರು (ಆಮದು) ಹೊರಮಾರು (ರಫ್ತು) ಸರಕುಗಳ ಮೇಲೂ ತೆರಿಗೆ ಹಾಕಿತು (ಇಸ್ಲಾಂಸಂ. ೪೨). 'ಉಱುವಾಱು$_2$' 'ಹೊಱವಾಱು' ಪರಾ. [ಒಳ (< ಒಳಗು) + ಮಾಱು$_2$]

**ಒಳವಿಡಿ** (ನಾ). ಹಿಡಿಯ ಒಳಭಾಗ ; ಅಂಗೈಯ ಒಳಭಾಗ : ಒಳವಿಡಿಯೊಳು ತ್ರಾಸಿನೊಳು ಹಾಕಿ ತೂಗಿದ ಸುಲಭದೇವನಿಗೊಂದಿಸುವೆ (ಅಬ್ಬಲೂ. ೧–೪). [ಒಳ (< ಒಳಗು) + ಪಿಡಿ$_3$]

**ಒಳವೀೞ್, ಒಳಬೀೞ್, ಒಳಬೀಳು** (ಕ್ರಿ). ೧. ಒಳಗಾಗು ; ಕೈವಶವಾಗು ; ಸೋಲು : ಒಳವಿರ್ದ ವಿಟರ ಸೋಕಿದ ಕಾಮಗ್ರಹವನು ತೊಲಗಿಸುತಿಹರಂಗನೆಯರು (ಕಂಸವಿ. ೨–೧೧೦). **ಒಳಬೀೞ್** : ೧. ಅಂಜದಿರಂಜದಿರು ಸತಿಯರ್ಗೆ ಧೈರ್ಯಂ ಬೇಳ್ಪುದು ಇಂತಲ್ಲಲ್ಲ ಬೇಗವೊಳಬೀಳಲಾಗದು (ಸಂಬರ. ೧೬–೩೬) ; ಮಾಯೆಯಲಿ ನಿರ್ವಾಯದಿಂದೊಳಬಿದ್ದು ತೊಳಲುವ ಜೀವರಾಶಿಗಳ (ನಿಭಾಗ. ೧–೧–೩). **ಒಳಬೀಳು** : ೧. ನವಣೆಯನು ಉಂಬುವನು ಹವಣಾಗಿ ಇರುತಿಹನು ಬವಣೆಗಳೆಗವನು ಒಳಬೀಳನು (ಸರ್ವಜ್ಞ. ೨೦೨೧) ; ಐಶ್ವರ್ಯದ ಹೊಳಪಿಗೆ ಒಳಬಿದ್ದೆನಲ್ಲ (ದೇವೀಚೌ. ೨೩). ೨. ಆಕ್ರಮಿಸು ; ಮುತ್ತು : ಮೇಲೆ ದಳ್ಳುರಿ ಧರಧುರದಲೊಳಬೀಳುತ್ತಿದ್ದವು ಕಿಡಿಯ ಚೂಣಿಯಲಿ (ಕುವ್ಯಾದ್ರೋ. ೧೯–೪೫) ; ಎನಗೆ ತಿಳಿಯದಂತೆ ಕ್ರುದ್ಧ ಜನರು ಪಾಳತಿಯಲ್ಲಿ ಬಂದು ಒಳಬಿದ್ದು ಸಂಚರಿಸುವ ತೆರನಾಗಿದೆ (ಮೋಕ್ಷದೀ. ೨೬–೨೪).
[ಒಳ (< ಒಳಗು) + ಬೀೞ್$_1$ (< ಬೀೞ್$_1$)]

**ಒಳವು$_1$** 'ಉಳ್$_1$' ಪರಾ.

**ಒಳವು$_2$, ಒಳಹು, ಒಳುವು** (ನಾ). ೧. ಅಂತರಂಗ ; ರಹಸ್ಯ : ಇಂದು ಹೋಗಿ ನೀ ವಿನಯದಿಂದಲಿ ಸಾರೆ ಒಂದೆ ಮಾತಿಲಿ ಒಳವು ತಿಳಿದು ಬಾರೆ (ಪುರಂದ. ೪–೧೩೩–೫) ; ಗುಡಿಯೆ ಮಡಿಯನಾಡು ಎಂದೆಂಬ ಜಾಣರ ನುಡಿಯ ಒಳವೇನಿಹುದು (ಸೂರ್ಯಪಾ. ೮೬–೪) ; ಬಾಳಪ್ಪ ಸೆಟ್ಟಿಗೆ ಯಾವ ಒಳವೂ ಗೊತ್ತಾಗಲಿಲ್ಲ (ಒಡ್ಡಉ. ೫೪) ; ನಿನ್ನೊಳವು ಬಚ್ಚ ಬರಿಗನ್ನಡವಾಗಿ ತೋರುತ್ತಿದೆ (ನಡೆದಾ. I, ೪೪೬). ೨. ಒಳಭಾಗ : ದ್ರೌಪದಿ ಕೀಚಕನ ಮನೆಗೆ ನಡೆತಂದವನ ಕಂಡು ದೂರದಲಿ ವೊಳವಂ ಪುಗದೆ (ತುರಂಗ. ೩೫–೩೨). ೩. ವಶ ; ಅಧಿಕಾರಕ್ಕೆ ಒಳಪಟ್ಟದ್ದು : ಈ ಸ್ಥಳವು ನನಗೆ ಒಳವು (ಕ). **ಒಳಹು** : ೧. ಆದರ ಒಳಹು ನೀನೇ ನಿಃಕಳಂಕ ಮಲ್ಲಿಕಾರ್ಜುನಾ (ಮೋಳಿಮಾ. ೬–೨೩). **ಒಳುವು** : ೧. ಒಳುವೆಲ್ಲ ನನಗೆ ಒಳಿತಾಗಿ ತೋರಿ ಒಲವತ್ತ ಹರಿಯುತಿರಲಿ (ಹೃದಸ. ೬೩–೧೧).
[ದೇ. ‖ ತಮಿ. ಉಳವು ; ಮಲ. ಒಳಿ, ಒಳಿವು ; ತುಳು. ಒಳ, ಒಳವು, ಒಳಾವು, ಉಳವು ; ತೆಲು. ಒಳವು]

**ಒಳವುಗಿಸು, ಒಳಪುಗಿಸು, ಒಳಹೊಗಿಸು** (ಕ್ರಿ). ಒಳಗೆ ಹೊಗುವಂತೆ ಮಾಡು ; ಪ್ರವೇಶ ಕೊಡು : ನಿಳಯಾಂಗಣದೊಳ್ ಸುಳಿವ ವಿಟನಂ ನೋಟದೊಳೊಳವು [ಪಾಠಾಂ. ಪು] ಗಿಸಿ (ಗಿರಿಕ. ೨–೧೦೫) ; ಅತಿಮುದದಿಂದೊಳವುಗಿಸೆನೆ ಹುಗಿಸಿದಳಾ ಸ್ತ್ರೀ ಭರದಿಂದ (ಜಯಕಾ. ೨–೨೦) ; ಜಗದಂತರಿಯಾಮಿ ಮುಂಗೆಲಸಕ್ಕೆ ತುರಿಹದಿಂದವಳ ಪ್ರೇರಕನಾಗಿ ಪರಮತಾತ್ಪರಿಯದಿಂದೊಳವುಗಿಸಿದನು (ಮೋಹತ. ೨೯–೪೦). **ಒಳಪುಗಿಸು** : ಪಾರ್ವತಿ ಬಾಣಪಂಚಕನ ಕುಸ್ತರಿಸಿ ತನ್ನ ಮಱೆಗೊಂಡು ನಂದೀಶ ಕಾಣದಂತೊಳಪುಗಿಸಿದಳು (ಮೋಹತ. ೬–೩೦) ; ಅಳವಳಿದು ಪಳಯಿಸುವಳಂ ಕರೆದು ನೆರೆದ ಜನದೊಳವುಗಿಸಿ . . . ತೊಟ್ಟನೆ ತೋಱಲ್ (ರಾಜಶೇ. ೧೩–೧೦೪ ವ). **ಒಳಹೊಗಿಸು** : ಒಳಹೊಗಿಸಿ ಸಾತ್ಯಕಿಯ ಸಿಕ್ಕಿಸಿ ಗೆಲುವ ತವಕವ ಕಂಡು ಕೆಣಕಿದರಳವಿಯಲಿ ಸಹದೇವ ನಕುಳರು ಕೌರವಾನುಜನ (ಕುವ್ಯಾಕ. ४–೫) ; ತೆಱಹುಗೊಟ್ಟೊಳಹೊಗಿಸಿ ಸದೆದನು ಬಱಸಿಡಿಲು ಬಡಿದಂತೆ (ನಳಚ. ೯–೩೧) ; ಆಣೆಯದು ಚಕ್ರಿಯಾಪ್ತಿಗರೆಯ್ದಲೆಮ್ಮ ಪಟ್ಟಣದೊಳಹೊಗಿಸಬೇಡ (ಭರಚ. ४८–೧೧೨).
[ಒಳ (< ಒಳಗು) + ಪುಗಿಸು (< ಪೊಗಿಸು)]

**ಒಳವುಗ್ಗೆ** (ಕ್ರಿ). ಒಳಪಡಿಸಿಕೊಳ್ಳು ; ವಶಪಡಿಸಿಕೊಳ್ಳು : ಬಳಿಸಂದು ಬಾಳುವರತ್ತೆ ಮಾವಂದಿರನೊಳವುಗ್ಗೆಯೊಳ್ಪುವಡೆವರು (ಹದಿಬ. ೧–೫೩).
[ಒಳವು$_{2}$ + ಕೈ$_{1}$ (< ಕೆಯ್$_{1}$)]

**ಒಳವುಗೊಡು** (ಕ್ರಿ). ಹೃದಯವನ್ನು ಒಪ್ಪಿಸು : ಒಳವುಗೊಟ್ಟ ಕಾದಲನಂ ಮೂದಲಿಪ ಹೂಜೆಗಾರ್ತಿಯೊಂದಾಯತಿಯಂ ಮೆ ಱೆ ವ ನಿನಗೆ ನಳ್ಗೆಳದಿಗಲ್ಲದೆ ಪೆಱಳಾವಳ್ಗಂ ಕತೆಯಂ ಬಿ ತ್ತ ರ ಂ ಬಿತ್ತರಿಪಂ . . . ಮುದ್ದಣಂ (ರಾಮಾಶ್ವ. ೧೫೨–೪). [ಒಳವು$_{2}$ + ಕೊಡು]

**ಒಳವೊಗು**, ಒಳವುಗು, ಒಳವೊಗು, ಒ ಳ ಹು ಗು, ಒಳಹೊಗು, ಒಳ್ಪೊಗು (ಕ್ರಿ). ೧. ಒಳಗೆ ಹೊಗು ; ಪ್ರವೇಶಮಾಡು : ಒಳವೊಕ್ಕು ಮುಱಿವೆನಾತನ ಕ್ಕೊಡೆಯಂ (ಕಬ್ಬಿಕಾ. ೨೪೭) ; ಒಡಮುರಿದೊಳವೊಕ್ಕು ಬಿಱುಗಾಳಿ ಬೀ ಸ ಲು ಮೃಡನಾಸ್ಥಾನದಿಂ ಸುರರು ಹೊಡೆಮುಗ್ಗಿದರು (ಮೋಹತ. ೩೭–೫೮) ; ಒಳವೊಕ್ಕನೊಡನೆ ರತ್ನಾಂಜಲಿಯನು ಪಾದನಳಿನ ಯುಗಕೆ ಸೂಸಿ ಚಕ್ರಿ (ಭರಚ. ೪೪–೮೫). ೨. ಒಳಪಡು ; ಸೇರ್ಪಡೆಯಾಗು ; ಒಂದಾಗು : ನ ಣ್ಪಿ ನ ನೆವದಿಂದೆ ಪಾಂಡವರನಾನೊಳವೊಕ್ಕೊಡೆ ನೀಮೆ ಪೇಸಿರೇ (ಪಂಪಭಾ. ೯–೭೮). **ಒಳವುಗು** : ೧. ವರ ಕೈರವ ಮಿತ್ರ ಕಿರಣದಂತವಳ ವಚನಮೊಳವುಗದೆ ತನ್ನನಃ ಪದ್ಮಿನಿಯೊಳ್ (ಶಾಂತಿಪು. ೫–೧೪೫); ಒಳವುಗೆ ಸಲಿಲಂ ತೀವೆ ಗರ್ತಂಗಳಂ ಕುಂದುವುದು (ಮಲ್ಲಿಪು. ೧–೬೪) ; ಒಳವುಗುವುದಕೆ ಗುದ್ದಾಡಿದರು ಬಾಗಿಲು ಹಿಡಿಯದೆ ಪೊಕ್ಕು (ಮೋಹತ. ೩–೪೮) ; ಅರಮನೆಯನೊಳವುಗೆ ಸಮಯವಲ್ಲದೆಂದುಸಿರಲ್ (ಚಿಬಪು. ೬–೨೨). ೩. ಸೂಕ್ಷ್ಮವಾಗಿ ಪರೀಕ್ಷಿಸು ,— ಪರಿಶೀಲಿಸು : ನೆಗಟ್ದು ಕವಿರತ್ನನಂತೊಳವುಗುವುದು ಮೊಗ್ಗಾಯ್ತು (ಅಜಿಪು. ೧–೯೫). **ಒಳವೊಗು** : ೧. ನೀಳಾಂಜನೆ . . . ಒಳಪೊಕ್ಕಳ್ ಭೋಂಕನೆ ನಿಖಿಳ ಜನಾಂತರಂಗಮಂ ರಂಗಮುಮಂ (ಆದಿಪು. ೯–೧೯) ; ಎನ್ನೊಳ ಪೊಕ್ಕಪನೆಯ್ದೆ ಪೀರ್ದಪಂ ಪಿರಿದುವೆನಲ್ಕೆ ತದ್ವಿಜಕುಮಾರಕನೆನ್ನನೊಱಲ್ದು ನೋಡಿದಂ (ಕಾ ದಂ ಉ. ೫೪೯) ; ಗೂಢಪ್ರಾಣಿಯಂತೊಳಪೊಕ್ಕಡಂಗಿದ ಕಣ್ಣುಂ (ಪ ಂ ಚ ತ ಂ . ೭೩–೫) ; ನಾರಿಯರೊಳಪೊಕ್ಕರೊಡನೆ (ಭರಚ. ೪೭–೫೫). ೨. ಇದಱ ತಣ್ಣಂಪಿನೊಳಪೊಕ್ಕುದೆನೆ ಮಧುವ ಕಂಪಂ ಮುಕ್ಕಳಿಸಿದ ವಕುಳಮಾರುಮಂ ಸೊಕ್ಕಿಸದೇ (ಆದಿಪು. ೧೧–೧೨೪) ; ಪೊಳೆವ ರವಿಬಿಂಬದೊಳ್ಪಂ[ದೊಳಪೊಕ್ಕ]ಮೃತಾಂಶುಬಿಂಬಮೆನೆ (ಕಾದಂಪೂ. ೪೯೭) ; ಪಿರಿದಪ್ಪ ಭೇರಿದುಂದುಭಿಪರಿಶೇಷಂ ವಾದ್ಯಮಿವಱಿಶೊಳೊಳಪೊಕ್ಕಿರ್ಕುಂ (ವಸ್ತುಕೋ. ೭೯–೨೭). ೩. ಒಳಪೊಕ್ಕು ನೋಡೆ ಭಾರತದೊಳಗಣ ಕಥೆಯೆಲ್ಲಮಾ ಗದಾಯುದ್ಧದೊಳಂತೊಳಕೊಂಡತ್ತು (ಗದಾಯು. ೧–೪೫) ; ಅಲ್ಲಮಪ್ರಭುದೇವರು ತಮ್ಮ ಮೂಲಜ್ಞಾನದಿಂದ ಅನುಮಿಷ ದೇವರ ಸಮಾಧಿಯಂ ಕಂಡು ಒಳಪೊಕ್ಕು ನೋಳ್ಪಾಗಳು ಒಂದು ದೀಪ್ತಿ ಬೆಳಗು ತ್ತಿರೆ ಕಂಡು (ಶೂನ್ಯಸಂ. ೧೦–೨೦). ೪. ಭೇದೋಪಾಯ ಮಾಡು : ಈ ನೆವದಿಂ ನಮ್ಮಂ ತಾ ನಾ ರ ಯ್ಯ ಲ್ಕೆ ಬಗೆವನಲ್ಲದೊಡೊಳಪೊಕ್ಕಾ ನೃಪನ ಮಂತ್ರಿ ಮಂತ್ರ ವಿಧಾನದಿನುಯ್ಯಲ್ಕೆ ನಮ್ಮನೊಡರಿಪನಕ್ಕುಂ (ಶಾಂತಿಪು. ೨–೩೪) ; ಎಂತುಂ ನಂಬದರಂ ನಂಬುವಂತೆ ನುಡಿದೊಡಂಬಡಿಸಿಯೊಳಪೊಕ್ಕು ನೆಗಟ್ದುದು ವಿಶ್ವಾಸಮೆಂಬುದು (ಪಂಚತಂ. ೨೧–೩). **ಒಳಹುಗು**: ೧. ಸಿಕ್ಕಲು ಸೆಳೆವರು ಸೆಳೆದೊಳಹುಗುವರು ಕುಕ್ಕಲು ಕುಕ್ಕಿ ಕಡಿವರು (ಮೋಹತ. ೨೮–೩೯). **ಒ ಳ ಹೊ ಗು** : ೧. ನಿಜಗದೆಯಲೊಳಹೊಕ್ಕು ಹೊಯ್ದನು ಗಜದ ಮಸ್ತಕವ (ಕು ವ್ಯಾ ದ್ರೋ . ಪರಿ. ೨೮೧) ; ಭೂವರನ ದೃಷ್ಟಾಕಾರದಿಂದೊಳಹೊಕ್ಕನರಮನೆಯ (ನಳಚ. ೩–೨೭) ; ಖಚರೆಯರೊಳಹೊಕ್ಕರರಸನೋಲಗಕೆ (ಭರಚ. ೩೭–೬೫). ೨. ಚನ್ನಮಲ್ಲಿ ಕಾರ್ಜುನನೆಂಬ ಗಂಡನ ಒಳಹೊಕ್ಕು ಬೆರಸಿದೆನು (ಮಹಾದೇ. ೩೧–೨) ; ಒಳಹೊಕ್ಕು ನಮ್ಮೊಳೊಂದಾಗಿರುವುದುಂಟೊ ತಳುವದುಸಿರಿ ನೀವೆಂದ (ಕಂಸವಿ. ೧೩–೩). ೩. ತಾನು ದುರ್ಬಲನಾದರೆ ಶತ್ರುಗಳನ್ನು ಒಳಹೊಕ್ಕು ತಗ್ಗಿನಡೆಯಬೇಕು (ಕೃವಾಉ. ೧೨೫) ; ಒಳಹೊಕ್ಕು ಆಳವಾಗಿ ಅಭ್ಯಾಸಮಾಡಿದಷ್ಟೂ ಅರ್ಥ ಹೊಸ ಹೊಸದಾಗಿ ಹೊರಡುತ್ತದೆ (ಜಗದಾ. ೨೨೭). **ಒಳ್ಪೊಗು** : ೨. ಇದಿರೊಳ್ ನಿಂದೊಡೆ ವಜ್ರಿ ಸೈರಿಸನಿರಲ್ವೇಡೆಮ್ಮೊಳೊಳ್ಪೊಕ್ಕು ನಿಲ್ವುದು (ಪಂಪಭಾ. ೪–೨೪).
[ಒಳ (< ಒಳಗು) + ಪೊಗು]

**ಒಳವೊಯ್ಲು** (ನಾ). ಒಳಗಿನ ಹೊಡೆತ : ಕಟ್ಟುಱದಿಂ ಪರಿವ ನೀರ್ವೊನಲೊಳವೊಯ್ಲುಕೋಲಾಹಲಂಗಳಿಂದೆಡೆಯೆಡೆಯೊಳೊಗೆದು ಸು ೞಿ ನೆ ಸುತ್ತಿ ಗರ್ತದಂತಿಱಿವ ಮಹಾವರ್ತಂಗಳಿಂ (ಚಿಕವಂ. ೩–೧೭).
[ಒಳ (< ಒಳಗು) + ಪೊಯ್ಲು]

**ಒಳಶುಂಠಿ** (ನಾ). (ಆಲಂ) ತೊಡೆಯ ಚರ್ಮವನ್ನು ಹಿಸುಕಿ ತಿರುಚುವುದು : ಹುಡುಗರೆಲ್ಲ ಸೇರಿದರು. ಮುಂದೆ ತಮಗೆ ಬೀಳಬಹುದಾದ 'ಕಡುಬು'ಗಳನ್ನೂ ದೊರೆಯಬಹುದಾದ 'ಒಳಶುಂಠಿ'ಗಳನ್ನೂ ನೆನೆದು ಅವರಿಗೆ ದಿಕ್ಕೇ ತೋಚದಂತಾಗಿತ್ತು (ಕಳಹು. ೭೧) ; ಅವರು ಅವನನ್ನು ಚಿಕ್ಕಂದಿನಿಂದಲೂ ಒದ್ದು ಹೊಡೆದು . . . ಒಳಶುಂಠಿ ಹಿಡಿದು ಪಳಗಿಸಲು ಪ್ರಯತ್ನಪಟ್ಟಿದ್ದರು (ಮಲೆಮ. ೩೨೪).
[ಒಳ (< ಒಳಗು) + ಶುಂಠಿ]

**ಒಳಸಂಚು** (ನಾ). ಒಳಗೊಳಗೇ ಹೂಡಿರುವ ಹಂಚಿಕೆ; ಗುಪ್ತ ದ್ರೋಹ ; ಪಿತೂರಿ : ಯಶೋದೆಯ ಆಸ್ತಿಯ ಕುರಿತಾದ ಒಳಸಂಚು ಕೂಡ ಪರಿಣಾಮಕಾರಿಯಾಗದೆ ಹೋಗುವುದು (ವಾ ತ್ಸ ಲ್ಯ . ೩೬೫) ; "ಮಾರ್ಚ್ ಒಂದರ ಒಳಸಂಚಿನಲ್ಲಿ ಎಲ್ಲರೂ ಭಾಗವಹಿಸಲಿಲ್ಲ" (ಪುನರು. ೩೩೦). [ಒಳ (< ಒಳಗು) + ಸಂಚು$_{2}$]

**ಒಳಸರಿ** (ಕ್ರಿ). ೧. ಒಳಸೇರು ; ಒಳಕ್ಕೆ ಹೋಗು ; ಅಡಗು : ಇಕ್ಕೆಲನ ನೋಡಿದರೆ ಮುರಿದೊಳಸರಿದುವಾಲಿಗಳು (ಕುವ್ಯಾಸ. ೧೩–೩೫) ; ಒಳಸರಿಯೆ ಹಿಂಭಾಗ ಮುಂಗಾಲೊಳದಿಶೆಯದಿಂಬಾಗೆ (ಸಾಳ್ವಭಾ. ೨೧–೨೦) ; ಬಿಗಿವ ಬಿಡಿಸಿಕೊಳ್ವ ತಗೆವ ತವಕಿಸುವ ನೆಗೆವ ನಿಗುರಿಯೊಳಸರಿವ ಲಗಡನಂತೆಱಗಿ ಲಾಗಿಸುವ ಹೋರಾಟದ ವಿಗಡ ಮಲ್ಲರುಗಳೊಪ್ಪಿದರು (ಕಂಸವಿ. ೨೧–೯೩). ೨. ಕುಗ್ಗು ; ಕಡಮೆಯಾಗು : ಎನಗೆ ಭರಿತನೇಮ ಒಳಸರಿವುತ್ತಿದೆ (ಸರ್ವವ. ೧೩೩–೬೩೩) ; ಝಳದ ಲಳಿ ಲಟಕಟಿಸೆ ಮಾರ್ಗಸ್ಖಲಿತ ಖೇದ ಸ್ವೇದಬಿಂದುಗಳೊಳಸರಿಯೆ (ಕು ವ್ಯಾ ಅ . ೧೦–೪೪) ; ರಗಳೆಗಳು ಹರಿಹರನ ಕೃತಿಗಳಲ್ಲಿ ವಿಶಾಲವಾಗಿ ಅರಳಿ ಮತ್ತೆ ಒಳಸರಿದಿದ್ದವು (ಸಮಾಲೋ. ೧೭). ೩. ಹಿಂಜರಿ ; ಹಿಮ್ಮೆಟ್ಟು ; ಹಿಂದೆಗೆ : ಸೋಲ ಮಿಗಲೊಳಸರಿವ ಬಿರುದರ ಬೀಳಗೆಡಹಿಸಿ ಕಪಿಯ ಹಳವಿಗೆ ಗೋಲನೆತ್ತಿಸಿ ಕೆಲಬಲದ ಮನ್ನೆಯರ ಕೈವೀಸಿ (ಕುವ್ಯಾಭೀ. ೬–೧೩) ; ಧುರದೊಳೊಡೆಯನನೊಪ್ಪುಗೊಟ್ಟೊಳಸರಿವ ಭಂಡನು (ಜೀ ವ ಂ ಚ . ೫–೭೫) ; ಸುರಸೇನೆಯೊಳಸರಿವುದಂ ಕಂಡು ಖತಿಯಿಂದಂ ಷಡಾನನಂ ವಾಹನಮನೊಲಿದು ಬೋಳೈಸಿ ಬಲವನಧಿಗಭಯವನೀವುತೆ (ಚಿಬಪು. ೩೯–೩೭). [ಒಳ (< ಒಳಗು) + ಸರಿ$_{1}$]

**ಒಳಸಱಿ** (ನಾ). ಗದಾಯುದ್ಧದಲ್ಲಿ ಒಂದು ವರಿಸೆ : ಹೊಯ್ದರೊಡ್ಡಿದರಣೆದು ಮೊ ನೆ ಯ ಲಿ ಹೊಯ್ದರೊಳಸಱಿ[ಪಾ ಠ ಂ . ಸುಳಿ]ಯಿಂದ ಕಳೆದರು ಕಾಯ್ದು ಹೆಣಗಿದರು (ಕುವ್ಯಾಅ. ೭–೩೫). 'ಒಳಸುಳಿ' ಪಠಾ.
[ಒಳ (< ಒಳಗು) + ಸಱಿ ?]

**ಒಳಸಾಗುವಳಿದಾರ** (ನಾ). ಒಬ್ಬ ಸಾಗುವಳಿದಾರನ ಕೈಯಿಂದ ಭೂಮಿಯನ್ನು ಪಡೆದು ಸಾಗುವಳಿ ಮಾಡುವ ಚಿಕ್ಕಸಾಗುವಳಿದಾರ ; ಪೋಟಸಾಗುವಳಿದಾರ (ಉಕ) (ಮೈಗೆಜೆ. IV, ೭೪೯).
[ಒಳ (< ಒಳಗು) + ಸಾಗುವಳಿ + -ದಾರ್$_{4}$]

**ಒಳಸಾರ್** (ಕ್ರಿ). ೧. ಒಳಗೆ ಹೋಗು ; ಒಳಸೇರು : ನಾಣ್ಚಿ ಜಗುಟ್ಟಿ ರ್ವರುಮೊಳಸಾರ್ದು ಪೋಪುದುಂ (ಆದಿಪು. ೩–೮೯) ; ಉಪಾಯದಿನೊಳ ಸಾರ್ದು ಪೊಕ್ಕನೊಂದಂಗಡಿಯಂ (ಧರ್ಮಾಮೃ. ೪–೧೦೨) ; ಅಡ್ಡವಾಯ್ದು ಗಿಳಿ ಮಲ್ಲಱಿಗೊಂಡೊಳಸಾರೆ (ಕಬ್ಬಿಕಾ. ೩೧೧) ; ಒಳಸಾರ್ದು ತಾನವರ್ಗೆ ಕಿಂಕರತೆಯಂ ಪೊತ್ತು (ಇಹರ. ದೇ. ೩೦–೨೪). ೨. ಅಡಗು ; ಮರೆಯಾಗು : ಬಂಟರ್ ನಂಟರಂ ಕಂಡ ಬಡವನಂತೊಳಸಾರೆ (ಧರ್ಮಾಮೃ. ೨–೬೯) ; ಬೇತಾಳನಂತೊಳಸಾರ್ದ ಬಸಿಱುಂ (ಧರ್ಮಾಮೃ. ೪–೩೫).
[ಒಳ (< ಒಳಗು) + ಸಾರ್$_1$]

**ಒಳಸಾರ** (ನಾ). ಒಳಗಿನ ಸತ್ತ್ವ, —ತಿರುಳು : ಒಳಸಾರ, ಒಳರಸ, ಒಳಆತ್ಮ ಎಂದೆಂದಿಗೂ ಒಂದೇ (ಕಜಸಾ. ೬೪).
[ಒಳ (< ಒಳಗು) + ಸಾರ$_2$]

**ಒಳಸಾಲ** (ನಾ). ೧. (ಬಂಧು ಬಳಗದಲ್ಲಿಯೇ ಮಾಡುವ) ಒಳಗಿನ ಸಾಲ. ೨. ಮುಚ್ಚಿಟ್ಟಸಾಲ ; ಗುಪ್ತಸಾಲ ; "ತಿಳಿಯದ ಸಾಲ ; ಹೇಳದ ಸಾಲ" (ಜಾನಕೋ. ೩೦). [ಒಳ (< ಒಳಗು) + ಸಾಲ$_1$]

**ಒಳಸಾಲು** (ನಾ). ನಡುವಿನ ಸಾಲು ; ಮಧ್ಯಂತರದ ಸಾಲು : ಅದಂಥ ಮಲ್ಲಿಗೆ ಒಳಸಾಲಿನ ಬೀದೀಲಿ ಆಯ್ತಳಿ ಮಲ್ಲಯ್ಯ ಬರುತಾನೆ (ನಾಪದ. ೧೨). [ಒಳ (< ಒಳಗು) + ಸಾಲು$_2$ (< ಸಾಲ್$_2$)]

**ಒಳಸೀರೆ** (ನಾ). ಒಂದು ಮೂಲಿಕೆ, —ಔಷಧಿ ದ್ರವ್ಯ : ಒಳಸೀರೆ ೩, ಹೊರಸೀರೆ ೩, ಜೋಳ, ಮೂರು ಹಿಡಿ ಬನ್ನಿಸೊಪ್ಪು, ಇವನ್ನು ಕೂಡಿ ಹಾಕಿ ಇಡಿದು ತೆಗೆದುಕೊಂಡು . . . ಮೂರು ದಿನ ಮೆಲ್ಲಲು ಕಣ್ಣು ಕಾಂಬುದು (ವಿವೈವಿ. ೬೩). [ಒಳ ? + ಸೀರೆ ?]

**ಒಳಸುಂಕ** (ನಾ). ಒಳನಾಡಿನಲ್ಲಿ ಬೀಳುವ ಸುಂಕ (ಪತ್ರಿನಿ. ೩೬).
[ಒಳ (< ಒಳಗು) + ಸುಂಕ]

**ಒಳಸುದ್ದಿ** (ನಾ). ಹೊರಗಿನವರಿಗೆ ತಿಳಿಯಲು ಸಾಧ್ಯವಿಲ್ಲದ ಸುದ್ದಿ ; ಗುಟ್ಟು (Inside–information. ಇಂಕನಿ).
[ಒಳ (< ಒಳಗು) + ಸುದ್ದಿ]

**ಒಳಸುರಂಗ** (ನಾ). ಬೆಟ್ಟ ಮೊದಲಾದುವುಗಳಲ್ಲಿ ಕೊರೆದು ಮಾಡಿದ ಗುಪ್ತಮಾರ್ಗ: ನೀರು ತುಂಬುವ ದಿಡ್ಡಿಯೊಳಸುರಂಗ ದ್ವಾರ ತೋಱಿತು ಕಣ್ಗೆ ಕೌತುಕವ (ಕಂನವಿ. ೧೧–೧೩೭).
[ಒಳ (< ಒಳಗು) + ಸುರಂಗ$_2$]

**ಒಳಸುರ್ಕು** (ಕ್ರಿ). ೧. ಒಳಗೇ ಸುಕ್ಕಾಗು ; ಮುದುರಿಕೊಳ್ಳು. ೨. ಅಂಜಿಕೆಯಿಂದ ಹಿಂಜರಿ : ಬರ್ಪ ಸೊರ್ಕಿದಾನೆಯಂ ಕಂಡು ವೀರರೊಳಸಾರೆ ಗಬಿಪರೊಳಸುರ್ಕೆ (ಧರ್ಮಾಮೃ. ೧೩–೫೩).
[ಒಳ (< ಒಳಗು) + ಸುರ್ಕು$_1$]

**ಒಳಸುಳಿ** (ನಾ). ೧. ಒಳಗಿನ ಸುಳಿ : ಹೊಕ್ಕುಳ ಎಂಬುದು ಕೆಲವು ಅಕ್ಷರಗಳಿಗೆ ನಡುವೆ ಬರುವ ಒಳಸುಳಿ (ಸಂಶೋಧ. ೧೧). ೨. ಗದಾಯುದ್ಧದಲ್ಲಿ ಒಂದು ವರಿಸೆ : ಹೊಯ್ದುರೊಡ್ಡಿದ ರಣದ ಮೊನೆಯಲಿ ಹಾಯ್ದುರೊಳಸುಳಿ[ಪಾಠಾಂ. ಸಱಿ]ಯಿಂದ ಕಳೆದರು ಕಾಯ್ದು ಹೆಣಗಿದ ರುಪ್ಪರಕೆ ಜಾಱಿದರು ಪಡಿತಳಕೆ (ಕುವ್ಯಾಆ. ೭–೩೫). 'ಒಳಸಱಿ' ಪರಾ.
[ಒಳ (< ಒಳಗು) + ಸುಳಿ$_2$ (< ಸುೞಿ$_2$)]

**ಒಳಸೂತ್ರ** (ನಾ). ಒಳಗಿನ ಸಂಬಂಧ ; ಅಂತರಂಗ ಸಂಬಂಧ : ಜನುಮಕು ಮರಣಕು ಒಳಸೂತ್ರ ಇರುವುದ ಕಂಡಾಗ ಇತಿಮಿತಿ ಯಾಯ್ತೆನಗೆ (ಸಖೀಗೀ. ೧೫–೨೧೩). [ಒಳ (< ಒಳಗು) + ಸೂತ್ರ]

**ಒಳಸೂಱೆ** (ನಾ). ಒಳಗೇ ಆಗುವ ಸೂರೆ ; ಗುಪ್ತವಾಗಿ ನಡೆಯುವ ಲೂಟಿ. 'ಒಳಸೂಱಿಗ' ಪರಾ.
[ಒಳ (< ಒಳಗು) + ಸೂಱೆ]

**ಒಳಸೂಱಿಗ** (ನಾ). ಒಳಗಿಂದೊಳಗೇ ಲೂಟಿಮಾಡುವವನು : ಕವಿದುದೊಳಸೂಱಿಗರು ಕೋಟೆಯ ತವಕಿಗರು ಗುಜುಗುಜಿಸಿ ಬಿಗಿದವು ಭವನ ಭವನ ಕವಾಟತತಿಗಾಳಾಯ್ತು ಗಜನಗರ (ಕುವ್ಯಾಕ. ೧–೬).
[ಒಳಸೂಱೆ + –ಗ$_3$]

**ಒಳಸೆರಗು** (ನಾ). ಒಳಗೆ ಮಾಡಿಕೊಂಡು ಉಡುವ ಸೆರಗು ; ಉಡುಸೆರಗು (ಕ).
[ಒಳ (< ಒಳಗು) + ಸೆರಗು$_2$ (< ಸೆಱಂಗು)]

**ಒಳಸೆಳೆತ** (ನಾ). ಒಳಗಿನ ಆಕರ್ಷಣೆ, —ಪ್ರಭಾವ : ನಮ್ಮ ಜೀವನದಲ್ಲಿಯೇ ಉಂಟಾಗುತ್ತಿರುವ ರಾಷ್ಟ್ರೀಯ, ರಾಜಕೀಯ, ಸಾಮಾಜಿಕ ಜಾಗೃತಿಯ ಒಳಸೆಳೆತದಿಂದಲೂ ನಮ್ಮ ಸಾಹಿತ್ಯವು . . . ಹೊಳಪುಗೊಳ್ಳುತ್ತಲಿದೆ (ತಿಡುಗು. ೯). [ಒಳ (< ಒಳಗು) + ಸೆಳೆತ]

**ಒಳಸೇದು** (ಕ್ರಿ). ಒಳಗೆ ಎಳೆದುಕೊಳ್ಳು ; ಒಳಗೇ ತಡೆದು ನಿಲ್ಲಿಸು : ಎತ್ತಿ ಮಗನಂ ಬಿಗಿಯಪ್ಪಿ ಪೊದಟ್ದು ಕಣ್ಣನೀರ್ಗಳನೊಳ[ಸೇದಿ] [ಪಾಠಾಂ. ಸೋಗೆ]ತಾಂ ಪರಸಿ (ಕಾದಂಉ. ೫೦೬).
[ಒಳ (< ಒಳಗು) + ಸೇದು$_1$ (< ಸೇಂದು)]

**ಒಳಸೇರು** (ಕ್ರಿ). ಒಳಗೆ ಹೊಗು ; ಪ್ರವೇಶಿಸು : ಊದಲು ಬೂದಿ ಒಳಸೇರಿ ಬಾಯಾಱಿ ಹೋದುದನು ಕಂಡೆ (ಸರ್ವಜ್ಞ. ೧೯೬೬) ; ತರಕಾರಿಗಳನ್ನು ಕತ್ತರಿಸುವಾಗಲೂ ಹೊರಗಿನಿಂದ ಅಣುಗಳು ಒಳಸೇರದಂತೆ ಜಾಗರೂಕತೆ ವಹಿಸಬೇಕು (ಅಡುಸಾ. ೮೫) ; ನಿಂತಲ್ಲೆ ನಿಲ್ಲುವುದೆ ನೀರು ? ಕೈಚಾಚಿ ಹರಿಯುವದು, ನೆಲದ ಒಳಸೇರುವದು (ನೆಲಮು. ೧೫).
[ಒಳ (< ಒಳಗು) + ಸೇರು$_1$]

**ಒಳಸೊಗ** (ನಾ). ಒಳಗಿನ ಸುಖ ; ಅಂತರಂಗದ ಸಂತೋಷ : ನುಡಿಗೆ ಬಾರದ ಚೆಲುವಿನೊಳಸೊಗದ ಸಂಗಮವ ಬಿತ್ತರಿಸುತಿದೆ ವೇಣುಗಾನಲಹರೀ (ಮಲೆದೇ. ೩೪–೯).
[ಒಳ (< ಒಳಗು) + ಸೊಗ]

**ಒಳಸೋರ್** (ಕ್ರಿ). ೧. ಹಿಂದೆಗೆ ; ಹಿಮ್ಮೆಟ್ಟು : "ಒಳಸೋರ್ದುದೆಂದುಂ . . . ಪಾರಗೈಯ್ಯೆಂದುಂ– ಈ ೧೩ ಅಪಸರಣಕ್ಕೆ ಪೆಸರ್" (ಕಶಸಾ. ೩೧–೬೫೫) ; ಎಂತಿದಿರಾಂತೆಯಂತೆ ಕಲಿಯಾಗೊಳಸೋರದಿರ್ (ಪಂಪಭಾ. ೧೦–೯೮) ; ಒಳಸೋರದೆ ಚಿಂತಿಸದಾಂತಿಱಿಗುಮಿಾಗುಮಿಱಿವ ಬೆಡಂಗಂ (ಗದಾಯು. ೧–೧೫) ; ಮಹಾವಾದಿಗಳಾಸ್ಥಾನದೊಳ್ ಕುಂದಿ ಕುಸ್ಥಿದೊಳಸೋರ್ದು . . . ಮಿಡುಕದಿರ್ಪರ್ (ಧರ್ಮಾಮೃ. ೯–೪೪ ವ) ; ಶಂಭುವೆಂದು ಬಹುಬಾಣದಿನೆಚ್ಚೊಡೆ . . . ಸೆಳೆದೀಳ್ದು ಕೊರಂದೊಡಂ ತಿಳಿವೊಳಸೋರ್ದು [ಪಾಠಾಂ. ಸಾರ್ದು]ದಕ್ಕಟ ಪುರಾಕೃತ ಕರ್ಮದ ಪೆರ್ಮೆಯೆಂತುಟೊ (ಶಬಶಂ. ೪–೧೧೫). ೨. ಜರಿದು ಬೀಳು ; ಕೆಳಗೆ ಕುಸಿ : ತಿಳಿವುವೊಳಸೋರ್ದುದುರು ಕಳೆಗುಂದಿತಾನನಂ (ಕುಮಾಪು. ೩–೬೩) ; ಇಳೆಗೆ ಪಟಿಗಾಲದಂಬರಮಂಬರವೊಳಸೋರ್ಗುಂ ಬೀೞ್ಗು ಮೆಂದು ಧಾತ್ರಂ ಬಲ್ಪಿಂದಳವಡೆ ಚೆಟ್ಟಿದ ಬೆಳ್ಳಿಯ ಮೊಳೆಗಳೆನಲ್ ತೊಳಗಿ ಬೆಳಗಿದುವು ತಾರಗೆಗಳ್ (ಜಗವಿ. ೧೬–೯೯). ೩. ಮರೆಯಾಗು ; ಅಡಗು : ಅಸುರರನಾಸುರಂ ಮಸಗಿ ತಿಂಬ ಬಳಾರಿ . . . ಕುಱಿವಿಂಡ ನೆಯ್ದಿ ಮೆಯ್ವಸವೊಳಸೋರ್ವಿನಂ ಪಿಡಿದು ಗುಕ್ಕಿಸಲಾಱಳೆ (ಸಮಪ. ೯–೧೧೨) ; ಯಜ್ಞದತ್ತೆ ಮೆಲ್ಲನೊಳಸೋರ್ದುಸಿರದಿರ್ಪುದುಂ (ಧರ್ಮಾಮೃ. ೮–೮೦). [ಒಳ (< ಒಳಗು) + ಸೋರ್$_1$]

**ಒಳಹಂದರ** (ನಾ). ಒಳಗಿನ ಚಪ್ಪರ, —ಹೊದಿಕೆ : ಪ್ರತಿಯೊಂದು ರಾಜಕೀಯ ಕಲಹದ ಹಿನ್ನೆಲೆಯಾಗಿ ಒಳಹಂದರವಾಗಿ ಒಂದು ವರ್ಗ ಕಲಹವು – ಆರ್ಥಿಕ ತಿಕ್ಕಾಟವು – ಇದ್ದೇ ಇರುತ್ತದೆ (ಮಾವಾದ. ೯೮).
[ಒಳ (< ಒಳಗು) + ಹಂದರ (< ಪಂದರ್)]

**ಒಳಹದುಳ** (ನಾ). ಒಳಗಿನ ನೆಮ್ಮದಿ; ಕ್ಷೇಮ (?): ನಲ್ಲತಿಯ ರಸ ವೆರಸು ಬಳೆಸಿ ಪೇಳಿದನು ಒಳಹದುಳವನು ಹದಮಾಡಿ . . . ವೀರ ಮುದ್ದಣನು (ಗರಿ. ೧೭–೧೫). [ಒಳ (< ಒಳಗು) + ಹದುಳ (< ಪದುಳ)]

**ಒಳಹರಿ** (ನಾ). ಒಳಗಿನ (ನೀರಿನ) ಹರಿ, —ಕಾಲುವೆ: ಮಾಟ ಕೂಟವೆಂಬ ಹೊಲದಲ್ಲಿ ಪಾಪಪುಣ್ಯವೆಂಬ ಬೀಜದ ಬಿತ್ತಿ ಕೆಲ್ಲ ತಂಗಾಲಕ್ಕೆ ಬೆಳೆದು ಮಳೆಗಾಲಕ್ಕೆ ತಗ್ಗಿ ಹೊಲದ ಒಳಹರಿಯಲ್ಲಿ ಜಲ ನಿಂದು ಹೋಯಿತ್ತು ಮತ್ತೆ ಹೊಲದ ಹೊಲಬಿಲ್ಲ (ಮೋಳಿಮಾ. ೧೦೪–೪೧೩). [ಒಳ (< ಒಳಗು) + ಹರಿ$_3$ (< ಪರಿ$_3$)]

**ಒಳಹರಿವು** (ನಾ). "ಒಳಕ್ಕೆ ಹರಿಯುವುದು" (Influx. ಇಂಕನಿ). [ಒಳ (< ಒಳಗು) + ಹರಿವು (< ಪರಿವು)]

**ಒಳಹಾದಿ** (ನಾ). ಒಳದಾರಿ; ಹತ್ತಿರದ ದಾರಿ: ಸಂಗೀತಪ್ರಪಂಚದಲ್ಲಿ ಕೀರ್ತಿಗೆ ಒಳಹಾದಿಗಳಿಲ್ಲ (ಸಂಗೀತ. VI, ಪೀಠಿಕೆ). [ಒಳ (< ಒಳಗು) + ಹಾದಿ (< ಪಾದಿ$_1$)]

**ಒಳಹಾಯಿಕೆ** (ನಾ). "(ನೀರನ್ನು) ಒಳಹಾಯಿಸುವ ಸ್ಥಳ" (Intake. ಇಂಕನಿ). [ಒಳ (< ಒಳಗು) + ಹಾಯಿಕೆ]

**ಒಳಹು** 'ಒಳವು$_2$' ನೋ.

**ಒಳಹುಗು** 'ಒಳವೊಗು' ನೋ.

**ಒಳಹುಯ್** 'ಒಳಪೊಯ್' ನೋ.

**ಒಳಹುರಿ** (ನಾ). ಒಳಗಿನ ತಂತು, —ಎಳೆ: ಬಿಲ್ಲೇ ಕಳಚಿದೆ ಕೈಯಿಂದ, ಹೆದೆ ಹರಿದಿದೆ ಒಳಹುರಿಯಿಂದ ಕೈಗಳ ಹಿಡಿತವೆ ಸಡಿಲಾಗಿ, ಎನಿಸಿದೆ ಆಗದು ಒಂದಾಗಿ (ಅರಲು. ೧೯೭–೩). [ಒಳ (< ಒಳಗು) + ಹುರಿ$_3$ (< ಪುರಿ$_3$)]

**ಒಳಹುರುಳು** (ನಾ). ಒಳಗಿನ ತಿರುಳು, —ಮರ್ಮ: ತನ್ನ ತಾ ತಿಳಿಯದ ಆ ಜ್ಞಾನ ಅಜ್ಞಾನ ಒಳಹುರುಳ ತಿಳುವಳಿಕೆ ಎಂತಾದೀತು? (ಮುಕ್ತಕಂ. ೩–೧೪). [ಒಳ (< ಒಳಗು) + ಹುರುಳು (< ಪುರುಳ್)]

**ಒಳಹೊಗಿಸು** 'ಒಳವುಗಿಸು' ನೋ.

**ಒಳಹೊಗು** 'ಒಳವೊಗು' ನೋ.

**ಒಳಹೊಟ್ಟೆ** (ನಾ). ಹೊಟ್ಟೆಯ ಒಳಭಾಗ; ಜಠರ: "ಕೋಷ್ಠಃ, ಅಂತರ್ಜಠರಂ – ಒಳಹೊಟ್ಟೆ" (ಸಿದ್ಧಾಂತಿ. ೩೩೦). [ಒಳ$_1$ (< ಒಳಗು) + ಹೊಟ್ಟೆ$_1$ (< ಪೊಟ್ಟೆ$_1$)]

**ಒಳಹೊಡೆತ** (ನಾ). ೧. ಒಳಗಿಂದೊಳಗೇ ಪೆಟ್ಟುಕೊಡುವಂತಹದು; ಒಳಗುದ್ದು; ಮುಸುಕಿನ ಏಟು: ಹುಚ್ಚಾಟಗಳು ಹೆಸರಿಗೆ ಹುಚ್ಚಾಟಗಳಾಗಿದ್ದರೂ ಅವು ಒಳಹೊಡೆತದವಿರುವುದೇ ಹೆಚ್ಚು (ತಿದುಗು. ೪ ಪೀಠಿಕೆ). ೨. ಗುಪ್ತವಾಗಿ ಕೊಡುವ ಲಂಚ: ನೂರಿನ್ನೂರು ಒಳಹೊಡೆತವಿದ್ದದ್ದೇ (ದಾಸಹು. ೫೭). [ಒಳ (< ಒಳಗು) + ಹೊಡೆತ (< ಪೊಡೆತ)]

**ಒಳಹೊಯ್** 'ಒಳಪೊಯ್' ನೋ.

**ಒಳಹೊರಗು** 'ಒಳಹೊಱಗು' ನೋ.

**ಒಳಹೊರಗೆ** 'ಒಳಹೊಱಗೆ' ನೋ.

**ಒಳಹೊಱಗು**, ಒಳಹೊರಗು (ನಾ). ೧. ಒಳಗಡೆ ಮತ್ತು ಹೊರಗಡೆ. ೨. ಅಂತರಂಗ ಮತ್ತು ಬಹಿರಂಗ: ಒಳಗೆ ಶೋಧಿಸಿ ಹೊಱಗೆ ಶುದ್ಧವಿಸಿ ಒಳಹೊಱಗೆಂಬ ಉಭಯ ಶಂಕೆಯ ಕಳೆದು (ಮಹಾದೇ. ೮–೧); ಸದ್ಭಾವ ಪ್ರಕಾಶಿಸಲು ಒಳಹೊಱಗೆಂಬುದಿಲ್ಲ (ಅದವ. ೧೧೭). **ಒಳಹೊರಗು**: ಅಪ್ರತಿಭಳಪ್ಪಳೀನ್ ಅಸುರೇಂದ್ರನೊಳಹೊರಗು ಮೇಲ್ಕೆಳಗುಗಳನರಿತವಳ್? (ಶ್ರೀರಾ. ಮಾ. ೭೪೪–೨೭೮); ಹೊತ್ತು ಮುಱುಗಿತ್ತಾಗ ಕತ್ತಲೆ ಒಳಹೊರಗು ಗೊತ್ತಾಗದು ಏನು ಎಂತಾಯ್ತು (ಸಿದ್ಧಪು. ೪–೩೪). [ಒಳ (< ಒಳಗು) + ಹೊಱಗು (< ಪೊಱಗು)]

**ಒಳಹೊಱಗೆ**, ಒಳಹೊರಗೆ (ಅ). ೧. ಒಳಗೆ ಮತ್ತು ಹೊರಗೆ. ೨. ಅಂತರಂಗ ಬಹಿರಂಗಗಳಲ್ಲಿ: ಎನ್ನ ಜ್ಞಾನದಲ್ಲಿದ್ದ ಮಹಾಲಿಂಗವನು ಎನ್ನ ಸರ್ವಾಂಗದೊಳಹೊಱಗೆ ತೆಱಹಿಲ್ಲದಳವಡಿಸಿದ ನಮ್ಮ ಶ್ರೀಗುರುಲಿಂಗದೇವ (ಮಹಾದೇ. ೬–೧). **ಒಳಹೊರಗೆ**: ಕೂಸು ಇದ್ದ ಮನಿಗೆ ಬೀಸಣಿಗೆ ಯಾತಕ್ಕ ಕೂಸು ಕಂದಯ್ಯ ಒಳಹೊರಗೆ ಆಡಿದರ ಬೀಸಣಿಕೆ ಗಾಳಿ ಸುಳಿದಾವು (ಹಳ್ಳಿಯ. ೭೫).

**ಒಳಹೊರಗೆಮಾಡು** = ಶತಪಥ ಹಾಕು; ತಿರುಗು: ಅವನೂ "ರಾಯರು ಸತ್ತರೂ ದೇವರ ನಾಮೋಚ್ಚಾರ ಮಾಡಲಿಕ್ಕಿಲ್ಲ" ಎಂದು ಗುಡುಗು ಹಾಕುತ್ತ ಒಳಹೊರಗೆಮಾಡುತ್ತಿದ್ದ (ನಿರಾಘ. ೬೫). [ಒಳ$_0$ (< ಒಳಗೆ) + ಹೊಱಗೆ (< ಪೊಱಗೆ)]

**ಒಳಱಿಸು** (ಕ್ರಿ). ಅರಚುವಂತೆ ಮಾಡು: ಅದುಂ ಬಿಡದೊಳಱಿಸುವ ನೋವನಾಗಳೆ ಕಿಡಿಕುಂ (ಖಮುದ. ೨–೧೧೨). [ಒಳಱು + -ಇಸು$_3$]

**ಒಳಱು**, ಒಳರ್$_1$ (ಕ್ರಿ). ಕೂಗು; ಅರಚು; ಹುಯ್ಯಲಿಡು: "ಒಳಱು–ರಾವೇ (ಶಬ್ದಮಾಡು)" (ಶಮಧಾ); ಕೊಂದಪ್ಪನೆಂದೊಳಱಿ ಪುಯ್ಯಲಿಡೆ (ವಡ್ಡಾರಾ. ೧೨೪–೨೩); ಭಯಂ ಬೆರಸೊಳಱಿ (ಪಂಪಭಾ. ೫–೯೧); ದುಃಖಂಬಟ್ಟೋವೊಯ್ಕೆಂದೊಳಱುತ್ತಿರ್ಪರ್ (ಧರ್ಮಾಮೃ. ೬–೧೭೭); ಹಂತಿಯ ದಾಯದೂಟಕೆ ಖಣಿಗಳಾದವೆ ಶಿವಶಿವಾ ಎಂದೊಳಱುತಖಿಳ ಬಲ (ಕುಮಾ್ಯಕ. ೧೩–೧); **ಒಳರ್$_1$**: ಏನುಮಂ ನೆರೆಯೆ ಪೇಳಂ ವ್ಯಂಗ್ಯಮೆಂದಾ ಬಗೆಂಟೊಳರ್ವಂ (ಸಂಸಪ. ೧೯–೪). [ದೇ. ‖ ತಮಿ. ಮಲ. ಉಳಱು]

**ಒಳಱುಗುದಿಗೆ** (ನಾ). (ಕಾವಲುಗಾರರ) ಕುಟ್ಟಿ ಶಬ್ದಮಾಡಲು ಉಪಯೋಗಿಸುವ ದೊಣ್ಣೆ; ಕಾವಲುಗಾರನ ದೊಣ್ಣೆ: ಹೊಡೆವ ಹೆಬ್ಬರೆ ಜಾವಗಹಳೆ ತಂಬಟೆಗಳ ಕಡುರವ ವೊಳಱುಗುದಿಗೆಯ ಜಡಿವ ದನಿಗಳಿಂದ ತಳವಾಱರುಗಳ ಪಡೆ ತಿರುಗುವುದು ದುರ್ಗದಲಿ (ಕಂಸವಿ. ೧೧–೧೪೧). [ಒಳಱು + ಗುದಿಗೆ]

**ಒಳಾಗ್ರ** (ಗು). ೧. ಒಳನಾಡಿನಲ್ಲಿ ಬೆಳೆಯುವ; ಸ್ಥಳೀಯ: ಒಳಾಗ್ರದ ಅಡಕೆ; ಒಳಾಗ್ರದ ಬಾಳೆ (ರೂಢಿ). (ನಾ). ೨. ಮನೆಯ ಒಳಭಾಗ. [ಒಳ (< ಒಳಗು) + ಅಗ್ರ]

**ಒಳಾಯ** (ನಾ). ೧. ಒಳಗಿನ ಆವಾರ, —ಹಜಾರ: ರಾಜಾರಾಮನ ತಂಗಿಯನ್ನೂ ಸ್ವಾಗತಿಸಿ ಒಳಾಯದ ಒಂದು ಕೋಣೆಗೆ ಕರೆದೊಯ್ದರು (ನಡೆದಾ. II, ೯೪೨). ೨. (ಕಟ್ಟಡದ) ಒಳಗಿನ ಅಳತೆ; ಒಳ ಉಸುಲು (ಉಕ): ಈ ಮನೆಯ ಒಳಾಯವೆಷ್ಟು (ರೂಢಿ). [ಒಳ (< ಒಳಗು) + ಅಯ$_1$]

**ಒಳಿಗ** (ನಾ). ತಲೆಮರೆಸಿಕೊಂಡು ಸುಳಿದಾಡುವವನು (ಶಿ). [?]

**ಒಳಿತು$_1$** 'ಒಳ್ಳಿತು$_1$' ನೋ.

**ಒಳಿತು$_2$** 'ಒಳ್ಳಿತು$_2$' ನೋ.

**ಒಳಿಪುಣುಶೆ** (ನಾ). ಒಂದು ಸ್ಥಳದ ಹೆಸರು: ಒಳಿಪುಣುಶೆಯೆ ಅಳರಿಯ ಕಿಱುಕೆಱೆಯೆ ಅಂತೆ ಪೋಗಿ ಕಲ್ ಕುಪ್ಪೆಯೆ ಅನ್ತೆ ಪೋಗಿ (ಮೈಆರಿ. ೧೯೧೯, ೭೪–೬೯; 900). [ಒಳಿ? + ಪುಣುಶೆ (< ಪುಣಸೆ)]

**ಒಳಿರ್** 'ಉಳ್$_1$' ಪರಾ.

**ಒಳು** 'ಒಳ್$_3$' ನೋ.

**ಒಳುಗಂಪು** 'ಒಳ್ಗಂಪು' ನೋ.

**ಒಳುಗನ್ನಡ** 'ಒಳ್ಗನ್ನಡ' ನೋ.

**ಒಳುಗಾಡು** (ನಾ). ಕಾಡಿನ ಒಳಭಾಗ; ವನಾಂತರ: ಸಲೆ ಪಜ್ಜೆಯ ನಿಡೆ ನಾಂಟುವ ಮೊನೆಮುಳ್ಳಿನಿಂದೊಳುಗಾಡೆಸೆದುದೇನೆಂಬೆ (ಕಂಸವಿ. ೧೮–೪೭). [ಒಳು$_0$ (< ಒಳಗು) + ಕಾಡು$_3$]

**ಒಳುಗಾರ್ತಿ** (ನಾ). ಒಲುಮೆಯುವಳು; ಪ್ರೀತಿಯವಳು: ತುಂಬು ಜವ್ವನಕೆ ಕೈನೀಡಿ ನಂಬಿಸಿ ನೆಱೆ ರಂಗಯೆಂಬೊಳುಗಾರ್ತಿಯ ಕಾಂಬುದ ದೆಂದುವಂದಪುದೊ (ಶತಸಾಂ. ೩೨-೭೯). [< ಒಲಗಾರ್ತಿ ?]

**ಒಳುಗುಂದು** (ಕ್ರಿ). ಅಂದಗೆಡು; ಸೊಗಸು ಕಡಮೆಯಾಗು: ಮಂಗಳವೇ ಮಜ್ಜನವೆನಗೆ ವಿಭೂತಿಯೇ ಒಳು[ಪಾಠಾಂ. ಒಳ]ಗುಂದ ದರಿಸಿನವೆನಗೆ (ಮಹಾದೇ. ೭-೯). [ಒಳು (< ಒಳ್ಳಿತ್ತು$_1$) + ಕುಂದು$_1$]

**ಒಳುಗುಣ** 'ಒಳ್ಗುಣ' ನೋ.

**ಒಳುಗೂಟ** (ನಾ). ಒಳ್ಳೆಯ ಕೂಟ; ಹಿತವಾದ ಸಂಯೋಗ: ಕಳೆ ಪೆರ್ಚೆ ಕೂಡುವಿನಿಯಳ ಒಳುಗೂಟದಂತೊಲಿಸುತಿದೆ ನಿನ್ನಯ ಸವಿದಳೆದ ಮೆಲ್ನುಡಿಯ ವಿಳಾಸ (ಕುರಾಸಾಂ. ೧-೫೯).
[ಒಳು (< ಒಳ್ಳಿತ್ತು$_1$) + ಕೂಟ$_1$]

**ಒಳುಗೆಸಱು** 'ಒಳ್ಗೆಸಱ್' ನೋ.

**ಒಳುಗೊಂಬು** 'ಒಳ್ಗೊಂಬು' ನೋ.

**ಒಳುಗೊರಳು** (ನಾ). ಒಳ್ಳೆಯ ಕಂಠ; ಮಧುರವಾದ ಕಂಠ: ಸುಳಿ ನಾಭಿಯೊಳು ಪುಟ್ಟಿ ಮೆಲ್ಲೆದೆಯೊಳು ಬೆಳೆದೊಳುಗೊರಳೊಳು ಪ್ರಾಯ ವಡೆದು . . . ಬಾಯ್ದೆಱೆಗಿಳಿದು ಮೋಹಿಸಿದುದಾಳಾಪ (ಭರಚ. ೧೧-೧೩).
[ಒಳು (< ಒಳ್ಳಿತ್ತು$_1$) + ಕೊರಳು (< ಕೊರಲ್)]

**ಒಳುದಿವಸ** (ನಾ). ಒಳ್ಳೆಯ ದಿನ; ಶುಭದಿವಸ: ಬಳಿಕಲನಿಬರ ಮತದಿ ನಾತಂಗೊಳುದಿವಸದಲಿ ಯೌವರಾಜ್ಯದ ಲಲಿತಪಟ್ಟವ ಕಟ್ಟಿದನು (ತೊರರಾ. ೨-೧-೭). [ಒಳು (< ಒಳ್ಳಿತ್ತು$_1$) + ದಿವಸ]

**ಒಳುದೊಡೆ** 'ಒಳ್ದೊಡೆ$_2$' ನೋ.

**ಒಳುನುಡಿ** 'ಒಳ್ನುಡಿ' ನೋ.

**ಒಳುನುಡಿಕಾಱ** 'ಒಳ್ನುಡಿಕಾಱ' ನೋ.

**ಒಳುನೋಟ** 'ಒಳ್ನೋಟ' ನೋ.

**ಒಳುಪು** 'ಒಳ್ಪು' ನೋ.

**ಒಳುಬಾಳು** (ನಾ). ಒಳ್ಳೆಯ ಜೀವನ; ಉತ್ತಮವಾದ ಬದುಕು: ಬಯಲನೊಂದು ಗುಡಿಗೊಳಿಸುತಿಹಳು ಒಳುಬಾಳ ಹರಕೆ ಎಂದು (ಸೂರ್ಯಪಾ. ೭೪-೮). [ಒಳು (< ಒಳ್ಳಿತ್ತು$_1$) + ಬಾಳು$_2$ (< ಬಾೞ್$_2$)]

**ಒಳುಮಾಟ** (ನಾ). ಒಳ್ಳೆಯ ಕೆಲಸ; ಪುಣ್ಯದ ಕಾರ್ಯ: ವರಕೃಪಾ ಲೋಕನವೆ ಲಗ್ನಂ ಶರಣರೊಳುಮಾಟವೆ ಮುಹೂರ್ತಮವರ ಹರಕೆಯೇ ಸರ್ವ ಬಲವಂತಾಗಿ ಬಸವಂಗೆ (ಬಸವು. ೪-೯೬).
[ಒಳು (< ಒಳ್ಳಿತ್ತು$_1$) + ಮಾಟ$_1$]

**ಒಳುಮೊಗ** 'ಒಳ್ಮೊಗ' ನೋ.

**ಒಳುವಣ್ಣ** 'ಒಳ್ವಣ್ಣ' ನೋ.

**ಒಳುವರ್ಣ** (ನಾ). ಒಳ್ಳೆಯ ಬಣ್ಣ: ಅದೊ ಕರ್ಣದಲ್ಲಿ, ಒಳುವರ್ಣ ದಲ್ಲಿ ಸ್ವರವರ್ಣವಲ್ಲಿ ಅರಳಿ (ಹೃದಸ. ೪೯-೧೭).
[ಒಳು (< ಒಳ್ಳಿತ್ತು$_1$) + ವರ್ಣ]

**ಒಳುವಸರ** (ನಾ). ಒಳ್ಳೆಯ ಬಟ್ಟೆ; ಉತ್ತಮವಾದ ವಸ್ತ್ರ: ಪಳಿಯ ಪಟ್ಟೆಯ ದುಕುಲದ ಚೀನಾಂಬರದೊಳುವಸರಗಳು ಮೆಱೆದವು (ಕುರಾಸಾಂ. ೩-೮೦). [ಒಳು (< ಒಳ್ಳಿತ್ತು$_1$) + ಪಸರ]

**ಒಳುವಾತು** 'ಒಳ್ವಾತು' ನೋ.

**ಒಳುವು** 'ಒಳವು$_2$' ನೋ.

**ಒಳುವೆಂಗೂಸು**, ಒಳುವೆಣ್ಗೂಸು (ನಾ). ಒಳ್ಳೆಯ ಹೆಂಗಸು; ಶ್ರೇಷ್ಠಳಾದ ಸ್ತ್ರೀ: "ವರಸ್ತ್ರೀ, ಮತ್ತಕಾಮಿ[ಶಿ]ನೀ– ಈ ೨ ಒಳುವೆಂ ಗೂಸು?" (ಹಲಾಯು. ೮೦-೩೩೫). **ಒಳುವೆಣ್ಗೂಸು**: (ಕ).
[ಒಳು (< ಒಳ್ಳಿತ್ತು$_1$) + ಪೆಂಗೂಸು]

**ಒಳುವೆಣ್** 'ಒಳ್ವೆಣ್' ನೋ.

**ಒಳುವೆಣ್ಗೂಸು** 'ಒಳುವೆಂಗೂಸು' ನೋ.

**ಒಳುವೆಸರ್** 'ಒಳ್ಪೆಸರ್' ನೋ.

**ಒಳುಹು** 'ಒಳ್ಪು' ನೋ.

**ಒಳುಹೂ** (ನಾ). ಚೆಲುವಾದ ಹೂವು: ಸಲೆ ಸುದಾಮನ ಕೈಯ ಲೊಳುಹೂಗಳನು ಕೊಂಡಾತಂಗಭೀಷ್ಟವ ಸಲಿಸಿದನು ಮುಱಿದನು ಭಾರಿಧನುವನು (ನಿಭಾಗ. ೩-೨-೨೬).
[ಒಳು (< ಒಳ್ಳಿತ್ತು$_1$) + ಹೂ$_3$ (< ಪೂ$_2$)]

**ಒಳುಸೂಳುಮಾತು** (ನಾ). ಒಳ್ಳೆಯ ಸಲ್ಲಾಪ: ಕಣ್ಬಾಲಿಗಳೊಳಿಹ ಬಾಲಕರನೊಳುಸೂಳುಮಾತಂ ಹೇಳಿಸಲು . . . ಬಲ್ಲ ನೆಱೆ ಜಾಣೆ (ಬಸವು. ೪೨-೪, ೫). [ಒಳು (< ಒಳ್ಳಿತ್ತು$_1$) + ಸೂಳುಮಾತು (< ಸೂಳ್ನುಡಿ)]

**ಒಳೂರು** (ನಾ). ಒಳನಾಡಿನಲ್ಲಿರುವ ಊರು; ಪೇಟೆ ಪಟ್ಟಣಗಳಿಂದ ದೂರವಾದ ಊರು: ಅದೆಲ್ಲಾ ನಮಗೆ ಗೊತ್ತಿಲ್ಲ. ಒಳೂರುಗಳಲ್ಲಿ ನೆರೆಹೊರೆಯವರಿಗೆ ಆಗಾಗ್ಗೆ ಹೀಗಾಗುವುದುಂಟು (ದೇವೀಚಾ. ೨೮).
[ಒಳ (< ಒಳಗು) + ಊರು$_3$ (< ಊರ್)]

**ಒಳಿ$_1$** (ಕ್ರಿ). ನರ ತೊಡಕು; ಎಲುವಿನ ಕೀಲು ತಪ್ಪು: ಸಮುದ್ರವ ಹೊಕ್ಕು ಕಾಲು ಒಳಿದಲ್ಲಿ ಕೊಱತೆಯನಱುಸುವದೆ ಆ ಸಮುದ್ರವು (ಬಸಹ. ೮೨-೨೪೫); ಬಡಿಯುವ ಹುರುಪಿನಲ್ಲಿ ಅವನ ಮೊಳಕೈಯು ಒಳೆಯಿತು (ರಕ್ತಧ್ವ. ೭೩). [< ಉಳಿ$_3$]

**ಒಳಿ$_2$** (ನಾ). ಮನೆಯ ಎರಡು ಸೂರುಗಳೂ ಕೂಡಿಕೊಳ್ಳುವ ಮೇಲ್ಬದಿ: ನೀನು ಒಳಿ ಮೇಲಣ ಕುಂಬಳ ಕಾಯಂತೆ ಎರಡು ಕಡೆಗೂ ಸರಿ (ರೂಢಿ). 'ಒಳಿಹೆಂಚು' ಪರಾ. [?]

**ಒಳಿ$_3$** (ನಾ). ಕುದುರೆ ಹಿಂಗಾಲುಗಳ ಮೇಲೆ ನಿಲ್ಲಲಾಗದಂತೆ ಕಡಿ ವಾಣಕ್ಕೆ ಸೇರಿಸಿ ಕಟ್ಟಿದ ಪಟ್ಟಿ; ತಂಗುಪಟ್ಟಿ (ಸ್ಯಾಂಡರ್): "ಒಳಿಯೆಂದು ಕುದುರೆಯು ವಳಿಯುಮಂ" (ಕಬ್ಬಿಕೈ. ೮೦). [?]

**ಒಳಿಹೆಂಚು** (ನಾ). ಎರಡೂ ಸೂರುಗಳನ್ನು ಕೂಡಿಸುವ ಹೆಂಚು; ಡಬ್ಬಂಚು. [ಒಳಿ$_2$ + ಹೆಂಚು$_2$ (< ಹಂಚು$_3$)]

**ಒಳಿನ್** 'ಉಳ್$_1$' ಪರಾ.

**ಒಳಿವು** 'ಉಳ್$_1$' ಪರಾ.

**ಒಳ್ಕ** 'ಒಳ್ಕೆ' ನೋ.

**ಒಳ್ಕು** 'ಒಟ್ಕು$_2$' ನೋ.

**ಒಳ್ಕೆ** 'ಓಳ್ಕೆ' ನೋ.

**ಒಳ್ಗಂಡ** (ನಾ). ಒಳ್ಳೆಯ ಶೂರ; ಕಡುಗಲಿ: ತಾಗಿದ ನೆಗೞ್ದೊಳ್ಗಂ ಡರಗಂಡೋಡುವಿನಂ ಕೊಂಡುವು ಗಾಂಡೀವ ಮುಕ್ತಬಾಣಗಣಂಗಳ್ (ಪಂಪಭಾ. ೫-೮೮ ವ); ಈ ಸಮರಕ್ಕೊಳ್ಗಣ್ಡಂಬರಂ ಗಣ್ಡರೇ (ಸೌಇಇ. XI-i, ೫೨-೧೩; 1007); ಸಾಹಸದೊಳ್ಗಂಡನಲ್ತೆ ಬಿಜ್ಜನ ಬಂಟಂ (ಎಕ. VIII, ಸಾಗರ. ೧೦೯-೨೨; 1042); ಒಳ್ಗಂಡರ ಬಿರ್ದಿನ ಬಲ್ಪಿಂ ಗಂಡು ದೊಟ್ಟೊಳ್ಪೆಸಕದ ಸೊಬಗಾ ನಾಡ ಪೆಂಡಿರ್ಗೆ ಸಾಜಂ (ಪುಷ್ಪಪು. ೨-೨೬).
[ಒಳ್$_3$ (< ಒಳ್ಳಿತ್ತು$_1$) + ಗಂಡ$_1$]

**ಒಳ್ಗಂಪು**, ಒಳುಗಂಪು (ನಾ). ಸೊಗಸಾದ ಪರಿಮಳ; ಶ್ರೇಷ್ಠವಾದ ಸುಗಂಧ: ಅಲರ್ದ ಚೆನ್ನೆಯ್ದಿಲ್ಗಳೊಳ್ಗಂಪಿನಿಂಪನಲಂಪಿಂ ತೆಗೆದೊಟ್ಟೆ ಕೊಂಡು (ಕಾದಂಉ. ೪೨೮); ಕನಕಕ್ಕೊಳ್ಗಂಪು ಸಾರ್ದಂದದ ತನುಲತೆ (ಕಾವ್ಯಸಾ. ೫೮೦). **ಒಳುಗಂಪು**: ಜಾತಿ ಪಟೀರದೊಳು ತಂಪು ತ್ರಿದಶ ಧರಣೀರುಹದೊಳೊಳುಗಂಪುಮಿರ್ಪವೊಲು (ಬಸವು. ೧-೭); ಒಳುಗಂಪ ನೊಲ್ಲದೆ ತಳುವದೆ ದುರ್ಗಂಧಕೆಳಸುವ ನೊಣದಂತೆ (ಕುರಾಸಾಂ. ೧-೫೩).
[ಒಳ್$_3$ (< ಒಳ್ಳಿತ್ತು$_1$) + ಕಂಪು]

**ಒಳ್ಗಂಬ** (ನಾ). ಉತ್ತಮವಾದ ಕಂಬ: ಪಳಿಕುಗಳ ಸಾಲಿಸಿವ ಭಿತ್ತಿಗಳ್ ವಜ್ರದೊಳ್ಗಂಬಗಳ್ (ಚಿಬಪು. ೫-೪೮).
[ಒಳ್$_2$ (< ಒಳ್ಳಿತ್ತು$_1$) + ಕಂಬ$_1$ (< ಕಂಭ)]

**ಒಳ್ಗಜ್ಜ** (ನಾ). ಒಳ್ಳೆಯ ಕೆಲಸ; ಮೇಲಾದ ಕೆಲಸ: ಊರಿಗದ ಪೆಣ್ಗಳಿಗೆ ಬಿಡುಗೆಲಸಂಗಳ ಬೆಸಸಿಯಾಪಂತೆ ತಾನೊಡರಿಪುದೊಳ್ಗಜ್ಜವನು (ಹದಿಬ. ೮-೭). [ಒಳ್$_2$ (< ಒಳ್ಳಿತ್ತು$_1$) + ಕಜ್ಜ]

**ಒಳ್ಗಟ್ಟೆ** (ನಾ). ಒಳ್ಳೆಯ ಕಟ್ಟು, —ತಿರುಳು: ಪೂರ್ವೋತ್ತರವೆರಡಜ ಪಕ್ಷಂಗಳೊಳ್ ಯುಕ್ತಿಜಾಲಂಗಳ ಸಾರಾಸಾರಮಂ ಸೋದಿಸಿ ಕಳೆದ ದೞಿಕೊಳ್ಪೊಟ್ಟನೊಳ್ಗಟ್ಟೆಯಂ ಕೂರ್ತೊರ್ಳಕೊಂಡಿರ್ಪೊಳ್ಪಿನಿಂ ತತ್ತ್ವದ ನೆಲೆಯಱಿತು (ಚಕವಿ. ೪-೧೦೦).
[ಒಳ್$_2$ (< ಒಳ್ಳಿತ್ತು$_1$) + ಗಟ್ಟಿ]

**ಒಳ್ಗತಿ** (ನಾ). ಉತ್ತಮವಾದ ಗತಿ; ಸದ್ಗತಿ: ಅಘವಶದಿಂ ನರಕಗತಿ ಗಿೞಿವ ಜೀವೋತ್ಕರಮುಮನೊಳ್ಗತಿಗೆ ತಪೋರ್ಡಾತನೆ ಕೆಳೆಯಂ (ಧರ್ಮಾಮೃ. ೭-೧೨೫). [ಒಳ್$_2$ (< ಒಳ್ಳಿತ್ತು$_1$) + ಗತಿ]

**ಒಳ್ಗದಿರ್** (ನಾ). ಒಳ್ಳೆಯ ಕಿರಣ; ಸೊಗಸಾದ ಕಿರಣ: ಎಳವೆಱೆ ಯೊಳ್ಗದಿರ್ಗಳ್ಗಂದೆಳಸಿದವೀಶ್ವರನ ಸನ್ನಿಧಾನದೊಳ್ (ಕಾದಂಪೂ. ೬೭೭); ಎಸೆವೊಳ್ಗದಿರ್ಗಳಂ ಮಣಿಮಯದೊಪ್ಪುವೊಂದು ತೊಡವಂ ಪಡಿಗೊಳ್ವುದು ಕಬ್ಬಮೊರ್ಬನಾ (ಚಕವಿ. ೧-೧೦).
[ಒಳ್$_2$ (< ಒಳ್ಳಿತ್ತು$_1$) + ಕದಿರ್]

**ಒಳ್ಗನಸು** (ನಾ). ಒಳ್ಳೆಯ ಕನಸು; ಶುಭಸ್ವಪ್ನ: ಚಂಡ ಗಜಗಮನೆ . . . ಕಂಡಳೀರೆಂಟುಮೊಳ್ಗನಸಿನೆಸೆವೋಳಿಯಂ (ಆದಿಪು. ೭-೨೭ ರಗಳೆ); ಈ ಪದಿನಾಱುಮೊಳ್ಗನಸನಂಬಿಕೆ ಕಂಡು (ಶಾಂತಿಪು. ೯-೨೦೯).
[ಒಳ್$_2$ (< ಒಳ್ಳಿತ್ತು$_1$) + ಕನಸು]

**ಒಳ್ಗನ್ನಡ**, ಒಳುಗನ್ನಡ (ನಾ). ಒಳ್ಳೆಯ ಕನ್ನಡ; ಸತ್ತ್ವಯುತವಾದ ಕನ್ನಡ: ಮುನ್ನಾದ್ಯರಿನೊರೆದೊಳ್ಗನ್ನಡ ಸುಶಬ್ದಮಣಿನಿಚಯಮುಮಂ (ಕವಿಕಂ. ೧೨); ಒಳ್ಗನ್ನಡದ ಕೆಲೆಯೊ ಕುಸುರಿಗೆಲಸದ ಸಿಲೆಯೊ (ಹೊಂಗಳು. ೧೬-೧೦). **ಒಳುಗನ್ನಡ**: ಒಳುಗನ್ನಡ ಬೆಳುಗನ್ನಡ ಹಳೆಗನ್ನಡ ದೇಶಿಯಂಗಳಾ ಕನ್ನಡಮಂ ತಿಳಿ (ಕವಿಜಿ. ೪-೨).
[ಒಳ್$_2$ (< ಒಳ್ಳಿತ್ತು$_1$) + ಕನ್ನಡ]

**ಒಳ್ಗಬ್ಬ** (ನಾ). ಸೊಗಸಾದ ಕಾವ್ಯ; ಉತ್ತಮವಾದ ಕಾವ್ಯ: ಒಳ್ಗಬ್ಬಮುಮೊಳ್ನುಡಿಯುಂ ಗೇಯಮುಮುರ್ಚದ ಕಡುಗಲ್ಲೆರ್ದೆಯೆರ್ದೆಯ ನಂಬು ಮೇಣುರ್ಚುಗುಮೇ (ಕಾವ್ಯಾವ. ೨೦೯).
[ಒಳ್$_2$ (< ಒಳ್ಳಿತ್ತು$_1$) + ಕಬ್ಬ]

**ಒಳ್ಗರುಳ್** (ನಾ). ಒಳಗಿನ ಕರುಳು: ತೋಡುವೆನೊರ್ವನೊಳ್ಗರುಳ ನುರ್ವಿಗೆ (ಪಂಪಭಾ. ೯-೨೪). 'ಅಳ್ಗರುಳ್' ಪರಾ.
[ಒಳ್$_1$ (< ಒಳಗು) + ಕರುಳ್]

**ಒಳ್ಗಲಿ** (ನಾ). ಒಳ್ಳೆಯ ಶೂರ; ಮೇಲಾದ ಶೂರ; ಕಡುಗಲಿ: ಕಲಿಯನೆ ಪಂದೆ ಮಾಪ್ಪ ಕಡುವಂದೆಯನೊಳ್ಗಲಿ ಮಾಪ್ಪ . . . ನೃಪಚಿತ್ತವೃತ್ತಿ ಸಂಚಲಂ (ಪಂಪಭಾ. ೧೨-೯೨); ಎನ್ನದೋರ್ವಲಮನತಿಕ್ರಮಿಸಲ್ಕಮಾಟಿಸಿ ಬಂದೊಳ್ಗಲಿ ದಲಿವಂ ಜವನಲ್ಲಿಯುಂಡಿಗೆದಂದನೋ (ಕಾವ್ಯಾವ. ೮೨). [ಒಳ್$_2$ (< ಒಳ್ಳಿತ್ತು$_1$) + ಕಲಿ$_2$]

**ಒಳ್ಗವಿ** (ನಾ). ಒಳ್ಳೆಯ ಕವಿ: "ಒಳ್ಗವಿ, ಬೆಳ್ಗವಿ, ಅೞಿಗವಿ" (ಭಾಷಾಭೂ. ೧೩೨ ಉದಾ). [ಒಳ್$_2$ (< ಒಳ್ಳಿತ್ತು$_1$) + ಕವಿ$_6$]

**ಒಳ್ಗಳಮೆ** (ನಾ). ಉತ್ತಮವಾದ ನೆಲ್ಲು; ಸೊಗಸಾದ ಭತ್ತ: ಕೆಯ್ವೊಲಂಗಳ ಸಸ್ಯಾವಳಿಯೆಲ್ಲಮೊಳ್ಗಳಮೆಯುಂ ಪುಂಡ್ರೇಕ್ಷುವುಂ (ಜಗವಿ. ೯-೮೭). [ಒಳ್$_2$ (< ಒಳ್ಳಿತ್ತು$_1$) + ಕಳಮೆ]

**ಒಳ್ಗಾಲ** (ನಾ). ಒಳ್ಳೆಯ ಕಾಲ; ಸುಖ ಸಮೃದ್ಧಿಯ ಕಾಲ: ಎಂದು ಮಿಳಾತಳಂ ಬೆಳೆಯುತಿರ್ಕೊಳ್ಗಾಲಮಕ್ಕೆ (ಛಂದೋಂಬು. ೬-೧೩).
[ಒಳ್$_2$ (< ಒಳ್ಳಿತ್ತು$_1$) + ಕಾಲ$_1$]

**ಒಳ್ಗಾಸೆ** (ನಾ). ಒಳ್ಳೆಯ ಕಾಚ, —ಚಡ್ಡಿ: ಮಹಾಶೇಷನ ಒಳ್ಗಾಸೆಯುಟ್ಟು ಸುರನರಭುಜಂಗರುಗಳಸುಗಳ್ಗೊಂಬ ಕಾಲ್ದೊಡರ್ಗಟ್ಟಿ ನಡೆತಂದು (ಚಿಬಪು. ೩೧-೯). [ಒಳ್$_2$ (< ಒಳ್ಳಿತ್ತು$_1$) + ಕಾಸೆ$_1$]

**ಒಳ್ಗಾಹು** (ನಾ). ಒಳ್ಳೆಯ ಕಾವಲು; ಭದ್ರವಾದ ರಕ್ಷೆ: ಅರ್ ಪೋಲ್ತಪರ್ ಬ್ರತರಕ್ಷ ಪ್ರಕರಕ್ಕೆ ಶೀಳಭಟರೊಳ್ಗಾಹುಳ್ಳನಂ ಹುಳ್ಳನಂ (ಎಕ. II, ೩೪೫-೩೬; ಸು. 1159).
[ಒಳ್$_2$ (< ಒಳ್ಳಿತ್ತು$_1$) + ಕಾಹು$_1$ (< ಕಾಪು)]

**ಒಳ್ಗಿಡಿ** (ನಾ). ಒಳ್ಳೆಯ ಕಿಡಿ; ಪ್ರಖರವಾದ ಕಿಡಿ: ದಶರಥನೆಚ್ಚಂ ಸಿಡಿಲೊ [ಪಾಠಾಂ. ಲ]ಳ್ಗಿಡಿಗಳವೊಲಂಬನಂಬಟ್ಟುವಿನಂ (ಪಂರಾಮಾ. ೩-೫೯); ಸಿಡಿಲಿದಱುಣ್ಮುವೊಳ್ಗಿಡಿಯೊಳಂ ಪಡಿಯಲ್ಲೆನಲೆಯ್ದೆ ಸಾಯಕಂ ನಡೆ (ಜಗವಿ. ೧೫-೮). 'ಅಳ್ಗಿಡಿ' ಪರಾ.
[ಒಳ್$_2$ (< ಒಳ್ಳಿತ್ತು$_1$) + ಕಿಡಿ$_1$]

**ಒಳ್ಗು** 'ಒಟ್ಗು$_2$' ನೋ.

**ಒಳ್ಗುಂಡಿಗೆ** (ನಾ). ೧. ಉತ್ತಮವಾದ ಕಮಂಡಲು: ಉತ್ಪಲಾಪ್ತಾಶ್ಮದಿಂ ನೆಗಳ್ದೊಳ್ಗುಂಡಿಗೆಯಾಂತ ದಕ್ಷಿಣಕರಂ ತೋಱಿತ್ತು ಯೋಗೀಂದ್ರನಾ (ರಾಜಶೇ. ೧-೧೩೩). ೨. ಮಿಗಿಲಾದ ಎದೆಗಾರಿಕೆ; ಧೈರ್ಯ (ಕಿ). [ಒಳ್$_2$ (< ಒಳ್ಳಿತ್ತು$_1$) + ಗುಂಡಿಗೆ$_2$]

**ಒಳ್ಗುಡಿ** (ನಾ). ೧. ಸೊಗಸಾದ ಧ್ವಜ; ಚೆಲುವಾದ ಬಾವುಟ: ಜೈನರೊಳ್ಗುಡಿಯ ದಾಂಗುಡಿಗಳ್ ನಲಿದಾಡುವಂತೆ ಸುತ್ತಿಱಿದುವು ಭೋಂಕೆನಾತನ ಪುರಾತನ ಪುಣ್ಯಫಲಪ್ರಭಾವದಿಂ (ಆದಿಪು. ೨-೬೩); ಒಳಿದೋರಣಮಾಯ್ತು ಹಾರದ ಪಚ್ಚೆಸಾರದ ಮಾಲೆ ಸೌಧಾಳಿಯೊಳ್ಗುಡಿಯಾಯ್ತು (ಪಂಪಭಾ. ೧೪-೧೪); ಸೊಗಯಿಸೆ ಬಹುವರ್ಣವಿವಿಧಪಟದೊಳ್ಗುಡಿಗಳ್ (ಪುಷ್ಪಪು. ೧೨-೧೬). ೨. ಉಜ್ಜ್ವಲವಾದ (ದೀಪದ) ಕುಡಿ: ನಿಧಿಯಂ ತೋಱುವ ದೀಪದೊಳ್ಗುಡಿ (ವಸ್ತುವಂ. ೮೮).
[ಒಳ್$_2$ (< ಒಳ್ಳಿತ್ತು$_1$) + ಗುಡಿ$_2$]

**ಒಳ್ಗುಡುತೆ** (ನಾ). ಒಳ್ಳೆಯ ಅಂಗಿ: ದೂಳದರ್ಜು ನಿರಿಗೆಟ್ಟು ಮಾಸಿದ ತನ್ನ ಒಳ್ಗುಡುತೆಯನ್ನೂ ಪುನಃ ಪುನಃ ನೋಡಿಕೊಂಡು (ಬೆಟ್ಟಅ. ೧೧೦-೨). [ಒಳ್$_2$ (< ಒಳ್ಳಿತ್ತು$_1$) + ಕುಡುತೆ]

**ಒಳ್ಗುಣ**, ಒಳುಗುಣ (ನಾ). ಒಳ್ಳೆಯ ಗುಣ; ಉತ್ತಮ ಸ್ವಭಾವ: ಉಗ್ರತೇಜಮುಮಿಾಯೊಳ್ಗುಣಮುಂ ಕಲಿತನಮುಮಿದೇಂ . . . ಸೂತಸುತನೊಳೊಡವುಟ್ಟುಗುಮೇ (ಪಂಪಭಾ. ೧೨-೯೮); ಒಳ್ಪಿನೊಳ್ಗುಣದೊಳಣ್ಮಿನೊಳಾಪ್ಪಿನೊಳಾದುದೆಂದು ಪೆಂಪಾರ್ಗ್ಗಮಸಾಧ್ಯಂ (ಎಕ. VII, ಶಿವಮೊ. ೧೦-೪೦; 1085). **ಒಳುಗುಣ**: ಅಲ್ಲದನೊಳುಗುಣಗಳನು ಪಾಡುತ್ತ (ನಿಭಾಗ. ೧೦-೨೮-೪). [ಒಳ್$_2$ (< ಒಳ್ಳಿತ್ತು$_1$) + ಗುಣ$_2$]

**ಒಳ್ಗುಣಿ** (ನಾ). ಒಳ್ಳೆಯ ಗುಣವುಳ್ಳವನು: ಒದವಿದ ವೀರಭಟಭಾರ್ಗವನೊಳ್ಗುಣಿ ಹುಳ್ಳಮಾಂಕಂ (ಎಕ. XII, ತಿಪಟೂ. ೧೨೮-೪೩; 1202).
[ಒಳ್$_2$ (< ಒಳ್ಳಿತ್ತು$_1$) + ಗುಣಿ$_3$]

**ಒಳ್ಗುದಿ** (ನಾ). ಒಳಗಿನ ಕುದಿತ; ಮೂಕಸಂಕಟ. 'ಒಳ್ಗುದಿಗೊಳು' ಪರಾ. [ಒಳ್$_1$ (< ಒಳಗು) + ಕುದಿ$_3$]

**ಒಳ್ಗುದಿಗೊಳು** (ಕ್ರಿ). ಒಳಗೊಳಗೇ ಸಂಕಟಪಡು, —ಚಡಪಡಿಸು: ವಿವಿಧ ಲಕ್ಷಣ ಲಕ್ಷ್ಯ ಕಾವ್ಯನಾಟಕಗಳ ವಿವರವನಱಿಯದೆ ಬಱಿದೆ ಕವಿತೆಯ ಪೇಳ್ವೆನೆಂದೊಳ್ಗುದಿಗೊಳುತಿಹ ಕವಿ ತಾ ಕಪಿಯಲ್ತೆ ಧರೆಗೆ (ನಾಗಕು. ೧-೬೨). [ಒಳ್ಗುದಿ + ಕೊಳು (< ಕೊಳ್$_1$)]

**ಒಳ್ಗುದುರೆ** (ನಾ). ಒಳ್ಳೆಯ ಕುದುರೆ: ಏಳಿದಂಗೆಯಲಿಮಿಾಗಡೆ ನವೊಮ್ಮಾಳನೊಳ್ಗುದುರೆಯಂ (ಕಾವ್ಯಾವ. ೩೧೪).
[ಒಳ್$_2$ (< ಒಳ್ಳಿತ್ತು$_1$) + ಕುದುರೆ]

**ಒಳ್ಗುರುಳ್** (ನಾ). ಚೆಲುವಾದ ತಲೆಗೂದಲು; ಸೊಗಸಾದ ತಲೆಗೂದಲು: ಒಳ್ಗುರುಳಂ ಸಮುಱುವ ಕನ್ನಿಕೆ ಕರಮೆಸೆದಳ್ (ಆದಿಪು. ೬-೮).
[ಒಳ್$_2$ (< ಒಳ್ಳಿತ್ತು$_1$) + ಕುರುಳ್]

**ಒಳ್ಗುಲ** (ನಾ). ಮೇಲಾದ ವಂಶ; ಸತ್ಕುಲ: ಶಂಖದೊಳ್ ಪಾಲೆಱೆ ದಂತಿರೆ ಮಲಿನಮಿಲ್ಲದೊಳ್ಗುಲದರಸುಗಳಿರೆ ನೀನುಮುಗ್ರಪೂಜೆಯನಾಂಪಾ (ಪಂಪಭಾ. ೬-೫೦). [ಒಳ್$_2$ (< ಒಳ್ಳಿತ್ತು$_1$) + ಕುಲ]

**ಒಳ್ಗುವರ** (ನಾ). ಉತ್ತಮನಾದ ಮಗ: ಕಾದಿಯೊಳ್ಗುವರನ ಪಿಡಿದರು (ಮೋಹತ. ೧೨-೩೮). [ಒಳ್$_2$ (< ಒಳ್ಳಿತ್ತು$_1$) + ಕುವರ]

**ಒಳ್ಗೂಡಾರ** (ನಾ). ಸೊಗಸಾದ ಡೇರೆ, —ಗೂಡಾರ: ಸ್ಮರನ ಪಯಣಕೆ ಪೊಯ್ದ ನವಚಂದ್ರಗಾವಿಯೊಳ್ಗೂಡಾರದರಳಲೆಗಳೆನೆ . . . ಅಶೋಕದ್ರುಮಂಗಳ್ ಕರಂ ಮೆಱೆದುವು (ಚಿಬಪು. ೪೫-೧೯).
[ಒಳ್$_2$ (< ಒಳ್ಳಿತ್ತು$_1$) + ಗೂಡಾರ]

**ಒಳ್ಗೂಟಿ್** (ನಾ). ಒಳ್ಳೆಯ ಆಹಾರ, —ಊಟ (?): ಬಿಟ್ಟರು ಮನಿಜಿವೆ ನೀನುಂ ಬಿಟ್ಟರುಮಂ ಕೊಲ್ವೆ ಕಲಹದೊಳ್ಗೂಟಿಂಗಂದೆಬ್ಬಾಡಿಯೆ ಮುನಿದಿಸುವೈ (ಗದಾಯು. ೬-೫೨). ☞ ಇಲ್ಲಿ 'ಕಲಹದೊಳ್ ಕೂಟಿಂಗಂ' ಎಂದೂ ಬಿಡಿಸಲು ಸಾಧ್ಯ.
[ಒಳ್$_2$ (< ಒಳ್ಳಿತ್ತು$_1$) + ಕೂಟ್$_1$]

**ಒಳ್ಗೆಳೆಯ** (ನಾ). ಒಳ್ಳೆಯ ಸ್ನೇಹಿತ: ತನ್ನೊಳ್ಗೆಳೆಯನನನ್ಯಜನಿಂ ನೆಗೞ್ಗಂ ನನ್ನಿಯೆಂದು ಚಂದಿರನೊಲವಿಂದಂ ನಲಿವಂತಿರೆ ಕುವರನ ಚೆನ್ನಮೊಗಂ ಚೆಲ್ವುವೆತ್ತು ತೊಳಗಿದುದಾಗಳ್ (ಚಿಕವಿ. ೪-೧೫೫).
[ಒಳ್$_2$ (< ಒಳ್ಳಿತ್ತು$_1$) + ಗೆಳೆಯ (< ಗೆಳೆಯ)]

**ಒಳ್ಗೆಸಱ್**, ಒಳುಗೆಸಱು (ನಾ). ೧. ಒಳ್ಳೆಯ ಕೆಸರು. ೨. ಹೆಚ್ಚಾದ ಕೆಸರು: ಕಾಳಿಂಗಗಜೇಂದ್ರದಾನಜಲಧಾರಾಸಾರದಿಂ ನೋಡೆ ಕುಂದಿದುದಿಲ್ಲೊಳ್ಗೆಸಱಾ ಸುಯೋಧನನೃಪ ದ್ವಾರೋಪಕಂಠಂಗಳೊಳ್ (ಪಂಪಭಾ. ೬-೪೧). **ಒಳುಗೆಸಱು**: ೨. ಇರಬಾರದುತ್ತರಿಸಬಾರದೊಳುಗೆಸಱಿನಿಂ ಸುತ್ತಿ ಸೂಜಿ ನಿಘದ ದರ್ಭೆವುಲ್ಲಲ್ಲಿ (ಸಾನಂಚ. ೪-೧೧೪ ರಗಳೆ).
[ಒಳ್$_2$ (< ಒಳ್ಳಿತ್ತು$_1$) + ಕೆಸಱ್]

**ಒಳ್ಗೆಳೆ** (ನಾ). ಒಳ್ಳೆಯ ಗೆಳೆತನ, —ಗೆಳೆಯ: ತನ್ನೊಳ್ಗೆಳೆ ತನ್ನ ಭಾಗ್ಯಮಿಾ ಚಿಕದೇವೇಂದ್ರಂ (ಅಪ್ರತಿ. ೧-೧೩).
[ಒಳ್$_2$ (< ಒಳ್ಳಿತ್ತು$_1$) + ಗೆಳೆ (< ಕೆಳೆ)]

**ಒಳ್ಗೆಱೆ** (ನಾ). ಒಳ್ಳೆಯ ಕೆರೆ; ಮಿಗಿಲಾದ ಕೆರೆ: ದೆಸೆ ಮುಖಧೂಮದಿಂ ದ್ವಿಜರ ಹೋಮದಿನೊಳ್ಗೆಱೆ ಹಂಸಕೋಕಸಾರಸ ಕಳನಾದದಿಂ ದೊಳಗೆ ವೇದನಿನಾದದಿನೆತ್ತಮೆಯ್ದೆ ಶೋಭಿಸೆ (ಪಂಪಭಾ. ೧೪-೫೭).
[ಒಳ್$_2$ (< ಒಳ್ಳಿತ್ತು$_1$) + ಕೆಱೆ]

**ಒಳ್ಗೊಂಚಲ್** (ನಾ). ಸೊಂಪಾದ ಗೊಂಚಲು; ಸೊಗಸಾದ ಗುಚ್ಛ: ತಮ್ಮೊಳ್ ಪಳಂಚಲೆವೊಳ್ಗೊಂಚಲಂ ಕಾಯೊಳುರ್ಕುವೆಳನೀರಿಂದಂ ಬನಂಗಳ್ಗುಂದಲೆ ನೀರೂಟಂ (ವರ್ಧಪು. ೧-೪೩).
[ಒಳ್$_2$ (< ಒಳ್ಳಿತ್ತು$_1$) + ಗೊಂಚಲ್]

**ಒಳ್ಗೊಂಬು**, ಒಳುಗೊಂಬು (ನಾ). ಒಳ್ಳೆಯ ಕೊಂಬೆ; ಚೆನ್ನಾಗಿ ಬೆಳೆದ ರೆಂಬೆ: ಕವಲ್ ಕವಲ್ತು ಪಲವುಂ ಕೊಂಬಾದುವೊಳ್ಗೊಂಬುಗಳ್ (ಆದಿಪು. ೧೧-೯೭). **ಒಳುಗೊಂಬು**: ವಿಸ್ತರದಿಂ ಪಣ್ತೊಳುಗೊಂಬೆನೆ ವರಸಸ್ಯಸಮೃದ್ಧಫಳದಿ ಕೊೞಱೂರೆಸೆಗುಂ (ಸೌಇಇ. IX–i, ೨೪೯–೨೨; 1147). [ಒಳ್$_2$ (< ಒಳ್ಳಿತ್ತು$_1$) + ಕೊಂಬು$_2$]

**ಒಳ್ಗೊತ್ತು** (ಕ್ರಿ). ಒಳಗೆ ಒತ್ತು; ಕೂಡಿಸಿ ಕಟ್ಟು; ಒತ್ತಾಗಿ ಸೇರಿಸು (?): ಒತ್ತುತ್ತುಂ ಪ್ರಿಯಚುಂಬಿತೋಷ್ಠಮಣಿಯಂ ವ್ಯಾಲಂಬದಿಂ ಮೆಲ್ಲನೊಳ್ಗೊತ್ತುತ್ತಂ... ನಿತಂಬೆ ಬಂದಳಿರುಳೊಳ್ (ಸೂಕ್ತಿಸು. ೮-೧೬೪). [?]

**ಒಳ್ಗೊನೆ** (ನಾ). = ಒಳ್ಗೊಂಚಲ್: ವನಪಾಲಂ ಕಾಣ್ಕೆಗೈದಂ ವಿಚಕಿಲ ದಲರಂ ಪಚ್ಚೆಯಂ ಬಾಳೆವಣ್ಣೊಳ್ಗೊನೆಯಂ ದಾಳಿಂಬವಣ್ಣಂ (ರಾಜಶೇ. ೧೦-೨). [ಒಳ್$_2$ (< ಒಳ್ಳಿತ್ತು$_1$) + ಗೊನೆ (< ಕೊನೆ$_3$)]

**ಒಳ್ಗೊಳ** (ನಾ). ಉತ್ತಮವಾದ ಸರೋವರ: ಪಂಕೇಜದಿನೊಳ್ಗೊಳಂ . . . ವಲಂ ರಮ್ಯಂ (ಧರ್ಮಾಮೃ. ೧-೩೫).
[ಒಳ್$_2$ (< ಒಳ್ಳಿತ್ತು$_1$) + ಕೊಳ$_2$]

**ಒಳ್ಗೋಡು** (ನಾ). ಬಲಿಷ್ಠವಾದ ಕೋಡು; ಗಟ್ಟಿಯಾದ ಕೊಂಬು, —ಕೋರೆ: ನಾಲ್ಕುಮೊಳ್ಗೋಡುಗಳಿಲ್ಲದೇಂ ಮದದೊಳಾಯ್ತೆ ಟಲಂ ದಿಗಿಭಕ್ಕೆ ಮೊಕ್ಕಳಂ (ಶಾಂತಿಪು. ೨-೩೨).
[ಒಳ್$_2$ (< ಒಳ್ಳಿತ್ತು$_1$) + ಕೋಡು$_5$]

**ಒಳ್ಜಂತ** (ನಾ). ಒಳ್ಳೆಯ ದಂತ, —ಕೋರೆ: ಧರಣಿಸುತೆ. . . ಕಂಗೊಳಿಸಿದಳ್ ಮಿರುಗನಿಕ್ಕಿದೊಳ್ಜಂತದ ಮನೋಹರ ಪ್ರತಿಮೆಯಂತೆ (ಶೀಪರಾ. ೧೫-೩). [ಒಳ್$_2$ (< ಒಳ್ಳಿತ್ತು$_1$) + ಜಂತ$_1$]

**ಒಳ್ಜಸ** (ನಾ). ಒಳ್ಳೆಯ ಯಶಸ್ಸು; ಉತ್ತಮವಾದ ಕೀರ್ತಿ (ಕ).
[ಒಳ್$_2$ (< ಒಳ್ಳಿತ್ತು$_1$) + ಜಸ]

**ಒಳ್ತನ** (ನಾ). ಮೇಲ್ಮೆ; ಒಳ್ಳೆಯತನ: ನುಡಿದಂತೆ ತಂತಮ್ಮಾನೆಯೊಳ್ತನಮುಮಂ ಬಿನ್ನಣಮುಮಂ ಮೆಱೆದು (ಶಾಂತಿಪು. ೩-೨೭ ವ). ☞ ಇಲ್ಲಿ 'ಅಳ್ತನ' ಎಂಬ ಪಾಠವಿದ್ದಿರಬಹುದು.
[ಒಳ್$_2$ (< ಒಳ್ಳಿತ್ತು$_1$) + -ತನ]

**ಒಳ್ತಪ**, ಒಳ್ದಪ (ನಾ). ಒಳ್ಳೆಯ ತಪಸ್ಸು: ಒಳ್ತಪದೊಳರ್ತಿಗುಂದದಿರಿನಿಸುಂ (ಧರ್ಮಾಮೃ. ೪-೧೫). **ಒಳ್ದಪ**: ದೋಸಂಗಳಂ ಬರಲಿತ್ತೊಳ್ದಪದಲ್ಲಿ ತಂದು ಕಿಡಿಯಂ ನೀನಿಕ್ಕಿ ನಿನ್ನಂ ಸುಡಲ್ ಮರುಳ್ಳೆ (ಜೀವಸಂ. ೯-೨೬). [ಒಳ್$_2$ (< ಒಳ್ಳಿತ್ತು$_1$) + ತಪ$_2$]

**ಒಳ್ತಳಿರ್** 'ಒಳ್ದಳಿರ್' ನೋ.

**ಒಳ್ತು** (ಕ್ರಿ). ತಿವಿ; ಚುಚ್ಚು; ಇರಿ: ಒಡಿಪೊಡಿಸಿ ಅರಮನೆ ಪುಗುವೊರಾ ಅಬ್ಬೆ ಅಳ್ಮನ್ ಕೊಲಜರ ಮುಗಸುರಿಗೆಯೊಳ್ತುವೊನ್ (ಸೌಇಇ. IX–i, ೧೬–೨೧; ಸು. 9ನೆಯ ಶತ). [?]

**ಒಳ್ದಪ** 'ಒಳ್ತಪ' ನೋ.

**ಒಳ್ದಳ** (ನಾ). ಚೆಲುವಾದ ದಳ, —ಎಸಳು (ಕ).
[ಒಳ್$_2$ (< ಒಳ್ಳಿತ್ತು$_1$) + ದಳ$_2$ (= ದಲ)]

**ಒಳ್ದಳಿರ್**, ಒಳ್ತಳಿರ್ (ನಾ). ಕೋಮಲವಾದ ಚಿಗುರೆಲೆ; ಚೆಲುವಾದ ತಳಿರು: ಒಳ್ದಳಿರ್ಗಲರ್ಗೆ ಫಲಕೆ ಪರಿದತ್ತೆಳವೆಂಡಿರ ನೆರವಿ (ಚಂದ್ರಪು. ೬-೯೮). **ಒಳ್ತಳಿರ್**: ಒಳ್ತಳಿರಾಂತ ರಸಾಲಭೂಜ ಮುಜ್ವಳ ಮಣಿಪೀಠವಾಗಿ ಬನಮೋಲಗಶಾಲೆಯಾಯ್ತು ಕಾಮನಾ (ವೃಷವಿ. ೪-೩೪). [ಒಳ್$_2$ (< ಒಳ್ಳಿತ್ತು$_1$) + ತಳಿರ್$_2$]

**ಒಳ್ದಳೆ** (ಕ್ರಿ). ಚೆನ್ನಾಗಿ ಹೊಂದು; ಪೂರ್ಣವಾಗಿ ತಾಳು: ಒಳ್ದಳೆದ ಚೆಲ್ವಿನಾನನದೊಳುಱೆ ಮಿಱುಗುವ ಕುರುಳ್ದೊಂಗಲ್ (ಜೈಮಿಭಾ. ೧೪-೩೫). [ಒಳ್$_2$ (< ಒಳ್ಳಿತ್ತು$_1$) + ತಳೆ$_1$]

**ಒಳ್ದಾಮರೆ**, ಒಳ್ದಾವರೆ (ನಾ). ಸುಂದರವಾದ ಕಮಲ: ಒಳ್ದಾಮರೆಗಣ್ಣ ಸುಲೋಚನೆಯುಂ ಲಕ್ಷ್ಮೀಮತಿಯುಂ ಸಂಜನಿಯಿಸಿ ಪಿರಿದುಂ ಚೆಲ್ವಿಕೆದಾಳಿದರು (ಜಯಕಾ. ೩-೧೯). **ಒಳ್ದಾವರೆ**: ಬಿರಿದೊಳ್ದಾವರೆಗಂಪಂ ಕೊರಲುದ್ದಂ ಪೀರ್ವ ತುಂಬಿ (ಕಬ್ಬಿಕಾ. ೩೨೯).
[ಒಳ್$_2$ (< ಒಳ್ಳಿತ್ತು$_1$) + ತಾಮರೆ]

**ಒಳ್ದಾರಿ** (ನಾ). ಒಳ್ಳೆಯ ಹಾದಿ; ಒಳ್ಳೆಯ ನಡತೆ: "ಒಳ್ದಾರಿಯೆನಲು ಸನ್ನಡತೆ" (ಕಶರ. ೧೧೯).

[ಒಳ್$_2$ (< ಒಳ್ಳಿತ್ತು$_1$) + ದಾರಿ$_1$]

**ಒಳ್ದಾವರೆ** 'ಒಳ್ದಾಮರೆ' ನೋ.

**ಒಳ್ದಿರುಳ್** (ನಾ). ಒಳಗಿನ ತಿರುಳು; ಸಾರಸತ್ತ್ವ: ಇಂಗಡಲ ನಿಡುದೆರೆಗಳೋ ಬೆಳ್ದಿಂಗಳೊಳ್ದಿರುಗಳೊ [ಪಾಠಾಂ. ಬೆಳುದಿಂಗಳೊಳು ದಿರುಳುಗಳೊ] ಶರದಭ್ರಂಗಳೊಡ್ಡೋ ... ಎನಲು (ಬಸವು. ೧೧-೩೪).

[ಒಳ್$_1$ (< ಒಳಗು) + ತಿರುಳ್]

**ಒಳ್ದುಡುಗೆ, ಒಳ್ದೊಡಿಗೆ** (ನಾ). ಒಳ್ಳೆಯ ಆಭರಣ; ಶ್ರೇಷ್ಠವಾದ ಭೂಷಣ: ಬಟ್ಟೆ ಮಚ್ಚುಗೊಟ್ಟಂ ಕೊಟ್ಟೊಳ್ದುಡುಗೆಗಳನುಟ್ಟ ದುಗಲಮನೆಡೆಯಱಿದಾ ಮುನಿನಿವೇದಕಂಗೆ ನೃಪೇಂದ್ರಂ (ಶಾಂತಿಪು. ೧-೮೩). **ಒಳ್ದೊಡಿಗೆ**: ಜಡೆಗಳ ಬಂಬಲೊಪ್ಪುವಳಕಾವಳಿ ಭೀಷಣ ಮಪ್ಪ ಪಾವಿನೊಳ್ದೊಡಿಗೆ (ಛಂದೋಂಬು. ೧-೨).

[ಒಳ್$_2$ (< ಒಳ್ಳಿತ್ತು$_1$) + ತುಡುಗೆ]

**ಒಳ್ದುಱುಬು** (ನಾ). ಚೆಲುವಾದ ತಲೆದುರುಬು; ಸೊಗಸಾದ ಮುಡಿ: ದನಿಯೆನೆ ನವಕೋಕಿಲರವವೊಳ್ದುಱುಬೆನೆ ನವಿಲಡಿಯೆನೆ ತಳಿರ್ (ಜಯುಕಾ. ೧-೪೯).

[ಒಳ್$_2$ (< ಒಳ್ಳಿತ್ತು$_1$) + ತುಱುಬು$_2$ (< ತುಱುಂಬು$_2$)]

**ಒಳ್ದೆನೆ** (ನಾ). ಒಳ್ಳೆಯ ತೆನೆ; ತುಂಬಿದ ತೆನೆ: ಮಿಳಿರ್ವೆಲೆಪಕ್ಕ ದಂತರುಣಿಮತ್ವದಿನೊಳ್ದೆನೆ ಕುಂಡದಂತೆ ಕಣ್ಗೊಳಿಗೊಳಿಸೆ ಪೊಱಲಿರ್ದ ಕಳಮ ಸ್ತಬಕಾಗ್ರಮನೇಱಿ ಪಾಲುಣಲ್ಕೆಳಸುವ ರಾಜಕೀರಮಂ (ವರ್ಧಪು. ೧-೪೨).

[ಒಳ್$_2$ (< ಒಳ್ಳಿತ್ತು$_1$) + ತೆನೆ$_1$]

**ಒಳ್ದೆರೆ** (ನಾ). ಚೆಲುವಾದ ತೆರೆ; ಅಂದವಾದ ಅಲೆ: ಕೊಳಂಗಳೊಳ್ದೆರೆಯಿನುಣ್ಮುವ ತಣ್ಬನಿಯಿಂದೆ (ಚಂದ್ರಪು. ೭-೮೩); ಬಾಲೆಯ ನೇತ್ರದಿಂದಮರ್ದಿನೊಳ್ದೆರೆಮಾಲೆ ಪೊದಟ್ದು ನೀಳ್ದು ಬಂದೀ ಲಲಿತಾಂಗನಂ ಬಳಸಿದತ್ತೆನೆ (ಜಗವಿ. ೧೦-೭೯).

[ಒಳ್$_2$ (< ಒಳ್ಳಿತ್ತು$_1$) + ತೆರೆ$_4$]

**ಒಳ್ದೊಡವು** (ನಾ). = ಒಳ್ದುಡುಗೆ: ನಿರವಿಸು ನೀಂ ಕಬ್ಬದ ನುಡಿವುರುಳ್ಗಳೊಳ್ದೊಡವಿನಿರವಂ (ಅಪ್ರತಿ. ೧-೧೨); ದಿನದಿನದಲ್ಲಿ ತಾಳ್ದಿಱವಿನೊಳ್ದೊಡವಂ ಪೊಱಮಿಂಚುಗೈದು ಬಂದೆನಗಿನಿವಾತನಾಡಿ ... ಎಳ್ದು ಪೋದಂ (ರಾಜಶೇ. ೧೧-೧೬೫).

[ಒಳ್$_2$ (< ಒಳ್ಳಿತ್ತು$_1$) + ತೊಡವು]

**ಒಳ್ದೊಡಿಗೆ** 'ಒಳ್ದುಡುಗೆ' ನೋ.

**ಒಳ್ದೊಡೆ$_1$** (ನಾ). ತೊಡೆಯ ಒಳಭಾಗ; ಊರುಪ್ರದೇಶ: ಮೊಟಕಾಲ್ = ಒಳ್ದೊಡೆಯ ಸಂದು (ಶಮುದ. ಪರಿ. ೧); ಹರಿಣರುಚಿಯಂತೆ ಮೆಯ್ ಕಡುಕರೆದೊಳ್ದೊಡೆಗಳ್ (ಅಶ್ವಶಾ. ೨-೯೭).

[ಒಳ್$_1$ (< ಒಳಗು) + ತೊಡೆ$_1$]

**ಒಳ್ದೊಡೆ$_2$, ಒಳುದೊಡೆ** (ನಾ). ಒಳ್ಳೆಯ ತೊಡೆ: ಮಿಂಚುವೊಳ್ದೊಡೆ ಮಡಂ (ಕಾವ್ಯಸಾ. ೬೧೨ ಶೂದ್ರಕ); ಮಸೆದ ಮದನನ ಬಾಳಂತಾದುವು ಪೊಳೆವೊಳ್ದೊಡೆ (ಪಂಪಭಾ. ೨-೪೨); ಲತಾಂಗಿಯರೊಳಗೊರ್ವಳು ನಿಂದೊಳ್ದೊಡೆಯಗ್ರದೊಳು ಇರಿಸಿದ ಮಿಸುನಿಯ ನಿಡುಗಿಂಡಿ ಕರಂ ಪರಿರಂಜನೆಯಂ ಪಡೆದತ್ತು (ಜಯುಕಾ. ೨-೧೫); ಸ್ಫುರಿಸುವೊಳ್ದೊಡೆಯ ಬೆಡಗಿನ ನಡೆಯ (ಜೈಮಿಭಾ. ೧೧-೯). **ಒಳುದೊಡೆ**: ಮಿಸುಪ ಕಪ್ಪಿನ ಬಾಸೆಯಂ ಭಾವಿಸುವನೆಳಲತೆಯಂತೆ ಕೋಮಳದಸಿಯ ನಡುವಂ ಭಾವಿಸುವನೊಳುದೊಡೆಗಳಂ (ಬಸವು. ೪೨-೨೩).

[ಒಳ್$_2$ (< ಒಳ್ಳಿತ್ತು$_1$) + ತೊಡೆ$_2$]

**ಒಳ್ದೊಲೆ** (ನಾ). ಒಳ್ಳೆಯ ತೊಲೆ; ಚೆಲುವಾದ ತೊಲೆ: ಮರಕತವೇದಿ ಮಾಣಿಕದ ಬೋದಿಗೆ ... ಪವಳದೊಳ್ದೊಲೆ ರನ್ನದ ಜಂತೆ (ಶಬಶಂ. ೧-೭೦).

[ಒಳ್$_2$ (< ಒಳ್ಳಿತ್ತು$_1$) + ತೊಲೆ$_1$]

**ಒಳ್ದೊಱೆ** (ನಾ). ನದಿಯ ಒಳಭಾಗ; ಹೊಳೆಯ ಒಡಲು: ಒಳ್ದೊಱೆಯ ಬೆಳ್ನೊರೆಯ ತೊಳಪೆಳೆಯ ಮೀನ್ಪೊಳೆಯಲಿರದೆಳೆಯಲೆಡೆ ... ಅತುಳಗಂಗೆ ಸುತರಂಗೆ ನೋಳ್ಪಂಗೆ ಸಲೆ ಕಣ್ಗೆಸೆದಳು (ಜೈಮಿಭಾ. ೯-೨೪).

[ಒಳ್$_1$ (< ಒಳಗು) + ತೊಱೆ$_2$]

**ಒಳ್ನಗೆ** (ನಾ). ಚೆಲುವಾದ ನಗೆ; ಮಂದಹಾಸ: [ಮೀನಾಂಕಮತ್ತೇಭ ಚಾಮರಮೋ] ನಂದನಲಕ್ಷ್ಮಿಯೊಳ್ನಗೆಯೊ ತಾಂ ... ಪೇೞೆಂದಿನಂ (ಶಾದಂಪೂ. ೭೪೧).

[ಒಳ್$_2$ (< ಒಳ್ಳಿತ್ತು$_1$) + ನಗೆ]

**ಒಳ್ನಡಕೆ** (ನಾ). ಉತ್ತಮವಾದ ಆಚರಣೆ, —ನಡತೆ: ನಡೆವ ನುಡಿವಾಹಾರಂಗೊಳ್ವೆಯ್ದಿ ಕೊಳ್ವೆಡುವಯ್ದುಮೊಳ್ನಡಕಮೆ ಸಮಿತ್ಯಾಖ್ಯಂ (ಶಾಂತಿಪು. ೬-೫೨).

[ಒಳ್$_2$ (< ಒಳ್ಳಿತ್ತು$_1$) + ನಡಕೆ]

**ಒಳ್ನಡತೆ** (ನಾ). ಒಳ್ಳೆಯ ನಡತೆ; ಸದ್ವರ್ತನೆ: ನಾಣ್ನುಡಿಯೆಂಬುದು ಯಾವುದಾದರೊಂದು ಒಳ್ನಡತೆಯನ್ನು ಬೋಧಿಸುವ ನುಡಿ (ನಾಜೋಜ. ೨೫೯); ಅತ್ಯಂತ ಸಾಮಾನ್ಯ ಒಳ್ನಡತೆಯ ರೈತ (ಪುನರು. ೨೩೨).

[ಒಳ್$_2$ (< ಒಳ್ಳಿತ್ತು$_1$) + ನಡತೆ]

**ಒಳ್ನಡವಳಿ** (ನಾ). = ಒಳ್ನಡತೆ: ಅದುವರೆಗೂ ತಾನು ಒಳ್ನಡವಳಿಗೇ ಹೆಗಲುಕೊಟ್ಟು ಹೊಗಳಿಸಿಕೊಂಡು ಬಾಳಿದ್ದನ್ನು ನೆನೆದು ಕರ್ಣನು ... ಬಂದು ತಾಗಿದನು (ಭಾಮುಣಿ. ೩೦).

[ಒಳ್$_2$ (< ಒಳ್ಳಿತ್ತು$_1$) + ನಡವಳಿ (< ನಡೆವಳಿ)]

**ಒಳ್ನಡು** (ನಾ). ಚೆಲುವಾದ ಸೊಂಟ; ಸೊಗಸಾದ ನಡು: ಎಳವಿದಿರಬಣ್ಣಮೊಳ್ನಡು ... ಪೊದಟ್ದೆಳಸುವ ಬಾಯ್ ಬಳಸುವ ಕಣ್ (ಆದಿಪು. ೪-೪೪); ಒಳ್ನಡು ಬಳ್ಕೆ ... ವಿರಾಜಿಸುತಿರ್ಪರಲ್ಲಿ ತೋಳ್ಗಳ್ಗಳಿದೊಪ್ಪೆ ನೀಳ್ದುಡುಗಿ ಘಟ್ಟಿವಮುಗುಟ್ಟುವ ಘಟ್ಟಿವಳ್ತಿಯರ್ (ಜಗವಿ. ೯-೧೧೨); ಸಿಂಗದ ಶಿಶುವಂ ತಾನಿಳಿಕೆಯ್ಯೊಳ್ನಡುವಿನ ನೃಪತನುಜೆಯ ತರುಣಿಮಮೊಪ್ಪಿದುದು (ಜಯುಕಾ. ೩-೨೨).

[ಒಳ್$_2$ (< ಒಳ್ಳಿತ್ತು$_1$) + ನಡು$_2$]

**ಒಳ್ನಡೆ** (ನಾ). ಚೆಲುವಾದ ನಡಿಗೆ; ಮೋಹಕವಾದ ಪದವಿನ್ಯಾಸ: ತತ್ಪುರಂಧ್ರಿಯರೊಳ್ನಡೆಯೊಂದು ಜಾಣ್ಮೆಯಂ (ಬಾಭಪು. ೧-೧೧೧); ಅಂಚೆಯು ನಡೆಯನಿದಂ ತನತೆನುತುಂ ಮುಂಚಲ್ ಪಿಡಿವೊಳ್ನಡೆ ರತಿರೂಪಂ ಲಂಚಂಗೊಂಡ ವಿಲಾಸದಿನೆಸೆದತ್ತಾ ರಾಜೀವಾಸ (ಜಯುಕಾ. ೨-೨); ವಿಶೇಷಮಾಂದ್ಯವನಾಂತುದೊಳ್ನಡೆ (ಚಿಬಪು. ೪-೧೧).

[ಒಳ್$_2$ (< ಒಳ್ಳಿತ್ತು$_1$) + ನಡೆ$_2$]

**ಒಳ್ನಾಡು** (ನಾ). ಒಳ್ಳೆಯ ನಾಡು; ಶ್ರೇಷ್ಠವಾದ ರಾಜ್ಯ: ವಿಖ್ಯಾತಿಯಂ ತಾಳ್ದಿದೊಳ್ನಾಡಂ ಕೂಡೆ ತೊಟಲ್ದು ... ಕೇವಲಿ ಕುಬೇರಾದ್ರೀಂದ್ರಮಂ ಮುಟ್ಟಿದಂ (ಪಂರಾಮಾ. ೧೩-೭೪).

[ಒಳ್$_2$ (< ಒಳ್ಳಿತ್ತು$_1$) + ನಾಡು]

**ಒಳ್ನಾರಿ** (ನಾ). ಒಳ್ಳೆಯ ನಾರಿ; ಉತ್ತಮಳಾದ ಸ್ತ್ರೀ: "ನಾರಿಯರೊಳಂ ಮತ್ತಕಾಶಿನಿಯೆನಲ್ಕೆವೊಳ್ನಾರಿಯಕ್ಕುಂ" (ಮಂಗರಾ. ೯೦-೬).

[ಒಳ್$_2$ (< ಒಳ್ಳಿತ್ತು$_1$) + ನಾರಿ$_2$]

**ಒಳ್ನಿಱಿ** (ನಾ). ಒಳ್ಳೆಯ ನಿರಿಗೆ; ಚೆಲುವಾದ ನಿರಿ: ಬೆನ್ನನಾ ನೀಳಕೇಶಪ್ರಸರಂ ಚೆಲ್ವಿಂ ಪೊದಟ್ದೊಳ್ನಿಱಿಯನೆಡದ ತೋಳ್ ಸೋಗೆಯಂ ನೂಲತೊಂಗಲ್ ದೆಸೆಯಂ ಕರ್ಣ್ ಕೆನ್ನೆಯಂ ... ಓರಂತಲೆಯೆ ಭರತನಂ ನೋಡಲೈತಂದೊಳೊರ್ವಳ್ (ಆದಿಪು. ೧೧-೧೬).

[ಒಳ್$_2$ (< ಒಳ್ಳಿತ್ತು$_1$) + ನಿಱಿ$_2$]

**ಒಳ್ನುಡಿ, ಒಳುನುಡಿ** (ನಾ). ಒಳ್ಳೆಯ ಮಾತು ; ಚತುರೋಕ್ತಿ ; ಸುಭಾಷಿತ : ಕುಲದ ಚಲದ ಪೆಂಪೊಂದೆ ಚೆಲ್ವೊಂದೆ ಸಂದೊಳ್ನುಡಿಯೊಂದೇ ವಿದ್ಯೆಯೊಂದೇ ಪುದಿದೊದವಿದ ಜನ್ಮಾಂತರ ಸ್ನೇಹಮೊಂದೇ (ಆದಿಪು. ೪–೨೭) ; ಬಿಡೆಬಿಡಿಸುವಂತೆ ನೃಪರೊಳ್ನುಡಿಯಂ ಬೀಸುವುದು ಚಾಮರಾವಳಿ (ಕಾದಂಪೂ. ೫೫೭) ; ಶೌಚಕ್ಕಾಸ್ಪದಂ ಜಾಣ್ತನಕ್ಕೆಱೆವಟ್ಟೊಳ್ನುಡಿಗಾಣ್ಮನಾಯತಿಗಡರ್ಪು (ಪಂಚತಂ. ೧೧–೬) ; ಅಲಂಕಾರವೊಳ್ನುಡಿ ಸಲೆಕೃತಿಯುದರದೊಳು ನೆಲಸಿದುವಾಗಿ ವಿಲಾಸವುಂಟು(ಅಂಜಚ. ೧–೮೨) ; ಗುರುವಿನೊಳ್ನುಡಿಯಂತೆ ಶ್ರೇಯಸ್ಸು ಬಾಳ್ಗೆ (ಕೋಗಿಲೆ. ೪೭–೧೦). **ಒಳುನುಡಿ** : ಗೆಲುವಾದುದಲ್ತೆ ನಿಮ್ಮರಸನ ಕಾರ್ಯವೆಂದೊಳುನುಡಿ ನುಡಿದನು ನಗುತ (ಭರಜ. ೩೮–೯೫).

[ಒಳ್$_2$ (< ಒಳ್ಳಿತ್ತು$_1$) + ನುಡಿ$_2$]

**ಒಳ್ನುಡಿಕಾಱ, ಒಳುನುಡಿಕಾಱ** (ನಾ). ಒಳ್ಳೆಯ ಮಾತುಗಳನ್ನು ಆಡುವವನು ; ವಾಕ್ಚತುರ : ನಗೆವಡಿಕಾಱಂ ನೀಱಂ ಬಗೆಕಾಱಂ ಪಾಟಕಾಱನೊಳ್ನುಡಿ[ಪಾಠಾಂ. ಳ್ನಗೆ]ಕಾಱಂ (ಕಾವ್ಯಾವ. ೩೨೫) ; ಬಿತ್ತರದಿಂ ದಪ್ಪನನಿರ್ದೊತ್ತಿನೊಳಿಂತೆಂದು ನುಡಿವುದೊಳ್ನುಡಿಕಾಱಂ (ಖಮದ. ೪–೫೦). **ಒಳುನುಡಿಕಾಱ** : ಒಳುನುಡಿಕಾಱನ ಕಾಣೆಸಲವನಂದು ಇಳೆಗೆ ಮಯ್ಯಿಕ್ಕಿ ಬಿದ್ದೆದ್ದು (ಕುರಾಸಾಂ. ೧೮–೧೫೪).

[ಒಳ್ನುಡಿ + –ಕಾಱ]

**ಒಳ್ನುಡಿಗೇಳ್** (ಕ್ರಿ). ಒಳ್ಳೆಯ ಮಾತನ್ನು ಕೇಳು ; ಸೊಗಸಾದ ಮಾತನ್ನು ಆಲಿಸು: ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಂ . ... ನೆನೆವುದೆನ್ನ ಮನಂ ಬನವಾಸಿದೇಶಮಂ (ಪಂಪಭಾ. ೪–೩೦).

[ಒಳ್ನುಡಿ + ಕೇಳ್]

**ಒಳ್ನುಡಿದೋಱು** (ಕ್ರಿ). ಒಳ್ಳೆಯ ಮಾತನ್ನು ಹೇಳು : ಆದರದಿಂದೊಳ್ನುಡಿದೋಱ್ಪ ಸಿಂಗರಿಪ ನಾನಾ ಲೀಲೆ ಕೈಗಣ್ಮೆ ಕಿಂಪುರುಷರ್ ಕಿನ್ನರರಚ್ಚರರ್ ಬಿನದಿಪರ್ ತತ್ಕಂದರಸ್ಥಾನದೊಳ್ (ಶಬಶಂ. ೧–೪೮).

[ಒಳ್ನುಡಿ + ತೋಱು$_1$ (< ತೋಱ್)]

**ಒಳ್ನೆಯ್** (ನಾ). ಒಳ್ಳೆಯ ತುಪ್ಪ : ಪದಾಂತ್ಯಲೋಪಕ್ಕೆ – ತೆಂಗಾಳಿ, ಅರಮನೆ, ಒಳ್ನೆಯ್ (ಶಮದ. ಮ. ೧೭೬ ಪ್ರಯೋ).

[ಒಳ್$_2$ (< ಒಳ್ಳಿತ್ತು$_1$) + ನೆಯ್$_3$]

**ಒಳ್ನೋಂಪಿ** (ನಾ). ಉತ್ತಮವಾದ ವ್ರತ: ಪಲವುಮೊಳ್ನೋಂಪಿಗಳಂ ॥ ಅಲಸದೆ ಮನದೊಳ್ ಚಿಂತಿಸಿ (ಧರ್ಮಾಮೃ. ೩–೨೧೬, ೨೧೭).

[ಒಳ್$_2$ (< ಒಳ್ಳಿತ್ತು$_1$) + ನೋಂಪಿ]

**ಒಳ್ನೋಟ, ಒಳುನೋಟ** (ನಾ). ಮನೋಹರವಾದ ನೋಟ ; ಚೆಲುವಾದ ನೋಟ : ತಾಟಂಕಂಗಳ್ ಕಪೋಲಸ್ಥಲಮನಲೆಯೆ ಮಧ್ಯಂ ಕರಂ ಬಳ್ಕೆ ತೋರ್ಪೊಳ್ನೋಟಂ ನಲ್ಗಾಡಿಯಂ ಪುಟ್ಟಿಸೆ (ಉದ್ಭಟ. ೮–೧೫). **ಒಳುನೋಟ** : ಬೆಳುನೋಟವಾವಾಗ ಬಿಱುನೋಟವಾವಾಗ ಸೆಳೆನೋಟ ಕೊಲ್ಲಿನೋಟಗಳು ಬಳಲುನೋಟಗಳೋರೆನೋಟವಾವಾಗವೆಂದೊಳುನೋಟವೆರಸಿ ಪಾಡಿದಳು (ಭರಜ. ೧೧–೩೧).

[ಒಳ್$_2$ (< ಒಳ್ಳಿತ್ತು$_1$) + ನೋಟ]

**ಒಳ್ಪಡರ್** (ಕ್ರಿ). ಅಂದವೇರು ; "ಸಮೀಚೀನವಾಗು, ಮನೋಹರವಾಗು, ಅಂದವಾಗು" (ಪ್ರಭಣ್ಣ). [ಒಳ್ಪು + ಅಡರ್]

**ಒಳ್ಪಯ** (ನಾ). ಒಳ್ಳೆಯ ಹಸು : ಬೆಳಗೆಯ್ಯಿಂ ಪೊಂಗಣೆಯಿಂ ಫಲತರುವಿಂದೊಳ್ಪಯಂಗಳಿಂ ಕುಸುಮರಜಾನಿಳನಿಂ ಪಗರೆಯ ಪರಿಯಿಂ ತಳರದೆ ಸಿರಿ ಬಲ್ಲಕುಂದೆ ನಾಳ್ಕೆಸೆದಿರ್ಕ್ಕುಂ (ಸೌಇಇ. IX–i, ೨೪೯–೧೬ ; 1147).

[ಒಳ್$_2$ (< ಒಳ್ಳಿತ್ತು$_1$) + ಪಯ್ವು$_2$]

**ಒಳ್ಪರಿಜು** 'ಒಳ್ವರಿಜು' ನೋ.

**ಒಳ್ಪಿಡೆಯ** (ನಾ). ಸದ್ಗುಣಕ್ಕೆ ನೆಲೆಯಾದವನು ; ಸದ್ಗುಣಿ : ಉರ್ಬ್ಬಿಯೊಳ್ ಸಕಲರೊಳೊರ್ಬ್ಬನೆ ಗಣ್ಡ ಶ್ರೀಚನ್ತಮನೆನ್ತುಮೊಳ್ಪಿಡೆಯನ್ ಗೊನ್ತಿಸುತರಿಂ ಪರಾಕ್ರಮನ್ ಬಲ್ವಡೆ ಸುದ್ರಕನ್ ಪ್ರಳಯ ಧನಿ (ಎಇ. XXIV, ೨೬–೬ ; 885). [ಒಳ್ಪು + ಇಡೆಯ]

**ಒಳ್ಪು, ಒಳುಪು, ಒಳುಹು, ಒಳ್ವು** (ನಾ). ೧. ಒಳ್ಳೆಯತನ ; ಸಜ್ಜನಿಕೆ ; ಸದ್ಗುಣ : "ಪರಭಾಗಮೆನೆ ಗುಣೋತ್ಕರ್ಷಮೆನಲೊಳ್ಪಕ್ಕುಂ" (ಮಂಗರಾ. ೧೩೪–೩೪) ; ಅವನೀನಾಥನ ಗೆಯ್ದ ಪೊಲ್ಲಮೆಗಮೆನ್ನೊಳ್ಪಿಂಗಮಿಂ ಸಕ್ಕಿಯಾಗು (ಪಂಪಭಾ. ೨–೨೩) ; ಸಮರೈಕಮೇರು ಕೆಲದಿಂ ಪೊಗೞಿಪ್ಪ ಕೆಲದಿಂ ಪಲವೊಳ್ಪಿನಾತನಯಸಕ್ಕಂಜುವಂ (ಎಕ. VIII, ಸೊರಬ. ೪೭೭–೧೦ ; 991) ; ಒಳ್ಪನೆ ಬಗೆವ ಪುಣ್ಯಮೂರ್ತಿಗೆ ಕನಸಿನುಳಂ ಕಿಡಿಪೆನೆನ್ದವಂ ತಾಂ ಕಿಡುಗುಂ (ಎಇ. XVIII, ೫–೬೧ ; 1082) ; ಒಳ್ಪಿಂದಕ್ಕುಂ ಸೌಖ್ಯಂ ದುಃಖದಿನಕ್ಕುಂ ಪಾಪಂ (ಸಮುಪ. ೫–೧೨೬) ; ಒಳ್ಳಿತಱ ಭಾವಂ ಒಳ್ಪು (ಶಬ್ದಾನು. ೪೩೨ ಪ್ರಯೋ). ೨. ಚೆಲುವು ; ಶೋಭೆ ; ಸೊಗಸು : "ಒಳ್ಪು . . . – ಈ ೧೪ ಮನೋಹರಂ" (ಕಶಸಾ. ೧೧–೨೧೧) ; ಪಿಡಿದೆಡಗಯ್ಯ ಚಾಮರದ ದಕ್ಷಿಣಹಸ್ತದ ಪದ್ಮದೊಳ್ಪೊಡಂಬಡೆ (ಪಂಪಭಾ. ೧೩–೯೯) ; ನುತನೃತ್ಯನಿಕಾಯದ ಗಾನದೊಳ್ಪು . . . ಸೊಗಯಿಸುತ್ತಿರೆ (ಧರ್ಮಾಮೃ. ೪–೧೨) ; ಅಂಜದೆಯಳುಕದೆ ಪೇಳು ಪಲವಗೆ ಕಬ್ಬದೊಳ್ಪುಗಳ (ಹದಿಬ. ೧–೨೯). ೩. ತಿರುಳು ; ಕೆಚ್ಚು ; ಸತ್ತ್ವ : ಪಾಲೊಳ್ಪಂ ಸವಿಯುಮದಱೊಳೇಂ ಸಮನಿಕುಮೇ (ಧರ್ಮಾಮೃ. ೧–೧೯೨) ; ತನ್ನ ಗುಣದೊಳ್ಪು ರತಿರಮಣನನಲ್ಲಾಡಿಸೆ ಮಂದಮಾರುತಂ ಮೋಹಿಸುತ್ತೆ ಮುಂದೆಯ್ತಂದಂ (ಗಿರಿಕ. ೭–೫೯) ; ಕನ್ನಡದೊಳ್ಪಿನ ನುಡಿಯಂ ಮುನ್ನಿದಱೊಳೆ ನೋಡಿ ತಿಳಿದುಕೊಳ್ವುದು ಚದುರಂ (ಕಬ್ಬಿಕಾ. ೭). ೪. ಕ್ಷೇಮ ; ಸುಖ : ಇನಿತಂ ನಿಮ್ಮ ಮನಕ್ಕೆ ಕೊಕ್ಕರಿಕೆಯಂ ಮಾಡಿರ್ದ ಸಾಮ್ರಾಜ್ಯಮೆಂತೆನಗೊಳ್ಪಂ ಪಡೆದಪ್ಪುದು (ಆದಿಪು. ೪–೭೯) ; ಒಡಮೆಯುಮೊಳ್ಪಂ ಕಿಡುಗುಂ ಮೂಲವ್ಯಾಧಿಯು ಮುಡಸುಗುಮಿಂತೆನೆ ಜೂದಿನಿಂ ಬರ್ಪ ಫಳಂ (ಸಮುಪ. ೬–೫೨) ; ಅ ಖಳನಿನಾರ್ಗಂ ಪೇೞಿಮೊಳ್ಪಂಟೆ (ಸೂಕ್ತಿಸು. ೧–೩೨) ; ನೀವಾಗೊಳ್ಪಂ ನುಡಿದಪಿರಿ (ಉದ್ಭದೇ. ೪–೧೨೪). ೫. ಮೇಲ್ಮೆ ; ಶ್ರೇಯಸ್ಸು ; ಹಿತ : "ಶ್ರೇಯಾಂಸಿ – ಒಳ್ಪುಗಳುಂ" (ನೀತಿವಾ. ೬) ; ಇಂದ್ರನೊಳರ್ಧಾಸನಮೇಱುದೊಳ್ಪು ಹರಿಗಂಗಕ್ಕುಂ ಪೆಱಂಗಕ್ಕುಮೇ (ಪಂಪಭಾ. ೮–೨೮) ; ಚಕ್ರವರ್ತಿಯುಮಂ ಪೆರ್ಚಿಸಿದೊಳ್ಪು ನಿನ್ನೊಳೆಸೆಗುಂ ಶ್ರೀದಾನಚಿಂತಾಮಣೀ (ಅಜಿಪು. ೧೨–೧೧) ; ಅಕ್ಷಯಸುಖದೊಳ್ಪನೋಹಿಲಂ ಪಡೆದಿರ್ದಂ (ಉದ್ಭಟ. ೧೧–೯೧). **ಒಳುಪು** : ೧. ಸತ್ಯಾಶ್ರಯದೇವಂ ಬ್ರಹ್ಮದೇವಕುಳಮನೊಳುಪಿನ ಸತ್ಯಾಶ್ರಯ ಸಕಳ ಧಾತ್ರಿಯನಾಳ್ದಂ (ಎಕ. VII, ಶಿಕಾರಿ. ೧೨೫–೧೦ ; 1019). ೨. ವಿನೆಯಕ್ಕಾಪ್ಪಿಂಗಡ ಪೊರ್ಳುಪಿನಾಗರಮೆಂಬೀ ಗುಣದಿಂ ಗುಣಂಗೊಳಿಸಿದಂ ಭೂಲೋಕಮಂ ನಾಕಮಂ (ಎಕ. VI, ಕಡೂರು. ೫೧–೩೫ ; 1169). ೪. ಜೀವಂಗೆ ಪುಣ್ಯವಶದಿಂ ದೇವಗ್ರುಹಮಂತ್ರತಂತ್ರ ನೈವೇದ್ಯಂಗಳ್ ತಾವೊಳುಪನೀಗುಂ (ಸಮುಪ. ೪–೨೯). **ಒಳುಹು** : ೧. "ಪರಭಾಗಃ, ಗುಣೋತ್ಕರ್ಷಃ – ಈ ೨ ಒಳುಹು [ಪಾಠಾಂ. ಒಳ್ಪು]" (ಹಲಾಯು. ೧೩೦–೧೦೧). **ಒಳ್ವು** : ೨. ಅಂತೊಳ್ವನಾಂತ ಧಾತ್ರೀಕಾಂತೆಯ ಕುಂತಳವೆನಿಪ್ಪ ಕುಂತಳಂ (ಇಅ. XII, ೯೬–೧೪ ; 1187).

ಒಳ್ಪಾಗು = ಒಲವು ಉಂಟಾಗು ; ಮನಸ್ಸಾಗು : ಪನ್ನೀರ್ವರಾಟ್ವಾರ್ಗಳ ಚರಿತೆಯನಾಕರ್ಣಿಪೊಳ್ಪಾಗೆಯಾಗಳ್ ಸುಗುಣಂ ಶ್ರೀಚಿಕ್ಕದೇವ ಕ್ಷಿತಿಪತಿ ಬುಧರಂ ನೋಡಿದಂ ಪ್ರೇಮದಿಂದಂ (ದಿವ್ಯಸೂ. ೧–೯೦). [ಒಳ್$_2$ (< ಒಳ್ಳಿತ್ತು$_1$) + –ಪು$_2$]

**ಒಳ್ಪುಗ** (ನಾ). ಒಳಿತನ್ನುಂಟುಮಾಡುವವನು ; ಸಜ್ಜನ: ಚೆನ್ನಿಗ ರೋಜೆಗಾಜರುಜುವರ್ ಕಲಿಗಳ್ ನೆಜ಼ೆಜಾಣರೊಳ್ಪುಗರ್ ಬನ್ನಣೆಗಾಜರ್ . . . ತನ್ನೊಡನಾಡೆ ನಾಡೆ ನಲಿಗುಂ ಚಿಕದೇವನೃಪಂ (ಚಿಕವಿ. ೫-೧೧೦). [ಒಳ್ಪು + -ಗ₃]

**ಒಳ್ಪುಗಾಣ್** (ಕ್ರಿ). ಒಳ್ಳೆಯದನ್ನು ಕಾಣು : ಪಿರಿದರ್ಥಿ ಮುನ್ನ ಮಾಹೇಶ್ವರರೊಳ್ಪನಗದಜಕೊಳ್ಪುಗಾಣದೆ ನೆಗಟ್ದೀ ಪರಮ ಜಿನಧರ್ಮದೊಳಪೊಕ್ಕು ರಾಗಿಪಂ ಸುಕವಿ ಪಂಪರಾಜನ ಮೊಮ್ಮಂ (ಸಮುಪ. ೧-೫೯). [ಒಳ್ಪು + ಕಾಣ್]

**ಒಳ್ಪುಗಿಡು** (ಕ್ರಿ). ಅಂದಗೆಡು ; ಸೊಗಸುಗೆಡು : ಅಪ್ಪಪದಾರ್ಥ ತತ್ತ್ವಮಂ ಸ್ಮರಿಯಿಪ ಚಿತ್ತಮೊಳ್ಪುಗಿಡದೋದುವ ನಾಲಗೆ ಮುನ್ನಮಿರ್ದ ಬಿತ್ತರದಿನದೆತ್ತಲುಂ ತಳರದಾಸನಂ (ಸುಕುಮಾ. ೯-೧೬). [ಒಳ್ಪು + ಕಿಡು (< ಕೆಡು)]

**ಒಳ್ಪುಗೆಯ್** (ಕ್ರಿ). ಶ್ರೇಯಸ್ಸನ್ನು ಉಂಟುಮಾಡು : ತನ್ನಿಟ್ಟ ಚಕ್ರಮದುಂ ನಿಃಪ್ರಭಮಾಗೆ ಸಿಗ್ಗನೊಳಕೊಂಡಾತ್ಮಾಗ್ರಜಂಗೊಳ್ಪುಗೆಯ್ದು ಮಹೀರಾಜ್ಯಮನಿತ್ತು (ಎಕ. II, ೨೩೪-೪; 1180). [ಒಳ್ಪು + ಕೆಯ್₁]

**ಒಳ್ಪುಗೊಳ್** (ಕ್ರಿ). ೧. ಸಂತೋಷಪಡು ; ತೃಪ್ತಿ ಹೊಂದು : ಕಣ್ಗೊಳ್ಪುಗೊಳ್ವೆನೆಂಬಂ ಪಾಣ್ಬಂ (ಸಮುಪ. ೫-೫೧) ; ಮಂಡೆಯೊಳಿಪ ನಾಟ್ಯಮಾಲೇಂದ್ರನೆಂದೊಳ್ಪುಗೊಂಡೊರೆದನು ಮಾಗಧೇಂದ್ರ (ಭರಜ. ೩೫-೨೯). ೨. ಒಪ್ಪಿಕೊಳ್ಳು ; ಸ್ವೀಕರಿಸು : ಅನ್ನೆಗಂ ಮುನ್ನೆಮ್ಮ ರಾಜ್ಯಮನೊಳ್ಪು[ಪಾಠಾಂ. ನೊಪ್ಪು]ಗೊಳ್ಗೆ ಬಟಿಕ್ಕೆ ಕಳಿಪುವೆನೆನೆ (ನೇಮಿಪು. ೪-೧೧೩ ವ). [ಒಳ್ಪು + ಕೊಳ್₁]

**ಒಳ್ಪುಡಿ** 'ಒಳ್ನುಡಿ' ನೋ.

**ಒಳ್ಪುನುಡಿ** (ನಾ). ವಿಶಿಷ್ಟವಾದ ಮಾತು: ನಾಣ್ನುಡಿ– ಒಳ್ಪುನುಡಿಗಳೂ ಅನ್ಯದೇಶ್ಯಗಳೂ ಇದರಲ್ಲಿವೆ (ಕಸಾಚ. ೨೯೧). [ಒಳ್ಪು + ನುಡಿ₂]

**ಒಳ್ಪುವಡೆ** (ಕ್ರಿ). ೧. ಚೆಲುವಾಗು ; ಮನೋಹರವಾಗು : ನಿನ್ನ ಬಾಳಂತೆ ಒಳ್ಪುವಡೆದ ಕೆಂದಳಿರ್ಗಳಿಂ ಮಿಸುಗುವ ಅಸುಗೆಗಳಿಂ (ಕಬ್ಬಿಕಾ. ೪೯); ಅವನಿಚ್ಚೆಯೊಳವತರಿಸಿದುದಾದಿಯೊಳಾವನಿಂದೊಳ್ಪುವಡೆದುದು . . . ಅಖಿಳ ಚರಾಚರವು (ಹದಿಬ. ೮-೧). ೨. ಮೇಲ್ಮೆಯನ್ನು ಪಡೆ ; ಶ್ರೇಯಸ್ಸುಹೊಂದು : ಆತ್ಮೆಮಾವಂದಿರನೊಳಗುಗೈದೊಳ್ಪುವಡೆವರು (ಹದಿಬ. ೧-೫೩). ೩. ಹೆಚ್ಚಾಗು : ಮೃದುತನು ಚಂಡಕರ ಕಾಂತದಿಂದ ಜ್ವಾಲಾಕಲಾಪಗಳುಣ್ಕಿ ವರಬುದ್ಧಿವನವಲಯ ನಿರ್ದಹಿಸ ಲಾತಂಕ ಮೃಗತೃಷ್ಣೆಯೊಳ್ಪುವಡೆಯೆ . . . ಬಳಿವರಿವ ಚಿಂತಾಘರ್ಮಕಾಲದೊಳ್ (ಸಂದಿಮಾ. ೧೧೦-೩). [ಒಳ್ಪು + ಪಡೆ₁]

**ಒಳ್ಪುವೆರಸು** (ಅ). ತಿರುಳುಗೊಂಡು ; ಗಟ್ಟಿಯಾಗಿ : ಓಪರಮುನಿಸುಂ ಕಡುಮೂರ್ಖನ ತಪಮುಂ ನೋಟ್ಪೊಡೆ ಶಾಶ್ವತಮೊಳ್ಪುವೆರಸು ನಿಲಲಱಿದಪುವೇ (ಧರ್ಮಾಮೃ. ೨-೨೨೦). [ಒಳ್ಪು + ಬೆರಸು₃]

**ಒಳ್ಪುವೆಱು** (ಕ್ರಿ). ೧. ಶೋಭಿಸು ; ಸೊಗಸಾಗು : ಸುರಾಂಗನಾಮಧುರಗೀತಿಯಿಂದೊಳ್ಪುವೆತ್ತದೊಂದೆಡೆ . . . ಅದೇಂ ಗಗನಮಂಡಲಂ ಶೋಭೆಯಂ ಪೆತ್ತುದೋ (ಆದಿಪು. ೭-೫೯) ; ವೇದಘೋಷದಿಂದಕ್ಷಯ ಮೊಳ್ಪುವೆತ್ತ ಕುರುವತ್ತಿಯ (ಸೌಇಇ. IX-i, ೧೦೨-೩೪ ; 1046) ; ಬುದ್ಧಿಪರಾಕ್ರಮಂಗಳಿಂದೊಳ್ಪುವೆತ್ತವನಾದೊಡಂ ಭಕ್ತಿಯಿಲ್ಲದವನೇತರ್ಕಂ ಬಾರ್ತೆಯಿಲ್ಲಂ (ಪಂಚತಂ. ೪೨-೨೦). ೨. ಏಳಿಗೆಯಾಗು ; ಮೇಲ್ಮೆ ಹೊಂದು : ನಿನ್ನ ಕೃಪಾರಸದಿಂದೈಸೆಯಾನು ಕಬ್ಬೊನ್ನು ಚೆಂಬೊನ್ನಾದಂತೆ ಸನ್ನುತಿವಡೆದೊಳ್ಪುವೆತ್ತು ಸಕಲಭಾಗ್ಯೋನ್ನತಿಯೊಡಗೂಡಿಹೆನು (ಹದಿಬ. ೧-೩೫). [ಒಳ್ಪು + ಪೆಱು₁]

**ಒಳ್ಪೂಜೆ** (ನಾ). ಉತ್ತಮವಾದ ಪೂಜೆ : ಪಂಚಮಹಾಧ್ವನಿನಾದಮುವೊಳ್ಪೂಜೆಯುಮನವರತಂ ಬಸದಿಯೋಳಿಯೊಳ್ ರಂಜಿಸುಗುಂ (ಧರ್ಮಾಮೃ. ೫-೫೧). [ಒಳ್₂ (< ಒಳ್ಳಿತ್ತು₁) + ಪೂಜೆ₃]

**ಒಳ್ಪೆಣ್** 'ಒಳ್ವೆಣ್' ನೋ.

**ಒಳ್ಪೆಸಱ್** (ನಾ). ಉತ್ತಮವಾದ ಹೆಸರುಕಾಳು ; ಶ್ರೇಷ್ಠ ಮುದ್ಗ : ಒಂದೇ ಬೀಜದೊಳೊಂದೇ ರೂಪಿನೊಳೊಂದೇ ನೆಲದೊಳಗೊಂದಿ ಬೆಳೆದು ಕಲವೊಂದಱೊಳೊಡನೆ ಬೆರೆದು ಬೇವೊಳ್ಪೆಸಱಂತೆ ಮೃದುತ್ವವನು ಒಂದದ ಖರ ಮುದ್ಗದವೊಲ್ (ಜಯಕಾ. ೧-೧೮). [ಒಳ್₂ (< ಒಳ್ಳಿತ್ತು₁) + ಪೆಸಱ್]

**ಒಳ್ಪೇರು** (ನಾ). ಒಳ್ಳೆಯ ಹೆಸರು, —ಖ್ಯಾತಿ, —ಪ್ರಸಿದ್ಧಿ : ಭುವನಸ್ತುತನೆನಿಪನಾತನೊಳ್ಪೇರಿಗೆ ಸಂಭವಿಸಿದರಿವರೆಂದಡೆ ಕವಿಗಮಕಿಗಳಳವೆ ಪೊಗಳಲುಂ ಬಣ್ಣಿಸಲುಂ (ಕೊಲ್ಹಾಶಾ. ೧೭-೨೨ ; 1196). [ಒಳ್₂ (< ಒಳ್ಳಿತ್ತು₁) + ಪೇರು₂]

**ಒಳ್ಪೊಟ್ಟೆ** (ನಾ). ಒಳಗಿನ ಜಳ್ಳು ; ಅಂತರಂಗದ ನಿಸ್ಸಾರತೆ : ಸಾರಾಸಾರಮಂ ಸೋದಿಸಿ ಕಳೆದದಱೊಳ್ಪೊಟ್ಟನೊಳ್ಗಟ್ಟಿಯಂ ಕೊರ್ತೊಳಕೊಂಡಿರ್ಪೊಳ್ಪಿನಿಂ ತತ್ತ್ವದ ನೆಲೆಯಱಿತು (ಚಿಕವಿ. ೪-೧೦೦). [ಒಳ್₁ (< ಒಳಗು) + ಪೊಟ್ಟು]

**ಒಳ್ಪೊತ್ತು** 'ಒಪ್ಪೊಟ್ಟು' ನೋ.

**ಒಳ್ಪೊಟ್ಟು** (ನಾ). ಒಳ್ಳೆಯ ಹೊತ್ತು ; ಯೋಗ್ಯಸಮಯ : ಓಕೃಷ್ಣ, ಓಕೃಷ್ಣ, ಒಳ್ಪೊಟ್ಟಿನೊಳ್, ಬಂದೆ (ಅಶ್ವತ್ಥಾ. ೪೭-೯೦೮). [ಒಳ್₂ (< ಒಳ್ಳಿತ್ತು₁) + ಪೊಟ್ಟು]

**ಒಳ್ಬಾಸಿಗ** (ನಾ). ಒಳ್ಳೆಯ ಹೂಮಾಲೆ ; ಸೊಗಸಾದ ಬಾಸಿಂಗ : ನನೆಯಂ ದಾವಣೆಗಟ್ಟಿ ಕಟ್ಟುತ್ತಿನಿಯರ್ಗೊಪ್ಪಿಸಿಕೊಡುವವೊಲಿತ್ತರ್ ವನಿತೆಯರಾ ಪೂವಿನ ಪೆಟಿಯೊಳೊಳ್ಬಾಸಿಗಮಂ (ಜಯಕಾ. ೧-೫೮). [ಒಳ್₂ (< ಒಳ್ಳಿತ್ತು₁) + ಬಾಸಿಗ]

**ಒಳ್ಬಿಡು** (ಕ್ರಿ). ಒಳಗೆ ಬಿಡು, —ಸುರಿ (?) : ಹಿಕ್ಕವತ್ತಿಗೆಯೊಂದು ಸಂಭವಿಪ ಮೂಳಮನಲ್ಲದಂತದನಟ್ಟುವ[ವೊ]ಳ್ಬಿಡು [ಪಾಠಾಂ. ವೊಳ್ದಡು]ಗಾಜ್ಯಮಂ (ಲೋಕೋಪ. ೯-೧೫೦). [ಒಳ್₁ (< ಒಳಗು) + ಬಿಡು₁]

**ಒಳ್ಬೆಳಸು** (ನಾ). ಒಳ್ಳೆಯ ಬೆಳೆ ; ಉತ್ತಮವಾದ ಬೆಳಸು : ಮೂಸಾಸಿರಗುಣಗಳ ಒಳ್ಬೆಳಸು, ನೆರವೇರಿದ ಕನಸು (ದ್ರಾಕ್ಷಿದಾ. ೨-೧೯). [ಒಳ್₂ (< ಒಳ್ಳಿತ್ತು₁) + ಬೆಳಸು₂]

**ಒಳ್ಮಣಿ** 'ಒಳ್ವಣಿ' ನೋ.

**ಒಳ್ಮನೆ**, ಒಳಮನೆ (ನಾ). ಮನೆಯ ಒಳಭಾಗ ; ಅಂತರ್ಗೃಹ : ಸಂಜೆಗತ್ತಲೆ ತೋಱೆ ದೀಪಮೊಳ್ಮನೆಯನ್ನೈದಲ್ [ಪಾಠಾಂ. ಮೊಳ್ಮನೆಯನ್ನೈದಿಲ್] (ಚಿಬಪು. ೫-೨೦). **ಒಳಮನೆ** : "ಅಂತರ್ಗೃಹಂ – ಒಳಮನೆ" (ಸಿದ್ಧಾಂತಿ. ೩೩೦) ; ಆಚಾರ್ಯರು ನಮ್ಮನ್ನು ಒಳಮನೆಯ ಕೋಣೆಯೊಂದಕ್ಕೆ ಕರೆದೊಯ್ದರು (ಕಾಲಯಾ. ೧೦). [ಒಳ್₁ (< ಒಳಗು) + ಮನೆ]

**ಒಳ್ಮರಲ್** (ನಾ). ಒಳ್ಳೆಯ ಅರಳು ; ಉತ್ತಮವಾದ ಲಾಜೆ : ಹುರಿಗಡಲೆಯಂತಾನುಂ ಕಾಯ್ವಾಱದೋಡಿನ ಜೋಳದೊಳ್ಮರಲಲರುವಂತಾನುಂ . . . ಮೆಯ್ಯ್ ಬಿರ್ಕುಬಿರ್ಕನೆ ನಿಬ್ಬರಂ ಬಿರಿದೊಳಱುಗುಂ (ಶಾಂತಿಪು. ೭-೯೨). [ಒಳ್₂ (< ಒಳ್ಳಿತ್ತು₁) + ಮರಲ್₄]

**ಒಳ್ಮಾಣಿಕ** (ನಾ). ಶ್ರೇಷ್ಠವಾದ ಮಾಣಿಕ್ಯ : ಕಾರ್ಶ್ಯಮೊಂದಿರ್ದೊಡಂ ಕಡೆದೊಳ್ಮಾಣಿಕದಂತೆ ರಂಜಿಪನಿವಂ ತೇಜೋನ್ವಿತಂ ಭೂಮಿಪಂ (ಶಾಕುಂತ. ೮೨-೧೩೭). [ಒಳ್₂ (< ಒಳ್ಳಿತ್ತು₁) + ಮಾಣಿಕ]

**ಒಳ್ಮಾತು** 'ಒಳ್ವಾತು' ನೋ.

**ಒಳ್ಮಾನಸಿಕೆ** (ನಾ). ಸೌಜನ್ಯ; ಒಳ್ಳೆಯತನ : "ಸಾಧುತಾ ಚ = ಒಳ್ಮಾನಸಿಕೆಯುಂ" (ನೀತಿವಾ. ೩೧–೧೭).

[ಒಳ್$_2$ (< ಒಳ್ಳಿತ್ತು$_1$) + ಮಾನಸಿಕೆ]

**ಒಳ್ಮಾವು** (ನಾ). ಒಳ್ಳೆಯ ಮಾವಿನ ಮರ : ಪೊಸಮಲ್ಲಿಗೆಗಮೊಳ್ಮಾವಿಂಗಂ ಮದುವೆ ಮಾಡಿದಳ್ ಬನದೊಳ್ (ವರ್ಧಪು. ೯–೩೮).

[ಒಳ್$_2$ (< ಒಳ್ಳಿತ್ತು$_1$) + ಮಾವು]

**ಒಳ್ಮಿಂಚು** (ನಾ). ಒಳ್ಳೆಯ ಮಿಂಚು; ಮಿಗಿಲಾದ ಮಿಂಚು : ಅರತ್ನದಿಂ ಕಾಂಚನದಿಂದೊಳ್ಮಿಂಚಿನಿಂದಂ ರವಿರುಚಿಯಿನಳುಂಬಂ ಮಹೇಶಪ್ರಕಾಶಂ (ಶಬಶಂ. ೫–೮).

[ಒಳ್$_2$ (< ಒಳ್ಳಿತ್ತು$_1$) + ಮಿಂಚು$_3$]

**ಒಳ್ಮಿಡಿ** (ನಾ). ಒಳ್ಳೆಯ ಮಿಡಿ; ಸೊಗಸಾದ ಹೀಚು : ಇತ್ತನಗ್ಗಳದ ಮಾವಿನ ಪೂವಿನ ಮಾವಿನಂಕುರ ಪ್ರಕರದ ಮಾವಿನೊಳ್ಮಿಡಿಯ ಜೀವಿತಮಂ ಮದನಂ ಬಸಂತದೊಳ್ (ಶಾಂತಿಪು. ೭–೧೨೯).

[ಒಳ್$_2$ (< ಒಳ್ಳಿತ್ತು$_1$) + ಮಿಡಿ$_6$]

**ಒಳ್ಮಿದುಳ್** (ನಾ). ಮಿದುಳಿನ ಒಳಭಾಗ : ಕದನದೊಳುಣ್ಮಿದೊಳ್ಮಿದುಳಕರ್ದಮದೊಳ್ ಜಗುಳ್ದಂಘ್ರಿ ಜಾಜಿ ಪೋಪುದುಂ (ಗದಾಯು. ೪–೪೩); ಒಳ್ಮಿದುಳ್ ಸಿಡಿಲ್ತರೆ ಪೊಜಸಾರ್ದು ಸನ್ನೆದಗರಂದದೆ ತಾಗುವ ಝುಟ್ಟಿಮಲ್ಲರಂತಿರೆ (ವರ್ಧಪು. ೮–೫೭).

[ಒಳ್$_1$ (< ಒಳಗು) + ಮಿದುಳ್]

**ಒಳ್ಮುಗುಳ್** (ನಾ). ಒಳ್ಳೆಯ ಮೊಗ್ಗು : ಕೆಂಪಿನೊಳ್ ಪೊರೆದ ವಸಂತದೊಳ್ಮುಗುಳ ತಜ್ಜೊತ್ತಡವಂ ತುಡಿಸಲ್ಕೊಡರ್ಚಿದಳ್ (ಕಾದಂಉ. ೭೮೫).

[ಒಳ್$_2$ (< ಒಳ್ಳಿತ್ತು$_1$) + ಮುಗುಳ್$_2$]

**ಒಳ್ಮುಡಿ** (ನಾ). ಚೆಲುವಾದ ತಲೆಕೂದಲು; ಸೊಗಸಾದ ತಲೆಗೂದಲು : ಕೋಮಳ ತನುಯಷ್ಟಿ ಕಲ್ಪಲತಿಕಾಂಕುರಮೊಳ್ಮುಡಿ ಸೋಗೆ (ಕಾವ್ಯಸಾ. ೭೧೨ ಶೂದ್ರಕ); ಕಟ್ಟದೊಳ್ಮುಡಿ ವಿಭಾಗಿಸದ ಕುರುಳ ಬೈತಲೆಯೊಂದು ತೋಳ್ಗಮರ್ದ ಜವಕೆ . . . ಮೆಜಿಯೆ ಬರುತಿರ್ದರರೆಮೂಳ್ಪ ಸಿಂಗರಂಗಳನುಳಿದು ತರಳೆಯರ್ ತವಕದಿಂದೆ (ಚಿಬಪು. ೧೯–೨೪).

[ಒಳ್$_2$ (< ಒಳ್ಳಿತ್ತು$_1$) + ಮುಡಿ$_3$]

**ಒಳ್ಮುತ್ತು** (ನಾ). ಒಳ್ಳೆಯ ಮುತ್ತು; ಚೊಕ್ಕಮುತ್ತು. 'ಒಳ್ಮುತ್ತುದೊಡವು' ಪರಾ. [ಒಳ್$_2$ (< ಒಳ್ಳಿತ್ತು$_1$) + ಮುತ್ತು$_5$]

**ಒಳ್ಮುತ್ತುದೊಡವು** (ನಾ). ಚೊಕ್ಕಮುತ್ತಿನ ಆಭರಣ : ಗಜಶಿರದಿ ಪಂದಿಯ ದಾಡಿ[ಡೆ]ಯಿಂ ಪೆಸರ್ವೆತ್ತು ಪುಟ್ಟದೊಳ್ಮುತ್ತುದೊಡವುಗಳ (ರಾಘಚ. ೧೭–೬೫). [ಒಳ್ಮುತ್ತು + ತೊಡವು]

**ಒಳ್ಮುಱಿ** (ನಾ). ಒಳ್ಳೆಯ ತುಣುಕು; ಸೊಗಸಾದ ಚೂರು : ಪೊಳೆವೆಳದಿಂಗಳೊಳ್ಮುಱಿಗಳಿಂ ಸುರಸಿಂಧುವ ಶೀಕರಂಗಳಿಂ ಜಳನಿಧಿಯಲ್ಲಿ ಮಾರ್ಪೊಳೆವ ತಾರೆಗಳಿಂ ಸಮೆದಂತೆ . . . ಎಸೆದುದುಜ್ಜ್ವಳಮೌಕ್ತಿಕ ಹಾರಮಂಡಳಂ (ಕಾದಂಉ. ೧೦೬).

[ಒಳ್$_2$ (< ಒಳ್ಳಿತ್ತು$_1$) + ಮುಱಿ$_2$]

**ಒಳ್ಮೆ** (ನಾ). ೧. ಒಳ್ಳೆಯತನ; ಸಜ್ಜನಿಕೆ : ಬಾಚ್ಕೆ ಸಂಗಾತಿಯ ಒಳ್ಮೆ (ಕುಜಳ್. ೧–೬–೧). ೨. ಶುಭ; ಶ್ರೇಯಸ್ಸು : ಮುಂದೊಳ್ಮೆ ಬರ್ಪುದೆಂದೊಳ್ಪರಕೆಯಂ ಪೇಳ್ದು (ಶ್ರೀರಾಮಾ. ೩೧೭–೪೪೫).

[ಒಳ್$_2$ (< ಒಳ್ಳಿತ್ತು$_1$) + -ಮೆ$_1$]

**ಒಳ್ಮೆಳೆ** (ನಾ). ಒಳ್ಳೆಯ ಮೆಳೆ : ಕಳಕಂಠಸ್ವನಮಂ ಪಳಂಚಲೆವ ಶಬ್ದಂಬಂಧಮಾಕಂದದೊಳ್ಮೆಳೆಯಂ ಪಾಳಿಸುವರ್ಥಂ (ಅನಂಪು. ೧–೪೭).

[ಒಳ್$_2$ (< ಒಳ್ಳಿತ್ತು$_1$) + ಮೆಳೆ]

**ಒಳ್ಮೊಗ**, ಒಳುಮೊಗ (ನಾ). ಚೆಲುವಾದ ಮುಖ : ನಲ್ಲರೊಳ್ಮೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ (ಪಂಪಭಾ. ೪–೨೮). **ಒಳುಮೊಗ** : ಹರಿಣಧರನವೊಲೊಳುಮೊಗಂಗಳ ಹರಿಯ ನಡುವಿಂದಸಿಯನಡುಗಳ . . . ಯುವತಿಯರು (ಬಸಪು. ೫–೨೫).

[ಒಳ್$_2$ (< ಒಳ್ಳಿತ್ತು$_1$) + ಮೊಗ$_2$]

**ಒಳ್ವಕ್ಕೆ** (ನಾ). ಒಳ್ಳೆಯ ಬಕ್ಕೆ ಹಲಸಿನ ಮರ : ಬೇರ್ವಿಡಿದುರುಟವರಂ ತೋರವಣ್ಬೇಱಿದೊಳ್ವಕ್ಕೆ (ಎಕ. VI, ಕಡೂರು. ೧೨೯–೪೫; 1718).

[ಒಳ್$_2$ (< ಒಳ್ಳಿತ್ತು$_1$) + ಬಕ್ಕೆ$_1$]

**ಒಳ್ವಚ್ಚ** (ನಾ). ಒಳ್ಳೆಯ ಆಭರಣ : ಒರ್ವರಳಮರ್ಚಿದೆಳ್ ಪಲರನ್ನದೊಳ್ವಚ್ಚಮಂ (ಉದ್ಭಟ. ೮–೪೦). [ಒಳ್$_2$ (< ಒಳ್ಳಿತ್ತು$_1$) + ಪಚ್ಚ$_2$]

**ಒಳ್ವಣಿ**, ಒಳ್ಮಣಿ (ನಾ). ಉತ್ತಮವಾದ ರತ್ನ : ಕಣಿಯೊಳಗಾಯ್ದು ಸಾಣೆವಿಡಿದೊಳ್ವಣಿಯಂತಿರೆ ಮಾತಿನೋಜೆ (ಚಿಕವಿ. ೧–೧೧). **ಒಳ್ಮಣಿ** : ಚರಿತ ಪುರಾಣದೊಳ್ಮಣಿಗಳಂ ಸರವೇಱಿಪವೋಲ್ ಭವಾವಳೀಸ್ಮರಣ ಕಥಾಭವಂಗಳನದಾರ್ ಬರೆವರ್ (ಅರ್ಧನೇ. ೧–೩೯); ಎಣಿಸೆ ನಖಂಗಳಿಂದುಡಿಯದಿರ್ದ ಚಿಗುರ್ ಕಡೆದೆಜ್ಜವಿಕ್ಕದೊಳ್ಮಣಿ . . . ಆಕೆಯ ರೂಪನಘಂ (ಶಾಕುಂತ. ೨೫–೪೫). [ಒಳ್$_2$ (< ಒಳ್ಳಿತ್ತು$_1$) + ಮಣಿ$_3$]

**ಒಳ್ವಣ್ಣ**, ಒಳುವಣ್ಣ (ನಾ). ಒಳ್ಳೆಯ ಬಣ್ಣ; ಶ್ರೇಷ್ಠ ವರ್ಣ : ಊರ್ಜಿತಮಾದೊಳ್ವಣ್ಣಮಂ ತುಳ್ಕುವಮುಳತರ ಶೈವಾಳಬಿಂಬಂಬೊಲತ್ಯುನ್ನತ ರಮ್ಯಂಬೆತ್ತಿರಲ್ . . . ತಾಟಂಕಮಂ (ಉದ್ಭಟ. ೮–೩೨). **ಒಳುವಣ್ಣ** : ಥಳಥಳಿಸುವ ಚಂದ್ರಗಾವಿಯ ಮೇಲ್ಕಟ್ಟನೊಳುವಣ್ಣದ ತುಂಬುದೆರೆಯ ಕಳಹಂಸೆದುಪ್ಪುಳುವಾಸಿನ ಮಂಚದೆ (ಕಂನವಿ. ೯–೧೮೮).

[ಒಳ್$_2$ (< ಒಳ್ಳಿತ್ತು$_1$) + ಬಣ್ಣ]

**ಒಳ್ವನೆ** (ನಾ). ಒಳ್ಳೆಯ ಮನೆ : ಸಕಲಕೋಶದ ಗೃಹಂಗಳ್ ತೈಲ ಘೃತ ಗುಡ ಪ್ರಕರ ಸಭಾಂಡದುಗ್ರಾಣದೊಳ್ವನೆಗಳುಂ (ಚಿಬಪು. ೫–೫೦).

[ಒಳ್$_2$ (< ಒಳ್ಳಿತ್ತು$_1$) + ಮನೆ]

**ಒಳ್ವರಕೆ** (ನಾ). ಒಳ್ಳೆಯ ಹರಕೆ; ಶುಭಾಶೀರ್ವಾದ : ಪಯೋಜಜ ಪಾರ್ವತೀಶ್ವರೊಳ್ವರಕೆಯನಾಂತು (ಪಂಪಭಾ. ೧೨–೨೨೧); ಮುಂದೊಳ್ಮೆ ಬರ್ಪುದೆಂದೊಳ್ವರಕೆಯಂ ಪೇಳ್ದು (ಶ್ರೀರಾಮಾ. ೩೧೭–೪೪೫).

[ಒಳ್$_2$ (< ಒಳ್ಳಿತ್ತು$_1$) + ಪರಕೆ$_1$]

**ಒಳ್ವರಲ್** (ನಾ). = ಒಳ್ವಣಿ : ಪಚ್ಚೆಯೊಳ್ವರಲ ತೊಳಪ್ಪ ಮಾಣಿಕದ ಮುತ್ತಿನ ಲಂಬಣಂ (ಚಂದ್ರಪು. ೬–೪೮).

[ಒಳ್$_2$ (< ಒಳ್ಳಿತ್ತು$_1$) + ಪರಲ್]

**ಒಳ್ವರಿಜು**, ಒಳ್ಪರಿಜು (ನಾ). ಸುಂದರವಾದ ರೂಪ; ಒಳ್ಳೆಯ ಆಕೃತಿ : ಬಾನ್ನವಿರನೊಳ್ವರಿಜಂ[ಪಾಠಾಂ. ಳ್ಪರಿಜಂ] ತಳೆದೊಪ್ಪಿ ತೋಱಿದಂ (ಶಬಶಂ. ೫–೯). **ಒಳ್ಪರಿಜು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಒಳ್$_2$ (< ಒಳ್ಳಿತ್ತು$_1$) + ಪರಿಜು]

**ಒಳ್ವಳೆ** (ನಾ). ಒಳ್ಳೆಯ ಬಳೆ, —ಕಡಗ : ಲತಾಂತಮಾಲೆ ಮಂಜುಲ ಗಜದಂತದೊಳ್ವಳೆ ವಿರಾಜಿಸೆ ವಿರಾಜಿಸಿದರ್ ಪುಳಿಂದಿಯರ್ (ಶಬಶಂ. ೩–೧೦). [ಒಳ್$_2$ (< ಒಳ್ಳಿತ್ತು$_1$) + ಬಳೆ$_3$]

**ಒಳ್ವಾತು**, ಒಳುವಾತು, ಒಳ್ಮಾತು (ನಾ). ೧. ಸೊಗಸಾದ ಮಾತು; ಸವಿನುಡಿ; ಸುಭಾಷಿತ : ಅಕ್ಕರಗೊಟ್ಟಯುಂ ಚದುರರೊಳ್ವಾತುಂ ಕುಳಿರ್ ಕೋೞ್ಪ ಜೊಂಪಮುಂ (ಪಂಪಭಾ. ೪–೩೧). **ಒಳುವಾತು** : ೧. ಬಳಿಕ ನಡೆದು ಬಂದ ಬಳಲಿಕೆಗಳೆವಂತೊಳುವಾತುಗಳನೊಡರಿಪುದು (ಹದಿಬ. ೩–೧೫). **ಒಳ್ಮಾತು** : ೨. ನೀತಿಯ ಮಾತು; ನೀತಿ : "ಒಳ್ಮಾತೆನಲ್ . . . ನೀತಿಯದಕ್ಕು" (ಕಶರ. ೧೧೯).

[ಒಳ್$_2$ (< ಒಳ್ಳಿತ್ತು$_1$) + ಮಾತು$_1$]

**ಒಳ್ಪಾತುಗ** (ನಾ). ಒಳ್ಳೆಯ ಮಾತನಾಡುವವನು; ವಾಕ್ಚತುರ : ಕಲಾವಿದನೊಳ್ಪಾತುಗನೋಜೆಗಾಜನುಚಿತಜ್ಞಂ . . . ಚಿಕದೇವೇಂದ್ರಂ (ಅಪ್ರತಿ. ೧೧-೨೧). [ಒಳ್ಪಾತು + -ಗ$_3$]

**ಒಳ್ಪಾನಸ** (ನಾ). ಒಳ್ಳೆಯ ಮನುಷ್ಯ : ಒಳ್ಗುಣಂ, ಒಳ್ನುಡಿ, ಒಳ್ಪಾನಸಂ (ಭಾಷಾಭೂ. ೩೫ ಉದಾ). [ಒಳ್$_2$ (< ಒಳ್ಳಿತ್ತು$_1$) + ಮಾನಸ$_1$]

**ಒಳ್ಪಾವುಗೆ** (ನಾ). ಒಳ್ಳೆಯ ಪಾದುಕೆ; ಉತ್ತಮವಾದ ಪಾದರಕ್ಷೆ: ಮಿನುಮಿನುಪ ಪಳುಕಿನೊಳ್ಪಾವುಗೆಗಳಂ ಮೆಟ್ಟಿ (ಪದ್ಮರಾ. ೨-೫೨). [ಒಳ್$_2$ (< ಒಳ್ಳಿತ್ತು$_1$) + ಪಾವುಗೆ]

**ಒಳ್ಪಾಸೆ** (ನಾ). ಒಳ್ಳೆಯ ಬಾಸೆ; ಹೊಕ್ಕುಳಿನ ಮೇಲೆ ಇರುವ ರೋಮರಾಜಿ : ಕರಚರಣಾಧರದಂತವಿತತಿಯೆಂಬರುಣಮಣಿಯನುಗುರೆಂಬ ಕುಲಿಶಮಂ ಕುರುಳಲರ್ಗಣ್ಕುಡುವುರ್ವೊಳ್ಪಾಸೆಗಳೆಂಬ ಕರಿಯ ಪರಲಂ ಸ್ಮರನೆಂಬಾ ಸೊನ್ನರಂ ಕೀಲಿಸಲು (ಜಯುಕಾ. ೩-೫೩). [ಒಳ್$_2$ (< ಒಳ್ಳಿತ್ತು$_1$) + ಬಾಸೆ$_1$]

**ಒಳ್ಪಾಳೆ** (ನಾ). ಒಳ್ಳೆಯ ಬಾಳೆಯ ಗಿಡ: ಇರ್ತಡಿಗಾಲುವೆಯಿಂದವೆ ನೆಜಱ ಮುಸುಕಿ ಬೆಳೆದ ಚೆಂದೆಂಗೊಳ್ಪಾಳೆಯಡಕೆ ಪಸುರೆಲೆವಳ್ಳಿ (ಜಯುಕಾ. ೧-೩೮). [ಒಳ್$_2$ (< ಒಳ್ಳಿತ್ತು$_1$) + ಬಾಳೆ$_1$ (< ಬಾೞೆ)]

**ಒಳ್ಬಿತ್ತು** (ನಾ). ಒಳ್ಳೆಯ ಬೀಜ; ಚಂದವಾದ ಬೀಜ: ಕೆಂಬರಲೆಣೆ ಮಾಡುವರೇಕೆಂಬ ರಸಂಬಡೆದು ರಂಜಿಪೊಳ್ಬಿತ್ತಿನ ದಾಳಿಂಬದ ಬನದ ಶುಕಾಳಿಗಳೆಂಬದವಣ್ಗೆಱಗಿ ತುಱುಗಿದುವು (ಧರ್ಮನಾ. ೪-೫೯). [ಒಳ್$_2$ (< ಒಳ್ಳಿತ್ತು$_1$) + ಬಿತ್ತು$_2$]

**ಒಳ್ಪು** 'ಒಳ್ಪು' ನೋ.

**ಒಳ್ಪುಡಿ, ಒಳ್ಪುಡಿ** (ನಾ). ಸೊಗಸಾದ ಹುಡಿ; ಉತ್ತಮವಾದ ಚೂರ್ಣ: ಕುಂಕುಮದೊಳ್ಪುಡಿವೆರೆದ ಕಮ್ಮೆಣ್ಣೆಯ ಪಂಕವನುತ್ತಮಾಂಗದೊಳು ಅಂಕಿಸಿಕೊಂಡವಳಿರ್ದಳು (ಕುರಾಸಾಂ. ೩೩-೯೨). **ಒಳ್ಪುಡಿ** : ಮತ್ತೆ ತಳಿವ ಪೊಸಗಪ್ಪುರದೊಳ್ಪುಡಿ ಪೊತ್ತಿದುದಾ ವಿರಹಾನಲನೊಳಗೆ (ಜಯುಕಾ. ೪-೪೧). [ಒಳ್$_2$ (< ಒಳ್ಳಿತ್ತು$_1$) + ಪುಡಿ]

**ಒಳ್ಪೆಣ್, ಒಳುವೆಣ್, ಒಳ್ಪೆಣ್** (ನಾ). ೧. ಚೆಲುವೆಯಾದ ಹೆಣ್ಣು; ಸುಂದರಿ : ಕುಡುಮಿಂಚಂ ಮಸೆದನ್ನರಪ್ಪ ಪಲರೊಳ್ಪೆಂಡಿರ್ (ಆದಿಪು. ೩-೧೭); ಕಳ್ಗೊಳಮಮರ್ದಿನೊಳಂ ಪುಟ್ಟಿದ ಪೆಂಡಿರಂತೆ ಸೊಗಯಿಸುವ ಪಲರುನೊಳ್ಪೆಂಡಿರ್ (ಪಂಪಭಾ. ೪-೮೭); ಅವರಿಂ ಪೊಜಗೆ ದೇವಕನ್ನೆಯರೆನಿಪ ಪೆಂಡವಾಸದೊಳ್ಪೆಂಡಿರಿಂದಂ (ಧರ್ಮಾಮೃ. ೮-೨೨೭). ೨. ಸಜ್ಜನೆ; ಪತಿವ್ರತೆ : ಇದನಾಲಿಪುದೊಳ್ಪೆಂಡಿರ ಧರ್ಮದ ಹದನಱಾಚರಿಸುವುದು (ಹರಿಬ. ೧-೬೧). **ಒಳುವೆಣ್** : ೧. ಚೆಲ್ವಿತ್ತಿರೆ ಪೆಂಡವಾಸದೊಳುವೆಂಡಿರಲಂಕೃತಿಯಿಂದಮಿರ್ಪಿನಂ (ಧರ್ಮಾಮೃ. ೪-೧೩೭). **ಒಳ್ಪೆಣ್** : ೧. [ನೋಡೆಂದು ತನ್ನ ಕೃತಕದಿಂ ಪಡೆದೊಳ್ಪೆಂಡಿರಂ ತೋಱು ಮತ್ತಂ] (ಧರ್ಮಾಮೃ. ೩-೧೦೫). [ಒಳ್$_2$ (< ಒಳ್ಳಿತ್ತು$_1$) + ಪೆಣ್]

**ಒಳ್ಬೆಸನ** (ನಾ). ಒಳ್ಳೆಯ ಊಳಿಗ; ಉತ್ತಮವಾದ ಸೇವೆ : ಪೆಸರಂ ಕೇಳ್ದು ಬೆಳ್ಕತುರ್ದು ಪರಧರಣೀಮಂಡಳಂ ಗಂಡುಗೆಟ್ಟೊಳ್ಬೆಸನಂ ಪೂಣ್ದತ್ತು (ಸುಕುಮಾ. ೯-೭೩). [ಒಳ್$_2$ (< ಒಳ್ಳಿತ್ತು$_1$) + ಬೆಸನ$_2$]

**ಒಳ್ಪೆಸರ್, ಒಳುವೆಸರ್** (ನಾ). ಒಳ್ಳೆಯ ಹೆಸರು : ಆ ವಿಪ್ರೋತ್ತಮನ ಮಗಂ ಭೂವಿಶ್ರುತನೀಶ್ವರಾಖ್ಯನೆಂಬೊಳ್ಪೆಸರಿಂ ದೇವದ್ವಿಜಗುರು ಜನಪದಸೇವಾನಿರತಂ (ಪಂಚತಂ. ೯-೧೪). **ಒಳುವೆಸರ್** : ಒಳುವೆಸರ್ಗ ಮದುಮ ತಾ ಸೊದೆಯೆನಲ್ ಸುಧೆ (ಕಬ್ಬಿಕೈ. ೧೦). [ಒಳ್$_2$ (< ಒಳ್ಳಿತ್ತು$_1$) + ಪೆಸರ್]

**ಒಳ್ಬೆಳಗು** (ನಾ). ಉಜ್ವಲವಾದ ಬೆಳಕು; ಒಳ್ಳೆಯ ಕಾಂತಿ : ಚಂದ್ರಮುಖದೊಳ್ಬೆಳಗಿನ ವಧು ಕೇಳ ಕೆಳದಿ ನಿನಗಭ್ಯುದಯಂ (ಛಂದೋಂಬು. ೧-೪೯); ಚಂದ್ರನೊಳ್ಬೆಳಗುವೊಲೊಪ್ಪಿ ತೋಱಿ ದುಗುಲಂ (ಕಾದಂಉ. ೧೫೦); ಕತ್ತಲೆಯನೊಳ್ಬೆಳಗು ಪುಸಿಯಂ ದಿಟಂ . . . ಸಲೆ ತೆವರುವಂತೆ (ಚಿಬಪು. ೩-೨೮); ರನ್ನದೊಳ್ಬೆಳಗು ಚೆಂಬಿಸಿಲಂತಿರೆ (ಶಬಶಂ. ೧-೭೭). [ಒಳ್$_2$ (< ಒಳ್ಳಿತ್ತು$_1$) + ಬೆಳಗು$_2$]

**ಒಳ್ಬೆಳೆ** (ನಾ). ಒಳ್ಳೆಯ ಬೆಳೆ. 'ಒಳ್ಬೆಳೆವೊಲ' ಪರಾ. [ಒಳ್$_2$ (< ಒಳ್ಳಿತ್ತು$_1$) + ಬೆಳೆ$_2$]

**ಒಳ್ಬೆಳೆವೊಲ** (ನಾ). ಚೆನ್ನಾಗಿ ಬೆಳೆದ ಹೊಲ; ಬೆಳೆ ತುಂಬಿ ನಿಂತ ಹೊಲ : ವಿಲಸದ್ವಿಶ್ರುತ ಪುರವರಮೆಂಬೊಳ್ಬೆಳೆವೊಲದೊಳ್ ಸೌಭಾಗ್ಯತೆಯಿಂ ಕಣ್ಗೊಳಿಸುವ ಪುರಜನಮೆಂಬ ಬೆಳಸನುಱ ಬೆಳವಿಗೆಯಂ ಮಾಳ್ಪ ಇಳೆಯಾಣ್ಮನ ಕರುಣರಸಂ (ಜಯುಕಾ. ೧-೬೫). [ಒಳ್ಬೆಳೆ + ಪೊಲ]

**ಒಳ್ಬೆಱ** (ನಾ). ಸೊಗಸಾದ ಚಂದ್ರ; "ಅತಿಶಯವುಳ್ಳ ಚಂದ್ರ" (ಕಬ್ಬಿಕಾ. ಕೋಶ) : ತನ್ನನೆ ತಾನೊಲವಿಂದೆ ಜಾನಿಸುತ್ತಗಲದೆ ನಿಂದ ನೊರ್ವ ಸವಣಂ ಬಗೆಗೊಳ್ಪೆ [ಪಾಠಾಂ. ಳ್ಪ]ಱತಟ್ಟಿತೆಂಬಿನಂ (ಕಬ್ಬಿಕಾ. ೨೨೭). [ಒಳ್$_2$ (< ಒಳ್ಳಿತ್ತು$_1$) + ಪೆಱ]

**ಒಳ್ಬೇಟ** (ನಾ). ಒಳ್ಳೆಯ ಪ್ರಣಯ : ಚದುರೋಜೆ ಚಾಟುತನಮುಂದಂ ಬಂಧಮೊಳ್ಬೇಟಮಿಚ್ಛೆಗೆ ಸಂದೊಂದುವ ಕೂಟಮೆಲ್ಲಮುವರ್ಗೇಂ ಮೈಸಂದು ಮುಚ್ಚಿರ್ದುದೋ (ರಾಜಶೇ. ೧೧-೮೩). [ಒಳ್$_2$ (< ಒಳ್ಳಿತ್ತು$_1$) + ಬೇಟ$_2$ (< ಬೇಂಟ)]

**ಒಳ್ವೊಗು** 'ಒಳವೊಗು' ನೋ.

**ಒಳ್ವೊನಲ್** (ನಾ). ಮನೋಹರವಾದ ಪ್ರವಾಹ, —ನದಿ : ಉದಿರ್ಪುತಿರ್ಪ ಕುಸುಮದ್ರುತಿಯೊಳ್ವೊನಲೊಳ್ ಕಟಲ್ವ ಕಪ್ಪುರದ ಪುಳಿಲ್ (ವರ್ಧಪು. ೪-೭೩). [ಒಳ್$_2$ (< ಒಳ್ಳಿತ್ತು$_1$) + ಪೊನಲ್]

**ಒಳ್ವೊಲ** (ನಾ). ಉತ್ತಮವಾದ ಭೂಮಿ; ಫಲವತ್ತಾದ ನೆಲ : ಕುನ್ತಳದೇಸಕ್ಕಳವಟ್ಟ ಚಿನ್ನಪೂವನೆ ಬೆಳಗಿದುದೊಳ್ವೊಲಮೆನಿಪ್ಪ ಬೆಳ್ವಲದೇಶಂ (ಕಇ. I, ೨೪-೮; 1148). [ಒಳ್$_2$ (< ಒಳ್ಳಿತ್ತು$_1$) + ಪೊಲ]

**ಒಳ್ಳಕ್ಕರಿಗ** (ನಾ). ಒಳ್ಳೆಯ ಅಕ್ಷರಜ್ಞ; ಪಂಡಿತ; ವಿದ್ವಾಂಸ : ತಿಂದು ಪರಿವನಲ್ಲಂ . . . ತಕ್ಕನೆನಿಸಿದೊಳ್ಳಕ್ಕರಿಗಂ (ಸಮಪ. ೧೩-೪೮). [ಒಳ್$_2$ (< ಒಳ್ಳಿತ್ತು$_1$) + ಅಕ್ಕರಿಗ]

**ಒಳ್ಳಡಗು** (ನಾ). ಒಳಗಿನ ಮಾಂಸ : ಇಭದೊಳ್ಳಡಗುಮನಡುಗುಮೆರತಿಯಗರ್ಗಡಗೊ[ಗೆ]ಲ್ವಪ್ಪಿನಮಿಭೇಂದ್ರದಿಂ ತುಱಯಿಸುವೆಂ (ಶಾಂತಿಪು. ೬-೮೧). ☞ ಇಲ್ಲಿ ಒಳ್ಳೆಯ ಮಾಂಸ ಎಂದೂ ಅರ್ಥವಾಗಬಹುದು. [ಒಳ್$_1$ (< ಒಳಗು) + ಅಡಗು$_3$]

**ಒಳ್ಳನೆ** (ಅ). ಸುಮ್ಮನೆ; ನಿಷ್ಕಾರಣವಾಗಿ : ಒಳ್ಳನುರಿವ ಪುಣ್ಗಳೊಳ್ ಕ್ಷಾರವಾರಿಗಳನೆಱದೊರಸಿ ಕರ್ಚುವರುಂ (ಆದಿಪು. ೫-೮೫ ವ). 'ಉಳನೆ' ಪರಾ. [?]

**ಒಳ್ಳರಲ್** 'ಒಳ್ಳಲರ್' ನೋ.

**ಒಳ್ಳರಲೆಱು** (ಕ್ರಿ). ಒಳ್ಳೆಯ ಹೂವನ್ನು ಕೊಡು : ನಾರಿಯೊರ್ವಳ ನರ್ಮವಾಕ್ಯಕೆ ನವಮಂದಾರವೊಳ್ಳರಲೆಱದುದು (ಶ್ರೀಪಾಲ. ೫-೪೨). [ಒಳ್ಳರಲ್ (< ಒಳ್ಳಲರ್) + ಎಱು$_1$]

**ಒಳ್ಳರಲ್ದಿಱು** (ಕ್ರಿ). ಒಳ್ಳೆಯ ಹೂವುಗಳನ್ನು ಕೊಯ್ದು ತರು : ಪೂಗೊಂಚಲೊಳ್ ಪೊಕ್ಕು ನುಣ್ಪಿಂದಂ ಕಂಪಿಡಿದೊಳ್ಳರಲ್ದಿಱದು (ಶಬಶಂ. ೨-೩೯). [ಒಳ್ಳರಲ್ (< ಒಳ್ಳಲರ್) + ತಿಱು$_1$]

**ಒಳ್ಳರಸಂಕಶಂಕರ** (ನಾ). ಒಂದು ಬಿರುದು (?): ವಾದ್ಯವಿದ್ಯಾಧರ [ನೊ]ಳ್ಳರಸಂಕ[ಶಂಕ]ರಂ ಕಪ್ಪುರವರ್ಷನೃಪಗೆ ನೆಗರ್ದ್ದನೆಱೆಗಮಹೀಶ (ಸೌಇಇ. XX, ೫೦-೧೫ ; ?). [?]

**ಒಳ್ಳಲಗು** (ನಾ). ಒಳ್ಳೆಯ ಅಲಗು ; ಹದವಾದ ಬಾಯ್ಧಾರೆ: ಒಳ್ಳ ಲಗಿನ ಶರತತಿಯಿಂ ಕೊಳ್ಳಕೊಳ್ಳೆಂದಂಗರಾಜನಸುರನನೆಚ್ಚಂ (ಪಂಪಭಾ. ೧೨-೧೨). [ಒಳ್$_2$ (< ಒಳ್ಳಿತ್ತು$_1$) + ಅಲಗು$_2$]

**ಒಳ್ಳಲರ್, ಒಳ್ಳರಲ್** (ನಾ). ಸೊಗಸಾದ ಹೂ ; ಒಳ್ಳೆಯ ಹೂವು : ಚಿಪ್ಪರಳದೊಳ್ಳಲರ್ಗಳಂ ತುಂಬಿ (ಸಿದ್ಧರಾ. ೪-೩೬); ಸಂಪಗೆಯೊಳ್ಳಲ ರ್ಗಳ ಪಿಡಿದು ಮಾಱುವ ಕೋಮಲೆಯರು (ಶ್ರೀಪಾಲ. ೧-೮೦). **ಒಳ್ಳರಲ್** : ಪುರವೀಧಿಯೊಳೊಳ್ಳರಲೆತ್ತಿ ಮಾಱುವಾಖ್ಯಾನದ ಮಾಲೆ ಗಾರ್ತಿಯರ ರೂಪನಭೀಕ್ಷಿಸಿ (ಶಾಂತೀಶ್ವ. ೧೩-೧೬೩); ಮುಡಿಯೊಳ್ ತುಱುಬಿದ ಚೆಂಗಣಿಗಿಲೆಯೊಳ್ಳರಲಿಂ (ಜಯಕಾ. ೨-೪೮). 'ಉಳ್ಳಲರ್$_2$' ಪರಾ. [ಒಳ್$_2$ (< ಒಳ್ಳಿತ್ತು$_1$) + ಅಲರ್$_2$]

**ಒಳ್ಳಳ್ಕು** (ಕ್ರಿ). ಒಳಗೊಳಗೇ ಹೆದರು ; ಬಹಳವಾಗಿ ಅಂಜು : ಪರ ಭೂಪಂಗತ್ತಿರ್ಗೊಳ್ಳಳ್ಕಿದ ರಿಪುಗಸುರಧ್ವಂಸಿಯಿಪ್ಪರ್ಂತೆ ವಿದ್ಯಾಧರ ನಿಪ್ಪರ್ಂತಬ್ಧಿಯಿರ್ಪರ್ಂತೆಸೆದು ಮಹಿಮೆಯಿಂದಿರ್ದ್ದಪಂ (ಸೌಇಇ. XX, ೭೪-೬ ; 1142). 'ಉಳ್ಳಳ್ಕು' ಪರಾ. [ಒಳ್$_1$ (< ಒಳಗು) + ಅಳ್ಕು$_1$]

**ಒಳ್ಳಱಿವು** (ನಾ). ಒಳ್ಳೆಯ ಜ್ಞಾನ ; ಶ್ರೇಷ್ಠಜ್ಞಾನ : ಒಳ್ಳಱಿವಿನ ಲ್ಲೊಳಿದನ್ ಶಿಳಿಯೆಯೇನ್ ನೀನ್ (ಬದ್ಧಪ್ರ. ೧೮-೩೮೨); ಅದು ನಿನಗೆ ಒಳ್ಳಱಿವ ಕಲಿಸಿಲ್ಲವಿನ್ನುಂ (ಬದ್ಧಪ್ರ. ೫೨-೧೧೩೩). [ಒಳ್$_2$ (< ಒಳ್ಳಿತ್ತು$_1$) + ಅಱಿವು]

**ಒಳ್ಳಾಗರ** (ನಾ). ಒಳ್ಳೆಯ ವಾಸಸ್ಥಾನ; ಶ್ರೇಷ್ಠವಾದ ಮನೆ: ತ್ಯಾಗದ ಗುಣಕ್ಕೆ ತಾಯ್ಮನೆ . . . ಇಷ್ಟರ ವಿಶಿಷ್ಟರ ತೋಷಣಪೋಷಣಂ ಗಳೊಳ್ಳಾಗರಮೆಂದು ಬಣ್ಣಿಸುವುದೀ ಧರೆ ಪಣ್ಡಿತ ಪಾರಿಜಾತನಂ ನಾಗನಂ (ಎಇ. XXI, ೨-೩೩ ; 1260). [ಒಳ್$_2$ (< ಒಳ್ಳಿತ್ತು$_1$) + ಆಗರ$_2$]

**ಒಳ್ಳಾನೆ** (ನಾ). ಒಳ್ಳೆಯ ಆನೆ; ಉತ್ತಮವಾದ ಆನೆ : ಒಳ್ಳಾನೆಗೋ ಡಲಱಿಯದ ಬೆಳ್ಳಾಳವೊಲಗಿದು (ಶಾಂತಿಪು. ೧೦-೮). [ಒಳ್$_2$ (< ಒಳ್ಳಿತ್ತು$_1$) + ಆನೆ$_1$]

**ಒಳ್ಳಾರ** (ನಾ). ಒಳ್ಳೆಯ ಹಾರ; ಉತ್ತಮವಾದ ಮಾಲೆ: "ಒಳ್ಳಾರಂ ಸುಹಾರಾರ್ಥದೊಳ್" (ಕರ್ಣಾನಿ. ೯೬); ರಕ್ಕಸರ ಪಂದಲೆಯಮಾಲೆಯತಿ ತೀವಿರ್ದ ಮುತ್ತಿನೊಳ್ಳಾರವಾಗಲ್ಕೆ ಮಾದೇವನೆಱಗುವನೆಡರ್ಗಾವ ನೊಪ್ಪಿದನೆನ್ನ ಜೀವಗುರು (ಚೇರಮ. ೧-೫೧); ಮೌಕ್ತಿಕದ ಗಡಣದೊ ಳ್ಳಾರಂಗಳಿಂದ (ವೀಕೃಪು. ೨-೯-೧೮). [ಒಳ್$_2$ (< ಒಳ್ಳಿತ್ತು$_1$) + ಆರ$_2$]

**ಒಳ್ಳಾಳ್, ಒಳ್ಳಾಳು** (ನಾ). ಶೂರ; ಕಡುಗಲಿ : ಬೆಳ್ಳಾಳ್ಗೆ ಪೊಳೆವು ದೋಱುವುದೊಳ್ಳಾಳ್ಗೆ ಪೊಡರ್ಪುದೋರ್ಪುದು (ಪಂಪಭಾ. ೧೨-೧೨) ; ಒಳ್ಳಾಳೆಡೆಗೋದನೊದಱಿ ಚಟ್ಟನೊಳೊವಜಂ (ಶಮದ. ನ. ೭೯ ಪ್ರಯೋ). **ಒಳ್ಳಾಳು** : ಕಿರಾತರಾಜರ್ ತಮ್ಮಳ್ಳಾಳುಮನೊಳ್ಳಾಳುಮ ನುಕರ್ಾಳುಮನೊಡಗೊಂಡು ಬಂದು ಮುತ್ತಿದರಾಗಳ್ (ಜೀವಸಂ. ೫೮-೪೦). [ಒಳ್$_2$ (< ಒಳ್ಳಿತ್ತು$_1$) + ಆಳ್$_3$]

**ಒಳ್ಳಾಳು** 'ಒಳ್ಳಾಳ್' ನೋ.

**ಒಳ್ಳಿ** (ನಾ). ರಾಶಿ ; ಸಮೂಹ : ಸಂಶಯದ ಹಸರಮುಬ್ಬಟೆದುಡುವು ರೋಗದೊಟ್ಟಲು ಕಪಟದೊಳ್ಳಿಯಹುದೀ ಕಾಯವು (ಕೈಕವ. ೧-೧೮-೨). [< ಉರುಳಿ$_1$ ?]

**ಒಳ್ಳಿಕೆಯ್** (ಕ್ರಿ). ೧. ಲೇಸುಮಾಡು; ಸರಿಯಾದುದನ್ನೇ ಮಾಡು : ನಿಲ್ಲದೆ ಬಂದೆಮೆಂದೊಡೊಳ್ಳಿಕೆಯ್ದಿರೆಂದೊರ್ (ವಡ್ಡಾರಾ. ೮೯-೧೮) ; ತಪಂಬಟ್ಟೊಳ್ಳಿಕೆಯ್ದಿರ್ (ಚಾವುಂಪು. ೯೪-೧) ; ಬ್ರಹ್ಮಣ್ಯಂ, ಬ್ರಾಹ್ಮಣೇ ಹಿತಂ – ಈ ೨ ಬ್ರಾಹ್ಮಣರ್ಗೆ ಒಳ್ಳಿಕೆಯ್ವುದು (ಹಲಾಯು. ೬೭-೨೫೨). ೨. ಅನುಗ್ರಹಿಸು ; ಉಪಕಾರಮಾಡು : ಸುಯೋಧನನೆನಗೊಳ್ಳಿ ಕೆಯ್ದ ಕೃತಮಂ ಪೆಱಗಿಕ್ಕಿ . . . ಪಾಂಡವರನಾನೊಳವೊಕ್ಕೊಡೆ ನೀಮೆ ಪೇಸಿರೇ (ಪಂಪಭಾ. ೬-೯೮) ; ದ್ರೋಣನೆಮಗೊಳ್ಳಿಕೆಯ್ದಂ ದ್ರೋಣನ ಸುತನೊಳ್ಳಿಕೆಯ್ಯದಿರ್ಕುಮೆ (ಗದಾಯು. ೩-೬೧). ೩. ಶುಭವನ್ನುಂಟು ಮಾಡು : ಎನಗೀಗಳೊಂದಿ ಚಂದ್ರನ ಬಲಮೊಳ್ಳಿತಾಗಿ ಸಲೆಯಿಲ್ಲದೊಡಾ ವುದುಮೊಳ್ಳಿಕೆಯ್ಗುಮೇ (ಪಂಪಭಾ. ೪-೬೮); ಕಿಚ್ಚಂ ಸಾರ್ದಂಗೆ ಮಾಗೆಯೊಳೊಳ್ಳಿಕೆಯ್ವಂತೆ ಬೇಸಗೆಯೊಳೊಳ್ಳಿಕೆಯ್ಗುಮೆ (ಜೀವಸಂ. ೧೩-೨೫ ವ). [< ಒಳ್$_2$ (< ಒಳ್ಳಿತ್ತು$_1$) + ಕೆಯ್$_1$]

**ಒಳ್ಳಿಗ** (ನಾ). ಒಳ್ಳೆಯವನು : ಅಂ ಕರಿಕನೆನಾಂ ಶ್ವೇತನೆನಾಂ ಕುಲಜ ನೆನಾಂ ಧನಾಢ್ಯನೆಂದೊಳ್ಳಿಗನೆಂ (ಪರಮಾ. ೫-೧೪). [ಒಳ್$_2$ (< ಒಳ್ಳಿತ್ತು$_1$) + -ಇಗ]

**ಒಳ್ಳಿತು** 'ಒಳ್ಳಿತ್ತು$_1$' ನೋ.

**ಒಳ್ಳಿತುಗೆಯ್** (ಕ್ರಿ). = ಒಳ್ಳಿಕೆಯ್ ೧ : ಒಳ್ಳಿತುಗೆಯ್ದ ದೇವಗತಿ ಯೊಳ್ ತೊದಳೇಂ ಜನಿಯಿಸಿದಪೆ (ವರ್ಧಪು. ೧೬-೬೧). [ಒಳ್ಳಿತು (< ಒಳ್ಳಿತ್ತು$_1$) + ಕೆಯ್$_1$]

**ಒಳ್ಳಿತೆಸಕ** (ನಾ). ಒಳ್ಳೆಯ ಕೆಲಸ : ಒಳ್ಳಿತೆಸಕಂಗೆಯ್ದರೆಲ್ಲರುಂ, ಪೆರ್ಮೆಯದು ! (ಪಾರಶಿ. ೨೮-೬೫೧). [ಒಳ್ಳಿತು (< ಒಳ್ಳಿತ್ತು$_1$) + ಎಸಕ$_2$]

**ಒಳ್ಳಿತ್ತು$_1$, ಒಳಿತು$_1$, ಒಳ್ಳಿತು** (ಗು). ೧. ಒಳ್ಳೆಯದಾದ; ಶ್ರೇಷ್ಠ ವಾದ; ಯೋಗ್ಯವಾದ : ಬಲಮುಂ ಶಕುನಮುನೊಳ್ಳಿತ್ತುಪಾಯಮುಂ ಪಿಡಿವಂದು (ಪಂಪಭಾ. ೫-೪೬). (ನಾ). ೨. ಒಳ್ಳೆಯದು ; ಶ್ರೇಷ್ಠ ವಾದುದು ; ಯೋಗ್ಯವಾದುದು : ಈಗಳೆನ್ನ ಪುಣ್ಯದಿಂ ದೊರೆ ಕೊಂಡುದೊಳ್ಳಿತ್ತು (ಪಂಪಭಾ. ೧-೧೧೮ ವ) ; ಎನ್ನೊಡನೆ ಬರ್ಪುದೊ ಳ್ಳಿತ್ತು (ಪಂಚತಂ. ೫೪-೨೦) ; ವಸ್ತ್ರಂಗಳೊಳ್ ಬೆಳ್ಪಟ್ಟೆಯೊಳ್ಳಿತ್ತು (ಶಬ್ದಾನು. ೨೨೩ ಪ್ರಯೋ). ೩. ಶುಭವಾದುದು ; ಹಿತವಾದುದು ; ಉತ್ತಮವಾದುದು : ಒಳ್ಳಿತ್ತ ಕೆಯ್ವೊರಾರ್ ಪೊಲ್ಲದುಮದಱನ್ತೆ (ಇಆ. X, ೬೧-೭ ; 7ನೆಯ ಶತ) ; ಅಡಿಗಡಿಗೊಳ್ಳಿತ್ತಂ ನುಡಿ (ಸಮಪ. ೨-೮೦) ; ಅಲ್ಲದುದಂ ಪಿಂಗಿಸಿ ಲೀಲೆಯಿನೊಳ್ಳಿತ್ತಂ ಪಿಡಿವಾ ಬುಧಜಾಲಂ (ಜಯಕಾ. ೧-೨೨). **ಒಳಿತು$_1$** : ೨. ಆದದ್ದೆಲ್ಲ ಒಳಿತೇ ಆಯಿತು (ಪುರಂದ. ೧-೯೫ ಪಲ್ಲವಿ) ; ಸಂಧಿಯ ಮಾಳ್ಪುದೊಳಿತೆಂದು . . . ಬಿನ್ನಹಮಾಡಿದನು (ಮೋಹತ. ೩೭-೩೫) ; ನೀವೂ ಬಂದರೆ ಒಳಿತು (ಕುಂಕುಮ. ೪೯). ೩. ಹೆತ್ತವರು ತಮ್ಮ ಮಕ್ಕಳ ಒಳಿತಿಗಾಗಿಯೇ ಶ್ರಮಿಸುತ್ತಾರೆ (ಪ್ರಕಾಪ. ೨೪). **ಒಳ್ಳಿತು** : ೨. ಒಳ್ಳಿತಪ್ಪ ಸತ್ಯ ಶೌಚ ಚಾರಿತ್ರವೆಂದು (ವಡ್ಡಾರಾ. ೮೭-೮) ; ಇದು ಪೊಲ್ಲದೊ ತಾನೊಳ್ಳಿತೋ ಮೇಣ್ (ಕಾದಂಪೂ. ೭೮೬) ; ಅಸುರರಿಪುವಿನ ಕೂಡೆ ವಿಗ್ರಹವೊಳ್ಳಿತೇ (ಕುವ್ಯಾದ್ರೋ. ೧-೯). ೩. ಆದಿಯ ನೃಪರಮಿತಮತಿಗಳಿದನೊಳ್ಳಿತನುತ್ಪಾದಿಸಿದರ್ (ಶಾಂತಿಪು. ೬-೧೨) ; ಧರ್ಮತನೂಜನೊಳ್ಳಿತಂ ಪೇೞ್ದಪಂ (ಗದಾಯು. ೭-೪೫) ; ಕುಳ್ಳಿರಿರಕ್ಕೆ ನೀವೆಲ್ಲ ಬಳಲ್ದಿರೆಂದೊಳ್ಳಿತ ನುಡಿದು (ಭರಚ. ೪-೧೧೩).

ಒಳ್ಳಿದರ್, ಒಳ್ಳಿದರು (ಬಹುವ): ನಾಯಕರೊಳ್ಳಿದರ್ ನೆರೆದರೋ ಕಾದಲ್ಕೆ (ಪಂಪಭಾ. ೧೦-೪) ; ಅವನಿಪಾಲರು ಕಂಗಳಿಂದವೆ ಕಿವಿಗೆ ಕರವೊ ಳ್ಳಿದರು (ಕುವ್ಯಾದ್ರೋ. ೧೮-೨) ; ಒಳ್ಳಿದರ ಒಡನಾಡಿ ಕಳ್ಳನೊಳ್ಳಿದನಕ್ಕು ಒಳ್ಳಿದನು ಕಳ್ಳರೊಡನಾಡಿ ಅವ ಶುದ್ಧ ಕಳ್ಳ ತಾನಕ್ಕು (ಸರ್ವಜ್ಞ. ೮೨೩).

ಒಳಿತಾಗಿ = ೧. ಚೆನ್ನಾಗಿ; ಸುಖವಾಗಿ: ನೀವು ಒಳಿತಾಗಿ ಇದ್ದೀರೊ? (ಮುಂಬಯಿ. ೩-೬೭). ೨. ಸಂಪೂರ್ಣವಾಗಿ; ವಿಶೇಷವಾಗಿ: ಅವನನ್ನು ಒಳಿತಾಗಿ ಥಳಿಸಿದರು (ಮುಂಬಯಿ. ೧-೨೩); ಒಳಿತಾಗಿ ಮಳೆಬೀಳುವವರೆಗೆ ಕಡಿಮೆಯಾಗುವುದಿಲ್ಲ (ಕಥಾಗ. I, ೨೧). ಒಳಿತಾಗು, ಒಳ್ಳಿತಾಗು, ಒಳ್ಳಿತ್ತಾಗು = ಒಳ್ಳೆಯದಾಗು; ಹಿತವಾಗು: ಇದರಿಂದ ಒಳಿತಾಗಲಿಕ್ಕಿಲ್ಲ (ಮೇದಿಮ. ೧೦); ಸಮ್ಯಗ್ಜ್ಞಾನ ಚಾರಿತ್ರಂಗಳೊಳಗೊಳ್ಳಿತಾಗಿ ನೆಗಟ್ದು (ವಡ್ಡಾರಾ. ೮೪-೨೯); ನಿನ್ನ ಚೆನ್ನಭಾಷಿತಮದೊಳ್ಳಿತ್ತಾದುದು (ಗದಾಯು. ೨-೮ ವ); ನೀನಾ ದ್ವಿಜನ್ಮಜಾತಿಯಂ ಒಳ್ಳಿತ್ತಂ ಮಾಡಿದೆಯನ್ನೆವರಂ ಒಳ್ಳಿತ್ತಾಗಿ ನಡೆಗುಂ (ಚಾವುಂಪು. ೭೪-೨೧); ಒಳ್ಳಿತ್ತು ಪೊಲ್ಲದೆಂಬುದನೊಳ್ಳಿತ್ತಾಗಱಿದವಂಗೆ ಜಿನವಚನಂ ತಾನೊಳ್ಳಿತ್ತು (ಸಮುಪ. ೩-೩೦). ಒಳ್ಳಿತೆಯ್ದು = ಒಳ್ಳೆಯದನ್ನು ಪಡೆ; ಶ್ರೇಯಸ್ಸನ್ನುಹೊಂದು: ಒಡಲೊಡವೆಯನಿತ್ತುವೊಳ್ಳಿತೆಯ್ದಿದರೆಂಬ ನುಡಿ ಹರೆದುದ ಕೇಳಱಿಯಾ (ಶ್ರೀಪಾಲ. ೮-೫೩). ಒಳ್ಳಿದನ್, ಒಳ್ಳಿದನು = ಒಳ್ಳೆಯವನು: ಕಳ್ಳನೊಳ್ಳಿದನೊ ತಳಱನೊಳ್ಳಿದನೊ (ಕುಸುಮಾ. ೭-೨೭); ಲಕ್ಷ್ಮೀಲೋಲನಿಮಗೊಳ್ಳಿದನು (ಕುವ್ಯಾಅ. ೦೦೫. ೨೧-೪೪). ಒಳ್ಳಿದಳ್ = ಒಳ್ಳೆಯವಳು: ಒಳ್ಳಿದಳ್, ನಲ್ಲಳ್, ಪೊಲ್ಲಳ್ (ಭಾಷಾಭೂ. ೧೯೦ ಉದಾ); ವಿದ್ಯಾಕಲೆಗಳನು ಒಳ್ಳಿದಳಂತೆ ತೋಱಿಸಿದಳು ರಾಯಗೆ (ಕುರಾಸಾಂ. ೨೫-೧೮). [ದೇ. ‖ ತಮಿ. ಒಳಿ, ಒಣ್ಮೈ]

ಒಳ್ಳಿತ್ತು₂, ಒಳಿತ್ತು₂ (ಅ). (ಒಪ್ಪಿಗೆಯನ್ನು ಸೂಚಿಸುವಲ್ಲಿ) ಆಗಬಹುದು, ಒಳ್ಳೆಯದು ಎಂಬರ್ಥದಲ್ಲಿ ಬರುವ ಅವ್ಯಯ: ಆವರ್-ಕರಮೊಳ್ಳಿತ್ತಂತೆಗೆಯ್ವೆಮೆಂದು (ಪಂಚತಂ. ೨೦-೧೩); ಅಂತಾದೊಡೆ ಕರಮೊಳ್ಳಿತ್ತು ನಡೆ ನಿನ್ನ ನಚ್ಚಿನ ರಿಷಿಯಲ್ಲಿಗೆ (ಸುಕುಮಾ. ೬-೫೧ ವ); ಕರಮೊಳ್ಳಿತ್ತು ಬನ್ನಿಂ (ಧರ್ಮಾಮೃ. ೧-೯೮). ಒಳಿತ್ತು₂: ಅಸಮಾಕ್ಷಪದದರ್ಶನಕೆ ಪೋದಪೆವೆಂದು ಬೆಸಗೊಳಲೊಳಿತೆಂದು ನುಡಿದ (ಮೋಹತ. ೨೩-೫೭). [< ಒಳ್ಳಿತ್ತು₁]

ಒಳ್ಳಿಹ (ಗು). ಚೆನ್ನಾಗಿರುವ; ಉತ್ತಮವಾಗಿರುವ: ಒಳ್ಳಿಹ ಮುಸ್ತೆಯಿಪ್ಪೆ ಕೇಡಿಲ್ಲದ ಚಿಲ್ಲಗೊಟ್ಟೆ ಪೂಸಪೀರೆಯ ಬಿತ್ತಿನೊಳಾದ ಬೂದಿಯಂ ನಿಲ್ಲದೆ ಬಾವಿಯೊಳ್ ಕಲಸಲ್ (ಜಟ್ಟಮ. ೧೧-೬೩); ಒಳ್ಳಿಹ [ಪಾಠಾಂ. ಯ] ಮೈಲಾರನವೊಳಗೆಲ್ಲ ಸಣಬು (ಬಸವ. ೨೮೦); ಕಣ್ಣುಗಾಣದ ಕುರುಡನೊಳ್ಳಿಹ ಕನ್ನಡಿಯ ಹಿಡಿದಂತೆ (ಪ್ರಭುಲೀ. ೭-೮). ಒಳ್ಳಿಹನು = ಒಳ್ಳೆಯವನು: ಮನಧರ್ಮವ ಮಱೆಯಿಸಿ ಹೀನನೊಳ್ಳಿಹನಾದಹನೆ (ಮೋಳಿಮಾ. ೪-೧೩).

[ಒಳ್₂ (< ಒಳ್ಳಿತ್ತು₁) + ಇಹ₁ (< ಇರ್₁)]

ಒಳ್ಳುಗುರ್ (ನಾ). ಒಳ್ಳೆಯ ಉಗುರು; ಚೆಲುವಾದ ಉಗುರು: ಅವನತಕಂಠಿ ಕಯ್ನುಡಿಯನೊಳ್ಳುಗುರಿಂ ಬೆರಟುತ್ತೆ ಬೆಳ್ಮೊಗಂ ಸಮನಿಸೆ ಕಾಲ್ಬೆರಲ್ ಬರೆಯೆ ಭೂಮಿಯನಿರ್ದಳದೊಂದು ಚೆಲ್ವಿನಿಂ (ರಸರ. ೪-೧೮೫). [ಒಳ್₂ (< ಒಳ್ಳಿತ್ತು₁) + ಉಗುರ್₁]

ಒಳ್ಳುಡೆ (ನಾ). ಒಳ್ಳೆಯ ಉಡುಗೆ: ಮಿಸುಪ ದುಗುಲದೊಳ್ಳುಡೆ (ಜಗವಿ. ೧೦-೧೦೭); ಅಕ್ಷಮಾಲೆಯೊಳ್ಳುಡೆ ನವಕಾಂತಿ ಹಸ್ತಕಟಕಂ ಮೆಱೆಯುತ್ತಿರೆ (ಗಿರಿಕ. ೩-೪೮). 'ಉಳ್ಳುಡೆ' ಪರಾ.

[ಒಳ್₂ (< ಒಳ್ಳಿತ್ತು₁) + ಉಡೆ₂]

ಒಳ್ಳುಣಿಸು (ನಾ). ಒಳ್ಳೆಯ ಉಣಿಸು; ಉತ್ತಮವಾದ ಆಹಾರ: ಅಗಲೊಳಿಕ್ಕಿದೊಳ್ಳುಣಿಸು (ಅಜಿಪು. ೨-೫೧); ತುಡುವುದು ಭೂಷಣ ಮನುಣ್ಬುದೊಳ್ಳುಣಿಸಂ (ಧರ್ಮಾಮೃ. ೪-೨೩೨); ಬಡವಂಗೆ ಕೆಡವರಂ ಪಸಿದವಂಗೊಳ್ಳುಣಿಸು ... ದೊರೆಕೊಂಡೊಲಾಯ್ತು (ಚಿಬಪು. ೩೭-೧೨).

[ಒಳ್₂ (< ಒಳ್ಳಿತ್ತು₁) + ಉಣಿಸು₂]

ಒಳ್ಳುರಿ (ನಾ). ಹೆಚ್ಚಿನ ಉರಿ; ಪ್ರಚಂಡವಾದ ಜ್ವಾಲೆ: ಆ ನನೆಗಣೆಯಿಂದುದಯಿಸಿದುಗ್ರಾನಲನೊಳ್ಳುರಿಯೊಳು ತದ್ವಿರಹದ ಮಾನಿನಿ ಕಣ್ಗೆ ವಿರಾಜಿಸಿದಳ್ (ಜಯಕಾ. ೪-೪೨). [ಒಳ್₂ (< ಒಳ್ಳಿತ್ತು₁) + ಉರಿ₂]

ಒಳ್ಳುರಿಚ (ನಾ). ಒಳ್ಳೆಯ ಊರಿನಲ್ಲಿ ಹುಟ್ಟಿದವನು; ಪಟ್ಟಣಿಗ; ನಾಗರಿಕ: ಒಳ್ಳುರಿಚಂ, ಬನಿಚಂ, ಕಲಿಚಂ, ಕರಹಡಿಚಂ (ಶಬ್ದಾನು. ೪೨೦ ಪ್ರಯೋ); ಬಿನ್ನಣಿಗಾಱರೊಳ್ಳುರಿಚರ್ ಅಕ್ಕರಿಗರ್ ಕೆಳೆ ಪಾರ್ವರ ಮಕ್ಕಳುಂ ತನ್ನೊಡನಾಡೆ (ಚಿಕವಿ. ೫-೧೧೦). [ಒಳ್ಳೂರ್ + -ಇಚ]

ಒಳ್ಳುಲಿಪು (ನಾ). ಇಂಪಾದ ಧ್ವನಿ; ಮಧುರವಾದ ನಾದ: ಜಲವಿಹಗಂಗಳೊಳ್ಳುಲಿಪುಗೇಳ್ದು (ಕುಸುಮಾ. ೧-೮೧).

[ಒಳ್₂ (< ಒಳ್ಳಿತ್ತು₁) + ಉಲಿಪು]

ಒಳ್ಳೂರ್ (ನಾ). ಒಳ್ಳೆಯ ಊರು, —ಪಟ್ಟಣ: ಒಳ್ಳಿತು ಊರ್ ಒಳ್ಳೂರ್ (ಶಬ್ದಾನು. ೪೯೧ ವ್ಯಾಖ್ಯಾ). 'ಒಳ್ಳೂರಿಗ' ಪರಾ.

[ಒಳ್₂ (< ಒಳ್ಳಿತ್ತು₁) + ಊರ್]

ಒಳ್ಳೂರಿಗ (ನಾ). ೧. = ಒಳ್ಳುರಿಚ: ಕರಹಡಿಗಂ, ಒಳ್ಳೂರಿಗಂ, ಬಾನಿಗಂ, ಪಟ್ಟಣಿಗಂ (ಶಬ್ದಾನು. ೪೯೧ ಪ್ರಯೋ). ೨. (ಕರಾ) ಒಳನಾಡಿನವನು. [ಒಳ್ಳೂರ್ + -ಇಗ]

ಒಳ್ಳೆ₁ (ಗು). ಒಳ್ಳೆಯ; ಶ್ರೇಷ್ಠವಾದ: ಮಕ್ಕಳಿಗೆ ಒಳ್ಳೇ ನಡತೆಯನ್ನು ಕಲಿಸುವುದು (ಮುಂಬಯಿ. ೪-೩೩); ಜನರು ನನ್ನ ಒಳ್ಳೆ ಎತ್ತುಗಳನ್ನೆಲ್ಲಾ ಓಡಿಸಿಬಿಟ್ಟರು (ಆರ್ಯಕ. ೧೦); ಒಳ್ಳೇಮಾತಿಗೆ ಸುಳ್ಳೇ ಪ್ರಧಾನ್ಯ (ಗಾದೆ). [< ಒಳ್₂]

ಒಳ್ಳೆ₂ (ನಾ). ವಿಷವಿಲ್ಲದ ಹಾವು; ನೀರುಹಾವು: "ರಾಜಳಃ, ಡುಂಡುಭಃ – ಈ ೨ ಒಳ್ಳೆ" (ಹಲಾಯು. ೧೦೭-೨೧); ನೆಟ್ಟನೆ ವಿಷಮೊಳ್ಳೆಗುಳ್ಕೊಡಮದೊಳ್ಳೆಯೆ (ಪಂಪಭಾ. ೧೦-೪); ಅಱಿಯದವರಿಗೆ ಒಳ್ಳೆ ಹೆಡೆಯೆತ್ತಿಯಾಡುವಂತೆ (ಬಸವ. ೬೬೮); ಉರಗೇಂದ್ರಂಗೆ ಸಮಾನಮೊಳ್ಳೆಯೆ (ಸೋಮೇಶ. ೧೦); ಒಳ್ಳೆ ಗಡ ಪಾವುಡವ ವಾಸುಗಿಯಲ್ಲಿ ಗಟ್ಟಿತು (ಕುವ್ಯಾದ್ರೋ. ೫-೫೩).

[ದೇ. ‖ ತುಳು. ಒಳ್ಳೆ, ಒಲ್ಲೆ; ಕೊಡ. ಒಳ್ಳೆಪಾಂಬೀ]

ಒಳ್ಳೆ₃ (ನಾ). ಕಹಿಪಡುವಲಕಾಯಿ: ಪೂವಿನ ಬಾಡುಗಳಂ ಕ್ಷೀರಾವನಿಜಂಗಳ ಫಳಂಗಳಂ ಒ[ಪಾಠಾಂ. ಬ]ಳ್ಳೆಯುಮಂ ಶ್ರಾವಕನಾಗದು ಸೇವಿಸಲ್ (ಸಮುಪ. ೬-೮). [?]

ಒಳ್ಳೆಉಪ್ಪಿಗಿಡ (ನಾ). ಒಂದು ಬಗೆಯ ಗಿಡ: ಒಳ್ಳೆಉಪ್ಪಿಗಿಡ, ಕತ್ತರಿಗಿಡ, ಕಾಡುಕತ್ತರಿ (ವೈಔಗಿ. ೧೭-೩೦೮).

[ಒಳ್ಳೆಉಪ್ಪಿ₀ + ಗಿಡ (< ಗಿಡು)]

ಒಳ್ಳೆಕಾರೆ (ನಾ). ಒಂದು ಔಷಧಿ ಗಿಡ: ನಗರೆ, ದೊಡ್ಡಕಾರೆ, ಬೋನುಗಾರೆ, ಗರುಡಕಾರೆ, ಒಳ್ಳೆಕಾರೆ (ವೈಔಗಿ. ೬೬-೧೩೩೯). [?]

ಒಳ್ಳೆಗ (ನಾ). ನೀರುಹಾವಿನಂತಹವನು; ಕ್ಷುದ್ರ; ಅಲ್ಪ: ಅಳುತನವುಳ್ಳವರ ಕರೆ ಪಾಂಚಾಲರೊಳ್ಳೆಗರವದಿರಂಬಿನ ಕೋಲ ಕಾಣದ ಮುನ್ನ ಹಮ್ಮೈಸುವರು ಹುರಿಯೊಡೆದು (ಕುವ್ಯಾದ್ರೋ. ೧-೫೯); ಡಿಳ್ಳಮಾದುದೆ ಯೌವನಾಶ್ವಭೂಪತಿಯ ಬಲಮೊಳ್ಳೆಗರ ನೂಕು ನೂಕು (ಜೈಮಿಭಾ. ೪-೨೧). [ಒಳ್ಳೆ₂ + -ಗ₃]

ಒಳ್ಳೆಣ್ಣೆ (ನಾ). ಎಳ್ಳು, ಹುಚ್ಚೆಳ್ಳು, ಕುಸುಬೆ, ನೆಲಗಡಲೆ ಮೊದಲಾದುವುಗಳಿಂದ ತೆಗೆದು ಅಡುಗೆಗೆ ಉಪಯೋಗಿಸುವ ಎಣ್ಣೆ: ಎತ್ತುಗಳಿಗೆಲ್ಲ ಒಳ್ಳೆಣ್ಣೆ, ಹಾಗೂ ಕೋಳಿತತ್ತಿಯ ಗೊರಟ ಹಾಕಿಸಿ ನದಿಗೆ ಈಸಲು ಕಳಿಸಬೇಕಾಗಿತ್ತು (ಗ್ರಾಮಾಯ. ೧೪); ಬೆಳ್ಳಿ ಬಟ್ಟಲದಾಗ ಒಳ್ಳೆಣ್ಣೆ ತಕ್ಕೊಂಡು ... ಮದುಮಕ್ಕಳಿಗೆ ನಯನೀರೂನು ಬನ್ನಿರೆ (ಲೋಕಗೀ. ೪೨). [ಒಳ್₂ (< ಒಳ್ಳಿತ್ತು₁) + ಎಣ್ಣೆ]

**ಒಳ್ಳೆತನ** (ನಾ). ಒಳ್ಳೆಯ ಸ್ವಭಾವ, —ನಡತೆ: ಅಂತೂ ಪದ್ಮಾವತಿಯ ಒಳ್ಳೆತನದಲ್ಲಿ ಆಕೆಗೆ ಸುಖ ಸಿಕ್ಕಲಿಲ್ಲ (ದೇವಹಂ. ೮೭).

[ಒಳ್ಳೆ$_1$ + -ತನ]

**ಒಳ್ಳೆನಂಗು** (ನಾ). ಒಂದು ಔಷಧಿಗಿಡ (ಮೈಔಗಿ. ೭೭–೧೫೭೮). [?]

**ಒಳ್ಳೆನೀಲಿ** (ನಾ). ಒಂದು ಔಷಧಿಗಿಡ; ನೀಲಿಗಿಡ: ಒಳ್ಳೆನೀಲಿ, ಹೆಣ್ಣುನೀಲಿ, ಅಂಜೂರನೀಲಿ (ಮೈಔಗಿ. ೪೭–೯೦೩).

[ಒಳ್ಳೆ$_0$ + ನೀಲಿ]

**ಒಳ್ಳೆಮೆಣಸು** (ನಾ). ಒಂದು ಜಾತಿಯ ಮೆಣಸು; ಕಾಳುಮೆಣಸು: ಪಥ್ಯಕ್ಕೆ ಒಳ್ಳೆಮೆಣಸಿನ ಸಾರು ಹಿತವಾಗುತ್ತದೆ (ರೂಢಿ).

[ಒಳ್ಳೆ$_1$ ? + ಮೆಣಸು]

**ಒಳ್ಳೆಲೆ** (ನಾ). ಒಂದು ಜಾತಿಯ ಎಲೆ; ಸೊಗಸಾದ ಎಲೆ (?): ಬೆಳರೆ ಮುಖಾಬ್ಜಮಾಯ್ತು ಡಸಿದೊಳ್ಳೆಲೆಯಂತೆ (ಕಾವ್ಯಸಾ. ೩೬೦ ಶೂದ್ರಕ); ಕವಲಿನೊಳ್ಳೆಲೆಯಂ ದೆಸೆಯಂ ಮುಗುಳ್ಗಳಿಂ . . . ನೀರೆಱೆ ದನ್ತೆ ದುಗ್ಧಮೆನೆ ಚಟ್ಟಲದೇವಿಯ ಸದ್ಮಕೋದ್ರುಮಂ (ಎಕ. VIII, ನಗರ. ೪೦–೩೩; 1077).

[ಒಳ್ ? + ಎಲೆ$_1$]

**ಒಳ್ಳೆಸಟ್** (ನಾ). ಒಳ್ಳೆಯ ರೇಕು, —ದಳ: ಮಸೃಣಕಟಾಕ್ಷದಿಂ ಕುಮುದದೊಳ್ಳೆಸಟಂ ಕರೆವಂತಿರೆ . . . ಬೊಂಬುಳಿಗೊರ್ವಳಾಡಿದಳ್ (ಜಗವಿ. ೫–೧೭).

[ಒಳ್$_2$ (<ಒಳ್ಳಿತ್ತು$_1$) + ಎಸಟ್]

**ಒಳ್ಳೆಹೊನ್ನೆ** (ನಾ). ಹೊನ್ನೆಮರದಲ್ಲಿ ಒಂದು ಪ್ರಕಾರ (?): ಒಳ್ಳೆ ಹೊನ್ನೆ, ಹನೆ (ಮೈಔಗಿ. ೬೫–೧೩೧೭).

[ಒಳ್ಳೆ$_0$ + ಹೊನ್ನೆ]

**ಒಱಂಗಿಸು**, ಒರಗಿಸು, ಒಱಗಿಸು (ಕ್ರಿ). ೧. ಬಾಗಿಸು; ತಿರುಗಿಸು: ಒಂದಿನಿಸು ಗೋಣನೊಱಂಗಿಸಿ ನೋಡುತೋಪನಂ (ಉದ್ಭಟ. ೧೦–೪೭). **ಒರಗಿಸು**: ೨. ಮಲಗಿಸು: ಇನ್ನು ಮಗುವನ್ನು ಒರಗಿಸಲಿಕ್ಕೆ ಒಂದು ಜಾವ ಬೇಕು (ಮಧುಸ. ೧೪೨). ೩. ಆನಿಸು; ಆತು ಕೊಳ್ಳುವಂತೆ ಮಾಡು: ನಾನು ಅವರ ಹಿಂದುಗಡೆ ಅವರನ್ನು ಒರಗಿಸಿ ಕೊಂಡು ನಿಂತುಕೊಂಡೆ (ಚೆಂಗಾಳ್ವ. ೧೪೨). ೪. ಹೊರಿಸು; ಹೇರು; ಆರೋಪಿಸು: ಬುದ್ಧಿಮಂತನೆಂದು ಹೊಗಳಿಸಿಕೊಳ್ಳುವ ದೊಡ್ಡವನೂ ಮುಗ್ಗರಿಸುವುದಾದರೆ, ಈ ದೋಷವನ್ನು ಆರಮೇಲೆ ಒರಗಿಸಬಹುದು? (ಬೆನ್ನ ಬೇ. ೧೬೦). **ಒಱಗಿಸು**: ೨. ಒಡಹುಟ್ಟಿದರ ಸಹಿತೊಱಗಿಸುವೆ ನಿಮ್ಮಡಿಯ ಚರಣದೊಳು (ಕುವ್ಯಾಅ. ಓಂಇ. ೨೦–೭); ಬಿಸಿನೀರಿನಿಂದೆ ಮೆಯ್ದೊಳೆದು ಪಕ್ಕೆಯೊಳೊಱಗಿಸಿ ವಸ್ತ್ರದಿಂ ಮುಚ್ಚಿ ಹೊದೆಸಿ (ಮೋಹತ. ೧೧–೪೭). ೩. ಗೃಹಬಹಿರ್ದ್ವಾರ ವೇದಿಕೆಯೊಳು ಇಂಧನದ ಹೊರೆಯ ನೊಱಗಿಸಿ (ಚಬಪು. ೫೨–೪೭).

[ಒಱಂಗು + -ಇಸು$_3$]

**ಒಱಂಗು**, ಒರಗು$_1$, ಒಱಗು$_1$ (ಕ್ರಿ). ೧. ನಿದ್ದೆಹೋಗು; ಮಲಗು: ಕಂಪುಂಡು ತಣಿದು ಪೂಗೊಂಚಲೆಡೆಯೊಳೊಱಂಗಿ (ಉದ್ಭಟ. ೧೦–೧೨೪); ರತ್ಯಂತದೊಳ್ಪಿರಿದುಂ ವಿಶ್ರಮಿಸುತೊಱಂಗೆ ಗಿರಿಶಂ ತಾನೆಂಬ ನಾಮಂ ದಿಟಂ (ಶ್ರೀಸೋಶ. ೩); ಒಱಂಗುವುದನ್ ಪೋಲ್ಗುಂ ಸಾವೊಱಂಗಿ ಕಣ್ದೆಱೆವುದನ್ ಪೋಲ್ಗುಂ ಪುಟ್ಟು (ಕುಱಳ್. ೧–೩೪–೯). **ಒರಗು$_1$**: ೧. ಸಿರಿಯ ತೋಳೊಳೊರಗಿ ಮರೆವ (ಕವಿಕಾ. ೪೪); ಬಣ್ಣದ ತೊಟ್ಟಿ ಲಲ್ಲಿ ಕೂಸು ಒರಗಿದೆ (ಹಬ್ಬಬ. ೧೯). ೨. ಕೆಳಕ್ಕೆ ಬಾಗು; ಬಗ್ಗು: ಮೇರುಪರ್ವತವು ಒರಗಿದ ರೀತಿ. . . ಕರ್ಣನು ಹತನಾದನು (ಕೃವಾಕ. ೧). ೩. ಸಾಯು: ಕೌರವರಿಗೆ ಹೊತ್ತುಬಂದಿದೆ. ಅವರು ನಾಯಿನರಿಗಳ ಪಾಲಾಗಿ ಒರಗುತ್ತಾರೆ (ವಚಭಾ. ೨೪೬). ೪. ಆತುಕೊಳ್ಳು; ನೆಮ್ಮು: ತಲೆತಿರುಗಿ ಮಲಗಿದರು ನೆಲನುಮಂ ಸಾರಿದರು ಬರಿನೆಲನ ಕೆಲರು ಒರಗಿದರು (ತುರಂಗ. ೮೮–೭); ಚಾವಡಿಯ ಆ ದೊಡ್ಡಕಂಬಕ್ಕೆ ಒರಗಿ ಕೂಡುವಂತೆ. . . ಅಭ್ಯಾಸವಾಗಿತ್ತು (ಕಂಬಹು. ೧).

**ಒಱಗು$_1$**: ೧. "ಒಱಗು – ಸುಪ್ತೌ (ನಿದ್ದೆ ಹೋಗು)" (ಶಮುಧಾ); ಅಗ್ನಿಹೋತ್ರ ಶಾಲೆಗೆವಂದು ದರ್ಭಶಯನತಳದೊಳೊಱಗಿ (ಪಂಪಭಾ. ೧೩–೩೨ ವ); ಅಲರ್ದಲರೆಸಳ ಪಸೆಯ ಮೇಲೊಱಗಿರ್ದಂ (ಕಾದಂಪೂ. ೯೦೫); ಸುರಗಿಯ ಮೇಲೊಱಗಿ ನಾನಿಹೆನು (ಮಹಾದೇ. ೨೪–೪). ೨. ಬೆಳೆದೊಱಗಿದ ಕಬವೆಗಳುಂ (ಕವಿರಾ. ೩–೧೭೭); ಪೂತೊಱಗಿದ ಗಿಡುಗಳಿಂದೆ (ಅರ್ಥನೀ. ೨–೬೫); ಗಾಳಿಗೊಱಗಿದ ಕದಳಿಯಂತಿರೆ ಲೋಲಲೋಚನೆ ಥಟ್ಟುಗೆಡೆಗಳು (ಕುವ್ಯಾಅ. ೯–೨೭). ೩. ಗುರುತನುಜ ಸಂಗರದೊಳೊಱಗಿದನೆಂದು ದ್ರೋಣಂಗಱುಹು (ಕುವ್ಯಾದ್ರೋ. ೧೮–೩೯); ಕೆಲರು ಮುಗ್ಗಿತು ಕೆಲರು ತಗ್ಗಿತು ಕೆಲರು ಒಱಗಿದರು (ಕೌಶಿರಾ. ೩೨–೩೫). 'ಉಱುಗು' ಪರಾ.

[ದೇ. ‖ ತಮಿ. ಉಱಙ್ಗು, ಉಱಗು, ಉಱಕ್ಕು; ಮಲ. ಉಱಙ್ಙು, ಉಱಕ್ಕು; ತುಳು. ಒರಗು, ಒರ್ದು; ಕೊಡ. ಒರ್; ತೆಲು. ಒಱಗು, ಒರಗು; ಪರ್ಜಿ. ಒರ್ಗ್]

**ಒಱಂಟೆ**, ಒರಟ, ಒಱಟ (ನಾ). ೧. ಗಡುಸಾದವನು; ಹಠವಾದಿ; ಮೊಂಡ; ಸೋಲದವನು; ಉದ್ಧತ: ಮಾರ್ಪಡೆಗೊಱಂಟನಣ್ಣನ ಬಂಟಂ (ಎಕ. II, ೧೩೮–೩; 940); ಕಣ್ಣಾಣದಿಂತಪ್ಪೇಕಗ್ರಾಹಿಗೆ ಮೊಱಂಟಗಂ ರಥಮನೆಸಗೆಂ (ಪಂಪಭಾ. ೧೨–೫೦ ವ). **ಒರಟ**: ೨. ಒರಟು ಸ್ವಭಾವದವನು; ನಯನಾಜೂಕಿಲ್ಲದವನು: ಆ ಒರಟರು ಗಾಬರಿಗೊಂಡು ಕೊಲಂಬಸನ ಕಾಲಿಗೆ ಬಿದ್ದು (ಜ್ಯೋತಿರ್ವಿ. ೨೩೭). **ಒಱಟ**: ೧. ಒಱಟರರ್ಜುನಭೀಮರತಿನಿಷ್ಠುರರು (ಕುವ್ಯಾಕ. ४–३०).

ಒಱಂಟರಗಂಡ = ಒರಟರಿಗೆ ಗಂಡನಂತಿರುವವನು; ಒಂದು ಬಿರುದು: ತೊಣ್ಣರ ಗಂಡನುದ್ಧತರ ಗಂಡನೋ[ನೊ]ಱಂಟರಗಂಡಂ (ಸೌಇಇ. IX–i, ೨೫೭–೨೧; 1159). ಒಱಟರಮಲ್ಲ = ಒಱಂಟರ ಗಂಡ: ನಾಗದೇವನೊಱಟರಮಲ್ಲಂ (ಅಜಿಪು. ೧–೪೦).

[ಒಱಂಟು + -ಅ$_7$]

**ಒಱಂಟು**, ಒರಟು (ನಾ). ೧. ಹಟಮಾರಿತನ; ಮೊಂಡುಸ್ವಭಾವ: ಮುನ್ನಿನೊಱಂಟುವೇಡ ಮಗನೇ ಕೈಕೊಳ್ ಧರಾಭಾರಮಂ (ಪಂಪಭಾ. ೧–೮೧); ನಿತ್ಯಬಿಂದುಗೆ – ಬೆಡಂಗು . . . ಒರ[ಱ]ಂಟು, ತೆರಂಟು (ಶಮುದ. ೩೭ ಪ್ರಯೋ). **ಒರಟು**: ೨. ಒರಟತನ; ನಯನಾಜೂಕಿಲ್ಲದಿರುವಿಕೆ; ಅಸಭ್ಯವಾಗಿರುವಿಕೆ: ಜನಾನುಗ್ರಹದ ಚಿಂತೆ ರಾಜಕೀಯಸ್ಥನ ಸ್ವಭಾವವನ್ನು ಒರಟಾಗಿಸುತ್ತದೆ (ಸಾಹಿಶ. ೧೫); ಇದು ಬಹು ಒರಟು ತತ್ತ್ವವಾಗಿ ಕಾಣುತ್ತದೆ (ಶಿಕ್ಷದ. ೩೧೩); ಒರಟನಿಂದ ಹರಟೆ ಉಂಟಾಗುವುದು (ಗಾದೆ).

ಒರಟುಕೊಂಡಿರು = ಒರಟುತನವನ್ನು ಹಿಡಿದಿರು; ಹಟಮಾಡು: ನೀನು ಹೀಗೆಲ್ಲ ಹೆದರಿಸೋದು, ಒರಟುಕೊಂಡಿರೋದು ಒಳ್ಳೇದಲ್ಲ (ಬಾಳಹೂ. ೨೫).

[ದೇ. ‖ ತಮಿ. ಉಱಂಡ್ಯೆ; ತುಳು. ಒರಂಟ್, ಒರಂಟು]

**ಒಱಂಟುತನ**, ಒರಟುತನ, ಒಱಟ್ಟತನ (ನಾ). ನಯವಿಲ್ಲದಿರುವಿಕೆ; ಬಿರುಸಾಗಿರುವಿಕೆ: ಮಾಡದೊಱಂಟುತನಮಂ ಮಾಡಿದೆಯಪ್ಪೊಡೆ ನಿನಗೆ ತಕ್ಕ ವಿಧಿಯಂ ನಾಳೆ ಮಾಟ್ಪೆಂ (ಧರ್ಮಾಮೃ. ೩–೧೦೦). **ಒರಟುತನ**: ಪೋಲೀಸ್ ಇನ್ಸಪೆಕ್ಟರರೆಂದರೆ ಅವರ ಮುಖದ ಮೇಲೆ ಒರಟುತನ ಕಾಣುವುದು ಸ್ವಾಭಾವಿಕ (ರತ್ನಗೋ. ೩೭); ಅವರಲ್ಲಿ ಕೋಪ, ಕ್ರೋಧ, ಒರಟುತನಗಳು ಹೆಸರಿಗೂ ಇರಲಿಲ್ಲ (ಪ್ರತಾಪ. ೨೦). **ಒಱಟ್ಟತನ**: ಕೊಟ್ಟ ಕುದುರೆಯನು ಮನಮುಟ್ಟಿ ನೋಡದೆ ನನ್ನೊಱ ಟ್ಟತನದಿಂದಮಿಾ ವಂಚಕನೊಳಗೆ ತಂದಿಟ್ಟು ಕುದುರೆಯನು ನೀಗಾಡಿ (ಸಮ್ಯಕೌ. ೧೧–೬೯).

[ಒಱಂಟು + -ತನ]

**ಒಱಂಟುವೇೞ್** (ಕ್ರಿ). ಒರಟುಮಾತನ್ನು ಹೇಳು ; ನಯವಿಲ್ಲದ ಮಾತನ್ನು ಹೇಳು : ಜಲಕ್ಕನಿರೆ ಪೇೞದೆ ಕೆಮ್ಮನೊಱಂಟು [ಪಾಠಾಂ. ನೊಗಂಟು, ನೆಗಂಟು] ವೇೞ್ದು (ಕಾವ್ಯಾವ. ೨೪೯).
[ಒಱಂಟು + ಪೇೞ್]

**ಒಱಂತೆ**, ಒರತೆ, ಒಱತೆ (ನಾ). ಒಣಗಿದ ಹಳ್ಳ ಅಥವಾ ನದಿಯ ಒಡಲಲ್ಲಿ ನೀರು ಜಿನುಗುವ ತಗ್ಗು, —ಕುಳಿ; ಬುಗ್ಗೆ; ಝರಿ : "ಒಱತೆಯೊಱಂತೆಯೆನಲ್ಕೆ ನಿರ್ಝರ ನಾಮಂ" (ಕವಿಕಂ. ೧೯೪); ದೂರ ಪೆರ್ಬಾವಿಯೊಱಂತೆ ತೋಡುವಿನೆಗಂ ತಳಕೋಡಿದುದಾ ನಿದಾಘದೊಳ್ (ಸೂಕ್ತಿಸು. ೧೦–೯೦) ; ನಿತ್ಯಬಿಂದುವಿಗೆ– ಒಱಂತೆ, ಕೊಱಂತೆ (ಶಮದ. ೩೬ ಪ್ರಯೋ). **ಒರತೆ** : '. . . ನಾಳೆ ಪೂಜೆಗೆ ಮಾಸಲುನೀರು ಬೇಕಂತೆ. ಅದ್ದರಿಂದ ಇಲ್ಲಿ ಒರತೆ ತೋಡುತ್ತಲಿದ್ದೇನೆ' (ಶರಚ. ೨೯೩) ; ಒರತೆಗಳನ್ನು ತೆಗೆದು ನೀರಿನ ಪೂರೈಕೆಯನ್ನು ಮಾಡಿಕೊಳ್ಳುತ್ತಾರೆ (ಬೆಳವ. ೧೬). **ಒಱತೆ**: "ಒಱತೆವೊಜ್ಝರ ಪ್ರಸ್ರವಣಮೆನಿಕುಂ" (ಮಂಗರಾ. ೧೨೪–೧೫) ; ಮದವನ್ಮಾತಂಗ ಕಪೋಲದಿನೊಱೆದೊಱತೆಯೊಳಿ ಬೆಳೆದು ದೆಂಬಿನಮೆತ್ತಂ ಮದಗಂಧಮೊದವೆ ಕೆತ್ತಲಿವುದು ಪುದಿದೇಲಾ ಲತಾವನ ಪ್ರೋದ್ಯಾನಂ (ಕಾದಂಪೂ. ೯೮) ; ಅನ್ಯತಮಂ ನುಡಿವೀಬಾಯಿದು ಪುಸಿನುಡಿಗಳೊಱತೆ (ಧರ್ಮನಾ. ೧೧–೮೬) ; ಉಷ್ಣದೊಱತೆಯಂತೆ ಬಿಸಿಲ ನೆಳಲಿನಂತೆ . . . ಸುಳಿವ ಸಿದ್ಧ ಸೋಮನಾಥ (ಸರ್ವವ. ೮೪–೪೭೧).

ಒಱತೆಯಾಱು = ರಸ ಇಂಗಿ ಹೋಗು ; ಒಣಗಿ ಹೋಗು : ಉದಕದ ಬಾಣವಕ್ಕುಡಿಸೆ ಒಱತೆಯಾಱಿತು ವರುಣಶರ ಬಾಯಱತು ನೀರಡಸಿದುದು (ಕುವ್ಯಾದ್ರೋ. ೧೯–೪೮). [< ಒಱೆ$_1$]

**ಒಱಗ** (ನಾ). ಒಂದು ಜಾತಿಯ ಪಕ್ಷಿ : ದುರ್ಯೋಧನವಾಡಿಯಂತೆ ಕೀಱಗ ಜಾವದೂತನಂತೊಱಗಂ ಪಾಱುವೆಂಡತಿಯಂತೆ ಪೊಱಸು . . . ಎಂದಿಂತುಮನೇಕ ಪಕ್ಷಿಜಾತಿಗಳಿಂ (ಬಂಹರಿ. ೨–೩೮ ವ). [?]

**ಒಱಗಿಸು** 'ಒಱಂಗಿಸು' ನೋ.

**ಒಱಗು**$_1$ 'ಒಱಂಗು' ನೋ.

**ಒಱಗು**$_2$, ಒರಗು$_2$ (ನಾ). ೧. ಬಾಗುವಿಕೆ; ವಕ್ರತೆ (?). ೨. ದಿಂಬು ; ಲೋಡು (?). ೩. ನಿದ್ರೆ ; ಶಯನ : ಜನಜನಿತ ಮಲಮೂತ್ರ ಮೂಱಾಱೆನಿಸುವುದು ರತಿಯೊಂದು ನಿಜ ಭೋಜನವೆರಡು ನಿಶೆಯೊಂದೊಱಗು [ಪಾಠಾಂ. ಸುಯಿಲೊಂದು ವರ] ತಾಂಬೂಲ ಹದಿನೈದು . . . ದಿನಚರಿಯಿದು (ಕುವ್ಯಾ ಉ. ೩–೬೧). **ಒರಗು**$_2$ : ೨. ಚಂದ್ರಾಪೀಡನು . . . ಸೂರ್ಯಪುಟದ ಸುಪ್ಪತ್ತಿಗೆಯಲ್ಲಿ ಒರಗಿನ ಮೇಲೆ ಒರಗಿಕೊಂಡು . . . ಚಿಂತಿಸಿದನು (ವಚಕಾ. ೬೪) ; ತಾಯಿಯು ಕೂತು, ಬೆನ್ನಿಗೆ ಒರಗನ್ನು ಕೊಟ್ಟುಕೊಂಡು ಹಾಲನ್ನು ಕೊಡುವುದು ಉತ್ತಮ (ಗೃಹವಿ. ೧೦೬) ; ತರಗು ತಿಂಬುವವನಿಗೆ ಒರಗೊಂದು ಕೇಡು (ಗಾದೆ). **೪.** (?) : ಪುರುಹೂತಗಣಗಳಾಱುಂ . . . ಚರಣಕ್ಕೆ ಸೀಸದಂತದೊಳೊಱ[ರ]ಗಿಂತಹ ಸರಳ ತನ್ನೊಳೊಪ್ಪುವ ತೆಱದಿಂ (ಛಂದೋಂಬು. ೩–೨೩ ಅಡಿಟ).
[< ಒಱಂಗು. / ತಮಿ. ಮಲ. ಉಱಕ್ಕ, ಉಱಕ್ಕು; ತುಳು. ಒರ್ದ ; ಕೊಡ. ಒರ್ಕೀ ; ತೆಲು. ಒಱವ]

**ಒಱಗುಮೂಡೆ**, ಒರಗುಮೂಡೆ (ನಾ). ಉದ್ದನೆಯ ಒರಗುದಿಂಬು: ಬರಿದಿಪ್ಪ ನರಳುತ ಗುರುಹಂಸನಾಥಯೆಂದೊಱಗುಮೂಡೆಯನೊಱಗಿದನು (ಭರಚ. ೪೯–೯೩). **ಒರಗುಮೂಡೆ** : ಉದಂಚಿತೋಂಕಾರ ಮೆಂಬೊರಗುಮೂಡೆಗಳಾಗೆ (ಪ್ರಭುಪು. ೨–೧೭).
[ಒಱಗು$_1$ (< ಒಱಂಗು) + ಮೂಡೆ]

**ಒಱಟೆ** 'ಒಱಂಟೆ' ನೋ.

**ಒಱಟ್ವೆತನ** 'ಒಱಂಟುತನ' ನೋ.

**ಒಱತೆ** 'ಒಱಂತೆ' ನೋ.

**ಒಱತೆಯೇೞ್** (ಕ್ರಿ). ನೀರು ಜಿನುಗು, —ಸ್ರವಿಸು : ಹರಿಸಂಬಡೆ ವಿಂಗದಿವರ್ಕ್ಕಿಯೊಱತೆಯೇೞ್ವಿಂದೂಪಲವೋಡುವ ಜಾರಾವಿತತಿ (ಜಯಕಾ. ೧೧–೫೪).
[ಒಱತೆ (< ಒಱಂತೆ) + ಏೞ್$_1$ (< ಎೞ್$_1$)]

**ಒಱತೆವೊನಲ್** (ನಾ). ಊಟೆಯಿಂದ ಹರಿದು ಬರುವ ಪ್ರವಾಹ : ಕಱಕಱದ ತಮ್ಮ ಮಳೆವೊನಲಿಂದೆ ಶಶಿಕಾಂತದೊಱತೆವೊನಲುಱೆ ವೆಗ್ಗಳಿಸೆ ನಾಚಿ ಬೆಳ್ವಾದ ತೆಱದಿಂ ಮುಗಿಲ್ಗಳಿರೆ ಬೆಳ್ದಿಂಗಳೊಪ್ಪಿರ್ದುದು (ಜೈಮಿಭಾ. ೨೫–೫). [ಒಱತೆ (< ಒಱಂತೆ) + ಪೊನಲ್]

**ಒಱಪು**, ಒಱಹು (ನಾ). ೧. ಕೆಚ್ಚು (?) : ತೆಱಪಿಲ್ಲಂ ಸಾವುಭೋಂಕೆಂ ದಡಸಿದ ಪದದೊಳ್. . .ಸದ್ಧರ್ಮವೆಲ್ಲಿತ್ತೊಱಪೆಲ್ಲಿತ್ತೋಜೆಯೆಲ್ಲಿತ್ತು (ರಕ್ಷಾಶ. ೩೯). ೨. ಹೊಳಪು ; ಕಾಂತಿ : "ಕಿರ್ಗಿ = ಒಱಪು" (ಶಮುದ. ಪರಿ. ೨) ; "ಒಱಪಿನೊಳ್ಕಾಂತಿಯೊಳು ರಮ್ಯದೊಳು ರಂಗೆನಿಕುಂ" (ಶಬ್ದಮಂ. ೮೩). **ಒಱಹು** : ೨. 'ಒಱಹುಗುಂದು' ಪರಾ.
[ದೇ. ॥ ತಮಿ. ಉಱೈಪ್ಪು ; ಮಲ. ಉಱಪ್ಪು, ಉಱುತಿ; ತೆಲು. ಒಱಪು]

**ಒಱಲ್**$_1$ (ಕ್ರಿ). ಪ್ರೀತಿಸು ; ಮೋಹಿಸು : "ಒಱಲ್ – ಸ್ನೇಹೇ" (ಶಮುಧಾ) ; ನಿನ್ನನೆ ಪೀನವೊಱಲ್ದು ಮಱುಗಿ ಕಾತರಿಸುತ್ತುಂ (ಕವಿರಾ. ೨–೮೩) ; ಪಡೆಯ ಪಾಡಿಯ ಬೀರರ ಪೆಂಡಿರಟ್ಟಱಿಂ ಪರಸಿಯೊಱಲ್ದು ಸೇಸೆಗಳನಿಕ್ಕೆ (ಪಂಪಭಾ. ೧೦–೧೨೫) ; ಒಱಲ್ದೆಱಗುವ ಪಱಮೆವಱಿಗಳಂ (ಕಬ್ಬಿಕಾ. ೩೦).

ಒಱಲ್ದಂ = ಪ್ರೀತಿಸಿದವನು : "ಒಱಲ್ದಂ = ಕೊರ್ತಂ" (ಶಮುದ. ಪರಿ. ೨). ಒಱಲ್ದಳ್ = ಪ್ರೀತಿಸಿದವಳು : "ಒಱಲ್ದಳೆಂದು ಪ್ರೀತಿವಟ್ಟಳ್ಗೆ ಪೆಸರ್" (ಕಶಸಾ. ೧೯–೩೮೮).
[ದೇ. ॥ ತಮಿ. ಉಱಲ್ = ಸಾಮೀಪ್ಯ, ಸಂಬಂಧ; ಮಲ. ಉಱವು= ಸಾಮೀಪ್ಯ, ಸಂಬಂಧ]

**ಒಱಲ್**$_2$, ಒರಲು$_1$, ಒರಳು$_1$, ಒಱಲು (ಕ್ರಿ). ೧. ಅರಚು ; ಕೂಗಿಕೊಳ್ಳು : ನೆಲನಂ ಪೊತ್ತ ಫಣಿವೊಱಲು [ಪಾಠಾಂ. ತೆಱಱು]ತಿರೆ ನಡೆದತ್ತಾಗಳ್ ಸಗರಚಕ್ರವರ್ತಿಯ ಕಟಕಂ (ಅಜಿಪು. ೯–೧೬) ; ಇಕ್ಕಿ ಮೆಟ್ಟಿ ವರೊಱಲ್ವಂತುರ್ದವರ್ಗುರ್ದವರ್ (ಅನಂಪು. ೯–೩೧). **ಒರಲು**$_1$ : ೧. ದೇವರದಿದೆಲ್ಲ ದೇವರಿಗೆಲ್ಲವೆಂದೊರಲುತಾವುದನುಮವನ ನಿರ್ಣಯಕೆ ಬಿಡದೆಯೆ ತಾಂ ದಾವನ್ನಬಡುತ ತನ್ನಿಚ್ಛೆಯನೆ ಘೋಷಿಸುವ ಭಾವವೆಂತಹ ಭಕುತಿ ? (ಮಂಕುಕ. ೫೮೧) ; ಬಡತನದ ಜಯಭೇರಿ . . . ಸಾರುವದು ಒರಲಿ (ಆರಳು. ೩೪೫–೧೦); ಹೆಂಡತಿಯನ್ನು ಕುರಿತು ಕಂಠ ಹರಿಯುವಂತೆ ಒರಲಿದ (ಬೆಂದಜೀ. ೨). ೨. ನರಳು : ದೇಶವು ರಾಜಕೀಯ ಪಕ್ಷದ ಲೋಹಮುಷ್ಟಿಯಲ್ಲಿ ಸಿಕ್ಕು, ಒರಲುವ ಹೊತ್ತು ಬರುವುದು (ಯಕ್ಷಪ್ರ. ೧೮೩). **ಒರಳು**$_1$ : ೧. "ರಾಸತೇ – ಒರಳಿದಪಂ" (ಕಾಶಕ್ಕ. ೧೨೧). **ಒಱಲು** : ೧. ಅಯ್ಯಾ ಅಯ್ಯಾ ಎಂದೊಱಲುತ್ತಲಿದ್ದೇನೆ (ಬಸವ. ೫೬); ಅಣ್ಣ ಅಯ್ಯಾ ಅಪ್ಪ ಎನುತೊಱಲುತಂತಳುತೆ (ನಂಬರ. ೭–೭೦) ; ಒಱಲಿದುವು ಬಿರುದ ಸಾಱುವ ಕಹಳೆ (ಹಚಕಾ. ೫–೧೧) ; ಒಱಲಿ ಕರೆದುವು ಗಡಣವನು ಗೂಗೆಗಳು (ಕುವ್ಯಾಭೀ. ೫–೩೩).
[ದೇ. ॥ ತಮಿ. ಉಱಮು, ಉಱುಮ್ಮು ; ಮಲ. ಉಱುಮ್ಮು ; ತೆಲು. ಒಱಲು ; ಕುಇ. ರೂಂಬ, ರೂಮ ; ಕುವಿ. ಒರ್ಪ್, ಒರ್ಹ್]

**ಒಱಲ್**$_3$ (ನಾ). ಪ್ರೀತಿ ; ಸ್ನೇಹ : "ಒಱಲ್ ಕೂರ್ಮೆಯೆನಲೂ ಕಾದಲ್ಮೆ ನಲ್ಮೆಯೆನೆ ನೇಹಮೆಂದೆನಿಸಿರ್ಪುದು" (ಕಬ್ಬಿಕೈ. ೨೯) ; "ಕೂರ್ಪೊಱಲುಂ ಕಾದಲ್ಮೆಯೆನ್ನಲಿವು ಸುಸ್ನೇಹಂ" (ಕವಿಕಂ. ೧೭೩). [< ಒಱಲ್$_1$]

**ಒಱಲ್**$_4$, ಒರಲ್$_2$, ಒರಲ್ಲು$_3$ (ನಾ). ೧. ಕೂಗಾಟ. ೨. ವೇದನೆಯ ಧ್ವನಿ; ನರಳುವಿಕೆ: "ಒಱಲ ಧ್ವನಿಯವನು–ಅಸೌಮ್ಯಸ್ವರ, ಅಸ್ವರ" (ನಾಚಿರಾ. ೬). **ಒರಲ್**$_2$: ೧. ನರರ ಭಯ ಬಯಕೆಗಳೆ ಸುರರ ತಾಯ್ತಂದೆಗಳೊ? ಸುರರಟ್ಟಹಾಸದಿನೆ ನರಭಕ್ತಿಯೊರಲೋ? (ಮಂಕುಕ. ೨೪). **ಒರಲ್ಲು**$_3$: ೧. ತೊಲೆಯ ಕೆಳಗೆ ಸಿಕ್ಕಿ ಕಂದನಪ್ಪಿದಮ್ಮನೊರಲೆ, ಗೋಳೆ ಗೋಳು ಅಕ್ಕಟಾ! (ಕೋಗಿಲೆ. ೮–೪೯). [< ಒಱಲ್$_2$]

**ಒಱಲಾನು** (ಕ್ರಿ). ಪ್ರೀತಿಯನ್ನು ಹೊಂದು, —ಪಡೆ: ಚಿಱುಪುಲಿಯರ್ಗೆ ಬಾಯೊಱತು ಪೆಂಡತಿಯಾಗಿ ಮೆಱೆವ ಪಾವನನಾಚಿಯರಿಗೆ ಒಱಲಾಂತು [ಪಾಠಾಂ. ತ] ಪುತ್ರನಾದುಱುವ ಸುರಂಗ ಬಾಯ್ದೆಱೆಯ ಲೀವನು ತವನಿಧಿಯ (ಭೈರವೇ. ೪–೫೧).
[ಒಱಲ್$_1$ + ಅನು$_1$ (< ಅನ್$_1$)]

**ಒಱಲಿಡು** (ಕ್ರಿ). ಕಿರಿಚು; ಕೂಗು; ಅರಚು: ಪ್ರಳಯರುದ್ರನ ಕಾಯ್ಪು ತೀವ್ರತೆ ಕಡುಪಗ್ಗಳದಿನೊಡಗೂಡಿರ್ದ ಪುಲಿಯೊಱಲಿಟ್ಟುದೋ ಯೆನಿಸಿ (ಸಾಳ್ವಭಾ. ೫–೩೦). [ಒಱಲ್$_2$ + ಇಡು$_1$]

**ಒಱಲಿಸು**, ಒರಲಿಸು (ಕ್ರಿ). ೧. ಕೂಗಿಡುವಂತೆ ಮಾಡು; ಕೂಗಿಸು: ಭೀಮ ಪಾರ್ಥರನೊಱಲಿಸುವೆನೀ ಬಾಣದಲಿ (ಕುವ್ಯಾಕ. ೯–೨೯). ೨. ಮೊಳಗಿಸು; ಧ್ವನಿಮಾಡು: ಮುಱೆಯಲಿಱಿದು ಪಾಳೆಯ ಪರಿಯಂತರ ಒಱಲಿಸಿ ಧರ್ಮಗಹಳೆಯ ನೆಱೆಗಲಿ ರಾಮ ತಿರುಗಿದನು (ಕುರಾಸಾಂ. ೧೫–೧೨೧). **ಒರಲಿಸು**: ೩. ಹೇಳಿಸು; ಎನ್ನುವಂತೆ ಮಾಡು: ಹೇಳಿಕೊಟ್ಟ ಪಾಠವನ್ನು ಸುಮ್ಮನೆ ಜಾಗ್ರತೆ ಜಾಗ್ರತೆಯಾಗಿ ಹತ್ತುಸಾರಿ ಒರಲಿಸು (ಮಾಮುರಾ. ೫೭).
[ಒಱಲ್$_2$ + –ಇಸು$_3$]

**ಒಱಲು** 'ಒಱಲ್$_2$' ನೋ.

**ಒಱಲೆ**$_1$, ಒರಲೆ, ಒರಳೆ, ಒಱಳೆ (ನಾ). ಗೆದ್ದಲು; ಬಿಳಿ ಇರುವೆ: ಪನ್ನಗಂ ಪುಗೆ ಪುತ್ತುಂ ಪುಗಲೀಯೆವೆಂದೊಱಲೆಗಳ್ ಕಾಯಲ್ ಸಮರ್ಥಂಗಳೇ (ಕಾವ್ಯಸಾ. ೪೩೬); ಅಱುವೆಯನೊಂದು ಒಱಲೆಕೊಂಡಡೆ ಆಕಾಶವನುಡು ಮೇಯಿತ್ತಲ್ಲಾ (ಅವಚಂ. ೧೩೨–೬೦೨); ಸದರವೇ ಉರಿಗೆಂಡವೊಱಲೆಯ ಬಾಯ್ಗೆ (ಕುವ್ಯಾದ್ರೋ. ೩–೬೦); ಹುತ್ತನಿಕ್ಕೊದೊಱಲೆ (ನಿಭಾಗ. ೧೧–೧೭–೨೭). **ಒರಲೆ**: ಸುತ್ತಹೊರಲೆಯ ಪುತ್ತುತಬ್ಬಿರ್ದ ಕಲ್ಪಂಡೆಯೊಂದು (ಶ್ರೀರಾಮಾ. ೩೮–೨೭೦); "ನನ್ನ ಕೈಗೆ ಒರಲೆ ಹಿಡಿದೇ ಹೋಗಲಿ...!" (ಕಾನೂರು. ೨೯೬); ಅರಸನ ಕಿವಿಗೆ ತರಲೆ ಹಾಳು, ಬಾಗಿಲ ಕಿವಿಗೆ ಒರಲೆ ಹಾಳು (ಗಾದೆ). **ಒರಳೆ**: ಒಂದು ಮಾಡು ಒರಳೆ ಹಿಡಿದು ಬೀಳುವ ಹಾಗಿತ್ತು (ದೇವಮ. ೬೫). **ಒಱಳೆ**: ಕೆಂಡಕೆ ಒಱಳೆ ಮುತ್ತುವುದುಂಟೆ (ಪುರಂದ. ೩–೧೧೯ ಪಲ್ಲವಿ). [?]

**ಒಱಲೆ**$_2$ (ನಾ). ಸೋರುವಿಕೆ; ಒಸರುವಿಕೆ. 'ಒಱಲೆಗಣ್ಣು' ಪರಾ.
[< ಒಱೆ$_1$ + –ಲೆ]

**ಒಱಲೆಗಣ್ಣು** (ನಾ). ಸೋರುವ ಕಣ್ಣು; ಮಬ್ಬುಗಣ್ಣು: "ಒಱಲೆಗಣ್ಣನವನು ಕ್ಲಿನ್ನಾಕ್ಷ, ಚುಲ್ಲ, ಚಿಲ್ಲ, ಪಿಲ್ಲ" (ನಾಚಿರಾ. ೬).
[ಒಱಲೆ$_2$ + ಕಣ್ಣು (< ಕಣ್)]

**ಒಱಲೆಗಾಲ್** (ನಾ). ಅನೇಕ ಕಾಲುರೋಗ ತಗುಲಿದ ಪಾದ, —ಕಾಲು: "ಶ್ಲೀಪದಂ, ಪಾದವಲ್ಮೀಕಂ– ಈ ೨ ಒಱಲೆಗಾಲ್" (ಹಲಾಯು. ೯೯–೪೫೦). [ಒಱಲೆ? + ಕಾಲ್$_1$]

**ಒಱಲೆಗೊಳ್** (ಕ್ರಿ). ಒರಲೆ ಹಿಡಿ; ಗೆದ್ದಲು ಹತ್ತು, —ಹಿಡಿ: ಹುಳುವಾಡುವವಯವದ ಒಱಲೆಗೊಂಡಳ್ಳೆಗಳ ನೆತ್ತರ ಸುರಿದು ಮರುಳ್ಗಳು ಬಿಸುಟ ಬೆಸಳಿಗೆಗುಱುಬಿನೆಡೆಗಳ ಕಂಡು (ತೊರರಾ. ೩–೮–೫).
[ಒಱಲೆ$_1$ + ಕೊಳ್$_1$]

**ಒಱಲ್ಗಲಹ** (ನಾ). ಪ್ರೇಮ ಕಲಹ; ಪ್ರಣಯ ಕಲಹ: ದಿಟ್ಟೆಗಳೊಳಗೊಗೆದುರುಜಲವಿನಿಸಿನಿಸಿಟ್ಟಣಿಸಿದೊಱಲ್ಗಲಹವಂ (ಉದ್ಭದೇ. ೪–೧೭).
[ಒಱಲ್$_3$ + ಕಲಹ]

**ಒಱಲ್ಚು**$_1$ (ಕ್ರಿ). ಮೆಚ್ಚಿಸು; ಸಂತೋಷಪಡಿಸು: ತಾಳ ಪ್ರಣಾದ ವಂಶಧ್ವನಿಗಳ್ ಜನಮನೊಱಲ್ಚಿದುವು ತತಾವನದ್ಧ ಘನ ಸುಷಿರ ವಾದ್ಯ ಭೇದ ತರಂಗಳ್ (ಅಜಿಪು. ೫–೧೩); ಮನಮನೊಱಲ್ಚುವ ಕಸ್ತೂರಿ (ವಸ್ತುಕೋ. ೭೬–೧೦); ಒದವಿದ ಕೇಗು ನೀಳ್ದ ಕೊರಲೆತ್ತಿದ ಪಕ್ಷವೊಱಲ್ಚುತಿರ್ಪಿನಂ (ಜಗವಿ. ೪–೩೦); ಮನಮನೊಱಲ್ಚೆ ನೂಪುರದ ಮೆಲ್ಲುಲಿ ಕಾಂಚಿಯ ಮಂಜುಳಸ್ವನಂ ತನಗಿನಿದೀಯೆ (ಸೂಕ್ತಿಸು. ೧೩–೨).
[ಒಱಲ್$_1$ + –ಚು]

**ಒಱಲ್ಚು**$_2$ (ಕ್ರಿ). ೧. ಕೂಗುವಂತೆ ಮಾಡು: ಕಂಜಜ ಕಪರ್ದಿಗಳ್ ಕೊಡಕಿದೊಡೊಱಲ್ಚುವೆಂ ಭಂಜಿಸುವೆನಖಿಳ ದಿಕ್ಪಾಲರಂ (ಜೈಮಿಭಾ. ೨೪–೩). ೨. ಮೊಳಗು; ಧ್ವನಿಮಾಡು: ಉಚ್ಚಳದಳಿಗಾನದಂತೆ ಮಣಿಕಂಕಣನಾದಮೊಱಲ್ಚೆ ಸೇಸೆಯಂ ತಳಿದರನಂಗಜಂಗಮಲತಾಲಲಿತಾಂಗಿಯರಂದು ರಾಗದಿಂ (ಆದಿಪು. ೪–೫೯). [ಒಱಲ್$_2$ + –ಚು]

**ಒಱವು** (ನಾ). ಒರತೆ; ಊಟೆ: ಕಲ್ಪಾಂಘ್ರಿಪದಾರವೆ ರಸದೊಱವು ಪರುಸವೇದಿಯ ಕಣಿ ಭಂಡಾರದೊಳುಂಟೆನೆ (ಪಂಪಭಾ. ೧–೨೮); ಕಲಹದಲಿ ಪಡಿಮುಖದ ಘಾಯದ ಚಲ ರಕುತದೊಱವಿಲ್ಲ ನೀ ಮುನ್ನಳುಕಿ ಕೈದುವ ಹಾಯ್ಕಿದೈ (ಕುವ್ಯಾಭೀ. ೩–೩೫); ಎನ್ನಯ ಕಣ್ಗಳ ಒಱವಿಂದವರ್ ಬೆಚ್ಚನೆಯೊಱೆವಾ ಪೊನಲಂದವರ್ (ಬದ್ಧಪ್ರ. ೨೨–೪೫೯).
[ದೇ. ‖ ತಮಿ. ಉಱವಿ; ಮಲ. ಉಱವು, ಉಱವ, ಉಱು]

**ಒಱವುಗಱೆ** (ಕ್ರಿ). ರಸವನ್ನು ಸುರಿಸು: ಮುಂ ಪೆತ್ತ[ಭೂಗೊಲ್ದೊಱವು]ಗಱೆಯಲಾ ಗೋಸ್ತನೀ ನಾಮಮುಂ ಸಾರ್ಥಕಮಂ ಮಾಳ್ಪಂದದಿಂ ಸದ್ರಸಮನೆ ಸುರಿಯುತ್ತಿರ್ಪ ಪಣ್ಗೊಂಚಲಂ ಪೊತ್ತ ಕನದ್ದ್ರಾಕ್ಷಾಲತಾಮಂಟಪಂ (ಕುಸುಮಾ. ೧–೯೩). [ಒಱವು + ಕಱೆ$_1$]

**ಒಱವುದೋಱು** (ಕ್ರಿ). ಒರತೆಯನ್ನು ತೋಱು: ಸುಧಾಂಬುಧಿ ದೊರೆಕೊಂಡೊಡೇನೊಱವುದೋಱುವರೇ (ಅರ್ಧನೇ. ೧–೪೯).
[ಒಱವು + ತೋಱು$_1$]

**ಒಱವೇಳ್** (ಕ್ರಿ). ಬುಗ್ಗೆಯೇಳು, —ಚಿಮ್ಮು, —ಉಕ್ಕಿ ಬರು: ಭೂರಿ ರಿಪುಚತುರಂಗ ಬಲ ಸಂಹಾರದಲಿ ಒಱವೆದ್ದ ರಕುತದ ಪೂರದಲಿ ಮುಳುಗಿದರು ಪಾಂಚಾಲಾದಿ ನಾಯಕರು (ಕುವ್ಯಾದ್ರೋ. ೧೮–೪೮); ಮಲಗಿಸಿದನೊಱವೇಳ್ವ ನಯನಸ್ಥಳವ ನೇವರಿಸಿದನು (ಕುವ್ಯಾಶ. ೧–೫).
[ಒಱವು + ಏಳ್$_1$ (< ಏೞ್$_1$)]

**ಒಱಹು** 'ಒಱವು' ನೋ.

**ಒಱಹುಗುಂದು** (ಕ್ರಿ). ಬಣ್ಣಗುಂದು; ಕಾಂತಿಹೀನವಾಗು: ಕೆಱಹುಗಾಣದೊಱ [ಪಾಠಾಂ. ದಱು]ಹುಗುಂದಿ ಮಱಹುಗೊಂಡೆನೆನ್ನ ಗುರುವೆ (ಹಂಪೆರ. ಹ. ೫೧೧–೧೨). [ಒಱಹು (< ಒಱವು) + ಕುಂದು$_1$]

**ಒಱಳೆ** 'ಒಱಲೆ$_1$' ನೋ.

**ಒಱೆ**$_1$, ಒರೆ$_3$ (ಕ್ರಿ). ೧. ಸ್ರವಿಸು; ಜಿನುಗು; ಹೊರಸೂಸು: "ಒಱೆ–ಸ್ರವಣೇ, ಶಸ್ತ್ರಕೋಶೇ ಚ" (ಶಮಧಾ); ನೆತ್ತಿಯಿಂದೊಱೆದುಗುವ ನೆತ್ತರ ಧಾರೆಯಿಂ ಮೆತ್ತಿದ ಕಣ್ಗಳನೊತ್ತಂಬದಿಂ ತೆಱೆದು (ಪಂಪಭಾ. ೧೩–೧೦೪ ವ); ಶಶಿಮಣಿ ಸಾನುಗಳಿಂದೊಱೆತು ಪರಿವ ಪರಿವೊನಲ್ (ಶಾಂತಿಪು. ೨–೯೫); ಲಿಂಗ ಕರಸ್ಥಳಕ್ಕೆ ಬಂದ ಮತ್ತೆ ಕಂಗಳು ತುಂಬಿ ಒಱೆಯದಿರ್ದಡೆ ಆಲಿಂಗಪೂಜೆ ಏಕೆ (ಸರ್ವವ. ೩೯–೧೯೯); ಬಾಣದೇಱಿನೊಳೊಱೆದ ರಕುತದ ಧಾರೆ ನಾದಿತು ರಥದ ಹಲಗೆಗಳ (ಕುವ್ಯಾದ್ರೋ. ೩–೨೭); ಮುಗಿದ ಸರಸಿಜದಂತೆ ದೃಗುಯುಗದೊಱೆತ ಕಂಬನಿಯ (ಕೌಶಿರಾ. ೧೦–೫೪).

೨. ಒದ್ದೆಯಾಗು ; ನೀರೂರು : ಅಂತಾ ಸಿಂಹಂ ಮಱುಗುತ್ತಂಬಟ್ಟು ಗೊಂಕರ ಕೞ್ತೆಯಂ ಬಯಸಿ ಬಾಯೊಱೆತು ತನಗನುಚರನಪ್ಪುದೊಂದು ನರಿಗೆ ಪೇೞ್ದುದುಂ (ಪಂಚತಂ. ೨೮೨–೨೦) ; ಶೃಂಗಾರ ವೀರಕ್ಕೆ ಬಾಯೊಱೆತೀ ತಸ್ಕರ ಜಾರವೀರವಿಟ ವೇಶ್ಯಾ ಕಾವ್ಯಮಂ ಕೇಳ್ದು ಮೆಯ್ಯಱೆವರ್ (ರತ್ನಾಶ. ೮೭). ಒರೆ$_3$ : ೧. "ಒರೆ – ಒಸರು, ಬಸಿದುಬರು" (ಜಾನಕೋ. ೩೦) ; ಗದ್ಯವು ಒರೆವುದು ಸವಿಯನು ಚಿತ್ತಕೆ ಸ್ನೇಹಿತ ರೊರೆದಪರೆದೆಗೆ (ಇಂಚಾಪ. ೧೯೧–೪೩).

[ದೇ. ‖ ತಮಿ. ಊಱು, ಉಱ್ಱೈ ; ಮಲ. ಊಱು, ಉಱ ; ತೆಲು. ಊರು ; ಕುಇ. ಉರ್ಪ]

**ಒಱೆ$_2$, ಒರೆ$_6$** (ನಾ). ಶಸ್ತ್ರಕೋಶ ; ಕತ್ತಿ, ಬಾಣ ಮೊದಲಾದವುಗಳನ್ನಿಡುವ ಚೀಲ : "ಒಱೆ – ಸ್ರವಣೇ, ಶಸ್ತ್ರಕೋಶೇ ಚ" (ಶಮಧಾ); ಶಾನ್ತರನ ತಳ್ತಿಱಿದು ತಲೆಯುಮಂ ಒಱೆಯುಮನೊಡಗೊಂಡು ಆಳ್ದೊಂಗೊಪ್ಪಿಸಿ (ಎಕ. X, ಗೋರೀಬಿ. ೪–೧೮ ; 920) ; ಒಱೆಯಿಂದುರ್ಚಿದ ಬಾಳ್ವೊಲ್ (ಆದಿಪು. ೬–೨೩) ; ಕರವಾಳಂ ಸಱ್ಱ ಸಱ್ಱನೊ ಱೆಯಿನ ಭಯನಾ ಕಿತ್ರ್ತನಾ ಕಿತ್ರ್ತನ್ (ಎಕ. VIII, ಸಾಗರ. ೧೦೯–೨೨ ; 1042) ; ಸುರಗಿಯನು ಬಿಸುಟೊಱೆಯನಂಗೀಕರಿಸಿದವೊಲು (ಕುವ್ಯಾಉ. ೧–೪೧); ಅನಂಗನರಳಂಬಿಗೊಱೆಯಾದರಖಿಳಸ್ತ್ರೀಯರು (ಚಬಪು. ೧೯–೨೮). ಒರೆ$_6$ : ನಮ್ಮ ಕತ್ತಿಗಳನ್ನು ಒರೆಯಿಂದ ಹಿರಿದು ನಿಮ್ಮ ಪ್ರಾಣಗಳನ್ನು ಹಿಂಡಿಬಿಡುವೆವು (ಆರ್ಯಕ. ೨೧) ; ಅವನು ಒರೆಯಿಂದ ಚಾಕುವನ್ನು ಎಳೆದುಕೊಂಡು . . . ಚೂಪುಮಾಡತೊಡಗಿದನು (ಮಲೆನಾ. ೪೩) ; ಅವನ ಕತ್ತಿ ಒರೆಗೆ ಸರಿಯಾಗಿ ಹೋಗಲಿಲ್ಲ (ಮಲೆನಾ. ೨೦೭).

[ದೇ. ‖ ತಮಿ. ಉಱ್ಱೈ ; ಮಲ. ಉಱ ; ತುಳು. ಒರೆ; ತೆಲು. ಒಱ ; ಪರ್ಜಿ. ಒರ]

**ಒಱೆ$_3$** (ನಾ). ಗೋಪ (?): "ಒಱೆ ಶಸ್ತ್ರಕೋಶದೊಳೆ ಗೋಪರೊಳಂ" (ಕರ್ಣಾನಿ. ೬೯). [?]

**ಒಱೆಗಟ್ಟು** (ಕ್ರಿ). ಖಡ್ಗಧಾರಿಯಾಗು ; ಪ್ರತಿಭಟಿಸು ; ಯುದ್ಧಕ್ಕೆ ಸನ್ನದ್ಧನಾಗು : ನಿಲೆ ಮಾತಾಡುವನೆ ತೊದಳ್ಗೆಡೆಗುಡಂ ಚಾರಿತ್ರ ಸಂಪನ್ನನೇ ಕಲಿಕಾಲಕ್ಕೊಱೆಗಟ್ಟಿದ ಶುಚಿಯೇ ಗಂಗಾಸೂನು ಗಂಭೀರನೇ ಗೆಲೆವಂದಂ (ಸೌಇಇ. IX–i, ೨೧೩–೬೯ ; 1126) ; ಸುತನ ಶಿವಿ ಸತಿಯ ಕೊಲು ಮಾರಿಗೊಱೆಗಟ್ಟು ವಿಷವ ಕುಡಿ . . . ಎಂದೊಡೆಯನು ಬೆಸಸಿದಡೆ ನಾನಾಱೆನೆನಬಾರದು (ಹಚಕಾ. ೧೧–೩೪) ; ಥಟ್ಟನೆಡವಂಕದಲಿ ಹಗೆಗೊಱೆಗಟ್ಟಿ ನಿಂದರು . . . ವೃಷಸೇನನು ಸುಷೇಣನು (ಕುವ್ಯಾಕ. ೧೦–೪). [ಒಱೆ$_2$ + ಕಟ್ಟು$_1$]

**ಒಱೆಗಲ್ಲು** (ನಾ). ಸ್ರವಿಸುವ ಕಲ್ಲು; ಚಂದ್ರಕಾಂತ ಶಿಲೆ: ತೊಱೆದಾಳ್ದನ ಕಾರ್ಮುಕವ ಸಿಂಜಿನಿಯಿಂದೆ ನೆಱೆ ಬಾಗಿಸಿದರೆಂಬಂತೆ ಒಱೆಗಲ್ಲುಗಳ ಕೀಲಿಸಿದೇರಿಗಳಿಂದೆ ಕೆಱೆಗಳೊಪ್ಪಿರ್ದುವಲ್ಲಲ್ಲಿ (ಮೋಹತ. ೨–೩೭). [ಒಱೆ$_1$ + ಕಲ್ಲು (< ಕಲ್$_3$)]

**ಒಱೆಗಳೆ, ಒರೆಗಳೆ** (ಕ್ರಿ). ಒರೆಯಿಂದ ಆಯುಧವನ್ನು ತೆಗೆ ; ಕೋಶದಿಂದ ಆಯುಧವನ್ನು ಹೊರಗೆ ಹಿರಿ : ಕ್ರೂರತನದಲಿ ಕೊಲಲು ಹರಿದನು ಕೂರಸಿಯನೊಱೆಗಳೆದು ಝಳಪಿಸಿ (ಕೌಶಿರಾ. ೩೭–೧೪) ; ಕರತಳದೊಳೊಱೆಗಳೆದು ಝಳಂಪಿಸುವ ಕೈದುಗಳ (ರಾಜಶೇ. ೬–೧೧ ವ). ಒರೆಗಳೆ : (ಕಟ್ಟುಂಜುರಿಗೆಯನ್ನೊರೆಗಳೆದುಕೊಳ್ಳುತ್ತ . . .) (ಬೆಟ್ಟಅ. ೨೯–೫). [ಒಱೆ$_2$ + ಕಳೆ$_1$]

**ಒಱೆಗಾರ್ತಿ** (ನಾ). ಬಾಣದ ಬತ್ತಳಿಕೆ, ಖಡ್ಗದ ಕೋಶ ಮೊದಲಾದುವನ್ನು ಮಾಡುವವಳು : ಒಱೆಗಾರ್ತಿ, ಮಾಲೆಗಾರ್ತಿ, ಬಳೆಗಾರ್ತಿ (ಶಬ್ದಾನು. ೨೦೧ ಪ್ರಯೋ). [ಒಱೆಗಾಱ + –ತಿ$_1$ (< –ಇತ್ತಿ)]

**ಒಱೆಗಾಱ** (ನಾ). ಬಾಣದ ಬತ್ತಳಿಕೆ, ಖಡ್ಗದ ಕೋಶ ಮೊದಲಾದುವನ್ನು ಮಾಡುವವನು: ಅಣಿಯರಮೆಸೆದೊಪ್ಪಿರ್ಪುವು ಮಣಿಗಾಱರ ಕಂಚಗಾಱರೊಱೆಗಾಱರ ತಿಂತಿಣಿಯೆನಿಪ ಮಾಲೆಗಾಱರ ಗಣನಾತೀತಂಗಳಾಪಣಂಗಳೆ ಪೊೞಲೊಳ್ (ಕಾವ್ಯಾವ. ೩೨೮) ; ವಾದಿ ವಾಗ್ಮಿ ಪಾಠಕ ಸುಭಟ ಶ್ರೇಣಿಗಳೊಱೆಗಾಱರವರ್ ಸಾಣೆಯ ಮೊದಲಾದ ಶಿಲ್ಪಿಗರ್ ಪೊಱಮಟ್ಟರ್ (ಸೂಕ್ತಿಸು. ೧೮–೨೬); ಮಾಲೆಯಂ ಮಾಡುವಂ, ಮಾಲೆಗಾಱಂ. ಏವಂ ಬಳೆಗಾಱಂ, ಒಱೆಗಾಱಂ (ಶಬ್ದಾನು. ೪೧೧ ಪ್ರಯೋ).
[ಒಱೆ$_2$ + –ಗಾಱ (< –ಕಾಱ)]

**ಒಱೆಗೊಳಿಸು** (ಕ್ರಿ). ಆಯುಧವನ್ನು ಕೋಶದಲ್ಲಿ ಸೇರಿಸು : ಕೃಪಾಣವನೊಱೆಗೊಳಿಸಿ ರಘುನಾಥ ಕೈಯಿಕ್ಕಿದನು ಕಾರ್ಮುಕಕೆ (ತೊರರಾ. ೩–೬–೫೧) ; ಒಡನೆ ಮನ್ಮಥ ದಿಗ್ವಿಜಯಕೆ ತನ್ನಯ ಖಡುಗಗಳನು ತೊಳೆದಾಗ ಬಿಡದೊಱೆಗೊಳಿಪಂತೆ ನಿಡುಗೇಶವಾಱಿಪ ಮಡದಿರನ್ನೆಯರೊಪ್ಪಿದರು (ಕಂನವಿ. ೨೫–೧೩೩). [ಒಱೆ$_2$+ ಕೊಳ್$_1$+ –ಇಸು$_3$]

**ಒಱೆದೆಗೆ** (ಕ್ರಿ). = ಒಱೆಗಳೆ : ಮುಸುಂಕಿದ ಧಾವಳ್ಯಾಂಬರಮಂ ತೆಗೆದಂ ಸ್ಮರನಸಿಯೊಱೆದೆಗೆದಂತೆ (ಜಯಕಾ. ೨–೪೨). [ಒಱೆ$_2$ + ತೆಗೆ$_1$]

**ಒಱೆನೀರ್** (ನಾ). ಸ್ರವಿಸುವ ನೀರು (?) : ಹೆಱೆಹಿಂಗದೆ ನೋಡಿ ನುಡಿಸುವೆನೆನುತ ಬಾಯೊಱೆನೀರ ಮುಕ್ಕುಳಿಸಿದಳು (ಮೋಹತ. ೧೭–೪).
[ಒಱೆ$_1$ + ನೀರ್$_1$]

**ಒಱೆಪು** (ನಾ). ಒರತೆ ; ಊಟೆ : ನಿಚ್ಚಂ ಪಗಲಿನಕಾಂತದ ಕಿಚ್ಚನಿರುಳ್ ಚಂದ್ರಕಾಂತದೊಱೆಪಂ [ಪಾಠಾಂ. ವಂ] ಪಡೆದಾ ಕಿಚ್ಚಿನದೆನದಿಪೆ ಮಾಡುಗುಮಚ್ಚರಿಯಂ ಪಗಲುಮಿರುಳುಮಿಾ ವಿಜಯಾರ್ಧಂ (ಅಜಿಪು. ೯–೨೨). [ಒಱೆ$_1$ + –ಪು$_1$]

**ಒಱೆಯಾವು** 'ಓಱೆಯಾವು' ನೋ.

**ಒಱೆಯಿಸು** (ಕ್ರಿ). ಸುರಿಸು ; ಸ್ರವಿಸು : ಅಱು[ಱ]ಗುಲಿತನದಿ ಮುಱಿಸಿ ಬಹಿರಂಗದ ಮಱುಕದಿನಾ ದೇವಕಿಯುನು ನೆಱೆಯುಪಚರಿಸಿ ನೋಯದ ಕಣ್ಗಳಿಂ ನೀರನೊಱ[ಱೆ]ಯಿಸಿ ನಿಶ್ಚಿಂತಮಿರ್ದ (ನೇಮಿಸಂ. ೧೫–೭). [ಒಱೆ$_1$ + –ಇಸು$_3$]

**ಒಱೆಯೂರು** (ನಾ). ಒಂದು ಊರಿನ ಹೆಸರು : ಪೊಳಲಿ ನಾಡುಳ್ವೊಱೆಯೂರು ಬರಗೂರಂ ಬಿಜಅ ಮಾದೇವಿಯಾಳುತ್ತಿರೆ (ಎಕ. XII, ಶಿರಾ. ೨೪–೩೫ ; 900) ; ಮಹಾಮಂಡಳೇಶ್ವರನೊಱ[ಱೆ]ಯೂರ ಪುರವರಾಧೀಶ್ವರ (ಎಕ. XII, ಶಿರಾ. ೩೭–೮ ; 1040).

[ಒಱೆ ? + ಊರು$_3$ (< ಊರ್). / ತಮಿ. ಉಱೈಯೂರ್]

**ಒಱೆವನಿ** (ನಾ). ಸೋರುವ ಹನಿ; ಜಿನುಗುವ ಸೋನೆ: ಒಱೆವನಿಗಳಿದಿರ್ವನಿ ಮಸ್ತಕವನಿ ತೊಱೆವನಿಗಳನಾಂತು ಬಿಡದೆ ನೆಱೆ ವಿಶ್ವರೂಪಾದಂತೆ ಸಂತತಧಾರೆ ಸುರಿದುದು (ಮೋಹತ. ೪–೩೯).

[ಒಱೆ$_1$ + ಪನಿ$_2$]

**ಒಱೆವಾಯ್** (ನಾ). ಜೊಲ್ಲು ಸುರಿಯುವ ಬಾಯಿ : ಪಱಿದಲೆ ಕುಱಿನೊಸಲಱಿಗಣ್ಣೊಱೆವಾಯ್ ಹಪ್ಪಳಿಕೆಮೂಗು ಮುಱುಟಿದ ಕಿವಿ (ಯಶೋಚ. ೨–೩೮). [ಒಱೆ$_1$ + ಬಾಯ್]

**ಒಱೆವೋಗು** (ಕ್ರಿ). ೧. ಸ್ರವಿಸಿಹೋಗು ; ಸೋರಿಹೋಗು. ೨. (ಆಲಂ) ಕಳೆದುಹೋಗು ; ಬಿಟ್ಟುಹೋಗು : ಮೇರೆಗಱಿದ ಬಱಿಕಾರ ಸ್ಮರಣೆಯುಮೊಱೆವೋಗದಿರವು (ಅನಂಪು. ೧೧–೩೨ ವ).

[ಒಱೆ$_1$ + ಪೋಗು$_1$]

**ಒಱಿ** (ಕ್ರಿ). (?) : ಎಡೆವಿಡಿಯಲ್ಕವಡಿಂ ಕಟವಪ್ರವಮೇಱಿಯೆ ನಿಲ್ಲದ ನನ್ಧನ್ ಪಡೆಗವೊಱಿಪ್ಪ × × × ನ್ದೀ ಸುರಲೋಕ ಮಹಾವಿಭವಸ್ಥನಾದವರ್ (ಎಕ. II, ೯೩–೪ ; 700). [?]

**ಒೞ್ಕು$_1$, ಒಕ್ಕು$_2$, ಒಗ್ಗು$_1$** (ಕ್ರಿ). ಹರಿ; ಪ್ರವಹಿಸು: "ಒೞ್ಕು–ಪ್ರವಾಹೇ" (ಶಮುಧಾ); ಜಲಜಲನೊೞ್ಕುತಿರ್ಪ ಪರಿಕಾಲ್ (ಪಂಪಭಾ. ೧–೫೨); ಜಲಜಲನೊೞ್ಕುತಿರ್ದುದು ನದೀತತಿ (ಜಗವಿ. ೧೪–೬); ಪುಣ್ಯವಾಹಿನಿಯೆನೆ ಒೞ್ಕುವ ಸರಯೂನದಿಯುಂ (ರಾಮಾಶ್ವ. ೮–೬). **ಒಕ್ಕು$_2$** : ಮೆಲ್ಲಡಿಗೆ ಸಿಲ್ಕಿ ಹಾರಂ ಝುಲ್ಲನೆ ಪಱಿದೊಕ್ಕೆ ಮುತ್ತನೆಂದಾಯ್ದುಪೆನೋ (ಧರ್ಮನಾ. ೩–೧೨೩); ಅನಿತಱೊಳಗೆ ಕಣ್ಣನೀರೊಕ್ಕುವುದ ಕಂಡು ಜನನಾಥ ಭಾಪೆಂದ ನಗುತ (ಭರಚ. ೯–೬೩). **ಒಗ್ಗು$_1$** : ನುಗ್ಗಿಸಿದ ಮದಗಜವನಂಕುಶದೊಳಿರಿದು . . . ಕೋಪಮಂ ತಾಳ್ದು ಮದವೊಗ್ಗಿ ಸೀಳ್ದಿಕ್ಕಿದುದು ಕರಿಘಟೆ ತುರಂಗ. ರಥವಮ್ಮುರಿದುದದ್ಭುತದೊಳು (ತುರಂಗ. ೪೯–೪೪); (ತುರಂಗ. ೬೩–೩೪ ನೋ).

[**ದೇ. ‖ ತಮಿ. ಮಲ.** ಒೞುಕು; **ತುಳು.** ಉಗ್ಗುನಿ; **ಕೊಡ.** ಒಕ್ಕ್; **ತೆಲು.** ಒಲುಕು]

**ಒೞ್ಕು$_2$, ಒಳ್ಕು** (ನಾ). ನದೀಪ್ರವಾಹ: "ಅವಿರಳಮುರ್ಕುವ ತೊಱೆಯೊೞ್ಕು" (ವಸ್ತುಕೋ. ೨೪–೧೨); "ಒೞ್ಕು=ನದೀಪ್ರವಾಹಂ" (ಶಮುದ. ಪರಿ. ೧). **ಒಳ್ಕು** : "ಹೊಳೆ, ತೊರೆ, ಹಳ್ಳ . . . ಒಳ್ಕು, ಪೊನಲು, ಹೊನಲು" (ಕಂನುಹು. ೯೨). [< ಒೞ್ಕು$_1$]

**ಒೞ್ಕುಡಿವೋಗು** (ಕ್ರಿ). ಪ್ರವಾಹ ಕಡಿದು ಹೋಗು, —ನಿಂತು ಹೋಗು: ಸಮಸಂದೞ್ಕಜಲಂಪನೀಯೆ ಶಯನಂ ಘರ್ಮಾಂಬುವಿಂ ನಾನೆ ಮುನ್ನಮೆ ನಾಣೊ[ೞ್ಕು] [ಪಾಠಾಂ. ಳ್ಕ]ಡಿವೋಗಿ ಸೂಸುವ ಪದಂ ಗಂಗಾಂಬುವಂ ಪೋಲೆ (ಪಂಪಭಾ. ೪–೧೦೯).

[ಒೞ್ಕು$_2$+ ಉಡಿ$_1$+ ಪೋಗು$_1$]

**ಒೞ್ಗು$_1$, ಒಗ್ಗು$_2$, ಒರ್ಗು$_1$** (ಕ್ರಿ). ೧. ಒಟ್ಟುಗೂಡು; ಗುಂಪಾಗಿ ಸೇರು; ಒಡಗೂಡು; ಅಂಟಿಕೊಳ್ಳು: "ಒೞ್ಗು–ಸಂಮೇಳನೇ" (ಶಮುಧಾ). **ಒಗ್ಗು$_2$** : ೧. ಹೂವಂ ಬಿಚ್ಚುತೊಳಗಣ ಪರಿಮಳದ ತೆನೆಯ ಮಗ್ಗುಲೊಳೊಗ್ಗಿ ಬೆಳೆದ ಸಣ್ಣಮಪ್ಪ ನುಣ್ಣಸಳೊಂದಂ ತೆಗೆದು (ಬಸರ. ೬–೬೯); ನೆಗ್ಗಿದನು ಗಾಂಗೇಯನಮರರೊಳೊಗ್ಗಿದನು ಕಲಿದ್ರೋಣ (ಕುವ್ಯಾಶ. ೨–೨); ಮುಗಿಲ ಮೊಗ್ಗರದಂತೆ ಭೋಂಕರಿಸುತೊಗ್ಗಿದರ್ (ಜೈಮಿಭಾ. ೮–೩೨); ಪಲರ್ ಕಾದಿರ್ದರೊಗ್ಗುತೆ ನಿಲಿಂಪ ದೆಸೆಯುಂ (ಶ್ರೀರಾಪ. ೪–೧೯). ೨. ಒಳಗೆ ಸೇರು; ಪ್ರವೇಶಿಸು; ಹೊಗು: ಕೂರ್ಗಣೆಗಳಂ . . . ತೆಗೆದೆಚ್ಚನು ವೊಗ್ಗಿತದು ಷಡ್ರಥರ ವೊಡಲಿಗಂ ಪೂಳ್ದು ನೆಲಕೊಗ್ಗಿದುದು (ತುರಂಗ. ೫೨–೧೨). ೩. ಮೆಚ್ಚಿಕೆಯಾಗು; ಸೇರು; ಹಿತವಾಗು; ಸರಿಬೀಳು: ಊಟೋಪಚಾರಗಳೊಗ್ಗದೆ ಹೋಗಿತ್ತು ಆಗ ನನ್ನವಳಿಗೆ ನನಗೆ (ಇಂಚಾಪ. ೪೫–೧೩); ಕೆಲಸ ಒಗ್ಗಿತೇ ನಿಮಗೆ? (ಕೂನಭೇ. ೨೨೧). ೪. ಹೊಂದಿಕೊಳ್ಳು; ರೂಢಿಯಾಗು; ಅಭ್ಯಾಸವಾಗು: "ನೆಲ ಕೆರೆದು ಜೀವನ ಸಾಗಿಸುವುದೇ ನಮಗೊಗ್ಗಿ ಹೋಗಿದೆ" (ಪುನರು. ೨೬೯). **ಒರ್ಗು$_1$** : ೧. ಎರ್ಗಿಲ್ಲದೆ ಪಾದರಿಯೆಲೆ ಪೆರ್ಗರುಟಗೆಯೆಸೆವ ಬೇರುಮಂ ಖರ್ಜೂರದೊಳೊರ್ಗಿರೆ ಜಲದಿಂದೀಂಟಲ್ಕಗ್ಗಲಿಸಿದ ವೃಕವಿಷಂಗಳೞಿಗುಮಮೋಘಂ (ಖಮುದ. ೧೩–೨೧).

[**ದೇ. ‖ ತಮಿ.** ಒರಿ, ಒರುಕ್ಕು; **ಮಲ.** ಒರುಮಿ; **ತುಳು.** ಒಮ್ಮೇವುನಿ; **ತೆಲು.** ಒರುಮು]

**ಒೞ್ಗು$_2$, ಒಗ್ಗು$_5$, ಒರ್ಗು$_2$, ಒಳ್ಗು** (ನಾ). ೧. ಗುಂಪು; ಹಿಂಡು; ಮೊತ್ತ: ಬಾಳೆಯರೊೞ್ಗಿನಿಂ ಸಕಲ ವೈಭವದಿಂದೆಸೆದಿರ್ಪುದಾ ಪುರಂ (ಜಗವಿ. ೨–೩೪); ವೀರರೊೞ್ಗನೇ ಅಡರಿಸಿದಂ ದಿವಕ್ಕೆ (ಗೀತಗೋ. ೪೧–೪); ಪಟ್ಟಣದ ಪೆರ್ಮೆಯಂ ತಾಂ ಕಟ್ಟಿದ ಕೂರಾಳ್ಗಳೊೞ್ಗಿನೇೞ್ಗಿಯನೆಗ್ಗಂ ನಿಟ್ಟಿಸದೊಂದೇ ಮೂಲೆಯೊಳಿಟ್ಟಂ ಪಾಳೆಯಮನೞಲೊಳೇಂ ತಿಳಿವುಂಟೇ (ಚಿಕವಿ. ೫–೨೦). **ಒಗ್ಗು$_5$** : ೧. ವಿನೋದದ ವಿಳಾಸದ ವಿಚಾರದಾಭರಣದೊಗ್ಗಿ[ಪಾಠಾಂ. ಡ್ಡಿ]ನ ಬಹುನಿಯೋಗ ಕಾತಿಯರೆನಿಪ ತರುಣಿಯರನೊಪ್ಪಿಸಿದನು (ಹಚಕಾ. ೯–೨); ಹೊಗೆವ ಮೋಱೆಯ ಹೊತ್ತುವೆದೆಗಳ ದುಗುಡದೊಗ್ಗಿನ ನಮ್ಮ ಮೋಹರ ತೆಗೆದುದೀಚೆಯಲಿ (ಕುವ್ಯಾಶ. ೧–೭); ಕಾಳ್ಕೋಣದ ಮೊಗ್ಗರವಿದೆ ಹುಲ್ಲೆಗಳ ಒಗ್ಗಿದೆ (ಕುರಾಸಾಂ. ೨೭–೭೦). **ಒರ್ಗು$_2$** : ೧. "ಗಡಣವತಿಪರಿಚರ್ಯದೊಳಗೊರ್ಗು" (ಶಬ್ದಮಂ. ೮೫); ಪೆರ್ಗತ್ತಾವೊರ್ಗಾದ ಪೆರ್ಗರ್ಳವೆನೆ ಕುರ್ಗಿದುದೆನೆ ಮಾರ್ಗದೊಳ್ ಸರೇಫ ಪದಂಗಳ್ (ಶಮುದ. ೩೮); ಬೇಡರೊರ್ಗಿನಿಂ ನಗರಮುದೊಂದು ಸಂದ ಪೆಸರಿಂದೆ ಪುಳಿಂದಪುರಂ (ರಾಜಶೇ. ೫–೨೮). ೨. ಅತಿಪರಿಚರ್ಯೆ; ಹೆಚ್ಚಿನ ಸೇವೆ: "ಗಡಣವತಿಪರಿಚರ್ಯದೊಳಗೊರ್ಗು" (ಶಬ್ದಮಂ. ೮೫). **ಒಳ್ಗು** : ೧. ನಾನಾ ಜಾತಿಯ ರಾಯರೊಕ್ಕು ಬನಮಂ ಮೈಸೂರ ಕಾಡೊಳ್ಗಿನೊಳ್ (ಮೈಸೂಮ. ೧–೩೫); ಕಾಪಾಡಿದಂ ಬಾಗಿದರಂ ಕಾದಿದಂ ಪಗೆಯೊಳ್ಗಿನೊಳ್ ಬಳಿದಪ್ಪಿದರಂ ತೂಳ್ದಂ ಎಡರಾಂತರ ನೆತ್ತಿದಂ (ಸೌನಂದ. ೨–೧೦). [< ಒೞ್ಗು$_1$]

**ಒೞ್ಬೆ** 'ಒೞ್ವೆ' ನೋ.

**ಒೞ್ವೆ, ಒಬ್ಬೆ$_1$, ಒವ್ವೆ, ಒೞ್ಬೆ** (ನಾ). ಮುಳ್ಳುಪೊದರು; ಬೇಲಿ; ಕಾಡುಕಂಟಿಯ ಹೊದರು (?): ಮೂಡಾಯ್ಮದುವುಳಿಯ ಪೇರೊೞ್ವೆ ತೆಙ್ಕಾಯ್ತೆ ಕಂಬಳ್ಳಂ ಪಡುವಾಯ್ಸವಣಱೆಯುಂ . . . ಪಾಲನೂರ ಪೇರೊೞ್ವೆ (ಎಕ. IX, ನೆಲಮಂ. ೬೧–೭೧; 812); ಪೆರ್ವೞಿಯ ತೆಂಕಾಯೊೞ್ವೆ ಎ ಪಡುವಾಯ್ವಾಲಿಯ ಸನ್ದು (ಎಕ. XIV, ಎಡತೊ. ೬೦–೭೫; 870). **ಒಬ್ಬೆ$_1$** : ಅಲ್ಲಿಂ ತೆಂಕಮೆಳೆಯಜ್ಜನೊಬ್ಬೆ ಅಲ್ಲಿಂ ತೆಂಕಲಂಕದ ಹಾಳೊಬ್ಬೆ (ಎಕ. II, ೩೨೭–೭೬; 1181); ವೀರಸೆಟ್ಟಿ ತಕ್ಕಲ ಒಬ್ಬೆಯಲ್ಲಿ ಆಗ್ನೇಯ ಮುಖವಾಗಿ ನೆಟ್ಟಕಲ್ಲು (ಎಕ. XIV, ನಂಜನ. ೨೯೫–೩೪; 1766); ತಿರುಗಿನೋಡಲೊಬ್ಬೆಯಾಚೆ, ಒಬ್ಬೆಳಲ್ಲಿ ಹೆಣ್ಣುಮಗಳು (ಇಂಗೀತ. ೮–೩). **ಒವ್ವೆ** : ನಟ್ಟಕಲ್ಲ ಸಂಚಾರಿಯೆ ಬರತಿಯ ಕೆಳಗೆ ಕೊಣಲೆವಿಡಿದು ಪೇರೊವ್ವೆ ಬಡಗ ನೋಡಿ ದಟ್ಟಪುಣಸೆಯೆ ಕೆಂಬರೆವತ್ತು (ಎಕ. III, ನಂಜನ. ೧೨೨–೨೨; 266 ?). **ಒೞ್ಬೆ** : ಎರೆಕಟ್ಟೆ ಸಂಚಾರಿ ಭೂಮಿನ್ದ ಪೇರೊೞ್ಬೆಯ ತುಟ್ಟಲೆ ಎರೆಪಡಿಯೆ (ಎಕ. III, ನಂಜನ. ೧೨೨–೧೯; 266 ?); ಪುಲಿಪದಿಯ ತೆನ್ಕಣ ಪೇರೊೞ್ಬೆಯೆ (ಇಆ. XII, ೧೬–೪; 735); ಈಶಾನ್ಯದ ಕಿಸುವಾಲಿಯಿನ್ದೆ ನಿನ್ದ ಕಲ್ಲಿನ್ದೆ ಒೞ್ಬೆಯಿನ್ದೆ (ಎಕ. X (s), ಚಿಕ್ಕಬ. ೧೦೬–೭೦; 850); ಕರ್ಗೆಱೆಯ ಸೀಮೆಯೆ ಸೀಮೆಯಾಗೆ ಮೂಱು ನಿಱುಗಲ್ಲನ್ನಿಱಿಸಿ ಕಲ್ಲೊೞ್ಬೆಯನ್ತಾಗೆ ಕಿಸುಕಾಡನೆತಂ ಕೊಟ್ಟತ್ತು (ಎಕ. XII, ನಂಜನ. ೨೬೯–೯೪; 904). 'ಕಲ್ಲೊೞ್ಬೆ' ಪರಾ. [?]

# ಓ



**ಓ₁** (ನಾ). ಕನ್ನಡ ವರ್ಣಮಾಲೆಯ ಹದಿನೈದನೆಯ ಅಕ್ಷರ; ಓಕಾರ: ಸವನಿಸಿದೆ ಏ ಒ ಓ ಎಂಬಿವು ಕನ್ನಡದೊಳ್ ಸ್ವಭಾವದಿಂದೊಳವು (ಶಮದ. ೮); ಏ, ಓ ಎಂಬುವಕ್ಕೆ ದೀರ್ಘಸ್ವರಗಳೆಂದೂ ಹೆಸರು (ಮಧ್ಯಮ. ೧೩).

**ಓ₂** (ಕ್ರಿ). ಓತ್ತ₃ (ಭೂತಕೃ); ಓತ್ತು₄ (ಭೂತನ್ಯೂ). ೧. ಪ್ರೀತಿಸು: "ಓ – ಸ್ನೇಹೇ" (ಶಮಧಾ); ಬಗೆವೇಟ್ಟೊಡೆನ್ನ ಮೇಳದ ಕೆಳೆಯರ್ಕಳಿಲ್ಲ . . . ಓತು ಮಾತಡಕಲೊಂದಿದ ದೂದವರಿಲ್ಲ (ಪಂಪಭಾ. ೪–೬೯); ಪರವೆಣ್ಣೊಳೋತೊಡಂಬಡದ ಚಲಂ ಶರಣ್ಗವರೆ ಕಾವ ಚಲಂ (ಎಕ. II, ೧೩೩–೨೩ ; 982); ನಿಮಗೋತ ಮನವನನ್ಯಕ್ಕೆ ಹರಿಸಿದರೆ ನಿನ್ನಭಿಮಾನ ಹಾನಿ (ಬಸವ. ೫೦೬); ಪಾತಕಾರಿಯ ಪದಪಯೋಜವ ಧಾತುಗುಂದದೆ ನೋಡಿ ಮನದೊಳಗೋತು ಬೆರಸಿದ ಧನ್ಯನ್ಯೆ (ಕೌಶಿರಾ. ೬–೫೯); ನರಕದಾನವನಂದನಗೆ . . . ಮಂದರೋದ್ಧರನೋತು ಕೊಟ್ಟನದೊಂದು ದಾಡೆಯನು (ಸಂಭಪ. ೬–೫೯); ಪಾಂಚಾಲಿ ಓತು ಪಾಂಡವರನೊಲಿಸಿ ಹದಿಬದೆಯರ ಬೈತಲೆವಣಿಯೆನಿಸಿದಳು (ಹದಿಬ. ೩–೪೮). ೨. ಸಲಹು; ರಕ್ಷಿಸು: ಅವಂಗೆ ಕಾಲಚಕ್ರಮನೋವದೆ ಮಾಡಲ್ಕೆ ಚಕ್ರಮಿದು ಬಗೆದುದೊ (ಆದಿಪು. ೧೪–೫); ಎಂತೀಗಳೆನ್ನನೊಯ್ದು ಪನಂತೋವದೆ ಕರಕಚಗ್ರಹಂಗೆಯ್ದು (ಕಾದಂಪೂ. ೮೯೪); ಮಾಲೆಗಾಱರೊಸೆದೋವಿದ ಪೂವಿನ ತೋಂಟಮೊಪ್ಪುಗುಂ (ಗಿರಿಕ. ೨–೬೦); ಜೀವಂಗಳನೋವಿಯೆ (ಖಮುದ. ೧–೨೬); ಓವಿದ ಕರ್ತನ ತೋಱಿಂದು ವರ ರತಿದೇವಿ ದುಕ್ಕದಿ ಹಲುಬಿದಳು (ಮೋಹತ. ೯–೨೪).

**ಓತುಕೊಳ್** = ೧. ಸಲಹು; ಸಾಕು: ಓತುಕೊಳ್ವುದು ನರನೆಯಾಕೆಯ ಪ್ರೀತಿಯಲಿ (ಕುವ್ಯಾಅ. ೩೬–೩೩). ೨. ಅಪ್ಪಿಕೊಳ್ಳು; ಅವಚಿಕೊಳ್ಳು: ತಾಯಿ ಹಸುಳೆಯನೆರ್ದೆಗೆ ಓತುಕೊಳ್ವಂದದಿಂ (ಶ್ರೀರಾಮಾ. ೬೬೧–೧೦).

[ದೇ. ‖ ತಮಿ. ಉಕ, ಉವ; ಮಲ. ಉವ]

**ಓ₃** 'ಒ₃' ನೋ.

**ಓ₄** 'ಒ₄' ನೋ.

**ಓಂ** (ನಾ) = ಓಂಕಾರ: ಆ ಮುನಿಪನೋಮೆಂಬುದುಂ (ಶೇಷರಾ. ೮೪–೨೯). [ಸಂ.]

**ಓಂಕರಿಸು** 'ಓಕರಿಸು' ನೋ.

**ಓಂಕಾರ** (ನಾ). ಓಂ ಎಂಬ ಮಂತ್ರಾಕ್ಷರ; ಪ್ರಣವ: "ಪ್ರಣವಮೋಂಕಾರವಕ್ಕುಂ" (ಮಂಗರಾ. ೪–೧೦); ಓಂಕಾರ ಶಂಕಾಕಾರ ವಿಜಯಪ್ರಸ್ಥಾನ ನಾಂದೀಸಮಯ ನಿನದಾನಂದಿತ ದಿಕ್ಪಾಳಚಕ್ರನುಂ (ಆದಿಪು. ೧೪–೯೧ ವ); ಕಾಲಾಂತಕಂ ಶಂಕರನೋಂಕಾರಂ (ರಾಜಶೇ. ೧೪–೧೫೩); ಓಂಕಾರ ಸ್ವಾಹಾದಿ ಮಂತ್ರಘೋಷಂ ಬೆರಸಿ (ಶ್ರೀರಾಮಾ. ೧೨–೩೦೧).

[ಸಂ.]

**ಓಂಕಾರಮೂರ್ತಿ** (ನಾ). ಓಂಕಾರ ಸ್ವರೂಪನಾದವನು; ಶಿವ; ಪರಮಾತ್ಮ: ವಿಶ್ವಪ್ರಕೃತಿ ರೂಪಯೆನಿಪಮ್ಮಗೋಂಕಾರಮೂರ್ತಿಗೆ . . . ವ್ಯೋಮಶಕ್ತಿಗೆ ನಮೋ ನಮೊ (ವೀಶೈಪು. ೨–೨–೩೫).

[ಓಂಕಾರ + ಮೂರ್ತಿ]

**ಓಂಗು** (ಕ್ರಿ). (ಕರಾ) ಕೆಲಸವಿಲ್ಲದೆ ಸುತ್ತಾಡು, —ಅಲೆದಾಡು.

[← ತುಳು. ಓಂಗು]

**ಓಂಟೆ** 'ಓಟ್ಟೆ₃' ನೋ.

**ಓಂತಿ, ಓತ್ತಿ₁** (ನಾ). ಹಲ್ಲಿಯ ಜಾತಿಗೆ ಸೇರಿದ ಉಡುವಿನಂಥ ಒಂದು ಪ್ರಾಣಿ; ಸರಟ; ಓತಿಕ್ಯಾತ; ಹೆಂಟೆಗೊದ್ದ: ನರಿ ನಾಯ್ ಬೆಕ್ಕೋಂತಿ ಮೀನ್ ಪೇನ್ ನೊಣಮುಡು ಕರಿ . . . ಈ ತಿರಿಕ ವ್ರಾತಂಗಳೊಳ್ ಸಂಭವಿಸಿ ದುರಿತದಿಂ ದುಃಖಮಂ ಪೇಱಲಾಱೆಂ (ಧರ್ಮಾಮೃ. ೧೩–೧೫೬). ಓತ್ತಿ₁: ಮೋಹದಾಕೆವೋತಿಯಾದಳೆಂಬಂತೆ (ಧರ್ಮಾಮೃ. ೨–೮೩); ಓತಿ ಬೇಲಿವರಿದಂತೆ ಎನ್ನ ಮನವಯ್ಯಾ (ಬಸವ. ೨೮೬); ಓತಿಗೆ ಬೇಲಿ ಸಾಕ್ಷಿಯೆಂಬಂತೆ (ಸೌಂದಪು. ೫–೯); ಮರುಳುತನವು ಮಾತಿನಲ್ಲಿ ಹೃದಯದಲ್ಲಿ ವಿಷದ ಗುಟಕೆ ಮರದ ಮೇಲಣ ಓತಿಯಂತೆ ನಮಿಸುವಂಥ ದುರುಳನಿಗೆ (ಪುರಂದ. ೨–೬೪–೩).

[ದೇ. ‖ ತಮಿ. ಓಂತಿ, ಓತಿ, ಓತ್ತಿ; ಮಲ. ಓಂತು; ತುಳು. ಓಂತಿ; ಕೊಡ. ಓಂದಿ]

**ಓಂಪುಡಿ** (ನಾ). ಕಡಲೆ ಹಿಟ್ಟಿಗೆ ಓಮನ್ನು ಸೇರಿಸಿ ಮಾಡುವ ಒಂದು ತಿಂಡಿ: ಎಂಟು ಉಂಡೆ, ಓಂಪುಡಿ . . . ಕೊಟ್ಟಿದ್ದರು (ದಿಲ್ಲಿಪ. ೬೬); ಅಪ್ಪನೂ ಅಮ್ಮನೂ ಬಹಳ ಸಂಭ್ರಮಗೊಂಡು ಒಳ್ಳೊಳ್ಳೆಯ ಹಣ್ಣುಗಳನ್ನೂ, ಓಂಪುಡಿ, ಕೇಸರಿ, ಕಾಫಿಗಳನ್ನೂ ತಯಾರು ಪಡಿಸಿ ಸಿದ್ಧರಾದರು (ಪಕ. ೬೨). [?]

**ಓಕ₁** (ನಾ). ೧. ಮನೆ; ವಾಸಸ್ಥಳ: "ಆವಾಸಃ . . . ಓಕಃ . . . ಆಲಯಃ – ಈ ೩೧ ಮನೆ" (ಹಲಾಯು. ೯೯–೧೩೬). ೨. ಆಶ್ರಯ: "ಓಕ ಎಂದರೆ ಆಶ್ರಯವು" (ಬ್ರಹ್ಮಭಾ. ೨೬೫). ೩. ಸಂತೋಷ; ತೃಪ್ತಿ. ೪. ಸೌಂದರ್ಯ. [< ಸಂ. ಓಕಸ್]

**ಓಕ₂** (ನಾ). ಮೇರೆ: ಅಲ್ಲಿಂದಂ ಪಡುವಲು ಕಲ್ಲಹಳ್ಳಿಯ ತೆಂಕಣ ಓಕದ ಕಲ್ಲು ಅಲ್ಲಿಂದ ಪಡುವಲು ಬೆಲದ ತಾಳಗುಡದ ಕಲ್ಲ ಗುಡ್ಡೆ (ಎಕ. XIV, ಮಂಡ್ಯ. ೧೧೫–೯೫ ; 1576). [?]

**ಓಕ₃** (ನಾ). ಒಂದು ಜಾತಿಯ ಮರ: ತಮ್ಮ ಹಡಗುಗಳನ್ನು ಓಕವೆಂಬ ಜಾತಿಯ ಕಟ್ಟಿಗೆಯಿಂದ ಮಾಡುತ್ತಿದ್ದರು (ಮುಂಬಯಿ. ೩–೧೧೩).

[← ಇಂ. Oak]

**ಓಕರ, ಓಕರೆ** (ನಾ). = ಓಕರಿಕೆ ೧: ಮಾರಿ ಮೃತ್ಯುಗಳಿಗೋಕರ [ಪಾಠಾಂ.ರೆ] ಹುಟ್ಟಿ ಕ್ರೂರಜವಂಗತಿಭೀಕರ ಹುಟ್ಟಿ ರಿಪುಬಲವಂ ಕೊಂದು (ಹಚಕಾ. ೧೨–೩೦ ರಗಳೆ); ತಾನಳಿದುಂಡವರಿಗೆ ಓಕರಮಾಳ್ಪ ನೊಣದಂತೆ ದುರ್ಜನರು ಹಾನಿ ತಮಗೆಯಾದೊಡಾಗಲಿ ಮಾನ್ಯರ ಮಾನಾಪಹಾರ ಮಾಡುವರು (ನೇಮಿಸಂ. ೧–೩೪). ಓಕರೆ: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ದೇ. ‖ ತಮಿ. ಓಕ್ಕಾಳ, ಓಕ್ಕಾಳಿ, ಓಜ್ಕಲ್; ಮಲ. ಓಕ್ಕಾನ; ತುಳು. ಓಂಕದೇ; ತೆಲು. ಓಕರ, ಓಕರಿಂತ, ಓಕಿಲಿ, ಓಕಿಲಿಂತ]

**ಓಕರಣೆ** (ನಾ). = ಓಕರಿಕೆ ೧: ಭುಜಬಲತೂಕವುಳ್ಳವರೇಸು ಮಂದಿಯು ಹರಿಯೊಡನೆ ತೊಡಗಿ ಓಕರಣೆ ಬಹ ತುತ್ತನಱಿದಱಿದಾಕರಣೆಯಿಂದುಣ್ಣದಿರು (ಪ್ರಹ್ಲಾಚ. ೬–೫೦). [ಓಕರ + –ಅಣೆ]

**ಓಕರಿಕೆ, ಓಗಡಿಕೆ** (ನಾ). ೧. ವಾಂತಿ ; ವಮನ : "ಉದ್ಗರಂ ವಮನ ಮೋಕರಿಕೆ" (ಮಂಗರಾ. ೧೧೩–೨) ; ಸರಸಿಜಾಕ್ಷಿಯ ಭಕ್ತಿ ಶೀಲೋದರ ವಿತರಪಾಕವನೊಲಿಯದೋಕರಿಕೆಯಾದುದು (ಬಸಪು. ೩–೨) ; ಓಕರಿಕೆ ಯಾಯ್ತುಬಲೆಗೆ (ಚೀರಮ. ೩–೨೦) ; ಮಲಮೂತ್ರಗಳ ದುರ್ಗಂಧದಿಂದ ಪಿತ್ತಕ್ಷೋಭವಾಗಿ ಓಕರಿಕೆ ಬರುತ್ತದೆ (ಮುಂಬಯಿ. ೫–೧೫೮) ; ಸಮುದ್ರ ಪ್ರಯಾಣದಿಂದ ಹುಟ್ಟುವ ಓಕರಿಕೆಯಿಂದ ಅವನು ಬಹಳ ಕೊಂದರೆ ಪಟ್ಟನು (ವಿಜ್ಞಾಕ. ೯೧). ೨. (ಆಲಂ) ಜುಗುಪ್ಸೆ ; ಹೇಸಿಕೆ : ಜಗತ್ತಿನ ವಿಚಿತ್ರ ವ್ಯಾಪಾರಗಳನ್ನು ನೋಡಿ ಅವಳಿಗೆ ಓಕರಿಕೆ ಬರುವಂತಾಯಿತು (ಮಣ್ಣಿಮ. ೧೫೫) ; ಅಲ್ಲಿಯ ದೃಶ್ಯವನ್ನು ನೆನೆದಾಗಲೆಲ್ಲ ಓಕರಿಕೆ ಬರುತ್ತದೆ (ಪುನರು. ೩೨೮). **ಓಗಡಿಕೆ** : ೧. ಮಲಂಗುವಿಕೆಯೋಗಡಿಕೆ ಯಾಗುಳಿಕೆಯು . . . ಕೈಸಾರ್ದವು (ಮಹಾಂತೇ. ೨–೩೪).
[ಓಕರ + –ಇಕೆ]

**ಓಕರಿಗೊಳ್** (ಕ್ರಿ). ವಾಂತಿಮಾಡಿಕೊಳ್ಳು ; ಕಾರು : ಶೈಲವೋಕರಿ ಗೊಂಡುದೆಂಬ ವಿಶಾಲದಿಂದೊಂದೊಂದು ಗಳಿಗೆಗೆಯೋಳಿಯಿಂ ದೊಂದೊಂದು ಪಣ್ಣುದುರುತಿಹ ವಿಟಪಿಗಳ (ಬಸಪು. ೧೯–೫೧).
[ಓಕರಿ$_0$ + ಕೊಳ್$_1$]

**ಓಕರಿಸು, ಓಂಕರಿಸು, ಓಗಡಿಸು** (ಕ್ರಿ). ೧. ವಾಂತಿಮಾಡು ; ಕಾರು: "ಓಕರಿಸಿದುದೋಗಡಿಸಿದುದು ತಾಂ" (ಕವಿಕಂ. ೧೯೯) ; ಓವೆಂದೋಕರಿಸಿ ನರೇಶ್ವರನ ಮೇಲೆ ಕಾಱಿದನಾಗಳ್ (ಧರ್ಮಾಮೃ. ೪–೧೬೩) ; ಓಕರಿಸಿದಳು ಮೃತ್ಯುವೆನ್ನನು (ಕುವ್ಯಾಅ. ೧೪–೧೮); ಮೃತ್ಯು ತುಷ್ಟಿಯಲೋಕರಿಸಿದಳು (ತೊರರಾ. ೬–೨೧–೨೯) ; ಓಕರಿಸುವ ಬೇತಾಳನ ಬಾಯಿಂದಾ ಕುರುಳೋವದೆ ಸುರಿದುದು (ಜಯಕಾ. ೭–೩೨). ೨. ಹೊರಸೂಸು ; ಉಗುಳು : ಆ ಕಠೋರದ ಕಯ್ದು ಕಿಡಿಗಳನೋಕರಿಸೆ (ಕುವ್ಯಾಗ. ೬–೨೭) ; ಕೋಪಾನಲನನೋಕರಿಸಿದನು ಕಲಿ ಹನುಮ (ತೊರರಾ. ೫–೨–೪೪). ೩. (ಆಲಂ) ಜುಗುಪ್ಸೆಹೊಂದು; ಹೇಸಿಕೆ ಪಡು ; ಅಸಹ್ಯ ಪಡು : ಲೋಕ ನಿಂದಿಸುವುದು ಕೇಳಿದವರು ಚೀ ಸಾಕೆಂದೋಕರಿಸುವರು (ಕುರಾಸಾಂ. ೩೨–೧೨೪) ; ಅವಿವೇಕದಾಚರಣೆಯ ನಾರು ನಡೆವರೆಂದವನೊಲ್ಲದೋಕರಿಸಿದನು (ಭರಚ. ೮೦–೨೬). **ಓಂಕರಿಸು** : ೧. ಕರಂ ಪೇಸಿಯೋಂ[ಪಾ ಠಾಂ. ಯೋ]ಕರಿಸುತ್ತ . . . ಅಂದಿನಿರುಳೊಂದು ನರಕದೊಳಿರ್ದ ಭವದಂತಾಗಿ (ಜೀವಸಂ. ೫೬–೩೬ ವ) ; ಮಳೆಗಳಲಿ ಇಳೆ ದಣಿವುತೋಂಕರಿಸಿತೆನೆ ಪಂಕಿಲಗಳುಬ್ಬಿದವು (ಅನಂರಾ. ೪–೨–೯). **ಓಗಡಿಸು** : ೧. "ಒಗಡಿಸಿತೆಂದುಂ, ಓಗಡಿಸಿತೆಂದುಂ, ಓಕರಿಸಿದುದು" (ಕಶಸಾ. ೨೩–೪೮೮) ; "ಓಗಡಿಸಿತೆನೆ ಕಾರುವುದಕಕ್ಕು" (ಕಶರ. ೧೭). ೩. ತದೀಯಜನಕನನೋಗಡಿಸದೆ ಧರ್ಮನಂದಧರ್ಮದೆ ಕೊಲೆ (ನೇಮಿಪು. ೩–೧೦೯) ; ಕಾಗೆಯ ಗೂಗೆಯೊಟ್ಟೆಯ ಸೃಗಾಲದ ಕತ್ತೆಯ ಬಾಯ್ಗಳಂತೆ ಮೆಯ್ಯೋಗಡಿಪಂತು ಪೆರ್ವಡುಕೆ ನಾತದ (ಅನಂಪು. ೯–೨೯) ; ಅಖಿಳವಿಷಯಸುಖಕ್ಕೋಗಡಿಸಿ ಭವಪಾಶಮಂ ಪಱಿಪಡಿಸಿ (ಪುಷ್ಪಪು. ೧೩–೬೫). ೪. ಹಿಂದೆಗೆ; ಹಿಂಜರಿ: ಅಳ್ಕದೆ ತಡದಡಿಸದೆ ನಡದು ದಹನನ[ಂ]ವೊಲಗೊಣ್ಣೋಗಡಿಸದೆ ಚಿನ್ತಿಸಿ ಮನದೊಳ್ ನೃಡನಂ (ಇಆ. XX, ೬೯–೩ ; 9ನೆಯ ಶತ) ; ಅರ್ಥರಾಶಿಯಂ ಪಡೆವವರೆಲ್ಲಮೋಗಡಿಸದೀವಡಂ (ಕಾವ್ಯಸಾ. ೪೨೩ ಶೂದ್ರಕ) ; ಮಾಗಧನಂ ಕಟ್ಟಿದಲ್ಲದಿರನರಸನೆನುತ್ತೋಗಡಿಸದೆ ನಡೆದುದು ಬಲಸಾಗರಮಾ ಸಾಗರಂಬರಂ (ಆದಿಪು. ೧೨–೬೪) ; ಒಂದು ರಥಾಂಗಕಾಂತೆ . . . ನೂಂಕೆ ಪೋಗದೋಗಡಿಸದೆ ಪತ್ತೆಸಾರ್ದ (ಕುಸುಮಾ. ೧೦–೮೨). ೫. ತಪ್ಪಿಹೋಗು ; ನಿಂತುಹೋಗು ; ಇಲ್ಲವಾಗು : ಕಣ್ಣನೀರ್ಗಳೋಗಡಿಸದೆ ಸೂಸೆ (ಆದಿಪು. ೧೨–೩೩) ; ನಡೆದುದು ಬಾಳ ಕಾಲದೊಳೆ ತೊಟ್ಟನಗಂಕದ ಶೌಚವೀಗಳೋಗಡಿಪುದೆ (ಪಂಪಭಾ. ೧೧–೪೭) ; ಕರುಮಾಡಮೋರೆವೋಯ್ತೋಗಡಿಸಿತ್ತು ಚಿತ್ತದ ಮುದಂ (ಶಾಂತಿಪು. ೩–೧೦೪) ; ಅನ್ಯಮಂಡಲಿಕರ ದರ್ಪಮೋಗಡಿಸಿತು (ಎಇ. XV, ೩೩೧–೯ ; 1028) ; ಈಗಡಿನ ಸುಖಂ ಧರ್ಮದಿನೋಗಡಿಸುಗುಮೆಂದು ಬೆರ್ಚಿ ಮೊಗಮಂ ತಿರಿಪಲ್ಕಾಗದು (ಜೀವಸಂ. ೨೨೩–೨೫).
[ಓಕರ + –ಇಸು$_3$. / ಪ್ರಾ. ಓಗ್ಗಾರಣ = ವಾಂತಿ]

**ಓಕರಿಸುಹ** (ನಾ). = ಓಕರಿಕೆ ೧ : "ಉದ್ಗಾರ, ಉದ್ಗಾರ್ಹ" (ನಾಚಿರಾ. ೬).
[ಓಕರಿಸು + –ಹ$_2$]

**ಓಕರೆ** 'ಓಕರ' ನೋ.

**ಓಕಸೌಕಸ** (ನಾ). ಗುಬ್ಬಿ ; ಗುಬ್ಬಚ್ಚಿ : "ಓಕಸೌಕಸಮೆನಲು ಚಟಕಮೆನೆ ಕಲವಿಂಕವಾ ಕಾಳಕಂಠಮೆನೆ ಗುಬ್ಬಿ" (ಮಂಗರಾ. ೫೧–೬). [ಸಂ.]

**ಓಕಾರ** (ನಾ). [ವ್ಯಾಕ] 'ಓ' ಎಂಬ ವರ್ಣ : ಅಕಾರಮುಂ ಉಕಾರಮುಂ ಕೂಡಿ ಸಂಧಿಯಾಗೆ, ಓಕಾರಂ ಪುಟ್ಟುಗುಂ (ಶಮದ. ೧೦ ಅಡಿಟ).
[ಸಂ.]

**ಓಕು** (ನಾ). ಕೊರತೆ; ನ್ಯೂನತೆ : "ಓಕು ಮುಕ್ಕುಗಳನ್ನು ಸರಿಪಡಿಸುವ ಸಲುವಾಗಿ ಹೋವಾರ್ಡನಂತೆ ಸೋಗು ತಾಳಿದ್ದೀಯೆ" (ಪುನರು. ೩೨೭).
[?]

**ಓಕುಳಿ** (ನಾ). ಉತ್ಸವ ಸಂದರ್ಭಗಳಲ್ಲಿ ಒಬ್ಬರಮೇಲೊಬ್ಬರು ಎರಚುವ ಬಣ್ಣದ ನೀರು : ಸಾಂದಿನೊಳ್ ಕತ್ತುರಿಯೊಂದು ಕೋಳ್ಗೆ ಸಱಿಕೊಳೋಕುಳಿಚಂದನ ಗಂಧವಾರಿಯೊಳ್ (ಪಂಪಭಾ. ೧೪–೨೦) ; ತುಪ್ಪದೋಕುಳಿ ನವದುಗ್ಧದೋಕುಳಿ ಹಿಮವ್ರಜದೋಕುಳಿ (೧೦ಕ. ೩–೬೨) ; ಓಕುಳಿಯ ನೆವದಿಂದ ತೆಕ್ಕೆಯ ಬಾಕುಳಿಗಳುರವಣಿಸಿತೇ (ಕುವ್ಯಾಅ. ೭–೮೭) ; ಮಱುದಿವಸ ಮರುವಲಿಯ ಸಮನಂತರದಲವಭೃತದೋಕುಳಿಯ ವಿಸ್ತರಣವೆಸೆದುದು (ತೊರರಾ. ೧–೧೬–೫೧) ; ಓಕುಳಿಯ ನೆವದೊಳಪ್ಪಿದರೆಂಬ ನಾಣ್ನುಡಿಯನಭಿನಯಿಸಿ ತೋಱುವಂತೆ (ಚೆಬಪು. ೩೭–೭೬).
[ದೇ. ‖ ತುಳು. ಓಕುಳಿ, ಓಕಳಿ]

**ಓಕುಳಿಗುಂಡಿ** (ನಾ). ಓಕುಳಿ ತುಂಬಿರುವ ಗುಂಡಿ, —ತಗ್ಗು : ರಂಗದ ಬೀದಿಯಲ್ಲೇ ಇರುವ ಓಕುಳಿಗುಂಡಿಯಲ್ಲಿ ಅರತೀನೀರು (ವಸಂತ) ಮಾಡಿ ತುಂಬಿ ಪರಸ್ಪರ ಎರಚಾಡುವರು (ಹುಟ್ಟಹ. ೫೦).
[ಓಕುಳಿ + ಗುಂಡಿ$_1$]

**ಓಕುಳಿಗುಪ್ಪಸ** (ನಾ). ಓಕುಳಿಯಾಡುವಾಗ ತೊಡುವ ಕುಪ್ಪಸ: ನಂದರಾಜನು ಓಕುಳಿಗುಪ್ಪಸವನೆಲ್ಲರಿಗೆಯು ಇತ್ತು . . . ನೀರಾಟದಲ್ಲಿ ಮಯೂರನಂಗವನಱಿಯಬೇಕೆಂದು (ಭೈರಸೂ. ೩೬).
[ಓಕುಳಿ + ಕುಪ್ಪಸ]

**ಓಕುಳಿಬುಗ್ಗೆ** (ನಾ). ಓಕುಳಿಯ ಊಟೆ, —ಚಿಲುಮೆ : ಒರಲಿದಳು ಕಂಡು ನೆತ್ತರ್ವೊನಲ್ ಚಿಮ್ಮಿದೋಕುಳಿಬುಗ್ಗೆಯಂ ! (ಶ್ರೀರಾಮಾ. ೮೧೩–೫೯).
[ಓಕುಳಿ + ಬುಗ್ಗೆ]

**ಓಕುಳಿಯಾಡು** (ಕ್ರಿ). ಓಕುಳಿಯನ್ನು ಎರಚಿ ಆಡು ; ಓಕುಳಿಯನ್ನು ಒಬ್ಬರೊಬ್ಬರ ಮೇಲೆ ಚೆಲ್ಲು : ರಸಭಾವದೊಳೋಕುಳಿಯಾಡೆ ಪೇಟ್ಟನಭಿನವಪಂಪಂ (ಮಲ್ಲಿಪು. ೧–೪೨) ; ಸಕಲ ಗಣವೃಂದಂ ಪ್ರಸಾದದೋಕುಳಿಯಾಡಿ ಸಕಲಗಣಸಂಕುಳಂ ತಣಿವಿನೋಕುಳಿಯಾಡಿ (ಬಸರ. ೭–೧೮೩) ; ಓಕುಳಿಯಾಡುವೆಳವೆಂಡಿರ ಮೆಯ್ಯ ಕುಂಕುಮದಿಂದೊಂದಿದ ಕೆಂದಾವರೆವೂಗಳಂ ತಳೆದು (ಕಬ್ಬಕಾ. ೩೦) ; ರಕುತದ ಕಡಲಲೋಕುಳಿಯಾಡಿದವು ಭೇತಾಳಕಾಳಿಯರು (ಕುವ್ಯಾಭೀ. ೫–೩೩) ; ಊರಿನ ಬೀದಿಯ ಸುತ್ತಲೂ ಓಕುಳಿಯಾಡಿ ಹೊಳೆಗೆ ಹೋಗಿ ಸ್ನಾನ ಮಾಡಿ ಬರುವರು (ಹುಟ್ಟಹ. ೫೦).
[ಓಕುಳಿ + ಆಡು$_1$]

**ಓಕೊಳ್ಳು** ‘ಓಗೊಳ್ಳು’ ನೋ.

**ಓಖಣಿ** (ನಾ). ಮಾತು ; ನುಡಿ : ರಸಭರಿತೋಖಣಿ ಹಸುಳನ ಹುಸಿಗೇಳಿ ಶಶಿವದನೆಯರ್ ಮುದ್ದಿಸಿ ಅಪ್ಪಿಕೊಂಡರೆ (ಪ್ರಸಭಾ. ೧೭–೨೨).
[ಪ್ರಾ. ವಕ್ಖಾಣ (< ಸಂ. ವ್ಯಾಖ್ಯಾನ)]

**ಓಗ** (ನಾ). = ಓಘ ೪ : “ಓಘಂ – ಓಗಂ” (ಶಮದ. ಸ. ೨೬೯ ಪ್ರಯೋ); “ಓಘ, ಓಗ” (ಶಬ್ದಾನು. ೧೪೩ ಪ್ರಯೋ). [< ಸಂ. ಓಘ]

**ಓಗಂಪಾಡು** ‘ಓಗಂಬಾಡು’ ನೋ.

**ಓಗಂಬಾಡು**, ಓಗಂಪಾಡು (ಕ್ರಿ). ಸುಪ್ರಭಾತಗೀತವನ್ನು ಹಾಡು : ನಿನಗೋಗಂಬಾ[ಪಾಠಾಂ. ಪಾ]ಡುವ [ಪಾಠಾಂ. ನಿನಗಾಗಂ ಪಾಡುವ, ನಿನ ಜೋಗುಳ ಪಾಡುವ] ಯುವತಿ ನಿಕಾಯದ ದನಿಗೆ ಸೆಣಸುವಂತೆವೊಲ್ . . . ಮೊರೆವುವಳಿಗಳ ಬಳಗಂ (ಆದಿಪು. ೧೨–೫೧). **ಓಗಂಪಾಡು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. “ಓಗಂ ಪಾಡುವ = ದ್ರುತಗತಿಯಿಂದ ಹಾಡುವ” (ಆದಿಪು. ಕೋಶ).
[ಓಗ$_0$ + ಪಾಡು$_1$]

**ಓಗಟೆ** (ನಾ). ಸುಲಭವಾಗಿ ತಿಳಿಯಲು ಅಥವಾ ಬಿಡಿಸಲು ಸಾಧ್ಯವಾಗದ ಮಾತು; ಗೂಢವಾದ ಮಾತು ; ಪ್ರಹೇಳಿಕೆ : ಪರಹೃದಯದ ಪ್ರವೀಣತೆಯನೋಗಟೆಯರ್ಥಮಂ (ದಶಕು. ೮–೩೨೨) ; ವಿಧಿ ಬರೆದೋಗಟೆಯೊ ಕುರುವಂಶ ವಜ್ರದ ಬೇಗಡೆಯೊ (ಕುವ್ಯಾಕ. ೨೬–೧೪) ; ಓಗಟೆಯಾದ ಮಾತನೊಂದಾಡಲ್ (ದಿವ್ಯಸೂ. ೪–೧೯). ‘ಒಗಂಟು’ ಪರಾ. [?]

**ಓಗಡಿಕೆ** ‘ಓಕರಿಕೆ’ ನೋ.

**ಓಗಡಿಸು** ‘ಓಕರಿಸು’ ನೋ.

**ಓಗರ** (ನಾ). ೧. ಪಕ್ವವಾದದ್ದು ; ಪರಿಪೂರ್ಣವಾದದ್ದು : “ಓಗರ ಮೆಂದು ಪಕ್ವದೊಳ್” (ಕರ್ಣಾನಿ. ೪೩). ೨. ಬೇಯಿಸಿದ ಆಹಾರ ; ಅನ್ನ : “ಕೂರಮನ್ನಂ ಭಕ್ತಮೋದನಂ ಭಿಸ್ಸಮಾಹಾರಮಶನಂ ಬಲಿಯೆನಲ್ಕೆ ವೋಗರಮಕ್ಕು” (ಮಂಗರಾ. ೬೩–೧) ; ನೀವಿಕ್ಕುವ ಕೀರೆಗಂ ಬರಗಿನೋಗರಕ್ಕಂ ಪುಟ್ಟಿದವನಲ್ಲ (ನಂಬಿರ. ೨–೭೩) ; ಚಂದದೋಗರದೊಳಗೆ ಚಂದ್ರಿಕೆಯ ಹೊಸ ಹಳುಕಿನಂದದೆಮ್ಮೆಯ ಮೊಸರು (ಸಿದ್ಧರಾ. ೨–೩೩) ; ಸಣ್ಣಕ್ಕಿಯೋಗರ ತೊವ್ವೆ ಪಳಿದ್ಯವ ತರತರದಲಿ ಬಡಿಸಿದರು (ಮೋಹತ. ೩–೫೧) ; ಬಿಸಿಬಿಸಿಯಾದ ಓಗರಗಳನ್ನೂ, ಕುಡಿಯಲು ಬಿಸಿಹಾಲನ್ನೂ ಕೊಟ್ಟರು (ಕಭವಿ. 1, ೩೮೪). ‘ಮೇಲೋಗರ’ ಪರಾ. ೩. ಪರಿಮಳ ; ಸುಗಂಧ : ಕಳವೆ ಶಾಲಿಗೆ ಓಗರದ ಉದಕವನೆಱೆದವರಾರಯ್ಯಾ (ಮಹಾದೇ. ೧–೧) ; ದಳಂಬಡೆದು ಮಡುಗಟ್ಟಿ ಪರಿವ ಮಾಸಲ್ವಾಸಿಗದೋಗರದಣ್ಪಿನ ಸೌರಭ ಸಂಗಮದೊಳ್ (ಅನಂಪು. ೮–೧ ವ).
[ದೇ. ‖ ತಮಿ. ಓರ್ಗೈ ; ತೆಲು. ಓಗಿರ, ಓಯಿರ, ಓವಿರ, ಓರೆ]

**ಓಗರಗಂಪು** (ನಾ). ಬೆರಕೆಗಂಧ ; ಸಮ್ಮಿಶ್ರಗಂಧ : ಪೂತ ಗೊಜ್ಜಗೆಗಳ ಸಿಂದುರಂಗಳೊಳಗೋಗರಗಂಪನೆ ಬೀಱುತಿರ್ಪ ಮಲ್ಲಿಗೆಯೊಳರಲ್ದ ಸಂಪಗೆಯೊಳಗ್ಗಲಿಸಿತ್ತು (ಪಂಪಭಾ. ೫–೩೦) ; ಮನಕ್ಕಲ್ಲೆಸೆಗುಂ ಕದಂಬಮೆನಿಪೋಗರಗಂಪೆಸೆದಿರ್ದ ಚಂಪಕಂ (ದಶಕು. ೬–೨೧) ; ಮೆಲ್ಲೆಲರೆಂಚಿವಿಂಡು ತಳ್ತೋಗರಗಂಪು ತಳ್ತಲತೆ . . . ಚೆಲ್ವಾಗಿರೆ (ನಳಚಂ. ೧೬).
[ಓಗರ + ಕಂಪು]

**ಓಗರವಳಿಗೆ** (ನಾ). ಒಂದು ಭಕ್ಷ್ಯ : ಪೊಸ ಸೊಜ್ಜಿಗೆಯೊಳೋಗರವಳಿಗೆಯುಂ [ಪಾಠಾಂ. ಳಂಗವಾರಳಿಗೆಯುಂ, ಳ[ಗ]ಂಗರವಳಿಗೆಯುಂ] ಮಾಡಿ ಸುಟ್ಟುದಂ ಚೂರ್ಣಮಾಡಿ (ಸೂಪಶಾ. ೫–೭೨). [< ಅಂಗರವಳಿಗೆ]

**ಓಗರವೂ** (ನಾ). ಬಗೆಬಗೆಯ ಬೆರಕೆಯ ಹೂವು : ಓಗರವೂಗಳ ಬಂಡನೆಯ್ದೆ ಪೀರುತ್ತೊಡವಂದುವಿಂದ್ರವನದಿಂ ಮಱಿದುಂಬಿಗಳ್ (ಪಂಪಭಾ. ೧೧–೮೧). [ಓಗರ + ಪೂ$_2$]

**ಓಗರಸ್ಥಲ** (ನಾ). [ವೀಶೈ] ಒಂಬತ್ತು ಮಹಾಲಿಂಗಸ್ಥಲಗಳಲ್ಲಿ ಒಂದು : ನಿಂದುದೋಗರಸ್ಥಲ . . . ಜ್ಞಾನಶೂನ್ಯಸ್ಥಲ ಈ ೯ ಮಹಾಲಿಂಗಸ್ಥಲಂಗಳು (ಅಖಂಡೇ. ೨೫೨). [ಓಗರ + ಸ್ಥಲ]

**ಓಗರೆ** (ಕ್ರಿ). ಪ್ರೀತಿಯಿಂದ ಕರೆ; ಕಳಕಳಿಯಿಂದ ಕರೆ : ಮನೆಯ ಹಂಬಲು ‘ಬಾರೊ ಸಾಧನಕೇರಿಗೆ’ ಎಂದು ಓಗರೆಯುತ್ತಿದೆ (ಸೂರ್ಯಪಾ. ೨. ಮುನ್ನುಡಿ). [ಓ$_2$ + ಕರೆ$_1$]

**ಓಗಾಯಿತ** ‘ಓಗಾಯ್ತು’ ನೋ.

**ಓಗಾಯ್ತು**, ಓಗಾಯಿತ (ನಾ). “ಅಭಿಮಾನ, ಆಶೆ” (ಪ್ರಭಣ್ಣ) : ಮೂಗು ಹೋದಾ ಬಳಿಕ ಮೂಕುತಿಯ ಮೇಲೇವುದೋಗಾಯ್ತುಮುಸು [ಪಾಠಾಂ. ಯಿತಸು, ಯಿತ್ಯಮುಸು]ವಳಿದ ಬಳಿಕೊಡಲ ಮೇಲೇವುದೋಗಾಯ್ತು [ಪಾಠಾಂ. ತ್ಯ] ಕಂಪಳಿದ ಬಳಿಕ ಕುಸುಮಾವಳಿಯ ಮೇಲೇವುದೋಗಾಯಿತಂ [ಪಾಠಾಂ. ತ್ಯವು] (ಸೋಮಚ. ೪–೯೨). **ಓಗಾಯಿತ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[?. / ತಮಿ. ಓಗೈ = ನಲಿವು, ಸಂತೋಷ, ತೃಪ್ತಿ]

**ಓಗೊಡು** (ಕ್ರಿ). ಕರೆಗೆ ಉತ್ತರ ಕೊಡು : ತಾನದು ಕರೆದೊಡೋಗೊಡುತಿಕ್ಕು ತಿಳಿ ಸಂಜೀವಕರಣಿಯನು (ಕಾಶಿರಾ. ೨೯–೩೧) ; ಕೂಗಿಕೊಂಡರೆ ಓಗೊಡುವ ಒಬ್ಬ ಆತ್ಮೀಯನಾದರೂ ಇರುವನೆ (ವಾರಾಕ್ಯ. ೪೩) ; ಕರೆದರು ಓಗೊಡಬಾರದೆ (ಸಿದ್ಧಪು. ೩–೪೭).
[ಓ$_4$ (< ಒ$_4$) + ಕೊಡು]

**ಓಗೊಳ್ಳು**, ಓಕೊಳ್ಳು (ಕ್ರಿ). = ಓಗೊಡು : ತನಿಖೆಯ ಸಮಯದಲ್ಲಿ ಕಾರ್ಮನೋವ್ ಹೆಸರು ಕೂಗಿದಾಗ ಅವನೇ ಓಗೊಂಡ (ಪುನರು. ೫೧೭). **ಓಕೊಳ್ಳು** : ಎನಿತು ಕರೆದರೂ ಓಕೊಳ್ಳದಿರುವ ಅಚೆನ್ನಿದ್ರೆಯಾದೆ (ಅಗ್ನಿಹಂ. ೯೪). [ಓ$_4$ (< ಒ$_4$) + ಕೊಳ್ಳು$_1$ (< ಕೊಳ್$_1$)]

**ಓಘ** (ನಾ). ೧. ಪ್ರವಾಹ; ನೆರೆ : “ಧಾರೆ ಪ್ರವಾಹಮೋಘಂ” (ಮಂಗರಾ. ೧೨೩–೧೨) ; ಐತಿಹಾಸಿಕ ಘಟನೆಗಳ ಓಘವು, ತತ್ಕಾಲೀನ ಅನೇಕ ಕಾರಣಗಳಿಂದಾಗಿ ಆಗಾಗ ದಿಕ್ಕು ಬದಲಿಸುತ್ತ ಬಂದುದುಂಟು (ಕರ್ಣಾಟ. ೬೨) ; ಅವಳ ಒಂದೊಂದು ವಚನವೂ ಭಕ್ತಿಯ ಓಘದಲ್ಲಿ, ಅನುಭವದ ಆಳದಿಂದ ಹೊರಹೊರಟುದು (ಕರ್ಣಾಕ. ೬೯). ೨. ರಭಸ : ಮಾತಿನ ಓಘದಲ್ಲಿ ದೇಸಾಯರು ನರಹರಿಯನ್ನು ಕೋಣೆಯಿಂದ ಪಡಸಾಲೆಗೆ ಕರೆದುಕೊಂಡು ಬಂದರು (ಸಮುಜೀ. ೨೨೩). ೩. ಸಮೂಹ ; ರಾಶಿ : ಪ್ರಥಿತ ಪೃಥವೀಪಾಲೌಘಾ ನಮ್ರ ಮೌಳಿಮಣಿ ಪ್ರಭಾಗ್ರಥಿತ ಪದಪೀಠಾಗ್ರಂ (ಕಾದಂಪೂ. ೧೭) ; ಅಘೌಘಮೆನಿಪ ಕೋಳ್ಗೆಸಜಂ ಕರ್ಚಿ (ಉದ್ಭದೇ. ೩–೬೪) ; ಮುರಿದ ಪೆರ್ಮರಗಳಿಂ ತಂದ ಕಾಷ್ಠೌಘಮಂ ಹರಡಿ (ಶ್ರೀರಾಮಾ. ೧೩೮–೩೭೧). ೪. [ಸಂಗೀತ] ದ್ರುತತಾಳ (ಕಿ).
[ಸಂ.]

**ಓಚಯ್ಯ** (ನಾ). ಉಪಾಧ್ಯಾಯ ; ಗುರು : ಹೊಸಶಾಲೆಗೆ ಬಂದಿರುವ ಓಚಯ್ಯಗಳು (ಬೆಳುಮು. ೯೫) ; ಓಚಯ್ಯನವರು . . . ಎರಡನೇ ಕ್ಲಾಸಿನಲ್ಲೇ ಇರು ಎಂದರು (ಸುವಸಂ. ೯೮).
[ಓಚ$_0$ (< ಓಜ$_1$) + ಅಯ್ಯ$_1$]

**ಓಜ$_1$** ‘ಒವರ್ಝು’ ನೋ.

**ಓಜ$_2$**, ಒವಜೆ, ಓಜೆ$_2$ (ನಾ). ೧. ಕಾಂತಿ : ರವಿಯ ಬತ್ತಿಯನು ಹೊತ್ತಿಸಿಹುದು ಬಾನಲ್ಲಿ ಈ ಶನೋಜ (ಮುಕ್ತಕಂ. ೧೩–೧೩). ೨. [ವೈದ್ಯಶಾ] ವೀರ್ಯದ ಅತಿಸೂಕ್ಷ್ಮಭಾಗ : ವೈದ್ಯಶಾಸ್ತ್ರದ ರೀತಿಯಾಗಿ ಆಹಾರಕ್ಕೆ ಏಳು ಪರಿಣಾಮಗಳು. ಏಳನೆಯದೇ ವೀರ್ಯ. ವೀರ್ಯದ ಅತಿ ಸೂಕ್ಷ್ಮಭಾಗ “ಓಜ”. ಈ ಓಜದಿಂದ ವಾತಸಂಸ್ಥಾನದ ಅತಿಸೂಕ್ಷ್ಮತಂತುಗಳು ಆಗಿವೆ (ಜೀವಾತ್ಮ. ೧೫೨).

೩. [ಕಾವ್ಯಮೀ] ಕಾವ್ಯದ ಹತ್ತು ಶಬ್ದಗುಣಗಳಲ್ಲಿ ಒಂದು; ಸಮಾಸ ಭೂಯಿಷ್ಠ ರಚನೆ : ಪಿರಿದುಂ ಸಮಾಸಮಾಗಿರೆ ವಿರಚಿಸುವುದು ತಾನದೋಜಮಕ್ಕುಂ (ಕಾ ವ್ಯಾ ವ. ೧೨೨). ೪. ಪ್ರಾಣ. ೫. ಶಕ್ತಿ; ಸಾಮರ್ಥ್ಯ. ೬. ನೀರು. ೭. ಶಸ್ತ್ರಾಸ್ತ್ರ ನೈಪುಣ್ಯ. ೮. ವೇಗ. **ಒವಜೆ :** ೧. ಬಳವಳವಣ್ಮ ಕಾಯ್ಪೊವಜೆ ಬಿನ್ನಣಮೆಂಬಿವು ಪೊಟ್ಟಜಲ್ಲಿ ಕೈಕೊಳೆ ವನವಹ್ನಿಯಿಂ ಬಿದಿರಗಂಟೊಡೆವಂತೆ ಛಟಚ್ಛಟಸ್ವನಂ ಬಳೆದುದು ಯುದ್ಧದೊಳ್ (ಜಗವಿ. ೬–೬೩). ಓಜೆ$_2$: ೩. ಮನಸಿಜನೋಜೆ ಕಣ್ಣಮನ ಜಾಣ್ಣುಡಿ (ಜಗವಿ. ೧–೧೦). ೫. ತಮ್ಮೋಜೆ ತಮ್ಮಾರ್ಪು ತಮ್ಮ ಸದಾ ಚಾರತೆ ತಮ್ಮ ನಿರ್ಮ್ಮಳತೆ (ಎಇ. XIII, ೩೩೩–೬೦ ; 929) ; ಪೆಸರ್ಗಂ ತೇಜಕ್ಕಮೊಂದೋಜೆಗಮಹಿತ ಮಹೀಪಾಳಕರ್ಬೆಚ್ಚೆ ಬಾಯ್ಕೇಳಿಸಿ (ಆದಿಪು. ೧೪–೧೪೮). [< ಸಂ. ಓಜಸ್]

**ಓಜ$_3$** (ಗು). ವಿಷಮ ಸಂಖ್ಯೆಯ; ಬೆಸಸಂಖ್ಯೆಯುಳ್ಳ. 'ಓಜ ಗೃಹಸ್ಥ', 'ಓಜರಾಶಿ' ಪರಾ. [ಸಂ.]

**ಓಜಗಾಱ** (ನಾ). ತೇಜಸ್ಸುಳ್ಳವನು; ಶಕ್ತಿಯುಳ್ಳವನು (?): ಓಜಗಾಱರಕ್ಕರಿಗರೋದುಗಾಱರ್ ಸಂಗೀತ ಸಾಹಿತ್ಯ ನಿಪುಣರ್ . . . ಆಗಿರ್ಪರ್ (ಚಿಕವಂ. ೧೪೪–೨). [ಓಜ$_2$ + -ಗಾಱ (< -ಕಾಱ)]

**ಓಜಗೃಹಸ್ಥ** (ನಾ). [ಜ್ಯೋತಿ] ವಿಷಮಸ್ಥಾನದಲ್ಲಿರುವುದು : ಪಗಲಿನ ಲಗ್ನಮಕ್ಕಿರುಳ ಲಗ್ನದೊಳೋಜಗೃಹಸ್ಥನಾಗೆ ತಂದೆಗೆ ಜನಕ ಗ್ರಹಂ ನೆಲಸೆ (ಜಾತತಿ. ೩–೭). [ಓಜ$_3$ + ಗೃಹಸ್ಥ]

**ಓಜಗೊಡಗಿ** (ನಾ). ಉಪಾಧ್ಯಾಯರಿಗೆ, ಗುರುಗಳಿಗೆ ಬಿಟ್ಟ ದತ್ತಿ : ವಸಂತಕ್ಕೆ ಗಡಿ ಖಂ ೧೨ ಹಲವು ಸಾಲೆಯಲಿ ವೋಜಗೊಡಗಿ ಬೀಜವರಿ ಖಂ ೧೦ಕ್ಕೆ ಗಡಿ ಖಂ ೫೦ (ಎಕ. VIII, ತೀರ್ಥಹ. ೧೯–೩೯ ; 1573). [ಓಜ$_1$ (< ಒವಝು) + ಕೊಡಗಿ (< ಕೊಡಗೆ)]

**ಓಜರಾಶಿ** (ನಾ). [ಜ್ಯೋತಿ] ಮೇಷ, ಮಿಥುನ, ತುಲಾ, ಧನುಸ್ಸು, ಕುಂಭ ಮೊದಲಾದ ರಾಶಿಗಳು ; ಬೆಸರಾಶಿ : "ಓಜಗೃಹಸ್ಥನಾಗೆ" ಎಂದರೆ ಲಗ್ನದಿಂದ ಓಜರಾಶಿಯಲ್ಲಿದ್ದರೆ ಎಂದು ಅರ್ಥವಾಗುತ್ತದೆ (ಜಾತತಿ. ೩–೭ ಅಡಿಟ). [ಓಜ$_3$ + ರಾಶಿ]

**ಓಜರೇಖೆ** 'ಓಜಾರೇಖೆ' ನೋ.

**ಓಜಸ್ವಿ** (ಗು). ೧. ಕಾಂತಿಯುಳ್ಳ. ೨. ಬಲವುಳ್ಳ. ೩. [ಕಾವ್ಯಮೀ] ಓಜೋಗುಣದಿಂದ ಕೂಡಿದ. [ಸಂ. ಓಜಸ್ವಿನ್]

**ಓಜಸ್ಸು** (ನಾ). ೧. ಶಕ್ತಿ; ಸಾಮರ್ಥ್ಯ; ಕೆಚ್ಚು. ೨. ಕಾಂತಿ; ಹೊಳಪು. ೩. ಪ್ರಕಟರೂಪ; ಆವಿರ್ಭಾವ. ೪. ಆಧಾರ; ನೆಲೆ. ೫. ನೀರು. ೬. [ಕಾವ್ಯಮೀ] ಕಾವ್ಯದ ಹತ್ತು ಶಬ್ದಗುಣಗಳಲ್ಲಿ ಒಂದು : "ಓಜಸ್ಸು – (ಹ್ರಸ್ವಾಕ್ಷರಗಳೂ ಅವುಗಳ ಮುಂದೆ ಸಂಯುಕ್ತಾಕ್ಷರಗಳೂ ವಿಶೇಷವಾಗಿ ಬರುವುದರಿಂದ) ಪದಗಳ ಜೋಡಣೆಯಲ್ಲಿ ಕಂಡು ಬರುವ ಬಿಗಿಕಟ್ಟು" (ಕೈಪಿಡಿ. ೨೩೪); ಶ್ಲೇಷ, ಪ್ರಸಾದ . . . ಓಜಸ್ಸು, ಕಾಂತಿ, ಸಮಾಧಿ – ಈ ಹತ್ತು ಗುಣಗಳೇ ವೈದರ್ಭಮಾರ್ಗದ "ಪ್ರಾಣ" (ಭಾರಮೀ. ೨೯). [ಸಂ. ಓಜಸ್]

**ಓಜಾಯತ** (ನಾ). ಅತಿಶಯವಾದ ತೇಜಸ್ಸು; ಕಾಂತಿಯ ಹೆಚ್ಚಳ (?): ವೀರರುಣ್ಮುವೋಜಾಯತಮಂ ಬಿತ್ತರಿಸಲಳವೆ (ಕಮಮಾ. ೫–೪೯). [ಓಜ$_2$ + ಆಯತ$_4$]

**ಓಜಾಯಿತ** (ನಾ). ಶ್ರೇಷ್ಠನಾದ ಶಿಲ್ಪಿ; ಶಿಲ್ಪಾಚಾರ್ಯ (?): ಕುದುರೆ ಕಾಱರ ಕೇಣಕದನುಮಾನಕ್ಕಮೋಜಾಯಿತರೋಜೆಯೊಲವಱಿದ ಭೂಮನಕ್ಕಂ ಸಕ್ಕಸಮನಾಗಿ ತೂಗಿದಂತೆ (ಅನಂಪು. ೨–೩೦ ವ) ; ಚತುರಾನನಂ ಚತುರತೆಯಿಂದೋಜೆದಪ್ಪದೋಜಾಯಿತನಾಗಿ ನಿರ್ಮಿಸಿದರಮ್ಯಹರ್ಮ್ಯಂಗಳಿಂ (ವಿರೂಪಾ. ೪೩ ವ). [ಓಜ$_1$ (< ಒವಝು) + -ಆಯಿತ (< -ಆಯ್ತ)]

**ಓಜಾಯಿಲ** (ನಾ). ೧. ಮರಗೆಲಸದವನು ; ಬಡಗಿ (?) : ಮರನು ಮನೋಜಾಯಿಲನಾಗಿ ಪೊಸೆಯೆ ಕಿರ್ಚಕ್ಕುಂ ಎಳ್ಳಂ ಗಾಣದೊಳಿಕ್ಕಿ ಪಿೞಿಯೆ ಬೞಿಕ್ಕೆಣ್ಣೆಯಕ್ಕುಂ (ಧರ್ಮಾಮೃ. ೯–೧೨೦). ೨. ಅಕ್ಕಸಾಲಿ (?) : ಓಜಾಯಿಲಂ, ಅಡ್ಡಾಯಿಲಂ (ಶಮದ. ೨೧೫ ಪ್ರಯೋ). ೩. (ಆಲಂ) ವಂಚಕ; ಮೋಸಗಾರ (?) : ಬೆಳ್ಳಕ್ಕಿಯಂತೆ ಮಾಯಾಮಾರ್ಗನುಂ ಪುಲಿಯಂತೋಜಾಯಿಲನುಂ (ಧರ್ಮಾಮೃ. ೬–೬೨). [ಓಜ$_1$ (< ಒವಝು) + -ಆಯಿಲ$_2$]

**ಓಜಾರೇಖೆ,** ಓಜರೇಖೆ (ನಾ). [ಗಣಿತ] ವರ್ಗಮೂಲ ತೆಗೆಯುವಾಗ ಸಂಖ್ಯೆಯ ಮೇಲೆ ಗುರುತಿಸುವ ರೇಖೆ : ಓಜಾರೇಖೆಯೆಂದು ಸಲಾಕಾರೇಖೆಯಂ ತೆಗೆದು . . . ಓಜಾರೇಖೆಗಿಂದಲ್ಲಿಯೇ ವರ್ಗಮೂಲಂಗೊಂಬುದು (ವ್ಯವಹಾ. ೧೪–೯). **ಓಜರೇಖೆ :** ಎಂದು ಓಜರೇಖೆಯಂ ತೆಗೆದು (ವ್ಯವಹಾ. ೧೩–೩).

ಓಜೆಯರೇಖೆ = ಓಜಾರೇಖೆ: ಓಜಾತ್– ಓಜೆಯರೇಖೆ ನಿಂದಲ್ಲಿಯೇ ವರ್ಗಮೂಲಂಗೊಂಬುದು (ವ್ಯವಹಾ. ೧೪–೫). [ಓಜ ? + ರೇಖೆ]

**ಓಜಾಸೂತ್ರ** (ನಾ). ಪದಾರ್ಥಗಳ ಅಳತೆ, ತೂಕಗಳಿಗೆ ಅನುಗುಣವಾಗಿ ನಾಣ್ಯದ ಕೋಷ್ಟಕಗಳನ್ನು ಹೊಂದಿಸಿ ಹೇಳುವ, ಲೆಕ್ಕ ಮಾಡುವ ಸುಲಭ ಸೂತ್ರ : ಮಂಗುಣ ಅಳತೆಗೆ – ಅಳತೆಗೆ ಓಜಾಸೂತ್ರಂ (ವ್ಯವಹಾ. ಅನುಬಂ. ೧–೧). [ಓಜ ? + ಸೂತ್ರ]

**ಓಜಾಹಾರ** (ನಾ). ನೀರಿನ ಆಹಾರ (?) : ಪಕ್ಷಿಗಳ ತತಿಗಳ್ಗೋಜಾಹಾರಮಕ್ಕುಂ (ಶ್ರಾವಕಾ. ೭೨–೭). [ಓಜ$_2$ + ಆಹಾರ]

**ಓಜಾಳು** (ನಾ). ಉದ್ಯೋಗವನ್ನು ಕಳೆದುಕೊಂಡವನು (ಸ್ಯಾಂಡರ್); "ಉದ್ಯೋಗವಿಲ್ಲದವನ ಹೆಸರು" (ಗಂಗಾಮ. ೫೯). [?]

**ಓಜಿಸು** (ಕ್ರಿ). ಕ್ರಮಗೊಳಿಸು ; ಅಣಿಗೊಳಿಸು : ಬೇಂಟೆಯನಾಡಿ ರಘುರಾಮನಾ ಜನಕಜೆಯನಂದು ನೀಗಿದನೋಜಿಸಿದ ಬೇಂಟೆಗಳನಾಡಿ ವಿರಾಜಿಸುವ ಕಣ್ಣಪ್ಪನಿಪ್ಪನು (ಬಸಪು. ೩೧–೨೧) ; ಈ ಜಗದ ಜೀವರಿಗದೊಂದೇ ವ್ಯಾಜವಿಲ್ಲದ ಸೃಷ್ಟಿಯನು ಮಿಕ್ಕೋಜಿಸಲು ಹದಿನಾಲ್ಕು ಲೋಕದ ಜೀವರಾಶಿಗಳ (ಸಂಭಪ. ೫–೯) ; ಮಹಾಮಂಗಳೋತ್ಸವಗಳ ನೋಜಿಸಿ (ಸಿಂಗಿರಾ. ೨೭–೬). [< ಯೋಜಿಸು ?]

**ಓಜು$_1$** 'ಒವಝು' ನೋ.

**ಓಜು$_2$** 'ಒವಜು' ನೋ.

**ಓಜುಗಟ್ಟಿಗೆ** (ನಾ). ಉಪಾಧ್ಯಾಯನ ಕೈಯಲ್ಲಿರುವ ಬೆತ್ತ ; ಶಿಕ್ಷಾದಂಡ : ಎಡದ ಕೈಯಲು ಹಾಲಬಟ್ಟಲು ಬಲದ ಕೈಯಲ್ಲಿ ಓಜುಗಟ್ಟಿಗೆ ಆವಾಗ ಬಂದಾನೋ ನಮ್ಮಯ್ಯ ಬಡಿದು ಹಾಲ ಕುಡಿಸುವ ತಂದೆ (ಬಸವ. ೩೮೮). [ಓಜು$_1$ (< ಒವಝು) + ಕಟ್ಟಿಗೆ]

**ಓಜೆ$_1$** (ನಾ). ೧. ಸಾಲು ; ಶ್ರೇಣಿ; ಪಂಕ್ತಿ : ಕೂಳೊಳರ್ಧವ ಹೊಡೆದು ಸುೞಿದು ಹಾಲುತುಪ್ಪದ ಹರವಿಯೋಜೆಯಲಿ (ಕು ವ್ಯಾ ಆ. ೧೦–೩೦) ; ಪೌಜು ಪೌಜಾಗಿ ಬೊಬ್ಬಿರಿದೇೞುವರಿಭಟರೋಜೆಯನೇನ ಬಣ್ಣಿಸುವೆ (ಕಂನವಿ. ೧೪–೪೭). ೨. ಕ್ರಮ ; ರೀತಿ ; ಅಣಿ; ಒಪ್ಪ : ಕರ್ಣನು ಮನ್ನೆಂದೊಂದೋಜೆಯೊಳೆಸಗದೊಡಾಂ ಸ್ಯಂದನದಿಂದಿೞಿದು ಪೋಪೆಂ (ಪಂಪಭಾ. ೧೨–೧೦೧) ; ಅದು ಕಣ್ಣಪ್ಪನ ಪೂಜೆಯೋಜೆ ಬಗೆಯಲ್ ವೇದೋಕ್ತಮೇ (ಪಂಪಾಶ. ೪೪); ಮಗಳೆ ನೀ ನನಗಲ್ಲದಿರ್ದೋಜೆಗಳ ನಡೆವರೆ (ಪ್ರಭುಲೀ. ೫–೫೪). ೩. [ಸಂಗೀತ] ತಾಳ; ಲಯ; ಸಾಂಗತ್ಯ : ಪೊಲೆಯರ್ಬಡಿವ ಪಱೆಯೋಜೆಗಾಡುವ ಪಗರಣಿಗರಂ ಕಂಡು (ಧರ್ಮಾಮೃ. ೫–೧೦೩) ; ತಾಳಮಾನ ಸರಿಸವನಱಿಯೆ ಓಜೆ ಬಜಾವಣೆಯ ಲೆಕ್ಕವನಱಿಯೆ (ಬಸವ. ೪೯೪). ೪. ವಶ ; ಅಧೀನ. 'ಓಜೆಗೊಳ್$_1$', 'ಓಜೆವಿಡಿ' ಪರಾ. [ದೇ. ‖ ತೆಲು. ಓಜ]

**ಓಜ್ಜೆ₂** 'ಓಜ₂' ನೋ.

**ಓಜೆಗಾತಿ** (ನಾ). ಕ್ರಮವರಿತು ನಡೆಯುವವಳು; ಒಪ್ಪವುಳ್ಳವಳು: ಹೆಣ್ಣಿಗೆ ಹಿತ ರಂಗನೆಂಬೋಜೆಗಾತಿಯ ಕಣ್ಣಾರದೆಂದು ಕಂಡಪೆನೊ (ಶತಸಾಂ. ೩೦–೫೫). [ಓಜೆಗಾಱ + –ತಿ₁ (< –ಇತ್ತಿ)]

**ಓಜೆಗಾಱ** (ನಾ). ಕ್ರಮವಾಗಿ ವ್ಯವಹರಿಸುವವನು; ಒಪ್ಪಗಾರ: ಕಲಾವಿದನೊಳ್ವಾತುಗನೋಜೆಗಾಱನುಚಿತಜ್ಞಂ ಭಾವುಕಂ (ಗೀತಗೋ. ೧–೩). [ಓಜೆ₁ + –ಗಾಱ (< –ಕಾಱ)]

**ಓಜೆಗೆಡಿಸು** (ಕ್ರಿ). ಶೋಭೆ ಕೆಡುವಂತೆ ಮಾಡು; ಕಾಂತಿಗೆಡಿಸು: ನಿನ್ನ ರೂಪಿಗೆ ಮರುಳಾದ ರಾಜವದನೆಯ ನೀನಿಂತು ಓಜೆಗೆಡಿಪುದೆಂದಱಿಸಿದಳವಳು (ಕುರಾಸಾಂ. ೩೩–೪೪). [ಓಜ್ಜೆ₂ (< ಓಜ₂) + ಕೆಡು + –ಇಸು₃]

**ಓಜೆಗೆಡು** (ಕ್ರಿ). ಕ್ರಮತಪ್ಪು; ನಿಯಮವನ್ನು ಮೀರು: ಪೂಜೆಯಂ ನೋಡಿ ಮೆಚ್ಚದೆ ಪೂಜೆಯಂ ಮಾಡಿ ಓಜೆಗೆಟ್ಟಱುಹುಗೆಟ್ಟತಿಲಲ್ಲೆಯಂ ಮಾಡಿ (ಬಸರ. ೩–೫೬). [ಓಜೆ₁ + ಕೆಡು]

**ಓಜೆಗೆಯ್** (ಕ್ರಿ). ಶೋಭೆಯನ್ನುಂಟುಮಾಡು, —ಒದಗಿಸು: ರತಿಗೆ ರತಿಯಂ ಪುಟ್ಟಿಸುವ ರೂಪು ವಾಣಿಗುನ್ನತವಾಣಿಯಂ ಶಿಕ್ಷಿಸುವ ವಾಗ್ವಿಲಾಸವಿನಸತಿಗೆ ತೇಜಮನೋಜೆಗೆಯ್ವ ತನುರುಚಿ (ಪದ್ಮರಾ. ೩–೬೯). [ಓಜ್ಜೆ₂ (< ಓಜ₂) + ಕೆಯ್₁]

**ಓಜೆಗೆಯ್ಸು** (ಕ್ರಿ). ಸಾಲುಗೊಳಿಸು; ಕ್ರಮಗೊಳಿಸು: ಬಗೆಗೊಳಲೋಜೆಗೆಯ್ಸುವ ಕೆಲಕ್ಕೆ ನಿವರ್ತಿಪವುಂಕಿ ದಾಂಟಿಪೋಜೆಗೆ ತುರಗಂ . . . ಬರೆ (ವರ್ಧಪು. ೮–೬). [ಓಜೆ₁ + ಕೆಯ್₁ + –ಸು₁]

**ಓಜೆಗೊಳ್₁** (ಕ್ರಿ). ಕ್ರಮವನ್ನು ಅನುಸರಿಸು; ವಿಧೇಯವಾಗು: ಓಜೆಯೊಳೋಜೆಗೊಂಡು ಧರ್ಮಪ್ರಿಯರಾದರ್ ಪ್ರಜೆಗಳುಂ (ಆದಿಪು. ೧೬–೪೦). [ಓಜೆ₁ + ಕೊಳ್₁]

**ಓಜೆಗೊಳ್₂** (ಕ್ರಿ). ಶೋಭೆಯನ್ನು ಹೊಂದು; ಅಂದವಾಗು: ಓಜೆಗೊಳೆ ರಜತಶಾಸನ ರಾಜತ್ಪತ್ರಕದೊಳೆಸೆಯೆ ಬರೆಯಿಸುವಂತೆ (ಶಾಂತಿಪು. ೪–೫೯); ವಿವಿಧಾಮರ ಸಂಕುಲಮೋಜೆಗೊಳ್ವಿನಂ ಪಾಡಿದುದು (ಸುಕುಮಾ. ೯–೨೨). [ಓಜ್ಜೆ₂ (< ಓಜ₂) + ಕೊಳ್₁]

**ಓಜೆಗೊಳಿಸು** (ಕ್ರಿ).= ಓಜೆಗೆಯ್ಸು: ಒಲಿದು ಮಕುಟಾವಳಿಯ ಶೋಣಿತ ಪಳಿಯ ರಕ್ಕಸದೇಸಿಯಲಿ ಬಿಗಿದೆಳೆವ ಹಾಹೆಯನೋಜೆಗೊಳಿಸಿಕ್ಕಲಿಸಿ ಪದಯುಗವ (ತೊರರಾ. ೧–೧೫–೧೯); ಚಾಮರೇಂದ್ರರ ನಿತ್ತರದಲೊಮ್ಮೊದಲೆ ಚಪಲವ ಚಿತ್ತರಿಸುವಂತೋಜೆಗೊಳಿಸಿದರಮರ ಪಡಿಯಱರು (ಸಾಳ್ವಭಾ. ೨೧–೩೬). [ಓಜೆಗೊಳ್₁ + –ಇಸು₃]

**ಓಜೆದಪ್ಪು** (ಕ್ರಿ). ಕ್ರಮತಪ್ಪು; ನಿಯಮವನ್ನು ಮೀರು: ಜಿನಾಗಮದೋಜೆಯೊಳೋಜೆದಪ್ಪದೀ ವೀರನ ವೀರವೃತ್ತಿಯೊಳವಂ ನೆಱೆ ಬಣ್ಣಿಸಲಾರ್ಪನಾವನೋ (ಧರ್ಮಾಮೃ. ೪–೮೪); ಮಗಳೆಂಬ ಭಾವನೆಯನುಳಿದು ಪರಶಕ್ತಿಯೆಂದು ಓಜೆದಪ್ಪದೆ ಬಹಳ ಭಯ ಭಕ್ತಿಯಿಂ ಪದಸರೋಜಂಗಳಂ ಭಜಿಸುತಿರ್ದರ್ (ಚಿಬಪು. ೩೬–೧೯); ನಿನ್ನ ತನುಸಂಭವರ್ ಜಾನಕಿಯ ಮಕ್ಕಳಿವರೋಜೆದಪ್ಪಿದರ್ (ಜೈಮಿಭಾ. ೨೧–೫೩). [ಓಜೆ₁ + ತಪ್ಪು₁]

**ಓಜೆವಚ್ಚ** (ನಾ). ಹೊಳಪಿನ ಆಭರಣ: ಒಲ್ದೊಪ್ಪಂಬಡರೋಜೆವಚ್ಚಮನಿಡರ್ ಪೊಂಬಟ್ಟೆಯಂ ತಾಮುಡರ್ (ಚಕವಿ. ೩–೩೯). [ಓಜ್ಜೆ₂ (< ಓಜ₂) + ಪಚ್ಚ₂]

**ಓಜೆವಿಡಿ** (ನಾ). ಸಾಲಾಗಿರುವ, ಪಳಗಿಸಿದ ಹೆಣ್ಣಾನೆ: ಎರಡುಂ ಪಕ್ಕದೆ ಪಣ್ಣಿದೋಜೆವಿಡಿಯಂ ಕೈಗೆಯ್ದು ಬಂದೇಱೆ ಚಾಮರಮಂ ಕನ್ನೆಯರಿಕ್ಕೆ (ಪಂರಾಮಾ. ೨–೧೧). [ಓಜೆ₁ + ಪಿಡಿ₃]

**ಓಜೆವೆರಸು₁** (ಕ್ರಿ). ಶೋಭೆಯಿಂದ ಕೂಡಿರು; ಕಾಂತಿಯುಕ್ತವಾಗಿರು: ಭಕ್ತಿಮಂತನಾ ಪುಷ್ಪದತ್ತಂ ನಮಿಸಿ ಕೈಮುಗಿದು ಮುಂತಿರ್ದನೋಜೆವೆರಸಿ (ಸೌಂದಪು. ೧–೪೧); ಅಮೃತಾನ್ನದಾರೋಗಣೆಯ ಮಾಡಿಸಿದನೋಜೆವೆರಸಿ (ಸೌಂದಪು. ೪–೫೫). [ಓಜ್ಜೆ₂ (< ಓಜ₂) + ಬೆರಸು₁]

**ಓಜೆವೆರಸು₂** (ಅ). ಶೋಭೆಯಿಂದ ಕೂಡಿ, —ಯುಕ್ತವಾಗಿ: ಯತಿಧರ್ಮದೊಳ್ನಡೆವಾತಂ ಮೂಲೋತ್ತರ ಗುಣಂಗಳೋಜೆವೆರಸು ಸಕಲದೋಷಂಗಳುಂ ತನ್ನಂ ಪೊರ್ದದಂತಾಗೆ ನಡೆವುದು (ಧರ್ಮಾಮೃ. ೬–೨೦೯). [ಓಜ್ಜೆ₂ (< ಓಜ₂) + ಬೆರಸು₃]

**ಓಜೆವೆಱು** (ಕ್ರಿ). ಶೋಭೆಯನ್ನು ಹೊಂದು; ಅಂದವಾಗು: ಎರಡುಂ ಕೆಲಂಬಿಡಿದು ಬಾಜಿಪ ವಾದ್ಯದಿನೋಜೆವೆತ್ತ ಗಾಯನಿಯರ ಸೀಯನಪ್ಪ ರಸಗೇಯಮನಾಲಿಸುತಿರ್ಪಳ್ (ಪಂರಾಮಾ. ೩–೧೦೬); ವರ ಕಮಂಡಲಮೊಪ್ಪೆ ಹಸ್ತದೊಳೋಜೆವೆತ್ತಿರೆ ಬೆಳ್ಳಿಯುತ್ತರಿಗೆ ಜನ್ನಿವರಂ ಬೆಡಂಗಳವಟ್ಟು ಬಾಲದಿನೇಶನಂತಿರೆ ತನುಚ್ಛವಿ (ಧರ್ಮಾಮೃ. ೫–೨೦೬); ಅತ್ತೆಯ ಮಗಳ ವಿಳಾಸಿನಿಯೆಂದೋಜೆವೆತ್ತನ್ನನಿವಳು ತೋಱಪಗ (ಭರತಚ. ೩೬–೮೧). [ಓಜ್ಜೆ₂ (< ಓಜ₂) + ಪೆಱು₁]

**ಓಜೆವೇಳ್** (ಕ್ರಿ). ಕ್ರಮವನ್ನು ತಿಳಿಸು; ರೀತಿಯನ್ನು ಹೇಳು: ಇದು ಹಬ್ಬಿ ಲೋಕಾಂತವಾಗುತದಿದು ಬೇಡ ಮಗನೆಯೆಂದಾಕೆ ಮತ್ತೋಜೆವೇಳಿದಳು (ಭರತಚ. ೪೬–೧೩೪); ರಾಜರೋಜೆಯ ಮೀಱಿ ನಡೆಯೆ ಓಜೆವೇಳ್ವರು ಆರು ಬೇಡೆಂದು ಸಖರೆಲ್ಲರೋಜೆಯಿಂದೆಱಗಿ ಪೇಳಿದರು (ಭರತಚ. ೪೮–೫೯). [ಓಜೆ₁ + ಪೇಳ್ (< ಪೇೞ್)]

**ಓಜೋಗುಣ** (ನಾ). [ಕಾವ್ಯಮೀ] ಕಾವ್ಯದ ಹತ್ತುಗುಣಗಳಲ್ಲಿ ಒಂದು: "ಪದಬಂಧವು ಬಿಗಿಯಾಗಿರುವುದೂ, ಅರ್ಥವು ಪ್ರೌಢವಾಗಿರುವುದೂ ಓಜೋಗುಣವಾಗುತ್ತವೆ" (ಭಾರವಿಸಾ. ೪೨); ಓಜೋಗುಣ ಸಮಾಸ ವಿರಾಜಿತಂ (ಉದಯಾ. ೫). [ಸಂ. (ಓಜಸ್ + ಗುಣ)]

**ಓಜೋನ್ವಿತ** (ಗು). ಓಜಸ್ಸಿನಿಂದ ಕೂಡಿದ; ಸತ್ತ್ವಯುತವಾದ: ವಾಲಿಯ ಸಹೋದರಂ ಸುಗ್ರೀವನಲ್ತೆ ಆ ಓಜೋನ್ವಿತಂ (ಶ್ರೀರಾಮಾ. ೨೬೮–೧೩); ಪಾನೀಯ ಸೇವಿಸಿದಾಗ ಮಾತ್ರ ತನ್ನ ಮಾತು ಓಜೋನ್ವಿತವಾಗಿರುತ್ತದೆಂದು ತಾರಸ್ ತನ್ನ ವಿಷಯವಾಗಿ ಹೇಳಿಕೊಳ್ಳುತ್ತಿದ್ದನು (ಪುನರು. ೪೬೨). [ಸಂ.]

**ಓಜೋಲಕ್ಷಣ** (ನಾ). [ಕಾವ್ಯಮೀ] ಕಾವ್ಯದ ಹತ್ತುಗುಣಗಳಲ್ಲಿ ಒಂದು: ಸಮಱೆ ಸಮಾಸಪದಂಗಳನಮರ್ದಿರೆ ಸಯ್ತಾಗಿ ಬಗೆದು ಪೇೞ್ದೊಡದಕ್ಕುಂ ಕ್ರಮದೋಜೋಲಕ್ಷಣಮುತ್ತಮಮಿದು ಗದ್ಯಕ್ಕಲಂಕ್ರಿಯಾನುಸಮೇತಂ (ಕವಿರಾ. ೨–೮೩). [ಸಂ. (ಓಜಸ್ + ಲಕ್ಷಣ)]

**ಓರ್ಝು** 'ಒವರ್ಝು' ನೋ.

**ಓಟ** (ನಾ). ೧. ಓಡುವಿಕೆ; ಪಲಾಯನ: ಪುಸಿಗೆ ಪೇಸುವನ್ ಓಟಕ್ಕೆ ನಾಣ್ಚುವನ್ ಒಂದಿಱಿವಾತನ್ ಹಿರುಡವನ್ (ಮೈಆರಿ. ೧೯೧೬, ೧೩–೯ ; 900); ಕೆಲರ್ ನೋಡೆನೋಡೆ ತಮ್ಮೋಟಕ್ಕೆ ತಾಮೇ ನಾಣ್ಚಿದರ್ (ಶಾಂತಿಪು. ೪–೩೦ ವ); ಗೆಲ್ಲದ ಕಾಳೆಗದಿಂದೋಟಮೆ ಲೇಸು (ಧರ್ಮಾಮೃ. ೧೩–೧೨೬); ಶಲ್ಯ ಕ್ಷೋಣಿಪತಿ ಕೃತವರ್ಮ ಕೃಪರತಿಜಾಣರೋಟದ ವಿದ್ಯೆಗೆನುತಿರ್ದುದು ಭಟಸ್ತೋಮ (ಕುವ್ಯಾದ್ರೋ. ೧೬–೧೮); ದೊರೆತನಕ ದೂರು, ಹೊಳೆತನಕ ಓಟ (ಗಾದೆ). ೨. [ಕಾವ್ಯಮೀ] ನಡೆ; ಶೈಲಿ; ವಾಗ್ಝರಿ; ಮಾತಿನ ಓಟ: ಪದಗಳನ್ನು ಗೀತರೂಪವಾಗಿ ನೇಯುವುದು, ಅವುಗಳ ಓಟವೇ ನೃತ್ಯದ ಸಂತೋಷವನ್ನು ನೀಡುವಂತೆ ಮಾಡುವುದು ಇವು ಮುಖ್ಯ (ಭಾವಗೀ. ೪೯).

**ಓಟಕೀಳು** = ಪಲಾಯನ ಮಾಡು: ಹೆದರಿದ ಸೇವಕ ಅಲ್ಲಿಂದ ಓಟಕಿತ್ತ (ಹೊಸಕ್ಷಿ. ೧೬೧). [ಓಡು₁ + –ಅ₆]

**ಓಟಂಗೊಳ್** (ಕ್ರಿ). ಓಡಿಹೋಗು ; ಪಲಾಯನ ಮಾಡು : ಸೂರ್ಕದಾನೆ ಮೇಗಿಲ್ಲದೆ ಪರಿತಂದು ಮಸಗಿ ಕೊಲ್ವುದಂ ಕಂಡೋಟಂಗೊಳ್ವ ದೊಡಂ (ಜೀವಸಂ. ೧-೧೩ ವ) ; ಭಯಂಗೊಂಡೋಟಂಗೊಂಡೊಡೆ ಕೃಷ್ಣ ಕುಮಾರಂ ತೊಲಗದೆ ನಿಂದು ಸಿಂಹನಾದಂಗೆಯ್ದೊಡೆ (ಬಂಹರಿ.೬-೪೧ ವ).
[ಓಟ + ಕೊಳ್$_1$]

**ಓಟಗಾತಿ** (ನಾ). ಓಡುವವಳು : ಆಕೆ ಒಳ್ಳೆಯ ಓಟಗಾತಿ (ರೂಢಿ). 'ಆಟಗಾತಿ' ಪರಾ. [ಓಟಗಾರ + -ತಿ$_1$ (< -ಇತ್ತಿ)]

**ಓಟಗಾರ** (ನಾ). ಓಡುವವನು (ೱ). 'ಆಟಗಾಱ' ಪರಾ.
[ಓಟ + -ಗಾರ (< -ಕಾಱ)]

**ಓಟಗುಳಿ** (ನಾ). ೧. ಓಡುವುದೇ ಸ್ವಭಾವವುಳ್ಳವನು. ೨. (ಆಲಂ) ಪುಕ್ಕಲ; ಹೇಡಿ. 'ಓಟಗುಳಿತನ' ಪರಾ. [ಓಟ + -ಕುಳಿ$_3$]

**ಓಟಗುಳಿತನ** (ನಾ). ೧. ಓಡಿಹೋಗುವ ಸ್ವಭಾವ. ೨. (ಆಲಂ) ಪುಕ್ಕಲತನ; ಹೇಡಿತನ: ನಿನ್ನೋಟಗುಳಿತನದಳವ ಮಾಗಧ ಕಾಲಯವನರು ಬಲ್ಲರು (ಕುವ್ಯಾಸ. ೮-೩೫). [ಓಟಗುಳಿ + -ತನ]

**ಓಟವಿಕ್ಕು** (ಕ್ರಿ). ಓಡಿಹೋಗು ; ಪಲಾಯನ ಮಾಡು: ಓಟವಿ[ಪಾಠಾಂ. ಕಿ]ಕ್ಕಿತು ಕಂಡು ನಿಮ್ಮ ನರೇಂದ್ರಪರಿವಾರ (ತೊರರಾ. ೬-೨೭-೪). [ಓಟ + ಇಕ್ಕು]

**ಓಟು$_1$** (ನಾ). ೧. ಆ ಪ್ರಮಾಣ; ಅಷ್ಟು : ನನ್ನೊಸೇ ಹೇಂಗವ್ರೋ ಕೆಣ್ತುಂಬಾ ನೋಡ್ದ್ರು ಓಟೀ ಸಾಕಲ್ವಾ ಎಂದಳು (ಹುಟ್ಟಿಹ. ೫೩) ; ಏಟು ಬೇಕಾಯ್ತದೋ ಓಟು ತಕೊಂಡೋಗಿ (ನಡೆದಾ. II, ೧೪೪೧). ೨. ಕೊಂಚ; ತುಸು ; ಸ್ವಲ್ಪ : ಓಟು ಯಾರು ನೀವು ? (ಹಾಸ್ಯಮಂ. ೧೦). 'ಓಸು' ಪರಾ. [< * ಒಷ್ಟು]

**ಓಟು$_2$** (ನಾ). ಮತ : ರಾಯರಿಗೆ ಕೇವಲ ಹನ್ನೊಂದು ಓಟುಗಳು ದೊರೆತು ಎಲ್ಲರಿಗಿಂತ ಕೊನೆಯ ತರಗತಿಯಲ್ಲಿ ನಿಂತರು (ರಾಯಳ. ೯೬) ; ಹೊಟ್ಟೆಗಿಲ್ಲದವರಿಗೆ ಆ ಓಟನಿಂದೇನಾಗಬೇಕು ? ಓಟನ ಅಧಿಕಾರ ಕೊಡುವ ಬದಲು ಸರಕಾರ ಅವರಿಗೆ ಊಟಕೊಟ್ಟಿದ್ದರೆ ? (ದೀಪದ. ೧೧೭). [← ಇಂ. Vote]

**ಓಟೂರ್** (ನಾ). ಒಂದು ಊರಿನ ಹೆಸರು : ಕ್ರಮಾಗತದ ಪೆರ್ಗ್ಗಡೆ ನಾಕಿಯ ಚಟ್ಟಯ್ಯಂ ಚಿತ್ತರಟಿಹಳ್ಳಿ ಓಟೂರ್ಗ್ಗೆ ಮೂಲಿಗಂ (ಎಕ. VIII, ಸೊರಬ. ೭೮-೧೧ ; 938). [? + ಊರ್]

**ಓಟೆ$_1$** (ನಾ). ೧. ಕಾಡಿನಲ್ಲಿ ಬೆಳೆಯುವ ಬಿದಿರಿನ ಜಾತಿಯ ಒಂದು ಗಿಡ. ೨. ಒಂದು ಜಾತಿಯ ಮರ : "ಅಮೃವತಿವೋಟೆ." (ಮಂಗರಾ. ೪೨-೩೭).

[ದೇ. ‖ ತಮಿ. ಓಡೈ ; ಮಲ. ಓಡ ; ತುಳು. ಓಂಟೆ ; ಕೊಡ. ಓಟೆ]

**ಓಟೆ$_2$, ಒಟ್ಟೆ$_1$, ಓಂಟೆ** (ನಾ). ೧. ಸೀಳು; ಹೋಳು : ಒಂದೊಂದಕೊಂದು ಸಂಭಾರಮಂ ತುಪ್ಪದೊಳು ವೊಗ್ಗರಿಸಿಯೋಟೆಯೊಳು ಪೂರೈಸಿ ಪೊಡ್ಡಣಿಗೆಗೊಟ್ಟೊಡೆ (ಸೂಪಶಾ. ೪-೧೨). ೨. ಗೊರಟೆ; ಹಣ್ಣಿನ ಮಧ್ಯದಲ್ಲಿರುವ ಬೀಜ: ಓಟೆ ಇದ್ದಂತೆ ಕಾಯ ಮೆದ್ದವರುಂಟೆ (ಅವಚಂ. ೨೬೯-೧೨೩೫) ; ಒಂದು ಹೊಲದಲ್ಲಿ ಎರಡು ಮಾವಿನ ಓಟೆಗಳನ್ನು ನಟ್ಟು ನೋಡು. ಒಂದು ಹುಳಿಮಾವಾಗುತ್ತದೆ. ಇನ್ನೊಂದು ಸಿಹಿ. ಹೊಲ ಒಂದು, ಆದರೆ ಓಟೆಗಳು ಭಿನ್ನಭಿನ್ನವಾಗಿದ್ದುದರ ಪರಿಣಾಮವೇ ಇದು (ಜೀವಾತ್ಮ. ೨೪೨) ; ಓಟೆ ಒಡೆದು ಸಸಿಯಾಗುತ್ತದೆ (ಸಂಸ್ಕಾರ. ೮೭). ೩. ಚಿಪ್ಪು ; ಪರಟೆ; ಸಿಪ್ಪೆ : ಉಂಡೆಹಲಸಿನಕಾಯ ಮೇಲಿನೋಟೆಯ ಕೆತ್ತಿ (ಸೂಪಶಾ. ೫-೪೫) ; ಅಚ್ಯುತಂ . . . ಕಮಠಾವತಾರಂದಾಳ್ದಿರಲ್ಕೊಂದದಱ ಚೆಲ್ವ ಚೆನ್ನೋಟೆಯಂ ಸಲೆ ಪದಕದಂತೆಯುರದೊಳ್ ತಾಳ್ದನ ಭವಂ (ಪಾಸೋವು. ೯-೧೫೩) ; ಕೋಟಿ ದೇವರಿಗೆ ಓಟೇದೀಪ (ಗಾದೆ). ಒಟ್ಟೆ$_1$ : ೧. ". . . ಜೇನು ಎದ್ದುಬಿಟ್ಟದೆ ! ತುಡುವೆ, ಕರಿತುಡುವೆ ! ಇದೆ ಒಟ್ಟೇಲಿ... ಇಬ್ಬರೂ ಸೇರಿ, ಬ್ಯಾಟಿಕತ್ತೀಲಿ ಒಟ್ಟೆಕಂಡೀನ ಕಡಿದೂ ಕಡಿದೂ ದೊಡ್ಡದು ಮಾಡಿ ಜೇನು ಕಿತ್ತೇ ಕಿತ್ರು" (ಮಲೆಮ. ೩೪೩). ಓಂಟೆ : ೩. ಬ್ರಹ್ಮಾಂಡದೋಂಟೆಯಂ ಕರ್ಚಿರ್ಪುದಿನ್ನದಱ ಮೇಲಣ ವಿಶಾಲಮೇ ಭೂಲೋಕಂ (ಚಬವು. ೧೫-೪).

[ದೇ. ‖ ತಮಿ. ಓಟ್ಟು ; ಮಲ. ಓಟ್ಟ ; ತುಳು. ಒಟ್ಟೆ ; ಕೊಡ. ಒಡೆವೆ; ತೆಲು. ಒಡಿಪಿ, ಓಡು, ಓಟ = ಒಡೆದ, ತೂತು ಬಿದ್ದ]

**ಓಟೆ$_3$** (ನಾ). (?) : ಓಟೆಯ ವೋಜೆಯಿಂದೆ ಚಯಿ(ಚೈ)ತ್ರದೆಡೆಗರ್ಭಮು ಮೇಱಿ ಬಱಿಕ್ಕೆ ಕುಂದುಗುಂ ಪಾಟಿಸಿ ಮೂಱುಮೂಱುವರೆ ಖಂಡುಗದರ್ಘದೆ ಮತ್ತಮಂತೆ ತಾಂ ತಾಟಿಸಿ ಧೂಮಕೇತು ನೆಗೆದುಂ ಸಲೆ ಡಾಮರಮಕ್ಕುಮೆಲ್ಲಿಯುಂ ಕೂಟಮನಾಸೆಗೆಯ್ಗು(ಯ್ದು) ಶನಿ ಬಂದನು ರಾಧೆಯೊಳಿರ್ಪ ಕಾಲದೊಳ್ (ಜಟ್ಟಮ. ೧೨-೧೦೨). [?]

**ಓಡ, ಓಡು$_3$, ಓಡೆ$_2$** (ನಾ). ದೋಣಿ; ಹರಿಗೋಲು; ನಾವೆ : "ಜೋಗಂ ಪರೀತಂ ನಿಮಂಜರಂ ದುಗ್ಗಿಯೋಡಂ ದೋಣಿಯೆಂದೆನಲ್ ನಾವೆಯಕ್ಕುಂ" (ಮಂಗರಾ. ೧೨೦-೪); ತೊಱೆಯ ತಡಿಯೊಳೋಡಮಂ ನಡೆಯಿಸುವ ಮತ್ಸ್ಯಗಂಧಿಯಂ ಕಂಡು (ಪಂಪಭಾ. ೧-೬೮ ವ) ; ಅಧಿನಿಯನರೋಡಂಗಳಿಂದಾರೊ ಶ್ರೀಕ್ಷಯಾಪರ್ನ ಬಳಿಗೆ ಬಂದು (ಪಾರಸಿ. ೧೫-೩೩೬). ಓಡು$_3$ : ಪಡಗೋಡು ನಾವೆ ದೋಣಿಗಳಿಡಿಕಿಱಿದ [ಬಹಿ]ತ್ರವಮುರ್ದ ಜೋಲಿಗಂಬುಗೆ ಬಂದೆಡೆಗೆಯ್ದು (ಸೂಕ್ತಿಸು. ೨-೨೦). ಓಡೆ$_2$ : ಘೋರಸಂಸಾರವೆಂಬ ವಾರಿಧಿಗೆ ಜ್ಞಾನ ಓಡೆ ಏಱಿ ಮೆಲ್ಲನೆ ಹರಿಪುರವ ಸೇರಲು ಬೇಕೆಂಬುವರಿಗೆ (ವಾದಿಕೀ. ೧೫-೨೫) ; ಮತ್ಸ್ಯಗಂಧಿನಿಯೆಂಬ ಪೆಸರಿನೋಳ್ ಬೆಳೆದು ಯಮುನಾನದಿಯ ವೋಡೆಯನ್ನಡೆಸುತಿರೆ (ತುರಂಗ. ೯-೩೭) ; ಸಮುದ್ರವನ್ನು ದಾಟುವುದಕ್ಕೆ ಬಸಿದವನಿಗೆ ಓಡೆ ದೊರಕಿದ ಹಾಗೆ (ಕೃವಾವಿ. ೨೯).

[ದೇ. ‖ ತಮಿ. ಮಲ. ತುಳು. ತೆಲು. ಪರ್ಜಿ. ಓಡ]

**ಓಡಗಾರ** (ನಾ). ನಾವೆ ನಡೆಸುವವನು; "ಅಂಬಿಗ" (ಜಾನಕೋ. ೩೦).
[ಓಡ + -ಗಾರ (< -ಕಾಱ). / ತಮಿ. ಓಡಕ್ಕಾರ]

**ಓಡಮ್ಮೆಯ** (ನಾ). ಒಬ್ಬಾತನ ಹೆಸರು : ಮಹಾಬ್ರಾಹ್ಮಣಾಯ ಆಮದೇವ್ಪೆಯಾಯ ವಿಪ್ರನೋಡಮ್ಮೆಯ ಸುತಾಯ (ಇಆ. V, ೨೭೮-೯; 1026).
[?]

**ಓಡಾಟ** (ನಾ). ಓಡಾಡುವಿಕೆ; ಸುತ್ತಾಟ; ಅಲೆತ: ಮದುವೆಯ ಓಡಾಟದಿಂದ ತುಂಬಾ ಆಯಾಸವಾಗಿದೆ (ರೂಢಿ). [ಓಡು$_1$ + ಆಟ]

**ಓಡಾಡಿಸು** (ಕ್ರಿ). ಅಲೆದಾಡಿಸು ; ಸುತ್ತಾಡಿಸು : ಅವನನ್ನು ವ್ಯರ್ಥವಾಗಿ ಓಡಾಡಿಸಿದರು (ರೂಢಿ). [ಓಡಾಡು + -ಇಸು$_3$]

**ಓಡಾಡು** (ಕ್ರಿ). ಅಲೆದಾಡು ; ಸುತ್ತಾಡು ; ಚಲಿಸು : ಒಡನುಂಡೋಡಾಡಿ ಕೆಟ್ಟು ಧೂರ್ತಿಂ ನಾಡೆಯುಮವರೆಡೆಗೆ ತಾನೆ ಮಿಕ್ಕಂ ಧರೆಯೊಳ್ (ಧರ್ಮಾಮೃ. ೨-೧೦೭) ; ಹಾಗೇ ಅತ್ತಿತ್ತ ಓಡಾಡಬಾರದು. ಓಡಾಡಿದರೆ ಗಾಳಿಗೆ ಉರಿ ಹೆಚ್ಚಾಗುವುದು (ಮುಂಬಯಿ. ೪-೬೧) ; ಎಲ್ಲ ಕೆಲಸಗಳಿಗೂ ಮುಂದಾಗಿ ಓಡಾಡಿದರು (ಕಳಹು. ೯೧). [ಓಡು$_1$ + ಆಡು$_1$]

**ಓಡಾರಿ** (ನಾ). (ಕರಾ) ಕುಂಬಾರ : ಬಡಗಿ ಓಡಾರಿಗಳನ್ನು ಕಟ್ಟಿಕೊಂಡೇ ಮಲೆಯ ಮಧ್ಯದಲ್ಲಿ ಕುಡಿಯರ ಕೇರಿಗೆ ಸಮಿಪದಲ್ಲಿ . . . ನೆಲ ಸವರಿಸಿದರು (ಕುಡಿಕೂ. ೩೫) ; ಊರಿನ ಓಡಾರಿಗಳಿಂದಲೇ ಆ ಕೆಲಸ ಸಾಗಬೇಕಾಗಿತ್ತು (ಹುಮುಖ. ೨೭೩). [← ತುಳು. ಓಡರಿ]

**ಓಡಿ** (ನಾ). ಒಂದು ಸ್ಥಳದ ಹೆಸರು (?) : ಬಡಗಮನೆಯ ಪಡುವ ಮಠದ ಕೆಱೆಯ ತೆಂಕ ಓಡಿಯೊಳಗಣ ಮೂಡ ಹಸುಗೆ (ಸೌಇಇ. IX–ii, ೪೪೬–೨೭ ; 1436). [?]

**ಓಡಿಕೆ** (ನಾ). ಓಟ; ಪಲಾಯನ: ನೋಡಿ ಕಂಡನು ಸುರರ ಮುಜುಗಿಗೆಡ ದೋಡಿಕೆಯ ಕಳಕಳವನಸುರವಿಭಾಡ ನಸುನಗುತ (ತೊರಿರಾ. ೩–೬–೨೩).
[ಓಡು$_1$ + –ಇಕೆ]

**ಓಡಿಗ** (ನಾ). ಓಡಿಹೋಗುವವನು; ಹೇಡಿ: ಶಿವನ ಬಲದಿಂದಲಾ ದನುಜ ತಾಮಸಿಯಾದ ಮೊದಲೆ ವೋಡಿಗನನೆಗ್ಗಿ ಸುವೆನೆನುತಾ (ನವಮೋ. ೩೧–೩೫). [ಓಡು$_1$ + –ಇಗ]

**ಓಡಿಗೆ** (ನಾ). = ಓಡಿಕೆ: ಶಿವಗೆ ಮೈಯಿಕ್ಕಿ ಕೈಮುಗಿದು ನುತಿಸಿ ನಿಮ್ಮಾಸೆ ಯವರೋಡಿಗೆಯ ನೋಡಿಯೆನೆ (ಲಶಿಚಂ. ೧೬–೧೦).
[ಓಡು$_1$ + –ಇಗೆ]

**ಓಡಿಸು** (ಕ್ರಿ). ಓಡಿಹೋಗುವಂತೆ ಮಾಡು; ಹೊಡೆದಟ್ಟು: ಕಾದಿ ಮಱುವಕ್ಕದವರ ಮೆಯ್ಮೆಯ್ಯುಮ್ಮಾಗೆ ಎಚ್ಚೋಡಿಸಿ ಆ ಕಯ್ಯಂ ಗೆಲ್ದು (ಎಕ. VIII, ಸೊರಬ. ೧೦–೭; 800); ಬಂಡಣದೊಳೆನ್ನನೋಡಿಸಿ ಕೊಂಡೊಯ್ದಂ ನಿನ್ನನಾ ಸರಿತ್ಸುತಂ (ಪಂಪಭಾ. ೧–೭೬); ಎಷ್ಟದಿನ ಪ್ರಾಲಂ ದುಗ್ಧಾಜ್ಯ ಸಮನ್ವಿತಮಟ್ಟು ಕೊಡೆಯೆ ಪಲ್ದಿಂಬುದನೋಡಿಸುಗುಂ (ಲೋಕೋಪ. ೯–೩೧); ಸುಭಟರ ಕತ್ತಲೆಯೊಳೋಡಿಸಿದ ಕಡುಹನು ತೋಱು ನಮ್ಮೊಡನೆ (ಕುವ್ಯಾದ್ರೋ. ೧೩–೩೧); ತನ್ನ ದುಃಖವನು ಓಡಿಸಿ ತೊಱೆದಳ್ಕಱಿಂದೆ ಬಿನ್ನಹವನು ಮಾಡಿದ (ಮೋಹತ. ೪೧–೧೧).

**ಓಡಿಸಿಕೊಂಡುಬರು** = ೧. ಅಟ್ಟಿಸಿಕೊಂಡು ಬರು. ೨. (ಆಲಂ) ಹೆಣ್ಣನ್ನು ಅಪಹರಿಸಿ ತರು: ಅಲ್ಪವಯಸ್ಕಳಾಗಿದ್ದ ಚಿಕ್ಕಹುಡುಗಿಯನ್ನು ಓಡಿಸಿಕೊಂಡುಬಂದುದಕ್ಕಾಗಿಯೂ (ನಾಪೋಲೀ. ೧೯೫).
[ಓಡು$_1$ + –ಇಸು$_3$]

**ಓಡು$_1$** (ಕ್ರಿ). ಪಲಾಯನ ಮಾಡು; ವೇಗವಾಗಿ ಹೋಗು: "ಓಡು – ಪಲಾಯನೇ, ಭಾಂಡಶಕಲೇ ಚ (ಹುರಿಯುವ ಓಡು)" (ಶಮಧಾ); "ಓಡು ಪಲಾಯನೇ ಕಪಾಲೇ ಚ" (ಶಬ್ದಾನು. ೧೨ ವ್ಯಾಖ್ಯಾ); ಕರ್ಮಕ್ಕೋಡಿ ಬರ್ದುಂಕಲ್ಕೆ ಕಲ್ತರಾರ್ ಬಿನ್ನಣಮಂ (ಕವಿರಾ. ೧–೭೩); ಬಾಡದ ಬಾಸಿಗಮುಡೆ ಚೆಲ್ವೋಡದ ದಿವ್ಯಾಂಬರಂ ಮನಂಗೊಳೆ (ಆದಿಪು. ೬–೪೦); ಹಿತ್ತಲ ದೆಸೆಯೊಳ್ ಬಿಡದೋಡುವಾಕೆ ಕಾಣದೆ ಕೆಡೆದಳ್ (ಧರ್ಮಾಮೃ. ೨–೪೪); ಓಡಿ ನಾಚಿಸುವವರು ನಿಲಿ ರಣಖೇಡರೀಗಳೆ ಮರಳಿ (ಕುವ್ಯಾಕ. ೮–೩೦); ಓಡಿ ಸಿಕ್ಕಬೇಡ ಆಡಿ ತಪ್ಪಬೇಡ (ಗಾದೆ).

**ಓಡಿಯಾಡು** = ಅಲೆದಾಡು; ಸುತ್ತಾಡು: ಧೂಮಕೇತುಗಳೋಡಿಯಾಡಿತು ಗಗನಾಂತರದೆ (ಮೋಹತ. ४೦–೮); ಮದಕರಿಗಳು ಕಟ್ಟಿದ ಮಲ್ಲಗಂಭವನೊದೆದು ದೆಸೆದೆಸೆಗೈದಿ ಹದಗೆಟ್ಟೋಡಿಯಾಡಿದವು (ಕಂನವಿ. ೧೫–೯೨).

[ದೇ. ‖ ತಮಿ. ಮಲ. ತುಳು. ಓಡು; ಕೊಡ. ಓಡ್, ಓಡಿ; ತೆಲು. ಓಡು]

**ಓಡು$_2$** (ನಾ). ೧. ಮಡಕೆಯ ಚೂರು, —ಹೋಳು; ಬೋಕಿ; ಬಿಕ್ಕರೆ: "ಓಡು – ಪಲಾಯನೇ, ಭಾಂಡಶಕಲೇ ಚ (ಹುರಿಯುವ ಓಡು)" (ಶಮಧಾ); ಓಡೆತ್ತ ಬಲ್ಲುದು ಆವಲಕ್ಕಿಯ ಸವಿಯ (ಬಸವ. ೯೮); ಓಡಿನಲಿ ಉಂಬವಗೆ ಹರಿವಾಣವೇಕೆ (ಪುರಂದ. ೨–೬೪–೭). ೨. ಮಡಕೆ: ಎಮ್ಮೆಯ ಪೆಸರ್ ಮಹಾದೇವಿಯೆಂಬಂತೆ ಓಡಿನ ಪೆಸರ್ ಮಂಗಳಮೆಂಬಂತೆ (ಧರ್ಮಾಮೃ. ೮–೧೬೬); ಮಣ್ಣಿನಲ್ಲಿ ಸುಟ್ಟ ಓಡು ಮುನ್ನಿನಂತಾಗಬಲ್ಲರೆ ಭಾವಲಿಂಗ ಸಂಬಂಧಿ (ಮೋಳಿಮಾ. ೬೫–೨೯೬); ಓಡು ಮಣ್ಣಾಲಿ ಹುಟ್ಟಿ ಕೂಡುವದೆ ಜಾತಿಯನು (ಸರ್ವಜ್ಞ. ೩೩೧). ೩. ಹುರಿಯುವ ಹೆಂಚು; ಕಾವಲಿ: ಹುರಿಗಹಲೆಯಂತಾನುಂ ಕಾಯ್ದಾಱದೋಡಿನ ಜೋಳದೊಳ್ಕರಲಲರುವಂತಾನುಂ ಕಾರ್ಗೆಯ್ಯ ಮೇರೆಯೊಳಿಟ್ಟ ಕೆಕ್ಕರಿಕೆ ಬಿರಿವಂತಾನುಂ (ಶಾಂತಿಪು. ೭–೯೨); ಸಿದ್ಧಾರ್ಥಮೆಂಬ ಬಿಳಿಯ ಸಾಸಿವೆಗಳಂ ನೀರೊಳ್ ನಾಂದಿ ತರಿಸಿಯರಸನ ಮೆಯ್ಯ ಮೇಗಣಿಂದಿೞಿಯೆ ಸುರಿಯೆ ಕಾಯ್ದೋಡಿನೊಳಿಕ್ಕಿದೆಳ್ಳಿನಂತೆ (ಜೀವಸಂ. ೨೫–೧೧); ಕೋಡಗದ ಮೊಗಸಿರಿಗೆ ಕಾವಲಿಯೋಡು ಕನ್ನಡಿಯಾಯ್ತು (ಕುವ್ಯಾಕ. ೯–೧೫); ಕಾದ ಓಡಿನ್ತಂಗೆ ಹುರಿದ ಹಂಚಿನ್ತಂಗೆ ನಾದ್ನಿ ಬಂದವಳೆ ತವರೀಗೆ (ಹಳ್ಳಿಯ. ೧೫೫); ಓಡಿನ ಮೇಲೆ ರೊಟ್ಟಿಯೊಂದು ಬೇಯುತ್ತಿತ್ತು (ಧೂಮಮು. ೯೮). ೪. ಹೆಂಚು: ಮಾಳಿಗೆಯೋಡು ಬಿಲ್ಲೆಯ ಮನೆ ಕಲ್ಲ ದೇವಾಲಯವಿಟ್ಟಿಗೆನೆಸದ ಶಾಲೆಗಳೆಲ್ಲ ಪುಲ್ಮನೆಗೆ ಮುಂಚುರಿದುವು (ನೇಮಿಸಂ. ೩೪–೭೬); ಓಡು ಹೊಚ್ಚದೆ ಮಾಡು ಹುಲ್ಲಿಗೆ ಜೋಡು ಹಾಕಿದೆ ಕಾಲಿಗೆ (ಕವಪು. ೧೮–೧೨). ೫. ತಲೆಬುರುಡೆ; ಡವಗೆ; ಕಪಾಲ; ತಲೆಚಿಪ್ಪು: "ಓಡು ಪಲಾಯನೇ ಕಪಾಲೇ ಚ" (ಶಬ್ದಾನು. ೧೨ ವ್ಯಾಖ್ಯಾ); ಬಾಳ ಕೋಳೊಳಮುಚ್ಚಳಿಸಿದ ಕಪಾಲದೋಡುಗಳಂ ಗಂಗೆಗಟ್ಟುತ್ತುಂ (ಪಂಪಭಾ. ೧೧–೨ ವ); ತಳಿತ ತಲೆಯೋಡಿನೊಳು ಶೋಣಿತ ಜಲವ ಕಾಸಿದರೆಲೆಯ ಕರುಳನು ಹಿಳಿದು ಹಿಂಡಿದರು (ಕುವ್ಯಾಭೀ. ೫–೩೧); ಕೆಲವು ಕರಿಯ ರದನಂಗಳ್ಗೆ ತಲೆಯೋಡ ಸೊರೆಗಟ್ಟಿ ನರದ ತಂತ್ರಿಯ ಪೂಡಿ ದಂಡಿಗೆವಿಡಿದು ಪಾಡಿದುವು (ಜೈಮಿಭಾ. ೨೨–೭೪). ೬. (ಆಲಂ) ಅಲ್ಪ; ಕ್ಷುದ್ರ; ತುಚ್ಛ: ಕೂಡಲ ಚನ್ನಸಂಗನ ಮುಂದೆ ಈ ಓಡುಗಳ ಮಾತ[ಪಾಠಾಂ. ವೇದಗಳ ಮಾತ, ವೋಡು ಮತಗಳ, ಒಡ್ಡುಗಳ ಒಡ್ಡು] ಪ್ರತಿಮಾಡಬೇಡ (ಚನ್ನವ. ಕ. ೫೦೮); ಓಡುಗಳಿರಾ ನೋಡಲಾಪೊಡೆ ನೋಡ ಬನ್ನಿರೆ (ಬಸವು. ೫೬–೩೦).

[ದೇ. ‖ ತಮಿ. ಮಲ. ಓಡು; ತುಳು. ಓಡು, ಓಡಿಲ್; ಕೊಡ. ಓಡೀ; ತೆಲು. ಓಡುಬಿಲ್ಲ]

**ಓಡು$_3$** 'ಓಡ' ನೋ.

**ಓಡುಂಜಗಳ** (ನಾ). (?): ಎತ್ತುವುದು ಕೋಲ್, ಎತ್ತುಂಗೋಲ್. ಏವಂ ಕುತ್ತುಂಗಱು, ತೂಗುಂದೊಟ್ಟಿಲ್ . . . ಓಡುಂಜಗಳಂ (ಶಬ್ದಾನು. ೩೪೪ ಪ್ರಯೋ). [ಓಡು$_1$ + ಜಗಳ]

**ಓಡುಕುಳಿ, ಓಡುಗುಳಿ** (ನಾ). ೧. ಓಡುವುದೇ ಸ್ವಭಾವವಾಗಿ ಇರುವವನು; ಪಲಾಯನ ಪಟು: ಆಟಕುಳಿ, ಅಂಜುಕುಳಿ, ಓಡುಕುಳಿ (ಭಾಷಾಭೂ. ೧೮೪ ಉದಾ). ೨. (ಆಲಂ) ಪುಕ್ಕಲ; ಹೇಡಿ: ಓಡುಕುಳಿ ಹೋದಲ್ಲಿ ಮಗಧನ ರಾಜಕಾರ್ಯದಲಿ ಅಡಲಱಿಯೆ (ಕುವ್ಯಾಸ. ೧೦–೨೦); ನೋಡಿದನು ಕಾರುಣ್ಯ ದೃಷ್ಟಿಯಲೋಡುಕುಳಿಗಳನಂಜ ಬೇಡೆಂದಭಯವನು ಕೊಡುತ (ನಿಭಾಗ. ೩–೮–೪೬). **ಓಡುಗುಳಿ**: ೨. (ಸ್ಯಾಂಡರ್). [ಓಡು$_1$ + –ಕುಳಿ$_3$]

**ಓಡುಕುಳಿತನ** (ನಾ). ೧. ಓಡುವುದೇ ಸ್ವಭಾವವಾಗಿರುವಿಕೆ. ೨. (ಆಲಂ) ಹೇಡಿತನ: ವರವನಿತ್ತೋಡಿದನ ಮಾತನು ನಿರುತ ವೀಕ್ಷಿಸಬಹುದು ಪರಮೇಶ್ವರನು ಗಡ ತನಗೋಡುಕುಳಿತನದಂಗವೇಕೆಂದ (ನಿಭಾಗ. ೧೦–೯೧–೨೯). [ಓಡುಕುಳಿ + –ತನ]

**ಓಡುಗರತಿ** (ನಾ). ಓಡಿಹೋದ ಗರತಿ: ದೆಸೆದೆಸೆಗೆ ಕಾರ್ಬೊಗೆ ಮೂಡಿ ಮುಸುಕಿತುದದವನಿಯಂಬರ ಕೂಡೆ ಸೀಕರಿಯಾಯ್ತು ನಡನಡ ನಡುಗಿದರು ಸುರರು ಓಡುಗರತಿಯ ಮಗನು ತನ್ನನು ಕಾಡುವಂತಾಯ್ತಿವನ ಬಲುಹನು ನೋಡುವೆನು (ನಿಭಾಗ. ೬–೭–೬). [ಓಡು$_1$ + ಗರತಿ]

**ಓಡುಗಲ್ಲು** (ನಾ). ಬಂಡೆಗಲ್ಲು; ಒಡ್ಡುಗಲ್ಲು: ಮದಕರಿ ಘಟಾವಳಿಯೋಡುಗಲ್ಲಿನ ತುರಗಚಯ ತೆರೆಯ ವರ ವರೂಥವ್ರಜದ ಸುಳಿಗಳ (ಕೋಗಯ. ೨೦–೪). ☞ ಇದು 'ಒಡ್ಡುಂಗಲ್' ಶಬ್ದದ ಅಪಪಾಠವಿರಬಹುದೆ? [ಓಡು ? + ಕಲ್ಲು (< ಕಲ್$_3$)]

**ಓಡುಗುಳಿ** 'ಓಡುಕುಳಿ' ನೋ.

**ಓಡುಗೆಯ್ಯ** (ನಾ). ಕೈಯಲ್ಲಿ ತಲೆಯೋಡನ್ನು ಹಿಡಿದವನು; ಕಪಾಲಪಾಣಿ; ಶಿವ: ಓಡುಗೆಯ್ಯನ ಶಕುತಿಯೊಳವರಿರುವನ್ನ ಪಾಡೆಂ ಬುದೆನಗೆ ಕಾಣಿಸಿತು (ಮೋಹತ. ೩೭–೫೩).
[ಓಡು$_2$ + ಕೆಯ್$_2$ + –ಅ$_7$]

**ಓಡುಬಿಲ** (ನಾ). ಒಡೆದ ಹೆಂಚು: ಜಂಗಮ ವಿರಹಿತ ಲಿಂಗಾರ್ಚನೆ ಓಡುಬಿಲಲೆಱೆದ [ಪಾಠಾಂ. ಓಡುಬಲಲೆಱೆದ, ಒಡದ ಭಾಜನದಲ್ಲೆಱದ, ಓಡಲ್ಲೆಱೆದ, ವಡಬನಲ್ಲೆಱದ, ವಡಬಿಲ್ಲಿದಲ್ಲೆಱದ] ಜಲದಂತೆ (ಬಸವ. ೩೯೭). [?. / ತೆಲು. ಓಡುಬಿಳ್ಲ = ಹೆಂಚು]

**ಓಡುಭಾಗ** (ನಾ). ಮುದ್ರಣ ಯಂತ್ರದಲ್ಲಿ ಒಂದು ಸಲಕರಣೆ; "ಚಾಲಕಭಾಗ" (Carriage. ಇಂಕನಿ): ಅಚ್ಚುಮೊಳೆಗಳ ಫಾರಂ ಅನ್ನು ಹಿಂದೆ ಮುಂದೆ ಜರುಗಿಸಲು ಸಹಾಯವಾಗುವಂತೆ ಓಡುಭಾಗವನ್ನು (ಕ್ಯಾರೇಜ್) ಸೇರಿಸಲಾಯಿತು (ಮುದ್ರಕ. ೮೭).
[ಓಡು$_1$ + ಭಾಗ]

**ಓಡುಮಾಡು** (ಕ್ರಿ). ಕೀಳಾಗಿ ಭಾವಿಸು; ಅವಮಾನ ಪಡಿಸು: ಜಯವರ್ಮಾಧೀಶನಾಸ್ಥಾನದೊಳವಯವದಿಂದೆನ್ನನಂದೋಡುಮಾಡಿರ್ದ ಯತೀಶಾಂಭೋಜ ಸೂರ್ಯಂಗಳನಳಪಡೆ ನಾನಾ ಪ್ರಕಾರಂಗಳಿಂ ಸಂಶಯಮೇಕಿನ್ನಣ್ಣ ನಾಂ ಕೊಲ್ಲದೊಡೆ ಮನುಜನೇ (ಧರ್ಮಾಮೃ. ೯–೧೩೮); ಓಡುಮಾಡಿದಳೆನ್ನ ನೀ ನಾಡಾಡಿಯವನೆಂದೇ ವಿಭಾಡಿಸಿ (ನಿಭಾಗ. ೭–೯–೨೪). [ಓಡು$_2$ + ಮಾಡು$_1$]

**ಓಡುಹುಳು** (ನಾ). ಕಸಕಡ್ಡಿಗಳಲ್ಲಿರುವ ಒಂದು ಜಾತಿಯ ಹುಳು; ಸಗಣಿಹುಳು: ಹಲಸಿನ ತರಗಿನ ನಡುವೆ ಬಿದ್ದಿದ್ದ ಒಂದು ಸೆಗಣಿ ಮುದ್ದೆಯಿಂದ ಒಂದು ಓಡುಹುಳು ಸಣ್ಣದೊಂದು ಉಂಡೆಯನ್ನು ರಚಿಸಿ (ಮಲೆಮ. ೫೬). [ಓಡು$_0$ + ಹುಳು$_2$ (< ಪುೞು$_1$)]

**ಓಡೆ$_1$** (ನಾ). ೧. ಬಾವಿಯ ಒಳಭಾಗದ ಗೋಡೆಯನ್ನು ಕಟ್ಟಲು ಉಪಯೋಗಿಸುವ ಸುಟ್ಟ ಮಣ್ಣಿನ ವರ್ತುಳ, —ಬಿಲ್ಲೆ. 'ಓಡೆಬಾವಿ' ಪರಾ. ೨. ದವಸಧಾನ್ಯಗಳನ್ನು ತುಂಬಿಡಲು ಬಳಸುವ ದೊಡ್ಡ ಮಣ್ಣಿನ ಪಾತ್ರೆ; ರಂಜಣಿಗೆ: ಎರಡು ಓಡೆ ಬತ್ತ (ರೂಢಿ). 'ವಾಡೆ' ಪರಾ. [ದೇ. ‖ ತಮಿ. ಉಱೈ; ತೆಲು. ಒಱ]

**ಓಡೆ$_2$** 'ಓಡ' ನೋ.

**ಓಡೆ$_3$** (ನಾ). ಒಂದು ಜಾತಿಯ ಸಸ್ಯ: "ಓಡೆಯೆನೆ ಸೆ[ಪಾಠಾಂ. ಸ]ಡೆಯಕ್ಕುಂ" (ಮಂಗರಾ. ೪೦–೩೨) [?]

**ಓಡೆ$_4$** (ನಾ). ಅರಮನೆ (ಸ್ಯಾಂಡರ್). [← ಮರಾ. ವಾಡಾ]

**ಓಡೆಬಾವಿ** (ನಾ). ಓಡೆಗಳಿಂದ ರಚಿಸಿದ ಬಾವಿ; ಬಳೆಬಾವಿ: ಮನೆಗೆ ಒಂದು ಓಡೆಬಾವಿ (ರೂಢಿ). [ಓಡೆ$_1$ + ಬಾವಿ]

**ಓಡ್ರ** (ನಾ). ೧. ಒಡಿಸ್ಸಾ ರಾಜ್ಯದ ಉತ್ತರ ಭಾಗ. ೨. ಅಲ್ಲಿ ವಾಸವಾಗಿರುವ ಜನ. [ಸಂ.]

**ಓಡ್ರಪುಷ್ಪ** (ನಾ). ದಾಸವಾಳದ ಹೂ, —ಗಿಡ. [ಸಂ.]

**–ಓಣ** (ಪ್ರ). ಒಂದು ಕೃದಂತ ಪ್ರತ್ಯಯ: ಅವುಗಳಿಂದ ಆದನ್ನು ನಿಲ್ಲಿಸೋಣವಾಗದು (ಮುಂಬಯಿ. ೪–೧೦೦); ತಾವು ಇಲ್ಲಿ ಬಂದು ಇಳುಕೊಂಬೋಣವಾಯಿತು (ಮುಂಬಯಿ. ೪–೧೫೨); ಸುಮ್ಮನೇ ಇರೋಣವಾಗದೆ (ಮುಂಬಯಿ. ೫–೬೨). [< –ವಣ]

**ಓಣಂ** (ನಾ). ಶ್ರಾವಣಮಾಸದ ಒಂದು ಹಬ್ಬ. 'ಓಣಂಹಬ್ಬ' ಪರಾ. [← ಮಲ. ಓಣಂ. / ಸಂ. ಶ್ರಾವಣ]

**ಓಣಂಹಬ್ಬ** (ನಾ). ಶ್ರಾವಣಮಾಸದಲ್ಲಿ ಕೇರಳದವರು ಆಚರಿಸುವ ಹಬ್ಬ: ಆ ವರ್ಷ ಓಣಂಹಬ್ಬದ ಹೊತ್ತಿಗೆ ಚಿರುಕಂಡನ ಮದುವೆಯೂ ಆಯಿತು (ಚಿರಸ್ಮ. ೧೯೭). [ಓಣಂ + ಹಬ್ಬ (< ಪರ್ಬ)]

**ಓಣಿ** (ನಾ). ೧. ಸಾಲು; ಶ್ರೇಣಿ: ಪಡುವಲು ತೆಂಕವುನ್ನಾಗಿ ನಡೆದ ಪೂರ್ವದ ಓಣಿಯಿಂ ನಿಮಿರ್ದ್ದಂ ಕಡೆಯ ಚಿಕ್ಕ ಕೊಳನ ಮೇರೆ (ಎಕ. VII, ಶಿಕಾರಿ. ೩೨೩–೨೧; 1046); ಬಡಗಲು ಪಱುಗೂಲ ಪೊಳೆಗೆ ಪೋಪ ಓಣಿ (ಹೈಅಸಿ. V, ೭–೨೯; 1088); ಮೂಡಲು ಓಣಿಯ ಬಟ್ಟೆಯೇ ಮೇರೆ (ಸೌಇಇ. XI–ii, ೧೪೦–೩೩; 1097); ಮರಳನ್ನು ಹರಡಿ ಓಣಿ ಓಣಿಯಾಗಿ ಮಾಡಿರಿಸುವರು (ಬಾಲಪ್ರ. I, ೫೩೧). ೨. ಕೇರಿ; ಗಲ್ಲಿ; ಬೀದಿ: ದಾರಿಯೊಳಿಡುಕುಱೊಳೋಣಿಯೊಳಾರವೆಗಳ ತಳದೊಳ್ (ಗಿರಿಕ. ೪–೮೩); ಕಂತುರಾಣಿಯ ... ಓಣಿಯೊಳ್ ಮೆಱೆಸುತ ಕರ ಕೊಂಡು ಬಂದಾಗ (ಮೋಹತ. ೧೦–೧೦); ಓಣಿಗೊಂದು ಗುಡಿಗಳಿಲ್ಲವೆ? (ಹಬ್ಬಬ. ೨೧); ತೆಂಗಿನಕಾಯಿಯನ್ನು ... ಓಣಿಯವರಿಗೆಲ್ಲ ಮುಟ್ಟಿಸಿದರು (ರಂಗರೋ. ೧೧). ೩. ಹಳ್ಳ; ಕೊರಕಲು. 'ಓಣಿಯೋಗು' ಪರಾ. [ದೇ. ‖ ತುಳು. ಕೊಡ. ಓಣಿ; ತೆಲು. ಓಣಿಕಟ್ಟು = ಕೆತ್ತಲೆ ತುಂಬಿದ ಓಣಿ, ಕಣಿವೆ]

**ಓಣಿಯೋಗು** (ಕ್ರಿ). ಹಳ್ಳಬೀಳು; ಕೊರಕಲುಬೀಳು: ಅಂತು ಚಕ್ರಹತಿಯಿಂದೋಣಿಯೋ [ಪಾಠಾಂ. ವೋ]ದ ರಣಕ್ಷೋಣಿಯನಕ್ಷೂಣ ಬಾಣ ಘಾತದಿಂ ಹತಮಾದ ಹಯದ ಸಾರಥಿಗಳ (ಪಾರ್ಶ್ವಪು. ೩–೧೨೧ ವ).
[ಓಣಿ + ಪೋಗು$_1$]

**ಓತ$_1$** (ನಾ). ಓದು; ಪಠನ: ಏಱುತಕ್ಕೆ ಏತಂ; ಓದಿಂಗೆ ಓತಂ (ಶಮದ. ೨೦೯ ಪ್ರಯೋ); ಪುಸಿಯೋತದ ಮಾತಿನೊಂದು ಭೀತಿಯಿಂ ಮಾತೆಯಂ ತೋಱಿದೆಂ (ರಾಮಾಶ್ವ. ೬೫–೧೦); ಇಲ್ಲಿ ಆಟಗಾರರಿಗೆ ಆಟವಿದೆ; ಅಭ್ಯಾಸಿಗಳಿಗೆ ಓತವಿದೆ (ಪತ್ರಿಕಾ. ೧). [ಓದು$_1$ + –ತ$_2$]

**ಓತ$_2$** (ನಾ). ಮಗ್ಗದ ಹಾಸು: "ಎಲೌ ಗಾರ್ಗಿಯೆ, ಈ ಅಕ್ಷರದಲ್ಲಿಯೇ ಆಕಾಶವು ಓತವಾಗಿಯೂ ಪ್ರೋತವಾಗಿಯೂ ಇರುತ್ತದೆ" (ಬ್ರಹ್ಮಭಾ. ೫೬೧). [ಸಂ.]

**ಓತ$_3$** 'ಓ$_2$' ಪರಾ.

**ಓತಪ್ರೋತ** (ಗು). ೧. ಹಾಸು ಹೊಕ್ಕಾದ; ಎಲ್ಲ ಕಡೆಗೆ ವ್ಯಾಪಿಸಿದ: ಸತ್ವರಜಸ್ತಮ ಮೂರುಗುಣವು ... ಎತ್ತೆತ್ತಲೋತಪ್ರೋತಾಗಿ ಆ ಬ್ರಹ್ಮಸ್ತಂಭ ಪರಿಯಂತವಾಗಿ (ಪ್ರಸಭಾ. ೫೭–೧೩); ಆ ಸ್ಥಿರತತ್ತ್ವವು ಜ್ಞಾನಧಾರೆಗಳಲ್ಲಿ ಓತಪ್ರೋತವಾಗಿ ಹಾಸುಹೊಕ್ಕಿನಂತೆ ಹೊಂದಿಕೊಂಡಿರುತ್ತದೆ (ಜೀವಾತ್ಮ. ೪೩); ಮಾತುಗಳಂತೂ ದೇಸಿಯಿಂದ ಓತಪ್ರೋತವಾಗಿವೆ (ತವನಿ. ೬೬). (ನಾ). ೨. ಹಾಸುಹೊಕ್ಕು; ಎಲ್ಲ ಕಡೆಗೆ ಹೆಣೆದು ಕೊಂಡದ್ದು: ತಿಳಿಯಲೋತಪ್ರೋತದಲಿ ನಿಷ್ಕಳವೆ ಸಕಳವೆಯಾಗಿ ವಿಶ್ವದೊಳೊಳಗುಹೊಱಗಾನಲ್ಲದಿಲ್ಲೆಲೆ ಪಾರ್ಥ ಕೇಳೆಂದ (ಕುವ್ಯಾದ್ರೋ. ೩–೭೦). ೩. ಸರಾಸರಿ. ೪. ನಿರಂತರ: ಮಳೆ ಓತಪ್ರೋತವಾಗಿ ಸುರಿಯುತ್ತಿದೆ (ರೂಢಿ).
**ಓತಪ್ರೋತಕಡಿಪ್ರಮಾಣ** = ಸರಾಸರಿ ಲೆಕ್ಕ. [ಸಂ.]

**ಓತಾರಿ** (ನಾ). ಒಂದು ಜಾತಿ; ಕಂಚುಗಾರ ಜಾತಿ; ಎರಕಹೊಯ್ಯುವವನು: ಕಂಚುಗಾರರು – ಬೆಳಗಾವೀ ಜಿಲ್ಲೆಯಲ್ಲಿ ಓತಾರಿಯೆಂಬ ಜಾತಿಯವರು ಯೆರಕುಹೊಯ್ದು ಮೂರ್ತಿಗಳನ್ನೂ ಕಂಚಿನ ಕಾಲುಂಗುರಗಳನ್ನೂ ಮಾಡುತ್ತಾರೆ (ಕಭಾಗೆ. ೧೫೫).
[← ಮರಾ. ಓತಾರೀ]

**ಓತಿ$_1$** 'ಓಂತಿ' ನೋ.

**ಓತಿ$_2$** (ನಾ). "ಒಂದು ಬಗೆ ಹುಣ್ಣು" (ಪ್ರಭಣ್ಣ).
[?. / ತುಳು. ಓಂತಿಕುತ್ತ = ಮುಖ ಊದಿಕೊಳ್ಳುವ ಒಂದು ಬಗೆಯ ರೋಗ]

**ಓತಿಕಾಟ** 'ಓತಿಕೇತ' ನೋ.

**ಓತಿಕೇತ,** ಓತಿಕಾಟ, ಓತೀಕಾಟ (ನಾ). ಹಲ್ಲಿಯಜಾತಿಗೆ ಸೇರಿದ ಉಡುವಿನಂತಹ ಒಂದು ಪ್ರಾಣಿ; ಸರಟ; ಓತಿಕ್ಯಾತ; ಹೆಂಟೆಗೊದ್ದ: ಬೇಲಿ ಮೇಲೆ ಒಂದು ಓತಿಕೇತ ನೋಡಿದೆ (ರೂಢಿ). **ಓತಿಕಾಟ:** ಓತಿಕಾಟಕ್ಕೆ ಬೇಲಿ ಸಾಕ್ಷಿ (ಗಾದೆ). **ಓತೀಕಾಟ:** ಓತೀಕಾಟದಂಥಾದ್ದೊಂದು ಪ್ರಾಣಿಯು ಸು. ೧೨ ಫೂಟು ಎತ್ತರವುಂಟು (ಮುಂಬಯಿ. ೬-೨೫೯); ಇಬ್ಬರು ಗೃಹಸ್ಥರು . . . ಓತೀಕಾಟದ ಬಣ್ಣವು ಎಂಥಾದ್ದಿರುತ್ತದೆಂಬುದನ್ನು ಕುರಿತು ತಮ್ಮತಮ್ಮೊಳಗೆ ಬಹಳ ವಿವಾದ ಮಾಡಿದರು (ರಾಪಹಂ. ೩೦). [ಓತಿ$_1$ + ಕೇತ$_1$. / ಕೊಡ. ಓತಿಕೇತೇ]

**ಓತೀಕಾಟ** 'ಓತಿಕೇತ' ನೋ.

**ಓತು$_1$** (ಕ್ರಿ). ಸಾಲಾಗಿರಿಸು; ಪೇರಿಸು: ಪುಸ್ತಕಗಳನ್ನು ಓತುಬಿಡು (ರೂಢಿ). [< ಒತ್ತು$_1$ ?]

**ಓತು$_2$** (ನಾ). ೧. ಓದಿದ್ದು; ಅಧ್ಯಯನ ಮಾಡಿದ್ದು. ೨. ವೇದ: "ಓತು [ಪಾಠಾಂ. ದು], ಪಟಿಪಾತು, ಬೇದಂ, ಸುತಿ – ಈ ೪ ವೇದಂ" (ಕಶಸಾ. ೧೨-೨೪೨). [ದೇ. ‖ ತಮಿ. ಮಲ. ಓತ್ತು]

**ಓತು$_3$** (ನಾ). ಬೆಕ್ಕು; ಮಾರ್ಜಾಲ: "ಮಾರ್ಜಾಲಂ ಬಿಡಾಲಮಾಖು ದ್ವಿಷಂ ಪುಷದಂಶಮೋತುವೆನೆ ಬೆಕ್ಕೆನಿಕ್ಕುಂ" (ಮಂಗರಾ. ೪೯-೧೧); ಕಟ್ಟಳ್ಕರಿಂ ಸಾಕಿದರಗಿಳಿಯನೋತುವಿನ ಬಾಯ್ಗಾವವೋಲ್ (ಶೀಪರಾ. ೨೪-೪೯). [ಸಂ.]

**ಓತು$_4$** 'ಓ$_2$' ಪರಾ.

**ಓತ್ವ** (ನಾ). = ಓಕಾರ: ನೆಗಟ್ಟಿರ್ದ ರೇಫ ಬಿಟನಾಂತ ಗಾಂತ ಸಾಂತೋತ್ವದಿದಿರ ವತ್ವಂ ಪತ್ವಂ ಪುಗುಗುಂ (ಶಮದ. ೨೩೨). [ಸಂ.]

**ಓದಕ್ಕಿ** (ನಾ). ಜೀರಿಗೆ ಜಾತಿಯ ಒಂದು ಬೀಜ; ಅಜಮೋದ: ಹಿಂಗು ೧ ತೊಲ, ಕರಿಮೆಣಸಿನ ಪುಡಿ ‖ ತೊಲ, ಶುಂಠಿ ಪುಡಿ ೧ ತೊಲ, ಓದಕ್ಕಿ (ಓಮ) ೧ ತೊಲ– ಇವುಗಳನ್ನು ಅರ್ಧಸೇರು ನೀರಿನಲ್ಲಿ ಮಿಶ್ರ ಮಾಡಿ ಕುಡಿಸುವುದು (ಗ್ರಾಮಾಕ. ೧೩೮). [? + ಅಕ್ಕಿ$_1$]

**ಓದನ** (ನಾ). ಅನ್ನ: "ಕೂರಮನ್ನಂ ಭಕ್ತಮೋದನಂ ಬಿಸ್ಸನಾಹಾರಮಶನಂ ಬಲಿಯೆನಲ್ಕೆ ವೋಗರಮಕ್ಕು" (ಮಂಗರಾ. ೬೩-೧); ಆಯುವಿಲ್ಲದಂಗುಂತುಮೋದನಂ ನಂಜಲ್ತೇ (ನೇಮಿಪು. ೧೪-೭೮). [ಸಂ.]

**ಓದರೆ** (ನಾ). (ಉಕ) ಅಂಚು (?): ಒಂದು ಮುಂಗುಲಿ ಆ ಹೊಲದ ಒಡ್ಡಿನ ಓದರೆಗುಂಟ ಸಾಗಿತ್ತು (ಬನಸಿ. ೧೧೪). [?]

**ಓದಾಟ** (ನಾ). ಓದು; ಓದುವಿಕೆ. [ಓದು$_1$ + ಅಟ]

**ಓದಾಣಿಕೆ** (ನಾ). ಓದುವಿಕೆ: ಪವಿತ್ರಗ್ರಂಥಗಳ ಓದಾಣಿಕೆಯೇ ಮಹಾಪರಾಧವೆಂದು ಸಮರ್ಥಿಸಿ ಪಂಥಾಭಿಮಾನಿಯೊಬ್ಬನನ್ನು ದಂಡನೆಗೆ ಗುರಿಪಡಿಸಿದ ಮತ್ತೊಬ್ಬ ವಕೀಲನನ್ನು ನಾನು ಬಲ್ಲೆ (ಪುನರು. ೪೩೧). [ಓದುವಣ$_0$ + –ಇಕೆ]

**ಓದಾಳಿ** (ನಾ). ಓದುವ ಅಭ್ಯಾಸವುಳ್ಳವನು; ಪಾಠಕ; ಓದುಗಾರ; ವ್ಯಾಸಂಗಶೀಲ: "ವೇದಂಗಳನಿತಱೊಳಮಿವನೋದಾಳಿಯೆನಿಪ್ಪನಱಿಗನೂಚಾನನವಂ" (ವಸ್ತುಕೋ. ೫೮-೩೯); "ಓದಾಳಿಯೆಂದು ಪಾಠಕಂ" (ಕಶಸಾ. ೧೭-೩೨೯); ಸದ್ವಿಟಂ ಸೊಮ್ಮನಱಿಗೆವೋದಾಳಿಯಂತೆ (ಮದಶಿ. ೧೦-೭೬); ಮಾಱಾಳಿಯುಮೋದಾಳಿಯುಮೇಱಾಳಿಯುಮಪ್ಪನಾಗಿ ಪಡೆಪಾಳಿಯೆ ಕೇಳ್ (ಕಾವ್ಯಾವ. ೩೫೩); ಬೊಮ್ಮಪುರದವರ್ ಓದಾಳಿ ಪಾರ್ವರೆಂದೊಲ್ಲು (ಚಿಕವಂ. ೪೬-೭); ಕಿರಿಯರಾದ ನೀಲಕಂಠರು ಓದಾಳಿಗಳು (ಬೆಟ್ಟಹೊ. ೩). [ಓದು$_1$ + –ಆಳಿ$_3$]

**ಓದಾಳಿತನ** (ನಾ). ವ್ಯಾಸಂಗಶೀಲತೆ; ಓದುಗಾರಿಕೆ: ಅರ್ಥಾನುಗುಣಮಾಗಿ ಧ್ವನಿಯೊಳ್ ಮೆಲ್ಪು ಬಲ್ಪು ನುಣ್ಪು ಬಿಣ್ಪುಗಳಂ ಸಮನಿಸುವೋದಾಳಿತನದೋಜೆಯುಂ (ಚಿಕವಂ. ೧೫೬-೫). [ಓದಾಳಿ + –ತನ]

**ಓದಿಕೆ** (ನಾ). = ಓದು$_2$೧: ಓದಿಕೆಗಳ್, ಓದುಗಳ್ (ಶಬ್ದಾನು. ೫೬೯ ಪ್ರಯೋ). [ಓದು$_1$ + –ಇಕೆ]

**ಓದಿಕೆವೇಳ್** (ಕ್ರಿ). ಓದಿಹೇಳು: (ನಿಡುವಜ್ಜೆಗಳಿಂದ ಹೋಗಿ, ತುಂಗರಾಯನ ಸಡಿಲ್ವಿಡಿಯಿಂದ ಓಲೆಯನ್ನು ಕೊಂಡು, ಓದಿಕೆವೇಳ್ವನು) (ಬೆಟ್ಟಅ. ೨೧೨-೧೧). [ಓದಿಕೆ + ಪೇಳ್ (< ಪೇಱ್)]

**ಓದಿಸು** (ಕ್ರಿ). ೧. ಓದು ಕಲಿಸು: ವಿದ್ಯಾಭ್ಯಾಸಮಾಡಿಸು; ಹೇಳಿಕೊಡು: "ಓದಿಸು – ಶಾಸ್ತ್ರಶಿಕ್ಷಾಯಾಂ" (ಶಮಧಾ); ಉಪಾಧ್ಯಾಯಂಗೆ ಕಟಿಮೆಯ ಕೂಟುಂ ತುಪ್ಪಮುಂ ಕೊವೆಯುಮನುಣಲ್ಕೊಟ್ಟು ಕುಮಾರನನೋದಿಸುಗೆಂದೋಲೆಯನಟ್ಟಿದೊಡೆ (ವಡ್ಡಾರಾ. ೭೫-೧೫); ಮುನಿಜನದೋದಿಸಿದೋಜೆಯೊಳನುವದಿಪುದು (ಆದಿಪು. ೧-೧೪); ಮತ್ತನಯರ್ಕಳನೋದಿಸೆ ಮತ್ತಿವನಕ್ಲೇಶದಿಂ ಶ್ರುತಿ ಸ್ಮೃತಿ ಶಾಸ್ತ್ರೋಪಾತ್ತಮುಖನಾಗೆ (ಶಾಂತಿಪು. ೬-೬೩); ಸುರಗುರುವಿಂದಲೋದಿಸಿ ಕಂದನನು ಜಮದಗ್ನಿರಾಯನ ಮಂದಿರಕೆ ಪರುಠವಿಸಿ (ಕುವ್ಯಾಅ. ೧೨-೪೨). ೨. ಓದುವಂತೆ ಮಾಡು: ಓದಿಸಿದನೋಲೆಯನು (ಸಾಳ್ವಭಾ. ೮-೮೦). ೩. ಶುಭಪ್ರಸಂಗದಲ್ಲಿ ಕಾಣಿಕೆ ಅಥವಾ ಉಡುಗೊರೆಯಾಗಿ ಕೊಡು, —ಒಪ್ಪಿಸು: ನನ್ನ ಮದುವೇಲಿ ನೀನು ಓದಿಸಿದ್ದು ಕಣೆ ಇದು (ಅನ್ನಾವ. ೭೨). ೪. ನೈವೇದ್ಯವಾಗಿ ಕೊಡು: ಬಾಬಯ್ಯನಿಗೆ ಸಕ್ಕರೆ ಓದಿಸಿಕೊಂಡು ಬಾ (ರೂಢಿ).

**ಓದಿಸಿಕೊಳ್** = ೧. ಹೇಳಿಸಿಕೊಳ್ಳು: ಪರಿಪರಿಯ ಬಿರುದಿನಂಕಮಾಲೆಯನೋದಿಸಿಕೊಳುತ ಓಲಗವೆಂಗಳು ಬರುತಿದ್ದರು (ಭರಚ. ೪೭-೪೮). ೨. ಒಪ್ಪಿಸಿಕೊಳ್ಳು; ಸ್ವೀಕಾರಮಾಡು: ಮಹಾಸ್ವಾಮಿಗಳು ನಜರನ್ನು ಓದಿಸಿಕೊಂಡರು (ರೂಢಿ). ಓದಿಸುವಾತ = ಕಲಿಸುವವನು; ಉಪಾಧ್ಯಾಯ: "ಅಧ್ಯಾಪಕಃ, ಉಪಾಧ್ಯಾಯಃ – ಈ ೨ ಓದಿಸುವಾತಂ" (ಹಲಾಯು. ೬೬-೨೪೬). [ಓದು$_1$ + –ಇಸು$_3$]

**ಓದು$_1$** (ಕ್ರಿ). ೧. ಪಠನ ಮಾಡು; ಉಚ್ಚರಿಸು; ನುಡಿ; ಹೇಳು: "ಓದು – ಪಠನೇ" (ಶಮಧಾ); ಕಲ್ತೊಡನೋದುವುವಲ್ತೆ ಗಿಳಿಗಳುಂ ಪುರುಳಿಗಳುಂ (ಕವಿರಾ. ೧-೧೦); ಇರುಳುಂ ಪಗಲುಮೋದುತ್ತಮಿರಿಮೆಂದು ಕಲ್ಪಿಸಿದೊಡವರುಮಿರುಳುಂ ಪಗಲುಮೋದುತ್ತಿರೆ (ವಡ್ಡಾರಾ. ೮೨-೩); ನಾಲ್ಕುಂ ಲಾವಗೆಗಳಗ್ನಿಸೂಕ್ತಂಗಳನೋದುತ್ತುಮದಿರದಿದಿರಂಬರೆ (ಪಂಪಭಾ. ೫-೧೦೦ ವ); ಚಿಲಿಮಿಲಿಯೆಂದೋದುವ ಗಿಳಿಗಳಿರಾ ನೀವು ಕಾಣಿರೇ (ಮಹಾದೇ. ಬ. ೩೩-೭೩); ಅರಸುಮಕ್ಕಳ ಮುಂದೆ ಓದಿ ಮೆಚ್ಚಂ ಕೊಳ್ವಕ್ಕರಿಗರಬ್ಬರದೊಳಂ (ಕಬ್ಬಕಾ. ೪೪). ೨. ಅಭ್ಯಾಸ ಮಾಡು; ವ್ಯಾಸಂಗಮಾಡು; ಕಲಿ: ಮಠದಲೋದುವ ವಿದ್ಯಾರ್ಥಿರ್ತಪೋಧನಗ್ಗಂ ವಿದ್ಯಾರ್ಥಿರ್ ಮಾಣಿಯಗ್ಗಂ ಬಿಟ್ಟ ಗಱ್ದೆ (ಎಕ. XI, ಚಿತ್ರದು. ೭೭-೧೨; 940); ನಾಮೆಲ್ಲಮೊಂದೆ ಗರುಡಿಯೊಳೋದಿದ ಮಾನಸರೆವು (ಪಂಪಭಾ. ೯-೪೮ ವ); ಎನಿತೋದನೋದಿಯುಂ ಮನದನಿತೆ ವಲಂ ಬುದ್ಧಿಯಕ್ಕುಂ (ಪಂಚತಂ. ೧೭-೧೫); ಓದಿದವನು ಭೇದ ತಿಳಿದಾನು (ಗಾದೆ).

**ಓದಲಿಕ್ಕು** = ಓದಲು ಕಲಿಸು; ಅಧ್ಯಯನ ಮಾಡಿಸು: ಓದಲಿಕ್ಕಿದೊಡೋದುವನು ಮಾಣಿಯರಿಂಗೆ ಬೋಧಾರ್ಹನ ಸುಶಿಕ್ಷೆಯಲಿ (ಮೋಹತ. ೧೭-೭೮). ಓದಲಿಡು = ಓದಲಿಕ್ಕು: ಸರ್ವವಿದ್ಯೆ ಸಂಜನಿಪವೋಲ್ ವೋದಲಿಟ್ಟು ಮುದಮೊಂದಿರೆ ಕಲ್ತರನೂನವಿದ್ಯೆಯಂ (ರಾಜಶೇ. ೪-೭೬). ಓದಱಿವ = ವಿದ್ಯಾವಂತ; ತಿಳಿದವನು: ಓದಱಿವರ ಪೇಟ್ದ ನೋಂಪಿಗಳನೊರ್ಮೆ ಪಲವರ್ಮೆಯುಂ... ನಮೆದರ್ (ಪಂಪಭಾ. ೧-೧೩೫). ಓದಿದರ್ = ಓದಿದವರು; ವಾಚಕರು: ಪೊಸವೇಟದಲಂಪುಗಳೆಲ್ಲಮೋದಿದರ್ಗೆದಱಿನುಯಾಯಿಗಳ್ಗೆಸೆವುದಾರಗುಣಂ (ಪಂಪಭಾ. ೧೪-೬೩).

ಓದುವರ್ =(ಶಿವಾಲಯಗಳಲ್ಲಿ) ಸ್ತೋತ್ರಗಳನ್ನು ಹಾಡುವವರು: ಶಿವದೇವಾಲಯದಲ್ಲಿ ತೇವಾರಗಳನ್ನು ಹಾಡುವ ಓದುವರ್‌ಗಳಿಗೂ ವೈಷ್ಣವ ದೇವಾಲಯಗಳಲ್ಲಿ ಅರೈಯರ್‌ಗಳಿಗೂ ಹೆಚ್ಚು ಮಾನ್ಯತೆ ಇದೆ (ಸಂಗೀಚಂ. ೧೯೨).

[ದೇ. ‖ ತಮಿ. ಓದು, ಓದಿ; ಮಲ. ತುಳು. ಓದು; ಕೊಡ. ಓದ್, ಓದಿ]

**ಓದು$_2$** (ನಾ). ೧. ಓದುವಿಕೆ: ಓದು, ಓದುವುದು, ಓದಿಕೆ (ಶಬ್ದಾನು. ೫೭೯ ಪ್ರಯೋ); ಹೀಗೆ ಮಂಜಕ್ಕನ ಓದು ಸಾಗಿತು (ಹಾಹುತ್ತ. ೬೩); ಅವನಿಗೆ ಓದು ಬರಹ ಬರುತ್ತದೆಯೇ? (ರೂಢಿ). ೨. ವಿದ್ಯೆ; ಜ್ಞಾನ; ಶಾಸ್ತ್ರ: ಜಡಜನಮುಮೆಲ್ಲಮೋದಂ ತಡೆಯದೆ ಕಲ್ಗುಂ ಗುರೂಪದೇಶ ಕ್ರಮದಿಂ (ಕವಿರಾ. ೧–೧೦); ನೀವಾವೋದುಗಳಂ ಬಲ್ಲಿರ್ (ವಡ್ಡಾರಾ. ೨–೨೧); ಓದದೋದಱಿಯದ ವಿದ್ದೆ ಸಲ್ಲದ ಚದುರ್ ನೆಱೆ ಕಲ್ಲದ ಕಲ್ಪಿ (ಪಂಪಭಾ. ೪–೯೫); ಮಾಣದೆ ಚಿಂತಿಸದೋದುಂ ಫಲವಂ ಭಾವಿಸು ತಿರ್ಪನ ತಪಮುಮೊಪ್ಪಲಾರ್ಕುಮೆ (ಧರ್ಮಾಮೃ. ೨–೮೨); ಓದುಗಳೊಳ್ ವೃಕ್ಷಾಯುರ್ವೇದಮೆ ಜನನುತಂ (ಲೋಕೋಪ. ೬–೧); ಜೋಯಿಸರೋದು ಹುಸಿಯಾಯ್ತು (ಕುವ್ಯಾದ್ರೌ. ೧೯–೧೯); ವಾಣೀದೇವಿಗೆಯೋದಂ ಕಲಿಸುವ ಜತಿರಾಯನೆಸೆದನಲ್ಲಿ (ಜಯುಕಾ. ೨–೨೬). ೩. ವೇದ: "ಓದು [ಪಾಠಾಂ. ತು], ಪಱಪಾತು, ಬೇದಂ, ಸುತಿ–ಈ ೪ ವೇದಂ" (ಕಶಸಾ. ೧೨–೨೪೨); "ವೇದಂ ಬೇದಮೋದು ಸುತಿ ಪಱಪಾತುಂ" (ಕವಿಕಂ. ೧೧೭).

ಓದುಬರಹ = ಓದುವುದು ಮತ್ತು ಬರೆಯುವುದು: ಉಪಾಧ್ಯಾಯರು ನನಗೆ ಓದುಬರಹವನ್ನೂ ಗಣಿತವನ್ನೂ ಕಲಿಸಿದರು (ಕಸರಿ. ೧); ಗುರುವಾಗಿ ನಿಂತರು ತಂದೆಯ ಮನೆಯೊಳು ನಮಗೋದುಬರಹವ ಕಲಿಸೆ (ಇಂಚಾಪ. ೧೪–೫೭). [< ಓದು$_1$. / ತುಳು. ಓದಿಗೆ, ಓದು]

**ಓದುಂಗಾಱ**, ಓದುಗಾರ, ಓದುಗಾಱ (ನಾ). ಓದುವವನು; ವ್ಯಾಸಂಗಮಾಡುವವನು; ವಿದ್ಯಾರ್ಥಿ: ಓದುಂಗಾಱಂ, ಜೂದುಂಗಾಱಂ (ಶಮದ. ೨೦೦ ಪ್ರಯೋ); ಜೂದುಂಗಾಱಂ, ಓದುಂಗಾಱಂ (ಶಬ್ದಾನು. ೩೮೪ ಪ್ರಯೋ). **ಓದುಗಾರ**: ಆ ಹುಡುಗ ಒಳ್ಳೆಯ ಓದುಗಾರ (ರೂಢಿ). **ಓದುಗಾಱ**: ಪ್ರಜೆಗಳ್ ... ಓಜಗಾಱರಕ್ಕರಿಗರೋದುಗಾಱರ್ ಸಂಗೀತ ಸಾಹಿತ್ಯ ನಿಪುಣರ್ (ಚಿಕವಂ. ೧೪೪–೨).
[ಓದು$_2$ + –ಗಾಱ (< –ಕಾಱ)]

**ಓದುಕುಳಿ**, ಓದುಗುಳಿ (ನಾ). ಓದುವ ಅಭ್ಯಾಸವುಳ್ಳವನು; ಪಾಠಕ; ಓದುಗಾರ; ವ್ಯಾಸಂಗಶೀಲ: ಓದುಕುಳಿಯಿಂ, ಬಂಡುಣಿಯಿಂ (ಶಬ್ದಾನು. ೨೬೬ ಪ್ರಯೋ). **ಓದುಗುಳಿ**: "ಗೋಷ್ಠಿಗೆ ಹೊಂದದ, ಮಂದಿಯೊಡನೆ ಬೆರೆಯದ, ಕ್ರೀಡಾದಿಗಳಲ್ಲಿ ಆಸಕ್ತಿಯಿಲ್ಲದ, ಕೇವಲ ವ್ಯಾಸಂಗಮಗ್ನನಾದ ವಿದ್ಯಾರ್ಥಿ; ಓದಾಳಿ, ಓದುಗುಳಿ" (Smug. ಇಂಕನಿ). [ಓದು$_2$ + –ಕುಳಿ$_3$]

**ಓದುಗ** (ನಾ). ಓದುವವನು; ವಾಚಕ: ಸಾಧನೆಯಿಂದ ಬಂದ ಓದುಗ ಕಳನೇಱ ಕೈಯ ಮಱೆದಂತೆ (ಮೋಳಿಮಾ. ೧೫೭–೫೮೭); ಓದುಗರ ಚಿತ್ತಚಾಂಚಲ್ಯವಾಗಬಾರದೆಂಬುದೇ ಅವರ ಉದ್ದೇಶವಿರಬೇಕು (ಗ್ರಂಥಾಲ. ೫); ಓದುಗನ ಪ್ರತಿಕ್ರಿಯೆಯ ಬಗೆಗೆ ಅವನು ಕುತೂಹಲಿಯಾಗದಿದ್ದರೆ ಬಲುಬೇಗನೆ ಬೇರುಸತ್ತ ಮರವಾಗುತ್ತಾನೆ (ಜೀವನ. ೨ ಮುನ್ನುಡಿ). [ಓದು$_1$ + –ಗ$_3$]

**ಓದುಗಬ್ಬ** (ನಾ). ಓದತಕ್ಕ ಕಾವ್ಯ; ಪಠಿಸುವ ಕಾವ್ಯ: ಕಬ್ಬಿಗರೋದುಗಬ್ಬವ ಹಾಡುಗಬ್ಬವ ಕಬ್ಬದೊಳೊರೆವರ್ (ಭರಚ. ೧–೬).
[ಓದು$_1$ + ಕಬ್ಬ]

**ಓದುಗಲಿ** (ಕ್ರಿ). ವಿದ್ಯಾಭ್ಯಾಸ ಮಾಡು; ಶಾಸ್ತ್ರವನ್ನು ಕಲಿ: ನಿಮ್ಮೊಳಗೋದುಗಲಿವೆನೆಂಬಾ ಶಿಷ್ಯನೊಳಗೆ ಇಂತಾಡುವರೆ (ಪ್ರಭುಂಜ. ೩–೭೨); ಓದುಗಲಿಯಲಧೇನು ಕರ್ಮವನಾದರಿಸಲಿನ್ನೇನು (ಗಗತಾ. ೧೪–೩೯).
[ಓದು$_2$ + ಕಲಿ$_1$ (< ಕಲ್$_1$)]

**ಓದುಗಲಿಸು** (ಕ್ರಿ). ವಿದ್ಯಾಭ್ಯಾಸಮಾಡಿಸು; ವಿದ್ಯೆ ಹೇಳಿಕೊಡು: ಓದುಗಲಿಸುವರೊಲಿದು ಪೊಗಳಿದೊಡಾವೋದುಗಲಿವರೋದುಗಳು ಮೇದಿನಿಯೊಳು ಮೇಲೆನಿಪುವು (ಹದಿಬ. ೧–೨೪).
[ಓದುಗಲಿ + –ಇಸು$_3$]

**ಓದುಗಾರ** 'ಓದುಂಗಾಱ' ನೋ.

**ಓದುಗಾರಿಕೆ** (ನಾ). ೧. ಓದುವ ಹವ್ಯಾಸ; ಓದುವಿಕೆ; ವ್ಯಾಸಂಗ: ಓದುಗಾರಿಕೆಯು ಅಭಿವೃದ್ಧಿಯಾಗಲು ವರ್ತಮಾನ ಪತ್ರಿಕೆಗಳನ್ನು ತರಿಸುತ್ತಿದ್ದರು (ಹುಟ್ಟಹ. ೯). ೨. ರಾಗವಾಗಿ ಓದುವ ಕಲೆ; ಗಮಕ: ಬಹಳ ಹಿಂದಿನ ಕಾಲದಲ್ಲಿಯೂ ... ಕರ್ಣಾಟಕರಲ್ಲಿ ಓದುಗಾರಿಕೆ ಹೆಚ್ಚು ಪ್ರಾಶಸ್ತ್ಯವನ್ನೂ ಪ್ರೋತ್ಸಾಹವನ್ನೂ ಪಡೆದ ಲಲಿತಕಲೆಯಾಗಿತ್ತು (ಸಾಹಿಜೀ. ೧೨೦). [ಓದುಗಾರ (< ಓದುಂಗಾಱ) + –ಇಕೆ]

**ಓದುಗಾಱ** 'ಓದುಂಗಾಱ' ನೋ.

**ಓದುಗುಳಿ** 'ಓದುಕುಳಿ' ನೋ.

**ಓದುವೞ** (ನಾ). ಓದುವ ಸ್ಥಳ; ಪಾಠಶಾಲೆ: ಸೌಲಭ್ಯದ ಶಾಲೆಯುಂ ಒಳ್ಪಿನೋದುವೞಯುಂ ಒಳ್ನುಡಿಯ ಗುಡಿಯುಂ ಮಱುಕದ ಕರುವಾಡಮುಂ (ಚಿಕವಂ. ೧೧೪–೯). [ಓದು$_2$ + ಪೞ$_3$]

**ಓದುವೇೞ್** (ಕ್ರಿ). ಓದನ್ನು ಕಲಿಸು; ವಿದ್ಯಾಭ್ಯಾಸ ಮಾಡಿಸು: ಶಾಸ್ತ್ರದರ್ಥಮಂ ಬಿಸುಡದೆ ಪೂಣ್ಕೆಯಿನೋದುವೇೞ್ದೊಡಾರ್ ಮೆಚ್ಚರಿದಂ (ಜಾತತಿ. ೧–೧೨); ಅಂತೇವಾಸಿಗಳ್ಗೋದುವೇೞ್ವುವು ... ಕೇಳೀಶುಕಸಾರಿಕಾತತಿಗಳ್ (ಜಗವಿ. ೯–೧೧೫). [ಓದು$_2$+ ಪೇೞ್]

**ಓದುಳ್ಳ** (ನಾ). ಓದಿದವನು; ವಿದ್ಯಾವಂತ; ಪಂಡಿತ: ಉಳ್ಳ ಪ್ರತ್ಯಯಕ್ಕೆ – ಧನಮುಳ್ಳಂ ... ಓದುಳ್ಳಂ, ತೇಜಮುಳ್ಳಂ (ಶಮದ. ೨೦೬ ಪ್ರಯೋ). [ಓದು$_2$ + –ಉಳ್ಳ$_0$]

**ಓದೊಡೆಯ** (ನಾ). ಓದುಳ್ಳವನು: ಸಿರಿಯೊಡೆಯನಾಗಿಯುಂ ದರ್ಪರಹಿತನೋದೊಡೆಯನಾಗಿಯುಂ ವಿಗಳಿತ ಮತ್ಸರಂ (ಶಾಂತಿಪು. ೩–೮೬).
[ಓದು$_2$ + –ಒಡೆಯ$_2$]

**ಓದ್ದಿ** (ನಾ). ಒಂದು ಔಷಧಿ ವಸ್ತು: "ಪ್ರಾಣದಾ– ಅಳಲೆ, ವೃದ್ಧಿ, ಕಿಱುಗೊಳೀಯ ಸೊಪ್ಪು, ಜೀರಗೆ, ಓದ್ದಿ?" (ಓಷಧಿ. ೯೬). [?]

**ಓನಾಮ** (ನಾ). ೧. ಓಂ ನಮಃ ಎಂಬ ಮಂತ್ರ. ೨. (ಆಲಂ) ಮೂಲಾಕ್ಷರ; ಆರಂಭ: ಅಂತಾತನೆಸಗಲೆನ್ನಯ ಕಲಿಕೆಗದೆ ಗಡಾ ಓನಾಮ (ಹೆಬ್ಬೆರ. ೫–೫); ಐಗಳು ಹರಡಿದ ಮರಳಿನಲ್ಲಿ ಓನಾಮವನ್ನು ಹಾಕಿಕೊಡುತಿದ್ದರು (ಹಾಹುತ್ತ. ೬೩). [< ಸಂ. ಓಂನಮಃ]

**ಓನು** (ಕ್ರಿ). ಚೆನ್ನಾಗಿ ಕಲಸು; ತೊಳಸು: ಹಿಟ್ಟನ್ನು ಓನು (ರೂಢಿ).
[?. / ತಮಿ. ಒನ್ನು = ಬೆರಸು, ಕೂಡಿಸು]

**ಓಪ** (ನಾ). ಪ್ರೀತಿಪಾತ್ರನಾದವನು; ಪ್ರಿಯಕರ; ನಲ್ಲ; ಕಾದಲ: "ನಲ್ಲರ್ಕಳೋಪರ್ಕಳಾ ಪ್ರಿಯರೊಳ್ ಕಾದಲರೆಂದೆನಲ್ಕಿನಿಯರ್" (ಕರ್ಣಾನಿ. ೬೩); ತಿಳಿಪಲಡಿಗೆಱಗಿದೋಪನ ತಳಂಗಳಾ ತೀಟದಿಂ ಪದಂಗೊಳೊಗೆದಾ ಪುಳಕಚಯಂಗಳ್ (ಕವಿರಾ. ೩–೧೧೮); ಓಪನಂ ಮಿಡುಕಲೀಯದೆ ಕಾಲ್ವಿಡಿದಟ್ಟು (ಪಂಪಭಾ. ೪–೯೭); ಓಪರ ಮುನಿಸುಂ ಕಡುಮೂರ್ಖನ ತಪಮುಂ ... ನಿಲಲಱದಪುವೇ (ಧರ್ಮಾಮೃ. ೨–೨೨೦); ಒಲಿದವಳೋಪನ ಹಲವು ಚಂದದಿ ಪೊಗಳ್ದಲಿದಳೆಂದೆನ್ನದಿರು (ಭರಚ. ೬–೯೧).

ಓಪರ್ (ಬಹುವ) : ಓಪರೋಪರೊಳೊಡೆಸಾಯಲ್ಪಡೆದರಿನ್ನವೇಂ ಸೈಪೊಳವೇ (ಆದಿಪು. ೫-೨೪); ಅಳು ಕೋಪ ಓಪರೊಳು ಹೊಲ್ಲ (ಸರ್ವಜ್ಞ. ೧೧೪೦). **ಓಪವಳ್, ಓಪಳ್** = ಪ್ರಿಯತಮೆ ; ಪ್ರೇಯಸಿ : ಓಪವಳೊಳ್ ನೆಱೆದಪ್ಪುದಾಗದೀ ಗಿಳಿಯನಗಲ್ಗುಲ್ (ವರ್ಧಪು. ೧-೯೨); ಲಾಲಿಸಿ ಕೇಳ್ವರ ಶಿವಗೋಪವಳಾಡಿದ ಲಲ್ಲೆಯೆನೆ (ಜಯಕಾ. ೧-೨೫); "ಮನದನ್ನಳ್ ಕಾದಲೆಯೆಂದಿನಿಯಳ್ ಶ್ರಾನೋಪಳೆಂದು ನಲ್ಲಳೆನಲ್ಕಂದ ನುನಯದಿಂ ಪ್ರಿಯೆ" (ಕವಿಕಂ. ೧೭೨); ಓಪಳ ತಳಮಂ ಪೊಯ್ದಾಶ್ವರಂ ಮುಗುಳ್ನಗೆ ನಕ್ಕಂ (ಪಂಪಭಾ. ೧೨-೧೪೪); ನೀನೆನಗೋಪಳಾದರೆ ಸಾಕು (ಕುವ್ಯಾವಿ. ೨-೨೯). [ಓಪು + -ಅ$_7$]

**ಓಪಾದಿ$_1$** (ನಾ). ಹೋಲಿಕೆ; ಸಾದೃಶ್ಯ; ಸಾಮ್ಯ: ಅಳದು ಕಣ್ಣ ಭೂಮಿಗೆ ನೂಱಕ್ಕೆ ಹತ್ತಱೋಪಾದಿಯ ದಶವಂಧಮುನಿಕ್ಕಿ (ಎಇ. XVI, ೪೮-೫೨ ; 1142); ನಿನ್ನೋಪಾದಿಯಲಿ ಸುಚರಿತ್ರನಾವನು ಮೇದಿನಿಯೊಳು (ಕುವ್ಯಾಭೀ. ೧೦-೨೧); ಆದಿಮಾಯಾತೀತನನುಪಮವೇದಸಿದ್ಧನು ಜಗದ ನರರೋಪಾದಿಯಲಿ ಹಲುಬಿದನು (ತೊರರಾ. ೩-೧೧ ಸೂಚನೆ). [ದೇ. ‖ ತಮಿ. ಮಲ. ಒಪ್ಪ]

**ಓಪಾದಿ$_2$** (ಅ). ಹಾಗೆ; ಅಂತೆ: [... ಸೌಳುವಣ್ಣನಲ್ಲಿ ಮಱಿ ಬರುಹವುಂ ಕುರುಡಂಗೆ ಕನ್ನಡಿಯಂ ತೋಱುಹವುಂ ಮೂರ್ಖನಂ ಬುದ್ಧಿವಂತನೋಲೈಸುಹವುಂ ಇವಱೋಪಾದಿ] (ಪಂಚತಂ. ೧೩೬-೧೧). [ದೇ. ‖ ತಮಿ. ತುಳು. ಓಪಾದಿ]

**ಓಪು** (ನಾ). ಪ್ರೀತಿ ; ಸ್ನೇಹ: "ತಕ್ಕು, ಅಚ್ಚು, ಒಲುಲ್, ಕಾದಲ್ಕೆ, ನಲ್ಮೆ, ಕೂರ್ಮೆ, ಎಱಕಂ, ಓಪು – ಈ ೮ ಸ್ನೇಹಕ್ಕೆ ಪೆಸರ್" (ಕಶಸಾ. ೧೯-೩೯೦) ; ಓಪು, ಕಾಪು, ಮೇಪು (ಶಬ್ದಾನು. ೧೪ ಪ್ರಯೋ). [ಓ$_2$ + -ಪು$_2$]

**ಓಪೆ** (ನಾ). ಪ್ರಿಯೆ; ಪ್ರಿಯತಮೆ : ಎಲ್ಲವ ನೀನೆ ಗೆತ್ತು ತಾನೊರಲ್ದಪಳಂತೆ ಹಮ್ಮದಮನಾಳ್ದು ತೊಳಲ್ದು ಬಳಲ್ವಳೋಪೆ ಕೇಳ್ (ನರಚ. ೮೩-೨೧೯). [ಓಪು + -ಎ$_2$]

**ಓಬಳಾಡು** (ಕ್ರಿ). ೧. "ಮಲಗು" (ರಮಾಕಾಂ. ೧೨೪). ೨. "ಜೋಗಳಾಡು; ಮಗುವನ್ನು ಚಪ್ಪರಿಸಿ ಮಲಗಿಸು" (ಜಾನಕೋ. ೩೦). [ಓಬಳ್$_0$ + ಆಡು$_1$]

**ಓಬಳಿಗಾಯಿ**, ಓಬುಳಿಗಾಯಿ (ನಾ). ಮರದಿಂದ ಮಾಡಿದ ಗೋಲಿ, —ಗುಂಡು (ಸ್ಯಾಂಡರ್). **ಓಬುಳಿಗಾಯಿ :** (ಸ್ಯಾಂಡರ್). [ಓಬಳ್$_0$ + ಕಾಯಿ$_4$ (< ಕಾಯ್$_4$). / ತೆಲು. ಓಮನಗಾಯಲು = ಗಟ್ಟಿಗುಳಿ ಆಟದ ಕಾಳು]

**ಓಬಾಟೆ** (ನಾ). ಮೂರ್ಖತನ; ಅವಿವೇಕ (ಸ್ಯಾಂಡರ್). [?]

**ಓಬಿಕಾಲ** (ನಾ). ಬಹಳ ಹಿಂದಿನ ಕಾಲ (ಕಿ). [?]

**ಓಬಿರಾಯ**, ಓಬೀರಾಯ (ನಾ). ಅತಿಪ್ರಾಚೀನ ಕಾಲದ ಒಬ್ಬ ಕಾಲ್ಪನಿಕವ್ಯಕ್ತಿ. **ಓಬೀರಾಯ :** ನೀನು ನನಗೆ ಓಬೀರಾಯನ ಕಥೆ ಹೇಳಬೇಡ (ರೂಢಿ).

**ಓಬಿರಾಯನಕಾಲ, ಓಬೀರಾಯನಕಾಲ** = ಬಹಳ ಹಿಂದಿನಕಾಲ : ಓಬಿರಾಯನಕಾಲದ ವೃತ್ತಪತ್ರಿಕೆಯಿಂದ ನೆರೆದವರಿಗೆಲ್ಲಾ ವರ್ತಮಾನ ಹಂಚುತ್ತಿದ್ದ ಮೇಷ್ಟರು ವಾನ್ ಖಮೆಲ್ ಸಹ ಇರಲಿಲ್ಲ (ಯೋಧಪು. ೮೭); ಎಲ್ಲೋ ಒಂದೊಂದು ಮನೆಯ ಅಟ್ಟದಮೇಲೆ ಓಬೀರಾಯನ ಕಾಲದ ರಾಟೆಗಳಿದ್ದವು (ಹುಟ್ಟಹ. ೯); ಆದರೆ ಅವು ಓಬೀರಾಯನ ಕಾಲದವು (ಪುನರು. ೪೨೯). [?]

**ಓಬೀರಾಯ** 'ಓಬಿರಾಯ' ನೋ.

**ಓಬುಳಿಗಾಯಿ** 'ಓಬಳಿಗಾಯಿ' ನೋ.

**ಓಮ$_1$**, ಓಮು, ಓವ, ಓವು (ನಾ). ಜೀರಿಗೆ ಜಾತಿಯ ಒಂದು ಬೀಜ; ಅಜಮೋದ: ತವಸಿಯ ಬೇರ ಕಷಾಯಾಂಬುವಿನೊಳಮದ ಪಲವು ಸೂಟಿಯೊಳಂ ಭಾವಿಸಿದೋಮುವನರೆದು (ಲೋಕೋಪ. ೯-೧೨೩); ಮಕ್ಕಳು ನಿದ್ದೆಯಲ್ಲಿ ಮೂತ್ರ ಮಾಡುತ್ತಿದ್ದರೆ – ರಾತ್ರೆ ಮಲಗುವಾಗ ಒಂದೆರಡು ಚಿಟಿಕೆ ಓಮ ತಿನ್ನಿಸುವುದು (ಮನೆಮ. ೧೪); ಓಮ ತಿಂದ ಕತ್ತೆ ಹಾಗೆ (ಗಾದೆ). **ಓಮು :** 'ಓಮುಕಾಳು' ಪರಾ. **ಓವ:** ಒದವಿರ್ದ ಕಾದಲಂ ಬೆಲ್ಲದೊಳಂ ತುಪ್ಪದೊಳಮುಟ್ಟು ತಿಂದೊಡಮಂತಲ್ಲದೊಡೆ ವಿಳಂಗಂ ಚೋಪಾರದೋವೆಮೆಂಬಿವನೆ ತಿಂದೊಡಂ ಕ್ರಿಮಿಪೋಕುಂ (ಲೋಕೋಪ. ೯-೧೧೪); ಓವ ಸಾಸವೆ ಮೆಂಥೆಯ ಜೀರಗೆ ಸಬ್ಬಸಗೆ ಕೊತ್ತುಂಬರಿ (ಎಕ. XII, ಪಾವುಗ. ೫೦-೫೫ ; 1248). **ಓವು :** "ಲೋವ ಕರ್ಕಟಕಮುಜಮೋದಮೆನಲೋವು" (ಮಂಗರಾ. ೪೧-೩೪); ಓವುಮುಮಂ ಶುಂಠಿಯುಮಂ ಸೇವಿಸೆ ಪಱಿಪಡುಗುನೂವಗಂ ಖಪರೋಗಂ (ಲೋಕೋಪ. ೯-೧೩); ಮಾಂಗಾಯ ತಿರುಳುಮೋವು ಶುಂಠಿಗಳಂ ಕುಡಿಬೆಲ್ಲವತ್ತ್ರಮೊಂದಾದರೆ ಬಿಸಿನೀರಿಂದ ಕೆಡಿಸುಗುಂ ಗ್ರಹಿಣಿಯುಮಂ (ಕಲ್ಯಾಕಾ. ೪-೧೭). [ದೇ. ‖ ತಮಿ. ಮಲ. ತುಳು. ತೆಲು. ಓಮ]

**ಓಮ$_2$** (ನಾ). ದಯೆ; ಪ್ರಸಾದ: ಗೌರೀವಲ್ಲಭಂ ದುರಿತಾರಿದುರ್ಜನ ದುರ್ಲಭಂ ನಿಜಭಕ್ತರೋಮಕ್ಷೇಮ ಭಾವಿತನು (ಬಸಪು. ೪೩-೮೭). [ಸಂ. ಓಮನ್]

**ಓಮು** 'ಓಮ$_1$' ನೋ.

**ಓಮುಕಾಳು**, ಓವುಕಾಳು (ನಾ). ಓದಕ್ಕಿ; ಓಮ : "ಅಜಮೋದಾ, ಉಗ್ರಗಂಧಾ, ಬ್ರಹ್ಮದರ್ಭಾ, ಯವಾನಿಕಾ – ೪ ಅಜಾಮೋದದ ಹೆಸರುಗಳು, ಓಮುಕಾಳು" (ಸಿದ್ಧಾಂತಿ. ೧೨೭). **ಓವುಕಾಳು :** (ಕಿ). [ಓಮು (< ಓಮ$_1$) + ಕಾಳು$_2$ (< ಕಾಟ್ಟು$_2$)]

**ಓಯರ**, ಓಯಾರ (ನಾ). ೧. ಸೊಗಸು ; ಅಂದ ; ಚೆಂದ ; ಬೆಡಗು ; ಬಿನ್ನಾಣ : ಸುರತರುವಿನಾರವೆಗಳ ಸುರಭಿಗಳೋಯರದ (ಗಿಂಕ. ೧೦-೭೭ ವ); ಭಾರತಿಗೆ ಹಾರಮನೋಯರಮಾಗೆ ಕೋದವೋಲೆಸವಿನಂ (ಎಕ. V, ಚನ್ನರಾ. ೨೦೩-೩೦ ; 1223); ಸಾಮುತ್ವರಿತವ ಓಯರದಿ ಕೇಳು (ವೀಶೈಪು. ೩-೧೮-೧೮); ಶರಣನಿಕಾಯವೋಯರದಿಂ ದಂಡನಾಯಕ ಬಸವನ ಗೇಯಕೆ ಪೇಳಲ್ಕೆದಿದರು (ನೋಳಪು. ೫-೪೦); ಬೇಱಿಂದೊಡೋಯರದಿಂ ಬಂದು (ಚಕವಿ. ೫-೫೮). **ಓಯಾರ:** ೧. ಕಥಾವಿಸ್ತಾರದೊಳ್ ವರ್ಣನಕ್ರಮಮೋಯಾರಮನಾಳ್ದು ದಳ್ಳಿಸಿಸವೇಟ್ಟುಂ (ಅನಂಪು. ೧-೩೭); ರಾಯನೊಡನೆ ಬೇಂಟೆಗೆ ಪೋದುದಿಲ್ಲ ಮೇಲೋಯಾರ [ಪಾಠಾಂ. ಲೊಯ್ಯಾರ]ದಿಂದಿರ್ದುದಿಲ್ಲ (ಕುರಾಸಾಂ. ೩೫-೧೧೦). ೨. ದಯೆ; ದಾಕ್ಷಿಣ್ಯ : ಬಹುಳ ಬಲ ಸನ್ನಾಹದಾಯತದಲಿ ನಮ್ಮ ಮೇಲೆ ಓಯಾರವಱಿಯದೆ ಖಾನ ದಂಡೆತ್ತಿ ನಿರ್ದಾಯದಿಂದೈತಂದನೀಗ (ಕಂನವಿ. ೧೧-೧೧೩). 'ಒಯ್ಯಾರ' ಪರಾ. [ದೇ. ‖ ತಮಿ. ಒಯಿಲ್, ಒಯ್ಯಾರ; ತೆಲು. ಒಯಾರ, ಒಯ್ಯಾರ]

**ಓಯಾರ** 'ಓಯರ' ನೋ.

**ಓಯಾರಿಸು** (ಕ್ರಿ). ಸಾಲಾಗಿರಿಸು: ಪ್ರವಾಳಮಂ ಜಡಾಶ್ರಯಮೆಂದೊಲ್ಲದವನಧಃಕರಿಸಿ ಮುಕ್ತಿಯ ಬಿತ್ತನೋಯಾರಿಸಿದಂತಿರ್ದ ದಂತಪಂಕ್ತಿಯನೊಳಗುಮಾಡಿಕೊಂಡು (ಬಸರ. ೧೨-೯೧). 'ಒಯ್ಯಾರಿಸು' ಪರಾ. [ಓಯಾರ (< ಓಯರ) + -ಇಸು$_3$]

**ಓಯಿ** (ಅ). ಸಂಬೋಧನಾರ್ಥಕ ಅವ್ಯಯ ; "ಸಂಬೋಧಿಸಿ ಕರೆಯುವುದು" (ಸಿದ್ಧಾಂತಿ. ಕಿ. ೪೭೨). [ದೇ. ‖ ತಮಿ. ಓಯ್ ; ತುಳು. ಓಯಿ ; ತೆಲು. ಓಯಿ, ಓಯಿ]

**ಓರ್**$_1$ 'ಒರ್' ನೋ.

**ಓರ್**$_2$, ಓರ್ಬು$_2$ (ನಾ). ತೂತು; ರಂಧ್ರ (ಕ). (?). **ಓರ್ಬು$_2$:** ಮಾರಿಯಱಕೆಗಳಡಗದಂತಕನೂರು ತುಂಬದೆ ಶಾಕಿನಿಯರೊಡ್ಡೋರು [ಪಾಠಾಂ. ರೆ] ನನೆಯದೆ ಡಾಕಿನಿಯರಿಗೆ ಡೊಳ್ಳು ಸಾಲಿಡದೆ . . . ವಾರ ಣಾಹ್ವಯ ನಗರಿಯನು ಹೊಗದಿಹನೆ ಹೇಳೆಂದ (ಕುವ್ಯಾಉ. ೧೧–೧೦). [< ಪೋರ್$_3$ ?]

**ಓರಂಡಲ** (ನಾ). ೧. ಒಂದು ಪ್ರತಿಭಟನೆ; ಒಂದು ಸ್ಪರ್ಧೆ: "ಓರಂಡಲಂತೆಗೆದುದು . . . – ಈ ೨೫ ಪ್ರತಿಹತಕ್ಕೆ ಪೆಸರ್" (ಶಶಸಾ. ೧೫–೨೯೬); "ಅಲಗಣಸಾದುದು ಮಿಕ್ಕುದು ಗೆಲೆವಂದುದುಮಳ್ಕಿಸಿದುದು ಮೋರಂಡಲಮಂಡಲೆದುದು ಪಳಂಚಿದುದು ತಾನಳಿಸಿದುದಂ ಪೊಡೆದುದ್ದೆದೆ ಮಾಱಿದುದೆಂದುಂ" (ಕವಿಕಂ. ೧೩೬). ೨. ಒಂದು ಕಡೆಯ ಭಾರ, —ತೂಕ: ಕೊಂಕಿದ ಕೂರಲಿಂದಾಂಕಿ ಪೊಱವಾಱ ಪೊಱೆಗಮೋ [ಪಾಠಾಂ. ಮಾ]ಱ[ರ]ಂಡಲಮಾಗಿಕೊಂಡು ಜೋಲ್ವ ಕುಚಭರಮ ನುರದೆ ಕೊಂಡು (ಲೀಲಾವ. ೩–೨೧); ನೆಲಸಿದ್ದ ಮ್ಮೊರಂದೆ ಬಿಣ್ಪಿಂ ಬಡಗಣದೆಸೆಯಿಂ ಕೊಣ್ಡು ನೆಲ್ಲಪ್ಪುದೋರಂಡಲಮಕ್ಕುಂ ವಿಶ್ವಮಂ ದುಮ್ಮಳಿಸಿ ಬೆಸಸೆ ವಿಶ್ವಾಮರ ಶ್ರೇಣಿ ಮಾಜಂಡಲವಾದಂ ತೆಂಕ (ನಾಂದೇಶಾ. ೨೪–೪೦, ೪೩; 12ನೆಯ ಶತ); ಅಂತು ವಿಜಯಾರ್ಧಕಟ ಕಕ್ಕಮೋರಂಡಲಮಾಗೆ ಕಟಕಮಂ ಬಿಡಿಸಿ (ಪಾರ್ಶ್ವಪು. ೧೧–೧೯ ವ); ಉಂಡುಟ್ಟು ಬಾಳ್ವ ನರರಂ ಕಂಡರೆ ಸೈರಿಸದ ಚಂಡವೇಗನ ಕಥೆಗೋರಂ ಡಲಮೆನಿಪರ್ಗೆ ಭಯಂಗೊಂಡೆಪೆಂ (ಧರ್ಮಪ. ೪–೯).

[ಓರ್$_1$ (< ಒರ್) + ಅಂಡಲ್$_6$. **P** ಅಂಡಲ = ಸಮಾನವಾಗಿರುವಿಕೆ, ಆಶ್ರಯ]

**ಓರಂತರ** (ನಾ). (ವಂಶದಲ್ಲಿ) ಒಂದು ತಲೆಮಾರಿನ ಅಂತರ: ಆ ದಕ್ಷಮರೀಚಿ ಪ್ರೋಪ್ಪವರ್ ದಂಪತಿಗಳಿವರ್ಗಮೋರಂತರಂ ವಾಗ್ವರಂಗಂ (ಶಾಕುಂತ. ೧೧೨–೧೯೦). [ಓರ್$_1$ (< ಒರ್) + ಅಂತರ]

**ಓರಂತಿರ್** (ಕ್ರಿ). ಒಂದೇರೀತಿಯಾಗಿರು; ಕ್ರಮವಾಗಿರು; ಸಮನಾಗಿರು: ಕಾರಕಮಂ ಕ್ರಿಯೆಯುಮನಱಿದೋರಂತಿರೆ ಮುಂ ತಗುಳ್ಚಿ (ಕವಿರಾ. ೨–೮೫); ತಾರಕೆಯುಳ್ಳಿನಮಿಕ್ಕಿಂತೋರಂತಿರೆ ಬೆಂಗಿಗಬ್ಬುಗ ರಯ್ಯನ ಧರ್ಮ್ಮಂ (ಸೌಇಇ. XI–i, ೪೨–೩೧; 971); ಓರಂತಿರೆ ಕೂಡೆ ಲಕ್ಷ್ಮಿ ತಿಱ್ಱನೆ ತಿರುಪಳ್ (ಕಾದಂಪೂ. ೫೪೬); ಮುತ್ತಂ ಶಾರದಮೇಘಾ ವಳಿ ತಂದೋರಂತಿರೆ ಕಱಿದುವೆನಿಸಿದುವು ಬೆಳ್ಸರಿಗಳ್ (ಜಗವಿ. ೪–೬೮). [ಓರಂತು + ಇರ್$_1$]

**ಓರಂತು** (ಅ). ಒಂದೇ ಸಮನಾಗಿ; ಕ್ರಮಬದ್ಧವಾಗಿ; ಚೆನ್ನಾಗಿ: ತನ್ನ ನಂಬಿ ಬಂದ ಬದ್ದೆಗದೇವಂಗೆ ಸಕಳಸಾಮ್ರಾಜ್ಯಮನೋರಂತುಮಾಡಿ ನಿಱಿಸಿದರಿಕೇಸರಿಯ (ಪಂಪಭಾ. ೯–೫೨ ವ); ಸ್ತ್ರೀರತ್ನರ ಸ್ತ್ರೀರತ್ನದೊ ಳೋರಂತೊಡಗೂಡಿ ಕೂರ್ತು ಸುಖಮಿರ್ಕೆ (ಶಾಂತಿಪು. ೩–೫೫); ಓರಂತು ಪಕಾರವಂ ಮೆಱೆದವರ್ (ಕಾದಂಪೂ. ೫೭೯). [ಓರ್$_1$ (< ಒರ್) + ಅಂತು$_1$]

**ಓರಂತೆ** (ಅ). = ಓರಂತು: ಲೀಲೆ ಮಿಗೆ ಮೂವತ್ತಿರ್ವರೋರಂತೆ ನರ್ತಿಸೆ ದೇವಾಂಗನೆಯರ್ (ಆದಿಪು. ೭–೫೩); ಈವೊಡಲೋರಂತುರಿವಂದವಾದ ಪುದು (ಕಾದಂಪೂ. ೮೫೩); ಓರಂತೆ ಪರೆದ ನವಸಂಧ್ಯಾರುಚಿಯಿಂದ (ಕಾವ್ಯಾವ. ೫೦೭); ಪಾಲಂ ಕುಡಿಯದಿರ್ದೊಡೆ ನೋಡಿ ಕಡು ಸಿಡಿಮಿಡಿ ಗೊಳುತ್ತೋರಂತೆ ಚಿಂತಿಸುತಿರ್ಕು ಕೊಡಗೂಸು (ಬಸವು. ೧೪–೧೯); ಓರಂತೆ ಸಾಕಿದ ಸುತರು ತನ್ನವರಲ್ಲ (ಪುರಂದ. ೧–೧೭೩–೨); ಪರಂಪರಾ ಗತವಾಗಿ ಬಂದ ಸಂಪತ್ತಿಗೆ . . . ತಂತಪ್ಪು ದುಡಿತವನ್ನು ಕೂಡಿಸಿ ಅದನ್ನು ಓರಂತೆ ಹಿಗ್ಗಿಸುತ್ತ ಬರಬೇಕು (ಮೂರುಉ. ೭ ಮುನ್ನುಡಿ).

ಓರಂತಾಗು = ಒಂದೇಸಮನಾಗು; ಏಕಪ್ರಕಾರವಾಗು: ಕೆಂದೂಳಿ ಯೊಳ್ ಕೆಸರ್ಮಸಗಿದ ಜಲದುರ್ಗಮೆಲ್ಲಂ ನೆಲದೋಳೋರಂತಾಗೆಯುಂ (ಅಜಿಪು. ೯–೧೭ ವ). [ಓರಂತು + –ಎ$_4$]

**ಓರಂದ** (ನಾ). ಒಂದೇಕ್ರಮ; ಏಕಪ್ರಕಾರ: ಓರಂದದಿಂ ಸಿಂಪುಗಳು ಗುಳೆ ಸಿಡಿಲ್ದಂದ ಮುಕ್ತಾಫಲಶ್ರೇಣಿಗಳಿಂದಂ (ಕಾದಂಪೂ. ೭೫೧); ಓರಂದದಿ ನುಡಿವುದು ಜೀವಂ ಸಂದಾ ಮೋಕ್ಷಾಮೃತಾರ್ಣವಂಬುಗುವಿ ನೆಗಂ (ನೇಮಿಪು. ೧೩–೬೭); ಕೂಡೆ ಬಾಯ್ಗೋರಂದದಿಂ ತೀವಿದ ತನಿಗೆನೆ ವಾಲ್ (ಕಾವ್ಯಸಾ. ೯); ನೆರವು ಬಹುದೋರದವೊಮ್ಮುಖವೊಂದು ಸಂಕೇತ (ಕುವ್ಯಾಕ. ೨–೧೯). [ಓರ್$_1$ (< ಒರ್) + ಅಂದ]

**ಓರಂಬೆಸೋರಂಬೆ** (?): ಒನ್ದೊನ್ದು ತಡಿಯೊಳೋರಂಬೆಸೋರಂಬೆ ಸೆನ್ನ ರಗಲದೊಳ್ ತೋಣ್ಬ ಮ್ಮಾಡುವನ್ತಾಗಿ ಕೊಟ್ಟತ್ತು (ಎಕ. XII, ಸಂಜನ. ೨೬೯–೯೩; 904). [?]

**ಓರಗಿತ್ತಿ** (ನಾ). ೧. ಭಾವ ಅಥವಾ ಮೈದುನನ ಹೆಂಡತಿ; ಗಂಡನ ಸಹೋದರನ ಹೆಂಡತಿ; ನೆಗೆಣ್ಣಿ: ಎನಗೆ ಪೋರಗಿತ್ತಿಯ ಸವತಿಯತ್ತಿ ಗೆಯರುಪಟಳಂ ತೋರಮೆನುತೊರೆದು (ವೆಂಕಾರಾ. ೫–೨–೪೧); ಚಂದ್ರಿಯು ತನ್ನ ಓರಗಿತ್ತಿಯ ಮಗಳೆಂಬ ಭಾವನೆಯನ್ನು ತೊಡೆದು ಹಾಕಿತ್ತು (ನಿಶಿಉ. ೪); ಶಾಂತಲಾದೇವಿ ಓರಗಿತ್ತಿಯರೊಡನೆ ಕೊಂಚ ಕಾಲ ಕುಳಿತಳು (ಸವತಿ. ೩೦). ೨. ಸಮವಯಸ್ಕಳು.

[ದೇ. ‖ ತಮಿ. ಓರಗತ್ತಿ, ಓರಗತ್ತಾಳ್]

**ಓರಗೆ, ಓರಿಗೆ** (ನಾ). ಸಮಾನ; ಸಮವಯಸ್ಕ; ಸರಿಜೋಡಿ: "ಸರಿ, ದೊರೆ . . . ಓರಗೆ . . . ಸಂಗಡಂ – ಈ ೧೮ ಸಮಾನಕೆ ಪೆಸರ್" (ಶಶಸಾ. ೧೫–೨೯೧); "ಸರಿಯೋರಗೆ ಮಾರ್ಪಡೆ ಹೊಯರ್ಕ್ಕೈ . . . ಅಕ್ಕುಂ ಸಮನುಂ" (ಕವಿಕಂ. ೧೩೬); ತನ್ನೋರಗೆಗಳಪ್ಪ ಪಲಂಬರ್ ಮಾಣಿ ಗಳ್ವೆರಸು ಪೊಱವೊಟಿಲೊಳ್ ಬಟ್ಟಾಡುತ್ತಿರೆ (ವಡ್ಡಾರಾ. ೭೩–೨೧); ಓರ ಗೆಯ ರಾಜಪುತ್ರರ ಗಡಣದೊಳ್ಕೂಡಿ (ಮನುಜೋ. ೨೧೮–೨೭); ಎನ್ನೋರ ಗೆವೆಣ್ಗಳ್ ಕೂಡೆ ಮನಂಗೊಳ್ವ ಮಕ್ಕಳಂ ಮುದದಿಂ ಮುದ್ದಾಡುತಿದಿ ರ್ಪರ್ (ಪುಷ್ಪಪು. ೩–೮೦); ಸಂಪಗೆಯ ಬಿರುಮುಗುಳಿನೋರಗೆಯ ಮೈಗಂಪು (ಸೌಂದಪು. ೭–೩೪); ಆ ರಂಗವೆಂಬ ಪದ್ಮದ ಪದಿನಾಱೆಸ ಳೋರಗೆಯಾಗಿ ಮೆಱೆದರು (ಭರಜ. ೧೩–೧೧೯); ನನ್ನೋರಗೆಯವರಿಗೆ ಮೇಳಕೆ ತಗುವಂಥ ಕುಣಿತವ ಕಲಿಸಿ . . . ರಂಗಕೆ ಬಿಟ್ಟರು (ಇಂಚಾಪ. ೧೧–೪೫). ಓರಿಗೆ: ಈ ರಾಜಪುತ್ರರು ಚಕ್ರವರ್ತಿನಿಯವರ ಓರಿಗೆಯವ ರಿದ್ದರು (ಮುಂಬಯಿ. ೪–೫); ಮಾನವನ ಪೌರುಷದೊಡನೆ ದೈವವು . . . ಓರಿಗೆಯವರಂತೆ ವರ್ತಿಸುತ್ತಿರಲಾರದು (ಪ್ರಬಂಧ. ೪೬).

ಓರಗೆಯಾಗು = ಸಮನಾಗು; ಸರಿಯಾಗು: ಮಿಸುಗುವ ಕಣ್ಣ ನುಣ್ಪೆಳಗು ಜೊನ್ನದೊಳೋರಗೆಯಾಗೆ (ಕಬ್ಬಿಕಾ. ೩೪೩).

[ಓರ್$_0$ + –ಅಗ್ಗೆ$_3$ ?]

**ಓರಗೆಗೊಳ್** (ಕ್ರಿ). ಸಮಾನವಾಗು; ಜೊತೆಯಾಗು: ಜನಪತಿ ಪುತ್ರನಂ ಶುಭಮುಹೂರ್ತದೊಳೋರಗೆಗೊಂಡ ಮಂತ್ರಿಪುತ್ರನೊಳೊಡ ಗೂಡಿ ಮಂಗಳವಿಳಾಸವೊಡಂಬಡೆ (ರಾಜಶೇ. ೪–೭೬).

[ಓರಗೆ + ಕೊಳ್$_1$]

**ಓರಗೆಯೆನಿಸು** (ಕ್ರಿ). ಸಾಟಿಯೆನಿಸು; ಸಮವೆನಿಸು: ಕಾರಿರುಳೊಳ ಮರ್ದ ತಾರಗೆಗೋರಗೆಯೆನಿಸಿರ್ದುದಿಲ್ಲರಲ್ಕುಡಿಯೊಳಿದೇಂ ಕಾರಣಂ (ರಾಜಶೇ. ೩–೬೩). [ಓರಗೆ + ಎನಿಸು$_1$]

**ಓರಗೆವೂ** (ನಾ). ಬಗೆ ಬಗೆಯ ಬೆರಕೆ ಹೂ: ಚಾರುಲತಾವನಾಂತರ ದೊಳೋರಗೆವೂಗಳನಾಯ್ದು ಕೊಯ್ದಲಂಕಾರಮನಾ ಲತಾಂತತತಿಯಿಂ ಸಮೆದಾಂತ ಬೆಡಂಗು ಕಣ್ಗೊಳಲ್ (ಜಗವಿ. ೧೦–೬೭). [ಓರಗೆ + ಪೂ]

**ಓರಡಿ$_1$** (ನಾ). **೧.** ಇಳಿಜಾರು ; ಇಳುಕಲು ; ಓರೆ. **೨.** ವ್ಯತ್ಯಾಸ ; ಏರುಪೇರು (ಕ).
ಓರಡಿಕಟ್ಟು = ಪೇರುಕಟ್ಟು (ಕ). [?]

**ಓರಡಿ$_2$** (ನಾ). ಒಂದು ಅಡಿ; ಒಂದು ಹೆಜ್ಜೆ : ಓರಡಿಯನಣಂ ನಡೆಯಲು ಮಾಜದೆ (ಪಂಪಭಾ. ೧–೧೪೪) ; ಬಿಂಕಂ ಬೆರಸೊರ್ವಳ್ನೋಡ ಗಳಿಗೆ ಗೋರಡಿಯಂ ವಿಸ್ತರದಿಂದಿಡುತುಂ ಬಂದಳ್ (ಧರ್ಮಾಮೃ. ೬–೧೮೪) ; ದಾಕ್ಷಿಣ್ಯದಲಿ ತಾನೋರಡಿಯನೀರಡಿಮಾಡಿದೆನು ಜಗವ (ನಿಭಾಗ. ೮–೧೮–೩೧) ; ಪೊಡವಿಯೋರಡಿಗೊಯ್ಯೆ ಕುಸಿವ ಪೊಲಡಿಯಿಡುವ ಚಾಣೂರ ಮುಷ್ಟಿಕರು ನಡೆದು ಬಹ ವಹಣಿಯೆ ತದಾಸ್ಥಾನವನು ಮೆಚ್ಚಿಸಿತು (ಸಾಳ್ವಭಾ. ೧೩–೫೬). [ಓರ್$_1$ (< ಒರ್) + ಅಡಿ$_1$]

**ಓರಣ** (ನಾ). **೧.** ಸಾಲು ; ಪಂಕ್ತಿ : ನೆಱೆದೆಚ್ಚೆಚ್ಚೋರಣದೊಳ್ ಚೀಕಿತ್ಸನನಾರುಮಗುರ್ವಿಸೆ ಘಟೋದ್ಭವಂ ಕಱಿದಾರ್ದರ್ (ಪಂಪಭಾ. ೧೧–೬೦) ; ಓರಣದ ತೋರಣದ ಮೆಱೆವ ಮುತ್ತಿನ ಮತ್ತವಾರಣದ ಮಂಟಪದ (ಹಱಾ. ೪–೫) ; ಗಜನಿವಹ ರಥದೋರಣಂ ತೇಜಿಗಳ ರಾಜಿ (ಸೌಂದಪು. ೧೧–೧೦) ; ಓರಣದ ಕಡೆಗಳಲಿ ತಲೆಗಳ ತೋರಣವ ಕಟ್ಟಿದರು (ಕುಮ್ಮಾಭೀ. ೪–೧೮). **೨.** ಅಚ್ಚುಕಟ್ಟು ; ಕ್ರಮ ; ಒಪ್ಪ ; ಶಿಸ್ತು : ಅದಱ ವಲಯದೊಳೋರಣದಿಂ ಕೀಲಿಸಿ ಪಚ್ಚಳಿಸುವ ಪಸುರ್ವಣಿಯೆಂಬ ತೆಱದಿ (ಜಯಕಾ. ೧–೫೫); ಬಡನೆಯ ಕಾಯನೋರಣದಿನಿಪ್ಪೋಲು ಮಾಡಿ ಬೇಯಿಸಿ (ಸೂಪಶಾ. ೪–೧೨) ; ಪಾತ್ರೆಗಳನ್ನು ಓರಣವಾಗಿ ಸಾಲಾಗಿ ಇಟ್ಟು ಆಟವಾಡುತಿದ್ದನು (ಕಾಂಪೂಚ. ೪); ಓರಣವಾಗಿಟ್ಟ ವಸ್ತುಗಳನ್ನೇ ಮತ್ತೆ ಮತ್ತೆ ಎತ್ತಿ ಎತ್ತಿ ಇಡಲಾರಂಭಿಸಿದಳು (ಪರಿಣೀ. ೧೩). [ದೇ. ‖ ತಮಿ. ಒಱುಙ್ಗು]

**ಓರಣಂಗೊಳ್**, ಓರಣಗೊಳ್ (ಕ್ರಿ). ಸಾಲಾಗಿರು ; ಕ್ರಮವಾಗಿರು ; ವ್ಯವಸ್ಥಿತವಾಗು : ಮುತ್ತಿನಿಂ ಕಟ್ಟಿದುವು ಮೇಲ್ಕಟ್ಟು ತೊಳತೊಳಗೆ ಮಕರತೋರಣ ಓರಣಂಗೊಂಡವಲ್ಲಲ್ಲಿ (ಮಾನಸ.ದೇ. ೧೬೪–೧೭) ; ಮಾಣಿನಿಯರುರುಗಳೋರಣಂಗೊಂಡು ಮಣಿಖಚಿತಕಾನಕದ ದಂಡಿಗೆಯ ನುಡಿಸುತ್ತ (ಸೌಂದಪು. ೮–೪) ; ಮತ್ತಮಾಗಳೋರಣಂಗೊಂಡು ಶರಚ್ಛಶಾಂಕ ರುಚಿಯೊಳ್ ಸೆಣಸಲೆಳಸಿ (ಶಬಶಂ. ೧–೭೯ ವ). **ಓರಣಗೊಳ್** : ಕೊಂಕುಗೊಳ್ವ ಪೊಳೆವೋರಣಗೊಂಬ ತೊಟಿಲ್ವ ತೇಲ್ವ (ಚಿಕವಿ.೪–೧೨೩). [ಓರಣ + ಕೊಳ್$_1$]

**ಓರಣಂಗೊಳಿಸು**, ಓರಣಗೊಳಿಸು (ಕ್ರಿ). ಅಂದವಾಗಿ ಜೋಡಿಸು : ಕಟಾವಳಿಗಳಂ ಬಗಿಬಗಿದು ಪುಡಿಗತ್ತುರಿಯನೆಯ್ದೆ ತಳಿದೋರಣಂಗೊಳಿಸಿ ಕಮ್ಮಲರ್ಗಳಂ ಮುಡಿಸಿ (ಪದ್ಮರಾ. ೩–೪೪) ; ರುದ್ರಾಕ್ಷೆಯಂ ಚಾರುತರದ ಧಾರೆಗಳುಳ್ಳವಿಪ್ಪತ್ತೆಂಟಂ ಚೆಲ್ವಿನಿಂದೋರಣಂಗೊಳಿಸಿ (ಸೌಂದಪು. ೬–೩೪). **ಓರಣಗೊಳಿಸು** : ಅವರು ನಿನ್ನಂತೆಯೇ ಕೂದಲು ಓರಣಗೊಳಿಸಿಕೊಂಡಿರುತ್ತಾರೆ (ಹೇಮಂತ. ೫೫). [ಓರಣಂಗೊಳ್ + –ಇಸು$_3$]

**ಓರಣಂಬಿಡಿ** (ಕ್ರಿ). = ಓರಣಂಗೊಳ್ : ಸಂಗೀತಮಂ ಪಾಡಿ ಮೋಹಿಪ ಗರುಡ ಗಂಧರ್ವ ಚಾರಣರಿಂದೋರಣಂಬಿಡಿದೋರಂತೆ ನಿಂದ ವೀರಪ್ರಮಥರಿಂ (ಶಬಶಂ. ೧–೬೯ ವ). [ಓರಣ + ಪಿಡಿ$_1$]

**ಓರಣಗಾತಿ** (ನಾ). ಓರಣವುಳ್ಳವಳು ; ಅಚ್ಚುಕಟ್ಟಿನವಳು : ಎಲೆಬಳ್ಳಿಗಳು ಓರಣಗಾತಿಯರಂತೆ ಧೋರಣದಿಂದ ನಿಂತಿದ್ದವು (ಸಮಜೀ. ೮೭). [ಓರಣ + –ಗಾರ (< –ಕಾಱ) + –ತಿ$_1$ (< –ಇತ್ತಿ)]

**ಓರಣಗೆಡು** (ಕ್ರಿ). ಸಾಲು ಮುರಿದು ಹೋಗು ; ಅವ್ಯವಸ್ಥಿತವಾಗು : ಉಳಿದುದಾಹವ ಸೇನೆ ರಿಪುಮಂಡಳಿಕರೋರಣಗೆಡಲು ರಣಮಂಡಲದ ಪದ್ಮವ್ಯೂಹದಲಿ ಕೆಣಕಿದನು ಕಾಳಿಗವ (ಕುಮ್ಮಾದ್ರೋ. ೧೦–೩೯). [ಓರಣ + ಕೆಡು]

**ಓರಣಗೊಳ್** ‘ಓರಣಂಗೊಳ್’ ನೋ.

**ಓರಣಗೊಳಿಸು** ‘ಓರಣಂಗೊಳಿಸು’ ನೋ.

**ಓರಣಿಕೆ**, ಓರಣಿಗೆ (ನಾ). ಸಾಲಾಗಿರುವಿಕೆ ; ಕ್ರಮವಾಗಿರುವಿಕೆ : ಕಣೆಯ ಕಲ್ಲೊರಲೆ ಡೆಂಕಣಿಯಾಗೆಯುಂ ಸಾರಮಾರಿಯ ಪೊಯ್ಲೋರಣಿಕೆಗೆಡೆಯುಂ ಕೆತ್ತಿಸಿದ ಗಾಳದೊಳೆತ್ತಿದ ಪಾಪೆಯಂತೆಬಲೆಯುಂ (ಅನಂಪು. ೧೧–೮೪ ವ). **ಓರಣಿಗೆ** : ಭೇರಿಶಂಖಮೃದಂಗ ರಣಕಹಳಾರವದ ರಥಸದಲಿ ಮೇಲ್ಪಗದೋರಣಿ[ಪಾ. ಠಾಂ. ಕೆ]ಗೆ ಪೈಸರಿಸಿ (ತೊರರಾ. ೫–೬–೭). [ಓರಣ + –ಇಕೆ]

**ಓರಣಿಗೆ** ‘ಓರಣಿಕೆ’ ನೋ.

**ಓರಣಿಸು** (ಕ್ರಿ). ಸಾಲುಗೊಳ್ಳು ; ಓರಣವಾಗಿರು : ವಿಮಳ ಸ್ವರ್ಗಸುಖ ಸಾಕಾರಿ ಬರುತಿದೆ ಸಾರಿ ನೀವೆಂದೋರಣಿಸಿ ಕೈವಾರಿಸುತ ನಡೆದುದು ಸತೀ ನಿವಹ (ಜೀವಂಚ. ೮–೨೭) ; ಹಿಂದಾರವರು ಬಳಿವಳಿಯಲೊಗ್ಗಿನಲೋರಣಿಸಿ ಮುಂಚುವರು (ಕುಮ್ಮಾಕ. ೧೪–೯) ; ಉಭಯಪಕ್ಷದೊಳೋರಣಿಸಿದ ವಿದ್ವತ್ಸಭೆಗೆ ಸಪ್ತಾಂಗವ ಕೊಟ್ಟು (ಮೋಹತ. ೨೦–೪೯) ; ಓರಣಿಸಿದಳಕಾವಳಿಯ ಪೆಱೆನೊಸಲ ಕತ್ತುರಿಯ (ಜೈಮಿಭಾ. ೨–೪೮). [ಓರಣ + –ಇಸು$_3$]

**ಓರನ್ನ** (ನಾ). ಒಂದೇ ತೆರ ; ಸರಿ ; ಸಾಟಿ ; ಸಮಾನ : ಆತನ ಮಗಂ ಪ್ರತಾಪದಿಂ ತೇಜದಿಂದಾದಿತ್ಯನೊಳೋರನ್ನನಪ್ಪೊಂ (ವಡ್ಡಾರಾ. ೭೫–೧೧) ; ಎನಗೆರಟ್ಟಂಡಮುಮೋರನ್ನರೆ ಬಲೆಂತು ಕಾದುವೆಂ (ಪಂಪಭಾ. ೧೦–೧೨) ; ನೀರೂಡಲಿಕ್ಕಿದಂಗಜನ ಕೂರಲಗಿನೊಳೋರನ್ನಮಪ್ಪಳ್ (ವರ್ಧಪು. ೪–೫೪ ವ); ಭಾರತಿಗೋರನ್ನಳಪ್ಪ ನಾರಿಯನೊರ್ವಳಂ (ಗಿರಿಕ. ೩–೯೮ ವ). [ಓರ್$_1$ (< ಒರ್) + ಅನ್ನ$_1$]

**ಓರನ್ನೆ** (ನಾ). ಸಮಾನಳಾದವಳು : ಶ್ರೀದೇವತೆಯದೊಳೋರನ್ನೆಯರಂ . . . ಶುಭಮುಹೂರ್ತದೊಳ್ ನೋಡಿ ಮುದ್ರಿಕಾಪ್ರದಾನಂ ಮಾಡಿ (ಸುಕುಮಾ. ೧೦–೬೫ ವ). [ಓರನ್ನ + –ಎ$_2$]

**ಓರಾಗು** (ಕ್ರಿ). ಪಕ್ಕಕ್ಕೆ ಸರಿ ; ಓರೆಯಾಗು ; ದಾರಿ ಬಿಡು : ನಡೆನಡೆ, ಓರಾಗು ಓರಾಗು ತಡೆ ತಡೆ . . . ಎಂದು ನುಡಿಯುವ ಕಾಲಾಳುಗಳ ಧ್ವನಿಗಳು (ಕೃವಾಕ. ೭೫) ; ಓರಾಗು ಸಾರುವೆವೆನ್ನುವರು (ವಿಸೀಗೀ. ೧೪). [ಓರೆ$_1$ + ಆಗು$_1$]

**ಓರಾಯ$_1$** (ನಾ). ಸಾಲು ; ಪಂಕ್ತಿ : ಎತ್ತಿದ ಮೇಘಡಂಬರಂಗಳ ಮುಂದೆ ಪರಿವಪಾಳಿಕೇತನಂಗಳ ಪೋರಾಯದೊಬ್ಬರಂಗಳ ಕೂಡಿ ನಡೆವ ಕುಂತಂಗಳ (ಮಹಾನೀ. ೧೨–೯ ವ). [< ಓಯರ ?]

**ಓರಾಯ$_2$** (ನಾ). ಒಂದೇ ಅಳತೆ, —ಪ್ರಮಾಣ : ಭುಜದ್ವಂದ್ವದೊಳ್ ಕುಡಿಮಿಂಚಂ ಕೊನರಿಪ್ಪ ವಜ್ರವಳಯಂ ವಕ್ಷೋಗ್ರದೊಳ್ ಶೋಭೆಯಂ ಪಡೆದೋರಾಯದ ಮುತ್ತಿನೆಕ್ಕಸರಂ (ಮಹಾನೀ. ೬–೪೨). [ಓರ್$_1$ (< ಒರ್) + ಆಯ$_1$]

**ಓರಾಸನ** (ನಾ). ಒಂದೇ ಆಸನ ; ಏಕಪೀಠ : ಸುರೇಂದ್ರನೊಳೋರಾಸನಮಿರ್ಪಂ (ಶಾಂತಿಪು. ೫–೧೫೩) ; ಇಂದ್ರನೊಳೋರಾಸನ [ಜಾ]ಣನೆನಿಪ ಪಾಣ್ಡ್ಯನ [ಕುಲ]ಮಂ ಬೇರಿನ್ದ ಕಿಟ್ಟಿ[ಚೋ]ಱನ ಬೇರಂ ಬೇ[ರಿನ್ದೆ ಕಿ]ಟ್ಟಿನ್ ಆನೆವೆಡಂಗಂ (ಎಇ. XIX, ೨೮೯–೧೮ ; 963) ; ಅಚ್ಯುತೇಂದ್ರನೊಳೋರಾಸನಮಿರ್ದಂ (ಸುಕುಮಾ. ೯–೩೯). [ಓರ್$_1$ (< ಒರ್) + ಆಸನ]

**ಓರಾಳ್ಕೆ** (ನಾ). ಒಂದೇ ಆಳಿಕೆ, —ಆಡಳಿತ : ಮನೆವೀಡಿಲ್ಲಾದದು ಓರಾಟ್ಕೆ[ಳ್ಕೆ] ಒಮ್ಮೆ (ಎಇ. XIV, ೧೯೦–೧೨ ; 725). [ಓರ್$_1$ (< ಒರ್) + ಆಳ್ಕೆ]

**ಓರಿ** ‘ಓವರಿ’ ನೋ.

**ಓರಿಗಾಡು** (ಕ್ರಿ). ಜೊತೆಗೆ ಆಡು ; ಜೊತೆಯಾಗಿ ಆಡು : ತಂದೆಮಗಳಿರಲಿ ಮೇಣಣ್ಣತಂಗಿಯುಮಿರಲಿಯೊಂದೆ ದಾರಿಯ ಹಿಡಿದು ಕೂಡಿಪೋದಡೆ ಬಿನದದಿಂದೋರಿಗಾಡಿದಡೆ . . . ಸಂದೇಹಗೊಂಬುವರ್ ಮನುಜರ್ (ಮಲ್ಲಚ. ೬–೮). [ಓರಿಗೆ (< ಓರಗೆ) + ಆಡು$_1$]

**ಓರಿಗೆ** 'ಓರಗೆ' ನೋ.

**ಓರಿಚೇಳು** (ನಾ). "ಸಣ್ಣ ಕೆಂಪು ಚೇಳು" (ರಮಾಕಾಂ. ೧೩೦). [?]

**ಓರಿಡು** (ಕ್ರಿ). ಗೋಡೆಗೆ ಕೆಂಪು ಪಟ್ಟೆ ಬಳಿ (ಸ್ಯಾಂಡರ್).
[ಓರ್$_0$ + ಇಡು$_1$]

**ಓರಿರ್ಮೆ** (ಅ). ಒಂದೆರಡು ಸಲ : (ಓರಿರ್ಮೆ ಯಾತಾಯಾತವೋಗಿ) (ಮಂತ್ರಶ. ೧೪೦–೧೦). [ಓರ್$_1$ (< ಒರ್) + ಇರ್ಮೆ]

**ಓರು$_1$** (ಕ್ರಿ). ಆಲೋಚಿಸು ; ಚಿಂತಿಸು ; ವಿಚಾರಿಸು ; ಯೋಚಿಸು (ಕಿ).
[ದೇ. ‖ ತಮಿ. ಓರ್ ; ಮಲ. ಓರ್ಕ ; ತೆಲು. ರೋಯು, ಋರೋಯು]

**ಓರು$_2$** 'ಓರ್$_2$' ನೋ.

**ಓರುವಾಯಿ** (ನಾ). ಒಂದು ಊರಿನ ಹೆಸರು : ಘೂತ ಪುಷ್ಪವನದಿಂ ವನಧಿಂ ತೊಳಪ ಕಲಿದೇವ ನಿಳಯದ ಬೆಳಕೆದಿನೀಯೋರುವಾಯಿ ಸೊಗಯಿಸುತಿರ್ಕ್ಕುಂ (ಸೌಇಇ. IX–i, ೩೨೨–೨೧ ; 1195). [?]

**ಓರೆ$_1$** (ನಾ). ೧. ಇಳುಕಲು; ಇಳಿಜಾರು; ಮಗ್ಗುಲು : ಬಡಗಣ ಶೃಂಗ ಪರ್ವತದೋರೆಯಲಿ (ಕುವ್ಯಾಸ. ३–೬೧) ; ಉರಿಗಳಿಂದೋರೆಯಿಂ [ಪಾಠಾಂ. ಜರಿಗಳಿಂದುರಿಗಳಿಂ] ಫೋರೆಯಿಂದಿಡಿದ ಕಮ್ಮರಿಗಳಿಂ . . . ಆ ಪಥಂ ಬೆದಱಿಸುವುದು (ಚಬಪು. ೫೬–೨೩) ; ತಾನು ಸ್ವತಃ ಗುಡ್ಡದ ಓರೆಯನ್ನು ಆಗೆಯಲಾರಂಭಿಸಿದನು (ಅಕ್ಬರ. ೫) ; ಗುಡ್ಡದ ಓರೆಯ ಮೇಲಿಂದ ಹಾಡೊಂದು ಇವನ ಕಿವಿಯ ಮೇಲೆ ಬೀಳುವುದು (ತುಂಗಭ. ೬೮). ೨. ವ್ಯತ್ಯಾಸ : ನೆನಹಿನ ಗಡಣೆಯೆಂತಂತೋರೆಯಿಲ್ಲದೆ ನುಡಿವ ಭಾಷೆ ನುಡಿಗಳಹಗೆ ತಾಂ ನಡೆಸುವುದು ಭಾಷೆ (ಬಸಪು. ೬–೨) ; ಜ್ಞಾನ ನಿಷ್ಠೆಯೊಳೋರೆಯುಂಟೇ (ಕುವ್ಯಾಸ. ೧೩–೪೧). ೩. ಮೂಲೆ ; ತುದಿ. ೪. ಅಂಚು ; ಪಕ್ಕ ; ಬದಿ : ಭೂರಿಬಲ ಹಬ್ಬಿದುದು ದಿಕ್ಕುಗಳೋರೆ ಹಿಗ್ಗಿದವು (ಕುವ್ಯಾಭೀ. ೮–೧೧) ; ಹಾರನಹಳ್ಳಿಯ ಓರೇಲಿ ಇರುವೋನೇ ನಾರಿಯ ಮಗನೇ ಬೆನವಣ್ಣ (ಜಗೀತೆ. ೪). ೫. ವಕ್ರತೆ ; ಡೊಂಕು : ವೀರಸಿರಿ ನಿಮಗೆಂದು ವಂದಿಗಳೋರೆ ಕಟಕಿಯಲೆನ್ನರೇ ಕೈವಾರಿಸುವ ಕವಿನಿಕರ ನಾಚದೆ (ಕುವ್ಯಾಗ. ೧–೧೯) ; ನಾರಿಯಂ ಕೀಸಿ ನರಮಂ ಸೀೞಿ ಹೆದೆಗಟ್ಟು ವೋರೆಯಂ ತಿರ್ದು ಒಳ್ಳಿತುಮಾಡಿ ಬಿಲ್ಲನೊರೆ (ಸಮ್ಯಕಾ. ೧೦–೩೨). ೬. ವಕ್ರಸ್ವಭಾವದವನು : ಕಳ್ಳರುಗಳೋರೆಗಳು . . . ಕೆಡಿಕಿಗಳನಿಷ್ಟಪುಷ್ಟಿಗಳು (ಬಸಪು. ೪೦–೫೮).
[ದೇ. ‖ ತಮಿ. ಓರ, ವಾರ ; ತುಳು. ಕೊಡ. ಓರೆ ; ತೆಲು. ಓರ]

**ಓರೆ$_2$** (ನಾ). ಸಮಾನ ; ಸಮವಯಸ್ಕ ; ಸರಿಜೋಡಿ : ಅಂತು ತನ್ನೋರೆಗಳ್ವೆರಸು ದುಘುಮ್ಮಿಱಿದೋಲಾಡುವಲ್ಲಿ (ಶಾಂತಿಪು. ೮–೨೮ ವ); ಸಿರಿಯು ಕುಲಸತಿ ಸುತನು ಕಮಲಜ ಓರೆ[ಪಾಠಾಂ. ರಿ]ಯ ಸೊಸೆ ಶಾರದೆ ಸಹೋದರಿ ಗಿರಿಜೆ (ಹರಿಸಾ. ೨೫). [< ಓರಗೆ]

**ಓರೆಂಜಲ್** (ನಾ). ಒಂದೇ ಎಲೆಯಲ್ಲಿ ಊಟಮಾಡುವುದು ; ಸಹಭೋಜನ : ಓರೆಂಜಲ್ಗೊರ್ವಂಗಿಗೆ ವಾರದ ಖಳರೊಡನೆ ಬೆರಸಿ ಮೇಳಂಗೊಂಡಂದಾರುಂ ಲಘುವಪ್ಪರ್ (ಕಾವ್ಯಾವ. ೨೫೯) ; ಒರ್ಕಲಿ, ಓರೆಂಜಲ ನಂಟಂ, ಓರಂದದ ಮಾನಸಂ (ಭಾಷಾಭೂ. ೧೫೩ ಉದಾ) ; ಓರೆಂಜಲ್, ಈರ್ಛೈದು, ಈರೊತ್ತೆ (ಶಮದ. ೧೮೦ ಪ್ರಯೋ).
[ಓರ್$_1$ (< ಒರ್) + ಎಂಜಲ್]

**ಓರೆಕಿವಿ** (ನಾ). ಬಾಗಿದ ಕಿವಿ ; ಡೊಂಕಾದ ಕಿವಿ (ಕಿ).
[ಓರೆ$_1$ + ಕಿವಿ]

**ಓರೆಕೆಯ್** (ನಾ). ಬಾಗಿದ ಕೈ ; ಡೊಂಕಾದ ಕೈ (ಕಿ).
[ಓರೆ$_1$ + ಕೆಯ್$_2$]

**ಓರೆಕೋರೆ** (ನಾ). ೧. ಹೆಚ್ಚುಕಡಮೆ ; ಲೋಪದೋಷ : ಆರು ಮಱಸಬಹುದರಸನೆಲ್ಲರ ಚಿತ್ತದೋರೆಕೋರೆಯ ಬಲ್ಲನು (ಭರಚ. ೮–೭) ; ವಿಮಳ ದರ್ಪಣವ ನಿಟ್ಟಿಸಿ ತಮ್ಮ ಕೈಮುಟ್ಟಿ ಸಮಱಿದರೋರೆಕೋರೆಗ್ಳಳ (ಭರಚ. ೩೧–೪೬) ; ಜೀವನದ ಏರುಪೇರುಗಳು, ಓರೆಕೋರೆಗಳು ತುಂಬ ಬೇಕು (ಅಲೆಮ. ೪೫). ೨. ವಕ್ರತೆ ; ಕೊಂಕು : ಬಹಳಪಾಲು ಜನರ ಓರೆಕೋರೆಯ ನೋಟ, ವಕ್ರದ ನಡೆ ನುಡಿ . . . ತನಗೆ ಭಾಸವಾಗುತ್ತಿತ್ತು (ರಂಗನಾ. ೧೯). [ಓರೆ$_1$ + ಕೋರೆ]

**ಓರೆಗಟ್ಟು** (ನಾ). ಓರೆಯಾಗಿ ಪೇಟ ಅಥವಾ ರುಮಾಲನ್ನು ಕಟ್ಟುವುದು (ಕಿ). [ಓರೆ$_1$ + ಕಟ್ಟು$_2$]

**ಓರೆಗಣ್ಣು** (ನಾ). ೧. ಕಣ್ಣಿನ ಕೊನೆ ; ಕಡೆಗಣ್ಣು ; ಕಟಾಕ್ಷ ; ಅಪಾಂಗ : ಓರೆಗಣ್ಣಲಿ ನೊಂದು ನೋಡುವ ಸೂರಿಯನ ಸುತಗಭಯಕರ ಸರಸೀರುಹವ ತೋಱಿಸುತ (ತೊರರಾ. ೪–೪–೨೯) ; ಸಾರಥಿಯ ಕುಬ್ಜಾವತಾರವನೋರೆಗಣ್ಣನೊಳೀಕ್ಷಿಸುತ ದಮಯಂತಿ (ನಳಚ. ೮–೪೩) ; ನೋಡುವಳೊಡನೋರೆಗಣ್ಣಿಂದ ಭಾವನ ಕೂಡದ್ದವೋಱಿದೆಗೆವಳು (ಭರಚ. ೯–೬೮). ೨. ಮೆಳ್ಳೆಗಣ್ಣು (ಕಿ). [ಓರೆ$_1$ + ಕಣ್ಣು (< ಕಣ್)]

**ಓರೆಗೆಡೆ** (ಕ್ರಿ). ೧. ಕೊಂಕು ಮಾತಾಡು ; ಗಳಹು : ಉಳಿದ ದ್ರುಪದ ವಿರಾಟರೆಂಬೀ ಹುಳುಗಳವರಂತೋರೆಗೆಡೆದರು (ಕುವ್ಯಾಉ. ೨–೪೦); ವೀರರುದ್ರನು ಜಗವ ನುಂಗುವನೋರೆಗೆಡೆಯದಿರಂಬ ಸುರಿ ಸುರಿ (ಕುವ್ಯಾದ್ರೋ. ೧೦–೫೨). ೨. ಪಕ್ಕಕ್ಕೆ ಬೀಳು : ಹೂಮಾಲೆ ವಾರಣೇಂದ್ರನ ಮೇಲೆ ಬಿದ್ದಂತೋರೆಗೆಡೆದುರುಳಿತ್ತು ಧರಣಿಗೆ (ನಿಭಾಗ. ೧೦–೬೯–೩೪).
[ಓರೆ$_1$ + ಕೆಡೆ$_1$]

**ಓರೆಗೈ, ಓರ್ಗೈ** (ಕ್ರಿ). ಓರೆಮಾಡು (?) : ತೋಱು ಜೀವನವೆಲ್ಲಿ ಶಿರಮುಂಡೋರೆಗೈದಾಗೆನ್ನ ಮಾಹತ್ತೋಱುದಲ್ಲದೆ ಬಿಡಲು ಹೆಣನಾತೊಡಗೆ ಜೀವನವೆ (ಬಜ್ಜಪು. ೬೦–೪೫). **ಓರ್ಗೈ** : ಲಿಂಗವಿರದರ ಕಾಣುತಲಿ ವದನಂಗಳೋರ್ಗೈಯದೀಯ ಭ್ರಷ್ಟನು ಜಂಗಮರ ಸಮುದಾಯ ಕೈದಿದ (ಬಜ್ಜಪು. ೯೧–೩). [ಓರೆ$_1$ + ಗೈ (< ಕೆಯ್$_1$)]

**ಓರೆಗೊರಳು** (ನಾ). ಬಾಗಿದ ಕೊರಳು ; ಪಕ್ಕಕ್ಕೆ ತಿರುಗಿದ ಕೊರಳು : ಎಲೆ ಮಿಡುಕದಾಸ್ಥಾನ ವೀಳೆಯದೆಲೆಯ ಮಡಿಸುವ ರಭಸವಿಲ್ಲೊಳಗೊಳಗೆ ಸನ್ನೆಗಳೋರೆಗೊರಳುಗಳೌಡುಗಚ್ಚುಗಳ (ಕುವ್ಯಾಕ. ೧–೨೦) ; ಉದುರಿದ ಬಿಲುಸರಳ ಹೆಗಲೋರೆಗೊರ[ಪಾಠಾಂ. ಗರು]ಳರೆಮುಚ್ಚುಗಣ್ಣುಗಳ ತಳಿತ ರಕ್ತಾಂಕುರದ ಬಳಕೆಗೆ (ಕುವ್ಯಾಶ. ೩–೩೯).
[ಓರೆ$_1$ + ಕೊರಳು (< ಕೊರಲ್)]

**ಓರೆಚಪ್ಪರ** (ನಾ). ೧. ಒಂದು ಮಗ್ಗುಲಿಗೆ ಬಾಗಿರುವ ಚಪ್ಪರ ; ಇಳಿಜಾರಾದ ಚಪ್ಪರ. ೨. ಹಟ್ಟಿ ಅಥವಾ ರೊಪ್ಪದ ಚಪ್ಪರ (ಕಿ).
[ಓರೆ$_1$ + ಚಪ್ಪರ]

**ಓರೆಡೆ$_1$** (ನಾ). ಒಂದು ಸ್ಥಳ ; ಒಂದು ಎಡೆ : ನಿಂದು ನಿಂದೋರೆಡೆ [ಪಾಠಾಂ. ರಡಿ]ಗೋರೊರ್ಮೆ ಲಿಸುತ್ತುಂ ನೆರವಿಯುಲಿಪುಮಂ (ಜಗವಿ. ೧೫–೭೯). [ಓರ್$_1$ (< ಒರ್) + ಎಡೆ$_3$]

**ಓರೆಡ್ಡೆ$_2$** (ನಾ). ಒಂದು ಸಲ ಬಡಿಸುವುದು, —ಬಡಿಸುವಷ್ಟು : ಓರ[ರೆ]ಡೆ ಮೂರಡೆಯಱಿದೆಡೆಮಾಡುವ ನಾರಿಯರೆಡೆಮಾಡುತಿರಲು ಭೂರಮಣನು ರಮಣಿಯರೆಲ್ಲರುಂಡರು ಓರಂತೆ ತೃಪ್ತಿವಡೆದರು (ಭರಚ. ೪–೧೦೭). 'ಮೂರೆಡೆ' ಪರಾ. [ಓರ್$_1$ (< ಒರ್) + ಎಡೆ$_4$]

**ಓರೆದುಱುಬು** (ನಾ). ಓರೆಯಾಗಿ ಕಟ್ಟಿದ ತುರುಬು : ಓರೆದುಱುಬಂ ತೆಗೆದು ಜಡೆಗಟ್ಟಿ ಪೊಱಮಟ್ಟು ಕೇರಿಗೊಂಡೈದಿದಳ್ (ಜೈಮಿಭಾ. ೨೬–೯). [ಓರೆ$_1$ + ತುಱುಬು$_4$ (< ತುಱುಂಬು$_2$)]

**ಓರೆನುಡಿ** (ನಾ). ಕೊಂಕು ಮಾತು; ವಕ್ರೋಕ್ತಿ : ಹೋರೆಗಳ ಹೊಳ್ಳಿಱಿತ ಜೋಯಿಸರಾರುಭಟೆಗಳ ಬಿಂಕ ಕೋವಿದರೋರೆನುಡಿ ತಾ ಜಾಳುಜಪವೀ ನೃಪರ ಬೋಳವಿಸೆ (ಸಂಭಪ. ೨೯–೫). [ಓರೆ$_1$ + ನುಡಿ$_2$]

**ಓರೆನೋಟ** (ನಾ). ಕುಡಿನೋಟ; ಕಡೆಗಣ್ಣನೋಟ : ಬಿನ್ನಣದಿ ಮಿಗೆವೋರೆನೋಟದ ಕಣ್ಣಿನಿಂದೀಕ್ಷಿಸಿದಳು (ನಳಚ. ೩–೬೦); ಆ ವೇಳೆಯಲ್ಲಿ ಓರೆನೋಟದಿಂದ ನೋಡುವ ಕಾದಂಬರಿಯ ಕರಿಯಾಲಿಗಳು ಬಲುನಿಡಿದಾದ ಕಡೆಗಣ್ಣಿನ ಬಳಿಗೆ ನಡೆದು (ವಚಕಾ. ೫೭); ನಿನ್ನೋರೆನೋಟಕೆ ಹಗೆ ತಾನೆ ಕೈಸೆರೆ ಯುದ್ಧವಿಲ್ಲದೆ ಗೆಲುವ ಧೀರೆ (ಇಂಚಾಪ. ೮೯–೩೧). [ಓರೆ$_1$ + ನೋಟ]

**ಓರೆಪೀರ** 'ಓರೆಪೀರೆ' ನೋ.

**ಓರೆಪೀರೆ, ಓರೆಪೀರ** (ಗು). "ಅಂಕುಡೊಂಕು, ನೇರವಲ್ಲದ" (ಸಿಂಕೋ. ೮೪). **ಓರೆಪೀರ** : (ರಮಾಕಾಂ. ೧೩೦). [?]

**ಓರೆಪೋರೆ** (ನಾ). ೧. ಹೆಚ್ಚುಕಡಮೆ; ಲೋಪದೋಷ : ಪಾರಲೌಕಿಕದುಳಿವನೈಹಿಕದೋರೆಪೋರೆಯನಿಂದು ಬಲ್ಲವರಾರು (ಕುವ್ಯಾಸ. ೧೨–೬೪); ಕೊಯ್ದಳವನಿಪಶಿರೋಮಣಿಯ ಮಸ್ತಕವನೆರಡಾಗಿ ಸರಿಸದಿಂದೋರೆಪೋರೆಗಳಿಲ್ಲದೆ (ಜೈಮಿಭಾ. ೨೬–೬೨); ಪದಿಮೂಱು ವರುಷಮೋರೆಪೋರೆಗಳಿಲ್ಲದೆಯನುಭವಿಸಿದರು (ಲಕ್ಷ್ಮೀಭಾ. ೪–೪–೩೭); ಪರರಾಷ್ಟ್ರದಿಂ ಬಂದ ದೊರೆಗಳ ಮನೋಭಾವವಱಿತೋರೆಪೋರೆ ಸಂಜನಿಸದಂತುಪಚಾರವೆರಸಿ (ವೆಂಕಾರಾ. ೧–೮–೧೦). ೨. ವಕ್ರತೆ; ಕೊಂಕು : ಓರೆಪೋರೆಯೊಳಾಡಿ ಧರ್ಮದ ಧಾರಣೆಯ ಘಟ್ಟಿಸುವದಿದು ಗಂಭೀರರಿಗೆ ಗರುವಾಯಿಯೇ (ಕುವ್ಯಾಸ. ೧೪–೮೪); ಕೌರವನು ಕರ್ಣಾದಿಗಳ ನುಡಿಯೋರೆಪೋರೆಯೊ [ಪಾಠಾಂ. ಹದರಿನೊ]ಳವಗಡಿಸಿ (ಕುವ್ಯಾವಿ. ೮–೭೦). [ಓರೆ$_1$ + ಪೋರೆ]

**ಓರೆಮಾಡು** (ಕ್ರಿ). ಮರೆಮಾಡು; ಮುಚ್ಚು : ಬೀಡು ಬಿಟ್ಟೆಡೆಗಿವರೇಕೆಂದು ನಾನೋರೆಮಾಡಿ ಮನೆಯೊಳಿಟ್ಟು ಬಂದೆ (ಭರಚ. ೩೯–೧೩೧); ಬಾಗಿಲನ್ನು ತೆರೆದು ಓರೆಮಾಡಿಕೊಂಡು ಒತ್ತಟ್ಟು ಮಲಗಿದಳು (ದೇವೀಚಾ. ೪೧); ಒಳಹೋಗಿ ನಿಂತು ಬಾಗಿಲು ಓರೆಮಾಡಿಕೊಂಡಳು (ಒಡ್ಡಿಉ. ೪). [ಓರೆ$_1$ + ಮಾಡು$_1$]

**ಓರೆಮಾತು** (ನಾ). ನೇರವಲ್ಲದ ಮಾತು; ಕೊಂಕು ಮಾತು : ಏನಿದು ಓರೆಮಾತನಾಡುತ್ತಿರುವಿರಿ? ಹೌದೆಂದಾದರೆ ಒಪ್ಪಿಕೊಳ್ಳಿ; ಇಲ್ಲವಾದರೆ ಅಲ್ಲವೆನ್ನಬಾರದೇ? (ಕುರುಕಾ. ೪೮). [ಓರೆ$_1$ + ಮಾತು$_1$]

**ಓರೆಮೂಗು** (ನಾ). ಸೊಟ್ಟ ಮೂಗು; ಡೊಂಕು ಮೂಗು; ಬಾಗಿದ ಮೂಗು (ಕಿ). [ಓರೆ$_1$ + ಮೂಗು]

**ಓರೆಮೈ** (ನಾ). ಪಕ್ಕಕ್ಕೆ ಹೊರಳಿದ ಮೈ : ನರಸಿಂಗರಾಯ ಹೊರಳಿ ನೋಡುವಾಗ ಇವರು ಓರೆಮೈಯಾಗಿ ಬಾವಿಯ ಕಡೆಗೆ ತಿರುಗಿದ್ದರು (ನಿರಾಭ. ೧೦೫). [ಓರೆ$_1$ + ಮೈ (< ಮೆಯ್)]

**ಓರೆಮೋರೆ** (ನಾ). ಸೊಟ್ಟಮೋರೆ; ಒಂದು ಕಡೆಗೆ ತಿರುಗಿದ ಮುಖ (ಕಿ). [ಓರೆ$_1$ + ಮೋರೆ (< ಮೋಱೆ)]

**ಓರೆಯಾಗು** (ಕ್ರಿ). ೧. ವಕ್ರವಾಗು; ಕೊಂಕಿರು; ಭೂಭ್ರಮಣದ ಅಕ್ಷವು ... ಓರೆಯಾಗಿರುವುದರಿಂದ, ಕ್ರಾಂತಿವೃತ್ತವು ವಿಷುವದ್ವೃತ್ತಕೆ ... ಓರೆಯಾಗಿದೆ (ನಕ್ಷತ್ರ. ೪೦). ೨. ಪಕ್ಕಕ್ಕೆ ಸರಿ; ಅರುಗಾಗು : ಕಷ್ಟಗಳು ಓರೆಯಾಗುತ್ತ ಬಂದುವು (ಆರ್ಯಕೀ. ೭೧). [ಓರೆ$_1$ + ಆಗು$_1$]

**ಓರೆಯಿಸು, ಓರೈಸು** (ಕ್ರಿ). ೧. ಓರೆಮಾಡು; ಪಕ್ಕಕ್ಕೆ ಸರಿಸು : ಓರೆಯಿಸಿದಂ; ತೇರಯಿಸಿದಂ; ತೆಲ್ಲಯಿಸಿದಂ (ಶಮದ. ೫೪ ಪ್ರಯೋ). **ಓರೈಸು** : ೨. (?) : ತಾನಳಿದೊಡಮುದತ್ಯಂತ ದಯೆಯಿಂ ಜೀವನವನಿತ್ತುಂ ತಳುವದೋರೈಪ ಶಕ್ರಂ ನಮ್ಮ ರಕ್ಷಿಸುಗೆ (ವಿವೇಭ. ೧–೧೧). [ಓರೆ$_1$ + –ಇಸು$_3$]

**ಓರೆಲೆದಾವರೆ** (ನಾ). ಒಂದು ಮೂಲಿಕೆ : "ಪದ್ಮಾ – ಗಂಟುಭಾರಂಗಿ, ಓರೆಲೆದಾವರೆ" (ಓಷಧಿ. ೯೦). [?]

**ಓರೆವರಿ** (ಕ್ರಿ). ಓರೆಯಾಗು; ಪಕ್ಕಕ್ಕೆ ಸರಿ; ಅರುಗಾಗು : ಸುರಪದಿಶಾಪತಿ ಬಿನದದಿ ಪೊಡೆವವಸರದೊಳಗಾ ಕೈಯೋರೆವರಿಯೆ ನೆಗೆವರುಣಮಣಿಯ ಕಂತುಕಮೆನೆ (ಜಯಕಾ. ೧೪–೫). [ಓರೆ$_1$ + ಪರಿ$_2$]

**ಓರೆವೊಯ್ಲು** (ನಾ). ಅಡ್ಡಹೊಡೆತ; ಓರೆಯಾಗಿ ಬೀಳುವ ಪೆಟ್ಟು: ಜಾಱುವೊಯ್ಲಡವೊಯ್ಲು ನಿಡುವೊಯ್ಲೋರೆವೊಯ್ಲುಪ್ಪರದಹೊಯ್ಲುಬ್ಬೇಱುವೊಯ್ಲಿನಲೊದಗಿದರು ಭಟರು (ತೊರರಾ. ೪–೪–೨೪). [ಓರೆ$_1$+ ಪೊಯ್ಲು]

**ಓರೆವೋಗು** (ಕ್ರಿ). ೧. ಒಂದು ಮಗ್ಗುಲಿಗೆ ಬಾಗು, —ಜೋಲು : ಅಬ್ದುವಿಳೆಯೊಳ್ ನಿಧಿಗಳ್ ಕರುಮಾಡವೋರೆವೋಯ್ತು (ಶಾಂತಿಪು. ೩–೧೦೪); ಇಂಬಾಗಿರೆಯುಂ ಮಕುಟಮದಂ ಬಿಣ್ಪನೊಳೋರೆವೋದೊಡೋಸರಿಪವೊಲ್ ... ಕೆರಮನುತ್ತಮಾಂಗಕ್ಕೊಯ್ದಂ (ಶಾಂತಿಪು. ೫–೧೦೨); ಮಹಾರಥರಚ್ಚು ಸಿಡಿಲ್ದುದೀಸು ಸೂಸಿದುದು...ನೊಗನೋರೆವೋಯ್ತು (ಪಂರಾಮಾ. ೧೩–೭೯). ೨. ಕುಂದು; ಕಡಮೆಯಾಗು : ಪೊರೆವೋಗದ ಕಟ್ಟಾಯಮುಮಂ ಓರೆವೋಗದ ಚಲಮುಮಂ (ಶಾಂತಿಪು. ೪–೩೬ ವ); ಮೇರೆಯಱಿದ ಮೆಲ್ಮಾತು ಓರೆವೋಗದ ಜಾಣ್ಮೆ ಮೆಱೆಯಲು (ಕುರಾಸಾಂ. ೨–೬೧). [ಓರೆ$_1$ + ಪೋಗು$_1$]

**ಓರೆಹದಿರು** (ನಾ). ಸ್ಪಷ್ಟವಾಗಿ ತಿಳಿಯದಿರುವ ಒಗಟೆಯಂಥ ಮಾತು, —ಸಂಕೇತ, —ಸಂಜ್ಞೆ; ಜಾರುಮಾತು : ಕೌರವನು ಕರ್ಣಾದಿಗಳ ನುಡಿಯೋರೆಹದಿ [ಪಾಠಾಂ. ದ] ರಿನೊಳವಗಡಿಸಿ ಹೊಂದೇರದುವ್ವಾಳಿಸುತ ಮೂದಲಿಸಿದನು (ಕುವ್ಯಾವಿ. ೮–೭೦). [ಓರೆ$_1$ + ಹದಿರು$_2$ (< ಪದಿರ್$_2$)]

**ಓರೈಸು** 'ಓರೆಯಿಸು' ನೋ.

**ಓರೊಂದು** (ನಾ). ಒಂದೊಂದು; ಒಂದಕ್ಕೊಂದು : ತೊಟ್ಟ ತುಡುಗೆಗಳ್ ಕೌಸ್ತುಭರತ್ನಮನೋರೊಂದೆ ಮಸುಳಿಸೆ (ಪಂಪಭಾ. ೫–೨೬); ತಂತಮ್ಮೊಳೋರೊಂದರ್ಕೆ ಪುಯಲ್ಚುವಂತೆ ಕರುಣಾರುತಮನೊದವಿಸುತ್ತುಂ (ಕಾದಂಉ. ೩೪೮); ಓರೊಂದಱೊಳಗೆ ನಾಡುಗಳೀರೆಂಟುಗಳಾಗೆ ಕೂಡಿ ಮೂವತ್ತೆರಡುಂ ರಾರಾಜಿಸೆ ಸೊಗಯಿಪ್ಪುದಿಳಾರಮಣೀರಮ್ಯಗೇಹಮುಭಯ ವಿದೇಹಂ (ಪುಷ್ಪಪು. ೨–೨). [ಓರ್$_1$ (< ಒರ್) + ಒಂದು$_3$]

**ಓರೊಬ್ಬ** 'ಓರೊರ್ವ' ನೋ.

**ಓರೊಮ್ಮೆ** 'ಓರೊರ್ಮೆ' ನೋ.

**ಓರೊರ್ಬ** 'ಓರೊರ್ವ' ನೋ.

**ಓರೊರ್ಮೆ, ಓರೊಮ್ಮೆ** (ಅ). ಒಮ್ಮೊಮ್ಮೆ; ಒಂದೊಂದು ಸಮಯ; ಒಂದೊಂದು ಸಲ : ಪೆಸರ್ಗೊಂಡಿಂದ್ರನರೇಂದ್ರವಂದ್ಯನನೊಜಲ್ದೆತ್ತಾನುಮೋರೊರ್ಮೆ ಚಿಂತಿಸಿದೊಂಗಂ ಪವಣಿಲ್ಲ (ಆದಿಪು. ೧–೩೭); ಸುರನಿರ್ಪತ್ತಿ ಚ್ಛಾರ್ಸಿರಬರಿಸಕ್ಕೋರೊರ್ಮೆ ನೆನೆವನುಣಿಸಂ (ಶಾಂತಿಪು. ೪–೧೧೪); ಓರೊರ್ಮವನಿತಳದೊಳೋರೊರ್ಮೆ ವಿದ್ಯಾಧರಾಕಾರದಿನಂತರ್ಧಾನದೊಳ್ (ಜಗವಿ. ೭–೯೩). **ಓರೊಮ್ಮೆ** : ಓರೊಮ್ಮೆ ಮೆಲ್ಲನೆ ನಡೆವುದು (ಭರಚ. ೩೬–೭೪). [ಓರ್$_1$ (< ಒರ್) + ಒರ್ಮೆ]

**ಓರೊರ್ವ**, ಓರೊಬ್ಬ, ಓರೊರ್ಬ (ನಾ). ಒಬ್ಬೊಬ್ಬ; ಪ್ರತಿಯೊಬ್ಬ: ಪರೆದೋರೋರ್ವರೊಂದೊಂದು ಬಟ್ಟೆಯೊಳ್ ಪೋಗಿ ಬೇಙಿಬೇಙಿ ಪೊಱಲಂ ಪೊಕ್ಕು (ಪಂಪಭಾ. ೮-೫೨ ವ); ಚರಮದೇಹಧಾರಿಗಳಿವರ್ ತಮ್ಮೊಳೋರೊರ್ವರಂ ನೋಯಿಸಲುಂ ಕೊಲಲುಂ ಆಱರ್ (ಚಾವುಂಪು. ೬೯-೧೩); ಓರೊರ್ವರೆಯ್ದೂರ್ವರ್ಗಂ ನಾಯಕರಾಗಿ (ಧರ್ಮಾಮೃ. ೨-೧೬೭ ವ); ಓರೊರ್ವರಂ ಡೊಕ್ಕರಿಸುತ್ತೋರೊರ್ವರಂ ಜಾಳಿಸುವ ಪದದೊಳ್ (ಜಗವಿ. ೬-೬೪); ಅಭವ ನಿಮ್ಮ ಶ್ರೀಪಾದಭಕ್ತರ್ ದುರಿತಮುಕ್ತರಿಪ್ಪರ್ ಕೋಟಿಗೋರೊರ್ವರ್ (ಚಬವು. ೩-೧೩). **ಓರೊಬ್ಬ**: ತಮ್ಮೊಳೋರೊಬ್ಬರಿಗೆ ಬಣ್ಣಿಸುತ (ನಿಭಾಗ. ೩-೫-೪೦). **ಓರೊರ್ಬ**: ಓರೊರ್ಬರ ಕೈಗೆಯ್ದುಸುವ ಬೇಗಮಂ ಮನಮೆಯ್ದಿದುದಿಲ್ಲ (ಆದಿಪು. ೭-೮೨).

[ಓರ್$_1$ (< ಒರ್) + ಒರ್ವ]

**ಓರ್ಗೈ** 'ಓರೆಗೈ' ನೋ.

**ಓರ್ಚಿಕೆ** (ನಾ). ಸಹನೆ; ತಾಳುವಿಕೆ; "ಸಹನ ಶಕ್ತಿ" (ಗಂಗಾಮ. ೬೦).

[ಓರ್ಚು + -ಇಕೆ]

**ಓರ್ಚು** (ಕ್ರಿ). ತಾಳಿಕೊಳ್ಳು; ಸಹಿಸು (ಸ್ಯಾಂಡರ್); "ಅನುಭೋಗಿಸು" (ಗಂಗಾಮ. ೬೦).

[ದೇ. ‖ ತಮಿ. ಓರ್ಮಿ = ಧೈರ್ಯದಿಂದಿರು; ತೆಲು. ಓರುಚು, ಓರ್ಚು; ಕುವಿ. ಒರ್ಗ್, ಒರ್ಗಿ]

**ಓರ್ಜಂತೆ** 'ಒರ್ಜಂತೆ' ನೋ.

**ಓರ್ಜವಳಿ** (ನಾ). (?): ಇಱಪದಿಪ ಬರಿಸಕೆ ಗುಡಿಗೆ ಓರ್ಜವಳಿ ದುಟ್ಟಿಗೆಇವರ್ ಇದನಟಿದವರ್ ಬರಣಾಸಿಯುಂ ಕಾವಿಲೆಯು ಕೆರೆಯುನ್ದೇಗುಲಮುಮ ಪಾರ್ವ್ವರುಮನಟಿದ ಲೋಕಕೆ ಸಲ್ವರ್ (ಸೌಇಇ. IX-i, ೪೦೧-೫; ?). [?]

**ಓರ್ಪಟ್ಟು** (ನಾ). ೧. ನಿಶ್ಚಯ; ನಿರ್ಧಾರ (ಸ್ಯಾಂಡರ್). ೨. ಒಂದು ಸ್ಥಳ; ಒಂದು ಎಡೆ (ಸ್ಯಾಂಡರ್). ೩. "ನಿಶ್ಚಯ ಗುರಿ" (ರಮಾಕಾಂ. ೧೩೦).

[ಓರ್$_1$ (< ಒರ್) + ಪಟ್ಟು$_1$]

**-ಓಲ್** '-ಪೋಲ್' ನೋ.

**-ಓಲಂತೆ** (ಅ). ಹೋಲಿಕೆಯನ್ನು ಸೂಚಿಸುವ ಮಾತು: ಕಾವ್ಯಕ್ಕೆ ಕೈಂಕರ್ಯವೆಸಗುವ ಅಲಂಕಾರದೋಲಂತೆ (ಶ್ರೀರಾಮಾ. ೬೦೧-೮).

[-ಓಲ್ (< -ಪೋಲ್) + ಅಂತೆ$_1$]

**ಓಲಗ$_1$** (ನಾ). ರಾಜನ ಸಭೆ; ದರ್ಬಾರು; ರಾಜನು ದರ್ಶನ ಕೊಡುವ ಎಡೆ; ರಾಜಾಸ್ಥಾನ: ಇರುಳಿನೋಲಗದೊಳ್ ನೆರೆದಿರ್ದ ನೆರವಿಯೊಳ್ ಅರಸನುಂ ಮಹಾದೇವಿಯುಂ (ವಡ್ಡಾರಾ. ೮೨-೩); ರಾಜರಾಜನುಱದೆ ಕಿಱಿಯನಗೆ ನಕ್ಕು ನಾಳಿನೋಲಗದೊಳ್ ತಂದು ಕಾಣಿಸೆಂಬುದುಂ (ಪಂಪಭಾ. ೯-೨೮ ವ); ಆರೊಡನೆ ನುಡಿವೆನಟ್ಟಿಯೊಳಾರೊಡನೋಲಗದೊಳಿರ್ಪೆನಾರೊಡನೆ ಸಮಂತಾರೋಗಿಪೆಂ (ಗದಾಯು. ೫-೩೦); ಸುದತಿಯರಿಲ್ಲದೋಲಗದ ಲೀಲೆ ಮನೋಹರಮಪ್ಪ ಪುತ್ರರಿಲ್ಲದ ಮನೆವಾಟ್ಟೆ (ಧರ್ಮಾಮೃ. ೧-೭೪); ಮಿಡುಕದಿರ್ದುದು ರಾಯನೋಲಗದೊಳಗೆ ಪರಿವಾರ (ಕುಮಾರ. ೧-೧೮).

[< ಸಂ. ಅವಲೋಕ ?]

**ಓಲಗ$_2$** (ನಾ). (ರಾಜಸಭೆಯ) ಸೇವೆ; ಊಳಿಗ; ಚಾಕರಿ: ತಂಡತಂಡದೋಲಗಕ್ಕೆ ಪುಗುವ ಪೊಱಮಡುವ ವಾರವಿಳಾಸಿನಿಯರ ನೂಪುರಂಗಳ ರವಂಗಳೊಳ್ (ಪಂಪಭಾ. ೪-೪೯ ವ); ಅರಸರೋಲಗಂ ಲೇಸು ಕಾಳಿಗಂ ಬೆಟ್ಟಿತೆಂಬಂತೆ (ಧರ್ಮಾಮೃ. ೯-೨೯); ಓಲಗದ ಸೂಳೆಯರ್ ಭೂಪಾಲಕನಿಕ್ಕೆಲದೊಳ್ಪಿದೆ ಕುಳ್ಳಿರ್ದರ್ (ಬಾಧಪು. ೬-೯).

[ಪ್ರಾ. ಓಲಗ್ಗ (< ಸಂ. ಅವಲಗ್ನ)]

**ಓಲಗ$_3$** (ನಾ). ೧. (ನಾಗಸ್ವರ ಮೊದಲಾದ) ವಾದ್ಯ: ಪಾಳೆಯಗಾರನು ಗರ್ವದಿಂದ ಅವರೆದುರಿಗೆ ಓಲಗ ತಾಳಮೇಳಗಳೊಂದಿಗೆ ಪಲ್ಲಕ್ಕಿಯಲ್ಲಿ ಅಟ್ಟಹಾಸದಿಂದ ಬಂದನು (ಸಂಸಕ. ೧೩೧); ಜೋಳದ ಗರಿಯ ಪೀಪಿಯೇ ಓಲಗ (ಸುವಸಂ. ೩೦); ಮದುವೆಯ ಮನೆಯ ಓಲಗ (ರೂಢಿ). ೨. (ಆಲಂ) ಅಳು; ಕೂಗು: ನಿನ್ನ ಓಲಗ ನಿಲ್ಲಿಸು (ರೂಢಿ). 'ವಾಲಗ' ಪರಾ.

ಓಲಗದವ = ಓಲಗ ಬಾರಿಸುವವನು: ಹೊರಗೆ ಓಲಗದವನು ತೋಡಿರಾಗವನ್ನು ಬಾರಿಸತೊಡಗಿದ್ದನು (ಗಂಮಾಯು. ೧೩೫). ℙ ಇದರ ಮೂಲಸ್ವರೂಪ 'ವಾಲಗ' ಎಂದಿರುವಂತೆ ಕಾಣುತ್ತದೆ. ಕಿಟೆಲ್ ಅವರು ಇದನ್ನು 'ವೇಣುಕ' ಶಬ್ದದಿಂದ ಬಂದಿರಬಹುದೆಂದು ಊಹಿಸುತ್ತಾರೆ. ಇದಕ್ಕೆ ಹೊಸ ಪ್ರಯೋಗಗಳಿರಬಹುದೇ ಹೊರತು ಹಳೆಯವು ಯಾವುವೂ ಇಲ್ಲ. [?]

**ಓಲಗಂಗುಡು**, ಓಲಗಗೊಡು (ಕ್ರಿ). ದರ್ಬಾರು ನಡಸು; ರಾಜಸಭೆ ನಡಸು; ಸಭೆ ಸೇರು: ಅಂತು ಪಿರಿದೋಲಗಂಗೊಟ್ಟಿರ್ಪನ್ನೆಗಂ (ಪಂಪಭಾ. ೯-೨೯ ವ); ಈತನೋಲಗಂಗೊಟ್ಟಿರೆ ಸಪ್ತಾಂಗದ ರಾಜ್ಯದ ತೇಜಮುಮುಂಗೊಳಿಸುವುದನ್ನಮಂಡಲಾಧೀಶ್ವರರಂ (ಶಾಂತಿಪು. ೫-೧೨೮); ಮಕುಟವರ್ಧನರ ಮಂತಣದ ನಡುವೋಲಗಂಗೊಟ್ಟು ಕುಳ್ಳಿರ್ದ ನರಸಿಂಗ ಮೊನೆಯರ್ಗೆ ಮೆಯ್ಯಿಕ್ಕಿ ನಿಂದು (ಸಂಬರ. ೨-೩೬). **ಓಲಗಗೊಡು**: ಮುಂದಣಾ ಚಾವಡಿಯೊಳಗೆ ಗೋವಿಂದನೋಲಗಗೊಟ್ಟಿರಲು (ಸಾಳ್ವಭಾ. ೧೮-೫೦).

[ಓಲಗ$_1$ + ಕುಡು$_1$ (< ಕೊಡು)]

**ಓಲಗಂಪರೆ** (ಕ್ರಿ). (ರಾಜನ) ಸಭೆ ವಿಸರ್ಜನೆಗೊಳ್ಳು; ಸಭೆ ಮುಗಿ: ಮಿಕ್ಕಿನ ಮಾತ್ಯರುಂ ತಾರ್ಕಿಕರುವೆರಸಂತೋಲಗಂಪರೆದು (ಬಸವು. ೫೪-೮೩); ಒಂದು ದಿವಸಂ ಬೈಗುಂಬೊಱ್ತಿನೊಳೆಂದಿನಂತಿರೋಲಗಂಪರ್[ರೆ]ಯೆ . . . ಅರಮನೆಯಿಂ ಪೊಱಮಟ್ಟು (ರಾಮಾಶ್ವ. ೪-೬).

[ಓಲಗ$_1$ + ಪರೆ$_1$]

**ಓಲಗಕಾರ್ತಿ** (ನಾ). ಪರಿಚಾರಿಕೆ; ದಾಸಿ: ಅರಮಗನಿರ್ಪ ಓಲಗದ ಓಲಗಕಾರ್ತಿಯರೆಲ್ಲರೊಪ್ಪಿದರ್ (ಶಬ್ದಾನು. ೩೪ ಪ್ರಯೋ).

[ಓಲಗಕಾಱ + -ತಿ$_1$ (< -ಇತ್ತಿ)]

**ಓಲಗಕಾಱ**, ಓಲಗಿಕಾಱ (ನಾ). ಸೇವಕ; ಪರಿಚಾರಕ: ಮೃಗದೊಲವರಮುಮನರಸನ ಬಗೆಯುಮನಱಿದಲಸದೆಳಸಲೋಲಗಿಸಲ್ ನೆಟ್ಟಗೆ ಬಲ್ಲನುಳ್ಳೊಡವನಲ್ತೆ ಗುಣಾರ್ಣವ ಬೇಂಟೆಕಾಱನೋಲಗಕಾಱಂ (ಪಂಪಭಾ. ೫-೪೨). **ಓಲಗಿಕಾಱ**: "ಅನುಜೀವೀ, ಸಹಾಯಃ, ಸೇವಕಃ, ಅನುಚರಃ, ಅನುಗಃ – ಈ ೫ ಓಲಗಿಕಾಱಂ" (ಹಲಾಯು. ೭೦-೨೭೪); ಪಸಾಯದಾನಂಗುಡುವನಿಂತು ಕಾಣದೆ ಕೆಟ್ಟೆನೆಂದು ಚಿಂತಿಸುವವೋಲಗಿಕಾಱನುಂ (ಪಸಾರ. ೭೬೨-೧೧).

[ಓಲಗ$_2$ + -ಕಾಱ]

**ಓಲಗಗೊಡು** 'ಓಲಗಂಗುಡು' ನೋ.

**ಓಲಗಗೊಳ್ಳು** (ಕ್ರಿ). ಓಲಗ ನಡಸು; ದರ್ಬಾರು ಜರುಗಿಸು: ಕಾಮನು ಓಲಗಗೊಂಡಿರುವಾಗ ಜೊನ್ನವಕ್ಕಿಯು ಮುಕ್ಕಣ್ಣನ ತಿಂಗಳ ಸೆರೆಯ ವೃತ್ತಾಂತವನ್ನು ಅರುಹುವುದು (ಸಾಹಿಸ. ೧೩೨).

[ಓಲಗ$_1$ + ಕೊಳ್ಳು$_1$ (< ಕೊಳ್$_1$)]

**ಓಲಗಮಿರ್** (ಕ್ರಿ). ೧. ಸಭೆಯಾಗಿರು: ಪಲಗಣ್ಣನ ಪಟ್ಟದ ಸತಿ . . ದಲಲನೆಯರೊಳಗೋಲಗಮಿರ್ಪಂತಾ ಲಲಿತ ಶಶಾಂಕವದನೆ ಸಖಿಯರ ಮಧ್ಯದೊಳಿರಲ್ (ಜಯಕಾ. ೨-೧೯). ೨. ಸಭೆ ನಡಸು: ರಾತ್ರಿಯೊಳವನೀನಾಥಂ ಜಾವಗಳಿಯಲೋಲಗಮಿರ್ದೆಯ್ದಿದನಾ ಶಯ್ಯಾಗೃಹಕೆ (ಜಯಕಾ. ೨-೫೦).

[ಓಲಗ$_1$ + ಇರ್$_1$]

**ಓಲಗವಾಗು** (ಕ್ರಿ). ಸಭೆಯಲ್ಲಿ ದರ್ಶನ ಕೊಡು, —ಕಾಣಿಸಿಕೊಳ್ಳು: ಹೊಱಸಭೆಯಿಂದೊಳಚಾವಡಿಗೆಯ್ದಿ ಚೆಲ್ವೆಱಕದೊಳೋಲಗವಾದಾ (ಭರಜ. ೩೭–೬೪). [ಓಲಗ$_1$ + ಆಗು$_1$]

**ಓಲಗವೀ** (ಕ್ರಿ). ದರ್ಬಾರು ನಡಸು; ರಾಜಸಭೆ ನಡಸು; ಸಭೆ ಸೇರು: ಸುತ್ತಿಮುಱುಮುಂಟಪದೊಳೋಲಗವಿತ್ತಖಿಲ ಭಕ್ತರ ಮಹಾ ಗ್ರಹದೊತ್ತನಾಲಿಸಿ ಕೇಳುತಂ ಶಿವಭಕ್ತಿವತ್ಸಳನು (ಬಸವು. ೨೬–೨೩). [ಓಲಗ$_1$ + ಈ$_2$]

**ಓಲಗವುರುಡು** (ನಾ). ರಾಜಸಭೆಯಲ್ಲಿ ನಡೆಯುವ ಸ್ಪರ್ಧೆ: ಅನಗಿ ದಱಿದಿರ್ದೊಡಂ ಚಲದಿನೆನ್ನೊಳೆ ಪೊಂಗಿ ಪೊಡರ್ಪುದೋರ್ಪನೋಲಗ ವುರುಡಿಲ್ಲ ಮೆಚ್ಚವಣಿಗಿಲ್ಲ ಕರಂ ಮುಳಿಸಿಲ್ಲ ಕಾಯ್ದು ಕೆಮ್ಮಗೆ ಬಱಿಸಂದು ಕೊಂದಪನಕಾರಣದಿಂ ಮೊಱೆಯೋ ಮನೋಭವಾ (ಆದಿಪು. ೧೨–೩೪). [ಓಲಗ$_1$ + ಪುರುಡು$_1$]

**ಓಲಗವೆಣ್** (ನಾ). ರಾಜಸಭೆಯ ಪರಿಚಾರಿಕೆ, —ಊಳಿಗ ದವಳು: ಕಾಲುತೊಡರು ಪರಿಪರಿಯ ಬಿರುದಿನಂಕಮಾಲೆಯನೋದಿಸಿ ಕೊಳುತ ಓಲಗವೆಂಗಳು ಬರುತಿದ್ದರೀಕ್ಷಿಪರಾಲಿಗಳ್ ಬೆಬ್ಬಳವಾಗೆ (ಭರಜ. ೪೭–೪೮). [ಓಲಗ$_2$ + ಪೆಣ್]

**ಓಲಗಶಾಲೆ, ಓಲಗಸಾಲೆ** (ನಾ). ರಾಜಾಸ್ಥಾನ; ಸಭಾಮಂದಿರ; ರಾಜಸಭೆ: ಓಲಗಶಾಲೆ ಪೂಗಿಡುಗಳೋಳಿಗೆ ಜೇವಣಶಾಲೆ ಮತ್ತ ಭೃಂಗಾಳಿಗೆ (ಪುಷ್ಪಪು. ೨–೫೦); ಏಳುವರೆಯೋಜನದಲೋಲಗಶಾಲೆ ತುಂಬಿತು (ಸಂಭಪ. ೫–೮೮); ವನಲಕ್ಷ್ಮಿಯೋಲಗಶಾಲೆಯಂದದಲಿ ನಂದನವನ ಕಡುರಯ್ಯವಾಯ್ತು (ಕಂನವಿ. ೫–೧೦೩); ವಿಜಯ ಸಿಂಹಾ ಸನದ ಓಲಗಶಾಲೆ ಅದ್ಭುತವಾಗಿ ಅಲಂಕರಿಸಲ್ಪಟ್ಟಿತ್ತು (ಶಾಂತಲಾ. ೧೬); ರಾಜನು ಪ್ರತ್ಯೇಕವಾದ ಓಲಗಶಾಲೆಯಲ್ಲಿ . . . ಕುಳಿತು ರಾಜ್ಯದ ವ್ಯವಹಾರಗಳನ್ನು ಪರಿಶೀಲಿಸುತ್ತಾನೆ (ಪ್ರವಾಇ. II, ೨೯೩). **ಓಲಗಸಾಲೆ:** ಪಾಸಱೆ ಸಿಂಹಪೀಠಮಳ್ಕಿನೀರುತಿ ಮಂಗಳ ಗೀತಿ . . . ಪೊದಱೋಲಗಸಾಲೆ ಮೊಕ್ಕಳಂ ಬೀಸುವ ಗಾಳಿ ಚಾಮರದ ಗಾಳಿಯೆನಲ್ (ಪಂಪಭಾ. ೬–೨೯); ತ್ರಿದಶಾಂಗನೆಯರ್ . . . ಪಾಡಿದರೋಲಗಸಾಲೆ ಯೊಳ್ (ಶಾಂತಿಪು. ೯–೧೮೫); ಕಪ್ಪೆಳಗೋಲಗಸಾಲೆಯೆಲ್ಲಮಂ ತೀವೆ (ಕಬ್ಬಿಗಕಾ. ೧೩೩); ಓಲಗಸಾಲೆಯಲಿ ಋತುಪರ್ಣನಿದ್ದನು ಸಿಂಹಪೀಠದಲಿ (ನಳಚ. ೭–೧). [ಓಲಗ$_1$ + ಶಾಲೆ$_1$]

**ಓಲಗಸಮಯ** (ನಾ). ಓಲಗ ನಡೆಯುವ ಸಮಯ; ಸಭೆಯ ವೇಳೆ: ದೇವನೋಲಗಸಮಯವಱಿತಾಂ ಬಹೆನು ನಿಲ್ಲು (ಕೌಶಿರಾ. ೧೪–೫೩). [ಓಲಗ$_1$ + ಸಮಯ]

**ಓಲಗಸಾಲೆ** 'ಓಲಗಶಾಲೆ' ನೋ.

**ಓಲಗಾರ್ತ** (ನಾ). ಓಲಗಕ್ಕೆ ಅಥವಾ ಸೇವೆಗೆ ಯೋಗ್ಯವಾದದ್ದು: ಮೇಲನೆಣಿಕೆಯನಱಿಯದೆಮ್ಮ ನೃಪಾಲವಂಶಕೆ ಕುಂದ ಹೊಱಿಸುವು ದೋಲಗಾರ್ತವೆ ನಿಮಗೆ ನಿಮ್ಮನುಮಾನವೇನೆಂದ (ತೊರರಾ. ೬–೫೩–೭೫). [ಓಲಗ$_2$ + ?]

**ಓಲಗಿಕಾಱ** 'ಓಲಗಕಾಱ' ನೋ.

**ಓಲಗಿಗ** (ನಾ). ಸೇವಕ: ನಿನಗೆಂದುಂ ತೆತ್ತು ಪೊತ್ತೋಗಲಿಗ[ಲಗಿಗ]ರ ಪರಿಯಾಗಿಪ್ಪ ಸೋಮಪ್ರಭಂ ನಂದನರೀಗಳ್ಕೊರ್ವಿ ತಾಮುಂ ಮಲೆದ ಪರವರುಂ (ಅನಂಪು. ೧೩–೧೫). [ಓಲಗ$_2$ + –ಇಗ]

**ಓಲಗಿಸು$_1$, ಓಲ್ಯೈಸು$_1$** (ಕ್ರಿ). ೧. ದರ್ಬಾರು ಮಾಡು, —ನಡಸು. ೨. ಒಟ್ಟಿಗೆ ಸೇರು: ಅಯೋಧಶ್ರೇಷ್ಠರ ದ್ವಂದ್ವಯುದ್ಧವನ್ನು ನೋಡುವ ಸಂತೋಷವು ಮನಸ್ಸಿನಲ್ಲಿ ಹೆಚ್ಚಿ ಬರುತಲಿರಲು ಬ್ರಹ್ಮರ್ಷಿ ಗಳೂ ದಕ್ಷನೂ ಮೊದಲಾದ ನವಬ್ರಹ್ಮರೂ ಓಲಗಿಸಿದರು (ಕೃವಾಳ. ೧೬೩). **ಓಲ್ಯೈಸು$_1$:** ೧. ಬೆಳಗುವ ಶರತ್‌ಚಂದ್ರನು ಮೇಲೆ ಓಲ್ಯೈಸಿದ್ದಾನೆ (ಪಂಯಾತ್ರೆ. ೬೧); ಶಂಕರನು ತನ್ನ ಪ್ರಿಯಸತಿ ಪಾರ್ವತಿಯೊಡಗೂಡಿ ಉಲ್ಲಾಸದಿಂದ ಓಲ್ಯೈಸುತ್ತಿದ್ದಾಗ (ಭಾರದ. ೬೮). [ಓಲಗ$_1$ + –ಇಸು$_3$]

**ಓಲಗಿಸು$_2$, ಓಲಯಿಸು, ಓಲಯ್ಸು, ಓಲವಿಸು, ಓಲ್ಯೈಸು$_2$** (ಕ್ರಿ). ೧. ಸೇವೆಮಾಡು; ಅಧೀನವಾಗಿರು: ಶ್ರೀನೊಱಂಬನ ಪೆರ್ಗ್ಗಡೆ ತ್ರಿಭುವನಯ್ಯ ಪೆರ್ಮಾಡಿಯನೋಲಗಿಸಿ ಸಿವಯ್ಯನ ಕೆಱೆಯನಾಳುತ ಮಿಱ್ದು (ಎಕ. IV, ಚಾಮರಾ. ೧೪೧–೨; 900); ಎನ್ನ ಪ್ರತಿಮೆಯನ್ನಿಟ್ಟು ಪೂಜಿಸುತ್ತುಮೋಲಗಿಸುತ್ತುಮಿರಿಂ (ವಡ್ಡಾರಾ. ೧೦೭–೨೭); ಓಲಗಿಸಿ ಬಾಳ್ವುದೆ ಕಷ್ಟಮಿಳಾಧಿನಾಥರಂ (ಪಂಪಭಾ. ೧೨–೯೨); ಓಲಗಿಪವನಿಂ ಮೂಢನಾರುಮಿಲ್ಲ (ಪಂಚತಂ. ೫೨–೨೧); ಕೋಲ ಮೊನೆಯಲಿ ಕೃಷ್ಣ ರಾಯನನೋಲಗಿಸಿ ಮೆಚ್ಚಿಸಿದ ನಾ ಕಟ್ಬಾಳು (ಕುವ್ಯಾಭೀ. ೭–೫). ೨. ಅರ್ಪಿಸು; ಕಾಣಿಕೆಕೊಡು: ಓಲಗಿಸಿ ವಸ್ತುವಾಹನಮಾಲೆಯ ನುತ್ತಂಸಮಣಿಮರೀಚಿಗಳಿಂ ಭೂಪಾಲನ ಚರಣಸರೋಜಕ್ಕೋಲಗಿಸಿದನು ದಯಸುಂದರಂ ತಣ್ಪಿಸಿಲಂ (ಪಂರಾಮಾ. ೨–೫); ನೃಪಾಲರ್ ವನಮ್ಹಾಲಿ ಗೋಲಗಿಸಿದರ್ ತಂತಮ್ಮ ಸರ್ವಸ್ವವಂ (ಜಗವಿ. ೯–೧೨); ಕರಮೇಟಿಗ್ಗೆ ಯುಳ್ಳ ಪಿಳ್ಳೆಗಳಿರೆಡುಮನೋಲಗಿಸುವಂ (ಯಶೋಚ. ೩–೭೭). **ಓಲಯಿಸು:** ೧. ಅರಸಿಯರನೋಲಯಿಸಲೆಂದು ಬಂದು (ಬಾಧಪು. ೧–೧೬೨ ವ); ತನ್ನನೆಲ್ಲರುವೋಲಯಿಸಿ ಬರೆ (ಬಸವು. ೫–೧೧); ಪಾಂಡವ ರಾದರೋ ನಿನ್ನನ್ನು ಓಲಯಿಸುವುದಕ್ಕೆ ಹೇಗೋ ಹಾಗೆಯೇ ಕಾಳಗಕ್ಕೂ ಸೊಂಟಕಟ್ಟಿರುವರು (ಭೀಷ್ಮಚ. ೧೫೨). ೩. ಪುಸಲಾಯಿಸು: ಗಿರಿಯಪ್ಪರು ಪೋಲೀಸರನ್ನು ತುಂಬ ಓಲಯಿಸುತಿದ್ದುದು ಮಾತ್ರ ಎಲ್ಲರಿಗೂ ಗೊತ್ತಿತ್ತು (ರಕ್ತರೂ. ೫೨). **ಓಲಯ್ಸು:** ೧. ಹೊನ್ನನಾರ್ಜಿಸುವ ತೇಜನಂ ನೆನೆದು ಎಂದನೋಲಯ್ಸಲ್ಪರಾಧೀನವೇಕೆಂದು (ಏಹಾರ. ದೇ. ೧೧೫–೧೬); ಮೃಗ ಧರಬಿಂಬಂಗಳವೆರಡಗಲದೆ ವೋಲಯ್ಸು [ಪಾಠಾಂ. ಕೊಂಡೆಸೆಯು] ತಿರ್ದ ಪುವು ಸರಸಿಜದೊಂದಗಣಿತ ಕರ್ಕಶವೆನಲ್ಕಗಪುತ್ರಿಗೆ ನೀಲ ಮುತ್ತಿನೋಲೆ ಯನಿತ್ತರ್ (೧ಗಿಕ. ೧೦–೩೯). **ಓಲವಿಸು:** ೧. ಜಂಗಮುವನೋಲವಿ ಸುತ್ತ (ಬಸವು. ೨೧–೨೭); ಶರಣ ಶಂಕರದಾಸಿಮಯ್ಯನ ಚರಣಯುಗಳವ ನೋಲವಿ [ಪಾಠಾಂ. ಯಿ]ಪ ಕಿಂಕರಗೆ ಧನವಿಲ್ಲೆನಲುಬಾರದು (ಬಸವು. ೨೯–೩೧). **ಓಲ್ಯೈಸು$_2$:** ೧. ಅಡಿಯೊತ್ತಲ್ ಕೇಯೂರಕನೆಡೆಯಱ ದೋಲ್ಯೈಸೆ ಕನ್ಯಕಾಸಂಕುಳಂ (ಕಾದಂಉ. ೮೮); ಅರಸರನೋಲ್ಯೈಸುವ ರಾದರದಿಂ ಬಲಹೀನರಾಗಿ ಸೇವಕರೆಂದುಂ (ಪಂಚತಂ. ೧೦೦–೧೦); ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲ್ಯೈಸಿಹನೆಂದು ನುಡಿವ ರಯ್ಯಾ ಪ್ರಮಥರು (ಬಸವ. ೭೦೯); ರಣದೊಳೊಡ್ಡಿದರಾತಿಗಳನೀ ಹಣೆಯ ಪಟ್ಟದ ವೀರ ಜಯಿಸಲು ಹಣವಿಗಾನೋಲ್ಯೈಸೆ ಮಾಡುವೆನಡವಿ ಯಲಿ ತಪವ (ಕುವ್ಯಾಭೀ. ೧–೩೮). ೨. ಅಯೋನಿಸಂಭವವೀ ಮಂಗಳ ಹಯವೆಂದೋಲ್ಯೈಸಿದನಿಳಾಧಿನಾಥಂಗೆ ಪಾರಶೀಕಾಧೀಶಂ (ಕಾದಂಪೂ. ೪೯೯); ಪಾರಶೀಕಾಧಿರಾಜನೆನ್ನಂ ಕಂಡು ಪಿಡಿದೊಯ್ದು ತಾರಾಪೀಡ ನರೇಂದ್ರಂಗೋಲ್ಯೈಸೆ (ಕಾದಂಉ. ೬೨೦). ೩. ಒಲಿಸಿಕೊಳ್ಳಲು ಓಲ್ಯೈಸು ತ್ತಿದುದು ಮಾತ್ರ ಎಲ್ಲರಿಗೂ ಗೊತ್ತಿತ್ತು (ಮುನಿಮಾ. ೧೨೬). ೪. ಹಿಮ್ಮೆಟ್ಟು; ಹಿಂದೆಸರಿ: "ಬೆಂಗೊಟ್ಟುದುಮೋಲ್ಯೈಸಿತು ಪಿಂಗಿತು ಪೆಡೆಮೆಟ್ಟಿತೆನ್ನಲಪಸರಣಂ" (ಕವಿಕಂ. ೨೫೩). ೫. ಆವರಿಸು; ಸುತ್ತು ಗಟ್ಟು; ಬಳಸು: ಪಟುಭಟರ ಪಟಲ ವೋಲ್ಯೈಸಿ ಬರೆ ಗಗನಮಂಡಲವ ಬಗಿದು (ಸೌಂದಪು. ೧೮–೧೪); ಹಾಲು ಬತ್ತಕೆ ಕವಿವರಗಿಳಿಗಳ ಹಿಂಡ ಮೇಲಕೆಬ್ಬಿಸುವ ನಾರಿಯರ ಪೇಳಲಳವೆ ನೆಲೆಮೊಲೆಗಳ ಕಮಲವೆಂದೋ ಲ್ಯೈಸುವುವು ತುಂಬಿಗಳು (ಕಂನವಿ. ೫–೬೪).

ಓಲಗಿಸಿಕೊಳ್, ಓಲಯಿಸಿಕೊಳ್, ಓಲೈಸಿಕೊಳ್ = ಸೇವೆಮಾಡಿಸಿಕೊಳ್ಳು : ಆಳಿದನು ರಾಮನ ವಿವಾಹದ ಮೇಲೆ ಹನ್ನೆರಡಬುದ ಪರಿಯಂತೋಲಗಿಸಿಕೊಂಡಖಿಳರಾಯರನವನಿಮಂಡಲವ (ತೊರರಾ. ೨–೧–೨); ಓಲಯಿಸಿಕೊಂಬುದೆಮ್ಮಂ ಪಾಲಿಪುದುಱೆ ಮಾಙ್ಪ ಕಾರ್ಯಮೇನುಳ್ಳೊಡದಂ ಬಾಲಿಕೆ ಮಾಡಿಸಿಕೊಂಬುದು (ಬಾಧಪು.೬–೬೩); ಜಲರುಹಾಸನಮುಖ್ಯ ದಿವಿಜಾವಳಿಗಳಿಂದೋಲೈಸಿಕೊಂಬಗ್ಗಳದ ವಿಭವದ ದೈವ (ತೊರರಾ. ೧–೮–೬೫). ಓಲಗಿಸುವವ = ಸೇವಕ : "ಸೇವಕಃ, ಅರ್ಥಿನ್, ಅನುಜೀವಿನ್ – ಇವು ಓಲಗಿಸುವವನು" (ನಾಚಿರಾ. ೧೩೧).

[ಓಲಗ$_2$ + –ಇಸು$_3$]

**ಓಲಗಿಸು$_3$** (ಕ್ರಿ). (ನಾಗಸ್ವರ ಮೊದಲಾದ ವಾದ್ಯಗಳನ್ನು) ಊದು, —ನುಡಿಸು, —ಬಾರಿಸು : ಅತಿಮೃದುರವ ದಾಯಿಗಳಂ ತತಘನಸುಷಿರಾವನದ್ಧ ವಾದ್ಯಂಗಳನೇಂ ಮತಮುಱೆದೋಲಗಿಪುದೊ ದಂಪತಿಗೆಂದುಮವಾರ್ಯವೀರ್ಯತೂರ್ಯಕ್ಷ್ಮಾಜಂ (ಆದಿಪು. ೫–೩೫).

[ಓಲಗ$_3$ + –ಇಸು$_3$]

**ಓಲಯಿಸು** 'ಓಲಗಿಸು$_2$' ನೋ.

**ಓಲಯ್ಸು** 'ಓಲಗಿಸು$_2$' ನೋ.

**ಓಲವಿಸು** 'ಓಲಗಿಸು$_2$' ನೋ.

**ಓಲಸರಿ** (ನಾ). (ಕರಾ) ವಿಶಿಷ್ಟವಾದ ನರ್ತನವನ್ನೊಳಗೊಂಡ ಭೂತಕೋಲ : ಭೂತದ ಕೋಲ ಓಲಸರಿಗಳಿಗಾಗಿ ಅಣಿಗಟ್ಟುವ ಭೂತದ ಪಾತ್ರಿಯೂ ಹಾಗೆ ಮೆತ್ತೆಗಳನ್ನು ತಲೆಗೆ ಸುತ್ತಿಕೊಳ್ಳುತ್ತಾರೆ (ಪಾರ್ತಸು. ೪೬); ಹುಲಿರಾಯನು ಓಲಸರಿಯ ಬಾರಣೆಗಾಗಿ ಹೊರಟನೆಂಬುದು ಅವರಿಗೆ ಗೊತ್ತಾಯಿತು (ವೀರಬಂ. ೨೫).

[← ತುಳು. ಓಲಸರಿ]

**ಓಲಾಟ** (ನಾ). ೧. ಒಯ್ಯಾರಿತನ; ತೂಗಾಟ: ಈ ಓಲಾಟ ಒಂದೆರಡು ನಿಮಿಷ ಅಷ್ಟೆ (ಅಲಹೂ. ೮೯). ೨. ಉಬ್ಬು; ಉತ್ಸಾಹ; ಮೆರೆತ: ಪೇಳುವುಡೇನಿನ್ನು ದುರ್ಜನಸಂಗದೋಲಾಟ ಸೊಗಸಾಯಿತು (ಪುರಂದ. ೧–೧೬೧–೩); ಮೈತುಂಬಿಕೊಂಡು ಮನೆಗೆ ಬಂದಳು. ಆ ಓಲಾಟ ಹೇಳತೀರದು; ಸುಮ್ಮನೆ ಹುಚ್ಚು ಹುಚ್ಚು (ಸುಖವಿ. ೭). ೩. "ಮಿತ್ರತ್ವ" (ಸಿರಿಕೋ. ೮೪). [?]

**ಓಲಾಡಿಸು$_1$** (ಕ್ರಿ). ೧. ತೂಗಾಡಿಸು; ತೊನೆದಾಡಿಸು : ಪಂಡರಿಯ ಗೋಪಾಲವಿಠಲ ಓಲಾಡಿಸುತ್ತ ಕುದುರಿ ಓಲಾಡೆ ಪೋದನೆಂದು (ಜಗದಾ. ೧೪೩). ೨. ಸಂತೋಷಪಡಿಸು; ನಲಿದಾಡಿಸು : ಪಾಲಿಂದಂ ಮೊಸರಿಂದಂ ಮೇಲೆನಿಸುವ ತುಪ್ಪದಿಂದಮುಡುಗೆಗಳಿಂದಂ ಲೀಲೆಯೊಳೆ ಮುನಿಕದಂಬಮನೋಲಾಡಿಸು ಮಗಳೆ ನಿನ್ನ ಕಣ್ತಣಿವಿನೆಗಂ (ಧರ್ಮಾಮೃ. ೩–೨೬೬); ಗುಣ್ಪುವಡೆದ ಪೊಕರ್ಟಱೆಂಬ ತಿಳಿಗೊಳಂ ಕಮ್ಮಂಗೋಲನೆಂಬ ಜಕ್ಕವಕ್ಕಿಯನೋಲಾಡಿಸೆಯುಂ (ಕಬ್ಬಿಕಾ. ೧೨೩).

[ಓಲಾಡು$_1$ + –ಇಸು$_3$]

**ಓಲಾಡಿಸು$_2$** (ಕ್ರಿ). ಸ್ನಾನಮಾಡಿಸು; ಮುಳುಗಾಡಿಸು : ಭುವನಾಂತರಮಂ ಸಿಂಪಿಸುವವೊಲಾಶಾವನಿತೆಯರುಮನೋಲಾಡಿಸುವಂತೆವೊಲ್ (ಕಾದಂಪೂ. ೯೯೯); ಅತಿಪ್ರಮೋದರಸಪ್ರವಾಹದೊಳ್ ಮನಮನೋಲಾಡಿಸಿ ಕಿಱಿದುಂ ಪೊಟ್ತುನಿರ್ದು ಮಣಿಮಯಾಸನದಿಂದೆರ್ದು (ಮಲ್ಲಿಪು. ೪–೭೨); ಸ್ವಾರ್ಥಲೋಲುಪ್ತಿಯಲಿ ನಿಲುವ ಸಮರ್ಥರಾದರೆ ಬಾಣಧಾರಾ ತೀರ್ಥದೊಳಗೋಲಾಡಿಸುವೆನೆಂದೆಚ್ಚನಭಿಮನ್ಯು (ಕುವ್ಯಾದ್ರೋ. ೬–೧೦); ಶಿವತತ್ತ್ವಾನುಭಾವಸುಖಸಂತೋಷಸಾಗರದೊಳೋಲಾಡಿಸಿದ ನಖಿಳಭಕ್ತರಂ ಪ್ರಭುರಾಯನು (ಚೆಬಪು. ೧೧–೫೪).

[ಓಲಾಡು$_2$ + –ಇಸು$_3$]

**ಓಲಾಡು$_1$** (ಕ್ರಿ). ೧. ತೂಗಾಡು; ತೊನೆದಾಡು : ಗಾಳಿಗೆ ಗರಿ ಓಲಾಡುತ್ತಿದೆ (ರೂಢಿ). ೨. ಹಿಗ್ಗು; ನಲಿದಾಡು : ನಾ ನಿಮ್ಮ ಪೂಜಿಸಿ ಹರುಷದೊಳೋಲಾಡುವೆನಯ್ಯಾ (ಮಹಾದೇ. ೧೩–೧); ಉರುಸೌಖ್ಯದೊಳೋಲಾಡುವನರ್ಚಿಸುತೆ ಭೂಮಿಪಂ ಪಾರ್ವತಿಯಂ (ಉದ್ಭಟ. ೩–೧೨೮). ೩. (ಆಲಂ) ಮೆರೆದಾಡು : ಹುಡುಗರು ಸಂಭ್ರಮದಿಂದ ಓಲಾಡುತ್ತಿದ್ದಾರೆ (ರೂಢಿ). [ಓಲು$_1$ + ಆಡು$_1$]

**ಓಲಾಡು$_2$** (ಕ್ರಿ). ನೀರಾಟವಾಡು; ಜಲಕೇಳಿಯಾಡು : "ಓಲಾಡು (ಓಲ್ + ಆಡು) – ಜಲಖೇಲನೇ" (ಶಮುಧಾ); ತೀರ್ಥಂಗಳೊಳೋಲಾಡುತ್ತುಂ (ಪಂಪಭಾ. ೪–೧೮ ವ); ದೆಸೆಗಳ್ . . . ಅಣ್ಪಕ್ಕಿ ಪಾಲೊಳಗೋಲಾಡಿದವೋಲೆಸೆದಿರ್ದುವು (ಶಾಂತಿಪು. ೮–೧೧೩); ನಿರ್ಭರಚಂದ್ರಿಕಾಜಲದೊಳೊಲ್ದೋಲಾಡಿ . . . ಮಂದಾನಿಲಂ (ಕಾದಂಉ. ೪೨೮); ಮೂಡಿ ಮುೞ್ಕಾಡಿದನೆತ್ತಂ ನೀಡುಮೋಲಾಡಿದನವಗಹನಂ ಮಾಡಿದಂ (ಸುಕುಮಾ. ೯–೪೩); ಪೂರ್ಣ್ಣಗಂಗಾನದಿಯಂ ವಿಳಸಿತಮಂ ಪೊಕ್ಕು ನಿರಾಕುಳದಿಂದೋಲಾಡಿ ಪಾಡಿ (ಎಕ. VII, ಶಿವಮೊ. ೪–೧೦; 1122).

[ಓಲ್$_0$ + ಆಡು$_1$. P ಓಲ್ (< ಸಂ. ಉದ್ರ ?)]

**ಓಲಾಯ** (ಅ). ಯಾವಾಗಲೂ; ಎಂದೆಂದಿಗೂ : ಎಸಳ್ಗಣ್ಣ ಡಾಳದಿಂ ಕೀಲಿಸಿಹ ಮರಗತ್ತಲೊತ್ತರವನಪಹರಿಸುತೋಲಾಯ ಜಮದಗ್ನಿಯುರುತಪೋವಿಪಿನಮಂ ಪಾವನಂಗೈವುತೊಲ್ದು (ಪರಶು. ೧೬–೧೩).

[← ತುಳು. ಓಲಾಯಿ]

**ಓಲಿ** (ನಾ). ೧. ಮದುವೆಯಾಗುವ ಹೆಣ್ಣಿಗೆ ಕೊಡಬೇಕಾದ ಶುಲ್ಕ; ಕನ್ಯಾದಕ್ಷಿಣೆ; ತೆರ; ಕನ್ಯಾಶುಲ್ಕ : ತನ್ನ ಮಗಳಾದ ದ್ರೌಪದೀದೇವಿಗೆ . . . ಪರಾಕ್ರಮವೇ ಓಲಿಯಾಗುವ ಹಾಗೆ ಕಲ್ಪಿಸಲು (ಕೃವಾಅ. ೩೪೪). ೨. ಒತ್ತೆ; ಆಧಾರ : ಕಂಸನು ಜರಾಸಂಧನ ಮಕ್ಕಳನ್ನು ರಾಜ್ಯವನ್ನೇ ಓಲಿಯಾಗಿ ಕೊಟ್ಟು ಮದುವೆಯಾದುದರಿಂದ (ಕೃವಾಸ. ೩೭). 'ಓಲಿಡು' ಪರಾ. ೩. ಬಿಡುಗಡೆಯ ಹಣ.

[?. / ತೆಲು. ಓಲಿ]

**ಓಲಿಡು** (ಕ್ರಿ). ಒತ್ತೆ ಇಡು; ಅಡವಿರಿಸು; ಆಧಾರವೆಂದು ಇಡು (ಕ).

[ಓಲು$_2$ + ಇಡು$_1$]

**ಓಲಿತರು** (ಕ್ರಿ). ಒತ್ತೆ ತರು : ಆ ವನದೊಳಿಹ ಸಕಲಜಾತಿಕುಸುಮಂಗಳಿಗೆ . . . ಮಲಯ ಪರ್ವತದಿಂದ ಸೌರಭವನೋಲಿತಂದವಕೆ ಕಡಗೊಡುವಂತೆ (ನವಮೋ. ೨೫–೪೭). [ಓಲಿ + ತರು$_1$ (< ತರ್)]

**ಓಲಿಸು** (ಕ್ರಿ). ಒಲೆಯುವಂತೆ ಮಾಡು; ಬಾಗಿಸು : ಲಾಲಿಸಲೆ ಗುರುರಾಯ ಚಿತ್ತವನೋಲಿಸುವನಾಗಿರ್ದು ವ್ಯಾಕುಲ ತಾಳಲೇಕೇ (ಜಿನಭಾ. ೧೧–೨೬). [ಓಲು$_1$ + –ಇಸು$_3$]

**ಓಲು$_1$** (ಕ್ರಿ). ಬಾಗು; ಒಲೆ; ತೂಗು : ನಿನ್ನವರಿಗೋಲಿಹಳು ಅಪಜಯಾಂಗನೆ (ತುರಂಗ. ೪೮–೫); 'ನೀನೂ ಆ ಕಡೆಯೇ ಓಲಿದೆಯಾ! ಇನ್ನು ನಾವು ಸೋತೆವು' (ಶಾಂತಲಾ. ೧೨೭). 'ವಾಲು' ಪರಾ.

[← ತೆಲು. ವಾಲು, ವೇಲು, ವ್ರಾಲು]

**ಓಲು$_2$** (ನಾ). ಹೊಣೆ; ಒತ್ತೆ; ಜಾಮೀನು; ಅಡವು; ಈಡು : "ಕರಾರು ನೆರವೇರಿಸಲು, ಸಾಲತೀರಿಸಲು, ಮೊ.ಕ್ಕೆ ಹೊಣೆಯಾಗಿ ಒಬ್ಬನಲ್ಲಿಟ್ಟ, ಕರಾರು ತಪ್ಪಿದರೆ ದಂಡವಾಗಿ ಕಳೆದುಕೊಳ್ಳಬೇಕಾದ, —ವಸ್ತು; ಅಡವು; ಒತ್ತೆ; ಈಡು; ಗಿರವಿ; ನ್ಯಾಸ; ಓಲು" (Pledge. ಇಂಕನಿ); ತಾನು ಮುಂದೆ ಜಗಳ ತೆಗೆಯಲಿಕ್ಕಿಲ್ಲವೆಂಬುದಕ್ಕೆ ಓಲಾಗಿ ತನ್ನ ಮಗನನ್ನು ಅಕ್ಬರನಿಗೊಪ್ಪಿಸಿ (ಅಕ್ಬರ. ೨೭); ಶೇರಖಾನನ ಮಗನಾದ ಕುತುಬನನ್ನು ಐದುಸಾವಿರ ಸವಾರರೊಡನೆ ಓಲು ತೆಗೆದುಕೊಂಡು ಗುಜರಾಥದ ದಾರಿಯ ಹಿಡಿದನು (ಮೋಬಾದ. ೫೬). [?]

**-ಓಲು**$_3$ '-ಪೋಲ್' ನೋ.

**ಓಲುಕೊಡು** (ಕ್ರಿ) = ಓಲಿಡು (ಈ). [ಓಲು$_2$ + ಕೊಡು]

**ಓಲುಗಾರ** (ನಾ). ಒತ್ತೆಯಾಗಿ ಇರಿಸಿಕೊಂಡ ಮನುಷ್ಯ; ಜಾಮೀನು ದಾರ: ಪುಣೆಯಲ್ಲಿ ೧೭೬೦ರಿಂದ ಪೇಶ್ವೆಯ ಓಲುಗಾರನಾದ ಚಂದಾ ಸಾಹೇಬನಿದ್ದನು (ಚಂಸಂ. ೨೪೪). [ಓಲು$_2$+ -ಗಾರ (< -ಕಾಱ)]

**ಓಲುಗಾರ್ತಿ** (ನಾ). ಜಾಮೀನು ಆಗಿರುವವಳು (ಈ). [ಓಲುಗಾರ + -ತಿ$_1$ (< -ಇತ್ತಿ)]

**ಓಲುವೆ** (ನಾ). ಮನದ ಒಲವು; ಇಂಗಿತ: ಅವರೋಲುವೆಯ ನೀನ ರಿತು ಬಲ್ಲವನಾದಿಯಿಂದವರಿರವ ಅಹುದಲ್ಲೆಂದು ಪೇಳುವುದೆಂದ ಕರ್ಣ ನಿಗೆ (ಜೆನಭಾ. ೨೨–೨೩). [ಓಲು$_1$+ -ವೆ]

**ಓಲೆ** (ನಾ). **೧.** ತಾಳೆಮರದ ಗರಿ, —ಎಲೆ: ಪಲವು ಕಪ್ಪಡಂಗ ಳೊಳ್ ಸುತ್ತಿರ್ಪುದೊಂದೋಲೆಯೊಳ್ ಬರೆದಿರ್ದ ಗಾಹೆಯಂ ಕಂಡು (ಪಂಚತಂ. ೧೯೩–೩); ಮಾಯದ ಕೈಯಲ್ಲಿ ಓಲೆ ಕಂಠವ ಕೊಟ್ಟರೆ ಲಗುನ ವಿಗುನವ ಬರೆಯಿತ್ತು ನೋಡಾ (ಅವಚಂ. ೯–೩೬). **೨.** ಕಾಗದ; ಪತ್ರ: "ಓಲೆ ಪತ್ರಮದು ಲೇಖ್ಯಮಕ್ಕು" (ಮಂಗರಾ. ೧೦೫–೧೫); ಒಂದೋಲೆಯನಿಂತೆಂದು ಬರೆದಳ್ (ವಡ್ಡಾರಾ. ೧೬೩–೭); ನಿನತೊಂದೋ ಲೆಗೆ ತೀರ್ವುದೊಂದು ಮನೆವಾರ್ತೆಗಿದೇನೆಂದರಸ ಬಳಿಯೆ ನುಡಿದಪೆ (ಆದಿಪು. ೧೪–೩೦); ಈವೋಲೆಗಂಡಾಕ್ಷಣಂ ಬರ್ಪುದು (ಬೊಮ್ಮರ. ೧೭೬–೩); ಓದಿಸಿದನೋಲೆಯನು ತನ್ನೆದೆ ನಾದುದಾದ ವಿಮೋಹರಸದಲಿ (ಸಾಳ್ವಭಾ. ೮–೮೦); ಅಂಚೆಯಾಳು ಬಂದು ಕೆಲವು ಓಲೆಗಳನ್ನು ಮಾಧ ವನ ಕೈಗೆ ಕೊಟ್ಟುಹೋದ (ತೇಮೋಡ. ೩೦). **೩.** ಕಿವಿಯಲ್ಲಿಡುವ ಆಭರಣ; ಸುರುಳಿಸುತ್ತಿ ಕಿವಿಗೆ ಇಟ್ಟುಕೊಳ್ಳುವ ತಾಳೆಗರಿ: ನೀನೆನ್ನೋಲೆಯ ಕಡಗದಱಿವನೇಂ ನೋಡಿದಪಾ (ಪಂಪಭಾ. ೧೧–೧೨೩); ಕಿವಿಯಲಿಕ್ಕಿದ ಬಳಹದೋಲೆ (ಬಸರ. ೯–೧೧೧); ಕೋಲನುಗಿದೆಯೊ ನನ್ನ ಕಿವಿಯೆರಡೋಲೆದೆಗೆದೆಯೊ (ಸಾಳ್ವಭಾ. ೫–೩೯); ಓಲೆ ಮಾರಿದರೂ ಸಾಲದ ಉಪದ್ರ ನಿಲ್ಲಲಿಲ್ಲ (ಗಾದೆ). 'ಮುತ್ತಿನೋಲೆ', 'ರನ್ನದೋಲೆ' ಪರಾ. **೪.** ರಥದ ಮೇಲೆ ಛತ್ರದಂತೆ ಇರುವ ಮೇಲ್ಗಟ್ಟು (ಈ). ಓಲೆಯುವ = ಅಂಚೆಯ ಆಳು; ಓಲೆಕಾರ: ಪಜರ ಬೆಸದೊಳೋ ಲೆಯವನಾಗಿ ಬಂದು (ಚಾವುಂಪು. ೬೩–೭). [ದೇ. ‖ ತಮಿ. ಓಲೈ; ಮಲ. ಓಲ; ತುಳು. ಕೊಡ. ಓಲೆ]

**ಓಲೆಕಾತಿ** 'ಓಲೆಗಾತಿ' ನೋ.

**ಓಲೆಕಾರ** 'ಓಲೆಕಾಱ' ನೋ.

**ಓಲೆಕಾಱ, ಓಲೆಕಾರ** (ನಾ). **೧.** ಕಾಗದ ಪತ್ರಗಳನ್ನು ಒಯ್ದು ಮುಟ್ಟಿಸುವ ಸೇವಕ; ಅಂಚೆಯ ಆಳು: ಕಾಳೆಗವಿದು ಕಡೆಯೆನುತ ಬಾಳುವಿಡಿದು ನಡೆದುದು ವ್ಯಸನಗಳೆನಿಪೋಲೆಕಾಱರೊಗ್ಗಿನಲಿ (ತ್ರಿಪುಸಾಂ. ೧೮–೨೦೮); ಓಲೆಕಾಱರ್ ಬಂದು ಮುನಿಗೆಱಗಿ ಪಾವುಡೆಯುಮಂ ಕಟ್ಟೋಲೆಯುಮನೊಪ್ಪಿಸಿದರ್ (ರಾಮಾಶ್ವ. ೬೯–೨೭). **ಓಲೆಕಾರ: ೧.** ದ್ವಾರಸಮುದ್ರದಿಂದ ಓಲೆಕಾರರು ಬಂದಿರಲಿಲ್ಲವೆ? (ತುಂಗಭ. ೫); ನೀಲ ಬಾಲಕಗೆ ಚಂದ, ಕೋಲು ಓಲೆಕಾರಗೆ ಚಂದ (ಗಾದೆ). **೨.** ಸೇವಕ: ಓಲೆಕಾರರಿಗೆ ಕೃಷ್ಣನನ್ನು ಹಿಡಿದು ಕಂಬಕ್ಕೆ ಕಟ್ಟಿಹಾಕುವಂತೆ ಅಪ್ಪಣೆ ಮಾಡಿದನು (ನೀತಿಚಿಂ. I, ೧೧). **೩.** ತೋಟಿ, ತಳವಾರ ಮೊದಲಾದ ಗ್ರಾಮನೌಕರ. [ಓಲೆ+ -ಕಾಱ]

**ಓಲೆಕಾಱಿಕೆ** (ನಾ). ಕಾಗದಗಳನ್ನು ತಲಪಿಸುವ, ತರುವ ಕೆಲಸ; ಓಲೆಕಾರತನ; ಸೇವಾವೃತ್ತಿ: ಅಟಕಾಱಿಕೆ, ಓಲೆಕಾಱಿಕೆ, ಕಂಚು ಗಾಱಿಕೆ, ಬಳೆಗಾಱಿಕೆ (ಶಬ್ದಾನು. ೪೩೧ ವ್ಯಾಖ್ಯಾ). [ಓಲೆಕಾಱ + -ಇಕೆ]

**ಓಲೆಕೊಡೆ** 'ಓಲೆಗೊಡೆ' ನೋ.

**ಓಲೆಕೊಪ್ಪು** (ನಾ). ಕಿವಿಗಿಟ್ಟುಕೊಳ್ಳುವ ಒಂದು ಆಭರಣ: ಮುಗಿಲಲಲ್ಲಾಡುವ ಬಾವಿಲಿ ಮಲ್ಲಿಗೆ ಕಿವಿಗೊಪ್ಪು ಓಲೆಕೊಪ್ಪು ಚಳ ತುಂಬ (ಗರಿ. ೧೧೬–೯). [ಓಲೆ + ಕೊಪ್ಪು$_2$]

**ಓಲೆಗರಿ** (ನಾ). ಓಲೆಯ ಗರಿ, —ಎಸಳು: ಅಲ್ಲೊಂದು ಕುಟೀರ ವಿದ್ದಿತು. ಅದಕ್ಕೆ ತಾಳೇ ಓಲೆಗರಿ ಹೊದ್ದಿಸಿದ್ದಿತು (ದೇವೀಚಾ. ೪೪). [ಓಲೆ + ಗರಿ (< ಗಱಿ)]

**ಓಲೆಗಾತಿ, ಓಲೆಕಾತಿ** (ನಾ). ಸೇವಕಿ; ದಾಸಿ; ಊಳಿಗದವಳು: ಭೂಪತಿಯೋಲೆಗಾತಿಯರಿದಿರಲಾಡಿದ ಭಾಷೆಯಿನ್ನೊಮ್ಮೆ (ಕುವ್ಯಾದ್ರೋ. ೯–೪೩). **ಓಲೆಕಾತಿ:** ನಿಮ್ಮಡಿಯೋಲೆಕಾತಿಯರೊಳಗೆ ಮಾಟನ ಮೇಲು ಗೈಯವಳಾವಳು (ಕುವ್ಯಾವಿ. ೨–೧೩). [ಓಲೆಕಾಱ + -ತಿ$_1$ (< -ಇತ್ತಿ)]

**ಓಲೆಗುಡು** (ಕ್ರಿ). ಪತ್ರವನ್ನು ಕಳಿಸು: ಮಾವಿನೊಳ್ ಮಸಗುತುಮಿರ್ಪ ಬಲ್ಸೊನೆಯ ಸೋನೆಗೆ ಕಾಂಚನಕೇತಕೀ ನವಪ್ರಸವದಳಂಗಳೋಲೆ ಗುಡೆ (ಶಮುದ. ನ. ೭೮ ಪ್ರಯೋ). [ಓಲೆ + ಕುಡು$_1$ (< ಕೊಡು)]

**ಓಲೆಗೊಡೆ, ಓಲೆಕೊಡೆ** (ನಾ). ಓಲೆಗರಿಗಳಿಂದ ಮಾಡಿದ ಕೊಡೆ; ತಾಳೆಗರಿಯ ಛತ್ರಿ: (ನೀರ್ದಾರೆಗಳ ಓಲೆಗೊಡೆಯನ್ನು ರತ್ನಕಂಬಳ ಕ್ಕೆಳೆಹಿಡಿಬಿಟ್ಟು, ಉತ್ತರಿಗೆಯನ್ನು ಬಿಚ್ಚಿ ಕಾಲೊರಸಿಕೊಳ್ಳುತ್ತಿರುವನು) (ಮಂತ್ರಶ. ೩೦–೨೦). **ಓಲೆಕೊಡೆ:** ಇಷ್ಟು ಜನರು ಸಿಕ್ಕಿದ ಚಂಪೆ ಚೂರು ಗೋರಬು, ಓಲೆಕೊಡೆಗಳನ್ನು ಹಿಡಿದುಕೊಂಡು ಹೊರಟರು (ಮರಮು. ೩); ಒಂದು ಓಲೆಕೊಡೆಯನ್ನಾದರೂ ಈಸಿಕೊಂಡು ಬರು ತ್ತೇನೆ (ಮಲೆಮ. ೫೩೩). [ಓಲೆ + ಕೊಡೆ$_2$]

**ಓಲೆಗ್ರಂಥ** (ನಾ). ತಾಳೆಗರಿಯ ಪುಸ್ತಕ: ಓಲೆಗ್ರಂಥ, ಹಸ್ತಪ್ರತಿ ... ಮುಂತಾದುವುಗಳನ್ನು ವಿಷಯಾನುಗುಣವಾಗಿ ೧ರಿಂದ ೯ರ ವರೆಗೆ ಒಂಬತ್ತು ಮುಖ್ಯವಿಭಾಗಗಳಲ್ಲಿ ವಿಭಜಿಸಲಾಗುತ್ತದೆ (ಗ್ರಂಥಾಲ. ೧೮). [ಓಲೆ + ಗ್ರಂಥ]

**ಓಲೆಚಂದ್ರಿಕೆ** (ನಾ). ಬರಹವುಳ್ಳ ತಾಳೆಗರಿಯ ಸುರುಳಿ (ಈ). [ಓಲೆ + ಚಂದ್ರಿಕೆ]

**ಓಲೆತಿರಗಣಿ** (ನಾ). ಓಲೆಯ ತಿರುಪು; ಓಲೆಯನ್ನು ಬಿಗಿಯಾಗಿ ಕೂಡಿಸುವ ತಿರುಪಿನ ಮೊಳೆ (ಈ). [ಓಲೆ + ತಿರಗಣಿ (< ತಿರಿಗಣಿ)]

**ಓಲೆತಿರುಪು** (ನಾ). = ಓಲೆತಿರಗಣಿ: ಓಲೆತಿರುಪು ಕಳೆದು ಹೋಗಿದೆ (ರೂಢಿ). [ಓಲೆ + ತಿರುಪು$_2$ (< ತಿರಿಪು$_2$)]

**ಓಲೆಬೆಲ್ಲ** (ನಾ). ತಾಳೆಮರದ ರಸದಿಂದ ಮಾಡಿದ ಬೆಲ್ಲ; ತಾಳೆ ಬೆಲ್ಲ: ಕೊಬರಿ, ಕಡಲೆ, ಉತ್ತುತ್ತೆ, ಓಲೆಬೆಲ್ಲ ... ಮೊದಲಾದ ವಿಶೇಷ ವಾಗಿ-ಮಕ್ಕಳ ಹಿಗ್ಗಿಗೆ ಕಾರಣವಾಗುವ ಪದಾರ್ಥಗಳನ್ನೂ ಮಾರಾಟಕ್ಕೆ ತರುತ್ತಿದ್ದರು (ಮಲೆಮ. ೪೩೭). [ಓಲೆ + ಬೆಲ್ಲ]

**ಓಲೆಭಾಗ್ಯ** 'ಓಲೆವಾಗ್ಯ' ನೋ.

**ಓಲೆಯುಚಂದಿಗ** (ನಾ). ಒಬ್ಬಾತನ ಹೆಸರು: ಶ್ರೀ ಓಲೆಯುಚನ್ದಿಗನುಂ ಗಾಳಿಗನುಂ ಮೊದಲಾಗೆ ಅಯ್ನೂರ್ಬ್ಬರುಂ ತುಪ್ಪವನುಱಿದೋರ್ (ಸೌಇಇ. XI–i, ೧೨–೧೩; 868). [ಓಲೆ + ಚಂದಿಗ]

**ಓಲ್ಯೆಯುಡಕು** (ಕ್ರಿ). ಓಲೆಯನ್ನು ಒಯ್ದು ಮುಟ್ಟಿಸು; ಅಂಚೆಯ ಕೆಲಸಮಾಡು: ಓಲೆಯಡಕುವ ವಿಶಾಖನಂದಿ ಗಣಿಕಾವಾಟದೊಳ್ ಸುಱಿಯುತ್ತಿರ್ದು ಪರಿತಂದು ನೋಡಿ (ಶಾಂತಿಪು. ೭–೫೯ ವ). [ಓಲೆ + ಅಡಕು$_1$ (< ಅಡುಕು)]

**ಓಲೆಯೊಯ್** (ಕ್ರಿ). ಪತ್ರಗಳನ್ನು ಒಯ್ಯು: ಇತ್ತರಂದುಱದಾತಂಗಿರ ದೋಲೆಯೊಯ್ದ ಬೆಸನಂ (ಶಾಂತಿಪು. ೭–೫೯). [ಓಲೆ + ಒಯ್$_1$]

**ಓಲೆವತ್ತಳೆ** (ನಾ). ಕಾಗದ ಪತ್ರ : ಈ ಪಿಶಾಚರಾಯನ ರಾಯಬೀಡಾರ ದೋಲಗದಲ್ಲಿ ಗುಟ್ಟಾಗಿ ತಮ್ಮ ಓಲೆವತ್ತಳೆಯನ್ನೊಪ್ಪಿಸಲೆಂದು (ಮಂತ್ರಶ. ೧೧೨–೫). [ಓಲೆ + ಪತ್ತಳೆ]

**ಓಲೆವಾಗ್ಯ, ಓಲೆಭಾಗ್ಯ** (ನಾ). ಓಲೆಯನ್ನು ತೊಡುವ ಭಾಗ್ಯ ; ಮುತ್ತೈದೆತನ ; ಸೌಮಂಗಲ್ಯ : ನಿನಗಱುವುಂಟೆ ಎಂದು ಕೇಳೆ ಯೆನ್ನೋಲೆವಾಗ್ಯಮುಂಟೆಂದಳ್ (ಪಂಪಭಾ. ೧೦–೪೫ ವ); ನಿನತೋಲೆ ವಾಗ್ಯಮೋಸರಿಸಿದುದೆ ಧರಿತ್ರಿ (ವರ್ಧಪು. ೯–೭೦). ಓಲೆಭಾಗ್ಯ : ಮೇಲಣನುವನು ಬಲ್ಲೆ ನೀ ತನ್ನೋಲೆಭಾಗ್ಯವ ಕಾಯಬೇಹುದು (ಕುವ್ಯಾದ್ರೋ. ಓರಿಇ. ೮–೫೨ ಅಡಿಟ); ವಿಷಯೆಯ ಓಲೆಭಾಗ್ಯ ಸುಟ್ಟುರಿದರೇನಂತೆ ! (ಚಂದ್ರಸ. ೯೦). [ಓಲೆ + ಭಾಗ್ಯ]

**ಓಲೆಸರ್ಪಣಿ** (ನಾ). ಓಲೆಗೆ ಜೋಡಿಸಿದ ಅಲಂಕಾರದ ಸರಪಣಿ ; ಕೆನ್ನೆಸರ (ಕಿ). [ಓಲೆ + ಸರ್ಪಣಿ$_0$ (< ಸರಪಣಿ)]

**ಓಲೈಸಿಸು** (ಕ್ರಿ). ಆಶ್ರಯಿಸುವಂತೆ ಮಾಡು : ನಿನ್ನ ಕೊಂದು ಪಾಳ್ಯ ಸುವೆಂ ನಾಗಲೋಕಮಂ ಶೋಕಮುಮನೋಲೈಸಿಸುವೆನೆಲವೊ ನಿನ್ನಬಲೆ ಯರ್ಗೆ (ಚಿಬಪು. ೪೯–೨೧). [ಓಲೈಸು$_2$ (< ಓಲಗಿಸು$_2$) + –ಇಸು$_3$]

**ಓಲೈಸು$_1$** ‘ಓಲಗಿಸು$_1$’ ನೋ.

**ಓಲೈಸು$_2$** ‘ಓಲಗಿಸು$_2$’ ನೋ.

**ಓವ** ‘ಓಮ್ಮ$_1$’ ನೋ.

**ಓವಗಿಸು** (ಕ್ರಿ). ಆಕ್ರಮಿಸು ; ಮುತ್ತು : ಅತಿದೀರ್ಘೋರ್ಧ್ವ ಘ್ರಾಣ ಹಸ್ತಂ ನಿಶಿತದಶನದಂಷ್ಟ್ರಾಂಕುರಂ ಪಕ್ಷರಕ್ಷಾಯತ ಪಕ್ಷಂ ತಾರ್ಕ್ಷ್ಯ ನಂತೋವಗಿಸಿ ತುಳಿಯೆ ತನ್ನಾನೆ (ಎಕ. V, ಬೇಲೂರು. ೧೭–೩ ; 1136). [ಓವಗ್ಗ$_0$ + –ಇಸು$_3$. / ಪ್ರಾ. ಓವಗ್ಗ = ಆಕ್ರಮಿಸು, ಪರಾಭವಿಸು]

**ಓವಜ** ‘ಒವರ್ಝು’ ನೋ.

**ಓವಡಿಸು** (ಕ್ರಿ). ಹೆಚ್ಚು ; ವೃದ್ಧಿಯಾಗು : ನುಡಿ ಗದ್ಗದಿಕೆಯೊಳದ್ದು ಉಪಚಾರವೋವಡಿ [ಪಾಠಾಂ. ವೊಲ್ಲುಡಿ, ವೋಹರಿ]ಸಿ ಲಲ್ಲೆ ಮೆಯ್ದೋಱಿ ಮಱಹಂಕುರಿಸಿ ಸವಿ ಪಲ್ಲವಿಸಿ (ನಂಬಿರ. ೧೦–೯೭). [ಓವಡ್ಡ$_0$ (< ಸಂ. ಉಪವೃದ್ಧ) + –ಇಸು$_3$]

**ಓವಣ** (ನಾ). ಪ್ರೀತಿ ; “ಮೋಹ” (ಪ್ರಭಣ್ಣ) : ಒಳಗುಳ್ಳೋವಣಮ ಮರ್ದಿರೆ ಚಳನಂ ಪೊಱಗೆಸೆಯೆ ಬೆಳಪನೆಯ್ದುವ ಬೆಳಗಂ ಪೋಳೆವ ಸುಲಿ ವಲ್ಲೆ ಮಸುಳಿಸೆ ವಿಳಾಸದಿಂ ದರ್ಭಶಯನ ತಳಗತನಾದಂ (ಕಾವ್ಯಾವ. ೨೪೭). [?]

**ಓವತ** (ನಾ). (?) : ಬಾವಂನ ನಿರತಂ ತಂದಾವಗಮೊಂದೆಸೆಯೊಳಿಟ್ಟು ತಂನಂ ಪ್ರತಿಯಿಟ್ಟ ವೀರರೊಡನೆ ತೂಗಿದೊಡೋವತ ವೀರಕ್ಕೆ ಮಾಧವಂ ಗೆಲೆವಂದಂ (ಸೌಇಇ. IX–i, ೨೪೯–೪೭ ; 1147). [?]

**ಓವತೆ** (ನಾ). ಒಂದು ತೆರಿಗೆ : ಸೇಸೆ ಗ ೨ ಹಾ ೨ ಕಂಡಿಕೆವಣ ಪ ೪ ಓವತೆ ಗ ೮ ಅಂತು ಗ ೨೯ (ಎಕ. V, ಹಾಸನ. ೮೪–೬೨ ; 1230). [?]

**ಓವನಿಗೆ** (ನಾ). ಒಂದು ಜಾತಿಯ ಹಾಡುಗಬ್ಬ : ಏವೇಳ್ವುದೊ ಶಿವಮಾರ ಮಹೀವಳಯಾಧಿಪನ ಸುಭಗ ಕವಿತಾಗುಣಮಂ ಭೂವಳಯ ದೊಳ್ಗ ಜಾಷ್ಟಕಮೋವನಿಗೆಯುಮೊನಕೆವಾಡುಮಾಡುದೆ ಪೇಳ್ಗು (ಎಕ. VIII, ನಗರ. ೩೫–೩೩ ; 1077) ; ಆವ ಮೆಯ್ಕೊಳಂ ಹಾಡುವರಾದ ಗೋವನಿಗೆವಾಡುವರುಂ ನೃಪ ನಿನ್ನ ಗೀತಮಂ ಹಾಡಿಯೆ (ವರ್ಧಪು. ೪–೩೭). [?]

**ಓವರಿ, ಓರಿ, ಓಹರಿ** (ನಾ). ೧. ಒಳಮನೆ ; ಕೋಣೆ ; ಗರ್ಭಗೃಹ : “ಓವರಿಯುದುಪಗೃಹಂ ಗರ್ಭಗೃಹಮಕ್ಕು” (ಮಂಗರಾ. ೫೮–೮) ; “ಓವರಿಯುಗಳಂತಿಗೆ ಕೋಣೆಯು” (ಕವಿಕಂ. ೧೪೪); ಪುರೋಚನನುಮಾ ಮನೆಯೊಳೊಂದೋವರಿಯೊಳ್ ಮಱಕೆಂದಿದಂ (ಪಂಪಭಾ. ೩–೪ ವ) ; ನಂಬುಗೆಯೆಂಬ ಬಲ್ಗಾಪನಿಕ್ಕಿ ಮನಮೆಂಬ ವಜ್ರದೋವರಿಯೊಳಿರಿಸಿ (ಧರ್ಮಾಮೃ. ೨–೨) ; ಆಷ್ಟದಳ ಕಮಲವೆಂಬ ಓವರಿಯೊಳಗೆ ನಿಜನಿವಾಸವೆಂಬ ಹಾಸುಗೆಯ ಹಾಸಿ (ಬಸಹ. ೭–೧೭) ; ವರಸಂಧಾನವೋ ಸಂಗ್ರಾಮವೋ ನಯವೇನು ಮನದೋವರಿಯೊಳಿರಿಸದೆ ಹೇಳು ನಿಶ್ಚಯವ (ಕುವ್ಯಾಉ. ೩–೩) ; ಆ ಒತ್ತಿನ ಚಿತ್ರದ ಬಾಗಿಲೋವರಿ ಯೊಳಾವಗಂ ತೀವಿ ಕಾವಲಿರ್ಪ ಬಲ್ಲಿದರಪ್ಪ ಗೊಲ್ಲರೆಲ್ಲರುಂ (ಚಿಕವಂ. ೭೪–೧). ೨. ಪಕ್ಕ ; ಪಾರ್ಶ್ವ ; ಮಗ್ಗುಲು : ಶಿಲೆಯೋವರಿಯೊಳ್ ಹೆಜ್ಜೇನ ಹುಟ್ಟಿ ಸೊಗಯಿಸಿ ತೋರ್ಕುಂ (ಸೂಕ್ತಿಸು. ೩–೮೪) ; ಪರ್ವತದ ಮೂಡಲ ಓವರಿಯಲ್ಲಿ ನಿಸರ್ಗ ನಿರ್ಮಿತವಾದುದೊಂದು ಗುಹೆಯಿದೆ (ರಾಜಯೋ. ೮೩). ೩. (ಅಲಂ) ಮುಚ್ಚುಮರೆ : ಮನದೊಳೋವರಿ ಯಿಲ್ಲ ಬುದ್ಧಿಯೊಳು ವಿಸಂಚವಿಲ್ಲ (ಬಸರ. ೮–೫೧) ; ಗುರುವಿನೊಳೋ ವರಿ ಗುರುವಿನೊಳ್ ಮಱೆ ಮಿಥ್ಯೆ ಗುರುವಿನೊಳಗೆ ತರ್ಕ ಪುಸಿ ನಿಂದೆ (ಪರಬೋ. ೬–೪–೧). **ಓರಿ :** ೧. ವಿದ್ಯೆಗಲಿಸಲು ಒಂದು ಓರಿಯನ್ನು ಅಕೆಗೆ ಬಿಟ್ಟುಕೊಟ್ಟರು (ಗರತಿ. ೧೬೦). **ಓಹರಿ :** ೧. ಹಡೆಯಲ್ಲಿ ಹೆಬ್ಬಿಲ ಕಣ್ಣಿನ ಓಹರಿಯಲ್ಲಿ ಹುಲ್ಲಿನ ಹಾಸಿಕೆಯ ಶಯನದ ಮನೆ (ಅಱಮಾ. ೧೫೪) ; ಈ ಉಭಯವ ಮುಚ್ಚಿ ನಾಸಿಕದೋಹರಿ ನಷ್ಟವಾದಲ್ಲಿ ಪ್ರಸಾದಿ ಸ್ಥಲ (ಮೋಳಿಮಾ. ೧೩೭–೫೨೪) ; ತ್ರಿಗುಣಾತ್ಮಕನ ತ್ರಿಗುಣ ಓಹರಿಯಲ್ಲಿ ಬಳಸಿಪ್ಪ ಬಂಧದಲ್ಲಿ ಮಗ್ನನಾಗದೆ (ವಸುಗುಂ. ೯೦) ; ಕಾಹಿನಿಂದರ್ಚಿಸಿದ ಮಂಟಪದೋಹರಿಯೊಳೆಸೆದಿರ್ಪಳಾ ಮಣಿಮಯದ ಕಾಂತಿಯಲಿ (ಮೈರಾಕಾ. ೩–೬೧).

[ಪ್ರಾ. ಓವಾರಿಅ (< ಸಂ. ಅಪವರಕ). / ಮರಾ. ಓವರೀ ; ತೆಲು. ಓವರಿ]

**ಓವಳಿಸು** (ಕ್ರಿ). (ಆರತಿ) ಬೆಳಗು : ಪೌರಾಂಗನೆಯರ್ ತಂದೆಟ್ಟಿಯಿಂ ದೋವಳಿಸುವ ಮಣಿದೀಪ ಪ್ರಭಾಮಾಳೆ ಮಾರ್ತಂಡನಗುರ್ವಂ ಮಿಱಿ ಪರ್ವುತ್ತಿರೆ (ಶಾಂತೀಶ್ವ. ೮–೧೩೯). [← ಮರಾ. ಓವಾಳಣೇ?]

**ಓವಿ** (ನಾ). [ಛಂದ] ಮರಾಠಿಯಲ್ಲಿ ಒಂದು ಪದ್ಯಜಾತಿ : ಓವಿ – ಅಭಂಗಗಳ ಮೂಲಕ . . . ಜ್ಞಾನಭಕ್ತಿಗಳನ್ನು ಈ ಸಂತರು ಪ್ರಚಾರ ಮಾಡಿದರು (ಕರ್ನಾಕ. ೩೭). [← ಮರಾ. ಓವೀ]

**ಓವಿಗ** (ನಾ). ರಕ್ಷಕ ; ಕಾಪಾಡುವವನು : ನಾವಾಗಿ ಭವಾಬ್ಧಿಯನು ದಾಟಿಸುವನು ನಮ್ಮ ಘೋವ ನಾವು ವಿಜಯವಿಠ್ಠಲನು ಪೋವಿಗನು (ಮೋಕ್ಷದೀ. ೪೭–೨೩) ; ಪಶುಪಾಲಕ ನಮ್ಮ ವಿಜಯವಿಠ್ಠಲರೇಯ ಆಸಮಾ ನೀನಾದರೂ ಭಕ್ತರಿಗೆ ಪೋವಿಗಾ (ವಿಸಾಸು. ೮೧–೩). [ಓವು$_0$ + –ಇಗ]

**ಓವು** ‘ಓಮ್ಮ$_1$’ ನೋ.

**ಓವುಕಾಳು** ‘ಓಮುಕಾಳು’ ನೋ.

**ಓವೊ, ಓವೋ** (ಅ). ಆಶ್ಚರ್ಯವನ್ನೂ ದುಃಖವನ್ನೂ ಸೂಚಿಸುವ ನಿಪಾತಾವ್ಯಯ. (i) ಆಶ್ಚರ್ಯಕ್ಕೆ : ಒಂದೊಂದೆ ರಸದ ಸೋಲಮ ದೊಂದೊಂದೆನೆ ಕೊಲ್ಲುಮೋವೊ ಲಂಪಳರಪ್ಪೆಮ್ಮಂದಿಗರಂ ಬಗೆವಂದದೆ ಕೊಂದಿಕ್ಕವೆ ಸಕಳವಿಷಯವಿಷಮವಿಷಂಗಳ್ (ಆದಿಪು. ೪–೭೩) ; ಹೊಸ ತಿದು ಕಾಲನ ಕೋಣನ – ಓವೊ! ಉಸಿರಿನ ಸುಯ್ಯೋ ? (ಕವಿಪು. ೨೭–೪). (ii) ದುಃಖಕ್ಕೆ : ಓವೊ ಕೆಟ್ಟೆನೀ ಚಿತ್ತಜತಾಪವಗ್ಗಲಿಸಿದಪ್ಪುದು (ಕಾದಂಪೂ. ೮೮೨); ಓವೊ ಕೊಂಡೀ ವ್ರತಮಂ ತೊಱೆವುದಱಿಂ ಸಾವುದು ಕರಮ್ಲುಱುವುದು ಚೀ ಕಷ್ಟಮೆಂದು ನಿಶ್ಚಲಮತಿಯಿಂ (ಧರ್ಮಾಮೃ. ೩–೯೭). **ಓವೋ :** (i). ಓವೋ ಪೆಱತೇನೊ ನೀನೆ ಭುವನಕ್ಕಾರಾಧ್ಯನೈ (ಆದಿಪು. ೧೧–೯೮) ; ಓವೋ ಮತ್ತಿದು ಪೆಱತೇನೆನುತ್ತಮೆರ್ದೆ ಪವ್ವನೆ ಪಾಱಲ್ (ಕಾದಂಪೂ. ೮೯೯).

**ಓವೋವೊ, ಓವೋವೋ** (ದ್ವಿರುಕ್ತಿ) : ತನುವಂ ನಿಷ್ಠುರಮಪ್ಪ ಪವಾಸಂಗಳಿನಿರದಿಂತೋವೋವೊ ತವಿಸುವುನ್ನತನಾವಂ (ಧರ್ಮಾಮೃ. ೬-೪೩); ಓವೋವೊ [ಪಾಠಾಂ. ನಡೆನಡೆ] ಎಂದೆಲ್ಲಾ ಸಖಿಯರ್ ಸಂದಣಿಸಿ ಹೊಸಪೂಜೆ ಹಸನಾಯಿತ್ತೆನುತೆ (ನಂಬಿರ. ೧೨-೬೨); ಓವೋವೋ ನಾನು ಹೇಳುವ ಮಾತನ್ನು ಸ್ವಲ್ಪ ಕೇಳು (ರೂಢಿ). [?]

**ಓವೋ** 'ಓವೊ' ನೋ.

**ಓಷ** (ನಾ). ೧. ಉರಿಯುವಿಕೆ; ದಾಹ. ೨. [ವೈದ್ಯಶಾ] ತ್ರಿಕಟುಕ : "ಓಷಮೆನೆ ತ್ರಿಕಟುಕಾಖ್ಯಂ" (ಮಂಗರಾ. ೪೧-೩೬). [ಸಂ.]

**ಓಷಧ** (ನಾ). ಔಷಧ; ಮದ್ದು : ಅಲ್ಲಿಪ್ಪ ತಪೋಧನರ ಪಥ್ಯಾಹಾರ ಮೋಷಧ ನಿಮಿತ್ಯಕಮಾಗಿ (ಸೌಇಇ. XX, ೨೧-೫೬ ; 1019). [< ಸಂ. ಔಷಧ]

**ಓಷಧಿ** (ನಾ). ೧. ಸಸ್ಯ; ಮೂಲಿಕೆ. ೨. ಔಷಧಿಗಾಗಿ ಉಪಯೋಗಿಸುವ ಮೂಲಿಕೆ. [ಸಂ.]

**ಓಷಧೀಶ** (ನಾ). ಓಷಧಿಗಳ ಒಡೆಯ; ಚಂದ್ರ: "ಓಷಧೀಶಂ ಶಶಾಂಕಂ" (ಮಂಗರಾ. ೧೧-೪). [ಓಷಧಿ + ಈಶ]

**ಓಷಧೀಶ್ವರ** (ನಾ). = ಓಷಧೀಶ: ಬೆಳ್ವೆಳಗಿನ ಬಾಳ್ವೆಳೆಯಂ ತಳ್ವದೆ ಬಾಂಬೊಲದೊಳರುಣಕರಶಿಖಿಶಿಖೆ ಪಾಳೆಳ್ವಿನಮಳುರ್ದುಱೆ ಚಿಂತೆಯ ನಾಳ್ವಂತೆವೊಲೋಷಧೀಶ್ವರಂ ಕಳೆಗೆಟ್ಟಂ (ರಾಜಶೇ. ೧೨-೧೩). [ಓಷಧಿ + ಈಶ್ವರ]

**ಓಷ್ಟ್ರ** (ನಾ). ಒಂಟೆ: ತುರಗ ತುರು ಅಜ ಓಷ್ಟ್ರವನಮನೆಗರೆವುದಂಗಡಿ ವಸನವಿರಚಿತವನ್ನಪಾನಗಳಾಚರಿಯಿಸುವ ಪಣ್ ಕಾಯಿ ಜಾತಿಯ ನೊರೆದು (ಬಿಜ್ಜಪು. ೧೦-೪೩). [< ಸಂ. ಉಷ್ಟ್ರ]

**ಓಷ್ಠ** (ನಾ). ತುಟಿ; ಮೇಲ್ದುಟಿ : "ಅಧರಃ, ದಂತಚ್ಛದಃ, ಓಷ್ಠಃ, ದಂತವಾಸಃ – ಈ ೪ ತುಟಿ" (ಹಲಾಯು. ೮೬-೩೭೦); ಒಂದು ಶೂನ್ಯ ಅಧರವಾಗೆ ಒಂದು ಶೂನ್ಯ ಓಷ್ಠವಾಗೆ ಪೂರ್ಣವೊಂದೆ ಚುಂಬಿತ (ಅನಿಕೇ. ೧೯-೭). [ಸಂ.]

**ಓಷ್ಠಪಾನ** (ನಾ). ಮುತ್ತು; ಚುಂಬನ : "ವದನಕೂಟಂ ಮುತ್ತು ಚುಂಬನಮದೋಷ್ಠಪಾನಂ" (ಮಂಗರಾ. ೯೭-೧೬). [ಓಷ್ಠ + ಪಾನ]

**ಓಷ್ಠಾಗತ** (ಗು). ತುಟಿಯವರೆಗೆ ಬಂದ; ತುಟಿಯಲ್ಲಿ ಮಾತ್ರ ನಿಂತ: ಎರಡು ದಿನಗಳಿಂದ ಎಲ್ಲರಿಗೂ ನಿರಾಹಾರವಾದ್ದರಿಂದ ಪ್ರಾಣವು ಓಷ್ಠಾಗತವಾಗಿರುವುದೆಂದೂ ಹೇಳತೊಡಗಿದರು (ಕಪಾಕುಂ. ೮). [ಓಷ್ಠ + ಆಗತ]

**ಓಷ್ಠಿ** (ನಾ). ತೊಂಡೆಗಿಡ, —ಹಣ್ಣು : "ಓಷ್ಠಿ ತುಂಡಿಕೆ ಬಿಂಬೆ ತೊಂಡೆಯುಕ್ಕುಂ" (ಮಂಗರಾ. ೩೮-೨೫). [ಸಂ. ಓಷ್ಠೀ]

**ಓಷ್ಠ್ಯ** (ಗು). ೧. ತುಟಿಯಲ್ಲಿರುವ. ೨. ತುಟಿಗೆ ಸಂಬಂಧಿಸಿದ; ತುಟಿಯಿಂದ ಉಚ್ಚಾರವಾಗುವ. (ನಾ). ೩. ತುಟಿಯಲ್ಲಿ ಹುಟ್ಟುವ ವರ್ಣ: "ಓಷ್ಠದಲ್ಲಿ ಉವರ್ಣ, ಪವರ್ಗ, ಉಪಧ್ಮಾನೀಯಗಳು ಹುಟ್ಟುತ್ತವೆಯಾದ್ದರಿಂದ ಇವು ಓಷ್ಠ್ಯಗಳು" (ಹೊನುಗ. ೭). [ಸಂ.]

**ಓಷ್ಠ್ಯಸ್ವರ** (ನಾ). ತುಟಿಯಿಂದ ಉಚ್ಚರಿಸುವ ಸ್ವರ: ಅಕಾರಕ್ಕೆ ಓಷ್ಠ್ಯಸ್ವರಂ ಪರಮಾಗೆ, ವತ್ವಸಂಧಿಯಾಗುವುದು (ಶಮದ. ೫೫ ಅಡಿಟ). [ಓಷ್ಠ್ಯ + ಸ್ವರ$_1$]

**ಓಸನ** (ನಾ). ಒಂದು ಊರಿನ ಹೆಸರು : ಆಮ್ನಾಯದಲಾದ ಓಸನದ ತೀರ್ಥವ ಕಾಲಂ ಕಟ್ಟಿ ಕೊಟ್ಟಂ (ಎಕ. XI, ದಾವಣ. ೧೧೪-೧೩ ; 997); ಓಸನದ ತೀರ್ತ್ಥದ ರಾಮೇಶ್ವರದೇವರ್ಗ್ಗೆ ನವಖಮ್ಮ ಖಣ್ಡ ಜೀರ್ಣ್ನೋದ್ಧಾರ ಪೂಜೆ ಪುನಸ್ಕಾರ ನಿಮಿತ್ಯಮಾಗಿ (ಎಕ. XI, ದಾವಣ. ೧೧೩-೮; 1160); ಓಸನದ ಹರಿಯಗಉಡನ ತಂಮ ಬಯಿಚಿಗಉಡ ಮಗ ಕೇತಗಉಡ ಕಲ್ಲನೆತ್ತಿಸಿ ಪ್ರತಿಷ್ಟೆಯ ಮಾಡಿದರೂ (ಎಕ. XI, ದಾವಣ. ೧೧೬-೭ ; 1397). [?]

**ಓಸರ$_1$** (ನಾ). ೧. ಒಂದು ಮಗ್ಗುಲಿಗೆ ಸರಿಯುವುದು; ಓರೆಯಾಗುವುದು; ಸಮತೂಕವಿಲ್ಲದಿರುವುದು; ಒಗ್ಗಾಲಿ: ಹೇರ್ಗಳಂ ಬಿಸುಟ ಹೋರಿಗಳ ಚಪ್ಪರಣೆಯಿಂ ನಿಲಿಸಿ ಮೂಗನೇಣಡುತೆ ಹೇರ್ಗಳ ಹೊಲಿವುತೋಸರವನು ಅಪ್ಪಿ ನೆಗಪುತ್ತೆ (ಚಿಬಪು. ೪೭-೪೬). ೨. ತಪ್ಪು; ಸುಳ್ಳು: ಓಸರದ ಬಜಿಮಾತದಲ್ಲಿದು ವೇದಮತವೆಂದ (ತೊರರಾ. ೪-೧೨-೧೩); ನುಡಿದವಧಿಗೋಸರಂ ಬಂದಲ್ಲಿ ಸಪ್ತಜಿಹ್ವಾನಲಗೆ ಗ್ರಾಸಮಿಾ ತನು (ಪರಶು. ೨-೩೨). [ಪ್ರಾ. ಓಸರ (< ಸಂ. ಅಪಸರ)]

**ಓಸರ$_2$** (ನಾ). ವಾಸರ; ದಿನ: ವಾಸರೋಸರ ಬಿಡದೆ ಶರೀರ ದಂಡಿಸಿ ಘಾಸಿಯಾಗಿ ಪಲ್ಲುಗಿರಿದರೇನು ವಾಸುದೇವನ ಪಾದಸೇವೆ ದೊರಿಯದು (ವಿಸಾಸು. ೭-೧). [< ಸಂ. ವಾಸರ]

**ಓಸರ$_3$** (ನಾ). ಪರ್ಯಾಯ (?) : ಮೂಕ ಎಂಬುದು ಹೆತ್ತ ತಾಯಿ ಇಟ್ಟ ಹೆಸರಿನ ಓಸರ ಕರೆವ ದಿನದಲಿ ಅವಳು ಕಾಣಳು ಇವನ ಪ್ರಾಪ್ತಿಯ ಬೇಸರ (ಮೂಕಮ. ೪). [?]

**ಓಸರ$_4$** (ನಾ). (?) : ಓವಿ ತುಂಬುರ ನಾರದರು ಪಂಚಮಸ್ವರಂ ತೀವಿರ್ಝಂ ಮೈಯಲ್ಲಿ ನಾಭಿ ಹೃತ್ಕರದೆಡೆಯೊಳಾವೋಸರಂಪೈಸರಂಬೊಕ್ಕೊಡಂ ತಾಳಹೀನಮಂ ಬರಲೀಯದೆ (ಚೇರಮ. ೧೦-೩೭). [?]

**ಓಸರಗೇಳು** (ಕ್ರಿ). ಪಕ್ಕಕ್ಕೆ ನಿಂತು ಕೇಳು; ಮರೆಗೆ ನಿಂತುಕೇಳು : ಅಂಗಣಗಳಲಿ ದೇವತಾಭವನಂಗಳಲಿ ಕೋಠಾರ ಮಂಟಿಯ ಸಂದಿಗೊಂದಿಯಲಿ ಹಿಂಗದೋಸರಗೇಳುತವೆ ಸೀತಾಂಗನೆಯ ನುಡಿ ಹುಟ್ಟದೇಯೆನುತಂಗಲಾಚುತ ಬೀದಿಯುಗಲಕೆ ನೋಡುತೈತಂದ (ತೊರರಾ. ೫-೨-೧೩). [ಓಸರ$_1$ + ಕೇಳು (< ಕೇಳ್)]

**ಓಸರಣೆ** (ನಾ). ಹಿಂಜರಿಯುವುದು; ಹಿಮ್ಮೆಟ್ಟುವುದು : ನಾನಾಯುಧದಗಡಣೆಗಳ ಓಸರಣೆಗೊಡದತಿಬಳರು ದಿವದಾಸೆಗಾಱರು ವೈರಿಬಲವನು ಘಾಸಿಮಾಡಿದರೊಗ್ಗಿನಲಿ (ಕುವ್ಯಾಭೀ. ೪-೬೨). [ಪ್ರಾ. ಓಸರಣ (< ಸಂ. ಅಪಸರಣ). / ಮರಾ. ಓಸರಣೇ]

**ಓಸರಿ** (ನಾ). (?) : ವೈಶ್ರವಣನಾಮಿಷಬಂಧವದೆ ಮಿಕ್ಕವರ ನೆಣದೋಸರಿಯ ತುಪ್ಪದ ಲೇಪವದೆಯೆಂದ (ತೊರರಾ. ೬-೨೭-೧೫). [?]

**ಓಸರಿಕೆ** (ನಾ). ಬಾಗುವಿಕೆ; ಪಕ್ಕಕ್ಕೆ ಸರಿಯುವುದು : ಮುಕುಳಿತ ಕರದ ಕಂಪನದ ಕೋಮಲದ ಕೊಂಕುಗಳ ಮಕುಟಸ್ತೋಮದೋಸರಿಕೆಗಳ ವಿಗತೋದ್ದಾಮರಿರ್ದರು ಭೂರಿಭಯರಸಭರಿತ ಭಾವದಲಿ (ತೊರರಾ. ೬-೧೦-೫). [ಓಸರ$_1$ + -ಇಕೆ]

**ಓಸರಿಗೆ** (ನಾ). ಮನೆಯ ಮುಂದೆ ಅಥವಾ ಹಿಂದೆ ಇರುವ ಬಂಕ; ಹಜಾರ : ಮನೆಯೊಳಾರುಮಿಲ್ಲೋಸ[ಪಾಠಾಂ. ರುವಿಲ್ಲಾಸ, ರೂವಿಲ್ಲಶ]ರಿಗೆಯೊಳ್ ತೊಟ್ಟಲೊಳಿರ್ದವ್ಯಕ್ತ ಕಿಱುಗೂಸು ಬೋಳಹ ಬೋಳಹ ಭಟ್ಟಾರಾ ಎಂದತ್ತಾಗಳ್ (ವಡ್ಡಾರಾ. ೮೫-೧೨).
[ಪ್ರಾ. ಓಸರಿಅ (< ಸಂ. ಅಪಸಾರಕ). / ಮರಾ. ಓಸರೀ, ಓಸರ, ಓಸಾರಾ; ಹಿಂ. ಉಸಾರಾ]

**ಓಸರಿಗೊಳ್** (ಕ್ರಿ). ಓರೆಯಾಗಿ ಹೋಗು; ಪಕ್ಕಕ್ಕೆ ಹೋಗು; ಮಗ್ಗುಲಾಗಿ ಹೋಗು : ಮೆಯ್ದೋಱುವುದಿಲ್ಲಿ ಸಲ್ಲದೆನಗೆಂಬವೊಲೋಸರಿಗೊಂಡು ಪೋಗುತಂ ತೂಱದೆ ಪಣ್ಣನೂದಿದುದು ತಣ್ಣೆಲರಾ ಮುನಿಯಿರ್ದ ತಾಣದೊಳ್ (ಪುಷ್ಪಪು. ೧೪-೨೬). [ಓಸರ$_0$ + ಕೊಳ್$_1$]

**ಓಸರಿಸು** (ಕ್ರಿ). ೧. ಓರೆಯಾಗು; ಅರುಗಾಗು; ಪಕ್ಕಕ್ಕೆ ಸರಿ: "ಒಳಸೋರ್ದುದು ಪಾಱಿತು ಮಲ್ಲಳಿಗೊಂಡುದು ಸರಿದುದೋಸರಿಸಿದುದು ತಾಂ" (ಕವಿಕಂ. ೨೫೨); ಚಃ ದೊರೆಯಲ್ತಿದೆಂದು ಭಾಸ್ಕರಸುತನೊಯ್ಯನೋಸರಿಸೆ (ಪಂಪಭಾ. ೩–೭೧); ಬಾಸಣಿಸಿದತುಳ ಮೋಹಮದೋಸರಿಸಲ್ ಥಳಥಳಿಪ್ಪ ವಿಮಲಾತ್ಮನವೋಲ್ (ಉದ್ಭಟ. ೫–೯೬); ಪರಬಲದ ಕಡುವೇಸಗೆಗೆ ಕವಿದುದು ರಾಜಹಂಸಪ್ರಕರವೋಸರಿಸೆ (ಕುವ್ಯಾದ್ರೋ. ೧–೪೮). ೨. ಓರೆಮಾಡು; ಪಕ್ಕಕ್ಕೆ ಸರಿಸು,—ತಳ್ಳು: ಓಸರಿಸಿದ ಜವನಿಕೆಯೊಡನೋಸರಿಸಿದನಿಸಲೆ ಕಂತು ಪುಷ್ಪಾಂಜಳಿಯಂ (ಆದಿಪು. ೯–೨೧); ಪಾವಡದರ್ಪವೊಲಿರೆ ಕೆಲರೊಯ್ಯನೆ ತುಡುಗೆಯನೋಸರಿಸೆ (ಪಂಪಭಾ. ೩–೫೦); ಮುಖಾಬ್ಜಮಂ ಮುಸುಱಿಪ ಕುಂತಳಮಧುಕರಂಗಳಂ ಕೆಲತಳಪಲ್ಲವದಿಂದೋಸರಿಸುವ ಪುಣ್ಯವನಿತೆ (ಸುಕುಮಾ. ೧೦–೧೫); ನಿಱಿಯ ಸೆಱಂಗನೋಸರಿಸಿ ಕೆಂದಳದಿಂದಮೆ (ಅರ್ಧನೇ. ೧–೧೦೦); ನಿಡುಮುಸುಕನೋಸರಿಸೆ ದೇಹದು ಸಿರಿಲ್ಲದಿರೆ (ಬಸರ. ೯–೧೫೦); ಮೇಲುದನೊಯ್ಯನೋಸರಿಸುತೆ (ಚಿಬಪು. ೫–೨೭); ಅವನ ಕಪಿವೇಷವನ್ನು ಓಸರಿಸಿ ಸ್ವಲ್ಪ ಉದಾರಹೃದಯದಿಂದ ಅವನನ್ನು ಒಬ್ಬ ಪ್ರಾಜ್ಞನೂ ಮಹಾವೀರನೂ ಆದ ಮಾನವನೆಂದೇಕೆ ಭಾವಿಸಬಾರದು? (ಭಾರದ. ೮೮). ೩. ಹಿಂಜರಿ; ಹಿಂದೆಗೆ; ಹಿಮ್ಮೆಟ್ಟು; ಬಿಟ್ಟುಹೋಗು: ಮಳೆ ಮಂಜು ಕಾಳಗತ್ತಲೆಯೆಂದೋಸರಿಸಿದೆ (ಕಾದಂಉ. ೩೧೮); ದೇಸಿಗನ ಕಾಳೆಗದಂತೋಸರಿಸಿ ನುಸುಳ್ದು ಪೋಗದೆ (ಧರ್ಮಾಮೃ. ೧೧–೨೦೨); ಪೊರೆದಾಳ್ದನ ಕಾರ್ಯಕ್ಕೋಸರಿಸದೆ ಸತ್ತವನೆ ಬಟ್ಟನೆಂಬಂ ಕರ್ಣಂ (ಅರ್ಧನೇ. ೪–೧೦೦); ಅಂಜದೆ ಹೆದಜದೋಸರಿಸದೆ (ಹಚಕಾ. ೧೧–೧೯); ಆಹವದೊಳೋಸರಿಸಿದರೆ ಭಟಸಾಹಸಕೆ ಕಲೆ ಹೊದ್ದದೇ (ಕುವ್ಯಾಭೀ. ೮–೩೧). ೪. ಬಿಟ್ಟುಬಿಡು; ತೊರೆ: ಎಲ್ಲಮನೋಸರಿಸಿ ನೆರವಿಯಲಿ ಬರಿಸಿ ನಾಳೆ ಕಾದುವಮೆಂದೊಡಂಬಡಿಸಿ (ಬಂಹರಿ. ೭–೫೬ ವ). ೫. ನೇವರಿಸು; ತಿದ್ದು; ಸರಿಪಡಿಸು: ಕುರುಳ್ಗಳೊಳ್ ತೊಡರ್ದ ದೇಸಿಯನಾವಗಮಾವ ಚೆನ್ನಪೂಗಳನವನೊಯ್ಯನೋಸರಿಸುತುಂ (ಪಂಪಭಾ. ೨–೧೭); ಇಂಬಾಗಿರೆಯುಂ ಮಕುಟಮುದಂ ಬಿಣ್ಪನೊಳೋರೆವೋದೊಡೋಸರಿಪವೊಲೊರ್ವಂ . . . ಕರಮನುತ್ತಮಾಂಗಕ್ಕೊಯ್ದಂ (ಶಾಂತಿಪು. ೫–೧೦೨); ಪರೆದಿರ್ದ ಕುರುಳ್ಗಳನೋಸರಿಸಿ (ಕಾದಂಪೂ. ೮೦೫); ನೆಳಲಂ ನೋಡಿ ತುಱುಂಬನೋಸರಿಸುತೆ (ಸಮುಪ. ೬–೩೯); ನಿಱಿಯನೋಸರಿಸುತ್ತ [ಪಾಠಾಂ. ನೊಯ್ಯಾರಿಸುತ್ತ] ಮೇಲುದನಿಱಕುತೆಡಗೈದುದಿಯಲಾ ಮುಂಜೆಱಗ ಸಂವರಿಸುತ್ತ (ಶೊರರಾ. ೩–೪–೮). ೬. ಒರಸು: ತುಱುಗೆವೆ ಕಣ್ಬನಿಗಳನೋಸರಿಸದೆ ಬಱಿದಿಹುದೇನವ್ವ ತಾಯೇ (ಮೋಹತ. ೯–೧೭); ಸೂಸುವಾ ರಸಿಗೆಯನು ವಸನದೊಳೋಸರಿಸಿ ಮೈದೊಳೆದು (ಸಾಳ್ವಭಾ. ೧೮–೪೧). ೭. ಅಪೇಕ್ಷಿಸು; ಬಯಸು: ನುಡಿಯಿಲ್ಲದ ಕಡೆಯಿಲ್ಲದ ನಲ್ಲನ ಒಡಗೂಡಿ ಸುಖಿಯಾದೆ ಕೇಳಿರಯ್ಯ ಓಸರಿಸೆನನ್ಯಕ್ಕೆ (ಮಹಾದೇ. ೩೫–೧೩); ಭಾಷೆ ಪೈಸರವಿಲ್ಲ ಓಸರಿಸೆನನ್ಯಕ್ಕೆ (ಶೂನ್ಯಸಂ. ೨೯೪–೨೭).

[ಓಸರ$_1$ + –ಇಸು$_3$. / **ತೆಲು.** ಓಸರು, ಓಸರಿಂಚು, ಓಸರಿಲ್ಲು, ಓಹಟಿಂಚು, ಓಹಟಿಲ್ಲು]

**ಓಸರು$_1$** (ನಾ). ತಡ; ಸಾವಕಾಶ: ಅತ್ಯುಗ್ರ ಪುಣ್ಯಪಾಪದ ಫಲಗಳು ಓಸರಂ ಮಾಡದೇ ಮೂಱುಪಕ್ಷಂ ಮೂಱುಮಾಸಮಾ ಮೂಱುದಿನದೊಳಗೆ ಕಾಣಿಸುಗುಮೆಂಬಾ ಸುಜನರುಸಿರು (ಸಮ್ಯಕ್ತ್ವ. ೫–೫೮).

[ಪ್ರಾ. ಓಸರ (< ಸಂ. ಅವಸರ)]

**ಓಸರು$_2$** (ನಾ). ಒರತೆ; ಚಿಲುಮೆ (ಸ್ಪ್ರಿಂಗ್). [< ಒಸರ್$_2$]

**ಓಸಱಂಗೇಳ್** 'ಓಸಱುಗೇಳ್' ನೋ.

**ಓಸಱು** (ನಾ). ಶಕುನ; ನಿಮಿತ್ತ: ಓಸಱಿಯಂ ಕೇಳ್ವೊಡೆ ಸಂಧ್ಯಾಸಮಯಂ ಮೂಱುಮುತ್ತಮಂ (ಲೋಕೋಪ. ೧೨–೫೦); ಮನೆಯಿಂದೋಸಱುಗೇಳಲೆಂದು ಬರಲಾಗಳ್ ಭೇರಿ ಮಾಂಗಲ್ಯತೂರ್ಯನಿನಾದಂ . . . ಇನಿತುಂ ಕಟ್ಟಿದಿರಾಗಿ ತೋಱಿ ಶುಭದಂ (ಲೋಕೋಪ. ೧೨–೫೧). [?]

**ಓಸಱುಗೇಳ್, ಓಸಱಂಗೇಳ್, ಓಸಱುಗೇಳ್** (ಕ್ರಿ). ಶಕುನವನ್ನು ಕೇಳು; ಜ್ಯೋತಿಷ್ಯದ ಪ್ರಶ್ನೆ ಮಾಡು: ನೀರಪೊಱ ಪಾಡುವೆಡೆ ಹೊಲಗೇರಿ ಪರೇತವನವಸಗವನೆ ಸಭೆ ದೇವಾಗಾರಂ ಚೌವಟಮೆಸೆದಿರ್ಪಾರವೆಯೆಂಬೆಡೆಗಳುಚಿತವೋಸಱುಗೇಳಲ್ (ಲೋಕೋಪ. ೧೨–೫೩).

**ಓಸಱಂಗೇಳ್:** ಹರಣದೆಱಯನ ಬರವು ಹಗಲಳಿವುದಕೆ ಮುನ್ನ ದೊರಕುವುದೊ ದೊರಕದೋ ಎಂದು ತಳ್ಳಂಕದಿಂದಿರದೋಸಱಂಗೇಳ್ವ ಪೆಣ್ಮಾಣಿಕಂ ತಾನಗಲ್ದಂತುಟಿಸುವಿಡಿವಳೋ (ಸಮ್ಯಕ್ತ್ವ. ೩–೨೪).

**ಓಸಱುಗೇಳ್:** ಇನಿಯನ ಮೊಗದ ಮುನಿಸು ತಿರ್ದುವುದೋ ಘನವಹುದೋ ಎನುತವೆ ಬಾಳಾಂಕಿಯ ಮನೆಯರುಗಂ ಮೆಯ್ಯಾಣಿಸಿಕೊಳ್ಳದೆ ನಿಂದೋಸಱುಗೇಳ್ವಾ ವನಿತೆಯಿರವನೀಕ್ಷಿಸಿ (ಜಯಕಾ. ೧೪–೬೫). [ಓಸಱು + ಕೇಳ್]

**ಓಸಱುಗೇಳ್** 'ಓಸಱುಗೇಳ್' ನೋ.

**ಓಸಿ** 'ವಸಿ' ನೋ.

**ಓಸಿತು** (ನಾ). ಒಂದಿಷ್ಟು; ಒಷ್ಟು: ಪುತ್ರಸೊಸೆಯರು ಬಂದು ನಲಿವ ಬಲದೊಡೆಯಲ್ಲಿ ಮೈತ್ರಿಯಿಂ ಕುಳ್ಳಿರ್ದ ಕೇಳ್ವಾಮಭಾಗವೆ ಧಾತ್ರಿಯೊಳ್ ಸ್ತ್ರೀಭಾಗವಾದಡೋಸಿತು ಪೇಳ್ವೆನಿನ್ನೊಂದು ಸನ್ಮತವನು (ಲಕ್ಷ್ಮಭಾ. ೧–೨೧–೩೧). [?]

**ಓಸು** (ನಾ). ಅಷ್ಟು; ಆ ಪ್ರಮಾಣ: ನಿಮ್ಮನುದಾಸೀನಗಾಣ್ಬನೆ ನೀವು ಓಸಳುಕಿನೊಳಿಂತು ಬರಲೇತಕೆ (ಭರಚ. ೩೫–೪೦).

ಓಸಳಿಕು = ಅಷ್ಟು ವಂಚನೆ, —ವೋಸ: ಭೂಸುರಂ ನಿಮಗಿತ್ತ ದಾನಫಲದೊಳ್ಸರಿಯನೇಸೇಸು ಪರಿ ಬೇಡಿ ಬೇಡಿಕೊಂಡೊಡೆ ನನಗೆ ವೋಸಳಿಕನೇ [ಪಾಠಾಂ. ನನಗುದಾಸೀನಮಂ] ಮಾಡಿಕೊಂಡ ಕಾರಣ ಮನನುನಯದಿಂದ ನಿರವಿಸು (ಸಮ್ಯಕ್ತ್ವ. ೭–೪೩); ಏನಾದೊಡಾಗಲಿ ನಾನು ಮುಂದೆ ನೋಡದೆ ಕೊಡುವೆನೆಂದು ನುಡಿದಾ ಮಾತನೋಸಳಿಕು [ಪಾಠಾಂ. ನೋಸರಂ] ಮಾಡಲೆನಗೆ . . . ಮುಂದಣುತ್ತಮಮಪ್ಪಗತಿ ಪೈಸರಿಸುವುದು (ಸಮ್ಯಕ್ತ್ವ. ೧೧–೨೭): ಓಸಳುಕು=ಅಷ್ಟು ಭಯ, —ಹೆದರಿಕೆ: ನೀವು ಓಸಳುಕಿನೊಳಿಂತು ಬರಲೇತಕೆ (ಭರಚ. ೩೫–೪೦). [?]

**ಓಸುಕರ** 'ಓಸ್ಕರ' ನೋ.

**ಓಸುಗ** 'ಓಸ್ಕರ' ನೋ.

**ಓಸುಗರ** 'ಓಸ್ಕರ' ನೋ.

**ಓಸ್ಕರ, ಓಸುಕರ, ಓಸುಗ, ಓಸುಗರ** (ಅ). ಸಲುವಾಗಿ; ದೆಸೆಯಿಂದ; ನಿಮಿತ್ತದಿಂದ: ತ್ರಿವಿಧ ಮಲವೆಂದಱಿದು ತನ್ನ ಸುಖಕ್ಕೋಸ್ಕರವಾಗಿ ವಸ್ತುವಿನಿಂದ ನಿರ್ಮಲವಾಯಿತ್ತೆಂದು ಮುಟ್ಟಬಹುದೆ (ಪ್ರಭೋಗ. ೮೩); ವಲ್ಲಭಗೋಸ್ಕರ ಎಲ್ಲಾ ಎಡೆಯೊಳ್ ಎನಗೆ ತಕ್ಕ ವಲ್ಲಭನಂ ನೋಡುತ್ತಂ ಬರುತಿರ್ದೆಂ (ಧರ್ಮಪ. ೩–೬೦ ವ); ಅಮ್ರುತಪಡಿಯ ನಡೆಸಲೋಸ್ಕರವಾಗಿ (ವೈಆರಿ. ೧೯೩೪, ೨೬–೧೦ ; 1403); ಆದಕೋರ್ಸ್ಕರಂ ನಿನ್ನಂ ತಿಳಿಯಬೇಕೆಂಬೆಯಾ? (ಮನೋವಿ. ೧–೪೫ ಟೀಕು); ಸಿದ್ಧರಾಮನನ್ನು ಅಲ್ಲಮ ಖಂಡಿಸಿದ್ದು ಇದಕ್ಕೋಸ್ಕರವೇ (ಶೂನ್ಯಕು. ೧೨೮); ಓಸ್ಕರ, –ಆಗಿ, –ಸಲುವಾಗಿ: ಪ್ರಯೋಜನವನ್ನು ಸೂಚಿಸುವಾಗ ಚತುರ್ಥೀವಿಭಕ್ತಿಯ ರೂಪಕ್ಕೆ ಈ ಅವ್ಯಯಗಳಲ್ಲಿ ಯಾವುದಾದರೂ ಒಂದು ಸೇರಿ ಅರ್ಥವನ್ನು ಸ್ಪಷ್ಟಪಡಿಸುತ್ತದೆ (ಮಧ್ಯಮ. ೧೫೮)

**ಓಸುಕರ** : ಗುರು ನಿನಗೆ ತಾ ವಾ ಗ ಲೋ ೯ ಸು ಕ ರ [ಪಾಠಾಂ. ಗರ] (ವಾಗೀರ. ದೇ. ೨೭೧–೨೬). **ಓಸುಗ** : ಸಕಲ ಪದಾರ್ಥವನು ಗುರುಲಿಂಗ ಜಂಗಮಕ್ಕೆ ಒಪ್ಪಿಸಿ ಸಕಲ ಕೃತ್ಯಂಗಳಿಂದ ನಿಮುಗೋಸುಗ ತಹೆನು (ಚನ್ನವ. ೫೭–೧೪) ; ಸುಚರಿತ್ರರ್ ಸಲೆ ಕೀರ್ತಿಗೋಸುಗ ಮಹಾಕಷ್ಟಂಗಳಂ ತಾಳಿ (ಸೋಮೇಶ. ೯೩) ; ಮಕ್ಕಳಿಗೋಸುಗವಲೇ ಹಣವ ಗಳಿಸುವುದು (ಕುವ್ಯಾದ್ರೋ. ೧೮–೬೬). **ಓಸುಗರ** : ಹಿರಿಯರೆಲ್ಲರು ನೆರೆದು ನಿಮ್ಮ ಕಟ್ಟಿದರೆ ಅಯ್ಯ ಉಪಚಾರಕ್ಕೋಸುಗರ [ಪಾಠಾಂ. ಕ್ಕೋಸ್ಕ, ಕೋಸುಗ, ಕೋಸುಕರ] ಸಾವಿಂಗೆ ಸಂಗಡವಾದೆಯಲ್ಲಾ ಗುಹೇಶ್ವರಾ (ಅವಚಂ. ೧೧೪–೫೧೭) ; ಮೇದಿನಿಯ ತಿಣ್ಣವನಿಳುಹಲೋಸುಗರ ಆಹವದೊಳರ್ಜುನನ ರಥದೊಳು ವಾಹಕನು ತಾನಾಗಿ (ಕುವ್ಯಾಭೀ. ೩–೯೩).

[ದೇ. ‖ ತಮಿ. ಓಶರ; ತೆಲು. ಕೋಸರ, ಕೋಸ]

**ಓಹ** (ನಾ). ರಾಶಿ ; ಗುಂಪು (ಸ್ಯಾಂಡರ್). [< ಸಂ. ಓಘ]

**ಓಹಟೆ, ಓಹೋಟೆ** (ನಾ). ೧. ಸಮುದ್ರದ ತೆರೆಗಳು ಇಳಿದು ಹೋಗುವುದು ; ತೆರೆಯ ಇಳಿತ : ಭರತಿಯ ಸಮಯದಲ್ಲಿ ತಂದೊಡ್ಡಿ ಓಹಟಿಯ ವೇಳೆಯಲ್ಲಿ ತಿರುಗಿ ಕೊಚ್ಚಿಕೊಂಡು ಹೋಗುವ ಕಾಲಸಮುದ್ರ ಇದೊಂದು ರತ್ನವನ್ನು ಮರೆತುಹೋದಂತೆ ತೋರಿತು (ಸಮಜೀ. ೬೬೦). **ಓಹೋಟೆ** : ೧. ಇದಕ್ಕೆ ಭರತಿ – ಓಹೋಟೆಗಳೆಂತಲೂ ಏರಿಳಿತಗಳೆಂತಲೂ ಅನ್ನುವರು (ಮುಂಬಯಿ. ೬–೩೭೨). ೨. “ಸಣ್ಣ ತೆರೆ” (ರಮಾಕಾಂ. ೧೩೧).

[ಪ್ರಾ. ಓಹಟ್ಟ (< ಸಂ. ಅಪಘಟ್ಟ). / ಮರಾ. ಓಹಟ, ಓಹಟೀ, ಓಹಟೀ]

**ಓಹಡಿಸು** (ಕ್ರಿ). ಹಿಂಜರಿ ; ಹಿಮ್ಮೆಟ್ಟು (?) : ವಂಶದ್ರೋಹಿ ಸಿಲುಕಿದನೆನುತ ತಡೆದರು ರಥಿಕರೆಡಬಲನ ಗಾಹಿಸಿತು ದೂಹತ್ತಿ ಲೌಡೆಯ ರಾಹುತರು ಕಟ್ಟಳವಿಯಲಿ ಕವಿದೋಹಡಿಸಪೌಂಕಿತು ಪದಾತಿ ಧನಂಜಯನ ರಥವ (ಕುವ್ಯಾಗ. ೧–೩೫). [ಓಹಡ್$_{0}$ + –ಇಸು$_{3}$]

**ಓಹಣ** (ನಾ). ವಾಹನ : ಮಣಿಯದೆ ನ್ರಿಪದಂಡೇಶಾಗ್ರಣಿಗಳು ಪಾಳಿಟ್ಟು ತಾಗಲವಗೋರೊಂದೋಹಣವುಳಿಯೆ ವಾರುವಂಗಳನಣಿಯರವೆನೆ ಹಿಡಿದು ಹಬ್ಬಣಂ ಹೆಸರ್ವಡೆದ[ಂ] (ಕೊಲ್ಹಾಶಾ. ೧೫–೪೬ ; 1186) ; ಬಡಕಟ್ಟಿಯನೊಂದಂ ಪೆರ್ಮಡುವಿನೊಳಿರ್ಪೊಳ್ಪೆಯೊಂದನೊಡೆಯರ ದೆಸೆಯಿಂ ನಡೆಗೆಟ್ಟೋಹಣಮೊಂದಂ ಮಡಿಪಿದ ಸಾಹಸಮದಿಲ್ಲಿ ಸಲ್ಲದು ಮರುಳೇ (ಮಹಾನೇ. ೭–೨೫). [< ಸಂ. ವಾಹನ]

**ಓಹರಿ** ‘ಓವರಿ’ ನೋ.

**ಓಹರಿಕೆ** (ನಾ). (?) : ತಜ್ಜಗದ ಜೀವದ ಸುಕೃತ ದುಷ್ಕೃತವ ಓ[ಪಾಠಾಂ. ಹೋ]ಹರಿಕೆಯಲಿ ತಂದು ಭವದಲಿ ಸೋಹಿ ಸುಳಿಸುವಂ (ಕುವ್ಯಾಸ. ೯–೯). [?]

**ಓಹರಿಸಾಹರಿ** (ನಾ). ಹಿಮ್ಮೆಟ್ಟುವುದು ; ಸ್ಥಾನಾಂತರಗೊಳ್ಳುವುದು (?): ಅರವರಿಸದೆಯೋಹರಿಸಾಹರಿಯುಂ [ಪಾಠಾಂ. ಮೋಹರಿಸಿ ಹರಿಯು] ಮಾಡುತಿರ್ದವು (ಕುಮುರಾ. ೮–೭೨ ; ಶಬ್ದವಿ. ೧೬ ನೋ) ; ಯಾದವರ ಮನೆಯ ನಾಯಕರಾಹಾಯೆನೆ ನೆಗಳ್ದ ವೈರಿ ಮುಂಮಡಿಸಿಂಗಂಗೋಹರಿಸಾಹರಿಯಾಗಿರೆ ಕಾದಿದ ಮೂಲೋಕವಜಿರಿಯೆ ಜಿನರೊಳು ಸಂದಂ (ಮೈಆರಿ. ೧೯೩೫, ೩೯–೧೨; 1283); ಉಭಯಾನೀಕ..ೋಹರಿಸಾಹರಿಯ ಸುವ್ಯಾಕುಲರನೀಕ್ಷಿಸುತಲಿದ್ದರು ಪವನಜಾದಿಗಳು (ಕುವ್ಯಾಅ. ೧೯–೨೯) ; ಅಂತು ಓಹರಿಸಾಹರಿಯಾಗಿ ಕಾದುವರಂ ಕಲಿಕಾಮದೇವಂ ಕಂಡು ಕೋಪಮಂ ತಾಳ್ದಾಗಳ್ (ಶ್ರಿಪುವಿ. ೫–೯ ವ).

[ಓಹರ್$_{0}$ + ಸಾಹರ್$_{0}$. / ತೆಲು. ಓಹರಿಸಾಹರಿ = ತಂಡೋಪತಂಡ, ಅಸ್ತವ್ಯಸ್ತ]

**ಓಹಿ** (ನಾ). ಅವಧಿ : ಹರಿಸದಿನಿತ್ತ ಹಗಲ ಚಿಕ್ಕೊತ್ತಿಯನಿರುಳೊತ್ತಿಯ ಹಣಮೆನುತವೆ ಬಗೆದಾಯಿರುಳೊತ್ತಿಯ ವಿತ್ತಮನೋಹಿಯೆನುತ್ತಾವೋಹಿಯ ಹೊನ್ನಂ ವರ ಸಜ್ಜನವೆನುತವೆ ಬಗೆದಾಕೆಗೆಯರಿದೇ ಗಂಡರೊಲುಮೆಯರಿದೇ ಸಿರಿ (ಜಯಕಾ. ೧೪–೫೨); “ವಿಟ” (ಷಟ್ಪನಿ).

ಓಹಿಯಸೂಳೆ = ಅವಧಿಯ ವೇಶ್ಯೆ : ಹಿರಿಯರಸಿ ದರಿದ್ರಾಂಗನೆ ಸಿರಿಯೋಹಿಯಸೂಳೆ ನೋಳ್ಪೊಡಂ ಜಗವರಿಯಲ್ ಸಿರಿ ಸಂಚಲೆಯೆಂ ದರಿದುಂ ಕರೆದೀವುದು ಕೈಗೆ ಕರಟ ಬಾರದ ಮುನ್ನಂ (ನೀತಿಸಾ. ೧೪೯).

[ಪ್ರಾ. ಓಹಿ (< ಸಂ. ಅವಧಿ)]

**ಓಹು** (ನಾ). ಒಪ್ಪು (?): ನಂಬಿಯ ತೆಜದಿಂ ಶಿವನಂ ನಂಬಿದನೋಹಿಲನ ತೆಜದಿನೋಹಿಲ್ಲದ ಭಕ್ತಂ ಬಾಣನಂತೆ ಜಾಣಂ ಕಿಂಬಹುನಾ ವೀರ ಬಿಜ್ಜಲಾವನಿಪಾಲಂ (ಎಇ. XX, ೧೨–೪ ; 1187). [< ಒಪ್ಪು$_{2}$]

**ಓಹೊ, ಓಹೋ** (ಅ). ಆಶ್ಚರ್ಯ, ಭಯಾದಿಗಳನ್ನು ಸೂಚಿಸುವ ನಿಪಾತಾವ್ಯಯ : ತತ್ಕ್ಷಣದೊಳೆ ಮುಳಿದಂದೋಹೊ ಕಾದಂಬರುದ್ರಂ (ಎಇ. XVI, ೭೧–೨೭ ; 1074) ; ಸೂಸದಂಜದಿರೋಹೊಯೆನುತ (ಬಸಪು. ೧೦–೨). **ಓಹೋ** : ಓಹೋ ಇರಲಿಂ ಪೆಜವಜ ಮಾಹಾತ್ಮ್ಯಮುಂ (ಕಾವ್ಯಾವ. ೫೦) ; ಓಹೋ ನಿವಾರಣಾರ್ಥೇ (ಭಾಷಾಭೂ. ೨೭೮); ಸವನಿಪುದೋಹೋ ಹೋ ಎನೆ ನಿವಾರಣಾರ್ಥಂ (ಶಮುದ.೩೦೯) ; ಕರಡಿಯ ಮಗಳನಾಳ್ದ ನಿನಗೋಹೋ ಧರೆಯೊಳದ್ಭುತಾಕಾರರಾರೋ (ಜೈಮಿಭಾ. ೨–೫೯).

**ಓಹೋ** ‘ಓಹೊ’ ನೋ.

**ಓಹೋಟೆ** ‘ಓಹಟೆ’ ನೋ.

**ಓಳ್$_{1}$** (ಕ್ರಿ). ಸಂಭೋಗ ಮಾಡು : “ಓಳ್ – ನಿಧುವನೇ” (ಶಮುಧಾ) ; ಪಡೆದಂ, ಓಳಿದಂ, ಕಳಿದಂ, ಪಳಿದಂ (ಭಾಷಾಭೂ. ೨೧೫ ಪ್ರಯೋ).

[ದೇ. ‖ ತಮಿ. ಓ ; ಕೊಡ. ಓಳ್]

**ಓಳ್$_{2}$** (ನಾ). ಹೋಳು ; ಸೀಳು ; ಸೀಳಿದ ಭಾಗ : ರಥಿಕರ ತಲೆಗಳೋಳ್ಗಳುಂ ಸೀಳ್ಗಳುಂ ಬಾನಿಂದೆ ಬೀಳುತಿರಲು (ಚೆಬಪು. ೩೧–೨೭) ; ಕಡಿದ ತಲೆಯೋಳ್ಗಳಿಂ ತೋಳ್ಗಳಿಂ (ಚೆಬಪು. ೪೩–೪೪). ‘ಪೋೞ್$_{2}$’ ಪರಾ. [< ಪೋೞ್$_{2}$]

**ಓಳಿ** (ನಾ). ೧. ಸಮೂಹ; ರಾಶಿ; ಮೊತ್ತ : “ಇಟ್ಟಳ ಗುಮ್ಮಿಯೋಳಿ ಪಂತಿಯು ಸಾಲುಂ” (ಕವಿಕಂ. ೧೦೭) ; ಗ್ರಾಸಮನುಣ್ಬುದೆಂದೊಡಣಮೋಳಿಯ ರಕ್ಕಸಪಾರ್ವರಿರ್ದುದು (ಕಾವ್ಯಸಾ. ೫೩೫ ಶೂದ್ರಕ) ; ಕರ್ಚಿ ಪಾಜಿದುವು ಕೆಂದಳಿರಂ ಗಿಳಿವಿಂಡಿನೋಳಿಗಳ್ (ಪಂಪಭಾ. ೫–೩೧); ಸುಳಿಗುರುಳೋಳಿ ಕಣ್ಗವರೆ (ಧರ್ಮಾಮೃ. ೭–೧೭೯). ೨. ಸಾಲು ; ಪಂಕ್ತಿ ; ಮಾಲೆ : “ಪಜ್ತಿ ಮಾಲೆಯೋಳಿಯೆನಿಕ್ಕುಂ” (ವಸ್ತುಕೋ. ೧೦೩–೨೯) ; ಒಂದು ಬಟ್ಟಿನ ಮೇಗೆ ಪದಿನಾಲ್ಕು ಬಟ್ಟನೊಂದೊಂದಜಿ ಮೇಗೋಳಿಯೊಳಿಟ್ಟಾಡುತ್ತಿರ್ಪನ್ನೆಗಂ (ವಡ್ಡಾರಾ. ೭೩–೨೩) ; ಪೆಂಡವಾಸದೊಳ್ಪೆಂಡಿರನೆರಡೋಳಿಯೊಳಮಿರಿಸಿ (ಪಂಪಭಾ. ೯–೨೮ ವ) ; ಸಾಲಸಾವಿರ ದೀವಿಗೆಯ ಹರಿದಾಳಿಗಳುಕದೆ ನೃಪರ ಮೋಜಿಗಳೋಳಿಗಳ ನೆಜತಿ ಹೊದ್ದಿ ಕತ್ತಲೆ ನಿಂದುದಲ್ಲಲ್ಲಿ (ಕುವ್ಯಾಕ. ೧–೧೯) ; ಈ ಹಸಿರು ಓಳಿಗಳ ನಡುವಿನ ಜಾಗದಲ್ಲೇ ಕೆಂಪುಹರಗಿ ಹವ್ವನೆ ಬೆಳೆದು ನಿಂತಿತ್ತು (ಮೂರುದಾ. ೯೦). ೩. ಓರಣ ; ಕ್ರಮ ; ಪರಿವಿಡಿ : ಕೌರವನಾಯಕನೂರುಭಂಗಮೊಂದಲ್ಲದುದೆಲ್ಲಮಂ ನೆಜಪಿದೆಂ ಗಡ ಮೋಳಿಯೆ ಕೇಳಿಮೆಲ್ಲರುಂ (ಪಂಪಭಾ. ೧೨–೧೬೧) ; ರಾಜಚತುಷ್ಟಯಮೋಳಿಯೊಳ್ಮೆತರೆ [ಪಾಠಾಂ. ಮೆಂಬ ಗಣಂಗಳೆ] ಪಾವಕಾನಿಲರತ್ತಲ್ ಮತ್ತೋಜೆಯೊಳೋತು ಹರೀಶ್ವರರೊಂದಿರೆ (ಛಂದೋಂಬು. ೨–೧೨೮) ; ಓಳಿಯಿಂ ನಡೆವ ವೀರಗಣಂಗಳಿಂ (ಪದ್ಮರಾ. ೯–೩೭). ೪. ಕಿವಿ. ೫. ವಸ್ತ್ರ. ೬. ಪತಾಕೆ.

೭. ಅಧಮ. ೮. ಅಸ್ತ್ರ. ೯. ವಲ್ಲಿ. ೧೦. ಈಶ: "ಅಸ್ತ್ರದೊಳ್ ನಿಕರದೊಳ್ ಕರ್ಣದೊಳ್ ವಲ್ಲಿಯೊಳ್ ಧ್ವಜದೊಳೀಶನೊಳೋಳಿ ಶಬ್ದಮಕ್ಕುಂ" (ಮಂಗರಾ. ೧೫೨-೫೭); "ಕಿವಿ ವಸ್ತ್ರಂಗಳ್ ನೆರವಿ ಪತಾಕೆಯೊಳಧಮಂ ಪರಿಕಿಸಲ್ಕೆನಾಮ ಓಳಿ ಶಬ್ದಂ" (ನಾನಾಕಂ. ೧೫೮). [ಪ್ರಾ. ಓಲಿ (< ಸಂ. ಆಲೀ)]

**ಓಳಿಗಲ್** (ನಾ). ಸಾಲಾಗಿ ಇಟ್ಟ ಕಲ್ಲು: ಪಿರಿಯಯ್ಯ ಪುಣುಸೆವರಂ ನಟ್ಟ ಓಳಿಗಲ್ಲಿನ್ದಂ ಪಡುವಣ ತೆವರಿಂದೊಳಗೆ (ಎಕ. IV, ಹೆಗ್ಗಡ. ೧೬-೨೦; 1021). [ಓಳಿ + ಕಲ್$_3$]

**ಓಳಿಗುರುಳ್** (ನಾ). ತುಂಬು ಕೂದಲು; ಸಮೃದ್ಧವಾದ ಕೂದಲು: ಓಳಿಗುರುಳ್ ಮದಭೃಂಗಮಾಳೆಯಂ ತೆಗೆಟ್ಟುದು (ಶಾಂತೀಶ್ವ. ೪-೪). [ಓಳಿ + ಕುರುಳ್$_1$]

**ಓಳಿಗೆ** (ನಾ). ಜೀನಿನ ಕೆಳಗೆ ಹಾಕುವ ಮೆತ್ತೆ (?): "ಓಳಿಕಾ-ಓಳಿಗೆ; ಗಳಂತಿಕಾ – ಗಳಂತಿಗೆ" (ಶಮದ. ೨೫೫ ಪ್ರಯೋ); "ಓಳಿಗೆ – ಓಲಿಕಾ" (ತದ್ಭಕೋ. ೮). [?]

**ಓಳಿಗೊಳ್** (ಕ್ರಿ). ಸಾಲುಗೊಳ್ಳು; ಪಂಕ್ತಿಯಾಗು: ಓಳಿಗೊಂಡು ಮಂದಯಿಸಿ ನಿಂದ ಬಲವಕ್ಕದೆಡವಕ್ಕದಂಗರಕ್ಕರ ನೆರವಿಯುಮನೀಕ್ಷಿಸುತ್ತುಂ (ವರ್ಧಪು. ೯-೫೬ ವ); ಓಳಿಗೊಂಡು ಸಕಲಭಕ್ತಜನಾಳಿಸಹಿತಂ (ಬಸಪು. ೫೮-೫೫). [ಓಳಿ + ಕೊಳ್$_1$]

**ಓಳಿಗೊಳಿಸು** (ಕ್ರಿ). ಕ್ರಮಗೊಳಿಸು; ಅಣಿಗೊಳಿಸು: ಮುಂದೆ ಪರಿವೊಜ್ಜರಂಗಳನೋಳಿಗೊಳಿಸಿಯುಂ (ಚಂದ್ರಪು. ೧೨-೮೩ ವ); ಜಾಳಂಗಳಿಂ ಮೇಳೆಯುಮನೋಳಿಗೊಳಿಸಿಯುಂ (ಪುಷ್ಪಪು. ೭-೬೯ ವ). [ಓಳಿಗೊಳ್ + –ಇಸು$_3$]

**ಓಳಿದೋರಣ** (ನಾ). ಸಾಲುತೋರಣ; ಪಂಕ್ತಿ-ಪಂಕ್ತಿಯಾದ ತೋರಣ: ಓಳಿದೋರಣಮಾಯ್ತು ಹಾರದ ಪಚ್ಚೆಸಾರದ ಮಾಲೆ (ಪಂಪಭಾ. ೧೪-೧೫); ಪಂದಲೆಯೋಳಿದೋರಣದ ಸೀಯದರಂ ಪೊಸದೂವೆ ದೂಪ ತೂಗುಂದಲೆ ಬಾಜೆಪ್ಪಿಣಂ ಪೊಡರೆ (ಕಾವ್ಯಾವ. ೫೭). [ಓಳಿ + ತೋರಣ]

**ಓಳಿಯಿಸು, ಓಳಿಸು** (ಕ್ರಿ). ೧. ರಾಶಿಮಾಡು; ಒಟ್ಟುಗೂಡಿಸು; ಕೂಡಿಹಾಕು: ಬಚ್ಚಲ ಪರಿನೀರಿನೊಳ್ ಪರಿಯಲೋಳಿಯಿಸಲ್ ಪರಿಗೋಲನಿಕ್ಕಿ ಪಾಯ್ಸಲೆ (ಅಜಿಪು. ೬-೪೫). **ಓಳಿಸು**: ೨. ಕ್ರಮಗೊಳಿಸು; ಅಣಿಗೊಳಿಸು: ದಾಳಿಂಬದ ಕಿಱುನನೆಗಳ ದಾಳಿಂಬಿಗೆ ಮೆಚ್ಚಿಯೆ ಮುಗುಳ ಮುತ್ತಿನಲೊರ್ವಳ್ ಬಾಳಕಿ ಪಂಚಶರಂಗೊಯ್ದೋಳಿಸಿದಳ್ ಪಂಚಶರನ ಶರಪರಿಣತೆಯಿಂ (ಅನಂಪು. ೭-೨೧). [ಓಳಿ + –ಇಸು$_3$]

**ಓಳಿವಡು** (ಕ್ರಿ). ೧. ಸಾಲುಗಟ್ಟು; ಓರಣವಾಗು: ನೆಲೆಮಾಡಂಗಳೊಳೋಳಿವಟ್ಟ ಗುಡಿಗಳ್ (ಆದಿಪು. ೭-೧೧೨); ತಮಾಲವನದ ಲೀಲೆ ಕರಮೆ ಕಣ್ಗೆವರ್ಕುಮೋಳಿವಟ್ಟು ಸೊಗಯಿಸಿರ್ಕುಂ (ಅಜಿಪು. ೨-೮). ೨. ಗುಂಪುಗೂಡು: ಓಳಿವಟ್ಟ ಬೆಳ್ನೊರೆಗಳ ಪಿಂಡನೆತ್ತಿಸಿದ ಬೆಳ್ಗೊಡೆಗಳ್ (ಪಂಪಭಾ. ೩-೬೮); ತಮಾಳಭೂರುಹನಿವಹದ ಮೇಲೋಳಿವಟ್ಟು ಪಾಱುವ ಗಿಳಿ (ಅಜಿಪು. ೬-೧೨); ಸುರ ಸಮಿತಿಯತಿತ್ವರಿತದಿನೋಳಿವಟ್ಟು ಭೋರೆನೆ ನಡೆಯೆ (ನೇಮಿಪು. ೮-೧೩೮ ವ). [ಓಳಿ + ಪಡು$_1$]

**ಓಳಿವಡೆ** (ಕ್ರಿ). = ಓಳಿವಡು ೧: ಮಕರತೋರಣದ ಬಹಿರ್ಭಾಗದುಭಯ ಪಾರ್ಶ್ವದೊಳಮೋಳಿವಡೆಯೆ ಸುರಕರೀಂದ್ರಮನೆ ಕಟ್ಟಿಲ್ ನಟ್ಟ ಪಾರಿಜಾತದ ಮುಂಡಗಂಭಂಗಳಂ ಪೋಲ್ತು (ಶಾಂತಿಪು. ೩-೧೯ ವ). [ಓಳಿ + ಪಡೆ$_1$]

**ಓಳಿವಾಡು** (ನಾ). ವೃಂದಗಾನ: ನೀವು ಲಜ್ಜೆಯಿಲ್ಲದ ಕಯ್ವಾರಿಪರಮವಂದಿಗಳ ಭಟ್ಟಜನದ ಓಳಿವಾಡಿನ ಪ್ರಪಂಚದಲ್ಲಿ ಪಳಗಿದವರಾಗಿರಬೇಕು (ಮಂತ್ರಶ. ೩೩-೬). [ಓಳಿ + ಪಾಡು$_2$]

**ಓಳಿವಿಡಿ** (ಕ್ರಿ). ೧. ಕ್ರಮಗೊಳಿಸು: ಓಳಿವಿಡಿವನು ಕಮಲಭವನೆನ್ನಾಜ್ಞೆಯಲಿ ಜಗವ (ನಿಭಾಗ. ೩-೧೩-೧೪). ೨. ಕ್ರಮವನ್ನು ಅನುಸರಿಸು: ಏಳುತಿಲರಾಶಿಗಳ ಗಿರಿಗಳನೋಳಿವಿಡಿದರ್ಚಿಸಿ (ನಿಭಾಗ. ೧೦-೫-೫). [ಓಳಿ + ಪಿಡಿ$_1$]

**ಓಳಿವೀಡು** (ನಾ). ಸಾಲುಮನೆ; ಸಾಲಾದ ಬಿಡಾರ, —ಪಾಳೆಯ: ಮನಸಿಜಚಕ್ರವರ್ತಿ ನಡೆಯುತ್ತಿರೆ ದಿಗ್ವಿಜಯಕ್ಕೆ ಮುಂದುಮುಂದನೆ ಮಧು ಬಂದು ಮುಚ್ಚಱಿದು ಕೂಡೆ ವಿನಿರ್ಮಿಸಿದೋಳಿವೀಡು ನಂದನಚಯಮಲ್ಲಿ ರಾಜಿಪುವು (ಶಾಂತಿಪು. ೭-೧೩೦). [ಓಳಿ + ಬೀಡು$_3$]

**ಓಳಿವೆಳಗು** (ನಾ). ೧. ಸಾಲು ದೀಪ. ೨. ಒಟ್ಟು ಪ್ರಕಾಶ: ಮೇಳವಿಸಿದನು ಬಲವ ಮಣಿಗಣದೋಳಿವೆಳಗಿನ ಜಂಚೆ ಹಣ್ಣಿದ ನೀಲಗಿರಿಸನ್ನಿಭ ಮದೇಭವ (ತೊರರಾ. ೬-೨೦-೭). [ಓಳಿ + ಬೆಳಗು$_2$]

**ಓಳಿವೆಳ್ಪು** (ನಾ). ಸಾಲುಗಟ್ಟಿದ ಬಿಳುಪು; ಬಿಳಿಬಣ್ಣದ ಮೊತ್ತ: ಗಿರಿಶಿಖರಂಗಳೊಳ್ಪರೆದು ಸೌಧಗೃಹಂಗಳೊಳೊಂದಿ . . . ಅಂಚೆಗಳೋಳಿವೆಳ್ಪನೊಳ್ಪರಸಿ . . . ಪರ್ವಿದುವಿಂದುಮರೀಚಿಮಾಲೆಗಳ್ (ಕಾದಂಬ. ೪೨೧). [ಓಳಿ + ಬೆಳ್ಪು]

**ಓಳಿವೆಱು** (ಕ್ರಿ). ೧. ಕ್ರಮವಾಗಿರು: ಜ್ವಾಳೆತೋಯಮೆಯ್ತಂದೋಳಿವೆತ್ತೊಡಕ್ಕುಂ ನೀಳಕುಂತಳೇ ಕೇಳ್ ಶಾಳಿನೀವಿತಾನಂ (ಛಂದೋಂಬು. ೨-೨೪). ೨. (ಹೆಸರು ಮೊದಲಾದುವು) ಗುಂಪಾಗಿರು; ಆವಳಿಗೊಂಡಿರು: ತನ್ನವನಿಯೊಳು ಪೆಸರೋಳಿವೆತ್ತಾರುಹತರಂ ಜಿನಮಂತ್ರವಾದಿಗಳ ಪೇಳಲೇನು (ಬಸಪು. ೫೦-೪೬). [ಓಳಿ + ಪೆಱು$_1$]

**ಓಳಿಸು** 'ಓಳಿಯಿಸು' ನೋ.

**ಓಳೆ** (ನಾ). ಒಳಭಾಗ; ಕುಹರ: ವಿಚಾರಿಸೆ ಗುದವಿದಮೇಧ್ಯದ ಹೆಡಗೆ ಕಿವಿಯು ಕಜ್ಜೋಳೆಯು ಬೀಜಿನ ಕೊಡಿಗೆಯ ಹೊಲನಹುದು (ಕೈಕವ. ೨-೬-೨). [?]

**ಓಳ್ಕೆ, ಒಳ್ಕ, ಒಳ್ಕೆ** (ನಾ). ರತಿಕ್ರಿಯೆ; ಸಂಭೋಗ; "ರತಿಕ್ರೀಡೆ" (ಪ್ರಭಣ್ಣ). **ಒಳ್ಕ**: ಮಸೆವುದು ಮಾಸಲಿರ್ದ ಪಟಿವೇಟಮನಿಚ್ಚೆಯ ಬಿಚ್ಚತಿಕ್ಕೆಯಂ ಪೊಸಯಿಪುದೊಳ್ಕಮಂ (ಶಾಂತಿಪು. ೮-೯೧). **ಒಳ್ಕೆ**: "ಒಳ್ಕೆ ನಿಧುವನಂ" (ಸಂಜೀವ. ೨೫). [ಓಳ್$_1$ + –ಕೆ]

**ಓಱಗುಡಿಸು** 'ಓಱುಗುಡಿಸು' ನೋ.

**ಓಱುಗುಡಿಸು, ಓಱಗುಡಿಸು** (ಕ್ರಿ). ಕುಸಿ; ಹೊರಳು; ಓರೆಯಾಗು; ಮುಗ್ಗುರಿಸು: ತೋಱುವೀ ಮಹಪಾದಿಭೂತದೊಳೋಱುಗುಡಿಸದೆ ನಿಂದ ಮೂವತ್ತಾಱು ತತ್ತ್ವದೊಳೀಶನೇ (ಕುವ್ಯಾಸ. ೯-೧೨); ಏಱಿದೆನು ಸುರಪತಿಯ ಪೀಠವನೋಱುಗುಡಿಸಿತು ಪದವಿಯದು ವಿಪ್ರಾವಮಾನದಲಿ (ಕುವ್ಯಾಅ. ೧೩-೬೨). **ಓಱಗುಡಿಸು**: ತೋಱಿದುಭಯಗುಣಪ್ರಪಂಚದ ತೋಱಿಕೆಯ ಷಡ್ಭಾವ ವಿಕೃತಿಯ ಚಾರುಗಳ ಜಂಗುಳಿಯ ಜೀವರ ಜೋಕೆಗೆಡೆಗುಡದೆ ಮೂಱಿರದು ಭೂತದವಿಕಾರಕ್ಕೋಱಗುಡಿಸದ ಕಾಲ ಕರ್ಮವ (ನಿಭಾಗ. ೩-೪-೬). [?]

**ಓಱೆ** (ನಾ). ಅಗಡುತನ; ವಕ್ರತೆ; ಒರಟುತನ: ಲವಣಂ ನಱುವಲ ಬೇರ್ ಗುಳ್ಳವದಱ ಬರಿವದಱ ಲೊಕ್ಕಿ ಕಿಱುಮೆಕ್ಕೆಗಳೆಂಬಿವನರೆದು ತಕ್ರದೊಳ್ ಪೂಸುವುದದಱಿಂ ಕಱುವಿನೋಱಿ(ಡೆ)ಗಳ್ ಪಱಿಪಡುಗುಂ (ಲೋಕೋಪ. ೯-೧೯೭). 'ಓಱಿಯಾವು' ಪರಾ. [?]

**ಓಱೆಗಾಱ** (ನಾ). ಚಿತ್ತಾರಿಗ; ಬಣ್ಣಗೆಲಸ ಮಾಡುವವನು: ರಂಗಾಜೀವಃ, ಚಿತ್ರಕೃತ್ –ಈ ೨? ಓಱೆಗಾಱ [ಪಾಠಾಂ. ವ್ಯಾಱೆಗಾಱಂ] (ಹಲಾಯು. ೩. ೯೭–೪೩೭).

[ಓಱೆ³₀ + –ಗಾಱ (< –ಕಾಱ). ℙ ತೆಲು. ಓರು = ಗೋಡೆಗಳ ಕೆಳಭಾಗದಲ್ಲಿ ಹಾಕುವ ಕೆಂಪು ಪಟ್ಟಿ]

**ಓಱೆಯಾವು**, ಒಱೆಯಾವು (ನಾ). ಅಗಡು ಹಸು; ತುಂಟ ಹಸು; ಮೊಂಡ ಹಸು: ರುಜೆ ಮೇಣು [ಪಾಠಾಂ. ಮೆಣಸು] ಬಿಳಿಯ ಸಾಸಿವೆ ಬಜೆ ಬಿಟಲಿನ ಬೀಜಮೆಂಬಿವಂ ಸರಿಗೊಂಡಂತಜಮೂತ್ರದೊಳರೆದೆಚ್ಚುಗೆ ನಿಜೇಚ್ಛೆಯಿಂದೋಱೆಯಾವು ಮಟ್ಟಂ ಕಱೆಗುಂ (ಲೋಕೋಪ. ೯–೧೯೬); ಊರಮುಂದೆ ಹಾಲಹಳ್ಳ ಹರಿಯುತ್ತಿರಲು ಓಱೆಯಾವಿನ ಬೆನ್ನಲ್ಲಿ ಹರಿಯಲದೇಕಯ್ಯಾ ಲಜ್ಜೆಗೆಡಲೇಕೆ ನಾಣುಗೆಡಲೇಕೆ ಕೂಡಲಸಂಗಮದೇವಯ್ಯನುಳ್ಳನ್ನಕ್ಕ ಬಿಜ್ಜಳನ ಭಂಡಾರವೆನಗೇಕಯ್ಯಾ (ಬಸವ. ೭೫೪). **ಒಱೆಯಾವು**: ಹಾಲ ಸಾಗರದೊಳಗೋಲಾಡುತಿರ್ದು ಒಱೆಯಾವಿನ ಬೆನ್ನ ಹರಿವನಲ್ಲ (ಚನ್ನವ. ೪. ೬೮೩); ಒಱೆ³ [ಪಾಠಾಂ. ಒದೆ] ಯಾವಿನ ಹಾಲನಾರಯ್ಯ ಕಱೆವರು (ಅವಚಂ. ೮೧–೩೬೫). [ಓಱೆ³ + ಆವು]

**ಓೞ್** (ಕ್ರಿ). ಪ್ರವಾಹದಂತೆ ಹರಿ, —ಹಾಯು: ಎರಡುಂ ಬಲದ ವೀರ ಭಟರ್ಕಳೋೞ್ದು ಪೊೞಮಟ್ಟು (ಎಕ. VIII, ಸೊರಬ. ೧೦–೧೫; 800). [?]

**ಔ**$_1$ (ನಾ). ಕನ್ನಡ ವರ್ಣಮಾಲೆಯ ಹದಿನಾಲ್ಕನೆಯ ವರ್ಣ; ಔಕಾರ: ಅಆ ಎಂಬ ವರ್ಣಂ ಪಿಂಗಿದಾ ಪನ್ನೆರಡು ಸ್ವರಂಗಳ್ ನಾಮಿ ಸಂಜ್ಞೆಯಂ ಪಡೆವುವು; ಅವಾವುವೆಂದೊಡೆ . . . ಏ ಐ, ಓ ಔ, ಎಂಬಿವು (ಶಮದ. ೯ ವೃತ್ತಿ); ಐ, ಔ ಎಂಬ ಸ್ವರಗಳು ಉಳಿದುವು (ಮಧ್ಯಮ. ೧೩).

**ಔ**$_2$ (ಅ). ಸಂಬೋಧನಾರ್ಥದಲ್ಲಿ ಹತ್ತುವ ಅವ್ಯಯ: ಉರ್ಬಿಸೊಳಾಂತು ಸೆಣಸಿ ಕಾದುವ ಜನಪಂಗೆಂಟೆರ್ದೆಯೆ ಮರುಳೆ ನೀನೆತ್ತಣಿದೌ (ಧರ್ಮಾಮೃ. ೪–೨೫೧); ಸಾಲಾಗಿ ನಿಲ್ಲಿರೌ ನೂರ್ವರು ಪೆಂಗಳು (ಭರಚ. ೪೬–೧೩೭).

**ಔಂಕಿಸು** (ಕ್ರಿ). ಹಿಸುಕುವಂತೆ ಮಾಡು: ಅದುಮಿಸು; ಮೆಟ್ಟಿಸು: ಪರವಶದಿ ತಾಂ ಮಱೆತೊಡನೆ ತಿಳಿದುರವಣಿಸಿ ಪೊಡಮಡುವೆನೆಂದವಸರಿಸುತೇಳಲಿಕೌಂಕಿಸು[ಪಾಠಾಂ. ಕುಂಕಿಸು]ವ ಗುರು ಭಕ್ತಿ ಯ ಯ್ಯಂಗೆ (ಬಸವು. ೩೯–೩೫). [< ಅವುಂಕಿಸು]

**ಔಂಕು** 'ಅಮುಂಕು' ನೋ.

**ಔಂಚು, ಔಚು**$_1$ (ಕ್ರಿ). ಒತ್ತು; ಅಮುಕು; ಇರಿಕು; ಔಕು: ಪಾಶವ ಕೊರಳಿಗಿಕ್ಕಿಕ್ಕಳದಲೊಡೆಮುರಿದೌಂಚಿ ತಿನ್ನಡಗ (ಅಂಬಿಕಾ. ೪–೫೬); ಕೋಳುಗೊಡದಿರಿಯುಬ್ಬಿ ಸದೆಯಿರಿ ಕಾಲಹಿಡಿದೆಳೆದೌಂಚಿ ಮುರಿಚಿರಿ (ಅಂಬಿಕಾ. ೫–೨೩). **ಔಚು**$_1$: ಭೀಮನೀತನ ಬಲುಭುಜವನೌಚಿದನು (ಕುವ್ಯಾದ್ರೋ. ೧೯–೨೬). [< ಅಮುರ್ಚು]

**ಔಂಡು**$_1$ (ನಾ). "ಅವಳಿ, ಯಮುಳ, ಜತೆಜತೆ" (ಸಿಂಕೋ. ೮೫); "ಅವಳಿ, ಜತೆಜತೆ" (ರಮಾಕಾಂ. ೧೩೧). [?]

**ಔಂಡು**$_2$ 'ಅವುಂಡು' ನೋ.

**ಔಂಡುಗರ್ಚು** 'ಅವುಂಡುಗರ್ಚು' ನೋ.

**ಔಕ್** (ಅ). ಭಯ, ಹೆದರಿಕೆ ಮೊದಲಾದುವನ್ನು ಸೂಚಿಸುವ ಅವ್ಯಯ: ಅಸತ್ತು ಬೇಸತ್ತು ಅಕ್ಕನ ಮನೆಗೆ ಹೋದರೆ ಅಕ್ಕನ ಗಂಡ ಔಕ್ ಅಂದ (ಗಾದೆ).

**ಔಕಣ** (ನಾ). "ಬೈಲು" (ಗಂಗಾಮು. ೬೧). [?]

**ಔಕಾಟ** 'ಅವುಕಾಟ' ನೋ.

**ಔಕಾರ** (ನಾ). [ವ್ಯಾಕ] = ಔ$_1$: ಔಕಾರಕ್ಕೆ – ವಿದಿತ + ಓಕಾರಂ = ವಿದಿತೌಕಾರಂ – ಎಂಬಂತೆ (ಶಮದ. ೧೦. ಅಡಿಟ). [ಸಂ.]

**ಔಕು** 'ಅಮುಂಕು' ನೋ.

**ಔಕ್ಷಕ** (ನಾ). ಎತ್ತುಗಳ ಗುಂಪು. [ಸಂ.]

**ಔಗಾಮು** (ನಾ). ನೆಲಸುವಿಕೆ; ವಾಸಿಸುವಿಕೆ.
ಔಗಾಮುಮಾಡು=ಸ್ಥಿರವಾಗಿ ನೆಲಸು, —ವಾಸಿಸು (ಸ್ಯಾಂಡರ್). [?]

**ಔಗು**$_1$ (ಕ್ರಿ). ಅಲುಗಾಡಿಸು; ಅಲ್ಲಾಡಿಸು: ಔಗಿಕೊಳ್ಳು (ಸ್ಯಾಂಡರ್). [?]

**ಔಗು**$_2$ 'ಅವುಗು' ನೋ.

**ಔಘ** (ನಾ). ೧. ಗುಂಪು; ಸಮೂಹ: "ನಿಕರಂ ನಿಕಾಯಂ ಸಮಾಜಮೌಘಂ . . . ತತಿವ್ರಾತಮತಿಕರಂ ಶ್ರೇಣಿ ಪೇಟಕಮನಂತಂ ರಾಶಿ ಚಯ ಕುಳಮೆನಲ್ ಮತ್ತೆ ಸ್ತೋಮಕ್ಕೆ ನಾಮಮಕ್ಕುಂ" (ಮಂಗರಾ. ೧೨೬–೧). ೨. ಪ್ರವಾಹ. [ಸಂ.]

**ಔಚಿತಿ** (ನಾ). ಉಚಿತವಾಗಿರುವಿಕೆ; ಯೋಗ್ಯವಾಗಿರುವಿಕೆ (ಕಿ). [ಸಂ. ಔಚಿತೀ]

**ಔಚಿತ್ಯ** (ನಾ). ೧. ಉಚಿತವಾದುದು; ಯೋಗ್ಯವಾದುದು: ತ್ರಿಭುವನಾಧೀಶಂ ಜಿನೇಶಂ ಸಮಾಧಾನ ಪ್ರಾಪ್ತಿಯನೀಗೆ ಭವ್ಯನಿಕರಕ್ಕೌಚಿತ್ಯಮಂ ಸುತ್ಯಮಂ (ಜೀವಸಂ. ೧–೧); ಭಾರತೀಯ ಸಂಸ್ಕೃತಿಯನ್ನು ವೈದಿಕ ಸಂಸ್ಕೃತಿ ಎಂದು ಹೇಳುವುದರಲ್ಲಿ ಔಚಿತ್ಯವಿದೆ (ಮಕ್ಸಾರ. ೯೬ ಪೀಠಿಕೆ). ೨. [ಕಾವ್ಯಮಿ] ಒಂದು ಸಿದ್ಧಾಂತ: "ಕಾವ್ಯದ ಸಾರವಾದ ರಸವು ಸರಿಯಾಗಿ ಅಭಿವ್ಯಕ್ತವಾಗಬೇಕಾದರೆ ಕಾವ್ಯದ ಅಂಶಗಳಲ್ಲಿ ಪ್ರತಿಯೊಂದೂ ಅದಕ್ಕೆ ಅನುಗುಣವಾಗಿಯೇ ಇರಬೇಕಷ್ಟೆ. "ಅಂಗಿ" ಗೂ ಅಂಗಕ್ಕೂ ಇರುವ ಈ ಅನುಗುಣ್ಯವೇ – ಹೊಂದಿಕೆಯೇ – ಔಚಿತ್ಯ" (ಭಾರಮಿ. ೪೪೬). [ಸಂ.]

**ಔಚು**$_1$ 'ಔಂಚು' ನೋ.

**ಔಚು**$_2$ (ಕ್ರಿ). ಮುಚ್ಚಿಡು; ಮರೆಮಾಡು: ನಿಜವನ್ನು ಔಚಬಾರದು (ರೂಢಿ). [< ಅವಿಚು]

**ಔಜಸ** (ನಾ). ೧. ಕಾಂತಿ; ಪ್ರಕಾಶ (ಕಿ). ೨. ಚಿನ್ನ (ಕಿ). [< ಸಂ. ಓಜಸ್]

**ಔಟು** (ನಾ). ೧. ಜೋರು; ಜಂಬ; ಆಡಂಬರ. ೨. ಉಡಾಫೆ; ಬುರುಡೆ. [< ಅವುಟು$_3$]

**ಔಡಲ** 'ಅವುಡಲ' ನೋ.

**ಔಡಲೆಣ್ಣೆ** (ನಾ). ಹರಳೆಣ್ಣೆ: ಸೈಂಧವಲವಣ (ಸೈದಾಲವಣ), ಜೇನು ತುಪ್ಪ, ಬೇವು, ಔಡಲೆಣ್ಣೆ (ಗೃಹವೈ. ೫); ಔಡಲೆಣ್ಣೆ ಕುಡಿದವರಂತೆ ಮುಖ ಕಿವಿಚಿ (ದೀಪಹ. II, ೨೩೩). [ಔಡಲ (< ಅವುಡಲ) + ಎಣ್ಣೆ]

**ಔಡವ** (ನಾ). [ಸಂಗೀತ] "ಆರೋಹಣದಲ್ಲೂ ಅವರೋಹಣದಲ್ಲೂ ಐದು ಸ್ವರಗಳನ್ನು ಹೊಂದಿರುವ ರಾಗ" (ಸಂಗೀಚಂ. ೩೧). [ಸಂ.]

**ಔಡು**$_1$ 'ಅವುಡು$_1$' ನೋ.

**ಔಡು**$_2$ 'ಅವುಂಡು' ನೋ.

**ಔಡು**$_3$ 'ಅವುಡು$_3$' ನೋ.

**ಔಡುಗಚ್ಚು**$_1$ 'ಅವುಂಡುಗರ್ಚು' ನೋ.

**ಔಡುಗಚ್ಚು**$_2$ 'ಅವುಡುಗಚ್ಚು$_2$' ನೋ.

**ಔಡುಗಡಿ** 'ಅವುಡುಗಡಿ' ನೋ.

**ಔಡುಗರ್ಚು** 'ಅವುಂಡುಗರ್ಚು' ನೋ.

**ಔಡೊತ್ತು**$_1$ (ಕ್ರಿ). ಹಲ್ಲುಗಳಿಂದ ತುಟಿಯನ್ನು ಕಚ್ಚು; ಹಲ್ಲುಮಂಡಿ ಕಚ್ಚು: ಪರಿಪಚ್ಯಮಾನ ಸಂಗರ ಸಮುತ್ಸಾಹ ಫಲಮನಾಸ್ವಾದಿಪಂತಿರೌಡೊತ್ತುವ (ವರ್ಧಪು. ೭–೪೧ ವ); ಚಿತ್ತವಂಚನೆಯೊಳು ಪತ್ತಿರಲದನೌಡೊತ್ತಿ ಕೀಳುತ (ಅಂಜಚ. ೫–೧೪೯); ಕರ್ಬೊಗೆ ಸುತ್ತಿದುಸುರಲಿ ಮಿಸೆಗಡಿದೌಡೊತ್ತಿ ಸೆಳೆದನು ಶರವನೆಚ್ಚನು (ಕುವ್ಯಾದ್ರೋ. ೧೮–೪೨). [ಔಡು$_2$ (< ಅವುಂಡು) + ಒತ್ತು$_1$]

**ಔಡೊತ್ತು**$_2$ (ನಾ). ಹಲ್ಲುಗಳಿಂದ ತುಟಿಯನ್ನು ಕಚ್ಚಿಕೊಂಡಿರುವುದು: ಥಗೆಯ ಡೆಗೆ ಶಾಸ್ತುವಲಗೆಗೌಡೊತ್ತುಗಳ ಬಲಿದವಯವದ ಸತ್ರಾಣಿಗಳ ದೇವನು ಠಾ[illegible]ಲೊದಗಿದನು ಬಾಲದಲಿ (ಕುವ್ಯಾಅ. ೧೦–೧೯). [ಔಡು$_2$ (< ಅವುಂಡು) + ಒತ್ತು$_1$]

**ಔತಣ** 'ಅವುತಣ' ನೋ.

**ಔತಣಕೂಟ** (ನಾ). ಊಟದ ಕೂಟ; ಭೋಜನ ಕೂಟ: ಆ ಗುಂಪು ಹಿಂದಿರುಗುವುದಕ್ಕೆ ಮುಂಚೆ ಔತಣಕೂಟವೊಂದು ಏರ್ಪಾಡಾಗಿತ್ತು (ಪುನರು. ೨೨೦). [ಔತಣ (< ಅವುತಣ) + ಕೂಟ₁]

**ಔತಣವಿಕ್ಕು** (ಕ್ರಿ). ಹಬ್ಬದೂಟ ಹಾಕು, —ಬಡಿಸು: ವಡಬಗೌತಣ ವಿಕ್ಕುವರೆ ಕಡಲೊಡೆಯಗಹುದು (ಕುವ್ಯಾದ್ರೋ. ೬–೧೯); ಬಡಬಗೌತಣ ವಿಕ್ಕುವಡೆಯೊಕ್ಕುಡಿತೆ ಹಾಲೇ ಮಂಜು ಸುರಿಯಲಿಕೊಡನೆ ಕೆಚ್ಚೆ ತುಂಬುವುದೆ (ನಳಚ. ೨–೧೯). [ಔತಣ (< ಅವುತಣ) + ಇಕ್ಕು]

**ಔತಣಿಸು** (ಕ್ರಿ). ಔತಣಮಾಡಿಸು: ಎಲೆ ಧನಂಜಯ ಹಗೆಯ ಹೆಚ್ಚಿದ ಹಳುವವಿದೆ ನಿನ್ನತು ಕೋಪಾನಳನನೌತಣಿಸೈ [ಪಾಠಾಂ. ಹಳುವವಿದೆಲಾ ವಜ್ರಿಸುತ ನಿನ್ನಳವಿಯಲಿ ತಱುಬಿದೆ] (ಕುವ್ಯಾಭೀ. ೩–೨೫). [ಔತಣ (< ಅವುತಣ) + -ಇಸು₃]

**ಔತನ** 'ಅವುತಣ' ನೋ.

**ಔತಳ** (ನಾ). ಅವುತಣ: ಪುರಜನಕ್ಕೆ ಮುದದಿನೌತಳ [ಪಾಠಾಂ. ಅವುತಣ]ವ ಮಾಡಿಸಿದಳಾ ಗುಣವಂತೆ (ಸಮ್ಯಕೌ. ೬–೩೭). [< ಅವುತಣ]

**ಔತಿ** (ನಾ). ಕವಚ: "ಔತಿಗಳ್ ಕವಚಂಗಳ್" (ಕರ್ಣಾನಿ. ೧೭). [?]

**ಔತೆ** (ನಾ). "೧. ಕಾಣಿಕೆ. ೨. ಕಾರಭಾರ" (ಗಂಗಾಮು. ೬೧). [?]

**ಔತ್ತರೇಯ** (ಗು). ೧. ಉತ್ತರ ದಿಕ್ಕಿಗೆ ಸಂಬಂಧಿಸಿದ, —ಸೇರಿದ: ಶಿವಭಕ್ತನಾದ ರಾವಣನೂ, ದಾಕ್ಷಿಣಾತ್ಯ ಹನುಮಂತನೂ, ಔತ್ತರೇಯರ ಕೂಡ ನಡೆದುಕೊಂಡ ರೀತಿ (ಭಾ ಷಾ ಶಾ. ೪೯); ಔತ್ತರೇಯ ಧರ್ಮ ಪಂಥಗಳು (ಕರ್ಣಾಕ. ೨೦೦). (ನಾ). ೨. ಉತ್ತರೆಯ ಮಗನಾದ ಪರೀಕ್ಷಿತ್ ರಾಜನ ಹೆಸರು. [ಸಂ.]

**ಔತ್ತರೇಯಪಾಠ** (ನಾ). ಉತ್ತರ ದಿಕ್ಕಿನವರ ಪಾಠ, —ಸಂಪ್ರದಾಯ: ಮಹಾಭಾರತಕ್ಕೆ ದಾಕ್ಷಿಣಾತ್ಯಪಾಠ, ಔತ್ತರೇಯಪಾಠವೆಂದು ಎರಡು ಪಾಠಗಳಿವೆ (ಭಾರದ. ೯೬). [ಔತ್ತರೇಯ + ಪಾಠ]

**ಔತ್ತಾನಪಾದ** (ನಾ). ೧. ಉತ್ತಾನಪಾದನ ಮಗ; ಧ್ರುವ. ೨. ಧ್ರುವ ನಕ್ಷತ್ರದ ಹೆಸರು. [ಸಂ.]

**ಔತ್ತಾನಪಾದಿ** (ನಾ). = ಔತ್ತಾನಪಾದ. [ಸಂ.]

**ಔತ್ವ** (ನಾ). [ವ್ಯಾಕ] ಔಕಾರ: ಅವತರಿಸಿರ್ಕುಮುವರ್ಣದ ಮುವರ್ಣದೋತ್ತೌತ್ವದಗ್ರದೊಳ್ ಸ್ವರಮಿರೆ ವತ್ವವಿಧಾನಂ (ಶಮದ. ೫೫). [ಸಂ.]

**ಔತ್ಸುಕ್ಯ** (ನಾ). ೧. ಕುತೂಹಲ; ಉತ್ಸಾಹ; ಆತುರ: "ಉಚ್ಚುಕವಮೌತ್ಸುಕ್ಯಮದಕ್ಕುಂ" (ಚತುನಿ. ೧೧೭). ೨. ದುಃಖ; ಸಂತಾಪ. ೩. ಬಯಕೆ; ಆಸೆ. [ಸಂ.]

**ಔದನಿಕ** (ನಾ). ಅಡುಗೆಯವನು; ಬಾಣಸಿಗ. [ಸಂ.]

**ಔದರಿಕ** (ನಾ). ಹೊಟ್ಟೆಬಾಕ; ತಿನ್ನಾಳಿ: "ಅದ್ಯೂನನೌದರಿಕನೆನೆ ತನ್ನನಾರೈವನಕ್ಕು" (ಮಂಗರಾ. ೬೮–೧೦). [ಸಂ.]

**ಔದಲೆಗಾಣ್** (ಕ್ರಿ). ಅಡಗು; ಗುಪ್ತವಾಗು: ಕಸವರದಾಸೆಯಿಂ ಪದಪುದೋರ್ಪಟಿವೆಂದಿರ ನಲ್ಮೆಯೆಂದು ಭಾವಿಸದಿರು ನೀಂ ಮನೋನಯನ ವಲ್ಲಭ ಕೂರಿಸಿ ಕೂರ್ತ ನಿನ್ನ ಮೆಯ್ಯ್ ಕಸವರಮೆನ್ನನಿನ್ನುಸಿರದೌದಲೆಗಾ [ಪಾಠಾಂ. ದೌತಲೆಕಾ]ಣ್ಬೆನಮಂದೆ ನಂಬು ಚೀ ಕಸವರ ಬೇಟಮೆಂಬುದೆರೆಕೊಳ್ವರ ಬೇಟಮದೆನ್ನಬೇಟಮೋ( ವ್ಯಾವ. ೩೦೪). ℙ ಈ ಶಬ್ದ 'ತೌದಲೆಗಾಣ್' ಎಂಬುದರ ರೂಪಾಂತರವಿರಬಹುದು. [ಔದಲ್ಕೆ₀ + ಕಾಣ್. ℙ ಔದಲೆ = ಅವಿ + ತಲೆ ?]

**ಔದಾರಿಕ** (ನಾ). [ಜೈನ] ಸ್ಥೂಲತನು, —ದೇಹ: ತದುಪಾಂತ ಸಮಯದೊಳನ್ಯತರ ವೇದನೀಯ ದೇವಗತಿ ತತ್ಪ್ರಾಯೋಗ್ಯಾನುಪೂರ್ವೌದಾರಿಕ ಶರೀರ ತದ್ಬಂಧನ ಸಂಘಾತ ಸಂಸ್ಥಾನಾಂಗೋಪಾಂಗ ಸಂಹನನ ವರ್ಣಗಂಧ ರಸ ಸ್ಪರ್ಶ ಪ್ರಶಸ್ತಾಪ್ರಶಸ್ತ ವಿಹಾಯೋಗತಿ . . . ಎಂಬೆಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ (ಪಂರಾಮಾ. ೧೬–೮೦ ವ). [ಸಂ.]

**ಔದಾರಿಯ** (ನಾ). = ಔದಾರ್ಯ: ರಣದೌದಾರಿಯವ ತೋಱಿಮಗೆ ನುತ್ತಡಹಾಯ್ದನಾ ದ್ರೋಣ (ಕುವ್ಯಾದ್ರೋ. ೯–೪೨). [< ಸಂ. ಔದಾರ್ಯ]

**ಔದಾರ್ಯ** (ನಾ). ಉದಾರತೆ; ಘನತೆ; ಹಿರಿಮೆ. [ಸಂ.]

**ಔದಾಸೀನ** (ನಾ). ಉದಾಸೀನ; ಉಪೇಕ್ಷೆ (೩). [ಸಂ. ಔದಾಸೀನ್ಯ]

**ಔದಾಸೀನ್ಯ** (ನಾ). = ಔದಾಸೀನ: ನಿಜವಾದ ಧೀರನ ಬಳಿ ಇರುವುದೆಲ್ಲಾ ಸಮೃದ್ಧಿ, ಒರಟು ಮತ್ತು ಔದಾಸೀನ್ಯ (ಮಲೆನಾ. ೩೨). [ಸಂ.]

**ಔದಾಸ್ಯ** (ನಾ). = ಔದಾಸೀನ: ಕಂಡಿಲ್ಲ, ಕಾಣೆ ನಾನರ್ಜುನನ ಸಿರಿಮೊಗದಿ ಹಾಸ್ಯವನ್ನಲ್ಲದೌದಾಸ್ಯವನ್ನೇನಾಯ್ತು? (ಹಬ್ಬೆರ. ೨೫–೧೨). [ಸಂ.]

**ಔದುಂಬರ** (ನಾ). ೧. ಉದುಂಬರ ಮರದಿಂದ ಜನಿಸಿದ್ದು. ೨. ಅತ್ತಿಯಮರ: "ಔದುಂಬರಂ ದುಗ್ಧತರುವೆನಲತ್ತಿ" (ಮಂಗರಾ. ೩೫–೧೩); ಎರನುಂ ಮುತ್ತಮುಮೊಡವೆಳೆದಿರೆ ಪಡುವಲದಲ್ಲದಂದು ಮಾರುಡವನೌದುಂಬರಮುಂ ಪೆಱದಿರೆ ಬಡಗಲ್ ದೊರೆಕೊಳ್ಳುಂ (ಲೋಕೋಪ. ೫–೧೯); ಔದುಂಬರದ ಕುಸುಮದಲ್ಲಿ ಪಾದರಿ ಫಲವಾಗಿ . . . ಎಲವದ ಮರದಲ್ಲಿ ಹಣ್ಣಾಯಿತ್ತು (ಮೋಳಮಾ. ೧೮೧–೬೮೧). ೩. ಕುಷ್ಠರೋಗದಲ್ಲಿ ಒಂದು ಬಗೆ: ಕಪಾಲ, ಔದುಂಬರ, ಮಂಡಲ . . . ಹದಿನೆಂಟು ತೆಱ ಕುಷ್ಠಗಳ ಹೆಸರು (ವೈದ್ಯಸಾ. I, ೩೮೮). ೪. [ಸಂಗೀತ] ಒಂದು ಬಗೆಯ ವಾದ್ಯ: ಆ ವಾದ್ಯಗಳ ಸಮೂಹದಲ್ಲಿ . . . ದುಂದುಭಿ, ಭೂಮಿದುಂದುಭಿ, ವನಸ್ಪತಿ, ಔದುಂಬರ ಮುಂತಾದ ಲಯವಾದ್ಯಗಳೂ . . . ಹೆಸರಿಸಲ್ಪಟ್ಟಿವೆ (ಸಂಗೀಚಂ. ೧೦೮). [ಸಂ.]

**ಔದುಂಬರಕುಷ್ಠ** (ನಾ). ಕುಷ್ಠರೋಗದಲ್ಲಿ ಒಂದು ಬಗೆ: ಪಾಪದ ಫಲದಿಂದೇಱುದಿವಸದಿಂದೊಳಗೌ[ಪಾಠಾಂ. ಗು]ದುಂಬರಕುಷ್ಠಮಾಗಿ ಪುಟಿಱಿತು (ವಡ್ಡಾರಾ. ೧೦–೪); ಪಾಪದ ಫಲದಿನೌದುಂಬರಕುಷ್ಠಮಾಗಿ ಸರ್ವಾಂಗೋಪಾಂಗಾವಯವ ಪ್ರದೇಶಂಗಳೆಲ್ಲಂ ರೂಪಱಿಯಲಾಗದಂತು ಜರ್ಜರಮಾಗಿ ಜರಿಯೆ (ಸುಕುಮಾ. ೫–೧೧ ವ). [ಔದುಂಬರ + ಕುಷ್ಠ]

**ಔದ್ಧತ್ಯ** (ನಾ). ಉದ್ಧಟತನ; ಸೊಕ್ಕಿನ ನಡತೆ: ಈಗ ಚಾಣಕ್ಯನು ವಿಜಯದಿಂದ ಕೊಬ್ಬಿಹೋಗಿದ್ದಾನೆ. ಅವನ ಔದ್ಧತ್ಯವನ್ನು ಸಹಿಸದೆ ಚಂದ್ರಗುಪ್ತನು ಅವನ ಸಚಿವಪದವಿಯನ್ನು ಕಿತ್ತುಹಾಕಬಹುದು (ರಾಕ್ಷಮು. ೫೯). [ಸಂ.]

**ಔದ್ಯಮಿಕ** (ಗು). ಉದ್ಯೋಗಕ್ಕೆ ಸಂಬಂಧಿಸಿದ (Industrial. ಪತ್ರಿನಿ. ೪೪). [ಸಂ.]

**ಔದ್ಯಮೀಕರಿಸು** (ಕ್ರಿ). ಕೈಗಾರಿಕೆಯ ಏರ್ಪಾಡು ಮಾಡು (Industrialise. ಪತ್ರಿನಿ. ೪೪). [ಔದ್ಯಮೀಕರಣ₀ + -ಇಸು₃]

**ಔದ್ಯೋಗಿಕ** (ಗು). ಉದ್ಯೋಗಕ್ಕೆ ಸಂಬಂಧಿಸಿದ; ತಾಂತ್ರಿಕವಾದ (Technical. ಪತ್ರಿನಿ. ೮೧). [ಸಂ.]

**ಔದ್ಯೋಗಿಕಶಿಕ್ಷಣ** (ನಾ). ಉದ್ಯೋಗಕ್ಕೆ ಸಂಬಂಧಿಸಿದ ಶಿಕ್ಷಣ; ತಾಂತ್ರಿಕ ವಿದ್ಯೆ (Technical Education. ಪತ್ರಿನಿ. ೮೧). [ಔದ್ಯೋಗಿಕ + ಶಿಕ್ಷಣ]

**ಔದ್ವಾಹಿಕ** (ನಾ). ೧. ಮದುವೆಗೆ ಸಂಬಂಧಿಸಿದುದು. ೨. ಮದುವೆಯಲ್ಲಿ ವಧುವಿಗೆ ಬಂದ ಮುಯ್ಯಿ. [ಸಂ.]

**ಔನ್ನತ್ಯ** (ನಾ). ಉನ್ನತಿಕೆ; ಘನತೆ; ದೊಡ್ಡಸ್ತಿಕೆ: ಅತಿತುಂಗಾಕೃತಿಯಾದೊಡಾಗದದಱೊಳ್ ಸೌಂದರ್ಯ್ಯಮೌನ್ನತ್ಯಮುಂ ನುತಸೌನ್ದರ್ಯ್ಯಮುಮಾಗೆ ಮತ್ತತಿಶಯಂ ತಾನಾಗದು (ಎಕ.II, ೨೩೪–೧೬; 1180); ಭಗವಂತನ ಔನ್ನತ್ಯವನ್ನು ಶಿಲ್ಪದಲ್ಲಿ ನಿರೂಪಿಸಲು ಸಾಧ್ಯವಾದ ಬಗೆ ಎರಡು; ಒಂದು – ಅದ್ಭುತ ಆಗಾಧ ನಿರೂಪಣ, ಎರಡು – ಅನುಪಮ ಸೌಂದರ್ಯ ನಿರೂಪಣ (ಶಾಂತಲಾ. ೧೨೬). [ಸಂ.]

**ಔಪಗವ** (ಗು). ಉಪಗು ಎಂಬ ರಾಜನಿಗೆ ಸಂಬಂಧಿಸಿದ. [ಸಂ.]

**ಔಪಗವಕ** (ನಾ). ಔಪಗವಗಳ ಗುಂಪು, —ಸಮೂಹ. [ಸಂ.]

**ಔಪಚಾರಿಕ** (ಗು). ೧. ಉಪಚಾರಕ್ಕೆ ಸಂಬಂಧಿಸಿದ; ವಾಡಿಕೆಯ: ದಂಡಕಾರಣ್ಯದ ಋಷಿಗಳ ಜೀವನವು ಶಾಂತವಾಗಿದ್ದಿತೆಂದು ಹೇಳಿದುದು ಔಪಚಾರಿಕವಾದ ಮಾತು (ಭಾರದ. ೮೯). ೨. ಗೌಣವಾದ; ಪ್ರಧಾನವಲ್ಲದ. ೩. ಲಾಕ್ಷಣಿಕವಾದ; ಆಲಂಕಾರಿಕವಾದ. [ಸಂ.]

**ಔಪಚ್ಛಂದಸಿಕ** (ನಾ). [ಛಂದ] ಒಂದು ಬಗೆಯ ಛಂದಸ್ಸು: ವಹ್ನಿತೋಯಯುಗ್ಮಂ ಆ ಪಾದದ್ವಯಕಂತೆ ಬಂದೊಡಕ್ಕುಂ ಚಾಪಳನೇತ್ರೇ ವಿರಾಜಿಸುತ್ತಂದೌಪಚ್ಛಂದಸಿಕಂ ಕವೀಶ್ವರೋಕ್ತಂ (ಛಂದೋಂಬು. ૩–೨೦). [ಸಂ.]

**ಔಪದಾಹ್ಯ** (ನಾ). ಚಿತೆ (?): ಚದುರತರದಿಂದೌಪದಾಹ್ಯವನೊದಗಿ ವಿರಚಿಸಿ ಕನಕಮಣಿಗಳ ಕದಿರುಪೊಳೆಯೆ ವಿಮಾನಗಳನತಿ ಚಿತ್ರಮೆನೆ ರಚಿಸಿ (ತಿಮ್ಮಸ್ತ್ರೀ. ૩–೧೦). [ಸಂ. ?]

**ಔಪನಿಷದ** (ಗು). = ಔಪನಿಷದಿಕ: ಬ್ರಹ್ಮವನ್ನು "ಔಪನಿಷದ" ವೆನ್ನುವರು. ಉಪನಿಷನ್ಮಾತ್ರದಿಂದ ತಿಳಿಯಬರುವದೆಂದರ್ಥ (ಭಾರದ. ೨೩೨). [ಸಂ.]

**ಔಪನಿಷದಿಕ** (ಗು). ಉಪನಿಷತ್ತಿಗೆ ಸಂಬಂಧಿಸಿದ, —ಸೇರಿದ: ಔಪನಿಷದಿಕ ದರ್ಶನವನ್ನು ವಿವರಿಸುವಾಗ ನಾನು ಈ ಎರಡೂ ಬಗೆಗಳನ್ನು ಬಳಸಿರುವೆ (ಪರಪ. ૩೧). [ಸಂ.]

**ಔಪಪಾದಕದಶಾಂಗ** (ನಾ). [ಜೈನ] ಜೈನಾಗಮುಗಳ ಹನ್ನೆರಡು ಅಂಗಗಳಲ್ಲಿ ಒಂದು: ವೇದಗಳಿಗೆ ಆಚಾರಾಂಗ, ಸೂತ್ರಕೃತಾಂಗ . . . ಔಪಪಾದಕದಶಾಂಗ, ಪ್ರಶ್ನವ್ಯಾಕರಣಾಂಗ . . . ದೃಷ್ಟಿವಾದಾಂಗಗಳೆಂಬ ಹನ್ನೆರಡು ಅಂಗಗಳಿವೆ (ಭಾರದ. ೧೭೯). [ಔಪಪಾದಕ + ದಶಾಂಗ]

**ಔಪಮ್ಯ** (ನಾ). [ಕಾವ್ಯಮಿ] ಉಪಮೆ; ಸಾದೃಶ್ಯ; ಹೋಲಿಕೆ: ಏನಾನುಮೊಂದು ತೆಱದಿಂ ನಾನಾವಿಧ ವಸ್ತುರೂಪದೊಳ್ ಸಾದೃಶ್ಯಂ ತಾನೆನಿಸಿ ತೋರ್ಪುದದು ಬುಧಮಾನಿತಮೌಪಮ್ಯಮೆಂಬಲಂಕೃತಿಯಕ್ಕುಂ (ಕಾವ್ಯಾವ. ೬೬೪). [ಸಂ.]

**ಔಪಯಿಕ** (ಗು). ಉಪಾಯಕ್ಕೆ ಸಂಬಂಧಿಸಿದ, —ಸೇರಿದ. [ಸಂ.]

**ಔಪರಿಷ್ಟಕ** (ನಾ). ೧. "ಮೇಲ್ಭಾಗ" (ಆದಿಪು. ಕೋಶ): ಚಳದಳಕಾಳಿ ನಿನ್ನ ವದನಾಂಬುಜಮಂ ನಡೆ ನೋಡಲೀಯದವ್ವಳಿಸುವುದೌಪರಿಷ್ಟಕದೊಳೆನ್ನನಿವೆಂದು ಕನಲ್ದು (ಆದಿಪು. ೪–೧೨). ೨. ಒಂದು ಬಗೆಯ ರತಿಕ್ರೀಡೆ: ಬೆನ್ನನಪ್ಪಳಿಪ ಸೋರ್ಮುಡಿಯಂ ಕೆಲಿಗಂಟನಿಕ್ಕಿ ಕಾದಲನೊಳೆ ಕೂಡೆ ಕೋಮಲೆಗೆ ಬಿಚ್ಚತಮೊಪ್ಪಿದುದೌಪರಿಷ್ಟಕಂ (ಸೂಕ್ತಿಸು. ೧೪–૩೬). [ಸಂ.]

**ಔಪಲ** (ಗು). ಉಪಲಕ್ಕೆ ಸಂಬಂಧಿಸಿದ; ಕಲ್ಲಿನ. [ಸಂ.]

**ಔಪವಾಹ್ಯ** (ನಾ). ರಾಜನ ಪಟ್ಟದ ಆನೆ: "ನೃಪರಂ ನೆಗಪಿ ತಾಳ್ದಾನೆ ಔಪವಾಹ್ಯಮೆನಿಕ್ಕು" (ಮಂಗರಾ. ೪೭–೪). [ಸಂ.]

**ಔಪಶ್ಲೇಷಿಕ** (ಗು). ೧. ಗಾಢಸಂಬಂಧದ. (ನಾ). ೨. [ವ್ಯಾಕ] ಅಧಿಕರಣದಲ್ಲಿ ಒಂದು ವಿಧ: "ಅಧಿಕರಣಧೊಂದು ಕಡೆ ಮಾತ್ರ ಅಧಿಕರಣವಾಗಿದ್ದರೆ, ಅದು ಔಪಶ್ಲೇಷಿಕವು" (ಹೊಸುಗ. ೧೫೪). [ಸಂ.]

**ಔಪಹಾಸಿಕ** (ಗು). ಉಪಹಾಸಕ್ಕೆ ಸಂಬಂಧಿಸಿದ, —ಸೇರಿದ: ಹೆಗಲಮೇಲೆ ಒದ್ದೆಬಟ್ಟೆ ಹಾಕಿಕೊಂಡು ಔಪಹಾಸಿಕವಾಗಿಯೂ ದಿಟ್ಟತನದಿಂದಲೂ . . . ನಿಂತಿದ್ದನು (ಪುನರು. ೫೧೭). [ಸಂ.]

**ಔಪಾಖ್ಯಾನ** (ನಾ). ಉಪಾಖ್ಯಾನ: ಮಾನನಿಧಿ ಸಾವಿತ್ರಿಯೌಪಾಖ್ಯಾನವನು ಕೇಳಿದನು (ಕುವ್ಯಾಅ. ೨೩–೩). [ಸಂ.]

**ಔಪಾಸನ** (ಗು). ಉಪಾಸನಕ್ಕೆ ಸಂಬಂಧಿಸಿದ, —ಸೇರಿದ: ಬ್ರಹ್ಮವಂಶೋತ್ಪನ್ನರ್ ಔಪಾಸನಾಗ್ನಿಹೋತ್ರ ಗುರು ಮರುದತಿಥಿಪೂಜಾನಿರತರ್ (ಸೌಇಇ. XV, ೧೩೪–೭೯; 1178); ನಿತ್ಯಕರ್ಮಂಗಳನು ಚರಿಸುವ ನಿತ್ಯದೌಪಾಸನವ ಬೇಳುವ . . . ವಿಪ್ರಗೃಹಗಳಲಿ (ಕೌಶಿರಾ. ૩೯–೭). [ಸಂ.]

**ಔಪಾಸನೆ** (ನಾ). ಬೆಳಗ್ಗೆ ಮತ್ತು ಸಂಜೆ ದಂಪತಿಗಳು ಮಾಡುವ ಹೋಮ: ಗೃಹಗಳಲ್ಲಿ ಔಪಾಸನೆ ಮಾಡುವದಕ್ಕಾಗಿ ಪ್ರತ್ಯೇಕ ವೇದಿಕೆಗಳು ಬೇಕಾಗಿಲ್ಲ (ಭಾರದ. ೧೭). [ಸಂ. ಔಪಾಸನಾ]

**ಔಮಿನ** (ನಾ). ಅಗಸೆ ಹೊಲ: "ಅಗಸೆಗೆಯ್ಯೌಮೀನವೆಸರಕ್ಕು" (ಮಂಗರಾ. ೨೮–૩); ಏನೆಸೆವುವೊ ಕೌದ್ರವೀಣದೌಮೀನದ ತೈಲೀನದ ಮಾಷೀಣದ ಮೌದ್ಗೀನದ ಬಹುಸಾರ ಸಸ್ಯಸಕಳ ಫಳಂಗಳ್ (ಪುಷ್ಪಪು. ೨–೧೨). [ಸಂ.]

**ಔಮ್ಯ** (ನಾ). ಅಗಸೆ ಹೊಲ: ಲೀಲೆಯಿನದಱ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗಂ ಮಾಷ್ಯಂ ಶಾಲೇಯಂ ವ್ರೈಹೇಯಂ ತೈಲೀನಂ ಕೌದ್ರವೀಣವೌಮ್ಯಂ ಯವ್ಯಂ (ಚಂದ್ರಪು. ೧–೯೧). [ಸಂ.]

**ಔರಭ್ರ** (ನಾ). ಒರಟಾದ ಉಣ್ಣೆಯ ಕಂಬಳಿ: "ಆವಿಕಂ ಔರಭ್ರ ಮೂರ್ಣಾಯು ಕಂಬಳಿಯದು" (ಮಂಗರಾ. ೧೧೧–೨೯). [ಸಂ.]

**ಔರಭ್ರಕ** (ನಾ). ಕುರಿಗಳ ಹಿಂಡು, —ಸಮೂಹ, —ಮಂದೆ. [ಸಂ.]

**ಔರಸ** (ಗು). ೧. ಎದೆಗೆ ಸಂಬಂಧಿಸಿದ, —ಸೇರಿದ. (ನಾ). ೨. ಹೊಟ್ಟೆಯಲ್ಲಿ ಹುಟ್ಟಿದ ಮಗ; ಸ್ವಂತ ಮಗ. 'ಔರಸಪುತ್ರ' ಪರಾ. [ಸಂ.]

**ಔರಸಪುತ್ರ** (ನಾ). ಸ್ವಂತ ಮಗ: ಪತ್ತುವಿಧಮುಂಟು ಸುತರದರೊಳೌರಸಪುತ್ರನುತ್ತಮಂ (ಜೈಮಿಭಾ. ೨೮–೫೭). [ಔರಸ + ಪುತ್ರ]

**ಔರಸಸಂಪತ್ತು** (ನಾ). ಪರಂಪರೆಯಾಗಿ ಬಂದ ಸಂಪತ್ತು; ಪಿತ್ರಾರ್ಜಿತವಾದ ಸಂಪತ್ತು: ಕನ್ನಡವು ವೀರಶೈವ, ವೈಷ್ಣವ ಮತಗಳಿಗೆ ಹುಟ್ಟು ಜಾತಿಯಿಂದಲೇ ಬಂದ ಔರಸಸಂಪತ್ತೆಂಬ ಅನೈತಿಹಾಸಿಕ ಅಹಂಕಾರದಿಂದ ತೋರುವ ಪಂಕ್ತಿಪ್ರಪಂಚ (ವಿಚಾಮಂ. ೧೯). [ಔರಸ + ಸಂಪತ್ತು]

**ಔರ್ಧ್ವದೇಹಿಕ** (ನಾ). ಸತ್ತಮೇಲೆ ಮಾಡುವ ಕ್ರಿಯೆ; ಅಂತ್ಯಕ್ರಿಯೆ. [ಸಂ.]

**ಔರ್ವ** (ಗು). ೧. ಊರ್ವನಿಗೆ ಸಂಬಂಧಿಸಿದ, —ಸೇರಿದ. ೨. ತೊಡೆಯ; ತೊಡೆಯಿಂದ ಹುಟ್ಟಿದ. (ನಾ). ૩. ಭೃಗುವಿನ ಸಂತತಿಯವನು; ಸಗರನ ಗುರು. ೪. ವಸಿಷ್ಠನ ಮಗನ ಹೆಸರು. ೫. ಸಮುದ್ರದೊಳಗಿರುವ ಬೆಂಕಿ; ವಡಬ. 'ಔರ್ವಜ್ವಲನ' ಪರಾ.

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿವರಗಳು |
|---|---|---|---|---|---|
| ೧೬೩ | ಮನೋನಂ. | ಮನೋನಂದನ | ಎಂ. ಶಿವರಾಂ | ೧೯೬೫ | ವಿದೇಹ, ೧೭ನೆಯ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು |
| ೧೬೪ | ಮನೋರೋ | ಮನೋರೋಗಗಳು | ಎಸ್. ಆರ್. ಕುಲಕರ್ಣಿ | ೧೯೫೪ | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |
| ೧೬೫ | ಮಲೆನಾ. | ಮಲೆನಾಡವರು | ಗೊರೂರು ರಾಮಸ್ವಾಮಯ್ಯಂಗಾರ್ | ೧೯೪೭ | ಸತ್ಯಶೋಧನ ಪ್ರಕಟನ ಮಂದಿರ, ಬೆಂಗಳೂರು |
| ೧೬೬ | ಮಲೆಮ. | ಮಲೆಗಳಲ್ಲಿ ಮದುಮಗಳು | ಕುವೆಂಪು | ೧೯೬೭ | ಉದಯರವಿ ಪ್ರಕಾಶನ, ಮೈಸೂರು |
| ೧೬೭ | ಮಹಾಯೋ. | ಮಹಾಯೋಗಿ ಶ್ರೀ ಅರವಿಂದರ ಚರಿತ್ರೆ, ಸಾಧನೆ, ಉಪದೇಶ | ಆರ್. ಆರ್. ದಿವಾಕರ್ | ೧೯೬೩ | ೨ನೆಯ ಮುದ್ರಣ, ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ |
| ೧೬೮ | ಮಾದೇಸಾಂ. | ಮಾದೇಶ್ವರ ಸಾಂಗತ್ಯ | ಗುರುಸಿದ್ಧಕವಿ | ೧೭೫೦ | ಶರಣ ಸಾಹಿತ್ಯ ಗ್ರಂಥಮಾಲೆ, ಬೆಂಗಳೂರು |
| ೧೬೯ | ಮಾಧವಾ. | ಮಾಧವಾಲಂಕಾರ | ಮಾಧವ | ೧೫೦೦ | ಹಸ್ತಪ್ರತಿ: ಕೆ. ಬಿ. ೪೮, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೧೭೦ | ಮಾನಸ. | ಮಾನಸ ಸರೋವರ | ಕಾವ್ಯಾನಂದ | ೧೯೫೯ | ಶಾರದಾ ಪ್ರಕಟನಾಲಯ, ಬೆಂಗಳೂರು |
| ೧೭೧ | ಮಾರ್ಗದ. | ಮಾರ್ಗದರ್ಶಿ | ಆರ್. ಕೆ. ನಾರಾಯಣ್ ಅನು॥ ಚಿ. ನ. ಮಂಗಳ | ೧೯೬೫ | ಸಾಹಿತ್ಯ ಅಕಾದೆಮಿ, ನವದೆಹಲಿ |
| ೧೭೨ | ಮುಂಬವ್ಯಾ. | ಮುಂಬಯಿಯ ವ್ಯಾಪಾರ | ರಾ. ರಾ. ರಾಮಚಂದ್ರ, ವಿನಾಯಿಕ ಟಿಕೆಕರ | ೧೮೯೪ | ಬಾಸೆಲ್ ಮಿಷನ್ ಛಾಪಖಾನೆ, ಮಂಗಳೂರು |
| ೧೭೩ | ಮುಕ್ತಿ. | ಮುಕ್ತಿ | ಶಾಂತಿನಾಥ ದೇಸಾಯಿ | ೧೯೬೧ | ಮನೋಹರ ಗ್ರಂಥಮಾಲಾ, ಧಾರವಾಡ |
| ೧೭೪ | ಮುಗಿಯು. | ಮುಗಿದ ಯುದ್ಧ | ಕೆ. ಶಿವರಾಮ ಕಾರಂತ | ೧೯೬೧ | ಹರ್ಷ ಪ್ರಕಟಣಾಲಯ, ಪುತ್ತೂರು |
| ೧೭೫ | ಮೂಗುತಿ. | ಮೂಗುತಿಹಾಡು | ರಾಘವೇಂದ್ರ ಹಡಗಲಿ | ೧೯೭೩ | ರಾಘವೇಂದ್ರಾಚಾರ್ಯ ಹಡಗಲಿ, ಕನ್ನಡ ನಿಘಂಟು ಕಚೇರಿ, ಬೆಂಗಳೂರು–೧೮ |
| ೧೭೬ | ಮೃಜಲ. | ಮೃಗಜಲ | ಅನಂತ ಗೋಪಾಲ ರೇವಡೆ ಅನು॥ ಪೆರ್ವಾಡಿ ಸದಾಶಿವಭಟ್ಟ | ೧೯೬೧ | ಪ್ರತಿಭಾ ಗ್ರಂಥಮಾಲೆ, ಧಾರವಾಡ |
| ೧೭೭ | ಮೇಘದೂ. | ಕನ್ನಡ ಮೇಘದೂತ | ಅಂಬಿಕಾತನಯದತ್ತ | ೧೯೪೩ | ಸಮಾಜ ಪುಸ್ತಕಾಲಯ, ಧಾರವಾಡ |
| ೧೭೮ | ಮೈಲಾರ. | ಮೈಲಾರದ ಶ್ರೀ ಬಸವಲಿಂಗಶರಣರ ಕೃತಿಗಳು | ಮೈಲಾರದ ಶ್ರೀ ಬಸವಲಿಂಗ ಶರಣ | ೧೭೮೦ | ೩ನೆಯ ಮುದ್ರಣ, ಶ್ರೀ ಮುರುಘಾಮಠ, ಧಾರವಾಡ |
| ೧೭೯ | ಲಾಸ್ಯರಂ. | ಲಾಸ್ಯರಂಜನಂ | ಸಿಂಹಭೂಪಾಲ | ೧೫೮೩ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೧೮೦ | ಲಿಂಗಪು. | ಲಿಂಗಪುರಾಣ | ? | ? | ಹಸ್ತಪ್ರತಿ: ಕೆ. ೬೪೮, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೧೮೧ | ವಚಕಾ. | ವಚನ ಕಾದಂಬರಿ | ಸಂ॥ ಎಸ್. ಜಿ. ನರಸಿಂಹಾಚಾರ್ ಎಂ.ಎ.ರಾಮಾನುಜಯ್ಯಂಗಾರ್ | ೧೯ನೆಯ ಶತ | ಕರ್ಣಾಟಕ ಕಾವ್ಯ ಕಲಾನಿಧಿ, ಮೈಸೂರು |
| ೧೮೨ | ವಂಶವೃ. | ವಂಶವೃಕ್ಷ | ಎಸ್. ಎಲ್. ಭೈರಪ್ಪ | ೧೯೬೫ | ಸಾಹಿತ್ಯ ಭಂಡಾರ, ಹುಬ್ಬಳ್ಳಿ |
| ೧೮೩ | ವಾತಾಚಿ. | ವಾತಾದಿ ಸಕಲರೋಗ ಚಿಕಿತ್ಸೆ | ? | ? | ಹಸ್ತಪ್ರತಿ: ಕೆ. ಪಿ. ೧೬೬, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೧೮೪ | ವಿಮರ್ಶೆ. | ವಿಮರ್ಶೆಯ ಪೂರ್ವಪಶ್ಚಿಮ | ಜಿ. ಎಸ್. ಶಿವರುದ್ರಪ್ಪ | ೧೯೬೧ | ಸಾರಸವಿಹಾರ, ಸರಸ್ವತೀಪುರ, ಮೈಸೂರು |
| ೧೮೫ | ವಿಷಚಿ. | ವಿಷ ಚಿಕಿತ್ಸೆ | ? | ? | ಹಸ್ತಪ್ರತಿ: ಕೆ. ಪಿ. ೪೩೯, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೧೮೬ | ವ್ಯಾಸಬಿ. | ವ್ಯಾಸರ ಬಿತಣ | ಅನು॥ ಎಲ್. ಗುಂಡಪ್ಪ | ೧೯೫೧ | ಸತ್ಯಶೋಧನ ಪ್ರಕಟನ ಮಂದಿರ, ಬೆಂಗಳೂರು |
| ೧೮೭ | ಶಂಕಶ. | ಶಂಕರ ಶತಕ | ಚಂದ್ರಕವಿ ಸಂ॥ ಸಿ. ಮಹದೇವಪ್ಪ | ೧೪೫೦ | ಪ್ರಥಮದರ್ಜೆ ಕಾಲೇಜು, ಚಿಕ್ಕಮಗಳೂರು |
| ೧೮೮ | ಶಮಪಾಂ. | ಶಬ್ದಮಣಿದರ್ಪಣದ ಪಾಠಾಂತರಗಳು | ಪ್ರೊ. ಡಿ. ಕೆ. ಭೀಮಸೇನರಾವ್ | ೧೯೫೧ | ಕನ್ನಡ ರಿಸರ್ಚ್ ಇನ್‌ಸ್ಟಿಟ್ಯೂಟ್, ಧಾರವಾಡ |
| ೧೮೯ | ಶರಚ. | ಶರಣಚರಿತಾಮೃತ | ಸಿದ್ಧಯ್ಯ ಪುರಾಣಿಕ | ೧೯೬೪ | ವಯಸ್ಕರ ಶಿಕ್ಷಣ ಸಮಿತಿ, ಮೈಸೂರು |
| ೧೯೦ | ಶಿಲ್ಪನಾ. | ಶಿಲ್ಪ ಮತ್ತು ನಾಗರಿಕತೆ | ಎಚ್. ಸಿ. ಕಪಿನೀಪತಿಭಟ್ಟ | ೧೯೬೮ | ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ |
| ೧೯೧ | ಶಿವಪ್ರ. | ಶಿವಯೋಗ ಪ್ರದೀಪಿಕೆ (ಟೀಕೆ) | ಬಸವಾರಾಧ್ಯದೇವ | ೧೭೦೦ | ಹಸ್ತಪ್ರತಿ: ಕೆ. ಬಿ. ೧೮೦, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿವರಗಳು |
|---|---|---|---|---|---|
| ೧೯೨ | ಶ್ರೀಪದಾ. | ಶ್ರೀಪದಾಶೀತಿ | ಆಚಣ್ಣ | ೧೫೨೯ | ಹಸ್ತಪ್ರತಿ: ಕೆ. ಎ. ೨೮೪, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೧೯೩ | ಶ್ರೇಷ್ಠಪ್ರ. | ಶ್ರೇಷ್ಠ ಪ್ರಬಂಧಗಳು | ನೋ. ರಾಜೇಶ್ವರಯ್ಯ, ಪ್ರಧಾನ್ ಗುರುದತ್ತ | ೧೯೬೫ | ಮೋಹನ ಪ್ರಕಾಶನ, ಮೈಸೂರು |
| ೧೯೪ | ಷೇಕ್ಸ್‌ಪಿ. | ಷೇಕ್ಸ್‌ಪಿಯರ್ | ಎ. ಎನ್. ಮೂರ್ತಿರಾವ್ | ೧೯೬೨ | ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| ೧೯೫ | ಸಂಗೀತ. | ಕರ್ಣಾಟಕ ಸಂಗೀತರತ್ನಗಳು | ಎಸ್. ಅನಂತನಾರಾಯಣ | ೧೯೬೦ | ಕಾವ್ಯಾಲಯ, ಮೈಸೂರು |
| ೧೯೬ | ಸಂಧ್ಯಾಕಾ. | ಸಂಧ್ಯಾಕಾಲ | ಶ್ರೀರಂಗ | ೧೯೬೩ | ಉಷಾ ಸಾಹಿತ್ಯಮಾಲೆ, ಮೈಸೂರು |
| ೧೯೭ | ಸಂನಾಟ. | ಸಂಸ್ಕೃತ ನಾಟಕ | ಎ. ಆರ್. ಕೃಷ್ಣಶಾಸ್ತ್ರೀ | ೧೯೫೫ | ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| ೧೯೮ | ಸಂಶೋತ. | ಸಂಶೋಧನ ತರಂಗ | ಡಾ|| ಎಂ. ಚಿದಾನಂದಮೂರ್ತಿ | ೧೯೬೭ | ಸರಸ ಸಾಹಿತ್ಯ ಪ್ರಕಾಶನ, ಮೈಸೂರು |
| ೧೯೯ | ಸಂಶೋಧ. | ಸಂಶೋಧನ ರತ್ನಮಾಲಿಕೆ | ಟಿ. ಕೇಶವಭಟ್ಟ | ೧೯೭೯ | ಚಿರಸಾಹಿತ್ಯ ಪ್ರಕಾಶನ, ಬೆಂಗಳೂರು |
| ೨೦೦ | ಸಂಸ್ಕಾರ. | ಸಂಸ್ಕಾರ | ಯು. ಆರ್. ಅನಂತಮೂರ್ತಿ | ೧೯೬೬ | ಮನೋಹರ ಗ್ರಂಥಮಾಲಾ, ಧಾರವಾಡ |
| ೨೦೧ | ಸಕವೈ. | ಸಕಲವೈದ್ಯ ಸಂಹಿತಾಸಾರಾರ್ಣವ | ಕಳಲೆ ವೀರರಾಜೇಂದ್ರ | ೧೭೨೦ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೨೦೨ | ಸನ್ಯಾಸಿ. | ಸನ್ಯಾಸಿಯ ಬದುಕು | ಕೆ. ಶಿವರಾಮ ಕಾರಂತ | ೧೯೬೧ | ೨ನೆಯ ಮುದ್ರಣ, ಹರ್ಷ ಪ್ರಕಟಣಾಲಯ, ಪುತ್ತೂರು |
| ೨೦೩ | ಸರ್ವವ. | ಸರ್ವ ಪುರಾತನರ ವಚನ | ಸಂ|| ಚನ್ನಮಲ್ಲಿಕಾರ್ಜುನ | ೧೯೫೯ | ಸದ್ಧರ್ಮ ದೀಪಿಕೆ ಗ್ರಂಥಮಾಲಾ, ಮೈಸೂರು |
| ೨೦೪ | ಸಾಮುಲ. | ಸಾಮುದ್ರಿಕಾ ಲಕ್ಷಣ | ಕುಮಾರಸ್ವಾಮಿ | ? | ಹಸ್ತಪ್ರತಿ: ಕೆ. ಎ. ೨೦೩, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೨೦೫ | ಸಾಲಂಸಾ. | ಸಾಲಂಕೃತ ಸಾಹಿತ್ಯ | ಪಂ. ಕೇಶವಶರ್ಮಾ ಗಲಗಲಿ | ೧೯೬೬ | ಸಮಾಜ ಪುಸ್ತಕಾಲಯ, ಧಾರವಾಡ |
| ೨೦೬ | ಸಾವಿತ್ರಿ. | ಸಾವಿತ್ರಿ | ಎಂ. ಆರ್. ಶ್ರೀನಿವಾಸಮೂರ್ತಿ | ೧೯೪೯ | ಸತ್ಯಶೋಧನ ಪುಸ್ತಕ ಭಂಡಾರ, ಬೆಂಗಳೂರು |
| ೨೦೭ | ಸಾಹಿಸ. | ಸಾಹಿತ್ಯ ಸಂಶೋಧನೆ ಮತ್ತು ಸಮಾಲೋಚನೆ | ಸದಾನಂದ ನಾಯಕ | ೧೯೫೯ | ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ |
| ೨೦೮ | ಸಾಹೇಬ್. | ಸಾಹೇಬ್, ಬೀಬಿ ಮತ್ತು ಗುಲಾಮ | ವಿಮಲಮಿತ್ರ, ಅನು|| ಅ. ಶಂಕರ | ೧೯೬೬ | ಕಾವ್ಯಾಲಯ, ಮೈಸೂರು |
| ೨೦೯ | ಸುತ್ತುಮು. | ಸುತ್ತು – ಮುತ್ತು | ಎನ್. ಎಸ್. ಗದಗಕರ | ೧೯೬೫ | ಶರತ್ ಪ್ರಕಾಶನ ಮಂದಿರ, ಬೆಳಗಾಂ |
| ೨೧೦ | ಸುಧಾಮ. | ಸುಧಾಮ ಚರಿತೆ | ? ಸಂ|| ರಾಘವೇಂದ್ರರಾವ್ | ೧೮ನೇ ಶತ | ಸುರುಚಿ ಪ್ರಕಾಶನ, ಮೈಸೂರು |
| ೨೧೧ | ಸುವರ್ಣ. | ಸುವರ್ಣ ಸಂಚಯ | ಸಂ|| ದೇ. ಜವರೇಗೌಡ | ೧೯೬೭ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೨೧೨ | ಸೌಂದಸ. | ಸೌಂದರ್ಯ ಸಮೀಕ್ಷೆ | ಜಿ. ಎಸ್. ಶಿವರುದ್ರಪ್ಪ | ೧೯೬೫ | ತ. ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು |
| ೨೧೩ | ಸ್ಮೃತಿಚಿ. | ಸ್ಮೃತಿಚಿತ್ರಗಳು | ಶ್ರೀಮತಿ ಲಕ್ಷ್ಮೀಬಾಯಿ ಟಿಳಕ, ಅನು|| ದ. ಬಾ. ಕುಲಕರ್ಣಿ | ೧೯೭೬ | ಸಾಹಿತ್ಯ ಅಕಾದೆಮಿ, ಹೊಸ ದೆಹಲಿ |
| ೨೧೪ | ಸ್ವಪ್ನಹೊ. | ಸ್ವಪ್ನದ ಹೊಳೆ | ಕೆ. ಶಿವರಾಮ ಕಾರಂತ | ೧೯೬೬ | ಹರ್ಷ ಪ್ರಕಟನಾಲಯ, ಪುತ್ತೂರು |
| ೨೧೫ | ಹಂಸದ. | ಹಂಸದಮಯಂತಿ ಮತ್ತು ಇತರ ರೂಪಕಗಳು | ಪು. ತಿ. ನರಸಿಂಹಾಚಾರ್ | ೧೯೬೫ | ಶಾರದಾ ಮಂದಿರ, ಮೈಸೂರು |
| ೨೧೬ | ಹಣಪ್ರ. | ಹಣ ಪ್ರಪಂಚ | ವಿ. ಸೀತಾರಾಮಯ್ಯ | ೧೯೫೮ | ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| ೨೧೭ | ಹಳ್ಳಿಪ. | ಹಳ್ಳಿಯ ಪದಗಳು | ಬಿ. ಎನ್. ರಂಗಸ್ವಾಮಿ | — | ? |
| ೨೧೮ | ಹಾಲಾಸ್ಯ. | ಹಾಲಾಸ್ಯ ಪುರಾಣ | ಇಮ್ಮಡಿ ಗುರುಸಿದ್ಧ | ೧೭೨೦ | ಹಸ್ತಪ್ರತಿ: ಕೆ. ೧೧೫೪, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೨೧೯ | ಹುಲಿಹಾ. | ಹುಲಿಯ ಹಾಲಿನ ಮೇವು | ಭಾರತೀಸುತ | ೧೯೭೦ | ಕಾವೇರಿ ಪ್ರಕಾಶನ, ಮಡಕೇರಿ |
| ೨೨೦ | ಹೇಮಂತ. | ಹೇಮಂತ | ಪ್ರಿಯದರ್ಶಿ | ೧೯೫೮ | ಸಮಾಜ ಪುಸ್ತಕಾಲಯ, ಧಾರವಾಡ |
| ೨೨೧ | ಹೇಮಕೂ. | ಹೇಮಕೂಟ | ಸಾ. ಶಿ. ಮರುಳಯ್ಯ | ೧೯೬೬ | ತ. ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು |
| ೨೨೨ | ಹೇಮಾತೀ. | ಹೇಮಾವತಿಯ ತೀರದಲ್ಲಿ | ಗೊರೂರು ರಾಮಸ್ವಾಮಯ್ಯಂಗಾರ್ | ೧೯೬೯ | ಶಾರದಾ ಮಂದಿರ, ಮೈಸೂರು |
| ೨೨೩ | ಹೈದರ. | ಹೈದರನಾಮ | ನಲ್ಲಪ್ಪ | ೧೮೮೪ | ಜರ್ನಲ್ ಆಫ್ ಮಿಥಿಕ್ ಸೊಸೈಟಿ, ಬೆಂಗಳೂರು |
| ೨೨೪ | ಹೊಯ್ಸವಾ. | ಹೊಯ್ಸಳ ವಾಸ್ತುಶಿಲ್ಪ | ಡಾ|| ಎಸ್. ಶ್ರೀಕಂಠಶಾಸ್ತ್ರೀ | ೧೯೬೫ | ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |

# ಅನುಬಂಧ III

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿವರಗಳು |
|---|---|---|---|---|---|
| ೧ | ಚಿತ್ರಾಂಗ | ಚಿತ್ರಾಂಗದಾ | ಕುವೆಂಪು | ೧೯೩೬ | ಉದಯರವಿ ಪ್ರಕಾಶನ, ಮೈಸೂರು |
| ೨ | ದಶಾವ | ದಶಾವತಾರ ಚರಿತ್ರೆ | ಮಲ್ಲರಸಾಂಕ | ೧೬೮೦ | ಹಸ್ತಪ್ರತಿ : ಕೆ. ಬಿ. ೯೮,<br>ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೩ | ನಂದಿಲೀ. | ನಂದಿಯಾಗಮುಲೀಲೆ | ವೀರಸಂಗಯ್ಯ | ೧೫೮೯ | ಹಸ್ತಪ್ರತಿ : ಕೆ. ಬಿ. ೩೦೬,<br>ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೪ | ನನ್ನಕಾ. | ನನ್ನಯ್ಯನ ಕಾವ್ಯ | ಪರ್ವತದೇವ | ೧೫೭೭ | ಹಸ್ತಪ್ರತಿ : ಕೆ. ಬಿ. ೪೫೦,<br>ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೫ | ನಾನಾಗು. | ನಾನಾರ್ಥ ಗುರುಬೋಧಸಾರ | ಯೋಗೀಂದ್ರ | ? | ಹಸ್ತಪ್ರತಿ : ಬಿ. ಕೆ. ೧೮೬,<br>ಕನ್ನಡ ಅಧ್ಯಯ ಸಂಸ್ಥೆ, ಮೈಸೂರು |
| ೬ | ನಾನಾಲ. | ನಾಯಕನಾಯಿಕಾ ಲಕ್ಷಣ | ಯೋಗೀಂದ್ರ | ? | ಹಸ್ತಪ್ರತಿ : ಕೆ. ಬಿ. ೨೮,<br>ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೭ | ನೊಳಂಬ. | ನೊಳಂಬ ಇತಿಹಾಸ ದರ್ಶನ | ಸಂ॥ ಕೆ. ಆರ್. ಬಸವರಾಜ್ | ೧೯೭೬ | ನೊಳಂಬ ಇತಿಹಾಸ ಪರಿಷತ್,<br>ಕೃ. ರಾ. ಬಡಾವಣೆ, ತಿಪಟೂರು |
| ೮ | ವೈಶಾಖಿ | ಗೊಲ್ಗೊಥಾ ಮತ್ತು ವೈಶಾಖಿ | ಗೋವಿಂದಪೈ | ೧೯೪೭ | ಕಾವ್ಯಾಲಯ ಪ್ರಕಾಶಕರು, ಮೈಸೂರು |

# ಸಂಕ್ಷಿಪ್ತಗಳು ಮತ್ತು ಸಂಕೇತಗಳು

## ಅನುಬಂಧ II

—ಕ. ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟಣೆ
(ಉದಾ. ಚನ್ನವ. ಕ., ಬಸವ. ಕ., ಮಹಾದೇ. ಕ)

ಕೃಶಾ. ಕೃತಕಶಾಸನ

ಟೀ. ಟೀಕು(ಕೆ)

—ದೇ. ಎಚ್. ದೇವೀರಪ್ಪನವರ 'ಶರಣಚರಿತಮಾನಸ'

ಪೋರ್ಚ್. ಪೋರ್ಚುಗೀಸ್

ಪ್ರ. ಪ್ರಸ್ತಾವನೆ

—ಬ. ಡಾ. ಎಲ್. ಬಸವರಾಜು ಅವರ 'ಅಕ್ಕನ ವಚನಗಳು'

ಮೊ. ಮೊದಲಮಾತು

ರ. ರಗಳೆ

ರಾಣಿಬೆ. ರಾಣಿಬೆನ್ನೂರು

ವ. ವಚನ

ಸು. ಸುಮಾರು

ಹಾನುಗ. ಹಾನುಗಲ್ಲು

—ಹ. ಫ. ಗು. ಹಳಕಟ್ಟಿಯವರ 'ಹರಿಹರನ ರಗಳೆಗಳು'

(R) Revised Edition

◁ Back Formation

**ಕ$_1$** (ನಾ). ಕನ್ನಡ ವರ್ಣಮಾಲೆಯ ಹತ್ತೊಂಬತ್ತನೆಯ ಅಕ್ಷರ.

**ಕ$_2$** (ನಾ). ಕಮ್ಮ; ಭೂಮಿಯ ಒಂದು ಅಳತೆ: ಆ ಹಳ್ಳಿಯಲು ಬಿದ್ದಲೆ ಕ ೧೦೦ ಗೋಪಾಳದೇವರ ಸೊಡರೆಂಣೆಗೆ (ಎಕ. XIV, ನಾಗಮಂ. ೧೪೦–೭೧; 1225). ℙ ಇದು ಶಾಸನಗಳಲ್ಲಿ ಬಳಸುವ 'ಕಮ್ಮ'ದ ಸಂಕ್ಷಿಪ್ತರೂಪ. [< ಕಮ್ಮ$_1$]

**-ಕ$_3$** (ಪ್ರ). **೧.** ಪುಲ್ಲಿಂಗಸೂಚಕ ತದ್ಧಿತ ಪ್ರತ್ಯಯ: "ಏನಾನುಮೊಂದು ಭಾವಮನಾನಲ್ ಸಲ್ವವನೊಳಱಿಗೆ ಕ ಪ್ರತ್ಯಯಮಂ... ಕ ಪ್ರತ್ಯಯಕ್ಕೆ – ಬಡಕಂ, ನಿಡುಕಂ, ಒಣಕಂ... ಕೊಟಕಂ" (ಶಮದ. ೨೦೫, ಪ್ರಯೋ); "ಕ – ಇದು ಉಳ್ಳ – ಕರಿಕ, ಕೊಟಿಕ, ಬಿಳಿಕ" (ಕೈಪಿಡಿ. ೧೮). **೨.** ಕರ್ತೃತ್ವ ಸೂಚಕ ಪ್ರತ್ಯಯ: ಉದಾ. ಚಿನ್ನಗೆಯ್ಕ, ಕೊರಳುಗೊಯ್ಕ. ℙ ಉಡುಕ, ನಡುಕ ಇವುಗಳಲ್ಲಿಯ 'ಕ' ಕಾರವನ್ನು ಕೇಶಿರಾಜ ಭಾವನಾಮಪ್ರತ್ಯಯವೆಂದು ಭಾವಿಸಿದ್ದಾನೆ. ಆಡು ಎಂಬುದು ಆಟ ಆದ ಹಾಗೆ ಇಲ್ಲಿ ನಡುಗು ಎಂಬುದು ನಡುಕ ಆಗಿದೆ.

**ಕ$_4$** (ನಾ). ೧. ಬ್ರಹ್ಮ. ೨. ಆತ್ಮ. ೩. ಕ್ಷೇತ್ರ. ೪. ಸೂರ್ಯ. ೫. ವಾಯು. ೬. ತಲೆ. ೭. ನೀರು. ೮. ಸ್ವರ್ಗ. ೯. ಅಗ್ನಿ. ೧೦. ಇಂದ್ರಿಯ. ೧೧. ಆಕಾಶ. ೧೨. ಯತಿ. ೧೩. ಗಿಳಿ. ೧೪. ನವಿಲು. ೧೫. ಸಂತೋಷ. ೧೬. ಸೊನ್ನೆ. ೧೭. ಕಣ್ಣು: "ವಾರಿಯೊಳು ಬ್ರಹ್ಮನೊಳು ಶಿರದೊಳು ಸುಖಾಂತದೊಳು ಮಾರುತನೊಳೋರಂತೆ ಕಂ ಶಬ್ದಮಕ್ಕು" (ಮಂಗರಾ. ೧೪೫–೨೯); "ಪವನಾತ್ಮಂ ಭಾನು ಶಿರಂ ನವಿಲಿಂದ್ರಿಯ ಬೊಮ್ಮ ನಯನ ವೈಶ್ವಾನರ ನೀರ್ ದಿವವೇಕಾದಶ ಲೆಖ್ಖಂ ಭುವಿಯೊಳ್ ಕಂ ಎಂಬ ಶಬ್ದಮಕ್ಕುಂ ನಯದಿಂ" (ನಾನಾಕಂ. ೨೨); "ಪವನ ದಿವಾಂಬು ಕೀರ ನವಿಲಾನಲ ಭಾನು ಶಿರಂ ಸರೋಜಸಂಭವ ನಯನೇಂದ್ರಿಯಾತ್ಮಮಿವು ಕಂ ಶಬುದಂ" (ನಾನಾರ. ೮). [ಸಂ.]

**ಕಉ[ವು]ಲೆ** 'ಕವಿಲ್ಕೆ$_3$' ನೋ.

**ಕಉ[ವು]ವಲಮರ** (ನಾ). ಒಂದು ಜಾತಿಯ ಮರ: ತಾರಿಯ ಕೊಪ್ಪಲ ಒತ್ತಿನಲು ತಾತೆಯ ಹೊಳೆಯ ದಡದ ಮೇಲೆ ಕಉ[ವು]ವಲ ಮರ ಒತ್ತಿನಲು ನಟ್ಟ ವಾಮನ ಮುದ್ರೆಯ ಕಲ್ಲು (ಎಕ. VIII, ತೀರ್ಥಹ. ೧೯೦–೩೩; 1487). [? + ಮರ$_1$]

**ಕಉ[ವು]ಸಾಳ** 'ಕಂಸಾಳ' ನೋ.

**ಕಂ** 'ಕಣ್' ನೋ.

**ಕಂಕ** (ನಾ). ೧. ಒಂದುಜಾತಿಯ ಹದ್ದು; ರಣಹದ್ದು: ಈ ಕಾಂಡಕ್ಕೆ ವೇಗ ಬರಲು ತುದಿಗೆ ಹಾಕಿರುವ ಗರಿಯು ಗೃಧ್ರದ್ದೆ, ಕಂಕದ್ದೆ, ಕಲಲದ್ದೆ, ಮಯೂರದ್ದೆ ಅಥವಾ ಶಿಥಿಲ ಹನುವಿನದೆ? (ಬುದ್ಧಪ. ೮೦); ಕಂಕ ವಿಶೃಂಖಲ ಬಿಂಕದ ಬೆನ್ನೇರಿ ಬಾನೆಲ್ಲ ತಾನೊಂದೆ ಆಳುವೊಲೆ (ಸಖೀಗೀ. ೨೩–೩೯೩). ೨. ಇಕ್ಕಳ; ತಂಡಸ; ಚಿಮುಟ: ಮದಂಘ್ರಿಸಂಸ್ಪರ್ಶನಮುಂ ಸಂಗತಮಲ್ತೆನಲಿದೆ ಕಂಕಂ ಗರುವನೆಯೆನಲ್ (ಉದ್ಭಟ. ೧೧–೧೦೯). 'ಕಂಕಮುಖ' ಪರಾ. ℙ ಇದು 'ಕಂಕವದನ' ಎಂಬುದರ ಸಂಕ್ಷಿಪ್ತರೂಪವಿರಬಹುದೆ? ೩. ಯಮ. ೪. ಕಪಟಬ್ರಾಹ್ಮಣ. ೫. ವಿರಾಟರಾಜನ ಆಸ್ಥಾನದಲ್ಲಿ ಯುಧಿಷ್ಠಿರನು ಇಟ್ಟುಕೊಂಡ ಹೆಸರು: ಕಂಕನೆಂಬಭಿಧಾನ ತನಗೆಂದ (ಕುವ್ಯಾವಿ. ೧–೬). ೬. ಒಂದು ಜಾತಿಯ ಮಾವು. [ಸಂ.]

**ಕಂಕಟ** (ನಾ). ೧. ಕವಚ; ಚಿಲಖತ್ತು. ೨. ಅಂಕುಶ. ೩. ಮೇರೆ. [ಸಂ.]

**ಕಂಕಟಿಕ** (ನಾ). ತಲೆಯ ಟೊಪ್ಪಿಗೆ; ಶಿರಸ್ತ್ರಾಣ: "ಕಂಕಟಕಮೆನೆ ತೌಳಿ" (ಮಂಗರಾ. ೮೬–೩೧). [ಸಂ.]

**ಕಂಕಡ** (ನಾ). ಒಂದು ಬಗೆಯ ಸಸ್ಯ: ತಂದಸಿ, ಕಂಕಡ (ಮೈಔಗ. ೪೧–೮೧೮). [?]

**ಕಂಕಡಿ** (ನಾ). ಮುಳ್ಳುಸವುತೆಯ ಕಾಯಿ (ಕ).
[< ಸಂ. ಕರ್ಕಟಿ. / ಹಿಂ. ಕಕಡೀ; ಮರಾ. ಕಾಂಕಡೀ]

**ಕಂಕಣ** (ನಾ). ೧. ಕಡಗ; ಹಸ್ತಾಭರಣ; ಬಳೆ: ಜಯವಧು ಪಂಕಜನಾಭಂಗೆ ಕೂರ್ತು ರಣಮುಖವೆಡೆಯೊಳ್ ಮುಂ ಕೊಟ್ಟಟ್ಟಿದ ರತ್ನದ ಕಂಕಣಮೆಂಬಂತೆ ಕೈಗೆವಂದುದು ಚಕ್ರಂ (ಪಂಪಾಭಾ. ೧೪–೧೮೫); ಕಂಕಣ ಕಿಂಕಿಣೀರುತಿ ಪೊಣ್ಮೆ (ಜಗವಿ. ೩–೫೨). ೨. ಉಡಿದಾರ; ಮೇಖಲೆ. ೩. ಕೌಸ್ತುಭ. ೪. ಯಾವುದಾದರೂ ಆಭರಣ. ೫. ಭ್ರಮಣ; ತಿರುಗುವಿಕೆ; ಸುತ್ತುವಿಕೆ. ೬. ಮುಡಿ. ೭. ನೀರಿನ ಕಣ: ತಾವರೆದೆಱೆದ ಕೈಗಳಿಂ ತುಳುಕಿದರ್ ಚೆಲ್ವ ಕಂಕಣರವಂ ಮಿಗೆ ಚೆಲ್ವ ಕಂಕಣರವಂಗಳೊಡನೆ (ಜೈಮಿಭಾ. ೩೦–೭). ೮. ಕಣ್ಣೀರು; ಅಶ್ರುಬಿಂದು: ಪ್ರಣುತ ಕಂಕಣ ನಿಕರವದು ತಾಂ ಗಣಿಸುವಡಾನಂದಕರ ಕಾರಣಮೆನಿಸಿದದು ಚೋದ್ಯಮೇ (ಬಸವು. ೧೮–೭೭); ಅರಸರ್ ಕುಡುವಾ ಕಾರ್ತಸ್ವರ ಕಂಕಣಮಿಕ್ಕೆ ಸರಸರಾಸ್ವಾದಿಸಿ ಕಾವ್ಯರಸವ ಸೂಸುವ ಸುಖಭಾಸ್ವರಾಶ್ರುಕಂಕಣಮೆ ಕವಿಗೆ ಕಂಕಣಮಲ್ತೇ (ದಮಸ್ವ. ೫–೨೩ ಪೀಠಿಕೆ). ೯. ಕಣ್ಣು. ೧೦. ನೀರು. ೧೧. ಬಿಳಿದಾದುದು. ೧೨. ಕಾಂತಿ. ೧೩. ಯುದ್ಧ. ೧೪. ನವಿಲು. ೧೫. ಕಾರ್ಯ. ೧೬. (ಮದುವೆಯ ಕಾಲದಲ್ಲಿ ವಧೂವರರ) ಮುಂಗೈಗೆ ಕಟ್ಟುವ ರಕ್ಷಾಸೂತ್ರ: ಮದುವೆ ಕಂಕಣ ಬಿಚ್ಚುವವರೆಗೂ ಹೊರಗೆ ಹೋಗಬಾರದು (ರೂಢಿ); "ಕೌಸ್ತುಭ ಕಣ್ಣೀರ್ ತಿರುಗುವ ವ್ವಸ್ತುಡಿದಾರಗಳು ಕೈಯ ಕಂಕಣವೈದುಂ ಪ್ರಸ್ತುತ ಕಂಕಣಶಬ್ದಂ" (ನಾನಾಕೌ. ೮೪); "ಕೌಸ್ತುಭಂ ಕಣುನೀರ್ ಭ್ರಮಣಂ ಮೇಖಲೆ ಹಸ್ತಭೂಷಣಮಿವಿಂತುಂ ಕಂಕಣಾಖ್ಯಾನಂ" (ನಾನಾರ. ೪೬); "ಕಂಕಣಮೆನೆ ಕಣ್ಣಕ್ಕುಂ ಕಂಕಣಮೆನಲುದಕಮಕ್ಕು ಕಂಕಣಮೆನೆ ಬಿಳಿದಕ್ಕುಂ ಕಂಕಣಮೆನೆ ಕಂಬನಿಯುಂ ಕಂಕಣಮೆನೆ ಕಾಂತಿಯಕ್ಕು ಶಬ್ದಾಗಮದೊಳ್ ‖ ಕಂಕಣಮೆನೆ ನವಿಲಕ್ಕುಂ ಕಂಕಣಮೆನೆ ಕಾರ್ಯಮಕ್ಕು ಶಬ್ದಾಗಮದೊಳ್" (ಶಬ್ದರ. ೮, ೯). [ಸಂ.]

**ಕಂಕಣಕಟ್ಟು** 'ಕಂಕಣಗಟ್ಟು' ನೋ.

**ಕಂಕಣಕೈ** (ನಾ). ಬಳೆತೊಟ್ಟ ಕೈ; ಕಡಗವಿಟ್ಟ ಕೈ; ಮುತ್ತೈದೆಯ ಚಿಹ್ನೆ: ಕಂಕಣಕೈಯನ್ನು ಮೇಲೆ ಮಾಡಿಕೊಂಡು ಆಚಾರ್ಯರ ಪತ್ನಿ ಕೊನೆಯ ಯಾತ್ರೆಗೆ ಸಿದ್ಧಳಾಗಿದ್ದಳು (ಗ್ರಾಮಾಯ. ೫೬೧).
[ಕಂಕಣ + ಕೈ$_2$ (< ಕೆಯ್$_2$)]

**ಕಂಕಣಗಟ್ಟು, ಕಂಕಣಕಟ್ಟು** (ಕ್ರಿ). ೧. ಮದುವೆ ಮೊದಲಾದ ಮಂಗಳ ಪ್ರಸಂಗಗಳಲ್ಲಿ ಮುಂಗೈಗೆ ಕಂಕಣವನ್ನು ಕಟ್ಟು: ಮನೆಗೊರ್ವ ಮಂಕ ತೊಡರ್ಚಿದ ತನ್ನ ಸೋಂಕಲೊಪ್ಪುವ ಕಾಂತನವೈವಾಹಕ ಕಂಕಣಗಟ್ಟೆಂದರಳುತ (ಮೋಹತ. ೧೮–೨೮). ೨. (ಆಲಂ) ಪ್ರತಿಜ್ಞಾಬದ್ಧನಾಗು; ಸಂಕಲ್ಪಮಾಡು. **ಕಂಕಣಕಟ್ಟು**: ೨. ಭಾರತೀಯ ಸಂಸ್ಕೃತಿಯ ಉದ್ಧರಣಕ್ಕೆ ಶಿವಾಜಿ ಕಂಕಣಕಟ್ಟಿದನು (ಖುಕ್ಸಾರ. ೧೧೩ ಪೀಠಿಕೆ); ತಾವು ಕಂಕಣಕಟ್ಟಿ ನಿಲ್ಲಬೇಕು (ದಾನಚಿಂ. ೧೬೮).

ಕೆಂಕಣಕಟ್ಟಿಕೊಳ್ಳು = (ಆಲಂ) ದೀಕ್ಷೆವಹಿಸು; ಕೆಲಸಕ್ಕೆ ಸಿದ್ಧವಾಗು. [ಕೆಂಕಣ + ಕಟ್ಟು$_1$]

**ಕೆಂಕಣಗಾಳೆ** (ನಾ). ಒಂದು ಬಗೆಯ ಸಸ್ಯ: ಕೊಟಗೇರು, ಹುಲಿಗೇರು, ಸಣ್ಣಹೊಲಿಗಾರ, ಕೆಂಕಣಗಾಳ (ವೈಶಿಗಿ. ೪೪–೮೬). [?]

**ಕೆಂಕಣಗೀಲು** (ನಾ). ಕೆಂಕಣದ ಕೀಲು; ಬಳೆಯ ತಿರುಪು: ಕರದ ಕೆಂಕಣಗೀಲನೊತ್ತುವ ಭರದ ನೆವದಿಂ ಪ್ರೀತಿಮತಿ ಸೌಂದರಿಯ ಸಾಧ್ವಸ ದೊಡನೆ ಲಜ್ಜೆಯನೋಡಿಸಿದ ಕುವರ (ಸಾಳ್ವಭಾ. ४–೮). [ಕೆಂಕಣ + ಕೀಲು (< ಕೀಲ್)]

**ಕೆಂಕಣತೊಡು** (ಕ್ರಿ). ೧. ಕೆಂಕಣವನ್ನು ತೊಟ್ಟುಕೊಳ್ಳು. ೨. (ಆಲಂ) ಪ್ರತಿಜ್ಞಾಬದ್ಧನಾಗು; ಸಂಕಲ್ಪ ಮಾಡು: ನಿಮಗಿರುವ ಒಳ್ಳೆಯ ಹೆಸರನ್ನು ಅಳಿಸಬೇಕೆಂದೇ ಕೆಂಕಣತೊಟ್ಟಿದ್ದಾನೆ (ಪ್ರ ತಾ ಪ. ೬೩); ಪ್ರಜೆಗಳ ನೆಮ್ಮದಿ ಸುಖಗಳಿಗಾಗಿ ಕೆಂಕಣತೊಟ್ಟ (ಶಾಂತಲಾ. ೨೬). [ಕೆಂಕಣ + ತೊಡು$_1$]

**ಕೆಂಕಣಪ್ರಾಪ್ತಿ** (ನಾ). ಮದುವೆಯಾಗುವ ಯೋಗ: ತನ್ನ ಜಾತಕದಲ್ಲಿ 'ಎರಡನೆಯ ಕೆಂಕಣಪ್ರಾಪ್ತಿ ಇದೆ' ಎಂದು ಹೇಳಿರುವುದರ ಅಭಿಪ್ರಾಯವೇನು? (ಮಹಾಗ. ೩೨೦). [ಕೆಂಕಣ + ಪ್ರಾಪ್ತಿ]

**ಕೆಂಕಣಬದ್ಧ** (ಗು). ೧. ಮಂಗಳಕಾರ್ಯಕ್ಕಾಗಿ ಮುಂಗೈಗೆ ಕೆಂಕಣವನ್ನು ಕಟ್ಟಿಕೊಂಡ: ಮಂಗಳಸ್ನಾನಮಾಡಿ ಕೆಂಕಣಬದ್ಧನಾದ ರಾಮನು ... ಅಡವಿಗೆ ಹೊರಟುಬಿಟ್ಟನು (ವಾರಾಕ್ಯ. ೫೬). (ನಾ). ೨. (ಆಲಂ) ತನ್ನ ಗುರಿಯನ್ನು ನೆರವೇರಿಸಲು ಪ್ರತಿಜ್ಞಾಬದ್ಧನಾದವನು (ಶಿ). [ಕೆಂಕಣ + ಬದ್ಧ]

**ಕೆಂಕಣಬಲ** (ನಾ). ೧. ಕೆಂಕಣವನ್ನು ಕಟ್ಟುವ ಯೋಗ; ಮದುವೆಯ ಯೋಗ: ಅವನಿಗೆ ಕೆಂಕಣಬಲ ಕೂಡಿಬಂತು (ರೂಢಿ). ೨. ಯೋಗ; ಪ್ರಾಪ್ತಿ. [ಕೆಂಕಣ + ಬಲ]

**ಕೆಂಕಣರೇಖೆ** (ನಾ). [ಸಾಮುದ್ರಿ] ೧. ಮಣಿಕಟ್ಟಿನಲ್ಲಿರುವ ಐಶ್ವರ್ಯಸೂಚಕರೇಖೆ: ಭೂಲಾಭಕಾರ್ಯದಲ್ಲಿ ಅಸಹಾಯ ಸಾಮರ್ಥ್ಯವು ಸುಬುದ್ಧಿಯು ಶೌರ್ಯವು ಧೈರ್ಯವು ಯಿವು ಕೆಂಕಣ ರೇಖೆಗೆ ಫಲ (ಸಾಮುಲ. ೧೦೧). ೨. ಅಂಗೈಯಲ್ಲಿರುವ ವಿವಾಹ ಸೂಚಕ ರೇಖೆ. 'ಆಯುರೇಖೆ' ಪರಾ. [ಕೆಂಕಣ + ರೇಖೆ]

**ಕೆಂಕಣವರ್ಷ** (ನಾ). ಒಂದು ಬಿರುದು: ಕೆಂಕಣವರ್ಷ ಚಾಗವೆಡಂಗಿ (ಎಇ. XV, ೩೩೧–೧೫ ; 1028). [ಸಂ. ಕೆಂಕಣವರ್ಷಾ (ಕೆಂಕಣ + ವರ್ಷ + -)]

**ಕೆಂಕಣವಲಯ** (ನಾ). ೧. ಕಡಗ; ಬಳೆ: ಸೊಗಯಿಸುವ ಕರ್ಣಾವತಂಸ, ಕೆಂಕಣವಲಯಗಳನ್ನು ತೊಡಿಸಿದರು (ಶಾಂತಲಾ. ४೫). ೨. ಜಲಕಣಗಳ ಆವರಣ: ಕೆಂಕಣವಲಯಂಗಳಿಂ ಮನೋಜ್ಞಮಪ್ಪ ಸುಮೇರುವೆಂತು (ರಾಮಾಶ್ವ. ೫४–೧೮). [ಕೆಂಕಣ + ವಲಯ]

**ಕೆಂಕಣವಾರ** (ನಾ). ಕೆಂಕಣದ ಸಾಲು, —ಗುಂಪು: ಮುಗುಳ್ಸರಿಗೆ ತೋಳ್ವಳೆ ಕೆಂಕಣವಾರಮೆಂದು ಬೇಟ್ಟನಿತನೆ ಮಾಡಿ ತೊಟ್ಟು (ಪಂಪಭಾ. ೨–೧೬). [ಕೆಂಕಣ + ವಾರ$_3$]

**ಕೆಂಕಣಿಕೆ** (ನಾ). ೧. ಮುಂಗೈಯ ಒಂದು ಆಭರಣ; ಗೆಜ್ಜೆಗಳಿರುವ ಕಡಗ. ೨. ಸಣ್ಣಗೆಜ್ಜೆ: ಕನಕಮಣಿಖಚಿತ ಕೆಂಕಣಿ [ಪಾಠಾಂ. ಕಂಕಿಣಿ, ಕಿಂಕಿಣಿ]ಕೆಯ ಸುಖಾಸನದೊಳನುಪಮ ಸ್ವಾತಂತ್ರ ಗುರುವ ಬಿಜಯಂಗೈಸಿ (ಸಿದ್ಧರಾ. ೯–೫). [< ಸಂ. ಕೆಂಕಣೀಕಾ]

**ಕೆಂಕತ** (ನಾ). ಹಣಿಗೆ; ಬಾಚಣಿಗೆ: "ಹಣಿಗೆ ಕೇಶಮಾರ್ಜನಿ ಕೆಂಕತಂ" (ಮಂಗಕಾ. ೬೨–೨೧). [ಸಂ.]

**ಕೆಂಕತಿಕೆ** (ನಾ). = ಕೆಂಕತ (ಶಿ). [ಸಂ. ಕೆಂಕತಿಕಾ]

**ಕೆಂಕಪತ್ರ** (ನಾ). ಹದ್ದಿನ ಗರಿಗಳನ್ನು ಕಟ್ಟಿದ ಬಾಣ, —ಅಂಬು: "ಚಿತ್ರಪುಂಖಂ ಮಾರ್ಗಣಂ ಬಾಣಮಿಷು ಕೆಂಕಪತ್ರಂ . . . ಎಂದೆನಲ್ಕಂ ಬೆನಿಕ್ಕುಂ" (ಮಂಗರಾ. ೭೬–೩४). [ಕೆಂಕ + ಪತ್ರ]

**ಕೆಂಕಬಲೆ** (ನಾ). (ಕರಾ) ಚಾಟಿಮೀನು ಹಿಡಿಯುವ ಬಲೆ. [ಕೆಂಕ$_0$ + ಬಲೆ$_1$]

**ಕೆಂಕಮಾಲೆ** (ನಾ). ೧. ಒಂದು ಬಗೆಯ ವಾದ್ಯ. ೨. ಕೈಗಳ ತಟ್ಟುವಿಕೆಯಿಂದ ತಾಳ ಸೂಚನೆ (ಶಿ). [ಸಂ. ಕೆಂಕಮಾಲಾ]

**ಕೆಂಕಮುಖ** (ನಾ). ಇಕ್ಕಳ; ಪಟಕಾರ (ಶಿ). [ಕೆಂಕ + ಮುಖ]

**ಕೆಂಕರ$_1$**, ಕೆಂಕರೆ, ಕೆಂಖರ (ನಾ). ೧. ಸುಣ್ಣಕಲ್ಲು. ೨. ಬೆಣಚುಕಲ್ಲು. 'ಕೆಂಕರಕಲ್ಲು' ಪರಾ. **ಕೆಂಕರೆ:** ೩. "ಹಾದಿಗೂ ಹಸ್ತೆಗೂ ಹೆಚ್ಚಾಗಿ ಉಪಯೋಗಿಸುವ ದಪ್ಪಮರಳಿನ ಮತ್ತು ಸಣ್ಣಕಲ್ಲಿನ ಉಂಡೆಗಳ ಮಿಶ್ರಣ: ಗರಸು" (Gravel. ಇಂಕಶ). **ಕೆಂಖರ: ೨.** ಸುರಭಿ ಚಿಂತಾಮಣಿ ಸಂತಾನಂಗಳಿರೆ ಬಳಿದು ಕೆಂಖರಗಳನಾರೈವ ಮರುಳನಂದದೆ ನಿಮ್ಮ ಪದಮಿರೆ ಸಂಸಾರಶರಧಿಯೊಳಾಳ್ದೆರ್ದಯಿಲೆ ದೇವ (ತ್ರಿಭುತಿ. ೩–४೩). [ಪ್ರಾ. ಕಕ್ಕರ (< ಸಂ. ಕರ್ಕರ). / ಹಿಂ. ಕೆಂಕಡ, ಕೆಂಕರ]

**ಕೆಂಕರ$_2$** (ನಾ). ಸುಳಿಗೂದಲು. [< ಸಂ. ಖಂಕರ]

**ಕೆಂಕರ$_3$** (ಗು). ೧. ದುಷ್ಟ; ನೀಚ. (ನಾ). ೨. ನೀರುಮಜ್ಜಿಗೆ. ೩. ಅತ್ಯಧಿಕ ಸಂಖ್ಯೆ (ಒಂದು ನೂರು ನಿಯುತದಷ್ಟು). [ಸಂ.]

**ಕೆಂಕರಕಲ್ಲು** (ನಾ). ಬೆಣಚುಕಲ್ಲು: ಹುಲ್ಲಿಲ್ಲದ ಕೆಂಕರಕಲ್ಲುನೆಲದ ಮೇಲೆ ಕುಳಿತು, ಬಿಸಿಲ ಝಳದಲ್ಲಿ . . . ಒಂದು ವೀರರಸಾತ್ಮಕಕಾವ್ಯವನ್ನು ಬರೆದೆ (ನಿಬಂಧ. II, ೬೫). [ಕೆಂಕರ$_1$ + ಕಲ್ಲು (< ಕಲ್$_3$)]

**ಕೆಂಕರಗರೆ** (ಕ್ರಿ). ಗಟ್ಟಿಯಾಗಿ ಕೂಗು (?): ಕರಿ ಹಯವು ಕಾಲಾಳು ಕೆಂಕರಗರೆವುತೇಕಾಕ್ಷೋಹಿಣಿಯು ಬರುತುರುಸರಳಮಾಲೆಯನು ಕೆದರಿ ದರಿದು ಮುಳಿಸಿಂದ (ಜನಭಾ. ೬೩–४೩). 'ಕೆಂಕಾರಿಸು' ಪರಾ. [ಕೆಂಕರ$_0$ + ಕರೆ$_1$]

**ಕೆಂಕರಿ$_1$** (ನಾ). ಒಂದು ಬಗೆಯ ವಾದ್ಯ: ಕೆಂಕರಿಯ ಸಿವಿಚಿ ಪೆಂಪಿನ ಝುಂಕಟಬೊಂಬುಟಿಯ ಪಟವದುಳಿಕೆಯ ಢಕ್ಕಾಸಂಕುಳದ ತಾಳದುಲಿ ನೆಗಟ್ಟಿರ್ದುಂ ಕರ್ಣಾಮೃತ ಸಮುದ್ರಘೂರ್ಣನಮಾಯ್ತು (ಪುಷ್ಪಪು. ೧೨–೨೬); ಕೆಂಕರಿಯ ದನಿಗೆ ಕುಣಿಯನೇ ಸರ್ವೇಶ್ವರಂ (ವೀಕ್ಷಿಚ. ೮–೫–೧೨) ; ಗೋವಳರು ಬಾಜಿಪ ತಿತ್ತಿರಿಯ ಕೊಂಬುಗಳ ಕೊಳಲು ಗಳೆತ್ತರದ ಕೆಂಕರಿಯ ಜುಂಚಿಯ ಯೆಕ್ಕಮದ್ದಳೆಯ ಬುತ್ತರಿಕ ದನಿ ಗೇಳುತ ಪುರುಷೋತ್ತಮನು ನಂದನುವೆರಸಿ ಬರುತ (ಸಾಳ್ವಭಾ. ೧೨–೫೬). [?]

**ಕೆಂಕರಿ$_2$** (ನಾ). ಚಾಟಿ; ಚಬಕ: ಈತಂ ಪಗಲ್ಗಳ್ಪನೀತನಂ ಸಮ್ಮ ಕೆಂಕರಿಯಿಂ ಬಡಿವರ್ (ರಾಮಾಶ್ವ. ೧೦೬–೨೯). 'ಕೆಂಕರಿಗೋಲ್' ಪರಾ. [?]

**ಕೆಂಕರಿ$_3$** (ನಾ). ಸುಳಿಗೂದಲುಳ್ಳವನು: "ಖಂಖರಿ–ಕೆಂಕರಿ" (ಶಮದ. ೨೬೧ ಪ್ರಯೋ). [< ಸಂ. ಖಂಕರಿನ್]

**ಕೆಂಕರಿಕೆ** (ನಾ). = ಕೆಂಕಣಿಕೆ ೧ (?): ಮೆಯ್ಯ ಮಸಿ ಕೊರಲ ಬಕ್ಕಳೆ ಪೊಯ್ಯ ಪುಗಿಲ್ಗರೆವ ಕೆಯ್ಯ ಕೆಂಕರಿಕೆ ಕರಂ ರಯ್ಯಮೆನೆ ಛಾಡು ತಿರ್ದಳ್ (ಕಾವ್ಯಾವ. ೩೦೯). [?]

**ಕಂಕರಿಗೋಲ್**, ಕಂಕರಿಗೋಲು (ನಾ). ೧. ಬಾರುಕೋಲು; ಚಾವಟಿಗೋಲು; ಉದ್ದವಾದ ಚಾಟಿ (ಕಿ). ೨. (ಅಸ್ಪೃಶ್ಯತನದ ಸಂಕೇತವಾಗಿ ಚಂಡಾಲನು ಕೈಯಲ್ಲಿ ಹಿಡಿದುಕೊಳ್ಳುವ) ದೊಣ್ಣೆ: ಇಂದುಧರನೊಂದುವೇಷಂಬೊತ್ತು ಬರುತಿರಲ್ ಪೆಗಲ ಮಿಣಿ ಕಯ್ಯ ಕಂಕರಿಗೋಲಿನೀಶ್ವರಂ ಸೊಗಯಿಪ ವಿಭೂತಿ ರುದ್ರಾಕ್ಷೆಯ ಕೃಪಾಕರಂ (ಭೋಗರ. ೨೧೦–೪); ಪಿಡಿದ ಕಂಕರಿಗೋಲಿನಿಂದೆ ತನ್ನಂಗದೊಳ್ ಪೂರೆದ ಮಣ್ಣಂ ಪರುಷಮಂ ಮಾಡಿ (ಚೆಬಪು. ೫೭–೨೧). **ಕಂಕರಿಗೋಲು**: ೨. ಮಿಣಿ ಕಂಕರಿಗೋಲ ಹಿಡಿದು ಬಪ್ಪುದು ಜಂಗಮಸ್ಥಲವೇ (ಉರಿಪ. ೫೮–೩೭); ನಸುಕುಸಿದ ದೇಹ ಕಂಕರಿಗೋಲನಿಱಿದು ಬಾರಿಸುತ ಕೈವಿಡದೆ ಸಂಬಳಿ ಸಂಬಳೆಂದೆಂದು ಕೊಸರುತಿಹ ಬಾಯ್ವೆರಸಿ ಬೀದಿಬೀದಿಯೊಳು ಸುಳಿದಂ (ಹಚಕಾ. ೧೧–೩೭); ಕಯ್ಯ ಕಂಕರಿಗೋಲ ಕನಕವಾಗಿಸಿ ತೋಱಿದನು ಕೂಡೆ ಭಾಳಲೋಚನಗೆ ಸನ್ನಾಸಿ ಮಂಚಯ್ಯ (ಮೋಳಿಪು. ೫–೧೧೩); ಚರ ಪಾದತೀರ್ಥದಿಂ . . . ಕಂಕರಿಗೋಲ ಹೇಮಗೆಯ್ದಿರದೆ ಸನ್ನಾಸಿ ಮಂಚಯ್ಯ (ಭೈರಸೂ. ೩೫೩). [ಕಂಕರ್ಶ್ರಿ + ಕೋಲ್$_1$]

**ಕಂಕರಿಗೋಲು** 'ಕಂಕರಿಗೋಲ್' ನೋ.

**ಕಂಕರೆ** 'ಕಂಕರ್$_1$' ನೋ.

**ಕಂಕಲಿಪ್ರಿಯ** (ನಾ). (?): ಲಲಿತ ಕಂಕೆಲಿದ್ರುಮವೆ ನೀ ತೋಱೊಲಿದು ಕಂಕಲಿಪ್ರಿಯನನು (ಜೀವಂಚ. ೫–೨೩). [?]

**ಕಂಕವಕ್ಕಿ** (ನಾ). ರಣಹದ್ದು: "ಲೋಹಪೃಷ್ಠಃ, ಕಂಕ ಈ ೨ ಕಂಕ ವಕ್ಕಿ" (ನಾಚಿರಾ. ೧೧೪). [ಕಂಕ + ಪಕ್ಕಿ$_1$]

**ಕಂಕಳ** (ನಾ). ಕೈಗಡಗ: "ಕಂಕಳ–ಕಂಕಾಳ; ಕಂಕಣ" (ತದ್ಭಕೋ. ೫). [< ಸಂ. ಕಂಕಣ]

**ಕಂಕಳವರಳ್** (ನಾ). ೧. ಕಂಕಣದಲ್ಲಿ ಕೆತ್ತಿದ ರತ್ನ (ಕಿ). ೨. ಶ್ರೇಷ್ಠನಾದ ವ್ಯಕ್ತಿ (ಕಿ). ೩. ಒಳ್ಳೊಳ್ಳೆಯ ಗಾದೆಗಳನ್ನು ಚೆನ್ನಾಗಿ ಬಲ್ಲವನು; "ನಲ್ಗಾದೆಗಾಱ" (ಚತುನಿ. ಕಿ. I, ೪೩). [ಕಂಕಳ + ಪರಳ್ (< ಪರಲ್)]

**ಕಂಕಾರಿಸು**, ಕಂಖಾರಿಸು (ಕ್ರಿ). ಗಟ್ಟಿಯಾಗಿ ಕೂಗು; ದೊಡ್ಡ ಶಬ್ದಮಾಡು; ಬೊಬ್ಬೆಮಾಡು: ಕೂಗುತಿಹ ಕಹಳೆಗಳು ಖಡಿಖಡಿತಾಗು ತಾಗೆಂದೊದರ್ವ ತಂಬಟಗಾರರಿಂ ಬಲವೆರಡು ಕಂಕಾರಿಸುತ ರಣಮುಖಕೆ (ಪಶುಭಾ. ೮–೧೧); ವೀರಕೋಡುಗಳುಡುಗಿ ತುರುವಾಕಾರವಾದವರೊಂದಿನಲಿ ಕಂಕಾರಿಸುತ ನಡಸಿದರು ಕೌರವನಾಳು ಗೋಗಣವ (ಜೆಸಭಾ. ೫೮–೨೭); ನೀರ ಮಧ್ಯದ ಪುರದ ಹಯ ಕಾಲೂರಿ ನಿಲ್ಲದೆ ಕುಣಿವುತಿರೆ ಕಂಕಾರಿಸುವ ಜೋಧರನೀಕ್ಷಿಸಿ (ಜೆಸಭಾ. ೭೪–೫೧). **ಕಂಖಾರಿಸು**: ಒತ್ತಿ ಕಂಖಾರಿಸುತೆ ಕಿತ್ತ ಕತ್ತಿಯ ಭಲ್ಲ ಮೊದಲಾದ ಕೈಯಸ್ತ್ರವ (ಜೆನಮು. ೧೭–೧೧); ಅಡಿಗಟ್ಟಿ ಕಂಖಾರಿಸುತ ಕುಳಿಕುಳಿ ನಾಲ ಮೊರೆಯುತಲಿ (ಜೆರಾಮಾ. ೨೬೧–೪).

[ಕಂಕರ$_0$ + –ಇಸ್ಸು. / ಮರಾ. ಖಂಕಾರಣೇ = ಗಂಟಲನ್ನು ಸರಿಪಡಿಸಿಕೊಳ್ಳು]

**ಕಂಕಾಲ**, ಕಂಕಾಳ (ನಾ). ೧. ಅಸ್ಥಿಪಂಜರ; ಎಲುಬಿನ ಗೂಡು: ತೊಲಂ ಬಾಸಣಿಸಿದ ಕಂಕಾಲಮೆ ದಲ್ ಜೀವದಿರ್ಕೆಯೆನಲಾಗದು (ನೀತಿಮಂ. II, ೪೯); ಕಂಕಾಲ ಭೀಕರಮದಂ ಕಂಡು ಸೌಮಿತ್ರಿ (ಶ್ರೀರಾಮಾ. ೨೪೮–೩೬೨). ೨. [ಸಂಗೀತ] ಸಂಗೀತದ ಒಂದು ಪದ್ಧತಿ. ೩. ಒಬ್ಬ ರಾಕ್ಷಸನ ಹೆಸರು. **ಕಂಕಾಳ**: ೧. ಬ್ರಹ್ಮಕಪಾಲ ವಿಷ್ಣುಕಂಕಾಳವನಿಕ್ಕಿ ಅಡುವಲ್ಲಿ ನೀಲಕಂಠ ನೆಂಬಾತನೊಬ್ಬ ಗಣೇಶ್ವರನು (ಅವಚಂ. ೧೧೩–೫೧೨); ಆ ಮುನಿಯ ಕಂಕಾಳದಲಿ ಸುತ್ರಾಮ ಕೊಂದನು ವೃತ್ರನನು (ಕುವ್ಯಾಅ. ೯–೧೧); ಇಂದುಧರ ಕಂಕಾಳಮಂ ಧರಿಸಿದಾ ಕಥೆಯ ಕೇಳಿ (ಲಶಿಚಂ. ೭ ಸೂಚನೆ); ಸುಟ್ಟು ಕರಿಯಾಗಿದ್ದ ಆರ್ವರ ಕಂಕಾಳಗಳು ಕಣ್ಣಿಗೆ ಬಿದ್ದುವು (ಭೀಷ್ಮಚ. ೭೪). [ಸಂ.]

**ಕಂಕಾಲತೆ** (ನಾ). ಕಂಕಾಲವಾಗಿರುವಿಕೆ; ಅಸ್ಥಿಪಂಜರದ ಸ್ಥಿತಿ: ತೊವಲ್ ಪತ್ತಿ ಬಿಗಿದೆಲ್ವುಗೂಡಿನ ಶಿಥಿಲ ಕಂಕಾಲತೆಯ (ಶ್ರೀರಾಮಾ. ೨೧–೫೪೭); ಬರದ ಗರ ಬಡಿದಿರ್ದ ಕಲ್‌ಕೊರಕು ಕಂಕಾಲತೆಯ ಮಲೆಯ ತೊರೆ ತಾನಲ್ಲಲ್ಲಿ ತುಂಡುತುಂಡಾಗಿ ತಂಗಿದುದು (ಶ್ರೀರಾಮಾ. ೩೪೦–೧೪). [ಸಂ. ಕಂಕಾಲತಾ]

**ಕಂಕಾಲಧರ** (ನಾ). ಎಲುಬಿನ ಮಾಲೆಯನ್ನು ಧರಿಸಿದವನು; ಶಿವ (ಕಿ). [ಸಂ.]

**ಕಂಕಾಲಮಾಲಿ** (ನಾ). = ಕಂಕಾಲಧರ (ಕಿ). [< ಸಂ. ಕಂಕಾಲಮಾಲಿನ್]

**ಕಂಕಾಲಿ**, ಕಂಕಾಳಿ (ನಾ). ೧. ಶಿವ. ೨. ಶಿವನ ಸೇವಕರಲ್ಲಿ ಒಬ್ಬ; ಶಿವನ ಆಸ್ಥಾನದಲ್ಲಿರುವ ವೇತ್ರಧರರಲ್ಲಿ ಒಬ್ಬ. **ಕಂಕಾಳಿ**: ೨. ಪೊಂಬೆತ್ತಮನೆತ್ತಿ ಹೋ ಸಾರ್ ತೊಲಗೆಂದು ನಿವಾರಿಸಿ ಸಮುಚಿತ ಸ್ಥಾನದೊಳಿಂಬುಕೆಯ್ಯುವ ಭೀಮ ಕಂಕಾಳಿಗಳೆಂಬ [ಪಾಠಾಂ. ಕಂಕಾಳರೆಂಬ] ವೇತ್ರಧರರಿಂ (ಶಬಶಂ. ೧–೭೯ ವ). ೩. ರುದ್ರಾಣಿಯರಲ್ಲಿ ಒಬ್ಬಳು: ಧುರದೊಳಗೆ ಕಾಮಾಕ್ಷಿ ಚಾಮುಂಡಿ ಕಂಕಾಳಿಯರು ಭೂತಗಣಸಹಿತ ರುಧಿರದೋಕುಳಿಯನಾಸುರದೊಳೊಲಿದಾಡುವಾಗಲು (ಸೋಮಚ. ೫–೫೮); ಹೋಳೆರಡ ಬೀಸಾಡೆ ರಣದಲಿ ಕಾಳಿ ಕಂಕಾಳಿಯರು ದಣಿದರು (ಕೌಶಿರಾ. ೨೦–೩೪). [< ಸಂ. ಕಂಕಾಲಿನ್]

**ಕಂಕಾಳ** 'ಕಂಕಾಲ' ನೋ.

**ಕಂಕಾಳಗೊರವ** (ನಾ). ಒಬ್ಬ ಶೈವಗುರುವಿನ ಹೆಸರು: ಪುರುಷೋತ್ತಮ[ನೆ]ಱಿಯೆ ಬಱಿಕ್ಕೆಯಂ ಕಂಕಾಳಗೊರವರ ಕಾಲಂ ಕರ್ಚ್ಚಿ (ಇಎ. ೧೯೪೭, ಹಾನಗಲ್. ೨೦೭–೮; 859). [ಕಂಕಾಳ (= ಕಂಕಾಲ) + ಗೊರವ]

**ಕಂಕಾಳದಂಡ** (ನಾ). ಎಲುಬಿನಿಂದ ಮಾಡಿದ ದಂಡ, —ಕೋಲು; ಅಸ್ಥಿದಂಡ: ಹರಿಯ ಕಂಕಾಳದಂಡವ ಪಿಡಿದವರ್ ಪಂಚಮುಖರು ನಯನತ್ರಿತಯರು (ಸಿದ್ಧೇಪು. ೧–೩೫). [ಕಂಕಾಳ (= ಕಂಕಾಲ) + ದಂಡ]

**ಕಂಕಾಳಾಂಕಪಾಣಿ** (ನಾ). = ಕಂಕಾಲಧರ: ಶಿವಂಗೆ ಕಂಕಾಳಾಂಕ ಪಾಣಿಗೆ ಶಂಕರತ್ವದ ಕಿಂಕರರು ಸರಿಯೇ (ಬಸಪು. ೫೪–೨೩). [ಕಂಕಾಳ (= ಕಂಕಾಲ) + ಅಂಕ$_3$ + ಪಾಣಿ$_3$]

**ಕಂಕಾಳಿ** 'ಕಂಕಾಲಿ' ನೋ.

**ಕಂಕಾಳಿಕೆ** (ನಾ). ಅಸ್ಥಿಪಂಜರ; ಎಲುಬಿನ ಗೂಡು: ಬರಿಯೆಲ್ ಬೇಱಿರ್ದ ಕಂಕಾಳಿಕೆ ಪೆಡತಲೆಯೊಳ್ ಪೊಕ್ಕ ಕಣ್ ತೋರ್ಪ ಕೆಯ್ಯಾಳ್ಸರೆ . . . ಚಿದ್ರೂಪಕ್ಕೆ ಪಕ್ಕಾಗಿರೆ ಚರಿಗೆಗುಣಲ್ಪಂದನೋರ್ವಂ ಮುನೀಂದ್ರಂ (ಅರ್ಧನೇ. ೭–೨). [ಸಂ. ಕಂಕಾಲಿಕಾ]

**ಕಂಕಿ**, ಕಂಕು, ಕಂಕೆ (ನಾ). ೧. ಕಾಳು ಉದುರಿಸಿ ಉಳಿದ ತೆನೆ: ಮೇಟಿಯ ಸುತ್ತಲೂ ದನಗಳು ತಿರುಗಾಡಿದಂತೆ ಅವುಗಳ ಕಾಲ್ತುಳಿತಕ್ಕೆ ತೆನೆಗಳು ಕಂಕಿಯಾಗುತ್ತಿದ್ದವು (ನಡುಗೋ. ೩೭); ಹಂತಿಯ ಹೊಡೆಯುತ ಕಂಕಿಯ ತೆಗೆಯುತ ತಣಿವರು ರೈತರು (ಕಪವು. ೩–೬೭); ಸುಂಕರಾಶಿಯ ಕಣಕೆ ಸಂಕದೇವನ ಬಲವು ಕಂಕಿಯಾ ಕಣಕೆ ನಿನಬಲವು ಮಾದೇವಿ ಸೋಂಕಿದರೆ ರಾಶಿ ಕಣತುಂಬಿ (ಕರಚ. ೨೪೩). ೨. (ಬತ್ತ ಮೊದಲಾದುವುಗಳ ಮೇಲಿನ) ಊಬು; "ಕಾಳಿನ ಮೇಲಿನ ಊಬು" (ಸರ್ವಜ್ಞ. ಕೋಶ): ಸುಂಕಿಗನು ಹುರಿಹಲ್ಲು ಬಿಂಕದ ಬೆಲೆವೆಣ್ಣು ಕಂಕಿಯು ಸುಂಕ ನಸುಗುನ್ನಿ ಇವು ಆಱು ಸೋಂಕಿದರೆ ಬಿಡವು (ಸರ್ವಜ್ಞ. ೧೫೦೦).

೩. ಕಾಯಿ ಉದುರಿಸಿದ ಗೊನೆ: ಅಡಕೆಕಂಕಿ ಬರಲಿಂದ ಕೆಸಗುಡಿಸು (ರೂಢಿ). ೪. (ಆಲಂ) ಸತ್ತ್ವಹೀನೆ; ರೋಗಿಷ್ಠೆ: ಕಂಕಿ ಹೋಹುದ ಜಿಂದ ಮಂಕಿ ಹೋಹುದು ಲೇಸು (ಸರ್ವಜ್ಞ. ೧೮೨೨). **ಕೆಂಕು**: ೧. (ಕಿ). **ಕೆಂಕೆ**: ೧. ಜಂತುಗುಂಟೆಯಿಂದ ಕಂಕೆಯನ್ನು ತೆಗೆದರೆ ಉಳಿಯುವುದೇ ಸುಂಕರಾಶಿ (ಕಸಾಪ. I, ೧೩೧). [← ತೆಲು. ಕಂಕಿ]

**ಕೆಂಕಿಕಣ** (ನಾ). ತೆನೆಯನ್ನು ಒಕ್ಕಿ ಅಥವಾ ತುಳಿಸಿ ಕಂಕಿಯನ್ನೂ ಕಾಳನ್ನೂ ಬೇರ್ಪಡಿಸುವ ಕಣ (?): ಕೊಂಕಣದ ಕೊಪ್ಪಿರಲಿ ಆಂಕಣದ ಗುತ್ತಿರಲಿ ಬಂಕಣದ ರೊಕ್ಕ ಗಪ್ಪಿರಲಿ ಸುಗ್ಗ್ಯಾಗ ಕಂಕಿಕಣ ಸುಂಕ ಒಪ್ಪಿರಲೊ (ಕನ್ನಜಾ. ೨೬). [ಕಂಕಿ + ಕಣ$_1$ (< ಕಳ$_3$)]

**ಕೆಂಕಿಸು** (ಕ್ರಿ). ರೇಗು; ಸಿಡಿದುಬೀಳು (?): ಸತಿಯು ಸಾದುರ್ಗ್ರ ಕೋಪದಿಂ ಕೌಶಿಕ ಶಾಂತಿಯ ಕವರ್ದು ಕಂಕಿಸಿ ಮಸಗುತತಿ ಕನಲ್ಕೆಯ ನಾಂತು ಶಾರ್ದೂಲನಂತೆ ಘರ್ಜಿಸುತಲಿ (ಮದೇಪು. ೨೪–೧೩).

[ಕಂಕು$_0$ + –ಇಸು$_3$. P ತೆಲು. ಕಂಕು = ನಿಂದಿಸು, ದೂಷಿಸು]

**ಕೆಂಕು** 'ಕಂಕಿ' ನೋ.

**ಕೆಂಕುಣ** (ನಾ). ಒಂದು ಬಗೆಯ ಕಣ್ಣಿನ ರೋಗ: ಆ ಕಂಕುಣ ವೆಂಬ ರೋಗವೂ, ತಿಮಿರವೂ . . . ಪರಿಹರಿಸುವುದು (ಸಕವೈ. ೨೬). [?]

**ಕೆಂಕುಣಿಕೆ** (ನಾ). ಒಂದು ಬಗೆಯ ಸಸ್ಯ: "ಕಂಕುಣಿಕೆ, ಹೆಮ್ಮಿಟಲ, ಅಜಗಂಧಿ, ಹೊನ್ನಗನ್ನೆ" (ಓಷಧಿ. ೧೦೬). [?]

**ಕೆಂಕುಷ್ಠ** (ನಾ). ಒಂದು ಬಗೆಯ ಔಷಧಿ ಮಣ್ಣು: "ಕಂಕುತುಷಾ–ಕಂಕುಷ್ಠಂ" (ಓಷಧಿ. ೨೨). [ಸಂ.]

**ಕೆಂಕುಷ್ಠಾದಿಘೃತ** (ನಾ). ಒಂದು ಬಗೆಯ ಲೇಹ್ಯ: ಕಂಕುಷ್ಠಾದಿ ಘೃತ . . . ಕಂಕುಷ್ಠ, ಇಂಗು, ಸೈಂಧವ, ತಿಗಡೆ, ಮುಂಡುಗಳ್ಳಿಯ ಚೆಕ್ಕೆ . . . ಪಾನಾಭ್ಯಂಗ ವಸ್ತಿಗಳ ಮಾಡಿಸಲು ಮಲಬಂಧ, ಮೂಲವ್ಯಾಧಿ, ಉದಾವರ್ತ, ಆಧ್ಮಾನ, ಇಷ್ಟನು ಪರಿಹರಿಸುವದು (ವೈದ್ಯಸಾ. I, ೨೦೩).

[ಕಂಕುಷ್ಠ + ಆದಿ$_2$ + ಘೃತ]

**ಕೆಂಕುಳು** 'ಕವುಂಕುಳ್' ನೋ.

**ಕೆಂಕುಬು** 'ಕವುಂಕುಳ್' ನೋ.

**ಕೆಂಕೆ** 'ಕಂಕಿ' ನೋ.

**ಕೆಂಕೆಲಿ** (ನಾ). = ಕಂಕೆಲ್ಲ: ಲಲಿತ ಕಂಕೆಲಿದ್ರುಮವೆ ನೀ ತೋಱಿಸೊಲಿದು ಕಂಕಲಿಪ್ರಿಯನನು (ಜೀವಂಚ. ೫–೨೩); ಎಸೆವ ಭಾಮಂಡಲವು ಚಾಮರ ಕುಸುಮ ಮಳೆ ಕಂಕೆಲಿಚ್ಛತ್ರವು (ಜಿನಸಾ. ೬೩).

[< ಸಂ. ಕಂಕೇಲಿ]

**ಕೆಂಕೆಲ್ಲ** (ನಾ). ಅಶೋಕವೃಕ್ಷ: ಕಾಮಿನೀ ವಾಮಪದಾಹತಿಯಂ ಬಯಸದೆಯುಂ ಪುಷ್ಪಿತಮಾದುದು ಲಲಿತ ಪಲ್ಲವಂ ಕಂಕೆಲ್ಲಂ (ಚಂದ್ರಪು. ೨–೬೧); ನೇಱಿಲ್ ಘನಸಾಂಬ್ರವತ್ತಿ ತಿಳಕಂ ಕಂಕೆಲ್ಲ ಪು(ಂ)ನ್ನಾಗನಾದರಿ ಪೂಗದ್ರುಮ (ಸೌಇಇ. IX–i, ೩೪೩–೪೦; 1226).

[< ಸಂ. ಕಂಕೇಲ್ಲ]

**ಕೆಂಕೆಲ್ಲಿ** (ನಾ). = ಕಂಕೆಲ್ಲ: "ಕಂಕೆಲ್ಲಿಃ, ಅಶೋಕಃ—ಈ ೨ ಅಸುಗೆ" (ಹಲಾಯು. ೩೨–೩೯); "ಕಂಕೆಲ್ಲಿಯದಶೋಕೆ" (ಮಂಗರಾ. ೩೪–೯); ಕೆಂದಳಿರಿಂ ಕಂಕೆಲ್ಲಿಗಳಿ ನಂದನದಿಂ ತಿಳಿಗೊಳಂಗಳಿಂದ (ಎಕ. VIII, ಸೊರಬ. ೨೬೬–೧೦; 1070); ಕರ್ಪುರದ ಜಗುಲಿಯ ಮೇಲೆ ಕಂಕೆಲ್ಲಿಯ ಪಲ್ಲವಂಗಳಿಂ ಸಮೆದ ತಳಿರ್ವಾಸಿನ ಮೇಲೆ ಪವಡಿಸಿ (ಧರ್ಮಾಮೃ. ೧೧–೧೧೫); ಮುಕುಳಿತವಕುಳಂ ಪಲ್ಲವೋಲ್ಲಾಸಿ ಕಂಕೆಲ್ಲಿ ಲತಾಂತಾಕ್ರಾಂತ ವಾಸಂತಿಕವೆಸೆದುದು (ಜಗವಿ. ೧೪–೪೨).

[< ಸಂ. ಕಂಕೇಲ್ಲಿ]

**ಕೆಂಕೇಲಿ**, ಕಂಕೇಳಿ (ನಾ). ಅಶೋಕವೃಕ್ಷ: ಕಂಕೇಲಿ [ಪಾಠಾಂ. ಕಂಕೆಲ್ಲ] ಪಲ್ಲವೋಲ್ಲಾಸ ರಚಿತಮುಜ್ಜ್ವಲಮಣಿದರ್ಪಣ ದೀಪ್ತಿರಮ್ಯಂ (ಆದಿಪು. ೪–೩೦ ರಗಳೆ); ಕುಸುಮಮಳೆ ಕಂಕೇಲಿ ದುಂದುಭಿಯೆಸೆವ ಚಾಮರಛತ್ರ (ಪಸುಭಾ. ೬–೮). **ಕೆಂಕೇಳಿ**: ಕಾಱ್ಕಿಚ್ಚಿನಂತೆ ಕೆಂಕಮಾದ ಕಂಕೇಳೀಕುಜಂಗಳೊಳಂ (ಮಲ್ಲಿಪು. ೨–೩೩); ತತ್ಕಂಕೇಳಿಯ ಬನಮಂ ಪೊಕ್ಕು (ಉದ್ಭಟ. ೬–೧೩೫ ವ). [ಸಂ.]

**ಕೆಂಕೇಳಿ** 'ಕಂಕೇಲಿ' ನೋ.

**ಕೆಂಕೊಟ್ಟೆ** (ನಾ). = ಕಂಕೋಷ್ಠ: "ಪಟುಪರ್ಣೀ, ಹೈಮವತೀ, ಸ್ವರ್ಣಕ್ಷೀರೀ, ಹಿಮವತೀ ಈ ೪ ಕಂಕೊಟ್ಟೆ" (ನಾಚಿರಾ. ೧೧೧). [?]

**ಕೆಂಕೊಳ** (ನಾ). ಒಂದು ಬಗೆಯ ಸಸ್ಯ: "ಕಂಕೊಲ–ಕಂಕೊಳ, ದೊಡ್ಡ ಕಹಿಮೆಣಸು" (ಓಷಧಿ. ೨೨). [< ಸಂ. ಕಂಕೋಲ]

**ಕೆಂಕೋಷ್ಠ** (ನಾ). ಘಂಟಾಮಣಿಸೊಪ್ಪು: "ಪಟುಪರ್ಣೀ, ಹೈಮವತೀ, ಸ್ವರ್ಣಕ್ಷೀರೀ, ಹಿಮಾವತೀ – ೪ ಕಂಕೋಷ್ಠದ ಹೆಸರು" (ಸಿದ್ಧಾಂತಿ. ೧೨೬). [?]

**ಕೆಂಕೋಳಚಿನ್ನಿ** (ನಾ). ಮೆಣಸಿನ ಕಾಳಿನಂತೆ ಸಣ್ಣ ಸಣ್ಣ ಕಾಯಿಗಳನ್ನು ಬಿಡುವ ಒಂದು ಜಾತಿಯ ಬಳ್ಳಿ, —ಗೆಡ್ಡೆ: ಕರ್ಪುರ ಚಿನ್ನಿ, ಕಬಾಬಚಿನ್ನಿ, ಕಂಕೋಳಚಿನ್ನಿ (ಮುಂಬವ್ಯಾ. ೧೪೬).

[ಕಂಕೋಳ$_0$ + ಚಿನ್ನಿ$_2$]

**ಕೆಂಖರ** 'ಕಂಕರ$_1$' ನೋ.

**ಕೆಂಖಾರಿಸು** 'ಕಂಕಾರಿಸು' ನೋ.

**ಕೆಂಗ** (ನಾ). (?): "ದೋಗ್ರ್ಯಾಹ್ಯಂದಾರುಚ ಭುಜಗಳಿಂದ ಹಿಡಿವಂಥಾ ಮರನು ಯಿದಕೆ ಕಂಗಯೆಂಬ ಹೆಸರೂ" (ಖಡ್ಗಟೀ. ೨–೩೧). [?]

**ಕೆಂಗಟ್ಟು** 'ಕಣ್ಗಟ್ಟು$_1$' ನೋ.

**ಕೆಂಗಡೆ** 'ಕಣ್ಗಡೆ' ನೋ.

**ಕೆಂಗಣಿಗೆ** (ನಾ). ಒಂದು ಊರಿನ ಹೆಸರು: ತಾಳ ಕಂಗಣಿಗೆಯಂ ಪ್ರತಿಷ್ಠಂ ಮಾಡಿ . . . ಕಂಗಣಿಗೆಯ ಗುಡ್ಡೆಮಾನ್ಯದೊಳಗೆ (ಹೈಆಸಿ. VIII, ೩೩–೨೮೫, ೩೧೬; 1085); ಕಂಗಣಿಗೆಯ ಬಡಗ ವೊಲದಿಂ ಮೂಡ ಶ್ರೀ ಮಧುಸೂದನ ಶ್ವೇತ ಕೇಶವ ದೇವರ ಕೆಯ್ಯ (ಕಇಅ. ೧೩–೪–೧೦೨; 1093). [?]

**ಕೆಂಗದಿರು** 'ಕಣ್ಕದಿರು' ನೋ.

**ಕೆಂಗನೆ** (ಅ). ಅತಿಶಯವಾಗಿ; ಅಧಿಕವಾಗಿ: ಮುನಿಸಿನೊಳಾದ ಮೇವಯಿಸಿ ಸ್ಫುರಿಸದಾದಟಿಲೊಳ್ ಕನಲ್ದು ಕಂಗನೆ ಕನಲುತ್ತುಮುಮ್ಮಳಿಸಿ ಸ್ಫುರಿಸಲಾಱದೆ (ಪಂಪಭಾ. ೪–೧೦೬); ದನಿದೋಱೆ ಕತ್ತರಿ ಮೊನೆಗೊಂಡ ಕಿವಿಯಿಂ ಕೆಕ್ಕಳಿಸುವ ದೃಷ್ಟಿಯಿಂ ಕಂಗನೆ ಕನಲ್ದು (೧೦ಕ. ೨–೧೦೫ ವ); ಭಗದತ್ತನ ಧನುವನಿಕ್ಕಡಿಗಡಿಯೆ ಕಂಗನೆ ಕನಲಿ ಗವಸಣಿಗೆ ಯಿಂದುಗಿದನು ನಿಜಾಯುಧವ (ಕುವ್ಯಾದ್ರೋ. ೩–೫೫).

**ಕೆಂಗನೆಕನಲ್**, **ಕೆಂಗನೆಗನಲು** = ಹೆಚ್ಚಾಗಿ ಕೋಪಗೊಳ್ಳು: ಸುರತಸುಖಸುಧಾ ಸೇವನೆಗೆ ವಿಘ್ನಕಾರಿಯೆನಿಪ ಸೂರ್ಯೋದಯಕ್ಕೆ ಕಂಗನೆಕನಲ್ದು (ಪಾರ್ಶ್ವಪು. ೩–೨೫ ವ); ಕವಿದುದು ಸೇನೆ ಕಂಗನೆಗನಲಿ ಕರ್ಣ ದ್ರೋಣರಿಗೆ (ಕುವ್ಯಾದ್ರೋ. ೧೫–೬೯).

[ಕೆಂಗು$_0$ + –ಅನೆ$_1$]

**ಕೆಂಗಪಾದಿ** (ನಾ). ಒಂದು ಸ್ಥಳದ ಹೆಸರು: ಚೋಳಧನಞ್ಜಯನ್ ಎರಿಗಾಲ್ಪಾದಿ ಅಱುನೂಱು ಆಳೆ ಕಂಗಪಾದಿ ಕೊಟ್ಟವಳ್ಳಿಪಾದಿ ವಲ್ಲಭ ಪಾದಿಯು ಮೂಱುಪಾದಿ ವಲವರ್ಮ್ಮನಾಮೇಕೆ ಮ × × × ಧೊಕೆಯ್ದನ್ನು ಕನ್ದಕೊತ್ತರ ಶ್ರೀರಾಮನ್ . . . ವೀರಸ್ವರ್ಗಂ ಪೊಕ್ಕನ್ (ಎಕ. XII, ಮದ್ದಗಿ. ೯೩–೧; 750). [< ಗಂಗವಾಡಿ ?]

**ಕಂಗಮಂಗಲ** (ನಾ). ಒಂದು ಸ್ಥಳದ ಹೆಸರು : ಕುಲಬ್ರಹ್ಮಣರ್ಕ್ಕಂಗಮಂಗಲವರ್ಕ್ಕೆ ಕೊಣ್ಣನ್ದ ನಾಮ ಗೋತ್ರಸ್ಯ (ವ್ಯೆ ಅ ೦. ೧೯೧೪, ೯-೧೦ ; ?). [ಕಂಗ ? + ಮಂಗಲ]

**ಕಂಗಲಿಂಡಿಗ** (ನಾ). ಒಬ್ಬಾತನ ಹೆಸರು : ಕಂಗಲಿಂಡಿಗ ನಾಟ್ಟಾವುಣ್ಡುಗೆಯ್ಯೆ (ಎಕ. VIII, ಸೊರಬ. ೨೪೦-೫ ; 950). [?]

**ಕಂಗಲು** (ನಾ). ಒಂದು ಆಯುಧ; ಕವಚ (?) : ಜಡೆಯ ಗೊಂಡೆಯ ಕಂಗಲ ಜೋಡು ಕಟ್ಟಿದ ಕಡಿದಬ್ಬೆ ಕಯ್ಯ ಸಿಂಗಾಡಿ ತೊಡೆಯ ಬಲ್ಲೆಹ ಮಿಗೆ ಮೆಱೆಯಲೆಯ್ತಂದರಂದೊಡನೆ ತುರುಕರಾವುತರು (ಕುರಾಸಾಂ. ೧೧-೨೨) ; ದಶರಥಿ ಜವದಾಡೆ ಕಡಿದಾಬೆ ಕಾಲಕುಪ್ಪಸ ಕಂಗಲು ಠೌಳಿ ಸ್ವವಗ ಎಸೆಯೆ ರಣದೊಳೆಸೆದರು (ಕುರಾಸಾಂ. ೨೦-೪೭) ; ಸಿಂಗಾಡಿ ತರಕಸ ಕುರುಬಾಣ ವೊಚ್ಚೆಯ ಹೊಂಗೆಲಸದ ಜೋಡು ಸವಗ ಕಂಗಲು ವಜ್ರಾಂಗಿ ಕತ್ತಿ ನೇರ್ಝುಯಗಳ ವಂಗಡ ಸಿಕ್ಕಿತೇನೆಂಬೆ (ಕುರಾಸಾಂ. ೨೦-೭೮) ; ಮುಡಿಯಾಭರಣ ಸೀಸಕ ಕಂಗಲು ವ್ಯೆದೊಡಿಗೆ ಕಂಗಳೆ ವಾಜಿಗಳು ಕಡೆಗಣ್ಣ ಬೆಳಗು ಬಲ್ಲೆಹವಾಗೆ ಸತಿಯರು ನಡೆದರು ಹಯಕಾಜಿರಂತೆ (ನಾಗಕು. ೪-೪೧).

[< ಸಂ. ಕಂಕಟ, ಕಂಕಟಕ ?]

**ಕಂಗವಡಿ** (ನಾ). ಒಂದು ನಾಡಿನ ಅಥವಾ ಊರಿನ ಹೆಸರು : ಕೈಬಿಸಿದ ಕಾಳೆಗ ಅಣಿಯುಳ್ ಕುದುರೆಯುಳ್ ತಾಗಿ ಪಲರನಿಱಿದು ಸತ್ತೊಡೆ ಮೆಚ್ಚಿ ಕಙ್ಗವಡಿಯಾನ್ ಕಲ್ನಾಟು ಕೊಟ್ಟದು (ಎಕ. X, ಮುಳಬಾ. ೨೨೮-೮ ; 890). [< ಗಂಗವಾಡಿ ?]

**ಕಂಗಳ** (ನಾ). ಕಣ್ಣಿಲ್ಲದವನು ; ಕುರುಡ : ಕಂಗಳಯ್ಯಂಗೆ ಮಣಿಮುಕುರವ ತೋಱೆ ಕಾಣ್ಬನೆ ತನ್ನ ಪ್ರತ್ಯಂಗವ (ಆದವ. ಉ. ೮೩-೧೩೭) ; ಕಂಗಳನ ಕೋಲು ಕಳೆದಂತೆ (ಸರ್ವಜ್ಞ. ೧೫೩೭) ; ಗಾಳಿ ಬೆಮರ್ತಂದು ನೇಸಱ್ ಕಂಗಳನಾದಂದು (ರಾಮಾಶ್ವ. ೧೧-೨೯) ; ಕಂಗಳನಿಗೆ ಅಗ್ನಿಸ್ತಂಭನಸಿದ್ಧನಿಗೆ ಆಮಾತು (ಬಿಟ್ಟಅ. ೨೧೪-೧೬) ; ಕಂಗಳರ ಜಂಗುಳಿಯ ಪ್ರತ್ಯಯಕೆ ತಂದೆಯೋ (ಗರಿ. ೧೬-೧೦).

[ಕಂ (< ಕಣ್) + ಕಳೆ$_2$ (< ಕಱು$_1$) + -ಅ$_7$]

**ಕಂಗಱುಬು** 'ಕಣ್ಗಱುಬು' ನೋ.

**ಕಂಗಾಗು** (ಕ್ರಿ). ಸಿಟ್ಟಿಗೇಳು ; ರೇಗು ; ವ್ಯಗ್ರವಾಗು ; ಸಿಡಿಮಿಡಿಗೊಳ್ಳು (ಕಿ). [ಕಂಗು$_5$ + ಆಗು$_1$]

**ಕಂಗಾಡು** (ನಾ). ದುರ್ಬಲತೆ ; ನಿಶ್ಯಕ್ತತೆ : ಈಚೀಚೆಗೆ ಅವನು ತುಂಬಾ ಕಂಗಾಡಾಗಿದ್ದಾನೆ (ರೂಢಿ). [?]

**ಕಂಗಾಣಿಕೆ** 'ಕಣ್ಕಾಣಿಕೆ' ನೋ.

**ಕಂಗಾಣಿಸು** (ಕ್ರಿ). ಕಣ್ಣಿಗೆ ಕಾಣಿಸು : ಕಂಗಾಣಿಸದೆ ಪಾರಿಯ ಪಟ್ಟೆ ಕರ್ವಣ್ಣ ಗೊಂಗಡಿ ಮುಸುಕಿಟ್ಟುಕೊಂಡು ಅಂಗಡಿ ಸೊಡರ್ಗೆಟ್ಟ ದೇಗುಲದೆಡೆಯ ದುಸ್ಸಂಗ ದಂಪತಿಗಳೊಪ್ಪಿದರು (ಮೋಹತ. ೧೮-೨೩).

[ಕಂಗಾಣು (< ಕಣ್ಗಾಣ್) + -ಇಸು$_3$]

**ಕಂಗಾಣು** 'ಕಣ್ಗಾಣ್' ನೋ.

**ಕಂಗಾರ** 'ಕಂಗಾರು' ನೋ.

**ಕಂಗಾರು**, ಕಂಗಾರ (ನಾ). ಸಿಟ್ಟು ; ಕೋಪ (ಕಿ). **ಕಂಗಾರ** : (ಸ್ಯಾಂಡರ್). [?]

**ಕಂಗಾಲ** (ಗು). ೧. ಬಡವಾದ ; ದುರ್ಬಲವಾದ : ಇಂದು ಅವರು ಕಂಗಾಲ ಸ್ಥಿತಿಗೆ ಬಂದಿದ್ದರು (ಊರುಕ. ೪). (ನಾ). ೨. ದರಿದ್ರ ಮನುಷ್ಯ ; ಬಡವ : "ಕೊಡು, ಆ ಕಂಗಾಲ ಕಗ್ಗನಿಗೆ ಕೊಟ್ಟು ಬಾ ಹೋಗು" (ಇಪ್ಪಕ. ೩೮೫) ; "ಹೇ ರಾಜಾಧಿರಾಜ ತೈಲಿಕ ತನಯ ! ಈ ಕಂಗಾಲನ ಹೊಟ್ಟೆ ಇನ್ನೂ ತುಂಬಿಲ್ಲ" (ಕಮಕ. ೧೪೦).

ಕಂಗಾಲಾಗು = ೧. ಕಂಗೆಡು ; ದಿಕ್ಕುಗೆಡು ; ದಂಗುಬಡಿ : ಅನಿರೀಕ್ಷಿತವಾಗಿ ಒದಗಿದ ಉಗ್ರಪ್ರತಿಭಟನೆಯಿಂದ ಸರ್ಕಾರ ಕಂಗಾಲಾಯಿತು (ಸ್ವಾವೀರ. ೧೦೮) ; ಜನರು ಕಂಗಾಲಾಗಿ ಗುಳೇಕಟ್ಟಿಕೊಂಡು ಹೋಗಹತ್ತಿದರು (ಚಂದ್ರತಾ. ೮). ೨. ಕ್ಷೀಣವಾಗು ; ದುರ್ಬಲವಾಗು : ತಂದೆತಾಯಿಗಳು ಈ ಹೊಸ ಕೊರಗಿನಲ್ಲಿ ಕಂಗಾಲಾದರು (ಹಂಗೀತೆ. ೮೭). [← ಪಾರ. ಮರಾ. ಹಿಂ. ಕಂಗಾಲ]

**ಕಂಗಾಲತನ** (ನಾ). ದರಿದ್ರತೆ ; ದುರ್ಭಿಕ್ಷ ; ಹೀನತೆ : ಈ ಕಂಗಾಲತನಕ್ಕಾಗಿ ಗೋವರ್ಧನನ ಒಂದು ಮನಸ್ಸು ಒಮ್ಮೊಮ್ಮೆ ಅವನಿಗೆ ಛೀ ಹಾಕುತ್ತಿತ್ತು (ಎರಸೆ. ೧೧೭) ; ಕಂಗಾಲತನವು ಹೆಚ್ಚಾದ ಕಾಲಕ್ಕೆ ಅನ್ನದ ಕೊರತೆಯನ್ನು ತತ್ವಜ್ಞಾನದ ಬಂಗಾಲಿತನದಿಂದ ಮುಚ್ಚಬೇಕಾಗುತ್ತದೆ (ವಿಚಾಮಂ. ೩೪). [ಕಂಗಾಲ + -ತನ]

**ಕಂಗಾಲಿ**, ಕಂಗಾಳಿ (ನಾ). ೧. ಬಡತನ; ಕಂಗಾಲತನ (ಕಿ). ೨. ಬಡವ; ದರಿದ್ರ (ಕಿ). **ಕಂಗಾಳಿ**: ೨. ತೊಲಗಲ್ಕೆ ಕಂಗಾಳಿಯುಲ್ಲಾನು ಬಂದಿರ್ಪ ಕೆಲಸಮದು ಬೇರಿರ್ಪುದು (ಪರಶು. ೨೭-೯) ; ದೊಡ್ಡಮನೆಯವರಿಗೆ ಮೇಲುಗಡೆಸಾಲಿನಲ್ಲಿ ಎಲೇ ಹಾಕಿ, ಕಂಗಾಳಿ ಮುತ್ತೈದೆಯರನ್ನು ಆಚೆತೊಟ್ಟಿಯ ಕೆಳಗಡೆಸಾಲಿನಲ್ಲಿ ಕೂರಿಸಿ (ನೀತಿಚಂ. XIV, ೬). [← ಮರಾ. ಹಿಂ. ಕಂಗಾಲೀ]

**ಕಂಗಾಹಿ** (ನಾ). ಕಣ್ಣನ್ನು ಕಾಯುವಂಥದು ; ರೆಪ್ಪೆ : ಲಜ್ಜೆಗಳನುಳಿದು ದಾಹಗೊಂಡಕ್ಷಿಗಳು ತ್ರಿಜಗನ್ಮೋಹನನಮಳಮೂರ್ತಿಯನು ಕಂಗಾಹಿಗಳು ತಾವಾಗಿ ನಿಂದಿರೆ ಕಂಡರಬಲೆಯರು (ನಿಭಾಗ. ೧೦-೨೦-೧೭). [ಕಂ (< ಕಣ್) + ಕಾಹಿ]

**ಕಂಗಾಳಿ** 'ಕಂಗಾಲಿ' ನೋ.

**ಕಂಗಿಡಿ** 'ಕಣ್ಗಿಡಿ' ನೋ.

**ಕಂಗಿಡಿಸು** 'ಕಣ್ಗಿಡಿಸು' ನೋ.

**ಕಂಗು**$_1$ 'ಕರ್ಗು$_1$' ನೋ.

**ಕಂಗು**$_2$ 'ಕವುಂಗು' ನೋ.

**ಕಂಗು**$_3$ (ನಾ). ಬರಗು ; ನವಣೆ : "ಕೋರದೂಷಂ ಸ್ಯಾಮಕಾಹ್ವ ಬರಗುವದಕ್ಕುವಂತಾ ಪ್ರಿಯಂಗು ಕಂಗು ಸಮಾಖ್ಯಂ" (ವಸ್ತುಕೋ. ೯೪-೧೭) ; "ಕಂಗುವೆನೆ ನವಣೆ" (ಮಂಗರಾ. ೧೧೦-೪) ; ಚತುಷ್ಖಣ್ಡಕ ಬ್ರೀಹಿ ಬೀಜವಾಪಮಾತ್ರಂ ದ್ವಿಖಣ್ಡಕ ಕಂಗು ಕ್ಷೇತ್ರಂ (ಮೈಅಂ. ೧೯೪೨, ೩೪-೭೧ ; 9ನೆಯ ಶತ) ; ಪದವಱೆಗಳೊಳ್ ಕಳಮ ಷಷ್ಟಿಕಾ ವ್ರೀಹಿ ಯವಯಾವನಾಳ ಗೋಧೂಮ ಕಂಗು . . . ವಿವಿಧ ಧಾನ್ಯ ಭೇದಂಗಳುಂ (ಆದಿಪು. ೬-೭೨ ವ). [ಸಂ.]

**ಕಂಗು**$_4$ (ನಾ). ಸಣ್ಣ ಬೀಜಗಳನ್ನು ಬಿಡುವ ಒಂದು ಬಳ್ಳಿ : "ಜ್ವಲಿನಿ ಜ್ಯೋತಿಷ್ಮತಿಯೆನಲ್ ಕಂ[ಪಾಠಾಂ. ಕಾಂ]ಗೆನಿಕ್ಕು" (ಮಂಗರಾ. ೪೪-೪೪). 'ಕಂಗುಂಗೆ' ಪರಾ. [?]

**ಕಂಗು**$_5$, ಖಂಗು (ನಾ). (ಉಕ) ಅಸಮಾಧಾನ ; ಕೋಪ. **ಖಂಗು** : "ಕಂಗು, [ಖಂಗು], ಸೇಡು, ಸಿಟ್ಟು, ಮುಯ್ಯ" (ಕಂನುಹು. ೮೦).

[← ಮರಾ. ಖಂಕ, ಖಂಖ]

**ಕಂಗು**$_6$ (ನಾ). ಅತ್ಯಂತ ಸೋಜಿಗ, —ಚೋದ್ಯ; "ಬಲು ಚೋದ್ಯ" (ಚತುನಿ. ಕಿ. I, ೭೩). [?]

**ಕಂಗು**$_7$ (ನಾ). ಆತ್ಮನಿಂದೆ (ಸ್ಯಾಂಡರ್). [?]

**ಕಂಗುಂಗೆ**, ಕಂಗೊಂಗೆ, ಕಂಗೊಗ (ನಾ). = ಕಂಗು$_4$ : "ಕಟಭಿಃ — ಕಂಗುಂಗೆ, ಬಿಳಿಯ ಸೀಗೆ, ಗಿರಿಕರ್ಣಿಕೆ" (ಒಷಧಿ. ೨೩) ; ಎಳೆಯದಾದ ಪಾದರೀಸೊಪ್ಪನ್ನು ಕಂಗುಂಗೆ ಬಳ್ಳಿಯೊಂದಿಗೆ ಬೇಯಿಸಿ ಮತ್ತೆ ಹುಳಿಯನ್ನು ಹಾಕಿ ಹುಳಿಪಲ್ಯವನ್ನು ಮಾಡುವುದು (ಭೀಮಸೂ. ೧೫ ಅಧಿಟ).

**ಕೆಂಗೊಂಗೆ**: (ಅಮರ. ಟೀಕೆ). **ಕೆಂಗೊಗ**: ರಾಜಿಪ ಸಮುದ್ರ ಫಲಮಂ ಯೋಜಿಸು ಕಂಗೊಗನ [ಪಾಠಾಂ. ಕಂಗೊನ, ಕಂಗುವನ, ಕಂಗೋನ]ಬೇರುಮಂ ಮಜ್ಜಿಗೆಯಿಂ ಪೂಜಿತರಿತ್ತೊಡೆ ಕೊಳೆ ನಿರ್ವಾಜಂ ಪೂಸದನೆ ಕೆಂಜಿಗೆಯ ವಿಷಮುಱಗುಂ (ಖಮುದ. ೧೩–೧೨೩). [?]

**ಕೆಂಗುಡಿ** 'ಕಣ್ಕುಡಿ' ನೋ.

**ಕೆಂಗುಮಾಡು** (ಕ್ರಿ). ತೆಗಳು ; ಹೀಯಾಳಿಸು : ಕಂಗುಮಾಡಿದೆ ಎನ್ನ ಕಂಡವರೊಳಗೆ ಭಂಗಬಡಿಸಿದೆ ನೀನು ಬಾಹ್ಯಳನು ಮಾಡಿ (ಶ್ರೀಕೃಪಾ. ೪೬). [ಕಂಗು$_5$ ? + ಮಾಡು$_1$]

**ಕೆಂಗುರಿ** 'ಕಂಗೋರೆ' ನೋ.

**ಕೆಂಗುರುಡ** (ನಾ). ೧. ಕಣ್ಣಿಲ್ಲದವನು ; ಕುರುಡ : ಮುಂತೆ ಕಂಗುರುಡಂಗೆ ಬೆಳಪ ಕಂಗಳನೀಯೆ ಸತ್ಪಥದಿ ನಡೆಯದಿಹನೇ (ನವಮೋ. ೧೮–೩೩). ೨. (ಅಲಂ) ಕಣ್ಣಿದ್ದೂ ಕುರುಡ; ವಿವೇಕವನ್ನು ಕಳೆದುಕೊಂಡವನು : ಅನಿಮಿಷರ ಸಾವಿರವಿಲೋಚನದಮರಪತಿ ಕಂಗುರುಡನಾದನು ಮದದಲಿನ್ನುಳಿದವರ ಪಾಡೇನು (ನಿಭಾಗ. ೬–೭–೭).

[ಕಂ (< ಕಣ್) + ಕುರುಡ]

**ಕೆಂಗುಱುಹು** 'ಕಣುಗುಱುಹು' ನೋ.

**ಕೆಂಗೂರಿ** 'ಕಂಗೋರೆ' ನೋ.

**ಕೆಂಗೆಂದಿಬೇರು** (ನಾ). ಒಂದು ಬಗೆಯ ಮೂಲಿಕೆ: ಕಂಗೆಂದಿಬೇರು, ಗಜ್ಜುಗದ ಬೇರು (ಸಕವ್ಯ. ಪರಿ. ೪೪೧).

[ಕಂಗೆಂದಿ$_0$ + ಬೇರು (< ಬೇರ್)]

**ಕೆಂಗೆಡಿಕೆ** (ನಾ). ಗಾಬರಿ ; ದಿಗ್ಭ್ರಾಂತಿ : ಫಲುಗುಣನ ಕಂಗೆಡಿಕೆಯನು ಕಂಡಱುಹಲಱಿಯದೆ ಗಹನ ಮಾರ್ಗದಲಿ (ತಿಮ್ಮಮಾ. ೨–೭೭) ; ಈಗ ನಾವಿಹ ಮಡುವಿದೆಂದಿಗೆ ಬತ್ತುವುದು ಕಂಗೆಡಿಕೆಯೇತಕೆ ಮುಂದೆ ಬಂದುದ ಕಾಬೆವೆಂದೆನುತ (ತಿಮ್ಮಶಾಂ. ೪–೬೯). [ಕಂಗೆಡು (< ಕಣ್ಗೆಡು) + –ಇಕೆ]

**ಕೆಂಗೆಡಿಸು** 'ಕಣ್ಗೆಡಿಸು' ನೋ.

**ಕೆಂಗೆಡು** 'ಕಣ್ಗೆಡು' ನೋ.

**ಕೆಂಗೇಡು** (ನಾ). ೧. ಕಣ್ಣಿನ ಕೇಡು, —ಬಾಧೆ. ೨. ಕಂಗೆಡುವಿಕೆ; ತೊಂದರೆ: ನರಮೃಗತತಿ ಕಂಗೇಡಿಗೊಳಗಾಗೆ ಬಂದಂ ನೀಡುಂ ನಿಷ್ಠುರ ನಿದಾಘ ರಾಜಂ ತೇಜಂ (ಹಮ್ಮೀರ. ೪–೬೫) ; ದೇವನನು ಕಾಡದಿರು ಕಂಗೇಡು ಮಾಡದಿರು – ಆಡದಿರು ಕಾಡದಿರು ! (ಕ್ರೌಂಚಧ್ವ. ೫೯).

[ಕಂ (< ಕಣ್) + ಕೇಡು]

**ಕೆಂಗೊಂಗೆ** 'ಕಂಗುಂಗೆ' ನೋ.

**ಕೆಂಗೊಗ** 'ಕಂಗುಂಗೆ' ನೋ.

**ಕೆಂಗೊಳ್**, ಕಂಗೊಳು (ಕ್ರಿ). ೧. ಕಣ್ಣುತೆರೆದು ನೋಡು : ಕಾಲಂ ಕಂಗೊಂಡನೆ ಹರಿ ಮೇಲೊಪ್ಪುವ ತಲೆಯನಜಸಿ ಕಂಡನೆ (ಹಮ್ಮೀರ. ೭–೪೪). **ಕೆಂಗೊಳು** : ೨. ಕಣ್ಣನ್ನು ಸೆಳೆ; ಆಕರ್ಷಿಸು : ಲಲನೆಯ ರೂಪೀ ಚೆಲುವು ವಿದ್ಯಾಕಲೆಯಿದಧಿಕವೆನುತ್ತರಸ ಕಂಗೊಳುತಿರಲು ಭೂವರನ ನೋಡುತ ಮೂರ್ಛಿಸಿದಳಾಕೆ (ಸಾಳ್ವಭಾ. ೮–೪೨).

[ಕಂ (< ಕಣ್) + ಕೊಳ್$_1$]

**ಕೆಂಗೊಳಿಸು** (ಕ್ರಿ). ಕಣ್ಣನ್ನು ಆಕರ್ಷಿಸು; ಅಂದವಾಗು ; ಶೋಭಿಸು : ಕಂಗೊಳಿಪ ಮರಕತದ ಕಳಸಂಗಳ ಜಲವಂ ಸುರಿದರ್ (ಕಾದಂಪೂ. ೭೩) ; ಪರಮನೆರ್ದೆ ಕಟ್ಟನೆ ಕರಗಿ ಪೋಣ್ ಪ್ರವಾಹಿಸಿತೊಯೆನೆ ಗಂಗೆ ಕಂಗೊಳಿಸಿತು (ಪದ್ಮರಾ. ೧೩–೩೧) ; ವಿಹಂಗ ಸಂತೋಷದಿ ತಮ್ಮ ಮುಂಗಟ್ಟಿದ ಮುದ್ದುಮಱಿಗಳ್ಗೆ ಗುಟುಕೀಯೆ ಕಂಗೊಳಿಸಿತು ರುಕ್ಮಿಣಿಗೆ (ಮೋಹತ. ೪–೧೯) ; ಮಿಂಚಿನ ಗೊಂಚಲೆತ್ತಲುಂ ಬಳಸಿ ಕಂಗೊಳಿಸುತಿರಲ್ (ಜೈಮಿಭಾ. ೫–೧೧). [ಕಂಗೊಳ್ + –ಇಸು$_3$]

**ಕೆಂಗೊಳು** 'ಕಂಗೊಳ್' ನೋ.

**ಕೆಂಗೋರಿ** 'ಕಂಗೋರೆ' ನೋ.

**ಕೆಂಗೋರು** 'ಕಂಗೋರೆ' ನೋ.

**ಕೆಂಗೋರೆ**, ಕಂಗುರಿ, ಕಂಗೂರಿ, ಕಂಗೋರಿ, ಕಂಗೋರು (ನಾ). ೧. ಕಟ್ಟಡದಲ್ಲಿ, ಗೋಡೆಯಲ್ಲಿ ಮಾಡಿದ ಕೆತ್ತನೆಯ ಅಥವಾ ಬಣ್ಣದ ಅಲಂಕಾರ; ಅಂಚುಕಟ್ಟು; ರೇಖಾವಿನ್ಯಾಸ (+). **ಕೆಂಗುರಿ** : ೨. ಬಟ್ಟೆಯ ಅಂಚಿನಲ್ಲಿ ಹೆಣೆದ ಕಸೂತಿ ; ಅಲಂಕಾರದ ಹೆಣಿಗೆ: ಕಂಗುರಿ ಚಂದಿರಗಾವಿಯ ಪಟದಿಂ ಮಂಗಳತರ ನಂದಿಧ್ವಜ ಚಯದಿಂ (ಹಾಲಾಸ್ಯ. ೨–೮೦). **ಕೆಂಗೂರಿ** : ೨. ಅವರು ಉಪಯೋಗಿಸುವ ತಂಬೂರಿ ವೀಣೆಗಳಿಗೆ ದಂತದ, ಚಿನ್ನ ಬೆಳ್ಳಿಗಳ ನಕಾಸಿನ 'ಕಂಗೂರಿ' ಕಟ್ಟಿರಬೇಕು (ಸಾಹಿಜೀ. ೧೦). **ಕೆಂಗೋರಿ** : ೨. (ರೀವ್ಸ್). **ಕೆಂಗೋರು** : ೨. (ರೀವ್ಸ್).

[← ಪಾರ. ಕಂಗುರಾ ; ಮರಾ. ಕಂಗೂರಾ, ಕಂಗೋರಾ]

**ಕೆಂಗೋಲು** (ನಾ). ಕವೆಗೋಲು : ಆಕೆ ಹಿಟ್ಟನ ಕಂಗೋಲಿನಲ್ಲಿ ಬೆಕ್ಕಿಗೆ ಬಡಿದಳು (ರೂಢಿ). [< ಕವೆಗೋಲು ?]

**ಕೆಂಚ$_1$** 'ಕಂಚು$_1$' ನೋ.

**ಕೆಂಚ$_2$** (ನಾ). ಒಬ್ಬಾತನ ಹೆಸರು : ಆತಂಗೆ ನೆಗಳ್ದಿನ್ದನಿನ್ದಂಗೆ ಸಂದ ವಾರ್ಯ್ಯಭುಜವೀರ್ಯ್ಯರಪ್ಪ ಕವಿಲಾಸನುಂ ಕಂಚನುಂ ಪ್ರವೀತಭಯಂ (ಎಇ. XXVII, ೧೫–೧೩ ; 1114); ಹಿತ್ತಿಲಿಗೆ ಗಡಿ ಮೂಡಲು ಆಡುಸಾದನ ಮಗ ಕಂಚನ ಹಿತ್ತಿಲು ಗಡಿ ತೆಂಕಲು ಹರವರಿಯ (ಕಇ. I, ೪೧–೪೨ ; 1417). [?]

**ಕೆಂಚ$_3$** (ನಾ). ಸ್ಪರ್ಧೆಯಲ್ಲಿ ಮುಟ್ಟಬೇಕಾದ ಕೊನೆಯ ಮೆಟ್ಟುಗಟ್ಟೆ ; ಗುರಿ: ಜನಸಮೂಹವೂ ಜಯಕಾರ ಹಾಕುತ್ತ ಬಂಡಿಯನ್ನು ಹಿಂಬಾಲಿಸಿತು. ನಂದಿ ಕಂಚವನ್ನು ಮುಟ್ಟಿದ (ಬೆಳುಮ. ೧೮೧).

[?]

**ಕೆಂಚಗಾರಬೆಳ್ಗಲಿ** 'ಕಂಚಗಾಱಬೆಳ್ಗಲಿ' ನೋ.

**ಕೆಂಚಗಾರ್ತಿ** (ನಾ). ೧. ಕಂಚುಗಾರನ ಹೆಂಡತಿ. ೨. ಕಂಚುಗಾರರ ಹೆಂಗಸು : ಕಂಚಗಾರ್ತಿ, ಗಾಡಿಗಾರ್ತಿ (ಶಮದ. ೨೦೮ ಪ್ರಯೋ).

[ಕಂಚಗಾಱ (< ಕಂಚುಗಾಱ) + –ತಿ$_1$ (< –ಇತ್ತಿ)]

**ಕೆಂಚಗಾಱ** 'ಕಂಚುಗಾಱ' ನೋ.

**ಕೆಂಚಗಾಱಗಲ್** (ನಾ). ಒಂದು ಸ್ಥಳದ ಹೆಸರು : ಕಞ್ಚಗಾಱಗಲ್ಲೆ ಪೊಲ ಎಲ್ಲೆ ಪುಣುಸೆಎ (ಎಇ. XII, ೧೬–೪ ; 735) ; ಕಡವಿನ ಪುಲ್ ಪದಿಯೆ ಕಞ್ಚಗಾಱಗಲ್ಲೆ ಪೊಲ ಎಲ್ಲೆ ಪುಣುಸೆಎ (ಎಕ. XII, ಗುಬ್ಬಿ. ೬೧–೯೫ ; 812). [ಕಂಚಗಾಱ (< ಕಂಚುಗಾಱ) + ಕಲ್$_3$]

**ಕೆಂಚಗಾಱಬೆಳ್ಗಲಿ**, ಕಂಚಗಾರಬೆಳ್ಗಲಿ (ನಾ). ಒಂದು ಊರಿನ ಹೆಸರು : ಅಗ್ರಹಾರತಿಳಕಂ ಸೊಗಯಿಪ್ಪುದು ಕಂಚಗಾಱಬೆಳ್ಗಲಿ (ಎಕ. VIII, ಸಾಗರ. ೧೦೯–೨೨ ; 1042). **ಕೆಂಚಗಾರಬೆಳ್ಗಲಿ** : ಅಗ್ರಹಾರಂ ಕಞ್ಚಗಾರಬೆಳ್ಗಲಿಯ ಪೂರ್ವ್ವದೆ ಸ್ಥಾನಮಾನ್ಯಂ (ಸೌಇಇ. IX-i, ೭೪–೫ ; 981). [ಕಂಚಗಾಱ (< ಕಂಚುಗಾಱ) + ಬೆಳ್ಗಲಿ]

**ಕೆಂಚಗಾಱವಸರ** (ನಾ). ೧. ಕಂಚುಗಾರನ ಅಂಗಡಿ. ೨. ಕಂಚುಗಾರರ ಅಂಗಡಿ ಸಾಲು : ಪುರದೊಳ್ ಬಂದಿರ್ದ ತಾಡಾಗಣಂಗಳಿವಂ ಬಂತಿರೆ ಕಂಚಗಾಱವಸರಂ ಮಾಳ್ಕುಂ ಮನೋರಾಗಮಂ (ಜಗವಿ. ೯–೧೧೦). [ಕಂಚಗಾಱ (< ಕಂಚುಗಾಱ) + ಪಸರ]

**ಕೆಂಚಗಾಱಿಕೆ** (ನಾ). ಕಂಚುಗಾರನ ವೃತ್ತಿ, —ಉದ್ಯೋಗ: ಆಟಕಾಱಿಕೆ, ಓಲೆಕಾಱಿಕೆ, ಕಂಚಗಾಱಿಕೆ, ಬಳೆಗಾಱಿಕೆ (ಶಬ್ದಾನು. ೪೩೧ ವ್ಯಾಖ್ಯಾ). [ಕಂಚಗಾಱ (< ಕಂಚುಗಾಱ) + –ಇಕೆ]

**ಕಂಚಡಿ** (ನಾ). ಕಚ್ಚುಟ; ಕೌಪೀನ : ಕಾಶಿ ಕಂಚಡಿಯೇಕೆ ಅಸುರದ ಜಡೆಯೇಕೆ ಕೇಶವನು ಕಿತ್ತಿಕೊಳಲೇಕೆ ತ್ರ್ಯಮಲದ ಆಶೆ ಬಿಡದನಕ (ಸರ್ವಜ್ಞ. ೫೭೩). [< ಕಚ್ಚುಟ]

**ಕಂಚಯ** 'ಕಂಚಯ್ಯ' ನೋ.

**ಕಂಚಯ್ಯ**, ಕಂಚಯ (ನಾ). ಒಬ್ಬಾತನ ಹೆಸರು : ಶ್ರೀ ಕಞ್ಚಯ್ಯ (ಎಕ. II, ೪೭೦ ; 1000). **ಕಂಚೆಯ** : ತಿಳಿವಳ್ಳಿಯುತ್ತವಸೆಟ್ಟಿ ಕಂಚಯನ ಮಲ್ಲಿಸೆಟ್ಟಿ ದೋಣಿಯಾಕಿಸೆಟ್ಟಿ (ಕಇ. I, ೧೯–೧೨ ; 1108). [ಕಂಚ$_2$ + ಅಯ್ಯ$_1$]

**ಕಂಚರ** (ನಾ). ನೀರಿನಲ್ಲಿ ಚಲಿಸುವಂತಹದು ; ಜಲಚರ. [ಸಂ.]

**ಕಂಚರಸ** (ನಾ). ಒಬ್ಬಾತನ ಹೆಸರು : ಶ್ರೀಮತ್ ಕಂಚರಸರ್ ಸ್ವೈಗೊಟ್ಟ ಗಂಗನಿಂ ಬಂದ ಧರ್ಮಮಂ ಸಮುದ್ಧರಿಸಿದಂ (ಇಆ. XVIII, ೩೧೨–೨೬ ; 11ನೆಯ ಶತ). [ಕಂಚ$_2$ + ಅರಸ$_1$]

**ಕಂಚಲದೇವಿ** (ನಾ). ಒಬ್ಬಾಕೆಯ ಹೆಸರು : ನನ್ನಿಯ ಗಂಗದೇವನುಂ ಪಟ್ಟಮಹಾದೇವಿ ಕಂಚಲದೇವಿಯರುಂ (ಎಕ. VII, ಶಿವಮೊ. ೪–೯೨ ; 1122). [ಕಂಚಲ$_0$ + ದೇವಿ]

**ಕಂಚಲು** (ನಾ). ಕರುವನ್ನು ಕಟ್ಟುವ ಸ್ಥಳ : ಕೊಳುಂಬನು ಕಂಚಲಿನಿಂದ ಕರುವನ್ನು ಬಿಟ್ಟ (ಧೂಮಮ. ೩೦). [?]

**ಕಂಚವಡ್ಡ** (ನಾ). ಒಂದು ಸ್ಥಳದ ಹೆಸರು : ಗಾಉುಮಾರರ ಚಉಡಣನ ಕೆಯ್ಯನ್ನೆಂಕಣ ಕಂಚವಡ್ಡದ ಮೇರೆ (ಸೌಇಇ. XI-ii, ೧೭೪–೨೯ ; 1124). [ಕಂಚ$_2$ + ?]

**ಕಂಚವಾಳ** 'ಕಂಚುವಾಳ' ನೋ.

**ಕಂಚಳವಾೞೆ** (ನಾ). ಒಂದು ಜಾತಿಯ ಬಾಳೆ : ಕಾಯ್ ಪೇೞಿದ ತೆಂಗು ತೋರ ಗೊನೆವೇೞಿದ ಕಂಚಳವಾೞೆ ತೋರವಣ್ಪೇೞಿದ ಬಕ್ಕೆ (ಅನಂಪು. ೧–೭೮). [ಕಂಚಳ ? + ಬಾೞೆ]

**ಕಂಚಳಿಗೆ** (ನಾ). ಕಂಚಿನ ತಾಳ : ಕಂಚಳಿಗೆಯ ಸೋಂಕಿನಿಂ ಯೇಕ ದ್ವಿ ತ್ರಿ ಚತುಸ್ಸರ ಪಂಚಸರಗಳೂ (ಪೂಜ್ಯಚ. ೪–೮೭). [< ಸಂ.* ಕಾಂಸ್ಯತಾಲಿಕಾ]

**ಕಂಚಾ** (ನಾ). ಗಜುಗದ ಬೀಜ, ಕಲ್ಲು, ಅರಗು ಮೊದಲಾದವುಗಳಿಂದ ಮಾಡಿದ ಗೋಲಿ, —ಗುಂಡು ; ಆಟದ ಗೋಲಿ (ಕ). [?]

**ಕಂಚಾಲ** 'ಕಂಚುವಾಳ' ನೋ.

**ಕಂಚಾಳ** 'ಕಂಚುವಾಳ' ನೋ.

**ಕಂಚಿ$_1$** (ನಾ). ಈಳೆ ಜಾತಿಗೆ ಸೇರಿದ ಒಂದು ಹುಳಿ ಹಣ್ಣು, —ಮರ; ಹೇರಿಳೆ : "ಹೇರೀಳೆಯೆನೆ ಕಂಚಿ" (ಮಂಗರಾ. ೩೪–೧೦) ; ಮಾದಲ ನಿಂಬೆ ದೊಡ್ಡಿಲೆ ಕಂಚಿ ಕಿತ್ತೀಳೆ ಸ್ವಾದು ಖರ್ಜೂರ ದ್ರಾಕ್ಷೆಗಳು (ಮೋಹತ. ೨೪–೫೨) ; ಕಂಚಿಯಾಲದ ಗಡಣಂ ಕೊಸಗಿಜೆ ಬಸಿಱೀ ಹುಲಗಿಲ್ ಗೊರವಿ (ಹಮ್ಮಿರ. ೪–೭೮) ; ಕಂಚಿಯ ಫಲ ಲೇಸು ಮಿಂಚು ಮುಗಿಲಿಗೆ ಲೇಸು (ಸರ್ವಜ್ಞ. ೧೧೩೮) ; ಕಂಚಿಹಣ್ಣು ಕಹಿಯೆಂದ ಲಿಂಬೆಹಣ್ಣು ಹುಳಿಯೆಂದ (ಹಳ್ಳಿಯ. ೧೦೮).

**ಕಂಚಿಕಾಯಿ, ಕಂಚೀಕಾಯಿ** = ಕಂಚಿಮರದ ಕಾಯಿ : ಮಾವಿನ ಕಾಯಿ, ಕವಳೀಕಾಯಿ, ಕಂಚಿಕಾಯಿಗಳ ಉಪ್ಪಿನಕಾಯಿಗಳು ನೋಡುವವರ ಮನಸ್ಸನ್ನಾಕರ್ಷಿಸುತ್ತಿದ್ದವು (ಪುಣ್ಯಕಿ. ೬) ; ಕಂಚೀಕಾಯಿ ಮುಂತಾದವುಗಳ ಚಟ್ನಿಯು ಗ್ರಾಹಕ (ಅಷ್ಟಾಂಗ. ೧೪೧) ; ಸಕ್ಕರಿಗಂಚಿ ಕಂಚೀಕಾಯಿ ಎಂಬ ಹೆಸರುಗಳಿವೆ (ಕೃಷಿಪ್ರ. ೧೭೮). [< ಕಂಚೀಳೆ]

**ಕಂಚಿ$_2$** (ನಾ). (ಕರಾ) ಹುಲ್ಲುಚಪ್ಪರದ ಕೆಳಭಾಗದ ಅಂಚು ; ಸೂರು : ಕಂಚಿನೀರು ಇಳಿಯಲಿಲ್ಲ ಕೊಡನೀರು ಎಲ್ಲಿಂದ ಬರಬೇಕು ? (ರೂಢಿ). [?]

**ಕಂಚಿ$_3$** (ನಾ). (ಕರಾ) ಕಂಚಿನ ಗಿಂಡಿ : ನೀರನ್ನು ಕಂಚಿನಲ್ಲಿ ತೆಗೆದುಕೊಂಡು ಬಾ (ರೂಢಿ). [?]

**ಕಂಚಿ$_4$** (ನಾ). ೧. ಕಂಚೀಪಟ್ಟಣ ; ಕಾಂಚೀಪುರ : ಕಞ್ಚಿಯಾನ್ ಕೊಣ್ಡು (ಎಇ. III, ೩೬೦–೩ ; 740) ; ಕಞ್ಚಿಯನ್ 'ಕ್ಕೊಳ್ವನ್ದು (ಮೈಆರಿ. ೧೯೩೯, ೨೩–೨ ; 740) ; ಕಂಚಿಯೊಳು ಸಿರಿಯಾಳನೆಂಬನು (ಬಸವು. ೨೪–೩). ೨. ಡಾಬು ; ಒಡ್ಯಾಣ : "ಕಂಚಿ – ಕಾಂಚೀ = ಒಡ್ಯಾಣ" (ತದ್ಭಕೋ. ೫). [< ಸಂ. ಕಾಂಚೀ]

**ಕಂಚಿ$_5$** (ನಾ). ೧. ಸ್ಥಾನ (?) : ಎದುರಿಗಿದ್ದದ್ದೆಲ್ಲ ಅದಲು ಬದಲು ಕಂಚೀಬದಲು ಹುಡುಕುತಿದ್ದೇವೆ ಕಣ್ಮುಚ್ಚಿ : ಇವರ ಬಿಟ್ಟವರಾರು ? (ನೆಲಮು. ೩೨). ೨. "ಹೋಳು ; ಭಾಗ ; ಗುಂಪು" (ಜಾನಕೋ. ೩೨). [?]

**ಕಂಚಿಅಬ್ಬೆ** 'ಕಂಚಿಯಬ್ಬೆ' ನೋ.

**ಕಂಚಿಕ** (ನಾ). ಒಂದು ಬಗೆಯ ಸವುಟು : "ಕಂಚಿಕಮೆನಲ್ ಸೌಟಿ ನಿಕ್ಕುಂ" (ಮಂಗರಾ. ೬೧–೧೮). [< ಕಚಕ]

**ಕಂಚಿಕುಳ್ಳಿ** (ನಾ). ಒಂದು ಸ್ಥಳದ ಹೆಸರು : ಕವುಳಸ್ಥೆಯಾರುಂ ಕಞ್ಚಿಕುಳ್ಳಿಯಂ ಪಾಣಿದರುಂ ಆಕ್ಕಶಾಲೆಯರಾ ಪುಲಿಯಣ್ಣಂಗಳು ಎರೆಕಾಡನಳದೊರ್ (ಸೌಇಇ. IX–i, ೪೭–೧೪ ; 9ನೆಯ ಶತ). [?]

**ಕಂಚಿಕೆ** (ನಾ). ಗುಳ್ಳೆ ; ಬೊಬ್ಬೆ : ಮೊಲೆವಾಲೊಳ್ ಬಸಿರಿಯ ತಳಿರೆಲೆಯಂ ಕಱಿಕೆಯುಮನಕ್ಕೆಯಲ್ಲದೊಡೆ ಶಮಿಾದಳಮನಜದುಗ್ಧದಿಂದರೆದು ಲೇಪನಂಗೆಯ್ಯೆ ಉರಿವ ಕಂಚಿ(ಚು)ಕೆ ಕಿಡುಗುಂ (ಲೋಕೋಪ. ೯–೧೬೨). [ಸಂ. ಕಂಚಿಕಾ]

**ಕಂಚಿಗ** (ನಾ). ೧. "ಅಸುರ" (ಚತುಸ. ಕ. I, ೨೭). ೨. (ದೇವಾಲಯದ ಸೇವಕರಲ್ಲಿ) ಒಂದು ವರ್ಗದ ಹೆಸರು : ಮಾರ್ತಾಂಡ ದೇವರದೇಗುಲದ ಕುಂಬಾರ ವೆಸನ ಹಡಿ ಸಲಿಸುವ ಕಂಚಿಗಂಗೆ (ಎಕ. VIII, ಸಾಗರ. ೧೧೯–೭೫ ; 1079). [?]

**ಕಂಚಿತೋರಣ** (ನಾ). ಕಂಚಿನ ತೋರಣ : ಹೆಚ್ಚಿನ ಕೊಡದವಳು ಕಂಚಿತೋರಣ ಕಟ್ಟಿ ರಚ್ಚಿಗೆ ಬರಲು ನಾಲ್ವರ ಮುಂದಕೆ ಉಚ್ಚರಿಸಲೊಶವಲ್ಲ ಕೇಳು ಸಜ್ಜನ ಸೊಲ್ಲ (ಪುರಂದ. ೧–೩೭–೩). [< ಸಂ.* ಕಾಂಸ್ಯತೋರಣ]

**ಕಂಚಿನಮುರಲು** (ನಾ). ಒಂದು ಜಾತಿಯ ಮೀನು (?) : ಕಲೀ ಮೀನು, ಗಿಡಪಕ್ಕೆ, ಕೊರವ ... ಹುರವಿನ ಮುರಳು, ಕಂಚಿನಮುರಲು ; ಬೀಳೀಕೊರವ, ಮರಕೊರವ, ಬಾಳು ; ಬೇಲಿಕೊರವ (ನಮ್ಮನು. ೨೪೦). [?]

**ಕಂಚಿನಿ** (ನಾ). ನರ್ತಕಿ ; ಕುಣಿತದವಳು (ಕ). [< ಸಂ. ಕಂಜನೀ. / ಮರಾ. ಕಂಚನೀ]

**ಕಂಚಿನಿಂಬೆ** (ನಾ). ಈಳೆ ಜಾತಿಗೆ ಸೇರಿದ ಒಂದು ಹುಳಿ ಹಣ್ಣು, —ಮರ : "ಜಟಲಃ – ಕಂಚಿನಿಂಬೆ, ಹೇರಿಳೆ" (ಔಷಧಿ. ೫೯) ; ನಿಂಬೆ ಕಿತ್ತೀಳೆ ನಾರಂಗ ಹೇರಿಳೆ ಕಂಚಿನಿಂಬೆ [ಪಾಠಾಂ. ಬಿ]ಯ ಕಾಯ ಕುಸುರಿಗಳನಾ ರಸವೊಡೆಯದಂತೆ ಹುಳಿಧಿಗೆದು ಬಟ್ಟವಾಲೊಳಗೆ ಪಾಯಸಮಾಳ್ಪುದು (ಸೂಪಶಾ. ೩–೧೦). [ಕಂಚಿ$_1$ + ನಿಂಬೆ]

**ಕಂಚಿಮೇಕೆ** (ನಾ). ೧. ಬಿಳಿ ಬಣ್ಣದ ಗಿಡ್ಡ ಮೇಕೆ (ಕ). ೨. ದೊಡ್ಡ ಕೆಚ್ಚಲುಳ್ಳ ಮೇಕೆ. [← ತೆಲು. ಕಂಚಮೇಕ]

**ಕಂಚಿಮೊಗ್ಗೆ** (ನಾ). ಒಂದು ಸಸ್ಯ ವಿಶೇಷ : ಮುಸ್ಸಿವಾಲ, ಮುಸ್ಸಿವಾರ, ಕಂಚಿಮೊಗ್ಗೆ (ಮೈಔಗಿ. ೫೩–೧೦೬೧). [?]

**ಕಂಚಿಯಬ್ಬೆ**, ಕಂಚಿಅಬ್ಬೆ (ನಾ). ಒಬ್ಬಾಕೆಯ ಹೆಸರು : ಕಾಮಿನಿ ಕಂಚಿಯಬ್ಬೆಗಂ ಪುಟ್ಟಿದಳಱಿವಭಿಮಾನಂ (ಎಕ. IX, ಚನ್ನಪ. ೧೪೧–೨ ; 900?). **ಕಂಚಿಅಬ್ಬೆ**: ದುಗ್ಗಮಾರೆಱ್ ಅಪ್ಪೋ ಕುವಳಾಲನಾಡು ಮೂನೂಱುಂ ಗಂಗಱುಸಾಸಿರಮುಮಾಳೆ ಅವರಾ ಮಹಾದೇವಿ ಕಞ್ಚಿ ಅಬ್ಬೆ ಆಗಳಿ ಆಳೆ (ಎಕ. X, ಮುಳಬಾ. ೮೦–೫ ; 767).
[ಕಂಚಿ$_0$ + ಅಬ್ಬೆ$_1$]

**ಕಂಚಿವಡ್ಡ** (ನಾ). ಒಂದು ಸ್ಥಳದ ಹೆಸರು (?): ಮೂಡಣ ಕಂಚಿವಡ್ಡದಿಂ ಬಡಗಲುಂ ಕೆಱೆಯ ಬರ್ಚ್ಚಲಿಂದ ಮೂಡಲುಂ (ಎಕ. VII, ಶಿಕಾರಿ. ೧೫೧–೫೯ ; 1047); ಜಾಲಿಯ ಕೆಱೆಯಿಂ ಪಡುವಣ ಪತ್ತು[ಗೆ]ಯೊಳು ಕಂಚಿವಡ್ಡಮಾಗಿ ಬಡಗಲು ಹರಳ ಮತ್ತರೊಂದು (ಕಇ. I, ೨೪–೪೫ ; 1148). [?]

**ಕಂಚಿವಾಳ** 'ಕಂಚುವಾಳ' ನೋ.

**ಕಂಚಿಹಸು** (ನಾ). ಉತ್ತಮ ಜಾತಿಯ ಗಿಡ್ಡ ಹಸು (ಕ).
[ಕಂಚಿ$_0$+ ಹಸು (< ಪಸು$_3$)]

**ಕಂಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು.
[ಕಂಚಿ$_0$+ ಹುಲ್ಲು (< ಪುಲ್)]

**ಕಂಚೀಳೆ** (ನಾ). = ಕಂಚಿನಿಂಬೆ : ಪೇರೀಳೆಯ ನಾರಂಗದ ಕಂಚೀಳೆಯ ತನಿವಣ್ಣನಿಕ್ಕೆ ಮೆಲ್ದು (ಧರ್ಮಾಮೃ. ೧–೧೫೧); ಬಾೞೆಯ ಖರ್ಜೂರದ ಕಿತ್ತೀೞೆ[ಳೆ]ಯ ಕರ್ಮರದ ಮಾವಿನರನೇಱಿಲ ಕಂಚೀೞೆ[ಳೆ]ಯ ಪಲಸಿನ ಮರದಿಂ (ಕಾವ್ಯಾವ. ೨೩೦); ಮಾದುಫಲಮಿಾಳೆ ಬೆಡಂಗೆನಿಸಿರ್ದ್ದ ಮಾವು ಕಂಚೀಳೆ ಕವುಂಗು ತೆಂಗು ಪಲಸುರ್ಬ್ಬಿದ ಕರ್ಬ್ಬಿನ ತೋಂಟಂ (ಸೌಇಇ. IX–i, ೨೪೯–೨೬ ; 1147). [ಕಂಚಿ$_1$+ ಈಳೆ]

**ಕಂಚು$_1$**, ಕಂಚ$_1$ (ನಾ). ೧. ತಾಮ್ರವೂ ತವರವೂ ಸೇರಿ ಆದ ಮಿಶ್ರ ಲೋಹ: "ಕಂಚಿನಲ್ ಕಾಂಸ್ಯಂ" (ಕಶರ. ೧೨೦); ಪೊಟಲೊಳಗೊಪ್ಪೆ ಕನ್ನಡಿಯ ಕಂಚಿನ ತೋರಣದೋಳಿಗಳ್ (ಪಂಪಭಾ. ೩–೬೪); ಸೋರೆಯ ಬಟ್ಟಲಂ ನಂಬಿ ಕಂಚಿನ ಬಟ್ಟಲನೊಡೆವ ಗೊರವನುಮಂ (ಧರ್ಮಾಮೃ. ೮–೫೧); ಕಂಚಿನಿಂದೆ ಭಾಸುರಮಾಗಿ ಸಮೆದ ಕಲಶಂಗಳೊಳ್ (ಅರಾಚ. ೬–೨೧); ಕಂಚು ಹಿತ್ತಾಳೆ ಪ್ರತಿಮೆಗಳ ನೆರಹಿ ಮಿಂಚಬೇಕೆಂದು ಬಲುಜ್ಯೋತಿಗಳನು ಹಚ್ಚಿ (ಪುರಂದ. ೨–೨೫–೨). ೨. ಕಂಚಿನ ತಟ್ಟೆ,—ಹರಿವಾಣ : ಕುಳ್ಳಿರಿಸಿ ಕಂಚನಿಟ್ಟು ಬಿಸಿಯುಂಬಲಿಯಂ ಬಡ್ಡಿಸಿದೊಡೆ (ವಡ್ಡಾರಾ. ೧೮೮–೧೪) ; ಎನ್ನ ಹೆಣನ ಮೇಲೆ ಕಂಚಿಟ್ಟುಂಡರೆಯೂ ಮಾಣೆ (ಬಸವ. ೬೯೨); ಕಱು ತಡೆದತ್ತು ಕಂಚನುಣಲೂಮನೆಯೂಕೆ ಗಳುಯ್ದು ರಕ್ಕ (ಸೂಕ್ತಿಸು. ೮–೧೩೪). **ಕಂಚ$_1$** : 'ಕಂಚಗಾಱ' ಪರಾ.

**ಕಂಚಿನಕಂಠ** = (ಆಲಂ) ಗಡುಸಾದ ಧ್ವನಿ; ಸ್ಪಷ್ಟವಾದ ಧ್ವನಿ: ಆ ದಾಸರದು ಕಂಚಿನಕಂಠ (ರೂಢಿ). **ಕಂಚಿನನಾಣ್ಯ** = ಕಂಚಿನಿಂದ ಮಾಡಿದ ನಾಣ್ಯ (ಪಾರಿನಿ. ೧೬). **ಕಂಚಿನಹಾನೆ** = ತುಳುವರ ಶಾಸನಗಳಲ್ಲಿ ಬರುವ ನಾಣ್ಯ: ಹಾನೆ, ನಾಡಹಾನೆ, ಕಂಚಿನಹಾನೆ, ಮೂಡೆ (ತುಳುನಾ. ೨೬೧). [< ಸಂ. ಕಾಂಸ್ಯ]

**ಕಂಚು$_2$** (ನಾ). =ಕಂಚುಕ ೧: ಮನದೊಳಗೊಸಗೆಯಂ ಶರೀರದೊಳೆತ್ತಂ ರೋಮಾಂಚಕಂಚುವಂ[ಪಾ ಠಾಂ. ಕಂ] ಮದಿರಾಮದವಾಗಿಸೆ ತೆಗಬ್ಬ ನಾಕೆಯ ನುಡಿಯೊಳ್ (ಕವಿರಾ. ೩–೯). [< ಸಂ. ಕಂಚುಕ]

**ಕಂಚುಕ** (ನಾ). ೧. ಕುಪ್ಪಸ; ರವಕೆ : ಪೊಸನೇತ್ರದ ಚಂಚತ್ಕಂಚುಕಮನಿಳಾವಿಳಸತ್ಕಾಮಿನಿ ತೊಟ್ಟ ಪೋಲ್ವೆಯಂ ಪುಟ್ಟಿಸುಗುಂ (ಶಾಂತಿಪು. ೧–೬೦); ಪೊಸಸೀರೆಯಂ ನಿಱಿವಿಡಿದುಟ್ಟು ಕಂಚುಕಮಂ ಬಿಗಿದು (ರಾಮಾಶ್ವ. ೧೨೪–೩). ೨. ಉದ್ದವಾದ ನಿಲುವಂಗಿ : ಮುಸುಕಿದ ಮೆಯ್ಯಿಂ ಗುಲ್ಫಾವಸಕ್ತಮೆನಿಸಿರ್ದ ರಕ್ತನವಕಂಚುಕದಿಂ (ಕಾದಂಪೂ. ೩೯); ಲಂಬಕೂರ್ಚಕಲಾಪಂ ಸಿತಕಂಚುಕಂ ತ್ವರಿತದಿಂ ಬಂದಂ ಪ್ರತೀಹಾರಕಂ (ಪಂರಾಮಾ. ೨–೨); ಅವನ ಚರ್ಮದ ಕಂಚುಕವನ್ನು ತೆಗೆಯಿಸಿ, ಒಳಗೋಣೆಗೆ ಹೋದನು (ಪುನರು. ೫೧೦). ೩. ಹಾವಿನ ಪರೆ; ನಿರ್ಮೋಕ. 'ಕಂಚುಕಗಳೆ' ಪರಾ. [ಸಂ.]

**ಕಂಚುಕಗಳೆ** (ಕ್ರಿ). ಪರೆ ಬಿಚ್ಚು; ಪರೆಯನ್ನು ಕಳೆದುಕೊಳ್ಳು: ಬಳಿಕಲೇವೊಗಳುವೆನು ಕಂಚುಕಗಳೆದ ಕಾಳೋರಗನ ಖಾತಿಯ ಕಳಕಳಕೆ ಮಿಗಲುಗಿದನೊಱೆಯಿಂದುಗ್ರಖಂಡೆಯವ (ತೊರರಾ. ೩–೬–೪೧).
[ಕಂಚುಕ + ಕಳೆ$_1$]

**ಕಂಚುಕದಳೆ** (ಕ್ರಿ). ಕವಚವನ್ನು ತೊಡು : ತರಿಸಿದ ಬಾಣ ತೂಣೀರ ಕಾರ್ಮುಕವ ಸೇವರಿಸಿದ ಕಂಚುಕದಳೆದ ಧರಿಸಿದ ಶಂಖಚಕ್ರವನಾಕ್ಷಣದಲ್ಲಿ ಸ್ಮರಿಸಿದ ವಿಹಗೇಶ್ವರನ (ಮೋಹತ. ೩೬–೨೮).
[ಕಂಚುಕ + ತಳೆ$_1$]

**ಕಂಚುಕದೋಷ** (ನಾ). ಕಂಚುಕ ಎಂಬ ರೋಗ (?): ರಸಮಹಾತ್ಮ್ಯವ ಕೇಳಿ ಪಡೆಯಲಾ ಲವಲವಿಕೆಯಲಾ ಕಂಚುಕದೋಷವ ಹಸನಾದೌಷಧದಿಂ ಕಳೆಯದೆ ತದ್ರಸ ಸಂಸ್ಕಾರವಿಶುದ್ಧಿಗೆ ಬೀಜವೆನಿಸುವ ಶುಭಪ್ರಭೆಯಂ ಕಾಣದೆ (ಭಕ್ತಿಸ. ೪–೯೨). [ಕಂಚುಕ ? + ದೋಷ]

**ಕಂಚುಕಾಂಗ** (ನಾ). ಒಂದು ಬಗೆಯ ಕಂಚುಕ: "ಬಳಸು-ಭ್ರಮಣ, ಕಂಚುಕಾಂಗಯೋಃ (ಯುದ್ಧಕವಚ)" (ಶಮಧಾ).
[ಕಂಚುಕ+ ಅಂಗ$_2$]

**ಕಂಚುಕಿ$_1$** (ನಾ). ಗುಳ್ಳೆ; ಬೊಬ್ಬೆ: ಕೆಱಕು ತುಱಿಗ (ಖ) ಜ್ಜಿ ಕಂಚುಕಿ ಕುರುವಂಬಳು (ಅಶ್ವಶಾ. ೧೨–೧). [< ಕಂಚಿಕೆ]

**ಕಂಚುಕಿ$_2$** (ಗು). ೧. ಕಂಚುಕವನ್ನು ತೊಟ್ಟುಕೊಂಡ. (ನಾ). ೨. ಅಂತಃಪುರದ ಅಧಿಕಾರಿ; ರಾಣಿವಾಸದ ಪಾರುಪತ್ಯಗಾರ: ಧವಳ ಕಂಚುಕಾವಚ್ಛನ್ನ ವೃದ್ಧಕಂಚುಕೀಜನ ಪರಿವೃತೆಯುಂ (ಅಜಿಪು. ೩–೧೩ ವ); ವೃದ್ಧಕಂಚುಕಿ ಸಹಿತಂ ಪುರಪುರಂಧ್ರಿಯರುಂ . . . ನಿಂದು (ಪುಷ್ಪಪು. ೮–೬೨ ವ); ಅಭಿನವ ರವದ ಕಂಚುಕಿಗಳ ಘಡಾವಣೆಗಳಲಿ ರಾಜಾವಳಿ ಶಿರೋಮಣಿ ಹೊಕ್ಕನನುಪಮ ರಾಜಮಂದಿರವ (ತೊರರಾ. ೧–೭–೬೨); ಮುದಿಕಂಚುಕಿಯೊಬ್ಬನು . . . ಮುಂದೆ ಮುಂದೆ ಹೋದನು (ಸವತಿ. ೭೨). ೩. ದ್ವಾರಪಾಲಕ. ೪. ಹಾವು; ಸರ್ಪ. ೫. ಕುಪ್ಪಸ: ಮಡದಿಯರಿಗೆ ನಾನು ತೊಡಿಸುವೆ ಕಂಚುಕಿಯ ವುಡಿಸುವೆ ಪೀತಾಂಬರವ (ಹಮಚ. ೧೦೩). [< ಸಂ. ಕಂಚುಕಿನ್]

**ಕಂಚುಕಿತ** (ಗು). ೧. ಕಂಚುಕವನ್ನು ತೊಟ್ಟುಕೊಂಡ: ರೋಮಾಂಚ ಕಂಚುಕಿತಾಂಗ ಸಂಗದಲಿ (ಬಸಪು. ೨–೨೨); ವಿಶ್ವದ ಚರಾಚರಂ ರೋಮಾಂಚ ಕಂಚುಕಿತಗಾತ್ರಮಪ್ಪಂತೆ (ಶ್ರೀರಾಮಾ. ೮೪–೧೬೬). ೨. (ಆಲಂ) ಆವರಿಸಿಕೊಂಡ: ಚತುರವಚನ ರಚನಾ ಪ್ರಪಂಚ ಕಂಚುಕಿತ ರೋಮಾಂಚ ಚುಂಚುಸಭಾಜನ ಶರೀರನುಮಪ್ಪ ದೂತಮುಖ್ಯನ ನಟ್ಟೆ (ಶಾಂತಿಪು. ೨–೫೧ ವ). [ಸಂ.]

**ಕಂಚುಕೀಂದ್ರ** (ನಾ). ಹಾವುಗಳ ರಾಜ; ಆದಿಶೇಷ : ಗರುಡ ಚಂಚುವಂ ಕಂಡ ಕಂಚುಕೀಂದ್ರನಂತೆಯುಂ ಭಯಂಗೊಂಡು (ಪುಷ್ಪಪು. ೧೩–೨೬ ವ). [ಕಂಚುಕಿ$_2$ + ಇಂದ್ರ]

**ಕಂಚುಕೆ** (ನಾ). = ಕಂಚುಕ ೧ : ಅವರವರ ದಿವ್ಯದುಕೂಲ ಕಂಚುಕೆಗಳನು ಸವಿನಯದಿ ನಿರಿಯ ಪಸರಿಸಿಯುಟ್ಟು (ನವಮೋ. ೧೦–೬೬).
[ಸಂ. ಕಂಚುಕ]

**ಕಂಚುಗನ್ನಡಿ** (ನಾ). ಕಂಚಿನ ಕನ್ನಡಿ : ಕುಂಚದ ಕಂಚುಗನ್ನಡಿಯ ಬಿಜ್ಜಣಿಗೆಯ ದೇವಾಂಗನೆಯರ ಗೊಂದಣಂ (ರಾಮಾಶ್ವ. ೬೬–೨೯).
[ಕಂಚು$_1$ + ಕನ್ನಡಿ$_1$]

**ಕಂಚುಗರ್ಚು** (ಕ್ರಿ). (ಕಂಚಿನ) ತಟ್ಟೆ ಹಾಗೂ ಪಾತ್ರೆಗಳನ್ನು ತೊಳೆ: ಎಸರನಿಡುವಕ್ಕಿಗರ್ಚುವ ಬೆಸನಂ ಕೆಯ್ಗೆಱಿವ ಕಂಚುಗರ್ಚುವ ಬೆಸನಂ ಬೆಸನಲ್ಲದೆ ಮತ್ಸ್ಯನ ಬಾಣಸಿಗಂ ಗಾರಿತ್ತರೆಲವೊ ನಿನಗೀ ಬೆಸನಂ (ಗದಾಯು. ೬-೩೭). [ಕಂಚು$_1$ + ಕರ್ಚು$_2$ (< ಕಚ್ಚು)]

**ಕಂಚುಗಾರ** 'ಕಂಚುಗಾಱ' ನೋ.

**ಕಂಚುಗಾರಗತ್ತಿ** (ನಾ). ಒಂದು ಬಗೆಯ ಕತ್ತಿಯ ವರಸೆ,—ಭಂಗಿ: ಪಾದಗಳ ತುದಿಗಳಿಂದ ನಿಂತು ದೇಹದ ಯಡಬಲದಲ್ಲಿ ತಿರಿಗಿಸುವದೂ ಯಿದು ಕಂಚುಗಾರಗತ್ತಿಯೆಂದೂ ಸಮ್ಮತವೂ (ಖಡ್ಗಟೀ. ೪-೪೨). [ಕಂಚುಗಾರ$_0$ + ಕತ್ತಿ]

**ಕಂಚುಗಾಱ**, ಕಂಚಗಾಱ, ಕಂಚುಗಾರ (ನಾ). ಕಂಚು, ಹಿತ್ತಾಳೆ ಮೊದಲಾದ ಲೋಹದ ಕೆಲಸ ಮಾಡುವವನು: "ಲೋಹಕಾರ ನೆನಲ್ ಕಂಚು [ಪಾಠಾಂ. ಚ]ಗಾಱನದಕ್ಕು" (ಮಂಗರಾ. ೧೧೧-೧); [... ಕಂಚುಗಾಱರ್ ಮಿಂಚುಗಂಡ ಶಿಶುವಿನಂತಂಜಿ] (ಧರ್ಮಾಮೃ. ೨-೬೯); ನಿರ್ಮಳ ಪಾತ್ರೋತ್ಕರದಿಂದಂ ತೊಳತೊಳಗುತ್ತಿರ್ಪ ಕಂಚುಗಾಱರ ಪಸರಂ (ಗಿರಿಕ. ೨-೯೨); ತಾವರೆಗಳೆಲೆಯನಾಂತ ಕೊಳಂಗಳ್ ಪಸರಿಸಿದ ಕಂಚುಗಾಱರ ಪಸರದವೊಲ್ ನಾಡೆ ತೋರ್ಪುವು (ಕಬ್ಬಿಕಾ. ೧೦೫); ಕಂಚುಗಾಱರ ಬಿಡಾರದಂದದಲಿ ಕಂಚು ಹಿತ್ತಾಳೆ ಪ್ರತಿಮೆಗಳ ನೆರಹಿ (ಪುರಂದ. ೨-೨೫-೨); ಕಮ್ಮಱ ನುಡಿಗ ಕುಂಬಱ ಕಂಚುಗಾಱರ ಕೇರಿ ಮೆಱೆದಿಹವು (ಸಾಳ್ವಭಾ. ೨-೮); ಪಂಚಾರತಿ ಗಂಟೆಗಳಿಂದೆ ಮೆಱೆದುವು ಕಂಚುಗಾಱರ ಪಸರಗಳು (ಕಂನವಿ. ೬-೬೯). **ಕಂಚಗಾಱ**: ಕಜ್ಜಗಾಱ ನೇಡಿಗೆ ಮನೆ ವೀಡಿಲ್ಲಾದದು (ಎಇ. XIV, ೧೯೧-೨೫; 725); ಅಣಿಯರ ಮೆಸೆದೊಪ್ಪಿರ್ಪುವು ಮಣಿಗಾಱರ ಕಂಚಗಾಱರೊಱೆಗಾಱರ ತಿಂತಿಣಿ ಯೆನಿಪ ಮಾಲೆಗಾಱರ ಗಣನಾತೀತಂಗಳಾಪಣಂಗಳೆ ಪೊೞಲೊಳ್ (ಕಾವ್ಯಾವ. ೩೨೮); ಕಂಚಗಾಱ ಬಸವೋಜ ಕಂಡರಿಸಿದಂ (ಎಕ. VII, ಶಿವಮೊ. ೫೫-೬೩; 1167); ಕಂಚಗಾಱರು ಕೈದುಗಾಱರು ಹೊಳೆವ ಹೊಮ್ಮಂಚಗಾಱರು ಶಿಲ್ಪಿಗರು (ಮೋಹತ. ೩-೨೨). **ಕಂಚುಗಾರ**: ವಿವಿಧ ಉದ್ಯೋಗಗಳನ್ನು ಕೈಕೊಂಡ 'ಪಾಂಚಾಳ'ರು ಇರುವರು. ಇವರಲ್ಲಿ ಕೆಲವರು ಕಂಚುಗಾರರಾಗಿರುವರು (ಕರ್ನಾಜ. ೯೩). [ಕಂಚು$_1$ + -ಗಾಱ (< -ಕಾಱ)]

**ಕಂಚುಗಾಱಗೇರಿ** (ನಾ). ಕಂಚುಗಾರರ ಓಣಿ,—ಬೀದಿ: ಪುಲಿಯಂ ಕಂಡ ಪುಲ್ಲೆಯ ಪಿಂಡಿನಂತೆ ಕಂಚುಗಾಱರ್ ಭಯದಿಂ ಮನೆಯಂ ಬಿಟ್ಟು ಪೋಗೆ ಕಂಚುಗಾಱಗೇರಿಯಂ ಪೊಕ್ಕು (ಧರ್ಮಾಮೃ. ೨-೨೫). [ಕಂಚುಗಾಱ + ಕೇರಿ]

**ಕಂಚುಗುಳಿ** (ನಾ). ಕಂಚಿನ ಬಟ್ಟಲಿನ ಗುಳಿ: ಕಂಚುಗುಳಿಯಂತೆ ಹೊಳೆಗಣ್ಣಿದೆ (ಕಂಕ. ೮೦-೧೧). [ಕಂಚು$_1$ + ಕುಳಿ$_2$ (< ಕುೞಿ$_2$)]

**ಕಂಚುಗೊರಲ್** (ನಾ). ಕಂಚಿನಂತೆ ನುಡಿಯುವ ಕಂಠ; ಸ್ಪಷ್ಟ ಹಾಗೂ ಮಧುರವಾಗಿ ನುಡಿಯುವ ಧ್ವನಿ: ಭಕ್ತಿಗೆ ಕೃತಜ್ಞತೆಗೆ ಕಂಚುಗೊರಳಂ ಕೊಟ್ಟನಿಂತು (ಶ್ರೀರಾಮಾ. ೩೯೨-೮೯). [ಕಂಚು$_1$ + ಕೊರಲ್ (< ಕೊರಲ್)]

**ಕಂಚುತನ** (ನಾ). ಕಂಚಿನ ಗುಣ; ಕಂಚಿನಂತೆ ನಾದ ಹೊರಡಿಸುವ ಗುಣ: ತಮ್ಮ ಶಾರೀರದ ಕಂಚುತನವನ್ನೂ ಸೂಕ್ಷ್ಮತೆಯನ್ನೂ ಉಳಿಸಿಕೊಳ್ಳಲು ಮಹಾವೈದ್ಯನಾಥಅಯ್ಯರ್‌ರವರು ಬಹಳ ಎಚ್ಚರವಹಿಸುತ್ತಿದ್ದರು (ಸಂಗೀತ. ೪). [ಕಂಚು$_1$ + -ತನ]

**ಕಂಚುಪ್ರಾಂತಿ** (ನಾ). ಒಂದು ಬಗೆಯ ಸಸ್ಯ: ಕಂಚುಪ್ರಾಂತಿ, ಚಂದಕಲ, ಬಟ್ಟಚೆಂದ್ರಿಕೆ, ಉಪ್ಲಿಗೆ (ಮೈಔಗಿ. ೫೧-೧೦೩೩). [?]

**ಕಂಚುಮಿಂಚಾಗು** (ಕ್ರಿ). ಮಿಂಚಿನಂತೆ ಹೊಳೆದು ಮಾಯವಾಗು: ಇಂತಿವೆಲ್ಲವೂ ಸಂಚಾರದ ಸಂದೇಹ ಇವಱಲ್ಲಿ ಕಂಚುಮಿಂಚಾಗದೆ ಮುಂಚು ಬೇಗ (ಸಗಮಾ. ೧೬); ಹಿಂಚುಮಿಂಚಿನ ಸವಿ ತೂಗಿ ಕಂಚುಮಿಂಚಾಗಿ ರಾಗಿಸಿದರು ಮೈಗೆ ರೋಮಾಂಚನ ಜುಮ್ಮನೇಳ್ವಂತೆ (ಭರತೇ. ೧೩-೩೧); ಸಂಚಿಯವನಂ ಪೊಂಚಿ ಸದೆದು ಕಂಚುಮಿಂಚಾದರ್ (ಚಕವಂ. ೪೫-೨೦); ಈ ಪರಿಯಿಂ ಕಂಚುಮಿಂಚಾಗಿ ನುಡಿದಂಗದನ ಪೊಂಗದ ನುಡಿಗಳನಾಲಿಸಿ (ರಾಮಾಶ್ವ. ೧೪೨-೨೧). [ಕಂಚು$_1$ + ಮಿಂಚು$_1$ + ಆಗು$_1$]

**ಕಂಚುರಳಿ** (ನಾ). ಕಂಚಿನಿಂದ ಮಾಡಿದ ಗುಂಡನೆಯ ಪಾತ್ರೆ (ಶ). [ಕಂಚು$_1$ + ಉರಳಿ (< ಉರುಳಿ$_1$)]

**ಕಂಚುವಡಿಗ** (ನಾ). ಕಂಚು, ಹಿತ್ತಾಳೆ ಮೊದಲಾದ ಲೋಹದ ಕೆಲಸಮಾಡುವವನು: "ಮಾಲೆಯಿಂ ಜೀವಿಸುವಂ, ಮಾಲೆವಡಿಗಂ. ಏವಂ ಕಂಚುವಡಿಗಂ, ಪಱೆವಡಿಗಂ, ಪೂವಡಿಗಂ" (ಶಬ್ದಾನು. ೪೧೬ ಪ್ರಯೋ); ಮಡಿವಾಳ ಮಾಲೆವೂಗಾಱ ಕುಂಬಾಱ ಕಂಚುವಡಿಗ ಕಮ್ಮಱ ವಟ್ಟಗರಾ (ಶ್ರೀಪಾಲ. ೧-೬೫). [ಕಂಚು$_1$ + -ವಡಿಗ]

**ಕಂಚುವಱೆ** (ನಾ). ಕಂಚಿನ ತಮಟೆ; ಕಂಚಿನವಾದ್ಯ: ಮುಟ್ಟುಪಡಂ ಬೆರಸಿರ್ಪೊಡಂ ಪೊಲೆಯರ ದನಿಯಪ್ಪೊಡಂ ಕೇಳದಂತು ಕಂಚುವಱೆವರಸು ಲೇಸುನುಡಿ ಲೇಸುನುಡಿಯೆಂಬ ಮಹಿಮೆಯಿಂದುಣ್ಬರ್ (ಧರ್ಮಾಮೃ. ೯-೧೧೧). [ಕಂಚು$_1$ + ಪಱೆ$_1$]

**ಕಂಚುವಾಳ**, ಕಂಚವಾಳ, ಕಂಚಾಲ, ಕಂಚಾಳ, ಕಂಚಿವಾಳ (ನಾ). ಒಂದು ಜಾತಿಯ ಮರ: ತಾರೆಮರವು ನೀಲೀಮರ ಕಂಚುವಾಳದ ಮರ ಯಾ ಮರಗಳು ಭಯಂಕರಗಳಾದ್ದರಿಂದ ಉದ್ಯಾನಗಳಲ್ಲಿ ಹಾಕಬಾರದು (ಸೌಗಂಧಿ. ೪೨೭-೧೧); ಅರಳಿದ ಕಂಚುವಾಳದ ಹೂಗಳಿಂದ ನಗರ ಪ್ರಾಂತದ ವನಸ್ಥಳಿಗಳು ಹೊಳೆಯುತ್ತಿದ್ದುವು (ಬಾಣಕ. ೬೯). **ಕಂಚವಾಳ**: "ಮಹಾಪುಷ್ಪ – ಕಂಚವಾಳ" (ಓಷಧಿ. ೧೧೬); ತಲೆಯಂ ಕಟ್ಟಿರೆ ಕಂಚವಾಳ ಮರದೊಳ್, ಶೂದ್ರೀಕ ವೀರಾಖ್ಯನಂ (ಸೋಮೇಶ. ೪೨). **ಕಂಚಾಲ**: ಕಂಚಾಲ ಕಡವದ ಕಕ್ಕೆ ತಂಡಸಲೊಕ್ಕಿ ಮಿಂಚುಳ್ಳತೇಗು ಚಂದನವು (ದೇವಾಂಪು. ೬-೨೯೧); ಕಣ್ಣೆ ಸೊಕಮ ನಿತ್ತುದು ವನಂ ಯರಯಲವ ಕಂಚಾಲ ಬಕುಳ ನವಿಲಾದಿ ಯರಟಾಳದಿಂಡಂ ಹೊನ್ನೆ (ಪ್ರಭುಪು. ೩-೧೫೫). **ಕಂಚಾಳ**: "ಕೋವಿದಾರಃ, ಚಮರಿಕಃ, ಕುದ್ದಾಲಃ, ಯುಗಪತ್ರಕಃ ಈ ೪ ಕಂಚಾಳದ ಮರ" (ನಾಚಿರಾ. ೧೧೬); ವೇಗದಿಂ ಕಂಪಿಸುತ್ತಿದೆ ಕಂಚಾಳದ ಕೇತನಂ ವಿಷಮ ಭೂಭಾಗೋಪಘಾತಂಗಳಿಂ (ಉರಾಚ. ೮೪). **ಕಂಚಿವಾಳ**: ಕಾರಾಚ ಕಗ್ಗಲಿ ಕಂಚಿವಾಳದ ಮರ ಸೂರಮಾರ್ಗವ ತಡೆದಿಹುವು (ಕಂನವಿ. ೧೮-೩೭). [< ಸಂ. ಕಂಚೂಲ ?]

**ಕಂಚುಳಿಕ** (ನಾ). ಅಂತಃಪುರದ ಅಧಿಕಾರಿ; ರಾಣಿವಾಸದ ಪಾರುಪತ್ಯಗಾರ: ಬರುವನಿಲ್ಲಿಗೆ ಬಿಡನರಮನೆಗೋಡೆಂದು ಇರದೆ ಪೇಳದ ಕಂಚುಳಿಕನು (ಅಮುಸಾಂ. ೬-೭೩). [?]

**ಕಂಚುಳಿಕೆ** (ನಾ). ೧. ಕುಪ್ಪಸ; ರವಕೆ: ತೊಟ್ಟಿರ್ದ ಧರಾತಳಮೆಂಬ ಪೆಣ್ಣ ಪೊಸ ಕಂಚುಳಿಕೆಯ ಸಿರಿಮೂರ್ತಿನಂದದಮಾದುವು ಪನಿಗಳ್ (ಕಾವ್ಯಸಾ. ೬೯೪ ಶೂದ್ರಕ); ಅಬ್ಬಿ ನೀರದಳದಳವಟ್ಟೆ ಕಂಚುಳಿಕೆ ಕೆಂದಳಿರ್ಗೊಂಚಲ ಚಲ್ಲಣಂ ಪ್ರವಾಳಲತೆಯ ಬಾಲಗಚ್ಚೆ ಬಲಕಿಕ್ಕಿದ ಚಂಪಕ ಮಾಲೆ ಶೋಭೆಯಿಂ ಬಳೆಯಿಸೆ (ಲೀಲಾವ. ೧೧-೬೪). **೨.** ಅಂಗಿ: ಕಿರ್ಗಟ್ಟಿನ ಸುರೆಗಿಯ ಕಟ್ಟಿದ ಚಿಂದರಿಯ ತೊಟ್ಟ ಕಂಚುಳಿಕೆಯ (ಗಿರಿಕ. ೬-೫೫ ವ); ನಿದ್ರೆಗೈದಿಂದು ಹಾಸನ ಕಂಚುಳಿಕೆಯಲಿರ್ದ ಪತ್ರವ ನೋಡಿಕೊಂಡು ತಿರ್ದಿ (ಚಂದ್ರಹಾ. ೩-೧). [ಸಂ. ಕಂಚುಲಿಕಾ]

**ಕಂಚೆಯರಸ** (ನಾ). ಒಬ್ಬಾತನ ಹೆಸರು: ಕಂಚಿಯರಸರಾಳು ಅಯ್ಚಯ್ಯ (ಎಕ. XII, ಪುದ್ದಗಿ. ೪೦–೨ ; 950).
[< ಕಂಚ್ಚ + ಅಯ್ಯ$_1$ (< ಅಯ್ಯ$_{11}$) + ಅರಸ$_1$]

**ಕಂಚೋಲೆ** (ನಾ). ಕಂಚಿನಿಂದ ಮಾಡಿದ ಓಲೆ: ಮುಗಿಲ ಪೂವಂ ಸೂಡುವಳ್ ತಾರೆಯಂ ತಿಱಿವಳ್ ಮುತ್ತುಗಳಿಂದು ಚಂದ್ರರವಿಯಂ ಕಂಚೋಲೆಯೆಂದಿಕ್ಕುವಳ್ ನಿಜಿಯಿಂ ಸುತ್ತುವಳೀಯುವಾರ್ಥಿಜಯಮಂ ಶ್ರೀಕೀರ್ತಿ ರೇಚಾಂಕನಾ (ಕಾವ್ಯಸಾ. ೨೨೪). 'ಕಲ್ಲೋಲೆ' ಪರಾ.
[ಕಂಚು$_1$ + ಓಲೆ]

**ಕಂಜ** (ನಾ). ೧. ನೀರಿನಲ್ಲಿ ಹುಟ್ಟಿದ್ದು; ತಾವರೆ; ಕಮಲ: ಇದೆಱೊಳ್ ತೋಱಿತ್ತು ಕೊಳಂ ಪರಿವಿಕಸಿತ ಕನಕಕಂಜಕಿಂಜಲ್ಕ ಪುಂಜ ಪಿಂಜರಿತ ಜಳಂ (ಪಂಪಭಾ. ೮–೩೮); ದಿನಪನ ಕೆಯ್ಯು ಕಂಜ ದೊಡವುಟ್ಟಿದ ತಾವರೆ ಕಾಮಚಾಪದಿಂ ಜನಿಯಿಸಿದಿಕ್ಕು ಚಂದ್ರನಮರ್ದಿಂ ಮಡುಗೊಂಡ ಕೊಳಂ (ಪುಷ್ಪಪು. ೨–೩೭); ಕಂಜ ಕುಮುದಂಗಳಿಲ್ಲದ ಸರಂ ಸರದಿಂದೆ ರಂಜಿಸದ ಶುಕಪಿಕಂ . . . ಇಲ್ಲವಾ ನಾಡೊಳು (ಚಿಬಪು. ೧೧–೫). ೨. ಬ್ರಹ್ಮ. [ಸಂ.]

**ಕಂಜಗರ್ಭ** (ನಾ). ಕಮಲವನ್ನು ಹೊಕ್ಕುಳಲ್ಲಿ ಉಳ್ಳವನು; ಪದ್ಮನಾಭ; ವಿಷ್ಣು (ಕಿ). [ಕಂಜ + ಗರ್ಭ]

**ಕಂಜಜ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ.
ಕಂಜಜನಯ್ಯ = ಬ್ರಹ್ಮನ ತಂದೆ; ವಿಷ್ಣು: ಖಗಪತಿಗಮನ ಕಂಜಜನಯ್ಯ ರಕ್ಷಿಸು ನಮ್ಮನನವರತ (ಹಭಸಾ. ೪). [ಸಂ.]

**ಕಂಜಜಾತ** (ನಾ). = ಕಂಜಜ (ಕಿ). [ಸಂ.]

**ಕಂಜಜೋದ್ಭವ** (ನಾ). = ಕಂಜಜ (ಕಿ). [ಕಂಜಜ + ಉದ್ಭವ]

**ಕಂಜನಾಭ** (ನಾ). ಕಮಲವನ್ನು ಹೊಕ್ಕುಳಲ್ಲಿ ಉಳ್ಳವನು; ವಿಷ್ಣು.
[ಸಂ. (ಕಂಜ + ನಾಭಿ + –)]

**ಕಂಜನಾಭಿ** (ನಾ). ಕಮಲದ ಗರ್ಭ: ಕಂಜನಾಭಿಯಲ್ಲಿ ಕುಂಜರ ಬಂದು ಮಂದಿರದವರನೆಲ್ಲ ಕೊಂದಿತ್ತು (ಮಧುವ. ೨೨). [ಕಂಜ + ನಾಭಿ]

**ಕಂಜನಾಲ**, ಕಂಜನಾಳ (ನಾ). ತಾವರೆಯ ದಂಟು, —ದೇಟು (ಕಿ).
**ಕಂಜನಾಳ**: ಆ ಕೆಱೆಗೆ ತೂಬು ಬಿಸಿಲ ಸಂಭ್ರಮದ ಕಲ್ಲು ಕಂಜನಾಳದ ನೂಲಿನ ಕಂಭ (ವಚಸಂ. ೫೪೭–೧); ಕುಂಜರಂ ನಾ ನಿನ್ನ ಮಸ್ತಕ ಕಂಜನಾಳಕ್ಕೆನುತಢಸಿ ಬರೆ (ಬಸಪು. ೨೮–೨೫); ಕಂಜನಾಳದಿ ಕಟ್ಟುವಡೆವುದೆ ಕುಂಜರನು (ಕುವ್ಯಾಅ. ೬–೧೧). [ಕಂಜ + ನಾಲ$_1$]

**ಕಂಜನಾಳ** 'ಕಂಜನಾಲ' ನೋ.

**ಕಂಜನೇತ್ರ** (ನಾ). ಕಮಲದಂತೆ ಕಣ್ಣುಳ್ಳವನು; ಕಮಲಾಕ್ಷ; ವಿಷ್ಣು. [ಕಂಜ + ನೇತ್ರ]

**ಕಂಜನೇತ್ರೆ** (ನಾ). ಕಮಲದಂತೆ ಕಣ್ಣುಳ್ಳವಳು; ಕಮಲಾಕ್ಷಿ (ಕಿ).
[ಸಂ. ಕಂಜನೇತ್ರಾ (ಕಂಜ + ನೇತ್ರ + –)]

**ಕಂಜಪತ್ರ** (ನಾ). ಕಮಲದ ದಳ, —ಎಸಳು. 'ಕಂಜಪತ್ರಾಂಬಕೆ' ಪರಾ. [ಕಂಜ + ಪತ್ರ]

**ಕಂಜಪತ್ರಾಂಬಕೆ** (ನಾ). ಕಮಲದ ಎಸಳಿನಂತೆ ಕಣ್ಣುಳ್ಳವಳು: ಅಂಜುವೆಯೇತಕೆ ಕಂಜಪತ್ರಾಂಬಕೆ (ಶಾಕುಂತ. ೪೧ ಅಡಿಟ).
[ಸಂ. ಕಂಜಪತ್ರಾಂಬಕಾ (ಕಂಜಪತ್ರ + ಅಂಬಕ + –)]

**ಕಂಜಪ್ರಿಯ** (ನಾ). ಕಮಲಗಳಿಗೆ ಪ್ರಿಯನಾದವನು; ಸೂರ್ಯ: ಪಿಂಜರರುಚಿ ರಂಜಿಸಿದುದೆಂದು ಕಂಜಪ್ರಿಯನಾ (ಜಗವಿ. ೪–೬೨).
[ಕಂಜ + ಪ್ರಿಯ]

**ಕಂಜಬಾಣ** (ನಾ). ಕಮಲವನ್ನೇ ಬಾಣವನ್ನಾಗಿ ಉಳ್ಳವನು; ಕಾಮ (ಕಿ). [ಕಂಜ + ಬಾಣ]

**ಕಂಜಭವ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಆ ವಧು ಯೌವನೋದಯ ರಸಾಯನಸಿದ್ಧಿ ಮನೋವಿಮೋಹ ಸಂಭಾವನವಿದ್ಯೆ ಕಂಜಭವ ಕೌತುಕ ಸೃಷ್ಟಿ (ಚಂದ್ರಪು. ೩–೨೩); ರಂಜಕರು ನಾವಲ್ಲ ಜೂಜಿಗೆ ಕಂಜಭವ ತಾನು (ಕುವ್ಯಾಸ. ೧೬–೫೧). [ಸಂ.]

**ಕಂಜಮುಖಿ** (ನಾ). ಕಮಲದಂತೆ ಮುಖವುಳ್ಳವಳು; ಕಮಲಮುಖಿ: ಕಂಜಮುಖಿಯ ಕರತಲದಂಗುಲಿಯೊಳು ರಂಜಿಸಿದವು ಬೆಳ್ಳುಗುರ್ಗಳು (ತ್ರಿಭುತಿ. ೨೦–೫೫). [ಸಂ. ಕಂಜಮುಖೀ (ಕಂಜ + ಮುಖ + –)]

**ಕಂಜರ**$_1$ (ನಾ). ೧. ಸೂರ್ಯ. ೨. ಆನೆ. ೩. ಹೊಟ್ಟೆ. ೪. ಬ್ರಹ್ಮ. ೫. ನವಿಲು. ೬. ಮುನಿ. [ಸಂ.]

**ಕಂಜರ**$_2$, ಖಂಜೀರ (ನಾ). ಎರಡು ಸಲ ಬಾಗಿರುವ ಅಲಗುಳ್ಳ ಕಿರುಗತ್ತಿ; ಕಠಾರಿ: ಪಂಜಿನವರ ಬಗೆನೋಡಿ ರಾಜೇಂದ್ರ ಕಂಜರಕೆ ಕೈಯ ಹಾಕಿ (ಬಿಜ್ಜರಾ. ೬–೯). **ಖಂಜೀರ**: ಒಬ್ಬನು ಈ ಅಲ್ಲೀ ಆದಿಲ ಶಹನನ್ನು ಖಂಜೀರ ಚುಚ್ಚಿ ಕೊಂದುಹಾಕಿದನು (ವಿವರ್ಣ. ೩೫).
[← ಅರ. ಮರಾ. ಹಿಂ. ಖಂಜರ್]

**ಕಂಜರಜ** (ನಾ). ಕಮಲದ ಪರಾಗ; ತಾವರೆಯ ಬಂಡು: ಸಿರಿಯ ಹರಿಯಡೆಯೊಳಬ್ಧಿಯೊಳಿರದೇಳ್ವ ಸುವರ್ಣ ಕಂಜರಜದೊಡವೆರೆದೊಳ್ದರೆಗೆ ದೊರೆಯಾದುದು ವಧೂವರರೆಡೆಯೊಳ್ ಮಿಸುಪ ಮಿಸುನಿದೆರೆ (ರಾಜಶೇ. ೮–೬೦). [ಕಂಜ + ರಜ$_1$]

**ಕಂಜರಿ**, ಖಂಜರಿ (ನಾ). ಸಣ್ಣ ತಮಟೆಯಂಥ ಒಂದು ವಾದ್ಯ: ಹಯಾತ್ ಕೈಯಲ್ಲಿ ಕಂಜರಿ ಹಿಡಿದು ನಿಂತ ಅಂದರೆ ಸಾಕು; ಒಂದು ಕ್ಷಣದಲ್ಲಿ ಹಳ್ಳಿಯ ಜನ ಮೈದಾನದಲ್ಲಿ ಸೇರಿಬಿಡುತ್ತಿದ್ದರು (ಗೋಪುರ. ೩೮). **ಖಂಜರಿ**: ನಾಲ್ವರು ಮಕ್ಕಳೂ ತಾಳ ಮದ್ದಲೆ ಖಂಜರಿಗಳನ್ನು ಬಾರಿಸುತ್ತಾ ಹಿಂದಿರುತ್ತಿದ್ದರು (ಕಥವಿ. I, ೨೫೫); ಆ ಸಮಯಕ್ಕೆ ಸರಿಯಾಗಿ ಖಂಜರಿಯನ್ನು ಬಾರಿಸಿಕೊಂಡು ಒಬ್ಬ ಮನುಷ್ಯನು ಆ ಗಲ್ಲಿಯಲ್ಲಿಯೇ ಬಂದನು (ಪಿಶಾಪ. ೩೦).
[← ಮರಾ. ಖಂಜರೀ, ಖಂಜಿರೀ; ಹಿಂ. ಖಂಜರೀ]

**ಕಂಜರೀಟ** (ನಾ). ಗೀಜಗನ ಹಕ್ಕಿ (ಕಿ). [< ಸಂ. ಖಂಜರೀಟ]

**ಕಂಜಲೋಚನ** (ನಾ). ತಾವರೆಯಂತೆ ಕಣ್ಣುಳ್ಳವನು; ವಿಷ್ಣು (ಕಿ). [ಕಂಜ + ಲೋಚನ]

**ಕಂಜವೈರಿ** (ನಾ). ಕಮಲದ ಶತ್ರು; ಚಂದ್ರ: "ಕಂಜವೈರಿಯೊಳು ಮಾಸದೊಳು ತಿಂಗಳು ಸೀರೆ ಗಂಜುಗಳೊಳಂ ಜವಳಿ ಸಾಮಾನ್ಯ ಚಾಪಲಗಳುಂ ಜಾವಳವೆನಿಕ್ಕು" (ಶಬ್ದಮಂ. ೧೧೩). [ಕಂಜ + ವೈರಿ]

**ಕಂಜಶರ** (ನಾ). ಕಮಲವನ್ನೇ ಬಾಣವನ್ನಾಗಿ ಉಳ್ಳವನು; ಕಾಮ (ಕಿ). [ಕಂಜ + ಶರ]

**ಕಂಜಸಂಭವ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಕಂಜಸಂಭವ ಪಿತನು ಬಂದನು ನಂಜಿನಲಿ ಪವಡಿಸುವ ಬಂದನು (ಕುವ್ಯಾಉ. ೮–೫೧). [ಕಂಜ + ಸಂಭವ]

**ಕಂಜಸಖ** (ನಾ). ಕಮಲಗಳಿಗೆ ಪ್ರಿಯನಾದವನು; ಸೂರ್ಯ: ಮಂಜಿನ ಪುಂಜಮೊತ್ತರಿಸಿ ಮುತ್ತಿ ಮುಸುಂಕೆ ಭಯಾರ್ತಿಗೊಳ್ವನೇ ಕಂಜಸಖಂ (ಶಬಶಂ. ೪–೪೪). [ಕಂಜ + ಸಖ]

**ಕಂಜಸದ್ಮೆ** (ನಾ). ಕಮಲವನ್ನೇ ಮನೆಯಾಗಿ ಉಳ್ಳವಳು; ಲಕ್ಷ್ಮಿ (ಕಿ). [ಸಂ. ಕಂಜಸದ್ಮಾ ?]

**ಕಂಜಾಕರ** (ನಾ). ೧. ಕಮಲಗಳ ಸಮೂಹ. ೨. ಕಮಲಗಳಿಂದ ತುಂಬಿದ ಕೊಳ; ಕಮಲಾಕರ: ತರುಲತೆಗಳಿಱುಬಿನಲಿ ಕಂಜಾಕರದ ತಡಿಯಲಿ ನಿಂದು ಮೆಲ್ಲನೆ ಕರೆದು ಕೇಳಿಸಿ ಹೇಳಿದರು ತಂತಮ್ಮ ಹೆಸರುಗಳ (ಕುವ್ಯಾಗ. ೪–೩೦). [ಕಂಜ + ಆಕರ$_3$]

**ಕೆಂಜಾಕ್ಷ** (ನಾ). ತಾವರೆಯಂತೆ ಕಣ್ಣುಳ್ಳವನು; ವಿಷ್ಣು: ಕಂಜಾಕ್ಷನಂ ಪೂರ್ವಪುಣ್ಯದ ಪುಂಜಂ ನೆರೆದೆಯ್ದಿದಂತೆ ಬಲಗೊಂಡಾನಂದದಿಂ ದಕ್ಷಿಣಾಂಸದ ಮೇಗಿರ್ದುದು (ಶಾಂತಿಪು. ೪–೫೩).
[ಸಂ. (ಕಂಜ + ಅಕ್ಷಿ + –)]

**ಕೆಂಜಾತ** (ನಾ). ೧. ನೀರಿನಲ್ಲಿ ಹುಟ್ಟಿದ್ದು; ಕಮಲ. ೨. ತಲೆಗಳ ಗುಂಪು. ೧, ೨: ಮುಳಿಸಿಂದಿಸಲೊಡವಾಜುವ ಶಿಳೀಮುಖಂಗಳೆ ಶಿಳೀಮುಖಂ ಕಂಜಾತಂಗಳೆ ಕಂಜಾತಮೆನಲ್ ಪೂಗೊಳನಂ ಪೋಲ್ತುದು ನಭಂ ಧನುರ್ಧರಧುರದೊಳ್ (ಜಗವಿ. ೭–೫೫). [ಸಂ.]

**ಕೆಂಜಾತನಯನ** (ನಾ). = ಕಂಜಾಕ್ಷ: ಈ ತೆಜದಿ ಫಲುಗುಣನ ರೂಪ ದಶಾತಿಶಯ ಲಕ್ಷಣವನಾ ಕಂಜಾತನಯನನು ಪೇಳಲು (ತಿಮ್ಮಭ. ೭–೮೯). [ಕಂಜಾತ + ನಯನ]

**ಕೆಂಜಾತಪತ್ರ** (ನಾ). ಕಮಲದ ದಳ, —ಎಸಳು: ಇದು ತಾನಾಕೆ ಪೊರಳ್ದ ಪುಷ್ಪಶಯನಂ ಕಂದಿರ್ಪ ಕಂಜಾತಪತ್ರದೆ ಸೂಕ್ಷ್ಮಾಗ್ರ ನಖಂಗಳಿಂ ಬರೆದನಂಗಾಲೇಖನಂ (ಶಾಕುಂತ. ೪೩–೭೭).
[ಕಂಜಾತ + ಪತ್ರ]

**ಕೆಂಜಾತಪೀಠ** (ನಾ). ಕಮಲವನ್ನೇ ಪೀಠವಾಗಿ ಉಳ್ಳವನು; ಬ್ರಹ್ಮ: ಪ್ರೀತಿಯಲಿ ಕುಳ್ಳಿರ್ದರಾ ಕಂಜಾತಪೀಠನ ಸೂನು ಬಳಿಕಾದರದಲಿಂತೆಂದ (ತಿಮ್ಮಶ್ರ. ೩–೩). [ಕಂಜಾತ + ಪೀಠ]

**ಕೆಂಜಾತಸಂಜಾತ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಸುರಸ್ತ್ರೀಭಾಗ್ಯ ಸೌಭಾಗ್ಯ ಸಮ್ಮು[ದ]ಸೌಂ[ದ]ರ್ಯ್ಯಮನಾಯ್ದು ಶೀವಿಪದೆದಂ ಕಂಜಾತಸಂಜಾತನೀ ಸು[ದತೀ]ರತ್ನಮಂ (ಕಇಅ. ೮೧–೧೫–೭೦; 1117). [ಕಂಜಾತ + ಸಂಜಾತ]

**ಕೆಂಜಾಪ್ತ** (ನಾ). ಕಮಲಗಳಿಗೆ ಪ್ರಿಯನಾದವನು; ಸೂರ್ಯ: ಕಂಜಾಪ್ತ ನಿನ್ನನೀ ಮುಂಜಾನೆ ಹೊಗಳುವವು ಮುಂಜುಳಧ್ವನಿಯಿಂದ ವಿಹಗಂಗಳು (ಕಎಪು. ೨೬–೭). [ಕಂಜ + ಆಪ್ತ]

**ಕೆಂಜಾರಿ** (ನಾ). ಕಮಲದ ಶತ್ರು; ಚಂದ್ರ (ಕಿ).
[ಕಂಜ + ಅರಿ$_6$]

**ಕೆಂಜಾಲಯ** (ನಾ). ಕಮಲಕ್ಕೇ ಮನೆಯಾಗಿರುವುದು; ಕೊಳ.
**ಕೆಂಜಾಲಯಳ್** = ಕಮಲವನ್ನೇ ಮನೆಯಾಗಿ ಉಳ್ಳವಳು; ಲಕ್ಷ್ಮಿ: ಮುಂಜಕೇಶಿಯ ಸತ್ತ್ವಗುಣ ವೃತ್ತಮಾದುದೋ ಕಂಜಾಲಯಳ ಮುಕುರ ನಡೆಗಲ್ತುದೋ (ಏಕೋಪು. ೫–೭).
[ಕಂಜ + ಆಲಯ]

**ಕೆಂಜಾಸನ** (ನಾ). ತಾವರೆಯನ್ನೇ ಪೀಠವಾಗಿ ಉಳ್ಳವನು; ಬ್ರಹ್ಮ: ನಮಗೀಗೆ ಬೇಟ್ಟ ವರಮಂ ಶ್ರೀರಾಜ ಕಂಜಾಸನಂ (ಗದಾಯು. ೧–೩).
[ಕಂಜ + ಆಸನ]

**ಕೆಂಜಾಸ್ತ್ರ** (ನಾ). ಕಮಲವನ್ನೇ ಬಾಣವನ್ನಾಗಿ ಉಳ್ಳವನು; ಕಾಮ: ಲೀಲಾಕಮಲಂ ಕರಾಂಬುಜದಿನಾಗಳ್ ಸೂಸೆ ಕಂಜಾಸ್ತ್ರನಂ ನಗುವಂತೊಪ್ಪುವನಂ ಮೃಗಾಕ್ಷಿ ನಡೆನೋಡುತ್ತಿರ್ದಳಾ ಭೂಪನಂ (ರಾಜಶೇ. ೭–೨೧). [ಕಂಜ + ಅಸ್ತ್ರ]

**ಕೆಂಜಾಸ್ಯೆ** (ನಾ). ಕಮಲದಂತೆ ಮುಖವುಳ್ಳವಳು; ಕಮಲಮುಖಿ (ಕಿ). [ಸಂ. ಕಂಜಾಸ್ಯಾ (ಕಂಜ + ಅಸ್ಯ + –)]

**ಕೆಂಜಾಳಿ** (ನಾ). ಕಮಲಗಳ ಸಮೂಹ: ಇದೆ ಪರ್ವಿತ್ತು ಮತಂಗಜೋಚ್ಛಲಿತ ಕಂಜಾಳೀ ರಜಸ್ತೋಮಮಂ (ಕಾದಂಪೂ. ೧೫೪); ಮಂಜುಳದ ಕಂಜಾಳಿಗಳ ಕಡುಪರಿಮಳದ ಪಸರದ ಸೊಗಸು ತೀವಿತು ವಿಮಳ ಪದ್ಮಾಕರದ ಪವಮಾನ (ಕುವ್ಯಾಅ. ೨೩–೧೩).
[ಕಂಜ + ಅಳಿ$_4$ (= ಅಲಿ$_4$)]

**ಕೆಂಜೂಸ್**, ಕಂಜೂಷಿ (ನಾ). ಜಿಪುಣ; ಕೃಪಣ; ಲೋಭಿ: ಆ ಮನುಷ್ಯ ಮಹಾ ಕಂಜೂಷ್ (ಅಭಿಮಾ. ೪). **ಕೆಂಜೂಷಿ**: ಆದರೆ ಅವರು ಅಷ್ಟೆಲ್ಲ ಇದ್ದರೂ ಹದಿನಾರಾಣೆ ಕಂಜೂಷಿಗಳು (ಪಾನಕ. ೪೨).
[← ಮರಾ. ಕಂಜೂಸ್, ಕಂಜೂಷ್; ಹಿಂ. ಕಂಜೂಸ್]

**ಕೆಂಜೂಷಿ** 'ಕಂಜೂಸ್' ನೋ.

**ಕೆಂಜೇಕ್ಷಣೆ** (ನಾ). ಕಮಲದಂತೆ ಕಣ್ಣುಳ್ಳವಳು; ಕಮಲಾಕ್ಷಿ (ಕಿ).
[ಸಂ. ಕಂಜೇಕ್ಷಣಾ (ಕಂಜ + ಈಕ್ಷಣ + –)]

**ಕೆಂಜೊಡರ್** (ನಾ). (ಅಲಂ) ಕಣ್ಣಿನ ಹೊಳಪು: ಕಾಮಿನಿಯರ್ಗೆ ಕಂಜೊಡರೆನಸುಂ ತಾಜಿಕೆ (ರಾಮಾಶ್ವ. ೧೨೩–೫).
[ಕಂ (< ಕಣ್) + ಸೊಡರ್]

**ಕೆಂಜೋದಯ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ (ಕಿ).
[ಕಂಜ + ಉದಯ]

**ಕೆಂಜೋದರ** (ನಾ). ಕಮಲವನ್ನು ಹೊಕ್ಕುಳಲ್ಲಿ ಉಳ್ಳವನು; ಪದ್ಮನಾಭ; ವಿಷ್ಣು: ಏದೊರೆಯಂ ಕಂಜೋದರನ ಮೈದುನಂ (ಪಂಪಭಾ. ೭–೧೭). [ಕಂಜ + ಉದರ]

**ಕೆಂಜೋದ್ಭವ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಕಂಜೋದ್ಭವನ ಸರಸ್ವತಿಯ ಧವನ ಮಸ್ತಾಹಿತ ಕರತಳನ (ಉದ್ಭದೇ. ೧–೨೩). [ಕಂಜ + ಉದ್ಭವ]

**ಕಂಟ** (ನಾ). ೧. ತಾಳೆಯೋಲೆಯ ಮೇಲೆ ಅಕ್ಷರಗಳನ್ನು ಬರೆಯಲು ಬಳಸುವ ಉಕ್ಕಿನ ಲೇಖನಿ: "ಕಂಠ – ಕಂಟ; ಕಂಠಿಕಾ – ಕಂಟಿಕೆ" (ಶಮದ. ೨೫೫ ಪ್ರಯೋ); ಕಂಟಮೊನೆ ಬಾಳ್ಮೊನೆಯಾಗಿರೆ (ಅನಂಪು. ೨–೨೪); ಒಂದು ಕರದಿ ಪುಸ್ತಕಗಳಂ ಕೂಡೆ ಮತ್ತೊಂದು ಹಸ್ತದಿ ಕಂಟಮಂ ಪಿಡಿದು (ತುರಂಗ. ೭–೬); ಇದಕ್ಕೆ ಉಕ್ಕಿನ ಕಂಟವನ್ನೇ ಉಪಯೋಗಿಸಬೇಕಾಗಿತ್ತು (ಕನ್ನಸಂ. ೪೪); ದಂಟು ಮುರಿದರೆ ಕಂಟವಾದೀತೆ? (ಗಾದೆ). ೨. ಪಾತ್ರೆಗಳ ಮೇಲಂಚು, —ಕೊರಳು, —ಬಾಯಿ: ದಂಡಿಗಂಜುವ ಬಂಟ ಒಡೆದ ಹರವಿಯ ಕಂಟ (ಕನಕ. ೧೩೧–೪); ಅದರ ಬಾಯಿಗೆ ಒಂದು ಅರ್ಧ ಹರಿವೆಯ ಕಂಟವನ್ನು ಹಾಕಿ – ಆ ಕಂಟದ ಕೊಪ್ಪರಿಗೆಯೊಳಗೆ (ಕಭಾಗೆ. ೨೮). ೩. ಗದ್ದೆ ಅಥವಾ ಕೆರೆಯ ಅಂಚು (?)೪ ಗಡಿ ಮೂಡಲು ಕೆಜೆಯ ಕಂಟ (ಕಇ. I, ೪೧–೩೮; 1417); ಬಡಗಲು ಹರಿದ ಅವಳೆಯ ಕಂಟ್ಟದ ಮೇಲೆ ನಟ್ಟ ಕಲು ಗಡಿ (ಕಇ. III-i, ೯–೩೨; 1538). [< ಸಂ. ಕಂಠ]

**ಕಂಟಕ** (ನಾ). ೧. ಮುಳ್ಳು: ಕಮಳಕಾನನಕಂಟಕಲಗ್ನಪಾದನಾದ ಪೊಲುದುಗುತ್ತುಮಾತ್ಮಕರಮಂ ರವಿ ಪೊರ್ದಿದನಸ್ತಶೈಲಮಂ (ಪಂಪಭಾ. ೪–೪೬); ಕಂಟಕದೊಳ್ ಕೋದೆಳಮುತ್ತುಗಳೆನೆ ನಿಂದುವು ಜಡಬಿಂದುಗಳ್ (ಲೀಲಾವ. ೧೪–೧೪). ೨. (ಅಲಂ) ಉಪದ್ರವಕಾರಿ; ಶತ್ರು: ಕಂಟಕಕೋಟಿಯಂ ಕಡಿದು (ಶಾಪಮಂ. ೩೮–೨೦೭; 1112); ಕಂಟಕನಲಾ ಧರ್ಮಪ್ರಭಾವಕೆ ಕೌರವೇಶ್ವರನು (ಕುವ್ಯಾಗ. ೩–೨); ಎಂಟು ಕಂಟಕರಿಂಗೆ ನೆಂಟರುಗಳಯ್ವರಿಗೆ ಗಂಟಲಗಾಳನಾಗಿಪ್ಪ ಗುರು ನೀಲಕಂಠ ನಾಗಿಕ್ಕು (ಸರ್ವಜ್ಞ. ೭೦). ೩. ವಿಘ್ನ; ವಿಪತ್ತು: ಇಂದುಮೌಳಿಯ ಸೇವೆಗಿಂದು ಪುಳಿಂದ ಕಂಟಕನಾದನೇ (ಕುವ್ಯಾಅ. ೬–೧೮); ಪರದೈವ ಭಜನೆಗಳನಿಂದ್ರಿಯಾರ್ಥಂ ಮಾಳ್ಪ ನರರ್ಗೆ ಕಂಟಕಮಪ್ಪುದು (ಭಾವಚಿಂ. ೨–೨೮); ಕಂಟಕದ ಸಂಕಟವ ಕಳೆದು ಮೇಲೇರ್ದರೂ ತಟ್ಟಿದೊಡನೆಯೆ ತೆರೆವ ಕದವದಲ್ಲ (ಅನಿಕೇ. ೨–೯). ೪. ರೋಮಾಂಚನ; ಪುಳಕ; ಮೈ ನವಿರೇಳುವಿಕೆ: ಪುಳಕಕ್ಕೆ ಕಂಟಕವೆಸರಂ ಕೊಟ್ಟಜನ ಸುಜನತೆಗೆ ಬೆಜಗಪ್ಪೆಂ (ಚಂದ್ರಪು. ೮–೭೫); ನೆಗೆವಿನಂ ಕಂಟಕಂ ಚೂತಿಕಾಕೋಮಳೆಯಂ . . . ತಿಳಿಪಿದಂ ಪ್ರೇಮಕಾಂತಂ ವಸಂತಂ (ಅನಂಪು. ೬–೭೪).

೫. ಬೇಟೆಗಾರ; ಬೇಡ; ಲುಬ್ಧಕ. ೬. [ಜ್ಯೋತಿಷ] ಕುಂಡಲಿಯ ೧, ೪, ೭ ಮತ್ತು ೧೦ನೆಯ ಸ್ಥಾನ: ಉದಯ ದಶಾಸ್ತಮಯ ಚತುರ್ಥದೆಡೆಗೆ ಕೇಂದ್ರಂ ಚತುಷ್ಟಯಂ ಕಂಟಕಮೆಂಬುದು ಸಂಜ್ಞೆ (ಜಾತಕ. ೧–೩೬). ೭. ಒಂದು ಜಾತಿಯ ಗಿಡ: ಕಂಟಕ ನಾಳಿಕೇರ ಹಿಂತಾಳ (ಯಾದವ. ೧–೩೫). ೮. ಯುದ್ಧ; ಕಾಳಗ: "ಅರಾತಿ ಮುಳ್ಳಾಹವ ಕಿಲ್ಬಿಷಂ ಪುಳಕ ಲುಬ್ಧಕರಿಂತಿವು ಕಂಟಕಾಹ್ವಯಂ" (ನಾನಾರ. ೪೦). [ಸಂ.]

**ಕಂಟಕಂಬಡೆ** (ಕ್ರಿ). ೧. ಮುಳ್ಳುಗಳನ್ನು ಪಡೆದಿರು; ಮುಳ್ಳಿನಿಂದ ಕೂಡಿರು: 'ಪುಸಿಯುಸುರಿ ಸರ್ವೇಶಂಗೆ ಯೋಗ್ಯನಾಗತಿ ಕಂಟಕಂ ಬಡೆದು ನಾಣ್ಚದೆ ಯಿಳೆಯೊಳಿಹನು (ನವಮೋ. ೧೦–೪೦). ೨. (ಅಲಂ) ತೊಂದರೆಗೊಳಗಾಗು. ೧, ೨: ಮೂಡೆಗಟ್ಟಂ ಹುಡುಕುನೀರೊಳ್ ಮೆಟ್ಟಿ ಕಾಡುತಿಹ ಪಾಮರರ ಕೈವಿಡಿತೆಗೊಳಗಾಗಿ ನಾಡೆ ಪಂಕವ ಪೊಗುತ್ತ ದರ್ಯೊಡೆದು ಕಂಟಕಂಬಡೆದೆವಿನ್ನು . . . ಎಂದು ರಾಗಿಸಿ ಕಳಮೆಯ ಮಡಿಯ ಸಾಲ್ ಮೆಱೆದವು (ಭಾವಚಿಂ. ೩–೬). [ಕಂಟಕ + ಪಡೆ$_1$]

**ಕಂಟಕಚಕ್ರ** (ನಾ). ಹಲ್ಲುಗಳುಳ್ಳ ಚಕ್ರ; ಮುಳ್ಳುಗಳುಳ್ಳ ಚಕ್ರ: ದಂತುರಚಕ್ರ, ಅಂದರೆ ಹಲ್ಲುಗಳುಳ್ಳಂಥ ಚಕ್ರ, ಇದಕ್ಕೆ ಕಂಟಕಚಕ್ರ, ಅಂದರೆ ಮುಳ್ಳುಗಳುಳ್ಳಂಥ ಚಕ್ರವೆಂತಲೂ ಅನ್ನಬಹುದು (ಮುಂಬಯಿ. ೫–೧೯೧ ಅಡಿಟ). [ಕಂಟಕ + ಚಕ್ರ]

**ಕಂಟಕಛೇದ್ಯ** (ನಾ). ಮುಳ್ಳುಗಳನ್ನು ಕತ್ತರಿಸುವಿಕೆ: "ಚುರ್ಚುವತಿ ವಾಕ್ಯಮಂ ನುಡಿವಲ್ಲಿ ಮೂತ್ರಗಂಧದೊಳು ಕಂಟಕಛೇದ್ಯದೆಡೆಯಲ್ಲಿ ಕೊರ್ಚುವ" (ಶಬ್ದಮಂ. ೮೭). [ಕಂಟಕ + ಛೇದ್ಯ]

**ಕಂಟಕಟಿ** (ನಾ). ನಿಶ್ಚಿತ; ದೃಢ: ಎಷ್ಟೋ ಜನ ಪೋಲೀಸಿನವರೂ ಈತನನ್ನು ಹಿಡಿದು ಬಂದಿಯನ್ನಾಗಿ ಮಾಡಬೇಕೆಂದು ಕಂಟಕಟಿಯಾದ 'ಸಂಕಲ್ಪವನ್ನು ಮಾಡಿಕೊಂಡು . . . ಬಸವಳಿದು ಬಿದ್ದುಹೋಗಿರುವರು (ಚೆನ್ನಬೇ. ೫). [?]

**ಕಂಟಕದ್ವಾರ** (ನಾ). ಕಂಟಕ ಸಹಿತವಾದ ಬಾಗಿಲು; ದೊಡ್ಡ ದೊಡ್ಡ ಕಬ್ಬಿಣದ ಮೊಳೆಗಳು ಮುಂದೆ ಹಾಯ್ದಿರುವ ಬಾಗಿಲು: "ಕಂಟಕದ್ವಾರ – ಕಂಟಿಯಬಾರ" (ಶಮದ. ೨೯೬ ಪ್ರಯೋ). 'ಕಂಟಿಯ ದಾರ' ಪಠಾ. [ಕಂಟಕ + ದ್ವಾರ]

**ಕಂಟಕನಾಶ** (ನಾ). (ಅಲಂ) ೧. ವಿಘ್ನಗಳನ್ನೆಲ್ಲ ನಾಶಮಾಡಿದವನು. ೨. ಕಂಟಕದಿಂದ ಪಾರಾದವನು: ಎಂಟು ಬಂಟರು ಕಂಟಕನಾಶ [ಪಾಠಾಂ. ಕಂಠನಷ್ಟ]ವಾದರು (ಮೋಳಿಮಾ. ೨೩೦–೭೮೩). [ಕಂಟಕ + ನಾಶ]

**ಕಂಟಕಫಲ** (ನಾ). ೧. ಹಲಸಿನ ಮರ. ೨. ಗೋಕ್ಷುರದ ಗಿಡ. ೩. ಔಡಲ ಗಿಡ; ಹರಳಿನ ಗಿಡ. ೪. ದತ್ತೂರದ ಗಿಡ. [ಕಂಟಕ + ಫಲ]

**ಕಂಟಕಭವನ** (ನಾ). [ಜ್ಯೋತಿಷ] ಕೇಂದ್ರಸ್ಥಾನ: ನವಪಂಚಮದೊಳ್ ಕಂಟಕಭವನದೊಳಶುಭಗ್ರಹಂಗಳಿರೆ ಸೌಮ್ಯರ್ ವ್ಯೆರಿ ವಿನಾಶವ್ಯಯದೊಳ್ ನಿಲೆ ರವಿಯುದಯದೊಳಾಗೆ ಶಿಶುಗೆ ಸದ್ಯೋಮರಣಂ (ಜಾತಕ. ೬–೬). [ಕಂಟಕ + ಭವನ]

**ಕಂಟಕಭೂಪ** (ನಾ). (ಅಲಂ) ಶತ್ರುರಾಜ; ವೈರಿಯಾದ ಅರಸ: ಕಂಟಕಭೂಪರ ಕೋಂಟೆಯನಂಟೆ ಕರಂ ಕಾದಿ ಗೆಲ್ದು (ಹಮ್ಮೀರ. ೧–೬೦). [ಕಂಟಕ + ಭೂಪ]

**ಕಂಟಕರೂಪ** (ನಾ). (ಅಲಂ) ಮುಳ್ಳಿನಂತೆ ಇರುವವನು; ವಿಘ್ನಕಾರಿ; ಶತ್ರು: ಪರಮಾರ್ಥಮಾರ್ಗಕಂಟಕರೂಪರ್ ಧೀರರ್ . . . ನಡೆತಂದರ್ (ಹಮ್ಮೀರ. ೨–೧೦೦). [ಕಂಟಕ + ರೂಪ]

**ಕಂಟಕವಕ್ರಿಮ** (ನಾ). ೧. ಮುಳ್ಳಿನಂತೆ ಬಾಗಿರುವುದು. ೨. ಮುಳ್ಳಿನ ಡೊಂಕು, —ಮುರಿತ. ೩. (ಅಲಂ) (ಇತರರಿಗೆ) ತೊಂದರೆಯನ್ನುಂಟುಮಾಡುವ ಸ್ವಭಾವ. ೧, ೩: ಕಂಟಕವಕ್ರಿಮಂ ಬದರದೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಚಂದ್ರಪು. ೩–೯ ವ). [ಕಂಟಕ + ವಕ್ರಿಮ]

**ಕಂಟಕಸ್ಥಿತಿ** (ನಾ). ೧. ಮುಳ್ಳುಗಳಿಂದ ಕೂಡಿರುವಿಕೆ. ೨. (ಅಲಂ) ಬಾಧೆಕೊಡುವವನಾಗಿರುವಿಕೆ. ೧, ೨: ನೆಗಟ್ಟುದ್ದಂಡತೆ ಕಂಟಕಸ್ಥಿತಿ ಸರೋಜವ್ರಾತದೊಳ್ . . . ಪೀನಮೊಪ್ಪುಗುಮುರ್ವೀಶರೊಳೊಪ್ಪದೆಂದೆಣಿಸಿದಂ ತನ್ನೀಱ್ಗೆಯಿಂ ಪದ್ಮಜಂ (ಪುಷ್ಪಪು. ೫–೫೭). [ಕಂಟಕ + ಸ್ಥಿತಿ]

**ಕಂಟಕಾಂಕುರ** (ನಾ). (ಅಲಂ) ಮೈಮೇಲೆ ಮುಳ್ಳು ಬರುವಿಕೆ; ನವಿರೇಳುವಿಕೆ; ರೋಮಾಂಚನ: ಅತಿಪೀಡಿಸುಗುಂ ಸ್ಥಾನಚ್ಯುತನಾಗಿಯುಮುಖಿಳಮಂ ಖಳಂ ವೃತಿವೀರುತ್ಪತಿತಂ ಪಥಿಕರ ಪದತಳಹತಿಯಂ ಹತಕಂಟಕಾಂಕುರಂ ಮಾಡುವವೊಲ್ (ಲೀಲಾವ. ೧–೩೬). [ಕಂಟಕ + ಅಂಕುರ]

**ಕಂಟಕಾರಣ್ಯ** (ನಾ). ಮುಳ್ಳುಗಾಡು: ಸ್ವಾತಂತ್ರ್ಯದ ಕಂಟಕಾರಣ್ಯವೂ ಪಾರತಂತ್ರ್ಯದ ಸ್ವರ್ಣಪಂಜರಕ್ಕಿಂತ ಶತಶಃ ಶ್ರೇಷ್ಠವಾದುದೆಂಬ ಭಾವನೆಯು ಬಲಿಯತೊಡಗಿ (ಪ್ರಬಂಧ. ೬೭). [ಕಂಟಕ + ಅರಣ್ಯ]

**ಕಂಟಕಾರಿ** (ನಾ). ೧. ಗುಳ್ಳದ ಗಿಡ, —ಕಾಯಿ. ೨. ಪಾದರಕ್ಷೆ. ೧, ೨: ಓದಿದವ ತಾನೆಂದು ತನ್ನಯ ಪಾದರಕ್ಷೆಯನೌಷಧಕೆ ಸಂಪಾದಿಸುವನೀ ಕಂಟಕಾರಿಯನಱಿಯದವನೆಂದ (ನಿಭಾಗ. ೪–೧೭–೮). [ಸಂ. ಕಂಟಕಾರೀ; ಕಂಟಕ + ಅರಿ$_6$]

**ಕಂಟಕಾರಿಕೆ** (ನಾ). ೧. ಗುಳ್ಳದ ಕಾಯಿ: "ನಿದಿಗ್ಧಿಕಾ, ಕಂಟಕಾರಿಕಾ, ವ್ಯಾಘ್ರೀ – ಈ ೩ ನೆಲಗುಳ್ಳಂ" (ಹಲಾಯು. ೧೦೧–೪೬೫). ೨. "ಅಂಟಾಳಗಿಡ" (ಗಂಗಾಮ. ೬೩). [ಸಂ. ಕಂಟಕಾರಿಕಾ]

**ಕಂಟಕಿ** (ನಾ). ೧. ಮುಳ್ಳುಗಳಿಂದ ತುಂಬಿದ್ದು. ೨. ಮೀನು. ೩. ಮುಳ್ಳುಗಳಿರುವ ಯಾವುದಾದರೂ ಗಿಡ. ೪. ಹಲಸು: ಕಂಟಕಿಯು ಸಹಕಾರ ದಾಡಿಮಫಲಂ ಟಿಂಟಣಿಸಿ ತಳ್ತೊಡೆದು ರಸಪ್ರವಾಹಗಳಾಗೆ (ಪ್ರಭುಪು. ೨–೨೧). ೫. ಕಡ್ಡಿ; ಕುಂಚ: ವರದಂತಮಂ ಕ್ಷೀರಿಕಂಟಕಿಗಳಿಂದೊರಸಿಯುರುನಿರ್ಮಲೋದಕದಿ ಗಂಡೂಷವೆಂಬವನಚರಣಾಂಬುಜಕ್ಕೆ ಶರಣು (ಲಶಿಚಂ. ೪೫–೩). ೬. (ಅಲಂ) ಪೀಡಿಸುವುದು; ತೊಂದರೆ ಕೊಡುವುದು. ೭. ವಿಘ್ನಕಾರಿ: ಕಪಟ ಕಂಟಕಿ ಕಟಕಿ ಕಡುದುಷ್ಟೆ (ಜೈಮಿಭಾ. ೫–೬೧). [< ಸಂ. ಕಂಟಕಿನ್]

**ಕಂಟಕಿತ** (ಗು). (ಅಲಂ) ರೋಮಾಂಚನ ಹೊಂದಿದ; ಮೈಗೆ ಮುಳ್ಳು ಬಂದ: ಅಲೌಕಿಕಮಮಾನುಷಮೆಂದು ಕಂಟಕಿತಾಂಗನಾದ ನಿಳಾಧಿಪಂ (ಮಲ್ಲಿಪು. ೫–೪೩). [ಸಂ.]

**ಕಂಟಜವಾಬು** (ನಾ). ಅಡ್ಡವಾದ ಉತ್ತರ; ಅಡ್ಡಜವಾಬು: "ಸಾಕುಮಾಡು ನಿನ್ನ ಕಟ್ಟುಕಥೆಯನ್ನು, ಇನ್ನುಮೇಲೆ ಈ ಕಂಟಜವಾಬುಗಳನ್ನು ಇಲ್ಲಿ ಸೈರಿಸುವವರಾರೂ ಇಲ್ಲ ಗೊತ್ತೇನು?" (ಮೊಗ್ಗು. ೮೨). [ಕಂಟ ? + ಜವಾಬು]

**ಕಂಟಣಿಸು** 'ಕಂಟಳಿಸು' ನೋ.

**ಕಂಟಣೆ** 'ಕಂಟಲೆ' ನೋ.

**ಕಂಟಣೆಯೆತ್ತು** 'ಕಂಟಲೆಎತ್ತು' ನೋ.

**ಕಂಟಮೊನೆ** (ನಾ). ಕಂಟದ ಮೊನೆ; ಉಕ್ಕಿನ ಲೇಖನಿಯ ತುದಿ: ಭೂತಳೇಶ್ವರ ಧನವೃದ್ಧಿ ರಾಜಗೃಹಕರ್ಮಕಳಾಪಸಮುಚ್ಚಯಂ ನಿರಂತರಮಿವರೊಂದು ಕಂಟಮೊನೆ ಬಾಳ್ಮೊನೆಯಾಗಿರೆ ಸಲ್ವುದು (ಅನಂಪು. ೨–೨೪). [ಕಂಟ + ಮೊನೆ$_1$]

**ಕೆಂಟೆಯ** 'ಕಂಟೆಯ' ನೋ.

**ಕೆಂಟೆಲಿ** 'ಕಂಟಲೆ' ನೋ.

**ಕೆಂಟಲೆ**, ಕಂಟಣೆ, ಕಂಟಲಿ, ಕಂಟಾಳ, ಕಂಡಾಲ (ನಾ). ಎರಡೂ ಪಕ್ಕಕ್ಕೆ ಸಮನಾಗಿ ಕೂಡುವಂತೆ ಹೇರುವ ಎರಡು ಒಡಲಿನ ಚೀಲ; ಹಸುಬೆ: ಎತ್ತು ಕಂಟಲೆ ಕಂಬಿ ಕಾವಡಿ ಹೊತ್ತ ಹೊರೆ ಹಸುಬೆಗಳ ಶರಣರ ಮೊತ್ತ ಸಾಗಿತು (ಶರಲೀ. ೫೪೦–೫); ಎಂಟು ತಿಂಗಳ ನಾರಿ ಎಂಟೇನ ಬಯಸಿದಳು ಕಂಟಲೆ ಅಕ್ಕಿ ಕೊಡ ತುಪ್ಪ (ಜಗೀತೆ. ೯೬); ಕುದುರೆಯ ಕಡಿವಾಣವು ಕೈಯೊಳಗಿರುವ ವರೆಗೆ ಅದರ ಮೇಲೆ ಕೂತರೂ, ಕಂಟಲೆ ಹೇರಿದರೂ . . . ಸುಮ್ಮನೆ ಹೋಗುವದು (ಮುಂಬಯಿ. ೪–೧೮೦). **ಕೆಂಟಣೆ**: ನೇಣ್ ಕಂಟಣೆ ಗೋಣಿ ದಂಡಿಗೆ ಸವಂಗಂ ಮೊಚ್ಚೆಯಂ ಹಲ್ಲಣಂ . . . ಇನಿತುಂ ದಂಡಿಂಗೆ ಸಾಮಗ್ರಿಗಳ್ (ಸೂಕ್ತಿಸು. ೧೮–೨೩); ರಸಭಂಡವೈದು ವಿದಳವಿಪ್ಪತ್ತೈದು ಪಸರ ಪತ್ರಿಗೆಯ ಕಂಟಣೆಯೆಪ್ಪತ್ತೈದು (ಶಿವಗೀ. ೧೮೯–೯೪೬). **ಕೆಂಟಲಿ**: ಪರಮೇಶ್ವರನು ಒಬ್ಬ ಬಣಜಿಗನ ವೇಷದಿಂದ ತನ್ನ ಗಿಡ್ಡ ಎತ್ತಿನ ಮೇಲೆ ಕಂಟಲಿಯನ್ನು ಹೇರಿಕೊಂಡು ಸುಮತಿಗೆ ಕಾಣಿಸಿಕೊಂಡನು (ಭದ್ರಾಯು. ೭); ತಮ್ಮಣದೀಕ್ಷಿತರ ಕಾಯನ್ನು ಮಾತ್ರ ಅವರು . . . ತಮ್ಮ ಕಂಟಲಿಯಲ್ಲಿ ಹಾಕಿಕೊಳ್ಳುತ್ತ ಬರುತ್ತಿದ್ದರು (ಕಲಿಕು. ೫); "ನಾವೂ ನೀವೂ ನೆಂಟರು, ಆದರೆ ಕಂಟಲಿಯಲ್ಲಿ ಕೈಹಾಕಬೇಡಿರಿ" (ಕುಟುಂಬ. ೪೫). **ಕೆಂಟಾಳ**: (ಕ). **ಕೆಂಡಾಲ**: ಉಸಿಗನೆಡಗೌಂಕುಳೊಳಗೊಂದು ಕಂಡಾಲವಂ ಸಸಿನೆದಳೆಯುತ್ತ ಮಾದೇವಿ ಸಡಗರದೆ ಪಿಂದೆಸೆಯೊಳೊಪ್ಪುತ್ತಿರಲ್ (ಆರಾಜ. ೮–೪).

[ದೇ. ‖ ತಮಿ. ಕಣ್ಟಾಳ; ತೆಲು. ಕಂಟಲ, ಕಂಟ್ಲ. / ಮರಾ. ಕಂಠಾಳ, ಕಂಠಾಳೀ]

**ಕೆಂಟಲೆಎತ್ತು**, ಕಂಟಣೆಯೆತ್ತು, ಕಂಠಣೆಯೆತ್ತು (ನಾ). ಕಂಟಣೆಯನ್ನು ಹೊರುವ ಎತ್ತು; ಹಸುಬೆಯನ್ನು ಹೊರುವ ಎತ್ತು: ಮಂಗಳೂರಿಗೆ ಹೊರಡುವ ಕಂಟಲೆಎತ್ತುಗಳ ಜೊತೆಯಲ್ಲಿ ತನ್ನ ಇಬ್ಬರು ಆಳು ಹೊರಡುವಂತೆ ಏರ್ಪಾಡು ಮಾಡಿದನು (ಚಿಕರಾ. ೩೬೬). **ಕೆಂಟಣೆಯೆತ್ತು**: ಗುಡಿಯುಂ ಕಂಟಣೆಯೆತ್ತುಂ ನಡೆಗುದುರೆಯುಮೆರಡು ಬಂಟರಿರ್ವರ್ ತೊತ್ತಿರ್ ಕಡುಗೂರ್ಪ ಮಿಂಡಿವೆಂಡಿತಿಯೊಡವಾರದ ದಂಡು ಜವನ ದಂಡಣೆಯಲ್ತೆ (ಸೂಕ್ತಿಸು. ೧೮–೨೪). **ಕೆಂಠಣೆಯೆತ್ತು**: ಚಂಡಿಗೊಳುವ ಕಂಠಣೆಯೆತ್ತ ಸಾಗಿಸಿ ಕೊಂಡೊಯ್ಯುತ್ತಿದ್ದರು ಕೆಲರು (ನಾಗಕು. ೧೫–೫೦).

[ಕಂಟಲೆ + ಎತ್ತು₂ (< ಎಬ್ಬು₁). / ತಮಿ. ಕಣ್ಟಾಳವೆರುದು]

**ಕೆಂಟವಣ** (ನಾ). ಕಂಟದ ಮೇಲೆ ಹಾಕುವ ತೆರಿಗೆ; ಲಿಪಿಕಾರನ ಮೇಲೆ ವಿಧಿಸುವ ತೆರಿಗೆ: ಪುರವರ್ಗ ಗೌಡಿಕೆ ಮಾನ್ಯ ಪೇಠೆಪದಿಕೆ ಉಂಬಳಿ ಸಿದ್ಧಾಯ ದಾಯ ಕಾರಕ ಕಂಟವಣ ಮೊದಲವಿದ್ದ × × ನುಂಟಾದನುಮಾಡಿಸಿಕೊಂಡಿದ್ದಾ (ಎಕ. VIII, ಸೊರಬ. ೨೬೬–೩೫; 1629). 'ಕಂಠವಣ' ಪರಾ. [ಕಂಟ + ಪಣ₁]

**ಕೆಂಟವಲಗೆ** (ನಾ). ಮುಳ್ಳುಹಲಗೆ (?): ಪೊಂಬಾಳೆಯ ಕಂಬಂಗಳಿಂ ಪಚ್ಚೆಯ ಪಲಗೆಗಳಿಂ ಬಕುಳದ ಬೋದಿಗೆಗಳಿಂ ಬಂಧೂಕದ ಬಾರವಟ್ಟೆಗೆಗಳಿಂ ಕೇತಕಿಯ ಕಂಟವಲಗೆ [ಪಾಠಾಂ. ಕಂಠದಲಗೆ]ಗಳಿಂ ಕುರವಕದ ಕೀಲ್ಪ್ವದುವಂಗಳಿಂ ಮಂದಾರದ ಮೊಳೆಸಾಲ್ಗಳಿಂ (ಕುಸುಮಾ. ೧೨–೧೫೭ ವ). [ಕಂಟ ? + ಪಲಗೆ]

**ಕೆಂಟಳಿಸು**, ಕಂಟಣಿಸು, ಕಂಠಣಿಸು (ಕ್ರಿ). ೧. ಕುಗ್ಗು; ಸಂಕೋಚವಾಗು: ನಿಜಪುರೋಪವನ ಲೀಳೆ ಮಧುಮಾಸ ವಿರತಿಯೊಳ್ ಮಸುಳ್ದಿರೆ ಕಂಟಳಿಸಿದ ಮೆಯ್ವೆರಸಿ ನಿಸಾಕುಳನಾದೊಂ (ಶಾಂತಿಪು. ೫–೬೫); ಪಾಟ್ಟನೆ ಪುಲ್ಲನು ಚುರ್ಚವಂದದಿನೆಲ್ಲಂ ಪಿಡಿಮುರ್ಚಿ ಬೇಳ್ವರರೆಬರ್ ಸುಡದಟ್ಟುಕಸಲಾಜದಗ್ನಿ ಕಂಟಳಿಸುವಿನಂ (ಜಗವಿ. ೧೬–೬೨); ಜಗವೆಲ್ಲಂ ಕಡುಪಿಂಗೆ ಕಂಟಳಿಪಿನಂ (ಸೌಇಇ. XV, ೯೨–೮; 12ನೆಯ ಶತ). ೨. ಅಸಹ್ಯಪಡು; ಜುಗುಪ್ಸೆಪಡು: ಬಳಮುಱಿದಿರ್ದ ತೋಳನಿಱಿಕೆಯ್ವಳಿಪಿಂದೆ ಪುರುಳ್ ಧುರಕ್ಕೆ ಕಂ(?)ಟಳಿಸೆ ಕನಲ್ದು ಪೋಗೆ ಸಿರಿ (ಚಂದ್ರಪು. ೨–೫೧). ೩. ಉತ್ಸಾಹಗೊಳ್ಳು; ರೋಮಾಂಚನಗೊಳ್ಳು; ನಿಮಿರು: ವೀರರಸಂ ಕರೆಗಣ್ಮೆ ಕಂಟಳಿಸೆ ಮೆಯ್ಯುವಿರಗ್ಗಳಮೊಪ್ಪಿದಂ ಗಳ ಸರಿತ್ಸುತ ನಾಹವಲಂಪಟಂ (ಕಾವ್ಯಾವ. ೪೮೯); ಇಳಾತಳಕ್ಕೆ ಕಿಳಿರ್ದುಪ್ಪರಿಸುತ್ತುಜಿ ಮಿಾಂಟಿ-ದಾಂಟಿ ಕಂಟಳಿಸಿ ಪೊದಳ್ದು ಪಾಯ್ದು ಪರಿಯಿಟ್ಟುದು ವಾಯುರಯಂ ಹಯದ್ವಯಂ (ರಾಜಶೇ. ೧೩–೯೧). ೪. ಕೇಕರಿಸು: ತೂಂಕಡಿಸುವ ಬಿಳ್ತಾಗುವ ಬಿಕ್ಕುವ ತೇಂಕುವ ತೇಗುವ ಕಂಟಳಿಸುವಖಿಳ ವಿಕೃತಿಗೆಸಲ್ಲಂ (ಪುಷ್ಪಪು. ೧೨–೮೪). ೫. ಹೆದರು; ಭಯಪಡು: ಖಂಡೆಯ ಬಾಯಿಂ ತೊಲಗದೆ ಕಂಡರ್ ಕಂಟಳಿಸೆ ಕಾದಿದರ್ ಬಲ್ಗಂಡರ್ (ಪಾರ್ಶ್ವಪು. ೩–೧೫೧). **ಕೆಂಟಣಿಸು**: ೧. ಹೇಸಿಕೆಯುನು ನೇಸಱುಗುಲನ ಕಾಳಿಜಂ ಕಂಟಣಿಸ [ಪಾಠಾಂ. ಕರಣಂ ಕಲ್ಲಯಿಸಲು] ಬೇಕೆಂದು ನೆರಹಿದಂ (ಹಚಕಾ. ೧೧–೩೦). ಗಂಟಲುರಂಬರಂ ಬಱಹುಗೋಣೆಬಲಲ್ ಕಡುಸೇದೆಯಿಂದೆ ಮೈ ಕಂಟಣಿಸುತ್ತೆ ಕೋಡಗಱಿಸೀದು ಮುಱುಂಟಿ ವಿಹಂಗ ಸಂಕುಲಂ (ಸೂಕ್ತಿಸು. ೧೦–೧೧೯); ಅಧಿಕನಲ್ಲಾ ಕರ್ಣ ಕಿಱುಕುಳನೆ ಕಂಟಣಿಸಬೇಡಿನ್ನು ಭಾಷೆಗಳುಂಟು ನಿನ್ನಲಿ (ಕುವ್ಯಾದ್ರೋ. ೧೫–೭). ೨. ನರಕದ ನೆಲೆ ಪೇಸಿಕೆಗಳ ಕರು ಮಸಣದ ಪುಟ್ಟು ಪಾಪದೇಱ . . . ಅಂತದಂ ಕಂಡು ಕಂಟಣಿಸುತ್ತಮೆನ್ನೊಳಿಂತೆಂದೆಂ (ಕಾದಂಉ. ೭೪೮); ಪೇಸದೆ ಕಂಟಣಿಸದೆ ಬೆರೆತೋಸರಿಸದೆ ಮಾಂಸಸೇವನೆಗೆಯ್ದನೆ ಭಕ್ತಂ (ಸಮಪ. ೧೪–೧೪೦); ಆ ಕೂಂಟಣೆಯ ಕಿವಿಲುತನಮಂ ಕಂಡು ಕಂಟಣಿಸಿ ವಿದೂಷಕನಿವಳಂ ಜವನಾದೊಡೊರ್ಮಿಂಗೆ ಕೊಯ್ಯಲಮ್ಮನೆಂದು ನುಡಿದು (ಶಾಂತೀಶ್ವ. ೧೧–೭೯ ವ). ೩. ಕಣ್ಮಲರ್ಗಳ್ ಮಲರ್ದಳ್ಪೆಪೊಯ್ಯೆ ಮೆಯ್ಯೊಜಗೆ ಕೆಲಕ್ಕೆ ಕಂಟಣಿಸೆ ಮೆಯ್ಯುವಿರೊಯ್ಯನೆ ಕಂಠಕಂದಳಂ ತೆಱೆದು ಮಿಡುಂಕೆ (ಲೀಲಾವ. ೬–೭೦); ಸಂದ ಕಲ್ಕರಗೆ ನರರ ಮನ ನಾರಿಯರಿಂದ ಝೋಂಪಿಸದೆ ಕಂಟಣಿಪಿ (ವರ್ಧಚ. ೧–[illegible]). ೫. ಆತುರಿಸಿ ಕಾಡುವೆನ್ನಂಡಲೆಗೆ ಕಂಟಣಿಸ [ಪಾಠಾಂ. ಕಂಟಳಿಸ, ಕಂಠಣಿಸ]ದೀತನಲ್ಲದೆ ನಿಲುವರಾರೆಂದು (ಸೋಮಚ. ೩–೪೬); ಬಂಟನಾಗಿರ್ದ ಗಣಕನ ಕಯ್ಯುಲಿಂದೊಡವ ಕಂಟಣಿಸದೀಸಿಕೊಂಡಕ್ಷರವ ಕಂಡು ಮನವಂಟಿ (ಸೌಂದಪು. ೫–೮). **ಕೆಂಠಣಿಸು**: ೧. ಭೀಮನ ಗದೆಯ ಘಾತಿಯ ಘುಲ್ಲಣೆಗೆ ಕಂಠಣಿಸಿದವು ಟೆಂಠಣಿಸುವಾನೆಗಳು (ಕುವ್ಯಾಗ. ೧–೫೪); ರವಿ ಮತ್ತೆ ಮೂಡಣ ಗದ್ದುಗೆಯ ವೆಂಠಣಿಸಿದನು ಕುಮುದಾಳಿ ಕಂಠಣಿಸೆ (ಕುವ್ಯಾಭೀ. ೭–೪). ೫. ದಶಕಂಠಾಸುರನ ಕಂಠರವ ದಿಕ್ತತಿಯ ಕಂಠಣಿಸೆ (ಶತಸಾಂ. ೭೦–೫೪). ೬. ಗೋಳಾಡು; ದುಃಖಿಸು: ಎಡೆ ಕಟ್ಟಿ ಕಡೆ ಕಂಠಣಿಸದ ಸಮಹಿತ ಸಾಧ್ಯರು (ಪದಗೋ. ೪–೨೦೧); ಎಸೆವುತಿರೆ ಬಂದು ಮಹಮನೆಯ ಗೋವಳನಲ್ಲಿ ದೆಸೆದೆಸೆಗೆ ಕಂಪಿಸುತೆ ಕಂ [ಪಾಠಾಂ. ಟಂ]ಠಣಿಸುತಂತಲ್ಲಿ ನಿಂದು ಬಸವಂಗೆ ಬಿನ್ನೈಸಿದಂ (ಬಸರ. ೯–೧೦೪).

[ಕಂಟಳ₀ + -ಇಸು₃. / ಮರಾ. ಕಂಟಾಳಣೇ]

**ಕೆಂಟಾಳ** 'ಕಂಟಲೆ' ನೋ.

**ಕೆಂಟಿ₁** (ನಾ). ಕೊರಳಿನ ಒಂದು ಆಭರಣ; ಹಾರ: "ಕಂಟಿ – ಕಂಠೀ = ಕಂಠಾಭರಣ" (ತದ್ಭಕೋ. ೫); ಮೆಚ್ಚೀವೊಡಾ ಗಾವಮಂ ಸರವಮಂ ಕಂಟಿಯ ಜೋಡುಸಾಲ್ಗಳನಿವಂ ನೀಡಲ್ಕನಂ ನೋಳದ್ಸೈ (ಮೈಸೂಮೆ. ೪–೪೮). [< ಸಂ. ಕಂಠೀ]

**ಕಂಟ್ಟೆ₂** (ಗು). ೧. ಮುಳ್ಳಿನಿಂದ ಕೂಡಿದ. (ನಾ). ೨. ಪೊದೆ; ಮೆಳೆ; ಮುಳ್ಳು; ಹೊದರು: ಕಿರಿಗಿಡಗಳೂ ನಾನಾ ಪ್ರಕಾರದ ಕಂಟಗಳೂ ಮುಖ್ಯವಾಗಿ ಬೆಳೆದಿರುತ್ತವೆ (ಕಭಾಗೆ. ೫೩); ಬನ್ನಿಯ ಕಂಟಿ, ಬೇವಿನ ಕಂಟಿ, ಮುಡಿಯನ ಕಂಟಿ . . . ಮುಂತಾದ ಗಿಡಗಳಿದ್ದರೆ ಅವುಗಳ ಬೇರು ಸಹಿತ ಅಗೆದು ತೆಗೆಯಬೇಕು (ಕೃಷಿಪ್ರ. ೨೫); ಇಬ್ಬನ್ನಿ ತೊಳೆದರೂ ಹಾಲು ಮೆತ್ತಿದಾ ಕವಳಿ ಕಂಟಿಯಾ ಹಣ್ಣು ಹೊಳಿಹೊಳಿವ ಹಾಂಗ ಕಣ್ಣುರುವ ಹೆಣ್ಣು (ನಾದಲೀ. ೫೮-೧೬). ೩. ಗುಂಪು; ತೋಪು; ಸಮೂಹ: ಸಹಕಾರದ ಸಂದಣಿಯುಂ ತೆಂಗಿನ ತಿಂತಿಣಿಯುಂ ಕದಳಿಯ ಕಂಟಿಯುಂ ದಾಡಿಮದ ತೋರಣಮುಂ (ಕುಸುಮಾ. ೯-೮ ವ); ಕದಳಿಯ ಕಂಟಿ ಕಮ್ಮರದ ಸಂದಣಿ (ಸೂಕ್ತಿಸು. ೪-೩೭); ತೆಂಗಿನ ತಿಂತಿಣಿಯುಂ ಕದಳಿಯ ಕಂಟಿಯುಂ ದಾಡಿಮದೊತ್ತರಮುಂ(ಶಾಂತೀಶ್ವ. ೧೦-೭೮ ವ). ೪. ಬೃಹಶ್ರೀ ಎಂಬ ವೃಕ್ಷಭೇದ. ೫. ಆರೇಖದಿರ. ೬. ನೀರುಗಂಟಿ. ೭. ಒಂದು ಆಯುಧ: ಅಸ್ಸಿಜ ಸುಲದಿ ಕಂಬು ಕಂಟಿ ಕುಲಿಶಾವನ . . . ಮೊದಲಾದಾ ಬತ್ತೀಶಾಯುಧಾಶಕ್ತ (ಎಕ. XVI, ಗುಬ್ಬಿ. ೬೪-೨೦; 1672). ೮. (ಅಲಂ) ಹಿಂಸೆ; ತೊಂದರೆ.
[< ಸಂ. ಕಂಟನ್]

**ಕಂಟಿಕೆ₁** 'ಕಂಡಿಕೆ₁' ನೋ.

**ಕಂಟಿಕೆ₂**, ಕಂಟಿಗೆ (ನಾ). ಕೊರಳಲ್ಲಿ ಧರಿಸುವ ಚಿನ್ನದ ಏಕಾವಳಿ ಸರ; ಒಂದೆಳೆ ಹಾರ; ಕಂಠಿಕೆ: "ಕಂಠಿಕಾ – ಕಂಟಿಕೆ" (ಮದ. ೨೫೫ ಪ್ರಯೋ). **ಕಂಟಿಗೆ**: (ಕ). [< ಸಂ. ಕಂಠಿಕಾ]

**ಕಂಟಿಗ** (ನಾ). ಗದ್ದೆಗಳಿಗೆ ನೀರು ಹಾಯಿಸುವುದಕ್ಕಾಗಿ ಸರ್ಕಾರದಿಂದ ನಿಯುಕ್ತನಾದ ಸೇವಕ (ಕ). 'ನೀರುಗಂಟಿಗ' ಪರಾ.
[ಕಂಟ ? + –ಇಗ]

**ಕಂಟಿಗೆ** 'ಕಂಟಿಕೆ₂' ನೋ.

**ಕಂಟಿಯ**, ಕಂಟಯ (ನಾ). ೧. ಮುಳ್ಳು. ೨. (ಅಲಂ) ವಿಘ್ನ: "ಕಂಟಿಯ – ಕಂಟಕ = ವಿಘ್ನ, ಮುಳ್ಳು" (ತದ್ಭಕೋ. ೫). **ಕಂಟಯ**: "ಕಂಟಕ, ಕಂಟಯ" (ಶಬ್ದಾನು. ೧೬೦ ಪ್ರಯೋ).
[< ಸಂ. ಕಂಟಕ]

**ಕಂಟಿಯದಾರ**, ಕಂಟಿಯಬಾರ, ಕಂಟಿಯದರ, ಕಂಟಯದಾರ, ಕಂಟಯಬಾರ (ನಾ). ಕಂಟಕ ಸಹಿತವಾದ ಬಾಗಿಲು; ದೊಡ್ಡ ದೊಡ್ಡ ಕಬ್ಬಿಣದ ಮೊಳೆಗಳು ಮುಂದೆ ಹಾಯ್ದಿರುವ ಬಾಗಿಲು: "ಕಂಟಿಯದಾರ – ಕಂಟಕದ್ವಾರ" (ತದ್ಭಕೋ. ೫). **ಕಂಟಿಯಬಾರ**: "ಕಂಟಕದ್ವಾರ – ಕಂಟಿಯಬಾರ" (ಶಮದ. ೨೯೬ ಪ್ರಯೋ); "ಕಂಟಿಯಬಾರಮೆನಲ್ಕದು ಕಂಟಕಮುಹ ಬಾಗಿಲಕ್ಕು" (ಕವಿಕಂ. ೧೪೩); ಆ ರಾಜಗೇಹಾಜಿರದ ಸೀಯದರದ ಕಂಟಿಯಬಾರದಂತರಾಳದಲ್ಲಿ (ಅನಂಪು. ೧–೧೧೭ ವ). **ಕಂಟಿಯದರ**: "ಕಂಟಿಯದರಂ, ಕಂಟಿಯದಾರಂ, ಕಂಟಿಯಬಾರಂ" (ಶಬ್ದಾನು. ೩೭೮ ಪ್ರಯೋ). **ಕಂಟಯದಾರ**: "ಕಂಟಿಯದರಂ, ಕಂಟಿಯದಾರಂ, ಕಂಟಿಯಬಾರಂ" (ಶಬ್ದಾನು. ೩೭೮ ಪ್ರಯೋ). **ಕಂಟಯಬಾರ**: ಅರಿನೃಪಾಳರ ಹಿಂಡ ನಿಜಾಸಿದಂಡದಿಂ ಕಂಟಿಯಬಾರದೊಳ್ ಸುಳಿಸಿ (ಇಸಿ. XII, ೯೭-೧೭; 1187). [< ಸಂ. ಕಂಟಕದ್ವಾರ]

**ಕಂಟಿಯಬಾರ** 'ಕಂಟಿಯದಾರ' ನೋ.

**ಕಂಟಿರಾಯಿ** 'ಕಂಠೀರಾಯಿ' ನೋ.

**ಕಂಟಿಸು₁** (ಕ್ರಿ). ಪೀಡಿಸು; ಹಿಂಸಿಸು; ನೋಯಿಸು: ಬೆಸವರಿಗೆಯ್ದು ಬೇಸಟುಸುವಿತ್ತುದನೆತ್ತುವ ಮೇಗುದೋರ್ಪ ಕಂಟಿಸುವ ಕನಲ್ವ ಕಡ್ಡಯಿಸುವೇಬಿದನಂ ತಿಳಿಪಲ್ ಮನಂಗೊಳಲ್ (ಶಾಂತಿಪು. ೮–೧೦೩); ಅವಳುಮನೊಲಿಸಿ ಕಂಟಿಸಿ ಗೋವರ ಗುಗ್ಗುರಿಗೆ ಮಾಡಿಯುಂ ತಣಿಯಯ್ (ಕಾವ್ಯಾವ. ೧೬೬); ಕರೆಯದೆ ಕಾಡಿ ಕಂಟಿಸುವ ಕೂಂಟಣಿಯಂ ನೊಣಗಚ್ಚಿ ತಿಂಗೆ ಬೆಂಗುರುಟಿ ಬಳಾರಿ ಬಾಡಿಸುಗೆ (ಲೀಲಾವ. ೨–೧೦೬); ಸತಿ ಕಂಟಿ [ಪಾಠಾಂ. ಟಿ]ಸಿ ಕಾಡುವಳೆಂದು (ಸೂಕ್ತಿಸು. ೩–೧೪೦); ಮುಳಿವ ಕನಲ್ವ ಕಂಟಿಸುವ ಕಾಡುವ ಬೇಡುವ (ರಸರ. ೩–೧೫೬).
[ಕಂಟ + –ಇಸು₃. P ಪ್ರಾ. ಕಟ್ಟ (< ಸಂ. ಕಷ್ಟ)]

**ಕಂಟಿಸು₂** 'ಕಟ್ಟಿಸು' ನೋ.

**ಕಂಟು₁** (ನಾ). ೧. ಬಾವಿಯ ಒಳಗೋಡೆ ಅಥವಾ ಮನೆಯ ಒಳಗೋಡೆಯಲ್ಲಿ ಚಾಚಿರುವ ಭಡಿ, —ಚಡ, —ಕಂಟಿ. ೨. ಪಾತ್ರೆಯ ಅಂಚು, —ಕಂಟ. ೩. ಬಾವಿಯಲ್ಲಿ ಇಳಿಯುವುದಕ್ಕೆ ಮಾಡಿದ ಸೋಪಾನಮಾರ್ಗ (ಕ). [< ಕಂಟ ?]

**ಕಂಟು₂** 'ಕಮಟು' ನೋ.

**ಕಂಟೆಯದರ** 'ಕಂಟಿಯದಾರ' ನೋ.

**ಕಂಟೆಯದಾರ** 'ಕಂಟಿಯದಾರ' ನೋ.

**ಕಂಟೆಯಬಾರ** 'ಕಂಟಿಯದಾರ' ನೋ.

**ಕಂಠ** (ನಾ). ೧. ಕೊರಳು. ೨. ಪಾತ್ರೆಯ ಕಂಟ. ೩. ನಾದ; ಧ್ವನಿ. ೪. ದೇಹ. ೫. ಸಾಮೀಪ್ಯ. ೬. ದಂಡೆ; ತಟ; ದಡ. ೭. ಬರೆಯುವ ಉಕ್ಕಿನ ಲೆಕ್ಕಣಿಕೆ; ಕಂಟ: ". . . ಕೈಯೊಳಗಿನ ಓಲೆಕಂಠಗಳನ್ನು ಬಿಸುಟು ಇದನ್ನು ಆರಿಸಿ ಹೋದನು" (ಕಪಪು. ೬-೬೫); ಬದಿಯಲ್ಲಿ ಬರೆಯುವ 'ಕಂಠ' ವಿದೆ (ವಿಜಸಾ. ೭೮). ೮. ಕಾಂಡ: "ಪತ್ರಿ [ಪಾಠಾಂ. ಪ್ರತಿ] ನಾರಾಚಮೆನೆ ಕಂಠ" (ಮಂಗರಾ. ೧೦೬–೧೫); "ನೀರಲ್ಲಿ ನಿಜ ಕಂಠದಲ್ಲಿ ಪ್ರಸ್ತಾವದಲಿ ನಿಂದೆಯಲಿ ಶಸ್ತ್ರದಲಿ ಕಾಂಡಮೆಳ್ಕುಂ" (ಮಂಗರಾ. ೧೪೭–೩೮); "ಸಂಹನನ ಸಮಿಪ ನಾದ ತಟ ಕಂಧರಮೆಂಬಿವು ಕಂಠವಾಚಕಂ" (ನಾನಾರ್ಥ. ೫೩). ೯. (ಭಾರತೀಯ ವಾಸ್ತುಶಿಲ್ಪದಲ್ಲಿ) ದೇವಾಲಯದ ಕಮಾನಿನ ಒಂದು ಅಂಗ. ೧೦. ಒಂದು ಔಷಧಿ ಗಿಡ: "ಕಾಡಪುಂಖ – ಕಂಠ, ಉತ್ತರಣೆ" (ಓಷಧಿ. ૩૧).

ಕಂಠಚಾಮೀಕರನ್ಯಾಯ = ಒಂದು ಬಗೆಯ ನ್ಯಾಯ; ಕೊರಳಲ್ಲಿ ಚಿನ್ನದ ಆಭರಣವನ್ನಿಟ್ಟುಕೊಂಡು ಬೇರೆ ಎಲ್ಲಾ ಕಡೆ ಹುಡುಕುವುದು. ಕಂಠಶೋಸಿಕೊಳ್ಳು = (ಅಲಂ) ವ್ಯರ್ಥವಾಗಿ ಮಾತನಾಡು; ಗಂಟಲು ಒಣಗಿಸಿಕೊಳ್ಳು; ಕಂಠಶೋಷಣೆ ಮಾಡಿಕೊಳ್ಳು: ವಿದ್ಯಾಗುರು ಎಂದರೆ ಕಾಸಿಗಾಗಿ ಕಂಠಶೋಸಿಕೊಳ್ಳುವ ಪಶು ಎಂಬ ಭಾವನೆ (ಹೇಮುಕೂ. ೧೦). [ಸಂ.]

**ಕಂಠಕಚ್ಚರ** (ನಾ). ಕುತ್ತಿಗೆಗೆ ತಗುಲಿ ಹಾಕಿಕೊಳ್ಳುವ ಚೀಲ (?): "ಕಂಠಕಚ್ಚರದೊಳ್ ಬಕ್ಕಳೆ" (ಕರ್ಣಾನಿ. ೭೪). [ಕಂಠ + ಕಚ್ಚರ]

**ಕಂಠಕುಬ್ಜ** (ನಾ). [ವೈದ್ಯಶಾ] ಒಂದು ಬಗೆಯ ಸನ್ನಿಪಾತ ಜ್ವರ: ಕಂಠಕುಬ್ಜ . . . ಪ್ರಳಾಪಗಳೆಂದು ಪದಿಮೂರು ತೆರನಾದ ಈ ಸನ್ನಿಪಾತಂಗಳ್ಗೆ (ಸಕವೈ. ೧೫೦). [ಕಂಠ + ಕುಬ್ಜ]

**ಕಂಠಗತ** (ಗು). ೧. ಕುತ್ತಿಗೆಗೆ ಬಂದಿರುವ: ಮುನಿಕುಮಾರಂ ಬರುತಿರ್ದ ಬಟ್ಟೆಯೊಳ್ ಕಂಠಗತಪ್ರಾಣನಾಗಿರ್ದನ್ನಂ ಕಂಡು (ಕಾದಂಪೂ. ೨೦೮); ಕಂಠಗತಪ್ರಾಣೆಯವಳ್ ನಿನ್ನ ದೂಸಜಿಂ ಬಟ್ಟಪ್ಪಳ್ (ಸೂಕ್ತಿಸು. ೧೫–೧೮). (ನಾ). ೨. (ಅಲಂ) ಪೇಚು; ಅತ್ಯಂತ ಕಷ್ಟ. [ಸಂ.]

**ಕಂಠಗತವಾಯು** (ನಾ). ಉಸಿರು ಕೊರಳೊಳಗೆ ಬಂದಿರುವವನು; ಮರಣೋನ್ಮುಖನಾದವನು: ಅಂತು ಬಿದ್ದು ಜಟಾಯು ಕಂಠಗತ ವಾಯುವಾಗೆ ದಶಕಂಠನುಯ್ವ ಸಮಯದೊಳ್ (ಪಂರಾಮಾ. ೯–೧೦೬ ವ).
[ಕಂಠಗತ + ವಾಯು]

**ಕಂಠಗತಾಸು** (ನಾ). ಪ್ರಾಣವು ಕೊರಳವರೆಗೆ ಬಂದಿರುವವನು; ಮರಣೋನ್ಮುಖನಾದವನು: ಅಗಧರ ನಿನ್ನಂಘ್ರಿಭಾರಮಂ ಕ್ಷೀಣ ಬಲೋರಗನೆಂತು ಸೈರಿಪಂ ಕಂಠಗತಾಸುವಕ್ಕುಮೇಕಕ್ಷಣದಿಂ (ಜಗವಿ. ೩-೧೧೦). [ಕಂಠಗತ + ಅಸು₅]

**ಕಂಠಗರಲ** (ನಾ). ಕೊರಳಲ್ಲಿ ವಿಷವುಳ್ಳವನು; ಶಿವ (ಕ). [ಕಂಠ + ಗರಲ]

**ಕಂಠಗ್ರಹಂಗೆಯ್** (ಕ್ರಿ). ಕಂಠವನ್ನು ಹಿಡಿ; ಕತ್ತು ಹಿಸುಕು: ಅಂತಕಂ ಕಡುಪಿನಿಂ ಕಂಠಗ್ರಹಂಗೆಯ್ಯದಿಂ ತಡೆಯಂ (ಆದಿಪು. ೧-೭೯). [ಕಂಠಗ್ರಹ₀+ ಗೆಯ್ (< ಕೆಯ್₁)]

**ಕಂಠಣಿಸು** 'ಕಂಟಳಿಸು' ನೋ.

**ಕಂಠಣೆಯೆತ್ತು** 'ಕಂಟಲೆಎತ್ತು' ನೋ.

**ಕಂಠತಾಲವ್ಯ** (ನಾ). [ವ್ಯಾಕ] ಕಂಠ ಮತ್ತು ತಾಲು ಎರಡೂ ಕೂಡುವ ಎಡೆಯಲ್ಲಿ ಉಚ್ಚಾರವಾಗುವ ವರ್ಣ: ಕಂಠತಾಲವ್ಯ - ಐ (ಕೈಪಿಡಿ. ೫) [ಸಂ. (ಕಂಠತಾಲು + -)]

**ಕಂಠತ್ರಾಣ** (ನಾ). ೧. ಕೂಗಿಕೊಳ್ಳುವ ಶಕ್ತಿ: ಆ ತಂದೆ ತಾಯಂದಿರ ಸಂಸ್ಕೃತ ಪ್ರಿಯತೆಯನ್ನೂ ಕಂಠತ್ರಾಣವನ್ನೂ ನಾನು ಗೌರವಿಸುತ್ತೇನೆ (ಗಾಳಿಪ. ೮೬). ೨. "(ಹೆಂಗಸಿನ) ತಲೆಯ ಮತ್ತು ಕತ್ತಿನ ಮೇಲೆ ಹೊದೆದುಕೊಳ್ಳುವ ವಸ್ತ್ರ" (Gorget. ಇಂಕನಿ). [ಕಂಠ + ತ್ರಾಣ]

**ಕಂಠನಾಳ** (ನಾ). ಕಂಠದ ನಾಳ: ಚಂಚುವಂ ತೆಱೆದೆಱಂಕೆ ನೆಱಲ್ದಿರೆ ಕಂಠನಾಳಮಂ ನೀಡಿ ವಿಯತ್ತಲಕ್ಕೊಗೆದು ಕಾರಮುಗಿಲ್ವನಿಯಂ ಮನಂ ಕುಳಿರ್ಕೋಡುವಿನಂ ಕೆರ್ದುಂಕಿ (ಪಂರಾಮಾ. ೩-೧೪೬); ಕಂಠನಾಳ (Larynx)ದೊಳಗೆ ತೊಂದರೆಯುಂಟಾದಾಗ ಕಂಠನಾಳದ ಹತ್ತಿರ ಶೇಖರಣೆಯಾದ ಜೊಲ್ಲನ್ನು ಹೀರಿ ಹೊರತೆಗೆಯಬೇಕು (ಕೆಲರೋ. ೨೬). [ಕಂಠ + ನಾಳ₁ (= ನಾಲ₁)]

**ಕಂಠಪಟ್ಟಿಕೆ** (ನಾ). ಕೊರಳಪಟ್ಟಿ; ಕೊರಳಿಗೆ ಕಟ್ಟಿಕೊಳ್ಳುವ ಬಟ್ಟೆ; ಕಂಠಬಂಧ: "ಅವನ ಕಂಠಪಟ್ಟಿಕೆಯನ್ನು ಸಡಿಲಗೊಳಿಸಬೇಕು" ಎಂದು ಅಂಚೆಯವ ಸೂಚಿಸಿದನು (ಪುನರು. ೪೪೪). [ಕಂಠ + ಪಟ್ಟಿಕೆ]

**ಕಂಠಪಾಠ** (ನಾ). ಉರುಹಾಕುವುದು; ಗಟ್ಟಿ ಮಾಡಿಕೊಳ್ಳುವುದು; ಬಾಯಿಪಾಠ ಮಾಡುವುದು: ವಾಲ್ಮೀಕಿಯಿಂದ ರಾಮಾಯಣವನ್ನು ಕಂಠಪಾಠಮಾಡಿದ ಕುಶಲವರು ಯಾರೆಂಬುದೇ ಈಗಿನ ಪ್ರಶ್ನೆ (ಭಾರದ. ೮೩). [ಕಂಠ + ಪಾಠ]

**ಕಂಠಪಾವಡ** (ನಾ). ಕೊರಳಿಗೆ ಕಟ್ಟಿಕೊಳ್ಳುವ ಬಟ್ಟೆ: ಕಂಠಪಾವಡವಾದಲ್ಲಿ ಉರದಿಂದ ಮಾಱಿ ಹಾಯಲಾಗದು (ಏಲೇಶ್ವ. ೫೪). [ಕಂಠ + ಪಾವಡ]

**ಕಂಠಪೂರ್ತಿ** (ಅ). ಕುತ್ತಿಗೆ ಮಟ್ಟ; ಕೊರಳು ತುಂಬುವವರೆಗೆ: ಕಂಠಪೂರ್ತಿ ಕುಡಿದು ಬಿದ್ದಿದ್ದ (ಹೊಸಕ್ಷಿ. ೪೯); ಕಂಠಪೂರ್ತಿಯಾಗಿ ತಿಂದಾದ ಮೇಲೆ ನಾಲಿಗೆ ಗಂಟಲುಗಳ ತೀಟೆಯನ್ನು ತೀರಿಸಿಕೊಳ್ಳುವ ಸಲುವಾಗಿ ಹಾಗೆ ಆವರು ಮಾತಾಡುತ್ತಿದ್ದಂತೆ ಅವನಿಗೆ ಭಾಸವಾಯಿತು (ಪುನರು. ೧೨೪). [ಕಂಠ + ಪೂರ್ತಿ]

**ಕಂಠಬಂಧ** (ನಾ). = ಕಂಠಪಟ್ಟಿಕೆ: "[ಷರ್ಟಿನ ಕೊರಳಪಟ್ಟಿಯನ್ನು ಬಂಧಿಸುವ(ಂತೆ ತೋರುವ) ರೇಷ್ಮೆ, ಮೊದಲಾದವುಗಳಿಂದ ಮಾಡಿದ] ಕಂಠಬಂಧ" (Neck-tie. ಇಂಕನಿ). [ಕಂಠ + ಬಂಧ]

**ಕಂಠಭೂಷೆ** (ನಾ). ಕೊರಳಲ್ಲಿ ಧರಿಸುವ ಒಂದು ಆಭರಣ; ಅಡ್ಡಿಕೆ; ಚಿಕ್ಕಕಂಠಿಕೆ (ಕ). [ಕಂಠ + ಭೂಷೆ]

**ಕಂಠಮುಗೆಱೆ** (ನಾ). ಒಂದು ಕೆರೆಯ ಹೆಸರು: ನೆಱೆವ ಗುಣಾಢ್ಯ(ಢ್ಯ)ರ್ಕ್ಕಣ್ಠಮುಗೆಱೆಗಿನಿತುಂ ದ್ರವ್ಯದಾಯಮುಂ ಕೊಟ್ಟಾ(ಟ್ಟ) ವರ್ಗ್ಗ(ರ್ಗ)ಳ್ ತಱಿಸನ್ದೀ ಶಾಸನವನ್ನಿಱಿಸಿದರ್ (ಇಆ. XII, ೨೨೩-೧೧; 929). [ಕಂಠಮು₀+ ಕೆಱೆ]

**ಕಂಠಮಣಿ** (ನಾ). ೧. ಗಂಟಲಿನಲ್ಲಿರುವ ಮೃದ್ವಸ್ಥಿಯ ಭಾಗ; ಗಂಟಲುಮಣಿ; ಗೋಮಾಳೆ; ಧ್ವನಿಪೆಟ್ಟಿಗೆ: "ಗಂಟಲಿನಲ್ಲಿ ಶ್ವಾಸನಾಳದ ಹೊರಮೈಯಲ್ಲಿ ಕಾಣುವ 'ಥೈರಾಯ್ಡ್ ಕಾರ್ಟಿಲೆಜ್' ಎಂಬ ಮೃದ್ವಸ್ಥಿಯ ಚಾಚಿಕೊಂಡಿರುವ ಭಾಗ: ಕಂಠಮಣಿ; ಗಂಟಲಮಣಿ; ಗೋಮಾಳೆ" (Adam's apple. ಇಂಕನಿ). ೨. ಕೊರಳಲ್ಲಿ ಧರಿಸುವ ರತ್ನ. ೩. (ಆಲಂ) ಪ್ರಿಯವಾದ ವಸ್ತು. [ಕಂಠ + ಮಣಿ₃]

**ಕಂಠಮಾಲೆ** (ನಾ). ಕೊರಳಲ್ಲಿ ಧರಿಸುವ ಸರ: ಮಾಲೆಗೆ-ಕಂಠಮಾಲೆ, ಪಚ್ಚೆಮಾಲೆ (ಶಮದ. ೨೯೮ ಪ್ರಯೋ); ಕಂಠಮಾಲೆ ೧ ಕೆ ಮುತ್ತು ೨೦ ಮಾಣಿಕ ೧೮ ನೀಲ ೨ ತುಂಬಿದ ಕುಸುರಿ ೩೮ (ಸೌಇಇ. IX-ii, ೪೮೭-೩; 1513); ಹೊಳೆವ ವಜ್ರದ ಕಂಠಮಾಲೆ ಮಾಣಿಕ್ಯದ ಸುಲಲಿತ ಕಂಠಮಾಲೆಗಳ . . . ಸಲೆ ಧರಿಸಿದಳು (ಕಂನವಿ. ೨೪-೬೪). [ಕಂಠ + ಮಾಲೆ]

**ಕಂಠರುತಿ** (ನಾ). ಕಂಠಧ್ವನಿ: ಶಕುನಿರವಕ್ಕೆ ಕಂಠರುತಿ ಕೂಟದೊಡಂಬಡಿನೊಳ್ ನಿಮಿರ್ಚೆ ಗಾಯಕತೆಯಂ (ಶಾಂತಿಪು. ೮-೧೦೧). [ಕಂಠ + ರುತಿ]

**ಕಂಠಲಗ್ನ** (ಗು). ೧. ಕೊರಳಿಗೆ ಅಂಟಿಕೊಂಡ, —ಅಪ್ಪಿಕೊಂಡ. (ನಾ). ೨. ಕೊರಳನ್ನು ಅಪ್ಪಿಕೊಂಡವಳು; ಪ್ರೇಯಸಿ: ಅವಳು 'ಆನಂದದಿಂದ ಔರಂಗಜೇಬನ ಕಂಠಲಗ್ನಳಾದಳು' (ಬಂಕಿವು. ೨೪೫). [ಕಂಠ + ಲಗ್ನ]

**ಕಂಠವಣ** (ನಾ). ಕಂಟದ ಮೇಲೆ ಹಾಕುವ ತೆರಿಗೆ; ಲಿಪಿಕಾರನ ಮೇಲೆ ವಿಧಿಸುವ ತೆರಿಗೆ: ಭೂಮಿಗಳು ಮನೆಗಳು ಆಯಹಾರಕ ಕಂಠವಣವಳೆ ಬುಟ್ಟಿ ಮೊರಸಹಿತಾ ಕೊಟ್ಟು (ಮೈಆರಿ. ೧೯೨೮, ೬೪-೧೫; 1533). 'ಕಂಟವಣ' ಪರಾ. [ಕಂಠ + ಪಣ₁]

**ಕಂಠವಸ್ತ್ರ** (ನಾ). ಕತ್ತಿಗೆ ಸುತ್ತಿಕೊಳ್ಳುವ ಬಟ್ಟೆ; ರೇಷ್ಮೆ ಮೊದಲಾದವುಗಳ ಚಿಕ್ಕ ಚೌಕ: "ಕಂಠವಸ್ತ್ರ" (Neckerchief. ಇಂಕನಿ); ನನ್ನ ಕಂಠವಸ್ತ್ರವನ್ನು (ಮಫ್ಲರ್) ಕೈಚೀಲದಲ್ಲೇ ಇರಿಸಿದ್ದೆ (ನಂಟರು. ೯೯). [ಕಂಠ + ವಸ್ತ್ರ]

**ಕಂಠಶಾಲೂಕ** (ನಾ). ಕಂಠರೋಗಗಳಲ್ಲಿ ಒಂದು: ಎಲಚಿಯ ಹಣ್ಣಿನ ಹಾಗೆ ಕೊರಳ ಒಳಗೆ ಶ್ಲೇಷ್ಮಾಧಿಕ್ಯದಿಂದ ಗ್ರಂಥಿ ಕಠಿಣವಾಗಿ ಸ್ಥಿರವಾಗಿ ಇಹುದು. ಅದು ಕಂಠಶಾಲೂಕವೆನಿಸಿಕೊಂಬುದು (ವೈದ್ಯಸಾ. II, ೧೧೭). [ಕಂಠ + ಶಾಲೂಕ]

**ಕಂಠಶುದ್ಧಿ** (ನಾ). ಕಂಠಶುದ್ಧವಾಗಿರುವಿಕೆ; ಧ್ವನಿಯ ಸ್ಪಷ್ಟತೆ: ಇದರಿಂ ಖಾಸ, ಶ್ವಾಸ . . . ಕ್ರಿಮಿರೋಗ ಸಹ ಪರಿಹಾರವಹುದು. ಶರೀರಕಾಂತಿ, ಕಂಠಶುದ್ಧಿ, ಅಗ್ನಿಪಟುತ್ವ, ಧಾತುವೃದ್ಧಿ ಸಹ ಉಂಟಾಗುವುದು (ಸಕವೈ. ೨೧೮). [ಕಂಠ + ಶುದ್ಧಿ]

**ಕಂಠಶೋಷ** (ನಾ). ೧. ಕೂಗಾಡಿ ಗಂಟಲು ಒಣಗಿಸಿಕೊಳ್ಳುವುದು. ೨. (ಆಲಂ) ಫಲವಿಲ್ಲದೆ ಮಾತಾಡುವಿಕೆ: "ಮನೆಯಲ್ಲಿ ಕಿರಿಯರ ಮುಂದೆ ಇವನು ಹಗಲೆಲ್ಲ ಕಂಠಶೋಷ ಮಾಡಿಕೊಳ್ಳುತ್ತಿದ್ದದ್ದು ಒಂದನ್ನೇ ಹೇಳಿ - "ಮನೆತನದ ಹೆಸರನ್ನು ಕೆಡಿಸಬೇಡಿರೋ" . . . ಎಂದು ತೊಳಲಾಡಬೇಕು (ಮೂರುದಾ. ೫೭). [ಕಂಠ + ಶೋಷ]

**ಕಂಠಶೋಷಣೆ** (ನಾ). = ಕಂಠಶೋಷ ೧: ಕಪ್ಪುಬಣ್ಣದ ವೈಶ್ಯನೊಬ್ಬ ದೊಡ್ಡದನಿಯಲ್ಲಿ ಕಂಠಶೋಷಣೆ ನಡೆಸಿದ್ದ (ಹೊಸಕ್ಷಿ. ೧೮೩) [ಕಂಠ + ಶೋಷಣೆ]

**ಕಂಠಶ್ರೀ** (ನಾ). ಧ್ವನಿಯ ಸಂಪತ್ತು; ಉತ್ತಮವಾದ ಶಾರೀರ: "ಶ್ರೀಕಂಠಯ್ಯನವರ 'ಕಂಠಶ್ರೀ' ಇತರರಿಗಿಲ್ಲ" (ಕಬಸಾ. XIV, ಪೀಠಿಕೆ); ಕೃಷ್ಣಯ್ಯರ್ ಅವರಿಗೆ . . . ಮಂದರಶ್ರುತಿಯಲ್ಲಿ ಹಾಡಬಲ್ಲ ಕಂಠಶ್ರೀ ಇತ್ತು (ಸಂಗೀತ. ೪೦). [ಕಂಠ + ಶ್ರೀ]

**ಕಂಠಸೂತ್ರ** (ನಾ). ೧. ಹೆಂಗಸರು ಕೊರಳಲ್ಲಿ ಧರಿಸುವ ಸರ: ಈ ಕಂಠಸೂತ್ರಮಿಾ ಕರ್ಣತಾಟಂಕಮಿಾ ಶ್ರೀಕರಂ ನಿಜಜನನಿಗೇಕೆಂದು ಬಿಡಿಸಿದೈ ಸಾಕಿನ್ನು (ಜೈಮಿಭಾ. ೨೩–೫೫). ೨. ಯಜ್ಞಸೂತ್ರ (ಕಿ). ೩. [ಕಾಮಶಾ] ಆಲಿಂಗನದ ಒಂದು ಪ್ರಕಾರ.
[ಕಂಠ + ಸೂತ್ರ]

**ಕಂಠಸ್ಥ** (ಗು). ೧. ಕೊರಳಲ್ಲಿರುವ: ಕಂಠಸ್ಥ ನಕ್ಷತ್ರಮಾಲೆಯಿಂ . . . ಉದ್ಭಾಸಿಸಿದಂ ಸ್ವಯಂವರದೊಳ್ (ಶಾಂತಿಪು. ೫–೧೬೧). (ನಾ). ೨. (ಆಲಂ) ಬಾಯಿಪಾಠ; ಕಂಠಪಾಠ; ಗಟ್ಟಿಮಾಡುವಿಕೆ: ವ್ಯಾಖ್ಯಾನಕಾರನು ಈ ಪದ್ಯಗಳನ್ನು ಕೊಟ್ಟು ಭಾಷಾಭ್ಯಾಸಿಗಳಿಗೆ ಕಂಠಸ್ಥ ಮಾಡಿಕೊಳ್ಳಲು ಅನುಕೂಲ ಮಾಡಿಕೊಟ್ಟಿದ್ದಾನೆ (ಶಮಪಾಂ. ೫೭).
[ಸಂ.]

**ಕಂಠಾಭರಣ** (ನಾ). ಕೊರಳಲ್ಲಿ ಧರಿಸುವ ಆಭರಣ: ಅ ತ್ರೈಭುವನಕಾಂ[ತೆಗಂ] ದಲ್ ಕಂಠಾಭರಣಮೆನೆ ಪರೆದ ತನ್ನಧ್ವರ ಧೂಮುದೆ ಕರಿದು ಮಾಡಿದಂ ನಿಜಯಶಮಂ (ಪಂಪಭಾ. ೧೪–೪೪); ಅವಳ ಕೊರಳಲ್ಲಿದ್ದ ಕಂಠಾಭರಣವನ್ನೂ . . . ಅರಸನ ಮುಂದಿಟ್ಟನು (ಕವಿಕ. ೧೫).
[ಕಂಠ + ಆಭರಣ]

**ಕಂಠಿ** (ನಾ). ೧. ಕಂಠ; ಗಂಟಲು. ೨. ಕೊರಳಲ್ಲಿ ಧರಿಸುವ ಸರ: "ಉರಸ್ಸೂತ್ರಿಕೆ–ಹೊಕ್ಕುಳ ತನಕ ಜೋತಾಡುವ ಮುತ್ತಿನ ಕಂಠಿ" (ಗಂಗಾಮು. ೪೫); ಉಳಿದಾರ ಮುಂಗೆಯ್ಯ ಮುರಿ ಪೆಂಡೆಯ ತೋಳ ಬಳೆ ಕಂಠಿ [ಪಾಠಾಂ. ಕಂಟಿ] ಕಡೆಯ ಕಡುಕಿನಾ ಬಲುರಾಸಿ (ಕುರಾಸಾಂ. ೩೮–೯೫); " . . . ಅವನ ಕೊರಳಿಗೆ ಹಾಕಿದ ಕಂಠಿಯ ಮೇಲೆ ಕೈಯಾಡಿಸುತ್ತಿದ್ದ" (ಆಬೋಲೀ. ೪೭). ೩. ಕುದುರೆಯ ಕತ್ತಿಗೆ ಕಟ್ಟುವ ಹಗ್ಗ. [ಸಂ. ಕಂಠೀ]

**ಕಂಠಿಕಾಬಂಧ** (ನಾ). ಕಂಠಹಾರವನ್ನು ತೊಡಿಸುವುದು: ಯುವರಾಜ ಕಂಠಿಕಾಬಂಧವಂ . . . ನೃಪಂ ನಿರ್ಮಿಸಿದಂ (ಪುಷ್ಪಪು. ೪–೮೩).
[ಸಂ. (ಕಂಠಿಕಾ + ಬಂಧ)]

**ಕಂಠಿಕಾಳಾಯಿ** (ನಾ). ಒಂದು ಸಮುದ್ರಪ್ರಾಣಿಯ ಒಳಚಿಪ್ಪು; ಸಮುದ್ರದ ನೊರೆ: "ಕಫಂ – ಕಡಲನಾಲಗೆ, ಕಂಠಿಕಾಳಾಯಿ" (ಒಷಧಿ. ೧೯). [?]

**ಕಂಠಿಕೆ**$_{1}$ (ನಾ). ಒಂಟಿಳೆಯ ಮುತ್ತಿನ ಹಾರ; ಏಕಾವಳಿ: "ಒಂದು ಸರವಾಗಿರ್ದ ಹಾರಮೇಕಾವಳಿಯು ಕಂಠಿಕೆಯೆನಿಕ್ಕು" (ಮಂಗರಾ. ೧೦೦–೨೪); ಕಪ್ಪುರದ ಕಂಠಿಕೆ ಬಣ್ಣದ ಸಣ್ಣಮಾಲೆ ತೆಂಗಿನ ತಿರುಳೋಲೆ (ಮಲ್ಲಿಪು. ೪–೧೦೮); ಕುಂಡಳಮನಮರ್ಚಿ ಕಂಠಿಕೆಯನರ್ಪಿಸಿ (ಪುಷ್ಪಪು. ೧೧–೭೦); ನಲ್ಗತೆಯಂ ಬಿತ್ತರಿಸಿದೊಡೆ ಅರಮನೆಯೊಳ್ ರನ್ನಗಡಗಮಂ ಪೊನ್ನ ಕಂಠಿಕೆಯಂ ಮೆಚ್ಚನೀವರ್ (ರಾಮಾಶ್ವ. ೫–೧೭).
[ಸಂ. ಕಂಠಿಕಾ]

**ಕಂಠಿಕೆ**$_{2}$ (ನಾ). ಒಂದು ಬಗೆಯ ಹೂವು: ಸುರಗಿ ತಾವರೆಯು ಮಲ್ಲಿಗೆ ಗುಳ್ಳ ಮಂದಾರ ಕುರವಕಂ ಬಹುಕರ್ಣಿಕಾರ ಕಂಠಿಕೆ ಜಾಜಿ ಬಕುಳ ಲೋಧ್ರಂ . . . ಪುಷ್ಪವಿವು ಯೋಗ್ಯ ಶಿವಗೆ (ಗುರುಚಾ. ೭–೧೬).
[?]

**ಕಂಠಿತ** (ಗು). ೧. ದುಃಖಿಸಲ್ಪಟ್ಟ. ೨. ಆತುರವಾದ; ಉತ್ಕಂಠಿತವಾದ (ಕಿ). [ಸಂ.]

**ಕಂಠಿಸರ,** ಕಂಠೀಸರ (ನಾ). ಕಂಠೀರಾಯಿ ವರಹದ ಸರ; ಕಂಠಿಕೆ: ತುದಿಗೆ ಬಂದಿಹುದೆನಲು ಮುಂಗಡೆ ಚದುರನಿರೆ ತ್ರೈವರ್ಷದಣುಗೆಂದು ಸುದತಿ ಕೊರಳಿಗೆ ಕಂಠಿಸರವನುಗೊಳಿಸೆ (ಬಿಜ್ಜಪು. ೮೯–೫೮); ಬಾಚಣಿಗೆಗಳು, ಕಂಠಿಸರಗಳು . . . ಅಲಂಕಾರವಸ್ತುಗಳು ಶಿಲಾಯುಗದ ಪ್ರಾಚೀನ ಸಂಶೋಧನೆಗಳಲ್ಲಿ ಸಿಕ್ಕಿವೆ (ದಭಾಇ. ೧೬). **ಕಂಠೀಸರ:** ಕಂಠೀಸರ, ಕಟ್ಟಾಣಿಸರ . . . ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲೆಮಂ. ೩೮). [ಕಂಠಿ + ಸರ$_{6}$]

**ಕಂಠೀರವ** (ನಾ). ೧. ಗರ್ಜಿಸುವ ಪ್ರಾಣಿ; ಸಿಂಹ: ಆ ರವಮಂ ನಿರ್ಜಿತ ಕಂಠೀರವ ರವಮಂ . . . ಕೇಳ್ದಾ ನೀರೊಳಗಿರ್ದುಂ ಬೆಮರ್ತರ್ ಸುರೆಗಪತಾಕಂ (ಗದಾಯು. ೭–೨೨); ಕಂಠೀರವದ ಮೇಲೆ ಬಿಡುಕೂರಂಬಂ ತಡೆದಿಱ ಪುಲಿಗಳನೆಂಬುಗ್ಗಡವೇಡರ ಪಡೆಯ ರಭಸಮಾಯ್ತುಡವಿಯೊಳಂ (ಹವ್ಮ್ಮಾರ. ೪–೪೩). ೨. ಮದವೇರಿದ ಆನೆ. ೩. ಪಾರಿವಾಳ. ೪. ಮೈಸೂರು ಅರಸರಲ್ಲಿ ಒಬ್ಬ: ಪಂಕಜನೇತ್ರ ಸದೃಶ ಕಂಠೀರವನಂಕಿತ ಕೃತಿಯ ಪೇಳುವೆನು (ಕಂನವಿ. ೧–೨೩).

**ಕಂಠೀರವಗುಳಿಗೆ** = ಕಂಠೀರವರಾಯನ ವರಹ: ೨೦ ಮಟ್ಟನ ಕುರುಚಿಗ್ರಾಮದಲ್ಲಿ ಹೊಲ ಗು ೭ ಉಭಯಂ ಕಂಠೀರವಗುಳಿಗೆ ಇಪ್ಪತ್ತೇಳು ವರಹದ ಹುಟ್ಟುವಳಿ (ಎಕ. IX, ನೆಲಮಂ. ೪–೧೧; 1763).
[ಸಂ.]

**ಕಂಠೀರವಮಧ್ಯೆ** (ನಾ). ಸಿಂಹದ ನಡುವಿನಂತೆ ತೆಳುವಾದ ನಡುವುಳ್ಳವಳು: ವರ ಕಂಠೀರವಮಧ್ಯೆ ಮಿಾನ ನಯನಾಂಭೋಜಾಸ್ಯೆ ಬಾಲೇಂದು ಸೌಂದರ ಫಾಲಾಳಿ ಸುಕೇಶಿ (ಹವ್ಮ್ಮಾರ. ೨–೭೨).
[ಸಂ. ಕಂಠೀರವಮಧ್ಯಾ (ಕಂಠೀರವ + ಮಧ್ಯ + –)]

**ಕಂಠೀರವವಾಹನೆ** (ನಾ). ಸಿಂಹವನ್ನೇ ವಾಹನವಾಗಿ ಉಳ್ಳವಳು; ದುರ್ಗೆ: ಕೂರಸಿಯೊಳ್ ನೆಲಸುಗೆ ಕಂಠೀರವವಾಹನೆ ಚಳುಕ್ಯಕಂಠೀರವನಾ (ಗದಾಯು. ೧–೫).
[ಸಂ. ಕಂಠೀರವವಾಹನಾ (ಕಂಠೀರವ + ವಾಹನ + –)]

**ಕಂಠೀರವಾಸಂದಿ** (ನಾ). ಸಿಂಹಾಸನ: ಸೌಂದರಾನೀಕಮಣಿ ರುಚಿಜಳಸ್ಯಂದಿಯಂ ಮಂದರೋತ್ತುಂಗ ಕಂಠೀರವಾಸಂದಿಯಂ [ಪಾಠಾಂ. ಕಂಠೀರವಸ್ಯಂದಿಯಂ] (ಆದಿಪು. ೭–೨೭ ರಗಳೆ).
[ಸಂ. ಕಂಠೀರವಾಸಂದೀ]

**ಕಂಠೀರಾಯಿ,** ಕಂಟಿರಾಯಿ (ನಾ). ಹದಿನೆಂಟು ಬಗೆಯ ವರಹ ನಾಣ್ಯಗಳಲ್ಲಿ ಒಂದು: ೧೭ ಕಂಠೀರಾಯಿ ಕಿಮ್ಮತ್ತು ರೂ. ೩ ಅ. ೪ (ಕಭಾಗೆ. ೨೮೦); ಹತ್ತು ಹಣಕ್ಕೆ ಕಂಠೀರಾಯಿ ಒಂದು ವರಹ (ಮಹಾವಂ. I, ೯೦). **ಕಂಟಿರಾಯಿ:** ಸಾಗುವಳಿ ಮಾಡಿದ ಕೊಪ್ಪಲ ಭೂಮಿಯಂನ್ನು ಕಂಟಿರಾಯಿ ಗು ೫ (ಮೈಆರಿ. ೧೯೨೯, ೯೪–೩೨; 1813).

**ಕಂಠಿರಾಯಪಗೋಡ, ಕಂಠಿರಾಯಿಹಣ, ಕಂಠೀರಾಯಿವರಹ** = ಕಂಠೀರಾಯಿ: (ಮೈಗಜೆ. IV, ೭೬೬); ಎರಡು ಕಂಠಿರಾಯಿಹಣವನ್ನು ಕೊಟ್ಟು ಮತ್ತೊಂದು ಹಾರವನ್ನು ತೆಗೆದುಕೊಂಡು ಅದನ್ನು ಪಾರುಪತ್ತೆಗಾರನ ಕೈಗೆ ಕೊಟ್ಟ (ಚಂಗಾಳ್ವ. ೩೧೯); ಆ ಕಾಲದಲ್ಲಿ ಠರಾವಾದ ಹುಟ್ಟುವಳಿಯ ಅಂದಾಜು ಕಂಠೀರಾಯಿವರಹ (ಮಹಾವಂ. II, ೩).
[< ಕಂಠೀರವ ?]

**ಕಂಠೀಸರ** 'ಕಂಠಿಸರ' ನೋ.

**ಕಂಠೆಯಭಾರ** (ನಾ). ಒಂದು ಮನೆತನದ ಹೆಸರು; ಒಂದು ಬಿರುದು (?): ಅವದಾತ ಕೀರ್ತಿವಿಭು ಕಣ್ಠೆಯಭಾರದ ನನ್ನಪಯ್ಯಣಾಣನ ತನೆ(ನ)ಯುಂ ವಿವೇಕನಿಧಿ ಕತ್ತಮಹೀಭುಜನೆಂಬ ಪೆಮ್ರ್ಮಗಂ (ಎಇ. XVI, ೪–೪೧; 978). 'ಕಂಟೆಯಬಾರ' ಪಠಾ. [?]

**ಕಂಠೋಕ್ತ** (ಗು). ಸ್ಪಷ್ಟವಾದ; ಮರೆಮಾಚದ: ಗಂಡನ ಸೋವಾರಿತನಕ್ಕೆ ಅವನ ಉತ್ತೇಜನವೇ ಕಾರಣವೆಂದು ಆಕೆ ಕಂಠೋಕ್ತವಾಗಿ ಹೇಳಿ ಅವನಿಗೂ ಹಿಡಿಶಾಪ ಹಾಕಿದಳು (ಯೋಧಪು. ೬೮).
[ಕಂಠ + ಉಕ್ತ]

**ಕಂಠೋಷ್ಠ್ಯ** (ನಾ). [ವ್ಯಾಕ] ಗಂಟಲು ಮತ್ತು ತುಟಿ ಎರಡೂ ಸ್ಥಾನಗಳಲ್ಲಿ ಕೂಡಿ ಉಚ್ಚಾರವಾಗುವ ವರ್ಣ: ಕಂಠೋಷ್ಠ್ಯ– ಔ (ಕೈಪಿಡಿ. ೫). [ಸಂ. (ಕಂಠ + ಓಷ್ಠ + –)]

**ಕಂಠ್ಯ** (ನಾ). [ವ್ಯಾಕ] ಗಂಟಲಿನಲ್ಲಿ ಹುಟ್ಟುವ ವರ್ಣ: ಕಂಠ್ಯ – ಅ, ಆ, ಕವರ್ಗ, ಹ (ಕೈಪಿಡಿ. ೫). [ಸಂ.]

**ಕಂಡ**$_1$, ಕಂಡು$_2$, ಖಂಡು$_1$ (ನಾ). ೧. ತುಂಡು; ತುಣುಕು; ಭಾಗ: "ಖಂಡ – ಕಂಡ" (ಶಮದ. ೨೫೫ ಪ್ರಯೋ); "ಕಂಡವೆನಲ್ಕೆ ತುಂಡಿಸೊಳ್" (ಕರ್ಣಾನಿ. ೩೩); ವಜ್ರತುಂಡ ಹತಿಗಂ ಮೆಯ್ಯ್ಮಾಂತು ಕಂಡಂಗಳುಳ್ಳಿನಮುಂಗಂಗಳನೊಡ್ಡಿಯೊಡ್ಡಿ (ಪಂಪಭಾ. ೪–೨೬). ೨. ಖಂಡ; (ಮೂಳೆಯಿಲ್ಲದ) ಮಾಂಸ: ಇಱಿದು ಕಣ್ಡಕಣ್ಡಮಾಗಿ ಸತ್ತಾನ್ (ಎಕ. II, ೨೪೮–೭; 860); ನಭಂಬರಂ ಸಿಡಿಲ್ವ ಪಂದಲೆ ಸೂಸುವ ಕಂಡದಿಂಡೆಗಳ್ (ಪಂಪಭಾ. ೧೧–೫೮); ಕಂಡದಿಂಡೆ ಕೋಟ್ಯ್ಮದುಳ ರಾಶಿ ನೆಣದುರ್ವು ಪರ್ವೆ (ಪಂರಾಮಾ. ೧೪–೭); ನಿಡಿಗರುಳ ಕಂಡದ ಕಾಳಿಜದ ನೆತ್ತರಿನ ನಿಡುಗಲ್ಲಾಯ್ತು ರಣಭೂಮಿ (ಉತ್ತರಾ. ೮–೭೭). **ಕಂಡು**$_2$: ೧. ಕಂಡಿಂದ ಕೆಳಗೆಂಟು ಕಂಭವ ಕಾಲಂತೆ ಕಂಡರಿಸಿದನೊಡನವನು ಕಂಡರೊಂದಾಯುತವಾಗಿದ್ದುದದಕೊಲ್ದು ಕೊಂಡಾಡಿದರು ನೃಪಸುತನ (ಭರಚ. ೭೫–೧೭); ಬಾಳೆಎಲೆ ಆರಿಸುವಾಗ. . . ಕೀತು ಹಾಕುವುದೊ? ಕುಡಿ ಹಾಕುವುದೊ? ಕಂಡು ಹಾಕುವುದೊ? (ಮಲೆಮ. ೨೩೫). **ಖಂಡು**$_1$: ೧. ಖಂಡನಂ, ಖಂಡನೀಯಂ, ಖಂಡಿಃ, ಖಂಡುಃ, ಈ ೪ ಸರಿಪಾಲ್ (ಕಾಶಕ್ಯ. ೧೦೨). ೨. ಉರಿತ್ತೈಲದೊಳಗ್ಹಾಕಿ ಗುಂಡು ಕರಿದ ತೆಱನಾಗಿ ಹಂದಿಯ ತಿನಿಸುವ ಖಂಡು (ಪುರಂದ. ೫–೬೮–೩).
[< ಸಂ. ಖಂಡ]

**ಕಂಡ**$_2$ (ನಾ). ಬಾಳೆಯ ಕಂದು (?): ಮಹೇಶ್ವರ ಭಟ್ಟೋಪಹಿತಾಗ್ನಿಗಳಿಂಗೆ ಮುಡಿತಿನಿ ಹಲಸಿನ ಗದ್ದೆ ಗೊರಂಟಿ ಅರಟಿ ಕಂಡ ಸಹಿತ ಗದ್ದೆ ಮೂಡೆ ೧೦ (ಎಇ. XXVII, ೨೮–೩೪; 1256); ಹೊಂನೆಯ ಮಾಲು ಅರಟಿ ಕಂಡ ಎಕ್ಕಲಗದ್ದೆ ಬಟ್ಟಗದ್ದೆ ಕಾಳುವ ಗದ್ದೆ ಸಹಿತಮಾಗಿ (ಎಇ. XXVII, ೨೮–೪೦; 1256). [?. / ತುಳು. ಕಂಡೊ = ಹೊಲ, ಭೂಮಿ]

**ಕಂಡ**$_3$ 'ಕಾಣ್' ಪರಾ.

**ಕಂಡಗೂಳಿ** (ನಾ). ಒಂದು ಸ್ಥಳದ ಹೆಸರು (?): ಅಂನ್ಯಾಯತದ ಬಿರಿದು ಮೂಜು ಕಂ[ಡ]ಗೂಳಿಯ ಹರಿಗೆಯ ಹಿಡಿದು ಜಕಂಣ ನಾಯಕನಿಂದಲ್ಲಿ (ಕಇ. I, ೩೬–೭; ಸು. 1398). [?]

**ಕಂಡಗೆ** 'ಖಂಡುಗ' ನೋ.

**ಕಂಡಣಿಸು** 'ಕಂಡರಿಸು' ನೋ.

**ಕಂಡಣೆ**, ಕಂಡನೆ (ನಾ). ಅಂತಿಮ ತೀರ್ಮಾನ; ಒಪ್ಪಂದ (ಕ). **ಕಂಡನೆ**: (ಕ).

**ಕಂಡಣೆಪತ್ರ** = ಕರಾರುಪತ್ರ; ಒಪ್ಪಂದದ ಕಾಗದ (ಕ). **ಕಂಡಣೆ ಹಣ** = ನಿಗದಿಯಾದ ಹಣ (ಕ). [< ಸಂ. ಖಂಡನ]

**ಕಂಡನಿ** (ನಾ). ೧. ಒರಳು. ೨. ಒನಕೆ: ಚುಲ್ಲಿ ಪೇಷಣಿ ಕಂಡನಿ ಉಪಸ್ಕರ ಉದಕುಂಭ ಎಂಬೈದು ಗೃಹೋಪಕರಣಗಳೂ ಹತ್ಯಾಕಾರಕಗಳು (ಆರ್ಯಧ. ೧೪೭). [ಸಂ. ಕಂಡನೀ]

**ಕಂಡನೆ** 'ಕಂಡಣೆ' ನೋ.

**ಕಂಡಪಟೆ** 'ಕಂಡವಡ' ನೋ

**ಕಂಡಪಿಳ್ಳೆ** (ನಾ). "ಗರ್ಭದೊಳಗಿನ ಕೂಸು, ಮಾಂಸದ ಪಿಂಡ" (ಮೋಳಿಮಾ. ಕೋಶ): ಐಕ್ಯನಾದಲ್ಲಿ ಕಂಡಪಿಳ್ಳೆಯಂತಿರಬೇಕು (ಮೋಳಿಮಾ. ೧೪೩–೫೧೮). [ಕಂಡ ? + ಪಿಳ್ಳೆ]

**ಕಂಡಬಟ್ಟೆ** 'ಕಂಡಾಬಟ್ಟೆ' ನೋ.

**ಕಂಡಭೂಮಿ** (ನಾ). ಗದ್ದೆಯ ಭಾಗ; ಭೂಮಿಯ ಭಾಗ: ಮತ್ತಮಾ ಪ್ರಭುಗಳ್ಗೆ ಅಳದು ಕಣ್ಡಭೂಮಿಗೆ ನೂಱಕ್ಕೆ ಹತ್ತಱೋಪಾದಿಯ ದಶವನ್ಧಮನಿಕ್ಕಿ (ಎಇ. XVI, ೪೮–೫೨; 1147). [ಕಂಡ$_1$ + ಭೂಮಿ]

**ಕಂಡಮಂಡಲ** (ನಾ). ಅಲ್ಲಲ್ಲೇ ಹರುಕುಮುರುಕಾಗಿ ಬೀಳುವ ಮಳೆ; ಖಂಡವೃಷ್ಟಿ (?): ಅಲ್ಲಿಂದ ಮೂಱುವರ್ಷ ಮಳೆ ಬೆಳೆ ಕಂಡಮಂಡಲವಾದದ್ದೆ ಕುಱುಹು (ಕಾಲಸಂ. ೮೯–೧೧); ಮೂರು ಆರು ಉಳಿದರೇ ಕಂಡಮಂಡಲ ಬಾಗಿ ಹರಿದರೆ ದುರ್ಭಿಕ್ಷ ತಪ್ಪದೂ (ಮನೆಲ. ೧೮–೩). [?]

**ಕಂಡಮ್ಮಯ್ಯ** (ನಾ). ಒಬ್ಬಾತನ ಹೆಸರು: ಮರಂಗಲ್ಲೊಡೆಯ ಕಣ್ಡಮ್ಮಯ್ಯನಾ ಮಗನ್ ವಿಲಗಣ್ಡಯ್ಯನು (ಎಕ. X, ಚೌರಂಗ್. ೬೪–೫; 900). [ಕಂಡ$_0$ + ಅಮ್ಮ$_1$ + ಅಯ್ಯ$_1$]

**ಕಂಡರಣೆ** (ನಾ). ಕಡೆಯುವಿಕೆ; ಕೊರೆಯುವಿಕೆ; ಕಲ್ಲು, ಲೋಹ ಮೊದಲಾದವುಗಳಲ್ಲಿ ಕೊರೆಯುವಿಕೆ: ಸೂಣ್ಡಿಯ ಸೋವೋಜನ ಕಣ್ಡರಣೆ ಮಙ್ಗಳಂ (ಸೌಇಇ. XI–i, ೮೪–೯೦; 1049); ಕಲ್ವೆಸದೋಜಗೆ ನಚ್ಚಿನಚ್ಚು ಕಂಡರಣೆಗೆ ಮಂಡನಂ ಮರವೆಸಕ್ಕೆಱೆವಟ್ಟು (ಮಲ್ಲಿಪು. ೨–೭೬); ಪೊಂಬೊಳಲ ಮಾರೆಯಭಟ್ಟರ ಬರೆಪ ರೂವಾರಿ ಸೊಸೆನೋಝನ ಕಣ್ಡರಣೆ (ಸೌಇಇ. XV, ೨೨–೧೦೧; 1142); ಕಡಪದ ಕಂಡರಣೆಯ ಬೇಗಡವೆಸೆದ ವಿಚಿತ್ರಮಪ್ಪ ಕೆಲಸದ ಗತಿಯಂ ನಡೆನೋಡಿ (ಬಾಧಪು. ೧–೧೫೭); ಯಾವ ಚಕ್ರವರ್ತಿಯ ವಿವಾಹಮಂಟಪ ಈ ತೆರನಾದ ಕಂಡರಣೆಯ ಕೌಶಲವನ್ನು ತೋರಿಸಬಲ್ಲುದು! (ಪಂಯಾತ್ರಿ. ೨೫). [?]

**ಕಂಡರಣೆಕಾರ** (ನಾ). ಕಂಡರಣೆಯ ಕೆಲಸ ಮಾಡುವವನು; ಅಕ್ಷರ, ಚಿತ್ರ ಮೊದಲಾದುವನ್ನು ಕೊರೆದು ಮೂಡಿಸುವವನು; ಶಿಲ್ಪಿ: ಇವುಗಳ ಜೊತೆಗೆ ಲಿಪಿಕಾರನ ಮತ್ತು ಕಂಡರಣೆಕಾರನ ತಪ್ಪುಗಳೂ ಸೇರಿಕೊಳ್ಳುತ್ತವೆ (ಕನ್ನಸಂ. ೬೧).
[ಕಂಡರಣೆ + –ಕಾರ$_1$ (< –ಕಾಱ)]

**ಕಂಡರಣೆಗೆಯ್** (ಕ್ರಿ). = ಕಂಡರಿಸು ೧: ಬಳ್ಳಿಮಿಂಚಿನೊಳ್ಗುಡಿಯನೆ ಕೊಂಡು ಕಂಡರಣೆಗೆಯ್ದರೊ ಪೇೞನೆ (ಅನಂಪು. ೬–೧೯).
[ಕಂಡರಣೆ + ಗೆಯ್ (< ಕೆಯ್$_1$)]

**ಕಂಡರಿಸು**, ಕಂಡಣಿಸು, ಕಂಡಳಿಸು, ಖಂಡರಿಸು (ಕ್ರಿ). ೧. ಕೆತ್ತನೆ ಕೆಲಸಮಾಡು; ಕಡೆ; ಕೊರೆದು ಮೂಡಿಸು: ಎಸಟ್ಗಳನೆಯ್ದೆ ಕಂಡರಿಸಿ ಮುತ್ತಿನೊಳಲ್ಲಿ ಸುವರ್ಣಚೂರ್ಣಮಂ ಪಸರಿಸಿ (ಆದಿಪು. ೧೧–೧೧೬); ದಿನಕರಸುತವಚನಂ ರಾಮನೆನಿಸು ಕಂಡರಿಸಿ ಕಲ್ಲೊಳಿಟ್ಟಕ್ಕರಮುಮೆಂಬಿನೆಗಮೆಸೆದಪುದು ನೃಪಶಾಸನಂ (ಅಜಿಪು. ೧೨–೨೫); ಈ ಶಾಸನಮಂ ಬೂವೋಜನ ಮಗಂ ಬಮ್ಮೋಜ ಕಂಡರಿಸಿದಂ (ಎಕ. VIII, ಸಾಗರ. ೧೨೯–೭೧; 1042); ಕರಗಿ ಕಾಸಿದ ವಿದ್ಯೆಯನು ಬೇಱರಿಸಿ ಶುದ್ಧಬ್ರಹ್ಮವನು ಕಂಡರಿಸಿದಂತಿರಲೆಸೆವ ಶಿವನನು ಕಂಡನಬುಜಭವ (ಕುವ್ಯಾಕ. ೬–೧೬); ಕರು ಮಾಡದಿ ಕಂ[ಪಾಠಾಂ. ಖಂ]ಡರಿಸಿದ ಜಾಳಾಂದರದೊಳು ರಾಜಾಂಗನೆಯರು (ಕುರಾಸಾಂ. ೪೦–೭೩). **ಕಂಡಣಿಸು**: ೧. ರಾವಣನಾಕ್ಷಣದೊಳು ತನ್ನ ಪುಷ್ಪಕಮಂ ಅಣೆದೆಡರ್ದೆಸೆದನಾದಿತ್ಯಬಿಂಬದೊಳು ಕಂಡಣಿಸಿದ ರಾಹುವಂದದಲಿ (ಅಂಜಚ. ೧೩–೧೧೦); ಮನೋಹರದ ಸಿದ್ಧಿಗಳನೊಳಕೊಂಡು ಕಾರದ ವಿಚಿತ್ರರ ಕೆಲಸಗತಿಯಂತೆ ತೋಱಿಕೊಂಡೆಸವುತ್ತ ಕಂಡಣಿಸಿ (ವೀಶೈಪು. ೮–೨೦–೨೫).

೨. ತುಂಡುಮಾಡು: ಕಡಿವ ಕಂಡಣಿಸಿ ದಾಂಟುವ ಕೈದುಡುಕಿದೊಡೊಡನೆ ಮುರಿವ ಮೇಘಪಥಕೆ ಬಿಡದಡರುವ ಬಿರುದಿನ ಬಹುತುರಗವ ಪೊಡವಿಪರಿಗೆ ತೋಱಿದರು (ಅಂಜಚ. ೬-೯೨). **ಕಂಡಳಿಸು**: ೧. ಕಂಡಳಿಸಿದ ಕರ್ಪುರದ ಕರಂಡಗೆಯಂ ನಗುವ ಬಾಯ್ದೆಱೆಗೆ (ಪಾರ್ಶ್ವಪು. ೧೦-೪೦); ಪಳುಕಿನ ಭಿತ್ತಿಯಿಂದೆ ಶಶಿಕಾಂತದ ಬಾಗಿಲು ವಾಡದಿಂದೆ ಕಂಡಳಿಸಿದ ವಜ್ರವೇದಿಕೆಗಳಿಂ (ಧರ್ಮಪ. ೧-೬೪). **ಖಂಡರಿಸು**: ೧. ಬರೆದಂ ಪೆಗಂ ಖಣ್ಡರಿಸಿದಂ ಪದುಮ್ಯ (ಎಕ. VII, ಶಿಕಾರಿ. ೯-೧೭; 1021); ಮಾಳೋಜಂ ಸಾಸನಮಂ ಅಕ್ಕರಮಂ ಖಣ್ಡರಿಸಿದಂ (ಮೈಆರಿ. ೧೯೩೦, ೭೩-೫೩; 1080); ಬಿರುದ ರೂವಾರಿ ಮುಖತಿಳಕಂ ವರ್ದ್ಧಮಾನಾಚಾರಿ ಖಂಡರಿಸಿದಂ (ಎಕ. II, ೭೩-೫೩; 1118). ೨. ಹಿಡಿಂಬನ ಹಿಂಡಿ ಬಕಾಸುರನ ಖಂಡರಿಸಿ ಕೀಚಕನ ಮಂಡಲದೊಳಗೆ ನಿಂದೆ (ವಿಪಕೀ. ೬೦). [ಕಂಡರಣೆ + -ಇಸು$_3$]

**ಕಂಡರಿ** (ನಾ). ದೇಹದೊಳಗಿನ ಮುಖ್ಯವಾದ ರಕ್ತನಾಳ (ಕಿ). [ಸಂ. ಕಂಡರಾ]

**ಕಂಡಲಿ** (ನಾ). ಅಟ್ಟೆಯನ್ನು ಕತ್ತರಿಸಲು ಉಪಯೋಗಿಸುವ ಕಡಿಗತ್ತಿ (ಕಿ). [?]

**ಕಂಡವಡ**, ಕಂಡಪಟ (ನಾ). ತೆರೆ; ಜವನಿಕೆ: "ಕಂಡವಡಂ ತೆಱೆ ಸೀರೆ" (ಕರ್ಣಾನಿ. ೪); ತಳಿರ್ಗಳ ಕಂಡವಡಂ [ಪಾಠಾಂ. ಪಟಂ] ಗಳೆ ತಳಿರ್ಗಳ ಪಾಸುಗಳೆ (ಆದಿಪು. ೧೧-೭೯). **ಕಂಡಪಟ**: "ಕಾಂಡಪಟ – ಕಂಡಪಟ" (ಶಮದ. ೨೭೦ ಪ್ರಯೋ); ಅಮರೆ ಮಾಡಿದ ಬಿಟ್ಟುಳಿಯ ಕಕ್ಕುಂಬ ತೊಡಂಬೆಯ ಮೂಡಿಗೆಯ ಕದಳಿಕೆಯ ಕಂಡಪಟಂಗಳುಮಂ (ಪಂಪಭಾ. ೫-೪೭ ವ). [< ಸಂ. ಕಾಂಡಪಟ. / ತೆಲು. ಕಂಡವಡ]

**ಕಂಡವಿಡು** (ಕ್ರಿ). ಪುಷ್ಟವಾಗು; ಮಾಂಸಖಂಡಗಳು ತುಂಬಿಕೊಂಡು ದಪ್ಪವಾಗು (ಕಿ). [ಕಂಡ$_1$ + ಇಡು$_1$. / ತೆಲು. ಕಂಡಪಟ್ಟು]

**ಕಂಡಸಕ್ಕರ್** (ನಾ). ಒಂದು ಮನೆತನದ ಅಥವಾ ಒಬ್ಬಾತನ ಹೆಸರು (?): ಮಿದಿಲೆಯ ಕದುಯ್ಯ ಭರತಯ್ಯ ದಿಟ್ಟಯಮ್ಮ ಅಮ್ಮಣಬೀಯವರು ಕಂಡಸಕ್ಕರ ಕಸವಣ್ಣ ಕುಣ್ಣನಗಮ್ಮ ದುಗ್ಗಯ್ಯ ಇನ್ತಿನಿಬರಾ ದತ್ತಿ (ಎಕ. XVI, ತುಮಕೂ. ೮೧-೧೫; 903). [?]

**ಕಂಡಸಕ್ಕರೆ**, ಖಂಡಸಕ್ಕರೆ (ನಾ). ಕಲ್ಲುಸಕ್ಕರೆ: ಅಮೃತದ ಕಂಡಸಕ್ಕರೆಯ ಕೂಟಮುಮೊಲ್ಲಳ ಕೂಟಮುಂ ಸಮಾನಮೆ ವಲಂ (ಕಾವ್ಯಾವ. ೧೪೪). **ಖಂಡಸಕ್ಕರೆ**: ಖಂಡಸಕ್ಕರೆ ಚಿಲುಪಾಲು ಗಾರಿಗೆ ವಡೆ ಮಂಡಿಗೆ ಕಜ್ಜಾಯಗಳ ತಂಡತಂಡದೆ ರಾಸಿಗೈದು ನೈವೇದ್ಯವ ಚಂಡಿಕಾಂಬಿಕೆಗರ್ಪಿಸಿದರು (ಕಂಸವಿ. ೨೨-೨೮). [< ಸಂ. ಖಂಡಶರ್ಕರಾ]

**ಕಂಡಸಿ** (ನಾ). ಒಂದು ಬಗೆಯ ಸಸ್ಯ: ಬೆಲ್ಲವತ್ತಂ ಬೇವು ಬಿಕ್ಕೆ ಕಂಡಸಿ ತಪಸಿ (ಸಿದ್ಧಕಾ. ೬-೧೭); ಕಂಡಸಿ ಸೊಪ್ಪಂ ಅರೆದು ಮೊಸರಲ್ಲಿ ತೆಗೆದುಕೊಳ್ಳಲು ಮೋಹ ಗುಣ (ವಿವೈವಿ. ೪). [?]

**ಕಂಡಳಿ** (ನಾ). ಅಯ್ಯಾವೊಳೆ ಐನೂರ್ವರ ಒಂದು ಬಿರುದು; ಒಂದು ವಂಶದ ಹೆಸರು (?): ಲಕ್ಷ್ಮೀವಕ್ಷಸ್ಥಳಂ ಸರಾಳಿಂಗಿತ ಭುವನಪರಾಕ್ಕ್ರಮಂ ವಾಸುದೇವ ಕಣ್ಡಳಿ ಮೂಳಭದ್ರೋದ್ಭವ[ಂ] ಭಗವತೀ ವರಪ್ರಸಾದಂ (ಕಇ. IV, ೫೫-೬; 1000); ಜಯವಧೂಲೋಲರ್ ಕಣ್ಡಳೀಮೂಳಭದ್ರೋದ್ಭವ ವೀರಾವತಾರರೇಕೈಕವೀರರ್ (ಸೌಇಇ. IX-i, ೧೧೧-೧೯; 1045). [?]

**ಕಂಡಳಿಸು** 'ಕಂಡರಿಸು' ನೋ.

**ಕಂಡಾಪಟ್ಟೆ** 'ಕಂಡಾಬಟ್ಟೆ' ನೋ.

**ಕಂಡಾಬಟ್ಟೆ**, ಕಂಡಬಟ್ಟೆ, ಕಂಡಾಪಟ್ಟೆ (ಅ). ಮನ ಬಂದಹಾಗೆ; ಮಿತಿಯಿಲ್ಲದೆ; ಸಿಕ್ಕಾಪಟ್ಟೆ: ಈಗ ಅವು ಸ್ವಲ್ಪಮಟ್ಟಿಗೆ ಅಲಭ್ಯವಾದವು. ಇದ್ದವುಗಳ ಬೆಲೆ ಕಂಡಾಬಟ್ಟೆ (ಕೈಹಿಕಾ. ೩೧); ಅಹಲ್ಯೆಯ ಮನಸ್ಸು ಹಾದಿಬಿಟ್ಟು ಕಂಡಾಬಟ್ಟೆ ಅಲೆಯತೊಡಗಿತು (ಅಹಲ್ಯೆ. ೧೨೧); ಕ್ರಮ ತಪ್ಪು ಎಂದು ಕಂಡಾಬಟ್ಟೆ ಯಾರೂ ಹೇಳಿದ್ದಿಲ್ಲ (ಪಂಜೆನಿ. II, ೯೨); "ಗೌಡರು ಕಂಡಾಬಟ್ಟೆ ಬೈದರಲ್ಲಾ ಇವತ್ತು, ನನಗೆ? . . . ಇವತ್ತಾದ್ರೂ ಹೋಗಿ ಹೇಳಿಬಿಡ್ತೀನಿ" (ಮಲೆಮ. ೪೭೧). **ಕಂಡಬಟ್ಟೆ**: ಅಟ್ಟಿದ ಕೌರವ ಬಲವಾ ಕಂಡಬಟ್ಟೆ ಮಾಡಿದ ದಿಬ್ಬಣವಾ (ಕನಕಾಂ. ೫೧). **ಕಂಡಾಪಟ್ಟೆ**: ನೊಗಲ ಪ್ರಜೆಗಳನ್ನು ಕಂಡಾಪಟ್ಟೆ ಕೊಳ್ಳೆ ಹೊಡೆದು ನಿಂತೆಡೆ ನಿಲ್ಲದಂತೆ ಅವರನ್ನು ಗೋಳಾಡಿಸಿರುವನು (ಹಂಕಿರು. ೪೦); ಕೆಲವು ಜನರು ಕಂಡಾಪಟ್ಟೆ ಮಾತನಾಡುತ್ತಿದ್ದರು (ದಂಬನಾ. ೮೩). [ದೇ. ‖ ತಮಿ. ಕಣ್ಡಮಟ್ಟುಂ = ಹೆಚ್ಚಾಗಿ]

**ಕಂಡಾಲ** 'ಕಂಟಲೆ' ನೋ.

**ಕಂಡಾಳು** (ನಾ). ಒಂದು ಔಷಧಿ ಸಸ್ಯ: ಕಂಡಾಳು, ಕಾಡುಬೆಣ್ಣೆ ಬಿದಿರುಸೊಪ್ಪು (ಮೈಔಗಿ. ೨೪-೪೩೯). [?]

**ಕಂಡಿ$_1$**, ಖಂಡಿ$_1$ (ನಾ). ೧. ಕಿಂಡಿ; ರಂಧ್ರ: ಎಸೆವಂಬುಗಂಡಿ ಪೆಟಲ ಕಂಡಿ ಸುಭಟರು ಮುಸುಕಿ ಹೊಯ್ದಾಡುವ ಕಂಡಿ (ಕುರಾಸಾಂ. ೩೭-೫೨); ಪ್ರಕಾಶನವು ಬೆಳಕಿನ ಕಂಡಿ, ಕಾಲ ಮತ್ತು ಹಿಂದಿರಿಸಿದ ರಾಸಾಯನಿಕ ಪ್ಲೇಟ್ ಇಲ್ಲವೆ ಪಟಲ (Film) ಇದರ ಸೂಕ್ಷ್ಮತೆ ಇವುಗಳನ್ನು ಹೊಂದಿದೆ (ಬಾಲಪ್ರ. II, ೯೫೪). ೨. ರಹಸ್ಯ; ಮರ್ಮ: ಕಂಡನಾತನ ಕಪಟವೇಷದ ಕಂಡಿಯನು ನೆಱೆ ನೋಡಿ ಭಾವಿಸಿ ದಂಡನಾಯಕ ಬಳಿಕ ನಿಶ್ಚಯಿಸಿದನು ಗುರುವೆಂದು (ಪ್ರಭುಲೀ. ೨೨-೩೮). ೩. ಮೃಗಗಳು ಕಾಡಿನಿಂದ ಕಾಡಿಗೆ ಹೋಗುವ ಅಥವಾ ಬರುವ ಸ್ಥಳ,—ಎಡೆ: ಮೃಗಮಂ ಗಾಳಿಯನಿರ್ಕೆಯಂ ಪಕ್ಕೆಯಂ ಗಣಿದಮಂ ಕಂಡಿಯಂ ಮಾರ್ಕಂಡಿಯಂ ಪುಗಿಲಂ ಪೋಗಂ (ಪಂಪಭಾ. ೫-೪೩); ನಾಯ ಬಾಯ ಮೊಲನಂ ಕೈಗುತ್ತಿ ಕೊಲ್ ಕಂಡಿಯೊಳ್ ಕೆಡೆ ಕುತ್ತೆಚ್ಚಿಸು ಮೇಲೆ ಪಾಯ್ವ ಪುಲಿಯಂ (ಸೂಕ್ತಿಸು. ೩-೧೧೫); ಬಿಲ್ಲಿನವರು ಜೀವಾದಿಗಳು ಆ ಕಾಡಿನಿಂದ ಇನ್ನೊಂದು ಕಾಡಿಗೆ ಓಡುವ ಜಾಗಗಳನ್ನು . . . ತಮ್ಮ ಪರಿಭಾಷೆಯಲ್ಲಿ "ಕಂಡಿ" ಎಂದು ಕರೆಯುತ್ತಾರೆ (ಮಲೆಚಿ. ೫). ೪. ಗುಪ್ತದ್ವಾರ: ಭಂಡನ ಕಂಡರೆ ಕಂಡೀಲಿ ಆದರೂ ಹೋಗಬೇಕು (ರೂಢಿ). **ಖಂಡಿ$_1$**: ೧. ಕರುಳ್ಸೂಸಿದೊಡಂ ಖಂಡಿಯ ಬಾಯಿಂ ತೊಲಗದೆ ಕಂಡರ್ ಕಂಟಳಿಸೆ ಕಾದಿದರ್ (ಪಾರ್ಶ್ವಪು. ೩-೧೫೧); ಸುಪ್ರಚಂಡನೆಂಬುದೂ ಕಂಡಿತೀಗ ಮಯ್ಯೊಳಿರುವ ಖಂಡಿ ಪೇಳ್ವುದೂ (ರಾವಸೋ. ೮).

**ಕಂಡಿಮಾಡು** = ತೂತುಮಾಡು: ಧಾತ್ರಿಯನೊಯ್ಯನೆ ಕಂಡಿಮಾಡಿ ಕಣ್ ತಣಿವಿನಮಂದು ನಿಂದಿಱಿದ ಕೊಳ್ಳುಳನಂ ನಡೆನೋಟ್ಟುಹಿಂದ್ರರೊಳ್ (ಪಂಪಭಾ. ೧೧-೪೧).

[ದೇ. ‖ ಮಲ. ಕಣ್ಡಿ; ತುಳು. ಕಂಡಿ, ಖಂಡಿ, ಗಂಡಿ; ಕೊಡ. ಕಂಡಿ; ತೆಲು. ಗಂಡಿ, ಗಂಡಿಕ]

**ಕಂಡಿ$_2$** 'ಖಂಡಿ$_2$' ನೋ.

**ಕಂಡಿಕೆ$_1$**, ಕಂಟಿಕೆ$_1$ (ನಾ). ಲಾಳಿಯಲ್ಲಿ ಸೇರಿಸುವ ನೂಲಿನ ಉಂಡೆ,—ದಾರದ ಉಂಡೆ: ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು (ದೇದಾವ. ೬೦-೧೯೭). **ಕಂಟಿಕೆ$_1$**: (ಕಿ).

**ಕಂಡಿಕೆಮುಳ್ಳು** = ಕಂಡಿಕೆಯನ್ನು ಸೇರಿಸುವುದಕ್ಕಾಗಿ ಲಾಳಿಯಲ್ಲಿ ಜೋಡಿಸಿದ ಮುಳ್ಳಿನಂತಹ ಕೊಕ್ಕೆ (ಕಿ).

[ಕಂಡು$_1$ + -ಇಕೆ. / ತಮಿ. ಕಣ್ಡು; ತೆಲು. ಕಂಡೆ, ಕಂಡಿಯ]

**ಕಂಡಿಕೆ$_2$** (ನಾ). ೧. ತುಂಡು; ಚೂರು: "ತುಂಡಿನಲ್ಲಿ ಕಂಡಿಕೆ ಯೆಂಬುದಕ್ಕು" (ಕಬ್ಬಿಗ. ೭೩); ಕಡಿದಿಕ್ಕಿದ ಬೆರಲ ಕಂಡಿಕೆಗಳಿಂ ಪಸಿಯ ರಸಿನದ ಕೊಂಬನುಡಿದು ಸುಣ್ಣಂದೊಡೆದೀಡಾಡಿದಂತಾಗೆ (ಅರ್ಧನೇ. ೫-೨ ವ); ಕರಿಯ ಕರ್ಬಿನ ಕಂಡಿಕೆಗಳೊ ಕರಶಾಖೆಗಳೊ (ಸಮ್ಯಕೌ. ೧೦-೩೦); ಚಂಡಿಮಾಡಿದ ಶಿಶುಗಳಿಗೆ ಕಬ್ಬಿನದೊಂದು ಕಂಡಿಕೆಯನು ಕೊಡುವಂತೆ (ಭರತ. ೪೯-೧೪೩). ೨. "ಭಾಗ, ಏಕ ದೇಶ" (ಲಶಿಚಿಂ. ಕೋಶ): ಪಾಳಿಯೊಳ್ ನಿಜೇಗೆ ಪದವರ್ಧರುಚಿ ಕಂ[ಪಾಠಾಂ. ಖಂ]ಡಿಕೆಗಳೋಳಿಯಿಂ ಪಠಿಸುತಾ ಪದಗಳಂ ಛೇದಿಸುವ ಪೇಳುತಿಪ್ಪಾ ಕ್ರಮವ ನಾರಣಂ ಬ್ರಾಹ್ಮಣಂ ಸೂತ್ರಮಂ ನೆಲೆಯಜೇವುತ (ಲಶಿಚಿಂ. ೩೮-೫); ಮೊದಲಾದ ಸಂಗತಿಗಳೆಲ್ಲವೂ ಶತಪಥದಲ್ಲಿ ಹತ್ತನೆಯ ಕಂಡಿಕೆಯವರೆಗೂ ಪ್ರಸಕ್ತವಾಗಿದೆ (ಭಾರದ. ೧೪೩). ೩. ಕಾಂಡ: "ನಾಳಂ, ಕಾಂಡಂ – ಈ ೨ ಕಂಡಿಕೆ" (ಹಲಾಯು. ೯೫-೪೨೫). [< ಸಂ. ಖಂಡಿಕಾ]

**ಕಂಡಿಕೆವಣ** (ನಾ). ಒಂದು ಬಗೆಯ ತೆರಿಗೆ (?): ಎಳ್ಳು ಜೋಳ ನಲ್ಲಾವು ನಲ್ಲೆತ್ತು ಕಳುಕು ಕಂಡಿಕೆವಣ ಖಾಣ ನಿಬನ್ಧಿ ನೂಲ ಹದಿಕೆ ಅಡಕೆಯ ಸುಂಕ (ಎಕ. VI, ತರೀಕೆ. ೨೦-೨೮; 1185); ತೊಡರು ನಲಾವು ನಲ್ಲೆತ್ತು ಕಳುಕು ಕಂಡಿಕೆವಣ ಆನೆಯ ಸೇಸೆ ಕುದುರೆಯ ಸೇಸೆ ಕುಮಾರಗಾಣಿಕೆ (ಮೈಆರಿ. ೧೯೪೦, ೩-೨೫; 1206); ಕಂಡಿಕೆವಣ ಪಣ ೨ ವತ್ತಗದ್ಯಾಣ ೧೫ (ಎಕ. V, ಬೇಲೂರು. ೭೪-೧೩೪; 1216). [ಕಂಡಿಕೆ$_1$? + ಪಣ$_1$]

**ಕಂಡಿತ$_1$** (ನಾ). ನಿಶ್ಚಿತವಾದ ಅಭಿಪ್ರಾಯ: ಕಂಡಿತಮಪ್ಪ ಪರತತ್ತ್ವ ವಿಷಯವನು ಕಂಡು ನಂಬುವುದು (ಸರ್ವಜ್ಞ. ೫೯೩); ತನ್ನ ಕಂಡಿತವನ್ನು ವ್ಯಕ್ತಪಡಿಸದೆ ಇದ್ದರೆ ಆಗುವ ಅಸಮಾಧಾನವನ್ನು ಕಳೆದುಕೊಳ್ಳಲು ಆಡುವ ಮಾತು ... ಎಂತಹದಿದ್ದರೂ ತನ್ನ ಪ್ರಾಮಾಣಿಕತೆಯ ಮೂಲಕ ಮಿಗಿಲಾದುದು (ಭೂಮಿತಾ. I, ಮುನ್ನುಡಿ). [< ಸಂ. ಖಂಡಿತ]

**ಕಂಡಿತ$_2$** 'ಕಂಡಿತಂ' ನೋ.

**ಕಂಡಿತಂ**, ಕಂಡಿತ$_2$ (ಅ). ನಿಶ್ಚಯವಾಗಿ: ಸಾವನಾರ್ಯರನೊಳಗಿಸೆ ಸಮಾಜದ ಪುರೋಭಿವೃದ್ಧಿ ತಾನುತ್ತರೋತ್ತರವಹುದು ಕಂಡಿತಂ! (ಹೆಬ್ಬೆರ. ೨೪-೨೪). **ಕಂಡಿತ$_2$**: ಆರು ತಪ್ಪಿದರು ಕಂಡಿತ ಕಪಿಲೆಯ ಕೊಂದ ಪಾಪದಲ್ಲಿ ಹೋಹರು (ಎಕ. IX, ಹೊಸಕೋ. ೬೩-೨೩; 1412). [< ಕಂಡಿತ$_1$]

**ಕಂಡಿತವಾಚೆ** (ನಾ). ನೇರವಾದ ಮಾತು; ಸತ್ಯವಾದ ಮಾತು; ನಿರ್ಣಾಯಕವಾದ ಮಾತು: ಇದುವೇ ಕಂಡಿತವಾಚೆ [ಪಾಠಾಂ. ಖಂಡಿತವಾಚ್ಯ] ಅಹುದು (ಜ್ಞಾನಸಿಂ. ಕಿ. ೪೨-೧೨). [< ಸಂ. ಖಂಡಿತವಾಚಾ]

**ಕಂಡಿತವಾದಿ** (ನಾ). ಕಂಡಿತವಾಗಿ ಮಾತನಾಡುವವನು; ಮುಚ್ಚು ಮರೆಯಿಲ್ಲದೆ ಇದ್ದುದನ್ನು ಇದ್ದಂತೆ ಆಡುವವನು: ಕಂಡಿತವಾದಿ ಲೋಕವಿರೋಧಿ (ಗಾದೆ). [< ಸಂ. ಖಂಡಿತವಾದಿನ್]

**ಕಂಡಿದೋರು** (ಕ್ರಿ). (ತಪ್ಪಿಸಿಕೊಂಡು ಹೋಗುವ) ಕಿಂಡಿಯನ್ನು ತೋರಿಸು: ಚೋರಗೆ ಕಂಡಿದೋರಿ ವಡೆಯಂಗೆ ದೂರ ಹೇಳುವಾ ಕುಟಿಲ ಚರನಂತಾದೆ (ನವಮೋ. ೩೦-೪೫). [ಕಂಡಿ$_1$ + ತೋರು (< ತೋಱು)]

**ಕಂಡಿಬೀೞ್** (ಕ್ರಿ). ರಂಧ್ರವಾಗು; ತೂತುಬೀಳು: ಅನೇಕ ವಿಧದ ಘಾಯ ಗಳಿಂಗಳಿಂ ಪೊಳಲ್ವೋದ ಮೆಯ್ಗಳಂ ಕಳಿಯೆ ಪಾಱುವ ಕೈಗಳುಂ ಕಂಡಿಬಿರ್ದ ತೋರ ತೊಡೆಗಳುಂ (ಮಹಾನೇ. ೧೨-೫೪ ವ). [ಕಂಡಿ$_1$ + ಬೀೞ್$_1$]

**ಕಂಡಿವಲ್** (ನಾ). ನಡುವೆ ಸಂದಿ ಬಿಟ್ಟಿರುವ ಹಲ್ಲು; ಒಂದಕ್ಕೊಂದು ಹೊಂದದಿರುವ ಹಲ್ಲು: ಮಿಂಚುದಲೆಗಳ ಕಂಡಿ [ಪಾಠಾಂ. ಖಂಡಿ] ವಲ್ಗಳ ಸಂಚದವದಿರ ಕುಟಿಲ ಕುಹಕದ ಕುಂಚಿತರ ಹೆದ್ದನಿಗಳಾ ಡೊಳ್ಳುಗಳ ಹೇರೊಡಲ ವಂಚಕರ (ಬಸವು. ೫೧-೫೪). [ಕಂಡಿ$_1$ + ಪಲ್]

**ಕಂಡಿಸು$_1$** (ಕ್ರಿ). ೧. ತುಂಡುಮಾಡು; ಕತ್ತರಿಸು: ದುರದೊಳ ಗಿದಿರಾದ ವೈರಿರಾಯರ ಗರ್ವಗಿರಿಶಿಖರವ ಕಂಡಿಸುವ ವರವಜ್ರದಂಡ ದಂದದಲಿ ಭೂಪಾಲನ ಸುರುಚಿರ ಖಡ್ಗವೊಪ್ಪಿದುದು (ಕಂಸವಿ. ೨೨-೯). ೨. ಹಾಳುಮಾಡು; ನಾಶವಮಾಡು: ಈ ಧರ್ಮವನು ಕಂಡಿಸದೆ ನಡೆಸಿದಡೆ ತಮ್ಮ ××× ಮಾಡಿದ ಧರ್ಮಫಲ (ಸೌಇಇ. IX-i, ೬೯-೧೮; 11ನೆಯ ಶತ). [ಕಂಡ$_1$ + -ಇಸು$_3$]

**ಕಂಡಿಸು$_2$** (ಕ್ರಿ). ಕೆತ್ತು; ಕೊರೆ: ವಾರಿಕಲ್ಲ ಕಡಿದು ಪುತ್ಥಳಿಯ ಕಂಡಿಸುವಂತೆ ಉಪ್ಪಿನ ಪೊಟ್ಟಣವ ಉದಕದಲ್ಲಿರಿಸಿದಂತೆ ಕರ್ಪುರದ ಪ್ರಣುತೆಯಲ್ಲಿ ಜ್ಯೋತಿಯ ಬೆಳಗುವಂತೆ ಸಿದ್ಧ ಸೋಮನಾಥ ಲಿಂಗವ ವಗ್ರಾಹಕ (ವಚಶಾ. II, ೪೨೮). [< ಕಂಡರಿಸು ?]

**ಕಂಡು$_1$** (ನಾ). ದಾರದ ಉಂಡೆ; ಕಂಡಿಕೆ (೬). [ದೇ. ‖ ತಮಿ. ಕಣ್ಡು; ತೆಲು. ಕಂಡೆ, ಕಂಡಿಯ]

**ಕಂಡು$_2$** 'ಕಂಡ$_1$' ನೋ.

**ಕಂಡು$_3$** (ನಾ). ನವೆ; ತೀಟೆ: "ಮೆಯ್ಯ ತಿಮಿರ ಕಂಡೂ ಖರ್ಜು ಮೆನಿಸಿಕ್ಕು" (ಮಂಗರಾ. ೧೧೩-೧); ಆಕೆಯಾ ಕೂಸಿನ ಕಯ್ಯ ಪತ್ತಿರ್ದ ಕಂಡುಗಳಂ ಕಂಡು ಕರಕಂಡುವೆಂಬ ಪೆಸರನಿಟ್ಟು ಸಲಹುತ್ತಿರಲ್ (ಪುಣ್ಯಾಸ್ರ. ೨-೫೪ ವ). [ಸಂ.]

**ಕಂಡು$_4$** 'ಕಾಣ್' ಪರಾ.

**ಕಂಡುಕ** 'ಖಂಡುಗ' ನೋ.

**ಕಂಡುಕೂರ್** (ನಾ). ಒಂದು ಊರಿನ ಹೆಸರು: ಅಪರಂ(ರ)ದಿಶಿ ಕ(ಕೆ?)ಣ್ಡುಕೂರ ಗ್ರಾಮಸ್ಯ ಸೀಮಾವಿಧಿ (ಇಅ. V, ೫೧-೧೯; 5ನೆಯ ಶತ). [? + ಊರ್]

**ಕಂಡುಗ** 'ಖಂಡುಗ' ನೋ.

**ಕಂಡುವೋಗು** (ಕ್ರಿ). ತುಂಡುತುಂಡಾಗು: ಕಂಡುವೋದ ತೊಡೆಯುಂ ಪಿಸುಟಿದ್ದ ಕಿಱುವ್ವೊಡೆಯುಂ ... ಕೋಱುಮೃದುಳ ಕೋಱುಸಜುಮುಗುರ್ವು ವಡೆಯೆ (ಪಂರಾಮಾ. ೧೩-೫೪ ವ). [ಕಂಡು$_2$ (< ಕಂಡ$_1$) + ಪೋಗು$_1$]

**ಕಂಡೂತಿ** (ನಾ). ತುರಿಸುವುದು; ತುರಿಕೆ; ನವೆ; ತೀಟೆ: "ಕಂಡೂತಿಃ, ಕಂಡೂಯಾ, ಕಂಡೂಃ, ಕಂಡೂಯನಂ, ಖರ್ಜೂಃ – ಈ ೫ ತಿನಸು" (ಹಲಾಯು. ೯೯-೪೯೯); ಶಿರದ ಕಂಡೂತಿಯನು ಕಳೆಯಲ್ಕುರಿವ ಕೊಳ್ಳಿಯ ಕೊಂಡು ತುರಿಸುವ ಪರಿಯ ಮಾಡಿದೆ (ಕೋಗಯು. ೧೫-೨೭). [ಸಂ.]

**ಕಂಡೂಯನ** (ನಾ). = ಕಂಡೂತಿ: ವನಕರಿಕಪೋಲ ಕಂಡೂಯನ ದಿಂದಂ ಪಾಯೆ ಮದಜಲಾಸವರಸ ವಾಸನೆಯಿಂದಿತರ ವನಂಗಳು ಮನುಕರಿಪುವು ಸಪ್ತಪರ್ಣಪಾದಪ ವನಮಂ (ಅಜಿಪು. ೯-೩೧). [ಸಂ.]

**ಕಂಡೂರಗಣ** 'ಕಂಡೂರ್ಗಣ' ನೋ.

**ಕಂಡೂರ್ಗಣ**, ಕಂಡೂರಗಣ (ನಾ). ಜೈನಯತಿಗಳ ಒಂದು ಸಂಘದ ಹೆಸರು: ಕಣ್ಡೂರ್ಗ್ಗಣಾಬ್ಧಿ ಚಂದ್ರನ ಖಣ್ಡಿತ ಸುತಪೋ ವಿಭಾಸಿ (ಸೌಇಇ. XX, ೫೦-೩೧; ?). **ಕಂಡೂರಗಣ**: ಕಣ್ಡೂರ ಗಣೋರು ಕಲ್ಮಿ ವೃದ್ಧಿಕರಃ (ಸೌಇಇ. XX, ೧೮-೨೩; 980). 'ಕಾಣೂರ್ಗಣ' ಪಥಾ. [ಕಂಡೂರ್$_0$ + ಗಣ]

**ಕೆಂಡೂಲ,** ಕಂಡೂಳ (ಗು). ನವೆ ಹತ್ತಿದ; ತುರಿಕೆಯಿಂದ ಕೂಡಿದ; ಕಡಿತ ಹತ್ತಿದ: ಮದಪಯಃಕಂಡೂಲ [ಪಾಠಾಂ. ಳ, ಯ] ಗಂಡಸ್ಥಳ ದ್ವಿರದೋದ್ಘೃಷ್ಟಘನಸ್ರವತ್ ಸರಳ ಸಾರಾಮೋದ ... ಮಂದಾನಿಳಂ (ಆದಿಪು. ೧೩-೯). **ಕೆಂಡೂಳ** : ಮೇಲಿನ ಪ್ರಯೋಗದ ಪಾಠಾಂತರ ವನ್ನು ನೋಡಿ. [ಸಂ.]

**ಕೆಂಡೂವ್ಯಾಪ್ತಿ** (ನಾ). ನವೆಯ ಹರಡುವಿಕೆ: ತರು ಕಾಂಡಂ ದೆಸೆ ಯಾನೆಗಳ್ಗೆ ಕಂಡೂವ್ಯಾಪ್ತಿಯಂ ಪಿಂಗಿಸುತ್ತಿರೆ (ಜಗವಿ. ೧೬-೩೫). [ಸಂ. (ಕಂಡೂ + ವ್ಯಾಪ್ತಿ)]

**ಕೆಂಡೂಹೃತಿ** (ನಾ). ನವೆಯನ್ನು ನಿವಾರಿಸುವುದು; ತೀಟೆಯನ್ನು ತೀರಿಸಿಕೊಳ್ಳುವುದು: ಎನ್ನಯಭುಜಕಂಡೂಹೃತಿ [ಪಾಠಾಂ. ಕೆಂಡೂತಿ] ಯಂ ನೆಗಳ್ವಿಂ ತೋರ್ಪೆನೆನ್ನ ಸಾಹಸದಿರವಂ (ರಾಜಶೇ. ೫-೧೩೨). [ಸಂ.]

**ಕೆಂಡೂಳ** 'ಕಂಡೂಲ' ನೋ.

**ಕೆಂಡೆ** 'ಖಂಡೆ' ನೋ.

**ಕೆಂಡೆಗೊಳ್** 'ಕಾಣ್' ಪರಾ.

**ಕೆಂಡೆಯ$_1$** 'ಖಂಡೆಯ$_2$' ನೋ.

**ಕೆಂಡೆಯ$_2$** (ನಾ). ತೀರ್ಮಾನ; ಖಂಡಿತವಾದ ಅಭಿಪ್ರಾಯ: ಈ ವಿಷಯದಲ್ಲಿ ಅವರ ಮಾತೇ ಕೆಂಡೆಯ (ರೂಢಿ). [?]

**ಕೆಂಡೋಲ** (ನಾ). ೧. ಧಾನ್ಯವನ್ನು ತುಂಬಿಡಲು ಬಿದಿರಿನಿಂದ ಮಾಡಿದ ಗೂಡೆ, —ಗಳಗೆ. ೨. ಕಾಳನ್ನು ಸಂಗ್ರಹಿಸಿ ಇಡುವ ಸ್ಥಳ; ಉಗ್ರಾಣ. ೩. ಒಂಟೆ. [ಸಂ.]

**ಕೆಂತ** (ನಾ). (ಕರಾ) ೧. ಇಳಿಜಾರು; ಕಡಿದು: ಮಡಿಕೇರಿಯಿಂದ ಸುಳ್ಯಕ್ಕೆ ಹೋಗುವ ದಾರಿ ಬಹಳ ಕಂತವಾಗಿದೆ (ರೂಢಿ). ೨. ಆಳ: ಎಂಥ ಶಬೆ ಅಂತೀಯ! ಕೆಂಡದೊಳಗಡೆ ಕೆಂತಹೂತ ಬದನೆಯಕಾಯಿ ಯಂತೆ ಮೈ (ಚಂಡಿಮ. ೩೧). [← ತುಳು. ಕಂತ್, ಕಂತ]

**ಕೆಂತರಿಕೆ** (ನಾ). ಒಂದು ಊರಿನ ಹೆಸರು: ಸಿಂದವಾಡಿ ಸಾಸಿರದ ಕಂಪಣಂ ಭಾಗಿ ೧೨೫ ಬಳಿಯ ಬಾಡಂ ಕಂತರಿಕೆಯಂಬ ಗ್ರಾಮಮಂ (ಸೌಇಇ. IX-i, ೨೭೭-೩೫; 1184). [?]

**ಕೆಂತರಿಸು** 'ಕತ್ತರಿಸು$_1$' ನೋ.

**ಕೆಂತಾಡಿ** (ನಾ). ಒಬ್ಬಾತನ ಹೆಸರು: ಹಂಗರ ಅಧಿವಾಸದಲು ಕಂತಾ ಡಿಯ ಬಿಂನಾಣಿಯ ಕಯ್ಯಲೂ ಹಂಗರಬಟ್ಟನ ಕಯ್ಯಲೂ ದನಿಯರು ಮೂಲವಾಗಿ ಕೊಂಡ ಬಾಳಿನ ವಿವರ (ಸೌಇಇ. IX-ii, ೪೦೯-೧೪; 1365). [?]

**ಕೆಂತಿ$_1$** 'ಕಂದಿ$_1$' ನೋ.

**ಕೆಂತಿ$_2$** (ನಾ). ೧. ಲಿಂಗಗಳಿಗೂ, ಬಸವನ ವಿಗ್ರಹಗಳಿಗೂ ಲೇಪಿಸು ವುದಕ್ಕಾಗಿ ತಯಾರಿಸಿದ ಗೇರೆಣ್ಣೆ ಹಾಗೂ ಕಾಡಿಗೆಯ ಕರಿಯ ಮಿಶ್ರಣ: ಬೂದಿ ಕಂತಿಯ ಬಡಿದು ರನ್ನಕಂತೆಯ ತೀಡಿ ಜೋಗಿರೂಪವು ಒಪ್ಪುವದೊ ದೇವಾ (ಕನ್ನಜಾ. ೩೪೯-೨೬). ೨. ಜೈನ ಸಂನ್ಯಾಸಿನಿ: "ಶ್ರಮಣಾ, ಭಿಕ್ಷುಕೀ, ಮುಂಡಾ-ಈ ೩ ಕಂತಿ" (ಹಲಾಯು. ೬೦-೩೩೩); ಕಟಿಯಲ್ಬಲ್ಲಪಥಮ್ರ್ಮದಾ ಸ ಸಿ ಮ ತಿ ಶ್ರೀಗಂತಿಯರ್ಅರ್ವರ್ನನ್ನು (ಎಕ. II, ೭೬-೨; 700); ತಮ್ಮತ್ತೆವಿರಪ್ಪ ವಿಜಯಮತಿ ಕಂತಿಯರ್ ಕಂತಿಯ ರಾಗಿ ತಪಂಬಟ್ಟು (ವಡ್ಡಾರಾ. ೧೩೪-೨); ಗೊರತಿಯ ಕಂತಿಯ ಕುಂಟಣಿ ಯರ ... ಮುಂದಂ ನುಡಿಯಲೀಯಲಾಗದು ವಧುವಂ (ಮದತಿ. ೮-೨೬). ೩. ಒಬ್ಬ ಕನ್ನಡ ಕವಯಿತ್ರಿಯ ಹೆಸರು: ಕಂತಿ ಹಂಪನ ಸಮಸ್ಯೆಗಳು (ಕವಿಚ. I, ೧೧೦). [ದೇ. ‖ ತಮಿ. ಕನ್ತಿ]

**ಕೆಂತಿಕಾಜಿ** (ನಾ). ಒಬ್ಬಾತನ ಹೆಸರು (?).

**ಕಂತಿಕಾಜಿರಾಯರಗಂಡ** = ಒಂದು ಬಿರುದು: ಶ್ರೀಮತು ಕಂತಿ ಕಾಜಿರಾಯರಗಂಡ ನಾಗಂಣ್ಣ ಒಡೆಯರು ಸಾದಲಿಯ ರಾಜ್ಯವನ್ನಾಳುವ ಕಾಲದಲ್ಲಿ (ಎಕ. X, ಚಿಕ್ಕಬ. ೬೩-೫; 1371); ಕಂತಿಕಾಜಿರಾಯರಗಂಡ ಗಜದಳ ವಿಭಾಡ ಸಮುದ್ರಸಾಳ್ವ × ಗೆಬೆಹಾಳ ಮದುವರಸನಾಯ್ಕರ ಮಗ (ಎಕ. VI, ಮೂಡಗೆ. ೪೩-೬; 1547). [?]

**ಕೆಂತಿಕೆ** (ನಾ). ಜೈನ ಸಂನ್ಯಾಸಿನಿ: ತಾನುಂ ಪದ್ಮಾವತಿ ಕಂತಿಕೆಯರ ಪಕ್ಕದೆ ಆಚಾಮ್ಲವರ್ಧಮಾನಮಂ ನೋಂತು (ಚಾವುಂಪು. ೬೭೩-೨೨); ಪ್ರಭಾವತಿಯುಂ ಪದ್ಮಾವತಿಯರೆಂಬ ಕಂತಿಕೆಯರ ಸಾರೆ ರತ್ನಾವಳಿ ತಪ ದೊಳ್ ನೆಗಟ್ದು ಅಚ್ಯುತಕಲ್ಪದೊಳ್ ಪ್ರತೀಂದ್ರನಾದೊಳ್ (ಚಾವುಂಪು. ೧೯); ಸುರಮಂಜರಿ ಕಂತಿಕೆ ಚಾರಿತ್ರವನಿರದಾಂತು ತಪಿಸುತಲಿರಲು (ಜ್ಞಾನಚ. ೨೪-೬೩). [ಕಂತಿ$_2$+ -ಕೆ?]

**ಕೆಂತಿಸು** (ಕ್ರಿ). ಆರಿಸು; ನಂದಿಸು (ಕಿ). [ಕಂತು$_1$+ -ಇಸು$_3$]

**ಕೆಂತು$_1$** (ಕ್ರಿ). ೧. ಮುಳುಗು; ಅಡಗು: ನಾಳೆಗಂ ನಳಿನಸಖ ಕಂತು ವನಕಂ, ಕಾಯ್ವೆ ಸೈಂಧವನ ರಣದಿ (ತುರಂಗ. ೫೩-೬೫); ಮುತ್ತಣ್ಣನು ಬ್ರಾಹ್ಮಣನ ಮನೆಗೆ ಬರುವಾಗ ಹೊತ್ತು ಕಂತುತ್ತಿತ್ತು (ಈ ಕಥೆ. ೯೮); ಕಂತಿದೆ ನೀ ದಿನಾಂತದಿನನಂತೆ (೧೪ವಿಂ. ೫೩-೧೨); ವೆಂಕಮ್ಮ ಆಗಲೇ ಸರೋವರದ ನೀರಲ್ಲಿ ಮಂಡಿ ಕಂತುವತನಕ ಮುಂದೆ ಸಾಗಿದ್ದರು (ಪದ್ಮಸ. ೨೬೪). ೨. (ಕರಾ) ಚುಚ್ಚು; ನಾಟು: ನಡೆಯುವಾಗ ಮುಳ್ಳು ಕಂತೀತು, ಜೋಕೆ (ರೂಢಿ). [ದೇ. ‖ ತುಳು. ಕಂತ್, ಕಂತು]

**ಕೆಂತು$_2$** (ನಾ). ೧. ಅವಧಿ; ವಾಯಿದೆ; ಗಡು. ೨. ಕೊಡಬೇಕಾಗಿರುವ ಹಣ, ಕಾಳು ಅಥವಾ ಇನ್ನು ಯಾವುದನ್ನೇ ಆಗಲಿ ನಿಯಮಿತ ವಾದ ಅವಧಿಗೆ ಸರಿಯಾಗಿ ಮುಟ್ಟಿಸಬೇಕಾದ ಪಾಲು; ನಿಶ್ಚಿತ ಪಡಿಸಿದ ಮೊತ್ತ; ಕಿಸ್ತು: ಕಂಪನಿಯವರು ಸಮಾಜಕ್ಕೆ ಕಂತಿನ ಮೇಲೆ ಆರು ಹೊಲಿಗೆಯಂತ್ರಗಳನ್ನು ಕೊಡುವುದಕ್ಕೆ ಒಪ್ಪಿದ್ದರು (ಬದುಜ. ೧೪೯); ಹತ್ತು ರೂಪಾಯಿಯಂತೆ ಕಂತುಕಟ್ಟು (ಕಾಮಿಕಾಂ. ೫೨); ಪುಣ್ಯವಂತ ಕೊಡಲು ಬೇಕಿಲ್ಲ ನೀನವಗೆ ಭಕ್ತಿ ಕಂತ (ಗಣೇಶ. ೭೧-೧೦). [?]

**ಕೆಂತು$_3$** (ನಾ). ೧. ಮನ್ಮಥ; ಕಾಮ: "ಮನಸಿಜಂ ಮನ್ಮಥಂ ... ಕಂತುವೆನೆ ಮಾರನೆನೆ ಮದನನಕ್ಕು" (ಮಂಗರಾ. ೭-೨೨); ನಿರ್ಜಿತ ಕಂತುವೆನಲ್ಕಂತು ಪುಟ್ಟಿದಂ ಗಾಂಗೇಯಂ (ಪಂಪಭಾ. ೧-೭೬); ನಂದನ ವನದೊಳಗೇನೇಂ ಬಂದವೊ ಮರನೆಂದು ಕಂತು ಬೆಸಗೊಳೆ (ಅಜಿಪು. ೬-೧೩); ನನೆಗಣೆಯಂ ತೂಗುತುಂ ಕಂತುವೀ ಬಂದಂ (ಜಗವಿ. ೪-೨೧); ಕಂತು ಕೂರ್ತಾರ್ತ್ಮರತಿಯೊಡನೆ ಈಸಾಡಲ್ಕೆ ರಾಗಮುಗ್ಗಲಿಸಿತೆನೆ (ಶ್ರೀರಾಮಾ. ೧೮೭-೨೯೬). ೨. ಹೃದಯ. ೩. ಕಣಜ. [ಸಂ.]

**ಕೆಂತುಕ,** ಕಂದುಗ (ನಾ). ಆಟದ ಚೆಂಡು: ಲೀಲಾಂಬುಜದ ರತ್ನಕಂತು ಕದ ವಿಳಾಸಿನಿಯರ (ಗಿರಿಕ. ೩-೯೧ ವ); ಒಲೆಯಲು ತನುಲತೆ ಸುರಿಯೆ ಕಂಗಳ ಕಾಂತಿ ಲಲನೆ ಹೊಡೆದಳು ಕಂತುಕವಾ (ಜೀವಂಸಾಂ. ೧೯-೪೨); ರತಿಕಾಮುರ್ಕಳ ತಿಜಿಕಲ್ಲಾಟದ ಇಂದ್ರಾಶ್ಮ ಕಂತುಕಂಬೊಲೆಸೆವ ಬಾಲಜಂಬೀರದಿಂ (ರಾಮಾಶ್ವ. ೫೩-೧೭). **ಕಂದುಗ**: "ಕಂದುಗ (ಕಂತುಕ) – ಕಂದುಕ = ಚೆಂಡು" (ತದ್ಭಕೋ. ೬). 'ಕರಗಂದುಗ' ಪರಾ. [< ಸಂ. ಕಂದುಕ]

**ಕೆಂತುಕಕೇಳಿ** (ನಾ). ಚೆಂಡಾಟ: ಕಂತುಕಕೇಳಿಗಿನ್ನಲ್ಲಿಗೆ ಪೋದಪೆ ಕಂತುಸನ್ನಿಭ ದಿವ್ಯಾಂಗ (ಕುರಾಸಾಂ. ೩೨-೧೧೧). [ಕಂತುಕ + ಕೇಳಿ (= ಕೇಲಿ)]

**ಕೆಂತುಕಕ್ರೀಡೆ** (ನಾ). = ಕಂತುಕಕೇಳಿ: ದಿಗ್ಗಜಂಗಳನಜಾಂಡಂಗಳಂ ಬಿಡೆ ಕಂತುಕಕ್ರೀಡೆಯಾಡುವೆನೊ ಬೇಗ ಬೆಸಸು (ವೀಶೈಪು. ೩-೩-೨೬). [ಕಂತುಕ + ಕ್ರೀಡೆ]

**ಕಂತುಕಖೇಲನ** (ನಾ). = ಕಂತುಕಕೇಳಿ : ಬರ್ಪ ಪರ್ವತಗಳೊಗ್ಗ್ಯಿಂದ ಪಿಡಿದೊಂದನೊಂದ ಸಂಬಂಧಗೈವುದಮಿರ್ದನೊಡನೆ ಕಂತುಕಖೇಲನಂಗೈವನಂತನಾಯಾಸದಿಂ (ವೆಂಕಾರಾ. ೬-೮-೧೦). [ಕಂತುಕ + ಖೇಲನ]

**ಕಂತುಕಮಾಯಾವಿದ್ಯೆ** (ನಾ). ಚೆಂಡನ್ನು ಮಾಯಗೊಳಿಸುವ ವಿದ್ಯೆ (?) : ವೈಶ್ಯಸುತ ಲೋಕವಿಸ್ಮಯಮಾದರಣ್ಯಕ್ಕೈದಿ ಕಂಗಳಿಂದ ಕಂತುಕಮಾಯಾವಿದ್ಯೆಯನೆಲ್ಲವನು ಅಭ್ಯಾಸವ ಮಾಡಿ (ಕಕುಮಾ. ೧೬೧-೧೦). [ಸಂ. ಕಂತುಕಮಾಯಾವಿದ್ಯಾ (ಕಂತುಕ + ಮಾಯಾ + ವಿದ್ಯಾ)]

**ಕಂತುಕಳಂಬ** (ನಾ). ಕಾಮನ ಬಾಣ : ಮಹೀಕಾಂತಾತ್ಮಜೆ ಚಿಂತೆಯಿಂದೆ ಬರಲೊಡನದಟಿಂ ಕಂತುಕಳಂಬಕದಂಬಂ ಸ್ವಾಂತವನೊಳಪೊಕ್ಕುದೆಂದು ಯತಿಪುಂಗವರಾ (ಹವಿಮ್ಮಾರ. ೬-೨೫). [ಕಂತು₃ + ಕಳಂಬ (= ಕಲಂಬ)]

**ಕಂತುಕುಂತ** (ನಾ). ಕಂತುವಿಗೆ ಕುಂತಪ್ರಾಯನಾದವನು; ಶಿವ; ಈಶ್ವರ : ಚಿತ್ಕಾಮಿನೀಕಾಂತ ಹೃತ್ಕಾಂತ ಸಾಹಸೋದ್ಧೃತ್ಕಂತುಕುಂತ (ಉದ್ಭದೇ. ೬-೩೦). [ಕಂತು₃ + ಕುಂತ]

**ಕಂತುಕೇಳಿ** (ನಾ). ರತಿಕ್ರೀಡೆ; ಸಂಭೋಗ : ಕಂತುಸನ್ನಿಭ ದಿವ್ಯಾಂಗ ಕಂತುಕೇಳಿಯನೆಸಗೆನ್ನೊಡನೆಂದರ್ಥಾಂತರದಿಂದವಳುಸುರೆ (ಕುರಾಸಾಂ. ೩೨-೧೦೧). [ಕಂತು₃ + ಕೇಳಿ (= ಕೇಲಿ)]

**ಕಂತುಚಾಪ** (ನಾ). ಮನ್ಮಥನ ಬಿಲ್ಲು; ಕಬ್ಬಿನ ಬಿಲ್ಲು : ಕಂಪನಕ್ಷಿಗಳ ಚಂದ್ರಿಕೆ ಚಂದ್ರಿಕೆಯಿಂ ಪಳಂಚೆ ಗೇಯದ ರುತಿ ಕಂತುಚಾಪ ರುತಿಯೊಳ್ ತಡಮಾಗೆ (ಜಗವಿ. ೧೬-೧೧೩). [ಕಂತು₃ + ಚಾಪ₁]

**ಕಂತುಚೇತ** (ನಾ). ಕಾಮಾತುರವಾದ ಮನಸ್ಸು; ಕಾಮಾಸಕ್ತಿ : ನೀರೇಜಷರ್ಣೋತ್ಕರಮನುತೆ ಮೊದಲ್ಗೊಂಡುದಂಭೋಜ ಸದ್ಮಾಂತದೊಳುದ್ಯತ್ಕಂತುಚೇತಂ ತೊಱಲಲವಿರತಂ ಚಕ್ರವಾಕಂ ವರಾಕಂ (ಚಂದ್ರಪು. ೮-೧೦). [ಕಂತು₃ + ಚೇತ]

**ಕಂತುಧೇನು** (ನಾ). ಕಾಮಧೇನು : ಕಡಿವೆನದೆಂತು ಕಲ್ಪದ್ರುಮವ ನೆಲವದ ಸಂತತಿಯ ಫಲಗಳನು ನೆಚ್ಚಿ ಪಯೋವಿಹೀನೆಯನು ಕಂತುಧೇನುವ ಮಾಱಿ ಬೆಲೆಗೊಂಬಂತೆ (ನಿಭಾಗ. ೮-೧೬-೪೩). [ಕಂತು ? + ಧೇನು]

**ಕಂತುಪಿತ** (ನಾ). ಕಾಮನ ತಂದೆ; ವಿಷ್ಣು : ಕಂತುಪಿತ ಸನ್ನಿಭನು ಸತಿಯನು ಸಂತವಿಸಿ ಮರಳಿದನು (ಕುವ್ಯಾಅ. ೪-೪೬). [ಕಂತು₃ + ಪಿತ]

**ಕಂತುಮಥನ** (ನಾ). ಕಾಮನನ್ನು ಮಥಿಸಿದವನು; ಶಿವ : ಚಿಂತಿಸಿದೊಡೇನಹುದು ಹೊಗುವೆನು ಕಂತುಮಥನನ ಮಱೆಯನು (ಕುವ್ಯಾಅ. ೨೨-೪೩). [ಕಂತು₃ + ಮಥನ]

**ಕಂತುಮರ್ದನ** (ನಾ). = ಕಂತುಮಥನ: ನೆನೆದು ಕೀರ್ತಿಸಲಾಗಿ ಬಯಲಾದ ಕಂತುಮರ್ದನನೆ, ಬಂದಾ ಮುನಿವ್ರಾತಕ್ಕೆ ಕೃಪೆಯಿಂ ಪ್ರಸನ್ನನಾಗಿ (ವೀಶೈಪು. ೫-೨-೨೫). [ಕಂತು₃ + ಮರ್ದನ]

**ಕಂತುವೈರಿ** (ನಾ). ಕಂತುವಿಗೆ ಶತ್ರುವಾದವನು; ಶಿವ : ಕಂತುವೈರಿಗೆ ತನ್ನ ನೇಮವನೆಂತು ತಪ್ಪಿಸಬಹುದು (ಬಸವು. ೪೩-೨೩). [ಕಂತು₃ + ವೈರಿ]

**ಕಂತುಶರ** (ನಾ). = ಕಂತುಚಾಪ : ನೃಪಡಹಾಸದ್ಯುತಿಯಂತೆ ಕಂತುಶರದಂತಿರ್ದಚ್ಚವೆಳ್ದಿಂಗಳಂ ಕಡುದಣ್ಪಿಂಗೆಡೆಗೊಂಡಿದೊಂದು ಬಿಸಿಲೆಂದಾಶ್ಚರ್ಯದಿಂದಂ ಜನಂ ನಡೆ ನೋಡುತ್ತೆ (ಜಗವಿ. ೪-೭೪). [ಕಂತು₃ + ಶರ]

**ಕಂತುಹರ** (ನಾ). = ಕಂತುಮಥನ : ಕಂತುಹರನಿಪ್ಪ ಸೆಜ್ಜೆಯ ಸೊಬಗನೊಳಕೊಂಡು ಎಸೆವ ಪುರದೊಳಗೆಲ್ಲ ಹರಮಯಂ ಶಿವಮಯಂ (ತಿರುರ. ಹ. ೨-೧೪). [ಕಂತು₃ + ಹರ₂]

**ಕಂತೆ₁** (ನಾ). ಹುಲ್ಲು ಮುಂತಾದುವುಗಳ ಹೊರೆ, — ಕಟ್ಟು, — ಪಿಂಡಿ: ಊರಲೊಕ್ಕಲಲೊನ್ದು ಪೋಱಿಯುಂ ಪತ್ತುಕೊಳಗ ಭತ್ತಮುಂ ಒನ್ದು ಕನ್ತೆಯು ಬಣ್ಣಿಗೆ ಮೂಗುಳಮಂ ಕಪ್ಪಡಕ್ಕೆ ಪೞ್ತಿಯುಂ ಬ್ರಹ್ಮಲಿಂಗಿ ಭಟಿರ್ಗೆ ಕೊಟ್ಟವುದು (ಸ್ವೈಅರಿ. ೧೯೪೬, ೨೮-೧೮ ; 1032); ಹದಿನೆಂಟು ಧಾನ್ಯಗಳನ್ನು . . . ಕಂತೆಯಂ ಕಟ್ಟಿ ಬಣಬೆಯನ್ನೊಟ್ಟಿ (ವಚಶಾ. II, ೬೬); ನೋಟಿನ ಕಂತೆ ತೆಗೆದು ಕೊಡುವನು (ಕೂಲಿ. ೧೦).

ಕಂತೆಕಟ್ಟು = ೧. ಪೆಂಡಿಕಟ್ಟು; ಹೊರೆಕಟ್ಟು; ಕೂಡಿಸಿಕಟ್ಟು : ಅವನನ್ನು ಕಂತೆಕಟ್ಟಿ ತಲೆಯಮೇಲೆ ಹೊತ್ತುಕೊಂಡು (ಮುನಿಮಾ. ೧೯೯); ನಾಟಿ ಸಮಯದಲ್ಲಿ . . . ಹೆಂಗಸರು ಅಗೆ ತೆಗೆದು ಕಂತೆಕಟ್ಟುವರು (ಗಾರಕ. ೪೩). ೨. (ಆಲಂ) ಸ್ಥಳಬಿಟ್ಟು ಹೊರಡು : ಅವನು ಕಂತೆ ಕಟ್ಟಿಕೊಂಡು ಗಾಡಿ ಬಿಟ್ಟ (ರೂಢಿ).

[ದೇ. ॥ ತಮಿ. ಕಱ್ಱೈ ; ಮಲ. ಕಟ್ಟ]

**ಕಂತೆ₂** (ನಾ). ೧. ಚಿಂದಿಬಟ್ಟೆ; ಸಂನ್ಯಾಸಿಗಳು ಧರಿಸುವ ಬಟ್ಟೆ; ಕವುದಿ : "ಕಂಥಾ – ಕಂತೆ" (ಶಮದ. ೨೫೫ ಪ್ರಯೋ); ಕಂತೆಬೊಂತೆಯ ಜಂಗಮ ಬಂದರೆ ಹೀನವೆಂದು ಕಂಡೆನಾದರೆ ಪಂಚಮಹಾಪಾತಕ (ಬಸವ. ೪೧೧); ವಿಪರೀತದಲಿ ಹಱಕು ಕಂತೆಯ ಹೊದ್ದು (ರೇವಣ. ೧-೧೧); ಹಲುಬುವುದೇನು ಕಂತೆಗೆ ತಕ್ಕ ಬೊಂತೆಯನು (ನಳಚ. ೬-೧೦); ಕಂತೆಯನು ಹೊದ್ದು ತಿರಿದುಂಬ ಶಿವಯೋಗಿ ಎಂತಿರ್ದಡೇನು (ಸರ್ವಜ್ಞ. ೫೨೩). ೨. ಜೋಳಿಗೆ. 'ಕಂತೆಭಿಕ್ಷ' ಪರಾ. ೩. ಗೋಡೆ (?). ೪. (ಆಲಂ) ಗೊಡ್ಡುಕಥೆ; ವ್ಯರ್ಥವಾದುದು : ಅಱಿತು ವಿಚಾರಿಸಿ ನೋಡಲದೆಲ್ಲವು ಮೞೆವುದೀಗ ಕಂತೆಗಳಂತೆ (ಪುರಂದ. ೨-೬೩-೪); ಕಂತೆಗಳಿವದ್ಯತನರೂಳ್ವ ಕವನಂ (ಸಂಸಪ. ೬-೨); ಒಕ್ಕಾಲು ಮಾತ್ರವೆದಿಟವೆಂದು ತಿಳಿ ನೀನು ಸುಳ್ಳಿನ ಕಂತೆ ಮುಕ್ಕಾಲು (ಇಂಚಾಪ. ೨೧೬-೬೬).

ಕಂತೆಕಟ್ಟು = ೧. ಹರಕಲು ಬಟ್ಟೆಯನ್ನು ಒಗೆ. ೨. (ಆಲಂ) ಸಾಯು. ಕಂತೆಬೊಂತೆ = ಕೆಂತೆ ಮತ್ತು ಬೊಂತೆ : ನೆನೆವೊಡೆ ಸೀರೆ ಗೀರೆ ಸಲೆ ಕಂಬಳಿಗಿಂಬಳಿ ಕಂತೆಬೊಂತೆಯುಂ (ಬಾಧಪು. ೪-೭೫). ಕಂತೆವೊಗೆ = (ಆಲಂ) ಪ್ರಾಣಬಿಡು; ಸಾಯು : ಅವನು ಮನೋರೋಗದಲ್ಲಿ ಒದ್ದಾಡಿ ಒಂದುದಿನ ಕಂತೆವೊಗೆದ (ರೂಢಿ).

[< ಸಂ. ಕಂಥಾ]

**ಕಂತೆಕಾಯಿಕ** (ನಾ). ಭಿಕ್ಷೆಬೇಡುವ ಉದ್ಯೋಗ : ಸಂತೆಕಾಯಿಕ ಸೋಮಕಾಯಿಕ ಕಂತೆಕಾಯಿಕ ಇರುಳಕಾಯಿಕವೆಂತವಕೆ ಪೆಸರಿಟ್ಟು (ಬಜ್ಜಪು. ೪೮-೫೨). [ಕಂತೆ₂ + ಕಾಯಿಕ (< ಕಾಯಕ)]

**ಕಂತೆಗ** (ನಾ). ಕಂತೆಯನ್ನು ಧರಿಸುವವನು; ವಿರಾಗಿ; ಯೋಗಿ : ಗ ಪ್ರತ್ಯಯಕ್ಕೆ – ಮಾತುಗಂ, ಬೂತುಗಂ, ಕಂತೆಗಂ, ಕತೆಗಂ, ಬೊಂತೆಗಂ (ಶಮದ. ೨೦೧ ಪ್ರಯೋ). [ಕಂತೆ₂ + –ಗ₃]

**ಕಂತೆಪುರಾಣ** (ನಾ). (ಆಲಂ) ಅರ್ಥಹೀನವಾದ ಕಥೆ; ಹಾಳುಕಥೆ; ಗೊಡ್ಡುಕಥೆ : ಕಂತೆಪುರಾಣ ಆರಂಭವಾಯಿತು (ಆಲಹೂ. ೪೬). [ಕಂತೆ₂ + ಪುರಾಣ]

**ಕಂತೆಭಿಕ್ಷ** (ನಾ). ೧. ಜೋಳಿಗೆಯಲ್ಲಿ ನೀಡಿಸಿಕೊಳ್ಳುವ ಭಿಕ್ಷೆ. ೨. ಜೋಳಿಗೆಯಲ್ಲಿ ಭಿಕ್ಷೆಯೆತ್ತುವ ವೃತ್ತಿ : ಮಲ್ಲಿಕಾರ್ಜುನಪ್ಪನವರನ್ನು ಕರದಿ ಕಪ್ಪರ ಹಿಡಿಸಿ ಕಂತೆಭಿಕ್ಷ ಮಾಡಿಸಿ ಭಕ್ತನನ್ನಾಗಿ ಪರಿವರ್ತಿಸಿದರು (ಶರಚ. ೮೧೯). [ಕಂತೆ₂ + ಭಿಕ್ಷ]

**ಕಂತೆವೊರೆ** (ಕ್ರಿ). (ಆಲಂ) ಕೆಲಸಕ್ಕೆ ಬಾರದ ಮಾತಾಡು: ಅವರಿವರಂ ಕನಲ್ದು ಬಿಜುಮಾತುಗಳಿಂ ಜಜಿದಾನೆ ಲೋಕದೊಳ್ ಕವಿಯೆನುತುಂತೆ ಕಂತೆವೊರೆದಂತಟಿಗಬ್ಬಮನುಬ್ಬಿ ಪೇೞ್ದು (ಧರ್ಮನಾ. ೧-೬೬). [ಕಂತೆ$_2$ + ಒರೆ$_1$]

**ಕಂತ್ರಾಟ**, ಕಂತ್ರಾಟು (ನಾ). (ಉಕ) ೧. ಗುತ್ತಿಗೆ; ನಿಶ್ಚಿತಪಡಿಸಿದ ಕರಾರುಗಳ ಮೇಲೆ ಕೆಲಸ ವಹಿಸಿಕೊಳ್ಳುವುದು. 'ಕಂತ್ರಾಟದಾರ' ಪರಾ. ೨. ಕಪಟ; ಮೋಸದ ಹಂಚಿಕೆ; ಕಾರಸ್ಥಾನ: ಅವರದೇ ಇದೆಲ್ಲಾ ಕಂತ್ರಾಟವಿರಬೇಕೆಂದೂ ಅವರನ್ನು ನೆನಸಿ ಕುದಿದರು (ನಿರಾಥ. ೧೧೨); ಹಾಗೂ ಹೀಗೂ ಕಂತ್ರಾಟಮಾಡಿ ಒಂದು ಅಧಿಕಾರ ದೊರಕಿಸಿ . . . ಆಕಸ್ಮಾತ್ತಾಗಿ ಶಿಷ್ಯನಾಗಿಬಿಡುತ್ತಾನೆ (ಚೀನಬಾ. ೭೪); ನಿಮ್ಮ ಕಂತ್ರಾಟಕ್ಕ ಏನು ಕೊನೆ ಇದ್ದಹಾಗೆ ಕಾಣೋದಿಲ್ಲ (ಮಂಚಿಹು. ೩೧). **ಕಂತ್ರಾಟು**: ೧. 'ಕಂತ್ರಾಟುದಾರ' ಪರಾ. [← ಇಂ. Contract]

**ಕಂತ್ರಾಟದಾರ**, ಕಂತ್ರಾಟುದಾರ (ನಾ). ಗುತ್ತಿಗೆ ಹಿಡಿದವನು; ಕಂತ್ರಾಟ ವಹಿಸಿಕೊಂಡವನು: ಕಂತ್ರಾಟದಾರನಿಗೆ ೧೦೦ ಕೂಲಿ ಯಾಳು ಕೊಡಿಸಿ ತರುವುದು ಇದರಿಂದ ದುಸ್ತರವಾಗಿ ಪರಿಣಮಿಸಿತು (ಕರವೀ. ೧೪೫). **ಕಂತ್ರಾಟುದಾರ**: ಕಂತ್ರಾಟುದಾರ ಕಣ್ಣಾಪಂಡಿತನ ಕೈಲಿ ಒಂದು ಅಳತೆಗೋಲೂ ದಾರದುಂಡೆಯೂ ಇದ್ದುವು (ಮಲೆಮ. ೩೨೯). [ಕಂತ್ರಾಟ + -ದಾರ$_4$]

**ಕಂತ್ರಾಟು** 'ಕಂತ್ರಾಟ' ನೋ.

**ಕಂತ್ರಾಟುದಾರ** 'ಕಂತ್ರಾಟದಾರ' ನೋ.

**ಕಂತ್ರಿ** (ಗು). ೧. ಒರಟು ತಯಾರಿಕೆಯ; ನಯವಲ್ಲದ: ಕಂತ್ರಿ ಸಾಬೂನಿನ ಉಪಯೋಗದಿಂದ ನಲುಗಿದ ಬಟ್ಟೆ ಎಳೆಗಳು (ಗೃಹವಿ. ೮೪). (ನಾ). ೨. ಮೋಸಗಾರ: ಕಪಟಿ; ಕಾರಸ್ಥಾನಿ: ನಿನ್ನನ್ನು ಕಂತ್ರಿಗಳ ಕಣ್ಣು ತಪ್ಪಿಸಿ ಸಾಬೀತಿನಲ್ಲಿಟ್ಟುಕೊಳ್ಳುವುದು . . . ಸುಲಭ ವಲ್ಲ (ಹೊಸಕ್ಷಿ. ೫೧); ಈ ಶ್ರೇಷ್ಠಿಗಳ ಬಳಗವಾದರೂ ಶ್ರೀಮಂತ ಕಂತ್ರಿ ಜನ (ಆಳನಿ. ೧೬); ದೇವಯ್ಯ ಕಂತ್ರಿನಗೆ ನಕ್ಕು, ಹೇಳುತ್ತಲೆ ಬಾಗಿಲು ದಾಟಿದನು (ಮಲೆಮ. ೩೩೪). ೩. ನಾಟಿ; ಕಸಿಯಲ್ಲದ್ದು; ಗ್ರಾಮೀಣ: ಏನ ಕಂತ್ರಿಹೆಣ್ಣುಮಗಳು ಆದಾಳಪಾ ಅಂತೇನಿ! (ಬೀಳತಿ. ೧೪೯). [← ಇಂ. Country]

**ಕಂತ್ರಿಸು** (ಕ್ರಿ). ಸಿಂಡರಿಸು; ಮುರುಟು: ಗೌಡರು ಜುಗುಪ್ಸೆಯಿಂದ ಮುಖ ಕಂತ್ರಿಸಿಕೊಂಡು . . . ಕೇಳಿದರು (ಮಲೆಮ. ೩೯೩). [?]

**ಕಂಥೆ** (ನಾ). ೧. ಸಂನ್ಯಾಸಿಗಳೂ ಭಿಕ್ಷುಕರೂ ಹೊದೆಯುವ ಬಟ್ಟೆ; ಕವುದಿ: ಸಮತೆಯೆಂಬ ಕಂಥೆಯ ತೊಟ್ಟು ಸುಬುದ್ಧಿಯೆಂಬ ಟೊಪ್ಪರವ ನಿಕ್ಕಿ (ಅವಚಂ. ೨೪೬-೧೧೨೨); ನಿಮ್ಮ ಕಂಥೆಗೆ ಕೌಪಿಗೆಣೆಯೆನಲಮ್ಮೆನು (ಬಸವು. ೨೭-೪೪); ಮಱಸಿಕೊಂಡಾ ಕಂಥೆಯಂ ಬೇಡಲಾತುರದಿ (ಲಶಿಚಂ. ೩೫-೧೯); "ಮಂತ್ರ ಭಿನ್ನವಾಯಿತ್ತೆಂದು ಕಂಥೆಯ ಬಿಡುವರಿ ಆಱುವುಳ್ಳವರು . . ." (ಕರ್ಣಾಕ. ೧೬೧). ೨. ಜೋಳಿಗೆ: ಹಗಲಲ್ಲಿ ಇರಿಸಿ ಕಂಥೆ ಜೋಗಿ ಎದ್ದಂತೆ ಅಲಕನೆದ್ದು ಮುಗಿಸಿದಿರಿ ಒಂದು ಸಂಥೆ (ಅರಳು. ೭೪-೧೩). ೩. (ಆಲಂ) ಉಪಯೋಗವಿಲ್ಲದ ಮಾತು; ವ್ಯರ್ಥವಾದ ಹೇಳಿಕೆ: ಬಾಳ್! ಕಳ್ಳನೊರೆದೊಂದು ಸುಳ್ಳಿನ ಸಂತೆ . . . ಅರ್ಥವಿಲ್ಲದ ಬಣಗು ಕಂಥೆ (ಶ್ರೀರಾಮಾ. ೬೩೭-೮೫). [ಸಂ. ಕಂಥಾ]

**ಕಂಥೆಗುಪ್ಪಸ** (ನಾ). ಚಿಂದಿಬಟ್ಟೆಗಳಿಂದ ಮಾಡಿದ ಕುಪ್ಪಸ: ನಿಜ ಸಮಯದುತ್ಸಾಹಮೆಂಬ ಸೊಂಪಿನ ಕಂಥೆಗುಪ್ಪಸಂ ತೊಟ್ಟು . . . ಭಿಕ್ಷಾನ್ನಮಂ ಶಿವಂಗರ್ಪಿಸಿ (ಆರಾಜ. ೫-೭). [ಕಂಥೆ + ಕುಪ್ಪಸ]

**ಕಂದ$_1$** (ನಾ). ೧. ಮಗು; ಕೂಸು; ಹಸುಳೆ: ತಾರಕನಂ ಶಂಕರನ ಕುಮಾರಕನಱಿದಂ ಗಡಿಂತು ತೊಟ್ಟಿಲ ಕಂದಂ (ಸಮಪ. ೧೦-೬೭); ಪಾಲ್ಬೊರೆದ ಸುಣ್ಣೆರಲಂ ಮೊಲೆಗಿತ್ತು ಪೀರ್ದು ಕಣ್ದೆಱೆಯದ ಕಂದ ನೆಂದೆನಗೆ ಕಣ್ದೆಱೆಯಿಪ್ಪನೊ ಮಂದಹಾಸಮಂ (ಅರ್ಧನೇ. ೧-೧೦೦); ಘನ ಪೌರುಷವು ನಿನಗುಂಟೆಂದು ಕಂದನ ತೆಗೆದು ಬಿಗಿಯಪ್ಪಿ (ಕುವ್ಯಾದ್ರೋ. ೪-೩೬); ಕದನಕ್ಕೆ ಕಂದನ ಕಳುಹಬಹುದೇ (ತೊರರಾ. ೧-೯-೩೪). ೨. ತನಗಿಂತ ಚಿಕ್ಕವರನ್ನು ವಾತ್ಸಲ್ಯದಿಂದ ಕರೆಯುವಾಗ ಬಳಸುವ ಮಾತು: ನಿನ್ನನುಜರ್ ನಿನ್ನಂ ಬೆಸಕೆಯ್ದೆ ನೀನೆ ನೆಲನ ನಾಳ್ವುದು ಕಂದಾ (ಪಂಪಭಾ. ೯-೮೨); ಕಂದ ನಿಜಾನುಜರೆಲ್ಲಿದರ್ (ಗದಾಯು. ೩-೭೬); ಕಂದಾ ನೀನಿತ್ತ ಬಾ ಎಂದು ನೀವು ನಿಮ್ಮಂದವ ತೋಱಯ್ಯಾ (ಮಹಾದೇ. ಕ. ೧೫-೩೪); ಕಂದ ಬಾರೆನ್ನ ಕಟ್ಟಾಣಿ ಪೆಣ್ಮಣಿಯೆ ಬಾರೆಂದು ಮುಂದಕೆ ಬರಿಸಿದಳು (ಹದಿಬ. ೧-೨೭). [ದೇ. ‖ ಮಲ. ಕಞ್ಞ; ತೆಲು. ಕಂದು, ಕಂದುವು; ಕುರುಖ್. ಖದ್ದ್, ಖದಾ; ಮಲ್ತೊ. ಕದೆ]

**ಕಂದ$_2$** (ನಾ). ೧. ಹೆಗಲು; ಭುಜಾಗ್ರ: ಕುಣಿದವಿಬ್ಬರ ಮುಷ್ಟಿಯಿಬ್ಬರ ಹಣೆಯಲೆದೆಯಲಿ ಮೋಱೆಯಲಿ ಭುಜದಣಸಿನಲಿ ಕಂದದಲಿ ಶಿರದಲಿ ಬದಿಯಲುದರದಲಿ (ಕುವ್ಯಾಸ. ೨-೧೦೭); ಬೆಂಗವಾಯ್ದು ನಡೆಯಿಸಿ ನಲವೇಱಿಸಿ ಕಂದವ ತಟ್ಟಿ ಬಿಡದೆ ದಟ್ಟಿಸಿ ತೋಱಿಸಿದನು (ಕುರಾಸಾಂ. ೯-೯೩); ಕುದುರೆಗಳ ಜೀನ ಹಲ್ಲಣ ಲೇವೆ ಕಬ್ಬಿ ಕಂದದ ಹಕ್ಕರಿಕೆ ಚಬುಕು ಮೊಗರಂಬ ವಾಘೆಗಳ್ (ಚಿಬಪು. ೪೭-೪೪); ಮುದ್ದು ವೆಣ್ವೊರ್ವಳ ಕಂದದೊಳ್ ನಟ್ಟು ಮೊಱಗುವ ಮದ್ದಳಮಂ ನೋಡಿ (ಚಿಕವಿ. ೬-೧೩೨ ವ). ೨. [ಛಂದ] ಮಾತ್ರಾಗಣಬದ್ಧವಾದ ಒಂದು ಅರ್ಧಸಮವೃತ್ತ: ಕಂದಂಗಳ್ ಪಲವಾಗಿರೆ ಸುಂದರವೃತ್ತಂ ಗಳಕ್ಕರಂ . . . ಅಂದಂಬೆತ್ತಿಸೆಯೆ ಪೇೞ್ದೊಡದು ಚತ್ತಾಣಂ (ಕವಿರಾ. ೧-೩೫). ೩. ಸೈನ್ಯ; ದಳ. 'ಕಂದಾಚಾರ' ಪರಾ. ೪. ಸಮೂಹ. ೫. [ಜೈನ] ಪುದ್ಗಲಗಳ ಪಿಂಡ: ಗಿರಿ ತರು ಗೋಡೆ ಮುಂತಾದುವು ಬಲು ಕಂದದಿರವಿಂದ ನಡೆಗಡ್ಡಲಹುವು ಪರಮಾಣುವಣು ಬಡ ಕಂದದ ಪುದ್ಗಲವಿರುತಿದ್ದು ತಡೆಯವೆಯ್ದುವರಾ (ಭರಚ. ೬೪-೪೦). [ಪ್ರಾ. ಖಂಧ (< ಸಂ. ಸ್ಕಂಧ)]

**ಕಂದ$_3$** (ನಾ). ೧. ಗೆಡ್ಡೆ; ಕಮಲದ ಗೆಡ್ಡೆ: "ಸಾರಸದ ಗಡ್ಡೆಯದು ಕಂದಂ" (ಮಂಗರಾ. ೧೨೪-೧೭); ಜಲಜಾತ ಕುಮುದ ನೀಲೋತ್ಪಲಕಂದ ಮನಾಜ್ಯ ಮಧುಗಳಿಂ ಸಂಧಿಸಿ (ಲೋಕೋಪ. ೬-೨೩); ಮರ ಫಲತೋಟ ಬೆಬನಹೆತ[ಲು] ಕಂದ ಕದಿರು ತುಂಬೆ (ಸೌಇಎ. ೧೯೨೯, ಮಂಗಳೂ. ೪೭೯-೧೭; 1320). 'ಕಂದಮೂಲ' ಪರಾ. ೨. ಬೆಳ್ಳುಳ್ಳಿ. ೩. ಸೂರಣಗೆಡ್ಡೆ. ೪. ಬಾವು; ಊತ; ಗಂಟು. ೫. ಗುಹ್ಯೇಂದ್ರಿಯ ಬಾಧೆ. ೬. ಮೇಘ. 'ಕಂದವಾಹನ' ಪರಾ. ೭. ಕರ್ಪೂರ. [ಸಂ.]

**ಕಂದಕ$_1$** (ನಾ). (ಕೋಟೆಯ ಸುತ್ತಲೂ ಇರುವ) ಅಗಳು, —ಅಗಳತೆ; ಆಳವಾದ ತಗ್ಗು, —ಕುಣಿ, —ಹಳ್ಳ: ಎರಡು ಸುತ್ತಿನ ಕೋಟೆಯೊತ್ತಿನಲಗಳು ಕಂದು[ದ]ಕವ ಮತ್ತೆ ರಾಟವಳ. . .ಕಂಡರಾಗ (ಕಂನವಿ. ೧೪-೨೬); ಕೋಟೆಯ ಸುತ್ತಲೂ ಆಳವಾದ ಕಂದಕವಿರುತ್ತಿತ್ತು (ಕಶಾಅ. ೨೮೪); ದಾರಿಯಲ್ಲಿ ಅಲ್ಲಲ್ಲಿಯೇ ಯುದ್ಧಕಾಲದ ಕಂದಕಗಳು ನಾಶವಾದ ಮೋಟಾರ್ ಗಾಡಿಗಳ ಅಸ್ಥಿಪಂಜರ (ಯೋಧಪು. ೧). [ದೇ. ‖ ತೆಲು. ಕಂದಕ. / ಅರ. ಮರಾ. ಖಂದಕ]

**ಕಂದಕ$_2$** (ನಾ). ಒಂದು ಊರಿನ ಹೆಸರು: ಮಹಾದೇವ ಗಿರೀಃ ಪೂರ್ವತ ಆನೇವರಿ ಚಾಲ ಕನ್ದಕ ದುದ್ದಪಲ್ಲಿ ಸಹಿತಾ ಪಾಣ್ಡರಙ್ಗಪಲ್ಲೀ ಪ್ರತಿಪ(ಪಾ)ದಿತೇ (ಮೈಆರಿ. ೧೯೨೯, ೧೧೭-೧೪; 516). [?]

**ಕಂದಕೊತ್ತ** (ನಾ). ಒಂದು ಊರಿನ ಹೆಸರು: ಕನ್ದಕೊತ್ತರ ಶ್ರೀರಾಮನ್ ನರ ಗಜ ತುರಗ ಸಮೂಹಂ ಪೊಕ್ಕು ಎತು ವೀರಸ್ವರ್ಗಂ ಪೊಕ್ಕನ್ (ಎಕ. XII, ಮದ್ದಗಿ. ೯೩–೩; 790). [?]

**ಕಂದಗಡ್ಡೆ**, ಕಂದಗೆಡ್ಡೆ (ನಾ). ಸೂರಣಗೆಡ್ಡೆ (ಕಿ). **ಕಂದಗೆಡ್ಡೆ**: (ಮೈಔಗಿ. ೭೬–೧೫೫೮). [ಕಂದ$_3$ + ಗಡ್ಡೆ$_1$]

**ಕಂದಗೆಡ್ಡೆ** 'ಕಂದಗಡ್ಡೆ' ನೋ.

**ಕಂದಣಿಕೆ** 'ಕಂದಳಿಕೆ' ನೋ.

**ಕಂದತಮ್ಮ** (ನಾ). ಒಂದು ಹೆಸರು (?): ಇದಕ್ಕೆ ಸಾಕ್ಷಿ ಅಮಚ್ಚರ್ ತೆಲಮ್ಮೆಯರ್ ಕರಾಸರ್ ರಗ್ಗ × × ಸರ್ ನಿನೆಚ್ಚಾರ್ ಧರಳೆ × × ಕನ್ದತಮ್ಮ (ಎಕ. IV, ಗುಂಡ್ಲುಪೇ. ೮೬–೬; 750). [?]

**ಕಂದನಾಡಿ** (ನಾ). ದೇಹದ ಮುಖ್ಯ ನಾಡಿಗಳಲ್ಲಿ ಒಂದು; ಸುಷುಮ್ನಾ ನಾಡಿ (?); "ಸುಷುಮ್ನನಾಡಿ" (ಸರ್ವಜ್ಞ. ಕೋಶ): ಕುಂಡಲಿಯ ಭೇದದ ಕಂದನಾಡಿಯ ನಡುವೆ ಮಂಡಿಸುತಿರ್ಪ ಹಂಸನ ಹತ್ತಿರವೆ ಕಂಡಿಹುದು ಸುಳುವು (ಸರ್ವಜ್ಞ. ೪೭೪). [ಕಂದ ? + ನಾಡಿ]

**ಕಂದನೆ** (ನಾ). ಯಂತ್ರ ಮೊದಲಾದುವನ್ನು ಶುದ್ಧಗೊಳಿಸಿ ಚಲನ ಸೌಲಭ್ಯಕ್ಕಾಗಿ ಹಾಕುವ ಎಣ್ಣೆ, —ಹೆರೆ; ಎರೆಎಣ್ಣೆ; ಕೀಲೆಣ್ಣೆ: ಎತ್ತಿನಗಾಡಿ ಚಕ್ರಕ್ಕೆ ಕಂದನೆ ಹಾಕಬೇಕು (ರೂಢಿ). [← ತೆಲು. ಕಂದೆನ, ಕಂದಿಯನ]

**ಕಂದಮಂಗಲ** (ನಾ). ಒಂದು ಪ್ರದೇಶದ ಅಥವಾ ಊರಿನ ಹೆಸರು: ಕೈವಾರ ವಿಷಯ (ಅ)ನ್ತರ್ಗತಾ ಕನ್ದಮಙ್ಗಲೋ (ಅ) ನಾಮಧೇಯ ಪ್ರತಿಪಾದಿತೇ (ಮೈಆರಿ. ೧೯೧೪, ೧೩–೩೫; 806); ಕಂದಮಂಗಲಕೆ ಸಲುವ ಶಿಂತ ತಡಪು ಎನಿಸಿಕೊಂಬ ಗ್ರಾಮವ (ಎಕ. X, ಚಿಂತಾಮ. ೧೩೧–೧; ?). [ಕಂದ$_0$ + ಮಂಗಲ ?]

**ಕಂದಮೂಲ** (ನಾ). ಗೆಡ್ಡೆಗೆಣಸು: ರುದ್ರಾಕ್ಷಮಾಲೆಯಂ ಕಳೆದು ಮಣಿದೊಡಿಗೆಯಂ ಕಂದಮೂಲವನು ಬಿಟ್ಟೊಟಮಂ . . . ಜಗವಱಿಯೆ ಕೂಡಲು ವ್ರತಕ್ಕೆ ಮುಪ್ಪಾಯ್ತೆ ಮುಪ್ಪಿನೊಳು (ಹಚಕಾ. ೯–೮). [ಕಂದ$_3$ + ಮೂಲ]

**ಕಂದಮ್ಮ** (ನಾ). ಮಗು: ಸಣ್ಣ ಕಂದಮ್ಮಗಳ ಕಣ್ಣೀನ ಕವಡೀಯ ತಣ್ಣನ್ನ ಜೋಮಾಲೆ ಕೊರಳೊಳಗಿತ್ತೋ (ನಾದಲೀ. ೩೮–೮). [ಕಂದ$_1$ + ಅಮ್ಮ$_1$]

**ಕಂದಮ್ಮಭಟ್ಟ** (ನಾ). ಒಬ್ಬಾತನ ಹೆಸರು: ಕನ್ದಮ್ಮಭಟ್ಟರಾನೆ ಊರಾಳೆ ಆನೆಊರಱಿವಿನೊಳ್ ಮನ್ದೆಯನ್ನಗೆ × × × ತಮ್ಮುತ್ತಿಬ್ಬರುಂ ಎಱಿದು ಸತ್ತಾರ್ (ಎಕ. X, ಶಿಡ್ಲಘ. ೩೪–೧; 900). [ಕಂದಮ್ಮ + ಭಟ್ಟ]

**ಕಂದಯ್ಯ** (ನಾ). = ಕಂದಮ್ಮ: ಚಿಕ್ಕ ನನ ಕಂದಯ್ಯ, ಚಿಣಿದಾಂಡು ಅಡ್ಡಾನ . . . ಬಾಲ್ಯಾರ ಚಿತ್ರದ ಕೊಡಕ ಚಿಣಿಬಡೆದ (ಕನ್ನಜಾ. ೪೬). [ಕಂದ$_1$ + ಅಯ್ಯ$_1$]

**ಕಂದರ$_1$** (ನಾ). ಕೊರಳು; ಕುತ್ತಿಗೆ: ಗರಳವನುಯಮರ್ದನುಂಬಂತೆ ಸವಿದಮಳ ಕಂದರದಿಯಂಕಿತಗೈದ ರಾಮೇಶನಡಿಕಮಲ ಕೊರ್ತು ಮೇಲ್ಗಥೆಯ ಪೇಳ (ನವಮೋ. ೧೬–೧); ಲಿಂಗಗಳನವರ ಬಂದದಿ ಕಂದರಕೆ ಬಿಗಿಸವರ ಕರಡಿಗೆ ಬಿಟ್ಟು ಉರದೆಡೆಗವನು ಕಟ್ಟಿಸಿ (ಬಜ್ಜಪು. ೪೪–೩೩). [< ಸಂ. ಕಂಧರ]

**ಕಂದರ$_2$** (ನಾ). ೧. ಕಣಿವೆ; ದರಿ: "ಕಂದರಮೆನಲು ದರಿಯಕ್ಕು" (ಮಂಗರಾ. ೩೦–೨); ಪಾಲ ಪೊನಲ್ ಪೊದಱೊದವಿ ಸೌಂದರಮಂದರ ಕಂದರಂಗಳಂ (ಅಜಿಪು. ೪–೬೩). ೨. ಗವಿ; ಗುಹೆ: ಆ ಗಿರೀಂದ್ರಕಂದರದೊಳ್ ತಪಂಗೆಯ್ವ ತಪೋಧನರ (ಪಂಪಭಾ. ೭–೮೦ ವ). [ಸಂ.]

**ಕಂದರಿ** (ನಾ). ಗವಿ; ಗುಹೆ (ಕಿ). [ಸಂ. ಕಂದರೀ]

**ಕಂದರಿಕೆ** (ನಾ). 'ಭೋಗದವರು' ಎಂಬ ಪಂಗಡದವರು ಅನುಸರಿಸುವ ಒಂದು ದಾಂಪತ್ಯ ವಿಧಿ: ಕಂದರಿಕೆಯೆಂಬುದು ಮದುವೆಗೆ ಎಡಗೈ . . . ಸಾಮಾನ್ಯವಾಗಿ ತಾಳಿಶಾಸ್ತ್ರವಾಗುವ ದಿನವೇ ಕಂದರಿಕೆಯಾಗುವುದುಂಟು (ಗಾಯಜ. ೨೬). [?]

**ಕಂದರೆ** (ನಾ). = ಕಂದರಿ (ಕಿ). [< ಕಂದರ]

**ಕಂದರೊಳೆ** (ನಾ). ಆಕ್ಷೋಡದ ಮರ (ಕಿ). [< ಸಂ. ಕಂದರಾಲ]

**ಕಂದರೋದರ** (ನಾ). ಕೊಳ್ಳ, ಕಣಿವೆಗಳನ್ನು ಒಳಗೊಂಡದ್ದು: ಭರತೈರಾವತದ ನಟ್ಟ ನಡುವಿರ್ದುದು ಸೌಂದರ ಮಂದರಾಚಲಂ ಕಂದರೋದರಂ ಕಿನ್ನರಾಮರ ಸ್ತ್ರೀರಮ್ಯಂ (ಅಜಿಪು. ೨–೨). [ಕಂದರ$_2$ + ಉದರ]

**ಕಂದರ್ಪ** (ನಾ). ೧. ಕಾಮ; ಮನ್ಮಥ: "ಪ್ರದ್ಯುಮ್ನಃ, ಮಕರಧ್ವಜಃ . . . ಮನ್ಮಥಃ, ಕಂದರ್ಪಃ . . . ಮನೋಭವಃ — ಈ ೨೮ ಕಾಮ(ದೇವ)ನ ಪೆಸರ್" (ಹಲಾಯು. ೭–೩೩); ಆ ಮಹಾರ್ಣವಂ . . . ಕಂದರ್ಪನಂತೆ ಶಂಬರ ಮದವಾರಣೋದಾರಮಂ (ಜಗವಿ. ೧–೪೪ ವ); ಕಂದರ್ಪನೆಂಬ ಡೊಂಬನ ಚಂದದ ಪೊಂಬೊಂಬೆವಿಂದು ನೆರೆದತ್ತಾಗಳ್ (ಹವ್ಯಾರ. ೨–೭೧). ೨. ಒಬ್ಬ ಕನ್ನಡ ಕವಿಯ ಹೆಸರು: ಶ್ರೀ ಕಂದರ್ಪನ ಕಾವ್ಯಂ (ಕವಿಚ. I, ಅನುಬಂ. ೨). [ಸಂ.]

**ಕಂದರ್ಪಕ** (ನಾ). = ಕಂದರ್ಪ ೧: ಕೊಲೆಗಡಿಗ ಕಂದರ್ಪಕನ ಕೂರಲಗೊ ಮದನನ ಸೂಕ್ಕಿದಾನೆಯೊ (ಕುವ್ಯಾವಿ. ೨–೮). [ಸಂ.]

**ಕಂದರ್ಪದಹನ** (ನಾ). ಕಾಮನನ್ನು ಸುಟ್ಟವನು; ಶಿವ: ಕಂದರ್ಪದಹನನಂ ನೆನದು ಕೀರ್ತಿಸುವವನ ಭಾಗ್ಯವಂ ಪೊಗಳಲಳವೆ (ವೀಶೈಪು. ೨–೬–೩೧). [ಕಂದರ್ಪ + ದಹನ]

**ಕಂದರ್ಪನಂದನ** (ನಾ). ೧. ಮನ್ಮಥನ ಮಗ; ಅನಿರುದ್ಧ. ೨. ಕಾಮನಂತೆ ಇರುವ ಬಾಲಕ; ಚೆಲುವಾದ ಮಗು: ನಮ್ಮ ದೊರೆ ನಂದನವನಕ್ಕೆ ಬೇಂಟೆವೋಗಿ ತಂದಿರ್ಪನೀ ಕಂದರ್ಪನಂದನನ್! (ಚಂದ್ರಸ. ೩೯–೨). [ಕಂದರ್ಪ + ನಂದನ]

**ಕಂದರ್ಪರಿಪು** (ನಾ). ಕಾಮನವೈರಿ; ಶಿವ (ಕಿ). [ಕಂದರ್ಪ + ರಿಪು]

**ಕಂದರ್ಪಸಾಯಕ** (ನಾ). ಕಾಮನ ಬಾಣ: ವಿಲಾಸವತಿ ನರ್ತಿಸಿದಳ್ ಕಂದರ್ಪಸಾಯಕಂ ನರ್ತಿಪವೋಲ್ (ಮಲ್ಲಿಪು. ೮–೪೯). [ಕಂದರ್ಪ + ಸಾಯಕ]

**ಕಂದರ್ಪಾರಿ** (ನಾ). = ಕಂದರ್ಪರಿಪು: ಕಂದರ್ಪಾರಿ . . . ಮದನರಿಪು—ಇವು ಪದಿನಾಱುಂ ರುದ್ರಗಣಂಗಳ್ (ಛಂದೋಂಬು. ೫–೩ ವ). [ಕಂದರ್ಪ + ಅರಿ$_6$]

**ಕಂದಲ್$_1$**, ಕಂದಲು (ನಾ). ಮಣ್ಣಿನ ಚಿಕ್ಕಪಾತ್ರೆ; ಗಿಂಡಿ: ಮಹಾತೀರ್ತ್ಥಂಗಳೊಳನೇಕ ಕವಿಲೆಗಳಂ . . . ಕಂಚಿನ ಕಱವ ಕಂದಲ್ಗಳುಂ ಬೆರಸು . . . ದಾನಂಮಾಡಿದ ಮಹಾಪುಣ್ಯಫಲಮಕ್ಕು (ಸೌಇಇ. IX–i, ೨೫೪–೫೧; 1148); ನೆಲಹಿನ ಪಾಲುಂ ಬರ್ದುಂಕದೆಲೆ ಕಱಿವೀ ಕಂದಲ ಪಾಲುಂ ಮುಂ ಬರ್ದುಕದು (ಅರ್ಥನೇ. ೭–೮೦); ಕಂದಲ ತೊಡೆಯೊಳಿರುಕಿ . . . ಸುರಭಿಯ ಕಱಿವಬಲೆಯರ ಕುವರನೀಕ್ಷಿಸಿದ (ಜೀವಂಚ. ೬–೨೮). **ಕಂದಲು**: ಬೆಣ್ಣೆಯ ಕಂದಲ ಕರಗಲಿಟ್ಟರೆ ಕಂದಲು ಕರಗಿತ್ತು ಬೆಣ್ಣೆಯುಳಿಯಿತ್ತು (ಅವಚಂ. ೧೪೯–೬೮೦); ಹಾಲ ಕಂದಲು ತುಪ್ಪದ ಮಡಕೆಯ ಬೋಡು ಮುಕ್ಕೆನಬೇಡ (ಬಸವ. ೪೧೬); ಮುಂದಲೆಯೊಳು ಶಿಖಿ ಮೊರೆವ ಲಹರಿಯೊಳು ಕಂದಲ ಸುರೆ ಕಂಕುಳಲಿ (ಹರಿಸಾಂ. ೩–೧೨೨). [ದೇ. ‖ ತಮಿ. ಕನ್ನಲ್; ತುಳು. ಕಂದೆಲ್]

**ಕೆಂದಲ್**$_2$ (ನಾ). ಮೊಳಕೆ; ಚಿಗುರು: ಅವರ ಬೇಟದ ಕಂದಲ್ಗ [ಪಾಠಾಂ. ಕವಲ್ಗ]ಳಂತೆ ಚಿತ್ರಾಂಗದ ವಿಚಿತ್ರವೀರ್ಯರೆಂಬ ಮಕ್ಕಳ್ ಪುಟ್ಟೆ (ಪಂಪಭಾ. ೧–೭೩ ವ). [< ಸಂ. ಕಂದಲ]

**ಕಂದಲ, ಕಂದಳ** (ನಾ). ೧. ಮೊಳಕೆ; ಕುಡಿ. ೨. ನಿಂದೆ; ದೂಷಣೆ. ೩. ಕೆನ್ನೆ; ಕಪೋಲ. ೪. ಮಧುರವಾದ ನಾದ. ೫. ಬಾಳೆಯ ಗಿಡ. ೬. ಗುಂಪು. ೭. ಚಿನ್ನ. ೮. ಕಾಳಗ; ಯುದ್ಧ. ೯. ಒಂದು ಬಗೆಯ ಹೂವು. **ಕಂದಳ**: ೩. ದೇಹದೀಪ್ತಿ ಹಾರದ ನೆವದಿಂದಮೋಲಗಿಸೆ ತಾರಗೆಯಂ ನಿಜಕಂಠ ಕಂದಳಂ (ಪಂರಾಮಾ. ೬–೭೮). ೯. ಕೇದಗೆಗಳೊಳ್ಗಜೀಯೊಳ್ ಗಜೀಸೋಂಕಿ ಕುಂದದೊಳ್ ಕುಂದದ ಲೀಲೆಯಿಂ ಸುಳಿದು ಕಂದಳ[ಪಾಠಾಂ. ಕೆಂದಳ]ದೊಳ್ ದಳಮಂ ಕಲಂಕಿ . . . ತೀಡಿದುದು ಮಾರುತಂ (ಜಗವಿ. ೪–೩೪). [ಸಂ.]

**ಕಂದಲಿ**$_1$ 'ಕಂದುಳಿ' ನೋ.

**ಕಂದಲಿ**$_2$ (ನಾ). ೧. ಒಂದು ಬಗೆಯ ಜಿಂಕೆ; ಕದಲಿ. ೨. ಕೆಂಪು ಅಥವಾ ಹಳದಿ ಹೂವು ಬಿಡುವ ಒಂದು ಬಗೆಯ ಸಣ್ಣ ಗಿಡ; ಭೂಕದಲಿ; ನೆಲಬಾಳೆ: ಆಲರ್ದುವು ಕುಟಜಂಗಳ್ ಪೂತುವಿಂಬಪ್ಪಿನಂ ಕಂದಲಿ [ಪಾಠಾಂ. ಕಂಟಲಿ, ಕಂಡಲಿ] ಕುಸುಮಿಸಿದತ್ತು ದ್ದಾಮ ನೀಪಾವ ನೀಜಾವಲಿ (ಕಾವ್ಯಾವ. ೬೫೫). ೩. ಬಾವುಟ; ಧ್ವಜ. ೪. ಕಮಲದ ಬೀಜ. [ಸಂ. ಕಂದಲೀ]

**ಕಂದಲಿಸು** (ಕ್ರಿ). ಕದಲಿಸು; ಅಲ್ಲಾಡಿಸು; ಕಂಪಿಸುವಂತೆ ಮಾಡು (?): ಮನೋಹರವಾದ ವುಸುರಿನ ಘಾಳಿಯಿಂದ ಪೀತಾಂಬರವನ್ನು ಕಂದಲಿಸುತ . . . ಆ ನಾರದನನ್ನು ಕುರಿತು ನುಡಿದನು (ಅರ್ಕಮಾ. ೭೬). [ಕಂದಲ್ ? + –ಇಸು$_3$]

**ಕಂದಲು** 'ಕಂದಲ್$_1$' ನೋ.

**ಕಂದವಕ್ಕರಿಕೆ** (ನಾ). ಆನೆ ಕುದುರೆಗಳ (ಹೆಗಲ) ಮೇಲೆ ಹೊದಿಸುವ ಹಕ್ಕರಿಕೆ, —ಜೂಲು: ಚಿನ್ನದ ಲಾಳ ವಜ್ರದ ಪೆಂಡೆಯ ಪೊಸರನ್ನದ ಪಕ್ಕರಿ ಮೊಗದ ಕನ್ನಡಿ ಕಂದವಕ್ಕರಿಕೆ ಮೆಱೆಯೆ ಚೆಲ್ವ ಕನ್ನಡಿಸಿದುದಾ ವಾಜಿ (ಕುರಾಸಾಂ. ೩೯–೬೨). [ಕಂಧ$_2$+ ಪಕ್ಕರಿಕೆ]

**ಕಂದವಕ್ಕರೆ** (ನಾ). = ಕಂದವಕ್ಕರಿಕೆ: ಪಕ್ಕರಕ್ಕೆಯ ಕಂದವಕ್ಕರೆಯ ಕಡಿಯಾಣದುಕ್ಕುಲದ ಮೊಗಮುಟ್ಟು ಮುಂತಾದ ಸಂಜೋಗ (ಚೇರಮ. ೧೧–೪೩). [ಕಂಧ$_2$+ ಪಕ್ಕರೆ]

**ಕಂದವಟ್ಟಿಗೆ** (ನಾ). ೧. "ಎರಡು ಭಾಗಗಳನ್ನು ಜೋಡಿಸಲು ಉಪಯೋಗಿಸುವ ಪಟ್ಟಿ, ಗಂದವಟ್ಟಿಗೆ, ಕದದ ಹಲಗೆಗಳಿಗೆ ಹಾಕುವ ಅಡ್ಡಪಟ್ಟಿ; ವೀಣಾದಂಡ" (ಪ್ರಭಣ್ಣ). ೨. ಹೆಗಲಿಗೆ ಹಾಕಿಕೊಳ್ಳುವ ಪಟ್ಟಿ; ಮದ್ದಳೆ ಮೊದಲಾದ ವಾದ್ಯಗಳನ್ನು ಹೆಗಲಿಗೆ ನೇತುಹಾಕಿಕೊಳ್ಳುವ ಪಟ್ಟಿ: ಅವುಜಿಗಂ ಕಂದವಟ್ಟಿಗೆಯಂ ಪೆಗಲೊಳ್ ತಗುಳ್ಚಿ ಕಯ್ಯನೇಜೊಳ್ ಕರತಳಮಂ (ಮಹಾನೀ. ೪–೫೪ ವ); ಅವುಜಮಂ ಪಿಡಿದೆತ್ತಿ ಕಂದವಟ್ಟಿಗೆಯನೆ ಕಂದದೊಳ್ತಳೆದು ತನ್ನೆಡಗೈಯನೆ ನೇತ್ರವಟ್ಟಿಗೆಯೊಳ್ ಪುಗಿಸಿ (ಧರ್ಮಪ. ೨–೨೧). [< ಸಂ. ಸ್ಕಂಧಪಟ್ಟಿಕಾ]

**ಕಂದವಾರ** (ನಾ). ಒಂದು ಊರಿನ ಹೆಸರು: ಕಂದವಾರದ ಸೀರೆ ಕೈಬರಹದ ಬಣ್ಣ (ಅಮೂಸಾಂ. ೪–೯). [< ಸಂ. ಸ್ಕಂಧಾವಾರ = ರಾಜನ ಬಿಡಾರ]

**ಕಂದವಾಹನ** (ನಾ). ಮೋಡವನ್ನೇ ವಾಹನವಾಗಿ ಉಳ್ಳವನು; ಮೇಘವಾಹನ; ಇಂದ್ರ: ಮುನ್ನ ಧರೆಯೊಳು ಸಂದ ರವಿಸುತ ಕೀರ್ತಿಮುಖ ಶಿಬಿ ಕಂದವಾಹನರೀಶ್ವರಂಗರ್ಪಿಸಲಜೀಯದೆ (ಬಸವು. ೧೮–೧೯). [ಕಂಧ$_3$+ ವಾಹನ]

**ಕಂದಶರ್ಮ** (ನಾ). ಒಬ್ಬಾತನ ಹೆಸರು: ಕತ್ತಿಶರ್ಮ್ಮಣ ಪುತ್ರ ಕನ್ದಶರ್ಮ್ಮಣ ಪುತ್ರ ಕಪ್ಪಶರ್ಮ್ಮಣ ಚತಾರಿ ಅಂಶಃ (ಇಅ. VII, ೧೪೬–೪೨; 668). [< ಸಂ. ಸ್ಕಂದಶರ್ಮನ್]

**ಕಂದಳ** 'ಕಂದಲ' ನೋ.

**ಕಂದಳಿ** (ನಾ). ಸಸಿ; ಮೊಳಕೆ: ಧರ್ಮದ್ರುಮಚ್ಛೇದ ಪರಶುಧಾರೆಯುಂ ವಿಷಯ ವಿಷದ್ರುಮ ಕಂದಳಿಯುಂ . . . ಅಪ್ಪ ಪಾತಕಿಯೊಳ್ ಲಕ್ಷ್ಮಿಯೊಳ್ (ಆದಿಪು. ೧೪–೧೨೨ ವ, ೧೨೩). [< ಕಂದಲ್$_2$]

**ಕಂದಳಿಕೆ, ಕಂದಣಿಕೆ** (ನಾ). ೧. ಒಂದು ಬಗೆಯ ಹೂವಿನಗಿಡ; ನೆಲಬಾಳೆ: ಕಂದಳಿಕೆಯಂತೆ ಶಿಶಿರ ಸಂಪರ್ಕಕ್ಕೆ ಕಂದಿ ಕುಂದುವಳ್ (ಕಾದಂಉ. ೩೪೦). ೨. ತಡಿ; ಜೀನು: "ಬಜುಗೋಣಿ ಕಂದಳಿ [ಪಾಠಾಂ. ಕಿ. ಣಿ]ಕೆ ಕವುದಿಗಳೆಯ್ದೆ ಸಬರಮುಕ್ಕುಂ" (ಮುಂಗರಾ. ೧೦೨–೩). ೩. ಧ್ವಜ; ಬಾವುಟ: ಮದಗಜಕಿಕ್ಕು ಕಡಿಯಾಣಮಂ ಕಬ್ಬಿಯಂ ರಥಚಯಕಿಕ್ಕು ಹಲ್ಲಣಮುಮಂ ಹಕ್ಕರಿಕೆಯುಂ ವೀರಭಟರಿಗಿಕ್ಕು ಕಂದಳಿಕೆಯುಮಂ ಶಿಕ್ಕೆಯುಮಂ (ಕುಮುರಾ. ೧೮–೧೭). **ಕಂದಣಿಕೆ**: ೨. "ಬಜುಗೋಣಿ ಕಂದಣ [ಪಾಠಾಂ. ಳಿ]ಕೆ ಕವುದಿಗಳೆಯ್ದೆ ಸಬರಮುಕ್ಕುಂ" (ಮುಂಗರಾ. ಕಿ. ೧೦೨–೩). 'ಕಂದಲಿ$_2$' ಪರಾ. [?. / ತೆಲು. ಕಂದಳಿಕ = ಜೀನಿಗೆ ಹಾಕುವ ದಪ್ಪ ಬಟ್ಟೆ]

**ಕಂದಳಿತ** (ಗು). ೧. ಚಿಗುರಿದ. ೨. ಅರಳಿದ; ಹಿಗ್ಗಿದ: ಪರಾಗಾರುಣ ಶ್ರೀಮಿಳದುದ್ಯದ್ವರ್ಣಕಂ ಕಂದಳಿತ ಕಮಳ ಚಿತ್ರಂ . . . ಕಾಸಾರಂ (ರಾಜಶೇ. ೨–೬೨); ಅರಸನೂ ಅಪರಿಮಿತಾನಂದ ಕಂದಳಿತ ಹೃದಯನಾಗಿ ಕಲಾನಾಥರನ್ನೂ ಪರಮಶಿವನನ್ನೂ ಸ್ತುತಿಸಿದನು (ಪುರಾವಿ. ೯೧). [ಸಂ. ಕಂದಲಿತ]

**ಕಂದಳಿರು** (ನಾ). ಒಂದು ಸ್ಥಳದ ಹೆಸರು: ನಾಯಕನು ಕಂದಳಿರೊಳಗೆ ಮು ×× ಎನಸಲುರಳಿಯಲುಕೆ ವೊಂದು ಸಿವನೆಕೆಯನು ಉಂಬಳಿಯಾಗಿ ಕೊಟ್ಟರು (ಎಕ. VIII, ಸಾಗರ. ೮೪–೧೩; 1282). [?]

**ಕಂದಳಿಸು** (ಕ್ರಿ). ೧. ಕುಡಿಯಿಡು: ಮುಕ್ತಾಲತೆ ಮುಂದೆ ಕಂದಳಿಸೆ ಕಣ್ಮಲರಂ ಶ್ರವಣಾನತೋತ್ಪಳಂ ಲಾಲಿಸೆ ಬಾಲೆ ಬಂದೆಜಗಿದಳ್ ನಿಜತಾತನ ಪಾದಪೀಠದೊಳ್ (ವರ್ಧಪು. ೯–೩೫). ೨. (ಅಲಂ) ಮಿನುಗು; ಹೊಳೆ: ಅಳಿಕುಳ ಪ್ರಭೆಯನಿಳಿಸಿ ಕಂದಳಿಪ ಕುಂತಳದ ಕಾಂತೆಯರ (ನಂದಿಮಾ. ೯–೩೩). [ಕಂದಳ (= ಕಂದಲ) + – ಇಸು$_3$. / ತೆಲು. ಕಂದಳಿಂಚು]

**ಕಂದಾಚಾರ** (ನಾ). ೧. ಒಂದು ವಿಧವಾದ ಸೈನ್ಯ. ೨. ಶಸ್ತ್ರಧಾರಿಯಾದ ಸೇವಕ, —ಜವಾನ: ಬೆಳೆಯ ಲೆಕ್ಕದಲೂ ಕಂದಾಚಾರ[ಕೆಬ] ರಸಿಕೊಂಡು (ಸೌಇಎ. ೧೯೨೯, ಮುಂಗಳೂ. ೪೭೧–೧೭; 1337); ಕಂದಾಚಾರದ ಕಾಚಪ್ಪನಾಯಕರ ಮಕ್ಕಳು (ಎಕ. V, ಹಾಸನ. ೨–೨೧; 1563); ಮಿರ್ಾಮುಹಮುದಲ್ಲಿ ಕಡೆ ಐನೂರು ಕಂದಾಚಾರದ ಜನ (ರಾಜೇಂದ್ರ. ೯೬); ಕಂದಾಚಾರದ ಜವಾನರು ನಿಮ್ಮ ಚಿಕ್ಕಮ್ಮನನ್ನು ಹಿಡಿದುತಂದರು (ಅದೂಟ. ೧೬೨). ೩. ಸಂಪ್ರದಾಯ; ಹಳೆಯ ಕಾಲದಿಂದ ನಡೆದು ಬಂದ ಕಟ್ಟುಪಾಡು: ಈ ಹಾಳು ಕಂದಾಚಾರ ಯಾವತ್ತು ಹೋಗುತ್ತೋ ಅವತ್ತೇ ನಮ್ಮ ದೇಶಕ್ಕೆ ಮೋಕ್ಷ (ಅನಾಮಿ. ೫೭); ನೀವು ಹಳೇ ಕಂದಾಚಾರಗಳನ್ನೇ ನಂಬಿಕೊಳ್ಳಿ (ನಾಲ್ಕಮ. ೫); ಕಂದಾಚಾರ ಪದ್ಧತಿಯ ಪತ್ರಿಕೆಗಳಲ್ಲಿ ಪ್ರಕಟಗೊಂಡ ಅಗ್ಗದ ಲೇಖನಗಳ ಸಮಕ್ಕೂ ಅವನ ಬರಹಗಳು ನಿಲ್ಲುವಂತಿರಲಿಲ್ಲ (ಪುನರು. ೩೩೩).

ಕಂದಾಚಾರಕಚೇರಿ, ಕಂದಾಚಾರಕಛೇರಿ = ಸೈನ್ಯ ಖಾತೆಯ ಕಚೇರಿ; ಹಿಂದಿನ ಕಾಲದ ಹದಿನೆಂಟು ಕಚೇರಿಗಳಲ್ಲಿ ಒಂದು (ಸ್ಯಾಂಡರ್): ಕಂದಾಚಾರಕಛೇರಿ (ಮಹಾವಂ. II, ೩೯).

ಕಂದಾಚಾರದ ದಫೇದಾರ=ಕಂದಾಚಾರದ ಸೇರ್ವೆಗಾರ (ಸ್ಯಾಂಡರ್). **ಕಂದಾಚಾರದ ಭಂಟ** = ಕಂದಾಚಾರದ ವಾಲೆಕಾರ (ಸ್ಯಾಂಡರ್). **ಕಂದಾಚಾರದ ಭಕ್ಷಿ** = ಸೈನ್ಯದ ಮುಖ್ಯ ಅಧಿಕಾರಿ: ಈ ವರ್ತಮಾನ ಟೀಪುಸುಲ್ತಾನರು ಕೇಳಿ, ಕಂದಾಚಾರದ ಭಕ್ಷಿ ಸದೂರ್ ಗುಲಾಮಲ್ಲೀ ಗಾಜೀ ಕಾದಲೇರ್‌ದಿಲ್ಖಾ ಇವರ ಸಂಗಡ (ರಾಜೇಂದ್ರ. ೨೧). **ಕಂದಾಚಾರದವ** = ೧. ಸೈನಿಕ; ಸೈನ್ಯಕ್ಕೆ ಸೇರಿದವನು: ನಿಮ್ಮಲ್ಲಿ ಓಲೆಕಾರರು ಕಂದಾಚಾರದವರು ಆರಾರು? (ಬಿಟ್ಟಅ. ೫೦–೮). ೨. ಸಂಪ್ರದಾಯಕ್ಕೆ ಕಟ್ಟುಬಿದ್ದವನು. **ಕಂದಾಚಾರದ ವಾಲೆಕಾರ** = ಶಸ್ತ್ರಧಾರಿಯಾದ ಸೇವಕ, —ಜವಾನ (ಸ್ಯಾಂಡರ್). **ಕಂದಾಚಾರದ ಸೇರ್ವೆಗಾರ** = ಶಸ್ತ್ರಸಜ್ಜಿತವಾದ ಸೇವಕರ ಮೇಲಧಿಕಾರಿ (ಸ್ಯಾಂಡರ್). **ಕಂದಾಚಾರದ ಹೋಬಳಿದಾರ** = ಕಂದಾಚಾರದ ಸೇರ್ವೆಗಾರ (ಸ್ಯಾಂಡರ್). [ಕಂದ₂ + ಆಚಾರ]

**ಕಂದಾಯ**, ಕಂಥಾಯ (ನಾ). ೧. ಭೂಮಿ, ಮನೆ ಮೊದಲಾದುವುಗಳಿಗಾಗಿ ಸರ್ಕಾರಕ್ಕೆ ತೆರುವ ನಿಗದಿಯಾದ ಹಣ; ತೆರಿಗೆ; ಕರ; ತೀರ್ವೆ; ಬಿರಾಡ: ನುಡಿದ ದ್ರವ್ಯಮಂ ಕಂದಾಯದೊಳ್ ಕುಡುವುದು ಸ್ಕಂಥೋಪನಯ ಸಂಧಿಯೆಂಬುದಕ್ಕುಂ (ಪಂಚತಂ. ೨೨೧–೨); ಎನ್ನ ಚತುರಂಗಬಲಕ್ಕೆ ತಪದಿ ಕಂದಾಯಮುಮಂ ಕೊಟ್ಟು ನಷ್ಟವಾಗಿ (ವಚಶಾ. I, ೨೮೦); ಮಾಲೂರಲು ಕಡಿದ ಕಂದಾಯದಲು ಸಟ್ಟು ಬೆಡಿಗೆ ಸಲ್ಲದು (ಸೌಇಎ. ೧೯೨೯, ಮಂಗಳೂ. ೬೬೦–೧೮; 1375); ಕಂದಾಯ ಪ್ರಾಪ್ತಿಗೆ ಖಳನಿತ್ತ ಜೀವಿತ ಸಂದುದೆ ನಿಮಗೆ (ಮೋಹತ. ೩೩–೫); ಬೆಳೂರು ಗದ್ದೆಯಲ್ಲಿ ಕಂದಾಯ ಅಯಿದು ಹೊನ್ನು (ಎಕ. XIV, ತಿರುಮ. ೧೬೪–೧೮; 1663); ಮುಂ ಮಿತಿಗೆಯ್ದ ಕಂದಾಯಮನಲ್ಲದೆ ಪೆಜತೊಂದು ಕಾಸುವೀಸಮನೊಲ್ಲಂ (ಅಪ್ರತಿ. ೧೧೫–೩). ೨. [ಜ್ಯೋತಿಷ] ನಾಲ್ಕು ತಿಂಗಳ ಅವಧಿ: ವರುಷಕ್ಕಯನಗಳೆರಡಂ ಹರುಷದಿ ಕಂದಾಯ ಮೂರು ರುತುಗಳಾರು ವರುಷಕೆ ಮಾಸವು ದ್ವಾದಶ (ಭಾಸ್ಕರ. ೫೨–೧). **ಕಂಥಾಯ:** ೧. ಇಂಥಾರಿಗೆ, ಕಂಥಾಯಂ, ಅಂಥುವಣೆ (ಶಬ್ದಾನು. ೮೦ ವ್ಯಾಖ್ಯಾ).
[ದೇ. ‖ ತಮಿ. ಮಲ. ಕನ್ದಾಯ; ತುಳು. ಕಂದಾಯೊ; ತೆಲು. ಕಂದಾಯ]

**ಕಂದಾರಿ**, ಕಂದಾರೆ (ನಾ). ಅಫಘಾನಿ ದೇಶ, —ಜನ; ಪಠಾಣಿ: "ಒಂದಲ್ಲ ನೂರುಜಡೆ ಹಾಕುತ್ತಾಳೆ ನೋಡು ಅಕ್ಕ, ಕಂದಾರಿಗಳ ಹಾಗೆ ..." (ವಾತ್ಸಲ್ಯ. ೬೬). **ಕಂದಾರೆ:** ಕಂದಾರೆಯವರು ಎತ್ತಿಕೊಂಡು ಚೀಲಕ್ಕೆ ತುಂಬಿ ಮಾರಿಬಿಡುತ್ತಾರೆ (ಜೆಂಗೂಲಿ. ೧೪೯).
[← ಹಿಂ. ಕಂಥಾರೀ. / ಸಂ. ಗಂಧಾರ, ಗಾಂಧಾರ]

**ಕಂದಾರೆ** 'ಕಂದಾರಿ' ನೋ.

**ಕಂದಾವುಜ** (ನಾ). ಹೆಗಲಿಗೆ ಕಟ್ಟಿಕೊಂಡು ಬಾರಿಸುವ ಒಂದು ಬಗೆಯ ಚರ್ಮವಾದ್ಯ; "ವಾದ್ಯಭೇದ" (ಪ್ರಭಣ್ಣ): ಕಂದಾವುಜ [ಪಾಠಾಂ. ಕುಥಾವುಜ, ಕತತಾವುಜ, ಕುಂಡಪ್ರಜ] ಪಟಾವುಜ, ಕುಡುವಾವುಜ, ಅಡಾವುಜಮೆಂಬ ನಾಲ್ಕು ತೆಜದ ಅವುಜಮನೋಜೆಯಿಂ ಬಾಜಿಸುವವಾವುಜಕಾಜಿರಿಂ (ವಿವೇಕ. ಉ. ೧೯೧); ಕಂದಾವುಜಂ ಪಂಚಾವುಜವಡಾವುಜ ತುಂಬಿವೊಂದೆಸೆಯೊಳುಲಿಯೆ (ರೇವಣ. ೩–೪೫). 'ಅಡ್ಡಾವುಜ' ಪರಾ. [ಕಂದ₂ + ಅವುಜ]

**ಕಂದಾಳ** (ನಾ). ಒಂದು ಔಷಧಿ ಸಸ್ಯ: ಕಂದಾಳ, ಕಂಡ್ಲಾ (ವೈಔಗಿ. ೬೬–೧೩೪೬). [?]

**ಕಂದಾಳಸಂಪಿಗೆ** (ನಾ). ಒಂದು ಬಗೆಯ ಸಸ್ಯ: ಮನೋರಂಜಿನಿ ಹೂಬಳ್ಳಿ, ಕಂದಾಳಸಂಪಿಗೆ (ವೈಔಗಿ. ೯–೧೫೪). [?]

**ಕಂದಾಳೆ** (ನಾ). ಒಂದು ಬಗೆಯ ಮರ: (ವೈಔಗಿ. ೭೧–೧೪೫೩). [?]

**ಕಂದಿ₁**, ಕಂತಿ₁ (ನಾ). ಕರುಹಾಕಿದ ಹಸು; ಈದ ಆವು. 'ಎಳಗಂದಿ', 'ಕಡುಗಂದಿ' ಪರಾ. **ಕಂತಿ₁**: 'ಎಳಗಂತಿ' ಪರಾ.
[ಕಂದು₅ + –ಇ₂]

**ಕಂದಿ₂** (ನಾ). ಕಪ್ಪು; ಕರಿಯ ಬಣ್ಣ (ಕಿ). [< ಕಂದು₃]

**ಕಂದಿಕೆ** (ನಾ). ಬಾಡುವಿಕೆ; ಕಪ್ಪಾಗುವಿಕೆ: ಕಂದಿಕೆ, ಕಂದಿಕೆಗಳ್ (ಶಬ್ದಾನು. ೫೬೮ ಪ್ರಯೋ). [ಕಂದು₁ + –ಇಕೆ]

**ಕಂದಿಸು** (ಕ್ರಿ). ಬಾಡುವಂತೆ ಮಾಡು; ಕುಗ್ಗಿಸು; ಮಸಕಾಗಿಸು; ಕಾಂತಿಹೀನವಾಗಿಸು: ಏವೊಟ್ಟುಂ ಗಾತ್ರಮುಮಂ ಶೋಷಿಸುತೆ ಕರಣಮಂ ಕಂದಿಸುತ್ತುಂ (ರಕ್ಷಾಶ. ೭); ಪಿರಿದುಂ ಸುಯ್ವೆಂಕೆಯಿಂ ಪಂಕಜೋತ್ಕರಮುಂ ಕಂದಿಸುತುಂ (ಶಾಂತೀಶ್ವ. ೧೧–೧೨); ನಿಂದಿಸರಲೇ ಪ್ರಜೆಗಳಿನ್ನೆಂಗಂ ತನ್ನ ಗುಣಕೊಂದಿಸರಲೇ ಪಳಿವನಮಲತರ ಕೀರ್ತಿಯಂ ಕಂದಿಸರಲೇ ದೂಸಜಿಂದೆ ಭುಜವಿಜಯಪ್ರತಾಪತೇಜವನಿಳೆಯೊಳು (ಜೈಮಿಭಾ. ೧೮–೪೨); ವನಜಾರಿಯ ಕಂದಿಪವೋಲ್ ದಿನಮುದು ಕುಮುದಿನಿಯ ಪಿರಿದು ಕಂದಿಸಿದವುದೇಂ (ಶಾಕುಂತ. ೩೮–೬೮).
[ಕಂದು₁ + –ಇಸು₃]

**ಕಂದೀಲ** 'ಕಂದೀಲು' ನೋ.

**ಕಂದೀಲು**, ಕಂದೀಲ (ನಾ). ೧. ಮೇಣದ ಬತ್ತಿ. ೨. ಗಾಳಿ ತಾಗದಂತೆ ಗಾಜಿನ ಆವರಣವುಳ್ಳ, ಎಲ್ಲಿಗಾದರೂ ಒಯ್ಯಲು ಅನುಕೂಲವಾಗುವಂತೆ ಹಿಡಿಕೆಯುಳ್ಳ ದೀಪ; ಲಾಟೀನು; ಲಾಂದ್ರ: ಅರಮನೆಯವರೇ ಬಂದು ಅದನ್ನು ಸಿಂಗರಿಸಿ ಕಂದೀಲು, ಗುಳೋಪು ಕಟ್ಟಿದ್ದಾರೆ (ಮಲ್ಲಿ. ೯೭); ಕಂದೀಲಿನ ಮಂದಬೆಳಕಿನಲ್ಲಿ ... ಮನ ಕಳವಳಿಸ ಹತ್ತಿತು (ಮೂರುದಾ. ೫೪); ಕಂದೀಲಿನ ಬತ್ತಿಯನ್ನು ಏರಿಸುವಾಗ ಚಿನ್ನೂನ ಕೈ ನಡುಗಿತು (ಕ್ಷಿತಿಜ. ೪೫); ತಾಯಿಯವರು ... ಕಂದೀಲನ್ನು ಸಣ್ಣಮಾಡಿ, ನನ್ನ ಬಳಿಯ ಹಾಸಿಗೆಯಲ್ಲಿ ಅಡ್ಡಾದರು (ಅಬೋಲೀ. ೩). **ಕಂದೀಲ:** ೨. ಕಂದೀಲದ ಮಂದಪ್ರಕಾಶದಲ್ಲಿ ಹಾಸಿಗೆಯ ಮೇಲೆ ಸೋತು ಸಣ್ಣಾದ ಒಬ್ಬ ಮಧ್ಯಮ ವಯಸ್ಸಿನ ಹೆಣ್ಣುಮಗಳು ಬಾಗಿ ಕುಳಿತುಕೊಂಡಿದ್ದಳು (ಗಂಮಾಯಿ. ೪೪); ಇರುಳಿನಲಿ ಕಂದೀಲ ಬೆಳಕಿನಲಿ ಬರುವಂತೆ ಬಾಲ್ಯದನುಭವ ಮರಳಿ ಕರೆವುದಯ್ಯ (ಭಾವಜೀ. ೮).
[← ಅರ. ಕಂದೀಲ್; ಹಿಂ. ಕಂಡೀಲ್, ಕಂದೀಲ್; ಪೋರ್ಚು. ಕ್ಯಾಂಡಿಲ್]

**ಕಂದು₁** (ಕ್ರಿ). ೧. ಕಳೆಗುಂದು; ಮಾಸು; ಬಣ್ಣಗೆಡು: "ಕಂದು–ಗತಕಾಂತೌ, ಪೇಷಣಾಗ್ರಶಿಲಾಯಾಂ ಚ" (ಶಮಧಾ); ಕಾಡೊಳ್ ಬೇಡರಂತೆ ತೊಟಿಲ್ವ ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡುವುದುಂ (ಪಂಪಭಾ. ೭–೩೨ ವ); ಮಾಜುವಡೆಯದ ಪರದನಂತೆ ಕಂದಿ (ಧರ್ಮಾಮೃ. ೧–೧೬೮); ಮುಖಶಶಿಮಂಡಲಂ ಕಂದಿ ಕಳೆಗುಂದಿ (ಸಿದ್ಧರಾ. ೧–೨೭); ಧೂಮಶಿಖಿ ಕುಪ್ಪಳಿಸಿದರೆ ಕಂದುವದೆ ನಭ (ಕುವ್ಯಾಸ. ೯–೧೪); ಮುಸುಡುಗಳು ಕಂದಿದವು ಕುಂದಿದವೆಸೆವ ತನುಕಾಂತಿಗಳು (ತೊರರಾ. ೨–೮–೧೬). ೨. ಕಪ್ಪಾಗು; ಕರಿಕಾಗು: ಪಗೆವರ ಪೆಂಡಿರ ಮೊಗಂಗಳುಮಾಕೆಯ ಕುಚಚೂಚುಕಂಗಳುಮೊಡನೊಡನೆ ಕಂದಿದವು (ಪಂಪಭಾ. ೧–೧೪೧ ವ); ಇನಮಂಡಲಮಂ ಸ್ವರ್ಭಾನು ನುಂಗೆ ಕಡುಗಂದಿ ಕಂದುಗೊಂಡಿರ್ಪುದುಂ (ಪಂರಾಮಾ. ೨–೩೦); ಕಾಯ ಕಜ್ಜಿನೆ ಕಂದಿದಡೇನಯ್ಯಾ ಕಾಯ ಮಿಜ್ಜಿನೆ ಮಿಂಚಿದಡೇನಯ್ಯಾ (ಮಹಾದೇ. ಕ. ೫೮–೧೫೩); ಕೊಳುಗಿಡಿಯ ಸೆಖೆ ತಾಗಿ ಸುಭಟಾವಳಿಯ ಮಿಸೆಗಳುರಿಯೆ ನೆಜಿ ಕಂದಿದವು ಮೋಜಿಗಳು (ಕುವ್ಯಾದ್ರೋ. ೧೯–೩೫).
[ದೇ. ‖ ತಮಿ. ಕನ್ಱು, ಕನ್ಱಿ; ತುಳು. ತೆಲು. ಕಂದು]

**ಕಂದು₂** (ನಾ). ೧. ಕೆಂಪು ಮಿಶ್ರವಾದ ಕಪ್ಪು; ಕರಿಯ ಬಣ್ಣ: ಊದುಂ ಬಾಯ್ಗೆ ಬೂದಿ ಸದೆವೊಯ್ದುದು ಮರ್ದಿಸುತಿರ್ಪ ಕೈಗೆ ಕಂದಾದುದು ನೋಟ್ಪ ಕಣ್ಗೆ ಪೊಗೆ ಪೊಯ್ದುದು (ಕಾವ್ಯಸಾ. ೧೨); ಹಳದಿ, ಕೆಂಪು ಮತ್ತು ನೀಲಿ ... ಈ ಮೂರನ್ನು ಸೇರಿಸಿದರೆ ಕಪ್ಪು (ಅಥವಾ ಕಂದು) ಬಣ್ಣವಾಗುತ್ತದೆ (ಮುದ್ರಕ. ೬೭); ಕಣ್ಣಿನ ಬಣ್ಣ, ಚರ್ಮದ ಬಣ್ಣಗಳು ಬಿಳುಪು, ಕಪ್ಪು, ಕೆಂಪು, ಕಂದುಗಳಾಗಿ ... ಉತ್ಪನ್ನವಾಗಲು ಆರಂಭವಾಗುತ್ತದೆ (ಜೀವಾತ್ಮ. ೨೨೧). ೨. (ಆಲಂ) ಕಲೆ; ಕಳಂಕ; ದೋಷ: "ಕಳಂಕಕ್ಕೆ ನಾಮ ಕಜಿ ಕಂದೆಂದು" (ಕಬ್ಬಿಕೈ. ೪೪); "ಕಂದೆಂದುಂ ಕಜಿಯೆಂದುಂ ಸಂದೆಗಮಿಲ್ಲವು ಕಳಂಕ" (ಕವಿಕಂ. ೪೫); ಕುಲದೊಳಂ ಚಲದೊಳಮಾದ ಕಂದುಂ ಕುಂದುಮಿಲ್ಲದೆ ತನ್ನೊರೆಗಂ ದೊರೆಗಮಾರುಮಿಲ್ಲೆನಿಸಿದಾಗಳ್ (ಪಂಪಭಾ. ೨-೨೬ ವ); ಇನನೊಡವೋಗದ ನವವಧುಗೆ ಪಿರಿದೆ ಕಂದುಂ ಕುಂದುಂ (ಶಾಂತಿಪು. ೮-೬೩); ಬಲುಹು ಹೊಜಗೆ ಪರಾಭವದ ಕಂದೊಳಗೆ ಕಡುಹಿನ ಕಲಿತನದ ಹಳಹಳಿಕೆ ಹೊಜಗೆ ಮಹೀಶ ಹದನಿದು ನಿನ್ನ ನಂದನನ (ಕು ವ್ಯಾ ಶ. ೨-೧); ರಾಯನ ಮನದೊಳಗಣ ಕಂದ [ಪಾಠಾಂ. ದು] ಕಳೆಯೆ (ಕುರಾಸಾಂ. ೩೭-೧೦೧); ಮಂದಮರಾಟರ ದುರ್ಯಶದಿಂದಂ ಮಿಗೆ ಮಾಸಿವಂದ ಕರ್ಣಾಟಕದಾ ಕಂದಂ ಕಳೆದಪ್ರತಿಮಂ (ಅಪ್ರತಿ. ೧೦೭-೧೪).

[< ಕಂದು₁. / ಕೊಡ. ಕಂದಿ = ಹೊಡೆತದ ಗುರುತು, ಜಜ್ಜುಗಾಯ; ತೆಲು. ಕಂದು]

**ಕಂದು₃** (ನಾ). ಅರೆಯುವ ಗುಂಡು; ರುಬ್ಬುಗುಂಡು: "ಕಂದು-ಗತಕಾಂತೌ, ಪೇಷಣಾಗ್ರ ಶಿಲಾಯಾಂ ಚ" (ಶಮಥಾ); ಹಿಮಚೂರ್ಣಮಂ ತಳಿದು ಕಂದುಗಳಿಂ ಪಿಡಿದೌಂಕಿ ನೂಂಕಿದರ್ ದೆಸೆದೆಸೆಗೆಲ್ಲ ಕಂಪೆಸಗೆ ಗಟ್ಟಿ ಮಗುಳ್ಚುತೆ ಗಟ್ಟವಳ್ತಿಯರ್ (ಗಿರಿಕ. ೨-೮೯); ಗಟ್ಟಿಮಗುಟ್ಟುವ ಗಟ್ಟವಳ್ತಿಯರ ಪಟ್ಟುಡೆಯೊಳ್ ಕಟ್ಟುವಡೆದುಂ ಕೈಯೆಡೆಯೊಳ್ ಮೆಯ್ಯುಡಿದುಂ ಕಂದಿನೊಳ್ ಕಂದಿಯುಂ ಅಸವೆಯೊಳಸಕಳಿದುಂ ಸುಯ್ಯೊಳ್ ಸುಗಿದುಂ (ರಾಮಾಶ್ವ. ೨-೨೧). [?]

**ಕಂದು₄** (ನಾ). ಒಂದು ಬಗೆಯ ಧಾನ್ಯ; ಸಜ್ಜೆ: "ಗುಂಡ್ರಾ- ಕಂದು, ಕಂಬುಧಾನ್ಯ" (ಔಷಧಿ. ೪೯).

[ದೇ. ‖ ತಮಿ. ಕನ್ದಿ = ಬೇಳೆ; ತೆಲು. ಕಂದಿ; ಪರ್ಜಿ. ಕೆರ್ದಿ]

**ಕಂದು₅** (ನಾ). ೧. ಕರು; ಆಕಳ ಕರು: "ಕಂದೆಂದು ಗೋವತ್ಸಮೆನಿಸಿರ್ಪುದು" (ಕಬ್ಬಿಕೈ. ೬೧); "ಕಂದೆನಲು ಕರುವಕ್ಕು" (ಕಶಠ. ೧೮); ಕಾಮ ಕ್ರೋಧ ಲೋಭ ಮೋಹ ಮದ ಮತ್ಸರದಿಚ್ಛೆಗೆ ಹರಿದು ಹಂದಿಯೊಡನಾಡಿದ ಕಂದಿನಂತಾದರು [ಪಾಠಾಂ. ಕಜ್ಜನಂತಾದವರು] ಇನ್ನು ಬಲ್ಲರೆ ಗುಹೇಶ್ವರ ಮಾಯಾಮುಖರು ನಿಮ್ಮುವನು (ಅವಚಂ.೭೪-೩೨೯). ೨. ಪ್ರಾಣಿಗಳ ಗರ್ಭಸ್ರಾವ: "ಅವತೋಕಾ, ಸ್ರವದ್ಗರ್ಭಾ - ಈ ೨ ಕಂದಿಕ್ಕಿದಾವು" (ಹಲಾಯು. ೪೫-೧೧೫); ಅನೇಕ ವೇಳೆಗಳಲ್ಲಿ ಕಂದು ಹಾಕಿಬಿಡುವುವು (ಗ್ರಾ ಮಾ ಕ. ೧೫೦). ೩. ಬಾಳೆಯ ಸಸಿ, —ಅಗೆ: ಕಂದಿನೊಳಗೆ ಹುಟ್ಟಿ ಕಂದರೆಲ್ಲರ ಬಿಟ್ಟು ಮುಂದಲೆಯನು ಕೊಟ್ಟು ಜನದಾ ನಿಂದೆಯೊಳೊಂದಿ ಬಾಳುವ ಬಾಳ ಸುಡಲಕಟೆಂದು ಬಾಳೆಗಳೆಜಗಿದವು (ಅಂಜಚ. ೨-೩೭); ಇನಿವಣ್ಣಳನೀಯದೆ ಪೇಟಿನಿವಣ್ಣಳನಿತ್ತು ಸತ್ತಬಾಟಿಯ ಕಂದುಂ (ನೀತಿಮಂ. I, ೧೭); ಕಡಿದುಬಿದ್ದ ಬಾಳೆಯ ಕಂದಿನಂತೆ ಬಿದ್ದು (ವಚಭಾ. ೩೨೬).

ಕಂದಹಾಕು, ಕಂದುಹಾಕು = ಗರ್ಭಸ್ರಾವವಾಗು: ಕಂದಹಾಕಿದ ಆಕಳು (ನಾಚಿರಾ. ೬); ಅವರ ಮನೆಯ ಹಸು ಕಂದುಹಾಕಿತು (ರೂಢಿ).

[ದೇ. ‖ ತಮಿ. ಕನ್ಱು; ಮಲ. ಕನ್ನು, ಕಜ್ಞ; ತುಳು. ಕಂಜಿ; ಕುರುಖ್. ಖದ್ದ್, ಖದಾ]

**ಕಂದು₆** (ನಾ). ಹುರಿಯುವ ಹೆಂಚು; ಕಾವಲಿ: "ಹುರಿವ ಹಂಚಕ್ಕು ಕಂದು ಸ್ವೇದನಿಕೆಯದೆಂದರೆ ಕಾವಲಿಯೆನಿಕ್ಕುಂ" (ಮಂಗರಾ. ೩೩-೨೪); ಪಿರಿದು ಕರ್ಬೊನ್ನ ಕಂದುವಿನಲ್ಲಿ ದೇಹಮಂ ಭರದಿನಿನಿಸಿನಿಸಾಗಿ ಕೊಯ್ದಿರಿಸಿ ಸುಡ ಬಗೆವಂ (ಅರಾಚ. ೯-೨೧). [ಸಂ.]

**ಕಂದುಕ** (ನಾ). ಚೆಂಡು: ಕಂದುಕ ಬೀಳಲರಮನೆಗದನಿರದೆತ್ತಿ ತಂದಪೆನೆಂದು ಕಂಪಿಲನ ನಂದನನೆಯ್ದಲು (ಕುರಾಸಾಂ. ೧-೮೬); ನೆಲಕೆತ್ತಿ ಹೊಡೆದರು ಮೇಲಕೆ ಪುಟನೆಗೆದೇಳುವ ಕಂದುಕದಂತೆ (ಇಂಜಾಪ. ೨೨೧-೯೩).

ಕಂದುಕದಾಗಮ = (ಕುದುರೆ) ಚೆಂಡಾಟದ ಶಾಸ್ತ್ರ: ಶ್ರೀಗೆ ವಿಜಯಕ್ಕೆ ವಿದ್ದೆಗೆ ಚಾಗಕ್ಕದಟಂಗೆ ಜಸಕೆ ಪೆಂಪಿಂಗಿನಿತರ್ಕ್ಕಾಗರಮಿದೆನ್ದು ಕನ್ದುಕದಾಗಮದೊಳೆ ನೆಗಟ್ಟುಮಲ್ತೆ ಬೀರರ ಬೀರ (ಎಕ. II, ೧೩೩-೬೫; 982). [ಸಂ.]

**ಕಂದುಕಕೇಳಿ** (ನಾ). ಚೆಂಡಾಟ: ಡೋಳಾಕೇಳಿಯ ಕಂದುಕಕೇಳಿಯ ... ಬಿನದದೊಳೆ ಸತಿಯನವರೊಸೆಯಿಸಿದರ್ (ಪುಷ್ಪಪು. ೯-೮೨).

[ಕಂದುಕ + ಕೇಳಿ (= ಕೇಲಿ)]

**ಕಂದುಕಕ್ರೀಡೆ** (ನಾ). = ಕಂದುಕಕೇಳಿ: ಅರಮರಸಂ ಕೃತಕಾದ್ರಿಯೊಳರಮರ ಮನೆಯೊಳಗೆ ಕಂದುಕಕ್ರೀಡೆಗಳೊಳ್ ... ನಿಲ್ವಂ (ಕವಿರಾ. ೧-೯೮); ಕಂದುಕಕ್ರೀಡಾದಿ ನಾನಾವಿಧ ವಿನೋದಂಗಳಿಂ ಕೆಲವು ದಿವಸ ಮನಿರ್ದು (ಪಂಪಭಾ. ೬-೬೯ ವ). [ಕಂದುಕ + ಕ್ರೀಡೆ]

**ಕಂದುಕಕ್ರೀಡಿತ** (ನಾ). = ಕಂದುಕಕೇಳಿ: ರಿಪುನೃಪತಿ ಶಿರಃಕಂದುಕಕ್ರೀಡಿತಂ (ಎಕ. V, ಬೇಲೂರು. ೧೨೪-೯೬; 1133); ಕನತ್ಕಳಶನಿಕರಮಂ ಕೆಯ್ಗೆಯ್ಯೊಳ್ ತಂದೀವ ಕೊಳ್ವ ಸಂಭ್ರಮದಂದಂ ಪೋಲ್ತತ್ತು ಕಂದುಕಕ್ರೀಡಿತಮಂ (ಚಂದ್ರಪು. ೧೨-೧೨೪). [ಕಂದುಕ + ಕ್ರೀಡಿತ]

**ಕಂದುಕನೀಱ** (ನಾ). (ಕುದುರೆ) ಚೆಂಡಾಟದಲ್ಲಿ ನಿಪುಣ; ಒಂದು ಬಿರುದು (?): ಭಟ್ಟಜನ ಬಾಂಧವ ಬೊಪ್ಪನಂಕಕಾಱ ಕಂದುಕನೀಱ ರಣರಂಗಸಿಂಗ ವೆಡೆಯವೆಡಂಗ (ಸೌಇಇ. IX-i, ೩೪೩-೨೩; 1226).

[ಕಂದುಕ + ನೀಱ]

**ಕಂದುಕಮಾಳ** (ನಾ). ಒಂದು ಬಿರುದು: ಮಾಸಾಮಾನ್ತ ಚಲ್ಲಧ್ವಜ ರಣದುತ್ತರಙ್ಗನೆನ್ತುಮೊಳ್ಪಿದಂ ಕನ್ದುಕಮಾಳನ ಧಳಕೆ ದೊರೆಯ್ಯಂ ವೈರಿ ಕಾಳಾನಳಂ ಚಣ್ಣಮ್ಮಾರ್ತ್ತಣ್ಣಂ ಸರಯ್ಯ ಸೂದ್ರಕ ಶ್ರೀಕ[ಲಿ] ವಿಟ್ಟರ[ಸ]ರ್ (ಎಕ. VIII, ಸೊರಬ. ೮೮-೩; 912).

[ಕಂದುಕ + ಮಾಳ ?]

**ಕಂದುಗ** 'ಕಂತುಕ' ನೋ.

**ಕಂದುಗುಳ್** (ನಾ). ಒಂದು ಊರಿನ ಹೆಸರು: ಕಣ್ಣ ವಿಷಯೇ ಕನ್ದುಗುಳ್ನಾಮಗ್ರಾಮ (ಇಆ. VI, ೭೭-೩೧; ?). [?]

**ಕಂದುಗೊರಲ್** (ನಾ). ಕಪ್ಪಾದ ಕೊರಳು: ಕಿಱುವೆಱಿ ಬಾಂದೊಱಿ ಬಿಸುಗಣ್ಚೈಮೊಗವೆಲರುಣಿ ಕಂದುಗೊರಲ್ಪತ್ತುಂತೋಳಾನೆದೊವಲ್ಪೊಂಬುಲಿ ಸಮ್ಮಂ (ಉದ್ಭದೇ. ೩-೩೯). [ಕಂದು₂ + ಕೊರಲ್]

**ಕಂದುಗೊರಲ** (ನಾ). ಕಪ್ಪಾದ ಕೊರಳು ಉಳ್ಳವನು; ನೀಲಕಂಠ; ಶಿವ: "ಗೊರವನ್ಕೆ ಕಿಲ್ವೆಟ್ಟಳಿಯನ್ಕೆ ಮೊಗಂ ಕಂದುಗೊರಲನೆಲರುಣಿವೆದೆಯಂ" (ಕಬ್ಬಿಕೈ. ೪); ಗೊಂದೆಗಳಂ ಕಾಯದ ಗೋವಿಂದಂ ಕಂದುಗೊರಲನಲ್ಲದ ಮಾದೇವಂ ... ರಾಜಪ್ರಭ ರಾಜಸುತಂ (ಜಯಕಾ. ೨-೬೯); ಕಂದುಗೊರಲನೊಳು ಕಾದಲ್ಕೆ ಸ್ಮರ ತನ್ನದೊಂದು ಬಿಲ್ಲದು ಸಾಲದೆಂದು ತಂದಿಲ್ಲಿ ಬೆಳಸಿದನೆಂಬಂತೆ ಬೆಳ್ಗರ್ಬು ಸಂದಣಿಸಿತು ಬನಬನದಿ (ಮೋಹತ. ೨-೪೭). [ಕಂದುಗೊರಲ್ + -ಅ₇]

**ಕಂದುಬೆಳ್ಳಿ** 'ಕಂದುವೆಳ್ಳಿ' ನೋ.

**ಕಂದುಮೋಱಿ** (ನಾ). ಬಾಡಿದ ಮುಖ; ಒಣಗಿದ ಮುಖ: ಕಂದುಮೋಱಿಯ ರಾಯನನು ತೆಗೆದಂದಣದೊಳಾಲಿಂಗಿಸುತ ನಲವಿಂದ ಮನ್ನಿಸಿ ತಂದನರಮನೆಗೆ (ಕುವ್ಯಾಭೀ. ೧-೧೭); ಕಂದುಮೋಱಿಯ ಮಹಿಪತಿಯ ನೆಗಹಿದನು ಕರುಣದಲಿ (ಕುವ್ಯಾದ್ರೋ. ೭-೨೧). [ಕಂದು$_1$ + ಮೋಱಿ]

**ಕಂದುರಿ** (ನಾ). ಒಂದು ಬಗೆಯ ಪಾಕ: ಬಿಳಿಯ ಸಕ್ಕರೆಯಿಟ್ಟು ಸಂಭಾರವೊಂದರೊಳಗಿಳುಹಿ ಮತ್ತದಕೆ ನಾರಂ ಸುತ್ತಿ ಮೊದಲು ಪಾಕಂ ಮಾಡಿದಂತೆ ಯೆರಡು ಘಳಿಗೆ ಗೂಡಿನೊಳಿಕ್ಕಿ ಪಾಕವಂ ಮಾಡಿಕೊಂಡಿಳುಹಿ ನಾರಂ ತೆಗೆದು ಪರಿಮಳವ ಪೊರೆಯೊತ್ತಿ ಬಳಿಕ ಕಂದುರಿ ಕುಂಬಳದ ಕಾಯ ಪಾಕಮೆಂದೆಂಬ ಹೆಸರಂ ಕರೆವುದು (ಸೂಪಶಾ. ೫-೨೮). [?]

**ಕಂದುವೆಳ್ಳಿ**, ಕಂದುಬೆಳ್ಳಿ (ನಾ). ೧. ಚೊಕ್ಕವಲ್ಲದ ಬೆಳ್ಳಿ; ಅಶುದ್ಧ ಬೆಳ್ಳಿ: ರಸಮೊಸರ್ವ ಜೀನ ಬಱವುಟ್ಟ ಸುರಿದು ಕವಿದಿಟ್ಟ ಕಂದುವೆಳ್ಳಿಯ ಕೊಡನಾಟಿಸಿ ಮುಡಿಗೆ ಸುತ್ತಿ ಬಿನದದೆ ಬಿಸುಟ್ಟ ಪೂಮಾಲೆಯೆನಿಸಿದುದು ವಿಧುಬಿಂಬಂ (ಸೂಕ್ತಿಸು. ೯-೧೩). **ಕಂದುಬೆಳ್ಳಿ**: ೨. ಕಂದುಬೆಳ್ಳಿಯಿಂದ ಮಾಡಿದ ನಾಣ್ಯ: ಮುರಿಗಂಚು ತವರ ಹಿತ್ತಾಳೆ ತಾಂಬ್ರಯಿವು ಮೊದಲಾದ ಲೋಹವ ತನ್ನಿ ಕಳ್ಳವಣ ಕಂದುಬೆಳ್ಳಿ ಮೊದಲಾದ ರೊಕ್ಕವ ತನ್ನಿ (ಬಿಡವ. ೨೪೭). [ಕಂದು$_3$ + ಬೆಳ್ಳಿ]

**ಕಂದುಹೃದಯ** (ನಾ). (ಆಲಂ) ಕಳಂಕ ತುಂಬಿದ ಮನಸ್ಸು; ಕೆಟ್ಟ ಮನಸ್ಸು: ಇತ್ತಲು ಕಂದುಹೃದಯದ ಕೌರವೇಂದ್ರನ ಹದನ ಕೇಳೆಂದ (ಕುವ್ಯಾಸ. ೧೩-೨೦). [ಕಂದು$_2$ + ಹೃದಯ]

**ಕಂದುಳಿ**, ಕಂದಲಿ$_1$ (ನಾ). ಮಚ್ಚುಗತ್ತಿ: ನಳಿನನೇತ್ರೆಯರೊಳು ನೇಹಗಲಹವಾಂತು ಮುಳಿದರೆ ಸ್ಮರ ತಮ್ಮದಿಸಲು ಬಳಿಯ ಕಬ್ಬುಗಳು ಬಿಲ್ಲಹವೆಂದು ಮಸೆದ ಕಂದುಳಿಯಿಂದ ಕಡಿದ ಜೂದಿನಲಿ (ಮೋಹತ. ೨೦-೨೩). **ಕಂದಲಿ$_1$**: ನಾನು ಹೊರಡುವಾಗ ಒಂದು ಕಂದಲಿ ಅಡಗಿಸಿ ತಂದೆ. ಸೀನನ ಹತ್ತಿರ ಒಂದು ಚೂರಿ (ಚಾಕು) ಇತ್ತು (ವೀನಾದ. ೫). [ಕಂದು ? + ಉಳಿ$_5$]

**ಕಂದೂರಿ** (ನಾ). ಮುಸಲ್ಮಾನರು ಮಾಡುವ ಒಂದು ಹಬ್ಬ: ರೋಗವು ಹೋದ ಬಳಿಕ ಪೀರನ ದರ್ಶನಕ್ಕೆ ಬಂದು, ಕುರಿಕೋಳಿಗಳನ್ನು ಕೊಟ್ಟು ಕಂದೂರಿಯ ಮಾಡಿಸುವರು (ಕಭಾಗಿ. ೪೮೭). [← ಪಾರ. ಕಂದೂರೀ; ಮರಾ. ಕಂದುರೀ, ಕಂದೋರೀ./ ತಮಿ. ಕನ್ದಿರಿ, ಕನ್ದೂರಿ]

**ಕಂದೆ** (ನಾ). ಮಡುವಾಗಲೆಂಬ ಸಸ್ಯ: "ಕಂದೆಯೆನೆ ಮಡುವಾಗಲಕ್ಕು" (ಮಂಗರಾ. ೪೫-೪೭). [?. / ತಮಿ. ಕನ್ದೈ]

**ಕಂದೆದೆ** (ನಾ). (ಆಲಂ) ಕಳಂಕಿತ ಮನ; ಮಲಿನ ಮನ: ಕಂದೆದೆಯಳಾ ಖಡುಗವನು ನೆಗೆತಂದು ಗಂಡನ ಕೊರಳ ಹೊಯ್ಯಲು (ಸಾಳ್ವಭಾ. ೧೦-೪೭). [ಕಂದು$_2$ + ಎದೆ (< ಎರ್ದೆ)]

**ಕಂದೆರವಿ** 'ಕಣ್ದೆಱವಿ' ನೋ.

**ಕಂದೆರೆ** 'ಕಣ್ದೆಱೆ' ನೋ.

**ಕಂದೆಱಪು** 'ಕಣ್ದೆಱಪು' ನೋ.

**ಕಂದೆಱಪುಗೈ** (ಕ್ರಿ). ಕಣ್ಣಿಗೆ ಕಾಣುವಂತೆ ಮಾಡು; ಪ್ರಕಟಗೊಳಿಸು: ನಿಜ ಮಹಿಮೆಯಂ ಕಂದೆಱಪುಗೈದು ಪೇಳಿಸಿದವೊಲ್ (ಕೊಟ್ಟೂಬ. ೧-೩೪). [ಕಂದೆಱಪು (< ಕಣ್ದೆಱಪು) + ಗೈ (< ಕೆಯ್$_1$)]

**ಕಂದೆಱವಿ** 'ಕಣ್ದೆಱವಿ' ನೋ.

**ಕಂದೆಱವು** 'ಕಣ್ದೆಱವು' ನೋ.

**ಕಂದೆಱವೆ** (ನಾ). ೧. ಕಣ್ಣು ತೆರೆಯುವುದು; ಕಣ್ಣು ಬಿಡುವುದು: ಭಕ್ತಿಜ್ಞಾನವ ಕಂದೆಱವೆಯ ಮಾಡಿ ಶಿವಾಚಾರದ ಘನದ ಬೆಳವಿಗೆಯ ಮಾಡಿ (ಅವಚಂ. ೨೩೧-೧೦೪೭); ಕಳಕಳದ ಕಂದೆಱವೆಗಳ ಕುರುಕುಲದ ನಿರ್ಮೂಲನದ ನಿಶ್ಚಯದ (ಕುವ್ಯಾಸ. ೧೪-೩೦); ತತ್ಪುರದ ಱವ ಕಾಣಿಸುವಂತೆ ನಭ ಕಂದೆಱವೆಯಾದುದು (ತೊರರಾ. ೪-೬-೧೦). ೨. (ಆಲಂ) ಕೃಪೆ; ಅನುಗ್ರಹ: ಒಳಹೊಱಗೆನ್ನದೆ ಎನ್ನೊಳು ತನ್ನಯ ಹೊಳೆವ ಜ್ಞಾನದ ಜ್ಯೋತಿಯ ಬೆಳಗ ತಿಳಿವಂತೆನ್ನಯ ಕಂದೆಱವೆಯ ಪುಟ್ಟಿಸಿ ಸಲಹಿದ ಶ್ರೀಗುರುವೆ ಶರಣು (ಶಿವಗೀ. ೮-೨೩). [ಕಂ (< ಕಣ್) + ತೆಱವೆ]

**ಕಂದೆಱಸು** (ಕ್ರಿ). (ವಿಗ್ರಹಗಳಿಗೆ) ಕಣ್ಣುಬಿಡಿಸು: ಪ್ರತಿಷ್ಠೆಯನು ಮಾಡಿಸಿ ಕಂದೆಱಸಿ ಮಾಡಹೇಳಿದರು (ಬೊಂಕಶಾ. ೧೯೩೯, ಕುಂದಗಲ್. ೮೨-೯; 1366). [ಕಂ (< ಕಣ್) + ತೆಱಸು]

**ಕಂದೆಱಿ** 'ಕಣ್ದೆಱಿ' ನೋ.

**ಕಂದೆಱಿಯ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಅತ್ತಾರುಗ ನಾಗಯ್ಯನ ಮಗನ್ ಕನ್ದೆಱಿಯನ್ ಕೊಟ್ಟುದು ಸೊಡರು ಪನ್ನೆರಡು ಗದ್ದಣ ಆಚನ್ದ್ರತಾರಕಂ (ಎಕ. VII, ಶಿಕಾರಿ. ೪೫-೬೫; 890). [ಕಂದ ? + ಎಱಿಯ]

**ಕಂದೊಡೆ** (ಕ್ರಿ). ಮೊಳಕೆ ಒಡೆ; ಅಂಕುರಿಸು: ಭಾಗ್ಯದ ಕಂದಂ ಕಂದೊಡೆದುದು (ಚಕವಿ. ೬-೨೨೩). [ಕಂದು$_6$ + ಒಡೆ$_1$]

**ಕಂದೊಳಲ್** 'ಕಣ್ದೊಳಲ್' ನೋ.

**ಕಂದೊಳಲಿ** 'ಕಣ್ಣಂದೊಟಲಿ' ನೋ.

**ಕಂದೊಳಲು** 'ಕಣ್ದೊಳಲ್' ನೋ.

**ಕಂದೊಳಲುಗೊಳ್** (ಕ್ರಿ). ಭ್ರಮಿಸು: ಲಿಂಗ ಜಂಗಮ ಒಂದೇ ಎಂದು ಕಂದೊಳಲು [ಪಾಠಾಂ. ಳ]ಗೊಂಡಿರಲ್ಲಾ (ಅವಚಂ. ೩೬-೧೫೮). [ಕಂದೊಳಲು (< ಕಣ್ದೊಳಲ್) + ಕೊಳ್$_1$]

**ಕಂದೊಳಸುಗೊಳ್** (ಕ್ರಿ). ಕಂಗೆಡು; ಕಕ್ಕಾಬಿಕ್ಕಿಯಾಗು: ಬಲುಮೆ ಬಿದ್ದುದು ವಾಸಿಯಲಿ ಕಂದೊಳಸುಗೊಂಡುದು ಕಾಮಶರ ಮನವಳುಕೆ ಕೆಡಹಿತು ವಿರಹತಾಪದಲಿ (ಕುವ್ಯಾಆ. ೯-೩೪). [ಕಂ (< ಕಣ್) + ತೊಳಸು$_2$ (< ತೊಱಸು$_1$) + ಕೊಳ್$_1$]

**ಕಂದೋಟಿ** (ನಾ). ಹಣವನ್ನು ಇಡುವ ಪೆಟ್ಟಿಗೆ, —ಚೀಲ (*). [?]

**ಕಂದೋಡಿ** (ನಾ). ಒಂದು ಜಾತಿಯ ಹಾವು; ಕನ್ನಡಿ ಹಾವು: ಇದನ್ನು ಕಂಡೇ ನೀವು ಇಷ್ಟು ಬೆರಗಾದಿರಿ. ಮಲೆಯಲ್ಲಿ ನನ್ನ ತೊಡೆಯಷ್ಟು ದಪ್ಪದ ಕಂದೋಡಿಗಳುಂಟು (ಬಾಳಿಗಿ. ೭೧). [← ತುಳು. ಕಂದಡಿ, ಕಂದೊಡಿ]

**ಕಂದ್ಲಿ** (ನಾ). (ಕರಾ) ಒಂದು ಜಾತಿಯ ಮೀನು. [?]

**ಕಂಧ** (ನಾ). ೧. ಮೋಡ. ೨. ಒಂದು ಬಗೆಯ ಹುಲ್ಲು. [ಸಂ.]

**ಕಂಧರ** (ನಾ). ೧. ಕೊರಳು: ಉರದಿನಾಂತೊಡೆ ತುಡುಗೆವೊಲೆಸೆದಿರ್ದುದಂಕುಶಂ ಕಂಧರದೊಳ್ (ಪಂಪಭಾ. ೧೧-೭೭); ಆ ವಾತಂ ಕೇಳ್ದೀಷದಾವಲಿತ ಕಂಧರನಿದೆತ್ತಣಿಂ ಬಂದುದೆಂದು . . . ಭಾವಿಸಿ ನೋಡಿ (ಕಾದಂಪೂ. ೨೩೪). ೨. ಮೋಡ. ೩. ಒಂದು ಬಗೆಯ ಹುಲ್ಲು. ೪. ಒಂದು ಜಾತಿಯ ಸಸ್ಯ. [ಸಂ.]

**ಕಂಧರಗಡಿ** (ನಾ). ಕೊರಳಿನ ತುಂಡು; ಕುತ್ತಿಗೆಯ ಹೋಳು (?): ಕಂಧರಗಡಿ ಬಾಹುಗಡಿ ಹಸ್ತಗಡಿ ನೇರಂದದ ನಡುತೊಡೆಗಡಿಯ ವೃಂದಾರಕ ವಿರೋಧಿಗಳು ಬಿದ್ದರು ಕಾಮನಂದನ ಬಾಣಗಳಿಂದ (ಮೋಹತ. ೩೫-೨೨). [ಕಂಧರ + ಕಡಿ$_4$]

**ಕಂಧರದ್ವಯಸ** (ಗು). ಕೊರಳಿಗೆ ಮುಟ್ಟುವಷ್ಟು; ಕುತ್ತಿಗೆಯ ವರೆಗೆ ಆಳವಾದ; ಆಕಂಠಪ್ರಮಾಣದ : ಪರಿಕಿಸೆ ಕಂಧರದ್ವಯಸ ಮಾಯ್ತು ವಿಭಾಸುರ ಕೇಸರಾಳಿಯೊಳ್ ಕರತರಣೀಯಮಾಯ್ತು ಪೊಸಮಲ್ಲಿಗೆಯೊಳ್ . . . ಮಧುಪಮಾಳೆಗೆ ಮಾಧವದೊಳ್ ಮಧೂತ್ಕರಂ (ಚಂದ್ರಪ್ರ. ೭-೬೪). [ಸಂ.]

**ಕಂಧರಬಂಧ** (ನಾ). ಹೆಗಲು : ಗಂಧೇಭ ಕಂಧರಬಂಧ ಪ್ರವಿಭಾಸಿಯಪ್ಪರಿಗನಂ ಕಾಣುತ್ತೆ ಕಣ್ಸೋಲ್ತು (ಪಂಪಭಾ. ೪-೩೮). [ಕಂಧರ + ಬಂಧ]

**ಕಂಧಾಯ** 'ಕಂದಾಯ' ನೋ.

**ಕಂಪು₁** (ನಾ). ಜೇಡಿಮಣ್ಣು : ಮದಮಂ ಗಂಡಸ್ಥಳೋದೀರ್ಣ ಕಂಪದೊಳಂ ಸೇವಿಸಿ ತುಂಬಿಗಳ್ ತಣಿದುವು (ಪುಷ್ಪಪು. ೧೦-೧೧); ಇದು ಕಂಪ; ಮೊದಲ ಬೆಳೆ ಆಗುವಂತಿಲ್ಲ (ಮುಗಿಯು. ೭೫); ಕೆರೆ ಅಂಗಳದ ಕಂಪ ಆದೆಯಲ್ಲಾ ಅಲ್ಲೇ ಕೊಟ್ಟರೆ ಕೊಡಬೇಕು ಇವರಿಗೆ ಕೈ! (ಮಲೆಮ. ೫೪೨). [< ಸಂ. ಪಂಕ. / ತುಳು. ಕಂಪೊ, ಗಂಪೊ = ಜೌಗುಭೂಮಿ]

**ಕಂಪು₂** (ನಾ). ೧. ನಡುಕ; ಅದಿರುವಿಕೆ : ರಂಭೋರುವ ಕಂಪಮುಗ್ಗದೆ ನಿಜೋಷ್ಠ ಸ್ಪಂದನ ಸ್ಫೂರ್ತಿ ಮಾಣದೆ (ಸೂಕ್ತಿಸು. ೮-೧೬೫); ಅದಕ್ಕೆ ನಾವು ಕಂಪ ಅಥವಾ ನಡುಗು ಎನ್ನುತ್ತೇವೆ (ಮುಂಬಯಿ. ೫-೧೦೨). ೨. ವರುಣ : ಗುರು ಕಂಪ ನಿನಗೇಕೆ; ಬಲಭೇದಿ ಜೃಂಭಿತವು? (ಧ್ವನ್ಯಾಲೋ. ೯೯). ೩. ದೇವಾಲಯದ ತಳಹದಿಗೆ ಉಪಯೋಗವಾಗುವ ದಿಮ್ಮಿಗಳಲ್ಲಿ ಒಂದು. [ಸಂ.]

**ಕಂಪಂಗೊಳ್** (ಕ್ರಿ). ನಡುಕವನ್ನು ಹೊಂದು; ಅದಿರು : ಸಿಡಿಲಿಂ ಮಿಂಚಿಂ ಘನಧ್ವಾನದಿಂದಿಳೆ ಕಂಪಂಗೊಳೆ (ಆದಿಪು. ೧೩-೫೯); ಮೇದಿನಿ ಕಂಪಂಗೊಂಡುದು . . . ಏನುಗ್ರಮೋ ವೈಷವಾಸ್ತ್ರಂ (ಜಗವಿ. ೮-೬೩). [ಕಂಪ₂ + ಕೊಳ್₁]

**ಕಂಪಣ₁** (ನಾ). ೧. ಒಂದು ಆಡಳಿತಕ್ಕೆ ಸೇರಿದ ನಾಡಿನ ಒಂದು ಭಾಗ; ಈಗಿನ ಹೋಬಳಿಯಂತೆ ಒಂದು ವಿಭಾಗ : "ವಿಷಯ ಮೆಂಬುದು ಕಂಪಣ" (ಹಲಾಯು. ೪೭-೧೨೯); ತುಪ್ಪದ ದೇವಯ್ಯಂಗಂ ನಲ್ವಿಡಿ ೧೨ ಐ ಕಂಪಣಂ ಒರ್ವಾಯಂ ಕುಡೆ (ಸೌಇಇ. IX-i, ೯೨-೧೬; 1036); ಪಾನುಂಗಲ್ಲಯ್ನೂಱಱ ಕಮ್ಪಣಂ ನಿಡುಗುನ್ದಗೆ ಪನ್ನೆರಡಱ (ಕಇ. I, ೧೭-೩೩; 1055); ಬನವಾಸಿ ಪನ್ನಿಚ್ಛಾಸಿರದ ಕಂಪಣಂ ಬಾಸವುರಂ (ಸೌಇಇ. XX, ೪೯-೬೦; 1076). ೨. ಒಬ್ಬಾತನ ಹೆಸರು : ಕಾಳಿಗಾವುಂಡಿಗುತ್ಸವದಿಂ ಪುಟ್ಟಿದರೊಪ್ಪೆ ಬಮ್ಮಣನುಮಂತಾಕ[ಮ್ಪ]ಣಂ ಬಾಚಣಂ ರವಿತೇಜಂ ಪದ್ಮ[ಣ]ಂ (ಕಇ. I, ೨೪-೧೭; 1148). [?]

**ಕಂಪಣ₂** (ನಾ). ಮೆದೆ; ಹೊರೆ : ಎಮ್ಮ ತಾಯಿ ನಿಂಬವ್ವೆ ನೀರನೆಱೆ ದುಂಬಳು ಎಮ್ಮಯ್ಯ ಚೆನ್ನಯ್ಯ ರಾಯಕಂಪಣವ ಹೊಱುವ (ಬಸವ. ೩೫೧); ಗುಡಿ ಸರವತ್ತಿಗೆ ಹುರಳಿ ಹುಲ್ಲ ಕಂಪಣ ಕಡಲೆ ಕವಳ ಹಕ್ಕರಿಕೆಯ ಹಿಡಿದ ಹೇಱಿನ ಕೊಟ್ಟಿಗೆಯೆತ್ತುಗಳ್ (ಶ್ರೀಪಾಲ. ೧೩-೮೮); ಚೆನ್ನಯ್ಯ ನಿನ್ನ ಕಂಪಣವನಡಕುವನು (ರಾಘಚ. ೧೨-೪೪). [?]

**ಕಂಪಣ₃** (ನಾ). ಒಂದು ಆಯುಧ : ಕಣಯ ಕಂಪಣ [ಪಾಠಾಂ. ನ] ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾವಿವಿಧಾಯುಧಂಗಳೊಳಿಟ್ಟುಂ (ಪಂಪಭಾ. ೧೨-೧೧೮ ವ); ಅಸಿ ಮುಸಲ ಕಣಯ ಕಂಪಣ ಮುಸುಂಡಿ ಪಿಂಡಿವಾಳ . . . ಆದಿಯಾದ ಪಲವು ತೆಱದ ಕೈದುಗಳಿಂ (ಧರ್ಮಪ. ೧-೬೬ ವ); ಶರಶಕ್ತಿ ತೋಮರ ಕಣೆಯ ಕಂಪಣ ಕೊಂತ ಪರಶು (ಕುರಾಸಾಂ. ೪೩-೮೫); ಹೆಣಗಿದರ್ ಶರ ಖಡ್ಗ ಪರಶು ಗದೆ ಚಕ್ರ ಕಂಪಣ ಮುಷ್ಟಿಯುದ್ಧಾದಿ ಸಕಲಾಯುಧಂಗಳಿಂ (ಚಬಪು. ೪೯-೪೩). [< ಸಂ. ಕಂಪನ]

**ಕಂಪಣಿಗ** (ನಾ). ಹುಲ್ಲುಮೆದೆ ಹಾಕುವವನು : ಚೆನ್ನ ಚೋಳನ ಮನೆಯ ಕಂಪಣಿಗನಯ್ಯಾ (ಬಸವ. ೬೮೨). [ಕಂಪಣ₂ + -ಇಗ]

**ಕಂಪನ** (ನಾ). ೧. ನಡುಕ; ನಡುಗುವಿಕೆ : "ತೊನೆದುದು ತೂಗಿದುದೊಲೆದುದುಮೆನುತಲ್ಲಾಡಿದುದು ನಡುಗಿತೆಂದೆನಲದು ಕಂಪನಮಕ್ಕುಂ" (ಕವಿಕಂ. ೨೫೪); ಸ್ವೇದ ಕಂಪನ ದೇಹೋತ್ಥಾನವೆಂಬ ಕ್ರಮದಿಂ ಕನಿಷ್ಠ ಮಧ್ಯಮೋತ್ತಮ ಪ್ರಾಣಾಯಾಮ ಸಿದ್ಧಿ ಸೂಚನಂಗಳಂ (ವಿವೇಕ. ೧೫೧); ಘೋಷದಲ್ಲಿ ಏರುತಗ್ಗುಗಳು ನಿಯಮಾನುಸಾರ ಉಂಟಾಗುವುವು. ಇದರಿಂದ ಧ್ವನಿಯನ್ನು ನಡುಗಿಸಿದಂತೆ . . . ಅನುಭವವುಂಟಾಗುತ್ತದೆ. ಇಂತಹ ಶಬ್ದದ ನಡುಗುವಿಕೆಗೆ ಕಂಪನವೆಂದು (Beat) ಹೆಸರು (ಭೌತವಿ. ೧೨೪). ೨. ಒಂದು ಆಯುಧ : ಮುಸಲ ಕಣಾಯ ಕಂಪನ ಮುಸುಂಡಿ ಬಿಂಡಿವಾಳ ವಜ್ರಮುಷ್ಟಿ . . . ಪಾಶಾಂಕುಶಾದಿ ಶಸ್ತ್ರಾಸ್ತ್ರಂಗಳೊಳೆಚ್ಚು ಮಿಟ್ಟುಮಿಱಿದುಂ ಪೊಯ್ದುಂ (ಪಂರಾಮಾ. ೧೩-೭೬ ವ). ೩. ಶಿಶಿರ ಋತು. ೪. ಸನ್ನಿಪಾತ ಜ್ವರ. [ಸಂ.]

**ಕಂಪನಗೊಳ್** (ಕ್ರಿ). ನಡುಕವನ್ನು ಹೊಂದು; ನಡುಗು; ಕಂಪಿಸು : ಕಡು ನಾಣ್ಚೆಯಂಜಿ ಕಣ್ಮುಚ್ಚಿ ಕಂಪನಗೊಂಬ ಬಡವೆಣ್ಣಳು (ಹದಿಬ. ೧-೫೬); ದಶಕಂಠ ಘನ ಸತ್ತ್ವದಿಂದ ವಿಂಶತಿ ತೋಳ್ಗಳೊಸೆದು ಬಂಧಿಸಿ ಬಿಗಿದುಯೆತ್ತೆ ಕಂಪನಗೊಂಡೆ ಬಿಸಜಾಕ್ಷ ಪಶುಗರ್ಭ ಪಾಕಶಾಸನ ಮುಖ್ಯ ಸುರರು ಮರೆಯಿಡಲು ಒಲಿದು (ನವಮೋ. ೨-೧೩). [ಕಂಪನ + ಕೊಳ್₁]

**ಕಂಪನಗೊಳಿಸು** (ಕ್ರಿ). ನಡುಗಿಸು; ನಡುಕ ಹುಟ್ಟಿಸು : ಆ ಕೇಳಿದ ಮಾತು ಅವಳ ಶರೀರವನ್ನೆಲ್ಲಾ ಕಂಪನಗೊಳಿಸುತ್ತಿತ್ತು (ಕುಸುಸಂ. ೧೧೦). [ಕಂಪನಗೊಳ್ + -ಇಸು₃]

**ಕಂಪನತರಂಗ** (ನಾ). ಕಂಪನಗಳ ಅಲೆ : ಅವರ ಶಾರೀರದ ಶ್ರುತಿಯೂ ಸ್ಪಂದನ ತರಂಗವೂ, ಆ ಮನೆಯ ಹಜಾರದ ಗೋಡೆ ಮತ್ತು ಕಂಬಗಳ ಕಂಪನತರಂಗವೂ ಆಕಸ್ಮಾತ್ ಕೂಡಿದುದರಿಂದ ಕಂಬ, ಗೋಡೆ ಮತ್ತು ನೆಲಗಳು ಏಕನಾದದಲ್ಲಿ ಅಲ್ಲಾಡಲಾರಂಭಿಸಿದುವು (ಸಂಗೀತ. ೩೫). [ಕಂಪನ + ತರಂಗ]

**ಕಂಪನಾಂಕ** (ನಾ). ಕಂಪನಗಳ ಸಂಖ್ಯಾಪ್ರಮಾಣ : ನಮ್ಮ ಕಿವಿಗೆ ಗಾಳಿಯ ಕಂಪನಗಳು ಶಬ್ದವಾಗಿ ತೋರಬೇಕಾದರೆ ಒಂದು ಕ್ಷಣದಲ್ಲಾಗುವ ಕಂಪನಗಳ ಸಂಖ್ಯೆ ಅಥವಾ ಕಂಪನಾಂಕವು ಒಂದು ಮಿತಿಯಲ್ಲಿರಬೇಕು (ವಿಜ್ಞಾವಿ. ೧೧೧). [ಕಂಪನ + ಅಂಕ₂]

**ಕಂಪನಾವರ್ತ** (ನಾ). ಕಂಪನ ಪರಂಪರೆ : ಉತ್ಪನ್ನವಾದ ಕಂಪನಾವರ್ತಗಳು ಸುತ್ತಲಿರುವ ಗಾಳಿಯನ್ನು ಸೋಕಿ ಗಾಳಿಯೂ ಕಂಪಿಸುವಂತೆ ಮಾಡುತ್ತದೆ (ಸಂಗೀಚಂ. ೬). [ಕಂಪನ + ಆವರ್ತ]

**ಕಂಪನಿ**, ಕುಂಪಣಿ, ಕುಂಪನಿ, ಕುಂಪೆನಿ, ಕುಂಫಣಿ (ನಾ). ೧. ಸಾಮೂಹಿಕ ಕಾರ್ಯಸಂಸ್ಥೆ, —ಸಂಘ, ಮಂಡಲಿ : ನಾಲ್ಕು ನಾಟಕ ಕಂಪನಿಗಳು ಬಂದಿದ್ದವು (ನಾಡಿಗೇ. ೩೦೦). ೨. "ಕ್ಯಾಪ್ಟನ್ನಿನ ಆಧಿಪತ್ಯದಲ್ಲಿರುವ ಪದಾತಿದಳ" (Company. ಇಂಕನಿ). ೩. (ಭಾರತವನ್ನು ಕೆಲಕಾಲ ಆಳುತ್ತಿದ್ದ) ಈಸ್ಟ್ ಇಂಡಿಯಾ ಕಂಪನಿಯೆಂಬ ವ್ಯಾಪಾರೀ ಸಂಸ್ಥೆ. **ಕುಂಪಣಿ:** ೧. ಕುಂಪಣಿ ಅಂಗಡೀ ಇಟ್ಟು ಸಾವಕಾರಾದ್ರ ನಿನ್ನಷ್ಟಕ್ಕ ನೀ ಆದೀ (ದಾಸಹು. ೨೧). ೨. ಅವನು ಕಳ್ಳರನ್ನು ಹಿಡಿಯುವುದಕ್ಕೆ ಒಂದೊಂದು ಕುಂಪಣಿ ಶಿಪಾಯಿಗಳನ್ನು ಒಂದೊಂದು ದಿಕ್ಕಿಗೆ ಕಳುಹುತ್ತಿದ್ದನು (ದೇವೀಚೌ. ೩೧). ೩. ನರರ ವರ್ಷತ್ರಯಂ ವಾಗ್ವಿಷಯದಿಂ ಕಾದುತಿರದೆ ಬೇಸರಿಸಿ ಕುಂಪಣಿಯೆಂಬರಾಜ್ಞೆಯಿಂ ನೆರೆ ವಿಚಾರಿಸಲವಳ್ ಪೂರ್ವಪ್ರಮಾಣಮಂ ತಿಳಿಯುತ್ತೆ (ಮಹಾವಿ. ೨೩-೫); ದೊಡ್ಡವೀರರಾಜ ತನ್ನ ಮಗಳ ಹೆಸರಲ್ಲಿ ಕುಂಪಣಿಯವರೊಂದಿಗೆ ಸುಮಾರು ಏಳು ಲಕ್ಷ ರೂಪಾಯನ್ನು ನಿಧಿಯಾಗಿರಿಸಿದ್ದನು (ಚಕರಾ. ೬೫).

ಕುಂಪನಿ : ೨. ವಬ್ಬ ಸರದಾರ ವಂದು ಕುಂಪನಿ ಶಿಪಾಯಿಗಳು ಸಹ (ರಾಜೇಂದ್ರ. ೧೨೧). **ಕುಂಪೆನಿ :** ೩. 'ಕುಂಪೆನಿಸರ್ಕಾರ' ಪರಾ. **ಕುಂಫಣಿ :** ೩. 'ಕುಂಫಣಿರೂಪಾಯಿ' ಪರಾ.
[← ಇಂ. Company. / ಮರಾ. ಕಂಪನೀ. / ತಮಿ. ಕುಮ್ಪಿನಿ; ತೆಲು. ಕುಂಪಿಣಿ]

**ಕಂಪಲ್**, ಗಂಪಲ್ (ನಾ). ಕೆಸರು ; ಹುದಿಲು : ಕಂಪಲೊಳ್ ಬಿರ್ದ ಪಶುವಿನಂತೆ ಸಂಸಾರದೊಳ್ ಬಿರ್ದು ನಮೆಯದೆ (ಧರ್ಮಾಮೃ. ೧೪-೮೪) ; ಪಲ್ಗಳ್ ಕೆದಱಿದೊಡಂ ಕಂಪಲ್ಗಳ್ ಕೆನ್ನೆತ್ತರಿರ್ಪಿನಿಂ ಪುಟ್ಟಿದೊಡಂ ಬಲ್ಗಂಡಂ ಸೂಸಿದೊಡಂ ಬಲ್ಗಂಡರ್ ಬೆದಱದಿಱಿದು ಕುಱಿದಱಿಯಾದರ್ (ಪಾರ್ಶ್ವಪು. ೩-೧೫೨) ; ಕಂಪಲ್ಮಡುಗೊಂಡಾ ಪಲ್ವಲಂಬೊಕ್ಕಡಿಗೆ ಪೊರಳ್ದಬ್ಬುತುಂ (ಶಾಂತೀಶ್ವ. ೧೨-೩೬). **ಗಂಪಲ್ :** ನೀರ ನೂಡಲೆಂದಾ ವರವಜ್ರಘೋಷಕರಿ ಪೋಗುತೆ ತತ್ತಟದಾನೆ ಗಂಪಲೊಳ್ ಭಾವಿಸದೆಯ್ದೆ ಪೊಕ್ಕ ಬಳಮುೞ್ದಿರೆ ಕಂಡು (ಪಾರ್ಶ್ವಪು. ೫-೬೧) ; ಮೂವರು ಮಂತ್ರಿಗಳು ತನ್ನ ತೂಗೆ ಗಂಪಲೊಳಿರ್ದು ನೀಂ ಪಿಡಿದೆತ್ತಿ ಮೆಯ್ಯಂ ಕರ್ಚಿ ರತ್ನಮಯಸಿಂಹಾಸನದ ಮೇಲೆ ಕುಳ್ಳಿರಿಸಿದುದಂ ನಿನಗೆ ಪೇಳ್ದಪಂ (ಪುಣ್ಯಾಸ್ರ. ೯-೩೮ ವ). [ಕಂಪ$_1$ + -ಅಲ್$_2$]

**ಕಂಪಲರ್$_1$** (ಕ್ರಿ). ವಾಸನೆ ಹರಡಿಕೊಳ್ಳು ; ಸುಗಂಧ ಹಬ್ಬು : ಅಮರ್ದುವಳ್ಳಿ ಕಂಪಲರ್ದುದೆನಲ್ಕೆ (ಶಮದ. ೪೫). [ಕಂಪು + ಅಲರ್$_1$]

**ಕಂಪಲರ್$_2$** (ನಾ). ಸುಗಂಧಯುಕ್ತವಾದ ಹೂವು ; ಪರಿಮಳವುಳ್ಳ ಪುಷ್ಪ. [ಕಂಪು + ಅಲರ್$_2$]

**ಕಂಪಲ್ಮಸಗಿಸು** (ಕ್ರಿ). ಕೆಸರೆಬ್ಬಿಸು ; ಕೆಸರು ಏಳಿಸು : ಮದಧಾರಾವೃಷ್ಟಿ ಕಂಪಲ್ಮಸಗಿಸೆ [ಪಾಠಾಂ. ಪಂಕಂ ಮಸಗಿಸೆ] ನೆಲನಂ (ಪುಷ್ಪಪು. ೫-೯). [ಕಂಪಲ್ಮಸಗು + -ಇಸು$_3$]

**ಕಂಪಲ್ಮಸಗು** (ಕ್ರಿ). ಕೆಸರಾಗು ; ರಾಡಿಯಾಗು : ಕಂಪಲ್ಮಸಗುತ್ತುಂ ಬತ್ತೆ ತೆರ್ಪಂಬಡೆದಱುಗೆಱೆಗಳ್ (ಜಗವಿ. ೧೭-೬೨) ; ಜಳರಾಶಿಶ್ರೇಣಿ ಕಂಪಲ್ಮಸಗೆ ಬಲ ಪದೋದ್ಧೂತ ಧೂಳಿವ್ರಜವ್ಯಾಕುಳದಿಂ (ಶಾಂತೀಶ್ವ. ೧೨-೭). [ಕಂಪಲ್ + ಮಸಗು$_1$]

**ಕಂಪವಾತ** (ನಾ). (ಮಕ್ಕಳಿಗೆ ಬರುವ) ಒಂದು ರೋಗ ; ಎಳವು ; "ದೇಹದ ಸ್ನಾಯುಗಳು ಅನೈಚ್ಛಿಕವಾಗಿ ಒಂದು ಕ್ರಮವಿಲ್ಲದೆ ಸಂಕುಚಿತವಾಗುತ್ತ ಹೋಗುವ ಸೆಳವುರೋಗ" (Chorea. ಇಂಕನ್ನಿ).
[ಕಂಪ$_2$ + ವಾತ]

**ಕಂಪವೇಱು** (ಕ್ರಿ). ನಡುಕ ಅಧಿಕವಾಗು, —ಹೆಚ್ಚಾಗು : ಮೆಯ್ಯೆಲ್ಲವಂಕುರವೇಱಲ್ ನುಡಿ ಕಂಪವೇಱೆ ಚರಣಂಗಳ್ ಲೀಲೆಯೇಱಲ್ (ಪಂಪಾಶ. ೧೮). [ಕಂಪ$_2$ + ಏಱು$_1$ (< ಏಱ್$_1$)]

**ಕಂಪಳ$_1$** (ನಾ). ಸರಂಜಾಮು ; ಸಲಕರಣೆ : ಕುರಿಗಳು, ಕೊಲ್ಲಾರಿ ಬಂಡಿಗಳು ಮುಂತಾದ ಕಂಪಳ (ಸರಂಜಾಮು)ವನ್ನು ಅವರು ಹೊರಡಿಸಿದ್ದರು (ಕರತ್ನ. ೧೩೩); ಈ ಮೂರು ಜನ ಅಣ್ಣತಮ್ಮದಿರು . . . ತುರು, ಕುರಿ, ಕೊಲ್ಲಾರಿ, ಮುಂತಾದ ಕಂಪಳವನ್ನು ತೆರಳಿಸಿಕೊಂಡು ದಕ್ಷಿಣ ದೇಶಕ್ಕೆ ಬಂದರು (ಚಿತ್ರಪಾ. ೪). [?]

**ಕಂಪಳ$_2$** (ನಾ). ಒಂದು ಆಡಳಿತಕ್ಕೆ ಸೇರಿದ ನಾಡಿನ ಒಂದು ಭಾಗ ; ಈಗಿನ ಹೋಬಳಿಯಂತೆ ಒಂದು ವಿಭಾಗ : ಹಂನ್ನೆರಡು ಲಕ್ಷ್ಯ ಕಂಪಳದೊಳಗೆ ಹಂನ್ನೆರಡುಸಾವಿರ ಆವಂ (ಮೈ ಆ ರಿ. ೧೯೩೧, ೧-೨೦ ; 1310) ; ಆ ಹೆಣ್ಣಿನ ಕಳಂತ್ರಕ್ಕೆ ಬಹಗ ಕಂಪಳಕೆ ಆದಿಕವಾದ ಜಂಬೂದ್ವೀಪಕೆ (ಎಕ. VII, ಚನ್ನಗಿ. ೮೩-೧೨ ; ಸು. 1680). [?]

**ಕಂಪಾಡಗ** (ನಾ). ತೇಗದ ಮರ : "ಕಂಪಾಡಗಮೆ ತೇಗು" (ಶಬ್ದಮಂ. ೨೬). [?]

**ಕಂಪಾತ್ರ** (ನಾ). ಶಿವ ; "ತಲೆಬುರುಡೆಯನ್ನು ಪಾತ್ರೆ ಮಾಡಿಕೊಂಡವ" (ಪ್ರೌಢರಾ. ಕೋಶ) : ಜಗದೀಶ ಕಂಪಾತ್ರ ಜಲಜಾರಿಖರನೇತ್ರ (ಪ್ರೌಢರಾ. ೪-೧). [ಸಂ. (ಕಂ + ಪಾತ್ರ)]

**ಕಂಪಾಯಮಾನ** (ಗು). ನಡುಗುವ ; ಕಂಪಿಸುವ (ಕ). [ಸಂ.]

**ಕಂಪಾಲೆ** (ನಾ). ಒಂದು ಜಾತಿಯ ಮರ : ಕುಂಪೋಲಿ, ಹುದಿಗೊಳ್ಳು, ಕಾಲ್ಮಧು, ಕಂಪಾಲೆ, ಕಬ್ಬಿಣದಮರ (ವೈಔಗಿ. ೭೦-೧೪೩೫). [?]

**ಕಂಪಾಸು** (ನಾ). ೧. ಕೈವಾರ ; ವೃತ್ತಗಳನ್ನು ರೇಖಿಸಲು ಬಳಸುವ ಸಲಕರಣೆ : ಈ ಕಂಪಾಸುಯೆಂಬ ಸಾಧನವು ಸರಿಸುಮಾರು ಅಡಿಕೆ ಕತ್ತರಿಯ ಹಾಗೆ ಇರುತ್ತದೆಂದು ಹೇಳಬಹುದು (ಭೂಮಿಅ. ೪೨). ೨. ದಿಕ್ಸೂಚಿ. [← ಇಂ. Compass]

**ಕಂಪಾಹತ** (ನಾ). (?) : "ತಂಪುಂ ಕಂಪಾಹತಮಿವು [ಪಾಠಾಂ. ಮಿಹು] ನುಂಪೆನಿಕುಂ [ಪಾಠಾಂ. ನಿಂಪೆನಿಕುಂ]" (ಚತುನಿ. ಕಿ. I, ೧೦೬). [?]

**ಕಂಪಿ** (ನಾ). ತಾಳೆಗರಿ ಪುಸ್ತಕದ ಇಕ್ಕಡೆಗಳಲ್ಲಿ ಹಾಕುವ ಮರದ ಪಟ್ಟಿ : ದುರಿತಗಳನೊಡೆಮೆಟ್ಟಿ ಗುಣಗಳ ಧರಿಸಿ ಕಾಮನ ಕಾರ್ಮುಕವ ಕತ್ತರಿಸಿ ಪುಸ್ತಕಕೆಸೆವ ಕಂಪಿಯ ರಚಿಸಿ ಸದ್ಗುಣವ ಭರದಿ ದಾರವ ಮಾಡಿ ಧರಿಸಿದ ವರ ರತಿಯ ಜಱಿದಚಳಿತನ ಸುಸ್ಥಿರದಿ ನೆನೆವೆನು ವರ್ಧಮಾನ ಮುನೀಂದ್ರಚಂದ್ರಮನ (ಜೀವಂಚ. ೧-೧೩). [ದೇ. ‖ ತಮಿ. ಕಮ್ಪ್ಪಿ]

**ಕಂಪಿಗವುಂಡ** (ನಾ). ಒಬ್ಬಾತನ ಹೆಸರು : ಕಮ್ಪಿಗವುಣ್ಡನ ಮಗಂ ×× ಗಾತಿ ಪುಲಿ[ಯ]ನಿಱಿದುಂ ಸತ್ತಂ (ಎಕ. XI, ಚಿತ್ರದು. ೨೬-೧೨ ; 946). [ಕಂಪಿ ? + ಗವುಂಡ (< ಗಾಮುಂಡ)]

**ಕಂಪಿಡಿ** (ಕ್ರಿ). ಸುವಾಸನೆಯಿಂದ ತುಂಬು ; ಗಮಗಮಿಸು : ಅರಮನೆ ಮೂಗು ಕಂಪಿಡಿದೆಲರ್ ನಱುಸುಯ್ ಸಿತಕೇತುಮಾಳೆ ಭಾಸುರ ನಯನಾಂಶು . . . ಪುರಮೆಸೆದಿರ್ಪುದಾ ವಿಷಯಲಕ್ಷ್ಮಿಯ ಮುಗ್ಧಮುಖೇಂದುವೆಂಬಿನಂ (ಪುಷ್ಪಪು. ೨-೩೨). [ಕಂಪು + ಇಡಿ$_2$]

**ಕಂಪಿಡಿಗು** (ಕ್ರಿ). ನಡುಕ ತುಂಬು : ತಲೆಯೆಲ್ಲಾ ಕಂಪಿಡಿಗಿತು, ಆಮೇಲೆ ತಲೆ ಹೌರಗಾಯಿತು (ಮುಂಗಾಪು. ೯೧). [ಕಂಪ$_2$ + ಇಡಿಗು (< ಇಡುಗು$_1$)]

**ಕಂಪಿಡು** (ಕ್ರಿ). ಪರಿಮಳ ಸೂಸು ; ಸುವಾಸನೆ ಹರಡು : ಕುವಲಯಕ್ಕಡಿಯಿಟ್ಟುದು ತುಂಬಿ ಜ್ಞಾತಿ ಕಂಪಿಟ್ಟುದು (ಜಗವಿ. ೧೪-೬) ; ಸೊಂಪಿನಿಂ ಕಂಪಿಡುವ ಸಂಪಗೆಗಳಿಂ ಕೊಂಡು (ಬಸರ. ೩-೨೩) ; ಮೈಪರಿಮಳದಿ ದೆಸೆ ಕಂಪಿಡಲು ಭಾರವಣೆಯಲಿ ಬಂದನು ಕರ್ಣನೋಲಗಕೆ (ಕುವ್ಯಾದ್ರೋ. ೧-೧೪) ; ಕಡುಜವದಿ ಬೆನ್ನಟ್ಟಿದಳು ಕಂಪಿಡಿದ ಚಂದನವೊಯ್ಯ ಪವನಂ ಬಿಡದೆ ಬೆನ್ನಟ್ಟುವ ಭುಜಂಗಿವೊಲವನ ವಹಿಲದಲಿ (ಸಾಳ್ವಭಾ. ೬-೩೩). [ಕಂಪು + ಇಡು$_1$]

**ಕಂಪಿಣೆಯಾಗು** (ಕ್ರಿ). ದಟ್ಟೈಸು (?) : ಬರುವ ಕಿಚ್ಚಿನ ದಾಳಿಗುನ್ನತ ಮರುತ ಬಲವಾದವೊಲ್ ಮಹಾ ಕಟ್ಟರುಳ ಮೋಹರವೆಲ್ಲ ಕಂಪಿಣೆಯಾದುದೆಂಬಂತೆ (ದೇವೀಮ. ೫-೧೫). [?]

**ಕಂಪಿತ** (ಗು). ೧. ನಡುಗಿಸಲ್ಪಟ್ಟ : ಬಹುಕಹಳಾ ಶಂಖಭೇರೀ ಮೃದಂಗಸ್ವರದಿಂದೋರಂತೆ ತೀವಲ್ ನಡೆದುದು ಕಟಕಂ ಕಂಪಿತ ಕ್ಷೋಣಿಭಾಗಂ (ಪುಷ್ಪಪು. ೫-೩೫). (ನಾ). ೨. ನಡುಕ ; ಕಂಪನ : ಮನದೊಳತಿ ಭಯಕಂಪಿತದಿ ಕರವನಜಮುಕುಳಿತನಾದ ಬಸವ ಕುಮಾರನಂ ನೋಡಿ (ಬಸಪು. ೨೨-೭೭). ೩. [ಸಂಗೀತ] ಗಮಕಗಳಲ್ಲಿ ಒಂದು ಪ್ರಕಾರ : "ಕಂಪಿತ–ತನ್ನ ಸ್ಥಾನದಲ್ಲೇ ಒಂದು ಸ್ವರ ಕಂಪಿಸುವುದು" (ಸಂಗೀಚಂ. ೨೮). ೪. ಸ್ವರದೋಷಗಳಲ್ಲಿ ಒಂದು : ಕಂಪಿತ ಚಿಂತಿತ. . . ಕಾಲಹೀನವೆಂಬ ಹದಿನೈದು ಸ್ವರದೂಷಣಂಗಳಂ ತೊಱೆದು (ವಿವೇಕ. ೨೩೬). ೫. ಗಾಯಕನ ದೋಷ : "ಕಂಪಿತ–ದೇಹ ನಡುಗಿಸುತ್ತಾ ಹಾಡುವವನು" (ಸಂಗೀಚಂ. ೧೦೩). [ಸಂ.]

**ಕಂಪಿಲ$_1$** ‘ಕಂಪಿಲಿ’ ನೋ.

**ಕಂಪಿಲ$_2$** (ನಾ). = ಕಂಪಿಲ್ಲ. [ಸಂ.]

**ಕಂಪಿಲಿ, ಕಂಪಿಲ$_1$** (ನಾ). ೧. ಒಂದು ಊರಿನ ಹೆಸರು: ಕಂಪಿಲಿಗೆ ಪಡೆವೋದಲ್ಲಿ ಕೊಮಾಲರಾ ಮಗನ್ಸಾಣ್ಣಪ್ಪನ್ ಕಾಳೆಗದೊಳ್ಸತ್ತಲ್ಲಿ (ಎಕ. X, ಮುಳಬಾ. ೨೫೫–೬; 750); ಕಂಪಿಲಿಯ ನೆಲೆವೀಡಿನೊಳ್ (ಎಇ. IV, ೨೧೩–೧೧; 1064). **ಕಂಪಿಲ$_1$**: ೨. ಕಂಪಿಲ ದೇಶದ ರಾಜನ ಹೆಸರು: ಚಂಗಾಪುರದಲು ಕಂಪಿಲರಾಯನ ಬಾಹತ್ತರ ವಿನೋಗಾಧಿಪತಿ ಪತಿ ಕಾರ್ಯ್ಯಧುರಂಧರ ಬಯಿಚವೆಗ್ಗಡೆ (ಎಇ. XXIII, ೨೮–೪; 1407). [?]

**ಕಂಪಿಲ್ಲ** (ನಾ). ಒಂದು ಬಗೆಯ ಸಸ್ಯ: “ರಂಜಿಕಃ – ಕಂಪಿಲ್ಲ” (ಓಷಧಿ. ೧೩೩); ಅದು ಜಂಬೂ ಜಂಭ ರಂಭಾಕುಳಕ ಬಕುಳ ಕಂಪಿಲ್ಲ ಸತ್ರಾರ್ಣ . . . ತಿಳಕಭೂರ್ಜಾದಿ ಭೂಜಾವಕೀರ್ಣಂ (ಅರ್ಥನೀ. ೩–೩೫). [ಸಂ.]

**ಕಂಪಿಸು$_1$** (ಕ್ರಿ). ಸುವಾಸನೆಯನ್ನು ಕೊಡು; ಪರಿಮಳಿಸು: ಹೊಸಯೆಳೆಯ ಕೋಮಳದ ನವ ಕಂಪಿಸುವ ನುಣ್ಪಿನ ತಣ್ಪಿನಾಮೋದಿಸುವ ಸೊಂಪಿನ ಬಿಲ್ವಪತ್ರೆಯನಾಗ ಕೊಯ್ತಂದು (ಬಸಪು. ೧೮–೩೦); ಸೊಂಪೆಸೆವ ಕೋಗಿಲೆಯ ಸರ ದೆಸೆ ಕಂಪಿಸುವ [ಪಾಠಾಂ. ತಂಪೆಸೆವ] ತಂಬೆಲರ ಹುವ್ವಿನ ಜೊಂಪ (ಕುವ್ಯಾಅ. ೪–೩೭). [ಕಂಪು + –ಇಸು$_3$]

**ಕಂಪಿಸು$_2$** (ಕ್ರಿ). ೧. ನಡುಗು; ಅದಿರು: ಬಜಸಿಡಿಲೆಯ್ತಂದು ಪೊಯ್ಯಲ್ ನೆಲಂ ಕಂಪಿಸುವಂತೆ (ಕಾದಂಪೂ. ೭೦೦); ಕರಮುರಿದಪ್ಪ ಬಾಧೆಗಳಿ ನೋವೆನೆ ಕೂಗಿರೆ ಬೆರ್ಚಿ ಕಂಪಿಸುತ್ತಿರೆ (ಧರ್ಮಾಮೃ. ೯–೫೬); ಪೂರಾಯದ ವಿಘಾತಿಯಲರಸ ಕಳವಳಿಸಿದನು ಕಂಪಿಸುತ (ಕುವ್ಯಾಕ. ೧೧–೫೪); ಕಡಲಳ್ಳೆಹೊಯ್ವಂದದಿ ಕಂಪಿಸಿತು (ಮೋಹತ. ೨–೭). ೨. ನಡುಗಿಸು; ಅಂಜಿಸು: ಬವರದಲಿ ರಘುನಾಥಸೇನಾನಿವಹವನು ಕಂಪಿಸುವೆನೇ ಕಾಂಗದಲಿ ವೈರಿಗಳ (ಕೌಶಿರಾ. ೨೦–೮). [ಕಂಪನ + –ಇಸು$_3$]

**ಕಂಪು, ಗಂಪು** (ನಾ). ೧. ಸುಗಂಧ; ವಾಸನೆ; ಪರಿಮಳ: “ನಱುಸೊವಡು ಕಂಪು ನಾತಂ ನೆಱೆ ಸೌಸವ ಕಮ್ಮಿತೆಂದು ಮಗಮಗಿಸಿದುದು” (ಕವಿಕಂ. ೯೬); ಬೇಯದೆ ಕಾಯ್ದೋಡಿನ ಜೋಳದಂತಲದೊರ್ಡಾ ಕಂಪುಂ ಮನಸ್ತಾಪಮುಂ (ಕಾವ್ಯಸಾ. ೫೮೮ ಶೂದ್ರಕ); ಪೊದಟ್ಟ ಪೊಸನೈದಿಲ ಕಂಪನೆ ಬೀಱಿ ಕಾಯ್ತ ಕೆಂಗೊಲೆಯೊಳೆ ಜೋಲ್ವ ಶಾಳಿ (ಪಂಪಭಾ. ೧–೫೨); ಕಂಪಿಲ್ಲದ ತುಪ್ಪಮುಂ ಪೆಂಪಿಲ್ಲದ ಪ್ರಭುತ್ವಮುಂ (ಧರ್ಮಾಮೃ. ೧–೭೫); ಚಂದನವ ಕಡಿದು ಕೊಱೆದು ತೇದಡೆ ನೊಂದೆನೆಂದು ಕಂಪ ಬಿಟ್ಟಿತ್ತೆ (ಮಹಾದೇ. ಕ. ೪೯–೧೨೭). ೨. ಅಸಹ್ಯಕರವಾದ ವಾಸನೆ; ದುರ್ನಾತ: ಕನಲ್ವ ಕೆಂಡದ ಮೇಲೆ ಪಱಿಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ (ಪಂಪಭಾ. ೧೩–೭೧ ವ). **ಗಂಪು**: ೧. ಗಂಪಿನ ಸಂಪಿಗೆಯ ವನದ ತಂಪಿನ ನೆಲದೊಳ್ (ಸುಸಾರ. ೧೩೧–೬).

[ದೇ. ‖ ತಮಿ. ಕಮಕಮವೆನಲ್; ತುಳು. ಕಮ್ಮೆನ, ಕಮ್ಮನ; ತೆಲು. ಕಂಪು; ಕೋಲಾ. ಕವ್, ಕಂಪ್; ನಾಯ್ಕಿ. ಕಪ್; ಕುರುಖ್. ಗಮಕ್]

**ಕಂಪುಗಾರ್ತಿ** (ನಾ). ಸುಗಂಧವುಳ್ಳವಳು; ಪರಿಮಳವನ್ನು ಬೀರುವವಳು: ಕೊಡುವೊಂದು ವಸ್ತುವಂ ನಾನಾಪ್ರಕಾರದಿಂ ನುಡಿದು ಮಾಱುವ ಕಂಪುಗಾರ್ತಿಯರು ತಾವೆ ತಮ್ಮೊಡಲೊಳಿರ್ಪನ್ನೃತಮುಂ ಕನ್ನಡಿಸುವಂತೆಸೆದರ್ (ಚೆಬಪು. ೧೦–೬); ಇಂಪುಗಾರ್ತಿಯರಂದ ಗಾರ್ತಿಯರಾಣ್ಮಗೆ ಕಂಪುಗಾರ್ತಿಯರ್ ಜಾಣೆಯರ ಮನದಾಣ್ಮಗೆ . . . ಸಂಪಿಗೆಯ ಹೂವ ಮುಡಿಸಿದರು (ಕವಿಚ. III, ೧೮೨ ಲಕ್ಷ್ಮೀದೇವಿಗೆ ಹೂ ಮುಡಿಸುವ ಹಾಡುಗಳು). [ಕಂಪುಗಾಱ + –ತಿ$_1$ (< –ಇತ್ತಿ)]

**ಕಂಪುಗಾಳಿ** (ನಾ). ಸುವಾಸನೆಯುಕ್ತವಾದ ಗಾಳಿ: ತೆನೆಯ ಕಂಪುಗಾಳಿ ಬೀಸಿಬರುವುದು (ಕೊಳಲು. ೮೫). [ಕಂಪು + ಗಾಳಿ]

**ಕಂಪುಗಾಱ** (ನಾ). ೧. ಪರಿಮಳವನ್ನು ಬೀರುವವನು. ೨. ಸುವಾಸನೆಯ ವಸ್ತುಗಳನ್ನು ತಯಾರಿಸುವವನು: ಸೊಂಪುಗಾಱಂ, ಕಂಪುಗಾಱಂ (ಭಾಷಾಭೂ. ೧೮೬ ಉದಾ). [ಕಂಪು + –ಗಾಱ (< –ಕಾಱ)]

**ಕಂಪುಗು** (ಕ್ರಿ). ಪರಿಮಳವನ್ನು ಸೂಸು; ಸುಗಂಧವನ್ನು ಬೀರು: ಸಂಪಗೆ ಕರಂ ಮಿಗೆ ಕಂಪುಗೆ ನಂದನಂಗಳೊಳ್ (ನೇಮಿಪು. ೧೩–೧೭); ನೆಗಳ್ದ ಪೊಂಬಾಳೆಗಳ ಚವರದಿಂ ಪೂತು ಕಂಪುಗುವ ವೃಕ್ಷಾವಳಿಯ ಗುಡಿಯಿಂ (ಪದ್ಮರಾ. ೮–೨೩). [ಕಂಪು + ಉಗು$_1$]

**ಕಂಪುಗೊಳ್** (ಕ್ರಿ). ವಾಸನೆಯನ್ನು ಹೀರು; ಮೂಸಿನೋಡು: ಕಂಪುಗೊಳಲ್ಕಸಿರ್ದುಸಿರೆನಿಸಂ ಪೊಱಮಟ್ಟೆಸಱ ತುದಿಯನೆಯ್ದಲೊಡಂ (ಆದಿಪು. ೧೧–೧೧೫); ವಿಷ ವಿಷಮು ಕನತ್ಕಿಂಜಲ್ಕಮನುತ್ಪಲವೊಂದಂ ಜನಪತಿ ಕಂಪುಗೊಂಡು ತೂಂಕಂಗೊಂಡಂ (ಶಾಂತಿಪು. ೬–೯೨); ಗರುಕೆಯನ್ನು ಕಂಪುಗೊಂಡ ಕುರಿಮರಿಯಂತೆ ಬಿಜಯಮಾಡುತ್ತಿದ್ದಾಳೆ! (ಬಿಟ್ಟಅ. ೧೦–೧೦). [ಕಂಪು + ಕೊಳ್$_1$]

**ಕಂಪುಗೋಲ್** (ನಾ). ಸುಗಂಧದ ಬಾಣ; ಹೂವಿನ ಬಾಣ. ‘ಕಂಪುಗೋಲ’ ಪರಾ. [ಕಂಪು + ಕೋಲ್$_1$]

**ಕಂಪುಗೋಲ** (ನಾ). ಹೂವಿನ ಬಾಣವುಳ್ಳವನು; ಮನ್ಮಥ. ‘ಕಂಪುಗೋಲಾರಿ’ ಪರಾ. [ಕಂಪುಗೋಲ್ + –ಅ$_7$]

**ಕಂಪುಗೋಲಾರಿ** (ನಾ). ಮನ್ಮಥನ ಶತ್ರು; ಶಿವ: ಪುಷ್ಪಕದೊಳಗೆ ದಂಪತಿಗಳನಿಟ್ಟು ಕಂಪುಗೋಲಾರಿ ಜಗಂ ಪೊರೆಯೇಱ ನೋಡುತಿರೆ ಮುಂಪೋದ ಕೈಲಾಸಕಂ (ಭೈರವೇ. ೫–೧೪೩). [ಕಂಪುಗೋಲ + ಅರಿ$_6$]

**ಕಂಪುಣ್** (ಕ್ರಿ). ಸುಗಂಧವನ್ನು ಉಣ್ಣು; ಪರಿಮಳವನ್ನು ಸೇವಿಸು: ಕಂಪುಂಡು ಸೊಕ್ಕಿ ಸಲೆ ಬೀಱ್ವ ಮತ್ತಾಳಿಯಿಂ (ಉದ್ಭಟ. ೩–೮೯). [ಕಂಪು + ಉಣ್]

**ಕಂಪುಣಿ** (ನಾ). ಕಂಪನ್ನು ಉಣ್ಣುವ ಜೀವಿ; ದುಂಬಿ: ಕಂಪನುಣ್ಬುದು ಶೀಲಮಿದರ್ಕೆ ಕಂಪುಣಿ (ಶಬ್ದಾನು. ೫೪೬ ಪ್ರಯೋ); ಗಡಣಂಗೊಂಡರೆಯಟ್ಟುತಿರ್ಪ ಕಂಪುಣಿಗಳೊಳಂ (ಮರಾಜ. ೨೩–೪೮ ವ). [ಕಂಪುಣ್ + –ಇ$_3$]

**ಕಂಪುಣುಬ** (ನಾ). ಹೂವಿನ ಬಾಣವುಳ್ಳವನು; ಮನ್ಮಥ; ಕಾಮ: ಕೈಪಱಿಗುಟ್ಟೆ ಬಂದಾಡವೊಲ್ಲಮ್ಮನೋಡುತಿಹ ತಿರುವನೊಂದೇ ಜಾವದೊಳ್ ಕೆಡುವ ಕಂ[ಪಾಠಾಂ. ಕೆಂ]ಪುಣುಬನ ಬಲ್ಗಯ್ಯನವನೆಂದು ಕೊಂದ (ಚೀರಮ. ೧೧–೪೮). [ಕಂಪು + ಪುಣುಬು (< ಪುಣುಂಬು) + –ಅ$_7$]

**ಕಂಪುದೀವು** (ಕ್ರಿ). ಸುಗಂಧ ತುಂಬಿಕೊಳ್ಳು: ತೊಂಗಲ್ವೊಂಡಿರ್ದ ಕೆಂಪಾದಸುಗೆಯ ತಳಿರಂ ಕಂಪುದೀವಿರ್ದ ಪೂವಂ (ಕಬ್ಬಿಕಾ. ೮೮). [ಕಂಪು + ತೀವು]

**ಕಂಪುನೀರ್** (ನಾ). ಸುವಾಸನೆ ಬೆರೆತ ನೀರು; ಪನ್ನೀರು: ಬಿಜ್ಜಣಿಕೆಯಿಕ್ಕಿದಳ್, ಕಂಪುನೀರೆರಚಿದಳ್ (ಶ್ರೀರಾಮಾ. ೩೨೨–೮೮). [ಕಂಪು + ನೀರ್$_1$]

**ಕಂಪುವಡೆ** (ಕ್ರಿ). ಪರಿಮಳವನ್ನು ಹೊಂದು: ಕಡುಗಂಪುವಡೆದುವಾ ಮೂಲಾಗ್ರಮಾ ಬನದ ನಡುವೆ ಪುಟ್ಟಿದ ಕಾಳ್ಮರಂಗಳೆಲ್ಲಂ (ಜೈಮಿಭಾ. ೩–೩೬). [ಕಂಪು + ಪಡೆ$_1$]

**ಕಂಪುವಳೆ** (ನಾ). ಸುಗಂಧದಲ್ಲಿ ವ್ಯವಹರಿಸುವುದು; ಗಂಧವಹ; ಗಾಳಿ : "ಕಂಪುವಳಂ, ಎರಲ್, ಮಿಗದೇರಂ, ಎಲರ್, ಗಾಳಿ – ಈ ೫ ವಾಯುವ ಪೆಸರ್" (ಕಶಸಾ. ೪–೩೮); "ಕಂಪುವಳಂ ಮಿಗದೇರಂ ತಾಂ ಪರಿಕಿಸಲೆಲರು ಗಾಳಿ" (ಕವಿಕಂ. ೩೮); ಇಂಪಿನ ಕಂಪಂ ಕಾಣ್ಕೆಯ ನಿತ್ತಾ ಕಂಪುವಳಂ ಮನ್ನಣೆವಡೆದು (ಹವಿಶ್ಟಾರ. ೪–೧೨ ರಗಳೆ).
[ಕಂಪು + –ವಳ]

**ಕಂಪುವಿಡಿ** (ಕ್ರಿ). ವಾಸನೆ ಹಿಡಿ; ವಾಸನೆಯಿಂದ ಗುರುತು ಹಿಡಿ : ಕಂಪುವಿಡಿದಿಂತು ಬರ್ಕುಂ ಬಿಡದೆ ಬೇಂಟೆನಾಯ್! (ಅಶ್ವತ್ಥಾ. ೧–೭).
[ಕಂಪು + ಪಿಡಿ$_1$]

**ಕಂಪುವೆಱು** (ಕ್ರಿ). ಕಂಪನ್ನು ಹೊಂದು : ಸುಗಂಧಜಲದೊಳ್ ತೊಳೆಯೆ ಕಂಪುವೆತ್ತು ಪೊಳೆವ ಪಳುಕಿನ ಕಂಬಂಗಳೊಳಂ . . . ಎಸೆ ವಾಸ್ಥಾನ ಮಂಟಪದೊಳ್ (ಕಾದಂಪೂ. ೭೯). [ಕಂಪು + ಪೆಱು$_1$]

**ಕಂಪುವೇಱು** (ಕ್ರಿ). = ಕಂಪುವಡೆ : ಅವಿರಳ ಕುಸುಮಾವಳಿ ಕಂಪುವೇಱೆ ಸೊಗಯಿಪ ಕಿಱುಮಿಡಿಗಳೊಳೊಪ್ಪಿ ತೋಱೆ (ಪಂಪಭಾ. ೪–೧೦).
[ಕಂಪು + ಪೇಱು$_1$]

**ಕಂಪುವೊಬಲ್** (ನಾ). ಸುಗಂಧದ ಪಟ್ಟಣ; ಕಥೆಯಲ್ಲಿ ಬರುವ ಒಂದು ಊರಿನ ಹೆಸರು : ತುರಿಪದಿಂ ಬಂದು ಕಂಪುವೊಬಲಂ ಪೊಕ್ಕು (ಕಬ್ಬಿಕಾ. ೧೮೮). [ಕಂಪು + ಪೊಬಲ್]

**ಕಂಪೂ** (ನಾ). (ಉಕ) ಸಂಘ; ಮಂಡಲಿ; ಟೋಳಿ : ನಮ್ಮ ಕಂಪೂದ ಮಂದಿಗೆಲ್ಲಾ ಹೇಳಿಬಿಡತೇನಿ. ನಿನಗ ಬಹಿಷ್ಕಾರ ಹಾಕೇಬಿಡತೇವಿ(ಶಿಡುಗು. ೩೯); ನಮ್ಮ ಕಂಪೂ ಕೂಡಿತು ಅಂದ್ರ ನಾ ಮತ್ತ ಆ ಮಾತು ತಗೀತೇಣಿ (ಮಿಂಚಿಹು. ೯೦).
[← ಮರಾ. ಹಿಂ. ಕಂಪೂ = ಸೈನಿಕ ಪಾಳ್ಯ, ಶಿಬಿರ. / ಇಂ. camp]

**ಕಂಪೂರಕುಲ** (ನಾ). ಒಂದು ವಂಶದ ಹೆಸರು : ಕಂಪೂರಕುಲನ್ ಮಾರಿಕೇಸಿ ಲಿಖಿತಂ (ಎಕ. IV, ಎಡತೊ. ೬೦–೮೧; 890). [?]

**ಕಂಪೆ** (ನಾ).(ತಲೆಯ ಮೇಲಿನ ಅಥವಾ ಹೆಗಲ ಮೇಲಿನ)ಮಡಕೆಯ ಹೊರೆ: ಕುಂಬಾರರ ಕಂಪೆಗೆ ಮಡಕೆ ೧ (ಸೌಇಇ. XX, ೨೪೪–೧೧; 12ನೆಯ ಶತ); ಕಂಪೆಗೆ ಮಡಿಕೆ ಒಂದು (ಮುಂಬರಾ. X, ೨೨೭–೬೫; 1205). [?]

**ಕಂಪೇಱು** (ಕ್ರಿ). ಪರಿಮಳವನ್ನು ಹೊಂದು : ನವ್ಯಪ್ರಸೂನ ರಸೋದ್ಧೃತ್ ಪರಿರಂಭದಿಂದೆ ಪಿರಿದುಂ ಕಂಪೇಱೆ (ಕುಸುಮಾ. ೭–೮೫).
[ಕಂಪು + ಏಱು$_1$ (< ಏಱ್$_1$)]

**ಕಂಪೊಗೆ** (ಕ್ರಿ). ಪರಿಮಳವನ್ನು ಸೂಸು; ಸುಗಂಧವನ್ನು ಬೀರು : ತ್ಯಾಗವನ್ನು ಬಿತ್ತಿ ಬೆಳೆದಂಥ ಗೊಮ್ಮಟ ನಿಲವು ರಸಿಕತೆಯ ಕಂಪೊಗೆವ ಚೆಂಗುಲಾಬಿ (ನೆಲಮು. ೫೦). [ಕಂಪು + ಒಗೆ$_1$]

**ಕಂಪೊರೆ** (ಕ್ರಿ). = ಕಂಪೊಗೆ : ಕಣ್ದೆರೆಯ ಕದಲಿಸದೆ ನುಣ್ಪೊಗರ ತಿಮಿರಿದಳ್ ಕಣ್ಗಳೊಳ್ಪಂ ತುಂಬಿ ಕಂಪೊರೆಯುತಿಹಳು (ಕಾಲೂರ. ೩೩–೩೧). [ಕಂಪು + ಒರೆ$_3$ (< ಒಱೆ$_1$)]

**ಕಂಪ್ರ** (ಗು). ೧. ನಡುಗುವ. ೨. ಚಲಿಸುವ; ಚಂಚಲವಾದ. [ಸಂ.]

**ಕಂಬ$_1$** 'ಕಂಭ' ನೋ.

**ಕಂಬ$_2$** (ನಾ). ಒಂದು ಜಾತಿ : ಬೇವಂದಿಯ ಕಂಬರು ಗಾಣವನು ಯವಲದವರು (ಸೌಇಇ. IX–i, ೩೬೧–೫; 1340). [?]

**ಕಂಬ$_3$** (ನಾ). ಒಂದು ಜಾತಿಯ ಮರ : ಪುತ್ರಜೀವಿ, ಹೆಸ್ಸರೆ, ವುಬ್ಬಿನ, ಕಂಬದಮರ (ಮೈಔಗಿ. ೩೩–೧೨೮೫). [?]

**ಕಂಬಗಟ್ಟು** 'ಕಂಭಗಟ್ಟು' ನೋ.

**ಕಂಬಚ್ಚಿ** 'ಕಂಬಿಯಚ್ಚು' ನೋ.

**ಕಂಬಚ್ಚು** 'ಕಂಬಿಯಚ್ಚು' ನೋ.

**ಕಂಬಚ್ಚುಗಜ್ಜ** (ನಾ). ಕಂಬಚ್ಚಿನ ಕೆಲಸ; ಕಂಬಚ್ಚಿನಲ್ಲಿ ಸರಿಗೆಯನ್ನು ಎಳೆಯುವ ಕೆಲಸ : ಬಿರುವಾತು ಬಗೆಯನಿರ್ಕುಳಿಗೊಂಡು ಕಣ್ಮುಚ್ಚಿ ಕಂಬಚ್ಚುಗಜ್ಜದಿಂ ನಿಡುಸುಯ್ಲು ನೀಳ್ದೆಳೆದು ಮೆಯ್ವಣ್ಣ ಗೆಡಿಸಿತ್ತು (ಸಂಸಪ. ೨೫–೬).
[ಕಂಬಚ್ಚು (< ಕಂಬಿಯಚ್ಚು) + ಕಜ್ಜ]

**ಕಂಬನಿ** 'ಕಣ್ಬನಿ' ನೋ.

**ಕಂಬನಿಗಱೆ** (ಕ್ರಿ). ಕಣ್ಣೀರನ್ನು ಸುರಿಸು : ಪುತ್ರನ ಸಲಹಲೊ ಬೇಡವೊ ಹೇಳೆಂದತ್ತಳು ಕಂಬನಿಗಱೆದು (ನೋಹತ. ೧೧–೫೨); ಅಲ್ಲಿರ್ದ ಪಕ್ಷಿಮೃಗಜಂತುಗಳ್ ಧರಣಿಸುತೆಯಂ ಬಳಸಿ ನಿಂದು ಮೈಯುಡುಗಿ ಜೋಲ್ದಿರದೆ ಕಂಬನಿಗಱೆದು ನಿಜವೈರಮಂ ಮಱೆದು (ಜೈಮಿಭಾ. ೧೯–೩೨). [ಕಂಬನಿ (< ಕಣ್ಬನಿ) + ಕಱೆ$_1$]

**ಕಂಬನಿಗಿಡಿ** (ನಾ). ಕಣ್ಣೀರಿನ ಕಿಡಿ, —ಬೆಂಕಿ : ಕಣ್ಗಳಿಂದುಗುತರ್ಪ ಕಂಬನಿಗಿಡಿಗಳಿಂದುರುಪುವಂತವನಂ ನೀಡುಂ ನೋಡುತ್ತ (ಕಾದಂಉ. ೫೭೨). [ಕಂಬನಿ (< ಕಣ್ಬನಿ) + ಕಿಡಿ$_1$]

**ಕಂಬನಿದುಂಬು** (ಕ್ರಿ). ಕಣ್ಣೀರು ತುಂಬು; ಕಣ್ಣೀರು ಉಕ್ಕಿಬರು : ಕಂಗೆಟ್ಟವೈಯಿಲೆ ಕಂದ ಹಾಯೆಂದೊಟ್ಟವೊಜಲಿದಳಬಲೆ ಕಂಬನಿದುಂಬಿ [ಪಾಠಾಂ. ದುಳುಕಿ] ಪೌರಜನ (ತೊರರಾ. ೨–೩–೫೭); ಪರಮಸುಖವಿಹ ಸತಿಗೆ ವಿಧಿಯಿದು ಹರಹರಾಯೆನುತರಸ ಕಂಬನಿದುಂಬಿದನು ಮಱುಗಿ (ನಳಚ. ೫–೧೫); ಮಱುಗಿ ಕಂಬನಿದುಂಬಿ ಮಾಡಿದ ವಿಘಾತಿಯಂ ಮಱೆದು ಸುತನಂ ಕೂಡಿಕೊಂಡು (ಜೈಮಿಭಾ. ೩೨–೫೭).
[ಕಂಬನಿ (< ಕಣ್ಬನಿ) + ತುಂಬು$_1$]

**ಕಂಬನಿದುಳುಕು** (ಕ್ರಿ). = ಕಂಬನಿದುಂಬು : ಕಂದ ಬಾಯೆಂದು ಸೆಳೆದು ಬಿಗಿಯಪ್ಪಿದನು ಕಂಬನಿದುಳುಕಿದನು (ಕುವ್ಯಾಅ. ೮–೬೧); ಕಂಬನಿದುಳುಕುತಮರರ ಚಕ್ರಿ ಸರಿದನು ತನ್ನ ಪಟ್ಟಣಕೆ (ತೊರರಾ. ೪–೪–೭೦).
[ಕಂಬನಿ (< ಕಣ್ಬನಿ) + ತುಳುಕು$_1$ (< ತುಳುಂಕು$_1$)]

**ಕಂಬನಿದುಱುಗು** (ಕ್ರಿ). = ಕಂಬನಿದುಂಬು : ಕೊರಳ ಸೆರೆ ಹಿಗ್ಗಿದವು ಕಂಬನಿದುಱುಗಿದವು (ಕುವ್ಯಾದ್ರೋ. ೮–೭).
[ಕಂಬನಿ (< ಕಣ್ಬನಿ) + ತುಱುಗು (< ತುಱುಂಕು)]

**ಕಂಬನಿದೊಡೆ** (ಕ್ರಿ). ಕಣ್ಣೀರನ್ನು ಒರಸು : ಕಂಬನಿದೊಡೆದು ಕಾಂತೆ[ತಿ]ಯ ತಾಳ್ದ ಮುಖಚಂದ್ರಬಿಂಬವ ಚುಬುಕಾಗ್ರವಿಡಿದು (ಮೋಹತ. ೩೩–೪೯); ಮಗಳೆಂದ ಮಾತಿಗೆ ಕರಗಿ ಕಂಬನಿದೊಡೆದು [ಪಾಠಾಂ. ಯುಗಲು] (ನಳಚ. ೮–೮); ಬಿಗಿಯಪ್ಪಿ ಕಂಬನಿದೊಡೆದು . . . ಲಾಲಿಸಿದಂ ಕುಳಿಂದಕಂ (ಜೈಮಿಭಾ. ೨೮–೫೫).
[ಕಂಬನಿ (< ಕಣ್ಬನಿ) + ತೊಡೆ$_1$]

**ಕಂಬನಿಯೊರೆ** (ಕ್ರಿ). ಕಣ್ಣೀರನ್ನು ಸುರಿಸು : (ಅಸಹಾಯೆಯಾಗಿ, ಎದ್ದು, ಕಣ್ಣೀರವನನ್ನೇ ಈಕ್ಷಿಸುತ್ತಿದ್ದು, ಕಂಬನಿಯೊರತು, ಅವನತ ವಕ್ತ್ರೆಯಾಗುವಳು) (ಬಿಟ್ಟಅ. ೨೭–೨೪).
[ಕಂಬನಿ (< ಕಣ್ಬನಿ) + ಒರೆ$_3$ (< ಒಱೆ$_1$)]

**ಕಂಬಪೂಜೆ** 'ಕಂಭಪೂಜೆ' ನೋ.

**ಕಂಬಯ್ಯ** (ನಾ). ಒಬ್ಬಾತನ ಹೆಸರು : ಮಹಾರಾಜರಾ ಮಗನ್ದಿರ್ ರಣಾವಳೋಕ ಶ್ರೀ ಕಮುಯ್ಯನ್ ಪೃಥುವೀರಾಜ್ಯಂಗೆಯೆ (ಎಕ. II, ೩೫–೩; 800); ಕಂಬಯ್ಯಂ ಪೆರ್ಗ್ಗಡೆಯಾಗೆ . . . ಕೆಱೆಯಂಮ್ಮಾಡಿಸಿ (ಎಕ. VIII, ಸಾಗರ. ೧೦೦–೫; 986). [ಕಂಬ$_0$ + ಅಯ್ಯ$_1$]

**ಕಂಬರಾಜಗೀರೆ** 'ಕಂಭರಾಜಗೀರೆ' ನೋ.

**ಕಂಬರ್ತಿ** (ನಾ). ನಷ್ಟವನ್ನು ತುಂಬಿ ಕೊಡುವಿಕೆ (ಕ).
[ಕಮ್ $_0$ + ಬರ್ತಿ (< ಭರ್ತಿ). ℙ ಅರ. ಪಾರ. ಹಿಂ. ಮರಾ. ಕಮ್ = ಸ್ವಲ್ಪ, ಕಡಮೆ]

**ಕಂಬಲ**, ಕಂಬಳ$_6$ (ನಾ). ೧. ಕಂಬಳಿ ; ಜಾಡಿ : ಕರ್ಪುರಚ್ಛವಿದೇಹ ಕುರ್ಪಸಂ ಕಂಬಲದಿ ಸರ್ಪನ ಶಿರೋವೇಷ್ಟಿ (ಲಿಂಗಪು. ೧೫–೩೨). ೨. ದನಗಳ ಗಂಗೆದೊಗಲು. ೩. ಒಂದು ಜಾತಿಯ ಜಿಂಕೆ. ೪. ಉಣ್ಣೆಯ ಉತ್ತರೀಯ; ಶಲ್ಯ. ೫. ಗೋಡೆ. ೬. ಒಂದು ಬಗೆಯ ಚಿಕ್ಕ ಹುಳು. ೭. ಸರ್ಪರಾಜನ ಹೆಸರು. ೮. ಆನೆಯ ಹೊದಿಕೆ. ೯. ನೀರು. **ಕಂಬಳ$_6$** : ೧. "ಅವಿಕಃ ... ಕಂಬಳಃ – ಈ ೫ ಕಂಬಳಿ" (ಹಲಾಯು. ೯೦–೩೯೭) ; ವರಚಿತ್ರ ಕಂಬಳದ ಗದ್ದುಗೆಯೊಳಂ ತೈಲವೆರಸಿದಭ್ಯಂಗನಸ್ನಾನವಂ ಮಾಡಿಸಿಯೆ (ಲಕಿಚಂ. ೪೪–೩) ; ಜರತಾರದಿಂ ಕರೆಯ ಕಟ್ಟಿರ್ದ ಪೊಸ ಕರಿಯ ಕಂಬಳವ ಪೊದ್ದು (ಚೋರಬ. ೪–೭). ೨. ಜಲಮಂ ಕುಡಿದಾಡುವ ಸಂಚಲಗಳ ಕಂಬಳದ ಸೆಳೆಯ ಕೊಂಬಿನ ಬಲ್ಗೆಚ್ಚಲದ ಪಲತೆಱದ ಬಣ್ಣದ ಎಳದುಱ[ಱು]ಗಳ ಬಳಗ ಮೆಸೆದುದಾ ಪೊಳಲಮುಳಲೊಳ್ (ಕವಿಚ. III, ೨೧೯ ಸರಸ್ವತೀಪ್ರಬಂಧ). ೧೦. ಎತ್ತಿನ ಬಂಡಿ : "ಗಂತ್ರಿಯೆಂದೆನಲ್ ಕಂಬಳಂ" (ಮಂಗರಾ. ೮೪–೨೩). ೧೧. ಶಿವನು ಕರ್ಣಕುಂಡಲವಾಗಿ ಧರಿಸಿರುವ ಸರ್ಪಗಳಲ್ಲೊಂದು : ಕರ್ಣ ಧೃತ ಕಂಬಳಾಶ್ವತರ ಸರಸ ಸಂಗೀತಾಕರ್ಣನ ಕೌತುಕಾಂತರಂಗ (ರಾಜಶೇ. ೧೩–೫೪ ವ). ℙ ಕಂಬಳ ಮತ್ತು ಅಶ್ವತರ ಎಂಬಿವೆರಡು ಸರ್ಪಗಳು ಶಿವನ ಕರ್ಣಾಭರಣವಾಗಿದ್ದು ಸಾಮಗಾನ ಮಾಡುತ್ತಿರುತ್ತವೆ. [ಸಂ.]

**ಕಂಬಲವಾಹ್ಯ** (ನಾ). ಕಂಬಳಿ ಹೊದಿಸಿದ ಎತ್ತಿನ ಬಂಡಿ ; ಕಂಬಳಿ ಹೊದಿಸಿರುವ ಸವಾರಿಯ ಬಂಡಿ. [ಕಂಬಲ + ವಾಹ್ಯ]

**ಕಂಬಲಾಸನ**, ಕಂಬಳಾಸನ (ನಾ). ೧. ಕಂಬಳಿ ಹಾಸಿದ ಪೀಠ (ಕ). **ಕಂಬಳಾಸನ** : ೨. ಜಿಂಕೆಯ ಚರ್ಮ ಹಾಸಿದ ಪೀಠ : ಕಂಬಳಾಸನ ಸರ್ವಸುಖಕರ ತುಂಬು ವ್ಯಾಘ್ರಾಸನದಿ ಮೋಕ್ಷವು (ಗಗತಾ. ೪–೨೪) ; ಅವನೆದುರಿಗೆ ಕಂಬಳಾಸನದಲ್ಲಿ ದುರ್ಗಾದಾಸನು ಕುಳಿತಿದ್ದಾನೆ (ಕೋಹಿನೂ. ೯೭). [ಕಂಬಲ + ಆಸನ]

**ಕಂಬಲಿ** (ನಾ). ೧. ಕಂಬಳಿಯಿಂದ ಹೊದಿಸಿದುದು, —ಮುಚ್ಚಿದುದು. ೨. ಎತ್ತು. [< ಸಂ. ಕಂಬಲಿನ್]

**ಕಂಬಲಿವಾಹ್ಯಕ** (ನಾ). = ಕಂಬಲವಾಹ್ಯ. [ಕಂಬಲಿ + ವಾಹ್ಯಕ]

**ಕಂಬವಲಿ** 'ಕಂಭವಲಿ' ನೋ.

**ಕಂಬಶಾಸ್ತ್ರ** (ನಾ). (ಬೆಸ್ತರಲ್ಲಿ) ಮದುಮಕ್ಕಳು ಗೊತ್ತಾದ ಕಂಬಗಳ ಪೂಜೆ ಮಾಡಿ, ಅವುಗಳೆದುರಿಗೆ ಅನ್ನದ ನೈವೇದ್ಯವನ್ನು ಇಡುವ ಸಂಪ್ರದಾಯ (ಎಸಮ್ಮೈ. IV, ೬). [ಕಂಬ$_1$ (< ಕಂಭ) + ಶಾಸ್ತ್ರ]

**ಕಂಬಳ$_1$** (ನಾ). ಹೊಲ ; ಗದ್ದೆ (?) : ತಾಯೂರ ಪಱಿಕೆಱಿ ಬಸವಯ್ಯ ತನ್ನ ಪರ ಏರಿಯ ಜೋಳದ ಕೆಯ್ಯ ಪಱಿ ಕಮ್ಬಳದೆಡಕೆಯ್ಯಿಸಿ ಮಾರಗವುಣ್ಡ ಸನ್ತಿಗವುಣ್ಡಗಂ (ಎಕ. III, ನಂಜನ. ೯೭–೬ ; 898) ; ಎಟ್ಟಿದಿಮ್ಬುರ್ಗ್ಗ ಎಳಚಾಗಪಳ್ಳಿಯ ಮಾರಯ್ಯ ತಪೆಱಿಕೆಱಿ ಬಸವಯ್ಯ ಕಮ್ಬಳದೊಳೆ ಮೆಚ್ಚಿಕೊಟ್ಟ (ಎಕ. III, ನಂಜನ. ೯೮–೪ ; 898) ; ಪಾರ್ಶ್ವನಾಥ ಸ್ವಾಮಿಯ ಅಮೃತಪಡಿಗೆ ಮಲ್ಲಿಲದ ಕಂಬಳದಲ್ಲಿ ಅಕ್ಕಿಮುಡಿ ೩೦ (ಇಆ. V, ೪೨–೩ ; 1587). [?. / ತಮಿ. ಕಮ್ಬಲೈ ; ತುಳು. ಕಂಬಳೊ]

**ಕಂಬಳ$_2$** (ನಾ). ಒಂದು ವಾದ್ಯವಿಶೇಷ : ಕರಿಕಾಲ ಚೋಳಾನ್ವಯ ಪವಿತ್ರ ಕಂಬಳ ಘೋಷಣ ಮಣ್ಡಳಿಕ ಭೂಷಣಂ ರಾಜಮಾನ್ಧಾತಂ (ಸೌಇಇ. IX–i, ೧೫೨–೮ ; 1082). 'ಕಂಬಳಪಱಿ' ಪರಾ. [ದೇ. ‖ ತಮಿ. ಕಮ್ಬಲಿ = ಒಂದು ಬಗೆಯ ಹರೆ, ನಗಾರಿ]

**ಕಂಬಳ$_3$** (ನಾ). ದಿನಗೂಲಿ ; ಒಂದು ದಿನದ ಕೆಲಸಕ್ಕಾಗಿ ಕೊಡುವ ಕೂಲಿ : ಕಂಬಳಕ್ಕೆ ಹೋಗಿ ಕನಕದ ಕೊಡನ ಕಂಡಂತೆ ಮರ್ತ್ಯಲೋಕಕ್ಕೆ ಬಂದು ಮಾನವಜನ್ಮವ ಕಂಡೆ (ಘನವ. ೧೪) ; ಮುಂದಕ್ಕೆ ಕೂಲಿ ಕಂಬಳ ಸೇವಕಾವೃತ್ತಿಯಿಂದಾದೊಡಂ ಪರದುಗೆಯ್ವುದಕೆ ಪೌಳ್ಯಮಂ ಹಡೆಯದೊಡೆ ಕಾರ್ಯಮಹುದೇ (ಸಮ್ಯಕೌ. ೧೧–೮). [?]

**ಕಂಬಳ$_4$**, ಕಂಬುಳ (ನಾ). ೧. ಕೆಸರಗದ್ದೆಯಲ್ಲಿ ಕೋಣಗಳನ್ನು ಓಡಿಸುವ ಸ್ಪರ್ಧೆ : ಕಂಬಳ ಎಂದರೆ ಕೋಣಗಳನ್ನು ಓಡಿಸುವ ಸ್ಪರ್ಧೆ. ಅದು ನಡೆಯುವುದು ನೀರಿರುವ ಗದ್ದೆಗಳಲ್ಲಿ (ಕಪಪು. ೫–೨೬) ; ತುಂಬಿ ಕೊಪ್ಪದ ಸುಗ್ಗಿ ಗದ್ದೆಯ ಕಂಬಳ ಎಂದರೆ ಭಾರೀ ಮನರಂಜನೆಯ ಕಂಬಳ (ದೇವಹಂ. ೧೧೦) ; ನಾಯಿಯ ತರಲೇಕೆ ಕೋಳಿಯ ಅಂಕಕೆ ಮೇಕೆ ತಾನೇಕೆ ಕಂಬಳಕೆ (ಇಂಚಾಪ. ೨೦೦–೯೦). ೨. ಒಕ್ಕಲುತನದ ಆರಂಭದ ಉತ್ಸವ : ಉಳುವ ಆರಂಭದಲ್ಲಿ ಕಂಬಳ ಎಂಬ ಹಬ್ಬವಿದೆ (ಜಾನಗೀ. ೬೫) ; ಆ ದಿನ ನೆಲ್ಲುಹಳ್ಳಿಯ ಪೆದ್ದೇಗೌಡರ ಮನೆಯಲ್ಲಿ ಕಂಬಳವಾಗಿತ್ತು (ಕಾನೂರು. ೫೬೫). **ಕಂಬುಳ** : ೧. ವರ್ಷವರ್ಷವೂ ಬರುವ ಅನಿಲಜೆ ಬೈಲಿನ ಕಂಬುಳದ ಉತ್ಸವವು ಸಮೀಪಿಸಿತು (ಕೋಟಚೆ. ೮); "ಪಂತಕ್ಕಾಗಿ ಕೋಣಗಳನ್ನು ಓಡಿಸುವುದಕ್ಕೆ ಪ್ರತ್ಯೇಕವಾಗಿ ಏರ್ಪಡಿಸಿದ ಹೊಲ" (ಕೋಟಚೆ. ಕೋಶ). [?]

**ಕಂಬಳ$_5$** 'ಕಂಬಲ' ನೋ.

**ಕಂಬಳಗದ್ದೆ** (ನಾ). ಒಂದು ಬಗೆಯ ದೊಡ್ಡಗದ್ದೆ ; ಸೇವೆಗಾಗಿ ಕೊಟ್ಟ ಗದ್ದೆ ; ದಿನಗೂಲಿಗಾಗಿ ಬಿಟ್ಟ ಗದ್ದೆ (?) : ಅವರಿಂಗೆ ಬಿಟ್ಟ ಬಾಳು ಕಂಬಳಗದ್ದೆ ಕುಸಿಯ ತರದ ಗದೆಗಳು ೫ (ಸೌಇಇ. IX–ii, ೪೭೦–೪೬ ; 1482) ; ಹಣವಿನ ಬಡಿಯನು ಯಂಣ್ನ ಕಂಬಳಗದೆ[ದ್ದೆ] ಯಿಂದ ನಡಸಿ ಬಾಹೆನು (ಮೈಆರಿ. ೧೯೪೩, ೫೪–೩೬ ; 1673) ; ಶ್ಯಾನೆ ಮೂಡವತ್ತು ಬಲಗೈ ಕಂಬಳಗದ್ದೆ (ಎಕ. III, ತಿರುಮ. ೬೩–೫೧೯ ; 1748). [ಕಂಬಳ ? + ಗದ್ದೆ (< ಗಟ್ಟಿ)]

**ಕಂಬಳಗಾರ** (ನಾ). ಕೂಲಿಕಾರ; ಕೂಲಿ ಮಾಡುವವನು : ಜೀತಗಾರರು ಕಂಬಳಗಾರರ ಸುಂಕವೊಳವಾ ಎ ಸುಙ್ಕಕ್ಕೆ ಸಲುವ ಆ ಸಕಲ ಪೈರು (ಎಕ. III, ಶ್ರೀರಂಗ. ೧೦೦–೧೬೬ ; 1724). [ಕಂಬಳ$_3$ + –ಗಾರ (< –ಕಾಱ)]

**ಕಂಬಳತೀರ್ಥ** (ನಾ). ಒಂದು ಕ್ಷೇತ್ರದ ಹೆಸರು : ಕುಱಿವಡವಂ ಪೊದೆವರುಮಾದೊರಲ್ಲಿಂದಿತ್ತ ಕಂಬಳ[ಪಾಠಾಂ. ೪, ೮]ತೀರ್ಥಮೆಂಬುದಾದುದು (ವಡ್ಡಾರಾ. ೯೩–೧೯). [ಕಂಬಳ$_6$ (= ಕಂಬಲ) + ತೀರ್ಥ]

**ಕಂಬಳದಾನವರ್ಮ** (ನಾ). ಒಬ್ಬಾತನ ಹೆಸರು : ಮಣ್ಣಿಕಲ್ಲ ಕಮ್ಬಳದಾನವರ್ಮ್ಮ[ರ್ಮ] ಕಡಸಂ ಪೆರ್ಭುಲಿ ಕೊಣ್ಡೊಡೆ ಆ ಪುಲಿಯ ಕೊಲ್ವೆನೆನ್ದು ಪ್ರತಿಜ್ಞೆ ಕಡಿದು ಜಾಮದಿನೊಳಗೆ ಕೊನ್ದಂ (ಎಕ. X, ಮುಳಬಾ. ೧೬೨–೨ ; 950). [ಕಂಬಳ ? + ದಾನವರ್ಮ]

**ಕಂಬಳಪಱಿ** (ನಾ). ಒಂದು ವಾದ್ಯವಿಶೇಷ : ಕಾ[ಸ್ಯಪ]ಕುಳಪವಿತ್ರ ಸುಜನಯ್ಯ[ಮಿತ್ರಂ] ಕಂಬಳಪಱಿ ಘೋಷಣಂ ಮಣ್ಡಳಿಕ ಭೂಷಣಂ (ಸೌಇಇ. IX–i, ೧೪೬–೧೬ ; 1079). 'ಕಂಬಳ$_2$' ಪರಾ. [ಕಂಬಳ$_2$ + ಪಱಿ$_1$]

**ಕಂಬಳವಂತ** (ನಾ). ಹೊಲ, ಗದ್ದೆಗಳನ್ನು ಉಳ್ಳವನು : ಸಂಬಳವಂತರಾಗಿ, 'ಕಂಬಳವಂತ' ರಾಗಲು ಬಯಸಿ, ಸ್ವದೇಶದಲ್ಲಿಯೇ ಸಿದ್ಧ ಸರಕುಗಳಿಗೆ ಪೇಟೆಯನ್ನು ಒದಗಿಸುವರು (ಮಾವಾದ. ೧೪೫). [ಕಂಬಳ$_1$ + –ವಂತ]

**ಕಂಬಳಾಸನ** 'ಕಂಬಲಾಸನ' ನೋ.

ಕಂಬಳಿ, ಕಂಬಟಿ (ನಾ). = ಕಂಬಲ ೧: "ಕಂಬಲಂ ಕಂಬಳಿಯೆ" (ಕವಿಕಂ. ೨೬೧); ಕಂಬಳಿಯಲ್ಲಿ ಕಣಕವ ನಾದಿದಂತೆ ಕಾಣರೇ ಎನ್ನ ಮನ (ಬಸವ. ೨೬೦); ಹಗಲ ಕಂಬಳಿ ಕೈಯ ಕಲ್ಲಿಯೋಗರದಿಂದೆ ... ಪರಿತಂದು (ಬಸರ. ೯-೯೫); ಕಂಬಳಿ ದಟ್ಟಿ ಬೂರವಡವೆಂಬಿವು ಕಾವುವೆ ಶೀತಕಾಲಮಂ (ಸೂಕ್ತಿಸು. ೧೦-೨೬೧); ಕಂಬಳಿಯ ಹೊದೆವವಗೆ ಮಡಿಯೇತಕೆ (ಪುರಂದ. ೨-೬೨-೨); ಕರಿಯ ಕಂಬಳಿಯ ಕುಪ್ಪುಸ ಕುಲ್ಲಾಯಿಕ್ಕಿ ... ಕೊಡಗರ ಪರಿವಾರ ಬಂದುದರ್ತಿಯಲಿ (ಕಂಸವಿ. ೨೦-೬೪). ಕಂಬಟಿ: "ಕ್ಷಳನೊಳಂ ಜಟನುಂಟು . . . ಕಂಬಳಕೆ ಕಂಬಟಿಯೆಂಬ ತೆಜದಿನಹುದದು ಕನ್ನಡಂ" (ಸಂಜೀವ. ೩೧); ಕುಂಬಟಿ, ಬೆಂಬಟಿ, ಕಂಬಟಿ, ಆಗುಟಿ, ಕೊಟಿವಿ (ಶಬ್ದಾನು. ೧೪೦ ವ್ಯಾಖ್ಯಾ).

ಕಂಬಳಿಯಹುಟು = ಮೈಮೇಲೆ ತುಪ್ಪಟವಿರುವ ಒಂದು ಬಗೆಯ ಹುಳು; ಕೋರಿಹುಳು: "ಊರ್ಣಾಯು ಕಂಬಳಿಯಹುಟುವೆನಿಕ್ಕುಂ" (ಮಂಗರಾ. ೪೯-೧೩); ಕಂಬಳಿಯಹುಟುವಿನ ವಿಷಕ್ಕೆ (ಖವುದ. ೧೩-೧೨೦).

[ದೇ. ‖ ತಮಿ. ಕಮ್ಬಳಿ; ಮಲ. ಕಮ್ಬಿಳಿ; ತುಳು. ಕಂಬೊಳಿ; ತೆಲು. ಕಂಬಳಿ. / ಸಂ. ಕಂಬಲ]

ಕಂಬಳಿಕರೀಮರ (ನಾ). ಒಂದು ಜಾತಿಯ ಮರ: ಕಂಬಳಿಕರೀಮರ, ಬೀಡಿಎಲೆಮರ, ತೂಪ್ರ, ತೂಬರಿ (ಮೈಔಗಿ. ೩೧-೬೦೪). [?]

ಕಂಬಳಿಕುರುಬ (ನಾ). ಕಂಬಳಿಗಳನ್ನು ನೆಯ್ಯುವ ಕುರುಬ. [ಕಂಬಳಿ + ಕುರುಬ$_1$ (< ಕುಱುಂಬ$_1$)]

ಕಂಬಳಿಗಿಡ (ನಾ). ಒಂದು ಜಾತಿಯ ಗಿಡ: ಕಂಬಳಿಗಿಡ, ರೇಷ್ಮೆಹಿಪ್ಪಲಿ ಗಿಡ (ಮೈಔಗಿ. ೫೫-೧೧೦೦). [ಕಂಬಳಿ ? + ಗಿಡ (< ಗಿಡು)]

ಕಂಬಳಿಗೊಪ್ಪೆ (ನಾ). ಕಂಬಳಿಯಿಂದ ಮಾಡಿದ ಗೌಸು, —ಮುಸುಕು: ಹಿಡಿದ ಸಂಬಳಿಗೋಲು ಕಂಬಳಿಗೊಪ್ಪೆಯು ಸಡಗರದಿ ಹಜಿಯ ಬಾಜಿಸುತ (ಹರಿಸಾಂ. ೪-೧೩).

[ಕಂಬಳಿ + ಗೊಪ್ಪೆ$_2$ (< ಕೊಪ್ಪೆ)]

ಕಂಬಳಿಗೋಟೆ (ನಾ). ಮೂರು ಮೂಲೆಗಳನ್ನು ಸೇರಿಸಿ ಹೊಲಿದ ಕಂಬಳಿ: ಮೂರು ಹಣಕೊಂದು ಕಂಬಳಿಗೋಟೆ (ಸುಗುಗಂ. ೧೧೭-೫).

[ಕಂಬಳಿ + ಗೋಟೆ]

ಕಂಬಳಿತಿಮಿರ (ನಾ). ಕಂಬಳಿಯಂತಿರುವ ಕತ್ತಲೆ; ಕಗ್ಗತ್ತಲೆ: ಕವಿದ ಕಂಬಳಿತಿಮಿರದಿಂ ಬಿಡುಗಡೆಯ ಪಡೆಯೆ ಮೆಯ್ದ್ ಕೊಡಹಿತುದ ಯಾಚಲಂ (ಶ್ರೀರಾಮಾ. ೬೪೧-೩೧೯). [ಕಂಬಳಿ + ತಿಮಿರ$_2$]

ಕಂಬಳಿಯಳಿಗ (ನಾ). ಒಂದು ಬಗೆಯ ಓತಿ; ಊಸರವಳ್ಳಿ; ಸರಟ" (ಚತುನಿ. ಕಿ. I, ೬೪). [ಕಂಬಳಿ + ಅಳಿಗ]

ಕಂಬಳಿಹುಳು (ನಾ). ಮೈಮೇಲೆ ತುಪ್ಪಟವಿರುವ ಒಂದು ಬಗೆಯ ಹುಳು; ಕೋರಿಹುಳು: "ಕೌಡಿಲ್ಯಃ – ಕಂಬಳಿಹುಳ[ಟು], ತುಂಬಿ, ಸರದಾಳಿ" (ಒಷಧಿ. ೪೨); ಮಳೆಬಿದ್ದು ಕಂಬಳಿಹುಳು ಎದ್ದಿದೆ (ರೂಢಿ).

[ಕಂಬಳಿ + ಹುಳು$_2$ (< ಪುೞು$_1$). / ತಮಿ. ಕಮ್ಬಳಿಪ್ಪುೞು; ಮಲ. ಕಮ್ಬಿಳಿಪ್ಪುೞು; ತುಳು. ಕಂಬೊಳಿಪುರಿ; ತೆಲು. ಕಂಬಳಿಪುರುಗು]

ಕಂಬಱ 'ಕಮ್ಮಱ' ನೋ.

ಕಂಬಟಿ 'ಕಂಬಳಿ' ನೋ.

ಕಂಬಾರ 'ಕಮ್ಮಱ' ನೋ.

ಕಂಬಾರಗಿತ್ತಿ 'ಕಮ್ಮಾರಗಿತ್ತಿ' ನೋ.

ಕಂಬಾರಿಕೆ 'ಕಮ್ಮಱಿಕೆ' ನೋ.

ಕಂಬಾವತಿ 'ಕಂಭವತಿ' ನೋ.

ಕಂಬಾಱ 'ಕಮ್ಮಱ' ನೋ.

ಕಂಬಿ$_1$ (ನಾ). ೧. ಚಿನ್ನ, ಬೆಳ್ಳಿ ಮೊದಲಾದ ಲೋಹಗಳ ತಂತಿ: ಅಕ್ಕಸಾಲೆ ಕಂಬಚ್ಚಿನಿಂದ ಚಿನ್ನದ ಕಂಬಿ ಎಳೆಯುತ್ತಾನೆ (ರೂಢಿ). ೨. ಕುದುರೆಯ ಬಾಯಲ್ಲಿಡುವ ಉಕ್ಕಿನ ತುಂಡು: ಕಂಬಿಯ ಕಡಿಯಣದ ಕೀಲಣದ ಹೋರಟೆಯ ಘಾರಾಘಾರಿಯೊಳ್ ಜೋಳಿಸುವ ಲಾಲಾಜಲಂ ಖುರಹತಿಯಿಂ ನೆಗೆವ ಧೂಳ್ಗೆ ಚಳೆಯಂಗುಡೆ (ಗಿಂಕ. ೬-೫೫ ವ). ೩. ಸೀರೆ ಮೊದಲಾದ ಬಟ್ಟೆಗಳ ಕಲಾಬತ್ತಿನ ಅಂಚು: ಕುಂದದನಂತಪುರಾಣಮನೊಂದಂ ಬರೆಯಿಸಿ ಮುಮುಕ್ಷು ಗೀವುದು ಕೇಳ್ವಾನಂದಿಸುವ ವಿವೇಕಿಗೆ ತೀವಿದ ಚಿತ್ರಂ ಕಂಬಿಕಪ್ಪಡಂ ಮೆಚ್ಚಿವಿನಗಂ (ಅನಂಪು. ೧೦-೮೩); ಬೋರಿಟ್ಟು ಬಂದ ಮಳೆರಾಯ – ರಂಭೆ ನಿನ್ನ ಕಂಬೀಯ ಸೆರಗ ಮರೆಮಾಡೆ (ಹಳ್ಳಿಬಾ. ೩೨). ೪. ಕಬ್ಬಿಣದ ಅಥವಾ ಉಕ್ಕಿನ ಪಟ್ಟಿಕೆ, —ಕೋಲು; ಹಳಿ: ತೆಂಗಿನ ಪೊಸನೆಣಂದಜು ದಿಂಗಳ್ವರಮಡಸಿ ಕಂಬಿಯಿಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಸುತ್ತುಂ ಸಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ಧರ್ಮಾಮೃ. ೨-೯೨); ಬೆಂದ ಹುಣ್ಣು ಕಂಬಿಯಲ್ಲಿ ಕೀಸುವರೆ (ಬಸವ. ೩೧೬); ಸುಧಾರಣೆ ಹಬ್ಬುತ್ತ ಹೋಗುವದು ರೇಲ್ವೆ ಕಂಬಿಗಳ ಗುಂಟ (ಮೇದಿಮು. ೧). ೫. ಮೂಗಿನ ಹೊಳ್ಳೆಗಳ ಮಧ್ಯದ ದಿಂಡು: ಮೊದಲ ಬಾಲದೊಳು ಮೂಗಿನ ಕಂಬಿಯೊಳು [ಪಾಠಾಂ. ಕಂಬನೊಳು] . . . ಸುಳಿ ಪುಟ್ಟೆ ಕಷ್ಟ ಮಕ್ಕುಂ (ಮಂಗರಾ. ೮೩-೧೯). ೬. ಕೋಲು; ಗಳೆ; ಕಾವಲುಗಾರನ ಕೈಯಲ್ಲಿರುವ ವೇತ್ರದಂಡ: ತಱುಬಿದರು ಕಂಬಿಯನಿಕ್ಕಿ ಬಾಗಿಲಲಿ (ಕುವ್ಯಾಅ. ೬-೩೨); ಮುಂದೆ ಕಂಬಿಯ ಕಂಚುಕಿಯರುಲುಹಿಂದೆ ವಿಪ್ರರ ಮಂತ್ರಘೋಷಣೆಯಿಂದ ಬಂದರು ರಾಜಪುತ್ರರು (ತೊರರಾ. ೧-೧೬-೪೨); ಜಡಿವ ಪಡಿಹಾರರುಗ್ಗಡಿಪ ಕಂಬಿಯ ಚರರ ನಡುವೆ ಭಟ್ಟರು (ಸಿಂಗಿರಾ. ೪೧-೧೫); ಬಿಲ್ಲ ಕಂಬಿಯು ಡೊಂಕು, ಬಿಟ್ಟ ಬಾಣವು ಡೊಂಕೆ (ಗಂ. ೩೨-೫). ೭. ಭಾರ ಹೊರಲು ಹೆಗಲ ಮೇಲೆ ಇಟ್ಟುಕೊಳ್ಳುವ ಬಿದಿರ ದಬ್ಬೆ; ಅಡ್ಡೆ: ಜಾಲಮನೊಪ್ಪಿರೆ ಮಾಡ್ಪ ಕಲ್ಲಿಯಂ ಕಾಸಿನ ಕಂಬಿಯಂ ಸಮೆವ ಮಾರ್ಗಣಮಂ ಗಜಿಗಟ್ಟುತಿರ್ಪ . . . ವನೇಚರರು (ಜಗವಿ. ೧೬-೧೬); ಕಾವಡಿಯ ಕಂಬಿಯೊಳ್ ಘನಪಾತ್ರೆಗಳನಿರಿಸಿ (ಒಹಿರ. ಹ. ೨೧೧-೩); ಅಂಬುವನು ತರಲೆಂದು ಪಿತೃಗಳ ಕಂಬಿಯನು ನೇರಿರಿಸಿ (ತೊರರಾ. ೨-೫-೧೧); ಎತ್ತು ಕಂಟಲೆ ಕಂಬಿ ಕಾವಡಿ ಹೊತ್ತ ಹೊರೆ ಹಸುಬೆಗಳ ಶರಣರ ಮೊತ್ತ ಸಾಗಿತು (ಶರಲೀ. ೫೪೦-೫).

ಕಂಬಿಕಟ್ಟು = ಅಂಚುಕಟ್ಟು; ಕರೆಕಟ್ಟು: ಶಾಲಿಗೆ ಕಂಬಿಕಟ್ಟಬೇಕು (ರೂಢಿ). ಕಂಬಿಕೀಳಿಸು = (ಅಲಂ) ಜಾಗಬಿಟ್ಟು ಓಡಿಸು: ನಾಳೆಯೇ ಅವನ ಅಂಗಡಿ ಇಲ್ಲಿಂದ ಕಂಬಿಕೀಳಿಸಿಬಿಡ್ತೇನೆ (ಬಿಂಗಬ. ೧೪೪). ಕಂಬಿಕೀಳು = (ಅಲಂ) ಓಡಿಹೋಗು: ಆ ಪರಿಸ್ಥಿತಿಯಿಂದ ಪಾರಾಗುವ ಒಂದೇ ಒಂದು ದಾರಿಯೆಂದರೆ ಅಲ್ಲಿಂದ ಕಂಬಿಕೀಳುವುದು (ಪುನರು. ೩೦೭); ಶ್ರೋತೃಗಳು ಒಬ್ಬೊಬ್ಬರಾಗಿ ಅಲ್ಲಿಂದ ಕಂಬಿಕಿತ್ತರು (ಚಿಕಸ. ೧೧). ಕಂಬಿಯವ = ಕಾವಲುಗಾರ: ಅಂಕದ ಕಳಕೆ ನಡೆವ ಮಾಸಾಳ್ಗಳ ಕಂಬಿಯವರ ಕರೆಪಕ್ಕಳು ತಳುಮಾಡದೆ ಪೊಜಮಡುವ (ಜಯಕಾ. ೧೨-೧೪).

[ದೇ. ‖ ತಮಿ. ಮಲ. ಕಮ್ಬಿ; ತುಳು. ಕಂಬಿ; ತೆಲು. ಕಮ್ಮಿ, ಕಮ್ಮಿ]

ಕಂಬಿ$_2$ (ನಾ). ೧. ಒಂದು ಪ್ರದೇಶದ ಹೆಸರು (?): ಗ್ರಾಮುಕ್ಕೆ ತೆಂಕಲು ಡೊಗರಕಟ್ಟೆ ಹಳ್ಳದ ಕೆರೆ ಕಂಬೀಹರೆ ತಿಟ್ಟನಲ್ಲು ಬಡಗಮುಖವಾಗಿ ನಟ್ಟ ಕಲ್ಲು (ಎಕ. XIV, ನಂಜನ. ೨೯೫, ಪುಟ ೧೫೦-೫; 1716).

೨. ಉಪ್ಪಿನ ಮೇಲಿನ ಸುಂಕ (?): ಆ ಗ್ರಾಮಕ್ಕೆ ಪೂರ್ವದಲು ಹೊಂಬಳಿ . . . ಬಿಟ್ಟ ಬೀಢಾರ ಸೇಸೆ ಮಠನ ಬಿಟ್ಟ ಜೋಡಿಗ್ರಾಸ ಆ ಗ್ರಾಮದ ತೋಟಗಾರುಕ ಉಪ್ಪಿನಕಾಯ ಕಂಬಿ ನಾಡ ಸರಥಿಯಿಂದ ಬಹಂಥಾ ಮಳಬ್ರಯ ಮುಂತಾಗಿ (ಮೈಆರಿ. ೧೯೪೧, ೩೬-೪೫ ; 1399). ೩. (?): ಅದಜ ಮೇಗಣ ತೋಳ ಆರವೆ ಕಂಬಿ ಸಹಿತವಾಗಿ (ಎಇ. XXVII, ೨೮-೫೧ ; 1256) ; ಆ ಭೂಮಿಗೆ ಬಂದ ತೋಟ ಆರವೆ ಕಂಬಿ ಮನೆ ಸಹಿತವಾಗಿ . . . ಕೊಟ್ಟರು (ಎಇ. XXVII, ೨೮-೬೨ ; 1256).
[?. / ತಮಿ. ಕಮ್ಬಿ = ಪಟ್ಟುಪ್ಪು]

**ಕಂಬಿ₃** (ನಾ). ೧. ಸೌಟು ; ಸಟ್ಟುಗ: "ಕಂಬಿ ತದ್ರು ತಾಂ ದರ್ವಿ ದಾರುಹಸ್ತಕಮೆನಿಪ್ಪುದದು ಖಜಿಕಾಖ್ಯಂ" (ವಸ್ತುಕೋ. ೫೦-೩೩). ೨. ಬಿದಿರಿನ ಗಂಟು. ೩. ಬಿದಿರಿನ ಟಿಸಿಲು. [ಸಂ.]

**ಕಂಬಿಊರನ್** (ನಾ). ಒಬ್ಬಾತನ ಹೆಸರು: ಬರೆದೊನ್ಕಮ್ಬಿಊರನ್ (ಎಕ. X, ಚಿಂತಾಮ. ೧೨೬ (a)-೮ ; 800) ; ಕಮ್ಬಿಊರನ್ ವರೆದನ್ (ಎಕ. X, ಚಿಂತಾಮ. ೧೨೬ (b)-೭ ; 800). [?]

**ಕಂಬಿಕಾತಿ** (ನಾ). ಅರಮನೆಯ ಕಾವಲುಗಾತಿ; ಕಟ್ಟಿಗೆಗಾತಿ; ವೇತ್ರಧಾರಿಣಿ: ಅಚ್ಚಾವಧಾನ ಸಾರ್ಥಂದಳೆಂದಜಿಪಿದಂಬೈಯೊಳ್ ಕಂಬಿಕಾತಿಯರು (ಭರತ. ೪೬-೯೩) ; ಇಕ್ಕೆಲದೊಳಂ ಜಿಯ್ಯ ಪರಾಕೆಂದು ನುಡಿದು ವೃಗ್ಗಡಿಸಹ ಕಂಬಿಕಾತಿಯರುಗಳ ಸಡಗರವನಾರು ಪೇಳುವರೆ (ನವಮೋ. ೪-೩೮). [ಕಂಬಿಕಾಜ + -ತಿ₁ (< -ಇತ್ತಿ)]

**ಕಂಬಿಕಾಜ** (ನಾ). ೧. ಅರಮನೆಯ ಕಾವಲುಗಾರ ; ಕಟ್ಟಿಗೆಗಾರ: ಕಂಬಿಕಾಜಂ ಹೊನ್ನದೇವಂ ನಿಂದಿ ಸಮ್ಮಾರ್ಜನೆಯವಳು ಸಿಟಿಲಾಂಬಕನೆ ಮಾರಯ್ಯನಡುಗಬ್ಬುಗಳೆನಡಕುವನು (ಬಸವ. ೯-೪೧) ; ಕಂಬಿಕಾಜರು ಪಾಯಕರು ಗಾಯಕರು . . . ಮಂಟಪದೊಳು ವಿರಾಜಿಸಿದರು (ಸೌಂದಪು. ೬-೫೭) ; ವಂದಿಗಳ ನುಣ್ಣರದ ಕವಿಗಳ ಕೊಂಡಾಟದ ಕಂಬಿಕಾಜರ ರವಮೊಪ್ಪಿತಾ ಸಮಯದೊಳು (ಶ್ರೀಪಾಲ. ೧೦-೬೪). ೨. ಅಡ್ಡೆ ಹೊರುವವನು: ಬಾಹತ್ತರ ನಿಯೋಗಿಗಳ ಗುಗ್ಗುಳದ ಕಂಬಿಕಾಜರ ಮಹಾ ಮಾಹೇಶ್ವರರ ಹೊಗಳ್ವ ಜನಂಗಳಂ ವಂದಿಗುಡುತ (ಓಹರ. ಹ. ೨೦೮-೧೫). [ಕಂಬಿ₁ + -ಕಾಜ]

**ಕಂಬಿಗ₁** (ನಾ). ಬಾಗಿಲು ಕಾಯುವವನು; ದ್ವಾರಪಾಲಕ; "ಪಡಿಯಜ" (ಚತುನಿ. ತಿ. I, ೧೩): ಸೂಳಾಯ್ತರು ; ಕಂಬಿಗರು ; ವಂದಿಮಾಗಧರು (ಮಂತ್ರಶ. ೭-೧೫); ಓಲಗದ ಗುರಿಕಾರರು, ಕಂಬಿಗರು, ಬಂದಬಂದವರನ್ನು ಆಸನಗಳವರೆಗೆ ಕರೆದೊಯ್ದು ಕುಳ್ಳಿರಿಸುತ್ತಿದ್ದರು (ಸವತಿ. ೯೭). [ಕಂಬಿ₁ + -ಗ₃]

**ಕಂಬಿಗ₂** (ನಾ). ೧. ನೀಚ ಮನುಷ್ಯ; ಅಯೋಗ್ಯ ಮನುಷ್ಯ. ೨. ಭಿಕಾರಿ: "ಕಂಬಿಗ – ಕಂಬುಕ = ಬಿಕಾರಿ" (ತದ್ಭವಕೋ. ೬). [< ಸಂ. ಕಂಬುಕ]

**ಕಂಬಿಗಟ್ಟಿಸು** (ಕ್ರಿ). ಕಂಬಿಯಿಂದ ಬಿಗಿಸು; ತಂತಿಯಿಂದ ಬಿಗಿಸು: ತುಂಬಿ ನೂಜಾಜು ಪೆಟ್ಟಿಗೆ ದುಗುಲವ ಮುಂದೆ ಕಂಬಿಗಟ್ಟಿಸಿ ಕಳುಹಿದನು (ಭರಚ. ೧೯-೧೩೯). [ಕಂಬಿ₁ + ಕಟ್ಟಿಸು]

**ಕಂಬಿಡು** (ಕ್ರಿ). ಸರಳು, ಸಲಾಕೆಯನ್ನು ಇಡು: ನಂಬಿಸಿ ಖಳನಂ ಸಜ್ಜನನೆಂಬುದನೆನಿಸಿದೊಡಮೇನೊ ಸ್ಯೆತಾದಪನೇ ಕಂಬಿಟ್ಟು ನಾಯ ಬಾಲವನಿಂಬಿಂ ಕಟ್ಟಿದೊಡೆ ಸ್ಯೆತದೇನಾದಪುದೇ (ಸೂಕ್ತಿಸು. ೧-೪೨). [ಕಂಬಿ₁ + ಇಡು₁]

**ಕಂಬಿಪಂಚೆ** (ನಾ). ಜರತಾರಿ ಅಂಚಿರುವ ಪಂಚೆ, —ದೋತರ: ಇಬ್ಬರೂ ಬರಿ ಮೈಯಲ್ಲಿದ್ದರು. ಕಂಬಿಪಂಚೆ ಮಾತ್ರ ಉಟ್ಟಿದ್ದರು (ಚಂಗಾಳ್ಯ. ೪೬). [ಕಂಬಿ₁ + ಪಂಚೆ]

**ಕಂಬಿಪೇಟ** (ನಾ). ಜರತಾರಿ ಅಂಚಿರುವ ರುಮಾಲು: ರಾಯರು ತಲೆಗೆ ಭರ್ಜರಿಯಾದ ಕಂಬಿಪೇಟ ಸುತ್ತಿದ್ದರು (ರೂಢಿ). [ಕಂಬಿ₁ + ಪೇಟ₂]

**ಕಂಬಿಯಚ್ಚು**, ಕಂಬಚ್ಚಿ, ಕಂಬಚ್ಚು (ನಾ). ತಂತಿಗಳನ್ನು ಎಳೆದು ಉದ್ದಮಾಡಲು ಬಳಸುವ ರಂಧ್ರಗಳುಳ್ಳ ಲೋಹದ ಫಲಕ, —ಪಟ್ಟಿ: ಇದೆ ಯೋಣಿ ಕಂಬಿಯಚ್ಚಿನ ಸರಿಗೆಯಾವಿನ್ನು (ಸಾನಂಚ. ೪-೭೭ ರಗಳೆ) ; ಬಿಸಿಗದಿರ್ವ ಟ್ಟಿಂಬ ಕಂಬಿಯಚ್ಚಿಂ ಕಾಲವೆಸ ಕನಕಪ್ರಭೆಯ ಹೊಸ ಹೊನ್ನ ಸರಿಗೆದೆಗೆವ ಸುತ್ತುಗಂಭದೊಂದೆಸಕವಾಯಿತು (ಪ್ರಭಂಜ. ೧-೫೧). **ಕಂಬಚ್ಚಿ**: ಸಿರಿ ಎಂಬ ಕಂಬಚ್ಚಿಯಿಂದಜ ಮನದಂದು ವರನೀಲ ಸಣ್ಣ ಸರಿಗೆಯ (ಜ್ಞಾನಚ. ೨-೭). **ಕಂಬಚ್ಚು**: ಅನಿತುಂ ತಂತ್ರಿಗಳಿಂದಮೊಂದೆ ದನಿಯಿಯುಣ್ಮತ್ತೆಂಬಿನಂ ಕೂಡೆ ನುಣ್ಣನೆ ಕಂಬಚ್ಚಿನೊಳೀಚ್ಚ ಪೊಂಜರಿಗೆಯಂ ಪೋಲ್ಪುಂ ಶ್ರುತಿಸ್ಫೂರ್ತಿ (ಚಿಕವಿ. ೪-೧೧೩) ; ಕರ್ತಾರನ ಕಂಬ[ಪಾಠಾಂ. ಬೆ]ಚ್ಚಿನಲ್ಲಿ ಚಿನ್ನದ ಸಲಾಕೆಯ ತೆಗೆವಂತೆ (ಅಖಂಡೇ. ೯-೭) ; ಇರ್ಕುಟಿಯ ತಂಡಸದ ಕರ್ತರಿಯ ಸುತ್ತಿಗೆಯ ಕೈವಾರದ ಕಂಬಚ್ಚಿನ . . . ಸೊನ್ನೆಗಾಜರ ಸಾಲೆಯಿಂ (ರಾಮಾಶ್ವ. ೧೦೩-೨೦).
[ಕಂಬಿ₁ + ಅಚ್ಚು₃. / ತಮಿ. ಮಲ. ಕಮ್ಬಿಯಚ್ಚು ; ತುಳು. ಕಂಬೆಚಿ, ಕಂಬೆಚ್ಚಿ ; ತೆಲು. ಕಮ್ಮಚ್ಚು]

**ಕಂಬಿವಡ್ಡ** (ನಾ). ಒಂದು ಪ್ರದೇಶದ ಹೆಸರು(?): ಸಿದ್ಧೇಶ್ವರಗೆಯ್ಯ ಮೂಡಣ ಕಂಬಿವಡ್ಡದೊಳ್ ಅಲ್ಲೇಶ್ವರಗೆಯ್ಯದಜ ಮೂಡಣ ಕಂಬಿವಡ್ಡದೊಳ್ ನೂಜು ಮತ್ತರ್ ಕೆಯ್ಯಂ (ಎಇ. XVI, ೨೯-೨೮ ; 1010). [?]

**ಕಂಬಿವಾರು** (ಅ). ಅಂಚುಗುಂಟ ; ದಂಡೆಗುಂಟ ; ಅಂಚುಹಿಡಿದು: ಮೂಡಲು ಕಂಬಿವಾರು ಬಂದಹಾಗೆ ನೆಲನಂಚು ನೀರೇರ ಕಲಲಿ ನೆಟ್ಟ ಲಿಂಗಮುದ್ರೆಕಲು ಗಡಿ . . . ಪಡುವಲು ಕಂಬಿವಾರು ಬಂದಹಾಗೆ ನೆಲನಂಚು ನೀರೇರ ಕಲಲಿ ನೆಟ ಲಿಂಗಮುದ್ರೆಕಲು ಗಡಿ ಬಡಗಲು ಭೀಮಣನ ತೋಟದ ಗಡಿಯಲಿ ಕಂಬಿವಾರು ಬಂದಹಾಗೆ ನೆಟ ಲಿಂಗಮುದ್ರೆಕಲು ಗಡಿ (ಎಕ. VIII, ತೀರ್ಥಹ. ೫೧-೩೩ ; 1630). [ಕಂಬಿ₁ + ವಾರು₃]

**ಕಂಬಿವಿಲ್** (ನಾ). ಬಿದಿರಿನ ಬಿಲ್ಲು(?): ಎಡಗೈಯೊಳ್ ಕಂಬಿವಿಲ್ ದಕ್ಷಿಣ ಕರತಲದೊಳ್ ಮೂಜು ಮಾಜಂಬುಗಳ್ . . . ಅಂಸಸ್ಥಾನದೊಳ್ ತಾಳ್ದಿದ ಬಲೆ ನೆಲಸಲ್ ವ್ಯಾಧನಾಕಾರಮಾಗಲ್ ನಡೆತಂದಂ ಪುಷ್ಪಬಾಣಂ (ಮಹಾನೀ. ೭-೧೨೭). ☞ ಈ ಶಬ್ದ 'ಕಬ್ಬುವಿಲ್' ಎಂಬುದರ ಅಪಲಿಖಿತವಿರಬಹುದೆ ? [ಕಂಬಿ₃ + ಬಿಲ್₁]

**ಕಂಬಿಸೀರೆ** (ನಾ). ಜರತಾರಿ ಸೀರೆ: ನಂಜಾನಗೂಡಲ್ಲಿ ಸಂಬಳದ ಸೂಳೇರು ಕಂಬಿಸೀರೆಯ ಎಡಗಾಸೆ ಹಾಕ್ಕೊಂಡು (ಹಳ್ಳಿಯ. ೩೭). [ಕಂಬಿ₁ + ಸೀರೆ]

**ಕಂಬೀರ** (ನಾ). "ಶೂರ ; ಬಂಟ ; ಮುಂದಾಳು" (ಜಾನಕೋ. ೩೪). [← ಮರಾ. ಖಂಬೀರ್]

**ಕಂಬು** (ನಾ). ೧. ಶಂಖ: ಪವಳದ ಬೀಡು ಕಂಬುಗಳ ನಾಡು ಜಲೇಶನ ಜೋಡು (ಸೂಕ್ತಿಸು. ೨-೩೭). ೨. ಕಡಗ; ಕಂಕಣ. ೩. ಆನೆ. ೪. ನೀರು. ೫. ಬಿಳಿಯ ಬಣ್ಣ. ೬. ಒಂದು ಬಗೆಯ ಧಾನ್ಯ: ನರೆದಲೆಗನಿದು ನೆಲ್ಲು ಹಾರಕ ಬರಗು ಜೋಳವು ಕಂಬು ವುರುತರದ ಎವೆ ನವಣೆಯಿದೂ ನವಧಾನ್ಯ (ರಾಮಚ. ೧೧-೩೨). ೭. ಕೊರಳು: "ಮದಗಜ ಶಂಖಂ ಧಾನ್ಯಗಳುದಕಂ ಬಿಳಿದೈದು ಕಂಬು ಶಬ್ದಂ" (ನಾನಾಕಂ. ೧೦). [ಸಂ.]

**ಕಂಬುಕ** (ನಾ). ೧. ಶಂಖ. ೨. ಕೀಳುಮನುಷ್ಯ. [ಸಂ.]

**ಕಂಬುಕಂಠ** (ನಾ). ೧. ಶಂಖದಂತಿರುವ ಕೊರಳು : ಎಱಲೆಗಣ್ಣಾ ಪೊಂಬಣ್ಣದಸಿಯೊಡಲ ಕಂಬುಕಂಟ[ಠ]ದ (ಜನವ. ೨-೯); ಪಂಕಜಾನನಂ ಸೆಳೆನಡು ಸುಕಂಬುಕಂಠಂ (ಜೈಮಿಭಾ. ೨೫-೪). ೨. ಶಂಖದಂತೆ ಧ್ವನಿಹೊರಡಿಸುವ ಕೊರಳು : ಅವನ ಕಂಬುಕಂಠಕ್ಕೆ ಹೆದರಿ ನಿದ್ದೆ ಒಂದು ಹರದಾರಿ ಓಡಿಹೋಗುತ್ತದೆ (ಗಾಳಿಪ. ೧೭೦).
[ಕಂಬು + ಕಂಠ]

**ಕಂಬುಕಂಠಿ** (ನಾ). ಶಂಖದಂತೆ ಕೊರಳುಳ್ಳವಳು: ಪಟ್ಟಣದೊಳಿಲ್ಲ ದುಸ್ತ್ರೀಯರೆಲೆ ಕಂಬುಕಂಠೀ (ನವಮೋ. ೨-೫೩).
[ಸಂ. ಕಂಬುಕಂಠೀ (ಕಂಬು + ಕಂಠ + -)]

**ಕಂಬುಕಂಠೆ** (ನಾ). = ಕಂಬುಕಂಠಿ: ಅಳಿನೀಳಾಳಕಿ ಹಂಸಗಾಮಿನಿ ಲತಾತನ್ವಾಂಗಿ ಬಿಂಬೋಷ್ಠೆ ನಿರ್ಮ್ಮಳ ಚಂದ್ರಾನನೆ ಕಂಬುಕಂಠೆ (ಸೌಇಇ. XX, ೧೧೬-೩೩ ; 1146). [ಸಂ. ಕಂಬುಕಂಠಾ (ಕಂಬು + ಕಂಠ + -)]

**ಕಂಬುಕಂಧರ** (ನಾ). = ಕಂಬುಕಂಠ ೧ : ತುಂಬಿಗುರುಳ ಬಿಂಬಾಧರದ ಕಂಬುಕಂಧರದಂಬುಜನೇತ್ರೆಯರ್ (ರಾಮಾಶ್ವ. ೧೨೧-೧೬).
[ಕಂಬು + ಕಂಧರ]

**ಕಂಬುಕಂಧರೆ** (ನಾ). = ಕಂಬುಕಂಠಿ : ಸಚ್ಚಕೋರೀನಿನದೆ ಗಜಗಮನೆ ಕಂಬುಕಂಧರೆ (ಚಬವು. ೧೦-೨೩).
[ಸಂ. ಕಂಬುಕಂಧರಾ (ಕಂಬು + ಕಂಧರ + -)]

**ಕಂಬುಗಲ, ಕಂಬುಗಳ** (ನಾ). ಶಂಖದಂತಿರುವ ಕೊರಳು (ಕ). **ಕಂಬುಗಳ** : ಕಂಬುಗಳಂ ನಗುವಂತಿರೆ ಕಂಬುಗಳಂ ಕರಮೆಸೆಗುಮಾವಣಿಕ್ಪತಿಸತಿಯಾ (ಸುಕುಮಾ. ೯-೮೯); ಕಂಬುಗಳದಾ ಅತುಲ ತುಲಸೀ ಮಾಲನಂ ರಮಾಲೋಲನಂ . . . ಸುಧನ್ವಂ ಕಂಡನು (ಜೈಮಿಭಾ. ೧೩-೨೬).
[ಕಂಬು + ಗಲ್ಘ]

**ಕಂಬುಗಳ** 'ಕಂಬುಗಲ' ನೋ.

**ಕಂಬುಗೆ** (ನಾ). ೧. (ಆಯುಧಗಳನ್ನು ತುಂಬುವ) ರಥದ ಒಂದು ಭಾಗ, —ಜಾಗ : "ರಥಗುಪ್ತಿ ವರೂಥ ಎಂದು, ದೂಳುಮಱಿ; ಕಂಬುಗೆ ಎಂದೂ, ಎಂಬರು" (ನಾಚಿರಾ. ಕ); ಬಲ ನಡೆವಲ್ಲಿ ಕಂಬುಗೆಯ ಭಂಡಿ ಕಬಿಲ್ದುಡಿದಿರ್ಪೊಡೆತ್ತಲುಂ ತೊಲಗದೆ ನಟ್ಟು ನಿಲ್ವೊಡದು ದೇಶ ಮಹೀಶ ವಿನಾಶಕಾರಣಂ (ಲೋಕೋಪ. ೪-೭); ಅತಂ ಕಂಬುಗೆಯ ಬಂಡಿಯೊಳು ಮಂದಸಂಗೊಟ್ಟಡೆ (ಸಿದ್ಧರಾ. ೯-೧೦); ತೆಗೆತೆಗೆದು ತಲೆ ಮಟ್ಟು ಕಱಿದರು ಬಿಗಿದ ಬಿಲುಗಳಲತಿರಥರು ಕಂಬುಗೆಯ ಮುಱಿದರು ಹಯವ ತಱಿದರು (ಕುವ್ಯಾಭೀ. ೪-೯೬); ರಥಕೆ ಹೂಡಿದ ಲುಳಿಯ ತೇಜಿಯ ಶಸ್ತ್ರ ತುಂಬಿದ ಹಲವು ಕಂಬುಗೆ ಸಹಿತ ಮೆಱೆಯುವ ಹುಲಿಯ ಹಳವಿಗೆಯ (ಕೌಶಿರಾ. ೨೬-೧೭); ಬಸವಳಿದು ಕಂಬುಗೆಯ ದಿಮ್ಮಿದಂ ಕರ್ಣ ತನ್ನಸುವ ಮರದಂ ದ್ರೋಣ (ತುರಂಗ. ೫೨-೨೨). ೨. "ರಥದೊಳಗೆ ಕುಳಿತವರಿಗೆ ಪೆಟ್ಟು ತಗುಲದಂತೆ ಸುತ್ತಲೂ ಹಾಕಿರುವ ಸಲಾಕೆ, ಧ್ವಜಸ್ತಂಭ (?)" (ಪ್ರಭಣ್ಣ): ಸಲೆ ತರಹರಿಸಲಱಿಯದೆ ಮಲಗಿ ನಿಂದನು ರಥದ ಕಂಬುಗೆಯ (ಕುವ್ಯಾವಿ. ೮-೬೩); ಸುಪತಾಕೆಗಳ ಸಿಂಧದ ಹೊಳೆವ ಹೊಂಗಂಬುಗೆಯ ಹೂಡಿದ ಹಯದ (ಕುವ್ಯಾಭೀ. ೩-೧೯).
[?]

**ಕಂಬುಗೆಕೊಡ** (ನಾ). ಒಂದು ಬಗೆಯ ಕೊಡ : ಹೇಮರಜತದೊಳೆಸಮೆದಾ ಕೋಮಳ ದೀವಿಗೆಯ ಕಂಬ ಕಂಬುಗೆಕೊಡನುಂ ಸೋಮದಿನಕರನ ಪೋಲ್ವ ಸನಾಮದ ಭಾಜನದ ಭಾರಕರ್ ನಡೆತಂದರ್ (ಸೂಕ್ತಿಸು. ೧೮-೩೦).
[ಕಂಬುಗೆ ? + ಕೊಡ$_2$]

**ಕಂಬುಗ್ರೀವ** (ನಾ). ೧. ಶಂಖದಂತಿರುವ ಕೊರಳು. ೨. ಒಂದು ಆಮೆಯ ಹೆಸರು (ಕ).
[ಕಂಬು + ಗ್ರೀವ]

**ಕಂಬುಗ್ರೀವೆ** (ನಾ). ಶಂಖದಂತೆ ಕೊರಳುಳ್ಳವಳು : ಕಂಬುಗ್ರೀವೆಯ ಜಾನಕಿಯ ಸುದ್ದಿಗಾತಂ ಬಂದಂ (ಪಂರಾಮಾ. ೧೧-೧೧೪).
[ಸಂ. ಕಂಬುಗ್ರೀವಾ (ಕಂಬು + ಗ್ರೀವ + -)]

**ಕಂಬುಜ** (ನಾ). ೧. ಶಂಖದಲ್ಲಿ ಹುಟ್ಟಿದ್ದು: ವಾಜಿತನೋರಹಿತ ಕಂಬುಜ ಲತಾಂಬುಜಂ (ಮದತಿ. ೧-೪೪). ೨. ಒಂದು ಬಗೆಯ ಮದ್ದಳೆ. [ಸಂ.]

**ಕಂಬುಧರ** (ನಾ). ಶಂಖವನ್ನು ಹಿಡಿದಿರುವವನು ; ವಿಷ್ಣು : ಕಂಬುಧರ ಕಾಯಭವ ಕುಂಭಿನೀಧರ (ಪ್ರೌಢರಾ. ೧೫-೧). [ಸಂ.]

**ಕಂಬುಲ** (ನಾ). ಒಂದು ಬಗೆಯ ವಾದ್ಯ : ಕಂಬುಲಪಟು ಪಟ್ಟಹ ಘೋಷಣಾನೀಕ ವಿಸ್ತಾರಿತ ಸಮಸ್ತಲೋಕ . . . ಚೋಳಕುಳಾನ್ವಯ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ (ಸೌಇಇ. IX-i, ೨೬೯-೧೯ ; 1169). 'ಕಂಬಳ$_2$' ಪರಾ. [?]

**ಕಂಬುಸೂತ್ರ** (ನಾ). (?) : ಸಾಂಬಲೋಕದ ಮಧ್ಯದಿ ಸವಿಗೊಂಡು ಕಂಬುಸೂತ್ರದ ಸಾಧ್ಯದಿ ಅಂಬರದೊಳವತಾರ ತುಂಬಿ ತುಳುಕುವಂತೆ (ಶರೀಫ. ೩೧-೧). [ಕಂಬು ? + ಸೂತ್ರ]

**ಕಂಬುಳ** 'ಕಂಬಳ$_4$' ನೋ.

**ಕಂಬೆಳಕು** 'ಕಣ್ಬೆಳಗು$_1$' ನೋ.

**ಕಂಬೆಳಗು$_1$** 'ಕಣ್ಬೆಳಗು$_1$' ನೋ.

**ಕಂಬೆಳಗು$_2$** 'ಕಣ್ಬೆಳಗು$_2$' ನೋ.

**ಕಂಬೇಟ** 'ಕಣ್ಬೇಟ' ನೋ.

**ಕಂಬೊಣರ್** 'ಕಣ್ಬೊಣರ್' ನೋ.

**ಕಂಬೊಲ** 'ಕಣ್ಬೊಲ' ನೋ.

**ಕಂಬೋಲಿ** 'ಕಂಭವಲಿ' ನೋ.

**ಕಂಭ, ಕಂಬ$_1$** (ನಾ). ೧. ಮಾಳಿಗೆ ಅಥವಾ ಚಪ್ಪರಕ್ಕೆ ಆಧಾರವಾಗಿ ನಿಲ್ಲಿಸಿದ ಎತ್ತರವಾದ ಮರ, ಕಲ್ಲು ಮುಂತಾದುವು; ಧ್ವಜವೇರಿಸಲು ನಿಲ್ಲಿಸಿದ ಕೋಲು; ಸ್ತಂಭ: ಪಿಡಿದಡಸಿ[ಯ]ಗುರ್ವು ಪರ್ವೆ ಬೀಸಿ ಗುಣಣೆಯ ಕಂಭಂಗಳೊಳಂ ಕೇರ್ಗಳೊಳಮಾಸ್ಫೋಟಿಸಿ ತಾಟಿಸಿದಾಗಳ್ (ಪಂಪಭಾ. ೮-೭೬ ವ); ಅತಿವರ್ತಿಯಪ್ಪ ಮತ್ತಗಜಂ ಕಂಭಕ್ಕೆ ತರ್ಪಂತೆ (ಪಂಚತಂ. ೧೮-೧೯); ಕಡೆವ ಕಂಭದ ಕೆಳಗೆ ಧರಿಸಿದ ಕೂರ್ಮರೂಪದಿ ಮೇರು ಮಂದರವ (ಸಂಭಪೆ. ೫-೧೦೪); ಮತ್ತಗಜ ಮದವೇಱಿ ಕಂಭವ ಕಿತ್ತುದುಪ್ಪರಿಗೆಯ ಮುಱಿದುದು (ಸಾಳ್ವಭಾ. ೧೨-೫೧). ೨. [ಗಣಿತ] ಕ್ಷೇತ್ರಫಲ : ಉದ್ದಮನಗಲದಿನಿಱಿಯಲ್ ಸಿದ್ಧಿಸಿ ತಾಂ ಬಂದ ಲಬ್ಧಮಕ್ಕುಂ ಕಂಭಂ (ವ್ಯವಹಾ. ೪ ಕ್ಷೇತ್ರ). ೩. ಹೊಲ, ಗದ್ದೆ, ಧಾನ್ಯ ಮುಂತಾದುವುಗಳನ್ನು ಅಳೆಯುವ ಒಂದು ಪ್ರಮಾಣ : ಮೂಡಗೋಡಿಯ ಮೂನೂಱು ಕಂಭ ಬೆದ್ದಲುಂ ಹಡುವ ತೆಂಕಲಾಗಿ ಹಡುವಗೋಡಿಯೇಳನೂಱು ಕಂಭ ಬೆದ್ದಲು ಸಹಿತ (ಎಕ. V, ಹಾಸನ. ೬೬-೪೩ ; 1170); ಮತ್ತರು ಎಂಬುದು ಭೂಮಿಯ ಗಡಿ ಬ॥ ಮತ್ತರು ೧ಕ್ಕೆ ಕಂಭಂ ೯೦೦ ಎಂದು ತಿಳಿದುಕೊಂಬುದು ಕಂಭ ೧ಕ್ಕೆ ಕೆಯ್ ೪ (ವ್ಯವಹಾ. ಅನುಬಂ. ೧೮-೨೯ ಟೀಕು); ಅಱುವತ್ತುನಾಲ್ಕನರ್ಧಿಸೆಯುದರ್ಧಿಸೆ ಉತ್ತಮಾದಿ ಪಾದಮದಾಗಲ್ ನೆಱೆ ಕಂಭಮೊಂದದಕ್ಕುಂ ನವಶತದಿಂ ಮತ್ತಱೊಂದು ಗಣಿತವಿಳಾಸಾ (ವ್ಯವಹಾ. ೬-೩೮). **ಕಂಬ$_1$**: ೧. ಚಾಗದ ಕಂಬಮುಂ ನಿಱಿಸಿ ಬೀರದ ಶಾಸನಮುಂ ನೆಗೞ್ಚಿ (ಪಂಪಭಾ. ೧-೫೦); ಕುಂಭಕರ್ಣನಂ ಕಂಬಂ ಮುಱಿದ ಮಾಳಿಗೆಯಂತೆ ಮಾಡಿ (ಧರ್ಮಾಮೃ. ೭-೯೫); ಕೆಟ್ಟು ಸುರರೋಡಿದರು ಕಂಬದಿ ನಟ್ಟ ಬಾಣವ ಕಂಡು (ಸಂಭಪ. ೨೦-೫೦); ವಿಜಯದಾಸರು . . . ಅದೇ ಕಂಬದ ಹತ್ತಿರ ಕುಳಿತು-ಎದ್ದುಹೋಗುವುದು ಅಭ್ಯಾಸವಾಗಿತ್ತು (ಕಂಚಹು. ೧); ತುಟಿಮೀರಿದ ಹಲ್ಲು, ಮಳಮೀರಿದ ಕಂಬ (ಗಾದೆ).

೩. ಸಾವಿರ ಖಂಡುಗಮಂ ಬೆಳೆದಾವೊಕ್ಕಲಮಗನದೊಂದು ಕಂಬಮ ನೊಯ್ದಿಟ್ಟಾವೂರಿನ ಬಾದುಂಬೆಗೆ ಸಾವಿರಮಂ ಬೆಳೆದವೆಂದು ನಡುವರ್ ಮೂಢರ್ (ಸಮಪ. ೯-೪೩) ; ತೆಂಕಲು ಕಂಬಂ ಸಾಸಿರ (ಕೊಲ್ಹಾಶಾ. ೧೩-೩೮ ; 1156); ಹಳಿಯಲು ಗದ್ದೆ ಕಂಬ ಇಪ್ಪತ್ತು (ಎಕ. VII, ಶಿವಮೊ. ೪೦-೬೩ ; 1180) ; ಸೇನಬೋವ ವೀರಪ್ಪಂಗೆ ಮೂವತ್ತಾಱು ಮೆಟ್ಟಿನ ನೂಱು ಕಂಬ ಕೆಯಿಸಲುಉದು (ಎಕ. XI, ಚಿತ್ರದು. ೬-೩೬ ; 1333).

[ಪ್ರಾ. ಕಂಬೊ (< ಸಂ. ಸ್ಕಂಭ). / ತಮಿ. ಮಲ. ಕಪ್ಪು; ತುಳು. ಕಂಮ, ಕಂಬ, ಕಂಬೊ, ಕಂಭ; ತೆಲು. ಕಂಬ]

**ಕಂಭಕುಂಭ** (ನಾ). ಆರತಿ ಅಕ್ಷತೆ : ಈ ರೀತಿ ತಾಳಿ ಕಟ್ಟಿಕೊಂಡ ಹೆಂಗಸರಿಗೆ ಕಂಭಕುಂಭಗಳಲ್ಲಿ (ಆರತಿ ಅಕ್ಷತೆ) ಪ್ರವೇಶವಿರಲಿಲ್ಲ (ಹುಟ್ಟ ಹ. ೧೬). [ಕಂಭ ? + ಕುಂಭ ?]

**ಕಂಭಗಟ್ಟು**, ಕಂಬಗಟ್ಟು (ನಾ). ಕಂಬದ ಸುತ್ತಲೂ ಅಲಂಕಾರಕ್ಕಾಗಿ ಸುತ್ತುವ ಬಟ್ಟೆ, ಹೂವು ಮುಂತಾದುವು: ಮುತ್ತಿನ ರಂಗವಲಿಗಳಿಂ ಚಿನ್ನದ ಕಂಭಗಟ್ಟನಿಂ ಶೃಂಗಾರಂ ಮಾಡುವುದುಂ (ಧರ್ಮಾಮೃ. ೮-೨೧೫) ; ಕಂಗೆ ಸುರಂಗವೆನಿಸಿದ ಕಂಭಗಟ್ಟನ ಮೇಲುಕಟ್ಟುಗಳ (ಬಸವು. ೧೨-೧೩). **ಕಂಬಗಟ್ಟು** : ಬಳ್ಳಿಮಲ್ಲಿಗೆಯ ಮುಗುಳ ಮಾಲೆಯ ದುಗುಲದ ಕಂಬಗಟ್ಟನಿಂ (ಮಲ್ಲಿಪು. ೬-೫೧).

[ಕಂಭ + ಕಟ್ಟು$_2$]

**ಕಂಭದೀವಿಗೆ** (ನಾ). ಕಂಬದ ಮೇಲಿನ ದೀಪ : ತೂಗುಂಜೊಡರ್ಗಳನ್ನು ಕಂಭದೀವಿಗೆಗಳನ್ನು ಬತ್ತಿವೊತ್ತಿಸಿ (ಮಂತ್ರಶ. ೧೧೯-೬).

[ಕಂಭ + ದೀವಿಗೆ]

**ಕಂಭನಿಱಿಸುಗೆ** (ನಾ). ಕಂಬವನ್ನು ನಿಲ್ಲಿಸುವಿಕೆ ; ಕಂಬವನ್ನು ಸ್ಥಾಪಿಸುವುದು: ಗುಂಡೋತ್ತರದಂತೆ ನೆಲಗಟ್ಟನಂತೆ ರಂಗಘಟ್ಟಣೆಯಂತೆ ಕಂಭನಿಱಿಸುಗೆಯಂತೆ ಕರುಮಾಡದಂತೆ . . . ಪದಿಮೂಱು ಗುಣಸ್ಥಾನಂಗಳಿರ್ದಪುವು (ಧರ್ಮಾಮೃ. ೧೨-೨೪).

[ಕಂಭ + ನಿಱಿಸುಗೆ]

**ಕಂಭನಿಱುಗೆ** (ನಾ). ಕಂಬದ ಸ್ಥಾಪನೆ : ನೆಲಗಟ್ಟನ ಮೇಲೆ ಕಳಶಮನಿಡುವ ಗುಂಡೋತ್ತರದ ಮೇಲೆ ಸೊದೆಯುಂ ಬಱಿವ ಕಂಭನಿಱುಗೆಯಿಲ್ಲದೆ ಜಿನಭವನಮಂ ಮಾಳ್ಪ . . . ಕಱ್ಪಗ್ಗನಂ ಪೋಲ್ಕುಂ (ಧರ್ಮಾಮೃ. ೧೨-೨೪). [ಕಂಭ + ನಿಱುಗೆ]

**ಕಂಭಪೂಜೆ**, ಕಂಬಪೂಜೆ (ನಾ). ೧. ಕಟ್ಟಡ ಕಟ್ಟುವಾಗ ಮೊದಲು ನಿಲ್ಲಿಸಿದ ಕಂಭಕ್ಕೆ ಮಾಡುವ ಪೂಜೆ(+). **ಕಂಬಪೂಜೆ**: ೨. ಮದುವೆಯಲ್ಲಿ ಮಾಡುವ ಒಂದು ಶಾಸ್ತ್ರ ; "ಮುಂಡಿಗೆ ಮುಹೂರ್ತ" (ಪ್ರಭಣ್ಣ). [ಕಂಭ + ಪೂಜೆ$_3$]

**ಕಂಭಮುಹೂರ್ತ** (ನಾ). = ಕಂಭಪೂಜೆ ೧ (+).

[ಕಂಭ + ಮುಹೂರ್ತ]

**ಕಂಭರಾಜಗೀರೆ**, ಕಂಬರಾಜಗೀರೆ (ನಾ). ಒಂದು ಬಗೆಯ ಸಸ್ಯ : "ರಕ್ತಬಾಷ್ಪಃ – ಕಂಭರಾಜಗೀರೆ" (ಒಷಧಿ. ೧೩೪). **ಕಂಬರಾಜಗೀರೆ** : "ಬಾಷ್ಪಿಕ – ಅಂಬಟಿ, ಇಂಗು, ಪತ್ರ, ಕಂಬರಾಜಗೀರೆ." (ಒಷಧಿ. ೧೦೮).

[ಕಂಭ$_0$ + ರಾಜಗೀರೆ]

**ಕಂಭವತಿ**, ಕಂಬಾವತಿ, ಕಂಭಾವತಿ (ನಾ). ೧. ಒಂದು ಬಗೆಯ ಸೀರೆ : ಕೃಷ್ಣನಾರಿ ದ್ರೌಪದಿಗೆ ವಸ್ತ್ರ ಅಕ್ಷಯವೆಂದನು ಸುರುತಿ ಕಂಭವತಿ ಸಣ್ಣ ಬಣ್ಣ ಸೀರೆಗಳು ಮೇರುವಿನ ಬೆಟ್ಟದಂತೆ ಮಹಿಮೆ ತೋಱಿದ (ಪುರಂದ. ೫-೬೨-೧೯). **ಕಂಬಾವತಿ**: ೨. ಭಾರಿ ಅಂಚುಳ್ಳ ಉಡಿಗೆ (ಸ್ಯಾಂಡರ್) **ಕಂಭಾವತಿ** : ೨. (ಸ್ಯಾಂಡರ್). [?]

**ಕಂಭವಲಿ**, ಕಂಬವಲಿ, ಕಂಬೋಲಿ (ನಾ). ಕಂಬಕ್ಕೆ ಮಾಡುವ ಪೂಜೆ; ಒಂದು ಶಾಸ್ತ್ರ : ತಿಂಗಳ ಕಂಭವಲಿಯ ಮಾಡಿರುತಿಪ್ಪ ಮಂಗಲವ ಕಮಲಿನಿಯೂ (ಪೂಜ್ಯಚ. ೮-೧೧೬). **ಕಂಬವಲಿ** : ಇಳೆ ನುತಿಪಂತೆ ನಾಕಬಲಿಯಂ ಮಿಗೆ ಮಾಡಿ ಮಗುಳ್ದು ಬಂದು ಸಂಕುಳಮದು ಪೆರ್ಚಿ ಕಂಬವಲಿಯೊಳ್ ನಲಿದೋಕುಳಿಯಾಡಲು (ಉದ್ಭಟ. ೮-೬೯); ಆದುವು ನಾಗವಲಿಯು ಕಂಬವಲಿಯು ಮತ್ತಾದುವಂತೊಸಗೆಯೌತಣವು (ನಾಗಕು. ೩-೮೧). **ಕಂಬೋಲಿ** : ಮಲಗವೇಲಿಗೆ ಬಂದು ಕಂಬೋಲಿಯ ಶಾಸ್ತ್ರ ಮಾಡಿ ಬಂಧುಜನರನ್ನು ಬೀಳ್ಕೊಟ್ಟರು (ಕಥವಿ. ೩೧೦) ; ಮರುದಿನ ಅಮಾವಾಸ್ಯೆ ; ಆಮೇಲೆ ತಿಂಗಳ ಕಂಬೋಲಿ (ಶ್ರೀಕಥೆ. ೧೧೦). [ಕಂಭ + ಬಲಿ$_5$]

**ಕಂಭಶಕ್ತಿ** (ನಾ). ಆಧಾರಭೂತ ಶಕ್ತಿ; ಬೆಂಬಲಿಗ ಶಕ್ತಿ (?): ತೊಡೆಗಳನುಡಿಯಲ್ ಗುರುಗಳ್ ತೊಡೆಸಕ್ಕಗಳಾಗೆ ಮಕುಟಭಂಗಂ ಮಾಡಲ್ ನುಡಿದೆನಗೆ ಮಕುಟಬದ್ಧರು ಮೊಡನಿರ್ದರು ಮವರ ಕಂಭಶಕ್ತಿಗಳಾದರ್ (ಗದಾಯು. ೧-೬೮). [ಕಂಭ + ಶಕ್ತಿ]

**ಕಂಭಾವತಿ** 'ಕಂಭವತಿ' ನೋ.

**ಕಂಸ** (ನಾ). ೧. ಕಂಚು. ೨. ಲೋಹದಿಂದ ಮಾಡಿದ ಕುಡಿಯುವ ಬಟ್ಟಲು. ೩. ವರ್ತುಳದ ಪರಿಘದ ಒಂದು ಭಾಗ, —ಅಂಶ ; '( )' ಆವರಣ ಚಿಹ್ನೆ : ಇಂತಹ ಮಾತುಗಳು ಕಂಸದೊಳಗಿರುವ ಶಬ್ದಗಳಂತೆ, ಓದುವ ಸಲುವಾಗಿವೆ (ಯಕ್ಷಬ. ೧೧೩). ೪. ಕೃಷ್ಣನ ಮಾವನಾದ ಮಥುರಾದೇಶದ ಅರಸು : ಶಿಶುಗಳಾಱುಮವೀ ಕ್ರಮದಿಂದೆ ಕಾಲಕಾಲಾಕೃತಿ ಕಂಸನಿಂ ಲಯಮನೆಯ್ದಿರೆ (ಜಗವಿ. ೨-೫೬).

[ಸಂ.]

**ಕಂಸಜಿತ್ತು** (ನಾ). ಕಂಸನನ್ನು ಗೆದ್ದವನು ; ಕೃಷ್ಣ (+).

[< ಸಂ. ಕಂಸಜಿತ್]

**ಕಂಸತಾಲ**, ಕಂಸತಾಳ (ನಾ). ಕಂಚಿನಿಂದ ಮಾಡಿದ ತಾಳ (+). **ಕಂಸತಾಳ** : ಕಂಸತಾಳಾವಳಿಯ ಘೋಷಣವೆಸೆಯಲಾ ಧೂಪಾರತಿಯನೀಯೆ (ಬಸವು. ೧೨-೩೪). [ಕಂಸ + ತಾಲ$_3$]

**ಕಂಸತಾಳ** 'ಕಂಸತಾಲ' ನೋ.

**ಕಂಸಬಿ** 'ಕಸಬಿ' ನೋ.

**ಕಂಸಸೂದನ** (ನಾ). ಕಂಸನನ್ನು ಕೊಂದವನು ; ಕೃಷ್ಣ : ಪುಟ್ಟಿದಪಂ . . . ಉಗ್ರಸೇನ ಭಯಭೇದನನುದ್ಧತ ಕಂಸಸೂದನಂ (ಜಗವಿ. ೨-೮೪).

[ಕಂಸ + ಸೂದನ]

**ಕಂಸಹರ** (ನಾ). ಕಂಸನನ್ನು ಕೊಂದವನು ; ಕೃಷ್ಣ (+). [ಸಂ.]

**ಕಂಸಾಂತಕ** (ನಾ). = ಕಂಸಸೂದನ : ಹಂಸಧ್ವಜಂ ಕಾದಲೆಂತಹುದೊಯೆನುತುಮಾ ಕಂಸಾಂತಕಂ ನಿಧಾನಿಸಿಕೊಂಡು ಶಕ್ರಸುತನಂ ಸೈರಿಸೆನುತೆ . . . ಐತಂದನಾಗ (ಜೈಮಿಭಾ. ೧೪-೨೬). [ಕಂಸ + ಅಂತಕ]

**ಕಂಸಾರಕ** (ನಾ). ಕಂಚು, ಹಿತ್ತಾಳೆ ಮೊದಲಾದ ಲೋಹದ ಕೆಲಸ ಮಾಡುವವನು: ಉತ್ಕಿ(ತ್ಕೀ)ರ್ಣ್ಣಂ ಕ[ನ್ಸಾ](ಮ್ಸಾ)ರಕಾ(ಕ) ದೇವಪಿಲೇನೇತಿಃ(ತಿ) (ಎಇ. XIX, ೧೩೬-೩೫ ; 9ನೆಯ ಶತ).

[< ಸಂ. ಕಾಂಸ್ಯಕಾರಕ]

**ಕಂಸಾರಾತಿ** (ನಾ). = ಕಂಸಾರಿ (+). [ಕಂಸ + ಅರಾತಿ]

**ಕಂಸಾರಿ** (ನಾ). ಕಂಸನ ವೈರಿ; ಕೃಷ್ಣ : ಭೀಕರಸಾಮಂತನಿಕಾಯದೈತ್ಯಬಳವತ್ಕಂಸಾರಿ ಕಂಸಾರಿ ಸಂಗರರಂಗಕ್ಕಹಿವೈರಿವೈರಿಯೆನಿಪಂ ಸಾವಂತ ನಾಗಾರ್ಜ್ಜುನಂ (ಎಕ. VI, ತರೀಕೆ. ೪೨-೪೦ ; 1206) ; ಕಂಸಾರಿ ಬಾರದೆ ನರಂಗೆ ಸೋಲ್ವವನಲ್ಲ ಹಂಸಧ್ವಜಂ ಧುರದೊಳು (ಜೈಮಿಭಾ. ೧೦-೪೯). [ಕಂಸ + ಅರಿ$_6$]

**ಕಂಸಾರಿಸಖ** (ನಾ). ಕೃಷ್ಣನ ಗೆಳೆಯ; ಅರ್ಜುನ: ಎದುರಿಗೆ ಕಂಸಾರಿಸಖನು ಪಾಂಡವಸೇನೆಯನ್ನು ಹಂಸವ್ಯೂಹದಲ್ಲಿ ಒಡ್ಡಿ ನಿಂತನು (ಭಾಮಣಿ. ೨೬). [ಕಂಸಾರಿ + ಸಖ]

**ಕಂಸಾಳ, ಕಉ[ವು]ಸಾಳ, ಕಾಂಸಾಳ, ಕೌಸಾಳ** (ನಾ). ಕಂಚಿನ ದೊಡ್ಡ ತಾಳ: "ಕಾಂಸ್ಯತಾಳ – ಕಂಸಾಳ" (ಶಮದ. ೨೯೩ ಪ್ರಯೋ); ಸುಗತಿಯನುಗುಳ್ವ ಕರಡೆಗಳ ಮೇಳೈಪ ಕಂಸಾಳದ ಗರ್ಗರಿಪ ಗಿರ್ಗಟಿಗಳ (ಗಿರಿಕ. ೧೦–೭೭ ವ); ಅವುಜ ಕರಡೆಗಳ ತಾಳ ಕಂ[ಪಾಠಾಂ. ಕೌ]ಸಾಳ ರವದೊಳಗೆ ನಡೆದನು (ಸಿದ್ಧರಾ. ೫–೨೦); ಕರಡೆ ಕಂಸಾಳ ಡೊಳ್ಳಾರಿ ಟುಮುಕು ತಂಬಟಂ (ಚೆಬಪು. ೬–೭). **ಕಉ[ವು]ಸಾಳ**: ಶಿವರಾತ್ರಿಯ ರತದುತ್ಸಹ ಕರಡೆ ಕಉ[ವು]ಸಾಳ ಡೋಳು ಕಾಳೆ ನಂದಾದೀವಿಗೆಯಿನ್ತಕೆ ನಡೆಯಬೇಕು (ಎಕ. VI, ಚಿಕ್ಕಮ. ೪೮–೧೩; 1549). **ಕಾಂಸಾಳ**: "ಜಗಳೆಯೆ ಕಾಂಸಾಳಂ" (ಕವಿಕಂ. ೨೪೯). **ಕೌಸಾಳ**: ಅಗಳುಣ್ಮಿದವು ಕೌ[ಪಾಠಾಂ. ಕೈ]ಸಾಳದ ಘಳತ್ಕಾರ (ಬಸರ. ೭–೧೦೪); ಭೋರ್ಗರೆವ ಭೇರಿ ನಿಸ್ಸಾಳ್ಗಳಿಂ ತರತರದೊಳೊದಱುತಿಹ ಕಹಳೆ ಕೌಸಾಳ್ಗಳಿಂ (ಪ್ರೌಢರಾ. ೧–೪೨). [< ಸಂ. ಕಾಂಸ್ಯತಾಲ]

**ಕಂಸಾಳಕ** (ನಾ). ಅಕ್ಕಸಾಲಿಗ (ಕಿ).
[ಕಂಸಾಳ + –ಕ$_3$. / ತೆಲು. ಕಂಸಾಲ, ಕಂಸಾಲಿ]

**ಕಂಸಾಳಗಿತ್ತಿ** (ನಾ). ಕಂಸಾಳವನ್ನು ಬಾರಿಸುವವಳು: ಓಲಗದವರ ಚಿತ್ರದಾಟದ ತಾಳಧರಿಗಳ ಕಹಳೆಕಾಜರನಾಲಿಸುವ ಕಂಸಾಳಗಿತ್ತಿಯರು (ಬಸಪು. ೫–೪೩). [ಕಂಸಾಳ + –ಗಿತ್ತಿ]

**ಕಂಸಾಳೆ** (ನಾ). ಕಂಚಿನ ಕಹಳೆ: ಕರಡಿ ಕಂಸಾಳೆ ಹೆಗ್ಗಾಳೆ (ಸಿದ್ಧಕಾ. ೮–೬): ಬೀಣೆಯ ಜವಳಿಮದ್ದಳೆಯ ಕಂಸಾಳೆಯ (ರಾಮಾಶ್ವ. ೭೮–೧೯).
[< ಸಂ. *ಕಾಂಸ್ಯಕಾಹಲಾ]

**ಕಂಸಾಳೆಪದ** (ನಾ). ತಾಳಕ್ಕೆ ತಕ್ಕಂತೆ ಲಯಬದ್ಧವಾಗಿ ಹಾಡುವ ಹಾಡು: ಕೆಲವು ಹಳ್ಳಿಗಳಲ್ಲಿ ಕಂಸಾಳೆಪದಗಳು ಈಗಲೂ ಇವೆ (ರೂಢಿ).
[ಕಂಸಾಳೆ$_0$ + ಪದ$_2$]

**ಕಂಸಿ** (ನಾ). ಜಾಗಟೆ: ಢೋಲ್ ಮತ್ತು ಕಂಸಿ(ಜಾಗಟೆ)ಯ ಧ್ವನಿಗೆ ಮರದ ಖಡ್ಗಗಳಿಂದ ನರ್ತಕರು ಕುಣಿಯುತ್ತಾರೆ (ಅಭಾನ್ಯ. ೧೨೮).
[< ಸಂ. ಕಂಸೀಯ = ಕಂಚು]

**ಕಃಪದಾರ್ಥ** (ನಾ). ಅತಿ ತುಚ್ಛವಾದ ವಸ್ತು; ಬೆಲೆಯಿಲ್ಲದುದು: ಜೋನ್ಸಳ ನೀಚತನದ ಮುಂದೆ ಅವನು ಕಃಪದಾರ್ಥವೆಂದೇ ಅನ್ನಬಹುದು (ಅಂಬಿಕೆ. ೮೭); ನಾನೊಂದು ಕಃಪದಾರ್ಥವಾದಾಗ ಉಂಟಾದ ವ್ಯಥೆಯ ಮುಂದೆ ಆ ಅಗಲಿಕೆಯ ಬೇನೆ ಏನೇನೂ ಇಲ್ಲವೆಂದೇ ಹೇಳಬಹುದಿತ್ತು (ಪುನರು. ೩೮೯). [ಸಂ. (ಕಃ + ಪದಾರ್ಥ)]

**ಕಕಂಟಕ** (ನಾ). ಓತಿ; ಓತಿಕೇತ: ಹುಲ್ಲುಗಡ್ಡೆಯ ದೇವತೆ ಅಲ್ಲಿಗೆ ಬಂದು, ಕಕಂಟಕ (=ಓತಿಕಾಟ) ರೂಪವನ್ನು ತಳೆದು, ಆ ಮಂಗಲವೃಕ್ಷದ ಬೊಡ್ಡೆಯಲ್ಲಿ ಸೇರಿ (ಬುದ್ಧಜಾ. ೧೨೬). [ಪಾಲಿ. ಕಕಂಟಕ]

**ಕಕಂದಿ** (ನಾ). ಒಂದು ಬಗೆಯ ತೆರಿಗೆ (?): ಕವತ್ರ್ಯ ಸೇಸೆ ಒಸಗೆ ಮನ ಕರೆ ಕೂಟ ಕಕನ್ದಿ ಬೀರವಣ ಕೊಡತಿವಣ ಕತ್ತರಿವಣ ... ವೊಳಗಾಗಿ ಹಲವು ಮಹಿಮೆಗಳಂ (ಮೈಆರಿ. ೧೯೩೨, ೧೬–೩೦; 1669). [?]

**ಕಕಬಿಕ** 'ಕಕವಕ' ನೋ.

**ಕಕಬಿಕಗೊಳು** (ಕ್ರಿ). ಗದ್ಗದವಾಗು; ಮಾತು ತಡವರಿಸು: ಹದಿದು ಸಡಿಲದ ತೆಕ್ಕೆ ... ರದಹತಿಯ ಚೀತ್ಕಾರ ಕಕಬಿಕಗೊಳುವ ಗಳರವದ ಹದನು (ಅನಂರಾ. ೭–೧–೭೨).
[ಕಕಬಿಕ (< ಕಕವಕ) + ಕೊಳು (< ಕೊಳ್$_1$)]

**ಕಕಮಕ** 'ಕಕವಕ' ನೋ.

**ಕಕಮುಖ** 'ಕಕವಕ' ನೋ.

**ಕಕರ** (ನಾ). ಒರಟ: ಅವನೊಬ್ಬ ಕಕರ, ನಮ್ಮ ಮಾತು ಕೇಳೋದಿಲ್ಲ (ರೂಢಿ). [?. / ಸಂ. ಕರ್ಕಶ]

**ಕಕವ** (ನಾ). ತಿಳಿಗೇಡಿ; ಮಂಕ; ಬೆಪ್ಪ: ಕಕವನ ಹಾಗೆ ಬಾಯಿ ಬಿಡುತ್ತ, ಬಡಿಸಿದ್ದನ್ನೆಲ್ಲಾ ಬಡಿಸಿಸಿಕೊಂಡು ಶಾಮಣ್ಣ ಎರಡನ್ನೂ ತಿಂದು ಮುಗಿಸಿ (ಮನೋನಂ. ೯೪). [?]

**ಕಕವಕ, ಕಕಬಿಕ, ಕಕಮಕ, ಕಕಮುಖ** (ನಾ). ೧. ಭ್ರಾಂತಿ; ಅರಿವು ಮರುಳು; ಏನೂ ತಿಳಿಯದಿರುವುದು: ಕಾಮವಿಕಾರದ ಇಚ್ಛೆಯಂ ಪುಟ್ಟಿಸಿ ಕಳವಳಿಸಿ ನುಡಿಯುತ್ತಿಹುದು ಕಕವಕ ಭಾಷೆಗಳನ್ನಾಡಿಸುತ್ತಿಹುದು (ಕರಹ. ೬೮). **ಕಕಬಿಕ**: ೨. ಗದ್ಗದ; ಮಾತು ತಡವರಿಸುವಿಕೆ. 'ಕಕಬಿಕಗೊಳು' ಪರಾ. **ಕಕಮಕ**: ೧. ಇವರಿಬ್ಬರ ಮಧ್ಯೆ ನಾನು ಏನುಮಾಡುವುದೂ ತೋಚದೆ ಕಕಮಕನಾಗಿದ್ದೆ (ಸಣ್ಣಕ. X, ೧೭೬); ಇಷ್ಟು ಹೊತ್ತಿಗೆ ಅಮಲ್ದಾರರಿಗೆ ಕಕಮಕ ಹಿಡಿದಿತ್ತು (ಶ್ರೀಕಥೆ. ೧೩೭); ಯಾವುದನ್ನು ತಿನ್ನುವುದು, ಯಾವುದನ್ನು ಬಿಡುವುದು ಎಂದು ಕಕಮಕ ಹಿಡಿಯಿತು (ರಾಗಿಣಿ. ೨೨೯). **ಕಕಮುಖ**: ೧. ನಕುಲ ಸಹದೇವ ಭೀಮಾರ್ಜುನರು ಸೋತರಿನ್ನೆಲ್ಲಿಯದನಂತಸೇನೆ ಕಕಮುಖಮಾಗೆ ಪ್ರಳಯದ ಸಿಡಿಲತೆಱದೊಳಾ ಶಕುತಿಯೈದಿತ್ತು (ಲಕ್ಷ್ಮಭಾ. ೮–೩–೪೬). [?]

**ಕಕಾರ** (ನಾ). [ವ್ಯಾಕ] = ಕ$_1$: ಪ್ರಕಟತರ ವ್ಯಂಜನ ಸಂಜ್ಞೆ ಕಕಾರದಿನಾ ಳಕಾರಪರ್ಯಂತಂ (ಶಮದ. ೧೩). [ಸಂ.]

**ಕಕುಂದರ** (ನಾ). ಕಟಿ ಪ್ರದೇಶದಲ್ಲಿ ಪಿರ್ರೆಯ ಮೇಲ್ಭಾಗದಲ್ಲಿರುವ ಕುಳಿ: "ಕಕುಂದರಂ ಕುಂಡೆಗಳ ತಟದ ಕುಣಿಯಕ್ಕು" (ಮಂಗರಾ. ೯೮–೧೭). [ಸಂ.]

**ಕಕುತ್ಸ್ಥ** (ನಾ). ಇಕ್ಷ್ವಾಕುವಿನ ಮೊಮ್ಮಗ. [ಸಂ.]

**ಕಕುತ್ಸ್ಥಜ** (ನಾ). ಕಕುತ್ಸ್ಥ ವಂಶದವನು; ರಾಮಚಂದ್ರ: ರವಿಸುತನಲ್ಲಿಗೈತಂದಱುಹಿದನು ಬರವನು ಕಕುತ್ಸ್ಥಜನ (ತೊರರಾ. ೪–೧–೨೧). [ಸಂ.]

**ಕಕುದ** (ನಾ). ೧. ಶಿಖರ; ತುದಿ. ೨. ಬೆಟ್ಟದ ತಪ್ಪಲು. ೩. ಗೂಳಿಯ ಹಿಣಿಲು; ಡುಬ್ಬ: ಪೊಱಮಟ್ಟತ್ತು ಕಾಂತಾರದಿಂ ಪಾಟಲನೇತ್ರಂ ತುಂಗಗಾತ್ರಂ ಘನತರಕಕುದಂ ಶಾತಶೃಂಗಂ ಗವೇಂದ್ರಂ (ಜಗವಿ. ೫–೩೫); ಇಂದುಶೇಖರನು ... ನಿನ್ನಯ ಕಕುದವುಂ ಪಿಡಿದು (ಪ್ರಭುಪು. ೮–೮). ೪. ಕೋಡು; ಕೊಂಬು. ೫. ಗೂಳಿಯ ಮುಸುಡು, —ಮುಖ. ೬. ಗೂಳಿ; ಹೋರಿ. ೭. ಶ್ರೇಷ್ಠ; ಮುಖಂಡ. ೮. ರಾಜಚಿಹ್ನೆ. ೯. ಕತ್ತಿ; ಖಡ್ಗ. ೧೦. ಆಕಾಶ: "ಪ್ರಧಾನಮುಂ ಪುಂಗವ ತದ್ವಿಷಾಣ ತತುಪ್ರೋತಕಮದ್ರಿತಟಂ ಕೃಪಾಣ ರೋಧೋಂಗಣ ಮೆಂಬಿವುಂ ಕಕುದಮಕ್ಕುಂ" (ನಾನಾರ. ೧೪೪). [ಸಂ.]

**ಕಕುದಿ** (ನಾ). ಹಿಣಿಲುಳ್ಳದ್ದು; ಡುಬ್ಬವುಳ್ಳದ್ದು: ಕಕುದಿಯುಮವಯವ ಹೀನಾಧಿಕನುರಸ್ತನಿಯುಂ ತ್ರಿಕರ್ಣಯುಂ ... ಕುಲನಾಶಕರಂ (ಅಶ್ವಶಾ. ೪–೪೩); ಕಕುದಿಯ ಸಂಧಿಯಪೇಕ್ಷಿಸು ಕಕುಸಂದಿಯೆಡೆಗೆ ರಂಧ್ರಮೆಯೆಂದುಂ (ಅಶ್ವಶಾ. ೯–೪೧). [< ಸಂ. ಕಕುದ್ಮಿನ್]

**ಕಕುದ್ಗಿರಿ** (ನಾ). ಒಂದು ಬೆಟ್ಟದ ಹೆಸರು; ಶಿವಗಂಗೆ ಬೆಟ್ಟ: ಭೂಲೋಕಪಾವನ ಕಕುದ್ಗಿರಿ ಸುದಾಕ್ಷಿಣ್ಯ ಕೈಲಾಸವದಱ ಮೇಲಣ ಗವಿಯ ಸಿಂಹಾಸನ (ವೀಶೈಪು. ೧–೧–೬೫).
[ಸಂ. (ಕಕುದ್ + ಗಿರಿ)]

**ಕಕುದ್ಮ** (ನಾ). ಗೂಳಿ; ಹೋರಿ: "ಉಕ್ಷಂ ವೃಷಂ ಕಕುದ್ಮಂ [ಪಾಠಾಂ. ಗ್ನಂ] ... ಎನೆ ಯೆತ್ತೆನಿಕ್ಕುಂ" (ಮಂಗರಾ. ೫೩–೧).
[< ಸಂ. ಕಕುದ್ಮತ್]

**ಕಕುದ್ಮತಿ** (ನಾ). ತಿಕ; ಪಿರ್ರೆ; ಜಘನ: "ಕಾಂಚೀಪದಂ, ಕಳತ್ರಂ, ಜಘನಂ, ಶ್ರೋಣೀ, ಕಕುದ್ಮತೀ – ಈ ೫ ಜಘನಂ" (ಹಲಾಯು. ೮೪–೩೫೮). [ಸಂ. ಕಕುದ್ಮತೀ]

**ಕಕುಭ** (ನಾ). ೧. ದಿಕ್ಕು: ನಿಜಪೀಠಂಗಳಿಂದೆಬ್ದುದಾಗಳ್ ತೀವ್ರುತ್ತಿರ್ಪನ್ನೆಗಂ ಭೂಷಣರುಚಿ ಕಕುಭಾನೀಕಮಂ ರಾಜಲೋಕಂ (ಪಂರಾಮಾ. ೫–೭೬). ೨. ಆಕಾಶ: ಧರೆಯೊಳ್ ತೋರ್ಪಂತಾ ಕಕುಭರಂಗದೊಳ್ ತೋರ್ಪನನಿಲಪಥದೊಳ್ ತೋರ್ಪಂ ಪರಿಣತಿವೃತ್ತಮನೆನೆ ಬಿತ್ತರಿಸಿದ ಸಂದಿಂದ್ರನಿಂದ್ರಜಾಲಿಗತನಮಂ(ಆಪು. ೫–೧೮). ೩. ಮತ್ತಿಯ ಮರ; ಅರ್ಜುನ ವೃಕ್ಷ: "ಅರ್ಜುನಃ, ಕಕುಭಃ – ಈ ೨ ಮತ್ತಿ" (ಹಲಾಯು. ೩೨–೮೨); ಕಕುಭಾಶೋಕ ಕದಂಬ ಲುಂಗ ಲವಲೀ ಭೂಜಾರ್ಜುನಾನೋಕಹಪ್ರಕರಂ (ಪಂಪಭಾ. ೫–೮೦). ೪. ಶಿಖರ. ೫. ಮುಖ್ಯ. ೬. ವೀಣೆಗೆ ಹೊಂದಿಸಿರುವ ಕುಂಬಳಕಾಯಿಯ ಬುರುಡೆ. ೭. [ಸಂಗೀತ] ರಾಗಗಳಲ್ಲಿ ಒಂದು. [ಸಂ. ಕಕುಭ್, ಕಕುಭ]

**ಕಕುಭದಂತಿ** (ನಾ). ದಿಕ್ಕಿನ ಆನೆ; ದಿಗ್ಗಜ: ಸಕಳ ಚಂದ್ರಮುನಿನಾಥರುರ್ವ್ವರಾ ಸಕಳದೊಳ್ಪರಮಯೋಗ್ಯರೆಂಬುದಂ ಕಕುಭದನ್ತಿಗಳ ದನ್ತದೊಳ್ಕರಂ ಪ್ರಕಟಮಾಗೆ ಬರೆದಂ ಪಿತಾಮಹಂ (ಎಕ. VIII, ನಗರ. ೫೭–೯೩; 1077). [ಕಕುಭ + ದಂತಿ]

**ಕಕುಭವಸನ** (ನಾ). ದಿಕ್ಕುಗಳೇ ಬಟ್ಟೆಯಾಗಿ ಉಳ್ಳವನು; ದಿಗಂಬರ; ಶಿವ: ತಿಳಿಯದೇ ಕಕುಭವಸನನ [ಪಾಠಾಂ. ಮುಖವೈರಿಯಂ] ಜಜಿಕಿದು ಮರುಳು ಮಾತಾಡಿದರೆ ಕರಿನಿಕರ ಸರಿಯೆ ಹರಿಗೆ (ಪ್ರಾಭರಾ. ೧೮–೩೭). [ಕಕುಭ + ವಸನ]

**ಕಕುಲತೆ** 'ಕಕ್ಕುಲತೆ' ನೋ.

**ಕಕುಲಾತಿ** 'ಕಕ್ಕುಲತೆ' ನೋ.

**ಕಕುಲಾತೆ** 'ಕಕ್ಕುಲತೆ' ನೋ.

**ಕಕುಸಂದಿ** (ನಾ). ಕಕುದಿಯ ಸಂದಿ (?): ಕಕುದಿಯ ಸಂಧಿಯಪೇಕ್ಷಿಸು ಕಕುಸಂದಿಯಿಡೆಗೆ ರಂಧ್ರಮೆಯೆಂದುಂ (ಅಶ್ವಶಾ. ೯–೪೧). [?]

**ಕಕುಳತೆ** 'ಕಕ್ಕುಲತೆ' ನೋ.

**ಕಕೂಟ** (ನಾ). ಒಂದು ಜಾತಿಯ ಹಕ್ಕಿ; ಸರಕುಟವಕ್ಕಿ: "ಶರವೈರಿಯೆನಲಾ ಕಕೂಟಮೆನಿಕ್ಕು[ಪಾಠಾಂ. ವಾಕ್ಕೋಟಮೆನಿಸಿ, ವಾಕಂಕೂಟ]" (ಮಂಗರಾ. ೫೧–೬). [?]

**ಕಕೋಕಶಾಸ್ತ್ರ** 'ಕಕ್ಕೋಕಶಾಸ್ತ್ರ' ನೋ.

**ಕಕೋರ್ಲ** (ನಾ). ಒಂದು ಬಗೆಯ ಸಸ್ಯ: ಹೆತ್ತರಾಣಿಕೆ, ನಲ್ಲ, ಹೆದ್ದರಣಿ, ಬಿಳಚಿ, ತೆರಣಿ, ಕಕೋರ್ಲ (ವೈಶಿಗಿ. ೬೩–೧೨೬). [?]

**ಕಕ್ಕ₁** (ನಾ). ಡೊಂಕು; ಡೊಂಕುತನ; ವಕ್ರತೆ (ಕಿ). [?]

**ಕಕ್ಕ₂**, ಕಾಕ್ಕ, ಕಾಕಾ₁ (ನಾ). (ಉಕ) ಚಿಕ್ಕಪ್ಪ; ತಂದೆಯ ತಮ್ಮ: ಲಕ್ಷ್ಮಣನು ನಿಮ್ಮ ಕಕ್ಕನಾಗಬೇಕು (ಮುಂಬಯಿ. ೬–೪೦೫); ಅಂದು ನಮ್ಮ ಮನೆಯಲ್ಲಿ ನಮ್ಮ ಕಕ್ಕನ ಮಗನ ಹುಟ್ಟಿದ ಹಬ್ಬ (ಮಹಾತ್ಮಾ. ೮೩). ಕಾಕ₁: ಈ ಕಾಕನ ಹೆಸರನ್ನೇ ನನಗೂ ಇಡಲಾಯಿತು (ಬೆಂಜನ್. ೧೧). ಕಾಕಾ₁: ಮಕ್ಕಳೆಲ್ಲಾ ರಾಯರನ್ನು "ಚಾಕ್ಲೇಟು ಕಾಕಾ!" ಎಂದು ಕರೆಯುತ್ತಿದ್ದರು (ಕಂಬಹು. ೧೩೧).

ಕಕ್ಕಂದಿರು (ಬಹುವ): ಜಯಣ್ಣನಿಗೆ ಕಕ್ಕಂದಿರು . . . ಸೋದರ ಮಾವ ಎಲ್ಲರೂ ಇದ್ದರು (ವೈನಿ. ೩೭).

[← ಪಾಳಿ. ಹಿಂ. ಮರಾ. ಕಾಕಾ; ಸಿಂಧಿ. ಕಾಕೊ = ತಂದೆಯ ಸಹೋದರ]

**ಕಕ್ಕ₃** (ನಾ). (ಮಕ್ಕಳ ಭಾಷೆಯಲ್ಲಿ) ಹೊಲಸು; ಹೊಲಸು ಪದಾರ್ಥ: 'ಥೂ – ಕಕ್ಕ ಅದನ್ನ ತಿನ್ನಬಾರದು' (ಅವತಂ. ೬೦). [< ಕಕ್ಕಸು ?]

**ಕಕ್ಕಂಬು** (ನಾ). ಒಂದು ಬಗೆಯ ಬಾಣ; ಮುಳ್ಳಿನ ಬಾಣ; "ಕಕ್ಕುಳ್ಳ ಅಂಬು" (ಪ್ರಭಣ್ಣ): ಮುಂ ಮೊನೆ ನೆರಕೆ ನಾರಾಚಂ ತಗರ್ತಲೆಯಂ ನೆಬನರಿ[ವ] ಕ[ಡೆ]ಗೆಲೆಯಂಬು ಕಕ್ಕಂಬು ಕೆಲ್ಲಂಬು ಮೊನೆಯಂಬು [ತೀವೆ ಕಣ್ಣಂ] (ಪಂಪಭಾ. ೧೩–೩೯); ಕಕ್ಕಂಬಿಂ ಮೊನೆಯಂಬಿಂ ನೆಲೆಗಕ್ಕಂ ಬಿಲ್ಲಾಂತು ಕೆಲ್ಲಕೆಲ್ಲಂಬುಗಳಿಂ ಚಕ್ಕನೆ ಪೊಣರ್ದ್ದರ ತಲೆಗಳು ಮೊಕ್ಕನೆ ಪೋಪಿನೆಗಮೆಚ್ಚ ಬೆಳನಾಹವದೆಡೆಯೊಳು (ವ್ಯೆಆರಿ. ೧೯೩೦, ೬೩–೧೮; 1194). [ಕಕ್ಕು₃ + ಅಂಬು₂]

**ಕಕ್ಕಟ₁** 'ಕರ್ಕಡೆ' ನೋ.

**ಕಕ್ಕಟ₂** (ನಾ). ಹೆಚ್ಚು; ಅತಿಶಯ: ಹಾಗಲಕಾಯಿ ಕಕ್ಕಟ ಕಹಿ (ರೂಢಿ). [?]

**ಕಕ್ಕಟೆ** 'ಕರ್ಕಡೆ' ನೋ.

**ಕಕ್ಕಡ₁** 'ಕರ್ಕಡೆ' ನೋ.

**ಕಕ್ಕಡ₂** (ನಾ). ೧. ಬಟ್ಟೆಯನ್ನು ಎಣ್ಣೆಯಲ್ಲಿ ನೆನೆಯಿಸಿ ಉರಿಸುವ ಕೈದೀಪ; ದೀವಟಿಗೆ: ಅಲ್ಲಿ ಬಹಳ ಕತ್ತಲೆ ಅದೆ; ಒಂದು ಕಕ್ಕಡಾ ಹಚ್ಚಿಕೊಂಡು ಹೋಗು (ಮುಂಬಯಿ. ೪–೬೨); ಕಕ್ಕಡ ಹೊತ್ತಿಸಿ ಕಣ್ಣುಗಳಲ್ಲಿ ಮಾಡಿಸಿ ಕೆನ್ನೀರ್ ಜಳಕವನು (ಗರಿ. ೬೬–೪); ಮುಂದುಗಡೆ ಎತ್ತರದಲ್ಲಿ ಕಕ್ಕಡದಂತೆ ಉರಿಯುತ್ತಿರುವ ಪಂಜುಗಳು (ಗರುದಾ. ೫೮). ೨. ದಪ್ಪ ಬತ್ತಿ: ದಾಸಯ್ಯ ಗರುಡಗಂಬವನ್ನಿಟ್ಟು ಕಕ್ಕಡವನ್ನು ಚಾಚುತ್ತಿದ್ದ (ನದೀಪ. ೫೫).

[?. / ತೆಲು. ಕಾಗಡಾ. / ಮರಾ. ಕಾಂಕಡಾ, ಕಾಕಡಾ]

**ಕಕ್ಕಡ₃** (ನಾ). (ಉಕ) ಆವರಣ (?): ಒಂದೆರಡು ಸಾರಸಮಿಥುನಗಳು ಕೊಳದ ಕಕ್ಕಡದಲ್ಲಿ ಚೀತರಿಸುತ್ತಿದ್ದವು (ರಕ್ತಧ್ವ. ೨೫೩). [?]

**ಕಕ್ಕಡ₄** (ಗು). ಹಿರಿದು; ದೊಡ್ಡ; ಪುಷ್ಟ. 'ಕಕ್ಕಡವಂದಿ' ಪರಾ. [ಪ್ರಾ. ಕಕ್ಕಡ]

**ಕಕ್ಕಡವಂದಿ** (ನಾ). ದೊಡ್ಡ ಹಂದಿ; ಪುಷ್ಟವಾದ ಹಂದಿ; "ಖಡ್ಗಮೃಗ" (ರಾಮಾಶ್ವ. ಕೋಶ): ಎನ್ನ ಚಿನ್ನಕುನ್ನಿಯನೀ ಕಕ್ಕಡ[ಪಾಠಾಂ. ಕಿ. ಕರ್ಕಡ]ವಂದಿ ಕೊಂದುದನ್ನಿದಟಿಕೊಡನಳಿವೆಂ ಕೊಲ್ಲದುಳಿಯೆನೀ ಸೂಕರನಂ (ಗಿರಿಕ. ೧–೧೦೮); ಕೆಡೆದಿರ್ದ ಶಬರನಂ ಕಕ್ಕಡ [ಪಾಠಾಂ. ಕಿ. ಕರ್ಕಡ]ವಂದಿಯನೀಕ್ಷಿಸುತ್ತೆ ಶಬರಸಮೂಹಂ (ಗಿರಿಕ. ೧–೧೧೦); ಕೊಕ್ಕರಿಸಿದ ಕಕ್ಕಡವಂದಿಯ . . . ಮೊಜಿವ ಬಲ್ಪುಲಿಯ ಗಜಬಜದ ಸಂಚಾರಂ ಬಲ್ಪಿರಿದಾಯ್ತು (ರಾಮಾಶ್ವ. ೮೪–೮). [ಕಕ್ಕಡ₄ + ಪಂದಿ]

**ಕಕ್ಕಡವೆಳಗು** (ನಾ). ದೀವಟಿಗೆಯ ಬೆಳಕು: (ಕಕ್ಕಡವೆಳಗು; ಏರುತ್ತಿರುವ ಬೊಂಬುಳಿಯ ಝಲ್ಲಳಿಯ . . . ಬಾಜಣೆ; ತರುವಾಯ) (ಮಂತ್ರಶ. ೩೦–೫). [ಕಕ್ಕಡ₂ + ಬೆಳಗು₂]

**ಕಕ್ಕಡಾರತಿ** (ನಾ). ಕಕ್ಕಡವನ್ನು ಹೊತ್ತಿಸಿ ಅದರಿಂದ ದೇವರಿಗೆ ಮಾಡುವ ಆರತಿ: ಮೋಹಿನಿಯು ಹೋದಾಗ ಸಂಜೆಯ ಕಕ್ಕಡಾರತಿಯಾಯಿತು (ದಾಸಹು. ೧೮). [ಕಕ್ಕಡ₂ + ಆರತಿ₁]

**ಕಕ್ಕಡಿ** (ನಾ). ಒಂದು ಬಗೆಯ ಸೌತೆಕಾಯಿ (?): ಕಕ್ಕಡಿಯ ಕಾಯಿ, ಭದ್ರಮುಸ್ತೆ, ಮುಟ್ಟದರೆ ಮುನಿವ, ಧಾತಕೀಕುಸುಮ . . . ಸೇವಿಸಲು ಸಕಲಮೂಲವ್ಯಾಧಿಗಳು, ಗ್ರಹಣೀದೋಷ, ಶ್ವಾಸ, ಕಾಸ, ಇಷ್ಟನು ಪರಿಹರಿಸುವುದು (ವೈದ್ಯಸಾ. I, ೧೯೯ ಟೀಕೆ). [< ಸಂ. ಕರ್ಕಟೀ]

**ಕಕ್ಕಡೆ** 'ಕರ್ಕಡೆ' ನೋ.

**ಕಕ್ಕಡೆವಲೆ** (ನಾ). ಬೇಟೆಗಾರರು ಬಳಸುವ ಒಂದು ಬಗೆಯ ಬಲೆ: ತೊಡಂಕುವಲೆ ಕೊಲ್ವಲೆ ಕಕ್ಕಡೆ[ಪಾಠಾಂ. ಡ]ವಲೆ ನಿಡುವಲೆ ಸಾಲ್ವಲೆ ಬಿಡುವಲೆಗಳೆನಿಪ್ಪುವೆಸೆದುವಾ ಬೇಂಟೆಗರೊಳ್ (ಶಬಶಂ. ೩–೨೪).
[ಕಕ್ಕಡೆ ? + ಬಲೆ$_1$]

**ಕಕ್ಕಣೆ** 'ಕರ್ಕಡೆ' ನೋ.

**ಕಕ್ಕನೆ** 'ಕಟ್ಕನೆ' ನೋ.

**ಕಕ್ಕನೆಬಿಮೇಲ** (ನಾ). ಒಂದು ಸ್ಥಳದ ಹೆಸರು (?): ಆದಿವಾರದುತ್ತರಾಯಣ ಸಂಕ್ರಾನ್ತಿಯಂದು ಕುಂಬಿಟ್ಟಗೆಯ ಚಂ[ಡೇ]ಸ್ವರಕ್ಕೆ [ಅ]ಪೊಲದ ಕಕ್ಕನೆಬಿಮೇಲ ಬಟ್ಟೆಯಿಂ ಇ[ಪ್ಪಂ]ಕದಲುಂ ಒಡೆಟನ ಕೋಲಲು ಬಿಟ್ಟ ಕೆಯಿ ಮತ್ತರೊಳಗೆ. . . ಮಾಣಿಗಳ್ಗೆ ಮತ್ತ ೨ (ಸೌಇಇ. XX, ೫೧–೧೯ ; 1077). [?]

**ಕಕ್ಕಬಿಕ್ಕರಿ** 'ಕಕ್ಕರಿಬಿಕ್ಕರಿ' ನೋ.

**ಕಕ್ಕರ$_1$** (ನಾ). ೧. ಮಾಸಲು ಬಣ್ಣ: 'ಕಕ್ಕರ(ಮಾಸಲುಬಣ್ಣ)ವು ಸಂಧಿ(ಸಂಜೆ)ಗೊಂಡ ಸಂಜೆಯಲ್ಲಿ' ಎಂದೂ . . . ನಮಗೆ ತೋರುತ್ತಿದೆ (ನಾಡೋಜ. ೧೬೯). ೨. ಒಂದು ಮದ್ಯದ ಹೆಸರು: ಚಿಂತಾಮಣಿಗೇವುದಕ್ಕ ದಳಮಿಲ್ಲೀ ಕಕ್ಕರಕ್ಕಿಂತುಟಪ್ಪುದು ಕಳ್ಳಪ್ಪುದು ತಪ್ಪದೆಂದು ಕುಡಿಧರ್ ಕಾಮಾಂಗಮಂ ಕಾಂತೆಯರ್ (ಪಂಪಭಾ. ೪–೮೮). ೩. ಸಿಹಿ; ಮಧು: ಕಕ್ಕರ ಇಲ್ಲದ ಹಣ್ಣು ಅಕ್ಕರೆ ಇಲ್ಲದ ಹೆಣ್ಣು ಸಿಕ್ಕರೂ ಬೇಡ (ರೂಢಿ). [?]

**ಕಕ್ಕರ$_2$** 'ಕರ್ಕಡೆ' ನೋ.

**ಕಕ್ಕರ$_3$** (ನಾ) ಒಬ್ಬಾತನ ಹೆಸರು: ಕಕ್ಕರ ಮದಲೂರಿಱಿದು ತೊಱುಗೊಣ್ಡೊಡೆ . ಜ್ಗಣಿ ಮಾರ ಶ್ರೀಮೇಱಿತಿಜ್ಗಣಿಯೂರುಳ್ಳಗಿ ಪಲರನ್ . . ಎಱಿದು ಸಗಮೇಱಿದನ್ (ಎಕ. X, ಶಿಡ್ಲಘ. ೩೨–೩ ; 870 ?). [?]

**ಕಕ್ಕರ$_4$, ಕಕ್ರ** (ನಾ). ಒಂದು ಜಾತಿಯ ಪಕ್ಷಿ: "ಕಕ್ಕರಾಖ್ಯವದು ಕಾಟಂಬಕಂ" (ಮಂಗರಾ. ೫೧–೬) ; ಗೌಱು ಕಕ್ಕ[ಪಾಠಾಂ. ಕುಕ್ಕು]ಟ ಸೋಱೆ ಪುಲ್ಲೆಡೆ ಕಿಱುವಕ್ಕಿಗಳನುದುರ್ಚಿದರಲ್ಲಿ ನಲ್ಲಿಕಾಯಿಗಳ ಚಲ್ಲವಡಿದಂತೆ (ಸೊಬಸೋ. ೧೧–೫೦) ; ಕಾಗೆ ಕನ್ನವಿಲು ಕಕ್ಕರ ಕಾಡೆ ಪಾರಿವ (ಕುರಾಸಾಂ. ೨೬–೮೫): ಎಱಲಾವಿಗೆ ಬುಱುಲೆ ಕಕ್ಕರ ಗವುಜು ಚಿಲುವ (ಕಳ್ವಭಾ ೫.೧); ಹರಡೆ ಚಾತಕ ಕಾಕ ಗಿಡುಗ ಕಕ್ಕರ ಹದ್ದು (ಮರುಚಾ. ೧–೨೯). **ಕಕ್ರ**: (ಕಿ). [< ಸಂ. ಕ್ರಕರ]

**ಕಕ್ಕರಗೆಯ್ತ** (ನಾ). ಕಕ್ಕರವೆಂಬ ಮದ್ಯದ ಪಾನದಿಂದ ಮಾಡುವ ಚೇಷ್ಟೆ: ಅಂತು ಕುಡಿಯೆ ಕಕ್ಕರಗೆಯ್ತದಿಂ ತುದಿ[ಪಾಠಾಂ. ಗೆಯ್ತುದಿ, ಗೈತುತುದಿ]ನಾಲಗೆಯೊಳ್ ತೊದ[ಲ್ವೆ]ರಸು ನುಡಿವ ನುಡಿಗ[ಳುಂ] (ಪಂಪಭಾ. ೪–೮೮ ವ). [ಕಕ್ಕರ$_1$ + ಗೆಯ್ತ (< ಕೆಯ್ತ)]

**ಕಕ್ಕರಗೊಂಡ** (ನಾ). ಒಂದು ಸ್ಥಳದ ಹೆಸರು: ತುಂಗಭದ್ರಾನದಿತನ್ನದೀ ತಟದೊಳೊಪ್ಪುವ ಕಕ್ಕರಗೊಣ್ಡಮೆಂಬಧಿಷ್ಠಾನದೊಳುರ್ವ್ವರಾಧಿಪತಿ ಚಕ್ರಧರಂ ನೆಲಸಿರ್ದ್ದ ಬೀಡಿನೊಳ್ (ಎಇ. XV, ೩೪೧–೩೪ ; 1071).
[ಕಕ್ಕರ ? + ಕೊಂಡ$_1$]

**ಕಕ್ಕರನೆ** (ಅ). ಕರಕರನೆ; ಕರಿಕಾಗುವಂತೆ (?): ಪಲ್ಲಟಿಸಿ ಕರ್ಚಿದೆಲೆಯುಂ ಮೆಲ್ಲದೆ [ಪಾಠಾಂ. ನೆ] ಕಕ್ಕರನೆ ಕರಿಯೆ ಖಾರದಿನಧರಂ ಪಲ್ಲಂ ದಷ್ಟಾಧರ ಮಧು ನಲ್ಲನ ಪಲ್ಗಳ್ಕೆ ಕರ್ಗಿ[ಪಾಠಾಂ. ರ್ಚಿ]ತೆನೆ ತೋರ್ಪವಳಂ (ಲೀಲಾವ. ೧೩–೩೩).

ಕಕ್ಕರನೆಕರಿ= "ಬಲು ಕಪ್ಪಾಗು; ಬಹಳವಾಗಿ ಸೀದುಹೋಗು (ಪ್ರಭಣ್ಣ). [?]

**ಕಕ್ಕರವಕ್ಕಿ** (ನಾ). ಒಂದು ಜಾತಿಯ ಪಕ್ಷಿ: ಗಿಡುಗ ಮೊಲಂ ಕವುಂಜು ಮರೆ ಮುಂಗಲಿ ಕಕ್ಕರವಕ್ಕಿ ಕೋಡಗಂ (ಸೂಕ್ತಿಸು. ೩–೧೬೮) ; ಶರಭ ಕೋಕಿಲ ಕೋಕ ಕಾಕ ಕಕ್ಕರವಕ್ಕಿ ಕಲವಿಂಕ ಕಂಕ ಶಕುನಿ (ಸಿದ್ಧಕಾ. ೬–೧೯). [ಕಕ್ಕರ$_4$ + ಪಕ್ಕಿ$_1$]

**ಕಕ್ಕರವಟಿಯಿಗೆ** (ನಾ). ಒಂದು ಬಗೆಯ ಬಟ್ಟೆ (?): ಮೆಟ್ಟುವೆಡೆಗಳೊಳೆಲ್ಲಂ ಪಾಸಿಕಾರೋಹಣದ ಕಕ್ಕರವಟಿಯಿಗೆಯ ಚಿತ್ರಾವಳಿಯ ಪಳಿವೆಡೆಯ ತುಳಿವೆಡೆಯ ನೆಳಲಪಾಣೆಯ ಬಣ್ಣದ ಕಣದ ಬಣ್ಣವಣ್ಣಿಗೆಯ ಜವಳಿಗಳನೆ ಮೊಗಂನೋಡದೆ ಸೂಸಿದಾಗಳ್ (ಆದಿಪು. ೪–೩೪ ವ) ; ಬಾಯಿನಂಗಳ್ವೆರಸುಂಗುರ ದೇವಾಂಗದ ಚಳೆಯ ಪಟಿಯ ಪಟ್ಟಾವಳಿಯೆಕ್ಕಾರೋಹಣದ ಕಕ್ಕರವಟಿಯಿಗೆಯ ದುಗುಳದ ಪಾಗುಡಂಗಳಂ ಪವಣಿಸಲ್ಕರಿದೆನಿಸಿ ಕೊಟ್ಟು (ಮಹಾನೇ. ೯–೪ ವ).
[ಕಕ್ಕರ ? + ಪಟಿಯಿಗೆ]

**ಕಕ್ಕರಸಂಜೆ** (ನಾ). ಕತ್ತಲೆ ಕವಿಯುತ್ತಿರುವ ಸಂಜೆ (?): ಅರಿಗನ ನಾಂಪ ಗಂಡುಮದಟುಂ ನಿಮಗಾವಗಮಾದುದಾಹವಾಜಿರದೊಳದರ್ಕೆನಾಳೆ ನರನಂ ತೆಗೆದುಯ್ವುದು ಧರ್ಮಪುತ್ರನಂ ಗುರು ಪಿಡಿದಪ್ಪನೆಂದವರ ನಾಗಳೆ ಪೂಣಿಸಿ ಪೋಗವೇೞ್ದು ಮಚ್ಚರದೊಳೆ ಮಾಣದೊಡ್ಡಿದನಸುಂಗೊಳೆ ಕಕ್ಕರ[ಪಾಠಾಂ. ತಕ್ಕರ]ಸಂಜೆ ಸಂಜೆಯೊಳ್ (ಪಂಪಭಾ. ೧೧–೮೫). ☞ "ಈ ಪದ್ಯದ ಕಡೆಯ ಭಾಗವನ್ನು 'ಕಕ್ಕ–ಅರಸು–ಅಂಜೆ–ಸಂಜೆಯೊಳ್' ಎಂದು ವಿಂಗಡಿಸಿ ಅನ್ವಯಗೊಳಿಸಬೇಕು. 'ಕಕ್ಕ–ಕಕ್ಕಲ' ಮೊದಲಾದುವುಗಳು ಒಂದೇ ಹೆಸರಿನ ರೂಪಾಂತರಗಳೆಂಬುದು ಇತರ ರಾಜವಂಶಾವಳಿಯಿಂದ ಗೊತ್ತಾಗಿದೆ. 'ಸಂಸಪ್ತಕರನ್ನು ಹಾಗೆ ಕಳುಹಿಸಿದ ಕಕ್ಕರಸ(ಸುಯೋಧನ)ನು ವೈರಿಗಳಂಜುವಂತೆ ಸಂಜೆಯ ಸಮಯದಲ್ಲಿ ಯುದ್ಧಕ್ಕಣಿಯಾದನು' ಎಂದೂ, ಅದರೊಡನೆ, 'ಕಕ್ಕರ (ಮಾಸಲು ಬಣ್ಣ)ವು ಸಂಧಿ(ಸಂಜೆ)ಗೊಂಡ ಸಂಜೆಯಲ್ಲಿ' ಎಂದೂ, ಪ್ರಕೃತಾಪ್ರಕೃತಾರ್ಥಗಳು ಅಲ್ಲಿ ಸಂಧಿಸಿರಬೇಕೆಂದು ನಮಗೆ ತೋರುತ್ತಿದೆ" (ನಾಡೋಜ. ೧೬೯) ; "'ಕಕ್ಕರಸಂಜೆ' ಎಂಬ ಪಾಠಕ್ಕೆ ಪ್ರತಿಯಾಗಿ 'ಕಕ್ಕಸರಂಜೆ' ಎಂದಾಗಲಿ, 'ಕಕ್ಕರರಂಜೆ' ಎಂದಾಗಲಿ ಇದ್ದಿರಬಹುದು, ಕಕ್ಕಸ < (ಸಂ) ಕರ್ಕಶ = ಕಕ್ಕರ < ಕರ್ಕರ – ಕಠೋರ, ಕಠಿನ; ಎಂದರೆ ಕದನದಲ್ಲಿ ಕರ್ಕಶರಾದವರು, ಕದನ ಕರ್ಕಶರು ಎಂದು ಅರ್ಥವಾಗಬಹುದು" (ಪಂಪದೀ. ೪೦೯).
[ಕಕ್ಕರ$_1$ ? + ಸಂಜೆ]

**ಕಕ್ಕರಸೆ** (ನಾ). ಒಂದು ಊರಿನ ಹೆಸರು (?): ಕಕ್ಕರಸೆಯ ಮಣ್ಣಗಂಬೀರದ ಪೋಜಿಗಂ ಸಮಸ್ತ ಭರನಿರೂಪಿತನಾಗಿ ಪೆರ್ಗ್ಗಡೆತನಂಗೆಯ್ಯುತ್ತಂ (ಎಕ. VIII, ಸೊರಬ. ೪೬೪–೧೪ ; 954). [?]

**ಕಕ್ಕರಿ** (ನಾ). ದೋಷ; ನ್ಯೂನತೆ; ಕುಂದು (?): ಎಡೆಗಳೊಳ್ ತೆಱಪಂ ನಡೆ ನೋಡಿನೋಡಿ ಮೆಯ್ ಬೇಸಱುಮುತ್ತು ಕಕ್ಕರಿ ಕರಂ ಬಡಪಟ್ಟರಲೊಂದು ಸಂದು ಕಟ್ಟಾಸೆಯನಿತ್ತುದು (ನಳಚಂ. ೪೯೬).
[ಪ್ರಾ. ಕಕ್ಕರಾಇಯ (< ಸಂ. ಕರ್ಕರಾಯಿತ)]

**ಕಕ್ಕರಿಬಿಕ್ಕರಿ, ಕಕ್ಕಬಿಕ್ಕರಿ** (ನಾ). ಅಂಕುಡೊಂಕುತನ; ವಕ್ರತೆ (ಕಿ). **ಕಕ್ಕಬಿಕ್ಕರಿ**: (ಕಿ).
[ಕಕ್ಕರಿ$_0$ + ಬಿಕ್ಕರಿ$_0$. / ತೆಲು. ಕಕ್ಕರಿಬಿಕ್ಕಿರಿ]

**ಕಕ್ಕಲ** (ನಾ). ಒಬ್ಬಾತನ ಹೆಸರು: ಕಕ್ಕಲನ ತಮ್ಮನಪ್ಪ ಬಪ್ಪುವನಂಕಕಾಱನಂ (ಪಂಪಭಾ. ೯–೫೨ ವ) ; ಶ್ರೀಮತ್ ಕಕ್ಕಲದೇವ ಪ್ರಿತುವೀರಾಜ್ಯಂಗೆಯೆ (ಎಕ. VIII, ಸೊರಬ. ೪೫೫–೨ ; 972). [?]

**ಕಕ್ಕಲಾತಿ** 'ಕಕ್ಕುಲತೆ' ನೋ.

**ಕಕ್ಕವಡ,** ಕಕ್ಷವಡ (ನಾ). ಮಲ್ಲಯುದ್ಧದಲ್ಲಿ ಒಂದು ವರಸೆ; ಪಾದಭಂಜನವೆಂಬ ಬಿನ್ನಣ. ℙ ಎದುರಾಳಿಯ ಸೊಂಟವನ್ನು ಎರಡುತೊಡೆಗಳ ನಡುವೆ ಸಿಕ್ಕಿಸಿಕೊಂಡು ಪಾದಗಳನ್ನು ಕಂಕುಳುಗಳಿಗೆ ಆನಿಸಿ ಎದುರಾಳಿಯ ಒಂದು ಪಾದವನ್ನು ತಿರಿಚಿ ಹಿಂಸಿಸುವುದು: ಕಮ್ಮರಿ ಮುಹುಡಂ ಜವತ್ಸವಡಿ ಪಾಸಗೆ ಕಕ್ಕವಡುಮ್ಮಹಗ್ಗಮಂತರಲಗಡಂ. . . ಎನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಪುವಿ. ೨೬-೧೮). **ಕಕ್ಷವಡ:** ಎಸೆವ ಮುಹಗ್ಗಳಂ ಠಡಕಿ ಕಕ್ಷವಡಂ ಮುಹಡಂ ತುಳಾಡಿ . . . ಎನಿಪ್ಪ ಜಟ್ಟಿಗನ ನಚ್ಚಿನ ಬಿನ್ನಣ ಮೊಪ್ಪೆ ಕಾದಿದರ್ (ಚಂದ್ರಪು. ೫-೬೮). [< ಸಂ. ಕಕ್ಷವಡ ?]

**ಕಕ್ಕವಿಕ್ಕಿ** 'ಕಕ್ಕಾವಿಕ್ಕಿ' ನೋ.

**ಕಕ್ಕಶ** 'ಕಕ್ಕಸ' ನೋ.

**ಕಕ್ಕಸ,** ಕಕ್ಕಶ, ಕರ್ಕಸ (ನಾ). ೧. ಕಷ್ಟ; ಪ್ರಯಾಸ; ಆಯಾಸ; ಏದುವುದು: ದಿಕ್ಕುದಿಕ್ಕಿನ ಹಗ್ಗದ ಹೂಟೆಯಿಂದತಿ ಕಕ್ಕಸದಿಂ ನಡೆಯಿಪರು (ಕುರಾಸಾಂ. ೯-೪೮); ಕಕ್ಕಸ ನಿನಗಿದು ಹವಣಲ್ಲ ಛೇದಿಸೆ ವೆಕ್ಕಸವಹುದು (ಮೋಹತ. ೩೩-೨೧); ವೃಥಾ ಗಳಹಬೇಡ ನಾವೀಗ ಸಾರಿದೆವು ಮುಂದೆ ಕಕ್ಕಸವಹುದು (ಜೈಮಿಭಾ. ೨-೬೨). ೨. ಕಠಿಣತೆ; ಕ್ರೂರತನ; ನಿರ್ದಯತೆ; ಉಗ್ರತೆ: ಕಕ್ಕಸದ ಕಮ್ಮಬಿರು ನಿಡಿದಿಕ್ಕುಳುಗಳಿಂದವಚಿ ಪಿಡಿದು ತಂದು (ಸಿದ್ಧರಾ. ೭-೧೯); ಕಕ್ಕಸದ ಬಾಣವೊಂಬತ್ತಱಿಂ ಹರಿವರೂಥವನೆಚ್ಚು ಬೊಬ್ಬಿಱಿದನು (ಚೆಬಪು. ೩೨-೧೧); ಕಕ್ಕಸದ ಬಿಸದುರಿಯನುಗುಳ್ವ ಪಾವಂ ತಂದು ಪಕ್ಕಿಗೈದವರುಂಟೆ (ನಂದಿಮಾ. ೧೦-೫೦); ರಾಣಿ ಯಾರನ್ನೇ ಆಗಲಿ ಎಂದೂ ಕಕ್ಕಸದಿಂದ ನುಡಿಸಿದವಳಲ್ಲ (ಸವತಿ. ೮೫). ೩. ಸೊಕ್ಕು; ಉಬ್ಬು: ಕಿಕ್ಕಿಱಿದು ಬೆಳೆದ ರಸವಾಳೆವಣ್ಗೊನೆಗಳಂ ಕಕ್ಕಸದೆ ಬೆಳೆದ ತೆಂಗಾಯ್ಗೊನೆಗಳಂ (ಚೆಬಪು. ೪೫-೨೯). ೪. ಜೋರು; ರಭಸ: ಆಹವದೊಳೆಮ್ಮೊಡನೆ ಕಕ್ಕಸವನು ಮಾಡಿದೊಡವರನು ಯಮೆಯಿಕ್ಕದೆ ಮುನ್ನ ಬಿಕ್ಕುವೆವು (ತ್ರಿಪುಸಾಂ. ೧೬೫); ಎಕ್ಕತೂಳದ ಬಂಟನಾ ವಸುದೇವನು ಕಕ್ಕಸದಿಂದಿದಿರಾದ (ನೇಮಿಸಂ. ೧೨-೮೭); ಕಕ್ಕಸದಿಂ ಕಾದಿ ಹಿಮ್ಮೆಟ್ಟಿ ಗಜ ಮಱಿ ವೊಕ್ಕಡೆ ಬಿಡೆನು (ಮೋಹತ. ೩೪-೩೮); ಕಕ್ಕಸದ ಮಾತು ಬಂದಾಗ ನಾಲಗೆ ಸಿಕ್ಕುವಂತಿದನೆಸಗಿದೆನು (ಭರಚ. ೩೮-೧೩೩). **ಕಕ್ಕಶ:** ೨. ಕಕ್ಕಶವೆಂಬುದು ಸತಿಯರ ಕುಚದೊಳು (ಅಂಜಚ. ೨-೨೫). **ಕರ್ಕಸ:** ೨. ಲೆಕ್ಕಿಸರು ನಮ್ಮವನು ಪಲವೇಂ ಚಿಕ್ಕಹರೆಯದಿ ಮೊದಲು ನಮ್ಮೊಳು ಕರ್ಕಸವ ಬೆಳಸುವರು (ಸಾಳ್ವಭಾ. ೨೨-೩೧).

[< ಸಂ. ಕರ್ಕಶ]

**ಕಕ್ಕಸಂಬಡು,** ಕಕ್ಕಸಬಡು (ಕ್ರಿ). ಕಷ್ಟಪಡು; ಚಡಪಡಿಸು: ಬೆಳ್ಳಕ್ಕರಿಗರೊಳ್ ಸಿಲ್ಕಿ ಕಕ್ಕಸಂಬಡುವೆರಡುಂ ವೇದಾಂತಂಗಳುಂ (ಚಕವಂ. ೬೮-೧೦). **ಕಕ್ಕಸಬಡು:** ಕಿಕ್ಕಿರಿ ತುಂಬಿದೆ ಭೂಮಿಯ ಕಣಜ ಕಕ್ಕಸಬಡುತಿದೆ ಬೊಕ್ಕಸದೊಡಲು (ಗರಿ. ೬೦-೧೩); ಅದನ್ನು ನೋಡಿ ವೆಂಕಪ್ಪನು ಮತ್ತಿಷ್ಟು ಕಕ್ಕಸಬಟ್ಟನು (ಫಲಸಂ. ೭); ಕೆಲವರು ನಕ್ಕರು; ಹಲವರು ಕಕ್ಕಸಬಟ್ಟರು (ಬೆಟ್ಟಹೊ. ೬೧). [ಕಕ್ಕಸ + ಪಡು$_1$]

**ಕಕ್ಕಸಂಬೆಱು,** ಕಕ್ಕಸವೆಱು (ಕ್ರಿ). ೧. = ಕಕ್ಕಸಂಬಡು: ಆ ರಕ್ಕಸಂ ಕಕ್ಕಸಂಬೆತ್ತೊಳಱುತ್ತುಂ ಬಿಳ್ದು ಪಾತಾಳದೊಳೆ ಮಿಡುಕನೇ ಪೇಳ್ (ಶಬಶಂ. ೨-೧೫). **ಕಕ್ಕಸವೆಱು:** ೨. ದರ್ಪತೋರು; ಸೊಕ್ಕು ತುಂಬು: ಕಕ್ಕಸವೆತ್ತು ಕಾದುವ ನೃಪೋತ್ತಮರೆಲ್ಲ . . . ತೊತ್ತಿನ ಮಕ್ಕಳಂತೋಲಗಿಸುವರು (ಮೋಹತ. ೨೦-೪೪). ೩. ಕಠಿನವಾಗು: ಸೆಳೆನಡುವಿನ ಕಕ್ಕಸವೆತ್ತ ಬಲ್ಮೊಲೆದಳೆದ ಹೆಂಡತಿಯ ಕೈಪಿಡಿದು (ಮೋಹತ. ೧೬-೧೪). [ಕಕ್ಕಸ + ಪೆಱು$_1$]

**ಕಕ್ಕಸಗಾರ** (ನಾ). ಕ್ರೂರನಾದ ಮನುಷ್ಯ (ಕ).

[ಕಕ್ಕಸ + -ಗಾರ (< -ಕಾಱ)]

**ಕಕ್ಕಸಗಾರ್ತಿ** (ನಾ). ಕ್ರೂರಿಯಾದ ಹೆಂಗಸು (ಕ).

[ಕಕ್ಕಸಗಾರ + -ತಿ$_1$ (< -ಇತ್ತಿ)]

**ಕಕ್ಕಸಗೊಳ್** (ಕ್ರಿ). ಕಷ್ಟಪಡು; ಪ್ರಯಾಸಪಡು: ಕಡುನೇಮವಿಡಿದು ಕಕ್ಕಸಗೊಂಡು ಮುನಿವರರೊಡರಿಸುವುಗ್ರತಪಗಳು (ಹದಿಬ. ೨-೨೮).

[ಕಕ್ಕಸ + ಕೊಳ್$_1$]

**ಕಕ್ಕಸಜವ್ವನ** (ನಾ). ಬಲಿತ ಯೌವನ; ಕೊಬ್ಬಿದ ಯೌವನ: "ಕರ್ಕಶಯೌವನ - ಕಕ್ಕಸಜವ್ವನ" (ಶಮದ. ೨೮೯ ಪ್ರಯೋ).

[ಕಕ್ಕಸ + ಜವ್ವನ]

**ಕಕ್ಕಸಜವ್ವನೆ** (ನಾ). ಬಲಿತ ಯೌವನವುಳ್ಳವಳು; ನವಯುವತಿ: ಪಕ್ಕಿ ಸೋವ ಕಕ್ಕಸಜವ್ವನೆಯರ ಮೆಲ್ಲುಲಿ ಕೇಳಿವರ್ಪುದು (ರಾಮಾಶ್ವ. ೯-೮). [ಕಕ್ಕಸಜವ್ವನ + -ಎ$_2$]

**ಕಕ್ಕಸಬಡು** 'ಕಕ್ಕಸಂಬಡು' ನೋ.

**ಕಕ್ಕಸಮೂದಲೆ** (ನಾ). ಕಠೋರವಾದ ಮೂದಲೆ, —ಚುಚ್ಚುಮಾತು: ನಿಷ್ಕಾರುಣಿಕತೆಯು, ಕಕ್ಕಸಮೂದಲೆಯು, ನಿಸ್ಸಹಾಯರನ್ನಿರಿವ ಹಂದೆಯ ಹಮ್ಮು (ಬೆಟ್ಟಅ. ೧೩-೭).

[ಕಕ್ಕಸ + ಮೂದಲೆ]

**ಕಕ್ಕಸವೆಱು** 'ಕಕ್ಕಸಂಬೆಱು' ನೋ.

**ಕಕ್ಕಸು,** ಕಕ್ಕಸ್ಸು (ನಾ). ಪಾಯಖಾನೆ; ಶೌಚಕೂಪ: ಕೋಣೆಗೆ ಸೇರಿಯೇ ಸ್ನಾನದ ಮನೆ, ಕಕ್ಕಸು, ಮುಖತೊಳೆಯಲು ತೊಟ್ಟಿ (ದಿಲ್ಲಿಪ. ೭). **ಕಕ್ಕಸ್ಸು:** ಜಲಗಾರರಿಬ್ಬರು ಬಂದು, ಈ ಮನೆ ಕಕ್ಕಸ್ಸು ಗುಡಿಸುವವನು ತಾನು, ತಾನು ಎಂದು ಜಗಳಾಡಿದರು (ರೂಪಸಂ. ೧೧).

[← ಡಚ್. ಕಖುಯಿಸ್. / ತಮಿ. ಕಕ್ಕುಸು; ಮಲ. ಕಕ್ಕೂಸ್; ತುಳು. ಕಕ್ಕುಸ್, ಕಕ್ಕೊಸು]

**ಕಕ್ಕಸ್ಸು** 'ಕಕ್ಕಸು' ನೋ.

**ಕಕ್ಕಳಗೆಱಲ್** (ಕ್ರಿ). ೧. ಶಿಥಿಲವಾಗು; ಕಳಚಿಬೀಳು (?): ಅಂತು ಪಿಱಿಯೆ ಕಕ್ಕಳಗೆಱಲ್ದು ಸೊಪ್ಪುಸೊಪ್ಪೆಲ್ವಂ ಕುದಿಯಿಸೆ ತತ್ತಳಗುದಿದು (ಶಾಂತಿಪು. ೭-೯೫ ವ). ೨. ಜಾರು (?): ಅಳುಕೆ ನೆಲವಕ್ಕೆ ತನು ಕಿಸುಗುಳನಾಗಿ ಕನಲ್ದುಕ್ಕಿ ಕಿಡುಕೆ ಕೊಕ್ಕಳಗೊಳೆವಂ ಕಕ್ಕಳಗೆಱಲ್ದು ಮೆಯ್ಯಲೆ ಕುಕ್ಕುಳಗಂದಿ ಪೊಂದೆ ಚಿತ್ತಮಾ ತುಂಬಿಗೆಯಾ (ಬಂಹರಿ. ೧೩-೩೪). [ಕಕ್ಕಳ ? + ಕೆಱಲ್$_1$]

**ಕಕ್ಕಾಟೆ** (ನಾ). ಪುಕ್ಕ; ಹೇಡಿ (?): ಎಂತೆಂತವರಿಗೋ ಅಂತರಾಟ ಸುಮ್ಮನಿರೋ ಕಕ್ಕಾಟ (ಹುಟ್ಟಹ. ೧೦೭). [?]

**ಕಕ್ಕಾಡಿಚಕ್ರ** (ನಾ). ದೀಪಗಳನ್ನುಳ್ಳ ಚಕ್ರ; ಅಗ್ನಿಚಕ್ರ (?): ಇದಿರಾಗಿ ಯಿತ್ತೆರದ ಜೋಡು ಜವನರ ಕೊಂಡವೆನೆ ಕಕ್ಕಾಡಿಚಕ್ರವ ಕಾಲಚಕ್ರೊಡಗೂಡಿದಂದದಿ ಜೋದರಿರಿದಾಡಿದರು ಭರವಶದಿ (ಜೈರಾಮಾ. ೬೦-೩೫). [ಕಕ್ಕಾಡಿ$_0$ + ಚಕ್ರ]

**ಕಕ್ಕಾಬಿಕ್ಕ** (ನಾ). ಹೆದರಿದವನು; ಗಾಬರಿಗೊಂಡವನು (ರೀವ್ಸ್); "ಅಂಜುಬುರುಕ; ಹೇಡಿ" (ಜಾನಕೋ. ೩೧).

[ಕಕ್ಕಾಬಿಕ್ಕು (< ಕಕ್ಕಾವಿಕ್ಕಿ) + -ಅ$_7$]

**ಕಕ್ಕಾಬಿಕ್ಕಿ** 'ಕಕ್ಕಾವಿಕ್ಕಿ' ನೋ.

**ಕಕ್ಕಾಬಿಕ್ಕು** 'ಕಕ್ಕಾವಿಕ್ಕಿ' ನೋ.

**ಕಕ್ಕಾವಾಡಿಕಾಯಿ** (ನಾ). ಹಾವುಮೆಕ್ಕೆ; ಕಹಿಮಿಣಕೆ: "ಇಂದ್ರವಾರುಣಿ- ಕಾಡಕವಡೀಕಾಯಿ, ಕಕ್ಕಾವಾಡೀಕಾಯಿ" (ಗಂಗಾಮ. ೩೨).

[ಕಕ್ಕಾವಾಡಿ$_0$ + ಕಾಯಿ$_4$ (< ಕಾಯ್$_4$)]

**ಕಕ್ಕಾವಿಕ್ಕಿ**, ಕಕ್ಕವಿಕ್ಕಿ, ಕಕ್ಕಾಬಿಕ್ಕಿ, ಕಕ್ಕಾಬಿಕ್ಕು, ಕಕ್ಕುಬಿಕ್ಕು (ನಾ). ದಿಕ್ಕುತೋಚದಿರುವುದು; ಗಾಬರಿ; ದಿಗ್ಭ್ರಮೆ: ಸೀತಕ್ಕನ ಈ ಅನಿರೀಕ್ಷಿತ ಆವೇಶವನ್ನು ಕಂಡು ಸುಬ್ಬಕ್ಕನವರು ಕಕ್ಕಾವಿಕ್ಕಿಯಾದರು (ಇತಿಶ್ರೀ. ೬೮); ಹುಡುಗರು ಕಕ್ಕಾವಿಕ್ಕಿಯಾಗಿ ... ಬೆರಳಿಟ್ಟು ಗುರುಗಳನ್ನು ತೋರಿಸಿದರು (ಜಯಂತ. ೨೩); ಶೈಲಿಯೂ ಅವಳ ಮಾತಿನಿಂದ ಒಂದುಕ್ಷಣ ಕಕ್ಕಾವಿಕ್ಕಿಯಾದಳು (ತೀಮೋಡ. ೧೪). **ಕಕ್ಕವಿಕ್ಕಿ**: ನಿತಾಯಿಬಾಬುಗಳು ಕಕ್ಕವಿಕ್ಕಿಯಾಗಿ ಅಂದರು (ಕುರಿಹಿಂ. ೨೬). **ಕಕ್ಕಾಬಿಕ್ಕಿ**: ಬೃಹನ್ನಳೆಯು ಕಕ್ಕಾಬಿಕ್ಕಿಯಾಗಿ ಆಡುವುದನ್ನು ಕಂಡು ಉತ್ತರನು ತಾನೇ ಬಂದು ಕವಚವನ್ನು ತೊಡಿಸಿದನು (ವಚಭಾ. ೨೦೪); ಅವಳು ಕಕ್ಕಾಬಿಕ್ಕಿಯಾಗಿ ಸುತ್ತಲೂ ಕಣ್ಣರಳಿಸಿ ನೋಡತೊಡಗಿದಳು (ಮುತ್ತೈದೆ. ೨೮); ಹಕ್ಕಿಮಾತಿನಿಂದ ಕಕ್ಕಾಬಿಕ್ಕಿಯಾದರು (ಹುಟ್ಟಿಹ. ೧೨೯). **ಕಕ್ಕಾಬಿಕ್ಕು**: ಅವರು ಕೇಳಿದ ಪ್ರಶ್ನೆಯಿಂದ ನನಗೆ ಕಕ್ಕಾಬಿಕ್ಕಾಯಿತು (ರೂಢಿ). **ಕಕ್ಕುಬಿಕ್ಕು**: ಶ್ರೀಧರನ ಮಾತಾಪಿತೃಗಳು ಕಕ್ಕುಬಿಕ್ಕಾಗಿ ದಿಗ್ಭ್ರಮೆಯೊಡನೆ ನಿಂತಲ್ಲಿಯೇ ನಿಂತಿದ್ದರು (ಮೊಗ್ಗು. ೬೬); ಕೋದಂಡರಾಮಯ್ಯ ಕಕ್ಕುಬಿಕ್ಕಾಗಿ ನಿಂತುಕೊಂಡ (ನಡೆದಾ. II, ೯೩೧).

[< ಸಂ. ಕಾಕಪಿಕ ?. / ತುಳು. ಕಕ್ಕಾಬಿಕ್ಕಾರೆ; ತೆಲು. ಕಕಪಿಕ, ಕಕವಿಕ, ಕಕಾಪಿಕ, ಕಕಾವಿಕ]

**ಕಕ್ಕಿ**, ಕಾಕೀ (ನಾ). (ಉಕ) ಚಿಕ್ಕಮ್ಮ; ಚಿಕ್ಕಪ್ಪನ ಹೆಂಡತಿ: ಕಕ್ಕಿ ತಾಯಿಯನ್ನು ಕಂಡೇ ಇಲ್ಲವಂತೆ (ವಾತ್ಸಲ್ಯ. ೯); ಆ ಅಗ್ರಹಾರದಲ್ಲೆಲ್ಲಾ ಅವರು 'ಕಕ್ಕಿ'ಯೆಂದು ಪ್ರಸಿದ್ಧರಾಗಿದ್ದರು (ಪ್ರತಿಬಿಂ. ೨೬); ಅವರ "ಕಕ್ಕಿ" ಇರದಿದ್ದರೆ, ಅವರು ಏನಾಗುತ್ತಿದ್ದರೊ! (ದಕ್ಷಿನ. ೧೬). **ಕಾಕೀ**: "ಇವತ್ತು ಪಾಠ ಇರಲಿಲ್ಲ ಕಾಕೀ" ಎಂದಳು ಶಾಂತಾ (ಜನಿವಾ. ೬೦).

[← ಪಾರ. ಹಿಂ. ಕಾಕೀ; ಮರಾ. ಕಾಕೀ, ಕಾಕೂ]

**ಕಕ್ಕಿವಳ್ಳಿ** (ನಾ). ಒಂದು ಊರಿನ ಹೆಸರು: ಶ್ರೀವನಿತಾಲಯರ ಆಳ್ವರಾ ನಾರದಿಗೆ ಕಕ್ಕಿವಳ್ಳಿಯೋನ್ ಪುಕ್ಕೊಳ್ಳಿ ಕೊಟ್ಟು ಸರ್ವ್ವಪರಿಹಾರಂ ಕೊಟ್ಟುರ್ (ಎಕ. VI, ಮೂಡಗೆ. ೨೬-೩; 950 ?).

[ಕಕ್ಕಿ ? + ಪಳ್ಳಿ$_1$]

**ಕಕ್ಕಿಸು** (ಕ್ರಿ). ೧. ಕಕ್ಕುವಂತೆ ಮಾಡು; ವಾಂತಿ ಮಾಡಿಸು. ೨. (ಆಲಂ) ಅನ್ಯಾಯದಿಂದ ಹಿಡಿದುಕೊಂಡದ್ದನ್ನು ತಿರುಗಿ ಒಪ್ಪಿಸುವಂತೆ ಮಾಡು: ನಿನಗೆ ಸೊಕ್ಕೇಱಿತಾ ಯಾಗಪಶುರುಚಿಗಳಿಂದದಂ ಕಕ್ಕಿಸುವೆನೀಕ್ಷಣಂ (ಚಿಬಪು. ೩೨-೧೧). [ಕಕ್ಕು$_1$ + -ಇಸು$_3$]

**ಕಕ್ಕು**$_1$ (ಕ್ರಿ). ೧. ಕಾರಿಕೊಳ್ಳು; ವಾಂತಿಮಾಡು: ಕರೀಂದ್ರನೊಳ್ ಸುರೇಂದ್ರನ ಕರೀಂದ್ರಮಾದೊಡಂ ಕೈಯಿಕ್ಕಿದೊಡೆ ಕಕ್ಕದಿರದೆಂದು ನೀಡುಂ ನೋಡುತ್ತ (ಕುಸುಮಾ. ೧೪-೧೪೪ ವ); ದಕ್ಕಿಸಲಾಱದೆಯಾ ಮುನಿಯಾ ಕೂಳ ಕಕ್ಕಲು (ನೇಮಿಸಂ. ೨೦-೩೪); ಸೊಕ್ಕಿದ ಕುಂಭಾಂಡ ರಣದೊಳು ರಕುತವ ಕಕ್ಕಿದ (ಮೋಹತ. ೪೦-೬೨); ಕಕ್ಕುವರ್ ಮೂಗಿನಿಂ ಶೋಣಿತವನು (ಚಿಬಪು. ೨೮-೨೬); ಮೆಲ್ದುದಂ ಕಕ್ಕು ಕಕ್ಕೆಂದು (ಚಿಕವಿ. ೩-೫೬). ೨. (ಆಲಂ) ತೆಗೆದುಕೊಂಡದ್ದನ್ನು ಮರಳಿ ಒಪ್ಪಿಸು: ಬಲವಾಗಿ ತದಕಿದರೆ ಸರಿ, ಅವನು ಹಣ ಕಕ್ಕುತ್ತಾನೆ (ರೂಢಿ). ೩. ಒಳಗಿನ ವಿಷಯವನ್ನೆಲ್ಲ ತೋಡಿಕೊಳ್ಳು, —ಹೇಳು: ಸಿಕ್ಕವರೊಡನೆಲ್ಲ ತನ್ನ ಹಿಂದಿನ ಗೋಳಿನ ಕಥೆಯನ್ನು ಕಕ್ಕುತ್ತಾಳೆ (ಹಳ್ಳಿಹಾ. ೧೧೦); ಎಲ್ಲಾ ಸಮಾಚಾರವನ್ನೂ ಕಕ್ಕಲೇಬೇಕು (ದೌಲತ್. ೮೪)

[ದೇ. ‖ ತಮಿ. ಮಲ. ಕಕ್ಕು; ತುಳು. ಕೊಡ. ಕಕ್ಕ್; ತೆಲು. ಕಕ್ಕು, ಕ್ರಕ್ಕು; ಗೊಂಡಿ. ಕಕ್ಕಾನಾ; ಮಲ್ತೊ. ಕಜ್ರೆ = ಉಗುಳು]

**ಕಕ್ಕು**$_2$ (ನಾ). ೧. ವಾಂತಿ; ಕಾರಿಕೆ; ವಮನ: "ಸಿಗುರೊಳುದ್ಗಾರದೊಳ್ ಕಕ್ಕು" (ಶಬ್ದಮಂ. ೮೦). ೨. ಕಾರಿಕೊಂಡ ವಸ್ತು (ಕ).

[< ಕಕ್ಕು$_1$]

**ಕಕ್ಕು**$_3$ (ನಾ). ೧. ಗರಗಸಮುಂತಾದುವುಗಳ ಹಲ್ಲು, —ಮುಳ್ಳು: ಕಕ್ಕಿನ ಪವಳದ ಮಣಿಗಳನಿಕ್ಕುವವರ್ಪಲರೊ ಮುತ್ತಿನ್ನೈಸರಮಂ ಕೇಳಿಕ್ಕುವವರ್ಪಲರೊ (ಧರ್ಮಾಮೃ. ೧-೨೦೦); ವಿರಹಿಗಳ ಚಿತ್ತಮಂ ಸೀಳ್ವ ಕಾಮನ ಕಯ್ಯ ಗರಗಸದ ಕಕ್ಕುಗಳೊ (ಹಚಕಾ. ೩-೨೬). ೨. ಸಿಗುರು; ಸಿಬುರು: "ಸಿಗುರೊಳುದ್ಗಾರದೊಳ್ ಕಕ್ಕು" (ಶಬ್ದಮಂ. ೮೦). ೩. ಒರಟಾಗಿರುವಿಕೆ: ತೆಳ್ಪಿತ್ತು ಕೆಂಪಸಿದೆನಿಪ್ಪ ನಾಲಗೆ ಲೇಸು ಕಕ್ಕು [ಪಾಠಾಂ. ಕಪ್ಪು] ಕವಲಾಗೆ ಪೊಲ್ಲಂ (ಮಂಗರಾ. ೮೨-೧೬). ೪. ತೀಕ್ಷ್ಣತೆ; ಹರಿತ; ಚುರುಕು (ಕ).

[ದೇ. ‖ ತಮಿ. ಮಲ. ಕರುಕ್ಕು, ಕರಟು; ತುಳು. ಕರಡ್, ಕರಡು; ತೆಲು. ಕರಕು, ಕರುಕು; ಪರ್ಜಿ. ಖರ]

**ಕಕ್ಕು**$_4$ (ನಾ). ಒಂದು ಪ್ರದೇಶದ ಹೆಸರು: ಬಡಗಣ ದೆಸೆಯೊಳ್ ಕಕ್ಕಿನ ಕೋಹು ಅದಱ ಮೂಡಣ ಬೀರಜ್ಜನ ಕೆಱೆ (ಎಕ. II, ೩೪೫-೬೪; 1159). [?]

**ಕಕ್ಕುಂದಱೆ**, ಕಕ್ಕುದಱೆ (ನಾ). ಗರಗಸದಂತೆ ಹಲ್ಲುಗಳುಳ್ಳ ಒಂದು ಆಯುಧ (?): "ಕಕ್ಕುಂದಱೆಯೆಂದು ಕಕ್ಕುದಱೆ" (ಕಶಸಾ. ೧೬-೩೧೫); ಕುಸುಂಕುಜುಗೊಂಡೆಸಱ ಬಾಱ್ವೇಲಿಯ ಕೇಸರದ ಕಕ್ಕುಂದಱೆಯ ಕಾಪಿನ ಕಂಪಿನ ಕೋಶಮಿರ್ಪಂತೆ (ಲೀಲಾವ. ೮-೫೧ ವ); ಕಕ್ಕುಂದಱೆ, ದಕ್ಕುಂದಲೆ (ಶಮುದ. ೧೬೨ ಪ್ರಯೋ); ಬಗ್ಗಂದೊವಲ್, ಬಗ್ಗದೊವಲ್; ಕಕ್ಕುಂದಱೆ, ಕಕ್ಕುದಱೆ (ಶಬ್ದಾನು. ೩೬೯ ಪ್ರಯೋ); ಚೆಂದಳಿರಾಂತಶೋಕೆ ಮಣಿಮಂಟಪಂ ... ಕೇತಕಿ ಸುತ್ತುವೇಲಿ ಕಕ್ಕುಂದಱೆಯಾಂತ ಕೋಟೆ ಮದನಂಗೆನೆ ಕಂಗೊಳಿಸಿರ್ದುದಾ ವನಂ (ವೃಷವಿ. ೪-೩೩). **ಕಕ್ಕುದಱೆ**: "ಕಕ್ಕುಂದಱೆಯೆನಲು ಕಕ್ಕುದಱೆಯುಮದಕ್ಕುಂ" (ಕವಿಕಂ. ೧೪೬); ಅಂಗಜನೃಪನ ಬಿನದದರಮನೆಯೆಂದು ಮಧುವನಕೆ ಕಕ್ಕುದಱೆಯಂ ನೆಟ್ಟನೋ ... ಎನಲ್ ವನಮನುಱೆ ಬಳಸಿ ಕಂಗೊಳಿಪ ಪೊಂಗೇದಗೆಗಳೊಪ್ಪಿದುವು (ಚಿಬಪು. ೪೫-೧೮); ಎದ್ದಡರಿದು ನೂಕುವ ಕಕ್ಕುದಱೆ ಕೇತಕೆಸಳ ದಸಿಯಲಿ (ನಿಜಸಾಂ. ೯೦); ಅಗಣಿತ ಕಕ್ಕುದಱೆ ಬದ್ದುಗಳಲೊಪ್ಪುವ ತಳ್ಪುವಲಗೆಗಳು (ಪ್ರಹ್ಲಾಚ. ೪-೩೮). [ಕಕ್ಕು$_3$ + ತಱೆ$_5$ ?]

**ಕಕ್ಕುಂಬ** (ನಾ). (?) : ಕಾಡಬೇಲಿಯಂ ಮಾರ್ಕಾಡನಱೆಯಲುಂ ಮೂಡಿಗೆ ಕಕ್ಕುಂಬಂ [ಪಾಠಾಂ. ಕುಕ್ಕುಂಬಂ, ಕುಕ್ಕಂಬಂ] ಸುಱೆಸಿ ಜೊಂಪಂ ಬೀಡು ಬಿಡುವಿಂಬು (ಪಂಪಭಾ. ೫-೪೧); ಅಮರೆ ಮಾಡಿದ ಬಿಟ್ಟುಳಿಯ ಕಕ್ಕುಂಬ ತೊಡಂಬೆಯ ಮೂಡಿಗೆಯ ಕದಳಿಕೆಯ ಕಂಡಪಟಂಗಳುಮಂ (ಪಂಪಭಾ. ೫-೪೬ ವ); "ಕಕ್ಕುಂಬ - ?" (ಪಂಪಭಾ. ಕೋಶ). ℙ "ಕುಕ್ಕಂಬ (ಕಿಱೆದು + ಕಂಬ) ಗಳೆಂದರೆ, ಇಕ್ಕಡೆಯಲ್ಲಿ ಬಾಗಿದ ಡೇರೆಯ ಸೂರುಗಳನ್ನು ಹೊತ್ತು ನೆಲೆಗೊಳ್ಳುವ ಕಿರುಗಂಬಗಳೆಂದು ಅರ್ಥವಾಗುವುದು" (ನಾಡೋಜ. ೩೦೫). [?]

**ಕಕ್ಕುಗಡಿ** (ನಾ). ಸಣ್ಣಸಣ್ಣಗೆ ಕತ್ತರಿಸಿದುದು; ಸಣ್ಣಚೂರು: ತೊಡೆಯನು ಕೊಯ್ದು ಕತ್ತಿಯಲಿ ಕಕ್ಕುಗಡಿಗಡಿದಟ್ಟು ಘೃತದಿಂದಿಕ್ಕಲಾ ಭೂಸುರನು ಕೋಪಿಸಿ ನಕ್ಕು ನುಡಿದಪನು (ಸಂಭಪ. ೨೫-೧೫, ೧೬).

[ಕಕ್ಕು$_3$ + ಕಡಿ$_4$]

**ಕಕ್ಕುಗುರು** (ನಾ). ಹರಿತವಾದ ಉಗುರು; ಚೂಪಾದ ಉಗುರು: ಕಕ್ಕುಗುರಿನೇರ್ಗಳಂ ಸುಯ್ವಿಟ್ಟು ಸುಗಿದಂ (ಕಾಲೂರ. ೯೮-೧೯೬).

[ಕಕ್ಕು$_3$ + ಉಗುರು (< ಉಗುರ್$_1$)]

**ಕಕ್ಕುದಱು** 'ಕಕ್ಕುಂದಱು' ನೋ.

**ಕಕ್ಕುಬಿಕ್ಕು** 'ಕಕ್ಕಾಬಿಕ್ಕಿ' ನೋ.

**ಕಕ್ಕುರಿ** (ನಾ). ಕ್ರೌರ್ಯ. 'ಕಕ್ಕುರಿಮಿಗು' ಪರಾ. [?]

**ಕಕ್ಕುರಿಮಿಗು**(ಕ್ರಿ). ಕ್ರೌರ್ಯ ಹೆಚ್ಚಾಗು; "ಕಕ್ಕುರಿಮಿಕ್ಕು = ಕರುಣೆಯಿಲ್ಲದೆ" (ಪದ್ಮಸಾ. II, ೮೫೩ ಟಿಪ್ಪಣಿ): ಬಿಡದಟ್ಟಿ ಮುಟ್ಟಿ ಕೆಡೆ ಮೆಟ್ಟಿಡು ಕಕ್ಕುರಿಮಿಕ್ಕು ಪೊಕ್ಕು ಪೊಯ್ ಕಡಿ ತಿವಿ ಕೊಲ್ಲು . . . ಎಂಬ ಬೇಡ ವಡೆಯಬ್ಬರವಾತಿಡಿದುತ್ತು ಸುತ್ತಲುಂ (ತ್ರಿಷಷ್ಟಿ. ೨೭-೫೪).

[ಕಕ್ಕುರಿ + ಮಿಗು]

**ಕಕ್ಕುಲತೆ,** ಕಕುಲತೆ, ಕಕುಲಾತಿ, ಕಕುಲಾತೆ, ಕಕುಳತೆ, ಕಕ್ಕಲಾತಿ, ಕಕ್ಕುಲಾತಿ, ಕಕ್ಕುಲಾತೆ, ಕಕ್ಕುಲಿತೆ, ಕಾಕುಲತೆ, ಕಾಕುಲಾತಿ (ನಾ). ೧. ಚಿಂತೆ; ಕಳವಳ; ಸಂಕಟ: ತಪ್ಪದುಪೋ ಲಲಾಟಲಿಖಿತ ಕಕ್ಕುಲತೆಗೆ ಬಂದರೆ ಆಗದು ನೋಡಾ (ಬಸವ. ೬೮೭); ಹೊಟ್ಟೆಯ ಕಕ್ಕುಲತೆಗಾಗಿ ಭಕ್ತರ ಮನೆಯ ಹೊಕ್ಕು ಸೇವೆಯ ಮಾಡುವ ಮಿಟ್ಟೆಯ ಭಂಡರಿಗೆಲ್ಲಿಯದೋ ನೆಟ್ಟನೆ ದೇವತ್ವ (ಮೋಳಿಗೆ. ೬೦-೨೪೭). ೨. ಪ್ರೀತಿ; ಮೋಹ; ಮಮಕಾರ: ಅಕ್ಕಟಕ್ಕಟ ಈತಗಳುಪಿದ ಕಕ್ಕುಲತೆ ಕೈಸಾರಿತಲ್ಲದೆ . . . ಒಕ್ಕಲಿಕ್ಕಿ ಸಮುಸ್ತಭೋಗವ ಮಿಕ್ಕು ಸವಿಯದೆಯೆನ್ನ ಭಾವನೆ ಮುಕ್ಕುಹೋದುದೆ (ಪ್ರಭುಲಿ. ೫-೪೯); ಹರಣದಲಿ ಕಕ್ಕುಲತೆ [ಪಾಠಾಂ. ಲಿತೆ] ಬೇಡುದ್ಧರಿಸುವುದು ಸತ್ಕುಲತೆಯನು (ಕುಮಾರವ್ಯಾಸ/ದ್ರೋ. ೧೫-೨೧); ಕಕ್ಕುಲತೆಯಿಂದ ನಡೆಯಿಸುವ ಅರಸು ತಾ ಚಕ್ಕಂದವಿರುವ (ಸರ್ವಜ್ಞ. ೬೨೭); ರಾಧೆಯು ತಾಯಿ - ತಂದೆಗಳಿಗೆ ಒಬ್ಬಳೇ ಒಬ್ಬಳಾದ ಕಕ್ಕುಲತೆಯ ಮಗಳು (ಸ್ಕಾಲಮಿ. ೩೧). ೩. ಕನಿಕರ; ದಯೆ: ಸುರರ ನೀಂ ಬಿಡಿಪ ಕಕ್ಕುಲತೆಯೇತಕೆ (ಜೈಮಿ. ೩೨-೧೧). **ಕಕುಲತೆ:** ೪. ಜಿಪುಣತನ; ಕೃಪಣತೆ: ಕೆಟ್ಟ ಕಕುಲತೆಯ ಮಾಡಿದರೆ ಆ ಕಟ್ಟೆ ಕೆಟ್ಟುಹೋಗಿಹುದು (ಸರ್ವಜ್ಞ. ೬೬೭). **ಕಕುಲಾತಿ:** ೧. ಪದ್ಮಾವತಿಯನ್ನು ನೋಡಿದಾಗ ಸುಮಿತ್ರೆಯ ಕಕುಲಾತಿ ಮೇರೆ ಮೀರಿಬಂತು (ಅಸುರ. ೪೦). ೨. ಹೆಣ್ಣು ಮನುಕುಲದೊಂದು ಪುಣ್ಯದಾ ಬನದಲ್ಲಿ ಕಕುಲಾತಿಯರಳಿಸಿದ ಮಧುರ ಹೂವು! (ಭಾವಜೀ. ೧೫-೨೯೦). ೩. ಮೊದಲು ಅವಳಂಥ ಕಕುಲಾತಿಯ ಹೆಂಗುಸೇ ಇರಲಿಲ್ಲ (ಕಾರವಾ. ೧೨); ಭಾವನೆಯನ್ನು, ರಾಗವನ್ನು ಹಾಗೂ ಕಕುಲಾತಿಯನ್ನು ಬದಿಗಿರಿಸಿ (ಜೀವಪ್ರ. XI, ಮನೋವೇದಿಕೆ). **ಕಕುಲಾತೆ:** ೨. "ಅಂತಃಕರಣ; ಪ್ರೀತಿ" (ಜಾನಕೋ. ೩೦). **ಕಕುಳತೆ:** ೨. (ಕ). **ಕಕ್ಕಲಾತಿ:** ೧. ಮಕ್ಕಳು ಇಲ್ಲಂತ ಕಕ್ಕಲಾತಿಯ ಮಾತು ಪಕ್ಕದವರ ಮುಂದೆ ಆಡಿಲ್ಲ (ಸಿದ್ಧಪು. ೧-೪೦). **ಕಕ್ಕುಲಾತಿ:** ೧. ತಾಯ ಹೃದಯದಿಂದ, ಕಕ್ಕುಲಾತಿಯಿಂದ ಬಂದ ವಾಣಿ ಅದು! (ಬನಸಿ. ೧೬). ೨. ಆಗಲಿಸಿದೆನ್ನೆವರ ಕಕ್ಕುಲಾತಿಯ ಅಣ್ಣತಮ್ಮಗಳಾ (ಶರೀಫ. ೫೦); ಬಿಕ್ಕಿಬಿಕ್ಕಿ ಅಳುವ ಚಿಕ್ಕಸಿದ್ಧನ ಕಂಡು ಕಕ್ಕುಲಾತೀಲಿ ಕರೆದು ಕೇಳಿದರು (ಸಿದ್ಧಪು. ೫-೧೮). **ಕಕ್ಕುಲಾತೆ:** ೧. ಸಿಕ್ಕಿತಿವಳೊಳೆನ್ನ ಮನವಿನ್ನು ತಿರಗದು ಕಕ್ಕುಲಾತೆಯ ಮಾಡಲೇಕೆ (ಜಿರಾಮಾ. ೪-೯೩). **ಕಕ್ಕುಲಿತೆ:** ೧. ಲೆಕ್ಕವಿಲ್ಲದೆ ತಂದುಕುಡಲು ಚಿನ್ನಮನಲ್ಲಿ ಕಕ್ಕುಲಿತೆಯ ಮಾಡದಿರರು (ಅಂಜಚ. ೩-೮೬); ಕಕ್ಕುಲಿತೆಯ ಮಾಡಿ ಕೆಡಬೇಡ ಬಿಡು ಬಿಡು (ಕುರಾಸಾಂ. ೩೪-೭೮); ಕಕ್ಕುಲಿತೆ ಬೇಡಿನ್ನು ತನ್ನನು ಮಿಕ್ಕು ಬದುಕುವೆನೆಂಬ ಕಾಲನ (ನಿಭಾಗ. ೪-೧೨-೧೩). ೨. ಒಡಲ ಕಕ್ಕುಲಿತೆಗೆ [ಪಾಠಾಂ. ಕಕ್ಕುಲತೆಗೆ, ಕಕ್ಕುಲಾತಿಗೆ, ಕವಳಕ್ಕೆ] ಪರರ ದಾಕ್ಷಿಣ್ಯಕ್ಕೆ ಅನ್ಯದೈವ ಭವಿನೇಮಿಸ್ತರುಗಳಲ್ಲಿ (ಚನ್ನವ. ಕ. ೧೭೭-೩೮೪); ಪೊಡವಿಪತಿಗಳ ಬಸುಱ ಬಂದೀಯೊಡಲ ಕಕ್ಕುಲಿತೆಯನು ಕಾಳಗದೆಡೆಗೆ ಮಾಡಿದರಿಲ್ಲ (ಕುವ್ಯಾವಿ. ೬-೨೭); ಕೈವಾರವೇಕೀ ಕಾಯದಲಿ ಕಕ್ಕುಲಿತೆ ಬೇಡೆಂದ (ಕುವ್ಯಾಭೀ. ೮-೫೩). ೫. ಬಯಕೆ; ಹಂಬಲು: ಕಕ್ಕುಲಿತೆಯನುಂಟುಮಾಡಿದುದು ಪೆಣ್ಗೊಳಾವನಪಾಂಗ ವಿಭ್ರಮಂ (ಧರ್ಮನಾ. ೩-೨೩); ಕಕ್ಕುಲಿತೆಯೆಮಗಿಲ್ಲೆಂದನಾ ದ್ರೋಣ (ಕುವ್ಯಾಅ. ೭-೩೩); ದೊರೆಗಳಾರಾದರೂ ಕಕ್ಕುಲಿತೆಯ ಮಾಡಿ ತೆಗೆದುಕೊಂಡರೆ ಎಮಲೋಕ ಪ್ರಾಪ್ತಿ (ಮೈಅರಿ. ೧೯೩೦, ೬೦-೨೦; 1573); ಇನ್ನು ಹಯಮಂ ಬಿಡುವನಲ್ಲ ನಿಮಗೆಮ್ಮ ತಾತಂ . . . ಕಕ್ಕುಲಿತೆ ಬೇಡ ನಡೆ (ಜೈಮಿಭಾ. ೧೩-೭). ೬. ಸಂಶಯ; ಅನುಮಾನ: ಅಕ್ಕಱಿಂದಲ್ಲ ನೀನೋಡಿಹೋದಹೆಯೆಂಬ ಕಕ್ಕುಲಿತೆ ಗೇಱಿಂದೆನ್ನೆಸೆ (ಹಚಕಾ. ೮-೬೮). **ಕಾಕುಲತೆ:** ೧. "ಪುನಃ ನಿಮ್ಮನ್ನು ನೋಡುವೆನೇ ಎಂದು ಚಿಂತಿಸುತ್ತಿದ್ದೆ . . ." ರೂಪಾ ಕಾಕುಲತೆಯಿಂದ ನುಡಿದಳು (ರೂಲೀಪಾ. ೧೨೪). **ಕಾಕುಲಾತಿ:** ೨. ಕಾಕುಲಾತಿಯ ಪಿಡಿದು ಲೌಕಿಕದೊಳು ಬಿದ್ದು (ವಿದಾಕ್ಯ. ೧೩೫-೧); ಆಕಳನು ಕಾಯ್ದು ಕಾಕುಲಾತಿಯಿಂದ (ಮೋಕ್ಷದೀ. ೬೦-೨೨).

[ದೇ. || ತಮಿ. ಕಕ್ಕುರೀತ = ಪ್ರಯಾಸ, ತೊಂದರೆ; ತೆಲು. ಕಕ್ಕುಱತಿ, ಕಕ್ಕೂಱತಿ]

**ಕಕ್ಕುಲತೆಪಡು** 'ಕಕ್ಕುಲತೆಬಡು' ನೋ.

**ಕಕ್ಕುಲತೆಬಡು,** ಕಕ್ಕುಲತೆಪಡು, ಕಕ್ಕುಲಿತೆಬಡು (ಕ್ರಿ). ೧. ಕರುಣೆಗಾಗಿ ಬೇಡಿಕೊಳ್ಳು; ಹಲುಬು: ಖಳರಿಗೆ ಸಿಕ್ಕಿದೆನು ನಿನಗಲ್ಲದಾರಿಗೆ ಕಕ್ಕುಲತೆ [ಪಾಠಾಂ. ಕಕ್ಕುಲಿತೆ]ಬಡುವೆನು ಮುರಾಂತಕಯೆಂದಳಿಂದುಮುಖಿ (ಕುವ್ಯಾಸ. ೧೪-೧೯೯). **ಕಕ್ಕುಲತೆಪಡು:** ೨. ಚಿಂತೆಮಾಡು; ಕಳವಳಿಸು: ಕಕ್ಕುಲತೆ [ಪಾಠಾಂ. ಕಕ್ಕುಲಿತೆ] ಪಟ್ಟರಿಲ್ಲ ಕರುಣಾಳು ನಿನ್ನ ಮಱಹೊಕ್ಕೆನು ಸಲಹೊ (ಪುರಂದ. ೧-೧೬೪-೩). **ಕಕ್ಕುಲಿತೆಬಡು:** ೨. ಸಕ್ಕರೆಗೆ ಸದೃಶಮಾದೆಳನೀರುಗಳ್ ತಮ್ಮ ತಲೆಯೊಳಗೆ ಪೊತ್ತುಕೊಂಡು ಉಕ್ಕಿದತಿಹರುಷದಿ ನಿಜಜೀವವಿರುವನಕ ಕಕ್ಕುಲಿತೆಬಡದೆ ಕೊಡುತಿರ್ಪ ಕೆಂದೆಂಗುಗಳ್ (ಅರ್ಚಾವಿ. ೨೩-೫). ೩. ಆಸೆಮಾಡು; ಬಯಸು: ಒಕ್ಕಲಿಗ ವೈಶ್ಯ ಕ್ಷತ್ರಿಯರಿಗೆ ದ್ವಿಜೋತ್ತಮಂ ಕಕ್ಕುಲಿತೆಬಟ್ಟು ವಂದಿಪನೆ (ದೀಕ್ಷಾಬೋ. ೧೦೩-೯). [ಕಕ್ಕುಲತೆ + ಪಡು$_1$]

**ಕಕ್ಕುಲಾತಿ** 'ಕಕ್ಕುಲತೆ' ನೋ.

**ಕಕ್ಕುಲಾತೆ** 'ಕಕ್ಕುಲತೆ' ನೋ.

**ಕಕ್ಕುಲಿತೆ** 'ಕಕ್ಕುಲತೆ' ನೋ.

**ಕಕ್ಕುಲಿತೆಕಾಱ,** ಕಕ್ಕುಲಿತೆಗಾಱ (ನಾ). ಆಸೆಯುಳ್ಳವನು; ಲೋಭಿ: ಕಳವಳಿಸಿದರು ಕಾಯದಲಿ ಕಕ್ಕುಲಿತೆಕಾಱ[ಪಾಠಾಂ. ಗಾಱ]ರು ಕೈದೆಗೆದ ರಗ್ಗಳೆಯನುಱುಬೆಗೆ (ಕುವ್ಯಾದ್ರೋ. ೧೫-೫೧). **ಕಕ್ಕುಲಿತೆಗಾಱ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ಕಕ್ಕುಲಿತೆ (< ಕಕ್ಕುಲತೆ) + -ಕಾಱ]

**ಕಕ್ಕುಲಿತೆಗಾಱ** 'ಕಕ್ಕುಲಿತೆಕಾಱ' ನೋ.

**ಕಕ್ಕುಲಿತೆಗೊಳ್** (ಕ್ರಿ). ೧. ಹಂಬಲಿಸು; ಆಸೆಪಡು: ಬ್ರಾಹ್ಮಣನಳುಕಿ ಶೂದ್ರನನು ಕಕ್ಕುಲಿತೆಗೊಂಡಣಲಿ ಬೇಡಿದೊಡಿಕ್ಕದಿರಿ ನರಮಾಂಸವಿಂದೆಲೆ ಸಿಕ್ಕಿದೆನು ಮರುಳಾಗಿ ಶೂದ್ರನ ಕಪ್ಪಭೋಜನಕೆ (ಸಂಭಪ. ೨೫-೧೬). ೨. ಚಿಂತೆಮಾಡು; ಕಳವಳಿಸು: ಮಕ್ಕಳ ಭವಿಷ್ಯಕ್ಕೆ ಕಕ್ಕುಲಿತೆಗೊಳಬೇಡ (ಮಂಕುಕ. ೪೨೦).

[ಕಕ್ಕುಲಿತೆ (< ಕಕ್ಕುಲತೆ) + ಕೊಳ್$_1$]

**ಕಕ್ಕುಲಿತೆಗೊಳಿಸು** (ಕ್ರಿ). ಸಂಕಟಪಡಿಸು: ದುರ್ಮಾರ್ಗ ರಕ್ಕಸಿಯರುಂ . . . ನೆಲದಣುಗಿ ಭಯಮೋಹಗೊಳುವಂತೆ ಪರಿಪರಿಯ ಲಲಿತಕಾಠಿಣ್ಯತರ ಕಲುಷಿತದ ದುರ್ಭಾಷೆಯಲಗುಗಳ ನಾಲ್ದೆಸೆಯ ಕಕ್ಕುಲಿತೆಗೊಳಿಸಿದರ್ (ವೆಂಕಾರಾ. ೫-೧೦-೧). [ಕಕ್ಕುಲಿತೆಗೊಳ್ + -ಇಸು$_3$]

**ಕಕ್ಕುಲಿತೆಬಡು** 'ಕಕ್ಕುಲತೆಬಡು' ನೋ.

**ಕಕ್ಕುಲಿಸು** (ಕ್ರಿ). ಮೋಹಕ್ಕೆ ಒಳಗಾಗು ; ಮರುಳಾಗು : ಸಿಕ್ಕಿತಲ್ಲಾ ಲೋಕವೀಪರಿ ಕಕ್ಕುಲಿಸಿಯೊಡಲಾಸೆಗಜೀವನು ಲೆಕ್ಕಿಸದೆಯಕಟ (ಪ್ರಭುಲೀ. ೧೧-೫). [ಕಕ್ಕುಲ ? + -ಇಸು$_3$]

**ಕಕ್ಕೆ** (ನಾ). ಗೊಂಚಲುಗೊಂಚಲಾಗಿ ಹಳದಿ ಹೂವು ಬಿಡುವ ಒಂದು ಬಗೆಯ ಮರ; ಸುವರ್ಣಕ; ರಾಜತರು : "ಆರಗ್ವಧಂ ಸ್ವರ್ಣಪುಷ್ಪ ಕೃತಮಾಲಮೆನಲಾ ರಾಜತರುವೆನಲ್ ಕಕ್ಕೆ" (ಮಂಗರಾ. ೩೫-೧೨) ; ಪಂಚಮುಖನಲ್ಲಿ ಕಕ್ಕೆಯಮರದ ಮೇಲಿರಲು ಕಕ್ಕೆ ಸದ್ಭಕ್ತನ ಸುಖಕ್ಕೆ ನೆಲೆಯಾಗಿರಲು ಕಕ್ಕೆ ಭಕ್ತನ ಸಮ್ಮುಖಕ್ಕೆ ಶಿವನಂತಿರಲು ಕಕ್ಕೆ ರುದ್ರನ ರೂಪಕಕ್ಕೆ ಸಮನಾಗಿರಲು ಕಕ್ಕೆ ಶರ್ವನ ನಾಟಕಕ್ಕೆ ನಂಟಾಗಿರಲು (ಅನಾರ. ಹ. ೧೩೨-೧೪) ; ಕಕ್ಕೆಯೆಕ್ಕೆಗಳ ಪೂವಂ ತಂದು ತಣಿವಿಲ್ಲ ದರ್ಚಿಸುತೆ (ಚಂಡೀರ. ಹ. ೧೪೦-೧೯) ; ಕಡವೊಡವೆಕ್ಕೆ ಕಕ್ಕೆ ತರಿ ತಾರಿ ಬೆಳಲ್ ಬಿಳಿಯತ್ತಿ (ಧರ್ಮಪ ೩-೪೭) ; ಗಿರಿಯ ಶಿರದಲಿ ಹೂತ ಕಕ್ಕೆಯ ಮರ ಮುಱಿದು ಬೀಳ್ವಂತೆ (ಕುವ್ಯಾದ್ರೋ. ೩-೭೬) ; ಕಣಗಿಲು ಕಕ್ಕೆ ಬಿಕ್ಕೆಯಣಿಲು ಕದಳಿ ಹಾದರಿಯ ಮರ ಮೊದಲಾದುವು (ಸಾಳ್ವಭಾ. ೫-೩). [ದೇ. ‖ ತಮಿ. ಕಡುಕ್ಕೈ, ಕೊನ್ನೈ ; ಮಲ. ಕೊನ್ನ ; ತುಳು. ಕಕ್ಕೆ]

**ಕಕ್ಕೆಕೂಳು** (ನಾ). ನಿಕೃಷ್ಟವಾದ ಆಹಾರ (?) : ಬಿಕ್ಕೇಕೂಳು ಕಕ್ಕೇಕೂಳು ತಿನ್ನುತಾ ಇದ್ದ (ಬೆಳುಮು. ೬೪). [ಕಕ್ಕೆ ? + ಕೂಳು$_2$ (< ಕೊಱು$_1$)]

**ಕಕ್ಕೊರಲೆ, ಕಕ್ಕೊರಳೆ, ಕಕ್ಕೋರೆಲೆ** (ನಾ). ಒಂದು ಬಗೆಯ ಸಸ್ಯ : "ಕುಬೇರಕಃ-ಕಕ್ಕೊರಲೆ, ನಂದಿವೃಕ್ಷ" (ಔಷಧಿ. ೩೭) ; ಕಕ್ಕೊರಲೆ, ಹಂಸ ಪಾದಿಗಳ ಸೊಪ್ಪನು ಶಿಶುಗಳ ಶಿರಸ್ಸಿನಲ್ಲಿ ಧರಿಸಲು ಪಕ್ಷಿಗ್ರಹ ಹರವಹುದು (ವೈದ್ಯಸಾ. II, ೧೪). **ಕಕ್ಕೊರಳೆ** : ಕಕ್ಕೊರಳೆಬೀಜ, ಯವಕ್ಷಾರ . . . ಐದುವರಹತೂಕವ ಆಡಿನ ಮೂತ್ರದಲ್ಲಿ ಅರೆದು (ವೈದ್ಯಸಾ. II, ೫೪). **ಕಕ್ಕೋರೆಲೆ** : ಕಕ್ಕೋರೆಲೆ, ಎಲವದ ಹಗಿನು . . . ಧೂಪವ ಹಾಕಲು ಚಿತ್ತವಿಭ್ರಮ ಸನ್ನಿ ಶಮನವಹುದು (ಸಕವೈ. ೧೫೬). [? + ಕೊರಲೆ]

**ಕಕ್ಕೊರಳೆ** 'ಕಕ್ಕೊರಲೆ' ನೋ.

**ಕಕ್ಕೋಕಶಾಸ್ತ್ರ, ಕಕೋಕಶಾಸ್ತ್ರ, ಕೊಕ್ಕೋಕಶಾಸ್ತ್ರ** (ನಾ). ಒಂದು ಕಾಮಶಾಸ್ತ್ರದ ಹೆಸರು (?). **ಕಕೋಕಶಾಸ್ತ್ರ** : "ಕಾಮಶಾಸ್ತ್ರ" (ಗಂಗಾಮು. ೬೪). **ಕೊಕ್ಕೋಕಶಾಸ್ತ್ರ** : ಕೊಕ್ಕೋಕಶಾಸ್ತ್ರ ಇನ್ನಷ್ಟು ಕೇಳುವ ಆಸೆ ಇದ್ದರೂ ಮತ್ತೆ ಕಣ್ಣು ಆ ಕಡೆ ಹೋಯಿತು (ಹೊಸಕ್ಷಿ. ೧೭೫). [ಕಕ್ಕೋಕ$_0$ + ಶಾಸ್ತ್ರ]

**ಕಕ್ಕೋರೆಲೆ** 'ಕಕ್ಕೊರಲೆ' ನೋ.

**ಕಕ್ಕೋಲ** (ನಾ). ೧. ಒಂದು ಜಾತಿಯ ಮರ. ☞ ಇದರ ಕಾಯಿಯ ಒಳಭಾಗವು ಅಂಟಾಗಿಯೂ, ಸುಗಂಧವಾಗಿಯೂ ಇರುತ್ತದೆ. ೨. ಕಕ್ಕೋಲ ಕಾಯಿಯಿಂದ ತಯಾರಿಸಿದ ಸುಗಂಧ. [ಸಂ.]

**ಕಕ್ಕೋಲಕ** (ನಾ). = ಕಕ್ಕೋಲ ; "ಗವಲಕಚೂರ" (ಗಂಗಾಮು. ೬೪). [ಸಂ.]

**ಕಕ್ಖಟ** (ಗು). ೧. ಗಟ್ಟಿಯಾದ ; ಘನರೂಪವುಳ್ಳ. (ನಾ). ೨. ನಗೆ ; ನಗುವಿಕೆ. [ಸಂ.]

**ಕಕ್ಖವಡ** 'ಕಕ್ಕವಡ' ನೋ.

**ಕಕ್ರ** 'ಕಕ್ಕರ$_4$' ನೋ.

**ಕಕ್ಷ** (ನಾ). ೧. ಕಂಕುಳು ; ಬಗಲು : ನಿಚ್ಚಲಿ ಕಾರಿರುಳೊಳ್ ಪೊಱಪಟ್ಟಮನುಟ್ಟಿರ್ದಿಱುಂಕಿ ಕಕ್ಷದೊಳ್ (ಶಾಂತಿಪು. ೭-೬೫) ; ಮೇಲುದುಗುಡದ ಮುಖದ ನೀರೊಱಿವಾಲಿಗಳ ಕಕ್ಷದ ಗದೆಯ ಭೂಪಾಲ ಬಂದನು (ಕುವ್ಯಾಗ. ೬-೧) ; ಕಕ್ಷದಲಿ ವಿಧಿಯು ಧರಿಸಿಹನು ಕರಪೀಠದೊಳು ಪಕ್ಷಿವಾಹನನು ಪಿಡಿದಿಹನು (ಪ್ರೌಢರಾ. ೮-೩). ೨. ಪಾರ್ಶ್ವ ; ಪಕ್ಕ : ಆಗಳ್ ಮದಗಜ ಕಕ್ಷಧ್ವಜ ವಿರಾಜಿತಮಪ್ಪ ತನ್ನ ಪೊನ್ನರಥಮಂ ಮುದ್ರರಾಜನನೇಱಲ್ವೇೞ್ದು (ಪಂಪಭಾ. ೧೨-೧೯೪ ವ). ೩. ಕೊಠಡಿ ; ಕೋಣೆ : ಡ್ಯೂಕನ ಶಯನಕಕ್ಷವು ಅತ್ಯಂತ ರಮಣೀಯ ಮತ್ತು ಸುರುಚಿಪೂರ್ಣರೀತಿಯಲ್ಲಿ ಅಲಂಕೃತವಾಗಿತ್ತು (ಯೋಧರು. ೬೦). ೪. ಅರಣ್ಯ : ಸಜ್ಜನ ಭಕ್ತರಾಮಯಾಪತ್ ಕಕ್ಷಧೂಮಾಂಕ ಪಶುಪತಿ ಲಲಾಮ ಪರಿಪಾಲಯ (ಗುರುಚಾ. ೨-೧). ೫. ಕಚ್ಚೆ ; ಸೊಂಟಕ್ಕೆ ಸಿಕ್ಕಿಸುವ ಸೀರೆಯ ಅಥವಾ ಪಂಚೆಯ ಅಂಚು : ಪ್ರಸ್ತಕ್ಕೆ ಭಕ್ಷ, ವೈಷ್ಣವರಿಗೆ ಕಕ್ಷ, ನಾರಾಯಣ ಅಂದವಗೆ ಮೋಕ್ಷ (ಗಾದೆ). ೬. ಲಂಗೋಟಿ ; ಕೌಪೀನ. ೭. ಉಡಿದಾರ ; ನಡುಕಟ್ಟು ; ಒಡ್ಯಾಣ. ೮. ಹುಲ್ಲು. ೯. ಮೇಲಕ್ಕೆ ಹಬ್ಬುವ ಬಳ್ಳಿ. ೧೦. ಅರಮನೆಯ ಅಂತಃಪುರ ; ರಾಣಿವಾಸ. ೧೧. ತರ್ಕದಲ್ಲಿ ಉತ್ತರ ಅಥವಾ ಪ್ರತಿವಾದ. ೧೨. ಅಂಗಣ ; ಪ್ರಾಂಗಣ. ೧೩. ಬಾಗಿಲು ; ದ್ವಾರ. ೧೪. ಗ್ರಹ, ತಾರೆಗಳು ತಿರುಗುವ ಪಥ : "ಪ್ರಾಂಗಣ ಕೌಪು ಕಕ್ಷಮುಡಿನೂಲ್ ಕಾಂತಾರ ಕಕ್ಷಾಹ್ವಯಂ" (ನಾನಾರ. ೧೧). [ಸಂ.]

**ಕಕ್ಷಕಾರ** (ನಾ). ಬಗಲಲ್ಲಿರುವವನು ; ಸ್ವಾಧೀನನಾದವನು : ಪಕ್ಷಕಾರರನ್ನು ಕಕ್ಷಕಾರರನ್ನಾಗಿ ಮಾಡಿಕೊಳ್ಳಲು ಬಲ್ಲ ಮೋಹಕನಗೆಯಿಂದ ನಮ್ಮ ವಕೀಲಮಿತ್ರರು . . . ಬಂದರು (ನಿರಾಭ. ೧೪೬). [ಸಂ.]

**ಕಕ್ಷಕುಳ** (ನಾ). ಕಂಕುಳಲ್ಲಿರುವವನು (?) : ಆಕಾಶದ ಕವಿಗಳೆನ್ನ ತೊಟ್ಟಿಲ ಕೂಸು ಹರಿಬ್ರಹ್ಮರೆನ್ನ ಕಕ್ಷಕುಳ [ಪಾಠಾಂ. ಕಕ್ಷೆಯ ಒಕ್ಕಲು] ಸೀ ಮಾವ ನಾನಳಿಯ ಗೊಹೇಶ್ವರ (ಅವಚಂ. ೧೨೧-೫೫೦). [ಕಕ್ಷ + ಕುಳ ?]

**ಕಕ್ಷಪಾಲ, ಕಕ್ಷಪಾಳ** (ನಾ). ಕಂಕುಳಿಗೆ ತಗುಲಿಹಾಕಿಕೊಳ್ಳುವ ಚೀಲ ; ಬಗಲು ಚೀಲ : ಕಾಲಕರ್ಮವನು ಪಾದುಕೆಗಳಾಗಿಯೆ ಮೆಟ್ಟ ಮೇಲೆನಿಸುವಷ್ಟಮಾಸಿದ್ಧಿಗಳನೇ ಕಕ್ಷಪಾಲವಾಗಿಱುಕಿ (ಭಿಕ್ಷಾಟ. ೧-೧೪). **ಕಕ್ಷಪಾಳ** : ಆಕಾಶವೆ ಕೊಪ್ಪರ ಅಜಾಂಡ ಬ್ರಹ್ಮಾಂಡವೆ ಕರ್ಣಕುಂಡಲ ಆದಿಯಾಧಾರವೆ ಕಕ್ಷಪಾಳ (ಅವಚಂ. ೬೩-೩೭೪) ; ಸರಪಳಿಯ ಹೊಸ ಕಕ್ಷಪಾಳದ . . . ಪರಿವಿಡಿಯೊಳೆಸೆದಿರ್ದರಾ ಜೋಗಿಗಳು (ಶಂಕದಾ. ೧೫-೫). [ಸಂ.]

**ಕಕ್ಷಪಾಲಿಕೆ, ಕಕ್ಷಪಾಳಿಕೆ** (ಸ್ತ್ರೀ). = ಕಕ್ಷಪಾಲ : ಸನ್ನುತ ವಿದ್ಯಾಮಯ ಕಕ್ಷಪಾಲಿಕೆ ಬೆಡಂಗಂ ಬೀಱೆ (ವೃಷವಿ. ೧೯-೩೦). **ಕಕ್ಷಪಾಳಿಕೆ** : ಅಂತಿತ್ತು ತನ್ನ ಕಕ್ಷತಳದೊಳಿಱುಂಕಿದ ಪೊಂಬುಲಿಯ ಚರ್ಮದ ಕಕ್ಷಪಾಳಿಕೆಯೊಳಗಳವಟ್ಟ ನಿಗ್ಗವದ ಕರಂಡಕದೊಳಗೆ (ರಾಜಶೇ. ೫-೨೫ ವ). [ಸಂ. ಕಕ್ಷಪಾಲಿಕಾ]

**ಕಕ್ಷಪಾಳ** 'ಕಕ್ಷಪಾಲ' ನೋ.

**ಕಕ್ಷಪಾಳಿಕೆ** 'ಕಕ್ಷಪಾಲಿಕೆ' ನೋ.

**ಕಕ್ಷಪುಟ** (ನಾ). ಕಂಕುಳು ; ಬಗಲು : ಮಾಱ್ಪುದು ಕಂಪಿನ ಸೊಂಪಿನ ಪೊಗರಿಂದಂ ವನಿತೆಯ ಕಕ್ಷಪುಟಮಿಕ್ಷಣಾಕರ್ಷಣಮಂ (ಪುಷ್ಪಪು. ೩-೩೮). [ಕಕ್ಷ + ಪುಟ$_2$]

**ಕಕ್ಷಭಂಡ** (ನಾ). ಕಂಕುಳಲ್ಲಿ ಇರುಕಿ ತರುವಂಥ ಸರಕಿನ ಹೊರೆ ; ಕಂಕುಳ ಗಂಟು (?) : ಹೊಜಗಂ ಬಂದ ಗಂಧವಣಕ್ಕೆ ಕಕ್ಷಭಣ್ಡಕ್ಕೆ ಆ ಭಣ್ಡಂ ಗದ್ಯಾಣಂ ತೂಕಮಯ್ದು (ಎಇ. XIII, ೨೧-೫೩ ; 1204). [ಕಕ್ಷ + ಭಂಡ]

**ಕಕ್ಷಮೂಲ** (ನಾ). = ಕಕ್ಷಪುಟ : "ಕಾಂಕುಱ್ = ಕಕ್ಷಮೂಲಂ" (ಶಮುದ. ಪರಿ. ೧). [ಕಕ್ಷ + ಮೂಲ]

**ಕಕ್ಷಾಂತ** (ನಾ). ಬಾಗಿಲ ಪಕ್ಕ; ದ್ವಾರದ ಬಳಿ: ಐತಂದು ವಿನಯದಿಂದರಮನೆಯ ಕಕ್ಷಾಂತದೊಳ್ನಿಂದು ಪೇಳೆ ದೌವಾರಿಕೆಯೊಳು (ವೆಂಕಾರಾ. ೧-೨೨-೧೪). [ಕಕ್ಷ + ಅಂತ್ಯ]

**ಕಕ್ಷಾಂತರ** (ನಾ). ಒಳಮನೆ; ಏಕಾಂತದ ಕೋಣೆ: "ಕಕ್ಷಾಂತರಂ, ಪ್ರಕೋಷ್ಠಂ – ಈ ೨ ನೆಲೆ" (ಹಲಾಯು. ೫೧-೧೪೪); "ಕಕ್ಷಾಂತರಂ [ಪಾಠಾಂ. ಕಕ್ಷಂತರು] ಪ್ರಕೋಷ್ಠಂ ಮನೆಯ ನಿಲವದು" (ಮಂಗರಾ. ೬೦-೧೪). [ಕಕ್ಷ + ಅಂತರ]

**ಕಕ್ಷಾಂತರಂಗ** (ನಾ). ಅಂಗಳದ ಒಳಭಾಗ; ಪ್ರಾಂಗಣದ ಮಧ್ಯ: ಮಂತ್ರಿಗಳ ಮಾಗಧರ ವಂದಿಗಳ ಗಡಣಮಂ ಕಕ್ಷಾಂತರಂಗದೊಳ್ ನಿಲಿಸಿ (ವೆಂಕಾರಾ. ೨-೮-೧). [ಕಕ್ಷ + ಅಂತರಂಗ]

**ಕಕ್ಷಾಪಟೆ** (ನಾ). ಕೌಪೀನ; ಲಂಗೋಟಿ. [ಸಂ. (ಕಕ್ಷಾ + ಪಟ)]

**ಕಕ್ಷಿ** (ನಾ). ೧. ವ್ಯಾಜ್ಯ; ವಿವಾದ (?). ೨. ವಾದಿ ಅಥವಾ ಪ್ರತಿವಾದಿ: ಅಂಥಾ ಮನುಷ್ಯನನ್ನು ನೇಮಿಸಿದ್ದ ಕಕ್ಷಿಯು ಹೊಸದಾಗಿ ಮತ್ತೊಬ್ಬನನ್ನು ನೇಮಿಸತಕ್ಕದೆಂದು ವಿಧಿಸತಕ್ಕದ್ದು (ಗ್ರಾಮಾಕ. ೧೭); ದೇಶದಲ್ಲೆ ಕಕ್ಷಿ ಪ್ರತಿಕಕ್ಷಿಗಳು ಎದ್ದರೆ? (ಶಾಂತಲಾ. ೨೪೧). [?]

**ಕಕ್ಷಿಗಾರ** (ನಾ). ವಕೀಲರ ಬಳಿ ಫಿರ್ಯಾದು ಮಾಡುವವನು; ವಾದಿ ಅಥವಾ ಪ್ರತಿವಾದಿ: ಕೆಲಸ ಕಲಿಯುವುದಾಗಲಿಲ್ಲ. ಕಕ್ಷಿಗಾರರೂ ಕಾಣುತ್ತಿರಲಿಲ್ಲ (ಆಲಹೂ. ೬೬); ಕಕ್ಷಿಗಾರರೇ ರಾಜಿಗೆ ಒಪ್ಪಿದರೆ? (ಚಂದತೋ. ೧೩೦); ವಕೀಲರ ಮತ್ತು ಕಕ್ಷಿಗಾರರ ಹಿತ ಒಂದೇ ಅಲ್ಲ (ಮೂವಾದ. ೯೦). [ಕಕ್ಷಿ + -ಗಾರ (< -ಕಾಱ)]

**ಕಕ್ಷೆ** (ನಾ). ೧. ಕಂಕುಳು; ಬಗಲು: ಕಕ್ಷೆಯಲಿ ಲಿಂಗವ ಧರಿಸಿದ ಮತ್ತೆ ಕುಕ್ಷೆಯ ವರ್ತನವ ಬಿಟ್ಟುಬಿಡಬೇಕು (ಮೋಳಿಮಾ. ೧೩೫-೫೨೨). ೨. ವ್ಯಾಪ್ತಿ; ಪರಿಮಿತಿ; ಕ್ಷೇತ್ರ: ಇತಿಹಾಸದೊಳಗಿನ ಘಟನೆಗಳನ್ನು ವಿವರಿಸುವಾಗ ಕೂಡ 'ಪರಮಾತ್ಮಶಕ್ತಿ' 'ದೈವ' ಇಂತಹ ಇತಿಹಾಸದ ಕಕ್ಷೆಯ ಹೊರಗಿನ ಮಾತುಗಳು ಬರುತ್ತವೆ (ಕರ್ನಾಟ. ೯೦೧); ಈ ಪುಸ್ತಕದ ಕಕ್ಷೆಯಲ್ಲಿ ಬರುವ ಕಾಲಾವಧಿಯು ದೀರ್ಘವಾದದ್ದು (ಸಾಸಮಾ. ೭೬). ೩. ಗ್ರಹ ಹಾಗೂ ಉಪಗ್ರಹಗಳು ಸುತ್ತುವ ಮಾರ್ಗ; ಪ್ರದಕ್ಷಿಣೆಯ ಪಥ: ಈ ವಾರ್ಷಿಕ ಪ್ರದಕ್ಷಿಣೆಯ ಮಾರ್ಗಕ್ಕೆ ಭೂಮಿಯ ಕಕ್ಷೆ ಎನ್ನುವರು (ಮುಂಬಯಿ. ೬-೫೯); ನಾವು ನಮ್ಮ ನಮ್ಮ ಕಕ್ಷೆಗಳಲ್ಲಿಯೇ ತಿರುಗುವ ಗ್ರಹಗಳು! (ಮುಕ್ತಿ. ೧೭). ೪. ಮನೆಯ ಒಂದು ಭಾಗ; ಕೋಣೆ: ಚಾರು ದಕ್ಷಿಣದಿಕ್ಕಿನ ಕಕ್ಷೆಯ ಗವಾಕ್ಷದೊಳಗೆ ಕುಳಿತಿರುತ್ತಾಳೆ (ಇಪ್ಪಕ. ೨೪೭). [ಸಂ. ಕಕ್ಷ, ಕಕ್ಷಾ]

**ಕಕ್ಷೇಷು** (ನಾ). ಒಂದು ಬಗೆಯ ಬಾಣ: "ಕವಡಿಕೆಯಂಬು ಕಕ್ಷೇಷು ವಕ್ಕು" (ಮಂಗರಾ. ೭೭-೩೫). [ಕಕ್ಷ + ಇಷು]

**ಕಕ್ಷ್ಯಾಂತರ** (ನಾ). ಆವರಣ; ಪ್ರಾಂಗಣ: ರಾಜಧಾನಿಯಂ ಪೊಕ್ಕು ಸಪ್ತಕಕ್ಷ್ಯಾಂತರಂಗಳ ಕಾಂಚನಮಯತೋರಣಂಗಳಂ ನುಸುಳ್ದು ಕನ್ಯಾಂತಃಪುರದ್ವಾರಮನೆಯ್ದಿ (ಕಾದಂಪೂ. ೯೫೫); ಪಯೋದ ಗಜ ಘಟೆ ಸುಱಿದತ್ತಿನರುಚಿಪಲ್ಲವಕುಳಕಬಳನ ಲೀಲೆಯಿನಂತರಿಕ್ಷ ಕಕ್ಷ್ಯಾಂತರದೊಳ್ (ಚಂದ್ರಪ್ರ. ೪-೩೨). [ಸಂ. (ಕಕ್ಷ್ಯಾ + ಅಂತರ)]

**ಕಕ್ಷ್ಯಾವಕಾಶ** (ನಾ). ಒಳಮನೆಯ ವಿಸ್ತಾರ: ಬಾಗಿಲ್ಮಾಡಮಂ ಪೊಕ್ಕಂತರಾಂತರಾಭಿಶೋಭಮಾನಾಕ್ಷ್ಯೂಣ ಕಕ್ಷ್ಯಾವಕಾಶಮಂ ಕೋಱುತ್ತುಂ (ಶಾಂತಿಪು. ೩-೧೭ ವ). [ಸಂ. (ಕಕ್ಷ್ಯಾ + ಅವಕಾಶ)]

**ಕಕ್ಷ್ಯೆ** (ನಾ). ೧. ಆನೆಯ ನಡುಕಟ್ಟು. ೨. ಕಟ್ಟಡಗಳಿಂದ ಸುತ್ತುವರಿಯಲ್ಪಟ್ಟ ಒಳಅಂಗಳ; ನಡುತೊಟ್ಟಿ. ೩. ವ್ಯಾಪ್ತಿ; ಪರಿಮಿತಿ; ಕ್ಷೇತ್ರ: ಅದು 'ಕಾವ್ಯ' ಕಕ್ಷ್ಯೆಯಲ್ಲಿ ಸೇರದು (ಧ್ವನ್ಯಾಲೋ. ೭ ಅಡಿಟ). [ಸಂ. ಕಕ್ಷ್ಯಾ]

**ಕಖುಡಿಬರ್ತಿ** (ನಾ). ಕಕ್ಕಡದ ಆರತಿ; ದೀಪಾರತಿ (?): ಬೆಳಿಯ ನೀರಾಂಜನದ ಹಲಿಗೆ ೯ ಹಿರಿಯ ಆರತಿ ೮ ಪುರುಷಾಮೃಗದ ಆರತಿ ೩ ನಾಗಾರತಿ ೧ ಧೂಪಾರತಿ [೧] ಕಖುಡಿಬ[ರ್ತಿ] ೨ ಪ್ರತುಮೆಆರತಿ ೧ ಅಂತು ಆರತಿ ೨೫ (ಸೌಇಇ. IV, ೨೬೩-೪೩; 1513). [ಕಖುಡಿ₀ (< ಕಕ್ಕಡ₃?) + ವರ್ತಿ?]

**ಕಗತಿ** (ನಾ). ಪೀಠ (?): ವಿಗಡ ಶುಂಭ ನಿಶುಂಭರು ... ಹೊಗುವ ರಮರಾವತಿಗೆ ಸುರಪನ ಕಗತಿನಲಿ ಮಂಡಿಸುವರು (ಅಂಬಿಕಾ. ೨೬-೭). [?]

**ಕಗ್ಗ**₁ (ಗು). ೧. ಕೆಲಸಕ್ಕೆ ಬಾರದ; ನಿಷ್ಪ್ರಯೋಜಕವಾದ: ಆ ಮುನೀಶ್ವರನೆನ್ನ ಕೋಪದಿಂ ಝುಂಕಿಸುತ ರುದ್ರನಂತೆ ಕಗ್ಗ ಭೂಸುರನೆನುತ್ತೀನ ವಂಚಿಸಿ ಶರಸಮುದ್ರವಂ ಬೇಡ್ದರ್ (ತುರಂಗ. ೬೧-೨೨); ಈ ರತ್ನವನ್ನು ಓರ್ವ ಕಗ್ಗಬಡಹಳ್ಳಿಗನಕೊರಳಿನಲ್ಲಿ ಕಟ್ಟುವಪ್ರಸಂಗವು ಒದಗಿದೆ (ಪಂಚೇ. ೫). (ನಾ). ೨. ಬೇಸರದ ಹರಟೆ; ಗೊಡ್ಡು ಕತೆ: ಈ ಕಗ್ಗವನ್ನು ಮೊದಲಬಾರಿಗೆ ಓದಿದಾಗ, ಇದು ಏನೋ ಅವ್ಯವಸ್ಥೆಯ ಕಗ್ಗವೆಂದು ಎನಿಸುತ್ತದೆ (ರಾಮರಾ. ೬೬); ಯಶಸ್ಸು ಎಂಬುದೆಲ್ಲಾ ಬರಿಯ ಕಗ್ಗ (ಮಲೆನಾ. ೧೫); ಈಕಗ್ಗವನ್ನೆಲ್ಲಾ ಕೇಳಿದೇನೆ ಬಿಡು (ಅಷಾಭೂ. ೧೭). ೩. ಕಾಡುಮನುಷ್ಯ; ಒರಟ; ಒಡ್ಡ: ಆ ತೆರೆದಿದ್ದ ಬಾಗಿಲಲ್ಲಿ ಮುಕ್ಕರಿಸಿ ಬಿದ್ದಾಗ ಭೀಮನು ಕಗ್ಗನಂತೆ ನಕ್ಕನು (ಮಭಾರ. ೮೨). [?]

**ಕಗ್ಗ**₂ (ನಾ). ಖಡ್ಗ; ಕತ್ತಿ: ಕಗ್ಗದಲಿ ಮಡಿದನುಜನಿಗೆ ಮನ ತಗ್ಗಿ ಮುಮ್ಮಲಮರುಗಿ ವಂಶವು ಜಗ್ಗಿತಾಹಾಯೆಂದು (ಜನಭಾ. ೩-೬೫); ಎಲೆ ಮಡೋನ್ಮತಿ ನೀನು ಕಗ್ಗಕೆ ಬಲನೆ (ಜನಭಾ. ೧೧-೧೩); ಕಗ್ಗದ ಕಲಿ ಬೀರಾ ಎದ್ದು ಬಾರೋ ಸಗನಯ್ಯಾ (ನಾಪದ. ೧೪೦). [ಪ್ರಾ. ಖಗ್ಗ (< ಸಂ. ಖಡ್ಗ)]

**ಕಗ್ಗಂಟು** (ನಾ). ೧. ಸುಲಭವಾಗಿ ಬಿಡಿಸಲಾರದ ಗಂಟು: ಈ ದಾರ ಬಹಳ ಕಗ್ಗಂಟಾಗಿದೆ (ರೂಢಿ). 'ಸರಗಂಟು' ಪರಾ. ೨. (ಅಲಂ) ಜಟಿಲವಾದ ಸಮಸ್ಯೆ; ಕ್ಲಿಷ್ಟವಾದ ಸಮಸ್ಯೆ: ಇದು ಬಿಡಿಸಬರದ ಕಗ್ಗಂಟು ಕೂಟಜನ್ಮದ ರಹಸ್ಯ (ಅರಳು. ೨೧೮-೩); ಈ ನೆಂಟು ಕಗ್ಗಂಟು, ಹಸನಿಲ್ಲ ವ್ಯವಹಾರ (ಮಾಮನೆ. ೪೫); ಅರ್ಥವೇ ಆಗದ ತೊಡಕಿನ ಕಗ್ಗಂಟುಗಳಿಂದ ನೀನು ನನ್ನ ಜೀವನವನ್ನು ಕಟ್ಟಿಹಾಕಿದ್ದೀಯಾ? (ವಂಶವೃ. ೩೦೫). [< ಕಡಿದು + ಗಂಟು]

**ಕಗ್ಗಂದು** (ನಾ). ಹೆಚ್ಚಾದ ಕಂದು ಬಣ್ಣ: ಆಕೆಗೆ ಕಗ್ಗಂದುಬಣ್ಣದ ಸೀರೆ ಚೆನ್ನಾಗಿ ಒಪ್ಪುತ್ತದೆ (ರೂಢಿ). [< ಕಡಿದು + ಕಂದು₂]

**ಕಗ್ಗಂಬಳಿ** (ನಾ). ಕರಿಯ ಕಂಬಳಿ: ಬಾರೆಂದು ಕರೆದು ಕಾಳಾಂಬರ ಮನುಡಿಸಿ ಕಗ್ಗಂಬಳಿಯ ಪೊದಿಸಿ ಪಗಲಂಗನೆಯಳಾ ... ಎಂಬಂತೆ ಕತ್ತಲೆಯ ಮೊತ್ತ (ನವಮೋ. ೧೭-೧೦); ಇಡೀ ಪ್ರಪಂಚವನ್ನು ಅಪಾರ ವಾದೊಂದು ಕಗ್ಗಂಬಳಿಯಿಂದ ಮುಸುಕಿ ಮುಚ್ಚಿದಂತಿತ್ತು (ವೀರಬಂ. ೧೪). [< ಕರಿದು + ಕಂಬಳಿ]

**ಕಗ್ಗಟ್ಟು** (ನಾ). ಬಲವಾದ ಕಟ್ಟು: ನೋಟಗಳ ಕಗ್ಗಟ್ಟು ಬಿಚ್ಚಿದಂತಾಗಿ ಮೇಣ್ ಆಟವಾಡುತಲಿಹುದು ಬೇರೆಡೆಯ ಬಿಗಿದು (ಕಾಲೂರ. ೪೩-೫೫). [< ಕಡಿದು + ಕಟ್ಟು₂]

**ಕಗ್ಗತ್ತಲ್** 'ಕರ್ಗಟ್ಟಲೆ' ನೋ.

**ಕಗ್ಗತ್ತಲು** 'ಕರ್ಗಟ್ಟಲೆ' ನೋ.

**ಕಗ್ಗತ್ತಲೆ** 'ಕರ್ಗಟ್ಟಲೆ' ನೋ.

**ಕಗ್ಗದಾರಿ** (ನಾ). ಕಚ್ಚಾದಾರಿ, —ರಸ್ತೆ: ಉಳಿದ ಮೂರು ಮೈಲು ಕಗ್ಗದಾರಿಯಿಂದ ಪಲ್ಲಕ್ಕಿಯಲ್ಲಿ ಕುಳಿತು, ಅನಂತರ ನಮ್ಮ ಊರು ಮುಟ್ಟಬೇಕಾಗುತ್ತದೆ (ಇಪ್ಪಕ. ೪೨೯). [ಕಗ್ಗ₁ + ದಾರಿ₁]

**ಕೆಗ್ಗನಹಳ್ಳಿ** (ನಾ). ಒಂದು ಊರಿನ ಹೆಸರು: ನೆಲ್ಲಿಕುಂಟೆ ಗ್ರಾಮ ೧ ಕಗ್ಗನಹಳ್ಳಿ ಗ್ರಾಮ ೧ ತಿರುಮಲಹಳ್ಳಿ ಗ್ರಾಮ ೧ (ಎಕ. X, ಮುಳಬಾ. ೧೮–೧೪; 1234). [ಕಗ್ಗ$_{0}$ + ಹಳ್ಳಿ (< ಪಳ್ಳಿ$_{1}$)]

**ಕಗ್ಗನೆ** 'ಕರ್ಗನೆ' ನೋ.

**ಕಗ್ಗಪ್ಪು$_{1}$** (ನಾ). ತೀರ ಕಪ್ಪು; ಕಡುಗಪ್ಪು; ದಟ್ಟವಾದ ಕರಿಯ ಬಣ್ಣ: ಕಾರ್ಮೋಡದ ಒಡ್ಡು ದೊಡ್ಡದಾದ ಕಗ್ಗಪ್ಪಿನ ಹಾಯಿ ಹಾರಿಸಿ ಮುಗಿಲಿನ ನಡುವೆ ತಲೆ ಎತ್ತಿ ನಿಂತಿತು (ಇಪ್ಪಕ. ೧೮೦).
[< ಕಡಿದು + ಕಪ್ಪು$_{4}$ (< ಕರ್ಪು$_{1}$)]

**ಕಗ್ಗಪ್ಪು$_{2}$** (ನಾ). ಆಳವಾದ ಕುಳಿ, —ಹಳ್ಳ: ಅವರ್ಗಳನ್ನ ಸಹಾಯತೆಯ ಕಗ್ಗಪ್ಪಿಗೊದೆದುರುಳಿಸಿಕೊಂಡು (ಮಂತ್ರಶ. ೧೩೪–೧೩).
[< ಕಡಿದು + ಕಪ್ಪು$_{3}$]

**ಕಗ್ಗಬುದ್ಧಿ** (ನಾ). ಜಡಬುದ್ಧಿ; ದಡ್ಡಬುದ್ಧಿ: "ನಿಮ್ಮ ಮೂರ್ಖತನ ದಿಂದ, ಹಳ್ಳಿಯ ಕಗ್ಗಬುದ್ಧಿಯಿಂದ ಮಗು ಸತ್ತದ್ದು" (ಸ್ಮೃತಿಚಿ. ೧೪೪).
[ಕಗ್ಗ$_{1}$ + ಬುದ್ಧಿ]

**ಕೆಗ್ಗರಿ** 'ಕಗ್ಗಲಿ$_{1}$' ನೋ.

**ಕಗ್ಗರಿಕು** (ನಾ). ಅತಿ ಕಪ್ಪಾದ ಕರಿಕು, —ಇದ್ದಲು: ಮಹೀಚಕ್ರದೊಳ್ ಕಗ್ಗರಿಕೆಂತಂತೆತ್ತಲುಂ ಪಂದಲೆ ಪಡಲಿಡೆ ಧಂಧಂಧಗಿಲ್ಭುಭುರ್ಗಿಲ್ ಘಂಘುರಿಲೆಂದೇನಳ್ವಿತೋ . . . ವೀರಬಲ್ಲಾಳ ಕೋಪೋದ್ಧುರ ದಾವೋಗ್ರಾನಳಂ (ಎಕ. VI, ತರೀಕೆ. ೪೫–೪೩; 1196).
[< ಕಡಿದು + ಕರಿಕು$_{2}$ (< ಕರಿಂಕು)]

**ಕಗ್ಗಲ್**, ಕಗ್ಗಲ್ಲು (ನಾ). ಗಟ್ಟಿಯಾದ ಕಲ್ಲು; ಕಾಡುಕಲ್ಲು: ಕಾದ ಕಗ್ಗಲ್ಲ ಫಲವೆಂದವಂ ತಂದೀವರು (ಸಿದ್ಧರಾ. ೮–೩೦); ರೋಹಿಣಿ ಧರಣೀಧರ ಮಣಿಯಂ ಕಗ್ಗಲ್ಲಂ ಧರಿಯಿಸಿದಂತಿರೆ ಸಜ್ಜನರಂ ದುರ್ಜನರಂ ಪಡೆದಂ ಕಮಳಭವಂ (ಕುಮುರಾ. ಪೀಠಿಕಾ ಸಂಧಿ. ೩೫); ಮಂಡಮತಿಯಾ ಸುಯೋಧನನೃಪಂ ಕಗ್ಗಲ್ಲ ಬೀಟೆಯುಂದದಿ ಮುನಿಸನು ಒಂದಿನಿಸು ಮುಚ್ಚದಾ ಕಳ್ಳರಂ ನಾಳೆ ನೀ ತಂದೊಪ್ಪಿಸೆಂದು ಯಮದಂಡನಂ. . . ಕಳುಹಿ (ಸಮ್ಯಕೌ. ೨–೬೯). **ಕಗ್ಗಲ್ಲು:** ಕಾಳಮ್ಮನೆಂಬವಳ್ ಕಗ್ಗಲ್ಲಿನಿಂ ಕಚ್ಚಿದ ಹಾಲನೀಶಂಗುಣಿಸಿದಳ್ (ಚೆಬಪು. ೫೫–೪೫); ಪೊಸ ಕಗ್ಗಲ್ಲುಗಳೊಸರವು ಕಣ್ಗೆ ರಾಜಿಸಿದುದು (ಕಂಸವಿ. ೨೦–೫); ಎಲ್ಲೆಲ್ಲಿಯೂ ಕಟ್ಟಿಸಿದ ದೇವಾಲಯಗಳೆಲ್ಲವು ಕಗ್ಗಲ್ಲಿನಲ್ಲಿ ನಿರ್ಮಿತವಾದವು (ಮೈವಾಸ್ತು. ೬೨).
[< ಕಡಿದು + ಕಲ್$_{3}$]

**ಕಗ್ಗಲಮಾನೆಯ** (ನಾ). ಒಂದು ಕೊಡುಗೆ: ನಿತ್ಯ ನಿ(ನೈ)ವೇದ್ಯಕಂ (ಕ್ಕಂ) ಬಿಟ್ಟ ಕಗ್ಗಲಮಾನೆಯ ಕೆಯಿ ಮತ್ತರು ೧೨ (ಇಆ. IX, ೭೫–೬; 1118). [ಕಗ್ಗಲ$_{0}$ (< ಕಗ್ಗಲಿ$_{2}$) + ಮಾನೆಯ (< ಮಾನ್ಯ)]

**ಕಗ್ಗಲಿ$_{1}$**, ಕಗ್ಗರಿ (ನಾ). ಒಂದು ಜಾತಿಯ ಮರ; ಮುಳ್ಳಿಲ್ಲದ ಕರಿಜಾಲಿ; ಖದಿರವೃಕ್ಷ: ಕರಡಿಗಳೊ ಕಗ್ಗಲಿ [ಪಾಠಾಂ. ಕಗ್ಗವಿ, ಕಗ್ಗಲ್ಲ, ಕಗ್ಗನಿ, ಕಗ್ಗೊಲೆ]ಯ ಬಲು ಹೆಮ್ಮರಡಿಗಳೊ (ತೊರರಾ. ೬–೮–೨೯); ಕೈಯಿಂದ ಬಗ್ಗಿಸಿ ನೋಡಲಿನಿಸು ಬಗ್ಗಿತಿಲ್ಲದು ಕಗ್ಗಲಿಯೊನಕೆಯಂದದೊಳು (ನೇಮಿಸಂ. ೧೬–೧೧೫); ಕಡಿದೆ ಕಗ್ಗಲಿಗೋಸುಗ ಕಲ್ಪವೃಕ್ಷವ (ಕುರಾಸಾಂ. ೩೬–೧೪೬); ಕಾರಾಚ ಕಗ್ಗಲಿ ಕಂಚಿವಾಳದ ಮರ ಸೂರ ಮಾರ್ಗವ ತಡೆದಿಹುವು (ಕಂನವಿ. ೧೮–೩೭). **ಕಗ್ಗರಿ:** ಕತ್ತೆಯ ಲದ್ದಿ ಕಗ್ಗರಿಯ ಕರಿಯಂ ವುಮ್ಮತ್ತದ ಸೊಪ್ಪಿನ ರಸದಲ್ಲಿ ಅರದು (ಅಶ್ವವೈ. ೧೩–೫೩ ಟೀಕೆ); ಆ ರೀತಿಯೊಳಮರ್ಯಾದೆಯಿಂ ಕುಡುವ ಕೊಂಬ ಮಾನವರಿರ್ವರುಂ ಕಗ್ಗರಿಯ ಮರನಾದೊಡಂ ಕಲ್ಲ ಗುಂಡನಾದೊಡಂ ಕೊರಲೊಳ್ ಬಿಗಿದು ಸಾಗರಮಂ ದಾಂಟಲೆಳಸುವ ಮಾನಿಸರಂತೆ (ಭಾರಶಾಂ. ೨೬೭). [?]

**ಕಗ್ಗಲಿ$_{2}$** (ನಾ). ಕಡುಗಲಿ; ಮಿಗಿಲಾದ ಬಂಟ; ಪರಾಕ್ರಮಿ: ನಾರಿಯರು ನಸುನಗುತ ವಿಹಾರಿಸುತ ಕಗ್ಗಲಿಯ ಪೊಲ್ ಕರವೀರವರ್ಗವ ಮಂಡೆವಾಗಿಸಿ ಪೂದಿಜಿಾದರು (ಸನತ್ಕು. ೬–೧೩); ಅಜಿಯೊಳ್ ಬೆನ್ನ ಬಿಡದೊಂದಾಗಿ ಬರ್ಪ ಕಗ್ಗಲಿಗಳೆತ್ತ ಬನ್ನಿಂ (ಸಮ್ಯಕೌ. ೮–೪೪); ಇದಿರಾಗಿ ಕಜುತ್ತು ನಿಂದಾ ಕಗ್ಗಲಿಗಳ ಮೊತ್ತವನೆಲ್ಲವನಾ ಗದೆಯಿಂ ವಿಕ್ರಮೋತ್ತಂಸನರೆದು ಹಾಕಿದನು (ನೇಮಿಸಂ. ೨೯–೨೫).
[< ಕಡಿದು + ಕಲಿ$_{2}$]

**ಕಗ್ಗಲು$_{1}$** (ನಾ). ೧. ಕಪ್ಪಾದುದು; ಕಂದಿದುದು. (ಗು). ೨. ಕಪ್ಪಾದ; ಕಂದಿದ: ದೊರೆಯು ಇವಳ ತೊಟ್ಟಿಗೆ ಕೊಡುತಾ ಇದ್ದ ಖಾಸಾ ಸೋಬಸ್ಕರವನ್ನು ದಿನಕ್ರಮೇಣ ಕಡಿಮೆಮಾಡುತಾ ಕಡೆಗೆ ಕಗ್ಗಲುರಾಗಿ ಮುಗ್ಗಲುಹುರಳಿಗೆ ಇಳಿಸಿದನು (ಪೇಟಿಮಾ. ೧೬).
[ಕಗ್ಗ$_{1}$ (< ಕರ್ಗ$_{1}$) + -ಅಲು (< -ಅಲ್$_{2}$). / ತಮಿ. ಕರುಕಲ್]

**ಕಗ್ಗಲು$_{2}$** (ನಾ). (?): ಒಬ್ಬ ಬೆಟಿನಯರ ಕಗ್ಗಲ ಒಬ್ಬ ಗಾಳ ಬೇಲ ಹುಣಿಸಿ ತೊಂಣ ಕಾಲವೂರ ಮುನ್ದಣ ಬಲದ ಒಬ್ಬಯ್ಯರು (ಎಕ. III, ಮಳವ. ೧೦೭–೯; 1321). [?]

**ಕಗ್ಗಲ್ಲು** 'ಕಗ್ಗಲ್' ನೋ.

**ಕಗ್ಗವಿ** (ನಾ). ಕತ್ತಲೆ ತುಂಬಿದ ಗವಿ: ಪ್ರಾಣಕೂಪದ ಕಗ್ಗವಿಯಲ್ಲಿ ದಾರಿ ನಡೆಯಲು ಬೆಳಕನ್ನು ಕೊಡುವುದು (ಮಣಿಸ. ೨೭); ಆ ಕಗ್ಗವಿಯೆ ಹೆಬ್ಬುಲಿಯ ನೆಲೆಮನೆ! (ಸುವಸಂ. ೭೫); ಗೊಬ್ಬರ ತುಂಬಿದ ಕಗ್ಗವಿಯಲ್ಲಿ (ಕವಿಸೋ. ೧೪). [< ಕರಿದು + ಗವಿ$_{1}$]

**ಕಗ್ಗಳ** (ನಾ). ಅಸ್ಥಿಪಂಜರ; ಎಲುಬಿನ ಗೂಡು (?): ನೀಲದಾತ ನೀರಸದೊಳಗೊಂದು ಕಗ್ಗಳ ಮೇಳವಿಡಿದು ಕಳೆಗೊಂಡು ಶೂಲಿಯರ್ಧಾಂಗಿವೊಪ್ಪಿರ್ದಳು (ಅಬ್ಬಲೂ. ೧–೫). [< ಸಂ. ಕಂಕಾಲ]

**ಕಗ್ಗಾಡು** (ನಾ). ದಟ್ಟವಾದ ಅಡವಿ; ನಿಬಿಡವಾದ ಅರಣ್ಯ: ಆ ಹಿಮಾಲಯದ ಹೆಗ್ಗವಿ ಕಗ್ಗಾಡುಗಳನ್ನು ಅಹುಂಬೊಲಗಳನ್ನಾಗಿ ಮಾಡಿಕೊಂಡ ಆರ್ಯರಿಗೆ ಈ ವಿಂಧ್ಯವನ್ನೀಕ್ಷಿಸಿ ಭಯಜ್ವರವುಂಟಾಗಬಹುದೇನು? (ನಾಡೋಜ. ೧೧೧); ಈ ಕಗ್ಗಾಡಿನ ಇಟ್ಟೆಡೆಯಲ್ಲಿ ಆರಿಹೋದುದೆಂದರೆ ಸ್ವಾಭಾವಿಕವಲ್ಲ (ವೀರಬಂ. ೨೧); ನೂರಾರು ವರ್ಷಗಳ ಈ ಕಗ್ಗಾಡನ್ನು ಸುಟ್ಟು ಹಾಕಿದರ್. . . ಬೆಳಕನ್ನು ಕಂಡೀತು (ಭಾರದ. ೪೮).
[< ಕಡಿದು + ಕಾಡು$_{2}$]

**ಕಗ್ಗಾಯಿ** (ನಾ). ಕಸುಗಾಯಿ; ಬಲಿತು ಪಕ್ವವಾಗದಿರುವ ಕಾಯಿ: ಕಗ್ಗಾಯಿ ಬಲಿಬಲಿದು ಮ್ಯಾಲೆ ಮಧುರಸ ಬೆರೆದು ಪದಗಾಯಿಯಾದಂತೆ (ನವಮೋ. ೨೩–೩೪). [< ಕಡಿದು ? + ಕಾಯಿ$_{4}$ (< ಕಾಯ್$_{4}$)]

**ಕಗ್ಗಾರು$_{1}$** (ನಾ). ಮಿತಿಮೀರಿದ ಮಳೆ; ಅತಿವೃಷ್ಟಿ (ಕ).
[< ಕಡಿದು + ಕಾರು$_{2}$ (< ಕಾರ್$_{2}$)]

**ಕಗ್ಗಾರು$_{2}$** (ನಾ). ಅನಾವೃಷ್ಟಿ; ಬರಗಾಲ (ಕ).
[< ಕಡಿದು + ಗಾರು (< ಗಾಜು)]

**ಕಗ್ಗಾಲ** (ನಾ). ಬರಗಾಲ; "ಕೆಟ್ಟಕಾಲ; ಬರಗಾಲ" (ಜಾನಕೋ. ೩೧). [< ಕಡಿದು ? + ಕಾಲ$_{1}$]

**ಕಗ್ಗಾವಳ**, ಕಗ್ಗಾಳ (ನಾ). ದಟ್ಟವಾದ ಕತ್ತಲೆ; ಕಗ್ಗತ್ತಲೆ: ಆವ ದಿಕ್ಕಿನಲಿ ದಿಟ್ಟಿಸಿ ನೋಡಲು ಕಗ್ಗಾವಳ ಮುಸುಕಿಕೊಂಡಾಗ (ಕಂನವಿ. ೧೮–೩೮). **ಕಗ್ಗಾಳ:** ಅವಳ ಭಾವಂ ಬೆಚ್ಚಿಸಿತ್ತೆಂತೆನಲು ಕಗ್ಗಾಳ [ಪಾಠಾಂ. ಕಗ್ಗಾಳು, ರಗಳ] ಕವಿದ ಕಾನನಕೈದಿ ನಿಶಿಯುದ್ಭವಿಸಿತೆಂದೆಳ್ತಹ ಚಕೋರನ (ಮದೇಪು. ೫–೫೩); ಆ ಪ್ರತಾಪಸೂರ್ಯನು ತನ್ನ ರಕ್ತಕರಗಳಿಂದ . . . ಚೋಳರೆಂಬ ಕಗ್ಗಾಳನ್ನು ಚದರಿಸಿದನು (ಕರತ್ನ. ೧೦).
[< ಕಡಿದು + ಕಾವಳ$_{1}$]

**ಕಗ್ಗಾಳೆ** 'ಕಗ್ಗಾವಳ' ನೋ.

**ಕಗ್ಗಿ** (ನಾ). ಒಂದು ಸೀಮೆಯ ಹೆಸರು: ಕಗ್ಗಿ ಮುವತ್ತಱ ಸೀಮೆ (ಎಕ. VI, ತರೀಕೆ. ೬೭–೧೦; 888). [?]

**ಕಗ್ಗು**$_1$ 'ಕಗುರ್$_1$' ನೋ.

**ಕಗ್ಗು**$_2$ (ನಾ). ೧. "ಬರ, ಅಸಹ್ಯನೋಟ" (ಸರ್ವಜ್ಞ. ಕೋಶ): ಕಗ್ಗು ಕಾಣಲು ಹೊಲ್ಲ ಮೊಗ್ಗೆ ಮುಡಿಯಲು ಹೊಲ್ಲ (ಸರ್ವಜ್ಞ. ೧೮೧೩). ೨. "ಹೀಚು, ಮಿಡಿ . . . ಕಾಯಿ, ಕಗ್ಗು" (ಕಂಸುಕು. ೯೨). ೩. ಕಮರು ವಾಸನೆ (ಕ). [?]

**ಕಗ್ಗುಂಬಳ** (ನಾ). ಒಂದು ಜಾತಿಯ ಕುಂಬಳಕಾಯಿ: ಕಗ್ಗುಂಬಳದ ಹಾಸುಗಾಯ್ಗಳನು ತಂದಿಳುಹಿ ಸಮನಾದ ಕಂದಲ ಮುಚ್ಚಿ (ಸೂಪಶಾ. ೫–೧೬); ಭಸ್ಮವ ಹೂಸಿದಡೇನು ಚಪ್ಪರದ ಮೇಲೆ ಕಗ್ಗುಂಬಳಕಾಯಿ ಬಿದ್ದಂತೆ (ಶರಚ. ೬೨೨). [< ಕಡಿದು ? + ಕುಂಬಳ]

**ಕಗ್ಗುರಿ** (ನಾ). ದಡ್ಡ ಕುರಿ: ಗುರಿಯ ಮರೆತು ಕಗ್ಗುರಿಗಳಾಗಿ 'ಕಬ್ಬಿನ ಹೊರಗಣೆಲೆಯನೆ ಮೆಯ್ಯುತ ಅಲ್ಪಸುಖಕ್ಕೆ' ಸೋಲಬಾರದು (ಶರಚ. ೮೩೪). [< ಕಡಿದು ? + ಕುರಿ$_3$ (< ಕುಱಿ$_3$)]

**ಕಗ್ಗುಱುಕೆ** 'ಕಗುರ್ಱುಕೆ' ನೋ.

**ಕಗ್ಗೆರೆ** 'ಕರ್ಗೆಱೆ' ನೋ.

**ಕಗ್ಗೆಱೆ** 'ಕರ್ಗೆಱೆ' ನೋ.

**ಕಗ್ಗೊಡಗೆ** (ನಾ). ದೊಡ್ಡ ಕೊಡುಗೆ (?): ಮಹಾಜನಂಗಳ್ ಕೊಟ್ಟ ಕಗ್ಗೊಡಗೆಯಂ (ಎಇ. XIII, ೩೩–೫೧; 1204). [< ಕಡಿದು ? + ಕೊಡಗೆ ?]

**ಕಗ್ಗೊನೆ** (ನಾ). ದೊಡ್ಡ ಗೊನೆ; ತುಂಬಿದ ಗೊನೆ (?): ಕಗ್ಗೊನೆ ಗಾಣ್ಕೆಯ ಒಳಗಿನ ಅಕಲಂಕಿತ ಕೆಚ್ಚೀ ನೆಲದೆದೆಯಲಿ ನೆಲೆ ಮಾಡೆಲೆ ಹೊನ್ ಹೂ ಮನ ಮೆಚ್ಚೀ (ಅರಳು. ೨೨೫–೧೧). [< ಕಡಿದು ? + ಗೊನೆ (< ಕೊನೆ$_3$) ?]

**ಕಗ್ಗೊಲೆರ್** 'ಕಗ್ಗೊಱಲೆ' ನೋ.

**ಕಗ್ಗೊಲೆ** 'ಕಟಿಗ್ಗೊಲೆ' ನೋ.

**ಕಗ್ಗೊಲೆಕಾಱ** (ನಾ). ಕಗ್ಗೊಲೆ ಮಾಡುವವನು; ಕ್ರೂರನಾದ ಕೊಲೆಗಾರ: ತಾವರೆಯ ಕಗ್ಗೊಲೆಕಾಱನುತ್ಪಳವನ ವಿದೂಷಕನು . . .' ಎನಲು ಮಿಗೆ ಮೆಱೆದನುದಯಾಚಲದ ಚಾವಡಿಯಲಿ ಸುಧಾಸೂತಿ (ಕುವ್ಯಾದ್ರೋ. ೧೬–೧೬). [ಕಗ್ಗೊಲೆ (< ಕಟಿಗ್ಗೊಲೆ) + -ಕಾಱ]

**ಕಗ್ಗೊಲೆವೊಯ್** 'ಕಳ್ಗೊಲೆವೊಯ್' ನೋ.

**ಕಗ್ಗೊಱಡು** (ನಾ). ಕಪ್ಪಾದ ಕೊರಡು: ಬೆಂದ ಕಗ್ಗೊಱಡಿನಂತೆ ಬಿಸಿಲೊಳ್ ನಿಂದು (ಧರ್ಮಾಮೃ. ೮–೮೦). [< ಕರಿದು + ಕೊಱಡು]

**ಕಗ್ಗೊಱಲೆ, ಕಗ್ಗೊಲೆರ್** (ನಾ). ಕರಿಯ ತುಳಸಿ: "ಕಗ್ಗೊಱಲೆ ಬಾಬರಿ ಕ್ಷುದ್ರಪತ್ರಂ" (ಮಂಗರಾ. ೩೯–೨೬); ತಗರಂ ಕೊಳ್ಳುಳಿ ನುಗ್ಗಿ ಕಗ್ಗೊಱಲೆ ತೊಟ್ಟಿಲ್ ಸೂರಣಂ ಶುಂಠಿಯಜ್ಜಗೆಯಯ್ದುಪ್ಪುಗಳಿಕ್ಕೆ ಸಾಸಿವೆ (ಲೋಕೋಪ. ೯–೨೪೦); ಅರುಣಾಭಂ ಪುಷ್ಪಮಪ್ಪೊಂದಗಸೆಯನೆ ವಲಂ ನೋಡಿ ತನ್ಮೂಲಮಂ ಕೊಂಡರೆ ನೀಂ ಬೆಳ್ಳುಳ್ಳಿಯಂ ಕಗ್ಗೊಱಲೆಯ ರಸದಿಂ ಭಾವಿಸಂಕಿರ್ದ ಮರ್ದಂ ನರಮೂತ್ರಂಗೂಡಿ ನಸ್ಯಂ ವಿರಚಿತ ಮದು ತತ್ಸರ್ಪದಷ್ಟಾಂಗಮಾಗಳ್ ನಿರುತಂ ಸಂಹಾರಿಕುಂ (ಖಮದ. ೬–೧೨); ಆಡಿನ ಬೆಣ್ಣೆಯ ಕಾಡ ಕಗ್ಗೊಱಲೆ ಕಹಿದೊಂಡೆ ನಾತಗಳು ತೀಡಿದರೆ ಬಿಡವು (ಸರ್ವಜ್ಞ. ೧೯೪೫). **ಕಗ್ಗೊಲೆರ್**: "ಪರ್ಣಾಸಃ, ಕಠಿಂಜರಃ, ಕುಟೇರಕಃ – ೩ ಕಗ್ಗೊಲೆರ್ಗಿಡದ ಹೆಸರು" (ಸಿದ್ಧಾಂತಿ. ೧೧೪). [< ಕರಿದು + ಕೊಱಲೆ]

**ಕಗ್ಗೋಡಿ** (ನಾ). ಒಂದು ಸ್ಥಳದ ಹೆಸರು: ಐಶಾನ್ಯಾಂ ದಿಶಿ ಕಗ್ಗೋಡಿ ಸಂಗಮಸ್ಯೋತ್ತರ ನಿಕಟೇ ವಾಮನಮುದ್ರಾ ನಿಖಾತಶಿಲಾ (ಕಇ. IV, ೫೪–೬೯; 1245). [?]

**ಕಚ** (ನಾ). ೧. ತಲೆಕೂದಲು: ಪರೆದ ಕಚಮುಂ ಕಣ್ಣಿಂ ಕಯ್ಗಣ್ಮು ವಶ್ರುಜಲಂಗಳುಂ ಬೆರಸು (ಪಂರಾಮಾ. ೯–೪೨). ೨. ತುರುಬು; ಹೆಡ ತಲೆಯಲ್ಲಿನ ಕೂದಲಗಂಟು (ಕ). ೩. ಜಟೆಗಟ್ಟಿದ ಕೂದಲು (ಕ). ೪. ಗಾಯದ ಕಲೆ,—ಗುರುತು. ೫. ಕಟ್ಟು; ಬಂಧ. ೬. ಮೋಡ. ೭. ಉಡುಗೆಯ ಸೆರಗು, —ಅಂಚು. [ಸಂ.]

**ಕಚಕುಳಿ, ಕಚಗುಳಿ, ಕಚ್ಚಕುಳಿ, ಕಚ್ಚಗುಳಿ** (ನಾ). ನಗಿಸುವುದಕ್ಕಾಗಿ ಕಂಕುಳಲ್ಲಿ ಗುಳುಗುಳು ಬೆರಳಾಡಿಸುವುದು; ಚಕ್ಕಲಗುಳಿ: ನಿರ್ಮಲೆಗೆ ಕಚಕುಳಿಯಾಗುತ್ತದೆ (ಆಬೋಲೀ. ೧೦೯). **ಕಚಗುಳಿ**: ಕಚಗುಳಿಯಿಡುತ್ತಿದೆ ಹೂಬೇಟ! (ಕೋಗಿಲೆ. ೬೭–೧೪). **ಕಚ್ಚಕುಳಿ**: ಪ್ರಮೀಲೆಗೆ ಕಚ್ಚಕುಳಿಯಿಟ್ಟಂತೆ ಆಗಿ (ಮರಳಿ. ೧೪೮). **ಕಚ್ಚಗುಳಿ**: ನನಗಾದರೋ ಕಚ್ಚಗುಳಿ ಇಟ್ಟಹಾಗಾಯಿತು (ಗಲಿಪ್ರ. ೧೨).

**ಕಚಕುಳಿಯಿಡು, ಕಚಗುಳಿಇಡು, ಕಚಗುಳಿಯಿಡು** = ಚಕ್ಕಲಗುಳಿಯಿಡು; ಕಟ್ಟ್ಯಾಡಿಸು: ನೀಳಕೇಶ ಹಾರಿ ನಾಗೇಂದ್ರನ ಮೊಗಕ್ಕೆ ಕಚಕುಳಿಯಿಟ್ಟವು (ಸಿಡಿಲು. ೩೬); ಮರ್ಯಂಕಳನ್ನು ಕಚಕುಳಿಯಿಡಲು ಪ್ರಾರಂಭಿಸಿದಳು (ಮಲೆನಾ. ೧೬೪); ನೂರು ಝರಿ ತೊರೆಗಳಲಿ ಬಳುಕಿ ಕಚಕುಳಿಯಿಟ್ಟು ಹಸುರ ನಗಿಸುತ (ನೆಲಮು. ೧೫); ನೀರೊಳಗಿನ ಕಸ ಕಳೆಗಳು ಅಲುಗಿದವು; ಅವು ಮೈಗೆ ಸೋಕಿ ಕಚಗುಳಿಇಟ್ಟಂತಾಯಿತು (ನಗಹೊ. ೨೫೮); ಭುಜದಿಂದ ಕಾಲಿನವರೆಗೂ ಕಚಗುಳಿಯಿಟ್ಟು ನೆಲಕ್ಕೆ ಬಿದ್ದ ಎಲೆಗಳ ಮೇಲೆ ಎಡ್ವಿನ್ ಹೆಜ್ಜೆಯಿಟ್ಟ (ಹೊಸಕ್ಷಿ. ೨೬೭). [?]

**ಕಚಕುಳಿಸು** (ಕ್ರಿ). ಚಕ್ಕಲಗುಳಿಯಿಡು; ಕಟ್ಟ್ಯಾಡಿಸು: ಮೋಡದ ತುಂಡುಗಳು ತಮ್ಮೊಳಗೆ ನಾಚಿ ಬೆಸೆದು ಮೈಗೂಡಿ ಕಣ್ ಚಿವುಟಿ ಕಚಕುಳಿಸಿ ಕರೆದವು ಜಡಿ (ಪಲಾನ. ೩೮). [ಕಚಕುಳಿ + -ಸು$_1$]

**ಕಚಕ್ಕನೆ** (ಅ). ಕಚ್ಚನೆ; ಒಮ್ಮೆಲೆ: ಕಚಕ್ಕನೆ ಮುಳ್ಳು ನೆಟ್ಟಿತು (ರೂಢಿ). [?]

**ಕಚಗುಳಿ** 'ಕಚಕುಳಿ' ನೋ.

**ಕಚಗ್ರಹ** (ನಾ). ಚಂಡಿಕೆ ಅಥವಾ ಜುಟ್ಟು ಹಿಡಿಯುವಿಕೆ; ತಲೆಗೂದಲನ್ನು ಹಿಡಿದೆಳೆಯುವಿಕೆ: ಧೃಷ್ಟದ್ಯುಮ್ನ ಕಚಗ್ರಹ ವಿಲುಳಿತ ಮೌಳಿಯುಂ . . . ವಿದಾರಿತಶರೀರನುಮಾಗಿ ಬಿಟ್ಟಿರ್ದ ಶರಾಚಾರ್ಯರಂ ಕಂಡು (ಪಂಪಭಾ. ೧೩–೫೪ ವ). [ಕಚ + ಗ್ರಹ]

**ಕಚಗ್ರಹಂಗೆಯ್** (ಕ್ರಿ). ಮುಡಿಯನ್ನು ಹಿಡಿದು ಎಳೆ; ಜುಟ್ಟು ಹಿಡಿದು ಎಳೆ: ಎಂತೀಗಳೆನ್ನನೊಯ್ದಪನಂತೋವದೆ ಕರಕಚಗ್ರಹಂಗೆಯ್ದು ನಿಶಾಕಾಂತಂ (ಕಾದಂಪೂ. ೮೯೪). [ಕಚಗ್ರಹ + ಗೆಯ್ (< ಕೆಯ್$_1$)]

**ಕಚಡ, ಕಚಡಾ, ಕಚರಾ, ಕಚ್ಚಡ** (ಗು). ೧. ಹೊಲಸಾದ; ಕೊಳಕಾದ: ನಾನು ಈ ಕಚಡ ಕೆಲಸಕ್ಕೆ ಒಪ್ಪೋದಿಲ್ಲ (ಮುನಿಮಾ. ೧೩೧). **ಕಚಡಾ**: "ಥೂ! ಇದೆಲ್ಲಾ ಕಚಡಾ ಪುಸ್ತಕ . . ." (ರಂಗವ. ೧೧೧); ಕೆರೆಯ ಕಚಡಾ ನೀರೆಲ್ಲಾ ತೆಗೆಯುತ್ತಿದ್ದಾರಂತೆ (ಕರಿಕಂ. ೯). ೨. ಹೀನವಾದ: "ಕಚಡಾ ಜನಗಳ ಸಹವಾಸ ಮಾಡುವುದಕ್ಕೆ ನನಗೆ ಇಷ್ಟವಿಲ್ಲ ಗೌಡರೇ" (ಗೃಹಲ. ೧೮೩). **ಕಚರಾ**: (ನಾ). ೩. ಕಸ; ಕೊಳಕು: ಕಾಲಿವೆಯೊಳಗಣ ಕಚರಾ ವಗೈರೆ ಅಡಚಣೆಯನ್ನು ತೆಗಿಯುವುದು (ಗ್ರಾಮಾಕ. ೩). **ಕಚ್ಚಡ**: (ಕ).

[?. / ತಮಿ. ಕಚಡು; ಮಲ. ಕಚ್ಚ; ತೆಲು. ಕಸಟು. / ಮರಾ. ಕಚರಾ. / ಸಂ. ಕಜ್ಜರ]

**ಕಚಡಾ** 'ಕಚಡ' ನೋ.

**ಕಚಡಿ** 'ಕಚ್ಚಡಿ' ನೋ.

**ಕಚಪಕ್ಷ** (ನಾ). ಹೆಣೆದು ಅಲಂಕರಿಸಿದ ತಲೆಗೂದಲು; ಕೇಶಪಾಶ. [ಸಂ.]

**ಕಚಪಚ** 'ಕಚಪಿಚಿ' ನೋ.

**ಕಚಪಾಶ** (ನಾ). = ಕಚಪಕ್ಷ. [ಸಂ.]

**ಕಚಪಿಚಿ, ಕಚಪಚ** (ಅ). ಅವ್ಯವಸ್ಥಿತವಾಗಿ, ಸಿಕ್ಕಾಪಟ್ಟೆ ಮುಂತಾದ ಅರ್ಥಗಳಲ್ಲಿ ಬರುವ ಒಂದು ಅನುಕರಣ ಶಬ್ದ; "ಹೊಲಸು ಪಲಸು" (ಜಾನಕೋ. ೩೨). **ಕಚಪಚ**: ನೆಗ್ಗಲಿ ಮುಳ್ಳಿನ ಹಾಸಿಗೆ ಹೊಡೆಯಲು ಅದನ್ನು ಕಚಪಚ ತುಳಿಯುವದಿಧೆಯೆ? (ಜನನಾ. ೬೨).

ಕಚಪಿಚಿಕೆಲಸ = ಅಸಹ್ಯಕರವಾದ ಕೆಲಸ; ಜುಗುಪ್ಸೆಯ ಕೆಲಸ (*). [?]

**ಕಚಪು** (ನಾ). ಮಸಾಲೆ ಹಾಕಿ ಬೇಯಿಸಿದ ಕಾಯಿಪಲ್ಯ ಅಥವಾ ಹಣ್ಣು (*). [← ತುಳು. ಕಚಿಪು]

**ಕಚಬಂಧ** (ನಾ). ತಲೆಕೂದಲಿನ ಕಟ್ಟು; ಹೆರಳು; ತುರುಬು; ಮುಡಿ: ಮಹಾಕವಿಗಳೊಜಲ್ದು ತಿರ್ದುಗೆ ವಚೋವನಿತಾ ಕಚಬಂಧಮಂ (ಮಲ್ಲಿಪು. ೧-೨೪). [ಕಚ + ಬಂಧ]

**ಕಚಭರ** (ನಾ). ತುಂಬುಗೂದಲು; ಕೇಶರಾಶಿ: ಪಾರ್ವತಿಯ ಜಡೆಗಳನೊಪ್ಪಿರೆ ಬಿಡಿಸಿ ಕಚಭರಮನತಿಭರದಿಂ ತಿರ್ದುತ್ತುಮಿರ್ದರ್ (ಗಿರಿಕ. ೧೦-೧೬); ಅಳಿಕದೊಳಕ್ಷಿಯೊಳು ಕಚಭರದೊಳೀ ಪರಿಯಿಂದೆ ತತ್ತತ್‌ಸ್ಥಾನ ಕಳೆಗಳಲಿ (ಬಸಪು. ೪೦-೧೯). [ಕಚ + ಭರ]

**ಕಚಭಾರ** (ನಾ). ತಲೆಕೂದಲಿನ ಒಜ್ಜೆ, —ಹೊರೆ; ತುರುಬಿನ ಭಾರ: ಕಚಭಾರಂ ಕೊರಲ್ಗಬಲೆಯ ಕಚಕುಚಭರಮುಸಿಯ ನಡುಗೆ (ಅಜಿಪು. ೨-೪೩). [ಕಚ + ಭಾರ]

**ಕಚಮಾಲ** (ನಾ). ಹೊಗೆ; ಧೂಮ. [ಸಂ.]

**ಕಚರಾ** 'ಕಚಡ' ನೋ.

**ಕಚರಿ**$_1$ 'ಕಚ್ಚಡಿ' ನೋ.

**ಕಚರಿ**$_2$ (ನಾ). ಅರಿದಾಳ; ಕಚೋರ (?): ತಳಗು ಕಲೆ ಕಚರಿ ಜರ್ಝರಿ ಪುಳಕಂ ತಿಳಿಗಾರೆ ತಿರವಿ ವರ್ಣಮಣಂ ಸಂಗಳಿಸದೆ ಪಳುಕಿನ ಕುಟ್ಟಿಮ ತಳಮದು ತಳತಳಿಸಿ ತೊಳಗುವುದು ತನಿವೆಳಗಿಂ (ಕುಸುಮಾ. ೧-೧೧೫). [?]

**ಕಚವಾಯಿಸು, ಕಚವಾಸು, ಕತವಾಸು** (ಕ್ರಿ). (ಉಕ) ೧. ಬಳಲಿ ನಿಸ್ಸತ್ತ್ವವಾಗು; ನಿರ್ವಿಣ್ಣವಾಗು (*). ೨. ಬೇಸರವಾಗು; ರೋಸಿಹೋಗು; ಜುಗುಪ್ಸೆಹೊಂದು. **ಕಚವಾಸು**: ೨. ಜೀವಾ ಕಚವಾಸಿ ಹೋತು (ಸಶೂರ. ೧೧೭). **ಕತವಾಸು**: ೨. ನಾನೇ ಅಲ್ಲೆ ಇರೂದಕ್ಕ ಕತವಾಸಿದೆ (ದೀಪಕ. II, ೩೪೩).

[ಕಚವಾಯ್ ? + –ಇಸು$_3$. P ಮರಾ. ಖಚಣೇ = ಶಕ್ತಿಹೀನವಾಗು]

**ಕಚವಾಸು** 'ಕಚವಾಯಿಸು' ನೋ.

**ಕಚಾಕಚಿ** (ನಾ). ೧. ಪರಸ್ಪರ ಕೂದಲು ಹಿಡಿದು ಎಳೆದಾಡುವುದು; ಕೇಶಾಕೇಶಿ: ರಣಂ ಬಿಲ್ಲಿಂದಮಾಯ್ತು ಬಿಲ್ಮುಱಿದೊಡೆ ಗೋಣ್ಮುರಿಗೆ ತಲೆಯೊತ್ತುತಿರ್ಪೊಂದುರವಣೆಯಿಂದಾದುದಾ ಕಚಾಕಚಿ ಯುದ್ಧಂ (ಚಂದ್ರಪು. ೧೦-೭೦); ಜೆಟ್ಟಿಗರೊಳ್ ಶಸ್ತ್ರಾಶಸ್ತ್ರಿಯುಂ ಖಡ್ಗಾಖಡ್ಗಿಯುಂ ದಂಡಾದಂಡಿಯುಂ ಕಚಾಕಚಿಯುಮಾಗಿ ತಳ್ತಿಱಿವ ವಸುಷೇಣನೃಪನ (ಅನಂಪು. ೧೧-೮೩ ವ). ೨. ಜಗಳ; ಬಡಿದಾಟ: ದಂಡಾದಂಡಿ, ಕಚಾಕಚಿ (ಶಮುದ. ನ. ೧೯೬ ಪ್ರಯೋ). [ಸಂ.]

**ಕಚಾಯಿಸು** (ಕ್ರಿ). ೧. ನಿಭಾಯಿಸು; ನಿರ್ವಹಿಸು: ಎಂತೆಂತಹ ಅಧಿಕಾರಿಗಳಲ್ಲಿಯೋ ಕಚಾಯಿಸಿದ ತಾನು . . . ಈ ಹುಡುಗ ಅಮಲ್ದಾರರುಗಳಲ್ಲಿ ಬೈಸಿಕೊಳ್ಳಬೇಕಾಯಿತಲ್ಲಾ (ಬೆಸ್ತಕ. ೨೬). ೨. ತುಂಬುಹರಯಕ್ಕೆ ಬರು; ಯೌವನ ಉಕ್ಕಿ ಹರಿ: ಬೀದಿಯ ಕಾಮಣ್ಣಗಳು ಕಚಾಯಿಸಿದ ಹೆಣ್ಣುಗಳನ್ನು ಚುಡಾಯಿಸಿದರು (ರೂಢಿ).

[ಕಚಾಯತ? + –ಇಸು$_3$. P ಮರಾ. ಕಚಕ್ಯಾ = ದಿಟ್ಟ, ಧೈರ್ಯಶಾಲಿ]

**ಕಚಾರಿ** (ನಾ). (ಕರಾ) ಅನ್ನ ಬಡಿಸುವ ಅಗಲವಾದ ಬಾಯಿಯುಳ್ಳ ದೊಡ್ಡ ಪಾತ್ರೆ; ಪರಾತ (?). [< ಕಟೋರ$_2$ ?]

**ಕಚಾರಿಕೆ** (ನಾ). ಒಂದು ಬಗೆಯ ಮೂಲಿಕೆ (?): ತುಂಬುರು ಮುಸ್ತೆ ಎರಡು ಜೀರಿಗೆ ಕಚಾರಿಕೆ ಅಜಮೋದ ಬಜೆ (ಅಶ್ವಟೀ. ೧೦೮-೮). [?]

**ಕಚಾವಳಿ** (ನಾ). ತಲೆಗೂದಲಿನ ರಾಶಿ, —ಗುಂಪು, —ಸಮೂಹ; ಕೇಶಪಾಶ: ಮನಮೊಲ್ದೊಡಂ ತಪಶ್ರೀವಧು ಕಾಮಿನೀ ಜನದವೋಲ್ ನಿನಗೀವಳೆ ಕೂರ್ತು ವಸ್ತ್ರಭೂಷಾವಳಿಯಂ ಕಚಾವಳಿಯನೀ ವಧು ಗರ್ವದ ಗಾಳು ವಸ್ತ್ರಭೂಷಾವಳಿಯಂ ಕಚಾವಳಿಯನಿತ್ತರನಲ್ಲದೆ ಪೊರ್ದಲೀವಳೇ (ಪಂರಾಮಾ. ೨-೧೯). [ಕಚ + ಆವಳಿ$_1$ (= ಅವಲಿ)]

**ಕಚು** (ನಾ). ೧. ಒಂದು ಬಗೆಯ ಕಂದಮೂಲ. ೨. ಉದ್ಯಾನದಲ್ಲಿ ಬೆಳೆಸುವ ಗಿಡ; ಗಂಧಪತ್ರ (*). [ಸಂ.]

**ಕಚುವನಹಳ್ಳಿ** (ನಾ). ಒಂದು ಊರಿನ ಹೆಸರು: ನಾಗಗಟ್ಟವೊಳಗಾದ ಮಡಲು ಕಚುವನಹಳ್ಳಿ (ಎಕ. X, ಮುಳಬಾ. ೨೯-೬; 1398).

[ಕಚುವ ? + ಹಳ್ಳಿ (< ಪಳ್ಳಿ$_1$)]

**ಕಚೂರ** (ನಾ). ಒಂದು ಗಂಧಿಗೆ ಪದಾರ್ಥ, —ಮೂಲಿಕೆ: ಸೂರ್ತಿ ಚವಾಳಾ ಮಣದ ಮೇಲೆ ಕಿಮ್ಮತ್ತು ಇರತಕ್ಕ ಜಿನಸಗಳು. ೧, ಅಕ್ಕಲ ಖಾರ . . . ೧೪, ಕಚೂರ (ಮುಂಬವ್ಯಾ. ೧೨೪). 'ಕಚೋರ' ಪರಾ. [< ಸಂ. ಕಚೋರ]

**ಕಚೇರಿ, ಕಚ್ಚೇರಿ, ಕಛೇರಿ** (ನಾ). ೧. ಕೆಲಸ, ಕಾರಭಾರಗಳನ್ನು ಮಾಡುವ ನಿಶ್ಚಿತ ಸ್ಥಳ; ಕಾರ್ಯಾಲಯ; ಆಫೀಸು: ದಿವಾನ್ ಕಚೇರಿ ಹಜೂರು (ಮೈಆರಿ. ೧೯೨೯, ೯೪-೪; 1813); ಅಂಚೆ ಅಮೃತ ಮಹಲ ಕಚೇರಿ (ಎಕ. XIV, ಚಾಮರಾ. ೨೪೦-೧; 1868); ನಡುವಿನ ಕೊಟಡಿಯಲ್ಲಿ ಶೇಖಜಿಯವರ ಕಚೇರಿಯಿತ್ತು (ರತ್ನಗೋ. ೧೫); ಮಾಮಲೇದಾರ ಕಚೇರಿಯಲ್ಲಿ ಕೆಲಸವೂ ದೊರಕಿತು (ಗಂಮಾಯಿ. ೧). ೨. ಸಭೆ; ಸಮಾರಂಭ: ನಾಳೆ ಸುಬ್ಬಲಕ್ಷ್ಮಿ ಸಂಗೀತಕಚೇರಿ ಇದೆ (ರೂಢಿ). **ಕಚ್ಚೇರಿ**: ೧. ಕಚ್ಚೇರಿಯ ಜನರು ಬಾಕಿದಾರರ ಮನೆಗಳನ್ನು ಲೂಟಿಮಾಡಿ (ದೇವೀಚೌ. ೧೦). **ಕಛೇರಿ**: ೧. ಆಲೋಚಿಸಿ ಅಪ್ಪಣೆ ಕೊಡಿಸಿದ ವ್ಯವಸ್ಥೆಯಿಂದ ೧೮ ಕಛೇರಿಗಳೂ . . . ಫೌಜುದಾರಿ (ತುಕಡಿ)ಗಳೂ ಸ್ಥಾಪಿತವಾದವು (ಮಹಾವಂ. II, ೩೮); (ಅವನಿಗೆ ಸರ್ಕಾರದ ಯಾವುದೋ ಒಂದು ಕಛೇರಿಯಲ್ಲಿ ಹೆಸರಿಗೆ ಮಾತ್ರ ಒಂದು ನೌಕರಿ ಇದ್ದಿತು) (ಮಲೆನಾ. ೮).

[← ಮರಾ. ಕಚೇರೀ; ಹಿಂ. ಕಚಹರೀ]

**ಕಚೋರ** (ನಾ). ೧. ಗಂಧಪತ್ರ: "ತಟ, ಗಂಧಮೂಲಿ, ಷಡ್ಗಂಧಿಕಾ– ಈ ೩ ಗ್ರಂಥಿಯನ್ನುಳ್ಳ ಕಚೋರ" (ನಾಚಿರಾ. ೧೧೨); ದಳಬಳ (ಕಚೋರ)ದ ಹಸಿಗಡ್ಡೆಯ ರಸ ಒಂದು ಚಮಚೆಗೆ ಅಷ್ಟೇ ನೀರುಳ್ಳಿ ರಸ ಕೂಡಿಸಿಕೊಡುವುದು (ಮನೆಮ. ೧೪). ೨. ಅರಿದಾಳ: "ಅಂಗುಲಿ ಕಚೋರವೆನಲರಿದಾಳಮೆನಿಸಿಕ್ಕು" (ಮಂಗರಾ. ೩೧-೭); ಕಚೋರ ಗಂಟು ಪರಂಗಿ ಅತಿಬಜೆ . . . ಉಮ್ಮತ್ತದ ರಸದಲ್ಲಿ ಮರ್ದಿಸಿ ಲೇಪವಂ ಮಾಡಲು ಮಾಣ್ಗು (ವಾತಾಚಿ. ೧೩-೪). [ಸಂ.]

**ಕಚೋರಿ** (ನಾ). ಮೀನು, ತರಕಾರಿ ಮೊದಲಾದುವುಗಳನ್ನು ಕಣಕದ ಹಾಳೆಯಲ್ಲಿಟ್ಟು ಕರಿದು ಮಾಡುವ ಒಂದು ಬಗೆಯ ತಿಂಡಿ; ಮೊಟ್ಟೆಪೂರಿ; ಸಮೂಸ: ಚಾರು ಆಗ ಭೂಪತಿಯ ಸಲುವಾಗಿ ತತ್ತ್ರಿಯ "ಕಚೋರಿ"ಯನ್ನು ಕರಿಯುತ್ತಿದ್ದಳು (ಇಪ್ಪಕ. ೨೯೧). [← ಮರಾ. ಕಚೋರಿ; ಹಿಂ. ಕಚೌರೀ]

**ಕಚೌಘ** (ನಾ). ಕೂದಲಿನ ಸಮೂಹ: ಭೂಕಂದರ್ಪಂ ಸೂಸಿದ ನೊಲವಿಂದವಳ ಕಚೌಘದಲ್ಲಿ ಧವಳಾಕ್ಷತೆಯಂ (ರಾಜಶೇ. ೮–೬೪). [ಕಚ + ಓಘ]

**ಕಚ್ಚ** (ನಾ). ೧. ಕಚ್ಚೆಯ ಚುಂಗು. ೨. ಲಂಗೋಟಿ; ಕೌಪೀನ: "ಕಕ್ಷದೊಳೆ ಕಚ್ಚಂ" (ಕರ್ಣಾನಿ. ೩೮); "ಕಕ್ಷ – ಕಚ್ಚ" (ಶಮದ. ೨೬೨ ಪ್ರಯೋ). [< ಸಂ. ಕಕ್ಷ]

**ಕಚ್ಚಕುಳಿ** 'ಕಚಕುಳಿ' ನೋ.

**ಕಚ್ಚಗುಡ** (ನಾ). ಒಂದು ಬಗೆಯ ಬೆಲ್ಲ: ಜೀರಗೆ ಹೇಱಿಂಗೆ ಹಿಱಿಯ ಸೊಳಸ ೨ ಕಚ್ಚಗುಡಕ್ಕೆ ಹೇಱಿನರ್ದ್ಧ ಬೆಲ್ಲಂ ಭಣ್ಡಿಗೆ ೧೦ ಹೇಱಿಂಗೆ ೨ (ಸೌಇಇ. IX–i, ೧೬೨–೩೪; 1106). [ಕಚ್ಚ ? + ಗುಡ]

**ಕಚ್ಚಗುಳಿ** 'ಕಚಕುಳಿ' ನೋ.

**ಕಚ್ಚಡ** 'ಕಚಡ' ನೋ.

**ಕಚ್ಚಡಿ, ಕಚಡಿ, ಕಚರಿ$_1$, ಕಚ್ಚರಿ** (ನಾ). ಊಟದಲ್ಲಿ ನಂಚಿಕೊಳ್ಳುವ ಒಂದು ವ್ಯಂಜನ, —ಪದಾರ್ಥ: ಉಪ್ಪುಗಾಯ್ ಬಾಳುಕಂ ಕೃಸರಿ ಕಚ್ಚಡಿ ಪಾಲ್ ಮೊಸರ್ಗಳಿವು ಬಗೆಗೊಳಿಸಿ ಪೊಸತೆನಿಸಿರಲ್ ಸವಿದನಚ್ಯುತಂ (ಜೈಮಿಭಾ. ೬–೪೪); ಕರುಳು ಶಾಖಾವಳಿಯ ಮಿದುಳಿನ ಪರಿಪರಿಯ ಕಚ್ಚಡಿಯ ಮಾಂಸದ ಪರಿಕಲಿತ ಚಿತ್ರಾನ್ನರಾಶಿಯ (ಅನಂರಾ. ೬–೨೨–೧೪); ಕಚ್ಚಡಿಯ ಸೀಕರಣೆ ಪಳದ್ಯವ . . . ಬಡಿಸಿದಳ್ (ಕೋಗಯು. ೪–೧೪). **ಕಚಡಿ**: ಬಂದೆಳ್ಳರಾಸಿಗಳ ತೆಲ್ಲಿಗರೊಯ್ದು ಗಾಣವಾಡೊಳ್ಳಿತೆನಿಸಿದ ತೈಲ ಕುಂಭಕೋಟಿಗಳ ತಂದರು ಹಿಂಡಿ ಕಚಡಿ [ಪಾಠಾಂ. ಕಚರಿ, ಖಚರಿ, ಬಚರಿ]ಗಾಗಿ (ಸಿದ್ಧರಾ. ೮–೫೧). **ಕಚರಿ$_1$**: ಉಪ್ಪಿನಕಾಯ ಕಚರಿಗಳ ಬಟ್ಟಸಂಡಗೆ ಬಾಳುಕಂಗಳನೊಟ್ಟೈತಿರ್ದರು (ಪ್ರಭುಲೀ. ೨೩–೨೪); ಪಪ್ಪಳ ಸಂಡಿಗೆ ಪಚ್ಚಡಿಯುಪ್ಪಿನಕಾಯ್ ಪಲ್ಯಂ ಮೇಲೋಗರ ಕಚರಿಗಳೊಪ್ಪಿರಲವನೆಲ್ಲಮುಮಂ (ಹಾಲಾಸ್ಯ. ೮–೨೦). **ಕಚ್ಚರಿ**: ಸೇವಗೆಯ ಪಾಯಸ, ಮುಕ್ಕಡಲೆಯ ಹುಗ್ಗಿ, ಹಿಂಡಿಯ ಕಚ್ಚರಿ, ಅಲಸಂದೆಯ ಗುಗ್ಗುರಿ, ಜೇನುತುಪ್ಪ . . . ಮಂತ್ರ ಸಮನ್ವಿತವಾಗಿ . . . ನಿವಾಳಿಸಿ (ಬಾಲಚಿ. ೧೪೯–೩); ಪರಿಮಳಂಗಳ ಪಸರಿಸುವ ಕಚ್ಚರಿ [ಪಾಠಾಂ. ಕಸ್ತೂರಿ]ಯ ಪಚ್ಚಡಿಗಳ ಸುಸಾರೋತ್ಕರದ ಸಾರಿನ (ಪ್ರಭುಲೀ. ೪–೪೫); ಅಚ್ಚರಿಯ ಕಚ್ಚರಿಯ ಹಪ್ಪಳಗಳ ಸೋಗೆಗಣ್ಣಬಲೆ ನೀಡಿದಳು (ಧರಚ. ೧೦–೨೪); ಉಪ್ಪಿನಕಾಯ್ ಪಳಿದ್ಯ ಕಚ್ಚರಿ ಬಾಳುಕಂಗಳೊಪ್ಪುವ ಪಕ್ವಫಲ ರಸಾಯನದ ಸೀಕರಣೆಗಳನು (ಚಬವು. ೫–೬೦). [ದೇ. ‖ ತಮಿ. ಕಿಚ್ಚಡಿ]

**ಕಚ್ಚನೆ** (ಅ). ಒಮ್ಮೆಲೆ; ಕಚಕ್ಕನೆ: ಕಚ್ಚನೆ ಮುಳ್ಳು ನೆಟ್ಟಿತು (ರೂಢಿ). [?]

**ಕಚ್ಚಪ** (ನಾ). ಆಮೆ; ಆವೆ: ಮಚ್ಛದಿಂ ಕಮಠದಿಂ ಕಚ್ಛಪೋತ್ಕರದಿಂದ ಹೆಚ್ಚಿದ ನಕ್ರನಿಕಾಯ (ಅಮುಸಾಂ. ೧–೩೦). [< ಸಂ. ಕಚ್ಛಪ]

**ಕಚ್ಚಪವೀಣೆ** (ನಾ). ಆಮೆಯ ಆಕಾರದ ಒಂದು ಬಗೆಯ ವೀಣೆ: ಕಚ್ಚಪವೀಣೆಯ ಕೋವಿದರಿಂ ಮುಖವೀಣೆಯ ಮೋಹಿಗಳಿಂದಂ ರಾವಣ ವೀಣೆಯ ರಂಜಕರಿಂ (ಹಮ್ಮಾರ. ೮–೪೧ ವ). [ಕಚ್ಛಪ + ವೀಣೆ]

**ಕಚ್ಚಯ** (ನಾ). ಒಬ್ಬಾತನ ಹೆಸರು: ವಿಟ್ಠಯನ ಬರಹ ಕಚ್ಚಯನ ಬರಹ (ಎಕ. X, ಮುಳಬಾ. ೧೬೩–೧೨; 1503). [?]

**ಕಚ್ಚರ** (ನಾ). ೧. ಹೊಲಸು; ಕೊಳೆ; ಧೂಳು: ತೊಡವುಗಳನೆಲ್ಲಮಂ ಪರಿದಿಟ್ಟು ಕಚ್ಚರದ ಉಡಿಗೆಯನ್ನುಟ್ಟು ಕೆದರಿದ ಕೇಶಪಾಶಗಳ ಗುಡಿಗಟ್ಟಿ (ವೆಂಕಾರಾ. ೨–೫–೨೯). ೨. ಚೇಲ. 'ಕಂಠಕಚ್ಚರ' ಪರಾ. [ಸಂ.]

**ಕಚ್ಚರಾಂಬರ** (ನಾ). ಮಾಸಿದ ಬಟ್ಟೆ: ಸೊಗಯಿಸುವ ಕಚ್ಚರಾಂಬರದಿಂದ ಪರಿಕರದೊಳು ಸೊಗಯಿಸುವ ಮುಹಿಯಂತೆ ರಕ್ಕಸೀಗಣದೊಡನೆ ಸೊಗಯಿಸುವ ಜನಕಜೆಯ ಸುಪ್ರಭೆಯ ಕಾಣುತ್ತ ಹಿಗ್ಗಿದಂ (ವೆಂಕಾರಾ. ೫–೭–೨೪). [ಕಚ್ಚರ + ಅಂಬರ]

**ಕಚ್ಚರಿ** 'ಕಚ್ಚಡಿ' ನೋ.

**ಕಚ್ಚಲು** (ನಾ). (ಅಕ್ಕಿ ಮೊದಲಾದುವನ್ನು) ತೊಳೆದ ನೀರು. 'ಅಕ್ಕಚ್ಚಲು' ಪರಾ. [ಕಚ್ಚು$_2$ (< ಕಟ್ಟು) + –ಅಲು (< –ಅಲ್$_3$)]

**ಕಚ್ಚವಡ** (ನಾ). (?) : ರಮಣನಿಗೆ ಯರವಾಗಿ ಲಕ್ಷ್ಮೀರಮಣನಿಗೆ ಪರವಾದ ವಿಗ್ರಹ ಯಮನ ಕಬಳಿಡುವೆಂದು ಬಿಟ್ಟೊಯ್ಯಾನ ಕಚ್ಚವಡಾದು ಮುಕಲವನಿಗೆ ಖಗನು ಹಾಯೆಂದಮರಿದಜ್ಞಾನದಲಿ ಯಿರಲಿಲ್ಲಮಿತಗುಣ ಬೀಳ್ವಾಗ ತಿಳಿದೊನದೇವಿಯವಧಿಯಲಿ (ಜಿರಾಮಾ. ೭೬–೨೯). [?]

**ಕಚ್ಚವರ್** (ನಾ). ಒಂದು ಊರಿನ ಅಥವಾ ಮನೆತನದ ಹೆಸರು: ಶ್ರೀಮತ್ ಲೆಂಡೆ(? ಣ್ಡೆ)ಯರಸರು ಪುರಿಗೆಱೆ ಮೂನೂಱುಮನಾಳುತ್ತಿರೆ ಮುಟ್ಟುವುರದ ಸೂರ್ಪದಿಮ್ಮೊರುಂ ಇಟ್ಟು ದಯೆಗೆಯ್ದೆ ಕಚ್ಚವರ ಕಾದಮ್ಮನ ವುಟವುರಂ ಬಿಡಿಸಿದೊಂ (ಇಆ. XII, ೨೨೫–೯; 916). [?]

**ಕಚ್ಚವಿ, ಕಚ್ಛವಿ** (ನಾ). ಒಂದು ಊರಿನ ಹೆಸರು (?) : ಆ ದೇಗುಲದ ಕೆಱೆಯ ಕೆಳಗೆ ಕಚ್ಚವಿಯ ಗಳಿಂಬದೊಳೆ ಬಿಟ್ಟ ಗಟ್ಟಿ (ಎಕ. VII, ಶಿಕಾರಿ. ೨೦(೩)–೧೫; 1032); ಮುಟ್ಟವಯಲೊಳಗೆ ಬಿಟ್ಟ ಗಟ್ಟಿ ಕಚ್ಚವಿಯ ಗಳೆಯಲು ಕಮ್ಮಂ ೨೫(ಎಕ. VII, ಶಿಕಾರಿ. ೧೪–೧೬; 1089). **ಕಚ್ಛವಿ**: ಕಚ್ಛವಿಯ ಗಡಿಂಬದ ಗಳೆಯೊಳಳೆದು ಕೊಟ್ಟ ಗಟ್ಟಿ (ಮೈಆರಿ. ೧೪೨೯, ೬೫–೮; 1025); ಅಯೂರ ಕೆಱೆಯ ಕೆಳಗೆ ಕಚ್ಛವಿಯ ಗಳೆಯಲು ಮತ್ತರೆರಡುಮಂ ಸರ್ವನಮಸ್ಯಮಾಗಿ ಬಿಟ್ಟುಕೊಟ್ಟಂ (ಮೈಆರಿ. ೧೪೨೪, ೬೪–೧೩; 1220). [?]

**ಕಚ್ಚಳಿ** 'ಕಚ್ಚಟಿ$_1$' ನೋ.

**ಕಚ್ಚಟಿ$_1$, ಕಚ್ಚಳಿ** (ನಾ). ಬಹುಮಾನವಾಗಿ ಕೊಡುವ ಬಿರುದಿನ ಬಳೆ: "ಕಚ್ಚಟಿ – ಬಿರುದಿನ ಬಳೆ" (ಶಮದ. ಪರಿ. ೨); "ಕಚ್ಚಟಿಯೆನೆ ಬಿರುದಿನ ಬಳೆ" (ಕವಿಕಂ. ೧೯೦); ಅರಮನೆಯವರುಂ ಕಬ್ಬಮಂ ಕಂಡಲ್ತೆ ಕಚ್ಚಟಿಯನಿತ್ತರ್ (ರಾಮಾಶ್ವ. ೫–೨೪). **ಕಚ್ಚಳಿ**: ಪುಲಿಯ ಚರ್ಮದ ಪಲುದಿಯ ಗಱಿಯ ತೋಳ ಕಚ್ಚಳಿಯ ತೊಂಗಲ್ ಘಂಟೆಯ (ರಾಜಶೇ. ೬–೧೧ ವ); ಕಾಂಚನ ಮುದ್ರಾಂಗುಲೀಯಕ ಕಚ್ಚಳಿ [ಪಾಠಾಂ. ಕಚ್ಚಕಳಿ] ಸಹಿತಮುಡರ್ದಾನೆವೆರಸು (ಕೆಳನೃ. ೨–೯೯); ತೋಳ ಕಂಕಣದ ಕಚ್ಚಳಿಗಳು (ಬಿಟ್ಟಳ. ೧೯೭–೧೬). [?]

**ಕಚ್ಚಟಿ$_2$** (ನಾ). ಒತ್ತಿ ಚಪ್ಪಟೆಯಾದದ್ದು: "ಕಚ್ಚಟಿಯೆಂದು, ಒತ್ತಿ ಚಪ್ಪಟೆಯಾದುದು" (ಶಮದ. ೬. ೨೩ ವೃತ್ತಿ). [?]

**ಕಚ್ಚಟಿವೋಗು** (ಕ್ರಿ). ಕೊರಕಲು ಬೀಳು (?) : ಪರಿವ ಜಳಪ್ರವಾಹಕುಳದಿಂ ನೆಱೆ ಕಚ್ಚಟಿ [ಪಾಠಾಂ. ಕಚ್ಚರಿ]ವೋಗೆ ಭೂಧರೋತ್ಕರಮಿರದೆಯ್ದೆ ಬೀಳ್ಕೊರ್ಱಿದಡಂಗೆಡೆಯುತ್ತಿರೆ ಪೆರ್ಮರಂಗಳ್ (ಶಾಂತೀಶ್ವ. ೧೨–೫೩). [ಕಚ್ಚಟಿ ? + ಪೋಗು$_1$]

**ಕಚ್ಚಾ** (ಗು). ೧. ಅಪಕ್ವವಾದ; ಹಣ್ಣಾಗದ; ಅಸಿದ್ಧವಾದ; ಮೂಲಸ್ಥಿತಿಯಲ್ಲಿರುವ. ೨. ಬಾಳಿಕೆ ಬಾರದ; ಬೇಗನೆ ಹಾಳಾಗುವ,

೩. ನಯಮಾಡದ: ಕಚ್ಚಾ ರಸ್ತೆಗಳು ಮಳೆಗಾಲದಲ್ಲಿ ನಿರುಪಯೋಗಿಯಾಗುತ್ತವೆ (ರೂಢಿ). ೪. ಚೆನ್ನಾಗಿ ಬೇಯದೆ ಇರುವ; ಹಸಿಬಿಸಿಯಾದ. (ಕ). ೫. ಕ್ರಮವಾಗಿ ವಿಂಗಡಿಸದೆ ಇರುವ. ೬. ಅನುಭವವಿಲ್ಲದ; ತಿಳಿವಳಿಕೆಯಿಲ್ಲದ: ಅವನಿನ್ನೂ ಕಚ್ಚಾ ಹುಡುಗ (ರೂಢಿ). ೭. ಪೂರ್ಣವಾಗದ; ಅರ್ಧಂಬರ್ಧ ಮಾಡಿದ; ಅರೆಬರೆಯಾದ (ಕ).

**ಕಚ್ಚಾ ಕರಡು** = ಸುಮಾರಾದ, ಸ್ಥೂಲರೂಪದ ಲೆಕ್ಕ; ಅಂದಾಜಿನ ಲೆಕ್ಕ. **ಕಚ್ಚಾ ಕಿರ್ದಿ** = ಖಾತೇವಾರು ಹಂಚಿಹಾಕದಿರುವ ಜಮಾ ಖರ್ಚು. **ಕಚ್ಚಾ ಪದಾರ್ಥ** = ಕಚ್ಚಾಮಾಲು: ಕಚ್ಚಾ ಪದಾರ್ಥಗಳನ್ನೂ ಆಹಾರಪದಾರ್ಥಗಳನ್ನೂ ಪರದೇಶಗಳಿಗೆ ರಫ್ತು ಮಾಡುತ್ತದೆ (ಭೂವಿವ. ೬೬೬). **ಕಚ್ಚಾ ಮಣ** = "ಮುಂಬಯಿ ಮಣಕ್ಕೆ ಕಚ್ಚಾಮಣ ಅನ್ನುತ್ತಾರೆ" (ಮುಂಬವ್ಯಾ. ೧೧೮). **ಕಚ್ಚಾ ಮಾಲು** = ಮೂಲ ಸಾಮಗ್ರಿ; ವಸ್ತುಗಳನ್ನು ತಯಾರಿಸುವುದಕ್ಕಾಗಿ ಬಳಸುವ, ಮೂಲ ಸ್ವರೂಪದಲ್ಲಿಯೇ ಇರುವ ವಸ್ತು: ಜೀವನವೆಂಬ ಶಬ್ದದೊಳಗಿನ ಯಾವತ್ತೂ ನೈಸರ್ಗಿಕ ಏರಿಳಿತಗಳು ಹಾಗು ಇರುವಿಕೆಯು ಬರುತ್ತದೆ. ಆದರೆ ಇದು ಜೀವನದ ಕಚ್ಚಾಮಾಲು (ಪ್ರಬಂಧ. ೧೦); "ಪಕ್ಕಾಮಾಲು" ಗಳಿಗೆ ಅಗತ್ಯವಿರುವ "ಕಚ್ಚಾಮಾಲಿ"ನ ಹುಟ್ಟುವಳಿ (ಮಾವಾದ. ೧೪೫). **ಕಚ್ಚಾ ರಸ್ತೆ** = ಟಾರು, ಸಿಮೆಂಟು ಮೊದಲಾದುವನ್ನು ಹಾಕಿ ಭದ್ರಪಡಿಸದೆ ಇರುವ ರಸ್ತೆ: ಮಳೆಯಾದಾಗ ಕಚ್ಚಾ ರಸ್ತೆಯಲ್ಲಿ ನಡೆಯುವುದು ಬಹಳ ಕಷ್ಟ (ರೂಢಿ). **ಕಚ್ಚಾ ವಸ್ತು** = ಕಚ್ಚಾಮಾಲು (Raw material. ಪತ್ರಿಪಿ. ೬೮). **ಕಚ್ಚಾ ಸೇರು** = ಇಪ್ಪತ್ತು ಅಥವಾ ಇಪ್ಪತ್ತುನಾಲ್ಕು ರೂಪಾಯಿ ತೂಕ (ಕ). **ಕಚ್ಚಾ ಹುರಿ** = ಸಿದ್ಧಮಾಡದೆ ಇರುವ ಹುರಿ: ಸಣಬಿನ (ಕಚ್ಚಿಹುರಿ) ಕಚ್ಚಾಹುರಿ ವಗೈರೆ (ಮುಂಬವ್ಯಾ. ೧೧೮).

[← ಹಿಂ. ಮರಾ. ಕಚ್ಚಾ]

**ಕಚ್ಚಾಟ** (ನಾ). ಪರಸ್ಪರ ಕಚ್ಚಾಡುವುದು; ನನಗೆ ತನಗೆಂದು ಕಿತ್ತಾಡುವುದು; ಜಗಳ: ಧರೆ ಕೋಲುಕಾಟ ಮಾರುಗನಿಂದ ಹಾಳಾಯ್ತು ಮೇಲೆ ಮೇಲೆ ಆ ಮಹಾದ್ವಿಜರ ಕಚ್ಚಾಟಮುಂಟು (ಜೀರಮು. ೮-೧೪); ಈ ರೀತಿಯ ಕಚ್ಚಾಟದಲ್ಲಿಯೇ . . . ಕಾಲಹರಣ ಮಾಡುವುದೊಂದು ದೊಡ್ಡ ಜಾಡ್ಯವಾಗಿದೆ! (ರೂಪಸಂ. ೩೨).

[ಕಚ್ಚು₁ (< ಕರ್ಚು₁) + ಆಟ]

**ಕಚ್ಚಾಡು** (ಕ್ರಿ). ೧. ಪರಸ್ಪರ ಕಡಿದಾಡು; ಜಗಳವಾಡು; ನನಗೆ ತನಗೆಂದು ಕಿತ್ತಾಡು: ಅತ್ತೆ ಸೊಸೆ ಕಚ್ಚಾಡಿ ಮಗನನ್ನು ಹಣ್ಣುಮಾಡಿದರು (ರೂಢಿ); ನೀ ಮಾಡು ನೀ ಮಾಡು ಅಂತ ಕಚ್ಚಾಡಿ ಮಾಡೋಕೆ (ಮುನಿಮಾ. ೬೬). ೨. (ಆಲಂ) ಪ್ರಣಯಕಲಹವಾಡು: ಹೆಣ್ಣಂಡು ಜೇನ್ನೊಣ ಮುದ್ದಾಡಿ ಕಚ್ಚಾಡಿ ಹೂಜೇನ ಹನಿಹನಿ ಕುಡಿಧಾಂಗ (ಸಖೀಗೀ. ೫೧).

[ಕಚ್ಚು₁ (< ಕರ್ಚು₁) + ಆಡು₁]

**ಕಚ್ಚಾಳ** (ನಾ). ಒಂದು ಜಾತಿಯ ಗಿಡ: "ಗಿರಿಜಃ – ದೊಡ್ಡಬೇವು, ಕಚ್ಚಾಳ, ಕೊಡಸಿಗ" (ಓಷಧಿ. ೪೮). [?]

**ಕಚ್ಚಿ** (ನಾ). (ಮಕ್ಕಳ ಭಾಷೆಯಲ್ಲಿ) ಹುಳು: ಅಮ್ಮ ಕಚ್ಚಿ ಬಂತು (ರೂಢಿ). [ಕಚ್ಚು₁ (< ಕರ್ಚು₁) + -ಇ₃]

**ಕಚ್ಚಿಕೆ** (ನಾ). ಕಚ್ಚುವಿಕೆ; ಕಡಿತ (ಕ).

[ಕಚ್ಚು₁ (< ಕರ್ಚು₁) + -ಇಕೆ]

**ಕಚ್ಚಿಯಗಂಗ** (ನಾ). ಗಂಗರಸರಲ್ಲಿ ಒಬ್ಬನ ಹೆಸರು: ಸ್ವಸ್ತಿ ಶ್ರೀ ಕಚ್ಚಿಯಗಜ್ಗನ ಪಟ್ಟಬ್ಜಟ್ಟಿದ ಮೂಱನೇ ವರಿಷದನ್ದು (ಎಕ. XII, ತಿಪಟೂ. ೧೧-೧; ಸು. 930 ?). [?]

**ಕಚ್ಚಿಲವಡಿ** (ನಾ). ಒಂದು ಬಗೆಯ ತೆರಿಗೆ: ಮಗ್ಗದೆಱ ಕಚ್ಚಿಲವಡಿ × × × ಹಡಲ × × × ಯ ಕುಳವನುಂ (ಎಕ. XIV, ಮಂಡ್ಯ. ೧೩೭-೨೧; 1278). [?]

**ಕಚ್ಚಿಸು** 'ಕರ್ಚಿಸು₁' ನೋ.

**ಕಚ್ಚಿಱು** (ಕ್ರಿ). ಜೊತೆಗೂಡಿಸು; ಸೇರಿಸು: "ಕಚ್ಚಿಱು – ಯುಗಲ ಸಂಧಾನೇ" (ಶಮಧಾ). [ಕಚ್ಚು₁ (< ಕರ್ಚು₁) + ಇಱು₁]

**ಕಚ್ಚು₁** 'ಕರ್ಚು₁' ನೋ.

**ಕಚ್ಚು₂** 'ಕಟ್ಟು' ನೋ.

**ಕಚ್ಚು₃** 'ಕರ್ಚು₃' ನೋ.

**ಕಚ್ಚು₄**, **ಗಚ್ಚು₁** (ನಾ). ೧. ಒಂದು ಬಾರಿ ಕಚ್ಚಿಕೊಳ್ಳುವಷ್ಟು; ತುತ್ತು; ಕಬಳ: ಹಸುವಿಂಗೆ ಒಂದು ಕಚ್ಚು ಎತ್ತಿಂಗೆ ಎರಡು ಕಚ್ಚು ಕಱುವಿಂಗೆ ಮೂಱು ಕಚ್ಚು ಇಂತಿವ ನೋಡಿ ಮೇಯಿಸಿಕೊಂಡು ತೊಂಡು ಹೋಗದಂತೆ ನಾ ಕಾದೊಪ್ಪಿಸಬೇಕು (ತುಱುಗಾ. ೨); ಬಾಯೊಳಗಣ ಕಚ್ಚು ದೇಹದೊಳಗಣ ಮುರುಗು ಅವಂಗಾವ ನಿತ್ಯನೇಮವು ಇಲ್ಲ (ಸರ್ವವ. ೧೧೯-೬೧೪); ಹಸು ಒಂದು ಕಚ್ಚೂ ಹುಲ್ಲು ತಿಂದಿಲ್ಲ ಈ ದಿನ (ರೂಢಿ). ೨. ಕತ್ತರಿಸಿದ ಅಥವಾ ಚುಚ್ಚಿದ ಗುರುತು, —ಕಲೆ: ಈ ಸಾಮಾನುಗಳ ಮೇಲೆ ಕಚ್ಚುಗಳು ಗೀರುಗಳು ಬಿದ್ದು ಅವುಗಳ ಲಕ್ಷಣ ಕೆಡುತ್ತದೆ (ಗೃಹವಿ. ೧೬೩); ಕಪ್ಪುರದ ಗಿಡಕ್ಕೆ ಕೊಡ್ಲೆಯಿಂದ ಕಚ್ಚುಹಾಕಿದರೆ ಹಾಲು ಬರುವುದು (ಮುಂಬಯಿ. ೪-೭೧). ೩. ಗಾಯ: ಕೈಗೆ ಉಳಿಯಿಂದ ಕಚ್ಚಾಯಿತು (ರೂಢಿ). ೪. ನೋವು; ವ್ಯಥೆ: ಫ್ರೈಜಿಯ ಮನಸ್ಸಿಗೆ ಕಚ್ಚು ಅನಿಸಿ ಅವನು ಅದೇ ರಾತ್ರಿ ತನ್ನ ಅಶ್ರಮವನ್ನೂ . . . ತ್ಯಾಗ ಮಾಡಿದನು (ಅಪ್ರೇಮ. ೧೬); ಅವಳ ಮನಕ್ಕೆ ಅದು ಬಹಳ ಕಚ್ಚಿನಿಸುತ್ತಿತ್ತು (ಕಾಗೆಕ. ೬೬); ಮೃಣಾಲಳಿಗೆ ಎಷ್ಟೂ ಕಚ್ಚೆನಿಸಲಿಲ್ಲ (ಅರಗಿ. ೮೬). ೫. ತುಂಡು; ಭಾಗ (ಕ). ೬. ಸೇಡು; ಮತ್ಸರ; ಕುನಿಸು: ಆ ಮನುಷ್ಯ ಹಾವಿನಂತೆ ನನ್ನ ಮೇಲೆ ಕಚ್ಚು ಇಟ್ಟುಕೊಂಡಿದ್ದಾನೆ (ರೂಢಿ). **ಗಚ್ಚು₁**: ೧. ದನಕ್ಕೆ ಒಂದು ಗಚ್ಚು ಹುಲ್ಲು ಹಾಕು (ರೂಢಿ).

[< ಕಚ್ಚು₁ (< ಕರ್ಚು₁)]

**ಕಚ್ಚುಕ** (ನಾ). ಕಚ್ಚಾಟ; ಜಗಳ: ಹುಚ್ಚುಕುನ್ನಿ ಮನವೇ ನೀ ಹುಚ್ಚುಗೊಂಬುದು ಘನವೆ ಕಚ್ಚುಕದತನವ ಬಿಟ್ಟು ಅಚ್ಯುತನ ಪಾದ ಮುಟ್ಟು (ಪುರಂದ. ೩-೧೫೫ ಪಲ್ಲವಿ). [?]

**ಕಚ್ಚುಕಡಿ** (ನಾ). ನಿಂದೆ; ನೋವು (?). 'ಕಚ್ಚುಕಡಿಗೊಳ್' ಪರಾ.

[ಕಚ್ಚು₁ (< ಕರ್ಚು₁) + ಕಡಿ ?]

**ಕಚ್ಚುಕಡಿಗೊಳ್** (ಕ್ರಿ). ನಿಂದಿಸಿಕೊಳ್ಳು; ನೊಂದುಕೊಳ್ಳು (?): ಆ ಸಮುದ್ರದತ್ತಂ ತನ್ನ ಬಡತನಕೆ ನೊಂದು ತನ್ನೊಳಗೆ ತಾನೆ ಕಚ್ಚುಕಡಿಗೊಂಡು (ಸಮ್ಯಕೌ. ೧೧-೮). [ಕಚ್ಚುಕಡಿ + ಕೊಳ್₁]

**ಕಚ್ಚುಕನ್ನಡಕ** (ನಾ). "ಮೂಗಿಗೆ ಕಚ್ಚಿಕೊಳ್ಳುವ ತೋಳಿಲ್ಲದ ಕನ್ನಡಕ" (Pince-nez. ಇಂಕನಿ): ಕಚ್ಚುಕನ್ನಡಕವನ್ನು ಮೂಗಿನ ಮೇಲಿಟ್ಟುಕೊಂಡು ಸುತ್ತಲೂ ಕಣ್ಣು ಹೊರಳಿಸಿ. . .ನ್ಯಾಯದರ್ಶಿಗಳನ್ನು ಪ್ರಶ್ನಿಸಿದನು (ಚುನರು. ೩೦). [ಕಚ್ಚು₁ (< ಕರ್ಚು₁) + ಕನ್ನಡಕ₂]

**ಕಚ್ಚುಕೂಡಿಸು** (ಕ್ರಿ). ಕುಕ್ಕಿ ಅಥವಾ ಚುಚ್ಚಿ ಚಿಹ್ನೆಮಾಡು, —ಗುರುತುಮಾಡು: ಒಮ್ಮೊಮ್ಮೆ ಹಲ್ಲಿನಿಂದ ಕಡಿದು ಕಚ್ಚಿ ಆ ಚಿನ್ನದ ಹಾಳೆಗಳ ಮೇಲೆ ಕಚ್ಚುಕೂಡಿಸಿದನು (ಇಪ್ಪಕ. ೩೫೦). [ಕಚ್ಚು₄ + ಕೂಡಿಸು]

**ಕಚ್ಚುಗಾಲಿ** (ನಾ). ಸುತ್ತಲೂ ಹಲ್ಲುಗಳಿರುವ ಚಕ್ರ; ಮುಳ್ಳುಗಳಿರುವ ಚಕ್ರ; ಕಕ್ಕುಚಕ್ರ; ಹಲ್ಲುಗಾಲಿ: ರೈಲಿನ ಚಕ್ರಗಳಿಗೂ ಗಡಿಯಾರಕ್ಕಿರುವಂತೆ ಕಚ್ಚುಗಾಲಿ(Cog – Wheel)ಗಳನ್ನಿಡುವರು (ಬಾಲಪ್ರ. I, ೨೬೮). [ಕಚ್ಚು₁ (< ಕರ್ಚು₁) + ಗಾಲಿ]

**ಕಚ್ಚುಟೆ** (ನಾ). ಲಂಗೋಟಿ; ಕೌಪೀನ: "ಕಟ್ಟುವ ಕಚ್ಚು[ಪಾಠಾಂ. ಕಚ್ಚ]ಟೆಂ ಕೌಪೀನಮಕ್ಕು" (ಮಂಗರಾ. ೭೬-೯); ಒರ್ವಂ ಕರಿಯ ಕಚ್ಚುಟೆಮನುಟ್ಟು ಮೆಯ್ಯೆಲ್ಲಂ ಮಸಿಯಂ ಪೂಸಿ (ವಡ್ಡಾರಾ. ೧೧೮-೧೭); ಅಚಜ್ಯರ ಕವಡಿ ಕಚ್ಚುಟೆಕ್ಕ ಮತ್ತ ೨ (ಸೌಇಇ. XX, ೫೧-೨೭; 1077); ಮುಂಜಿ ಕಚ್ಚ[ಚ್ಚು]ಟೆಂ ಗುಂಡಿಗೆ ಬೋಳಮಂಡೆ ಮಣಿದಂಡಮಿವೀಕ್ಷಣ ಸೌಖ್ಯ ಹೇತುವೇ (ಶಂಶಾಮಾ. ೪-೮೧); ಪೊದೆದಂಬರಮುಟ್ಟ ಕಚ್ಚುಟೆಂ (ಚಂಪ್ರಪು. ೬-೮); ಮುಂತೆ ಬೇಡಲು ಮುನ್ನ ಮಡಗಿದ ಬೊಂತೆಯಂ ಕಚ್ಚುಟೆವನಜಿಸಿಯು ಕಾಣದೆ (ಬಸಪು. ೨೭-೪೩); ಸಾಗರವ ದಾಂಟಿ ಹೊನ್ನಾಗರಕೆ ಹಾಜಿದ ರಾಘವನ ಬಂಟ ಹನುಮಂಗೆ ಕಚ್ಚುಟೆ[ಟ]ಯು ಹೋಗದೇಕೆಂದ (ಸರ್ವಜ್ಞ. ೫೫೫). [< ಸಂ. ಕಕ್ಷಾಪಟ]

**ಕಚ್ಚುಟೆಂದೊಲಗು** (ಕ್ರಿ). ೧. ಲಂಗೋಟಿಯಿಲ್ಲದಾಗು. ೨. (ಆಲಂ) ನಿಷ್ಠೆ ಕೆಟ್ಟುಹೋಗು: ಈ ಸ್ಥಾನಂ ನೈಷ್ಠಿಕ ತಪೋಧನರ ಸ್ಥಾನವಿಲ್ಲಿ ಕಚ್ಚುಟೆಂದೊಲಗಿದ ತಪೋಧನರ ಸ್ಥಾನಕ್ಕೆ (ಸೌಇಇ. IX-i, ೧೯೭-೫೪; 1119); ಇಲ್ಲಿ ಕಚ್ಚುಟೆಂದೊಲಗಿದ ತಪೋಧನಂ ಸ್ಥಾನಕ್ಕೊಡೆಯನೆ (ಸೌಇಇ. IX-i, ೧೯೯-೪೫; 1120). [ಕಚ್ಚುಟೆ + ತೊಲಗು]

**ಕಚ್ಚುತುಟಿ** (ನಾ). ಹಲ್ಲುಗಳಿಂದ ಕಚ್ಚಿಹಿಡಿದ ತುಟಿ: ಹಣ ಕೈಗೆ ಸೇರಿತೆಂದರೆ . . . ಸಿಡುಕುಮೋರೆ, ಗಂಟುಹುಬ್ಬು, ಕಚ್ಚುತುಟಿ, ಕಟು ಭಾಷಣಗಳು ಬರುತ್ತವೆ (ವಚಭಾ. ೩೪೭).

[ಕಚ್ಚು$_1$ (< ಕರ್ಚು$_1$) + ತುಟಿ$_2$]

**ಕಚ್ಚುನೀರು** 'ಕರ್ಚುನೀರ್' ನೋ.

**ಕಚ್ಚುಮಾತು** (ನಾ). ಘಾಸಿಗೊಳಿಸುವ ಮಾತು; ನೋವುಂಟು ಮಾಡುವ ಮಾತು: ಚುಚ್ಚುಮಾತು, ಕಚ್ಚುಮಾತು (ಕಂಸುಹು. ೮೩). [ಕಚ್ಚು$_1$ (< ಕರ್ಚು$_1$) + ಮಾತು$_1$]

**ಕಚ್ಚುಹಣ** (ನಾ). ಕಚ್ಚುವಿಕೆ; ಕಡಿತ; ಕಚ್ಚೋಣ: "ದಂಶನಂ, ದಂಶನೀಯಂ– ಈ ೨ ಕಚ್ಚುಹಣಂ" (ಕಾಶಕ್ಕ. ೨೮೦).

[ಕಚ್ಚು$_1$ (< ಕರ್ಚು$_1$) + ಅಹಣ]

**ಕಚ್ಚುಹಾಕು** (ಕ್ರಿ). (ಕತ್ತರಿಸುವಂತೆ) ಗುರುತು ಮಾಡು: ಇಳಿ ಹೊತ್ತಿನಲ್ಲಿ ಒಳಗಿನ ಬೀಜಕ್ಕೆ ದಕ್ಕೆ ಹತ್ತದ ಹಾಗೆ ಜಾಗ್ರತೆಯಿಂದ ಮೇಲ್ಗೋಟೆಗೆ ಚೂರಿಯಿಂದ ಕಚ್ಚುಹಾಕುವರು (ಮುಂಬಯಿ. ೪-೩೯).

[ಕಚ್ಚು$_4$ + ಹಾಕು (< ಪಾಯ್ಕು$_1$)]

**ಕಚ್ಚೂರ, ಕರ್ಚೂರ** (ನಾ). ೧. ಎಲೆಗಳಿಲ್ಲದ ಒಂದು ಜಾತಿಯ ಸಸ್ಯ; ಚಂದ್ರಮಲ್ಲಿಕೆ (ಕ). **ಕರ್ಚೂರ**: ೨. ಸುವಾಸನೆಯುಳ್ಳ ವಸ್ತು: ಹಾಲ ಮಡ್ಡಿ ಕರ್ಪೂರ . . . ಚಂದನ ಕರ್ಚೂರ ರಾಳ ಗುಗ್ಗುಳದ ದಶಾಂಗ (ಸಿದ್ಧಪು. ೧೯-೩). [< ಸಂ. ಕರ್ಚೂರ]

**ಕಚ್ಚೂರಾದಿಚೂರ್ಣ** (ನಾ). ಕಚ್ಚೂರ ಮೊದಲಾದ್ದರಿಂದ ತಯಾರಿಸುವ ಔಷಧ: ". . . ಗಾಬರಿಯಿಲ್ಲ. ತಲೆಗೆ ಕಚ್ಚೂರಾದಿಚೂರ್ಣ ಇಡಿ" (ಸೀತಾರ. ೧೮). [ಕಚ್ಚೂರ + ಆದಿ$_2$ + ಚೂರ್ಣ$_2$]

**ಕಚ್ಚೆ** (ನಾ). ೧. ಪಂಚೆ ಅಥವಾ ಸೀರೆಯ್ನ ಒಂದು ಸೆರಗನ್ನು ತೊಡೆಯ ಸಂದಿಯಿಂದ ಹಾಯಿಸಿ ಹಿಂದೆ ಕಟಿಭಾಗದಲ್ಲಿ ಸಿಕ್ಕಿಸುವ ಪಂಚೆಯ ಅಥವಾ ಸೀರೆಯ ತುದಿ, —ಚುಂಗು: "ಉಡುಶೀರೆ ಕೋವಣಗಳೊಳ್ ಕಚ್ಚೆ" (ಶಬ್ದಮಂ. ೮೭); ಅವ ಗಂಡರುಮಂ ಕಚ್ಚೆಯೊಳಿಟ್ಟು ಕಟ್ಟುವೆನೆನುತ್ತಿರ್ಪಾಕೆ . . . ತಾಳ್ದಲರಿದೆಂದಿರ್ಕಚ್ಚೆಯಂ ಕಟ್ಟಿದಳ್ (ಪಂಪಭಾ. ೪-೩೮); ಗಂಡರ ನಾಲಗೆಯ ನಣ್ಣಿಯುಂ ಕಚ್ಚೆಯ ಶೌಚಮುಮಿವೆಲ್ಲ ನಿಲಲಱಿವುವೆ (ಲೀಲಾವ. ೧೪-೧೧೫ ವ); ಪೊಸೆದ ಕೆಂಜೆಡೆಯುಂ ಪುಲಿದೋಲ ಕಚ್ಚೆಯುಂ (ಉಮಾಶ. ೪೯); ಕಚ್ಚೆ ಹಾಕಿ ಆಲಂಕಾರವಾಗಿ ಚುಂಗುಚುಂಗಾಗಿ ಧೋತ್ರವುಟ್ಟು (ಸಾಹಿಜೀ.೫೧). ೨. ಲಂಗೋಟಿ; ಕೌಪೀನ: ನಿವಾಳಿಗೆ ತಂದ ಬಟ್ಟೆ ಕಚ್ಚೆಗೆ ಆದರೆ ದಿವಾಳಿಗೆ ಏನು ಮಾಡ್ಯಾನು? (ಗಾದೆ). ೩. ನಡುಕಟ್ಟು; ಉಡಿದಾರ; ಒಡ್ಯಾಣ (ಕ). ೪. (ಪ್ರಾಣಿಗಳ) ಮರ್ಮಾಂಗ; ಯೋನಿ: ಬೀಸುವ ಬಾಲಂಗಳಿಂ ಕಚ್ಚೆಯ ಕೆಚ್ಚಲುಣ್ಣೆಗೆ ಪಕ್ಕಿಯೆಱಗುವಂತೆ (ಲೀಲಾವ. ೫-೧೦೦); ಪೊಸನಸೆಯ ಸೊವಡನಾಘ್ರಾಣಿಸಿ ಮಣಿಕದ ಮಿಡುಕುಗಚ್ಚೆಯೊಳ್ ಮೊಗವೆತ್ತುತ್ತಿಸೆದುದು ವೃಷಂ (ಲೀಲಾವ. ೫-೧೦೮). ೫. ನೇಗಿಲಿಗೆ ಮೇಣಿಯನ್ನು ಭದ್ರವಾಗಿ ಸೇರಿಸುವ ಬೆಣೆ, —ಗೂಟ: ಮೇಣಿಯ ಕಚ್ಚೆ ಬಿದ್ದುಹೋಗಿದೆ (ರೂಢಿ).

**ಕಚ್ಚೆಯಕಟ್ಟು, ಕಚ್ಚೆಯಂಕಟ್ಟು** = ೧. ಉಟ್ಟ ಬಟ್ಟೆಯನ್ನು ಮೇಲೇರಿಸಿ ಬಿಗಿದು ಕಟ್ಟಿಕೊಳ್ಳು: ಬಿಗಿದು ಬೀಗಿ ಕಚ್ಚೆಯಕಟ್ಟಿ ಫಲವೇನು (ಪತಿಲ. ೧೩). ೨. (ಆಲಂ) ಸಿದ್ಧವಾಗು: ಶ್ರೀಮಹಾಭಾರತಂ ಮುಡಿದ ಬಳಿಕಂದಶ್ವತ್ಥಾಮ ಕಚ್ಚೆಯಕಟ್ಟಲೇನಹುದು (ಸಂಗಿರಾ. ೧೪-೧೫); ಎನ್ನ ಮಾತಂ ಕೇಳದೆ ಕಲಹಕ್ಕೆ ಕಚ್ಚೆಯಂಕಟ್ಟುವ ನಿನಗೆ ಕಚ್ಛಪ ಕಥೆಯಾಗದೆ ಪೋಗದು (ಪಂಚತಂ. ೧೫೧-೯).

[ದೇ. ‖ ತಮಿ. ಕಚ್ಚೈ, ಕಚ್ಚು, ಕಚ್ಚ; ಮಲ. ಕಚ್ಚ; ತುಳು. ಕೊಡ. ಕಚ್ಚೆ; ತೆಲು. ಕಚ್ಚ]

**ಕಚ್ಚೆಗ** (ನಾ). ಒಂದು ಬಿರುದು: ಅಜ್ಯತ್ರಿಣೇತ್ರಸಾನೆವೆಡಙ್ಗಂ ವನಗಜಮಲ್ಲಂ ಕಚ್ಚೆಗ ಕೃಷ್ಣರಾಜ ಶ್ರೀಮತ್ ಕನ್ನರದೇವ (ಎಕ. III, ಮಂಡ್ಯ. ೪೧-೩; 950); ಅಕಾಳ ವರಿಷಂ ನೃ[ಪತು]ಂಗಂ ಕ[ಚ್ಚೆ]ಗಂ (ಎಕ. XIX, ೨೮೯-೯; 963). ℙ ಈ ಶಬ್ದ 'ಕಂಚಿಗೊಂಡ (= ಕಂಚಿಯನ್ನು ಗೆದ್ದ)' ಎಂಬುದರ ಸಂಕ್ಷಿಪ್ತರೂಪವಿರಬಹುದು. [?]

**ಕಚ್ಚೆಗಟ್ಟು** (ಕ್ರಿ). ೧. ಕಚ್ಚೆಯನ್ನು ಹಾಕು: ಅರ್ಧಗಪ್ಪಡಮಂ ಬಿಸುಟ್ಟು ಕಚ್ಚೆಗಟ್ಟದೆ ಸಯ್ಯುಡುವರುಂ (ವಡ್ಡಾರಾ. ೯೩-೧೮). ೨. (ಆಲಂ) ಕದನಕ್ಕೆ ಸಿದ್ಧವಾಗು: ಕಚ್ಚೆಗಟ್ಟದೆ ಕೈದುವಿಡಿಯದೆ ಕೆಚ್ಚೆದೆಯ ಮನಸಿಜನ ತಪಸಿನ ಕಿಚ್ಚಿನಿಂದುರುಪಿದೆ ಮಹಾಮೋಹಾಸುರನ ಮುಸುಡ (ಸಾಳ್ವಭಾ. ೩-೫). [ಕಚ್ಚೆ + ಕಟ್ಟು$_1$]

**ಕಚ್ಚೆನಿಸು** (ಕ್ರಿ). ಅಳುಕು: ನನ್ನ ಮನಸ್ಸೂ ಕೂಡ ಯಶವಂತರಾಯ ನನ್ನು ಕಂಡು ಕಚ್ಚೆನಿಸಿತು (ಸ್ಮೃತಿಚಿ. ೧೬೧).

[ಕಚ್ಚು$_4$ + ಎನಿಸು$_1$]

**ಕಚ್ಚೆಪಂಚೆ** (ನಾ). ಕಚ್ಚೆಹಾಕಿ ಉಡುವ ಪಂಚೆ: ಕಚ್ಚೆಪಂಚೆಯ ನುಟ್ಟು ಮೈಮೇಲುತ್ತರೀಯವ ಹೊದ್ದಿರೆ (ಗಣೇಶ. ೬೩-೧೩); ಕಚ್ಚೆ ಪಂಚೆ, ದ್ವಾದಶನಾಮ, ಮುದ್ರೆ, ತುಳಸಿಮಣಿ, ಹೆಗಲ ಮೇಲೆ ಚೌಕ (ನಡೆದಾ. I, ೫೧೨). [ಕಚ್ಚೆ + ಪಂಚೆ]

**ಕಚ್ಚೆಶುದ್ಧಿ** (ನಾ). ವ್ಯಭಿಚಾರವಿಲ್ಲದಿರುವಿಕೆ; ಸಂಯಮ; ಶೀಲವಂತಿಕೆ: ಕಚ್ಚೆಶುದ್ಧಿಯಿಲ್ಲದವನ ಸಹವಾಸ ಮಾಡಬಾರದು (ರೂಢಿ).

[ಕಚ್ಚೆ + ಶುದ್ಧಿ]

**ಕಚ್ಚೆಹರಕುತನ** (ನಾ). ವ್ಯಭಿಚಾರ; ಸಂಯಮವಿಲ್ಲದ ಲೈಂಗಿಕ ವೃತ್ತಿ: ಅರವತ್ತರ ಕಚ್ಚೆಹರಕುತನದ ತೆವಲು ಮುದುಕಿದಂತೆ (ಚಂಡಿಮ. ೫೩-೫). [ಕಚ್ಚೆ + ಹರಕು + -ತನ]

**ಕಚ್ಚೆಹರುಕ** (ನಾ). ಕಾಮುಕ; ಹಾದರಮಾಡುವವನು; ಜಾರ: ಕಚ್ಚೆಹರುಕನಹ್ಹಾನುತಾ ಲಜ್ಜೆಗೇಡುಮಾಡಿ (ಕನಕಾಂ. ೭೦).

[ಕಚ್ಚೆ + ಹರುಕ]

**ಕಚ್ಚೆಹರುಕಿ** (ನಾ). ಹಾದರಗಿತ್ತಿ; ಜಾರಸ್ತ್ರೀ: "ಕಚ್ಚೆಹರುಕಿ; ದುರ್ನಡತೆಯ ಹೆಂಗಸು" (Light – Skirts. ಇಂಕಕ).

[ಕಚ್ಚೆಹರುಕ + -ಇ$_2$]

**ಕಚ್ಚೇರಿ** 'ಕಚೇರಿ' ನೋ.

**ಕಚ್ಛೆ** (ನಾ). ೧. ದೋತ್ರ ಅಥವಾ ಸೀರೆಯ ಕಚ್ಚೆ. ೨. ನೀರಿನ ಬಳಿ ಇರುವ ಸ್ಥಳ; ಜವುಗು ನೆಲ. ೩. ನದಿಯ ದಂಡೆ: "ತೀರಂ, ಕೂಲಂ, ತಟಂ, ಕಚ್ಛಃ, ಪ್ರಪಾತಃ, ರೋಧಃ – ಈ ೬ ತೊಱೆಯ ತಡಿ" (ಹಲಾಯು. ೧೧೦–೪೫); ಕಾಳಿಂದೀನದೀಕಚ್ಛದೊಳಾತ್ಮೇಚ್ಛೆಯಿಂ ನಲಿನಲಿದು (ಪಂಚತಂ. ೨೪–೧೨); ಯಮುನಾಕಚ್ಛಂಬಿಡಿದೇಟ್ರುತ್ತುಮೊಂದವಸರದೊಳ್ (ಜಗವಿ. ೩–೭೮). ೪. ಒಂದು ಪ್ರದೇಶದ ಹೆಸರು. ೫. ಹಡಗಿನ ಒಂದು ಭಾಗ; "ಹಡಗದ ನಾಳ" (ಗಂಗಾಮ. ೬೫). ೬. ಮರಮುಟ್ಟುಗಳನ್ನು ಮಾಡಲು ಉಪಯೋಗವಾಗುವ ಒಂದು ಜಾತಿಯ ಮರ. ೭. ಬಾಣ ಮಾಡಲು ಬಳಸುತ್ತಿದ್ದ ಒಂದು ಬಗೆಯ ಕಡ್ಡಿ: ಈ ಬಾಣದ ಕಾಂಡವು ಕಚ್ಛದ್ದೆ, ರೋಪಿಮದ್ದೆ? (ಬುದ್ಧಪ. ೮೦). [ಸಂ.]

**ಕಚ್ಛಕ್ಷುರಿಕೆ** (ನಾ). ಒಂದು ಬಗೆಯ ಆಯುಧ: ವಜ್ರಕವಚ, ವಜ್ರಮುಷ್ಟಿ, ಕರತ್ರಾಣ, ಶಿರಸ್ತ್ರಾಣ, ಮಧ್ಯತ್ರಾಣ, ಪದತ್ರಾಣ, ವರ್ಮವರ, ಕಚ್ಛಕ್ಷುರಿಕ (ವಿವೇಕ. ೨೬೨).
[ಸಂ. ಕಚ್ಛಕ್ಷುರಿಕಾ (ಕಚ್ಛ + ಕ್ಷುರಿಕಾ)]

**ಕಚ್ಛಪ**(ನಾ). ೧. ಆಮೆ: ಕಳಹಂಸೆಗಳ್ ಕಚ್ಛಪಂಗೆ ಬುದ್ಧಿವೇೞ್ದೊಡೆ (ಪಂಚತಂ. ೧೫೭–೧೪); ಮಹಾಮತ್ಸ್ಯ ಕಚ್ಛಪ ಕುಳೀರ ಕುಂಭೀರ ಕಮಠ ನಕ್ರಚಕ್ರಮೆ (ಜಗವಿ. ೧೪–೮೫ ವ). ೨. ಕುಬೇರನ ಒಂಭತ್ತು ನಿಧಿಗಳಲ್ಲಿ ಒಂದು: ಕುಬೇರಂಗೆ . . . ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ವರವೆಂಬ ನವನಿಧಿಗಳಿಗಧಿಕಾರಮುಂಟಾಗಿ(ವಿವೇಕ. ೨೦೭). ೩. ಮದ್ಯಾರ್ಕವನ್ನು ಬಟ್ಟಿ ಇಳಿಸುವುದಕ್ಕಾಗಿ ಬಳಸುವ ಪಾತ್ರೆ. ೪. ಒಂದು ಬಗೆಯ ಅಂಗುಳುರೋಗ: ಕಟವಾಯ ಮೂಲದಲ್ಲಿ ಮಹಾವೇದನೆ ಉಂಟಾಗಿಹುದು . . . ವಾಯ ಬಿಡಲೀಸದು ಈ ಪ್ರಕಾರದಲ್ಲಿ ಇದ್ದುದನು ಕಚ್ಛಪವೆಂಬ ತಾಲುರೋಗವೆಂದಱಿವುದು (ವೈದ್ಯಸಾ. II, ೧೧೫). [ಸಂ.]

**ಕಚ್ಛಪವೀಣೆ** (ನಾ). ಆಮೆಯಾಕಾರದ ಒಂದು ಬಗೆಯ ವೀಣೆ: ವಿಪಂಚಿಕೆ . . . ಕಚ್ಛಪವೀಣೆ, ನಾರದವೀಣೆ . . . ಕಾಲಕೀಯೆಂಬ ಮೂವತ್ತುಮೂಱು ತಂತ್ರೀವಾದ್ಯಂಗಳಲ್ಲಿ (ವಿವೇಕ. ೨೩೬).
[ಕಚ್ಛಪ + ವೀಣೆ]

**ಕಚ್ಛಪಿ** (ನಾ). ೧. ಹೆಣ್ಣು ಆಮೆ. ೨. ಒಂದು ಬಗೆಯ ವೀಣೆ; ಸರಸ್ವತಿಯ ವೀಣೆ: ಬಚ್ಚಿದಳೆ ಕನ್ನಡದ ಭಾರತಿ? ಮುಚ್ಚುವಳೆ ಮಧುಮಧುರ ಕಂಠವನೆಚ್ಚರಿಸಲೇನಚ್ಚರಿಯ ಕನ್ನಡದ ಕಚ್ಛಪಿಯ? (ಗೀವಿಂ. ೧೦೦–೨೦). ೩. ಒಂದು ಬಗೆಯ ಚರ್ಮರೋಗ. [ಸಂ. ಕಚ್ಛಪೀ]

**ಕಚ್ಛಾವಾಲ** (ನಾ). ಕಚ್ಚೆಯ ಚುಂಗು; ಹಿಂಗಚ್ಚೆ: ಎಯ್ದೆವಂದಳ್ಕುಱೆ ಕಚ್ಛಾವಾಲಮಂ ಕೈದುಡುಕಿ ಪಿಡಿದನಂ ನೋಡದಂತಿರ್ದ ಪಾಂಗಿಂ ಪೊಱಕೈಯೊಳ್ ಮೋದಿ (ಜಗವಿ. ೬–೯೪).
[ಸಂ. (ಕಚ್ಛಾ + ವಾಲ)]

**ಕಚ್ಛು** (ನಾ). ಕಜ್ಜಿ; ತುರಿ; ನವೆ. [ಸಂ.]

**ಕಚ್ಛುರ** (ಗು). ೧. ತುರಿಯುಳ್ಳ; ಕಜ್ಜಿಯಾದ. ೨. ಕಾಮುಕನಾದ. [ಸಂ.]

**ಕಚ್ಛುರೆ** (ನಾ). ಒಂದು ಜಾತಿಯ ಸಸ್ಯ; ಯವಾಸ; ನಸುಗುನ್ನಿ (ಕ). [ಸಂ. ಕಚ್ಛುರಾ]

**ಕಛೇರಿ** 'ಕಚೇರಿ' ನೋ.

**ಕಜ**(ನಾ). ಆನೆ: ದಿಗ್ಗಜಗಳೊಳು ಕಾದುವೆವೆಂದು . . . ಸಗ್ಗದಾನೆಗೆ ಸರಿಮಿಗಿಲೆನಿಸುವ ಕಜವೊಗ್ಗಿಹವಾ ನೃಪನೊಳಗೆ (ಗೋಮಟೇ. ೨–೧೫). ‖P ಈ ಶಬ್ದ 'ಗಜ' ಎಂಬುದರ ಅಪಲಿಖಿತವಿರಬಹುದು. [?]

**ಕಜಕೆ, ಕಜಿಕೆ** (ನಾ). ಸೌಟು; ಹುಟ್ಟು; ಚಮಚ: "ಖಜಕಂ – ಕಜಕಂ" (ಶಮದ. ಸ. ೨೬೯ ಪ್ರಯೋ). **ಕಜಿಕೆ**: "ಕಜಕೆ (ಕಂಚಿಗ, – ಖಜಿಕಾ" (ತದ್ಭಕೋ. ೫); "ಗಿಲಿಕೆ" (ಶಮದ. ಸ. ೨೬೯ ಅಡಿಟ).
[< ಸಂ. ಖಜಕ, ಖಜಾಕಾ]

**ಕಜಗಟ್ಲೆ** (ನಾ). ಜಗಳ: ಕೊಡಗರ ಸಂಗಡ ಕಜಗಟ್ಲೆ ಬ್ಯಾಡ (ಚಂಗಾಳ್ವ. ೨೬೩). [?]

**ಕಜಗೆಡು, ಕಜೆಗೆಡು** (ಕ್ರಿ). (ಕರಾ) (ಕೆಲಸ) ಕೆಡು, —ನಿಂತು ಹೋಗು: ಜಾನವಾರುಗಳಲ್ಲದೆ, ಊರಿನ ಬೇಸಾಯವು ಕಜಗೆಡಬಾರದೆಂದು ಹಾಗೆ ಮಾಡಿದರು (ಔದಾಊ. ೩೭೪). **ಕಜೆಗೆಡು**: ಎಂಟು ದಿನಗಳ ಕೆಲಸ ಕಜೆಗೆಟ್ಟಿತಲ್ಲ ಎಂದು ಪ್ರತಿಯೊಬ್ಬರಿಗೂ ಚಿಂತೆಯೆ (ಕುಡಿಕೂ. ೩೭೯). [ಕಜ$_0$ (< ಕಜ್ಜ$_1$) + ಕೆಡು]

**ಕಜರಗಳೆ** (ನಾ). ಅತಿ ರಂಪ; ಬಗೆಹರಿಯದ ರಗಳೆ: "... ಇದೇನಾ ಕಜರಗಳೆ ಅಟ್ಟೀಲಿ–?" (ಸರ್ವಮಂ. ೧೫೪).
[ಕಜ? + ರಗಳೆ]

**ಕಜಾಕ** (ನಾ). ಪಕ್ಷಿ: "ಖಜಾಖ – ಕಜಾಕ" (ಶಮದ. ೨೫೫ ಪ್ರಯೋ).
[< ಸಂ. ಖಜಾಕ]

**ಕಜಾವು** (ನಾ). ೧. ಕಸ. ೨. (ಆಲಂ) ಕಸಕ್ಕೆ ಸಮಾನವಾದವನು; ಅಲ್ಪಮನುಷ್ಯ: ಇಂಥ ಶ್ರೀಮಂತರಲ್ಲಿ ಒಬ್ಬರೇ ಒಬ್ಬರು ಆಕ್ಷೇಪವೆಂದರೆ ಮಿ| 'ನಂದ್'. ಉಳಿದವರೆಲ್ಲರೂ ಕಜಾವುಗಳು (ಔದಾಊ. ೨೪೪).
[← ತುಳು. ಕಜವು, ಕಜಾವು]

**ಕಜಿಕೆ** 'ಕಜಕೆ' ನೋ.

**ಕಜಿಯಾ, ಕಜ್ಜಿಯಾ** (ನಾ). ೧. ಜಗಳ; ತಂಟೆ; ವಿರೋಧ. ೨. ಕಾಳಗ; ಯುದ್ಧ: ಕೊಡಗಿನ ಸಂಸ್ಥಾನದವರಿಗೂ ನಮಗೂ ಮುಂದೆ ಕಜಿಯಾ ಇಲ್ಲದೆ ಸಲ್ಲಾ ಮಾಡಿ ದೋಸ್ತಿ ಮಾಡಬೇಕು (ರಾಜೇಂದ್ರ. ೧೨); ಈ ಮೇರೆ ಇದ್ದರೆ ಕಜಿಯಾ ಬಾಕಿ ಇದ್ದೀತು (ರಾಜೇಂದ್ರ. ೪೬). **ಕಜ್ಜಿಯಾ**: ೨. ಉಭಯ ಸರಕಾರಕ್ಕೂ ಬಹಳ ದಿವಸದಿಂದಾ ಲಡಾಯಿ ಕಜ್ಜಿಯಾ ಯಂಬ ಕಿಡಿ ಬಿದ್ದು ಉರಿಯುತ್ತಿದ್ದಂಥಾದ್ದು ಶಿವನ ಕಟಾಕ್ಷದಿಂದ ನೊಂದಿಹೋಯಿತು (ರಾಜೇಂದ್ರ. ೧೧೯).
[← ಅರ. ಪಾರ. ಕಝಿಯಾ. / ಸಂ. ಖಜಾ]

**ಕಜೂರ** 'ಕರ್ಜೂರ' ನೋ.

**ಕಜೆ** (ನಾ). (ಕರಾ) ಹೊಳಪಿಲ್ಲದಿರುವುದು; ತಳಿಸದೆ ಇರುವುದು: ಕೊಳವಳಿಕೆ ಬೀಜದ ಪುಡಿಯನ್ನೂ ಹಿಪ್ಪಲಿಯನ್ನೂ ಸೇರಿಸಿಕೊಂಡು ಅಕ್ಕಿಯನ್ನು ಬೇಯಿಸಿದರೆ (ಅಕ್ಕಿಯು ಕಜೆಯಾಗಿದ್ದರೂ) ಅನ್ನವು ಬೆಳ್ಳಗಾಗುವುದು (ಭೀಮುಸೂ. ೧೬–೪೪ ಅಡಿಟ).
ಕಜೆಕಜೆ (ದ್ವಿರುಕ್ತಿ): ಚೆನ್ನಾಗಿ ಕುಟ್ಟದೆ ಕಜೆಕಜೆಯಾಗಿರುವ ಅಕ್ಕಿಯ ಅನ್ನ (ಮನಮ. ೮೨). [← ತುಳು. ಕಜೆ]

**ಕಜೆಗೆಡು** 'ಕಜಗೆಡು' ನೋ.

**ಕಜೆಹಿಡಿ** (ಕ್ರಿ). ಹಟಹಿಡಿ; ರಗಳೆಮಾಡು; ರಚ್ಚೆಹಿಡಿ: ಎಚ್ಚರವಾಗಿ ಬಿಟ್ಟರೆ ಬಹಳ ಕಜೆಹಿಡಿಯುತ್ತಾಳೆ (ಚಂಗಾಳ್ವ. ೨೫೯).
[ಕಜೆ$_0$ + ಹಿಡಿ$_1$ (< ಪಿಡಿ$_1$)]

**ಕಜ್ಜ$_1$** (ನಾ). ೧. ಕೆಲಸ; ಕರ್ತವ್ಯ: ತಲೆಸೂಡಿ ಮುನ್ನೆ ಕಜ್ಜದ ಫಲಮಂ ಬೆಸಗೊಂಡುಮೆ[ೞ]ವನಲ್ಲಿಂ ಬೞಿಯಂ (ಕವಿರಾ. ೩–೧೪೪); ಸಂಧಿಯನೊಲ್ಲುದೆ ಕಜ್ಜಮಿಾಗಳ್ (ಪಂಪಭಾ. ೧೩–೮); ಅದಱಿಂ ನಾಮುಸಿಱದಿರ್ದಪುದೇ ಕಜ್ಜಂ (ಪಂಚತಂ. ೨೭–೬); ಬಲು ಕಜ್ಜವುಂಟದಱಿಂದ ಕೊಲಗದೆನ್ಮೊತ್ತಿನೊಳಿರು (ಭರಚ. ೨೭–೧೭); ಮಿಾಱಬಾರದ ಕಜ್ಜದೊಳು ಮೇರೆಯಱಿತು ನ್ಪದೋಱಿ ನಡೆವುದುಚಿತದೊಳು (ಹದಿಬ. ೮–೩೫).

೨. ಉಪಾಯ; ಪರಿಹಾರ: ಏತಱ ಪಡೆಮಾತೊ ಮತ್ತಮಿರ ವೇೞ್ಪುದು ಪನ್ನೆರಡಬ್ದಮಂ ಮನಂ ಮಱುಗೆ ಬನಂಗಳೊಳ್ ನುಡಿದ ನನ್ನಿಗೆ ಪೇೞಿಮಿದರ್ಕೆ ಕಜ್ಜಮಂ (ಪಂಪಭಾ. ೮–೪೯).
[ಪ್ರಾ. ಕಜ್ಜ (< ಸಂ. ಕಾರ್ಯ). / ತೆಲು. ಕಜ್ಜ]

**ಕಜ್ಜ₂** (ನಾ). = ಕಜ್ಜಾಯ ೨ : ಮಾಡಿದ ಪುಳ್ಗಿ ಕಜ್ಜ ತೊಗೆ ತುಪ್ಪೊಡೆ . . . ಇಂತಿವರ ಭೋಜನಕೆ (ಹಾಲಾಸ್ಯ. ೮–೫). [ಪ್ರಾ. ಖಜ್ಜ]

**ಕಜ್ಜಕ** (ನಾ). ಲಾಳದ ಕಡ್ಡಿ; ಬೆತ್ತ: "ಮಹಾಶರಃ – ಕಜ್ಜಕ" (ಓಷಧಿ. ೧೧೬). [?]

**ಕಜ್ಜಗಲಿ** (ನಾ). ಕೆಲಸಮಾಡುವುದರಲ್ಲಿ ಗಟ್ಟಿಗ; ಒಳ್ಳೆಯ ಕೆಲಸಗಾರ; ಕಾರ್ಯಶೂರ: ಕಜ್ಜಮಂ ಕಾಲಮಂ ಪಾರ್ವ ಕಜ್ಜಗಲಿಗಳುಮಂ . . . ನಡೆಗಲಿಗಳುಮಂ ನೋಡಿ (ಗದಾಯು. ೮–೩೪ ವ); ಕಜ್ಜಗಲಿಯಪ್ಪುದು ತಾತ್ಪರ್ಯಂ (ನೀತಿವಾ. ೨೯–೧೧). [ಕಜ್ಜ₁ + ಕಲಿ₂]

**ಕಜ್ಜಗುಟ್ಟು** (ನಾ). ಕೆಲಸದ ಗುಟ್ಟು; ಕಾರ್ಯದ ರಹಸ್ಯ: ಅವಳ ಸಗಿದಾ ಕಜ್ಜಗುಟ್ಟು ತಂದೆಗೇನಾದರೂ ತಿಳಿದಿಹುದೊ? (ಚಂದ್ರಸ. ೧೦೨). [ಕಜ್ಜ₁ + ಗುಟ್ಟು]

**ಕಜ್ಜಟಸತ್ತಿಗ** (ನಾ). ಒಬ್ಬಾತನ ಹೆಸರು: ಅನುಪಮ ವಿಭವಂ ನೋಡಾ ಕಜ್ಜಟಸತ್ತಿಗನೋಡದೆ ಸಂಗರದೊಳೆಱುವ ತಂಬುಲಿಗೆಱಕ (ಸೌಇಇ. XI–ii, ೧೩೩–೩೯ ; 1087). [?]

**ಕಜ್ಜಯ** 'ಕಜ್ಜಾಯ' ನೋ.

**ಕಜ್ಜರಿ, ಗಜ್ಜರಿ, ಗಜ್ಜರೆ** (ನಾ). ಒಂದು ಬಗೆಯ ಕೆಂಪು ಮೂಲಂಗಿ; ಕ್ಯಾರೆಟ್: ಮೂಲಂಗಿ ಮಾಗುಳಿ ಯೆಳೆಯ ಕಾರಗೆಣಸು ಕಜ್ಜರಿಯ ಸಣ್ಣನಂ ಸವಿದು (ಸಮ್ಯಕೌ. ೭–೨೮). **ಗಜ್ಜರಿ:** ನಾದಿಗರ ಬಳಿಯಲ್ಲಿ ರಕ್ತ ತೆಗೆಯುವ ತುಮ್ಮಡಿ ಇರುತ್ತದೆ. ಅದು ಗಜ್ಜರಿಯಂತೆ ಶಂಕ್ವಾಕೃತಿಯಾಗಿರುತ್ತದೆ (ಮುಂಬಯಿ. ೪–೭೭); ಸಂಡಿಗಿಗುಂಬಳ ಗಜ್ಜರಿ ಮೂಲಂಗಿ ಕಡಲೆಪಲ್ಲೆ ಸಲ್ಲಿಸಿದರು (ಸಿದ್ಧಪು. ೧೭–೪೭); ಮೊಟ್ಟೆ, ಮೂಲಂಗಿ, ಗಜ್ಜರಿ – ಎಲ್ಲವನ್ನೂ ಹಸಿಹಸಿಯಾಗಿಯೇ ತಿನ್ನುತ್ತಾರೆ (ಮಹಾತ್ಮ. ೯೦). **ಗಜ್ಜರೆ:** ಅವನ ಗಜ್ಜರೆಯಂಥ ಕೆಂಪು ತುಂಬಿದ ಮುಖ, ಶಾಂತಿ ಗಾಂಭೀರ್ಯಗಳ ಬೀಡಾಗಿದೆ (ಚೀನಬಾ. ೨೯೮).
[ಪ್ರಾ. ಗಜ್ಜರ. / ಹಿಂ. ಮರಾ. ಗಾಜರ್]

**ಕಜ್ಜಲ, ಕಜ್ಜಳ** (ನಾ). ೧. ಕಣ್ಣಿಗೆ ಹಚ್ಚಿಕೊಳ್ಳುವ ಕಾಡಿಗೆ: ಪಾರಾವತ ಕಜ್ಜಲವರ್ಣಮಾದೊಡದಱಿಂ ಕಜ್ಜಲಮಕ್ಕುಂ (ಲೋಕೋಪ. ೬–೭); ತೊಡೆದು ಕಣ್ಗೆ ಕಜ್ಜಲ ವಿಲಾಸವಿನ್ನೇವುದೆಮಗೆ (ಅಜಿಪು. ೬–೧೦೬); ವಿಲೋಚನಕ್ಕೆ ಕಜ್ಜಲವತಿಭಾರವೆಂಬ ತನುಲೇಖೆಗೆ ಚಂದನದಣ್ಪು ಬಿಣ್ಪೆ ತೆಂಬ (ಜಗವಿ. ೨–೯೯); ಕಜ್ಜಲಮಂ ತಿಲರಸದೊಳ್ ಕಲಸಿ ಗೆಯ್ದ ಬೊಂಬೆಗಳೆನೆ ದಲ್ ಸಲೆ ನುಣ್ಗೊಂಪಿನ ಬೇಡರ ಲಲನೆಯರಂ (ಹಮ್ಮಾರ. ೪–೭೫). ೨. ಮೋಡ. **ಕಜ್ಜಳ:** ೧. ಅನವರತಂ ಕಜ್ಜಳಮಂ ತಳೆವಕ್ಷಿಗಳಜ್ಜಳಮಂ ತಾಳ್ದೆ ತನಯ ನೀಂ ಸೈರಿಪುದೇ (ಚಂದ್ರಪು. ೫–೧೨); ಕಜ್ಜಳದ ಕನ್ನಡಿಯ ಚೆನ್ನೆಯರ್ವೆರಸು (ಕಬ್ಬಿಕಾ. ೩೨೪); ಪದೆಪಿಂದಂಬರ ಲಕ್ಷ್ಮಿಯೆಚ್ಚಿಕೊಳಲೆಂದೌತ್ಸುಕ್ಯದಿಂ ಕಜ್ಜಳಂ ಪುದಿದೊಪ್ಪಿರ್ದ ಕರಂಡಮಂ ತೆಗೆದು (ದಶಕು. ೩–೩೩); ಖಂಡೇಂದುಮುಖಿಕೆ ಕತ್ತುರಿಯಿಟ್ಟುಮಿರ್ಪವರ ಗಂಡಸ್ಥಳಕೆ ಕಜ್ಜಳವ (ಮೋಹತ. ೧೩–೭೫); ಕಜ್ಜಳವ ರೇಖೆಯೊಯೆಂಬಿನವಿಾಕ್ಷಿಪರ್ಗೆ (ವಿಷ್ಣುಪು. ೫–೩–೧೧೩). [ಸಂ.]

**ಕಜ್ಜಲಗಿರಿ, ಕಜ್ಜಳಗಿರಿ** (ನಾ). ಕಾಡಿಗೆಯ ಪರ್ವತ (ಓ). **ಕಜ್ಜಳಗಿರಿ:** ಒಡಲುಗೊಂಡ ತಮಂಥ ಪಟಲಮೊ ನಡೆವ ನೀಲಾದ್ರಿಗಳೊ ಕೈಕಾಲ್ಪಡೆದ ಕ[ಪಾಠಾಂ. ಪ]ಜ್ಜಳಗಿರಿಗಳೋ (ಬಸವು. ೫೮–೪೮).
[ಕಜ್ಜಲ + ಗಿರಿ₁]

**ಕಜ್ಜಲರೇಖೆ** (ನಾ). ಕಾಡಿಗೆಯ ಗೆರೆ; ಕಾಡಿಗೆಯ ಗುರುತು: ಕೇಯೂರ ಮುದ್ರಾಂಕಿತಂ ಕೊರಲೊಳ್ ಕಜ್ಜಲರೇಖೆ ತನ್ನಧರದೊಳ್ . . . ತಳ್ಪೊಯ್ಯೆ ನಿಚ್ಚಂ (ಕಾವ್ಯಸಾ. ೬೫೫ ಶೂದ್ರಕ); ಮಂಜುಮಣಿದೀಪದ ಕಜ್ಜಲರೇಖೆ ನೆಗೆದುದೆನೆ ಕಣ್ಗೊಲವಿತ್ತುದು ರೋಮರಾಜಿ (ರಾಜಶೇ. ೭–೩೪). [ಕಜ್ಜಲ + ರೇಖೆ]

**ಕಜ್ಜಲಾದ್ರಿ** (ನಾ). = ಕಜ್ಜಲಗಿರಿ : ನೆಗೆದು ಧೂಮವಜಾಂಡವೆಲ್ಲವ ಮಿಗೆ ಮುಸುಕಿ ಕೆಂಪಡರೆ ಮಿಕ್ಕಿನ ನಗಕುಲಂಗಳು ಕಜ್ಜಲಾದ್ರಿಗಳಂತೆ ತೋಱಿದವು (ಬಸವು. ೫೮–೬೧). [ಕಜ್ಜಲ + ಅದ್ರಿ]

**ಕಜ್ಜವೆಣ್ಣು** (ನಾ). ಸೇವಕಿ; ದಾಸಿ: ಅಣ್ಣನ ಕಂಡರ್ತಿವಡುತ ಬಂದರು ಕಜ್ಜವೆಣ್ಣುಗಳ್ವೆರಸಿ ತಂಗಿಯರು (ಭರತ. ೩೯–೧೦); ಅಷ್ಟಱೊಳು ಬಂದರರಸನ ಬಳಿಯಿಂದ ಕಜ್ಜವೆಣ್ಣುಗಳು (ಭರತ. ೪೨–೩೦).
[ಕಜ್ಜ₁ + ಪೆಣ್ಣು (< ಪೆಣ್)]

**ಕಜ್ಜಳ** 'ಕಜ್ಜಲ' ನೋ.

**ಕಜ್ಜಳಂಬರೆ** (ಕ್ರಿ). (ಕಣ್ಣಿಗೆ) ಕಾಡಿಗೆ ಹಚ್ಚು, —ಲೇಪಿಸು : ತಿಲಕಮನಿಡುವ ಮೊಗಮುರಿವ ಕಜ್ಜಳಂಬರೆವ ಕನ್ನಡಿಯ ನಿಟ್ಟಿಪ (ಜೈಮಿಭಾ. ೧೭–೨೯). [ಕಜ್ಜಳ (= ಕಜ್ಜಲ) + ಬರೆ₁]

**ಕಜ್ಜಳಗಿರಿ** 'ಕಜ್ಜಲಗಿರಿ' ನೋ.

**ಕಜ್ಜಳವಿಡು** (ಕ್ರಿ). (ಕಣ್ಣಿಗೆ) ಕಾಡಿಗೆ ಇಡು, —ಲೇಪಿಸು : ಕಜ್ಜಳವಿಡುವ ಕನ್ನಡಿಯ ನೋಡುವ ಮಿಗೆ ಸಜ್ಜುಕ ಸರಗಳ ಮುಡಿವ (ಕಂಸವಿ. ೨೨–೭). [ಕಜ್ಜಳ (= ಕಜ್ಜಲ) + ಇಡು₁]

**ಕಜ್ಜಳವೆಚ್ಚು** (ಕ್ರಿ). = ಕಜ್ಜಳವಿಡು : ಎಣ್ಣೆಯನೂಡಿ ನೀರೆಱೆದು ತೊಡೆದಾಗ ಕಣ್ಣಿಗೆ ಕಜ್ಜಳವೆಚ್ಚು[ಚ್ಚಿ] (ಮೋಹತ. ೪–೭೫).
[ಕಜ್ಜಳ (= ಕಜ್ಜಲ) + ಎಚ್ಚು]

**ಕಜ್ಜಳಿ** (ನಾ). ಹಲವು ಔಷಧವಸ್ತುಗಳ ಮಿಶ್ರಣ, —ರಸಾಯನ: ಭಾವನೆಯಾದ ಕಜ್ಜಳಿಯಲ್ಲಿ ಕೂಡಿ ದ್ರಾಕ್ಷಾಕಷಾಯದಿಂದ ಏಳುಸಾರಿ ಭಾವನೆ ಮರ್ದನೆಗಳಂ ಮಾಡಿ . . . ಕೊಡಿಸಲು ಸಕಲ ಪಿತ್ತರೋಗ . . . ಪರಿಹರಿಸುವುದು (ವೈದ್ಯಸಾ. I, ೧೦೨) ; ರಸ, ಗಂಧಕ, ಇವಂ ಕಜ್ಜಳಿಯಂ ಮಾಡಿ ನಿಂಬೆಯ ರಸದಿಂ ಮೂರುದಿನಂಗಳು ಮರ್ದಿಸಿ ನಾರು ಬೇಳೆಗಳ ರಸದಿಂ ಪ್ರತ್ಯೇಕ ೨೧ ಸಲ ಮರ್ದಿಸಿ ಗ ೧ ತೂಕವನ್ನು ಗರುಗದ ರಸದಲ್ಲಿ ಕೊಡಲು, ಅತಿಸಾರ, ಗ್ರಹಣಿಗಳು ಮಾಣುವುವು (ವಿವೈವಿ. ೨೫).
[ಸಂ. ಕಜ್ಜಲೀ]

**ಕಜ್ಜಾಯ, ಕಜ್ಜಯ, ಕರ್ಜುಯ, ಕರ್ಜುಾಯ, ಖಜ್ಜಯ, ಖಜ್ಜಾಯ** (ನಾ). ೧. ರೊಟ್ಟಿ; "ರೊಟ್ಟಿ; ಬಕ್ಕರಿ" (ಜಾನಕೋ. ೩೨). ೨. ಅಕ್ಕಿಯಿಂದ ಮಾಡಿದ ಒಂದು ಬಗೆಯ ಸಿಹಿ ತಿಂಡಿ; ಕರಿದ ಅಥವಾ ಬೇಯಿಸಿದ ಒಂದು ಬಗೆಯ ಸಿಹಿ ತಿಂಡಿ: ಪಸರದಲ್ಲಿಯೆ ಕುಳ್ಳಿತಾರೋಗಿಸುವ ಕಜ್ಜಾಯವನೊಸೆದು ಕೊಡೆ (ಬಸವು. ೩೭–೬೫); ಕಳಿತ ಹಲಾಹಳದ ಕಜ್ಜಾಯವೆನಿಸಿತು ರೂಹು ಸುಮನೋಹರ ಭಯಂಕರವಾಯ್ತು ಸುರಸತಿಯ (ಕುವ್ಯಾಅ. ೮–೪೨); ದೋಸೆ ಕಜ್ಜಾಯ ರೊಟ್ಟಿ ಹೊಯಿಗಡುಬತಿರಸಂಗಳ್ (ಚಿಬಪು. ೪೭–೪೨); ಕಜ್ಜಾಯಕ್ಕೆ ತಕ್ಕ ಕಾಸು (ಚೆಂಗೂಚಿ. ೧೩೬). 'ಪಂಚಕಜ್ಜಾಯ' ಪರಾ.ತಿ. (ಆಲಂ) ಹೊಡೆತ; ಪೆಟ್ಟು: ಸುಮ್ಮನಿದ್ದರೆ ಸರಿ, ಇಲ್ಲದಿದ್ದರೆ ಎರಡು ಕಜ್ಜಾಯ ಕೊಡ್ತೀನಿ! (ರೂಢಿ). **ಕಜ್ಜಯ :** ೨. ಉಂಡಿಂ ಬಳಿಯಂ ತಿಂಬರ್ ಕಜ್ಜಯಮಂ . . . ಅಱಿತವಿಲ್ಲದ ಗೊರವರ್ (ಸಮುಪ. ೧೪–೯); ಮಾರಿಯ ಬುತ್ತಿ ಮುರುಳ್ಗಳ ಕಜ್ಜಯಮೆನಿಸದೆ (ಜಗವಿ. ೯–೬೨). **ಕರ್ಜುಯ :** ೨. ತುಪ್ಪದ ಲಟಿ ಬೆಲ್ಲದ ಕರ್ಜುಯ ೧೦ ತಾಂಬೂಲಕೆ ಅಡಕೆಯ ಹೋಳು ೧೦ ಯಲೆ ೧೦ (ಎಕ. XI, ಹೊಳಲ್ಕೆ. ೧೧೩–೧೮ ; 1556).

**ಕರ್ಝಾಯ** : ೨. ನಿತ್ಯ ನೈವೇದ್ಯ ಕರ್ಝಾಯ ನಂದಾದೀಪ ಇವಕೆ ಶಲವಾಗಿ ಈ ನಾಗಲಾಪುರವೆಂಬ ಗ್ರಾಮವನು (ಎಕ. III, ಶ್ರೀರಂಗ. ೨-೧೫ ; 1529); ತುಪ್ಪ ನೆಯಿವೇದ್ಯಕೆ ಕರ್ಝಾಯಕೆ (ಮೈ ಆ ರಿ. ೧೯೩೪, ೧೫-೧೭ ; 1547); ತುಪ್ಪಂ ಕರ್ಝಾಯಕ್ಕೆ ವೊಡೆಗೆ ಉದ್ದು (ಎಕ. VI, ಮೂಡಗೆ. ೪೦-೧೫ ; 1552). **ಖಜ್ಜಯ** : ೨. ಸೆಜ್ಜೆಯ ಮಜ್ಜನದ ಖಜ್ಜಯದ ಹೀಲಿಕರಗದ ಬೋನದ ಪರಿಯಣದ (ಚಂದ್ರಪು. ೬-೮೫ ವ). **ಖಜ್ಜಾಯ** : ೨. ಸೆಜ್ಜೆಯ ಮನೆ ಮಜ್ಜನದ ನಿಶಾಂತವು ಖಜ್ಜಾಯದ ಮಂದಿರವು (ಅಂಜಚ. ೩-೩೩); ಆ ದಿನ ಹೂವಿಂಗೆ ಪ × ಖಜ್ಜಾಯಕ್ಕೆ ಪ ೨ (ಎಕ. XV, ಬೇಲೂರು. ೨೪೮-೧೧ ; 1298); ವಿನಾಯಕ ದೇವರಿಗೆ ನಿತ್ಯಪಡಿಗೆ ಖಜ್ಜಾಯದ ಆರೋಗಣೆಗೆ (ಎಕ. VIII, ತೀರ್ಥಹ. ೩೦-೫ ; 1308); ನಾರಿ ಖಜ್ಜಾಯವನೆಡೆಮಾಡಿದಳು (ಭರಚ. ೧೦-೩೦).

[ಪ್ರಾ. ಖಜ್ಜ (< ಸಂ. ಖಾದ್ಯ). / **ತಮಿ.** ಕಜ್ಜಾಯ ; **ತುಳು.** ಕಜ್ಜಾಯ, ಕಜ್ಜಾಯೊ ; **ತೆಲು.** ಕಜ್ಜಾಯ, ಕಜ್ಜ, ಕಜ್ಜೆ. / **ಮರಾ.** ಖಾಜೇ]

**ಕಜ್ಜಾಲಿ** (ನಾ). ೧. ಕಾಡಿಗೆ ಬಣ್ಣದವಳು. ೨. ನೀಚ ಹೆಂಗಸು. ೩. ಜಗಳಗಂಟಿ: "ಕಜ್ಜಾಲಿ - ಕರಿಪಿ; ಜಗಳಗಂಟೆ; ಕರಿಗಣ್ಣ ; ಕಾಡಿಗ್ಗಣ್ಣಿನ ಹುಡುಗಿ; ಕೊಜ್ಜಿ" (ಜಾನಕೋ. ೩೨) ; ಚೆಜ್ಜಕ ಹೋಳಿಗಿ ಚೂಜಿಲಿ ತುಪ್ಪ ಕಜ್ಜಾಲೆವ್ವ ಬೀಗುತಿ (ಲೋಕಗೀ. ೫೧).

[← ಮರಾ. ಖಜ್ಜಾಳೀ]

**ಕಜ್ಜಿ, ಖಜ್ಜಿ, ಗಜ್ಜಿ** (ನಾ). ಬೊಕ್ಕೆಯೇಳುವ ಅಥವಾ ತುರಿಯೇಳುವ ಒಂದು ಬಗೆಯ ಚರ್ಮರೋಗ: "ಖರ್ಜು - ಕಜ್ಜಿ" (ಶಮದ. ೨೭೯ ಪ್ರಯೋ); ದೌರ್ಜನ್ಯಕಾರಿ ಸತ್ತರೆ ಹತ್ತಿರ್ದ ಕಜ್ಜಿ ಹರಿದಂತೆ (ಸರ್ವಜ್ಞ. ೮೧೪); ಈ ತೈಲದಿಂ ಕಜ್ಜಿ, ಇಸುಬಿನ ಹುಣ್ಣು . . . ಇವೆಲ್ಲಾ ಮಾಣ್ಗುಂ (ವಿವೈವಿ. ೬೯); ಕಜ್ಜಿ ಇದ್ದವನಿಗೆ ಲಜ್ಜೆಯಿಲ್ಲ, ಅಜ್ಜಿ ಇದ್ದವನಿಗೆ ಯೋಚನೆಯಿಲ್ಲ (ಗಾದೆ). **ಖಜ್ಜಿ** : ತುರಗದ ಖಜ್ಜಿಗೆ ವಿಲೇಪನಂಗೆಯ್ವುದದಂ (ಅಶ್ವಶಾ. ೧೩-೧೭); ಬೊಜ್ಜು ಇದ್ದರೆ ಖಜ್ಜಿ ಬಿಡುವುದೇ? (ಗಾದೆ). **ಗಜ್ಜಿ** : ಪ್ರೀತಿಯಿಂದ ನೀತಿ ಹುಟ್ಟುವದು, ಲೂತಿಯಿಂದ ಗಜ್ಜಿ ಹುಟ್ಟುವದು (ಗಾದೆ) ; ಬದನೇಕಾಯಿ ಬಜ್ಜಿ ಮೈಯೆಲ್ಲಾ ಗಜ್ಜಿ (ಗಾದೆ). [< ಸಂ. ಖರ್ಜು, ಖರ್ಜೂ]

**ಕಜ್ಜಿಗಟ್ಟು** (ಕ್ರಿ). ಕಜ್ಜಿಯಾಗು; ಬೊಕ್ಕೆಯಾಗು: ಅನುಲೋಮವಾಗಿ ವಾಜಿಗೆ ಜನಿಯಿಸೆ ಬಲಮೆರ್ದೆಯ ಲದ್ದಿಗುತ್ತಂ ಪಿರಿದಪ್ಪಿನಮಲ್ಲಿ ಕಜ್ಜಿಗಟ್ಟುವುದನುನಯದಿಂ ಕುಡುಗೆ ಯೆಣ್ಣೆಯಂ ನವರಸಮಂ (ಅಶ್ವಶಾ. ೭-೨೭). [ಕಜ್ಜಿ + ಕಟ್ಟು$_1$]

**ಕಜ್ಜಿಗಿಡ** (ನಾ). ತೊಗಟೆ ಮತ್ತು ಎಲೆಗಳ ಮೇಲೆ ಕಜ್ಜಿಯ ಬೊಕ್ಕೆಗಳಂತೆ ಗುರುತುಗಳಿರುವ ಗಿಡ (ಸ). [ಕಜ್ಜಿ + ಗಿಡ (< ಗಿಡು)]

**ಕಜ್ಜಿಗುತ್ತ** (ನಾ). ಕಜ್ಜಿಯ ರೋಗ: ಮರದರಿಸಿನ . . . ಎಣ್ಣೆಯೊಳಟ್ಟಾದರದಿಂದಂ ಪೂಸೆ ಕಜ್ಜಿಗುತ್ತಂ ತೀರ್ಗುಂ (ಅಶ್ವಶಾ. ೧೩-೧೮).

[ಕಜ್ಜಿ + ಕುತ್ತ]

**ಕಜ್ಜಿಗೋಲಿ** (ನಾ). ಒಂದು ಬಗೆಯ ಔಷಧಿ ಸಸ್ಯ: ಗೂಡುಮಿಟ್ಲ ಮರ, ಕಜ್ಜಿಗೋಲಿ (ವೈಔಗಿ. ೩೬-೭೧೫). [?]

**ಕಜ್ಜಿಬುರುಕ** (ನಾ). ಕಜ್ಜಿ ಎದ್ದು ಕೆರೆದುಕೊಳ್ಳುತ್ತಿರುವವನು : ಇಲ್ಲಿಂದ ಎದ್ದು ಹೋಗೋ ಕಜ್ಜಿಬುರುಕ (ರೂಢಿ). [ಕಜ್ಜಿ + -ಪುರುಕ]

**ಕಜ್ಜಿಬುರುಕಿ** (ನಾ). ಕಜ್ಜಿ ಎದ್ದು ಕೆರೆದುಕೊಳ್ಳುತ್ತಿರುವವಳು : ಅವಳೊಬ್ಬಳು ಕಜ್ಜಿಬುರುಕಿ (ರೂಢಿ). [ಕಜ್ಜಿಬುರುಕ + -ಇ$_2$]

**ಕಜ್ಜಿಯಾ** 'ಕಜಿಯಾ' ನೋ.

**ಕಜ್ಜಿಹುಳು** (ನಾ). ಕಜ್ಜಿರೋಗಕ್ಕೆ ಕಾರಣವಾದ ಹುಳು: ಕಜ್ಜಿ ಹುಳುಗಳಿಂದ ಕಜ್ಜಿರೋಗ ಬರುತ್ತದೆ (ರೂಢಿ).

[ಕಜ್ಜಿ + ಹುಳು$_2$ (< ಪುೞು$_1$)]

**ಕಜ್ಜುರ** 'ಕಜೂರ್ರ' ನೋ.

**ಕಜ್ಜೂರ** 'ಕಜೂರ್ರ' ನೋ.

**ಕಜ್ಜೆ** (ನಾ). ೧. ತಂಟೆ; ಜಗಳ: ಯತಿಗೆ ಲಾಂಛನವೇಕೆ ಶುಚಿಗೆ ಮೊದಲು ಏಕೆ ಕಲಿಗೆ ಕಜ್ಜೆಯೇಕೆ ದಿಟವುಳ್ಳ ಮನಕ್ಕೆ ಆಚಾರವೇಕೆ (ವಚಶಾ. II, ೫೦೫). ೨. ಪ್ರಕರಣ; ವಿವಾದ: ಈ ಕಜ್ಜೆಯಲ್ಲಿದ್ದ ಸತ್ಯಾಂಶವನ್ನು ಹುಡುಕಿ ತೆಗೆಯಬೇಕೆಂಬ ಕುತೂಹಲವು ಅವನ ಮನಸ್ಸಿನಲ್ಲಿ ಹುಟ್ಟಿತು (ಬೀರಬ. ೧೬). [← ಮರಾ. ಕಜ್ಜಾ ; ಪಾರ. ಕಝಿಯಾ]

**ಕಜ್ಜೆರೆ** (ನಾ). ಕರಿಯ ಸೆರೆ, —ನರ (?): ಬಸಿಜ್ಞಿತ್ತಿ ಕಟ್ಟಿ ಕಜ್ಜೆರೆ [ಪಾಠಾಂ. ಕರ್ಚಿರೆ] ಬೆಸೆದಿರೆ ಪಲ್ಲಂ ತಿನುತ್ತು ಮಿರೆ ಕಾಲಂ ಘಟ್ಟಿಸುತುಮಿರೆ ಬಿಱ್ದು ನೆಲದೊಳ್ ಬಸವಳಿದಱಿಮೇಹುಮೇಯೆ ಬಾಱದು ತುರಗಂ (ಅಶ್ವಶಾ. ೬-೬೦). [< ಕರಿದು + ಸೆರೆ$_3$]

**ಕರ್ಝಂಯ** 'ಕಜ್ಜಾಯ' ನೋ.

**ಕರ್ಝಾಯ** 'ಕಜ್ಜಾಯ' ನೋ.

**ಕಟ$_1$** (ನಾ). ಕಡೆ; ಕೊನೆ; ತುದಿ. 'ಕಟವಾಯ್' ಪರಾ.

[< ಕಡೆ$_3$]

**ಕಟ$_2$** (ನಾ). ೧. ಹುಲ್ಲಿನ ಹುರಿ; ಚಾಪೆ. ೨. ಊರಿನ ಹೊರವಲಯ. ೩. ಕಾಲ ; ಸಮಯ. ೪. ಸೊಂಟ. ೫. ಪಕ್ಕೆ. ೬. ಹೆಣ; ಶವ. ೭. ಸುಡುಗಾಡು; ಶ್ಮಶಾನ. ೮. ಸಿದಿಗೆ; ಹೆಣ ಒಯ್ಯುವ ಚಟ್ಟ. ೯. ಮರದ ಹಲಗೆ. ೧೦. ಒಂದು ವರ್ಷ ಮಾತ್ರ ಇರುವ ಸಸಿ. ೧೧. ಒಂದು ಜಾತಿಯ ಹುಲ್ಲು. ೧೨. ವಿಪುಲತೆ; ಹೆಚ್ಚಳ. ೧೩. ಆನೆಯ ಗಂಡಸ್ಥಳ: ಕರೀಂದ್ರರುಂದ್ರ ಕಟ ಕೂಟ ಪರಿಚ್ಯುತ ಭೃಂಗಮಾಳಿಕಾ ಪೀತ ಮದಾಂಬುಕಂ (ಪಂಪಭಾ. ೧೪-೩). ೧೪. ದವಡೆ: ಕಟ ಕಂಡೂತಿ ನಿವಾರಣೈಕಮತಿ ಮತ್ತೇಭೌಘ ಸಂಘೃಷ್ಟ ತತ್ಕಟದಾನದ್ರವ ಚಿಹ್ನ ಚಂದ್ರಮಣಿ (ರಾಜಶೇ. ೫-೫೫). [ಸಂ.]

**ಕಟಂಕಟ** (ಗು). ಸೊರಗಿದ; ಶುಷ್ಕವಾದ (?): ಕಟಪಟ ಮಕ್ಷ ಕಟಂಕಟ ದೇಹಾ ದಿಟಪುಟವಿಹಪರಸುಖನಿರ್ಮೋಹ (ಅವಧೂ. ೫೯).

[?]

**ಕಟಂಕಟೇಯ** (ಗು). ಒಳಕ್ಕಿಳಿದ (?): ಪುತ್ತಡರ್ದಿರ್ದ ಮೆಯ್ ಪೊದಱುಗೊಂಡ ಜಟಾವಳಿ ಕೆಯ್ಯಕಾಲುಗುರ್ ಸುತ್ತಿ ಕಟಂಕಟೇಯ ಮೆನಲಾದ ಬಸಿಱ್ ಪರಮಾತ್ಮ ರೂಪದೊಳ್ ಪತ್ತಿದ ಶಾಂತದೃಷ್ಟಿ . . . ಒಪ್ಪುತ್ತಿರೆ ಜೀರ್ಣತಾಪಸಕುಲಂ ಮೆಱೆದಿರ್ಪುದು (ದಶಕು. ೪-೩೦).

[?]

**ಕಟಂಜನ** 'ಕಟಾಂಜನ' ನೋ.

**ಕಟಂಬರೆ** (ನಾ). ಒಂದು ಬಗೆಯ ಔಷಧಿ ಗಿಡ; ಕಟುಕರೋಹಿಣಿ (ಸ). [ಸಂ. ಕಟಂಬರಾ]

**ಕಟಂಭರೆ** (ನಾ). ಹಸರಣೆ ಗಿಡ; ಕಳ್ಳನ ಚೌರಿ; ಕೊಮ್ಮೆಗಿಡ (ಸ).

[ಸಂ. ಕಟಂಭರಾ]

**ಕಟಕ$_1$** 'ಕಟಕು$_1$' ನೋ.

**ಕಟಕ$_2$** (ನಾ). ೧. ಏಡಿ : "ಕುಳಿರಃ, ಕರ್ಕಿ, ಕಟಕಃ . . . ಕರ್ಕಟಕಾ ಯಿಾ ೮ ಕಟಕಕ್ಕೆ ಹೆಸರೂ" (ಭಾಸ್ಕರ. ೬೬-೩). ೨. [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಒಂದು: ಕಟಕವು ಕ್ರಾಂತಿಚಕ್ರದ ಹನ್ನೆರಡು ರಾಶಿಗಳಲ್ಲೆಲ್ಲ ಕ್ಷೀಣತಮ ಕಾಂತಿಯುದು (ನಕ್ಷತ್ರ. ೭೬).

[< ಸಂ. ಕರ್ಕಟಕ ?]

**ಕಟಕ$_{3}$** (ನಾ). ೧. ಕಡಗ; ಕೈಬಳೆ: ರಕ್ತಾಶೋಕ[ರಚಿತ]ರತ್ನಕಟಕದಿಂ ಕಪ್ಪುರದ [ಪೂವ] ಸರಿಗೆಯಿಂ (ಕಾದಂಉ. ೭೮೬); ಶಬ್ದಾಲಂಕಾರಂಗಳ್ ಕಟಕ ಮಕುಟಾದಿ ಭೂಷಣಗಳಂತೆ (ಅಪ್ರತಿ. ೨೮–೧೪); ಮೆಲ್ಲನೆ ಸಡಿಲ್ದು ಈಗಳ್ ಕಟಕಂಬೊಲಿರ್ಕುಂ (ರಾಮಾಶ್ವ. ೫೦–೨೦). ೨. ರಾಜಧಾನಿ; ನಗರ; ಮುಖ್ಯಪಟ್ಟಣ: ನೀಂ ಪತ್ರಲೇಖೆಯನೊಡಗೊಂಡು ಪೋಗಿ ಕಟಕಮಂ ಪುಗಿಸು (ಕಾದಂಉ. ೩೨೪); ಗಂಗಮಂಡಲ ಚಕ್ರೇಶ್ವರ ಕಟಕೋತ್ತಮ ನಾಯಕ ವಿರಚನೆಯಿನನರ್ಘರತ್ನಮಾದಂ ರತ್ನಂ (ಗದಾಯು. ೧–೪೦); ಬಿಟ್ಟಿಯಿಂದ ಕಟಕವ ಕಂಡೆನೆಂಬುದೆನಗಾಯ್ತು (ಹಚಕಾ. ೫–೮೪); ಈ ಕಡಲಸುತ್ತರಿಸಿ ವೀರವನೌಕಸರ ಕಟಕವನು ಹೊಕ್ಕನು (ತೊರರಾ. ೬–೬–೫೪). ೩. ಬೆಟ್ಟದ ತಪ್ಪಲು: ಬಳಮಂ ತಾಳ್ದಿರ್ಕುಮುರ್ವೀಧರ ಕಟಕ ಚರದ್ವನ್ಯದಂತಾವಳಂಬೊಲ್ (ಶಾಕುಂತ. ೨೨–೩೮). ೪. ಸಮೂಹ; ಗುಂಪು: ನಂದಗೋಪಂ . . . ನಿಖಿಲ ಗೋಪಕಟಕಂಬೆರಸು ಕತಿಪಯ ಪ್ರಯಾಣಂಗಳಿಂ ಪೋಗಿ (ಜಗವಿ. ೩–೬೫ ವ). ೫. ದಂಡು; ಸೈನ್ಯ: ಚಕ್ರವರ್ತಿಯ ಕಟಕಮುಂ ತನ್ನ ನೆಟಿಲೊಳೆ ಕಾವ (ಆದಿಪು. ೧೧–೩ ವ); ನಡೆದತ್ತಾಗಳ್ ಸಗರಚಕ್ರವರ್ತಿಯ ಕಟಕಂ (ಅಜಿಪು. ೯–೧೬); ನಡೆದುದು ಕಟಕಂ ಕಂಪಿತ ಕ್ಷೋಣಿಭಾಗಂ (ಪುಷ್ಪಪು. ೫–೩೫). ೬. ಸಮುದ್ರ. ೭. ನಿತಂಬ. ೮. ಆಧಿಕ್ಯ; ಹೆಚ್ಚಳ. ೯. ಹಲ್ಲು; ದಾಡೆ. ೧೦. ಆನೆಯ ಕೋರೆಗೆ ಅಲಂಕಾರಕ್ಕಾಗಿ ತೊಡಿಸುವ ಉಂಗುರ, —ಅಣಸು. ೧೧. ಉಪ್ಪು. ೧೨. ಬಿಸಿಲು. ೧೩. ಬಿಲ್ಲಿನ ಹೆದೆ: ಡೊಣೆಯಿಂ ಕಣೆಯಂ ತೆಗೆದಾರ್ದುಂ ಬಿಲ್ಗದಂ ಪೂಡಿ ಪೊಡರ್ಪುವೆತ್ತು ಕಟಕಾಮುಖದಿಂ ಸೆಳೆದು (ಶಬಶಂ. ೩–೫೨). ೧೪. ಕಡಜ; ಕಣಜ; ಕಡಜೀರಿಗೆ ಹುಳು: “ಗಂಡೋಲಿ, ಪರಟೊ ಈ ೨ ಕಟಕ” (ನಾಚರಾ. ೧೧೫). ೧೫. ಒರಿಸ್ಸಾದೇಶದ ರಾಜಧಾನಿ: “ಉಪ್ಪಿನೊಳು ದಂತದೊಳು ಸೇನೆಯೊಳು ಗಿರಿಯ ಪೊರೆಯೊಳು ರಾಜಧಾನಿಯೊಳು ವಳಯದೊಳು ಶರಧಿಯೊಳಲಂಕಾರದೊಳು ನಿತಂಬಂಗಳೊಳು ಕಟಕಾಭಿಧಾನಮಕ್ಕುಂ” (ಮಂಗರಾ. ೧೫೨–೫೯); “ಪರ್ವತೋಪತ್ಯಕಂ ವಿಪುಲಂ ಹಸ್ತವಿಭೂಷಣಂ ಶರಧಿ ಸೈನ್ಯಂ ದಂತಮುಂ ಕ್ಷಾರಮಾತಪಮಿಂತುಂ ಕಟಕಾಭಿಧಾನಂ” (ನಾನಾರ. ೧೩೪).

**ಕಟಕದಗೋವ** = ಒಂದು ಬಿರುದು: ಕಟಕದಗೋವನಚಳಿತಧೈ[ರ್ಯ್ಯಂ] (ಇಆ. V, ೧೬–೨೨; 1019); ಕಟಕದಗೋವನೆಂಬ ಪೆಸರೇಂಗಳ (ಎಇ. XVI, ೩೫೭–೧೪; ?); ಕಟಕದಗೋವಂ ರಕ್ಕಸಗಂಗಂ (ಎಕ. VII, ಶಿವಮೊ. ೪–೭೬; 1177). [ಸಂ.]

**ಕಟಕಟ$_{1}$, ಕಟಕಟಾ** (ಅ). ವಿಷಾದವನ್ನು ಸೂಚಿಸುವ ‘ಅಯ್ಯೋ’ ಎಂಬ ಅರ್ಥವುಳ್ಳ ಶಬ್ದ: ಕಟಕಟ ಧನಂಜಯನೆಂದು ಸೋತನು ಹಿಂದೆ ನಿನ್ನೊಡನೆ (ಕುವ್ಯಾಕ. ೯–೮); ಕಟಕಟ ದುರಾತ್ಮರು ಬೇರು ಗೊಲೆಗಂಗೈಸಿದರು (ನಿಭಾಗ. ೩–೧–೧೧); ನಾನಿದಿರ್ಗೊಳದೆ ಕಟಕಟ ನೀವಿಂತು ಬಪ್ಪರೆ (ಭರಚ. ೪೬–೫೭). **ಕಟಕಟಾ**: ಕಟಕಟಾ ಪೇರಡವಿಯೊಳಗೆಕ್ಕಟಿಯದೇತಕೆ ನವೆವುತಿರ್ದಪೆ (ಬಸಪು. ೧೮–೯); ಕರ್ಣಸೂರ್ಯನ ಮಹಿಮೆ ಮಸುಳಿತು ಕಟಕಟಾ[ಪಾಶಾಂ. ಮಸುಳಿತಕಟಕಟಾ]ಯೆನುತಖಿಳಬಲ ಬೆದಱೆ (ಕುವ್ಯಾದ್ರೋ. ಓರಿಇ. ೧೬–೪೬).

[< ಅಕ್ಕಟ. / ಮರಾ. ಕಟಕಟಾ]

**ಕಟಕಟ$_{2}$** (ನಾ). ಶಿವ. [ಸಂ.]

**ಕಟಕಟಾ** ‘ಕಟಕಟ$_{1}$’ ನೋ.

**ಕಟಕಟಿ, ಕಿಟಕಿಟ** (ನಾ). ಕಿರಿಕಿರಿ; ತೊಂದರೆ; ಅನಾನುಕೂಲ: ಅಕ್ಕನ ಬಂದಾಳಂದವ್ಯಾಗ ಕಟಕಟೀನ ತಪ್ಪಿಹೋತು! (ಬೆಂದಯು. ೮); ನಮ್ಮ ಜಿನ್ನರದಲ್ಲಿ ಹೀಗೆ ಜಾಗೆಯ ಕಟಕಟಿಯಿಲ್ಲ (ಚೆಂದುಟ. ೮೯); ಅಷ್ಟು ಪರಿವಾರದೊಡನಿರುವುದೂ ಆತನಿಗೆ ಕಟಕಟಿಯೇ ಅನಿಸಹತ್ತಿತು (ಕಾಳರಾ. ೮). **ಕಿಟಕಿಟ**: ನನಗೆ ಅತ್ತೆಯಗಿಂತ ಹೆಚ್ಚು ಕಿಟಕಿಟ ಮಾಡುತ್ತಾಳೆ (ಮೋಹಿನೀ. ೨೯). [← ಮರಾ. ಕಟ್‌ಕಟ್, ಕಿಟ್‌ಕಿಟ್]

**ಕಟಕಟಿಸು** (ಕ್ರಿ). ಕಟಕಟ ಎಂದು ಶಬ್ದಮಾಡು: ಇಬ್ಬರ ಹಲಗೆಗಳೂ ಕಟಕಟಿಸತೊಡಗಿದವು (ರಂಗರೋ. ೪೫).

[ಕಟಕಟ$_{0}$ + –ಇಸು$_{3}$]

**ಕಟಕಟಿ** (ನಾ). ೧. ಮರದಿಂದ ಅಥವಾ ಕಬ್ಬಿಣದ ಸರಳುಗಳಿಂದ ಮಾಡಿದ ಕಟ್ಟೆ; ಕಟಾಂಜನ: ಮರದ ಸಾಮಾನು ವಗೈರೆ ೩೦ ಕಟಕಟಿದೊ ೧೦ ಚಿಕ್ ೨೦ (ಎಕ. XIV, ನಂಜನ. ೨೮೯–೫; 1847). ೨. (ನ್ಯಾಯಾಲಯದಲ್ಲಿ) ಆರೋಪಿ ಅಥವಾ ಸಾಕ್ಷಿ ನಿಲ್ಲುವ ಕಟ್ಟೆ; ಸಾಕ್ಷಿಗೂಡು: ನಾನವಳನ್ನು ಖೈದಿಗಳ ಕಟಕಟಿಯಲ್ಲಿ ಮತ್ತೆ ನೋಡುವಂತಾಯಿತೆ? (ಪುನರು. ೯೯). [ದೇ. ‖ ತೆಲು. ಕಟಕಟಾಲು]

**ಕಟಕತ್ವ** (ನಾ). ಸೇನಾಧಿಪತ್ಯ (?): ಸೊಗಯಿಸುಗುಂ ಕಟಕತ್ವಮಂ ಸಮರ್ಥಬಲಂ (ಕವಿರಾ. ೨–೧೫೦). [ಸಂ.]

**ಕಟಕಯ** (ನಾ). ಒಬ್ಬಾತನ ಹೆಸರು: ಕುಱುಂಬಗಾವುಣ್ಡಂಗಂ ಕಟಕಯಗಂ ಬಿಟ್ಟಿರಡುಗ್ಗಂಡುಗಂ ಮಣ್ಣದೆಱೆ . . . ಪರಿಹಾರಂ ಬಿಟ್ಟರ್ (ಮೈಆರಿ. ೧೯೩೩, ೩೮–೭; 791). [?]

**ಕಟಕರಕ್ಷಪಾಳ** (ನಾ). ನಗರವನ್ನು ಕಾಪಾಡುವವನು; ಒಂದು ಬಿರುದು: ಅಪ್ರತಿಹತ ಶೌರ್ಯ್ಯ[ಂ] ಗುರುಜನ ಪದ ಪರಾಗರಂಜಿತ ಭಾಳಂ ಕಟಕರಕ್ಷಪಾಳ ನಾಮಾದಿ ಸಮಸ್ತ ಪ್ರಸಸ್ತಿ ಸಹಿತಂ (ಕಇಆ. ೪೦–೫೭–೧೮; 1121). [ಕಟಕ$_{3}$ + ರಕ್ಷಪಾಳ]

**ಕಟಕರಿಸು** (ಕ್ರಿ). ೧. ಕಲ್ಲಿನಿಂದ ಕುಟ್ಟಿ ದಾರ ಮೊದಲಾದುವುಗಳನ್ನು ತುಂಡುಮಾಡು. ೨. (ನೂಲು ಮೊದಲಾದುವು) ಹರಿದುಹೋಗು, —ತುಂಡಾಗು: ತನ್ನ ವಿಚಾರಗಳು ಕಟಕರಿಸಿದಾಗ ಎದ್ದ ಸಪ್ಪಳವೇ ಭೀಕರವಾಗುವದೇನೋ ನಿಜ (ರಕ್ತಧ್ವ. ೯೩).

[ಕಟಕರ? + –ಇಸು$_{3}$]

**ಕಟಕರೋಣಿ, ಕಟಕರೋಹಿಣಿ, ಕಟಕಲೋಣಿ** (ನಾ). ಒಂದು ಬಗೆಯ ಔಷಧಿ ಗಿಡ; ಕಟುಕರೋಹಿಣಿ (+). **ಕಟಕರೋಹಿಣಿ**: (+). **ಕಟಕಲೋಣಿ**: (+). [< ಸಂ. ಕಟುಕರೋಹಿಣೀ]

**ಕಟಕರೋಹಿಣಿ** ‘ಕಟಕರೋಣಿ’ ನೋ.

**ಕಟಕಲೋಣಿ** ‘ಕಟಕರೋಣಿ’ ನೋ.

**ಕಟಕವರ್ಧಮಾನಕ** (ನಾ). [ನಾಟ್ಯ] ನೃತ್ಯದಲ್ಲಿ ಕೈಗಳ ಒಂದು ಭಂಗಿ: ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತಹಸ್ತಗಳು ಯಾವುವೆಂದರೆ – ೧. ಅಂಜಲಿ . . . ೫. ಕಟಕವರ್ಧಮಾನಕ (ಆಭಾನ್ಯ. ೪೮).

[ಸಂ. (ಕಟಕ + ವರ್ಧಮಾನಕ)]

**ಕಟಕಸನ್ನಾಹ** (ನಾ). ಯುದ್ಧಕ್ಕೆ ಸಿದ್ಧನಾಗಿರುವವನು; ಒಂದು ಬಿರುದು: ಗಣ್ಡರ ತೀರ್ತ್ಥಂ ಕಟಕಸನ್ನಾಹಂ ಸಿಂಘನ ಗರುಡಂ (ಸೌಇಇ. XX, ೨೧–೪೬; 1019). [ಕಟಕ$_{3}$ + ಸನ್ನಾಹ]

**ಕಟಕಸೇಸೆ** (ನಾ). ಒಂದು ಬಗೆಯ ತೆರಿಗೆ: ಕಟಕಸೇಸೆ ವೀರಸೇಸೆ ಆನೆಯ ಸೇಸೆ . . . ಒಳಗಾದ ಪೂರ್ಬಾಯ ಅಪೂರ್ಬಾಯಂಗಳನು . . . ಬಿಟ್ಟು (ಎಕ. XVI, ಚಿಕ್ಕನಾ. ೭೧–೨೭; 1330). [ಕಟಕ$_{3}$ + ಸೇಸೆ]

**ಕಟಕಾಂಬ** (ನಾ). ಒಂದು ಬಗೆಯ ಔಷಧಿ ಗಿಡ: ಕಾಡುಗುಂಬಳ, ಕಟಕಾಂಬ, ಹೀಲಗ (ವೈಔಗಿ. ೭೫–೧೫೩೬). [?]

**ಕಟಕಾಚಾರಿಯ** (ನಾ). ಸೇನಾಧಿಪತಿ; ದಳಪತಿ: ಅಖಿಳಸೇನೆಯ ಭೂರಿ ಭಟರಗ್ರದಲಿ ಕಟಕಾಚಾರಿಯನು ಕೈವೀಸಿದನು (ಕುವ್ಯಾದ್ರೋ. ೨–೨೩). [< ಕಟಕಾಚಾರ್ಯ]

**ಕಟಕಾಚಾರ್ಯ** (ನಾ). ೧. ರಾಜಗುರು; ಅರಸುಮನೆತನದ ಗುರು(?): ಯಾದವ ಕಟಕಾಚಾರ್ಯ ಸುಕವಿ ಸುಮನೋಬಾಣ ಜಾಮಾತೃ ಪರಮ ಚಿದಾನಂದ ಮಲ್ಲಿಕಾರ್ಜುನ ಕವೀಶ್ವರ (ಸೂಕ್ತಿಸು. ೧-೭೮ ವ); ಕವಿ ಸುಮನೋಬಾಣನ ಯಾದವ ಕಟಕಾಚಾರ್ಯನೆಸೆವ ದೌಹಿತ್ರನೆ ನಾಂ ಕವಿ ಕೇಶವನೆಂ (ಶಮದ. ಪೀಠಿಕೆ. ೨); ಪ್ರಾರ್ಥನಾದಿಗಳನ್ನು ನಡಸುವ ಕಟಕಾಚಾರ್ಯರೂ, ಅಡುಗೆ ಮಾಡುವವರೂ, ಸೇವಕರೂ ಎಲ್ಲ ಸೇರಿ ಸಮುದ್ರದಂತೆ ಅಗಾಧವಾಯಿತು (ಶಾಂತಲಾ. ೧೪೮). ೨. ಸೈನ್ಯಾಧಿಪತಿ; ದಳಪತಿ; ಸೇನಾನಿ: ಉಭಯ ಕಟಕಾಚಾರ್ಯ ಪಾಂಡವವಿಭುವ ಹಿಡಿತಹೆನೆಂದು ಕೌರವ ಸಭೆಗೆ ಭಾಷೆಯ ಕೊಟ್ಟು (ಕುವ್ಯಾದ್ರೋ. ೨ ಸೂಚನೆ). [ಕಟಕ$_3$ + ಆಚಾರ್ಯ]

**ಕಟಕಾಯನ** (ನಾ). ಕರ್ಕಾಟಕ ಸಂಕ್ರಾಂತಿ; ದಕ್ಷಿಣಾಯನ ಸಂಕ್ರಾಂತಿ: ಜೂನ್ ೨೧ನೆ ತಾರೀಖಿನಲ್ಲಿ ಸೂರ್ಯನ ಕಿರಣ ನೇರವಾಗಿ ಕರ್ಕಾಟಕ ಸಂಕ್ರಾಂತಿ ವೃತ್ತದ ಮೇಲೆ ಬೀಳುತ್ತದೆ. ಇದಕ್ಕೆ ಕಟಕಾಯನ (Summer Solstice) ಎಂದು ಹೆಸರು (ಭೂವಿವ. ೧೫).
[< ಸಂ. ಕರ್ಕಟಾಯನ]

**ಕಟಕಾರ** (ನಾ). ಮೇದ; ಚಾಪೆ ಮೊದಲಾದುವುಗಳನ್ನು ಮಾಡುವವನು: ನಲಿದು ಕಟಕಾರರ್ಗೆ ಕೆಲರ್ಗೆ ಜೀವಿತವಿತ್ತು ಮಲಸದವರಿಂ ಮೊಜಗಳಂ ಭರದೆ ಮಾಡಿಸುತ (ಅರಾಚಾ. ೧೩-೬). [ಸಂ.]

**ಕಟಕಿ** (ನಾ). ೧. ಚುಚ್ಚುಮಾತು; ಪರಿಹಾಸ; ವ್ಯಂಗ್ಯ: ಮುಂದೆ ಕುಣಿವುತ ಬಾಯ್ಗೆ ಬಂದ ಕಟಕಿಯನಾಡಿ (ತಿರುರ. ಹ. ೧೬-೧೦); ಸಿಪ್ಪಸರ ಜೋ ಎಂದು ಕಟಕಿಯನಾಡಿ (ಸಿದ್ಧರಾ. ೧-೫೯); ನಲ್ಲೆಯಾಡಿದ ಕಟಕಿಯ ನುಡಿಗೆ ಕೃಷ್ಣ ಮನದೊಳಗೆ ಹರುಷಗೊಂಡ (ಬಿದುರೆ. ೨೫). ೨. ಚುಚ್ಚುಮಾತಾಡುವವಳು: ಕುಲಗೇಡಿ ಕಪಟ ಕಂಟಕಿ ಕಟಕಿ ಕಡುದುಷ್ಟೆ ಕಲಹಾರ್ಥಿ . . . ಎನಿಪ ವನಿತೆಯರ ನಿಜಕೆ ನಿಲಿಸಿ (ಜೈವಿಭಾ. ೫-೬೧).

ಕಟಕಿಯಾಡು= ಚುಚ್ಚಿಮಾತಾಡು: ಎಮ್ಮಾ ಅತಿಶಯಮಪ್ಪ ವಿದ್ಯೆಯನು ನುತಿಸದೆ ಕಟಕಿಯಾಡಿದನಿವನು (ನೇಮಿಸಂ. ೨೩-೨೪); "ಊರೂರು ಬಿಕ್ಕೆ ಬೇಡುವ ಬ್ರಾಹ್ಮಣನನ್ನು ಬೇಡಿ ಕಾಡುವ ನಿನಗೆ . . . ನಾಚಿಕೆಯಿಲ್ಲವೆ" ಎಂದು ಕಟಕಿಯಾಡಿದನು (ಹಗಲಿ. ೫೨). [?]

**ಕಟಕಿಗ** (ನಾ). ಸೈನಿಕ; ದಂಡಾಳು: ತೆಗೆ ವಾರುವಮಂ ಹಾರುವ ಬಗೆಯಂ ತನಗಿರುಳ ಬವರಮೆನುತ ಸವಂಗಂಬುಗವ ಕಟಕಿಗರನಳಿಜಂ ಪುಗಿಸಿದುದು ಭುಜಾಸಿ ಗಂಗದಂಡಾಧಿಪನಾ (ಎಕ. II, ೬೩-೨೩; 1118).
[ಕಟಕ$_3$ + -ಇಗ]

**ಕಟಕಿಸು** (ಕ್ರಿ). ವ್ಯಂಗ್ಯವಾಗಿ ಮಾತನಾಡು; ಚುಚ್ಚಿನುಡಿ; ಕಟಕಿಯನ್ನಾಡು: ಪುರದ ವಿಪ್ರಾದಿ ಕಟಕಿಸುತ ಬಿಜ್ಜಳಗೆ ಬಂದೊರೆದರತಿ ಕೊಂಡೆಯವನು (ಲಿಂಗಪು. ೨೯-೪೨). [ಕಟಕಿ+ -ಇಸು$_3$]

**ಕಟಕು$_1$**, ಕಟಕ$_1$ (ನಾ). ಬಿಳುಪು ಅಥವಾ ಕೆಂಪುಬಣ್ಣದ ಗಟ್ಟಿ ಮಣ್ಣಿನ ಒಂದು ಪ್ರಕಾರ; ಹಿಟ್ಟುಗಲ್ಲು: ಧಾರ್ವಾಡ ಕಟಕುಬಂಡೆಯ ಮೇಲೆ ಹಬ್ಬಿತ್ತು ವನವಾಸಿ ಕುಂತಳದ ಭವ್ಯ ಜಾಗ (ಅರಳು. ೩೦೩-೩). **ಕಟಕ$_1$**: ಉಸುಬಿನ ದೊಡ್ಡ ದೊಡ್ಡ ಬೈಲುಗಳೂ, ಕಟಕ, ಸುಣ್ಣದ ಕಲ್ಲು ಮುಂತಾದವುಗಳ ಗುಡ್ಡಗಳೂ ದೃಷ್ಟಿಗೆ ಬೀಳುವವು (ಮುಂಬಯಿ. ೬-೨೬೪); ಕಪ್ಪು, ಕರಲು, ಕೆಂಪು, ಬಿಳಪು, ಕಟಕ, ಕೆಂಪುಮಸಾರಿ . . . ಮೊದಲಾದ ಯಾವ ಪ್ರಕಾರದ ಭೂಮಿಗಳಿಗಾದರೂ (ಕೃಷಿಪ್ರ. ೪೩).
[< ಸಂ. ಖಟಿಕಾ ?]

**ಕಟಕು$_2$** 'ಕಟುಕು$_4$' ನೋ.

**ಕಟಕು$_3$** 'ಕಡುಕು$_3$' ನೋ.

**ಕಟಕೆಟ್ಟು** (ನಾ). ನಂಚಿಕೊಳ್ಳುವ, ಬಾಡಿಸಿಕೊಳ್ಳುವ ಒಂದು ಪದಾರ್ಥ (?): ಮುಂದೆ ಮುದ್ದೆ ಮಾಡಿದ ಕಣಕದ ರೊಟ್ಟಿ ಅದಕೆ ಸಾಧನ ತೋವೆ ಕಟಕೆಟ್ಟು ಅದಜ ಮೇಲೆ ತಾ ಪುಣ್ಯವು ಪುಟ್ಟು ಪುರಂದರ ವಿಠಲನ ಪ್ರಸಾದ ಘಟ್ಟಿ (ಪುರಂದ. ೫-೮೬ ಉ). [?]

**ಕಟಕೋಪಾಧ್ಯಾಯ** (ನಾ). ರಾಜಗುರು; ಅರಸುಮನೆತನದ ಗುರು (?): ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾ ನಾಗವರ್ಮಂ . . . ನೃಸಿಂಹ ಕ್ಷಿತಿಪಾಲನಲ್ಲಿ ಕಟಕೋಪಾಧ್ಯಾಯನಾರೆಂಬ ಸೂಕ್ತಿ (ಅನಂಪು. ೧-೩೪); ಯಾದವ ಕಟಕೋಪಾಧ್ಯಾಯನಪ್ಪ ಕವಿ ಸುಮನೋಬಾಣನ ಮಗಳ ಮಗನೆಂ (ಶಮದ. ಪೀಠಿಕೆ. ೨ ವೃತ್ತಿ).
[ಕಟಕ$_3$ + ಉಪಾಧ್ಯಾಯ]

**ಕಟಗಡಕಿ** (ನಾ). ನಿರ್ದಯಳಾದ ಹೆಂಗಸು; ಕಟುಕ ಹೆಂಗಸು: ಕಟಗಡಕಿ ನಿನ ಮಾತು ತುಟಿಮ್ಯಾಲೆ ನಿಲ್ಲವ . . . ತಗುದಾಳ ತಗುದಾಳ ನ್ಯಾಯ ಹಟಗಾಸಿ (ಕಜಾಗೀ. ೪). [< ಕಟು$_1$ + ಕಡಿಕ$_2$ + -ಇ$_2$]

**ಕಟಗರಿಸು** (ಕ್ರಿ). (ಹಲ್ಲು) ಕಟಕಟ ಎಂದು ಶಬ್ದಮಾಡು: ಗಾಳೀಮಳ್ಯಾಗ ಕಟಬೋ ಅಂತ ಹಲ್ಲು ಕಟಗರಿಸಿಗೊಂತ ಕುಂದ್ರೋ ಪಿರುತಿ ಐತೇನು ಅವಗ? (ಹೊಸಂಸಾ. ೨೨-೪).
[ಕಟಗರ$_0$ + -ಇಸು$_3$]

**ಕಟಗುಟ್ಟಿಸು** (ಕ್ರಿ). ಕಟಕಟ ಎಂದು ಶಬ್ದಮಾಡು: ಆತ ನನ್ನ ಕಡೆಗೆ ಬೆನ್ನು ಮಾಡಿ ನಿಂತು ಬಾಟಲಿಗಳನ್ನು ಕಟಗುಟ್ಟಿಸುತ್ತ (ಹೊಸಕ್ಷಿ. ೯೯).
[ಕಟಗುಟ್ಟು + -ಇಸು$_3$]

**ಕಟಗುಟ್ಟು** (ಕ್ರಿ). ೧. ಎರಡು ವಸ್ತುಗಳು ಒಂದಕ್ಕೊಂದು ತಾಗಿ ಕಟಕಟ ಎಂದು ಶಬ್ದವಾಗು; ಕಟಕಟಿಸು. 'ಕಟಗುಟ್ಟಿಸು' ಪರಾ. ೨. ಮೇಲಿಂದ ಮೇಲೆ ಹೇಳು: ಎರಡೆಂದರೆ ಎರಡೇ ದಿನಾಲು ಕಟಗುಟ್ಟಿ ಹೇಳಿಕೊಟ್ಟಿದ್ದಳು (ಸಂಪಿಗೆ. ೯). [ಕಟ$_0$ + ಕುಟ್ಟು$_1$]

**ಕಟಗೋಲು** (ನಾ). (ಚಿಣ್ಣಿದಾಂಡು ಆಟದಲ್ಲಿ) ದಾಂಡು ನೆಲಕ್ಕೆ ತಾಗುವುದು: ಕಟಗೋಲೆಂದು ಕೂಗಿದ್ದರಿಂದ ಅವನು ಔಟಾಗಲಿಲ್ಲ (ರೂಢಿ). [ಕಟ$_0$ + ಕೋಲು$_1$ (< ಕೋಲ್$_1$)]

**ಕಟಪಟಿ**, ಕಟಪಟೆ, ಕಟಪಿಟಿ, ಕಟಿಪಟಿ, ಖಟಪಟಿ, ಖಟಿಪಿಟಿ (ನಾ). ೧. ಹೋರಾಟ; ಹೆಣಗಾಟ; ಪ್ರಯತ್ನ: ಏತಜ ಕಟಪಟ ಒಂದಿನ ಹೋಗುತಿದ್ದೆ ಲಟಪಟ (ಪುರಂದ. ೨-೫೨ ಪಲ್ಲವಿ); ಈ ಎಲ್ಲ ಹೋರಾಟದಲ್ಲಿಯೂ ಮತ್ತು ಕಟಪಟಿಯ್ಯಲ್ಲಿಯೇ ಈ ಜೀವನದ ಇತಿಶ್ರೀಯು ಆಗಿದ್ದರೆ (ಪ್ರಬಂಧ. ೧೦). ೨. ತೊಂದರೆ; ರೇಜಿಗೆ; ಕಷ್ಟ. ೩. ಕಾಟ; ಹಿಂಸೆ: ಕಟಪಟದೇವರಿಗೆ ಕಾಯಿಬಾಳೆಹಣ್ಣು (ಗಾದೆ). ೪. ತಡಬಡೆಯಿಲ್ಲದೆ ಮಾತನಾಡುವುದು. **ಕಟಪಟೆ**: ೨. ಕಟುಕದ ವೃತ್ತಿ ಬಿಟ್ಟು ಶಿವಪೂಜೆಯ ಮಾಳ್ಪುದಕೆನ್ನ ಚಂದದಿಂ ಕಟಪಟೆಮಾಡದಿನ್ನು ಹರುಷೋನ್ನತಿಯಿಂದಲಿ (ಯಚೋರ. ೩೭). **ಕಟಪಿಟಿ**: ೧. "ಪ್ರಯತ್ನ" (ಜಾನಕೋ. ೩೨). **ಕಟಿಪಟಿ**: ೪. ತಟತಟ ತನುತಾಪದಿನುದರಾರ್ಥಂ ಕಟಪಟ ವಚನ ವೃಥಾ ವಾದಾರ್ಥಂ (ಅವಧೂ. ೨೭). **ಖಟಪಟಿ**: ೧. ತಾಯಿ, ಮಗಳಿಗೆ ಒಳ್ಳೇ ವರ ಸಿಗಬೇಕೂ ಅಂತ ಖಟಪಟಪಟ್ಟರ ಇದರಾಗ ಏನು ತಪ್ಪು? (ಸಮಜೀ. ೨೪೪). **ಖಟಿಪಿಟಿ**: ೧. ಅವರು ಮಾಡುತ್ತಿದ್ದುದೆಲ್ಲ ಹಕ್ಕನ್ನು ದಕ್ಕಿಸಿಕೊಳ್ಳುವ ಖಟಿಪಿಟಿ (ಗಾಳಿಪ. ೫೭).
[← ಮರಾ. ಖಟ್‌ಪಟ್]

**ಕಟಪಟೆ** 'ಕಟಪಟಿ' ನೋ.

**ಕಟಪಯ** (ನಾ). [ಗಣಿತ] ಅಂಕೆಗಳಿಗೆ ಬದಲು ಅಕ್ಷರಗಳನ್ನು ಉಪಯೋಗಿಸುವುದು: ಅಕ್ಷರ ಸವುಜ್ಞಿ × ಕಟಪಯಮೆಂದರೆ (ಭಾಸ್ಕರ. ೭೨-೫).
[?]

**ಕಟಿಪಿಟಿ** 'ಕಟಪಟ' ನೋ.

**ಕಟಿಬಾಯಿ** 'ಕಟವಾಯ್' ನೋ.

**ಕಟಿಭಿ** (ನಾ). ಕಂಗೊಂದಿ ಗಿಡ ; ಜ್ಯೋತಿಷ್ಮತಿ, ಅಪರಾಜಿತಾ ಮೊದಲಾದ ಬಳ್ಳಿಗಳ ಹೆಸರು : "ಪಾರಾವತಾಂಘ್ರಿ, ಕಟಭಿ, ಪಣ್ಯ, ಪಣ್ಯ, ಜ್ಯೋತಿಷ್ಮತಿ" (ನಾಚಿರಾ. ೬). [ಸಂ. ಕಟಭೀ]

**ಕಟಿರು** (ನಾ). ಒಣಗಿದುದು; ಬಿರುಸಾದುದು : "ತಂಗಳಾಗಿ ಕಟರಾಗಿ ದ್ದಾವು. ಅವನ್ನೇನ ಮಾಡ್ತೀರಿ ಬಿಡ್ರಿ . . ." (ಜ್ವಾಲಾಮೇ. ೩೭೭). [?]

**ಕಟಿರೆ** 'ಕಟ್ಟಉವೆ' ನೋ.

**ಕಟಿಲೆ** 'ಕಟ್ಟಳೆ$_1$' ನೋ.

**ಕಟಿವಪ್ರ** (ನಾ). ಶ್ರವಣಬೆಳುಗೊಳದ ಚಿಕ್ಕಬೆಟ್ಟದ ಹೆಸರು : ಕಟ ವಪ್ರನಾಮಕೋಪಲಕ್ಷಿತೇ . . . ಉತ್ತುಙ್ಗ ಶೃಙ್ಗೇ (ಎಕ. II, ೧-೬ ; ಸು. 600) ; ಕೇಳೊಯ್ಪಿನ್ನ ಕಟವಪ್ರಶ್ರೈಲಮಡಱಿದ್ದಿನಮ್ಮಾ ಕಳನ್ತೂರನಂ ಬಾಲೇ ಪೆರ್ಗ್ಗೊರವಂ ಸಮಾಧಿ ನೆಜಿರ್ದೋ (ಎಕ. II, ೨೨-೩; ಸು. 700). ℙ ಇದು 'ಕಟ್ಟಿವಪ್ಪು' ಶಬ್ದದ ಸಂಸ್ಕೃತೀಕರಣವಿರಬಹುದು. [?]

**ಕಟಿವರಿಗೆ** (ನಾ). ಒಂದು ಬಗೆಯ ಔಷಧಿ ಮೂಲಿಕೆ : ಕಟವರಿಗೆ, ಕೊಳವಳಿಕೆ ಬೀಜ . . . ಕಲ್ಕವಂ ಮಾಡಿ ಹಾಕಿ ಕರೆಪಾಕದಿಂದಿಳುಹಿ ಸರ್ವಾಂಗಲೇಪಂಗೈಯಲು ಸಂಧಿಗಸನ್ನಿ ಮುಂತಾದ ಸಕಲ ಸನ್ನಿಪಾತವ್ಯೂ ಗುಣವಕ್ಕುಂ (ಸಕವೈ. I, ೧೫೩). [?]

**ಕಟಿವಾಯ್**, ಕಟಬಾಯಿ, ಕಟವಾಯಿ (ನಾ). ಬಾಯಿಯ ಕೊನೆ, —ಮೂಲೆ : ಎತ್ತಿದ ಮುಖಂ ಮೆಱೆಯೆ ಇಳಿದ ಕಟವಾಯ ಹೊಸ ನೊರೆಗಱುಂಕೆಗಳೆಸೆಯೆ (ಅನಾರ. ಹ. ೧೩೧-೧೦) ; ಕಲ್ಲ ಪೊಗರೊಳಂ ನೆನ್ಮಿ ಪುಲಿ ಸಮಱಿದುವು ಕಟವಾಯ ಸವಿಗಳಂ (ಅನಂಪು. ೯-೧೬ ರಗಳೆ); ಕಟವಾಯನು ನಾಲಗೆಯಿಂದ ಸವಱಿ (ಸೊಬಸೋ. ೫-೯೭) ; ಗಳಹಿದೊಡೆ ಕಟವಾಯ ಕೊಯ್ವೆನು (ಕುವ್ಯಾವಿ. ೬-೩೦). **ಕಟಿಬಾಯಿ:** ಮೂಗು ಹಿಡಿದು ಅದರ ಕಟಬಾಯಿ ಕಿಸಿದು ತನ್ನ ಕೈಯಿಂದಲೇ ತುತ್ತು ತುರುಕು ವುದು (ನಡೆದಾ. II, ೮೮೮). **ಕಟವಾಯಿ** : ತುದಿನಾಲಗೆಯಿಂದಂ ಕಟವಾ ಯಿಗಳಂ ಸವರಿಕೊಳುತ್ತುಂ (ಭಾರಶಾಂ. ೮) ; ಕಟವಾಯಿಯೊಳು ಜೊಲ್ಲು (ನಾಡಪ. ೧೪) ; ಅವಳು ಕಟವಾಯಿಯಲ್ಲಿ ಜೊಲ್ಲು ಸುರಿಸುತ್ತಿರುವಾಗ ಹನುಮಪ್ಪ ಕೇಳಿದ್ದ (ಬೆಂದಜೀ. ೩೧). [ಕಟ್$_1$ + ಬಾಯ್]

**ಕಟಿವಾಯಿ** 'ಕಟವಾಯ್' ನೋ.

**ಕಟಿಳೆ** 'ಕಟ್ಟಳೆ$_1$' ನೋ.

**ಕಟಿಳೆವಟ** (ನಾ). ಒಂದು ಬಗೆಯ ವರಮಾನ, —ಆದಾಯ : ಯಿಾ ಗ್ರಾಮದ ಚತುಸ್ಸೀಮೆಗೆ ಸಲುವ . . . ದುಳಿರವಟ ಕಟಳೆವಟ ಏರಿ ಮಿಾನ ಬೆಲೆ ಸಂತೆ ಉಂಟಾದ ಹಲ ಉಪಾಧಿಗಳೂ ಸಹ ಸೇರ್‍ಸಿ ಕೊಟ್ಟೆವು (ಸೌಇಇ. IX-ii, ೪೬೩-೮; 1470). [ಕಟಳೆ (< ಕಟ್ಟಳೆ$_1$?) + ವಟ್ಟ$_3$ (< ವಟ್ಟ$_1$?)]

**ಕಟಾಂಜನ**, ಕಟಂಜನ (ನಾ). = ಕಟಕಟಿ ೧ : ಈ ಗಜಗಳ ಕಟಾಂಜ ನಕ್ಕೆ ನಾಲ್ಕೂ ದಿಕ್ಕಿಗೆ ಇರುವ ನಾಲ್ಕು ಬಾಗಿಲುಗಳಲ್ಲಿ ಒಂದನ್ನು ಮಾತ್ರ ಬೆಳಿಗ್ಗೂ ಸಂಜೆಗೂ ತೆರಿಯುತ್ತಾರೆ (ಮುಂಬಯಿ. ೬-೨೬) ; ಶಿನ್ನ ಭಡಕ್ಕನೆ ಎದ್ದು ಕಟಾಂಜನದೊಳಗಿಂದ ಹೊರಗೆ ನೋಡಿದ (ಮೂರುದಾ. ೧೬೫). **ಕಟಂಜನ** : ಬಳಸಿದ ಕಟಂಜನದೊಳಗಣ ವೇದಿಕೆಯ ಮೇಲೆ (ಬೆಟ್ಟಅ. ೧೦೫-೨೦). [← ಮರಾ. ಕಟಂಜನ್, ಕಟಾಂಜನ್, ಕಟೆಂಜನ್]

**ಕಟಾಕಟಿ** (ನಾ). ೧. ಸರ್ವಸಾಧಾರಣ; ಸರಿಸುಮಾರು : ರಾಮಟಂಕಿ ನಾಣ್ಯವು ಕಟಾಕಟಿ ನಾಲ್ಕು ತೊಲಿ ಇರುತ್ತಿತ್ತು (ಕಭಾಗೆ. ೨೮೦). ೨. ಅತಿ ಕಟ್ಟುನಿಟ್ಟಿನ (ತೂಕ); ಬರಾಬರಿ (ತೂಕ) : "ಒಂದು ತರದ ತೂಕ: (ಬಾಳ ಕಟಾಕಟಿ ತೂಕ) ಸಮತೂಕ" (ಜಾನಕೋ. ೩೨). [← ಮರಾ. ಕಟಾಕಟೀ]

**ಕಟಾಕ್ಷ** (ನಾ). ೧. ಕುಡಿನೋಟ ; ಓರೆನೋಟ ; ಕಡೆಗಣ್ಣಿನ ನೋಟ : ಕಾಂತೆಯರ್ ಬರೆ ಕಟಾಕ್ಷಮಂ ಚೆಲ್ಲುತುಂ (ನಂಬಿರ. ೧೦-೩); ಭ್ರೂಲತೆಯ ಬಿಲುಗಳ ಕಟಾಕ್ಷದ ಕೋಲ ಹೊದೆಗಳ ಬಾಸಗಳ ಕರವಾಳಿ ಗಳ (ಕುವ್ಯಾಅ. ೧೩-೩೪). ೨. ಕಣ್ಣಿನ ಕೊನೆ; ಅಪಾಂಗ : ಮಾನಿನಿಯ ಸಿರಿಮುಡಿಯ ಕಟ್ಟುವ ಸೂನ ಮುಡಿಸುವ ವರ ಕಟಾಕ್ಷಕೆ ಕಾಡಿಗೆಯನಿಡುವ (ಕುವ್ಯಾವಿ. ೧-೩೧). ೩. ಕೃಪಾದೃಷ್ಟಿ; ಅನು ಗ್ರಹ : ಮುರವೈರಿಯ ಕಟಾಕ್ಷದ ಕಾಹು ಘನವೆಂದ (ಕುವ್ಯಾದ್ರೋ. ೨-೬೪). ೪. [ನಾಟ್ಯ] ಶೃಂಗಾರವನ್ನು ಅಭಿನಯಿಸುವ ಒಂದು ದೃಷ್ಟಿ, —ನೋಟ : ಒದವಿದ ಕಣ್ಣಾಲಿಗಳತಿಮುದದಿಂದಂ ನೋಡಿ ನೋಡಿ ಮುರಳ್ದುಂ ತಿರುಗಲ್ ಉದಯಿಸುವಪಾಂಗಮದು ತಾಂ ಮದ ವಾರಣಗಮನೆ ಕೇಳ್ ಕಟಾಕ್ಷಮೆನಿಕ್ಕುಂ (ಲಾಸ್ಯರಂ. ೩-೧೧). [ಸಂ.]

**ಕಟಾಕ್ಷನಿರೀಕ್ಷಣ** (ನಾ). ೧. ಕಡೆಗಣ್ಣಿನಿಂದ ನೋಡುವುದು. ೨. [ಕಾಮಶಾ] ಸ್ತ್ರೀ ನೋಟಗಳಲ್ಲಿ ಒಂದು ಬಗೆ : ಅರೆ ಮಾತುಮ ನಾಲಿಸಲೊಲ್ಲಳು ನೋಟದೊಳಾರುಮನಾವಗಂ ಮಾರಬಾಣಂಗಳ ಕಾಟಕ್ಕಾ ನಾಟಲಿಯೆಂಬರುರೋಪನಂದಬ್ಬರದಿ ನಯದಿಂ ಕಡೆಗಣ್ಣೊ ಯಿವಿದೆಂದೆಱಿವಂತು ಪಂಕೇರುಹಾಸವಮಮಂ ಮುಳಿದಾ ಸ್ತ್ರೀ ನೋಡೆ ಕಟಾಕ್ಷನಿರೀಕ್ಷಣಂ (ಮದತಿ. ೧೧-೧೮) [ಕಟಾಕ್ಷ + ನಿರೀಕ್ಷಣ]

**ಕಟಾಕ್ಷಪಡೆ** (ಕ್ರಿ). ಕೃಪಾದೃಷ್ಟಿಯನ್ನು ಪಡೆ; ಅನುಗ್ರಹ ಹೊಂದು: ಅರಿದುದು ಕಪಿಸೇನೆ ಲಕ್ಷ್ಮಣ ವೀರಸಿರಿಯ ಕಟಾಕ್ಷಪಡೆದನು (ಕಾಶಿರಾ. ೩೬-೭೫). [ಕಟಾಕ್ಷ + ಪಡೆ$_1$]

**ಕಟಾಕ್ಷವಿಕ್ಷೇಪ** (ನಾ). ೧. (ಪ್ರೀತಿಯಿಂದ) ಕಣ್ಣಿನ ಕೊನೆಯಿಂದ ನೋಡುವುದು; ಅಪಾಂಗ ದೃಷ್ಟಿ : ಅಕೃಷ್ಣ ಸುಂದರ ಸುಂದರೀ ಕಟಾಕ್ಷ ವಿಕ್ಷೇಪನುಂ (ಶಾಂತಿಪು. ೧-೭೧ ವ) ; ಕರ್ಮಕ್ಷಯಂಗೆಯ್ದು ಮೋಕ್ಷ ಲಕ್ಷ್ಮೀ ಕಟಾಕ್ಷವಿಕ್ಷೇಪ ಲಕ್ಷಿತ ಸುಖಮಯ ಶರೀರನಾಗಿರ್ದಂ (ಅಜಿಪು. ೧೨-೪ ವ). ೨. ಕಡೆಗಣ್ಣಿನ ಅಲುಗಾಟದಿಂದ ಮಾಡುವ ಸಂಜ್ಞೆ : ತನ್ನ ನಾಲ್ವರ್ ತಮ್ಮಂದಿರ ಮುನಿದ ಮೊಗಮಂ ಕಂಡು ತನ್ನ ನುಡಿದ ನನ್ನಿಯ ಕೇಡಂ ಬಗೆದರೆಂದು ಕಟಾಕ್ಷವಿಕ್ಷೇಪದಿಂ ಬಾರಿಸೆ (ಪಂಪಭಾ. ೭-೮ ವ). [ಕಟಾಕ್ಷ + ವಿಕ್ಷೇಪ]

**ಕಟಾಕ್ಷವೀಕ್ಷಣ** (ನಾ). = ಕಟಾಕ್ಷವಿಕ್ಷೇಪ ೧ : ಕರ್ಣಿಯ್ದಿಲ ಬಾಸಿಗಂ ನಿಮಿರ್ವ ಪೋಲ್ ನಿರ್ಮಿದತ್ತು ಕಟಾಕ್ಷವೀಕ್ಷಣಂ (ಶಾಂತಿಪು. ೮-೮೬) ; ನೀಮುಂ ಧನ್ಯರ್ ; ಸ್ಮಿತಾ ಕಟಾಕ್ಷವೀಕ್ಷಣ ಪರಿಪೂತಗಾತ್ರರಲ್ತೆ ! (ರಾಮಾಶ್ವ. ೨೯-೯). [ಕಟಾಕ್ಷ + ವೀಕ್ಷಣ]

**ಕಟಾಕ್ಷಿಸು** (ಕ್ರಿ). ೧. ಕಡೆಗಣ್ಣಿನಿಂದ ನೋಡು ; ಓರೆನೋಟ ಬೀರು: ಅನೇಕ ಹೇತು ದೃಷ್ಟಾಂತಂಗಳಂ ತೋಱಿ ನುಡಿದ ದೈಪದಾಕ್ಷನಂ ಕಟಾಕ್ಷಿಸಿ ಪತಿಹಿತ ಶಿಖಾಮಣಿಯಪ್ಪ ರಕ್ತಾಕ್ಷನಿಂತೆಂದಂ (ಪಂಚತಂ. ೨೪೯-೧) ; ಲಕ್ಷ್ಮಣಂ ಕುಪಿತಮನಂ ಕಟಾಕ್ಷಿಸುವುದುಂ (ಪಂರಾಮಾ. ೭-೧೨೬). ೨. ಕಡೆಗಣಿಸು : ದೀಕ್ಷೆಗೆಯ್ದುಲದೇಕೆ ಭಂಗವೇನಾಯ್ತು ಕಟಾಕ್ಷಿಸಿ ನುಡಿದೆನೆ ನಿನ್ನಾ (ಭರತಕ. ೫೨-೧೭). [ಕಟಾಕ್ಷ + -ಇಸು$_3$]

**ಕಟಾಕ್ಷೇಕ್ಷಣ** (ನಾ). ಅನುಗ್ರಹ; ಕೃಪಾದೃಷ್ಟಿ: ಗುರು ಕಟಾಕ್ಷೇಕ್ಷಣದಿ ಮುನ್ನಿನ ಮರವೆಯೆಲ್ಲವು ಸರಿಯಲು (ಗಗತಾ. ೨-೨೩).
[ಕಟಾಕ್ಷ + ಈಕ್ಷಣ]

**ಕಟಾಟಂಕ** (ನಾ). ಅಗ್ನಿ (?) : ದೇವ ಸಂವರ್ತದ ಕಟಾಟಂಕದುರು ಕೋಪಭಾವದಿಂ ತೊಡವುಗಳ ತೊಡಕುಗಳನುಳಿದು ರಾಜೀವಾಕ್ಷಿ ತಿರೆ ಯೊಳೊರಗಿರ್ಪಳಾರೊಡನಿದನ್ನುಸುರದಲೆ ಮೌನವಿಡಿದು (ವೆಂಕಾರಾ. ೨-೬-೫). ℙ ಈ ಶಬ್ದ 'ಕಟಂಕಟ (= ಅಗ್ನಿ)' ಎಂಬುದರ ಅಪ ಲಿಖಿತವಿರಬಹುದು. [?]

**ಕಟಾಣ,** ಕಟಾಣಿ (ನಾ). ದ್ವಿದಳ ಧಾನ್ಯ : ಕಡಲಿ ಮುಂತಾದ ಕಟಾಣದ ಧಾನ್ಯಗಳಲ್ಲಿ (ಕೃಷಿಪ್ರ. ೬೯). **ಕಟಾಣಿ :** ವಟಾಣಿ ಮೊದಲಾದ ಕಟಾಣಿ ಜೀನಸುಗಳು ಕಡಲಿಯ ಧಾನ್ಯಗಳು ಇವುಗಳನ್ನು ಬೆಳೆಯಬಹುದು (ಕೃಷಿಪ್ರ. ೪೨). [← ಮರಾ. ಕಠಾಣ್, ಕಠಾನ್, ಕಾಠಣ್]

**ಕಟಾಣಿ** 'ಕಟಾಣ' ನೋ.

**ಕಟಾಯಿಸು** (ಕ್ರಿ). ೧. ಬೆಳೆಯನ್ನು ಕೊಯ್ಯಿಸು; ಕಟಾವು ಮಾಡಿಸು (ಕ). ೨. ಕತ್ತರಿಸು; ಕಡಮೆ ಮಾಡು: ತಲೆಯ ಚೆಂಗೂದಲನ್ನು ತೆಗೆಯಿಸಿ, ರೆಕ್ಕೆಗಳನ್ನು ಕಟಾಯಿಸದಿದ್ದರೆ, ನಾನು ಇವನನ್ನು ಹೆತ್ತವಳೇ ಅಲ್ಲ (ಕಲ್ಲಿಕಾ. ೫೩); ಅವನ ಒಂದು ದಿನದ ಸಂಬಳವನ್ನು ಕಟಾಯಿಸಿದರು (ರೂಢಿ). ೩. ಮುಗಿಸು (ಕ).

[ಕಟಾವು + –ಇಸು$_3$]

**ಕಟಾರ$_1$** 'ಕಡಾರ$_4$' ನೋ.

**ಕಟಾರ$_2$,** ಕಟಾರಿ, ಕಠಾರ, ಕಠಾರಿ, ಕಡಾರ$_3$, ಕಾಠಾರಿ (ನಾ). ಸರಳವಾದ, ಒಂದು ಹಸ್ತ ಉದ್ದದ ಕಿರುಗತ್ತಿ; ಬಾಕು; ಚೂರಿ: ಭಟ್ಟಗುತ್ತನ ಕಟಾರದ ವೊಲ್ (ಅನಂಪು. ೧೪–೨೦); ಮಿಸುಪ ರತ್ನಘಟಿತ ಕಟಾರಮಂ ಕಟ್ಟಿ (ಪಾರ್ಶ್ವಪು. ೧೨–೬ ವ); ವೈರಿಸಂಹಾರಮನೀ ಕಟಾರದೊಳೆ ಮಾಡುವೆನೆಂದನದಂತೆ ಮಾಡಿದ (ಎಕ. VII, ಹೊನ್ನಾಳಿ. ೫೫–೧೩ ; 1247) ; ಸಬಳ ಭಲ್ಲೆಯ ಕತ್ತಿ ಕಡಿದಾಬೆ ಕಟಾರ ಕೈಗತ್ತಿಗಳಿಂ (ಚಿಕವಂ. ೧೪–೭). **ಕಟಾರಿ :** ಅಸಿಯುಲಗಿಟ್ಟೆ ಕಕ್ಕಡೆ ಕಟಾರಿ ಸರಲ್ ಸಬಳಂಗಳೆಂಬಿವಂ ಮಸೆಯಿಪ (ಮಹಾನೀ. ೧೧–೩೧) ; ಕೊಡಲಿ ಕಟಾರಿ ಕಕ್ಕಡೆ ಕವಣೆಯ ಪಿಡಿದೊಡನೆಯ್ತುರುವ ಶಬರರ (ಕಾಮುಕ. ೪–೨೩) ; ಕಟಕರವನ ಕಟಾರಿಯನ್ನು ಕಂಡು ಕುರಿಗಳು ಭೀತಿಗ್ರಸ್ತವಾಗುವಂತೆ (ಕೃಷ್ಣಾಕು. ೧–೨೩). **ಕಠಾರ :** ಕೆಯ್ಯ ಪಲಗೆಯೊಳಂ ಕಟ್ಟಿದ ಕಠಾರದೊಳಂ ಪಿಡಿದ ಕೂರಸಿಯೊಳಮೆಯ್ದಿಸಿ ಪರಿದು (ಅಸಂಪು. ೧೧–೪೮ ವ); ನಿಶಿತ ಕಟಾಕ್ಷಮೆಂಬ ಶರಮಂ ನಖಮೆಂಬ ಕಠಾರಮಂ (ಬಾಧಪು. ೨–೬೧); ಹೊನ್ನ ಮೋಹರದ ಕಠಾರ ಬೆನ್ನ ಮೂಡಿಗೆಯ ಬಿಲ್ಲಾಳು ನಡೆದುದು (ಶ್ರೀಪಾಲ. ೧೩–೬೫) ; ಅವನ ಸತಿ ಕಠಾರವ ಭಿಕ್ಷವಿಕ್ಕೆ (ಗುರುಚಾ. ೨–೬). **ಕಠಾರಿ :** ಕೂರಸಿ ಕಠಾರಿಗಳನಲ್ಲಲ್ಲಿ ಗಳವಡಿಸಿ (ಇಹರ.ಹ. ೧೩೮–೪) ; ಹೊಸ ತಿರುವ ಕಟ್ಟುವ ಕಠಾರಿಯ ಮಸೆವ (ಕುವ್ಯಾಭೀ. ೫–೩೮) ; ಕಡಿಗತ್ತಿ ಚೂರಿಯು ಕಠಾರಿ ಗದೆ ಮುಖ್ಯ ಪೊನ್ನೊರೆಯಿಂದ ಉರೆ ಬೆಳಗುವ (ನವಮೋ. ೨೪–೫೬) ; ಅಧಿಕಾರಿಯು . . . ತನ್ನ ಕೈಯನ್ನು ಸೊಂಟದಲ್ಲಿದ್ದ ಕಠಾರಿಯ ಮೇಲಿಟ್ಟುದನ್ನು ಕಂಡನು (ಒಡೆಕ. ೨೩). **ಕಡಾರ$_3$ :** ಕಟಕಿಯ ಕಡಾರಂ ಕೊಯ್ದುದೆಂಬವನಂತೆ [ಪಾಠಾಂ. ಕಟರಕ್ಕೊಯ್ದಂತೆ] ಗೆಯ್ದು (ಲೀಲಾವ. ೨–೧೦೮ ವ) ; ಪೊಳೆವ ಚಲ್ಲಣಗಳಿಂ ನನೆಯ ಪಿಲ್ಲಣಿಗೆಯಿಂ ದಳವಡೆದ ಹೂವಿನ ಕಡಾರ ಖೇಟಕಗಳಿಂ (ಲಿಂಗಪು. ೩೨–೩೮). **ಕಾಠಾರಿ :** ಕಾಸಿ ಬಡಿದೇ ದಬ್ಬಣವು ಕಾಠಾರಿಯೆಂದೇ ಕರದ ಬಹುವಿಧದಿ ಮಬ್ಬುದೋಱದೆ ಅವನು ನೋಡಲು ಕಬ್ಬಿಣವು ತಾನೊಂದೆ (ಜ್ಞಾನಸಿಂ. ೬–೧೨).

[< ಸಂ. ಕಟ್ಟಾರ]

**ಕಟಾರಿ** 'ಕಟಾರ$_2$' ನೋ.

**ಕಟಾವು** (ನಾ). ಪೈರುಕೊಯ್ಯುವುದು ; ಕೊಯ್ಲು : ತೆನೆ ಬಲಿತು ಪೈರು ಕಟಾವಿಗೆ ಬಂದ ಮೇಲೆ ನೀರನ್ನು ನಿಲ್ಲಿಸಿ ಪೈರನ್ನು ಕೊಯ್ಯಬೇಕು (ವ್ಯವಮ. ೪೭) ; ಈ ವರ್ಷ ಅದು ಕಟಾವಿಗೆ ಬಂದಾಗಲೂ ಅದರಲ್ಲಿ ನೀರು ತುಂಬಿತ್ತು (ನಮ್ಮೂರ. ೧೮) ; ಸುಗ್ಗಿಯ ಬೆಳೆಯ ಕಟಾವು ಮುಗಿಯುತ್ತ ಬರುತಿತ್ತು (ರಕ್ತರೂ. ೪೧).

[← ಹಿಂ. ಕಟಾವ್, ಕಟಾಈ]

**ಕಟಾಹ** (ನಾ). ೧. ಕಡಾಯಿ ; ಕೊಪ್ಪರಿಗೆ : ತದ್ಗಿರಿತಟದೊಳ್ ಮುನ್ನೆ ಪೂಟ್ದ ಸುವರ್ಣ ಪೂರ್ಣ ಕಟಾಹಂಗಳಂ ತೋಱಿದಾಗಳ್ (ಆದಿಪು. ೫–೧೧ ವ) ; ಈ ಖಳನಂ ಕಟಾಹಪೂರಿತ ತಪ್ತತೈಲದೊಳ್ ಮುಳುಗಿಸೆನೆಲ್ (ಜೈಮಿಭಾ. ೧೧–೩೧). ೨. ಅರ್ಧಗೋಲ : ಮಂಡಿತೋರು ಜಟಾಚ್ಛಟಾ ಪ್ರೋದ್ದಂಡ ಹತಿಯಿಂದಂಬುರುಹ ಗರ್ಭಾಂಡ ಕೂಟ ಕಟಾಹವೊಡೆಯಲು (ಬಸಪು. ೧೭–೧೮). ೩. ಕೇರುವ ಮರ. ೪. ಮಿಲನ ; ಕೂಟ. ೫. ಸಾಮೀಪ್ಯ. ೬. ಸಮಯ ; ಅವಕಾಶ. ೭. ಸೋರೆಕಾಯಿ. ೮. ಆಮೆಯ ಚಿಪ್ಪು ; ಆಮೆ ಕವಡೆ. ೯. ಬಾವಿ. ೧೦. ನರಕ. ೧೧. ಕೊಂಬು ಹುಟ್ಟುತ್ತಿರುವ ಎಮ್ಮೆ ಅಥವಾ ಕೋಣ : "ಸಮಯಂ ಸಮೀಪ ಚಕ್ಕಳಮಿಳನುಂ ಸುಪಾತ್ರ ಸೊರೆಯೆಂ ಬಿವಕೆಯ್ದೆ ಕಟಾಹ ವಾಚಕಂ" (ನಾನಾರ. ೧೦೮). [ಸಂ.]

**ಕಟಿ$_1$** (ನಾ). ಗಟ್ಟಿ ; ಬಿರುಸು : ತಾಟನಲ್ಲಿ ಒಂದು ಕಟಿಯಾದ ಬಕ್ಕರಿಯಿತ್ತು (ವೀನಾದ. ೩) ; ಏನು ರೊಟ್ಟಿಯಿವು ? ಕಟಿಕಟಿ ಕಬ್ಬಿಣ (ರೂಢಿ).

[?]

**ಕಟಿ$_2$** (ನಾ). ೧. ಸೊಂಟ ; ನಡು : ಕಟಿ ಕಳಕಾಂಚಿಯಿಂದೆ ಕಳಕಾಂಚಿಯುಮಿಾ ಕಟಿಯಿಂ . . . ಅಲಂಕರಿಸಿರ್ದುವು (ಚಂದ್ರಪು. ೬–೬೭) ; ಗಳದೊಳ್ ತೋಳ ಮೊದಲ್ ಪಳಂಚೆ ಕಟಿಯೊಳ್ ವೃತ್ತೋರು ತಳ್ಪೊಯ್ಯೆ (ಅನಂಪು. ೭–೧೮) ; ಕುಮತಿಯಿಳಿದನು ಜಾನು ಕಟಿ ಹೃತ್ಕಮಲಗಳ ಮುಖ ಮೂರ್ಧಪರಿಯಂತಂ (ಕುವ್ಯಾಗ. ೩–೪೩) ; ಮಲ್ಲಗಚ್ಚೆಯ ಕಟಿಯ ಆ ಮಲೆಯ ಸಿಡಿಲಾಳ್ಗಳಂ ಮೆಚ್ಚಿ (ಶ್ರೀರಾಮಾ. ೨೯೧–೧೭೭). ೨. ಕುಂಡೆ ; ನಿತಂಬ : "ಆರೋಹಃ, ನಿತಂಬಃ, ಕಟೀ– ಈ ೩ ಕಟಿ" (ಹಲಾಯು. ೮೪–೩೫೮). [ಸಂ.]

**ಕಟಿಕ** 'ಕಡಿಕ$_2$' ನೋ.

**ಕಟಿಗ** 'ಕಡಿಕ$_2$' ನೋ.

**ಕಟಿಗಣ್ಮು** (ಅ). (ನಡೆಯುವಾಗ ಹಾವುಗೆಗಳ ಶಬ್ದವನ್ನು ಸೂಚಿಸುವ) ಒಂದು ಅನುಕರಣ ಅವ್ಯಯ : ಕಟಿಗಣ್ಮು ಝುಟಿಲೆಂದು ಪಾವುಗೆಗಳ ದನಿ ನಟಿಸಿ ಮೆಲ್ಲನೆ ಪಜ್ಜೆಯಿಡುವ ಪಟುಭಾವ ಪಸರಿಸೆ ವೀರಲಕ್ಷ್ಮಿಯ ರಾಯ ವಿಟ ನಡೆದನು (ಭರಚ. ೪–೪). [?]

**ಕಟಿಗೆ** 'ಕಟ್ಟಿಗೆ$_1$' ನೋ.

**ಕಟಿಚಲ್ಲಿ** (ನಾ). ಒಡ್ಯಾಣಕ್ಕೆ ತೆತ್ತಿಸಿರುವ ಸಣ್ಣದಾದ, ಗುಂಡಾದ ಕನ್ನಡಿ: ಇಟ್ಟಳಮಾಯ್ತುರಚಲ್ಲಿ ಕೊಂದು ಕೂಗಿತು ಕಟಿ [ಪಾಠಾಂ. ತಱಿ] ಚಲ್ಲಿ ಸೂಸಕದ ನೂಪುರದಬ್ಬರಮಾದುದಬ್ಬರಂ (ಕಾವ್ಯಾವ. ೬೧).

[ಕಟಿ$_2$ + ಚಲ್ಲಿ]

**ಕಟಿಜೀವ** (ನಾ). ಗಟ್ಟಿಯಾದ ಜೀವ ; ಕಷ್ಟಗಳಿಗೆ ಕುಗ್ಗದ ಜೀವ : ಈ ಜೀವ ಬಹಳ ಕಟಿಜೀವ ಅಂತ ಬದುಕಿದೆ (ಮುತ್ತೈದೆ. ೭).

[ಕಟಿ$_1$ + ಜೀವ]

**ಕಟಿತಟ** (ನಾ). ಸೊಂಟದ ಪ್ರದೇಶ : ಸ್ಫುಟವೈಶಾಖಸ್ಥಾನಂ ಕಟಿತಟವಿನ್ಯಸ್ತ ಹಸ್ತಯುಗನಾಗಿ (ಆದಿಪು. ೧–೪೫). [ಕಟಿ$_2$ + ತಟ$_3$]

**ಕಟಿದಘ್ನ** (ಗು). ನಡುಮುಟ್ಟ ಮುಳುಗುವ; ಸೊಂಟದವರೆಗೆ ಮುಳುಗುವ : ಪೆಣ್ಬಡೆ ನಿಂದುದು ಪೊಕ್ಕು ಜಾನದಘ್ನೋರುದಘ್ನ ಕಟಿದಘ್ನ ನಾಭಿದಘ್ನ ಸ್ಥಳದೊಳ್ (ಜಗವಿ. ೧೪–೯೫) ; ತರುಣಿಯರಿದೆ ಕಟಿದಘ್ನದ ಸುರಚಾಪ ತರಂಗಿಣೀ ಪ್ರವಾಹಾಂತರದೊಳ್ ಬರುತಿರ್ದಪರ್ (ಅನಂಪು. ೨–೩೮). [ಸಂ.]

**ಕಟಿನರ** (ನಾ). ಸೊಂಟದ ನರ : ಕಟಿನರದ, ಕಟಿನರಕ್ಕೆ ಸಂಬಂಧಪಟ್ಟ (Sciatic. ಇಂಕನಿ). [ಕಟಿ$_2$ + ನರ$_1$ (< ನರವು)]

**ಕಟಿಪಟಿ** 'ಕಟಿಪಟಿ' ನೋ.

**ಕಟಿಪಟ್ಟಿಕೆ** (ನಾ). ಸೊಂಟದ ಪಟ್ಟಿ; ಸೊಂಟಕ್ಕೆ ಕಟ್ಟಿಕೊಳ್ಳುವ ಬಟ್ಟೆಯ ಅಥವಾ ಚರ್ಮದ ಪಟ್ಟಿ: ಸಮುವಸ್ತ್ರ ಮತ್ತು ಕಟಿಪಟ್ಟಿಕೆಯನ್ನು ಧರಿಸಿದ ಚಕ್ರವರ್ತಿ (ಪುನರು. ೩೧). [ಕಟ$_2$ + ಪಟ್ಟಿಕೆ]

**ಕಟಿಪಿಟಿ** (ನಾ). ಬಾಯಿಜಗಳ: ಲಕ್ಷ್ಮೀದೇವಮ್ಮಗೂ ಅವಳಿಗೂ ಕಟಿಪಿಟಿ ಹತ್ತಿ ಕೈ ಕೈಯೂ ಆಯಿತು (ಸಂಸ್ಕಾರ. ೪೬). 'ಲಟಾಪಟಿ' ಪರಾ. [?. / ತುಳು. ಕಟಿಪಿಟಿ]

**ಕಟಿಬಂಧ** (ನಾ). ೧. ಉಡಿದಾರ; ನಡುಕಟ್ಟು. ೨. ಹವಾಮಾನದ ಮೇರೆಗೆ ವಿಂಗಡಿಸಲಾದ ಭೂವಲಯ (ಕ). [ಕಟ$_2$ + ಬಂಧ]

**ಕಟಿಭ್ರಾಂತಕರಣ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು: ಕಡೆಯೊಳ್ ಚತುರಸ್ರಮುಮಂ ಪಡೆದಿರೆ ಕಟಿಭ್ರಾಂತಕರಣಮೆಂದೆನಿಸಿರ್ಕುಂ (ಲಾಸ್ಯರಂ. ೪–೯೬). [ಕಟ$_2$ + ಭ್ರಾಂತ + ಕರಣ]

**ಕಟಿರೇಚಿತ** (ನಾ). [ನಾಟ್ಯ] ಸೊಂಟವನ್ನು ತಿರುಗಿಸುವ ಕ್ರಮ: ಉರುಕಟಿಯಂ ನಾನಾ ದೆಸೆಗಿರದೇ ತಿರುಪಲ್ಕೆ ಕಾಂತೆ ಕಟಿರೇಚಿತಮುಂ (ಲಾಸ್ಯರಂ. ೪–೨೧). [ಕಟ$_2$ + ರೇಚಿತ]

**ಕಟಿಲಿಂಗ** (ನಾ). [ಜೈನ] ರತ್ನತ್ರಯಗಳ ಸಂಕೇತವಾಗಿ ಸೊಂಟದಲ್ಲಿ ಕಟ್ಟುವ ಮೂರೆಳೆಯ ಮುಂಜಿಹುಲ್ಲಿನ ದಾರ: "ರತ್ನತ್ರಯ ಪರಿಕಲ್ಪಿತದಿಂ ತ್ರಿಗುಣಮಪ್ಪ ಮುಂಜಿಯಂ ತಾಳ್ದುದು ಕಟಿಲಿಂಗಂ" (ಚಾವುಂಪು. ೨೩೨). [ಕಟ$_2$ + ಲಿಂಗ]

**ಕಟಿಲ್ಲಕ** (ನಾ). "ಹಾಗಲಕಾಯಿ" (ಗಂಗಾಮ. ೬೫). [ಸಂ.]

**ಕಟಿವ** (ನಾ). ಸೊಂಟ: ಕಡಿಕಟಿವಮನುಡಿ ತೊಡೆಯಂ ನಡನಡ ನಡುಗುವಿನಮುಡಸಿ ತಡೆಯದೆ ಖಳನಂ ಪಿಡಿದುಡಿಯೆ (ವಡ್ಡಾರಾ. ೧೨೭–೫). [< ಕಟ$_2$]

**ಕಟಿವಸ್ತ್ರ** (ನಾ). ಸೊಂಟಕ್ಕೆ ಸುತ್ತಿಕೊಳ್ಳುವ ವಸ್ತ್ರ: ಪ್ರಭುಗಳು . . . ಹಳದಿಬಣ್ಣದ ಪಟ್ಟನ್ನುಟ್ಟು, ಮೇಲೆ ನೀಲಿಯ ಕಟಿವಸ್ತ್ರದಿಂದ ಅಲಂಕೃತರಾಗಿದ್ದಾರೆ (ಶಾಂತಲಾ. ೩೪). [ಕಟ$_2$ + ವಸ್ತ್ರ]

**ಕಟಿವಾತ** (ನಾ). ಸೊಂಟದ ನೋವು; ಟೊಂಕಶೂಲೆ (ಕ). [ಕಟ + ವಾತ]

**ಕಟಿವೃತ್ತ** (ನಾ). [ನಾಟ್ಯ] ನರ್ತನದಲ್ಲಿ ನಿಲ್ಲುವ ಒಂದು ರೀತಿ: "ಏಕಪಾದ ಕಟಿವೃತ್ತ [ಪಾಠಾಂ. ಕಟಿಯುವೃತ್ತಂ, ಕಲಿಯುಉತ್ತಂ] ತ್ರಿಭಂಗಿ ಬಾಗೆನಲು ನಿಲುಕಡೆಯಕ್ಕು" (ಮಂಗರಾ. ೨೫–೯). [ಕಟ$_2$ + ವೃತ್ತ]

**ಕಟಿಶಿರ** (ನಾ). ನಿತಂಬ: ಕಟಿಶಿರಮೂರುದ್ವಂದ್ವಂ ದಿಟದಿಂ ಪದಿಮೂಱು ತಾಣಮೊಪ್ಪುವ ಕೈಗಳ್ ನಟಿಪ ಕ್ಷೇತ್ರಂಗಳ್ (ಲಾಸ್ಯರಂ. ೪–೧೫). [ಕಟ$_2$ + ಶಿರ$_1$]

**ಕಟಿಶೀರ್ಷ** (ನಾ). ಸೊಂಟದ ಕೆಳಭಾಗ; ಕುಂಡೆಯ ಅಗ್ರಭಾಗ: "ಕಟಿಶೀರ್ಷ[ಪಾಠಾಂ. ಶಿರರ್ಷ]ಮೆನಲುವಾ ತುದಿಗುಂಡೆಯೆನಿಸಿಕ್ಕು" (ಮಂಗರಾ. ೯೮–೧೭). [ಕಟ$_2$ + ಶೀರ್ಷ]

**ಕಟಿಸಮಕರಣ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು: ನೆಗಳ್ದಾ ಕಟಿಯೇ ಬಾಗಲ್ ಮಿಗೆ ಮತ್ತೊಂದೆತ್ತಿ ತೋಱಿ ಬರಿಯಾಪರಿಯಂ ಸೊಗಯಿಸಿ ವೈಷ್ಣವತಾಣದೊಳೊಗೆದೆರಡುಂ ಮಯ್ಯೊಳಾಗೆ ಕಟಿಸಮಕರಣಂ (ಲಾಸ್ಯರಂ. ೪–೬೪). [ಕಟ$_2$ + ಸಮ + ಕರಣ]

**ಕಟಿಸಾನು** (ನಾ). ಕುಂಡೆ; ನಿತಂಬ: "ಕಟಿಸಾನು ಪ್ರೋಥಂ ಯುಗಂ ಕುಂಡೆಯಕ್ಕುಂ" (ಮಂಗರಾ. ೯೮–೧೭). [ಕಟ$_2$ + ಸಾನು]

**ಕಟಿಸೂತ್ರ** (ನಾ). ಒಡ್ಯಾಣ; ಡಾಬು; ಕಾಂಚೀದಾಮ; ಉಡಿದಾರ: ನಿತಂಬದ ಬಿಣ್ಪನೊಳೇವುದಕ್ಕ ಪೋ ಬಿಡು ಕಟಿಸೂತ್ರಮಂ (ಪಂಪಭಾ. ೩–೪೭); ಮರಕತ ಮಣಿ, ಪದ್ಮರಾಗ ಶೋಭಿತ ಕಟಿಸೂತ್ರವನ್ನು ಆ ಮೇಖಲೆಗೆ ಜೋಡಿಸಿದರು (ಶಾಂತಲಾ. ೧೧೪). [ಕಟ$_2$ + ಸೂತ್ರ]

**ಕಟಿಸ್ನಾನ** (ನಾ). "ಟೊಂಕದ ವರೆಗೂ ತೊಟ್ಟಿಯ ನೀರಿನಲ್ಲಿ ಕುಳಿತು ಮಾಡುವ ಸ್ನಾನ ಚಿಕಿತ್ಸೆ: ಕಟಿಸ್ನಾನ; ಈ ಸ್ನಾನದ ತೊಟ್ಟಿ" (Hip-bath. ಇಂಕನಿ). [ಕಟ$_2$ + ಸ್ನಾನ]

**ಕಟಿಹಸ್ತ** (ಗು). ಸೊಂಟದ ಮೇಲೆ ಕೈಗಳನ್ನಿಟ್ಟುಕೊಂಡ: ಕಟಿಹಸ್ತನಾದ ವಿಠ್ಠಲನು ಎರಡು ಸಣ್ಣ ಚೀಲಗಳನ್ನು ಹಿಡಿದಿರುವನು (ಹೊಯ್ಸಳವಾ. ೧೩೬). [ಕಟ$_2$ + ಹಸ್ತ]

**ಕಟೀರ** (ನಾ). ಕುಂಡೆಯ ಮೇಲ್ಭಾಗ; ತಿಕ: "ಕಟೀರಮೆನೆ ತಿಗಮಕ್ಕು" (ಮಂಗರಾ. ೯೮–೧೬). [ಸಂ.]

**ಕಟು**$_1$ (ನಾ). ಒಂದು ಬಗೆಯ ತೆರಿಗೆ: ಸುಂಕ ಸಾ(ಂ)ಮ್ಯ ಕಟು ತಳವಾಜಿಕೆ (ಸೌಇಇ. IX-ii, ೪೯೩–೩೬; 1513). [?]

**ಕಟು**$_2$ (ಗು). ೧. ತೀಕ್ಷ್ಣವಾದ; ಖಾರವಾದ: ಮಧು ಸೀತುಂ ಕಟು ಸೀದು ಪೋ ಪುಳಿತ ಕಳ್ಳಲ್ತುಂ (ಪಂಪಭಾ. ೪–೮೮). ೨. ತೀವ್ರವಾದ; ಉಗ್ರವಾದ: ವಕೀಲ ಸರ್ಕಾರಿವಕೀಲನನ್ನು ಕಟುವಾಗಿ ಟೀಕಿಸಿದನು (ಪುನರು. ೯೫). ೩. ರಭಸದ; ಆವೇಶದ. ೪. ಕಹಿಯಾದ. ೫. ಹೊಂದದ; ಸರಿಬೀಳದ. (ನಾ). ೬. ಅನುಚಿತ ಕೆಲಸ. ೭. ಒಂದು ಬಗೆಯ ಔಷಧಿ ಗಿಡ. [ಸಂ.]

**ಕಟುಂಬಣ** 'ಕಟ್ಟುಂಬಣ' ನೋ.

**ಕಟುಕ**$_1$ 'ಕಡಿಕ$_2$' ನೋ.

**ಕಟುಕ**$_2$ 'ಕಟ್ಟುಕ' ನೋ.

**ಕಟುಕ**$_3$ (ಗು). ೧. ತೀವ್ರವಾದ; ಉಷ್ಣದಿಂದ ಕೂಡಿದ: ಇಂತೆಸೆವ ಕಟುಕ ಬೇಸಗೆಯೊಳಗೆ ಧರಣಿಜಾಕಾಂತ ತರುನೆಳಲನಾಶ್ರೈಸಿ ಬರುತಲಿರೆ (ವೆಂಕಾರಾ. ૩–૬–૨). ೨. ಅಸಹ್ಯವಾದ: ಈ ಮುನಿ ಜಲಕ್ರೀಡಾ ವಿನೋದಕ್ಕೆ ವಿಘ್ನಕಾರಿಯಾದನಿದಕ್ಕೆ ತಕ್ಕುದಂ ಮಾಡುವೆನೆಂದು ವಾರುವಂಗೆ ಕೂಡಿದ ಕಟುಕ ಕವಳಮಂ ಕೈಯೊಳಿಕ್ಕುವುದುಂ (ಪುಣ್ಯಾಸ್ರ. ೮–೨೮ ವ). [ಸಂ.]

**ಕಟುಕತನ** (ನಾ). ಕ್ರೂರತನ; ನಿರ್ದಯತೆ: ಅವನ ಕಟುಕತನ ದಿನ ದಿನಕ್ಕೂ ಜಾಸ್ತಿಯಾಗ್ತಾ ಇದೆ (ರೂಢಿ). [ಕಟುಕ$_1$ (< ಕಡಿಕ$_2$) + -ತನ]

**ಕಟುಕತ್ರಯ** (ನಾ). ಶುಂಠಿ, ಮೆಣಸು, ಹಿಪ್ಪಲಿ ಈ ಮೂರರ ಮಿಶ್ರಣ: ಕಟುಕತ್ರಯದಿಂದಲ್ಲದೆ ಮಧುರಪ್ರಯೋಗದಿಂ ಕಫಮನಾವ ನುಪಶಮಿಯಿಸಿದಂ (ಪಾರ್ಶ್ವಪು. ೨–೪೨). [ಕಟುಕ$_3$ + ತ್ರಯ]

**ಕಟುಕರೋಹಿಣಿ** (ನಾ). ಒಂದು ಬಗೆಯ ಔಷಧಿ ಗಿಡ: "ಕಟುಃ, ಕಟುಂಬರಾ, ಶೋಕರೋಹಿಣಿ, ಕಟುರೋಹಿಣಿ, ಈ ೪ ಕಟುಕರೋಹಿಣಿ" (ನಾಚಿರಾ. ೧೦೯); ನೆಲಬೇವು ಮುಸ್ತೆ ಪರ್ವಾಟಕದಿಂ ಕುದಿದಿಳುಪಿ ಕಟುಕರೋಹಿಣಿಯದಱೊಳಗಿರೆ (ಕಲ್ಯಾಕಾ. ૩–૩૨). [ಸಂ.]

**ಕಟುಕಲು** (ನಾ). ಮೃದುವಾಗಿಲ್ಲದಿರುವುದು; ಗಟ್ಟಿಯಾದದ್ದು; ಬಿರುಸು: ಈ ಕೋಡುಬಳೆ ಕಟುಕಲಾಗಿದೆ (ರೂಢಿ). [?]

**ಕಟುಕು**$_1$ 'ಕುಟುಕು$_1$' ನೋ.

**ಕಟುಕು**$_2$ 'ಕಡಿಕು$_2$' ನೋ.

**ಕಟುಕು**$_3$ 'ಕಡುಕು$_3$' ನೋ.

**ಕಟುಕು**$_4$, **ಕಟಕು**$_2$, **ಕಟುಗ**$_1$ (ಗು). ಒಣಗಿ ಅಥವಾ ಸುಟ್ಟು ಬಿರುಸಾದ, —ಗಟ್ಟಿಯಾದ: ಕಟುಕುರೊಟ್ಟಿ, ಗುಟುಕುನೀರು (ರೂಢಿ). **ಕಟಕು**$_2$: ಕಟಕುರೊಟ್ಟಿ ಮೆಣಸ್ಹಿಂಡಿ ತಿಂದು ಮೇಲೊಂದು ಗುಟುಕು ನೀರು (ನೆಲಮು. ೩೫). **ಕಟುಗ**$_1$: ಹಿಂದಿನ ದಿವಸದ ಕಟುಗರೊಟ್ಟಿ, ಅರೆಗೂಳನ್ನು ನೆನಿಸಿದರೆ ನನಗೆ ಇದು ಇಂದ್ರಭೋಗವೆಂದು ಎನಿಸಿತು (ಮೇದಿಮ. ૩૮). [?]

**ಕಟುಕೊಡಗಿ** ‘ಕಟ್ಟುಗೊಡಗೆ’ ನೋ.

**ಕಟುಕೊಡಿಗೆ** ‘ಕಟ್ಟುಗೊಡಗೆ’ ನೋ.

**ಕಟು[ಟ]ಕೋಜ** (ನಾ). ಒಂದು ಬಿರುದು: ಕಟು[ಟ]ಕೋಜಂ ಬೆಸಗೆಯ್ದು (ಎಕ. VIII, ಸೊರಬ. ೬೧–೧೮; 1032). [ಕಟಕ್$_3$ + ಓಜ$_1$ (< ಒವಝು)]

**ಕಟುಗ$_1$** ‘ಕಟುಕು$_4$’ ನೋ.

**ಕಟುಗ$_2$** ‘ಕಡಿಕ$_2$’ ನೋ.

**ಕಟುಗ$_3$** (ಗು). ಕ್ರೂರವಾದ; ನಿರ್ದಯವಾದ: ಕಲ್ಲುಮನಸ್ಸಿನ ಈ ಕಟುಗದೇವರು ನಿನ್ನ ಮೇಲಣ ವ್ಯಾಮೋಹದಿಂದ ಪರಂಧಾಮವನ್ನು ಹೊಂದಲಿ (ಶ್ರೀರಾಪ. ೨೯). [< ಕಟುಗ$_2$]

**ಕಟುಗೂಳು** ‘ಕಟ್ಟುಗೂಳು$_2$’ ನೋ.

**ಕಟುಗೊಡಗಿ** ‘ಕಟ್ಟುಗೊಡಗೆ’ ನೋ.

**ಕಟುಗೊರಲು** (ನಾ). ಬಿರುಸಾದ ಧ್ವನಿ; ಕಠೋರವಾದ ಸ್ವರ: (ಕಟುಗೊರಲಲ್ಲಿ) ಕರೆದ ದನಿ ಕೇಳಿಸದೆ! (ನಡೆದಾ. I, ೪೪೯). [ಕಟ್ಟು$_2$ + ಕೊರಲು (< ಕೊರಲ್)]

**ಕಟುತುಂಬಿ** (ನಾ). ಕಹಿಸೋರೆ; “ಹಾ ಲು ಗುಂ ಬ ಳ ಕಾ ಯಿ” (ಗಂಗಾಮ. ೬೫). [ಸಂ. ಕಟುತುಂಬೀ]

**ಕಟುತೆ** (ನಾ). ಬಿರುಸುತನ; ಉಗ್ರತೆ; ಕರ್ಕಶತೆ: ಹಟವಾದಕೆಡೆಯೆಲ್ಲಿ ಮನುಜ ಪ್ರಪಂಚದಲಿ . . . ಕಟುತೆ ಸಲ್ಲದು ಜಗಕೆ (ಮಂಕುಕ. ೨೯೯). [ಸಂ. ಕಟುತಾ]

**ಕಟುತ್ರಯ** (ನಾ). ಶುಂಠಿ, ಮೆಣಸು, ಹಿಪ್ಪಲಿ ಈ ಮೂರರ ಮಿಶ್ರಣ: ಗಿರಿಕರ್ಣಿಕೆ ಕಟುತ್ರಯಮರಿಸಿನಮುತ್ತರಣೆಯೆಕ್ಕೆ ಮಧುವೆಂಬಿವರಿಂ ವಿರಚಿಸಿದ ಗುಳಿಗೆಯಂ ಕೊಂಡರೆದೆ ಚ್ಚುಗೆ ನಯನದೊಳ್ ವಿಷೂಚಿಕೆ ಕಿಡುಗುಂ (ಲೋಕೋಪ. ೯–೧೨೨). [ಕಟ್ಟು$_2$ + ತ್ರಯ]

**ಕಟುತ್ವ** (ನಾ). ೧. ಖಾರವಾಗಿರುವಿಕೆ; ಖಾರ: ಧರಣೀನಂದನನಿಂ ಸಕಂಟಕ ಕಟುತ್ವಂ ಸೌಮ್ಯನಿಂ ನಿಷ್ಫಲಂ . . . ತತ್ತರುವಿಂಗೆ ಪೂರ್ವಗದಿತ ಸ್ಥಾ ನ ಸ್ಥ ರಾ ದಂ ದ ವ ರ್ (ಜಾತಕಿ. ೫–೧೧). ೨. ಉಗ್ರತೆ; ತೀಕ್ಷ್ಣತೆ. ೩. ಅಪ್ರಿಯತೆ. [ಸಂ.]

**ಕಟುನುಡಿ** (ನಾ). ೧. ಬಿರುಸಾದ ಮಾತು; ನಿಷ್ಠುರವಾದ ಮಾತು: ಅತ್ತಿಗೆಯ ಕಟುನುಡಿಗಳಿಗೂ ಅಧಿಕಾರದರ್ಪಕ್ಕೂ ಹೆದರಿ, ಅವಮಾನವನ್ನು ಹೊಂದಿದ ವೆಂಕಪ್ಪ . . . ತಿರುಪತಿಗೆ ತೆರಳಿದನು (ಜಗದಾ. ೧೩೩). ೨. ಕಹಿಯಾದ ಅಥವಾ ಅಪ್ರಿಯವಾದ ಮಾತು: ದುರ್ಯೋಧನನು ಕೃಷ್ಣನಿಗೆ ಕೊಟ್ಟ ಒರಟು ಉತ್ತರದ ಕೊನೆಗೆ . . . ಸ್ವಭಾವದ್ಯೋತಕವಾದ ಕಟುನುಡಿಗಳಿವೆ (ತವನಿ. ೭೦). [ಕಟ್ಟು$_2$ + ನುಡಿ$_2$]

**ಕಟುಭಾಷೆ** (ನಾ). = ಕಟುನುಡಿ ೧: ಆ ದ್ರೋಹಿಯು . . . ಅದಕ್ಕಿಂತ ಕಟುಭಾಷೆಯನ್ನು ಕೇಳಬೇಕಾಯಿತು (ಕಗದ್ಯ. II, ೨೯). [ಕಟ್ಟು$_2$+ ಭಾಷೆ]

**ಕಟುಮಧುರ** (ನಾ). ಕಹಿಯಾಗಿದ್ದೂ ಸಿಹಿಯಾಗಿರುವುದು: ಸಖಿ! ನಮ್ಮ ಸಖ್ಯದ ಆಖ್ಯಾನ ಕಟು–ಮಧುರ ವ್ಯಾಖ್ಯಾನದೊಡಗೂಡಿ ವಿವರಿಸಲೇ (ಸಖೀಗೀ. ೧–೧). [ಕಟ್ಟು$_2$+ ಮಧುರ]

**ಕಟುಮುಖವಾದಿತ್ರ** (ನಾ). ಒಂದು ಬಗೆಯ ವಾದ್ಯ: ನಂದಿಘೋಷವರ್ಮನನ್ನು ಹೊಡೆದಟ್ಟಿ ಕಟುಮುಖವಾದಿತ್ರ, ಸಮುದ್ರಘೋಷ ಮೊದಲಾದ ವಾದ್ಯವಿಶೇಷಗಳನ್ನೂ . . . ಸ್ವಾಧೀನಪಡಿಸಿಕೊಂಡನು (ಕರ್ಣಾಅ. ೯೦). [ಕಟುಮುಖ ? + ವಾದಿತ್ರ]

**ಕಟುರ** ‘ಕಟೋರ$_1$’ ನೋ.

**ಕಟುರೋಹಿಣಿ** (ನಾ). ಒಂದು ಬಗೆಯ ಔಷಧಿ ಗಿಡ: “ಕಟುಕಾಃ–ಕಟುರೋಹಿಣೀ” (ಒಷಧಿ. ೨೩). [ಸಂ. ಕಟುರೋಹಿಣೀ]

**ಕಟುವಿಪಾಕ** (ನಾ). ೧. ಕಹಿಯಾದ ಪರಿಣಾಮ. ೨. ಕಹಿಯಾದ ಪರಿಣಾಮವನ್ನುಂಟುಮಾಡುವಂತಹುದು. ೩. ಪಚನಕ್ರಿಯೆಯಲ್ಲಿ ಉಂಟಾಗುವ ರಸಗಳ ಪರಿವರ್ತನೆ: ಕಟುವಿಪಾಕವು ಲಘುವೂ ರೂಕ್ಷವೂ ಆಗಿರುವುದರಿಂದ ಮಲಬಂಧಕವಾಗಿಯೂ ಶೋಷಕವಾಗಿಯೂ ಶುಕ್ರವನ್ನೂ ದೃಷ್ಟಿಶಕ್ತಿಯನ್ನೂ ಕಡಿಮೆ ಮಾಡುವುದು (ಭೀಮಸೂ. ೫೪). [ಕಟ್ಟು$_2$ + ವಿಪಾಕ]

**ಕಟುವಿಪಾಕೆ** (ನಾ). ಕಹಿಯಾದ ಪರಿಣಾಮವನ್ನುಂಟುಮಾಡುವವಳು; ಅಪ್ರಿಯವಾದ ಪರಿಣಾಮವನ್ನುಂಟುಮಾಡುವವಳು: ಅಮರ್ದಿನೊಡವುಟ್ಟಿಯುಂ ಕಟುವಿಪಾಕೆಯುಂ (ಕಾದಂಪೂ. ೫೫೦). [ಸಂ. ಕಟುವಿಪಾಕಾ (ಕಟು + ವಿಪಾಕ + –)]

**ಕಟುವಿಷ** (ನಾ). ೧. ತೀವ್ರವಾದ ವಿಷ; ಉಗ್ರವಿಷ: ಸೌಂದರ್ಯವೆಂಬ ಕಟುವಿಷವೆ ಪೀಯೂಷವೇ! (ಕೃಷ್ಣಾಕು. ೨–೭). ೨. ವತ್ಸನಾಭಿ ಎಂಬ ಒಂದು ಬಗೆಯ ಸಸ್ಯ: ಕಟುವಿಷ, ಸೀಮೆನಾಭಿಗಿಡ (ಮೈಔಗಿ. ೨–೩೦). [ಕಟ್ಟು$_2$ + ವಿಷ]

**ಕಟೂಕ್ತಿ** (ನಾ). ಬಿರುಸಾದ ಮಾತು; ನಿಷ್ಠುರವಾದ ಮಾತು: ನಾಸ್ತಿಕತೆಯ ಕಟೂಕ್ತಿಗಳಿಂದ ತನ್ನ ಹೃದಯವನ್ನು ನೋಯಿಸಬೇಡವೆಂದು ಅಂಗಲಾಚಿ ಬೇಡುವಂತಿತ್ತು ಆ ನೋಟ (ತಾಯಿ. ೮೬); ಕಟೂಕ್ತಿಗಳನಾಡಿ ಅದರ ಫಲವಾಗಿ ಸಪರಿವಾರವಾಗಿ ಅವರಿಂದ ಹಿಡಿಯಲ್ಪಟ್ಟು . . . ಮುಸಲ್ಮಾನನಾಗಬೇಕಾಯಿತು (ಕಪಾಕುಂ. ೩೪). [ಕಟ್ಟು$_2$ + ಉಕ್ತಿ]

**ಕಟೆ** ‘ಕಡೆ$_1$’ ನೋ.

**ಕಟೋರ$_1$**, ಕಟುರ (ಗು). ಬಿರುಸಾದ; ಉಗ್ರವಾದ: “ಕಠೋರ–ಕಟೋರ” (ಶಮುದ. ೨೫೫ ಪ್ರಯೋ). **ಕಟುರ**: “ಉದ್ಯೋಗ–ಉಜ್ಜುಗ; ಕಠೋರ–ಕಟುರ” (ಶಮುದ. ೨೭೩ ಪ್ರಯೋ).
[< ಸಂ. ಕಠೋರ. / ತುಳು. ಕಟುರ, ಕಟೂರ, ಕಟೋರ, ಕಠೋರ; ತೆಲು. ಕಠೋರ]

**ಕಟೋರ$_2$** (ನಾ). ಅಗಲವಾದ ಬಾಯುಳ್ಳ ಬಟ್ಟಲು; ಮರದಿಂದಾಗಲಿ, ಲೋಹದಿಂದಾಗಲಿ ಮಾಡಿದ ಅಗಲವಾದ ಪಾತ್ರೆ; ದ್ರೋಣ; ಬೋಗುಣಿ (೬).
[ಸಂ. ಕಟೋರಾ. / ಹಿಂ. ಮರಾ. ಕಟೋರಾ, ಕಟೋರೀ]

**ಕಟ್ಟೆ$_1$** (ನಾ). ಸ್ನಾನಮಾಡುವ ಸ್ಥಳ; ಸ್ನಾನಘಟ್ಟ: ಸೆಟ್ಟಿಯ ಕಟ್ಟದಿಂ ಕೆಳಗೆ (ಸೌಇಇ. IX–i, ೯೫–೫೨; 1041); ಮಾಣಿಕಸೆಟ್ಟಿಯ ಕಟ್ಟದ ಕೆಳಗೆ ಗಟ್ಟಿದ್ದ ಮತ್ತರೊಂದು (ಸೌಇಇ. IX–i, ೧೦೭–೧೩; 1050); ಕೆಱೆಯೊಳಗಣ ಕೇದಗೆಯ ಕಟ್ಟದ ಮೊದಲೇರಿಯಲ್ಲಿ ಆ ಕಟ್ಟಕೆ ಬಿಟ್ಟ ಗದ್ದೆ ಮುಂನೂಱು (ಸೌಇಇ. IX–i, ೨೦೫–೨೨; 1122). ‘ಗಟ್ಟ’ ಪರಾ. [< ಸಂ. ಘಟ್ಟ. / ತಮಿ. ಕಟ್ಟ]

**ಕಟ್ಟೆ$_2$** (ನಾ). ಕಷ್ಟ; ತೊಂದರೆ: “ಕಷ್ಟ–ಕಟ್ಟ; ಗೋಷ್ಠಿ–ಗೊಟ್ಟಿ” (ಶಮುದ. ೨೮೩ ಪ್ರಯೋ); ಕಷ್ಟ, ಕಟ್ಟ (ಶಬ್ದಾನು. ೧೬೦ ಪ್ರಯೋ).
[< ಸಂ. ಕಷ್ಟ. / ತಮಿ. ತುಳು. ಕಟ್ಟ, ಕಷ್ಟ; ತೆಲು. ಕಷ್ಟ]

**ಕಟ್ಟೆಅವೆ** (ನಾ). ಒಂದು ಬಗೆಯ ರೋಗ: ಮುಂಡಗಳ್ಳಿಯ ಹಾಲಿನಲ್ಲಿ ಕಕ್ಕೆಹಣ್ಣಿನ ಭಾವನೆಯಂ ಕೊಟ್ಟು ಬೆಲ್ಲವಂ ಕೂಡಿಸಿ, ಹೊಟ್ಟು ತೆಗೆದ ಕಡಲೆಯಷ್ಟು ಗುಳಿಗೆಯಂ ಮಾಡಿ ೧ ಗುಳಿಗೆಯಂ ತುಪ್ಪದಿಂ ಸೇವಿಸೆ ಕಟ್ಟೆ ಅವೆ, ಜಲಗರ, ಶೋಭೆ, ಉದರದೋಷ ಸಹ ಗುಣಮಕ್ಕುಂ (ಸಕವೈ. I, ೩೬೮). [?]

**ಕಟ್ಟಂಕ** (ನಾ). ೧. ತೀವ್ರವಾದ ಯುದ್ಧ ; ಬಿರುಸಾದ ಕಾಳಗ (?). ೨. ಮಿಗಿಲಾದ ವೀರ; ಕಡುಗಲಿ; ಮಲ್ಲ: ಕಟ್ಟಂಕ, ಮಾಜಂಕ (ಶಮದ. ೨೯೮ ಪ್ರಯೋ). 'ಕಟ್ಟಂಕದಲ್ಲಣ' ಪರಾ. [< ಕಡಿದು + ಅಂಕ$_2$]

**ಕಟ್ಟಂಕದಲ್ಲಣ** (ನಾ). ಮಿಗಿಲಾದ ಶೂರರನ್ನು ತಲ್ಲಣಗೊಳಿಸುವವನು; ವೀರಾಧಿವೀರ; ಒಂದು ಬಿರುದು: ಕಟ್ಟಂಕದಲ್ಲಣಂ; ಪೂಮಾಲೆದುಱುಂಬು (ಶಮದ. ೨೯೯ ಪ್ರಯೋ). [ಕಟ್ಟಂಕ + ತಲ್ಲಣ]

**ಕಟ್ಟಂಗಾಲುವೆ** (ನಾ). ಕಟ್ಟಿದ ಕಾಲುವೆ (?): ಮೂಡಣ ಹೊಲದಲು ಕಟ್ಟಂಗಾಲುವೆ ಬಡಗಲು ಮಧ್ಯ ಕಡಿಲುಕರಂಭ (ಕಇಅ. ೪೬–೪–೧೮ ; 1152). [ಕಟ್ಟು ? + ಕಾಲುವೆ (< ಕಾಲ್ವಾಯ್)]

**ಕಟ್ಟಂದ** (ನಾ). ಅತಿಶಯವಾದ ಅಂದ ; ಅಧಿಕವಾದ ಸೌಂದರ್ಯ: ಕಟ್ಟಂದದಿಂ ಬಿಟ್ಟಗಣ್ಣ ಬಿಡಪೆಂಡಿರನಂಡಲೆವ ಸಿಂಗರದ ಬೆಲೆವೆಣ್ಗಳವಂಗಡಮುಂ (ಚಿಕವಂ. ೭೩–೧೮). [< ಕಡಿದು + ಅಂದ]

**ಕಟ್ಟಂಬಕಳ** (ನಾ). ಅಂಬಲಿಗೆ ಮಜ್ಜಿಗೆಯನ್ನು ಸೇರಿಸಿ ಮಾಡುವ ಒಂದು ಬಗೆಯ ಗಂಜಿ: ಮಾದರ ಚೆನ್ನಯಂ ಕಟ್ಟಂಬಕಳಮಂ . . . ಆರೋಗಿಸಿದನೆಂಬರು (ಬಸವು. ೩೩–೧೬). [< ಕಡಿದು + ಅಂಬಕಳ]

**ಕಟ್ಟಂಬರ** (ನಾ). ಒತ್ತಾಯ; ಸಡಗರ (?): ಕರಸುತ್ತ ಖಿಳರನಾಗಳ್ದೊರೆಮಗಳಾಯಾಯಕಾರ್ಯದು ಚಿತಜ್ಞರನಂದುರವಣೆಯನೆಯ್ದೆ ಕಟ್ಟಂಬರದಿಂ ಮಾಡಲ್ಕೆ ಬಂದಂತೆಸಗಿದರವರ್ಗಳ್ (ಹಾಲಾಸ್ಯ. ೬–೭). [?]

**ಕಟ್ಟಂಬಲಿ** (ನಾ). (ಜೋಳದ) ನುಚ್ಚಿನಿಂದ ಮಾಡುವ ಮಂದವಾದ ಅಂಬಲಿ ; "ಹುಳಿನುಚ್ಚು" (ಜಾನಕೋ. ೩೨) ; "ಹುಳಿಯಂಬಲಿ" (ಗಂಗಾಮು. ೬೫). [< ಕಡಿದು + ಅಂಬಲಿ$_1$]

**ಕಟ್ಟಂಬು** (ನಾ). ಬಿರುಸಾದ ಬಾಣ (?): ಸಂಘಟ್ಟನೆಯೊಱು ಕಟ್ಟಂಬಕಲಿಯ ತಾಗಿದ (ಇಎ. ೧೯೫೦, ಹಾನಗಲ್. ೭೫–೭ ; ?). [< ಕಡಿದು + ಅಂಬು$_2$]

**ಕಟ್ಟಕಡುಹು** (ನಾ). ಅತಿಶಯವಾದ ತೀವ್ರತೆ, —ರಭಸ, —ಜೋರು: ದಿಟ್ಟತನದಲಿ ಕಳನ ಕೊಯ್ಕೆ, ಕಟ್ಟಕಡುಹಿನ್ ಪಗೆಯ ಪೊಯ್ಕೆ (ಪಾರಸಿ. ೬–೧೩೪). [< ಕಡುಹು + ಕಡುಹು]

**ಕಟ್ಟಕಡೆ** (ನಾ). ತೀರಕೊನೆ, —ಅಂತ್ಯ: ತಟ್ಟತಳದೊಳು ಕಟ್ಟಕಡೆಯಲಿ ದುಟ್ಟನೀ ತೆಱದಿಂದೆ ಎಕ್ಕಲನಾಗಿರಲು ಕಂಡು (ಸಾನಂಚ. ೮–೨೧) ; ಕಟ್ಟಕಡೆಯ ಪೆರ್ವಟ್ಟೆ ಕರಂ ಗೆಂಟುಂ (ಶಮದ. ೧೯೩ ಪ್ರಯೋ) ; ಶೋಭನವಹುದಿಂದ್ರಪದವಿಯಹುದು ಮೋಕ್ಷಲಾಭವಹುದು ಕಟ್ಟಕಡೆಗೆ (ಭರಚ. ೧–೧೨) ; ಕರ್ಕಾಟಕರಾಶಿಯೇ ಪ್ರಕಾಶದಲ್ಲಿ ಕಟ್ಟಕಡೆಯಾದುದು (ಜ್ಯೋತಿರ್ವಿ. ೪೦) ; ಕಟ್ಟಕಡೆಯಲಿ ಮೇಯದೀರು ಬೆಟ್ಟದೊತ್ತಿಗೆ ಹೋಗದೀರು (ಗೋಹಾಡು. ೭೧). [ಕಟ್ಟು$_0$ + ಕಡೆ$_3$]

**ಕಟ್ಟಕರ್ಜನ** (ನಾ). ಒಬ್ಬಾತನ ಹೆಸರು: ಕಟ್ಟಕರ್ಜ್ಜನನ ಶಿಲಾಕರ್ಮ್ಮ (ಎಕ. VII, ಶಿಕಾರಿ. ೩೦೭–೭ ; 1016). [?]

**ಕಟ್ಟಕೊನೆ** (ನಾ). ಅತಿ ಕಡೆ, —ಕೊನೆ: ರಂಗಸ್ಥಳದಲ್ಲಿ ಕಟ್ಟಕೊನೆಯ ಮಾತೇ ಅವನದ್ದು (ಯಕ್ಷಬ. ೩೭). [ಕಟ್ಟು$_0$ + ಕೊನೆ$_8$]

**ಕಟ್ಟಕ್ಕರು** 'ಕಟ್ಟಟ್ಕಱ್' ನೋ.

**ಕಟ್ಟಕ್ಕರೆ** 'ಕಟ್ಟಟ್ಕಱ್' ನೋ.

**ಕಟ್ಟಕ್ಕಱ್** 'ಕಟ್ಟಟ್ಕಱ್' ನೋ.

**ಕಟ್ಟಗ್ಗಿ** (ನಾ). ಉಗ್ರವಾದ ಬೆಂಕಿ: ಸಗ್ಗಿಗವೆಟ್ಟೇ ಪೆರ್ವಿಲ್ ವಾಸುಗಿಯಗ್ಗಳದೊಳ್ತಿರು ಪೊಡೆಯಲರನು ಕ[ಪಾಠಾಂ. ತ]ಟ್ಟಗ್ಗಿಯ ಕೂರ್ಗಣೆ ನೆಲನೇ ತೇರ್ ಸಸಿಬಿಸುಗದಿರರೆಗಾಲಿ (ಉದ್ಭದೇ. ೪–೪೬). [< ಕಡಿದು + ಅಗ್ಗಿ$_1$]

**ಕಟ್ಟಚ್ಚರಿ** (ನಾ). ಮಿಗಿಲಾದ ಸೋಜಿಗ ; ಅತ್ಯಾಶ್ಚರ್ಯ: ಕಟ್ಟಚ್ಚರಿಯಾದುದೊರ್ಬನ ಮಹಾರತಸಂಭ್ರಮಮೊಂದು ತಾಣದೊಳ್ (ಸೂಕ್ತಿಸು. ೧೪–೪೫) ; ಕಟ್ಟಚ್ಚರಿಯ ಗಡಾರ್ಥತ್ವಂ (ಶಮದ. ೫೭) ; ಬಾಲೆಯ ಭಾಷಣಮಂ ಭಾವಿಸಿ ನಾರದಂ ಕಟ್ಟಚ್ಚರಿಯೊಳ್ (ಅದ್ಭುತ. ೧೨–೧). [< ಕಡಿದು + ಅಚ್ಚರಿ$_3$]

**ಕಟ್ಟಚ್ಚು** (ನಾ). ಅತಿಯಾದ ಪ್ರೀತಿ; ಹೆಚ್ಚಿನ ಅಕ್ಕರೆ: ನಿನ್ನಟ್ಟೆಯೆಲ್ವು ಕುಟ್ಟೆವುಱುಗಳ್ಗೆ ಕಟ್ಟಚ್ಚಿನ ಹೋೞಗೆಯಕ್ಕುಂ (ರಾಮಾಶ್ವ. ೮೬–೨೧). [< ಕಡಿದು + ಅಚ್ಚು$_4$]

**ಕಟ್ಟಡ** (ನಾ). = ಕಟ್ಟಣ ೧: ಪುರಾತನ ಪಟ್ಟಣಗಳೂ ಕಟ್ಟಡಗಳೂ ವಾಸ್ತುಶಾಸ್ತ್ರಕ್ಕನುಸಾರವಾಗಿಯೇ ನಿರ್ಮಿಸಲ್ಪಡುತ್ತಿದ್ದುವು (ಮೈವಾಸ್ತು. ೨೨) ; ಕನ್ನಡನಾಡಿನಲ್ಲಿ ಶಾತವಾಹನರ ಕಾಲದಿಂದಲೂ ಕಟ್ಟಡಗಳು ಕಂಡುಬರುತ್ತವೆ (ಹೊಯ್ಸವಾ. ೨). [< ಕಟ್ಟಣ ? . / ತಮಿ. ತೆಲು. ಕಟ್ಟಡ]

**ಕಟ್ಟಡಕ** (ನಾ). ೧. ಕರಾರುಪತ್ರ; ಲಿಖಿತ ಕರಾರುಪತ್ರ: (ಮೈಗೆಜಿ. IV, ೭೭೬). ೨. ಬಂಧ ; ರಚನೆ (?): ಬಿರುಸುಮಾತುಗಳಿಂದ ಇಂಪುಮಾತಿನ ತಂಪು ಮರೆಸಿ ಮನಸಿನ ಸೊಗಸ ಕಳೆದು –ಹಿಂಗಿಸಿ–ಹೀರಿ ಕೊರತೆಯಿಲ್ಲದ ಕನ್ನಡವನೊಡಕುನುಡಿಗಳಿಹ ಕೆಟ್ಟ ಕಟ್ಟಡಕ ಮಾಡೆ (ಗರಿ. ೧೬–೧೨). [ಕಟ್ಟು$_2$ + ಅಡಕ$_1$]

**ಕಟ್ಟಡವಿ** (ನಾ). ದಟ್ಟವಾದ ಕಾಡು: ದಾರುದಾರುಣದ ಕಟ್ಟಡವಿಗಿಲ್ಲಿ ಗೇಕೈತಂದೆ ತಂದೆಸೌಮಿತ್ರಿ ಹೇಳು (ಜೈಮಿಭಾ. ೧೯–೧೧) ; ಒಂದಾನೊಂದು ಕಟ್ಟಡವಿಯನ್ನು ಹೊಕ್ಕು (ಮಣಿಸ. ೩೨). [< ಕಡಿದು + ಅಡವಿ]

**ಕಟ್ಟಡಸು** (ಕ್ರಿ). ರಭಸದಿಂದ ಆಕ್ರಮಿಸು, —ಮುತ್ತು, —ಆವರಿಸು: ನಮ್ಮ ರಾಜ್ಯಕ್ಕೇ ಅಪಘಾತ ಅನಾಹುತವು ವಿಪತ್ತಿಯು ಕಟ್ಟಡಸಿ ನಿರ್ಮೂಲವಾಗಿ ಲಯವೇ ಆಗಿಹೋಗುವ ಹೊತ್ತು ಬಂದಾಯ್ತೋ! (ಬೆಟ್ಟಅ. ೨೦೭–೧೧). [< ಕಡಿದು + ಅಡಸು]

**ಕಟ್ಟಣ, ಕಟ್ಟಣೆ$_1$, ಕಟ್ಟೋಣ** (ನಾ). ೧. ಕಟ್ಟಿದುದು; ಮನೆ, ಮಂದಿರ ಮುಂತಾದುವುಗಳ ಕಟ್ಟಡ; ಇಮಾರತು: ಕಲ್ವೆಸದ ಕಟ್ಟಣಂ ತಿದ್ದದೆ ಹತ್ತು ಗದ್ಯಾಣಕ್ಕೆ ವರಲು ಕೆಱಿಗೆ ಪಡಿಸಲಿಕೆಯ ತೋಪ್ಪರು (ಸೌಇಇ. XI-ii, ೧೭೭–೧೦೨ ; 1124) ; ಕೆರೆಯ ಮೂಡು ಕಟ್ಟಣದ ಒಂದು ಸಾಲಿನಲ್ಲಿ ಇಂದಿಗೂ ಕಲ್ಲುಚಪ್ಪಡಿಗಳನ್ನು ಹಾಸಿಲ್ಲ (ದೇವಹಂ. ೪೮) ; ಪಟ್ಟಣಕ್ಕೆ ಅರಸು ಬಲ, ಕಟ್ಟಣಕ್ಕೆ ಕಲ್ಲು ಬಲ (ಗಾದೆ). ೨. ಬಂಧ; ರಚನೆ; ಕೂರಿಸುವುದು: ಸೌದೆಯಂ ತಂದು ಕೊಟ್ಟಗೆ ಗಡಕಿದಾ ಕಟ್ಟಿಗೆಯ ಕಟ್ಟಣಂ ತೋರ್ಪಂತೆ, ಕಣ್ಗೆಸೆದುದಾ ಮುಂದೆ ಗಂಧಚಿತೆ (ಶ್ರೀರಾಮಾ. ೧೨೦–೨೨೦) ; 'ಪಂಪಭಾರತ'ದ ಕಟ್ಟಣದಲ್ಲಿ ಒಂದು ಅಪೂರ್ವತೆ ಇದೆ (ಕಸಾಚ. ೯೬). **ಕಟ್ಟಣೆ$_1$**: ೧. ನಾಯಕಶಿಲ್ಪಿ ನಳಂ ಕೃತಿಯಗ್ರಭಾಗದೊಳ್ ಶೃಂಗ ಸದೃಶಂ ನಿಂದು, ಕಟ್ಟಣೆಯ ಮುನ್ನಡೆಗೆ ಬಟ್ಟೆಯಂ ತರಿಸಲ್ವ ಕಣ್ಣ ಕರ್ತವ್ಯದೊಳ್ ತೊಡಗಿರಲ್ (ಶ್ರೀರಾಮಾ. ೫೯೩–೨೪೩); ಇಲ್ಲಿಯ ಕಟ್ಟಣೆಗಳು ಬಲು ಅಂದವಾಗಿರುತ್ತವೆ (ಗ್ರೀಟಬ್ರಿ. ೬೫). ೨. ಕಟ್ಟಣೆಯಿಲ್ಲದೆತ್ತಿದೆಳೆಮುತ್ತಿನ ಸತ್ತಿಗೆ ಸಾಲ ಮಧ್ಯದೊಳ್ (ಉದ್ಭಟ. ೭–೧೨೬) ; ಎಣಿಸಿ ಪೇಳುವೆನ್ ಆದಿನಾಥನೋಲಗದ ಕಟ್ಟಣೆಯ (ಭರಚ. ೬೭–೬೬). **ಕಟ್ಟೋಣ**: ೧. ಆ ರಸ್ತೆಯು ಪಾರ್ಲಿಮೆಂಟ್ ಕಟ್ಟೋಣದರ ಸಮೀಪದಲ್ಲಿದೆ (ಪ್ರವಾಸಿ. ೯೧) ; ಅದೂ ಒಂದು ಉದ್ದ ಶಾಲೆಯಂತಹ ಕಟ್ಟೋಣ (ಕೈಹಿಕಾ. ೨೨); ನಿನ್ನ ಸರ್ವಸಂಪತ್ತುಗಳನ್ನೂ, ಕಟ್ಟೋಣಗಳನ್ನೂ . . . ಹರಾಜು ಹಾಕಿಸಬಲ್ಲೆನು (ಪ್ರಕಾಶ. ೪೯). [ಕಟ್ಟು$_1$ + –ಅಣ . / ತಮಿ. ಕಟ್ಟಣ ; ಮಲ. ಕೆಟ್ಟು, ಕೆಟ್ಟಕ ; ತುಳು. ಕಟ್ಟಣ, ಕಟ್ಟಲ್ಮೆ]

**ಕಟ್ಟಣಕ$_1$** (ನಾ). ೧. ಅತ್ಯಂತ ಆಶ್ಚರ್ಯ,— ಅದ್ಭುತ : ನರ್ತಕರ ವರ್ತಕರ ಮೊತ್ತ ದೊತ್ತರದ ತಿಂಥಿಣಿಯನೊತ್ತರಿಸಿ ಇಟ್ಟಣಿಸಿದ ಕಟ್ಟಣಕದಾಸ್ಥಾನದೊಳು (ಬಸರ. ೬-೨೬) ; ಒಡೆಯನ ಕಾಪು ಕಟ್ಟಣಕ ಮೆಂದೊಡೆ ಬಂಧುಗಳಾಪ್ತರಾಗರೆಂದೊಡೆ (ಅನಂಪು. ೧೧-೩೩) ; ಪೊಳೆವ ಕಟ್ಟಣಕದ ಕಟ್ಟೆಗೆಗಳಿಂದಿಟ್ಟಣಮಾದ ತಿಳಿಗೊಳಂಗಳೊಳ್ ಆನೆಯಂತೆ ನೀರಾಟಮನಾಡಿಯುಂ (ಕಬ್ಬಿಕಾ. ೧೨೫). ೨. ಪ್ರಚಂಡವಾದುದು : ಕಟ್ಟಣಕದ ದುಷ್ಟಗಜಮನಗ್ರಪಲ್ಲವಮಂ ಪಿಡಿದೇಱಿ ಭಂಗಿಸುತ್ತ (ಗಿರಿಕ. ೩-೧೦೫ ವ) ; ಕಟ್ಟಣಕ ಕಟ್ಟು ಒಡೆಯಿತ್ತು (ಸಿಂಗಿರಾ. ೨೭-೬೪).
[< ಕಡಿದು + ಅಣಕ$_1$]

**ಕಟ್ಟಣಕ$_2$** (ನಾ). ಅಪಹಾಸ್ಯ; ಹೆಚ್ಚಾದ ಕುಚೋದ್ಯ : 'ಆಯ್ತು ಮದುವೆ ! ಅವನಿಗೂ ಅವನಪ್ಪನಿಗೂ ಒಂದೇ ಸಾರಿ, ಒಂದೇ ಹಂದರ ದಲ್ಲೇ ಮದುವೆ' —ಕಟ್ಟಣಕದಿಂದ ನುಡಿದನು (ಬೆಳುಮು. ೨೦೨).
[< ಕಡಿದು + ಅಣಕ$_2$]

**ಕಟ್ಟಣಿ$_1$** 'ಕಟ್ಟಣ್ಣೆ$_3$' ನೋ.

**ಕಟ್ಟಣಿ$_2$** (ನಾ). ಭದ್ರವಾದ ಸಜ್ಜು (?) ; "ಬಲವಾದ ಆಯುಧ" (ಪಾರಸಿ. ಕೋಶ) : ಇಲ್ಲ ; ತಾಯಿ. ನಾಟುವೀಟಿ, ಹೊತ್ತ ಹರಿಗೆ, ಕಟ್ಟಣಿ (ಪಾರಸಿ. ೧೧-೨೫೩). [< ಕಡಿದು + ಅಣ್ಣೆ$_2$]

**ಕಟ್ಟಣಿಗಾವಲು** (ನಾ). ಸುಸಜ್ಜಿತ ಸೈನ್ಯದ ಕಾವಲು : ಆತನನ್ನು . . . ಅರಮನೆಯ ಕಟ್ಟಣಿಗಾವಲಲ್ಲಿ ರಿಸಿರಬೇಕೆಂಬ ಮಹಾಸ್ವಾಮಿಯವರ ದಂಡಾಜ್ಞೆಯನ್ನೂ ನೆರವೇರಿಸಿಬಿಡು (ಬೆಟ್ಟಅ. ೨೧೯-೨೪).
[ಕಟ್ಟಣ್ಣೆ$_2$ + ಕಾವಲು (< ಕಾವಲ್$_1$)]

**ಕಟ್ಟಣ್ಣೆ$_1$** 'ಕಟ್ಟಣ' ನೋ.

**ಕಟ್ಟಣ್ಣೆ$_2$** 'ಕಟ್ಟಳ್ಳೆ$_1$' ನೋ.

**ಕಟ್ಟಣ್ಣೆ$_3$**, ಕಟ್ಟಣಿ$_1$ (ನಾ). [ಸಂಗೀತ] ಗಾಯನದಲ್ಲಾಗಲೀ ನಾಟ್ಯ ದಲ್ಲಾಗಲೀ ತಾಳಕ್ಕೆ ಸರಿಯಾಗಿ ಹೊಂದಿಕೊಂಡು ಸಮಗತಿಯಲ್ಲಿ ಕಾಲಪ್ರಮಾಣ ನಿರ್ವಹಣೆಗಾಗಿ ಏರ್ಪಡಿಸಿರುವ ತಾಳಾಕ್ಷರ; ಜತಿ : ಪೊಂದಾಳಮಂ ಪಿಡಿದು ರಾಗಂಗೆಯ್ದು ಪಂಜಳದಲಿ ಅಂದವಡೆ ದಿಹ ಕಟ್ಟಣೆಯಲಿ ಕಡುಜಾಣ್ಮೆಯ ಸರಂದೋಱಿ . . . ಸೌಂದರ ಪಾಡಿದ (ಸೌಂದಪು. ೧೧-೧೪) ; ಕಾಲವನಱಿದು ಕಟ್ಟಣೆಗಳನಱಿದಾಗ ಗೌಳ ಶ್ರೀರಾಗಗಳಿಂದ ಮಾಳವಶ್ರೀಯೆಂಬ ರಾಗದಿಂದವರೊಲಿದಾಲಾಪಗಳನು ಮಾಡಿದರು (ಭರಚ. ೬೪-೫). ಕಟ್ಟಣಿ$_1$ : ಮುಂಬರಿದೆಸೆವ ಕಟ್ಟಣೆಗಳ ಗತಿಯ ನಿತಂಬಿನಿಯರುಗಳಾಡಿದರು (ಕಂನವಿ. ೮-೬೪). [?]

**ಕಟ್ಟಣೆಗಾಣ್** (ಕ್ರಿ). [ಸಂಗೀತ] ಸ್ವರ ಸಂಯೋಜನೆಯನ್ನು ಕಾಣು (?) : ಸೊಗಯಿಪ ವೀಣೆಯ ಕಟ್ಟಣೆಗಾಣದೆ ಮೊಗದಿರುಹಿದನು (ಜೀವಂಸಾಂ. ೧೧-೭). [ಕಟ್ಟಣ್ಣೆ$_3$ + ಕಾಣ್]

**ಕಟ್ಟಣ್ಮು** (ನಾ). ಅತಿಶಯವಾದ ಪರಾಕ್ರಮ, —ಸಾಹಸ : "ಪರಾಕ್ರಮ ಕರ್ಕಶಃ = ಕಟ್ಟಣ್ಮಿನ ಜಟ್ಟಿಗಂ" (ನೀತಿವಾ. ೨೯-೬೩) ; ಕಟ್ಟಣ್ಮಂ ಸೃಗಾಲಂ ರಥಾಂತರದಿಂ ತೊಟ್ಟನೆ ಪಾಯ್ದು (ಜಗವಿ. ೮-೬೫) ; ಕಟ್ಟಣ್ಮಿನ ಯವ್ವನಶ್ರೀಯನ್ನೇ ಒದೆದೆಳ್ಚಿ ಕೆರಳಿಸಿ (ಬೆಟ್ಟಅ. ೧೪೦-೧೬).
[< ಕಡಿದು + ಅಣ್ಮು$_2$]

**ಕಟ್ಟಣ್ಮುಕಾಱ** (ನಾ). ಕಡುಗಲಿ; ಅತ್ಯಂತ ಪರಾಕ್ರಮಶಾಲಿ : ಸೈಪುಗಾಱಂ ಸಿರಿಯೊಳ್ ಕಟ್ಟಣ್ಮುಕಾಱಂ ವಿತತವಿತರಣೋತ್ಸಾಹದೊಳ್ (ಅರ್ಧನೇ. ೧-೩೭). [ಕಟ್ಟಣ್ಮು + -ಕಾಱ]

**ಕಟ್ಟದಟು** (ನಾ). = ಕಟ್ಟಣ್ಮು : ಕಟ್ಟದಟಿಂದೆಯುಂ ಕಠಿನಪೀನ ಮಹೋನ್ನತ ಕಾಯದಿಂದೆಯುಂ ನೆಟ್ಟನೆ ನಿಂದು (ಚಿಕವಿ. ೨-೪).
[< ಕಡಿದು + ಅದಟು$_2$]

**ಕಟ್ಟಧಿಕಾರ** (ನಾ). ಹೆಚ್ಚಿನ ಅಧಿಕಾರ ; ಸರ್ವಾಧಿಕಾರ : ನಿಯತ ದಧಿಘೃತದುಗ್ಧಗುಡಸಂಚಯಕೆ ಸಂಬಾರಾದಿ ರಸ ನಿರ್ಣಯಕೆ ಕಟ್ಟಧಿಕಾರ ಸಿದ್ಧಾರ್ಥಂಗೆ ನೆಲೆಯಾಯ್ತು (ತೊರರಾ. ೧-೭-೨೬).
[< ಕಡಿದು + ಅಧಿಕಾರ]

**ಕಟ್ಟನೀತಿ** (ನಾ). ಅತಿ ಅನ್ಯಾಯ: ಕಾಯಘನಕಟ ನಡಸಿದ ವಿಚಾರಣೆಯ ಕಟ್ಟನೀತಿಗೆ ಹೇಸಿ ಬೆಳುಗದಿರದಿಳಿವೋಗೆ (ಗೊಲ್ಲೊಥಾ. ೧-೪).
[< ಕಡಿದು + ಅನೀತಿ]

**ಕಟ್ಟನೆ** (ಅ). ಕೂಡಲೆ ; ಥಟ್ಟನೆ ; ತಟಕ್ಕನೆ : ಕಾಮುಕ್ಕೆ ಮೋಹಕ್ಕ ನುಗೆಯ್ವೊಂದಾಗ್ರಹಂ ಕಟ್ಟನೆ ಕರಗಿತ್ತು (ರಕ್ಷಾ ಶ. ೬೨) ; ಅಮರರ ಧೇನು ಕಲ್ಲಾಯ್ತು ಪರುಷ ಕಟ್ಟನೆ ಕರಗಿತು (ಹಚಕಾ. ೧-೪೨) ; ಪರಮನಿರ್ದೆ ಕಟ್ಟನೆ ಕರಗಿ (ಪದ್ಮರಾ. ೧೩-೩೧). [?]

**ಕಟ್ಟನ್ನ$_1$** (ನಾ). ೧. ಕಟ್ಟಿಕೊಟ್ಟ ಅನ್ನ ; ಕಟ್ಟಿದ ಕೂಳು; "ಬುತ್ತಿ" (ಜಾನಕೋ. ೩೨). ೨. ಒಂದು ಬಗೆಯ ಕಲಸನ್ನ ; ಕಟ್ಟೋಗರ.
[ಕಟ್ಟು$_1$ + ಅನ್ನ$_3$]

**ಕಟ್ಟನ್ನ$_2$** (ನಾ). ಬೇಳೆಯ ಕಟ್ಟು ಕಲಸಿದ ಅನ್ನ ; ರೋಗಿಗಳಿಗೆ ಕೊಡುವ ಪಥ್ಯದ ಅನ್ನ : ಕಟ್ಟಿತನಕ್ಕೆ ಒಪ್ಪಿದವ, ಕಟ್ಟನ್ನಕ್ಕೂ ಒಪ್ಪ ಬೇಕು (ಗಾದೆ). [ಕಟ್ಟು$_3$ + ಅನ್ನ$_3$]

**ಕಟ್ಟಪ್ಪಣೆ** (ನಾ). ಕಠೋರವಾದ ಅಪ್ಪಣೆ; ಉಗ್ರವಾದ ಆಜ್ಞೆ : ಗೋಪುರದ ಕಿಟಕಿಯನ್ನು ಸೇರಬೇಕೆಂದು ಅರಸನ ಕಟ್ಟಪ್ಪಣೆ (ಮಣಿಸ. ೪೫) ; ಆ ಕೋಟೆಯೊಳಗೆ ಹೊರಗಿನವರಾರೂ ಹೋಗಬಾರದು ಎಂದು ಕಟ್ಟಪ್ಪಣೆ ಮಾಡಿದರು (ನಡೆದಾ. I, ೪೪೨). [< ಕಡಿದು + ಅಪ್ಪಣೆ$_1$]

**ಕಟ್ಟಪ್ಪುಣಿ** (ನಾ). (ಕರಾ) (ಗದ್ದೆಗಳ ನಡುವಿನ) ಬದು ; ತೆವರು : ಅಗತ್ಯವಿದ್ದಷ್ಟು ಮಣ್ಣನ್ನು ತೋಟಕ್ಕೂ ಕಟ್ಟಪ್ಪುಣಿಗಳಿಗೂ ಹಾಕಬೇಕು (ಮಣ್ಣನಂ. ೮೩). [← ತುಳು. ಕಟ್ಟಪುಣಿ]

**ಕಟ್ಟಬಡಿಸು** (ಕ್ರಿ). ತೊಂದರೆ ಕೊಡು; ಕಾಡು; ಪೀಡಿಸು : ಬೇಸರನು ಬಹುಕಟ್ಟಬಡಿಸಲು ಬೇಸರನು ಅವನೀಗ ಶಿಷ್ಯನು ಬೇಸರಿಲ್ಲದೆಯಿಹನು (ಜ್ಞಾನಸಿಂ. ೧-೨೯). [ಕಟ್ಟ$_2$ + ಪಡು$_1$ + -ಇಸು$_3$]

**ಕಟ್ಟಭಿಮಾನ** (ನಾ). ಹೆಚ್ಚಿನ ಅಭಿಮಾನ ; ವಿಶೇಷವಾದ ಹೆಮ್ಮೆ : ಧರೆಗೆ ಕಟ್ಟಭಿಮಾನ ಹೆಂಡಿರ ಹರಿಬವಾ ಹರಿಬದಲಿ ಕೆಡಹುವುದರಿಯನು (ಕುವ್ಯಾಉ. ೬-೨೪) ; ಬಿಸುಟಲೊದಱುತ ಶೂರ್ಪಣಖಿ ನಿವಡಿಸಿದ ಕಟ್ಟಭಿಮಾನ ವಿಲಸಿತ ಬೆಸುಗೆಗಳಚಿದ ನಾಸಿಕವನಿದಿರಲಿ ಖರಾಸುರನ (ತೊರರಾ. ೩-೫-೩). [< ಕಡಿದು + ಅಭಿಮಾನ]

**ಕಟ್ಟಭಿಮಾನಿ** (ನಾ). ಹೆಚ್ಚಾದ ಅಭಿಮಾನವುಳ್ಳವನು ; ಮಾನ ಧನ : ಇವನು ಕಟ್ಟಭಿಮಾನಿ ಭಂಗಿಸಿ ಬಿಟ್ಟೊಡೀತಂಗಿದುವೆ ಮರಣವಲ (ಕುವ್ಯಾಅ. ೨೨-೪೦). [< ಕಡಿದು + ಅಭಿಮಾನಿ]

**ಕಟ್ಟಭೋ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಕಟ್ಟಭೋ ಪ್ರಿಥುವೀ ರಾಜ್ಯಂಗೆಯೆ (ಎಕ. XII, ಮದ್ದಗಿ. ೫೦-೧ ; ಸು. 950). [?]

**ಕಟ್ಟಮರ** (ನಾ). ಒಂದು ಕೆರೆಯ ಹೆಸರು (?) : ದುನ್ದುಮಿಯೆಮ್ಬ ವರ್ಷಮ್ಬವತ್ರಿಸೆ ಕಟ್ಟಮರಕೆಱೆಯುಮಂ ಕಟ್ಟಸಿ ದೇಗುಲಂ ಮಾಡಿಸಿ (ಎಕ. VII, ಶಿಕಾರಿ. ೨೮೪-೫ ; 907). [?]

**ಕಟ್ಟಮುಸ್ತು** 'ಕಟ್ಟುಮುಸ್ತು' ನೋ.

**ಕಟ್ಟಮಾಟಿತ** (ನಾ). (?) : ಬ್ರಹ್ಮಸಮುದ್ರದ ಅಶೇಷ ಮಹಾಜನಂಗಳು ಕೊಟ್ಟ ಗೌಡಿಕೆಯ ವ್ರಿತ್ತಿ ಕಟ್ಟಮಾಟಿತಕೆ ಪ್ರತಿಯಾಗಿ ಪಾ × × ಗವುಡ ಅಮಿತಗವುಡಂಗಳ ಕಯ್ಯಲು ಪಾದಪೂಜೆ ಕೋಱಿಕೆ ಗ ೨೫ ಪ ೧೦ ಕೊಂಡು ಗವುಡುಂಬಳಿಯಾಗಿ ಕೊಟ್ಟ ಗದ್ದೆ (ಎಕ. VI, ಕಡೂರು. ೫೬-೨೦; 1235). [?]

**ಕಟ್ಟರಣ್ಯ** (ನಾ). ದಟ್ಟವಾದ ಕಾಡು : ಕೊಟ್ಟಗೆಯ ಕಾಮಧೇನುವ ನೊಲ್ಲದಳ್ತಿಯಿಂ ಕಟ್ಟರಣ್ಯದ ಪುಲಿಯನಜಿಸಿ ಕರೆಯಲ್ಕೊದೆಯ ಕಟ್ಟುವೆಯಲಾ (ಜೈಮಿಭಾ. ೧೦–೨೦). [< ಕಡಿದು + ಅರಣ್ಯ]

**ಕಟ್ಟರಸ, ಕಟ್ಟರಸು** (ನಾ). ದೊಡ್ಡ ಅರಸ; ಪ್ರಬಲನಾದ ರಾಜ : ಗ್ರಹದಂತೆ ಮಂತ್ರಕ್ಕೆಱಗದೆ ಕಟ್ಟರಸನಂತೆ ತಂತ್ರಕಾಸೆಗೆಯ್ಯದೆ (ಧರ್ಮಾಮೃ. ೪–೪೬); ಕಟ್ಟರಸರೊಡನೆಮಗೆ ವೈರವೇಕೆ (ಭಾವಚಿಂ. ೫–೨೧). **ಕಟ್ಟರಸು** : ಕಟ್ಟರಸಿನ ಕುವರನ ಚೆಲ್ವಿಕೆಯನು ಕಣ್ಣಟ್ಟು ನೋಡಿದ ಮಾತ್ರದೊಳು ಬಟ್ಟಜವ್ವನೆಯರ ಬಳಗಕಂಗೋದ್ಭವನಟ್ಟುಳಿಯತಿಘನಮಾಯ್ತು (ನೇಮಿಸಂ. ೮–೨೬); ಗರ್ವದಿಂದೆಮ್ಮ ರಾಜ್ಯವ ನಟ್ಟುಳಿಯನು ಮಾಡುವುದನು ಕಟ್ಟರಸಿನ್ನು ತಾಳನು (ಕುರಾಸಾಂ. ೧೦–೧೫); ನಟ್ಟಣೆ ಬೇಡ ನಮ್ಮರಸುಗಳ್ ನಿನಗೊಲ್ದು ಕೊಟ್ಟ ಮೇಲಹುದು ನಿನ್ನೊಡವೆ ಕಟ್ಟರಸಾದರೆ ಮನೆಯೊಳಿರುಳ್ಪುದ ಕುಟ್ಟನುಡಿವೆನೆಂದಳೊಡನೆ (ಭರಚ. ೪೩–೧೨). [< ಕಡಿದು + ಅರಸ$_{1}$]

**ಕಟ್ಟರಸು** 'ಕಟ್ಟರಸ' ನೋ.

**ಕಟ್ಟರಸುತನ** (ನಾ). ದೊಡ್ಡ ಅರಸುತನ; ಪ್ರಬಲ ರಾಜತನ: ಈ ಪರಿಯೊಳತಿಶ್ರಮಾಪಹರಮುಂ ಶ್ರಮಕಾರಿಯುಮಲ್ಲದಿರ್ಪ ಕಟ್ಟರಸುತನಂ ಸ್ವಹಸ್ತಧೃತದಂಡಮಹಾತಪವಾರಣೋಪಮಂ (ಶಾಕುಂತ. ೬೨–೧೦೬). [ಕಟ್ಟರಸು (< ಕಟ್ಟರಸ) + -ತನ]

**ಕಟ್ಟರೆ** 'ಕಟ್ಟಱವೆ' ನೋ.

**ಕಟ್ಟಲ್, ಕಟ್ಟಲು** (ನಾ). ೧. ಕಟ್ಟಲ್ಪಟ್ಟದ್ದು; ಕಟ್ಟಿಸಿಕೊಂಡ ಸ್ಥಿತಿ; "ಬದ್ಧ, ಸಿತ" (ನಾಚಿರಾ. ೩). **ಕಟ್ಟಲು** : ೧. (೩). ೨. ನಾಟಕವನ್ನು ಪ್ರದರ್ಶಿಸುವ ವೇದಿಕೆ; ರಂಗಭೂಮಿ; ಸ್ಟೇಜು : ಕಟ್ಟಲಿನ ಮುಂದೆ ಕುಳಿತಿರುವ ಜನಗಳ ಮಧ್ಯ. . .ಎರಡನೆಯ ಕಟ್ಟಲಿಗೆ ಹೋಗುವುದು ಪ್ರಯಾಸ (ನನ್ನೂರು. ೧೧೯).

[ಕಟ್ಟು$_{1}$ + -ಅಲ್$_{2}$?. / ತಮಿ. ಮಲ. ಕಟ್ಟಲ್ = ಮಂಚ]

**ಕಟ್ಟಲು** 'ಕಟ್ಟಲ್' ನೋ.

**ಕಟ್ಟಲೆ** 'ಕಟ್ಟಳೆ$_{1}$' ನೋ.

**ಕಟ್ಟಲೆಜ್ವರ** (ನಾ). ಅವಧಿ ಜ್ವರ; ಕಟ್ಟಿನ ಜ್ವರ; ಗಡುವಿನ ಜ್ವರ: ಕಟ್ಟಲೆಜ್ವರದಿಂದ ಹುಡುಗ ಬಲಹೀನನಾಗಿದ್ದಾನೆ (ರೂಢಿ).

[ಕಟ್ಟಲೆ (< ಕಟ್ಟಳೆ$_{1}$) + ಜ್ವರ]

**ಕಟ್ಟವತ್ತಿ** (ನಾ). = ಕಟ್ಟವತ್ತಿಗೆ: "ವೃತ್ತಿಕೆಯೆನಲ್ ಕಟ್ಟವತ್ತಿ" (ಮಂಗರಾ. ೪೩–೪೩). [< ಕಟ್ಟವತ್ತಿಗೆ]

**ಕಟ್ಟವತ್ತಿಗೆ** (ನಾ). ಶಂಖಪುಷ್ಪಿಗಿಡ : "ಅಮ್ಮಂಗೊಡಲಿ = ಹೆಗ್ಗಟ್ಟವತ್ತಿಗೆ" (ಶಮದ. ಪರಿ. ೨); "ಅಮ್ಮಂಗೊಡಲಿ ಕಟ್ಟವತ್ತಿಗೆ" (ಕವಿಕಂ. ೨೧೬); ತಿಗಡೆ ಶುಂಠಿ ಶಿವೆ ಬೆಲ್ಲಮೆಂಬ ಮದ್ದುಗಳನಕ್ಕೆ ಪುರಿದಿರ್ದ ಕಟ್ಟವತ್ತಿಗೆಯ ಬಿತ್ತುಗಳನಕ್ಕೆ ತಿಂಗೆ ಮಾಡುಗುಮುದಾರ್ಗಮಧಿಕಂ ವಿರೇಕಮಂ (ಲೋಕೋಪ. ೯–೩೫); ಶಂಖಿನೀ = ಕಟ್ಟವತ್ತಿಗೆ (ವಿನ್ಯವಿ. ೫೯). [?]

**ಕಟ್ಟವಸರ** (ನಾ). ೧. ಉಚಿತ ಸಮಯ : ನೆಟ್ಟನೆ ಮಹೀಶ್ವರಂ ಪಿರಿದು ಕಜ್ಜಕೆ ನಿನ್ನನೊಡಗೊಂಡು ಬಾಯೆನಲ್ಕೆ ಕಟ್ಟವಸರಕೆ ಬಂದೆನು (ಜೈಮಿಭಾ. ೩೧–೪೪). ೨. ಹೆಚ್ಚಿನ ಆತುರ, —ತ್ವರೆ: "ಆ ಮೂರು ಮನೆಗಳವರ ಇಚ್ಛೆಗೆ ಪ್ರಾಮುಖ್ಯತೆಯನ್ನು ಕೊಡುವ ಕಟ್ಟವಸರವದೇನೆಂಬುದನ್ನು ಮಹಾರಾಣಿಯವರು ತಿಳಿಯಬಯಸುತ್ತಾರೆ" (ಸವತಿ. ೧೬೯).

[< ಕಡಿದು + ಅವಸರ]

**ಕಟ್ಟವಾಳಿ** (ನಾ). ೧. ಮೊಂಡು ಹೆಂಗಸು; ಮೊಂಡಿ. ೨. ತುಂಟುದನ; ಮೊಂಡುದನ (೩). [?. / ಮರಾ. ಖಟ್ಯಾಳ್]

**ಕಟ್ಟಶನ** (ನಾ). ಒಂದು ಬಗೆಯ ಕಲಸನ್ನ; ಕಟ್ಟೋಗರ : ಉತ್ತಮದ ತುಪ್ಪಮಂ ಕಲಸಿಕೊಂಡೋಗರವ ಹತ್ತೆಂಟು ಬಗೆ ಮಾಡಿ . . . ಬಿಳಿಯ ಪುಳ್ಳಿಯಿಕ್ಕಿ ಪರಿಮಳವಿಕ್ಕಿ ಕಟ್ಟಶನಮಂ ಮಾಳ್ಪುದು (ಸೂಪಶಾ. ೩–೧೬). [ಕಟ್ಟು$_{1}$ + ಅಶನ]

**ಕಟ್ಟಸವಸ** (ನಾ). ತೀವ್ರವಾದ ಆತುರ: ನನಗೆ ಕಟ್ಟಸವಸದ ಕಾರ್ಯಾಂತರವು ಪ್ರಸನ್ನವಾಗಿದೆ (ಬೆಟ್ಟಅ. ೧೩೧–೧೧). [< ಕಡಿದು + ಅಸವಸ]

**ಕಟ್ಟಳಲಿಕೆ** (ನಾ). ಅತಿಯಾದ ದುಃಖ; ಹೆಚ್ಚಿನ ವ್ಯಥೆ: ಕಾಲ್ನಡೆಯಿಂದ ಕಡುಕಾಹುರದ ಕಟ್ಟಳಲಿಕೆಯಲ್ಕೈದಿದನವನಿಜಾಪತಿಯ (ತೊರರಾ. ೨–೩–೫೩). [< ಕಡಿದು + ಅಳಲಿಕೆ (< ಅಳಲ್ಕೆ)]

**ಕಟ್ಟಳಲು** (ನಾ). = ಕಟ್ಟಳಲಿಕೆ: ಮುಂಗಾಣದಾತುರದೊಳಲ್ಲಲ್ಲಿ ತಡವರಿಸಿ ಕೆಡೆದೆದ್ದು ಕಟ್ಟಳಲುರಿಯ ಸರದೊಳೊಜಲಿ ಕರೆಯುತ್ತ (ಹಚಕಾ. ೧೨–೨೩). [< ಕಡಿದು + ಅಳಲು$_{2}$ (< ಅೞಲ್$_{2}$)]

**ಕಟ್ಟಳವಿ** (ನಾ). ೧. ಘೋರ ಕಾಳಗ : ಕಟ್ಟಳವಿಯಲಿ ವೈರಿರಾಯನ ನಿಟ್ಟೆಳಿಸಿ ಮುಱಿಯೆಸುತ ಬರಲಡಗಟ್ಟಿ ತಡೆದರು (ಕುವ್ಯಾಕ. ೧೧–೩೪); ಕೆಣಕಿದುದು ಕಟ್ಟಳವಿಯಲಿ. . .ಬಲಿಮುಖವ್ರಾತ (ತೊರರಾ. ೬–೩೦–೩೫). ೨. ತೀರ ಸಮೀಪ, —ಸನಿಯ : ರಥವನು ಹರಿಸಿ ಭೀಷ್ಮನ ಹತ್ತೆಬರೆ ಕಟ್ಟಳವಿಯಲಿ ಹಾ ಮುತ್ತಯನು ಸಿಲುಕಿದನು ಶಿವಶಿವಯೆನುತ ಬಲಬೆದಱಿ (ಕುವ್ಯಾಭೀ. ೬–೨೪); ರಥ ಚಕ್ರವನು ಕಡಿಕಡಿದು ಬಿಸುಟನು ಹೊದ್ದಿದನು ಕಟ್ಟಳವಿಯಲಿ ಕರ್ಣ (ಕುವ್ಯಾದ್ರೋ. ೧೩–೫೯).

[< ಕಡಿದು + ಅಳವಿ]

**ಕಟ್ಟಳಿಕೆಱೆ** (ನಾ). ಒಂದು ಕೆರೆಯ ಹೆಸರು : ಕಟ್ಟಳಿಕೆಱೆಯ ಬಡಕಿಯ ಕಟ್ಟೆಯ ಕೆಳಗೆ ಬಿಟ್ಟ ಭೂಮಿ ಕಮ್ಮ ೭೦೦ (ಸೌಇಇ. IX–i, ೨೬೭–೬೯; 1160). [ಕಟ್ಟಳಿ$_{0}$ + ಕೆಱೆ]

**ಕಟ್ಟಳಿಪು** (ನಾ). ಬಹು ದುರಾಸೆ : ಕಟ್ಟಳಿಪಿಂದೊಳ್ಗುಣಮಂ ಬಿಟ್ಟುಂ ಲಘುಪಾತ್ರನಾಗಿ (ಸಮಪ. ೧೫–೩೬). [< ಕಡಿದು + ಅಳಿಪು$_{3}$]

**ಕಟ್ಟಳುಕು** (ನಾ). ಬಹಳ ಭಯ; ಅತಿಭೀತಿ : "ಬಹಳ ಭಯ, ಭೀತಿ, ಅಂಜಿಕೆ, ದಿಗಿಲು; ಕಟ್ಟಳುಕು" (Dread. ಇಂಕನಿ).

[< ಕಡಿದು + ಅಳುಕು$_{4}$ (< ಅಳ್ಕು$_{2}$)]

**ಕಟ್ಟಳೆ$_{1}$, ಕಟಲೆ, ಕಟಳೆ, ಕಟ್ಟಣೆ$_{2}$, ಕಟ್ಟಲೆ, ಕಟ್ಲೆ, ಖಟ್ಲೆ** (ನಾ). ೧. ನಿಯಮ; ಅಪ್ಪಣೆ; ಆಜ್ಞೆ; ಕಟ್ಟುಪಾಡು : ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾನು ಬೆಱಗಾದೆನು (ಅವಚಂ. ೧೩–೫೨); ಈತಂಗಿಂತೀ ಪುರದೊಳಗೋತನ್ನಮನಿಕ್ಕದಂತೆ ಕಟ್ಟಳೆಯಂ ಮೇಱೆತೆಱದಿಂ ಮಾಱ್ಪೆವು (ಉದ್ಭಟ. ೧೧–೯೫); ಹುಟ್ಟಿಸುವ ರಕ್ಷಿಸುವ ಭಕ್ಷಿಪ ಕಟ್ಟಳೆಯ ಸಳವಡಿಸಿ (ಪ್ರಭುಲೀ. ೧–೨೧); ಕಾವಲು ಕಟ್ಟಳೆ ಪುರದೊಳು ಬಿಡದೆಚ್ಚಱೊಳಗಿರಲೆಂದು ಪೊಡವೀಶ್ವರ ದಳಪತಿಗೆ ನೇಮವನಿತ್ತು (ಕಂನವಿ. ೧೨–೯೮). ೨. [ನಾಟ್ಯ] ಭರತನಾಟ್ಯದಲ್ಲಿ ಹಸ್ತಮುದ್ರೆಗಳನ್ನು ತೋರಲು ಬೆರಳುಗಳನ್ನು ಜೋಡಿಸುವ ಕ್ರಮ, —ರೀತಿ : ಕರದಭಿನಯ ಕಟ್ಟಳೆ ಕಳಾಸಿಕೆಯಿಂದ ಸಿರಿಯರಸನನೋಲಗಿಪರು (ಕಂನವಿ. ೭–೧೦೭); ಗಿಳಿಯ ಕಟ್ಟಳೆ ಸೋಗೆನವಿಲಾಟ ಹಂಸೆಯೆರಳೆಗಳ ಗತಿ ಗಂಡುವೇಷಗಳ ಬಗೆಬಗೆಯಭಿನಯ ವಿಲಾಸಗಳಿಂದ ತಲೆದೂಗಿಸಿದರು ಸಭೆಯ (ಕಂನವಿ. ೨೧–೧೧೬). ೩. (ಚಿನ್ನವನ್ನೂ ರತ್ನವನ್ನೂ ತೂಗುವ) ತೂಕ; ಅಳತೆ; ಪ್ರಮಾಣ : ಒಟ್ಟದ ಪೊನ್ನಬೆಟ್ಟುಗಳ ನೀವೆಡೆಗೇವುದೊ ತೂಕಮೆನ್ನ ಕೆಯ್ಗಟ್ಟಳೆ ಕೊಳ್ಳಿಂ (ಪಂಪಭಾ. ೬–೩೯); ಹೊನ್ನ ತೂಗಿದ ತ್ರಾಸು ಕಟ್ಟಳೆ [ಪಾಠಾಂ. ಜೆ] ಹೊನ್ನಿಂಗೆ ಸರಿಯಪ್ಪುದೆ (ಅವಚಂ. ೧೦೮–೪೯೦); ಸೊಗಸು ಮಿಗಲಾ ತ್ರಾಸು ಕಟ್ಟಳೆಯೊಗು ಮಿಗೆಯ ಮಾಷಗಳ ಪದ್ಧತಿಯಗಲದಲಿ ಹರಹಿದನು (ಸಂಭಪ. ೩೨–೩೩).

೪. ದೇವಸ್ಥಾನದಲ್ಲಿ ನೈವೇದ್ಯದ ಏರ್ಪಾಟು: ಇಂದು ಏನು ಕಟ್ಟಳೆ? (ರೂಢಿ). **ಕಟಲೆ**: ೫. ಮಠ ಮೊದಲಾದುವುಗಳಿಗೆ ಕೊಡುವ ಕಾಣಿಕೆಯ ನಿಗದಿ; ಸೇವೆಯ ಕಾಣಿಕೆ; ಸೇವಾಕ್ರಮ: ಆ ರಾಮಣ ದೇವರಿಗೆ ನಂಮ ಅರಮನೆಯಲು ಕೊಡುವ ಕಟಲೆಗೆ ಆ ರಾಮಣ ದೇವರ ಸಂನಿಧಿಯಲು ಹಿರಂಣ್ಯೋದಕ ದಾನ ಧಾರಾಪೂರ್ವ್ವಕವಾಗಿ ಧಾರೆಯ ನೆರದು ಸಮರ್ಪಿಸಿ ಕೊಟ್ಟದು (ಎಕ. XI, ಮೊಳಕಾ. ೩೧-೪ ; 1386). **ಕಟಳೆ**: ೧. ಅಧಿ[ಕಾರಿ] ಸುಂಕಿಗ ತಳವಾರರು ಆರು ಊಗದಾಂಗೆ ಕಟಳೆಯನು ಮಾಡಿ ಸರ್ವ್ವಮಾನ್ಯವಾಗಿ ನಡಸಿ ಬಹದು (ಸೌಇಇ. IX-ii, ೪೨೯-೩೮ ; 1405); ತಂನ ಪೂಜೆಯು ಮಾಡುವಹಾಗೆ ಕಟಳೆಯ ಮಾಡಿಕೊಂಡನು (ಎಕ. XI, ದಾವಣ. ೧೪೫-೬; ?). **ಕಟ್ಟಣೆ$_2$**: ೧. ಆಡುವ ಚಿತ್ತ ನಿಜವಸ್ತುವಿನ ಗೊತ್ತನಱಿಯದೆ ತನ್ನ ಇಚ್ಛೆಯಲ್ಲಿ ಹರಿದಾಡುತ್ತಿದೆ ನೋಡಾ ಇದಕ್ಕೆ ಒಂದು ಕಟ್ಟಣೆಯ ಗೊತ್ತ ಲಕ್ಷಿಸಿ ಕಟ್ಟುವಡೆವಂತೆ ಮಾಡು (ತುಜುಗಾ. ೪೦); ಸುಖಂಗಳಿಗೆ ಪಡಿಯ ಆ ಕಟ್ಟಣೆಯೊಳಿಕ್ಕುತೆಯ್ದೆ ಬಂದಪುದಾಗಿಯೇ (ವೀಶೈಪು. ೫-೯-೧೮); ಕಟ್ಟಣೆಯಿಲ್ಲದಪ್ರತಿಮನೊಳಗೆ ಯಳವಟ್ಟಿರ್ದ ಮೋಳಿಗೆಯಯ್ಯ (ಮೋಳಿಪು. ೫-೧೩೮). **ಕಟ್ಟಲೆ**: ೧. ಘುಟ್ಟಿದವರಿಗೆ ಸಾವು ತಪ್ಪದು ಬೊಮ್ಮನ ಕಟ್ಟಲೆ [ಪಾಠಾಂ. ಣೆ, ಳೆ] ಇದಕಂಜಲೇಕೆ (ಕುರಾಸಾಂ. ೩೩-೧೦೧); ಕುಱಿಯ ಹಿಂಡಿನ ಕಾವಲಿಹುದೆಂದಱುಹೆ ತೋಳಗೆ ಕಟ್ಟಲೆಯ (ಕೋಗಯ. ೨೪-೧೪); ರಾಯ ರಾಜ್ಯ ಭಾರವಂ ಮಾಡಿದುದಕ್ಕೆ ಕಟ್ಟಲೆ ತಪ್ಪದೆ ನಡೆವುದೇ ಫಲ (ಬತ್ತೀಪು. ೨೭). ೩. ಧಾನ್ಯಂ ಗುಂಜೆ ಮೂಷ ಕಟ್ಟಳೆ ಮೊದಲಾದುವಕ್ಕುಂ (ಶ್ರಾವಕಾ. ೫೮-೨೦). ೫. ಈ ದೊರೆಗಳ ಸಂಸಾರವೆಲ್ಲಾ ಮಹಾಲಯ ಅಮಾವಾಸ್ಯೆ ಕಟ್ಟಲೆ ಮಾಡುವುದಕ್ಕಾಗಿ ಪ್ರತಿವರುಷವೂ ಕಣಕುಪ್ಪಗೆ ಹೋಗುತಾ ಇದ್ದರು (ಚಿತ್ರಪಾ. ೪೮). ೬. ಸರದಿ; ಪಾಳಿ: ಒಂದೊಂದು ಶುಕ್ರವಾರ ಒಬ್ಬೊಬ್ಬರ ಮನೆಯ ಕಟ್ಟಲೆ (ಇಬದು. ೧೧೨). **ಕಟ್ಲೆ**: ೧. ಕಟ್ಲೇ ಮಾಡಿಸಿಯಿರುವುದರಿಂದ (ಎಕ. VI, ಕೊಪ್ಪ. ೪೮-೪೨ ; 1811). ೪. ಹೀಗಾಗಿ ದೇವಸ್ಥಾನದಲ್ಲಿ ವಿಶೇಷ ಕಟ್ಲೆ ಶ್ರಾವಣದಲ್ಲಿ ಪ್ರತಿದಿನವೂ ಇದ್ದದ್ದೇ (ಹೊಸಕ್ಷಿ. ೧೫). ೭. ಅವಧಿ; ಸಮಯ: ಕಟ್ಲೆ ತುಂಬಿದ ಮೇಲೆ ಕ್ಷಣಮಾತ್ರ ಇರಲಿಲ್ಲ ಅಷ್ಟಱೊಳು ಪುರಂದರವಿಠಲನೆನು ಮನವೆ (ಪುರಂದ. ೨-೬೧-೫). ೮. ಕ್ರಮ; ಪದ್ಧತಿ: ಚಿನಿವಾರರು ಸರಾಫಚೀಲವನ್ನು ತಮ್ಮ ಹೆಗಲ ಮೇಲೆ ಹೊತ್ತುಕೊಂಡು ಹೋಗುವ ಕಟ್ಲೆ ಉಂಟಷ್ಟೆ (ಕಥಾಮಂ. ೧೫-೧೬). ೯. ದಾವ; ವ್ಯಾಜ್ಯ: ಕಾಲುಪಾಲು ಹೊಲ ಬಿಡಿಸಿಕೊಡದೆ ತ್ರಕರಾರ್‍ರು ಮಾಡುತ್ತಾರ್‍ರೆಂಬುದಾಗಿ ಫಿರಿಯಾದಿ ಮಾಡಿದರ್‍ರಿಂದ ಕಟ್ಲೆಮಾಡಿಶಿ (ಎಕ. VII (S), ಚನ್ನಗಿ. ೮೫-೧೬ ; 1821); ಅವರ ಮೇಲೆ ಕಟ್ಲೆ ಹೂಡಿದರು (ರೂಢಿ). ೧೦. [ವೀಶೈ] ಗುರುಗಳ ಪಾದಪೂಜೆಮಾಡಿ ಪಾದೋದಕ ಸ್ವೀಕರಿಸುವುದು: ಕಟ್ಲೆ ತೆಗೆದುಕೊಳ್ಳಲು ಬನ್ನಿ (ರೂಢಿ). **ಖಟ್ಲೆ**: ೯. ಒಂದು ಕೊಲೆಯ ಖಟ್ಲೆಯು ಸರಕಾರದ ಪರವಾಗಿ ದಾಖಲಮಾಡಲ್ಪಟ್ಟಿತು (ಲಂಚಪ್ರ. ೯); ಪತ್ರಿಕಾ ಚೌರ್ಯಕ್ಕೆ ಖಟ್ಲೆಮಾತ್ರ ಹಾಕಬೇಕಾಗಿಲ್ಲ (ಗಾಳಿಪ. ೩೪); ಸೋಡ ಪತ್ರಗಳ ಖಟ್ಲೆಯಲ್ಲಂತೂ ಅವನದು ಎತ್ತಿದ ಕೈ (ಮೊಪಾಸಾ. ೪೧). ೧೧. ರೀತಿ; ಮಾರ್ಗ: ವಾಸವನೆ ನಾವು ಸೋಲುವರಲ್ಲ ಬಂದ ಖಟ್ಲೆಯನರಿದು ಪೋಗೆಂದನು (ತುರಂಗ. ೧೬-೩೪).

[ದೇ. ‖ ತಮಿ. ಕಟ್ಟಳೈ; ತುಳು. ಕಟ್ಟಳೆ; ತೆಲು. ಕಟ್ಟಡ, ಕಟ್ಟಡಿ]

**ಕಟ್ಟಳೆ$_2$** (ನಾ). ಗಟ್ಟಿಮಜ್ಜಿಗೆ; ನೀರು ಬೆರಸದ ಮಜ್ಜಿಗೆ; "ಮಜ್ಜಿಗೆ" (ಚತುನಿ. ಶಿ. I, ೪೭): ಕಾಯ್ಪವನ ಬಿಸುಪಿಗೇಂ ಬಿರ್ದಾಗಿ ತಂದಿತ್ತ ಕಟ್ಟಳೆಯ ಮೊಗೆಯೋ? (ಕಾಲೂರ. ೧೨೭-೨೭೦).

[< ಕಡಿದು + ಅಳೆ$_2$]

**ಕಟ್ಟಳೆ$_3$** (ನಾ). ವಿಗ್ರಹ; ಪ್ರತಿಮೆ: ಕಟ್ಟಳೆ[ಪಾಠಾಂ. ಣೆ]ಯೊಳಗಣ ಕಾಂಸ್ಯದಂತೆ . . . ಚಿನ್ನದೊಳಗಣ ಬಣ್ಣದಂತೆ (ಆದವ. ಹ. ೨-೮).

[ದೇ. ‖ ತಮಿ. ಕಟ್ಟಳೈ]

**ಕಟ್ಟಳೆಮರ** (ನಾ). ಸೈನ್ಯದವರ ಒಂದು ಸಾಧನ (?): ಸರಕಿನ ಕೋಣೆ ಕಟ್ಟಳೆಮರಂ ಕುಡುಗೋಲ್ ತೆರೆಸೀರೆ ದಬ್ಬಳಂ ಹುರಿ ಗಡಹಾರೆ . . . ಎಂಬುರುತರ ಸಾಧನಂಬೆರಸು ದಂಡಿನವರ್ ಪೊಱಮಟ್ಟರರ್ಥಿಯಿಂ (ತ್ರಿಪುವಿ. ೨೪-೨೮೫). [ಕಟ್ಟಳೆ? + ಮರ$_1$]

**ಕಟ್ಟಳ್ಕಱ್** 'ಕಟ್ಟಟ್ಕಱ್' ನೋ.

**ಕಟ್ಟಳ್ಕೆ** (ನಾ). ಗಾಢತೆ; ಸಮ್ಮರ್ದ; ಒತ್ತಾಗಿ ಸೇರಿರುವುದು: ಕಟ್ಟಳೆ, ಕಟ್ಟಳ್ಕೆ (ಶಮದ. ೧೮೦ ಪ್ರಯೋ). [< ಕಡಿದು + ಅಳ್ಕೆ$_2$]

**ಕಟ್ಟಱವೆ, ಕಟರೆ, ಕಟ್ಟರೆ, ಕಟ್ಟಱಿ, ಕಟ್ರೆ** (ನಾ). ಅರಗದಿರುವುದು; ಅಜೀರ್ಣ: ಕಟ್ಟಱವೆಯಾದೊಡಾಂ ಮುಟ್ಟೆ ಸುವೆನೇ ಕಾಲದೃಷ್ಟಿಯೆಂಬಡೆ ಹಾಲ ಮುಚ್ಚಿಕೊಂಡಾಂ ಬಂದೆ (ಲಶಿಚಂ. ೩೭-೫೮); ಮೆಟ್ಟಿ ಕೊರಳ ಕೊಯ್ದು ಪ್ರಳಯದ ಕಾಲಗೆ ಕಟ್ಟಱವೆಯ ಮಾಡಿದರು (ಕಂನವಿ. ೧೪-೮೬). **ಕಟರೆ**: ಕವಿ ಶೃಂಗಾರದ ವಿವಿಧ ಮುಖಗಳನ್ನು ಕಟರೆಯಾಗುವಷ್ಟರಮಟ್ಟಿಗೆ ವರ್ಣಿಸಿದ್ದಾನೆ (ನಂಜುಂಡ. ೯೭). **ಕಟ್ಟರೆ**: ನೂರು ವಸಂತಗಳ ಹೀರಿ ಕಟ್ಟರೆಯಾಗಿದೆ ಇದರ ಜೀವ (ಶಿಲಾಲ. ೪೨). **ಕಟ್ಟಱಿ**: ಮಾಣನವನೆಂದುಮೇನ್ ತನ್ನೆ ದರ್ಯ ಕಟ್ಟಱಿಯಿನೋಗಡಿಪುವನ್ನಂ (ಬದ್ಧಪ್ರ. ೧೦-೨೦೩). **ಕಟ್ರೆ**: ಅಜೀರ್ಣದಿಂದ ಕಟ್ರೆಯಾಗಿ (ಶಿವದ. ೧೫೨). [< ಕಡಿದು + ಅಱವೆ (< ಅಱಮೆ)]

**ಕಟ್ಟಱಿಕೆ** (ನಾ). ೧. ವಿಶೇಷವಾದ ತಿಳಿವಳಿಕೆ. ೨. ಸುಪ್ರಸಿದ್ಧಿ; ಹೆಚ್ಚಿನ ಪ್ರಸಿದ್ಧಿ: ಕುಱಿವಾನಿಸನಾನೆ ಕುಬುದ್ಧಿಯಾನೆ ಕಟ್ಟಱಿಕೆಯ ದುಷ್ಟನಾನೆ ಮಱೆ ದೇವ ಮದೀಯ ಶತಾಪರಾಧಮಂ (ಶಬಶಂ. ೪-೧೯).

[< ಕಡಿದು + ಅಱಿಕೆ]

**ಕಟ್ಟಱಿ** 'ಕಟ್ಟಱವೆ' ನೋ.

**ಕಟ್ಟಱಿಗಾಣ್** (ಕ್ರಿ). ಅಜೀರ್ಣಹೊಂದು: ಕೊಟ್ಟು ಬೇಸಱದ ಮುಗುದರಸು ದೊರಕಿದನಲೇ ಎಂದು ಕಟ್ಟಱಿಗಂಡ [ಪಾಠಾಂ. ಗಣ್ಣ, ಕಂಡೆ] ಪಾಪಿ ನಿಷ್ಕರುಣಿ ನಿರ್ದಯ್ಯ (ಹಚಕಾ. ೯-೭).

[ಕಟ್ಟಱಿ (< ಕಟ್ಟಱವೆ) + ಕಾಣ್]

**ಕಟ್ಟಟ್ಕಱ್, ಕಟ್ಟಕ್ಕರು, ಕಟ್ಟಕ್ಕರೆ, ಕಟ್ಟಕ್ಕಱ್, ಕಟ್ಟಳ್ಕಱ್** (ನಾ). ಅತ್ಯಂತ ಪ್ರೀತಿ. **ಕಟ್ಟಕ್ಕರು**: ಉಳಿದಿರಲು, ಮಾತಾಡಿ, ಆಳಿಸುವರೆ ಆದನೆಂದು ಮುಳಿಯುವೆನು ನನ್ನ ಕಟ್ಟಕ್ಕರಿನ ಬಳಿಯೂ (ಇಂಗೀತ. ೫೬-೧೨). **ಕಟ್ಟಕ್ಕರೆ**: ಕಂಪಿಲನಿಗೆ ಸ್ವಭಾವತಃ ಕುಮಾರ ರಾಮನ ಮೇಲೆ ಕಟ್ಟಕ್ಕರೆ (ಕುಮಾಸಾಂ. ೩೩೧). **ಕಟ್ಟಕ್ಕಱ್**: ಕಟ್ಟಕ್ಕಱ [ಪಾಠಾಂ. ರ, ಱನ, ಱಿನ] ಮಗನನಗಲಲಾಱದೆ (ನಂಬಿರ. ೧೨-೧೭); ಪಗೆತನಮಂ ಮಾಡಬಹುದೆಯೆನುತಶ್ರುಗೆ ಮುನಿದಳ್ ಕಟ್ಟಕ್ಕಱ ಮುಗುದೆ (ಉದ್ಭದೇ. ೪-೨೪). **ಕಟ್ಟಳ್ಕಱ್**: ಹೋಮ ಸಮಾಪ್ತಿಯೊಳಾಪ್ತನಪ್ಪ ಕಮಳಜಂ ಸಪ್ತಪದಿಯಂ ಕಟ್ಟಳ್ಕಱಿಂ ಮೆಟ್ಟಿಸಿ (ಗಿರಿಕ. ೧೦-೯೬ ವ); ನಿಜಸುತಂಗೆ ಮಿತವಚನಾಭಿಧಾನಮನಿಟ್ಟು ಕಟ್ಟಳ್ಕ[ಪಾಠಾಂ. ಕ್ಕ]ಱಿಂ ಸಲಪುತ್ತ್ರನಿರ್ಪಿನಂ (ರಾಜಶೇ. ೩-೨೬ ವ); ಕಟ್ಟಳ್ಕಱಿಂ ಭಕ್ತಿಸೌರಭ ಪರಿಮಿಳಿತ ಮೃದುತರ ಹೃದಯನಳಿನ ಸುಖಾಸನದೊಳ್ಮೂರ್ತಿಗೊಳಿಸಿಯುಂ (ವೃಷವಿ. ೨೩-೧೪ ವ). [< ಕಡಿದು + ಅಟ್ಕಱ್$_2$]

**ಕಟ್ವಾಗುಳಿಕೆ** (ನಾ). ಅಗಲವಾಗಿ ಬಾಯಿತೆರೆದು ಆಕಳಿಸುವುದು: ಜವಗತಿಯ ಹೆಕ್ಕಳದ ಗಳಘರ್ಜನೆಯ ಕಟ್ವಾಗುಳಿಕೆಗಳ ನಾಯ್ತುಡುಕಿದವು ತಡೆದಖಿಳ ಮೃಗಕುಲವ (ತೊರರಾ ೩-೩-೧೪).

[< ಕಡಿದು + ಆಗುಳಿಕೆ]

**ಕಟ್ಟಾಚಾರ**(ನಾ). ನಿಷ್ಠೆಯಿಂದ ಪಾಲಿಸಬೇಕಾದ ಆಚಾರ: ಇಂತಿದಂ ಮಾಳ್ಪುದಕೆ ಕಾರಣವನಱಿವು ಎನಗೆಂದೆನಲ್ ನೋಳ್ಪೊಡುಬ್ಬಟೆಯ ಕಟ್ಟಾಚಾರವೇನೆನಲ್ ಮಱುಮಾತುಗುಡದೆ ತೃಣದನಿತುಮಂ ಲೆಕ್ಕಿಸದೆ (ಸಾಮುರ. ಹ. ೨೪೧–೨೨). [< ಕಡಿದು + ಆಚಾರ]

**ಕಟ್ಟಾಜ್ಞೆ**(ನಾ). ಕಠೋರವಾದ ಅಪ್ಪಣೆ; ಉಗ್ರವಾದ ಆಜ್ಞೆ: ನೇಮಿಸಿ ಹರಿಪತಿಗಳನು ಕಳುಹಿದನು ಕಟ್ಟಾಜ್ಞೆಯಲಿ ರವಿಜ (ತೊರರಾ. ೪–೮–೧೯); ತಲೆಯಾಳುಗಳ್ ಪರಿದರಂಬುಧಿವರೆಗೆ, ಸಾರುತೆ ಕಪಿಧ್ವಜಂ ತಾಂ ಮೆರೆವ ನಾಡೊಡೆಯರೆಲ್ಲರ್ಗೆ ಕಟ್ಟಾಜ್ಞೆಯಂ (ಶ್ರೀರಾಮಾ. ೩೪೭–೨೧೦); ತಲ್ಲಣದ ಕಟಾಜ್ಞೆಗಾಗಲಿ ಎಲ್ಲರೋಡಿದರ್ ಅರಸುತಾ (ಕಎಪು. ೪೦–೬). [< ಕಡಿದು + ಆಜ್ಞೆ]

**ಕಟ್ಟಾಡಿಕೆ**(ನಾ). ೧. ಬಿರುಸಾದ ಚಲನೆ: ರಾಘವನ ಕೈಗಾಡಿಕೆಯ ಕಣೆ ಕತ್ತಲೆಯ ಕಟ್ಟಾಡಿಕೆಯ ಖಳನವಯವವ ಬಗಿದುಗಿದುದಗಲದಲಿ (ತೊರರಾ. ೬–೨೮–೨೨). ೨. (ಉಕ) ಕಚಗುಳಿಯಿಡುವುದು. 'ಕಟ್ಟಾಡಿಸು' ಪರಾ. [< ಕಡಿದು + ಆಡಿಕೆ]

**ಕಟ್ಟಾಡಿಸು** (ಕ್ರಿ). (ಉಕ) ಕಚಗುಳಿಯಿಡು: ಅವರಿಬ್ಬರ ಆ ಸ್ಥಿತಿಯನ್ನು ನೋಡಿ ನನಗೆ ಕಟ್ಟಾಡಿಸಿದಂತಾಯಿತು (ಚಂದುಟ. ೯೮). [< ಕಡಿದು + ಆಡಿಸು]

**ಕಟ್ಟಾಡು** (ಕ್ರಿ). ಬಳಸು; ಸುತ್ತುವರಿ: ಭಂಗಮನಿಕ್ಕಿಯುಂ ಮೂಱಿಡೆ ಗಲ್ಲದೆ ಕಟ್ಟಾಡಿಯುಂ ಮುಱಿಯೆ ಪೊಯಿಸಿದನುರಿಯಂ ಕೊನ್ನು ಧರೆಗೆಡೆತರ್ಗರ್ಗಡ ಯಿವನೆನಿಸದೆ ನೆಱಿಯೆ ಕಡುಜಾಣನೆನಿಸಲ್ಕೆ ಬಕ್ಕುಮೆ (ಎಕ. II, ೧೩೩–೧೪೦; 982); ಅಲೈಗಾರರಂತೆ ಕಟ್ಟಾಡಿವಂದಣಿದಪ್ಪಿ ಹೊಯಿದರು ಮೊಗಲ ರಾವುತನ (ಸೌಂದಕಾ. ೬–೧೧೩). [ಕಟ್ಟು$_1$ + ಆಡು$_1$]

**ಕಟ್ಟಾಣತಿ** (ನಾ). = ಕಟ್ಟಾಜ್ಞೆ: 'ಸೋತ ಜನಕ್ಕೆ ನಮ್ಮ ಸೈನ್ಯದ ಜನ ಯಾವ ತೊಂದರೆಯನ್ನೂ ಕೊಡಬಾರದೆಂದು ಕಟ್ಟಾಣತಿ ಮಾಡಿದ್ದಾಗಿದೆ . . .' (ಸಣ್ಣಕ. VIII, ೨). [< ಕಡಿದು + ಆಣತಿ$_3$ (< ಆಣತ್ತಿ)]

**ಕಟ್ಟಾಣಿ, ಕಟ್ಟಾಣೆ$_1$, ಕಠಾಣಿ, ಕಡ್ಡಾಣಿ**(ನಾ). ೧. ಶ್ರೇಷ್ಠವಾದದ್ದು; ಬಲು ಬೆಲೆಯುಳ್ಳದ್ದು: ಒಂದು ಚಿಪ್ಪಿನಲ್ಲಿ ಮೂಱು ಮುತ್ತು ಹುಟ್ಟಿದುವು ಒಂದು ಕಟ್ಟಾಣಿ ಒಂದು ಸುಪ್ಪಾಣಿ (ಮನುಗುಂ. ೮೪); ಶ್ರೀಕಳಾವಾಸಿನಿಯಿವಳ ವಾಕೆಲ್ಲ ಕಟ್ಟಾಣಿ (ಭರಚ. ೩೭–೭೦). ೨. ಶ್ರೇಷ್ಠ ವ್ಯಕ್ತಿ: ಸುಭಟರಲಿ ಕಟ್ಟಾಣಿ ಬಾರ್ಕೈ ತಂದೆ (ತೊರರಾ. ೬–೩೩–೩೨); ಪೆಣ್ಗಾಂಗನೆಯರ ಕುಲಕತಿ ಕಟ್ಟಾಣಿ ಮದನಮೋಹಿನಿಯೆಂಬ ಲಲನೆಯೊಪ್ಪಿದಳ್ (ಕಂಠವಿ. ೯–೧೫). ೩. ಬಲು ಬೆಲೆಯುಳ್ಳ ಮುತ್ತಿನ ಸರ; ಒಂದು ಕಂಠಾಭರಣ: ಕರುಣರಸವೆಂಬಂಥ ಕಟ್ಟಾಣಿ ಕಟ್ಟಿಕೊಂಡು (ಪುರಂದ. ೧–೩೪–೧); ಮುತ್ತಿನ ಯೇಳುಸರಂಗಳ ಕಟ್ಟಾಣಿಯಂತೆ (ಸೌಗಂಧಿ. ೨೩೨–೨); ಕಾಳು ಕಡ್ಡೀ ಮಾರಿ ಕಟ್ಟಾಣಿ ಮಾಡಿಸಿದ್ದೆ ಕಟ್ಟಾಣೊಂದರ ಘಳಿಗಿಕ್ಕಲಿಲ್ಲವೋ (ನಾಪದ. ೨೬). (ಗು). ೪. ಶ್ರೇಷ್ಠವಾದ; ಬಲು ಬೆಲೆಯುಳ್ಳ. 'ಕಟ್ಟಾಣಿಮುತ್ತು' ಪರಾ. **ಕಟ್ಟಾಣೆ$_1$**: ೧. ಕಟ್ಟಾಣೆ ಯಾವುದು ನಿಮ್ಮ ದೇಶದೊಳುಳ್ಳ ವಸ್ತುಗಳ . . . ಕಾಣಿಕೆಯನೀವುದು (ಕುವ್ಯಾಸ. ೩–೬೫). **ಕಠಾಣಿ**: ೩. ಬೆಲೆಯುಳ್ಳ ಮುತ್ತಿನ ಕಠಾಣಿಯು ಜಗನ್ನಾಥನಿಗೆ ಸಿಕ್ಕಿತು (ಮುಂಬಯಿ. ೪–೫೧); ವಾಲೆ ಮೂಗುತಿ ಅಣಿಮುತ್ತು ಕಠಾಣಿ (ವಿಪಕೀ. ೭). **ಕಡ್ಡಾಣಿ**: ೩. ವಾಣಿ ಕಮಲಾಸನನ ಪಟ್ಟದ ರಾಣಿ ವಿದ್ಯಾವಿದ್ಯಗಳ ಕಡ್ಡಾಣಿ . . . ನಟಿಸೊಲಿದು ರಸನಾಗ್ರ ರಂಗದಲಿ (ದೇವೀಮು. ೧–೪). [< ಕಡಿದು + ಅಣಿ$_1$]

**ಕಟ್ಟಾಣಿಪೆಣ್** 'ಕಟ್ಟಾಣಿವೆಣ್' ನೋ.

**ಕಟ್ಟಾಣಿಮುತ್ತು** (ನಾ). ಬೆಲೆಯುಳ್ಳ ಮುತ್ತು; ಶ್ರೇಷ್ಠವಾದ ಮುತ್ತು: ತಳತಳಿಪ ಪೊಸ ಕಟ್ಟಾಣಿಮುತ್ತಿನೆಸೆವ ಮೂಕುತಿಯ (ಪದ್ಮರಾ. ೩–೪೭); ಕಟ್ಟಾಣಿಮುತ್ತಿನ ಚೌಕುಳಿ ಕೊರಳೊಳಗಿಟ್ಟ ಪದಕ ಚಂದ್ರಹಾರ (ಕಂಠವಿ. ೬–೬೧). [ಕಟ್ಟಾಣಿ + ಮುತ್ತು$_5$]

**ಕಟ್ಟಾಣಿವಡೆ** (ಕ್ರಿ). ಕಟ್ಟಾಣಿ ಮುತ್ತುಗಳನ್ನು ಹೊಂದು; ಶ್ರೇಷ್ಠ ಮುತ್ತುಗಳಿಂದ ಕೂಡಿರು: ಕಡಗ ಭಾಪುರಿದ್ವಯ ಭುಜಪತ್ರ ಕಟ್ಟಾಣಿವಡೆದ ಕಂಧರದ ಮಾಲಿಕೆಯ (ಮೋಹತ. ೪೧–೫೫೭). [ಕಟ್ಟಾಣಿ + ಪಡೆ$_1$]

**ಕಟ್ಟಾಣಿವೆಣ್, ಕಟ್ಟಾಣಿಪೆಣ್** (ನಾ). ೧. ಶ್ರೇಷ್ಠಳಾದ ಹೆಂಗಸು: ಕಟ್ಟಾಣಿವೆಣ್ಣೆನಿಸುವ ಕ್ಷತ್ರಿಯಾತ್ಮಜೆ ಪಟ್ಟವರ್ಧನನ ಕೈವಿಡಿದು (ಭರಚ. ೯–೮೭). ೨. ಮಿಗಿಲಾದ ಚೆಲುವೆ: ದಿಟ್ಟದೆಗೆಯದೆ ವಿಟರು ತಲೆದೂಗುವ ಕಟ್ಟಾಣಿವೆಂಗಳ ಕಂಡರು (ಗೋಮಟೇ. ೧–೭೯). **ಕಟ್ಟಾಣಿಪೆಣ್**: ೨. ಊಣಯವನು ಮೋಹದೊಳಗೆ ಕಾಣಿಸದ ಕಟ್ಟಾಣಿಪೆ [ಪಾಠಾಂ. ವೆ] ಣ್ಗೊಲಿಯರೆ ವಿಟರು (ಕುರಾಸಾಂ. ೨೮–೭೧). [ಕಟ್ಟಾಣಿ + ಪೆಣ್]

**ಕಟ್ಟಾಣಿಸರ**(ನಾ). ಬೆಲೆಯುಳ್ಳ ಮುತ್ತಿನ ಸರ: ಕಂಠೀಸರ, ಕಟ್ಟಾಣಿ ಸರ . . . ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲಿಮಂ. ೩೮). [ಕಟ್ಟಾಣಿ + ಸರ$_6$]

**ಕಟ್ಟಾಣೆ$_1$** 'ಕಟ್ಟಾಣಿ' ನೋ.

**ಕಟ್ಟಾಣೆ$_2$** (ನಾ). = ಕಟ್ಟಾಜ್ಞೆ: ಜನರಾರೂ ಅರಿಯದಿರಲೆಂದು ಮಂತ್ರಿಯ ಕಟ್ಟಾಣೆ (ಚಂದ್ರಸ. ೨೨). [< ಕಡಿದು + ಆಣೆ$_2$]

**ಕಟ್ಟಾಣೆ$_3$** (ನಾ). ಶ್ರೇಷ್ಠವಾದದ್ದು (?): ಬಿಸಿಗೂರುಳ್ ಬಾಚ್ವ ಪ್ರಜೆಗೆಲ್ಲಂ ಕೊಟ್ಟೊದು ಕಟ್ಟಾಣೆ ಮಯ್ಯಾರ್ಕದಿ ಕಾರಾಳ್ಮೆಗೊಟ್ಟಾರ್ (ಎಕ. IX (S), ಮಾಗಡಿ. ೧೨೯–೫; 800). [?]

**ಕಟ್ಟಾನೆ** (ನಾ). ಬಲಿಷ್ಠವಾದ ಆನೆ: ಕಟ್ಟಾನೆ ಕಡಂಗಿ ಕೊಲ್ವ ತೆಜದಿಂ ಕೊಂದಂ ಮರುನ್ನಂದನಂ (ಗದಾಯು. ೬–೧೨); ಕಟ್ಟಾನೆಯುಮಂತುಟಲ್ಲ ಸರಿ ದಿಕ್ಕರಿಯೊಳ್ (ಅನಂಪು. ೧೩–೧೭); ಅನೆವಿನ್ನಣೆಯಪ್ಪುದೀ ಕಟ್ಟಾನೆಯೆಂದು ಕುಮಾರನಾ ಮದದಾನೆಯನು ಬೆಂಬರಿದು (ಸಾಳ್ವಭಾ. ೬–೧೩). [< ಕಡಿದು + ಆನೆ$_1$]

**ಕಟ್ಟಾನೆಮಲ್ಲ** (ನಾ). ಬಲಿಷ್ಠವಾದ ಆನೆಯನ್ನು ಸೋಲಿಸುವ ಜಟ್ಟಿ; ಒಂದು ಬಿರುದು (?): ತುಱುದಿಕ್ಕಿದನಾನ್ತ ಘಟಿಯನಾಯದ ಗಣ್ಡಂ ಕಟ್ಟಾನೆಮಲ್ಲನಂ ಕಡುಗಟ್ಟಿಗನುತ್ತಿಗನನೊಳಿಪನಂ ಚಟ್ಟಿಗನಂ (ಎಕ. XV, ಅರಸೀ. ೨೩೭–೧೩; 971). [ಕಟ್ಟಾನೆ + ಮಲ್ಲ]

**ಕಟ್ಟಾಮನುಷ್ಯ** (ನಾ). ಕಟ್ಟುನಿಟ್ಟಿನ ಮನುಷ್ಯ; ನಿಷ್ಠಾವಂತ: ಅವನು ಕಟ್ಟಾಮನುಷ್ಯ. ಅವನಿಗೆ ಅವ್ಯವಸ್ಥೆ ಹಿಡಿಸದು (ರೂಢಿ). [ಕಟ್ಟಾ$_0$ + ಮನುಷ್ಯ]

**ಕಟ್ಟಾಯ್** (ಕ್ರಿ). ಚೆನ್ನಾಗಿ ಆರಿಸು; ಸೂಕ್ಷ್ಮವಾಗಿ ಪರೀಕ್ಷಿಸಿ ಆರಿಸು: ಕಟ್ಟಾಯ್ದು ಬಲ್ಲಾಳ್ಗಳ ಜಟ್ಟಿಗರ ಯೋಧರ . . . ಚಿಕ್ಕ ಸೈನ್ಯವೊಂದನ್ನು ನೆರಪಿ (ಬೆಟ್ಟಅ. ೨೦೬–೧೫). [< ಕಡಿದು + ಆಯ್$_1$]

**ಕಟ್ಟಾಯ$_1$** (ನಾ). ೧. ಬಿಕ್ಕಟ್ಟಿನ ಸಮಯ: ಇಱಿವಾಳ್ ರಣಕ್ಕೆ ತುಱಿಲಾಳ್ ಕಟ್ಟಾಯದೊಳ್ (ಗದಾಯು. ೫–೩೫). ೨. ಬಲಾತ್ಕಾರ; ಕಡ್ಡಾಯ; ಒತ್ತಾಯ (?). ೩. ದೃಢನಿಶ್ಚಯ: ಎನಗೆ ಮಿತ್ರತ್ವ ಮನಿತೊಡಲ್ಲದೆ ಪೋಗೆನೆಂದು ಕಾಗೆ ಕಟ್ಟಾಯಮಂ ನುಡಿಯೆ (ಪಂಚತಂ. ೨೯೭–೧೨); ನೀವು ಕಟ್ಟಾಯದಲಿ ನಡೆಸಿರಲು ನಾನು ದೊರೆಯಾಗಿಹೆನು (ನವರಾ. ೫–೭). ೪. ಮಿಗಿಲಾದ ಸೊಗಸು, —ಚೆಲುವು: ನಾಳೆಗಲ್ಲೆ ಕಾಮನ ಕಟ್ಟಾಯದ ಹಬ್ಬಂ (ರಾಮಾಶ್ವ. ೧೩೪–೧೮). [< ಕಡಿದು + ಅಯ್$_1$. P ತಮಿ. ಅಯ್ = ಸೌಂದರ್ಯ]

**ಕಟ್ಟಾಯ್ಯ₂** (ನಾ). ಮಿಗಿಲಾದ ಸಾಮರ್ಥ್ಯ, —ಪರಾಕ್ರಮ: ಬಿಣ್ಪಿದರಂ ತವೆ ಕೊಂದ ಪೆಂಪು ಕಟ್ಟಾಯದ ಪೆಂಪು ಶಕ್ರನೊಡನೇಱಿದ ಪೆಂಪಿವು ಪೆಂಪುವೆತ್ತು ನಿಟ್ಟಾಯುಗಳಾಗಿ ನಿನ್ನೊಳಮರ್ದಿರ್ದುವು (ಪಂಪಭಾ. ೧೪–೧೭); ಪೊರೆವೋಗದ ಕಟ್ಟಾಯಮುಮುಂ ಒರೆವೋಗದ ಚಲಮುಮಂ (ಶಾಂತಿಪು. ೪–೩೭ ವ); ರಾವಣನ ಕಟ್ಟಾಯಕ್ಕೆ ಮಯಂ ವಿಸ್ಮಯಂಬಟ್ಟು (ಪಂರಾಮಾ. ೧೪–೭೪ ವ); ಕಟ್ಟುಗೊಂಡು ಕಟ್ಟುತ್ತಿಱಿವ ಕಟ್ಟಾಯದ ಕಡುಗಲಿಗಳೆಲ್ಲಂ (ಅನಂಪು. ೧೧–೮೩ ವ). [< ಕಡಿದು + ಆಯ್ಯ₃]

**ಕಟ್ಟಾಯಕಾರ್ತಿ** (ನಾ). ಅತಿ ಚೆಲುವೆ: ತೀಯಕಾರ್ತಿಯರ್ ತಾಯಿಲ್ಲದ ಕೂಸಿನಂತೆ ಬಾಯಂ ಬಿಡೆಯುಂ ಕಟ್ಟಾ[ಪಾಠಾಂ. ಟ್ಟೀ, ಟ್ಟ]ಯ ಕಾರ್ತಿಯರ್ ಕೆಟ್ಟ ಮನಮನಱುಸುವಂತೆ ಕಾಮುಪಿಶಾಚದಿಂ ಪುಗ ಱೆಯುಂ ಪುಗೆಯುಂ (ಅರ್ಧನೇ. ೫–೨ ವ). [ಕಟ್ಟಾಯ₁ + –ಕಾಱ + –ತಿ₁ (< –ಇತ್ತಿ)]

**ಕಟ್ಟಾಯಕಾಱ** (ನಾ). ಕಡುಗಲಿ; ಶೂರ: ನಿಸರ್ಗಶೂರನುಂ ಕಟ್ಟಾಯ ಕಾಱನುಂ ಅಪ್ಪುದಱಿಂ (ಶಾಂತಿಪು. ೪–೮ ವ). [ಕಟ್ಟಾಯ್ಯ₂ + –ಕಾಱ]

**ಕಟ್ಟಾಯತ** (ಗು). ೧. ಶ್ರೇಷ್ಠವಾದ: ಕಡೆದೆಱಿದಂತೆ ಕಟ್ಟಾಯತ ಹೊಸ ಹೊನ್ನ ತೊಡೆಹದಂತೆಸೆವ ಮೈಬಣ್ಣ ಅಡರುವ ಜವ್ವನದರಸು ಮಕ್ಕಳು ಬಹ ಕಡುಗಾಡಿ ಸೋಲಿಸಿತವನಾ (ಭರಜ. ೬೭–೧೯). (ನಾ). ೨. ಅಣಿ; ಸಜ್ಜು; ಸಿದ್ಧತೆ: ಕಟ್ಟಿದ ಸುವ್ರತಸೂತ್ರಂ ಮೆಟ್ಟಿದ ಕೆರ್ಪು . . . ಕಟ್ಟಾಯತನಾಗಿ ಚಳಿಯದಿಂ ಪೊಱಮಟ್ಟಂ (ಅನಂಪು. ೧೦–೫೬); ವೈಹಳಿ ಮಾಡಿದವಗೆ ಪಸಾಯನವಿತ್ತಾ ನೃಪತಿ ವೈಯಾರದಿಂ ತಾನೇಱುವೆನೆಂದು ಕಟ್ಟಾಯತಮಾದನಾ ನೃಪತಿ (ಶ್ರೀಪಾಲ. ೪–೧೫). [< ಕಡಿದು + ಆಯತ₁]

**ಕಟ್ಟಾಯತಿ** (ನಾ). ವಿಶೇಷವಾದ ಚೆಲುವು, —ಸೌಂದರ್ಯ. 'ಕಟ್ಟಾಯತಿವೆಱು' ಪರಾ. [< ಕಡಿದು + ಆಯತಿ]

**ಕಟ್ಟಾಯತಿವೆಱು** (ಕ್ರಿ). ವಿಶೇಷವಾದ ಚೆಲುವು ಹೊಂದು, —ಸೌಂದರ್ಯವನ್ನು ಪಡೆ: ಕಟ್ಟಾಯತಿವೆತ್ತ ಸತಿಯ ತಳೋದರ ನೆಟ್ಟನೆ ಹೊಱಹೊಮ್ಮಿತಾಗ (ಮೋಹತ. ೧೭–೫). [ಕಟ್ಟಾಯತಿ + ಪೆಱು₁]

**ಕಟ್ಟಾಯವಡೆ** (ಕ್ರಿ). ಹೆಚ್ಚಿನ ಸಾಮರ್ಥ್ಯವನ್ನು ಪಡೆ; ಹೆಚ್ಚು ಬಲಿಷ್ಠನಾಗು: ಕಟ್ಟಾಯವಡೆದಿರ್ದನಂಗಜನಲರ್ಗೋಲ ತೊಟ್ಟ ಮೋಹನಶಕ್ತಿಯಂತೆ (ಮೋಹತ. ೧೭–೩೮). [ಕಟ್ಟಾಯ್ಯ₂ + ಪಡೆ₁]

**ಕಟ್ಟಾಯವೆಱು** (ಕ್ರಿ). ಹೆಚ್ಚಿನ ಸೊಗಸನ್ನು ಪಡೆ, —ಚೆಲುವನ್ನು ತಾಳು: ಪಟ್ಟದ ರಾಣಿ ರುಕ್ಮಿಣಿದೇವಿ ಬಲದಲ್ಲಿ ಕಟ್ಟಾಯವೆತ್ತು ನಿಂದಿರಲು (ಮೋಹತ. ೩೭–೫). [ಕಟ್ಟಾಯ₁ + ಪೆಱು₁]

**ಕಟ್ಟಾಯಸ** (ನಾ). ಅತಿಶಯವಾದ ಬಳಲಿಕೆ, —ಆಯಾಸ, —ಶ್ರಮ: ಕಸರಿಕೆಯ ಕಾಪಥದ ಕಟ್ಟಾಯಸವು ತಡೆಮುದು (ತೊರರಾ. ೨–೪–೧೭); ರಾಯನ ಕಟ್ಟಾಯಸದ ತಪದ ಬಲ್ಮೆಯಂ ಕಂಡು (ರಾಮಾಶ್ವ. ೬೨–೫). [< ಕಡಿದು + ಆಯಸ₁]

**ಕಟ್ಟಾರತಿ** (ನಾ). ಉತ್ತಮವಾದ ಆರತಿ: ಕಟ್ಟಾರತಿಯ ಮಿರುಗುತಿಹ ಕನ್ನಡಿ ಸುಕಳಸಗಳ ಪಿಡಿದು (ನವಮೋ. ೩೪–೩೪). 'ಉಪ್ಪಾರತಿ₂', 'ದೀಪಾರತಿ' ಪರಾ. [< ಕಡಿದು + ಆರತಿ₁]

**ಕಟ್ಟಾರ್ಪು** (ನಾ). ಮಿಗಿಲಾದ ಕಲಿತನ; ಅತ್ಯಂತ ಪರಾಕ್ರಮ: ಧರ್ಮದಿನೋಜೆಯಿಂ ಸೊಬಗಿನಿಂ ಕಟ್ಟಾರ್ಪಿನಿಂ ಬಲ್ಪಿನಿಂ (ಚಕವಿ. ೨–೫). [< ಕಡಿದು + ಅರ್ಪು₁]

**ಕಟ್ಟಾವೈದಿಕ** (ನಾ). ನಿಷ್ಠಾವಂತ ವೈದಿಕ: ಅವರು ಕಟ್ಟಾವೈದಿಕರು (ರೂಢಿ). [ಕಟ್ಟಾ₀ + ವೈದಿಕ]

**ಕಟ್ಟಾವೈದ್ಯ** (ನಾ). ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ವೈದ್ಯ: ಆತನು ಒಬ್ಬ ಕಟ್ಟಾವೈದ್ಯನಂತೆ ಕಾಣುತ್ತಾನೆ (ರೂಢಿ). [ಕಟ್ಟಾ₀ + ವೈದ್ಯ]

**ಕಟ್ಟಾಸರು** 'ಕಟ್ಟಾಸಱು' ನೋ.

**ಕಟ್ಟಾಸಱು, ಕಟ್ಟಾಸರು** (ನಾ). = ಕಟ್ಟಾಯಸ: ಮಱಿಯುಡುಗಿ ಡಗೆ ದೋಱೆ ಕಟ್ಟಾಸಱು ಮೊಳೆತು ಬಾಯಾಱಿ ತನು ಬೆಮರಿ ಮುಖ ಬಾಡಿ (ಹಚಕಾ. ೬–೩೪); ಆಕಟ ಕಟ್ಟಾಸಱು ಮಹಾರಾಯರಿಗೆ ಬಂದುದೆ ಶಿವ ಶಿವಾಯೆಂದ (ತೊರರಾ. ೪–೨–೫). **ಕಟ್ಟಾಸರು:** (ಶಾಂತನಾಗಿ, ಕಟ್ಟಾಸರಿಂದ ಕಣ್ಮುಚ್ಚಿ, ಘುಲಗನ್ನು ನೆಮ್ಮಿರುವನು) (ಬಿಟ್ಟಅ. ೧೮೩–೧೦). [< ಕಡಿದು + ಆಸಱು₂ (< ಆಸಱ್ಕು)]

**ಕಟ್ಟಾಸುರ** (ಗು). ೧. ಅತ್ಯುಗ್ರವಾದ; ಪ್ರಚಂಡವಾದ: ಮಾಸರಗಂಡ ಬೊಯಲ ಪೋತರಾಜ ಕಟ್ಟಾಸುರ ಮದನಗೋಪಾಲ ಕೇಸುರಿಗಣ್ಣಳ ನರಸಿಂಹನೆನಿಸುವ ಭಾಸುರಗಜಗಳೈದಿದುವು (ಕಂಸವಿ. ೩–೪೦). (ನಾ). ೨. ಪ್ರಚಂಡತೆ; ಅತ್ಯುಗ್ರತೆ: ಅಗಳಸುರಂ ಕಟ್ಟಾಸುರಂ ಕುಂದದ ಕೋಲ್ಗಳಿಸುಗೆಯ ಕೈಚಳಕದಿಂ ಪಗೆಗಳಂ ಘಾತಿಸಿ ಭೀತಿಸಿ (ರಾಮಾಶ್ವ. ೧೧೨–೨೩). ೩. ಅತಿ ರಭಸ, —ತೀವ್ರತೆ, —ವೇಗ: ಅಗಳಾ ಕಪೋತನಂ ಕಟ್ಟಾಸುರದಿಂದಟ್ಟುತ್ತೆ ಬಂದ ಗಿಡಿಗಂ (ಶಾಂತೀಶ್ವ. ೧೩–೨೦ ವ); ಕಟ್ಟಾಸುರದಲೊದಱಿದವು ಘನ ಗಂಭೀರ ಭೇರಿಗಳು (ಕುವ್ಯಾ.ಸ.೧೧–೨೨). ೪. ಅತಿ ಕ್ರೌರ್ಯ: ನೃಪತಿ ಕಟ್ಟಾಸುರದ ಕೊಯ್ಲಾಱರಂ ಕರೆಸಿ ತೆಗೆಸಿದಂ ಮಸೆದ ಕೊಯ್ಕತ್ತಿಗಳನು (ಜೈಮಿಭಾ. ೨೬–೫೧). [< ಕಡಿದು + ಅಸುರ]

**ಕಟ್ಟಾಸೆ** (ನಾ). ತೀವ್ರವಾದ ಅಪೇಕ್ಷೆ; ಕಡುಬಯಕೆ: ಪಲ್ಲವಿಕಂ ಬಿಟ್ಟಗಲಲಾಱದೆ ಕಟ್ಟಾಸೆಯಿಂ ನುಡಿಯಲ್ (ಉದ್ಭಟ. ೩–೨೯ ವ); ಅಹಂಕರಿಸಿ ಕಟ್ಟಾಸೆಯಿಂ ಬಂದು ಪತ್ರಂಗಟ್ಟಿಯುಲಿದೆ ಕೇಳ್ (ಪದ್ಮರಾ. ೧೦–೫೭); ಬೆರಸಿ ಕಟ್ಟಾಸೆಯೊಡನೆಯ್ದಿ ದಾನಾರ್ಥಿಯಾಗೆಱಗಿದ ಸದಾಳಿಗಳ ತೆಪರಿ ನಿಸ್ಸಾರತೆಯ ಧರಿಸಿ (ಸೌಂದಪು. ೭–೯). [< ಕಡಿದು + ಆಸೆ₁]

**ಕಟ್ಟಾಸೆಗಾರಿಕೆ** (ನಾ). ಹಂಬಲು; ಕಟ್ಟಾಸೆಯಿರುವಿಕೆ: ಇಂತಿದು ಈ ಮದನಯಾತ್ರೆಯ ನಿಮ್ಮ ಕಟ್ಟಾಸೆಗಾರಿಕೆಗೆ ಕರೆವಾಟದ ಕೆಣಕು ವೇಟದ ಆದಿಮುಂಗಳವೇನು? (ಮಂತ್ರಶ. ೨೪–೧೩); ಕಟ್ಟಾಸೆಗಾರಿಕೆಯ ಬಲ್ಲ ಬಲ್ಲಿದನು ಶಂಕಿಸಲ್ಪಾರದ ಸುಮುಹೂರ್ತ! (ಬಿಟ್ಟಅ. ೨೧೫–೧೫). [ಕಟ್ಟಾಸೆ + –ಗಾರ (< –ಕಾಱ) + –ಇಕೆ]

**ಕಟ್ಟಾಸೆವಡು** (ಕ್ರಿ). ಬಹಳವಾಗಿ ಅಪೇಕ್ಷಿಸು; ಅತಿಯಾಗಿ ಆಸೆಪಡು: ಇಳೆಯೊಳಗೆ ಹೆಸರುಳ್ಳ ದಾನಿಯೆಂಬುದನು ಕೇಳ್ದಳಸಿ ಕಟ್ಟಾಸೆವಟ್ಟೆಯ್ತಂದು ಬೇಡಿ (ಹಚಕಾ. ೭–೧೫). [ಕಟ್ಟಾಸೆ + ಪಡು₁]

**ಕಟ್ಟಾಳ್, ಕಟ್ಟಾಳು** (ನಾ). ೧. ಕಡುಗಲಿ; ಶೂರ; ಗಟ್ಟಿಗ: ಕಟ್ಟಾಳ್ ಮಾನುಸಗಣ್ಣ ಮನ್ನವ ಬಣ್ಣನಂ (ಎಇ. XXIV, ೨೬೪–೯; 885); ಅದಟೊಂದುತ್ತರಮಾಗೆ ಕಾದಿದರ್ ಕಟ್ಟಾಳ್ಗಳ್ (ಪಂಪಭಾ. ೧೩–೩೭); ಆನೆ ಪೋಗಿ ಕಾದುವೆನೆಂದು ತಱಿಸಂದು ಕಟ್ಟಾಳಾಗಿ (ಶಾಂತಿಪು. ೩–೯೩ ವ); ಕಟ್ಟಾಳ್ ನೆರಂಬಾರ್ವನೇ (ಗದಾಯು. ೫–೪೭). **ಕಟ್ಟಾಳು:** ೧. ಪುಟ್ಟಿದ ಪದಿನೆಂಟು ವರುಷಕೆ ದೀಕ್ಷೆಯ ಕಟ್ಟಾಳು ಕೈಕೊಂಬನೆಂದು ನೆಟ್ಟನೆ ತಿಳಿದು (ಅಂಜಚ. ೪–೧೧೫); ಲೇಸಮಾಡಿದೆ ಭೀಮ ಕಟ್ಟಾಳ್ಗೈಸಲೇ ನೀನವರೊಳಗೆ (ಕುವ್ಯಾಕ. ೩–೬೦); ಹೊಸ ಹೊಂಜುರಿಗೆಯ ಕಟ್ಟಾಳು ಕಣ್ಗೆ ರಂಜಿಸಿದ (ಶ್ರೀಪಾಲ. ೮–೩೭).

೨. ನಂಬುಗೆಯ ಅಡಿಯಾಳು, —ಸೇವಕ: ಅಳ್ವರ ನಡೆ ಸದಾಚಾರ ವೆನ್ನದಿದ್ದರೆ ಕಟ್ವಾಳು ಶಿಷ್ಟತನಕ್ಕೆ ಹೋಹ ಕಷ್ಟವ ನೋಡಾ (ಬಸವ. ೬೯೭); ರಾಮ ಲಕ್ಷ್ಮಣರ ಕಟ್ವಾಳಾಗಿ ನೀ ನಡೆದೆ (ಪುರಂದ. ೧–೧೯೭–೪). [< ಕಡಿದು + ಆಳ್$_3$]

**ಕಟ್ವಾಳು** 'ಕಟ್ವಾಳ್' ನೋ.

**ಕಟ್ವಾಳುತನ** 'ಕಟ್ವಾಳ್ತನ' ನೋ.

**ಕಟ್ವಾಳ್ತನ, ಕಟ್ವಾಳುತನ** (ನಾ). ಮಿಗಿಲಾದ ಪರಾಕ್ರಮ; ಹೆಚ್ಚಿನ ಶೌರ್ಯ: ಪೆರ್ಬಡೆವೆರಸು ಮಹಾನೆರವಿವೆರಸು ಕಟ್ವಾಳ್ತನದಿಂ (ಧರ್ಮಾಮೃ. ೬–೧೧೬); ಉಗ್ರಕೋದಂಡಮಂ ಕೊಂಡು ವಿಮಾನದಿಂ ಪೊಣಮಟ್ಟು ಕಟ್ವಾಳ್ತನದಿನಿಸೆ (ನೇಮಿಪು. ೧೧–೮೬ ವ); ಕಡುಬಿನ್ನಣಂ ಬಡೆದು ಕಟ್ವಾಳ್ತನಂಬೆತ್ತು (ರಾಜಶೇ. ೬–೧೧ ವ). **ಕಟ್ವಾಳುತನ**: ಕಟ್ವಾಳುತನವಾಭರಣವವನೀಪಾಲಸುತರಿಗೆ (ಕುಮಾರವ್ಯಾ ದ್ರೋ. ೫–೩೧); ಕಟ್ವಾಳುತನವನು ಮೆಱೆದರಿದಿರಲಿ ರಾಘವೇಶ್ವರನ (ತೊರರಾ. ೬–೪–೯). [ಕಟ್ವಾಳ್ + -ತನ]

**ಕಟ್ವಾಳ್ತನಂಬೆಱು** (ಕ್ರಿ). ಮಿಗಿಲಾದ ಪರಾಕ್ರಮವನ್ನು ಹೊಂದು: ಸಿಡಿಲ ಪಡೆ ಕಾಲನ ಕಾಯ್ಪುಗೊಂಡು ಕಟ್ವಾಳ್ತನಂಬೆತ್ತಂತೆ ಮೆಱೆದು ನೆರೆದ ಪದಾತಿವ್ಯೂಹದಿಂ (ರಾಜಶೇ. ೬–೧೧ ವ) [ಕಟ್ವಾಳ್ತನ + ಪೆಱು$_1$]

**ಕಟ್ವಾಱು** (ಕ್ರಿ). ಚೆನ್ನಾಗಿ ಒಣಗು: ಕಟ್ವಾಱಿದ ಪುಳ್ಳಿಗಳಂ ನೆಟ್ಟನೆ ಕೊರಳೆಗಳನೆಯ್ದೆ . . . ಗುಹೆಯ ಬಾಗಿಲೊಳ್ ತೀವಿಸಿದಂ (ಧರ್ಮಾಮೃ. ೯–೧೭೨). [< ಕಡಿದು + ಆಱು$_1$]

**ಕಟ್ಟೈಕೆ** 'ಕಟ್ಟೆಗೆ$_1$' ನೋ.

**ಕಟ್ಟೆಗೆ$_1$, ಕಟಗೆ, ಕಟ್ಟೈಕೆ** (ನಾ). ೧. ಮರದ ತುಂಡು; ಸೌದೆ; ಉರುವಲು: ಹಜ್ಜೆಯ ಕಟ್ಟೆಗೆಯಂತೆ ಖಳರ ನುಡಿಗಳ್ಪಾಡದೆ ಇಱಿ ಪೊಲದ ನೀರಂತೆ ಕುಪಥಕ್ಕೆಜಗದೆ (ಧರ್ಮಾಮೃ. ೫–೯೯); ಮೋಳಿಗೆಯ ಮಾರಿತಂದೆಗಳು ಕಟ್ಟೆಗೆಗಳಂ ಕೊಂಡು ಬಂದು (ಶೂನ್ಯಸಂ. ೨೩೬–೧೫); ಉರಿಗೆಂಡದೊಳಗವಳಿಗಟ್ಟೆಗೆಯ ಕಟ್ಟೆ ನಡುವಿರಿಸಿ ಬೇಯಿಸಿ (ಸೂಪಶಾ. ೪–೫೧); ಬೆಂಕಿಯನುರುಹು ಕಟ್ಟೆಗೆಯ ಹಾಕಿವರವರಂ ಕರೆ ಯಿಗಾಗ ಲೆಂಬ ಡೊಂಕಿಲ್ಲ (ಭರಚ. ೨೩–೮೮); ಕಾಡಿನಲ್ಲಿ ತಿರುಗಿ, ಕಟ್ಟೆಗೆಯಿಲ್ಲ ಅಂದಹಾಗೆ (ಗಾದೆ). ೨. ಕಡ್ಡಿ; ಹಿಡಿ; ಹಿಡಿಕೆ: ಚಿತ್ರವ ಬರೆವಲೆಕ್ಕಣಿಕೆಯ ಕಟ್ಟೆಗೆಯಂತೆ ನೋಡಿದಡೆ ರೋಮ ಹಲವಾಗಿ ಬರೆವಡೆ ಕೂಡಿಹ ದಾರಿ ಒಂದೆಯಾಗಿ (ಅಂಬಿವ. ೫೪); ಅಂಕುಶದ ಕಟ್ಟೆಗೆಯ ಧಾರೆಯ ಕಮಳ ದಳಕೊಡತಿಗಳ ಕೈಹಾರೆಗಳನಳವಡಿಸಿದರು (ಕುಮಾರವ್ಯಾ ದ್ರೋ. ೩–೩). ೩. ಬೆತ್ತ; ಕೋಲು: "ಕಟ್ಟೆಗೆ ವೇತ್ರದಂಡಮಕ್ಕುಂ" (ಮಂಗರಾ. ೭೯–೪); ಕಟ್ಟೆಗೆಯುಮನಡ್ಡಲಿಟ್ಟು ದೌವಾರಿಕರ್ ನಿವಾರಿಸೆ (ಅರ್ಧನೇ. ೫–೮ ವ); ಮಕುಟವರ್ಧನರಂ ಕಟ್ಟೆಗೆಯೆತ್ತಿ ಮಟ್ಟಮಿರಿಸುವ ವೇತ್ರಹಸ್ತ [ರಾ]ಕ್ರಮಣಿಯ ನಡುವೆ (ಬಸರ. ೬–೨೯); ಬಾಗಿಲಲಿ ಕಟ್ಟೆಗೆಯ ಕೈಗಳಲಾ ಗುರೂಪ್ಪವ ಕೃಪರು ನಿಂದರು (ಕುಮಾರವ್ಯಾ ಆ. ೬–೨೦); ಹುಟ್ಟಿದ್ದು ಮೊದಲಾಗಿ ಕಟ್ಟೆಗೆ ಕೈಗೆ ಬಿಟ್ಟಿದ್ದಿಲ್ಲವು (ಶಾಕುಂತ. ೬೧ ಅಡಿಟ). ೪. ಕಟ್ಟೆಗೆಯ ಮೇಲಿನ ಸುಂಕ: ಹೊದಕೆ ಹೊಂಬಳಿ ಮಗಮೆವಟ್ಟ ಕಟ್ಟೆಗೆ ಸಹ ಸರ್ವಾಬಾಧೆ ಪರಿಹಾರವಾಗಿ . . . ಭೋಗಿಸೂದೆಂದು (ಮೈಆರಿ. ೧೯೩೩, ೨೩–೪೯; 1384). **ಕಟಗೆ**: ೩. ಶ್ರೀಪಾದಸೇವೆಯ ಕಟಗೆಯ ಅಹಮುದಖಾನನು ರಾಯರಿಗೆ ಧರ್ಮವಾಗಬೇಕೆಂದು ಕಟಸಿದ ಧರ್ಮಶಾಲೆ (ಸೌಇಇ. IX–ii, ೪೪೭–೩; 1439). **ಕಟ್ಟೈಕೆ**: ೧. ಪೊನ್ನಾಡ ಮಾದನ ಹಳಿಗೆ ಅಡಬರುವ ಕಯ್ಯಾಲು ಕಟ್ಟೈಕೆ ಕಲ್ಲ ವರದರಾಜದೇವರ ಮುಖಮಂಟಪದ ಗೋಪುರವ ಕದವಿಗೆ ತಸ್ಸಿ (ಎಕ. X (S), ಮುಳಬಾ. ೩–೭; 1430).

ಕಟ್ಟೆಗೆಯುವ = ೧. ಓಲಗದಲ್ಲಿ ಶಿಸ್ತುಕಾಯುವ ವೇತ್ರಧಾರಿ; ದಂಡವನ್ನು ಹಿಡಿಯುವವನು: "ಕಟ್ಟೆಗೆಯವಂ ವೇತ್ರಧರನುತ್ಪಾರಕಂ ದಂಡಿಯುಕ್ಕು" (ಮಂಗರಾ. ೭೯–೪). ೨. ಕಟ್ಟೆಗೆಯನ್ನು ಮಾರುವವನು ಅಥವಾ ಹೊರುವವನು (ಕ). [< ಸಂ. ಕಾಷ್ಠಕ. / ತಮಿ. ಕಟ್ಟೈ; ತುಳು. ಕಟ್ಟಗೆ; ತೆಲು. ಕಟ್ಟೆ, ಕಟ್ಟೆಯ]

**ಕಟ್ಟೆಗೆ$_2$** (ನಾ). ಕಟ್ಟಿದುದು; ಕಟ್ಟಡ; ಕಟ್ಟಣ; ಕಟ್ಟೋಣ (?): ಪೊಳೆವ ಕಟ್ಟಣಕದ ಕಟ್ಟೆಗೆಗಳಿಂದಿಟ್ಟಣಮಾದ ತಿಳಿಗೊಳಂಗಳೊಳಾನೆಯಂತೆ ನೀರಾಟಮನಾಡಿಯುಂ (ಕಬ್ಬಿಕಾ. ೧೨೫). [ಕಟ್ಟು$_1$ + -ಗೆ$_1$]

**ಕಟ್ಟೆಗೆಕಾರ** 'ಕಟ್ಟೆಗೆಕಾಱ' ನೋ.

**ಕಟ್ಟೆಗೆಕಾರ್ತಿ, ಕಟ್ಟೆಗೆಗಾತಿ, ಕಟ್ಟೆಗೆಗಾರ್ತಿ** (ನಾ). ರಾಜಸಭೆಯಲ್ಲಿ ಶಿಸ್ತನ್ನು ಕಾಯಲು ನಿಯಮಿತಳಾದ ರಾಜಸೇವಕಿ; ವೇತ್ರಧಾರಿಣಿ: ನೆಲನನುಗ್ಗಡಿಸೆ ಕಟ್ಟೆಗೆಕಾರ್ತಿಯರು ಮುಂದೆ ನಲವಿಂದಾ ನೃಪತನಯ ತಳರ್ದನು (ಕುರಾಸಾಂ. ೪೦–೮೩). **ಕಟ್ಟೆಗೆಗಾತಿ**: ನೆಲನ ನುಗ್ಗಡಿಸುವ ಕಟ್ಟೆಗೆಗಾತಿಯರ ಬೇಡವೆಂಬುದು ನೆವವಾಯಿತು (ವಡಕಾ. ೫೩). **ಕಟ್ಟೆಗೆಗಾರ್ತಿ**: ಗಲಬೆಯ ನಿಲಿಸುವ ಕಟ್ಟೆಗೆಗಾರ್ತಿಯರುಲುಹೆಸೆದುದು ಸಭೆಯೊಳಗೆ (ಮೋಹತ. ೪–೫). [ಕಟ್ಟೆಗೆಕಾಱ + -ತಿ$_1$ (< -ಇತ್ರಿ)]

**ಕಟ್ಟೆಗೆಕಾಱ, ಕಟ್ಟೆಗೆಕಾರ, ಕಟ್ಟೆಗೆಗಾರ, ಕಟ್ಟೆಗೆಗಾಱ** (ನಾ). ಓಲಗದಲ್ಲಿ ಶಿಸ್ತುಕಾಯುವ ವೇತ್ರಧಾರಿ; ದಂಡವನ್ನು ಹಿಡಿಯುವವನು: "ಪ್ರತೀಹಾರಕನೆನೆ ಪೆಸರದು ಕಟ್ಟೆಗೆಕಾಱಂಗೆ" (ಚತುನಿ. ೧೦೮); ಹಸ್ತ್ಯಶ್ವ ರಥ ಪದಾತಿಗಳೊಂದಱೊಳೊಂದು ಪೊರ್ದಲೀಯದೆ ನಿಯಮಿಸುವ ಕಟ್ಟೆಗೆಕಾಱರಿಂ (ಧರ್ಮಾಮೃ. ೮–೧೯೩); ಪಂತಿಗೊಳಿಸುವ ಪಡಿಯಱರ ಕಡಂಗಿ ನಡೆವರಂ ಜಡಿವ ಕಟ್ಟೆಗೆಕಾಱರ (ಮಹಾನೀ. ೧೨–೯ ವ); ನರರತ್ತು ಸುರರಿತ್ತಲೆಂಬ ಕಟ್ಟೆಗೆಕಾಱರುರವಣೆಗೇಳುತೆಯ್ದಿದನು (ಭರಚ. ೪೪–೭೨). **ಕಟ್ಟೆಗೆಕಾರ**: ಕಟ್ಟೆಗೆಕಾರರು, ವಂದಿಮಾಗಧರು, ಅಂಗರಕ್ಷಕರು (ಬಟ್ಟಆ. ೮–೨). **ಕಟ್ಟೆಗೆಗಾರ**: "ಕಕ್ಷ– ಕಟ್ಟೆಗೆಗಾರರೂ" (ಅಕಾನಿ. ೪–೩೦). **ಕಟ್ಟೆಗೆಗಾಱ**: ಕಟ್ಟೆಗೆಗಾಱರುಘೇಯುಘೇಯೆನುತ್ತಿರೆ (ಧರ್ಮಾಮೃ. ೬–೧೫೮); ಕೋಗಿಲೆಯೆಂಬ ಕಟ್ಟೆಗೆಗಾಱನ ಕೈಯ ಕೂಗಿಸಿದನು ತೀಕ್ಷ್ಣದಿ (ಮೋಹತ. ೬–೧೪). [ಕಟ್ಟೆಗೆ$_1$ + -ಕಾಱ]

**ಕಟ್ಟೆಗೆಗಾತಿ** 'ಕಟ್ಟೆಗೆಕಾರ್ತಿ' ನೋ.

**ಕಟ್ಟೆಗೆಗಾರ** 'ಕಟ್ಟೆಗೆಕಾಱ' ನೋ.

**ಕಟ್ಟೆಗೆಗಾರ್ತಿ** 'ಕಟ್ಟೆಗೆಕಾರ್ತಿ' ನೋ.

**ಕಟ್ಟೆಗೆಗಾಱ** 'ಕಟ್ಟೆಗೆಕಾಱ' ನೋ.

**ಕಟ್ಟೆಗೆವಿಡಿ** (ಕ್ರಿ). ೧. ರಾಜಸಭೆಯಲ್ಲಿ ಶಿಸ್ತನ್ನು ಕಾಯಲು ದಂಡವನ್ನು ಹಿಡಿ: ಜಯಶ್ಯಾಮೆಯ ಸುಣ್ಣುಡಿಯನವರ್ಗಿಡುವ ಸೆಳೆಯೆನೆ ಪಡಿಯಱಿಕೆಗೆ ಸುರವಧೂಟಿ ಕಟ್ಟೆಗೆವಿಡಿದಳ್ (ಅನಂಪು. ೪–೮೧). ೨. (ಅಲಂ) ಮುಪ್ಪಾಗು: ನಿಟ್ಟೆಲು ಮುಱಿಯದ ಮುನ್ನಂ . . . ಕಟ್ಟೆಗೆವಿಡಿಯದ ಮುನ್ನಂ ನೆಟ್ಟನೆ ನೀಂ ನಿನ್ನನಱಿದು ಭಾವಿಸು ಜೀವಾ (ಕವಿಚ. I, ೫೧೧ ಚಿಕ್ಕ ಶ್ರಾವಣಾಚಾರ). [ಕಟ್ಟೆಗೆ$_1$ + ಪಿಡಿ$_1$]

**ಕಟ್ಟೆಗೆವೆಣ್** (ನಾ). = ಕಟ್ಟೆಗೆಕಾರ್ತಿ: ಗೆಲು ಹೆಂಗಳರಸಿಯೆಂಡೊಡನೆ ಕಟ್ಟೆಗೆವೆಂಗಳುಲಿವುತಿದ್ದರು (ಭರಚ. ೮–೮೫). [ಕಟ್ಟೆಗೆ$_1$ + ಪೆಣ್]

**ಕಟ್ಟೆದಿರ್, ಕಟ್ಟೆದಿರು** (ನಾ). ಕಣ್ಣಿನ ಮುಂದುಗಡೆ; ಸಮಕ್ಷ; ನೇರ ಇದಿರು; ಮುಖಾಮುಖಿ: ಆತಂಗೆ ಕಟ್ಟೆದಿರೊಳ್ ನಿಲ್ವೊಡೆ ನೀನೆ ನಿಲ್ವೈ (ಪಂಪಭಾ. ೧೩–೩೧); ದೊಸಮಾರನಗುರಿನ ಕಟ್ಟೆದಿರೊಳು ನಿಲುವ ಗಂಡನಾವಂ ಧುರದೊಳ್ (ಎಕ. XVI, ಚಿಕ್ಕನಾ. ೧೦೬–೩; 1244); ಈ ಸವಣನ ನಾಂ ಕಟ್ಟೆದಿರೊಳ್ ಕಂಡು (ಜಯಕಾ. ೧೩–೪೦).

**ಕಟ್ಟಿದಿರು** : ಕಟ್ಟಿದಿರಿನಲ್ಲಿ ಶಿವಭಕ್ತನ ಕಂಡು ದೃಷ್ಟಿ[ಯಾ]ರಿ ಶರಣೆಂದೊಡೆ ಹುಟ್ಟೇಳು ಜನ್ಮದ ಪಾಪ ಬಿಟ್ಟು ಹಿಂಗುವುದು (ಬಸವ. ೧೪೦); ಹರಿ ಸೃಜಿಸಿದನು ಮಾಯಾಸೂಕರನ ಕಟ್ಟಿದಿರಿನಲಿ ಗರ್ಜಿಸಿತು ದಾಡೆಯ ಮಸೆದು (ತೊರರಾ. ೩-೩-೧೯). [< ಕಡಿದು + ಇದಿರ್]

**ಕಟ್ಟಿದಿರು** 'ಕಟ್ಟಿದಿರ್' ನೋ.

**ಕಟ್ಟಿನಿಯ** (ಗು). ಅತ್ಯಂತ ಪ್ರಿಯವಾದ: ಆರಿಯದಾನಾಣ್ಮೆಯಲಿ ಕಟ್ಟಿನಿಯ ನಂಟೊಡನೆ ನೆರೆದಿರ್ಪ ನೀನ್ (ಮೂರುನಾ. ೧೧೦-೪೨೧). [< ಕಡಿದು + ಇನಿಯ (< ಇನಿದು)]

**ಕಟ್ಟಿರಿತ** (ನಾ). ಬಲವಾದ ಇರಿತ; ತೀಕ್ಷ್ಣವಾಗಿ ಚುಚ್ಚುವಿಕೆ: ಒಂದೇ ಬೀಸಿಕೆಯ ಒಂದೇ ಕಟ್ಟಿರಿತ (ದಟ್ಟಳ. ೨೧೫-೧೧). [< ಕಡಿದು + ಇರಿತ (< ಇಱಿತ)]

**ಕಟ್ಟಿರುವೆ** 'ಕಟ್ಟೆಱುಂಪೆ' ನೋ.

**ಕಟ್ಟಿರುಳು** (ನಾ). ಗಾಢವಾದ ರಾತ್ರಿ: ಮಹಾಕಟ್ಟಿರುಳ ಮೋಹರವೆಲ್ಲ ಕಂಪಿಸಿಯಾದುದೆಂಬಂತೆ (ದೇವೀಮ. ೫-೧೫); ಕವಿದ ಕಟ್ಟಿರುಳಿನಲಿ ಹಡಗು ದೆಸೆಗೆಡುತಿರಲು (ಕವಿಕಾ. ೮೭). [< ಕಡಿದು + ಇರುಳು (< ಇರುಳ್)]

**ಕಟ್ಟಿಸು, ಕಂಟಿಸು₂** (ಕ್ರಿ). ೧. ಬಂಧಿಸು; ಕಟ್ಟು: "ಕಟ್ಟಿಸು-ಬಂಧನೇ" (ಶಮಥಾ); ಕಾಡಾನೆಯಂ ಕಟ್ಟಿಸಲೆಂದು ದಾವಿಗೆ ಪೋದೊಂ (ವಡ್ಡಾರಾ. ೧೧೧-೨೧); ಲಾಯದಿ ಕಟ್ಟಿಸಿದ ಹಯವ ನಿರುತ ಕಟ್ಟಿಸಿ (ಸಂಭಪ. ೩-೧೫). ೨. ನಿರ್ಮಿಸು; ರಚಿಸು: ನಾಗವರ್ಮ್ಮನ್ ಕಟ್ಟಿಸಿದ ದೇವಿಗೆಱೆಗಂ (ಎಕ. III, ನಂಜನ. ೧೯೨-೮; 968); ಹೊಸ ಕೆಱೆಯ ಕಟ್ಟಿಸಿ (ಎಕ. X, ಚಿಂತಾಮ. ೩೦-೧೦; 1047); ಕೆಱೆಯುಂ ಕಟ್ಟಿಸು ಬಾವಿಯಂ ಸವಸು (ಸೌಇಇ. IV, ೨೬೭-೪೪; 1380); ಗ್ರಾಮವಂನು ಹೊಸದಾಗಿ ಕಟ್ಟಿಸಿ (ಎಕ. VII, ಶಿವಮೊ. ೧೦೮-೩೩; 1558). ೩. ಅಳವಡಿಸು; ಹೊಂದಿಸು; ಭದ್ರಪಡಿಸು: ಮಾರ್ಪಡೆಯಾನೆಯ ಕೆಲವಣಿಯಿಂದು ದೆವಣಿಗಟ್ಟಿಸಿದನಾ ನರೇಂದ್ರಕುಮಾರಂ (ಮಲ್ಲಿಪು. ೪-೧೭೭); ಬಲ್ಲಿತ್ತಂ ಕರ್ಬೊನ್ನೊಳ್ ಕಟ್ಟಿಸಿದಂತೆ (ಧರ್ಮಾಮೃ. ೧-೨೧೬); ಸುಯೋಧನನಾದಿಯಾದ ಸಮಸ್ತ ನೃಪರು ವಿವಾದವಿಲ್ಲದೆ ಬರಲಿ ಕಟ್ಟಿಸು ಪಾವುಡವ (ಕುವ್ಯಾಳ. ೧೧-೧೪). ೪. ತೊಡಿಸು; ಅಲಂಕರಿಸು: ವಾರಣಾಸಿಯೆಹಳ್ಸಾಸಿರ ಕವಿಲೆಯ[೦] ಕೋಡುಂ ಕೊಳಗುಮಂ ಪೊನ್ನೊಳ್ಕಟ್ಟಿಸಿ ದಾನಂಗೊಟ್ಟ[ಫ]ಲಮಕ್ಕು (ಸೌಇಇ. XI-i, ೩೪-೧೯; 925); ಕವಿಲೆಯ ಕೋಡುಂ ಕೊಳಗುಮಂ ಪಜ್ಜಾರತ್ನಗಳೊಳ್ಕಟ್ಟಿಸಿ ಮಹಾ ರಿತ್ವಿಜಗಳ್ಗೆ ಧಯಮುಖಗೊಟ್ಟ ಫಳ (ಸೌಇಇ. XI-i, ೪೧-೫೨; 969). **ಕಂಟಿಸು₂**: ೩. ಅರಸಿಕೆಱೆಯ ಪುರದ ತುಂಬು ಮುಱಿದು ಬಿದು ಕೆಟರಲಾಗಿ ಆ ತೂಂಬನು ಬಿಚಿಸಿ ಸೋಧಿಸಿ ಬಲುಮಾನದ ಕಲಸು ಕಂಟಿಸಿ (ಸೌಇಇ. IX-ii, ೫೨೨-೧೬; 1527). [ಕಟ್ಟು₁+-ಇಸು₃]

**ಕಟ್ಟಿಸುಗೆ** (ನಾ). ರಭಸದಿಂದ ಬಾಣಪ್ರಯೋಗ ಮಾಡುವುದು: ನೀಂ ದಿಟ್ಟಂ ದಿಟಮಾದೊಡೆನ್ನೀ ಕಟ್ಟಿಸುಗೆಯ ಕೋಲರಾ ಪಟ್ಟ ಮುಱಿವುದು (ರಾಮಾಶ್ವ. ೧೫೭-೧೪). [< ಕಡಿದು + ಇಸುಗೆ]

**ಕಟ್ಟಿಱಿಕಾಱ** (ನಾ). ತೀಕ್ಷ್ಣವಾಗಿ ಇರಿಯುವವನು; ಉಗ್ರನಾದ ಯೋಧ: ಬಿಲ್ಲವರು ಕಟ್ಟಿಱಿಕಾಱರಾತನ ಜಪಗೆಡಿಸಿದರು (ಕುವ್ಯಾಕ. ೧೨-೨೨). [< ಕಡಿದು + ಇಱ್₄ + -ಕಾಱ]

**ಕಟ್ಟೆಱುಂಪೆ, ಕಟ್ಟಿರುವೆ, ಕಟ್ಟೆಱುಪೆ, ಕಟ್ಟೆಱುವೆ, ಕಟ್ಟೆಱುಹೆ** (ನಾ). ಕಚ್ಚುವ, ಕರಿಯ ದಪ್ಪನಾದ ಇರುವೆ; ಗೊದ್ದ: ಸೂಇಂಗಾಳೀಹಿ-ಕಟ್ಟೆಱುಂಪೆಗಳಿಂದಂ (ವಡ್ಡಾರಾ. ೧೬೨-೫); ಕಡಿವ ಕಟ್ಟೆಱುಂಪೆಗಳುದುದಾವೆಡೆಯ ಸುರಿಸುವುದೊ (ಅದಿಪು. ೫-೧೩).

**ಕಟ್ಟಿರುವೆ**: ಆ ಸೈನ್ಯವು ಕಟ್ಟಿರುವೆಗಳ ಗುಂಪು ಚದರಿ ಹೋಗುವಂತೆ . . . ಓಡಿಹೋಗುವುದು (ಕೃವಾಉ. ೨೪೫). **ಕಟ್ಟೆಱುಪೆ**: ಕರಿಯವು ಪಿರಿಯವು ಪವಣಸಲಱಿಯವು ಬಹು ವಿಧದಿನಾದ ಕಟ್ಟೆಱುಪೆ [ಪಾಠಾಂ. ಕಟ್ಟೆಱುಂಪೆ] ತಗುಳ್ದಿರದಡಿಯಿಂದಡರ್ದು (ಜೀವಸಂ. ೧೪೦-೩೮); ಕಂಗಳಂ ಕಡಿದುವು ಪತ್ತಿ ಕಟ್ಟೆಱುಪೆಗಳ್ [ಪಾಠಾಂ. ಪೆಗಲೊಳ್] (ಸೂಕ್ತಿಸು. ೩-೧೮೨). **ಕಟ್ಟೆಱುವೆ**: ಕಟ್ಟೆಱುವೆಯೋಳಿಯಂತೆಸವಸಿಯ ಬಾಸೆಯಿಂ (ಅಜಿಪು. ೪-೭); ಮುಱಿದು ಲೋಕವ ನುಂಗಿದರೆ ಕಟ್ಟೆಱುವೆಯೋ ಕಾಲಂಗೆ (ಕುವ್ಯಾಕ. ೧೫-೧೪); ಬೆಟ್ಟವನು ಕಟ್ಟೆಱುವೆ [ಪಾಠಾಂ. ಹೆ] ಕವಿವಂದದಲಿ ಕವಿದುದು (ತೊರರಾ. ೫-೯-೨); ಉರಗನ ಮುತ್ತಿ ಕಟ್ಟೆಱುವೆಯು ಕೊಱೆದಂತೆ ತೆಱನಪ್ಪುದೆಚ್ಚಱಿಕೆ (ಪುರಂದ. ೨-೪೫-೨).

**ಕಟ್ಟೆಱುಹೆ**: ಬೇಸರದೆ ಕಾಳೋರಗನನಡ್ಡೈಸಿ ಕಟ್ಟೆಱುಹೆ [ಪಾಠಾಂ. ವೆ] ಗಳು ಮಿಗೆ ವೇಡೈಸಿ ಕಡಿದಱೆಯಟ್ಟುವಂದದಲಿ (ಕುವ್ಯಾಸ. ೧-೭೫); ಕಟ್ಟೆಱುಹೆ ಕಚ್ಚಿದರೆ ದಿಗ್ಗಜವಳುಕಿ ನೊಂದಪುದೆ (ತೊರರಾ. ೬-೧೧-೩ ಅಡಟ); ಜಿಗುಳೆ ಕೆಂಜಿಗ ಕಟ್ಟೆಱುಹೆಯೋತಿಯು ಗೊದ್ದ ನೆಗೆವ ಹಾವರಣೆ ಕೆಂಡೇಳು (ಕಂನವಿ. ೧೮-೪೦). [< ಕಡಿದು + ಇಱುಂಪೆ]

**ಕಟ್ಟೆಱುಪೆ** 'ಕಟ್ಟೆಱುಂಪೆ' ನೋ.

**ಕಟ್ಟೆಱುವೆ** 'ಕಟ್ಟೆಱುಂಪೆ' ನೋ.

**ಕಟ್ಟೆಱುಹೆ** 'ಕಟ್ಟೆಱುಂಪೆ' ನೋ.

**ಕಟ್ಟು₁** (ಕ್ರಿ). ೧. ಬಂಧಿಸು; ಹಿಡಿದಿಡು; ಸೆರೆಹಾಕು; ಅಧೀನದಲ್ಲಿಟ್ಟುಕೊ: "ಕಟ್ಟು – ಬಂಧನೇ, ಪಕ್ವಧಾನ್ಯರಾಸೇ ಚ" (ಶಮಥಾ); ಕಟ್ಟಿದ ಸಿಂಘಮನ್ ಕೆಟ್ಟೊಡೇನೆಮಗೆಂದು ಬಿಟ್ಟವೊಲ್ (ಎಕ. X, ೬೦-೯; 700); ಅವ ಗಂಡರುಮಂ ಕಟ್ಟಿಯೊಕಟ್ಟು ಕಟ್ಟುವೆನೆನುತ್ತಿರ್ಪಾಕೆ (ಪಂಪಭಾ. ೪-೩೮); ನಾಯಬಾಲ ಸಡೆಯಂ ಕಟ್ಟಲ್ಕೆ ಟಿನ್ನಪ್ಪುದೇ (ಸೋಮೇಶ. ೪೭); ತೆವರಿದ ಪಟುಭಟರಸುವನೆಲ್ಲವ ಕಟ್ಟಿ ಕವರಿ ಕಾಲಗೆ ಸಮರ್ಪಿಸಿದೆ (ಮೋಹತ. ೩೪-೮). ೨. (ನೊಗಕ್ಕೆ) ಹೇರು: ದಂತಿಗಳ ಹೆಗಲಲಿ ಹಿಡುನೊಗನ ಕಟ್ಟಿದರು (ಕುವ್ಯಾದ್ರೋ. ೮-೪೫). ೩. ಹೂಡು: ನೊಗದ ಕೆಲದಲ್ಲಿ ಕಟ್ಟಿದ ಹೋರಿ (ಜ್ಞಾಸಾರ. ೬); ಊರಿಗೆ ಮಳೆ ಹುಯ್ಯು ಏರುಕಟ್ಟೊ ಕಂದಮ್ಮ (ಜಗೀಕ. ೮೦). ೪. ರಚಿಸು; ನಿರ್ಮಿಸು; ರೂಪಿಸು; ಕಲ್ಪಿಸು: ಕಣ್ವವರ ಪೊಬಲ ಸೆಟ್ಟಿಯ ಕಟ್ಟಿದ ಕೆಱೆಯ ಕಾಲೆಳೆಗೊಟ್ಟ ಕ್ರಮ (ಎಕ. III, ಮಂಡ್ಯ. ೧೪-೫; 907); ಮಹದಂತ ದಂತದೊಳೆ ಕಟ್ಟಿದ ತೊಟ್ಟಿಲಂ ನಯದಿಂದ ಮೇಱೆ[ಸೆ] (ಪಂಪಭಾ. ೧-೯೩); ಕಟ್ಟುಗೆ ಕಟ್ಟದಿರ್ಕೆ ಕಡಲಂ ಕವಿಸಂತತಿ (ಲೀಲಾವ. ೧-೧೧); ಕಟ್ಟಿಯುಮೇನೊ ಮಾಲೆಗಾಱನ ಪೊಸ ಬಾಸಿಗಂ ಮುಡಿವ ಭೋಗಿಗಳಲ್ಲದೆ ಬಾಡಿ ಪೋಗದೇ (ಅನಂಪು. ೧-೯೫); ನಾನಾ ಪುಷ್ಪಂಗಳ ಕೊಯ್ದು ಪೊಟ್ಟಣವ ಕಟ್ಟಿದರು (ಮೋಹತ. ೪-೫೫). ೫. ಅಡ್ಡಗಟ್ಟು₁; ತರುಬು; ತಡೆದು ನಿಲ್ಲಿಸು: ತೃಷ್ಣೆಯೆಂಬ ತೊಱೆಯ ಕಟ್ಟುವುದು (ಪಂಚತಂ. ೩೪-೨೨); ಪೋಪಲ್ಲಿ ಬಟ್ಟೆಯಂ ಕಟ್ಟಿಕ್ಕುಂ ಪಾವೊಂದು ಪಲವು ತಲೆಯದು (ಕುವ್ಯಾಸ್ತ್ರ. ೯-೨೫); ಧೀಮಗಜ ಕಟ್ಟಿದುದು ಬೀದಿಗಳ (ಕುವ್ಯಾದ್ರೋ. ೩-೧); ಕಟ್ಟಿದ ಹೈಹಯಂತಿಗಳ ಸಂದಣಿ ಬಾಂಬಟ್ಟಗರಿಕೆಯಾಟವಿನು ಕಟ್ಟಿದುದು (ಕುಹಾಸಾಂ. ೮-೧೨೦). ೬. ತೊಡು; ಧರಿಸು: ಕಟ್ಟಿದುದೆ ಸುರಗೆ ಮುಟ್ಟಿದುದೆ ಕಳಂ (ಆದಿಪು. ೩-೭೨); ಬಳಿದ ನಿಶಂಬದೆ ಕಾಂಚೀಕಳಾಪಮಂ ಕಟ್ಟಿರ್ದು (ಪಂಪಭಾ. ೧-೧೪೩); ಪೊನ್ನಂಬಿ ಬಿಟ್ಟು ಮಸಿಯಂ ಕಟ್ಟುವೆಗ್ಗನಂ ಪೋಲ್ವೆಂ (ಧರ್ಮಾಮೃ. ೩-೨೦). ೭. ತೊಡಿಸು; ಅಳವಡಿಸು: ಮುತ್ತಿನ ಕೊರಲ್ಗೆ ಗೋಧಿಯ ಕಲ್ಲ ಕಟ್ಟಿದೊಡದುಬ್ಬಿಯೂಗಳಿ ಪಾಱುವುದೇ ಕಬ್ಬಿಗರಾನುಕರಿದ ಕಾವ್ಯದ ತಿದ್ದಿ ಪರ್ದಿಸುವುದು (ಶೋಭಕೃ. ೧-೩೨).

೮. ಗಳಿಸು; ಕೂಡಿಸು: ಷೋಡಶಭಾವನೆಗಳಂ ಭಾವಿಸಿ ತೀರ್ಥಕರ ಮಹಾಪುಣ್ಯಮಂ ಕಟ್ಟಿ (ಚಾವುಂಪು. ೧–೪); ಪೂಜೆಗಳಂ ಕೊಟ್ಟು ಕಟ್ಟಿಕೊಳ್ವುದು ಪೊನ್ನಂ (ಸಮಪ. ೯–೯೧). ೯. ವಿಧಿಸು; ನಿಯಮಿಸು; ನಿಯಂತ್ರಿಸು: ಕಟ್ಟಿದಾಯುಷ್ಯದ ವಿರಾಮದೊಳ್ ಸತ್ತು ನಾನಾ ಭ್ರಮಣದಿಂ ಬಂದು (ಸುಕುಮಾ. ೬–೬ ವ). ೧೦. ತೀರ್ಮಾನಿಸು: ಏನೊಂದನಿಂದಿಗೊಲ್ಲೆವು ವ್ರತವೆಂದು ಸಂಧಾನಿಸಿ ಕಟ್ಟಿ ನುಡಿದರು (ಭರತ. ೮–೨೮). ೧೧. ಒದಗಿಸು; ಉಂಟುಮಾಡು; ಸೇರಿಸು; ಬೆರಸು: ಪಚ್ಚಪಸಿಯ ತುಱುಕಾಱಂಗಗ್ಗಳಿಕೆಯನೆ ಮಾಡಿ ನೀನುಂ ಪಱಿಯಂ ಕಟ್ಟಿಡೆಯೊ ಭೂಪರಿನಿಬರ ಕೊರಲೊಳ್ (ಪಂಪಭಾ. ೬–೯೬); ಜಾಜಿ ಮಲ್ಲಿಗೆ ಮುಂತಾದ ಹೂವಿನ ಪರಿಮಳವಂ ಕಟ್ಟಿ (ಸಕವ್ಯ. ೯೩); ಸಂಭಾರಮಂ ತುಂಬಿ ತುಪ್ಪದೊಳು ಪಾಕವನೆ ಮಾಡಿ ಪರಿಮಳವ ಕಟ್ಟುವುದು (ಸೂಪಶಾ. ೪–೬೨). ೧೨. ಆವರಿಸು; ಮುತ್ತು: ಸಾತ್ಯಕಿ ಹವಣ ನಱಿಯದೆ ಹೊಕ್ಕು ಸಿಕ್ಕಿದನವರೊಳಗೆ ಕಟ್ಟಿ [ಪಾಠಾಂ. ಕುಟಿಲ] ದವು ಸುತ್ತಲು ಸಾವಿರಾನೆಗಳು (ಕುವ್ಯಾಕ. ೩–೬); ಬಲದ ಸುತ್ತಲು ಕಟ್ಟಿತುರಿ ಕೆಂಬೆಳಗು ಕುಡಿದವು ಕರ್ಬೊಗೆಗಳಗ್ಗಳದ ಬಾಣದ ಬಂದಿಯಲಿ ಸಿಲುಕಿತ್ತು ರಿಪುಸೇನೆ (ಕುವ್ಯಾದ್ರೋ. ೧೯–೩೫). ೧೩. ತೆಗೆದಿಡು; ಮೀಸಲಾಗಿರಿಸು: ಇಪಗೊಣ್ಡನ ಒರೆಯ್ಗೆ ಮೆಚ್ಚಿ ಕಟ್ಟಿದ ಕೊಡಗೆ ಪಳ್ಳಗಟ್ಟಿ ನಾಲ್ಗಣ್ಡುಗ (ಎಕ. IV, ಹುಣಸೂ. ೧೧–೯; 1020?); ಬಿತ್ತಿಂಡಂ ಬೆಳೆದೊಕ್ಕಲ್ ಬಿತ್ತಂ ಮುಂದಣ್ಗೆ ಕಟ್ಟುವಂತಿರೆ (ಧರ್ಮಾಮೃ. ೯–೨೫). ೧೪. (ಎಮ್ಮೆ, ಹಸು ಮುಂತಾದುವು) ಗರ್ಭವಾಗು; ಗರ್ಭನಿಲ್ಲು: ನಾಲ್ಕು ವರ್ಷಕ್ಕೆ ಎಮ್ಮೆಗಳು ಕಟ್ಟುತ್ತವೆ; ಕಟ್ಟಿದ ಹತ್ತು ತಿಂಗಳಿಗೆ ಈಯುವುವು (ಮುಂಬಯಿ. ೩–೨೫); ಚಳಿಗಾಲದಲ್ಲಿ ಹುಲಿಗಳು ಕಟ್ಟುತ್ತವೆಂದು ಅಡವಿಯಲ್ಲಿ ತಿರುಗಾಡುವ ಜನರು ಹೇಳುತ್ತಾರೆ (ಕಭಾಗ. ೬೦). ೧೫. ಮಂತ್ರದಿಂದ ನಿಲ್ಲಿಸು; ಮಾಟಮಾಡು. ೧೬. ಸಲ್ಲಿಸು; ಪಾವತಿಮಾಡು; ಜಮೆಮಾಡು: "... ಒಟ್ಟು ಮತಗಳ ಪೈಕಿ ಹತ್ತನೇ ಒಂದು ಭಾಗವಾದರೂ ಬರದಿದ್ದರೆ ಕಟ್ಟಿದ ಹಣ ತಿರುಗಿ ಬರೋದಿಲ್ಲ" (ರಾಯಕ. ೯೫); ಪರೀಕ್ಷೆಗೆ ಹಣ ಕಟ್ಟು (ರೂಢಿ). ೧೭. ಮುಚ್ಚು: ದಾರಿ ಕಟ್ಟಿದೆ (ರೂಢಿ). ೧೮. ಇಳಿಯಬಿಡು; ನೇತುಹಾಕು: ತೊಟ್ಟಿಲು ಕಟ್ಟು (ರೂಢಿ). ೧೯. (ಬೆಲೆ ಮೊದಲಾದುವನ್ನು) ನಿರ್ಧರಿಸು: ಲೀಲಾಮಾತ್ರದಿಂ ಕಟ್ಟುವಚ್ಚರಿಯಿಂದಾ ಪುರದಲ್ಲಿ ಚಿನ್ನವರದರ್ ತಾಮಿಂತು ವಿಭ್ರಾಜಿಪರ್ (ಶಾಂತೀಶ್ವ. ೧–೧೨೧). ೨೦. (ಆಲಂ) ಸಾಕು; ಬೆಳಸು: ಅವನು ನಾಲ್ಕು ಹಸುಗಳನ್ನು ಕಟ್ಟಿದ್ದಾನೆ (ರೂಢಿ).

ಕಟ್ಟಾಗು = ೧. ನಿಂತುಹೋಗು; ತಡೆಯಲ್ಪಡು: ಈ ತಗ್ಗಿನೊಳಗೆ ಹೊರಗಿನ ಬೆಳಕೆಲ್ಲ ಕಟ್ಟಾಗಿ, ತೀರ ಕತ್ತಲೆಯುಂಟಾಗಿತ್ತು (ಮುಂಬಯಿ. ೬–೬೩); ಸಾಯಂಕಾಲವಾದೊಡನೆ ದಾರಿಗಳು ಕಟ್ಟಾಗುತ್ತಿದ್ದವು (ನಾಕಥೆ. ೨೬); ಈಗ ಬಾಡಿಗೆ ಬರುವದು ಕಟ್ಟಾಯಿತು (ಸಂಚಿತ್ರ. ೩೧). ೨. ನಿಯಮವಾಗು; ನಿಯತವಾಗು (ಕಿ).

ಕಟ್ಟಿಕೊಳ್, ಕಟ್ಟಿಕೊಳ್ಳು = ೧. ಗಳಿಸು; ಸಂಪಾದಿಸು: ಬೆಢಬೆದ ಬೆಂದನಿಬರ್ ಕಟ್ಟಿಕೊಳ್ವ ಕಣಿಯೇಂ ಪೆಱಂ (ಆದಿಪು. ೯–೯೦); ಇನಿತು ಪುಣ್ಯಂಗಳಂ ನೀ ಕಟ್ಟಿಕೊಳ್ (ಬಸವು. ೧೭–೬). ೨. ಅಡ್ಡಗಟ್ಟು; ತರುಬು: ಅಡಟನ್ನೈತರೆ ಹೋಗಲೀಯದೆ ಮೊದಲ ಬಾಗಿಲ ಕಟ್ಟಿಕೊಂಡಗ್ಗದ ಜಯದ್ರಥ ಭೀಮನೊಳು ಬಲುಗಾಳೆಗವ ಹಿಡಿದ (ಕುವ್ಯಾದ್ರೋ. ೫–೬೩). ೩. ಹೂಡು; ತೊಡಗು: ಸೊಕ್ಕಾನೆ ಸಿಂಗದೊಳ್ ಕದನವ ಕಟ್ಟಿಕೊಂಡೊಕ್ಕಲಾಗಿರ್ದು ಬಾಳುವುದೇ (ಮೋಹತ. ೩೩–೨೪). ೪. ತೆಗೆದಿಡು; ಮೀಸಲಾಗಿಡು: ರಿಪೇರಿ ಕೆಲಸ ವಗೈರೆ – ಇದಕ್ಕೆಲ್ಲ ಇನ್ನೊಂದು ೧೦,೦೦೦ ಕಟ್ಟಿಕೊಳ್ಳಿ (ಯೋಧಪು. ೨೫). ೫. ಪಕ್ಷವಹಿಸು; ಪರವಹಿಸು: ಅತ್ತ ತಾಯಿ, ಇತ್ತ ಹೆಂಡತಿ... ಯಾವುದು ಹೆಚ್ಚಿನದು? ಯಾರನ್ನೂ ಕಟ್ಟಿಕೊಳ್ಳಲಾರ (ಹೊಸಕ್ಷಿ. ೨೧). ೬. ಜೊತೆ ಮಾಡಿಕೊಳ್ಳು; ಸಂಗಡ ಕರೆದುಕೊಳ್ಳು: ಅಂಥ ಗಂಡ, ಇಂಥ ಮಗ – ಇಬ್ಬರನ್ನು ಕಟ್ಟಿಕೊಂಡು, ನಾನು ಹೇಗೆ ಬದುಕಿ ಬಾಳು ಮಾಡುತ್ತೇನೋ (ಬಿತಂಬಾ. ೧೧೧); ನಾಳೆ ಚಂದ್ರಹಾಸನ ಕಟ್ಟಿಕೊಂಡೋಡುವಳು, ನೋಡು! (ಚಂದ್ರಸ. ೬೮). ೭. ಹಚ್ಚಿಕೊಳ್ಳು: ಆ ವಿಚಾರವನ್ನೆಲ್ಲಾ ಕಟ್ಟಿಕೊಂಡು ನಿನಗೇನಾಗಬೇಕಾಗಿದೆ? (ರೂಢಿ).

ಕಟ್ಟಿಟ್ಟಬುತ್ತಿ = (ಆಲಂ) ಸಿದ್ಧವಾದ ವಸ್ತು; ಅನುಭವಿಸಲೇಬೇಕಾದ ವಿಷಯ: ಇದರಿಂದ ಅವನಿಗೆ ಒಳ್ಳೆಯ ಮನೆ, ಕೈತುಂಬ ಹಣ, ಜೊತೆಗೆ ಗೌರವ ಕಟ್ಟಿಟ್ಟಬುತ್ತಿಯಂತೆ ಕೂಡಿಬಂದುವು (ಪುನರು. ೩೫೧).

ಕಟ್ಟಿಡು = ೧. ಮೀಸಲಾಗಿರಿಸು; ನಿಗದಿಪಡಿಸು: ಪ್ರತಿಯೊಂದು ಜೀವಿಯೂ ತನಗೆ ಕಟ್ಟಿಟ್ಟ ತನ್ನ ಪಾಲನ್ನು... ಅನುಭವಿಸಿಯೇ ತೀರಬೇಕು (ಬದ್ಧಪ್ರ. XXXV ಪೀಠಿಕೆ, ಅಡಿಟಿ); ಪದವಿ ಕಟ್ಟಿದೆ ಮೇಲೆ ನಂಟರಿಷ್ಟರೆ ನಮಗೆ ಕಟ್ಟಿಟ್ಟ ಹಗೆ ಕಾಣ ಕೊನೆಗೆ (ಇರಜಾಪ. ೯೨–೫೦). ೨. ನಿಲ್ಲಿಸು; ಬಿಟ್ಟುಬಿಡು: ನಿನ್ನ ಬಡಿವಾರವೆಲ್ಲ ಕಟ್ಟಿಡು; ನನ್ನೆದುರು ಅದೆಲ್ಲ ನಡೆಯುವುದಿಲ್ಲ (ರೂಢಿ).

ಕಟ್ಟಿತು, ಕಟ್ಟಿದುದು = ಕರ್ಮಫಲ; ದೈವದಿಂದ ನಿರ್ಣೀತವಾದದ್ದು; ಹಣೆಬರಹ: ಕಟ್ಟಿತನಿನ್ನಾವನೊ ಕಳೆವನ್ (ಪಾರ್ಶ್ವಪು. ೧೨–೬೮); ಕಟ್ಟಿತನಾರ್ಗಂ ಕಳೆಯಲ್ ನೆಟ್ಟನೆ ಬಾರದವೋಲ್ (ಅನಂತಪು. ೧೨–೬೬); ಅರ್ಗಮೇಂ ಬಿದಿಯ ಕಟ್ಟಿದುದಂ ಕಳೆಯಲ್ಕೆ ತೀರ್ಗುಮೇ (ಪಂಪಭಾ. ೧೩–೭೪).

ಕಟ್ಟಿದಆವು = ಗರ್ಭನಿಂತ ಆವು; ಗಬ್ಬವಾದ ಆಕಳು: ಆಕಳುಗಳಲ್ಲಿ – ಈದ ಆವು; ಕಟ್ಟಿದ ಆವು; ಕನೆಯ ಆವು... ಬಗೆಬಗೆಯವು (ಭಾಪಾಶಾ. ೨೫೬).

ಕಟ್ಟಿದಲಗು = ೧. ಸದಾ ಕಟ್ಟಿಕೊಂಡಿರುವ ಅಲಗು, —ಕತ್ತಿ; ಸಿದ್ಧಖಡ್ಗ. ೨. (ಆಲಂ) ಬಲಗೈ ಬಂಟ; ಒಂದು ಬಿರುದು: ರಿಪುಮಂಡಳಿಕ ಸರಭಭೇರುಂಡ ನೆರೆವೆಡೆ ಗಂಡ ದಂಡಮಣಿಱಿವಂ ಗೋಮನಸಿಂಗ ಶ್ರೀಮಜಗದೇಕಮಲ್ಲದೇವರ ಕಟ್ಟಿದಲಗು ಕುಮರಂ ಮಹಾಮಂಡಲೇಶ್ವರಂ ಹೆಮ್ಮಾಡಿದೇವರಸರ ಮಹಾಪಸಾಯತಂ (ಸೌಇಇ. XV, ೩೦–೧೯; 1145).

ಕಟ್ಟಿಬರ್, ಕಟ್ಟಿಬರು = ೧. ಮುತ್ತಿಬ್ಬರು; ಗುಂಪಾಗಿ ಬರು; ಆವರಿಸು: ಕಪ್ಪುರದ ಕಪ್ಪುಕಳ್ಕಂ ಮಱಿದುಂಬಿವಿಂಡು ಮುಂದೆ ಮಂಡಳಿಸಿ ಕಟ್ಟಿಬರೆ ಕಟ್ಟಿಬಂದು ರೂಪು ರೇಖೆವಡೆಯೆ (ಅನಂತಪು. ೨–೨೮ ವ). ೨. (ಆಲಂ) ಮನಸ್ತಾಪವಾಗು; ಜಗಳವಾಗು: ಇತ್ತಲಾಗಿ ಸರಕಾರಕ್ಕೂ ನಿಮ್ಮ ಕುಂಪನಿಯವರಿಗೂ ಸ್ವಲ್ಪ ಕಟ್ಟಿಬಂದ ಸಮಯದಲ್ಲಿ (ರಾಜೇಂದ್ರ. ೫೯).

ಕಟ್ಟಿಹೋರು = ಛಲದಿಂದ, ಬಿಡದೆ ಜಗಳವಾಡು: ಎತ್ತೆ ಮಾತಿನವಾಸಿಗೆ ಮಿಟ್ಟೆಯ ಭಂಡರಂತೆ ಕಟ್ಟಿಹೋರುತ್ತ ತಥ್ಯಮಿಥ್ಯದಲ್ಲಿ ಕುಕ್ಕುಳುಗುದಿವುತ್ತ (ಸರ್ವವ. ೧೨೦–೬೨೫); ಭಕ್ತರು ಜಂಗಮದಲ್ಲಿ ಕಟ್ಟಿಹೋರಲೇಕೆ (ಕವಿಚ. II, ಅನುಬಂ. ೫೧).

[ದೇ. ॥ ತಮಿ. ಕಟ್ಟು; ಮಲ. ಕಟ್ಟು; ತುಳು. ಕಟ್ಟ್; ಕೊಡ. ಕೇಟ್ಟ್; ತೆಲು. ಕಟ್ಟು; ಕೋಲಾ. ಕಟ್; ನಾಯ್ಕಿ. ಪರ್ಜಿ. ಕಟ್ಟ್; ಗದಬ. ಕಟ್, ಕಟ್ಟ್]

**ಕಟ್ಟು2** (ನಾ). ೧. ಬಂಧನ; ಸಂಕೋಲೆ: ಗಜಂ ಸೊರ್ಕಿ ಮಸಗಿ ಕಟ್ಟು [ಪಾಠಾಂ. ಕಾಲ್ಗಟ್ಟು] ಗಳೆಲ್ಲಮಂ ಪಱಿದು (ವಡ್ಡಾರಾ. ೩೩–೧೦); ಸಾಯೆ ಸರಸಂ ನುಡಿದು ಕಟ್ಟಿದ ಕಟ್ಟುಗಳಂ ತಾನೆ ಬಿಟ್ಟು ಕಳೆದು (ಪಂಪಭಾ. ೭–೩೯ ವ); ಕಟ್ಟ ಬಡಿದಪನೊ ಇವಳಂ ಕಟ್ಟಲ್ಲದೆ ಕುಟ್ಟುತಿರ್ದಪನೊ (ಪುಣ್ಯಾಸ್ರ. ೩–೧೩); ಬಿಗಿದ ಮೂಟೆಯ ಕಟ್ಟು ಸಡಿಲವಾದರೆ ಧಾನ್ಯವೊಗುವಂತೆ (ಭರತ. ೧೮–೪೪); ಅವನಿಗೆ ಯಾವುದರ ಅಭಾವವೂ ಇರಲಿಲ್ಲ. ಯಾವುದರ ಕಟ್ಟೂ ಇರಲಿಲ್ಲ (ಮಲೆನಾ. ೮).

೨. ಎಲ್ಲೆ; ಮೇರೆ; ಗಡಿ: ಪೂರ್ವಸ್ಯಾಂ ದಿಶಿ ಗೊಟ್ಟಲ್ವೆಟ್ಟು ಮೇಳಿ ಆಗ್ನೇಯಸ್ಯಾಂ ದಿಶಿ ಕೊಯಲೇರಿ ಕಟ್ಟು (ಸೌಇಇ. IX-i, ೪೧-೧೯; 11ನೆಯ ಶತ). ೩. ಚೌಕಟ್ಟು; ಅಣಸು: ನಾಡೊಳಗೆ ಬೆಳ್ಳಿಕಟ್ಟಂ ಮಾಡುವನ ಪೊನ್ನನಿಕ್ಕಿ ಮಾಱ್ಪವೊಲ್ (ಸಮಪ. ೩-೬೨); ಚಿನ್ನದ ಹರಡೆ ಬೆಳ್ಳಿಯ ಕಟ್ಟು ಮುತ್ತುಗಳುನ್ನತ ಕುಚ್ಚುನಿಟ್ಟಿಗಳ ಸನ್ನಾಹದ ಬಲು ಭಟರು (ಕಂನವಿ. ೧೧-೧೪೫). ೪. ಅಪ್ಪಣೆ; ಶಾಸನ; ಆಜ್ಞೆ: "ಕಟ್ಟು ಇತಿ ಅನುಲ್ಲಂಘ್ಯೋ ನಿರ್ಣಯಃ" (ಶಬ್ದಾನು. ೪೪೧ ವ್ಯಾಖ್ಯಾ); ದೇಗುಲಂ ಮಾಡಿಸಿ ಈ ಕಟ್ಟಮ್ಪಡಿಸಲಿಸಲೆನ್ದು ಕೊಟ್ಟುದು (ಎಕ. VII, ಶಿಕಾ. ೨೮೪-೫; 902); ಬಟ್ಟೆಯೊಳಗೆ ನೀವು ದೂರದಿ ಬಪ್ಪಂತು ಕಟ್ಟು ಮಾಡಿದಿರ್ಂತುಟಾಯ್ತು (ಭರಚ. ೨೩-೮೦). ೫. ಸಿವುಡು; ಪಿಂಡಿ; ಕಂತೆ: ಅವರಿಗೆ ನಿತ್ಯ ಅರ್ಧ ಕಟ್ಟು ವಿಳ್ಳೆದೆಲೆ ಬೇಕಾಗುತ್ತಿದ್ದಿತು (ಬೈಸರ್ವೆ. ೧). ೬. ಎಮ್ಮೆ, ಹಸು ಮೊದಲಾದುವು ಗರ್ಭವಾಗುವುದು. 'ಕಟ್ಟು ಗಡಸು' ಪರಾ. ೭. ದಿಗ್ಬಂಧನ: ಭೂತಬಾಧೆಯಾಗದಂತೆ ಅವರು ಮನೆಗೆ ಕಟ್ಟು ಮಾಡಿಸಿದ್ದಾರೆ (ರೂಢಿ). ೮. ಮಾಟ; ಮಾಯ. 'ಕಣ್ಕಟ್ಟು' ಪರಾ. ೯. ಬಹಿಷ್ಕಾರ: ಯಾವುದೋ ಅಪರಾಧಮಾಡಿದ ಕಾರಣ ಅವನಿಗೆ ಕಟ್ಟು ವಿಧಿಸಿದ್ದಾರೆ (ರೂಢಿ). ೧೦. ಮರೆ: ಅಡಕೆ ತೋಟಕ್ಕೆ ತೆಂಕು ಕಟ್ಟು ಅವಶ್ಯಕ (ರೂಢಿ). ೧೧. ಕಾಗದ, ಪತ್ರ ಮೊದಲಾದುವುಗಳ ಕಡತ: ಶಂಕರಪ್ಪನ ವಿಳಾಸಕ್ಕೆ . . . ದಪ್ಪವಾದೊಂದು ಕಟ್ಟು ಬಂದಿತ್ತು (ರಂಗಕ. ೨೦).

ಕಟ್ಟುಪಡು = ಬಂಧನಕ್ಕೆ ಒಳಗಾಗು: ಕಿಸುಗುಳನಪ್ಪ ಬೈಕಂಗುಳಿಯುಮಂ ಕಟ್ಟುಪಟ್ಟ ಕಳ್ಳನುಮಂ ಕಂಡು (ಜೀವಸಂ. ೪೮-೬). ಕಟ್ಟಿಕ್ಕು = ಗಾಯಕ್ಕೆ ಪಟ್ಟಿಹಾಕು: ಮಸೆಯುಗುರ್ಕೈಗಳಂ ಸೀಳಿರಲ್ ನೊಂದು ಒಸೆದು ಕಟ್ಟಿಕ್ಕಿ ಮೇಹಾರಯ್ದು ಹುಲಿಗುಲಿಯ (ಕಾಲೂರ. ೯೯-೧೯೯). ಕಟ್ಟಿನಜ್ವರ = ೧೫, ೨೦, ೩೦ — ಹೀಗೆ ನಿಯಮಿತ ದಿನಗಳವರೆಗೆ ಇರುವ ಜ್ವರ: ಅವನಿಗೆ ಬಂದ ಕಟ್ಟಿನಜ್ವರಗಳು ಬೇಗನೆ ಕಡಿಮೆಯಾಗಲಿಲ್ಲ (ಫಲಸಂ. ೧೯). ಕಟ್ಟುಮಾಡು = ೧. ಕಟ್ಟೆಹಾಕು; ಕೈಕೋಳ ತೊಡಿಸು; ಸೆರೆಯಿಡು (ಕ). ೨. ನಿರ್ಬಂಧಿಸು; ಒತ್ತಾಯಪಡಿಸು: ಬಡತನದಲ್ಲಿಯೇ ಅವರು ಕಾಲ ಕಳೆಯುವಂತೆ ಕಟ್ಟುಮಾಡಿದ್ದುದೂ (ಪ್ರಮಹ. ೧೨೬). ೩. ಅಪ್ಪಣೆ ಮಾಡು; ನಿಯಮಿಸು: ಮುಟ್ಟಬೇಡ ಮುರಹರನ ದಾಸರನು ಕಟ್ಟುಮಾಡಿದ ಯಮನು ತನ್ನ ದೂತರಿಗೆ (ಕನಕ. ೭೪-೮೫); ಸಮಾಚಾರವಂ ತೆಗೆದುಕೊಂಡು ಬಂದು ಪೇಳುವುದೆಂದು ನನ್ನಂ ಕಟ್ಟುಮಾಡಿ ಕಳುಹಿಸಿಯಿರುವನು (ಸೌಗಂಧಿ. ೧೭೧-೧೪). ಕಟ್ಟುಹರಿದಪಂಜು = ೧. ಕಟ್ಟುಸಡಿಲಿ, ಮಿತಿಮೀರಿ ಉರಿಯುವ ಪಂಜು. ೨. (ಆಲಂ) ಹದ್ದು ಮೀರಿದುದು; ಎಲ್ಲಾ ಆಧುನಿಕ ದೇಶಭಾಷೆಗಳೂ ಗದ್ಯದಲ್ಲಿ, ಪತ್ರಲೇಖನದಲ್ಲಿ, ಈಗ ಬಹು ಮುಂದೆ ಹೋಗಿವೆ. ಕಟ್ಟಿನ ಕಷ್ಟವಿರಲಿ, ಕೆಲವು ವೇಳೆ ಅವು ಕಟ್ಟುಹರಿದಪಂಜುಗಳಾಗಿವೆಯೇನೋ ಎನ್ನಿಸುತ್ತಿದೆ (ಬಂಕಿಮ. ೪೯೪).

[< ಕಟ್ಟು$_1$. / ತಮಿ. ಕಟ್ಟು; ಮಲ. ಕೆಟ್ಟು; ತುಳು. ಕಟ್ಟ್; ಕೊಡ. ಕೇಟ್ಟೀ; ತೆಲು. ಕಟ್ಟು; ನಾಯ್ಕಿ. ಪರ್ಜಿ. ಕಟ್ಟ; ಗೊಂಡಿ. ಕಟ್ಟಾ]

**ಕಟ್ಟು$_3$** (ನಾ). ೧. ಬೇಳೆ, ಕಾಳುಗಳನ್ನು ಕುದಿಸಿ ತೆಗೆದ ನೀರು, —ಸಾರ, —ರಸ: "ಕಟ್ಟು-ಬಂಧನೇ, ಪಕ್ವಧಾನ್ಯರಸೇ ಚ" (ಶಮುಧಾ); ತುರಗಕ್ಕಿಕ್ಕುಗೆ . . . ಪೆಸಱ ಕಟ್ಟನಭಿನವಚಂದ್ರಾ (ಅಶ್ವಶಾ. ೧೩-೯); ಹುರುಳಿಯ ಕಟ್ಟನೊಳು ಕೆಲವನೊತ್ತರಿಸಿ (ಸೂಪಶಾ. ೪-೬೨); ಹೆಸರು ಬೇಳೆಯ ಕಟ್ಟು ಸ್ವಲ್ಪ ತೆಗೆದುಕೊಳ್ಳಬಹುದು (ಕುರಿಹಿಂ. ೪೬); ಹುರುಳೀ ಕಟ್ಟಿಗೆ ಬಂದವಗೆ ಕುದುರೇ ಬೆಲೆ ಯಾಕೆ? (ಗಾದೆ). ೨. ಬೇಳೆ ಕುಚ್ಚಿ ತೆಗೆದ ನೀರಿನಿಂದ ಮಾಡಿದ ಸಾರು, —ಎಸರು: ಕಟ್ಟಿಂಬುಱು ರಸವಿಶೇಷದೊಳ್. (ದಶಕು. ೧-೨೨ ವ); ಪಾಱೊಡಲ ನೆತ್ತರ್ ಪಿಱಿತಿಸಿವಡೆಗೆ ಪಗಲ ಬೋಸದೊಂದು ಕಟ್ಟಕ್ಕುಂ (ರಾಮಾಶ್ವ. ೮೬-೨೦).

ಕಟ್ಟನಾಂಬರ, ಕಟ್ಟನಾಂಬ್ರ = ಬೇಳೆಯ ಕಟ್ಟಿನ ಸಾರು: ಹೋಳಿಗೆ ಹೂರಣಗಡಬು ಕಡಲೀಪಚ್ಚಡಿ ಕಟ್ಟನಾಂಬರಾ ಉಂಡಿಗಡುಬು (ಶರೀಫ. ೩೭-೧); ಹುರಕ್ಕಿ ಹೋಳಿಗೆ ಹೂರಣಗಡುಬು ಕಡಲಿ ಪಚ್ಚಡಿ ಕಟ್ಟನಾಂಬ್ರಾ (ಶರೀಫ. ೨೩-೧).

[ದೇ. ‖ ತೆಲು. ಕಟ್ಟು; ಪರ್ಜಿ. ಕಟ್]

**ಕಟ್ಟುಂಗರೆ** (ನಾ). ಒಂದು ಬಗೆಯ ಆಟ: ಕರಮೆಸೆವ ಬೊಗರಿ ಕಟ್ಟುಂಗರೆ ತಿಱಿಕಲ್ ಚೆಂಡುಗಳನೊಱಲ್ದಾಡುತುಮಾ ತರುಶಾಖೆಗಳುಯ್ಯಲನಾದರದಿಂದೆಸೆಗುತ್ತೆ ಬಾಲಮಧ್ಯದೊಳಿರ್ದರ್ (ವಿಷ್ಣುಪು. ೫-೨-೧೫೯). [?]

**ಕಟ್ಟುಂಗವಳ** (ನಾ). ಕಟ್ಟಿಕೊಟ್ಟ ಅನ್ನ; ಬುತ್ತಿ: ಸೇನಾನಿಗೆ ಕೆಯ್ಸಾರೆ ಜಯಲಕ್ಷ್ಮಿ ನೃಪಘುಟಿಗಾರಾಜಕಮಾದುದಂದು ಕಟ್ಟುಂಗವಳಂ (ಶಾಂತಿಪು. ೧೦-೧೬೪). [ಕಟ್ಟು$_1$ + ಕವಳ]

**ಕಟ್ಟುಂಗೂಳ್, ಕಟ್ಟುಗೂಳು$_1$** (ನಾ). ೧. = ಕಟ್ಟುಂಗವಳ: ಹಸಿದು ನಿಬ್ಬಣಿಗರೆಲ್ಲಂ ಬಂಡಿಯಿಂದಿಳಿದು ಎಸೆವ ಕಟ್ಟುಂಗೂಳನಾನಂದದಿಂ ತೆಗೆದು (ಹಂಗೂರ. ೯೫-೨೫). **ಕಟ್ಟುಗೂಳು$_1$**: ೧. ಅದು ಧೃಷ್ಟನ ಕಯ್ಯ ಕಟ್ಟುಗೂಳು (ಕೋಲಶಾಂ. ೫೮); ಅಟ್ಟು ಕಟ್ಟಿದ ಕಟ್ಟುಗೂಳ ಕಕ್ಷದೊಳಿರಧಿಟ್ಟು (ಪ್ರಭಂಜ. ೨-೯೧); ಕಟ್ಟುಗೂಳನು ಹೊತ್ತು ಮಾನವ ಬಟ್ಟೆಯಲಿ ಕಡುಬಳಲಿ (ಅಮೃತ. ೮-೧೯). ೨. ಕಲಸಿದ ಅನ್ನ: ರಸ ರಸಾಯನ ಕಟ್ಟುಗೂಳು ಚಿಲುಪಾಲು ಕೆನೆಮೊಸರೆಂಬಿವಂ ಬಡಿಸುವುದ ಕಂಡು (ಸಮ್ಯಕೌ. ೪-೧೦).

[ಕಟ್ಟು$_1$ + ಕೂಳ್ (< ಕೂೞ್$_1$)]

**ಕಟ್ಟುಂಚುರಿಗೆ** (ನಾ). ಸೊಂಟದಲ್ಲಿ ಕಟ್ಟುವ ಒಂದು ಬಗೆಯ ಆಯುಧ; ಕಠಾರಿ: ಅಟ್ಟುಂಜಗಳಂ, ಕಟ್ಟುಂಚುರಿಗೆ (ಶಮದ. ೧೬೦ ಪ್ರಯೋ); (ಕಟ್ಟುಂಚುರಿಗೆಯ್ವನ್ನೊರೆಗೆಳೆದುಕೊಳ್ಳುತ್ತ ಮುನ್ನಡೆದು, ವಿಕ್ರಮರಾಯನಿಗೆ ನಿಂತು) (ಬೆಟ್ಟಿ. ೨೯-೫). [ಕಟ್ಟು$_1$ + ಸುರಿಗೆ]

**ಕಟ್ಟುಂಜೋಳ** (ನಾ). ಕಟ್ಟುವ ಕುಪ್ಪಸ, —ರವಕೆ: ಕಟ್ಟುಂಜೋಳಂ [ಪಾಠಾಂ. ಜೊಗ], ಏಱುಂಜವ್ವನಂ (ಶಮದ. ೧೬೦ ಪ್ರಯೋ).

[ಕಟ್ಟು$_1$ + ಜೋಳ$_2$ (= ಚೋಲ)]

**ಕಟ್ಟುಂದೆಱು, ಕಟ್ಟುತೆಱು** (ನಾ). ಕಟ್ಟಬೇಕಾದ ತೆರಿಗೆ; ನಿಗದಿಯಾದ ತೆರಿಗೆ: ಆ ಬಾಳಿಂಗೆ ಕಟ್ಟುಂದೆಱು ಕೋಟೇಶ್ವರ ದೇವರಿಂಗೆ (ಸೌಇಎ. ೧೯೩೨, ಉಡುಪಿ. ೩೦೮-೮; 1323); ಉಳ್ಳೂರ ದೇವರಿಂಗೆ ಕಟ್ಟುಂದೆಱಾಗಿ ವರುಷಂ ಪ್ರತಿ ೧ ಹೊಂನ ನಡಸುವರು (ಸೌಇಇ. IX-ii, ೪೨೩-೨೭; 1400). **ಕಟ್ಟುತೆಱು**: ಗುರುವಾರದಲು ತ್ಯಾಗಱಗೊಡಲ ಸ್ಥಳವ ಕಟ್ಟುತೆಱು[ವ್] ೧೨ ವನು ಬಟ್ಟಕಳದ ಮರ್ದ್ದವೆಳದ ಕುಟುಂಬದವರು (ಕಇ. I, ೩೭-೭; 1414?).

[ಕಟ್ಟು$_1$ + ತೆಱು$_2$ (< ತೆಱೆ$_3$)]

**ಕಟ್ಟುಂಪಡು** (ಕ್ರಿ). ಬಂಧನಕ್ಕೆ ಒಳಗಾಗು: ಕಟ್ಟುಂಪಟ್ಟುಂ ತಗಪಟ್ಟುಂ ಸೆರೆಯೊಳಿರ್ದುಂ ಅಳಲದೆ ಬೇಸಱದೆ ಮುನಿಯದೆ (ಶ್ರಾವಕಾ. ೪೮-೧೪).

[ಕಟ್ಟು$_2$ + ಪಡು$_1$]

**ಕಟ್ಟುಂಬಗೆ** (ನಾ). ಗಟ್ಟಿಯಾದ ಮನಸ್ಸು; ದೃಢಚಿತ್ತ: ಲೋಗರ್ ಪರಮೇಶನಂ ಕಟ್ಟುಂಬಗೆಯಿಂ ಪಿಡಿದು (ಅದ್ಭುತ. ೨೮-೧೪).

[< ಕಡಿದು + ಬಗ್ಗೆ]

**ಕಟ್ಟುಂಬಣ, ಕಟುಂಬಣ** (ನಾ). = ಕಟ್ಟುಂದೆಱು : ನಿಬಂಧ ಶಾಸನಂ= ಕಟ್ಟುಂಬಣದ ಶಾಸನಂ (ನೀತಿವಾ. ೨೯–೩೩). **ಕಟುಂಬಣ:** ಪ್ರತಿ ವರುಷಕ್ಕಂ ಕಟುಂಬಣವಾಗಿ ಕಿಱಿಯ ದೀಪಾವಳಿಯಲು ತಿಱುವ ಆರು ವಣಂ ಗದ್ಯಾಣ ೧ (ಸೌಇಇ. XX, ೧೧೯–೩೦; 1148).
[ಕಟ್ಟು$_{1}$ + ಪಣ$_{1}$]

**ಕಟ್ಟುಂಬಳಿ** (ನಾ). ನಿಗದಿಯಾದ ಉಂಬಳಿ, —ಕೊಡುಗೆ: ಈ ಕುತ್ತೋಲಿಮುರಿಯಲ್ಲಿ "ಪ್ರಭುವಳಿತವಾದ ಕಟ್ಟುಂಬಳಿ" ಎಂಬ ಒಕ್ಕಣೆಯಿದೆ (ಮಂತ್ರಶ. ೧೬–೨). [ಕಟ್ಟು$_{2}$ + ಉಂಬಳಿ]

**ಕಟ್ಟುಕ, ಕಟುಕ$_{2}$** (ನಾ). ೧. ಕಟ್ಟುವವನು: ಕಟ್ಟುಕಂ, ತಟ್ಟುಕಂ (ಶಮದ. ೨೦೩ ಪ್ರಯೋ). ೨. ಸುಳ್ಳು; ಕಟ್ಟುಕಥೆ: ಕಟ್ಟುಕ ಪುರಾಣವಂ ದಿಟ್ಟತನದಿಂ ಪಿಡಿದು (ಬೊಮ್ಮರ. ೧೧೧–೩); ನಾನಿದಕ್ಕೊಡಬಡುವೆನೇ ನಿಮ್ಮ ಕಟ್ಟುಕಕ್ಕಾನಂದಿಪೆನೆ (ಸಮ್ಯಕೌ. ೧೦–೫೯); ನಿಮ್ಮಂತಹ ಸದ್ಗೃಹಸ್ಥರ ಮಾತುಗಳನ್ನು ಕಟ್ಟುಕವೆಂದು ಕೀಳ್ವಡಿಸಲು ನನಗಿಷ್ಟವಿಲ್ಲ (ವಿಗಹ. ೪೮–೧೦). **ಕಟುಕ$_{2}$:** ೨. "ಕಟುಕಂ ತೊಡಲ್ ನುಸುಳೆಂದು ನೆಱೆ ಪುಸಿಯೆನಲ್ಕನೃತಮಕ್ಕು" (ಕಬ್ಬಿಕ್ಕೆ. ೫೯).
[ಕಟ್ಟು$_{1}$ + -ಕ$_{3}$]

**ಕಟ್ಟುಕಂಬ** 'ಕಟ್ಟುಗಂಭ' ನೋ.

**ಕಟ್ಟುಕಟ್ಟಲೆ** (ನಾ). ೧. ನಿಯಮ; ನಿರ್ಬಂಧ; ಕಟ್ಟುಪಾಡು: ಭಿಕ್ಷುಣೀ ಸಂಘಕ್ಕೆ ನಿಯಮಿಸಿದ ವಿಶೇಷವಾದ ಕಟ್ಟುಕಟ್ಟಲೆಗಳನ್ನು ಪಾಲಿಸಲು ಒಪ್ಪಿಕೊಂಡಾಗ (ರಾಮರಾ. ೧೬). ೨. (ಕರಾ) ಯಥಾಪ್ರಕಾರದ್ದು; ಸಾಮಾನ್ಯವಾದದ್ದು: ಇಂದು ವಿಶೇಷವೇನಿಲ್ಲ, ಬರೀ ಕಟ್ಟುಕಟ್ಟಲೆ (ರೂಢಿ). [ಕಟ್ಟು$_{2}$ + ಕಟ್ಟಲೆ (< ಕಟ್ಟಳೆ$_{1}$)]

**ಕಟ್ಟುಕಡಹ** (ನಾ). (ಆಲಂ) ತೀವ್ರವಾದ ಕಳವಳ, —ತೊಳಲಾಟ: ಇದೆಲ್ಲಂ ಕರ್ಮರಾಜನ ಪರಿಣತಿಯೆಂದು ನಿಮ್ಮ ಕಟ್ಟುಕಡಹಮಂ ಕಳೆವಂದು ಮಹಾವಿಭೂತಿಯಿಂದರಮನೆಗೆ ವಂದು ಕತಿಪಯದಿನಮಿರ್ದು (ಧರ್ಮಾಮೃ. ೭–೧೧೯). [ಕಟ್ಟು$_{2}$ + ಕಡಹ$_{2}$ (< ಕಡೆಪ)]

**ಕಟ್ಟುಕಡೆ** (ಕ್ರಿ). ಅತಿಯಾಗಿ ದುಃಖಿಸು, —ಮರುಗು; "ಮರ್ಯಾದೆ ಮೀರು, ನಿಯಮವನ್ನು ಉಲ್ಲಂಘಿಸು" (ಪಂರಾಮಾ. ಕೋಶ): "ಕಟ್ಟುಕಡೆ – ಮನೋನಿರೋಧೇ" (ಶಮಧಾ. ನ); ಮುನ್ನಂ ಮೈತ್ರೇಯರ್ ಕೊಟ್ಟೂರುಭಂಗ ಶಾಪಮಂ ನೆನೆನೆನೆದು ಮನದೊಳ್ ಕಟ್ಟುಕಡೆದು (ಗದಾಯು. ೪–೪೩ ವ); ಮಯ್ದುನನ ಮರಣಕ್ಕೆ ಕಟ್ಟುಕ[ಪಾಠಾಂ. ವ]ಡೆದು ಮನದೊಳ್ ಸೈರಿಸಿ (ಸುಕುಮಾ. ೨–೫೨ವ); ಭರತಂ ಕ್ರಮುಂದಪ್ಪಿ ಸಾಕೇತಸಾಮ್ರಾಜ್ಯಪಟ್ಟಮನೊಡಂಬಟ್ಟುದರ್ಕಂ ಲಕ್ಷ್ಮಣಂ ಕಟ್ಟುಕಡೆದು (ಪಂರಾಮಾ. ೬–೧೩೭); ಇವರ ತನುಗೆ ತಗದಾಹಾರಮ ನಿಕ್ಕಿದೆನೆಂದು ಕಟ್ಟುಕಡೆಯುತ್ತಿರೆ (ನೇಮಿಪು. ೭–೧೮೫ ವ).
[< ಕಡಿದು + ಕಡೆ$_{1}$]

**ಕಟ್ಟುಕಣಜ** (ನಾ). (ಬಿದಿರು ಮೊದಲಾದುವುಗಳಿಂದ) ಹೆಣೆದು ಮಾಡಿದ ಕಣಜ, —ಗಳಗೆ: ಎರಡು ಕಟ್ಟುಕಣಜಗಳಲ್ಲಿ ರಾಗಿ ತುಂಬಿದೆ (ಬೆಳುಮು. ೧೧೭).
[ಕಟ್ಟು$_{2}$ + ಕಣಜ$_{1}$ (< ಕಣಂಜ)]

**ಕಟ್ಟುಕತೆ** (ನಾ). ವಾಸ್ತವಿಕವಲ್ಲದ ಸಂಗತಿ; ಕಲ್ಪನೆಯಿಂದ ಕೂಡಿದ ಕಥೆ: ಇದೆಲ್ಲಾ ನಿಮ್ಮ ಕಟ್ಟುಕತೆ! (ಕಂಕಕೂ. ೬); ಕಳ್ಳಕಾಕರ ಭೀತಿ ಕಟ್ಟುಕತೆಯಾಯ್ತು (ಚಂದ್ರಸ. ೬೦); ಈ ಕಟ್ಟುಕತೆಯನ್ನು ಅದರಷ್ಟಕ್ಕೇ ನೀಗಿಬಿಡಬಹುದು (ತುಳುನಾ. ೧೮). [ಕಟ್ಟು$_{1}$ + ಕತೆ]

**ಕಟ್ಟುಕಥೆ** (ನಾ). = ಕಟ್ಟುಕತೆ: ಅದ್ಭುತ ಮಹಾದ್ಭುತಗಳ ಕಟ್ಟುಕಥೆ ಕೇಳುವುದೆಂದರೆ ತುಂಬ ಆಸಕ್ತಿ (ಶಿಕ್ಷದ. ೧೦೭). [ಕಟ್ಟು$_{1}$ + ಕಥೆ]

**ಕಟ್ಟುಕಾಲುವೆ** (ನಾ). ಆಣೆಕಟ್ಟಿನಿಂದ ನೀರು ಹಾಯಿಸುವ ಕಾಲುವೆ: ಸೀಮೆಯೊಳಗಣ ಕಾವೇರಿ ಕಟ್ಟುಕಾಲುವೆಯೊಳಗಾದ ಬಲ್ಲಾಳಪುರದ ಸ್ತಳ . . . ಹೇಮಾವತಿಯ ಕಟ್ಟುಕಾಲುವೆಯೊಳಗಣ ವರಾಹನ ಕಲಹಳಿ ಸ್ತಳ (ಎಕ. XIV, ಶ್ರೀರಂಗ. ೨೫೮–೪; 1544).
[ಕಟ್ಟು$_{2}$ + ಕಾಲುವೆ (< ಕಾಲ್ವಾಯ್)]

**ಕಟ್ಟುಕೊಡಗೆ** 'ಕಟ್ಟುಗೊಡಗೆ' ನೋ.

**ಕಟ್ಟುಕೊಡಿಗೆ** 'ಕಟ್ಟುಗೊಡಗೆ' ನೋ.

**ಕಟ್ಟುಕ್ಕು** (ನಾ). ಗಡುಸಾದ ಉಕ್ಕು: ಮಸಗಿದನು ನಿಮ್ಮಾತನುಗಿ ದೆಬ್ಬಿಸಿದ ಹುಲಿಯೋ ನೊಂದ ಹಂದಿಯೊ ಹಸಿದ ಭುಜಗನೊ ಕಾದ ಕಟ್ಟುಕ್ಕಿನ ಭಡಾಳಿಕೆಯೊ (ಕುವ್ಯಾಅ. ೬–೭).
[< ಕಡಿದು + ಉಕ್ಕು$_{3}$ (< ಉಕ್ಕುರ್$_{4}$)]

**ಕಟ್ಟುಗಂಭ, ಕಟ್ಟುಕಂಬ** (ನಾ). ೧. ಕಸರತ್ತು ಮಾಡಲು ಗರಡಿಯಲ್ಲಿ ನೆಟ್ಟಿರುವ ಕಂಬ: ಕಾಮುಕ ಪಶುಬಂಧನ ಯೂಪಸ್ತಂಭ ಕಾಮ ಜಟ್ಟಿಯ ಕಟ್ಟುಗಂಭ ಎನಲೊಪ್ಪಿದುವಾ ಮುಗ್ಧೆಯೆಸೆವೊಳ್ತೊಡೆಗಳ್ (ಶ್ರೀಪಾಲ. ೩–೫೦). **ಕಟ್ಟುಕಂಬ:** ೧. ಗರಡಿ ಮನೆಯ ಕಟ್ಟುಕಂಬ (ರೂಢಿ). ೨. ದನ ಮೊದಲಾದುವುಗಳನ್ನು ಕಟ್ಟುವ ಕಂಬ (ಓ). [ಕಟ್ಟು$_{1}$ + ಕಂಭ]

**ಕಟ್ಟುಗಡಸು** (ನಾ). ೧. ಬೆದೆಗೆ ಬಂದ ಕಡಸು, —ಹಸು: "ಕಾಲಪ್ರಾಪ್ತಿಯಾಗಿ ಬೆದೆಯಾದ ಆಕಳು" (ನಾಚಿರಾ. ೬). ೨. ಪ್ರಾಯಕ್ಕೆ ಬಂದವಳು; ಜವ್ವನೆ: ಈ ನನ್ನ ಕಟ್ಟುಗಡಸಿನ ಮೆಯ್ಯೆಂಬ ಹೊಸಹಿನ ಪಾತರದಲ್ಲಿ ಎಸಂಟ್ಟಿರುವ ರೂಪ ಸೌಂದರ್ಯ ಯವ್ವನ ಶೃಂಗಾರ ಕಲೆಗಳೆಂಬ ಪಂಚಾಸವಗಳನ್ನು (ಮಂತ್ರಶ. ೨೯–೧೫). [ಕಟ್ಟು$_{2}$ + ಕಡಸು$_{1}$]

**ಕಟ್ಟುಗಾಣ** 'ಕಟ್ಟುಗಾಳ' ನೋ.

**ಕಟ್ಟುಗಾರಿಕೆ** (ನಾ). ಕಟ್ಟುವ ಸಾಮರ್ಥ್ಯ; ರಚನಾಸಾಮರ್ಥ್ಯ: ನಟನಿಗೆ ಮಾತುಗಳ ಕಟ್ಟುಗಾರಿಕೆ ಇದೆ. ಆದರೆ ನರ್ತಕನಿಗೆ ಅದಿಲ್ಲ (ಬಾಲಪ್ರ. II, ೯೮೦). [ಕಟ್ಟುಗಾರ$_{0}$ + -ಇಕೆ]

**ಕಟ್ಟುಗಾವಲಿಗ** (ನಾ). ಕಟ್ಟುನಿಟ್ಟಾಗಿ ಕಾವಲು ಮಾಡುವವನು: ಕಾಮದೇವನ ಪಟ್ಟದಾನೆಯ ಕಟ್ಟುಗಾವಲಿಗರಂತಿಹರು (ಅಬ್ಬಲೂ. ೩–೯೩). [ಕಟ್ಟು$_{2}$ + ಕಾವಲಿಗ]

**ಕಟ್ಟುಗಾಳ, ಕಟ್ಟುಗಾಣ** (ನಾ). ಕಟ್ಟಿದಗಾಳ; ಮೀನು ಹಿಡಿಯಲು ಮಾಡಿದ ಕೊಕ್ಕೆ: ಲವಣಾಬ್ಧಿಯಲಿ ತರಳನ ನುಂಗಿದ ಪೆಣ್ಮೀನ ನೊರ್ವನು ವರ ಕಟ್ಟುಗಾಳದೆ ಪಿಡಿದ (ಮೋಹತ. ೧೧–೩೩). **ಕಟ್ಟುಗಾಣ:** ಕೇಣವಿಲ್ಲದೆ ರೋಹಿತವಾರ್ಧಿಯೊಳು ಕಟ್ಟುಗಾಣಕ್ಕೆ ಪಾಯ್ವ ಮೀನು (ಮೋಹತ. ೪೦–೭೦). [ಕಟ್ಟು$_{1}$ + ಗಾಳ]

**ಕಟ್ಟುಗಿ** (ಕ್ರಿ). ಬಲವಾಗಿ ನಡು, —ಚುಚ್ಚು, —ತಿವಿ: ಪಸಿ ಮೆಲ್ಲಡಿಯಂ ಕಟ್ಟುಗಿಯಲ್ ನಡೆಯುಡುಗಿ ಬಟಲ್ದಟಲ್ದ ನೋಹಿಲದೇವಂ ಇಂತಂಗಾಲ ನೆಟ್ಟು ಕಟ್ಟುಗಿಯಲಾ ನೋವಿನಿಂ ನಡೆಯುಡುಗುತಂದು ನೊಂದು ಕಂದಿ ಕುಂದಿ (ಉದ್ಭಟ. ೧೧–೧೦೩, ವ). [< ಕಡಿದು + ಉಗಿ$_{3}$]

**ಕಟ್ಟುಗುಂಟೆ** (ನಾ). (?): ಕಟ್ಟುಗುಂಟಕ್ಕೆ ಬಂದ ದೇವರ ಪೂಜಿಸಲು ಸೂಜಿಯ ಪೋಣಿಸಿ ದಾರವ ಮಱಿದಡೆ ಹೊಲಿಗೆ ಬಿಚ್ಚಿತ್ತು (ಅವಚಂ. ೯೧–೪೦೮). [?]

**ಕಟ್ಟುಗುಂಡು** (ನಾ). ಕಲ್ಲುಗಳನ್ನು ಪುಡಿಮಾಡಲು ಉಪಯೋಗಿಸುವ ದೊಡ್ಡಗುಂಡು: ಧರೆಯ ವಿಟರ ಪೇರೆರ್ದೆಗಲ್ಲನಾ ರತಿವರನೆಂಬೊರ್ವ ಕಲ್ಕುಟಿಕ ಭರದಿ ಪೊಡೆವ ಕಟ್ಟುಗುಂಡಿದೆನಲಾ ತರುಣಿಗೊಪ್ಪಿದುವು ನಿತಂಬ (ಶ್ರೀಪಾಲ. ೩–೫೧).
[< ಕಡಿದು + ಗುಂಡು$_{2}$ / ತೆಲು. ಕಟ್ಟುಗುಂಡು]

**ಕಟ್ಟುಗುಣ** (ನಾ). ಕಲಿತುಕೊಂಡ ಗುಣ: ಹುಟ್ಟುಗುಣಕ್ಕಿಂತಲೂ ಕಟ್ಟುಗುಣ ಕೀಳೆಂಬುದು ಎಲ್ಲರಿಗೂ ತಿಳಿದ ವಿಷಯ (ಪ್ರಮಹ. ೧೬೫). [ಕಟ್ಟು$_1$ + ಗುಣ$_2$]

**ಕಟ್ಟುಗುತ್ತಗೆ, ಕಟ್ಟುಗುತ್ತಿಗೆ** (ನಾ). ನಿಗದಿಯಾದ ಗುತ್ತಿಗೆ: ಸರ್ವಾಯಶುದ್ಧಿ ಕಟ್ಟುಗುತ್ತಗೆ ಪಿಂಡಾದಾನ (ಎಕ. VI, ತರೀಕೆ. ೨೦–೩೦; 1185); ಕಟ್ಟುಗುತ್ತಗೆಯಾಗಿ ತೆಱುವ ಸಿದ್ಧಾಯ ಪಳ ಅಲ್ಲಿ ದೇವಾಲ್ಯವ ಮಾಡಿಸಿದದಕ್ಕೆ ಏಱಿಗೆ ತೆಱುವ ಕಟ್ಟುಗುತ್ತಗೆ (ಮೈಆರಿ. ೧೯೩೬, ೧೭–೧; 13ನೆಯ ಶತ); ಸರ್ವಸ್ವಾಮ್ಯವನು ಅನುಭವಿಸಿಕೊಂಡು ಕಟ್ಟುಗುತ್ತಗೆಯಾಗಿ ವರುಷವೊಂದಕ್ಕೆ ತೆಱುತ್ತ (ಮೈಆರಿ. ೧೯೩೦, ೫೦–೧೪; 1392). **ಕಟ್ಟುಗುತ್ತಿಗೆ:** ಎನಗೆ ಕಟ್ಟುಗುತ್ತಿಗೆಯೊ (ಮೋಳಿಮಾ. ೨೨–೮೬); ಕಟ್ಟುಗುತ್ತಿಗೆ ಪಿಂಡದಾನವಾಗಿ ಕಿಱುಕುಳ ತಪ್ಪುತಾಡಿ (ಎಕ. XII, ಚಿಕ್ಕನಾ. ೨–೧೩; 1261); ಉಭಯಂ ಖ ೧೬೯ಂ ಗೆ ಸಲುವ ಕಟ್ಟುಗುತ್ತಿಗೆ ಗಡಿಯ ಭತ್ತ (ಎಕ. VIII, ತೀರ್ಥಹ. ೧೬೬–೩೨; 1610). [ಕಟ್ಟು$_2$ + ಗುತ್ತಗೆ]

**ಕಟ್ಟುಗುತ್ತಿಗೆ** ‘ಕಟ್ಟುಗುತ್ತಗೆ’ ನೋ.

**ಕಟ್ಟುಗೂಳಿ** (ನಾ). ಆಕಳಿಗೆ ಗರ್ಭ ಕಟ್ಟಿಸುವುದಕ್ಕಾಗಿ ಮೀಸಲಾದ ಗೂಳಿ; ಬೀಜದ ಹೋರಿ (ಕ). [ಕಟ್ಟು$_2$ + ಗೂಳಿ$_2$]

**ಕಟ್ಟುಗೂಳು$_1$** ‘ಕಟ್ಟುಂಗೂಳ್’ ನೋ.

**ಕಟ್ಟುಗೂಳು$_2$, ಕಟುಗೂಳು** (ನಾ). ಒಂದು ಬಗೆಯ ತೆರಿಗೆ: ತುಪ್ಪ ದಳಮಿಳಿ ಕುಳು ನೂಲೊಳಗಾದವು ಕಟ್ಟುಗೂಳು ಕಟಕಸೇಸೆ ವೀರಸೇಸೆ ಆನೆಯ ಸೇಸೆ ಕುದುರೆಯ ಸೇಸೆ (ಎಕ. XVI, ಚಿಕ್ಕನಾ. ೭೧–೨೭; 1350); ಸಿದ್ಧಾಯ ಕಟ್ಟುಗೂಳು ಕಟಕಸೇಸೆ (ಎಕ. XI, ಚಿತ್ರದು. ೬–೩೨; 1338). **ಕಟುಗೂಳು:** ಪಂಚಾಳವಳಕೆ ಕಟುಗೂಳು ಹದಿಕೆ ಕರ ಸುಂಕ ಕೊಮಾರ ಕಾಣಿಕೆ ಸುಂಕ ಹೊದಕೆ ಕಾಣಿಕೆ ಕಿರುಕುಳ ಏನು ಹದಿಕೆಗಳನೂ (ಎಕ. IX (S), ಬೆಂಗಳೂ. ೧೬೯–೨; 1329). [ಕಟ್ಟು$_1$ + ಗೂಳು ?]

**ಕಟ್ಟುಗೆ** (ನಾ). ಮಠ ಮೊದಲಾದುವುಗಳಿಗೆ ಕೊಡುವ ಕಾಣಿಕೆಯ ನಿಗದಿ; ಸೇವೆಯ ಕಾಣಿಕೆ: ಸ್ಥಾನಿಕ ತಂಮಣನು ಗಣಾಚಾರದ ಕಟ್ಟುಗೆಯ ತೆರುವ ಹಣವನು (ಎಕ. VII, ಶಿವಮೊ. ೨೧–೮; ?). [ಕಟ್ಟು$_1$ + –ಗೆ ?]

**ಕಟ್ಟುಗೆಕಾಣಿಕೆ** (ನಾ). ಕಟ್ಟಳೆಯ ಕಾಣಿಕೆ: ಆ ಕ್ಷೇತ್ರಂಗಳನು ನಾವು ಆ ರಾಮಣ್ಣಂಗಳ ಕಯ್ಯಲು ಗದ್ಯಾಣಂ ಎಂಟನೂ ಕಟ್ಟುಗೆಕಾಣಿಕೆಯಾಗಿ ಕೊಂಡು (ಎಕ. V, ಅರಸೀ. ೧೧೩–೧೪; 1318). [ಕಟ್ಟುಗೆ + ಕಾಣಿಕೆ (< ಕಾಣ್ಕೆ)]

**ಕಟ್ಟುಗೆಡೆ** (ಕ್ರಿ). ಸ್ಥೈರ್ಯಗೆಡು: ಪೊಸವೇಟಕಾರ್ತಿಯರ್ ತಮ್ಮ ಕನ್ನೆವೇಟಮುವಸೊಳಾಗದೆ ಕೆಟ್ಟವೆಂದು ಕಟ್ಟುಗೆಡೆಯೆಯುಂ (ಅರ್ಧನೇ. ೫–೨ ವ). [ಕಟ್ಟು$_2$ + ಕೆಡೆ$_1$]

**ಕಟ್ಟುಗೊಡಗಿ** ‘ಕಟ್ಟುಗೊಡಗೆ’ ನೋ.

**ಕಟ್ಟುಗೊಡಗೆ, ಕಟುಕೊಡಗಿ, ಕಟುಕೊಡಿಗೆ, ಕಟುಗೊಡಗಿ, ಕಟ್ಟುಕೊಡಗೆ, ಕಟ್ಟುಕೊಡಿಗೆ, ಕಟ್ಟುಗೊಡಗಿ** (ನಾ). ಕೆರೆ ಕಟ್ಟಿಸಿದುದಕ್ಕಾಗಿ ಕೊಡುವ ಮಾನ್ಯ: ಆ ದಾಮೋದರಸಟ ಕೊಡಿಯಪಂಕಟದರಾಗಿ ಆ ಎರಡು ಒಡವಿಂಗೂ ಕಟ್ಟುಗೊಡಗೆಯಾಗಿ . . . ಕೊಟ್ಟೆವು (ಎಕ. IX (S), ಬೆಂಗಳೂ. ೧೭೨–೨೦; 1370). **ಕಟುಕೊಡಗಿ:** ಚಿಕ ತಿಂಮಂಣನಾಯ್ಕರಿಗೆ ಕೊಟ ಕಟುಕೊಡಗಿಯ ಸಾಧನದ ಕ್ರಮವೆಂತೆಂದರೆ (ಎಕ. XII, ಶಿರಾ. ೧೮–೪; 1577 ?). **ಕಟುಕೊಡಿಗೆ:** ಕಟುಕೊಡಿಗೆ ಗದೆ ಖಂ ೧ ಹೊಲ ೧ (ಎಕ. X (S), ಮುಳಬಾ. ೧೪೭–೧; 16ನೆಯ ಶತ). **ಕಟುಗೊಡಗಿ:** ತಿಂಮಾವೊಡೆರಿಗೆ ಕೊಟ ಕೆಱೆಯ ಕಟುಗೊಡಗಿಯ ಶಿಲಾಸಾಶನ (ಮೈಆರಿ. ೧೯೩೦, ೧೦೦–೬; 1524). **ಕಟ್ಟುಕೊಡಗೆ:** ಪುರದ ಕೆಱೆಯ ಒಡವುಗಳನೂ ಕಟ್ಟಿ ರೂಪುಮಾಡಲಾಗಿ ಆ ಕೆಱೆಯಲಿ ಕಟ್ಟುಕೊಡೆ [ಡ] ಗೆ ಖಂಡುಗ ಗದ್ದೆಯನೂ . . . ನಡಿಯ ಉಳದು (ಎಕ. IX (S), ಹೊಸಕೋ. ೧೮೪–೨೦; 1433). **ಕಟ್ಟುಕೊಡಿಗೆ:** ಪೆರುಮಾಚನಹಳ್ಳಿ ಕೆರೆ ಕಟಸಿದಕ್ಕೆ ಕ್ರಿಷ್ಣಪಗೆ ಕೊಟ ಕಟ್ಟುಕೊಡಿಗೆ ಹೊಲ (ಎಕ. X, ಚಿಂತಾಮ. ೧೧೧–೬; 1677 ?). **ಕಟ್ಟುಗೊಡಗಿ:** ಕಟ್ಟುಗೊಡಗಿ ಮಾಂನ್ಯದ ಸಾಶನ (ಎಕ. XI, ಹಿರಿಯೂ. ೩೫–೬; 1548). [ಕಟ್ಟು$_2$ + ಕೊಡಗೆ (< ಕೊಡಂಗೆಯ್$_2$)]

**ಕಟ್ಟುಗೊತ್ತು** (ನಾ). ಕಟ್ಟುವ ಸ್ಥಾನ, —ಸ್ಥಳ, —ಹಕ್ಕು: ಹಸುವಿಂಗೆ ಹರವರಿ ಎತ್ತಿಂಗೆ ಕಟ್ಟುಗೊತ್ತು ಕಱುವಿಂಗೆ ವಿಶ್ವತೋಮುಖವಾಗಿ ಹರಿವುತ್ತಿಪ್ಪ ಕಱುವಿನ ಅಱಿವ ಗೋಪತಿನಾಥ ವಿಶ್ವೇಶ್ವರಲಿಂಗದಲ್ಲಿ ಕಟ್ಟುವಡೆಯಬೇಕು (ತು ಜು ಗಾ. ೪); ಆರಾರ ಕ್ರೀ ನೇಮಂಗಳಲ್ಲಿಪ್ಪ ವಿಶ್ವಾಸಕ್ಕೆ ತಪ್ಪದಿಪ್ಪ ಆ ವಸ್ತುವ ಬೇಱೊಂದು ಲಕ್ಷಿಸಿ ಕಟ್ಟುಗೊತ್ತಿಂಗೆ ತರಲಿಲ್ಲ (ಮೋಳಿಮಾ. ೧೩೮–೫೩೨). [ಕಟ್ಟು$_2$ + ಗೊತ್ತು]

**ಕಟ್ಟುಗೊಳ್, ಕಟ್ಟುಗೊಳ್ಳು** (ಕ್ರಿ). ೧. ನಿರ್ಬಂಧಕ್ಕೆ ಒಳಗಾಗು, —ಬದ್ಧವಾಗು: ಗುಟ್ಟಳಿದುದು ಮುನಿವರನಿಂದೆ ಕ್ಷೇತ್ರವ ಬಿಟ್ಟುದು ಭಾರ್ಗವಶರಕೆ ಕಟ್ಟುಗೊಂಡುದು ಮೂಜು ಭಂಗವೆಂದಬುದಿಯ ಬಿಟ್ಟೋಡಿತಾ ಪುರಲಗಳು (ಮೋಹತ. ೨೦–೧೦). ೨. ಗುಂಪಾಗು; ಒಟ್ಟೈಸು: ಬೀಸರಮಾದ ರಾಶಿಯಂತೆ ಪುಲಿವೊಗಂಗೆಟ್ಟು ಕಟ್ಟುಗೊಂಡು ತಟ್ಟುತ್ತಿಱಿವ ಕಟ್ಟಾಯದ ಕಡುಗಲಿಗಳೆಲ್ಲಂ (ಅನಂಪು. ೧೧–೮೩ ವ); ಉರವಣಿಸಿತು ಲಜ್ಜೆ ಕೆಳದಿಯರ್ ಕಂಡು ಕಾತುರ ಕಟ್ಟುಗೊಂಡುದಿರ್ವರಿಗೆ (ಮೋಹತ. ೩೧–೩೯). **ಕಟ್ಟುಗೊಳ್ಳು:** ೩. ಕಟ್ಟಲ್ಪಡು; ಬಂಧಿತವಾಗು: ಬಿಳಿಯುಡುಪು . . . ನಡುವಿನ ಬಳಿ ಪಟ್ಟಿಯಿಂದ ಬಿಗಿಯಾಗಿ ಕಟ್ಟುಗೊಂಡಿತ್ತು (ಪುನರು. ೧೮೯). [ಕಟ್ಟು$_2$ + ಕೊಳ್$_1$]

**ಕಟ್ಟುಗೊಳಿಸು** (ಕ್ರಿ). ೧. ಕಟ್ಟಿಹಾಕು; ಬಿಗಿಮಾಡು: ಭಸಿತವುಗುತಿಪ್ಪಡಿಯ ರಂಧ್ರದೊಳೊಸೆದು ಧಿಕ್ಕನೆ ತೆಗೆದೆಲೆಗಳಲಿ ಮುಸುಕಿ ಬಂಧಿಸಿ ಕಟ್ಟುಗೊಳಿಸಿ ಬಲಿಷ್ಕವಂ ಮಾಡ್ತಿ (ಬಸಪು. ೪೪–೧೬). ೨. ತಡೆ; ನಿಲ್ಲಿಸು: ನಿಟಿಲದೆ ಸುಱಿವ ರಕ್ತವ ಕಟ್ಟುಗೊಳಿಸಿ . . . ಸತ್ರಾಣ ಸಂಘಟಿಸೆ ರಕ್ಕಸರಾಯ ನುಡಿದ (ಮೋಹತ. ೧೨–೬೧). [ಕಟ್ಟುಗೊಳ್ + –ಇಸು$_3$]

**ಕಟ್ಟುಗೊಳ್ಳು** ‘ಕಟ್ಟುಗೊಳ್’ ನೋ.

**ಕಟ್ಟುಗ್ಗರ** (ನಾ). ಕ್ರೂರಭಾವ; ಪ್ರಚಂಡತೆ: ಕಟ್ಟುಗ್ಗರದ ಜಾಯಿಲದ ಜಂಗುಳಿಗಳ ತಟ್ಟು ನಡೆದು ಬಂದುದಾಗ (ನೇಮಿಸಂ. ೨–೩೯); ಕಟ್ಟುಗ್ಗರದಿ ಬಿಲ್ಲವರೆಚ್ಚ ಶರಗಳಿಂದಿಟ್ಟಣಿಸುತಲೆಯ್ತಂದು (ಚಂಪ್ರಸಾಂ. ೮–೩೫). [< ಕಡಿದು + ಉಗ್ಗರ]

**ಕಟ್ಟುಗ್ರ** (ಗು). ೧. ಬಹು ಪ್ರಚಂಡವಾದ; ಅತಿ ಕ್ರೂರವಾದ: ಕಟ್ಟುಗ್ರ ಕೋಪದಿಂ ಮುಳಿದಂದು ರಾಘವಂ (ಜೈ ಮಿ ಭಾ. ೮–೪೦); (ಪ್ರವೇಶಿಸಿ, ಕಟ್ಟುಗ್ರಭಾವದಿಂದ ನಿಲ್ಲುತ್ತಾನೆ . . .) (ಚಂದ್ರ ಸ. ೯೨). (ನಾ). ೨. ಪ್ರಚಂಡವಾದ ಪ್ರಯತ್ನ, —ಸಾಧನೆ: ಕಟ್ಟುಗ್ರ [ಪಾಠಾಂ. ಹ]ದಿಂದ ನಿಮ್ಮ ಶ್ರೀಚರಣವ ಕಂಡೆ (ಬಸವ. ೪೮೧). ೩. ಕ್ರೂರಭಾವ; ಪ್ರಚಂಡತೆ: ಕಟ್ಟುಗ್ರದಿಜುಹೆ ಕತ್ತಲೆಯ ನುಂಗಿತ್ತು (ಅವಚಂ. ೧೩೫–೬೧೯); ತರಹರಿಸು ಕಟ್ಟುಗ್ರವನು ನಿಷ್ಠುರತೆ ಸಾಕಿನ್ನು (ತೊರರಾ. ೨–೬–೨೧). [< ಕಡಿದು + ಉಗ್ರ]

**ಕಟ್ಟುಜ್ಜುಗಿಸು** (ಕ್ರಿ). ಬಹಳವಾಗಿ ದುಡಿ, —ಶ್ರಮಿಸು: ಪುಣ್ಯವಂಶಪ್ರದೀಪಕರಾಗಿ ಧನ್ಯರಾಗಲು ಪ್ರಯತ್ನಿಸಬೇಕು . . . ಕಟ್ಟುಜ್ಜುಗಿಸುತ್ತಿರಬೇಕು (ಬೆಟ್ಟಅ. ೧೯೬–೧೮). [< ಕಡಿದು + ಉಜ್ಜುಗಿಸು]

**ಕಟ್ಟುಡಿ** (ಕ್ರಿ). ಕಟ್ಟು ಬಿಚ್ಚು; ಬಂಧ ಸಡಿಲವಾಗು: ಕಟ್ಟುಡಿದ ನಾಲಗೆಯದುಸಿರ್ಗುಮೆ ನುಡಿಗಳನ್ (ಬದ್ಧಪ್ರ. ೪೬–೧೦೧೩).
[ಕಟ್ಟು$_2$ + ಉಡಿ$_1$]

**ಕಟ್ಟುತೆಱು** 'ಕಟ್ಟುಂದೆಱು' ನೋ.

**ಕಟ್ಟುತ್ತಮಿಕೆ** (ನಾ). ಅತ್ಯುತ್ತಮವಾದದ್ದು: ನೀವಿರಿಸಿದಂತಿಹೆನು ನೀವೆಂದಂತೆ ನಡೆವನೆಂದರಸ ಕಟ್ಟುತ್ತಮಿಕೆಯಂ ನುಡಿವೆ (ಹ ಚ ಕಾ. ೮–೨೩). [< ಕಡಿದು + ಉತ್ತಮಿಕೆ]

**ಕಟ್ಟುತ್ತರ** (ನಾ). ೧. "ಬಿಗುವಿನ ಮಾತು" (ಜಾನಕೋ. ೩೨). ೨. ಕಡ್ಡಾಯದ ಆಜ್ಞೆ; ಕಟ್ಟಪ್ಪಣೆ (ಕ). [< ಕಡಿದು + ಉತ್ತರ]

**ಕಟ್ಟುತ್ತಾರ** (ನಾ). ಮಳೆ, ಬೆಳೆ ಇಲ್ಲದಾಗ ಕಂದಾಯದಲ್ಲಿ ತೋರುವ ದೊಡ್ಡ ಪ್ರಮಾಣದ ಸವಲತ್ತು, —ರಿಯಾಯಿತಿ (ರೀವ್).
[< ಕಡಿದು + ಉತ್ತಾರ]

**ಕಟ್ಟುದಾರ** (ನಾ). (ನಡುವಿಗೆ) ಕಟ್ಟುವ ದಾರ; ಉಡಿದಾರ: "ಸುತ್ತುಪಟ್ಟಿ; ನಡುಕಟ್ಟು; ಕಟ್ಟುದಾರ; ಅಂಚು; ಅರುಗು" (Cincture. ಇಂಕನಿ). [ಕಟ್ಟು$_1$ + ದಾರ$_1$]

**ಕಟ್ಟುದೀವಿಗೆ** (ನಾ). ಕಟ್ಟುವ ದೀಪ: ಕಂಚು ಹಿತ್ತಾಳೆ ಸುವರ್ಣಮಯ ಕುಂದಣದ . . . ಸಾಲುದೀವಿಗೆಗಳೆ ಕಟ್ಟುದೀವಿಗೆಗಳು (ಪುರಂದ. ೫–೬೯–೧೧). [ಕಟ್ಟು$_1$ + ದೀವಿಗೆ]

**ಕಟ್ಟುದೆರೆ** (ನಾ). ತಡೆದು ನಿಲ್ಲಿಸುವ ಅಲೆ; ಎದುರು ತೆರೆ: ಇಡುಕುದೆರೆಯಟ್ಟುದೆರೆ ಕಟ್ಟು[ಪಾಠಾಂ. ಪೊಟ್ಟು, ಯಿಟ್ಟು]ಧೆರೆ ತಟ್ಟುದೆರೆಯಡ ಕಿಲುದೆರೆಗಳುಲಿದು ಹಳಚಲು (ಸೋಮಚ. ೧–೬೦). [ಕಟ್ಟು$_1$ + ತೆರೆ$_4$]

**ಕಟ್ಟುದ್ದ** (ನಾ). ಬಹಳ ಉದ್ದವಾದುದು; ಅತಿ ಎತ್ತರವಾದುದು: ಕಟ್ಟುದ್ದಮನಾಂತು ಮಿಸುಪ ಕೊಸಗಿನ ಚೆಲ್ವು (ಕಬ್ಬಿಕಾ. ೧೦೭).
**ಕಟ್ಟುದ್ದಮಾಗು** = ಬಹಳ ಉದ್ದವಾಗು; ಅತಿ ಎತ್ತರವಾಗು: ಬನಂಬಿಡಿದು ಕಟ್ಟುದ್ದಮಾಗಿ ಬೆಳೆದ ಬಿದಿರ ಕೊನೆಯ (ಕಬ್ಬಿಕಾ. ೨೩೪).
[< ಕಡಿದು + ಉದ್ದ]

**ಕಟ್ಟುನಿಟ್ಟು** (ನಾ). ನಿರ್ಬಂಧ; ಕಟ್ಟಳೆ; ಬಿಗುವು: ನ್ಯಾಯದಾನ ಕಟ್ಟುನಿಟ್ಟಾಗಿ ನಡೆಯುವಂತೆ ಅವನು ಏರ್ಪಾಡು ಮಾಡಿದ (ಹಾಹುತ್ತ. ೯೯); ಹೆಣ್ಣು ಎಂದು ಕಟ್ಟುನಿಟ್ಟನಲ್ಲಿಟ್ಟವರಲ್ಲ ನಮ್ಮ ತಂದೆ (ತೀಮೋಡ. ೯೩).
[ಕಟ್ಟು$_2$ + ನಿಟ್ಟು$_0$]

**ಕಟ್ಟುನೇಣು** (ನಾ). ಕಟ್ಟುವ ಹಗ್ಗ; ಪಾಶ: ಹಟ್ಟಿಯೊಳಗುಳ್ಳನಿತು ನೇಣ್ಗಳು ಕಟ್ಟ ಸವೆದವು ಕಡೆವ ಕಂಭದ ಕಟ್ಟುನೇಣಿಗೆ ನೇಣು ಬಂದವು ಬಾಲೆಯಿದ್ದೆಡೆಗೆ (ನಿಭಾಗ. ೧೦–೯–೪೧).
[ಕಟ್ಟು$_1$ + ನೇಣು (< ನೇಣ್)]

**ಕಟ್ಟುಪಂಜರ** 'ಕಟ್ಟುವಂಜರ' ನೋ.

**ಕಟ್ಟುಪಡು** 'ಕಟ್ಟುವಡು' ನೋ.

**ಕಟ್ಟುಪಡೆ** 'ಕಟ್ಟುವಡೆ' ನೋ.

**ಕಟ್ಟುಪಾಟು** 'ಕಟ್ಟುಪಾಡು' ನೋ.

**ಕಟ್ಟುಪಾಡು, ಕಟ್ಟುಪಾಟು** (ನಾ). ನಿಯಮ; ವ್ಯವಸ್ಥೆ; ಕ್ರಮ: ಭಾರತೀಯ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳು ಒಂದು ಕಟ್ಟುಪಾಡಿನಲ್ಲಿ ಅಡಗಿವೆ (ಭಾರದ. ೮೦); ಪ್ರಮಾಣ ಮೀರಿದ್ದ, ಕಟ್ಟುಪಾಡಿಲ್ಲದ ವರ್ಣನ ವಿಸ್ತಾರವೇ ಅವನ ಹೆಗ್ಗುರಿಯಾಗಿತ್ತು (ತವನಿ. ೧೭೫); ನೆಗಡಿಗೆ ಇಂಥ ಕಾಲ, ಇಷ್ಟು ಸಲ ಎಂಬ ಕಟ್ಟುಪಾಡು ಯಾವುದೂ ಇದ್ದಂತೆ ನನ್ನ ಅನುಭವಕ್ಕೆ ಬಂದಿಲ್ಲ (ನಂಟರು. ೩೬). **ಕಟ್ಟುಪಾಟು**: (ಕ).
[ಕಟ್ಟು$_2$ + ಪಾಡು$_3$. / ತಮಿ. ಕಟ್ಟುಪ್ಪಾಡು; ತುಳು. ಕಟ್ಟ್‌ಪಾಡು; ತೆಲು. ಕಟ್ಟುಪಾಟು]

**ಕಟ್ಟುಪಾಸ** (ನಾ). ಕಟ್ಟುನಿಟ್ಟಾದ ಉಪವಾಸ; ಕಠೋರವಾದ ಉಪವಾಸ: ಅನಿತಜಲಿ ಕೂಲಿ ಹುಟ್ಟದೆ ಕಟ್ಟುಪಾಸ[ಪಾಠಾಂ. ನಿಟ್ಟುಪಾಸ]ದೊಳೇಳುದಿನವಿರಲು (ಬಸಪು. ೨೭–೧೬). 'ನಿಟ್ಟುಪಾಸ' ಪಠಾ.
[< ಕಡಿದು + ಉಪಾಸ]

**ಕಟ್ಟುಪ್ಪು** (ನಾ). ೧. ಬಹಳ ಉಪ್ಪಾಗಿರುವುದು; ಉಪ್ಪು ಹೆಚ್ಚಾಗಿರುವುದು: ಸಾರು ಕಟ್ಟುಪ್ಪಾಗಿದೆ (ರೂಢಿ). ೨. ಔಷಧಿಗಾಗಿ ಬಳಸುವ ಒಂದು ಬಗೆಯ ಕೃತಕ ಉಪ್ಪು (ಕ). [< ಕಡಿದು + ಉಪ್ಪು$_1$]

**ಕಟ್ಟುಬಣ್ಣ** (ನಾ). ೧. ಕೃತಕವಾಗಿ ಹಾಕಿದ ಬಣ್ಣ; ಕಟ್ಟಿದ ಬಣ್ಣ: ಪುಟ್ಟುಬಣ್ಣ ಒಂದಜಿಒಳಗೆ ಕಟ್ಟುಬಣ್ಣ ಒಂದುಮಾಡಿ ಕಟ್ಟಕುಟ್ಟಿ ಕಾಸಿ ಕರಗಿ ಮೂಱುಬಣ್ಣವ ಮುಟ್ಟ ಮಾಡಿ (ಕನಕ. ೨೧೪–೨೩೧). ೨. ಬಣ್ಣದ ಸೀರೆ: ಮದನಹಾರವ ಹರಿಣಾವಳಿ ಪಳವಟ್ಟ ಕದಳಿ ಕೇಸರಿ ಕಟ್ಟುಬಣ್ಣ (ಅಮುಸಾಂ. ೪–೨೨). [ಕಟ್ಟು$_1$ + ಬಣ್ಣ]

**ಕಟ್ಟುಬಾಕಿ** (ನಾ). (ಉಕ) ವಸೂಲಾಗದ ಬಾಕಿ, —ಹಣ: ಆ ಊರಿನಲ್ಲಿ ಕಟ್ಟುಬಾಕಿ ಬಹಳ ಉಳಿದಿದೆ (ರೂಢಿ).
[ಕಟ್ಟು$_1$ + ಬಾಕಿ$_2$]

**ಕಟ್ಟುಬಾಳು** (ನಾ). ೧. ನಿಯಮಿತ ಜೀವನ; ಕಟ್ಟುನಿಟ್ಟಾದ ಜೀವನ: ಅವನದು ತೀರಾ ಕಟ್ಟುಬಾಳು (ರೂಢಿ). ೨. ಯಾಂತ್ರಿಕ ಜೀವನ: ಪಟ್ಟಣದ ಕಟ್ಟುಬಾಳಿನ ವರ್ಣನೆ ಮಾಡಿ, ಅದನ್ನೇ ಪುನಃ ಪುನಃ ಮಗುಚಿ ಹಾಕಿ ಹೇಳುವ ಸಾಹಿತ್ಯರಚನೆ (ನನ್ನೂರು. ಪೀಠಿಕೆ. ೧೪).
[ಕಟ್ಟು$_2$ + ಬಾಳು$_2$ (< ಬಾೞ್$_2$)]

**ಕಟ್ಟುಬೀಳು** (ಕ್ರಿ). ನಿರ್ಬಂಧಕ್ಕೆ ಒಳಗಾಗು; ಬಂಧನಕ್ಕೆ ಗುರಿಯಾಗು; ಕಟ್ಟಿಗೆ ಒಳಪಡು: ಮಕ್ಷಿಕೋಚ್ಛಿಷ್ಟವಿಲ್ಲದ ಜೇಸುತುಪ್ಪ ಕಟ್ಟುಬೀಳದ ಸಕ್ಕರೆಯಿಂದೆ ಸವಿಪಾತ ನೆಟ್ಟನೆ ಪೇಳ್ವುದೆನ್ನೊಡನೆ (ಮೋಹತ. ೨೩–೧); ನನ್ನ ಮನಸು . . . ಕರ್ತವ್ಯದ ಕರೆಗೆ ಕಟ್ಟುಬಿದ್ದಿದೆ (ರಾಜವ. ೪). [ಕಟ್ಟು$_2$ + ಬೀಳು$_1$ (< ಬೀೞ್$_1$)]

**ಕಟ್ಟುಬುತ್ತಿ** (ನಾ). ಕಟ್ಟಿಕೊಟ್ಟ ಅನ್ನ; ಬುತ್ತಿ: ಕಟ್ಟುಬುತ್ತಿಯನುಂಡು ತಳುವದೆ ಬೀಗದ ಪೆಟ್ಟಿಗೆಗಳ ಹೊತ್ತುಕೊಂಡು (ಚಂಪ್ರಸಾಂ. ೧೫–೭೪); ಕಟ್ಟುಬುತ್ತಿಯ ಮುಂದೆ ಉಣಲುಂಟು ತಾಳು (ಜಗದಾ. ೧೦೧). [ಕಟ್ಟು$_1$ + ಬುತ್ತಿ]

**ಕಟ್ಟುಬೆವರು** (ನಾ). ಹೆಚ್ಚಾದ ಬೆವರು: ಮೈಯೆಲ್ಲಾ ಕಟ್ಟುಬೆವರಿಟ್ಟಿದೆ (ಮನೋನಂ. ೧೪೭). [< ಕಡಿದು + ಬೆವರು$_3$ (< ಬೆಮರ್$_2$)]

**ಕಟ್ಟುಬ್ಬಟೆ** 'ಕಟ್ಟುರ್ಬಟೆ' ನೋ.

**ಕಟ್ಟುಬ್ಬರ** (ನಾ). ಅತಿಯಾದ ರಭಸ, —ವೇಗ: ಸಿಡಿಲಾಳ್ ತಡೆಯದೆಡೆಯ ನಡುವೆಟ್ಟುಗಳ್ಗೆ ಕಟ್ಟುಬ್ಬರದಿಂ ಬಂದೆಱಗುಗುಂ (ರಾಮಾಶ್ವ. ೧–೬); ನಿಸ್ಸಹಾಯರನ್ನಿರಿವ ಹಂದಿಯ ಹಮ್ಮು, ಕಟ್ಟುಬ್ಬರದ ಹಗೆತನವು (ಬಿಟ್ಟಅ. ೧೩–೮). [< ಕಡಿದು + ಉಬ್ಬರ (< ಉರ್ವರೆ)]

**ಕಟ್ಟುಬ್ಬಸ** (ನಾ). ಅತಿ ಉಬ್ಬಸ: ಕಟ್ಟಾಳ್, ಕಟ್ಟುಬ್ಬಸಂ (ಶಮದ. ೧೮೧ ಪ್ರಯೋ). [< ಕಡಿದು + ಉಬ್ಬಸ]

**ಕಟ್ಟುಬ್ಬೆಗ** (ನಾ). ೧. ಬಹಳ ಚಿಂತೆ, —ವ್ಯಾಕುಲತೆ (ಕ). ೨. ಮಿಗಿಲಾದ ಆವೇಗ, —ರಭಸ: ಮಿಗೆ ಮೂಲೋಕಂಗಳಂ ಗೆಲ್ದಧಿಕ ಮದದೆ ಪಂಚಾಸ್ತ್ರಮಂ ತೊಟ್ಟು ಕಟ್ಟುಬ್ಬೆ[ಪಾಠಾಂ. ಜ್ಜು]ಗದಿಂ ಕಂದರ್ಪನಾರ್ಪಿಂ . . . ಸಾರ್ಕೆವಂದು (ಶಬಶಂ. ೨–೯).
[< ಕಡಿದು + ಉಬ್ಬೆಗ]

**ಕಟ್ಟುಮಂಡಿಗೆ** (ನಾ). ಒಂದು ಬಗೆಯ ಭಕ್ಷ್ಯ; ಮಂಡಿಗೆ: ಉಂಡಲಿಗೆಯು ಕರಿಗಡಬು ರಾಜಿಪ ಕಟ್ಟುಮಂಡಿಗೆ ಬಿಸಿಯ ದೋಸೆಗಳ (ಕಂನವಿ. ೮–೮೯). [ಕಟ್ಟು$_1$ ? + ಮಂಡಿಗೆ (< ಮಂಡಗೆ)]

**ಕಟ್ಟುಮರ**(ನಾ). ೧. ಮರದ ದಿಮ್ಮಿಗಳನ್ನು ಕಟ್ಟಿ ಮಾಡಿದ ತೇಲುವ ಸಾಧನ; ತೆಪ್ಪ: ದೋಣಿಗಳನ್ನೂ ಕಟ್ಟುಮರಗಳನ್ನೂ ಹುಟ್ಟುಗಳಿಂದ ನಡಸುತ್ತ ಆ ಮಳೆಯಲ್ಲಿಯೇ ಸಾಹಸ ಮಾಡುತ್ತಿದ್ದರು (ಮ ಹಾ ಗ. ೨೧೮). ೨. ಹೆಂಡ ಇಳಿಸುವುದಕ್ಕಾಗಿ ಮಡಕೆ ಕಟ್ಟಿರುವ ಮರ: ಆ ಈಚಲು ತೋಪಿನಲ್ಲಿ ನೂರು ಕಟ್ಟುಮರಗಳಿವೆ (ರೂಢಿ). [ಕಟ್ಟು$_1$ + ಮರ$_1$. / ತಮಿ. ಕಟ್ಟುಮರ]

**ಕಟ್ಟುಮಸ್ತಿ** (ನಾ). ಅತಿಯಾದ ಹೆಮ್ಮೆ, —ಜಂಭ (*). [< ಕಡಿದು + ಮಸ್ತಿ]

**ಕಟ್ಟುಮಸ್ತು**, ಕಟ್ಟಮಸ್ತು (ನಾ). ತುಂಬಿದ ಮೈಕಟ್ಟು; ಗಟ್ಟಿಮುಟ್ಟು: ತೋಮ ಕಟ್ಟುಮಸ್ತಾದ ಆಳು (ಹೊಸಕ್ಷಿ. ೫೨); ಒಳೇ ಗಟ್ಟಿಮುಟ್ಟ ಕಟ್ಟುಮಸ್ತು ಆಗಿದ್ದಾನಿ (ಮಣ್ಣುಹೆ. ೧೧೩). **ಕಟ್ಟಮಸ್ತು**: ಮೂವರು ಕಟ್ಟಮಸ್ತಾದ ಆಳುಗಳು (ಗರುಡಾ. ೨೦). [← ಹಿಂ. ಕಠಮುಸ್ತ್; ಮರಾ. ಕಟಮುಸ್ತ್. / ತಮಿ. ಕಟ್ಟುಮಸ್ತು]

**ಕಟ್ಟುಮಾನ್ಯ** (ನಾ). ಕೆರೆ ಕಟ್ಟಿಸಿದುದಕ್ಕಾಗಿ ಕೊಡುವ ಮಾನ್ಯ: ನೀಉ ಕಟ್ಟ[ಟ್ಟು]ಮಾನ್ಯವಾಗಿ ಕೊಟ ಬೀಜವರಿಯ ಗದೆ (ಸೌಇಇ. IV, ೨೫೦–೫; 1521). [ಕಟ್ಟು$_2$ + ಮಾನ್ಯ]

**ಕಟ್ಟುಮುಟ್ಟು** (ನಾ). ೧. ಹೆಚ್ಚಿನ ಕ್ಲೇಶ. ೨. ಗಟ್ಟಿಮುಟ್ಟು (*). [< ಕಡಿದು + ಮುಟ್ಟು$_3$]

**ಕಟ್ಟುಮುಡಿ** (ನಾ). ಹೆಣೆದು ಕಟ್ಟಿದ ಮುಡಿ; ವೇಣೀಬಂಧ: "ಕಬರಿ ಕುಂತಳಂ ವೇಣಿ ಧಮ್ಮಿಲ್ಲಮೆನಲಾ ಕಟ್ಟುಮುಡಿ" (ಮಂಗರಾ. ೯೪–೬). [ಕಟ್ಟು$_1$ + ಮುಡಿ$_3$]

**ಕಟ್ಟುಮೆಟ್ಟು** (ನಾ). ಕಟ್ಟುಪಾಡು; ನಿರ್ಬಂಧ: ಒಡೆಯರು ಭಕ್ತರಲ್ಲಿ ರಾಣಿವಾಸವೆಂದು ಕಟ್ಟುಮೆಟ್ಟುಂಟೆ (ಮೋಳಿಮಾ. ೫೭–೨೪೦); ಅಚಾರ ಭ್ರಷ್ಟಂಗೆ ಕಟ್ಟುಮೆಟ್ಟ ಮಾಡಲಿಲ್ಲ (ಏಲೇಶ್ವ. ೧೨೯); ಅಲ್ಲಿಗಲ್ಲಿಗೆ ತಕ್ಕ ತಕ್ಕ ಬಗೆಬಗೆಗಳೊಳವೆಲ್ಲರ್ಕೆ ಕಟ್ಟುಮೆಟ್ಟಂಮಾಡಿ (ಪದ್ಮರಾ. ೪–೨೫). [ಕಟ್ಟು$_2$ + ಮೆಟ್ಟು$_2$]

**ಕಟ್ಟುಮೊಸರು**(ನಾ). ಬಟ್ಟೆಯಲ್ಲಿ ಕಟ್ಟಿ ನೇತುಹಾಕಿ, ನೀರು ಸೋರಿ ಹೋಗಿ ಗಟ್ಟಿಯಾದ ಮೊಸರು: ಒಡೆಯಂಗೆ ಭಿಟ್ಟ ಮನೆಯೊಡೆಯಂಗೆ ತುಪ್ಪ ಕಟ್ಟುಮೊಸರು ಮೃಷ್ಟಾನ್ನ (ಮೋಳಿಮಾ. ೨೨–೮೫); ಸಲೆ ಕಟ್ಟುಮೊಸರುಗಳ್ ಗಟ್ಟಿಮಜ್ಜಿಗೆಗಳ ಲಲನೆಯರುಣಬಡಿಸಿದರು (ಕಂಸವಿ. ೮–೯೧). [ಕಟ್ಟು$_1$ + ಮೊಸರು (< ಮೊಸರ್)]

**ಕಟ್ಟುರಸ** (ನಾ). ೧. ಬೇಳೆ, ಕಾಳು ಮೊದಲಾದುವುಗಳ ಕಟ್ಟಿನಿಂದ ಮಾಡುವ ಸಾರು; ಕಟ್ಟಿನ ಸಾರು. ೨. ಗಟ್ಟಿಮಾಡಿದ ಪಾದರಸ (*). [ಕಟ್ಟು$_3$ + ರಸ]

**ಕಟ್ಟುರೋಗ** (ನಾ). (ದನಗಳಿಗೆ ಬರುವ) ಆಮಶಂಕೆ; ರಕ್ತಭೇದಿ (ಎಸಮ್ಮೆ. XV, ೪೧). [ಕಟ್ಟು$_2$ + ರೋಗ]

**ಕಟ್ಟುರ್ಬಟೆ**, ಕಟ್ಟುಬ್ಬಟೆ (ನಾ). ೧. ಹೆಚ್ಚಳ; ಆಧಿಕ್ಯ; ಅತಿಶಯ: ಸುಟ್ಟೊಡೆ ತನ್ನಯ ಮಹಿಮೆಯ ಕಟ್ಟುರ್ಬಟೆಯುಱಿಯಲಕ್ಕುಮೆ (ವೃಷವಿ. ೧೩–೪೨). **ಕಟ್ಟುಬ್ಬಟೆ**: ೧. ನೋಡು ನಂದೀಶ ನಿಚ್ಚಟದ ಶರಣನಿರ್ಪುದಂ ನೋಡ ಕಟ್ಟುಬ್ಬಟೆಯ ನೇಮದಿಂ ಬಾಳ್ದುದಂ (ಸುರರ. ೮೮–೮). ೨. ಅತ್ಯಂತ ರಭಸ, —ವೇಗ, —ಸಾಹಸ: ಸುತ್ತಿತೆಗೆವ ಮೆಟ್ಟಿ ಸೀಳ್ವ ಕಟ್ಟುಬ್ಬಟೆಯ ದುಷ್ಟಗಜಂಗಳಂ (ರಾಜಶೇ. ೬–೧೧ ವ). ೩. ಅತಿಯಾದ ಆಯಾಸ: ಭಿಲ್ಲರ ರಭಸಕೆ ನಿಲ್ಲದೆ ಬಲ್ಲಿದ ಕಲಿಪಂದಿಯೊಂದು ಕಟ್ಟುಬ್ಬಟೆಯಿಂ ಮೆಲ್ಲನೆ ಪೊಱಡುತ್ತಿರೆ ಬಂದಲ್ಲೊರ್ವಂ ಬಿಲ್ಲಬಂಟನಿರ್ದಂ ಮಱಿಯೊಳ್ (ಹಮ್ಮೀರ. ೪–೪೪). [< ಕಡಿದು + ಉರ್ಬಟೆ]

**ಕಟ್ಟುರ್ಬು** (ನಾ). ಅತಿಶಯವಾದ ಪ್ರಖರತೆ; ಬಲು ಚುರುಕು, —ತೀವ್ರತೆ: ಕಟ್ಟುರ್ಬಿನ ಬೇಸಗೆಯ ಬೇಗೆಯೊಳಂ ಬತ್ತದೆ (ರಾಮಾಶ್ವ. ೬೩–೧೨). [< ಕಡಿದು + ಉರ್ಬು$_2$ (< ಉರ್ವು$_2$)]

**ಕಟ್ಟುಲಿ** (ನಾ). ಕಡಿದಾದ ಉಲಿ, —ಶಬ್ದ: ವೀರರಸಮೊಳಸಾದುರ್ಡುಗಿ ಕಣ್ಗೆಟ್ಟು ಹೊಱಗಣ ಕಟ್ಟುಲಿ ಮಾತ್ರದಿಂದಿರ್ಪ ಪಾಂಗನೀಕ್ಷಿಸಿ (ಕಗವಿ. ೯೪–೨ ವಿಷ್ಣುವು). [< ಕಡಿದು + ಉಲಿ$_2$]

**ಕಟ್ಟುಲುಹು** (ನಾ). ಗಟ್ಟಿಯಾದ ಧ್ವನಿ: ವಿಪಿನ ವಿಹಂಗಮದ ಕಟ್ಟುಲುಹು ಸೂಚಿಸುತಿರ್ದುದೈ ವನವಿಲಸದಭಿನವ ರಾಜಪದವಿಯನು (ತೊರರಾ. ೨–೨–೨೩). [< ಕಡಿದು + ಉಲುಹು (< ಉಲಿವು)]

**ಕಟ್ಟುಲುಹುದೋಱು** (ಕ್ರಿ). ದೊಡ್ಡ ಧ್ವನಿಮಾಡು; ಗದ್ದಲಮಾಡು; ಕೂಗಾಡು: ಹಕ್ಕಿಯಾಡುಂಬೊಲನ ಮರಗಾಡುಗಳೊಳಗೆ ಕಟ್ಟುಲುಹುದೋಱಡೆ ಹೊಕ್ಕುದಗಲಕೆ ಶಬರಸಂದೋಹ (ತೊರರಾ. ೩–೩–೧೧). [ಕಟ್ಟುಲುಹು + ತೋಱು$_1$ (< ತೋಱ್)]

**ಕಟ್ಟುವಂಜರ**, ಕಟ್ಟುಪಂಜರ (ನಾ). ೧. ಕಟಕಟೆ; ಸುತ್ತುವರಿದ ಚೌಕಟ್ಟು; ಕಟಾಂಜನ: ಕಟ್ಟುವಂಜರದೊಳ್ ನೀಂ ಬರೆದ ಗಾಹೆಯು ನೆಲ್ಲಿ ಕಲ್ತೆ (ಪಂಚತಂ. ೧೯೬–೧೮). ೨. (ರಥದ ಸುತ್ತಲೂ ಕಟ್ಟಿದ) ಮರದ ಅಥವಾ ಕಬ್ಬಿಣದ ಪಂಜರ: "ವರೂಥಃ, ರಥಗೋಪನಂ – ಈ ೨ ರಥದ ಕಟ್ಟ[ಟ್ಟು]ವಂಜರ" (ಹಲಾಯು. ೭೪–೨೯೫); "ಕಟ್ಟುವಂಜರಂ ರಥಗೋಪಮಕ್ಕು" (ಮಂಗರಾ. ೮೪–೨೫). **ಕಟ್ಟುಪಂಜರ**: ೧. ಪೂರ್ಣೇಂದು ಹೊನ್ನಿನುಪ್ಪರಿಗೆಯ ಕಟ್ಟುಪಂಜರದಲ್ಲಿ ಜೊನ್ನವ ಸುರಿದನಳ್ತಿಯಲಿ (ಮೋಹತ. ೧೬–೫೪); ಕಟ್ಟುಪಂಜರದೊಳೊಂದು ಕಡೆಯೊಳಗಾ ದಿಟ್ಟ ಕೈಯಿಕ್ಕಿ ನಿಂದಿರಲು (ಪ್ರಭಂಜ. ೪–೯೨). [ಕಟ್ಟು$_2$ + ಪಂಜರ$_1$]

**ಕಟ್ಟುವಡು**, ಕಟ್ಟುಪಡು (ಕ್ರಿ). ಬಂಧನಕ್ಕೆ ಒಳಗಾಗು; ಹಿಡಿಯಲ್ಪಡು; ಸೆರೆಸಿಗು: ಪಾಂಚಾಲರಾಜತನೂಜೆ ಪಗೆವರ ಕಟ್ಟುವಟ್ಟಿರ್ದೇಳಿದಿಕ್ಕೆಗೆ ಸಂತಸಂಬಟ್ಟು (ಪಂಪಭಾ. ೭–೩೮ ವ); ಕರಿಪತಿಗಳ್ ಮೊದಲಾಗಿರೆ ನರರ್ಗಂ ಬಸಮಾಗಿ ಕಟ್ಟುವಟ್ಟುವು (ಧರ್ಮಾಮೃ. ೫–೨೧). **ಕಟ್ಟುಪಡು**: ಅಗಸ್ತ್ಯಂ ಕುಡಿಯುತುಗುಟ್ವನಿಂ ಕಟ್ಟುಪಟ್ಟೆಬ್ಬಿದಿನ್ತಪ್ಪದು ಪೆಂಪನಾತ್ಮಳ್ದಿತೆನ್ದನ್ದಱಿಯರೆ (ಎಕ. X, ಮುಳಬಾ. ೩೮–೧೫; 890); ಅವನಿಪಾಳರ್ ಧರಣೀಪಾಳನ ಸೇನಾಪತಿಗಿರದಾಳಾದರ್ ಕಟ್ಟುಪಟ್ಟ ವನಮದ ಕರಿವೋಲ್ (ಶಾಂತಿಪು. ೧೧–೪೩). [ಕಟ್ಟು$_2$ + ಪಡು$_1$]

**ಕಟ್ಟುವಡೆ**, ಕಟ್ಟುಪಡೆ (ಕ್ರಿ). = ಕಟ್ಟುವಡು: ಕಟ್ಟಿ ಪರ್ವತ ತತಿಯಿಂದೆ ಕಟ್ಟುವಡೆದತ್ತಪರಾಬ್ಧಿ (ಗದಾಯು. ೧–೨೪); ಕಾಮಕ್ರೋಧ ಲೋಭ ಮೋಹದಿಂದ ಕಟ್ಟುವಡೆದನು (ಬಸವ. ೪೬); ಅಣ್ಣದೇವನೊಳಿಡಿದ ವಾತ್ಸಲ್ಯಮೆಂಬ ಬಲ್ಗಣ್ಣಿಯೊಳ್ ಕಟ್ಟುವಡೆದು (ಜೈಮಿಭಾ. ೧೮–೩೦). **ಕಟ್ಟುಪಡೆ**: ಐನುವ್ವಾಚಾರಿಯ ಮಗಂ ಪುಳಿಯಣ್ಣನನ್ದಿಯ ಎಕಣದ ಬಾಗಿಯುಲಗನಾಗೆ × ಕ್ಕಟ್ಟು ಪಡೆದ ಸ್ಥಿತಿ (ಎಕ. X (s), ಚಿಕ್ಕಬ. ೨೬–೧೦; 9ನೆಯ ಶತ); ಕಟ್ಟುಪಡೆದವಗುಂಟು ಬಿಚ್ಚಿಕೊಳ್ಳುವ ಚಿಂತೆ (ಅರಳು. ೯೭–೪೧). [ಕಟ್ಟು$_2$ + ಪಡೆ$_1$]

**ಕಟ್ಟುವಣ್ಣ** (ನಾ). ಪ್ರಕಾಶಮಾನವಾದ ಬಣ್ಣ; ಹೊಳೆಯುವ ಬಣ್ಣ: ಕಟ್ಟು [ಪಾಠಾಂ. ಪಟ್ಟು] ವಣ್ಣದ ಪಟ್ಟೆ ಬಲ್ಲಳ ದಟ್ಟ ಭೂಸತಿ ಮೇಘವರ್ಣದ ಪಟ್ಟೆ (ಬಸಪು. ೧೧–೨೬). [< ಕಡಿದು ? + ಬಣ್ಣ]

**ಕಟ್ಟುವರ್** (ಕ್ರಿ). ಕಠಿಣವಾಗು; ಬಿರುಸಾಗು; ಗಡುಸಾಗು: ಚಕ್ರೇಶ್ವರ ಸಿಗ್ಗನುಱಿ ಮುಳಿಸಂ ನೀನೆಂದಿಂಗಂ ಬಿಸುಡೀ ತಮ್ಮಂದಿರೊಳಿಂತಿಂತು ಕಟ್ಟುವರ್ಪುದು [ಪಾಠಾಂ. ಕಡ್ಡರಪ್ಪುದು] ಪೆಂಪೇ (ಆದಿಪು. ೧೪–೧೨೮). [< ಕಡಿದು ? + ಬರ್$_1$]

**ಕಟ್ಟುವಳಿ** (ನಾ). ಕಟ್ಟುಪಾಡು; ನಿರ್ಬಂಧ: ಈ ಸೇನಾ ನಿಯಮಗಳ ಕಟ್ಟುವಳಿಗಳ್ಗೆ ಬಾಗಲು ನಿಮಗೆ ಮನವಿಲ್ಲ (ಮಂತ್ರಶ. ೮೦-೫). [ಕಟ್ಟು$_2$ + -ವಳಿ$_1$]

**ಕಟ್ಟುವಾಸ** (ನಾ). ಮೇಲುಹೊದಿಕೆ; ರಕ್ಷಾಕವಚ (ಕಿ) [ಕಟ್ಟು$_2$ + ವಾಸ$_2$]

**ಕಟ್ಟುವೆಱು** (ಕ್ರಿ). = ಕಟ್ಟುವಡು: ಕಟ್ಟುವೆತ್ತ ಕಳ್ಳ ನೆಲ್ಲಮುಮಂ ನುಡಿಗುಮೆನ್ನೊಳಂತಪ್ಪುದಿಲ್ಲೆಂಬುದುಂ (ಚಾವುಂಪು. ೯೬-೧); ಉಪಸರ್ಗಂಮಾಡಿದ ಬಲಿ ಪಾಪದ ಫಲದಿಂ ಬೋಂಡಾಗಿ ಕಟ್ಟುವೆತ್ತನೆಂದು (ಧರ್ಮಾಮೃ. ೯-೨೫೪); ವಾಮನನ ಕೈಯೊಳಗುರ್ವಿಸೆ ಕಟ್ಟುವೆತ್ತು ಪಾತಾಳದೊಳಿರ್ದನೆಂದು ಪೞುವಂ ಬಲಿಯಂ (ಜಗವಿ. ೧೪-೮೧). [ಕಟ್ಟು$_2$ + ಪೆಱು$_1$]

**ಕಟ್ಟುಸಿರು** (ನಾ). ಉಸಿರಾಡಲು ಕಷ್ಟವಾಗುವ ಒಂದು ಬಗೆಯ ರೋಗ: ಕಷ್ಟಶ್ವಾಸ; ಕಟ್ಟುಸಿರು; ಶ್ವಾಸಾವರೋಧ (Dyspnoea. ಇಂಕನಿ). [ಕಟ್ಟು$_2$ + ಉಸಿರ್ಱು (< ಉಸಿರ್$_2$)]

**ಕಟ್ಟುಹಾವು** (ನಾ). ಮೈಯುದ್ದಕ್ಕೂ ಅಡ್ಡಡ್ಡವಾಗಿ ಮಚ್ಚೆಗಳುಳ್ಳ ಹಾವು; ಬಳೆಹಾವು (ಕಿ). [ಕಟ್ಟು ? + ಹಾವು (< ಪಾವು)]

**ಕಟ್ಟುಹುರಿ** (ನಾ). ಚೆನ್ನಾಗಿ ಹೊಸೆದು ಮಾಡಿದ ಹಗ್ಗ (ಕಿ). [< ಕಡಿದು + ಹುರಿ$_3$ (< ಪುರಿ$_3$)]

**ಕಟ್ಟುಹೋರಿ** (ನಾ). ಆಕಳಿಗೆ ಗರ್ಭ ಕಟ್ಟಿಸುವುದಕ್ಕಾಗಿ ಮೀಸಲಾದ ಗೂಳಿ; ಬೀಜದ ಹೋರಿ (ಕಿ). [ಕಟ್ಟು$_2$ + ಹೋರಿ (< ಪೋರಿ$_1$)]

**ಕಟ್ಟುಱ** (ನಾ). ಅತ್ಯಂತ ವೇಗ, —ರಭಸ: ಕಟ್ಟುಱದೊಳ್ ಬಿಟ್ಟ ಕ್ರೆನೆ ನಿಟ್ಟುರಮಂ ನುಡಿದು (ಚಿಕವಂ. ೬೬-೨೧); ಕಟ್ಟುಱದಿಂ ದಿಟ್ಟರಡರ್ದರಟ್ಟಿಳಿವರೆಗಂ (ಚಕವಿ. ೨-೧೧೯); ಈತಂಗೆ ನೆರವಮಾಗುತುಂ ಬೀಡಿಕೆಯಿಂ ಕಟ್ಟುರ[ಱ]ದಿಂ ಪೆಣ್ಬಡೆಯ ನೀಱವೆಣ್ಗಳ್ ಬಂದೊದವಿದರ್ (ರಾಮಾಶ್ವ. ೫೯-೬). [< ಕಡಿದು + ಉಱ ?]

**ಕಟ್ಟುಱುಕ** (ನಾ). ಒಂದು ಪಕ್ಷಿಯ ಹೆಸರು: ಮಱಕುಟುಗ ಕಟ್ಟುಱುಕ ಹಂಸೆಯು ಕರಿಯ ಪರ್ದುಱಿಪರ್ದು ಜೇಪರ್ದುರುತರದ ಹಡೆಹರ್ದು ಪೆರ್ವರ್ದವಱೊಳೊಪ್ಪಿದುವು (ಸಾಳ್ವಭಾ. ೫-೨೩). [?]

**ಕಟ್ಟೂಳಿಗ** (ನಾ). ಕಠಿನವಾದ ಕೆಲಸ, —ಸೇವೆ: ಕರೆ ಕಟ್ಟೂಳಿಗದ ಕಾತರರನೆಂದನು ಹರಿ ಸುಪರ್ಣಂಗೆ (ತೊರರಾ. ೧-೮-೫೪); ಹೇಳಿದನು ಬಳಿಕರಿವಿರೋಧದ ಬೇಳುವೆಯ ಸುರವಲ್ಲಭನ ಕಟ್ಟೂಳಿಗದ ಕಶ್ಯಪ ಮುನೀಂದ್ರ ಪೂರ್ವಸಂಗತಿಯ (ತೊರರಾ. ೧-೧೧-೩). [< ಕಡಿದು + ಊಳಿಗ (< ಊೞಿಗ)]

**ಕಟ್ಟೂಳಿಗೆ** (ನಾ). ಕಂದಾಯ (?): ಅಱು ತತ್ತಿನ ಮಹಾಜನಂಗಳು . . . ವರುಷಂ ಪ್ರತಿ ಗದ್ಯಾಣಂ ಆ ಮೂಱು ಕಟ್ಟೂಳಿಗೆಯಾಗಿ ಕೆಱೆಕಾಲುವೆಯ (ಎಕ. III, ತಿರುಮ. ೯೯-೨೩; 1325). [?]

**ಕಟ್ಟೆ$_1$** (ನಾ). ೧. ಜಗಲಿ; ವೇದಿಕೆ: ಧನಪಾಳಂ . . . ಧನ್ಯಕುಮಾರನಂ ಕಟ್ಟೆಯೊಳು ಕುಳ್ಳಿರಿಸಿ (ಪುಣ್ಯಾಸ್ರ. ೧೨-೧೪ ವ); ನೆರೆದ ಯಾಚಕರಿಗೆ ಹಂಚಿಕುಡುವ ಚಿನ್ನವರಡರೊಪ್ಪಿದರು ಕಟ್ಟೆಯಲಿ (ಮೋಹತ. ೩-೨೮); ಈ ತರ್ಕವನ್ನು ಅವರು ಊರಲ್ಲಿಯ ನಾಲ್ಕು ಪ್ರತಿಷ್ಠಿತ ಕಟ್ಟೆಗಳ ಮೇಲೆ ಕುಳಿತು ಹೇಳಲು ಸಹ ಹಿಂದೆ ಮುಂದೆ ನೋಡಲಿಲ್ಲ (ಸಮಜೀ. ೩೪೮); ಭಟ್ಟರು ಹೊರಗೆ ಬಂದು ಎತ್ತರವಾದ ಕಟ್ಟೆಯ ಮೇಲೆ ನಿಂತರು (ಹಬ್ಬಬ. ೪೫). ೨. ಒಡ್ಡು; ಸೇತುವೆ; ಅಡ್ಡಗಟ್ಟೆ; ಅಣೆಕಟ್ಟು: "ಸೇತುಃ, ವಾರಣಃ – ಈ ೨ ಕಟ್ಟೆ" (ಹಲಾಯು. ೧೧೧-೪೯); ತನುವೆಂಬ ಏರಿಗೆ ಮನವೆಂಬ ಕಟ್ಟೆಯ ಮಾಡಿ (ಅವಚಂ. ೧೬೨-೬೬೩); ಘನಸಾಗರವ ಕಟ್ಟಿದ ಕಟ್ಟೆಯಿದಲಾ ಕಾಣದೇ ಲೋಕ (ಕುವ್ಯಾಸ. ೯-೪೯); ಮಾದನಹಳಿಯ ಪಡುವಣ ಮಾರೆಗಲುಡನ ಕಟ್ಟೇ ಮೇಲಣ ಗಂಡಭೇರುಂಡನೆಂಬ ಮಾವಿನ ಮರನೂ (ಎಕ. X (S), ಮುಳಬಾ. ೩-೩; 1430); ಹರಿವ ಪ್ರವಾಹದುಱುಬೆಯ ಸ್ಪೈರಿಸದಾಗ ಜರಿವ ಮಳಲ ಕಟ್ಟೆಯಂತೆ (ಕಂಕವಿ. ೧೪-೮೯); ನಟ್ಟ ನೀರೊಳಗೆ ಈಸಲಾಱೆ ನಾನು ಎತ್ತಿ ಕಟ್ಟೆ ಸೇರಿಸಬೇಕಯ್ಯಾ ನೀನು (ಪುರಂದ. ೧-೩೬-೩). ೩. ಜಲಾಶಯ; ಕೊಳ: ಊರೂರುಗಳಿಗೆ ಕಾಲುವೆ ಕಟ್ಟೆಗಳನಿತ್ತು ಚಾರುತರದ ಧಾನ್ಯಗಳನು ಪೂರಿತ ಫಲವೀಯುತೆ (ಕಂಕವಿ. ೨-೨೦). ೪. ಪಾತಿ; ಮಡಿ; ಗಿಡ ಗಂಟೆಗಳಿಗೆ ಅಡಿಯಲ್ಲಿ ನೀರು ನಿಲ್ಲುವಂತೆ ರಚಿಸಿದ ಒಡ್ಡು: ಬೆಟ್ಟದಾ ತುದಿಯಲ್ಲಿ ಹುಟ್ಟಿದ ವೃಕ್ಷಕ್ಕೆ ಕಟ್ಟೆಯನು ಕಟ್ಟ ನೀರೆಱೆದವರು ಯಾರೋ (ಕನಕ. ೫೦-೬೧). ೫. ಪೊರಕೆ; ಕಸಬರಿಗೆ (ಕಿ). [ದೇ. ‖ ತಮಿ. ಕಟ್ಟು, ಕಟ್ಟೈ; ಮಲ. ಕೆಟ್ಟು; ತುಳು. ಕಟ್ಟ; ಕೊಡ. ಕಟ್ಟ; ತೆಲು. ಕಟ್ಟ; ಕೋಲಾ. ಕಟ್ಟಾ; ನಾಯ್ಕಿ. ಪರ್ಜಿ. ಕಟ್ಟ; ಗೊಂಡಿ. ಕಟ್ಟಾ]

**ಕಟ್ಟೆ$_2$** (ನಾ). (ಬಲಿತು ಒಣಗಿದ) ಬಿದಿರು: "ಆಲವಾಲದೊಳ್ ಕುಂಡದೊಳ್ ವಂಶವೃದ್ಧತ್ವದೊಳು ಕಟ್ಟೆ" (ಶಬ್ದಮಂ. ೯೦). [ದೇ. ‖ ತಮಿ. ಕಟ್ಟೈ = ಸೌದೆ; ತೆಲು. ಕಟ್ಟೆ = ಒಣಸೌದೆ]

**ಕಟ್ಟೆ$_3$** 'ಕುಟ್ಟೆ$_1$' ನೋ.

**ಕಟ್ಟೆಗಟ್ಟು** (ಕ್ರಿ). (ಪ್ರವಾಹವನ್ನು ತಡೆದು ನಿಲ್ಲಿಸಲು) ಅಣೆಕಟ್ಟು ಹಾಕು: ಕನಕ ಕಾಂಚೀಕಳಾಪಮುಂ ಅನಂಗರಾಗರಸ ಪ್ರವಾಹಕ್ಕೆ ಕಟ್ಟೆಗಟ್ಟುವಂತೆ ಕಟ್ಟೆ (ಆದಿಪು. ೪-೯೧ ವ); ದರಿಗಳಂ ಕೋಡೊಳ್ ಕುತ್ತಿಯೆತ್ತಿ ಬಿದಿರ್ದೀಡಾಡುತ್ತಿರ್ದು ಕಟ್ಟೆಗಟ್ಟಿದಂತಾಗಿ ಜಗುನೆಯಲ್ಲಿ ಪರಿಪರಿದು (ಪಂಚತಂ. ೪೬-೨); ಲಾವಣ್ಯರಸದ ಬರಿವೊನಲಂ ಕಟ್ಟೆಗಟ್ಟಿ ಕಡೆಗೋಡಿವಿಟ್ಟಂತಿರೆ (ವರ್ಧಪು. ೭-೯ ವ). [ಕಟ್ಟೆ$_1$ + ಕಟ್ಟು$_1$]

**ಕಟ್ಟೆಗೆಲಸ** (ನಾ). ಕಟ್ಟೆಯನ್ನು ಕಟ್ಟುವ ಕೆಲಸ: ಕಟ್ಟೆಗೆಲಸವೆ ತನ್ನಿಷ್ಟವಾಗಿರೆ ಹಿಡಿವಿಟ್ಟಿಯನಾ ಚರಿಸಿದ ಪಿಟ್ಟನ್ನಯನು ಪಿಡಿದು (ಭೈರವೇ. ೧-೧೫೯). [ಕಟ್ಟೆ$_1$ + ಕೆಲಸ]

**ಕಟ್ಟೆಗ್ಗ** (ನಾ). ಅತಿ ದಡ್ಡ; ಬಲು ಮೂರ್ಖ: ಕಟ್ಟೆಗ್ಗರಪ್ಪ ಋಷಿಯರ ಮಾತಂ ಕೇಳ್ದು ರಾಜ್ಯದ ಭೋಗೋಪಭೋಗಂಗಳಂ ಕಿಡಿಸಿಕೊಳವೇಡ (ಧರ್ಮಾಮೃ. ೯-೪೨); [ಪಟ್ಟೆಯಂ ಪಱಿದು ಚೆಂಡಂ ಮಾಡುವ] ಕಟ್ಟೆಗ್ಗರಂತೆ (ಧರ್ಮಾಮೃ. ೯-೧೬೨). [< ಕಡಿದು + ಎಗ್ಗ]

**ಕಟ್ಟೆಚ್ಚರ** 'ಕಟ್ಟೆಚ್ಚಱು' ನೋ.

**ಕಟ್ಟೆಚ್ಚಱು, ಕಟ್ಟೆಚ್ಚರ** (ನಾ). ಅತಿ ಜಾಗರೂಕತೆ; ಬಹಳ ಎಚ್ಚರ: ಪಟ್ಟಣ ಮೊದಲಾದ ಗಡಿಯ ದುರ್ಗಂಗಳಿಗೊಟ್ಟಿಸಿ ಸಂವರಣೆಗಳ ಕಟ್ಟೆಚ್ಚಱೊಳಿರಿಸು (ಕಂಕವಿ. ೧೧-೧೨೯). ಕಟ್ಟೆಚ್ಚರ: ಕಟ್ಟೆಚ್ಚರದಿಂದ ಇರು (ರೂಢಿ). [< ಕಡಿದು + ಎಚ್ಚಱು$_2$ (< ಎಚ್ಚಱ್$_1$)]

**ಕಟ್ಟೆಪುರಾಣ** (ನಾ). ಚಾವಡಿ ಕಟ್ಟೆಯಲ್ಲಿ ಕುಳಿತು ಮಾಡುವ ಹರಟೆ; ಗೊಡ್ಡುಹರಟೆ; ಹಾಳುಹರಟೆ; ಕೆಲಸಕ್ಕೆ ಬಾರದ ಮಾತು: ಅದನ್ನೆಲ್ಲ ಕಟ್ಟಿಕೊಂಡು ಮಾಡುವುದೇನು? ಬರೀ ಕಟ್ಟೆ ಪುರಾಣ (ರೂಢಿ). [ಕಟ್ಟೆ$_1$ + ಪುರಾಣ]

**ಕಟ್ಟೆಮನೆ** (ನಾ). ೧. ಜಾತಿಯ ಶ್ರೇಣಿ, —ಸಂಘ, —ಸಂಸ್ಥೆ (ಎಸಮ್ಮ. III, ೧೫). ೨. ಪಂಚಾಯಿತಿ ಕಟ್ಟೆ, —ಚಾವಡಿ: ಅಪರಾಧಿಯನ್ನು ನೀನು ಕಟ್ಟೆಮನೆ ಗುರುಮನೆ ಅರಮನೆಗಳಿಗೆ ವಿಧೇಯನೋ ಅವಿಧೇಯನೋ ಎಂದು ಕೇಳುವರು (ಹುಟ್ಟಹ. ೧೯); ನಾನು ಹಿಂದೆಂದೂ ಅಪರಾಧ ಮಾಡಿರಲಿಲ್ಲವೆಂದೂ, ಹಳ್ಳಿಯ ಕಟ್ಟೆಮನೆ ಮುಚ್ಚಳಿಕೆ ನೀಡಿತು (ಪುನರು. ೫೧೯). ೩. ಗ್ರಾಮಾಧಿಕಾರಿಯ ಮನೆ; ಊರ ಮುಖಂಡನ ಮನೆ.

ಕಟ್ಟೆಮನೆ ಯಜಮಾನ್ = ಜಾತಿಯ ಮುಖಂಡ, —ಮುಖ್ಯಸ್ಥ (ಎಸಮ್ಕೆ. III, ೯). [ಕಟ್ಟೆ$_1$ + ಮನೆ]

**ಕಟ್ಟೆಯ** (ನಾ). ಸಾಹಸ (?) : ಮಲಸೆಟ್ಟಿಯ ಮಗ [ಬಿ]ಟ್ಟೆಯಂ ಕಟ್ಟೆಯದಿಂ ಮಾಡಿದಾಳ್ತನಮೆಂತ[ಂ]ದಡೆ (ಕಇ. IV, ೨೪-೬ ; 1124). [< ಕಟ್ಟಾಯ್$_2$ ?]

**ಕಟ್ಟೆಯೊಡೆ** (ಕ್ರಿ). ಕಟ್ಟೆ ಒಡೆದು ಹೋಗು ; ಮೇರೆ ಮೀರು : ಮುಟ್ಟೆ ಬಂದುದು ಸೇನೆ ಕವಿದುದು ಕಟ್ಟಳವಿಯಲಿ . . . ಕಟ್ಟೆಯೊಡೆದಂಬುಧಿಯೊ (ಕುವ್ಯಾದ್ರೋ. ೧೮-೧೮). [ಕಟ್ಟೆ$_1$ + ಒಡೆ$_1$]

**ಕಟ್ಟೆರಕ** (ನಾ). ಚೆನ್ನಾಗಿ ಎರಕ ಹೊಯ್ಯುವುದು : ಕಟ್ಟೆರಕದ ಚಿತ್ರಪಟಗಳಿಂ ರಾಯನ ಪಟ್ಟದಾನೆಗಳ್ಳೆದಿದುವು (ಕಂನವಿ. ೩-೪೩) ; ದಿಟ್ಟಿಗೆ ನೂತನವಾದಪರಂಜಿಯ ಕಟ್ಟೆರಕದ ಭಿತ್ತಿಯಿಂದ (ಕಂನವಿ. ೭-೪೨). [< ಕಡಿದು + ಎರಕ$_2$]

**ಕಟ್ಟೆರಕೆ** (ನಾ). ಬಲಿತ ರೆಕ್ಕೆ : ತನ್ನ ಮರಿಗಳೊಳೊಮ್ಮೆ ಕಟ್ಟೆರಕೆ ಮೂಡಿದೆನಿತುಮಂ ಪೊರಮಡಿಸಿದುಲಿವಕ್ಕಿಯಮ್ಮ (ಗಿಶಿಎಂ. XV, ೫). [< ಕಡಿದು + ಎರಕೆ$_1$ (< ಎಱಂಕೆ)]

**ಕಟ್ಟೆಲ್ವು** (ನಾ). ಗಟ್ಟಿಯಾದ ಎಲುವು : "ಕಡಿದು ಎಲ್ವು, ಕಟ್ಟೆಲ್ವು" (ಶಬ್ದಾನು. ೩೩೯ ಪ್ರಯೋ). [< ಕಡಿದು + ಎಲ್ವು]

**ಕಟ್ಟೆವಲೆ** (ನಾ). ಒಂದು ತರದ ಬಲೆ : ದುಷ್ಟಮತಿ ಕೌರವನ್ನೊಡ್ಡಿದ ನಲಾ ಮಹಾ ಕಟ್ಟೆವಲೆಯಂ (ತುರಂಗ. ೩೩-೫). [ಕಟ್ಟೆ ? + ಬಲೆ$_1$]

**ಕಟ್ಟೆಸಕ$_1$** (ನಾ). ಹೆಚ್ಚಾದ ಸೊಬಗು ; ಅತಿಶಯವಾದ ಚೆಲುವು : ತೊಟ್ಟಿಲೊಳ್ ಸುಕುಮಾರನಂ ಕಟ್ಟೆಸಕದಿಂ ಮಲಗಿಸಿ (ಹವ್ಮಾರ. ೨-೨೫ ವ) ; ಕಟ್ಟೆಸಕದಿಂದ ಪಾಂಚಾಲಕೇತನ ನೃಪನ ಪಟ್ಟಾಭಿಷೇಕ ಮಣಿಕುಂಭದ್ವಯಕ್ಕೆ ಮುಸುಕಿಟ್ಟ ಬೆಳ್ವಟ್ಟೆಯಂತಿರೆ (ಸೌಂದಪು. ೭-೨೮) ; ಕಟ್ಟೆಸಕದಿಂದೆ ಕಂಗೊಳಿಸುತಿದೆ ಪೊಳಲ್ (ಜೈಮಿಭಾ. ೧೭-೧೧) ; ರಕ್ಕಸರ ನೆಟ್ಟನೆ ನಿಲುವ ತಾಣಗಳೆನೆ ಕೊತ್ತಳ ಕಟ್ಟೆಸಕದೊಳೊಪ್ಪಿದುವು (ಕಂನವಿ. ೨-೬೨). [< ಕಡಿದು + ಎಸಕ$_1$]

**ಕಟ್ಟೆಸಕ$_2$** (ನಾ). ೧. ಉತ್ತಮವಾದ ರಚನೆ; ಒಳ್ಳೆಯ ಮಾಟ; ಮೇಲ್ಮಟ್ಟದ ಕೃತಿ : ಕಟ್ಟೆಸಕದ ಕುಂದದ ಕಂದದ ಕಂಪಿಟ್ಟೆಸೆಸಿದ ಕುಂದದರಲ ಬಾಸಿಗದೊಟ್ಟೆಜೆಯೆಂತಂತೀ ಕೃತಿ ಚತುರರ ಬಗೆಗೀಗೊಗು ಮಿಗೆಯಂ (ಉದ್ಭದೇ. ೧-೨೮). ೨. ಮಿಗಿಲಾದ ಸಾಹಸ, —ಪರಾಕ್ರಮ : ತೊಟ್ಟನೆ ತೊಬಲ್ದು ಕಟ್ಟೆಸಕದಿಂದಂ ಬೇಂಟೆಯಾಡಿ ಬಚಲ್ದಿನಿಯರ್ಕಳಂ (ಉದ್ಭಟ. ೨-೮೨ ವ) ; ಬಿಲ್ಗಳಂ ಕುಸುರಿದಱಿವರ್ ಕುಬು ಬೆನುತ್ತಾರಿಕೊಂಡು ಕಟ್ಟೆಸಕದಿಂ ಪೊಸಬಿಲ್ಲನಾನುವರ್ (ಚಿಬಪು. ೨೬-೨೬). [< ಕಡಿದು + ಎಸಕ$_2$]

**ಕಟ್ಟೆಸಗು** (ಕ್ರಿ). ಕಟ್ಟನ್ನು ಕಟ್ಟು ; ಅಂಚನ್ನು ಕಟ್ಟು : ಧರೆ ಗಗನ ದಶದಿಕ್ಕುಗಳ ಸಾಗರಗಳನು ನಿಶ್ಚಿದ್ರಮಪ್ಪಂತಿರೆ ಪಿತಾಮಹನಿಂದ್ರನೀಲದ ಮಣಿಯ ಕಟ್ಟೆಸಗಿ ಭರಿತವಾಗಿಯೆ ಕಜ್ಜಲವ ವಿಸ್ತರದೊಳೂಡಿದನೆಂದೆನಲು ಕಾರಿರುಳು ತುಂಬಿತು ಜಗವನು (ಜೀವಂಚ. ೪-೧೭). [ಕಟ್ಟು$_1$ + ಎಸಗು$_1$]

**ಕಟ್ಟೆಸರ್** (ನಾ). ೧. ಚೆನ್ನಾಗಿ ಕುದಿದ ನೀರು. ೨. ಸೊಗಸಾದ ಸಾರು : ಸಣ್ಣಭತ್ತದೋಗರಮಂ ಕಟ್ಟೆಸರ ತೋವೆಯುಂ ದಸೆದೆಸೆಗೆ ಪಸರಿಸುತ್ತ (ಧರ್ಮಪ. ೨-೫೬ ವ). [< ಕಡಿದು + ಎಸರ್]

**ಕಟ್ಟೆಸುಗೆ** (ನಾ). ರಭಸದಿಂದ ಬಾಣ ಪ್ರಯೋಗ ಮಾಡುವುದು : ಸಾಯಕದ ಕಟ್ಟೆಸುಗೆಯಲಿ ಕಾತ್ಯಾಯನೀ ಶಂಗೆಣೆ (ತೊರರಾ. ೬-೧೮-೨೩). [< ಕಡಿದು + ಎಸುಗೆ]

**ಕಟ್ಟೆಸೆ** (ಕ್ರಿ). ವೇಗವಾಗಿ ಬಾಣ ಹೊಡೆ : ಸಾಲದೇ ನಾವುಂಬ ಖಗಗಳಂ ಮಿಗಗಳಂ ಮೀಂಗಳಂ ಕಟ್ಟೆಸೆಯೆ ಗುರಿಗೊಂಬುದಂ ಕಲಿಯೆ? (ಹಬ್ಬರ. ೧೬-೨೭). [< ಕಡಿದು + ಎಸೆ$_1$]

**ಕಟ್ಟೆಹಾಯ್** (ಕ್ರಿ). ಒಣಗು ; ಬತ್ತು : ಕಟ್ಟೆಹಾದಾ ಮರಕೆಯಿಷ್ಟು ನೀರೆಱೆದೊಡಂ ಹುಟ್ಟುವುದೆ ಚಿಗುರು ಯೆಲೆ ಪುಷ್ಪ ಕಾಯಿ ಹಣ್ಣು (ಗುರುಬೋ. ೧೬೩-೩). [ಕಟ್ಟೆ$_2$ + ಹಾಯ್$_1$ (< ಪಾಯ್$_1$)]

**ಕಟ್ಟೆಹೋಗು** (ಕ್ರಿ). ಒಣಗಿಹೋಗು : ಎಲ್ಲೆಲ್ಲಿ ನೋಡಿದಡೆ ಕಟ್ಟೆಹೋದ ಬಿದಿರಿನಂತೆ ತೊಟ್ಟು ಬಿಟ್ಟ ಹಣ್ಣಿನಂತೆ (ಮೋಳಿಮಾ. ೧೨-೪೨). [ಕಟ್ಟೆ$_2$ + ಹೋಗು$_1$ (< ಪೋಗು$_1$)]

**ಕಟ್ಟೆಱಕ$_1$** (ನಾ). ಅತಿಶಯವಾದ ಪ್ರೀತಿ, —ಅನುರಾಗ : ಕಟ್ಟೆಱಕ ದಿನಮುರ್ದಪ್ಪೆ ಪುಳಕತತಿ ನಾಂಟುಗುಮೆನ್ನೆಱೆಯನನೆನುತ (ವೃಷವಿ. ೨೩-೧೫) ; ಕಟ್ಟೆಱಕದೊಳಿನಿಯನ ಕಾಣುತ ಮರವಟ್ಟು ಮೈಮಱೆತು ನಿಟ್ಟಿಪಳು (ಹದಿಬ. ೭-೪೧) ; ಸೃಷ್ಟಿಯೊಳಾವ ಸುಕೃತದೊಳವನ ತಾಯಿ ಕಟ್ಟೆಱಕದಲಿ ಪಡೆದಳೊ (ಕಂನವಿ. ೯-೪೪). [< ಕಡಿದು + ಎಱಕ$_1$]

**ಕಟ್ಟೆಱಕ$_2$** (ನಾ). ಪೂರ್ಣವಾಗಿ ಅಧೀನವಾಗುವಿಕೆ, —ಬಾಗುವಿಕೆ; "ಕಡುಪ್ರೀತಿ" (ರಾಮಾಶ್ವ. ಕೋಶ) : ಮುಖಾಶ್ವಮಂ ಬಿಟ್ಟು ಕಟ್ಟೆಱಕದಿನೆಮ್ಮೊಳ್ ಪುದುವಾಱ್ (ರಾಮಾಶ್ವ. ೯೬-೧೩). [< ಕಡಿದು + ಎಱಕ$_2$]

**ಕಟ್ಟೆಱಗು** (ಕ್ರಿ). ಬಲವಾಗಿ ಎರಗು; ರಭಸದಿಂದ ಮೇಲೆಬೀಳು : ಪಸಿವಿಂದೆ ನಿನ್ನ ಮೇಲ್ ಕಟ್ಟೆಱಗಿ, ದಿನಮೆಲ್ಲ ತಣಿಯುಣುತೆ (ಬದ್ಧಪ್ರ. ೫೪-೧೧೮೫). [< ಕಡಿದು + ಎಱಗು$_1$]

**ಕಟ್ಟೇಕಾಂತ** (ನಾ). ೧. ಅತ್ಯಂತ ರಹಸ್ಯ ; ಬಹಳ ಗೋಪ್ಯ, —ಗುಟ್ಟು : ತಳೋದರಿ ವೃಕೋದರನಲ್ಲಿಗೆ ವಂದು ಕಟ್ಟೇಕಾಂತದೊಳಿಂತೆಂದಳ್ (ಪಂಪಭಾ. ೮-೭೦ ವ) ; ಪರಿಜನಮಂ ಪೋಗಲ್ವೇೞ್ದು ಕಟ್ಟೇಕಾಂತಮಂ ಮಾಳ್ಪುದುಂ (ಪಂರಾಮಾ. ೭-೧೦೬ ವ) ; ದುರಿಯೋಧನನ ನಾದರಿಸಿ ಕಟ್ಟೇಕಾಂತದಲ್ಲಿ ಮುವ್ವರು ವಿಚಾರಿಸಿದರು (ಕುವ್ಯಾಸ. ೧೨-೨೪) ; ಅರಮನೆಗೆಯ್ತಂದು ಕಟ್ಟೇಕಾಂತದೊಳೊರೆದನವಳಿಗಿಂತೆಂದು (ಕುರಾಸಾಂ. ೩೭-೨೨). ೨. ಗುಟ್ಟಾದ ಸ್ಥಳ; ರಹಸ್ಯವಾದ ಜಾಗ : ಈಗಳುಂ ಎನ್ನಂ ತನ್ನಾಕೆಸೆಂದೇ ಬಗೆದೆನ್ನಂ ಕಟ್ಟೇಕಾಂತಕ್ಕುಯ್ದು (ಪಂಚತಂ. ೫೫-೧೨). [< ಕಡಿದು + ಏಕಾಂತ]

**ಕಟ್ಟೇರ್ವಡೆ** (ಕ್ರಿ). ಬಲವಾದ ಏಟನ್ನು ಹೊಂದು ; ತೀವ್ರವಾಗಿ ಗಾಯಗೊಳ್ಳು : ಶ್ರೀಮಹಾಪಾರ್ಶ್ವನಿಂ ಕಟ್ಟೇರ್ವಡೆದು ಪೊಕ್ಕಿಹುದು ತನ್ನ ಹಕ್ಕೆಯಂ ಪಗೆಮಿಗಂ (ಶ್ರೀರಾಮಾ. ೬೭೫-೩೮೮). [< ಕಡಿದು + ಏರು$_6$ (< ಏಱ್$_4$) + ಪಡೆ$_1$]

**ಕಟ್ಟೇವ** (ನಾ). ೧. ಅತ್ಯಂತ ಅಸಮಾಧಾನ : ಪರಿಭವಮಂ ದನುಜಾರಿ ಬಲಾರಿಗಿತ್ತನೆನಗಿದು ಚಿತ್ರಂ ಎನೆ ಕೇಳ್ದು ಕಟ್ಟೇವಮುಂ ನೋವುಮಳವಿಗೞಿಯೆ ಶಚಿಯಿಂತೆಂದಳ್ (ಜಗವಿ. ೧೩-೮೦ ವ). ೨. ಅತಿ ಅಸೂಯೆ : ನಭೋಲಕ್ಷ್ಮಿ ಸಕಳಪ್ರಕಾಶಮಂ ಮೊಟ್ಟೆಗಟ್ಟಿ ಪಕ್ಕೆವೆಟ್ಟ ದಿಟ್ಟಡೆಗೆ ಕಳಿಪಿದ ಕಟ್ಟೇ[ಪಾಠಾಂ. ಟ್ಟೆ]ವದ ಪೊಟ್ಟಳಮಿದೆಂಬಿನಂ (ವರ್ಧಮಾ. ೬-೨೩ ವ). [< ಕಡಿದು + ಏವ$_1$]

**ಕಟ್ಟೇೞ್ಗೆ** (ನಾ). ಅಧಿಕ ಅಭಿವೃದ್ಧಿ, —ಏಳಿಗೆ : ಕಟ್ಟಾಯಂ, ಕಟ್ಟೇೞ್ಗೆ (ಕಮುದ. ೧೮೦ ಪ್ರಯೋ). [< ಕಡಿದು + ಏೞ್ಗೆ]

**ಕಟ್ಟೊಟ್ಟಜೆ** (ನಾ). ದೊಡ್ಡ ಸಮೂಹ ; ಮಹಾಸಮುದಾಯ ; ಒಗ್ಗಟ್ಟಾದ ಗುಂಪು : ಕಪಿಲೆಯುಂ ಪಾರುವರುಮಂ ಕಟ್ಟೊಟ್ಟಜೆಯಂ ಭಣ್ಡಾರಮುಮಂ ಕಾಲದಳ ××× ಬಲ್ಲಂ ಇನ್ನುಂ ನರಗನನೆನಾಳುವುದೆನ್ದು (ಎಕ. VI, ಕಡೂರು. ೧೪೭-೫ ; 972). [< ಕಡಿದು + ಒಟ್ಟಜೆ]

**ಕಟ್ಟೊಡತಿ** (ನಾ). ಎಲ್ಲರಿಗಿಂತ ಶ್ರೇಷ್ಠಳಾದ ಒಡತಿ; ಸರ್ವಾಧಿಕಾರಿಣಿ; ಮಹಾರಾಣಿ: ಬಟ್ಟದುಜುಬಿನೆಳವೆಣ್ಣೆ ಹರಣನಾಡ ಕಟ್ಟೊಡತಿಯೆ (ವರ್ಧಚ. ೬-೩). [< ಕಡಿದು + ಒಡತಿ]

**ಕಟ್ಟೊಡೆ** (ಕ್ರಿ). ೧. ನಿರ್ಬಂಧವಿಲ್ಲದಂತಾಗು; ನಿಯಮ ಮೀರು: ಓಗರಕೆ ಮನೆಮನೆಯ ತಪ್ಪದೆ ತಿರುಗುವ ಜೋಗಿಯ ಕೈಯ ಕಟ್ಟೊಡೆದ ಕೋಡಗದ ಮನಕೆಂತಹುದು ನಿನ್ನ ಭಕುತಿ (ಪುರಂದ. ೧-೬೪-೩). ೨. ಕೊಟ್ಟ ಮಾತನ್ನು ನಡಸದಿರು; ಮಾತಿಗೆ ತಪ್ಪು; ಕರಾರಿಗೆ ತಪ್ಪು; ಒಪ್ಪಂದ ಮುರಿ. ೩. ಗುಂಪು ಚೆದುರಿಹೋಗು (ಕ). [ಕಟ್ಟು₂ + ಒಡೆ₁]

**ಕಟ್ಟೊಡೆಯ** (ನಾ). ಎಲ್ಲರಿಗಿಂತ ಶ್ರೇಷ್ಠನಾದ ಒಡೆಯ; ಪರಮ ಪ್ರಭು; ಮಹಾರಾಜ: ಕಟ್ಟೊಡೆಯ ಕೊಲ್ಲುವಾಗ ಮತ್ತೊಬ್ಬರು ಬೇಡಾ ಎನಲುಂಟೆ (ಬಬ್ಬಬಾ. ೭೯); ನಿನಗುದ್ರೇಕವೇಕಿನಿತು ಕಟ್ಟೊಡೆಯ ನಾನಿರಲ್ (ಪದ್ಮರಾ. ೬-೧೩); ಸುರನದೀಜ ದ್ರೋಣ ಕೃಪರೀ ಕುರು ಬಲಕೆ ಕಟ್ಟೊಡೆಯರು (ಕುವ್ಯಾಕ. ೧-೨೨); ಕಟ್ಟೊಡೆಯನಾತನು ಜೀವ ಭೂತನು (ನಿಭಾಗ. ೬-೩-೨೬). [< ಕಡಿದು + ಒಡೆಯ₁]

**ಕಟ್ಟೊಡೆಯತನ** (ನಾ). ಹೆಚ್ಚಿನ ಒಡೆತನ; ಪರಮ ಪ್ರಭುತ್ವ: ಕಟ್ಟೊಡೆಯತನವ ಬಲಿದಿಂತು ಹೋರುವೆ ನೀನು ಹುಟ್ಟುವಾಗಿನ ಧನವ ಕಟ್ಟಿತಂದೆಯೋ ನೀನು (ದೀಕ್ಷಾಬೋ. ೧೧೫-೭); ಕಟ್ಟೊಡೆಯತನದಿಂದ ಭೀತಿಯ ಬಿಟ್ಟು ಕೆಳೆ ರಾಜ್ಯವನಾಳೆನುತ ಪರಮೇಷ್ಠಿ ನುಡಿದನು(ದೇವೀಮ. ೫-೧೧). [ಕಟ್ಟೊಡೆಯ + -ತನ]

**ಕಟ್ಟೊಣಗು** (ಕ್ರಿ). ಪೂರ್ತಿಯಾಗಿ ಒಣಗು: ಕಾದುದಾ ವನಭೂಮಿ ತರುಗುಲ್ಮಾದಿಗಳು ಕಟ್ಟೊಣಗಲಾದವು (ಕುವ್ಯಾಆ. ೫-೨೦). [< ಕಡಿದು + ಒಣಗು₁]

**ಕಟ್ಟೊತ್ತಂಬ** (ನಾ). ಅತಿಯಾದ ಒತ್ತಾಯ, —ಬಲಾತ್ಕಾರ: ಲಿಂಗಣ್ಣನ ಕಯ್ಯ ಓಲೆಯನ್ನು ತುಡುಕಿ ರಭಸದಿಂದ ಝಾಡಿಸಿ ಕಟ್ಟೊತ್ತಂಬದ ಬಲ್ಮೆಯಿಂದೆಳೆದು (ಬಟ್ಟಅ. ೨೧೧-೧೭). [< ಕಡಿದು + ಒತ್ತಂಬ]

**ಕಟ್ಟೊತ್ತರ**₁ (ನಾ). (ಉಕ) ಅತಿ ಅವಸರ: ಕಟ್ಟೊತ್ತರದ ಕೆಲಸ ಈಗಲೆ ಮಾಡು (ರೂಢಿ). [< ಕಡಿದು + ಒತ್ತರ₂]

**ಕಟ್ಟೊತ್ತರ**₂ (ನಾ). ಕಟ್ಟು ಕಳಚುವಿಕೆ; ಬಂಧವಿಮೋಚನೆ: ತಾನಜೀಯದುದನಜೀದಾಗವೇ ಭರಿತಾರ್ಪಣ ತ್ರಿವಿಧಮಲದಿಂದ ಕಟ್ಟೊತ್ತರ ಬಂದಲ್ಲಿ ತೊಟ್ಟುಬಿಟ್ಟ ಹಣ್ಣಿನಂತಿದ್ದಾಗವೇ ಭರಿತಾರ್ಪಣ (ಸರ್ವವ. ೧೩೧-೬೫೯). [ಕಟ್ಟು₂ + ಉತ್ತರ ?]

**ಕಟ್ಟೊತ್ತಾಯ** (ನಾ). = ಕಟ್ಟೊತ್ತಂಬ: ಕಟ್ಟೊತ್ತಾಯಕೆದ್ದನೆಂಬಂತೇಳ್ದನೂಟಕಾ ಮಲ್ಲಯನು (ಮಲ್ಲಚ. ೫-೩); ಎಲೆಲೆ, ಕಟ್ಟೊತ್ತಾಯದ ರಾಯ! ಮೊನೆಗೊಡ್ಡಿ ಬಂದು ನೀವಾರೆಂದು ಬೆಸಗೊಳ್ಳುದಿದಾವ ನಡತೆ? (ರಾಮಾಶ್ವ. ೧೫೫-೬). [< ಕಡಿದು + ಒತ್ತಾಯ]

**ಕಟ್ಟೊನಲ್** (ಕ್ರಿ). ಬಹಳ ಸಿಟ್ಟಿಗೇಳು, —ರೇಗು: ರಂಗನಾಥ:— (ಕಟ್ಟೊನಲ್ದು) ವೃದ್ಧನ ಮೇಲೆ . . . ಕಯ್ಯೆತ್ತಿ (ಬಟ್ಟಅ. ೧೦೦-೧೧). [< ಕಡಿದು + ಒನಲ್]

**ಕಟ್ಟೊಪ್ಪ** (ನಾ). ಬಲು ಒಪ್ಪವಾದದ್ದು; ಅತಿ ಸುಂದರವಾದದ್ದು; ತುಂಬ ಚೆಲುವಾದದ್ದು: ಕಟ್ಟೊಪ್ಪಮಾದ ಬಿಂಕದ ಬೊಟ್ಟಕ್ಕಿದ ಫುಲ್ಲ ಕಂಕಣಂ . . . ಅಳವಟ್ಟಿರೆ ಚಂಚರಿಯರಲ್ಲಿ ಮೆಲ್ಲನೆ ನಡೆವರ್ (ಸೂಕ್ತಿಸು. ೩-೨೩೭). [< ಕಡಿದು + ಒಪ್ಪ₂]

**ಕಟ್ಟೊಬ್ಬೆ** (ನಾ). ದೊಡ್ಡ ಬೇಲಿ (ಇರುವ ಸ್ಥಳ): ಅಲ್ಲಿಂದಂ ತೆಂಕಲು ಹಾಳೆಹಳ್ಳಿಯ ಕಟ್ಟೊಬ್ಬೆ ಹಳ್ಳಾ ಅಲ್ಲಿಂದಂ ತೆಂಕಲು ಕಲಮಾಲಡು(ಎಕ. XIV, ಮಂಡ್ಯ. ೧೧೫-೯೮; 1516). [< ಕಡಿದು + ಒಬ್ಬೆ₁ (< ಒಟ್ಟೆ)]

**ಕಟ್ಟೊಲುಮೆ** 'ಕಟ್ಟೊಲ್ಮೆ' ನೋ.

**ಕಟ್ಟೊಲ್ಮೆ**, **ಕಟ್ಟೊಲುಮೆ** (ನಾ). ಬಹಳ ಪ್ರೀತಿ; ಅತಿಶಯವಾದ ಅನುರಾಗ: ಕಟ್ಟೊಲ್ಮೆಯೊಳೆವೆಯಲುಗದೆ ನೀಡುಂ ನಿಟ್ಟಿಪ ನೀಜನ (ಜಯಕಾ. ೯-೧೦). **ಕಟ್ಟೊಲುಮೆ**: ಒಲಿಸಿಕೋ ನೀನಾತನನು ಕಟ್ಟೊಲುಮೆಯವರಿಲ್ಲಾತ ನೀ ಹೋಗೊಲಿಯದಿರನು (ತೊರರಾ. ೩-೯-೧೪); ಕಟ್ಟೊಲುಮೆಯನುಳ್ಳ ಕಡುನೀಜ (ಕುರಾಸಾಂ. ೨೮-೩೦). [< ಕಡಿದು + ಒಲ್ಮೆ]

**ಕಟ್ಟೊಱತೆ** (ನಾ). ದೊಡ್ಡ ಒರತೆ; ರಭಸವಾಗಿ ಉಕ್ಕುವ ಊಟೆ: ಕಂಬನಿಯ ಕಟ್ಟೊಱತೆಯಲಿ ಕರೆಕರೆವುತ್ತೈತಂದರು (ತೊರರಾ. ೩-೧೧-೩೦); ರಣಕಾ ರಣರಸದ ಕಟ್ಟೊಱತೆ ಸೂಸಿತು (ತೊರರಾ. ೬-೧೭-೩೭). [< ಕಡಿದು + ಒಱತೆ (< ಒಱಂತೆ)]

**ಕಟ್ಟೊಱಲ್** (ಕ್ರಿ). ಗಟ್ಟಿಯಾಗಿ ಕೂಗು, —ಚೀರು; ಗೋಳಾಡು: ಪೊಜಮಡುವ ಭೂಪಾಲನಂ ಕಂಡು . . . ಕೈನೀಡಿ ಕರೆದು ಕಟ್ಟೊಱಲಿ ಸ್ವೈರಿಸಲಾಱದೆ (ಹಚಕಾ. ೯-೫). [< ಕಡಿದು + ಒಱಲ್₂]

**ಕಟ್ಟೊಱಲಿಕೆ** (ನಾ). ಮಿತಿಮೀರಿದ ಗೋಳಾಟ; ಆಕ್ರಂದನ: ಸುರರ ಕಟ್ಟೊಱಲಿಕೆಯನದ ಕೇಳ್ದರಿ ಭಯಂಕರ ಲಕ್ಷ್ಮಣನು (ತೊರರಾ. ೬-೨೪-೧೬). [ಕಟ್ಟೊಱಲ್ + -ಇಕೆ]

**ಕಟ್ಟೋಗರ** (ನಾ). ೧. ಕಟ್ಟಿದ ಅನ್ನ; ಕಟ್ಟನ್ನ; ಬುತ್ತಿ: ಹೊಟ್ಟೆಯ ಮೇಲೆ ಕಟ್ಟೋಗರ[ಪಾಠಾಂ. ಓಗರ]ದ ಮೊಟ್ಟೆಯ ಕಟ್ಟಿದರೇನು ಹಸಿವು ಹೋಹುದೇ (ಅವಚಂ. ೪೨-೧೭೯); ತನ್ನಲ್ಲಿರ್ದ ಕಟ್ಟೋಗರವ[ನಾಹ] ರಂಗೊಟ್ಟು (ಸಿದ್ಧರಾ. ೨-೧೬); ಕೀಱುಗಲ್ಲಿಯೊಳಿಟ್ಟು ಕಶ್ವದೊಳ್ ನೀಳ್ದ ಕಟ್ಟೋಗರಮುಂ (ಚಿಕವಂ. ೭೦-೨೧). ೨. ಒಂದು ಬಗೆಯ ಕಲಸನ್ನ: ಓಗರದ ಪುಳ್ಳಿಯೋಗರದ ಪಲತೆಱದ ಪಾಲೋಗರದ ಕಟ್ಟೋಗರದ . . . ವಿಧಮಂ ವಧೂಜನವಱೀವ ತೆಱದಿನೊರೆವೆಂ (ಸೂಪಶಾ. ೩ ಸೂಚನೆ). [ಕಟ್ಟು₁ + ಓಗರ]

**ಕಟ್ಟೋಣ** 'ಕಟ್ಟಣ' ನೋ.

**ಕಟ್ಟೋಲಗ** (ನಾ). ದೊಡ್ಡ ರಾಜಸಭೆ; ಮಹಾಸ್ಥಾನ; ತುಂಬಿದ ದರ್ಬಾರು: ಸದಮುದದ ಕಟ್ಟೋಲಗದ ದಶವದನನಿದಿರಲಿ ಹಾಯ್ಕಿದನು ಬಲುಬೆದಱೆಕೆಯ ರಣಭೈರವನ ಸಂಗರ ಭಯಂಕರವ (ತೊರರಾ. ೫-೫-೩); ತಳವಾಱರೊರ್ಮೆಗಂ ಕಟ್ಟೋಲಗದ ರಾಯನೆಡೆಗೆಯ್ತಂದು (ರಾಮಾಶ್ವ. ೧೪೧-೧೮). [< ಕಡಿದು + ಓಲಗ₁]

**ಕಟ್ಟೋಲೆ** (ನಾ). ಕಟ್ಟಿದ ಓಲೆ; ಆಜ್ಞಾಪತ್ರ; ರಾಯಸ: ಓಲೆಕಾಱರ್ ಬಂದು ಮುನಿಗೆಱಗಿ ಪಾವುಡೆಯುಮಂ ಕಟ್ಟೋಲೆಯುಮನೊಪ್ಪಿಸಿದರ್ (ರಾಮಾಶ್ವ. ೬೯-೨೭). [ಕಟ್ಟು₂ + ಓಲೆ]

**ಕಟ್ಟೋವತ** (ನಾ). ಬಲು ಜೋಪಾನ; ಸಂರಕ್ಷಣೆ: ತಮ್ಮುಳ್ಳಾರ್ಥಮಂ ಬಯ್ತು ಬಂದಿಗೆ ಕಳ್ಳಂಗರಸಿಂಗೆ ದಾಯಿಗರಿಗಂ ಕಟ್ಟೋವತಂ ಮಾಟ್ಪಲೊಬಿಗಳೇಂ ಪೋಲ್ವರೆ ಸಾಕ್ಷಿ ಲೇಕ ಸುಕಚೂಡಾ ರಾಮುನಂ ಸೋಮುನ (ಕಇಅ. ೭೮-೧೩-೨೬; 1088). [< ಕಡಿದು + ಓವತ ?]

**ಕಟ್ರೆ** 'ಕಟ್ಟೆಱವೆ' ನೋ.

**ಕಟ್ಲೆ** 'ಕಟ್ಟಳೆ₁' ನೋ.

**ಕಟ್ಲೆಜ್ವರ** (ನಾ). ನಿಯಮದಂತೆ ಬರುವ ಜ್ವರ; ವಾಯಿದೆ ಜ್ವರ; ಕಟ್ಟಿನ ಜ್ವರ: ಅವಳು ಕಟ್ಲೆಜ್ವರದಿಂದ ತುಂಬಾ ಸುಸ್ತಾಗಿದ್ದಾಳೆ (ರೂಢಿ). [ಕಟ್ಲೆ (< ಕಟ್ಟಳೆ₁) + ಜ್ವರ]

**ಕಟ್ವಂಗ** (ನಾ). ಒಂದು ಮರದ ಹೆಸರು (ಕ). [< ಸಂ. ಖಟ್ವಾಂಗ]

**ಕಠಡೆ** (ನಾ). ಕಟಕಟೆ; ಕಟಾಂಜನ: ಅಡಕೊತಗಳು . . . ಕಠಡೆಗಳು (ಕಟಂಜನ) (ಮುಂಬವ್ಯಾ. ೧೧೧). [← ಮರಾ. ಕಠಡಾ]

**ಕಠರಿಗೆ** (ನಾ). ಕಣಜದ ಮೇಲಿನ ತೆರಿಗೆ : ಖಣಾ ಕಠರಿಗೆಯಿಲ್ಲ ಸುಂಕ ಗಣಾಚಾರಯಿಲ್ಲ (ಮೈಆರ. ೧೯೩೧, ೪೬–೪ ; 1637). [?]

**ಕಠಾಣಿ** 'ಕಟ್ಟಾಣಿ' ನೋ.

**ಕಠಾರ** 'ಕಟಾರ್$_2$' ನೋ.

**ಕಠಾರಾಯಿತ** (ನಾ). ಕಠಾರಿಯನ್ನು ಹಿಡಿದುಕೊಂಡು ಕಾಳಗ ಮಾಡುವವನು : ಬಾರಸಂಕಲೆಯ ತೊಡರ ತೋಟಿಯ ಕಠಾರಾಯಿತರ ಬಾಣಾಯಿತರ ಮಲ್ಲಜಟ್ಟಿಗಳ (ಬಸರ. ೬–೨೩).

[ಕಠಾರ (< ಕಟಾರ್$_2$) + –ಆಯಿತ (< –ಆಯ್ತ)]

**ಕಠಾರಿ** 'ಕಟಾರ್$_2$' ನೋ.

**ಕಠಾರಿಕಚ್ಚೆ** (ನಾ). ಗಂಡುಗಚ್ಚೆ; ವೀರಗಾಸೆ : ತಲೆಗೆ ಜೋಡೀವಸ್ತ್ರವನ್ನು ಕುಚ್ಚುಬಿಟ್ಟು ಸುತ್ತಿ ಪಟ್ಟೇಅಂಚಿನ ಪಂಚೆಯನ್ನು ಕಠಾರಿಕಚ್ಚೇ ಹಾಕಿ ಉಟ್ಟು (ಮುಸುಗ. ೪).

[ಕಠಾರಿ (< ಕಟಾರ್$_2$) + ಕಚ್ಚೆ]

**ಕಠಾರಿದಾರ** (ನಾ). ಕಠಾರಿ ಸಿಕ್ಕಿಸುವ ಪಟ್ಟಿ, —ನಡುಕಟ್ಟು : ಮೊನೆ ಮುಂಜೆಬಗನಳವಡೆ ಸೆಕ್ಕಿ ಸುತ್ತಿನೋಳಿಬುಕಿ ಬಿಗಿದ ಕಠಾರಿದಾರದ ಗೊಂಡೆಯವ ಕೆದಜಿ (ಕುವ್ಯಾದ್ರೋ. ೧೭–೧೯).

[ಕಠಾರಿ (< ಕಟಾರ್$_2$) + –ದಾರ$_4$. / ಮರಾ. ಕಟಾರೀದಾರ್]

**ಕಠಾರಿರಾಯ** (ನಾ). ಕಠಾರಿಯನ್ನು ಹಿಡಿದುಕೊಂಡು ಯುದ್ಧ ಮಾಡುವ ವೀರ; ಒಂದು ಬಿರುದು : ಸ್ವರ್ಗ ಮರ್ತ್ಯ ಪಾತಾಳ ತ್ರಿಭುವನಿ ಕಠಾರಿರಾಯರಾದ ಉದಯಗಿರಿಯ ಹರಿನೀಲ ಅಬ್ಬರಾಜಗಳ ಮಕ್ಕಳೂ (ಎಕ. XIV, ಶ್ರೀರಂಗ. ೯೫–೨ ; 1535).

[ಕಠಾರಿ (< ಕಟಾರ್$_2$) + ರಾಯ]

**ಕಠಾರಿಸಾಳುವ** (ನಾ). = ಕಠಾರಿರಾಯ: ಮೇದಿನಮೀಸರಗಂಡ ಕಠಾರಿ ಸಾಳುವ (ಸೌಇಎ. ೧೯೪೦, ಚೆಯ್ಯಾರ್. ೧೦೭–೨೦ ; 1469) ; ಮೇದಿನೀಮೀಸರಗಂಡ ಕಠಾರಿಸಾಳುವ (ಎಕ. X, ಗೋರೀಬಿ. ೭೮–೩ ; ಸು. 1495).

[ಕಠಾರಿ (< ಕಟಾರ್$_2$) + ಸಾಳುವ]

**ಕಠಿಣ** (ಗು). ೧. ಬಿರುಸಾದ; ಗಡುಸಾದ; ಕರ್ಕಶವಾದ; ಗಟ್ಟಿಯಾದ. ೨. ನಿಷ್ಠುರವಾದ : ಕಠಿಣವಾದ ಧರ್ಮನಿಷ್ಠೆಯಿಂದ ನಡೆಯುವವಳು ಅಜ್ಜಿ (ಕಂಬಹು. ೪೪). ೩. ಹಗುರಲ್ಲದ; ಕಷ್ಟಕರವಾದ; ದುಷ್ಕರವಾದ; ಜಟಿಲವಾದ. ೪. ಕ್ರೂರವಾದ; ನಿರ್ದಯವಾದ. (ನಾ). ೫. ಬಿರುಸು ; ಗಟ್ಟಿತನ : ಭೂಮಿಯ ಕಠಿಣವನು ಆಕಾಶದ ಮೃದುವನು ತಿಳಿವ ಗಮನವಲ್ಲಿಯೇ ನಿಂದಿತ್ತು (ಅವಚಂ. ೬–೧೯) ; ಶಿಲೆಯ ಮೇಲಾ ರಾಮಚರಣದ ತಳವನೂಜಲು ನಡುಗಿ ಬೆವತುದು ಯೆಲೆಲೆ ಕಠಿಣವನುಳಿದು ನಾರೀರೂಪ ಕೈಕೊಳಲು (ತೊರಾ. ೧–೯೬).

[< ಸಂ. ಕಠಿನ]

**ಕಠಿಣತೆ** (ನಾ). ಕಠಿಣವಾಗಿರುವಿಕೆ; ಗಟ್ಟಿತನ; ಬಿರುಸು : ಕಾಸೆ ಪಾಲುಂ ಪಡೆಗುಂ ಕಠಿಣತೆಯನಿರಿಸೆ ಶೀತಳಜಳದೊಳ್ (ಲೋಕೋಪ. ೮–೪೫) ; ಉದ್ವೃತ್ತತೆ ಕಠಿಣತೆ ಕುಚಕ್ಕೆ ಸಹಜಂ (ಪುಷ್ಪಪು. ೩–೩೭) ; ಕೆಸಜೊಳ್ ಪುಟ್ಟಿ ಕಠಿಣತೆಯನಾವರಿಸಿ ಕಂದನಾಂತುವಂ (ಚಬಪು. ೩೭–೩೮).

[< ಸಂ. ಕಠಿನತಾ]

**ಕಠಿನ** (ನಾ). = ಕಠಿಣ : "ಖರಃ, ಕಠೋರಃ, ಕಠಿನಃ, ಕರ್ಕಡಃ, ಕರ್ಕಶಃ, ದೃಢಃ — ಈ ೬ ಬೆಟ್ಟದು" (ಹಲಾಯು. ೫೭–೧೮೭).

[ಸಂ.]

**ಕಠಿನಚಿತ್ತ** (ನಾ). ಕ್ರೂರವಾದ ಮನಸ್ಸುಳ್ಳವನು; ನಿರ್ದಯಿ : ಇವನು ಬಹು ಕಠಿನಚಿತ್ತನಾದುದರಿಂದ . . . ಯೋಗ್ಯರಾದವರಿಗೆಲ್ಲರಿಗೂ ಇವನ ಕಾಟವು ದುಸ್ಸಹವಾಗಿದ್ದಿತ್ತು (ಕವಿಕ. ೧). [ಕಠಿನ + ಚಿತ್ತ$_2$]

**ಕಠಿನತೆವೆರು** (ಕ್ರಿ). ಬಿರುಸಾಗು; ಕರ್ಕಶವಾಗು: ಸೆಳೆಯುತ್ತಿರ್ಪಂತರಿಂ ಮೌರ್ವಿಯ ಕಠಿನತೆವೆತ್ತಿರ್ಪ ಪೂರ್ವಾಂಗದಿಂ ಕಂಗೊಳಿಸುತ್ತುಂ (ಶಾಕುಂತ. ೨೨–೩೮). [ಕಠಿನತೆ$_0$ + ಪೆರು (< ಪೆಱು$_1$)]

**ಕಠಿನಶಿಕ್ಷೆ** (ನಾ). ಕಷ್ಟಕರವಾದ ಶಿಕ್ಷೆ; ಸಶ್ರಮ ಶಿಕ್ಷೆ: ಅವಳು ಕಠಿನ ಶಿಕ್ಷೆಗೆ ಗುರಿಯಾಗಿದ್ದಾಳೆ (ಪುನರು. ೩೨೮).

[ಕಠಿನ + ಶಿಕ್ಷೆ]

**ಕಠಿನಹೃದಯ** (ನಾ). ೧. ಕ್ರೂರವಾದ ಮನಸ್ಸು; ಕಲ್ಲೆದೆ. ೨. ನಿರ್ದಯನಾದ ವ್ಯಕ್ತಿ; ಕ್ರೂರಿ (ಕ).

[ಕಠಿನ + ಹೃದಯ]

**ಕಠಿಲ್ಲಕ** (ನಾ). ೧. ಹಾಗಲಕಾಯಿ. ೨. ಒಂದು ಬಗೆಯ ಔಷಧಿ ಮೂಲಿಕೆ : "ಬೆಳ್ಳಡಕಿಲು ವಿಶಾಲಂ ಕಠಿಲ್ಲಕಮೆನಿಕ್ಕು" (ಮಂಗರಾ. ೪೦–೩೧).

[ಸಂ.]

**ಕಠೋರ** (ಗು). ೧. ಬಿರುಸಾದ; ಕಠಿನವಾದ. ೨. ಉಗ್ರವಾದ: ಕರಿಕಳಭ ಪ್ರಚಂಡ ಮೃಗರಾಜ ಕಿಶೋರ ಕಠೋರ ಘೋರ ಹೂಂಕರಣ (ಪಂಪಭಾ. ೯–೪೨) ; ಅಜ್ಜಿಯ ಅಜ್ಞೆ ಅಷ್ಟೊಂದು ಕಠೋರವಾಗಿತ್ತು (ಕಂಬಹು. ೫೩).

[ಸಂ.]

**ಕಠೋರಗತಿ** (ನಾ). ಬಿರುಸಾದ ನಡಗೆ; ತೀವ್ರವಾದ ಗತಿ : ಏನುತ್ತರೆ ಕುಮಾರಿ ಕಠೋರಗತಿಯಲಿ ಬರವು (ಕುವ್ಯಾವಿ. ೫–೩೭).

[ಕಠೋರ + ಗತಿ]

**ಕಠೋರತನ** (ನಾ). ಉಗ್ರತೆ ; ನಿರ್ದಯತೆ : ದುಷ್ಟದಂಡನವೂ ಅವರ ನಿರ್ಮೂಲನವೂ ಕಠೋರತನದಿಂದ ಆಗಲೇಬೇಕು (ಪ್ರಬಂಧ. ೧೧೪).

[ಕಠೋರ + –ತನ]

**ಕಠೋರತರ** (ಗು). ಅತಿ ಉಗ್ರವಾದ, —ಕ್ರೂರವಾದ : ಭೂರಿ ಭೀಕರ ಮಕರ ಮಹಿತಿಮಿ ತಿಮಿಂಗಿಲ ಕಠೋರತರ ರಾಜೀವ ಜೀವಪ್ರತತಿವಾಸವಾ ಸಮುದ್ರದೊಳೆಸೆದುದು (ಜೈಮಿಭಾ. ೬–೭). [ಸಂ.]

**ಕಠೋರವಾಣಿ** (ನಾ). ಬಿರುಸಾದ ಮಾತು ; ಗಡುಸಾದ ನುಡಿ : ಕಠೋರವಾಣಿಗಳಿಂ ಘಾತಿಸುತಿರ್ದಮಿನ್ನೆವರೆಗಂ ನಿಮ್ಮಂ (ಸುಕುಮಾ. ೨–೩೩). [ಕಠೋರ + ವಾಣಿ$_1$]

**ಕಡ$_1$** (ನಾ). ಎರವು ; ಸಾಲ ; ಋಣ ; ಉದ್ದರಿ : ಕಡನಂ ಕೊಟ್ಟರ್ ಕೊಳ್ವಂತೆ (ಶಾಂತಿಪು. ೮–೪೯) ; ಮುನ್ನಿನ ಕಡನಂ ನೀಂ ಕುಡು (ಕಾವ್ಯಾವ. ೬೦೩) ; ಕಡನ ಕೊಡಲಾಗಿ ಕೊಂಡವ ಸತ್ತ ಕೊಟ್ಟವ ಕೆಟ್ಟ (ಮೋಳಿಮಾ. ೨೬೭–೮೧) ; ಕಾಲನಾ ತಿಗುಳನೇಂ ಕಡಗೊಂಡನೊ ಬಡ್ಡಿಗೊಂಡನೋ (ಶಮದ. ಸ. ೧೭೮ ಪ್ರಯೋ) ; ಕಡನನು ಸವೃದ್ಧಿಕವಾಗಿ ಕೊಡಿಯೆಂದ (ಕುವ್ಯಾಅ. ೪–೧೩) ; ಕಡ ಹುಟ್ಟಿ ಬಡವ ಕೆಟ್ಟ (ಗಾದೆ).

[ದೇ. ॥ ತಮಿ. ಮಲ. ತುಳು. ಕಡ]

**ಕಡ$_2$** 'ಕಡಹು$_2$' ನೋ.

**ಕಡ$_3$** 'ಕಡವೆ$_2$' ನೋ.

**ಕಡ$_4$** (ನಾ). ೧. ಪಾರ; ದಂಡೆ; ಕೊನೆ. 'ಕಡತೇರು' ಪರಾ. ೨. ಪಾತಿ; ಕಟ್ಟೆ; ಮಡಿ. 'ಕಡಹು$_3$' ಪರಾ. [?]

**ಕಡ$_5$** (ನಾ). = ಕಟ$_2$ : "ಕಟ – ಕಡ" (ಶಮದ. ೨೫೫ ವೃತ್ತಿ).

[< ಸಂ. ಕಟ]

**ಕಡಂಕು$_1$** (ಕ್ರಿ). ಹೆಚ್ಚಾಗು; ಅತಿಶಯವಾಗು; ವಿಜೃಂಭಿಸು (?) : ಮೂರ್ಮುಗಿಲೊಡ್ಡಿದತ್ತು ತುಜುಗಾರ್ತಿಯ ಕೋಣೆ ಕಡಂಕಿ ಮಿಂಚಿದ ತ್ತೊರ್ಮೆಯೆ ನಿಂದ ನೀರ್ ತೆಗೆದುದೊರ್ಮೆ ಬಿಸಿಲ್ಗೆ ಪೊದಟ್ಟುದೋಳಿಯಿಂ ಘರ್ಮಮರೀಚಿಮಂಡಳತರಂಗಿತ ಮೈವಳಿಯಾಯ್ತು (ಸೂಕ್ತಿಸು. ೧೦–೧೭೫). [?]

**ಕಡಂಕು$_2$**, ಕಡುಕು$_4$ (ನಾ). ಅಟ್ಟೆ ; ಕಬಂಧ : "ಕಡಂಕೆನೆ ಕಬಂಧ" (ಕಶರ. ೨೦). **ಕಡುಕು$_4$** : "ಅಟ್ಟೆಯೆಂದುಂ ಕಡುಕೆಂದುಂ ಕಬಂಧಂ" (ಕಶಸಾ. ೧೪-೨೬೩). [?]

**ಕಡಂಗ$_1$** 'ಕಡಂಗು$_3$' ನೋ.

**ಕಡಂಗ$_2$** (ನಾ). ಕಡಾಯಿ ; "ಪಾತ್ರವಿಶೇಷ" (ಅಯ್ಯಾಶಾ) : ತರುಣಿಯರಲ್ಲಿಗಲ್ಲಿಗಜವಟ್ಟಿಗೆಯೊಳ್ ಕಡುಗೋಡುವೆತ್ತ ತಣ್ಣರಗಮನೆತ್ತಿ ನೀರೆಱೆಯೆ ಸಾಲ್ವುದೆನಲ್ ನೆರೆಪಾದಮಿಾಂಟುತುಂ ಬರೆ ಬಿಸಿಲಬ್ಬಿಕೊಲ್ವೆಸಕದಿಂ ಬಿಸಿನೀರ ಕಡಂಗ[ಪಾಠಾಂ. ತಡಂಗ]ದಂದದಿಂದಿರೆ ಬಸಿಱರ್ತ ಬಾಯೊಳಗೆ ಪಾಂಥಜನಂ ನಡೆಯಿತ್ತು ಮಾರ್ಗದೊಳ್ (ಜಗವಿ. ೧೬-೭೯). [ದೇ. ?. / ತಮಿ. ಕಡಗ = ಗಿಂಡಿ. / ಸಂ. ಕಟಾಹ]

**ಕಡಂಗ$_3$** 'ಕಡಗ$_1$' ನೋ.

**ಕಡಂಗರ** (ನಾ). ೧. ಹೊಟ್ಟು ; ಬೂಸ : "ಕಡಂಗರಂ ಬುಸಮೆನಲು ಹೊಟ್ಟು" (ಮಂಗರಾ. ೧೯೯-೩). ೨. ದೊಣ್ಣೆಯಂತಹ ಒಂದು ಬಗೆಯ ಆಯುಧ. [ಸಂ.]

**ಕಡಂಗಿಸು** (ಕ್ರಿ). ಉತ್ಸಾಹಗೊಳಿಸು ; ಹುರಿದುಂಬಿಸು : ಪೆರ್ಚುಂ ಕುಂದುಮನಱಿದು ಕಾಣಲುಂ ಕಾಣಿಸಲುಂ ಕಡಂಗಲುಂ ಕಡಂಗಿಸಲು ಮಡಂಗಲುಮಡಂಗಿಸಲುಮೊಡ್ಡಲುಮೊಡ್ಡಿಸಲುಂ . . . ಜಾಣನಾಗಿ (ಪಂಪಭಾ. ೫-೪೩ ವ). [ಕಡಂಗು$_1$+ -ಇಸು$_3$]

**ಕಡಂಗು$_1$**, ಕಡಗು$_1$, ಕಡುಗು$_1$ (ಕ್ರಿ). ೧. ಹುರಿದುಂಬು; ಉತ್ಸಾಹಿಸು; ಸಂಭ್ರಮಪಡು : "ಕಡಂಗು–ಔತ್ಸುಕ್ಯೇ" (ಶಮುಧಾ); ಬೆಸನಂ ಪೂಣ್ದು ಕಡಂಗಿ ಪಾಯ್ದು ಕಡಲಂ (ಪಂಪಭಾ. ೮-೩೫); ಏೞುಂ ಕಡಲಂ ಕಡಂಗಿ ಕುಡಿವೆಂ (ಕಬ್ಬಿಕಾ. ೧೫೪); ಅರಲ್ದೊಡಂಬೆಗೆ ಕಡಂಗುವ ತುಂಬಿಯ ಬಂಬಲೊಳ್ಸರಂ (ಅಪ್ರತಿ. ೧೫-೪೦). ೨. ಮಸಗು; ರೇಗು; ಕೋಪಿಸು: ಪಗಲಿರುಳೆನ್ನದೆನ್ನೊಳೆ ಕಡಂಗುವನೆನ್ನೊಳೆ ಬಲ್ಪುದೋರ್ಪಂ (ಆದಿಪು. ೧೨-೩೪); ಮಿಾಱಿದಡೆ ಮೃತ್ಯು ಕಡಂಗಿದೊಡಾರ್ದು ಭೈರವಂ ಕೆರಳ್ದಡೆ ಸಿಂಹ (ಎಕ.XI, ಚಿತ್ರದು. ೧೩-೧೮; 1124) ; ಕಡಂಗಿ ಕಾಯ್ದು ವಸಂತರಾಜಂಗೆ ಪುಯ್ಯಲಿಡುವಂತೆ (ಗಿರಿಕ. ೨-೬೧ ವ). ೩. ಆವೇಶಗೊಳ್ಳು ; ರಭಸವೇರು : ಬಡಿ ಕೊಲ್ ಕಟ್ಟೆಱಿ ಮುಱಿ ಕಡಿ . . . ನಿಮಿರ್ದಿಱಿ ಬಯ್ ಕಡಂಗಿ ನುಂಗೆಂದು ಮುಸುಱಿ ನಾರಕರಾಗಳ್ (ವಡ್ಡಾರಾ. ೧೨೬-೧೨) ; ಜನಕನನಿಕ್ಕಿದುದ್ಧತನನಿಕ್ಕುವೆನೆಂದು ಕಡಂಗಿ ಬಂದು (ಪಂರಾಮಾ. ೧೧-೭೧); ಜವನಂ ಜಕ್ಕುಲಿಪಂ ಕಡಂಗಿ ಸಿಡಿಲಂ ಮಾರ್ಕೊಳ್ವನ್ (ಎಕ. VIII, ಸೊರಬ. ೧೪೦-೨೮ ; 1198) ; ಎರಡೂ ಮಹಾಸೈನ್ಯಗಳು ಒಂದನ್ನೊಂದು ತುಡುಕಿ ಕಡಂಗಿ ಕಾದಿದುವು (ಕರತ್ನ. ೫೮). ೪. ಏರಿಬರು ; ಸಾಹಸಮಾಡು : ಮಿಾಱಲು ಕಡಂಗಲ್ ತೊಡರಲೆಡಱಲೊಟ್ಟಯ್ಸಲುಕ್ಕಲ್ . . . ಮಾಱಾಂತು ಕಾದಲ್ ನೆಱೆವರೆ ಧುರದೊಳ್ ದೇವ ಕಾದಂಬರುದ್ರಾ (ಎಇ. XVI, ೭೧-೨೨; 1075); ಮಿಾಱಿದಡೆ ಮಾರಿ ಕಡಂಗಿದೊಡಾಂಪ ಗಂಡರಾರು (ಸೌಇಇ. XX, ೭೬-೩೪ ; 1118); ಕಡಂಗುವಂನ್ಯಭೂಪರನಿರದೊಕ್ಕಲಿಕ್ಕಿ (ಕಇ. IV, ೧-೧೬ ; 1204). ೫. ತವಕಪಡು : ಕರಂ ಕಱಿಯೆ ನಂಬಿಪಳಿಂಬಱಿಪಳ್ ಕಡಂಗಿ ಕಾಲ್ಗಳೊಳೆ ಪೊರಬ್ವಳ್ (ಕಾವ್ಯಸಾ. ೯೯೩ ಶೂದ್ರಕ). **ಕಡಗು$_1$** : ೧. ಏಳನೆಯ ದಿನದೊಳ್ ಕಡಗಿ ನಡೆದು (ನಂದಿಮಾ. ೧-೯) ; ಲವಣಮನರೆದು ಕಡಗಿ ಪಾಕಂಗೈದು (ಲಿಂಗಪು. ೮-೪೨). ೨. ಕಡಗಿದಡೆ ಕೋದಂಡರುದ್ರನ ತೊಡಕಿ ಬದುಕುವರಾರು (ಕುವ್ಯಾದ್ರೋ. ೧-೫೬). ೩. ಬಸವನೀವ ಬೇಡಿತನೆಂದು ಕಡ[ಪಾಠಾಂ. ಡು]ಗಿ ಕೋಪಿಸಲಾಗಲದನಱಿದು (ಲಶಿಚಂ. ೩೬-೩೧) ; ಕಡಗಿ ಸಾತ್ಯಕಿಯೊಡನೆ ಬವರವ ಹಿಡಿದ ಭಟರಮರರ ವಿಮಾನವನಡರುತಿದ್ದರು (ಕುವ್ಯಾದ್ರೋ. ೧೧-೧೨). ೪. ಕಡಗುವ ರಿಪುಗಳ ಶಿರವಮಂ ಪೊಡೆಸೆಂಡಂ ಪೊಡೆ × × × ಕಂದುಕಕ್ರೀಡೆಯನ್ (ಎಕ. VII, ಶಿವಮೊ. ೮೮-೩೦ ; 1203) ; ಕಡಗಿ[ಪಾಠಾಂ. ಕಡೆಗೆ] ಕಾಮನ ಹೆಸರನಡಗಿಸಲು ಧಾಳಿಡುವ ಪಡೆಯೊ (ಸಿದ್ಧರಾ. ೨-೪೦) ; ಕಡಗಿ ಕರ್ಬೊಗೆ ಸುತ್ತಿ ದಳ್ಳುರಿಗಳಲೆದು (ಹಚಕಾ. ೧೦-೧೫). **ಕಡುಗು$_1$** : ೧. ಧಾತ್ರೀ ವಧುವಿಚ್ಛೆಕಾರ್ತ್ತ ಕಡು(ಗು)ಗೂತ್ತಿರೆ (ಎಇ. XVI, ೩೯-೪೧ ; 1152) ; ಬಲು ಬೇಡವಡೆ ಕಡುಗಿ[ಪಾಠಾಂ. ಕಡಗಿ] ಹರಕರಿಸಿ ನಡೆಯೆ (ಹಚಕಾ. ೫-೧೪) ; ಬಣಗುಗಳೊಡನೆ ಸರಿಗಂಡೆನ್ನ ಬಗೆಯದೆ ಕಡುಗುವ್ವೆ ಕಾಳಗಕೆ (ಕುವ್ಯಾದ್ರೋ. ೧೨-೧೬) ; ಚಕ್ರಿ ನಿಮ್ಮತ್ತ ಕಡುಗಿ ಹಾದಿಯ ನೋಡುತಿಹನು (ಭರಚ. ೩೮-೧೧೪). ೨. ಕಡಲ ಮಧ್ಯದ ಗಿರಿಗೆ ಸುರಪತಿ ಕಡುಗಿ ಮಾಡುವುದೇನು (ಕುವ್ಯಾದ್ರೋ. ೧೪-೩೧) ; ನಿವಾಘದ ಸುಳುವಿಗಿನಮಂಡಲವ ತಡೆವುದೆ ತಿಮಿರಲತೆ ಕಡುಗಿ (ತೊರರಾ. ೫-೫-೨೬) ; ಆ ದನಿಗೇಳ್ದಾಂ ಕಡುಗಿ ನಡುಮನೆಗೆ ಯ್ತರ್ಪನಿತಱೊಳ್ (ಚಿಕವಂ. ೩೮-೯). ೩. ಹೊಕ್ಕುದು ತುಳುವ ಪಡೆ ಕಡುಗಿ (ಕುವ್ಯಾಭೀ. ೪-೩೩) ; ಕಡುಗಿಬರ್ಪ ಕಾಡುಮಿಗವ ಹುಯ್ಯೆ ಸೆಳೆಯ ಬೆಳೆಗಾಯ್ವ ಕಡುನೀಱೆಯರು (ಶ್ರೀಪಾಲ. ೧-೫೪).

[ದೇ. ‖ ತೆಲು. ಕಡಂಗು, ಕಣಂಗು]

**ಕಡಂಗು$_2$**, ಕಡಕು$_4$ (ನಾ). ೧. ಇಚ್ಛೆ ; ಬಯಕೆ (ಕ). **ಕಡಕು$_4$** : ೨. ಸಡಗರ; ಸಂಭ್ರಮ ; ಉತ್ಸಾಹ : ಕರಿಯ ಕಂಬಳಿ ಹೊದ್ದು ಕಡಕಿಲಿ ಬರುವವರು ಕಡುಜಾಣ ನಮ್ಮೀಯರು (ಲೋಕಗೀ. ೫೪-೪) ; ಕಳಕ ಮಲ್ಲಯ್ಯಗೆ ಕಡಕಿಲೆ ವೈದೆನೆ ತಡಮಾಡದೆ ಅಡಸರದ್ದೂವ (ಕಜಾಗೀ. ೪೨). [< ಕಡಂಗು$_1$]

**ಕಡಂಗು$_3$**, ಕಡಂಗ$_1$, ಕಡಗು$_2$ (ನಾ). ೧. ಕಂದಕ ; ಅಗಳು : "ಕುಲ್ಯಕೌತ್ಸುಕ್ಯಂಗಳೊಳ್ ಕಡಂಗು" (ಶಬ್ದಮಂ. ೮೫). ೨. ಕಾಲುವೆ (ಕ). **ಕಡಂಗ$_1$** : ೧. ೧೮ ವರುಷ ಪರಿಯಂತರ ಕೊಡಗಿನ ರಾಜ್ಯದ ಒಳಗೆ ಯಾವತ್ತು ಕಡಂಗ ಕಂದುಕ ಮುಂತಾಗಿ ತೆಗೆಸಿ (ರಾಜೇಂದ್ರ. ೮) ; ಸಿದ್ಧಾಪುರದ ಕಡಂಗ ಪರಿಯಂತ್ರ ಭೂಮಿ ನಮ್ಮದು (ರಾಜೇಂದ್ರ. ೧೨೮). **ಕಡಗು$_2$** : ೩. ಕಾಲುವೆಯಿಂದ ಗಿಡಗಂಟೆಗಳ ಮಡಿಗೆ ನೀರು ಹಾಯಿಸಲು ಮಾಡಿಕೊಂಡ ಚಿಕ್ಕ ಹರಿ : ಬಾಳೆಗೆ ಕಡಗು ಸೂಳೆಗೆ ಬೆಡಗು (ಗಾದೆ).

[ದೇ. ‖ ತಮಿ. ಮಲ. ಕಿಡಙ್ಙು ; ಕೊಡ. ಕಡಂಗೀ = ನೀರಿಲ್ಲದ ಕಂದಕ]

**ಕಡಂಗುಡು** 'ಕಡಂಗೊಡು' ನೋ.

**ಕಡಂಗೊಡು**, ಕಡಂಗುಡು, ಕಡಗುಡು, ಕಡಗೊಡು (ಕ್ರಿ). ಸಾಲಕೊಡು ; ಎರವಲಾಗಿ ಕೊಡು : ಪೊಸ ಕಪ್ಪುರದಂಬುಲಮಂ ಬಾಯ್ದೆಱೆಗೆ ಕಡಂಗೊಟ್ಟು (ಜಯಕಾ. ೧೪-೭೯). **ಕಡಂಗುಡು** : ಬಲ್ಲಾಳ್ತನದಿಂದೆಱೆದುಕೊಳ್ವಂಗೆ ಕಡಂಗೊಟ್ಟರೆಂಬಂತೆ (ಧರ್ಮಾಮೃ. ೬-೬೮). **ಕಡಗುಡು** : ನಿಖಿಲ ಪೂಗಳಿಗೆ ಮೆಯ್ಗಂಧವ ಕಡಗುಡುವಂತೆ . . . ಬಾಣಜೆ ಬಂದಳೀಶ್ವರನ ಚಾವಡಿಗೆ (ಮೋಹತ. ೨೪-೬೯). **ಕಡಗೊಡು** : ಮನ್ನಿಸುತ ಕಡಗೊಡುವ ಯಧಿಕ ಧನಯುತರಾಗಿ . . . ವರ್ತಕರು ಮಿರ್ಪರು (ಸವಮೋ. ೨-೪೬) ; ಬೆಳ್ಗೊಳದ ಧರ್ಮಸಂಸ್ಥಾನದವರಿಗೆ ಕಡಗೊಟ್ಟಿರುವ, ಬಡ್ಡಿಗೊಳ್ಳುವ, ಅಶೇಷರೂ ಜೈನರು (ಬೆಟ್ಟಅ. ೪೧-೯). [ಕಡ$_1$ + ಕೊಡು]

**ಕಡಂಗೊಳ್**, ಕಡಗೊಳ್ (ಕ್ರಿ). ಸಾಲಮಾಡು ; ಎರವಲು ಪಡೆ : ಕಡಂಗೊಂಡಂ, ಕಡಗೊಂಡಂ (ಶಮುದ. ೧೬೬ ಪ್ರಯೋ). **ಕಡಗೊಳ್** : ಶಾರ್ಙ್ಗಧರಂ ಕಡಗೊಂಡೊಂ ಕುಡುವಂತೆ ಮಗುಱ್ದಂ ಕೊಂಡಿಡೆ (ಶಾಂತಿಪು. ೫-೬೩). [ಕಡ$_1$ + ಕೊಳ್$_1$]

**ಕಡಂಜ**, ಕಡಜ$_1$, ಕಣಜ$_2$ (ನಾ). ಜೇನುಹುಳದಂತೆ ಕೊಂಡಿಯುಳ್ಳ ಒಂದು ಜಾತಿಯ ಕೀಟ,—ಹಾರುಹುಳು; ಕಡಜೀರಿಗೆ: ಗಡ್ಡದೊಳು ಸಲೆ ಕಡಂಜಗಳ ಮೊತ್ತಮುದು ಗೂಡಿಕ್ಕಿ ತತ್ತಿಯಿಕ್ಕಿರ್ದಪುವು (ಸಿದ್ಧೇಶ. ೯-೫೭). **ಕಡಜ$_1$**: ಕಡುಗತ್ತಲೆಯ ಕೂಪದೊಳಗೆ ಹಾಯ್ಕಲು ತುಂಬಿ ಕಡಜಂಗಳೆಜಗಿ ತಿನುತಿರ್ಪವು (ವೀರಶೈವ. ೪-೧೯-೪೧); ಕಡಜ ನಡುವಿನ ಕಾಂತೆಯರು ನಡೆ ನಡೆಯ ಬಿಂಕದೊಳಸಮಶಸ್ತ್ರನ ಮಡದಿಯೆಡೆಯೊಳ ಗೈದಿಬಂದರು (ಜಿನಭಾ. ೧೯-೨೩). **ಕಣಜ$_2$**: ಕಣಜನ ಗೂಡನರೆದು ನಾಭಿಗೆ ಪೂಸಲು ಮೂತ್ರ ಬಿಡುವುದು (ಸಕವೈ. ೩೭೫); ಬ್ರಹ್ಮನಂ ಚಿಂತಿಸಲ್ ಕಣಜ ಕಚ್ಚಿದ ಕ್ರಿಮಿಯ ತೆರನಾಗಿ ತಾ ಮತ್ತೆ ತೋರುವಂ (ಪರಶು. ೯-೯); ಬಾರಿ ಬಾರಿಗು ಕಣಜ ಕಚ್ಚಿದ ಬೇರೆಯಾದ್ದುಳು ಕಣಜ ನಾಮವ ಸಾರುವಂದದವ ತೋರಬೇಕೆಂದೆನುತ (ಅರ್ಜಾವಿ. ೧೭-೪೨).

[ದೇ. ‖ ತಮಿ. ಕಡಮ್ಬ್ಯ; ಮಲ. ಕಡನ್ನಲ್, ಕಡುನ್ನಲ್; ತುಳು. ಕಣಜದ; ಕೊಡ. ಕಡಂದಿ; ತೆಲು. ಕಡಜು, ಕಣಜು]

**ಕಡಂದುರು** 'ಕಡಂದುಱು' ನೋ.

**ಕಡಂದುಱು**, ಕಡಂದುರು, ಕಡದುಱು, ಕಡುದುಱು (ನಾ). = ಕಡಂಜ: ಮದುವೆಯು ನೆರವಿಯಂ ಕಡಂದುಱು ಕವಿದಂತೆ (ಧರ್ಮಾಮೃ. ೨-೬೧); ಕಾರಮಳೆ ಕಱಿದಂತೆಯುಂ ಕಡಂದುಱ ಹುಟ್ಟಿಯ ಕೆಣಕಿದಂತೆಯುಂ (ಎಕ. VIII, ಸೊರಬ. ೧೭೫-೭; 1156); ತುಂಬಿಗಳಲ್ಲದೆ ಪೂವೊಳ್ ಮಗಮಗಿಸುವ ಕಂಪಂ ಕಡಂದುಱೀನಱಿದಪುದೇ (ಕಬ್ಬಿಗ. ೮); ಸಿಂಗ ನಡುವಿನ ಕಡಂದುಱುನಡುವಿನ ಹೆಂಗಳೆಯಿದ್ದರವಳೊಡನೆ (ನಾಗಕು. ೪-೮); ಆ ಕಾಂತೆಯೊಳಾ ನೆತ್ತರೆ ಬಿತ್ತಾಗೆ, ಬಸಿಱ್ ಕಡಂದುಱುಗೂಡಿ ನೋಲ್ ದಿನ ಕ್ರಮದಿಂ ಬಳೆಯುತಿರ್ದುದು (ಅದ್ಭುತ. ೩೧-೭). **ಕಡಂದುರು**: ದಾನ ಪರೋಪಕಾರ ಪಿರಿದುತ್ಸಹ ಸಂತತಮಿಲ್ಲದಾ ಗೃಹಂ ಕಾನನದಿಕ್ಕೆ ಗೀಜಗನ ಗೂಡು ಕಡಂದುರು ಪತ್ತು (ನೀತಿಸಾ. ೧೫೮). **ಕಡದುಱು**: ಕಡದುಱುಗಳ್ ಕಡಿದಂತಾಯೆಡೆಗಾಕ್ಷಣದಿಂದಮವಱ ಗೂಡಿನ ಮಣ್ಣಂ ತಡೆಯದೆ ನೀರಿಂ ಪೂಸಲ್ ಕಿಡುಗುಂ ತದ್ವಿಷಂ (ಖಮದ. ೧೩-೧೧೨); ಅರಳಿದಂಬುಜದೆಸಳಿನಲಿ ಕಡದುಱುವ ಕಂಡಡೆ ಕೊಡುವುದೆ ಮಧುಕರನ ಲಾಯದೊಳ್ (ಕುವ್ಯಾಕ. ೯-೨೫); ಕಡದುಱುವಿನುಬ್ಬರದ ಕೆಂಜಿಗೆಗೊಡನ ತೊನಸೆಯ ಹರವಿಗಳ ... ಕಾಲ್ದೊಡಕುಗಳ ಹಗ್ಗಗಳ ಹರಹಿನಲೆಸೆದುದಾ ದುರ್ಗ (ತೊರರಾ. ೬-೭-೧೧). **ಕಡುದುಱು**: ಕಡುದುಱಿನ ಸಂದೋಹವಮಮಾ ಬಡಬಶಿಖಿಯನು ಮುತ್ತುವಂದದಿ (ಕೌಶಿರಾ. ೧೧-೩೪).

[ದೇ. ‖ ತಮಿ. ಕಡುತ್ತೇಱು; ತೆಲು. ಕಡುದುರು, ಕಣುದುರು]

**ಕಡಂದುಱುತೆ** (ನಾ). = ಕಡಂಜ: ತುಂಬಿ ಪೀರ್ವವೊಲೇಂ ಪೀರ್ದಪುದೆ ಕಡಂದುಱುತೆ ನವ್ಯಾಮೋದಮಂ ಪೂಗಳೊಳ್ (ಜಗವ. ೧-೧೩). ☞ ಈ ಶಬ್ದವನ್ನು 'ಕಡಂದುಱು + ತೆ' ಎಂದು ಓದಿ 'ತೆ' ಎನ್ನುವುದನ್ನು ಅವ್ಯಯವಾಗಿ ಭಾವಿಸಬಹುದು.

[ಕಡಂದುಱು + -ತೆ]

**ಕಡಂಬ**, ಕಡಬ್ಬೆ, ಕಡವ$_1$, ಕಡವು$_3$, ಕಡವೆ$_1$, ಕಡಹ$_1$ (ನಾ). ೧. ಕೇಸರಿ ಬಣ್ಣದ ಸುವಾಸನೆಯ ಹೂವು ಬಿಡುವ ಒಂದು ಬಗೆಯ ಮರ; ಕದಂಬವೃಕ್ಷ: ತಿಳಕ ತಮಾಳ ತಾಳ ಸಹಕಾರ ಕರಂಜ ಕಡಂಬ ನಿಂಬ ಪಾಟಳ ತರುಸಂಘದಿಂ (ಎಕ. VII, ಶಿಕಾರಿ. ೨೩೫-೬೫; 1207). ೨. ನಾಳ; ದಂಟು; "ದೇಂಟು" (ಗಂಗಾಮು. ೬೬). ೩. ಈಚಲು ಮರ. ೪. ಸಮೂಹ; ಗುಂಪು; ಕೂಟ: ಭಜಯಾದಿತ್ಯ ಮಣ್ಣಲದ ಮಹಾಜನ ಕಡಮ್ಬ ಧರ್ಮ್ಮಕ್ಕ ಒಟ್ಟಿಕ್ಕದೇವರು ಒನ್ದು ಪೊಱ್ತೊಬ್ಬ ಪಾರ್ವ್ವನುಣ್ಣ ಧರ್ಮ್ಮಂ ನಡವುದು (ಎಕ. X, ಬಾರಿಂಗ್. ೨-೮; 943). ೫. ಒಂದು ರಾಜವಂಶದ ಹೆಸರು; ಕದಂಬ: ಮುಕ್ಕಣ್ಣ ಕಡಂಬಂ ಜಗದನುಗ್ರಹ ವಿಗ್ರಹಂ ದಾನವಿನೋದಿ (ಎಕ. VII, ಶಿಕಾರಿ. ೧೮೬-೧೧; 1200). **ಕಡಬ್ಬೆ**: ೧. ಅರಳುವಾಳ, ಕಡಬೆ, ಕಗ್ಗಲು ಮೊದಲಾದ ವೃಕ್ಷಗಳಿಂದಲೂ (ಕೃವಾಸ. ೫೧). **ಕಡವ$_1$**: ೧. ಕಜ್ಜುರ ಕಕ್ಕೆ ಕಡವ ಮೊಳಗು ನವಿಲ್ವಜ್ಜಿ ಗಜಿಕೆ ... ಬೆಳೆದಿರಲಾ ಬಿಂಜಂ ಭೀಕರತರಮಾಯ್ತು (ಜಯಕಾ. ೧೫-೨೯); ಮುಳ್ಳನುಳ್ಳ ಕಡವದ ಮರದಿಂ (ರಸರ. ಪರಿ. ೧೧೫). **ಕಡವು$_3$**: ೧. "ಕಡವೆನೆ ಕದಂಬವೃಕ್ಷಂ" (ಕವಿಕಂ. ೫೬); ಕಡವಿನ ಕಂಪಡಂಗಿದುದು ಜಾದಿಯ ಕಂಪೊದವಿತ್ತು (ಪಂಪಭಾ. ೭-೬೯); ಕಡವಿನಲರ ಕೇಸರಂಗಳಿಂ ಪೊರೆದೆಲರ್ಗಳುಂ (ಕಾದಂಬ. ೨೧೯); ಕಡವಿನ ಸೊವಡಿಂದೊಂದೆರಡಡಿಯಿಡುತಿರ್ದಪುದು ಗಾಳಿ (೧೧೦೩.೯-೩೨). **ಕಡವೆ$_1$**: ೧. ಎಲವ ಮುತ್ತುಗ ಹಾಲೆಯರನೇಱಲ ಕಡವೆ ಪೆರ್ಗೋಳಿಯಾಲವು (ಸಾಳ್ವಭಾ. ೫-೩); ತಿಲಕ, ಕರಿತಿಲಕ, ಕಡವೆ, ಕಲ್ಲುಬಸರಿ ಮೊದಲಾದ ಪುಷ್ಪಫಲಭರಿತವಾದ ವೃಕ್ಷಂಗಳನ್ನೂ (ಕೃವಾಅ. ೨೨೮). **ಕಡಹ$_1$**: ೧. ಕಡಹದ ಮರನೇರಿ ಕಾಡುವದುಚಿತವೆ (ವಿದಾಕ್ಷ. ೩೩-೧); ಕೆಂಪುಬೂರಗದಲ್ಲಿ ಕಾಗೆಗಳು, ಕಡಹದ ಮರದಲ್ಲಿ (Anthocephalus) ಬಾವಲಿಗಳು ಸಹಾಯಮಾಡುವವು (ಸಸ್ಯಶಾ. ೭೧).

[?. / ತಮಿ. ಕಡಮ್ಬು, ಕಡಮ್ಬು; ಮಲ. ಕಡಮ್ಬು; ತೆಲು. ಕಡಾಮಿ, ಕಡಿಮಿ. / ಪ್ರಾ. ಕಯಂಬ, ಕಲಂಬ. (< ಸಂ. ಕದಂಬ)]

**ಕಡಂಬಗಟ್ಟ** (ನಾ). ಒಂದು ಸ್ಥಳದ ಹೆಸರು: ಚಂದ್ರಾರ್ಕ್ಕತಾರಂಬರಂ ಸಲುತ್ತಮಿರ್ಪ್ಪಂತಾಗಿ ಕಡಂಬಗಟ್ಟದ ಕೆಳಗೆ ಮುಟ್ಟ ವಯಲೊಳಗೆ ಬಿಟ್ಟ ಗಟ್ಟಿ (ಎಕ. VII, ಶಿಕಾರಿ. ೧೪-೧೫; 1089).

[ಕಡಂಬ + ಗಟ್ಟ$_1$]

**ಕಡಂಬಡೆ** (ಕ್ರಿ). ಸಾಲವನ್ನು ಪಡೆ: ಕಡಂಬಡೆಯದ ಬಡವನಂತೆ ಪಸಿದು ಪಟ್ಟು ಬಱಿದಿದೇಕೊಡಲಂ ತಪಿಸಿ ಗಾವಿಲನಾದಪೈ (ಧರ್ಮಾಮೃ. ೮-೮೦). [ಕಡ$_1$ + ಪಡೆ$_1$]

**ಕಡಂಬರಸ**, ಕಡಬರಸ (ನಾ). ಕಡಂಬದ ರಸ; ಈಚಲಿನ ರಸ; ಹೆಂಡ: ಪುಸಿಯೊಳ್ ಪೊರೆಯದೆ ನಡೆವುದದಲ್ಲದೊಡದಱು ಕಡಂಬರಸನರಸನಂತಾಗಿರರೇ [ಪಾಠಾಂ. ಕಡಲ್ವೆರಸು ಪೊಡವಿಗರಸಾದಪನೇ] (ಪಂಚತಂ. ೨೫೪-೪). **ಕಡಬರಸ**: ಧರ್ಮಮುಂ ಪೆರ್ಚುವಂತಾಗೆ ರಾಜ್ಯಂಗೆಯ್ವುದರಸಂ ಕಡಬರಸಂ ಪಾದರಸಂ ನಿಶ್ಚಯಮುರಸಲ್ಲೆಂದು ತನ್ನೊಳ್ ಭಾವಿಸಿ (ಧರ್ಮಾಮೃ. ೧೧-೬೭); ಜವ್ವನದಿರವದು ಸುರಚಾಪದಂತೆ ತನು ಬುದ್ಬುದದಂತಿರೆ ಬಯಲೆಂಬುದನಱಿಯದೆ ಪರವಶನಪ್ಪರಸನೀಕ್ಷಿಸಲ್ ಕಡಬರಸಂ (ತ್ರಿಪುವಿ. ೧೯-೩೬); ಶರಣೆನೆ ಕಾಯ್ವುದು ಬೇಡಿದೊಡಿರದೀವುದು ತೊಡರೆ ಸೆಡೆಯದಿರುವುದು ಪುಸಿಯೊಳ್ ಪರೆಯದೆ ನಡೆವುದು ನಡೆಯದದಱರಸಂ ಕಡಬರಸನಂತೆ ಚೂಡಾರತ್ನಾ (ನೀತಿಸಾ. ೩೩೦). [ಕಡಂಬ + ರಸ]

**ಕಡಂಬಳೆ** (ನಾ). ಒಂದು ಜಾತಿಯ ವಿಷಪೂರಿತ ಹಾವು: ಈ ಬಾರಿ ಕಂಡುದರಲ್ಲಿ ನನಗೆ ವಿಶೇಷವಾಗಿ ಕಂಡ ಹಾವೆಂದರೆ, ಕಟ್ಟಿದ ಹಾವುಗಳು; ಕಡಂಬಳೆ, ಇವು ನಮ್ಮ ಊರಿನಲ್ಲಿಯೂ ಇರುವ ಹಾವುಗಳು (ಅಖಬೂ. ೧೧೧). [← ತುಳು. ಕಡಂಬಳೆ]

**ಕಡಂಮಾಡು** (ಕ್ರಿ). ಸಾಲಮಾಡು: ಪೆಜರ ಬಿನ್ನಣಮಂ ಪೆಜರೋಜೆಯಂ ಕಡಂಮಾಡುವ ಕಳ್ಳ ಕೊಳ್ಳ ಖಳರಿರ್ಕೆಮು (ಶಾಂತಿಪು. ೧೨-೬೭); ಬಿದಿಯುಂ ಕೆಯ್ಯೊಳ್ ಕಡಂಮಾಡುವಂ (ಸಂಸಪ. ೧೩-೪).

[ಕಡ$_1$ + ಮಾಡು$_1$]

**ಕಡಕೆ$_1$** 'ಕಡಗ$_1$' ನೋ.

**ಕಡಕ$_{2}$** (ನಾ). ಮೋಸ; ವಂಚನೆ (?): ನಿನ್ನಲ್ಲಿ ಕಡಕವಿಲ್ಲದೆಂತೀ ಮನ ಕೊಟ್ಟು ಅನ್ಯಶ್ರವಣವು ಕೇಳದಂತೆ ಕಿವಿಯ ಕೊಟ್ಟು . . . ಎನ್ನ ರಕ್ಷಿಸೊ (ಸಂಶೋತ. ೩೯); ಅಯ್ಯನಿರಲು ಮಗ ನಡೆಯಬೇಕಲ್ಲದೆ ಅಯ್ಯನೊಳ ಕಡಕವೆನ್ನುವರೇ (ಪೂಜ್ಯಚ. ೯–೬).
[< ಸಂ. ಕೃತಕ ?]

**ಕಡಕ$_{3}$** (ಗು). ಕರಾರುವಾಕಾದ; ಖಂಡಿತವಾದ: ತಂಗುಳ ಉಳಿಸದಿರಲು, ತಿನ್ನದಿರಲು ಕಡಕ ಎಚ್ಚರಿಕೆಯನ್ನು ಕೊಟ್ಟರು (ಹೊಲಮ. ೧೧೧).
[← ಮರಾ. ಕಡಕ್]

**ಕಡಕಟ್ಟು$_{2}$** (ನಾ). ಏರ್ಪಾಡು; ವ್ಯವಸ್ಥೆ: ಪುರಾಣ ನಿತ್ಯ ಹೋಮ ವೇದಪಾರಯಣ ಶ್ರೀ ತಿರುವಾಟ್ಟು ಯಿಷ್ಟು ಶ್ರೀ ಕಾರ್ಯ್ಯಕೆಲು ಕೂಡಿ ಮಾಡಿದ ಕಡಕಟ್ಟು (ಮೈಆರಿ. ೧೯೩೮, ೭೩–೨; 1381); ಹಿಡಿತುಂಬ ಹಿಡಕೊಂಡು ಹೊಲತುಂಬ ಬಿತ್ತ್ಯಾರೆ ಕಡಕಟ್ಟಿನ ಜಾಣ ನನ ತಮ್ಮ (ಗೌರಪ. ೧೧–೧೦). [ಕಡ ? + ಕಟ್ಟು$_{2}$]

**ಕಡಕಟ್ಟು$_{2}$** 'ಕಡಗಟ್ಟು' ನೋ.

**ಕಡಕಡಾಟ** (ನಾ). ಕಡಕಡ ಎಂಬ ಸದ್ದು; ಕರತಾಡನ ಶಬ್ದ: ಧೋಂಡೂಬಾಯಿಯ ಠರಾವಿಕ ಮೇಳವನ್ನು ಕಂಡು, ಪ್ರೇಕ್ಷಕವೃಂದ ಹರ್ಷಭರಿತವಾಗಿ ಟಾಳಿಯ ಕಡಕಡಾಟ ಮಾಡಿತು (ದೀಪಹ. II, ೩೮೮).
[← ಮರಾ. ಕಡಕಡಾಟ]

**ಕಡಕತ್ತಿ$_{1}$** 'ಕಡಿಗತ್ತಿ' ನೋ.

**ಕಡಕತ್ತಿ$_{2}$** (ನಾ). ಒಂದು ಗಿಡದ ಹೆಸರು: ಚಿತ್ರಗಾರನು ತದೇಕಧ್ಯಾನ ನಿರತನಾಗಿ ಬೇರೆಬೇರೆ ಬಣ್ಣಗಳನ್ನು ಸೇರಿಸಿ ಸ್ವಲ್ಪದೂರದಲ್ಲಿರುವ ಒಂದು ಕಡಕತ್ತಿ ಗಿಡವನ್ನು ಬರೆಯುತ್ತಿದ್ದ (ಇಬದು. ೧೪೪). [?]

**ಕಡಕಲ್**, ಕಡಕಲು (ನಾ). ಪ್ರಾಕಾರ, ಗೋಡೆ ಅಥವಾ ಬೇಲಿಗಳಲ್ಲಿ ಮನುಷ್ಯರು ಮಾತ್ರ ಹಾಯ್ದು ಹೋಗಲು ಹಾಕಿರುವ ಕವೆ; ಅಕ್ಕಳೆ; ಕವೆಗಳ ನಡುವಿನ ಕಿರುದಾರಿ (ಕ). **ಕಡಕಲು**: ತೋಟದ ಕಡಕಲ (ಹಿಕ್ಕಲು) ದಾಟೋದು ತಡವೇನೊ (ಹುಟ್ಟಹ. ೩೪).
[< ಕಡ್$_{2}$ + ಕಲ್$_{3}$ ?. / ತಮಿ. ಕಡಪ್ಪು]

**ಕಡಕಲು** 'ಕಡಕಲ್' ನೋ.

**ಕಡಕು$_{1}$** 'ಕಡುಕು$_{3}$' ನೋ.

**ಕಡಕು$_{2}$** (ನಾ). ಬಂದೂಕಿನ ದೊಡ್ಡ ಚರೆ; ಗುಂಡು: ಮೊದಲನೆ ಈಡು ಕಡಕಿನ ತೋಟಾದ್ದಾದ್ದರಿಂದ ಒಂದೆರಡು ಕಡಕುಗಳು ಗಿಡಗಳಿಗೆ ತಗುಲಿದ್ದುದು ಕಂಡುಬಂದಿತು (ಕಾನೂರು. ೧೪೩); ಈಡಿನ ಒಂದೆರಡು ಕಡಕು (ದೊಡ್ಡ ಚರೆ) ಅದರ ಹಿಂಭಾಗಕ್ಕೆ ಮೊದಲೇ ತಗುಲಿತ್ತು (ಕಾನೂರು. ೩೯೦). [?]

**ಕಡಕು$_{3}$** (ನಾ). ಭಂಗ; ಮುರಿತ; ತಡೆ: ನಾನು ಮಾಡಿದ ಯತ್ನಗಳು ಬೇರೆಬೇರೆ ಕಾಲದಲ್ಲಿ ನಡೆದವುಗಳಾದರೂ ಆ ಕತೆಯನ್ನು ಕಡಕಿಲ್ಲದೆ ಹೇಳುವುದು ಉಚಿತ (ಕೆಲನೆ. ೧೬೯). [< ಕಡಿಕು$_{2}$ ?]

**ಕಡಕು$_{4}$** 'ಕಡಂಗು$_{2}$' ನೋ.

**ಕಡಕು$_{5}$** (ನಾ). ಸಣ್ಣಕಲ್ಲು; ಚೂರುಕಲ್ಲು: ಕ[ಪಾಠಾಂ. ತ]ಡಕುಂ ಪಿಟ್ಟೆಯುಮೊತ್ತೆ ಮೆಲ್ಲಡಿಗಳಂ (ಪಂಪಭಾ. ೩–೯); ಕಡಕುಂ ಪರಲ್ಗಳುಂ ಮೆಲ್ಲಡಿಗಳನೆಡೆಯುಡುಗದೊತ್ತಿದೆಡೆಯಿಂ ನೆತ್ತರ್ ಬಿಡದೆ ಚುಚ್ಚು ಪಾಯೆ (ಸುಕುಮಾ. ೧೨–೧೮). [?]

**ಕಡಕುಳ** (ನಾ). ಒಂದು ಸ್ಥಳದ ಹೆಸರು: ಬ್ರಾಹ್ಮಣರಿಗೆ ಧಾರಾಪೂರ್ವಕಂ ಮಾಡಿಕೊಟ್ಟ ವ್ರಿತ್ತಿ ಕಡಕುಳದಲೆರಡು ಬಳ್ಳಿಗೆಜೀಯಲೆರಡು (ಕಇ. I, ೩೦–ಅಆ; 1277); ಕಡಕುಳದ ಸಾವಂತ ಬೊಪ್ಪಗೌಡನ ಹೆಗ್ಗಡೆ (ಇಆ. XII, ೧೦೦–ಆ; 1246). [?]

**ಕಡಕೋಲು** (ನಾ). ಒಂದು ಬಗೆಯ ಔಷಧಿ ಗಿಡ (ವೈಔಗಿ. ೧೨–೨೦೮).
[?]

**ಕಡಗ$_{1}$**, ಕಡಂಗ$_{3}$, ಕಡಕ$_{1}$ (ನಾ). ೧. ಕೈಗೆ ಅಥವಾ ಕಾಲಿಗೆ ಹಾಕಿಕೊಳ್ಳುವ ಆಭರಣ; ಬಳೆ: ಬೆಳೆದ ಕೆಯ್ಯಂ ಕೊಟ್ಟು ಕಡಗಮಂ ಕೊಳ್ವ (ಧರ್ಮಾಮೃ. ೯–೧೬೨); ಕಡಗ ಕಂಠಮಾಲೆಗಳಿಗೆ ಕಳ್ಳರ ಅಂಜಿಕೆಯುಂಟು (ಪುರಂದ. ೨–೩೧–೨); ತೊಳಗುವ ಮುತ್ತಿನ ಕಡಗ ಕಂಕಣದಿಂದ (ಕಂನವಿ. ೨೩–೭೯). ೨. (ಅಲಂ) ಮುತ್ತೈದೆತನ: ಕಾವುದಾತ್ಮಾನುಜೆಯ ಕಡಗಮಂ (ಪಂಪಭಾ. ೧೧–೧೨೬). **ಕಡಂಗ$_{3}$**: ೧. ಹಸ್ತಕಡಂಗದ ಹರಿಣಲೋಚನೆಯಳ ಪುಸ್ತಿದೊಡವಿನ ಬೆಡಗಿಯ ಶಿಸ್ತಿನಿಂ ನಿಂತು ರಂಗಾಯೆಂಬಳ ಕೂಡುಪಾಸ್ತಿಯದೆಂದು ವಂದವುದೊ (ಶತಸಾಂ. ೨೬–೩೪). **ಕಡಕ$_{1}$**: ೧. (ಕ).
ಕಡಕಬಳೆ, ಕಡಕಪಾತ್ರೆಬಳೆ = ಮೂರು ಪೆಣಿನ ಬಳೆ (ಕ).
[< ಸಂ. ಕಟಕ]

**ಕಡಗ$_{2}$** (ನಾ). ಒಂದು ಬಗೆಯ ಮರ: ನೆಲ್ಲಿ, ಹೊನ್ನೆ, ಸಾಗಡೆ, ಚೆಂದಲ, ಕಡಗ, ಸೀ ಅಣವಿಗೆ (ನಮ್ಮನು. ೨೩೬). [?]

**ಕಡಗ$_{3}$** (ನಾ). ಗಾಡಿ; ತೋಡು. 'ಕಡಿಗೆ$_{1}$' ಪರಾ. [?]

**ಕಡಗಂಟು** (ನಾ). ಬಿಚ್ಚಲಾರದ ಗಂಟು; ಕಗ್ಗಂಟು (?): ಸಾವಿತ್ರಮ್ಮನ ಸಮಸ್ಯೆಗೆ ಮತ್ತೊಂದು ಕಡಗಂಟು ಹೆಣೆದಂತೆ ಆಯಿತು (ಕೊನೆಭೇ. ೧೦೧). [ಕಡ ? + ಗಂಟು]

**ಕಡಗಟ್ಟು**, ಕಡಕಟ್ಟು$_{2}$ (ನಾ). ಸಾಲದ ವಹಿವಾಟು: ಈ ಕಡಗಟ್ಟಿನ ಎಷ್ಟು ವರಹಗಳಿಗೆ ನಿರಾಶೆಯಾಗಿ ನೀವು ಇತ್ತ – ಮನವ ಮಾಡಿದಿರಿ? (ಬಿಟ್ಟಅ. ೪೧–೧೨). **ಕಡಕಟ್ಟು$_{2}$**: ಅವನ ಕಡಕಟ್ಟಿಗೆ ನೋಟು, ದಸ್ತಾವೇಜು ಯಾವುದೂ ಇಲ್ಲ. ಎಲ್ಲ ತಿಂಗಳು ತಿಂಗಳ ಲೆಕ್ಕ (ಹಹಸ. ೨೬).
[ಕಡ$_{1}$ + ಕಟ್ಟು$_{2}$]

**ಕಡಗತ್ತಿ** 'ಕಡಿಗತ್ತಿ' ನೋ.

**ಕಡಗದ** (ನಾ). ಒಂದು ಸಸ್ಯದ ಹೆಸರು: ಕಡವಳ, ಕಡಗದ, ಕಡಾನಿ, ಕೊಂಗು (ವೈಔಗಿ. ಅ೪–೧೦೮ಆ). [?]

**ಕಡಗಾರ** (ನಾ). ಸಾಲಗಾರ: ಅವನು ನನಗೆ ಕಡಗಾರನಾಗಿದ್ದಾನೆ (ರೂಢಿ). [ಕಡ$_{1}$ + -ಗಾರ (< -ಕಾಱ)]

**ಕಡಗು$_{1}$** 'ಕಡಂಗು$_{1}$' ನೋ.

**ಕಡಗು$_{2}$** 'ಕಡಂಗು$_{3}$' ನೋ.

**ಕಡಗು$_{3}$** 'ಕಡಹು$_{2}$' ನೋ.

**ಕಡಗುಕಾಲುವೆ** (ನಾ). ಕಂದಕ; ಅಗಳು: ಕೆಟ್ಟೆಯ ಭೂಮಿಯಾಗಿದ್ದು ನೀರೂ ನಿಲ್ಲುವ ಸಂಭವವಿದ್ದರೆ ಅಂಥ ಕಡೆಗಳಲ್ಲಿ ಕಡಗುಕಾಲುವೆಗಳನ್ನು ಹೊಡೆದು ಹೆಚ್ಚಾದ ನೀರು ಬಸಿದು ಹೋಗುವಂತೆ ಮಾಡಬೇಕು (ವ್ಯವಮ. ೬೩).
[ಕಡಗು$_{2}$ (< ಕಡಂಗು$_{3}$) + ಕಾಲುವೆ (< ಕಾಲ್ವಾಯ್)]

**ಕಡಗುಡು** 'ಕಡಂಗೊಡು' ನೋ.

**ಕಡಗೆ** (ನಾ). ಮೂಟೆ; ಹೊರೆ; ಕಟ್ಟು: ಹೊಜಗಣಂ ಬಂದ ಸೀರೆಯ ಕಡಗೆಗೆ ವೀಸವೊಂದು (ಎಇ. XIII, ೨೧–ಅ೩; 1204). [?]

**ಕಡಗೊಡು** 'ಕಡಂಗೊಡು' ನೋ.

**ಕಡಗೊಳ್** 'ಕಡಂಗೊಳ್' ನೋ.

**ಕಡಗೋಲಮಂಡೆ** (ನಾ). ಒಂದು ಸಸ್ಯದ ಹೆಸರು; ಬಚನಾಗ: ಕಡಗೋಲಮಂಡೆಯ ಆಕಾರದ ಕೆಂಪಾದ ಹೂವಾಗುವದರಿಂದ ಕಡಗೋಲಮಂಡೆ ಎಂದು ಗೊಲ್ಲರು ಹೇಳುತ್ತಾರೆ (ಗೃಹವೈ. ೭).
[?]

**ಕಡಗೋಲುಗಿಡ** (ನಾ). ಒಂದು ಜಾತಿಯ ಗಿಡ: ಅಂತ್ರಿಕೆಹುಲ್ಲು, ಕಡಗೋಲುಗಿಡ, ಮುಳ್ಳುಮುತ್ತ, ಜಾಲಿಜಪ್ಪಟೆ – ಇಂಥ ನೂರಾರು. . . ಗಿಡ ಮರ ಬಳ್ಳಿ ಯಥೇಚ್ಛವಾಗಿ ಬೆಳೆದು ತಮ್ಮ ಆಧಿಪತ್ಯವನ್ನು ಸ್ಥಾಪಿಸಿವೆ (ಬೆಳುವು. ೫೩) [ಕಡಗೋಲು$_0$ + ಗಿಡ (< ಗಿಡು)]

**ಕಡಗೋಲುಬಳ್ಳಿ** (ನಾ). ಒಂದು ಜಾತಿಯ ಬಳ್ಳಿ (ಕ). [ಕಡಗೋಲು$_0$ + ಬಳ್ಳಿ]

**ಕಡಗೋಲುಮಂಡೆಯಹುಲ್ಲು** (ನಾ). ಒಂದು ಜಾತಿಯ ಹುಲ್ಲು (ಕ). [ಕಡಗೋಲು$_0$ + ಮಂಡೆ$_0$ + ಹುಲ್ಲು (< ಪುಲ್)]

**ಕಡಗೋಲುಮರ** (ನಾ). ೧. ಕಡೆಗೋಲಿನ ಹಿಡಿ ಅಥವಾ ತಲೆ. ೨. ಒಂದು ಮರದ ಹೆಸರು (ಕ). [ಕಡಗೋಲು$_0$ + ಮರ$_1$]

**ಕಡಚಲು**, ಕಡಚ್ಚಿಲು, ಕಡೆಚಲು (ನಾ). ೧. ಮರ, ದಂತ, ಲೋಹ ಮೊದಲಾದ ವಸ್ತುಗಳನ್ನು ತಕ್ಕ ಆಕಾರಕ್ಕೆ ಅಳವಡಿಸಲು ಚರಕಿ ಯಂತ್ರದ ಮೂಲಕ ಕಡೆಯುವುದು, —ರೂಪಿಸುವುದು: ಅದರ ಚಿತ್ರ, ಕೆತ್ತನೆ, ಕಡಚಲು ಕೆಲಸ ನೋಡುವುದೆಂದರೆ ನಮಗೆ ತುಂಬ ಆಸಕ್ತಿ (ಹುಮುಖ. ೧೯). ೨. ಕಡೆಯುವ ಯಂತ್ರ; ಗಾಡ; ಚರಕಿ. **ಕಡಚ್ಚಿಲು**: (ಕರಾ) ೧. ಮೇಜಿನ ಕಾಲಿಗೋಸ್ಕರ ಬೀಟಿ ಮರವನ್ನು ಕಡಚ್ಚಿಲು ಹಿಡಿಯುತ್ತಿದ್ದಾರೆ (ರೂಢಿ). **ಕಡೆಚಲು**: ೧. (ಕ).

[ದೇ. ‖ ತಮಿ. ಕಡೈಚ್ಚಲ್; ಮಲ. ಕಡಚ್ಚಲ್; ತುಳು. ಕಡ್ಚಿಲ್, ಕಡಿಚಿಲ್]

**ಕಡಚಿ**, ಖಡಚಿ, ಖಡಿಚಿ (ನಾ). (ಉಕ) ಮಗುಚುವ ಕೈ; ಕುರುಪಿ; ಹಂಚಿನ ಮೇಲೆ ರೊಟ್ಟಿ, ದೋಸೆ ಮೊದಲಾದುವನ್ನು ಎತ್ತಿ ಹಾಕುವ ಸಾಧನ: ಮುಂಬಾಯಿ ಶಹರದಲ್ಲಿ ಆಗುವ ಜೀನಸಗಳ ವಿವರವು . . . ಕೆಳಗೆ ಬರೆಯಲ್ಪಟ್ಟಿದೆ. ೧. ಅಡಕೊತಗಳು . . . ೪. ಕಡಚಿ (ಮುಂಬವ್ಯಾ. ೧೦೧). **ಖಡಚಿ**: ಮುಚ್ಚುಕಟಿಗೆ ದಿನದ ವ್ಯವಹಾರದ 'ಖಡಚಿ' (ಭಾಷಾಶಾ. ೧೯). **ಖಡಿಚಿ**: ಖಡಿಚಿಯಿಂದ ಹೋಳಿಗೆ ತಿರುವಿಹಾಕು (ರೂಢಿ). [← ಮರಾ. ಕಡಚೀ, ಕರಛೀ]

**ಕಡಚೆ** (ನಾ). ಶಿರೀಷ ವೃಕ್ಷ (ಕ). [?]

**ಕಡಚ್ಚಿಲು** 'ಕಡಚಲು' ನೋ.

**ಕಡಜ$_1$** 'ಕಡಂಜ' ನೋ.

**ಕಡಜ$_2$** (ನಾ). ಒಂದು ಜಾತಿಯ ಸಸ್ಯ: "ವಸುಕಃ —ಚಿನ್ನೆಗ್ಗಿಲು, ಬಾಗೆ, ಕಡಜ, ಅರ್ಕಸೆಕ್ಕೆ" (ಓಷಧಿ. ೧೪೬). [?]

**ಕಡಜಾಜಿ** (ನಾ). ಒಂದು ಜಾತಿಯ ಗಿಡ ಅಥವಾ ಬಳ್ಳಿ: "ಕಾಮವಲ್ಲಿ–ಕಡಜಾಜಿ" (ಓಷಧಿ. ೩೧). [?]

**ಕಡಜೀರಿಗೆ**, ಕರ್ಜೀರಿಗೆ (ನಾ). ೧. ಜೇನುಹುಳದಂತೆ ಕೊಂಡಿಯುಳ್ಳ ಒಂದು ಬಗೆಯ ಕೀಟ, —ಹಾರುಹುಳು: ಕಡಜೀರಿಗೆ ನೋಡಲು ಬಣ್ಣದ ಬೆಡಗನ್ನೇನೊ ಪಡೆದು ಬಂದಿದೆ. ಆದರೆ ಅದನ್ನು ಹಾಡಿ ಹರಸುವ ಪುಣ್ಯವಂತ ಇನ್ನೂ ಹುಟ್ಟಬೇಕು (ಗಾಳಿಪ. ೨೧೩). **ಕರ್ಜೀರಿಗೆ**: ೧. (ಕ). ೨. ಒಂದು ಬಗೆಯ ಔಷಧಿ ಬೀಜ (ಕ). [< ಕಡಂಜ]

**ಕಡಣ** 'ಕಡ್ಡಣ' ನೋ.

**ಕಡತ** 'ಕಡಿತ$_3$' ನೋ.

**ಕಡತಿ** (ನಾ). ಹೆಣ್ಣುಮಂಗ (?): ಮುದಿ ಗಂಡುಮಂಗಗಳು ತಮ್ಮ ಕಡತಿಗಳೊಡನೆ ಹೇಗೆ ವ್ಯವಹರಿಸುತ್ತಿದ್ದುವೋ ಹಾಗೆಯೇ ಅವನು ಸಹ ಸಾಧ್ಯವಿದ್ದಿದ್ದರೆ ಆ ಪ್ರತಿಸ್ಪರ್ಧಿಗಳೊಡನೆ ವರ್ತಿಸುತ್ತಿದ್ದನು (ಪುನರು. ೫೩೭). [?]

**ಕಡತೂರ್** (ನಾ). ಒಂದು ಊರಿನ ಹೆಸರು: ಇದರ್ಕ್ಕೆ ಸಾಕ್ಷಿ ಬೆಳತೂರಾ ಮಹಾಜನಮುಂ ಕಡತೂರಾ ಮಹಾಜನಮುಂ (ಎಕ. X, ಕೋಲಾರ. ೧೧–೧೧; 753). [? + ಊರ್]

**ಕಡತೇರಿಸು** (ಕ್ರಿ). ೧. ಪಾರುಮಾಡು; ರಕ್ಷಿಸು. ೨. ಕೊನೆ ಮುಟ್ಟಿಸು (ಕ). [ಕಡತೇರು + –ಇಸು$_3$]

**ಕಡತೇರು** (ಕ್ರಿ). ೧. ತೊಂದರೆ, ರೋಗ ಮೊದಲಾದುವುಗಳಿಂದ ಪಾರಾಗು. ೨. ಮುಗಿ (ಕ).

[ದೇ. ‖ ತಮಿ. ಕಡತ್ತೇಱು; ತೆಲು. ಕಡತೇಱು, ಕಡತೇರು]

**ಕಡದುಱು** 'ಕಡಂದುಱು' ನೋ.

**ಕಡಪ** 'ಕಡೆಪ' ನೋ.

**ಕಡಪಕತ್ತಿ** (ನಾ). (ಕರಾ) ದೊಡ್ಡಕತ್ತಿ; ಮಚ್ಚು. [← ತುಳು. ಕಡ್ಪತ್ತಿ]

**ಕಡಪಟ್ಟಿಗಾಲ** (ನಾ). ಒಂದು ಸ್ಥಳದ ಹೆಸರು (?): ಕಡಪಟ್ಟಿಗಾಲ ವಟವೃಕ್ಷಮ್ (ಎಕ. I, ೧–೩೦; 466). [?]

**ಕಡಪುಡ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಕಡಪುಡನ್ ಸುಡಿದನ್ ಸಲಿಪೋ ಬಾದಾವಿಯ ಮಾಣಿ (ಇಆ. IX, ೭೫–೧; 9ನೆಯ ಶತ). [?]

**ಕಡಬ$_1$** 'ಕಡವೆ$_2$' ನೋ.

**ಕಡಬ$_2$** (ನಾ). ಒಬ್ಬಾತನ ಹೆಸರು (?): ಚಾಮೆಯಗೆಱೆಯ ಮೊದಲ ಕಡಬನ ಗಱಿ್ದ ಅಯ್ಯುತ್ತು (ಸೌಇಇ. IX-i, ೨೫೫–೨೨; 1148). [?]

**ಕಡಬಡ್ಡಿ** (ನಾ). ಬಡ್ಡಿಗಾಗಿ ಕೊಡುವ ಸಾಲ: ಹಡೆದೊಡ್ಡನೆ ವಸ್ತುವನು ಮೃಡಭಕ್ತರಿಂಗಲ್ಲದೆ ಕಡಬಡ್ಡಿಯ ಕೊಡಲಾಗದು . . . ನಿಮ್ಮ ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು (ಬಸವ. ೨೩೯). [ಕಡ$_1$ + ಬಡ್ಡಿ]

**ಕಡಬರಸ** 'ಕಡಂಬರಸ' ನೋ.

**ಕಡಬೆ$_1$** 'ಕಡವೆ$_2$' ನೋ.

**ಕಡಬೆ$_2$** 'ಕಡಂಬ' ನೋ.

**ಕಡಮೆ**, ಕಡಿಮೆ (ನಾ). ೧. ಕೊರತೆ; ನ್ಯೂನತೆ; ಕಮ್ಮಿ: ಎಂದ ಮಾತುಗಳನೆಲ್ಲವನು ಒಂದಱಿನೊಳ್ ಕಡಮೆಯಿಲ್ಲದೆ ಪೇಳ್ದು (ಮೋಹತ. ೩೩–೩೬); ೧೪೦೭ ವರಹ ಕಡಮೆ ಶಿಂದ ರೊಕದಲ್ಲಿ (ಎಕ. XIV, ಶ್ರೀರಂಗ. ೨೫೭–೬; 1564); ಭೂಷಣಾವಳಿಯಾಗ ಕಡಮೆಯಿಲ್ಲ ಮಗೆ (ಭರತ. ೮–೧೬). ೨. ಉಳಿದದ್ದು; ಮಿಕ್ಕದ್ದು: ಕೈಕೊಂಡನಖ ಭಾರತ ಕಥೆಯ ಕಡಮೆಯ ಜನಪನರಸಯ ಕೃಷ್ಣರಾಯನಿಗಂಕಿತವ ಮಾಡಿ (ತಿಮ್ಮಶಾಂ. ೧–೨೮); ತಲೆಯ ಬೋಳಿಸಿ ಮೂರು ಪಟ್ಟಿಯಂ ಹಂದೆ ಪೋಗೆಂದು ಕಟ್ಟಿಂದಿಟ್ಟು ಕಳುಪಲಾ . . . ಕಡಮ ಮಂಡೆಯನು ಬೋಳಿಸಿಕೊಂಡು (ತುರಂಗ. ೩೪–೨೯, ೩೦). ೩. ಕೆಳಮಟ್ಟ; ಕೆಳದರ್ಜೆ: ಮಂತ್ರಿಗಿಂತಲೂ ಕಡಮೆ ಆಗಿರುವ ಬೇರೊಬ್ಬ ಕಾರ್ಯದಕ್ಷನಾದ ಆಲೋಚನಾಧಿಕಾರಿ (ಸಿದ್ಧಾಂತಿ. ೬. ೨೫೭). **ಕಡಿಮೆ**: ೧. ಮಂದಿಗೆ ಕೊಟ್ಟರೆ, ಹಣವು ಕಡಿಮೆ ಆಗುತ್ತದೆ. ಆದರೆ ವಿದ್ಯೆಯು ಹೆಚ್ಚಾಗುತ್ತದೆ (ಮುಂಬಯಿ. ೧–೧೧); ರಾಯನ ಸೈನ್ಯಪಡೆಯಲ್ಲಿ ಅಶ್ವಸೈನ್ಯದ ಸಂಖ್ಯೆಯು ಕಡಿಮೆಯಾಗಿತ್ತು (ಕೃದೇವ. ೧೯). ೩. ಮೆಣಸು ಹುಳಿತರೆ ಜೋಳಕ್ಕೆ ಕಡಿಮೆಯೆ? (ಗಾದೆ). [ದೇ. ‖ ತಮಿ. ಕಡೈಮೈ; ತುಳು. ಕಡಮೆ; ತೆಲು. ಕಡಮ]

**ಕಡಲ್$_1$** (ನಾ). ಪ್ರವಾಹವನ್ನು ಎರಡು ಭಾಗ ಮಾಡುವ ಕಲ್ಲು; ಬಂಡೆಗಲ್ಲು; ಪ್ರವಾಹಕ್ಕೆ ಅಡ್ಡನಿಂತದ್ದು: "ಹೊನಲನ್ ಇಬ್ಬಗೆ ಮಾಡುವ ಕಡಲು[ಲ್] – (ಕೂಪಕ, ವಿದಾರಕ)" (ನಾಚಿರಾ. ೬). [?]

**ಕಡಲ್$_2$**, ಕಡಲು (ನಾ). ೧. ಸಮುದ್ರ ; ಸಾಗರ: ಕಡಲ ತಡಿಯೆಯ್ದೆ ನೆಲನಂ ಪಡೆದರ್ ಭವದೀಯ ಪುತ್ರರ್ (ಆದಿಪು. ೯-೯೮) ; ಪುಸಿಯೊಳ್ ಪೊರೆಯದೆ ನಡೆವುದದಲ್ಲದೊಡರಸು ಕಡಲ್ವೆರಸು ಪೊಡವಿಗರಸಾದಪನೇ [ಪಾಠಾಂ. ಕಡಂಬರಸನರಸನಂತಾಗಿರರೇ] (ಪಂಚತಂ. ೨೫೪-೪) ; ಕಡಲಾಪೋಶನಮಾದುದಾ ಮುನಿಗೆ (ಕಾದಂಪೂ. ೧೦೩) ; ಹೊಡೆಗೆಡೆದ ದಂತಿಗಳು ರಕ್ತದ ಕಡಲೊಳೀಸಾಡಿದವು (ಕುವ್ಯಾದ್ರೋ. ೧೦-೧೦) ; ಕಡಲೆಡೆಯೊಳು ಮಲಗಿದನಾವಳಿಗಾಗಿ ಕಡಲ ಕಡೆದು ಬಳಲಿದನು (ಹದಿಬ. ೬-೨). **ಕಡಲು**: ೧. ಕಾಳರಕ್ಕಸುಭಟರು ಕವಿದರು ಕಾಲಕೂಟದ ಕಡಲು ಕವಿವಂದದಲಿ ಕಪಿಬಲವ (ತೊರರಾ. ೬-೩೩-೮) ; ಬಾ ಅಲ್ಲಿ ಕಡಲಲ್ಲಿ ತೆರೆತೆರೆಯ ನೊಡೆವಲ್ಲಿ (ಸವೀಗೀ. ೭-೧೩). ೨. (ಕರಾ) ಒಂದು ಬಗೆಯ ಮೀನು.

**ಕಡಲತರಕಾರಿ** = ಮೀನು : ತರ್ಕಾರಿ ಬೆಳೆದದ್ದೆಲ್ಲಾ ಮಂಗ್ಳೂರಿಗೊ, ಬೆಂಗ್ಳೂರಿಗೊ ಹೋದ್ರೆ ಕಡಲತರಕಾರಿಯಲ್ಲದೆ ಮತ್ತೆಂಥಾದ್ದು ತಿಂತೊ, ಪಾಪ (ಹೊಸಕ್ಷಿ. ೫೫). **ಕಡಲನಾಲಗೆ, ಕಡಲನಾಲಿಗೆ** = **ಕಡಲನೊರೆ** : "ವಾರಿಫೇನಂ ಕಡಲನಾಲಗೆಯದಕ್ಕು" (ಮಂಗರಾ. ೪೩-೪೨) ; ಒಡಲಾಂತು ಹರಿಯ ಕೀರ್ತನೆಗೆಯ್ಕದ ಜಿಹ್ವೆ ಕಡಲನಾಲಗೆಯಾಗದಿಹುದೆ (ಮೋಹತ. ೧೩-೨) ; ಕಣ್ಣುಕಪ್ಪಿಗೆ :—ಕಪ್ಪುರಿ, ಕಡಲನಾಲಿಗೆ . . . ಇಷ್ಟನ್ನೂ ಹುರಿದು ವಸ್ತ್ರಗಾಳಿತವಂ ಮಾಡಿ ಕಣಿಗೆಯಲ್ಲಿ ಹಾಕಿ ಬೆಣ್ಣೆಯಲ್ಲಿ ಮರ್ಧಿಸಿ . . . ಇಕ್ಕುವದು (ವಿವೈವಿ. ೧೫೬). **ಕಡಲನೊರೆ** = ಸಮುದ್ರದ ನೊರೆ : "ಉದಧಿಫೇನು – ಕಡಲನೊರೆ" (ಬಸಧಿ. ೧೬). **ಕಡಲಮಗಳಗಂಡ** = ಸಮುದ್ರರಾಜನ ಮಗಳಾದ ಲಕ್ಷ್ಮಿಯ ಪತಿ ; ವಿಷ್ಣು : ಕಡಲಮಗಳಗಂಡನಾದೊಡೆಮ್ಮೊಡನೊಮ್ಮೆ ತೊಡರಲು ಸಂಗ್ರಾಮದೊಳು (ಕೃಪುಸಾಂ. ೧೫-೧೬೪). **ಕಡಲೊಳ್‌ಪಟ್ಟಂ** = ಸಮುದ್ರದ ಮೇಲೆ ಮಲಗಿರುವವನು ; ವಿಷ್ಣು : ಕಡಲೊಳ್‌ಪಟ್ಟನನಿಕ್ಕಿ ಮೆಟ್ಟಿದದಟಂ (ಕಬ್ಬಿಕಾ. ೩೨೨).

[ದೇ. ‖ ತಮಿ. ಮಲ. ತುಳು. ಕಡಲ್ ; ತೆಲು. ಕಡಲಿ]

**ಕಡಲಣುಗ** (ನಾ). ಸಮುದ್ರದಲ್ಲಿ ಹುಟ್ಟಿದವನು ; ಚಂದ್ರ (ಕಿ).

[ಕಡಲ್$_2$ + ಅಣುಗ (< ಅಣುಂಗ)]

**ಕಡಲಣುಗಿ**, ಕಡಲಣುಗೆ (ನಾ). ಸಮುದ್ರದಲ್ಲಿ ಹುಟ್ಟಿದವಳು ; ಲಕ್ಷ್ಮಿ : ಕಡಲಣುಗಿ ಮಲರ್ಗಣ್ಣ ಕೈಪಿಡಿಯ ನೋಡುವಳ್ ಜುಣುಗಿ (ಕಾಲೂರ. ೨೭-೧೬). **ಕಡಲಣುಗೆ** : ದುಡುಕಿದಾ ಸೂರೆಗರ ಹಾವಳಿಗೆ ನೊಂದೆ ! ಕಡಲಣುಗೆ ! ಬಡವಾದೆ ಕಾವರಿಲ್ಲೆಂದೆ ! (ಕಏಪು. ೩೨-೨).

[ಕಡಲ್$_2$ + ಅಣುಗಿ (< ಅಣುಂಗಿ)]

**ಕಡಲಣುಗೆ** 'ಕಡಲಣುಗಿ' ನೋ.

**ಕಡಲಳಿಯ** (ನಾ). ಸಮುದ್ರರಾಜನ ಅಳಿಯ ; ವಿಷ್ಣು : ಕಡಲಳಿಯ ನೊಲವಿಂದ ಕಾಯಲಿ (ಕಾಲೂರ. ೯೯-೧೯೨). [ಕಡಲ್$_2$ + ಅಳಿಯ]

**ಕಡಲಾಂಡಭಟ್ಟ** (ನಾ). ಒಬ್ಬಾತನ ಹೆಸರು : ಅತ್ತಿರಾಳ್ವಭಟ್ಟರು ಶ್ರೀರಂಗಭಟ್ಟರು ಕಡಲಾಂಡಭಟ್ಟರು ಪಾರ್ತ್ಥಸಾರಥಿಭಟ್ಟೋಪಾಧ್ಯಾಯರು (ಸೌಇಇ. IX-i, ೨೫೦-೪೬ ; 1148).

[ಕಡಲ್$_2$ + ಆಂಡ + ಭಟ್ಟ]

**ಕಡಲಾಣ್ಮ** (ನಾ). ಸಮುದ್ರರಾಜ ; ವರುಣ : "ಕಡಲಾಣ್ಮಂ ಯಾದಸಾಂ ಭರ್ತೃವಿನೊಳ್" (ಕರ್ಣಾನಿ. ೪೧). [ಕಡಲ್$_2$ + ಆಣ್ಮ (< ಆಳ್ಮ)]

**ಕಡಲಿಡು** (ಕ್ರಿ). ಸಮುದ್ರವಾಗು ; ಸಮುದ್ರದಂತೆ ತುಂಬಿ ನಿಲ್ಲು : ಕಡಲಿಡುವ ರಕುತದ ಸುಗ್ಗಿ ಶಾಕಿನಿಯರಿಗೆ ಸೇರಿತು (ಕುವ್ಯಾಭೀ. ೪-೯) ; ಕಟ್ಟದಿರ ಕಳಿವಣ್ಣುಗಳ ಕಡಲಿಟ್ಟು ಸುರಿವ ಸುಧಾರಸದ ಹೊಂಗಟ್ಟುಗಳ ಫಲಭೂಜರಾಜಿಯ ಕಿತ್ತನಾ ಹನುಮ (ತೊರರಾ. ೫-೪-೫) ; ಕಡಲಿಡುವ ಕಂಬನಿಯೊಳಿಂತೆಂದಳು (ಜೈಮಿಭಾ. ೩೨-೫೨). [ಕಡಲ್$_2$ + ಇಡು$_1$]

**ಕಡಲಿಬತ್ತಿ** (ನಾ). ಒಂದು ಬಗೆಯ ಬತ್ತಿ : ದೀವಿಗೆಯ ಬತ್ತಿಗಳನ್ನು ಕಡಲಿಬತ್ತಿಗಳನ್ನು ಖಡ್ಡಿಬತ್ತಿಗಳನ್ನು ಮಾಡುತ್ತಾರೆ (ಕೃಷಿಪ್ರ. ೭೪).

[? + ಬತ್ತಿ]

**ಕಡಲಿಳಿ** (ಕ್ರಿ). ಕಡಲಿಗೆ ಇಳಿ ; ಸಮುದ್ರದಲ್ಲಿ ಮುಳುಗು : ಏಣಾಂಕ ಗಗನದೊಳಿರ್ದು ತಾ ಪುಟ್ಟಿದ ತಾಣವ ನೋಡುವಂದದಲಿ ಕೇಣವಿಲ್ಲದೆ ಕಡಲಿಳಿವಂತೆ ಮತಿಪಂಚಬಾಣ ನೀರೊಟ್ಟಿಲೊಳ್ ಬಿದ್ದ (ಮೋಹತ. ೧೧-೨೮). [ಕಡಲ್$_2$ + ಇಳಿ$_1$ (< ಇಟಿ)]

**ಕಡಲು** 'ಕಡಲ್$_2$' ನೋ.

**ಕಡಲುಕಾಲುವೆ** 'ಕಡಲ್ಗಾಲುವೆ' ನೋ.

**ಕಡಲುಗಳ್ಳ** 'ಕಡಲ್ಗಳ್ಳ' ನೋ.

**ಕಡಲುಗಾಲುವೆ** 'ಕಡಲ್ಗಾಲುವೆ' ನೋ.

**ಕಡಲುಘಂಟೆ** (ನಾ). ಸಮುದ್ರದಲ್ಲಿ ನಾವಿಕರನ್ನು ಎಚ್ಚರಿಸುವುದಕ್ಕಾಗಿ ಇರಿಸಿದ ಗಂಟೆ : ಸಮುದ್ರದಲ್ಲಿ, ಬಂಡೆಗಳಿರುವ ಪ್ರದೇಶಗಳಲ್ಲಿ, ನಾವಿಕರನ್ನು ಎಚ್ಚರಿಸಲು, ದೀಪಸ್ತಂಭಗಳಿರುವಂತೆಯೇ, ನೀರಿನ ಕೆಳಗೆ ಕಡಲುಘಂಟೆಗಳನ್ನು ಇರಿಸುತ್ತಾರೆ (ಬಾಲಪ್ರ. II, ೭೫೮).

[ಕಡಲು (< ಕಡಲ್$_2$) + ಘಂಟೆ]

**ಕಡಲುರಿ** (ನಾ). ಸಮುದ್ರದ ಒಳಗಿರುವ ಬೆಂಕಿ ; ವಡಬಾಗ್ನಿ : "ಕಡಲುರಿ ಮುನ್ನೀರ್ಗಿಚ್ಚಿನೆ ವಡಬಾನಲಂ" (ಚತುನಿ. ೧೧೨) ; ಕಡಲುರಿಯಂತಕಾಲಘನಗರ್ಜನೆಯಂತೆ ಸಮಸ್ತದಿಕ್ತಟಂ ಪಿಡುಗುವಿನಂ ರಣಾನಕ ರವಂಗಳಸುಂಗೊಳೆ (ಪಂಪಭಾ. ೧೩-೩೩).

[ಕಡಲ್$_2$ + ಉರಿ$_2$]

**ಕಡಲುವರಿ** 'ಕಡಲ್ವರಿ' ನೋ.

**ಕಡಲುಸಿಂಹ** (ನಾ). ಬಲವಾದ ಪಕ್ಕಗಳುಳ್ಳ, ಸಿಂಹವನ್ನು ಹೋಲುವ ಸಮುದ್ರದ ಪ್ರಾಣಿ ; ಸಮುದ್ರಸಿಂಹ : ಕಡಲುಸಿಂಹ ಎನ್ನುವುದು ವಾಲ್‌ರಸ್ ಎಂಬೊಂದು ಪ್ರಾಣಿ (ಒಂದೇರಾ. ೧೨) ; ಬಲವಾದ ಪಕ್ಕಗಳುಳ್ಳ ಕಡಲುಸಿಂಹ, ವಾಲ್ರಸ್ ಮೊದಲಾದುವು ಅವುಗಳಿಂದ ನೆಲವನ್ನು ತಳ್ಳಿ ತುಸುದೂರ ಸಾಗಬಲ್ಲುವು (ಬಾಲಪ್ರ. II, ೭೨೪).

[ಕಡಲು (< ಕಡಲ್$_2$) + ಸಿಂಹ]

**ಕಡಲೆ** (ನಾ). ಒಂದು ಬಗೆಯ ದ್ವಿದಳಧಾನ್ಯ ; ಚಣಕ : "ಚಣಂಗಿ ಖಂಡಿಕಮೆನಲು ಕಡಲೆ" (ಮಂಗರಾ. ೧೧೦-೪) ; ಮೆಣಸುಗಡಲೆಯ ಪುಡಿಯೊಳಡಸಿದಲ್ಲವಲ್ಲಣಿಗೆಯ ಚಿಕ್ಕಣಂಗಳಂ ಸವಿಸವಿದು (ಪಂಪಭಾ. ೪-೮೭ ವ) ; ಹುರಿಗಡಲೆಯಂತಾನುಂ ಕಾಯ್ವಾಜಿದೋಡಿನ ಜೋಳದೊಳ್ಮರಲಲರುವಂತಾನುಂ (ಶಾಂತಿಪು. ೭-೯೨) ; ಕಡಲೆಗಳಂ ತಿಂಬ ಮೊಗ್ಗು ಕಲ್ಗಳೊಳುಂಟೇ (ಧರ್ಮಾಮೃ. ೧-೧೭೫) ; ಓದಿದೊಡೆ ಕಲ್ಲ ಮಾಲೆಯ ನಾದಂ ಕಬ್ಬೊನ್ನ ಕಡಲೆ ವಾದಿಸೆ ರಸಮಂ ಸೋದಿಸೆ ಯುಕ್ತಿನ ಪುಡಿಯೆನಿಪಾ ದುಷ್ಕವಿತೆಗಳನೆಣಿಸಲೇಕೀ ಕೃತಿಯೊಳ್ (ಗಂಕ. ೧-೨೨) ; ಕಡಲೆಗಳಿಂ ನಿಮ್ಮುಡಿಯೊಳಗೆ ಪಡುವ ದೇಗುಲದೆಡೆ ಯಾವುದು (ಶಮದ. ೧೦೨ ಪ್ರಯೋ) ; ಗೋಧಿ ಕಡಲೆಯ ವಿಳಸ ರಾಶಿಯ ದೇಸು ಯೋಜನದಳತೆ (ಕುವ್ಯಾಸ. ೬-೧೬).

[ದೇ. ‖ ತಮಿ. ಕಡಲೈ ; ಮಲ. ಕಡಲ ; ತುಳು. ಕೊಡ. ಕಡಲೆ]

**ಕಡಲೆಕಾಯಿ** (ನಾ). ೧. ಕಡಲೆಕಾಳುಗಳುಳ್ಳ ಕಾಯಿ : ಕಾಷ್ಠ ಪೋಗಿ ತಾ ಪರ್ವತ ನುಂಗಿತು ಕೃಷ್ಣನ ನುಂಗಿತು ಕಡಲೆಕಾಯಿ (ಪುರಂದ. ೩-೯೩-೩). ೨. ನೆಲಗಡಲೆ ; ಸೇಂಗಾ : "ನಿಮಗೆ ಹಾಲು, ಹಣ್ಣು, ಕಡಲೆಕಾಯಿ, ಪುರಿ – ಮೊದಲಾದುವನ್ನು ಕೊಡಿಸುತ್ತೇನೆ" (ರಂಗಕ. ೮೬).

[ಕಡಲೆ + ಕಾಯಿ$_4$ (< ಕಾಯ್$_4$). / ತಮಿ. ಕಡಲೈಕ್ಕಾಯ್]

**ಕಡಲೆಗೊರವಂಕೆ** (ನಾ). ಗೊರವಂಕ ಪಕ್ಷಿಗಳಲ್ಲಿ ಒಂದು ಜಾತಿ: ಒಂದು ಗುಂಪು ಕಡಲೆಗೊರವಂಕಗಳ ಹಿಂಡು ಹಾರಿಹೋಯಿತು (ಚಂದುಟ. ೧೫). [ಕಡಲೆ? + ಗೊರವಂಕ]

**ಕಡಲೆಬೇಳೆ** (ನಾ). ಕಡಲೆಕಾಳನ್ನು ಒಡೆದು ಮಾಡಿದ ಬೇಳೆ: ಕಡಲೆಬೇಳೆಯನ್ನು ನೆನೆಸಿ ನಿಂಬೆಹುಳಿಯಲ್ಲಿ ಅರೆದುಕೊಟ್ಟರೆ ಅಜೀರ್ಣ... ಗುಣವಾಗುವುವು (ಸಕವೈ. ೪೯೦ ಪರಿ). [ಕಡಲೆ + ಬೇಳೆ]

**ಕಡಲೆವಿಟ್ಟು** (ನಾ). ಕಡಲೆಯ ಹಿಟ್ಟು: ಕರಿಬೇವು ಬತಗಸಂಡಗೆಯಿಂಗು ಕಡಲೆವಿಟ್ಟರಿಸಿನದ ಹುಡಿ ಕೆಂಡಬೆಂದ ತೆಂಗಾಯೋಟಿ ಹುರುಳಿ ಸಾಸುವೆ ಮೆಂತೆಯುದ ಚೂರ್ಣ ಹಪ್ಪಳಂ ಸಂಭಾರ ವಸ್ತುವಹವು (ಸೂಪಶಾ. ೪–೧). [ಕಡಲೆ + ಪಿಟ್ಟು]

**ಕಡಲೆಹುಳಿ** (ನಾ). (ಔಷಧಿಗಾಗಿ) ಕಡಲೆ ಗಿಡದಿಂದ ತೆಗೆದ ಹುಳಿಯಾದ ರಸ: "ಚಣಕಾಮ್ಲ – ಕಡಲೆಹುಳಿ" (ಒಷಧಿ. ೫೪). [ಕಡಲೆ + ಹುಳಿ$_2$ (< ಪುಳಿ$_2$)]

**ಕಡಲೆಱೆಯ** (ನಾ). ವರುಣ: "ಮುನ್ನೀರೆಱೆಯಂ ಪ್ರಚೇತನೊಳ್ ಕಡಲೆ[ಱೆಯಂ] [ಪಾಠಾಂ. ಲೆನಿಕುಂ]" (ಕರ್ಣಾನಿ. ೧); ಕಡಲೆಱೆಯ ನಾಲವಟ್ಟವ ನೆನಸೆ ಪಡುವಣೆಲರಲೆದುದು (ಸಾಳ್ವಭಾ. ೧೬–೧೭). [ಕಡಲ್$_2$ + ಎಱೆಯ]

**ಕಡಲೊಡೆಯ** (ನಾ). = ಕಡಲೆಱೆಯ: ಕಡಲೊಡೆಯನಿತ್ತ ರನ್ನದ ತೊಡವಂ ತುಡು (ಕಬ್ಬಿಕಾ. ೪೩); ವಡಬಗೌತಣವಿಕ್ಕುವರೆ ಕಡಲೊಡೆಯಗಹುದು (ಕುವ್ಯಾದ್ರೋ. ೬–೧೯). [ಕಡಲ್$_2$ + ಒಡೆಯ$_1$]

**ಕಡಲೋಟ** (ನಾ). ೧. ಸಮುದ್ರದ ಇಳಿತ; ಓಹಟ: ವೇದತಸ್ಕರನ ತನ್ನೊಳಗಿಟ್ಟುಕೊಂಡಪರಾಧಕ್ಕೆ ಪೊಱಮಡಲೊಡನೆ ಮಾಧವ ಕರೆಸಲು ಮರಳಿ ಬಂದಂತಾಗಲಾದುದು ಕಡಲೋಟ ಭರಿತ (ಮೋಹತ. ೨–೯). ೨. ಒಂದು ಬಗೆಯ ವಿದ್ಯೆ: ಭಾರಣೆ ವರನಾಳಿ ಕಡಲೋಟ ಮುಂತಾದ ಚಾರುಕೌಶಲ್ಯವಿದ್ಯೆಗಳ ಧಾರುಣಿ ಪೊಗಳೆ ಪೇಳ್ದೀಲಾಚಾರ್ಯರ ಚಾರುಚರಣ ಶರಣೆನಗೆ (ನಾಗಕು. ೧–೧೨). [ಕಡಲ್$_2$ + ಓಟ]

**ಕಡಲ್ಕರೆ** 'ಕಡಲ್ಗರೆ' ನೋ.

**ಕಡಲ್ಗಟ್ಟು** (ಕ್ರಿ). ಸಮುದ್ರದಷ್ಟಾಗು; ಅಗಾಧವಾಗು; ಅಪಾರವಾಗು (?): ದಯಾರಸ ನೀರ ತಟಾಕಂ ತೀವಿ ತುಳುಂಕಿ ಕೋಡಿಮರಳಿಯುಂ ದಾನತೀರ್ಥ ಸರೋವರಂಗಳಱಿಬಳಿವೋಗೆಯುಂ ಸಮ್ಯಗಾಚಾರ ಚಾರುಪರಂಗಳ್ಕಡಲ್ಗಟ್ಟಿಯುಂ ಪೊದಱ್ಕೆವಡೆದ ಸದ್ಧರ್ಮಪೀಯೂಷ ಮಹಾಪ್ರವಾಹಂ (ಅನಂಪು. ೧೪–೪೭ ವ). [ಕಡಲ್$_2$ + ಕಟ್ಟು$_1$]

**ಕಡಲ್ಗರೆ, ಕಡಲ್ಕರೆ** (ನಾ). ಸಮುದ್ರತೀರ, —ದಡ: ಕಡಲ್ಗರೆಯನ್ನು ಸಂಜೆಯಾಗುವಾಗ ಮುಟ್ಟಿ, ಅಲ್ಲಿಯೇ ಜಲದೇವರ ಬರವನ್ನು ಹಾರೈಸುತ್ತ ಬಂಡೆಕಲ್ಲುಗಳ ಮರೆಯಲ್ಲಿ ಕುಳಿತನು (ಮಣಿಸ. ೯೯). **ಕಡಲ್ಕರೆ**: ಜಯಸೇನನು ಕಡಲ್ಕರೆಯ ಕಾಡುಗಳ ಮರೆಯಲ್ಲಿ ಲಂಗರು ಹಾಕಿ, ಹಡಗನ್ನು ನಿಲ್ಲಿಸಿ, ವೀರರೊಡನೆ ತೀರವನ್ನು ಸೇರಿದನು (ಮಣಿಸ. ೮೧). [ಕಡಲ್$_2$ + ಕರೆ$_4$]

**ಕಡಲ್ಗಳ್ಳ, ಕಡಲುಗಳ್ಳ** (ನಾ). ಸಮುದ್ರದ ಮೇಲೆಯೇ ಅಲೆಯುತ್ತಿದ್ದು ಹಡಗುಗಳನ್ನು ಲೂಟಿಮಾಡುವವನು: ರಷ್ಯದ ವ್ಯಾಪಾರಿ ಹಡಗಿನ ಮೇಲೆ 'ಕಡಲ್ಗಳ್ಳರ ಹಡಗುಗಳ' ದಾಳಿಗೆ ಅಮೆರಿಕಾ ಸರ್ಕಾರವೇ ಹೊಣೆ ಎಂದು ಹವಾನಾರೇಡಿಯೋ ಇಂದು ಆರೋಪಿಸಿತು (ಪ್ರಜಾವಾ. ೧–೨; ೨೧–೩–೬೩). **ಕಡಲುಗಳ್ಳ**: ಈ ದೇಶದಲ್ಲಿ ಅನೇಕ ಕಡಲುಗಳ್ಳರಿದ್ದಾರೆ (ಪ್ರವಾಇ. II, ೪೧). [ಕಡಲ್$_2$ + ಕಳ್ಳ$_1$]

**ಕಡಲ್ಗಾಲುವೆ, ಕಡಲುಕಾಲುವೆ, ಕಡಲುಗಾಲುವೆ** (ನಾ). ಎರಡು ಸಮುದ್ರಗಳನ್ನು ಸೇರಿಸುವ ವಿಸ್ತಾರವಾದ ಸಮುದ್ರಭಾಗ: ಕಾಲುವೆ; ಕಡಲ್ಗಾಲುವೆ (ಪಾರಿನಿ. ೧೪). **ಕಡಲುಕಾಲುವೆ**: "(ಎರಡು ಸಮುದ್ರಗಳನ್ನು ಸೇರಿಸುವ) ಜಲಸಂಧಿಗಿಂತಲೂ ವಿಸ್ತಾರವಾದ ಸಮುದ್ರಭಾಗ; ಕಡಲುಕಾಲುವೆ" (Channel. ಇಂಕನಿ). **ಕಡಲುಗಾಲುವೆ**: ಮಂಜು ಹರಡಿಕೊಂಡಿದ್ದ ಕಾರಣ ದಾರಿಯಲ್ಲಿ ಇಂಗ್ಲೀಷ್ ಕಡಲುಗಾಲುವೆ ಸರಿಯಾಗಿ ಕಾಣಿಸಲಿಲ್ಲ (ನಂಟರು. ೯೯). [ಕಡಲ್$_2$ + ಕಾಲುವೆ (< ಕಾಲ್ವಾಯ್)]

**ಕಡಲ್ಗಿಚ್ಚು** (ನಾ). ಸಮುದ್ರದ ಒಳಗಿರುವ ಬೆಂಕಿ; ವಡಬಾಗ್ನಿ: "ಕಡಲ್ಗಿಚ್ಚು ಬಡಬಾಗ್ನಿಯಕ್ಕು" (ಶಬ್ದಮಂ. ೧೩). [ಕಡಲ್$_2$ + ಕಿಚ್ಚು]

**ಕಡಲ್ಗುದುರೆ** (ನಾ). ಒಂದು ಜಾತಿಯ ಮೀನು: "ಒಂದು ಸಣ್ಣ ಮೀನ ಜಾತಿ; ಕಡಲ್ಗುದುರೆ" (Hippocampus. ಇಂಕನಿ). [ಕಡಲ್$_2$ + ಕುದುರೆ]

**ಕಡಲ್ತಡಿ** (ನಾ). ಕಡಲ ದಂಡೆ; ಸಮುದ್ರತೀರ: ಕಡೆಯ ಕಡಲ್ತಡಿ ವೊರೆಗಳ ಪಡೆಯಂ ಗೆಲ್ದು (ಅಪ್ರತಿ. ೧–೭). [ಕಡಲ್$_2$ + ತಡಿ$_5$]

**ಕಡಲ್ತೆಂಗು** (ನಾ). ಒಂದು ಬಗೆಯ ಔಷಧಿ ಗಿಡ: ಜೋಡಿತೆಂಗು, ಕಡಲ್ತೆಂಗು (ವೈಔಗಿ. ೫೧–೧೦೧೭). [ಕಡಲ್$_2$ + ತೆಂಗು$_2$]

**ಕಡಲ್ವರಿ, ಕಡಲುವರಿ** (ಕ್ರಿ). ಸಮುದ್ರದಂತೆ ಪಸರಿಸು; ಹರಿದು ಸಮುದ್ರವಾಗು; ವೃದ್ಧಿಯಾಗು: ಕಡಲ್ವರಿವ ಕಣ್ಣೀರ ಪೂರದೊಳ್ ಮುಳುಗಿದೆಮೆಪೊಱೆಯನಾನಲಾಱದೆ (ವರ್ಧಪು. ೯–೬೬ ವ); ತನುರುಚಿ ಕಂಪಿನ ಪೊಳಪಿನ ಕೌಮುದಿಯನೇಂ ಕಡಲ್ವರಿಯಿಪುದೋ (ಅನಂಪು. ೪–೪೮); ನೋಡುವ ಕೂಡುವ ಚಿಂತೆ ಕಡಲ್ವರಿದುದಂದು ಬೆಳಗಪ್ಪಿನೆಗಂ (ಯಶೋಚ. ೨–೩೨). **ಕಡಲುವರಿ**: ಬಸಿಯ ನೆತ್ತರು ಕಡಲುವರಿದುದು ಕೂಡೆ ಕಣನೊಳಗೆ (ಕುವ್ಯಾದ್ರೋ. ಒರಿಇ. ೨೮೨ ಪರಿ); ಭೂಕಾಂತ ನೆಱಗಿದನಾತ್ಮವಿದ್ಯಾಕಾಂತನಂಘ್ರಿಗೆ ಕಡಲುವರಿವಾನಂದ ಭಾಷ್ಪದಲಿ (ನಿಭಾಗ. ೫–೮–೩೯). [ಕಡಲ್$_2$ + ಪರಿ$_2$]

**ಕಡಲ್ವರಿಸು** (ಕ್ರಿ). ಕಡಲಾಗಿ ಪಸರಿಸು; ಸಮುದ್ರದಂತೆ ಹರಡು: ಕಣ್ಮಲರ್ ತನಿವೆಳಗಂ ಕಡಲ್ವರಿಸೆ (ಕುಸುಮಾ. ೫–೯೯); ಸುಲಿಪಲ್ಲ ಮಿಂಚು ಕಡೆಗಣ್ಮಲರ ಕಡಲ್ವರಿಪ ಕಾಂತಿ ದುಗುಲದ ಮುಕ್ತಾಫಲದ ಮಲಯರುಹದೊಪ್ಪಮನಲರ್ಗಣೆಗೆಳಿನೊಪ್ಪಸಲಗೆಯಿಡೆ ನಡೆತಂದಳ್ (ಅನಂಪು. ೪–೧೦೮). [ಕಡಲ್ವರಿ + -ಸು$_1$]

**ಕಡಲ್ವುಗು** (ಕ್ರಿ). ಸಮುದ್ರವನ್ನು ಹೊಗು, —ಪ್ರವೇಶಿಸು: ಚಂದ್ರಬಿಂಬಂ... ಪಡುವಣ ಕಡಲ್ವುಗೆ ಪರಿವ ಬೆಳ್ದಿಂಗಳ ಬೆಳ್ವೊನಲೊಳುರ್ವಿದ ಬೊಬ್ಬುಳಿಕೆಗಳಂತೆ ತಾರಗೆಗಳ್ ತಲೆಗರೆಯೆ (ಕಾದಂಉ. ೪೨೯). [ಕಡಲ್$_2$ + ಪುಗು (< ಪೊಗು)]

**ಕಡವ$_1$** 'ಕಡಂಬ' ನೋ.

**ಕಡವ$_2$** 'ಕಡವೆ$_2$' ನೋ.

**ಕಡವಂಚಿ** (ನಾ). ಒಂದು ಬಗೆಯ ಸಸ್ಯ: (ವೈಔಗಿ. ೫೪–೧೦೯೪). [?]

**ಕಡವಡ** (ನಾ). ಗೂಡಾರ; ಬಟ್ಟೆಯ ಗುಡಿಸಲು; ಡೇರೆ: ಪಱಿಯಿಗೆಯು ಪಱಿವಡಿಯುಮೆಡದೊಳಂ ಬಲದೊಳಮುಳವಡಿಸಿ ನಿಂದ ದಂಡಿಗಳ ದಂಡನಾಯಕರ ದಾನವಸೇನಾದಿಗಳ ಕಡವಡಂಗಳುಂ (ಅನಂಪು. ೧೩–೯೦ ವ). [< ಕಂಡವಡ?]

**ಕಡವರ,** ಕಡಾರ$_2$ (ನಾ). ೧. ಹೂಳಿಟ್ಟ ದ್ರವ್ಯ; ಹುದುಗಿಟ್ಟ ಸಂಪತ್ತು, —ನಿಧಿ: "ಕಡವರಮೆ ಬಯ್ಕೆ" (ಕವಿಕಂ. ೨೩೩); ಅಱಿಯಬಹುದೆ ರಸದ ಬಾವಿ ನಿರ್ಭಾಗ್ಯಂಗೆ ತೆಗೆಯಬಹುದೆ ಕಡವರವು ದರಿದ್ರಂಗೆ (ಬಸವ. ೨೬೬); ಬಡವಂಗೆ ಕಡವರವಿರ್ಪಂತೆ ಕುರುಡಂಗೆ ಕಣ್ಗಳಿರ್ಪಂತೆ (ನಂಬಿರ. ೧೮–೫೧); ನೆಲಮಱೆಯ ಕಡವರದಂತೆಯಿರು ತಿರ್ದನತಿಶೌರ್ಯನಾದಯ್ಯನಾದಯ್ಯನು (ಶಾಭಚ. ೧೩–೪೩). ೨. ಚಿನ್ನ; ಬಂಗಾರ: "ಕಸವರಂ ಸೊನ್ನೆ ಚೆಂಬೊನ್ನು ಕಡವರಮೆನಲು ಮಿಸುನಿ" (ಶಬ್ದಮಂ. ೬೯); ಕುವರನ ತೆಗೆದು ತಕ್ಕೈಸಿ ಕೇಳೆನ್ನ ಕಡವರಮೆ ಚಿಂತೆಯೆನಗೇಕೆ (ಭಾವಚಿಂ. ೯–೧೬); ಕಡವರವನೊರೆದು ಪುಟವಿಡಲು (ಸಿದ್ಧೇಪು. ೨೨–೪೭); ನಿನ್ನಡಿಯ ಪುಡಿಯು ಬಡತನವೆ ಕಡವರ ಕಣಾ (ಅಗ್ನಿಹಂ. ೯೧–೧೧). ೩. "ಹಣ, ಧನ" (ಪ್ರಭಣ್ಣ): ಶಿವಶರಣರಿಗೆ ಬಳಿಕ ಶರಣೆಂದು ಕಡವರವನಾರಾಧನಂಗೆಯ್ದು (ಸೌಂದಪು. ೬–೧೮). **ಕಡಾರ$_2$:** ೧. "ಕಡಾರಂ ನಿಕ್ಷೇಪ" (ಕವಿಕಂ. ೨೩೫); ಬಡವಂಗೆ ಕಡಾರಂ ಕೈಸಾರ್ದಂತೆ (ಧರ್ಮಾಮೃ. ೩–೨೪೧); ವಸುಧೆಯೊಳಡಂಗಿರದೆ ನೆಗೆದೆಸೆವ ಕಡಾರಮನೆ ಬಡವನಡಿ ಮೊದಲೊಳಭೀಕ್ಷಿಸಿ ಕಾಣ್ಬತೆಱದೆ (ಕುಸುಮಾ. ೧೨–೮೦). 'ಕಸವರ' ಪರಾ.

[< ಸಂ. ಕಾರ್ತಸ್ವರ ?]

**ಕಡವಲ್,** ಕಡವಲ, ಕಡವಾಲ, ಕಡಾಲ (ನಾ). ಒಂದು ಜಾತಿಯ ಮರ; ಕಡಂಬ (೬) **ಕಡವಲ:** (ಗಂಗಾಮ. ೩೭). **ಕಡವಾಲ:** ಹಸಿರು ಹಳದಿ ಕಪ್ಪಾದ ಮುಗುಳ ಕಡವಾಲಗಳನು ನೋಡಿ (ಕವೀಘ. ೬–೫); ವೈಗೆ ಕಡವಾಲಮರದ ಕಾಂತಿ (ಮುಕ್ತಕಂ. ೧೯–೧೪). **ಕಡಾಲ:** ಕಡಾಲ (ಕಳಂಬ) – ಉನ್ನತ ವೃಕ್ಷ; ಕಟ್ಟಿಗೆ ಇಮಾರತಿಗೆ ಬರುತ್ತದೆ (ಕಭಾಗ. ೩೭). [< ಕದಂಬ]

**ಕಡವಲ** 'ಕಡವಲ್' ನೋ.

**ಕಡವಸ,** ಕಡಾಸ$_2$, ಕಡಾಸು (ನಾ). (ಋಷಿಗಳು ಕುಳಿತುಕೊಳ್ಳಲು ಉಪಯೋಗಿಸುವ) ತೊಗಲು; ಚರ್ಮ; ಅಜಿನ: "ತೋಲ್ ತೊವಲ್ಪೆದೆ ಸಮ್ಮವದು ನೀಡು ಕಡವಸವಕ್ಕು" (ಶಬ್ದಮಂ. ೩೩); ಅಡವಿಯೊಳಗೆ ಕಳ್ಳರು ಕಡವಸ[ಪಾಠಾಂ. ವರ]ದ ಸ್ವಾಮಿಯನು ಹುಡುಕಿ ಹುಡುಕಿ ಅಱಸುತ್ತೈದಾರೆ (ಅವಚಂ. ೯–೩೩); ಸೂಡುತಲಿ ಬಿಡುಜಡೆಗಳನು ಕೈಗೂಡುತಲಿ ಕಡವಸ ವಿಭೂತಿಯ . . . ಮಾಯೆ ಬರಲೆದ್ದೋಡಿದರು ಹುಲಿಗಂಡ ಹುಲ್ಲೆಗಳಂತೆ (ಪ್ರಭುಲೀ. ೭–೪೫); ಜೋಗಿಗಳೋಡಿದರು ಕಡವಸಗಳಂ ಬಿಟ್ಟು (ಶಂಕದಾ. ೧೫–೩೩); ಜಡೆಯ ಕಟ್ಟಲುಬಹುದು ಕಡವಸವನುಡಬಹುದು . . . ಕರಣಗಳ ತಡೆಯುವುದೆ ಕಷ್ಟ (ಸರ್ವಜ್ಞ. ೫೩೦). **ಕಡಾಸ$_2$:** " . . . ಏನು ಶಾಸ್ತಿ ಮಾಡಬೇಕೋ ಆದನ್ನು ಮಾಡಿ ಹೊರಟೆಯಾ ಜೋಗಿ, ಹೆಗಲಿಗೆ ಕಡಾಸ" ಎನ್ನುವಂತೆ ಹೇಳದೆ ಕೇಳದೆ ಹೊರಟುಬಿಡುತ್ತೇನೆ" (ಮುಳ್ಳಿಹಾ. ೫೫). **ಕಡಾಸು:** ಎಡಕಂಕುಳಲ್ಲಿ ಕಡಾಸು, ಬವನಾಸಿ, ಬಲಕಂಕುಳಲ್ಲಿ ತುತ್ತೂರಿ (ಹುಟ್ಟಿಹ. ೧೭); ಜೋಗಿ ಎದ್ದರೆ ಕಡಾಸು ಹೆಗಲ ಮೇಲೆ (ಗಾದೆ).

[?. / ತೆಲು. ಕಡಪಸ, ಕಳವಸ, ಕಡಾಸ, ಕಳಾಸ. / ಮರಾ. ಕಡಾಸನ]

**ಕಡವಳ** (ನಾ). ಒಂದು ಬಗೆಯ ಸಸ್ಯ: ಕಡವಳ, ಕಡಗದ, ಕಡಾನಿ, ಕೊಂಗು (ವೈಔಗ. ೫೪–೧೦೮೫). [?]

**ಕಡವಾಗಿಸು** (ಕ್ರಿ). ಪ್ರವಾಹವನ್ನು ದಾಟುವ ಸ್ಥಳವಾಗಿ ಮಾಡು: ಕ್ಷೋಣಿಯಂ ಪಯದೇಱೆ ಬಳ್ವಳ ಬಳ್ಕಿಸುತ್ತಿರೆ ಮಿಕ್ಕ ದಿಕ್ಕೋಣಮಂ ಕಡವಾಗಿಸುತ್ತಿರೆ (ಅನಂಪು. ೧೪–೭೧).

[ಕಡವು$_3$ (< ಕಡಹು$_2$) + ಆಗಿಸು]

**ಕಡವಾಯ್** 'ಕಡೆವಾಯ್$_2$' ನೋ.

**ಕಡವಾಲ** 'ಕಡವಲ್' ನೋ.

**ಕಡವಿಗೆಱೆ** (ನಾ). ಒಂದು ಊರಿನ ಹೆಸರು: ಬಡಗಾಯ್ಕಡವಿಗೆಱೆ ಎ (ವೈಆರಿ. ೧೯೨೭, ೧೧೮–೪೮; 726).

[ಕಡವಿ ? + ಕೆಱೆ]

**ಕಡವು$_1$** 'ಕಡವೆ$_2$' ನೋ.

**ಕಡವು$_2$** 'ಕಡಂಬ' ನೋ.

**ಕಡವು$_3$** 'ಕಡಹು$_2$' ನೋ.

**ಕಡವುಗಾರ** (ನಾ). ಕಡವನ್ನು ಹಾಯಿಸುವವನು; ದೋಣಿ ನಡಸುವವನು: ಬಡಗಿಗಳನ್ನು, ಉಪ್ಪಾರರನ್ನು, ಕಡವುಗಾರರನ್ನು . . . ಕರೆದುಕೊಂಡು ಹೋಗುತ್ತಿದ್ದರು (ಬೆಂಜನ್. ೨೦).

[ಕಡವು$_3$ (< ಕಡಹು$_2$) + –ಗಾರ (< –ಕಾಱ)]

**ಕಡವುಲ್** (ನಾ). ಒಂದು ಬಗೆಯ ಹುಲ್ಲು; ಕಾಡುಹುಲ್ಲು: ಕಡವುಂ ಕಡವುಲ್ಲೊಳಡಂಗಿ ಝೊಂಪಿಸುತ್ತಿರೆ ಭರದಿಂದೆ ಬೇಂಟೆವಱೆಯುಬ್ಬರ ಮುಬ್ಬರಮಾಯ್ತರಣ್ಯದೊಳ್ (ಸೂಕ್ತಿಸು. ೩–೧೧೬).

[ಕಡ್$_5$ + ಪುಲ್]

**ಕಡವೆ$_1$** 'ಕಡಂಬ' ನೋ.

**ಕಡವೆ$_2$,** ಕಡ್$_3$, ಕಡಬ$_1$, ಕಡಬೆ$_1$, ಕಡವ$_2$, ಕಡವು$_1$, ಕಡಹ$_3$ (ನಾ). ೧. ಜಿಂಕೆಯ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ; ದೊಡ್ಡ ಜಿಂಕೆ; ಸಾರಂಗ: ಕಡವೆ ತುಱಿದು ಕದಡಿದೆಡೆಯೊಳಿಲೆ ಕಱಳ್ದು ಕೆಡೆದ ತೋರಗೊಂಬುಗಳಂ ಪೆರ್ವಾವೆಂದು ಪೊರ್ದಲಂಜಿ (ಕಬ್ಬಿಕಾ. ೨೩೪); ಎಕ್ಕಲನ ಕೊಟಾರಂ ಕರಡಿಯ ಹಟ್ಟಿ ಕಡವೆಯೂರ್ ಚಮರಿಯ ಹುರಂ (ಜಯಕಾ. ೧೫–೨೩); ಕಡವೆ ಕಾಡೆಮ್ಮೆ ಶರಭ ಶಾರ್ದೂಲಗಳೊಡನೊಪ್ಪುತಿಹ ಹರಿಣಗಳು (ಕಂನವಿ. ೨–೩೩); ಬೇಟೆಯಲ್ಲಿ ದೊಡ್ಡ ಕಡವೆಯೊಂದನ್ನು ಕೊಂದು (ಕಾನೂರು. ೧೪೪). **ಕಡ್$_3$:** ೧. ಕಾಡಿನಲ್ಲಿ ತಿರುಗುವ ಮಿಗ, ಹಂದಿ, ಕಡ, ಕಾಡುಕುರಿ ಮೊದಲಾದ ಪ್ರಾಣಿಗಳಿಗಾಗಿ ಕಂಡಿ ಕಾಯುತ್ತಿತ್ತೆಂದೂ ಪ್ರತೀತಿ (ಮಲೆಮ. ೭೫). **ಕಡಬ$_1$:** ೧. "ಕಮಲಃ . . . ಕಡಬ, ತಾವರೆ, ನೀರು" (ಸಿದ್ಧಾಂತಿ. ೩೬೨). **ಕಡಬೆ$_1$:** ೧. ಪಾಂಡವರ ಎತ್ತು ಹೋಗಿ ಕಾಡ ಮೊಲವಾದೊ . . . ಪಾಂಡವರ ಎಮ್ಮೆ ಹೋಗಿ ಕಾಡ ಕಡಬ್ಯಾದೊ (ಹಳ್ಳಿಬಾ. ೮೩). **ಕಡವ$_2$:** ೧. "ಗಂಡವೃತವೆನಲಾ ಕಡವ[ಪಾಠಾಂ. ಕಡುವ]ನಕ್ಕುಂ" (ಮಂಗರಾ. ೪೮–೮). ೨. ಗಂಡುಕುದುರೆ: ಪೆಂಟೆಗಳಂ ದಾಂಟೆ ಕೆಡಪುತ್ತುಂ ಕಡವಂಗಳಂ ಕರ್ಚಿ ಕೆಡಪುತ್ತುಂ ತಾನೆ ತನ್ನ ಬೀರಕ್ಕೆಱ್ಱಿ ಱಳಿದ ಕಱ್ತಿಯಂತೆ (ಅರ್ಧನೇ. ೭–೯೧ವ); ತಂದೆ ತಾಯಿಗಳಾದ ಗೋಳಿಗೆ ಕಡವಗಳು ವಾತದಿಂದ ಕೂಡಿರಲು ಅವಱಿಂದ ಹುಟ್ಟಿದ ಮಱಿಯು ವಾತರೋಗವನುಳ್ಳುದಹುದು (ಅಶ್ವಟೀ. ೪೪–೨). **ಕಡವು$_1$:** ೧. "ಕಡವು ವಿಪಿನಾಶ್ವಮಕ್ಕು" (ಮಂಗರಾ. ೪೮–೮); ತಡಂಮೆಟ್ಟಿ ಪರಿವ ಕಡವಿನ ಕಾಡೆಮ್ಮೆಯ ಮರೆಯ ಪಿಂಡುಗಳುಮಂ (ಪಂಪಭಾ. ೫–೪೮ವ). ೨. ಮುಳಿವ ಘೋಳಿಗೆಯಿರ್ದ ಶಾವಿಂ ತಳರದಿ ಪಾರ್ಕಡವುಗಳ ಬಿಡದಳಲಿಸುವ ಸೂಕಳತೆಯಂ ಕೈಕೊಂಡುದಾ ತುರಗಂ (ಕುಮುರಾ. ೩–೬೦). **ಕಡಹ$_3$:** ೧. ದೊಡ್ಡ ಹೊಟ್ಟೆಯ ಕಪ್ಪಾದ ಮುಂಗಾಲುಗಳುಳ್ಳ ಕಡಹ (ಸಿದ್ಧಾಂತಿ. ೧೩೭).

[ದೇ. ‖ ತಮಿ. ಕಡಮೈ, ಕಡವ್ಟೈ; ಮಲ. ಕಡಮಾನ್; ತುಳು. ಕಡಮು; ಕೊಡ. ಕಡಮೇ; ತೆಲು. ಕಡತಿ, ಕಣತಿ, ಕಡಜು, ಕಡಿತಿ, ಕಣಾಜು, ಕಣೆತಿ, ಕಣುಜು; ಕೋಲಾ. ನಾಯ್ಕಿ. ಕಡಸ್; ಕುರುಖ್. ಕಾಡ್ಸಾ]

**ಕಡವೆಗುಂಡಿ** (ನಾ). ಒಂದು ಊರಿನ ಹೆಸರು : ಕಡವೆಗುಂಡಿ ಎ(ಯ) ಉತ್ತರಂ ನೋಡಿ (ಇಆ. VIII, ೨೧೩–೩೧ ; 10ನೆಯ ಶತ). [ಕಡವೆ ? + ಗುಂಡಿ ?]

**ಕಡಸಿಗೆ** (ನಾ). ಒಂದು ಜಾತಿಯ ಗಿಡ: "ಶೃಂಗಿ ಕಡಸಿ[ಪಾಠಾಂ. ಸೀ]ಗೆ" (ಮಂಗರಾ. ೪೫–೪೮) ; ಕಡಸಿಗೆಯ ಬೇರ್ ಮರುಂಗುಳಿ ಯೊಗ್ಗಲಿಸಿರೆ (ಕಲ್ಯಾಕ. ೪–೨೨) ; ಕಡಸಿಗೆ ಕಾಗೆದೊಂಡೆ ಕಹಿದೊಂಡೆ ಕವುಂಗಿನ ಹಾಲೆಯೇಲೆ (ಸೂಕ್ತಿಸು. ೩–೨೬) ; ಕಡಸಿಗೆಯೆಸರಂ ಮೆಣಸಂ ಕುಡುವುದು (ಖಮುದ. ೨–೮೫) ; ಕಬ್ಬಿನ ಬನದಿ ಕಡಸಿಗೆ ಚೂತಮಯ ಕಾನನದಿ ಬೊಬ್ಬುಲಿ ಭೀಮಸೇನನಯುರವು ತಮ್ಮೊಳಗೆ (ಕುವ್ಯಾ ಆ. ೮–೫). [?]

**ಕಡಸು$_1$**, ಕಣಸು$_3$ (ನಾ). ೧. ಇನ್ನೂ ಕರುಹಾಕದೆ ಇರುವ ಹಸು ಅಥವಾ ಎಮ್ಮೆ; ಮಣಕ; ಪಡ್ಡೆ : ಕಡಸಂ ಪೆರ್ಭುಲಿ ಕೊಳ್ದೋಡೆ ಆ ಪುಲಿಯಂ ಕೊಲ್ವೆನೆನ್ನು ಪ್ರತಿಜ್ಞೆ ಕಡಿದು (ಎಕ. X, ಮುಳಬಾ. ೧೬೨–೨ ; ಸು. 950) ; ಮಂದೆಯಲ್ಲಿ ಕಱು ಕಡಸು ಎತ್ತು ಹಸುವಿನಲ್ಲಿ ಚಿತ್ರವರ್ಣವ ನಱಿಯಬೇಕು (ತುಱುಗಾ. ೧೧) ; ಹುಡುಗಿಯು ಸತ್ತಿದ್ದರೆ ಕಡಸನ್ನೂ ಹುಡುಗನು ಸತ್ತಿದ್ದರೆ ಹೋರಿಯನ್ನೂ ಮಾಸಲಾಗಿ ಹರಿಕೆ ಕಟ್ಟಿಬಿಡು ತ್ತಿದ್ದಳು (ಹುಟ್ಟಿಹ. ೧೨) ; "... ಭಾಗೀರಥಿಯ ಕಡಸು ಕರು ನಿನಗೆ ಕೊಡಬೇಕೆಂದೇ ಸಾಕಿದ್ದೇನೆ" (ಬಾಳಿಗಿ. ೨೯). **ಕಣಸು$_3$** : ೨. ಮರಿ ; ಶಾಬ : ಪಕ್ಕೆಯೊಳೆ ಪಟ್ಟು ಕಣಸಂ ಲಲ್ಲೆಗೆಯ್ದು ಪರಿವ ಕಾಬ್ಬುರದ ಕಳಕಳಮನಾಲಿಸುತಿರೆ ... ನೋಟ್ಟು ಹರಿಣಸಂದೋಹದಿಂದೆಯುಂ (ರಾಮಾಶ್ವ. ೩–೨೬).

[ದೇ. ‖ ತಮಿ. ಕಡಾರಿ, ಕಿಡಾರಿ ; ಮಲ. ಕಡಚ್ಚಿ; ತುಳು. ಗಡಸ್, ಗಡಸು ; ಕೊಡ. ಕಡೀಚಿ]

**ಕಡಸು$_2$** (ನಾ). ಒಂದು ಜಾತಿಯ ಮರ, —ಹಣ್ಣು : ಬಿಕ್ಕೆ ನೇಮಿ ಹೆಗ್ಗಳಪಿ ಕಡಸು ಕಾರೆ ಬೋರೆ ಗುಳವತ್ತಿ ... ಮುಂತಾದ ಪಣ್ಗಳ ತಂದರಾಳ್ದನ ಬಳಿಗೆ (ಮೋಹತ. ೧೯–೫೬) ; ಗಗನವ ಬಿಡದಲೆವ ಹಿಂತಾಲ ತಾಲವು ಕಡಸು ತೇಗರುಟಾಳ ಭೂಜವ್ರಜ ವಿರಾಜಿತವು (ಕೋಗಯ. ೪–೩೫). [?]

**ಕಡಹ$_1$** 'ಕಡಂಬ' ನೋ.

**ಕಡಹ$_2$** 'ಕಡೆಪ' ನೋ.

**ಕಡಹ$_3$** 'ಕಡವ$_2$' ನೋ.

**ಕಡಹ$_4$** 'ಕಡಹು$_2$' ನೋ.

**ಕಡಹರ** (ನಾ). ಒಂದು ಬಗೆಯ ಸುಣ್ಣ (?) : ಕಡಹರದ ಸುಣ್ಣವ ನಿತುಮಂ (ಎಇ. XII, ೩೩೨–೧೩ ; 1110). [?]

**ಕಡಹಾಲೆಬಳ್ಳಿ** (ನಾ). ಒಂದು ಜಾತಿಯ ಬಳ್ಳಿ : ಕಡಹಾಲೆಬಳ್ಳಿ, ದುಗ್ಧಿಕಾ (ಮೈಔಗಿ. ೫೨–೧೦೫೧). [ಕಡಹಾಲೆ$_0$ + ಬಳ್ಳಿ]

**ಕಡಹು$_1$** (ಕ್ರಿ). ಕಳಚು; ಬಿಡು(?): ಕಟ್ಟಿದ ಹಸುವ ಬಿಟ್ಟು ಕೊಡಿದ ಎತ್ತ ಕಡಹಿ ನಾಳೆ ಕೆದಡಿ ಎಂದು ಹೊಡೆವುತ್ತಿದೇನೆ (ತುಱುಗಾ. ೪೪). [?]

**ಕಡಹು$_2$**, ಕಡ$_2$, ಕಡಗು$_3$, ಕಡವು$_3$, ಕಡಹ$_4$, ಕಡುವು$_1$ (ನಾ). ೧. ಹೊಳೆಯನ್ನು ದಾಟುವ ಸ್ಥಳ; ಹಾಯ್ಗಡ : ಹಲವು ಕಡಹಿನಲ್ಲಿ ತೆಪ್ಪವನಿಕ್ಕಿದಡೆ ಹೊಳೆ ಒಂದೆ (ಮನುಗುಂ. ೬೭) ; ಕಾಲು ಕಡಹು ಆರಿಗೂ ಆಗದು ಎಲ್ಲಾ ಠಾವಿನಲ್ಲಿ ಮಡು ಮಯವಾಯಿತ್ತು (ಗುಪ್ತಮಂ. ೬೨) ; ಈಶಾನ್ಯದ ಮೇಗಡ ಹಳ್ಳಿಯ ದರುಗಡಹಿನ ನಡುಹೊಳೆಗಾಗಿ (ಎಕ. III, ತಿರುಮ. ೬೩–೩೬೨ ; 1748) ; ನದಿಗಳನ್ನು ತೆಪ್ಪಗಳಲ್ಲಿ ದಾಟುವ ಸ್ಥಳವನ್ನು 'ಕಡಹು' (ಈಗಿನ 'ಕಡ') ಎಂದು ಕರೆಯುತ್ತಾರೆ (ಕಶಾಅ. ೩೬೭ ಅಡಿಟ).

**ಕಡ$_2$** : ೧. ಸರಹದ್ದಿನ ಮುಳ್ಳು ಸೋಗೆ ಕಡ ದಾಟಿಸಿಬಿಟ್ಟು (ರಾಜೇಂದ್ರ. ೩೪). ೨. ಸ್ನಾನಪಾನಾದಿಗಳಿಗೆ ಜನರು ಉಪಯೋಗಿಸಿಕೊಳ್ಳುವ ಜಲಾಶಯದ ದಂಡೆ, —ಘಟ್ಟ : ನಮ್ಮೂರಿನ ನದಿಯಲ್ಲಿ ಒಕ್ಕಲಿಗರ ಕಡವು ಬ್ರಾಹ್ಮಣರ ಕಡಕ್ಕಿಂತ ಸ್ವಲ್ಪ ಮೇಲಿದೆ (ಗರುಡಾ. ೪೭). **ಕಡಗು$_3$** : ೧. ಶುಕ್ರವಾರದ ಪ್ಯಾಟಿ ಕಡಗಿನಲ್ಲಿ ನದೀ ದಾಟ ಹೋದರು (ಹೈದರ. ೧೧೪). **ಕಡವು$_3$** : ೧. 'ಗುರುವೆ! ಕಡವು ನೀನಾಗಿರಲು ಕಡವಿಗೈದುವುದೇಕೆ ? ಕಡವು ನಿನ್ನೊಳಗಿರಲು ಕಡವಿನ್ನು ಹೊರಗುಂಟೇ ? ...' (ಕಗದ್ಯ. II, ೬೯) ; ಮೆಲ್ಲನಿಳಿದೆ ಕಡವಿನ ಕೇರಿಗೆ (ಗಿಳಿವಿಂ. ೫೪–೧೨) ; ಅದು ನದಿಯನ್ನು ದಾಟುವ ಜಾಗ– ಕಡವು (ಚಿರಸ್ಮ. ೧೨). **ಕಡಹ$_4$** : ೧. ವೈಜೇಶ್ವರದ ಕಡಹ (ಎಕ. VI, ಕಡೂರು. ೧೫೭–೬೪ ; 1191). **ಕಡುವು$_1$** : ೧. ಸೆಜೆ ತುಱು ಸಹಿತ ಸೋಸಲೆಯ ಕಡುವ ದಾಟ (ಕಂನವಿ. ೩–೫೭) ; ಆ ನದಿಯು ವರ್ಷಾಕಾಲದಲ್ಲಿ ಎಲ್ಲಿ ನೋಡಿದರೂ ಇಳಿಯುವುದಕ್ಕೆ ಕಡುವಿಲ್ಲದೇ ಇರತಕ್ಕದ್ದಾಗಿಯೂ (ಕೃವಾಲು. ೨೮೭). ೨. ದೇವಸ್ಥಾನದ ಮುಂದೆ ಒಂದು ಸ್ನಾನದ ಕಡುವುವನ್ನು ಮಾಡಿ ಕಲ್ಲುಚಪ್ಪಡಿಗಳನ್ನು ಹಾಸಿದ್ದಾರೆ (ಶಿವರಾ. ೯೪) ; ಹೆಂಗಸರ ಕಡುವಿನಲ್ಲಿ ಅವರದೇ ರಾಜ್ಯ (ಗರುಡಾ. ೪೬).

[< ಕಡೆ$_2$ + -ಪು ?. / ತುಳು. ಕಡಪು, ಕಡವು]

**ಕಡಹು$_3$** (ನಾ). ಬತ್ತದ ಗದ್ದೆಯಲ್ಲಿ ವಿಂಗಡಿಸಿದ ಮಡಿ, —ಕಡ, —ಕಟ್ಟೆ : ಮುಂಧಿನ ಗದ್ದೆಯ ತೆಂಕಣದೆಸೆಯ ಕಡಹ ದಾರೆಯನೆಱದು (ಎಕ. VI, ಕಡೂರು. ೧೫೫–೨೨ ; 1092) ; ಇಳ್ದುಬಿಟ್ಟ ಕೊಡಂಗೆ ಗಳ್ದೆ ಕಡಹು ಮೂಱು ಸಲಗೆ ನಾಲ್ಕು (ಎಕ. III, ಶ್ರೀರಂಗ. ೧೧೯–೧೨ ; 1108) ; ಕೆಂಗಾಡುವಾಟನ ಕೆಱೆಯಲ್ಲಿ ಗದ್ದೆ ಮುತ್ತದ ಕಡಹು ಕಂಬ ೫೦ (ಸೌಇಇ. IX–i, ೧೬೪–೩೯ ; 1154) ; ಕೊನಿಗಾರ ಗದ್ದೆಯೊಳಗೆ ದಡಿಗ ಮೂಡೆ ೨ ಕಲ್ಲಳ್ಳನ ಕಡಹು ಮೂಡೆ ೧ (ಎಇ. XXVII, ೨೮–೪೬ ; 1256) ; ಭಣಗಿಲ ಬಯಲಲು ಕಡಹು ೧ (ಮೈಆರಿ. ೧೯೪೧, ೧೧–೨೨ ; 1398). [?]

**ಕಡಹುರ** (ನಾ). ಒಬ್ಬಾತನ ಹೆಸರು : ಕಮುಣ್ಣಜೆಯ ಕಡಹುರ ಭಟಾರ ಶಿಷ್ಯರುತ್ತನಿನ್ನಿ ಪುರಿಮಣ್ಣಲ ಭಟಾರರ (ಎಕ. X, ಕೋಲಾರ. ೯೦–೮೩ ; 903). [?]

**ಕಡಾಖಡಿ** 'ಖಡಾಖಡಿ$_1$' ನೋ.

**ಕಡಾಣಿ** (ನಾ). ೧. ಗಾಡಿಯ ಚಕ್ರಗಳು ಬೀಳದಂತೆ ಅಚ್ಚಿನ ಕೊನೆಗೆ ಸೇರಿಸುವ ಕಬ್ಬಿಣದ ಆಣಿ, —ಕೀಲು : ಒಂದೊಂದೂ ರಥದ, ಅಣಿ, ಅರಿಗೀಲು, ಕಡಾಣಿಯಿಂದ ಹಿಡಿದು ಮುಂಕಣಿಯವರೆಗೆ ಅಂಗಅಂಗ ಗಳನ್ನು ನೋಡುವನು (ಸವತಿ. ೪೮). ೨. ಕುದುರೆಯ ಬಾಯಿಗೆ ಹಾಕುವ ಕಡಿವಾಣ : ಬಾಯಿ ಹಗ್ಗ, ಬಾಯಿ ಚಿಕ್ಕ ಲಗಾಂ, ಬಾಯ ಕಡಾಣಿ, ಕುಣಿಕೆ(ಸಿದ್ಧಾಂತಿ. ೨೧೬). ೩. (?): ಇದಿರು ನಿಲಿಸಲ್ ಕಡಾಣಿಗೆ ಎದೆಯಲಲ್ಲಾಡಿಸಿದಡೆ ತಿರುಗಿಸುವದಕ್ಕಂ ಅದೆ ಕೈಯತ್ತಲು ಗಿಲುಗಿಸಿ ದಂದದೆ ಪಿಡಿಯೆ ಭವಿಷ್ಯದರ್ಥಕಹುದಾಲಸ್ಯಂ (ತತ್ತ್ವಾನಿ. ೪೬).

[ಕಡೆ$_3$ + ಆಣಿ$_3$]

**ಕಡಾನಿ** (ನಾ). ಒಂದು ಬಗೆಯ ಔಷಧಿ ಸಸ್ಯ : ಕಡವಳ, ಕಡಗದ, ಕಡಾನಿ, ಕೊಂಗು (ಮೈಔಗಿ. ೫೪–೧೦೮೫). [?]

**ಕಡಾಯ$_1$** 'ಕಡ್ಡಾಯ' ನೋ.

**ಕಡಾಯ$_2$**, ಕಡಾಯಿ (ನಾ). ಅಗಲವಾದ, ದುಂಡಗಿರುವ ಪಾತ್ರೆ; ಕೊಪ್ಪರಿಗೆ : ಕಬ್ಬಿನ ಹಾಲು ತೆಗೆದುಕೊಂಡು ಕಡಾಯದಲ್ಲಿ ಹಾಕಿ ಕುದಿಸುವಲ್ಲಿ (ಕೃಷಿಪ್ರ. ೧೮೬) ; ಒಂದು ಕಡಾಯ ನೀರು ಕಾಸಿ ಒಂದು ಮಣ ಸೀಗೆಯ ಅರದು (ನಾಪದ. ೧೫೨).

**ಕಡಾಯಿ** : ". . . ಈ ಕಡಾಯಿಯನ್ನು ನೋಡಿ ನಿನ್ನ ಹಣೇಬರಹವನ್ನು ನೆನೆದುಕೋ !" (ಮೇದಿಮು. ೧೫೫); ಅದನ್ನು . . . ಕಡಾಯಿಯೊಳಗೆ ಅದ್ದಿ ತೆಗೆಯುತ್ತಾರೆ (ಬಾಲಪ್ರ. III, 1249); ಬೀರಕ್ಕನು ಮತ್ತೊಂದು ಕಡಾಯಿನ ನೀರನ್ನು ಕಾಲಿನ ಮೇಲೆ ಸುರಿದುಕೊಂಡು ಕಡಾಯಿಯನ್ನು ಬರಿದು ಮಾಡಿದಳು (ನೀತಿಚಂ. IX, ೩೧). 'ಕಡಾರ₄' ಪರಾ.

[?. / ಹಿಂ. ಕಢಾಈ, ಕಡಾಹೀ, ಕಢೈಯಾ ; ಮರಾ. ಕಢಈ. / ಪ್ರಾ. ಕಡಾಹ (< ಸಂ. ಕಟಾಹ)]

**ಕಡಾಯಿ** 'ಕಡಾಯ್₂' ನೋ.

**ಕಡಾಯಿಸು₁** (ಕ್ರಿ). ಬಲವಾಗಿ ಕಚ್ಚಿಸು, —ಹೊಡೆ; ಬಂದೂಕಿಗೆ ಮದ್ದು ಜಡಿಯುವಂತೆ ಜಡಿ; ಮೊಳೆಯಂತೆ ಜಡಿದು ಕೂಡಿಸು; ಭದ್ರಪಡಿಸು (ಶ).

[ಕಡಾಯ ? + -ಇಸು₃. P ತಮಿ. ಕಡಾಜು, ಕಡಾವು]

**ಕಡಾಯಿಸು₂** (ಕ್ರಿ). ದೊಡ್ಡ ಸದ್ದುಮಾಡು; "ಸಪ್ಪಳಮಾಡು" (ಗಂಗಾಮು. ೩೭).

[ಕಡಾಯ್ ? + -ಇಸು₃. / ಮರಾ. ಕಡಕಾವಣೇ]

**ಕಡಾರ₁** (ನಾ). ಒಂದು ನಾಡಿನ ಹೆಸರು : ಗಂಗೆಯು ಕಡಾರಮು ಪೂರ್ಬ್ಬದೇಸಮು ಕೊಣ್ಡೊಯಾ (ಎಕ. IX(s), ಹೊಸಕೋ. ೧೪೧–೨ ; 1028); ಶ್ರೀ ಗಂಗೆಯುಂ ಕಡಾರಮುಂ ಪೂರ್ವ್ವದೇಸಮುಂ ಕೊಣ್ಡ ಉಡಯಾರ್ ಶ್ರೀ ರಾಜೇನ್ದ್ರಚೋಳದೇವಗ್ಗೆ (ಎಕ. X, ಕೋಲಾರ. ೧೪–೧ ; 1035); ಸಮಂತೆಸವಶೋಕ-ಕಡಾರ ವಿಶಾಲಸಿಂಹಳಾದ್ಯಂತರದೇಶಮಂ ತಗುಳ್ದು ಪೊಕ್ಕು (ನೇಮಿಪು. ೩–೭೦). P ಈಗಿನ ಬರ್ಮಾ ಅಥವಾ ಸುಮಾತ್ರ ದೇಶ.

[?. / ತಮಿ. ಕಡಾರ = ಬರ್ಮಾ ಅಥವಾ ಸುಮಾತ್ರ ದೇಶ]

**ಕಡಾರ₂** 'ಕಡವರ' ನೋ.

**ಕಡಾರ₃** 'ಕಟಾರ₂' ನೋ.

**ಕಡಾರ₄**, ಕಟಾರ₁, ಕಢಾರ (ನಾ). ಕೊಪ್ಪರಿಗೆ; ಹಂಡೆ : ತನ್ನ ಮನೆಯ ಕಡಾರದ ಪೊನ್ನಂ ತಂದು ಮುಂದಿಱಿಪುವುದುಂ (ಸುಕುಮಾ. ೭–೨೮ ವ); ಬಿಡದೆ ಕಡಾರದ ಪೊನ್ನಂ ಕಡುಲೋಭಂ ಕಂಡು ಮೋಹದಿಂದಾ ಪೊನ್ನಂ ತಡೆಯದೆ ನೋಡುತಿರ್ಪ ಪೋಲ್ (ಧರ್ಮಾಮೃ. ೭–೨೪); ಪೊಂದಗಡಿನ ಕಡಾರಮಂ ಕಾದಿರ್ಪಂತೆ ಕಂಪಂ ಪೀರ್ದು . . . ಪೊಜಮಡುವ ಮಱಿದುಂಬಿಗಳಿಂ (ಲೀಲಾವ. ೭–೭೬); ತಣ್ಣೆಲ ತಾಣಮಂ ಕಂಪಿನ ಕಡಾರಮುಂ (ಕುಸುಮಾ. ೯–೮ ವ). **ಕಟಾರ₁** : (ಕರಾ) ಕಟಾರದಲ್ಲಿ ಅನ್ನ ಬೇಯಿಸುತ್ತಿದ್ದಾರೆ (ರೂಢಿ). **ಕಢಾರ** : ಕಾಲಿಲ್ಲದ ಅಥವ ಕಢಾ[ಪಾಠಾಂ. ಠ]ರವ ಹಿಡಿದು ಮೂಜುಗಾವುದವ ತಿರುಗಿ ಬಂದ (ಕೋಲಶಾಂ. ೩೪); ಸಱಿಮಿಂಡಿ ಪಿಡಿದಿರ್ದ ಪಳುಕಿನ ಕಢಾರವಾ ನೆಱಿವೆಱಿಯ ಪೋಲ್ತು ಮುಖಕಾಂತಿಗೊಸರಿರ್ದೊಡೆದ ತೆಜದೊಳಿರಲ್ (ಚೀರಮ. ೨–೧೮).

[?. / ತಮಿ. ಕಡಾರ, ಕಿಡಾರ; ಮಲ. ಕಿಡಾರ. / ಸಂ. ಕಟಾಹ]

**ಕಡಾರ₅** (ನಾ). ನಸುಗೆಂಪು ಬಣ್ಣ : "ಹರಿಃ, ಕದ್ರುಃ, ಕಡಾರಃ, ಪಿಂಗಳಃ — ಈ ೪ ನಸುಗೆಂಪು" (ಹಲಾಯು. ೧೨೧–೫೦); "ಪಿಂಗಳಂ ಕದ್ರು ಕಡಾರ ಚಂಡಸೀಮ ನಸುಗೆಂಪು ಪಿಂಗಂ ಪಿಶಂಗಂ ಕಪಿಲು ಶ್ಯಾಮಮೆನೆ ಹಸುರುಗೆಂಪು" (ಮಂಗರಾ. ೧೩೧–೨೧); ನೀಲದ ಕಡಾರದ ಕಾಲಿಮ ಕಾಂತಿಯಿಂ ಮಲಯರುಹಜಲಮಿಳಿತ ಮೃಗಮದಾಭ್ಯಂಗನಮನಂಗೀಕರಿಸುವಂತೆಯುಂ (ಅನಂಪು. ೫–೭೧ ವ). [ಸಂ.]

**ಕಡಾರಂಬಡೆ** (ಕ್ರಿ). ನಿಧಿಯನ್ನು ಪಡೆ; ಐಶ್ವರ್ಯವನ್ನು ಹೊಂದು : ಕಡಾರಂಬಡೆದ ಬಡವರಂತೆ ನಲವು ನೆಲೆವೆರ್ಚೆ (ಶಾಂತೀಶ್ವ. ೧೪–೪೨ ವ).

[ಕಡಾರ₂ (< ಕಡವರ) + ಪಡೆ₁]

**ಕಡಾಲ** 'ಕಡವಲ್' ನೋ.

**ಕಡಾವಿಗೆ**, ಖಡಾವಿಗೆ (ನಾ). ಮರದಿಂದ ಮಾಡಿದ ಪಾದರಕ್ಷೆ; ಮರವಾವುಗೆ : ಕಡಾವಿಗೆಗಳನ್ನು ಮೆಟ್ಟಿಕೊಂಡು ಪಡದಪ್ಪನವರು ಲಿಂಗಪ್ಪನನ್ನು ಜೊತೆ ಮಾಡಿಕೊಂಡು, ಚಾವಡಿಗೆ ನಡೆದರು (ಗ್ರಾಮಾಯ. ೪೭೮). **ಖಡಾವಿಗೆ** : ತನ್ನ ತೀರಿದ ಗಂಡನ ಖಡಾವಿಗೆಗಳನ್ನು ಹಿಡಿದು . . . ಅಣಿಮಾಡಿದಳು (ಜವಿಾನ್ದಾ. ೩೮). [ಕಡಾವು + -ಗೆ₁]

**ಕಡಾವು** (ನಾ). = ಕಡಾವಿಗೆ (ಶ).

[← ಹಿಂ. ಖಡಾಊ ; ಮರಾ. ಖಡವಾ, ಖಡಾವಾ]

**ಕಡಾಶೆ** (ನಾ). ಅತಿ ಆಸೆ; ಕಟ್ಟಾಸೆ(?) : ಅತಿ ಆಶೆ ಪಟ್ಟರೆ ಕಡಾಶೆ ಕಣ್ಣು ಕೊಂಡು ಹೋಗುವುದು ಎಂಬ ಸಾಮತಿಯು ಹಾಗೆ ಮೊದಲಿಗೇ ಮೋಸ ಬರುವುದು (ಕಥಾಮಂ. IV, ೬೯). [< ಕಡಿದು + ಆಶೆ]

**ಕಡಾಸ₁** (ನಾ). (ಕರಾ) ಒಂದು ಜಾತಿಯ ಮೀನು. [?]

**ಕಡಾಸ₂** 'ಕಡವಸ' ನೋ.

**ಕಡಾಸು** 'ಕಡವಸ' ನೋ.

**ಕಡಾಹ** (ನಾ). = ಕಡಾಯ್₂ : ತದ್ಗಿರಿತಟದೊಳ್ ಮುನ್ನೆ ಪೂಟ್ಟು ಪೊನ್ನ ಕಡಾಹಂ[ಪಾಠಾಂ. ರಂ]ಗಳಂ ತೋಱಿ ಚೋದ್ಯಂಬಟ್ಟು (ಚಾವುಂಪು. ೩೩–೩). [ಪ್ರಾ. ಕಡಾಹ (< ಸಂ. ಕಟಾಹ)]

**ಕಡಿ₁** (ಕ್ರಿ). ೧. ಕಚ್ಚು; ಕುಕ್ಕು; ಕುಟುಕು : "ದಂತದಿಂ ಕಡಿವಲ್ಲಿ ತೋಳಿವಲ್ಲಿಯಂಬಿಲದೊಳಂ ಕರ್ಚು" (ಶಬ್ದಮಂ. ೮೭); ಒಡಲಂ ಮಿಡುಕುವಿನಂ ಕಡಿವ ಕಟ್ಟಿಱುಂಪೆಗಳುಂ (ಆದಿಪು. ೫–೧೩); ಭೀಮಸೇನಂ ಕಿಡಿಕಿಡಿವೋಗಿ ಮಿಾಸೆಯಂ ಕಡಿದು (ಗದಾಯು. ೬–೧೭ ವ); ಇಲಿಗಂ ಮರಕುಟವಕ್ಕಿಗಮುಲಸದೆ ಕರ್ದುಕುತ್ತೆ ಕಡಿಯುತಿರ್ಪುದೆ ಸಹಜಂ (ಧರ್ಮಾಮೃ. ೧–೪೬); ಹಿಡಿದ ಮೇಲಳಿಮನಸಾದರೆ ವ್ರತ ತಾನೆ ಕಡಿವುದು ಫಣಿಯಂತೆ ತನ್ನಾ (ಭರಚ. ೧೭–೧೫). ೨. ನವೆಯಾಗು; ತುರಿಕೆಯಾಗು : ನಸುಗುನ್ನೆ ತಾಗಿದ್ದರಿಂದ ಅವನಿಗೆ ಮೈಯೆಲ್ಲಾ ಕಡಿಯತೊಡಗಿತು (ರೂಢಿ).

[ದೇ. ॥ ತಮಿ. ಮಲ. ಕಡಿ; ತುಳು. ಕಡೆ; ಕೊಡ. ಕಡಿ; ಕುರುಖ್. ಕಟ್ನಾ]

**ಕಡಿ₂** (ಕ್ರಿ). ೧. ಕತ್ತರಿಸು; ಸೀಳು; ತುಂಡರಿಸು; ತರಿದುಹಾಕು : "ಕಡಿ – ಖಂಡನೇ, ಶಕಲೇ ಚ (ತುಂಡು)" (ಶಮಧಾ); ಘೋಟಿಯಿಲರ್ ತಗುಳ್ದು ತತ್ತಜ ತಱಿದಿಕ್ಕಿ ದೇಗುಲಕೆ ಪೆರ್ಮರನಂ ಕಡಿವಂತೆ ಮಾಡಿದರ್ (ಪಂಪಭಾ. ೮–೯೫); ಕತ್ತಿಗೆಯಂ ಕೊಂಡು ಕಪಾಲವಂ ಕಡಿವ ಕಾಳರಕ್ಕಸಿಯರುಮಂ (ಗದಾಯು. ೫–೩ ವ); ಚಂದನವ ಕಡಿದು ಕೊಱಿದು ತೇದಡೆ ನೊಂದೆನೆಂದು ಕಂಪ ಬಿಟ್ಟಿತ್ತೆ (ಮಹಾದೇ. ಕ. ೪೯–೧೨೭); ಅಲಿಕಲುಗಳ ಕಡಿವಡುಕ್ಕಿನ ಚೀಲಣದ ಹಂಗೇಕೆ (ಕುಮಾಡ್ರೊ. ೧೦–೩೧). ೨. ಅಗೆ; ತೋಡು : ಮನೆಗೆ ಬೆಂಕಿ ಹತ್ತಿದಾಗ ಬಾವೀ ಕಡಿಯಲಿಕ್ಕೆ ಹೋದರು (ಮುಂಬಯಿ. ೫–೧೫); ಅದು ಕಡಿದ ಕಾಲುವೆಯಲ್ಲ; ಹರಿದ ಹೆದ್ದೊರೆ (ನಾಡೋಜ. ೭). ೩. ತುಂಡಾಗು; ನುಚ್ಚಾಗು : ಒಂದೇ ಭಾಗಕ್ಕೆ ಒನಕೆಯ ಪೆಟ್ಟು ಬಿದ್ದುದರಿಂದ ಅಕ್ಕಿ ಕಡಿಯುವುದು(ಹೋಳಾಗುವುದು) (ಸಂಶೋಧ. ೧೪೯). ೪. (ಆಲಂ) ಮಾಡು; ಸಾಧಿಸು : ಕಡಸಂ ಪೆರ್ಬುಲಿ ಕೊಣ್ಡೋಡೆ ಆ ಪುಲಿಯಂ ಕೊಲ್ವೆನೆನ್ದು ಪ್ರತಿಜ್ಞೆ ಕಡಿದು (ಎಕ. X, ಮುಳಬಾ. ೧೬೨–೩ ; ಸು. 950); ನೀನು ಏನು ಕಡೀತೀಯೋ ನೋಡುತ್ತೇನೆ (ರೂಢಿ).

ಕಡಿದಾಟ = ಹೊಡೆದಾಟ; ಜಗಳ: ಮನೆಗೆ ಬಂಡ ಮೇಲಾದರೂ ಹಾಯಾಗಿ ಸುಮ್ಮನೆ ಕುಳಿತುಕೊಳ್ಳೋಣವೆಂದರೆ – ಇವರ ಕಡಿದಾಟ (ಕಮನೆ. ೪೪). **ಕಡಿದಾಡು** = ೧. ಕತ್ತರಿಸು; ಒಂದನ್ನೊಂದು ಛೇದಿಸು: ಕಡಿದಾಡುತಿರ್ದವುದ್ದಂಡ ವೀರರ ಕೆಯ್ಯೊಳೆಸೆವ ತಂಡತಂಡದ ಖಡ್ಗಧಾರೆಯು ಕೆಂಗಿಡಿ ಕೆಂಡದ ಮಳೆಯಾದುದಿಳೆಗೆ (ಮೋಹತ. ೧೨-೬೪); ಕಡಿದಾಡಿದರ್ ಕತ್ತಿ ಕೈದುವಿಂ ಗದೆಗಳಿಂ ಬಡಿದಾಡಿದರ್ (ಚಿಬಪು. ೨೯-೬). ೨. (ಆಲಂ) ಜಗಳವಾಡು; ಹೋರಾಡು: ಗೋಮಿನೀ ವರನೊಳು ಕಡಿದಾಡಿ ಕೈಲಾಸಭೂಮಿಗೆ ತಾ ಬಪ್ಪನೆಂದ (ಮೋಹತ. ೩೫-೬೪); ಕಡಿದಾಡಿದರೆ ಫಲವೇನು ತಾರ್ಕಿಕ ಶಾಸ್ತ್ರಯುಕ್ತಿಯಲಿ (ಗಗತಾ. ೧೨-೮೬).

[ದೇ. ॥ ತಮಿ. ಕಡಿ; ತುಳು. ಕಡಿ, ಕರ್; ಕುರುಖ್. ಖಟ್ನಾ]

**ಕಡಿ$_3$** (ನಾ). ೧. ಹೋಳು; ತುಂಡು; ಚೂರು; ಭಾಗ: "ಕಡಿ – ಖಂಡನೇ, ಶಕಲೇ ಚ (ತುಂಡು)" (ಶಮುಧಾ); ಆ ಕಪ್ಪಡಮನೆರಟ್ಕಡಿಯಾಗೆ ಸಜ್ಜನೆ ಸೀಳ್ದೀಡಾಡುವುದುಂ (ಅರ್ಥನೇ. ೭-೯ ವ); ಅಳ್ಕಿ ಪುಳಿಂದಂ ಕಾಣುತೆ ತಳ್ಕೈಸಿಯೆ ಕೊಂಡು ಶುನಕನೆರಡುಂ ಕಡಿಯಂ ಕಾಳ್ಕಿರ್ಚು ತಗುಳ್ದ ತೆಜದಿಂ . . . ಬಳಲುತ್ತ (ಗಿರಿಕ. ೧-೧೧೬); ನಗರದಲಿ ಕಟಕದಲಿ ಕೆಂಪಿನ ಮುಗಿಲ ಕಡಿ ಬಿದ್ದಂತೆ . . . ಎಸೆದವಾ ಹೋಳೆರಡು ರಕ್ಕಸಿಯ (ತೊರರಾ. ೫-೧-೨೩); ಒಂದು ಕಡಿ ತೆಂಗಿನ ಕಾಯಿ ತಂದು ಅವರ ಕೈಗೆ ಕೊಟ್ಟಳು (ಬಾಳಿವೈ. ೧೧೪). ೨. ದಪ್ಪನುಚ್ಚು. 'ಕಡಿನುಚ್ಚು' ಪರಾ. ೩. (ಆಲಂ) ಏಟು; ಹೊಡೆತ (?): ಅಂಗಜನಣುಗನ ಬಲಗೊಂಬ ವನಲಕ್ಷ್ಮಿ ರಂಗವಾಲಿಯನಿಕ್ಕಿದಂತೆ ತುಂಗ ವಿಕ್ರಮರಂಬುಗಡಿಯಿಂದೆ ಸುರಿದ ರತ್ನಂಗಳೊಪ್ಪಿರ್ದುವಾ ಬನದಿ (ಮೋಹತ. ೧೯-೨೪).

[< ಕಡಿ$_2$. / ತಮಿ. ಕಡಿಕ್ಕೈ; ತುಳು. ಕಡಿ, ಗಡಿ; ತೆಲು. ಕಡಿ]

**ಕಡಿ$_4$** 'ಕಡಿದು' ನೋ.

**ಕಡಿ$_5$** (ನಾ). ಸೊಂಟ; ನಡು; ಟೊಂಕ (?): ಮೆಟ್ಟು ನಿಮ್ಮ ಪೊಟ್ಟೆಯೊಳಿರ್ದಪುದೆಂಬ ಮಾತಂ ಕೇಳ್ದು ಗದ್ದದಿಸಿಯವರ ಕಡಿಗಳಂ ಕಂಡು ಲಜ್ಜಿಸಿ ಪೋಗೆ (ಪುಣ್ಯಾಸ್ರ. ೭-೪೨ ವ). 'ಕಡಿಗೊಳ್', 'ಕಡಿದಾಬ್ಬೆ' ಪರಾ. [< ಸಂ. ಕಟ]

**ಕಡಿ$_6$** (ನಾ). ಪಳಿದ್ಯ; ಮಜ್ಜಿಗೆ ಸಾರು (?): ಮುಡಿಯು ಯೆಂಬರು ಬೆಳದ ಕೂದಲನೊಡಕಲೆಸರುಗಳಾ ಕಡಿಯು ಯೆಂಬರು ಧೌತವಸ್ತ್ರವ ಮಡಿಯು ಎಂಬರದಲ್ಲದೇ ಜನ ನುಡಿಯರು (ಅರ್ಜಾವಿ. ೧೪-೨೫).

[< ಸಂ. ಖಡ]

**ಕಡಿ$_7$** (ನಾ). ಹತ್ತಿನೂಲಿನ ನೀಳವಾದ ಸುರುಳಿ; ಲಡಿ (ಕ).

[← ಮರಾ. ಕಡೀ]

**ಕಡಿ$_8$** (ನಾ). ಹೊಕ್ಕುಳಿನ ಮೇಲೆ ಇರುವ ಚರ್ಮದ ಮಡಿಕೆ; ವಲಿ: "ವಲಿ – ಹೊಟ್ಟೇ ಮೇಲಿನ ಕಡಿ" (ಗಂಗಾಮು. ೨೮೩). [?]

**ಕಡಿ$_9$** (ನಾ). ಭರವಸೆ; ನಂಬಿಕೆ; ಭಾಷೆ (?): ಕಡುಮುನದ ಕಪಿಬಲದ ಧಾಳಿಗೆ ನಡುಗಿ ಕಂಡುದು ಪೂರ್ವದಿಕ್ಕಿನ ಪೊಡವಿಪರು ಸಾವಂತ ಮನ್ನೆಯ ಮಂಡಲೇಶ್ವರರು ಪೊಡವಿ ತಮ್ಮನಿತಜಲಿ ರಾವಣನಡಗಿರದ ವೋಲಾಜೆಭಾರದ ಕಡಿಯ ಕೊಟ್ಟರು ಬಳಿಕ ತಮ್ಮಯ ಧರ್ಮಸಾಕ್ಷಿಯಲಿ (ತೊರರಾ. ೪-೯-೨೨). [?]

**ಕಡಿಕ$_1$** (ನಾ). ಗಟ್ಟಿತನವುಳ್ಳವನು; ಗಟ್ಟಿಗ; ಕಟ್ಟಾಳು: ಕರಂದುಂಟೀತಂಗೆ ಈತನೊಳ್ ಮೇಣ್, ಕರಿಕಂ, ಏವಂ ಬಿಳಿಕಂ, ಕಡಿಕಂ, ತೋರಿಕಂ (ಶಬ್ದಾನು. ೪೦೩ ಪ್ರಯೋ).

[ಕಡಿ$_4$ (< ಕಡಿದು) + -ಕ$_3$]

**ಕಡಿಕ$_2$**, ಕಟಿಕ, ಕಟಿಗ, ಕಟುಕ$_1$, ಕಟುಗ$_2$, ಕಡಿಗ, ಕಡುಕ$_2$ (ನಾ). (ಪ್ರಾಣಿಗಳನ್ನು) ಕಡಿಯುವವನು, – ಕತ್ತರಿಸುವವನು; ಕಸಾಯಿಗಾರ: ನರಪಶಿಯಣುಗಂ ಸೊಣಕಡಿಕರುಮಂ ಪೊಲೆಯರು ಮನೋಲಗಿಪ್ಪುದೆ (ಸಮುಪ. ೯-೯೯); ಒಂದು ಸಾವಿರ ಜೀವಿಗಳ ದಿನಕೆ ಕೊಲ್ವ ಕಡಿಕರೊಂದುದಿನ ವನದಲ್ಲಿ ಬೇಂಟೆಯಾಡುತ್ತ (ಗುರುಚಾ. ೮-೬೬); ಶಸ್ತ್ರಗಳ ಯಂತ್ರಗಳ ಕಡಿಕರ ಸಾಹಾಯ್ಯದಿಂದ (ಚಿಟ್ಟಅ. ೫೨-೬). **ಕಟಿಕ**: ಮಜವೆಯೆಂಬ ಸುರಾಪಾನವ ಕೊಂಡು ದ್ವೇಷವೆಂಬ ಕಟಿಕರ ಮನೆಯ ಹೊಕ್ಕು ಸರ್ವಪಾತಕದ ಮಾಂಸವ ಕೊಂಡು (ಮೋಳಿಮಸ. ೧೯೦-೭೧೪). **ಕಟಿಗ**: "ವೈತಂಸಿಕಂ ಕೌಳಿಕಂ ಕ[ಪಾಠಾಂ. ಕು]ಟಿಗನೆನಿಸಿಕ್ಕು" (ಮಂಗರಾ. ೧೧೧-೪); ತಾಮ್ರಮರ್ದನಮಸಗ ಮುಚ್ಚಿಗ ರಜಕ ಚಿತ್ರಿಕ ಕಟಿಗ[ಪಾಠಾಂ. ಕ] ಕಲುಕುಟಿಕ (ತೊರರಾ. ೫-೮-೫೨). **ಕಟುಕ$_1$**: ಅನು ವೇಷಧಾರಿಯಯ್ಯ ಕಟುಕ[ಪಾಠಾಂ. ಕಟಿಕ, ಕಾಟುಗ] ಪೋಲುಗನೆಂಬುದು ನನ್ನ ಹೆಸರಯ್ಯ (ಬಸವ. ೩೩೫); ತಲೆಗಳ ತುಂಡು ತೋಳ್ಗಳ ತುಂಡು ನಡು ತುಂಡು ಸಲೆ ಜಾನು ಜಂಘೆಯ ತುಂಡು ಬೆಲೆಯಿಂದೆ ಕಟುಕರಂಗಡಿಯಂತೆ ರಣರಂಗ ಸಲೆ ಜಿಗುಪ್ಸೆಯ ತೋಱಿಸಿತು (ಮೋಹತ. ४೦-೬೬); ಕಟುಕರ ಮನೆಯ ಕುರಿಯ ಹಾಗೆ (ಗಾದೆ). **ಕಟುಗ$_2$**: ಕಟುಗಗಂಜಿಕೆಯೇಕೆ ದಿಟಕೆ ಮೂದಲೆಯೇಕೆ (ಸರ್ವಜ್ಞ. ೭೦೯). **ಕಡಿಗ**: ಅವನ ಮೊಗ ನೋಡಿ ಕರುಣದಿಂ ಕಡಿಗ[ಪಾಠಾಂ. ಕಟಿಗ, ಕಟುಗ, ಕಡಿಕ]ರೆದೆ ಕರಗಿದುದು (ಜೈಮಿಭಾ. ೨೮-೩೨); ಆ ಕಡಿಗರು ಅವನ ರಭಸಕ್ಕೆ ಭೀತರಾದವರಂತೆ ಶಕಟದಾಸನಂ ಬಿಟ್ಟು ದಿಕ್ಕುದಿಕ್ಕಿಗೆ ಓಡಿಹೋಗಲು (ಮುದ್ರಾಮಂ. ೩೦೨). **ಕಡುಕ$_2$**: ಅಂಜಿ ಅಳುವ ಬಾಲಕನಂ ಕಂಡು ಕಡುಕರ ಮನ ಕರಗಿತು (ಚಂದ್ರಹಾ. ೧-೫೧).

[ಕಡಿ$_2$ + -ಕ$_3$]

**ಕಡಿಕೆಂಡ**, ಕಡಿಖಂಡ, ಕಡಿಗಂಡ$_2$ (ನಾ). ೧. ತುಂಡು ತುಂಡಾದದ್ದು; ಛಿನ್ನ ಭಿನ್ನವಾದುದು; ಛಿನ್ನವಿಚ್ಛಿನ್ನವಾದದ್ದು: ಉಡಿಯೆ ಪಟಯಿಗೆ ವರೂಥಂ ಕೆಡೆಯೆ ಭುಜಾದಂಡ ವಜ್ರಮಯ ಕೋದಂಡಂ ಕಡಿಕಂಡಮಾಗೆ ಪಱಿಪಡೆ ಪೊಡರ್ಪು (ಪಂರಾಮಾ. ೩-೬೦). **ಕಡಿಖಂಡ**: ೧. ಕಡಿಖಂಡಮಾಗೆ ಸುರ್ಗ್ಗಿಱಿದು ಹಲರಂ ಕೊನ್ದು ತಾಂ ವೀರಭಟನಪ್ಪುದಱಿಂ (ಕಇ. IV, ೧೬-೧೫; 1166); ಜವನುಂಡು ಕಾಱಿದಂತಿರೆ ಕಡಿಖಂಡಮಾಗೆ ಕರಮಾಸುರವಾದುದು ಸಂಗರಾಂಗಣಂ (ಪಂರಾಮಾ. ೧೩-೭೪); ಕಡಿಖಂಡಮಯವಾಯ್ತಿಭ ರಥಾಶ್ವ ಕದಂಬ ನಿಮಿಷದಲಿ (ತೊರರಾ. ३-೬-೧೬); ಜಂಗಮವ ಕೆಡೆನುಡಿದೆನು ಕೈವಿಡಿದ ಸ್ತ್ರೀಯ ಕಡಿಖಂಡವ ಮಾಡಿದೆ ಒಡನಾಡಿದ ಕಡುಗೂಪರನಿಱಿದು ಕೊಂದೆ (ಘನವ. ೭); ಇದಿರಾದವರ ಕಡಿಖಂಡಗಳನು ಮಾಡುತೆದೆಗೆಟ್ಟು ಮಱಿಹೊಕ್ಕರಿಗೆ ಮುದದೊಳಭಯದಾನವನಿತ್ತು (ಕಂನವಿ. ೧೪-೫೧). ೨. ಕಡಿಯುವ ಕತ್ತಿ; ಖಂಡೆಯ (?): ಸದ್ದರ್ಶನಾಲಸ್ಯಮೆಂಬ ಕೊಂತಂಗಳಿಂ ತತ್ತ್ವಭೀತಿಯೆಂಬ ತಿವುಗಳುಗಳಿಂ ಸದ್ಗೋಷ್ಠಿದೂರಮೆಂಬ ಕಡಿಖಂಡಂಗಳಿಂ ಬೀಱಿ ಮೋದುತ್ತುಂ (ಧರ್ಮಾಮೃ. ೧೦-೮೬ ಅಟು). **ಕಡಿಗಂಡ$_2$**: ೧. ಈ ನಿಷ್ಠುರನಪ್ಪ ತಳಾರನ ಕೈಯೊಳ್ ಕಡಿಗಂಡಮಾಗೆ ಜೀಱೀಱಿ ಪೊಯ್ಸಿಕೊಂಡು ಸಾಯದೆ ವಾತ್ಸಲ್ಯರತ್ನಾಕರನ ಮಱಿಯಂ ಪುಗುವೆಂ (ಧರ್ಮಾಮೃ. ೬-೯೪).

[ಕಡಿ$_3$ + ಕಂಡ$_1$]

**ಕಡಿಕೆಂಡಂಗೆಯ್** (ಕ್ರಿ). ತುಂಡರಿಸು; ಚೂರುಚೂರಾಗಿ ಕತ್ತರಿಸು: ಗಜಯೂಥನಾಥನ ಬಱಿಧನವೋಕ್ಷಮುಪ್ಪಂತು ಪಾಶಮುಮಂ ಕಡಿಕೆಂಡಂಗೆಯ್ದು ಪ್ರತ್ಯುಪಕಾರಮಂ ಮಾಡಿ (ಪಂಚತಂ. ೨೯೭-೭).

[ಕಡಿಕಂಡ + ಗೆಯ್ (< ಕೆಯ್$_1$)]

**ಕಡಿಕಂಡಂಗೆಯ್ಸು** (ಕ್ರಿ). ಚೂರು ಚೂರಾಗಿ ಕತ್ತರಿಸುವಂತೆ ಮಾಡು; ನಾಶಮಾಡು : ಮುದದಿಂ ಮುಂದಿಟ್ಟು ತನ್ನಂ ರಣಾಜಿರದೊಳ್ ಶ್ರೀವಿಜಯಾಸ್ತ್ರದಿಂದೆ ಕಡಿಕಂಡಂಗೆಯ್ಸುವೆಂ (ಶಾಂತೀಶ್ವ. ೫-೨೦೪). [ಕಡಿಕಂಡಂಗೆಯ್ + -ಸು$_1$]

**ಕಡಿಕಂಡಮಾಡು** (ಕ್ರಿ). = ಕಡಿಕಂಡಂಗೆಯ್ : ಯುದ್ಧದಲ್ಲಿ ಶತ್ರುಗಳನ್ನು ಕಡಿಕಂಡಮಾಡಿದನು (ಸಕವ್ಯ. IX, ಪ್ರಸ್ತಾವ). [ಕಡಿಕಂಡ+ ಮಾಡು$_1$]

**ಕಡಿಕತ್ತಿ** 'ಕಡಿಗತ್ತಿ' ನೋ.

**ಕಡಿಕಾಳಗ** (ನಾ). ಸಣ್ಣ ಯುದ್ಧ; ತುಂಡುಕಾಳಗ; ರಾಜ್ಯದ ಗಡಿ ನಿರ್ಣಯಕ್ಕಾಗಿ ಮಾಡುವ ಯುದ್ಧ (?) : ಯತ್ತಿದ ಮೊನೆಗೆ ಮುಂತು ಕಡಿಕಾಳಗಕ್ಕೆ ಪಿಂತು ಆಟಿದ ಬೀಳಿಗೆರಡುಗೆಱೆ ಶಿವಧರ್ಮ್ಮ ನಿರ್ಮ್ಮಳನ್ (ಎಕ XII, ತಿಪಟೂ. ೧೦೪-೨೪; 1130). [ಕಡಿ$_3$? + ಕಾಳಗ(< ಕಾಳಗ)]

**ಕಡಿಕು$_1$** (ಕ್ರಿ). ಕತ್ತರಿಸಿ ಹೋಗು; ಕಿತ್ತುಹೋಗು: ತಸಿಸುಧೆಯೊಸರ್ದು ತೊಟ್ಟಿಡುವ ಬಿಂದುಗಳ ಸಾಲಿದೆನಲು ಕಡಿಕಿ ಕೞಿದುಗುವ ಹಾರದ ಮುತ್ತುಗಳ ಮಣಿಗಳೆಡೆವಿಡದೆ ಸೂಸುತಿರೆ (ಜೈಮಿಭಾ. ೧೧-೧೭). [?]

**ಕಡಿಕು$_2$**, ಕಟುಕು$_2$, ಕಡುಕು$_1$ (ನಾ). ೧. ಕಡಿದದ್ದು; ತುಂಡು; ಹೋಳು; ಖಂಡ: ಉಡಿದ ತೊಡೆಗಳ... ತೋಳಿವ ಕಡಿಕುಗಳ ರಣಮಹಿ ಭಯಾನಕರಸಕೆ ಗುಜ್ಜಿಯಾಯ್ತು (ಕುವ್ಯಾಭಾ. ೮-೮೧); ಕಡಿಕುಗಳು ಜೀವವ ಪಡೆಯವೇ ನಿನ್ನಂತೆ ದ್ರೋಣಸುತಾಸ್ತ್ರ ಬಾಧೆಯಲಿ (ನಿಭಾಗ. ೬-೧೬-೩೫). **ಕಟುಕು$_2$** : ೧. (ಕ). **ಕಡುಕು$_1$**: ೨. ಸಿಪ್ಪೆ; ಕೆಬ್ಬೆ: ಎಳನೀರು ಕಾಯನ್ನು ಚೆಕ್ಕಿ ... ಕುದಿಸಿ ಕಾಯಿಯ ಮೇಲೆ ಒಂದು ಕಡುಕನ್ನು ತೆಗೆದು ಒಂದು ದುಡ್ಡು ತೂಕ ಹಿಪ್ಪಲಿಚೂರ್ಣವನ್ನು ಎಳನೀರಿನೊಳಗೆ ಹಾಕಿ (ಸಕವ್ಯ. ೪೬೨ ಪರಿ). [ಕಡಿ$_2$ + -ಕು$_1$]

**ಕಡಿಕುವಲೆ** (ನಾ). ಒಂದು ಬಗೆಯ ಬಲೆ: ಪೊರಳಿದುವು ಕಾಲಾಳುಗಳ್ ಕಡಿಕುವಲೆಗಳಿಂದುರುಳಿದುವು ನೆಲನಗಲಕಂ ಹಾಸಿ (ತುರಂಗ. ೬೨-೨೨). [ಕಡಿಕು ? + ಬಲೆ$_1$]

**ಕಡಿಕೆ** (ನಾ). ಧಾನ್ಯವನ್ನು ಸಂಗ್ರಹಿಸಿ ಇಡುವ ದೊಡ್ಡ ಪಾತ್ರೆ; ಗಳಗೆ: (ಧಾನ್ಯ, ಸೆತ್ತೆ, ಮೊ.ನ್ನು ಹಾಕಿಡುವುದಕ್ಕೆ ಸಾ., ಒಂದು ಸ್ಥಳದಲ್ಲಿ ನೆಟ್ಟಿರುವ) ಪಾತ್ರೆ; ತೊಟ್ಟಿ; ಗಳಗೆ; ಕಡಿಕೆ; ಓಡೆ (Bin. ಇಂಕನಿ). [?. / ತುಳು. ಕದಿಕೆ]

**ಕಡಿಕೆಯ್$_1$**, ಕಡಿಗೆಯ್ (ಕ್ರಿ). ತುಂಡುಮಾಡು; ತುಂಡರಿಸು; ಕತ್ತರಿಸು : ಶರವರ್ಷದಿನಂದಱಿಯೆ ಕಡಿಕೆಯ್ದು ಬಿಡದೆಡೆವಱನಂ ಮಾಡಿದುವು ಗುರುತನೂಜನ ಕಣೆಗಳ್ (ಪಂಪಭಾ. ೧೨-೮೧). **ಕಡಿಗೆಯ್** : ಅರ್ಜುನಿಯ ಮೇಲೆ ಗದೆಯಂ ತೆಗೆದಿಡಲ್ಕವನದಂ ನಡುವೆ ಕಡಿಗೆಯ್ಯಲೆಂತೊದಗಿದನೊ (ಜೈಮಿಭಾ. ೨೨-೩೨). [ಕಡಿ$_3$ + ಕೆಯ್$_1$]

**ಕಡಿಕೆಯ್$_2$** 'ಕಡುಕೆಯ್' ನೋ.

**ಕಡಿಕೊಂಬು**, ಕಡಿಗೊಂಬು (ನಾ). ಕತ್ತರಿಸಿದ ಕೊಂಬೆ; ತುಂಡು ಮಾಡಿದ ರೆಂಬೆ: ಶರಪಂಜರನಂ ಯಮುಕುಂಜರಕ್ಕೆ ಕಡಿಕೊಂಬುಮಾಡಿ ಕಡಿಖಂಡಮೆನಲ್ ಕರವಾಳಿಂ ನಂದನನಾಜಿರಂಗದೊಳ್ ಪೊಯ್ಯೆ (ಪಂರಾಮಾ. ೧೩-೧೦೮); ವನಸ್ಪತಿಗಳ ಕಡಿಕೊಂಬಂ ಮೇಡು[-ದು] ನಿರ್ಮಳಸರೋವರಜಲಂಗಳಂ ಊಡಿ (ತತ್ತ್ವಪ್ರ. ೩೨೯). **ಕಡಿಗೊಂಬು** : 'ಕಡಿಗೊಂಬುಗೊಳ್' ಪರಾ. [ಕಡಿ$_2$ + ಕೊಂಬು$_3$]

**ಕಡಿಖಂಡ** 'ಕಡಿಕಂಡ' ನೋ.

**ಕಡಿಗ** 'ಕಡಿಕ್ಕ$_2$' ನೋ.

**ಕಡಿಗಂಟು** 'ಕಡುಗಂಟು' ನೋ.

**ಕಡಿಗಂಡ$_1$** (ನಾ). ತೀವ್ರ ಅಪಾಯ; ದೊಡ್ಡ ಕುತ್ತು (ಕ). [ಕಡಿ$_4$ (< ಕಡಿದು) + ಗಂಡ$_2$]

**ಕಡಿಗಂಡ$_2$** 'ಕಡಿಕಂಡ' ನೋ.

**ಕಡಿಗಡಿ$_1$** (ಕ್ರಿ). ತುಂಡಾಗುವಂತೆ ಸೀಳು, —ಕತ್ತರಿಸು: ಬಾಣನ ತೋಳುಗಳ ಕಡಿಗಡಿದು ಮೆಱಸಿದನಾಹವಾಗ್ರದಲಿ (ನಿಭಾಗ. ೩-೨-೩೬). [ಕಡಿ$_3$ + ಕಡಿ$_2$]

**ಕಡಿಗಡಿ$_2$** (ನಾ). = ಕಡಿಕಂಡ ೧: ಕಿಡಿಗುಟ್ಟಿದ ತೆಜದಿಂ ಕಡಿಗಡಿಯಾಗಿರೆ ಪೋರ್ವುವೆರಡು ಕೋಟಿಗಳಂ ಕಂಡು (ಶಾಂತಿಪು. ೯-೪೫). [ಕಡಿ$_3$ + ಕಡಿ$_3$]

**ಕಡಿಗತ್ತಿ**, ಕಡಕತ್ತಿ$_1$, ಕಡಗತ್ತಿ, ಕಡಿಕತ್ತಿ (ನಾ). ಕಡಿಯಲು ಬಳಸುವ ಕತ್ತಿ; ಮಚ್ಚುಗತ್ತಿ: ಕಡು[ಡಿ]ಗತ್ತಿ ... ಜವದಾಡೆಗಳೆಂಬ ಬತ್ತೀಸಾಯುಧಗಳಿಂ (ವಿವೇಕ. ೨೬೨); ಪಿಡಿದು ಹಲಗೆಯ ... ಪಿಂಡಿವಾಳಾಸಿ ಕಡಿಗತ್ತಿ ಚೂರಿ (ನವಮೋ. ೨೩-೫೬). **ಕಡಕತ್ತಿ$_1$** : ಕಡಕತ್ತಿಯನ್ನು ತರಿಸಿ ಎಲ್ಲರಿಗೂ ಒಂದೊಂದು ಎಳನೀರನ್ನು ಕೆತ್ತಿಕೊಟ್ಟೆ (ಚಂಗಾಳ್ವ. ೩೪೩). **ಕಡಗತ್ತಿ** : ಕರದೊಳಗಣ ಕಡಗತ್ತಿ ಕಂಬದಿಯಾನು ಹರುಷದಿ ಯೊಡ್ಡು ಪಾವಡಿಯ ಶಿರದೊಳು ಕಟ್ಟಿದ ಹುಳಿಗಾರ (ಜೀವಂಸಾಂ. ೨-೧೩). **ಕಡಿಕತ್ತಿ** : ಕುಡುಗೋಲ್ ಕೊಡಲಿ ಕೈಪಾರೆ ಗುದ್ದಲಿ ಮಚ್ಚು ಕಡಿ[ಪಾಠಾಂ. ಡು]ಕತ್ತಿ ದಬ್ಬುಕಗಳನು ಬಿಡದಾಂತು ನಡೆದರು (ಕುಠಾಸಾಂ. ೪೧-೪೮); ಶಾಕಮಾಂಸಗಳನ್ನು ಖಂಡಿಸುವುದಕ್ಕೆ ಸಾಧನವಾಗಿ ಒರೆಯಿಲ್ಲದಿರುವ ಒಂದು ಕಡು[ಡಿ]ಕತ್ತಿಯನ್ನು (ಕೃವಾವಿ. ೧೫). [ಕಡಿ$_2$ + ಕತ್ತಿ]

**ಕಡಿಗಲ್** (ನಾ). ಗಡಿಕಲ್ಲು; ಬಾಂದುಕಲ್ಲು : ತಳುಕಲ್ಲ ನಾಗಲೇಶ್ವರರ್ಕೆ ಕಾಲಂ ಕಚ್ಚಿಕೊಟ್ಟ ... ತೆಂಕಲಿಂಗದ ಕಲ್ ಎರಡು ಕಡಿಗಲ್ ಪಡುವ ಲಿಂಗದ ಕಲ್ (ಶಾಸಪ. ೨೮-೨೨; 991). [ಕಡಿ$_0$ (< ಕಡೆ$_3$) + ಕಲ್$_3$]

**ಕಡಿಗಳೆ** (ಕ್ರಿ). ಕಡಿದು ಕೆಡಹು; ಕತ್ತರಿಸಿ ಒಗೆ: ಖಡ್ಗವ ಹಿಡಿದು ಹಲಗೆಯಗೊಂಡ ಕೋಪದಲೊಡನೆ ಹರಿತರೆ ಬೋಳೆಯಲಿ ಕಡಿಗಳೆದ ಖಡ್ಗವನು (ಕೌಶಿರಾ. ೩೩-೫೬); ಜಗದುಪತಿ ಕಡಿಗಳೆದನಸುರನ ಕೈಯ ಕಾರ್ಮುಕವ (ನಿಭಾಗ. ೧೦-೬೯-೩೬). [ಕಡಿ$_2$ + ಕಳೆ$_1$]

**ಕಡಿಗುತ್ತಿಗೆ** (ನಾ). ಒಂದು ಬಗೆಯ ತೆರಿಗೆ (?): ಗದ್ದೆ ಬೆದ್ದಲು ತೋಟ ಮನೆ ಕಡಿಗುತ್ತಿಗೆ ಅಜುವಣವನೂ ಬನಗುತ್ತಿಗೆ ಆ ಚತುಶ್ಸೀಮೆಯೊಳಗೆ ಏನುಂಟಾದ ಸರ್ವಸ್ವಾಮ್ಯ (ಮೈಆರಿ. ೧೯೪೨, ೩೭-೩೪; 1360). [ಕಡಿ ? + ಗುತ್ತಿಗೆ$_1$(< ಗುತ್ತಗೆ)]

**ಕಡಿಗೆ$_1$** (ನಾ). ಕಡಗ ಹೊಡೆಯುವುದು; (ಕೆತ್ತನೆಯಲ್ಲಿ) ಗಾಡಿ ಹೊಡೆಯುವುದು; "ಕಡೆತ" (ಸಿದ್ಧರಾ. ಕೋಶ) : ಈಯುಳತೆಯಿಾಯಧಿಷ್ಠಾನವೀ ರೇಖೆಯಿಾ ಖಂಡೆಯಂ ಕಡಿಗೆಯಿಾ ತಾನವೀಯಾಯವೀ ಗೃಹವೆಂದು ಹೆಸರಿಡುವರಿಲ್ಲೆಂದು ಹಿಂದು ಮುಂದೆ (ಸಿದ್ಧರಾ. ೩-೪೩). [< ಕಡೆ$_1$ + -ಗೆ ?]

**ಕಡಿಗೆ$_2$** (ನಾ). (ಕರಾ) ಎಳೆಯ ಹಲಸಿನ ಕಾಯಿ; ಗುಜ್ಜೆ: ಹಲಸಿನ ಕಡಿಗೆಗೂ ಅಭಾವವಿಲ್ಲ (ಮುಗಿಯು. ೩೩೯); ಒಂದು ಐವತ್ತು ಕಡಿಗೆ ಯಾದರೂ ವರ್ಷಕ್ಕೆ ಸಿಕ್ಕುತ್ತದೆ (ಮರಮ. ೧೨೮). [?]

**ಕಡಿಗೆಬೆಲ್ಲ** (ನಾ). ಒಂದು ಅಳತೆಯ ಬೆಲ್ಲ: ಆಲೇಮನೆ ಸೂಳುಂಡೆ ದಿನ ೧ಕ್ಕೆ ಕಡಿಗೆಬೆಲ್ಲ ೫೦೦ (ಎಕ. XI, ಹಿರಿಯೂ. ೮೮-೨೧; 1589). 'ಗಡಿಗೆಬೆಲ್ಲ' ಪರಾ. [ಕಡಿಗೆ ? + ಬೆಲ್ಲ]

**ಕಡಿಗೆಯ್** 'ಕಡಿಕೆಯ್' ನೋ.

**ಕಡಿಗೊಂಬು** 'ಕಡಿಕೊಂಬು' ನೋ.

**ಕಡಿಗೊಂಬುಗೊಳ್** (ಕ್ರಿ). ಕತ್ತರಿಸಿದ ಕೊಂಬೆಯನ್ನು ಉಳ್ಳದ್ದಾಗು, —ಪಡೆ: ಸ್ಥಿರಮೂಲಮನಾಲದ ಪೆರ್ಮರನಂ ಕಡಿಗೊಂಬುಗೊಂಡ ಕಾಲವ್ಯಾಳದ್ವಿರದಕ್ಕೆ ನರಕಳೇಬರ ಜರತ್ತೃಣಗ್ರಾಸಮಾತ್ರಮಾವುದೊ ಗಹನಂ (ಮಲ್ಲಿಪು. ೯-೬೧); ಒಂದೊಂದೆಡೆಯೊಳಡವಿಯಾನೆಗಳ್ ಕಡಿಗೊಂಬುಗೊಂಡ ತದುಕಿನ ಮರದ ಮುಱಿಗಳ್ಗೊಳೊಗೆದ ಪಗಿನೊಳ್ (ಚಂದ್ರಪು. ೫-೬೫ ವ). [ಕಡಿಗೊಂಬು (< ಕಡಿಕೊಂಬು) + ಕೊಳ್$_1$]

**ಕಡಿಗೊಳ್** (ಕ್ರಿ). ಸೊಂಟಕ್ಕೆ ಎತ್ತಿಕಟ್ಟು, —ಸಿಕ್ಕಿಸು, —ಅಳವಡಿಸು: ಸುಡುದಲೆ ಬಿಟ್ಟ ಕಣ್ ಕಲಿವೊಗಂ ಕಡಿಗೊಂಡುಡೆ ಬಿಟ್ಟ ತಪ್ಪ ಕೈಯಿಡಿದು ಪೊರಳ್ಚಿ . . . ಬಂದನದೊರ್ವನಂದು ಬಿಲ್ವಿಡಿದು (ಅರ್ಧನೇ. ೬-೫೦). [ಕಡಿ$_5$ + ಕೊಳ್$_1$]

**ಕಡಿಚಣ** (ನಾ). ಉಗುರುಗಳನ್ನು ಕತ್ತರಿಸುವ ಸಾಧನ (?) : ತುಱುಬಿಂಗೆ ಬೆಳೆದುದಕ್ಕೆ ಕೊಱಿಗುಧಳ ಮತ್ತೆ ಹರಿವ ನಖಕ್ಕೆ ಕಡಿಚಣ ಮತ್ತೆ ಉಸುರಿನ ದೆಸೆಯ ನಾಸಿಕಕ್ಕೆ ಕಸನ ತೆಗೆವುದಕ್ಕೆ ಅಂಗುಲ ಸಂಗಿ (ಸರ್ವವ. ೧೨೫-೬೩೭). [?]

**ಕಡಿತ$_1$** (ನಾ). ೧. ಕಚ್ಚುವಿಕೆ; ಹಲ್ಲಿನಿಂದ ಕಡಿಯುವಿಕೆ: ಒಂದೆಱ ಕಡಿತಕ್ಕೊಂದಿನಿಸಂಜದೆ ಒಂದಿದ ಕಡುಗೋಪದಿಂದ ನಿಂದು ಕಾದಿ ಬೀಳ್ದಾಕೋಡಗದೊಳಗೊಂದು ಮರಣಮನೆಯ್ದಿದುದು (ನೇಮಿಸಂ. ೭-೨೪); ಇತ್ತೀಚಿಗೆ ಸೊಳ್ಳೆ ಕಡಿತ ಹೆಚ್ಚಾಗಿದೆ (ರೂಢಿ). ೨. ನವೆ; ತುರಿಕೆ: ಆಗವನು . . . ತುರುಚಿ ಗಿಡದ ಮೇಲೆ ಬಿದ್ದನು. ಅವನ ಕೈಗಳಿಗೆ] ಕಡಿತ ಹತ್ತಿತು (ಪುನರು. ೫೬). [ಕಡಿ$_1$ + -ತ$_2$]

**ಕಡಿತ$_2$** (ನಾ). ೧. ಕತ್ತರಿಸುವಿಕೆ; ಕಡಿಯುವಿಕೆ; ಕಟಾವು; ಛೇದನ: ಅರಸ ನಿನ್ನಯ ಕೊರಳ ಕಡಿತಕೆ ಸರಳು ಕುದಿತದಲೆನಗೆತನಗೆಂದೊಱಲುತಿವೆ (ಕುವ್ಯಾದ್ರೋ. ೧೦-೫೩). ೨. ಏಟು; ಹೊಡೆತ: ಪರಶುರಾಮನ ಕೊಡಲಿ ಕಡಿತವ ಧರಿಸಲಾಪೆನು ವಿಲಯಭೈರವ ನಿಱಿದಡಂಜೆನು (ಕುವ್ಯಾಭೀ. ೧೦-೬); ಒಂದು ದೆಸೆಯೊಳ್ ಪರಶುಗಳ ಕಡಿತಮೊಂದು ದೆಸೆಯೊಳ್ ಶಿಲಾವರುಷಂಗಳು (ಚೆಬಪು. ೨೮-೨೩); ದೈತ್ಯರ ಕಡಿತಕೊಳಗಾಗದ ಹಯಂಗಳ ಪೊಡವಿಯೊಳು ತಾ ಕಾಣೆ (ಕೋಗಯು. ೨೩-೫೦). ೩. (ಉಕ) ಪಗಡೆ, ಲೆತ್ತ ಮೊದಲಾದ ಆಟಗಳಲ್ಲಿ ಕಾಯಿಗಳನ್ನು ಹೊಡೆಯುವಿಕೆ, —ಕೊಲ್ಲುವಿಕೆ: ಕಡಿತ ಆಗಬೇಕಾದರೆ ಈಗ ಹತ್ತು ಬೀಳಬೇಕು (ರೂಢಿ). ೪. ಕಡಮೆ ಮಾಡಿದ್ದು; ಕುಗ್ಗಿಸಿದ್ದು; ಖೋತ.

**ಕಡಿತಹಾಕು** = ಕಡಮೆಮಾಡು; ಖೋತಾಮಾಡು: ಬೊಕ್ಕಸವು ಬರಿದಾದಾಗ . . . ನೌಕರರ ಪಗಾರವನ್ನು ಕಡಿತಹಾಕಿರಿ (ರೂಪಸಂ. ೨೫). [ಕಡಿ$_2$ + -ತ$_2$]

**ಕಡಿತ$_3$, ಕಡತ** (ನಾ). ೧. ಬಳಪದಿಂದ ಬರೆಯುವುದಕ್ಕಾಗಿ ತಯಾರಿಸಿದ ಕಪ್ಪುಲೇಪನವುಳ್ಳ ಬಟ್ಟೆಯ ಪಟ್ಟಿ; ಲೆಕ್ಕದ ಪುಸ್ತಕ: ಪಡೆದ ಧನಕ್ಕೆ ಲೆಕ್ಕಮಿಡಲಿಂದ್ರನಗಂ ಬಳಪಂ ಧರಾತಳಂ ಕಡಿತ ಮಹೀಶ್ವರಂ ತಗುಳೆ ಬಾಜಿಸುವೊಂ (ಶಾಂತಿಪು. ೯-೧೪೭); ಪೊಸಪೊನ್ನ ನೀರಾಜುಸಾವಿರಮನುಜ್ವಳ ಹರ್ಷದಿಂ ತರಿಸಿ ಕಡಿತಕ್ಕೆ ಬರೆಯಿಸಿ (ಪದ್ಮರಾ. ೫-೪೦); ಪದವಿಟ್ಟು ಕಡಿತದೊಳ್ ಬರೆದು ಮಾಡಿದ ಕೃತಿಯಲ್ಲ (ಮೋಹತ. ೧-೨೧); ಈ ಕಾಗದವ ಸೇನಬೋವರ ಕಡಿತಕ್ಕೆ ಬರಸಿ (ಎಕ. VIII, ಸೊರಬ. ೫೪೮-೧೫; 1686). ೨. ಪಗಡೆ, ಚದುರಂಗ ಮೊದಲಾದ ಆಟಗಳ ಹಾಸು, —ಹಲಗೆ: ಕಡಿತಮಿಕ್ಕಿದಂತಿರ್ದ ಸಮಚತುರಶ್ರಂ . . . ಕುರುಕ್ಷೇತ್ರಮನೆಯ್ದೆವಂದು (ಪಂಪಭಾ. ೯-೧೦೪ ವ); ಕಡಿತಮಂ ಬಳಸಿಕೊಂಡಿರ್ಪ ಜೂದುಗಾಱರಂತೆಯಿಪ್ಪಡಮಂ ಬಳಸಿಕೊಂಡು ಕುಳ್ಳಿರಲೊಡನೆ (ಅರ್ಧನೇ. ೮-೬೧ ವ). ೩. ಚರ್ಮ; ಚರ್ಮದ ಪದರ(?) : ಕಾದಲ್ಕೆಂದೀ ತೆಱದಿನೊಡ್ಡಿನಿಂದುವು ಭೂತಳಮಳ್ಳಾಡೆ ಕೆಸಱ ಕಡಿತದ ತೆಱದಿಂ (ಪಂಪಭಾ. ೧೦-೫೩); ಭೂತಳಂ ನೀರೊಳ್ಪಾಸಿದದೊಂದು ಪೆರ್ಗಡಿತದಂತಳ್ಳಾಡಲ್ (ಜಗವಿ. ೧೮-೨೬); ಮೆದುಮಾಡಲಿಕ್ಕೆಂದು ಸಮ್ಮಗಾರರು ಕೆಸರಿನಲ್ಲಿ ಕಡಿತ (ಚರ್ಮ)ವನ್ನು ಹಾಸಿ ಇಡುವುದು ಪದ್ಧತಿ (ನಾಡೋಜ. ೨೪೭). ೪. (ಆಲಂ) ಹತೋಟಿ; ವಶ; ಅಧೀನ: ಭರತಾವನೀಮಂಡಳ ಷಟ್ಖಂಡಮಂ ಕಡಿತಕ್ಕೆ ತಂದು (ಶಾಂತಿಪು. ೧೧-೮೪ ವ); ಕಡಿತಕ್ಕೇಱುತ್ತು ನಾಲ್ಕುಂ ಕಡಲ ಕಡೆವರಂ ಧಾತ್ರಿ (ಸೌಇಇ. IX-i, ೩೪೩-೫; 1226); ಬನವಸೆ ಪನ್ನಿಚ್ಚಾಸಿರಮುಮಂ ಕಡಿತಕ್ಕೆ ವೆರಿಸೆ (ಎಕ. V, ಬೇಲೂರು. ೧೭-೭; 1136). **ಕಡತ**: ೧. ಯಿ ಕಗದವ ಸೇನಬೋವನ ಕಡತಕ್ಕೆ ಬರಸಿ (ಎಕ. VIII, ಸಾಗರ. ೧೬-೧೪; 1672); ಮುಗಿಯದಿಹ ಲಾಭ ನಷ್ಟಗಳ ಕಡತದೊಳ್ ಅದೆಂದಿನಾ ಲೆಕ್ಕವೇ ತೀರ್ಮಾನ? ಬಿಡು ಲಾಭದಾತುರವ (ಮಂಕುಕ. ೫೯೪); ಹೊಟ್ಟೆಗಿಲ್ಲದ ಶಾನುಭೋಗ ಹಳೇ ಕಡತ ತೆಗೆದ (ಗಾದೆ).
[ದೇ.॥ ತಮಿ. ಕಡಿತ; ತುಳು. ಕಡತ, ಕಡಿತ; ತೆಲು. ಕಡಿತ, ಕಣಿತ]

**ಕಡಿತ$_4$** (ನಾ). ಉಂಬಳಿ: ಜಿಯುಂಣ್ಣನ ಹೊಲದೊಳಗೆ ಆಯಿಗುಳ ಹೊಲ ಕಡಿತದ ಹೊಲದೊಳಗೆ ಅಯಿಗುಳ ಹೊಲ (ಎಕ. IX (S), ಬೆಂಗಳೂ. ೧೬೮-೧೩; 1424). [?]

**ಕಡಿತಕಾಱ** (ನಾ). ಕಡಿಯುವವನು; ಕತ್ತರಿಸುವವನು: ಕೌರವ ಪಡೆಯ ಹೇರಡವಿಯನು ಸವಱಲು ಕಡಿತಕಾಱರು ಮುಂದೆ ಹೊಕ್ಕದು ನಕುಲ ಪಾರ್ಥಜರು (ಕುವ್ಯಾಭೀ. ೫-೮). [ಕಡಿತ$_2$ + -ಕಾಱ]

**ಕಡಿತಲೆ** (ನಾ). ೧. ಖಡ್ಗ; ಕತ್ತಿ: ಸ್ವಸ್ತಿ ಶ್ರೀ ಜಯಕಾಮನ್ವೀರ ಪೆಬ್ಬಾರ್ಗಣನ್ ಕಡಿತಲೆ ಮಣ್ಡೆ ಮಾಡಿ ತೊಮ್ಭತ್ತೈವರ್ ಇಱಿದೊ (ಎಕ. IX (S), ದೊಡ್ಡಬ. ೩೨-೨; 909); ಎರಡುಂ ಬಲದ ಕಡಿತಲೆಯ ನಾಯಕರ್ . . . ಕಾದೆ (ಪಂಪಭಾ. ೧೦-೮೦ ವ); ಕಡಿತಲೆವೆರಸು ಪಾಸಿನ ಮೇಲೆ ನಿದ್ರೆಗೆಯ್ವನೆಂಬ . . . ಬೆಳ್ತನಂ (ಧರ್ಮಾಮೃ. ೧೪-೧೩೪); ಉಗಿದ ಕಡಿತಲೆ ಮುಸುಕಿದವು ಚೌರಿಗಳ ಡೊಂಕಣಿ ತುಱುಗಿದವು (ಕುವ್ಯಾದ್ರೋ. ೮-೫೫); ಕಡಿತಲೆ ಕಪ್ಪಿನ ಹರಿಗೆ ಬಳಸಿ ನಿಱಿವಿಡಿದುಟ್ಟ ದಟ್ಟ (ಕುರಾಸಾಂ. ೨೭-೨೯). ೨. ಗುರಾಣಿ 'ಕಡಿತಲೆಕಾಱ' ಪರಾ.
[? / ತುಳು. ಕಡ್ತಲೆ]

**ಕಡಿತಲೆಕಾಱ, ಕಡಿತಲೆಗಾಱ** (ನಾ). ೧. ಕತ್ತಿಯನ್ನು ಹಿಡಿದವನು; ಖಡ್ಗಧಾರಿ: ಕಡಿತಲೆಯಂ ತೂಗುತ್ತುಂ ಕಡಿತಲೆಕಾಱರ್ ಕಡಂಗಿ ಬರೆ (ಪಂರಾಮಾ. ೭-೫೭). ೨. ಗುರಾಣಿ ಹಿಡಿದವನು: ನಡುವಿರುಳಪ್ಪಾಗಳ್ ಕಾಪಿನ ಕಡಿತ[ಕಡಿತಲೆ] ಕಾಱರ್ ಮಱೆದು ನಿದ್ರೆಗೆಯ್ದುದನಱಿದು ಮೆಲ್ಲನೆಯ್ದಿ (ಧರ್ಮಾಮೃ. ೬-೭೭); ಕಡಿತಲೆಕಾಱರ ನೆರವಿಯನಾಗಳ್ ಬಿಡೆ ಬೆಂಬತ್ತಿ ಪಿಡಿದು ಪಿಂಗಾಲಂ ಪಿಡಿದ ಹಲಗೆ ನುಚ್ಚುಂನೂಱಾಗಲ್ಕಡು ಪಿಂದಪ್ಪಳಿಸಿ (ಕುಮುರಾ. ೮-೫೧). **ಕಡಿತಲೆಗಾಱ**: ೧. ಅವಱಿಂ ಪೊಱಗೆ ಮಿಂಚಿನ ಬಳ್ಳಿಯನನುಕರಿಸುವ ಕಡಿತಲೆಗಾಱರಿಂದಂ (ಧರ್ಮಾಮೃ. ೮-೨೨೬); ಮೆಱೆವ ಹಜ್ಜೆಯ ಪಂಡೆವಲಗೆಯ ಮುಱಿಯ ಕೈದಂಡೆಗಳ ಜುಣುಗಿಸಿ ತಱುಬಿ ನಿಂದರು ಸಂದ ಕಡಿತಲೆಗಾಱರುಭಯದಲಿ (ಕುವ್ಯಾಭೀ. ೪-೩೪). ೨. "ಚರ್ಮಿನ್, ಫಲಕಪಾಣಿ – ಈ ೨ ಕಡಿತಲೆಗಾಱ" (ನಾಚಿರಾ. ೧೩೪). [ಕಡಿತಲೆ + -ಕಾಱ]

**ಕಡಿತಲೆಗಾಱ** 'ಕಡಿತಲೆಕಾಱ' ನೋ.

**ಕಡಿತಲೆಗೋತ್ರ** (ನಾ). ಒಂದು ವಂಶದ ಹೆಸರು (?) : ಶ್ರೀಜಿನಪದಪಂಕಜ ವಿರಾಜಿತ ಮಧುಕರನೆನಿಪ್ಪ ಮಲ್ಲಿಕೊಟ್ಟಂ ಪೂಜಿತವೆನೆ ತೀರ್ತ್ಥಂಕರ ಬ್ರಾಜಿತ ಪ್ರತಿಕೃತಿಯನುಚಿತ ಕಡಿತಲೆಗೋತ್ರಂ (ಮೈಆರಿ. ೧೯೪೩, ೩೬-೫; 13ನೆಯ ಶತ). [ಕಡಿತಲೆ ? + ಗೋತ್ರ]

**ಕಡಿತಲೆಯಾಳ್** (ನಾ). ಖಡ್ಗಧಾರಿಯಾದ ಅಂಗರಕ್ಷಕ; ಬಿಚ್ಚುಗತ್ತಿ ಕಾವಲುಗಾರ: ಸುತ್ತಲುಂ ಕಡಿತಲೆಯಾಳ್ ಕಡಂಗಿ ಬರೆ ಮಾರ್ಗಮೊಡಂಬಡೆ ರಾಜಮಾರ್ಗದೊಳ್ ನಡೆಯೆ ಹಯಂ ವಿಳಂಬಿತದೆ ಕುಂಡಳಮಂಡಿತನೇಂ ವಿಳಾಸಮಂ ಪಡೆದನೋ (ಪಂಚಾಮಾ. ೪-೯).
[ಕಡಿತಲೆ + ಆಳ್$_3$]

**ಕಡಿತವೆರ್ಗಡೆ** (ನಾ). ರಾಜ್ಯದ ಲೆಕ್ಕಪತ್ರಗಳ ಇಲಾಖೆಯ ಪರಮಾಧಿಕಾರಿ; ಪ್ರಧಾನ ಕರಣಿಕ: ಶ್ರೀಮನ್ಮಹಾಪ್ರಧಾನ ಸೇನಾಧಿಪತಿ ಕಡಿತವೆರ್ಗಡೆ ... ಯೋಗೇಶ್ವರದೇವಂ (ಕಇ. IV, ೨೨-೬; 1024); [ಕಡಿತ]ವೆರ್ಗ್ಗಡೆ ಚನ್ದಿಮಯ್ಯನಾಯಕರು ಬಿಸ್ನಪಂಗೆಯ್ದು (ಸೌಇ. IX-i, ೯೬-೧೧; 1050); ರಾಜಾಧ್ಯಕ್ಷಂ ಕಡಿತವೆರ್ಗ್ಗಡೆ ಕನ್ನಡಸಂಧಿವಿಗ್ರಹಿ ದಣ್ಣನಾಯಕಂ ಕಾಳಿಮರಸರ್ (ಕಇಅ. ೧-೧-೪; 1092).
[ಕಡಿತ$_3$ + ಪೆರ್ಗಡೆ]

**ಕಡಿತಿ** (ನಾ). ಒಂದು ಬಗೆಯ ಜಿಂಕೆ: "ರಾಹಿಷಃ ... ಗೋಕರ್ಣವಾದ ಕಡಿ[ಪಾಠಾಂ. ದ]ತಿ" (ಸಿದ್ಧಾಂತಿ. ೧೩೬).
[← ತೆಲು. ಕಡಿತಿ, ಕಣಿತಿ]

**ಕಡಿತಿನ್** (ಕ್ರಿ). ಕತ್ತರಿಸಿ ತಿನ್ನು; ಕೊಂದು ತಿನ್ನು: ಒಂದಾಡ ತಿಂಬಾತ ಹೊಂದಿದಡೆ ಸ್ವರ್ಗವನು ಎಂದೆಂದು ಅಜನ ಕಡಿತಿಂಬ ಕಟಿಗ ತಾನಿಂದ್ರನೇಕಾಗ (ಸರ್ವಜ್ಞ. ೯೩೯). [ಕಡಿ$_2$ + ತಿನ್$_1$]

**ಕಡಿದಬ್ಬೆ** 'ಕಡಿದಾಬ್ಬೆ' ನೋ.

**ಕಡಿದಲೆ** (ನಾ). ಕತ್ತರಿಸಿದ ತಲೆ: ರಕ್ಕಸನ ಕಡಿದಲೆಯ ಮೆಟ್ಟಿದುಮಿಂದ ಬಳಿಕೀ ಖಳನ ಸತಿಯರು ತೊತ್ತಿರಹರು ... ಫಡ ಪತಿವ್ರತೆ ತಾನು ಗಡ ಕಾಳ್ಗಿಡದು ನುಡಿವವರಾವು ಗಡ ದಿಟ ಕಡಿದಲೆಯ ತಾ ಮೆಟ್ಟಿಮಿಾವಳು ಗಡ ಮಹಾದೇವ (ತೊರರಾ. ೫-೩-೫೬, ೫೮); ಕರ ತಾವರೆ ಕರುಳ್ವಳ್ಳಿ ತೋಳ್ದಿರೆ ಪಯೋಧರ ಮಿಾನು ಗಜತುಂಡು ಮೊಸಳೆ ನೊರೆತ ರೋಹಿತ ಫೇನ ಕಡಿದಲೆ ಕಮಠ ಸಂಗರವಿದ್ದುದಂಬುಧಿಯಂತೆ (ಮೋಹತ. ೩೫-೨೩). [ಕಡಿ$_2$ + ತಲೆ$_1$]

**ಕಡಿದಾಬ್ಬೆ$_1$** (ನಾ). ಖಡ್ಗದಂತಹ ಒಂದು ಬಗೆಯ ಆಯುಧ: ಕಣೆ ಕೈಯಿಟ್ಟಿ ಪಾಜುಂಬಳೆ ಭಿಂಡಿವಾಳ ಸಬಲ ಭಲ್ಲೆಯ ಕತ್ತಿ ಕಡಿದಾಬೆ ಕಟಾರ ಕೈಗತ್ತಿಗಳಿಂ ಕೊಂದು (ಚಿಕವಂ. ೧೪-೬). [ಕಡಿ$_2$ + ?]

**ಕಡಿದಾಬ್ಬೆ$_2$**, ಕಡಿದಬ್ಬೆ (ನಾ). ಸೊಂಟಪಟ್ಟಿ; ನಡುಪಟ್ಟಿ: ಮುತ್ತಿನ ಜಿಡೆ ರನ್ನದ ದಶರಥಿ ವಜ್ರ ಕೆತ್ತಿದೊಜೆಯ ಕಡಿದಾಬೆ ಒತ್ತಿ ಕಟ್ಟಿದ ಜವದಾಡೆ ಮೆಜೆಯೆ (ಕುರಾಸಾಂ. ೧೮-೬೬). **ಕಡಿದಬ್ಬೆ**: ಜಡೆಯ ಗೊಂಡೆಯ ಕಂಗಲ ಜೋಡು ಕಟ್ಟಿದ ಕಡಿದಬ್ಬೆ [ಪಾಠಾಂ. ದಾಬು, ದಾಬೆ] ಕಯ್ಯ ಸಿಂಗಾಡಿ ತೊಡೆಯ ಬಲ್ಲೆಹ ಮಿಗೆ ಮೆಜೆಯಲೆಯ್ತಂದರಂ ದೊಡನೆ ತುರುಕರಾವುತರು (ಕುರಾಸಾಂ. ೧೧-೨೨).
[ಕಡಿ$_5$ + ದಾಬೆ (< ದಾವು$_3$)]

**ಕಡಿದು**, ಕಡಿ$_4$, ಕಡು$_1$ (ಗು). ೧. ತೀಕ್ಷ್ಣವಾದ; ಉಗ್ರವಾದ: ಒಳ್ಳಿತು ಮೆಲ್ಲಿತು ಬೆಟ್ಟಿತು ತೆಳ್ಳಿತು ಬಸಿದಸಿದು ಕಡಿದು ... ತು ದು ಕಡೆಯೆನೆ ಕೈಕೊಳ್ಳಿಂ ಗುಣವಾಚಿ ಮೇಣ್ ತುಕಾರಂ ದ್ವಿತ್ವಂ (ಶಮದ. ೬೭). (ನಾ). ೨. ತೀಕ್ಷ್ಣವಾದುದು; ಉಗ್ರವಾದುದು: ಘೋರಾಪಿ – ಆದನಾನುಂ ಕಡಿದಪ್ಪುದಜಿಂದಂ (ವಡ್ಡಾರಾ. ೭೩-೪); ಪರಿವಂಬಿನಂತೆ ಕಡಿದಪ್ಪ ಬಿದಿರಡವಿಯಂತೆ ಪುಗಲರಿದಪ್ಪ.... ಸಂಸಾರಮಂ ನಂಬಿ ದರ್ಶನಮುಮಂ ವ್ರತಮುಮಂ ಕೆಡಿಸುವುದೆಗ್ಗಿಕೆ (ಧರ್ಮಾಮೃ. ೩-೧೮೬); ಕಾಗೆಯಡಗಂ ತಡೆಯದೆ ಕೊಡಲೊಡಂ ಕಿಡುಗುಮಿಾ ಕಡಿದಪ್ಪ ರೋಗಮೆಂದು ನುಡಿವುದುಂ (ವರ್ಧಪು. ೧೬-೫೬ ವ); ಅವರ್ಗಿನಿದು, ಕಡಿದು ಎನಗೀ ಸಾವು (ಅಶ್ವತ್ಥಾ. ೩೯-೭೫೬). ೩. ಏರುಗಡೆ ಇರುವುದು; ಇಳಿಜಾರಲ್ಲದುದು: ಇಲ್ಲಿಂದ ಮುಂದೆ ಈ ಬೆಟ್ಟ ಕಡಿದು; ಸಿದ್ಧಗತಿ ಇಲ್ಲದವರಿಗೆ ಹೋಗಲಾಗುವುದಿಲ್ಲ (ವಚಭಾ. ೧೫೧); ಎತ್ತರವಲ್ಲದಿದ್ದರೂ ಕಡಿದಾಗಿರುವ ಎಡದಡವನ್ನೂ ... ಕುರಚಲು ಗಿಡಗಳನ್ನು ತೊಳೆಯುತ್ತದೆ (ಮಲೆನಾ. ೧೯). ೪. ಕಷ್ಟವಾದುದು; ಕಠಿನವಾದುದು: ಈ ಕೆಲಸ ಬಹಳ ಕಡಿದಾದದ್ದು (ರೂಢಿ). ೫. ತಗ್ಗು; ಹಳ್ಳ; ಕಿಬ್ಬರಿ: ಆ ಮೂಕ ಪ್ರಾಣಿಯು ಕಡಿದಿಗೆ ಬಿದ್ದು ಬಡಿದಾಡುವುದು ಆತನಿಗೆ ಗೊತ್ತಾಯಿತು (ಸತ್ಯಸಾ. ೯೩). ೬. (ಅಲಂ) ಹುರುಪು; ಉತ್ಸಾಹ: ರೇವಕ್ಕನೂ ಕಡಿದಿನಿಂದ ಓಡಾಡಿ ಹರಿ ಹೇಳುತ್ತಿದ್ದಾಳೆ (ಬೆಳುಮ. ೩೬). **ಕಡಿ$_4$**: ೧. 'ಕಡಿಗಂಟು', 'ಕಡಿಗಂಡ$_1$' ಪರಾ. **ಕಡು$_1$**: ೧. 'ಕಡುಕಾಯ್', 'ಕಡುಗಂಪು' ಪರಾ. ☞ 'ಕಡಿ$_4$' 'ಕಡು$_1$' ಎಂಬಿವು 'ಕಡಿದು' ಎಂಬುದಕ್ಕೆ ವ್ಯಂಜನಾದಿಯಾದ ಶಬ್ದ ಸೇರಿ ಸಮಾಸವಾದಾಗ ಬರುವ ಸಂಕ್ಷಿಪ್ತರೂಪಗಳು.
[ದೇ. ‖ ತಮಿ. ಕಡು, ಕಡುಮ್ಮೈ, ಕಡಿ; ಮಲ. ಕಡು, ಕಡಿ; ತುಳು. ಕಡು, ಕಡ್ಪ; ಕೊಡ. ಕಡೀಪ; ತೆಲು. ಕಡಿದಿ]

**ಕಡಿದೋಳು** (ನಾ). ಕಡಿದ ತೋಳು; ಕತ್ತರಿಸಿದ ತೋಳು: ಕರತಳದ ತಳಿರೆಲೆಯ ಕಡಿದೋಳುಗಳ ಕೊಂಬುಗಳ ಬೆರಳ ಕಳಿಕೆಯ ತಲೆಯ ಫಲಬಂಧುರದ ... ರಣವನವೆಸೆದುದು (ಕುವ್ಯಾದ್ರೋ. ೬-೪೨).
[ಕಡಿ$_2$ + ತೋಳು (< ತೋಳ್)]

**ಕಡಿನಾಳಿಕೆ** (ನಾ). ಕತ್ತರಿಸಲ್ಪಟ್ಟ ನಾಳ: ಅರಳ್ಕ ಕಡಿನಾಳಿಕೆಯ ರಕುತಕೆ ಮರಲ್ವ ಭೂತವ್ರಜದ (ಕುವ್ಯಾಕ. ೧೫-೩೩).
[ಕಡಿ$_2$ + ನಾಳಿಕೆ]

**ಕಡಿನುಚ್ಚು** (ನಾ). ತುಂಡಾದ ಕಾಳು; ದಪ್ಪನುಚ್ಚು: ಎರಡಬ್ಬೆ ಮಾಡಿದರೆ ಕಡಿನುಚ್ಚು ಆದಾವು ನೋಡಣ್ಣಾ ನಿನ್ನ ಮಡದಿಯ (ನಾಪದ. ೮೯). [ಕಡಿ$_3$ + ನುಚ್ಚು]

**ಕಡಿಪು$_1$** (ಕ್ರಿ). ಕೊಲ್ಲಿಸು; ಕಡಿಸು: ರವಿತನಯಂ ತನಗೆ ಜ್ಯೇಷ್ಠನಾದ ಸಹಜಾತನಾಗಬೇಕೆಂಬುದನಜಿಯದೆ ರಾಜ್ಯಕಾಮುಕನಾಗಿ ಬವರದೊಳ್ ಕಡಿಪಿ ಪಿರಿದಾಗಿ ದುರ್ಯಶಮಂ ಪಡೆದೆನೆಂದು ಚಿಂತಾಕ್ರಾಂತನಾಗಿ (ಭಾರಶಾಂ. ೨). [ಕಡಿ$_2$ + –ಪು$_1$]

**ಕಡಿಪು$_2$** (ಕ್ರಿ). ಕಡಿದಾಗಿರುವಿಕೆ: ಸಂಪಾತಿ ಕುಳ್ಳಿರ್ದ ಶಕುನಿ ಶಿಲೆಯಿರ್ಪೆಡೆಯ ಕಡಿಪುಮಂ (ತ್ರೀರಾಮಾ. ೫೧೨-೭೩); ಸ್ವಲ್ಪ ದೂರ ಹೋದ ಮೇಲೆ ಗುಡ್ಡದ ಕಡಿಪು ಕಡಿಮೆಯಾಗತೊಡಗಿ, ಕಡೆಗೆ ಸಮತಟ್ಟಾಗುತ್ತಾ ಬಂದಿತು (ಮಲೆಮ. ೨೫೧). [ಕಡಿ$_4$ (< ಕಡಿದು) + –ಪು$_2$]

**ಕಡಿಪೆಂಡೆ** (ನಾ). ಕಾಲಲ್ಲಿ ಧರಿಸುವ ಒಂದು ಬಗೆಯ ಆಭರಣ: ಕಿಂಗೆಜ್ಜೆ ಕಡಿಪೆಂಡೆ ಘಂಟಾ ಕಟಿಸೂತ್ರ ವರ ಹಾರ ಪದಕ ಶ್ರೀವತ್ಸಕೌಸ್ತುಭ ರತ್ನ (ವಾದಿಕೀ. ೬೨). [ಕಡಿ? + ಪೆಂಡೆ$_1$ (< ಪೆಂಡೆಯ)]

**ಕಡಿಮಣ್ಣು** (ನಾ). ಒಂದು ಊರಿನ ಹೆಸರು (?).
ಕಡಿಮಣ್ಣಕೋಲ್ = ಒಂದು ಬಗೆಯ ಅಳತೆಗೋಲು: ಕಡಿಮಂಣಕೋಲಿನಲಳೆದು ಸರ್ವನಮಸ್ಯವಾಗಿ ಕೊಟ್ಟ ಕೆಯಿ (ಸೌಇ. XX, ೨೪೮-೬೭; 1228). [ಕಡಿ? + ಮಣ್ಣು (< ಮಣ್)]

**ಕಡಿಮಾಡು** (ನಾ). ಇಳಿಜಾರಾದ ಸೂರು, —ಛಾವಣಿ: ಎಲ್ಲರೂ ಕೊಟ್ಟಿಗೆಯ ಕಡಿಮಾಡಿನ ಆಶ್ರಯದಲ್ಲಿ ಸ್ವಲ್ಪಹೊತ್ತು ವಿಶ್ರಮಿಸಿಕೊಳ್ಳಲು ನಿಶ್ಚಯಿಸಿ ನಿಂತರು (ಮಲೆಮ. ೬೭೦).
[ಕಡಿ$_4$ (< ಕಡಿದು) + ಮಾಡು$_3$ (< ಮಾಡ$_1$)]

**ಕಡಿಮೆ** 'ಕಡಮೆ' ನೋ.

**ಕಡಿಮೆಟ್ಟು** (ನಾ). ಕುದುರೆಯ ಗೊರಸು ಮೆಟ್ಟಿದ ಗುರುತು (?).
[ಕಡಿ? + ಮೆಟ್ಟು$_2$]

**ಕಡಿಮೆಯ್ಯ** (ನಾ). ಒಬ್ಬಾತನ ಹೆಸರು : ಕಡಿಮೆಯ್ಯಙ್ಗಳ ಪೊರ್ಗ್ಗೆ ಸ್ವಥನಂಗೆಯೆ (ಎಕ. VIII, ಸೊರಬ. ೨೩೪–೫ ; 999). [?]

**ಕಡಿಯಕ್ಕಿ** (ನಾ). ನುಚ್ಚಾದ ಅಕ್ಕಿ; ಒಡಕಲು ಅಕ್ಕಿ : ಕಡಿಯಕ್ಕಿಯಂತೆ ಕತ್ತರಿಸಿ . . . ಹುರಿದು ಮೃದುಮಾಡಿ (ಸೂ ಪ ಶಾ. ೪–೨೨) ; ಪಡಿಗೆ ಬಂದವನಿಗೆ ಕಡಿಯಕ್ಕಿ ಆಗದೇ? (ಗಾದೆ). 'ನುಚ್ಚಕ್ಕಿ' ಪರಾ. [ಕಡಿ$_3$ + ಅಕ್ಕಿ$_1$]

**ಕಡಿಯಣ** 'ಕಡಿವಾಣ' ನೋ.

**ಕಡಿಯಾಣ** 'ಕಡಿವಾಣ' ನೋ.

**ಕಡಿಯಾಣಿ** 'ಕಡೆಯಾಣಿ' ನೋ.

**ಕಡಿಯಾಲ** (ನಾ). ಹಕ್ಕರಿಕೆಯ ಸೊಪ್ಪು : "ಶಂಖಿನಿ, ಚೋರಪುಷ್ಪೀ, ಕೇಶಿನೀ–೩ ಕಡಿಯಾಲದ ಗಿಡದ ಪೆಸರುಗಳು, ಹಕ್ಕರಿಕೇಸೊಪ್ಪಿನ ಹೆಸರು" (ಸಿದ್ಧಾಂತಿ. ೧೨೩). [?]

**ಕಡಿಯಿಸು$_1$** (ಕ್ರಿ). (ಬಾಣದಿಂದ) ತುಂಡಾಗುವಂತೆ ಹೊಡೆ, —ಸೀಳು: ತುಡುಕುವಾನೆಗಳ ಸುಂಡಿಲ ಕಡಿಯೆಚ್ಚನು . . . ಕಾಲವರನು ಮಡುಹಿದನಾ ವೀರರಾಮ (ತುರಾಸಾಂ. ೨೦–೩೧). [ಕಡಿ$_3$ + ಇಸು$_1$]

**ಕಡಿಯಿಸು$_2$**, ಕಡಿಸು (ಕ್ರಿ). ಕತ್ತರಿಸು ; ತುಂಡರಿಸು : "ಕಡಿಯಿಸು–ಖಂಡನೇ" (ಶ ಮ ಥಾ) ; ರಾಜೇನ್ದ್ರಚೋಳಪೊಂಪಲಮಾರಾಯರ್ ಸಗ್ಗಯೆ ದಡಿವರಾಳ ಚೆಲ್ವ ಗಣ್ಣ ×× ತಲೆಯಂ ಕಡಿಯಿಸಿ ಸತ್ತ (ಎಕ. X, ಚಿಂತಾಮ. ೩೧–೩ ; ಸು. 1050). **ಕಡಿಸು** : ಮಾರ್ಮಲೆತವಂದಿರ ಸಂದಿಸಂದಿಗೆ ಮುಳಿದು ಕಡಿಸುವೆನೆಳಸುವೆನು ನಿಮಿಷದೊಳಧೋಗತಿಗೆ (ಬಸವು. ೫೮–೬೬) ; ಪಿಡಿಸಮರರೋಳಿಯಂ ಕಡಿಸು ಮಾಸಾಳಿಯಂ ಕುಡಿಸು ನೆತ್ತರನು (ಚಬವು. ೪೬–೨೨). [ಕಡಿ$_2$ + –ಇಸು$_3$]

**ಕಡಿಲ್** 'ಖಟಿಲ್' ನೋ.

**ಕಡಿಲವಾಗಿಲ್** (ನಾ). ಒಂದು ಸ್ಥಳದ ಹೆಸರು : ತಥಾ ದಕ್ಷಿಣ ಬ್ಬೆಲು ಹುರದ ಕಡಿಲವಾಗಿಲ ಹಲುಹಾಡಿಯ ಎವಂ ತಿಗ್ರಾಮಾ ತ್ರಿಸನ್ಧಿ ಸಿಮಾತು (ಇಆ. VIII, ೯೫–೧ ; 444). [?]

**ಕಡಿಲುಕರಂಭ** (ನಾ). (?) : ಮೂಡಣ ಹೊಲದಲು ಕಟ್ಟಂಗಾಲುವೆ ಬಡಗಲು ಮಧ್ಯ ಕಡಿಲುಕರಂಭ ೬ ಮತ್ತರು ೧೨ [ದೇ]ವರ ಮುಂದೆ ಹೂದೋಂಟಂ ಮತ್ತ ೧ (ಕಇಆ. ೪೬–೪–೧೯ ; 1152). [?]

**ಕಡಿವಡೆ$_1$** (ಕ್ರಿ). ಕತ್ತರಿಸಲ್ಪಡು ; ತುಂಡಾಗು : ಮೃಡನಿಂ ತನ್ನಯ ತಲೆಯಂ ಕಡಿವಡೆದಂ (ಸಮಪು. ೮–೧೫೫) ; ಶೂದ್ರಿಕಂ ಕುಲಗೆಡಿಕನಹ ಕೀಚಕನು ನೆಱೆ ಕಡಿವಡೆದರೆಂದಱಿದು (ಬಸವು. ೧೧–೫೧) ; ಭರದಲೆತ್ತಿದ ತೋಳು ಕಡಿವಡೆದುರುಳಿತವನಿಗೆ (ಕುವ್ಯಾದ್ರೋ. ೧೪–೧೪) ; ಕಡಿವಡೆದ ಚತುರಂಗವನು ಮೇಲಡಿಸಿ (ನಿಭಾಗ. ೪–೯–೧೪) ; ಶಿಶುಪಾಲನು ವಜ್ರಾಯುಧದಿಂದ ಕಡಿವಡೆದು ಬಿದ್ದ ಬೆಟ್ಟದಂತೆ ಬಿದ್ದುಬಿಟ್ಟನು (ವಚಭಾ. ೮೬). [ಕಡಿ$_3$ + ಪಡೆ$_1$]

**ಕಡಿವಡೆ$_2$** (ನಾ). ಒಂದು ಬಗೆಯ ವಡೆ : ಮೊಸರ ನೀರೊಳಗಟ್ಟು ಮೊಸರಿನೊಳಗಿಕ್ಕೆ ಮೊಸರೊಡೆಯೆಂಬ ಹೆಸರಾಯ್ತು ನೆಱೆ ಕಾಸಿದ ಅಳಗೆಯೊಳ[ಗ]ಟ್ಟ ಪ[ಳದೆ]ಯೊಳು ಪಾಕಂ ಮಾಡಿಯಿಳಿಪೆ ಕಡಿವಡೆಯೆಂದೆನಿಸಿತು (ಸೂಪಶಾ. ೧–೭೦). [ಕಡಿ$_6$ + ವಡೆ]

**ಕಡಿವಣ** 'ಕಡಿವಾಣ' ನೋ.

**ಕಡಿವರ್** (ಕ್ರಿ). ಕಡಿತಕ್ಕೆ ಬರು ; ಕೊಲೆಗೆ ಒಳಗಾಗು (?) : ಅಂತು ಕಂಸಂ ಕೃಷ್ಣಂಗೆ ಕಡಿವಂದುದಂ [ಪಾಠಾಂ. ಕಿಡಿವಂದುದಂ, ಕೆಡೆವಂದುದಂ] ಕಂಡು ವಸುದೇವಂ ಬಲದೇವಂಬೆರಸು ಚಾತುರ್ದಂತಬಲಮಂ ಕೂಡಿಕೊಂಡು . . . ಯುದ್ಧಸನ್ನದ್ಧರಾಗಿ (ಅರ್ಥನೇ. ೮–೭೨ ವ). [ಕಡಿ$_3$ ? + ಬರ್$_1$]

**ಕಡಿವಾಗ** (ನಾ). ಕಡಿದ ಭಾಗ ; ಕತ್ತರಿಸಿದ ತುಂಡು : ಬೇಟೆಯಾಡಿ ಮೃಗಂಗಳಿಗೆ ಮದ್ದರೆದು ಕಡಿವಾಗಂ[ಪಾಠಾಂ. ಗಡಿಭಾಗಂ]ಗಳನು ಕೊಡಿಸಿದನು ಪರಿವಾರಕೆ ವಿನೋದದಲಿ (ಕುವ್ಯಾಆ. ೧೬–೩೮). [ಕಡಿ$_3$ + ಬಾಗ]

**ಕಡಿವಾಡಿ** (ನಾ). ಕಡಿದಾದ ಪ್ರದೇಶ : ಈ ತಡಸಲುಗಳ ಪ್ರವಾಹವು ೧೦೦ ರಿಂದ ೨೦೦ ಫೂಟು ಎತ್ತರವಾದ ಕಡಿವಾಡಿಗಳ ಮೇಲಿಂದ ಬೀಳುತ್ತ ಹೋಗುತ್ತದೆ (ಕಭಾಗ. ೧೮). [ಕಡಿ$_4$ (< ಕಡಿದು) + ಪಾಡಿ$_1$]

**ಕಡಿವಾಣ**, ಕಡಿಯಣ, ಕಡಿಯಾಣ, ಕಡಿವಣ (ನಾ). ೧. ಕುದುರೆಯ ಬಾಯಿಗೆ ಹಾಕುವ ಉಕ್ಕಿನ ತುಂಡು ; ಖಲೀನ : ಕವಿಯ ಕೀಲಿನ ಪಾರುವದ ಬಲುವಿಲ್ಲ ನಾಕದ ಸೂತ್ರಿಕೆಯ ಕೊಂಡೆಯ ವಿವಿಧ ಕಡಿವಾಣಗಳ (ಕುಮುರಾ. ೩–೨೯) ; ಕತ್ತೆಗೇಕಯ್ಯ ಕಡಿವಾಣ (ಸಿದ್ಧೇವ. ೪೦೨) ; ಬಾಲಕೆ ಕಡಿವಾಣವನಿಕ್ಕಿ ಕುದುರೆಯ ಮೇಲುಮೊಗಕೆ ಹಲ್ಲಣವ ಪೇಳಲಳವೆ ಕಟ್ಟ (ಕಂಸವಿ. ೧೫–೯೩) ; ಕಡಲಿಗೆ ಬಾಯಿ ತೆರೆದು ಕಡಿವಾಣಕ್ಕೆ ಬಾಯಿ ಮುಚ್ಚಿದರೆ ಆದೀತೆ? (ಗಾದೆ). ೨. (ಅಲಂ) ತಡೆ ; ನಿರೋಧ ; ಹತೋಟಿ : ಕಲ್ಪನೆಗೆ ಕಡಿವಾಣವಿಲ್ಲ (ಕಮನಿ. ೨೪) ; ನನ್ನ ಹುಚ್ಚು ಕಲ್ಪನೆಗಳಿಗೆ ಕಡಿವಾಣವನ್ನು ಹಾಕುವುದು ಸಾಧ್ಯವೇ ಇರಲಿಲ್ಲ (ಮಾರ್ಗದ. ೮೨). **ಕಡಿಯಣ** : ೧. ಕಡಿಯಣಕೆ ಬಾಯಂ ತೆಱೆಯದಿರಿಂ (ಅರ್ಥನೇ. ೬–೫೪) ; ಕಂಬಿಯ ಕಡಿಯಣದ ಕೀಲಣದ ಹೊರಟೆಯ ಘಾರಾಘಾರಿಯೊಳ್ ಜೋಳಿಸುವ ಲಾಲಾಜಲಂ (ಗಿರಿಕ. ೬–೫೫ ವ) ; ಸಾರಥಿ ಕಡಿಯಣದ ಕುಡಿನೇಣ ಕೊಂಡನು ತಿರುಹಿದನು ರಥವ (ಕುವ್ಯಾಕ. ೧–೮) ; ತುರಗಚಯದ ತುಟಿಯಿನುಣ್ಮುವ ಕಡಿಯಣದ ಖಣಖಣ ಧ್ವಾನಂ (ಚಬವು. ೨೩–೨೬). **ಕಡಿಯಾಣ** : ೧. "ಖಲೀನಂ, ಕವಿಯಂ – ಈ ೨ ಕಡಿಯಾಣಂ" (ಹಲಾಯು. ೭೩–೨೮೮) ; ಕಸೆ ಕಟ್ಟಿ ಕ[ಪಾಠಾಂ. ಡ]ಡಿಯಾಣ ಸರಸಮಂ ಸ್ವೈರಿಸದ ಚಳ ಬಳಿಕೆಗಳ ಚಾರು ತುರಗಕುಲ (ಸೋಮಚ. ೫–೨೮) ; ಕಡಿಯಾ[ಪಾಠಾಂ. ವಾ]ಣವನು ಸೆಳೆದಿಳೆಗಿಳಿದು ದೇನ್ಯೆಯವನಿಗವತರಿಸಿದ ಕಥಾಂತರವೇನು (ತೊರರಾ. ೩–೨–೨೨). **ಕಡಿವಣ** : ೧. ಹಮ್ಮುಗೆಗಳನು ಬಲಿಸುವ ಕಡಿವಣವ ಕಂಬಗಳ ವಾಗೆಯ ಬಿಗಿಯ (ಕುವ್ಯಾಖ್ಯಾ. ಒರಿಇ. ೧೨–೧೩ ಅಡಿಟ).

[ದೇ. ॥ ತಮಿ. ಮಲ. ಕಡಿವಾಳ ; ತುಳು. ಕಡಿವಾಣ, ಕಡಿವಾಣೊ, ಕಡ್ಡಾಣೊ ; ತೆಲು. ಕಳ್ಳೆಯ, ಕಳ್ಳ, ಕಳ್ಲೆ]

**ಕಡಿವಾರು** 'ಕಡಿವಾಱು' ನೋ.

**ಕಡಿವಾಱು**, ಕಡಿವಾರು (ನಾ). ಒಂದು ಬಗೆಯ ತೆರಿಗೆ (?) : ಈ ಗ್ರಾಮಕ್ಕ ಸಲುವ ದುರ್ಗದೇವರಿಗೆ ಕೊಟುಬಹ ಕಡಿವಾಱ[ಱು] ನಾಡು ದಳವಾಱಿಕೆ ಹುಗಿಯ ಭತ್ತ (ಸೌಇಇ. IV, ೨೫೫–೧೪ ; 1513). **ಕಡಿವಾರು** : ಗ್ರಾಮುಗಳ ಸ್ಥಳ ಸುಂಕಕ್ಕೆ ಸಲುವಂತ ಕಡಿವಾರು ಅಂಗಡಿ ಕಡಿವಾರು ಮಗ್ಗ ಕಡಿವಾರು ಗಾಣ (ಎಕ. XI, ನೊಳಕಾ. ೧–೨೯ ; 1557). [?]

**ಕಡಿವೆಱು** (ಕ್ರಿ). ಕಡಿಯಲ್ಪಡು ; ತುಂಡಾಗು : ಅಂಗೈವೆರಲ್ ಕಾಲ್ ಕಡಿವೆತ್ತಂತಾಗೆ (ರಾಜಶೇ. ೯–೨೨). [ಕಡಿ$_3$ + ಪೆಱು$_1$]

**ಕಡಿವೋಗು** (ಕ್ರಿ). ತುಂಡಾಗಿ ಹೋಗು ; ಕತ್ತರಿಸಿ ಬೀಳು : ಅರೆ ಮುಗಿದಿರ್ದ ಕಣ್ಗಳುಮುಲರ್ದ ಮೊಗಂ ಕಡಿವೋದ ಕೆಯ್ಯುಂ (ಗದಾಯು. ೪–೫೩) ; ತೋಳ್ ಬೇಜಱಾಗೆ ಕಾಲ್ ಖಂಡಿಸೆ ನಡು ಕಡಿವೋಗಲ್ಕೆ ಜೀರೇಱೆ ಮೂರ್ಧಂ (ಜಗವಿ. ೭–೫೭) ; ತೊಡೆ ಕಡಿವೋಗೆ (ಎಕ. XV, ಬೇಲೂರು. ೩೬೧–೨ ; 1200) ; ಸುರಿವ ರೋಹಿತದಿಂ ಕಡಿವೋದ ಕಾಲ್ಗಳಿಂ ತೊಲಗಿದ ತೋಳ್ಗಳಿಂ (ರಾಜಶೇ. ೫–೧೧೯). [ಕಡಿ$_3$ + ಪೋಗು$_1$]

**ಕಡಿಸ** (ನಾ). ಒಂದು ಜಾತಿಯ ಮರ (?). ‖P ಇದರ ಕಾಯಿಗಳನ್ನು ಕಿವಿಯ ಆಭರಣದಲ್ಲಿ ಅಳವಡಿಸಲು ಉಪಯೋಗಿಸುತ್ತಾರೆ. [**ದೇ. ‖ ತಮಿ.** ಕಡಿಚ್ಚೈ; **ತೆಲು.** ಕಡಿಸೆ]

**ಕಡಿಸು** 'ಕಡಿಯಿಸು$_2$' ನೋ.

**ಕಡಿಹ** (ನಾ). ಕಡಿತ; ಕತ್ತರಿಸುವ ಕ್ರಿಯೆ; ಛೇದನ: ಕರ್ಬೊನ್ನದಂತೆ ಇರ್ಕುಳಿಗೆ ವಂದು ಕಬ್ಬಿನಂತೆ ಕಡಿಹಕ್ಕೆ ವಂದು (ಧರ್ಮಾಮೃ. ೩–೭೭); ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲುಹು (ಬಸವ. ೨೫೧). [ಕಡಿ$_2$ + -ಹ$_2$]

**ಕಡು$_1$** 'ಕಡಿದು' ನೋ.

**ಕಡು$_2$** (ಅ). ವಿಶೇಷವಾಗಿ; ಹೆಚ್ಚಾಗಿ: [ಕಡುಪಾರ್ವ][ಪಾಠಾಂ. ಗುಡುವಾಯ] ಮೆಲ್ಲೆರ್ದೆಯೊಳ್ ಕಯ್ಯನಿಕ್ಕಿ (ಕಾದಂಬ. ೩೬); ಕಡು ನೆಗೆದಬ್ಬರಂ ಮೊಱಗಿನಂತಿರೆ (ಕಬ್ಬಿಕಾ. ೨೬೭); ಎಮಾದಿ ಗಣಪಠಿತಾಃ ಶಬ್ದಾಃ ಅವ್ಯಯ ಸಂಜ್ಞಾ ನಿಪಾತಸಂಜ್ಞಾಶ್ಚ ಭವಂತಿ. ಪ್ರಯೋಗ:— ಎಮ; ನಾಡೆ; ಎಡೆ; ನೆಱೆ, ಮಿಗೆ, ಕಡು (ಶಬ್ದಾನು. ೨೧ ಪ್ರಯೋ); ಕಡುನಾಣ್ಚೆಯಂಜಿ ಕಣ್ಮುಚ್ಚಿ (ಹದಿಬ. ೧–೫೬). [< ಕಡು$_1$]

**ಕಡು$_3$** (ನಾ). ಬದುವುಗಳಿಂದ ನಿರ್ದಿಷ್ಟವಾಗಿರುವ ಗದ್ದೆಯ ಸೀಳು, —ಭಾಗ: ಧನಿಗಳು ನನಗೆ ಎರಡು ಕಡು ಗದ್ದೆ ಕೊಟ್ಟಿದ್ದಾರೆ (ರೂಢಿ). [?]

**ಕಡು$_4$** 'ಖಡು' ನೋ.

**ಕಡುಂಬು**, ಕಡುಬು, ಕಡುವು$_2$ (ನಾ). ೧. ಕಣಕದ ಹಾಳೆಯಲ್ಲಿ ಹೂರಣವನ್ನು ಇಟ್ಟು ಬೇಯಿಸಿದ ಅಥವಾ ಕರಿದ ಒಂದು ಬಗೆಯ ಸಿಹಿತಿಂಡಿ: ನಿತ್ಯ ಬಿಂದುಗೆ – ಬೆಡಂಗು . . . ಕಡುಂಬು, ಕಡಂದುಱು (ಶಮದ. ೩೬ ಪ್ರಯೋ); ಕೊಡಂತಿ, ಕಡುಂಬು (ಶಬ್ದಾನು. ೮೦ ವ್ಯಾಖ್ಯಾ). **ಕಡುಬು**: ೧. ಕಡುಬಿಱಿಗುಮೆ ಗಂಜಿಯಿಱಿಯದೆನಲೇಂ ಮರುಳೇ (ನೇಮಿಪು. ೧೧–೯೮); ಕಡುಬುವುಂಡಲಿಗೆ ಬೆರಲಸೇವಗೆಯಾದಿಯಾಗಿ ಯಡವಾದ ಕಜ್ಜಾಯಗಳ ತೆಗೆದುಕೊಂಡು (ಸೂಪಶಾ. ೩–೭); ಸಮರವು ಕಡುಬಿನಿಟ್ಟಾಟವೆ (ಕೋಗಯ. ೨೨–೬೧); ನೀರಿಱಿಯದ ಗಂಟಲೊಳ್ ಕಡುಬಂ ತುಱುಕಿದಂತಾಯ್ತು (ರಾಮಾಶ್ವ. ೬–೮). 'ಕರಿಗಡುಬು' ಪರಾ. ೨. ಇಡ್ಡಲಿಗೆ; ಇಡ್ಲಿ: ಉದಯದೊಳು ಸಕೆಯಳಗೆಯಲ್ಲಿ ಪಾವಡೆಗಟ್ಟಿಯದಱೊಳಗೆ ಸುಳಿವಾಳೆಯಂ ಹರಹಿ ಸಂಪಳೆಯನೊದಗಾಗಿ ಯೆಱೆದು ಮಡಕೆಯ ಮುಚ್ಚಿಯಟ್ಟೊಡುದ್ದಿನ ಕಡುಬು ವೆಸರ ಹಡೆದು [ಪಾಠಾಂ. ಕಡುವೆಸರೊಡೆದುದು, ಕಡುಬವೆಸರಾದುದು] ಮೃದುವಹುದು (ಸೂಪಶಾ. ೧–೭೨). 'ಹೊಯ್ಗಡುಬು' ಪರಾ. ೩. (ಆಲಂ) ಹೊಡೆತ; ಏಟು; ಪೆಟ್ಟು: ತಮಗೆ ಬೀಳಬಹುದಾದ 'ಕಡುಬು'ಗಳನ್ನೂ ದೊರೆಯಬಹುದಾದ 'ಒಳಶುಂಠಿ'ಗಳನ್ನೂ ನೆನೆದು ಅವರಿಗೆ ದಿಕ್ಕೇ ತೋಚದಂತಾಗಿತ್ತು (ಕಳಹು. ೭೧). **ಕಡುವು$_2$**: ೧. ಜೋಳಾವ ಬೆಳಿಯಾಲಿ ಏಳೆಮ್ಮೆ ಕರೆಯಾಲಿ ಮಾವಗಳ ಮನೆಯ ಬೆಳಗಾಲಿ ಬೊಮ್ಮಯ್ಯನೆ ತುಪ್ಪದ ಕಡುವ ಕಳುಹೇನು (ಗೌರಪ. ೧೮–೨).

**ಕಡುಬಿನಕಾಳಗ**, **ಕಡುವಿನಕಾಳಗ** = ಜಾತ್ರೆಯಲ್ಲಿ ಕೊನೆಯ ದಿನ ಮಾಡುವ ಒಂದು ಉತ್ಸವ: ಕಡುಬಿನಕಾಳಗದಲ್ಲಿ ಪ್ರಸಾದವನ್ನು ಆಯ್ದುಕೊಳ್ಳಲು ಮಕ್ಕಳಿಗೆ ಬಲು ಹಿಗ್ಗು (ರೂಢಿ); ಬುದ್ಧಿಯಿಲ್ಲವೆ ನಮ್ಮ ಕೆಣಕಿ ಸಮರಾಂಗಣದಿ ಗೆದ್ದವರು ಲೋಕದೊಳಗಿಲ್ಲೆಂಬುದನ್ ಅಪ್ರಬುದ್ಧನರಿಯನೆ . . . ಉತ್ತರನ ಯುದ್ಧ ಕಡುವಿನಕಾಳಗಮ್ಮಲ್ಲ ರಣಬಲಿಯ ತಿದ್ದುವೆನು ಭೂತಗಣಕೆ (ತುರಂಗ. ೩೬–೨೮).

[**ದೇ. ‖ ತುಳು.** ಕಡುಂಬು, ಕಡುಬು; **ಕೊಡ.** ಕಡೀಂಬೀ; **ತೆಲು.** ಕಡುಮು]

**ಕಡುಂಬುಟ್ಟು** (ನಾ). (ಕರಾ) "ಕಡುಬು" (ಹುಲಿಹಾ. ಕೋಶ): ಕೋಳಿಕರಿ, ಕೈಮ, ನೆಯ್‌ಕೂಳು, ಕಡುಂಬುಟ್ಟು ಮತ್ತು ಪಾಯಸಗಳನ್ನು ಮಾಡಿದ್ದರು (ನಡೆದಾ. II, 1132); ಪೂವಿ ಕಡುಂಬುಟ್ಟುಗಳನ್ನು ನೀಡುತ್ತ ಚೆಂಗುಮಣಿಯ ಎಲೆಯ ಮುಂದೆ ಬಂದಳು (ಹುಲಿಹಾ. ೨೬).

[← **ಕೊಡ.** ಕಡೀಂಬುಟ್ಟೀ = ಅನ್ನದ ಸಣ್ಣ ಉಂಡೆ]

**ಕಡುಕ$_1$** 'ಕಡುಕು$_3$' ನೋ.

**ಕಡುಕ$_2$** 'ಕಡಿಕ$_2$' ನೋ.

**ಕಡುಕೆಂಪು** 'ಕಡುಗೆಂಪು' ನೋ.

**ಕಡುಕಲು**, ಕಡುಕಲ್ಲು (ನಾ). ಒಂದು ಊರಿನ ಹೆಸರು: ಅಲಿಂ ಪಡುವಲು ಧಾರೆ ಕಡುಕಲು ಅಲಿಂ ಪಡುವಲು ಮಲಮುರಿ ಕೆಳಿ (ಎಕ. III, ಮಳವ. ೧೨೧–೧೭೪; 1424); ಗಾಜನೂರ ಸೀಮೆ ಕಡುಕಲು ಗ್ರಾಮ ೧ (ಎಕ. VII, ಶಿವಮೊ. ೧೭–೫; 1696). **ಕಡುಕಲ್ಲು**: ಕಡುಕಲ್ಲ ಪುಲ್ಲಮಜ್ಜಲ ತೆಱುದಾರ ಪುನ್ನಾಡನಾಳೆ (ಎಕ. IX, ದೇವನ. ೪೩–೨; 900).

[ಕಡು$_1$ (< ಕಡಿದು) + ಕಲು$_1$ (< ಕಲ್$_3$)]

**ಕಡುಕಲ್ಲು** 'ಕಡುಕಲು' ನೋ.

**ಕಡುಕಷ್ಟ** (ನಾ). ಹೆಚ್ಚಾದ ತೊಂದರೆ, —ಪ್ರಯಾಸ: ಆಗಿನ ಅವರ ಜೀವನನಿರ್ವಹಣೆಯ ಕಡುಕಷ್ಟ ಹೇಳತೀರದು (ಜಗದಾ. ೧೩೭).

[ಕಡು$_1$ (< ಕಡಿದು) + ಕಷ್ಟ]

**ಕಡುಕಳ್ಳ** 'ಕಡುಗಳ್ಳ' ನೋ.

**ಕಡುಕಾಯ್** (ಕ್ರಿ). ಹೇರಳವಾಗಿ ಕಾಯಿ ಬಿಡು; ಹೆಚ್ಚಾಗಿ ಫಲ ಬಿಡು: ಬೇರಿಂದಿಟ್ಟಣಿಸಿ ಕಡುಕಾತ ಹಲಸನು . . . ಕಿತ್ತನಾ ಹನುಮ (ತೊರರಾ. ೫–೪–೫). [ಕಡು$_2$ + ಕಾಯ್$_3$]

**ಕಡುಕು$_1$** 'ಕಡಿಕು$_2$' ನೋ.

**ಕಡುಕು$_2$** (ನಾ). ಒಂದು ಜಾತಿಯ ಗಿಡ; ಸಣ್ಣ ಕಡುಕು; "ಕಣಿಕೆ" (ನಾಚಿರಾ. ?). [?]

**ಕಡುಕು$_3$**, ಕಟಕು$_3$, ಕಟುಕು$_3$, ಕಡಕು$_1$, ಕಡುಕ$_1$ (ನಾ). ಗಂಡಸರು ಕಿವಿಯಲ್ಲಿ ಧರಿಸುವ, ಮಧ್ಯದಲ್ಲಿ ಹರಳು ಅಥವಾ ಮುತ್ತು ಇರುವ ಆಭರಣ: ತೋರಹಾರಮನಗಲುರಕ್ಕೆ ಕೈಕೊಳಿಸುತುಂ ಹಾರೈಸಿ ಹೊಳೆವ ಮುತ್ತಿಉ ಕಡುಕನಿಕ್ಕುತುಂ (ನಂಬಿರ. ೧೩–೪೦); ಚವುಕಳಿಯ ಮುತ್ತಿನ ಸಣ್ಣ ಕಡುಕಿನ ಹೊಳೆವ ಮುತ್ತಿನ ಕೊಪ್ಪುಗಳ ಕರ್ಣಾಭರಣವೆಸೆಯೆ (ಬಸಪು. ೪–೩೯); ವಜ್ರಮಾಣಿಕದ ಕಡುಕು (ಕುವ್ಯಾಕ. ೧೫–೩೦). 'ಹತ್ತಕಡುಕು' ಪರಾ. **ಕಟಕು$_3$**: (?). **ಕಟುಕು$_3$**: ಕಿವಿಯೊಳಗೆ ಕಟುಕು ಪಣೆಯೊಳು ತಿದ್ದಿ ಧರಿಸಿರ್ದ ಸುವಿಭೂತಿ (ಮಲ್ಲಚ. ೭–೨೨). **ಕಡಕು$_1$**: ತೋರ ಮುತ್ತಿನ ಸರ ಕಡ[ಪಾಠಾಂ. ಡು]ಕುಗಳನು ತಂದು (ಕುರಾಸಾಂ. ೩೨–೭೫); ಕಿವಿಯೊಳೊಪ್ಪುವ ಕಾಮಾಕ್ಷಿ ಕಡಕು ಗಂಟೆ (ಕಂನವಿ. ೨೦–೬೦); ಬಾಲನ ಕಿವಿಗೆ ಕಡಕಿಲ್ಲ ಮುರಿಯಿಲ್ಲ (ಹುಟ್ಟಹ. ೮೮); ಎರಡು ಕಿವಿಗಳಿಗೂ ಕೆಂಪು ಹರಳಿನ ಭಾರವಾದ ಕಡಕು (ವಂಶವೃ. ೧೯೪). **ಕಡುಕ$_1$**: ಕಡುಕ ನೇವಳ ಲುಳಿ ಬಳೆ ಮೊದಲಾದಚ್ಚದೊಡಿಗೆಯನು (ಭರಚ. ೭೩–೧೧೬).

[**ದೇ. ‖ ತಮಿ. ಮಲ.** ಕಡುಕ್ಕ; **ಕೊಡ.** ಕಡೀಕೀ]

**ಕಡುಕು$_4$** 'ಕಡಂಕು$_2$' ನೋ.

**ಕಡುಕುಂದಱು**, ಕುಡುಕುಂದಱು (ನಾ). ಕರಗಸದಂತೆ ಹಲ್ಲುಗಳುಳ್ಳ ಕತ್ತಿ; ಕಕ್ಕುಗತ್ತಿ; "ತಿವಿವ ದಸಿ" (ಶಮದ. ನ. ೧೮೧ ಅಡಿಟ): ಕಡು[ಪಾಠಾಂ. ಕುಡು]ಕುಂದಱು, ಉರ್ಕುಂದೊಱೆ (ಶಮದ. ೧೬೦ ಪ್ರಯೋ). **ಕುಡುಕುಂದಱು**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕಡುಕು ? + ತಱು$_5$]

**ಕಡುಕುರು** (ನಾ). ಒಂದು ಬಗೆಯ ಕುರು; ದೊಡ್ಡ ಕುರು (?): ಕಡುಕುರು ಮಾಣುವುದಕ್ಕೆ –ಹಾವುಮೆಕ್ಕೆ ಬೇರನ್ನು, ಎಳ್ಳನ್ನು ಅರೆದು ಮೈಗೆ ಪೂಸಲು ಕಡುಕುರು ಮಾಣ್ಗುಂ (ವಿವೈವಿ. ೧೩೦). [ಕಡು$_1$ (< ಕಡಿದು) + ಕುರು$_1$]

**ಕಡುಕುವರ** (ನಾ). ತೀರ ಎಳೆಯ ಹುಡುಗ; ಅತಿ ಚಿಕ್ಕಪ್ರಾಯದವನು: ಕಡುಕುವರ ಧನುವಿಲ್ಲ ಸಾರಥಿಯು ನಾಸ್ತಿ ರಥ ಕಡುದುರುಳಿ ತವನಿಗಂ (ತುರಂಗ. ೫೨–೩೨). [ಕಡು$_1$ (< ಕಡಿದು) + ಕುವರ$_2$]

**ಕಡುಕೆಂಕ** (ನಾ). ಹೆಚ್ಚಾದ ಕೆಂಪು; ತುಂಬ ಕೆಂಪು: ಬೆಳರ್ವಟ್ಟು ನಿಂದುದೊಂದೆಡೆ ಮಲಯೋದ್ಭವ ಪ್ರಸರದಿಂ ಕದಡಿಂ ಕಡುಕೆಂ[ಪಾಠಾಂ. ಗೆಂ]ಕಮಾದುದೊಂದೆಡೆ ನವಕುಂಕುಮದ್ರವದಿಂ (ಶಾಂತಿಪು. ೮–೨೯; ಸೂಕ್ತಿಸು. ೧೨–೨೯). [ಕಡು$_1$ (< ಕಡಿದು) + ಕೆಂಕ]

**ಕಡುಕೆಯ್**, ಕಡಿಕೆಯ್$_2$, ಕಡುಗೆಯ್ (ಕ್ರಿ). ೧. ರಭಸಗೊಳ್ಳು; ತೀವ್ರವಾಗು; ತೀಕ್ಷ್ಣವಾಗು: "ಕಡುಕೆಯ್–ತೀವ್ರತ್ವೇ" (ಶಮುಧಾ); ನಡಪಿದನಜ್ಜನೆಂದು ವಿಜಯಂ ಕಡು[ಪಾಠಾಂ. ಡಿ]ಕೆಯ್ದಿಸನೆನ್ನಮಮ್ಮನಾಂ ನಡಪಿದನೆಂದು ಸಿಂಧುತನಯಂ ಕಡು[ಪಾಠಾಂ. ಡಿ]ಕೆಯ್ದಿಸಂ (ಪಂಪಭಾ. ೧೧–೧೪); ಕಡುಕೆಯ್ದು ನಿನ್ನನುಜರಂ ಕೊಂದಿಕ್ಕಿದಂ ಕೂಡೆ ನೂರ್ವರುಮಂ (ಗದಾಯು. ೩–೮೬); ಕಡುಕೆಯ್ದು ಮುರಾರಿ ಬಾಣದೆಶಕದಿನೆಚ್ಚಂ (ಜಗವಿ. ೯–೩೯). ೨. ಶೌರ್ಯವನ್ನು ತೋರು; ಸಾಹಸ ಮಾಡು: ಜಗದಳಲನಾಱಿಸುವೆನೆಂದು ಕಡುಕೆಯ್ದು[ಪಾಠಾಂ. ಕೈದು] ದುರ್ಗಿ ನಿರ್ಘಾತನಂಗೆಯ್ಕೆ (ಹಚಕಾ. ೬–೨೦); ಗೋಟಿಯಿಲರ್ ಕಡುಕೆಯ್ದು ಕಾದಿದರ್ (ಕಬ್ಬಿಕಾ. ೨೭೪). **ಕಡಿಕೆಯ್$_2$**: ೧. ಕಡಿಕೆಯ್ದು ಕಾದಲೆಂದೊಡರಿಸುವಾತನೇಂ ಭುಜಗಮರ್ದ್ದನನೇ ಕಲಿಗೋನ ಭೂಪನೊಳ್ (ಎಕ. VIII, ಸಾಗರ. ೧೦೯–೩೭; 1042); ಕಡಿಕೆಯ್ದಿದಿರಾಂತಂಪಾತನ ನಾಜಿಯೊಳಂತಕಂಗೀವೆಂ (ವರ್ಧಪು. ೨–೨೭). **ಕಡುಗೆಯ್**: ೧. ಕಡುಗೆಯ್ದೇಳ್ ನಿಂದು ಕೇಳ್ ನಾಯ್ಗಳಂ ಬಿಡು (ಕಾದಂಪೂ. ೧೫೯); ಕಳಿವೆಯ ಕೊಱಮಂ ತೊವೆಯುಮಂ ತಿಳಿದುಪ್ಪಮುಮಂ ವಿನೋದದಿಂ ಗಳಿಲನೆ ನಾಯ್ಗೆ ಬೇಗಮೊಸೆದಿಕ್ಕಿದೊಡಂ ಕಡುಗೆಯ್ದು ಮತ್ತಮವ್ವಳಿಸಿ ಕನಲ್ದೊಡಲ್ದು (ಧರ್ಮಾಮೃ. ೬–೧೬೭). ೨. ಆ ಜಗದೀಶನ ದಂಡನಾಯಕಂ ಮದವದನೇಕಪ ಪ್ರಕರದಿಂ ಕಡುಗೆಯ್ದು ಗೆಲಲ್ ಕಡಂಗಿದಂ (ಶಾಂತಿಪು. ೧೧–೨೧); ಅರಿಮೋಹರವ ಕಡುಗೆಯ್ದು[ಪಾಠಾಂ. ಕಡುಕೆಯ್ದು, ಕಡಿಕೆಯ್ದು] ಕಡಿದೊಟ್ಟಿದನು (ಕುರಾಸಾಂ. ೧೩–೧೩೪). [ಕಡು$_1$ (< ಕಡಿದು) + ಕೆಯ್$_1$]

**ಕಡುಕೊರ್ಬು** 'ಕಡುಗೊರ್ವು' ನೋ.

**ಕಡುಕೋಪ** 'ಕಡುಗೋಪ' ನೋ.

**ಕಡುಗ$_1$** 'ಖಡ್ಗ' ನೋ.

**ಕಡುಗ$_2$** (ನಾ). ಒಬ್ಬಾತನ ಹೆಸರು: ಶ್ರೀ ಕಡುಗ (ಎಕ. II, ४೧೯; 1050). [?]

**ಕಡುಗಂಟು**, ಕಡಿಗಂಟು (ನಾ). ಬಿಡಿಸಲಾಗದ ಗಂಟು; ಕಗ್ಗಂಟು; ಬಲುತೊಡಕು: ಇದ್ದ ಒಬ್ಬ ಅಣ್ಣನನ್ನು ಮೃತ್ಯುವಿನ ದವಡೆಯಿಂದ ಬಿಡಿಸಿಕೊಳ್ಳಲು ಹೋಗಿ ಕಡಿದುಹೋಗಿದ್ದ ತನ್ನ ಸಂಸಾರ ಕಡುಗಂಟಾಯಿತು (ಬಂಕಿಮ. ೩೧೬). **ಕಡಿಗಂಟು**: (ಕಿ). [ಕಡು$_1$ (< ಕಡಿದು) + ಗಂಟು]

**ಕಡುಗಂದಿ** (ನಾ). ೧. ಕರುವಿನ ಮೇಲೆ ಅತಿ ಪ್ರೀತಿಯುಳ್ಳ ಹಸು: "ವತ್ಸಕಾಮಾ, ವತ್ಸಳಾ – ಈ ೨ ಕಡುಗಂದಿ" (ಹಲಾಯು. ४೫–೧೧೬). ೨. ಮಗುವಿನ ಮೇಲೆ ಬಹಳ ಪ್ರೀತಿಯುಳ್ಳವಳು: ದೇವಕಿ ಕಡುಗಂದಿಯಪ್ಪುದಱಿಂ ತೊರೆದೆಚ್ಚು ಪಾಯ್ವ ಮೊಲೆವಾಲಿಂ ಮಗನಂ ಮಜ್ಜನಂಬುಗಿಸಿ (ಅರ್ಧನೇ. ೮–೨೧ ವ). [ಕಡು$_1$ (< ಕಡಿದು) + ಕಂದಿ$_1$]

**ಕಡುಗಂದಿಗಲಿ** (ನಾ). ಕರುವಿನಲ್ಲಿ ಅತಿ ಪ್ರೀತಿಯುಳ್ಳ ಹಸುವಿನಂತೆ ಶೂರನಾದವನು (?): ಕಣ್ಬೊಲಿಕೆ ಮೊಗಮಂ ಸುತ್ತಿ ಕುಂಬಿಕ್ಕುತುಂ ಪರಿವ ಕಡುಗಂದಿಗಲಿಗಳುಮಂ... ಮೊಱೆಯುತ್ತುಂ ಪರಿವ ಪೆಂಕುಳಿಗಲಿಗಳುಮಂ (ಲೀಲಾವ. ೫–೧೩४). [ಕಡುಗಂದಿ + ಕಲಿ$_2$]

**ಕಡುಗಂದಿತನ** (ನಾ). ಅತಿ ಪ್ರೀತಿ; ಹೆಚ್ಚಿನ ವಾತ್ಸಲ್ಯ: ಗೂಡುಗಳೊಳ್ ಗೂಡುಗೊಂಡಿರ್ದ ಕುಱುಳೆವಱಿಗಳ್ಗೆ ಕುಟುಂಕನಿಕ್ಕಿ ಕಡುಗಂದಿತನದಿಂ ಕೋಡಗಱಿಯ ತುಱುಗಲೊಳ್ ಪೊದೆಯಿಸಿ ಪದೆದಿರ್ದ ವನವಿಹಗಂಗಳಂ (ಚಂದ್ರಪು. ೮–४ ವ). [ಕಡುಗಂದಿ + – ತನ]

**ಕಡುಗಂದು** (ಕ್ರಿ). ಅತಿಯಾಗಿ ಬಾಡು, —ಸೊರಗು: ಇರದಧಿಕ ಭ್ರಾಂತತೆಯಂ ಧರಿಯಿಸಿ ಕಡುಗಂದಿ ಜಿನುಗುವಾಱಿಡಿಯಾದಂತಿರೆ ತೋರ್ಪೀ ಪರಿಜನಮಂ ಹರಿಸದೊಳೊಡಗೂಡಿ ತೋಱು ಚರಣಾಂಬುಜಮಂ (ಚಂದ್ರಪು. ೫–೧೫). [ಕಡು$_2$ + ಕಂದು$_1$]

**ಕಡುಗಂಪು**, ಕಡುಕಂಪು (ನಾ). ಅತಿಶಯವಾದ ಸುಗಂಧ; ಮಿಗಿಲಾದ ಸುವಾಸನೆ,—ಪರಿಮಳ: ಮಡಿಗಳೊಳಗಲರ್ದ ನೆಯ್ದಿಲ ಕಡುಗಂಪುಮನಿವಱ ಕಂಪು ಗೆಲ್ದುವು (ಆದಿಪು. ೧–೬೦); ನಡು ತಾನೆ ಸಿಂಗಳದೇಶ ಕುಂತಳದೇಶ ಮುಡಿ ಕರ್ಣ ಕರ್ಣಾಟದೇಶ ಕಡುಗಂಪು ಕಾಶ್ಮೀರದೇಶ (ಭರತೇ. ೯–೪೬); ತೊಡೆದ ಯಕ್ಷಕರ್ದಮದ ಕಡುಗಂಪಿಂಗೆ ಮದಾಳಿ ಮೊರೆದೆಱಗೆ (ರಾಜಶೇ. ೬–೧೧ ವ). **ಕಡುಕಂಪು**: ಕಡುಕಂಪಂ ಪಿಡಿಕೆಯ್ಸಲ್ ಅಕ್ಕುಮೆ ಬಟಿಲ್ದೈತಂದ ತಂಗಾಳಿಯಂ ಪಿಡಿಯಲ್ ಬರ್ಕುಮೆ (ಅರ್ಧನೇ. ೧–೩೧). [ಕಡು$_1$ (< ಕಡಿದು) + ಕಂಪು]

**ಕಡುಗಂಪುವಡೆ** (ಕ್ರಿ). ಬಹಳ ಸುವಾಸನೆ ಹೊಂದು, —ಪರಿಮಳಗೊಳ್ಳು: ಪೂಗಳೊಂದು ಗೂಡಿ ಕಡುಗಂಪುವಡೆದುವು (ಜೈಮಿಭಾ. ೩–೩೩). [ಕಡುಗಂಪು + ಪಡೆ$_1$]

**ಕಡುಗಕ್ಕಸ** (ನಾ). ೧. ಕಠಿನವಾದುದು; ಕಷ್ಟವಾದುದು: ಕಡುಗಕ್ಕಸದ ಕೆಲಸಮನುಸಿರಲಱಿಯದವನೊಯ್ಯನವನಿಸುತೆಗಿಂತೆಂದನು (ಜೈಮಿಭಾ. ೧೯–೧೪). ೨. ಕರ್ಕಶವಾದುದು: ಕಡುಗಕ್ಕಸದ ಬಟ್ಟ ಬಲ್ಮೊಲೆಯ ಪೊಚ್ಚಪೊಸಜವ್ವನದ ನೀಱೆಯರ್ (ಜೈಮಿಭಾ. ೩೦–೨). [ಕಡು$_1$ (< ಕಡಿದು) + ಕಕ್ಕಸ]

**ಕಡುಗಜ್ಜ** (ನಾ). ಮಿಗಿಲಾದ ಕೆಲಸ; ಮಹತ್ತರವಾದ ಕಾರ್ಯ: ಕೇಳದತಿಹಿತರ ವಚನಮನಾಲೋಚಿಸದಗ್ರಕಾರ್ಯಮಂ ವ್ಯಗ್ರತೆಯಂ ತಾಳಿ ಕಡುಗಜ್ಜಮೆಸವುದನೇಳಿಪುದುರ್ವೀಜನಂ (ರಾಜಶೇ. ೧೩–೯). [ಕಡು$_1$ (< ಕಡಿದು) + ಕಜ್ಜ$_1$]

**ಕಡುಗಟ್ಟಿ** (ನಾ). ಅತಿ ಕಷ್ಟ: ಪುಟ್ಟಿ ಮುಳಿಸೊಸಗೆಗಳೆ ಕಡುಗಟ್ಟಂ ಮುಳಿಸೊಸಗೆಯೆಂಬ ನೃಪತನಯನವಂ ಮುಟ್ಟುಗಿಡೆ ಪಾರದರದೊಳ್ ಪುಟ್ಟಿದನರಸಂಗಮುರಸಿಗಂ ಪುಟ್ಟಿದನೇ (ಪಂಪಭಾ. ೧೨–೧೩೩). [ಕಡು$_1$ (< ಕಡಿದು) + ಕಟ್ಟ$_2$]

**ಕಡುಗಟ್ಟಿಗ** (ನಾ). ಬಲುಗಟ್ಟಿಗ; ಅತಿಶಯ ಪರಾಕ್ರಮಿ; ಒಂದು ಬಿರುದು: ತುಱುದಿಕ್ಕಿದನಾಸ್ತ ಘಟಿಯನಾಯದಗಣ್ಡಂ ಕಟ್ಟಾನೆಮಲ್ಲನಂ ಕಡುಗಟ್ಟಿಗನುತ್ತಿಗನನೊಲಿಪನಂ ಚಟ್ಟಿಗನಂ (ಎಕ. XV, ಅರಸೀ. ೨೩೭–೧೩; 971). [ಕಡು$_1$ (< ಕಡಿದು) + ಗಟ್ಟಿಗ]

**ಕಡುಗಡಬಡಿಸು** (ಕ್ರಿ). ವೇಗವಾಗಿ ಸರಿದಾಡು; ನಿಂತಲ್ಲಿ ನಿಲ್ಲದೆ ಗಡಬಡಿಸು: ಕಾಲದುರ್ಧರಭೋಗಿ ಜಿಹ್ವಾಜ್ವಾಲೆ ಕಿಡಿಯುನುಗುಳುತ ನುಡಕೆಯ ಮೇಲೆ ಹೆಡೆಯಂ ಬಡಿದುಕೊಳುತಂ ಕಡುಗಡಬಡಿಸುತ ಬಾಲವಂ ನುಲಿನುಲಿದುಕೊಳುತ (ಬಸವು. ೫೧–೫೯). [ಕಡು$_2$ + ಗಡಬಡಿಸು]

**ಕಡುಗಡಲು** (ನಾ). ದೊಡ್ಡ ಕಡಲು; ಆಳವಾದ ಸಮುದ್ರ; ಮಹಾಸಾಗರ: ತಾನೇನೆಂದು ನುಡಿವೆನು ಕೌತುಕಾಮೃತರಸದ ಕಡುಗಡಲ (ಕುವ್ಯಾ ಆ. ೨-೩); ಕಳವಳದ ಕಡುಗಡಲೊಳಾಡದೆ ಸುಳಿದೆವಿತ್ತಲು (ಕುವ್ಯಾಸ. ೧೫-೬೭); ಇದೆಯಲಾ . . . ಅಖಿಳಕರ್ಣಾಮೃತದ ಕಡುಗಡಲು (ನಿಭಾಗ. ೧೦-೧-೫).
[ಕಡು$_1$ (< ಕಡಿದು) + ಕಡಲು (< ಕಡಲ್$_2$)]

**ಕಡುಗಡಿಕ** (ನಾ). ಉಗ್ರನಾದ ಕಟುಕ; ಕೊಲೆಪಾತಕಿ: ಅವಂ ಕಡುಗಡಿಕರಾದ ಚರರನಟ್ಟಿದೊಡೆ (ಜೈಮಿಭಾ. ೧೧-೨೭).
[ಕಡು$_1$ (< ಕಡಿದು) + ಕಡಿಕ$_2$]

**ಕಡುಗಡಿದು** (ನಾ). ಅತಿ ವೇಗಶಾಲಿಯಾದುದು: ಮನದಿಂ ಕಡುಗಡಿದು ಮಿಥಿಲೆಯಂ ಕೂಗಿಡಿಸಿದುದದ್ಭುತ ತುರಂಗಮಂ ಸಿಂಗದ ಪೋಲ್ (ಪಂರಾಮಾ. ೪-೧೧೦).
ಕಡುಗಡಿಯವು=ಬಹಳ ವೇಗವುಳ್ಳವು, —ರಭಸವುಳ್ಳವು: ಕಡುಗಡಿಯವ[ಪಾಠಾಂ. ಗಲಿಗಳ]ಪ್ಪೆರಡಾನೆಗಳ್ ತಮ್ಮೊಳ್ ಪೋರಲ್ ಸಾರ್ದು ಪೆಱಪಿಂಗಿ ಪೋದುದುಮಮ್ (ವಡ್ಡಾರಾ. ೮೫-೨೫).
[ಕಡು$_1$ (< ಕಡಿದು) + ಕಡಿದು]

**ಕಡುಗಡುಪು** (ನಾ). ಅತ್ಯಂತ ರಭಸ; ಅತಿ ತೀವ್ರತೆ: ಮುಳಿಸಿಂದೆರಡುಂ ಕಡುಗಡುಪಿನಂಕದಾಂತೊಡನುಡಿದುವು . . . ಕರಿಯುಂ ಹರಿಯುಂ (ಶಾಂತಿಪು. ೨-೧೦೭); ಪೊಜಗೊಳಗೆಡದೊಳಂ ಬಲದೊಳಂ ಕಡುಗಡುಪಿನ್ನೆ ಬರ್ಪ್ಪ ವೇಳೆಯನ್ನಪ್ಪದೆ ಚಾರಿಸುವೋಜೆಯಂ ರಟ್ಟ ಕನ್ದರ್ಪ್ಪನನ್ತಾವಂ ಬಲ್ಲಂ (ಎಕ. II, ೧೩೩-೯೩; 982).
[ಕಡು$_1$ (< ಕಡಿದು) + ಕಡುಪು]

**ಕಡುಗತ್ತಲೆ** 'ಕಡುಗಟ್ಟಲೆ' ನೋ.

**ಕಡುಗನಲು** (ಕ್ರಿ). ಬಹಳ ಸಿಟ್ಟಿಗೇಳು; ಅತಿಯಾಗಿ ಕೋಪಿಸು: ಕಡುಗನಲುತ್ತ ವಜ್ರಾಯುಧಕೆ ನೇಮವನಿತ್ತನಾ ಬಲವೈರಿ (ನಿಭಾಗ. ೬-೧೧-೨೪).
[ಕಡು$_2$ + ಕನಲು$_1$ (< ಕನಲ್$_1$)]

**ಕಡುಗಯ್ಮೆ** (ನಾ). ಹೆಚ್ಚಾದ ದುಡಿಮೆ; ಕಷ್ಟವಾದ ಕೆಲಸ: ನಿಮ್ಮಂತಹ ಕಡುಗಯ್ಮೆಯ ಶ್ರಮಜೀವಿಗಳ ಜೀವಿತದ ವಿಷಯದಲ್ಲಿ ಕೊಸರಾಡುವುದಕ್ಕೆ ನನಗೆ ಇಷ್ಟವಿಲ್ಲ (ಮಂತ್ರಶ. ೫೪-೧೫).
[ಕಡು$_1$ (< ಕಡಿದು) + ಕಯ್ಮೆ (< ಕೆಯ್ಮೆ$_1$)]

**ಕಡುಗರಿದು** (ನಾ). ಬಲುಕಪ್ಪಾದುದು; ಕಡುಗಪ್ಪಾದುದು: ಕಡುಗರಿದಯಶಂ ಪೆಸರಿಡೆ ಕಡುವಿಳಿದಾಯಿತ್ತು ಕೀರ್ತಿ ಕವಿಗಳ್ ಕರಿದೆಂದೊಡೆ ಕರಿದವರ್ಗಳ್ ಬಿಳಿದೆಂದೊಡೆ ಬಿಳಿದು (ಲೀಲಾವ. ೧-೯).
[ಕಡು$_1$ (< ಕಡಿದು) + ಕರಿದು]

**ಕಡುಗರುಣ** (ನಾ). ಬಹಳ ದೈನ್ಯ; ಅತಿ ದೈನ್ಯತೆ: ಒಡನೆ ಕುಳ್ಳಿಹೆನೆಂದು ತಂದೆಗೆ ಕಡುಗರುಣವನು ತೋಱಿ ಕಾಡಿಯಳುತ್ತಿರಲು ಕಂಡು (ನಿಭಾಗ. ೪-೬-೩೪).
[ಕಡು$_1$ (< ಕಡಿದು) + ಕರುಣ]

**ಕಡುಗರುಣಿ** (ನಾ). ಬಹಳ ದಯಾವಂತ; ಅತ್ಯಂತ ಕರುಣೆಯುಳ್ಳವನು: ಈಕ್ಷಿಸುತ ನೃಪ ವರಕುಮಾರನ ಗಮನವನು ಕಡುಗರುಣಿ ಹೆತ್ತವರಾವ ಕಲುಹೃದಯರೋ ಮಹಾದೇವ ಪರಿಕಿಸುವೆಣಿದನೆನುತ (ನಿಭಾಗ. ೪-೭-೧೪).
[ಕಡು$_1$ (< ಕಡಿದು) + ಕರುಣಿ]

**ಕಡುಗರುವ** (ನಾ). ಬಹಳ ಘನತೆಯುಳ್ಳವನು; ಅತ್ಯಂತ ಹಿರಿಮೆಯುಳ್ಳವನು: ಕಡುಗರುವನೀ ರಾಧೇಯನಧಮನೆ ಮಾವ ಕೇಳೆಂದ (ಕುವ್ಯಾ ಕ. ೮-೨); ಹರಿಯ ಮಱೆದೆನು . . . ಕಡುಗರುವನೆಣಿಸುನ ದೇವನನು (ನಿಭಾಗ. ೧೧-೧೫-೬).
[ಕಡು$_1$ (< ಕಡಿದು) + ಗರುವ$_1$]

**ಕಡುಗರ್ಪು** (ನಾ). ದಟ್ಟವಾದ ಕಪ್ಪು; ತೀರ ಕಪ್ಪು: ಕಡುಗರ್ಪು ಭೃಂಗಕೋಟಿಯೊಳೆಸೆದಿರ್ದ ನೀಲಿ ಗಿರಿಮಲ್ಲಿಕೆಯೊಳ್ ಸಮನಾಗೆ (ಶಾಂತಿಪು. ೧-೬೪); ಕಡುಗರ್ಪೆಳಸಿದ ನಿಜವದನದೊಳಗ್ಗಳವಧರಂ ಕೆತ್ತೆ ಮಂತ್ರಿಮುಖ್ಯಂ ನುಡಿದಂ (ಕಾದಂಉ. ೪೭೮); ಮದಗಜಂಗಳ ಕಟಿತಟದ ಮದಕರ್ದಮದಿನೊಡವೆರೆದು ಕಲಸಿ ಕಲಂಕಿ ಕಡುಗರ್ಪನಾಳ್ದು ಕಾಳಿಂದಿಯಂತೆ ಕಣ್ಗೆವಂದು (ರಾಜಶೇ. ೨-೮ ವ).
[ಕಡು$_1$ (< ಕಡಿದು) + ಕರ್ಪು$_1$]

**ಕಡುಗಲಿ** (ನಾ). ಅತ್ಯಂತ ಶೂರ; ಮಹಾಪರಾಕ್ರಮಿ; ಬಲುಗಟ್ಟಿಗ: ನೆಱೆದೊಱೆ ಕಾದಿದಂ ಕಡುಗಲಿಯಂ ಪೋಲ್ತು (ಎಕ. IV, ನಾಗಮಂ. ೨೩-೪; 977); ಕಡುಗಲಿ ನಿತ್ಯೋಪವಾಸದೊಳ್ ನೆಱೆ ನೆಗೞ್ದಂ (ಧರ್ಮಾಮೃ. ೬-೩೭); ಅಂಗವಿಸಿ ಕಡುಗಲಿಗಳೆಱೆದಾಡಿದರು ತಮ್ಮೊಳಗೆ (ಕುವ್ಯಾದ್ರೋ. ೧೭-೩); ಪರವೆಂಗಳಿಗೆ ಹೇಡಿ ಕದನಕ್ಕೆ ಕಡುಗಲಿ ಪರಮುತಕ್ಕೊಡಂಬಡೆ ಮೂರ್ಖ (ಭರಚ. ೨-೧೩).
[ಕಡು$_1$ (< ಕಡಿದು) + ಕಲಿ$_2$]

**ಕಡುಗಲಿಗಂಡ** (ನಾ). ಮಹಾಶೂರ; ಶೂರರಲ್ಲಿ ಹೆಚ್ಚಿನ ಶೂರ; ಒಂದು ಬಿರುದು: ಕಡುಗಲಿಗಂಡ ರಾಜಿಣನೂರ್ಜ್ಜಿತ ಕೀರ್ತ್ತಿವಿಳಾಸ ಮೂರ್ತ್ತಿಯಂ (ಎಕ. VII, ಶಿವನೊ. ೫-೨೨; 1218).
[ಕಡುಗಲಿ + ಗಂಡ$_1$]

**ಕಡುಗಲಿತನ** (ನಾ). ಮಿಗಿಲಾದ ಶೂರತನ; ಅತಿಶಯ ಪರಾಕ್ರಮ: ಕಡುಗಲಿತನಮುಂ ಚಾಗದ ಪಡೆಮಾತುಂ ವಿದ್ಯೆಯುಳ್ಳುಮೊರ್ವನೊಳೆಂತುಂ ನಡೆಯವು ಭುವನಾಂತರದೊಳ್ (ಆದಿಪು. ೧೨-೧೦೪); ನುಡಿಯ ಬಲ್ಮೆಯುಂ ಕಡುಗಲಿತನಮುಂ . . . ಒಡವೆಯಾದಂದು ತಮ್ಮಿಂ ತಾವಕ್ಕುಂ ಕಿಡುವುವು ಧನಮಿಲ್ಲದಂದಿವೆಲ್ಲಂ (ಪಂಚತಂ. ೨೨-೧೪); ಕಡುಗಲಿತನದಿಂದೆನ್ನಂ ಬಿಡೆ ನುಡಿದು ಪೊಡರ್ಪಸುಱಿದು ಬೆಳ್ಳಿರಲೆಯ ಪೋಲ್ ಕಡುಗಲಿಗಳಾದಿರ್ (ಪಂರಾಮಾ. ೧೫-೬೦).
[ಕಡುಗಲಿ + -ತನ]

**ಕಡುಗಲಿಸು** (ಕ್ರಿ). ತೀಕ್ಷ್ಣವಾಗು; ತೀವ್ರತೆಯನ್ನು ಪಡೆ: ಮುಂದೈಪ ಬಿಸಿಲ ಬಿಸಿಯಿಂ ನೆತ್ತಿ ನೆಲನ ಬಿಸಿಯಿಂದ ಕಾಲ್ ಕಡುಗಲಿಸಿ [ಪಾಠಾಂ. ಕಡೆಗಳಸಿ] ಕವಿವ ಕಾದೆಲರ ಬಿಸಿಯಿಂದ ದೇಹಂ . . . ಬೆಂದು (ಹಚಕಾ. ೧೦-೨).
[ಕಡು$_1$ (< ಕಡಿದು) + -ಕಲ್$_4$ + -ಇಸು$_3$]

**ಕಡುಗಲ್ಲೆರ್ದೆ** (ನಾ). ೧. ಕಲ್ಲಿನಂಥ ಹೃದಯ; ಕಠಿಣ ಹೃದಯ. ೨. ಕಲ್ಲಿನಂಥ ಹೃದಯವುಳ್ಳವನು: ಒಳ್ನುಡಿಯುಂ ಗೇಯಮುಮುರ್ಚದ ಕಡುಗಲ್ಲೆರ್ದೆಯೆರ್ದೆಯನಂಬು ಮೇಣ ಚುರ್ಗುಮೇ (ಕಾವ್ಯಾವ. ೨೦೯).
[ಕಡು$_1$ (< ಕಡಿದು) + ಕಲ್ಲೆರ್ದೆ]

**ಕಡುಗವಿಲ** (ನಾ). ದಟ್ಟವಾದ ಕಪಿಲ ವರ್ಣ: ಸೊಡರಂ ಪರ್ಚಿಸಿದಂತಿರೆ ಬೆಡಂಗುವಡೆದೆಸೆವ ಮುನಿಯ ದೇಹದ್ಯುತಿಯಿಂ ಕಡುಗವಿಲಮಾಗಿ ಕಾಂಚನದಡವಿಯನನುಕರಿಸಿ ತದ್ವನಂ ಸೊಗಯಿಸುಗುಂ (ಕಾದಂಪೂ. ೭೨೯).
[ಕಡು$_1$ (< ಕಡಿದು) + ಕವಿಲ$_2$ (< ಕವಿಲ್$_3$)]

**ಕಡುಗತ್ತಲೆ** 'ಕಡುಗಟ್ಟಲೆ' ನೋ.

**ಕಡುಗಳ್ಳ**, ಕಡುಕಳ್ಳ (ನಾ). ಭಾರಿ ಕಳ್ಳ; ದೊಡ್ಡ ಕಳ್ಳ: "ಪಶ್ಯತೋಹರಂ ಕಡುಗಳ್ಳಂ" (ವಸ್ತುಕೋ. ೬೫-೮೨). **ಕಡುಕಳ್ಳ**: ಕಡುಕಳ್ಳರಿಗೆ ಗಂಡ ಮಡಿಧೋತ್ರಗಳ ಮಿಂಡ (ಪುರಂದ. ೪-೮೮-೧); ಕಳ್ಳರಲ್ಲಿ ಕಡುಕಳ್ಳ ಹೊಕ್ಕ ಹಾಗೆ (ಗಾದೆ).
[ಕಡು$_1$ (< ಕಡಿದು) + ಕಳ್ಳ$_1$]

**ಕಡುಗಟಿಪ** (ನಾ). ಬಲು ಮಾತಾಡುವವನು ; ವಾಚಾಳ ; ಬಾಯ್ಬಡಿಕ; ಅತಿ ಹರಟೆಗಾರ : ಚಪಳನಿವಂ ಕಡುಗಟಿಪಂ ವಿಪರೀತಮನೆನ್ನ ಮುಂವೆ ನುಡಿದಪನೆಂದುರ್ವಿಪ ಮುನಿಯುಮೇಡ (ಧರ್ಮಾಮೃ. ೬–೧೪) ; ಏನನೆಂದೊಡಂ ಕಡುಗಟಿಪಂ ಜಗದೊಳಿವಂ (ಧರ್ಮಾಮೃ. ೬–೧೮೩).

[ಕಡು$_1$ (< ಕಡಿದು) + ಗಟಿಪ]

**ಕಡುಗಟ್ತಲೆ, ಕಡುಗತ್ತಲೆ, ಕಡುಗಳ್ತಲೆ** (ನಾ). ಬಲು ಕತ್ತಲೆ; ಕಗ್ಗತ್ತಲೆ; ದಟ್ಟವಾದ ಕತ್ತಲೆ: "ಅವತಮಸಂ, ಅಂಧತಮಸಂ, ಸಂತಮಸಂ – ಈ ೩ ಕಡುಗಟ್ತಲೆ" (ಹಲಾಯು. ೧೮–೧೧೦) ; ಇಡಿದಡರೆ ಕೊಂಡ ಕುಸುಕಱ ಕಡುಗಟ್ತಲೆ ತಲೆಯನೆತ್ತದೊತ್ತರಿಸದಣಂ ಸೊಡರದೆಲೆಮಿಡುಕದಿರೆ (ಶಾಂತಿಪು. ೬–೧೧೮). **ಕಡುಗತ್ತಲೆ** : ಕಡುಗತ್ತಲೆಯೊಳ್ ಬಂದು (ವಡ್ಡಾರಾ. ೧೫೬–೯). **ಕಡುಗಳ್ತಲೆ** : ಕಡುಗಳ್ತಲೆ ಕವಿತರ್ಪಾಗಳ್ (ಗಿರಿಕ. ೪–೭೦ ವ).

[ಕಡು$_1$ (< ಕಡಿದು) + ಕಟ್ತಲೆ]

**ಕಡುಗಾಂಪ** (ನಾ). ಬಲು ದಡ್ಡ; ಮಹಾಮೂರ್ಖ : ಇಲ್ಲದ ಗುಣಗಳ ಬಲ್ಲರಿಚ್ಛೆಗತನದಲ್ಲಿ ಪೊಗಳೆ ಪೊಂಗಿ ನಲಿವ ಕಲ್ಲೆರ್ದೆಗರು ಕಡುಗಾಂಪರವನಿಯೊಳಗಿಲ್ಲನ್ಯರರಸುಗಳಿಂದ (ಕುರಾಸಾಂ. ೩೫–೮೫).

[ಕಡು$_1$ (< ಕಡಿದು) + ಗಾಂಪ]

**ಕಡುಗಾಡಿ** (ನಾ). ಮಿಗಿಲಾದ ಚೆಲುವು; ಅತಿಶಯವಾದ ಸೌಂದರ್ಯ : ಕಡುಗಾಡಿಯು ಸನ್ನಿಧಿ ಬೇಱದೊಂದು ಸುಣ್ಪಿನ ಕಣ ಬೇಱದೊಂದು ಪೊಸಗಂಪಿನ ಪೊಂಪುಱು (ಶಾಂತಿಪು. ೮–೭೯) ; ಕಡುಗಾಡಿ ಕಣ್ಗಡಱ ಮನಂ ಬೆರ್ಚೆ (ಕಾವ್ಯಾವ. ೩೦೦) ; ಕಡುಗಾಡಿ ಗರುಡಿಯೆಂಬಿವಱಿಂದಂ ವಸುಧೀಶನಣುಗದಮ್ಮಂ ವಸುದೇವಂ ಧರೆಗೆ ಕಣ್ಣುಮುಳ್ಳಾಗಿರ್ದಂ (ಅರ್ಧನೇ. ೪–೧೩೧) ; ಗೊಲ್ಲವೆಣ್ಣುಗಳು ಕಡುಗಾಡಿಯಿಂ ಬಂದು ಸೋಹುತಿಹರು ನೆಲ್ಲಮಡಿಗಳಿಗಿಳಿವ ಗಿಳಿಗಳ (ಕುರಾಸಾಂ. ೨–೩೬). [ಕಡು$_1$ (< ಕಡಿದು) + ಗಾಡಿ$_1$]

**ಕಡುಗಾಡಿವೆಱು** (ಕ್ರಿ). ಬಹಳ ಅಂದವನ್ನು ಪಡೆ; ಬಲ್ಲು ಸೊಗಸನ್ನು ಹೊಂದು : ಕಡುಗಾಡಿವೆತ್ತ ವಾಕ್ಸುಂದರಿ ಕೂರ್ತು ನಿಲ್ಕೆ ನಯಸೇನ ಮುನೀಂದ್ರಮುಖಾಬ್ಜಷಂಡದೊಳ್ (ಧರ್ಮಾಮೃ. ೧–೮) ; ಕಡುಗಾಡಿವೆತ್ತಲೆವ ತೆಂಕಣಗಾಳಿಯ ಸೋಂಕು ಸೊರ್ಕುವೆತ್ತುದು (ಧರ್ಮನಾ. ೧–೭೨). [ಕಡುಗಾಡಿ + ಪೆಱು$_1$]

**ಕಡುಗಾಪು**(ನಾ). ಬಿಗಿಯಾದ ಕಾವಲು; ಬಲವಾದ ಕಾವಲು: (... ಕೆಂಪನಾರಸಿಂಹಸೆಟ್ಟಿಯ ಕಡುಗಾಪಿನಲ್ಲಿ, ರಣಧೀರನೊಡನೆ, ನಿಷ್ಕ್ರಮಿಸುವನು). (ಚಿಟ್ಟಅ. ೨೦೮–೧೪). [ಕಡು$_1$ (< ಕಡಿದು) + ಕಾಪು$_1$]

**ಕಡುಗಾಯ್** (ಕ್ರಿ). ೧. ಅತಿಯಾಗಿ ಕಾಯು; ಬಹಳವಾಗಿ ಕಾವೇರು, —ಬಿಸುಪೇರು: ಕಡುಗಾಯ್ದ ಶಿಲೆಗಳೊಳ್ ಕೂರ್ಪುಡುಗದ ಕೈದುಗಳೊಳೆಱಗಿ (ಅಜಿಪು. ೧೧–೮) ; ಕಡುಗಾಯ್ದುಂ ನೀರ್ ಮನೆಯಂ ಸುಡಲಱಿಗುಮೆ (ಧರ್ಮಾಮೃ. ೨–೧೦೧) ; ನೆಲನುಷ್ಣಿಸಿತಲ್ತೆ ಕಡುಗಾದ ಕಾವಲಿಯಂತೆ (ತೊರರಾ. ೨–೪–೧೫) ; ಕ್ಷೋಣಿಯೊಳೀ ಬಲ್ಬಿಸಿಲಿಂದೆ ಕಡುಗಾದ ಬಾಣಲಿಯೆಣ್ಣೆಯೊಳಬುದಿ ಹೂಣಿಸಿ ಕುದಿಗೊಂಡು ಮರಳ್ದುದು (ಮೋಹತ. ೧೯–೪೫). ೨. (ಆಲಂ) ಅತಿಯಾಗಿ ಮುನಿದುಕೊಳ್ಳು ; ಬಹಳ ಸಿಟ್ಟಾಗು : ಕಡುಗಾಯ್ದಡರ್ತು ಮಚ್ಚರಿಸುವಳುನ್ನತಿಕ್ಕೆಗೆ ಬೆಡಂಗಿನ ತೋರ್ಕೆಗೆ (ಧರ್ಮಾಮೃ. ೮–೧೬೬). [ಕಡು$_2$ + ಕಾಯ್$_2$]

**ಕಡುಗಾಯಿ** (ನಾ). ಪಕ್ವವಾಗದೆ ಇರುವ ಕಾಯಿ; ಬಲಿತು ಹಣ್ಣಾಗದೆ ಇರುವ ಕಾಯಿ : ಅದಿನ್ನೂ ಕಸಗಟ್ಟೆ ಕಡುಗಾಯಿ (ರೂಢಿ). 'ಕಸುಗಾಯಿ' ಪರಾ.

[ಕಡು$_1$ (< ಕಡಿದು) + ಕಾಯಿ$_4$ (< ಕಾಯ್$_4$)]

**ಕಡುಗಾಯ್ಪು**, ಕಡುಗಾಹು (ನಾ). ೧. ಅತಿಯಾದ ಉಷ್ಣತೆ; ಮಿಗಿಲಾದ ಕಾವು : ನಡುಗಿ ತಡವರಿಸಿ ಬೆಂಕೆಯ ಕಡುಗಾಯ್ಪಿಂಗಗಿದು ಜೆಡೆಗಳೆಡುವಿನೊಳಹಿಗಳ್ ತೊಡರ್ದು ನುಸುಳ್ದೋಡಿ ಗಂಗೆಯ ಮಡುಗಳನಡಹಡಿಸಿ ಪುಗುವಿನಂ ಭಯವಶದಿಂ (ಕಾವ್ಯಾವ. ೪೧೦) ; ಉದಯಿಸೆ ಭಾನು ಭಾನುಮಣಿಯೊಳ್ ಕಡುಗಾಯ್ಪೊಗೆವಂದದಿಂದಂ (ಜಗವಿ. ೭–೫) ; ಬಿಸುಗದಿರನ ಕಡುಗಾಯ್ಪಂ ಮುಸುಳಿಸಿದುವು . . . ಕಾವನೆಚ್ಚಲರ್ಗಣೆಗಳ್ (ಕಬ್ಬಕಾ. ೩೦೧). ೨. (ಆಲಂ) ಏರಿದ ಕೋಪ; ಕೋಪೋದ್ರೇಕ; ಕೆರಳುವಿಕೆ: ನಡುವಗಲ ಬಿಸಿಲ್ ತನ್ನಂ ಸುಡೆ ವನಕರಿ ಕಮಳಬಂಧುವೊಳ್ ದಿನಕರನೊಳ್ ಕಡುಗಾಯ್ಪನೆ ಸರಸಿಜಮಂ ಕಿಡಿಸಲ್ ತಾಂ ಪೊಕ್ಕುದಾಗ ಬಗೆದಾ ಕೊಳನಂ (ಕವಿರಾ. ೩–೧೧೫) ; ಸಿಡಿಲಂ ಪಿಡಿವ ದಿಕ್ಕರಿಗಳನೆಳ್ಬಟ್ಟುವ ಕಡುಗಾಯ್ಪಂ ತಳೆದು . . . ನಿಂದು ಗಜಘಟಾಪಟಲದೊಳಂ (ಗಿರಿಕ. ೬–೫೫ ವ); ಕಡುಗಾಯ್ಪಿನಿಂದೆ ಗುಡುಗುಡಿಸಿ ಕಿಡಿಕಿಡಿಯಾದನೊಡನಾ ವಿರೂಪಾಕ್ಷನು (ಚೆಬಪು. ೩೧–೩). **ಕಡುಗಾಹು** : ೩. ಕಾದು ಕೆಂಪಾಗಿರುವಿಕೆ : ಕಡುಗಾಹ ತಳೆದವು ಕಂಗಳತಿಶಯ ರೌದ್ರಮುಖನಾದ (ನಿಭಾಗ. ೧೦–೮೪–೩೧).

[ಕಡು$_1$ (< ಕಡಿದು) + ಕಾಯ್ಪು$_1$]

**ಕಡುಗಾರ** (ನಾ). ಬಲಿಷ್ಠ (?) : ನುಡಿ ಭೇದಗಳಿಂದ ಕುಣಿಸುತಿಪ್ಪ ಮಾಯಾಕಡುಗಾರನೊಬ್ಬನೆ ಎಲ್ಲೆಲ್ಲಿ ಪರಿಪೂರ್ಣ (ವಿಪ್ರಸು. ೧೪–೩).

[ಕಡು$_1$ (< ಕಡಿದು) + -ಗಾರ (< -ಗಾಱ)]

**ಕಡುಗಾವಲ್** (ನಾ). ಬಲವಾದ ಕಾವಲು ; ಬಿಗಿಯಾದ ಅಂಗರಕ್ಷೆ: (... ಭವ್ಯಾಸನವನ್ನು ಬಳಸುಗಟ್ಟಿ ಬಿಚ್ಚುಗತ್ತಿಯ ಕಡುಗಾವಲ್ಗುಡುತ್ತಿರುವ . . . ಅಂಗರಕ್ಷಕರ ಜಂಗುಳಿ) (ಚಿಟ್ಟಅ. ೩೦–೧೭).

[ಕಡು$_1$ (< ಕಡಿದು) + ಕಾವಲ್$_1$]

**ಕಡುಗಾವಲಿ** (ನಾ). ದೊಡ್ಡ ಕಾವಲಿ; ಅಗಲವಾದ ಹಂಚು: ಕಾದ ಕಡುಗಾವಲಿಯೊಲಾಯ್ತಿಳೆ (ತೊರರಾ. ೫–೮–೬೦).

[ಕಡು$_1$ (< ಕಡಿದು) + ಕಾವಲಿ$_2$]

**ಕಡುಗಾಸು** (ಕ್ರಿ). ಬಹಳವಾಗಿ ಕಾಯಿಸು; ಮಿತಿಮೀರಿ ಶಾಖವುಂಟುಮಾಡು: ಕಡುಗ್ಗಾಸೆ ಕುದಿವ ಕಿಡಿಗುಟ್ಟಿ ಕೆಂಗಲಿಸಿ ಭುಗಿಲಿಡುವ ವಿಷವ (ಸಿದ್ಧರಾ. ೫–೧೪) ; ಕಡುಗಾಸಿ ಚಿಮ್ಮಾಡಿ ಕುಡಿ ಮುಗುಚಿ ಕತ್ತರಿಸಿ ಪೊಡೆವೆಡೆಗಳೊಳಗೆ ಸಿಡಿಸಿದನು (ಸರ್ವಜ್ಞ. ೧೪೧೨).

[ಕಡು$_2$ + ಕಾಸು$_1$]

**ಕಡುಗಾಹು** 'ಕಡುಗಾಯ್ಪು' ನೋ.

**ಕಡುಗಾಹೇಱು** (ಕ್ರಿ). ೧. ಬಹಳ ಕಾವೇರು. ೨. (ಆಲಂ) ಸಿಟ್ಟು ನೆತ್ತಿಗೇರು; ಕೋಪ ಹೆಚ್ಚಾಗು : ಹೇಱಿದರು ಹಿಳುಕುಗಳ ಮೈಯಲಿ ಜೋಱು ಮಸಗಲು ಭೀಷ್ಮ ಕಡುಗಾಹೇಱಿದನು ರೋಷಾಗ್ನಿವಿಕಟಜ್ವಾಲಿಮುಖನಾದ (ಕುವ್ಯಾಭೀ. ೬–೧೯).

[ಕಡುಗಾಹು (< ಕಡುಗಾಯ್ಪು) + ಏಱು$_1$ (< ಏಱ್$_1$)]

**ಕಡುಗಾಳ** (ನಾ). ತುಂಬ ಕೆಟ್ಟವನು, —ನೀಚ : ಕಡುಗಾಳ ಕೆಡಿಸಿ ಪೋದನು ನೋಡು (ಅನಂಚ. ೧೧–೯೬).

[ಕಡು$_1$ (< ಕಡಿದು) + ಕಾಳ$_1$]

**ಕಡುಗಾಳಿ** (ನಾ). ಬಲವಾದ ಗಾಳಿ; ಬಿರುಗಾಳಿ : ಅಡಿಯಿಂ ಮೇಗೆತ್ತುವ ಕಡುಗಾಳಿಯ ಪೊಯ್ಲೊಳಿದಱ ನೀರೊಱಿದಪುದು (ಆದಿಪು. ೧೩–೫೨) ; ಉಸಿರ್ದೊಡೆ ಕಡುಗಾಳಿಯ ತಱಗೆಲೆಗಳಂತೆ ಪಾಱಿದರಮರರ್ (ಅಜಿಪು. ೪–೬೫) ; ವಿಳಯಾನಿಳನೆನೆ ಭರದಿಂ ಕಡುಗಾಳಿ ಬೀಸಿದುದು ಗೋಕುಲದೊಳ್ (ಜಗವಿ. ೪–೮೬).

[ಕಡು$_1$ (< ಕಡಿದು) + ಗಾಳಿ]

**ಕಡುಗಾಳುತನ** (ನಾ). ತುಂಬ ದಡ್ಡತನ: ಕೇಳಜ್ಞ ನಿನ್ನ ಮಾತಂ ಕೇಳದೆ ಕಡುಗಾಳುತನದೆ ಸಿಲ್ಕಿದೆವು (ಪಂಚತಂ. ೨೯೦–೫). [ಕಡು$_1$ (< ಕಡಿದು) + ಕಾಳುತನ (< ಕಾಳ್ತನ)]

**ಕಡುಗಾಳಿಗ** (ನಾ). ಉಗ್ರವಾದ ಯುದ್ಧ; ಭಾರಿ ಕದನ: ಲಂಕಾಧಿನಾಥನಂ ವಾನರ ಸಹಾಯದಿಂ, ಕಡುಗಾಳೆಗದಿ ಕೊಂದು (ಶ್ರೀರಾಮಾ. ೮೫೭–೧೪೦). [ಕಡು$_1$ (< ಕಡಿದು) + ಕಾಳೆಗ]

**ಕಡುಗಿಚ್ಚು** (ನಾ). ಹೆಚ್ಚಾದ ಕಿಚ್ಚು; ಪ್ರಬಲವಾದ ಉರಿ: ಕಡುದುಃಖದಿಂದ ಬೆಂದುಂ ಬಿಡದಿಕ್ಕುಂ ಜ್ಞಾನರೂಪಮಂ ಜ್ಞಾನಮಯಂ ಕಡುಗಿಚ್ಚಿನಿಂದ ಬೆಂದುಂ ಬಿಡದಂತಿರೆ ತನ್ನ ರೂಪಮಂ ಕಳಧೌತಂ (ಪರಮಾ. ೫೯–೭೪). [ಕಡು$_1$ (< ಕಡಿದು) + ಕಿಚ್ಚು]

**ಕಡುಗಿಱಿದು** (ನಾ). ಬಹಳ ಸಣ್ಣದು; ಅತಿ ಚಿಕ್ಕದು: ಕಡುಗಿಱಿದಾಯ್ತು ರಜ್ಜುವರಮೈದುವರಂ (ಮಲ್ಲಿಪು. ೧–೫೬). [ಕಡು$_1$ (< ಕಡಿದು) + ಕಿಱಿದು]

**ಕಡುಗು$_1$** 'ಕಡಂಗು$_1$' ನೋ.

**ಕಡುಗು$_2$** (ನಾ). ಅತಿಶಯತೆ; ಹೆಚ್ಚಳ (?): ಮಿಡಿಯಲೊಡಂ ಸುರಿವುದು ರಸವೆಡೆಯುಡುಗದೆನಿಪ್ಪ ನುಡಿಗೆ ಕಡುಗೆನಿಸಿದ ಪೋಲ್ ಗುಡುಗುಡಿಸೆ ಗಂಟುಗಂಟುಗಳೆಡೆಯಿಂ ರಸಮುಣ್ಮುವಿಕ್ಷುವಾಟಗಳೆಸೆಗುಂ (ಕುಸುಮಾ. ೧–೧೦೦); ಮೃಗಪತಿಯಯುಡುಗು ಬೀಳುವ ಪಿಡುಗು ಮಿಂಚಿನ ಕಡುಗು ಬೆಡಗು ಮಳೆನೀರ್ ಕರಿಕರಾಯತದೀ (ಕೃಕರ್ಣಾ. ೨–೬೪). [?. / ತಮಿ. ಕಡುಗು = ಹೆಚ್ಚಾಗು]

**ಕಡುಗುಜ್ಜ**, ಕಡುಗುಜ್ಜು (ನಾ). ಬಹಳ ಕುಳ್ಳ; ಅತಿ ಗಿಡ್ಡ: ಆನೆ ಕಡುಗುಜ್ಜನಾದೊಡಮೇನನ್ಯಮೃಗಕ್ಕದೆಂತುಮುದ್ದಮೆ (ಸಮಪ. ೪–೬೪). **ಕಡುಗುಜ್ಜು**: "ಕಡುಗುಜ್ಜು ವೃಕ್ಷಂ ಕ್ಷುಪಾಖ್ಯಂ" (ಮಂಗರಾ. ೩೧–೧). [ಕಡು$_1$ (< ಕಡಿದು) + ಗುಜ್ಜ]

**ಕಡುಗುಜ್ಜು** 'ಕಡುಗುಜ್ಜ' ನೋ.

**ಕಡುಗುಣ್ಪು** (ನಾ). ಬಹಳ ಆಳ; ತೀರ ತಗ್ಗು: ಕಡುಗುಣ್ಪುವೆರಸು ದಾಂಟಿಂ ಗಡ ಮೀರಿಯನೆಂದು (ಆದಿಪು. ೧೨–೧೨೪); ಅವಳ ಕಡುಗುಣ್ಪ ನಾಳ್ದ ಪೊರ್ಕುೞ್ (ಕಬ್ಬಿಕಾ. ೭೮). [ಕಡು$_1$(< ಕಡಿದು)+ ಗುಣ್ಪು$_2$]

**ಕಡುಗುತ್ತ** (ನಾ). ತೀಕ್ಷ್ಣವಾದ ರೋಗ; ಉಲ್ಬಣವಾದ ವ್ಯಾಧಿ: ಕಿರಾತನಾಯಕರೆಯ್ತಂದು ಕಡುಗುತ್ತದಿಂ ಬಡಪಟ್ಟನೊಡಲಂ ಬಿಡದೆ ನೋಡಿ ನಡನಡ ನಡುಗಿ ಕಾಗೆಯಡಗಂ ತಡೆಯದೆ ಕೊಡಲೊಡಂ ಕಿಡುಗುಮಿಾ ಕಡಿದಪ್ಪ ರೋಗಂ (ವರ್ಧಪು. ೧೬–೫೬ ವ). [ಕಡು$_1$ (< ಕಡಿದು) + ಕುತ್ತ]

**ಕಡುಗುದಿ$_1$** (ಕ್ರಿ). ೧. ಬಹಳವಾಗಿ ಕುದಿ. ೨. (ಆಲಂ) ತಳಮಳಿಸು; ಚಡಪಡಿಸು: ಒದವಿದೈಶ್ವರ್ಯದಿಂ ಬಾಳ್ವರಂ ಕಂಡು ಕಡುಗುದಿದು ಮತ್ಸರದೆ ಕೊಂಡೆಯವನುಸಿರಿದೊಡೆ ಕೇಳ್ವುದು ನೀತಿಮಾರ್ಗವೆ (ಚಬಪು. ೮–೨೧). [ಕಡು$_2$ + ಕುದಿ$_1$]

**ಕಡುಗುದಿ$_2$** (ನಾ). ಅತಿಶಯವಾದ ಕುದಿತ; ಕತಕತ ಕುದಿಯುವಿಕೆ; ಅತ್ಯಂತ ಬೇಗೆ: ಮಿಡುಕುವಧರದ ಬಿಟ್ಟ ಕಂಗಳ ಕಡುಗುದಿಯ ಸುಯ್ಲುಗಳ (ನಿಭಾಗ. ೧೦–೫೪–೪). [ಕಡು$_1$ (< ಕಡಿದು) + ಕುದಿ$_3$]

**ಕಡುಗುದುರೆ** (ನಾ). ಚುರುಕಾದ ಕುದುರೆ; ವೇಗವುಳ್ಳ ಕುದುರೆ: ಬಿಸಿಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ (ಪಂಪಭಾ. ೧೦–೫೧ ವ); ತೊಡೆಯಿಂ ಕಡುಗುದುರೆಗಳಂ ಮದದಿಂ ನಡುಪಟ್ಟ ದಂತಿಯಂ . . . ಬಸದಾಗಿಸುವಂ (ಕಾವ್ಯಾವ. ೨೩೧); ಬಂದ ಕಡುಗುದುರೆ ಪೊಲದೊಳ್ ನಿಂದವರರಿ ತಿನಿದುವು (ಕಬ್ಬಿಕಾ. ೨೪೭); ಅಖಿಳವೇಗದ ಕಡುಗುದುರೆ ಬಳಲಿದವು ಬಗೆಯದೆ ಹರಿಯು ಗರ್ಜನೆಯ (ಕುವ್ಯಾದ್ರೋ. ೧೦–೨೨); ಕಡುಗುದುರೆಯ ಸೊಕ್ಕ ಮುಱಿಯೆಂದು ಚದುರಂಗದಡಿಯ ಮೇಲ್ವಾಯು ಪೇಳಿದಳು (ಕಂಸವ. ೬–೧೨೦). [ಕಡು$_1$ (< ಕಡಿದು) + ಕುದುರೆ]

**ಕಡುಗುರು** (ನಾ). ಶ್ರೇಷ್ಠನಾದ ಗುರು; ದೊಡ್ಡಗುರು: ಕಡುಗುರುವಿನಂತತಿ ವಿಭಕ್ತಿಲಿಂಗವನೀವುದೊಡನಾಡಿಯಂತೆ ತಾತ್ಪರ್ಯಾರ್ಥವೀವುದು (ಮಂಗರಾ. ೨–೬). [ಕಡು$_1$ (< ಕಡಿದು) + ಗುರು$_2$]

**ಕಡುಗುರುಡ** (ನಾ). ಸಂಪೂರ್ಣ ಕುರುಡ; ಕಗ್ಗುರುಡ: ನಿಮಿಷದೊಳಾರುಹತರಂ ಕಡುಗುರುಡರಂ ಮಾಡಿ ಬಸದಿಗಳಂ ಹಿರಿದು ಕೆಡಪಿ (ಬಸವು. ೪೯–೪೬); ಕಡುಗುರುಡಂ ಕಣ್ಣಂ ಕಡವರಮಂ ಬಡವಂ ಬಯಸುವ ಪರಿಯಿಂದೆ (ಜಯುಕಾ. ೨–೩೦). [ಕಡು$_1$ (< ಕಡಿದು) + ಕುರುಡ]

**ಕಡುಗೂಪ** 'ಕಡುಗೂರ್ಪ' ನೋ.

**ಕಡುಗೂರ್** (ಕ್ರಿ). ಬಹಳವಾಗಿ ಪ್ರೀತಿಸು: ಒಡಲೆರಡು ಜೀವಮೊಂದೆನೆ ಕಡುಗೂರ್ಪುದನಱಿ[ಯದಿಂತು ದುಷ್ಕೃತದಿಂದಂ] ತೊಡರ್ದವನೆ ತಾನೆ ತನ್ನಿಂ ಕಿಡೆ (ಕಾದಂಉ. ೪೮೧); ಕಡುಗೂರ್ಪಂಗನೆಯರ್ ನಂಟರ್ ತನುಭವರನುಜಾದಿಗಳಪ್ಪರೇ ಶರಣ್ ಸಾವೆಡೆಯೊಳ್ (ಧರ್ಮಾಮೃ. ೪–೨೬೪). [ಕಡು$_2$ + ಕೂರ್$_1$]

**ಕಡುಗೂರಿತು**, ಕಡುಗೂರಿದು (ನಾ). ಬಹಳ ಹರಿತವಾದದ್ದು: ಕಡುಗೂರಿತಕ್ಕುಮುಕ್ಕಿನೊಳೊಡಗೂಡಿದ ಪಚ್ಚೆ ಬೇಱ ಕೂರ್ಪಿಲ್ಲ (ಗದಾಯು. ೩–೬೫). **ಕಡುಗೂರಿದು**: ಪಾಂಡ್ಯನ ರಥದಚ್ಚುಡಿದಚ್ಚಿ ತಟ್ಟಿ ಕೊಂಡುವು ಕಡುಗೂರಿದುವೆನಿಪ ಗುರುತನೂಜನ ಕಣೆಗಳ್ (ಪಂಪಭಾ. ೧೨–೮೨). [ಕಡು$_1$ (< ಕಡಿದು) + ಕೂರಿತು (< ಕೂರಿತ್ತು)]

**ಕಡುಗೂರಿದು** 'ಕಡುಗೂರಿತು' ನೋ.

**ಕಡುಗೂರ್ಪ**, ಕಡುಗೂಪ (ನಾ). ಬಹಳ ಪ್ರೀತಿಮಾಡುವವನು; ಪ್ರಿಯತಮ: ಅನೆರಡಿಲ್ಲದೊಲ್ವ ತೆಱದಿಂದಿನಿಯಂ ಕಡುಗೂರ್ಪನಾದ ನಿನ್ನೇನೆನಗೆ (ಅನಂಪು. ೮–೧೮). **ಕಡುಗೂಪ**: ಕೈವಿಡಿದ ಸ್ತ್ರೀಯ ಕಡಿಖಂಡವ ಮಾಡಿದೆ ಒಡ್ಡನಾಡಿದ ಕಡುಗೂಪರನಿಱಿದು ಕೊಂದೆ (ಘನವ. ೬). [ಕಡು$_1$ (< ಕಡಿದು) + ಕೂರ್ಪ$_1$]

**ಕಡುಗೂರ್ಪು$_1$** (ನಾ). ಅತಿಶಯವಾದ ಪ್ರೀತಿ; ಹೆಚ್ಚು ಅನುರಾಗ: ಅಡಗಿನೊಳು ಬೆರೆಸಿ ವಿಷಮಂ ಕಡುಗೂರ್ಪಿಂದಿಕ್ಕಿ (ಧರ್ಮಾಮೃ. ೨–೨೦೨). [ಕಡು$_1$ (< ಕಡಿದು) + ಕೂರ್ಪು$_1$]

**ಕಡುಗೂರ್ಪು$_2$** (ನಾ). ಅತಿಶಯವಾದ ತೀಕ್ಷ್ಣತೆ; ಬಹಳ ಹರಿತ: ಕಡುಗೂರ್ಪಿಲ್ಲದ ಕರವಾಳ್ ಕಡುಪಿಲ್ಲದ ಕುದುರೆ ಗಾಡಿಯಿಲ್ಲದ ಬೆಲೆವೆಣ್ . . . ಅರ್ಥಿಯಂ ಮಾಡುಗುಮೇ (ಅಜಿಪು. ೬–೯೬); ಖಗನಾಯಕರಱಿದೊಡುರ್ಕುಗೆಟ್ಟನೆ ಮುನ್ನಿಂ ಮಿಗೆ ಕಡುಗೂರ್ಪಂ ತಳೆದಂ (ವರ್ಧಪು. ೮–೩೦). [ಕಡು$_1$ (< ಕಡಿದು) + ಕೂರ್ಪು$_2$]

**ಕಡುಗೂರ್ಮೆ** (ನಾ). ಅತಿ ಪ್ರೇಮ; ಅಧಿಕವಾದ ಪ್ರೀತಿ: ನಿನ್ನಸು . . . ಪೋಪೊಡಮೆನಗಿನ್ನುಮಿಾಯೊಡಲೋರ್ದುದು ನಾಣಿಲಿ ಜೀವಮಂ ದೊಡಾವೆಡೆಯೊಳೆ ನಿನ್ನೊಳೆನ್ನ ಕಡುಗೂರ್ಮೆಯುಮಟ್ಟುಱುಮಂಗ ವಲ್ಲಭಾ (ಪಂಪಭಾ. ೧೩–೪); ಒಡ್ಡಿದ ಮೇಘಸಮೂಹದಂತೆ ನಂಟರ ಕಡುಗೂರ್ಮೆ (ಧರ್ಮಾಮೃ. ೫–೧೯); ಕಡುಗೂರ್ಮೆಯಿಂದ ನಿನ್ನಡಿಯಾಣತಿಯನೆನ್ನ ಮುಡಿಯೊಳಾಂತೆನು (ಹದಿಬ. ೧–೪೪). [ಕಡು$_1$ (< ಕಡಿದು) + ಕೂರ್ಮೆ]

**ಕಡುಗೂರ್ಮೆವೆಱು** (ಕ್ರಿ). ಅಧಿಕವಾದ ಪ್ರೀತಿಯನ್ನು ಪಡೆ; ಹೆಚ್ಚು ಅನುರಾಗವನ್ನು ಹೊಂದು : ಬಿರಿದಪ್ಪ ಬೆಸನನೆನಗಿಂದರಸಂ ಕಡುಗೂರ್ಮೆವೆತ್ತು ಬೆಸಸಿದಂ (ಧರ್ಮಾಮೃ. ೬-೨೭). [ಕಡುಗೂರ್ಮೆ + ಪೆಱು$_1$]

**ಕಡುಗೆಂಟು** (ನಾ). ಬಹಳ ದೂರ : ಗುಣಾ[ನುವಾದದಿಂ ಲಜ್ಜಿತನಂ] ಬರಿತೆಗೆಯಲುಂ ಕಡುಗೆಂಟಾದನಂ ಬಟ್ಟೆಯಟ್ಟದೆಯುಂ ಬಲ್ಪಿನಿಂ ದೇವಿಯ ಪಾದಮೂಲಮನೆಯ್ದಿಸಲುಂ (ಕಾದಂಬ. ೪೦೪); ಬಿಲದೊಳಗೊಂದು ಕಲ್ಲ ಗವಿಯೊಳ್ ಕಡುಗೆಂಟೆಱಕೋಳಿರ್ದು ಕಪ್ಪೆ (ಸೂಕ್ತಿಸು. ೧೬-೬೨). [ಕಡು$_1$ (< ಕಡಿದು) + ಗೆಂಟು]

**ಕಡುಗೆಂಪು** (ನಾ). ಬಹಳ ಕೆಂಪು; ದಟ್ಟವಾದ ಕೆಂಪು: ನಿನ್ನ ಕಣ್ಣೊಳ್ ಪಸರಿಸಿ ಕಡುಗೆಂಪು ನೋಡಿಯುಂ ಸ್ಮೈರಿಪೆನೇ (ಆದಿಪು. ೧೨-೯೪); ಕಡುಗೆಂಪುವೊರೆದ ತಳಿರ್ಗಳೆನೆನೆವಿಡಿದಿಡಿದಡವಿ ಸುತ್ತಿ ಸೊಗಯಿಸಿ ತೋರ್ಕುಂ (ಕಾದಂಪೂ. ೧೧೦); ರಕ್ತಬಲಿಯುಮಂ ತಾಮೆ ಕುಡುವಂತೆಸೆದಿರ್ದರೊ ಕಡೆಗಣ್ಣೊಳ್ ಪಸರಿಸೆ ಕಡುಗೆಂಪು ಭೀಮದುರ್ಯೋಧನರಾ (ಗದಾಯು. ೮-೩); ಅರೆಮುಗಿದಕ್ಷಿ ಬೆಮರುವಂಗ ಕಡುಗೆಂಪು ಪರಿದು ರಾಜಿಸುವಧರಗಳ (ಕಂನವಿ. ೧೦-೫೧). [ಕಡು$_1$ (< ಕಡಿದು) + ಕೆಂಪು$_1$]

**ಕಡುಗೆಚ್ಚಲ್** (ನಾ). ತುಂಬಿದ ಕೆಚ್ಚಲು : ಬೆನ್ನಿಂ ಬಿರಿವನ್ನಂ ಕೊರ್ಬಿ ಮುಂಗಾಲ್ ಗಡಿಯೆನೆ ಕಡುಗೆಚ್ಚಲ್ ಪೊದೞ್ದಿಂದು ವತ್ಸೋತ್ಕರಮೆಲ್ಲಂ ಬಾಲವಂಬಂ ಕಱೆಯೆ (ಚಂದ್ರಪ್ರ. ೪-೪೮). [ಕಡು$_1$ (< ಕಡಿದು) + ಕೆಚ್ಚಲ್]

**ಕಡುಗೆಡೆ** (ನಾ). ಅಧಿಕವಾದ ಗೆಳೆತನ; ಅತಿಶಯವಾದ ಸ್ನೇಹ: ಎರವಿಲ್ಲದ ಕಡುಗೆಡೆಗಿಂದು ನೆರವಿಲ್ಲದ ಬಿಡುಗಡೆಯಾಯ್ತೇ! (ರಾಮಾಶ್ವ. ೩೬-೧೨). [ಕಡು$_1$ (< ಕಡಿದು) + ಗೆಡೆ$_2$]

**ಕಡುಗೆಯ್** 'ಕಡುಕೆಯ್' ನೋ.

**ಕಡುಗೆಯ್ಯ** (ನಾ). ಹೆಚ್ಚಾದ ಕೈಚಳಕವುಳ್ಳವನು, —ಕೈಚುರುಕುಳ್ಳವನು (?) : ಅಂತು ಕಡುಗೆಯ್ಯನಾಗಿ ಶೀಘ್ರಸಂಧಾನಮಿಸುವಶ್ವಗ್ರೀವನ ತಕ್ಕುಂ ಬೇಗಯ್ಕೆಯುಂ ಕಿಡೆ (ಶಾಂತಿಪು. ೫-೬೦ ವ). [ಕಡು$_1$ (< ಕಡಿದು) + ಕೆಯ್$_2$ + -ಅ$_7$]

**ಕಡುಗೆಲಸ** (ನಾ). ಕಷ್ಟವಾದ ಕೆಲಸ. 'ಕಡುಗೆಲಸಿ' ಪರಾ. [ಕಡು$_1$ (< ಕಡಿದು) + ಕೆಲಸ]

**ಕಡುಗೆಲಸಿ** (ನಾ). ಕಷ್ಟಪಟ್ಟು ಕೆಲಸಮಾಡುವವನು ; ಪರಿಶ್ರಮಿ : ಕಡುಗೆಲಸಿ, ನಿಡುಮೂಗಿ (ಶಮದ. ೧೬೮ ಪ್ರಯೋ); ಕಡುಚಾಗಿ, ಕಡುಗೆಲಸಿ (ಶಬ್ದಾನು. ೩೭೯ ಪ್ರಯೋ). [ಕಡುಗೆಲಸ + -ಇ$_3$]

**ಕಡುಗೆಲ್ಲಕಾರ್ತಿ** (ನಾ). ಮಹಾಜಯಶಾಲಿನಿ; ಯಾವಾಗಲೂ ಗೆಲ್ಲುವವಳು : ನೀನೀಕೆಯ ಕಾಲ್ವಿಡಿವಂತಾದಪುದಿನ್ನೇಂ ತೊಡರ್ದೈ ಕಡುಗೆಲ್ಲಕಾರ್ತಿಯಿಾ ಕಾಂತೆ ಗಡಾ (ಅರ್ಧನೇ. ೫-೬೫). [ಕಡು$_1$ (< ಕಡಿದು) + ಗೆಲ್ಲಕಾರ್ತಿ]

**ಕಡುಗೆಸಱ್** (ನಾ). ಬಹಳ ಕೆಸರು; ಹೆಚ್ಚಾದ ಕದಡು : ಬಿಡದುಗುವ ಸೊನೆಯ ಸೋನೆಯ ಕಡುಗೆಸಱೊಳ್ ಸಿಲ್ಕಿ ಬಂದ ಮಾವಿನ ಕೆಯ್ಯಂ ಪಿಡಿದಲ್ಲಿ ಮೆಲ್ಲಮೆಲ್ಲನೆ ನಡೆವುದು ಕಣ್ಣುಗುರುಡನಂತಿರುಪವನಪವನಂ (ಧರ್ಮನಾ. ೫-೩೭). [ಕಡು$_1$ (< ಕಡಿದು) + ಕೆಸಱ್]

**ಕಡುಗೇಡಿ** (ನಾ). ಬಹಳ ಕೆಡುಕ; ಅತಿ ದುಷ್ಟ : ಮೇಲ್ವಿನ್ನಣಿ, ಕಡುಗೇಡಿ (ಶಮದ. ೧೬೫ ಪ್ರಯೋ). [ಕಡು$_1$ (< ಕಡಿದು) + ಕೇಡಿ$_1$]

**ಕಡುಗೇಡಿಗ** (ನಾ). = ಕಡುಗೇಡಿ : ಪರಪೀಡೆಗಳುಕದೆ ವಕ್ರಗತಿಯಿಂದ ನಡೆವ ಕಡುಗೇಡಿಗರ್ (ಜೈಮಿಭಾ. ೨೪-೨೧). [ಕಡುಗೇಡು + -ಇಗ]

**ಕಡುಗೇಡು** (ನಾ). ದೊಡ್ಡ ಕೇಡು ; ಮಹಾವಿಪತ್ತು ; ಅತಿಯಾದ ಹಾನಿ.

**ಕಡುಗೇಡಕೆಡು** = ಬಹಳ ಹಾನಿಗೆ ಒಳಗಾಗು ; ದೊಡ್ಡ ವಿಪತ್ತಿಗೆ ಒಳಗಾಗು : ಯದುಗಳನ್ವಯದಾತ ನಮಗೊಳ್ಳಿದನು ಸೋದರಭಾವನೆಂದೇ ಮದಮುಖದಿ ಕಡುಗೇಡ ಕೆಟ್ಟನು ಶಿವಶಿವಾ (ಕುವ್ಯಾಭೀ. ೩-೬೪); ಅಕ್ಕಟಾ ಕಡುಗೇಡ ಕೆಟ್ಟನೆ ಶಿವಶಿವಾ (ತೊರವೆ. ೧-೪-೩); ಭೇದವನು ತಿಳುಹೆನಗೆ ಬಹಳ ದಯೋದಧಿಯೆ ಕಡುಗೇಡ ಕೆಟ್ಟನಲಾ (ನಿಭಾಗ. ೪-೧೬-೭). [ಕಡು$_1$ (< ಕಡಿದು) + ಕೇಡು]

**ಕಡುಗೈ** (ನಾ). ೧. ಬಲವಾದ ಕೈ. ೨. (ಅಲಂ) ಅತ್ಯಂತ ಪರಾಕ್ರಮ, —ಪ್ರತಾಪ : ಬಾವನ್ನವೀರ ಕಂಸನ ಕಡುಗೈಗೇಳಿದಾ ವಸುಧಾಮಂಡಲದ ಚಾವಡಿಚಾವಡಿಯೊಳಗುಳ್ಳ ವೀರಭಟಾವಳಿ ಬಂದು ಸೇರಿದುದು (ನೇಮಿಸಂ. ೧೪-೨). [ಕಡು$_1$ (< ಕಡಿದು) + ಕೈ$_2$ (< ಕೆಯ್$_2$)]

**ಕಡುಗೊಬ್ಬು** 'ಕಡುಗೊರ್ಬು$_2$' ನೋ.

**ಕಡುಗೊಬ್ಬುತನ** (ನಾ). ಅತಿಯಾದ ಸೊಕ್ಕು ; ಅತಿ ಗರ್ವ : ಕಡುಗೊಬ್ಬುತನದಲಿ ನಡೆಯದಿರು (ತುರಂದ. ೧-೧೬೮-೩). [ಕಡುಗೊಬ್ಬು (< ಕಡುಗೊರ್ಬು$_2$) + -ತನ]

**ಕಡುಗೊಯ್ಯಲ್** (ನಾ). ಪೂರ್ಣವಾಗಿ ಕತ್ತರಿಸುವುದು : ಬಬಲ್ದ ಬಡಗೊಂಡಿಯುಂತಿರಾಳ್ವೇರಿಯಱಿದು ಕಡುಗೊಯ್ಯಲಾದ ಕೆಯ್ಯಂತೆ ತೆನೆಮುಱಿದು (ಅನಂಪು. ೧೧-೮೩ ವ). [ಕಡು$_1$ (< ಕಡಿದು) + ಕೊಯ್ಯಲ್]

**ಕಡುಗೊರ್ಬು$_1$** 'ಕಡುಗೊರ್ವು' ನೋ.

**ಕಡುಗೊರ್ಬು$_2$, ಕಡುಗೊಬ್ಬು** (ನಾ). ೧. ಹೆಚ್ಚಾಗಿ ಕೊಬ್ಬಿ ಬೆಳೆದಿರುವುದು ; ಸುಪುಷ್ಟವಾಗಿರುವುದು : ಮೊದಲೊಳ್ ಮಿಳಿಸುತ್ತಂ ಗಗ್ಗಳಮಾಗಿ ಕಡುಗೊರ್ಬಿಂ ಬಳೆದ ಪೆರ್ಮರಂಗಳ ಶಿಂತಿನೊಳಂ (ಕಾದಂಬ. ೨೬೬). **ಕಡುಗೊಬ್ಬು** : ೨. ಅತಿಯಾದ ಗರ್ವ, —ಸೊಕ್ಕು. 'ಕಡುಗೊಬ್ಬುತನ' ಪರಾ. [ಕಡು$_1$ (< ಕಡಿದು) + ಕೊರ್ಬು$_2$ (< ಕೊರ್ವು$_2$)]

**ಕಡುಗೊರ್ವು, ಕಡುಕೊರ್ಬು, ಕಡುಗೊರ್ಬು$_1$** (ಕ್ರಿ). ಬಹಳವಾಗಿ ಉಬ್ಬು, —ಬಲಿ, —ಸೊಕ್ಕು : ದ್ರುಪದನಂ ತಱಿದೊಟ್ಟದೆ ಕೆಮ್ಮಗಾನಿದಂ ಕಡೆಗಣಿಸಿರ್ದೊಡೆನ್ನ ಕಡುಗೊರ್ವಿದ ತೋಳ್ಗಳ ಕೊರ್ವ ದೇವುದೋ (ಪಂಪಭಾ. ೩-೬೬). **ಕಡುಕೊರ್ಬು** : ಕಡುಕೊರ್ಬಿ ಚಪ್ಪರಿಪ ರಾಜಕುಲಾಳಿಯನಾವ್ಯುವೊಪ್ಪುಗುಂ (ಗಿರಿಕ. ೨-೩೩); ಎಯ್ಯಮ್ಮಗಂ ಕಡುಕೊರ್ಬಿ ಕಾನನಾಂತರದ ಕುಟೀರವಂ ಬೆಳೆದ ಕೆಯ್ಗಳನಂತಿರಲೀಯವು (ನಳಚಂ. ೬೫). **ಕಡುಗೊರ್ಬು$_1$** : ಮುಡಲ್ಲು ಬೆಳೆದ ತರುಣ ತಮಾಲತರು ವನದೊಳಿದಿದು ಕಡುಗೊರ್ಬಿ ಪರ್ಬಿದ ಮರ್ಬು (ರಾಜಶೇ. ೧-೧೦೨ ವ). [ಕಡು$_3$ + ಕೊರ್ವು$_1$]

**ಕಡುಗೋಡು** (ನಾ). ಬಹಳ ತಂಪು ; ಅತಿ ಶೈತ್ಯ. 'ಕಡುಗೋಡುವೆಱು' ಪರಾ. [ಕಡು$_1$ (< ಕಡಿದು) + ಕೋಡು$_3$]

**ಕಡುಗೋಡುವೆಱು** (ಕ್ರಿ). ಬಹಳ ತಂಪು ಹೊಂದಿರು ; ಅತಿ ಶೀತಲವಾಗಿರು : ಆಜವಟ್ಟಗೆಯೊಳ್ ಕಡುಗೋಡುವೆತ್ತ ತಣ್ಣರಗಮನೆತ್ತಿ ನೀರೆಱೆಯೆ (ಜಗವಿ. ೧೬-೭೯). [ಕಡುಗೋಡು + ಪೆಱು$_1$]

**ಕಡುಗೋಪ, ಕಡುಕೋಪ** (ನಾ). ಬಹಳ ಸಿಟ್ಟು ; ಕೋಪಾಧಿಕ್ಯ : ಮುಸಗಿ ಕಡುಗೋಪದಿಂದಂ ಸಸಿಯಂ ಪಿಡಿಯಲ್ಕೆ ರಾಹು (ಧರ್ಮಾಮೃ. ೭-೧೯೫); ಉಕ್ಕಿದ ಕಡುಗೋಪದಿ ಕೋಲ್ಗಳ ತಿಕ್ಕಿ ಮುಕ್ಕಿದ ಮುರಹರಾಗ್ರಜನ ಟಕ್ಕಿಸಿ ಹೋದಡೆ ಬಿಡೆನು (ಮೋಹತ. ೩೯-೯); ಚಿತ್ತದೊಳ್ ಕಿಡಿಯಿಡುವ ಕಡುಗೋಪದುಂ ಮೆಯ್ಯೊಳಿರದೆ ಪೊಱ ಮಡುವುದೋ ಕಂಗಳಿಂದೆನೆ ಕೆಂಪಡರ್ದಾಲಿಗಳ್ (ಜೈಮಿಭಾ. ೪-೩೬).

**ಕಡುಕೋಪ**: ಉರಿಗೊಳುವ ಕಡುಕೋಪದಲಿ ಕಿಡಿಕಿಡಿಯೋದನ ಸುರೇಂದ್ರ (ತೊರರಾ. ೩–೭–೧೪); ತಡವಿದರೆ ಭುಸ್ಸೆಂದು ಕಡುಕೋಪ ಗೊಂಡು ನೋಡುವ ನಾಗಣ್ಣ ಅಡಿಗಳ ತೋರೆಂದ ಮಲ್ಲೇಶನ (ಸಿದ್ಧಪು. ೫–೧೪); ಕಡುಕೋಪ ಬಂದಾಗ ತಡಕೊಂಡವನೇ ಜಾಣ (ಗಾದೆ). [ಕಡು$_1$ (< ಕಡಿದು) + ಕೋಪ]

**ಕಡುಗೋಮಲತೆ** (ನಾ). ಅತಿಯಾದ ಕೋಮಲತ್ವ: ಎಲೆಗೆ ಕಲು ಮ್ಮೆಯಾದೆ ಕಡುಗೋ[ಪಾಠಾಂ. ಕೋ]ಮಲತೆಯೆತ್ತಲು ಕರ್ಕಶಾಂಗದ ಬಲುಹಿದೆತ್ತಲು ಮಾಯವೇಷವ ಧರಿಸಿದೆಯೊ (ಕುವ್ಯಾವಿ. ೩–೮೭). [ಕಡು$_1$ (< ಕಡಿದು) + ಕೋಮಲತೆ]

**ಕಡುಚದುರ** (ನಾ). ಬಹಳ ಬುದ್ಧಿವಂತ; ಅತಿ ಚತುರ: ಕಡು ಚದುರರ ಚಿತ್ತಂಗೊಳಿಸಿದುದಾ ಬನದೊಳು ಸುಳಿವೆಳಗಾಳಿ (ಜಯಕಾ. ೧–೫೧). [ಕಡು$_1$ (< ಕಡಿದು) + ಚದುರ]

**ಕಡುಚದುರು** (ನಾ). ಮಿಗಿಲಾದ ಚಾತುರ್ಯ; ಬಲು ಜಾಣ್ಮೆ: ನೆಲದೊಳ್ ಮೃದುಪಾದವನಿಡೆ ನೋವುದೆನುತ ಕಡುಚದುರಿಂದಂಬರ ಚರವಿದ್ಯಂಬಡೆದೆಯ್ದುವ ತೆಜನಾಗಿ (ಜಯಕಾ. ೨–೫೧). [ಕಡು$_1$ (< ಕಡಿದು) + ಚದುರು$_3$]

**ಕಡುಚಪಲ** (ನಾ). ೧. ಅತಿ ಚಂಚಲಸ್ವಭಾವ. ೨. ಅತಿ ಚಂಚಲ ಸ್ವಭಾವದವನು: ಕಡುಚಪಲನಿವಂ ತನಗೇಗಿಡುಗುಮೋ (ಅಜಿಪು. ೧೦–೬). [ಕಡು$_1$ (< ಕಡಿದು) + ಚಪಲ]

**ಕಡುಚಳಿ** (ನಾ). ಬಹಳ ಚಳಿ; ಅತಿ ಶೈತ್ಯ: ಇಡಿದಿಂಧನದೊಳೆ ಫಣಿಪೊಳಗಡಂಗೆ ಮಣಿಗಂಡು ಕೆಂಡವೆಂದೊರ್ವಂ ಕೈದುಡುಕೆ ನೊಡೆದೇಳೆ ಭಯದಿಂ ಕಡುಚ[ಪಾಠಾಂ. ಛ]ಳಿಯಿಂದೊರ್ಮೆ ಸೆಡೆದು ನಡುಗುತ್ತಿರ್ದಂ (ರಾಜಶೇ. ೯–೨೫). [ಕಡು$_1$ (< ಕಡಿದು) + ಚಳಿ$_2$]

**ಕಡುಚಾಗ** (ನಾ). ದೊಡ್ಡ ತ್ಯಾಗ; ಮಹಾದಾನ: ನಿಡುದೋಳ್, ಕಡುಚಾಗಂ (ಶಬ್ದಾನು. ೮೭ ವ್ಯಾಖ್ಯಾ). [ಕಡು$_1$ (< ಕಡಿದು) + ಚಾಗ$_2$]

**ಕಡುಚಾಗಿ** (ನಾ). ಮಹಾತ್ಯಾಗಿ; ಮಹಾದಾನಿ; ಬಹಳ ದಾನ ಮಾಡುವವನು: ಅಳಿಚೆನ್ನಂ, ಕಡುಚಾಗಿ, ಉರಚಲ್ಲಿ (ಭಾ ಷಾ ಭೂ. ೩೦ ಉದಾ); ಚಾಗಿಗಳ ನಡುವೆ ಕಡುಚಾಗಿ ಸಂಗನ ಬಸವ (ಬಸರ. ೯–೮೩); ಕರುಣಾಮೃತವ ಕಱೆವ ಕಡೆಗಣ್ಣ ಕಡುಚಾಗಿ ಬಾಂದೊಱೆಯ ನೆಳವೆಱೆಯ ಧರಿಸಿದ ಸೊಬಗನು (ಸೌಂದಪು. ೪–೬೮); ಕಡಿದು ಚಾಗಂ ಆವಂಗೆ ಅತಂ, ಕಡುಚಾಗಿ (ಶಬ್ದಾನು. ೩೧೦ ಪ್ರಯೋ). [ಕಡುಚಾಗ + –ಇ$_3$]

**ಕಡುಚಿಬ್ಬು** (ನಾ). ಹೆಚ್ಚಾಗಿರುವ ಮಚ್ಚೆ, —ಚುಕ್ಕೆ: ಕಡುಚಿಬ್ಬಂ ಬೊಯ್ದು ಬಣ್ಣಂಬಡೆದು ಮೊನೆಗಳುಂ ನೇರಿತಾಗಿರ್ದು ಮತ್ತಿಮ್ಮಡಿ ಚೆಲ್ವಂ ಬೀಱುತುಂ ರಂಜಿಪ ಬಿಳಿಯೆಲೆಗಳ್ ಕಾಮದೇವಾಧಿರಾಜಂ ಪಿಡಿದಾರ್ಪಂ ತೋರ್ಪ ಕೂರಂಬುಗಳತೆಱದೆ ಕಣ್ಗೊಂಡವು (ಬಾಧಪು. ೧–೧೨೮). [ಕಡು$_1$ (< ಕಡಿದು) + ಚಿಬ್ಬು]

**ಕಡುಚೆನ್ನ** (ನಾ). ಬಲು ಚೆಲುವ; ಬಹಳ ಸುಂದರ: ತಂನಂನರಿಱಿ ವೀವರುಂ ಕಡುಚೆಂನರುಮಿಲ್ಲೆನಿಸಿ ರಾಮಚಂದ್ರಮಹೀಶಂ (ಎಕ. XI, ದಾವಣ. ೭೦–೮; 1275). [ಕಡು$_1$ (< ಕಡಿದು) + ಚೆನ್ನ]

**ಕಡುಚೆನ್ನೆ** (ನಾ). ಬಲು ಚೆಲುವೆ; ಬಹಳ ರೂಪವತಿ: ಬೆನ್ನ ಮೇಲಣ ಕಲಿಗಂಟಿನ ಕೆಂದಳಿರನ್ನದುಟಿಯ ಕಳಕಳಿಪ ಕನ್ನಡಿಮೊಗದ ಸುಕ್ಕುಂ ದುಱುಬಿನ ಕಡುಚೆ[ಪಾಠಾಂ. ಚೆ]ನ್ನೆಯರೆಸೆದರೊಗ್ಗಿನೊಳು (ಕುರಾಸಾಂ. ೨೮–೪೭). [ಕಡುಚೆನ್ನ + –ಎ$_2$]

**ಕಡುಚೆಲ್ವ** (ನಾ). ಅತಿ ಸುಂದರನಾದವನು; ಬಹಳ ರೂಪ ವಂತ: ಚೆಲ್ವನಿನಿತ್ತುಮೆಯ್ದೆ ಕಡುಚೆಲ್ವಂ (ಅನಂಪು. ೮–೫೮); ಕಡುಚೆಲ್ವನಾದ ವರನಂ ಕಂಡು ನಿಶ್ಚೈಸಿ (ಜೈಮಿಭಾ. ೩೦–೨೮); ಕಡುಚೆಲ್ವ ನಿನ್ನ ವಾರತೆಗೇಳಿವಾಕ್ಷಣ ಕುಡುವಿಲ್ಲನಲೆಗೊಳಗಾದೆ (ಕಂನವಿ. ೧೦–೩೪). [ಕಡುಚೆಲ್ವು + –ಅ$_7$]

**ಕಡುಚೆಲ್ವಿಕೆ** (ನಾ). ಮಿಗಿಲಾದ ಸೌಂದರ್ಯ; ಅತಿಶಯವಾದ ಸೊಬಗು: ನವಚಿತ್ರದ ಮಡದಿಯ ಕಡುಚೆಲ್ವಿಕೆಯುಂ ರಾಜಕುಮಾರಂ ನೋಡಿದನು (ಜಯಕಾ. ೩–೧೪); ನುಡಿಯಲಳವೆ ರಾಮನ ಗಂಡಗಾಡಿಯ ಕಡುಚೆಲ್ವಿಕೆಯ ಸಡಗರವ (ಕುರಾಸಾಂ. ೩೧–೭೩). [ಕಡು$_1$ (< ಕಡಿದು) + ಚೆಲ್ವಿಕೆ]

**ಕಡುಚೆಲ್ವು** (ನಾ). = ಕಡುಚೆಲ್ವಿಕೆ: ಸೊಗಯಿಪ ಮುನ್ನಿನಿರ್ದ ಪರಿಜಂ ಕಡುಚೆಲ್ವು ಗಡಂ (ಆದಿಪು. ೨–೬೦); ಕಡುಚೆಲ್ವಾದಂಗರಾಗಂ (ಕಾದಂಪೂ. ೧೦೦೨); ಆ ನಯನದ ಕಡುಚೆಲ್ವಂ ನಿಟ್ಟಿಸಿ (ಜಯಕಾ. ೩–೫೧); ಕಡುಚೆಲ್ವ ಪಾಣಿಯುಮಧರಮುಂ (ಜೈಮಿಭಾ. ೬–೨೩). [ಕಡು$_1$ (< ಕಡಿದು) + ಚೆಲ್ವು]

**ಕಡುಚೆಲ್ವೆ** (ನಾ). = ಕಡುಚೆನ್ನೆ: ಕಡುಚೆಲ್ವೆಯರೆರ್ದಾಡಿದರೊಡನಾಡುವರ ಕೇರಿಯಾದುದು (ಅಜಿಪು. ೫–೩೫); ಕಡುಚೆಲ್ವೆಯ ರೂಪುಗಂಡ ಬಳಿಕಂ ನಡೆಯರ್ . . . ಪಥಿಕರ್ (೧೦ಕ. ೨–೨೫); ಪೃಥಿವಿಯೊಳಗೆ ಸತಿ ಕಡುಚೆಲ್ವೆಯಾದರೆ ಮಿತಿಮೀರೆಯಿಲ್ಲದ ಮೋಹದ ಚಿಂತೆ (ಪುರಂದ. ೧–೪೫–೧). [ಕಡುಚೆಲ್ವು + –ಎ$_2$]

**ಕಡುಚೋದಿಗ** (ನಾ). ಅತ್ಯಾಶ್ಚರ್ಯ; ಬಲು ಸೋಜಿಗ: ವಟಪಕ್ವ ಫಲಮೆ ಮೆಯ್ಯಂ ಪಿಡಿದೀ ವಿಧುಮಂಡಲಮೇನುಜ್ಜ್ವಲಿಪೀ ಶ್ರೀವದನಕ್ಕೆಣೆಗಡ ಕಡುಚೋದಿಗಮಂ ಸಲೆ ಚೆನ್ನಾಗಿ ಭಾವಿಸಿ ನೋಡಿಯೆನುತ ತೋಱುವವೋಲ್ (ಜಯಕಾ. ೮–೩೬). [ಕಡು$_1$ (< ಕಡಿದು) + ಚೋದಿಗ]

**ಕಡುಜಡ** (ನಾ). ೧. ಬಹಳ ಮಂದಬುದ್ಧಿಯುಳ್ಳವನು: ಎಲೆ ಮರುಳು ವಿಪ್ರ ಎಲೆ ದ್ವಿಜಾಧಮಾ ಎಲೆ ಕರ್ಮದ ಕಡುಜಡನೆ ಕೇಳು (ಬಸರ. ೬–೭೭). ೨. ಅತ್ಯಂತ ಸೋಮಾರಿ: ಕಡುಜಡರೆನ್ನು ಪೋಲಿಪರೆ ಧನ್ಯನೆನಿಪ್ಪ ವಚೋಗ್ರಗಣ್ಯನಾ (ಎಕ. IV, ಹೆಗ್ಗಡ. ೧೮–೮; 1057). [ಕಡು$_1$ (< ಕಡಿದು) + ಜಡ]

**ಕಡುಜರ** (ನಾ). ತೀಕ್ಷ್ಣವಾದ ಜ್ವರ: ಪಾವು ಪಿಡಿದಂತೊದಱಿ ಕಡುಜರ ಪತ್ತಿದಂತು ಕಳವಳಿಸಿ ಠಕ್ಕು ಪತ್ತಿದಂತೆ ಮತಿಗೆಟ್ಟು (ಅನಂಪು. ೧೧–೪೪ ವ). [ಕಡು$_1$ (< ಕಡಿದು) + ಜರ$_2$]

**ಕಡುಜಲ** (ನಾ). ವೇಗವಾಗಿ ಹರಿಯುವ ನೀರು: ಕಡುಜಲಕ್ಕೆ ಇದಿರಾಗಿ ಹರಿವ ಸ್ವಾಮಿಯ ಬರವ ಕಂಡು ಬಿಡದೆ ಬೆಂಬತ್ತಿಸುವ ಪರಿಯ ನೋಡಾ (ಅವಚಂ. ೨೫೧–೧೧೪೫). [ಕಡು$_1$ (< ಕಡಿದು) + ಜಲ$_1$]

**ಕಡುಜವ** (ನಾ). ಅತಿ ವೇಗ; ಹೆಚ್ಚು ತ್ವರೆ: ಸುಟ್ಟುರೆಯಿಂದತ್ತತ್ತ ಮತ್ತನಿಮಿರದಿರನಿದೇನೆಂದು ಜಾತಾದ್ಭುತಂ ನೋಟ್ಪರ ಕಣ್ಣಂ ಚೇತಮುಮಂ ಕಾಲ್ಗಿಡೆ ಕಡುಜವದಿಂ ವಿಷ್ಣು ವರ್ಧಿಷ್ಣುವಾದಂ (ಅರ್ಧನೇ. ೬–೨೮). [ಕಡು$_1$ (< ಕಡಿದು) + ಜವ$_2$]

**ಕಡುಜಾಣ್** (ನಾ). ಅಧಿಕ ಕೌಶಲ್ಯ; ತುಂಬ ಜಾಣತನ: ಕಡುವುಗಳುದ್ದವಱಿಂ ಗಡ ಬೆಡಂಗುಗಳ ಬೀಱಿ ಭಂಗಿಗಳ ಲಳಿಗಳಿದೇಂ ಕಡುಜಾಣೆನೆ ಬದಿಕಯ್ವರಮುಡರ್ದ್ದಪುಳೆನೆ (ಎಕ. II, ೧೩೩–೧೦೮; 982); ಎನ್ನೀ ಕಬ್ಬದೊಳೆಂದುಂ ಸನ್ನಿದಮಾಗಿರ್ಕೆ ಕಣ್ಣಮಯ್ಯನ ಕಡುಜಾಣ್ (ಕಬ್ಬಕಾ. ೪). [ಕಡು$_1$ (< ಕಡಿದು) + ಜಾಣ್]

**ಕಡುಜಾಣ** (ನಾ). ಬಹಳ ಬುದ್ಧಿವಂತ; ಪ್ರಾಜ್ಞ: ವರ ವಸ್ತುವ ನಱಿವೆಡೆಗಂ ಪರದರ್ ಕಡುಜಾಣರೆಂದು ಕರಮಾದರದಿಂ ನರನಾಥರ್ ಪೂಜಿಸುವರ್ (ಧರ್ಮಾಮೃ. ೧–೧೧೦); ನುಡಿವರೊಳ್ ಕಡುಜಾಣಂ, ಕಲಿಗಳೊಳ್ ಮೆಯ್ಗಲಿ (ಭಾಷಾಭೂ. ೪೭ ಉದಾ); ಕಡುಜಾಣರ ಮೆಚ್ಚಿಸುವ ವಾಗ್ವಿಲಾಸಂ (ಚಿಬವು. ೧–೨೫); ಕಡುಜಾಣ ಭರತಾಚಾರ್ಯನು ರಾಜಿಪ ಬೆಡಗನದೇನ ಬಣ್ಣಿಸುವೆ (ಕಂನವಿ. ೮–೫೭).
[ಕಡು$_1$ (< ಕಡಿದು) + ಜಾಣ]

**ಕಡುಜಾಣಾಯ್ಲ** (ನಾ). ಅಧಿಕ ಚಮತ್ಕಾರದಿಂದ ಅಥವಾ ಜಾಣತನದಿಂದ ಪ್ರಕಾಶಿಸುವವನು: ಆ ವರು ಪೂರ್ವರು ಪರಶುರಾಮ ಪ್ರವರರೆನು ಮೆಚ್ಚಿಸಿದೆವೀಗಳೆನವರು ಕಡುಜಾಣಾಯ್ಲರೆಂದು ಸುರೇಖರೆಂದಿಹರು (ಕುವ್ಯಾಭೀ. ೯–೩೩).
[ಕಡುಜಾಣ + –ಆಯ್ಲ (< –ಆಯಿಲ$_2$)]

**ಕಡುಜಾಣೆ** (ನಾ). ಬಹಳ ಬುದ್ಧಿವಂತೆ; ಬಹು ಚತುರೆ: ಉಬ್ಬೆಗಮಿಲ್ಲದ ಕಣ್ಣನೀರ್ ಕರಂ ಚದುರರುಮಂ ಮನಂಗೊಳಿಪುದೇಂ ಕಡುಜಾಣೆಯರೋ ಲತಾಂಗಿಯರ್ (ಆದಿಪು. ೧೨–೪೩); ರಾಜಮಹಿಷೀ ಸಭೆಯೊಳ್ ಕಡುಜಾಣೆಯುಂ ಪ್ರವೀಣೆಯುಮೆನೆ ವೀಣೆಯಂ ಮಿಡಿದಳ್ (ಶಾಂತಿಪು. ೯–೧೮೭). [ಕಡು$_1$ (< ಕಡಿದು) + ಜಾಣೆ]

**ಕಡುಜಾಣ್ಮೆ** (ನಾ). ಅತಿಶಯವಾದ ಬುದ್ಧಿವಂತಿಕೆ; ಬಹಳ ಚಾತುರ್ಯ: ನುಡಿ ಬೆಡಂಗಂ ಬೀಱಿ . . . ಕಡುಜಾಣ್ಮೆ ಕಯ್ಗಣ್ಮೆ ಮೃದುಪದಂ ಸಂಪದಮನಡರೆ (ಪದ್ಮರಾ. ೧–೩೧).
[ಕಡು$_1$ (< ಕಡಿದು) + ಜಾಣ್ಮೆ]

**ಕಡುಜಿಡ್ಡು** (ನಾ). ಹೆಚ್ಚು ಜಿಗುಟು; ಬಹಳ ಜಿಡ್ಡು: ಕಡುಜಿಡ್ಡು ನಾರ್ಕುವಾ ಹಾಲ್ಗಡಲ ಮಗಳು ಲಕ್ಷ್ಮಿ ನಾತೊರ್ಡಂ ಗೋಪಾಳಂ ಬಿಡನು ಚಿತವೆಂಬೊಳೊಪ್ಪಂಬಡೆದೇಚಲೆ ಪದುಮಗಂಧಿ ಸಿರಿವಂ ಹರಿವಂ (ಎಕ. V, ಅರಸೀ. ೪೮–೭; 1165; ಕವಿಚ. I, ೨೪೭ ನೋ).
[ಕಡು$_1$ (< ಕಡಿದು) + ಜಿಡ್ಡು$_1$]

**ಕಡುಜ್ವರ** (ನಾ). ತೀಕ್ಷ್ಣವಾದ ಜ್ವರ: ಕಡುಜ್ವರಕ್ಕೆ–ಕುಂಕುಮದ ಹೂ . . . ಏಲಕ್ಕಿ ಒಂದು ಹಣತೂಕ ಇವುಗಳನ್ನೆಲ್ಲಾ ಮೊಲೆಹಾಲಿನಲ್ಲಿ ಅರೆದುಕೊಡಲು ಕಡುಜ್ವರಂ ಮಾಣುವುದು (ಸಕವೈ. ೭೮).
[ಕಡು$_1$ (< ಕಡಿದು) + ಜ್ವರ]

**ಕಡುಝುಳ** (ನಾ). ಅತಿಶಯವಾದ ಕಾವು, —ಬೇಗೆ: ಕೋಪದ ಕಡುಝುಳದ ಕಾಲಾಗ್ನಿ ರುದ್ರನ ಕಣ್ಣ ಹೋಲುವೆಯ . . . ಕಡುಹುಕಾಜರು ಮುಸಗಿದರು (ಕುವ್ಯಾದ್ರೋ. ೫–೬೯).
[ಕಡು$_1$ (< ಕಡಿದು) + ಝುಳ]

**ಕಡುಟಕ್ಕು** (ನಾ). ದೊಡ್ಡ ಮೋಸ; ಅತಿ ವಂಚನೆ: ಕಡುಟಕ್ಕು; ಮಾಣಿಕಟಕ್ಕೆ (ಶಮದ. ೭೫ ಪ್ರಯೋ); ಕಡುಟಕ್ಕು, ಪೊಸಟೊಪ್ಪಿಗೆ (ಶಬ್ದಾನು. ೯೩ ಪ್ರಯೋ).
[ಕಡು$_1$ (< ಕಡಿದು) + ಟಕ್ಕು (< ಠಕ್ಕು)]

**ಕಡುಟಕ್ಕುಗೊಳ್** (ಕ್ರಿ). ದೊಡ್ಡ ಮೋಸಕ್ಕೆ ಒಳಗಾಗು: ಕಡುಟಕ್ಕುಗೊಂಡವೊಲ್ ಮೆಯ್ ನಡುಗೆ ಮನಂ ವಿಕಳಮಾಗೆ (ಕಾವ್ಯಾವ. ೭೨)
[ಕಡುಟಕ್ಕು + ಕೊಳ್$_1$]

**ಕಡುತಣ್ಪು** ‘ಕಡುದಣ್ಪು’ ನೋ.

**ಕಡುತಪ** (ನಾ). ಉಗ್ರವಾದ ತಪಸ್ಸು: ಕಡುತಪದಿಂದೆ ನಿನ್ನ ಪಡೆಪಾವುದೊ ಗಾವಿಲ ಸಗ್ಗಮಲ್ತೆ (ಪಂಪಭಾ. ೭–೯೩); ಕಾಮನಂ ಕರೆಯಿಸಿ ಹರನ ಚಿತ್ತಮಂ ಚಲಿಯಿಸಿ ಕಡುತಪಮಂ ಕೆಡಿಸೆಂದು ಪೇಳೆ (ಗಿರಿಕ. ೨ ಕಥಾಗರ್ಭ). [ಕಡು$_1$ (< ಕಡಿದು) + ತಪ]

**ಕಡುತರುವಲಿ** (ನಾ). ತೀರ ಸಣ್ಣ ಹುಡುಗ: ಕಡುತರುವಲಿಯೆನಿಸುವನು ಪವನಜನು (ತಿಮ್ಮಕ್ರ. ೨–೧೮).
[ಕಡು$_1$ (< ಕಡಿದು) + ತರುವಲಿ]

**ಕಡುತವಕ** (ನಾ). ಅತಿ ಆತುರ; ಅಧಿಕವಾದ ಉತ್ಕಂಠೆ: ಕಡುತವಕದಲಿ ತಾನೆ ಅಲ್ಲಿಗೆಯ್ದಿ (ಬಸವು. ೪೦–೧೨).
[ಕಡು$_1$ (< ಕಡಿದು) + ತವಕ]

**ಕಡುತಿಣ್ಣ** (ನಾ). ಬಲು ಹೆಚ್ಚಾದುದು; ಅತಿ ತೀವ್ರವಾದುದು: ಅನೂನದಾನಮಂ ಮಾಳ್ಪ ಬಯಕೆ ಕಡುತಿಣ್ಣಮಾಗಿಯಂತೆ ಗೆಯುತ್ತುಮಿರೆ (ಬಾಧಪು. ೪–೩೭ ವ). [ಕಡು$_1$ (< ಕಡಿದು) + ತಿಣ್ಣ]

**ಕಡುದಣ್ಣನೆ** (ಅ). ಬಹಳ ತಣ್ಣಗೆ: ಆಡುವ ಮೀನ್ಗಳುಂ ಕುಣಿವ ಹಂಸೆಗಳುಂ ಕಡುದಣ್ಣನೇಗಳುಂ [ಪಾಠಾಂ. ಸಾಳ್ಗಳುಂ] ತೀಡುವ ಗಾಳಿಯುಂ (ಸೂಕ್ತಿಸು. ೨–೨೮). [ಕಡು$_1$ (< ಕಡಿದು) + ತಣ್ಣನೆ]

**ಕಡುದಣ್ಣಸ** (ನಾ). ಬಹಳ ತಂಪು: ಕುವರ್ಣಮಾಗೆ ನಖದಂತಚಯಂ ಕಡುದಣ್ಣಸಾಗಿ ಸುಯ್ಯ್ ಪೊಜಮಡೆ . . . ದಕ್ಷನ ಸಾವು ನಿಶ್ಚಯಂ (ಲೋಕೋಪ. ೧೦–೯). ‘ಕಡುದಣ್ಣಸೇಱು’ ಪರಾ.
[ಕಡು$_1$ (< ಕಡಿದು) + ತಣ್ಣಸ]

**ಕಡುದಣ್ಣಸೇಱು** (ಕ್ರಿ). ಬಹಳ ತಣ್ಣಗಾಗು; ಶಾಖವನ್ನು ಕಳೆದುಕೊಳ್ಳು: ಜಸಮೆಲ್ಲಂ ಮಾಸುಗುಂ ತೃಷ್ಣಾತಾಪಹುತಾಶಂ ಕಡುದಣ್ಣಸೇಱುಗುಮನೋಘಂ (ಜಗವಿ. ೨–೪೯); ಬಿಸಿಲ್ ಕಡುದಣ್ಣಸೇಱಿ ಕೇದಗೆ ಸುಟಿಯೇಱಿ (ಜಗವಿ. ೪–೪).
[ಕಡುದಣ್ಣಸ + ಏಱು$_1$ (< ಏಱ್$_1$)]

**ಕಡುದಣ್ಪು, ಕಡುತಣ್ಪು** (ನಾ). ಬಹಳ ತಣ್ಣಗಿರುವಿಕೆ; ಅತಿ ಶೈತ್ಯ: [ತನಿಗಂಪನಾಳ್ದು ಕಡುದಣ್ಪನಸುಂ] ಕವಿತರೆ ನೀಡಿದನಾಗಳ್ ದಿವಿಜೇಭಕರಾನುಕಾರಿ ನಿಜಕರಯುಗಮಂ (ಕಾದಂಪೂ. ೯೩೮). **ಕಡುತಣ್ಪು**: ಕಡುತಣ್ಪು ಕೆಟ್ಟು ಕಿಚ್ಚಿನೊಳೊಡಗೂಡಿದ ನೀರ್ ಬೞಿಕ್ಕೆ ತೀವ್ರತೆಯಂ ಕೈ ಸುಡುವಂತೆ (ಧರ್ಮಾಮೃ. ೨–೭೮). [ಕಡು$_1$ (< ಕಡಿದು) + ತಣ್ಪು]

**ಕಡುದನಿ** (ನಾ). ದೊಡ್ಡ ಧ್ವನಿ; ತೀವ್ರವಾದ ನಾದ: ಅಬುಜಭವಾಂಡ ಭೇರಿಯ ಕಡುದಣಿಗಳೆನಲೊದಱಿದವು ನಿಸ್ಸಾಳಕೋಟಿಗಳು (ಕುವ್ಯಾದ್ರೋ. ೧–೪೭). [ಕಡು$_1$ (< ಕಡಿದು) + ದನಿ]

**ಕಡುದರ್ಪ** (ನಾ). ಅಧಿಕವಾದ ಗರ್ವ; ಬಹಳ ಠೀವಿ: ಅರಸುಗುಣಂ, ಕಡುದರ್ಪಂ (ಶಮದ. ೧೭೪ ಪ್ರಯೋ).
[ಕಡು$_1$ (< ಕಡಿದು) + ದರ್ಪ]

**ಕಡುದರ್ಪವೇಱು** (ಕ್ರಿ). ಅತಿಯಾಗಿ ಗರ್ವಿಸು: ಕಡುದರ್ಪವೇಱಿದ ಒಡಲೆಂಬ ಬಂಡಿಗೆ ಮೃಡಶರಣರ ನುಡಿಗಡಣವೇ ಕಡೆಗೀಲು ಕಾಣಾ (ದೇದಾವ. ೧–೨). [ಕಡುದರ್ಪ + ಏಱು$_1$ (< ಏಱ್$_1$)]

**ಕಡುದಾರಿದ್ರ** (ನಾ). ಬಹಳ ಬಡವ; ದಟ್ಟದರಿದ್ರ: ನಿಧಾನವ ಕಂಡ ಕಡುದಾರಿದ್ರನುತ್ಸವದಂತೆ ಕೋಸಲದ ಮಂಡಲೇಶ್ವರನಿರಲು (ತೊರರಾ. ೧–೮–೧). [ಕಡು$_1$ (< ಕಡಿದು) + ದಾರಿದ್ರ]

**ಕಡುದಾರಿದ್ರ್ಯ** (ನಾ). ೧. ಬಹಳ ಬಡತನ. ೨. (ಅಲಂ) ತೀರ ತೆಳ್ಳಗಿರುವಿಕೆ: ಸುತಂ ಜನಿಯಿಸುವಂ ನಿನಗೆಂದು ಲೀಲೆಯೊಳುಸಿರಲು ಕೇಳ್ದತಿಹರ್ಷಂದಾಳಿ ಸುಖದೊಳಿರುತಿರಲಾ ವಾರ್ತೆಯಿನಾ ಲಲಿತಾಂಗಿಯ ನಡುವಿನ ಕಡುದಾರಿದ್ರ್ಯಂ ಪಿಂಗಿದುದು (ಜಯಕಾ. ೨–೫೩).
[ಕಡು$_1$ (< ಕಡಿದು) + ದಾರಿದ್ರ್ಯ]

**ಕಡುದಿಟ** (ನಾ). ಪೂರ್ಣ ನಿಶ್ಚಿತ, —ಸತ್ಯ: ಎಂತಪ್ಪ ಬುದ್ಧಿವಂತನುಂ ಸಂಸರ್ಗವಶದಿಂ ನಿಸರ್ಗಗುಣಮಂ ಪತ್ತುವಿಡುವುದು ಕಡುದಿಟಂ (ಪಂಚತಂ. ೧೨೧–೨೧). [ಕಡು$_1$ (< ಕಡಿದು) + ದಿಟ]

**ಕಡುದಿಟ್ಟ** (ನಾ). ಬಹಳ ಧೈರ್ಯಶಾಲಿ, —ಗಟ್ಟಿಗ: ಮಧುರೇಂದ್ರಂ ಕಡುದಿಟ್ಟ [ಪಾಠಾಂ. ದುಷ್ಟ] ನಾಗಲು ಬಳಿಕ್ಕೀಡೇರಿತೇ ದ್ವಾರಕಾಸದನಂ ವಾರ್ಧಿಯ ಕೂಡದೇ... ಕ್ಷೋಣಿಯೊಳ್ ವಿಧಿಕಾಡಲ್ ಸುಖಮಾಂ ಪರೇ (ಸೋಮೇಶ. ೩೭). [ಕಡು$_1$ (< ಕಡಿದು) + ದಿಟ್ಟ]

**ಕಡುದೀರ್ಘ** (ಗು). ಬಹಳ ಉದ್ದವಾದ: ಕಡುದೀರ್ಘಂ ಜರಠಂಗಳಾದಿ ಕಥೆಯುಂ ಪೌರಾಣ ಶಬ್ದಂ (ನಾನಾರ. ೧೩೯). [ಕಡು$_1$ (< ಕಡಿದು) + ದೀರ್ಘ]

**ಕಡುದುಗುಡ** (ನಾ). ಅತೀವ ದುಃಖ; ಬಹು ವ್ಯಥೆ: ಈತಂ ಭವತ್ತ್ರಿಯವಯಸ್ಯನೆಂದಱಿದಾಂ ಕಡುದುಗುಡಂದಳೆದಿದೇನೆಂದು ಕಂಬನಿಗಳಂ ಬಿಡುತ್ತೆ ಲಜ್ಜಾವನತಮುಖಿಯಾಗಿರಲ್ (ಕಾದಂಉ. ೫೭೮); ವಿಧಿ ನಿನ್ನ ವರಸಹೋದರನಿಟಿಲದಲಿ ಬರೆದನೆ ಪುಟ್ಟದಾಕ್ಷಣ ಪೋಪುದೆಂದು ಪಲ್ಮೊರೆದಳು ಕಡುದುಗುಡದಲಿ (ಮೋಹತ. ೪–೮೪). [ಕಡು$_1$ (< ಕಡಿದು) + ದುಗುಡ]

**ಕಡುದುಮ್ಮಾನ** (ನಾ). = ಕಡುದುಗುಡ: ನರನ ಕಡುದುಮ್ಮಾನ ನೆಱೆ ಹೆದಱಿಸಿತು ಮೂಜಗವ (ಕುವ್ಯಾದ್ರೋ. ೮–೧೧). [ಕಡು$_1$ (< ಕಡಿದು) + ದುಮ್ಮಾನ]

**ಕಡುದುರುಳ** (ನಾ). ಬಹಳ ಕೆಟ್ಟ ವ್ಯಕ್ತಿ; ಮಹಾದುಷ್ಟ: ಮೃಡನ ಬೋನವನಿಂತು ತುಡುಗಿಂ ತಿಂದ ಶಿವದ್ರೋಹಿ ಕಡುದುರುಳನಿವನೆಂದೆನುತ ತಲೆವೊಡೆಯೆ ಹೊಯ್ದಳು (ಬಸವು. ೨೪–೫೬). [ಕಡು$_1$ (< ಕಡಿದು) + ದುರುಳ]

**ಕಡುದುಷ್ಟ** (ನಾ). ಬಹಳ ಕೆಟ್ಟವನು. 'ಕಡುದುಷ್ಟೆ' ಪರಾ. [ಕಡು$_1$ (< ಕಡಿದು) + ದುಷ್ಟ]

**ಕಡುದುಷ್ಟೆ** (ನಾ). ಅತಿ ಕೆಟ್ಟವಳು; ಬಹಳ ಕೇಡಿಯಾದ ಹೆಂಗಸು: ಕಪಟೆ ಕಂಟಕಿ ಕಟಕಿ ಕಡುದುಷ್ಟೆ ಕಲಹಾರ್ಥಿ ವಿರಸೆ ಪರವಶೆ ಪಾದರಿ (ಜೈಮಿಭಾ. ೫–೬೧). [ಕಡುದುಷ್ಟ + -ಎ]

**ಕಡುದುಱು** 'ಕಡಂದುಱು' ನೋ.

**ಕಡುದೂಱುಕಾಱ** (ನಾ). ಮಿಗಿಲಾಗಿ ದೂರು ಹೇಳುವವನು; ಮಹಾಚಾಡಿಕೋರ: ಕೇಳದನು ಕಡುದೂಱುಕಾಱರ ನಾಲಗೆಯ ರಚಿತೋಕ್ತಿಯನು ಕರುಣಾಳುಗಳ ಬಲ್ಲಹನು (ತೊರರಾ. ೧–೮–೫೪). [ಕಡು$_1$ (< ಕಡಿದು) + ದೂಱುಕಾಱ]

**ಕಡುದೆಳ್ಪು** (ನಾ). ಬಹಳ ತಿಳಿಯಾಗಿರುವಿಕೆ; ನಿರ್ಮಲತೆ: ಅದಟನಳುಕ್ಕೆ ಮಯ್ಮೆಯ ನಿಮಿರ್ಕೆ ಯಶೋಧನದಿರ್ಕೆ ರಾಜವಂಶದ ಕಡುದೆಳ್ಪು ದಾನಗುಣದೊಳ್ಪು... ತನ್ನದೆಂಬುದನೆನೆ ಪೆರ್ಮೆಯಂ ತಳೆದನೋ ನ್ರಿಪರೊಳ್ ನೃಪತ್ರೈಲಶಾನ್ತರಂ (ಎಕ. VIII, ಸಾಗರ. ೧೫೯–೧೨; 1159); "ಶ್ರೀಸ್ಮೃತಿ" (ಶಾಪಮಂ. ೫೬೭ ಕೋಶ) [ಕಡು$_1$ (< ಕಡಿದು) + ತೆಳ್ಪು$_2$]

**ಕಡುದೇಸಿ** (ನಾ). ಬಲುಸೊಬಗು; ವಿಶೇಷವಾದ ಚೆಲುವು. 'ಕಡುದೇಸಿವೆಣ್' ಪರಾ. [ಕಡು$_1$ (< ಕಡಿದು) + ದೇಸಿ$_1$]

**ಕಡುದೇಸಿಗ** (ನಾ). ತೀರ ಅನಾಥ; ಯಾರೂ ದಿಕ್ಕಿಲ್ಲದವನು: ಹಲುಬಿದನಕಟ ಕಡುದೇಸಿಗನು ತಾ ತನ್ನೊಡನೆ ಫಲುಗುಣನೇಕೆ ಜನಿಸಿದನೊ (ಕುವ್ಯಾದ್ರೋ. ೧೨–೧). [ಕಡು$_1$ (< ಕಡಿದು) + ದೇಸಿಗ]

**ಕಡುದೇಸಿವೆಣ್** (ನಾ). ಬಹಳ ಚೆಲುವೆಯಾದ ಹೆಣ್ಣು; ಬಹಳ ಸೊಬಗಿನವಳು: ಕೊಂಡಸಿಯುಂಬೊಂದನೆ ದಡ್ಡವಿರ್ದ ಹೃದಯಂ ಜಾಳಾಂದರಂಬೋಪಿನಂ ಬೆಸೆದೆಚ್ಚಂ ಕಡುದೇಸಿವೆಂಡಿರನದೇಂ ಕಾಮುಂ ಛಲಗ್ರಾಹಿಯೋ (ಅರ್ಧನೇ. ೪–೧೪೬). [ಕಡುದೇಸಿ + ಪೆಣ್]

**ಕಡುದೈನ್ಯ** (ನಾ). ೧. ತೀರ ಲಘುವಾಗಿರುವುದು; ಅತಿ ದೀನತೆ: ಉಗ್ರ ಪಂಚಾನನಂ ಗೆಲ್ವ ಚತುರೋಪಾಯಮುಂ ಬಿಟ್ಟು ತಾನಳ್ಕಿ ಬಳ್ಕಿ ಕಡುದೈನ್ಯದಿಂದೀಗ ಮುಗ್ಧಾಂಗಮಂ ತಳೆದಿರ್ಪುದು ಏನಿದಚ್ಚರಿ (ಜೈಮಿಭಾ. ೬–೨೮); ಕಂಡಕಂಡವರೊಳು ಕಡುದೈನ್ಯವಡೆಯದುದ್ದಂಡೆಯೆನಿಸಿ ತಾನಿರದೆ... ಪೆರ್ಮೆಯ ಕೈಕೊಂಡೆಸೆವುದು ಕೋವಿದೆಯರು (ಹದಿಬ. ೪–೪೧). ೨. ಅತಿ ಬಡತನ. [ಕಡು$_1$ (< ಕಡಿದು) + ದೈನ್ಯ]

**ಕಡುದೊಡಂಕು** (ನಾ). ದೊಡ್ಡ ತೊಡಕು, —ಆತಂಕ, —ಬಂಧನ: ಕೋಪೋದ್ಭವವೇಕಾನೇಕೆ ಕರ್ಮದ್ವಯದ ಕಡುದೊಡಂಕೇಕದಾನೇಕೆ ದೇವಾ (ರಕ್ಷಾಶ. ೫೬). [ಕಡು$_1$ (< ಕಡಿದು) + ತೊಡಂಕು$_3$]

**ಕಡುನಂಜು** (ನಾ). ತೀಕ್ಷ್ಣವಾದ ವಿಷ: ಕಿಚ್ಚಿನುರಿ ಪತ್ತದೆ ಪೊತ್ತುವ ಬೇಗೆ ಪಾವು ತಿನ್ನದ ಕಡು[ಪಾಠಾಂ. ತನಿ]ನಂಜು ತನ್ವಿಯರೊಳಾದಳುಪಿಂ ಪೆಱತುಂಟೆ ಲೋಕದೊಳ್ (ಸೂಕ್ತಿಸು. ೧೫–೪೬; ಲೀಲಾವ. ೪–೫೫ ನೋ). [ಕಡು$_1$ (< ಕಡಿದು) + ನಂಜು$_2$]

**ಕಡುನಂಟ, ಕಡುನೆಂಟ** (ನಾ). ಅತ್ಯಂತ ಸಮೀಪದ ಆಪ್ತ; ಬಹಳ ಪ್ರೀತಿಯ ಬಂಧು: ಈ ಕಡುನಂಟನ ಸತಿಯ ರೂಪು ಸೋಲಿಸಿತೆನ್ನಂ (ಅನಂಪು. ೧೧–೩೦). **ಕಡುನೆಂಟ**: 'ಕಡುನೆಂಟತನ' ಪರಾ. [ಕಡು$_1$ (< ಕಡಿದು) + ನಂಟ]

**ಕಡುನನ್ನಿ** (ನಾ). ಸಂಪೂರ್ಣ ಸತ್ಯ; ಪರಮ ಸತ್ಯವಂತಿಕೆ: ಕರ್ಣನೇಱು ಕರ್ಣನ ಕಡುನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ (ಪಂಪಭಾ. ೧೨–೨೧೭); ಕಡುನನ್ನಿ ಬಂದು ಸರಣೆಂದವರಂ ತಲೆಗಾಯೆ (ಕಬ್ಬಿಕಾ. ೪೬). [ಕಡು$_1$ (< ಕಡಿದು) + ನನ್ನಿ]

**ಕಡುನಲ್ಲ** (ನಾ). ಅತ್ಯಂತ ಪ್ರಿಯನಾದವನು; ಬಹಳ ಪ್ರೀತಿಪಾತ್ರನು: ಅಂದೆ ಪೊಸಯಿಸಿದ ಪೊಸವೇಟಕಾಱರಪ್ಪ ಕಡುನಲ್ಲರು ಮಿರ್ವರುಮಿರೆ (ಆದಿಪು. ೧೨–೨೮ ವ); ಕಡುನಲ್ಲಂ ನೆರೆದಪ್ಪೊಡೆ (ಲೀಲಾವ. ೩–೧೯). [ಕಡು$_1$ (< ಕಡಿದು) + ನಲ್ಲ]

**ಕಡುನಳಿದು** (ನಾ). ಅತಿಯಾಗಿ ಬಾಗಿದುದು; ತುಂಬಾ ಇಳಿಬಿದ್ದುದು: ಅಡಿಯಿಡಲೀ ಧರಾವಳಯಮಿಟ್ಟೆಡೆಯೆಂಬಿನಮಭ್ರಮಂಡಲಂ ಕಡುನಳಿದಾದುದೀ[ಪಾಠಾಂ. ದಳವಾದುದೇ, ವಡಿಲಾದುದೀ] ಬಲದ ಧೂಳಿಯೊಳೆಂಬಿನಮೊಂದನೊಂದು ತಳ್ತಿಡೆಗಿಱಿದೆತ್ತಲುಂ ನಡೆವ ದಂತಿಘಟಾಳಿಯಿಂ (ಆದಿಪು. ೧೨–೬೨). [ಕಡು$_1$ (< ಕಡಿದು) + ನಳಿದು]

**ಕಡುನಾಣ್** (ನಾ). ಬಹಳ ನಾಚಿಕೆ; ಅತಿ ಲಜ್ಜೆ: ಇದು ಕಡುನಾಣ ಪುತ್ತು ವಲಮಿಂ ನೆನೆಯುತ್ತಿರಿಮೆಮ್ಮನೆಂಬುದಾವುದು ಗುಣಮೆಮ್ಮೊಳಾಗೆ ನೆನೆದಪ್ಪಿರ್ (ಆದಿಪು. ೧೧–೧೩೧); ಸಾವುದೆ ಜೀವನಂ ದಲೆನಗೀ ಕಡುನಾಣ್ಗೆಡೆಯಾದ ಜೀವನಂ ಸಾವೆಮ (ಕಾದಂಉ. ೫೯೧). [ಕಡು$_1$ (< ಕಡಿದು) + ನಾಣ್]

**ಕಡುನಾಣ್ಚು** (ಕ್ರಿ). ಬಹಳವಾಗಿ ನಾಚಿಕೆಪಟ್ಟುಕೊಳ್ಳು, —ಲಜ್ಜಿತನಾಗು: ನುಡಿ ತೊದಳಪ್ಪುದೊಂದಿಬರೆ ಮುಯ್ವುಗೆದೋಡುವ ಕಾಳೆಗಕ್ಕೆ ಕಣ್ಸಡೆವರ ಮಾತುಗೇಳೆ ಕಡುನಾಣ್ಚಯೆ ಮುಂಚುವೆಂ (ಗದಾಯು. ೧೦–೫). [ಕಡು$_2$ + ನಾಣ್ಚು]

**ಕಡುನಾಲಿಗೆ** (ನಾ). ಚುರುಕಾದ ನಾಲಗೆ; ಬಹಳ ಮಾತನಾಡುವ ನಾಲಗೆ: ಕಳ್ಳಗೆ ಕಡುನಾಲಿಗೆ ಹಾದರಗಿತ್ತಿಗೆ ಹಲವು ನಾಲಿಗೆ (ಗಾದೆ). [ಕಡು$_1$ (< ಕಡಿದು) + ನಾಲಿಗೆ (< ನಾಲಗೆ)]

**ಕಡುನಿಂದೆ** (ನಾ). ದೊಡ್ಡ ಅಪವಾದ; ಬಹಳ ನಿಂದೆ: ಸೋಕಿತೇ ಕಡುನಿಂದೆ ಪುಣ್ಯಶ್ಲೋಕರಿಗೆ (ತೊರರಾ. ೩–೨–೧೮). [ಕಡು$_1$ (< ಕಡಿದು) + ನಿಂದೆ]

**ಕಡುನಿಡಿದು** (ನಾ). ಬಲು ಉದ್ದವಾದುದು ; ಬಹಳ ದೀರ್ಘವಾದುದು : ಕಣ್ಮಲರ್ಗಳ್ ಕಡುನಿಡಿದಾದುವು (ಜಯಕಾ. ೩–೨೫).
ಕಡುನಿಡಿಯ = ಬಹಳ ಉದ್ದವಾದವನು, —ಎತ್ತರವಾದವನು: ಅಸಿಯಂ ಕಡುನಿಡಿಯಂ . . . ಸ್ಥೂಲನಖದಂತರೋಮಂ ರವಿಜಂ (ಜಾತತಿ. ೨–೨೫) ; ಕುಡಿದಾಡೆಯರ್ ಕೆಲರ್ ಕೆನ್ನೆಯುಗುರರ್ ಕೆಲರ್ ಕಡುನಿಡಿಯವರ್ ಕೆಲರ್ (ವೀರರ. ೩೮೬).
[ಕಡು$_1$ (< ಕಡಿದು) + ನಿಡಿದು]

**ಕಡುನಿಡಿದುಗೊಳ್** (ಕ್ರಿ). ಬಹಳ ಉದ್ದವಾಗು, —ಎತ್ತರವಾಗು : ಕಡುನಿಡಿದುಗೊಂಡಂಬರಮಂ ಚುಂಬಿಸಿ ನಳನಳಿಸಿ ಕೊರ್ಬಿ ಬೆಳೆದ ಪೆರ್ಬಿದಿರ ತುದಿ ತಾಗಿ ಪಜಿಂದ ಕಿಜಿಮುಗಿಲ್ಗಳಿಂದ (ಗಿರಿಕ. ೧–೧೨೮ ವ).
[ಕಡುನಿಡಿದು + ಕೊಳ್$_1$]

**ಕಡುನಿದ್ದೆ** (ನಾ). = ಕಡುನಿದ್ರೆ. 'ಕಡುನಿದ್ದೆಗೈ' ಪರಾ.
[ಕಡು$_1$ (< ಕಡಿದು) + ನಿದ್ದೆ]

**ಕಡುನಿದ್ದೆಗೈ** (ಕ್ರಿ). ೧. ತುಂಬ ನಿದ್ರೆಮಾಡು. ೨. (ಅಲಂ) ದೀರ್ಘನಿದ್ರೆಹೊಂದು ; ಸಾಯು : ಬೀಳುಕೊಂಡುದು ಜೀವ ಗರಳದ ಗಾಳಿ ಸೋಂಕಲು ತನುವ ತೊಟ್ಟಿಲ ಬಾಲಕನು ಕಡುನಿದ್ದೆಗೈದನು (ನಿಭಾಗ. ೬–೧೩–೩೨). [ಕಡುನಿದ್ದೆ + ಗೈ (< ಕೆಯ್$_1$)]

**ಕಡುನಿದ್ರೆ** (ನಾ). ೧. ಅತಿನಿದ್ರೆ. ೨. (ಅಲಂ) ದೀರ್ಘನಿದ್ರೆ ; ಸಾವು: ನಿರ್ದಿಶರಿಗಿನ್ನೇನು ಗತಿ ಕಡುನಿದ್ರೆಯಾಯಿತೆ ಕಮಲಲೋಚನನಿರ್ದಡೀ ವಿಧಿಯಿಹುದೆ ಹಾಯೆನುತಿರ್ದುದಖಿಳಜನ (ನಿಭಾಗ. ೮–೧೦–೨೮).
[ಕಡು$_1$ (< ಕಡಿದು) + ನಿದ್ರೆ]

**ಕಡುನಿಬ್ಬರ** (ನಾ). ಅತ್ಯಂತ ರಭಸ, —ಆವೇಗ : ಗರುಡನುಬ್ಬಟೆ ಗಹಿನಿಕರ ಜರ್ಝರಿತವಾದವೊಲಿವನ ಕಡುನಿಬ್ಬರದ ಥಾಳಿಗೆ ಧೈರ್ಯಗೆಟ್ಟುದು ಕೂಡೆ ಕುರುಸೇನೆ (ಕುವ್ಯಾದ್ರೋ. ೧೬–೧೨).
[ಕಡು$_1$ (< ಕಡಿದು) + ನಿಬ್ಬರ]

**ಕಡುನಿಮಿರ್** (ಕ್ರಿ). ಬಹಳ ಉದ್ದವಾಗು; ಹೆಚ್ಚು ಚಾಚು : ಕಡುನಿಮಿರ್ದ ಕೊಂಬು ಕೊಂಬಿನೊಳೆಡೆವಿಡದಲರ್ದಲರ ತೊಂಗಲಿಂ (ಕಬ್ಬಿಕಾ. ೫೯); ಕಡುನಿಮಿರ್ದು ಪೊಳೆವ ಪೊಸಪೂಗುಡಿಯೆಂಬಗ್ಗಳಿಕೆವಡೆದ ಸಬಳಮನೊಲವಿಂ ಪಿಡಿದು (ಕಬ್ಬಿಕಾ. ೨೧೬).
[ಕಡು$_2$ + ನಿಮಿರ್]

**ಕಡುನೀರಡಸು** (ಕ್ರಿ). ಬಹಳ ಬಾಯಾರಿಕೆಯಾಗು: ಗಜಮೈದೆ ಪೊಕ್ಕು ನದಿಯೊಳ್ ಕಡುನೀರಡಸಿ[ಪಾಠಾಂ. ನೀರಡಿಸಿ] ತೆಗೆದೀಂಟೆ ಜಲಮಂ ಬಿಡೆ ತಮ್ಮೊಳ್ ತೀವಿಕೊಂಡು ಚೆಲ್ಲುವ ಪದದೊಳ್ (ಗಿರಿಕ. ೧–೧೨೦). [ಕಡು$_2$ + ನೀರಡಸು]

**ಕಡುನೀಱ** (ನಾ). ಬಲು ಚೆಲುವ ; ಅತಿ ಸೊಬಗುಗಾರ: ಮಱುಗಿ ಮನದೊಳ್ ಮುನಿದು ಕೆಲದ ಕಡುನೀಱರನಡರೆ ನೋಟ್ಪ (ವರ್ಧಪು. ೯–೪೩ ವ) ; ಕಟ್ಟೊಲುಮೆಯನುಳ್ಳ ಕಡುನೀಱ (ಕುರಾಸಾಂ. ೨೮–೬೦).
[ಕಡು$_1$ (< ಕಡಿದು) + ನೀಱ]

**ಕಡುನೀಱೆ** (ನಾ). ಬಲು ಚೆಲುವೆ; ಅತಿ ಸುಂದರಿ : ಚಿತ್ತಭವಂ ದಶಕಂಧರಂಗೆ ಕೊಟ್ಟಂ ಕಡುನೀಱೆ ನಿನ್ನನನುರೂಪ ವರಂಗೆ (ಪಂರಾಮಾ. ೯–೧೬೪) ; ಮಣಿಗರ್ದುಗೆಯೊಳಗಾ ಕಡುನೀಱೆ ಕಣ್ಗೊಪ್ಪಿದಳು (ಶ್ರೀಪಾಲ. ೨–೧೩) ; ಕಡುನೀಱೆಯರು ಮುಂದೆ ನಿಲೆ ಮೊಱೆ ಧರ್ಮವ ಬಿಡುವರು ಮೋಹಿಜನಗಳು (ಕುರಾಸಾಂ. ೨೬–೯೧).
[ಕಡು$_1$ (< ಕಡಿದು) + ನೀಱೆ]

**ಕಡುನುಡಿ$_1$** (ಕ್ರಿ). ತೀಕ್ಷ್ಣವಾಗಿ ಮಾತನಾಡು : "ಧೇಕತೇ = ಕಡುನುಡಿದಪಂ" (ಕಾಶಕ್ಕ. ೮೬). [ಕಡು$_2$ + ನುಡಿ$_1$]

**ಕಡುನುಡಿ$_2$** (ನಾ). ೧. ತೀಕ್ಷ್ಣವಾದ ಮಾತು. ೨. ಬಡಾಯಿ : ಬಡವನ ಸುಖಮುಂ ಪಂದೆಯ ಕಡುನುಡಿಯುಂ ಮುಗಿಲ ನೆೞಲುಮೋಪರ ಮುನಿಸುಂ ಕಡುಮೂರ್ಖನ ತಪಮುಂ . . . ನಿಲಲಱಿದಪುವೇ (ಧರ್ಮಾಮೃ. ೨–೨೨೦). ೩. ಅತಿಯಾದ ಮೂದಲಿಕೆ, —ಕಟಕಿ : ಕಡುನುಡಿಗೆ ಮೆಚ್ಚಿದನು ಹಿಂದಕೆ ಮಿಡುಕುವವನೇ ಕರ್ಣನೀತನ ಕಡುಹ ನೋಡು ವಿಶೋಕ ಎಂದನು ನಗುತ ಕಲಿ ಭೀಮ (ಕುವ್ಯಾದ್ರೋ. ೧೩–೩೨).
[ಕಡು$_1$ (< ಕಡಿದು) + ನುಡಿ$_2$]

**ಕಡುನುಡಿಕಾರ** (ನಾ). ತೀಕ್ಷ್ಣವಾಗಿ ಮಾತನಾಡುವವನು; ನಿಷ್ಠುರವಾದಿ : "ಧ್ರೇಕಃ, ಧೇಕಕಃ, ಧ್ರೇಕಮಾನಃ–ಈ ೩ ಕಡುನುಡಿಕಾರಂ" (ಕಾಶಕ್ಕ. ೮೬).
[ಕಡುನುಡಿ$_2$ + -ಕಾರ$_1$ (< -ಕಾಱ)]

**ಕಡುನುಣ್ಪು** (ನಾ). ಬಹಳ ನುಣುಪು ; ಅತಿಶಯವಾದ ಮೃದುತ್ವ: ಕಿಱುದೊಡೆಯ ಕಡುನುಣ್ಪು ಕಣ್ಗಳೊಳ್ ನೆಱೆ ಪೊಳೆಯೆ (ಅಜಪು. ೪–೭).
[ಕಡು$_1$ (< ಕಡಿದು) + ನುಣ್ಪು]

**ಕಡುನೆಂಟ** 'ಕಡುನಂಟ' ನೋ.

**ಕಡುನೆಂಟತನ** (ನಾ). ಬಹಳ ಬಾಂಧವ್ಯ; ಅಧಿಕವಾದ ಪ್ರೀತಿ : ಕಮಲ ಅರ್ಕನಲಿರುವ ಕಡುನೆಂಟತನದಿಂದ ವಿಮಲ ಜಲದೊಳಗೆ ಅಡುತಿಹುದು (ಪುರಂದ. ೨–೩೪–೧).
[ಕಡುನೆಂಟ (< ಕಡುನಂಟ) + -ತನ]

**ಕಡುನೆಱ** (ನಾ). ಬಹಳ ಆಯಕಟ್ಟಿನ ಸ್ಥಳ; ಮರ್ಮಸ್ಥಾನ : ದಶಮುಖ ಸಾಮಂತನಂ ವಿಘ್ನನಂ ತೋಮರದಿಂದುದ್ದಾಮನಿಟ್ಟಂ ಬಿಡೆ ಕಡುನೆಱನಂ ನಟ್ಟು ತೂಗಾಡುವನ್ನಂ (ಪಂರಾಮಾ. ೧೩–೧೦೨).
[ಕಡು$_1$ (< ಕಡಿದು) + ನೆಱ$_1$]

**ಕಡುನೇಮ** (ನಾ). ಕಠಿನವಾದ ವ್ರತ ; ಉಗ್ರನಿಯಮ : ಕಡುನೇಮವಿಡಿದು ಕಕ್ಕಸಗೊಂಡು ಮುನಿವರರೊಡರಿಸುವುಗ್ರತಪಗಳು ಮಡದಿಯರಿನಿಯರ್ ಮನವಱಿತೆಸಗುವ ನಡತೆಗಳಿಗೆ ಪಡಿಯಲ್ಲ (ಹದಿಬ. ೨–೨೮).
[ಕಡು$_1$ (< ಕಡಿದು) + ನೇಮ$_1$]

**ಕಡುನೇಹ** (ನಾ). ಅತಿಶಯವಾದ ಪ್ರೇಮ ; ಮಿಗಿಲಾದ ಸ್ನೇಹ : ಪ್ರಿಯವಚದಂತೆ ಪುಣ್ಯತತಿಯಂತೆ ಸುಧಾಕರನಂತೆ ಕೂರ್ತ ಮುಗ್ಧೆಯ ಕಡುನೇಹದಂತೆ (ಗಿರಿಕ. ೧–೧೮); ಮುಕ್ಕುಳಿಸುವ ಜೊಲ್ಲುವಾಯಿಗೆ ಕಡುನೇಹ ಸೊಕ್ಕಾಂತು ಮುತ್ತನಿಕ್ಕುವಳು (ಮೋಹತ. ೧೬–೬೭)
[ಕಡು$_1$ (< ಕಡಿದು) + ನೇಹ]

**ಕಡುನೋ** (ಕ್ರಿ). ಬಹಳ ದುಃಖಪಡು, —ಸಂಕಟಪಡು : ಕೊರಳ ಸೆರೆ ಹಿಗ್ಗಿದವು ದೃಗುಜಲ ಉರವಣಿಸಿ ಕಡುನೊಂದನು (ಕುವ್ಯಾಉ. ೧೦–೧೧) ; ಹಂಸಧ್ವಜಂ ತನ್ನ ಚಿತ್ತದೊಳ್ ಕಡುನೊಂದಳಲ್ದು ಮಿಗೆ ಮರಣಮಂ ನಿಶ್ಚೈಸಿ (ಜೈಮಿಭಾ. ೧೪–೨೪).
[ಕಡು$_2$ + ನೋ]

**ಕಡುನೋವು** (ನಾ). ಬಹಳ ದುಃಖ; ತೀವ್ರವಾದ ಯಾತನೆ : ಪ್ರಿಯದತ್ತಸೆಟ್ಟಿ ಮಗಳಾಡುವೆಡೆಗಳಂ ನೋಡಿ ಕಡುನೋವಿಂ ಸೈರಿಸದುಮ್ಮಳಿಸಿ (ಧರ್ಮಾಮೃ. ೩–೨೩೩) ; ಕರಗಂಬೊತ್ತ ಮಡದಿಯರ್ಗಂ ದೀವದ ಖಗಮೃಗಕಂ ಬಿಡದದಸಿತು ತರುಮೂಲಮನೊಂದಿದ ಕಡುನೋವಾ ಶಾಖಾಸಂತತಿಗಿರದೆಯ್ದುವ ಮಾಳ್ಕೆಯೊಳು (ಜಯಕಾ. ೨–೪೧).
[ಕಡು$_1$ (< ಕಡಿದು) + ನೋವು]

**ಕಡುಪಂಥಗಾತಿ** (ನಾ). ಬಹಳ ಹಠಗಾತಿ : ಕಡುಪಂಥಗಾತಿ ನೀನೆನಗೆ ವೀಳೆಯದೆಲೆಗೊಡದಿರಂಜುವೆವು ನಾವೆಂದು (ಭರಚ. ೧೫–೪೪).
[ಕಡು$_1$ (< ಕಡಿದು) + ಪಂಥಗಾತಿ (< ಪಂಥಗಾರ್ತಿ)]

**ಕಡುಪಗಲ್** (ನಾ). ಬಹಳ ಏರಿದ ಹೊತ್ತು; ತುಂಬುಹಗಲು; ಮಧ್ಯಾಹ್ನ: ಕಡುಪಗಲಾದುದು ಬೀಡಂ ಬಿಡಿಸುವುದೀ ಪುಣ್ಯನದಿಯ ತಡಿಯೊಳ್ ದೇವರ್ (ಆದಿಪು. ೧೧–೬೯).
[ಕಡು$_1$ (< ಕಡಿದು)+ ಪಗಲ್]

**ಕಡುಪಾಗಿರು** (ಕ್ರಿ). ಮಂದವಾಗಿರು: ಚಿತ್ರದ ಪುರೋಭಾಗವು ಸಾಮಾನ್ಯವಾಗಿ ಕಡುಪಾಗಿದ್ದು ಮುಂಭಾಗದ ಚಿತ್ರವನ್ನು ಪರಿಸ್ಫುಟಗೊಳಿಸುವುದು (ಭಾಚಿತ್ರ. ೨೩). [ಕಡುಪು + ಆಗು$_1$ + ಇರು$_1$ (< ಇರ್$_1$)]

**ಕಡುಪಾತಕ** (ನಾ). ಮಹಾಪಾಪ: ಕರುಣಾಳು ರಾಘವನಲ್ಲಿ ತಪ್ಪಿಲ್ಲ ಕಡುಪಾತಕಂಗೈದು ಪೆಣ್ಣಾಗಿ ಸಂಭವಿಸಿದೊಡಲಂ ಪೊರೆವುದೆನ್ನೊಳಪರಾಧಮುಂಟು (ಜೈಮಿಭಾ. ೧೯–೨೬).
[ಕಡು$_1$ (< ಕಡಿದು) + ಪಾತಕ]

**ಕಡುಪಾತಕಿ** (ನಾ). ಬಹಳ ಪಾಪಮಾಡಿದವನು; ಪಾಪಿಷ್ಠ: ಕಡುಪಾತಕಿಯಲಾ ನಿಮ್ಮಯ್ಯನೆಂದಳು ಫಲುಗುಣನ ರಾಣಿ (ಕುವ್ಯಾದ್ರೋ. ೭–೧೬). [ಕಡು$_1$ (< ಕಡಿದು) + ಪಾತಕಿ]

**ಕಡುಪಾಪ** (ನಾ). ೧. ಮಹಾಪಾಪ; ದೊಡ್ಡಪಾಪ: ಒಡಹುಟ್ಟಿದರ ಕೈಯಾರ ಕೊಂದರೆ ಮುಟ್ಟದೇ ಕಡುಪಾಪ ಘನಪರಿತಾಪ ತನಗೆ (ಕುವ್ಯಾಭೀ. ೩–೨೬). ೨. ಬಹಳ ಪಾಪಮಾಡಿದವನು: ಕಡುಪಾಪಂ ಬಲು ಮಾಯಲಾತ ಶುಚಿಯೇ (ಸೋಮೇಶ. ೯೭).
[ಕಡು$_1$ (< ಕಡಿದು) + ಪಾಪ$_3$]

**ಕಡುಪಾಪಿ** (ನಾ). = ಕಡುಪಾಪ ೨: ನಿರ್ಭರದ ಕಡುಪಾಪಿ ದೈತ್ಯರ ಗರ್ಭದುಬ್ಬರ ಹಬ್ಬಿಸಿರ್ದುದು (ಸಂಭಪ. ೫–೧೮); ಮಿಡುಕಿದರು ಕಡುಪಾಪಿಯಿವ ತಾ ಬಿಡನೆನುತ ಮನನೊಂದು (ನಳಚ. ೪–೧೩).
[ಕಡು$_1$ (< ಕಡಿದು) + ಪಾಪಿ]

**ಕಡುಪಾಪಿಷ್ಠ** (ನಾ). = ಕಡುಪಾಪ ೨: ನಂಟರುಣ್ಣಲುಡಲುಂಟಾಗಿರ್ದುದಂ ತಾಳವಾ ಕಡುಪಾಪಿಷ್ಠನ . . . ನೋಡಿಯುಂ ನುಡಿಸಲ್ ಸಜ್ಜನರೊಲ್ವರೇ (ಸೋಮೇಶ. ೧೯). [ಕಡು$_1$ (< ಕಡಿದು) + ಪಾಪಿಷ್ಠ]

**ಕಡುಪಾಱು$_1$** (ಕ್ರಿ). ಪ್ರಖರತೆ ಕಡಮೆಯಾಗು: ಬಲ್ಪುಗುಂದಿದ ಮೃಗವೈರಿಯಂತೆ ಕಡುಪಾಱಿದ ಭಾಸ್ಕರನಂತೆ ಕಾಂತಿ ಬತ್ತಿದ ಸಸಿಯಂತೆ (ದಶಕು. ೬–೭೩). [ಕಡುಪು + ಆಱು$_1$]

**ಕಡುಪಾಱು$_2$** (ನಾ). ಅತಿ ಹಾದರಗಿತ್ತಿ: ಸಿತಗೆ ಕಡುಪಾಱು ನಿಷ್ಠುರೆ ಮತಿವಿಕಳೆ ಸಮಾನಯೋಗಸಂತುಷ್ಟೆ ಮದೋದ್ಧತೆ ಕಾತರಾಕ್ಷಿಯೇನಾಕೃತಯುತೆ ಸಂಭಾಷಿತಾತ್ಮೆಯೆನೆ ವಂಗದವಳ್ (ಮನ್ಮವಿ. ೫–೨೮).
[ಕಡು$_1$ (< ಕಡಿದು) + ಪಾಱು$_3$]

**ಕಡುಪು, ಕಡುಪುರ್, ಕಡುಹು$_2$** (ನಾ). ೧. ಉಗ್ರತೆ; ತೀವ್ರತೆ; ಪ್ರಖರತೆ; ತೀಕ್ಷ್ಣತೆ: ಕಿನಿಸಿ ಕಡುಪಿನಿಂದಂ ನಡುಗಿದಪುದು (ಕಾದಂಉ. ೬೬); ವಿಳಾಸಲೋಚನಂ ಕಡುಪಿನ ಬಾಣಮಾಗೆ (ಧರ್ಮಾಮೃ. ೪–೧೩೯); ಏವೊಗಟ್ವಿಂ ಕಡುಪಂ ನಿದಾಘದಾ (ದಶಕು. ೪–೨೨); ಪ್ರಳಯರುದ್ರನ ಕಾಯ್ಪು . . . ಸಿಡಿಲ ಕಡುಪಗ್ಗಳದಿನೊಡಗೂಡಿರ್ದ ಪುಲಿಯೊಱಲಿಟ್ಟುದೋಯೆನಿಸಿ (ಸಾಳ್ವಭಾ. ೫–೩೦). ೨. ವೇಗ; ಆವೇಶ; ರಭಸ; ಬಿರುಸು: ಕಡುಪಿಂದೆಯ್ತಂದು ಮಾಱಾಂತ ಸಾಮಜಸಂಘಾತಮನೊಂದುಗೊಳ್ಳೆರಡುಗೊಳ್ಳೆಂದುರ್ವಿ ಪೊಯ್ಯೊಂದು ಪೊಯ್ಗೆ ಜವಂಗುಂದಿ (ಪಂಪಭಾ. ೧೦–೧೦೨); ಕಡುಪಿನೊಳಂದು ಬಿಟ್ಟನತಿಶೀಘ್ರದೆ ವಾಜಿಯಂ (ಕಾದಂಪೂ. ೬೨೦); ಪಾಂಡ್ಯನಾಜಿಜಯಾಕಾಂಕ್ಷೆಯಿನೆಯ್ದೆವಂದು ಕಡುಪಿಂದಂ ತಾಗೆ (ಎಇ. XX, ೧೨–೨೫; 1167); ಗಿಳಿಗಳ್ ಕಡುಪಿಂ ನಡೆತಂದು ಸುತ್ತಲುಂ ಪಡಿಯಱರಾಗಿ ಚಪ್ಪರಿಪುವು (ಕಬ್ಬಿಕಾ. ೧೨೭); ಭಗಣಂ ಪಾಯ್ದುಳ್ಳೆ ಭೂಭೃತ್ಕುಳಂ ಕಡುಪಿಂ ಕಂಪಿಸೆ (ರಾಜಶೇ. ೬–೧೧). ೩. ಹುರುಪು; ಉತ್ಸಾಹ; ಉಬ್ಬು: ಕಡುಪಿಂ ಬಂದು ಪುರುಷಸಿಂಹಂಗಳಂತೆ ತರತರದಿಂ ಕುಳ್ಳಿರ್ದ ಗಜಾರೋಹಕರ ಗೊಂದಣದೊಳಂ (ಗಿರಿಕ. ೨–೧೦೫ ವ); ಆ ನೃಪವರನು ಕಡುಪಿಂದೆಯ್ದಿ ನಿನ್ನೊಳು ನಿಲ್ವನೊಸಗೆಯ ಪೊಡವಿಯಱಿವ ಮಾಳ್ಕೆಯೊಳು (ಶ್ರೀಪಾಲ. ೭–೧೦೨); ಒಡಲುರಿಗೆ ಮೊರೆಯಿಡುವ ಕಡಲನು ಕಡುಪಿನೊಳು ಮುದ್ದಾಡಿ ರಮಿಸುವೆ ನಗೆಮೊಗವ ತೋರಿ (ಗರಿ. ೫–೧೮). ೪. ಬಲುಮೆ; ಪರಾಕ್ರಮ; ದರ್ಪ: ಅಂತಕಂ ಕಡುಪಿನಿಂ ಕಂಠಗ್ರಹಂಗೆಯ್ಯದಿಂ ತಡೆಯಂ ಚೇತರಿಸು (ಆದಿಪು. ೧–೭೯); ಕುಳಿಕನ ಪಲ್ಗಳಂ ಮುಱಿಯೆ ಮೋದಿದರಾರ್ ಕಡುಪಿಂದೆ [ಪಾಠಾಂ. ಪಿಡಿದೆತ್ತಿ] (ಗದಾಯು. ೯–೨೦); ತತ್ಕಟಕಮಂ ಕಡುಪಿಂ ನೆಱೆ ಸೂಱೆಗೊಣ್ಡ ದೋಶ್ಶಾಳಿ ಕಳಿಂಗನಂ ಮುಱಿದು (ಎಕ. VII, ಶಿವಮೊ. ೬೪-೧೩; 1112?); ಕುಸುಮಕರ್ಣಿಕೆಯೊಳ್ ಕಡುಪಿಂ ಕೆಡಪಿ ಕೊಲ್ವುದಿದೆಂಬ ಶಂಕೆ ಘೋಂಕನೆ ಪುಟ್ಟೆ (ಗಿರಿಕ. ೨–೭೧ ವ); ತೋರಿಸು ನಿನ್ನ ಕಡುಪನೆಲೆ ವಾಮನ (ಚಿಬಪು. ೨೪–೧೪). ೫. ಕಂದುಕ ಕ್ರೀಡೆಯಲ್ಲಿ ಒಂದು ಕ್ರಮ: ಕಡುಪುಗಳುದ್ದವಟಂಗಡ ಬೆಡೆಂಗುಗಳ ಬೇಱೆ ಭಂಗಿಗಳ ಲಳಿಗಳಿದೇಂ ಕಡುಜಾಣನೆ (ಎಕ. II, ೧೩೩–೧೦೬; 982). ೬. ಮಲ್ಲಯುದ್ಧದಲ್ಲಿ ಒಂದು ವರಸೆ: ಕಡುಪಂ ಪಟ್ಟಿಸಮೆಂಬ ಬಿನ್ನಣದೆ ಕೃಷ್ಣಂ ಗೆಲ್ದು ಪಿಂಗಾಲ್ಗಳಂ ಪಿಡಿದಾರ್ದೆತ್ತಿ ನಿಶಾಟನಂ ತಿರಿಪೆ (ಜಗವಿ. ೬–೬೯). ೭. ಮಂದವಾಗಿರುವಿಕೆ; ದಟ್ಟವಾಗಿರುವಿಕೆ: ಆಕೃತಿಗಳ ವೈವಿಧ್ಯ ತೀಕ್ಷ್ಣತೆಯಿದ್ದುವಾದರೂ ಬಳಸಿದಂಥ ಬಣ್ಣಗಳು ತೀರ ಕಡುಪಿನವು (ಅಪೂಪ. ೧೭೭); ಹೀಗೆ ಏಳು ಬಣ್ಣಗಳೂ ಕಡುಪಿನ ಹೆಚ್ಚು ಕಡಿಮೆಯಿಂದಾಗಿ, ಬರಿಯ ಛಾಯೆ ಮಾತ್ರದ ಬಣ್ಣಗಳಂತೆ ಗೋಚರಿಸಬಹುದು (ಕಲೆದ. ೭೦). ೮. ಹುರಿಗಟ್ಟುವಿಕೆ; ಬಿಗಿಯಾಗುವಿಕೆ: ಚೆನ್ನಾಗಿ ಹೊಸೆದರೆ ಹುರಿ ಕಡುಪಾಗುವುದು (ರೂಢಿ). △**ಕಡುಪುರ್**: ೪. ಕಡುಪ್ಪಿರ್ನಿಂ ವಿಗುರ್ಬಿಸುವರ ಮಾಸೆಯಂ ಸುಡುವ ತೇಜದಳುರ್ಕೆ . . . ವೀರಪಾಂಡ್ಯನ (ಎಕ. XI, ದಾವಣ. ೮೫–೨೧; 1143). **ಕಡುಹು$_2$**: ೧. ಕಡುಹಿನ ಕಾಳಕೂಟದ ಸವಿಗೆ ನಂಜಿನ ಹೊನಲು ಬೆರಸಿದರೆ (ಕುವ್ಯಾಸ. ೧೫–೬೧); ಮರ್ಕಟಂಗಳನೊಕ್ಕಲಿಕ್ಕುತಿರೆ ಕಡುಹ ಕಂಡೋಡಿತ್ತು ಕಪಿಗಳು (ಕೌಶಿರಾ. ೨೭–೮); ನುಡಿಯಲಮ್ಮರು ಸುರುತಾಳನ ಕೋಪದ ಕಡುಹು ಕಂಗೆಡಿಸಿತೆಲ್ಲರನು (ಕುರಾಸಾಂ. ೪೧–೨೨). ೨. ಎಡೆವಿಡದಿಡುವ ತುಪಾಕಿಯ ಗುಂಡಿನ ಕಡುಹಿಂದ (ಕಂನವಿ. ೩–೭೬); ಹೊಣಕೆಗಳ ತಡಹುಗಳ ಕಲಿತನದ ಕಡುಹುಗಳ ರಣದವಕದಿಂ (ಜೈಮಿಭಾ. ೧೦–೪೨). ೪. "ಕಡುಹೆನೆ ಶೌರ್ಯಂ" (ಭಾರನಿ. ೪); ಬಿಡದ ಕುಲಶೈಲಂಗಳಗ್ಗದ ಕಡುಹೆನಿತು ವಾನರರು ಹೊಱಲೆಡೆಗೆಡೆಗೆ ಜರಿವಾ ಮಣ್ಣುಬೆಟ್ಟಂಗಳ ಬಿಗುಹದೆನಿತು (ಬಸಪು. ೧೯–೩೦); ಗುರುಸುತನ ಬಳಿವಿಡಿದು ಕಡುಹಿನ ಉರವಣಿಸಿದರು (ಕುವ್ಯಾಭೀ. ೮–೩೯); ಲಯಕೃತಾಂತನ ತಲೆಯನರೆಯರೆಗೊಯ್ದು ಕಡುಹಿನ ಕಾಲಭೈರವನ ಹಲುಗಳೆದ (ತೊರರಾ. ೩–೭–೬). ೯. ಬಹಳ ನೋವು, —ಯಾತನೆ: ನಡುನೆತ್ತಿಗೇಱಿತು ಮನದ ಕಡುಹು ಕಾಲ್ಗೆಟ್ಟುದು ಮಡದಿಗೆ ಮನ ರಾಮ ಮಡಿದ ವಾರ್ತೆಯನಾಲಿಸುತ (ಕುರಾಸಾಂ. ೩೬–೧೦೮).

[< ಕಡಿದು + -ಪು$_2$. / ತಮಿ. ಕಡುಪ್ಪು, ಕಡುಮೈ; ಮಲ. ಕಡುಪ್ಪ, ಕಡುಮ; ತುಳು. ಕಡ್ಪು = ವಿಪರೀತವಾದ; ಕೊಡ. ಕಡೀಪ]

**ಕಡುಪುಗಿಡಿಸು** (ಕ್ರಿ). ದರ್ಪವನ್ನು ಇಳಿಸು; ಶಕ್ತಿಗುಂದಿಸು: ಇದಿರಂ ಕಡುಪುಗಿಡಿಸಿ [ಪಾಠಾಂ. ಕಡುದೆಗೆದಿಸೆ] ಕೆದಱಿದರೆ ಕಣೆಗಳಂ ಸುಭಟರ್ಕಳ್ (ಜಗವಿ. ೭–೫೩). [ಕಡುಪು + ಕಿಡಿಸು (< ಕೆಡಿಸು)]

**ಕಡುಪುಗೆಯ್** (ಕ್ರಿ). ಪರಾಕ್ರಮವನ್ನು ತೋರು; ಬಲ್ಪುದೋರು; ಸಾಹಸಮಾಡು : ಭಗ್ನಬಿಲ್ಗನಾಗಿ ಮತ್ತಂ ಕಡು ಪುಗೆಯ್ವ ಶಿಶುಪಾಲನಂ ಮಗಧ ನರಪಾಲಂ ಕಂಡು (ಜಗನ್ನಿ. ೬-೧೦೦ ವ).
[ಕಡುಪು + ಕೆಯ್$_1$]

**ಕಡುಪೆಂಪು** (ನಾ). ಅತಿಶಯವಾದ ಹಿರಿಮೆ; ಮಹಾವೈಭವ : ಪಡೆದಂ ಬ್ರಹ್ಮಂ ಜಗಮುಂ ಪಡೆಯಲ್ ತಾನಾರ್ತನಿಲ್ಲ ಪೆಂಪಂ ನಿಮ್ಮಂ ಪಡೆದಲ್ತೆ ಪಡೆದನೆನಿಸಿದ ಕಡುಪೆಂಪಿನ ಪೊಱಗೆ ನೀವು ಮೊದಲಿಗರಾದಿರ್ (ಪಂಪಭಾ. ೬-೧೨). [ಕಡು$_1$ (< ಕಡಿದು) + ಪೆಂಪು]

**ಕಡುಪೆರ್ಚು** 'ಕಡುವೆರ್ಚು' ನೋ.

**ಕಡುಪೊಲ್ಲ** (ನಾ). ಬಲು ಕೆಟ್ಟದು; ಅತಿ ನಿಂದ್ಯವಾದುದು : ಕಡು ದುಷ್ಟರಪ್ಪವರ್ ಮುನಿದೊಡೆ ರಾಗದಿಂದೊಸೆದೊಡಂ ಕಡುಪೊಲ್ಲದಱಿಂದ ಮಂಜಿ ದುರ್ಜನ ಪರಮೇಶ್ವರರ್ಗಱಿದು ಕೈಮುಗಿವೆಂ (ಧರ್ಮಾಮೃ. ೧-೫೧). [ಕಡು$_1$ (< ಕಡಿದು)+ ಪೊಲ್ಲ]

**ಕಡುಬಂಜೆ** (ನಾ). ಪೂರ್ತಿ ಬಂಜೆ; ಸಂಪೂರ್ಣ ಗೊಡ್ಡು; ಪೂರಾ ನಿಷ್ಫಲವಾದುದು : ಪೌರುಷವು ಕಡುಬಂಜೆಯಾಯಿತು (ಕುವ್ಯಾಪಿ. ೩-೨೬). [ಕಡು$_1$ (< ಕಡಿದು) + ಬಂಜೆ$_1$]

**ಕಡುಬಂಡೆ** (ನಾ). ದೊಡ್ಡ ಕಲ್ಲು : ನಿಡಿದಾದ ದಾರಿಗೆ ಕಡುಬಂಡೆ ಕಂಡರೆ ಬಂಡಿ ಬಂಡಿಯಲಲ್ಲೆ ಮುಗ್ಗರಿಸದೆ (ಸರ್ವಜ್ಞ. ೩೭-೬೩೯). [ಕಡು$_1$ (< ಕಡಿದು) + ಬಂಡೆ$_1$]

**ಕಡುಬಡತನ** (ನಾ). ಬಹಳ ಬಡತನ; ಅತಿ ದಾರಿದ್ರ್ಯ : ಮೂಲ ಧನವೇಸುಂಟವೆಲ್ಲವನೋಳಿಯಲಿ ಚಂದನಕೆ ಸವೆಯಲು ಮೇಲೆ ಕಡುಬಡತನವಡಸಿರಲು (ಬಸವು. ೨೭-೧). [ಕಡು$_1$ (< ಕಡಿದು) + ಬಡತನ]

**ಕಡುಬಡವ** (ನಾ). ಅತಿ ಬಡವ; ತೀರ ದರಿದ್ರ : ಹರ್ಷದ ಲಹರಿಯೊಳೋಲಾಡಿದಂ ಕಡವರವನೆಡಹಿ ಸಂಧಿಸಿದ ಕಡುಬಡವನಂತೆ (ಜೈಮಿಭಾ. ೨೮-೫೪). [ಕಡು$_1$ (< ಕಡಿದು) + ಬಡವ]

**ಕಡುಬತ್ತಲು** (ನಾ). ಸಂಪೂರ್ಣ ನಗ್ನತೆ; ದಿಗಂಬರತ್ವ : ಕಡುಬತ್ತಲಾಗಿ ಎನ್ನ ಕೈಲಿ ಕಾಸಿಲ್ಲೆಂದರು ಒಡನೆ ಹಯವನೇಱಿ ಓಡಿದರು ಬಿಡೆನು (ಪುರಂದ. ೧-೨೩-೩). [ಕಡು$_1$ (< ಕಡಿದು) + ಬತ್ತಲ್ಉ$_2$ (< ಬತ್ತಲೆ)]

**ಕಡುಬಯಕೆ** (ನಾ). ತೀವ್ರವಾದ ಬಯಕೆ : ಅವನಿಗೂ ನಿಮ್ಮ ತಮ್ಮನ ಕಲ್ಯಾಣದ ಕಡುಬಯಕೆ (ತುಂಗಭ. ೯). [ಕಡು$_1$ (< ಕಡಿದು) + ಬಯಕೆ$_2$]

**ಕಡುಬರವು** (ನಾ). ರಭಸದಿಂದ ಬರುವಿಕೆ; ಬೇಗನೆ ಬರುವಿಕೆ : ನೀನಿಲ್ಲಿಗೇಕೆದ್ದು ಬಂದೆನ್ನ ಕಂದ ಈ ಕಡುಬರವೇನು ಕಾರಣ ಹೇಳು (ಮೋಹತ. ೨೭-೫೩). [ಕಡು$_1$ (< ಕಡಿದು) + ಬರವು]

**ಕಡುಬಲಿ** (ಕ್ರಿ). ಚೆನ್ನಾಗಿ ಬಲಿ, —ಗಟ್ಟಿಯಾಗು : "ಸಾರಯತಿ=ಕಡುಬಲಿದಪುದು" (ಕಾಶಕ್ಕ. ೨೮೩). [ಕಡು$_3$ + ಬಲಿ$_1$]

**ಕಡುಬಲ್ಮೆ$_1$** (ನಾ). ಅತ್ಯಂತ ಪರಾಕ್ರಮ (ಸಂಭ). [ಕಡು$_1$ (< ಕಡಿದು) + ಬಲ್ಮೆ]

**ಕಡುಬಲ್ಮೆ$_2$** (ನಾ). ಕ್ಷೀಣ ಪರಾಕ್ರಮ; ಕ್ಷೀಣ ಬಲ : "ಸ್ವಾರ, ಕೃಪ, ಶ್ರಥ - ದೌರ್ಬಲ್ಯೇ, ಕಡುಬಲ್ಮೆಯೊಳ್" (ಕಾಶಕ್ಕ. ೨೮೩). [ಕಡು$_0$ + ಬಲ್ಮೆ. P ತಮಿ. ಕಡುಗು = ಕಡಮೆಯಾಗು, ಕ್ಷೀಣಿಸು]

**ಕಡುಬಲ್ಲಿತ್ತು** (ನಾ). ಬಹಳ ಗಡುಸಾದುದು; ಬಹು ಘನವಾದುದು: ಮುತ್ತಿನ ನವಮಣಿಸರದೊಡವಿನ ಬಿಣ್ಪೆತ್ತಱ ಬಟ್ಟದುಱುಂಬಿನ ಕಡುಬಲ್ಲಿತ್ತಱ ಗುರುಕಟಿತಟಯುಗ್ಮದ (ಜಯಕಾ. ೫-೨೯). [ಕಡು$_1$ (< ಕಡಿದು) + ಬಲ್ಲಿತ್ತು]

**ಕಡುಬಲ್ಲಿದ** (ನಾ). ೧. ಅತಿ ಬಲಶಾಲಿ : ಕಡುಬಲ್ಲಿದನಪ್ಪ ಮೋಹಮಲ್ಲನ ಬಲಗಯ್ಯನಯ್ಯ ಮುಱಿದೈ (ಪಂಚಾಮಾ. ೫-೫); ಆತನವೊಲ್ ಕಡುಬಲ್ಲಿದರಿಲ್ಲ (ಕಬ್ಬಿಗಕಾ. ೧೭೭). ೨. ಮಹಾಶ್ರೀಮಂತ : ಪಗಲಿರುಳೆಂಬ ಭೇದಮನಯಂ ಬಡವರ್ ಕಡುಬಲ್ಲಿದರ್ . . . ಅಳರಸೆಂಬುದೊಂದು ದಂದುಗಂ (ಆದಿಪು. ೫-೩೦). [ಕಡು$_1$ (< ಕಡಿದು) + ಬಲ್ಲಿದ]

**ಕಡುಬಿಂಕತನ** (ನಾ). ಹೆಚ್ಚು ಅಹಂಕಾರ; ಅತಿ ಗರ್ವ : ಬೇಡಿದರೆ ಕೊಡದಿಹಗೆ ಕಡುಬಿಂಕತನವೇಕೆ ಪಾಡಲಱಿಯದವಂಗೆ ಪ್ರೌಢತನವೇಕೆ (ಪುರಂದ. ೨-೬೨-೧). [ಕಡು$_1$ (< ಕಡಿದು) + ಬಿಂಕತನ]

**ಕಡುಬಿಣ್ಪು** 'ಕಡುವಿಣ್ಪು' ನೋ.

**ಕಡುಬಿನ್ನಣ** 'ಕಡುವಿನ್ನಣ' ನೋ.

**ಕಡುಬಿನ್ನಣಂಬಡೆ** (ಕ್ರಿ). ಮಿಗಿಲಾದ ಕೌಶಲವನ್ನು ಪಡೆ; ನಿಪುಣನಾಗು : ಕೈಗೊಲೆ ಬಾಯ್ಗೊಲೆ ಮೈಗೊಲೆ ಕಾಲ್ಗೊಲೆ ಕೋಲ್ಗೊಲೆಯಂ ಕಲಿಪ ಕಡುಬಿನ್ನಣಂಬಡೆದು ಕಟ್ಟಾಳ್ತನಂಬೆತ್ತು (ರಾಜಶೇ. ೬-೧೧ ವ). [ಕಡುಬಿನ್ನಣ (< ಕಡುವಿನ್ನಣ) + ಪಡೆ$_1$]

**ಕಡುಬಿಲ್ಗಾಱ** (ನಾ). ಪ್ರಚಂಡ ಬಿಲ್ಲುಗಾರ; ಬಿಲ್ಲುಗಾರಿಕೆಯಲ್ಲಿ ಪ್ರವೀಣ : ಕರ್ಬಿನ ಬಿಲ್ಲನರಲಸರಲಂ ತೂಗುತ್ತುಂ ಕರಮೆಸೆದಲ್ಲಿ ತೊಟಿಲ್ವಂ ಕಡುಬಿಲ್ಗಾಱನ ತನುವೆಂಬ ತಳಾಱಂ (ಜಗನ್ನಿ.೯-೧೦೩). [ಕಡು$_1$ (< ಕಡಿದು) + ಬಿಲ್ಗಾಱ]

**ಕಡುಬಿಸಿ** (ನಾ). ಅತಿ ಬಿಸಿ; ಹೆಚ್ಚು ಶಾಖ : ಪುರಿವುದು ಕಡುಬಿಸಿಯಪ್ಪಂತಿರೆ ಮಳಲಂ (ಅಶ್ವಶಾ. ೧೦-೨೨). [ಕಡು$_1$ (< ಕಡಿದು) + ಬಿಸಿ (< ಬಿಸಿದು)]

**ಕಡುಬಿಸಿಲ್** 'ಕಡುವಿಸಿಲ್' ನೋ.

**ಕಡುಬಿಸಿಲು** 'ಕಡುವಿಸಿಲ್' ನೋ.

**ಕಡುಬಿಸುಪು** (ನಾ). ಬಹಳ ಕಾವು; ಅತಿ ಉಷ್ಣತೆ : ಕರ್ಬೊಗೆಯಂ ನೆಗಪುವ ಕೊಂಬುಗಳ ಕಡುಬಿಸುಪು ಕಾಲ್ಗಳಂ ಸುಡೆ (ಗಿರಿಕ. ೯-೨೭ ವ); ಕಡುಬಿಸುಪನಹಿಮಕರನಿವಜಕೊಡಲೊಳ್ ಮುಡಗಿಟ್ಟು ಪೋದನೆನೆ ಮಱುಕಂ ನೂರ್ಮಡಿಸಿದುದು (ಸೂಕ್ತಿಸು. ೮-೪೩). [ಕಡು$_1$ (< ಕಡಿದು) + ಬಿಸುಪು]

**ಕಡುಬಿಱುಸು** (ನಾ). ಬಹಳ ಕರ್ಕಶವಾದದ್ದು, —ಒರಟಾದದ್ದು : ಕಡುಬಿಱುಸಿನ ವೀಣೆ ಸೋಂಕಿ ನೊರಜೆದೆಯಿದೆಂದೊಡನೆದೆದಡಹಿ ತಕ್ಕಿಸುವ (ಭರತೇ. ೧೧-೮೪). [ಕಡು$_1$ (< ಕಡಿದು) + ಬಿಱುಸು]

**ಕಡುಬು** 'ಕಡುಂಬು' ನೋ.

**ಕಡುಬುವಾಡ** (ನಾ). ಒಂದು ಊರಿನ ಹೆಸರು : ಕಡುಬುವಾಡದ ಕಂಠದಿಂ ಪ| ತೆಂ| ಪೋಣಿಯಿಂ ಬ| ಪ| ಕಡುಬುವಾಡನ ಗಡಿಯಿಂ ಮೂ| ಬ| ಬರಬಯಲ ಗಡಿಯಿಂ ತೆಂ| ಯಿ ನಾಕು ಗಡಿಯೊಳಗೆ (ಸೌಇಇ. IX–ii, ೪೬೫-೨೦; 1472). [ಕಡುಬು ? + ವಾಡ]

**ಕಡುಬೆ** (ನಾ). (?) : ಈ ಸೊಪ್ಪುಗಳನ್ನು ತಂದು ಕಡುಬೆಯ ಹಾಗೆ ಹುರಿದು ನನೆದ ಪಾವುಡೆಯಲ್ಲಿ ಹಾಕಿ (ಅಶ್ವಟೀ. ೬೨-೬). [?]

**ಕಡುಬೆಟ್ಟಿತ್ತು** 'ಕಡುವೆಟ್ಟಿತ್ತು' ನೋ.

**ಕಡುಬೇಗ** (ನಾ). ಅತಿಶಯವಾದ ವೇಗ, —ರಭಸ : "ತ್ರಸೀ - ಉದ್ವೇಗೇ, ಕಡುಬೇಗದೊಳ್" (ಕಾಶಕ್ಕ. ೧೮೨). [ಕಡು$_1$ (< ಕಡಿದು) + ಬೇಗ]

**ಕಡುಬೇಗಿಸು** (ಕ್ರಿ). ಹೆಚ್ಚಾಗಿ ತ್ವರೆಮಾಡು; ಆತುರಪಡಿಸು : "ತ್ರಸ್ಯತಿ = ಕಡುಬೇಗಿಸಿದಪಂ" (ಕಾಶಕ್ಕ. ೧೮೨). [ಕಡುಬೇಗ + -ಇಸು$_3$]

**ಕಡುಬೇನೆ** 'ಕಡುವೇನೆ' ನೋ.

**ಕಡುಭರ** (ನಾ). ಅಧಿಕವಾದ ರಭಸ, —ವೇಗ : ಗರುಡಿಯೊಡೆಯನ ಪಾಳಯಕೆ ಕಡುಭರದಲೈತರೆ ಕೌರವೇಂದ್ರನ ಬರವಿದೇನೆಂದಿದಿರು ಬಂದನು ದ್ರೋಣನಿದಿರಾಗಿ (ಕುವ್ಯಾದ್ರೋ. ೮–೫೬); ವಿರಹಿವಿತಾನವು ನೆಚ್ಚು ಕೆಡಹಿ ಕಡುಭರದಿಂ ಬಾಜಿಪ ಶಂಖಮೆನಲ್ ನುಣ್ಪೊರಲತಿರಂಜಿಸಿತು (ಜಯಚಾ. ೬–೩೯); ಆ ಸುಧನ್ವನ ಸರಿಸಕಡರಿತುರಿ ಕಡುಭರದೊಳು (ಜೈಮಿಭಾ. ೧೩–೧೧).

[ಕಡು$_1$ (< ಕಡಿದು) + ಭರ]

**ಕಡುಭಾಷೆ** (ನಾ). ವೀರ ಶಪಥ; ದೃಢ ಪ್ರತಿಜ್ಞೆ: ಒಳ್ಳಿತಿದು ಕಡುಭಾಷೆ ನಾಳಿನ ಗೆಲ್ಲವೇ ಗೆಲವು (ಕುವ್ಯಾದ್ರೋ. ४–೧೦).

[ಕಡು$_1$ (< ಕಡಿದು) + ಭಾಷೆ]

**ಕಡುಭೀಕರ** (ನಾ). ಬಹಳ ಹೆದರಿಸುವಂತಹುದು ; ಅತಿ ಭಯಾನಕವಾದದ್ದು. 'ಕಡುಭೀಕರಂದೋಱು' ಪರಾ.

[ಕಡು$_1$ (< ಕಡಿದು) + ಭೀಕರ]

**ಕಡುಭೀಕರಂದೋಱು** (ಕ್ರಿ). ಅತಿ ಭಯಾನಕವಾಗಿ ತೋರು ; ಅತಿ ಭಯಂಕರವಾಗಿ ಕಾಣು : ಇಡಿಕಿಱಿದ ತಿಳಿನೀರ ಗಿಡುಗಳಿಂ ಮಡುಗಳಿಂ ಕಡುಭೀಕರಂದೋರ್ಪ ಹಳ್ಳದಿಂ ಕೊಳ್ಳದಿಂ (ರಾಘಚಾ. ೧೬–೫೬).

[ಕಡುಭೀಕರ + ತೋಱು$_1$ (< ತೋಱ್)]

**ಕಡುಮುಂದ್ಯೆಸು** (ಕ್ರಿ). ಬಲು ದಪ್ಪವಾಗು ; ಚೆನ್ನಾಗಿ ಹೆಪ್ಪುಗಟ್ಟು: ತಾಂ ಕಾಣ್ಕೆಗರಿದೆನಲ್ ಬಗೆಗೇಂ ಕಡುಮುಂದ್ಯೆಸಿ ನಿಂದುದೋ ಘನತಿಮಿರಂ (ದಶಕು. ೨–೪೪).

[ಕಡು$_2$ + ಮುಂದ್ಯೆಸು]

**ಕಡುಮಗ** (ನಾ). ಒಬ್ಬಾತನ ಹೆಸರು; ಒಂದು ಬಿರುದು (?): ಸ್ವಸ್ತಿಶ್ರೀ [॥*] ಬಯ್ದುಮ್ಮಹಾರಾಜ ಆಳು ವೀರಸತ್ತಿ ಮಗನ್ ರಣಬಜ್ಗಿ ಶ್ರೀಕಡುಮಗನ್ಕಲಹಾನಿಟ್ಟುರನ್ (ಸೌಇಇ. IX–i, ೧೬–೨ ; ಸು. ೬ನೆಯ ಶತ).

[ಕಡು ? + ಮಗ ?]

**ಕಡುಮದ** (ನಾ). ಅತಿಯಾದ ಸೊಕ್ಕು; ಅತೀವ ಮದ : ಕಡುಮದದ ಕಾಡಾನೆ ಹೊಕ್ಕೊಡನೊಡನೆ ಕಲಕಿದ ಕೊಳನವೊಲು (ಕುವ್ಯಾದ್ರೋ. ೧೩–೪).

[ಕಡು$_1$ (< ಕಡಿದು) + ಮದ$_1$]

**ಕಡುಮನ** (ನಾ). ರಭಸದ ಮನಸ್ಸು; ಆವೇಶಪೂರ್ಣ ಮನಸ್ಸು: ಕಡುಮನದ ಕೈಚಳಕಿಗರು ಮುಂಗುಡಿಯಲೈತರೆ (ಕುವ್ಯಾದ್ರೋ. ೬–೭); ಕಡುಮನದ ಕಾಲಾಳು ಕಱಿದುದು ಖಡುಗಧಾರೆಯನು (ಕುವ್ಯಾದ್ರೋ. ೬–೩೯) ; ಕಡುಮನದ ಕಪಿಬಲದ ಧಾಳಿಗೆ ನಡುಗಿ (ತೊರರಾ. ४–೯–೨೨).

[ಕಡು$_1$ (< ಕಡಿದು) + ಮನ$_1$]

**ಕಡುಮಾನಿ** (ನಾ). ಬಹಳ ಅಭಿಮಾನವುಳ್ಳವನು, —ಆತ್ಮಗೌರವವುಳ್ಳವನು: ಅನುಪಮ ಶಿವೈಕಸಮ್ಯಗ್ಜ್ಞಾನಿ ಕಡುಮಾನಿ (ಬಸರ. ೫–೧೦); ಶಿವನಲ್ಲದಾರುವಂ ಲೆಕ್ಕಿಸದ ಕಡುಮಾನಿ (ಮೆಜಿರ. ವೇ. ೬೯–೧೮).

[ಕಡು$_1$ (< ಕಡಿದು) + ಮಾನಿ]

**ಕಡುಮಿಡುಕು** (ಕ್ರಿ). ರಭಸದಿಂದ ತಳ್ಳು, —ದೂಡು: ಮೃಡನ ಮಱಿಗೊಂಡಿಪ್ಪ ಸತಿಯಂ ಕಡುಮಿಡುಕುತಂ ಹೋಗಿ ಸೆಱಗಂ ಪಿಡಿದು (ಬಸವು. ೫೨–೨೬).

[ಕಡು$_2$ + ಮಿಡುಕು$_3$ (< ಮಿಡುಂಕು$_3$)]

**ಕಡುಮಿಸುಗು** (ಕ್ರಿ). ಚೆನ್ನಾಗಿ ಮಿಂಚು, —ತಳತಳಿಸು : ಕಡುಮಿಸುಪ ಕಪ್ಪಂ ಪಡೆದವಾಱಡಿಗಳೀಕೆಯ ಮುಡಿಗೆ ಸುಳಿಸುಳಿದು (ಬಸವು. ೧೧–೪೧).

[ಕಡು$_2$ + ಮಿಸುಗು$_1$]

**ಕಡುಮುನಿ** (ಕ್ರಿ). ಬಹಳ ಸಿಟ್ಟಿಗೇಳು, —ಕ್ರುದ್ಧನಾಗು : ವಿದ್ಯುದ್ದಂಷ್ಟ್ರನುಮಂ ಸುದಂಷ್ಟ್ರನುಮಂ ಕಂಡು ಕಡುಮುನಿದು (ಶಾಂತಿಪು. ೪–೬೦ ವ).

[ಕಡು$_2$ + ಮುನಿ$_1$]

**ಕಡುಮುನಿಸು** (ನಾ). ಅತಿ ಸಿಟ್ಟು ; ಅತ್ಯುಗ್ರವಾದ ಕೋಪ : ನೋಡನಯ್ಯನುಸುರದಿಹನು ತಾನೊಮ್ಮೆಯುಂ ಕಡುಮುನಿಸದೆಂತಹುದೊ (ಬಸವು. ४೭–४೩).

[ಕಡು$_1$ (< ಕಡಿದು) + ಮುನಿಸು]

**ಕಡುಮುಪ್ಪು** (ನಾ). ಬಹಳ ಮುದಿತನ ; ಅತಿ ವೃದ್ಧಾಪ್ಯ : ಕಡುಮುಪ್ಪಾಗಿರೆ ಕುಂಟನಾಗೆ ಕುರುಡಂ ತಾನಾಗೆ . . . ಒಲಿವರ್ ಪೊನ್ನಿತ್ತೊಡಂ ಸೂಳೆಯರ್ (ಸೋಮೇಶ. ೭೧); ಕಡುಮುಪ್ಪು ಜವ್ವನದ ನಾನಾತೆಱದ ಸದಳಿಗರ್ (ಚೆಬಪು. ४೭–४೭).

[ಕಡು$_1$ (< ಕಡಿದು) + ಮುಪ್ಪು]

**ಕಡುಮುಹುಳಿ** (ನಾ). ಶುದ್ಧಮೂಳಿ (?) : ಬಿಡಿಸಲಾಗದೆ ಕೈದುಕಾತಿಯರಡಬಳವನೀ ಹುಲಿಯ ಬಾಯಲಿ ಕೆಡವಿ ಕಳೆದಿರಲಾ ಸುಯೋಧನ ಕರ್ಣ ಗುರುಸುತರು ಸುಡಲಿ ನಿಮ್ಮನು ಮೊಲೆಗಳಿಲ್ಲದ ಕಡುಮುಹುಳಿ[ಪಾಠಾಂ. ಮವುಳಿ] ನಿಮಗೇಕೆ ನಿಮ್ಮನು ನುಡಿಸುವವರಾವಲ್ಲೆನುತ ಮುದವೇಱಿದನು ಭೀಮ (ಕುವ್ಯಾಕ. ೧೯–೫೫).

[ಕಡು$_1$ (< ಕಡಿದು) + ಮುಹುಳಿ ?]

**ಕಡುಮುಳಿ** (ಕ್ರಿ). = ಕಡುಮುನಿ : ಕಡುಮುಳಿದು ನಿನ್ನ ತೊಡೆಗಳನು ಡಿವಿಡೆಯೊಳ್ ಭೀಮಸೇನನಾ ಪದದೊಳ್ ಪಿಡಿಯಲ್ಕೆಂದಿರ್ದೆನಿದಂ (ಪಂಪಭಾ. ೫–೫೯); ಅದಱ ಚೇಷ್ಟೆಯುಮಂ ಪಿಂಗಳಕಂ ಕಂಡು ಕಡುಮುಳಿದು (ಪಂಚತಂ. ೧೬೭–೮); ಕಡುಮುಳಿದು ಶತ್ರುಘ್ನನೊಂಬತ್ತು ಬಾಣದಿಂ ಬಿಡದೆಚ್ಚೊಡೆ (ಜೈಮಿಭಾ. ೨೦–೩೦).

[ಕಡು$_2$ + ಮುಳಿ]

**ಕಡುಮುಳಿಸು** (ನಾ). = ಕಡುಮುನಿಸು : ತದ್ರಾಜನಿಕೇತನದಲ್ಲಿ ಬರ್ದು ಪಡೆದುದು ಮನಕ್ಕೆ ಕಡುಮುಳಿಸಿನೆಸಕಮಂ ಮಾಗಧನಾ (ಆದಿಪು. ೧೨–೯೨); ಪರಿಯಿಟ್ಟೀ ಬಪ್ಪನೀ ಬಪ್ಪನೆ ಕಡುಮುಳಿಸಿಂ ಗಂಗಪೆರ್ಮಾಡಿ ರಾಯಂ ನಿರುತಂ ತಾನೆಂದು ಚೋಳಂ ಮದಮನುಡುಗಿದಂ (ಸೌಇಇ. IX–i, ೧೧೮–೧೮ ; 1057) ; ಒಡನೊಡನೆ ಶೋಕರಸಮುಂ ಕಡುಮುಳಿಸುಂ ತಿಣ್ಣಮಾಗೆ (ಪಂರಾಮಾ. ೯–೩೨); ನುಡಿದಡೆ ಪಾಪವೆ ಹೆತ್ತವರೊಡನೆ ಕಡುಮುಳಿಸೇ[ಪಾಠಾಂ. ಮುನಿಸೇಕೆಲೆ] ಮಗನೇ ಎನ್ನೊಡನೆ (ಹಚಕಾ. ೧೨–೩೦ ರಗಳೆ).

[ಕಡು$_1$ (< ಕಡಿದು) + ಮುಳಿಸು]

**ಕಡುಮೂರ್ಖ** (ನಾ). ೧. ಬಹಳ ದಡ್ಡ ; ಮಹಾಬುದ್ಧಿಗೇಡಿ : ಕಡುಮೂರ್ಖನೊರ್ಮೆ ಶಾಂತಂ ಕಡುರಾಗಿ ವಿರಾಗಿ (ಸಮಪ. ೮–೬೦) ; ಕಡುಮೂರ್ಖಂ ಹಿತ ಕೇಳ್ವನೇ (ಸೋಮೇಶ. ४೯) ; ಕಡುಮೂರ್ಖಂ ಮಂತ್ರಿಯಾದ ರಾಜ್ಯಮುದಘಲಂ (ಸೂಕ್ತಿಸು. ೧೬–೫೮). ೨. ಬಹಳ ದಡ್ಡತನ: ನಾವು ಕಡುಮೂರ್ಖದಲಿ ಮೈಮಱಿದೆವು (ಕುವ್ಯಾಭೀ. ೬–೬೮).

[ಕಡು$_1$ (< ಕಡಿದು) + ಮೂರ್ಖ]

**ಕಡುಮೆ** (ನಾ). ಉಗ್ರತೆ ; ತೀಕ್ಷ್ಣತೆ : ಮೆಕಾರಕ್ಕೆ – ಒಲ್ಮೆ . . . ಕಡುಮೆ, ಮೈಮೆ, ಕೂರ್ಮೆ (ಶಮದ. ೨೧೧ ಪ್ರಯೋ).

[ಕಡು$_1$ (< ಕಡಿದು) + –ಮೆ$_1$. / ತಮಿ. ಕಡುಮೈ; ಮಲ. ಕಡುಮ]

**ಕಡುಮೆಚ್ಚು** (ಕ್ರಿ). ಬಹಳವಾಗಿ ಮೆಚ್ಚು : ಕಟ್ಬಾಣ ನುಡಿಗೇಳಿ ಕಡುಮೆಚ್ಚಿ ಪರಿತೋಷಪಟ್ಟು (ಪೋಹತ. ೩೩–೫೩) ; ಕಡು ಮೆಚ್ಚಿ ತಮ್ಮನಂ ಕುಶನಪ್ಪಿದಂ (ಜೈಮಿಭಾ. ೨೧–४೦).

[ಕಡು$_2$ + ಮೆಚ್ಚು$_1$]

**ಕಡುಮೇಳ** (ನಾ). ಒಳ್ಳೆಯ ಹೊಂದಾಣಿಕೆ ; ಚೆನ್ನಾದ ಜೊತೆ : ಕಡುಮೇಳವುಳ್ಳವರ್ ಕಾಳ್ವಿಡಿವಿಡಿಯೆನೆ ಕುವರನೋಪಳೆಸೆವುಂಗುಟಮಂ ಪಿಡಿದು (ಸೂಕ್ತಿಸು. ೬–४೦).

[ಕಡು$_1$ (< ಕಡಿದು) + ಮೇಳ]

**ಕಡುಮೊನೆ** (ನಾ). ಹರಿತವಾದ ತುದಿ, —ಕೊನೆ : ಕಡುಮೊನೆಯ ಕೂರಂಬುಗಳ ಮಿಗೆ ಗಡಣಿಸಿದನು (ಕುವ್ಯಾದ್ರೋ. ೬–೧೯).

[ಕಡು$_1$ (< ಕಡಿದು) + ಮೊನೆ$_1$]

**ಕಡುಮೋನ** (ನಾ). ಮಿಗಿಲಾದ ಮೌನ; ಅತಿಶಯವಾದ ಮೌನ: ವಿಕಳವೆಡೆಗೊಳಲೇಳು ಕಡುಮೋನ[ಪಾಠಾಂ. ಸಲೆಮೌನ, ತಿರಮೋನ]ಮಂ ತಳೆಯಲೆಂಟತಿಮೂರ್ಛೆ ಮೂಡಲೊಂಬತ್ತು (ಹಚಕಾ. ೪–೪೩).
[ಕಡು$_1$ < ಕಡಿದು) + ಮೋನ]

**ಕಡುಮೋಹ** (ನಾ). ಅತಿಶಯವಾದ ಪ್ರೀತಿ; ಅತಿ ಮೋಹ: ಕಡುಲೇಸೆಂದೋಡಂ ಪಿಡಿದೊಡೆ ಕೈಮುಸಿಯಪ್ಪ ಮಾರ್ಗದಿಂ ದುರ್ಜನರಂ ಕಡುಮೋಹದಿನೊಳಕೊಂಡಿರ್ದೊಡೆ ಕೆಡುಗುಂ ತನ್ನೊಳಾದ ಗುಣಮನಿತನಿತುಂ (ಧರ್ಮಾಮೃ. ೨–೯೭); ನಡೆ ವಿಜಯನಾಗೆಂದು ತನುವನು ತಡವಿದರು ಕಡುಮೋಹವೆಡೆಯಲಿ ಘುಡುಘುಡಿಸೆ (ಕುವ್ಯಾದ್ರೋ. ೪–೫೩).
[ಕಡು$_1$ (< ಕಡಿದು) + ಮೋಹ]

**ಕಡುಮೋಹಿತ** (ನಾ). ಮೋಹಕ್ಕೆ ಪೂರ್ಣವಶನಾದವನು; ಅತಿ ಮರುಳಾದವನು: ಕಡುಮೋಹಿತರಾರುಮುಚಿತಮಂ ನೆನೆದಪರೇ (ಪಂರಾಮಾ. ೬–೩೫).
[ಕಡು$_1$ (< ಕಡಿದು) + ಮೋಹಿತ]

**ಕಡುರಮ್ಯ** (ನಾ). ಬಹಳ ರಮ್ಯವಾದುದು; ಬಲು ಸೊಗಸಾದುದು: ಬಂಧುಗಳ್ ಮನಂಬಡೆ ಕಡುರಮ್ಯಮಾಯ್ತುಮಿತತೇಜನೊಳಂದು ವಿವಾಹಮಂಗಳಂ (ಆದಿಪು. ೪–೫೩); ಕಡುರಮ್ಯಮಪ್ಪ ನಿರ್ಮಳ ಜಿನಮಂದಿರಂಗಳ ವಿಳಾಸಮನಚ್ಚರಿವಟ್ಟು ನೋಡಿದಂ (ಧರ್ಮಾಮೃ. ೫–೪೫); ಮರ್ತ್ಯಭುವನಂ ಕಡುರಮ್ಯಮದರ್ಕೆ ಸಂರಾಜಿತಮಪ್ಪ ಭಾರತಮಹೀತಳಂ (ಎಕ. VII, ಶಿಕಾರಿ. ೧೧೯–೫; 1181).
[ಕಡು$_1$ (< ಕಡಿದು) + ರಮ್ಯ]

**ಕಡುರಹ** (ನಾ). ಬಲು ದುಡುಕು; ಬಹಳ ಅವಸರ; ಅತಿ ಚಮತ್ಕಾರ(?): ವಿಗ್ರಹದೊಳಧಿಕರು ಜರಾಸಂಧಾದಿ ನಾಯಕರು ಮಹಿಯಮನ್ನೆಯರಧ್ವರವ ನಿರ್ವಹಿಸಲೀಯರು ಶಿವಶಿವಾ ಕಡುರಹವ[ಪಾಠಾಂ. ಗಡ ಶಿವಶಿವಾ ರಹವ] ಮಾಡಿದನರಸನೆಂದನು ನಗುತ ಕಲಿಪಾರ್ಥ (ಕುವ್ಯಾಸ. ೨–೨೮).
[ಕಡು$_1$ (< ಕಡಿದು) + ರಹ$_1$]

**ಕಡುರಾಗ** (ನಾ). ಬಹಳ ಪ್ರೀತಿ; ಅಧಿಕವಾದ ಸ್ನೇಹ: ಮಂಗಳಾರತಿ, ಕಡುರಾಗಂ, ಪೊಡವೀಶಂ (ಭಾಷಾಭೂ. ೧೩೨ ಉದಾ); ಕುವರನೋಪಳೆಸೆವುಂಗುಟಮುಂ ಪಿಡಿದು ನಸುನಗುತಮಾಕೆಯು ಕಡುರಾಗದೆ ಸಪ್ತಪದಿಗಳಂ ಮೆಟ್ಟಿಸಿದಂ (ಸೂಕ್ತಿಸು. ೬–೮೦); ಕಡುರಾಗಂ, ಮೊಗರಾಗಂ, (ಶಮುದ. ೧೬೪ ಪ್ರಯೋ).
[ಕಡು$_1$ (<ಕಡಿದು) + ರಾಗ]

**ಕಡುರಾಗಿ** (ನಾ). ವಿಶೇಷವಾದ ಆಸಕ್ತಿಯುಳ್ಳವನು; ಅತಿ ಮೋಹಿ: ಕಡುಮೂರ್ಖನೊರ್ಮೆ ಶಾಂತಂ ಕಡುರಾಗಿ ವಿರಾಗಿ ದುಶ್ಚರಿತ್ರಂ ಶುಚಿ (ಸಮುಪ. ೮–೬೦).
[ಕಡು$_1$ (< ಕಡಿದು) + ರಾಗಿ$_2$]

**ಕಡುರೂಪು** (ನಾ). ಉತ್ತಮವಾದ ರೂಪ; ಅತಿ ಸುಂದರವಾದ ರೂಪ: ಕಡುರೂಪು ಕಣ್ಗೆ ಮೈಗಂಪು ಮೂಗಿಗೆ ಮೆಲ್ನುಡಿ ಕೊಡಕೆಗೆ ಹೆಂಗಳೆಜೀವ ಕುಡಿನೀರಿನಿಂಪು ಜಿಹ್ವೆಗೆ ಶೈತ್ಯ ತನುವಿಂಗಿಡಿದುದು ಬಳಲಿ ಬಂದರಿಗೆ (ಮೋಹತ. ೨–೩೧).
[ಕಡು$_1$ (< ಕಡಿದು) + ರೂಪು]

△ **ಕಡುಪುರ್** ‘ಕಡುಪು’ ನೋ.

**ಕಡುಲಲ್ಲೆ** (ನಾ). ಅತಿಶಯವಾದ ಪ್ರೀತಿ, —ಅಕ್ಕರೆ: ನಡುವೆ ಜವನಿಕೆ ವಿಡಿದು ಪೊಚಗೆ ಕೈಮುಗಿದಿರ್ದು ಕಡುಲಲ್ಲೆಯಿಂ ಭೀತಿಯಿಂ ಭಕ್ತಿಯಿಂದಿರ್ದು (ಬಸರ. ೩–೬೮).
[ಕಡು$_1$ (< ಕಡಿದು) + ಲಲ್ಲೆ]

**ಕಡುಲಾಗು** (ನಾ). ಅತಿ ರಭಸ; ಬಹಳ ಚುರುಕು: ತನಿಗಿಡಿಯ ದಳ್ಳುರಿಯ ನಾಲಿಗೆಕೊನೆಗಳಲ್ಲಾಡಿದವು ಕಡುಲಾಗಿನಲಿ ಲಂಬಿಸಿ ಚುಂಬಿಸಿದುದುರಿ ಲಲಿತನಂದನವ (ಕುವ್ಯಾಆ. ೨೦–೨೬).
[ಕಡು$_1$ (< ಕಡಿದು) + ಲಾಗು$_2$]

**ಕಡುಲಿ** (ನಾ). ಮಳೆಯಾಗುವ ಮೊದಲು ಒಣನೆಲದಲ್ಲಿ ಬಿತ್ತುವುದು: ಈ ವರ್ಷ ಕಡುಲಿಗೆ ಬಿತ್ತಿದಗದ್ದೆಯಲ್ಲಿ ಬೆಳೆ ಚೆನ್ನಾಗಿ ಬಂದಿದೆ (ರೂಢಿ). [?]

**ಕಡುಲುಳಿ** (ನಾ). ಅತಿಯಾದ ಚಳಕ, —ಚುರುಕು: ಅಲಸಿದರು ಬಿನ್ನಣಕೆ ಬಿಗುಹಿನ ಕಳಿವುಗಳ ಬೇಸಜಿಕೆಯಲಿ ಕಡುಲುಳಿ ಮಸಗಿ ಡಾವರಿಸಿ ಮನವನುಪಾಯ ಡಾವರಕೆ ತೊಲಗಿ ನಿಂದರು (ಕುವ್ಯಾಸ. ೨–೧೦೩).
[ಕಡು$_1$ (< ಕಡಿದು) + ಲುಳಿ]

**ಕಡುಲುಳಿವೆಱು** (ಕ್ರಿ). ಅತಿಯಾದ ಚಳಕವನ್ನು ಹೊಂದು: ಕಡಲುಳಿವೆತ್ತು ಲಾಗಿಸುವ ಮೆಯ್ ಕುಡಿಮಿಂಚಿನವೊಲ್ ಪಳಂಚೆ (ಚಕವಿ. ೧೪–೧೩೬).
[ಕಡುಲುಳಿ + ಪೆಱು$_1$]

**ಕಡುಲೇಸು** (ನಾ). ಬಲು ಒಳ್ಳೆಯದು; ಉತ್ತಮವಾದುದು: ಕಡುಲೇಸೆಂದೋಡಂ ಪಿಡಿದೊಡೆ ಕೈಮುಸಿಯುಪ್ಪಮಾರ್ಗದಿಂ (ಧರ್ಮಾಮೃ. ೨–೯೭).

**ಕಡುಲೇಸುಮನದವ** = ಬಹಳ ಒಳ್ಳೆಯ ಮನಸ್ಸುಳ್ಳವನು: “ಕಡುಲೇಸುಮನದವಂ ಚಿದ್ರೂಪನೆನಿಸಿಕ್ಕು” (ಮಂಗರಾ. ೬೧–೨೦).
[ಕಡು$_1$ (<ಕಡಿದು) + ಲೇಸು$_1$]

**ಕಡುಲೋಭ** (ನಾ). ೧. ಅತಿಯಾದ ಆಸೆ. ೨. ಅತಿ ಲೋಭಿ, —ಜಿಪುಣ: ಕಡುಲೋಭಂಗತಿದ್ರವ್ಯಮಂ ಸುಕೃತಿಗಲ್ಪಾಯುಷ್ಯಮಂ ನೀಡುವಂ ಸುಡು ಪಾಪಿಷ್ಠನ ಬೊಮ್ಮನಂ (ಸೋಮೇಶ. ೩೩).
[ಕಡು$_1$ (< ಕಡಿದು) + ಲೋಭ]

**ಕಡುಲೋಭಿ** (ನಾ). = ಕಡುಲೋಭ ೨: ಅವಿದಗ್ಧರ್ ಕಡುಲೋಭಿಗಳ್ ಕೆಲಬರೀಯಲ್ ಮೆಚ್ಚಿಸಲ್ಕಾಜರ್ (ಅನಂಪು. ೮–೫೫); ಕಮ್ಮುಂಡರೆ ಕಡುಲೋಭಿಯೆಂಬೊರು ಉಣದಿದ್ದರೆ ರೋಗ್ಯಂಬುವರಯ್ಯ (ಪುರಂದ. ೪–೬೦–೧).
[ಕಡುಲೋಭ + –ಇ$_3$]

**ಕಡುವಂದೆ** (ನಾ). ಅತಿ ಹೇಡಿ; ಬಲು ಪುಕ್ಕ: ಕಲಿಯನೆ ಪಂದೆ ಮಾಳ್ಪ ಕಡುವಂದೆಯನೊಳ್ಗಲಿ ಮಾಳ್ಪ . . . ಅವಿವೇಕತೆಯಿಂ ನೃಪಚಿತ್ತವೃತ್ತಿ ಸಂಚಲಂ (ಪಂಪಭಾ. ೧೨–೯೨); ಕವಲಂಬು ತನ್ನ ಸಾರಿರ್ದವನಂ ಕೊಳೆ ನೆತ್ತರುಣ್ಬೆ ತಾಂ ನೊಂದನೆಗೆತ್ತವಧರಿಸದೆ ಬೇಗಂ ಮೂರ್ಛೆವೋಗಿ ಕಡುವಂದೆ ಪಡೆಗೆ ಪಡೆದಂ ನಗೆಯಂ (ಗದಾಯು. ೪–೨೬); ದೇವ ನೀಂ ಕಾಯ ಕಾಯೆನುತಿರ್ದ ಕಡುವಂದೆಯಿಂ ಭಯರಸಂ ಪ್ರತ್ಯಕ್ಷಮಾಯ್ತಾಜಿಯೊಳ್ (ಕುಸುಮಾ. ೧೧–೧೭).
[ಕಡು$_1$ (< ಕಡಿದು) + ಪಂದೆ]

**ಕಡುವಗೆ** (ನಾ). ೧. ಕಠೋರವಾದ ವೈರ; ಬದ್ಧವೈರ. ೨. ಕಟುಶತ್ರು; ಬದ್ಧವೈರಿ: ಕಡುವಗೆಯುದಾರವರ ಬಲದಲಿ ನುಡಿ ನಿದಾನವನವನ ಜೀವಕೆ ಹಿಡಿ ಮಹೀಪತಿ ಸಂಚಕಾರವನು (ಕುವ್ಯಾದ್ರೋ. ೮–೨೬).
[ಕಡು$_1$ (< ಕಡಿದು) + ಪಗೆ$_2$]

**ಕಡುವಣ** (ನಾ). ಒಂದು ಬಗೆಯ ತೆರಿಗೆ (?): ಭೂಮಿಗೆ ಸಲುವ ಗದ್ದೆ ಬೆದ್ದಲು ತ್ತೋಟತ್ತುಡಿಕೆ ಕಾಡಾರಂಭ ನೀರಾರಂಭ ಕಡುವಣ ಕಾಶಾವರ್ಗ್ಗಸುಂಕ (ಎಕ. VI, ತರೀಕೆ. ೨೨–೪೭; 1681).
[ಕಡು ? + ಪಣ$_1$]

**ಕಡುವಳಿ** ‘ಕಡುವಱಿ’ ನೋ.

**ಕಡುವಳಿಗಱಿ** (ಕ್ರಿ). ಬಲವಾದ ಮಳೆ ಸುರಿಸು: ಕೊಲುತಿರ್ದನನಿಬರಂ ಕೋಲ ಕಡುವಳೆಗಱಿದು (ಜೈಮಿಭಾ. ೨೦–೧೧).
[ಕಡುವಳಿ (< ಕಡುವಱಿ) + ಕಱಿ$_1$]

**ಕಡುವಱಿ**, ಕಡುವಳಿ (ನಾ). ಬಿರುಮಳೆ; ಜೋರುಮಳೆ; ಬಲವಾಗಿ ಸುರಿಯುವ ಮಳೆ: ಕಡುವಱಿಯಂ ಕಱಿಗೆ ಕದಡುದೋಪುರದ ಕಡಲೊಳ್ (ಚಕವಿ. ೧–೩೯). **ಕಡುವಳಿ**: ಕಡಿತಲೆಯ ಮಿಂಚುಗಳ ಹೊಯ್ಲಿನ ಸಿಡಿಲುಗಳ ರಕ್ತಪ್ರವಾಹದ ಕಡುವಳೆಯ ನೃತ್ಯತ್ಕಬಂಧದ ಸೋಗೆ ನವಿಲುಗಳ (ಕುವ್ಯಾಭೀ. ೪–೩೬).
[ಕಡು$_1$ (< ಕಡಿದು) + ಮಱಿ]

**ಕಡುವಾಯಿ** (ನಾ). (?): ಬಳ ಕಡುವಾಯಿ ಗಾಣ ಮಾನೆಂಜೆ ಯೀ ಮರಿಯಾದೆಯಲು ನಡದು ಬಹುದು (ಸೌಇಇ. IX–ii, ೪೧೭–೧೨; 1377). [?]

**ಕಡುವಾಳ್** (ನಾ). ಹರಿತವಾದ ಖಡ್ಗ; ತೀಕ್ಷ್ಣವಾದ ಕತ್ತಿ: ನಿಡುದೋಳಿಂ ಕಡುವಾಳಂ ಕೂರಸಿಯಿಂ ಕಡಂಗಿ ದಣಿಯಂ ಸಮಂತು ಬಸದಾಗಿಸುವಂ (ಕಾವ್ಯಾವ. ೨೩೧); ಕಡುಗುದುರೆ, ಕಡುವಾಳ್; ನಿಡುದೋಳ್ (ಭಾಷಾಭೂ. ೧೪೩ ಉದಾ).

[ಕಡು$_1$ (< ಕಡಿದು) + ಬಾಳ್$_3$]

**ಕಡುವಿಡಿ** (ಕ್ರಿ). ಗಟ್ಟಿಯಾಗಿ ಹಿಡಿ; ಪಟ್ಟುಹಿಡಿ: ಪತಿಯ ಪಾದಾಬ್ಜ ಭಕ್ತಿಯೆ ತಮಗಿಹಪರ ಗತಿಯೆಂದು ಕಡುವಿಡಿದಿರ್ಪ ಸತಿಯರು (ಹದಿಬ. ೨–೧೬).

[ಕಡು$_2$ + ಪಿಡಿ$_1$]

**ಕಡುವಿಣ್ಣಿತ್ತು** (ನಾ). ಬಹಳ ಭಾರವಾದದ್ದು: ತುಡುಗೆಗಳೊಳ್ ಸರಿಗೆಯುಮಂ ಕಡುವಿಣ್ಣಿತ್ತೆನಿಸಿ ನಡೆದುಮೋರಡಿಯನಣಂ ನಡೆಯಲು ಮಾಜದೆ ಕೆಮ್ಮನೆ ಬಿಡದಾರಯ್ವನಿತುಮಾಗೆ ಬಳೆದುದು ಗರ್ಭಂ (ಪಂಪಭಾ. ೧–೧೪೪).

[ಕಡು$_1$ (< ಕಡಿದು) + ಬಿಣ್ಣಿತ್ತು]

**ಕಡುವಿಣ್ಪು, ಕಡುಬಿಣ್ಪು** (ನಾ). ಅಧಿಕವಾದ ಭಾರ: ಮುಡಿಯ ಕುಚಯುಗದ ಜಘನದ ಕಡುವಿಣ್ಪಂ ಮಣಲೊಳಟ್ಟು ಬರೆ ಮೆಲ್ಲಡಿಗಳ್ (ಪಂಪಭಾ. ೭–೮೫). **ಕಡುಬಿಣ್ಪು**: ಕಡುಬಿಣ್ಪನ ಜಘನದ ಕಾಮಿನಿ (ಜೀವಂಸಾಂ. ೧೦–೨೫).

[ಕಡು$_1$ (< ಕಡಿದು) + ಬಿಣ್ಪು]

**ಕಡುವಿತ್ತಿಗ** (ನಾ). ಬಹಳ ಜಾಣ; ಬಹು ನಿಪುಣ: ಕೆಂಗಣಿಯ ಮೊನೆಯಂಬುಗಳ್ ಕಣ್ದೆಣಿಯಿಸಿದುವು ಪೊಣರ್ವ ಬಿಲ್ಲ ಕಡುವಿತ್ತಿಗರಂ (ಪಂಪಭಾ. ೧೦–೬೩).

[ಕಡು$_1$ (< ಕಡಿದು) + ಬಿತ್ತಿಗ]

**ಕಡುವಿನ್ನಣ, ಕಡುಬಿನ್ನಣ** (ನಾ). ಮಿಗಿಲಾದ ಚಾತುರ್ಯ; ಅಧಿಕವಾದ ಜಾಣ್ಮೆ: ಕಡುಪುಂ ಕಡುವಿನ್ನಣಮುಂ ತಮಗಳವಡೆ ತಾಗಿದರಿಳಿಯುಮಾಗಸಂ ತಾಗುವ ಪೋಲ್ (ಪಂರಾಮಾ.೧೦–೨೨). **ಕಡುಬಿನ್ನಣ**: ರಸಚಿತ್ರದ ಧೂಳೀಚಿತ್ರದ ಕಡುಬಿನ್ನಣದೆರೆಡುತೆಜಂ (ಜಯಕಾ. ೩–೬). 'ಕಡುಬಿನ್ನಣಂಬಡೆ' ಪರಾ.

[ಕಡು$_1$ (< ಕಡಿದು) + ಬಿನ್ನಣ]

**ಕಡುವಿನ್ನನೆ** (ಅ). ಬಹಳ ಮೌನವಾಗಿ, —ಖಿನ್ನವಾಗಿ.

**ಕಡುವಿನ್ನನಾಗು**= ಬಹಳ ಮೌನವಾಗು; ಅತಿ ಖಿನ್ನವಾಗು; ಅತಿ ಮ್ಲಾನವಾಗು: ಸರಸೀಜ ಬಾಂಧವನ ಪಿಂಬಿಡಿನೊಳ್ ಕಡುವಿನ್ನನಾದುವಿಂತೀ ಸರಸೀರುಹಂಗಳ್ (ಪಂಪಭಾ. ೪–೪೭); ಈ ನುಡಿಯನೀ ಪದದೊಳ್ ಪೆಜಗಿಕ್ಕೆ ನಾರದಂ ಮನದೊಳೆ ಪೇಸುಗುಂ ಸುರಪನುಂ ನಗುಗುಂ ಕಡುವಿನ್ನನಕ್ಕುಮಯ್ಯನ ಮುಖಂ (ಪಂಪಭಾ. ೬–೨೫).

[ಕಡು$_1$ (< ಕಡಿದು) + ಬಿನ್ನನೆ]

**ಕಡುವಿರಿದು** (ನಾ). ಬಲು ಹಿರಿದು; ಅತಿಶಯವಾದುದು: ಇರುಳೆನ್ನದೆ ಕಟ್ಟಿಲೆ ಕಡುವಿರಿದೆನ್ನದೆ ದುರ್ಗಮೆನ್ನದೋಪನೊಳೆತ್ತಂ ನೆರೆಯಲ್ ಪರಿದೆಯ್ಯುವ ಸುಂದರಿಯಭಿಸಾರಿಕೆಯೆನಿಪ್ಪ ಪೆಸರಂ ಪಡೆಗುಂ (ಶೃಂಗಾರ. ೩–೫೯); ಆ ಭರತಕ್ಷೇತ್ರವಿಜಯಾಚಲದಿರ್ಕೆಲದೊಳು ಮಿನಧ್ವಜನಾಡುಂಬೊಲನೆನಲೆಸೆದುದು ಸರಸಿಜನಣುಗನ ಕೈಮಾಟಕೆ ಕಡುವಿರಿದುಂ ಬಿನ್ನಣವಡೆದು (ಜಯಕಾ. ೧–೩೪).

[ಕಡು$_1$ (< ಕಡಿದು) + ಪಿರಿದು]

**ಕಡುವಿಲಾಸ** (ನಾ). ಅತಿಶಯವಾದ ಸೊಬಗು; ಅತಿ ಬೆಡಗು: ನೀನೋಲಗದೊಳೊಪ್ಪುವ ಕಡುವಿಲಾಸವ ಬಿಸುಟು ಕುರುಪತಿ ನುಡಿಸೆ ಜೀಯ ಹಸಾದವೆಂಬುದು ಕಷ್ಟ ನಿನಗೆಂದ (ಕುವ್ಯಾಉ. ೧೦–೯).

[ಕಡು$_1$ (< ಕಡಿದು) + ವಿಲಾಸ]

**ಕಡುವಿಲ್ಲ** (ನಾ). ಗಟ್ಟಿಗನಾದ ಬಿಲ್ಗಾರ; ಧನುರ್ವಿದ್ಯಾ ನಿಪುಣ: ಶರಸಂಧಾನಂ ನಿಟ್ಟಿಸಲರಿದೆಂಬಿನಮೆರಡು ಬಲದ ಕಡುವಿಲ್ಲರ್ ಭೋರ್ಗರೆದಿಸೆ (ಪಂಪಭಾ. ೧೦–೭೨); ಕಡುವಿಲ್ಲರ್ ಕಡುಕೆಯ್ದಿಸೆ (ಪಂರಾಮಾ. ೧೩–೪೬); ಆತನೊಳೆ ಕಡುವಿಲ್ಲನಾಗಬೇಕೆನಿಸುತಿದೆ (ಹೆಬ್ಬೆರ. ೩–೧೦).

[ಕಡು$_1$ (< ಕಡಿದು) + ಬಿಲ್$_2$ + –ಅ$_7$]

**ಕಡುವಿಷ** (ನಾ). ೧. ತೀವ್ರವಾದ ವಿಷ; ಉಗ್ರವಿಷ. ೨. ತೀಕ್ಷ್ಣ ವಿಷವುಳ್ಳದ್ದು; ಸರ್ಪ: ಪೊಡವಿಯೊಡೆಯನ ಕೈಯ ಹದದಂ ಕಡುವಿಷಂ ಮಿಗೆ ಕಚ್ಚಿ ಮೊಜಿಪುತ (ಬಸವು. ೪೬–೨೨).

[ಕಡು$_1$ (< ಕಡಿದು) + ವಿಷ]

**ಕಡುವಿಸಿಲ್, ಕಡುಬಿಸಿಲ್, ಕಡುಬಿಸಿಲು** (ನಾ). ಉಗ್ರವಾದ ಬಿಸಿಲು; ಉರಿಬಿಸಿಲು: ಕಡುವಿಸಿಲಿಂ ತಟ್ಟಾಜಿದ ಚರ್ಮದಿಂ ಪೃಷ್ಠದ್ವಾರಂ ಮುಚ್ಚಲ್ (ಪಂಚತಂ. ೧೯–೯); ಕುಸಿದುವು ಕಿರಣಂಗಳ್ ಕಡುವಿಸಿಲ ಪೊಡರ್ಪುಡುಗೆ ವಂದನುಕ್ರಮದಿಂ ತಣ್ಪಿಸಿಲಾಯ್ತು (ಪಂರಾಮಾ. ೧೧–೧೭೭); ಕೂರ್ಪೇಜಿದ ಕಡುವಿಸಿಲ ಪೊಡರ್ಪಿಂಗಿಜಿದಂತೆ ತೀರ ತರುಗಳ್. . . ನೀರ್ವೊಕ್ಕಿರ್ಪುವು (ಸೂಕ್ತಿಸು. ೧೦–೯೮); ಉರಿಗಿದು ಸರಿ ಕಡುವಿಸಿಲೆನಿಸಿರೆ ನಿದಾಘಮೇಂ ಪಸರಿಸಿತೋ (ರಾಜಶೇ. ೫–೩೪). **ಕಡುಬಿಸಿಲ್**: (ಕ). **ಕಡುಬಿಸಿಲು**: "ಕಡುಬಿಸಿಲು [ಪಾಠಾಂ. ವಿಸಿಲು] ಘರ್ಮಂ ನಿದಾಘಮೆನಿಕ್ಕು" (ಮಂಗರಾ. ೧೦–೨).

[ಕಡು$_1$ (< ಕಡಿದು) + ಬಿಸಿಲ್]

**ಕಡುವಿಳಿದು** (ನಾ). ಅಚ್ಚ ಬಿಳಿಯದು; ಪೂರ ಬಿಳಿಯದು: ಕಡುಗರಿದಯಶಂ ಪೆಸರಿಡೆ ಕಡುವಿಳಿದಾಯಿತ್ತು ಕೀರ್ತಿ (ಲೀಲಾವ. ೧–೯); ಕಡುವಿಳಿವಾದ ತಂಬುಲದ ಚೆಲ್ವೆಲೆಯಂ ಮುಡಿಸೊಳ್ಪೆರಳ್ಗಳಿಂ ಪಿಡಿದು (ಬಾಧವು. ೬–೮೩).

[ಕಡು$_1$ (< ಕಡಿದು) + ಬಿಳಿದು]

**ಕಡುವೀಟು** (ಕ್ರಿ). ಜೋರಾಗಿ ಬೀಳು, —ಆವರಿಸು: ದಿಶೋತ್ಕರಮನಿತುಂ ಕರಂಗಿ ಕಡುವೀಟುತಿರಲ್ ಬರುತಿರ್ದನಾ ನೃಪಂ (ಕುಸುಮಾ. ೩–೩೧).

[ಕಡು$_2$ + ಬೀಟು$_1$ (< ಬೀಟ್$_1$)]

**ಕಡುವು$_1$** 'ಕಡಹು$_2$' ನೋ.

**ಕಡುವು$_2$** 'ಕಡುಂಬು' ನೋ.

**ಕಡುವು$_3$** (ನಾ). ಕಾಲುವೆ, ಹಳ್ಳ: ಆ ಕೆಜಿಯವೊಡವನೂ ನೀವು ಕಟ್ಟಿಸಿ ತೂಬನನೂ ನಿಲಿಸಿ ಕೋಡಿಯ ಕಡುವನೂ ತೆಗಸಿ (ಎಕ. XIV, ಶ್ರೀರಂಗ. ೨೬೪–೫; 1518). [?]

**ಕಡುವು$_4$** (ನಾ). ಇಕ್ಕಟ್ಟು; ಸಮಸ್ಯೆ: ಎಡರಿನೊಳು ಧೈರ್ಯ ಮುಟ್ಟದ ಕಡುವಿನೊಳರಿತಜಿತಮಧಿಕಪದದೊಳು ಕೃಪೆ ಬಂದೆಡೆಗೊಂಡು ಬಾಳ್ವನಂ ವಿಧಿ ಪಡೆದುದೆ ಸಫಲಂ (ನೀತಿಸಾ. ೩೭೭). [?]

**ಕಡುವು$_5$** (ನಾ). (?): ಪಡೆದು ಮತ್ತೊಂದಸಿಯ ದಿನಕರ ಕಡುವ ಕೊಡಹುತಲಟ್ಟಿ ದಾರಿಯ ತೊಡಗಿ ಬಂದನು ಕಡುಗಿ ಲಕ್ಷ್ಮಣಗೆದುರು ಶಂಭುಕನೂ (ಜಿರಾಮಾ. ೩೦–೧೭). [?]

**ಕಡುವೃದ್ಧ** (ನಾ). ಬಹಳ ವಯಸ್ಸಾದವನು, —ಮುಪ್ಪಾದವನು: ಮರುಳಲಾ ಮಜುಮಾತು ಕಡುವೃದ್ಧರಿಗದೇಕೆಂಬಂತೆ ಚಿತ್ರದ ಹುರುಳ ಬಲ್ಲೆನು ಪಥವ ಬಿಡಿ ಕೆಲಸಾರಿ ಸಾಕು (ಕುವ್ಯಾದ್ರೋ. ೧೨–೧೫).

[ಕಡು$_1$ (< ಕಡಿದು) + ವೃದ್ಧ]

**ಕಡುವೆಂಕೆ** (ನಾ). ಪ್ರಖರವಾದ ಬೆಂಕಿ; ಅಧಿಕವಾದ ಉರಿ: ಮೇಗೊಗೆವ ನಿಡುಸುಯ್ಯ ಕಡುವೆಂಕೆಗಳಿಂ ಕಳಿಪುವುವು ಕಪಿಗಳದಜಿಕೊಳ್ ಹಿಮಮುಮಂ (ಚಂದ್ರವು. ೫–೫೨).

[ಕಡು$_1$ (< ಕಡಿದು) + ಬೆಂಕೆ]

**ಕಡುವೆಟ್ಟಿತು** 'ಕಡುವೆಟ್ಟಿತ್ತು' ನೋ.

**ಕಡುವೆಟ್ಟಿತ್ತು**, ಕಡುಬೆಟ್ಟಿತ್ತು, ಕಡುವೆಟ್ಟಿತು (ನಾ). ಬಹಳ ಬಿರುಸಾದುದು; ಅತಿ ಕರ್ಕಶವಾದುದು, —ಕಠಿನವಾದುದು: ಅಡಿದಳಿರ್ಗೆ ಧರಾವಲಯಂ ಕಡುವೆಟ್ಟಿತ್ತಾಗೆ ನಡೆಯಲಱಿಯದೆ ಮನುಜರ್ ಸೆಡೆಯೆ ಹಯಾದಿಗಳಿಂದಂ ನಡೆಯಿಸಿದಂ (ಪಂರಾಮಾ. ೧-೭೬). **ಕಡುಬೆಟ್ಟಿತ್ತು**: ನಡುನೀಳವಾಗಿ ಬೆನ್ನಂ ಕಡುಬೆಟ್ಟಿತ್ತಾಗಿ ಜಘನಮಂ ಹೊಕ್ಕುಳುಮಂ ನಡುವಿಂಗೆ ಸರಿಸಮಾಗಿಯೆ ಕೊಡುವುದು ತಲೆಕಟ್ಟನರ್ಧಚಂದ್ರಾಕೃತಿಯಂ (ಕವಿಚ. III, ೩೨೧ ಮಟದ ಕಂದ). **ಕಡುವೆಟ್ಟಿತು**: ಮೆಲ್ಲಿದುವಪ್ಪ ಕಾಲತಳಮುಂ ಕಡುವೆಟ್ಟಿದುವಪ್ಪ ಹಸ್ತಮುಂ (ಶಮದ. ೯೫ ಪ್ರಯೋ).

[ಕಡು$_1$ (< ಕಡಿದು) + ಬೆಟ್ಟಿತ್ತು]

**ಕಡುವೆರ್ಚು**, ಕಡುಪೆರ್ಚು (ನಾ). ೧. ಅಧಿಕವಾದ ಉನ್ನತಿ; ಅತಿಶಯವಾದ ಅಭಿವೃದ್ಧಿ: ಬಗೆಯದೆ ಮೆಯ್ಸೊಕಮಂ ಬಗೆ ಪಗೆವರ ಕಡುವೆರ್ಚನೆನ್ನ ಪೂಣ್ಕೆಯನೆರ್ದೆಯೊಳ್ ಬಗೆ (ಪಂಪಭಾ. ೭-೩೭). **ಕಡುಪೆರ್ಚು**: ೨. ಅಧಿಕವಾದ ಹೆಮ್ಮೆ, —ಅಹಂಕಾರ: ಕಡುಪೆರ್ಚನಿಂದಿಂದ್ರನಿಂತೆಂದಂ (ಧರ್ಮಾಮೃ. ೨-೨೧೯).

[ಕಡು$_1$ (< ಕಡಿದು) + ಪೆರ್ಚು$_3$]

**ಕಡುವೆಸ** (ನಾ). ಬಹಳ ಕೆಲಸ; ಹೆಚ್ಚು ಕೆಲಸ: ಉತ್ಸುಕತನದಿಂ ಪೆಟ್ಟುವೆರ್ಚಿ ಕಡುವೆಸನಂ ಮಾಟ್ಪ ಸೊಸೆ ಮಾವನ ಮಂಡೆಯಂ ಬೋೞಿಸಿದಳೆಂಬಂತೆ ರಾಗದಿಂದಮಾ ರತ್ನಮನೀಗಳ್ ನೆಗಪಿದೆನಪ್ಪೊಡೆ ಪೋಗಲ್ಬಾರದು...ಮೆಲ್ಲನೆ ನಿಂದು ಕಾರ್ಯಮಂ ನೆಗಟ್ವೆಂ (ಧರ್ಮಾಮೃ. ೬-೫೪). [ಕಡು$_1$ (< ಕಡಿದು) + ಬೆಸ$_1$]

**ಕಡುವೆಸನ** (ನಾ). ಅತಿವ್ಯಸನ, —ದುಶ್ಚಟ. 'ಕಡುವೆಸನಿಗ' ಪರಾ. [ಕಡು$_1$ (< ಕಡಿದು) + ಬೆಸನ$_3$]

**ಕಡುವೆಸನಿಗ** (ನಾ). ಅತಿ ದುಶ್ಚಟವುಳ್ಳವನು: ಅಡಗಿನ ಕಡುವೆಸನಿಗ ತಿನ್ನಡಗಂ ನಿನ್ನಡಗನೆಂದು ಪೇಸೇೞ್ವೆನೆಗಂ ... ಕೂರುಗೊಳ್ವರ್ ಬಾಯೊಳ್ (ಸುಕುಮಾ. ೧೧-೪೨). [ಕಡುವೆಸನ + -ಇಗ]

**ಕಡುವೆಳಗು** (ನಾ). ಪ್ರಖರವಾದ ಬೆಳಕು: ನಡುಪಗಲಿದೊಂದು ದೆಸೆಯೊಳ್ ಕಡುವೆಳಗೇಕಾದುದೆಂದು ಕೌತುಕದಿಂದಂ ನಡೆ ನೋಡುತಿರೆ (ವರ್ಧಪು. ೧೦-೨೨); ಝುಳಪಿಸಿ ಕಡುವೆಳಗು ಥಳಥಳಿಸಿ ತರಣಿಯ ತುಡುಕಿ ಹಾಯ್ದುದು (ಕುವ್ಯಾದ್ರೋ. ೧೮-೭೧).

[ಕಡು$_1$ (< ಕಡಿದು) + ಬೆಳಗು$_2$]

**ಕಡುವೆಳೆ** (ಕ್ರಿ). ವಿಶೇಷವಾಗಿ ಬೆಳೆ; ಹುಲುಸಾಗಿ ಬೆಳೆ: ಚೆಂದೆಂಗಿನೆಳಗಾಯೊಡೆದು ಝೋರೆನೆ ಪೊಸರ್ವ ಪೊನಲಿಂ ಕಡುವೆಳೆದ ರಸದಾಳಿಗಬ್ಬುಗಳ್ (ಸಾಳ್ವಭಾ. ೧-೬೦). [ಕಡು$_2$ + ಬೆಳೆ$_1$]

**ಕಡುವೆಳ್ಪು** (ನಾ). ಬಹಳ ಬಿಳುಪು; ಅಚ್ಚ ಬಿಳುಪು: ಅನನೇಂದುವ ಕಡುವೆಳ್ಪು ಕೂಸಿನ ನೆಗಟ್ತೆಯ ಬೆಳ್ಪುವೊಲಾಯ್ತು (ಪಂಪಭಾ. ೧-೧೨೫); ನಡುವಣ ಕರ್ಪುಂ ಕಡೆಯಣ ಕಡುವೆಳ್ಪುಂ ತುದಿಯ ಕೂರ್ಪುಮೆಸೆದಿರೆ ವಿಟರಂ ಬಿಡದಿಸಲೆ ತೆಗೆದ ಮದನನ ನಿಡಿಯಲರ್ಗಣೆಗಳನೆ ಪೋಲ್ತುವಾಕೆಯ ಕಣ್ಗಳ್ (ಕಾವ್ಯಾವ. ೧೫೦).

[ಕಡು$_1$ (< ಕಡಿದು) + ಬೆಳ್ಪು]

**ಕಡುವೆಱಗು** (ನಾ). ಅತ್ಯಾಶ್ಚರ್ಯ; ಅತಿ ವಿಸ್ಮಯ: ಅಱಿವು ಮಱವೆಗಳೊಂದನೊಂದನು ಮುಱಿದು ನೂಕಿದವವನಿಪತಿ ಕಡುವೆಱಗ ಕೇಣಿಯ ಕೊಂಡವೋಲಿದ್ದನು ವಿಚೇಷ್ಟೆಯಲಿ (ಕುವ್ಯಾಕ. ೧೪-೪); ಇದುವೆ ಕಡುವೆಱಗೆನುತಲಾ ದಶವದನ ಕದಪಿನ ಕೈಯಲಾ ಬೆಯ ವದನವನು ನೋಡಿದನು (ತೊರರಾ. ೩-೭-೧೩).

[ಕಡು$_1$ (< ಕಡಿದು) + ಬೆಱಗು]

**ಕಡುವೇಗ** (ನಾ). ೧. ಅಧಿಕವಾದ ವೇಗ; ಅತಿ ರಭಸ: ಕಡುವೇಗದಿನಸಕಱಿದುದು ಮನಮುಮಂ ತುರಂಗಮರತ್ನಂ (ಆದಿಪು. ೧೩-೩೯); ಕಡುವಿಲ್ಲರ್ ಕಡುಕೆಯ್ದಿಸೆ ಕಡುವೇಗದೆ ಪರಿದುವರುಣ ಜಲದ ಪೊನಲ್ಗಳ್ (ಪಂರಾಮಾ. ೧೩-೪೬); ಬಿಡದಿಱಿದಾಡಿ ಬಿಲ್ವಡೆ ಮುಡಿದುದು ರಣದೆಡೆಯೊಳು ಕಡುವೇಗದಿಂದ (ಕುರಾಸಾಂ. ೧೨-೬೦). ೨. ಬಹಳ ವೇಗವುಳ್ಳವನು: "ವೇಗಾಯ್ಲಂ ಕಡುವೇಗಂ" (ಚತುನಿ. ೩೨).

[ಕಡು$_1$ (< ಕಡಿದು) + ವೇಗ]

**ಕಡುವೇಗಿ** (ನಾ). ೧. ಬಹಳ ವೇಗವುಳ್ಳದ್ದು: "ಜವನ, ಜವಾಧಿಕ- ಕಡುವೇಗಿ ಅಹ ಕುದುರೆ" (ನಾಚಿರಾ. ೬). ೨. ಬಹಳ ವೇಗವುಳ್ಳವನು (೬). [ಕಡು$_1$ (< ಕಡಿದು) + ವೇಗಿ]

**ಕಡುವೇಟಕಾಱ** (ನಾ). ಉತ್ಕಟವಾದ ಬೇಟವುಳ್ಳವನು; ಪ್ರಣಯಾತುರನಾದವನು: ಮುನ್ನೆ ಬೇಟದ ಸವಿಗಂಡನಲ್ಲದಱಿಯಂ ಶ್ರಮಮಂ ಕಡುವೇಟಕಾಱರಾ (ಆದಿಪು. ೧೨-೨೩).

[ಕಡು$_1$ (< ಕಡಿದು) + ಬೇಟಕಾಱ]

**ಕಡುವೇಟಗಾರ್ತಿ** (ನಾ). ಪ್ರಣಯಾತುರವುಳ್ಳವಳು: ಅಲವರಿಸುವ ಕಡುವೇಟಗಾರ್ತಿಯ ಕಾತರಿಕೆಯಂ ಕಳೆಯಲ್ಪಡೆದೆವು (ಅರ್ಧನೇ. ೫-೨ ವ). [ಕಡುವೇಟಗಾಱ$_0$ + -ತಿ$_1$ (< -ಇತ್ತಿ)]

**ಕಡುವೇನೆ**, ಕಡುಬೇನೆ (ನಾ). ೧. ಬಹಳ ನೋವು; ಅತಿ ಹಿಂಸೆ: ಉದಯಿಪ ನೇಸಱಿಂ ಕಿಡದ ಕಟ್ಟಲೆ ಕಿತ್ತಲಗಿಂ ಕಱುತ್ತು ಕುತ್ತದ ಕಡು[ಪಾಠಾಂ. ಕರಿ, ಕಲಿ, ತಲೆ]ವೇನೆಯಂತಕನ ಬಾರಿಗೆ ಬಾರದ ಸಾವು ... ತನ್ನಿಯರೊಳಾದಳುಪಿಂ ಪೆಱತುಂಟೆ ಲೋಕದೊಳ್ (ಲೀಲಾವ. ೪-೫೫; ಸೂಕ್ತಿಸು. ೧೫-೪೬ ನೋ). **ಕಡುಬೇನೆ**: ೨. ಹೆರಿಗೆಯ ಬೇನೆ: ಕೊಡಗೂಸಿಂಗೆ ಕಡುಬೇನೆಯಾದುದ ಕಂಡೆ ಹಡೆದಿರ್ದ ಶಿಶುವ ಕೊಡಗೂಸು ನುಂಗಿತ್ತ ಕಂಡೆ (ಆದವ. ಹ. ೩೪-೯೯).

[ಕಡು$_1$ (< ಕಡಿದು) + ಬೇನೆ]

**ಕಡುವೇಸಗೆ** (ನಾ). ಉಗ್ರವಾದ ಬೇಸಗೆ: ವಿಗಡ ಕುಂಭಜ ಮೇಘಋತು ತನಿಹೊಗರಿಱಿದು ಪರಬಲದ ಕಡುವೇಸಗೆಗೆ ಕವಿದುದು ರಾಜಹಂಸಪ್ರಕರವೋಸರಿಸೆ (ಕುವ್ಯಾದ್ರೋ. ೧-೪೮); ಉರಿವ ಕಡುವೇಸ[ಪಾಠಾಂ. ಸಿ]ಗೆಯ ಬಿಸಿಲೆಂಡೆ ಬಸವಳಿದ ಕೋಮಲ ರಸಾಲದಂತೆ (ಜೈಮಿಭಾ. ೨-೧೬). [ಕಡು$_1$ (< ಕಡಿದು) + ಬೇಸಗೆ]

**ಕಡುವೊಂಗು** (ಕ್ರಿ). ಬಹಳವಾಗಿ ಉಬ್ಬು; ಅತಿ ಉತ್ಸಾಹಪಡು: ರಾಜ್ಯಂ ತನಗೆ ದೊರೆಕೊಂಡ ತೆಱದಿಂ ಮನದೊಳ್ ಕಡುವೊಂಗಿ (ಧರ್ಮಾಮೃ. ೯-೧೨). [ಕಡು$_2$ + ಪೊಂಗು$_1$]

**ಕಡುವೊತ್ತಾಗು** (ಕ್ರಿ). ಬಹಳ ಹೊತ್ತಾಗು: ಕಡುವೊತ್ತಾದುದು ರವಿಯುಂ ನಡುವಗಲೊಳ್ ನಿಂದು ಕೆದಱಿದಂ ಕರತತಿಯಂ ಕಿಡಿಗಳನೆನೆ (ಕಾದಂಪೂ. ೧೯೭). [ಕಡುವೊತ್ತು + ಅಗು$_1$]

**ಕಡುವೊತ್ತು** (ನಾ). ಬಹಳ ಹೊತ್ತು. 'ಕಡುವೊತ್ತಾಗು' ಪರಾ.

[ಕಡು$_1$ (< ಕಡಿದು) + ಪೊತ್ತು$_2$ (< ಪೊಟ್ತು)]

**ಕಡುವೊದಗು** (ಕ್ರಿ). ಜೋರಾಗಿ ಉಂಟಾಗು; ಅತಿಶಯವಾಗಿ ಬರು: ಟಂಕೃತಿ ಧನುವಿಂ ಶರದಿಂ ಭೀಂಕೃತಿ ... ಹೇಷಿತರುತಿ ಹಯದಿಂ ಕಡುವೊದಗುವಿನಮೆಯ್ದಿದುವು ರಥನಿವಹಂ (ಜಗವಿ. ೧೨-೨೧). [ಕಡು$_2$ + ಒದಗು$_1$]

**ಕಡುವೊಸತು** (ನಾ). ಅತಿ ಹೊಸದು; ಹೊಚ್ಚ ಹೊಸದು: ಪೊಸತೆನಿಪ ಸುರಗೆವೆಕ್ಕಣಮೆಸೆದಿರೆ ಕಡುವೊಸತು ಬಣ್ಣರಸಮೆಸೆದಿರೆ ನಿಪ್ಪೊಸತೆನಿಪ ದೇಸೆ ಮಾಸಱಮೆಸೆದಿರೆ ಸಭೆ ಮೆಚ್ಚೆ ಪೊಚ್ಚ ಪೊಸತಾಯ್ತು ರಸಂ (ಅಜಿಪು. ೫-೩೩). [ಕಡು$_1$ (< ಕಡಿದು) + ಪೊಸತು]

**ಕಡುಶಿಶು** (ನಾ). ತೀರ ಚಿಕ್ಕಮಗು ; ಸಣ್ಣ ವಯಸ್ಸಿನ ಶಿಶು ; ಹಸುಗೂಸು : "ಬಾಮುಂಚದೊಳು ಕಡುಶಿಶುವಿನೊಳು ಬಾಲದೊಳು . . . ದೇವಕೀತನಯನೊಳು ಬಾಲಕಾಭಿಖ್ಯೆಯಕ್ಕುಂ" (ಮಂಗರಾ. ೧೫೩-೬೧). [ಕಡು$_1$ (< ಕಡಿದು) + ಶಿಶು]

**ಕಡುಶೋಕ** (ನಾ). ಅತಿ ದುಃಖ: "ಅಳಲೆನಲ್ ಕಡುಶೋಕಂ" (ಭಾರನಿ. ೫೫); ಚಿತ್ರದ ಬವಣಿಗೆಯ ಭಾರಣೆಯ ಕಡುಶೋಕದಲಿ ಮೈಮಱಿದ (ಕುವ್ಯಾದ್ರೋ. ೧-೪); ಮಿಗವಕ್ಕಿಗಳ್ ನೊಂದು ಕಡುಶೋಕದಿಂದೆ ಪಸಿವು ನೀರಡಿಕೆಯಂ ತೊಱೆದು (ಜೈಮಿಭಾ. ೨೮-೩೫). [ಕಡು$_1$ (< ಕಡಿದು) + ಶೋಕ]

**ಕಡುಶೌರ್ಯ** (ನಾ). ಅತಿ ಪರಾಕ್ರಮ: ಅವನ ಕಡುಶೌರ್ಯಮಂ ಕಂಡು ಶಂಕೆಯಿಂ ದೇವಪುರದೊಡೆಯ ಲಕ್ಷ್ಮೀವರಂ ಮಾಡಿದಂ ತನ್ನ ಮೈದುನನೊಳಾಲೋಚನೆಯನು (ಜೈಮಿಭಾ. ೧೩-೬೪). [ಕಡು$_1$ (< ಕಡಿದು) + ಶೌರ್ಯ]

**ಕಡುಸಂತಸ** (ನಾ). ಬಹಳ ಸಂತೋಷ; ಅತ್ಯಾನಂದ: ತೆಕ್ಕನೆ ತೀವಿದ ಚತುರಂಗಬಳಮಂ ಕಂಡು ಕಡುಸಂತಸಂ ಮಿಕ್ಕು (ರಾಜಶೇ. ೧೩-೭೦ ವ). [ಕಡು$_1$ (< ಕಡಿದು) + ಸಂತಸ]

**ಕಡುಸಡಗರ** (ನಾ). ಬಹಳ ಸಡಗರ; ಅತಿ ಸಂಭ್ರಮ: ಅದಂ ಕೇಳ್ದು ಕಡುಸಡಗರಂ ಮಿಕ್ಕು (ರಾಜಶೇ. ೬-೧೧ ವ). [ಕಡು$_1$ (< ಕಡಿದು) + ಸಡಗರ]

**ಕಡುಸನ್ನಿ** (ನಾ). ೧. ಅತಿಯಾದ ಸನ್ನಿ. ೨. (ಅಲಂ) ಹುಚ್ಚುಹುಚ್ಚು: ಕಡುಸನ್ನಿವಿಡಿದು ಬೀಸುವ ಬಿಜುಗಾಳಿಯ ಕಡೆಯೊಳು ಹಱಿಗೋಲ ನಿಲಿಸಿ (ನೇಮಿಸಂ. ೩೩-೩೧). [ಕಡು$_1$ (< ಕಡಿದು) + ಸನ್ನಿ]

**ಕಡುಸಲುಗೆ** (ನಾ). ಬಹಳ ಸಲುಗೆ; ಅಧಿಕವಾದ ಪ್ರೀತಿ, —ಮಮತೆ: ಅಂಬಿಕಾಪ್ರಿಯ ಚಿತ್ರಪ್ರಿಯನೆಂಬ ತಂಬಿರಾಂತೋಳನೆಂಬ ಕಡುಸಲುಗೆಯ ಬಿರುದಿನ ಬಹುವಿಧದ ಕಹಳಾರವಂ ದೆಸೆದೆಸೆಗೆ ಪರಿಯೆ (ನಂಬರ. ೮-೨೩); ಕಡುಸಲುಗೆಯಿಂದುಕ್ಕಿ ನಲಿದಾಡುತಂ (ಮೋಹಿರ. ದೇ. ೭೩-೬). [ಕಡು$_1$ (< ಕಡಿದು) + ಸಲುಗೆ$_1$]

**ಕಡುಸವಿ** (ನಾ). ಮಿಗಿಲಾದ ರುಚಿ; ಬಲುರುಚಿ: ನುಡಿವೊಂದು ಸವಿ ನೋಟವೊಂದು ಸವಿ ತೋಟಿಕರ ಕಡುಸವಿಯು ಮುನಿಸಿನಿಂದಂ ಮುನ್ನ ಬಯ್ಕೆ ಸವಿ (ಹಚಕಾ. ೨೩೫. ಪಂ). [ಕಡು$_1$ (< ಕಡಿದು) + ಸವಿ$_2$]

**ಕಡುಸಹಸಿ** (ನಾ). ಬಹಳ ಸಾಹಸವುಳ್ಳವನು; ಮಹಾಸಾಹಸಿ: ಪಾಂಡವರೆಂಬವರು ಕಡುಸಹಸಿಗಳು ಗೆಲಲರಿದು (ಕುವ್ಯಾಆ. ೮-೧೧). [ಕಡು$_1$ (< ಕಡಿದು) + ಸಹಸಿ (< ಸಾಹಸಿ)]

**ಕಡುಸಾರೆ** (ನಾ). ತೀರ ಹತ್ತಿರ; ಬಹಳ ಸಮೀಪ: ನಿನಗೆ ವೃಷಭೇಶ್ವರಂ ಲೋಚನಗೋಚರ ನಿನ್ನೆವರೆಗಮಿಾಗಳ್ ನಿಂದಂ ಮನುಕುಲಲಲಾಮ ನೆಟ್ಟನೆ ಮನದೊಳ್ ಕಡುಸಾರೆಯಲ್ತೆ ಮುನ್ನಿಂದೀಗಳ್ (ಆದಿಪು. ೧೬-೫೬). [ಕಡು$_1$ (< ಕಡಿದು) + ಸಾರೆ$_1$]

**ಕಡುಸಾಲ** (ನಾ). ಬಹಳ ಸಾಲ; ದೊಡ್ಡ ಸಾಲ: ಮದನಂಗೀಶ್ವರ ಶತ್ರು ಬಂಧುನಿಚಯಕ್ಕಂ ಜಾರೆಯೇ ಶತ್ರು ಪೇಳದ ವಿದ್ಯೆಂಗಳ ತಂದೆ ಶತ್ರು ಕುವರರ್ಗಂ ಶತ್ರು ಸಮ್ಮಾನ್ಯರಾ ಸದನಕ್ಕಂ ಕಡುಸಾಲ ರೂಪವತಿ ತಾನೇ ಶತ್ರು ಗಂಡಂಗೆ (ಸೋಮೇಶ. ೮೭). [ಕಡು$_1$ (< ಕಡಿದು) + ಸಾಲ$_1$]

**ಕಡುಸಾಸ** (ನಾ). ಅತಿಶಯವಾದ ಸಾಹಸ: ನಾಡಿನಲಿ ಕಾಳೆಗದ ಸುಳುವಿಲ್ಲದಿರಲೇತಕಿನ್ನು ಪರಿಪರಿಯ ಕಡುಸಾಸದೀ ಹವಣಿಕೆಯು ನಾನರಿಯೆ! (ಹಬ್ಬೆರ. ೧೭-೫). [ಕಡು$_1$ (< ಕಡಿದು) + ಸಾಸ]

**ಕಡುಸಿಗ್ಗು** (ನಾ). ಬಹಳ ನಾಚಿಕೆ: ಮಹೀಪತಿಗಂ ದ್ವಿಜವಂಶಜಂಗಮೇತಜ ಕೆಳೆಯಿಂತು ನಾಣಿಲಿಗರಪ್ಪರೆ ಮಾನಸರೆಂಬ ಮಾತುಗಳ್ ನೆಱಿಗೊಳೆ ಕುಂಭಸಂಭವನನಾ ದ್ರುಪದಂ ಕಡುಸಿಗ್ಗು ಮಾಡಿದಂ (ಪಂಪಭಾ. ೨-೪೪). [ಕಡು$_1$ (< ಕಡಿದು) + ಸಿಗ್ಗು]

**ಕಡುಸಿತಗ** (ನಾ). ೧. ಅತಿ ಹಾದರಿಗ; ಮಹಾಜಾರ. ೨. ಅತಿ ತುಂಟ: ನಿಮ್ಮೂರ ಕಡುಸಿತಗನೊರ್ವ ವೃದ್ಧಂ ಬಂದು ಕೆಮ್ಮನೆಮ್ಮೊಳು ಬಿಡದೆ ಜಗಳವಾಡಿದನಿಂದು (ನಂಬರ. ೭-೧೯); ಸಂಗಡದವರು ಕಡುಸಿತಗರೆನೆ ಕೇಳ್ದಡಿಗಡಿಗೆ ಬೆಱಗಾಗಿ ಬಳಿಕಾ ರಜಕನಿಂತೆಂದ (ಅಕ್ರೂಚ. ೬-೨೩). [ಕಡು$_1$ (< ಕಡಿದು) + ಸಿತಗ]

**ಕಡುಸೀ** (ನಾ). ಬಹಳ ಸವಿಯಾದದ್ದು: ನಾಯಕಸಾರವೊಲಿದು ಕಡುಸೀಯೆನೆ ಕುಡಿಯೆಂದು ತಂದು ಕುಡಿಯಿಸುವರ್ ತಪ್ತಾಯಸ ರಸಮಂ (ಶಾಂತಿಪು. ೭-೯೭). [ಕಡು$_1$ (< ಕಡಿದು) + ಸೀ$_2$]

**ಕಡುಸುಖ** (ನಾ). ಹೆಚ್ಚು ಸುಖ; ಅತಿ ಸಂತೋಷ: ಕಷ್ಟಬೇಡೆಂಬಾಸೆ ಕಡುಸುಖವ ಕಾಂಬಾಸೆ (ಪುರಂದ. ೨-೧೫೧-೩). [ಕಡು$_1$ (< ಕಡಿದು) + ಸುಖ]

**ಕಡುಸುರ್ಕು** (ಕ್ರಿ). ಬಹಳ ಬಾಡು, —ಮುದುರು: ಅರಳಿ ಹೂಮೊಗ್ಗು ಪರಿಮಳವ ಬೀರಿ ಕಡುಸುರ್ಕಿ ಬಳಲಿ ತಾನೊರಗೆ ನೆಲದೆ (ವಿಸೀಗೀ. ೨-೭). [ಕಡು$_2$ + ಸುರ್ಕು$_1$]

**ಕಡುಸೆಲ್ಲೆಹ** (ನಾ). ಹರಿತವಾದ ಶಲ್ಯ: ಕಡಿತಲೆ ಕರಗಸ ಕತ್ತಿಗೆ ಕೊಂತಂ ಕಕ್ಕಡೆ ಕಡುಶೆ[ಸೆ]ಲ್ಲೆಹ ಬಲ್ಲೆಹ ಬಿಲ್ಲಲಗು (ವೀರೇಚ. ೨-೩೧). [ಕಡು$_1$ (< ಕಡಿದು) + ಸೆಲ್ಲೆಹ]

**ಕಡುಸೇದೆ** (ನಾ). ಅತಿಯಾದ ಶ್ರಮ; ಬಹಳ ಬಳಲಿಕೆ, —ಆಯಾಸ: ದೂರದೆ ಬಿರ್ದನೊಂದು ಕಡುಸೇದೆಯೊಳಂ ಬಂದೆನ್ನಂ ಪರವಶತೆಯೊಳೊಂದಿಸಿದತ್ತಾಗಳಾ ಪಿಪಾಸೋದ್ರೇಕಂ (ಕಾದಂಪೂ. ೧೮೯); ತೀರ್ದುದು ನೀರ್ ತೀರ್ದುದು ತೃಷೆ ತೀರ್ದುದು ಕಡುಸೇದೆ (೧೧೪. ೨-೨೪); ಕಾಮಿನಿಯೊರ್ವಳಿಂ ಕಡುಸೇದೆ [ಪಾಠಾಂ. ಸೆರೆಯು] ನಿನಗಹುದು (ಕುಂಾಸಾಂ. ೨೮-೨೧). [ಕಡು$_1$ (< ಕಡಿದು) + ಸೇದೆ]

**ಕಡುಸೊಂದಿ** (ನಾ). ಬಹು ಹಾದರಗಿತ್ತಿ, —ವ್ಯಭಿಚಾರಿಣಿ: ಸಿತಗೆ ಪತಿಗೆ ಮಿಗೆ ಕಾಯ್ವಳ್ ಕೋಟಕ್ಕೆ ಕಡುಸೊಂದಿ ನಾಣಿಲಿ ಬಕ್ಕಂಬಯಲೊಳಮದಾರುಮಂ ಬಂಚಿಸುವಳ್ (ಕಾವ್ಯಾವ. ೩೩೩). [ಕಡು$_1$ (< ಕಡಿದು) + ಸೊಂದಿ]

**ಕಡುಸೊಂಪು** (ನಾ). ಅಧಿಕವಾದ ಸೌಂದರ್ಯ, —ಸೊಬಗು: ಏನುಮಂ ಪಾಜ[ರ]ದೆಯರ್ಚಿಸಿಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ (ಪಂಪಾಶ. ೭೬). [ಕಡು$_1$ (< ಕಡಿದು) + ಸೊಂಪು]

**ಕಡುಸೊಕ್ಕು** 'ಕಡುಸೊರ್ಕು$_1$' ನೋ.

**ಕಡುಸೊಗ** (ನಾ). ಹೆಚ್ಚು ಸುಖ; ಬಹಳ ಆನಂದ: ಆ ಬಡನಡುವಿನಬಳೆಯ ಮೃದುನುಡಿಯಲೊಡಬಡಿಸಿ ಕಡುಸೊಗವಿತ್ತ ಮೃಡನಿಮ್ಮಡಿಗೆ ಪೊಡಮಡುವೆ (ಕವಿಚ. III, ೨೯೭ ಶುಕಸಪ್ತತಿ). [ಕಡು$_1$ (< ಕಡಿದು) + ಸೊಗ]

**ಕಡುಸೊಗಯಿಸು**, ಕಡುಸೊಗಸು (ಕ್ರಿ). ಬಹಳ ಸೊಗಸಾಗಿರು; ಬಲು ಚಂದಕಾಣು: ಕಡುಸೊಗಯಿಸುವೀ ಕುಸುಮದ ಫಲಮೇ ಪೊಡವಿಯನೆಲ್ಲಮನೊಂದೇ ತೋಳೊಳ್ ಗಡಣದಿ ಧರಿಯಿಪುದಪ್ಪುದು ನಿಶ್ಚಯಂ (ಜಯಕಾ. ೨-೪೬). **ಕಡುಸೊಗಸು**: ಎಳಮಿಂಚಿಂ ಕಂಡರಿಸಿದ ಕಾಂತೆಯೆನಲ್ ಕಡುಸೊಗಸಿದಳು (ಜಯಕಾ. ೨-೪೯). [ಕಡುಸೊಗ + -ಇಸು$_3$]

**ಕಡುಸೊಗಸು** 'ಕಡುಸೊಗಯಿಸು' ನೋ.

**ಕಡುಸೊರ್ಕು$_1$**, ಕಡುಸೊಕ್ಕು (ಕ್ರಿ). ಬಹಳ ಮದವೇರು ; ಅತಿಯಾಗಿ ಸೊಕ್ಕು : ಕತ್ತುರಿಯ ತಗುಳ್ದು ಪೊಯ್ವ ಸೊವಡಾ ಸೊವಡೊಳ್ ಕಡುಸೊರ್ಕಿ ಸೊರ್ಕಿಗಾವರಿಸುವ ತುಂಬಿ (ಆದಿಪು. ೨-೫). **ಕಡುಸೊಕ್ಕು** : ಕಡುಸೊಕ್ಕಿ ಸೀರೆಯಂ ಕಳೆದು ಕೌಂಕುಳಲವಚಿ ನಡೆದು ಡೆಂಡಣಿಸುತ್ತ ತೊದಳಿಸುತ ಬೈವುತ್ತ . . . ತೊತ್ತಿರೆಡೆಯಾಡಿದರು ಬೀದಿಬೀದಿಯೊಳು (ಹಚಕಾ. ೪-೪೫). [ಕಡು$_2$ + ಸೊರ್ಕು$_1$]

**ಕಡುಸೊರ್ಕು$_2$** (ನಾ). ಅಧಿಕ ಮದ ; ಬಲು ಕೊಬ್ಬು : "ಶುಂಡಾ ಪ್ರಪಾನಂ ಕಳ್ಗುಡಿಹ ಕಡುಸೊರ್ಕು ಚರ್ಕಣಂ ತಾನದು" (ವಸ್ತುಕೋ. ೯೩-೬) ; ಕಡುಸೊರ್ಕಿಂದಲರಂಬನಾನೆಯೆನಿಪೀ ತೆಂಗಾಳಿ ತನ್ನಿಚ್ಚೆಯಿಂ ನಡೆತಂದಪ್ಪುದು ಬೇಗದಿಂ (ಕಬ್ಬಿಕಾ. ೫೫) ; ಎನ್ನ ಪೂಗಣೆಗಳೋವದೆ ಬೆನ್ನನೆ ಪೋಗಿ ನಾಂಟದಿರ್ಪನ್ನೆಗಮುಂಟು ತನ್ನ ಕಡುಸೊರ್ಕು ಬಱಿಕ್ಕದು ಪಾಱಿಪೋಗದೇ (ಕಬ್ಬಿಕಾ. ೧೯೦).

[ಕಡು$_1$ (< ಕಡಿದು) + ಸೊರ್ಕು$_2$]

**ಕಡುಸೋಲ** (ನಾ). ೧. ದೊಡ್ಡ ಅಪಜಯ. ೨. ಬಲು ಮೋಹ ; ಅತಿ ಆಕರ್ಷಣೆ : ಮಾಡಿ ಬೆಡಂಗಿ ಕಣ್ಗೆ ಕಡುಸೋಲಮನೆನ್ನ ಮನಕ್ಕೆ ಸೋಲಮಂ ಮಾಡುವಲಂಪಿನಿಂ ಪುಗುವವೋಲೆರ್ದೆವೊಕ್ಕನಗಿಂದು ಕೈತ್ಯಮಂ ಮಾಡಿದಳ್ (ಜಗವಿ. ೧೧-೪೩).

[ಕಡು$_1$ (< ಕಡಿದು) + ಸೋಲ]

**ಕಡುಸೋವಡಿ** (ನಾ). ಬಹಳ ಮಡಿವಂತೆ ; ಆಚಾರಶೀಲೆ (?) : ಕೊಂಟಣದೊಟ್ಟಿ ಕೂರಿಸಿದ ಕಾದಲನಂ ಬಿಸುಡೆಂದು ಕೀಱಿ ಬಾಯುಂಟೆನಗೆಂದು ಬಗ್ಗಿಸುವೆ ಕೂಠದರಾರ್ಕಿಱಿಯೆಂದು ನಿನ್ನನೇಂ ನಾಂಟವೆ ಪೂವಿನಂಬು ಕಡುಸೋವಡಿ [ಪಾಠಾಂ. ದಿ] ಯಾದಪೆ ನಿನ್ನ ಮೆಯ್ಯ ನುಣ್ಗಂಟೊಡವುಟ್ಟಿ ಮಟ್ಟಮಿರೆ ಮಿಱುವರಾರೊ ಮನೋಜನಾಜ್ಞೆಯಂ (ಮಲ್ಲಿಪು. ೭-೬೪ ; ಸೂಕ್ತಿಸು. ೮-೪೪೪ ನೋ). P "ಸೋವದಿಯಾಗು = ದಯೆಯಿಲ್ಲದಿರು" (ಪ್ರಭಣ್ಣ).

[ಕಡು$_1$ (< ಕಡಿದು) + ಸೋವಡಿ. P ಮರಾ. ಸೋವಳಾ = ಮಡಿ, ಶುದ್ಧ, ಮಂಗಳಕರ]

**ಕಡುಹರುಷ** (ನಾ). ಬಹಳ ಸಂತೋಷ ; ಅತ್ಯಾನಂದ : ಕಡುಹರುಷದಲಿ ಕಲಿಶಲ್ಯ ಹೊಱವಂಟನು ನಿಜಾಲಯುವ (ಕುವ್ಯಾಕ. ೫-೧೨).

[ಕಡು$_1$ (< ಕಡಿದು) + ಹರುಷ]

**ಕಡುಹಾಕು** (ಕ್ರಿ). ಮೀನುಗಳನ್ನು ಕೊಲ್ಲುವುದಕ್ಕಾಗಿ ನೀರಲ್ಲಿ ವನಸ್ಪತಿಯ ವಿಷವನ್ನು ಸೇರಿಸು : ಜನರು . . . ದೊಡ್ಡಗುಂಡಿಗಳಿಗೆ 'ಕಡುಹಾಕಿ'ಯೂ (ಕೆಲವು ಮರಗಳ ಕಾಯಿ, ತೊಗಟೆ, ಸೊಪ್ಪುಗಳನ್ನು ಜಜ್ಜಿ ನೀರಿಗೆ ಹಾಕಿ ಕದಡುತ್ತಾರೆ. ಆ ವಿಷದಿಂದ ಮೀನು ಸತ್ತು ತೇಲುತ್ತವೆ . . .) ಮೀನು ಹಿಡಿಯುತ್ತಿದ್ದುದರಿಂದ ದನಕರುಗಳಿಗೆ ನೀರೂ ಸುಲಭವಾಗಿ ಸಿಕ್ಕುತ್ತಿರಲಿಲ್ಲ (ಕಾನೂರು. ೪೯೦).

[ಕಡು$_0$ (P ತಮಿ. ಕಡು = ವಿಷ) + ಹಾಕು (< ಪಾಯ್ಕು$_1$)]

**ಕಡುಹಿ** (ನಾ). ಉಗ್ರನಾದವನು ; ಕ್ರೂರಿ ; ದಯವಿಲ್ಲದವನು : ಕಡುಹಿಯೋ ನೀ ಬಳ್ಳುಗಱಿಯಲು ದಡಿಗ ಹಾಲಿನ ಸವಿಯ ನೋಡುವೆ ಬಡಿಗೆಗಾಣದೆ ಹೆಡಕ ಮೋಹಿಪ ರಾಮಬಾಣವಿರೆ (ಕೌಶಿರಾ. ೧೮-೪೯) ; ತನ್ನ ತಾನಱಿಯದ ಕಡುಹಿ ಕೊಲೆಯಂ ನೆನೆವನಲ್ಲದೆ ಮಹಾಪುರುಷಂ ನೆನೆವನೇ ಜೀವಹಿಂಸೆಯಂ (ಶಂಕದಾ. ೧೪-೩೫).

[ಕಡುಹು$_2$ (< ಕಡುವು) + -ಇ$_3$]

**ಕಡುಹಿಮ** (ನಾ). ಹೆಚ್ಚಾದ ಮಂಜು : ಕಡುಹಿಮಂ ಕಡುವಿಸಿಲು ಕಡುಗಾಳಿಯಿಲ್ಲ (ಹಚಕಾ. ೫-೫೬).

[ಕಡು$_1$ (< ಕಡಿದು) + ಹಿಮ]

**ಕಡುಹೀಹಾಳಿಕಾಱ** (ನಾ). ಅತಿ ಕ್ರೂರನಾದವನು, —ಉಗ್ರನಾದವನು : ಆಳುತನವುಬ್ಬೆದ್ದು ಕಡುಹೀಹಾಳಿಕಾಱರು ಕೈದುಕೊಂಡರು ಬಾಲಕನ ತಱುಬಿದರು ದೊರೆಗಳು (ಕುವ್ಯಾದ್ರೋ. ೫-೮೨).

[ಕಡು$_1$ (< ಕಡಿದು) + ಹೀಹಾಳಿ + -ಕಾಱ]

**ಕಡುಹು$_1$** (ಕ್ರಿ). ಪರಾಕ್ರಮವನ್ನು ತೋರು ; ಸಾಹಸ ಮಾಡು : ಕಡುಹುವಗ್ಗದ ಕಾಲಕೇಯರ ಗಡಣವಡಗಿತು (ಕುವ್ಯಾಅ. ೧೨-೫೩).

[< ಕಡುವು]

**ಕಡುಹು$_2$** 'ಕಡುವು' ನೋ.

**ಕಡುಹು$_3$** (ನಾ). ಉಂಡೆ ; ಗುಳಿಗೆ : ಹಿಪ್ಪಲಿ ಗ ೧ ತೂಕ, ಶುದ್ಧರಸ ಗ ೧ ತೂಕ ಸಹ ನಿಂಬೆಹಣ್ಣಿನ ರಸದಿಂ ಮರ್ದಿಸಿ ಕಡುಹಂ ಮಾಡಿ ನೆಳಲಲ್ಲಿ ಒಣಗಿಸಿ ತಿಲಪ್ರಮಾಣವಂ ಕಣ್ಣಿಗೆಚ್ಚಲು ಸನ್ನಿಪಾತಂ ಗುಣಮಕ್ಕುಂ (ಸಕವೈ. ೧೮೦). [< ಕಡುಕು$_1$]

**ಕಡುಹುಕಾತಿ** (ನಾ). ಉತ್ಸಾಹವುಳ್ಳವಳು; ಸಡಗರವುಳ್ಳವಳು : ಮುಡಿಯ ಸೊಬಗಿನ ಸಣ್ಣ ನಡುವಿನ ಬೆಡಗಿನಭಿನವರಸದ ಭಾವದ ಕಡುಹುಕಾತಿಯರೈದಿದರು (ತೊರರಾ. ೧-೧೪-೨೨).

[ಕಡುಹುಕಾಱ + -ತಿ$_1$ (< -ಇತ್ತಿ)]

**ಕಡುಹುಕಾಱ** (ನಾ). ೧. ಉತ್ಸಾಹವುಳ್ಳವನು; ಸಂಭ್ರಮವುಳ್ಳವನು. ೨. ಪರಾಕ್ರಮಶಾಲಿ; ದಿಟ್ಟ : ಮೃಡನನೊಂದವಸರಕೆ ಬಗೆಯದ ಕಡುಹುಕಾಱರು ನಿನ್ನವರು (ಕುವ್ಯಾದ್ರೋ. ೧೬-೨೬) ; ಮಿಱಿ ಮಿಸುಕುವ ಕಡುಹುಕಾಱರ ಕಾಲನೂರಿಗೆ ಕಳುಹಿ ಸಂದಣಿಸಿ (ತೊರರಾ. ೪-೬-೨೦). [ಕಡುಹು$_2$ (< ಕಡುವು) + -ಕಾಱ]

**ಕಡುಹುಗಳ್ಳ** (ನಾ). ಭಾರಿಕಳ್ಳ ; ಪ್ರಬಲನಾದ ಕಳ್ಳ : ಕಡುಹುಗಳ್ಳನು ಹಾದರಿಗನುಂ ಗಡಣೆಗಿವರೆನೆ ಶೂದ್ರಕಂ ಕುಲಗೆಡಿಕನಹ ಕೀಚಕನು ನೆಱೆ ಕಡಿವಡೆದರೆಂದಱಿದು (ಬಸವು ೧೧-೫೧).

[ಕಡುಹು$_2$ (< ಕಡುವು) + ಕಳ್ಳ$_1$]

**ಕಡೆ$_1$**, ಕಟೆ (ಕ್ರಿ). ೧. ಹಾಲು, ಮೊಸರು ಮೊದಲಾದುವುಗಳನ್ನು ಕಡೆಗೋಲಿನಿಂದ ಮಥಿಸು, —ಹೊಸೆ : "ಕಡೆ - ಮಥನೇ, ಅವಸಾನೇ ಚ" (ಶಮಧಾ) ; ಸುರಾಸುರೆರ್ . . . ಪಾಲ್ಗಡಲನುಪಾಯದಿಂ ಕಡೆಯೆ (ಕಾವ್ಯಸಾ. ೯೩೮ ಶೂದ್ರಕ) ; ಶ್ರೀರಮಣಿಯಂ ದ್ವಿಷದ್ಬಳ ಪಾರಾವಾರದೊಳುದಗ್ರ ಭುಜವಿಜಯ ಮಹಾಮೇರುವನೆ ಕಡೆದು ಪಡೆದಳವಾರುಮ ನಿಱಿಸಿದುದುದಾತ್ತನಾರಾಯಣನಾ (ಪಂಪಭಾ. ೪-೧) ; ಉರವಣಿಸಿ ತೊಡಗಿದರು ಕಡಲ ಕಡೆಯಲ್ಕೆಂದು (ನಂಬಿರ. ೧-೪) ; ಆರ ಹಾರೈಸಿದರೇನುಂಟು ಬರಿ ನೀರ ಕಡೆದರಲ್ಲೇನುಂಟು (ಪುರಂದ. ೧-೧೨೪ ಪಲ್ಲವಿ) ; ಕೆನೆವಾಲ ಕಡೆದು ನವನೀತಮುಂ ತೆಗೆದು (ಜೈಮಿಭಾ. ೧-೭). ೨. ಶೋಧಿಸು; ಸೋಸು; ವಸ್ತ್ರಗಾಳಿತ ಮಾಡು : ಈ ಔಷಧಿಯನ್ನು ಬಟ್ಟೆಯಲ್ಲಿ ಸ್ವಲ್ಪ ಕಡೆದು ಕೊಡು (ರೂಢಿ). ೩. ಬೆಂಕಿ ಹುಟ್ಟಿಸುವುದಕ್ಕಾಗಿ ಮರದ ತುಂಡುಗಳನ್ನು ಒಂದಕ್ಕೊಂದು ಉಜ್ಜು, —ತಿಕ್ಕು : "ಅರಣಿಃ . . . ಕಡ[ಡೆ]ದುವರೆಗೊಂಡು ಅಗ್ನಿಯಂ ಹುಟ್ಟಿಸುವ ಅರಣಿಯೆಂಬ ಮರಕ್ಕೆ ಹೆಸರು" (ಸಿದ್ಧಾಂತಿ. ೧೮೯) ; "ಅರಣಿ = ಬೆಂಕಿಯನ್ನು ಮಾಡುವುದಕ್ಕೆ ಕಡೆಯುವ ಕಟ್ಟಿಗೆ" (ಗಂಗಾವು. ೧೩). ೪. (ಯಂತ್ರಕ್ಕೆ ಕೊಟ್ಟು) ರೂಪಿಸು ; ಕೆತ್ತು ; ತಿದ್ದು : ಅಮರ್ದಿಂವೆ ತೊಯ್ದು ಕಪ್ಪುರವಳುಕಿಂದಱಂ ಕಡೆದು ಕಂಡರಿಪಂವಲಮೆನ್ನ ನಲ್ಲಳಂ (ಪಂಪಭಾ. ೫-೧೬) ; ಪೊಳೆವ ನವಚಂದ್ರಕಾಂತೋಪಳಮಂ ಕಂಡರಿಸಿ ಕಡೆದುಮಾಡಿದವೊಲ್ (ಸುಕುಮಾ. ೧೨-೪೬) ; ನಿದ್ರೆಯ ಭರದಲಿರ್ದನು ನೀಲಗಿರಿಯನು ಸರಸಿಜೋದ್ಭವ ಕಡೆದು ಕೆಡಹಿದ ತೆಱದಲಸುರೇಂದ್ರ (ತೊರರಾ. ೫-೨-೩೮). ೫. (ಅಲಂ) ದುಃಖಿಸು; ಕಳವಳಿಸು. 'ಕಟ್ಟುಕಡೆ' ಪರಾ.

ಕಟೆ : ೧. ಕಂಡು ಬಲ್ಲೆ ಜ್ಞಾನ ಕಟ[ಟ]ದು ಬಲ್ಲೇನಯ್ಯ (ಮೋಕ್ಷದೀ. ೮೨-೧೨). ೪. ಕೈಯಲ್ಲಿರುವುದು ಪಂಚಸೂತ್ರ ಪ್ರ ಮಾ ಣ ದಿ ಂ ದ ಕಟ[ಟ]ದು ತಿದ್ದಿ ತೀರ್ಚಿ ಒ ಪ್ಪ ವಿ ಟ್ಟು ದು ಲಿಂಗವು (ಮೋಳಿಮಾ. ೧೪೪-೬೪ ಅರ್ಥ); ತನ್ನಲಿಹ ಲಿಂಗವನು ಮುನ್ನಿಸಲಿ ಕಱುಯದೆ ಬಿನ್ನಣದಿ ಕಟಿದ ಪ್ರತಿಮೆಗಳಿಗೆಱಗುವ ಅನ್ಯಾಯ ನೋ ೀ ಡ (ಸರ್ವಜ್ಞ. ೧೯೯); ಸ್ವಾ ರಾ ಜ್ಯ ದೊ ೦ ದು ಘನ ಕನಸು ಕಂಡು ಕಟಿದಿಟ್ಟ ಆಗಿ ತ್ಯಾಗಿ (ಸೂರ್ಯಪಾ. ೧೬-೧೧); ತಾಯಿಯಂತೆ ಬಯ್ದು, ಅಂದು, ಕಟಿದು ಅವನನ್ನು ದಾರಿಗೆ ತಂದಿದ್ದರು (ಬೆಳುಮು. ೨೬). ೬. ಕುಟ್ಟು; ಕೊರೆ: ತನಗೆ ಇನ್ನೂ ತಿಳಿಯಲಿಲ್ಲೆಂದು ಅವನ ಮನಸ್ಸಿನೊಳಗೆ ಕಟ[ಟ]ಯುತ್ತಿತ್ತು (ಮುಂಬಯಿ. ೫-೨೬೩); ನನಗೆ ಆಶಾಭಂಗವಾದಂತೆನಿಸಿತ್ತು. ಅದು ಮನಸ್ಸಿನಲ್ಲಿ ಕಟಿಯುತ್ತಲಿತ್ತು (ಚಂದುಟ. ೨೪).

[ದೇ. ‖ ತಮಿ. ಕಡ್ಡೈ; ಮಲ. ಕಡ; ತುಳು. ಕಡೆ; ಕೊಡ. ಕಡೆ = ಅರೆ; ಮಲ್ತೊ. ಗಟ್ಯ]

ಕಡ್ಡೆ$_2$ (ಕ್ರಿ). ದಾಟು; ಹಾಯ್ದುಹೋಗು: ಹಱಗೋಲ ಬಿಸುಟು ಹೊಳೆಯಂ ಕಡೆವೆನೆಂದೆಂಬ ತೆ ಜ ನ ಲ್ಲ ವೇ (ಸಮ್ಮಕಾ. ೧೨-೨೧); ಮಾರ್ಪಡೆಗಳ ಕೂರ್ಪ್ಪಡುಗೆ, ಪೋರಬಯಸಿ ಕಡೆದರೇ! (ಪಾರಸಿ. ೩-೫೭).

[ದೇ. ‖ ತಮಿ. ಮಲ. ತುಳು. ಕೊಡ. ಕಡ; ತೆಲು. ಕಡಚು, ಗಡಚು, ಗಡುಚು; ಪರ್ಜಿ. ಕೆಡ್ಪ್; ಗಡಬ. ಕರ್ಪ್; ಕುರುಖ್. ಕಟ್ನಾ; ಮಲ್ತೊ. ಕಟೆ]

ಕಡ್ಡೆ$_3$ (ನಾ). ೧. ಕೊನೆ; ಮುಕ್ತಾಯ; ಅಂತ್ಯ: "ಕಡೆ – ಮಥನೇ, ಅವಸಾನೇ ಚ" (ಶಮಧಾ); ಪರಪಿನ ನೀಳದ ಕಡೆಯಂ ಮರುಳಂ ತವೆ ನೋಡಲಾಱದಂಬರತಳಮಂ ಕರಿದೆಂಬಂತೆ (ಪಂಪಭಾ. ೬-೨೦); ಕಳುಪಲ್ಕೆ ಕಡೆಯ ಬಾಗಿಲ್ವಾಡಂಬರೆಗಂ ಬಂದುದು . . . ಕನ್ಯಕಾ ನಿಕುರುಂಬಂ (ಕಾದಂಉ. ೧೭೯); ಎಡೆಯಿಲ್ಲದ ಕಡೆಯಿಲ್ಲದ . . . ಚೆಲುವಂಗೆ ನಾನೊಲಿದೆ ಎಲೆ ಅವ್ವಗಳಿರಾ (ಮ ಹಾ ದೇ. ಕ. ೧೦೮-೨೫೦). ೨. ಸೆರಗು; ತುದಿ; ಅಂಚು: ಮತ್ತಿನ ಬೂತು ತಪಂಗಳೆಮ್ಮ ಪುರ್ವಿನ ಕಡೆಯೊಂದು ಜರ್ವಿನೊಳೆ ತೀರ್ವುವು (ಪಂಪಭಾ. ೬-೮೧); ನಾಲ್ಕುಂ ಕಡಲ ಕಡೆವರಂ ದಿಗ್ವಿಜಯೋತ್ಸಾಹದಿಂ ಸಾ ಧಿ ಸಿ ದ ಂ ವಿಕ್ರಾಂತದಿಂ . . . ಬಿಟ್ಟಿದೇವಂ (ಎಕ. III, ಮಂಡ್ಯ. ೧೨೧-೯; 1235); ಕಣ್ಣ ಕಡೆ (ಶ ಬ್ದಾ ನು. ೮೯ ಪ್ರಯೋ). ೩. ಪಕ್ಕ; ಮಗ್ಗುಲು; ದೆಸೆ: ಅಮಿತ ಬಲದೆರಡು ಕಡೆಗಂ ನಿಮಿರ್ವ (ಕಾವ್ಯಸಾ. ೪೭೬ ಶೂದ್ರಕ); ಅನ್ತೆ ಬನ್ದು ಬೆಳೆಕೆಱೆಯ ಪಡುವಣ ಕಡೆಯಿಂ (ಎಕ. III, ನಂಜನ. ೧೩೯-೧೬; 915); ಎಡಗೆಯ್ಯನೂಱಿ ಪೀಠದ ಕಡೆಯೊಳ್ ಮುಯ್ಯುಡ್ದಮಾಗೆ. . . ಒರ್ವಂ ನುಡಿದಂ (ಶಾಂತಿಪು. ೫-೧೦೩); ಒಂದು ಕಡೆಯಲಿ ತಾಳಮದ್ದಳೆಯೊಂದು ಕಡೆಯಲಿ ಸರಸ ನೃತ್ಯಗಳು (ನಳಚ. ೩-೫೨); ನ್ಯಾಯ, ಸಂಪ್ರದಾಯ, ಇವೆರಡೂ ನಿನ್ನ ಕಡೆಯಲ್ಲಿವೆ(ಆರ್ಯಕ.೧೨). ೪. ಎಡೆ; ಸ್ಥಳ: ಗೆಲವಂ ತೋಱದೆ ದುಃಖ ಮುಪ್ಪ ಕಡೆಯೊಳ್ ಭೂತಂಗಳಾವಾಸದೊಳ್ ಸಲೆ ಬಲ್ಲರ್ ನಿಲೆ ಸಲ್ಲದೈ (ಸೋ ೀ ಮೇ ೀ ಶ. ೧೫). ೫. (ಆಲಂ) ಕೊನೆಯ ಸ್ಥಾನ; ಕೀಳು ಸ್ಥಿತಿ: ಷೋಡಶರಾಜರಿಂ ಕ ಡೆ ಯೊ ಳೆ ರ್ಪು ದು ಜೀಯ ಪಸಾದಮೆಂಬುದುಂ (ಪಂಪಭಾ. ೬-೧೬); ನ್ಯಾಯವಿಲ್ಲದವ ನಾಯಿಗಿಂತ ಕಡೆ (ಗಾದೆ).

ಕಡೆಗಾಗು = ೧. ದೂರವಾಗು; ಆಚೆಗೆ ಹೋಗು: ಎನಿತಾದೊಡಂ ತಾನು ಯುದ್ಧದಲ್ಲಿ ಕೌರವನಂ ಬಿಟ್ಟು ಕಡೆಗಾಗುವಂಥವನಲ್ಲ (ಭಾ ರ ಶಾ ೦. ೧೪). ೨. ಹೊರಬರು; ಕಳಚಿಕೊಳ್ಳು: ಮುಷ್ಟಿ ಸಡಿಲವಾಗಿ ಚಾ ರು ನ ಕೈಯಿಂದ ಭೂಪತಿಯ ಕೈ ಕ ಡೆ ಗಾ ಯಿ ತು (ಇ ಪ್ಪ ಕ. ೨೯೪). ೩. (ಉಕ) ಮುಟ್ಟಾಗು; ಹೊ ರ ಗಾ ಗು.

ಕಡೆಗೆ ಮಾಡಿಕೊಳ್ಳು = ತನ್ನ ಪಕ್ಷಕ್ಕೆ ಒಲಿಸಿಕೊಳ್ಳು: ಅವನನ್ನು ತನ್ನ ಕಡೆಗೆಮಾಡಿಕೊಂಡು ಇದ್ದಳು (ಮುಂಬಯಿ. ೫-೫೫). ಕಡೆಪೂರೈಸು = ಕೊನೆಯವರೆಗೆ ತಾಳು; ನಿಭಾಯಿಸು: ಅದೆಲ್ಲ ಅಷ್ಟಕ್ಕಷ್ಟೆ, ಕಡೆ ಪೂ ರೈ ಸು ವ ಮಾತಲ್ಲ (ರೂಢಿ). ಕಡೆಯಿಂದ = ಕೈಯಿಂದ: ನನ್ನ ಕಡೆಯಿಂದ ಸಾಧ್ಯವಾದುದನ್ನೆಲ್ಲಾ ಮಾಡುತ್ತೇನೆ (ರೂಢಿ). ಕಡೆವಿಡಿದು = ಪಕ್ಕವನ್ನು ಹಿಡಿದು; ಪಕ್ಕ ದ ಲ್ಲಿ; ಪಕ್ಕವಾಗಿ: ಆ ವಿಜಯಾರ್ಧ ಪರ್ವತದ ಕಡೆವಿಡಿದು ಮೇಗೆ ನೆಗೆದ ವನವೇದಿಕಾ ಪ್ರದೇಶ ಮನೆಯ್ದೆ ವಂದಾಗಳ್ (ಆದಿಪು. ೧೩-೧೦ ವ); ಕಡೆವಿಡಿದು ಕಲಿಪಾರ್ಥನಂಬಿನ ವಡಬ ನೆದ್ದುದು (ಕುವ್ಯಾಶ. ೩-೯); ಕಡೆದ ಕರುವಾಡದ ಕವಾಟದ ಕಡೆವಿಡಿದು ಹೊಂಬೆಸದಲುಱೆ ಹೊಗರಿಡುವ (ತೊರರಾ. ೫-೨-೬೪).

[ದೇ. ‖ ತಮಿ. ಕಡ್ಯ; ಮಲ. ಕಡ; ತುಳು. ಕೊಡ. ಕಡೆ; ತೆಲು. ಪರ್ಜಿ. ಕಡ]

ಕಡ್ಡೆ$_4$, ಕಡೆಯ$_1$ (ನಾ). ಅಂಗಳದಲ್ಲಿ ಅಲಂಕಾರಕ್ಕಾಗಿ ರಂಗವಲ್ಲಿ, ಹೂವು ಮೊದಲಾದುವುಗಳಿಂದ ಮಾಡಿದ ರಚನೆ; ಪೂವಲಿ; ರಂಗವಲ್ಲಿ: ಬಿಡುಮುತ್ತಿನ ಬಳಸಿದ ಕಡೆ ನಡುವಣ ಚೆಂಬೊನ್ನ ಪಟ್ಟವಣೆ (ಆದಿಪು. ೪-೩೩); ಕತ್ತುರಿಯ ನೀರ್ದಳಿಪಂ ಪುದಿದಿರ್ದ ತೋರಮುತ್ತಿನ ಕಡೆ ತಳ್ತ ಹೇಮಮಯ ಪುಷ್ಪದ ಪೂವಲಿ (ಜಗವಿ. ೯-೯೭); ಕಡೆಯೆಂಬ ನುಡಿ ಮೊ ಸ ರೊ ಳಾ ರಂಗವಲ್ಲಿಯೊಳಗಲ್ಲದಂತಾ ನಾಡೊಳೆಂದುಮಿಲ್ಲ (ಚೀರಮು. ೨-೮); ಕಪ್ಪುರದ ಕಡೆ ಕುಸುಮವಲಿ ಅಗರುವಿನ ಪೊಗೆ ತುಂಬಿಗಳ ಸೆಱೆವಿಡಿಯೆ (ಸಾಳ್ವಭಾ. ೨೦-೪೬). ಕಡೆಯ$_1$: "ಕಡೆಯಮದೆಂದುಂ ಪೂವಲಿಯೆನುತುಂ ಧರೆಯೊಳ್ ಭಾವಿಸೆ ತಾಂ ರಂಗವಲಿಗೆ ನಾಮುಂ" (ಕವಿಕಂ. ೧೭೭); ಚಳೆಯಂಗೊಟ್ಟಂಗಣದೊಳ್ ಕಡೆಯಂ ಗುಡುವಾ (ಜಯಕಾ. ೮-೨). [?]

ಕಡ್ಡೆ$_5$ 'ಕಡೆಯ$_2$' ನೋ.

ಕಡೆಕಂಜಿ (ನಾ). (ಕರಾ) ಕೊನೆಯ ಕರು: "ಹಿಡಿಹುಲ್ಲನು, ತಿಂಡಿ ಕಾಳನು, ಉಂಡು ಬೆಳೆದೀ ಕರುವಿದು ಗಂಡು ಅಲ್ಲವು. ಕೊಂಡು ಬಂದೆನು; ಹಿಂಡಿನಲಿ ಕಡೆಕಂಜಿಯು" (ಕಎಪು. ೧೪-೮).

[← ತುಳು. ಕಡೆಕಂಜಿ]

ಕಡೆಕಟ್ಟು (ನಾ). ಅಣಿ; ಅಚ್ಚುಕಟ್ಟು; ಓರಣ (?): ಎಡದ ಭಾಗದಿ ಗಿಂಡಿ ಬಲದ ಭಾಗದಿ ಹೊನ್ನ ಪಡಿಗ ಮುಂದಡ್ಡಣಿಗೆಯೊಳು ಎಡೆಗೊಂಡ ಹರಿವಾಣವೆಸೆಯೆ ಕುಳಿತುದೊಂದು ಕಡೆಕಟ್ಟನ್ನೇನೆಂಬೆನವನ (ಭರಚ. ೪-೬೧); ಮದುವೆಗೆಂದು ಕಟಕದ ಕಡೆಮುಟ್ಟ ಸಿಂಗರಿಸಿದ್ದ ಕಡೆಕಟ್ಟ ನೋಡುತ ಬಂದು (ಭರಚ. ೩೯-೨೬). [ಕಡ್ಡೆ$_4$ ? + ಕಟ್ಟು$_2$ ?]

ಕಡೆಕಳೆ 'ಕಡೆಗಳ$_2$' ನೋ.

ಕಡೆಕಾಲ 'ಕಡೆಗಾಲ' ನೋ.

ಕಡೆಕೂಳು (ನಾ). ಊಟದ ಕಡೆಯ ಭಾಗ, —ತುತ್ತು: ಹಾಳಾಗಿ ಹುಡಿಗೂಡಿಹೋದ ಕನ್ನಡನಾಡಿಗಿದಿರಾಗಿ ಬಂದು ನಿಂದು . . . ಕಾಳ ರಕ್ಕಸನ ಕಡೆಕೂಳು – ಬಾಳಕವಾದ ನಾಡ ನಡುಮನೆಯ ಕಂಡೆ (ಗಂ. ೧೩-೭). [ಕಡ್ಡೆ$_3$ + ಕೂಳು$_2$ (< ಕೂೞ್$_1$)]

ಕಡೆಕೇರಿ (ನಾ). ಒಂದು ಪ್ರದೇಶದ ಹೆಸರು: ಮು(? ಮೆ)ಂಗೂಟಿ ಪೋಜಂ ಕದೆ(? ಡೆ)ಕೇರಿಯನಾಳೆ (ಇಆ. XII, ೨೭೧-೧೧; 973).

[ಕಡ್ಡೆ$_3$ ? + ಕೇರಿ]

ಕಡೆಕೊಳ (ನಾ). ಒಂದು ಊರಿನ ಹೆಸರು: ಕಡೆಕೊಳವಂ ಬೆಮ್ಮರ್ವೆಯ ಬಿಡುತಿಟಿಟ್ಟೋಡೆ ಕಡೆಕೊಳದ ಗಾಮುಣ್ಡುಗಳು (ವೈಆರಿ. ೧೯೩೪, ೩೮-೪; 11[illegible]). [ಕಡ್ಡೆ$_3$ ? + ಕೊಳ$_2$ ?]

ಕಡೆಗಂತಿ 'ಕಡೆಗಂದಿ' ನೋ.

**ಕಡೆಗಂದಲ್** (ನಾ). (ಮೊಸರು) ಕಡೆಯುವ ಪಾತ್ರೆ, —ಮಡಕೆ : ಅಲ್ಲಿ ಗೋಪಿ ಕಡೆಗಂದಲೊಳ್ ಬೆಣ್ಣೆಗಳೆಯದುಱುಪಿಯೊಲೆಯೊಳುರ್ಕಿ ಯುಗುವ ಪಾಲ್ಗಂದಲನಿೞಿಪಿ ಬರ್ಪನಿತಱೊಳಾ ಕಡೆಗಂದಲಂ ಮಂತಿನೊಳ್ ಪೊಯ್ದೊಡೆದು (ಚಕವಂ. ೬೬-೧೮). [ಕಡೆ$_1$ + ಕಂದಲ್$_1$]

**ಕಡೆಗಂದಿ, ಕಡೆಗಂತಿ** (ನಾ). ೧. ಬೆಳೆದ ಕರುವುಳ್ಳ ಹಸು : "ಬಷ್ಕಯಣೀ, ಪ್ರೌಢವತ್ಸಾ – ಈ ೨ ಕಡೆಗಂದಿ" (ಹಲಾಯು. ೪೫-೧೧೫); ಕೆಲವು ಕಡೆಗಂದಿಗಳ ಬಾಲದ ಬಳಿಗೆ ಮೂಗಿಟ್ಟಡಿಗಡಿಗೆ ಮನ ನಲಿದು . . . ಹಿಂಡು ಹಿಂಡಿನಲಿ (ಕುವ್ಯಾವಿ. ೭-೫೧). ೨. ಕಡೆಯ ಕರುವನ್ನು ಈದ ಹಸು (ಕಿ). **ಕಡೆಗಂತಿ** : ೧. "ಚಿರಸೂತೆ, ವಷ್ಕಯಿಣೀ – ಕಡೆಗಂತಿಯ ಆಕಳು" (ನಾಚಿರಾ. ೯). [ಕಡೆ$_3$ + ಕಂದಿ$_1$]

**ಕಡೆಗಟ್ಟು$_1$** (ಕ್ರಿ). ಕೀಳುಮಾಡು ; ಅವಜ್ಞೆಮಾಡು: ಹುಟ್ಟೆ ಬ್ರಾಹ್ಮಣ ಜಾತಿಯನೆ ಕಡೆಗಟ್ಟೆ ಚಾತುರ್ವರ್ಣಗಳ ಸರಿಗಟ್ಟೆದಿನ್ನೀ ಜಾತಿ ಯಾವುದು ಲಿಂಗಧಾರಿಗಳೇ (ಬಜ್ಜಪು. ೬೧-೫೦). [ಕಡೆ$_3$ + ಕಟ್ಟು$_1$]

**ಕಡೆಗಟ್ಟು$_2$** (ಕ್ರಿ). (ಬಿರುದಿನ) ಕಡಗವನ್ನು ಕಟ್ಟು (?) : ರಂಭಾಸ್ತ್ರೀಯನೇಡಿಸಿ ಗೀತ ಕಡೆಗಟ್ಟೆ[ಪಾಠಾಂ. ಟು, ಟ್ಟು]ಕೊಂಬರು ಶುದ್ಧ ಚಾರಿಯಲಿ (ಮೋಹತ. ೧೮-೪೫). [ಕಡೆ$_5$ (< ಕಡೆಯು$_2$) + ಕಟ್ಟು$_1$]

**ಕಡೆಗಟ್ಟು$_3$** (ನಾ). ಕಡೆಯಲ್ಲಿ ಕಟ್ಟಿದ ಕಟ್ಟು (?) : ನಡುವೆ ಕಟ್ಟಿದ ಮೇಲ್ಕಟ್ಟಿನ ಹೊಕ್ಕುಳ ಹಲ್ಲೆಯ ತೊಂಗಲ್ಗಳಿಂ ಕದಾಯಿಯ ಕಡೆಗಟ್ಟಿನ ಪಚ್ಚೆಯ ಪಂಕ್ತಿಯ (ಕೇಶಿರ. ೧೦೦-೨೨). [ಕಡೆ$_3$ + ಕಟ್ಟು$_2$]

**ಕಡೆಗಡಿ** (ನಾ). ಕೊನೆಯ ಮೇರೆ; ಕಟ್ಟಕಡೆಯ ಎಲ್ಲೆ : ಅಮರರ್ ನೆರೆದುದು ತಮತಮಗೇಂ ಹೊಗಳ್ವೆಂ ಭೂಮಿಯೆ ಕಡೆಗಡಿಯೆನಲು (ವೀರೇಚ. ೨-೩೧). [ಕಡೆ$_3$ + ಗಡಿ$_1$]

**ಕಡೆಗಣ್, ಕಡೆಗಣ್ಣು** (ನಾ). ೧. ಕಣ್ಣಿನ ತುದಿ ; ಕಣ್ಣಿನ ಕೊನೆಯ ಭಾಗ; ಕಟಾಕ್ಷ: ಕಟಾಕ್ಷಂ ಕೇಕರಮಪಾಂಗಮೆನಿಕುಂ ಕಡೆಗಣ್" (ವಸ್ತುಕೋ. ೭೦-೧೬) ; ವನರುಹದಳನಯನೇ ನಿನ್ನನೆ ನೆನೆನೆನೆದಿರುಳೊ ಳೊಱಗದಿರೆ ಕಡೆಗಣ್ಗಳ್ ಮುನಿಸನಭಿನಯಿಪವೊಲ್ ಕೆಮ್ಮನೆ ರಕ್ತಾಂಭೋಜರುಚಿಯನಿಟ್ಟುಕೊಳ್ಗುಂ (ಕವಿರಾ. ೧-೯೩) ; ಮುಳಿಸಂ ಪುರುಡುಂಟುಮಾಡೆ ಜರ್ವಿದ ಕಡೆಗಣ್ಣ ಜರ್ಬುಗಳೊ (ಆದಿಪು. ೪-೧೦). ೨. ಕಡೆಗಣ್ಣಿನ ನೋಟ; ಓರೆನೋಟ: ನಾರಿಯರ ಕಡೆಗಣ್ಣ ಹೊಯ್ಲಿನ ಧಾರೆಗಳುಕದನಾವನಾತನೆ ಧೀರನಾತನೆ ದಿಟ್ಟ (ಕುವ್ಯಾಆ. ೧೩-೫೫). **ಕಡೆಗಣ್ಣು** : ೧. "ನೇತ್ರಯೋರಂತೌ – ಕಡೆಗಣ್ಣುಗಳು" (ನಾಚಿರಾ. ೧೨೨). ೨. ಕೌರವೇಂದ್ರಗೆ ಸಂಗರದ ಸಿರಿ ಸೊಗಸಿನಲಿ ಕಡೆಗಣ್ಣ ಸೂಸಿದಳು (ಕುವ್ಯಾದ್ರೋ. ೧೮-೩೭) ; ಕಡೆಗಣ್ಣ ಸವಿ ನುಡಿ ನಿಡುಹುಬ್ಬಿನ ಬೇಟ (ಕಂನವಿ. ೨೧-೨೫). ೩. (ಆಲಂ) ಅನಾದರ; ತಿರಸ್ಕಾರ : ಹೆಂಡತಿಯು ಕಡೆಗಣ್ಣಿನಿಂದ ನೋಡುವಳೀಗ (ಪುರಂದ. ೧-೨೬-೨). [ಕಡೆ$_3$ + ಕಣ್]

**ಕಡೆಗಣಿಕೆ** (ನಾ). (ಆಲಂ) ಕಡೆಗಣಿಸುವಿಕೆ; ಹೀನವಾಗಿ ಕಾಣುವಿಕೆ : ತಿರಸ್ಕಾರ; ಉಪೇಕ್ಷೆ; ಅವಮಾನ; ಕಡೆಗಣಿಕೆ" (Indignity. ಇಂಕನಿ). [ಕಡೆಗಣಿಸು$_1$ + –ಇಕೆ]

**ಕಡೆಗಣಿಸು$_1$** (ಕ್ರಿ). (ಆಲಂ) ಅಲಕ್ಷಿಸು; ತಿರಸ್ಕರಿಸು; ಅವಜ್ಞೆ ಮಾಡು : "ಕಡೆಗಣಿಸು – ಅವಜ್ಞಾಯಾಂ" (ಶಮಧಾ) ; ಅರಸನದಂ ಕಡೆಗಣಿಸೆ ಕೆಮ್ಮಗಿರ್ದಂ (ವಡ್ಡಾರಾ. ೧೬೯-೨೪) ; ಎಮ್ಮಂ ಕಡೆಗಣಿಸಿ ನಿಮಗೆ ನೆಗೞ್ವುದು ದೊರೆಯೇ (ಪಂಪಭಾ. ೧೧-೧೨೮) ; ಬಿಡುಗಣ್ಣರ ಗಡಣಂಗಳ ಕಡೆಗಣಿಸಿ ಒಡನೆ ನಾರಾಯಣನುರವ ಸೇರಿದ ಸಿರಿಮಡದಿಯಡಿಗೆ ವಂದಿಪೆನು (ಹದಿಬ. ೫-೨) ; ಅಮ್ಮನನ್ನು ಕಡೆಗಣಿಸಿ ಎಂದು ನಾನು ಹೇಳುವುದಿಲ್ಲ (ಪದ್ಮಸ. ೨೦೩). [ಕಡೆ$_3$ + ಗಣಿಸು]

**ಕಡೆಗಣಿಸು$_2$** 'ಕಡೆಗಾಣಿಸು' ನೋ.

**ಕಡೆಗಣ್ಚು** (ಕ್ರಿ). ೧. = ಕಡೆಗಣಿಸು$_1$ : "ಕಡೆಗಣ್ಚು (ಕಡೆಕಣ್ಚು) – ಅವಜ್ಞಾಯಾಂ (ತಿರಸ್ಕರಿಸು)" (ಶಮಧಾ) ; ನಿನಗಂತು ಸೀತೆಯೇ ಸೀತೆ ಕಡಂಗಿ ಕಾಯ್ದು ಕಡೆಗಣ್ಚಿದಳಪ್ಪೊಡೆ ಧಾತ್ರನಿಂ ತೊದಲ್ವಾತಿನೊಳೇನೊ ಪಾಂಡವರ ಕೆಯ್ಯೊಳೆ ನಿನ್ನ ನಿಸೇಕಮಾಗದೇ (ಪಂಪಭಾ. ೯-೪೯) ; ತಪೋವನವ ಕಾಣುತ್ತ ಕಡೆಗಣ್ಚಿ[ಪಾಠಾಂ. ಕಡೆಗಣಿಸಿ]ಪೋದೊರ್ಡೆ ಕೇಳ್ದು ಮುನಿ ಮುನಿವನಲ್ಲದೆ (ಹಚಕಾ. ೬-೫೯) ; ಉಪಮಾನವಸ್ತುವಿಪುರ್ದೆಂದು ಪಮೇಯವಸ್ತುವಂ ಕಡೆಗಣ್ಚಿ ಪೇೞ್ವುದುಂ ಪ್ರತೀಪಂ (ಅಪ್ರತಿ. ೪೦-೪) ; ಕಡೆಗಣ್ಚುವರ್ಕೆ ಬಾಗಿದರಂ (ಸೌನಂದ. ೮-೩೯). ೨. (ಆಲಂ) ಕೀಳಾಗು; ಪರಾಜಿತವಾಗು (?); "ಹಿಂಜರಿ" (ಶಾಪಮಂ. ಕೋಶ): ಪಾಯ್ವ ಪುಲಿ ಪೊಯ್ವ ಸಿಡಿಲ್ ಪಿಡಿವುಗ್ರ ಪನ್ನಗಂ ಸುಡುವ ದವಾಗ್ನಿ ಬಾಧೆ ಕಡೆಗಣ್ಚುವುದೆಂದೊಡೆ ತೇರಿದಾಳದೀ ಕಡುಗಲಿ ಗೊಂಕಭೂಪತಿಯ ಭವ್ಯತೆ ಕೇವಳಮೇ ನಿರೀಕ್ಷಿಸಲ್ (ಇಆ. XIV, ೧೫ ; 1123 ; ಶಾಪಮಂ. ೬೦-೩೩೯ ನೋ). [< ಕಡೆಗಾಣ್ + –ಚು]

**ಕಡೆಗಣ್ಣಿ** (ನಾ). ಕಡೆಯುವ ಹಗ್ಗ ; ಕಡೆಗೋಲಿಗೆ ಸುತ್ತಿ ಎಳೆಯುವ ಹಗ್ಗ : ಪೆಡೆ ಪಲವಪ್ಪ ವಾಸುಕಿ ಮಹೋರಗನಂ ಕಡೆಗಣ್ಣಿಮಾಡಿ ಪಾಲ್ಗಡಲನುಪಾಯದಿಂ ಕಡೆಯೆ (ಕಾವ್ಯಸಾ. ೯೩೮ ಶೂದ್ರಕ). [ಕಡೆ$_1$ + ಕಣ್ಣಿ]

**ಕಡೆಗಣ್ಣು** 'ಕಡೆಗಣ್' ನೋ.

**ಕಡೆಗಣ್ಣೇಱು** (ನಾ). ಕಣ್ಣಕೊನೆಯ ನೋಟದಿಂದಾದ ಗಾಯ; ಓರೆನೋಟದ ಆಕರ್ಷಣೆಯಿಂದಾದ ಬಾಧೆ; ಅಪಾಂಗಘಾತ: ನೀಱೆಯರ ನಿಡಿಯ ಕಡೆಗಣ್ಣೇಱಿಂದೆರ್ದೆ ಬಿರಿಯೆ ಬಱಿಕ ಮಲರಂಬುಗಳಿಂ ಮಿಱಿ ಮಿಳಿರ್ದಿಸದೆ ಮಸಕದೆ ತೋಱದೆ ಮಾಣ್ದಪನೆ ತನ್ನ ಸೊಬಗನನಂಗಂ (ಲೀಲಾವ. ೪-೪೯). [ಕಡೆಗಣ್ + ಏಱು$_4$]

**ಕಡೆಗಣ್ಬೆಳಗು** (ನಾ). ಕಡೆಗಣ್ಣಿನ ಹೊಳಪು ; ಕಟಾಕ್ಷದ ಕಾಂತಿ : ಬಳೆಗೈಯೆತ್ತಿ ಬಗಸೆಗಣ್ಗಳ ಕೋಮಲೆಯರ್ ಪಾಱಿಸುತೀಕ್ಷಿಪ ಕಡೆಗಣ್ಬೆಳಗೆಸೆದುವು (ಜಯಕಾ. ೧-೪೧). [ಕಡೆಗಣ್ + ಬೆಳಗು$_2$]

**ಕಡೆಗಳ$_1$** (ನಾ). ಕೊರಳ ತುದಿ ; ಗಂಟಲು : ಒಳಗೆ ಬೆಳೆದುದು ವೈರಶಿಖಿ ಕಡೆಗಳಕೆ ಹಾಯ್ದುದಾ ಜನನಿಜನಕರ ಬಲುನುಡಿಗಳಲಿ (ಕುವ್ಯಾಆ. ೬-೧೬). [ಕಡೆ$_3$ + ಗಳ$_2$ (= ಗಲ$_2$)]

**ಕಡೆಗಳ$_2$, ಕಡೆಕಳ** (ನಾ). ರಣರಂಗದ ಕೊನೆಯ ಭಾಗ: ಕರ್ಮವೆಂಬ ಅಂಕದೊಡನೆ ತೊಡರಿದೆ ಬಿನ್ನಪವನವಧಾರು ನಿಮ್ಮಾಳಿನ ಭಾಷೆಯ ಕಡೆಗಳಕ್ಕೆ ನೂಂಕುವೆ ಕೆಡಹುವೆನಂಕವ ಕರೆದರೋ ಎನಿಸಿದರೆ ನಿಮ್ಮಾಳಲ್ಲಾ (ಬಸವ. ೬೯೯). **ಕಡೆಕಳ** : ಮಾರ್ಪಡೆಯ ವಿರೋಧಿಯಂ ತವಿಸಿ ಮೊಱೆದರಂ ಮುಱಿದಾನ್ತುದಗ್ರರಂ ಕಡೆಕಳಕಿಕ್ಕಿ (ಎಕ. VIII, ಸಾಗರ. ೧೫-೩೪ ; 1218). [ಕಡೆ$_3$ + ಕಳ$_3$]

**ಕಡೆಗಾಣ್, ಕಡೆಗಾಣು** (ಕ್ರಿ). ೧. ಕೊನೆಯನ್ನು ಕಾಣು ; ಕೊನೆ ಮುಟ್ಟು ; ಪಾರಾಗು : ಕ್ಷಯಮಣಮಿಲ್ಲ ಕೇಳ್ದು ಕಡೆಗಂಡವನಾವನುಮಿಲ್ಲೆನಲ್ ತದಕ್ಷಯ ನಿಧಿ ತಾನೆ ತನ್ನನೊಸೆದೋಲಗಿಪಂಗೆ (ಪಂಪಭಾ. ೧-೫) ; ಕಡೆಯಿಲ್ಲದ ಸಂಸಾರದ ಕಡೆಗಾಣಲ್ ಬಗೆವೆಯಪ್ಪೊಡೆ (ಅಜಿಪು. ೨-೬೩) ; ಪುಳಕದ ಹಾದಿಗೆಂದು ಪಥವಪ್ಪುದು ಕಣ್ಗಳ ಕೋಡಿಗೆಂದು ನೀರ್ಗಳ ಕಡೆಗಾಣ್ಬುದು (ಪಂಪಾಶ. ೨) ; ಕ್ರಮವಱಿದೀತನ ನುತಿಸಲ್ಕೆ ನಿಗಮಾಗಮಶಾಸ್ತ್ರ ಕಡೆಗಂಡುದಿಲ್ಲ (ಮೋಹತ. ೨೯-೪೫). **ಕಡೆಗಾಣು** : ೧. ಮಂತ್ರವಿಚಾರದಲ್ಲಿ ಕಡೆಗಾಣುವುದು ಅಶಕ್ಯವಾದ್ದರಿಂದ (ಕೃಪಾಲು. ೭); ನಡೆಯಲಸದಳವಾದ ಕಡೆಗಾಣದಿಹ ಹಾದಿ ಹಿಡಿದು ನೀನಿರಲು (ಕಎಪು. ೨-೨). ೨. ಅಸ್ತಮಿಸು ; ಮುಳುಗು : ನಳಿನಾಪ್ತ ಕಡೆಗಂಡ ಬಳಿಕ ಪಶ್ಚಿಮನಭದಿ ಸಂಜೆಗೆಂಪಡರ್ದುದಾಗ (ನವಮೋ. ೧೧-೨೩).

೩. (ಆಲಂ) ಅಲಕ್ಷಿಸು; ತಿರಸ್ಕರಿಸು; ಉಪೇಕ್ಷಿಸು: ನೀನೆನ್ನಂ ಕಡೆಗಂಡ ರೀತಿಯುಳಲಂ ಪುಟ್ಟಿಪ್ಪುದೋ ನಾಥನೇ (ಮೈಸೂಮ. ೨–೬೦); ಪಾನಮೂರ್ತಿಯಾಗಿ ಕೃಷ್ಣಪ್ಪನವರು ಲಕ್ಷ್ಮಿಯನ್ನು ಕಡೆಗಂಡಿದ್ದರು (ಅನಾಮಿ. ೨). [ಕಡೆ$_3$ + ಕಾಣ್]

**ಕಡೆಗಾಣಿಕೆ** (ನಾ). (ಆಲಂ) ತಿರಸ್ಕಾರ; ಅಲಕ್ಷ್ಯ; ಉಪೇಕ್ಷೆ: ಕಾಣುತೀ ರಘುಪತಿಯ ಚಾಪಕೃಪಾಣ ಬಾಣವನೇಱುಳಿಯ ಕಡೆಗಾಣಿಕೆಯುಲೀಕ್ಷಿಸಿ ಮಹಾದೇವರಿಂದ ಕಂಡೆವಲ (ತೊರರಾ. ೪–೩–೧೯). [ಕಡೆಗಾಣ್ + -ಇಕೆ]

**ಕಡೆಗಾಣಿಸು, ಕಡೆಗಣಿಸು$_2$** (ಕ್ರಿ). ೧. ಕೊನೆಮುಟ್ಟಿಸು; ಪೂರ್ಣಗೊಳಿಸು; ನೆರವೇರಿಸು: ನಾನಾವರ್ಣದ ಹೇಮವ ಭಾವಿಸಿ ಒಂದಜಲ್ಲಿ ಕಡೆಗಾಣಿಸಿದ ಮತ್ತೆ ಭಾವನೆ ಬಣ್ಣ ಒಂದಲ್ಲದೆ ಮತ್ತೆ ಭಾವಿಸಲಿಲ್ಲವಾಗಿ (ನೋಳಮಾ. ೧–೧); ವೈದ್ಯನು ತನ್ನ ವಚನವನ್ನು ಬಹು ಜಾಗ್ರತೆಯಿಂದ ಕಡೆಗಾಣಿಸಿದನು (ಮುಂಬಯಿ. ೪–೬೮). ೨. (ಆಲಂ) ಅಲಕ್ಷಿಸು; ತಿರಸ್ಕರಿಸು; ಉಪೇಕ್ಷಿಸು: ನವನಾಗರಿಕತೆಯ ಹುಚ್ಚು ಹಿಡಿದು ನಾವು ಜೀವನ ಮೌಲ್ಯಗಳನ್ನು ಕಡೆಗಾಣಿಸಿದ್ದೇವೆ (ಧರ್ಮಸಾ. ೯೫); ಕೈ ಹಿಡಿದ ಹೆಂಡತಿಯನ್ನು ಕಡೆಗಾಣಿಸುವುದು ಧರ್ಮವಲ್ಲ (ಕಾವೇರಿ. ೪೧). **ಕಡೆಗಣಿಸು$_2$**: ೨. ಗಂಡನ ದೆಸೆವುತ್ತಮರಂ ಕಂಡಡೆ ಕಡೆ [ಪಾಠಾಂ. ಗಾ]ಣಿಸುವರ್ (ಸಮುಪ. ೫–೯೬). ೩. ಕೊನೆಮುಟ್ಟು; ಪೂರ್ಣಗೊಳ್ಳು: ಅವುದಱ ಕಾಣ್ಕೆಯಿಂ ತಣಿವು ಕಡೆಗಣಿಸದು ಅದು ಆಲೋಚನಕಂ (ನಾಚಿರಾ ೬). [ಕಡೆಗಾಣ್ + -ಇಸು$_3$]

**ಕಡೆಗಾಣು** 'ಕಡೆಗಾಣ್' ನೋ.

**ಕಡೆಗಾಯು** (ಕ್ರಿ). ಕೊನೆಯವರೆಗೆ ಕಾಪಾಡು, —ರಕ್ಷಿಸು: ಬಲಂಗಳಂ ತರಿದೆನ್ನ ಕಡೆಗಾಯಬೇಕೆಂದನು (ತುರಂಗ. ೪೬–೫). [ಕಡೆ$_3$ + ಕಾಯು$_1$ (< ಕಾ$_1$)]

**ಕಡೆಗಾಲ್** (ನಾ). ಕಾಲಿನ ತುದಿ; ತುದಿಗಾಲು: ಅಬ್ಬರಿಸಿ ಕಡೆಗಾಲಿಂದ ಹೊಯ್ದನು ಹಾಯ್ದು ಮುಂದಲೆಗೆ (ಕುವ್ಯಾದ್ರೋ. ೧೪–೧೦). [ಕಡೆ$_3$ + ಕಾಲ್$_1$]

**ಕಡೆಗಾಲ, ಕಡೆಕಾಲ** (ನಾ). ೧. ಕೊನೆಯ ಸಮಯ; ಅಂತ್ಯಕಾಲ: ಒಂದೇ ಸರಳಲಾವವನೆಚ್ಚಡಾಗಳೆ ನಿಮಗೆ ಕಡೆಗಾಲ [ಪಾಠಾಂ. ಕೇಡಹುದು, ಕಡೆಯಹುದು] (ಕುವ್ಯಾಕ. ೬–೮); ಪತಿಗೆ ಕೇಡಕ್ಕೆ ಕತ್ತಲೆಗೆ ಕಡೆಗಾಲಮಾಗದಿರ್ಕೆ (ಚಿಬಪು. ೯–೧೧); ಕಡೆಗಾಲದಿ ಕೈಮುಗಿಯಲು ದೈತ್ಯಂ ಎಂದನು ಹರಿ, "ಹೆಸರುಳಿಯಲಿ ನಿತ್ಯಂ" (ವಿಜದ. ೨೫–೧೩). ೨. ಪ್ರಳಯಕಾಲ: ಕಡೆಗಾಲ ಭೈರವನಂತೆ ಬಿಡೆಯವಿಲ್ಲದೆ ಬಂದ ಯಾದವರಾಯನ ಪಡೆಯನೆಲ್ಲವ ಸವರುವೆನು (ಮೋಹತ. ೩೬–೩೪). **ಕಡೆಕಾಲ**: ೧. ಕಡೆಕಾಲದಲ್ಲಿ ಅವಳ ಆ ಪುತ್ರರು ಬಂದು ಸುತ್ತೂ ಅವಳ ಕಿವಿಯಲ್ಲಿ ಘಟ್ಟಿಯಾಗಿ ಹರಿನಾಮ ಸ್ಮರಣೆಯನ್ನು ಮಾಡಿದರು (ಅರ್ಕಮಾ. ೬೪). [ಕಡೆ$_3$ + ಕಾಲ$_1$]

**ಕಡೆಗಿ** (ನಾ). ಒಂದು ಬಗೆಯ ಸಸ್ಯ: ಹಾಡಂಗ್, ಕಡೆಗಿ (ಸ್ಮೈಔಗ. ೩೫–೬೭೧). [?]

**ಕಡೆಗಿರ್ಚು** (ನಾ). ಕೊನೆಗಾಲದ ಬೆಂಕಿ; ಪ್ರಳಯಾಗ್ನಿ: ಕನ್ನೀರ್ಪೊನಲ್ ಕೋಡಿವರಿದು ಮುಖಶಿಖಿಯುರಿಯೆ ಜಗದ ಕಡೆಗಿರ್ಚವೋಲ್ (ಶ್ರೀರಾಮಾ. ೭೧೬–೨೧೦). [ಕಡೆ$_3$ + ಕಿರ್ಚು (< ಕಿಚ್ಚು)]

**ಕಡೆಗೀಲ್, ಕಡೆಗೀಲು** (ನಾ). (ಬಂಡಿಯ ಗಾಲಿ ಕಳಚದಂತೆ ಅಚ್ಚಿನ) ಕಡೆಯಲ್ಲಿ ಹಾಕುವ ಮೊಳೆ; ಕಡಾಣಿ: "ಅಣಿಃ, ಅಕ್ಷಃ, ಅಗ್ರಕೀಲಿಕಾ – ಈ ೩ ಕಡೆಗೀಲ್" (ಹಲಾಯು. ೭೪–೨೯೫). **ಕಡೆಗೀಲು**: ಕಡೆಗೀಲಿಲ್ಲದ ಬಂಡಿ ಹೊಡೆಗೆಡೆವುದು ಮಾಬುದೆ ಕಡೆಗೀಲು ಬಂಡಿಗಾಧಾರ (ದೇವಾವ. ೧–೨). [ಕಡೆ$_3$ + ಕೀಲ್]

**ಕಡೆಗೀಲು** 'ಕಡೆಗೀಲ್' ನೋ.

**ಕಡೆಗು** (ನಾ). ಒಂದು ಬಗೆಯ ತಿಂಡಿ: ಆ ದಿನ ಗಂಜಿ ಊಟ, ಅರಳ ಹಿಟ್ಟಿನ ಪಾನಕ, ಹೆಸರು ತಿರುವಿದ ಕಡೆಗು (ಪಠಾಕ್ಷಿ. ೧೯). [?]

**ಕಡೆಗುಂಡು** (ನಾ). ಕಡೆಯುವ ಗುಂಡು; ರುಬ್ಬುಗುಂಡು: ಬಳಿಯಲ್ಲಿ ಕಲ್ಲಿನ ಒರಳು ಮತ್ತು ಕಡೆಗುಂಡು (ಕಾನೂರು. ೩೬). [ಕಡೆ$_1$ + ಗುಂಡು$_2$]

**ಕಡೆಗೂಸು** (ನಾ). ಕೊನೆಯ ಮಗು; ಕಡೆಗೆ ಹುಟ್ಟಿದ ಮಗು (೬). [ಕಡೆ$_3$ + ಕೂಸು]

**ಕಡೆಗೆಡು** (ಕ್ರಿ). ಕೊನೆಯಿಲ್ಲದಾಗು; ಅನಂತವಾಗು; ಶಾಶ್ವತವಾಗು: ಕೆಡದ ಸಂಪದವದು ಕೇಡಿಲ್ಲದಾನಂದ ಕಡೆಗೆಟ್ಟ ಸೊಬಗಿನ ಬದುಕು (ಭರಚ. ೬೮–೯೩). [ಕಡೆ$_3$ + ಕೆಡು$_1$]

**ಕಡೆಗೆನ್ನೆ** (ನಾ). ಕೆನ್ನೆಯ ಪಕ್ಕ, —ಕೊನೆ; ತುದಿಗೆನ್ನೆ: ಬೆಮರಿಂ ಕಡೆಗೆನ್ನೆಯ ಜಾನಲಾದ ಬೊಟ್ಟು (ಶಮದ. ೧೬೨ ಪ್ರಯೋ). [ಕಡೆ$_3$ + ಕೆನ್ನೆ]

**ಕಡೆಗೆಯ್** (ಕ್ರಿ). ಕಡೆದು ರೂಪಿಸು; ಕೆತ್ತು: ಎಳೆಮಿಂಚಂ ಕಡೆಗೆಯ್ದು ಕಂಡರಿಸಿ ನೀಳ್ದಿಟ್ಟಂತೆ (ಉದ್ಭಟ. ೧೨–೧೧೯). [ಕಡೆ$_1$ + ಕೆಯ್$_1$]

**ಕಡೆಗೊಡೆಕಲ್** (ನಾ). ಒಂದು ಪ್ರದೇಶದ ಹೆಸರು (?): ಬಟ್ಟೆಗೆಱೆಯ ಏರಿ ಉಳಗಾಗೆ ಬನ್ದು ಕಡೆಗೊಡೆಕಲ್ಲುಣುಸೆಯು ಅನ್ತೆ ಬನ್ದು ಪೇರಲವದಾ ಬಕ್ಕಣವಲ್ಕಣೆಯ (ಎಕ. IX (8), ಬೆಂಗಳೂ. ೧೫೧–೪೦; 828). [?]

**ಕಡೆಗೊಳ್** (ಕ್ರಿ). ಕಡೆಯಿಸಿಕೊಳ್ಳು; ಮಥನಕ್ಕೆ ಗುರಿಯಾಗು; ಕ್ಷುಬ್ಧವಾಗು: ಕೇಳ್ವವರ ಪೇಳ್ವವರ ನೋಳ್ಪಾತುರದಿ ನುರ್ಗಿ ಪೋಪವರ ಬರ್ಪವರ ತುಮುಲಮೇರ್ದುದು ಕಡಲ್ ಕಡೆಗೊಂಡವೋಲ್ (ಶ್ರೀರಾಮಾ. ೮೬೫–೩೯೩). [ಕಡೆ$_1$ + ಕೊಳ್$_1$]

**ಕಡೆಗೊಳಿಸು** (ಕ್ರಿ). ೧. ಕೊನೆಗೊಳಿಸು; ಪರಿಹಾರ ಮಾಡು: ಬಂಧನವ ಕಡೆಗೊಳಿಸದೋದುಗಳಿಂದ ಫಲವೇನು (ಗಗತಾ. ೧೬–೫೩). ೨. (ಆಲಂ) ತಿರಸ್ಕರಿಸು; ಕಡೆಗಣಿಸು; ಬಿಡು: ನೀರ ಕಡೆಗೊಳಿಸುತ್ತೆ ಶುದ್ಧ ಕ್ಷೀರಮಂ ಸಂಗ್ರಹಿಪ ಹಂಸೆಯ (ಗಗತಾ. ೧೩–೪೫). [ಕಡೆ$_3$ + ಕೊಳ್$_1$ + -ಇಸು$_3$]

**ಕಡೆಗೊಳ್ಳಿ** (ನಾ). ಕೊನೆಗೆ ಉಳಿದಿರುವ ಕೊಳ್ಳಿ; ಸುಟ್ಟು ಉಳಿದಿರುವ ಸೌದೆಯ ತುಂಡು: ಅರಸನಾಶ್ಚರ್ಯಮಾನಸನಂತೆಗೆಯ್ವೆನೆಂದು ಕಡೆಗೊಳ್ಳಿಗಳುಮನಸ್ಥಿಶಕಲಮುಮಂ ಪುಂಜಿಸಿ (ವೃಷವಿ. ೩೯–೫೦ ವ). [ಕಡೆ$_3$ + ಕೊಳ್ಳಿ]

**ಕಡೆಗೊಳ್ಳು** (ಕ್ರಿ). ಅಂತ್ಯವಾಗು; ಮುಗಿ: ಕೈಕೊಂಡ ಕೆಲಸ ಕಡೆಗೊಂಡಿತು (ರೂಢಿ). [ಕಡೆ$_3$ + ಕೊಳ್ಳು$_1$ (< ಕೊಳ್$_1$)]

**ಕಡೆಗೋಡಿ** (ನಾ). ಕೆರೆ ಮೊದಲಾದುವುಗಳಲ್ಲಿ ಹೆಚ್ಚಿನ ನೀರನ್ನು ಹೊರಗೆ ಹರಿಯಬಿಡಲು ಮಾಡಿರುವ ಸ್ಥಳ; ಕೋಡಿ: "ಪರೀವಾಹಃ, ಜಳೋಚ್ಛ್ವಾಸಃ – ಈ ೨ ಕಡೆಗೋಡಿ" (ಹಲಾಯು. ೧೧೨–೫೫); ಕಡೆಗೋಡಿಗಳಿಂದ ಮೆಱೆವ ಬಲ್ಗೆಱೆಗಳಾ ಪೊಡವಿಯೊಳೆಸೆದಿರುತಿಹವು (ಕುರಾಸಾಂ. ೨–೩೪); ಕಂಗಳ ಘನಸರೋವರದಿಂದ ಕಡೆಗೋಡಿಯಲಿ ಜಲವಿಳಿದು (ನಿಭಾಗ. ೧–೧೦–೧೫). [ಕಡೆ$_3$ + ಕೋಡಿ$_1$]

**ಕಡೆಗೋಡಿಪೋಗಿಸು** 'ಕಡೆಗೋಡಿವೋಗಿಸು' ನೋ.

**ಕಡೆಗೋಡಿಪೋಗು** 'ಕಡೆಗೋಡಿವೋಗು' ನೋ.

**ಕಡೆಗೋಡಿವರಿ** (ಕ್ರಿ). ತುಂಬಿ ಕೋಡಿ ಬೀಳು ; ಹೊರಸೂಸಿ ಹರಿ : ಕಡೆಗೋಡಿವರಿದುವೆನಗಯ್ಯಾ ನಯನದ ಸುಖಜಲಂಗಳು(ಬಸವ. ೮೪೭); ಹೃದಯ ದಯಾಮೃತವಾಹಿನಿ ವದನದೆ ಕಡೆಗೋಡಿವರಿದುದು (ಜಗವಿ. ೧-೨೮) ; ಕಡೆಗೋಡಿವರಿವ ಕಾಂತಿಯ ಕಡಲೊಳಗಣ ಮಣಿವೊಲೆಸೆವ ಶಿಶುವಂ ಶಚಿ ಕಂಡು (ಅನಂಪು. ೫-೨೨) ; ಮಡದಿಯರ ಸುಯ್ಯ ಕಂಪುಂ ಮುಡಿಯಲರ್ಗಳ ನಱುಗಂಪುಂ ಗಡಣಿಸಿ ಕಡೆಗೋಡಿವರಿದುವೊಡ್ಡೋಲಗದೊಳ್ (ಕಬ್ಬಿಕಾ. ೧೨೯) ; ಕಡೆಗೋಡಿವರಿವನುರಾಗರಸದಲೆ ಮೂಡಿ ಮುಳುಗಿತು ತನು (ನಿಭಾಗ. ೩-೬-೩೬); ಘನ ನವಘೃತವ ತಂದೆಱೆದರು ಪತ್ರಭಾಜನ ತುಂಬಿ ಕಡೆಗೋಡಿವರಿಯೆ (ಮೋಹತ. ೩-೫೪).

[ಕಡೆಗೋಡಿ + ಪರಿ$_2$]

**ಕಡೆಗೋಡಿವರಿಯಿಸು** (ಕ್ರಿ). ಕೋಡಿ ಹರಿಸು; ತುಂಬಿ ಹೊರಸೂಸುವಂತೆ ಮಾಡು : ಕಣ್ಣ ತವಕಮಂ ಕಡೆಗೋಡಿವರಿಯಿಸುವ ರೂಪಿಂಗನುರೂಪಮಾಗಿ . . . ಮತ್ತಗಜದುತ್ತರದೇಸೆಯಂತೆ ಚಿತ್ತಮಂ ತೊತ್ತಳದುಳಿದು (ಅನಂಪು. ೧೧-೨೭ ವ). [ಕಡೆಗೋಡಿವರಿ + -ಇಸು$_3$]

**ಕಡೆಗೋಡಿವಿಡು** (ಕ್ರಿ). ತುಂಬಿ ಕೋಡಿ ಬೀಳುವಂತೆ ಮಾಡು ; ಹೊರಸೂಸಿ ಹರಿಸು: ಲಾವಣ್ಯರಸದ ಬರಿವೊನಲಂ ಕಟ್ಟಿಗಟ್ಟಿ ಕಡೆಗೋಡಿವಿಟ್ಟಂತಿರೆ (ವರ್ಧಪು. ೭-೯ ವ). [ಕಡೆಗೋಡಿ + ಬಿಡು$_1$]

**ಕಡೆಗೋಡಿವೋಗಿಸು, ಕಡೆಗೋಡಿಪೋಗಿಸು** (ಕ್ರಿ). = ಕಡೆಗೋಡಿವರಿಯಿಸು : ರಣೋರ್ವಿಯೆಂಬ ಪೂಗೊಳನನದೆಂದೊ ವೀರರಸಪೂರದೆ ನಾಂ ಕಡೆಗೋಡಿವೋ[ಪಾಠಾಂ. ಪೋ]ಗಿಪೆಂ (ಜಗವಿ. ೧೭-೮೮). **ಕಡೆಗೋಡಿಪೋಗಿಸು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕಡೆಗೋಡಿವೋಗು + -ಇಸು$_3$]

**ಕಡೆಗೋಡಿವೋಗು, ಕಡೆಗೋಡಿಪೋಗು** (ಕ್ರಿ). = ಕಡೆಗೋಡಿವಿಡು: ಕಡೆಗಣ್ಣಂ ಕಡೆಗೋಡಿವೋಗೆ ಪಿರಿದುಂ ಚಲ್ಲಂ (ಕಾವ್ಯಾವ. ೮೦೩). **ಕಡೆಗೋಡಿಪೋಗು** : ಬಿಡು ನಿಜಮನ್ಯು[ಬಾಷ್ಪಭರಮಂ] [ನುಡಿಗುಂದುತಮಿಂತು ದುಃಖಮಾಂತೊಡೆ] ಕಡೆಗೋಡಿಪೋಗದೆ ಪೊನಲ್ಪುಗು ತರ್ಪ ತಟಾಕ[ದಂದದಿಂದೊಡೆದಪುದಲ್ತೆ ನಿನ್ನ ಸುಮುಕೋಮಲಮುಪ್ಪೆರ್ದೆ . . .] (ಕಾದಂಉ. ೫೮೭). [ಕಡೆಗೋಡಿ + ಪೋಗು$_1$]

**ಕಡೆಗೋಡು** (ನಾ). = ಕಡೆಗೋಡಿ: ಕೆಱೆಯ ಬಡಗಣ ಕಡೆಗೋಡಿನ್ನೆದಿರಂ ಬೆಸನ್ತರದೊಳ್ ಒನ್ದು ಕಲ್ಲನ್ನಿಱಿಸಿ (ಎಕ. XII, ನಂಜನ. ೨೬೯-೯೫ ; 904) ; ನಾರಣಬ್ಬೆಯ ಕಟ್ಟಿಸಿದ ನೈರುತಿಭಾಗದ ಮುಟ್ಟದ ಕೆಱೆಯ ಎರಡು ಕಡೆಗೋಡಿನ ನಿಪ್ಪಱಿಯೆ ಮೇರೆಯಾಗಿ (ಎಕ. XII, ಶಿರಾ. ೩೯-೩೬ ; 920) ; ದೇವರ ಕೆಱೆಯ ಮೂಡಣ ಕಡೆಗೋಡಿನಲಿ ಪೆಗ್ಗಟ್ಟಿದ್ದ ಖಣ್ಡುಗ ಸಲ್ವುದು (ಎಕ. IX, ಮಾಗಡಿ. ೭೫-೨೦ ; 966). [ಕಡೆ$_3$ + ಕೋಡು$_7$]

**ಕಡೆಗೋಲ್, ಕಡೆಗೋಲು** (ನಾ). ಮೊಸರು ಮೊದಲಾದುವನ್ನು ಕಡೆಯುವ ಕೋಲು; ಮಂತುಗೋಲು; ಮಂತು : "ಮಂಥಾಃ . . . ಖಜಕಃ – ಈ ೫ ಕಡೆಗೋಲ್" (ಹಲಾಯು. ೪೬-೧೨೧) ; ಕನಕಪರ್ವತಮಂ ಕಡೆಗೋಲ ಮಾಡಿ (ಕಾವ್ಯಸಾ. ೯೩೮ ಶೂದ್ರಕ) ; ಕಡೆನೇಣಂಗೆ ಫಣೀಂದ್ರಂ ಕಡೆಗೋಲ್ ಕನಕಾದ್ರಿಯಾಗೆ (ಸಮುಪ. ೧೦-೯೯) ; ಕಡೆಗೋಲೆಂತು ತಿರಿಗುಮಂತಿರೆ ತಿರಿಗುಂ (ಜೀವಸಂ. ೭೯-೫) ; ಮಂದರಪರ್ವತ ವನಧಿಗೆ ಕಡೆಗೋಲಾಯ್ತು (ಕಂಸವಿ.೨-೨೮). **ಕಡೆಗೋಲು**: ನಿನ್ನ ಕರದಿ ಕಡೆಗೋಲು ನೇಣಂತೆ (ಪುರಂದ.೧-೧೧-೩); ಸಮ್ಯಕ್ತ್ವಗಿರಿಯ ಕಡೆಗೋಲನಿಟ್ಟು ಚಿದ್ಭಾವದ ನೇಣಿಂದ ಕಡೆವ ಪೊಲಿರ್ದುದಾ ಧ್ಯಾನ (ಭರಚ. ೭೪-೧೮); ಕಡಗ ಇದ್ದವಳು ಕಡೆಗೋಲು ಹಿಡಿಯಲಾರಳೆ ? (ಗಾದೆ). [ಕಡೆ$_1$ + ಕೋಲ್$_1$]

**ಕಡೆಗೋಲು** 'ಕಡೆಗೋಲ್' ನೋ.

**ಕಡೆಗೋಲ್ವಳ್ಳಿ** (ನಾ). ಕಡೆಗೋಲಿಗೆ ಸುತ್ತುವ ಬಳ್ಳಿ ; ಕಡೆಹಗ್ಗ : ಗೋಪಿ ಕೃಷ್ಣನನಂದು ಕೋಪದಿ ಬೈದು . . . ಕಡೆಗೋಲ್ವಳ್ಳಿಯಲಿ ಕೈಗಟ್ಟಿ ಕಂಬದಲಿ ಬಂಧಿಸಿದಳು (ಸಾಳ್ವಭಾ. ೧೧-೫೧).

[ಕಡೆಗೋಲ್ + ಬಳ್ಳಿ]

**ಕಡೆಚಲು** 'ಕಡಚಲು' ನೋ.

**ಕಡೆಚೋರಿ** (ಗು). ಕೊನೆಯ ; ತುದಿಯ : "... ಕಾಗಿನಾ ಸೀರೆಯೋಳು, ಕಡೆಚೋರಿ ಮನೆಯೋಳು, ಮಾವನ ಮಗಳೆ, ತಂದುಕೊಂಡೇನು ತೆರ ಹೇಳೆ" (ಹಳ್ಳಿಬಾ. ೫೨). [ಕಡೆ$_3$ + ಚೋರಿ$_1$]

**ಕಡೆತ** (ನಾ). ೧. ಕಡೆಯುವಿಕೆ ; ಮಥನ : ಭುವಿಯ ಬಂಧದಲ್ಲಿ ಸಿಲುಕಿ ಕೆಡೆದು ನಿಂತಿದೆ ಸಾಗರದಲೆ, ಅದರಾತ್ಮದ ಕಡೆತ ಕಂತಿದೆ (ಅಲಹೂ. ೧೧೦). ೨. ಮರ, ದಂತ, ಲೋಹ ಮೊದಲಾದ ವಸ್ತುಗಳನ್ನು ತಕ್ಕ ಆಕಾರಕ್ಕೆ ಅಳವಡಿಸಲು, ಚರಕಿಯಂತ್ರದ ಮೂಲಕ ಕಡೆಯುವುದು, —ರೂಪಿಸುವುದು : ಕೆತ್ತನೆಯ ಕೆಲಸ, ಕಡೆತಗಳನ್ನು ಮನುಷ್ಯ ಮಾತ್ರನಿಂದ ಸಾಧ್ಯವಲ್ಲದ ರೀತಿಯಲ್ಲಿ ರಚಿಸಿರುವರು (ಚೀನಾಬಾ. ೩೬). [ಕಡೆ$_1$ + -ತ$_2$]

**ಕಡೆತೇರು** (ಕ್ರಿ). ಕೊನೆಮುಟ್ಟು ; ಮುಕ್ತಾಯವಾಗು ; ದಾಟು (ಕ).

[ಕಡೆ$_3$ + ತೇರು$_1$(< ತೇರ್$_1$)]

**ಕಡೆದಾವು** (ನಾ). ಕಡೆಗೋಲಿನ ಹಗ್ಗ : ಬೆಣ್ಣೆಗಳವಿನೊಳ್ ಗೋಪಿ ಕಟ್ಟಿದ ಕಡೆದಾವು ಪೊಗಱ್ತವಡೆದುದು (ಚಿಕವಂ. ೧೨೮-೧೪).

[ಕಡೆ$_1$ + ದಾವು$_3$]

**ಕಡೆದೆಗೆ$_1$** (ಕ್ರಿ). ಕಡೆದು ತೆಗೆ: ನೊರೆವಾಲಿನೊಳಗೆ ಕಂಪಿಲ್ಲದಂತೆ ಅಡಗಿರುವ ತುಪ್ಪವನ್ನು ಕಡೆದೆಗೆಯುವ ಕಲೆ (ಬಾಳಬ. ೨೦).

[ಕಡೆ$_1$ + ತೆಗೆ$_1$]

**ಕಡೆದೆಗೆ$_2$** (ಕ್ರಿ). ೧. ಕೊನೆಯವರೆಗೂ ತೆಗೆ ; ಪೂರ್ತಿ ಎಳೆ : ತೂಗಿ ಕಡೆದೆಗೆದೆಚ್ಚು ಗರುಡಿಯ ಲಾಗುಕಾಜನ ರಥವ ಮುಱಿದನು (ಕುವ್ಯಾದ್ರೋ. ೬೦೩. ೨೮೦ ಪ೦). ೨. ಹೊರಗೆ ತೆಗೆ: ಜಲಂ ಮುಂತೆ ಕಡುಗಾಯ್ದುಕ್ಕುತಿರಲು ಜಲಚರನಿಚಯ ತಂತಮಗೆ ಸಿಡಿಮಿಡಿಯಗೊಂಬುತಿರೆ ಕಡೆದೆಗೆದು ನೆನೆದ ವಸ್ತ್ರವ ಬಿಡಿಸುತೇ (ನವಮೋ. ೨೫-೫೯).

[ಕಡೆ$_3$ + ತೆಗೆ$_1$]

**ಕಡೆದೆಗೆಸು** (ಕ್ರಿ). ಹೊರಗೆ ತೆಗೆಸು, —ತರಿಸು : ಮಣಿಮಯದ ವರ ಪುಷ್ಪಕವ ಮಾಡಿಸಿಹನೆನುತ . . . ಚಕ್ರೇಶಂಗೆ ತೋರೆ ಕಡೆದೆಗೆಸಿ ಶೃಂಗಾರಗೈಸಿ (ನವಮೋ. ೧೩-೮). [ಕಡೆದೆಗೆ$_2$ + -ಸು$_1$]

**ಕಡೆದೋಱು** (ಕ್ರಿ). ಕೊನೆಕಾಣು; ಮುಗಿ: ಕಡೆದೋಱುತ್ತಿರ್ಲ್ದನಿಪ್ಪಾಗಸದ ನಡುವೆ ವಾಯುತ್ರಯಂ ಸುತ್ತಿ (ಪಂರಾಮಾ. ೧-೪೨) ; ಕಡೆದೋಱದಿರ್ಪ ಗಗನದ ನಡುವಿರ್ಪುದು ನೂಲ ಸಿಜ್ಜೆಯಂ ನೇಱಿದ ಪೋಲ್ (ಪಾರ್ಶ್ವಪು. ೧-೯೮). [ಕಡೆ$_3$ + ತೋಱು$_1$ (< ತೋಱ್)]

**ಕಡೆನಾಡು** (ನಾ). ನಾಡಿನ ಕಡೆಯ ಪ್ರದೇಶ ; ಗಡಿನಾಡು : ಕಡೆನಾಡಲಿಂಗವ ನಡುನಾಡಿಗೆ ತಂದೆನೆಂಬ ಅಹಂಕಾರವ ಮುಂದುಗೊಂಡಿದ್ದೆಯಲ್ಲಾ (ಅವಚಂ. ೨೧೯-೯೯೨). [ಕಡೆ$_3$ + ನಾಡು]

**ಕಡೆನುಡಿ** (ನಾ). ಕೊನೆಯ ಮಾತು ; ಹಿನ್ನುಡಿ : "ಗ್ರಂಥದ ಉಪಸಂಹಾರ ಭಾಗ ; ಕಡೆನುಡಿ ; ಹಿನ್ನುಡಿ" (Epilogue. ಇಂಕನಿ).

[ಕಡೆ$_3$ + ನುಡಿ$_2$]

**ಕಡೆನೇಣ್** (ನಾ). = ಕಡೆದಾವು : ಕಡೆನೇಣಂಗೆ ಫಣೀಂದ್ರಂ ಕಡೆಗೋಲ್ ಕನಕಾದ್ರಿಯಾಗೆ (ಸಮುಪ. ೧೦-೯೯).

[ಕಡೆ$_1$ + ನೇಣ್]

**ಕಡೆನೋಟ** (ನಾ). ೧. ಕಣ್ಣಿನ ಕೊನೆಯಿಂದ ನೋಡುವಿಕೆ; ಓರೆ ನೋಟ; ಕುಡಿನೋಟ: ಎವೆಯಿಕ್ಕದ ಆವರ ಬೊಗಸೆಗಣ್ಣುಗಳ ಕಡೆನೋಟ ನೋಡಬೇಕು (ಮುಂಗಾಪು. ೬೨); ಕುಡಿಹುಬ್ಬು ಬಿಲ್ಲಾಗಿ ಕಡೆನೋಟ ಕಣೆಯಾಗೆ ಬಂದೆ ನೀ ಶಬರಿಯ ಹಾಗೆ (ಇಂಚಾಪ.೧೦೧–೯೧). ೨. ಕೊನೆಯಸಲ ನೋಡುವ ನೋಟ; ಅಂತ್ಯದರ್ಶನ: ಆವರ ಕಡೆನೋಟಕ್ಕೆ ಬಹಳ ಜನ ನೆರೆದಿದ್ದರು (ರೂಢಿ).
[ಕಡೆ$_3$ + ನೋಟ]

**ಕಡೆಪ**, ಕಡಪ, ಕಡಹ$_2$, ಕಡೆಹ (ನಾ). ೧. ಕಡೆಯುವಿಕೆ; ಕಡೆತ; ಮಥನ: ಕಡೆಪಮುಡುಗಿದಂಬುಧಿಯೆಂಬಂದದಿನಡವಿ ಮೂಗುವಟ್ಟ ದುರ್ದು ಬೇಟೆಯೊಳಾದ ಕಳಕಳಂ ಪಿಂಗುವಿನಂ (ಕಾದಂಪೂ. ೧೬೨). **ಕಡಪ**: ೨. ಕಂಡರಣೆ; ಕೆತ್ತನೆ: ಕಡಪದ ಕಂಡರಣೆಯ ಬೇಗಡ ವೆಸದ ಬೆಡಂಗು (ಮಹಾಸೇ. ೧–೮೫); ಕಡಪದ ಕಂಡರಣೆಯ ಬೇಗಡ ವೆಸೆದ ವಿಚಿತ್ರಮಪ್ಪ ಕೆಲಸದ ಗತಿಯಂ ನಡೆ ನೋಡಿ (ಬಾಧಪು. ೧–೧೫೭). **ಕಡಹ$_2$**: ೧. ಕಡಲ ಕಡಹದಲುರಿವ ಗರಳವನುಡುಗಿದವರಿವರೋ ಶಿವಾ (ಕುವ್ಯಾದ್ರೋ. ೧೮–೧೯); ಕಡಲ ಕಡಹದೊಳಿಡಿವ ತೆರೆಗಳೊ ಳೊಡೆದು ಮೂಡಿ (ತೊರರಾ. ೫೭೩ ಪರಿ); ಬಾಯೆನುತ ಕಡಹವನುಳಿದು ನಾರಾಯಣನು ನೆಗೆಹಿದನು ಕೊಟ್ಟನು ಪರಮರುಷಿಗಳಿಗೆ (ನಿಭಾಗ. ೮–೮–೭). ೨. ಕಡಹದ ಕಾಂತಿ ಕಂಡರಣೆಯೊಪ್ಪು ಮನಂಬುಗೆ (ಪುಣ್ಯಾಸ್ರ. ೮–೪). ೩. (ಆಲಂ) ತೊಳಲಾಟ; ಕಳವಳ. 'ಕಟ್ಟು ಕಡಹ' ಪರಾ. **ಕಡೆಹ**: ೧. ಬಲುಗಡಲ ಕಡೆಹದ ಗಿರಿಯನಬುಧಿಯ ತೆರೆಗಳೊದೆವಂತೆ (ಕುವ್ಯಾದ್ರೋ. ೧೬–೩). [ಕಡೆ$_1$ + –ಪ$_2$]

**ಕಡೆಪಟ್ಟು$_1$** (ನಾ). (ಇಸ್ಪೀಟಾಟದಲ್ಲಿ) ಕೊನೆಯ ಪಟ್ಟು: ಅವನು ಕಡೆಪಟ್ಟಿನಲ್ಲಿ ಗೆದ್ದುಬಿಟ್ಟನು (ರೂಢಿ). [ಕಡೆ$_3$ + ಪಟ್ಟು$_1$]

**ಕಡೆಪಟ್ಟು$_2$** (ಅ). ಕೊನೆಯದಾಗಿ; ಅಂತಿಮವಾಗಿ: ನೆಲವುತ್ತಿ ನೊಳ್ಪೊನಲು ಪುಗೆ ಪಾವು ಪೊಱಮಟ್ಟು ಪೆಡೆಗಳಂ ಕೊಡೆಗಳಂತೆತ್ತಿದುವು ಕಡೆಪಟ್ಟು (ಅನಂಪು. ೯–೧೬ ರಗಳೆ); ಕಡೆಪಟ್ಟು ದೀಕ್ಷೆಗೆ ನಡೆವರ ಪ್ರಾಜಿಯು ತಡೆಯನೊಯ್ಯನೆ ಕಳುಹುವನು (ಭರಚ. ೭೧–೬೫).
[ಕಡೆ$_3$ + ಪಟ್ಟು$_3$]

**ಕಡೆಪಡು$_1$** 'ಕಡೆವಡು' ನೋ.

**ಕಡೆಪಡು$_2$** (ಕ್ರಿ). ರಂಗವಲ್ಲಿ, ಹೂವುಗಳಿಂದ ಕೂಡಿರು,—ಅಲಂಕೃತ ವಾಗು: ತಳಿರುಯ್ಯಲಿಲ್ಲದ ಲತಾಗೃಹಮಿಲ್ಲದ ಗೊಟ್ಟಿಗಾಣರಿಲ್ಲದ ಕಡೆಪಟ್ಟ ಸೂಳೆವನೆಯಿಲ್ಲದವಿಲ್ಲವು ಸೂಳೆಗೇರಿಯೊಳ್ (ಮಲ್ಲಿಪು. ೨–೫೭).
[ಕಡೆ$_4$ + ಪಡು$_1$]

**ಕಡೆಪರಿ** (ಕ್ರಿ). ಕೊನೆಯಾಗು; ನಿಂತುಹೋಗು: ಇಂದುಕುಲ ಕಡೆ ಪರಿಯಿತಂದಿಗೆ (ಸಂಧಪ. ೧೩–೭೩). [ಕಡೆ$_3$ + ಪರಿ$_1$ (< ಪಱ್$_1$)]

**ಕಡೆಪೊಳ್ತು** (ನಾ). ಕಡೆಗಾಲ; ಅಂತ್ಯಕಾಲ: ಇದ್ದ ಹುಲ್ಲಿನ ಹೊರೆಯ ಬಿಟ್ಟಲ್ಲಿಗೈತಂದು ಬಿದ್ದೆಯೇಂ ಹುಲಿಬಾಯ್ಗೆ ಕಡೆಪೊಳ್ತಿ ದೆಂದು (ಕಾಲೂರ. ೮೩–೧೫೭). [ಕಡೆ$_3$ + ಪೊಳ್ತು (< ಪೊೞ್ತು)]

**ಕಡೆಬಾಳು** (ಕ್ರಿ). ಕೊನೆಯವರೆಗೆ ಬಾಳು; ಶಾಶ್ವತವಾಗಿರು: ಹೆಣ್ಣು ಮಣ್ಣು ಹಾಳಂತ ಬಣ್ಣ ಕಡೆಬಾಳದಂತ ಬಾಳುವೀ ಸುಳ್ಳಾಟಂತ (ನಾದಲೀ. ೫೬–೧೨); ಕಡೆಬಾಳುವ ಗೆಲವು ಬೇಕಾದವರು ಈ ಧರ್ಮವನ್ನು ಪಾಲಿಸ ಬೇಕು (ವಿಚಾಮಂ. ೨೪). [ಕಡೆ$_3$ + ಬಾಳು$_1$ (< ಬಾೞ್$_1$)]

**ಕಡೆಮಾಡಿಸು** (ಕ್ರಿ). ಅವಕಾಶಮಾಡಿಸು; ಎಡೆಮಾಡಿಸು: ನೋಡಿ ವಿಸ್ಮಿತನಾಗಿ ಪಾತ್ಸ್ಯಾವು ತಲೆದೂಗಿ ಕೂಡುಂಬಳಿಯಿತ್ತವರ್ಗೆ ಮೂಡಿ ದುಮ್ಮಳದೆ ಮೂಕೊಱೆಯ ವೀದಿಯ ಕಡೆಮಾಡಿಸಿಕೊಟ್ಟನಾ ಪುರದ (ಕಂನವಿ. ೧೩–೬೪). [ಕಡೆಮಾಡು + –ಇಸು$_3$]

**ಕಡೆಮಾಡು** (ಕ್ರಿ). ೧. (ಆಲಂ) ಕಡೆಗಣಿಸು; ನಿಕೃಷ್ಟವಾಗಿ ಕಾಣು: ಮಿಸುಪರಿದಳವ ಪಿಡಿದಿರ್ದ ಕಡ್ಡಿಯಿಂ ಕಡೆಮಾಡಿ ತೊಡೆವವಿದು ಚಿತ್ರವನೆ ಬರೆದರಿಳೆಯೊಡೆಯ ಸತ್ಯೇಂದ್ರಚೋಳನ ಪರಾಕ್ರಮದಂತೆ ಭಿತ್ತಿಯೊಳಗತಿ ಕುಶಲರು (ಭಾವಚಂ. ೫–೨೫). ೨. ಪಾರುಗಾಣಿಸು; ಕಡೆ ಹಾಯಿಸು: ಹೆಣ್ಣುಜನುಮಕ ಬಂದೆ, ಮಣ್ಣುಮಾಡಲಿಬ್ಯಾಡ ಹೆಣ್ಣುತನ ಶಿವನೆ ಜಗದಾಗ ಕೈಮುಗಿವೆ ಕಂದಯ್ನ ಕೊಟ್ಟು ಕಡಿ[ಡೆ]ಮಾಡು (ಜನಗೀ. ೫೯). ೩. ಅವಕಾಶಕೊಡು; ಎಡೆಗೊಡು. 'ಕಡೆಮಾಡಿಸು' ಪರಾ. [ಕಡೆ$_3$ + ಮಾಡು$_1$]

**ಕಡೆಮಿಣಿ** (ನಾ). (ಉಕ) ಕಡೆಯ ಹಗ್ಗ; ರಾಟೆಯ ನಡುವೆ ಇರದೆ ಪಕ್ಕಕ್ಕೆ ಜಾರಿ (ರಾಟೆಯ) ಕಿವಿಯ ಮತ್ತು ರಾಟೆಯ ನಡುವೆ ಸಿಕ್ಕಿಕೊಂಡ ಹಗ್ಗ. [ಕಡೆ$_3$ + ಮಿಣಿ (< ಮಿೞ್$_2$)]

**ಕಡೆಮುಕ್ಕು** (ನಾ). ಬೀಸುವ ಕಲ್ಲಿನಲ್ಲಿ ಕಡೆಯ ಸಲ ಹಾಕಿದ ಹಿಡಿ ಕಾಳು: ಮುಕ್ತಾಯಮಾಡಿ ಕಡೆಮುಕ್ಕು ಜಾಡಿಸಿ ಕಲ್ಲು ನಿಲ್ಲಿಸುವಳು (ಕನ್ನಜಾ. ೮೦). [ಕಡೆ$_3$ + ಮುಕ್ಕು$_2$]

**ಕಡೆಮುಗಿಲ್**, ಕಡೆಮುಗಿಲು (ನಾ). ೧. ಮುಗಿಲಿನ ಕೊನೆ; ದಿಗಂತ; ಕ್ಷಿತಿಜ: ಕಡೆಮುಗಿಲ್ವರಮೆನಿತೊ ಕಣ್ಣಾಲಿ ದೂರಂ (೧೪ವಿಂ. ೫೬–೫). **ಕಡೆಮುಗಿಲು**: ೨. ಕೊನೆಯ ಕಾಲದ ಮುಗಿಲು; ಪ್ರಳಯ ಮೇಘ: ಹೊಗೆಯ ಹಬ್ಬುಗೆ . . . ತೆತ್ತೀಸುಕೋಟಿಗಳ ಹಗಲಗಡಿತಕೆ ಹೊಕ್ಕುದೋ ಕಡೆಮುಗಿಲ ಕಾಣೆನು ದಿವವನೆತ್ತಣ ಗಗನ ಮಣಿ ನಕ್ಷತ್ರ ಚಂದ್ರಮರರಸ ಕೇಳು (ಕುವ್ಯಾಆ. ೨೦–೫೬).
[ಕಡೆ$_3$ + ಮುಗಿಲ್]

**ಕಡೆಮುಗಿಲು** 'ಕಡೆಮುಗಿಲ್' ನೋ.

**ಕಡೆಮುಟ್ಟ** (ಅ). ಕೊನೆಯ ವರೆಗೆ; ಕೊನೆಮುಟ್ಟುವ ವರೆಗೆ: ನುಡಿಯಲ್ಲಿ ಭಕ್ತಿಯನಾಡಿ ನಡೆಯಿಲ್ಲದಿದ್ದರೆ ಕಡೆಮುಟ್ಟ ಶಿವನೊಲಿವುದು ಹುಸಿ (ಅವಚಂ. ೨೧೬–೯೭೭); ಕಡೆಮುಟ್ಟ ತಣಿದುದು ಕಟಕ (ಭರಚ. ೪೦–೧೬); ಬಡತನ ಒಡೆತನ ಕಡೆತನಕುಳಿವಾವೇನ ಎದೆಹಿಂಗ್ಗ ಕಡೆಮುಟ್ಟ (ಗರಿ. ೧೦೩–೧೪).
[ಕಡೆ$_3$ + ಮುಟ್ಟ$_2$ (< ಮುಟ್ಟಂ)]

**ಕಡೆಮುಟ್ಟು** (ಕ್ರಿ). ಕೊನೆಯನ್ನು ಮುಟ್ಟು; ಪಾರಾಗು: ಎನಗಳ ವಡೆಯಿನ್ನಾ ಕಥನಮೆಂದ್ದು ಮದನಪತಾಕೆಗೆ ಕಡೆಮುಟ್ಟ ಚಿತ್ರಲತೆ ಪೇಱ್ವಾಗಳ್ (ಅನಂಪು. ೧೩–೪); ಜೀವನದ ಆಳದಲ್ಲಡಗಿದಾನಂದವನು ನಾನೊಮ್ಮೆ ಕಡೆಮುಟ್ಟ ನೋಡಲಿಹುದು (ನೆಲಮು. ೯೨).
[ಕಡೆ$_3$ + ಮುಟ್ಟು$_1$]

**ಕಡೆಮೂಲೆ** (ನಾ). ಕೊನೆಯ ಮೂಲೆ: ಗುಡಿಯ ಬೋದಿಗೆ ಕಲ್ಲು ನಡುರಂಗ ತಾ ಕಲ್ಲು ಕಡೆಮೂಲೆ ಸೆಜಗು ತಾ ಕಲ್ಲು ವರವನು ಕೊಡುವಾತ ಬೇಱೆ (ಸರ್ವಜ್ಞ. ೨೦೫). [ಕಡೆ$_3$ + ಮೂಲೆ]

**ಕಡೆಯ$_1$** 'ಕಡೆ$_4$' ನೋ.

**ಕಡೆಯ$_2$**, ಕಡೆ$_5$, ಖಡಿಯ, ಖಡೆ, ಖಡೆಯ (ನಾ). ೧. ಕಾಲ ಕಡಗ; ಕಾಲ ಬಳೆ; ನೂಪುರ: "ಸಿಂಜಿನಿ ಹಂಸಕಂ ಕಡೆಯ" (ಮಂಗರಾ. ೧೦೧–೩೦); ಬಿಂಕದಿಂ ಮೆಱೆವ ಕಡೆಯವನು ತುಱುಬಿ ನೊಳಿಕ್ಕು ಭೋಂಕೆಂಬ ಅಳಿಗಳಂ ಕಾಲೊಳಗೆ ಕಟ್ಟೆಂದು . . . ಮರುಳ್ಗೊಂಡಳೊಬ್ಬಳು (ಹಚಕಾ. ೪–೪೮); ಝಣಝಣರೆಂಬ ಕಾಲ ಕಡೆಯದ (ತ್ರಿಪುಸಾಂ. ೧೪೯); ಕಾಲ ಕಡೆಯ[ಪಾಠಾಂ. ಹ]ದ ಪೆಂಡೆಯಂಗಳ (ಬಸಪು. ೬೧–೨೭); ಮುಸುಕಿನ ಮೌಳಿ ಹಿಮ್ಮೆಟ್ಟಿದನು ಕಡೆಯುವ ತಿರುಗಿ ಕಿಱುದೊಡೆಗೆ (ಕುವ್ಯಾಆ. ೧೪–೧೨); ಚರಣದಲುಲಿವ ಕಡೆಯದ ಮಾಲಕುನಿ ನಾಡೆನಗೆ ಮಂಗಳವ (ಪ್ರಹ್ಲಾಚ. ೧–೬).

ಕಡ್ಯೆ: ೨. ಕೈಯ ಬಳೆ; ಕಂಕಣ; ಕಟಕ: ಆ ಸೇವಕರಿಗೆ ಸುವರ್ಣದ ಕಡೆಗಳನ್ನು ಇನಾಮಾಗಿ ಕೊಟ್ಟುಬಿಟ್ಟರು (ಮಂಜುಕ. ೨೦೯); ಭೃತ್ಯರು ಯಾವ ಕಾರ್ಯವನ್ನು ನಿರ್ವಾಹ ಮಾಡಿದಾಗ್ಯೂ ಕಡೆ ತೋಡೆ, ಷಾಲ್ ಜೋಡಿ ಮೊದಲಾದ ಇನಾಮುಗಳು ತಪ್ಪುತಿರಲಿಲ್ಲ (ಚಿತ್ರಪಾ. ೫ ಉಪೋದ್ಘಾತ). **ಖಡಿಯ**: ೧. ಬಿಗಿದುಡಿಗೆ ರತ್ನಾಭರಣ ಝುಗಝುಗಿಸೆ ಝಣಝಣರವದ ರಭಸದ ಖಡಿಯ ತತಿ ಮೆಚ್ಚೆಯೆ (ಕುವ್ಯಾಅ. ೨೨-೧೫). **ಖಡೆ**: ೨. ಉಂಗುರುಡುಗೂಣೆ ಖಡೆಯೊತ್ತಿ ಸತಿಯಳ ಮುರುವೊತ್ತಿ ನಿದ್ದಿ ಬಾರದ (ಗರತಿ. ೧೧೬); ದಂಡಿನ ಸರದಾರರು ಮಾಡಿದ ಸಾಹಸಕ್ಕೆ ದೊರೆಯು ಅವರಿಗೆ ಭಾರಿ ಮುತ್ತಿನ ಹಾರ, ಖಡೆ ತೋಡ ಶಾಲು ಮೊದಲಾದ ಖಿಲ್ಲತ್ತನ್ನು ತರಿಸಿಕೊಡಲು (ಚಿತ್ರಪಾ. ೯೫). **ಖಡೆಯ**: ೧. ಭುಜಕಂಠ ಕರ್ಣಾಭರಣ ಚರಣದ ಖಡೆಯದಲಿ ರಂಜಿಸಿದನಾ ಕರ್ಣ (ಕುವ್ಯಾಕ. ೮-೧೭); ಬಿರಿದಿನ ಖಡೆಯವೆಸೆಯೆ (ಕುರಾಸಾಂ. ೪೧-೯೧); ವಜ್ರ ರತ್ನಸ್ಫುರಿತ ಖಡೆಯಗಳಿಕ್ಕಿದನು ಕಾಲ್ಗಳಲಿ ದನುಜೇಂದ್ರ (ಅಂಬಿಕಾ. ೧೯-೨೩). [ಪ್ರಾ. ಕಡಯ, ಕಡಗ < ಸಂ. ಕಟಕ]

**ಕಡೆಯಂಗುಡು** (ಕ್ರಿ). ರಂಗವಲ್ಲಿ, ಹೂವು ಮೊದಲಾದುವುಗಳಿಂದ ಅಲಂಕಾರಮಾಡು: ಪಳಿಗುಡಿಗಳನೊಸೆದೆತ್ತುವ ಚಳೆಯಂಗೊಟ್ಟಂಗಣದೊಳ್ ಕಡೆಯಂಗುಡುವಾ . . . ಸಂತಸದ ಜನದ ಸಂದಣಿ ಮನೆಮನೆ ದಪ್ಪದೆ ಸಲೆ ಸೊಗಸಿದುದು (ಜಯಕಾ. ೮-೨).

[ಕಡೆಯ$_1$ (< ಕಡೆ$_4$) + ಕುಡು$_1$ (< ಕೊಡು)]

**ಕಡೆಯಾಣಿ, ಕಡಿಯಾಣಿ** (ನಾ). ಚೊಕ್ಕ ಚಿನ್ನ; ಅಪರಂಜಿ: ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲುಹು (ಬಸವ. ೨೫೧); ಕಡೆಯಾಣಿಗುಂಟೆ ಒರೆಗಲ್ಲು (ಅವಚಂ. ೨೬೬-೧೨೧೯); ಅಸದಳದಿಂಪು ಕಂಪು ಕಡೆಯಾಣಿಯ ಪೊನ್ನ ರಸಕ್ಕೆ ಕೂಡಿದಂತೆಸೆವುದು (ಜಗವಿ. ೧೭-೮೨); ಕಡೆಯಾಣಿಯ ಪೊನ್ನ ಘಟ್ಟಿಯಿಂ ಕಡೆದರೊ ಬಾಲಭಾನುಕರದಿಂ ಕರುವಿಟ್ಟರೊ (ಅನಂಪು. ೬-೧೯); ಒರೆಗಲ್ಲೊಳು ಕಡೆಯಾಣಿಯ ಚಿನ್ನವನೊರೆದ ರೇಖೆಯು ತೆಜನಾಗಿ (ಶ್ರೀಪಾಲ. ೧೧-೭೮); ಅಡಗಿರ್ದ ಬಣ್ಣವಾ ಕೀಳು ಚಿನ್ನಕೆ ಪೊಜಮಡಲದು ಕಡೆಯಾಣಿಯಾಯ್ತು (ಭರಚ. ೬೮-೨೭). **ಕಡಿಯಾಣಿ**: ಕಂಗೊಳಿಸುತಾ ಸುಗರ್ಭದ ಚಿಹ್ನೆ ಕಡಿಯಾಣಿ ಚಿನ್ನದಂತೆ (ಪರಶು. ೩-೪೫). 'ನೇರಾಣಿ' ಪರಾ. [ದೇ. ? / ತೆಲು. ಕಡಾನಿ]

**ಕಡೆಯಿಕ್ಕು** (ಕ್ರಿ). ರಂಗವಲ್ಲಿ, ಹೂವು ಮೊದಲಾದುವುಗಳಿಂದ ಅಲಂಕರಿಸು; ರಂಗೋಲಿ ಹಾಕು: ಕಡೆಯಿಕ್ಕಿದ ಬಿಡುಮುತ್ತಿನ ಪೊಡರ್ದುಣ್ಮುವ ಬೆಳಗು ಪೊಳೆವ ದುಗುಲದ ಪಸೆಯೊಳ್ (ಆದಿಪು. ೮-೧೬); ಕಡೆಯಿಕ್ಕಿದ ಮುತ್ತಿನ ಬೆಳ್ಪು (ಜಗವಿ ೧೦-೯೪); ಕತ್ತುರಿಯ ಕೆಸಱಿನಲಿ ಸಾರಿಸಿ ಮುತ್ತಿನಲಿ ಕಡೆಯಿಕ್ಕಿ (ಸಾಳ್ವಭಾ. ೨೦-೩೭); ಗುಡಿಗಟ್ಟುವ ಕಡೆಯಿಕ್ಕುವ ಸೊಡರ್ವೆಳಗುವ ತೋರಣಂದಗುಳ್ಕುವ ಚಳೆಯಂಗುಡುವ (ರಸರ. ೪-೧೮೭). [ಕಡೆ$_4$ + ಇಕ್ಕು]

**ಕಡೆಯಿಸು** (ಕ್ರಿ). ೧. ಮೊಸರು ಮೊದಲಾದುವುಗಳನ್ನು ಕಡೆಯುವಂತೆ ಮಾಡು, —ಮಥಿಸು: ಕಡೆಯಿಸಿದಂ ಸುರರಿನಸುರರಿಂ ಪಾಲ್ಗಡಲಂ (ಶಮದ. ೨೩೧ ಪ್ರಯೋ). ೨. (ಮೂರ್ತಿ ಮೊದಲಾದುವನ್ನು) ಕಡೆದು ರೂಪಿಸುವಂತೆ ಮಾಡು; ಕೆತ್ತಿಸು: ತನ್ನ ಗುರುಗಳ ದೂಪನೆ ಕರುವಿಡಿಸುವ ಕಡೆಯಿಸುವ ಕಂಡರಿಸುವ ಬೆಸನೆ ಬಸಮಾಗಿ (ಅರ್ಹನೇ. ೨-೫೪ವ); ಚಾವುಂಡರಾಯನು ಶ್ರವಣಬೆಳ್ಗೊಳದಲ್ಲಿ ಕುಕ್ಕುಟೇಶ್ವರ ಜಿನಮೂರ್ತಿಯನ್ನು (ಎಂದರೆ ಗೊಮ್ಮಟೇಶ್ವರ ವಿಗ್ರಹವನ್ನು) ಕಡೆಯಿಸಿ ಕೆಲವು ವರ್ಷ ಮಾತ್ರವಾಗಿತ್ತು (ಸಮಾಲೋ. ೧೪೮).

[ಕಡೆ$_1$ + - ಇಸು$_3$]

**ಕಡೆಯುಡಿ** (ನಾ). ಕೊನೆಯ ತುಂಡು; ಕಡೆಯ ಭಾಗ: ಬಡಿವಲ್ಲಿ ನಿಡಿಯ ಪುಳ್ಳಿಯ ಕಡೆಯುಡಿ ಸಿಱ್ಪಿಂದು ಪಾಱಿ ಕೊಂಚೆಯ ಕೊರಲಂ ನಡುವುದು (ಧರ್ಮಾಮೃ. ೧೨-೨೨೩). [ಕಡೆ$_3$ + ಉಡಿ$_6$]

**ಕಡೆಯೆಯ್ದಿಸು** (ಕ್ರಿ). ಕೊನೆಗಾಣಿಸು; ಪಾರುಗಾಣಿಸು; ಮುಗಿಸು: ಚರಮದೊಳ್ ಪರಮ ಶುಕ್ಲಧ್ಯಾನಮುಂ[ಮಂ] ಕಡೆಯೆಯ್ದಿಸಿ (ಅಜಿಪು. ೮-೨೮ವ); ಇದೇಕೆ ತಡೆದಿರೆನೆ ಪೀಠಮರ್ದಕನುಜ್ಜುಗಿಸಿದ ಕಜ್ಜಮಂ ಕಡೆಯೆಯ್ದಿಸಲೆಂಬುದುಂ (ಚಂದ್ರಪು. ೮-೭೦ವ). [ಕಡೆಯೆಯ್ದು + - ಇಸು$_3$]

**ಕಡೆಯೆಯ್ದು** (ಕ್ರಿ). ಕೊನೆಯನ್ನು ಮುಟ್ಟು; ಪಾರುಗಾಣು; ಮುಗಿ: ಇರ್ವರುಂ ಪೂಣ್ದಲಂಪಿನೊಳುಂಡರ್ ಕಡೆಯೆಯ್ದೆ ಷೋಡಶ ನದೀನಾಥೋಪಮಾಯುಷ್ಯಮಂ (ಆದಿಪು. ೩-೭೬); ಕಡೆಯೆಯ್ದತ್ತೆನಗಿಂದು ರಾಜ್ಯವಿಭವಂ (ಅಜಿಪು. ೧೦-೫೪); ಕಡೆಯಿಲ್ಲದ ಸಂಸಾರದ ಕಡೆಯಂ ಕಡೆಯೆಯ್ದೆ ಕಟ್ಟೆ ತಡೆಮಾಟ್ಪ ಗುಣಂ (ಸುಕುಮಾ. ೧೧-೮೧).

[ಕಡೆ$_3$ + ಎಯ್ದು]

**ಕಡೆಯೊದೆ** (ಕ್ರಿ). ಕಡೆಯಾಗುವಂತೆ ಒದೆ; ದೂರಕ್ಕೆ ಒದೆ: ಕಾಲಪಾಶವ ಕಡೆಯೊದೆವಡಾರಾಧಿಸುವುದವಿರತ ಮಹೀಸುರರ (ನಿಭಾಗ. ೩-೩-೧೩). [ಕಡೆ$_3$ + ಒದೆ$_1$]

**ಕಡೆವಗಲ್** (ನಾ). ಹಗಲಿನ ಕಡೆಯ ಭಾಗ; ಬೈಗು; ಸಂಜೆ; ಸಾಯಂಕಾಲ: "ಕಡೆವಗಲೆನಲ್ ತ್ರಿಸಂಧ್ಯಾಕಾಲಂ" (ಕವಿಕಂ. ೧೨೦); ಕಡೆವಗಲೊಳ್ ನಿಜಾಂಗಮತಿರಕ್ತದೊಳೊಪ್ಪಿರೆ . . . ಇನನೆಯ್ದಿದನಸ್ತಶೈಲಮಂ (ದಶಕು. ೨-೩೯); ವೃಷಭಯೋಗಿಗೆ ಘಾತಿಕರ್ಮವಾ ಕಡೆವಗಲೊಳು ಕೆಟ್ಟುದೊಡನೆ (ಭರಚ. ೭೮-೩). [ಕಡೆ$_3$ + ಪಗಲ್]

**ಕಡೆವಡು, ಕಡೆಪಡು$_1$** (ಕ್ರಿ). ೧. ಕೊನೆಯ ಸ್ಥಾನವನ್ನು ಹೊಂದು; ಕಡೆಯಲ್ಲಿ ಬರು: ಕಡೆವಟ್ಟ ಬಿಣ್ಪನೊಳ್ ಬರೆ ಲಘುವೊಂದೆ ಪಿಂತೆ ಲಘು ಮುಂತೆ ಸಮಂ (ಛಂದೋಂಬು. ೫-೩). ೨. (ಅಲಂ) ಕೀಳಾಗು; ನಿಷ್ಫಲವಾಗು: ರಕ್ಕಸನಂಬುಗಳ್ ಕಡೆವಟ್ಟು ಕೆಡೆದುವು (ಮೋಹತ. ೩೫-೩೭). **ಕಡೆಪಡು$_1$**: ೧. ಜಿನಸಮಯದಲ್ಲಿ ಕಡೆಪಟ್ಟನು ಮೆನಿಸೆಡಱಡಸಿದಲ್ಲಿಯುಂ ತಿರಿದಪನೇ (ಸಮಪ. ೬-೧೩); ೨. ಕರಂ ಕೆಟ್ಟೊಡೆದ ಸರದವಂ ಕಡೆಪಟ್ಟು[ಪಾಠಾಂ. ಬಗೆಗೆಟ್ಟು] ಮನಂಗೆಟ್ಟು ನಾಡುನಾಡಂ ತಿರಿಗುಂ (ಕಾವ್ಯಾವ. ೨೧೦); ನೆಗಟ್ದಳಕಾನಗರೀಶಂ ಬರ್ಕುಮೆ ತನ್ನಗರದಿ ಕಡೆಪಟ್ಟ ಪರದರೊರೆಗಂ ದೊರೆಗಂ (ಜಗವಿ. ೯-೧೦೬). [ಕಡೆ$_3$ + ಪಡು$_1$]

**ಕಡೆವರೆಯ** (ನಾ). ಹರೆಯ ಕೊನೆಗೊಂಡ ವಯಸ್ಸು: ಒರೆದಳ್ ಪದಿರಿಂದಂ ಕಡೆವರೆಯದ ಬರ್ದೊದವಿದ ಕಾಮಿನಿ (ಉದ್ಭದೇ. ೪-೩೯).

[ಕಡೆ$_3$ + ಪರೆಯ (< ಪರಯ)]

**ಕಡೆವಲಿ** (ನಾ). ರಂಗವಲ್ಲಿ, ಹೂವು ಮೊದಲಾದುವುಗಳ ಅಲಂಕಾರ: ಶೋಧಿಸಿದ ಕಾರಣೆಯ ಕಡೆವಲಿ[ಪಾಠಾಂ. ಕಡವಲಿ, ಕಡವರಿ, ಕಡಿವಲಿ]ಗೈದ ಪೊಸಮುತ್ತುಗಳ ಪಡಿಸಣಗೈದ ಧೂಪದ ಧೂಮಪವನನಲೆಸೆದುದಾ ನಗರ (ತೊರರಾ. ೨-೧-೧೩).

[ಕಡೆ$_4$ + ಬಲಿ$_5$]

**ಕಡೆವಲ್ಲು** (ನಾ). ಕೊನೆಯ ಹಲ್ಲು; ದವಡೆ ಹಲ್ಲು: ಕಡೆವಲ್ಲುಂ ನಾಲ್ಕಕ್ಕುಂ ಪಡೆಗುಂ ತಾಂ ಪಾರಿಕ್ವಮೆಂಬಾ ಪೆಸರಂ (ಅಶ್ವಶಾ. ೯-೮).

[ಕಡೆ$_3$ + ಪಲ್ಲು (< ಪಲ್)]

**ಕಡೆವಳ್ಳಿ** (ನಾ). ಕೀಳು ಹಳ್ಳಿ; ಕುಗ್ರಾಮ: ಅಲ್ಪಾಶ್ರಯಂ ಕಿಱುದೋಟಂ ಕಡೆವಳ್ಳಿ ದೀಳುಮನೆ ಮುಂಗೆಯ್ವಾರ್ಭಟಂ . . . ಬಱಿಗೈಯಂ ಸುಱಿದಂತೆ (ಸೋಮೇಶ. ೧೭). [ಕಡೆ$_3$ + ಪಳ್ಳಿ$_1$]

**ಕಡೆವಾಯ್**$_1$, ಕಡೆಹಾಯು (ಕ್ರಿ). ಕೊನೆಯನ್ನು ಮುಟ್ಟು; ದಾಟು; ಪಾರಾಗು : ಪಿಡಿಯಲೊಡರ್ಚೆ ತಡೆದು ತೊಡಂಕಿ ತುಡುಂಕಿದ ಗೋವನಂ ಕೊಡಪಿ ಕೆಡಪಿ ಕಡೆವಾಯ್ದು ನಡುವೀದಿಗೆ ಕಡುವೇಗದಿಂ ಪರಿತಂದು (ರಾಜಶೇ. ೬-೧೧ ವ). **ಕಡೆಹಾಯು** : ಕರ್ಮದ ಕಡಲಿಂದ ಕಡೆಹಾಯುವರು (ಪುರಂದ. ೧-೧೪೫-೩); ನಿನ್ನ ಸೊಮ್ಮು ನಿನಗೊಪ್ಪಿಸಿ ಕಡೆಹಾಯುವ ಕ್ಷಣವ ತಾ ಬೇಗ ಪ್ರಭುವೇ (ಅಂತರಾ. ೨).

[ಕಡೆ$_3$ + ಪಾಯ್$_1$]

**ಕಡೆವಾಯ್**$_2$, ಕಡವಾಯ್, ಕಡೆವಾಯಿ (ನಾ). ಬಾಯಿಯ ಕಡೆ, —ತುದಿ; ಕಟಬಾಯಿ : "ಸೃಕ್ವವೆಂಬುದು ಕಡೆವಾಯ್" (ಹಲಾಯು. ೮೬-೩೬೬); ಕಡೆವಾಯ ಲೋಳೆಯೊಳ್ ಪೊರೆದುಗುತರ್ಪ ಪಚ್ಚಪಸಿಯಚ್ಚಗಜುಂಕೆ (ಕಾದಂಪೂ. ೬೫೧); ಹಸ್ತಾಗ್ರಮಂ ಕಡೆವಾಯೊಳ್ ಸೆಱೆಯಿಟ್ಟು . . . ಇರ್ದುದೊಂದತಿ ಮದೇಭಂ (ಗಿರಿಕ. ೯-೨೪); ಚಾರಿವರಿದು ಚಂದ್ರಸುರಧೇನು ಕೂರ್ತು ಚಕೋರವತ್ಸಗೆ ಮೊಲೆಗುಡಲು ಪೂರಿಸಿ ಕಡೆವಾಯೊಳೞಿವ ತಣ್ಬಾಲೆನೆ ಸೋರಿತು ಬೆಳ್ದಿಂಗಳೞೆಗೆ (ಮೋಹತ. ೧೬-೫೫). **ಕಡವಾಯ್** : ಕಡವಾಯಂ ಬಿರ್ಚೆ ಬೆನ್ನಂ ಕುಸಿದು ನೆಗಪಿ ವಾಳಾಗ್ರಮಂ (ಅನಂಪು. ೧೨-೬೨). **ಕಡೆವಾಯಿ** : "ತುಟಿಯ ಪ್ರಾಂತ್ಯಗಳು ಶ್ರಕ್ಷಣಿಯೆನಿಸುಗು ಕಡೆವಾಯಿ" (ನಾಚರಾ. ೧೨೨). 'ಕಟವಾಯ್' ಪರಾ.

[ಕಡೆ$_3$ + ಬಾಯ್. / ತಮಿ. ಕಡೈವಾಯ್ ; ಮಲ. ಕಡವಾಯಿ]

**ಕಡೆವಾಯಿ** 'ಕಡೆವಾಯ್$_2$' ನೋ.

**ಕಡೆವೀಡು** (ನಾ). ಸೈನ್ಯದ ಕೊನೆಯ ಬೀಡು, —ಬಿಡಾರ : ಆಳು ನೆರೆದಿರೆ ನಾಲ್ಕು ದಿಕ್ಕಿನ ಮೂಲೆ ನೆಱೆಯದು ಮುನ್ನವೀಗಳು ಪಾಳೆಯದ ಕಡೆವೀಡಿಗೈದದು ಶಿವಶಿವಾ (ಕುವ್ಯಾಕ. ೨-೩); ಬೇಡುವೆನು ಹರಿದರುಶನವ ಕಡೆವೀಡಿನೊಳಗೆನ್ನಂತ್ಯಕಾಲಕೆ (ಸಂಭಪ. ೧೯-೧೨); ಈಗಳ್ ಅಶ್ವತ್ಥಾಮನ್ ಇರ್ಪ ಕಡೆವೀಡೆಯ್ದು (ಅಶ್ವತ್ಥಾ. ೧-೭).

[ಕಡೆ$_3$ + ಬೀಡು$_2$]

**ಕಡೆವುಟ್ಟು** (ಕ್ರಿ). ಕೊನೆಯಲ್ಲಿ ಹುಟ್ಟು; ಕೊನೆಯ ಮಗುವಾಗು : ಅನವದ್ಯಚರಿತನೆಂದಱಿದನಿಬರ ಕಡೆವುಟ್ಟಿದಾಕೆ ಹನುಮಂಗಸ್ಮಜ್ಜನಕಂ ದಧಿಮುಖ ನಗರೀಜನಪತಿ ಗಂಧರ್ವನೆಂಬನಂಬರಗಮನಂ (ಪಂರಾಮಾ. ೧೧-೬೨). [ಕಡೆ$_3$ + ಪುಟ್ಟು$_1$]

**ಕಡೆವೆಳಗು** (ನಾ). (ರಾತ್ರಿಯ)ಕೊನೆಯಲ್ಲಿ ಬರುವ ಬೆಳಕು; ಸಂಧ್ಯಾಕಾಲದ ಬೆಳಕು : ಕೞಿದರಿಬ್ಬರು ಕತ್ತಲೆಯ ಕಡೆ[ಪಾಠಾಂ. ಡು]ವೆಳಗಿನಲಿ ಕಾಮಾತುರರದ ಕಳವಳಿಗನಾ ಮಾರೀಚಗೆಂದನು ಮಧುರ ವಚನದಲಿ (ತೊರರಾ. ೩-೮-೧೨). 'ಕಡೆವಗಲ್' ಪರಾ.

[ಕಡೆ$_3$ + ಬೆಳಗು$_2$]

**ಕಡೆವೊನ್** (ನಾ). ಮೆರುಗಿಟ್ಟ ಚಿನ್ನ; ಅಪರಂಜಿ : ಪತಿಯ ನಿಡಿಯ ಕಯ್ಯಾವರೆಗಾದನ್ನೀಡಿದಳಾ ಶಚಿ ಕಡೆವೊನ್ನೆಸಕಮನಿಳಿಸಿ ಮಿಸುಪ ಜಿನಬಾಳಕನಂ (ಶಾಂತೀಶ್ವ. ೧೪-೬೩). [ಕಡೆ$_0$ + ಪೊನ್]

**ಕಡೆವೊಳಲು** (ನಾ). ಗಡಿಯಲ್ಲಿರುವ ಊರು; ಸೀಮೆಯ ಕೊನೆಯಲ್ಲಿರುವ ಊರು : ಸುವಸ್ತು ವಾಹನವ ಸಡಗರದಿ ತೆಗೆಕೊಂಡು ವಹಿಲದಿ ಮಡದಿರಿಗಿವರ ಮೇಘುಕೂಟದ ಕಡೆವೊಳಲ ಹೊಕ್ಕಿರ್ದು ದೂದಟ್ಟಿದನು ಪುರವರ್ಗೆ (ಸಾಳ್ವಭಾ. ೧೭-೫೦).

[ಕಡೆ$_3$ + ಪೊಳಲು (< ಪೊಟಿಲ್)]

**ಕಡೆಸರಿ** (ಕ್ರಿ). ಕಡೆಗೆ ಸರಿ; ಪಕ್ಕಕ್ಕೆ ಹೋಗು; ಓರೆಯಾಗು : ಕಣ್ಬೊಲಂದಪ್ಪಿ ಕಡೆಸರಿದು ತನ್ನನಜಿಸಿ ತೊಳಲ್ವ ಕಾದಲನಂ ಕಾದಲ್ಮೆಯಿಂ ಕಾಡಲೆಳಸಿ (ಶಬಶಂ. ೩-೩೫ ವ). [ಕಡೆ$_3$ + ಸರಿ$_1$]

**ಕಡೆಸಲ್** (ಕ್ರಿ). ಕೊನೆಮುಟ್ಟು; ದಡಸೇರು; ನೆರವೇರು : ಈ ನೆಲನಂ ಪತ್ತುವಿಟ್ಟು ಪೋಪಂತು ಮಾಟ್ಪೆನೆಂದು ಸಮಕಟ್ಟಿಕೊಂಡು ಬಂದಿರ್ದಂ ಅದಲ್ಲದೆಯುಂ ಅದು ಕಡೆಸಲ್ಲದಿರ್ದೊಡೆ ಭಯಸ್ಥನಾಗಿ ಬಂದು ನಿಮಗೆ ಶರಣಾಗತನಾದಂ (ಪಂಚತಂ. ೧೦೪-೧).

[ಕಡೆ$_3$ + ಸಲ್$_1$]

**ಕಡೆಸಾರ್** (ಕ್ರಿ). = ಕಡೆಸರಿ : ಕೆಡೆದತ್ತಿದೆನ್ನಯ ಬಾಣದಿಂ ಕಡೆಸಾರ್ ಬಿಡೆಂದವನನೀಶ್ವರನೆಂದು ಬಲ್ಲನೆ ಪಾರ್ಥನೊತ್ತಿ ಕೆರಳ್ಚಿದಂ (ಶಬಶಂ. ೪-೨೬); ಹವ್ವನೆ ಹಾರಿಯುದ ಬಿಸುಟು ಕಡೆಸಾರ್ದು ಪೊಱಮಟ್ಟು ಬಂದು (ನವಮೋ. ೯-೩೩). [ಕಡೆ$_3$ + ಸಾರ್$_1$]

**ಕಡೆಸಾರಿಗೆ** (ನಾ). ಕೊನೆ; ಮುಕ್ತಾಯ : ನುಡಿದ ಕಾಲಾವಧಿಗೆ ಜರೆತೆರೆಯುಡಗಿದವು ಜಾಣನಲಿ ಸತ್ಯವ ನಡೆಸಿದರಿ ಕಡೆಸಾರಿಗೆಯಲುನ್ನತಿಯ ಕೆಡಿಸದಿರಿ (ಕುವ್ಯಾಅ. ೧೫-೨೯). [ಕಡೆ$_3$ + ಸಾರಿಗೆ]

**ಕಡೆಸಾಲ್** (ನಾ). ರಂಗವಲ್ಲಿ, ಹೂವು ಮೊದಲಾದ ಅಲಂಕಾರಗಳ ಸಾಲು, —ಪಂಕ್ತಿ : ಕರ್ಪುರದ ಪರಿಪರಿಯ ಕಡೆಸಾಲ ಪರಿವಿಸ್ತರದ ಧೂಪದ ಧೂಮಗಂಧೋತ್ಕರ ಸಮುದ್ರದೊಳದ್ದನೊಲ್ಲದೆ ಪಥವ ಪವಮಾನ (ತೊರರಾ. ೧-೧೩-೫). [ಕಡೆ$_4$ + ಸಾಲ್$_2$]

**ಕಡೆಸಿಡಿ** (ಕ್ರಿ). ಪಕ್ಕಕ್ಕೆ ಸರಿ; ಪ್ರತ್ಯೇಕವಾಗಿರು; (ಗುಂಪಿನಿಂದ) ಬೇರೆಯಾಗಿ ನಿಲ್ಲು : ಕಡೆಸಿಡಿದೊಂದೆ ಭೂಜವಟ ಕಾನನಮೊಪ್ಪುವ ವೇಣುಕುಂಜವೆಂಬೆಡೆಗಳೊಳಿರ್ದ ಪಾವು ಕೊಳಲಪ್ಪುದಸಾಧ್ಯಂ (ಖಮುದ. ೩-೪೧). [ಕಡೆ$_3$ + ಸಿಡಿ$_1$]

**ಕಡೆಸಿಡಿಲ್** (ಕ್ರಿ). ಕಡೆಗೆ ಚಿಮ್ಮು; ಹೊರಕ್ಕೆ ಹಾರು : ಹೋಮದ ಕುಂಡದಿಂ ಕಡೆಸಿಡಿಲ್ದು ಪೊದಳ್ದಿರೆ ಕಂಡು ಕೆಂಡಮಂ ಕಾಮಿಸಿ ಗೇರಪಣ್ಣೆನುತೆ ಪಣ್ಣನೆ ಪೊರ್ದಿ ತುಡುಂಕೆ ಕೈ ಸುಡಲ್ (ರಾಜಶೇ. ೧-೧೨೮).

[ಕಡೆ$_3$ + ಸಿಡಿಲ್$_1$]

**ಕಡೆಸಿರಗೆಯ್** (ಕ್ರಿ). ತಲೆಕೆಳಗುಮಾಡು (?) : ಬಿಡುವುರಿಯೆಣ್ಣೆ ಸೂಸುವ ಕನಲ್ಗಿಡಿ ಬೀಸುವ ಪಾಸಮೋರೆಯಿಂದಿಡುವಱ ಪೊಯ್ವ ಕತ್ತೞಿಕೆ ಕುತ್ತುವ ಕೊಂತಮುರುಳ್ಚುವೊಡ್ಡುಗಲ್ ಕಡೆಸಿರ[ಪಾಠಾಂ. ಸೆಱ]ಗೆಯ್ದು ನೂಂಕು ದಳಿಯುಕ್ಕುವ ಬಲ್ದಸಿ ಭೀತಿಯಂ ಮನಕ್ಕೊಡರಿಸೆ ಲಗ್ಗೆಯೊಟ್ಟಳದೊಳಿಟ್ಟಳವಾದುದು ಕೋಂಟಿಗಾಳೆಗಂ (ಚಂದ್ರಪು. ೫-೧೦೫; ಕಾವ್ಯಸಾ. ೪೫೫ ನೋ); "ತಲೆಯನ್ನೊಡೆದು ಬಿಡು" (ಕರ್ಣಾಜ. ೩೩). [ಕಡೆ$_3$ + ಸಿರ$_1$ + ಕೆಯ್$_1$]

**ಕಡೆಸಿಲ್ಕು**$_1$ (ಕ್ರಿ). ಕೊನೆಯಲ್ಲಿ ಸಿಕ್ಕಿಕೊಳ್ಳು; ಕಡೆಗೆ ಉಳಿ : ಒಡನಾಡಿಗಳೆಲ್ಲರ ಸಂಗಡಮಿರದೀ ಪೊಲ್ತಿ ಪಸಿವಿನುರವಣೆಯಿಂ ಬೆಂದೊಡಲಂ ಪೊರೆಯಲ್ ಪೋದೆಂ ಕಡೆಸಿಲ್ಕಿದೆನದಱನಿಂತು ಪಳಯಿಪೆಂ (ವೃಷವಿ. ೩೯-೪೮). [ಕಡೆ$_3$ + ಸಿಲ್ಕು$_1$]

**ಕಡೆಸಿಲ್ಕು**$_2$ (ನಾ). ಕೊನೆಯ ಉಳಿಕೆ; ಕಡೆಯಲ್ಲಿ ಉಳಿದದ್ದು : ವರ್ಷಾಂತ್ಯದಲ್ಲಿ ಉಳಿಯುವ ಕಡೆಸಿಲ್ಕೆಷ್ಟು? (ರೂಢಿ).

[ಕಡೆ$_3$ + ಸಿಲ್ಕು$_4$]

**ಕಡೆಸೆಱಂಗು**, ಕಡೆಸೆಱಗು (ನಾ). ೧. ಸೆರಗಿನ ಕೊನೆ, —ತುದಿ, —ಅಂಚು : ವ್ಯಡನ ಹೊಜಗೊಮ್ಮಾಱು ಸೀರೆಯ ಕಡೆಸೆಱಂಗಿರೆ ಲಿಂಗದೊಳಗಾತಂ ಪ್ರವೇಶಿಸಿದ (ಬಸಪು. ೫೩-೪೯). **ಕಡೆಸೆಱಗು** : ೧. ನಿತ್ಯದ ಕಡೆಸೆಱಗಿನ ಸೋಂಕಂ ಕುಡೆ ರೋಮಜನಾದಂ (ಬಸರ. ೮-೧೩೬). ೨. ಕೊನೆ; ತುದಿ : ತುಱುಗೆವೆಯ ನಿಡುಗಂಗಳಿನ ಕಡೆಸೆಱಗ ನಮುರಿಸುತೊಯ್ಯನೊಯ್ಯನೆ ಮಱುಕ ಮಿಗೆ ಕಾಣಿಸುತ ಬಂದಳು ರಾಮನಿದ್ದೆಡೆಗೆ (ತೊರರಾ. ೩-೪-೮); ಕಂಗಳ ಕಡೆಸೆಱಗು ಕೆಂಪಾಯ್ತು (ನಿಭಾಗ. ೪-೫-೪೭). [ಕಡೆ$_3$ + ಸೆಱಂಗು]

**ಕಡೆಸೆಱಗು** 'ಕಡೆಸೆಱಂಗು' ನೋ.

**ಕಡೆಹ** 'ಕಡೆಪ' ನೋ.

**ಕಡೆಹರಿ** (ಕ್ರಿ). ಸೀಮೆಯನ್ನು ಮೀರು ; ಎಲ್ಲೆ ಮೀರು : ಕಡೆಹರಿದು ಹಾರುವುದು ಅಡಿಯ ಮೇಲೆಸಸುವುದು (ನಡೆವಾ. I, ೪೪೧).
[ಕಡೆ₃ + ಹರಿ₂ (< ಪರಿ₂)]

**ಕಡೆಹಾಯಿಸು,** ಕಡೆಹಾಸು (ಕ್ರಿ). ೧. ದಾಟಿಸು; ತೀರ್ಗಡೆಮಾಡು: ಆಯ್ಯ ನಾನು ಬಂದ ಭವಾಂತರದಲ್ಲಿ ನೀವು ಕಡೆಹಾಯಿಸಿದಿರೆಂಬುದ ನಱಿಯೆ(ಲಿಂಗವ.೮–೩೦); ಒಡೆಯನಾಜ್ಞೆಯಿಂದಲಿರ್ಪವನು ಕಡೆಹಾಯಿಸು ಹುಲಿರಾಯನೆ (ಗೋಹಾಡು. ೬೨). ೨. ಪಾರುಮಾಡು; ರಕ್ಷಿಸು: ಮಡದಿ ಮಕ್ಕಳನೆಲ್ಲ ಕಡೆಹಾಯಿಸುವ ನೀನೆ (ಪುರಂದ. ೧–೧೪೬–೨); **ಕಡೆಹಾಸು** ೩. ಕೊನೆಗೊಳಿಸು; ಪೂರ್ತಿಮಾಡು: ಸಾವಿರದಲ್ಲಿ ಒಂದು ರಜ್ಜು ಹರಿದಡೆ ಅದ ಸಾಗಿಸಿ ಕಡೆಹಾಸಬೇಕಲ್ಲದೆ ಗೈದು ಬಿಟ್ಟಡೆ ಒಂದೞ ಹಿಂದೊಂದೞಿಯಿತ್ತು ಆ ಅಚ್ಚು (ಮೋಳಿಗಮಾ. ೫೫–೨೨೮).
[ಕಡೆಹಾಯು (< ಕಡೆವಾಯ್₁) + -ಇಸು₂]

**ಕಡೆಹಾಯು** 'ಕಡೆವಾಯ್₁' ನೋ.

**ಕಡೆಹಾಸು** 'ಕಡೆಹಾಯಿಸು' ನೋ.

**ಕಡೆಹುಟ್ಟು** (ನಾ). ಕಡೆಗೆ ಹುಟ್ಟಿದ ಮಗು ; ಕಿರಿಯ ಮಗು (ಕ).
[ಕಡೆ₃ + ಹುಟ್ಟು₂ (< ಪುಟ್ಟು₁)]

**ಕಡೆಹೊಲ್ಲದು** (ಗು). ಕೊನೆಯಲ್ಲಿ ಕೆಡುಕನ್ನುಳ್ಳ, —ಕೆಟ್ಟದಾದ : ಕೊಡನ ಅಂಥಕ **ಪೊತ್ತು** ನಡೆವಂತೆ ಅಧಿಕಾರ ಕಡೆಹೊಲ್ಲದೆ[ಪಾಠಾಂ. ಯಲ್ಲಿ ಎ]ಚ್ಚಱಿಕೆ (ಪುರಂದ. ೨–೪೫–೧).
[ಕಡೆ₃ + ಹೊಲ್ಲದು (< ಪೊಲ್ಲದು)]

**ಕಡೆಹೋಗು** (ಕ್ರಿ). ಕೊನೆಮುಟ್ಟು ; ದಡಸೇರು : ಅಲ್ಲಮಪ್ರಭು ದೇವರಿಗೆ ಮರುಳುಶಂಕರದೇವರ ನಿಲವು ಕಡೆಹೋಗಿ[ಪಾಠಾಂ. ಹೊಂಗಿ] **ತೋಱುತ್ತಿ**ರಲು . . . ಸ್ತೋತ್ರಂಗಳಂ ಸಾಕೆಂದು ನಿರೂಪಿಸಿದ ಪ್ರಸ್ಥಾವದ ವಚನ (ಶೂನ್ಯಸಂ. ೧೧೬–೨೩).
[ಕಡೆ₃ + ಹೋಗು₁ (< ಪೋಗು₁)]

**ಕಡ್ಡ**₁, ಕಡ್ಡು, ಖಡ್ಡ₁, ಖಡ್ಡು (ಗು). ೧. ದಿಟ್ಟತನ ; ಎದೆಗಾರಿಕೆ: "ಕಡ್ಡ[ಪಾಠಾಂ. ಖಡ್ಡ]ಮೆನಲ್ ದಿಟ್ಟತನಂ" (ಚತುನಿ. II, ೩೮); ಕಡ್ಡದಿಂ ಕಾಳ್ಕೈಯ ಬಡಿದಾಡುತಿತ್ತು (ಕಾಲೂರ. ೫೦–೭೪). ೨. "ಮತ್ಸರ ; ದ್ವೇಷ" (ಪಂಪಭಾ. ಕೋಶ) : ಅವರಿರ್ವರ್ಗಮೊರ್ವ ರೊರ್ವರೊಳ್ ಮೂಗುದುಱಿಸಲಾಗದ **ಕಡ್ಡ**ಮವರ್ಗೆಂತುಮೊಡಂ ಬಡಾಗದು (ಪಂಪಭಾ. ೧೨–೧೦೩ ವ). ೩. ಕೋಪ: ಕಡ್ಡ ಬೇಡೆಲೆ ಸ್ವಾಮಿ ನಾವರೆಯೆತ್ತರೆಮ್ಮೊಳು ನಿಮಗೆನುತ ತಲೆಯೊಡ್ಡಿದರು ಪಾದದೊಳು ಶಂಕರದಾಸಿಮಯ್ಯಗಳ (ಶಂಕದಾ. ೮–೪). **ಕಡ್ಡು** : ೧. ಕಡ್ಡು [ಪಾಠಾಂ. ಡು] ಮನದ ಕಲಿತನದ **ರೋಷ**ಗಳಿಂದ **ಪೊ**ಡ್ಡೊಡ ಸಿದ ನಿಮಿಷದಲಿ(ಅಮುಸಾಂ. ೨–೧೧೩). **ಖಡ್ಡ**₁ : ೧. "ಖಡ್ಡ[ಪಾಠಾಂ. ಕಡ್ಡ]ಮೆನಲ್ ದಿಟ್ಟತನಂ" (ಚತುನಿ. II, ೩೮). **ಖಡ್ಡು** : ೧. 'ಖಡ್ಡಳಿ' ಪರಾ. [?. / ಸಂ. ಕಡ್ಡ್ = ಬಿರುಸಾಗು, ಕಠೋರವಾಗು]

**ಕಡ್ಡ**₂, ಖಡ್ಡ₂ (ನಾ). ೧. ದ್ವೇಷಿ ; ವೈರಿ : ಈತಂ ಮನೆಯ ಕಿಱುಕುಳ ವೆಸನಂ ಮಾಡದಿರೆ ತನ್ನ ಕಿಱಿಯಬ್ಬೆ ಜಡಿದೊಡೆ ಮುಳಿದು ಬಂದೊಂ ಮೂಗುದುಱಿಸಲಾಱದ ಕಡ್ಡನೆಂದಾ ತೆಜನಂ ಪೇೞ್ದು (ಚಾವುಂಪು. ೮೯–೮). ೨. ತಿಳಿಗೇಡಿ ; ದಡ್ಡ : ಆತಂ ಕಿಱುಕುಳನುಂ ಕಡ್ಡನುಮಾಗ ಲಾಗ ಧೈರ್ಯವಂತನಪ್ಪುದು (ಬಂಹರಿ.೬–೧೪). **ಖಡ್ಡ**₂ : ೨. ಗೊಡ್ಡು ಕೋಡಿನಲಿಱಿದು ನೆಗಹಿದ ಗೆಡ್ಡೆಯಂತಿದನೆತ್ತಿ ಭಕುತಿಯ ಖಡ್ಡನೈತರೆ ಕಂಡು ಹೋಗದಿರೆಂದು ಮಾರ್ಗದಲಿ (ನಿಭಾಗ. ೩–೯–೫೮).

**ಕಡ್ಡಮಾಡು** = ಮೂರ್ಖನನ್ನಾಗಿ ಮಾಡು ; ಪೆಚ್ಚುಗೊಳಿಸು : ಅಱಿಯದಂತೆ ಕಡ್ಡಮಾಳ್ಪುದು ಪ್ರತಿಕೂಲವೆರಸಿ ಗರ್ವದಿ ಮಾಡುವುದು (ದ್ವಾದಶಾ. ೫೨–೧೩೩). **ಕಡ್ಡಾಗು** = ದಡ್ಡನಾಗು ; ಪೆಚ್ಚಾಗು (ಕ).
[?. / ಸಂ. ಕಡ = ಮೂರ್ಖ]

**ಕಡ್ಡ**₃ (ಗು). ಕೆಟ್ಟದಾದ ; ದೋಷಯುಕ್ತವಾದ. 'ಕಡ್ಡವಾರ' ಪರಾ. [< ಸಂ. ಕಷ್ಟ]

**ಕಡ್ಡಂಚು** (ನಾ). ಗೆರೆಯಂತಿರುವ ಅಂಚು ; ಕಡ್ಡಿಅಂಚು : ಒಂದು ಜೊತೆ ಕಡ್ಡಂಚಿನ ಪಂಚೆಯನ್ನು ತಂದೆ (ರೂಢಿ). [ಕಡ್ಡಿ + ಅಂಚು₂]

**ಕಡ್ಡಗೂಂಟಣಿ** (ನಾ). ದಿಟ್ಟಳಾದ ಕುಂಟಣಿ ; ತಲೆಹಿಡುಕಿ: ಕಡ್ಡಗೂಂಟಣಿ ಕಿಡಿಯಂ ಮೆಟ್ಟಿದಂತಾಗೆ ಚೌಕಿಗೆಯ ಬಾಗಿಲ್ಗೆ ಬಂದು (ಲೀಲಾವ. ೨–೧೯೯ವ). [ಕಡ್ಡ₁ + ಕೂಂಟಣಿ]

**ಕಡ್ಡಣ,** ಕಡಣ, ಕಡ್ಡಣಿ (ನಾ). ಜಡೆಗಟ್ಟಿದ ಕೂದಲು; ಜಡೆಗಟ್ಟು: "ಕಡ್ಡ[ಪಾಠಾಂ. ದ್ದ]ಣಮೆಂದು ಜಡೆಗಟ್ಟು" (ಕಶಸಾ. ೨೨–೪೪೮); "ಮದವಟ್ಟಗೆಯೆ ಕಡ್ಡಣಂ ಎನೆ ತಾನೆ ಜಡೆಗಟ್ಟು" (ಕಬ್ಬಿಗ್ಕೈ. ೩೨); ಮುಡಿಜಡೆಯನ ಕಡ್ಡಣಮುಂ ಚೊಕ್ಕಳಂ ತುಱುಬಿ (ರಾಮಾಶ್ವ. ೧೩೧–೮). **ಕಡಣ**: "ಜಡೆಗಟ್ಟಿದು ಕಡಣಂ" (ಕವಿಕಂ. ೧೮೮). **ಕಡ್ಡಣಿ**: ಕಡಿತಲೆ ಕೆಯ್ಯ ನೇವಲೆಗೆ ಸಿಕ್ಕಿದ ಚಿಕ್ಕಸಿಧೇನು ಮಂಡೆಯೊಳ್ಕಡು ಮುರಿದೊತ್ತಿ ಸುತ್ತಿದ ಕಣ್ಣದಣಿ [ಕಡ್ಡಣಿ] [ಪಾಠಾಂ. ಕಣ್ಣಣಿ] ನೇಣರೆ ದೊಟ್ಟ ಕುಪ್ಪಸಂ ಕುಡಿನಿಮಿರ್ದಿರ್ಪ ಮೀಸೆ . . . ಇಂತು ನಡೆದರ್ ನಲವಿಂ ಪತಿಗಂಗರಕ್ಷಕರ್ (ಶಾಂತೀಶ್ವ. ೧೫–೮೮). [?]

**ಕಡ್ಡಣಿ** 'ಕಡ್ಡಣ' ನೋ.

**ಕಡ್ಡಣಿಗೆ,** ಖಡ್ಡಣಿಗೆ (ನಾ). ೧. ಜಡೆ ; ಹೆಣಿಗೆ : ಕೆದಱಿದ ತಲೆ ಯನಡಸಿ ಸುತ್ತಿದ ಮುಪ್ಪುರಿಯ ಬಾರಿಕಡ್ಡಣಿಗೆಯ (ಹಚಕಾ. ೧೧–೧೭). ೨. ಹೆಣೆದ ಚಾವಟ; ಬಾರುಕೋಲು : ಮಹಾಕಾಲನ ಕೋಣನ ಕೋಡಿನ ಹೊಸ ಬಡಿಗೆಗಳ ಕುಳಿಕನ ಕಡ್ಡಣಿಗೆಯ ಶಿಶಿರವಿಗಳ ತಾಳಗಳ (ವೀರೇಚ. ೨–೨೧) ; ಆ ಕೊನೆಯ ಶಬ್ದಗಳು ಬಾರಿಕಡ್ಡಣಿಗೆಯಿಂದ ಅವನನ್ನು ಛಳೀರನೆ ಹೊಡೆದಂತಾಯಿತು (ಹೊಸಮೇ. ೩೧೬). **ಖಡ್ಡಣಿಗೆ**: ೧. ತಲೆಯ ಖಡ್ಡಣಿಗೆಯ ಸುರಂಗದ ಪಳಿಯ ಸೀರೆಯ (ಕುವ್ಯಾಭೀ. ೪–೪೦). ೩. (?) : ಸಮತೆಯೆ ಖಡ್ಡಣಿಗೆಯೆಂದೆಂಬ ಸಮಿತ ಪಾತ್ರೆಯ ನಿಕ್ಕಿ ಸದ್ಭಾವನೆಂದೆಂಬ ನವ್ಯನೈವೇದ್ಯಮಂ ಬಡಿಸಿ (ವಾಯುರ. ೧೩೬–೨೬).
[ಕಡ್ಡಣ + -ಗೆ₁]

**ಕಡ್ಡಣಿಸು** (ಕ್ರಿ). "ಕತ್ತರಿಸು" (ತೊರರಾ. ಕೋಶ) : ಅಣಿದನೆಡದಲಿ ಬಲದಲಾತಗಳಣೆದ ಖಡ್ಗದ ಖಡ್ಗದಲಿ ಕಡ್ಡಣಿಸಿ [ಪಾಠಾಂ. ಖಡ್ಡಣಿಸಿ, ದಟ್ಟಣಿಸಿ, ಕಡೆಗಣಿಸಿ, ಕಣಕರಿಸಿ] ಕೈ ಮೈ ಉಳಿಯಲಿಬ್ಬರಿಗೊಬ್ಬನುರ ವಣಿಸಿ (ತೊರರಾ. ೬–೩೧–೨೧). [? + -ಇಸು₃]

**ಕಡ್ಡತನ,** ಖಡ್ಡತನ (ನಾ). ೧. ಕಾಟ; ತೊಂದರೆ. ೨. ದಡ್ಡತನ; ಮೂರ್ಖತನ : ತನುಜ ಕದನದ ಕಡ್ಡ[ಪಾಠಾಂ. **ಕಷ್ಟ**]ತನ ಬೇಡೆನಗಿ ದುಪಕಾರವು ವೃಥಾ ಕುರುವನಕೆ ವಹ್ನಿಯ ಬಿತ್ತಬೇಡಕಟೆಂದನಾ ಭೀಷ್ಮ (ಕುವ್ಯಾಭೀ. ೧೦–೩೧). **ಖಡ್ಡತನ**: ೨. ಗುಡ್ಡರೆಲ್ಲರು ಗುರುವ ನಾವನು ಖಡ್ಡತನದಲಿ ಜಱಿವನೆನುತವರಡ್ಡಹಾಯ್ದರು (ಪ್ರಭುಲೀ. ೧೩–೭); ಖಡ್ಡತನವನು ಬಿಸುಟು ಬಾಹ್ಯದಲಡ್ಡವಿಸಿ ಕಣುಮನಗಳಿಗೆ ಬಲೆಯೊಡ್ಡಿದರು ಬಲಕೇಶವರು ದಿವ್ಯಾಕೃತೀಕ್ಷಣದ (ನಿಭಾಗ. ೧೦–೮–೮). ೩. ಸೊಕ್ಕು ; ಮದ ; ದರ್ಪ : ರಾಯನ ನಾರಿಯರ ವಿವಿಧಾಭರಣ ಸಿಂಗಾರವೊಡ್ಡಿತು ಕೊಂಡು ಮುಳುಗಿತು ಖಡ್ಡತನ ನೃಪನ (ಕುವ್ಯಾಸ. ೧೪–೯); ಕ್ಷತ್ರಿಯರಿಗೀ ಕಡುಖಡ್ಡತನವಿರಬೇಕು (ತೊರರಾ. ೨–೨–೪೩).
[ಕಡ್ಡ₂ + -ತನ]

**ಕಡ್ಡಯಿಸು** (ಕ್ರಿ). ಕಷ್ಟಪಡಿಸು; ಕಾಡು: ಬೆಸವರಿಗೆಯ್ವ ಬೇಸರಿಸು ವಿತ್ತಾದನೆತ್ತುವ ಮೇಗುದೋರ್ಪ ಕಂಟಿಸುವ ಕನಲ್ವ ಕಡ್ಡಯಿಸು ವೇೞ್ದನಂ ತಿಳಿಪಲ್ (ಶಾಂತಿಪು. ೮–೧೦೩).

[ಕಡ್ಡ$_2$ + -ಇಸು$_3$]

**ಕಡ್ಡವಣೆ** (ನಾ). ಎಳೆಯುವುದು; ಬರಸೆಳೆಯುವುದು; ಸೆಳೆತ: ಆಕೆಯ ಮುದ್ದುವೆರಸಿದ ತೊದಲ್ನುಡಿಗಂ . . . ಪುರುಡುವೆರಸಿದ ಕೊಂಕಿಂಗಂ ಕದ್ದವಣ (?) [ಕಡ್ಡವಣೆ] [ಪಾಠಾಂ. ಗದ್ದವಣೆ]ವೆರಸಿದ ಸೋಂಕಿಂಗಂ ಗಾಡಿವೆರಸಿದ ಹಾವಕ್ಕಂ (ಪಂಪಭಾ. ೪–೧೭ ವ); ಎಮೆಯಿಕ್ಕಲ್ ಮೆಱೆಯಿಸುವಂತೋರೊರ್ವರನೊಡಲೊಳಡಸಿಕೊಳಲ್ ಕಡಂಗಿಸುವ ಕಡ್ಡವಣೆಯುಂ (ಲೀಲಾವ. ೧೦–೪೪ ವ). "ಕದ್ದವಣಿ – ರೋಮಾಂಚ?" (ಪಂಪಭಾ. ಕೋಶ).

[← ಪ್ರಾ. ಕಡ್ಡಣ < ಸಂ. ಕರ್ಷಣ]

**ಕಡ್ಡವಾರ** (ನಾ). ಕೆಟ್ಟವಾರ; ಶನಿವಾರ: ಕ್ರೂರದಿನಂಗಳ ಪೆಸರಂ ಮಱೆಯಿಸಿ ಮಂಗಳವಾರಂ ಕಡ್ಡ[ಪಾಠಾಂ. ವಡ್ಡ]ವಾರಮೆಂಬಂತೆ ವಲಂ (ಗದಾಯು. ೩–೨೬). ⅊ ಇದು 'ವಡ್ಡವಾರ'ದ ಅಪಪಾಠವಿರಬಹುದು. [ಕಡ್ಡ$_3$ + ವಾರ$_3$]

**ಕಡ್ಡಾಣಿ** 'ಕಟ್ಟಾಣಿ' ನೋ.

**ಕಡ್ಡಾಣೆ** (ನಾ). ಒಬ್ಬಾತನ ಹೆಸರು: ಕಡ್ಡಾಣೆ ಪೆರ್ಮಾನ್ ಸಾಮಾಜ್ಯಂಗೆಯೆ (ಎಕ. IX (S), ಚಿಂತಾಮ. ೧೭೦–೧; 750); ಸ್ವಸ್ತಿಶ್ರೀ ಕಡ್ಡಾಣೆ ಪೃಥುವೀ ರಾಜ್ಯಂಕೆಯೆ ಸಿಯಕೆಲ್ಲ ಕೆಸುಮಣ್ಣು ನಾಡಾಳೆ (ಎಕ. XVI, ತುಮಕೂ. ೯೫–೧; 780). [?]

**ಕಡ್ಡಾಯ**, ಕಡಾಯ$_1$, ಖಡ್ಡಾಯ (ನಾ). ೧. ಒತ್ತಾಯ; ಬಲಾತ್ಕಾರ; ನಿರ್ಬಂಧ: ದುಷ್ಪರಿಗಂಜಿ ಕಟ್ಟಿಕೊಳ್ಳಬಹುದೆ ಕಡ್ಡಾಯದ ವ್ರತವ (ಏಲೀಶ್ವ. ೨೦); ಕಡ್ಡಾಯಕ್ಕೆ ಕಟ್ಟಿದ ಈ ಒಡ್ಡುಗಲ್ಲಿನ ಮುಱಿಯೆ ಎನಗೊಂದು ಬುದ್ಧಿಯ ಹೇಳಾ (ಕಲ್ಯಾಶಾಂ. ೧); ದೇವರ ಪ್ರಾರ್ಥನೆ ನಡೆಸಬೇಕೆಂದು ಕಡ್ಡಾಯ ಮಾಡಿ, ಹಾಗೆ ಮಾಡದವರನ್ನು ಶಿಕ್ಷಿಸುತ್ತಾನೆ (ಪ್ರವಾಇ. II, ೭೯). ೨. ಕಡ್ಡಾಯವಾಗಿ ಮಾಡಬೇಕಾದ ಸೇವೆ; ಒತ್ತಾಯದ ಕೆಲಸ: ಇನ್ತೀ ಧರ್ಮ್ಮಮಂ ಸ್ಥಳದ ಹನ್ನವಣಿಗರುಂ ಕಡ್ಡಾಯದ ಕೋಲ್ಕಾಜರುಂ ಪುರಸ್ಸರರಾಗಿ ನಡಸುವುದು (ಸೌಇಇ. IX–i, ೧೬೪–೪೪; 1098); ಕಾಣಿಕೆ ಕಡ್ಡಾಯ ಸುಂಕ ಸುವರ್ಣ ಮನೆದೆಱೆ ಮುಂತಾದ ಅಯವೆಲ್ಲಉ (ಎಕ. IX (S), ಕಾನಕಾ. ೩೦–೨; 1332); ಕಾಣಿಕೆ ಕಡ್ಡಾಯ ಆಉದೂ ಯಿಲ್ಲ (ಸೌಇಇ. IX–ii, ೪೨೫–೧೬; 1401); ಮಗ್ಗ ಮುದ್ರೆ ಕ್ರಯ ಕಡ್ಡಾಯ ಹಾರಿಕಾಯ ಬಾಳುಕ (ಸೌಇಇ. IX–ii, ೪೪೦–೨೫; 1419); ಕಡ್ಡಾಯ ಬಿಟ್ಟೆ ಬಿರಾಡ ಕಾಣಿಕೆ (ಎಕ. XI, ಜಗಳೂ. ೪೧–೩೨; 1526); ಅಡ್ಡೆಯ ಹೊಱೆಯಂತೆ ಕೊಂಡೆಯ್ದು ಕೊಡುವಾಗ ಕಡ್ಡಾಯದೊಡವೆಯೇಯೆಂದಾ (ಭರಚ. ೩೮–೧೨೭). **ಕಡಾಯ$_1$**: ೨. ಅನುಪು ಅಳು ಅರ[ಕಾ]ಣಿಕೆ ಕಡಾಯಉ ದಂಡಾಯವಾರರು (ಸೌಇಇ. IX–ii, ೪೩೮–೧೭; 1418); ಕ್ರಯ ಕಡಾಯ ಭಿಟ್ಟೆ ಕೊಟ್ಟೆ (ಮೈಆರಿ. ೧೯೩೪, ೨೭–೨೧; 1430); ಚಕ್ರ ಕಾಣಿಕೆ ಕಡಾಯ ಸರ್ವಬಾಧ ಪರಿಹಾರವಾಗಿ [ಬಿಟ್ಟೆ]ವೆಂದು (ಸೌಇಇ. XX, ೨೩೯–೧೪; 1547). **ಖಡ್ಡಾಯ**: ೨. ಸುಂಕ ಸೋಳಿಗೆ ಖಾಣ ಖ[ಪಾಠಾಂ. ಕ]ಡ್ಡಾಯ ಕೊಟ್ಟ ಗುತ್ತಿಗೆ (ಬಸವು. ೨೭–೫೨); ಖಾಣಿಕೆ ಖಡ್ಡಾಯ ಬೇಡಿಗೆ ಬಿರಾಡ (ಸೌಇಎ. ೧೯೩೦, ಕುಂದಾಪು. ೫೩೯–೧೪; 1446). [ದೇ. ‖ ತಮಿ. ಕಟ್ಟಾಯ; ತೆಲು. ಕಡ್ಡಾಯ]

**ಕಡ್ಡಾಯಗಾರ** (ನಾ). ದಬ್ಬಾಳಿಕೆ ಮಾಡುವವನು; ಬಲಾತ್ಕಾರ ಮಾಡುವವನು (ಕಿ). [ಕಡ್ಡಾಯ + -ಗಾರ (< -ಕಾಱ)]

**ಕಡ್ಡಿ**, ಖಡ್ಡಿ$_1$ (ನಾ). ೧. ಚಿಕ್ಕ ದೇಟು; ಸಣ್ಣ ಸಿಗುರು: "ಯೋಗವಾಹ ಷಕಾರಕ್ಕೆ ಡತ್ವಂ—ಕಾಷ್ಠ – ಕಡ್ಡಿ" (ಶಮದ. ೨೮೩ ಪ್ರಯೋ); ಮಹಾಶ್ರೀಯಂ ಕೊಳದ ಪುಲ್ಲ ಕಡ್ಡಿಯಂ ತೊಱೆವಂತೆ ತೊಱೆದು (ಧರ್ಮಾಮೃ. ೯–೩೨); ಬೇವಿನ ಕಡ್ಡಿ ಭದ್ರಮುಸ್ತೆ ದ್ರಾಕ್ಷಂಬೆರಸರೆದು ಕುಡಿಯಲ್ಕೆಱೆದಡೆ (ಕಲ್ಯಾಕಾ. ೩–೩೮); ಉಱುವ ಜಯವಧುವೊಕ್ಕತನದಲಿ ಮುಱಿದ ಕಡ್ಡಿಯಿದೆನಲು ಕರದಿಂ ಮುಱಿದು ಬಿದ್ದುದು ಚಾಪವು (ಕುವ್ಯಾದ್ರೋ. ೬–೩೩); ದೂಜಿಕೊ ಬುದ್ಧಿ ಮಾಡಬೇಡ ಕೈಯೊಳಿಕೊ ಕಡ್ಡಿ ನಿನ್ನ ಕೈಯೊಳಿಕೊ ಕಡ್ಡಿ (ಕನಕ. ೨೭–೩೨). ೨. ಬರೆಯುವ ಉಪಕರಣ; ಲೆಕ್ಕಣಿಕೆ; ಕುಂಚ: ಹಲವು ಬಹುರೂಪ ಬರೆವ ಕರದ ಕಡ್ಡಿಯ ಬೋನದಂತೆ ಮನವಱಿದು ಕಣ್ಣು ನೋಡಿ ಕೈಯ ಕಡ್ಡಿಯ ಹಿಡಿದು ಲಕ್ಷಿಸುವಂತೆ (ಮೋಳಿಮಾ. ೫೭–೨೩೭). ೩. ನೂಲು ಸುತ್ತುವ ಕಂಡಿಕೆ; ಕದಿರು: ಕಡ್ಡಿಯ ಸುತ್ತುವ ಕೂಸ ಜಾಟಕ್ಕೆ ನುಂಗಿತ್ತು ಹಾಸಿನ ಕಡ್ಡಿಯಲೂಕೆಯ ನೆಯ್ವಾತನ ಬುದ್ಧಿಯ ಏನೆಂದಱಿಯದ ಕೂಸು ನುಂಗಿತ್ತು (ಗುಪ್ತಮಂ. ೪). ೪. (ಬೆಂಕಿ ಹೊತ್ತಿಸಲು) ತುದಿಗೆ ಮದ್ದು ಅಂಟಿಸಿದ ಕಡ್ಡಿ; ದೀಪದ ಕಡ್ಡಿ; ಬೆಂಕಿಕಡ್ಡಿ: ಒಲೆ ಹಚ್ಚಲು ಒಂದು ಕಡ್ಡಿ ಕೊಡು (ರೂಢಿ). 'ಕಡ್ಡಿಪೆಟ್ಟಿಗೆ' ಪರಾ. ೫. (ಆಲಂ) ಒಣಕಲು; ಬಡಕಲು: ಅವನು ಹೊಟ್ಟೆಗಿಲ್ಲದೆ ಕಡ್ಡಿಯಾಗಿದ್ದಾನೆ (ರೂಢಿ). ೬. (ಆಲಂ) ನಿಕೃಷ್ಟವಾದುದು; ಬೆಲೆಯಿಲ್ಲದ ವಸ್ತು: ಸಗ್ಗದ ರಾಜಪದವಿಯಂ ಕಡ್ಡಿಗುಂ ಕಡೆಯಾಗಿಯೆಣಿಸುವರು (ಅರ್ಚಾವಿ. ೨೮–೮). **ಖಡ್ಡಿ$_1$**: ೧. ವೀಣೆಯನು ವಿಸ್ತರದಿ ತಲೆಕೆಳಗಾಗಿ ಧರಿಸಿಯೆ ಕಳೆಯ ಖಡ್ಡಿಗಳ (ಜೀವಂಚ. ೯–೩). ೪. ಬೀಡಿಯ ಖುಷಿ, ಖಡ್ಡಿಯ ಬೋನಸ್ (ಮುಂಗಾಪು. ೫೪). ೬. ಬೊಡ್ಡಿ ಹೋದಪೆ ನೀನದೆಲ್ಲಿಗೆ ಖ[ಪಾಠಾಂ. ಬ]ಡ್ಡಿಗೆನ್ನನು ಕೊಳ್ಳದೆನುತಿಡೆ ಗಡ್ಡವನು ಕೆದಱುತ್ತ ಹಿಡಿದರೆ ಕಾಂತೆ ಬಸವಳಿದು (ನಿಭಾಗ. ೧೦–೨೫–೧೭).

**ಕಡ್ಡಿಗೆಣಿಸು** = ಕಡ್ಡಿಗೆ ಬಗೆ: ಮುಗ್ಗುವ ಮರರಂ ಕಡ್ಡಿಗೆಣಿಸದೆ (ಚಬಪು. ೪೨–೨೮). **ಕಡ್ಡಿಗೆಬಗೆ** = (ಆಲಂ) ಕನಿಷ್ಠವಾಗಿ ನೋಡು; ಕೀಳಾಗಿ ಕಾಣು: ಕರ್ಣಾದ್ಯರನು ಕಡ್ಡಿಗೆ ಬಗೆಯನೀ ಹೂಹೆಗಳ ಗಣಿಸುವನೆ (ಕುವ್ಯಾದ್ರೋ. ೫–೭೮); ಚತುರೆ ವೀಣಾವಾದ್ಯದಲಿ ಭಾರತಿಯ ಕಡ್ಡಿಗೆಬಗೆಯಳು (ಸಾಳ್ವಭಾ. ೬–೩); ರಾಮಂ ರಾವಣನನೊಂದು ಕಡ್ಡಿಗೆ ಬಗೆದಂ (ಶಬ್ದಾನು. ೨೧೯ ಪ್ರಯೋ). **ಕಡ್ಡಿಚಿಂತಾಮಣಿಶಕುನ** = ಕಡ್ಡಿಯಿಟ್ಟು ತೆಗೆದ ಪುಟದಲ್ಲಿರುವ ಮಾತಿನಿಂದ ಶಕುನ ಹೇಳುವುದು (ಕಿ). **ಕಡ್ಡಿತುಂಡಾಗಿನುಡಿ** = ಕಡ್ಡಿ ಮುರಿದಹಾಗೆ ಮಾತಾಡು: ನೆಕ್ಲು ದೋವ್ ಕಡ್ಡಿತುಂಡಾಗಿ ನುಡಿದನು (ಪುನರು. ೪೨೬). **ಕಡ್ಡಿಮುರಿದಹಾಗೆ ಮಾತಾಡು** = (ಆಲಂ) ನಿರ್ದಾಕ್ಷಿಣ್ಯವಾಗಿ ನುಡಿ; ಖಂಡಿತವಾಗಿ ನುಡಿ: ನಾವು ಎಷ್ಟು ಆಸೆಯಿಂದ ಹೋಗಿದ್ದೆವು. ಕಡ್ಡಿ ಮುರಿದ ಹಾಗೆ ಮಾತಾಡಿಬಿಟ್ಟರು (ರೂಢಿ). **ಕಡ್ಡಿ ಮುರಿದು ಕೈಗೆಕೊಡು** = ಕಡ್ಡಿ ಮುರಿದು ಹೇಳು: ಅವರ ಸಂಬಂಧ ಬೇಡ, ಬೇಡ ಎಂದು ನಾನು ಕಡ್ಡಿ ಮುರಿದು ಕೈಗೆಕೊಟ್ಟೆ (ಮಹಾಗ. ೫). **ಕಡ್ಡಿಮುರಿದುಪೇಳ್, ಕಡ್ಡಿ ಮುರಿದು ಹೇಳು** = ಖಂಡಿತವಾಗಿ ಹೇಳು; ನಿಷ್ಠುರವಾಗಿ ನುಡಿ: ಕಡ್ಡಿಮುರಿದುಪೇಳ್ವೆ, ನೀನಲ್ಲಿಗಯ್ದದಿರು (ಹಬ್ಬೆರ. ೫–೧); ಕಡ್ಡಿ ಮುರಿದು ಹೇಳುತ್ತೇನೆ ಕೇಳು. ನೀನಲ್ಲಿಗೆ ಹೋಗಬೇಡ (ರೂಢಿ).

[ಪ್ರಾ. ಕಟ್ಠ. / < ಸಂ. ಕಾಷ್ಠ]

**ಕಡ್ಡಿಉಪ್ಪು** 'ಕಡ್ಡುಪ್ಪು' ನೋ.

**ಕಡ್ಡಿಕಸರು** (ನಾ). ಕಸ ಕಡ್ಡಿ: ದಿನಾಲು ಕಡ್ಡಿಕಸರುಗಳನ್ನು ಗುಡಿಸಿ ಕುಕ್ಕೆಯಲ್ಲಿ ತುಂಬಿ ವಿದ್ಯಾರ್ಥಿಗಳು ತಗ್ಗಿನಲ್ಲಿ ಹಾಕುತ್ತಾರೆ (ಕಪಪು. ೫–೧). [ಕಡ್ಡಿ + ಕಸರು$_3$]

**ಕಡ್ಡಿಕುತ್ತು** (ಕ್ರಿ). ೧. ಕಡ್ಡಿಯನ್ನು ನೆಡು. ೨. ಲೆಕ್ಕಣಿಕೆಯಿಂದ ಮೂಡಿಸು; ಬರೆ: ನಾಟಕದಲ್ಲಿ ಕಡ್ಡಿಕುತ್ತುವ ನಾನೇ ಅವಮಾನಕ್ಕೀಡಾಗೆನೇ? (ಕನ್ನನು. I, ೧೩೨). [ಕಡ್ಡಿ + ಕುತ್ತು$_1$]

**ಕಡ್ಡಿಗೀರು** (ಕ್ರಿ). ಬೆಂಕಿ ಕಡ್ಡಿಯನ್ನು ಹೊತ್ತಿಸು: ಲಾಟಾನಿಗೆ ಕಡ್ಡಿ ಗೀರುತ್ತಿದ್ದ ಬ್ಯಾರಿಗಳು ಸಿದ್ದಣ್ಣನ ತತ್ತ್ವಜ್ಞಾನಕ್ಕೆ ಕಿವಿಗೊಡಲೇ ಇಲ್ಲ (ಮುಂಗಾಮು. ೧). [ಕಡ್ಡಿ + ಗೀರು$_1$]

**ಕಡ್ಡಿಗೊಳ್** (ಕ್ರಿ). (ಅಲಂ) ಹುಲ್ಲಿಗೆ ಸಮಾನವಾಗಿ ಎಣಿಸು; ಹುಲ್ಲಿನಷ್ಟಾದರೂ ಬೆಲೆಕೊಡು: ದೇಶಕೋಶದ ಸಿರಿಯ ಗಣಿಸನು ಕಡ್ಡಿ [ಪಾಠಾಂ. ಖಡ್ಡಿ]ಗೊಳ್ಳನು ಸಕಲ ಸಂಪದವ (ಕುವ್ಯಾವಿ. ೧೦-೬೩). [ಕಡ್ಡಿ + ಕೊಳ್$_1$]

**ಕಡ್ಡಿಪುಡಿ** (ನಾ). ೧. ಹೊಗೆಸೊಪ್ಪು; ತಂಬಾಕು: ಎಲೆಯನ್ನು ಬಾಯಲ್ಲಿ ತುರುಕಿಕೊಂಡು ಕಡ್ಡಿಪುಡಿಗೆ ಸುಣ್ಣ ಹಚ್ಚಿ ತಿಕ್ಕತೊಡಗಿದರು (ಚಿತ್ರಸ. ೧೧೪). ೨. ಹೊಗೆಸೊಪ್ಪಿನ ಕಡ್ಡಿಗಳನ್ನು ಕುಟ್ಟಿಮಾಡಿದ ಪುಡಿ; ಹೊಗೆಪುಡಿ: ಅವರು ಅಡಕೆ ಎಲೆ ಜೊತೆಗೆ ಕಡ್ಡಿಪುಡಿ ಹಾಕಿಕೊಳ್ಳುತ್ತಾರೆ (ರೂಢಿ). [ಕಡ್ಡಿ + ಪುಡಿ]

**ಕಡ್ಡಿಪುಸ್ತಕ** (ನಾ). ಶಕುನಗಳ ಪುಸ್ತಕ. [ಕಡ್ಡಿ + ಪುಸ್ತಕ]

**ಕಡ್ಡಿಪೆಟ್ಟಿಗೆ** (ನಾ). ಬೆಂಕಿಕಡ್ಡಿಗಳುಳ್ಳ ಪೆಟ್ಟಿಗೆ; ಬೆಂಕಿಪೊಟ್ಟಣ: ಹುಡುಕಿದರೂ ಕಡ್ಡಿಪೆಟ್ಟಗೆ ದೊರೆಯಲೊಲ್ಲದು (ಕಮ್ಮಟ. ೪). [ಕಡ್ಡಿ + ಪೆಟ್ಟಿಗೆ]

**ಕಡ್ಡಿಪೊಟ್ಟಣ** (ನಾ). = ಕಡ್ಡಿಪೆಟ್ಟಿಗೆ: ಒಂದು ಕಡ್ಡಿಪೊಟ್ಟಣ ಕೊಂಡು ಬಾ (ರೂಢಿ). [ಕಡ್ಡಿ + ಪೊಟ್ಟಣ]

**ಕಡ್ಡಿಬತ್ತಿ**, ಖಡ್ಡಿಬತ್ತಿ (ನಾ). ಕಡ್ಡಿಯಂತೆ ಉದ್ದವಾಗಿ ಹೊಸೆದು ಮಾಡುವ ಬತ್ತಿ: ಕರ್ಪುರದಾರತಿ ರತ್ನದೀಪಾರತಿ ಕಡ್ಡಿಬತ್ತಿ ಅಪಾರ ಮಹದಾರತಿ (ಮೋಹತ. ೨೧-೧೬); ಪಂಚಾರತಿ ಕಡ್ಡಿಬತ್ತಿ ನೀಲಾಂಜನ ವಲಗೆ (ಮೋಹತ. ೨೨-೪೩); ಕಡ್ಡಿಬತ್ತಿಮಾಡು ಹೂಬತ್ತಿ ಬೇಡ (ರೂಢಿ). 'ಗೆಜ್ಜೆಬತ್ತಿ' ಪರಾ. **ಖಡ್ಡಿಬತ್ತಿ**: ದೀವಿಗೆಯ ಬತ್ತಿಗಳನ್ನು ಕಡಲಿಬತ್ತಿಗಳನ್ನು ಖಡ್ಡಿಬತ್ತಿಗಳನ್ನು ಮಾಡುತ್ತಾರೆ (ಕೃಷಿಪ್ರ. ೭೪). [ಕಡ್ಡಿ + ಬತ್ತಿ]

**ಕಡ್ಡಿಮಟ್ಟ** (ನಾ). ಒಂದು ಅಳತೆಯ ಕಡ್ಡಿಯಿಂದ ಅಳೆದ ಪ್ರಮಾಣ: ಬದಸ್ತೂರು ಮಣ್ಣುಕೆಲಸ ಕಡ್ಡಿಮಟ್ಟಾ ವರಹ ವಂದಕ್ಕೆ ಇಷ್ಟು ಕೋಲು ಎಂಬದಾಗಿ ಮೊಕರರ ಮಾಡಿಸಿ ಕೆರೆ ಕಟ್ಟಿಗೆ ಮಣ್ಣುಹಾಕಿಸುವುದು (ಮಹಾವಂ. II, ೭೬). [ಕಡ್ಡಿ + ಮಟ್ಟ$_2$]

**ಕಡ್ಡಿಯರಕಿನಗಿಡ** (ನಾ). ಒಂದು ಬಗೆಯ ಗಿಡ: ಶಿವನಾರುಬಳ್ಳಿ, ಕಡ್ಡಿಯರಕಿನಗಿಡ (ಮೈಔಗಿ. ೪೮-೯೫೮). [?]

**ಕಡ್ಡಿಯರಗು** (ನಾ). ೧. ಕಡ್ಡಿಯಾಕಾರದ ಅರಗು; ಅರಗಿನ ಶಲಾಕೆ. ೨. ಕಡ್ಡಿಗಳಿಗೆ ಅಂಟಿಕೊಂಡಿರುವ ಅರಗು (ಕಿ). [ಕಡ್ಡಿ + ಅರಗು$_3$]

**ಕಡ್ಡಿಲು** (ನಾ). ಕಂದಕ; ಅಗಳು; ಕಡಗು (?): ಅರಮನೆಯನ್ನು ಕಟ್ಟಿಸಿ ಇದಕ್ಕೆ ಕಾವಲು ಕಡ್ಡಿಲು ವುಕ್ಕಡ ಪ್ಯಾಟೆ ಕಂದುಕ ಮುಂತಾದ್ದು ಶಾಸ್ತ್ರ ಪ್ರಕಾರಕ್ಕೆ ಪಟ್ಟಿವಂ ಮಾಡಿಸಿ (ಕೆಳವಂ. ೧೨-೧೨). 'ಕಡಂಗು$_3$' ಪರಾ. [?]

**ಕಡ್ಡಿವಲೆ**, ಖಡ್ಡಿವಲೆ (ನಾ). ಒಂದು ಬಗೆಯ ಬಲೆ: ಕಾಲ್ಕಣ್ಣಿ ಕಡ್ಡಿವಲೆಗಳ ಪರವುತುಪಸಾಕ್ಷಿ ಪಕ್ಷಿಗಳನಡ್ಡಾಡಿಸುತ್ತೆ (ಪರಶು. ೨೧-೩೦). **ಖಡ್ಡಿವಲೆ**: ಒಡ್ಡಿದರು ದಡಿವಲೆಯ ಸಿಡಿವಲೆ ಖಡ್ಡಿ[ಪಾಠಾಂ. ಕಡ್ಡಿ, ಖಡ್ಡ]ವಲೆಯನಗಲಕೆ (ತೊರರಾ. ೩-೩-೧೨). [ಕಡ್ಡಿ + ಬಲೆ$_1$]

**ಕಡ್ಡಿಹಿಡಿ** (ನಾ). ಕಡ್ಡಿಗಳಿಂದ ಮಾಡಿದ ಪೊರಕೆ: 'ಕಡ್ಡಿಹಿಡಿ' ಹಿಡಿದು ಹಕ್ಕೆ ಗುಡಿಸುತ್ತಿದ್ದಾಗ (ಬೆಳುಮ. ೧೪೦). [ಕಡ್ಡಿ + ಹಿಡಿ$_2$ (< ಪಿಡಿ$_2$)]

**ಕಡ್ಡಿಹುಳು** (ನಾ). ಕಡ್ಡಿಯಂತಿರುವ ಒಂದು ಬಗೆಯ ಹುಳು: ಒಂದು ಜಾತಿಯ ಕಡ್ಡಿಹುಳು (Stick insect) ಇದೆ (ಬಾಲಪ್ರ. III, 1257). [ಕಡ್ಡಿ + ಹುಳು$_2$ (< ಪುೞು$_1$)]

**ಕಡ್ಡು$_1$** 'ಕಡ್ಡ$_1$' ನೋ.

**ಕಡ್ಡು$_2$** (ನಾ). ಗಡ್ಡ. 'ಕಡ್ಡುವರ್' ಪರಾ. [< ಪ್ರಾ. ಖಡ್ಡ]

**ಕಡ್ಡುಪ್ಪು**, ಕಡ್ಡಿಉಪ್ಪು (ನಾ). ಒಂದು ಬಗೆಯ ಉಪ್ಪು: ರೋಗದ ಚಿಹ್ನೆಗಳು ಕಂಡಕೂಡಲೇ – ಕರ್ಪೂರ ೧೧ ತೊಲ ಕಡ್ಡುಪ್ಪು ೧ ತೊಲ ಬೆಲ್ಲ ೧ ತೊಲ ಇವುಗಳನ್ನು ಅರ್ಧಸೇರು ನೀರಿನಲ್ಲಿ ಮಿಶ್ರಮಾಡಿ ದಿನಕ್ಕೆ ಒಂದಾವೃತ್ತಿ ಕುಡಿಸಬೇಕು (ಗ್ರಾಮಾಕ. ೧೨೬). **ಕಡ್ಡಿಉಪ್ಪು**: ಸೀಸ, ಬಿಳುಗಾರ, ಸಜ್ಜರಸ, ಯವಕ್ಷಾರ, ಈ ನಾಲ್ಕು ಪ್ರತ್ಯೇಕ ಎಂಟು ಹಲ, ಕಡ್ಡಿಉಪ್ಪು ಇಪ್ಪತ್ತು ಹಲ, ಇವಿಷ್ಟನೂ ಕೂಡಿ ಮರ್ದಿಸಿ (ವೈದ್ಯಸಾ. I, ೩೦೮). [ಕಡ್ಡಿ + ಉಪ್ಪು$_1$]

**ಕಡ್ಡುವರ್** (ಕ್ರಿ). ಗಡ್ಡಬರು; ಮುದುಕನಾಗು: ಅಂತು ಪೊಜಮಡುವರಾತಿಕಾಲಾನಲನಂ ಕಂಡು ಕಡ್ಡುವಂದ ದೊಡ್ಡ[ಪಾಠಾಂ. ಕಂಡು ವಂದದೊಡ್ಡ]ರೆಲ್ಲಂ ಮುಸುಱಿ (ಪಂಪಭಾ. ೩-೬೧ ವ). [ಕಡ್ಡು$_2$ + ಬರ್$_1$]

**ಕಡ್ಡೆ** (ನಾ). ಅಮಂಗಳವಾದವಳು; ಕಷ್ಟವಾದವಳು; ಅನಿಷ್ಟೆ; "ದುಷ್ಟೆ" (ಪಂರಾಮಾ. ಕೋಶ): ವೀರಾಂಗನೆ ಕಡ್ಡೆ ತೋಳ್ವಿಸುಗೆಯೊಳ್ ಮೆಟ್ಟಿಪ್ಪಟ್ಟು [ಪಾಠಾಂ. ನೇರ್ಪಟ್ಟು] ನಿಲ್ವನ್ನಳೇ (ಪಂರಾಮಾ. ೧೨-೬೦); ಕುಪಿತೆ ಕುತ್ಸಿತೆ ಕುಹಕೆ ಕುಜೆ ಕಡ್ಡೆ [ಪಾಠಾಂ. ಕುಟಿಲೆ] ಕುಲಗೇಡಿ (ಜೈಮಿಭಾ. ೫-೬೧). [ಕಡ್ಡ$_3$ + -ಎ$_2$]

**ಕಡ್ಯ** (ನಾ). ಖಡ್ಗ; ಕತ್ತಿ: ಕಡ್ಯಗಳಿಂದಿವರ ಕೈಕಾಲುಗಳನ್ನು ಕತ್ತರಿಸಿ (ಸಾನಂಗ. ೩೯). [← ಮರಾ. ಕಡ್ಯಾ, ಖಡ್ಯಾ. / ಸಂ. ಖಡ್ಗ]

**ಕಡ್ರಬಡ್ರ**, ಕಡ್ರುಮುಡ್ರು (ಅ). (ಉಕ) ಕ್ರಮಬದ್ಧವಲ್ಲದೆ; ಅಡ್ಡಾದಿಡ್ಡಿ; ಅವ್ಯವಸ್ಥಿತವಾಗಿ: ಎಲ್ಲ ಕಡ್ರಬಡ್ರ ಗೀಚಿ ಇಟ್ಟಿದ್ದಾನೆ (ರೂಢಿ). **ಕಡ್ರುಮುಡ್ರು**: (ಸ್ಕ್ಯಾಂಡರ್). [< ಕರಡುಮುರುಡು ?]

**ಕಡ್ರುಮುಡ್ರು** 'ಕಡ್ರಬಡ್ರ' ನೋ.

**ಕಡ್ಲೆಗಂಗಾರ** (ನಾ). ಒಂದು ಜಾತಿಯ ಹುಲ್ಲು (ಕಿ). [ಕಡ್ಲೆ$_0$ (< ಕಡಲೆ) + ಗಂಗಾರ$_0$]

**ಕಡ್ಲೆನಾರು** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೨೬-೫೧೦). [ಕಡ್ಲೆ$_0$ (< ಕಡಲೆ) + ನಾರು$_2$]

**ಕಡ್ಲೆಮುಳ್ಳು** (ನಾ). ಒಂದು ಜಾತಿಯ ಗಿಡ: ಕಡ್ಲೆಮುಳ್ಳು, ಮುಳ್ಳುಬೀಜದಗಿಡ (ಮೈಔಗಿ. ೨-೨೩). [ಕಡ್ಲೆ$_0$ (< ಕಡಲೆ) + ಮುಳ್ಳು (< ಮುಳ್$_2$)]

**ಕಢಾರ** 'ಕಡಾರ$_4$' ನೋ.

**ಕಣ್**, ಕಂ, ಕಣು, ಕಣ್ಣು (ನಾ). ೧. ನೋಡುವ ಅಂಗ; ನೇತ್ರ; ನಯನ; ದೃಷ್ಟಿ: ಕಾಣನೇಗೆಯ್ದುಂ ತನ್ನ ದೋಷಮಂ ಕಾಣದಂತೆಂಮಂ ಕಣ್ಗಳ್ ತಮ್ಮ ಕಾಡಿಗೆಯಂ (ಕವಿರಾ. ೧-೪೫); ಬಂದುದಂದು ಶರದಂ ಲೋಕಕ್ಕೆ ಕಣ್ ಬರ್ಪಿನಂ (ಪಂಪಭಾ. ೭-೬೧); ಎನಗಿರ್ವರು ಮೆರಡು ಕಣ್ಗಳನ್ನರೆ ಯುವರಾಜನುಮಂಗರಾಜನುಂ (ಗದಾಯು. ೩-೬೭); ಲಿಪಿಭೇದದಿಂ ಪಲವಾಕಾರಮಾಗಿ ಕಣ್ಗೆ ತೋಱುವಕ್ಕರಂ ಚಾಕ್ಷುಷಮೆಂಬುದು (ಶಮದ. ೩ ವೃತ್ತಿ); ಕೀರ್ತಿಲತೆ ವಿಸ್ಫುರಿಸುತಿರ್ದುದು ಸಕಲ ಜನಪದ ಜನದ ಕಣ್ಮನಕೆ (ತೊರರಾ. ೧-೩-೩೧). ೨. ನವಿಲುಗರಿಯ ನಡುವಿರುವ ಗುಂಡಗಿನ ಚಿಹ್ನೆ, —ಗುರುತು: ಸುತವದನ ಕಮಲಮಂ ಕಾಣದ ಕಣ್ ಕಣ್ಬೀಲಿಯ ಕಣ್ಣೆನುತುಂ ಕಣ್ಬನಿಯಿಂ ಕರ್ಚಿದಳ್ ಕಪೋಲಸ್ಥಳಿಯಂ (ಮಲ್ಲಿಪು. ೩-೧೨೧); ಪೀಲಿಯ ಕಣ್ಣಂತೆ ಬಟ್ಟೆಯ ಪುಲ್ಲಂತೆ ತಾಳ ಕೆಯ್ಯಂತೆ (ಧರ್ಮಾಮೃ. ೮-೯೪).

೩. ಪಗಡೆಯ ದಾಳದ ಮೇಲಿನ ಚಿಹ್ನೆ, —ಚುಕ್ಕೆ: ಸೂಳೆಯ ಕಣ್ ಪಾಸಗೆಯ ಕಣ್ಣು ಮೇನುಱುಗುಗುಮೇ (ಪಂಪಭಾ. ೬-೬೩). ೪. ಹೊರಸು, ಬಲೆ ಮೊದಲಾದುವುಗಳ ಹೆಣಿಕೆಯಲ್ಲಿ ಬಿಟ್ಟ ಕಿಂಡಿ, —ತೂತು: ಹೊರಸಿನ ಕಣ್ಣಿನಲ್ಲಿ ಕಾಲು ತೊಡರಿಕೊಂಡಿತು (ರೂಢಿ). ೫. ಮೊಳಕೆ ಹೊರಡುವ ಗೆಣ್ಣು: ಎಲೆ ಸುಲಿದೆಡೆಗಳ ಕಣ್ [ಪಾಠಾಂ. ಕಂ] ಕಣ್ಗಲೆಯೆಡೆ ಗಂಟೊಡೆದು ಮೊನಸಿ ಸನೆದೋಱಿ ಮುಗುಳ್ತಲರ್ದು ಮಱಿದುಂಬಿಗಂತೆಂಬೆಲರ್ಗಂ ಮುದ್ದಾದುವಲ್ಲಿ (ಯಶೋಚ. ೪-೫). ೬. (ಆಲಂ) ಮಧ್ಯಸ್ಥಳ; ಪ್ರಮುಖವಾದ ಭಾಗ: ಪೊಱವೊಱಲ ಪೊಲದೊಳ್ ಬಟ್ಟೆಯ ಕಣ್ಣೊಳ್ [ಪಾಠಾಂ ಬಟ್ಟೆಗಣ್ಣೊಳ್] ರಾತ್ರಿ ಪ್ರತಿಮೆ ನಿಂದೊರ್ (ವಡ್ಡಾರಾ. ೧೫೨-೧೨); ಬಟ್ಟೆಯ ಕಣ್ಣೊಳಡ್ಡಂ ಬಿಟ್ಟಿರ್ದ ವೃದ್ಧ ಪಾಸರನಂ ಕಂಡು (ಪಂಪಭಾ. ೮-೩೧ ವ); ಬಟ್ಟೆಯ ಕಣ್ಣೊಳೆ ಕಲ್ಗಳ ನೊಟ್ಟುವರ್ (ಸಮಪು. ೧೨-೩); ಊರ ಮಧ್ಯದ ಕಣ್ಣ ಕಾಡಿನೊಳಗೆ ಬಿದ್ದೈದಾವೆ ಐದು ಹೆಣನು (ಅವಚಂ. ೨-೨೬). ೭. (ಆಲಂ) ಶ್ರೇಷ್ಠವಾದುದು; ಅಚ್ಚುಮೆಚ್ಚು: ಎಮಗೆಲ್ಲಂ ಕಣ್ಣಾಗಿರ್ದರವರತೀತರಾದರೆನೆ (ಚಾವುಂಪು. ೯೩-೩); ಎನಗೀ ವೈಶ್ಯಾತ್ಮಭವನೆ ಕಣ್ಣುಂ ಮತಿಯುಂ (ಧರ್ಮಾಮೃ. ೬-೧೯೯); ಚಾವುಂಡೋರ್ವಿಪತಿಗಂ ಸಿರಿದೇವಿಗಂ ಕುಮಾರರ್ ಕಣ್ಣುಂ ಗತಿಯುಮೆನೆ ಪುಟ್ಟಿದರ್ (ಎಇ. XX, ೧೨-೨; 1187); ಕವಿಯೇ ರಾಜರ ಕಣ್ಣಲ್ತೆ (ಸೋಮೇಶ. ೮೬). ೮. (ಆಲಂ) ದಯೆ; ಕರುಣೆ: ಬೆಂದ ಬಿದಿಗೆ ಕಣ್ಣ[ಪಾಠಾಂ. ಣ್ಗೆ]ಲ್ಲಕ್ಕುಂ (ಯಶೋಚ. ೨-೩೪). ೯. ವೆಜ್ಜ; ತೂತು; ರಂಧ್ರ: ಕಣ್ಣಿಲ್ಲದಿಹ ಸೂಜಿಯಲಿ ಹೊಲಿಗೆಯಹುದೆ (ಶಿರುಪಾ. ೨೯). ೧೦. ಬೆರಳು ತಟ್ಟುವ ಮದ್ದಳೆ, ತಬಲ ಮೊದಲಾದ ವಾದ್ಯಗಳ ಚರ್ಮದ ನಡುವಿನ ಭಾಗ; ಮೆತ್ತಿರುವ ಕರಿ ಸರಿ: ಮದ್ದಳೆಯ ಬಲಗಣ್ಣನೆತ್ತಿ ನೋಡಿ (ವಿರೂಪಾ. ೮೦). **ಕಂ**: ೧. 'ಕಂಗಳ', 'ಕಂಗಾಣಿಸು' ಪರಾ. **ಕಣು**: ೧. ಮಗನ ನೋಡಿದ ಹಲವು ಕಣು ದಣಿಯೆ (ಕೌಶಿರಾ. ೩೬-೨); ದೃಢವೈರ ದರುಶನ ಮಾತ್ರದಲಿ ಕಣು ಕೋರವಿಸಿದುವು ಕೋಮಲಾಂಗನ ಕಾಯಕಾಂತಿಯಲಿ (ತೊರರಾ. ೩-೪-೨); ಕಣುಗಳನು ತೆರೆದ ವರ್ಗೆ ಗೋಚರಿಸತಿಹನು (೧೪ವಿಂ. ೨-೨). ೭. ಕೌರವ ಕುಲಕೆ ಕಣು ಗತಿಮತಿಯೆನಿಸಿ ನೀ ಕರ್ಣನೆಂಬುದು ಸಕಲ ಜನಜನಿತ (ಕುವ್ಯಾಕ. ೧೯-೬೧). **ಕಣ್ಣು**: ೧. ಕಣ್ಣ ಮುಚ್ಚಿ ಕರ್ಣದಲ್ಲಿ ನೋಡಿದಾಗ ಮಹೇಶ್ವರಸ್ಥಲ (ಮೋಳಿಮಾ. ೧೩೬-೫೨೪); ನಿಮ್ಮರಿಭಟಗೆ ನಾಲ್ಕಿಲ್ಲ ಕೈ ಕಣ್ಣಿಲ್ಲ ನೊಸಲಿನಲಿ (ಕುವ್ಯಾಕ. ೪-೨೬); ತಾವರೆ ಮೊಗ ಮೀನ್ ಕಣ್ಣು ನೀರಾನೆಗಳ್ ತೀವಿದ ನಡೆ ಸುಳಿ ನಾಭಿ . . . ಎನೆ ಭಾವಕಿ ಮೆಱೆದಳರ್ತಿಯಲಿ (ಕಂನವಿ. ೫-೪೭). ೧೧. ದೃಷ್ಟಿ; ಗಮನ; ಲಕ್ಷ್ಯ: ಸಂಪ್ರದಾಯದ ಮೇಲೆ ಅವನ ಕಣ್ಣು (ಭಾರದ. ೫೮೧).

**ಕಣ್ಗೆವರ್** = ೧. ಕಣ್ಣಿಗೆಬೀಳು; ಕಾಣು: ದೆಸೆದೆಸೆಗೊಸಗೆಯೆ ಬರ್ಪಂತೆ ಕಣ್ಗೆವಂದುದು ಶರದಂ (ಆದಿಪು. ೧೧-೬); ನವಗ್ರೈವೇಯ ಕಂಗಳ್ ಮಹೀತಳದೊಳ್ ಸಂಧಿಸಿ ಬಂದು ನಿಂದ ತೆಜದಿಂದಂ ಕಣ್ಗೆವಂದೊಪ್ಪುಗುಂ (ಸುಕುಮಾ. ೧೦-೪೭). ೨. ಚೆಲುವಾಗು; ಮನೋಹರವಾಗು: "ಉಱೆ ಕಣ್ಗೆವಂದುದೊಳ್ಪುಮದಿರದಣಿಯನುವೆಡ್ಡಮೆನೆ ಮನೋಹರಮಕ್ಕುಂ" (ಕವಿಕಂ. ೯೯); ಅಂತೊಪ್ಪುವ ಗಂಡಗಾಡಿಯೊಳಿಂದ್ರನೀಲದಂತಪ್ಪ ಬಣ್ಣಂ ಕಣ್ಗೆವರೆ (ಪಂಪಭಾ. ೨-೩೮ ವ); ಮೌಕ್ತಿಕದ ರಂಗವಲಿ ಕಣ್ಗೆವಂದುದು (ಚೆಬಪು. ೬-೫೩). **ಕಣ್ಣಬಿನೋದ** = ೧. ಕಣ್ಣಿನ ಸಂತೋಷ. ೨. ಒಂದು ಬಿರುದು: ಚಲ[ದ]ಂಕ ಕಾಜನುಂ ಕಂಣಬಿನೋದನುಂ ಎಸುವರಾದಿತ್ಯ (ಎಕ. VI, ಕಡೂರು.೧೫೭-೫೧; 1191).

**ಕಣ್ಣಮೆಯ್ಯ** = ಮೈತುಂಬ ಕಣ್ಣುಳ್ಳವನು; ಇಂದ್ರ: ಆ ದೇವವೃಂದ ಸಹಿತ ಕಣ್ಣಮೆಯ್ಯನತ್ಯಾದರದಿಂದಿಳಿತಂದು (ಶ್ರೀಪಾಲ. ೭-೨). **ಕಣ್ಣಲಾಗೆನೆ** = "ಕ್ಷಣಮಾತ್ರದಲ್ಲಿ" (ಕಾದಂಉ. ಅಡಿಟಿ): ಮನುಜಮನೋಜ ನಿನ್ನ ಪೆಸರ್ಗೇಳಲೊಡಂ ಬೆಮರಿಂದೆ ಕಣ್ಣಲಾಗೆನೆ ನೆಱೆ ನಾಂದು ಪತ್ತಿದ ನಿಜಾಂಶುಕಮುಂ ಪುಳಕಂಗಳೆತ್ತೆ (ಕಾದಂಉ. ೩೧೪). **ಕಣ್ಣಲ್ಲಿ ಎಣ್ಣೆ ಹಾಕಿ ಹುಡುಕು** = ಅತ್ಯಂತ ಲಕ್ಷ್ಯಪೂರ್ವಕವಾಗಿ, ಸೂಕ್ಷ್ಮವಾಗಿ ಪರೀಕ್ಷಿಸು: ನನ್ನ ಕುಂದುಗಳನ್ನು ಕಣ್ಣಲ್ಲಿ ಎಣ್ಣೆಹಾಕಿ ಹುಡುಕಿ ನೋಡಿದ ಮೇಲೆ (ಇಪ್ಪಕ. ೪೨೯). **ಕಣ್ಣಲ್ಲಿ ಒತ್ತು** = ಕಣ್ಣಿಗೆ ಚುಚ್ಚು; ಕಣ್ಣೆಸುರಾಗು: ಮೊದಲೇ ಪೋಲೀಸಿನವರ ಕಣ್ಣಲ್ಲಿಒತ್ತುತ್ತಿದ್ದ ಅಣ್ಣನೇ ಈ ಸಂಚಿನ ಪ್ರೇರಕನೆಂದು . . . ಭಾವಿಸಿದ್ದರು (ಪ್ರೇಮಾಶ್ರ. ೧೫೧). **ಕಣ್ಣಾಗು** = ೧. ದೃಷ್ಟಿಯಿಡು; ತೀವ್ರವಾಗಿ ಬಯಸು: ನೃಪತನಯರ್ ಜಾನಕಿಯ ಮೇಲೆ ಕಣ್ಣಾಗಿರ್ದರ್ (ಪಂರಾಮಾ. ೫-೬೬). ೨. ಮುಖ್ಯವಾಗು; ಆಕರ್ಷಣೆಯ ಕೇಂದ್ರವಾಗು: ದೇವ ದೇವ ನಿಮ್ಮಂ ಕಂಡವನಾವಂ ಲೋಕಕ್ಕೆ ಕಣ್ಣಾಗ (ಬಸರ. ೬-೧೦೩). ೩. ಮಾರ್ಗದರ್ಶಕವಾಗು: ಲೋಕಕ್ಕೆ ಕಣ್ಣಾಗಿ ಬಾಳ್ವೆಮ್ಮ ಮಿತ್ರನಾ ನಾಕಸ್ಥನಾದನೆಂದಾಪ್ತರಳಲುತ್ತಿರ್ದರ್ (ಭಾವಚಿಂ. ೮-೩೬); ಹಾಡಿ ಹಣ್ಣಾದಿ ನೀ ಜಗದ ಕಣ್ಣಾದಿ ನೀ ದುಡಿದು ಸಣ್ಣಾದಿ ನೀ ಗುರುದೇವ (ಸಖೀಗೀ. ೪೭-೧೫). **ಕಣ್ಣಾಡಿಸು** = ೧. ದೃಷ್ಟಿಬೀರು; ನೋಡು: ಹುಡುಗರ ಕಡೆ ಕಣ್ಣಾಡಿಸಿ ನೋಡಲು ಜಯಂತನು ಬಂದುದು ಕಂಡುಬರಲಿಲ್ಲ (ಜಯಂತ. ೧೨); ಆಗಾಗ ಹಳೆಯ ಗ್ರಂಥಗಳ ಮೇಲೂ ಕಣ್ಣಾಡಿಸುತ್ತಿರಬೇಕು (ಗ್ರಂಥಾಲ. ೬೯). ೨. ಸನ್ನೆಮಾಡು; ಸೂಚನೆ ಕೊಡು: (. . .ತನ್ನವರ್ಗೆ ಕಣ್ಣಾಡಿಸಿ ಕರವಾಳವನ್ನು ಹಿರಿದುಕೊಳ್ವನು) (ಬರುಗಂ. ೨೦-೧೯). **ಕಣ್ಣಿಗೆಇಂಗುಹಚ್ಚು** = (ಆಲಂ) ಮೋಸಮಾಡು: "ಇಕೊ, ಇಕೊ, ನೀನು ಬರೆದಿರುವಿ. ನನ್ನ ಕಣ್ಣಿಗೆ ಇಂಗುಹಚ್ಚುವಿಯಾ! ತೋರಿಸು, ತೋರಿಸು" (ಇಪ್ಪಕ. ೨೩೪). **ಕಣ್ಣಿಗೆ ಕಣ್ಣು ಹತ್ತು** = ನಿದ್ರೆಹತ್ತು: ಮಗಳ ಬದುಕು ಹಸನಾಗಲಿ ಎಂಬ ನೆನಿಕೆಯಲ್ಲಿ ಕಣ್ಣಿಗೆ ಕಣ್ಣು ಹತ್ತಲಿಲ್ಲ (ಹೊಸಕ್ಷಿ. ೪೩). **ಕಣ್ಣಿಗೆ ಬೀಳು** = ಕಂಡುಬರು; ಗೋಚರವಾಗು; ಕಾಣಿಸು: ಮನೆಗೆ ಬಂದೊಡನೆ ಮೊದಲು ಕಣ್ಣಿಗೆ ಬಿದ್ದದ್ದು ನಿನ್ನ ಪತ್ರ (ರೂಢಿ). **ಕಣ್ಣಿಗೆ ಮಣ್ಣೆರಚು, ಕಣ್ಣಿಗೆ ಮಣ್ಣೆಸೆ** = (ಆಲಂ) ಮೋಸಮಾಡು: ಆ ಪರಂಗಿಯವನ ಕಣ್ಣಿಗೆ ಮಣ್ಣೆರಚಿ ಓಡಿಹೋಗಿ (ಬಂಕಿಮ. ೨೦೭); ಬಿಂಬಾಧರಾಮೋದ ಕರೆಯಲಿ ಮುಕ್ತಿಯ ಕಣ್ಣಿಗೆ ಮಣ್ಣೆಸೆದೇ (ಪಾಂಚಜ. ೫೯). **ಕಣ್ಣುಕಣ್ಣುಬಿಡು** = ೧. ಕಣ್ಣುಗಳನ್ನು ಕೆರಳಿಸು; ಕೆಕ್ಕರಿಸಿನೋಡು: ಈ ಮಾತುಗಳನ್ನು ಕೇಳಿ ಕರ್ಣನು ಕೋಪದಿಂದ ಕಣ್ಣುಕಣ್ಣುಬಿಡುತ್ತ (ವಚಭಾ. ೨೬೪). ೨. (ಆಲಂ) ಏನೂ ತೋಚದಾಗು; ದಿಗ್ಭ್ರಾಂತನಾಗು: ಇತರರು ಏನು ಮಾಡಬೇಕೆಂದು ತೋರದೆ ಕಣ್ಣುಕಣ್ಣುಬಿಡುತ್ತ ನಿಂತುಕೊಂಡಿದ್ದರು (ವಚಭಾ. ೨೧). **ಕಣ್ಣುಕತ್ತಲಿಡು, ಕಣ್ಣುಕತ್ತಲೆಬರು** = (ಆಲಂ) ಮೂರ್ಛೆ ಬೀಳುವಂತಾಗು; ಬವಳಿಬರು: ದೇವಾಂಬೆಗೆ ಸಿಡಿಲು ಬಡಿದಂತಾಯಿತು; ತಲೆ ತಿರುಗತೊಡಗಿತು; ಕಣ್ಣು ಕತ್ತಲಿಟ್ಟಿತು (ಚಿದೇವ. ೭೩); ಒಮ್ಮೊಮ್ಮೆ ಕಣ್ಣುಕತ್ತಲೆಬರುತ್ತಿತ್ತು (ಕಾಲೂರ. ೧೬ ಕಥಾಸಾರ). **ಕಣ್ಣುಕಾಣು** = ತಿಳಿ; ಅರಿವಾಗು: ಪೆಣ್ಣು ಪೆಣ್ಣಿಂದೇತಕೆ ಬೀಳುಗಳೆವರು ಕಣ್ಣುಕಾಣದ ಗಾವಿಲರು (ಹದಿಬ. ೪-೭). **ಕಣ್ಣುಕುಕ್ಕು** = ೧. ಕಣ್ಣು ಕೋರೈಸು: ಸೂರ್ಯನು ಕಣ್ಣುಕುಕ್ಕುವಂತೆ, ಬೆರಗುಗೊಳಿಸು (ವಚಭಾ. ೧೫೮); ಕಣ್ಣುಕುಕ್ಕುವಂಥ ಬಣ್ಣಬಣ್ಣದ ರೇಷ್ಮೆ ಬಟ್ಟೆಯನ್ನುಟ್ಟುಕೊಂಡು (ಪುನರು. ೧೩). ೨. (ಆಲಂ) ಹೊಟ್ಟೆಯುರಿಸು; ಕರುಬಿಸು: ಹಣವಂತನ ಸಿರಿ ಬಡವನ ಕಣ್ಣುಕುಕ್ಕುತ್ತದೆ (ರೂಢಿ).

ಕಣ್ಣುಕೂಡು, ಕಣ್ಣುಕೂರು = **೧.** ನಿದ್ರೆಬರು : ನಮ್ಮ ರೋಗಿಗೆ ಇದೇ ಈಗಷ್ಟೆ ಕಣ್ಣುಕೂಡುತ್ತಿವೆ! (ಸ್ಮೃತಿಚಿ. ೩೧೧); ಕರಿಯನಿಗೆ ಧನಿಗಳಲ್ಲಿ ದನಕಾಯಲು ಹೋಗಬೇಕಾಗಿತ್ತು. ಅವನು ಕಣ್ಣುಕೂರುತ್ತ ಅಲ್ಲಿಗೆ ಹೋದ (ರಕ್ತರೂ. ೪೧). **೨.** ಪ್ರೇಮಿಗಳ ದೃಷ್ಟಿಸೇರು. **ಕಣ್ಣುಕೆಂಪಗಾಗು** = **೧.** (ಅಲಂ) ಕೋಪವುಂಟಾಗು; ಕೆರಳು : ಡ್ಯೂಪ್ಲೆ ಒಂದು ಪಲ್ಲಕ್ಕಿಯಲ್ಲಿ ಊರಲ್ಲೆಲ್ಲ ಮೆರವಣಿಗೆ ಹೊರಟನು. ಬ್ರಿಟಿಷರ ಕಣ್ಣುಕೆಂಪಗಾಯಿತು (ಭಾರದ. ೪೨೪). **೨.** (ಅಲಂ) ಹೊಟ್ಟೆಯುರಿಯುಂಟಾಗು; ಕರುಬು : ಅವರಿಬ್ಬರಿಗೂ ಸಿದ್ದಣ್ಣನ ಏಳಿಗೆಯನ್ನು ನೋಡಿ ಕಣ್ಣುಕೆಂಪಗಾಗಿತ್ತು (ಪಂಜಪಂ. ೬೬); ಹೊಲ ಹಚ್ಚಗಾಯಿತು, ಒಡೆಯನ ಕಣ್ಣು ಕೆಂಪಗಾಯಿತು (ಗಾದೆ). **ಕಣ್ಣುತಪ್ಪಿಸು** = ಮೋಸಮಾಡಿ ಪಾರಾಗು : ಅತ್ತೆಯ ಮನೆಯವರ ಕಣ್ಣುತಪ್ಪಿಸಿ ಓಡಿಬಂದಿರಬೇಕೆಂದು ಕಾಣುತ್ತದೆ (ಅಂಬಿಕೆ. ೯). **ಕಣ್ಣುತಾಕು** = ದೃಷ್ಟಿಯಾಗು : ಮಗುವಿಗೆ ಯಾರದೋ ಕಣ್ಣುತಾಕಿದೆ (ರೂಢಿ). **ಕಣ್ಣುತುಂಬು** = ಕಣ್ಣೀರು ಬರು; ಹನಿಗೂಡು : ಆ ಗೋಳಿನ ಕಥೆ ಕೇಳಿ ಕಣ್ಣುತುಂಬಿತು (ರೂಢಿ). **ಕಣ್ಣುಬರು** = ಕಣ್ಣು ಬೇನೆಯುಂಟಾಗು; ಕಣ್ಣುಹತ್ತು : ಮಗುವಿಗೆ ಕಣ್ಣುಬಂದು ಅಳುತ್ತಿದೆ (ರೂಢಿ). **ಕಣ್ಣುಬೀಳು** = **೧.** ಮನಸ್ಸಾಗು; ಬಯಕೆ ಹುಟ್ಟು : ಆ ಮನೆಯ ಮೇಲೆ ಅವನ ಕಣ್ಣುಬಿದ್ದಿದೆ (ರೂಢಿ). **೨.** ದೃಷ್ಟಿತಾಕು : ಮಗುವಿನ ಮೇಲೆ ಕಂಡವರ ಕಣ್ಣುಬಿದ್ದೀತು ಜೋಕೆ (ರೂಢಿ). **ಕಣ್ಣುಮಿಟುಕಿಸು** = ಕಣ್ಣು ಮುಚ್ಚಿ ತೆರೆ; ಸನ್ನೆಮಾಡು; ಕಣ್ಸನ್ನೆಮಾಡು : "ಕುಮಾರಿ, ನಿನಗಿದೊ ನನ್ನ ನಮಸ್ಕಾರ" ಎಂದು ಮತ್ತೊಬ್ಬ ಕಣ್ಣುಮಿಟುಕಿಸಿದನು (ಪುನರು ೧೩೮); ತುಂಗಕ್ಕಬದಿಯ ಹೆಂಗಸಿನತ್ತ ಒಮ್ಮೆ ನೋಡಿ ಕಣ್ಣುಮಿಟುಕಿಸಿದ ರೀತಿ (ಮೂರುದಾ. ೧೪೪). **ಕಣ್ಣುಮುಚ್ಚಿಕೊಳ್ಳು** = **೧.** (ಅಲಂ) ನೋಡದೆ ಇರು; ಕಡೆಗಣಿಸು: ಸಣ್ಣಪುಟ್ಟ ದೋಷಗಳನ್ನೆಲ್ಲ ನೋಡುತ್ತಾ ಹೋದರೆ ಹೇಗೆ? ಅದಕ್ಕೆ ಕಣ್ಣುಮುಚ್ಚಿಕೊಳ್ಳಬೇಕು (ರೂಢಿ). **೨.** ಸಾಯು; ತೀರಿಹೋಗು : ಅವರು ಮೊನ್ನೆ ಮೊನ್ನೆ ಕಣ್ಣುಮುಚ್ಚಿಕೊಂಡರು (ರೂಢಿ). **ಕಣ್ಣುಹಾಕು** = **೧.** ಆಸೆಯಿಂದ ನೋಡು : ಹಿಂದೆ ಈ ಮೂಢನು ರುಕ್ಮಿಣಿಯ ಮೇಲೆ ಕಣ್ಣುಹಾಕಿದ್ದ (ವಚಭಾ. ೮೫). **೨.** "(ಒಂದು ಗಿಡದ) ಎಲೆ ಮೊಗ್ಗನ್ನು ಅಥವಾ ಅಂಕುರವನ್ನು (ಮತ್ತೊಂದು) ಗಿಡಕ್ಕೆ ಸೇರಿಸು" (Inoculate. ಇಂಕನಿ). **೩.** (ಅಸೂಯೆಯಿಂದ) ದೃಷ್ಟಿಹಾಕು : ಚೊಚ್ಚಲ ಮಗುವಿನ ಮೇಲೆ ಕಣ್ಣುಹಾಕಬೇಡ (ರೂಢಿ). **ಕಣ್ಣುಹಾಯಿಸು** = ದೃಷ್ಟಿಬೀರು; ನೋಡು : ಕಾಗದವೊಂದನ್ನು ಕೈಗೆತೆಗದುಕೊಂಡು ಕಣ್ಣುಹಾಯಿಸಿದನು (ಪುನರು. ೩೪೨). **ಕಣ್ಣುಹೊಡೆ** = ಕಣ್ಣುಮಿಟುಕಿಸು; ಕಣ್ಸನ್ನೆ ಮಾಡು : ಅವನು ಅವಳನ್ನು ನೋಡಿ ಕಣ್ಣುಹೊಡೆದು ಕರೆದನು (ರೂಢಿ).

[**ದೇ.** ‖ **ತಮಿ.** ಕಣ್; **ಮಲ.** ಕಣ್, ಕಣ್ಣು; **ತುಳು.** ಕಂಣ್, ಕಣ್ಣ್; **ಕೊಡ.** ಕಣ್ಣ್; **ತೆಲು.** ಕನು, ಕನ್ನು; **ಕೋಲಾ. ನಾಯ್ಕಿ. ಪರ್ಜಿ.** ಕನ್; **ಗಡಬ.** ಕಣ್; **ಗೊಂಡಿ.** ಕನ್; **ಕುಇ.** ಕನು; **ಕುವಿ.** ಕನ್ನು ಕನ್ನೊ; **ಕುರುಖ್.** ಕನ್ನ್; **ಮಲ್ತೊ.** ಗನು; **ಬ್ರಾಹೂಈ.** ಕನ್]

**ಕಣ್ಣು$_1$** 'ಕಳ್ಳ$_3$' ನೋ.

**ಕಣ್ಣು$_2$, ಖಣ್ಣು$_2$** (ನಾ). ಹೆಂಗಸರ ಕುಪ್ಪಸದ ಬಟ್ಟೆ, —ರವಕೆ ಬಟ್ಟೆ : ಬಣ್ಣದ ಕಣದ ಬಣ್ಣವಣ್ಣಿಗೆಯ ಜವಳಿಗಳನೆ . . . ಸೂಸಿದಾಗಳ್ (ಆದಿಪು. ೪–೩೪ ವ); ಒಂದು ಪಟ್ಟೆಯ ಕಣವನ್ನು ತರಿಸಿ . . . ಕೊಟ್ಟನು (ಕವಿಕ. ೫೫). **ಖಣ್ಣು$_2$** : ಸುಮಂಗಲೆಯರು ಖಣಗಳನ್ನು ಅರ್ಪಿಸಿ . . . ದೇವಿಯ ಉಡಿ ತುಂಬಿದರು (ಹಬ್ಬಬ. ೭೨); ಖಣವನ್ನು ಮಡಿಸಿ ಕೈಯಲ್ಲಿ ಕೊಟ್ಟು ಉಡಿ ತುಂಬಿದಳು (ಅಲ್ಪವಿ. ೬೮). [← **ಮರಾ.** ಖಣ]

**ಕಣ್ಣು$_3$** (ನಾ). **೧.** ತೀರ ಸಣ್ಣಚೂರು; ನುಚ್ಚು : "ಕಣಮೆನೆ ನುಚ್ಚು" (ಮಂಗರಾ. ೧೮೯–೩); ಈ ಗುಡ್ಡಗಳಲ್ಲಿ ಕಬ್ಬಿಣವೂ ಚಿನ್ನದ ಕಣಗಳೂ ದೊರೆಯುತ್ತವೆ (ಕಭಾಗ. ೮). **೨.** ಪದಾರ್ಥದ ಅತ್ಯಂತ ಸೂಕ್ಷ್ಮವಾದ ಅಂಶ; ಅಣು : ಅದರೊಳಗೆ ಸಣ್ಣ ಸಣ್ಣ ನೀಲಿ ಬಣ್ಣದ ಕಣಗಳು ಹುಟ್ಟುತ್ತವೆ (ಮುಂಬಯಿ. ೪–೫೫); ಪರಾಗದ ಕಣಗಳು ಇದೇ ರೀತಿಯಲ್ಲಿ ಸಿಕ್ಕಾಪಟ್ಟೆ ಕುಣಿದಾಡುವುದನ್ನು ಸೂಕ್ಷ್ಮದರ್ಶಕದ ಸಹಾಯದಿಂದ ನೋಡಬಹುದು (ಭೌತವಿ. ೨೮೬). 'ರಕ್ತಕಣ' ಪರಾ. **೩.** ತೀರ ಅಲ್ಪ; ಲವಲೇಶ: "ಅಲ್ಪಂ ಲವಂ ಲೇಶಮಣು ಕಣಂ" (ಮಂಗರಾ. ೧೨೭–೫). **೪.** ಬೆಂಕಿಯ ಕಿಡಿ, —ಚೂರು : "ಕಿಡಿಯೇಟಿಗೆ ಕಣಂ [ಪಾಠಾಂ. ಕು]ಸ್ಫುಲಿಂಗಮೆನಿಕ್ಕುಂ" (ಮಂಗರಾ. ೧೪–೮). [ಸಂ.]

**ಕಣಂಜ, ಕಣಜ$_1$** (ನಾ). ಧಾನ್ಯವನ್ನು ಸಂಗ್ರಹಿಸುವ ಸ್ಥಳ; ಬಿದಿರಿನ ಗೂಡೆ : ಅಕ್ಕಿ ಕಣಂಜದ ಮು ೬೩ ವರುಷ ೧ಕ್ಕೆ (ಬೊಂಕಶಾ. ೧೯೪೦, ಕುಮಟ. ೧೧೩–೨೮; 1475); ವಿಲಯ ಘೋರಾಂಧಕಾರದ ಕಣಂಜದಂತೋ ಪ್ರಳಯಕಾಲಮೇಘಂಗಳ ಕಠೋರದಂತೋ ಭಾವಿಸೆ (ಚೆಬಪು. ೪೬–೧೯). **ಕಣಜ$_1$** : "ಧಾನ್ಯಂಗಳಿಹ ಠಾವು ಕಣಜವೆನಿಕ್ಕು" (ಮಂಗರಾ. ೫೮–೮); ಕಣಜಂಗಳೊಳು ಪೊಕ್ಕು ನೆಲ್ಲುಗಳನುಜಿ ಕಟ್ಟಿ ಗಣಿಸದದ ಪೊತ್ತು (ಪೆರುರ. ೧೩೫–೬); ಭೂವರೇಣ್ಯಂ ತನ್ನ ಪಟ್ಟದ ದೇವಿ ಕಣಜದೊಳಿಮ್ಮ ಭತ್ತವನುಂಡೊಡಾಗ್ರಹಿಸಿ (ಬಸವು. ೨೪–೮೪); ಒಡೆಯಿರೋ ಕಣಜಗಳನೆಣ್ಣೆಯನಡಕಿರೋ ಸೀರೆಗಳ ದಿಂಡನು ಬಿಡಿಸಿರೋ (ತೊರರಾ. ೫–೮–೭); ಮಾರಿಯ ಮನೆ ಬಿಯ್ಯದ ಕಣಜಂ ಮತ್ತಾ ಠಾಜ ಕೃತಾಂತನ ಬಳಕೆಯ ಭಂಡಾರಂ (ಜಯಕಾ. ೭–೨೦); ಕಣಜದೊಳಿಹ ಬಹುಧಾನ್ಯವ ಬಗೆಯದೆ ಸೂಜಿಯ ಕೊಟ್ಟು (ಕಂನವಿ. ೧೧–೪೮).

[**ದೇ.** ‖ **ತಮಿ.** ಕಳಞ್ಚಿಯ; **ತುಳು.** ಕಣಜ; **ತೆಲು.** ಕಣಜ, ಕಣಂಜ / **ಮರಾ.** ಕಣಂಗ]

**ಕಣಂಜು, ಕಣಜ$_3$, ಕಣಜು$_1$** (ನಾ). ಹವಳ, ಮುತ್ತು ಹಾಗೂ ಸುಗಂಧ ದ್ರವ್ಯಗಳನ್ನು ತೂಗುವಾಗ ಬಳಸುವ ಒಂದು ಚಿಕ್ಕ ತೂಕದ ಪ್ರಮಾಣ : ವಿಕಲ್ಪಬಿಂದುಗೆ – ಕದಂಪು, ಕದಪು . . . ಕಣಂಜು, ಕಣಜು (ಶಮದ. ೩೬ ಪ್ರಯೋ); ಕುಂಕುಮದ ಕಣಂಜು ೨ ಕಸ್ತೂರಿ ಕಣಂಜು (ಸೌಇಇ. IX–ii, ೪೮೯–೩೯; 1513). **ಕಣಜ$_3$** : ಹವಳಕ್ಕೆ ಕಣಜ ಮುತ್ತಿಗೆ ಚವ್ವೂ, ಪಚ್ಚೆಗೆ ರತಿ (ಭಾಸ್ಕರ. ೭೭–೯). **ಕಣಜು$_1$** : ಮುತ್ತಿನ ಕಣಜಿನ ತೂಕಕ್ಕೆ :—ಹತ್ತು ಹಣವಡ್ಡ ತೂಕದ ಮುತ್ತಿನ ಕಣಜಕ್ಕು ಅದನು ಚೌವಡವಿನೊಳಂ ಪೊತ್ತುವುದು ಮತ್ತು ಬಿಗಿವುದು (ವ್ಯವಹಾ. ಅನುಬಂ. I, ೨); ಗಂಧ ತೊಲೆ ೧ಕ್ಕಂ ಅಡ್ಡಸಾಂದು ಜವಾದಿ ಪುಣುಗು ಪ್ರತಿ ಕಣಜು ಮೂರಕ್ಕೆ ಹಾಗ (ಎಕ. V, ಬೇಲೂರು. ೭೫–೮೪; 1382). [**ದೇ.** ‖ **ತಮಿ. ಮಲ.** ಕಟಿಞ್ಚು. / **ಸಂ.** ಕಲಂಜ]

**ಕಣಕ, ಕಣಿಕೆ$_2$, ಕಣುಕ** (ನಾ). ಹಸಿಹಿಟ್ಟು; ಕಲಸಿದ (ಗೋಧಿಯ) ಹಿಟ್ಟು : ಕಂಬಳಿಯಲ್ಲಿ ಕಣಕವ ನಾದಿದಂತೆ (ಬಸವ. ೨೬೦); ಆಡಗ ತಿಂಬರು ಕಣಕದಡಿಗೆ ಇರಲ್ಕೆ (ದೇದಾವ. ೩೩–೫೮); ಕಣಕ ಕುಟ್ಟೋ ಒನಕೆಲಿ ಬಡೆದರೆ ಕೈಂಕುಯಿ ರಾಗವ ಮಾಡುವಿರಿ (ಪುರಂದ. ೨–೯೦–೧); ಮಣೆಗೆ ಹತ್ತಿದ ಕಣಕ ಉರುಳುತ್ತಲೇ ಇರಲಿಲ್ಲ (ಚೆನ್ನಹಿಂ. ೪೧). **ಕಣಿಕೆ$_2$** : ಬುಧವಾರ ದಿನ ಎಂಣೆ ಘಾರಿಗೆ ದು ೪ ಗುರುವಾರ ದಿನ ಕಣಿಕೆ ಘಾರಿಗೆ ದು ೪ (ಕಇ. III–i, ೧೭–೬೮; 1556); ಕುಟ್ಟಿದ ಕಣಿಕೆಯೆರಡು ಭಾಗ ನೆನೆಯಿಕ್ಕಿದ ಸೊಜ್ಜಿಗೆ ಯೆರಡು ಭಾಗ (ಭೀಮಸೂ. ೧೭–೨). **ಕಣುಕ**: ಬಿಸಿಲು ತಾಕಿದವರಿಗೆ ಕಣುಕದ ಕಡುಬು ನೀಡುವುದು . . . ರಸಿಕಮಾರ್ಗವೆ (ಶಂಕದಾ. ೭–೮೧). [< **ಸಂ.** ಕಣಿಕ]

**ಕಣಕಡ್ಡಿ** (ನಾ). ಕಾಳು ಉದುರಿಸಿ ಉಳಿದ ತೆನೆ: ಕಣಕಡ್ಡಿಯನ್ನು ಉರುವಲಾಗಿ ಉಪಯೋಗಿಸುತ್ತಾರೆ (ರೂಢಿ). [ಕಣ$_1$ (< ಕಳ$_3$) + ಕಡ್ಡಿ]

**ಕಣಕಣ,** ಖಣಖಣ (ನಾ). ಹರೆ, ತಮಟೆ, ಹಲಗೆ ಮೊದಲಾದುವನ್ನು ಬಾರಿಸುವಾಗ ಹೊರಡುವ ಧ್ವನಿ, —ಶಬ್ದ. 'ಕಣಕಣಿಸು$_1$' ಪರಾ. **ಖಣಖಣ :** ಖಣಖಣಾಯಿತ ಖಲೀನ ಸಂಘಟ್ಟ ಸ್ಯಂದಮಾನ ಫೇನ ಸಲಿಲ ಸ್ರೋತಶ್ಶತಂಗಳಿಂದಂ (ಆದಿಪು. ೧೪–೯೫ ವ). [?]

**ಕಣಕಣಿ,** ಕಣಿಕಣಿ$_1$ (ನಾ). ಜ್ವರದ ಲಕ್ಷಣ; ಶಾಖ; ಕಾವು: ಕ್ಷಯದ ಆರಂಭವೇ ಮೊದಲು ಗೊತ್ತಾಗುವದಿಲ್ಲ. ಮೊದಲು ಸರ್ವಾಂಗದಲ್ಲಿ ಕಣಕಣಿಯೂ, ಒಣಕೆಮ್ಮೂ ಇರುವದು (ಔಷಧೀ. ೬೯). **ಕಣಿಕಣಿ$_1$ :** ಆದೇಕೋ ಬೆಳಗಿನಿಂದ ಮೈಯಲ್ಲಿ ಕಣಿಕಣಿ ಎನಿಸತೊಡಗಿದೆ (ರೂಢಿ). [?. / ತಮಿ. ಕಣಕಣ. / ಮರಾ. ಕಣಕಣ]

**ಕಣಕಣಿಸು$_1$** (ಕ್ರಿ). ಕಣಕಣ ಎಂದು ಶಬ್ದಮಾಡು: ಜಾಗಟೆ–ಗಂಟೆಗಳು ಢಣಢಣಿಸುವುವು. ತಾಳಗಳು ಕಣಕಣಿಸುವುವು (ಕನ್ನಜಾ. ೧೩). [ಕಣಕಣ + –ಇಸು$_3$]

**ಕಣಕಣಿಸು$_2$** (ಕ್ರಿ). ಕಣಕಣಿಯೆನಿಸು; ಇರುಸುಮುರುಸಾಗು: ಮತ್ತೊರ್ವಳ್ ತಾನೊಲ್ದು ಮೊಲ್ಲದಂತವನೊಳ್ ನೆಗಟ್ಟುವ ಮಗಳಣಕಕ್ಕೆ ತಲೆ ಕಣಕಣಿಸೆ (ಚಂದ್ರಪು. ೮–೭೨ ವ). [ಕಣಕಣಿ + –ಇಸು$_3$]

**ಕಣಕಲು** (ನಾ). ಒಂದು ಪಾತ್ರೆ (?) : ಪಾಯಸ ರನ್ನದ ಕಣಕಲಿಗೆ ಇಳಿವ್ಯಾಳ (ಲೋಕಗೀ. ೧೫೨); ರನ್ನದ ಕಣಕಲಿಗೆ ಇಳುವ್ಯಾಳ ಅಡಗಿಯ (ಲೋಕಗೀ. ೧೫೩). [?]

**ಕಣಕಾಲ್,** ಕಣಕಾಲು, ಕಣಿಕಾಲ್ (ನಾ). ಪಾದ ಮತ್ತು ಮಂಡಿಯ ಚಿಪ್ಪು ಇವುಗಳ ನಡುವಿನ ಭಾಗ: ಅಡಿ ತೊಡೆಪೊರ್ಕುಟುಂ ತೆಗಲೆ ಕೈ ಕಣ[ಪಾಠಾಂ. ಣಿ]ಕಾಲ್ ಕೊರಲೆಂಬಿವುಂ (ಪಂಪಭಾ. ೧೧–೧೩೬); ಕೈಗಳ್ ಕಡಿಖಂಡಮಾಗೆ ಕಣಕಾಲ್ಗಳ್ ನಟ್ಟುವುಗ್ರಾಜಿಯೊಳ್ (ಪಂರಾಮಾ. ೧೩–೫೫); ಅಕ್ಕಟಕ್ಕಟನ್ನುಡಿಯದೆ ಮಾಣದೀ ಕಟಿಯ ಭಾರದಿನೀ ಕಣಕಾಲ್ಗಳ್ (ಧರ್ಮಾಮೃ. ೭–೧೮೧). **ಕಣಕಾಲು:** "ಜಂಘಾ, ಪ್ರಸೃತಾ–ಈ ೨ ಕಣಕಾಲು" (ನಾಚಿರಾ. ೧೨೧); **ಪೊಯ್ಯೆ** ನಿರತಂ ಕಣಕಾಲು ಮೊಳಕಾಲ್ಮುಖಂ (ಎಕ. VIII, ಸೊರಬ. ೧೭೫–೧೨; 1156); ಕಣಕಾಲಂದುಗೆ ಘಲುಘಲುರೆನುತಲಿ (ಪುರಂದ. ೧–೧೩–೨); ಒಂದು ಮೊಸಳೆಯು ಅವನ ಕಣಕಾಲನ್ನು ಹಿಡಿದುಕೊಂಡಿತು (ವಚಭಾ. ೨೧). **ಕಣಿಕಾಲ್ :** ಕಣಿಕಾಲ್ ಕಡಿ ಬೆನ್ನೆರ್ದೆ ತೋಳ್ಗಲ್ಲ (ಕುರಾಸಾಂ. ೨೨–೯೨); ಕಣಿಕಾಲ್ ಮೆಲ್ಲಡಿಗಳಿಂದೆ ಮೆಱೆವಂ ಚೆಲ್ವಂ(ಚಿಕವಿ. ೩–೯೨). [ದೇ. ‖ ತಮಿ. ಕಣ್ಕೈಕ್ಕಾಲ್; ಮಲ. ಕಣಕ್ಕಾಲ್, ಕಣಙ್ಕಾಲ್]

**ಕಣಕಾಲು** 'ಕಣಕಾಲ್' ನೋ.

**ಕಣಕಿಸು** (ಕ್ರಿ). ಎಣಿಸು; ಲೆಕ್ಕಿಸು: ಗಣಿಕೆಯರ ಚತುರತೆಯು ಯೆಣಿಸುವರೆ ಜಗದೊಳಗೆ ಫಣಿಗಸಾಧ್ಯವು ಕೇಳು ಕಣಕಿಸುವೆ ನಾನು (ಹಮುಚ. ೬೯). [ಕಣಕ್ಕು$_0$ + –ಇಸು$_3$. / ℙ < ತಮಿ. ಕಣಕ್ಕು = ಲೆಕ್ಕ]

**ಕಣಕೋಱ** (ನಾ). ಮೊಳಕಾಲಿನವರೆಗೆ ಬರುವ ವಸ್ತ್ರದ ವೇಷ್ಟನ: ಕಂಬಿಯ ಬಿಲ್ಲುಂ ಪಿಡಿದ ಪುಳುಂಬಿನ ಮೂಱಂಬು ಪೆಗಲ ಬಲೆ ಕಣಕೋಱಂ [ಪಾಠಾಂ. ಬಲೆಣಕೊಱಂ, ಬಲೆಕಣ್ಣ ಕೋಱಂ] ಕೆಂಬೆತ್ತಸಿದಲೆ ತನಗಿರೆ ಶಂಬರರಿಪುವಂದು ಕೂಡೆ ವನಚರನಾದಂ (ನೇಮಿಪು. ೭–೧೭೬). [ಕಣ್$_3$ + ಕೋಱು$_0$ (< ಕೋಱು$_1$)]

**ಕಣಗಲ** (ನಾ). ಒಂದು ಜಾತಿಯ ಮರ (?) : ಕಣಗಲ (ಕರ್ಮಾಳೆ)–ಮಧ್ಯಮ ಆಕಾರದ ವೃಕ್ಷ. ಇದರ ಕಾಯಿಗಳನ್ನು ಪಶುಗಳು ಪ್ರೀತಿಯಿಂದ ತಿನ್ನುತ್ತವೆ (ಕಭಾಗೆ. ೩೭). [?]

**ಕಣಗಲು** 'ಕಣಗಿಲೆ$_1$' ನೋ.

**ಕಣಗಿಲ್** 'ಕಣಗಿಲೆ$_1$' ನೋ.

**ಕಣಗಿಲಿ** 'ಕಣಗಿಲೆ$_1$' ನೋ.

**ಕಣಗಿಲು** 'ಕಣಗಿಲೆ$_1$' ನೋ.

**ಕಣಗಿಲೆ$_1$,** ಕಣಗಲು, ಕಣಗಿಲ್, ಕಣಗಿಲಿ, ಕಣಗಿಲು, ಕಣಲಿಗೆ, ಕಣಿಗಿಲ್, ಕಣಿಗಿಲ, ಕಣಿಗಿಲೆ, ಕಣೆಗಿಲೆ, ಗಣಿಗಲು$_1$, ಗಣಿಗಲೆ, ಗಣಿಗಿಲು (ನಾ). ೧. ಚೂಪಾದ ಎಲೆಗಳಿರುವ ಒಂದು ಜಾತಿಯ ಹೂವಿನ ಗಿಡ; ಮತ್ತು ಅದರ ಹೂವು; ಕರವೀರ: ಮಾಲಗಾಜದ್ದೆರ್ವರ್ಗ್ಗ ನಡೆಯಿಸುವ ಕಣಗಿಲೆಯ ಗಿಡುವಿರ್ಪ್ಪತ್ತು (ಸೌಇಇ. XI-i, ೧೦೮–೧೮; 1069); ಕಬ್ಬಿನ ರಸ ಬಿಳಿಯ ಕಣಗಿಲೆಯ ಪುಷ್ಪ ಕಮ್ಮನಪ್ಪ ಗಂಧಾಕ್ಷತೆಯಿವಂ ಹೊಸ ಬಕ್ಕರೆಯಲ್ಲಿ ಇರಿಸಿ (ಬಾಲಚಿ. ೧೩೪–೧೫); ಫುಲ್ಲ ಕಂಕಣಂ ಕಣಗಿಲೆಯೊಂದಸಿಯ ಪಸಿಯೋಲೆ ನೆಲ್ಲಿಯ ತಿಸರಂ (ಸೂಕ್ತಿಸು. ೩–೨೩೫); ಕಣಗಿಲೆಯ ಬಂದುಗೆಯ ಕಕ್ಕೆಯ ಸಣಬ ಸರಿಸದ ಕುಸುಮದಲಿ ರಿಪುಗಣ ಭಯಂಕರನರ್ಚಿಸಿದನು (ಕುವ್ಯಾಅ. ೬–೯೩). ೨. ಒಂದು ತೆರದ ಬಾಣ: ಕಣಗಿಲೆಯ ಕೋಲುಳಿಯಂಬು ಕವಲಂಬಲಗಿನಂಬೀಸಾಡಿದವು ಪರಸೈನ್ಯ ಸಾಗರವ (ಕುವ್ಯಾದ್ರೋ. ೧೦–೪). **ಕಣಗಲು :** ೧. (ವೈಔಗಿ. ೫೬–೧೧೨೮). **ಕಣಗಿಲ್ :** ೧. ಕಿಸುಗಣಗಿಲ್ [ಪಾಠಾಂ. ಗಣಿಗಿಲೆ] (ಶಮದ. ೧೮ ಪ್ರಯೋ); ಬಜೆಯುಂ ಕಣಗಿಲ್ ವಿಳಂಗಂ ರಜನೀದ್ವಿತಯಂ ಕಟುತ್ರಯಂ (ಅಶ್ವಶಾ. ೧೧–೫೯). ೨. ಪರಿಗಳಿತ ಉಳಿಯಂಬು ಕಣಗಿಲ ಸರಳುಗೂಡಿಪ್ಪತ್ತು ಸಾವಿರವೆರಡು ಸಾವಿರವುಳಿದವೀ ನಾರಾಚನಿಕರದಲಿ (ಕುವ್ಯಾಕ. ೧೮–೨೧). **ಕಣಗಿಲಿ :** ೧. ಅಲ್ಲಿಂದ ತೆಂಕಲು ಕಣಗಿಲಿಯ ಮರನಲಿ ನಟ್ಟ ಕಲ್ಲು ೧ (ಎಕ. VIII. ತೀರ್ಥಹ. ೧೦೫–೫೩; 1405). **ಕಣಗಿಲು : ೧.** ಕಣಗಿಲು ಕಕ್ಕೆ ಬಿಕ್ಕೆಯಣಿಲೆ ಕದಳಿ ಹಾದರಿಯ ಮರ ಮೊದಲಾದುವುರ್ವಿಹವು (ಸಾಳ್ವಭಾ. ೫–೩); ಹಾವು ಮೆಕ್ಕೆ ಕಣಗಿಲು ಕತ್ತರಿ . . . ಇವೆಲ್ಲವುಗಳ ಬೇರು ಸಮಾನಂಗೊಂಡು ಅರೆದು (ವಿವೈವಿ. ೭೭). **ಕಣಲಿಗೆ : ೧.** ಪನ್ನೀರಿನಲಿ ವೇದಿಸಿದ ಕಣಲಿಗೆಯ ಕುಸುಮಗಳನು (ತೊರರಾ. ೬–೩೦–೪೩). ೨. ಕಂಡಳದ ಕಣಲಿಗೆಯ ಕೋಲುಗಳ (ತೊರರಾ. ೬–೩೪–೩೩); ನವಿಲುಗರಿ ಬಾಣದಲಿ . . . ಕಣಲಿಗೆ ಪವಣಿಕೆಯ ವಿಶಿಖದಲಿ ತಾರಕಿ ಮೀಂಟಿ ಹಳುಕಿನಲಿ (ಅಂಬಿಕಾ. ೩೨–೬೧). **ಕಣಿಗಿಲ್ : ೧.** "ಕರವೀರಮೆ ಪಡ್ಡಳಿಯು ಕಣಿಗಿಲೆಂದೆನಿಸಿರ್ಕುಂ" (ಕವಿಕಂ. ೭೦). **ಕಣಿಗಿಲ : ೧.** ಕಣಿಗಿಲದಲ್ಲಿ ರತ್ನಗಣಿಗಿಲ, ಚಂಡುಕಣಿಗಿಲ ಎತ್ತರ ಕಣಿಗಿಲ ಬಿಳಿಯ ಗಣಿಗಿಲ ಇವುಗಳ ಕೊಲ್ಲೆಗಳನ್ನು ಹಚ್ಚಬೇಕು (ಕೃಷಿಪ್ರ. ೨೦೦). **ಕಣಿಗಿಲೆ: ೧.** ಅಂಬಲಿಯ ಹಲವು ಬಗೆಯಂ ಮಾಡಿ . . . ಮರುಗ ದವನ ಬಾವನ್ನ ಬಕ್ಕೆಯೆಳೆಗಾಯಿ ಕಣಿ [ಪಾಠಾಂ. ಣ]ಗಿಲೆಯಿಂ ಯಿಾವೂವು . . . ತೀವಿ ಶೈತ್ಯಂಗೊಳಿಸಿ (ಸೂಪಶಾ. ೩–೬೯); ಸೌಂದರದ ಕಣಿಗಿಲೆಯ ಸಂಪಗೆಯ . . . ಅಲರ್ಗಳಿಂ ಹರನನರ್ಚಿಸಿದರ್ಗೆ (ವೀಶೈಪು. ೪–೨೧–೨); ಪಾದರಿ ಕಂಚಿ ಕಣಿಗಿಲೆ ದವನ (ಮೋಹತ. ೩–೧೫). **ಕಣೆಗಿಲೆ : ೧.** ಚೆಂಗಣಿಗಿಲೆ [ಪಾಠಾಂ. ಗಣಿಗಿಲೆ] (ಶಮದ. ೧೮೨ ಪ್ರಯೋ). **ಗಣಿಗಲು$_1$ : ೧.** "ಕರವೀರಃ . . . ಕೆಂಪು ಗಣಿಗಲಿಗೂ ಪೆಸರು" (ಸಿದ್ಧಾಂತಿ. ೧೧೪); "ಬಿಳೀ ಗಣಿಗಲಿಗುನ್ನೂ . . . ಕೆಂಪು ಗಣಿಗಲಿಗುನ್ನೂ ಹೆಸರು" (ಗುರುಬಾ. ೧೫೫). **ಗಣಿಗಲೆ :** ಗಣಿಗಲೆ ಸೊಪ್ಪು, ಆಡಿನ ಹಿಕ್ಕೆ . . . ವಾತಜ್ವರಂ ತೀರ್ಗುಂ (ಸಕವೈ. ೬೯). **ಗಣಿಗಿಲು : ೧.** "ಕರವೀರಃ . . . ಬಿಳೀಗಣಿಗಿಲಿಗೂ" (ಸಿದ್ಧಾಂತಿ. ೧೧೪).

[ದೇ. ? . / ತಮಿ. ಕಣವೀರ, ಕವಿರ, ಕಯಿರ; ಮಲ. ಕಣವೀರ; ತೆಲು. ಗನ್ನೆರು, ಗನ್ನೇರು. / ಹಿಂ. ಕನೇರಾ. / ಪ್ರಾ. ಕಣೇರ, ಕರವೀರ < ಸಂ. ಕರವೀರ]

**ಕಣಗಿಲ್ಲೆ**$_3$ (ನಾ). "ಬಿರುದಿನ ಆಭರಣ" (ಪಾರ್ಶ್ವಪು. ಟೀಕೆ) : ಚೈತ್ರ ಮೊಸೆದಳಿಮಾಳಾ ಕಿಂಕರರ್ಗೆ ಕೊಟ್ಟ ಕಣ[ಪಾಠಾಂ. ಣಿ]ಗಿಲೆಯಂ ಕಣ [ಪಾಠಾಂ. ಣಿ]ಗಿಲೆ ಪೋಲ್ತು ಪೂತು ಮಿಗೆ ಸೊಗಯಿಸುಗುಂ (ಪಾರ್ಶ್ವಪು. ೯-೧೩). [?]

**ಕಣಗಿಲೆವಾಡ** (ನಾ). ಒಂದು ಊರಿನ ಹೆಸರು : ಅರಿ ಮಂಡಳಿಕ ಗಜಕಂಠೀರವ ಆಹವಮಲ್ಲದೇವನ ಹಣುವಂ ಶತ್ರು ಕ್ಷತ್ರಾಬ್ಧಿ ಬಡಬಾನಳಂ ಕಣಗಿಲೆವಾಡ ದಾವಾನಳಂ ಕನ್ನಮ ದಿಶಾಪಟ್ಟಂ . . . ಶ್ರೀಮನ್ಮಹಾಮಂಡಳೇಶ್ವರ ಚಾವುಂಡರಾಯರಸರ್ (ಎಕ. VII, ಶಿಕಾರಿ. ೧೫೧-೧೭ ; 1047). [ಕಣಗಿಲ್ಲೆ$_1$ ? + ವಾಡ]

**ಕಣಗು** (ನಾ). ಒಂದು ಜಾತಿಯ ಮರ (ಕಿ). 'ಕೆಂಪುಕಣಗು' ಪರಾ. [?]

**ಕಣಚು** (ಕ್ರಿ). (?) ; "ಕಳಚು" (ಸಿದ್ಧವ. ಕೋಶ) : ಹುಣಚಿಯ ಮರದಲ್ಲೊಂದು ಹಣಚಿಯ ಬೆರಳಿಟ್ಟು ಹೋದಲ್ಲಿ ಆ ಹುಣಚಿಯ ಮರ ಹಣಚಿಯ ಮರವಾಗಿ ತಾ ಕಣಚಿ ಹೋದುದ ಕಂಡೆ (ಸಿದ್ಧವ. ೭೭೪). [< ಕಟಿಲ್ಚು ?]

**ಕಣಜ**$_1$ 'ಕಣಂಜ' ನೋ.

**ಕಣಜ**$_2$ 'ಕಡಂಜ' ನೋ.

**ಕಣಜ**$_3$ 'ಕಣಂಜು' ನೋ.

**ಕಣಜು**$_1$ 'ಕಣಂಜು' ನೋ.

**ಕಣಜು**$_2$ (ನಾ). ಒಂದು ಬಗೆಯ ಹಕ್ಕಿ ; ಪಿಂಗಾಕ್ಷ : "ಪಿಂಗಾಕ್ಷಮೆನೆ ಕಣಜು" (ಮಂಗರಾ. ೫೨-೯). [< ಸಂ. ಕಲಂಜ]

**ಕಣತಲೆ** (ನಾ). ಹಣೆಗೂ ಕಿವಿಗೂ ನಡುವೆ, ತಲೆಯ ಎರಡು ಪಕ್ಕಗಳ ಚಪ್ಪಟೆಭಾಗ ; ಮೆಲುಕು (ಉಕ) : "ಗಂಡಃ ಕಪೋಲಃ . . . ಕೆನ್ನೆಗಳ ಮೇಲ್ಭಾಗಕ್ಕೂ ಹಿಂಭಾಗಕ್ಕೂ ಹೆಸರು. ಕಟವಾಯಿ ಕಣೆ[ಣ]ತಲೆಕೆಳದಾಡೆಗಂ ಹೆಸರೆಂದು ಕೆಲವರೆನ್ನುವರು" (ಸಿದ್ಧಾಂತಿ. ೧೭೦) ; "ಕಣತಲೆ, ಕಪೋಲ, ಗಂಡ (ಸ್ಥಲ)" (Temple. ಇಂಕನಿ). [ಕಣ್$_0$ + ತಲೆ$_1$]

**ಕಣತಲೆನ್ಮೈಲಿ** (ನಾ). ಒಂದು ಬಗೆಯ ಸಿಡುಬು (ಕಿ). [ಕಣತಲೆ$_0$ + ಮೈಲಿ$_1$]

**ಕಣತಿ** 'ಕಣಿತಿ' ನೋ.

**ಕಣಪು**$_1$ (ನಾ). ಒಂದು ಬಗೆಯ ಕಬ್ಬಿಣದ ಈಟಿ, —ಬರ್ಜಿ. [ಸಂ.]

**ಕಣಪು**$_2$ (ನಾ). (ಕರಾ) ಒಂದು ಬಗೆಯ ಮೀನು. [? . / ತಮಿ. ಕಣವಾಯ್]

**ಕಣಪಾದ** (ನಾ). = ಕಣಕಾಲ್ : ಬಲದ ಕಣಪಾದದಲ್ಲಿ ಅಖಂಡಿತ ವೆಂಬ ಗಣೇಶ್ವರನೆನಿಸಿರ್ಪಿರಿ ಅಯ್ಯ ಎಡದ ಕಣಪಾದದಲ್ಲಿ ವ್ಯೋಮ ಕೇಶನೆಂಬ ಗಣೇಶ್ವರನೆನಿಸಿರ್ಪಿರಿ ಅಯ್ಯ (ಸಿದ್ಧೇಶ. ೧೮೮). [ಕಣ್$_0$ + ಪಾದ]

**ಕಣಪೊರಿ** (ನಾ). ಒಬ್ಬಾತನ ಹೆಸರು : ಬಾಣಿಗರಾಂಮಗನ್ನಕಪೊರಿ ಧಮ್ಮನಾಯಿಗಗೆ ಕೊಟ್ಟದು ಎರಡು ಸಾಲೆ ಅಟ್ಟುಜ್ಜೋದು ಅಚನ್ದ್ರ ತಾರಕಂ (ಎಕ. VII, ಶಿಕಾರಿ. ೪೫-೪೯ ; ಸು. 890 ?). [?]

**ಕಣಬ** (ನಾ). ಬಿಳಿಯ ಪಾದಗಳುಳ್ಳ ಕುದುರೆ : "ಅಡಿ[ಪಾಠಾಂ. ಎಡೆ] ಬೆಳ್ಪಾಗೆ ಕಣಬನಕ್ಕುಂ" (ಮಂಗರಾ. ೮೨-೧೫). [?]

**ಕಣಬಲಿ** 'ಕಳವಲಿ' ನೋ.

**ಕಣಬೆ** (ನಾ). ಒಂದು ಜಾತಿಯ ಬಳ್ಳಿ : "ರಾದ್ರಿಯೆನೆ ಕಣಬೆ" (ಮಂಗರಾ. ೪೪-೪೫). [< ಕಳವೆ$_1$ ?]

**ಕಣಮೆ** 'ಕಣುವೆ' ನೋ.

**ಕಣಯು**$_1$, ಕಣ್ಕೆ$_3$, ಕಣೆಯು$_1$ (ನಾ). ಉಡಿಯನ್ನು ಬಿಗಿಗೊಳಿಸಿ ನಿರಿಯನ್ನು ಸಿಕ್ಕಿಸುವ ಗಂಟು ; ಬಾಳೆಕಾಯಿಗುಂಟು ; ನೀವೀ ಗ್ರಂಥಿ : "ನಾರಿಯರ್ಕಳ ಜಘನಾಂಶುಕ ಗ್ರಂಥಿ ಕಣಯಮಂತದು ನೀವಿ ಯೆಂಬುದಕ್ಕುಂ" (ವಸ್ತುಕೋ. ೭೮-೨೧) ; "ನೀವೀ, ಉಜ್ಜಯಃ – ಈ ೨ ಕಣಯಂ" (ಹಲಾಯು. ೯೦-೩೯೩). **ಕಣ್ಕೆ**$_3$ : ಸ್ತ್ರೀಯ ಉಡಿಯ ಸೀರೆಯ ಕಣೆ (ನಾಚಿರಾ. ಕಿ). **ಕಣೆಯು**$_1$ : ನಡೆಯೆ ಚಟುಳತೆಗೆ ಕಣೆಯಂ ಸಡಿಲ್ದೊಡದನೆಡದಕೆಯ್ಯೊಳೋಸರಿಸುತ್ತುಂ (ಶಾಂತಿಪು. ೬-೯) ; ಕಣೆಯ ಮ ಳ ವ ಟ್ಟ ರೆ ಮುಯ್ವಂ ಬಳಸಿದ ಮೇಲುದು ಕುಚಮಂ ಬಿಗಿದಿರೆ ಗುರುನಿತಂಬೆ ದುಗುಲಮನುಟ್ಟಳ್ (ಜಗವಿ. ೧೦-೧೦೭) ; ಕಣೆಯದ ಚೆಲ್ವು ಕಂಪಣಮುಡಂಗದ ಸುಯ್ (ಪುಷ್ಪಪು. ೯-೪೫). [?]

**ಕಣಯು**$_2$ 'ಕಣೆಯು$_2$' ನೋ.

**ಕಣಯು**$_3$ 'ಕಣೆಯು$_3$' ನೋ.

**ಕಣಲಿಗೆ** 'ಕಣಗಿಲೆ$_1$' ನೋ.

**ಕಣವ** (ನಾ). ಒಬ್ಬಾತನ ಹೆಸರು : ಹೊಲೆಯರ ಕಣವೊಂಗೆ ಕೊಟ್ಟ ಮಣ್ಣ ಖ ೧ (ಎಕ. IV, ಗುಂಡ್ಲುಪೇ. ೯೧-೮ ; 975). [?]

**ಕಣವರಿಕೆ** 'ಕನವರಿಕೆ' ನೋ.

**ಕಣವು** 'ಕಳ್ವ$_3$' ನೋ.

**ಕಣವೆ** 'ಕಣುವೆ' ನೋ.

**ಕಣಶಿಲೆ** (ನಾ). ಒಂದು ಜಾತಿಯ ಕಲ್ಲು : ಬೀಳಗಿಯ ಖಣಿಗಳಲ್ಲಿ ದೊರೆಯುವ ಗುಲಾಬೀ ಬಣ್ಣದ ಕಣಶಿಲೆಯ ಜಾತಿಯ ಹಲಿಗೆಗಳು ವರ್ಣಸತಕ್ಕಂಥವು (ಕಭಾಗ. ೩೧) ; ಈ ಶಿಲೆಯು (ಕಣಶಿಲೆ) ಮೈಯೆಲ್ಲ ಕಾಳುಕಾಳಾಗಿ ಕಾಣಿಸುತ್ತಿರುವ ಕಾರಣ ಇದಕ್ಕೆ ಈ ಹೆಸರು ಬಂದಿದೆ (ಮುಂಬಯಿ. ೬-೨೫೦) ; ಬಳಪದ ಕಲ್ಲಿನ ಈ ಸ್ತಂಭಗಳು ದ್ರಾವಿಡ ರೀತಿಯ ಕಣಶಿಲೆಯ ಸ್ತಂಭಗಳಂತೆ ಎತ್ತರಲ್ಲದಿದ್ದರೂ ಕೌಶಲ್ಯಕ್ಕೆ ಅವಕಾಶ ಕೊಟ್ಟವೆ (ಹೊಯ್ಸವಾ. ೯). [ಕಣ್$_3$ + ಶಿಲೆ]

**ಕಣಸು**$_1$ (ನಾ). ೧. ನೋಟ ; ಕಾಣ್ಕೆ. ೨. ಅತಿಮಾನುಷ ದರ್ಶನ ; ಅಲೌಕಿಕವಾದ ತೋರಿಕೆ : ಏಕಾಗ್ರಚಿತ್ತರಾಗಿ ಕುಳಿತಾಗ ನಮ್ಮೊಳಗೆ ಮೂಡುವ ಪ್ರಕಾಶರೂಪಗಳೇ 'ಕಣಸು'ಗಳು (ಜೀಪಾಠ. ೨೫) ; ಕನಸೋ ಕಣಸೋ ನನಸೋ (ಸೂರ್ಯಪಾ. ೭-೧೧). [< ಕಾಣ್]

**ಕಣಸು**$_2$ 'ಕನಸು' ನೋ.

**ಕಣಸು**$_3$ 'ಕಡಸು$_1$' ನೋ

**ಕಣಾ** (ಅ). ಕಂಡೆಯಾ, ಅಲ್ಲವೇ ಎಂಬರ್ಥಗಳಲ್ಲಿ ಸಂಬೋಧನೆ ಯಲ್ಲಿ ಬಳಸುವ ಅವ್ಯಯ : ಕಲಿಯುಗದ ದುರ್ಮತಿ ಮನುಷ್ಯ ವ್ರಾತ ಹೀನಾಕೃತಿ ಕಣಾ (ಕುವ್ಯಾಅ. ೧೦-೩೩) ; ಬಣಗುಮಾನವ ಕೇಳು ಕಲಿದೂಷಣ ಕಣಾ ಬಂದವನು (ತೊರರಾ. ೩-೬-೧೭) ; ಈತನೆ ಜಗದ್ಗುರು ಕಣಾ (ಜೈಮಿಭಾ. ೬-೪೮). [< ಕಾಣ್]

**ಕಣಾದ** (ನಾ). ೧. ಕಣಗಳನ್ನು ತಿನ್ನುವವನು. ೨. ಚಿನ್ನ, ಬೆಳ್ಳಿ ಕೆಲಸಮಾಡುವವನು ; ಅಕ್ಕಸಾಲಿಗ. (ಕಿ). ೩. ವೈಶೇಷಿಕ ದರ್ಶನವನ್ನು ರಚಿಸಿದ ಒಬ್ಬ ಋಷಿಯ ಹೆಸರು. [ಸಂ.]

**ಕಣಾನ್ನ** (ನಾ). ನುಚ್ಚಕ್ಕಿಯ ಅನ್ನ : ಅನುದಿನದಿ ವಿಶ್ವಕುಟುಂಬಿ ಕೊಟ್ಟ ಕಣಾನ್ನ ಕುತ್ಸಿತ ಕಂಬಳಿಯೆ ಸೌಭಾಗ್ಯವೆಂದವನಂಘ್ರಿಗಳ ಭಜಿಸು (ಹಸಾರ. ೫-೭). [ಕಣ್$_3$ + ಅನ್ನ$_3$]

**ಕಣಾವಳಿ** (ನಾ). ಕಣೆಗಳ ಆವಳಿ ; ಬಾಣಗಳ ಸಮೂಹ : ತಿರುಪು ಸದರವು ನಿನಗೆ ಗತಿ ಕಾಹುರ ಕಣಾವಳಿ ಕಂಠಗತ ಬಾಹಿರನು ನೀನೆಲೆ ಕರ್ಣ ಫಡ ಹೋಗೆನುತ ತೆಗೆದೆಚ್ಚ (ಕುವ್ಯಾಕ. ೨೪-೫೧). [ಕಣೆ$_1$ + ಆವಳಿ$_1$ (= ಆವಲಿ)]

**ಕಣಾಳಿ** (ನಾ). ಕಣಗಳ ಸಮೂಹ; ಸಣ್ಣ ಚೂರುಗಳ ಗುಂಪು: ಮಿಕ್ಕು ಸೂಸುವ ತೂಱುಗಿಡಿಗಳ ಕಣಾಳಿಗಳ ಕಾಱಿಡುವ ಪೊತ್ತುಗೆಗಳ ಕೊಕ್ಕರಿಸುತುಗುವ ತನಿಗೆಂಡದಿಂಡೆಗಳ (ಜೈಮಿಭಾ. ೧೩–೧೨).
[ಕಣ$_3$ + ಆಳಿ$_4$ (= ಆಲಿ$_4$)]

**ಕಣಾಳಿಗೆ** (ನಾ). (?): ಮಾಧವಭಟ್ಟರ್ ಕಾರ್ತಿಕಾರಾಧನೆಗೆ ಕೊಟ್ಟ ಮೂಲಸ್ಥಾನದ ಕೇರಿಯಂ ನಿಜಾವತಿ × × ತಿ ಪದತಿ ಕಣಾಳಿಗೆ ವದ್ದದ ಮನೆ ೧ (ಕಇ. I, ೩೩–೩೦ ; 1246). [?]

**ಕಣಿ$_1$** (ನಾ). ೧. ನೋಟ; ಕಾಣ್ಕೆ. ೨. ಮುಂದಿನ ಜೀವನದಲ್ಲಿ ಬರಲಿರುವುದು; ಭವಿಷ್ಯ ಫಲ; ಪ್ರಯೋಜನ: ಗುಜುಗುಮ್ಮೆಂದು ಪಸಿದಿರ್ದು ಬೆದಬೆದ ಬೆಂದಿನಿಬರ್ ಕಟ್ಟಿಕೊಳ್ವ ಕಣಿಯೇಂ ಪೇೞಿಂ (ಆದಿಪು. ೯–೯೦); ಪ್ರಣವದ ದಿವ್ಯಸ್ವರೂಪವ ಕೇಳಿಂ ತ್ರಿಣಯನ ಭಕ್ತಿಯ ಕಣಿಯನು ಕೇಳಿಂ (ದೀಕ್ಷಾಬೋ. ೧೧೫–೧೭); ಕಣಿಯ ಹೇಳಬಂದೆ ನಾನು ಕಣಿಯ.ಕೇಳೆ ನೀನು (ಶಿವಗೀ. ೧೫೪–೭೯೧); ಏನವನ್ ಪೇೞ್ದ ಕಣಿ? ನೀನ್ ಕಂಡ ಕಣಿಯುಮೇನ್? (ಅಶ್ವತ್ಥಾ. ೩೦–೫೯೦); ಕಳ್ಳನ ತಾಯಿ ಸಂಗಡ ಕಣಿ ಕೇಳಿದ ಹಾಗೆ (ಗಾದೆ). ೩. ಹೇಳಿದ್ದನ್ನೇ ಹೇಳುವುದು: ನಿನ್ನ ಕಣಿ ತೆಗೆಯಬೇಡ (ರೂಢಿ). 'ಕಣಿವೇೞ್' ಪರಾ.
[< ಕಾಣ್ ?. / ತಮಿ. ಕಣಿ = ಜ್ಯೋತಿಷಿ]

**ಕಣಿ$_2$, ಖಣಿ$_1$** (ನಾ). ಕಲ್ಲು; ಶಿಲೆ: ಸೃಷ್ಟಿಯ ಮೇಲಣ ಕಣಿಯ ತಂದು ಅಷ್ಟತನುವಿನ ಕೈಯಲ್ಲಿ ಕೊಡಲು . . . ತಪ್ಪಿ ಸೃಷ್ಟಿಯ ಮೇಲೆ ಬಿದ್ದರೆ ಕೆಟ್ಟೆನಲ್ಲಾ (ಅಪಚಂ. ೫೧–೨೧೭); ಪೃಥ್ವಿಯಲ್ಲಿ ಹುಟ್ಟಿದ ಕಣಿಯನೆ ತಂದು ಅಷ್ಟತನುವಿನ ಕೈಯಲ್ಲಿ ಕೊಡಲು . . . ನಾ ಹೇಗೆ ಪೂಜಿಸಲಯ್ಯಾ (ಮೋಳಿಮಾ. ೫೦–೨೦೯); ವತ್ಸ ಪ್ರಹರಾ[ಲಾ]ದಂಗೆ ಕಂಬದೊಳಿರ್ದ್ದಂತೆ ಕಣಿಯೊಳಿರ್ದ್ದಪನೆಂದು ಪೇೞ್ದು ಬಿಜಯಂಗೆಯ್ದು (ಎಕ. VII, ಶಿಕಾರಿ. ೧೮೬–೫೧ ; 1200 ?); ಪರುಷದ ಕಣಿ ಹಸ್ತದೊಳಿದೆ (ಶಂಕಕಂ. ೧೧೩). **ಖಣಿ$_1$**: ಮಣಿಯನೆಣಿಸಿ ಕಾಲವ ಕಳೆಯಬೇಡ ಖ[ಪಾಠಾಂ. ಕ]ಣಿಯ ಪೂಜಿಸಿ ಕಾಲವ ಕಳೆಯಬೇಡ (ಅವಚಂ. ೧೯೦–೮೫೫). [?]

**ಕಣಿ$_3$** (ನಾ). ಸ್ಥಳ; ಜಾಗ; ತಾವು (ಕ). [?. / ತಮಿ. ಕಣ್]

**ಕಣಿ$_4$** (ನಾ). ೧. ಉರುಳು; ಪಾಶ; ಹಗ್ಗ; ಕುಣಿಕೆ: ಕಣಿಯ ಕುಣಿಕಿಲ ಬಂಡಿಯಂ ಬಚ್ಚಣಿಸಿ ನಂದಿ ಪತಾಕೆಗಳ ತೋರಣವನದಱೊಳಳಂಕರಿಸಿ ಚವರಂಗಳಂ ಕಟ್ಟಿ (ಬಸಪು. ೫೬–೫). ೨. ಕ್ಲೇಶ: 'ಬಲ್ಕಣಿ' ಪರಾ. [< ಕಣ್ಣ ?]

**ಕಣಿ$_5$** (ನಾ). ತಗ್ಗು; ಕಂದಕ: ಪಡುವ ಬೆಟ್ಟದ ತಪ್ಪಲ ಕಣಿಯ ಬಟ್ಟೆಯಿಂ (ಸೌಇಇ. XI–i, ೬೫–೪೭ ; 1029); ಸುತ್ತಲೂ ಕಣಿಯನ್ನು ಹೊಡೆದು, ಕೋಟೆಯಂಥ ಆವಾರವನ್ನು ಹಾಕಿಸಿ ಅವರು ಪಟ್ಟ ಕಷ್ಟವೆಷ್ಟು! (ಬಿಟ್ಟಜೀ. ೬೪); ಗಾಡಿಚಕ್ರ ಕಣಿಗೆ ಬಿದ್ದು, ನಾವೆಲ್ಲ ದಾರೀಲಿ ಹೋಗೋರು ಚಕ್ರಕ್ಕೆ ಕೈ ಕೊಟ್ಟು ಎತ್ತಿ, ನೂಕಿ, ದಾರೀಗೆ ತರಬೇಕಾಯ್ತು (ಮಲೆಮ. ೧೭೬). [?]

**ಕಣಿ$_6$, ಖಣಿ$_2$, ಗಣಿ$_2$, ಗನಿ** (ನಾ). ಆಶ್ರಯಸ್ಥಾನ; ಆಕರ: ಮದನನ ಕೈದುವೆಲ್ಲಿದಂ . . . ವಿಳಾಸದ ಕಣಿಯೆಲ್ಲಿದಂ ಚದುರ ಪುಟ್ಟಿದನೆಲ್ಲಿದಂ (ಆದಿಪು. ೩–೧೫); ಕಂಪಿನ ಕಣಿಯೆನಿಸಿದುದುದ್ಯಾನೈಕದೇಶದೊಳ್ (ಶಾಂತಿಪು. ೭–೧೪೧ ವ); ಸದ್ಗುಣದಿಕ್ಕೆರ್ದಾಣಮಾಪ್ಪಿರ್ನ ಕಣಿ (ಸೌಇಇ. XI–i, ೬೫–೩೮ ; 1029); ಪೆಂಪಿನ ಕಣಿ ಶಿಷ್ಟವರ್ಗ್ಗದ ತವರ್ಮ್ಮನೆ (ಎಕ. VIII, ಸಾಗರ. ೮೦–೧೬ ; 1096); ಅಕ್ಕರಿಗರಾಭರಣಂ ಬುಧರಿಚ್ಚೆಯಚ್ಚು ವೀರದ ಕಣಿ (ಸೂಕ್ತಿಸು. ೧–೨೫); ಮಕ್ಕಳ ಶಿರೋಮಣಿಯೆ ಸಿಂಗರದ ಕಣಿಯೆ ಜೋ (ಚಬಪು. ೫–೨೮); ಸ್ಲೇಟಿನ ಕಲ್ಲುಗಳನ್ನು ಕಣಿಗಳೊಳಗಿಂದ ಅಗಿದು ತೆಗೆಯುತ್ತಾರೆ (ಮುಂಬಯಿ. ೩–೫೭). **ಖಣಿ$_2$**: ಖಣಿಗಳಲ್ಲಿ ದೊರೆಯುವ ಧಾತುಗಳ ಕಲ್ಲುಗಳಲ್ಲಿ ಗಂಧಕವು ಮಿಶ್ರವಾಗಿರುತ್ತದೆ (ಮುಂಬಯಿ. ೬–೧೩); ಭಾರತದ ಪ್ರಾಚೀನ ಸಂಸ್ಕೃತಿಯ ಖಣಿಯಂತಿರುವ ವೇದೋಪನಿಷತ್ತುಗಳ ಹಿರಿಮೆಯನ್ನು ಸಾರಿ (ಭಾರದ. ೪೨೭). **ಗಣಿ$_2$**: "ಗಣಿ – ಖನೀ = ಆಕರ" (ತದ್ಭಕೋ. ೧೦); ಬ್ಯಾಂಕೂರಾ ಡಿಸ್ಟ್ರಿಕ್ಟ್ ಕಲ್ಲಿದ್ದಲು ಗಣಿಗಳಿಂದ ಪ್ರಖ್ಯಾತವಾಗಿದೆ (ಭೂಗೋಳ. ೪೭); ಅವರು ಗುಣಗಳ ಗಣಿ (ಬಾಣಅ. ೮೧). **ಗನಿ**: ನಿನ್ನ ತಾಯ್ಗನಿ ಎಲ್ಲಿ ? ಅಗೆದ ಗುದ್ದಲಿ ಎಲ್ಲಿ ? (ಗೀವಿಂ. ೩೦–೭೫); ಆಕೆ ಸಿರಿ–ಸೌಂದರ್ಯಗಳ ಗನಿ–ಹೆಗ್ಗನಿ (ರೂಪಸಂ. ೩೯). [< ಸಂ. ಖನಿ, ಖನೀ]

**ಕಣಿ$_7$, ಕಣೆ$_4$** (ನಾ). [ಸಂಗೀತ] ಹಾಡುವ ಅಥವಾ ನುಡಿಸುವ ಧ್ವನಿಯ ಘಾತ, —ನಾದ; ಮೋಹದ ಗುಣವುಳ್ಳ ಗಟ್ಟಿಯಾದ ಧ್ವನಿ; ಹೆಂಗಸರ ಶಾರೀರದ ನಾದ: ಇದರ ನಾದ ಸ್ವಲ್ಪ ಕಣಿ ಹೆಚ್ಚಾಗಿದ್ದರೂ . . . ಬಹಳ ಮೃದು ಮಧುರ ಗಂಭೀರವಾಗಬಲ್ಲುದು (ಗಾನಕ. ೯೮); ಹಾಡಿಕೆ ಉತ್ತಮವೆನಿಸಬೇಕಾದರೆ ಹಾಡುವವರ ಶಾರೀರವೂ ಕಣಿಯಾಗಿರಬೇಕು (ಸಾಹಿಜೀ. ೧೦). **ಕಣೆ$_4$**: ಗಮಕಂ ತಿರುಪಿಂಪು ನುಣ್ಪು ನೇವಣೆ ಕಣೆ ಬಣ್ಣದೊಡ್ಡವಣೆ ಕಾಳಸಿ ಬೈಸಿಕೆ . . . ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮಂ (ಜಗವಿ. ೫–೩). [?]

**ಕಣಿಕ** (ನಾ). ೧. = ಕಣಕ: ಖರ್ಜೂರದ ಪಣ್ಣಂ ನಾರಿಕೇಳಮಂ ಶರ್ಕರೆಯಂ ಪುದಿದಡುಗೆ ಕಣಿಕದೊಳ್ ತುಪ್ಪದೊಳದು ರಸಭರಿತಮಪ್ಪ ಪೂರಿಗೆಯಕ್ಕುಂ (ಲೋಕೋಪ. ೮–೮); ಅಕ್ಕಿ ಕಣಿಕವ ರಾಶಿಮಾಡಿದರು ಮಹಮನೆಯ ಉಗ್ರಾಣಕೆ (ಸಿದ್ಧರಾ. ೮–೫೦); ದೇವರಿಗೆ ಅವಸರ ಮೂರಕ್ಕಂ ಅಕ್ಕಿ ವೊಕ್ಕಳ ಕಣಿಕ ಮೂರು ಮಾನ (ಎಕ. XI, ಮೊಳಕಾ. ೩೧–೮ ; 1386); ಸಜ್ಜಗೆಯ ಪಾಯಸವ ಸುಱಿದು ಕಣಿಕದಿ ಸಮೆದ ಕಜ್ಜಾಯವುಮಂ ಮೆದ್ದು (ಸಮ್ಯಕೌ. ೭–೨೮); ಉಣಲಡಿಗೆ ಹಲವಾಗಿ ಕಣಿಕ ತಾನೊಂದಯ್ಯ (ಸರ್ವಜ್ಞ. ೨೩೭). ೨. ನುಚ್ಚು; ರವೆ: "ಕಣಿಕಂ – ನುಚ್ಚು" (ಕಾಶಕ್ಕ. ೧೩೯). [ಸಂ.]

**ಕಣಿಕಟಿಲು** (ಅ). ಕತ್ತಿಗಳು ಒಂದಕ್ಕೊಂದು ತಾಗಿದಾಗ ಉಂಟಾಗುವ ಧ್ವನಿಯನ್ನು ಅನುಕರಿಸುವ ಶಬ್ದ: ಹೊಡೆವ ರಣಭೇರಿಯಿಂ ಬೊಬ್ಬೆಯಬ್ಬರಗಳಿಂ ಕಣಿಕಟಿಲು ಮಡುಹೆಂದೆನೆ ಕಡಿದಾಡುತಿರ್ದ ಡಾಕಾಶದೊಳು (ವೀಶೈವು. ೩–೧೦–೨೪); ಕಡಿದರಿಬ್ಬರು ಕತ್ತಿ ಕಣಿಕಟಲುಯೆನಲೂ (ಕರಿಕ. ೬೪–೧). [?]

**ಕಣಿಕಣಿ$_1$** 'ಕಣಕಣಿ' ನೋ.

**ಕಣಿಕಣಿ$_2$** (ಅ). ಅನುಕರಣ ಶಬ್ದ (?): ತಾಯ್ಗುರಮನೆಯಿಂದ ತೆರಳಲೊಡನೆ ಮುಂದೆ ವಾಯಸ ತಿದ್ದಿದುವೆರಡು ಬಾಯುಬ್ಬಿ ಕಣಿಕಣಿಯೆಡದಲ್ಲಿ ಕರೆದುವಾ ರಾಯ ಪೋಪಲ್ಲಿ ಪಲ್ಲಿಗಳು (ಭರಚ. ೨೧–೪೨). [?]

**ಕಣಿಕಪುಷ್ಪ** (ನಾ). ಒಂದು ಬಗೆಯ ಹುಲ್ಲುಹೂವು: ಚಿನ್ನದಂತೆ ಥಳಥಳಿಸುವ ಸುವಾಸನೆಯ ಕಣಿಕಪುಷ್ಪಗಳು ದಾರಿಯಲ್ಲೆಲ್ಲಾ ಬೆಳೆದು ಕಣ್ಣಿಗೆ ಆನಂದವನ್ನುಂಟು ಮಾಡುತ್ತವೆ (ಪ್ರವಾಇ. I, ೨೩೭). [ಕಣಿಕ$_0$ + ಪುಷ್ಪ]

**ಕಣಿಕಾಱ** (ನಾ). ಕರಣಿಕ; ಲೆಕ್ಕ ಇಡುವವನು: ಅವರ ಕೋಲ್ಗಾಱ ಗಣಪತಿಯು ಪೆಜ್ಜರ್ಂಕದ ಕಣಿಕಾಱ ರಕ್ಕಸಗಂಗನು (ಎಕ. XI, ದಾವಣ. ೧೪೧–೩೦ ; 1065). [ಕಣಿ ? + –ಕಾಱ. / ತಮಿ. ಕಣಿಚಕ್ಕಾರನ್]

**ಕಣಿಕೆ$_1$** (ನಾ). ಸೆಜ್ಜೆ, ಜೋಳ ಮೊದಲಾದುವುಗಳ ತೆನೆ ಕತ್ತರಿಸಿದ ಮೇಲೆ ಉಳಿದ ಕಡ್ಡಿ: ಕಣಿಕೆಯಿಂ ಕೊಯಿಲೆಯೊಳು ಮರಳಿ ತೆನೆಗಳ ಸೃಜಿಸಿ ಕೊಯ್ದೊಡನೆ ಪುಟ್ಟುತಿರಲು (ಲಶಿಚಂ. ೩೭–೧೨೦); ಕಣಿಕೆಯ ರಾಶಿಯಂತೆಣಿಕೆಯಿಲ್ಲದೆ ಬಿದ್ದರು (ಅಮುಸಾಂ. ೨–೬೯); ಕಣಿಕೆ ಮೇವು ಬಿಟ್ಟಿಯಾಗಿ ಎತ್ತುವ ಆಗತ್ಯವೂ ಇಲ್ಲ (ಪ್ರೇಮಾಶ್ರ. ೪೮).
[ದೇ. ॥ ತುಳು. ಕಣಕ್ = ಸೌದೆ ; ತೆಲು. ಕಣಿಕ = ಕೋಲು]

**ಕಣಿಕೆ$_2$** 'ಕಣಕ' ನೋ.

**ಕಣಿಕೆ$_3$** (ನಾ). ಲೆಕ್ಕ; ಅಳತೆ (?): ಇಂಗುಳದ ಬೇರಿನ ತಿಗುಡು, ಚೂರ್ಣವಂ ಮಾಡಿ, ಅದರ ಸಮಾನ ಕಣಿಕೆ ಆಡಿನ ಹಾಲಲ್ಲಿ, ಅತುಪ್ಪದಲ್ಲಿ ತೆಗೆದುಕೊಳ್ಳಲು ಎಂತಹ ಕೈಮುಸುಕು ಸಹ ಮಾಣ್ಗುಂ (ವಿವೈವಿ. ೬೮). [?. / ತಮಿ. ಕಣಕ್ಕು]

**ಕಣಿಕೆ$_4$** (ನಾ). ೧. ತೀರ ಸಣ್ಣ ಕಣ; ವಸ್ತುವಿನ ಅತಿಸೂಕ್ಷ್ಮ ಭಾಗ. ೨. ನೀರಿನ ಕಣ, —ಬಿಂದು: (ಕಿ). ೩. ಒಂದು ಬಗೆಯ ಮರ; ಅಗ್ನಿಮಂಥವೆಂಬ ಮರ; "ನೆಲ್ಲಿಗಿಡದ ಭೇದಗಳು" (ಅಮರ. ಟೀಕೆ). [ಸಂ. ಕಣಿಕಾ]

**ಕಣಿಕ್ಕೈ** (ನಾ). ಮೊಳಕ್ಕೈಯಿಂದ ಮಣಿಕಟ್ಟಿನವರೆಗಿರುವ ಕೈಯ ಭಾಗ; ಮುಂಗೈ: ಅಡಿಗೆ ಕಡುಮೆಲ್ಪನೊಪ್ಪಿಸುವೆಡೆ ಕಣಿಕ್ಕೈಯ [ಪಾಠಾಂ. ಕಣಿಕಯ್ಯ, ಕರ್ಣಿಕೆಯ] ಡಿಯನೂಜಿಕೆ ನಸುಗೆಸಜಿಂ ಕೇಸಡಿಯೆಸೆದುವು ಕತ್ತುರಿಯಂ ತೊಡೆಹಂತಿರೆ ನಡೆವ ಸುಕರ ಕವಿಶೇಖರನಾ (ಲೀಲಾವ. ೫–೪೫). [ದೇ. ‖ ತಮಿ. ಕಣ್ಕೈಕ್ಕೈ; ಮಲ. ಕಣಜ್ಕೈ]

**ಕಣಿಗಾತಿ** 'ಕಣಿಗಾರ್ತಿ' ನೋ.

**ಕಣಿಗಾರ** (ನಾ). ಕಣಿ ಹೇಳುವವನು: ಮೇಷೇಗಳಿಟ್ಟಹನು ತಿರಿದುಂಬ ಕಣಿಗಾರನನು (ಮೂರುನಾ. ೧೧೧–೪೪೧).
[ಕಣಿ$_1$ + – ಗಾರ$_1$ (< – ಕಾಜ)]

**ಕಣಿಗಾರ್ತಿ**, ಕಣಿಗಾತಿ (ನಾ). ಕಣಿಹೇಳುವವಳು; ಕೊರವಂಜಿ (ಕಿ). **ಕಣಿಗಾತಿ**: (ಕಿ). [ಕಣಿಗಾರ + –ತಿ$_1$ (< – ಇತ್ತಿ)]

**ಕಣಿಗಿಲ್** 'ಕಣಗಿಲೆ$_1$' ನೋ.

**ಕಣಿಗಿಲ** 'ಕಣಗಿಲೆ$_1$' ನೋ.

**ಕಣಿಗಿಲಕಬ್ಬು** (ನಾ). ಒಂದು ಜಾತಿಯ ಕಬ್ಬು: ಕನ್ನಡ ಭಾಷೆಯಲ್ಲಿ ಹಿರೇಕಬ್ಬು ಮತ್ತು ಕಣಿಗಿಲಕಬ್ಬು ಎನ್ನುತ್ತಾರೆ (ಕೃಷಿಪ್ರ. ೧೮೨).
[ಕಣಿಗಿಲ ? + ಕಬ್ಬು (< ಕರ್ಬು$_1$)]

**ಕಣಿಗಿಲೆ** 'ಕಣಗಿಲೆ$_1$' ನೋ.

**ಕಣಿಗಿಲೆಲೆ** (ನಾ). ಕಣಗಿಲೆ ಎಲೆಯ ಆಕಾರದಲ್ಲಿರುವ ಒಂದು ಬಗೆಯ ಬಾಣ (?): ಹಿಳಿಕು ಕವಲಂಬು ಬೋಳೆವಿದಿರೆಲೆ ಮಿಟ್ಟೆಯಾಮೊಳೆ ತೊಡಕು ನಾರಾಚ ಕಣಿಗಿಲೆಲೆ [ಪಾಠಾಂ. ಕಣಗಿಲೆಲೆ, ಕಣಿಗಿಲೆಗ] ಸಿಲುಕು ಬಳೆ . . . ಎಂಬ ನಾನಾ ಸರಳನು ಸೆಳೆದು (ಸೋಮಚ. ೫–೨೬).
[ಕಣಿಗಿಲ್ (< ಕಣಗಿಲೆ$_1$) + ಎಲೆ$_1$]

**ಕಣಿಗೆ** 'ಕಣ್ಣಿಗೆ' ನೋ.

**ಕಣಿತಿ**, ಕಣಾತಿ (ನಾ). ಕಣಿ ಹೇಳುವವಳು; ಕೊರವಂಜಿ: ಏಳಲೀಸ ದಟ್ಟಮುಟ್ಟ [ಸಿದೀ ಕಣಿತಿ] [ಪಾಠಾಂ. ಚಿದಾಕಣಿತೆ] ಯೆಂಬುದ ದೃಷ್ಟತಾಗಿ ತೋಜಿಸುವೆನು (ಶಿವಗೀ. ೧೫೬–೭೯೫); ಮಡಿವಳತಿಯ ಕಣಿತಿಯ ಸೂಲಗಿತ್ತಿಯ ಸೂಳೆಯನು ಆಲೋಚನೆಗಂತರಂಗಕೆ ಬರಿಸದೆ (ಹದಿಬ. ೪–೪೪). **ಕಣಾತಿ**: ಕಾರುಕನ ಹೃದಯದ ಕಪಟ ಕಣಾತಿಯ ಕೈಯ ಕಲ್ಲು (ಸಗಬೊ. ೭೯). [ಕಣಿ$_1$ + – ತಿ$_1$ (< – ಇತ್ತಿ)]

**ಕಣಿತೆ** (ನಾ). ಹರವಿ; ಪಾತ್ರೆ (?): ಒಂಬತ್ತು ಜೂಳಿಯ ತ[ಪಾಠಾಂ. ಕ]ಣ್ಣೀರ ಕಣಿತೆ[ಪಾಠಾಂ. ಕೆ]ಯಂ ಹೊತ್ತು ತಿತ್ತಿಗೆ ನೀರ ಕಾಣದೆ (ಗುಪ್ತಮಂ. ೬೩). [?]

**ಕಣಿಯ** (ನಾ). ಕಣಿ ಹೇಳುವವನು; ಭವಿಷ್ಯವಾದಿ: ಕಣಿಯನ್ಗೆ ಮಜುನುಡಿಯಲೊಲ್ಲೆ ಸಾನ್ ಪೊಲ್ಲದನ್ (ಅಂತಿಗೊ. ೪೬–೯೬೯); ದೇವಸ್ಥಾನದಲ್ಲಿ ಸೇರಿ ಕಣಿಯನಿಂದ ಆಯುಧಪೂಜೆಗೆ ಒಂದು ಮುಹೂರ್ತವನ್ನು ಗೊತ್ತುಮಾಡಿಕೊಂಡರು (ಚಿಕರಾ. ೨೬೨).
[ಕಣಿ$_1$ + – ಅ$_7$. / ತಮಿ. ಕಣಿಯಾನ್]

**ಕಣಿಯಕಲ್**, ಕಣಿಯಕಲು (ನಾ). ಒಂದು ಪ್ರದೇಶದ ಹೆಸರು: ಬಲ್ಲಕುನ್ದ ಮೂನೂಜುಂ ಕಣಿಯಕಲ್ ಮೂನೂಜುಂ ಕುಡಿಯಾರವಿಯೆಪ್ಪತ್ತುಂ (ಎಕ. XI, ದಾವಣ. ೨೦–೫; 1045). **ಕಣಿಯಕಲು**: ಕಣಿಯಕಲು ಮೂನೂಜಜಕೊಳಗಣ ಬಾಡಂ (ಎಇ. IV, ೨೧೪–೨೧; 1064). [ಕಣಿ ? + – ಕಲ್$_4$]

**ಕಣಿಯಕಲು** 'ಕಣಿಯಕಲ್' ನೋ.

**ಕಣಿಲೆ** 'ಕಟಿಲೆ' ನೋ.

**ಕಣಿವು** (ನಾ). (?): ಕುಣಿವ ಸೊಜ್ಜಿಗೆಯಬ್ಬದುಣಿಯ ಸರಳಿಂ ತೆಗದು ಕಣಿವೆನಿಪ ಶೈಲಪಾತ್ರೆಯೊಳಿರಿಸಿ (ಲಿಂಗಪು. ೮–೧೦). [?]

**ಕಣಿವೆ** 'ಕಣುವೆ' ನೋ.

**ಕಣಿವೆಯಸಣ್ಣ** (ನಾ). ಒಂದು ಬಗೆಯ ಬತ್ತ: ಕಣಿವೆಯಸಣ್ಣ ಸತ್ಯಾಗಾಲದ ಸಣ್ಣವಣಿಯಾದ ಗೋವೆಯ ಸಣ್ಣ . . . ಶಾಲಿಯ ತೆನೆಗಳೊಪ್ಪಿದುವು (ಕಂನವಿ. ೫–೬೭); ಈ ಬತ್ತಗಳಲ್ಲಿ ಅನೇಕ ಜಾತಿಯವುಗಳಿದ್ದವು. ಅವಾವುವೆಂದರೆ ಕಣಿವೆಯಸಣ್ಣ, ಸತ್ಯಾಗಾಲದ ಸಣ್ಣ (ಕರ್ಣಾಜ. ೧೫೫). [ಕಣಿವೆ (< ಕಣುವೆ) + ಸಣ್ಣ]

**ಕಣಿವೇಳು** 'ಕಣಿವೇೞ್' ನೋ.

**ಕಣಿವೇೞ್**, ಕಣಿವೇಳು, ಕಣಿಹೇಳು (ಕ್ರಿ). ೧. ಭವಿಷ್ಯವನ್ನು ನುಡಿ; ಮುಂದಾಗುವುದನ್ನು ಸೂಚಿಸು: ಪಲರ್ಮೆ ಕಣಿವೇೞ್ದು . . . ಮೊದಲೆ ಒರೆದಿರ್ದಳೆನಗೆ (ಬದ್ಧಪ್ರ. ೧೩–೨೫೫). **ಕಣಿವೇಳು**: ೧. ತಮ್ಮ ಕಲ್ಪನೆಯ ಕನಸನೆ ನನಸಿನ ನನ್ನಿ ಎಂಬಂತೆ ಏನೇನೋ ಕಣಿವೇಳುತಿಹುದವರ ಚಾಳಿ (ಚಂದ್ರಸ. ೧೨). **ಕಣಿಹೇಳು**: ೧. ಹೊರನಿಮಿತ್ತಗಳ ನೆರವಿನಿಂದ ಕಣಿಹೇಳುವ ಕೆಲಸವನ್ನು . . . ಮಾಡಿದೆ (ಮೂರುಉ. ೮). ೨. ಹೇಳಿದ್ದೇ ಹೇಳು; ಯಾಂತ್ರಿಕವಾಗಿ ಹೇಳು: ಅವನು ಕಣಿಹೇಳೋದು ಕೇಳಿ ತಲೆಬೇಸರ ಬಂತು (ರೂಢಿ). [ಕಣಿ$_1$ + ಪೇೞ್]

**ಕಣಿಶ** (ನಾ). ಧಾನ್ಯದ ತೆನೆ: ಕಾಂಚನೋಜ್ವಳ ಕಣಿಶಂಗಳೊಪ್ಪಿದುವು (ಮಲ್ಲಿಪು. ೨–೧೮); ಕ್ರಮದಿಂದ ಪಾಲ್ದುಂಬಿ ಕಣಿಶವಾಗಿರ್ಪವಾ ರಮಣೀಯವಾದ ಕೇದಾರವು (ಚೇರಮ. ೨–೧೩). [ಸಂ.]

**ಕಣಿಸ$_1$** (ನಾ). ಸರಿಯಾದ ತೂಕ ಅಥವಾ ಬೆಲೆ (ಕಿ).
[?. / ತಮಿ. ತೆಲು. ಕಣಿಜ]

**ಕಣಿಸ$_2$** (ನಾ). = ಕಣಿಶ: ಕಣಿಸವ ಚಂಚುವಿಂದಾನುತೆ ಏಕತ್ವದಿಂದೆ ಸಾಲ್ವಿಡಿದ್ದೈದೆ (ಪ್ರಭುಪು. ೩–೨೪); ಗಿಳಿವಜಿಗಳು ಸಾಲಿಯ ಕಣಿಸಗಳೆಂಬ ಪೊಳೆವ ಕುಚಗಳ ಪಾಲುಂಡು ಕಳಕಳ ರವದಿ (ಅನಂಚ. ೧–೭೮).
[< ಸಂ. ಕಣಿಶ]

**ಕಣಿಹಾಕು** (ಕ್ರಿ). (ಎತ್ತುಗಳು) ನೊಗಕ್ಕೂ ತಮ್ಮ ಕತ್ತಿಗೂ ಕಟ್ಟಿದ ಮಿಣಿಯನ್ನು ಜಾರಿಸಿಕೊಳ್ಳು; ಹೆಗಲ ಮೇಲಣ ನೊಗವನ್ನು ತಪ್ಪಿಸು; ಬಳಗಹಾಕು (ಉಕ): ಎತ್ತುಗಳು ಪದೆಪದೆ 'ಕಣಿಹಾಕಿ' ಬಿಡುತ್ತಿದ್ದವು (ಬೈಸರ್ವ. ೧೨೧); ರಥದ ಧುರ್ಯಗಳು ಕಣಿಹಾಕಿಕೊಂಡು ವಾಹನ ಮುಂದೆ ಸಾಗದೆ ನಿಂತಿತ್ತು (ಕೆಲನೆ. ೧೫೫).
[ಕಣಿ$_0$ (< ಕಣ್ಣಿ ?) + ಹಾಕು (< ಪಾಯ್ಚು$_1$)]

**ಕಣಿಹೇಳು** 'ಕಣಿವೇೞ್' ನೋ.

**ಕಣೀರ**, ಕಣ್ಣೀರ (ನಾ). ಕುದುರೆಗಳ ಕಣ್ಣಿನ ಮಾಂಸ ಪಟಲದ ಕೆಂಪಾದ ಭಾಗ (?): "ವರ ಕಣ್ಣ ಮೊದಲಮಾಂಸದ ಕರಕೆಂಪೆ ಕಣೀರಮೆಂಬ ಪೆಸರಂ ಪಡೆಗುಂ" (ಅಶ್ವಶಾ. ೯–೧೮). **ಕಣ್ಣೀರ**: ಕಣ್ಣೀರ ಶುಕ್ಲಭಾಗ(ದ)ಕೆ ಬಣ್ಣಿಪ ಸು(ಷಿ)ರಕ್ಕೆ ತಾನುಮಾಗಸಮೆಂಬುದು (ಅಶ್ವಶಾ. ೯–೧೯); "ಕಣ್ಣ ಮೊದಲ ಮಾಂಸದ (ಕಡೆಯಿಂದ) ಕೆಂಪಿಂಗೆ ಕಣ್ಣೀರಮೆಂಬ ಪೆಸರಕ್ಕುಂ" (ಅಶ್ವಶಾ. ೯–೭೬ ವ). [?]

**ಕಣು** 'ಕಣ್' ನೋ.

**ಕಣುಕ** 'ಕಣಕ' ನೋ.

**ಕಣುಕಟ್ಟು** 'ಕಣ್ಗಟ್ಟು$_2$' ನೋ.

**ಕಣುಕಪ್ಪಟೆ** 'ಕಣ್ಕಪ್ಪಡಿ' ನೋ.

**ಕಣುಗಾಣ್** 'ಕಣ್ಗಾಣ್' ನೋ.

**ಕಣುಗಿಡಿ** 'ಕಣ್ಗಿಡಿ' ನೋ.

**ಕಣುಗಿಡಿಗೆದಱು** 'ಕಣ್ಗಿಡಿಗೆದಱು' ನೋ.

**ಕಣುಗುಱುಹು, ಕಂಗುಱುಹು** (ನಾ). ೧. ಕಣ್ಣಿಗೆ ಗುರಿಯಾದುದು, —ಕಂಡದ್ದು (?): ಕುಣಿಕುಣಿದು ಕೈಚಪ್ಪಳೆಯ ಕಟ್ಟಣೆಯರಲಿ ಕುಬುಬಿಜಿುದು ಕಾದಿದ ಕಣುಗುಱುಹಿನಸುರರಪಚಾರಿಸುತುಱುಬಿಬಾಲದಲಿ (ತೊರರಾ. ೫-೮-೫೦). **ಕಂಗುಱುಹು**: ೨. ಕಣ್ಣಿನ ಗುರುತು: ಕಂಗುಱುಹ [ಪಾಠಾಂ. ಪ]ನಿಟ್ಟಾ ಕೆಱಹುಗಾಲುಂಗುಟವನಾತ ಮನಸಿನೊಳು ಪಿಂಗದೆಡಗಣ್ಣಿಂಬಿನಲಿ ತಾಂ ತೆಗೆಯಲು (ಬಸಪು. ೧೮-೬೪). [ಕಣು (< ಕಣ್) + ಕುಱುಹು (< ಕುಱಿಪು)]

**ಕಣುಗೆಡು** 'ಕಣ್ಗೆಡು' ನೋ.

**ಕಣುಚಿ** (ನಾ). (?): ಹಾರುನಾಡ ಸೀಮೆ (ಕಣುಚಿಯಾಗಿತ್ತು) (ಮೈಎರಿ. ೧೯೩೦, ೫೯-೨; 577). [?]

**ಕಣುದಣಿ** 'ಕಣ್ದಣಿ' ನೋ.

**ಕಣುದಪ್ಪು** (ನಾ). ಕಣ್ಮರೆಯಾದುದು; ಕಣ್ಣಿಗೆ ಕಾಣದೆ ಇರುವಂಥದ್ದು: ಮನು ಕುಲೇಶ್ವರನೆನ್ನನಾ ಭಾಮಿನಿಯ ನೋಡಲು ಕಳುಹಲರಿಪುರವೆನಗೆ ಕಣುದಪ್ಪಾಯ್ತು (ತೊರರಾ. ೫-೧-೨೮). [ಕಣು (< ಕಣ್) + ತಪ್ಪು$_2$]

**ಕಣುಮಿಂಚು** 'ಕಣ್ಮಿಂಚು' ನೋ.

**ಕಣುಮುಚ್ಚಾಟ** (ನಾ). ಕಣ್ಣುಮುಚ್ಚಾಲೆ ಆಟ: ಕಣುಮುಚ್ಚಾಟಸವಗಲಿ [ಪಾಠಾಂ. ಕಣ್ಮುಚ್ಚಸಗವರಿ] ಹರಿ ಹಲಗೆ ನಿಡುಗವಣೆ (ಕುವ್ಯಾಆ. ೬-೨). [ಕಣು (< ಕಣ್) + ಮುಚ್ಚು$_1$ + ಆಟ]

**ಕಣುವಳೆ** (ನಾ). ಕಣ್ಣಿನಿಂದ ಸುರಿಯುವ ಮಳೆ; ಕಣ್ಣೀರಿನ ಮಳೆ: ಕಳವಳಿಪ ಕುಂತೀಸುತರ ಕಣುವಳೆಗವಗ್ರಹವಾಗು (ಕುವ್ಯಾಗ. ೧೧-೪೯). [ಕಣು (< ಕಣ್) + ಮಳೆ (< ಮಱೆ)]

**ಕಣುವೆ, ಕಣಮೆ, ಕಣವೆ, ಕಣಿವೆ** (ನಾ). ಎರಡು ಬೆಟ್ಟಗಳ ನಡುವಿನ ಇಕ್ಕಟ್ಟಾದ, ಆಳವಾದ ಪ್ರದೇಶ; ಕಂದರ: ಅದಱ ತದನಾನ್ತರ ಅಗುಲಿಯ ಕಣುವೆ ಅದಱ ತದನಾನ್ತರ ಪಾಣ ಕುಂಟ್ಟಿಯ ಕಣುವೆ (ಸೌಇಇ. IX–i, ೪೧–೨೯; 11ನೆಯ ಶತ); ಇವರಿಬ್ಬರು ಬಲು ಚೋದ್ಯರು ಕಣುವೆಯ ಕಟ್ಟಿ ಐದಾರೆ (ವಚಸಂ. ೭೬–೮೭); ಅನುಗೆಟ್ಟು ಬಿದ್ದನಾ ನಂಬಿ ಕಣುವೆಯನೆಡಹಿ ಬೀಳಲು (ಕಲಿರ. ೭೫–೨೨); ಕಣುವೆ ಕಾವ ದೇವರಿಗೆ ಅರಮನೆಯವರ ಮುಖಾಂತ್ರ (ಎಕ. VIII, ತೀರ್ಥಹ. ೯೪–೨೩; 1664); ಅಗ್ನೇಯದೊಳ್ ಕಣುವೆಯ ಬೆಟ್ಟಮನಿಱಿದು (ಚಕವಂ. ೫೩–೨೦). **ಕಣಮೆ**: ತಿಮ್ಮಣ್ಣನಾಯಕನು ರಾತೋರಾತು . . . ನೂಲೋ ಕಣಮೆ ಹಾದು ದುರ್ಗದ ಗುಡ್ಡಕ್ಕೆ ಬಂದನು (ಚಿತ್ರಪಾ. ೬). **ಕಣವೆ**: ಅನೇಕ ಕಣವೆಗಳನ್ನು ಕಾಡುಗಳನ್ನು ದಾಂಟಿ (ಪುರಾವಿ. ೫೪). **ಕಣಿವೆ**: ಕಣಿವೆಯ ಬಾಗಿಲ ಕಟ್ಟಿಕೊಂಡಾಕ್ಷಣ ಗುಣವಿಹೀನನ ಸರ್ವ ಬಲವ ಹಣಿದವನಾಡಿ (ಕಂನವಿ. ೧೭–೧೮); ಮೆಲ್ಲಮೆಲ್ಲನೆ ಕಣಿವೆಯ ಕಡೆ ಇಳಿದೆ (ಮಗಮಾಂ. ೩೪); ಕೆಮ್ಮಣ್ಣುಗುಂಡಿಯ ಕಣಿವೆಯನ್ನು ಒಮ್ಮೆ ನೋಡಿದಾಗ ಅದರ ಪ್ರತ್ಯಕ್ಷಾನುಭವ ನಮಗಾಗುತ್ತದೆ (ಶಿಕ್ಷದ. ೫೧೭).

[ದೇ. ‖ ತಮಿ. ಕಣವಾಯ್; ತುಳು. ಕಣಿಮೆ; ತೆಲು. ಕನುಮ, ಕನಮ]

**ಕಣುಶೂಲೆ,** 'ಕಣ್ಣುಶೂಲೆ' ನೋ.

**ಕಣುಸನ್ನೆ** 'ಕಣ್ಸನ್ನೆ' ನೋ.

**ಕಣೆ$_1$** (ನಾ). ೧. ಕೋಲು; ಸರಳು; ಬಾಣ: "ಪುಣುಬು ಕಣೆಯಂಬು ಸರಲ್ ತಾವಕ್ಕು ಶರಸಮಾಹ್ವಯ" (ಕವಿಕಂ. ೮೨); ಕಣೆಪಂಜರದೊಳೆಱಗಿ ಭೀಷ್ಮನ್ವಿಟ್ಟಂತೆ ನೆಲಮುಟ್ಟದೆ ಬಿಱಿದ್ದೀನಾನ್ (ಎಕ. VIII, ಸೊರಬ. ೧೦–೮; 800); ಮುನಿದಿಸುವಿನಜನ ಸರಲಂ ಮೊನೆಯಿಂ ಗಱಿವರೆಗಮೆಯ್ದೆ ಸೀಳ್ದುವು ಕಣೆಗಳ್ (ಪಂಪಭಾ. ೧೨–೧೮೭); ಜವನಾಳಂ ತಪ್ಪ ಕಣೆ ರೋಮರೋಮಂದಪ್ಪದೆ ನಾಂಟಿದುವು ಸೀಂಟಿದುವು ವಿಧಿಲಿಪಿಯಂ (ಪಂರಾಮಾ. ೧೩–೭೧); ಹೊಳೆವ ಕಣೆ ಹೊಕ್ಕಿಱಿದ ದಾರಿಯೊಳುಳಿದ ಕಣೆ ದಾಂಟಿದವು (ಕುವ್ಯಾಕ. ೧೪–೧೯); ಕಣೆ ನೆಯ್ದ ಬಾಗಿಲಂ ಬಲಿದು, ಸುತ್ತಿತ್ತಲುಂ ಮುಳ್ವೊಡ್ಡನಡಕಿ (ಶ್ರೀರಾಮಾ. ೧೯೬–೬೪). ೨. ಮುಳ್ಳುಹಂದಿಯ ಮುಳ್ಳು: ಮುಳ್ಳುಹಂದಿಗಳಿಗೆ ತಲೆಯಲ್ಲಿ ಮಾತ್ರ ಕಣೆಗಳಿಲ್ಲ (ಕಾನೂರು. ೩೮೮); ಒಂದೊಂದು ಸಾರಿ 'ಕಣೆ' ಯನ್ನು ಕೆಡಹಿ ಹೊರಗೆ ನಿಲ್ಲುತ್ತವೆ (ಬೆಳುಮ. ೨೬೭).

[ದೇ. ‖ ತಮಿ. ಕಣೈ; ಮಲ. ಕಣ; ತುಳು. ಕಣೆ, ಗಣೆ; ಗೊಂಡಿ. ಕಣೀ; ಪರ್ಜಿ. ಕಣಯ = ಈಟಿ]

**ಕಣೆ$_2$** 'ಗಱಿ' ನೋ.

**ಕಣೆ$_3$** 'ಕಣಯ$_1$' ನೋ.

**ಕಣೆ$_4$** 'ಕಣಿ$_7$' ನೋ.

**ಕಣೆ$_5$** (ನಾ). ಕಡೆ; ಕೊನೆ: ತೃಣಮುಂ ತೆನೆವೋದ ಬಱಿಕ್ಕೊಣಗುವುದದಱಿಂದೆ ನರರ ಬಾೞ್ ಲಘುಕಾಲಂ ಹಣಿದದ ಪೊಯಿಲ್ಗೆ ಮೊದಲ್ನಡು ಕಣೆಯೆನ್ನದಿದೆಳವೆ ಜವ್ವನಂ ಮುಪ್ಪೆನ್ನಂ (ಅನಂಪು. ೩–೭೧). ℙ 'ಕಡೆ$_3$' ಎಂಬುದರ ಅಪಲಿಖಿತವಿರಬಹುದು. [< ಕಡೆ$_3$ ?]

**ಕಣೆ$_6$** (ಅ). ಹೆಣ್ಣುಮಕ್ಕಳನ್ನು ಸಂಬೋಧಿಸುವಲ್ಲಿ ಕಂಡೆಯಾ, ಅಲ್ಲವೇ ಎಂಬರ್ಥದಲ್ಲಿ ಬಳಸುವ ಅವ್ಯಯ: " . . . ಮಕ್ಕಳನ್ನು ಪೋಷಿಸುವುದೇ ಹಿರಿದಾದ ಭಾಗ್ಯ ಕಣೆ" (ನಡೆದಾ. II, ೧೦೦೫); ಸುಗುಣ ಅಂದರೆ ಖಂಡಿತ ನೀನೇ ಕಣೆ ಸುಗುಣ (ರಂಟರ. ೨). 'ಕಣಾ' ಪರಾ. [< ಕಾಣ್]

**ಕಣೆ$_7$** (ನಾ). ೧. "ಹಿಪ್ಪಲಿ" (ಅಮರ. ಟೀಕೆ). ೨. "ಜೀರಿಗೆ" (ಅಮರ. ಟೀಕೆ). [ಸಂ. ಕಣಾ]

**ಕಣೆಕಾಲ್** 'ಕಣಕಾಲ್' ನೋ.

**ಕಣೆಗಱೆ** (ಕ್ರಿ). ಬಾಣಗಳನ್ನು ಸುರಿಸು; ಬಾಣದ ಮಳೆ ಸುರಿಸು: ವೃಷಧ್ವಜ ಸುವೇಗಾನುಸಾಲ್ವ ಕೃತವರ್ಮಾದಿ ಪಟುಭಟರ್ ತಾಗಿದರ್ ಕಲ್ಪಮೇಘಂಗಳಂ ತಡೆವಿಟ್ಟ ಮಳೆಯೆನಲ್ ಕಣೆಗಱೆಯುತೆ (ಜೈಮಿಭಾ. ೮–೨೯). [ಕಣೆ$_1$ + ಕಱೆ$_1$]

**ಕಣೆಗತ್ತಲೆ** (ನಾ). ಬಾಣಗಳು ಆವರಿಸಿದ್ದರಿಂದಾದ ಕತ್ತಲೆ: ಶ್ವಸನನುಮರ್ಕಪ್ರಭೆಯುಂ ನುಸುಳದೆನಲ್ ಪಾಯ್ವ ಕಣೆಯ ಕಣೆಗತ್ತಲೆಯೊಳ್ (ಜಗವಿ. ೧೨–೧೨); ಗಗನಸ್ಥಲಿ ಮಸೆವಿಸಿಲಿಂ ಕಣೆಗತ್ತಲೆಯಿಂ ಕೆಂಗಱಿಯ ಸಂಜೆಯಿಂ ತೀವುವಿನಂ (ಜಗವಿ. ೧೩–೭೬). [ಕಣೆ$_1$ + ಕತ್ತಲೆ]

**ಕಣೆಗಿಲೆ** 'ಕಣಗಿಲೆ$_1$' ನೋ.

**ಕಣೆಗೆದಱು** (ಕ್ರಿ). ಬಾಣಗಳನ್ನು ತೂರು; ಬಾಣಗಳನ್ನು ಪ್ರಯೋಗಿಸು: ಸುಭಟವ್ರಾತವೀಕ್ಷಿಸಲರಿದೆನುತ ಕಣೆಗೆದಱಿದನು ದ್ರೋಣ (ಕುವ್ಯಾದ್ರೋ. ೬–೧೪); ಕಣೆಗೆದಱಿ ಹೊದ್ದಿದರು ಜೋದರು (ಕುವ್ಯಾದ್ರೋ. ೧೭–೩೪). [ಕಣೆ$_1$ + ಕೆದಱು$_1$ (< ಕೆದಱ್$_1$)]

**ಕಣೆಗೊಳ್,** ಕಣೆಗೊಳ್ಳು (ಕ್ರಿ). ಬಾಣವನ್ನು ತೆಗೆದುಕೊ, —ಎತ್ತಿಕೊ: ಕಾವರ್ ಕಣೆಗೊಂಡವೊಲೆಂದೆಂಬ ಮಾತಿನಂತಾಗಿರದೇ (ಪಂಪಭಾ. ೧೧–೨೮); ನೀನೀ ವಿಷಯಕ್ಕೆೞಗುವುದುಂ ಕಾವರೆ ಕಣೆಗೊಂಡರೆಂಬ ನುಡಿಗೆಡೆಯಕ್ಕುಂ (ಪಂರಾಮಾ. ೯–೯೧); ಕಾವರೆ ಕಣೆಗೊಳ್ವೊಡಟ್ಟೆ ಬಾರಿಪರೊಳರೇ (ಯಶೋಚ. ೩–೧೮). **ಕಣೆಗೊಳ್ಳು:** ಪೂವಿಲ್ಲನೇರಿಸಿ ಕಾವನು ಕಣೆಗೊಂಡು ಟಂಕಾರ ಮಾಡಿದನಲ್ಲ (ಇಂಜಾಪ. ೧೪೪–೯). [ಕಣೆ$_1$ + ಕೊಳ್$_1$]

**ಕಣೆಗೊಳ್ಳು** 'ಕಣೆಗೊಳ್' ನೋ.

**ಕಣೆದುಡು** 'ಕಣೆದೊಡು' ನೋ.

**ಕಣೆದೊಡು,** ಕಣೆದುಡು (ಕ್ರಿ). ಬಾಣವನ್ನು ಹೂಡು; ಶರಸಂಧಾನ ಮಾಡು: ಮನೋಭವಂ ನನೆಗಣೆದೊಟ್ಟು ನಿಲ್ವಿನೆಗಂ (ಜಗವಿ. ೧೬–೧೧೧); ಕಣೆದೊಟ್ಟು ಕೈಕೊಂಡಾರು ತೆಚ್ಚರು (ತೊರರಾ. ೩–೧೨–೧೭); ಕಬ್ಬುವಿಲ್ಲಗೆ ಕಣೆದೊಟ್ಟು[ಪಾಠಾಂ. ಕಣೆಯುಂಟು] ಹೆಂಗಳ ನೆಸುವುಬ್ಬಸವೇಕೆಂದು ಕರೆದು (ಭರತ. ೬–೫೫); ಕಣೆದೊಟ್ಟು ಹರಿಣಗಳ ದೊಳ್ ಮಣಿಯಿಸಲಾರೆಂ ಗುಣಾಂಕಚಾಪವಂ (ಶಾಕುಂತ. ೨೧–೩೭). **ಕಣೆದುಡು:** ಗಣತತಿ ಕಿರಿಯಂ ಸದೆಯಲ್ ಕಣೆದುಡುತಿರೆ ಪುರ್ಬಿನಿಂದೆ ಜರ್ಬುತೆ ನಿಲಿಸುತ್ತೆ (ಶಬಶಂ. ೪–೧೯). [ಕಣೆ$_1$ + ತೊಡು$_1$]

**ಕಣೆಯ$_1$** 'ಕಣಯ$_1$' ನೋ.

**ಕಣೆಯ$_2$,** ಕಣಯ$_2$ (ನಾ). ೧. ಒಂದು ಬಗೆಯ ಆಯುಧ; "ತ್ರಿಕೋಣಾಕಾರದ ಎರಡು ತುದಿಗಳುಳ್ಳ ಲೋಹದ ದಂಡ" (ಕಶಾಅ. ೨೭೬): ಅಸಿ ಮುಸಳ ಕಣೆಯ ಕೊನ್ತಂ ಮುಸದ ಸರಲು ಮೆಯ್ಯ ನುಚ್ಚೆ ಬಮ್ಮುಗಸಾಂತಂ ಬಸಮಳಿದು ಬೀಳೆ ಧುರದೊಳ್ (ಎಕ. VIII, ಸೊರಬ. ೧೪೧–೧೬; 1127). ೨. ಬಾಣ; ಸರಳು: ಬಿಲ್ಲ ಬಲ್ಲಣೆಗಳ್ ಕೆಲರ್ ಕಣೆಯ[ಪಾಠಾಂ. ಯು]ಮನೀಡಾಡಿ ಕಣೆಯಮಂ ಕೊಂಡಾಡೆಯುಂ (ಪಾರ್ಶ್ವಪು. ೩–೧೫೨ ವ); ನಿರುತಮಾ ಕಣೆಯದೊಳ್ ಕಲಿಗಜಾಸುರನುರವನೆರಡು ತುಂಡಾಗಿ ಸೀಳದೊಡೇಕೆ ಕೈಗಳೊಳ್ ಧರಿಸಿದಾಯುಧಂ (ಚಬಪು. ೨೮–೨೭). **ಕಣಯ$_2$:** ೧. ಕಣ[ಪಾಠಾಂ. ಣೆ]ಯ ಕಂಪಣ ಮುಸಲ ಮುಸುಂಡಿ ಭಿಂಡಿವಾಳ . . . ಮಹಾ ವಿವಿಧಾಯುಧಂಗಳೊಳಿಟ್ಟುಮೆಚ್ಚುಂ (ಪಂಪಭಾ. ೧೨–೧೧೮ ವ); ಅಸಿ ಮುಸಲ ಕಣ[ಪಾಠಾಂ. ಣಾ]ಯ ಕಂಪನ ಮುಸುಂಡಿ . . . ಪಾಶಾಂಕುಶಾದಿ ಶಸ್ತ್ರಾಸ್ತ್ರಗಳೊಳೆಚ್ಚುಂ (ಪಂರಾಮಾ. ೧೩–೭೬ ವ); ಕಣಯ ಕಂಪನ ಗದಾದಂಡ . . . ಪ್ರಮುಖ ಬತ್ತೀಸಾಯುಧ ಭಯಂಕರರ್ ಪರಿತಂದು (ಮಹಾನೇ. ೧೨–೨೪ ವ); ಅಸಿ ಮುಸಲ ಕಣಯ . . . ಪಲವುಂ ತೆಜದ ಕೈದುಗಳಿಂ (ಧರ್ಮಪ. ೧–೭೬ ವ).

[< ಕಣೆ$_1$. / ತಮಿ. ಕಣೈಯ = ಗದೆ; ತೆಲು. ಕಣಯ]

**ಕಣೆಯ$_3$,** ಕಣಯ$_3$, ಖಣಯ (ನಾ). ೧. ಸಲ; ಬಾರಿ; ಸರತಿ; ಆವೃತ್ತಿ: ಜಲವನೀರಾಜು ಕಣೆಯಂಗಳಿಂ[ಪಾಠಾಂ. ಕಣೆಯಂತರಂ] ಮುಕ್ಕುಳಿಸಿ ಬಳಿಕ ಮುಖಮಜ್ಜನದೆ ಶುದ್ಧವಸ್ತ್ರವನುಟ್ಟು (ಲಶಿಚಂ. ೪೫–೪); ಅವನಿಸುತೆ . . . ಪುನರಪಿ ವಿವರಿಸಿದಳಿದು ಸತ್ಯವೆಂದಳು ಮೂಱು ಕಣೆಯದಲಿ (ಉರರಾ. ೧೮–೪೬). ೨. ರೀತಿ; ಪದ್ಧತಿ; ವಿಧಿ; ವಿಧಾನ; "ನ್ಯಾಯ" (ತೊರರಾ. ಕೋಶ): ಕೆಲರ್ ಕಣೆಯಮನೀಡಾಡಿ ಕಣೆಯಮಂ ಕೊಂಡಾಡೆಯುಂ (ಪಾರ್ಶ್ವಪು. ೩–೧೫೨ ವ); ನೋಡಾ ವಿಧದೆ ಕಣೆಯ ಕಣೆಯಕ್ಕೆ ಹಲವಹನೆಂತನೆ (ಮನೋವಿ. ೬–೩೩); ನಾಕೆರಡು ಕಣೆಯದಲಿ ಹೇಳಿದೊಡಾಕೆ ನಿನ್ನನು ಪೊಲ್ಲಳು (ಕೌಶಿರಾ. ೧೪–೧೨); ಜೀವಿಸುವ ಮಾತ ನೀಂ ಪೇಳ್ದುದಿಲ್ಲತ್ಯಂತ ಸಾವ ಕಣೆಯವನೆ ಕರುಣಂಗೆಯ್ದಿರಿ (ಲಶಿಚಂ. ೧೪–೩೦). ೩. ಸ್ಥಳ; ಪ್ರದೇಶ: ಅಲ್ಲಿಂ ಮೇಗಣ ಕಣೆಯದಲ್ಲಿ ನಂದನವನಮಿರ್ಪುದು (ತಸೂವ್ಯ. ೯೬); ಕಳೆದು ಮುಂದಣ ವಿವಿಧ ಮಣಿಮಂಜುಳ ಮುಖದ್ವಾರಗಳು ಬಲಿದಗ್ಗಳವ ಮುಱಿದೊಳಹೊಕ್ಕನೀ ಪರಿ ಕಣೆಯಕಣೆಯದಲಿ (ತೊರರಾ. ೫–೨–೬೩); ಸಿದ್ಧಚಾರಣನಿವಹ ಸೇವಿಸೆ ಮೂಜನೆಯ ಕಣೆಯವ ನಿರೀಕ್ಷಿಸುತಾ (ಉತ್ತರಾ. ೧೭–೩). ೪. ದಂಡೆ; ಅಂಚು; ತಟ: ಎರಡು ಕಣೆಯವಿದಲ್ಲದಿದ್ದರೆ ಗಿರಿಚಯಂಗಳ ತಂದು ಹೂಳಲೊಖರೆಯದಲಿ ಬೆಸಸೇನ ಮಾಡಲಿಯೆಂದ ಹನುಮಂತ (ಕೌಶಿರಾ. ೧೫–೪೬); ಇಟ್ಟಣಿಸಿ ಕಾವೇರಿಯ ತಟಾಕದ ಕಣೆಯವಿಡಿದೈತಂದು ಹೊಕ್ಕರು ಪಾಂಡ್ಯಮಂಡಲವ (ತೊರರಾ. ೪–೧೧–೪). ೫. ಕಥೆ; ಪ್ರಸಂಗ: ನಮ್ಮನ್ವಯಕೆ ಭಯವಿಲ್ಲದಿಹ ಪರಿಯೆಂತುಟೋ ನಾವೆಲ್ಲಿಯಾಪರಿ ಕಂಡು ಕೇಳಿದ ಕಣೆಯವಿ[ಪಾಠಾಂ. ಕಥೆಯಿದ, ಕಣೆಯವ]ಲ್ಲೆಂದ (ತೊರರಾ. ೬–೫೩–೫೪). **ಕಣಯ$_3$:** ೨. ನೈಷ್ಠಿಕಾಚರಣೆ ಶಂಕೆಯನೊಂದದೆ ಸಮ್ಯಗುತ್ತರೋತ್ತರ ಕಣಯಂಗಳೊಳ್ ಸಲೆ ಸಮಾಹಿತಮಾಗಿ ವಿರಾಜಿಸಿರ್ಪುದೊಂದರಿದೆ ಗುರೂಪದೇಶ ವಚನಾನುಭವಾಗಮದೊಳ್ (ಶತಕ. ೧೭–೨೧). **ಖಣಯ:** ೨. ಧುರದೊಳಿವನನು ಗೆಲ್ವೆನೆಂಬೀ ಬರಿಯ ಮದ ಸುಭಟಾಭಿಮಾನದ ಪರಿಯು ವರ ಸಾಹಿತ್ಯಜನಕಿದು ಖಣಯವಲ್ಲೆಂದ (ಅಂಬಿಕಾ. ೮–೬೧). [?]

**ಕಣೆಯ$_4$** (ನಾ). (?); "ಕಲ್ಲು" (ಸಿದ್ಧರಾ. ಕೋಶ): ಅಣಲಂ ತೋಱುತೆ ಮೆಯ್ಯಿಕ್ಕುತಂ ಕಣೆಯವನಾಡಿಸಿ ತೊನೆದಾಡುತ್ತಂ (ಭೃಂಗೀರ. ೧೩–೨೩); ಕಣೆಯ ಕಣೆ[ಪಾಠಾಂ. ಕಣಿಯ ಖಣಿ]ಯದ ದಾರವಟ್ಟ ವಜ್ರದ ಕದದ ಘಣಿಗಳಾಕಲ್ಪದಿಂದೆಸೆವ (ಸಿದ್ಧರಾ. ೧–೧೫); ಬೇಂಟೆಗೆ ಬಲ್ಸೊಣಗಂಗಳನೊಡನೆ ಪಿಡಿದುಮುರವಣಿಸುತ್ತುಂ ಕಣೆಯದೊಳೆಯ್ದುತ್ತಿರೆ ಘನ ಕಣೆಯ ಕದಂಬಂ ಭರದಿಂ ಮುಸುಕಿದುದಾಗಳ್ (ಹವ್ಯಾರ. ೪–೪೦). [?]

**ಕಣೆಯ$_5$** (ನಾ). (?): ಪಾಳ್ಯದಲ್ಲಿ ಕೊಟ್ಟ ಪುರಕಣೆಯದ ಆಱವಡ್ಡಗ್ಗೆ ಱಗ್ಗ × ಯ ದರ್ಮಕ್ಕೆ ಕೊಟ್ಟ ಪುರ × ದ (ಎಕ. IX, ಚನ್ನಪ. ೩–೩; 1709 ?). [?]

**ಕಣೆಯಿಸು** (ಕ್ರಿ). ಬಾಣಬಿಡು; ಬಾಣ ಪ್ರಯೋಗ ಮಾಡು: ಅಂಗಿಯಂ ತೊಟ್ಟು ಬಿಲ್ಪಿಡಿದ್ದು ಕಣೆಯಿಸಲರಿದ ಜೋದಂ ಗೆಲಲ್ಬಗೆಯೆ ಕಾಳೆಗದೊಳೆಂತಂತೆ (ಸೌನಂದ. ೫–೩೨). [ಕಣೆ$_1$ + ಇಸು$_1$]

**ಕಣೆಯೇಱು** (ನಾ). ಬಾಣದಿಂದ ಆದ ಗಾಯ: ಕಣೆ[ಪಾಠಾಂ. ಮಣೆ] ಯೇಱಿಂಗೆ ದಿಶಾಗಜಂ ಪೆಳಱಿ ಕೋಡೇಱಿಂಗೆ ಮಾಱಾನೆಗಳ್ ರಣದೊಳ್ ಬೆಂಗುಡೆ (ಪಂರಾಮಾ. ೧೩–೮೦). [ಕಣೆ$_1$+ ಏಱು$_4$ (< ಏಱ್$_4$)]

**ಕಣೆವೋಗು** (ಕ್ರಿ). ಗಣೆ ಮುರಿದು ಹೋಗು; ದಿಂಡು ಕತ್ತರಿಸಿ ಹೋಗು: ಕಣೆವೋದ ಕಣಕಾಲುಂ ದೊಣೆವೋದ ಮೇಗಾಲುಂ (ಪಂರಾಮಾ. ೧೩–೫೪ ವ); ಕಣೆವೋದ ಕಾಲಿನ ಕಯ್ವೋದ ತೋಳಿನ ಪಣೆವೋದ ಮೊಗದ ಸುಭಟರ (ಕುರಾಸಾಂ. ೧೨–೮೪). "ಕಣೆವೋದ ಕಣಕಾಲ್ = ಬಾಣವು ನುಗ್ಗಿ ಹೋದ ಕೆಳಕಾಲು" (ಪಂರಾಮಾ. ಕೋಶ). [ಕಣೆ$_3$ (< ಗಱೆ) + ಪೋಗು$_1$]

**ಕಣೆಹಂದಿ** (ನಾ). ಮುಳ್ಳುಹಂದಿ: ಕಣೆಹಂದಿ (ಮುಳ್ಳುಹಂದಿ), ಹಂದಿ, ಹುಲಿ, ಹಾವು ಮೊದಲಾದ ಕಾಡುಪ್ರಾಣಿಗಳೆಂದರೆ ಅವನಿಗೆ ಹೆದರಿಕೆಯಿಲ್ಲ (ಕಾನೂರು. ೩೮೨). [ಕಣೆ$_1$ + ಹಂದಿ (< ಪಂದಿ)]

**ಕಣೋ** (ಅ). = ಕಣಾ: ನನ್ನನ್ನೂ ಅವರು ಆಮಂತ್ರಿಸಿದ್ದಾರೆ ಕಣೋ (ಕಾಲಯಾ. ೮); ನೀವೆಲ್ಲಾ ಕಳ್ರು ಕಣೋ (ಕಂಕಕೂ. ೪೨). [< ಕಾಣ್]

**ಕಣ್ಕಟ್ಟು** 'ಕಣ್ಗಟ್ಟು$_2$' ನೋ.

**ಕಣ್ಕದಿರು** 'ಕಣ್ಗದಿರ್' ನೋ.

**ಕಣ್ಕಪಟ** 'ಕಣ್ಕಪ್ಪಡಿ' ನೋ.

**ಕಣ್ಕಪ್ಪಡಿ, ಕಣುಕಪ್ಪಟೆ, ಕಣ್ಕಪಟ, ಕಣ್ಕಪ್ಪಡೆ, ಕಣ್ಣುಕಪಟ, ಕಣ್ಣುಕಪ್ಪಡಿ, ಕಣ್ಣುಕಪ್ಪಡೆ** (ನಾ). ಬಾವಲಿ; ತೋಲಬಾವಲಿ: ನಮ್ಮ ಪುರಾತನ ದೇವಾಲಯಗಳು ಕಣ್ಕಪ್ಪಡಿಗಳ ನಿವಾಸಗಳಾಗಿವೆ (ರೂಢಿ). **ಕಣಕಪ್ಪಟೆ**: (ಕಿ). **ಕಣ್ಕಪಟ**: "ಬಾವಲಿ; ಕಣ್ಕಪಟ" (Flitter–mouse. ಇಂಕನಿ). **ಕಣ್ಕಪ್ಪಡೆ**: ಗೂಗೆಗಳೂ ಕಣ್ಕಪ್ಪಡೆಗಳೂ ನನಗೆ ಹೆದರಿ ಗಿಡಗಳ ಪೊಳ್ಳುಗಳಲ್ಲಿಯೂ ಹಾಳುಗೋಡೆಯ ಬಿರುಕುಗಳಲ್ಲಿಯೂ, ಅಡಗುತ್ತವೆ (ಮುಂಬಯಿ. ೩–೨೭). **ಕಣ್ಣುಕಪಟ**: ಸಂಜೆಯಾಯಿತೆಂದು ಹೊರಹೊರಟುವು ಕಣ್ಣುಕಪಟಗಳು (ಜ್ಯೋತಿರ್ವಿ. ೨೪೬). **ಕಣ್ಣುಕಪ್ಪಡಿ**: ಕಣ್ಣುಕಪ್ಪಡಿಗಳು ಹಿಂಡುಹಿಂಡಾಗಿ ಒಳಗಿಂದ ಹೊರಗೆ ಹಾರಿ ಹಾರಿ ಬರುತ್ತಿದ್ದುವು (ಜನಜೀ. ೬೭); ಆ ಗುಡಿಯು ಪಕ್ಷಿಗಳಿಗೂ ಕಣ್ಣುಕಪ್ಪಡಿಗಳಿಗೂ ಯಾವಾಗಲೂ ಬಂದು ಕೂಡ್ರುವ ಸ್ಥಳವಾಗಿತ್ತು (ರಾಪಹಂ. ೮೬). **ಕಣ್ಣುಕಪ್ಪಡೆ**: ಕಣ್ಣುಕಪ್ಪಡೆಯೆಂಬ ಹಕ್ಕಿಗಳಿಗೆ ತೀವ್ರವಾಗಿ ಹಾರಲಿಕ್ಕೆ ಬರುವ ಹಾಗೆಯೂ ಹಾರಹಾರುತ್ತ ಗರ್‍ರನೆ ತಿರುಗಲಿಕ್ಕೆ ಅಡ್ಡಿಯಾಗದ ಹಾಗೆಯೂ, ಅವುಗಳ ಶರೀರದ ರಚನೆ ಇರುತ್ತದೆ (ಮುಂಬಯಿ. ೫–೫೭). [ಕಣ್ + ಕಪ್ಪಡ$_1$ (< ಕಪಟ)]

**ಕಣ್ಕಪ್ಪಡೆ** 'ಕಣ್ಕಪ್ಪಡಿ' ನೋ.

**ಕಣ್ಕಪ್ಪು, ಕಣ್ಣುಕಪ್ಪು** (ನಾ). ೧. ಕಣ್ಣಿನ ಕಪ್ಪುಬಣ್ಣ, —ಕರಿಗುಡ್ಡೆ: ಹೆಪ್ಪಿನೊಳು ಹಾಲಡಗಿದಂತೆಯೊಂದಾನೊಂದು ನೆಪ್ಪಿನೊಳಗರಿವು ಮರವೆಗಳಡಗಿದಂತೆ ಕಣ್ಕಪ್ಪಿನೊಳು ಸೂರ್ಯ ಚಂದ್ರಾಗ್ನಿ ಪ್ರಕಾಶಂಗಳಡಗಿ ಕಾಣಿಸುವಂದದಿ (ಕವಿಚ. III, ೧೬೧ ವೀರಶೈವಷಟ್‌ಸ್ಥಲ ಸಿದ್ಧಾಂತ ಸಾರ). ೨. ಕಣ್ಣಿಗೆ ಹಚ್ಚುವ ಕಪ್ಪು, —ಕಾಡಿಗೆ: ಕಣ್ಕಪ್ಪು ಕೊಳ್ಳೊ ಕಸ್ತೂರೀ ಭರಣೀ ಬ್ಯಾಡ (ಹುಟ್ಟಹ. ೩೩). **ಕಣ್ಣುಕಪ್ಪು**: ೨. ಕಣ್ಣುಕಪ್ಪುಗಳಿಂ ತುಟಿಗಳೊಳ್ ಕರೆ ಕಟ್ಟೆ (ಸೌಗಂಧಿ. ೧೯೮–೫). [ಕಣ್ + ಕಪ್ಪು$_4$ (< ಕರ್ಪು$_1$)]

**ಕಣ್ಕಾಡಿಗೆ** (ನಾ). = ಕಣ್ಕಪ್ಪು (ಕಿ). [ಕಣ್ + ಕಾಡಿಗೆ]

**ಕಣ್ಕಾಣಿಕೆ, ಕಂಗಾಣಿಕೆ** (ನಾ). ೧. ಕಣ್ಣಿನಿಂದ ಕಾಣುವಿಕೆ; ಪ್ರತ್ಯಕ್ಷ ಕಾಣುವಿಕೆ: ಕಂಡಿಯಿಂದ ಕಂಡೇವೆ. ಕಣ್‌ಕಾಣಿಕೆ ಎಂದು ಜನ ಕಾದಿದೆ ಮನ ಕಾದಿದೆ (ಹೃದಸ. ೨೧–೧೦). **ಕಂಗಾಣಿಕೆ**: ೨. ದಾರಿ ತೋರಿಸುವುದು; ಮಾರ್ಗದರ್ಶನ: ಬಿನ್ನಣದಿ ಕಂಗಾಣಿಕೆಯ ಕಾಯಕದೊಳು ನೆಜಕಿ ಹನ್ನೆರಡು ಹೊನ್ನ ಜೀವಿತದಿನಿರ್ಪಂ ಸದಾ ಸನ್ನಿಹಿತನುಂ (ಲಶಿಚಂ. ೩೮–೯೮). [ಕಣ್ + ಕಾಣಿಕೆ (< ಕಾಣ್ಕೆ)]

**ಕಣ್ಕಾಪು** 'ಕಣ್ಗಾಪು' ನೋ.

**ಕಣ್ಕಿಡಿ** 'ಕಣ್ಗಿಡಿ' ನೋ.

**ಕಣ್ಕಿಸುರ್, ಕಣ್ಕಿಸುರು, ಕಣ್ಗಿಸುರ್, ಕಣ್ಗಿಸುರು, ಕಣ್ಣುಕಿಸುರು** (ನಾ). ೧. ಕಣ್ಣಿಗೆ ಅಸಹ್ಯವಾಗಿರುವುದು, —ಅಪ್ರಿಯವಾಗಿರುವುದು (ಕಿ). ೨. ಹೊಟ್ಟೆಕಿಚ್ಚು; ಕರುಬು; ಈರ್ಷೆ. **ಕಣ್ಕಿಸುರು**: ೩. ಕಣ್ಣಲ್ಲಿಯ ಗೀಜು; ಪಿಚ್ಚು; ಪಿಸುರು (ಕಿ). **ಕಣ್ಗಿಸುರ್**: ೪. ದೃಷ್ಟಿದೋಷ: ನೋಳ್ಪರ್ಗೆ ಕಣ್ಗಿಸುರ್ ಪುದುಗಿದೊಡೆ ಮದನಂಗೆ ಮಾನಹಾನಿ (ಜೈಮಿಭಾ. ೨೬–೧೧). **ಕಣ್ಗಿಸುರು**: ೨. ತೆಳ್ಪಿಜು ಕಾಮುಕರ ಕಣ್ಗಿಸುರು (ಉದ್ಭದೇ. ೫–೨೪). **ಕಣ್ಣುಕಿಸುರು**: ೧. ನಾವೆಲ್ಲ ನ್ಯಾಯವಾಗಿ ನಡೆದೆದ್ದು ನಮ್ಮೂರವರಿಗೆ ಕಣ್ಣುಕಿಸುರಾಯಿತು (ಮರಳಿ. ೬೫).

**ಕಣ್ಕಿಸುರಾಗು** = ಅಸಹನೆಯುಳ್ಳವನಾಗು: ಕೆಳದಿ ಸಪತ್ನಿಯಾದಳಿನಿಯ ಪಗೆಯಾದನನನ್ನ ಬಂಧುಗಳ್ ಮುಳಿವವರಾದರಾ ಹೊಟಲ ನೀಜರೆ ಕಣ್ಕಿಸುರಾದರ್ (ಅನಂಪು. ೧೪–೨೯). [ಕಣ್ + ಕಿಸುರ್$_2$]

**ಕಣ್ಕಿಸುರ** (ನಾ). ಅಸಹನೆಯುಳ್ಳವನು; ಕರುಬುಳ್ಳವನು: ಎಸೆವ ಬಸಂತಮಾಸಮಿದಿರೇಜುವ ಜವ್ವನಂ . . . ಕುಪ್ಪಿಗೆಯ ಕಳ್ ಮನೆಯೊಳ್ ಪಿರಿದುಂಟು ತೋಂಟ ಕಣ್ಕಿ[ಪಾಠಾಂ. ಣ್ಕಿ]ಸುರರ ಮಾತು ನೀತಿ ಗಡ ಹಾದರವಾಡದೆ ಸಾವಳೇ ಮಗಳ್ (ಸೂಕ್ತಿಸು. ೮–೧೨೬). [ಕಣ್ಕಿಸುರ್ + –ಅ$_7$]

**ಕಣ್ಕಿಸುರು** 'ಕಣ್ಕಿಸುರ್' ನೋ.

**ಕಣ್ಕುಟಗಲ್** (ನಾ). ಒಂದು ಬಗೆಯ ಸಸ್ಯ: ಕಣ್ಕುಟಗಲ್, ದೇವನಹುಳಿ, ಮಕ್ಕಿ (ಮೈಔಗಿ. ೩೮–೭೫೭). [?]

**ಕಣ್ಕುಟಿಕೆ, ಕಣ್ಕುಟಿಗೆ, ಕಣ್ಣುಕುಟಿಕೆ** (ನಾ). ಕಣ್ಣಿನ ರೆಪ್ಪೆಯ ಮೇಲೆ ಏಳುವ ಗುಳ್ಳೆ; ಕಣ್ಣುಜೆಟ್ಟು; ಕಣ್ಣುಜಿಟ್ಟಲೆ (ಉಕ). **ಕಣ್ಕುಟಿಗೆ**: (ಕಿ). **ಕಣ್ಣುಕುಟಿಕೆ**: ರೆಪ್ಪೆಯ ಗುಳ್ಳೆಗಳು (ಕಣ್ಣುಕುಟಿಕೆಗಳು) . . . ನೋಡಲು ಸುಲಭವಾಗಿ ಕಂಡರೂ ನೇತ್ರಚಿಕಿತ್ಸಕರ ಸಲಹೆಯನ್ನು ಪಡೆಯುವುದು ಒಳ್ಳೆಯದು (ನಮ್ಮದೃ. ೭೭). [ಕಣ್ + ಕುಟಿಕೆ]

**ಕಣ್ಕುಟಿಗೆ** 'ಕಣ್ಕುಟಿಕೆ' ನೋ.

**ಕಣ್ಕುಟಿಲ** 'ಕಣ್ಕುಟಿಲೆ' ನೋ.

**ಕಣ್ಕುಟಿಲೆ, ಕಣ್ಕುಟಿಲ** (ನಾ). = ಕಣ್ಕುಟಿಕೆ: (ಕಣ್ಣಪೂ ಕಣ್ಕುಟಿಲಂಗಳ್ಗೆ) ಕವಡಿಕೆಯನಕ್ಕೆ ಮೇಣ್ ರಜತವನಕ್ಕಿಂಬಾಗಿ ತೇದು ಪೂಸಲೊಡಂ . . . ಕಣ್ಕುಟಿಲೆಯಂತವಾಗಳೆ ಮಾಣ್ಗುಂ (ಲೋಕೋಪ. ೯–೭೯) **ಕಣ್ಕುಟಿಲ**: ದುರ್ಮಾಂಸ ದೋಷವೊ ನೀಲಿಗಣ್ಣೊ ಮಜವೆಯೊ ಕಣ್ಕುಟಿಲವೋಯರಿಯೋ (ಬಸವು. ೧೮–೬೬). [ಕಣ್ + ಕುಟಿಲ್$_0$]

**ಕಣ್ಕುಡಿ, ಕಂಗುಡಿ** (ನಾ). ಕಣ್ಣಿನ ಕುಡಿ, —ತುದಿ; ಕಡೆಗಣ್ಣು: ನಡುನಡುವೆ ನಕ್ಕು ಮತಮತ್ತು ಕದ್ದು ಕಣ್‌ಕುಡಿಲೆ ನೋಡಬೇಕ (ಹೃದಸ. ೧೮–೧೦). **ಕಂಗುಡಿ**: ಅತಿನಿಡಿಯ ಕಂಗುಡಿಯ ಹೊಯಿಲಿಂ ಮತಿಗೆಡಿಪ ಬೆಲೆವೆಣ್ಗಳ್ (ಸಾಳ್ವಭಾ. ೩–೧೦). [ಕಣ್ + ಕುಡಿ$_2$]

**ಕಣ್ಕುಣಿ** (ನಾ). = ಕಣ್ಕುಣಿಕೆ (ಕಿ). [ಕಣ್ + ಕುಣಿ$_2$ (< ಕುಟ್ಟಿ$_3$)]

**ಕಣ್ಕುಣಿಕೆ, ಕಣ್ಗುಣಿಕೆ, ಕಣ್ಗುಳಿಕೆ, ಕಣ್ಣುಕುಣಿಕೆ** (ನಾ). ಕಣ್ಣಿನ ತಗ್ಗಾದಭಾಗ, —ಕುಣಿ: ಎರಡು ಕಣ್ಕುಣಿಕೆಗಳನಾತನು ಬೆರಳಿನಿಂದೊತ್ತಲು ನೆರೆನೆರೆದು ಕಣ್ಣ್ಯದೆ ಕುಣಿಕೆಗಳಾಗಿ ಮೇಲ್ವರಿಯೆ (ಬಸವು. ೧೮–೬೨). **ಕಣ್ಗುಣಿಕೆ**: ಕಡೆಗಣ್ಣಿನಂಗುಟದಿನೊತ್ತೆ ಕಣ್ಗುಣಿಕೆಯಿಂದೆಡೆವಿಡದೆ ಸುರಿಗುಮಂಬಕದಂಬು (ಕುಮಾಪು. ೪–೨೪೦). **ಕಣ್ಗುಳಿಕೆ**: (ಕಿ). **ಕಣ್ಣುಕುಣಿಕೆ**: ಕಣ್ಣುಕುಣಿಕೆಗಳು ಗುಳಿ ಬಿದ್ದಿಹವು (ವೈದ್ಯಸಾ. I, ೩೩೫). [ಕಣ್ + ಕುಣಿಕೆ$_1$]

**ಕಣ್ಕೂಸು** (ನಾ). ಕಣ್ಣೆದುರಿಗೆ ಬೆಳೆದ ಕೂಸು; ಅಚ್ಚುಮೆಚ್ಚಾದವನು: ಅವನ ಕಣ್ಕೂಸಾಗಿ ನಿಂತು ಸ್ವಾರ್ಥವನ್ನು ಸಾಧಿಸಬೇಕೆನ್ನುವೆ (ಜಯಂತ. ೧೧೬). [ಕಣ್ + ಕೂಸು]

**ಕಣ್ಕೆತ್ತು, ಕಣ್ಗೆತ್ತು** (ಕ್ರಿ). ೧. ಕಣ್ಣುಮಿಟುಕು, —ಅದುರು. ೨. ಕಣ್ಣು ಮಿಟುಕಿಸು; ಕಣ್ಣಿಂದ ಸನ್ನೆಮಾಡು: ಜಯಾವತಿ ಕಣ್ಕೆತ್ತಿ ಬಾರಿಸಿದೊಡೆ (ವಡ್ಡಾರಾ. ೪೬–೧೩); ಕಣ್ಕೆತ್ತಿ[ಪಾಠಾಂ. ಕಣ್ಗೆತ್ತಿ] ಕಿಱುನಗೆ ನಗುವ ಕೂಠದರ ಮೊಗಮುಮಂ . . . ಕಂಡು (ಪಂಪಭಾ. ೭–೫ ವ). **ಕಣ್ಗೆತ್ತು**: ೨. ಕುಂಚದಡಪದ ಡವಕೆಯ ಪರಿಚಾರಿಕೆಯರೆಲ್ಲರುಮಂ ಕಣ್ಗೆತ್ತಿ ಕಳೆದೇಕಾಂತದೊಳ್ ಕನ್ನೆಯನಿಂತೆಂದಳ್ (ಪಂಪಭಾ. ೪–೬೬ ವ); ಬಿನ್ನನಿರೆ ವಸುದೇವ ಕಣ್ಗೆತ್ತೆ ಕಲೆಯೊಜಿಯ ವಸುದೇವ ನಾಕೆಯ ಪೊಳೆವ ಬೀಣೆಯ ಕೊಂಡು (ಸಾಳ್ವಭಾ. ೮–೮). [ಕಣ್ + ಕೆತ್ತು$_1$]

**ಕಣ್ಕೋರೈಸು** (ಕ್ರಿ). ಕಣ್ಣು ಕುಕ್ಕು; ಕಣ್ಣಿಗೆ ಮಿಂಚು : ಕಾರ್ಗಾಲದ ಮಿಂಚಿವೆನೆ ಕಣ್ಕೋರೈಪಂತಿರೆ ಪೊಳೆಯುತಿರ್ದಪುದೆಂತಕ್ಕುಮೊ ತಪದ ಮಹಿಮೆ ಮುನಿಪುಂಗವನಾ (ಕಾದಂಪೂ. ೨೪೬); ನೋಟ್ಪ ಕಣ್ಕೋರೈಪಂತಿರೆ (ಬಂಹರಿ. ೭-೫); ಕಣ್ಕೋರೈಸಿ ಮಮ್ಮಲಮಱುಗಿತುಭಯಬಲ (ಕುವ್ಯಾದ್ರೋ. ೧೯-೧೮). [ಕಣ್ + ಕೋರೈಸು]

**ಕಣ್ಗಂಡಿ** (ನಾ). (ನೋಡಲು ಅವಕಾಶ ಕೊಡುವ) ಸಣ್ಣ ಕಂಡಿ; ಚಿಕ್ಕ ರಂಧ್ರ : ಬಲ್ಲವರಿಗಲ್ಲದೆ ಅಗೋಚರವಾಗಿರುವ ಕಣ್ಗಂಡಿಗಳೂ (ಬೆಟ್ಟಅ. ೪೯-೩); ಹಗೇವು ನೆಲಮಾಳಿಗೆ ಸುರಂಗ ಕಣ್ಗಂಡಿ ಪಾವಟಗೆ ಗುಟ್ಟಿನ ಬಾಗಿಲು (ಮಂತ್ರಶ. ೫೩-೯). [ಕಣ್ + ಕಂಡಿ$_1$]

**ಕಣ್ಗಟ್ಟು$_1$**, ಕಂಗಟ್ಟು (ಕ್ರಿ). ೧. ಕಣ್ಣುಗಳನ್ನು ಕಟ್ಟು. ೨. (ಅಲಂ) ಮೋಸಮಾಡು; ತಿಳಿಯದಂತೆ ಮಾಡು : ಶುದ್ಧಮಪ್ಪ ಪೊನ್ನೊಳ್ ದುಸ್ವರಪ್ಪವರ್ ತಮ್ಮ ಲಾಭದಾಸೆಯಿಂ ಕಿಸುಬೆಳ್ಳಿಯೆಂಬಿವಂ ಬೆರೆಯಿಸಿ ಪೆಜರ ಕಣ್ಗಟ್ಟಿ ತಿರಿಪಿ ಮೇಲಪ್ಪ ಪೊನ್ನೆಂದು ತೋಱುಸುವ ತೆಱದಿಂ (ಧರ್ಮಾಮೃ. ೪-೩೪). **ಕಂಗಟ್ಟು** : ೧. ಹಲಧರನು ಪೋಕುಳಿಯೆಂದು ಕೊಡವಾಲ್ಸುರಿದು ಗೋಪಯಶೋಧರೆಯ[ದೆಯರ] ಕಂಗಟ್ಟಿದನು ಚದುರಿಂ (ಸಾಳ್ವಭಾ. ೧೨-೧೦). ೨. ರಾಣೀವಾಸದಲಿ ಕಂಗಟ್ಟಿ[ಪಾಠಾಂ. ಗಱಿಗಟ್ಟಿ] ತಂದುದು ತನ್ನನೀ ವಿಧಿಗೆ(ಕುವ್ಯಾಅ. ೧೩-೬೬). [ಕಣ್ + ಕಟ್ಟು$_1$]

**ಕಣ್ಗಟ್ಟು$_2$**, ಕಣುಕಟ್ಟು, ಕಣ್ಕಟ್ಟು, ಕಣ್ಣುಕಟ್ಟು (ನಾ). ೧. ಕಣ್ಣುಗಳನ್ನು ಕಟ್ಟುವುದು : ಸಲೆ ಪದ್ಮಿನಿಯ ಕಣ್ಗಟ್ಟನೆ ಶಶಿ ಮೂಡಿ ಬಳೆದ ನಾಗಸದೊಳೀವೇಳ್ವೆ (ಕಂನವಿ. ೯-೧೬೯). **ಕಣುಕಟ್ಟು** : ೨. (ಅಲಂ) ಯಕ್ಷಿಣೀ ವಿದ್ಯೆ; ಇಂದ್ರಜಾಲ. ೩. (ಅಲಂ) ವಂಚನೆ; ಮೋಸ : ಗಣಿಕೆ ಮುದಿಯಳು ಹೊಲ್ಲ, ಕಣುಕಟ್ಟು ಹೊಲ್ಲ ಅಱಿದರಲಿ (ಸರ್ವಜ್ಞ. ೬೪೬). **ಕಣ್ಕಟ್ಟು** : ೩. ಭಾರತೀಯರನ್ನು ಮನವೊಲಿಸಲು ಬ್ರಿಟಿಷರು ಕೈಕೊಂಡ ಕಣ್ಕಟ್ಟಿನ ಉಪಾಯಗಳೆಲ್ಲ ನಿರರ್ಥವಾಗಿ ನಿಂತವು (ಬೀಳತ. ೮೦); ಏಕೆ ಇಷ್ಟೊಂದು ಚಾತುರ್ಯ, ಇಷ್ಟೊಂದು ಕಣ್ಕಟ್ಟು (ಇಪ್ಪಕ. ೨೧೯). **ಕಣ್ಣುಕಟ್ಟು** : ೧. "ನೇತ್ರಬಂಧಂ ಕಣ್ಣುಕಟ್ಟು" (ಮಂಗರಾ. ೬೭-೫). ೨. ಪದುಮನಾಭನ ಕಣ್ಣುಕಟ್ಟವನಿದಕಳುಕನು (ಪ್ರಹ್ಲಾಚ. ೭-೬೫); ಮಣ್ಣೊಳಾಡುವ ಬೆಣ್ಣೆಯಂತಹ, ಕಣ್ಣುಕಟ್ಟಿನ ಸೊಬಗಿನಾ (ಕಎಪು. ೩೮-೧೧); ಪ್ರಪಂಚದ ಆಗುಹೋಗುಗಳಿಗೆ ಈ ಕಣ್ಣುಕಟ್ಟು ವಿದ್ಯೆಯೇ ಕಾರಣವೆಂದು ಜನ ನಂಬಿಕೊಂಡಿದ್ದರು (ನಂಜುಂಡ. ೧೩೯). [ಕಣ್ + ಕಟ್ಟು$_2$]

**ಕಣ್ಗಡೆ**, ಕಂಗಡೆ (ನಾ). ೧. ಕಣ್ಣಿನಕೊನೆ, —ತುದಿ; ಕಡೆಗಣ್ಣು : ತನು ವಲ್ಲಿಯಲರು ಕಣ್ಗಡೆ ಮುಡಿ ಸೋಗೆ (ಕಂನವಿ. ೬-೯೭); ಕಡಗಂಗಲ್ಕೆನೆ ತೋಳ್ಗಳಿಂ ನೆಗಪಿದಳ್ತಳ್ಕೈಸಿದಳ್ತನ್ನ ಕಣ್ಗಡೆಯಿಂ ತುಳ್ಕಿ ಮುದಪ್ರು ನೋಡಿ ನಲಿದಳ್ (ರಾಜಶೇ. ೧೪-೩೫). ೨. ಓರೆನೋಟ; ಕಡೆಗಣ್ಣಿನ ನೋಟ : ಕರಯಿಸಿಕೊಂಡು ಕಣ್ಗಡೆಯಿಂದ ನೋಡುತ (ಕುರಾಸಾಂ. ೩೭-೧೨). **ಕಂಗಡೆ** : ೨. ಎಳನಗೆಯೊಳಾದರಿಪ ಕಂಗಡೆಯ ಸಿಡ್ಡಳಕೆ. . . ಬಯಸಿ ಬಯಸಿ (ಜೈಮಿಭಾ. ೩-೧೦). [ಕಣ್ + ಕಡೆ$_3$]

**ಕಣ್ಗದಿರ್**, ಕಂಗದಿರು, ಕಣ್ಕದಿರು (ನಾ). ಕಣ್ಣಿನ ಕಾಂತಿ, —ಪ್ರಭೆ : ಕಾರ್ಮುಗಿಲ ಮಿಂಚೆನೆ ಕಣ್ಗದಿರ್ವಿರ್ವ ಮಿಂಚೆ (ಶಬಶಂ. ೩-೧೫); ಆಭರಣಮಲುಗಿದೊಡೆ ಕಣ್ಗದಿರ್ಸೂಸಿದೊಡೆ . . . ಜನರ ನಿದ್ರಾಭಂಗಮಾಗಿ ಕಂಡಪರ್ (ಜೈಮಿಭಾ. ೨೬-೮). **ಕಂಗದಿರು** : ಕಂಗದಿರು ಸೂಸದೊಲು (ವೆಂಕಾರಾ. ೫-೨-೩೮). **ಕಣ್ಕದಿರು** : ಹಿಗ್ಗಿನಹೊಳಹನು ಕಣ್‌ಕದಿರು ಬಗ್ಗಿಸುತಿರೆಯಿರೆ (ಗೋಕುನಿ. ೩೪). [ಕಣ್ + ಕದಿರ್$_2$]

**ಕಣ್ಗಯ್** 'ಕಣ್ಗೆಯ್' ನೋ.

**ಕಣ್ಗಲಿ** (ನಾ). (ಉಗ್ರವಾದುದನ್ನು) ನೋಡುವ ಸಾಮರ್ಥ್ಯವುಳ್ಳವನು, —ಧೈರ್ಯವುಳ್ಳವನು : ದೂರದೊಳಂಜದೀಕ್ಷಿಸುವ ಕಣ್ಗಲಿಗಳ್ ನೃಪರಾರುಮಿಲ್ಲೆನಲ್ ಸಾರೆವರಲ್ ಮನಂಗಿಡದ ಮೆಯ್ಗಲಿ ಯಾವನೊ (ಪಂರಾಮಾ. ೫-೮೨). 'ಮೆಯ್ಗಲಿ' ಪರಾ. [ಕಣ್ + ಕಲಿ$_2$]

**ಕಣ್ಗಱುಬು$_1$**, ಕಂಗಱುಬು (ಕ್ರಿ). ಕಣ್ಣಿನಿಂದ ಕರುಬು; ಹೊಟ್ಟೆಕಿಚ್ಚುಪಡು : ದೊರೆವೆಣ್ಣು ಹೊಂಬಾಳೆದೊಡೆ ಸೊಂಪು ಸುಣ್ಣವೆತ್ತಿರೆ ಕಂಡು ಕದಳಿ ಕಣ್ಗಱುಬಿ [ಪಾಠಾಂ. ಕಂಗಱುಬಿ, ಕಣ್ಗರುಚಿ] ಒರೆಗೆ ತಾ ಸಲ ಬಂದುದಿಲ್ಲವೆಂಬೊಂದೊಂದು ಹೊರೆಗಳೆದುವು ಬಾಳೆ ಬನದಿ (ಮೋಹತ. ೨೪-೪೦). **ಕಂಗಱುಬು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕಣ್ + ಕಱುಬು$_1$ (< ಕಱುಂಬು$_1$)]

**ಕಣ್ಗಱುಬು$_2$** (ನಾ). ಕಣ್ಕಿಸುರು; ಮಾತ್ಸರ್ಯ; ಹೊಟ್ಟೆಕಿಚ್ಚು : ನನಗಯ್ಯನಂದು ಪಿರಿಚಿಕೊಟ್ಟಂಬಳಿಯಲ್ಲಿ ನಾನಿಹೆನು-ಕಣ್ಗಱುಬಾಯ್ತೆ ತನಗಿದ ನೋಡಿ (ಭರಚ. ೪೮-೩೬). [ಕಣ್ + ಕಱುಬು$_2$(< ಕಱುಂಬು$_2$)]

**ಕಣ್ಗಾ** (ಕ್ರಿ). ಕಣ್ಣೆದುರಿಗಿರಿಸಿಕೊಂಡು ಕಾಯು, —ರಕ್ಷಿಸು : "ಕಣ್ಗಾವುದು – ನಿರೀಕ್ಷಿಸುವುದು" (ಪಂರಾಮಾ. ಕೋಶ); ಅಲೋಕಕನ ಮಾತ್ರದಿಂ ಮಱೆದು ಪಾಂಥ ಶ್ರೇಣಿ ನೀರಟ್ಟೆಯಂ ಶ್ರಮಮುಂ ತೀರ ಮೆಯಂ ಪ್ರಪಾಂಗನೆಯರಂ ಕಣ್ಗಾವುದಾದೇಶದೊಳ್ (ಪಂರಾಮಾ. ೧-೧೦೩). [ಕಣ್ + ಕಾ$_1$]

**ಕಣ್ಗಾಡಿ** (ನಾ). ಕಣ್ಣಿನ ಸೊಬಗು, —ಚೆಲುವು : ಕಣ್ಗಾಡಿ ಸೊಗಸುವ ಕನ್ನೈದಿಲಾಗೆ (ಕಂನವಿ. ೬-೪೯); ಲಲನೆಯ ಕಣ್ಗಾಡಿ ಮಿಂಚೆಂದು ಚಾತಕ ನಲಿವವು ಮಳೆಗಾಲವೆಂದು (ಕಂನವಿ. ೭-೬). [ಕಣ್ + ಗಾಡಿ$_1$]

**ಕಣ್ಗಾಣ್**, ಕಂಗಾಣು, ಕಣುಗಾಣ್, ಕಣ್ಗಾಣು, ಕಣ್ಣುಕಾಣು, ಕಣ್ಣುಗಾಣ್ (ಕ್ರಿ). ೧. ಕಣ್ಣಿನಿಂದ ನೋಡು; ದೃಷ್ಟಿಸು; ಪ್ರತ್ಯಕ್ಷವಾಗಿ ಕಾಣು : ಎನ್ನ ಗಂಡನಂ ಕಣ್ಗಾಣದಂತು ಮಾಡಿದೊಡೆ (ಹಂಚತಂ. ೨೭೨-೨೨); ಕಣ್ಗಾಣದವನ ಕೈಲಮಲರತ್ನವನಿತ್ತ ತೆಱನಂತೆ (ಗಗತಾ. ೧೨-೪೪). ೨. (ಅಲಂ) ಚೆನ್ನಾಗಿ ತಿಳಿದು ನೋಡು; ವಿವೇಕವಂತನಾಗಿರು : ಕಣ್ಗಾಣದಿಂತಪ್ಪೇಕಗ್ರಾಹಿಗಮೊಱಂಟಂಗಂ ರಥಮನೆಸಗೆಂ (ಪಂಪಭಾ. ೧೨-೨೦೫ ವ); ಅಂತುರ್ಕಿ ಸೊರ್ಕಿಂ ದಕ್ಕುಂ ದಲೆವಾಯ್ದು ದೂರ್ತಿಂ ಕಣ್ಗಾಣದೆ ಸೂಳೆಗೇರಿಯಂ ಪೊಕ್ಕು (ಧರ್ಮಾಮೃ. ೨-೪೩). **ಕಂಗಾಣು** : ೧. ಹೆಡತಲೆಗೆ ಮೋಹಿದ ಕೃತಾಂತನ ಖಡುಗವನು ಕಂಗಾಣರೇತಕೆ (ನಭಾಗ. ೨-೧-೬). **ಕಣುಗಾಣ್** : ೧. ಮಿಂಡೆಯ ಗಂಡ ತಾ ದಂಡಿಗೆ ಹೋಗಿಹರೆ ಹಿಂಡಿಯ ಹೆಡಿಗೆಗೆ ಕೋಣನ ತಂದು ಕಣುಗಂಡು ಹೊಡೆದಂತೆ (ಸರ್ವಜ್ಞ. ೧೮೬೫). **ಕಣ್ಗಾಣು** : ಬಾಣನ ಭಟರು ಯಾದವರೆಂಬ ಬಗೆಯ ಕಣ್ಗಾಣದೆ ತಮ್ಮೊಳು ತಾವು ಹಾಣಾಹಣಿಯೊಳು ತಿವಿದಾಡುವುದು (ಮೋಹತ. ೪೦-೪೨). **ಕಣ್ಣುಕಾಣು** : ೨. ಅಜ್ಞಾನಿಗಳಿರಾ ಕಣ್ಣುಕಾಣಿರೆ (ಬಸಪು. ೫೮-೩೩); ಹೆಣ್ಣುಪೆಣ್ಣೆಂದೇತಕೆ ಬೀಳುಗಳೆವರು ಕಣ್ಣುಕಾಣದ ಗಾವಿಲರು (ಹದಿಬ. ೫-೭); ಕಣ್ಣುಕಾಣದ ಹೊಟ್ಟೆಗೆ ಮಣ್ಣೇನು ಮಸಿಯೇನು? (ಗಾದೆ). **ಕಣ್ಣುಗಾಣ್** : ೨. ಕಾಮಿಗಳ್ ಕಣ್ಣುಗಾಣರೆಂಬುದು ಪುಸಿಯೇ (ಚಬಪು. ೨೦-೨).

ಕಣ್ಗಾಣದರ್ = ಕುರುಡರು : ಭೂಪರ್ ಪಿರಿದುಂ ಕಣ್ಗಾಣದರಂತಿರೆ ಕಾಣಲ್ಕಾಱರಲ್ತೆ ತೇಜಸ್ವಿಗಳಂ (ಕಾದಂಪೂ. ೫೬೧). [ಕಣ್ + ಕಾಣ್]

**ಕಣ್ಗಾಣಿಸು** (ಕ್ರಿ). ಕಣ್ಣಿಗೆ ಕಾಣುವಂತೆ ಮಾಡು, —ತೋರಿಸು : ಹಲದರಪಾಣಿ ಮನ್ಮಥಕುಮಾರಕನ ಮಾಣಿಕ್ಯರಚಿತ ಪಲ್ಲಕ್ಕಿಯನಿಳಿಸಿ ಕಣ್ಗಾಣಿಸಿದರು ಮುರಹರನ (ಮೋಹತ. ೪೧-೪೦). 'ಕಂಗಾಣಿಸು' ಪರಾ. [ಕಣ್ಗಾಣ್ – -ಇಸು$_3$]

**ಕಣ್ಗಾಣು** 'ಕಣ್ಗಾಣ್' ನೋ.

**ಕಣ್ಗಾಪು, ಕಣ್ಕಾಪು, ಕಣ್ಗಾಹು** (ನಾ). ೧. ಕಣ್ಣಿಟ್ಟು ಮಾಡುವ, ಎಚ್ಚರಿಕೆಯ ಕಾವಲು; ಕಣ್ಣಿನ ಕಾವಲು: ಪುರೋಚನನುಂ ಪೆಱಗಣ ಕಾಪಂ ಕಣ್ಗಾಪಿನಲೆ ಕಾದಿರ್ಪನ್ನೆಗಂ (ಪಂಪಭಾ. ೩-೪ ವ). ೨. ಕಣ್ಣಿಗೆ ಮರೆಮಾಡುವ ಸಾಧನ; ಕಣ್ಣಿನ ತಡೆ: ಕಣ್ಣಿಗಿಂತ ಕಣ್ಗಾಪನ್ನು ಗೌರವಿಸುವುದೇ ನಮ್ಮ ಚಿರ ಅಭ್ಯಾಸ (ನಿಬಂಧ. I, ೪೮೧). **ಕಣ್ಕಾಪು** : ೨. "(ಕುದುರೆಗೆ ಪಕ್ಕನೋಟಕ್ಕವಕಾಶವಿಲ್ಲದಂತೆ ಕಟ್ಟುವ) ಕಣ್ಕಾಪು" (Blinkers. ಇಂಕನ). **ಕಣ್ಗಾಹು** : ೧. ತನ್ನಯ ಕಳೆಯ ಕೂಡಿ ಕಣ್ಗಾಹಿನಿಂ ಘಟ್ಟಿಗೊಳಿಸಿದ ಪುಣ್ಯ ಘಟಿಕೆಯೋ (ಚಬಪು. ೨-೧೦).
[ಕಣ್ + ಕಾಪು$_1$]

**ಕಣ್ಗಾಹು** 'ಕಣ್ಗಾಪು' ನೋ.

**ಕಣ್ಗಿಚ್ಚು** (ನಾ). ಕಣ್ಣಿನ ಬೆಂಕಿ; ನೇತ್ರಾಗ್ನಿ : ಇದೆತ್ತಣುರಿಯೋ ಹರನ ಕಣ್ಗಿಚ್ಚಲ್ಲಲೇ (ಕುವ್ಯಾಭೀ. ೬-೩೪); ಖಂಡೇಂದುಶೇಖರ ಕಣ್ಗಿಚ್ಚಿನಿಂದೆನ್ನ ಗಂಡನನುರುಹಿದಂತುರುಹು (ಮೋಹತ. ೮-೩೭); ನಿಟಲಾಕ್ಷನ ಕಣ್ಗಿಚ್ಚಿನ ಕಿಡಿಗಳಾರ್ಭಟೆಯಂತೆ (ಕಂನವಿ. ೧೨-೧೮).
[ಕಣ್ + ಕಿಚ್ಚು]

**ಕಣ್ಗಿಡಿ, ಕಂಗಿಡಿ, ಕಣುಗಿಡಿ, ಕಣ್ಕಿಡಿ** (ನಾ). ೧. ಕಣ್ಣಿನ ಕಿಡಿ; ಕಣ್ಣಿನಿಂದ ಹೊರಟ ಬೆಂಕಿಯ ಕಿಡಿ. ೨. (ಆಲಂ) ಕೋಪದ ನೋಟ : ಕುಂಭಿಶಿರಃಪ್ರದೇಶಮಂ ಕೊನೆಯುಗುರಿಂದೆ ಸೀಳ್ದು . . . ಕುನುಂಗಿ ಕುಪ್ಪಳಿಸಿ ಕಣ್ಗಿಡಿ ಸಾಲಿಡೆ ನೋಡಿ ಬೇಡರಂ (ರಾಜಶೇ. ೫-೧೧೬). **ಕಂಗಿಡಿ** : ೧. ತ್ರಿಪುರಂಗಳಂ ಸುಟ್ಟ ಕಂಗಿಡಿಯಿನದ್ಭುತಂ (ವೀಶೈಪು. ೪-೨೨-೧). **ಕಣುಗಿಡಿ** : ೧. ಹಣೆಯ ಜೂಬಿನ ಜೂಲು ಗೂದಲ ಕಣುಗಿಡಿಯ ಕಡುಕಾಹುರದ (ತೊರರಾ. ೪-೭-೨೩). **ಕಣ್ಕಿಡಿ** : ೧. ಅಡೆವೊತ್ತ ಕೋಪಶಿಖಿ ಕಣ್ಕಿಡಿಯಂ ಕೆಂಡಮುಮನುಗುಳೆ . . . ಕಡೆಗಾಲದೊಳೊಗೆದ ಧೂಮಕೇತುವೊಲಿರ್ದಂ (ಪಂರಾಮಾ. ೬-೧೩೮).
[ಕಣ್ + ಕಿಡಿ$_1$]

**ಕಣ್ಗಿಡಿಗೆದಱು, ಕಣುಗಿಡಿಗೆದಱು** (ಕ್ರಿ). ಕಣ್ಣಿನಿಂದ ಕಿಡಿಗಳನ್ನು ಸೂಸು; ಕೋಪದಿಂದ ತೀಕ್ಷ್ಣವಾಗಿ ನೋಡು : ಮುಳಿದು ಕಣ್ಗಿಡಿಗೆದಱುತ ಖಾನ ಹಿನ್ನೆಲೆಗೆಳಸಿದೊಜ್ಜೀರ ಮುಲುಕರ ಸಲೆ ಜಜಿದು (ಕಂನವಿ. ೧೫-೨೭). **ಕಣುಗಿಡಿಗೆದಱು** : ಎಣಿಕೆಯಿನ್ನೇಕೆ ಬಂಧಿಸಿ ಪಟ್ಟಣವನೆಂದು ಕಣುಗಿಡಿಗೆದಱಿ ಗರ್ಜಿಸಿದ (ಕಂನವಿ. ೧೩-೪೭).
[ಕಣ್ಗಿಡಿ$_1$ + ಕೆದಱು (< ಕೆದಱ್$_1$)]

**ಕಣ್ಗಿಡು** 'ಕಣ್ಗೆಡು' ನೋ.

**ಕಣ್ಗಿಸುರ್** 'ಕಣ್ಕಿಸುರ್' ನೋ.

**ಕಣ್ಗಿಸುರು** 'ಕಣ್ಕಿಸುರ್' ನೋ.

**ಕಣ್ಗುಣಿಕೆ** 'ಕಣ್ಕುಣಿಕೆ' ನೋ.

**ಕಣ್ಗುಬ್ಬಿ** (ನಾ). (?); "ಕಣ್ಣುಗುಡ್ಡೆ; ಗಂಟೆನಂತಿರುವ ಕಣ್ಣು" (ಸುಕುಮಾ. ಕೋಶ) : ಕಣ್ಗುಬ್ಬಿಯ ಗುಳ್ಳೆಯಂತೆ ಪೊಱಪಾಯ್ವಿನಮಟ್ಟಳೆ ವೊಯ್ದೊಡೊರ್ವನಂ (ಸುಕುಮಾ. ೭-೬). [ಕಣ್ + ಗುಬ್ಬಿ (< ಗುಬ್ಬಿ$_1$)]

**ಕಣ್ಗುರುಡ** (ನಾ). ಕಣ್ಣು ಕಾಣಿಸದವನು; ಕುರುಡ: ಖರಕರನುದಯಕ್ಕಾಜನೆಯ ರಾಶಿಯೊಳ್ ಶೀತಕಿರಣನಾ ಹೋರೆಗೆ ಪನ್ನೆರಡನೆಯೊಳಿರ್ದೊಡಂ ಕಣ್ಗುರುಡರ್ ಸ್ತ್ರೀಪುರುಷರಪ್ಪರ್ (ಜಾತಕ. ೨೧-೪); ನಯಸರವ ಕಾಣದೆ ಕಣ್ಗುರುಡ[ಪಾಠಾಂ. ಕಂಗುರುಡ]ನಂತಿರ್ದನಸುರೇಂದ್ರ (ತೊರರಾ. ೨-೧೦-೪೩). 'ಕಂಗುರುಡ' ಪರಾ.
[ಕಣ್ + ಕುರುಡ]

**ಕಣ್ಗುಳಿಕೆ** 'ಕಣ್ಕುಣಿಕೆ' ನೋ.

**ಕಣ್ಗೂಟ** (ನಾ). ಕಣ್ಣುಗಳ ಕೂಟ; ದೃಷ್ಟಿ ಸಂಗಮ; ಕಣ್ಣು ಹಾಯುವಷ್ಟು ದೂರ (?): ತಮ್ಮ ತಮ್ಮ ತೊಱೆಗಳ ಕಣ್ಗೂಟದಲ್ಲಿಯ ಮೀಂಗಳು ತಮ್ಮತಮ್ಮ ಸಮುದ್ರಂಗಳ ಮತ್ಸ್ಯಂಗಳದ್ಧಾರ್ದರ್ ನಿಡಿಯುವಕ್ಕುಂ (ಪಸಾರ. ೩೫೫-೧೫). [ಕಣ್ + ಕೂಟ$_1$]

**ಕಣ್ಗೂಡು** (ಕ್ರಿ). ಉಂಟಾಗು (?) : ಆಗಳೆ ಗಾಡಿ ನಾಡೆ ಕಣ್ಗೂಡಿರಲೋರ್ವನುದ್ಭವಿಸೆ ಕಂಡು ನಿಜಾತ್ಮಜನೀತನೆಂದು (ಕಾದಂಪೂ. ೭೬೪). [?]

**ಕಣ್ಗೆಡಿಸು, ಕಂಗಿಡಿಸು, ಕಂಗೆಡಿಸು** (ಕ್ರಿ). ದಿಕ್ಕು ತಪ್ಪಿಸು; ಭಯಗೊಳಿಸು; ಗಾಬರಿಗೊಳಿಸು (+). **ಕಂಗಿಡಿಸು** : ಉಡು ಮೊಲ ನರಿ ಹುಲ್ಲೆ ಮರೆ ಸಾರಗಗಳ ಕಂಗಿಡಿಸುವ ಜಂಘಾಲಿಗಳು (ಮೋಹತ. ೧೯-೧೨). **ಕಂಗೆಡಿಸು** : ಸಿಂಗದ ಮುಱಿವುಂ ಮೇಷದ ಪಿಂಗುಂ ನಯವಿದರ ವಿನಯಮಿಂತಿವು ಮೂಱುಂ ಭಂಗಮೆನಿಸಲ್ಕೆ ಪಡೆಯವು ಕಂಗೆಡಿಕುಂ ಭರದಿನಹಿತರದಟಂ ಧುರದೊಳ್ (ಪಂಚತಂ. ೨೬೮-೭); ಕಂತುವನೆ ಕಂಗೆಡಿಸಿ (ಪ್ರಭುಲೀ. ೧-೪); ದೂಳಿಡುವ ಬಿರುಗಾಳಿ ಕಂಗೆಡಿಪ ಕತ್ತಲೆ (ಜೈಮಿಭಾ. ೪-೨೩); ಆ ಮಣ್ಣಿನ ದಾಹ ವಸುಮತಿಯನ್ನು ಕಂಗೆಡಿಸಿತು (ಮಣ್ಣಿಮ. ೪). [ಕಣ್ಗೆಡು + -ಇಸು$_3$]

**ಕಣ್ಗೆಡು, ಕಂಗೆಡು, ಕಣುಗೆಡು, ಕಣ್ಗಿಡು** (ಕ್ರಿ). ೧. ಕಣ್ಣಿನ ಶಕ್ತಿ ಗುಂದು: ಕಟ್ಟಿದ ಪಟ್ಟಮೆ ಸರವಿಗೆ ನೆಟ್ಟನೆ ದೊರೆ ಪಿಡಿದ ಬಿಲ್ಲೆ ದಂಟಂಗೆಣೆ ಕಣ್ಗೆಟ್ಟ ಮುದುಪಂಗೆ ಪಗೆವರ ನಿಟ್ಟೆಲ್ವಂ ಮುಱಿವೊಡೆನಗೆ ಪಟ್ಟಂಗಟ್ಟಾ (ಪಂಪಭಾ. ೧೦-೧೭). ೨. ಕಕ್ಕವಿಕ್ಕಿಯಾಗು; ದಿಕ್ಕು ತಪ್ಪು; ಗಾಬರಿಯಾಗು : ಬನದೊಳ್ ಕೂಡೆ ತೊಱಲ್ದು ಕಾಣದೆ ಕರಂ ಕಣ್ಗೆಟ್ಟು ಬಾಯ್ವಿಟ್ಟು ಬರ್ಪನೆಗಂ (ನೇಮಿಪು. ೩-೧೫೭). **ಕಂಗೆಡು** : ೨. ಮೋಹಮಂ ತೊಱೆದು ಕಂಡರ್ ಪೇಸೆ ಮೆಯ್ಯೊಳ್ ಮಹಾಮಲಮಂ ತಾಳ್ದಿದ ಕಷ್ಟರಂ . . . ಕಂಗೆಟ್ಟರಂ ಕಂಡು (ಧರ್ಮಾಮೃ. ೧-೧೦೮); ಧರ್ಮಜನ ಹದನೇನೆನುತ ಚಿಂತಾರಜನಿಯಲಿ ಕಂಗೆಟ್ಟುದಾಬಲ (ಕುವ್ಯಾಶ. ೩-೪೭); ಅಳಿದುಳಿದ ಜನಪದದ ಜನ ಕಳವಳಿಸಿ ಕಂಗೆಟ್ಟಂಗಭೂಪನ ಬಳಿಗೆ ಬಂದೊದಱಿದರು ದುರ್ಭಿಕ್ಷದ ಮಹಾಭಯವ (ತೊರರಾ. ೧-೫-೧೬); ತಾಯೆ ಶೋಕದಿ ಕನಲಿ ಕಂಗೆಡಬೇಡ (ನಳಚ. ೫-೩೭); ಪಡಗು ಮುಳುಗುವ ಸಮಯದಲಿ ಕಂಗೆಡದೆ ಸಿದ್ಧಾರ್ಥನ ಕರೆದು (ಸಾಳ್ವಭಾ. ೭-೪೬). ೩. ಕ್ಷೋಭೆಗೊಳ್ಳು; ಉದ್ವೇಗಗೊಳ್ಳು : ಜಾಣನಲ್ಲವುನೆಂಬ ಚೆಲುವನ ಕಾಣುತವೆ ಕಂಗೆಟ್ಟು ಕರಗಿದೆನೆಂದಳಾ ಮಾಯೆ (ಪ್ರಭುಲೀ. ೭-೧೭); ತವಪಂಚಬಾಣಕ್ಕೆ ಕಂಗೆಡದವರಾರು ಲೋಕದಲಿ (ಮೋಹತ. ೫-೪೮). **ಕಣುಗೆಡು** : ೧. ತಲೆ ನಡುಗಿ ಕಣುಗೆಟ್ಟು ಹಲುಗಳು ಕಳಲಿ (ನಿಭಾಗ. ೩-೧೪-೬). **ಕಣ್ಗಿಡು** : ೨. ಒತ್ತಂಬದಿಂದೊಳಗಂ ಪೊಕ್ಕು ಪಾಂಚಾಳಿಯಂ ಕಣ್ಗಿಡೆ ಜಡಿದು ಮುಡಿಯಂ ಪಿಡಿದು (ಪಂಪಭಾ. ೭-೪ ವ). [ಕಣ್ + ಕೆಡು$_1$]

**ಕಣ್ಗೆತ್ತು** 'ಕಣ್ಕೆತ್ತು' ನೋ.

**ಕಣ್ಗೆದಱು** (ಕ್ರಿ). (ಕೋಪದಿಂದ) ಕಣ್ಣಿನ ನೋಟವನ್ನು ಕೆದರು, —ಹರಡು (?) : ಕಣ್ಗೆದಱಿದೊಡನೆ ನಾಲ್ವತ್ತೆಣ್ಗಾವುದವರೆಗಮುಗಿದೊಡಂಬುಧಿ ಕಡಲತ್ತಣ್ಗೆ ಹರಿ ಬಂದುದಂ ಕಡುಜಾಣ್ಗಡದಱಿದಾಗಳವಧಿಬೋಧೋದಯದಿಂ (ಕಾವ್ಯಾವ. ೨೭೨). [ಕಣ್ + ಕೆದಱು$_1$ (< ಕೆದಱ್$_1$)]

**ಕಣ್ಗೆಯ್, ಕಣ್ಗಯ್** (ಕ್ರಿ). ಕಣ್ಣುಗಳನ್ನು ಮುಚ್ಚು; ನಿದ್ರೆ ಮಾಡು : ಹಂಸದ್ವಯಂಗಳ್ ತರದಿಂ ಕಣ್ಗೆಯ್ಯೆ (ಕಾದಂಉ. ೧೪೮); ಕಣ್ಗೆಯ್ವ ಕೇಕಿಗಳಂತೆಯುಂ (ದಶಕು. ೧೧-೧೩); ಸತಿ ಕಾದಲನ ನಿಮಿರ್ದ ತೊಡೆಯ ಮೇಲೆ ಬಟಿಲ್ದತ್ಯಾದರದಿಂ ಕಣ್ಗೆಯ್ದಳ್ (ನಳಚಂ. ೫೩೬). **ಕಣ್ಗಯ್** : ಇರ್ವರುಂ ಶಿಥಿಲ ತನೂಪರಿರಂಭಣದಚ್ಚಱಿಯದೆ . . . ಕಣ್ಗಯ್ದರ್ (ಯಶೋಚ. ಅನುಬಂ. ೧೨೪). [ಕಣ್ + ಕೆಯ್$_1$]

**ಕಣ್ಗೊನೆ** (ನಾ). ೧. ಕಣ್ಣಿನ ಕೊನೆ, —ತುದಿ; ಕಡೆಗಣ್ಣು : ಗಂಗೆ ಯಮುನೆ ಕಣ್‌ಗೊನೆಗೆ ಇಳಿದು ಸುಖದುಃಖ ಹರಿಯುತಿಹುದು (ಸೂರ್ಯಪಾ. ೩೪-೭). ೨. ಕಡೆಗಣ್ಣಿನ ನೋಟ; ಅಪಾಂಗ ವೀಕ್ಷಣ : ಈಶ್ವರನಂದು ತನ್ನ ಕಣ್ಗೊನೆಯೊಳೋಲಗವಂ ವಿಸರ್ಜಿಸುತ್ತ (ಚೆಬಪು. ೩-೩೪) ; ಕಣ್ಗೊನೆಯೊಳಿಟ್ಟೆಸುತಿಚ್ಚೆಯಜೀತು ಇನಿವಾತಿನಿಂದ ಸೋಲಿಸಿ (ಕಂನವಿ. ೯-೧೫೫). [ಕಣ್ + ಕೊನೆ$_3$]

**ಕಣ್ಗೊಳ್** (ಕ್ರಿ). ೧. ಕಣ್ಣನ್ನು ಸೆಳೆ; ಮನೋಹರವಾಗು : "ಕಣ್ಗೊಳ್ - ದರ್ಶನೀಯೇ" (ಶಮುಧಾ) ; ನಳಿತೋಳ ಬಳ್ವಳಿಕೆ ಕಣ್ಗೊಳೆ ಘಟ್ಟಿಮಗುಬ್ಬುವಂದಮುಲ್ತರೆದು ಮುಗುಬ್ಬುವಂದಮು ದಲೆ ನ್ನೆರ್ದೆಯಂ (ಪಂಪಭಾ. ೮-೬೦) ; ಚದುರೆತ್ತಣದಾಕೆಗೆಂದು ಕಣ್ಗೊಂಡ ವಿಲಾಸದಿಂ ನಗುವುದಲ್ಲಿಯ ವಾರವಿಲಾಸಿನೀಜನಂ (ಮಲ್ಲಿಪು. ೨-೫೫) ; ನಿಲಲಾಜ್ಞಾಲಕ್ಷ್ಮಿ ವಿಶ್ವಕ್ಷಿತಿಪಮಕುಟಕೂಟಂಗಳೊಳ್ . . . ನಿಶ್ಚಲ ಲಕ್ಷ್ಮೀಕಾಂತೆ ವಕ್ಷಸ್ಥಳದೊಳಖಿಳ ಸಾಮ್ರಾಜ್ಯ ಸಂಪತ್ತಿಯೊಳ್ ಕಣ್ಗೊಳೆ ನಿಂದಂ ಸಂದುಪೇಂದ್ರಂ (ನೇಮಿಪು. ೧೨-೨೮೮) ; ಗಿಳಿಗಳೆ ಪೂಡಿರ್ದ ಕುದುರೆ ತೆಂಗಾಳಿಯೆ ಕಣ್ಗೊಳೆ ತೇರೆಸಗುವಂ (ಕಬ್ಬಿಕಾ. ೨೦೯). ೨. ನೋಡು (?) : ಅವಳ ಸುಸಿಲಿನ ಸುಖವ ನೆಱೆ ಮೆಚ್ಚಿ ದಿವಿಜ ಲೋಕದ ನೆನಹನೀಕವಡಿಕೆಗೆ ಬಗೆಯನು ಮರುಳ್ದವನವಳನಲ್ಲದೆ ಕಣ್ಗೊಳನು ಸಿಬಿರದೊಳು ಶಬರಿಯರ (ಸಾಳ್ವಭಾ. ೫-೧೨). 'ಕಂಗೊಳ್' ಪರಾ. [ಕಣ್ + ಕೊಳ್$_1$]

**ಕಣ್ಗೊಳಿಸು, ಕಣ್ಣುಗೊಳಿಸು** (ಕ್ರಿ). ೧. ಕಣ್ಣನ್ನು ಆಕರ್ಷಿಸು; ಮನೋಹರವಾಗು : ಯುವರಾಜನುರಸ್ಥಳದೊಳ್ಮುಕ್ತಾವಳಿ ಕಣ್ಗೊಳಿಸುಗುಂ (ಕಾದಂಬ. ೧೧೭) ; ಕಣ್ಗೊಳಿಸುಗುಮಾಕೆಯ ವಿನೀಳ ಕಬರೀ ಭಾರಂ (ಸುಕುಮಾ. ೯-೮೮). **ಕಣ್ಣುಗೊಳಿಸು** : ೨. ಕಣ್ಣಿಗೆ ಕಾಣುವಂತೆ ಮಾಡು; ಪ್ರತ್ಯಕ್ಷವಾಗಿ ತೋರಿಸು : ಮುನಿಯು ಕುಳಿತಾಸನದ ತಾಣದೆ ಜನಕನಂದಿನಿಗಂದನೆಲೆ ಭೂತನಯೆ ನಿನ್ನಾಚರಣಪರಿಶುದ್ಧತೆಯ ವಿಷಯದಲಿ ಇನಿಯನೆದುರಲಿ ಕೂಡಿದಂಥೀ ಜನರು ಪ್ರತ್ಯಯಗಾಣುವಂತೀ ಕ್ಷಣಕೆ ನಿಃಸಂದೇಹವಾಗಿಯೆ ಕಣ್ಣುಗೊಳಿಸುವದು (ರಘುವಂ. ೧೭.೮). 'ಕಂಗೊಳಿಸು' ಪರಾ. [ಕಣ್ಗೊಳ್ + -ಇಸು$_3$]

**ಕಣ್ಚಲ್ಲ, ಕಣ್ಚೆಲ್ಲ** (ನಾ). ಚೆಲ್ಲುನೋಟ; ಸರಸನೋಟ; ಕಣ್ಣಿನ ವಿಲಾಸ: ನೀನವನೊಳ್ ಕಣ್ಚಲ್ಲದೆ ಪೋಗಿ ನೆರೆದು ಮೆಲ್ಲನೆ ಬಂದೈ (ಪುಷ್ಪಪು. ೮-೧೧೫) ; ಚ ಟ ವರ್ಗಕ್ಕೆ ತೃತೀಯತ್ವಮೆಂದುಮಿಲ್ಲದುದರ್ಕೆ :— ಕಡುಚಾಗಿ, ಕಣ್ಚಲ್ಲಂ (ಶಮದ. ೬೫ ಪ್ರಯೋ). **ಕಣ್ಚೆಲ್ಲ** : "ಕಣ್ಚೆಲ್ಲಮೆಂದು ಸರಸಾಲೋಕನಂ" (ಕಶಸಾ. ೨೭-೫೭೯) ; ಸೊಗಯಿಪೀ ರೂಪಮಿಾ ಬಣ್ಣಮಿಾ ಮೆಯ್ಸಿರಿ ಕಣ್ಚೆಲ್ಲಮಿಾ ಭಾವಕಮೊಗೆಯವೆನಲ್ಕಾಂತೆ ಕಣ್ಗೆಡ್ಡಮಾದಳ್ (ಲೀಲಾವ. ೩-೪೭) ; ಹಾರಂ ತೂಗೆ ಕಣ್ಚೆಲ್ಲಮಲ್ಲುಗೆ ಪೊನ್ನೋಲೆ ಕದಂಪನಪ್ಪಳಿಸೆ (ಜಗವಿ. ೧೦-೧೦೦). [ಕಣ್ + ಚಲ್ಲ]

**ಕಣ್ಚಿವುಟು, ಕಣ್ಣುಚಿಮುಟು, ಕಣ್ಣುಚಿವುಟು** (ಕ್ರಿ). ಕಣ್ಣು ಮಿಟುಕಿಸು; ಕಣ್ಣಿನಿಂದ ಸನ್ನೆಮಾಡು; ಕಣ್ಣುಹೊಡೆ : ಚಿತ್ರರತಿಯ ನೋಡುತ ಚಿಕ್ಕ ಕಣ್ಚಿವುಟುವವು (ಉದ್ಯಾಲೆ. ೯-೪). **ಕಣ್ಣುಚಿಮುಟು** : (ಕ). **ಕಣ್ಣುಚಿವುಟು** : ಬಣ್ಣಗೊಂಡು ಬಗೆಬಗೆಯಲಿ ಕಣ್ಣುಚಿವುಟಿ ಕರೆದುಹೋದ ಕನಸುಗಳೇ ಬನ್ನಿ (ನಾದಲೀ. ೧೫-೩). [ಕಣ್ + ಚಿವುಟು$_1$ (< ಚಿವುಂಟು)]

**ಕಣ್ಚೆಲ್ಲ** 'ಕಣ್ಚಲ್ಲ' ನೋ.

**ಕಣ್ಜಂಕೆ** (ನಾ). ಕಣ್ಣಿನಿಂದ ಬೆದರಿಸುವುದು.

**ಕಣ್ಜಂಕೆಜಂಕಿಸು = ಕಣ್ಣಿನಿಂದ ಬೆದರಿಸು**: ಕೌರವಂ ಕಣ್ಜಂಕೆ ಜಂಕಿಸುತ . . . ನಿಂದ (ಹೆಬ್ಬೆರ. ೧೦-೪). [ಕಣ್ + ಜಂಕೆ$_1$]

**ಕಣ್ಜರ್ಬುರ್** (ನಾ). = ಕಣ್ಜಂಕೆ : ಜಲರುಹನಾಭಂ ಕಂಡೆರ್ದೆಕಲಂಕಿ ಕಣ್ಜರ್ಬುರ್ ಜರ್ಬಿದಂ ಗಾಂಡಿವಿಯಂ (ಗದಾಯು. ೮-೩೦). [ಕಣ್ + ಜರ್ಬುರ್ (< ಜರ್ವು$_2$)]

**ಕಣ್ಜಾಡೆ, ಕಣ್ಣುಜಾಡು** (ನಾ). ೧. ಕಣ್ಣಿನ ಜಾಡು; ದೃಷ್ಟಿಪಥ (ಕ). ೨. ಕಂಡೂ ಕಾಣದಂತಿರುವುದು; ಕಣ್ಗೊಪ್ಪಿಗೆ; ಪರೋಕ್ಷ ಸಮ್ಮತಿ (ಸ್ಯಾಂಡರ್). **ಕಣ್ಣುಜಾಡು** : ೧. ಮೃಗ ನಮ್ಮ ಕಣ್ಣುಜಾಡಿನಿಂದ ತಪ್ಪಿಸಿಕೊಂಡಿತು (ರೂಢಿ). [ಕಣ್ + ಜಾಡು$_1$]

**ಕಣ್ಜಾಣ್ಮೆ** (ನಾ). ಕಣ್ಣಿನ ಜಾಣತನ; ಕಣ್ಣುಸನ್ನೆ : ಮಾಣವಕನು ನೊಯ್ಯನೆ ಕಣ್ಜಾಣ್ಮೆಂ ಪೆಜನೂಂಕಿ ಗುರುಕುಚಾಗ್ರದೊಳಾದಂ ಮೇಣೊಂದಿಸಿ ಸೋರೆಯನದೊರ್ವೇಣಾಕ್ಷಿ ಪಳಂಚಿದಳ್ ಮಿಸುಪ ಕಿನ್ನರಿಯಂ (ಉದ್ಭಟ. ೧೦-೪೯). [ಕಣ್ + ಜಾಣ್ಮೆ]

**ಕಣ್ಜಿಟ್ಟೆ** (ನಾ). ಕಣ್ಣಿನ ರೆಪ್ಪೆಯ ಮೇಲೆ ಆಗುವ ಬೊಕ್ಕೆ; ಕಣ್ಣು ಕುಟಿಕೆ (ಕ). [ಕಣ್ + ಜಿಟ್ಟೆ$_3$]

**ಕಣ್ಜೊಡರ್** (ನಾ). ಕಣ್ಣಿನ ಕಾಂತಿ (?) : ರೂಪುಗರೆದಿರ್ದೊಡ ಮಾತನ ರೂಪಿದೊಂದು ಕಣ್ಜೊಡವೆನೆ ಬೇಜದೊಂದು ಬಗೆಗಿಕ್ಕಿದ ಟಕ್ಕನೆ ವಶ್ಯದೊಂದು ಕ[ಪಾಠಾಂ. ತ]ಜೊಡರೆನೆ ನೋಟ್ಪ ನೋಟಕರ ಕಣ್ಗೊಳಗಾದುದು ಕಣ್ಣಪಾಪೆವೋಲ್ (ಪಂಚಾಮಾ. ೩-೩೯) ; ಕಣ್ - ಸೊಡರ್, ಕಣ್ಜೊಡರ್ (ಭಾಷಾಭೂ. ೩೩ ಪ್ರಯೋ). [ಕಣ್ + ಸೊಡರ್]

**ಕಣ್ಣ** (ನಾ). ಒಂದು ನಾಡಿನ ಹೆಸರು : ಕಣ್ಣವಿಷಯೇ ಕನ್ದುಗುಳ್ನಾಮ ಗ್ರಾಮ (ಇಆ. VI, ೭೭-೩೧; ?). [?]

**ಕಣ್ಣಂಗೂಳರಸ** (ನಾ). ಒಬ್ಬಾತನ ಹೆಸರು : ಪುತ್ತೂರೊಳು ಕಣ್ಣಂಗೂಳರಸ ಕನಕಾರಿಗೆ ಮೂಗೊಳಂ ಕಟಿನಿ ಭಗವತಿಗೆ ಕೊಟ್ಟೋದ ಱಿವೋಪ್ಪಞ್ಚಮಹಾಪಾತಕನಕ್ಕುಂ (ಎಕ. X, ಕೋಲಾರ. ೨೩೦-೮ ; ಸು. 750). [ಕಣ್ಣಂಗೂಳ್$_0$ + ಅರಸ$_1$]

**ಕಣ್ಣಂಜಿಕೆ** (ನಾ). ಕಣ್ಣಿನ ನೋಟದಿಂದುಂಟಾಗುವ ಹೆದರಿಕೆ, —ಭಯ : ಕಪ್ಪವನು ಆರ ಕಣ್ಣಂಜಿಕೆಗೆ ತೆತ್ತರು ಧಾರುಣೀವಲ್ಲಭರು (ನಿಭಾಗ. ೧-೧೦-೩೩). [ಕಣ್ + ಅಂಜಿಕೆ]

**ಕಣ್ಣಂದೊಟಲಿ, ಕಂದೊಳಲಿ, ಕಣ್ದೊಟಲಿ** (ನಾ). ೧. ಕಣ್ಣಲ್ಲಿ ಸುತ್ತುವ ಗುಡ್ಡೆ; ಕಣ್ಣುಗುಡ್ಡೆ : ಣತ್ವಕ್ಕೆ :- ಕಣ್ಣಂದೊಟಲಿ (ಶಮದ. ೧೭೨ ಪ್ರಯೋ). **ಕಂದೊಳಲಿ** : ೨. ಗುಂಗುರು ; ನೊರಜು; ನುಸಿ : ಮಾವಿನಹಣ್ಣಿನ ಕಾಲದಲ್ಲಿ ಕಂದೊಳಲಿಗಳ ಕಾಟ ಬಹಳ (ರೂಢಿ). **ಕಣ್ದೊಟಲಿ** : ೧. ಕಣ್ಣಂದೊಟಲಿ, ಕಣ್ದೊಟಲಿ (ಶಬ್ದಾನು. ೩೪೭ ಪ್ರಯೋ). [ಕಣ್ + ತೊಟಲ್$_2$ + -ಇ$_3$]

**ಕಣ್ಣಕುಟಿ** (ನಾ). ಒಬ್ಬಾತನ ಹೆಸರು : ಶ್ರೀ ಕಣ್ಣ[ಣ್ಣ]ಕುಟಿ ಅರಸ (ಎಕ. X, ಗೋರೀಬಿ. ೭೪-೧ ; ಸು. 900). [?]

**ಕಣ್ಣಚಿ** (ನಾ). ಒಬ್ಬಾತನ ಹೆಸರು : ಸನ್ದವರದರ ಕಣ್ಣಚಿಯುಂ (ಎಇ. IX, ೨-೧೧ ; 800). [?]

**ಕಣ್ಣಚ್ಚಿ** (ನಾ). ಕಣ್ಣಿಗೆ ಇಡುವ ಕಾಡಿಗೆ (?) : ಮತ್ತೆ ಮಾದಾಂಬಿಕೆಯ ಮಜ್ಜನಂಗೈಸುತಂ ಚಿತ್ತಾವಲರುತಲೊಗೆದದೂಟವಂ ನುಡಿಸುತಂ ಬಿತ್ತರದ ಕಣ್ಣಚ್ಚಿಯನ್ನಿಚ್ಚು ಹಳದಿಯಂ ವಿಸ್ತರದಿ ಮೈಗೆ ಪೂಸಿ (ಲಿಂಗಪು. ೨೦-೩೧). [ಕಣ್ + ಅಚ್ಚಿ ?]

**ಕಣ್ಣಡ, ಕನ್ನಡ$_2$** (ನಾ). ೧. ಕಣ್ಣಿಗೆ ಕಟ್ಟಿಕೊಳ್ಳುವ ಅಡ್ಡಪಟ್ಟಿ; ನೇತ್ರಬಂಧ : ಐವರು ಕೊಡಗೂಸುಗಳ ಕಣ್ಗಳಿಂಗೆ ಕಣ್ಣಡವ [ಪಾಠಾಂ. ಕನ್ನಡವ, ಕನ್ನಡಕವ] ಕಟ್ಟುತ್ತಿಹುದ ಕಂಡೆ (ಅವಚಂ. ೫೦-೨೧೧) ; ಕಾಯವೆಂಬ ಕಣ್ಣಡವಿಲ್ಲ ಪ್ರಾಣವಿಲ್ಲವಾಗಿ ಮನವೆಂಬ ನೆನಹಿಲ್ಲ ಅನುಭಾವವಿಲ್ಲವಾಗಿ (ಚನ್ನವ. ಕ. ೬೦೬-೧೩೫೪).

**ಕನ್ನಡ್ಡ**: ೧: ಕನ್ನಡದೈವರು ಹೆಣ್ಣುಗಳ ಚೆನ್ನಾಗಿ ಕಟ್ಟಿದಳು ಕಣ್ಣುಗಳ (ಶಿವಗೀ. ೧೪೨-೭೨೨). ೨. [ವೀಶೈ] ಲಿಂಗಕ್ಕೆ ಎಡೆಮಾಡುವಾಗ ಕಣ್ಣಿಗೆ ಮರೆಯಾಗಿ ಕಟ್ಟುವ ತೆರೆ: ಮಧ್ಯದಲ್ಲಿ ಕರ್ಮವೆಂಬ ಕನ್ನಡವ ಕಟ್ಟಿದಲ್ಲಿಯೂ ನಿನ್ನ ಜ್ಞಾನೋದಯದಿಂದ ನಿನ್ನನೀ ತಿಳಿದೆಯಲ್ಲದೆ ಅನ್ಯರ ಕೈಯಲ್ಲಿ ಅಗದು (ಶೂನ್ಯಸಂ. ೫-೧೭).
[ಕಣ್ + ಅಡ್ಡ$_0$ (< ಅಡ್ಡ$_1$)]

**ಕಣ್ಣಡಕ, ಕನ್ನಡಕ$_1$** (ನಾ). ೧. = ಕಣ್ಣಡ ೧: ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಕಾಣದೆ ಕಣ್ಣಡಕದ ಕಣ್ಣಿನಂತೆ ಕಣ್ಣೆನಿಸಿ ಕೆಟ್ಟೆನಯ್ಯ (ಆದವ. ಹ. ೧೫-೩೨); ಕರಮೆಸೆವ ಘೋಣಾಗ್ರದೊಳಗೆ ಬೆಳವಡೆಗಳಂ ಧರಿಸಿ ಕಣ್ಣಡಕಂಗಳಂ ತಾಳ್ದು (ಅರಾಚ. ೮-೩೪). ೨. = ಕಣ್ಣಡ ೨: ಪರವೆಂಬ ಮೇಲೋಗರವನಿಕ್ಕಿ ಬೆಳಗು ಕತ್ತಲೆಯೆಂಬ ಕಣ್ಣಡಕವ ಕಟ್ಟಿ ಲಿಂಗವ ಆರೋಗಣೆಯ ಮಾಡಿಸಿ (ಅವಚಂ. ೧೫೫-೭೧೧). **ಕನ್ನಡಕ$_1$**: ೧. ಐವರು ಕೊಡಗೂಸುಗಳ ಕಣ್ಣಿಂಗೆ ಕನ್ನಡಕವ [ಪಾಠಾಂ. ಕಣ್ಣಡವ, ಕನ್ನಡವ] ಕಟ್ಟುತ್ತಿಹುದ ಕಂಡೆ (ಅವಚಂ. ೫-೨೧೧).
[ಕಣ್ + ಅಡಕ$_1$]

**ಕಣ್ಣಡಿಗ** (ನಾ). ಅಡಿಯಲ್ಲಿ ಕಣ್ಣುಳ್ಳವನು; ಶಿವ: "ಕಣ್ಣಡಿಗಂ ತಿಸುಳಿ . . . ಐಮೊಗಂ- ಈ ೩೩ ಈಶ್ವರಂಗೆ ಪೆಸರ್" (ಕಶಸಾ. ೧-೧); "ಮಿಗಗೈಯಂ ಕಣ್ಣಡಿಗಂ ಮಿಗೆ ಸೊಡಬಲಿವನೆಯಣೀಸರಂ ಬೆಳ್ಳಡಿ . . . ಮಾದೇವ" (ಕವಿಕಂ. ೧೭).
[ಕಣ್ + ಅಡಿ$_1$ + -ಗ$_3$]

**ಕಣ್ಣಡಿಯ** (ನಾ). = ಕಣ್ಣಡಿಗ: "ಗನಹ ಮಾದೇವ ಕಣ್ಣಡಿಯ ಕರಿಗೊರಲ . . . ಈಶ್ವರನ ನಾಮಂ" (ಶಬ್ದಮಂ. ೪). [ಕಣ್+ಅಡಿ$_1$+-ಅ$_7$]

**ಕಣ್ಣನೂರು** (ನಾ). ಒಂದು ಊರಿನ ಹೆಸರು: ಕಣ್ಣನೂರು ಮಣಿಯೂರ ಚತುಸ್ಸೀಮೆಯಿನ್ದೊಳಗಾದ ಬಿತ್ತ ಕಟ್ಟುಮ ಕೊಟ್ಟಂ (ಎಕ. X, ಬೌರಿಂಗ್. ೪-೩; ಸು. 950).
[ಕಣ್ಣ + ಊರು$_3$ (< ಊರ್)]

**ಕಣ್ಣಪ್ಪರಸ** (ನಾ). ಒಬ್ಬಾತನ ಹೆಸರು: ಬಾಣಗಾರಾ ಕಣ್ಣಮ್ಮನ್ ಪ್ರಿಥಿವೀ ಗೋಸಾಸಿ ಕಣ್ಣಪ್ಪರಸರ ಮಗನ್ದಿ × (ಎಕ. VII, ಶಿಕಾಂ. ೪೫-೪೧; 890).
[ಕಣ್ಣಪ್ಪ$_0$ + ಅರಸ$_1$]

**ಕಣ್ಣಪ್ಪ** (ನಾ). ಕಣ್ಣೀರು: ಕಣ್ಣಪ್ಪುವಂ ತೊಡೆವಂ ಬಿಡದೆ ಕಣ್ಣಪ್ಪದೇವನು (ಬಸಪು. ೧೯-೫೭).
[ಕಣ್ + ಅಪ್ಪು$_4$]

**ಕಣ್ಣಬ್ಬರಸಿ** (ನಾ). ಒಬ್ಬಾಕೆಯ ಹೆಸರು: ಕಣ್ಣ[ಣ್ಣ]ಬ್ಬರಸಿಯ ತಮ್ಮ ಚಾವಯ್ಯನುಂ (ಎಕ. II, ೪೭೩-೧; 1000).
[ಕಣ್ಣಬ್ಬೆ$_0$ + ಅರಸಿ]

**ಕಣ್ಣಮ** 'ಕಣ್ಣಮ್ಮ' ನೋ.

**ಕಣ್ಣಮಂಗಲ** 'ಕಣ್ಣವಂಗಲ' ನೋ.

**ಕಣ್ಣಮಯ್ಯ** 'ಕಣ್ಣಮ್ಮಯ್ಯ' ನೋ.

**ಕಣ್ಣಮ್ಮ, ಕಣ್ಣಮ** (ನಾ). ಒಬ್ಬಾತನ ಹೆಸರು: ಕೋಸಿಗವಳ್ಳಿಯ ಕಣ್ಣಮ್ಮಂಗ ಪಿಟ್ದುವಟ್ಟಿಗಂ ಪುಟ್ಟಿದ ಕನ್ನಯನ್ (ಎಕ. VIII, ಸೊರಬ. ೪೪-೭; 971). **ಕಣ್ಣಮ**: ಕಣ್ಣಮನ ಜಾಣ್ನುಡಿ ಪಂಪನ ರೀತಿ (ಜಗವಿ. ೧-೧೦).
[ಕಣ್ಣ$_0$ + ಅಮ್ಮ$_1$]

**ಕಣ್ಣಮ್ಮಯ್ಯ, ಕಣ್ಣಮಯ್ಯ** (ನಾ). ಒಬ್ಬಾತನ ಹೆಸರು: ಕಣ್ಣಮ್ಮಯ್ಯನ ಮಗ ನಿರುಗಮ್ಮಯ್ಯನುಂ (ಎಕ. X, ಕೋಲಾರ. ೫೭-೭; 925). **ಕಣ್ಣಮಯ್ಯ**: ಕಣ್ಣಮ[ಪಾಠಾಂ. ಪ]ಯ್ಯನ ಕಡುಜಾಣ್ ರನ್ನನ ಮೆಯ್ಸಿರಿ (ಕಬ್ಬಕಾ. ೪).
[ಕಣ್ಣಮ್ಮ + ಅಯ್ಯ$_1$]

**ಕಣ್ಣಯ್ಯ** (ನಾ). ಒಬ್ಬಾತನ ಹೆಸರು: ನಾಗಮಯ್ಯನ ಮಗಂ ಕಣ್ಣಯ್ಯನುಂ ಸಂಕರಯ್ಯನುಂ (ಎಕ. X, ಚಿಂತಾಮ. ೪೩-೧೪; 960 ?).
[ಕಣ್ಣ$_0$ + ಅಯ್ಯ$_1$]

**ಕಣ್ಣರಳಿಸು** (ಕ್ರಿ). ಕಣ್ಣನ್ನು ಅರಳಿಸು, —ಹಿಗ್ಗಿಸು: ಸೂರ್ಯಚಂದ್ರ ಚಿಕ್ಕೆ ಕೋಟಿ ಕಣ್ಣರಳಿಸಿ ನೋಡಿವೆ (ನೆಲಮು. ೨೪); ಅವನನ್ನೆ ಕಣ್ಣರಳಿಸಿ ನೋಡುತ್ತ (ಪುನರು. ೨೭೬).
[ಕಣ್ಣು (< ಕಣ್) + ಅರಳಿಸು (< ಅಲರಿಸು)]

**ಕಣ್ಣರಳು** (ಕ್ರಿ). ಕಣ್ಣು ಅರಳು, —ಹಿಗ್ಗು. ೨. (ಅಲಂ) ಆನಂದವಾಗು: ಮಗುವನ್ನು ನೋಡಿ ತಾಯಿಗೆ ಕಣ್ಣರಳಿತು (ರೂಢಿ).
[ಕಣ್ಣು (< ಕಣ್) + ಅರಳು$_1$ (< ಅಲರ್$_1$)]

**ಕಣ್ಣರಿಕೆ** (ನಾ). ಸಾಕ್ಷಾತ್ ಲಕ್ಷ್ಯವಹಿಸುವಿಕೆ; ಪ್ರತ್ಯಕ್ಷವಾದ ಮೇಲ್ವಿಚಾರಣೆ; ದೇಖರೇಖಿ (ಉಕ): ತಮ್ಮ ಕಣ್ಣರಿಕೆಯಲ್ಲಿಯೆ ಬೆಳೆದ ಹುಡುಗಿ (ಹೊಸಕ್ಷಿ. ೧೮೪); ಶಂಕರ ರಾಯರ ಕಣ್ಣರಿಕೆಯಲ್ಲಿಯೆ ತನ್ನ ವಿದ್ಯಾಭ್ಯಾಸ ಸಾಗಿತ್ತು (ಕಮನೆ. ೨೬); ಸತ್ಯಸೂರ್ಯನ ಇದಿರುಗೊಂಡು ಕಣ್ಣರಿಕೆಯಲಿ ಗರುಡನೊಲು ಅಮೃತಕ್ಕೆ ಹಾರುತಿಹುದು (ಜೀವಲ. ೭೩-೧೫). [ಕಣ್ಣು (< ಕಣ್) + ಅರಿಕೆ (< ಅಱಿಕೆ)]

**ಕಣ್ಣರ್ತಿ** (ನಾ). ಕಣ್ಣಿಗೆ ಪ್ರೀತಿ; ನೇತ್ರಾನಂದ: ಕಣ್ಣರ್ತಿ ಮಿಗೆ ನೋಡಿ ನಗುತ ಹರಸಿದಳು ಬಣ್ಣವಣ್ಣಿಗೆಯೊಳೇನೆಂಬೆ (ಭರಚ. ೩೫-೭೫).
[ಕಣ್ + ಅರ್ತಿ$_1$ (< ಅೞ್ತಿ$_1$)]

**ಕಣ್ಣಲೆ$_1$** (ಕ್ರಿ). ಕಣ್ಣಿಗೆ ತಾಗು, —ಸ್ಫುರಿಸು; ದೃಷ್ಟಿಗೋಚರವಾಗು: "ಕಣ್ಣಲೆ [ಪಾಠಾಂ. ಕಣ್ಣಲ, ಕಣ್ಮಲೆ] ದುದೆಂದು ಪೊಡಕರಿಸಿತು" (ಶಮುದ. ಪರಿ. ೨); "ಪೊಣ್ಮಜಿಸಿತೆಂದು ಕಣ್ಣಲ[ಲೆ]ದುದು" (ಕಬ್ಬಕೈ. ೭೮).
[ಕಣ್ + ಅಲೆ$_1$]

**ಕಣ್ಣವಂಗಲ, ಕಣ್ಣಮಂಗಲ** (ನಾ). ಒಂದು ಪ್ರದೇಶದ ಹೆಸರು: ಕಣ್ಣವಂಗಲದ ರಾಮೇಶ್ವರದೇವಗೆ (ಎಕ. VI, ತರೀಕೆ. ೬೭-೫; 868). **ಕಣ್ಣಮಂಗಲ**: ಕಣ್ಣ[ಣ್ಣ]ಮಂಗಲದೊಳ್ಬಸದಿ ಮಾಡಿಸಿ ಆ ಬಸದಿಗೆ ಕೊಟ್ಟ ಮಣ್ಣು (ಎಕ. X, ಕೋಲಾರ. ೯೦-೮೫; 903).
[ಕಣ್ಣ + ಮಂಗಲ]

**ಕಣ್ಣವಲ್ಲಿ** (ನಾ). ಕುದುರೆಗಳಲ್ಲಿ ಒಂದು ಬಗೆ: ಎಲಚಿಯ ತನಿವಣ್ಣನ ಮಱಿಯಾದೆಯ ಕುದುರೆಗೆ ಬೆನ್ನ ನಿಟ್ಟೆಲುವಿಡಿದು ಬಾಲಪರಿಯಂತರ ವಂದೆ ರೇಖೆ ಕರಿದಾಗಿಯಿರ್ದಡಂ ಅದಂ ಕಣ್ಣವಲ್ಲಿಯೆಂಬರು" (ಅಶ್ವವೈ. ೨-೨೦ ಟೀಕೆ).
[?]

**ಕಣ್ಣವೊಳ್ಳಿ** (ನಾ). ಒಂದು ಪ್ರದೇಶದ ಹೆಸರು: ಶ್ರೀ ಗೋ[ಪಾ]ಲರಸರ್ ಕಣ್ಣ[ಣ್ಣ] [ವೊಳ್ಳಿಯಂ] ದುಷ್ಟನಿಗ್ರಹ ಶಿಷ್ಟಪ್ರತಿಪಾಳನದಿ ಸುಖ ದಿನಾಳುತ್ತಮಿರೆ (ಸೌಇಇ. XX, ೨೭-೧೧; 1041).
[ಕಣ್ಣ$_0$ + ಪಳ್ಳಿ$_1$ ?]

**ಕಣ್ಣಳತೆ** (ನಾ). ಕಣ್ಣಿಗೆ ಕಾಣುವಷ್ಟು ದೂರ: ಕವಿವ ಕಾದುವ ಕೌಣಪರ ಕೋಲಾಹಳಿಕೆಗಳ ಕಾಣೆನ್ಯೆ ಕಣ್ಣಳತೆಯಲಿ ಕುಂಭಿನಿಯ ವಿವರಣವ (ತೊರರಾ. ೩-೬-೧೨); ಆ ಮನೆ ಕಣ್ಣಳತೆಯಲ್ಲೇ ಇದೆ (ರೂಢಿ).
[ಕಣ್ + ಅಳತೆ]

**ಕಣ್ಣಳವಿ** (ನಾ). = ಕಣ್ಣಳತೆ: ಕಣ್ಣಳವಿಯಲಿ ಕಂಡನಪ್ರತಿಮಯತಿರಾಯ ಪಶುಪತಿ ಶಿವನ ನುತಪ್ರಭೆಯನು (ಹಚಕಾ. ೫-೫೬); ಕಣ್ಣಳವಿನಾಚೆಯಲಿ ಅವಿತು ನವಭೂಖಂಡ ಗತಜನ್ಮದಭಿಲಾಷೆಯಂತೆ . . . ಕಣ್ಸನ್ನೆಗೈದಿತ್ತು (ನವ್ಯಧ್ವ. ೧-೧೭).
[ಕಣ್ + ಅಳವಿ]

**ಕಣ್ಣಳವು** (ನಾ). ಕಣ್ಣಿಗೆ ಯೋಗ್ಯವಾದದ್ದು; ನೋಡುವುದಕ್ಕೆ ತಕ್ಕದ್ದು: ಕಣ್ಣಳವಿದಲ್ಲಬಲೆ ಕೇಳ್ ದೀಕ್ಷೆಗೊಂಡಿರ್ಪನಣ್ಣದೇವಂ ತಾನುಮನ್ನೆಗಂ ಪ್ರತಿಯಾಗಿ ಪೆಣ್ಣೊಳ್ ಬೇರೆಯೆನೆಂದು ಪೋಜಮುಟ್ಟೆನಶ್ವರಕ್ಷೆಗೆ (ಜೈಮಿಭಾ. ೧೬-೧೭). "ಕಣ್ಣಿನ ಸುಖ" (ಜೈಮಿಭಾ. ಟೀಕೆ).
[ಕಣ್ + ಅಳವು]

**ಕಣ್ಣಳಿ** (ಕ್ರಿ). ೧. ಕಣ್ಣು ಹೋಗು, —ಇಂಗು. ೨. (ಆಲಂ) ವಿವೇಕವಿಲ್ಲದಂತಾಗು; ಮತಿಗೆಡು: ಕಣ್ಣಳಿದ ಕಾಪಥನವೊಲು ಮನ ಬಣ್ಣಬಿಡುತಿದೆ ಬುದ್ಧಿ ಚಿಂತೆಯ ಕಣ್ಣಿಯಲಿ ತಾ ಕಟ್ಟುವಡೆದೆನೆ ಶಿವಶಿವಾ (ತೊರರಾ. ೩-೯-೧೩). [ಕಣ್ + ಅಳಿ$_1$ (< ಅೞಿ$_1$)]

**ಕಣ್ಣಳಿಸು** (ಕ್ರಿ). ೧. ಕಣ್ಣುಗಳನ್ನು ಕಳೆ, —ಇಂಗಿಸು. ೨. (ಆಲಂ) ವಿವೇಚನೆಯನ್ನು ಕಳೆದುಕೊಳ್ಳುವಂತೆ ಮಾಡು; ಬುದ್ಧಿಕೆಡಿಸು: ನಗುನಗುತೆಳೆದುಕೊಳ್ಳುವಳು ಚೆಲುವುಗಾಣಿಸಿ ರುದ್ರಮಾಯೆಯುವಳು. ಮದಹಿಡಿಸಿ ಮರುಳ್ಗೊಳಿಸಿ, ಇರುಳುಗವಿಸಿ, ಮುಚ್ಚುವಳು, ಕಣ್ಣಳಿಸಿ, ಮಣ್ಣೊಳವಳು (ಪಾರಸಿ. ೬-೧೪೬). [ಕಣ್+ಅಳಿಸು$_2$(< ಅೞಿಯಿಸು)]

**ಕಣ್ಣಱಸು** (ಕ್ರಿ). ಚೆನ್ನಾಗಿ ಹುಡುಕು; ಪರೀಕ್ಷಿಸು: ತೊಱೆಯದಿಹ ಪೂಜಾರಿಗಳ ಕಣ್ಣಱಸಿ ನೋಡ [ಪಾಠಾಂ. ಕಣ್ಣರಿಸಿ ನೋಡ, ಕಣ್ಣಱಕೆ ಮಾಡ]ಲ್ಕಂಜಿ ದೃಷ್ಟಿಗೆ ನೆಱೆ ಕರಾಗ್ರವನಡ್ಡವಿಡುತಂ ಮಂಟಪ ದೊಳಿರ್ದು ಹೊಱವಡುತ (ಬಸವು. ೨೬-೨೯). [ಕಣ್ + ಅಱಸು$_1$]

**ಕಣ್ಣಱಿ** (ಕ್ರಿ). ೧. ಇಂಗಿತವನ್ನು ತಿಳಿ: ಆ ರಮ್ಯನದಿಯ ಚೆಲ್ವ ನಿಳಾರಾಮಾರಮಣಚಟ್ಟಿಯಿಂ ನೋಡುವಿನಂ ಸಾರಥಿ ಕಣ್ಣಱಿದೊಯ್ಯನೆ ತೇರಂ ಕೊಸೆಗೊಂಡು (ಆದಿಪು. ೧೧-೫೭); ಮಹಾಶ್ವೇತೆಯ ಕಣ್ಣಱಿದು ... ಪ್ರತೀಹಾರಿಯರ್ ನಿವಾರಿಸುತ್ತಮಿರ್ದರ್ (ಕಾದಂ ಉ. ೪೬); ಕಣ್ಣಱಿದು ಸೇವೆಯ ಮಾಳ್ಪರಮರಿಯರು (ಸಾಳ್ವಭಾ. ೨೦-೩೩). ೨. (ಆಲಂ) ವಿವೇಚನೆಯಿಂದ ಕೂಡಿರು; ವಿವೇಕವಂತನಾಗಿರು: ಕಾಮಿ ಕಣ್ಣ[ಣ್ಣ]ಱಿವನಲ್ತು (ಅನಂಪು. ೧೧-೪೪). [ಕಣ್ + ಅಱಿ]

**ಕಣ್ಣಾಚಾರಿ** (ನಾ). ಒಬ್ಬಾತನ ಹೆಸರು: ಕಣ್ಣಾಚಾರಿಯ ಲಿಕಿತಂ (ಎಕ. VII, ಶಿಕಾರಿ. ೪೫-೪೭; 890 ?). [ಕಣ್ಣ$_0$ + ಆಚಾರಿ]

**ಕಣ್ಣಾತಿತಡಾಗ** (ನಾ). ಒಂದು ಕೆರೆಯ ಹೆಸರು: ಕಣ್ಣಾ[ಣ್ಣಾ]ತಿತಡಾಗ ಪಶ್ಚಿಮದಿಗ್ಭಾಗ (ಮೈಆರಿ. ೧೯೩೫, ೪೦-೬೩; 951). [ಕಣ್ಣಾತಿ$_0$ + ತಡಾಗ]

**ಕಣ್ಣಾಮುಚ್ಚಾಲೆ** 'ಕಣ್ಣುಮುಚ್ಚಾಲೆ' ನೋ.

**ಕಣ್ಣಾಮುಚ್ಚಿ, ಕಣ್ಣಾಮುಚ್ಚೆ** (ನಾ). ಒಬ್ಬರು ಕಣ್ಣು ಮುಚ್ಚಿಕೊಂಡು ಇತರರು ಅಡಗಿಕೊಂಡ ಮೇಲೆ ಕಣ್ತೆರೆದು ಅವರನ್ನು ಹುಡುಕುವ ಆಟ: ಈ ಕಣ್ಣಾಮುಚ್ಚಿ ಪದವನ್ನು ಕಟ್ಟುವ ಕಾಲಕ್ಕೆ (ಸಣ್ಣಕ. VII, ೯೧). **ಕಣ್ಣಾಮುಚ್ಚೆ**: ಕಣ್ಣಾಮುಚ್ಚೆ ಕೋಟೇಮೇಲೆ ಕುಡುಗೋಲು ಸಾಧು ಗೋದು ಇತ್ಯಾದಿಗಳೆಲ್ಲಾ ಸರ್ವರಿಗೂ ಸದಾಮಂದಟ್ಟಾದ ವಿಷಯವೇ (ಹುಟ್ಟಿಹ. ೧೨೭). [ಕಣ್ಣು (< ಕಣ್) + ಮುಚ್ಚು$_2$ + -ಇ$_3$]

**ಕಣ್ಣಾಮುಚ್ಚೆ** 'ಕಣ್ಣಾಮುಚ್ಚಿ' ನೋ.

**ಕಣ್ಣಾರ್** (ಕ್ರಿ). ಕಣ್ಣಿಗೆ ತೃಪ್ತಿಯಾಗು: ಪುಡಿಯೊಳ್ ಪೊರಳ್ವ ಪಗೆಯಂ ಕಣ್ಣಾರ್ವಿನಂ ನೋಡಿದಳ್ (ಪಂಪಭಾ. ೧೨-೧೪೧); ಆವಕಾಳಿಗದೊಳಂ ಕಣ್ಣಾ [ಪಾಠಾಂ. ಣ್ಣಾ] ರದಂ ನಾರದಂ (ಪಂರಾಮಾ. ೩-೧೮).

**ಕಣ್ಣಾರೆ** = ೧. ಕಣ್ಣು ತುಂಬುವಂತೆ; ತೃಪ್ತಿಯಾಗುವಂತೆ: ಅಂತು ಕಣ್ಣಾರೆ ನೋಡಿ ಮನವಾರೆ ಪೊಗೞ (ಅಜಿಪು. ೪-೧೫ ವ); ಕಣ್ಣಾರೆ ಕಂಡು ಮಚ್ಚರಿಪ ಹೆಣ್ಣಾವಳು (ಮೋಹತ. ೧೬-೩೪). ೨. ಪ್ರತ್ಯಕ್ಷವಾಗಿ; ಸಾಕ್ಷಾತ್ತಾಗಿ: ಕಾದಂಬರೀದೇವಿಯಂ ಕಣ್ಣಾರೆ ನೋಡಿ ಕಣ್ಬಡೆದುದರ್ಕೆ ಸಾಫಲ್ಯಮಂ ಸಾಧಿಸುವೆಂ (ಕಾದಂಉ. ೫೧); ಕ್ಷಿತಿಪಂ ನಿನ್ನ ಪೊಲ್ಲಮೆಗಳಂ ಕಣ್ಣಾರೆ ಕಂಡುಂ (ಧರ್ಮಾಮೃ. ೨-೧೦೦); ಜೀವಸಖರುಗಳಿಂಗೆ ಮರಣವ ತೀವಿ ತಾ ಕಣ್ಣಾರೆ ಕಂಡು (ಕುವ್ಯಾಅ. ಓರಿಇ. ೨೬-೩೬); ನಡೆದುದನ್ನು ತಾನಿನ್ನು ಬದುಕಿರುವಾಗಲೇ ಕಣ್ಣಾರೆ ಕಂಡಂತಾಯಿತು (ಕೃದೇವ. ೧೫); ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು (ಗಾದೆ). [ಕಣ್ + ಆರ್$_3$]

**ಕಣ್ಣಾಲಿ, ಕಣ್ಣಾಳಿ** (ನಾ). ಕಣ್ಣುಗುಡ್ಡೆ, —ಪಾಪೆ: ಮನೋಹರಿಯೆಂಬೊಳ್ ಪೆಸರ್ಗೆ ತಕ್ಕಂತೆ ನೋಡಿದರೆಲ್ಲರ್ಗಳ ಕಣ್ಣಾಲಿಗೆ ಸೊಗಯಿಸುವಳ್ (ವಡ್ಡಾರಾ. ೨-೧೧); ಕೂಡೆ ಕಣ್ಣಾಲಿಗಳ್ ಸುಡುವಂತಾದಪುದೇವಂ (ಕಾದಂಪೂ. ೮೫೩); ಕೇಳಿ ಸೊಗಸಿದ ವಸ್ತುವಿಗೆ ಕಣ್ಣಾಲಿ ಬಿದ್ದಣವಾಯ್ತು (ಕುವ್ಯಾಸ. ೩-೪೪); ತಲ್ಲಿಂಗದೊಳ್ ಮನಲೀನಮಾಗಿ ಕಣ್ಣಾಲಿಗಳ್ ನಟ್ಟು (ಚಬಪು. ೬-೧೨); ಕಣ್ಣಾಲಿಗೆ ಎವೆಯಡ್ಡ (ಗಾದೆ). **ಕಣ್ಣಾಳಿ**: ಮುಳಿದು ಕಣ್ಣಾಳಿಗಳ್ ಕೆಂಪಡರಲ್ (ಚಬಪು. ೩೧-೨೧). [ಕಣ್ + ಆಲಿ$_2$]

**ಕಣ್ಣಾಸರು** (ನಾ). ದೃಷ್ಟಿತಾಕುವಿಕೆ: ಮಗುವಿಗೆ ಕಣ್ಣಾಸರಾಗಿದೆ (ರೂಢಿ). 'ಕಣ್ಣೆಸರು' ಪರಾ. [ಕಣ್ಣು (< ಕಣ್) + ಅಸರು$_1$ (< ಅಸಱ್$_2$)]

**ಕಣ್ಣಾಳಿ** 'ಕಣ್ಣಾಲಿ' ನೋ.

**ಕಣ್ಣಿ** (ನಾ). ೧. ಹಗ್ಗ: "ಸಂಧಾನಂ, ದಾಮನೀ, ದಾಮ – ಈ ೩ ಕಣ್ಣಿ" (ಹಲಾಯು. ೪೬-೧೨೨); ಸಂಕಲೆಯ ಕಣ್ಣಿಗಳ್ ಭೋಂಕೆನೆ ಛೀಣ್ಮಿಸೆ (ನೇಮಿಪು. ೫-೮೮); ಅಂಧಕ ಕಣ್ಣಿಯ ಹೊಸೆದ ಛಂದವಾಯಿತು (ಅಱಮಾ. ೨೧೬); ಕೊರಳ ಕಣ್ಣಿಯಂ ಬಿಟ್ಟು (ಪುಣ್ಯಾಸ್ರ. ೬-೫೪ ವ); ದೈವವಿಕ್ಕಿದ ಕೊರಳುಗಣ್ಣಿಯ ಕುಣಿಕೆ ಯಾರಲಿ ಹಱವುದೈ (ಕುವ್ಯಾಸ. ೧೪-೪); ಮಂಗಲಸೂತ್ರ ಕೊರಲ ಕೋರೆಯುವ ಕಣ್ಣಿಯಾಗಿತ್ತೋ ಏನೋ (ಸುವಸಂ. ೪೨). ೨. (ದನಗಳ) ಕೊರಳಿಗೆ ಕಟ್ಟುವ ಹಗ್ಗ: (ಕಿ). [[ದೇ. ‖ ತಮಿ. ತುಳು. ಕಣ್ಣಿ; ತೆಲು. ಕನ್ನೆತಾಡು]

**ಕಣ್ಣಿಕ್ಕು** (ಕ್ರಿ). ೧. ದೃಷ್ಟಿಹಾಕು; ಕೆಡುಕನ್ನುಂಟುಮಾಡುವ ದೃಷ್ಟಿಯಿಂದ ನೋಡು: ಮಗುವಿನ ಮೇಲೆ ಕಣ್ಣಿಕ್ಕಬೇಡ (ರೂಢಿ). ೨. ಕಣ್ಣು ಮಿಟುಕಿಸು; ಕಣ್ಣೆವುಟು: ನಗೆಯ ಮಿಂಚುಲ್ಲಟಿಸೆ, ಚಿಕ್ಕೆ ಕಣ್ಣಿಕ್ಕುವೊಲು ಮಿಟುಕುತ್ತಿತ್ತೊ (ಉಯ್ಯಾಲೆ. ೩೮-೮). ೩. (ಆಲಂ) ಕಣ್ಣುಹಾಕು; ಮನಸ್ಸಿಡು; ಆಸೆಪಡು: ಕಕ್ಕಸವೆತ್ತ ಕಾಮಿನಿಯರ ಕಂಡು ಕಣ್ಣಿಕ್ಕದಂತೆನ್ನ ಚಿತ್ತವನು ಅಕ್ಕೊತ್ತೆಗೊಂಡ ಭಾಮಿನಿ ರನ್ನೆ (ಮೋಹತ. ೩೪-೨); ಸೊಕ್ಕಿದನ್ಯೆ ತನ್ನ ತಂಗಿಗೆಮ್ಮರಸು ಕಣ್ಣಿಕ್ಕಿದರಿಷ್ಟು ಹಮ್ಮಾಯ್ತು (ಭರಚ. ೩೮-೧೬); ಅಕ್ಕನಾಗಿಹ ಸೂರ್ಪನಖಿ ಕಣ್ಣಿಕ್ಕೆ ನಾಸಾಚ್ಛೇದಗೈಸೇನ್ಮಿಕ್ಕುದೇ ನಿನ ಘನವು (ಜಿರಾಮಾ. ೨೫೬-೨೧).

**ಕಣ್ಣಿಕ್ಕಿನೋಡು** = ಪರೀಕ್ಷಿಸಿ ನೋಡು; ಸೂಕ್ಷ್ಮವಾಗಿ ಪರಿಶೀಲಿಸು: ಭ್ರಾಂತಿಯಾಗಿರಬಹುದೆಂದು ಅದನ್ನು ಕುರಿತು ಕಣ್ಣಿಕ್ಕಿ ನೋಡಿದನು (ಕಪಾಕುಂ. ೧೩); ೫ಪದ್ಯಗಳನ್ನು ಕಣ್ಣಿಕ್ಕಿನೋಡಿದರೆ 'ಶೂದ್ರಕವು' ... ವೀರ ಪ್ರಚುರ ಕಾವ್ಯವೆಂದು ಭಾಸವಾಗುತ್ತದೆ (ಕಸಾಚ. ೫೦). [ಕಣ್ + ಇಕ್ಕು]

**ಕಣ್ಣಿಗ** 'ಕಣ್ಣಿಗೆ' ನೋ.

**ಕಣ್ಣಿಗಣ್** (ನಾ). ಹಗ್ಗದ ಕಣ್ಣು; ಕುಣಿಕೆ: ಮಿರುಪ ಚಿಂಬೊನ್ನಿನೊರೆಯಂತೆ, ಮಿಂಚಿದಳಕ್ಷಿಪಕ್ಷ್ಮಯೋಲವಲೊಡಲ ಕಣ್ಣಿಗಣ್ಗಳೊಳ್ ಸಿಲ್ಕಿ ತಳ್ಪಂಕಗೊಳೆ ದೊರೆಗೆ (ಶ್ರೀರಾಮಾ. ೧೫-೩೪೧). [ಕಣ್ಣಿ + ಕಣ್]

**ಕಣ್ಣಿಗೆ, ಕಣಿಗೆ, ಕಣ್ಣಿಗ** (ನಾ). ಹೊಲದಲ್ಲಿ ಬೆಳೆಯುವ ಒಂದು ಬಗೆಯ ಹುಲ್ಲು; ಕಳೆ: ನೊಸೆ ಸೈಹಂಚಿ ಕಣ್ಣಿಗೆ ನಾಲೆ ಗರುಗ (ಶ್ರೀಪಾಲ. ೬-೧೩). **ಕಣಿಗೆ**: ಭೂಮಿಯು ಹಸನಾಗಿರಬೇಕು. ಅದರಲ್ಲಿ ಕರಿಕೆ ಕಣಿಗೆ ನಟ್ಟುಗಳು ಇರಲಾಗದು (ಕೃಷಿಪ್ರ. ೨೫). **ಕಣ್ಣಿಗ**: ಹುಲುಬೇರು ಕರಿಕೆ ಕಣ್ಣಿಗ ತೇಲುವಂದದಿಂದಲಿ ಹೊಡೆ ಹಣವಿನ ಹೊಲವ (ಅಮುಸಾಂ. ೩-೧೨೨). [?]

**ಕಣ್ಣಿಟ್ಟಕಾತಿ** (ನಾ). ಈಟಿಯಂತೆ ಹರಿತವಾದ ನೋಟವುಳ್ಳವಳು: ಇಟ್ಟು ತೊಟ್ಟುದು ಹರುಷದಲಿ ಕಣ್ಣಿಟ್ಟಕಾತಿಯರಮರ ಲೋಕದ ಹೆಟ್ಟುಗೆಯರು (ನಿಭಾಗ. ೮-೨೧-೪೨). [ಕಣ್ + ಇಟ್ಟಿ$_2$ + -ಕಾತಿ$_1$]

**ಕಣ್ಣಿಡು** (ಕ್ರಿ).೧. ದೃಷ್ಟಿಯಿಡು; ದೃಷ್ಟಿನೆಡು : ಎಲೆ ತಾರಾಗಂ ಹರಂ ಕಣ್ಣಿಡೆ ಕರಗಿದುದು (ಕಾದಂಪೂ. ೬೩೪); ಕೌಮುದಿ ಕಣ್ಣಿಡೆ ಕರಗುವ ಚಂದ್ರಕಾಂತಮಣಿಪುತ್ರಿಕೆವೋಲ್ (ಯಶೋಚ. ೨-೨೩); ಮುೞಿದು ಕಣ್ಣಿಟ್ಟರೆ ಕ್ಷಣಕೆ ಮುಕ್ತಿಯ ಕಾಂಬ ಭರತಚಕ್ರಿಯ ಹೇಳಲಳವೆ (ಭರಚ. ೧-೨೦); ತರುಣ ಪ್ರೇಮಿಗಳು . . . ಒಬ್ಬರ ಕಣ್ಣಲ್ಲಿ ಮತ್ತೊಬ್ಬರು ಕಣ್ಣಿಟ್ಟುಕೊಂಡು ಮೌನವಾಗಿ ನೋಡುತ್ತಿದ್ದರು (ಪುನರು. ೨೪೩). ೨. ವಿಗ್ರಹಾದಿಗಳಿಗೆ ಕಣ್ಣನ್ನು ಬಿಡಿಸು : ಎಳಮಿಂಚಿಂ ಕಡೆದಂತೆ ಚಂದ್ರಕಳೆಯಿಂ ಕಣ್ಣಿಟ್ಟರೆಂಬಂತೆ (ಅನಂಪು. ೪-೭೦); ಕಡೆದು ಕಣ್ಣಿಟ್ಟು ನುಣ್ಮಿಂಚಿನೊಳ್ ಕಣ್ಗೊಳಿಪನ್ನಂ ಬಣ್ಣವಿಟ್ಟಂತೆಸೆವ ತನು (ಅನಂಪು. ೧೦-೨). ೩. ಕಣ್ಣಿನ ಕಾವಲಿಡು; ಎಚ್ಚರಿಕೆಯಿಂದ ಕಾಯುತ್ತಿರು; ನಿಗಾ ಇಡು : "ನಾನು ಬರೋವರೆಗೂ ಅವುಗಳ ಮೇಲೆ ಕಣ್ಣಿಟ್ಟಿರಿ" (ಮಾರ್ಗದ. ೩೭); ಇಲ್ಲಿಂದ ಹೋದಲಾಗಾಯ್ತು ಅವಳ (ನಿರ್ಮಲೆಯ) ಮೇಲೆ ಕಣ್ಣಿಟ್ಟಿದ್ದೆ (ಮೂರುದಾ. ೨೭೯). ೪. ಕೆಟ್ಟದೃಷ್ಟಿಯಿಂದ ನೋಡು: ಯಾರು ಕಣ್ಣಿಟ್ಟರೊ, ಮಗು ಬಡವಾಗಿದೆ (ರೂಢಿ). ೫. (ಆಲಂ) ಬಯಸು; ಕಾಮಿಸು; ಮನಸ್ಸಿಡು : ವಿದ್ವಿಷ್ಟವಿದ್ಯಾಧರ ಕರಟ ಶಿರಶ್ಶುಕ್ತಿಸಂಭೂತ ಮುಕ್ತಾವಲಿಯೊಳ್ ಕಣ್ಣಿಟ್ಟು (ಆದಿಪು. ೧-೭೬); ಮುಕ್ತಿಕಾಂತೆಗೆ ಕಣ್ಣಿಟ್ಟು ತದ್ವಿಶಾಳಕೇಳೀವನಮುಂ ಬಿಟ್ಟು (ವರ್ಧಪು. ೨-೫೮ ವ); ಮೃಗಧರ ನಿನ್ನ ಯೌವನದಲ್ಲಿ ಕಣ್ಣಿಟ್ಟು ತೆಗೆದಸು ಬಲವಂತನಾಗಿ (ಮೋಹತ. ೨೬-೨೪); ಅಪ್ಪನ ಆಸ್ತಿಯ ಮೇಲೆ ಕಣ್ಣಿಟ್ಟೇ ನನ್ನನ್ನು ಒಪ್ಪಿರಲಾರನು (ಮೂರುದಾ. ೨೪೧). [ಕಣ್ + ಇಡು$_1$]

**ಕಣ್ಣಿಲಿ** (ನಾ). ೧. ಕಣ್ಣು ಇಲ್ಲದ್ದು; ಕಣ್ಣು ಕಳೆದುಕೊಂಡದ್ದು; ಕುರುಡು : ರಾಜ್ಯಂ ಕಣ್ಣಿಲಿಯಾದೊಡಲಂತಾಯ್ತು (ಮರಾಚ. ೬-೪೧). 'ಕಣ್ಣಿಲಿವೊಗ' ಪರಾ. ೨. ಕಣ್ಣಿಲ್ಲದ ವ್ಯಕ್ತಿ. [ಕಣ್ + -ಇಲಿ$_3$]

**ಕಣ್ಣಿಲಿವೊಗ** (ನಾ). ಕಣ್ಣಿಲ್ಲದ ಮುಖದವನು; ಕುರುಡ: "ಅಂಧಕನ ಪೆಸರು ಕಣ್ಣಿಲಿವೊಗನುಂ ತಾನಕ್ಕು" (ಕವಿಕಂ. ೧೬೩); ಪೆೞವರ ಕೆೞವರ ಕಣ್ಣಿಲಿವೊಗರ ಗುಡ್ಡರೋರೊಂದು ನಾಡಂ ಕಱಿಕಱಿದು ಬರುವರುತಮಿರ್ಪುದುಂ (ರಾಮಾಶ್ವ. ೧೪೮-೩). [ಕಣ್ಣಿಲಿ + ಮೊಗ$_2$]

**ಕಣ್ಣಿವಲೆ** (ನಾ). ಕಣ್ಣಿಯಿಂದ ಮಾಡಿದ ಬಲೆ; ಹಗ್ಗದ ಬಲೆ: ದಯಿತೆಯರ ಕುರುಳ ಪಂಙ್ತಿಗಳನಂತಕನ ಕಣ್ಣಿವಲೆಯೆನ್ನದೆ ಮೞಿದುಂಬಿಯೆಂದೊಡಂ (ಧರ್ಮಾಮೃ. ೭-೧೫೫); ತೊಡಕುವಲೆ ತೋೞುವಲೆ ತೊಟ್ಟವಲೆ ಗೂಟವಲೆ ಕಣ್ಣಿವಲೆ ಕಾಲುವಲೆಯು (ಹಚಕಾ. ೫-೮); ಆವಳ ಪೆಱನೊಸಲನಲೆವ ಬಳ್ಳಿಗುರುಳೊಳ್ ತೊಡಂಕಿದ ಕಣ್ ಕಣ್ಣಿವಲೆಯೊಳ್ ಕೆಡೆದೆರಲೆಯಂತಡಿಯಿಡಲಾರ್ತುದಿಲ್ಲ (ಕಬ್ಬಿಕಾ. ೭೮); ಕಣ್ಣಿವಲೆ ಹೊಡೆವಲೆ ಹೊಸೆದ ಕಾಲ್ಗಣ್ಣಿವಲೆ (ಸಾಳ್ವಭಾ. ೫-೧೮). [ಕಣ್ಣಿ + ಬಲೆ$_1$]

**ಕಣ್ಣೀರ್, ಕಣ್ಣೀರು** (ನಾ). ೧. ಕಣ್ಣಿನಿಂದ ಬರುವ ನೀರು; ಕಂಬನಿ; ಅಶ್ರು: ಕಣ್ಣೀರ್ ಗೞಗೞನೊರ್ಮೊದಲೆ ಸುರಿಯೆ (ಪಂಪಭಾ. ೨-೨೪); ಸಂಜಯಂ ಗೞಗೞನೆ ಕಣ್ಣೀರಂ ನೆರಪಿ (ಗದಾಯು. ೪-೧೭ ವ); ಶೋಕಶಿಖಿಯನಾಱಿಸಿ ಕಣ್ಣೀರನಿತುಂ ಬತ್ತಿದುವು (ವರ್ಧಪು. ೯-೮೦). **ಕಣ್ಣೀರು** : ೧. ಬೆಟ್ಟದ ನವಿಲಿಗೆ ಕಣ್ಣೀರು ಬಂದರೆ ಬೇಟೆಗಾಱಗೆ ದಯ ಪುಟ್ಟೇತೆ (ಪುರಂದ. ೧-೧೫೭-೨); ಬನ್ನದೊಳಾಳಿದೆ ನಾನೆಂದು ಕಣ್ಣೀರನುನ್ನತವಾಗಿ ಸೂಸಿದಳು (ಕಂಸವಿ. ೨-೧೦೪). ೨. ದುಃಖ; ವ್ಯಥೆ: ಮೂವರ ಬಾಳೂ ಕಣ್ಣೀರಿನ ಬಾಳಾಯಿತು (ಕುಸುಸಂ. ೧೩); ನಿಮ್ಮ ತಾಯಿಗೆ ಕಣ್ಣೀರು ಬರುವಂತೆ ನೀವು ನಡೆದರೆ, ನಿಮ್ಮ ಬಾಳೇ ಕಣ್ಣೀರಾದೀತು (ರೂಢಿ).

**ಕಣ್ಣೀರಲ್ಲಿ ಕೂಳುತಿನ್ನು** = ದುಃಖದಿಂದ ಜೀವಿಸು : ಚೆನ್ನಮ್ಮನು ಕಣ್ಣೀರಲ್ಲಿಕೂಳುತಿನ್ನುತ್ತಿದ್ದಳು (ಪಂಜಪಂ. ೮೦). **ಕಣ್ಣೀರಲ್ಲಿ ಕೈತೊಳೆ** = ಬಹಳ ದುಃಖವನ್ನು ಅನುಭವಿಸು : ಹೆಣ್ಣುಮಕ್ಕಳ ಹಣೇಬರ ಎಲ್ಲಾ ಹಾಗೇ ಅಮ್ಮ. ಕಣ್ಣೀರಲ್ಲಿ ಕೈತೊಳೀತಿರೋದು (ಬಾಗಿನ. ೮). **ಕಣ್ಣೀರು ಕಪಾಳಕ್ಕೆಬರು** = ಬಹಳ ಕಷ್ಟವಾಗು ; ಸಾಕುಸಾಕಾಗಿ ಹೋಗು: ಊರಾಗಿನ ಒಂದು ಬಾವ್ಯಾಗ ಕಾಳು ನೀರಿಲ್ಲ. . .ಈಗ ದಿನದ ಬಳಕೆಗೆ ತರಬೇಕಾದರೆ ಕಣ್ಣೀರುಕಪಾಳಕ್ಕೆಬರತಾವ (ಕನಕ. ೨೪). [ಕಣ್ + ನೀರ್$_1$]

**ಕಣ್ಣೀರ** 'ಕಣೀರ' ನೋ.

**ಕಣ್ಣೀರಿಡು** (ಕ್ರಿ). ಅಳು; ಶೋಕಿಸು; ಮರುಗು : ತನ್ನ ಬಂಧನಕ್ಕೆ ಭಾಗಿಗಳಪ್ಪರ ದ್ವೇಷಿಸನು ಆದರವರಿಂಗೆ ಕಣ್ಣೀರಿಡುವನು (ಕಗದ್ಯ. ೭೬). [ಕಣ್ಣೀರು (< ಕಣ್ಣೀರ್) + ಇಡು$_1$]

**ಕಣ್ಣೀರು** 'ಕಣ್ಣೀರ್' ನೋ.

**ಕಣ್ಣೀರ್ತಟಿಕು** (ನಾ). ಕಣ್ಣೀರು ತೊಟ್ಟಿಕ್ಕುವಿಕೆ; ಕಂಬನಿಗರೆವುದು : "ರುದಿರ್-ಅಶ್ರುವಿಮೋಚನೇ, ಕಣ್ಣೀರ್ತಟಿಕಿನೊಳ್" (ಕಾಶಕ್ಯ. ೧೬೮). [ಕಣ್ಣೀರ್ + ತಟಿಕು ?]

**ಕಣ್ಣು** 'ಕಣ್' ನೋ.

**ಕಣ್ಣುಕಟ್ಟು** 'ಕಣ್ಗಟ್ಟು$_2$' ನೋ.

**ಕಣ್ಣುಕಪಟೆ** 'ಕಣ್ಕಪ್ಪಡಿ' ನೋ.

**ಕಣ್ಣುಕಪ್ಪಡಿ** 'ಕಣ್ಕಪ್ಪಡಿ' ನೋ.

**ಕಣ್ಣುಕಪ್ಪಡೆ** 'ಕಣ್ಕಪ್ಪಡಿ' ನೋ.

**ಕಣ್ಣುಕಪ್ಪು** 'ಕಣ್ಕಪ್ಪು' ನೋ.

**ಕಣ್ಣುಕಾಡಿಗೆಗಿಡ** (ನಾ). ಒಂದು ಬಗೆಯ ಗಿಡ: (ವೈಶಿಗ. ೨೩-೪೩೩). [ಕಣ್ಣು (< ಕಣ್) + ಕಾಡಿಗೆ + ಗಿಡ (< ಗಿಡು)]

**ಕಣ್ಣುಕಾಣು** 'ಕಣ್ಗಾಣ್' ನೋ.

**ಕಣ್ಣುಕಿಸಿ** (ಕ್ರಿ). ೧. ಕಣ್ಣುಗಳನ್ನು ಅರಳಿಸು: ಚೆನ್ನಾಗಿ ಕಣ್ಣುಕಿಸಿದು ಓದು (ರೂಢಿ). ೨. ಕೆಕ್ಕರಿಸಿ ನೋಡು; ಕೋಪವನ್ನು ತೋರಿಸು : ಸುಮ್ಮನೇ ನನ್ನ ಮೇಲೆ ಯಾಕೆ ಕಣ್ಣುಕಿಸಿಯುತ್ತೀಯಾ? (ರೂಢಿ). [ಕಣ್ಣು (< ಕಣ್) + ಕಿಸಿ$_1$]

**ಕಣ್ಣುಕಿಸುರು** 'ಕಣ್ಕಿಸುರ್' ನೋ.

**ಕಣ್ಣುಕುಕ್ಕಿಸು** (ಕ್ರಿ). ಪ್ರಕಾಶದ ಹೆಚ್ಚಳದಿಂದ ಕಣ್ಣುಮುಚ್ಚುವಂತೆ ಮಾಡು, —ಕೋರೈಸು : ಗೆಸ್-ದೀಪದ ಕಣ್ಣ[ಣ್ಣು]ಕುಕ್ಕಿಸುವಂತಹ ಬೆಳ್ಳಗಿನ ಪ್ರಕಾಶಕ್ಕೆ . . . ಪೂರ ಮರತೇಬಿಟ್ಟ (ಮೂರುದಾ. ೧೯೪). ೨. (ಆಲಂ) ಕಣ್ಣಿಗೆ ಚುಚ್ಚು; ಹೊಟ್ಟೆಕಿಚ್ಚಾಗುವಂತೆ ಮಾಡು : ಅವರ ಬಾಳು ನೆರೆಹೊರೆಯವರ ಕಣ್ಣುಕುಕ್ಕಿಸುವಂತಿದೆ (ರೂಢಿ). [ಕಣ್ಣು (< ಕಣ್) + ಕುಕ್ಕು$_1$ + -ಇಸು$_3$]

**ಕಣ್ಣುಕುಟಿಕೆ** 'ಕಣ್ಕುಟಿಕೆ' ನೋ.

**ಕಣ್ಣುಕುಣಿಕೆ** 'ಕಣ್ಕುಣಿಕೆ' ನೋ.

**ಕಣ್ಣುಕುದುರು** (ನಾ). ಕಣ್ಣಿನ ಗೂಡು, —ಕುಳಿ (ಶ). [ಕಣ್ಣು (< ಕಣ್) + ಕುದುರು$_4$ (< ಕುದಿರ್$_2$)]

**ಕಣ್ಣುಗ** (ನಾ). = ಖಂಡುಗ: ಈಪ್ಪತ್ತು ಕಣ್ಣುಗದೊ[ಳೆ] ಪಡಿಸಲಿಸ [ಮತ್ತ] ಕೊಳಗುರ ದೇಗುಲಕ್ಕೆ ಕಣ್ಣಪೀಟ ಪಣಿಯುವಟ್ಟುಮಿನಿತುವಂ ಕೊಟ್ಟು (ಸೌಇಇ. XI-i, ೩೫-೧೪ ; 933). Ⓟ ಇದು 'ಕಂಡುಗ' ಎಂಬುದರ ಅಪಲಿಖಿತ ಇರಬಹುದು. [?]

**ಕಣ್ಣುಗಂಡಿ** (ನಾ). ಚಕ್ರದ ಮಧ್ಯದಲ್ಲಿರುವ ಅಚ್ಚು ತೂರುವ ತೂತು, —ರಂಧ್ರ : "ಅಪಸ್ಕರಃ, ಅವಸ್ಕರಃ, ರಥಾಂಗಂ-ಚಕ್ರದ ಕಣ್ಣುಗಂಡಿ" (ಸಿದ್ಧಾಂಶಿ. ೨೧೭). [ಕಣ್ಣು (< ಕಣ್) + ಕಂಡಿ$_1$]

**ಕಣ್ಣುಗಾಣ್** 'ಕಣ್ಗಾಣ್' ನೋ.

**ಕಣ್ಣುಗುಡ್ಡು** 'ಕಣ್ಣುಗುಡ್ಡೆ' ನೋ.

**ಕಣ್ಣುಗುಡ್ಡೆ, ಕಣ್ಣುಗುಡ್ಡು** (ನಾ). ಕಣ್ಣಿನ ನಡುವಿರುವ ಕರಿಯ ಗೋಲ; ತಾರಕೆ; ಕನೀನಿಕೆ: ಗುಂಡಾಗಿರುವ ಅಗ್ನಿಕುಂಡಗಳಂತಿರುವ ಕಣ್ಣುಗುಡ್ಡೆಗಳಿಂ (ಸೌಗಂಧಿ. ೩೯೬–೧). **ಕಣ್ಣುಗುಡ್ಡು**: ಈಷಿಕಾ ... ಆನೆಯ ಕಣ್ಣುಗುಡ್ಡಿಗೆ ಹೆಸರು (ಸಿದ್ಧಾಂತಿ. ೨೧೨). [ಕಣ್ಣು (< ಕಣ್) + ಗುಡ್ಡೆ$_3$]

**ಕಣ್ಣುಗೊಂಬೆ** (ನಾ). = ಕಣ್ಣುಗುಡ್ಡೆ: ನನ್ನ ಮಗ ನಿನ್ನನ್ನು ತನ್ನ ಕಣ್ಣುಗೊಂಬೆಯಂತೆ ನೋಡಿಕೊಳ್ಳುತ್ತಾನೆ (ಆಶ್ರಮ. ೫೯); ತಂದೆತಾಯಿಗಳು ಅವಳನ್ನು ಕಣ್ಣುಗೊಂಬೆಯಂತೆ ಕಾಣುತ್ತಿದ್ದರು (ರಂಗರೋ. ೬೮). [ಕಣ್ಣು (< ಕಣ್) + ಗೊಂಬೆ]

**ಕಣ್ಣುಗೋಳಿಸು** 'ಕಣ್ಗೋಳಿಸು' ನೋ.

**ಕಣ್ಣುಚಿಮುಟು** 'ಕಣ್ಚಿವುಟು' ನೋ.

**ಕಣ್ಣುಚಿವುಟು** 'ಕಣ್ಚಿವುಟು' ನೋ.

**ಕಣ್ಣುಚೂಟಿ** (ನಾ). ೧. ದೃಷ್ಟಿಯ ಪಥ, —ಮಾರ್ಗ ೨. ಕಣ್ಣಿನಿಂದ ಮಾಡುವ ಸೂಚನೆ; ಕಣ್ಸನ್ನೆ (ಕಿ). ೩. ಕಣ್ಣು ಚಳಕ. [ಕಣ್ಣು (< ಕಣ್) + ಚೂಟಿ$_1$ (< ಸೂಟಿ$_1$)]

**ಕಣ್ಣುಜಾಡು** 'ಕಣ್ಜಾಡೆ' ನೋ.

**ಕಣ್ಣುಜಾಡ್ಯ** (ನಾ). ಪ್ರಾಣಿಗಳಿಗೆ ಬರುವ ಒಂದು ಬಗೆಯ ಕಣ್ಣಿನ ರೋಗ (ಎಸಮ್ಮೆ. XV, ೩೮). [ಕಣ್ಣು (< ಕಣ್) + ಜಾಡ್ಯ]

**ಕಣ್ಣುತಾಪಾಳ** (ನಾ). ಕೊನೆಯಲ್ಲಿ ತೂತು ಇರುವ ಅಗುಳಿ: "ಕೊಕ್ಕೆ ಮೊದಲಾದುವಕ್ಕಾಗಿ ಕೊನೆಯಲ್ಲಿ ಕಂಡಿಯಿರುವ ಅಗುಳಿ; ತಾಪಾಳ: ಕಣ್ಣುತಾಪಾಳ" (Eyebolt. ಇಂಕನ). [ಕಣ್ಣು (< ಕಣ್) + ತಾಪಾಳ]

**ಕಣ್ಣುತುಂಬು** 'ಕಣ್ತುಂಬು' ನೋ.

**ಕಣ್ಣುದಕ** (ನಾ). = ಕಣ್ಣೀರ್: ದುಃಖವಿದೇಕೆಂದು ಕಣ್ಣುದಕವ ತೊಡೆದಳು (ಮೋಹತ. ೩೩–೫೨). [ಕಣ್ + ಉದಕ$_2$]

**ಕಣ್ಣುನೂತಿ** (ನಾ). ಕಣ್ಣಿನಿಂದ ನೀರು ಸುರಿಯುವ ಒಂದು ಬಗೆಯ ರೋಗ (ಕಿ). [ಕಣ್ಣು (< ಕಣ್) + ನೂತಿ]

**ಕಣ್ಣುಪಟ್ಟಿ** (ನಾ). ೧. ಕಣ್ಣಿಗೆ ಕಟ್ಟುವ ಪಟ್ಟಿ. ೨. ತಲೆಗೂದಲನ್ನು ಕಟ್ಟುವ, ಕಣ್ಣುಗಳಿರುವ ಪಟ್ಟಿ: "ಸ್ತ್ರೀಯರ ತಲೆಗೂದಲನ್ನು ಕಟ್ಟುವುದಕ್ಕಾಗಿ ಉಪಯೋಗಿಸುವ ಪಟ್ಟಿ; ಕೂದಲು ಪಟ್ಟಿ; ಕೇಶಬಂಧನ. ಕಣ್ಣುಪಟ್ಟಿ" (Bandeau. ಇಂಕನ). [ಕಣ್ಣು (< ಕಣ್) + ಪಟ್ಟಿ$_2$]

**ಕಣ್ಣುಪಟ್ಟು** (ನಾ). ಕಣ್ಣಿನ ಉರಿಯನ್ನು ಕಡಮೆ ಮಾಡುವುದಕ್ಕಾಗಿ ಲೇಪಿಸುವ ಅಥವಾ ಹಚ್ಚುವ ಔಷಧಿ (ಕಿ). [ಕಣ್ಣು (< ಕಣ್) + ಪಟ್ಟು$_1$]

**ಕಣ್ಣುಪಡೆ$_1$** 'ಕಣ್ಬಡೆ' ನೋ.

**ಕಣ್ಣುಪಡೆ$_2$** (ನಾ). ಒಂದು ಬಗೆಯ ಔಷಧಿ ಸಸ್ಯ: (ವೈಔಗಿ. ೬೮–೧೩೮೪). [?]

**ಕಣ್ಣುಪರೆ** 'ಕಣ್ಪೊರೆ' ನೋ.

**ಕಣ್ಣುಪಿಚ್ಚು** (ನಾ). (ಉಕ) ಕಣ್ಣಿನ ಪಿಸುರು; ಗೀಜು (ಕಿ). [ಕಣ್ಣು (< ಕಣ್) + ಪಿಚ್ಚು]

**ಕಣ್ಣುಪಿಸುರು** (ನಾ). = ಕಣ್ಣುಪಿಚ್ಚು (ಕಿ). [ಕಣ್ಣು (< ಕಣ್) + ಪಿಸುರು]

**ಕಣ್ಣುಪುಟ್ಟಿ** (ನಾ). ಗಾಣಕ್ಕೆ ಹೂಡಿದಾಗ ಎತ್ತುಗಳ ಕಣ್ಣಿಗೆ ತೊಡಿಸುವ ಪುಟ್ಟಿ (ಕಿ). [ಕಣ್ಣು (< ಕಣ್) + ಪುಟ್ಟಿ$_3$]

**ಕಣ್ಣುಬಡಿ** 'ಕಣ್ಬಡಿ' ನೋ.

**ಕಣ್ಣುಬಿಡು** 'ಕಣ್ಬಿಡು' ನೋ.

**ಕಣ್ಣುಬೀಜ** (ನಾ). ಕಣ್ಣಿನ ಔಷಧಕ್ಕೆ ಉಪಯೋಗಿಸುವ ಒಂದು ಬಗೆಯ ಬೀಜ (ಕಿ). [ಕಣ್ಣು (< ಕಣ್) + ಬೀಜ]

**ಕಣ್ಣುಬೇನೆ** 'ಕಣ್ಬೇನೆ' ನೋ.

**ಕಣ್ಣುಬೊಟ್ಟು** (ನಾ). ದೇವತಾ ವಿಗ್ರಹಗಳ ಕಣ್ಣಿನ ಮೇಲೆ ಅಂಟಿಸುವ ಬೆಳ್ಳಿಯ ಕಣ್ಣು (ಕಿ). [ಕಣ್ಣು (< ಕಣ್) + ಬೊಟ್ಟು$_2$ (< ಬಟ್ಟು$_1$)]

**ಕಣ್ಣುಮಂಜು** (ನಾ). ಕಣ್ಣು ಮುಸುಕಾಗುವಿಕೆ; ದೃಷ್ಟಿಮಾಂದ್ಯ (ಕಿ). [ಕಣ್ಣು (< ಕಣ್) + ಮಂಜು]

**ಕಣ್ಣುಮಣಿ** 'ಕಣ್ಮಣಿ' ನೋ.

**ಕಣ್ಣುಮುಸಕು** (ನಾ). ೧. ಕಣ್ಣು ಚೆನ್ನಾಗಿ ಕಾಣದಂತೆ ಇರುವ (ಸಂಜೆಯ) ಮಬ್ಬು; ನಸುಗತ್ತಲೆ: ಕಣ್ಣುಮುಸಕು ಇರುವಾಗಲೆ ಅವಳು ಊರ ಹೊರಗಿನ ಬಾವಿಗೆ ನೀರಿಗೆ ಹೋದಳು (ನಿ ರಾ ಥ. ೪೯). ೨. ಕಣ್ಕಟ್ಟು; ಇಂದ್ರಜಾಲ: ಮಾತುಗಾರಿಕೆಯಿಂದ ಕಣ್ಣುಮುಸಕನೆ ತೋರಿ ಬಾಕಿ ಬಸಿದು ಪೊಟ್ಟೆಯ ಪೊರೆವ ಜಾತಿಕಾರನಂತೆ (ವಿ ಸಾ ಸು. ೬೬–೧). [ಕಣ್ಣು (< ಕಣ್) + ಮುಸಕು]

**ಕಣ್ಣುಮಿಡುಕು** (ಕ್ರಿ). ಕಣ್ಣಿನಿಂದ ಸನ್ನೆಮಾಡು; ಕಣ್ಣು ಮಿಟುಕಿಸು: ಶಿರಸ್ತೇದಾರರನ್ನೂ ಕೇಳಿ ಕಣ್ಣುಮಿಡುಕಿದರು (ಚಂಗಾಳ್ವ. ೩೧೮). [ಕಣ್ಣು (< ಕಣ್) + ಮಿಡುಕ್ಕು$_2$ (< ಮಿಡುಂಕ್ಕು$_2$)]

**ಕಣ್ಣುಮುಚ್ಚಣಿಕೆ** 'ಕಣ್ಣುಮುಚ್ಚಳಿಕೆ' ನೋ.

**ಕಣ್ಣುಮುಚ್ಚಳಿಕೆ, ಕಣ್ಣುಮುಚ್ಚಣಿಕೆ** (ನಾ). ೧. = ಕಣ್ಣಾಮುಚ್ಚಿ. 'ಕಣ್ಣುಮುಚ್ಚಳಿಕೆಯಾಟ' ಪರಾ. **ಕಣ್ಣುಮುಚ್ಚಣಿಕೆ**: ೧. ಮಳಲುಕುಪ್ಪೆ ಗುಬ್ಬಿಮನೆ ಕಣ್ಣುಮುಚ್ಚಣಿಕೆ ಬೆಳದಿಂಗಳ ಕುಪ್ಪೆ (ವಿ ಸ್ತ್ರೀ ಸು. ೧೯–೧೩); ಸಂಘಟಿತ ಜನರ ವಲಸೆ ಬಂದ ಗುಂಪುಗಳು ಒಂದೆರಡು ಭಾಷೆಗಳೊಡನೆ ಕಣ್ಣುಮುಚ್ಚಣಿಕೆಯಾಡುತ್ತವೆ (ವಿಚಾಮಂ. ೧೮). ೨. ಮರೆಯಲ್ಲಿ ನಡೆಯುವುದು; ತಿಳಿಯದಂತೆ ನಡೆಯುವುದು: ಈ ಹೃದಯವೈಶಾಲ್ಯದಲ್ಲಿ ಏನೋ ಒಂದು ಕಣ್ಣುಮುಚ್ಚಣಿಕೆಯಿದೆ, ತೋರಿಕೆಯಿದೆ (ಸಾಹಿವಿ. ೩೧). [ಕಣ್ಣು (< ಕಣ್) + ಮುಚ್ಚಳಿಕೆ]

**ಕಣ್ಣುಮುಚ್ಚಳಿಕೆಯಾಟ** (ನಾ). = ಕಣ್ಣಾಮುಚ್ಚಿ (ಕಿ). [ಕಣ್ಣುಮುಚ್ಚಳಿಕೆ + ಆಟ]

**ಕಣ್ಣುಮುಚ್ಚಾಟ** (ನಾ). = ಕಣ್ಣಾಮುಚ್ಚಿ: ಪಾಂಡುರ – ಪ್ರಕಾಶವನ್ನು ಅಂಧುಕಗೊಳಿಸಿ, ಆಗೀಗ ಕತ್ತಲೆಯ ಕಾದಿಯನ್ನು ಹೊಚ್ಚುತ್ತಿತ್ತು. ಕತ್ತಲೆ – ಬೆಳದಿಂಗಳಿನ ಕಣ್ಣುಮುಚ್ಚಾಟ ನಡೆದಿತ್ತು (ದೀಪಹ. II, ೧೧೬). [ಕಣ್ಣು (< ಕಣ್) + ಮುಚ್ಚು$_2$ + ಆಟ]

**ಕಣ್ಣುಮುಚ್ಚಾಲೆ** 'ಕಣ್ಮುಚ್ಚಾಲೆ' ನೋ.

**ಕಣ್ಣುಮುಚ್ಚು** 'ಕಣ್ಮುಚ್ಚು' ನೋ.

**ಕಣ್ಣುಮುಟ್ಟೆ** 'ಕಣ್ಮುಟ್ಟೆ' ನೋ.

**ಕಣ್ಣುಮೆತ್ತು** (ನಾ). ಕಣ್ಣುರೆಪ್ಪೆಗಳು ಪಿಸುರಿನಿಂದ ಮೆತ್ತಿಹಾಕಿಕೊಂಡಿರುವ ಸ್ಥಿತಿ: ಅತಿ ಉಷ್ಣದಿಂದ ಕಣ್ಣುಮೆತ್ತುಹಾಕಿಕೊಂಡಿವೆ (ರೂಢಿ). [ಕಣ್ಣು (< ಕಣ್) + ಮೆತ್ತು$_2$]

**ಕಣ್ಣುರಿ$_1$** (ಕ್ರಿ). ೧. ಕಣ್ಣಿಗೆ ಉರಿಯಾಗು. ೨. (ಆಲಂ) ಕೋಪವುಂಟಾಗು: ಅರಸನನ್ನೂ ಅವನ ಬಳಿಯಲ್ಲಿದ್ದ ನೂರುಮಂದಿ ವೀರಭಟರನ್ನೂ ನೋಡಿದಾಗಲೆಲ್ಲ ಚಿತ್ರಾಂಗಿಗೆ ಕಣ್ಣುರಿಯುತ್ತಿದ್ದಿತು (ಕವಿಕ. ೨೮). [ಕಣ್ಣು (< ಕಣ್) + ಉರಿ$_1$]

**ಕಣ್ಣುರಿ$_2$** (ನಾ). ೧. ಹಣೆಗಣ್ಣಿನ ಉರಿ; ನೇತ್ರಾಗ್ನಿ: ಲಲಾಟದೊಳ್ ಮಿಱುಪ ಕಣ್ಣುರಿಯಂತೆ (ಶಮುದ. ೨೩೨ ಪ್ರಯೋ); ಕಂದರ್ಪ ದೇಹ ಹರನಕಣ್ಣುರಿಯಿಂದ ಬೆಂದುದು ನಿಮಿಷಮಾತ್ರದಲಿ (ಮೋಹತ. ೬-೪೦). ೨. ಕಣ್ಣಿನಲ್ಲಿ ಆಗುವ ಉರಿ, —ನೋವು (ಕ). ೩. (ಆಲಂ) ಹೊಟ್ಟೆ ಕಿಚ್ಚು; ಅಸೂಯೆ; ಮತ್ಸರ. ೪. (ಆಲಂ) ಸಿಟ್ಟು; ಕೋಪ: ಕಂಡರೆ ಕಣ್ಣುರಿ, ಕಾಣದಿದ್ದರೆ ಹೊಟ್ಟೆಯುರಿ (ಗಾದೆ). [ಕಣ್ + ಉರಿ$_2$]

**ಕಣ್ಣುರುವು** (ನಾ). ಕಣ್ಣು ಉರಿಯುವಿಕೆ (ಕ).
[ಕಣ್ + ಉರುವು$_2$ (< ಉರಿವು$_2$)]

**ಕಣ್ಣುಶೂಲೆ, ಕಣುಶೂಲೆ** (ನಾ). ೧. ಕಣ್ಣಿನ ನೋವು, —ಬಾಧೆ: ಕಣ್ಣುಶೂಲೆ ಕೊಟ್ಟು ಮೂಗುಶೂಲೆ ಕೊಂಡರು (ಗಾದೆ). ೨. (ಆಲಂ) ಹೊಟ್ಟೆಕಿಚ್ಚು: ಬದುಕಿರುವ ತಮ್ಮನನ್ನು ನೋಡಿ ಅಣ್ಣನಿಗೇಕೆ ಕಣ್ಣು ಶೂಲೆ? (ರೂಢಿ). **ಕಣುಶೂಲೆ:** ೧. ಕಣುಶೂಲೆಯೋಯುಳಿಗಣ್ಣು (ಬಸವು.೧೮-೬೬).'ಮೂಗುಶೂಲೆ' ಪರಾ. [ಕಣ್ಣು(< ಕಣ್) + ಶೂಲೆ]

**ಕಣ್ಣುಸಟ್ಟುಗ** (ನಾ). (ಕರಿದ ಪದಾರ್ಥಗಳನ್ನು ಬಾಣಲೆಯಿಂದ ಎತ್ತುವ) ರಂಧ್ರಗಳಿರುವ ಒಂದು ಸಾಧನ; ಜಾಲರಿ; ಜಾರಿ ಸೌಟು: ಆಲೂಗೆಡ್ಡೆ...ಚೆನ್ನಾಗಿ ಕಾದು ಪೆಡಸಾದಾಗ ಅವುಗಳನ್ನು ಕಣ್ಣು ಸಟ್ಟುಗದಲ್ಲಿ ತೆಗೆದು (ಅಡುಸಾ. ೯೦). [ಕಣ್ಣು (< ಕಣ್) + ಸಟ್ಟುಗ]

**ಕಣ್ಣುಸನ್ನೆ** 'ಕಣ್ಸನ್ನೆ' ನೋ.

**ಕಣ್ಣುಸಿಳ್ಳು** (ನಾ). (ಉಕ) = ಕಣ್ಣುಪಿಚ್ಚು (ಕ).
[ಕಣ್ಣು (< ಕಣ್) + ಸಿಳ್ಳು$_2$]

**ಕಣ್ಣುಸುಳುವು** (ನಾ). ಲಘುನೋಟ; ಅಲ್ಪನೋಟ (ಕ)
[ಕಣ್ಣು (< ಕಣ್) + ಸುಳುವು (< ಸುಳಿವು)]

**ಕಣ್ಣುಸೋಗೆ** (ನಾ). ಕಣ್ಣಿನ ಕೊನೆ, —ಕುಡಿ (ಕ)
[ಕಣ್ಣು (< ಕಣ್) + ಸೋಗೆ$_1$]

**ಕಣ್ಣುಸೋಗೆಹಚ್ಚೆಬೊಟ್ಟು** (ನಾ). ಕಣ್ಣಿನ ಕುಡಿಯ ಬಳಿ ಹೆಂಗಸರು ಹಾಕಿಕೊಳ್ಳುವ ಅರ್ಧಚಂದ್ರಾಕಾರದ ಹಚ್ಚೆಬೊಟ್ಟು (ಕ).
[ಕಣ್ಣುಸೋಗೆ + ಹಚ್ಚೆ (< ಪಚ್ಚೆ) + ಬೊಟ್ಟು$_2$ (< ಬಟ್ಟು$_1$)]

**ಕಣ್ಣುಹೂವು** (ನಾ). ಕಣ್ಣುಗುಡ್ಡೆಯ ಮೇಲೆ ಉಂಟಾಗುವ ಬೆಳ್ಳನೆಯ ಚುಕ್ಕೆ, —ಗುರುತು; ಮೋತಿಬಿಂದು (ಕ).
[ಕಣ್ಣು (< ಕಣ್) + ಹೂವು (< ಪೂ$_2$)]

**ಕಣ್ಣುಹೊರಳಿಸು** (ಕ್ರಿ). ದೃಷ್ಟಿಯನ್ನು ಬೀರು: ದೊಡ್ಡನೂ . . . ಕೋಣೆಯ ಕಡೆ ಕಣ್ಣುಹೊರಳಿಸುತ್ತಿದ್ದನು (ಕಾಲೂರ. ೫ ಕಥಾಸಾರ).
[ಕಣ್ಣು (< ಕಣ್) + ಹೊರಳಿಸು (< ಪೊರಳಿಸು)]

**ಕಣ್ಣುಳ್ಕು** (ಕ್ರಿ). ಕಣ್ಣುಕೋರೈಸು; ಅತಿ ಪ್ರಕಾಶವಾಗು: ನೆರೆದುದಿದು ಮೇಣ್ ಕ್ಷಾತ್ರಂ ತೇಜಂ ಧರಾಧಿಪರೂಪದಿಂ ಧರೆಗೆನುತುಮಾ ದೂತಂ ಕಣ್ಣುಳ್ಕೆ ನೋಡಿ ಕುಮಾರನಂ (ಆದಿಪು. ೧೪-೪೪); ಗೋತ್ರಾಂತಕನಿಟ್ಟ ವಜ್ರವೆನಸುಂ ಬೀೞ್ವಂತೆ ಕಣ್ಣುಳ್ಕೆ [ಪಾಠಾಂ. ಕಣ್ಗುಕ್ಕೆ]ಕಣ್ಮರಲಂ ಪೆಣ್ಬಡೆ ಮುಚ್ಚೆ . . . ಉಳ್ಕು ಬಿರ್ದುದು (ಅರ್ಧನೇ. ೪-೫೧); ಆ ತೇಜದುರಿಯಂತೆ ಕಣ್ಣುಳ್ಕಿ, ಹೊರಗಡಗಿ, ಒಳಗಿರ್ಪುದಿನ್ನುಂ (ಹೊಂಗಳು. ೧೬-೬). [ಕಣ್ + ಉಳ್ಕು$_1$]

**ಕಣ್ಣುಱಿ** (ನಾ). (?): ವನವನಿತೆಯ ಕಣ್ಣುಱಿಯೆನೆ ನಿಱಿಗೊಂಡಿರೆ ನಿಱಿ ನಿಱ್ಱಿಗನ ನಿಱಿದಳಿರ ನಿಱಿಯನಱಿಯೆಂ ಪೊಗಟಲ್ (ಆದಿಪು. ೬-೯೮). [ಕಣ್ + ಉಱಿ ?]

**ಕಣ್ಣೂನ** (ನಾ). ಕಣ್ಣಿನ ಕೊರತೆ, —ದೋಷ: ನೀನೆ ಗತಿಯೆಂದು ಬಂದ ಭಕ್ತನ ಕಣ್ಣೂನವ ತಿದ್ದಿ ನಿಜವ ತೋರಿಸಯ್ಯ (ಕರ್ನಾಕ. ೨೫೬).
[ಕಣ್ + ಊನ]

**ಕಣ್ಣೂಹೆ** (ನಾ). ಕಣ್ಣಿನ ಊಹೆ, —ಅಂದಾಜು: ಕತ್ತಲೊಳೆ ನಡೆದರಯ್ ಸಾಹಸದ ಕಣ್ಣೂಹೆಯಿಂ (ಶ್ರೀರಾಮಾ. ೩೫-೨೧೧).
[ಕಣ್ + ಊಹೆ]

**ಕಣ್ಣೂಱು** (ಕ್ರಿ). ೧. ಕಣ್ಣಿಡು; ಗಮನವಿಡು: ಮೂಱುಲೋಕದ ಚೆಲ್ವತಲೆಗುದುರೆಯ ಕಣ್ಣೂಱಿ ಪೊಗಳಲೊರ್ವರಳವೆ (ಕುರಾಸಾಂ. ೯-೩೬); ಭವ್ಯಜನಮಂ ಕಣ್ಣೂಱಿ ಕಲ್ಪಿಪ್ಪುಪಾಧ್ಯಾಯರ್ ಜ್ಯೋತಿಸುಗೆಮ್ಮ ಚಿತ್ತಗೃಹದೊಳ್ ರತ್ನತ್ರಯ ಜ್ಯೋತಿಯಂ (ಆದಿಪು. ೧-೪); ಆರ್ಯರ ಯಶಮಿದು ಖಳರ ಕದರ್ಯರ ದುರ್ಯಶಮಿದೆಂದು ತೋರ್ಪಲ್ಲಿಯೆ ತಾತ್ಪರ್ಯಮೆನಗಾಂ ಜಗಕ್ಕಾಚಾರ್ಯನೆ ಕಣ್ಣೂಱಿ ಕಲ್ಪಿಪಂತೆಲ್ಲರುಮಂ (ಲೀಲಾವ. ೧-೫೩). ೨. "ಕರುಣವಿಡು" (ಪ್ರಭಣ್ಣ).
[ಕಣ್ + ಊಱು$_1$]

**ಕಣ್ಣೆಂಜಲ್, ಕಣ್ಣೆಂಜಲ, ಕಣ್ಣೆಂಜಲು** (ನಾ). ಕೆಟ್ಟ ಕಣ್ಣಿನಿಂದ ಆಗುವ ಕೇಡು; ದೃಷ್ಟಿದೋಷ: "ಕಣ್ಣೆಂಜಲು ದೃಷ್ಟಿದೋಷಮೆನಿಪುದು" (ಕವಿಕಂ. ೧೯೮); ತತ್ಕಾಮಿನೀಪುಣ್ಯದೇವತೆ ಕಣ್ಣೆಂಜಲದೋಷಮಂ ಪುರಿಪಲೆಂದಂದಿಟ್ಟ ರಕ್ಷಾಂಜನಾಕೃತಿಯಿಂ (ಮಲ್ಲಿಪು. ೪-೯೮); ಲೋಕದ ಕಿಸುರುಂ ಕಣ್ಣೆಂಜಲುಂ ಪತ್ತುಗುಮಿನ್ನೆಂದುಂ ಮನೆಯ ಪೊಸಂತಿಲಂ ಪೊಱಮಡಲಾಗದು (ಅರ್ಧನೇ. ೪-೪ ವ); ದಿಕ್ಕಾಮಿನಿಯರ್ ಕಂಡಂದಕ್ಕುಂ ಕಣ್ಣೆಂಜಲೆಂದು (ವರ್ಧಪು. ೧-೫೪); ಕಣ್ಣೆಂಜಲ್ಗಿಂದ್ರಂ ಬಿಗಿದ ಪೊನ್ನ ಕಾಹಳೆಯೆಂಬಿನಮೆಸೆದಂ ಮೃಗಾಂಕನರ್ಧೋದಯದೊಳ್ (ಅನಂಪು. ೬-೮೦). **ಕಣ್ಣೆಂಜಲ:** ಅವನ ಕಣ್ಣೆಂಜಲದ ಶರಹತಿಗೆ ಈ ಶರೀರ ಬಳುಕುವುದು (ಜಯಂತ. ೩೫೬). **ಕಣ್ಣೆಂಜಲು:** ತರಳಂಗೆ ಕಣ್ಣೆಂಜಲೆಂದು ತೂಪಿಱಿದು (ಮೋಹತ. ೧೬-೬೩). [ಕಣ್ + ಎಂಜಲ್]

**ಕಣ್ಣೆಂಜಲ** 'ಕಣ್ಣೆಂಜಲ್' ನೋ.

**ಕಣ್ಣೆಂಜಲು** 'ಕಣ್ಣೆಂಜಲ್' ನೋ.

**ಕಣ್ಣೆತ್ತು** (ಕ್ರಿ). ೧. ದೃಷ್ಟಿಬೀರು; ಲಕ್ಷ್ಯಕೊಡು; ಗಮನಿಸು: ಅವರು ಹೆಂಗಸರನ್ನು ಕಣ್ಣೆತ್ತಿ ಸಹ ನೋಡಬಾರದು (ಮುಂಬಯಿ. ೪-೨೧೫); ಅಂತರಿಕ್ಷವನ್ನೆಂದಾದರೂ ಕಣ್ಣೆತ್ತಿ ನೋಡಿದವರೆಷ್ಟು ಮಂದಿ? (ಜ್ಯೋತಿರ್ವಿ. ೫). ೨. ಕಣ್ಣಿನಿಂದ ಸನ್ನೆಮಾಡು, —ಸೂಚಿಸು: ಮನದನ್ನಳಪ್ಪ ಕೆಳದಿ ಮೆಲ್ಲನಾಕೆಯ ಕೆಲಕ್ಕೆವಂದೆಲ್ಲರುಮಂ ಕಣ್ಣೆತ್ತಿ ಕಳಿಪಿ (ಜಗವಿ. ೧೧-೬ವ). ✶'ಕಣ್ಕೆತ್ತು' ಪರಾ.
[ಕಣ್ + ಎತ್ತು$_1$]

**ಕಣ್ಣೆಮೆ, ಕಣ್ಣೆವೆ** (ನಾ). ಕಣ್ಣಿನ ರೆಪ್ಪೆ; ಕಣ್ದೆರೆ: ಮನೆಯಾಣ್ಮನ ಕಣ್ಣೆಮೆಯೆ ಕಾಂಡಪಟಮಾಗೆಯುಂ [ಬಗೆ] ಯಾಣ್ಮನ ಕಣ್ಣೆಮೆಯೆ ದೂದವಿಯಾಗೆಯುಂ (ಪಂಪಭಾ. ೪-೮೧ ವ). **ಕಣ್ಣೆವೆ:** "ಕಣ್ಣೆವೆ ಕಣ್ಣ ರೆಪ್ಪೆಯುದು" (ಕಶರ. ೨೧); ವರುಣಾದ್ಯರಿಗೆ ವಂದಿಸಿ ಕಣ್ಣೆವೆಯ ಬಿಗಿದರಗಳಿಗೆ ನಿಂದು (ಕುವ್ಯಾವಿ. ೩-೬); ಕಣ್ಣೆವೆ ಹಳಚಿ ನೋಡಿದುದಿಲ್ಲ ಮಗನ ಲಾವಣ್ಯವನು (ಮೋಹತ. ೪-೮೦); ಧ್ಯಾನಿಯ ಕಣ್ಣೆವೆಗೂದಲಿನಂಚೊಳ್ ಹೊಂಚುವ ಬಾಷ್ಪದ ಬಿಂದುವಿನಂತೆ (ಅನಿಕೇ. ೩೩-೧೦).
[ಕಣ್ + ಎಮೆ]

**ಕಣ್ಣೆಮೆಯಿಕ್ಕು** (ಕ್ರಿ). ಕಣ್ಣಿನ ರೆಪ್ಪೆಯನ್ನು ಹೊಡೆ; ಎವೆಯಿಕ್ಕು: ಕಣ್ಣೆಮೆಯಿಕ್ಕುವನಿತು ಪೊೞ್ತುಪ್ಪೊಡಮುಸಿರ್ಪತ್ತಿಲ್ಲದೆ (ವಡ್ಡಾರಾ. ೯೬-೨); ಕಣ್ಣೆಮೆಯಿಕ್ಕದಾಱು ಋತುವುಂ ಬನಮಂ ಸಿರಿಕೆಯ್ವೊಲಂಗಳಂ ಕಣ್ಣೆಮೆಯಿಕ್ಕದಲ್ಲಿ ಪಥಿಕರ್ ಗಿಳಿಸೋವಬಲಾ ಜನಂಗಳಂ ಕಣ್ಣೆಮೆಯಿಕ್ಕದೀಕ್ಷಿಸೆ (ಪಂರಾಮಾ. ೧-೧೦೬); ಕೆಡೆದಿರ್ದನಂ ಧರೆಗೆ ಕಣ್ಣೆಮೆಯಿಕ್ಕದೆ ನೋಡಿ (ವರ್ಧಪು. ೩-೧೪). [ಕಣ್ಣೆಮೆ + ಇಕ್ಕು]

**ಕಣ್ಣೆಲೆ$_1$** (ನಾ). ಕಣ್ಣಿಗೆ ಕಾಣುವ ಎಲೆ; ಎಲೆಯ ಕವಳಿಗೆಯಲ್ಲಿ ಮೇಲಿನ ಎಲೆ: ಕಣ್ಣೆಲೆ ನೋಡಿ ಕವಳಿಗೆ ಕೊಂಡರೆ ಒಳಗೆಲ್ಲ ಪುಡಿಯೆಲೆಯೆ (ರೂಢಿ). [ಕಣ್ + ಎಲೆ$_1$]

**ಕಣ್ಣೆಲೆ$_2$** (ನಾ). ಕಣ್ಣಿಗೆ ನೆಲೆಯಾದದ್ದು; ನೋಡಲು ತಕ್ಕದ್ದು; ಗಮನಾರ್ಹವಾದುದು: ಕೈಗರ್ತರಿಯ ಕೈದೀವಿಗೆಯ ಬೆನ್ನ ಚಮ್ಮಟಗೆಯ ಕಣ್ಣೆಲೆಯ ಕುಜುಪಿನ ಸುಭಟ ಪಿಟಕಂ (ಮಹಾನೇ. ೧೨-೨೦ ವ); ಕವಿತೆಗೆ ಕಣ್ಣೆಲೆಯಾದುದು ಕಳಾವಿಳಾಸನ ಕಾವ್ಯಂ (ಧರ್ಮನಾ. ೧-೭೦); ಮಲ್ಲೇಶ ಮೂರ್ತಿಯರು ಕೆಸರೂರಿನ ಕಣ್ಣೆಲೆಗಳು (ಬೆಳುವ. ೧೯೯). [ಕಣ್ + ನೆಲೆ]

**ಕಣ್ಣೆವೆ** 'ಕಣ್ಣೆಮೆ' ನೋ.

**ಕಣ್ಣೆಸರು** (ನಾ). ಕಣ್ಣೆಂಜಲು; ದೃಷ್ಟಿತಾಗುವಿಕೆ: "... ಹೋಗಬೇಕಾದರೆ ಹಳೇ ಸೀರೆ ಉಟ್ಟುಕೊಂಡು ಹೋಗು. ಚನ್ನಾದ ಸೀರೆನೂ ಉಟ್ಟುಕೊಂಡರೆ ಕಣ್ಣೆಸರಾದೀತು (ವಂಶವೃ. ೨೯೮); ಅವನ ವರ್ಣನೆ ಮಾಡಿದರೆ ಕಣ್ಣೆಸರಾದೀತೆಂದೇ ಹೆದರಿಕೆ (ಸುವಸಂ. ೫೨). 'ಕಣ್ಣಾಸರು' ಪರಾ. [ಕಣ್ + ಎಸರು$_2$ (< ಎಸರ್)]

**ಕಣ್ಣೆಳಅರಸ** (ನಾ). ಒಬ್ಬಾತನ ಹೆಸರು: ತೈತ್ತಿರ್ಯ್ಯಾಯ ನಾಗಶರ್ಮಣೇ ಕಣ್ಣೆಳಅರಸ ಸಿಕ್ಕಮ್ಮ ಆನಂದೂರ ಪೆರ್ಬಾರ್ಬ ಪ್ರಭೃತೀನ್ (ಮೈಆರಿ. ೧೯೧೮; ೧೨-೧೧, 6ನೆಯ ಶತ). [ಕಣ್ಣೆಳ ? + ಅರಸ$_1$]

**ಕಣ್ಣೆಜಕ** (ನಾ). ಕಣ್ಣಿನ ಪ್ರೀತಿ; ನೇತ್ರೋತ್ಸವ (?): ಸುತ್ತಣ ಸಭೆ ಕಣ್ಣೆಜಕಮ ಗೆತ್ತು ಪಲರ್ ನೆರೆದು ನೋಡೆ ನೃಪಸತಿ ಮನದೊಳ್ ಕೊರ್ತು [ಪಿರಿಯಲ್]·ಬಗೆದು ಜನೋತ್ತಮನೆಂದಂಜಿ ಮಾಣ್ದಳ್ (ಅಜಿಪು. ೫-೫೭). [ಕಣ್ + ಎಜಕ$_1$]

**ಕಣ್ಣೇಜು** (ನಾ). ೧. ಕಣ್ಣಿನ ಗಾಯ, —ಶೂಲೆ: ಶಿವದೂಷಕರ ನುಡಿಗೇಳ್ದ ಸದ್ಭಕ್ತನಂತೆ ಕಿವಿಯೇಜು ... ಶಿವಭಕ್ತಿಯಿಲ್ಲದ ಹಾಳೊಡಲ್ಗಳಂ ಕಂಡ ಶಿವಭಕ್ತನಂತೆ ಕಣ್ಣೇಜು (ನಂಬಿರ. ೧೬-೧೨). ೨. ಕಣ್ಣೆಂಜಲು; ದೃಷ್ಟಿದೋಷ: ಕಣ್ಣೊಳಂಜನವಿಟ್ಟು ಕಡೆಯೊಳಾ ಶಿಶುವಿಗೆ ಕಣ್ಣೇಜು ತಾಗುಗೆಂದವರು ... ನೊಸಲೊಳು ಕಪ್ಪ ಬಿನ್ನಣಮೆನಲೊಂದಿಸಿದರು (ಅಂಜಚ. ೪-೪೨); ಕಾಯಲ್ ನೆನೆವೇಂ ನೋಡಕ್ಕ ತಳ್ತಪ್ಪಿದೊಡೆ ಪೆಜರ ಕಣ್ಣೇಜಿನಾಶಂಕೆಯಿಂದಂ (ಅನಂಪು. ೮-೧೬); ಕಣ್ಣೇಜೆಂದು ನಿ[ಪಾಠಾಂ. ಜುಂದಿ, ರಡಿಂದಿ, ಜೆಂದಿ]ಟ್ಟಿಸರವರ್ ನೇಹದ ತಿಣ್ಣವಿನ್ನೆಂತೊಯೆನ್ನಯ ಮೊಗ ಬಣ್ಣವಳಿದರಳಿವರು (ಸೊಬಸೋ. ೧೫-೧೬); ಕನ್ನೆಗೆ ಕಣ್ಣೇಜಾದುದಕ್ಕಟಯೆಂದು ಚೆನ್ನೆಯರೆತ್ತಿ ತೂಪಿಜಿದು (ನಾಗಕು. ೨೫-೬೩). [ಕಣ್ + ಏಜು$_4$ (< ಏಜ್$_4$). / ತಮಿ. ಕಣ್ಣೂಜು]

**ಕಣ್ಣೊತ್ತು** (ನಾ). ೧. ಕಣ್ಣಿನ ಬಾಧೆ, —ತೊಂದರೆ (ಹ). ೨. (ಆಲಂ) ನೋವುಂಟುಮಾಡುವಂತಹುದು; ಆಧಾರಗಳು ... ಸಮಗ್ರವಾಗಿ ದೊರೆತಿಲ್ಲ ಇಲ್ಲವೆ ದೊರೆಯುವುದು ಸಾಧ್ಯವಿಲ್ಲ ಎಂಬ ಕೊರತೆಯೂ ಕಣ್ಣೊತ್ತಾಗಿದೆ (ಕಸಾಚ. ೩೯). [ಕಣ್ + ಒತ್ತು$_2$]

**ಕಣ್ಣೋಜಿ** (ನಾ). ಮೋಸಗಾರ; ಕುತಂತ್ರಿ: ತನ್ನ ಸಂಗಾತಿ ಆಂಡ್ರೂ ಎಫಿಮಿ ದೊಡ್ಡ ಕಣ್ಣೋಜಿ ಎಂದವನ ತಿಳಿವಳಿಕೆ (ಹುಚ್ಚಮ. ೪೨); ಅವನು ಶುದ್ಧ ಕಣ್ಣೋಜಿ, ಜೋಕೆ ನಂಬಬೇಡ (ರೂಢಿ). [← ತುಳು. ಕಣ್ಣೋಜಿ, ಕಂನೋಜಿ]

**ಕಣ್ಣೋಟ$_1$** (ನಾ). ಕಣ್ಣಿನ ಓಟ: ಆ ದಾರಿಗುಂಟ ನನ್ನ ಕಣ್ಣೋಟ ಸಾಗಿತ್ತು (ರೂಢಿ). [ಕಣ್ + ಓಟ]

**ಕಣ್ಣೋಟ$_2$** (ನಾ). ಕಣ್ಣಿನ ನೋಟ; ದೃಷ್ಟಿ: ಕಣ್ + ನೋಟಂ = ಕಣ್ಣೋಟಂ (ಶಮದ. ೧೫೮ ಪ್ರಯೋ); ಕನ್ನಡದ ಕಣ್ಣೋಟ – ಕೂರ್ಪು, ಅರ್ಪು (ಹೊಂಗಳು. ೧೫-೧೭); ಆಳುವ ಕಂದನ ತುಟಿಯು ಹವಳದ ಕುಡಿಯಂಗ. . .ಕಣ್ಣೋಟ ಶಿವನ ಕೈಯಲಗು ಹೊಳೆದಂಗ (ಗರತಿ. ೮೫). [ಕಣ್ + ನೋಟ]

**ಕಣ್ಣೋರೆ** (ನಾ). ಕಣ್ಣಿನ ಕೊನೆ; ಕಡೆಗಣ್ಣು; ಅಪಾಂಗ: ಸಾರಿ ಕೈಗೊಡುವಡಟರನು ಕಣ್ಣೋರೆಯಲಿ ಕೋಪಿಸುತ ತನ್ನಯ ತೇರನಿಳಿದನು ಪಾರ್ಥನು (ಕುವ್ಯಾದ್ರೋ. ೮-೧೨); ಅಬಲೆಯರ ಕಣ್ಣೋರೆಗಳ ಕಾಳಾಟ ಕಳುಕದರುಂಟೆ ಹೇಳು (ತೊರರಾ. ೧-೫-೫೨); ನಿನ್ನ ಕಣ್ಣೋರೆಯಿಂದೆ ನೋಡಲಾಗದೆ (ಚಿಬಪು. ೧೯-೩೪). [ಕಣ್ + ಓರೆ$_1$]

**ಕಣ್ತಡಿಕೆ** (ನಾ). ಪಕ್ಕಕ್ಕೆ ನೋಡದಂತೆ ಕಣ್ಣಿಗೆ ಕಟ್ಟಿದ ಪಟ್ಟಿ; ಕಣ್ಕಾಪು: ಈ ಯಾವ ಕಣ್ತಡಿಕೆಗಳನ್ನೂ ಕವಿಯು ಕಟ್ಟಿಕೊಳ್ಳಬಾರದು (ಜೀವಸಾ. ೪೫). [ಕಣ್ + ತಡಿಕೆ]

**ಕಣ್ತಡೆ** (ನಾ). = ಕಣ್ತಡಿಕೆ: ಕಣ್ತಡೆ ಕಟ್ಟಿಸಿಕೊಂಡ ಟಾಂಗಾಕುದುರೆಯಂತೆ (ನಂಟರು. ೧೧೬). [ಕಣ್ + ತಡೆ$_2$]

**ಕಣ್ತಣಿ** 'ಕಣ್ದಣಿ' ನೋ.

**ಕಣ್ತಪ್ಪಿಸು** (ಕ್ರಿ). ೧. ಕಣ್ಣಿನಿಂದ ಮರೆಯಾಗು; ಕಾಣದಂತೆ ನುಸುಳಿಕೊ; ಗಮನ ತಪ್ಪಿಸು: ಹುಡುಕುತಿಹ ಕಳ್ಳ ತಾಂ ಕಣ್ತಪ್ಪಿಸುತಲಿರಲ್ ಪಿಡಿದ ಕಟ್ಟಾಳಂತೆ (ಕಾಲೂರ. ೭೮-೧೯೯). ೨. ಕಣ್ಣಿನಿಂದ ಮರೆಯಾಗುವಂತೆ ಮಾಡು; ಅಡಗಿಸು: ಆ ಹಣವನ್ನು ಅವನ ಕಣ್ತಪ್ಪಿಸಿ ಇಡು (ರೂಢಿ). [ಕಣ್ + ತಪ್ಪಿಸು]

**ಕಣ್ತಪ್ಪು$_1$** (ಕ್ರಿ). ದೃಷ್ಟಿಯಿಂದ ಮರೆಯಾಗು; ಕಣ್ಮರೆಯಾಗು: ದನಕರುಗಳಂ ಕಾಯ್ವ ಹೊಣೆಯ ಹೊತ್ತಿದೆ ಹುಲಿಯೆ ಇನಿತು ಕಣ್ತಪ್ಪಿದರೆ ಎತ್ತುದನಮಿಲ್ಲ (ಕಾಲೂರ. ೫೨-೮೦). [ಕಣ್ + ತಪ್ಪು$_1$]

**ಕಣ್ತಪ್ಪು$_2$** (ನಾ). ನೋಡದೆ ಉಳಿದ ತಪ್ಪು; ದೃಷ್ಟಿಗೆ ಬಾರದ ತಪ್ಪು: ಮುದ್ರಣದಲ್ಲಿ ಕಣ್ತಪ್ಪು ಉಳಿಯಬಾರದು (ರೂಢಿ). [ಕಣ್ + ತಪ್ಪು$_2$]

**ಕಣ್ತಿಮಿರ್** (ಕ್ರಿ). ಕಣ್ಣುಗಳನ್ನು ಉಜ್ಜು, —ಒರಸು: ಪೊತ್ತುತಂದರ್ ದೊಡ್ಡನಂ ಮನೆಗೆ ಬೆರಗಿನಿಂ ಪೆತ್ತವರ್ ಕಣ್ತಿಮಿರಿ ಕಂಗೆಡಲ್ ಬಾಡಿ (ಕಾಲೂರ. ೧೦೩-೨೦೮). [ಕಣ್ + ತಿಮಿರ್$_1$]

**ಕಣ್ತೀಟೆ** (ನಾ). ಕಣ್ಣಿನ ಲಾಲಸೆ; ಕಣ್ಣಿನ ದುರಾಸೆ: "... ಈ ದಿಗಂಬರನಾರಿಯನ್ನು ಬಣ್ಣದಲ್ಲಿ ಬರೆದುಕೊಂಡು ಕಣ್ತೀಟೆ ತೀರಿಸಿಕೊಳ್ಳುವದು ಅದಾವ ರುಚಿಯೋ?" (ನಿರಾಧ. ೩೪). [ಕಣ್ + ತೀಟೆ]

**ಕಣ್ತೀವು** 'ಕಣ್ದೀವು' ನೋ.

**ಕಣ್ತುಂಬು, ಕಣ್ಣುತುಂಬು** (ಕ್ರಿ). ಕಣ್ಣಿಗೆ ತೃಪ್ತಿಯಾಗು: ಆರತಿ ಬೆಳಗಿ ತನ್ನ ಕಣ್ತುಂಬುವಂತೆ ನೋಡಿದಳು (ಕಾಲೂರ. ೨೦ ಕಥಾಸಾರ); ಜಗವರಳಿ ಕಂಡು ಕಣ್ತುಂಬಿ ಮರಳಿ ಮರುಳಾಗಿ ತುಂಬಿ (ಗಂಗಾತ. ೧೦೮-೧೮). **ಕಣ್ಣುತುಂಬು**: ಬಣ್ಣದೊಟ್ಟಿಲದಲ್ಲಿ ಕಣ್ಣುತುಂಬುವ ಕಂದ (ನೆಲಮು. ೬೨). [ಕಣ್ + ತುಂಬು$_1$]

**ಕಣ್ತುಮ್ರಿ** (ನಾ). ತುಮ್ರಿ ಜಾತಿಯ ಮರ: ಕಣ್ತುಮ್ರಿ, ತುಮ್ರಿ (ಮೈಔಗಿ. ೩೧-೫೪೮). [?]

**ಕಣ್ದಟ್ಟು** (ಕ್ರಿ). ಕಂಡುಕೊ: ಥಟ್ಟುಚ್ಚಿ ಸರಳುಗಿದ ಛಾಯಮಂ ತಾನೆ ಕಣ್ದಟ್ಟಿದಂ ಪೂರ್ವದೊಳ್ ದೂರ್ವಾಸ ನುಡಿದ ಈ ನುಡಿ ಸಮಯಕೊದಗಿತೆಂದು (ತುರಂಗ. ೯೦-೨೭). [ಕಣ್ + ತಟ್ಟು$_1$ ?]

**ಕಣ್ದಣಿ,** ಕಣುದಣಿ, ಕಣ್ತಣಿ (ಕ್ರಿ). ಕಣ್ಣಿಗೆ ತೃಪ್ತಿಯಾಗು; ಕಣ್ಣು ತುಂಬು: ಕಣ್ದಣಿಯದರ್ಭಕನಂ ನಡೆ ನೋಡಿನೋಡಿ (ಮಲ್ಲಿಪು. ೩–೧೧೩); ನೋಡಿದಂ ಕಣ್ದಣಿಯೆ ಬಳಿಕಿಳಿಗೆ ತನುವನೀಡಾಡಿ ದಂಡ ಪ್ರಣಾಮಂಗೈದು (ಜೈಮಿಭಾ. ೨೬–೭೧). **ಕಣುದಣಿ:** ಮನದಣಿದು ಕಣುದ [ಪಾಠಾಂ. ಣ್ದ]ಣಿದು ಹರುಷಾಶ್ರುಗಳುಗುತ್ತಿರಲು (ಬಸಪು. ೨೯–೧೭). **ಕಣ್ತಣಿ:** ಕಣ್ತಣಿವಿನಂ ... ಕೊಳ್ಗುಳನಂ ನಡೆ ನೋೞ್ಪ (ಪಂಪಭಾ. ೧೧–೪೧); ಕೃತ್ರಿಮ ಚೈತ್ಯಾಲಯಂಗಳಂ ಕಣ್ತಣಿವಿನಂ ನೋಡುತ್ತುಂ (ಧರ್ಮಾಮೃ. ೨–೧೪೫). [ಕಣ್ + ತಣಿ$_1$]

**ಕಣ್ದಣಿವು** (ನಾ). ಕಣ್ಣಿನಿಂದಾದ ತೃಪ್ತಿ; ನೋಟದಿಂದಾದ ತಣಿವು (ಶ). [ಕಣ್ + ತಣಿವು]

**ಕಣ್ದಿಟ್ಟಿ** (ನಾ). ಕಣ್ಣಿನ ನೋಟ, —ದೃಷ್ಟಿ: ನಿದ್ರಾನ್ವಿತೆಯಾಗಿ ಕಣ್ದಿಟ್ಟಿಯೊಳಗನಿರುದ್ಧನ ಕಂಡಮರ್ದಪ್ಪಿ (ಮೋಹತ. ೨೭–೪೧); ಧ್ಯಾನಮೂರ್ತಿಯ ಮೊಗದಿ ಕಣ್ದಿಟ್ಟಿ ನಟ್ಟು ನಿಷ್ಪಂದವಾಗುತಿದೆ (ಅಗ್ನಿಹಂ. ೬೦). [ಕಣ್ + ದಿಟ್ಟಿ]

**ಕಣ್ದಿಳುವು** (ನಾ). ಕಣ್ಣಿಗೆ ಕಟ್ಟಿದಂತಿರುವ ಅನುಭವ: ಆ ಪರಿಯ ಕಣ್ದಿಳುವಾಗಿ ಕೆಂಚವೀರಾಖ್ಯ ಬಿತ್ತರಿಸುವೆವು ಕೇಳು (ವೀಕೈಪು. ೧–೧–೪೬). [ಕಣ್ + ತಿಳುವು (< ತಿಳಿವು)]

**ಕಣ್ದೀವು,** ಕಣ್ತೀವು (ಕ್ರಿ). ಕಣ್ಣು ತುಂಬು; ತಣ್ಣಿಗೆ ತೃಪ್ತಿಯಾಗು: ಮೇನೆಯುಂ ಗಿರಿರಾಜನುಂ ಕಣ್ದೀವಿ [ಪಾಠಾಂ. ಕಣ್ತೀವಿ] ನೋಡಿ ಮೆಯ್ದೀವಿಯಪ್ಪಿ (ಗಿರಿಕ. ೩–೧೧೯ ವ). **ಕಣ್ತೀವು:** ನಿಮ್ಮ ಸಿರಿಯಂ ಕಣ್ತೀವಿ ನೋಡಿಯುಂ (ಪಂಚತಂ. ೩೫–೧); ಸುಖಜಲಂ ಕಣ್ತೀವೆ ಬೆಳೆವ ಗದುಗೆದವಲರೆ (ಬಸರ. ೩–೧೧೯). [ಕಣ್ + ತೀವು]

**ಕಣ್ದುದಿ** (ನಾ). ಕಣ್ಣಿನ ತುದಿ, —ಕುಡಿ; ಅಪಾಂಗ: ಸೋಗೆ ಕಣ್ದುದಿಗೆ ಶೋಭಿಸುವ ಗೆರೆ (ಶಬ್ದಮಂ. ೬೩). [ಕಣ್ + ತುದಿ]

**ಕಣ್ದುದಿಗೆರೆ** (ನಾ). ಕಣ್ಣಿನ ತುದಿಯಲ್ಲಿ (ಕಾಡಿಗೆಯಿಂದ) ಬರೆದ ಗೆರೆ; ಸೋಗೆ; "ಕಣ್ಣ ಕೊನೆರೇಖೆ" (ಶಬ್ದಮಂ. ಟೀಕೆ): "ನವಿಲು ಕಣ್ದುದಿಗೆರೆಗಳೊಳಡಕೆ ಮೊದಲಾದವಱ ಪತ್ರದಲ್ಲಿ ಸೋಗೆ" (ಶಬ್ದಮಂ. ೮೩). [ಕಣ್ದುದಿ + ಗೆರೆ]

**ಕಣ್ದೆರಪು** 'ಕಣ್ದೆಱಪು' ನೋ.

**ಕಣ್ದೆರೆ** (ನಾ). ಕಣ್ಣಿನ ತೆರೆ; ರೆಪ್ಪೆ: ಕಣ್ದೆರೆಯ ಕದಲಿಸದೆ ನುಣ್ಬೊಗರ ತಿಮಿರಿದಳ್ (ಕಾಲೂರ. ೩೩–೩೧). [ಕಣ್ + ತೆರೆ$_2$ (< ತೆಱೆ$_2$)]

**ಕಣ್ದೆರೆತ** (ನಾ). ಕಣ್ಣುಗಳನ್ನು ತೆರೆಯುವಿಕೆ: "ನೇಮಿಃ, ನಿಮೇಷಣಂ, ನಿಮಿಷಂ – ಈ ೩ ಕಣ್ದೆರೆತಂ" (ಕಾಶಕ್ಕ. ೬೦). [ಕಣ್ + ತೆರೆ$_1$ (< ತೆಱೆ$_1$) + -ತ$_2$]

**ಕಣ್ದೆಱಪು,** ಕಂದೆಱಪು, ಕಣ್ದೆರಪು (ನಾ). ಕಣ್ಣು ತೆರೆಯುವಿಕೆ; ಪ್ರಕಟಗೊಳಿಸುವಿಕೆ: ಎತ್ತನಾನಾವ ಕಾರಣದಿಂದ ಬಂದೆ ... ಉತ್ತರಗೊಡು ಕಣ್ದೆಱಪಾಗಿ (ವರ್ಧಚ. ೪–೩೮). **ಕಂದೆಱಪು:** 'ಕಂದೆಱಪುಗೈ' ಪರಾ. **ಕಣ್ದೆರಪು:** ಅವನ ಕೈಚಳಕವೆಲ್ಲವನ್ನೂ ಕಣ್ದೆರಪಾಗಿ ನೋಡಿ ಪ್ರೇಕ್ಷಕರು ... ಉಗ್ಗಡಿಸಿದರು (ಭೀಷ್ಮಚ. ೬೬). [ಕಣ್ + ತೆಱಪು]

**ಕಣ್ದೆಱವಿ,** ಕಂದೆರವಿ, ಕಂದೆಱವಿ, ಕಂದೆಱವೆ (ನಾ). ೧. ಕಣ್ಣು ತೆರೆಯುವುದು; ಕಣ್ಣು ಬಿಡಿಸುವುದು: ಪಚ್ಚೆಯ ಜಗಲಿಯ ಚೆಲ್ವಿಂಗೆ ಕಣ್ದೆಱವಿಯಾದಂತೆ ತೆಱಂಬೊಳೆವ ದೀವದ ಹರಿಣೆಗಳ ಲೋಚನಪ್ರತಿಬಿಂಬಂಗಳುಂ (ಪಂರಾಮಾ. ೩–೭೫ ವ); ಸಕಳಜಗಕ್ಕೆ ತನ್ನ ಕಾಂತಿಯ ಕಣ್ದೆಱವಿಯೆಂಬತಿರ್ದ ಮಹಾತೋರಣದೊಳಮೆಯ್ಯೊಳ್ ನೆರೆದು ಕುಳ್ಳಿರ್ದ ಸೂರ್ಯವಂಶದ ಸುಕುಮಾರರಿಂ (ಗಿರಿಕ. ೧೦–೨೮ ವ). ೨. (ವಿಗ್ರಹಕ್ಕೆ) ಕಣ್ಣು ಬಿಡಿಸುವುದು: ಕರುಕರುವಿಂಗೆ ಕಣ್ದೆಱವಿ ಕಲ್ಪಿಸದೋಜೆಗೆ ನಚ್ಚಿನಚ್ಚು (ಮಲ್ಲಿಪು. ೨–೬೬). **ಕಂದೆರವಿ:** ೧. ಅರಿವು ಕಂದೆರವಿಯಾದ – ಅರಿವೇ ತಾನಾದ – ಬಸವಣ್ಣನವರ ಮಹಾಮನೆಯಲ್ಲಿ ಈ ವಿಷಮ ದ್ವೈತವೆಲ್ಲಿ? (ಮೋಳಿಮಾ. ೨೫ ಪ್ರಸ್ತಾವನೆ). **ಕಂದೆಱವಿ:** ೧. ನಮ್ಮ ಗೊಹೇಶ್ವರನ ಕೈವಿಡಿದು ಪರಮಸುಖಿಯಾಗಿ ಕಳವಳ ಕಂದೆಱವಿಯೇನು ಹೇಳಾ (ಅವಚಂ. ೨೧೦–೯೪೩). **ಕಂದೆಱವೆ:** ಕುಮಾರಕರ ಪುಣ್ಯೋದಯದ ಕಂದೆಱವೆಯೈಸಲೆ (ಕುವ್ಯಾಳ. ೭–೧೨). [ಕಣ್ + ತೆಱವಿ]

**ಕಣ್ದೆಱವಿವಡೆ** (ಕ್ರಿ). ಕಣ್ದೆರವಿಯನ್ನು ಪಡೆ, —ಹೊಂದು: ಮಳಯಜತಿಳಕದಿನಶೇಷ ಮಂಡನಶ್ರೀಗೆ ಕಣ್ದೆಱವಿವಡೆದುಂ ಖಚರಸಹಚರೀ ಪರಿವಾರವೆಲ್ಲಂ ತಮ್ಮ ಪರಿಕರ್ಮಕೌಶಲಮಂ ಮೆಱೆದು ನೆಱೆಯೆ ಪಸದನಂಗೆಯ್ವೆ (ವರ್ಧಪು. ೭–೯ ವ). [ಕಣ್ದೆಱವಿ + ಪಡೆ$_1$]

**ಕಣ್ದೆಱವು,** ಕಂದೆಱವು (ನಾ). ತಿಳಿವು; ದರ್ಶನ: ಒದವಿದ ಚತುಷ್ಷಷ್ಟಿಕಲೆಗಳೊಳಗಣ ತಿಳಿವು ಪದಿನೆಂಟು ತೆಱದ ವಿದ್ಯೆಗಳ ಕಣ್ದೆಱವು ಸಕ್ಕದಮುಮರ್ದ ಕನ್ನಡಂ ಪಾಗದಂ (ಪದ್ಮರಾ. ೪–೩೪). **ಕಂದೆಱವು:** ನೀನಾರೈ ನರಾಂಗದ ಮಱೆಯ ಜವನಿಕೆ ನಿನ್ನಲಿದೆ ಕಂದೆಱವ ಮಾಡಾರೆಂಬುದನು ನೀನು (ತೊರರಾ. ೩–೧–೩೬). [ಕಣ್ + ತೆಱವು$_1$]

**ಕಣ್ದೆಱೆ,** ಕಂದೆರೆ, ಕಂದೆಱೆ (ಕ್ರಿ). ೧. ಕಣ್ಣುಬಿಡು: ಸೋಗೆಯ ಚೆಲ್ವು ಕಣ್ದೆಱೆದುದೋ ಪೆಱೆಗೆಂಬಿನಂ ಪೀಲಿಗಳ್ತರದಿಂ ಕಣ್ದೊಳಸಲ್ಕೆ (ಕಾದಂಪೂ. ೨೯೭); ಸುಷುಪ್ತಿಯೊಳಿದ್ದು ನಿಮಿಷದೊಳಿದ್ದು ಕಣ್ದೆಱೆದ (ಕುವ್ಯಾದ್ರೋ. ೮–೩೨). ೨. ಪ್ರಕಟವಾಗು; ಕಾಣಿಸಿಕೊಳ್ಳು: ಈ ದಂಪತಿಯ ಬಯಕೆ ಸಂಪೂರ್ಣಮಾಯ್ತುತ್ಸವಂ ಕಣ್ದೆಱೆದಂ ತಾಯ್ತಿನ್ನ ಸಾಮ್ರಾಜ್ಯದ ಫಲಂ (ಆದಿಪು. ೪–೪೮); ನೆಱೆಯೆ ಧನುರ್ವಿದ್ಯೆ [ಯೆ]ಕಣ್ದೆಱೆವಿನೆಗಂ ಕಲ್ತು ನಿಮ್ಮ ಮಕ್ಕಳ ಮೆಯ್ಯೊಳ್ ಮೆಱೆದಪ್ಪೆನೆನ್ನ ವಿದ್ದೆಯಂ (ಪಂಪಭಾ. ೨–೬೫); ನೆಱೆಯದಿರೆ ಗೌರವಮುಂ ಕಂಡಱೆಯದ ಪುರುಷಂಗೆ ಮಾೞ್ಪನೊಳ್ ಸುಜನತೆ ಕಣ್ದೆಱೆದುದು (ಶಾಂತಿಪು. ೨–೭೬); ಅಱಿವು ಕಣ್ದೆಱೆಯದವರಲ್ಲಿ ಆರತಿಯನೊಲ್ಲೆಯಯ್ಯ ನೀನು (ಮಹಾದೇ. ಕ. ೭೫–೧೮೭); **ಕಂದೆರೆ:** ೧. "ಬಾಹುಬಲಿ ಕಂದರೆದುಕೊಂಡೇ ಇದ್ದರೂ ಅವನ ಮನಸ್ಸು ... ಮರುಕವಡೆದುಕೊಂಡಿತ್ತು" (ಕನ್ನಇ. ೬೦); ಅಲಸ್ಯವನ್ನುಳಿದು, ಮೆಲ್ಲಮೆಲ್ಲನೆ ಕಿವಿಗೊಡಬೇಕು; ಕಂದೆರೆಯಬೇಕು (ನಾಡೋಜ. ೩೬೩). **ಕಂದೆಱೆ:** ೧. ತರುಣೀಡನಿಕಾಯದಿ ನೆಲ್ಲವಾಗಳಾಗಳೆ ಗಱೊಯ್ದು ಕಂದೆಱ[ಱೆ]ವ ತುಪ್ಪುಳೊಡರ್ಚುವ ಕೆಂಪನಾಳ್ದ ಕೋಮಳ ಶುಕಶಾಬಕಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ (ಕಾದಂಪೂ. ೧೭೪); ತರುಣಿವೊಯ್ಯನೆ ಕಂದೆಱೆದು ದಿಟ್ಟಿಸಿ ಜೀವಂಧರನ ಮೋಹನರೂಪಗಂಡು (ಜೀವಂಸಾಂ. ೧೩–೪೨); ಕಂದೆಱೆದಳು ಪುನರಪಿ ನೋಡಿ ಚರಣಾರವಿಂದದೆ ನೊಸಲ ಚಾಚಿದಳು (ಮೋಹತ. ೩೦–೩೪). [ಕಣ್ + ತೆಱೆ$_1$]

**ಕಣ್ದೊಡವು** (ನಾ). ಕಣ್ಣಿಗೆ ಭೂಷಣ: ಆತನ ರೂಪಿದೊಂದು ಕಣ್ದೊಡವೆನೆ ಬೇಱದೊಂದು ಬಗೆಗಿಕ್ಕಿದ ಟಕ್ಕನೆ ವಶ್ಯದೊಂದು ತಣ್ದೊಡರೆನೆ ನೋೞ್ಪ ನೋಟಕರ ಕಣ್ಗೊಳಗಾದುದು ಕಣ್ಣಪಾಪೆವೋಲ್ (ಪಂರಾಮಾ. ೩–೩೯). [ಕಣ್ + ತೊಡವು]

**ಕಣ್ದೊಳಲ್$_1$** (ಕ್ರಿ). (ಭಯದಿಂದ) ಕಣ್ಣನ್ನು ತಿರುಗಿಸು; ಕಂಗೆಡು: ಅಡಂಗುವ ಪೆರ್ಬುಲಿ ಕಣ್ದೊಳಲ್ವ ಬಲ್ಗರಡಿ ಕಡಂಗಿ ಮೆಯ್ಮುರಿವ ಕೇಸರಿ (ಶಬಶಂ. ೩–೪೮). [ಕಣ್ + ತೊಳಲ್$_1$ (< ತೊೞಲ್$_1$)]

**ಕಣ್ತೊಳಲ್**$_2$, ಕಂದೊಳಲ್, ಕಂದೊಳಲು (ನಾ). ಕಂಗೆಡುವಿಕೆ; ದಿಗ್ಭ್ರಮೆ (?): ಕಾಮದಿಂದಧಿಕದ ಕಣ್ತೊಳಲಿಲ್ಲದು ಕ್ಷೇಮ ಕೀರ್ತಿಯ ಕೆಡಿಸುವುದು (ಭರತ. ೧೨–೧೨೫). **ಕಂದೊಳಲ್**: ಮುಂದು ಗೆಟ್ಟು ನಾಂ ನಿಂದಿರಲಿಂಬುಗಾಣದಜಸುತ್ತವೆ ದೈವದ ವೃಂದ ಮಧ್ಯದೊಳ್ ಕಂದೊಳಲಾಗಿ ಬಂದು ಮಱೆವೊಕ್ಕೆನು ನಿಮ್ಮನು ದೇವ (ದೀಕ್ಷಾಬೋ. ೪೩–೮); ತಾಣದಲೂಹಿಸಿದ ಮನ ಮುಗ್ಗಿದುದು ಕಂದೊಳಲ ತೋಹಿನಲಿ (ಕುವ್ಯಾಗ. ೬–೨೮). **ಕಂದೊಳಲು**: 'ಕಂದೊಳಲುಗೊಳ್' ಪರಾ. [ಕಣ್ + ತೊಳಲ್$_2$ (< ತೊೞಲ್$_2$)]

**ಕಣ್ತೊಳೆ** (ಕ್ರಿ). ಕಣ್ಣುಗಳನ್ನು ತೊಳೆ: ಲಲನೆಯೋರ್ವಳು ಕಣ್ತೊಳೆ [ಪಾಠಾಂ. ಕಣ್ಗಳೆ, ಕಣ್ದಳೆ]ದಳಾ ರಾಯನ ಲಲಿತಲಾವಣ್ಯರಸದೊಳು (ಕುರಾಸಾಂ. ೭–೧೦೩). [ಕಣ್ + ತೊಳೆ$_1$]

**ಕಣ್ತೊಟಲಿ** 'ಕಣ್ಣಂದೊಟಲಿ' ನೋ.

**ಕಣ್ತೋಱು** (ಕ್ರಿ). ಕಣ್ಣಿಗೆ ಕಾಣಿಸು; ಗೋಚರವಾಗು: ಭೂರಮಣಿ ತನ್ನೃಪಾಲಯ ಚಾರುತೆಯಂ ನೋಡೆಲೆಂದು ಕಣ್ತೋಱಿದವೋಲ್ (ಬಾಹಪು. ೧–೧೬೭). [ಕಣ್ + ತೋಱು (< ತೋಱ್)]

**ಕಣ್ಪರೆ** 'ಕಣ್ಪೊರೆ' ನೋ.

**ಕಣ್ಪಸ** 'ಕಣ್ಬಸ' ನೋ.

**ಕಣ್ಪೊತಿ** (ನಾ). ಒಂದು ಸಸ್ಯದ ಹೆಸರು: (ವೈಶನಿ. ೩೭–೭೪೨). [?]

**ಕಣ್ಪೊರೆ**, ಕಣ್ಣುಪರೆ, ಕಣ್ಪರೆ (ನಾ). ಒಂದು ಬಗೆಯ ಕಣ್ಣಿನ ರೋಗ; ಕಣ್ಣುಗುಡ್ಡೆಯ ಮೇಲೆ ಬೆಳೆಯುವ ತೆಳುವಾದ ಪೊರೆ: ಕಣ್ಪೊರೆಯಿಂದ ದೃಷ್ಟಿಮಾಂದ್ಯವಾಗಿದೆ (ರೂಢಿ). **ಕಣ್ಣುಪರೆ**: (ಕ). **ಕಣ್ಪರೆ**: ಕುರುಡನ್ನುಂಟುಮಾಡುವ ಕಾರಣಗಳಲ್ಲಿ ಕಣ್ಪರೆ ಅತಿ ಪ್ರಾಮುಖ್ಯವಾದುದು (ನಿಮ್ಮದೃ. ೧೬೫). [ಕಣ್ + ಪೊರೆ$_6$]

**ಕಣ್ಪೊಚ್ಚ** (ನಾ). ಕಣ್ಣಿಗೆ ಅಲಂಕಾರ, —ಸೊಗಸು: ದಳಂಬೆತ್ತೊತ್ತೆ ಬಿಟ್ಟುಬ್ಬರಿಸಿ ಬಿರಿದು ಕಣ್ಪೊಚ್ಚವಾದಚ್ಚವಣ್ಪೇಱಿದ ದಾಳಿಂಬಂ (ಚಂದ್ರಪು. ೧೧–೫೪). [ಕಣ್ + ಪಚ್ಚ$_3$]

**ಕಣ್ಬಡಿ**, ಕಣ್ಣುಬಡಿ (ಕ್ರಿ). ರೆಪ್ಪೆ ಹೊಡೆ; ಕಣ್ಣುಮಿಟುಕಿಸು. 'ಕಣ್ಬಡಿಕ' ಪರಾ. **ಕಣ್ಣುಬಡಿ**: "ನಿಮಿಷ – ಕಣ್ಣುಬಡಿಯುವಷ್ಟು ಹೊತ್ತು" (ಗಂಗಾಪು. ೧೮೪). [ಕಣ್ + ಬಡಿ$_1$]

**ಕಣ್ಬಡಿಕ** (ನಾ). ರೆಪ್ಪೆ ಹೊಡೆಯುವವನು; ಕಣ್ಣುಮಿಟುಕಿಸುವವನು: ಆವನು ಮಹಾ ಕಣ್ಬಡಿಕ (ರೂಢಿ). [ಕಣ್ + ಬಡಿಕ]

**ಕಣ್ಬಡಿಗ** (ನಾ). ಕಣ್ಣುತಪ್ಪಿಸಿ ತಿರುಗುವವನು; "ಮೋಸಮಾಡುವವನು" (ಪಂಪಭಾ. ಕೋಶ): ಇಂತು ಕಣ್ಬ[ಡಿ][ಪಾಠಾಂ. ಟ]ಗರಪ್ಪರೆ ಮಾನಸರಪ್ಪರ್ (ಪಂಪಭಾ. ೮–೭೬); ಏರ್ದೆಗೆಟ್ಟರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರಿಂ ಮುಗುಳ್ದುಂ ... ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೋ (ಪಂಪಭಾ. ೮–೮೫). [ಕಣ್ + ಬಡಿಗ$_1$]

**ಕಣ್ಬಡಿಸು** (ಕ್ರಿ). ತೋರಿಸು; ಕಾಣುವಂತೆ ಮಾಡು: ಕಿಱಿದುಂ ದಿನದೊಳೆ ಕರೆತಂದು ಕಣ್ಬಡಿಸುವೆಂ (ಚಿಕವಿ. ೬–೧೩೩ ವ). [ಕಣ್ಬಡು$_2$ + –ಇಸು$_3$]

**ಕಣ್ಬಡು**$_1$ (ಕ್ರಿ). ೧. ಕಾಣಿಸಿಕೊ; ಕಣ್ಣಿಗೆ ಬೀಳು: ವಸಂತಕಂ ಲೀಲಾಮುಕುಂದಯಂತ್ರವಾದನಮಂ ನುತಿಸುವ ನೆವದಿಂದೆನ್ನ ವಿಡಂಬಿಪನದಱಿಂದಾನುಮೊಂದು ನೆವದೊಳಿಲ್ಲಿಂ ಪೊಱಮಟ್ಟು ಕಣ್ಬಡುವೆನೆಂದು ಯೋಚಿಸಿ (ಚಿಕವಿ. ೬–೨೨೨). ೨. ಮಲಗು; ಕಣ್ಣುಮುಚ್ಚು; "ಬಯಸು; ಆಶೆಪಡು" (ಜೀವಸಂ. ಕೋಶ): ನಾಮಿಂತೇಕವರ್ಗಳ್ಕಿಬಳ್ಕಿ ಬೆಸಕೆಯ್ದುಂತುಂಡು ಕಣ್ಬಟ್ಟಪಂ [ಪಾಠಾಂ. ಕಣ್ಪೆಟ್ಟಪಂ] (ಜೀವಸಂ. ೨೦೨–೪೧). [ಕಣ್ + ಪಡು$_1$. / ತಮಿ. ಕಣ್ಬಡು]

**ಕಣ್ಬಡು**$_2$ (ನಾ). ಕಣ್ಣೆದುರು; ಪ್ರತ್ಯಕ್ಷ: ಉಡುವವರುಮನುಣ್ಬರುಮಂ ನಡೆ ನೋಡಿ ಕನಲ್ದೊನಲ್ದು ಮುನ್ನಿನ ಭವದೊಳ್ ಕುಡದರ್ ಕಣ್ಬಡಿನೊಳ್ ಧೃತಿಗೆಡೆ ಬಡವರ ಪಿತರರಂತೆ ಮಱುಗುತ್ತಿರ್ಕುಂ (ಕಾವ್ಯಾವ. ೧೮೧). [< ಕಣ್ಬಡು$_1$]

**ಕಣ್ಪಡೆ**, ಕಣ್ಣುಪಡೆ$_1$ (ಕ್ರಿ). ಕಣ್ಣನ್ನು ಹೊಂದು; ದೃಷ್ಟಿಯನ್ನು ಪಡೆ: ಚಕ್ರರತ್ನಪ್ರಭಾಚಕ್ರದೊಳಂ ಆ ಪಡೆ ಕಣ್ಪಡೆದಂತೆ ಸೋಪಾನಾಂತರದೊಳೆಱೆದು (ಆದಿಪು. ೧೩–೫೦ ವ); ಕಾದಂಬರೀದೇವಿಯಂ ಕಣ್ಣಾರೆ ನೋಡಿ ಕಣ್ಪಡೆದುದರ್ಕೆ ಸಾಫಲ್ಯಮಂ ಸಾಧಿಸುವೆಂ (ಕಾದಂಉ. ೫೧೯); ಕಣ್ಪಡೆದ ಫಲಂ ಸುತನಂ ಕಾಣ್ಬುದೆ (ಮಲ್ಲಿಪು. ೩–೧೨೧); ಕಣ್ಪಡೆದ ಫಲಂ ಶುಭಮಂ ಕಾಣ್ಬುದೆ ವಲಂ ... ಕುರುಡಂ ಕಣ್ಪಡೆದವೊಲಾದುವೆಮ್ಮ ಜನ್ಮವೆ ಸಫಲಂ (ಅನಂಪು. ೧೩–೩೬). **ಕಣ್ಣುಪಡೆ**$_1$: ಹೋದ ಮಗ ಸಿಕ್ಕಿದ್ದು ನನಗೆ ಕಣ್ಣುಪಡೆದ ಹಾಗಾಯಿತು (ರೂಢಿ). [ಕಣ್ + ಪಡೆ$_1$]

**ಕಣ್ಪನಿ**, ಕಂಬನಿ (ನಾ). ಕಣ್ಣಿನಿಂದ ಬರುವ ನೀರು; ಕಣ್ಣೀರು: ಕೂಡೆ ಕಣ್ಪನಿಯಂ ಸೂಸಿದಳೊಂದುಮಂ ನುಡಿದಳಿಲ್ಲಾ ಕನ್ನೆತನ್ನಂದಮಂ (ಆದಿಪು. ೩–೨೪); ಈಗಳಾಂ ಬರಿದೆ ಕಣ್ಪನಿಯಂ ಸುರಿಯುತ್ತುಮಿ[ರ್ದೊಡಂ] ಬಂದಪುದೇನೊ (ಕಾದಂಉ. ೫೯೦); ಕಣ್ಪನಿ ಪೊಱಮಟ್ಟವು (ಜಗವಿ. ೫–೮೬); ಕಣ್ಪನಿಯನಿಕ್ಕಿದನತ್ತಲು (ಎಕ. VIII, ತೀರ್ಥಹ. ೨೫–೧೯; 1250); ಹಸಿದಿರ್ದುಂ ತಿನಲೊಲ್ಲದೆ ಕಣ್ಪನಿಯೊಸಱುತ್ತೆ (ಜಯಕಾ. ೨–೨೩); ತುಱುಗಿವೆ ಕಣ್ಪನಿಗಳನೋಸರಿಸದೆ ಬಱಿದಿಹುದೇನವ್ವ (ಮೋಹತ. ೯–೧೭). **ಕಂಬನಿ**: ಶೋಕದೊಡ್ಡಿನ ಮುಗಿಲು ಕಱೆದುದು ಕುರುಬಲದ ಕಂಬನಿಯ ಬಿಱುಪಳೆಯ (ಕುವ್ಯಾಕ. ೨೦–೩೬); ಆ ಶಶಿವದನೆ ಕಂಬನಿಯ ಮಿಡಿದಳು ನಿಜನಖಾಗ್ರದಲಿ (ನಳಚ. ೩–೪೨); ಕಾತುರದೆ ಹಂಬಲಿಪಳು ಕಂಬನಿಯೊಗುವಳೇನೆಂಬೆನಚ್ಚರಿಯ (ಕಂಸವಿ. ೯–೧೯೫); ಅಗಲುವಿಕೆಯ ಕಂಬನಿ ಅವರೆಲ್ಲ ಸುರಿಸಿದರು (ಕಂಬಹು. ೧೨೭). [ಕಣ್ + ಪನಿ$_2$]

**ಕಣ್ಪನಿದುಱುಗಲ್** (ನಾ). ಕಣ್ಣೀರಿನ ಹನಿಗಳ ಸಮೂಹ: ಅನುಭವಿಸಿದ ಕೋಟಲೆಗಳನಿನಿಸಂದೆಣಿಸಲ್ಕೆ ಮೌಕ್ತಿಕಾಕ್ಷಾವಳಿಯಂ ವನಜದಳನಯನೆ ಸಮೆದಪಳೆನೆ ಸುರಿದುವು ತರದೆ ತೋರ ಕಣ್ಪನಿದುಱುಗಲ್ (ಕಾದಂಉ. ೨೯೨). [ಕಣ್ಪನಿ + ತುಱುಗಲ್]

**ಕಣ್ಪನಿಮಱೆ** (ನಾ). ಕಣ್ಣೀರಿನ ಮಳೆ: ಎಱಗದೆ ತಮ್ಮೊಳ್ ಮಧುಕರ ನೆಱಗಿರೆ ಕೇದಗೆಯೊಳೆಱಲ್ದು ಕಣ್ಪನಿಮಱೆಯಂ ಕಱೆವಂತಿರೆ ಕೞೂವೂಗಳಿನುಱೆ ಬೀತುವು ಸುರಗಿ ಹೊನ್ನೆ ಮಲ್ಲಿಗೆವನದೊಳ್ (ಜಗವಿ. ೪–೫). [ಕಣ್ಪನಿ + ಮಱೆ]

**ಕಣ್ಪರಿ** (ನಾ). ೧. ಕಣ್ಣಿನ ಹರವು; ನೋಟದ ಹರವು: ಅಧರಾಮೃತಂ ತುಟುಕಲಾಗದು ಬೀಸಱಿವಾಗದಪ್ಪು ಕಣ್ಪರಿಯಣಮಾಗ ಪಣ್ಣಳಿಯ ದಿಂಪಗೆಯೊಗದಲಂಪು ಮಾಸಲಂತಿರೆ (ಅರ್ಧನೇ. ೪–೮೩); ಕಣ್ಪರಿ ಪುತ್ರಮಿತ್ರ ವನಿತಾಜನದೊಳ್ ಸಮಸಂದು (ಚಂದ್ರಪು. ೨–೪೧); ಕಳಕಳಮಲ್ಲದಿಲ್ಲ ನುಡಿ ಕಣ್ಪರಿ ಕಣ್ಪನಿಯಲ್ಲದಿಲ್ಲ (ಅನಂಪು. ೮–೩೯); ಕಾಯದೆ ಕಣ್ಪರಿಯಂ ತಂಗಾಯದೆ ನಿಮಗರಸನಾಣೆಯೆನೆ (ಸೂಕ್ತಿಸು. ೧೩–೧೭). ೨. (ಆಲಂ) ವಿವೇಕ. 'ಕಣ್ಪರಿಗೆಡು' ಪರಾ. [ಕಣ್ + ಪರಿ$_3$]

**ಕಣ್ಪರಿಗೆಡು** (ಕ್ರಿ). ವಿವೇಕವನ್ನು ಕಳೆದುಕೊಳ್ಳು: ಕಣ್ಪರಿಗೆಟ್ಟು ದಿವ್ಯಮುನಿಗಿತ್ತಪಮಾನದಿನಾರ್ತರೌದ್ರದಿಂ ಪೆಣ್ಬುಲಿಯಾಗಿ ಪುಟ್ಟೆ (ಪಂರಾಮಾ. ೨–೫೩); ತಮ್ಮೊಳೋರೊರ್ವರಂ ನಣ್ಪುಗೆ ಕಣ್ಪರಿಗೆಟ್ಟು ಇಱಿಯಿಱಿದು (ನೇಮಿಪು. ೩–೭೦ ವ); ಕಣ್ಪರಿಗೆಟ್ಟು ಕಾಮುನಿಸೆ ನಾಂಟುವ ಪೂಗಣೆಯಿಂ ಬೞಲ್ದು (ಜಗವಿ. ೧೭–೧೨೨). [ಕಣ್ಪರಿ + ಕೆಡು$_1$]

**ಕಣ್ಬರಿವು** (ನಾ). ಕಣ್ಣಿನ ಹರವು, —ವಿಸ್ತಾರ; ನೋಟದ ಅಳವು : ಎಂತೆಂತು ಕಂಡೆ ಕಣ್ಬರಿವೆಂತೆಂತೇನೆಂದು ನುಡಿದನಾತನ ಕೆಲದೊಳ್ ನೀಂ ತಡೆದ ಬೇಗವೆನಿತೆನಿತು (ಕಾದಂಪೂ. ೮೦೬). [ಕಣ್ + ಪರಿವು]

**ಕಣ್ಬಸ,** ಕಣ್ಬಸ (ನಾ). ಕಣ್ಣಿನ ಅಪೇಕ್ಷೆ, —ಬಯಕೆ : ನಾರದನ ಕಣ್ಬಸವೋಡಿದುದಿಂದು (ಜಗವಿ. ೧೪–೧೯) ; ಮಲೆದಿದಿರಾಂತರಂ ತಱಿದು ಕಣ್ಬಸವೊತ್ತುವಿನೊಂದು ತಳ್ಳಿನಿಂ ಕಲಿತನಮುಂ (ಎಕ. V, ಹಾಸನ. ೧೦೬–೨; 1222). **ಕಣ್ಬಸ :** ಕಣ್ಬಸ [ಪಾಠಾಂ. ಕಣ್ಬಸ] ವೋಡದಿದೆಂತು ನೋಡೆಯುಂ (ಅರ್ಧನೇ. ೬–೭). [ಕಣ್ + ಪಸ]

**ಕಣ್ಬಸಿವು** (ನಾ). = ಕಣ್ಬಸ : ತಮ್ಮೊಳ್ ಭರದಿಂ ವನದೇವತೆಯರ ನೆರವಿಯ ಕಣ್ಬಸಿವು ನಿಸದಮೋಸರಿಸುವಿನಂ (ಚಂದ್ರಪು. ೫–೭೯) ; ಓಡಿದುದೆನ್ನ ಕಣ್ಬಸಿವೆನುತ್ತೊಸೆದಾಡಿದನಂದು ನಾರದಂ (ಜಗವಿ. ೮–೬೫). [ಕಣ್ + ಪಸಿವು]

**ಕಣ್ಬಾಪೆ** (ನಾ). ಕಣ್ಣಿನ ಪಾಪೆ, —ಗುಡ್ಡೆ : ತಣ್ಬುಱಿಲ್, ನುಣ್ಬೊಗರ್, ಕಣ್ಬಾಪೆ (ಶಬ್ದಾನು. ೪೯ ಪ್ರಯೋ). [ಕಣ್ + ಪಾಪೆ]

**ಕಣ್ಬಿಡು,** ಕಣ್ಣುಬಿಡು (ಕ್ರಿ). ೧. ಕಣ್ಣನ್ನು ತೆರೆ; ದೃಷ್ಟಿ ಹರಿಸು : ಬಳಿಕನಿತರಲಿ ಕಣ್ಬಿಟ್ಟು ನೋಡುತ್ತಾಗ್ರಹಿಸುತಂ ತಂದೆಯಿಂತೆಂದಂ (ಬಸವು. ೧೩–೨೯). **ಕಣ್ಣುಬಿಡು :** ೨. ದಿಕ್ಕು ಕಾಣದಾಗು; ಕಂಗೆಡು : ಕಾಲನ ದೂತರು ಕರೆವಾಗ ನೀ ಕಾಲಗೆಟ್ಟು ಕಣ್ಣುಬಿಡುವಾಗ (ಪುರಂದ. ೧–೧೫೫–೩). ೩. ವಿವೇಕವನ್ನು ತಾಳು; ತಿಳಿವಳಿಕೆಯನ್ನು ಪಡೆ : ಎಲ್ಲವನ್ನು ಹಾಳುಮಾಡಿಕೊಂಡ ಮೇಲೆ ಅವನು ಕಣ್ಣು ಬಿಡುತ್ತಿದ್ದಾನೆ (ರೂಢಿ). [ಕಣ್ + ಬಿಡು$_1$]

**ಕಣ್ಬೀಡು** (ನಾ). ೧. ಕಣ್ಣನ್ನು ಬಿಡುವಿಕೆ, —ತೆರೆಯುವಿಕೆ : ಕಡೆಗಣ್ಣಿಂದುಜ್ಜ್ವಳಿಪ ಕಡುಗೆಂಪು ಕೌರವಕುಳಂಗೆ ಕಡುಮುಳಿದ ಜವನ ಕಣ್ಬೀಡಿನ ಪೋಲ್ (ಗದಾಯು. ೮–೩೪) ; ಆ ನಾಡು ಸಿರಿಯ ಕಣ್ಬೀಡು (ಶಮದ. ಮ. ೭೭ ಪ್ರಯೋ). ೨. ಕಣ್ಣು ನೆಲಸುವ ಸ್ಥಳ (ಕಿ). ೩. ಕಣ್ಣಿರುವ ಜಾಗ : ಸೊವಡಿಂಗೇವಯ್ಸಿ ಪುಲ್ಪಟ್ಟೆಯ ತಿವಳಿಯ ನಾರಯ್ದು ಘರ್ಮದ್ರವಂ ಮೆಯ್ಯನಿವಿರುಂ ಮೆಯ್ಸೋರ್ಚೆ ಕಣ್ಬೀಡುರಿಯ ನುಗುಱಿ (ಮಲ್ಲಿಪು. ೧೧–೯೦). [ಕಣ್ + ಬೀಡು$_2$]

**ಕಣ್ಬೀಲಿ** (ನಾ). ಕಣ್ಣುಳ್ಳ ಗರಿ; ನವಿಲುಗರಿ : ಸುತವದನಕಮಲಮಂ ಕಾಣದ ಕಣ್ ಕಣ್ಬೀಲಿಯ ಕಣ್ಣೆನುತುಂ ಕಣ್ಬನಿಯಂ ಕರ್ಚಿದಳ್ (ಮಲ್ಲಿಪು. ೩–೧೨೧) ; ಕಣ್ಬೀಲಿಗಳ ಪಸದನದೆ ಕೋಮಳೆ ಸೊಗಯಿಸಿದಳ್ ಶಬರಿ (ಪುಷ್ಪಪು. ೫–೯೬). [ಕಣ್ + ಪೀಲಿ]

**ಕಣ್ಬುಱುಂಕು** (ನಾ). "ಕಣ್ಣಿನ ಕೊಳೆ" (ಅದ್ಭುತ. ಕೋಶ) : ಇಂತು ಮಱುಗುವಾತನ ಕಣ್ಣೀರೆ ಪೊಚ್ಚಮಾಗೆ ಪರಿದುದು ಮೇಣ್ ಕಣ್ಬುಱುಂಕೆ ಬೆಟ್ಟವಾದುದು (ಅದ್ಭುತ. ೩೫–೯). [ಕಣ್ + ಪುಱುಂಕು. P ತುಳು. ಪುರ್ಕು, ಪುಳ್ಕು]

**ಕಣ್ಬೆಳಕು** 'ಕಣ್ಬೆಳಗು$_1$' ನೋ.

**ಕಣ್ಬೆಳಗು$_1$,** ಕಂಬೆಳಕು, ಕಂಬೆಳಗು$_1$, ಕಣ್ಬೆಳಕು (ನಾ). ೧. ಕಣ್ಣಿನ ಬೆಳಕು, —ಕಾಂತಿ : ಜನಿಯಿಸಿದ ಕುಮಾರನ ಜಯವನಿತೆಯ ಕಣ್ಬೆಳಗಿದೆನಿಸಿ ತತ್ಪ್ರಸವನಿಕೇತನಮಂ ಬಳಸಿರ್ದುದು (ಕುಸುಮಾ. ೬–೭೫) ; ಬೆನ್ನಂ ಮುಸುಂಕಿ ಮುಡಿಯಲೆಯೆ ಕಣ್ಬೆಳಗೊಲೆಯೆ . . . ಇಟ್ಟಾಡಿದರ್ ತಿಳಿನೀರ್ಗಳಿಂ (ಪದ್ಮರಾ. ೮–೪೪) ; ಮಿಂಚುಗಳ ಕಣ್ಬೆ[ಪಾಠಾಂ. ಕಂಬೆ]ಳಗಿನಲಿ ದಾರಿಯ ತೆಗೆತೆಗೆದು (ಕುಮ್ಮಾಅ. ೯–೨೪). **ಕಂಬೆಳಕು :** ೧. ಸೀತೆಯ ಸುಳಿವು ನಿಳಯದೊಳಿಲ್ಲದಿದೆ ಕಂಬೆಳಕು [ಪಾಠಾಂ. ಗು] ಕಾಣಿಸದಿದೆ (ತೊರರಾ. ೩–೧೧–೯).

**ಕಂಬೆಳಗು$_1$ :** ೧. ತುಂಬುದಿಂಗಳು ಮೊಗದ ನಸುನಗೆಯೆಂಬ ಬಾಂದೊಱಿದೆರೆವೊಯಿದು ನಿಡುಗಂಬೆಳಗು ಜೊನ್ನದೊಳು ಮುಳುಗಿಸು (ಸಾಳ್ವಭಾ. ೧–೬೩) ; ತೊಳಪ ಕಂಬೆಳಗಿಂದ . . . ಅಮರಿಯರು ಸೊಗಯಿಪರು (ಸಾಳ್ವಭಾ. ೨೦–೧೬) ; **ಕಣ್ಬೆಳಕು :** ೧. ದಯದ ತಣ್ಬೆಳಕು, ಜಯದ ಕಣ್ಬೆಳಕು, ನಯದ ನುಣ್ಬೆಳಕು ! (ಹೊಂಗಳು. ೩೩–೨೦). ೨. ಕಣ್ಣಿಗೆ ಕಾಣುವಷ್ಟು ಬೆಳಕು : ಹೊಳೆವ ನಕ್ಷತ್ರಗಳ ಕಣ್‍ಬೆಳಕಿನಲ್ಲಿ ನೀನಿಟ್ಟ ಖಾತೆ–ಕಿರ್ದಿಯನೊಮ್ಮೆ ತೆರೆಯಬೇಕು (ನೆಲಮು. ೨೬) ; ಆತನೂ ಆಹ್ವಾನವನ್ನು ಮನ್ನಿಸಿ ಸಂಜೆಗೆ ಮುಂಚೆಯೇ ಕಣ್ಬೆಳಕಿನಲ್ಲಿ ಬಂದರು (ಮನೋಸಂ. ೧೯). [ಕಣ್ + ಬೆಳಗು$_2$]

**ಕಣ್ಬೆಳಗು$_2$,** ಕಂಬೆಳಗು$_2$ (ನಾ). ೧. ಒಂದು ಬಗೆಯ ಧಾನ್ಯ : "ಅಫಲಾ – ಕಾಡಹೆಸರು ; ಕಣ್ಬೆಳಗು" (ಓಷಧಿ. ೫). **ಕಂಬೆಳಗು$_2$ :** "ಕುಲಾಳೀ – ಕಾಡಹುರಳಿಯೆಂದರೆ, ಕಂಬೆಳಗನು" (ಓಷಧಿ. ೩೬). ೨. ಕಣ್ಣಿನ ಹೊಳಪಿಗಾಗಿ ಬಳಸುವ ಕಾಡಿಗೆ ಕಲ್ಲು, —ಹರಳು : "ಚಕ್ಷುಸ್ಯ ಕುಲಾಲಿ ಕುಲತ್ಥಿಕೆ ಎಂದು ಕುಲಥಾಂಜನ ಕಂಬೆಳಗಿನ ಬೀಜಮೆಂದೂ, ಎಂಬರು (ನಾಚರಾ. ಕಿ). [?]

**ಕಣ್ಬೆಱು** (ಕ್ರಿ). ಕಣ್ಣನ್ನು ಹೊಂದು ; ದೃಷ್ಟಿಯನ್ನು ಪಡೆ : ಕಣ್ಬೆತ್ತ ಫಲಮನಿಂದು ಪೆತ್ತೆಂ (ವಡ್ಡಾರಾ. ೨೬–೧೩) ; ಕುರುಡಂ ಕಣ್ಬೆತ್ತವೋಲ್ ರಾಗದಿಂ (ಪಂಪಭಾ. ೯–೫) ; ನಟ್ಟು ನೋಡುವ ನಾಯಕಿಯರ ದಿಟ್ಟಿಗಳಿಂ ಚರಣತಳಂ ಕಣ್ಬೆತ್ತಂತಿರ್ದಪುವು (ನಂಬಿರ. ೪–೪೦) ; ದೇವಕಣ್ಬೆತ್ತು ಸೂರ್ಯನಂ ಕಾಣದಿರ್ದಂ ಪ್ರಭುವೆ (ವಾಗೀರ. ದೇ. ೨೬೧–೧೫). [ಕಣ್ + ಪೆಱು$_1$]

**ಕಣ್ಬೇಟ,** ಕಂಬೇಟ (ನಾ). ಕಂಡ ಕೂಡಲೇ ಮೋಹಿಸುವುದು ; ಕಣ್ಮೊಲುಮೆ ; ಚಕ್ಷುಃಪ್ರೀತಿ : ಕಣ್ಬೇಟದುದ್ದಾನಿಯಂ ಪಸರಂಗೆಯ್ದುವೊಲಪ್ಪ ಪೊಚ್ಚಱ ಮಹಾಸಾಮಂತ ಸೀಮಂತಿನೀಪ್ರಸರಂ (ಪಂಪಭಾ. ೫–೨೫) ; ಕಣ್ಬೇಟಕ್ಕಿದಿರಾದ ದೊಡ್ಡಿಂಗಂ ಸೌಂದರ್ಯಕ್ಕೆ ನೆಲೆಯಾದಂದಕ್ಕಂ (ಶಾಂತಿಪು. ೩–೫೩ ವ) ; ಮನುಜೇಂದ್ರಚಂದ್ರನ ಗಂಡಗಾಡಿಯಂ ನೋಡಿ ಕಣ್ಬೇಟದ ತೋಟಿಯೊಳ್ ತೊಡರ್ದು (ಮಲ್ಲಿಪು. ೩–೩೨) ; ಕನಸಿನ ಕಣ್ಬೇಟಮೊ (ಕಂಸವಿ. ೯–೨೦೬). **ಕಂಬೇಟ :** ಉಕ್ಕಿದಾ ಕಿವಿವೇಟ ಕಂಬೇ [ಪಾಠಾಂ. ಣ್ಬೇ] ಟಕ್ಕೆ ತಂದುದು ಕಂಗಳೀ ಕೆಯ ಮುಕ್ಕುಳಿಸಿ ಮೈಸೋಂಕಿನಲಿ ಲಟಕಟಿಸಿದುದು ಹೃದಯ (ಕುಮ್ಮಾಅ. ೧೩–೫೮). [ಕಣ್ + ಬೇಟ$_2$ (< ಬೇಂಟ)]

**ಕಣ್ಬೇಟಂಗೊಳ್** (ಕ್ರಿ). ನೋಟಮಾತ್ರದಿಂದ ಮೋಹಕ್ಕೆ ಒಳಗಾಗು, —ಕಾಮವಶವಾಗು : ಕಾಪಿಯೆಂಬ ಮಂತ್ರಿ ಸುಂದರಿ ಮಹಾದೇವಿಗೆ ಕಣ್ಬೇಟಂಗೊಂಡು (ವಡ್ಡಾರಾ. ೧೪೦–೧೭) ; ಕನ್ನೆಯನಾತಂ ಕಂಡು ಕಣ್ಬೇಟಂಗೊಂಡು ಮದುವೆಯಂ ನಿಂದು (ಪಂಪಭಾ. ೧–೬೮ ವ); ಕಂಡು ಕಣ್ಬೇಟಂಗೊಂಡು (ಧರ್ಮಾಮೃ. ೧೦–೪೨). [ಕಣ್ಬೇಟ + ಕೊಳ್$_1$]

**ಕಣ್ಬೇಟಂಗೊಳಿಸು** (ಕ್ರಿ). ನೋಟಮಾತ್ರದಿಂದ ಕಾಮಿಸುವಂತೆ ಮಾಡು : ತಮ್ಮ ನಿಡಿಯ ಬಿಳಿಯ ತುಱುಗೆಮೊಗಣ್ಣಿಳಿಂ ಕಣ್ಬೇಟಂಗೊಳಿಸಿಯುಂ (ಸುಕುಮಾ. ೧೧–೧೧೧ ವ). [ಕಣ್ಬೇಟಂಗೊಳ್ + –ಇಸು$_3$]

**ಕಣ್ಬೇನೆ,** ಕಣ್ಣುಬೇನೆ (ನಾ). ಕಣ್ಣಿನ ರೋಗ, —ಬಾಧೆ; ಕಣ್ನೋವು : ಅರ್ಥಪ್ರತೀತಿಯಂ ಕವಿಹೃದಯಸ್ಥಾನಮನಱಿದೋವದೆ ಕಣ್ಬೇನೆಯ ಕರಡಿಯವೊಲಱುಚುವಂ ವಾಚಕನೇ (ಛಂದೋಂಬು. ೧–೩೨ ಅಡಿಟ); ಪುಣಸೆಯ ಕೊನರುಮುಪ್ಪುಂ ಕಣ್ಬೇನೆಯಂ ಕಳೆವುದು (ಧರ್ಮಾಮೃ. ೯–೧೦೪); ಕಣ್ಬೇನೆ ಮಾಣ್ದಂದು ಕಾಣ್ಬಕ್ಷಿರೋಗಿಯಂತೆ (ವರ್ಧಪು. ೧೧–೭೯ ವ) ; ಹೀನಾತ್ಮರೊಱಿಖುತಿಪ್ಪರು ಹಗಲಿರುಳು ಕಣ್ಬೇನೆಯ ಕರಡಿಯಂದದೊಳು (ಭರತೇ. ೧೪–೧೨೪). **ಕಣ್ಣುಬೇನೆ :** (ಕಿ). [ಕಣ್ + ಬೇನೆ]

**ಕಣ್ಬೇಹತನ** (ನಾ). ನೋಟದಿಂದಲೇ ಉಂಟಾಗುವ ಬಯಕೆ, —ಆಸೆ: ನೋಡಿ ಕಣ್ಬೇಹತನದಿಂ ತನ್ನಾರ್ಪನಿತಂ ಕಟ್ಟಿಕೊಂಡು ಪೋಪೆನೆಂದಿರ್ಪುದುಂ (ಧರ್ಮಾಮೃ. ೧೨-೬೩). [ಕಣ್ + ಬೇಹತನ]

**ಕಣ್ಪೊಣರ್, ಕಂಬೊಣರ್** (ನಾ). ಕಣ್ಣಿನ ಜೊತೆ; ಎರಡು ಕಣ್ಣು: ಎನ್ನ ಕಣ್ಪೊಣರೆಂಬೀಮೀಂಬೊಣರಂ ಲಾವಣ್ಯರಸಾಂಬುಧಿಯೊಳ್ದೀವಿ ಮೂಡಿ ಮುೞ್ಕಾಡಿಸುವ್ಯೆ (ಮಲ್ಲಿಪು. ೪-೮೪); ಇಂತಿದೇಕೆ ಮಧುವಂ ನೆಱೆ ಕಾಱಿದ ನೈದಿಲಂದದಿಂ ನೆರೆದುವು ನೀಳ್ದ ಕಣ್ಪೊಣರ್ಗಳ್ (ಅರ್ಧನೇ. ೧-೧೧೩); ಕಣ್ಪೊಣರ ಬೆಂಬೞಿಯೊಳಸವಸದಿನೆೞ್ತರುತ್ತುಮಿರ್ದಳ್ (ವರ್ಧಪು. ೫-೬೪ ವ); ಪಳಚ್ಚನೆ ಸೆಳೆಮಿಂಚು ಕಣ್ಪೊಣರೊಳುಳ್ಕೆ (ಶಬಶಂ. ೧-೪೬). **ಕಂಬೊಣರ್**: ಕಂಬೊಣರರುಹನ ಕಾಯಕಾಂತಿಯೊಳು ತೆಱಂಬೊಳೆದಾಡಿದುವು (ಭರಚ. ೬೭-೩೮).

[ಕಣ್ + ಪೊಣರ್$_2$]

**ಕಣ್ಪೊಲ, ಕಂಬೊಲ** (ನಾ). ಕಣ್ಣಿಗೆ ಕಾಣುವಷ್ಟು ಪ್ರದೇಶ; ಕಣ್ಣಿನ ದೃಷ್ಟಿ ಹೋಗುವಷ್ಟು ದೂರ; ದೃಷ್ಟಿಪಥ: ಆ ದಂಪತಿಗಳ್ . . . ಬೆಡಂಗಂ ನೋಡಿದರಾದರದಿಂ ತಮ್ಮ ಕಣ್ಪೊಲಂಗಱಿವಿನಗಂ [ಪಾಠಾಂ. ಕಣ್ಪೊಣರ್ ದಣಿವಿನೆಗಂ] (ಆದಿಪು. ೫-೬೫); ಸುೞಿವನೆನ್ನಯ ಕಣ್ಪೊಲದೊಳ್ ನಿರಂತರಂ (ಕಾದಂಉ. ೫೬೦); ಪಗೆ ಕಣ್ಪೊಲದೊಳ್ ನಿಲೆ (ಜಗವಿ. ೬-೩೭); ಕಣ್ಪೊಲದ ತಾವರೆಗೊಳಂಗಳೊಳಗೋಲಾಡಿ (ಪುಷ್ಪಪು. ೨-೪೪ ವ); ನಿನಗೆ ಪುತ್ರನ ಪುತ್ರನಪ್ಪುದಱಿಂ ನಿನ್ನ ಕಣ್ಪೊಲದೊಳಿರ್ದಪುದು (ದಶಕು. ೯-೬೧ ವ). **ಕಂಬೊಲ**: ಅರವೆಯಿಂ ಪೊದಳಂ ಗಿಳಿವಿಂಡುಗಳಿಂ ಕಳನೂಲಯಂಗಳಿಂ . . . ಸೋಭಿಕುಂ ಸಿರಿಯ ಕಂಬೊಲದನ್ತೆ ಧರಾತಳಾಗ್ರದೊಳು (ಎಕ. VII, ಶಿಕಾರಿ. ೧೮೬-೧೭; 1200). [ಕಣ್ + ಪೊಲ]

**ಕಣ್ಪೊಳಪು** (ನಾ). ಕಣ್ಣಿನ ಕಾಂತಿ, —ಹೊಳಪು: ತನ್ನನೆ ನಿಳ್ಕಿ ನೋಟ್ಪರ ಕಣ್ಗೆ ಕಣ್ಪೊಳಪು ತನ್ನಯ ಮೆಯ್ಯ ಬೆಳ್ಪಿನೊಳಟ್ಟು ನಿಂದೊಡೆ (ಪಂಪಭಾ. ೬-೭); ತೊಲಗದೆ ದಿಟ್ಟಿ ನಟ್ಟು ನಿಲೆ ಕಣ್ಪೊಳಪಿಂದಮರ್ದಪ್ಪಿಕೊಳ್ವವೋಲ್ (ಪಂರಾಮಾ. ೧೦-೮೦); ಪೌರನಾರಿಯರ ಕಣ್ಪೊಳಪಕ್ಷಿ ಸಹಸ್ರಶೋಭೆಯಂ ಬೀಱೆ (ಚಂದ್ರಪು. ೧೦-೧೪). [ಕಣ್ + ಪೊಳಪು]

**ಕಣ್ಪೊಱು** (ಕ್ರಿ). (?): ವಜ್ರಮಾಳಿಯೆಂಬ ವಿದ್ಯಾಧರಂ ಬಂದೊಂದು ಬಂಧುರಮಪ್ಪ ಮಾಧವೀಮಂಡಪದೊಳ್ ಮನೋಭವಸುಖಮನನುಭವಿಸಿ ತನ್ನ ಬೆರಲುಂಗುರದ ಕೆಂಬರಲುಗೆ ಕಣ್ಪೊತ್ತು [ಪಾಠಾಂ. ಲ್ಗೆ ಕಣ್ಪಾತು, ಲುಗೆ ಕಣ್ಪಾತು] ದಾಡಿಂಬದ ಬಿತ್ತುಗೆತ್ತು ಸೋವುವ ಶುಖಶಿಶು (ಅರ್ಧನೇ. ೪-೮೪ ವ). [ಕಣ್ + ಪೊಱು ?]

**ಕಣ್ಮಗುೞ್** (ಕ್ರಿ). ಕಣ್ಣನ್ನು ಬೇರೆಡೆಗೆ ತಿರುಗಿಸು: ಶಬ್ದಮಣಮಿಲ್ಲದೆ ತೊಟ್ಟನೆ [ಕಣ್ಮಗುಳ್ದ[ಟ್ದ]ಳಗ್ಗಳಿಪಳವಿಂದೆ] ಮಾನಿನಿ ಮನಕ್ಕತಿವಿಸ್ಮಯಮಾಗೆ ಭೂಪನಾ (ಕಾದಂಪೂ. ೬೯೯); "ಕಣ್ಮಗುಟ್ದಳ್– ಕಣ್ಣನ್ನು ಮುಚ್ಚಿದಳು (ಕಾದಂಪೂ. ಅಡಿಟ). [ಕಣ್ + ಮಗುೞ್]

**ಕಣ್ಮಣಿ, ಕಣ್ಣುಮಣಿ** (ನಾ). ೧. ಕಣ್ಣಿನ ಗುಡ್ಡೆ; ಕಣ್ಣಿನ ನಡುವಿನ ಕರಿಯ ಗೋಲ: ಕಣ್ಮಣಿಯ ಮೂಲಕ ಹಾಯ್ದುಹೋಗಬಲ್ಲ ಶಕ್ತಿವಿಶೇಷವು ಜಾಲ ಪಟಲದ ಮೇಲೆ ಬಿದ್ದು ನಮಗೆ ಬೆಳಕೆಂಬ ಭಾವನೆಯನ್ನುಂಟುಮಾಡುವುದು (ಭೌತವಿ. ೧೫೪). ೨. (ಆಲಂ) ಕಣ್ಣಿಗೆ ಅಚ್ಚುಮೆಚ್ಚಾದದ್ದು; ಪ್ರಿಯವಾದುದು: ಕನ್ನಡ ಕಣ್ಮಣಿಗಳ್ ಪೆಣ್ಮಣಿಗಳ್ ಕಟ್ಟಾಳ್ಗಳ್ ಚೆನ್ನನೆಯ ಬಾಳ್ಗೆ ಬೆಳಕಕ್ಕೆ (ಹೊಂಗಳು. ೪೫-೧೩). **ಕಣ್ಣುಮಣಿ**: ೩. ಕಣ್ಣಿನ ಉರಿಯನ್ನು ಕಡಮೆ ಮಾಡಲು ತಿಕ್ಕುವ ಒಂದು ಬಗೆಯ ಕಲ್ಲು (ಕ).

[ಕಣ್ + ಮಣಿ$_3$]

**ಕಣ್ಮಬ್ಬು** (ನಾ). ಕಣ್ಣು ಸ್ಪಷ್ಟವಾಗಿ ಕಾಣದಂತಾಗುವ ನಸುಗತ್ತಲೆ: ಕಣ್ಮಬ್ಬು, ಸಂಜೆಗಂಟೆ, ಆ ಬಳಿಕ ಕಗ್ಗತ್ತಲೆ! (ಇಂಗೀತ. ೯೮-೯). [ಕಣ್ + ಮಬ್ಬು (< ಮರ್ಪು)]

**ಕಣ್ಮರೆ** 'ಕಣ್ಮಱೆ' ನೋ.

**ಕಣ್ಮಲರ್, ಕಣ್ಮಲರು** (ಕ್ರಿ). ಕಣ್ಣು ಅರಳು, —ವಿಕಾಸವಾಗು: "ಕಣ್ಮಲರ್ದುದನಱಿ ಕಣ್ಬೇಟೆಂದು [ಪಾಠಾಂ. ಕಣ್ಬಿಂಡೆಂದು, ಕಣ್ಬೇಡೆಂದು]" (ಚತುನಿ. ೧೦೬). **ಕಣ್ಮಲರು**: ಕರುಣೆ ಕಣ್ಮಲರಿದುದು ಹನುಮಹೃದಯದಲಿ (ಶ್ರೀರಾಮಾ. ೪೭೧-೬೯೭).

[ಕಣ್ + ಮಲರ್$_2$]

**ಕಣ್ಮಲರು** 'ಕಣ್ಮಲರ್' ನೋ.

**ಕಣ್ಮಲೆ** (ಕ್ರಿ). ೧. ಮನಸ್ಸಿಗೆ ಹೊಳೆ; ಸ್ಪಷ್ಟವಾಗು: "ಕಣ್ಮಲೆ (ಕಣ್ + ಮಲೆ) – ಚಿತ್ತಸ್ಫುರಣೇ" (ಶಮುಧಾ); "ಕಣ್ಮಲೆದುದು = ಪೊಡಕರಿಸಿತು" (ಶಮುದ. ಪರಿ. ೨); ಕಣ್ಮಲೆದಂ ಮುನಿ ಮನಮಂ ನುಣ್ಮುಗಿಲೊಳ್ಪೆರೆಯಿನಿನಿಸು ತೋಱುವ ರವಿವೋಲ್ ಉಣ್ಮದ ಮಲದಿಂ ನಸು ಪೊಱಪೊಣ್ಮೆ ತಪಸ್ತಪ್ತ ಕಾಯ ಕನಕದ್ಯುತಿಗಳ್ (ಲೀಲಾವ. ೮-೧೦೨). ೨. "ವ್ಯಾಪಿಸು". (ಪ್ರಭಣ್ಣ). ೩. ಕಡೆಗಣಿಸು; ಹೀಯಾಳಿಸು: ಮುನ್ನಮೆ ಸೋಂಕಿ ಕ[ಪಾಠಾಂ. ತ]ಣ್ಮಲೆವ ಮಾತುಗಳೆಲ್ಲರ ಪೇೞ್ವ ಮಾತುಗಳ್ (ಪಂಪಭಾ. ೭-೫೫). [ಕಣ್ + ಮಲೆ ?]

**ಕಣ್ಮಱೆ, ಕಣ್ಮರೆ** (ನಾ). ೧. ಕಣ್ಣಿಗೆ ಅಡ್ಡವಾದುದು, —ಮರೆಮಾಡುವಂತಹುದು; ಕಣ್ಣಿನ ತೆರೆ: ತೋಹಿನೊಳಿರ್ದವ ಕಣ್ಮಱೆಯಾದೆಲೆಗಳ ಹರಿದಾ ಕರವಿಸುಗೆಯ ಸರಿತದೊಳಿಳಿವಿಡಲು (ಸಂಗಿರಾ. ೨೮-೩೫). **ಕಣ್ಮರೆ**: ೨. ಕಣ್ಣಿಗೆ ಕಾಣದಾಗುವಿಕೆ; ಕಾಣಿಸದಾಗುವಿಕೆ: ಹುಲಿ . . . ಕಾಡಿನಲ್ಲಿ ಕಣ್ಮರೆಯಾಯಿತು (ಕಳಹು. ೬); ನಾನು ತೆಪ್ಪನೆ ನಮ್ಮ ದೇಶಕ್ಕೆ ಹೋಗಿ ಕಣ್ಮರೆಯಾಗುತ್ತೇನೆ (ವಚಭಾ. ೨೮೬). ೩. ಎಚ್ಚರಗೇಡಿತನ; ಅಲಕ್ಷ್ಯ (ಕ).

**ಕಣ್ಮರೆಯಾಗು** = ೧. ಕಣ್ಣಿಗೆ ಕಾಣದಂತಾಗು: ವಿಮಾನ ಕಣ್ಮರೆಯಾಯಿತು (ರೂಢಿ). ೨. ಅಗಲು; ದಿವಂಗತನಾಗು: ಗುರುಗಳು ಕಣ್ಮರೆಯಾಗಿ ಎರಡು ವರ್ಷಗಳಾದುವು (ರೂಢಿ).

[ಕಣ್ + ಮಱೆ$_2$]

**ಕಣ್ಮಾಯ** (ನಾ). ಕಣ್ಣುಕಟ್ಟು; ಇಂದ್ರಜಾಲ: ತತ್ಪ್ರಮೂಢಂಗೆ ಬೀಸಿದ ಕಣ್ಮಾಯದ ಕುಂಚದಂತಿರೆನಗಾದತ್ತಾಗಳ್ (ಕಾದಂಪೂ. ೮೦೩).

**ಕಣ್ಮಾಯಕಣ್ಚಿತ್ರ** = ನೋಡುನೋಡುತ್ತಿದ್ದಂತೆಯೇ ಯಾರಿಗೂ ತಿಳಿಯದಂತೆ ಮಾಡುವ ಕೆಲಸ: ನಾವೆಲ್ಲ ಅಲ್ಲೇ ಇದ್ದೆವು. ಕಣ್ಮಾಯ ಕಣ್ಚಿತ್ರ ಮಾಡಿ ದುಡ್ಡಿನ ಚೀಲ ಎತ್ತಿಬಿಟ್ಟಿದ್ದಾನೆ (ರೂಢಿ).

[ಕಣ್ + ಮಾಯ]

**ಕಣ್ಮಾಯೆ** (ನಾ). ಕಣ್ಣಿಗೆ ಮೋಹ, —ಭ್ರಾಂತಿ; ಕಣ್ಣಿಗೆ ಭ್ರಾಂತಿ ಹುಟ್ಟಿಸುವಂತಹುದು: ಕಣ್ಮಾಯೆ ಮುಸುಕದೇ, ಬಗೆ ಕದಡಿ ಗುಱಿಯಿಂದೆ ಪೊರಳದೇ (ಅಶ್ವತ್ಥಾ. ೧೮-೩೮೩); ಎವೆಯಿಕ್ಕದೆಯೆ ಇಂದು ಕಂಡನದೊಂದು ತನಗೆ ಮಾತ್ರಮೆ ದಿಟದ ಕಣ್ಮಾಯೆಯಂ (ಶ್ರೀರಾಮಾ. ೭೫೪-೧೫೨). [ಕಣ್ + ಮಾಯೆ]

**ಕಣ್ಮಾಲಿಸು** (ಕ್ರಿ). ಓರೆನೋಟ ಬೀರು: ಮೊಗಬಾಗಿ ನಿಂದಳವಳಿ ನಿಯನಂ ಪೆರಳಲ್ಲಿ ಕಣ್ಮಾಲಿಸಿದನೆಂದು ಸಂದೆಯಮನಾನುತ್ತೆ (ಸೌನಂದ. ೬-೪)

[ಕಣ್ + ಮಾಲಿಸು]

**ಕಣ್ಮಾಲೆಗಟ್ಟು** (ಕ್ರಿ). (ನೋಡುವವರ) ಕಣ್ಣುಗಳನ್ನು ಸಾಲಾಗಿ ನಿಲ್ಲಿಸು; ದೃಷ್ಟಿಯನ್ನು ಸೆಳೆ: ಮಾಲೆಗಟ್ಟುತ ನೋಟಕರ ಕಣ್ಮಾಲೆಗಟ್ಟುವ ರೊಪ್ಪ (ಸಾಳ್ವಭಾ. ೨-೧೨). [ಕಣ್ + ಮಾಲೆಗಟ್ಟು]

**ಕಣ್ಮಿಂಚು**, ಕಣುಮಿಂಚು (ನಾ). ಕಣ್ಣಿನ ಹೊಳಪು, —ಕಾಂತಿ: ನಸುನಗೆಯ ಬಗೆಬಿಸಿಲ್ ಮುಂಚುವೆರೆ ಕಣ್ಮಿಂಚ (ಕಾಲೂರ. ೧೨೬-೨೬೭). **ಕಣುಮಿಂಚು**: ಅಚ್ಚರಿಯ ಕಣುಮಿಂಚುಗಳ ಮಿಱುಗುಗಳ ವಂಗಡವೊ (ಬಸಪು. ೪೦-೪). [ಕಣ್ + ಮಿಂಚು$_3$]

**ಕಣ್ಮಿಟುಕು$_1$** (ಕ್ರಿ). ೧. ರೆಪ್ಪೆಹೊಡೆ; ಎವೆಯಿಕ್ಕು: ಅವನು ಕಣ್ಮಿಟುಕದೆ ನೋಡುತ್ತಿದ್ದ (ರೂಢಿ). ೨. ಕಣ್ಣಿನಿಂದ ಸೂಚಿಸು; ಸಂಜ್ಞೆಮಾಡು: ಅವಳು ಕಣ್ಮಿಟುಕಿ ಸೂಚಿಸಿದಳು (ರೂಢಿ). [ಕಣ್ + ಮಿಟುಕು$_1$]

**ಕಣ್ಮಿಟುಕು$_2$** (ನಾ). ರೆಪ್ಪೆ ಹೊಡೆಯುವಷ್ಟು ಕಾಲ: ನ ಭೂತೋ ನ ಭವಿಷ್ಯತಿ ಎಂಬಂತೆ ಸರ್ವತ್ರ ಧವಳಿಸಿ, ಕಣ್ಮಿಟುಕಿನಲ್ಲಿ ಕಣ್ಮರೆಯಾದ ಕಡುಗಲಿ ಕುಮಾರರಾಮ (ನಂಜುಂಡ. ೧೫). [ಕಣ್ + ಮಿಟುಕು$_2$]

**ಕಣ್ಮಿಡುಕ** (ನಾ). "ಕಣ್ಣು ಮಿಟಕಿಸುವ ಸ್ವಭಾವದವನು ಕಣ್ಮಿಡುಕ" (Blinkard. ೩೦೪೩). [ಕಣ್ + ಮಿಡುಕು$_4$ + -ಅ$_7$]

**ಕಣ್ಮುಚ್ಚಲೆ**, ಕಣ್ಣಾಮುಚ್ಚಾಲೆ, ಕಣ್ಣುಮುಚ್ಚಾಲೆ (ನಾ). = ಕಣ್ಣಾಮುಚ್ಚಿ: ಅಟ್ಟಲೆಯೇಱಿ ಕಣ್ಮುಚ್ಚಲೆಯೊಳು ತಮ್ಮ ಮುಟ್ಟುವರೆಂದು (ಶ್ರೀಪಾಲ. ೧-೭೧). **ಕಣ್ಣಾಮುಚ್ಚಾಲೆ**: ಸಿಕ್ಕಿರುವ ವಸ್ತುವಿನ ಜತೆ ಎಂದಿಗೂ ಕಣ್ಣಾಮುಚ್ಚಾಲೆ ಆಡಬಾರದು (ದೂರಸ. ೨೬೨). **ಕಣ್ಣುಮುಚ್ಚಾಲೆ**: ಹುಡುಗರು ಕಣ್ಣುಮುಚ್ಚಾಲೆ ಆಡುತ್ತಿದ್ದಾರೆ (ರೂಢಿ). [ಕಣ್ + ಮುಚ್ಚು$_3$ + ಆಲೆ?]

**ಕಣ್ಮುಚ್ಚು**, ಕಣ್ಣುಮುಚ್ಚು (ಕ್ರಿ). ೧. ಕಣ್ಣುಗಳನ್ನು ಮುಚ್ಚು: ಸುಭದ್ರೆಯ ರೂಪು ಕಣ್ಣಪಾಪೆಯಂತೆ ಕಣ್ಣೊಳ್ ತೊಱಲೆ ಕಣ್ಮುಚ್ಚದೆ . . . ಚಂದ್ರನಂ ನೋಡಿ (ಪಂಪಭಾ. ೪-೬೯ ವ); ಅದ್ವೈತದ ನಾಣ್ಯವ ಕಣ್ಮುಚ್ಚದ ನೋಟದಿಂ ನೋಡುವೆನಯ್ಯ (ಆದವ. ಹ. ೨೭-೭೭); ಧೊಪ್ಪನೆ ಮೂರ್ಛೆಯಲಿ ನೃಪ ಕೆಡೆದು ಕಣ್ಮುಚ್ಚಿದನು (ಕುವ್ಯಾಶ. ೧-೮); ಎವೆಯಿಟ್ಟು ಕಣ್ಮುಚ್ಚಿದಂತೆ ಮೂಲೋಕಕೆ ಜವೆಯ ಮೋಹವ ಕಲ್ಪಿಸಿದಳು (ಮೋಹತ. ೨೯-೮). ೨. ಗಮನಿಸದಿರು; ಉದಾಸೀನಮಾಡು: ಪಾಲಿಗೆ ಬಂದುದನ್ನು ಕಣ್ಮುಚ್ಚಿ ಅನುಭವಿಸತೊಡಗಿದಳು (ಸ್ವಪ್ನ ಹೊ. ೨೩೧). ೩. ಮಲಗು; ನಿದ್ರೆಮಾಡು: ಒರ್ವ ಪಾರ್ವಂ . . . ಬಂದು ಕಣ್ಮುಚ್ಚಲೆಡೆವೇಡೆ (ಪಂಪಭಾ. ೩-೩೧ ವ). ೪. ಸಾಯು; ತೀರಿಕೊಳ್ಳು: ಪಲಕಾಲಮಾನಗಲ್ದಿರ್ದೆನ್. ಅಲ್ಲಿ ಕಣ್ಮುಚ್ಚಲೆಂದಿರ್ದೆನ್ (ಅಶ್ವತ್ಥಾ. ೧೭-೩೫೪); ಡೊಂಬನು ತೀರಿಸದೆ ಕಣ್ಮುಚ್ಚಿದ (ಕಎಪು. ೪೧-೩೬). **ಕಣ್ಣುಮುಚ್ಚು**: ೧. ಪರಶಿವ ಬರಸೆಳೆದಪ್ಪಿದ ಸೊಗದೊಳು ಪಾರ್ವತಿ ಕಣ್ಣುಮುಚ್ಚಿದಳು (ಇಂಚಾಪ. ೮೪-೬). ೪. ಎಂಟುದಿನ ಜ್ವರ ಬಂದ ನೆವದಿಂದ ಒಂದುದಿನ ಕಣ್ಣುಮುಚ್ಚಿದಳು (ಮೂರುದಾ. ೩೪೭). [ಕಣ್ + ಮುಚ್ಚು$_1$]

**ಕಣ್ಮುಟ್ಟೆ**, ಕಣ್ಣುಮುಟ್ಟೆ (ಅ). ಪ್ರತ್ಯಕ್ಷವಾಗಿ; ಕಣ್ಣೆದುರಿಗೆ: ಒಂದು ಅದ್ಭುತವಾದ ಚೌಡಿಯನ್ನು ತಾನು ಕಣ್ಮುಟ್ಟೆ ನೋಡಿದ್ದನೆಂದು ಹೇಳುತ್ತಿರಲಿಕ್ಕೂ (ಅಂಬಿಕೆ. ೬); ಕಣ್ಮುಟ್ಟೆಕಂಡಿಲ್ಲ; ಆದರೂ ಮನದೊಳೆಂದೊ ಮೂರ್ತಿಗೊಂಡಿದೆ ಚಿತ್ರ (ನೆಲಮು. ೭೫). **ಕಣ್ಣುಮುಟ್ಟೆ**: "ಕಣ್ಣಾರೆ" (ಗಂಗಾಮ. ೬೮). [ಕಣ್ + ಮುಟ್ಟೆ$_2$ (< ಮುಟ್ಟಂ)]

**ಕಣ್ಮುಟ್ಟು** (ನಾ). ಕಣ್ಣಿಗೆ ನಿಲುಕುವುದು; ಕಣ್ಣೆದುರು; ಕಣ್ಣಳವಿ; ಪ್ರತ್ಯಕ್ಷ: ಕಣ್ಮುಟ್ಟಣ್ಮುಟ್ಟಾಗಿರೆ ಪೊಣ್ಮುವ ಮುಳಿಸಿನ್ತಗುಳ್ದು ಮಾಧವರಾಜ × × × (ಸೌಇಇ. XI-i, ೭೬-೨೩; 1045); ಕಣ್ಮುಟ್ಟೆನೊಳಿರ್ದರ್ ಲೆಪ್ಪದರಸಂ ಕೊಲವೇಟ್ಟಿನ್ (ಪಂರಾಮಾ. ೩-೨೮); ಕಾಯ್ದು ಕನಲ್ದು ಪೋದಿಸಿಯನಂ ಕಣ್ಮುಟ್ಟೆನೊಳ್ ಕಂಡು (ಅನಂಪು. ೮-೨೨). [ಕಣ್ + ಮುಟ್ಟು$_2$]

**ಕಣ್ಮುರಿ** (ಕ್ರಿ). ಕಣ್ಣು ತಿರುವು; ಕಣ್ಸನ್ನೆ ಮಾಡು: ಒಸಗೆಗಳ ಚಲ್ಲಾಡಿ ಕಣ್ಮುರಿದು ಕಾಡಿ (ಕಾಲೂರ. ೧೨೪-೨೬೩). [ಕಣ್ + ಮುರಿ$_1$]

**ಕಣ್ವ** (ನಾ). ೧. ಪಾಪ; ಕೆಡುಕು. ೨. ಒಬ್ಬ ಋಷಿಯ ಹೆಸರು. [ಸಂ.]

**ಕಣ್ವಾಯ್ವಿಡು** (ಕ್ರಿ). ಕಣ್ಣುಬಾಯಿ ಬಿಡು; ದಿಕ್ಕುಗೆಡು; ಗಾಬರಿಯಾಗು: ಇಂತಟ್ಟಬರ್ಪ ನಿರ್ಜರ ಭಯಕ್ಕೊಡನೊಡನೆ ಪಿಂತಿರುಗಿ ನೋಡಿ ಕಣ್ವಾಯ್ವಿಡುವ ಶಿಷ್ಯರಂ ಸಂತೈಸುತಂಜಬೇಡೆಂದಭಯವಿತ್ತು (ಚಿಬಪು. ೨೧-೨೬). [ಕಣ್ + ಬಾಯ್ + ಬಿಡು$_1$]

**ಕಣ್ಸನ್ನೆ**, ಕಣುಸನ್ನೆ, ಕಣ್ಣುಸನ್ನೆ (ನಾ). ೧. ಕಣ್ಣಿನಿಂದ ಮಾಡುವ ಸೂಚನೆ, —ಸಂಕೇತ: ಕುಱುಪಂ ಪುರ್ವಿನ ಜರ್ವೆ ತೋಱೆ ಬಗೆಯಂ ಕಣ್ಸನ್ನೆಗಳ್ ಪೇಱೆ (ಪಂಪಭಾ. ೪-೮೨); ಗಿರಿಜೆ ಕಂಡು ಗಣಪಂಗೆ ಕಣ್ಸನ್ನೆಯಿಂ ತೋಱಿಸುತ (ಪದ್ಮರಾ. ೧-೯); ಕೃಪೆಯಿಂ ನೋಡಿ ಕರೆಕರೆದು ಕಣ್ಸನ್ನೆಯಿಂದಂತರಂಗವಱಿದೊಡನೆ ಮನ್ನಿಸುತೆ (ಚಿಬಪು. ೨-೩೪). ೨. ಪೂರ್ವಸೂಚನೆ: ಬಯಕೆ ಬರುವದರ ಕಣ್ಸನ್ನೆ ಕಾಣೋ (ನನಲ್ಲ. ೬-೨೦). **ಕಣುಸನ್ನೆ**: ೧. ಎನುತ ಕಣುಸನ್ನೆಯಲಿ ಸುರಪಾಲನನು ನೋಡಲು (ನಿಭಾಗ. ೪-೧೩-೩೯). **ಕಣ್ಣುಸನ್ನೆ**: ೧. ಆವನು ಕಣ್ಣುಸನ್ನೆಮಾಡಿ ಕರೆದ (ರೂಢಿ). [ಕಣ್ + ಸನ್ನೆ$_2$]

**ಕಣ್ಸಯ್ಗೆ** (ನಾ). = ಕಣ್ಸನ್ನೆ. ೧ (ಶ). [ಕಣ್ + ಸಯ್ಗೆ]

**ಕಣ್ಸವಿ** (ನಾ). ಕಣ್ಣಿಗೆ ರುಚಿ ಅಥವಾ ಸೊಗಸು: ಬಾಯ್ಸವಿಗೆ ಮೆಯ್ಸವಿ ಕಣ್ಸವಿಯಪ್ಪ ರೂಪು (ಶಮದ. ೬೮ ಪ್ರಯೋ); ಕಿವಿಸವಿ ದನಿ ಕಣ್ಸವಿ ರೂಪು (ಯಶೋಚ. ೨-೫೨); ಚೆಲುವಿಂದೆಸೆವ ಕಾಂಚನಮಾಲೆ ಕಣ್ಸವಿಯಾಗಿ (ಸಾಳ್ವಭಾ. ೧೭-೧); ಮೋಡ ಮುತ್ತುವ ಜಡೆಗೆ ಜಾಹ್ನವಿಯೆ ಜಾರಿಬರೆ ಪಕ್ಕಕೆಳವೆರೆ ಸಿಕ್ಕಿ ಕಣ್ಸವಿಯ ಕೊಳುತ (ಮಲೆದೇ. ೪-೮). [ಕಣ್ + ಸವಿ$_2$]

**ಕಣ್ಸೂಲ** (ನಾ). ಕಣ್ಣು ಮತ್ತು ಕಿವಿಗಳ ನಡುವಿನ ಭಾಗ; ಮೆಲುಕು: ಎರಡು ಕಣ್ಸೂಲಗಳನ್ನು ಆದುಮಿ ಹಿಡಿದು ನೆಲದಮೇಲೆ ಊರಿದ ದೃಷ್ಟಿಗಳನ್ನು ಮೇಲಕ್ಕೆತ್ತದೆ ಕುಳಿತುಬಿಟ್ಟರು (ಮೂರುದಾ. ೭೫). [ಕಣ್ + ಸೂಲ$_3$]

**ಕಣ್ಸೆಡೆ** (ಕ್ರಿ). ೧. ಕಣ್ಣನ್ನು ಕುಗ್ಗಿಸು. ೨. ಕಂಡು ಹೆದರು: ಕಾಳೆಗಕ್ಕೆ ಕಣ್ಸೆಡೆವರ ಮಾತುಗೇಳೆ ಕಡುನಾಣ್ಚಯೆ ಮುಂಚುವೆನೆಂಬುದಾವಗಂ ಕುಡುವವರ್ಗೆಂದೊಡೇವೊಗಟ್ಟುದೋ (ಗದಾಯು. ೧೯-೫). [ಕಣ್ + ಸೆಡೆ$_1$]

**ಕಣ್ಸೆರೆ** (ನಾ). ಕಣ್ಣೆದುರಿಗೇ ಇರಬೇಕಾದ ಸ್ಥಿತಿ, —ಉಸ್ತುವಾರಿಕೆ: "ಎಲುವು ಚೆನ್ನಾಗಿ ಕೂಡಿಕೊಳ್ಳಲು ಇನ್ನೂ ಒಂದುವಾರ ನೀವು ಕಣ್ಸೆರೆಯಲ್ಲಿ ಇರಬೇಕಾದೀತು . . ." (ಪ್ರೇಮಾಶ್ರ. ೧೯೫). [ಕಣ್ + ಸೆರೆ$_3$ (< ಸೆಜೆ$_2$)]

**ಕಣ್ಸೋಲ್** (ಕ್ರಿ). ೧. ಕಣ್ಣುಸೋತುಹೋಗು (ಶ). ೨. ನೋಡಿದ ಮಾತ್ರದಿಂದಲೇ ಪ್ರೀತಿಯನ್ನು ಹೊಂದು; ನೋಡಿ ಆಕರ್ಷಿತವಾಗು: ಅರಿಗನಂ ಕಾಣುತ್ತೆ ಕಣ್ಸೋಲ್ತು (ಪಂಪಭಾ. ೪-೩೮); ಅಂತಾತನಂ ಕಣ್ಸೋಲ್ತು ನೋಡಿ (ಪಂರಾಮಾ. ೪-೧೦ ವ); ಚಿತ್ರದ ಪೆಣ್ಣ ನೀಕ್ಷಿಸಿ ಕರಂ ಕಣ್ಸೋಲ್ತು (ಕುಸುಮಾ. ೯-೮೦); ಅಂಬಾಲಿಕೆ ನಿನ್ನಂ ಕಂಡು ಕಣ್ಸೋಲ್ತು (ದಶಕು. ೮-೨೬೯). [ಕಣ್ + ಸೋಲ್]

**ಕಣ್ಸೋಲ** (ನಾ). ಕಣ್ಣು ಮೋಹಗೊಳ್ಳುವಿಕೆ; ನೋಟದ ಸೆಳೆತ; ನೋಡಿ ಮರುಳಾಗುವಿಕೆ; ಆಕರ್ಷಣೆ; ಚಕ್ಷುಃಪ್ರೀತಿ: ಕಣ್ಸೋಲದಿಂ ಕೀಚಕಂ ಬಂದುಜದೆನ್ನಂ ಕಾಡಿ ಕೈಗೆಲ್ದು[ಗಿ]ದಂ (ಪಂಪಭಾ. ೮-೭೧); ಕಣ್ಸೋಲಮನಱಿಯಂ ಪರವೆಣ್ ಸುರವಧುಗೆಣೆವರ್ಪೊಡಂ (ಕಾವ್ಯಾವ. ೭೫); ಪದಪಿಂದೀಕೆಯ ರೂಪನೀಕ್ಷಿಸಲೊಡಂ ಕಣ್ಸೋಲವೆನ್ನೊಳ್ ಪೊದಟಿಕ್ಕೊದವಿತ್ತು (ಜಗವಿ. ೧೦-೮೧). [ಕಣ್ + ಸೋಲ]

**ಕತ$_1$, ಕತನ** (ನಾ). ಕಾರಣ; ನಿಮಿತ್ತ: ಗುರುಜನದೃಗ್ಜಲವರ್ಷಂ ದೊರೆಕೊಂಡಿತ್ತೆನ್ನ ಪಾಪಕರ್ಮನ ಕತದಿಂ (ಗದಾಯು. ೪-೬೨); ನಿನ್ನ ಕತದಿಂದೆ ನಮೆದೆಂ ನಿನ್ನಂ ನಡೆನೋಡಿ ಸುಖಮನಱಿದೆಂ (ಧರ್ಮಾಮೃ. ೬-೭೮); ಸುಕುಮಾರೆ ವಿಲಾಸದೆ ನಡೆತಂದಳೆಂದಹಲ್ಯೆಯ ಕತದಿಂ ಸಾಸಿರಕಣ್ಣಂ ಮಾಡಿದ ವಾಸವ ವಿಜಯಧ್ವಜಪ್ರತಾಪದಿನೊರ್ವಳ್ (ಗಿರಿಕ. ೭-೫೦); ಲಿಂಗ ನಿನ್ನೊಳಿಹ ಕತದಿಂ ಎಂತರ್ಚಿಪೆ ನೀಂ ಬಱಿದಹ ಮತದಿಂ (ದೀಕ್ಷಾಬೋ. ೧೨೪-೧); ಧೂರ್ತರು ತಮ್ಮ ಕ[ಪಾಠಾಂ. ಮ]ತದಲಿ ತಾವು ಕೆಟ್ಟರು ನೀತಿಬಾಹಿರರು (ಕುವ್ಯಾವಿ. ೩-೧೦೮); ಸತಿಗೆ ಮರುಗುವ ಕತದಿ ಇನಿಸು ದೈನ್ಯವ ತಳೆದ (ಅರುಣ. ೩೨). **ಕತನ**: ಶಿವಾಲಯದ ಪಡಿಮುಚ್ಚಿರ್ಪ ಕತನಮೇನೆಂದೊಡಾಸ್ಥಾನದವರಚ್ಚಿಗಂ ಬಡುತೆಂದರ್ (ಪದ್ಮರಾ. ೫-೨೨); ಬಲುಹ ನುಡಿದರೆ ನಿನ್ನ ಕತನದಿ ಕೆಡುವುದಾ ಲೋಕ (ಸಂಭಪ. ೨೦-೫೫); ಮಲಹಣನ ಕತನದಿಂ ಕೆಟ್ಟುದೀ ಮನೆಯೆಂದು ಆವನ ಬಂಧುಗಳ ಕರೆಸಿ (ಗುಭಚ. ೯೨-೬೩). [?./ತೆಲು. ಕತ]

**ಕತ$_2$** (ನಾ). ದುಃಖ; ವ್ಯಥೆ: ಮನಮೊಸೆದು ನಡೆದನಪ್ಪೊಡೆ ಮನ ಕತವುಂ ನೋವನೆಲ್ಲಿಯುಂ ಪೊರ್ದದೆ (ಧರ್ಮಾಮೃ. ೧೦-೬).
[< ಸಂ. ಕ್ಷತ]

**ಕತ$_3$, ಖತಿ$_2$, ಖತೆ** (ನಾ). ತುಕ್ಕು; ಮುಷ್ಟು; ಜಂಗು. 'ಕತಹಿಡಿ' ಪರಾ. **ಖತಿ$_2$**: ಧಾತುಗಳ ಆಮ್ಲಜ ವಿಕಾರಗಳಿಗೆ ಕನ್ನಡದಲ್ಲಿ ಭಸ್ಮ, ಜಂಗು, ಖತಿ, ಸುಕ್ಕು ಎಂಬ ಹೆಸರುಗಳನ್ನ ಕೊಡುವರು (ಮುಂಬಯಿ. ೬-೩೨). 'ಖತಿನೆಡು' ಪರಾ. **ಖತೆ**: 'ಖತೆನೆಡು' ಪರಾ.
[← ಪ್ರಾ. ಖತ್ತ = ಗೊಬ್ಬರ]

**ಕತಕ** (ನಾ). ಚಿಲ್ಲದ ಮರ, —ಬೀಜ: "ಕತಕಂ ಚಿಲ್ಲು" (ಮಂಗರಾ. ೪೨-೩೯); ಕದಡಿದ ನೀರ್ ಕತಕದಿನಲ್ಲದೆ ತಿಳಿಗುಮೆ (ಚಂದ್ರಪು. ೭-೮); ಶಿಶಿರಮದಾಂಧಸಿಂಧುರ ಪೊಕ್ಕು ಕಲಕಿದ ಭುವನತಟಾಕ . . . ಭೋಂಕನೆ ತಿಳಿದುದು ತೆಂಕಣೆಲರೆಂಬ ಕತಕಸೋಂಕಿನೊಳು (ನಾಗಕು. ೩೦-೨೫); ಕದಡಿದ ಚಿತ್ತವು ತಿಳಿಯಿತು ಕತಕಕೆ ತಾನಾಗಿ ತಿಳಿವಂತೆ ನೀರು (ಇಂಚಾಪ. ೫೦-೩೭). [ಸಂ.]

**ಕತಕತನೆ** (ಅ). ನೀರು, ಸಾರು ಮೊದಲಾದುವು ಕುದಿಯುವಾಗ ಉಂಟಾಗುವ ಶಬ್ದವನ್ನು ಸೂಚಿಸುವ ಅನುಕರಣಾವ್ಯಯ: ಕತಕತನೆ ಕುದಿಯುತ್ತಿರುವ ಹೆಪ್ಪುಗಟ್ಟಿದ ದ್ರವದಷ್ಟು ಅಧಿಕ ಶಾಖವಿದೆ (ಅಕಾಶ. ೨೩); ನೀರು ಕತಕತನೆ ಕುದಿಯುತ್ತಿದೆ (ರೂಢಿ).
[ಕತಕತ$_0$ + -ಅನೆ]

**ಕತಕಬೀಜ** (ನಾ). ಕದಡಿದ ನೀರನ್ನು ತಿಳಿಮಾಡುವ ಒಂದು ಬಗೆಯ ಬೀಜ; ಚಿಲ್ಲದ ಬೀಜ: ಬಿನದಕೆ ಪಾಡುತ್ತಿರೆ ನುಣ್ದನಿ ನಿದ್ರೆಗೆ ಕತಕಬೀಜಮಾಯ್ತೆನೆ ತಿಳಿದಾ[ವನ]ಮೃಗಲೋಚನೆ ಮುಟ್ಟಿದ ಮನ ಮನೆ ತೊಟ್ಟನೆ ಪಸಾಯದಾನಂಗೊಟ್ಟಳ್ (ಯಶೋಚ. ೨-೨೮).
[ಕತಕ + ಬೀಜ]

**ಕತನ** 'ಕತ$_1$' ನೋ.

**ಕತಬಿ, ಕತಬೆ** (ನಾ). ಸಾಲಕ್ಕಾಗಿ ಬರೆದುಕೊಡುವ ಪತ್ರ; ಕರಾರು ಪತ್ರ: ಹಿಂದಣ ಸಂಚಿತ ಸಾಲಭಾರಕ್ಕೆಲ್ಲ ಸಂದಾಯವನು ಮಾಡಿ ಕತಬಿ ಹಱಿಸಿಬಿಟ್ಟೆ (ಪುರಂದ. ೨-೧೫-೩); ನೂರಾರುವರ್ಷಗಳ ಹಿಂದಿನ ಕತಬಿಗಳನ್ನು ತಿರುವಿಹಾಕುತ್ತಿದ್ದೆ (ಶಿಲಾಮು. ೭೧); ಎಲ್ಲವೂ ಸಾಲದ ಕತಬಿರೀ! (ಕುರಿಹಿಂ. ೭೩). **ಕತಬೆ**: (ಕ).
[← ಮರಾ. ಕತಬಾ, ಕತಾಬತ್; ಅರ. ಕಿತಾಬ್, ಕಿತಾಬತ್. ತೆಲು. ಕಡಪಾ]

**ಕತಬೆ** 'ಕತಬಿ' ನೋ.

**ಕತರ್ಚೆ, ಕದರ್ಚೆ** (ನಾ). ಗಲಾಟೆ; ಗಲಭೆ; ದೊಂಬಿ: "... ಸಲ್ಲಾ ಮೊಕರರು ಆಗಿರುವ ಅಭಿಪ್ರಾಯ ತಮ್ಮ ತಾಲೂಕಿನ ಜನರಿಗೆ ತಿಳಿಸಿ, ಮುಂದೆ ಕತರ್ಚೆ ಇಲ್ಲದ ಹಾಗೆ ಮಾಡಿಸುವುದು" (ರಾಜೇಂದ್ರ. ೯೧). **ಕದರ್ಚೆ**: (ಕ). [?]

**ಕತವಾಸು** 'ಕಚವಾಯಿಸು' ನೋ.

**ಕತಹಿಡಿ** (ಕ್ರಿ). ತುಕ್ಕುಹಿಡಿ; ಜಂಗುತಿನ್ನು: ತಲವಾರನ್ನು ಬಹಳ ದಿವಸದಿಂದ ಒರೆಯಿಂದ ತೆಗೆದಿರಲಿಲ್ಲವಾದ್ದರಿಂದ ಅದಕ್ಕೆ ಕತಹಿಡಿದು ಅದು ಒರೆಗೇ ಕಚ್ಚಿಕೊಂಡು ಹಿರಿಯಲು ಆಗಲಿಲ್ಲ (ಸಕತೆ. ೮೩).
[ಕತ$_3$ + ಹಿಡಿ$_1$ (< ಪಿಡಿ$_1$)]

**ಕತಾಯಿ** 'ಕಥಾಯಿ' ನೋ.

**ಕತಾವಿ** 'ಕಥಾಯಿ' ನೋ.

**ಕತಿ** 'ಖತಿ$_1$' ನೋ.

**ಕತಿಗೊಳ್** 'ಖತಿಗೊಳ್' ನೋ.

**ಕತಿಪಯ** (ಸ). ಕೆಲವು; ಹಲವು: ಕತಿಪಯ ದಿವಸಂಗಳಿಂ ಕೌಶಂಬಿಯನೆಯ್ದಿ (ವಡ್ಡಾರಾ. ೪-೨೦); ಕತಿಪಯ ಪದಾತಿ ಪರಿಜನ ಪರಿವೃತನುಂ (ಆದಿಪು. ೩-೯೦ ವ); ಕತಿಪಯ ಮಾಸಂಗಳಿಂ ಬಱಿಯಂ (ಜಗವಿ. ೨-೯೬ ವ). [ಸಂ.]

**ಕತಿಬಿ** (ನಾ). ನೀರೊರತೆ; ನೀರಿನ ಚಿಲುಮೆ: ಹೊಳೆಯಾಗಲಿ ಕೆರೆಯಾಗಲಿ ಹಳ್ಳದ ತಲೆಪರವು ಕತಿಬಿಗಳು ಮುಂತಾದ ಸ್ಥಲಗಳಲ್ಲಿ ಕಾವಲಿಯನ್ನು ಮಾಡಿ (ಕೃಷಿಪ್ರ. ೫೯). [?]

**ಕತಿಯಿಸು, ಕತಿಸು** (ಕ್ರಿ). ೧. ಹೇಳು; ನಿರೂಪಿಸು: ತತ್ಪುರೀ ಸತಿಯೊಡನಾ ಮನೋಹರ ವನಾಂಗನೆ ವಿಹ್ವಳೆ ಸಂಭ್ರಮೋಕ್ತಿಯಿಂ ಕತಿಯಿಸುವಂತೆ ಪೊಣ್ಮಿದುದು ಕೋಕಿಳ ಕೀರ ಮದಾಳಿ ನಿಸ್ವನಂ (ವರ್ಧಪು. ೧೩-೧೪). **ಕತಿಸು**: ೨. ಕಥೆಯನ್ನು ಬರೆ: ಏನು ಬರೆಯಲಿ, . . . ಕವನಿಸಲೆ? ಕತಿಸಲೆ? (ರೂಪಸಂ. ೩೮). [ಕತೆ + -ಇಸು$_3$]

**ಕತಿಸು** 'ಕತಿಯಿಸು' ನೋ.

**ಕತುಪೆ** (ನಾ). ಒಂದು ಬಗೆಯ ತೆರಿಗೆ (?): ಪೂರ್ಬ್ಬಾಯ ಅಪೂರ್ಬ್ಬಾಯ ಖಾಣ ಅಭೋಗ್ಯ ಬಕಳು ಕತುಪೆ ಬಂಡಿ ಅರವಟ್ಟಿಗೆ ಕುದಿರೆ ಹದಿಕೆ ಆನೆ ಹದಿಕೆ (ಎಕ. IX (S), ಬೆಂಗಳೂ. ೧೬೯-೨; 1379). [?]

**ಕತೆ** (ನಾ). ೧. ನಡೆದ ಅಥವಾ ಕಲ್ಪಿತವಾದ ಸಂಗತಿ; ಘಟನೆ; ವಿವರಣೆ: ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ (ಪಂಪಭಾ. ೧-೧೧); ಆ ವಿದ್ಯಾಧರರಾಜಸುತೆಯ ಕತೆಯಂ ಕೇಳಿಂ (ಶಾಂತಿಪು. ೯-೧೨); ವೇದವ್ಯಾಸ ದೇವನದಂದು ಕುಂತಿಗೆ ಹೇಳಿ ಚಿಂತೆಯ ದಂದುಗವ ಬಿಡಿಸಿದನು ಭೀಮನ ವಿಷಯಕತೆಗಳನು (ಸಂಭಪ. ೧೭-೪೪); ಕತೆಯನಾಲಿಸಿ ಬಱಿಕ್ಕಮಿಾಯೆನೆಂದೊಡೆ ಬಿಡೆಂ (ರಾಮಾಶ್ವ. ೫-೨೬). ೨. ದೊಡ್ಡದಾದದ್ದು; ರಗಳೆ: ಅಯ್ಯೋ, ಅದೊಂದು ಕತೆ (ರೂಢಿ).
[< ಸಂ. ಕಥಾ]

**ಕತೆಕಟ್ಟು** (ಕ್ರಿ). ಕತೆಯನ್ನು ರಚಿಸು, —ಕಲ್ಪಿಸಿ ಹೇಳು: ಯಾರ್ಯಾರೋ ಏನೇನೊ ಕತೆಕಟ್ಟಿದ್ದಾರಂತೆ (ಸುವಸಂ. ೨೩); ಸುಂದರ ಹುಡುಗಿ ಎಂದ ಕೂಡಲೇ ಸುತ್ತಲೂ ಕತೆಕಟ್ಟುವವರೇ! (ಮೂರುದಾ. ೧೩೨). [ಕತೆ + ಕಟ್ಟು$_1$]

**ಕತೆಗ** (ನಾ). ಕತೆಹೇಳುವವನು; ಕತೆಗಾರ: ಗ ಪ್ರತ್ಯಯಕ್ಕೆ - ಮಾತುಗಂ, ಬೂತುಗಂ, ಕಂತೆಗಂ, ಕತೆಗಂ (ಶಮುದ. ೨೦೧ ಪ್ರಯೋ).
[ಕತೆ + -ಗ$_3$]

**ಕತೆಗಾರ** (ನಾ). ಕತೆ ನಿರೂಪಿಸುವವನು. 'ಕತೆಗಾರಿಕೆ' ಪರಾ.
[ಕತೆ + -ಗಾರ (< -ಕಾಱ)]

**ಕತೆಗಾರಿಕೆ** (ನಾ). ಕತೆ ಹೇಳುವ ರೀತಿ; ಕಥನಕೌಶಲ: ಇವರ ಕತೆಗಾರಿಕೆಯಿಂದ ಕನ್ನಡಜೀವನಕ್ಕೆ ಜೀವಕಳೆ ಬಂದಿದೆ (ವಿಚಾಮಂ. ೯೮); ಕಿರುದೊರೆಗಳು ಸೂಚ್ಯವಾಗಿ ಮಾಡಿದ ರಾಜನೃಪನ ಗುಣಶ್ಲಾಘನೆಯಲ್ಲಿ ಕತೆಗಾರಿಕೆಯ ಕೈವಾಡವಿದೆ (ತವನಿ. ೧೭೬). [ಕತೆಗಾರ + -ಇಕೆ]

**ಕತೆಗಾರ್ತಿ** (ನಾ). ಕತೆ ನಿರೂಪಿಸುವವಳು: ಕತೆಗಾರ್ತಿಯ ಮುಖ್ಯ ಕೌಶಲ ವಾಸ್ತವಚಿತ್ರಗಳನ್ನೇ ಮೂರ್ತಿಮತ್ತಾಗಿ ಬರೆಯುವುದರಲ್ಲಿದೆ (ತೇವೋಡ. ೭ ಮುನ್ನುಡಿ). [ಕತೆಗಾರ + -ತಿ$_{1}$ (< -ಇತ್ತಿ)]

**ಕತೆಗುಟ್ಟು** (ಕ್ರಿ). ಕತೆಯನ್ನು ಹೇಳು: ಇನ್ನು ನಿಮ್ಮ ಸಟೆಗಳ ಸರಗಳನ್ನು ಪವಣಿಸಿ ಬಾಯ್ಗೆಯ್ದು ಕತೆಗುಟ್ಟರಿ (ಬೆಟ್ಟಅ. ೫೧–೧೨).
[ಕತೆ + ಕುಟ್ಟು$_{1}$]

**ಕತೆಮುಗಿ** (ಕ್ರಿ). ೧. ಕತೆ ಕೊನೆಯಾಗು. ೨. ಕೊನೆಗೊಳ್ಳು; ಅಂತ್ಯವಾಗು: "... ಅಲ್ಲಿಗೆ ಬೇಲಿಯ ಕತೆಮುಗಿಯಿತು" (ಪುನರು. ೨೭೦); ಅವನ ಕತೆಮುಗಿಯಿತು (ರೂಢಿ). [ಕತೆ + ಮುಗಿ$_{1}$]

**ಕತೆವೇೞ್** (ಕ್ರಿ). ಕತೆಯನ್ನು ಹೇಳು,—ನಿರೂಪಿಸು: ಡಾವರ ಡಾಕಿನಿ ಶಾಕಿನಿದೇವತೆ ಕತೆವೇೞಲತಿಶಯಂ ಬಲ್ಲಳ್ (ಪಂಚತಂ. ೧೫೨–೨); ಕತೆವೇೞ್ದು ಬೇಸತ್ತೆಂ (ರಾಮಾಶ್ವ. ೧೪೮–೧೬). [ಕತೆ + ಪೇೞ್]

**ಕತ್ತ$_{1}$, ಕಾತ್ತಿ$_{2}$** (ನಾ). ತೆಂಗಿನ ನಾರು; ನಾರಿನಿಂದ ಮಾಡಿದ ಹುರಿ, ಹಗ್ಗ ಮೊದಲಾದುವು: ಬೂಸಕಾಯಿ ಕತ್ತ ಹೊಗೆಸೊಪ್ಪು ಜವಳಿ ಮುಂತಾಗಿ (ಎಕ. VII, ಶಿವಮೊ. ೨೮–೧೬; 1670); ಕಾಯಿ ಕತ್ತ ಕಾಚು ಖೊಬರಿ (ಮೈಆರಿ. ೧೯೩೬, ೨೬–೩೭; 1708); ಬೆಲ್ಲ ಕಾಯಿ ಕತ್ತ ಕಾಚು (ಎಕ. VIII, ತೀರ್ಥಹ. ೭೨–೧೯; 1711); ಕತ್ತದ ಮಿಣಿಗಳ ಜೋಡಿಸಿ ಜನರ ತಾನಿತ್ತರದಲಿ ನಿಲ್ಲಿಸಿದನು (ಗೋಮಟೇ. ೩–೪೧); ಕಾಡಿನಿಂದ ತಂದಿದ್ದ ತರತರಹದ ಹಂಬುಗಳೂ ಕತ್ತದ ಕಿರುಮಿಣಿಯ ಉಂಡೆಗಳೂ ... ಬಿದ್ದಿದ್ದವು (ಮಲೆಮ. ೩೨೯); ಬಚ್ಚಲುಮನೆಯ ಕಲ್ಲಿಗೆ ಮರಳು ಹಾಕಿ ತೆಂಗಿನ ಕತ್ತದಿಂದ ತಿಕ್ಕಿದಳು (ದೇವಹಂ. ೧೩೦). **ಕಾತ್ತಿ$_{2}$**: ತೆಂಗಿನ ನಾರಿನಿಂದ ಕಾತಿಯಾಗುವುದು. ಆ ಕಾತಿಯ ಹೊಸೆದು ಹಗ್ಗ ಮಾಡುತ್ತಾರೆ (ಮುಂಬಯಿ. ೨–೫೨); ಕಾತಿ ಮತ್ತು ಚಿಲುಮೆಯನ್ನು ತಂದು ಬೆಂಕಿ ಹೊತ್ತಿಸಿದ (ಕುರಿಹಂ. ೭೧); ಕುತ್ತಿಗೆಗೆ ಕಾತಿಯನ್ನು ಬಿಗಿದಿದ್ದಳು (ಗಂಮಾಯಿ. ೨).
[ದೇ. ?‖. / ತಮಿ. ಕಱ್ಱು; ಮಲ. ಕಱು; ತುಳು. ಕತ್ತಾ. ಮರಾ. ಕಾಥಾ, ಕಾಥ್ಯಾ]

**ಕತ್ತ$_{2}$** (ನಾ). ಒಬ್ಬಾತನ ಹೆಸರು: ಕತ್ತ ಮಹೀಭುಜನೆಂಬ ಪೆರ್ಮ್ಮಾರ್ಗಂ (ಎಇ. XVI, ೪–೪೧; 978); ಕತ್ತನ ಸತ್ಯದ ದೊರೆಗಂ ಶೌರ್ಯದ ಪೊಗಳ್ಕೆಗಂ ಸಮನೊಳರೇ (ಮುಂಬರಾ. X, ೨೧೩–೧೦; 1070).
[< ಸಂ. ಕಾರ್ತವೀರ್ಯ ?]

**ಕತ್ತ$_{3}$** (ನಾ). (?): ಹೊತ್ತು ಮುಳುಗುವ ಸಮಯದಲ್ಲಿ ಸಂತೋಷ ಕೆಟ್ಟು ಕೆಟ್ಟ ಕಣ್ಣೀರು ಸುರಿವುತ್ತ ಕತ್ತವ [ಪಾಠಾಂ. ಗತ್ತವ] ಬಿಟ್ಟು ಲದ್ದಿಯ ಹನುಮಿಸಲು ಆ ಕುದುರೆಯ ಒಡೆಯಗೆ ಅಂಜಿಕೆಯುಂಟಾಹುದು (ಅಶ್ವಟೀ. ೧೮–೧೨). [?]

**ಕತ್ತ$_{4}$** (ನಾ). ಹಡಗಿನ ಒಂದು ಭಾಗ: "ಪಟಂ ಹಾಹೆಯಕ್ಕಾ ಜಳಿ ಕತ್ತವಕ್ಕುಂ [ಪಾಠಾಂ. ಬಳ್ಳಿ ಕರ್ತಮೆನಿಕುಂ]" (ಮಂಗರಾ. ೧೨೧–೫).
[?]

**ಕತ್ತಗಾಲಿನಹಂಬು** (ನಾ). ಒಂದು ಬಗೆಯ ಸಸ್ಯ; ಆಡುಮುಟ್ಟದ ಗಿಡ (ಕ). [ಕತ್ತಗಾಲು$_{0}$ + ಹಂಬು]

**ಕತ್ತಗಿನಿ** (ನಾ). ಒಂದು ಬಗೆಯ ಔಷಧಿ ಸಸ್ಯ: "ಕರಭಕರ್ಣಿಕಾ – ಕತ್ತಗಿನಿಯ ಸೊಪ್ಪು" (ಓಷಧಿ. ೨೭). [?]

**ಕತ್ತರ$_{1}$ಖತ್ರ** (ನಾ). ೧. ಒಂದು ಬಗೆಯ ವಾದ್ಯ; ಮದ್ದಳೆ. ೨. [ಸಂಗೀತ] ವಾದ್ಯ ನುಡಿಸುವ ಒಂದು ಗತ್ತು; ಮದ್ದಳೆ ಬಾರಿಸುವುದರಲ್ಲಿ ಒಂದು ಭೇದ: ಮೃದಂಗಮಂ ಮೇಳೈಸಿ ಕತ್ತರದೋಟ ಗಾಡಾದಿ ಭೇದಗಳನನುಸರಿಸಿ ... ನುಡಿಸಿ ಬಾಜಿಸುವ (ವಿವೇಕ. ೨೩೭); ಮಱುಕದ ಪೆಂಪು ಮೇಗೊಗೆಯೆ ಕತ್ತರಂ ಸಾಗುತಿರೆ ಪೊಱಕ್ಕೆಯೊಳು ... ಮದ್ದಳೆಯ ತೂಗಿ ತಧ್ಧಿತ್ತೆಂದು ರಾಗದಿಂ (ಚೇರಮ. ೧೦–೩೬); ಪಲತೆಱದ ತಾಳಗಳ ಜತಿಗಳನಳವಡಿಸಿ ತುಡುಕಳಗ ಕತ್ತರಗಳನು ಮೂದೆಜನಾದ ಲಯದಲಿ ಕುಡುಪಡರೆ ನುಡಿಸೆ (ಸಾಳ್ವಭಾ. ೮–೫೬); ಅಳವಟ್ಟ ಮದ್ದಳೆಯಿಂದ ಹಲವು ಕತ್ತರವ ಕಳಾಸವನಱಿದು ಮದ್ದಳೆಗ ಕೇಳಿಸಿ ನಿಂದನೊಡನೆ (ಭರಚ. ೧೨–೩೮); ಅಳಗನು ಸುಳಿಯುಳಗನು ಬೆಟ್ಟಳಗನು ವಿಲಸಿತ ಕತ್ತರಮೆಂಬಾ ಪಲತೆಱದಿಂ ಬಾಜಿಸಿದನು (ತರ್ಕಕಾ. ೭–೫೯). **ಖತ್ರ**: ೩. [ಸಂಗೀತ] ನಿಲುಗಡೆ (?): ತಾನ ಮೊದಲಿವು ಮುನ್ನವವಱೊಳು ಗಾನವೊಪ್ಪುವ ದಂಡಿಗೆಯನವಧಾನಿಸುತ ಮಿಗೆ ಮೇಘ ಚಾಳನ ಪೊಡನೆಯವು ಠಾಣಮಾನಿತನ್ನವ ಠಾಣಮುಂ ಸಂಧಾನಮುಮರಂ ತಾಳ ಪಕ್ಕಮನೂನ ಖತ್ರಂ [ಪಾಠಾಂ. ಪತ್ರಂ] ಪೊಟ್ಟವಣೆ ಸಾರಣಮುಮರ್ದಿರಲು (ಬಸವು. ೧೯–೮).
[?. / ತಮಿ. ಕತ್ತಿರಿ = ಒಂದು ಬಗೆಯ ಚರ್ಮವಾದ್ಯ]

**ಕತ್ತರ$_{2}$** 'ಕತ್ತರಿ$_{2}$' ನೋ.

**ಕತ್ತರಗೊಡು** (ಕ್ರಿ). (ಕುಸ್ತಿಯಲ್ಲಿ) ಕತ್ತರ ಎಂಬ ವರಸೆಯನ್ನು ಪ್ರಯೋಗಿಸು: ಮೊನ್ನೆ ಠಾಯೆಯಲ್ಲಿ ಕತ್ತರಗೊಟ್ಟುರುಳಿಸಿದುದನ್ನು ಮರೆತುಬಿಟ್ಟೆಯೋ? (ವಿಗಡ. ೨೭).
[ಕತ್ತರ$_{2}$ (< ಕತ್ತರಿ$_{2}$) + ಕೊಡು]

**ಕತ್ತರಣೆ** (ನಾ). ಕತ್ತರಿಸುವಿಕೆ; ಕಡಿತ; ತೆಗೆದುಹಾಕುವಿಕೆ: ಆದರೆ ಈ ಸೇರ್ಪಡೆ ಕತ್ತರಣೆಗಳಿಂದ ಮೂಲಕೃತಿಗೆ ಮೆರುಗುಬರುವಂತಿರಬೇಕು (ಸಾಹಿಪ್ರ. XII, ಪ್ರಸ್ತಾವನೆ). [ಕತ್ತರಿಸು + -ಅಣೆ$_{4}$]

**ಕತ್ತರಣೆಗೊಳ್ಳು** (ಕ್ರಿ). ಕತ್ತರಿಸಲ್ಪಡು; ಕತ್ತರಿಯ ಪ್ರಯೋಗಕ್ಕೆ ಒಳಗಾಗು: ಕತ್ತರಣೆಗೊಂಡ ಗಡ್ಡ ಮುಖದ ಕೆಳಭಾಗಕ್ಕೆ ಗಡಿ ಹಾಕಿದಂತಿತ್ತು (ಪುನರು. ೪೫೧). [ಕತ್ತರಣೆ + ಕೊಳ್ಳು (< ಕೊಳ್$_{1}$)]

**ಕತ್ತರಸ** (ನಾ). ಒಬ್ಬಾತನ ಹೆಸರು: ಅನ್ತೆನಿಸಿದ ವೀರ ಕತ್ತರಸನಿಂ ಪಿರಿಯ (ಸೌಇಇ. XX, ೫೦–೧೦; 1087). [ಕತ್ತ$_{2}$ + ಅರಸ$_{1}$]

**ಕತ್ತರಿ$_{1}$** (ನಾ). ೧. ಒಂದು ಬಗೆಯ ಬದನೆ; ವಾರ್ತಾಕ; ಫಲಾಸಿ: ಕತ್ತರಿಯೆಸೆವ ಮೂಲಮುಂ ಕತಕ ಕುಜಾವಳಿಯ ಪರಿಪಕ್ವಫಲರಸಜಳದಿಂದರೆದುದಱೊಳಲುಬಿ ತೊಯಿದಾ ಪಟಮುಂ (ಖಮದ. ೭–೨೦); ನಾಗಕೇಸರ, ಕತ್ತರಿ, ಬೆಬಡೆ ಬೀಜ ... ಇವೆಲ್ಲವನ್ನೂ ಹಾಲಲ್ಲಿ ಅರೆದು (ವಿವೈವಿ. ೭೪); ಕಾಲಬೀಟಿಗೆ – ಕತ್ತರಿಯ ಕಾಯುಂ ತುಂಬೇ ಸೊಪ್ಪುಂ ಅರೆದು ಕಾಲಿಗೆ ಪೂಸೆ ಗೆಲ್ಗುಂ (ವಿವೈವಿ. ೬೭). 'ಕತ್ತರಿಬದನೆ' ಪರಾ. ೨. ಒಂದು ಬಗೆಯ ಸಸ್ಯ: "ಲಕ್ಷಣ ಕಂದ:—ಬಿಳಿಯ ನೆಲದಾಳು, ಕತ್ತರಿ" (ಓಷಧಿ. ೧೪೧); ಎಸಗದ ಬೇರು, ಕತ್ತರಿಬೇರು, ನೆಲಗುಳ್ಳದ ಬೇರು ... ಕಷಾಯ ಕಾಸಿ ಕುಡಿಯಲು ಅಭಿನ್ಯಾಸ ಸನ್ನಿ ಪರಿಹರಮಕ್ಕುಂ (ಸಕವೈ. ೧೬೮). [ದೇ. ‖ ತಮಿ. ಕತ್ತರಿ]

**ಕತ್ತರಿ$_{2}$, ಕತ್ತರ$_{2}$, ಕತ್ತರೆ** (ನಾ). ೧. ಕತ್ತರಿಸುವುದಕ್ಕಾಗಿ ಉಪಯೋಗಿಸುವ ಇಕ್ಕುಳದ ಆಕಾರದಲ್ಲಿ ಎರಡು ಅಲಗುಗಳನ್ನು ಹೊಂದಿಸಿರುವ ಸಾಧನ: ಕತ್ತರಿಯ ಮೊನೆಯಂತೆ ಹೊಕ್ಕು ಕೆಡಹುವ ಕೃತ್ರಿಮರು (ನಗಮಾ. ೨೩); ಕತ್ತರಿಗಳಿಂ ಕತ್ತರಿಸುವ (ಸಿದ್ಧರಾ. ೮–೨೮); ಗಂಟಲ ಬಳೆಯಂ ಪತ್ತಿಸಿದ ಚಂದ್ರಕಾಂತದ ಕತರಿಯೆನೆ ತೊಳಗಿ ಬೆಳಗಿತೆಳವೆಱ ನಭದೊಳ್ (ಸೂಕ್ತಿಸು. ೮–೨೫೬).

೨. ಒಂದು ಬಗೆಯ ಬಾಣ: ಎಸಳಲಗು ಕವಲಂಬು ಕತ್ತರಿವೆಸರ ಕಣೆಗಳ ದಾಳಿ (ತೊರರಾ. ೬-೪೪-೯). ೩. ಗಾಣ ಹೊಡೆಯುವಾಗ ಗಾಣಿಗನು ಕುಳಿತುಕೊಳ್ಳುವ ಗಾಣದ ಭಾಗ: ಕತ್ತರಿಯಿಲ್ಲದೆ ಗಾಣವಾಡುವ ಎಗ್ಗನಂ (ಧರ್ಮಾಮೃ. ೫-೧೦೬ ಅಡಿಟ); ಗಾಣದ ಕತ್ತರಿಯಂ ಕೇಣದೊಳೇಱಿ . . . ಗಾಣಮಂ ತಿರುಗಿಸುತ್ತ (ರೇವಣ. ೨೬-೩); ಎತ್ತು ಗಾಣವ ನುಂಗು ಕತ್ತರಿಯ ಕಣೆ ನುಂಗು ಸುತ್ತಿ ಹೊಡೆಯುವನ ನೊಗ ನುಂಗು ಈ ಮಾತು ಸತ್ಯ ತಾನೆಂದ (ಸರ್ವಜ್ಞ. ೨೦೬೯). ೪. ಎತ್ತಿನ ಬಂಡಿಯಲ್ಲಿ ಗಾಡಿ ಹೊಡೆಯುವವನು ಕುಳಿತುಕೊಳ್ಳುವ ಜಾಗ; ಸಿಪಾಯಿ ದೆಬ್ಬೆ: ಗಾಡಿ ಹೊಡೆಯುವವನು . . . ಕತ್ತರಿಯಿಂದ ಇಳಿದು ಬಗ್ಗಿ, ಗಾಡಿಯ ಮುಂದೆ ಬಂದನು (ಕೈಹಿಕಾ. ೧); ಗಾಡಿಯ ಕತ್ತರಿ ನೆಲಕ್ಕೆ ತಗುಲಿದಾಗ ಅಮ್ಮ ಇಳಿಯುವ ಸಿದ್ಧತೆ ಮಾಡಿದಳು (ಬನಶಂ. ೧೪೪). ೫. ಎರಡು ರಸ್ತೆಗಳು ಕೂಡುವ ಸ್ಥಳ.'ಕತ್ತರಿರಸ್ತೆ' ಪರಾ. ೬. ಕುಸ್ತಿಯ ಒಂದು ಹಿಡಿತ, —ಪಟ್ಟು, —ವರಸೆ: ಬಾಹುದಣೆ ಖಮ್ಮರಿ ಕತ್ತರಿ ಖೋಡವಂಕುಶಂ ಸಸಿಕುವೆನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (ಚಂದ್ರಪು. ೫-೬೮); ಸಮಲತಾ ಬಹುಕಳಿ ಕತ್ತರಿಗಳಿಂ ಗಾಯುಮಱಿದೊತ್ತಿ ನೋಡಿ (ಬಂಹರಿ. ೩೧-೧೦); ಡೊಕ್ಕರ ಕಡಸಿ ಕತ್ತರಿ ಘಟ್ಟಿಸುವ ಗಳಹತ್ತ ಡೊಕ್ಕರವಾ (ಕುವ್ಯಾಸ. ೨-೯೬). ೭. (ಆಲಂ) ಇಕ್ಕಟ್ಟು; ಬಿಕ್ಕಟ್ಟು: ಅವನು ಕತ್ತರಿಯಲ್ಲಿ ಸಿಕ್ಕಿಹಾಕಿಕೊಂಡಿದ್ದಾನೆ (ರೂಢಿ). ೮. (ಆಲಂ) ಖೋತ; ಕಡಿತ: ಅವರು ಅಳಿಯನಿಗೆ ಮಾಡುವ ಈ ಮರ್ಯಾದೆಯಲ್ಲಿ ಮೊದಲನೇ ಅಂಗಡಿಯವನ ಮಾಗಡಿ – ಬೀರು ವ್ಯಾಪಾರಕ್ಕೆ ಕತ್ತರಿ (ಹೊಸಕ್ಷಿ. ೧೬೫). ೯. (ಆಲಂ) ಕಪಟ; ಮೋಸ: ಮಾತಿನಲ್ಲಿ ಭಕ್ತಿ ಮನದಲ್ಲಿ ಕತ್ತರಿ (ಮೋಳಿಮಾ. ೩೩-೧೩೮). **ಕತ್ತರ₂**: ೬. ಅಂ ಪಿಡಿದುದೆ ಕತ್ತರಂ ಕರವಳಂ ಸೆರವಟ್ಟಣೆ ಹತ್ತೆ ಡೊಕ್ಕರಂ ಚಡಿಕೆ ತುಳಾಡಿ (ಅನಂಪು. ೨-೨೬). **ಕತ್ತರೆ**: ೬. ಚಲ್ಲಣವಟ್ಟೆ ಪಟ್ಟೆ ಕತ್ತರೆಗಳೆನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಪುವಿ. ೨೬-೧೮).

ಕತ್ತರಿಆಡಿಸು = (ಆಲಂ) (ಹಣವನ್ನು) ಎತ್ತಿಹಾಕು; ಲಪಟಾಯಿಸು: ಉಮಾಪದನು ಇದೇ ರೀತಿಯಾಗಿ ಕತ್ತರಿ ಆಡಿಸುತ್ತ ಬಂದಿದ್ದಾನೆ (ಇಪ್ಪಕ. ೨೬೨). [ಪ್ರಾ. ಪಾಲಿ. ಕತ್ತರೀ < ಸಂ. ಕರ್ತರೀ]

**ಕತ್ತರಿಕಾಱ** (ನಾ). ಕತ್ತರಿಸುವವನು: ಬರುಬರುತಡ್ಡವಾಯಿದಡೆ ನೋವ ನೆಱೆಮಿಕ್ಕು ಉರವಣಿಸುತಲ್ಲಿ ಕತ್ತರಿಕಾಱರುಱೆ ಪೊಕ್ಕು ತೋಳ ನುಱೆ ಕತ್ತರಿಸಲ್ (ಪಿಂಡೋರ. ೪೪). [ಕತ್ತರಿ₂ + -ಕಾಱ]

**ಕತ್ತರಿಕೆ** (ನಾ). ೧. ಕತ್ತರಿಸುವಿಕೆ: ಹುಡುಗನಿಗೆ ಕತ್ತರಿಸುವಂತೆ ಮೊಟಕಾಗಿ ಕತ್ತರಿಸಿದ ಹೆಂಗಸಿನ ಕೂದಲಿನ ಕತ್ತರಿಕೆ (Etoncrop. ಇಂಕನಿ). ೨. ಕಡಮೆಮಾಡುವಿಕೆ; ಕಡಿತ; ಖೋತ: ಖೋತ (ಮಾಡುವುದು); ಕತ್ತರಿಕೆ (ಪತ್ರಿನಿ. ೬೧). [ಕತ್ತರಿಸು + -ಇಕೆ]

**ಕತ್ತರಿಗಂಡಿ** (ನಾ). ಮೃಗಗಳು ಬೇಟೆಗಾರರ ಈಡಿಗೆ ಸಿಕ್ಕಿಹಾಕಿಕೊಳ್ಳುವ ಕಂಡಿ, —ಸ್ಥಳ: ನೀರ್ದಾಣದೊಳ್ ಕತ್ತರಿಗಂಡಿಯ ನೆತ್ತಿಯುಂ . . . ಬೇಂಟೆಯಾಡುತಿರೆ (ರಾಮಾಶ್ವ. ೮೪-೫). "ಮೀನು ಹಿಡಿಯಲು ಉಪಯೋಗಿಸುವ ಕೂಳಿ (ಇದರಲ್ಲಿ ಹೋಗುವಾಗ ಮಾತ್ರ ಬಾಗಿಲು ತೆರೆದಿದ್ದು ಹೋದನಂತರ ಹೊರಕ್ಕೆ ಬಾರದ ಹಾಗೆ ಮುಚ್ಚಿ ಬಿಡುತ್ತೆ)" (ಪ್ರಭಣ್ಣ). [ಕತ್ತರಿ₂ + ಕಂಡಿ₁]

**ಕತ್ತರಿಗಡಿ** (ಕ್ರಿ). ೧. ಕತ್ತರಿಯಿಂದ ಕತ್ತರಿಸು, —ತುಂಡರಿಸು. ೨. ಕತ್ತರಿಸಿ ಹೋಗುವಂತೆ ಕಡಿ: ತಾವು ಶರಣರಾದಡೆ ತಮ್ಮ ಚಿತ್ತಿನ ಕೊನೆಯಲ್ಲಿ ಮುಸುಕಿದ ಅಷ್ಟಮದಂಗಳ ಕತ್ತರಿಗಡಿಯಬೇಕು (ಅಖಂಡೇ. ೨೬೬-೮). [ಕತ್ತರಿ₂ + ಕಡಿ₂]

**ಕತ್ತರಿಗಳ್ಳ** (ನಾ). ಜೇಬು ಕತ್ತರಿಸಿ ಕದಿಯುವವನು; ಜೇಬುಗಳ್ಳ; ಕಿಸೆಗಳ್ಳ: ಕತ್ತರಿಗಳ್ಳರಿದ್ದಾರೆ, ಎಚ್ಚರಿಕೆ (ರೂಢಿ). [ಕತ್ತರಿ₂ + ಕಳ್ಳ₁]

**ಕತ್ತರಿಗಾಳೆ** (ನಾ). ೧. ಗಾಣ ಹೊಡೆಯುವಾಗ ಗಾಣಿಗನು ಕುಳಿತುಕೊಳ್ಳುವ ಗಾಣದ ಭಾಗ. ೨. ಮಲ್ಲಯುದ್ಧದಲ್ಲಿ ಒಂದು ಪಟ್ಟು, —ವರಸೆ. ೧, ೨: ತಿರಿವುದು ಬೈಕಂಗೊಳ್ಳದು ಮೊರೆವುದು ಮಱುದುಂಬಿಯುಲ್ಲು ಕತ್ತರಿಗಾಳಂ [ಪಾಠಾಂ. ಕತ್ತರಿಘಾಯಂ, ಕರ್ತರಿಘಾಯಂ] ಬೆರಸಿ ತನುಗೊಂದಿ ದೊರೆಕೊಂಡಿರೆಯುಂ ಕೆಸಱಂಕಮಲ್ಲಿ ದಾವುದೊ ಪೇೞಿಂ (ಕಾವ್ಯಾವ. ೫೯೫). [ಕತ್ತರಿ₂ + ಗಾಳ₀ (< ಗಾಣ₁)]

**ಕತ್ತರಿಗಿಡ** (ನಾ). ಒಂದು ಔಷಧಿ ಸಸ್ಯ: ಒಳ್ಳೆ ಉಪ್ಪಿಗಿಡ, ಕತ್ತರಿಗಿಡ, ಕಾಡುಕತ್ತರಿ (ವೈಔಗಿ. ೧೬-೩೦೮). [ಕತ್ತರಿ₁ + ಗಿಡ (< ಗಿಡು)]

**ಕತ್ತರಿಗುಬ್ಬಿಗುಳ್ಳ** (ನಾ). ಒಂದು ಬಗೆಯ ಗುಳ್ಳದ ಕಾಯಿ: ಕಾನನದೊಳ್ ಕರಂ ಮೆಱೆವ ತಾಣದ ಕತ್ತರಿಗುಬ್ಬಿಗುಳ್ಳಮಂ [ಪಾಠಾಂ. ಗಳುಮಂ] ಜಾನಿಸಿ ನೀರೊಳಲ್ಲದೊಡೆ ನಿಂಬೆಯ ಪಣ್ಪುಳಿಯಿಂದಮಾದೊಡಂ ಜೇನನೊಣಂಗಳೂಱಿದೆಡೆಗಂ ತೊಡೆಯಲ್ಕೆ ವಿಷಂಗಳೋಡುಗುಂ (ಖಮದ. ೧೩-೧೧೪). [ಕತ್ತರಿ₁ + ಗುಬ್ಬಿ + ಗುಳ್ಳ]

**ಕತ್ತರಿಗುಳ್ಳ** (ನಾ). = ಕತ್ತರಿಗುಬ್ಬಿಗುಳ್ಳ: ಬಾಳೆ ಸೋರೆ ಹೀರೆ ಕತ್ತರಿಗುಳ್ಳ ಹಡಲ ಹಾಗಲ ತೊಗರಿ ಬದನೆ ಮೊದಲಾದ ಕಾಯ್ಗಳ ರಸಂಗಳ ತೆಗೆದು ಹದಪಡಿಸಿ (ಸೂಪಶಾ. ೫-೪೧). [ಕತ್ತರಿ₁ + ಗುಳ್ಳ]

**ಕತ್ತರಿಗೆ** (ನಾ). = ಕತ್ತರಿ₂ ೧: ೧. ಅಡಕೊತಗಳು. . . ೧೨. ಕತ್ತರ[ರಿ]ಗೆಗಳು. ೧೩. ಉಳಿಗಳು (ಮುಂಬವ್ಯಾ. ೧೦೧). [< ಸಂ. ಕರ್ತರಿಕಾ]

**ಕತ್ತರಿಗೈ** (ನಾ). ಕತ್ತರಿಯ ಆಕಾರದಲ್ಲಿ (ಎದೆಯ ಮೇಲೆ) ಇಟ್ಟುಕೊಂಡ ಕೈ: ಪ್ರಾರ್ಥನಾಮುದ್ರೆಯಿಂದ ಕತ್ತರಿಗೈಯಾಗಿ ನೆಲಕ್ಕೆ ಬಾಗಿದನು (ಪುನರು. ೧೬೮). [ಕತ್ತರಿ₂ + ಕೈ₂ (< ಕೆಯ್₂)]

**ಕತ್ತರಿಗೊಳ್, ಕತ್ತರಿಗೊಳ್ಳು** (ಕ್ರಿ). ೧. ಕತ್ತರಿಸಲ್ಪಡು; ತುಂಡಾಗು. ೨. ನೆಟ್ಟಗೆ ನಿಲ್ಲು; ಸೆಟೆದು ನಿಲ್ಲು: ಕತ್ತರಿಗೊಂಡ ಕರ್ಣಮೆಳನೀಲದ ನುಣ್ಬುಮುರ್ದಕ್ಷಿ ವಕ್ಷಮುಂ ಪತ್ತಿದ ಕಂಧರಂ . . . ಮೆಱೆವ ವಾರುವವಂ ಪದೆದಿತ್ತನಾ ನೃಪಂ (ದಶಕು. ೫-೩೮). ೩. ಕತ್ತರಿಯೆಂಬ ಕುಸ್ತಿಯ ಹಿಡಿತಕ್ಕೆ ಒಳಪಡು: ದಿಕ್ಕರಿಯನಿಕ್ಕುವವೋಲ್ ನೆಲಕಿಕ್ಕಿ ಪತ್ತಿ ಕತ್ತರಿಗೊಳೆ . . . ಮೆಯ್ಯ್ ಪರವಶವಾಗೆ ಜೋಲ್ದನಭಿಮನ್ಯು (ಪಂಪಭಾ. ೧೧-೧೦೪). **ಕತ್ತರಿಗೊಳ್ಳು**: ೧. ಕತ್ತರಿಗೊಂಡ ಕೂದಲಿನ ಮಗುವೊಂದು ಅವಳ ಬಳಿ ಬಂದು ನುಣ್ಣನಿಯಲ್ಲಿ ಮಾತು ತೆಗೆಯಿತು (ಪುನರು. ೨೩೮). [ಕತ್ತರಿ₂ + ಕೊಳ್₁]

**ಕತ್ತರಿಗೊಳ್ಳು** 'ಕತ್ತರಿಗೊಳ್' ನೋ.

**ಕತ್ತರಿಗೋಲು** (ನಾ). = ಕತ್ತರಿ₂ ೧: (೬). [ಕತ್ತರಿ₂ + ಕೋಲು (< ಕೋಲ್). / ತಮಿ. ಕತ್ತರಿಕ್ಕೋಲ್]

**ಕತ್ತರಿದಡಿ** (ನಾ). ಕತ್ತರಿಯಾಕಾರದ ದಡಿ, —ಗೂಟ; ಕವೆಗೋಲು: ಕತ್ತರಿದಡಿ [ಪಾಠಾಂ. ಕೆತ್ತದಡಿ, ಕೆತ್ತಡರಿದ, ಕೆತ್ತಡಿದಡಿ] ಬಿಗಿದಗುಸೆಯ ಬಳಿಯೊಳೆ ಸುತ್ತುವ ಸುನಕ ಸೂಕರಗಳ (ಸೊಬಸೋ. ೨೦-೧೫). [ಕತ್ತರಿ₂ + ದಡಿ₁]

**ಕತ್ತರಿಪಟ್ಟು** (ನಾ). ಮಲ್ಲಯುದ್ಧದಲ್ಲಿ ಒಂದು ವರಸೆ; ಕತ್ತರಿ ಹಿಡಿತ: ಭೀಮ ಜರಾಸಂಧರು ಡೊಕ್ಕರ ಪಟ್ಟು, ಲಗಡಿ, ಕತ್ತರಿಪಟ್ಟು, ನಾಗಬಂಧ ಮುಂತಾದ ಪಟ್ಟುಗಳನ್ನೊಡ್ಡಿ ಕಾಳಗ ನಡೆಸಿದರು (ರಾಜಸೂ. ೨೩); ತನ್ನ ಬಲಗಾಲಿನಿಂದ ಅವನ ಬಲಗಾಲನ್ನು ಕತ್ತರಿಪಟ್ಟು ಹಿಡಿದು ಕೆಡವಿದನು (ಕಥಾಮಂ. ೨). [ಕತ್ತರಿ₂ + ಪಟ್ಟು₁]

**ಕತ್ತರಿಬದಣೆ,** ಕತ್ತರಿಬದನೆ (ನಾ). ಒಂದು ಬಗೆಯ ಬದನೆ: "ವಿಶೋಧಿನೀ – ಫಲಾಶಿ, ದಂತಿ, ಕತ್ತರಿಬದಣೆ" (ಓಷಧಿ. ೧೫೫). **ಕತ್ತರಿಬದನೆ**: ಹಾಗಲಕಾಯಿ, ಕತ್ತರಿಬದನೆ ಕಾಯಿ, ತೊಂಡೆಕಾಯಿ, ಪಡವಲಕಾಯಿ . . . ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳೆಂದು ಮತಾಂತರದಲ್ಲಿ ಹೇಳಲ್ಪಟ್ಟಿದೆ (ಸಕವೈ. ೧೦೨); "ವಾರ್ತಾಕಾ – ಕತ್ತರಿ ಬದ(ಣೆ)ನೆ (ಓಷಧಿ. ೧೫೦). [ಕತ್ತರಿ$_1$ + ಬದಣೆ]

**ಕತ್ತರಿಬದನೆ** 'ಕತ್ತರಿಬದಣೆ' ನೋ.

**ಕತ್ತರಿಜಾವುಲಿ** (ನಾ). ಒಂದು ಬಗೆಯ ಕಿವಿಯ ಆಭರಣ; ಕಿವಿಯ ಮೇಲ್ಗಡೆಯಲ್ಲಿ ಧರಿಸುವ ಚಿನ್ನದ ಮತ್ತು ಹರಳಿನ ಬಾವುಲಿ (ಕ). [ಕತ್ತರಿ$_2$? + ಬಾವುಲಿ$_2$. / ತಮಿ. ಕತ್ತಿರಿಬಾವಿಲಿ; ತೆಲು. ಕತ್ತೆರ ಬಾವಿಲಿ]

**ಕತ್ತರಿಬೀಳು** (ಕ್ರಿ). ಕೊರೆಯಾಗು; ಕಡಿತವಾಗು: ತಮ್ಮ ಲಾಭಕ್ಕೆ ಕತ್ತರಿಬಿದ್ದಿತೆಂದು ಬ್ರಿಟಿಷರಿಗೆ ಹೊಟ್ಟೆಯುರಿ (ಎಆಗ್ನೇ. ೯೬); ತಾವು ಎಚ್ಚರದಿಂದ ಇರದೇ ಇದ್ದರೆ ಸಂಪಾದನೆಗೆ ಕತ್ತರಿಬೀಳುವ ಪ್ರಮೇಯ (ರಂಗವ. ೧೦೯). [ಕತ್ತರಿ$_2$ + ಬೀಳು$_1$ (< ಬೀೞ್$_1$)]

**ಕತ್ತರಿಮುಳ್ಳಿನಗಿಡ** (ನಾ). ಒಂದು ಬಗೆಯ ಸಸ್ಯ: (ವೈಔಗಿ. ೧೬–೩೦೯). [ಕತ್ತರಿ$_1$ + ಮುಳ್ಳು (< ಮುೞ್$_2$) + ಗಿಡ (< ಗಿಡು$_1$)]

**ಕತ್ತರಿಮೊನೆಗಿವಿ** (ನಾ). ಕತ್ತರಿಯ ಅಲಗಿನಂತೆ ನಿಮಿರಿರುವ ಕಿವಿ. 'ಕತ್ತರಿಮೊನೆಗಿವಿಕೊಳ್' ಪರಾ. [ಕತ್ತರಿ$_2$ + ಮೊನೆ$_1$ + ಕಿವಿ$_3$]

**ಕತ್ತರಿಮೊನೆಗಿವಿಕೊಳ್** (ಕ್ರಿ). ಕತ್ತರಿಯ ತುದಿಗಳಂತೆ ಕಿವಿಗಳನ್ನು ನೇರಾಗಿಡು: ಇನತುರಗಂಗಳ್ ಕತ್ತರಿಮೊನೆಗಿವಿಕೊಳ್ವಿನೆಗಮೆಯ್ದೆ ದೆಸೆಯನಿತುಂ ಮಾರ್ದನಿಗುಡುತಿರೆ ಘನಹೇಷಾಧ್ವನಿಗೆಯ್ದುದು ಬನದೊಳಾಗಳಾ ಹಯರತ್ನಂ (ಕುಸುಮಾ. ೧೪–೨೪). [ಕತ್ತರಿಮೊನೆಗಿವಿ + ಕೊಳ್$_1$]

**ಕತ್ತರಿಮೊನೆಗೊಳ್** (ಕ್ರಿ). ಕತ್ತರಿಯಂತೆ ಮೊನಚಾಗು: ಮರಲ್ದಿಟ್ಟ ಕತ್ತರಿಮೊನೆಗೊಂಡೆಱಲ್ವ ಕಿವಿ ಸೂಚಿಸಿದಪ್ಪುದು ಸೋಲ್ತ ಭಾವಮಂ ತುರಗಮಿದೇನನಾಲಿಸುತಮಿರ್ದಪುದು (ಕಾದಂಪೂ. ೬೫೧). [ಕತ್ತರಿ$_2$ + ಮೊನೆ$_1$ + ಕೊಳ್$_1$]

**ಕತ್ತರಿರಸ್ತೆ** (ನಾ). ಎರಡು ರಸ್ತೆಗಳು ಒಂದನ್ನೊಂದು ಛೇದಿಸುವ ಸ್ಥಳ: ಹೇಗೋ ಮಾಡಿ ಈ ಶಬ್ದಗಳು ಅವರ ಮೆದುಳಿನ ಕತ್ತರಿರಸ್ತೆಗಳ ಕೂಟದಲ್ಲಿ ಸೇರಿಕೊಂಡು ಬಿಡುತ್ತವೆಯೋ (ಪ್ರಹಾರ. ೩೨). [ಕತ್ತರಿ$_2$ + ರಸ್ತೆ]

**ಕತ್ತರಿವಣ** (ನಾ). ಕತ್ತರಿಯ ಮೇಲೆ ಹಾಕುವ ತೆರಿಗೆ; ಚಿಪ್ಪಿಗರ ಮೇಲೆ ಹಾಕುವ ತೆರಿಗೆ: ಬೀರವಣ ಕೊಡತಿವಣ ಕತ್ತರಿವಣ ಅಡೆಕಲುವಣ (ವೈಎಂ. ೧೯೩೨, ೧೬–೩೧; 1069). [ಕತ್ತರಿ$_2$ + ಪಣ$_1$]

**ಕತ್ತರಿವಾಣಿ** (ನಾ). ಸೋಕಿದರೆ ಕೈ ಕತ್ತರಿಸುವ ನೀರು; ವಿಷೋದಕ: ನೀರ್ಗೆತ್ತು ಬೆಳ್ಪನದಿಂ ಕತ್ತರಿವಾಣಿ[ಪಾಠಾಂ. ವಾರಿ]ಯಂ ಜಡಜನಂ ಕೈಗುತ್ತಲೇಟ್ಟುರ್ಪವೊಲ್ (ಪಂರಾಮಾ. ೩–೪೮); ಕತ್ತರಿವಾಣಿಯಲ್ಲಿ ಕೆಯ್ದುಡುಕಿದವೊಲ್ ಬೆರಲ್ಪರಿದುವು (ಅರ್ಧನೇ. ೮–೧೧೯); ಉದ್ವೃತ್ತರಂ ಕೂಡೆ ಸಂಹರಿಸಲು ಕತ್ತರಿವಾಣಿಯಾಯ್ತು . . . ವೀರ ಪಾಂಡ್ಯಭುಜ ದಂಡೋಗ್ರಾಸಿ ಧಾರಾಜಳಂ (ಸೌಇಇ. IX–i, ೨೬೭–೧೫; 1160); ರಸದ ಭಾಮಿಯ ತುಡುಕಬಾರದು ಕತ್ತರಿವಾಣಿಯ ದಾಂಟಿದವಂಗಲ್ಲದೆ (ಅವಚಂ. ೫೩–೨೨೮); ಕತ್ತರಿವಾಣಿಯೊಳೆಜಿಗುವ ಚಿತ್ತದೆ ಕವಿತರ್ಪ ಜಳವಿಹಗಂಗಳವೋಲ್ (ಚಂದ್ರಪು. ೬–೩೨); ಸೋಂಕೆ ಕತ್ತರಿಸಿ ಖಂಡಿಪ ಸಿದ್ಧರಸಹಸ್ರದಂ . . . ಕತ್ತರಿವಾಣಿಯ ವಾಪಿ ವಿಸ್ಮಯಂ (ಜಗವಿ. ೧೬–೩೯); ಮುನಿದು ಶಪಿಸಲು ಆ ನೀರು ಕತ್ತರಿವಾಣಿಯಾಗಿ (ಭೈರಸೂ. ೨೭೪). ◻ ಕಿಟೆಲ್ ಅವರು ಈ ಶಬ್ದಕ್ಕೆ 'ಕೈಯಲ್ಲಿ ಕತ್ತಿಯನ್ನು ಧರಿಸಿದವನು' ಎಂದು ಅರ್ಥೈಸಿದ್ದಾರೆ. [ಕತ್ತರಿ$_2$ + ಪಾಣಿ$_1$]

**ಕತ್ತರಿವಾರಿ** (ನಾ). = ಕತ್ತರಿವಾಣಿ: ನೀರ್ಗೆತ್ತು ಬೆಳ್ಪನದಿಂ ಕತ್ತರಿವಾರಿ[ಪಾಠಾಂ. ವಾಣಿ]ಯಂ ಜಡಜನಂ ಕೈಗುತ್ತಲೇಟ್ಟುರ್ಪವೊಲ್ (ಪಂರಾಮಾ. ೩–೪೮). [ಕತ್ತರಿ$_2$ + ವಾರಿ$_2$]

**ಕತ್ತರಿವಾಳಿ** 'ಕತ್ತರಿವಾಟಿ' ನೋ.

**ಕತ್ತರಿವಾಟಿ,** ಕತ್ತರಿವಾಳಿ (ನಾ). ಸೋಕಿದರೆ ಕತ್ತರಿಸುವ ಬಾಳೆ; ಒಂದು ಬಗೆಯ ಬಾಳೆ: ಸುಣ್ಣದಂತೆ ತೀವ್ರಮುಪ್ಪ ಕತ್ತರಿವಾಟಿಯಂತೆ ಸಾರಲರಿದಪ್ಪ . . . ಸಂಸಾರಮಂ ನಂಬಿ (ಧರ್ಮಾಮೃ. ೩–೧೮೬). **ಕತ್ತರಿವಾಳಿ**: ಬೆಳೆದ ಕತ್ತರಿವಾಳಿ ಸುತ್ತಲು ತುಳುಕುತಿಹ ನಂಜಿನ ನದಿಯ ಮಡು (ವೈರಾಕಾ. ೨–೧೭). [ಕತ್ತರಿ$_2$ + ಬಾಟಿ]

**ಕತ್ತರಿವೀಲಿ** (ನಾ). ಕತ್ತರಿಯಾಕಾರದಲ್ಲಿ ಸಿಕ್ಕಿಸಿರುವ ನವಿಲುಗರಿ: ಮುತ್ತಿನ ಮೂಗುತಿಯೊಪ್ಪೆ ಚುಂಚುಗಳ್ ಕತ್ತರಿವೀಲಿಯಂತಲೆಯೆ ಜೋಲ್ದಿರೆ ಚೊಲ್ಲೆಯಂ (ಲೀಲಾವ. ೨–೩೬); ಗೀರ್ವಾಣಬಾಣಾಸನ ಚ್ಛಳದಿಂ ಕತ್ತರಿವೀಲಿಯೊಂದು ಪಣೆಕಟ್ಟಂ ಕಟ್ಟಿಕೊಂಡು . . . ಬಂದೊದಱಿದಂ ಕಾರೆಂಬ ಗೋಪಾಳಕಂ (ಅರ್ಧನೇ. ೮–೪); ನೆತ್ತಿಯೊಳ್ ಕತ್ತರಿವೀಲಿಯುಂ ಮಿಱುಗೆ (ಜಗವಿ. ೫–೪೩); ಉಟ್ಟ ಕತ್ತರ[ರಿ]ವೀಲಿಯುಡಿಗೆಯ ಬೆಡಂಗವುರೆ ತೊಟ್ಟ ಪೊಂಬುಲಿದೊವಲ ಕುಪ್ಪಸದ (ಸೌಂದಪು. ೧೮–೧೮). [ಕತ್ತರಿ$_2$ + ಪೀಲಿ]

**ಕತ್ತರಿವೆಸ** (ನಾ). ಕತ್ತರಿಯಿಂದ ಮಾಡಿದ ಕೆಲಸ; ಕತ್ತರಿಗೆಲಸ; ಸಿಂಪಿಗನ ಕೆಲಸ: ಅತಿಶಯಿಸಿ ಬರೆದ ಸಚಿತ್ರ ರಚನೆಯುಮದರ್ಕೆ ದೊರೆಯಲ್ಲದೆನೆ ವಿನಿರ್ಮಿಸಿದ ಸುಯ್ಯಾಣವೆಸದ ಕತ್ತರಿವೆಸದ ಮಣಿವೆಸದ ಮೇಲ್ಗಟ್ಟನೊಳಂ (ವರ್ಧಪು. ೬–೩ ವ); ಕತ್ತರಿವೆಸದ ಕದಳಿಕೆಗಳಿಂದ ಲಂಕರಿಸಲ್ಪಟ್ಟುದಂ (ಪ್ರಕಟೀ. ೧೪–೧೬). [ಕತ್ತರಿ$_2$ + ಬೆಸ$_1$]

**ಕತ್ತರಿಸು,** ಕಂತರಿಸು (ಕ್ರಿ). ೧. ತುಂಡರಿಸು; ಕೊಯ್ಯು; ಹೋಳು ಮಾಡು; ಛೇದಿಸು: ಕತ್ತರಿಸಿ ಚಂದ್ರಕಳೆಯಂ ಪತ್ತಿಸಿದಂತೆಸೆವ ಸತಿಯ ಸುಲಿಪಲ್ಪೊಳಪಿಂ (ಮಲ್ಲಿಷು. ೩–೭೫); ಪತ್ತೆ ಕತ್ತರಿಸಿದ ಗಡ್ಡಮಿಟ್ಟ ತಿಲಕಂ (ಅರ್ಧನೇ. ೫–೩೧); ಹೆಮ್ಮರಂಗಳನೊಮ್ಮೊಮ್ಮೆಯೆ ಕತ್ತರಿಸುತುಂ ಕೈ ಪಱಿದ ದಂತಿ ಕಾಡೊಳ್ ಪೊಕ್ಕಂತೆ (ನಂಬಿರ. ೧೮–೧೪); ಸರಳ ಕೆನ್ನೆಗೆ ಸೇದಿದನು ಸಂಗರದ ಭೂರಿಶ್ರವನ ಖಡುಗದ ಕರವ ಕತ್ತರಿಸಿದನು (ಕುವ್ಯಾದ್ರೋ. ೧೪–೧೩); ಕತ್ತರಿಸಿದ ಬಿಳಿಯೆಲೆ ಕಯ್ಯೊಳಗೆ ಪೊರೆಯೆತ್ತಿದಡಕೆ ಬಾಯೊಳಗೆ (ಕುರಾಸಾಂ. ೨೧–೩೭). ೨. ಕಡಮೆ ಮಾಡು; ಖೋತಮಾಡು: ಮಿತವ್ಯಯ ದೃಷ್ಟಿಯಿಂದ ಅನಾವಶ್ಯಕ ಖರ್ಚುಗಳನ್ನೆಲ್ಲ ಕತ್ತರಿಸಲಾಗಿದೆ (ರೂಢಿ). ೩. (?): ಆಡುವ ನರ್ತನದ ಬಿತ್ತರಿಸುವ ಬೀದಿಗಳ ಕತ್ತರಿಸುವ ರಂಗವಲಿಯ ನರ್ತಿಸುವ ವೈತಾಳಿಕರ (ಅನಂಪು. ೯–೫೯ ವ). ೪. (ಆಲಂ) ತಿನ್ನು; ಕಬಳಿಸು; ಭಕ್ಷಿಸು: ಬಿಟ್ಟಿಕೂಳು ಸಿಕ್ಕರೆ ಅವನು ಕತ್ತರಿಸದೆ ಬಿಡನು (ರೂಢಿ). ೫. ನೆಟ್ಟಗೆ ನಿಲ್ಲಿಸು; ನಿಗುರಿಸು: ಆ ಸಿಂಗಂ . . . ಕಿವಿಯಂ ಕತ್ತರಿಸಿ ಶರೀರಮಂ ಸಂಕೋಚಿಸಿ ನಟ್ಟದಿಟ್ಟಿಗಳ್ವೆರಸು ನಿನ್ನನೆ ನೋಡುತ್ತುಮಿರ್ಕುಂ (ಪಂಚತಂ. ೧೬೬–೧೧); ಕತ್ತರಿಸಿ ಕಿವಿಗಳಂ ನಸುಗುತ್ತುತ್ತುಂ ಮೆಯ್ಯ ಖಂಡಮಂ (ಪಂರಾಮಾ. ೪–೧೦೮). **ಕಂತರಿಸು**: ೧. ಕೂಡಿಬಹ ಶರನಿವಹವಂತರಿಸಿ ಕಂತರಿಸಿ ಪೋಡಿಸದೆ ಮಿಗಿಲಾಸ್ತ್ರರಾಜಿಯಂ ಭಾಜಿಯಂ (ಜಿನಮು. ೨೯–೧೮). [ಕತ್ತರಿ$_2$ + –ಸು$_1$]

**ಕತ್ತರೆ** 'ಕತ್ತರಿ$_2$' ನೋ.

**ಕತ್ತಲಿಕಳ್ಳಿ** (ನಾ). ಒಂದು ಜಾತಿಯ ಕಳ್ಳಿ; ಮುಳ್ಳುಗಳ್ಳಿ: ಬೆತ್ತ ಬಿದಿರು ಮುಳ್ಮುತ್ತಕ ಕಗ್ಗಲಿ ಕತ್ತಲಿ [ಪಾಠಾಂ. ರಿ]ಕಳ್ಳಿ ಕಾಜಿಗಳ (ಕುಭಾಸಾಂ. ೨೭–೫೭). [ಕತ್ತಲಿ$_0$ + ಕಳ್ಳಿ$_2$]

**ಕತ್ತಲಿಡಿಸು** (ಕ್ರಿ). ಕತ್ತಲೆ ಕವಿಸು ; ಕಾಣದಂತೆ ಮಾಡು : ಅವಳ ಅಪೂರ್ವಲಾವಣ್ಯವು ವಿಳಾಸ ಪ್ರೌಢಿಮೆಗಳು ಚಂಡಶಾಸನನ ಕಣ್ಣನ್ನು ಕತ್ತಲಿಡಿಸಿ ಬಗೆಯನ್ನು ಸೂರೆಗೊಳ್ಳುವುವು (ಕಾವ್ಯಸ. ೬೫).
[ಕತ್ತಲಿಡು + –ಇಸು$_3$]

**ಕತ್ತಲಿಡು** (ಕ್ರಿ). ಕತ್ತಲೆ ಕವಿ ; ಕಾಣದಂತಾಗು : ದೇವಾಂಬೆಗೆ ಸಿಡಿಲು ಬಡಿದಂತಾಯಿತು ; ತಲೆ ತಿರುಗತೊಡಗಿತು, ಕಣ್ಣುಕತ್ತಲಿಟ್ಟಿತು (ಚಿದೇವ. ೭೬). [ಕತ್ತಲೆ$_1$ (< ಕಟ್ತಲೆ) + ಇಡು$_1$]

**ಕತ್ತಲಿಸು** 'ಕಟ್ತಲಿಸು' ನೋ.

**ಕತ್ತಲು** 'ಕಟ್ತಲೆ' ನೋ.

**ಕತ್ತಲೆ$_1$** 'ಕಟ್ತಲೆ' ನೋ.

**ಕತ್ತಲೆ$_2$** (ನಾ). ಒಂದು ವಂಶದ ಹೆಸರು : ಕತ್ತಲೆಕುಲಕಮಳ ಮಾರ್ತ್ತಣ್ಡನ್ ಮಯಾರಿವತೀ ಪುರವರಾಧೀಶ್ವರಂ ಜಿನಧರ್ಮ ನಿರ್ಮ್ಮಳಂ . . . ಬೆಳ್ವಲಾಧಿಪತಿ ಕಾಟರಸರು (ಎಇ. XV, ೩೪೧–೪೫ ; 1072). [?]

**ಕತ್ತಲೆಗುದ್ದು** (ನಾ). ಕತ್ತಲೆಯಲ್ಲಿ ಕಾಣದೆ ಬಂದು ಗುದ್ದುವ ಒಂದು ಬಗೆಯ ಆಟ : ಗುಡುಗು ಗುತ್ತಿನ ಚಂಡು ಗುಮ್ಮನೆ ಬಡಿವ ಕತ್ತಲೆಗುದ್ದು ಗಂಬದ ಗಡಣೆ ಕಣ್ಣುಮುಚ್ಚಾಟ ಸವಗಲಿ ಹಲ್ಲೆಯಾಟಗಳ (ಕುವ್ಯಾಅ. ೬–೨). [ಕತ್ತಲೆ$_1$ (< ಕಟ್ತಲೆ) + ಗುದ್ದು$_2$ (< ಗುರ್ದು$_2$)]

**ಕತ್ತಲೆಗೆಯ್** (ಕ್ರಿ). ಕತ್ತಲೆಯನ್ನು ಉಂಟುಮಾಡು : ಎತ್ತ ನೋಡಲು ಕಳಿವಣ್ಣುಗಳ್ ತರುಲತೆ ಕತ್ತಲೆಗೆಯ್ವುದಾ ಬನದಿ (ಮೋಹತ. ೨೪–೬೦). [ಕತ್ತಲೆ$_1$ (< ಕಟ್ತಲೆ) + ಕೆಯ್$_1$]

**ಕತ್ತಲೆಗ್ರಹಣ** (ನಾ). ಅಮಾವಾಸ್ಯೆಯ ದಿನ ಆಗುವ ಗ್ರಹಣ ; ಸೂರ್ಯಗ್ರಹಣ : ತಟ್ಟವಾಡಿನಾಡ ಮಂನೆಯ [ಚ]ಂದರಸಮ[ಯಳ] ಯಬರಸಿಯ ದತ್ತಿಯಾಗಿ ಕತ್ತಲೆಗ್ರಹಣದಲ್ಲಿ ಬಳಿಯ ಬಾಡದ ತದ್ವಾಡಿಗೆಯ (ಚಂ)ದೇಸ್ವರ ದೇವರ ಸ್ಥಾನದ ಪೂರ್ವದ × [ಲ್ಲಿ]ಹಡದಂತಟಂ (ತೋಟ) (ಸೌಇಇ. XX, ೨೧೦–೭ ; ?).
[ಕತ್ತಲೆ$_1$ (< ಕಟ್ತಲೆ) + ಗ್ರಹಣ]

**ಕತ್ತಲೆಮನೆ** (ನಾ). ೧. ಅಂಧಕಾರ ತುಂಬಿದ ಮನೆ. ೨. ಸೆರೆಮನೆ ; ಜೈಲು : ಆರುತಿಂಗಳು ಕತ್ತಲೆಮನೆ ವಾಸ (ರೂಢಿ). ೩. (ಆಲಂ) ಮಾಯಾರೂಪವಾದ ಸಂಸಾರ ಬಂಧನ (?) : ಭಕ್ತಿಯನಱಿಯದ ಅಧಮನಿಗೊಂದು ಕತ್ತಲೆಮನೆಯು ಸಾಕ್ಷಿ (ಪುರಂದ. ೨–೧೭–೯).
[ಕತ್ತಲೆ$_1$ (< ಕಟ್ತಲೆ) + ಮನೆ]

**ಕತ್ತಲೆವಣಿ** 'ಕಟ್ತಲೆವಣಿ' ನೋ.

**ಕತ್ತಲೆಹರ** (ನಾ). ಕತ್ತಲೆಯನ್ನು ನಿವಾರಿಸುವವನು ; ಸೂರ್ಯ : ರತ್ನದ ಕವಾಟ ತೋರಣಗಳು ಕತ್ತಲೆಹರನಂತೆ ಕಣ್ಣಿಗೆ ತೋಱುತಿವೆ (ತೀರ್ಥಮ. ೫೩). [ಕತ್ತಲೆ$_1$ (< ಕಟ್ತಲೆ) + ಹರ$_3$]

**ಕತ್ತವ್ಯ** (ನಾ). ಕರ್ತವ್ಯ : ನಾಗತ್ತರನ ಮಗಳೊಣ್ಡಬ್ಬೆಯು ಕತ್ತವ್ಯ ವೇಳೆಗೊಣ್ಡು ಸತ್ತಂ (ಎಕ. IX, ಬೆಂಗಳೂ. ೮೮–೪ ; 900).
[← ಪ್ರಾ. ಕತ್ತವ್ವ < ಸಂ. ಕರ್ತವ್ಯ]

**ಕತ್ತಳ$_1$** (ನಾ). ಅಂಗರಕ್ಷಕವಾದ ಕವಚ ; ಚಿಲಖತ್ತು : ಕಬ್ಬುನದ ಕಗ್ಗಿದ ಬಿಟ್ಟನಮರ್ಕೆವೆತ್ತ ಕತ್ತಳಮೆನಿಸಿತ್ತು ಪುತ್ತಗಳ ಮೆಯ್ಯ ಮಲಂ ಮಲಧಾರಿದೇವರಾ (ಎಕ. VIII, ತೀರ್ಥಹ. ೧೯೯–೧೩ ; 1083) ; ಖಳ ಕರ್ಮರಾಜನೊದವಿದ ಬಳಮಂ ಕೆಡಿಸಲ್ಕೆವೇಡಿ ತೊಟ್ಟಿರ್ದಾ ಕತ್ತಳಮಂ ಪೋಲ್ತುದು ನೋಡಲ್ ಮಳಮೋರಂತಮರ್ದು ಕೂಡೆ ಸರ್ವಾಂಗಮುಮಂ (ಧರ್ಮಾಮೃ. ೩–೨೭೬).
[ದೇ. ‖ ತಮಿ. ಕತ್ತಣ ; ತೆಲು. ಕತ್ತಳ]

**ಕತ್ತಳ$_2$** (ನಾ). ಬಿಳಿಯ ಬಣ್ಣದ ಕುದುರೆ : ಕತ್ತಳನನೇಱಿ ಸಮರದೊಳತ್ತಿಗ ಭೂಪಾಳನೆಯ್ದೆವರೆ ಕಂಡು (ಸೌಇಇ. IX–i, ೨೦೭–೫೦ ; 1124) ; ಚಂದ್ರಿಕೆಯಿಂದ ನಿರ್ಮಿಸಿದಂದದಿಂ ಚೆಲ್ವೊಂದಿರಲು ಕತ್ತಳನ ರೂಪಂ ತಳೆದನಾ ಖಚರಂ (ಕುಮುರಾ. ೩–೫೮) ; ಜನ್ನನಂ ನೀಲನ ನಳಗನಂ ತನ್ನಿ ಕತ್ತಳವಗೌಹಳಿಗನಂ ತನ್ನಿ (ಬಸಪು. ೫೯–೪೦) ; ಕತ್ತಳನನೇಱಿ ಬಿಜ್ಜಳನೃಪಂ ಪೋಗುತಿರಲು (ಲಶಿಚಂ. ೩೨–೨೩) ; ಕುಂಕುಮ ಬೋರ ಚೇರ ಕೊಂಗ ಕತ್ತಳ ಮುಂಜ ಮೊದಲಾದ ವರ್ಣಶುದ್ಧಾಂಗ ದಶ್ವಗಳು ಮೆಱೆದುವು (ಭರಚ. ೨೦–೫೪). [?]

**ಕತ್ತಳಿಕೆ$_1$** (ನಾ). ಕವಚ ; ಆವರಣ ; ಹೊದಿಕೆ : ಲಿಂಗದ ಮುಖಕ್ಕೆ ಮಱೆಯಾದ ಕತ್ತಳಿಕೆಯಂ ಕಳೆಯಲನುಗೈದರು (ಸಿದ್ಧರಾ. ೬–೩೦) ; ಲಿಂಗದ ಮುಖಕೆ ಕವಿದಡ್ಡವಾದ ಕತ್ತಳಿಕೆ ಹೊರೆ ತೆರೆ ಸೆರೆಗಳ . . . ಪಿಂಗಿಸಿ ಕಳೆದು (ಸಿದ್ಧರಾ. ೬–೩೧). [ಕತ್ತಳ$_1$ + –ಇಕೆ]

**ಕತ್ತಳಿಕೆ$_2$** (ನಾ). ಒಂದು ಆಯುಧ ; ಕಿರುಗತ್ತಿ ; ಕಠಾರಿ : ಬೀಸುವ ಪಾಸಮೋರೆಯಿಂದಿಡುವಱಿ ಪೊಯ್ವ ಕತ್ತಳಿಕೆ ಕುತ್ತುವ ಕೊಂತ ಮುರುಳ್ಚುವೊಡ್ಡುಗಲ್ (ಚಂದ್ರಪು. ೫–೧೦೫). [< ಸಂ. ಕರ್ತರಿಕಾ]

**ಕತ್ತಾಳೆ, ಕದ್ದಾಳೆ$_2$, ಕರ್ದಾಳೆ** (ನಾ). ಒಂದು ಬಗೆಯ ಸಸ್ಯ ; ಕಲ್ನಾರು ; ದೆವ್ವಬಾಳೆ (ಉಕ) : ಮನೆಗೆ ಕತ್ತಾಳೆಗಡ್ಡೆ ಬಂತು (ಅನ್ನಪೂ. ೭೨). **ಕದ್ದಾಳೆ$_2$** : ಕೆಲವು ಕಡೆ ಕದ್ದಾಳೆ ಮರಗಳಿಂದ ಮುಚ್ಚಿರುವ ಕಾರಣ ಕಳ್ಳನಂತೆ ಸದ್ದಿಲ್ಲದೆ ಪ್ರವಹಿಸುವದಾಗಿಯೂ (ಅರ್ಕಮಾ. ೯೯) ; ಸಮೀಪದಲ್ಲಿರುವ ಕದ್ದಾಳೆಯ ಮರದ ಚಿಗುರುಗಳ ಕೊಯ್ದು (ವಚಕಾ. ೨೩). **ಕರ್ದಾಳೆ** : ಸೂರ್ಕೇಱಿ ಬಂದಾನೆಯೋ ಕಮಲಾರಾಮ ಹರಿನ್ಮಣೀನಿಲಯಮೋ ತಳ್ತಿಟ್ಟ ಕರ್ದಾಳೆಯೋ (ಚಿಕವಿ. ೩–೮೪). [ದೇ. ‖ ತಮಿ. ಕಱ್ಱಾಟ್ಟೈ ; ಮಲ. ಕಜ್ಜವಾಟ]

**ಕತ್ತಿ** (ನಾ). ೧. ಖಡ್ಗ ; ಕರವಾಳು : ಮರುಳ್ವಕ್ಕದ ನಿಟ್ಟೊಡಲ್ ಮಸೆದ ಕತ್ತಿಗೆ ಕಣ್ಬೊಲನಾದುವೆತ್ತಲುಂ (ವರ್ಧಪು. ೧೫–೩೮) ; ಆತಂಗೆ ಕತ್ತಿಯಂ ಮಸೆದಂ (ಶಮದ. ೧೩೦ ಪ್ರಯೋ) ; ಕಳ್ಳರ ನಿವಹದಲಿ ಕಂಡವನ ತೊಡೆಯನು ಕೊಯ್ದು ಕತ್ತಿಯಲಿ (ಸಂಭಪ. ೨೫–೧೫) ; ಕತ್ತಿಯ ಹೊಳಹು ತೋಱಿತು ಸೂರ್ಯನ ಮೆಯ್ಯ ಮುತ್ತಿದ ಕಿರಣಗಳಂತೆ (ಮೋಹತ. ೧೧–೬೭) ; ವಾಮಮಾರ್ಗವೆಂದರೆ ಕತ್ತಿಯೊಡನೆ ಸರಸ (ಭಾರದ. ೨೨೮). ೨. ಒಬ್ಬಾತನ ಹೆಸರು : ಶ್ರೀ ಕತ್ತಿಯರ ಪ್ರಿಥಿವಿ ರಾಜ್ಯಂಕೆಯೆ (ಎಇ. VI, ೨೫೩–೧ ; 800) ; ಕತ್ತಿ ಅರಸರ ಕೊಜ್ಜುಗಣಿ ಅರಸರ ಬಾಗೆ ಊರೊಳೆ (ಮೈಆರಿ. ೧೯೩೯, ೨೨–೧ ; 750).

**ಕತ್ತಿಇರಿ** = ವಿರೋಧಮಾಡು ; ಹಗೆ ಸಾಧಿಸು : ಅವನು ಯಾಕೆ ನನ್ನಮೇಲೆ ಕತ್ತಿ ಇರಿಯುತ್ತಾನೆ. (ರೂಢಿ). **ಕತ್ತಿಎತ್ತಿಕಟ್ಟು** = ಯುದ್ಧಕ್ಕೆ ಸಿದ್ಧತೆಮಾಡು ; ಕತ್ತಿಹಿಡಿದು ನಿಲ್ಲು : ಕತ್ತಿಎತ್ತಿಕಟ್ಟಿದ ಸಮಾಚಾರವು ಗೂಢಚಾರರ ಮುಖಾಂತರ ತಿಳಿಯಿತು (ದೌಲತ್. ೬೮). **ಕತ್ತಿಮಸೆ** = ಕತ್ತಿಇರಿ : ಮನೆಯವರ ಮೇಲೆ ಕತ್ತಿಮಸೆದು ಹೊರಗಿನವರ ಪಕ್ಷ ಸಾಧಿಸುವುದುಂಟೆ? (ಆಷಾಭೂ. ೫೨). **ಕತ್ತಿಮಾಡು** = ಧಾಳಿಮಾಡು ; ಕತ್ತಿಯಿಂದ ಯುದ್ಧಮಾಡು (?) : ಚವಡಗೌಂಡ ಬೊಂಮಗೌಂಡ ಸಹಾ ಅವರ ಮೇಲೆ ಕತ್ತಿಮಾಡಿದಲ್ಲಿ ಹೆಣಮಯವಾಗಿಯಿ ಗೌಡರ ಮಗನು ಮಡಿದುಹೋದ ವರ್ತಮಾನಲು ಕೇಳಿ (ಎಕ. VIII, ಸಾಗರ. ೪೬–೩೩ ; 1646 ?). **ಕತ್ತಿಹಾಕು** = ಆತಂಕ ಪಟ್ಟುಕೊಳ್ಳು ; ತಳಮಳಗೊಳ್ಳು (?) : ಇಷ್ಟಕ್ಕೇಕೆ ಬೆದರಿ ಕತ್ತಿಹಾಕಬೇಕು ಅನ್ನುವ ಧೋರಣೆಯಲ್ಲಿ ಸತ್ಯವಿಲ್ಲದೇ ಇರಲಿಲ್ಲ (ಮರಳಿ. ೧೫೬).

[ದೇ. ‖ ತಮಿ. ಮಲ. ತುಳು. ಕೊಡ. ತೆಲು. ಕತ್ತಿ. / ಹಿಂ. ಕತ್ತೀ = ಸಣ್ಣಖಡ್ಗ, ಚಾಕು, ಚೂರಿ]

**ಕತ್ತಿಕಟ್ಟು** (ಕ್ರಿ). ೧. ಕತ್ತಿಯನ್ನು ಕಟ್ಟು. ೨. (ಆಲಂ) ವಿರೋಧಿಸು ; ಹಗೆ ಸಾಧಿಸು : ನಿಮ್ಮ ಮೇಲೆ ಕತ್ತಿಕಟ್ಟಲಿಲ್ಲ (ದೌಲತ್. ೮೧) ; ಇವನು ನನ್ನ ಮೇಲೆ ಕತ್ತಿಕಟ್ಟಲು ಯತ್ನಿಸುತಾ ಇದಾನೆ (ಮುನಿಮಾ. ೨೦೭). [ಕತ್ತಿ + ಕಟ್ಟು$_1$]

**ಕತ್ತಿಕಾಳೆಗ** (ನಾ). ಕತ್ತಿಯಿಂದ ಮಾಡುವ ಯುದ್ಧ ; ಖಡ್ಗಯುದ್ಧ : ಜೋಕೆ ! ಅವನು ಕತ್ತಿಕಾಳೆಗದಿ ಬಲುಗಟ್ಟಿಗನಂತೆ (ಚಂದ್ರಸ. ೧೦೦). [ಕತ್ತಿ + ಕಾಳೆಗ]

**ಕತ್ತಿಗ** (ನಾ). ೧. ಒಂದು ಕಾಡು ಜನಾಂಗ : ಕತ್ತಿಗರು, ಕುಲ್ಕರು, ಭಿಲ್ಲರು ಎಂಬ ಕಾಡು ಜನರು ಗುಜರಾತ್ ದೇಶದ ಕಾಡುಗಳಲ್ಲಿ ವಾಸವಾಗಿದ್ದಾರೆ (ಭೂಗೋಳ. ೭೭). ೨. ಒಬ್ಬಾತನ ಹೆಸರು : ಅಂಗೀರಸಗೋತ್ರದ ಈಶ್ವರನ ಕತ್ತಿಗನ ಮಕಳು ನಾರಾಯಣಭಟ್ಟರಿಂಗೆ (ಎಇ. XXVIII, ೨೮–೫೨ ; 1256). [?]

**ಕತ್ತಿಗೀಳು** (ಕ್ರಿ). (ಒರೆಯಿಂದ) ಕತ್ತಿಯನ್ನು ಕೀಳು, —ಹೊರದೆಗೆ : ಘೋಳಾಯ್ತುರಾರ್ಪಿನಿಂದೆರಡು ಕೈಯಲಿ ಕತ್ತಿಗಿತ್ತು ಸವಜಾದರು ಕಾಲಕಮ್ಮರಿಯ ತೆಜದಲಿ (ಸಾಳ್ವಭಾ. ೧೭–೨೯). [ಕತ್ತಿ + ಕೀಳು$_1$ (< ಕೀಱ್$_1$)]

**ಕತ್ತಿಗೆ** (ನಾ). ಕೈಗತ್ತಿ ; ಮಚ್ಚು : "ಕೃಪಾಣೀ, ಊನಕರ್ತರೀ – ಈ ೨ ಕಡಿವ ಕತ್ತಿಗೆ" (ಹಲಾಯು. ೯೭–೪೪೧) ; ಪೊಳೆವ ಕತ್ತಿಗೆಯುಂ ಬೆರಸು ಪೊಱಮಟ್ಟು ಕೀರ್ತಿಗೆಯೆಂಬುಗ್ರದೇವತೆ ಬೆಸಸು ಬೆಸಸೆಂದು ಬೆಸನಂಬೇಡೆ (ಪಂಪಭಾ. ೮–೪೨ ವ) ; ಕುಡುವುದು ಕಿಚ್ಚಂ ದೇವರ್ ತಡೆಯದೆ ಕತ್ತಿಗೆಯನೆಮಗೆ ಬೆಸಸುವುದು (ಅಜಿಪು. ೧೦–೪೦) ; ಕತ್ತಿಗೆಯಂ ಜಡಿಯುತ್ತುಮಂಗರಕ್ಕರ ಪಡೆ ತಾಗೆ (ಪಂರಾಮಾ. ೧೩–೭೮) ; ಕರಗಸದೊಳ್ ಪೋಳ್ದು ಕತ್ತಿಗೆಯೊಳ್ ಸೀಳ್ದು (ರತ್ನಕ. ೨–೪೨). [< ಸಂ. ಕರ್ತ್ರಿಕಾ]

**ಕತ್ತಿಮತ** (ನಾ). ಕತ್ತಿಯ ಬಲದಿಂದ ಸ್ಥಾಪಿಸಿದ ಮತ ; ಬಲಾತ್ಕಾರದಿಂದ ನೆಲೆಗೊಳಿಸಿದ ಮತ, —ಪಂಥ (*). [ಕತ್ತಿ + ಮತ]

**ಕತ್ತಿಮಾತು** (ನಾ). ಎರಡು ದೇಶಗಳು ಪರಸ್ಪರ ಯುದ್ಧ ಘೋಷಣೆ ಮಾಡುವಿಕೆ (*). [ಕತ್ತಿ + ಮಾತು$_1$]

**ಕತ್ತಿವರಸೆ** (ನಾ). ಖಡ್ಗದಿಂದ ಮಾಡುವ ಸಾಧನೆ : ತನ್ನ ಮಾತಿನ ಕತ್ತಿವರಸೆಯ ಆಟಕ್ಕೆ ನಾರಣಪ್ಪನಂಥ ಬಡಪಾಯಿ ಪ್ರತಿಸ್ಪರ್ಧಿಯಾಗಿ ಸಿಕ್ಕಿದ್ದು ಮಾತ್ರ ಅವಳ ದುರ್ದೈವ (ಅನಾಥೆ. ೩೧). [ಕತ್ತಿ + ವರಸೆ (< ವರಿಸೆ)]

**ಕತ್ತಿಶರ್ಮ** (ನಾ). ಒಬ್ಬಾತನ ಹೆಸರು : ಆಲಬೋಯಸ್ಯ ಕೌಣ್ಡಿಲ್ಯಗೋತ್ರಸ್ಯ ಕತ್ತಿಶರ್ಮ್ಮಣ ಪುತ್ರಾಯ (ಇಆ. VII, ೧೬೭–೧೯ ; 668). [ಕತ್ತಿ + ಶರ್ಮ]

**ಕತ್ತಿಸಾಧಕ** (ನಾ). ೧. = ಕತ್ತಿಸಾಧನ (*). ೨. ಖಡ್ಗವಿದ್ಯೆಯಲ್ಲಿ ನಿಪುಣ, —ಚತುರ (*). [ಕತ್ತಿ + ಸಾಧಕ]

**ಕತ್ತಿಸಾಧನ** (ನಾ). ಖಡ್ಗವಿದ್ಯೆಯ ಸಾಧನೆ. [ಕತ್ತಿ + ಸಾಧನ]

**ಕತ್ತಿಸು** (ಕ್ರಿ). ಹೊತ್ತಿಸು ; ಉರಿಮಾಡು : ಏಳುಬತ್ತಿಗಳನ್ನು ಕತ್ತಿಸಿದ ಮೇಲೆ ಮನೆಯೆಲ್ಲಾ ಬೆಳಕಾಯಿತು (ಚಂಗಾಳ್ಯ. ೧೮) ; ಒಲೆ ಕತ್ತಿಸುತ್ತಿದ್ದಾಳೆ (ರೂಢಿ). [ಕತ್ತು$_1$ + –ಇಸು$_3$]

**ಕತ್ತು$_1$** (ಕ್ರಿ). ೧. ಹೊತ್ತಿ ಉರಿಯಾಗು ; ಉರಿಹತ್ತು ; ಸುಡು : ಅದು ಉರಿಯ ಬುಡ ತುದಿಯಂತೆ ಕತ್ತುವುದು ಪೂರ್ವವಾಗಿ ಮೇಲೆ ಹತ್ತಿ ಉರಿವುದು ಉತ್ತರವಾಗಿ (ಮೋಳಿಮಾ. ೧೩೯–೫೩೭) ; ಕಲ್ಲು ಬೆಂಕಿಯ ಕೂಡಿ ಉರಿವಾಗ ಹುಲ್ಲು ಕತ್ತದುದಿಲ್ಲ (ಮಧುವ. ೨) ; ಹೊತ್ತುತ ಹೊಗೆವುತ ಕತ್ತುತ ಕವರುತ ಸುತ್ತುವರಿದು . . . ಒತ್ತಿ ಹಿಡಿದುದಾ ಕಿಚ್ಚು (ನೇಮಿಸಂ. ೩೪–೭೩) ; ಕತ್ತಿದ ಕಡಿಯೊಳುಪ್ಪಂ ಲೆಪ್ಪಿಸಿದಂತುಂ (ರಾಮಾಶ್ವ. ೧೩೦–೧೩). ೨. ಹೊತ್ತಿಸು ; ಬೆಂಕಿಯುಂಟುಮಾಡು : "ಗಳ ಶಿಖಿಪಟೂಕರಣದೊಳ್ಕತ್ತು" (ಶಬ್ದಮಂ. ೯೮). [ದೇ. ‖ ಮಲ. ಕತ್ತು ; ಕೊಡ. ಕತ್, ಕತ್ತಿ]

**ಕತ್ತು$_2$** (ಕ್ರಿ). ಕೂಗು ; ಕಿರಿಚು ; ಧ್ವನಿಮಾಡು (*). [ದೇ. ‖ ತಮಿ. ಕತ್ತು]

**ಕತ್ತು$_3$** 'ಕಟ್ಟು' ನೋ.

**ಕತ್ತು$_4$** 'ಖತ' ನೋ.

**ಕತ್ತುಪಟ್ಟಿ** (ನಾ). ಕೊರಳಪಟ್ಟಿ : "(ಅಂಗಿ, ಒಳಅಂಗಿ, ಮೊ. ಗಳ) ಕೊರಳಪಟ್ಟಿ, ಕತ್ತುಪಟ್ಟಿ . . . ನಾಯಿಯ ಅಥವಾ ಬಂದೀವಾನನ ಕೊರಳಪಟ್ಟಿ" (Collar. ಇಂಕನಿ). [ಕತ್ತು$_3$ (< ಕಟ್ಟು) + ಪಟ್ಟಿ$_2$]

**ಕತ್ತುಮೂಳೆ** (ನಾ). ಬರಿ ಕೊರಳು ; ಆಭರಣವಿಲ್ಲದ ಕತ್ತು (*). [ಕತ್ತು$_3$ (< ಕಟ್ಟು) + ಮೂಳೆ$_1$ (< ಮೂೞೆ$_1$)]

**ಕತ್ತುರಿ, ಕತ್ತೂರಿ** (ನಾ). ೧. ಕಸ್ತೂರಿಮೃಗದ ನಾಭಿಯಿಂದ ದೊರೆಯುವ ಸುಗಂಧ ದ್ರವ್ಯ ; ಕಸ್ತೂರಿ ; ಮೃಗಮದ : "ಮೃಗಮದಂ ಮೃಗನಾಭಿ ಕತ್ತುರಿಯೆನಿಕ್ಕು" (ಮಂಗರಾ. ೯೯–೨೧) ; ಕತ್ತುರಿಯಲ್ ಬರೆದಂತಪ್ಪ ವಿಕ್ರಾಂತತುಂಗನ ಮಿಾಸೆಗಳ್ (ಪಂಪಭಾ. ೨–೩೯ ವ) ; ಕತ್ತುರಿಯ ಬೊಟ್ಟನಿಟ್ಟು (ಧರ್ಮಾಮೃ. ೩–೯) ; ಸಾದು ಜವಾಜಿ ಕತ್ತುರಿ ಗಂಧಲೇಪದಲಿ (ಕುವ್ಯಾಪ್ರೋ. ೪–೪೯) ; ದಿಟ್ಟಿಯ ದೋಷಕೆಂದು ಕತ್ತುರಿಯಡ್ಡಬೊಟ್ಟನಿಟ್ಟು (ಸೌಂದಪು. ೭–೨೩) ; ಪನ್ನೀರ ಚಳೆಯ ಕತ್ತುರಿಯ ಸಾರಣೆ (ಕಂನವಿ. ೮–೧೧) ; ಕನ್ನಡಂ ಕತ್ತುರಿಯಲ್ತೆ (ರಾಮಾಶ್ವ. ೬–೧೩). ೨. ಒಂದು ಬಗೆಯ ಮಲ್ಲಿಗೆ ; ಕಸ್ತೂರಿ ಮಲ್ಲಿಗೆ : ತಾರಗೆಯ ನೊಳೆಗಳಂತಿರ್ದ ಪಡ್ಡಳಿಗಳಂ ಹಾರೈಸುತ ಕೊಂಡು ಬಿಳಿಯ ಕತ್ತುರಿಗಳಂ (ಪುಷ್ಪರ. ೯–೧೮) ; ಚೆಂಗಣಿಗಿಲೆ ಸೇವಂತಿಗೆ ಕತ್ತುರಿ ಸಿಂಗದ ಮುಡಿವಾಳ ದವನ ಮಂಗಳ ತುಳಸಿ ಬಿಲ್ವದ ಪತ್ರೆಗಳ (ಮೋಹತ. ೨೨–೪೨) ; ಕತ್ತುರಿ ಸೇವಂತಿಗೆ ದುಂಡುಮಲ್ಲಿಗೆ ಮೊತ್ತದ ಜಾಜಿ ಸಂಪಗೆಯ (ಕಂನವಿ. ೬–೮೨). **ಕತ್ತೂರಿ** : ೧. "ಕತ್ತುರಿ (ಕತ್ತೂರಿ) – ಕಸ್ತೂರೀ" (ತದ್ಭಕೋ. ೬) ; ಮಂದೆಗಮನೆಯರು ಕತ್ತೂರಿತಿಲಕವ ಚಂದನಗೂಡುತಿಕ್ಕಿದರು (ಜೀವಂಸಾಂ. ೧೦–೧೧). [ಪ್ರಾ. ಕತ್ಥೂರೀ < ಸಂ. ಕಸ್ತೂರೀ]

**ಕತ್ತುರಿಕಾಮ** (ನಾ). ಒಂದು ಬಗೆಯ ಸಸ್ಯ ; ಕೃಷ್ಣಪರ್ಣಿಗಿಡ ; ಕಾಮುಕಸ್ತೂರಿ : "ಮಾಲುಕಮೆನಲ್ಕೆ ಕತ್ತುರಿಕಾಮುಮೆನಿಸಿಕ್ಕು" (ಮಂಗರಾ. ೩೯–೨೯). [ಕತ್ತುರಿ + ಕಾಮ ?]

**ಕತ್ತುರಿಗಂಪು** (ನಾ). ಕಸ್ತೂರಿಯ ಪರಿಮಳ, —ವಾಸನೆ : ಇರುಳ ತಿರುಳ ಬಣ್ಣದ ತನುವಿನ ಕತ್ತುರಿಗಂಪಿನ ಕಾಳ್ಬೇಡಿತಿ (ಜಯಕಾ. ೨–೨೧). [ಕತ್ತುರಿ + ಕಂಪು]

**ಕತ್ತುರಿಗದಡು** (ನಾ). ಕಸ್ತೂರಿ ಬೆರಸಿ ಮಾಡಿದ ಕದಡು ; ಕಸ್ತೂರಿ ಮಿಶ್ರಿತವಾದ ಸುಗಂಧದ ರಾಡಿ : ಅನಿಮಿಷವಧು ಕತ್ತುರಿ ಗದಡಿನ ಚಳೆಯಂಗೊಟ್ಟಳಲ್ಲಿ (ಅನಂಪು. ೬–೪೭). [ಕತ್ತುರಿ + ಕದಡು$_1$]

**ಕತ್ತುರಿನಾಮ** (ನಾ). ಕಸ್ತೂರಿಯಿಂದ ಬರೆದ ನಾಮ ; ತಿಲಕ : ಕತ್ತುರಿ ನಾಮವನು ಪಣೆಗಳವಡಿಸಿದನು (ಕಂನವಿ. ೨೨–೬೧). [ಕತ್ತುರಿ + ನಾಮ]

**ಕತ್ತುರಿನೀರ್** (ನಾ). ಕಸ್ತೂರಿ ಬೆರಸಿದ ನೀರು, —ಓಕುಳಿ : ಮೇಳದ ವಧುವಿತ್ತಳ್ ಪರಿಹಾಸ ಕಾಂತಿಯಿಂ ಕೃಷ್ಣನ ಮೇಲೊತ್ತುವ ನಿಜಕರಯಂತ್ರದ ಕತ್ತುರಿನೀರ್ಗ ಮಲಮಲಯಜದ್ರವರುಚಿಯಂ (ಜಗವಿ. ೧೮–೧೦೧) ; ಇಟ್ಟನೀಶಂ ತನ್ನ ಕೆಯ್ಯ ಕತ್ತುರಿನೀರಪೊಟ್ಟಣದೊಳಗ ಜೆಯಂ (ಚೆಬಪು. ೩೭–೬೫). [ಕತ್ತುರಿ + ನೀರ್$_1$]

**ಕತ್ತುರಿಬೊಜಂಗ** (ನಾ). ಕಸ್ತೂರಿಯನ್ನು ಲೇಪಿಸಿಕೊಂಡ ವಿಟ; ಪರಿಮಳ ಪ್ರಿಯನಾದ ವಿಟ : ಕತ್ತುರಿಬಿಯಮಂ ಮೆಱೆದು ಕತ್ತುರಿಯೊಳ್ ಪೂಱ್ದು ಕತ್ತುರಿಮಿಗದಂತಿರ್ಪ ಕತ್ತುರಿಬೊಜಂಗರುಮಂ ನೋಡಿ (ಪಂಪಭಾ. ೪–೮೭ ವ). [ಕತ್ತುರಿ + ಬೊಜಂಗ]

**ಕತ್ತುರಿಬೊಟ್ಟು** (ನಾ). ಕಸ್ತೂರಿಯ ಬೊಟ್ಟು; ಕಸ್ತೂರಿ ತಿಲಕ : ಕತ್ತುರಿಬೊಟ್ಟನೆಂತಿಡುವೊಡಂ ನಿಲಲೊಲ್ಲದೆ (ಕಬ್ಬಿಕಾ. ೩೩೬); ಹೊನ್ನ ಮೋಹಳದ ಕಠಾರಿ ಕತ್ತುರಿಬೊಟ್ಟು ಚಿನ್ನದ ಕೆಯ್ಕಂಬು ಮೆಱೆಯೆ (ಕುರಾಸಾಂ. ೪೧–೯೬). [ಕತ್ತುರಿ + ಬೊಟ್ಟು$_3$ (< ಬಟ್ಟು$_1$)]

**ಕತ್ತುರಿಮರುಗ** (ನಾ). ಒಂದು ಸುಗಂಧ ಸಸ್ಯ; ಕಸ್ತೂರಿಯ ವಾಸನೆಯುಳ್ಳ ಮರುಗ : ಮರುಗ ಕತ್ತುರಿಮರುಗವು ಜಾಜಿ ಕೆಂಜಾಜಿ ಪರಿಮಳಿಸುವ ಸೇವಂತಿ (ಕಂನವಿ. ೫–೯೯). [ಕತ್ತುರಿ + ಮರುಗ]

**ಕತ್ತುರಿಮಿಗ** (ನಾ). ಕಸ್ತೂರಿಮೃಗ : ಕತ್ತುರಿಯೊಳ್ ಪೂಱ್ದು ಕತ್ತುರಿಮಿಗದಂತಿರ್ಪ ಕತ್ತುರಿಬೊಜಂಗರುಮಂ (ಪಂಪಭಾ. ೪–೮೭ ವ); ಹಸ್ತಿ ಕತ್ತುರಿಮಿಗಮಲ್ಲದುಗ್ರಮೃಗಮಿಲ್ಲ (ಅರ್ಥನೇ. ೧–೫೮) [ಕತ್ತುರಿ + ಮಿಗ]

**ಕತ್ತುರಿವಣ್** (ನಾ). ಕಸ್ತೂರಿಯಂತಹ ಮಣ್ಣು; ಕರಿಯ ಮಣ್ಣು (?): ಎಸಱಿಂ ಮುಟ್ಟಲೊಡಂ ತನ್ನ ಸೌರಭಂಗೆಟ್ಟು ನೆಗೞ್ದ ಕತ್ತುರಿವಣ್ಣಂ ಮಸಿಗಮೆಣೆಯುಪ್ಪುದೆನೆ ಬಣ್ಣಿಸುವಂ ಕೇದಗೆಯ ಕಂಪನೇವಣ್ಣಿಸುವಂ (ಆದಿಪು. ೧೧–೧೨೧). [ಕತ್ತುರಿ + ಮಣ್]

**ಕತ್ತುರಿವಳೆ** (ನಾ). ಕಸ್ತೂರಿ ಬಳೆ; ಕರಿಯ ಸಾಣೆಬಳೆ: ಮತ್ತೋರ್ವ ಪಾಮರಿ ಕವಣಿಗೆ ಗುಂಡಿಟ್ಟು ಕತ್ತುರಿವಳೆ ಗಳಿಲೆನುತ (ಅನಂಚ. ೧–೮೧). [ಕತ್ತುರಿ + ಬಳೆ$_3$]

**ಕತ್ತುರಿವುಲ್ಲೆ** (ನಾ). = ಕತ್ತುರಿಮಿಗ : ಘನಸಾರದ ಪೊಸ ಕಾಡೊಳ ಗಾಡುವ ಕತ್ತುರಿವುಲ್ಲೆಗಳ ಬಿನದಿಪ ಹಸುಳೆ ಜವಾದಿಯ ಮಿಗಗಳನನುರಾಗದಿ ನೋಡುತ (ಜಯಕಾ. ೪–೨). [ಕತ್ತುರಿ + ಪುಲ್ಲೆ]

**ಕತ್ತುರಿವೆಕ್ಕು** (ನಾ). ಪುನುಗಿನ ಬೆಕ್ಕು; ಪುಣುಗು ಬೆಕ್ಕು : ಮರಿಚವ್ಯಾಕೀರ್ಣಪರ್ಣಂ ಕುರರತನುವ(ನಾ)ಗ್ರಂಥಿಪರ್ಣಚ್ಛದಂ ಕತ್ತುರಿವೆಕ್ಕಂ ಸಲ್ಲಕೀಪಲ್ಲವಮಿಭಶಿಶುವಂ . . . ಕೊರ್ವಿಸೆ ಸೊಗಯಿಪುದೀ ಕಾನನೋದ್ದೇಶಂ (ಪುಷ್ಪಪು. ೫–೬೯). [ಕತ್ತುರಿ + ಬೆಕ್ಕು]

**ಕತ್ತೂರಿ** 'ಕತ್ತುರಿ' ನೋ.

**ಕತ್ತೃಣ** (ನಾ). ಒಂದು ಬಗೆಯ ಸುವಾಸನೆಯುಳ್ಳ ಹುಲ್ಲು; ಕಾಚೀ ಹುಲ್ಲು : "ಗಂಧಿತೃಣಂ–ಕತ್ತೃಣ, ಕುಂಕುಮ" (ಓಷಧಿ. ೪೬). [ಸಂ.]

**ಕತ್ತೆ$_1$** 'ಕಟ್ಟೆ' ನೋ.

**ಕತ್ತೆ$_2$** (ನಾ). "ಮಣಿಬಂಧದ ಮುಂದಣ ಭಾಗ" (ಅಕಾನಿ. ೫–೫). [?]

**ಕತ್ತೆಕಾಗದ** (ನಾ). ಕರಡು ಕಾಗದ; ಒರಟು ಕಾಗದ : ಬಸ್ತುಗಳು, ಮೊ.ನ್ನು ಮಾಡಲು ಉಪಯೋಗಿಸುವ ದಪ್ಪವಾದ ಒರಟು ಕಾಗದ; ಕತ್ತೆಕಾಗದ; ಕರಡುಕಾಗದ (Cartridge Paper. ಇಂಕನಿ); ಅದು ಒಂದು ತರಹೆ ದಪ್ಪನೆಯ ಕಾಗದವಂತಪ್ಪ, ಕತ್ತೆಕಾಗದ ಅಂತ ಕರೀತಾರಂತೆ (ಬೆಳುಮ. ೨೮). [ಕತ್ತೆ$_1$ (< ಕಟ್ಟೆ) + ಕಾಗದ]

**ಕತ್ತೆಕಿರುಬ, ಕತ್ತೆಗಿರುಬ, ಕತ್ತೆಗುರುವ** (ನಾ). ೧. ಒಂದು ಜಾತಿಯ ಕಾಡುಮೃಗ : ಕತ್ತೆಕಿರುಬಗಳೂ ಶ್ವಾಪದಗಳೂ ರುದ್ರವಿಹಾರಸ್ಥಾನವಾದ ಆ ಯುದ್ಧಭೂಮಿಯನ್ನು ಪ್ರವೇಶಿಸಿ (ಕೃವಾಕ. ೨೮). ೨. ಒಂದು ಜಾತಿಯ ಜಿಂಕೆ (ಕಿ). **ಕತ್ತೆಗಿರುಬ**: ೧. "ಮೃಗಾದಃ – ಕತ್ತೆ (ಗಿರುಬ) ಗುರುವ" (ಓಷಧಿ. ೧೨೮). **ಕತ್ತೆಗುರುವ**: ೧. ಮೇಲಿನ ಪ್ರಯೋಗವನ್ನು ನೋಡಿ.
[ಕತ್ತೆ$_1$ (< ಕಟ್ಟೆ) + ಕಿರುಬ (< ಕಿಱುಬ$_1$). / ತುಳು. ಕತ್ತೆಕುರುಬೆ]

**ಕತ್ತೆಕಿರುಬನಗಿಡ** (ನಾ). = ಕತ್ತೆಗರ್ಬ : ಕತ್ತೆಹೊಟ್ಟೆಗಿಡ, ಕತ್ತೆಕಿರುಬನಗಿಡ, ಕುರಿಗಿಡ (ವ್ಯೆಔಗಿ. ೬–೧೫೨).
[ಕತ್ತೆ$_1$ (< ಕಟ್ಟೆ) + ಕಿರುಬ + ಗಿಡ (< ಗಿಡು)]

**ಕತ್ತೆಕುರುಬ** (ನಾ). ಕತ್ತೆಗಳ ಮೇಲೆ ಹೇರಿಕೊಂಡು ಕಾಳು ಕಡಿ ಹಾಗೂ ಕಂಬಳಿಗಳನ್ನು ಮಾರುವ ಕುರುಬ (ಕಿ).
[ಕತ್ತೆ$_1$ (< ಕಟ್ಟೆ) + ಕುರುಬ$_1$ (< ಕುಱುಂಬ$_1$)]

**ಕತ್ತೆಗರೆ** (ಕ್ರಿ). ಕತ್ತೆಯ ಹಾಗೆ ಧ್ವನಿಮಾಡು, —ಕೂಗು : ಮುತ್ತಮುದುನರಿಯಂತೆ ಬಳ್ಳುಗರೆವರ್ ಕೆಲರ್ ನೆತ್ತಿವೊಡೆಯಲ್ ಗಳಹಿ ಕತ್ತೆಗರೆವರ್ ಕೆಲರ್ (ಏಕಾಂರ. ೧೪೪–೧೪).
[ಕತ್ತೆ$_1$ (< ಕಟ್ಟೆ) + ಕರೆ$_1$]

**ಕತ್ತೆಗರ್ಬ** (ನಾ). ಒಂದು ಬಗೆಯ ಔಷಧಿ ಸಸ್ಯ; ಕಟುಕರೋಹಿಣಿ (ಕಿ). [?]

**ಕತ್ತೆಗಾಲ** (ನಾ). ಒಂದು ಬಗೆಯ ಔಷಧಿ ಸಸ್ಯ : ಕತ್ತೆಗಾಲ – ಈ ಬೇರಂ ಹಾಲಲ್ಲಿ ತೆಗೆದುಕೊಳ್ಳೆ ವಾಂತಿ ಆಗುವುದು (ವಿವೈವಿ. ೪); ಕತ್ತೆಗಾಲದ ಬೇರಂ ತಂದು ಮೊಲೆ ಹಾಲಿಂದ ತೇದು ಅರೆ ಅಳಲೆಯಷ್ಟು ಎರೆಯಲು ವಾಂತಿಯಕ್ಕುಂ (ವಿವೈವಿ. ೧೦೮). [?]

**ಕತ್ತೆಗಾಹಿ** (ನಾ). ಕತ್ತೆ ಕಾಯುವವನು : ಕತ್ತೆಗಾಹಿಯ ಮಾತು ಬೇಡ (ಕೋಲಶಾಂ. ೩೯). [ಕತ್ತೆ$_1$ (< ಕಟ್ಟೆ) + ಕಾಹಿ]

**ಕತ್ತೆಗಿರುಬ** 'ಕತ್ತೆಕಿರುಬ' ನೋ.

**ಕತ್ತೆಗಿವಿ** (ನಾ). ಒಂದು ಬಗೆಯ ಸಸ್ಯ : "ಅಜಶೃಂಗಿ – ಕತ್ತೆಗಿವಿ" (ಅಕಾನಿ. ೨–೮); ಕತ್ತೆಗಿವಿ ಸಹದೇವಿ ಮತ್ತೆತ್ತುನಾಲಗೆಯು ಉತ್ತರಣೆ ವೆರಸಿ ತಿಲಕವಿಡೆ ಲೋಕ ತನ್ನತ್ತ ಸಾರುವುದು (ಸರ್ವಜ್ಞ. ೧೯೮೦). [?]

**ಕತ್ತೆಗುರುವ** 'ಕತ್ತೆಕಿರುಬ' ನೋ.

**ಕತ್ತೆಚಾಕರಿ** (ನಾ). ಕತ್ತೆಯಂತೆ ದುಡಿಯುವುದು; ಹೊರೆಗೆಲಸ; ಬಿಟ್ಟಿ ದುಡಿತ : ಕತ್ತೆಚಾಕರಿ ಮಾಡಿಸುವವನು (Slave driver. ಇಂಕನಿ); ಆಳಿನಿಂದ ಕತ್ತೆಚಾಕರಿ ಮಾಡಿಸಿಕೊಂಡು ಅವನಿಗೆ ಸರಿಯಾಗಿ ಕೂಲಿ ಕೊಡುತ್ತಿಲ್ಲ (ರೂಢಿ). [ಕತ್ತೆ$_1$ (< ಕಟ್ಟೆ) + ಚಾಕರಿ]

**ಕತ್ತೆತುಂಬೆಸೊಪ್ಪು** (ನಾ). ಒಂದು ಬಗೆಯ ಸಸ್ಯ : ಕತ್ತೆತುಂಬೆ ಸೊಪ್ಪು, ಅಧೋಮುಖಿ (ವ್ಯೆಔಗಿ. ೭೫–೧೫೪೩). [?]

**ಕತ್ತೆಬಾಲ** (ನಾ). ೧. ಕತ್ತೆಯ ಬಾಲ. ೨. (ಆಲಂ) ಕೆಲಸಕ್ಕೆ ಬಾರದ್ದು; ಕ್ಷುದ್ರವಾದುದು : ಅವನು ಬರದಿದ್ದರೆ ಕತ್ತೆಬಾಲ ಹೋಯಿತು (ರೂಢಿ). [ಕತ್ತೆ$_1$ (< ಕಟ್ಟೆ) + ಬಾಲ$_2$]

**ಕತ್ತೆಬಾಲದಹುಲ್ಲು** (ನಾ). ಒಂದು ಜಾತಿಯ ಹುಲ್ಲು (ಕಿ).
[ಕತ್ತೆಬಾಲ + ಹುಲ್ಲು (< ಪುಲ್)]

**ಕತ್ತೆಯ** 'ಕಟ್ಟೆಯ' ನೋ.

**ಕತ್ತೆವಾಯಿ** (ನಾ). ಕತ್ತೆಯ ಬಾಯಿ : ತಪ್ಪುತ್ತೆಡಹುತ್ತೋದುತ್ತಿಪ್ಪನ ಬಾಯಲ್ ಕತ್ತೆವಾಯಿ (ನೀತಿಸಾ. ೩೦).
[ಕತ್ತೆ$_1$ (< ಕಟ್ಟೆ) + ಬಾಯಿ$_1$ (< ಬಾಯಲ್)]

**ಕತ್ತೆಸಂಪಿಗೆ** (ನಾ). ಒಂದು ಬಗೆಯ ಸಂಪಿಗೆ : ಕನಂಗಹೂ, ಕಮಂದಮರ, ಅಪೂರ್ವಚಂಪಕ, ವನಸಂಪಿಗೆ, ಕತ್ತೆಸಂಪಿಗೆ (ವ್ಯೆಔಗಿ. ೧೬–೨೯೪). [ಕತ್ತೆ$_1$ (< ಕಟ್ಟೆ) + ಸಂಪಿಗೆ]

**ಕತ್ತೆಹೊಟ್ಟೆಗಿಡ** (ನಾ). ಒಂದು ಬಗೆಯ ಗಿಡ : ಕತ್ತೆಹೊಟ್ಟೆಗಿಡ, ಕತ್ತೆಕಿರುಬನಗಿಡ, ಕುರಿಗಿಡ (ವ್ಯೆಔಗಿ. ೯–೧೫೨).
[ಕತ್ತೆಹೊಟ್ಟೆ$_0$ + ಗಿಡ (< ಗಿಡು)]

**ಕತ್ಥನ** (ನಾ). ಜಂಬ ಕೊಚ್ಚುವಿಕೆ; ಬಡಾಯಿ. [ಸಂ.]

**ಕತ್ಥಾಯ** 'ಕಥಾಯಿ' ನೋ.

**ಕತ್ಥಿಸು** (ಕ್ರಿ). ಜಂಬಕೊಚ್ಚು; ಹೊಗಳಿಕೊಳ್ಳು: ಕೊಂದ ಬಿಸುಟೆ ಅಹಿತರನುಯೆಂದು ಕಂಸ ಕತ್ಥಿಸೆ ಇಂದಿರೇಶ ಕೇಳಿದವ್ಯಯಾತ್ಮಾ (ಪ್ರಸಭಾ. ೬೫–೪). [ಕತ್ಥನ + –ಇಸು₃]

**ಕತ್ವ** (ನಾ). [ವ್ಯಾಕ] 'ಕ' ಎಂಬ ವರ್ಣ: ದ್ವಿತ್ವಂ ಬೆರಸಿದ ಕತ್ವಂ ಚತ್ವಂ ಖತ್ವಂ ಯಥಾಪ್ರಯೋಗದಿನಕ್ಕುಂ (ಶಮದ. ೨೬೨). [ಸಂ.]

**ಕಥಕ್** (ನಾ). ಭಾರತೀಯ ನೃತ್ಯಪದ್ಧತಿಗಳಲ್ಲಿ ಒಂದು: ಕಥಕ್ ನೃತ್ಯವನ್ನು ಇಂದಿನ ಚಲನ ಚಿತ್ರಗಳಲ್ಲೂ . . . ಪ್ರದರ್ಶಿಸುವುದನ್ನು ಕಾಣುತ್ತಿದ್ದೇವೆ (ಅಭಾನ್ಯ. ೧೮). [← **ಹಿಂ. ಮರಾ. ಕತ್ಥಕ್**]

**ಕಥಕ** (ನಾ). ೧. ಕತೆ ಹೇಳುವವನು; ಕತೆಗಾರ: ಗಾಯಕ ವಾದಕ ನರ್ತಕ ಕಥಕ ಪುಣ್ಯಪಾಠಕ ವೈತಾಳಿಕನಿಕರಮುಮಂ ಕೊಟ್ಟು (ಆದಿಪು. ೪–೫೪ ವ); ರಾಮಾಯಣ ಭಾರತ ಕಥೆಗಳು ಜನತೆಗೆ ಕಥಕರು ಭಟ್ಟರು ಆಟ್ಟಲಾಟದವರು ಇವರಿಂದ ಕೇಳಿ ನೋಡಿ ಹಿಂದಿನಿಂದಲೂ ಪರಿಚಿತವಾಗಿದ್ದುವು (ಬಂಕಿಮ. ೭). ೨. ಮುಖ್ಯ ನಟ; ಭಾಗವತ (?): ಬೀಣೆಯ ಕೊಟಲ ಬೆದಂಡೆಯ ಗಾಣರ ಬಱಿವಿಡಿದು ಸುಱಿದು ಕುಂ[ದಿಂ] ಕಥಕಶ್ರೇಣಿಯೊಡನೆಳಸಿ ಬಳಸುವ ನಾಣಿಲಿಗಳನೀ ಬುಧಾಳಿಯೊಳ್ ಪುಗಿಸುವುದೆ (ಸುಕುಮಾ. ೨–೨೪). [ಸಂ.]

**ಕಥಕಳಿ** 'ಕಥಕ್ಕಳಿ' ನೋ.

**ಕಥಕ್ಕಲಿ** 'ಕಥಕ್ಕಳಿ' ನೋ.

**ಕಥಕ್ಕಳಿ, ಕಥಕಳಿ, ಕಥಕ್ಕಲಿ** (ನಾ). (ಮಲಯಾಳದಲ್ಲಿ ಪ್ರಚುರವಾಗಿರುವ) ಒಂದು ಬಗೆಯ ನೃತ್ಯನಾಟಕ: ಕೇರಳವು ಕಥಕ್ಕಳಿಯ ಮಾತೃಭೂಮಿ (ಭಾರಜಾ. ೧೨೭); ಕಥಕ್ಕಳಿಯ ಕ್ರಮದಂತೆ, ಶ್ಲೋಕಾರ್ಥಗಳನ್ನು ಬಿಡಿ, ಬಿಡಿ ಹಾವ (Gesture) ಗಳಿಂದ ವಿವರಿಸಿ ಹೇಳುವ ಪರಿಪಾಠವನ್ನು ನಮ್ಮವರು ಬಳಸಲಿಲ್ಲ (ಯಕ್ಷಬ. ೧೦); ಕಥಕ್ಕಳಿಯ ಪುತ್ಥಳಿಯೆ ! ಪೃಥಕ್ ಥತ್ ತಳಿಸಿದೆ ಜೀವಂತಿಗೆ (ಅರಳು. ೨೪೪–೭). **ಕಥಕಳಿ:** ಆಟ್ಟಕಥಾ ಅಥವಾ ಕಥಕಳಿ ದಕ್ಷಿಣಭಾರತದ ನಾಟಕ ಮತ್ತು ನಾಟ್ಯ ಕಲೆಗಳಿಗೆ ವೈಶಿಷ್ಟ್ಯವಾದ ಕಾಣಿಕೆಯಾಗಿದೆ (ಭಾರದ. ೪೦೩); ಮೂಕ ನಾಟಕಗಳಾದ ಕಥಕಳಿ ಮೊದಲಾದುವು ಈ ವಾದದ ಪರಿಣಾಮಗಳೇ (ಸಾಹಿಜೀ. ೧೯). **ಕಥಕ್ಕಲಿ:** ಇವರು ಕುಣಿಯುವ ಕುಣಿತಗಳು 'ಕಥಕ್ಕಲಿ' ಕುಣಿತಗಳಿಗೆ ಸಮೀಪವಾಗಿವೆ (ಕನ್ನಜಾ. ೩೧). [← **ಮಲ. ಕಥಕ್ಕಳಿ**]

**ಕಥನ** (ನಾ). ಹೇಳುವಿಕೆ; ನಿರೂಪಣೆ; ಕಥೆ: ವರನೃಪರ ಸಭೆಯೊಳಗೆ ಧರಣಿಪನ ಕಥನವೇ ಕಥನ (ಹಚಕಾ. ೧೪–೩೧); ಶ್ರವಣಸುಧಾವಿನೂತನ ಕಥನ ಕಾರಣ ಕಾವುದಾನತಜನವ (ಕುವ್ಯಾಅ. ೧–೧); ಮುದುಕಿ ಮಾತ್ರ ತನ್ನ ಕಥನಕ್ಕೆ ಪೂರ್ಣವಿರಾಮವಿತ್ತಿರಲಿಲ್ಲ (ಹಳ್ಳಿಹಾ. ೧೧೩). [ಸಂ.]

**ಕಥನಕವನ** (ನಾ). ಕಥನರೂಪವಾದ ಕವನ; ಕತೆಯನ್ನೊಳಗೊಂಡ ಪದ್ಯಕಾವ್ಯ: ಕಥನಕವನ, ದೃಶ್ಯಗೀತ . . . ಎಲ್ಲವೂ ಇಂದು ಕನ್ನಡದಲ್ಲಿ ನೆಲೆಗೊಂಡಿವೆ (ನವ್ಯಕಾ. ೨೪). [ಕಥನ + ಕವನ]

**ಕಥನಗೈ** (ಕ್ರಿ). ಕತೆಹೇಳು; ನಿರೂಪಿಸು: ಬೇಹಿನಾಳ್ . . . ಕಯ್ಮುಗಿದು ಕಥನಗೈದನು ಕದನವೃತ್ತಾಂತಮಂ (ಶ್ರೀರಾಮಾ. ೬೫೫–೩೪೭). [ಕಥನ + ಗೈ (< ಕೆಯ್₁)]

**ಕಥನಾಲಾಪ** (ನಾ). ಕಥೆ ಹೇಳುವಿಕೆ, —ನಿರೂಪಣೆ: ಇಳೆಯೊಳೀ ಕೃತಿಯ ಕಥನಾಲಾಪವೆಂತೆನಲು (ಭಕ್ತಾಚ. ೧–೭). [ಕಥನ + ಆಲಾಪ]

**ಕಥಯಿಸು** 'ಕಥಿಸು' ನೋ.

**ಕಥಾಂತರ** (ನಾ). ಬೇರೊಂದು ಕಥೆ; ಇನ್ನೊಂದು ಕಥೆ: ಒಂದು ದಿನಂ ಕೃಷ್ಣನಾಱಿಗುಟ್ಟಿದೊಡದನೇನೆಂದುಂ ಮಾಣಿಸಲಱಿಯದದೊಂದು ಕಥಾಂತರದೆ ಗೋಪಿ ಮಾಣಿಪ ಬಗೆಯಿಂ (ಜಗವಿ. ೩–೫೯); ಮುಂದಿಲ್ಲಿಯ ಕಥಾಂತರವನರಸ ಕೇಳು (ಜೈಮಿಭಾ. ೯–೧೨). [ಸಂ.]

**ಕಥಾಕಾಲಕ್ಷೇಪ** (ನಾ). ಹರಿಕತೆ: ಕಥಾಕಾಲಕ್ಷೇಪವೆಂಬುದು ಉತ್ತರದ ಕೀರ್ತನೆಗಳನ್ನು ಹೋಲುವ ದಕ್ಷಿಣದ ಕಲೆ (ಸಂಗೀತ. ೧೧೯). [ಸಂ. (ಕಥಾ + ಕಾಲಕ್ಷೇಪ)]

**ಕಥಾನಕ** (ನಾ). = ಕತೆ ೧: ಮುದುಕಿ ಹಿಂದಿನ ಕಥಾನಕವೊಂದನ್ನು ನೆನಪಿಗೆ ತಂದಾಗ (ಹಳ್ಳಿಹಾ. ೧೧೩); ಎರಡು ಕಥಾನಕಗಳ ಮೇಲೆ ಕರ್ತೃ ಕೆಲಸ ಮಾಡಿದ್ದಾನೆ (ಸಾಹಿಪ್ರ. ೨೧೩). [ಸಂ.]

**ಕಥಾನಾಯಕ** (ನಾ). ಕಥೆಯಲ್ಲಿಯ ಮುಖ್ಯಪಾತ್ರ: ಅರೂಢ ಸರ್ವಜ್ಞನಂ . . . ಕಥಾನಾಯಕಂ ಮಾಡಿ (ಪಂಪಭಾ. ೧–೫೧); ಸತ್ಯಾಶ್ರಯದೇವನೆ ಪೃಥ್ವೀವಲ್ಲಭಂ ಕಥಾನಾಯಕನಾಗಲನಿಲಜನೊಳ್ ಪೋಲಿಸಿ ಪೇಟ್ದನೀ ಗದಾಯುದ್ಧಮಂ ಮಹಾಕವಿರನ್ನಂ (ಗದಾಯು. ೧–೩೧). [ಸಂ. (ಕಥಾ + ನಾಯಕ)]

**ಕಥಾನ್ವಯ** (ನಾ). ಕಥೆಯ ಹೊಂದಿಕೆ, —ಸಂಬಂಧ, —ರಚನೆ: ಈಗಡಿನ ಕಥಾನ್ವಯಕ್ಕೆ ರಸಮುಂ ಪೊಸಗಬ್ಬಮುಪೂರ್ವಮಾವುವುಳ್ಳೊಡಮವು ಪೇಟ್ದು ಸಾಧಿಸಿದ ಕಬ್ಬಮೆ ದಲ್ ಕವಿಚಕ್ರವರ್ತಿಯಾ (ಶಾಂತಿಪು. ೧೨–೭೯). [ಸಂ. (ಕಥಾ + ಅನ್ವಯ)]

**ಕಥಾಪತಿ** (ನಾ). = ಕಥಾನಾಯಕ: ಈ ಕೃತಿಗೆ ಕಥಾಪತಿ ಕೃಷ್ಣಂ (ಜಗವಿ. ೧–೨೧). [ಸಂ. (ಕಥಾ + ಪತಿ)]

**ಕಥಾಪ್ರವಾಹ** (ನಾ). ಕತೆಯ ಓಟ, —ನಡೆ: ಮಾತಿನ ಮತ್ತು ಹೆಜ್ಜೆಯ ಗದ್ದಲದಿಂದ ಕಥಾಪ್ರವಾಹಕ್ಕೆ ನಡುನಡುವೆ ಅಡಚಣೆಯೊದಗುತ್ತಿತ್ತು (ಪುನರು. ೨೦೯). [ಸಂ. (ಕಥಾ + ಪ್ರವಾಹ)]

**ಕಥಾಪ್ರಸಂಗ** (ನಾ). ೧. ಪ್ರವಚನ; ಸಂವಾದ; ಸಂಭಾಷಣೆ. ೨. ಕಥೆಯ ವಸ್ತು; ಕಥೆ. ೩. ಸಂಭಾಷಣೆಯ ಸಂದರ್ಭ. [ಸಂ. (ಕಥಾ + ಪ್ರಸಂಗ)]

**ಕಥಾಭಿತ್ತಿ** (ನಾ). ಕಥೆಗೆ ಆಶ್ರಯವಾದದ್ದು; ಕಥಾವಸ್ತು; ಕಥಾವಿಷಯ: ಸಂದರ್ಜುನನೊಳ್ ಪೋಲ್ವೀ ಕಥಾಭಿತ್ತಿಯನನುನಯದಿಂ ಪೇಟಲೆಂದೆತ್ತಿಕೊಂಡೆಂ (ಪಂಪಭಾ. ೧–೫೧). [ಸಂ. (ಕಥಾ + ಭಿತ್ತಿ)]

**ಕಥಾಮಂಜರಿ** (ನಾ). ಕತೆಗಳ ಗೊಂಚಲು, —ಸಮೂಹ: ಈ ಮುಖ್ಯವಾದ ಆಖ್ಯಾನವೇ ಅನೇಕ ಉಪಾಖ್ಯಾನಗಳನ್ನೊಳಗೊಂಡು ಒಂದು ಬೃಹತ್ಕಥೆಯಾಗಿದೆ. ಅಥವಾ ಕಥಾಮಂಜರಿಯೇ ಆಗಿದೆ (ಭಾರದ. ೧೦೦). [ಸಂ. ಕಥಾಮಂಜರೀ (ಕಥಾ + ಮಂಜರೀ)]

**ಕಥಾಮುಖ** (ನಾ). ಕಥೆಯ ಪ್ರಾರಂಭದ ಭಾಗ: ಪೀಠಿಕಾಭಾಗ ಮುಗಿದು ಕಥಾಮುಖ ಆರಂಭವಾಗಬೇಕು – ಅದೇ ಹೊತ್ತಿಗೆ . . . ಅಲ್ಲಿಗೆ ಬಂದು ಕುಳಿತರು (ಸ್ಮೃತಿಚಿ. ೭೯). 'ಕಥಾವತಾರ' ಪರಾ. [ಸಂ. (ಕಥಾ + ಮುಖ)]

**ಕಥಾಯ** 'ಕಥಾಯಿ' ನೋ.

**ಕಥಾಯಿ, ಕತಾಯಿ, ಕತಾವಿ, ಕತ್ಥಾಯ, ಕಥಾಯ, ಕದಾಯಿ** (ನಾ). ಒಂದು ಬಗೆಯ ಬಟ್ಟೆ: ಜಗಪೊಗಳೆ ಪುಲ್ಲಿಯ ಕಥಾಯಿ [ಪಾಠಾಂ. ಪಡಿಪಟ್ಟವಳಿಯ] ಕಡೆಗಟ್ಟಂದ ಸೊಗಯಿಸಿದ ನೇತ್ರ ಸೂತ್ರಾವಳಿಗಳಿಂ (ಸಿದ್ಧರಾ. ೮–೫೩); ವರ್ಗದ್ವಿತೀಯಕ್ಕೆ – ವಕ್ಷಾಣಂ . . . ಮತ್ಥವಟ್ಟಗೆ, ಕಥಾಯಿ [ಪಾಠಾಂ. ಕಥಾಯಂ (ಕತ್ಥಾಯಂ)] (ಶಮದ. ನ. ೨೫ ವೃತ್ತಿ). **ಕತಾಯಿ:** ದುಗುಲದ ಪೈಠಣೆ ಸುಕ್ಕುಗುಪ್ಪಸ ಮಿಗೆ ಸೊಗಯಿಸುವ ಕತಾಯಿ [ಪಾಠಾಂ. ಸೊಗಯಿಸುವೆಕತಾಯಿ, ಸೊಗಯಿಪವೇಕತಾಯಿ, ಸೊಗಯಿಪಯೇಕತಾಯಿ] ಮೆಱೆಯೆ (ಕುರಾಸಾಂ. ೧೮–೩೩). **ಕತಾವಿ:** ಗಂಟಿಕ್ಕಿದ ಹುರ್ಬೊಪ್ಪುವ ತಿಲಕಂ ಬೈತಲೆ ಕತಾವಿಯ ತಲೆಸುತ್ತಿಂ ಮೆಯ್ಯಂಡೇಱಿ (ಕುಮುರಾ. ೧೧–೪).

**ಕತ್ಥಾಯ**: ಮತ್ಥವಟ್ಟಿಗೆ, ಕತ್ಥಾಯಂ [ಪಾಠಾಂ. ಕಥಾಯಿ, ಕಥಾಯಂ] (ಶಮುದ. ಸ. ೨೫ ವೃತ್ತಿ). **ಕಥಾಯ** : ಮೇಲಿನ ಶಬ್ದಮಣಿ ದರ್ಪಣದ ಪ್ರಯೋಗದ ಪಾಠಾಂತರವನ್ನು ನೋಡಿ. **ಕದಾಯಿ** : ನಡುವೆ ಕಟ್ಟಿದ ಮೇಲ್ಕಟ್ಟಿನ ಹೊಕ್ಕುಳ ಹಲ್ಲೆಯ ತೊಂಗಲ್ಗಳಿಂ ಕದಾಯಿಯ ಕಡೆಗಟ್ಟಿನ ಪಚ್ಚೆಯ ಪಂಕ್ತಿಯ (ಕೇಶಿರ. ೧೦೦–೨೨). [?]

**ಕಥಾಲಾಪ**, ಕಥಾಳಾಪ (ನಾ). ೧. ಮಾತುಕತೆ; ಸಲ್ಲಾಪ; ಸಂಭಾಷಣೆ: ಸುರಂಜನ ಕಥಾಲಾಪರಸದಿಂ ಷಡ್ರಸಾನ್ನದಾರೋಗಣೆಯೊಳಿರುತಿರ್ದನು (ಜೈಮಿಭಾ. ೬–೪೩). ೨. ಕತೆ ಹೇಳುವಿಕೆ; ಕಥಾನಿರೂಪಣೆ: ಆಲಿಸೆಲೆ ಜನಮೇಜಯಕ್ಷಿತಿಪ ಮುಂದಣ ಕಥಾಲಾಪ ಕೌತುಕವನು (ಜೈಮಿಭಾ. ೧೦–೧). **ಕಥಾಳಾಪ**: ೨. ಕೇಳಲೆ ನೃಪಾಲಕುಲತಿಲಕ ಮುಂದದ್ಭುತ ಕಥಾಳಾಪಮಂ (ಜೈಮಿಭಾ. ೧೬–೫೮). [ಸಂ. (ಕಥಾ + ಆಲಾಪ]

**ಕಥಾವಣಿ**, ಖತಾವಣಿ, ಖತಾವಣೆ (ನಾ). ವರ್ಗೀಕರಿಸಿ ಬರೆದ ವ್ಯವಹಾರದ ಲೆಕ್ಕ; ಖಾತೆವಾರು ಜಮಾಖರ್ಚು: ಪ್ರಭುದೇವ, ಕಾಮಣ್ಣನ ಮುಂದಿದ್ದ ಸಾಹುಕಾರರ ರೋಜು, ಕಥಾವಣಿ ಪುಸ್ತಕಗಳ ಕಡೆಗೆ ಕೈಮಾಡಿ ತೋರಿಸಿದ (ದಿವಾಬ. ೩೨). **ಖತಾವಣಿ**: ಬೈಕಖತಾವಣಿ ಬರಿಯುವುದು (ಮುಂಬವ್ಯಾ. ೨೭೯). **ಖತಾವಣೆ**: ಆದರ ಖತಾವಣೆ ಮಾಡಿದ ನಂತರ ಸಹಿಯು ಸರಿಯಾಗಿ ಇದ್ದ ಬಗ್ಗೆ (ಬ್ಯಾಂಕಕ್ಕೈ.೬೧). [← ಮರಾ. ಖತಾವಣೀ]

**ಕಥಾವತಾರ** (ನಾ). ಕಥೆಯ ಆರಂಭ: ಸತ್ಕೃತಿ ಕಥಿತ ಕಥಾವತಾರಮೇಂ ಕೇವಳಮೇ (ಕಾದಂಪೂ. ೭). [ಸಂ. (ಕಥಾ + ಅವತಾರ)]

**ಕಥಾವಸಾನ** (ನಾ). ಕಥೆಯ ಮುಕ್ತಾಯ, —ಮುಗಿವು: ಮೈದುನರಿರ್ವರುಂ ತಪಂಬಟ್ಟು ಕಾಲಾಂತರದೊಳ್ ಲೋಕಾಂತಿಕ ದೇವರಾದರೆಂಬ ಕಥಾವಸಾನದೊಳ್ (ಚಾವುಂಪು. ೫೯–೧೪). [ಸಂ. (ಕಥಾ + ಅವಸಾನ)]

**ಕಥಾಸಾರ** (ನಾ): ಕಥೆಯ ಸಾರಾಂಶ: ಕಥಾಸಾರವು ಮೊದಲಾಗಿ ಬರೆಯಲಾಗಿದೆ (ಕಾಲೂರ. ೬ ಹರಕೆ). [ಸಂ. (ಕಥಾ + ಸಾರ)]

**ಕಥಾಳಾಪ** 'ಕಥಾಲಾಪ' ನೋ.

**ಕಥಿಕ** (ನಾ). ಕಥೆ ಹೇಳುವವನು ; ಕಥೆಗಾರ: ಅಮೃತಮಥನಕಥನವನೊರ್ವ ಕಥಿಕನು ಕಥಿಸುತಿರಲಾಗಿ (ಬಸಪು. ೧೩–೧). [< ಸಂ. ಕಥಕ]

**ಕಥಿತ** (ಗು). ಹೇಳಲ್ಪಟ್ಟ ; ಹೇಳಿದ: ಸಕಳಾಳಾಪ ಕಳಾಕಳಾಪ ಕಥಿತ ವ್ಯಾವೃತ್ತಿಯೊಳ್ ಕೂಡಿ . . . ಪೇಟ್ದ ಚಿತ್ರಕೃತಿಯಂ (ಕವಿರಾ. ೧–೧೪೯); ನಿಜ ಪಿತೃಸೂತಕೇತನ ಕಥಿತಮಾಗಿರ್ದ ರಥಮನುಪಲಕ್ಷಿಸಿ ನೋಡಿ (ಪಂಪಭಾ. ೧೨–೩೦ ವ) ; ಈ ಸಂಧಿಯುದ್ಧಕ್ಕೂ ಶ್ರೀರಂಗಪಟ್ಟಣಕ್ಕೆ ಲಗ್ಗೆ ಬಿದ್ದ ಸಂಗತಿಯು ಕಥಿತವಾಗಿದೆ (ಕರ್ಣಾಜ. ೪೭). [ಸಂ.]

**ಕಥಿತಮೂಲ್ಯ** (ನಾ). ಪ್ರಕಟಗೊಳಿಸಿದ ಬೆಲೆ: (ಪಾರಿನಿ. ೨೬). [ಕಥಿತ + ಮೂಲ್ಯ]

**ಕಥಿಯಿಸು** 'ಕಥಿಸು' ನೋ.

**ಕಥಿಲ** (ನಾ). ತವರ: ೧. ಅಕ್ಕಲಕಾರ, ಉತ್ತಮ ; ೨. ಊದು (ಲೋಬಾನ); ೩. ಕಥಿಲ (ತವರು) ; ೪. ಕವಡಿ ಲೋಬಾನ (ಮುಂಬವ್ಯಾ. ೧೨೨). [← ಮರಾ. ಕಥೀಲ]

**ಕಥಿಸು**, ಕಥಯಿಸು, ಕಥಿಯಿಸು (ಕ್ರಿ). ಹೇಳು ; ನಿರೂಪಿಸು : ಗಣಧರಾದಿಗಳುಳ್ಳುದನುಳ್ಳ ಮಾಟ್ಕೆಯಿಂ ಕಥಿಸಿದರಿಲ್ಲಿ ಪೇಟ್ವ ಕವಿಕಲ್ಪಮಿದೆಂಬವನಲ್ಪನಲ್ಲನೇ (ಪುಷ್ಪಪು. ೧–೪೩); ಅಮೃತಮಥನ ಕಥನವನೊರ್ವ ಕಥಿಕನು ಕಥಿಸುತಿರಲಾಗಿ (ಬಸಪು. ೧೩–೧) ; ಪೃಥಿವೀಪತಿಯ ಕಂಡು ಹೆಬ್ಬೆಬ್ಬಗೊಂಡಿಂತು ಕಥಿಸಿದಳೆನದಿರು ಖಗವೆ (ಭರಚ. ೬–೯೨). **ಕಥಯಿಸು** : ಅಪಹಾಸ್ಯ ಸಮಾಶ್ರಿತಮಪ್ಪ ಕಬ್ಬಮಂ ಕಥಯಿಸಿ ಗರ್ವದಿಂ ಬೆಱೆತು (ಶೃಂಗಾರ. ೧–೭). **ಕಥಿಯಿಸು** : ಮಥಿಯಿಸಲೆಂದು ಮಂದರಮನಲ್ಲಿರದಿಟ್ಟರೆನಿಪ್ಪ ಭಾವಮಂ ಕಥಿಯಿಸುವಂತೆ ಮೇರು ಮೆಱೆದಿರ್ದುದು ಮಧ್ಯದೊಳಾ ಪಯೋಧಿಯಾ (ರಾಜಶೇ. ೧–೧೦೫). 'ಕತಿಸು' ಪರಾ. [ಕಥನ + –ಇಸು$_3$]

**ಕಥೆ** (ನಾ). = ಕತೆ ೧ : ಮಹಾಪುರುಷರ್ಕಳ ಕಥೆಗಳಂ ಪೇಟ್ವಲ್ಲಿ (ವಡ್ಡಾರಾ. ೧–೧೧) ; ಒಳಪೊಕ್ಕು ನೋಡೆ ಭಾರತದೊಳಗಣ ಕಥೆಯೆಲ್ಲಮೀ ಗದಾಯುದ್ಧದೊಳಂತೊಳಕೊಂಡತ್ತೆನೆ (ಗದಾಯು. ೧–೪೫) ; ವಿಷ್ಣುವ ನೆನೆದು ಮುನಿ ವಿಸ್ತರಿಸಿದನು ಕಥೆಯ (ಕುವ್ಯಾಅ. ೨–೧೦) ; ಕಥೆಗೊಂದು ಕಾಲುಂಟೆ? (ಗಾದೆ).

ಕಥೆಯಾಗು = ೧. ಕಥೆಯ ಸಂಗತಿಯಾಗು ; ಕಥಾವಸ್ತುವಾಗು : ವ್ಯಥೆಯಾದಳು ಕಥೆಯಾದಳು ಎದೆಯಲ್ಲಿಯೆ ಮಡಗಿ! (ಅರಳು. ೩೫೭–೯). ೨. ರಗಳೆಯಾಗು; ದೊಡ್ಡ ವಿಷಯವಾಗು: ಅದೇ ಒಂದು ಕಥೆಯಾಯಿತು (ರೂಢಿ). [ಸಂ. ಕಥಾ]

**ಕಥೆಗೇಳ್** (ಕ್ರಿ). ಕತೆಯನ್ನು ಕೇಳು : ವಿಪ್ರರೀ ಕಥೆಗೇಳೆ ವೇದ ಪವಿತ್ರರಹರು (ಕುವ್ಯಾದ್ರೋ. ಒರಿಇ. ೧೯–೫೬ ಅಡಿಟ). [ಕಥೆ + ಕೇಳ್]

**ಕಥೆವೇಟ್** (ಕ್ರಿ). ಕತೆಯನ್ನು ಹೇಳು, —ನಿರೂಪಿಸು : ನನ್ನಿಯಾದುದು ಸುತಂಗೆ ಕಥೆವೇಟ್ದರೆಂಬ ನಾಣ್ನುಡಿ ಜಗದೊಳ್ (ಆದಿಪು. ೮–೧೪). [ಕಥೆ + ಪೇಟ್]

**ಕಥ್ಯ** (ಗು). ೧. ಕಥನಕ್ಕೆ ಯೋಗ್ಯವಾದ. (ನಾ). ೨. ಕಥನಕ್ಕೆ ಯೋಗ್ಯವಾದುದು : ಈ ನಾಟಕಗಳು ಪದ್ಯ, ಕಥ್ಯ, ದ್ವಿಪದ, ಭಾಷಣಗಳು ಮುಂತಾದವುಗಳಿಂದ ರಂಜಿಸಲ್ಪಟ್ಟಿವೆ (ಭಾರದ. ೫೫೫). [ಸಂ.]

**ಕದ** 'ಕದವು$_1$' ನೋ.

**ಕದಂ** (ಗು). (ಕುದುರೆಯಂತೆ) ಸತ್ತ್ವಶಾಲಿಯಾದ; ಚುರುಕಾದ (ಕ).

ಕದಂನಡಿಸು = (ಕುದುರೆಯಂತೆ) ವೇಗವಾಗಿ ನಡಸು (ಕ). [← ಹಿಂ. ಪಾರೆ. ಮರಾ. ಖಂದಾ]

**ಕದಂದೆಗೆ** (ಕ್ರಿ). ಕದವನ್ನು ತೆಗೆ ; ಬಾಗಿಲನ್ನು ತೆರೆ : ಭಕ್ತನಂ ಕಂಡು ಭಯಂಬಡುತೆ ಕದಂದೆಗೆದು (ಉದ್ಭಟ. ೧೧–೬೨). [ಕದ (< ಕದವು$_1$) + ತೆಗೆ$_1$]

**ಕದಂಪು**, ಕದಪು (ನಾ). ಕೆನ್ನೆ ; ಗಲ್ಲ ; ಕಪೋಲ : ಪರಾಕ್ರಮಧವಳನ ಪರಾಕ್ರಮಕ್ಕೆ ಮೆಚ್ಚಿ ಕದಂಪಂ ಕರ್ಚಿ (ಪಂಪಭಾ. ೨–೬೨ ವ) ; ಮುತ್ತಿನ ನೀಲದೆಕ್ಕಸರದೋಲೆ ಕದಂಪಿನೊಳಾಡೆ (ಜಗವಿ. ೫–೪೩) ; ವಿಕಲ್ಪ ಬಿಂದುಗೆ – ಕದಂಪು, ಕದಪು (ಶಮುದ. ೩೬ ಪ್ರಯೋ) ; ಬಂದುಗೆವಾಯ ತೆಳ್ಗದಂಪಿನ ನುಣ್ಗೊರಲ (ಪದ್ಮರಾ. ೮–೯೯). **ಕದಪು** : "ಕದಪು ಕೆಲ್ಲಂ ಕಪೋಳಂ ಗಂಡಸ್ಥಳಂ" (ವಸ್ತುಕೋ. ೬೯–೧೫) ; ಕದಪಿನ ಕಣ್ಣ ಸಾರ್ಕೆಯನಳಂಕೃತಮಪ್ಪ ಗಳಪ್ರದೇಶಮಂ (ಕಾವ್ಯಸಾ. ೬೩೬ ಶೂದ್ರಕ) ; ಆವತಂಸಂ ಕದಪಂ ಪಳಂಚೆ (ಶಾಂತಿಪು. ೯–೧೯೯) ; ಅರಸನ ಕದಪು ಕೈಯಲಿ ಕೀಲಿಸಿತು (ಕುವ್ಯಾಕ. ೧–೨). [ದೇ. ॥ ತಮಿ. ಕದುಪ್ಪು]

**ಕದಂಬ** (ನಾ). ೧. ಕಡಹದ ಮರ; ನೀಪ ವೃಕ್ಷ: "ಕಡವೆನೆ ಕದಂಬ ವೃಕ್ಷಂ" (ಕವಿಕಂ. ೫೬) ; ಕಕುಭಾಶೋಕ ಕದಂಬ ಲುಂಗಲವಲೀ ಭೂಜಾರ್ಜುನಾನೋಕಹ ಪ್ರಕರಂ (ಪಂಪಭಾ. ೫–೮೦) ; ಕದಂಬಮಹಿಜಾತದಿಂ ಪಡುವಲಾಗೆ ಪುತ್ತಂತದರ್ಕೆ ದಕ್ಷಿಣದೊಳಾಗೆ ಮೂಱು ಪುರುಷಕ್ಕೆ ನೀರ್ (ಲೋಕೋಪ. ೫–೩೩). ೨. ಗುಂಪು; ಸಮೂಹ: ಕೆಲದೊಳಿರ್ದ ಸಖೀಕದಂಬದ ಮೊಗಮಂ ನೋಡೆ (ಕಾದಂಪೂ. ೩೪೧) ; ಎಸೆದುದಿರುಳೊಳ್ ಜಾರನಾರೀಕದಂಬಂ (ಜಗವಿ. ೪–೨೯) ; ಗಗನಾಪಗೆಯ ಜಲಕಣಕದಂಬಮೊ (ಹವ್ಯಾರ. ೨–೬೨).

೩. ಸಾಸಿವೆಯ ಕಾಳು. ೪. ಪರಿಮಳ ವಸ್ತು; ಸುಗಂಧ ಚೂರ್ಣ: ಕದಂಬಾದಿ ಗಂಧವಡಿಯನ್ನು ಧರಿಸಿಕೊಂಡಲ್ಲಿ – ಸಕಲವಾದ ತಿಮಿರ ದುರ್ಗಂಧ ದೋಷಂಗಳಂ ಹೋಗಲಾಡಿಸಿ, ಕಾಂತಿಯನ್ನುಂಟುಮಾಡಿ... ಶೀತೋಷ್ಣಗಳ ಹೆಚ್ಚಿಗೆಯನ್ನು ಕೆಡಿಸುವುದು (ಸಕವೈ. ೪೨); ಇವುಗಳ ಪರಸ್ಪರ ಸಮ್ಮೇಳನದಿಂದ ತಯಾರಾಗುವ ಕದಂಬಗಳನ್ನು ಹಲವು ತೆರನಾಗಿ ಉಪಯೋಗಿಸುತ್ತಿದ್ದರು (ಸಾಹಿಜೀ. .೫೨). ೫. ಸಮ್ಮಿಶ್ರಣ; ಸೇರ್ಪಡೆ; ಬೆರೆಯುವುದು: ತ್ರಿವಿಧ ಮಲವಿಲ್ಲದಡೆ ಒಲ್ಲೆನೆಂದು ತನ್ನಲ್ಲಿಗೆ ಬಂದಡೆ ಕೂಡಿ ಕದಂಬನಾಗಿ ಮಧುಮಕ್ಷಿಕದಂತೆ ಸಂಸಾರದಲ್ಲಿಯೇ ಸಾವನಲ್ಲ (ಸರ್ವವ. ೧೨೯-೬೫೩). ೬. ತರಕಾರಿ, ಮಸಾಲೆ ಮೊದಲಾದುವನ್ನು ಹಾಕಿ ಮಾಡಿದ ಅನ್ನ (ಕಿ). ೭. ಕಲಕಿ ಹೋದದ್ದು; ಅವ್ಯವಸ್ಥೆ: ಅವರ ಕೆಲಸವೆಲ್ಲಾ ಕದಂಬವಾಯಿತು (ರೂಢಿ). ೮. ಒಬ್ಬಾತನ ಹೆಸರು: ಶ್ರೀ ಕದವ್ವುರಾ ಮಗನ್ದಿರ್ ಆಜವಮ್ಮರಸರ್ (ಎಕ. VII, ಶಿಕಾರಿ. ೪೫–೪೫; 890); ಮುಜುಕಲ್ಲಂ ಕದಂಬ ತರಿಸಿ (ಎಕ. II, ೪೪೩; 900). ೯. ಒಂದು ರಾಜವಂಶದ ಹೆಸರು: ಬನವಾಸಿ ಪುರವರಾಧೀಶ್ವರಂ ಕದಂಬರಾ[ಭ]ರಣಂ (ಕಇ. I, ೧೯–೭; 1108); ಕರ್ನಾಟಕವನ್ನು ಆಳಿದ ರಾಜರುಗಳಲ್ಲಿ ಕದಂಬರು, ಗಂಗರು ... ಇವರೇ ಮುಖ್ಯರಾದವರು (ಪ್ರೈವಾಸ್ತು. ೩); ಕದಂಬರ ಸಂಸ್ಕೃತ ಮತ್ತು ಕನ್ನಡ ಶಾಸನಗಳಿವೆ (ಕಶಾಅ. ೨೧). ೧೦. ಅರಿಸಿನ (ಕಿ). [ಸಂ.]

**ಕದಂಬಕ** (ನಾ). ೧. ಗುಂಪು; ಸಮೂಹ; ಸಂಚಯ: "ನಿಕರಂ ನಿಕಾಯಂ ಸಮಾಜಮೌಘಂ ಕದಂಬಕಂ ... ಸ್ತೋಮಕ್ಕೆ ನಾಮಮಕ್ಕುಂ" (ಮಂಗರಾ. ೧೨೬–೧); ಶುಷ್ಕ ತಾರ್ಕಿಕಂಗಂ ಬೆಳ್ಳಕ್ಕರಿಗಂಗಂ ವಿಷಯಮೆ ಕಾವ್ಯರತ್ನಮತಿಚತುರಕವಿಕದಂಬಕವಿಷಯಂ (ಆದಿಪು. ೧–೨೪); ಗೋಪಕದಂಬಕಮಿಂದು ಗವ್ಯಮಾಹಿಷರಸ ಸಂಕುಳಂಬೆರಸು ಕಾರ್ಮುಕಪೂಜೆಗೆ ಬರ್ಪುದೆಂದು (ಜಗವಿ. ೫–೬೪). ೨. ಒಂದು ಬಗೆಯ ಖಾದ್ಯ; ಮೊಸರೊಡೆ: "ದಧಿಯಾಮ್ಲ ದುಗ್ಧಾದಿಯಲಿ ವಡೆಗಳಂ ಕಲಸಲದು ಕದಂಬಕಮಕ್ಕು" (ಮಂಗರಾ. ೬೫–೭). ೩. ಸಾಸಿವೆಗಿಡ. ೪. ಕದಂಬ ವೃಕ್ಷದ ಹೂವು. [ಸಂ.]

**ಕದಂಬಗೆಱೆ** (ನಾ). ಒಂದು ಕೆರೆಯ ಹೆಸರು: ತೆಂಕಲು ಕದಂಬಗೆಱೆ ನೈರಿತ್ಯಕ್ಕೆ ತ್ರಿಕಟೇಶ್ವರದ ಶೀಮೆ (ಕಇ. I, ೧೭–೩೯; 1055). [ಕದಂಬ + ಕೆಱೆ]

**ಕದಂಬದಂಬುಲ** (ನಾ). ಸುಗಂಧವಾದ ತಂಬುಲ; ಪರಿಮಳದ ತಾಂಬೂಲ: ಅದೇಂ ಮಗಮಗಿಸಿತ್ತೊ ಕತ್ತುರಿಯ ಕಪ್ಪುರದೊಂದು ಕದಂಬದಂಬುಲಂ (ಪಂಪಭಾ. ೪–೧೦೭); ಕುಂಕುಮದಣ್ಕೆ ಕದಂಬದಂಬುಲಂ ಕನಕವಿಭೂಷಣಾಳಿ ಪೊಸಜಾದಿಯ ಪೂ ದವಳಾರವಟ್ಟಿಜಂ ಬಿನಿಯಿಸಲ್ (ಜಗವಿ. ೧೪–೧೯). [ಕದಂಬ + ತಂಬುಲ]

**ಕದಂಬಯ್ಯದೇವ** (ನಾ). ಒಬ್ಬಾತನ ಹೆಸರು: ಬನವಾಸಿಯ ಶ್ರೀಮತ್ಕದಂಬಯ್ಯದೇವನ ಮೇಲೆ ವನ್ದನ್ದು (ಎಕ. VIII, ಸೊರಬ. ೬೦–೧೫; 1037). [ಕದಂಬ + ಅಯ್ಯ$_1$ + ದೇವ]

**ಕದಂಬಲಿಪಿ** (ನಾ). ೧. (ಓದಲು ಕಷ್ಟವಾದ) ಒಂದು ಬಗೆಯ ಗೂಢಲಿಪಿ: ಲಿಪಿಗಳ ವಿವರ– ಗಗನಲಿಪಿ ಧೂಮಲಿಪಿ ಜಲಲಿಪಿ ಪಿಶಾಚಲಿಪಿ ಖಗಲಿಪಿ ಕದಂಬಲಿಪಿ ಕಾಕಲಿಪಿ ... ಈ ಅಗಣಿತ ಲಿಪಿಗಳ ನೋಡಲಱಿಯದೆ ಬಿಜ್ಜಳರಾಯನ ಸಭೆಯೊಳು ಕಳವಳಗೊಳ್ಳುತ್ತಿದ್ದರು ವಿದ್ವಾಂಸರುಗಳೆಲ್ಲಾ (ಭಾಸ್ಕರ. ೭೭–೫). ೨. ಶಾಸನಗಳಲ್ಲಿ ಬರುವ ಕದಂಬರ ಕಾಲದ ಲಿಪಿ. [ಕದಂಬ + ಲಿಪಿ]

**ಕದಂಬವೆಳಗು** (ನಾ). ಅನೇಕ ಬಣ್ಣಗಳ ಸಂಕೀರ್ಣಕಾಂತಿ; ಬೆರಕೆ ಬೆಳಕು; ಮಿಶ್ರಪ್ರಕಾಶ: ಬಳ್ವಳ ಬಳೆದ ಕದಂಬವೆಳಗೆಂಬ ಧವಳಾರುಣನೀಲ ನೀರರುಹವನಕ್ಕಿದಿರೇಟ್ಟಿ ಲೋಚನಮರೀಚಿಗಳ್ (ಅನಂಪು. ೨–೩೩ ವ). [ಕದಂಬ + ಬೆಳಗು$_2$]

**ಕದಂಬಳಿಗೆ** (ನಾ). ಒಂದು ಪ್ರದೇಶದ ಹೆಸರು: ಶ್ರೀಮತ್ ಕನ್ನಯ್ಯಂ ಕದಂಬಳಿಗೆ ನಾಡ ... ಪ್ರತಿಪಾಳಿಸುತ್ತುಮಿರೆ (ಎಕ. XI, ಚಿತ್ರದು. ೨೬–೪; 946); ಕದಂಬಳಿಗೆ ದೇಶ ಸಹಸ್ರ ಮಧ್ಯೇ (ಮೈಆರಿ. ೧೯೩೫, ೪೦–೫೨; 951). [?]

**ಕದಂಬೂರು** (ನಾ). ಒಂದು **ಊರಿನ** ಹೆಸರು: ಶಿವಮಾರ ಕದಮ್ಬೂರಂ ಆಳೆ (ಎಕ. X, ಕೋಲಾರ. ೬–೩; 753); ಕದಂಬೂರಾ ನಾಳ್ಪದಿನ್‌ಬರು ವಿದತ್ತೂರು ನಾವಿದ ಪಂದೆಮು (ಎಕ. X, ಕೋಲಾರ. ೭–೫; 760); ಕದಂಬೂರೆ ತುಱುಗಳ್ಕೊಳ ಕಾದಿ ಸತ್ತ (ಎಕ. IX, ಆನೇಕ. ೭೩–೮; ಸು. 900). [ಕದಂಬ + ಊರು$_3$ (< ಊರ್)]

**ಕದಕ$_1$** (ನಾ). ಕಳ್ಳ; ಮೋಸಗಾರ. 'ಕದಕತನ' ಪಠಾ. [< ಸಂ. ಕೃತಕ]

**ಕದಕ$_2$** (ನಾ). ಮೇಲ್ಕಟ್ಟು; ಚಪ್ಪರ; ವಿತಾನ. [ಸಂ.]

**ಕದಕತನ, ಕದಕಿತನ** (ನಾ). ವಂಚಕತನ; ಮೋಸಗಾರಿಕೆ: ಯಿಂತೀ ತ್ರಿವಿಧದ ಕಲನಾಟವ ಬಿಡು ಕದಕತನ ಬೇಡ ಕದಂಬಲಿಂಗಾ (ಪದಗೋ. ೮೦). **ಕದಕಿತನ**: ಗೋಲಿನ ಗಾಣದ ಕೀಟಕವನೊಲ್ಲೆ ನಿನ್ನಾಟ ಅದೇತಱ ಮಡುವಿನಾಟ ಕದಕಿತನ ಬೇಡ ಕದಂಬಲಿಂಗಾ (ಮಾರಿವ. ೨೧೩–೩). [ಕದಕ$_1$ + – ತನ]

**ಕದಕದಪು** (ನಾ). ನಡುಕ; ಕಂಪನ: ಬೇಗದಿಂ ಕದಕದಪಂ ತೊಡರ್ಚಿಯೆಳೆದೇರನನೋಡಿಪೆನೆಂದು ಪೂಸರಂ (ಕಬ್ಬಿಕಾ. ೧೯೫). [ಕದಕದ$_0$ + –ಪು$_2$]

**ಕದಕದಿಸು, ಕದಕ್ಕದಿಸು** (ಕ್ರಿ). ನಡುಗು; ಅದುರು; ಅಲುಗಾಡು: "ಕದಕದಿಸು – ಸಂಚಲತ್ವೇ (ನಡುಗು)" (ಶಮಧಾ); ಕದಕದಿಪ್ಪ ಕುಚಂ ಸುಲಿಪಲ್ಲ ಕಾಂತಿ ಚೆಲ್ವೆತ್ತಧರಂ ಮನಂಗೊಳೆ (ದಶಕು. ೪–೨೯); ಕಾಲ ನಿಕ್ಕಲ್ಕೆ ಕದಕದಿಸಿದುದು ಭೂಮಿ (ಸಮ್ಯಕಾ. ೮–೬೧); ಕದಕದಿಪ ಹಂಸಕವ ಕರಕಿಟ್ಟು ಕಂಕಣವ ಮುದದಿ ಕಾಲ್ಗಿಟ್ಟು (ವೆಂಕಾರಾ. ೫–೮–೨೫). **ಕದಕ್ಕದಿಸು**: ತುಂಗಸ್ತನಂ ಕದಕ್ಕದಿಸೆ (ಆದಿಪು. ೧೨–೧೪); ಮೇಲುದ ನೊಟ್ಟೈಸಿ ಕುಚಂ ಕದಕ್ಕದಿಸೆ (ಪಂರಾಮಾ. ೩–೭೮); ತಾರ್ಕ್ಷ್ಯನನೇಱುವಂ ಕದಕ್ಕದಿಸೆ ನಿರರ್ಗಳಂ ... ವಸುದೇವವಲ್ಲಭಂ (ಅರ್ಧನೇ. ೪–೧೩೯); ಕುರುಳ್ಗಳುಂ ಹಾರಂಗಳುಂ ಕುಣಿಯೆ ಕುಚಯುಗಂ ವರನಿತಂಬಂ ಕದಕ್ಕದಿಸೆ (ಚಬಪು. ೫–೧೩); ಸೋರ್ಮುಡಿ ಕಡುಜಾರೆ ನುಣ್ದೊಡೆ ಕದಕ್ಕದಿಸುತ್ತಿರೆ (ವೃಷವಿ. ೪–೧೮). [ಕದಕದ$_0$ + –ಇಸು$_3$]

**ಕದಕಿತನ** 'ಕದಕತನ' ನೋ.

**ಕದಕ್ಕದಿಸು** 'ಕದಕದಿಸು' ನೋ.

**ಕದಗು** (ಕ್ರಿ). (ಎಲೆಗಳಿಂದ) ದಟ್ಟವಾಗು: ಎದುರಿನೊಳಗಿರುತಿರ್ಪ ಕದಗಿದೊಟವೃಕ್ಷವನು ಚದುರರೆಲ್ಲರು ನೀವು ಮುದದೊಳಗೆಯೇರಿ (ಹಮುಚ. ೧೪೧). [?]

**ಕದಡಾರತಿ** (ನಾ). ಕುಂಕುಮ ಕದಡಿದ ನೀರನ್ನು ಹರಿವಾಣದಲ್ಲಿಟ್ಟು ದೃಷ್ಟಿ ತೆಗೆಯುವುದಕ್ಕಾಗಿ ಮಾಡುವ ಆರತಿ: ಇರುಳು ವೆಣ್ ತನ್ನಯ ಮನೋವಲ್ಲಭಂ ಮನೆಗೆ ಬರಲು ಕುಂಕುಮದ ಕದಡಾರತಿಯ ಹರಿವಾಣ ನೆಱೆ ನೀವಾಳಿಸಿ ವರುಣದಿಕ್ಕಿಗಿಟ್ಟಂತೆ (ನಂದಿಮಾ. ೧೮–೨೦). 'ಕದಲಾರತಿ' ಪಠಾ. [ಕದಡು$_3$ + ಆರತಿ$_1$]

**ಕದಡಿಸು**, ಕದರಿಸು (ಕ್ರಿ). ೧. ಕಲಕು; ಬೆರಸು. ೨. ಕೆರಳಿಸು; ಕ್ಷೋಭೆಗೊಳಿಸು: ಮುನೀಂದ್ರಚಿತ್ತಮಂ ಕದಡಿಸಿ (ದಶಕು. ೮-೫೮); ದೈತ್ಯರನೊರಸಿದನು ಬಳಿಕುಳಿದ ಪಾಂಡವಕುರುನೃಪರ ಕದಡಿಸಿದನು (ಕುವ್ಯಾಅ. ೨-೪); "ಅವರ ಮನಸ್ಸನ್ನೆಲ್ಲ ಉಳಿದವರು ಕದಡಿಸಿ ಬಿಟ್ಟಿದ್ದಾರೆ . . ." (ಕಮನೆ. ೧೦೫); ವಿರೋಧವಿಚಾರಗಳನ್ನು ತಂದು ಜನತೆಯ ಮನಸ್ಸನ್ನು . . . ಕದಡಿಸಲು ಹೊಂಚುಹಾಕುವವರ ಹುಟ್ಟಡಗಿಸಬೇಕಾದುದು (ರೂಪಸಂ. ೨೪). **ಕದರಿಸು**: ೧. ಆ ಒನಕೆಯನ್ನು ಸಣ್ಣದಾಗಿ ಪುಡಿಮಾಡಿಸಿ ಆ ಪುಡಿಯನ್ನು ಸಾಗರದಲ್ಲಿ ಕದರಿಸಿಬಿಟ್ಟನು (ವಚಭಾ. ೩೭೮). ೨. ಕದಡೆತ್ತುವ ತಲೆಗುತ್ತುವ ಕದರಿಸಿ ಬೇಸರಿಸಿ ಬೈದು ಮೊರೆವಂಗನೆಯರ ಪುದುಹಾ[ಪಾ]ಳಿಂದಂ ಪಾವಿನ ಸದನವದೇನಾಯ್ತು (ನೀತಿಸಾ. ೭೩೫). [ಕದಡು$_1$ + – ಇಸು$_3$]

**ಕದಡು$_1$**, ಕದರು$_1$, ಕರಡು$_1$ (ಕ್ರಿ). ೧. ಕಲಕು; ಬೆರಸು: ಕದಡಿದ ನೀರ್ಗಳನುಂಡು (ವಡ್ಡಾರಾ. ೧೫೬-೨೪); ನೋಡಲಿದೆ ದಂತಿ ಕದಡಿದ ಕೊಳಂ (ಜೈಮಿಭಾ. ೨೮-೪೪); ದೈತ್ಯರು ನೆರೆದು ಕಚನನು ಕೊಂದು ದಹಿಸಿಯೆ ನಿರುತ ಬೂದಿಯ ಕದಡಿ ನೀರೊಳು ಕುಡಿದರೊಂದಾಗಿ (ಸಂಭಪ. ಪರಿ. ೩೧೮); ಹುಡಿಮಾಡಿಕೊಂಡಾ ಹುಡಿಯ ಬಿಸಿನೀರಿನೊಳು ಕದಡಿ (ಸೂಪಶಾ. ೨-೧೨). ೨. ಕ್ಷೋಭೆಗೊಳಿಸು; ಕೆರಳಿಸು: ಇಲ್ಲಿ ಬಾಟ್ಸರಂ ಕದಡದಿರಿತ್ತ ಬಾರದಿರ್ (ಪಂಪಭಾ. ೧೩-೭೩). ೩. ಕ್ಷೋಭೆಗೊಳ್ಳು; ಕೆರಳು: ಖಚರಚಕ್ರವರ್ತಿಯ ಚಿತ್ತಂ ಕೊಳದೊಳಗೆಳವಾಳೆ ತೆಱಂಬೊಳೆವಂತೆ ಕಲಂಕಿ ಕದಡಿದತ್ತಾ ಕ್ಷಣದೊಳ್ (ಪಂರಾಮಾ. ೯-೭೯); ಕದಡಿದ ಗಂಗೆಯಂತೆ ಬಂದಗಜಾಧಿಪತಿಯ ಸಭೆಯಂ ಹೊಕ್ಕನು (ಸಿದ್ಧರಾ. ೬-೪೬); ಸೋದರರ ಮನ ಕದಡಿದವು ದಾಯಾದವಿಷಯದಲಿ (ಕುವ್ಯಾಉ. ೧-೨೭). **ಕದರು$_1$**: ೧. ಚದುರೆಯರೆಯ್ತಂದು ಸುರಿದರು ಮೊಗದೊಳು ಕದರಿದ ಕತ್ತುರಿರಸವ (ನಾಗಕು. ೩೦-೧೩೨); ನೀರಿನಲ್ಲಿ ತೌಡು ಹೊಟ್ಟು ಕೋಳಿಹಿಕ್ಕೆಗಳನ್ನು ಕದರಿ ಆ ನೀರನ್ನು ದ್ರಾಕ್ಷಿಗಿಡದ ಬೇರಿಗೆ ಹಾಕಿದರೆ ವೃದ್ಧಿಯಂ ಹೊಂದುವದು (ಸೌಗಂಧಿ. ೪೩೪-೧೭); ಹೊಳೆಯಲ್ಲಿ ಹುಣಿಸೇಹಣ್ಣು ಕದರಿದ ಹಾಗಾಯಿತು (ಹುಟ್ಟಿಹ. ೧೨೨). ೪. ಆರಿಸು; ಒಟ್ಟುಗೂಡಿಸು. 'ಕದರುಬತ್ತ' ಪರಾ. **ಕರಡು$_1$**: ೧. ಉಪ್ಪನ್ನು ಸ್ವಲ್ಪ ನೀರಲ್ಲಿ ಕರಡಬೇಕು (ಅಡುಸಾ. ೯೩); ಕೊನೆಗೆ ಎರಡೂ ಕೆಟ್ಟು ಕರಡಿ ಹೊಲೆಯಾಗಬಾರದಲ್ಲ (ಬೆಳುಮ. ೫೭). 'ಕದಲು$_1$', 'ಕಲಡು$_1$' ಪರಾ.

[ದೇ. ‖ ತಮಿ. ಕದಟ್ಟು; ಮಲ. ಕದರ್ತು; ತುಳು. ಕದಲು, ಕದೆಲು; ತೆಲು. ಕದಲು; ಪರ್ಜಿ. ಗದ್ಲ್]

**ಕದಡು$_2$** (ನಾ). ೧. ಕಲಕಿದ ದ್ರವ; ಕಲ್ಕ; ಕಲಕಿದ ನೀರು: ಪೂಸಿದ ಮೃಗಮದದ ಮುಡಿಯ ಪೂವಿನ ರಜದಿಂ ವಾಸಿಸಿದ ನೀರ ಕದಡಿಂಪಾ ಸವದೊಳ್ ಸೊರ್ಕಿ ಬೆಂಡುಮಗುಳ್ದುವು ಮಿಾಂಗಳ್ (ಪಂಪಭಾ. ೫-೬೫); ಬೆಳರ್ವಟ್ಟು ನಿಂದುದೊಂದೆಡೆ ಮಲಯೋದ್ಭವಪ್ರಸರದಿಂ ಕದಡಿಂ ಕಡುಕೆಂಕಮಾದುದೊಂದೆಡೆ ನವಕುಂಕುಮದ್ರವದಿಂ (ಶಾಂತಿಪು. ೮-೨೯). ೨. ಬಗ್ಗಡ; ರಾಡಿ: ಚ[ಚಿ]ಲ್ಲಫಲದಿಂದೆ ನೀರ್ ಕದಡೆಲ್ಲಂ ತಿಳಿ (ಕಿಡು)ವಂತೆ ತಿಳಿಗುಂ (ಖಮದ. ೧೨-೪೬). ೩. ಕಳವಳ; ಕ್ಷೋಭೆ: ಕೆದಱಿದುದು ಕುಡಿನೋಟ ಕರಣದ ಕದಡು ಹರೆದುದು (ಕುವ್ಯಾಗ. ೧೦-೪); ಕಂಡನು ತಂದೆಯ ಕದಡನು ಕಲಿಕಾಲ ಗಾಂಡೀವಿ (ಕುರಾಸಾಂ. ೧೪-೯೯). ೪. ಕ್ಷೋಭೆಗೊಂಡ ವ್ಯಕ್ತಿ; ಕಳವಳಗೊಂಡ ವ್ಯಕ್ತಿ: ನೀತಿರಹಿತಗಳಖಿಳಯಿಂದ್ರಿಯಚೇತನಂಗಳು ಕದಡುಗಳು ಕಾಮಾತುರಂಗಳು (ಬಸವು. ೪೦-೬೫). 'ಕದಲು$_2$', 'ಕಲಡು$_2$' ಪರಾ.

[< ಕದಡು$_1$]

**ಕದಡುಗಣ್** (ನಾ). ಕೆರಳಿದ ಕಣ್ಣು; ಕೆಂಪೇರಿದ ಕಣ್ಣು: ಕೆಂಪಿನ ಕದಡುಗಂಗಳ ಕುಣಿವ ಮಿಾಸೆಯ ಕದನಗಲಿಗಳು ಕವಿದರು (ಕುವ್ಯಾದ್ರೋ. ೧೦-೫೯) [ಕದಡು$_1$ + ಕಣ್]

**ಕದಡುಗಳೆ** (ಕ್ರಿ). ಕೊಳೆಯನ್ನು ಕಳೆದುಕೊ; ಕಶ್ಮಲವನ್ನು ನೀಗು; ತಿಳಿಯಾಗು: ಪಲವುಂ ಪೊಱಗೆ ಕೊಳೆನೀರ್ಗಳ್ ಕದಡುಗಳೆದು ತಿಳಿದುವು (ಚಿಕವಂ. ೧೫೨-೧೦). [ಕದಡು$_2$ + ಕಳೆ$_1$]

**ಕದಡುದುಃಖ** (ನಾ). ಕ್ಷೋಭೆಗೊಳಿಸುವ ದುಃಖ; ಮನಸ್ಸನ್ನು ಕಲಕುವ ದುಃಖ: ಮುದುಕನಾಗಿ ಚಿಂತೆ ಪಡುವೆನು ನಾ ಕದಡುದುಃಖ ಪಡಲಾಱೆನು (ಪುರಂದ. ೨-೫೦-೩). [ಕದಡು$_1$ + ದುಃಖ]

**ಕದಡುದೋಱು** (ಕ್ರಿ). ಬಗ್ಗಡವನ್ನು ತೋರು; ಕೆಸರಾಗು: ಕುಡಿಗೆ ಕೊರಲ್ವರೆಗಂ ತಾಂ ಕಡುವಟೆಯಂ ಕಱೆಗೆ ಕದಡುದೋರ್ಪುದೆ ಕಡಲೊಳ್ (ಚಿಕವಿ. ೧-೩೯).

[ಕದಡು$_2$ + ತೋಱು$_1$ (< ತೋಱ್)]

**ಕದಡುನಗೆ** (ನಾ). ಕೆಣಕುವ, ಕೆರಳಿಸುವ ನಗೆ; ಮುಗ್ಧವಲ್ಲದ ನಗೆ: ಜವ್ವನವೆನ್ನಲೆ? ಮದವಿಲ್ಲದ ಮನ. ಶೈಶವವೆನ್ನಲೆ? ಕದಡುನಗೆ (ನಲ್ಕೆ. ೯). [ಕದಡು$_1$ + ನಗೆ]

**ಕದಡುನೀರ್** (ನಾ). ೧. ಬಗ್ಗಡವಾದ ನೀರು; ಕಲಕಿದ ನೀರು: ತೊಱೆ ಬರ್ಪಂದು ಕಲಂಕಿ ಮುಂ ಕದಡುನೀರ್ ಬರ್ಪಂತೆ (ಜೀವಸಂ. ೬೫-೨). ೨. ಓಕುಳಿ: ಕುಂಕುಮದ ಕದಡು[ಪಾಠಾಂ. ಕಡುಕು]ನೀರಂ ಭೋಂಕನೆ ಮೇಲೊತ್ತೆ (ಕಾವ್ಯಾವ. ೮೬೮); ಮೃಗಮದದ ಯಕ್ಷಕರ್ದಮದ ಗರುವ ಕುಂಕುಮದ ಕದಡುನೀರ್ದಳಿಪದಿಂ (ಪುಷ್ಪಪು. ೪-೩೩). [ಕದಡು$_1$ + ನೀರ್$_1$]

**ಕದಡುಬಗೆ** (ನಾ). ಕಲಕಿದ ಮನಸ್ಸು; ಕ್ಷೋಭೆಗೊಂಡ ಮನಸ್ಸು: ಕದಡುಬಗೆ ತಿಳಿಯಾಗಿ ದೂರದೆಸೆ ಬಳಿಯಾಗಿ (ಹೊಂಗಳು. ೧೨-೨೨). [ಕದಡು$_1$ + ಬಗೆ$_3$]

**ಕದಡುಮನ** (ನಾ). = ಕದಡುಬಗೆ: ಮೊದಲ ಕೋಟೆಯ ಸುತ್ತುವಳಯದ ಸದನ ಸಂಕುಳವನು ಪರೀಕ್ಷಿಸಿ ಕದಡುಮನದುಬ್ಬರದ ಮಱುಕದಲಿಳಿದನು (ತೊರರಾ. ೫-೨-೧೬). [ಕದಡು$_1$ + ಮನ$_1$]

**ಕದಡೇಳ್** 'ಕದಡೇೞ್' ನೋ.

**ಕದಡೇೞ್**, ಕದಡೇಳ್ (ಕ್ರಿ). ಬಗ್ಗಡ ಮೇಲಕ್ಕೆ ಬರು: ತರುಣೀಧೈರ್ಯಧರಿತ್ರಿ ಬಾಯ್ಬಿಡುವಿನಂ ವಾರಾಂಗನಾ ರಾಗ ಸಾಗರಪೂರಂ ಕದಡೇೞ್ವಿನಂ (ವರ್ಧಪು. ೨-೧೩). **ಕದಡೇಳ್**: ಕದಡೆಳ್ದು ಜಡಧಿ ತುಳ್ಕಿದುದು (ಶಬಶಂ. ೪-೧೮). [ಕದಡು$_2$ + ಎೞ್$_1$]

**ಕದಧ್ವ** (ನಾ). ಕೆಟ್ಟದಾರಿ. [ಸಂ. ಕದಧ್ವನ್]

**ಕದನ** (ನಾ). ೧. ನಾಶಮಾಡುವಿಕೆ; ಕೊಲ್ಲುವಿಕೆ: "ಮಾರಣಂ . . . ಕದನಂ, ವ್ಯಾಪಾದನಂ . . . ಹಿಂಸಾ, ಸಂಜ್ಞಪನಂ – ಈ ೨೧ ಕೊಲೆ" (ಹಲಾಯು. ೭೮-೩೨೩, ೩೨೪). ೨. ಯುದ್ಧ; ಕಾಳಗ: "ರಣಂ ಕದನ ಮೆನಲು" (ಮಂಗರಾ. ೨೫-೧); ಮಲಪರೊಳು ಗಂಡ ಕದನಪ್ರಚಂಡ ಶೌಚಗಾಂಗೇಯ (ಎಕ. VII, ಶಿವಮೊ. ೪೩-೨೩; 1172); ಕದನಕ್ಕಂಜುವ ವೀರನೇ (ಸೋಮೇಶ. ೭೮); ಶಿವಕಾಮರ ಕದನವು . . . ಕಬ್ಬಿಗರಕಾವದ ತಿರುಳು (ಸಾಹಿಸ. ೧೪೨). ೩. ಪಾಪ. [ಸಂ.]

**ಕದನಕಣ** (ನಾ). ಕಾಳಗದ ಕಣ; ಯುದ್ಧಭೂಮಿ; ರಣರಂಗ: ಇದ್ದಕ್ಕಿದಂತೆ ಆ ಕದನಕಣ ಗಂಗಾತೀರವಾಗಿ ಕಂಗೊಳಿಸಿತು (ಬಿದುರಿ. ೮೦); ಕದನಕಣದಲ್ಲಿ ಒಬ್ಬಳೇ ನಿಲ್ಲುವುದಕ್ಕಾಗದೆ ಅವಳೂ ಮನೆಯೊಳಕ್ಕೆ ತೆರಳಿದಳು (ಪ್ರೇಮಾಶ್ರ. ೨೩).

[ಕದನ + ಕಣ$_1$ (< ಕಳ$_3$)]

**ಕದನಕುತೂಹಲ** (ನಾ). ೧. ಯುದ್ಧದಲ್ಲಿ ಕುತೂಹಲ. ೨. ಯುದ್ಧಕ್ಕೆ ಆತುರನಾದವನು; ಕಾಳಗದಲ್ಲಿ ಕುತೂಹಲವುಳ್ಳವನು: ಕುರುಪಾಂಡವ ವೀರರೆಲ್ಲ ವಿಜಯೋತ್ಸಾಹಿಗಳಾಗಿ ಕದನಕುತೂಹಲರಾಗಿ ಶಂಖಧ್ವಾನ ಮಾಡುತ್ತಿದ್ದಾರೆ (ಭಾರದ. ೧೧೧). ೩. [ಸಂಗೀತ] ಒಂದು ರಾಗದ ಹೆಸರು: ಕದನಕುತೂಹಲ ರಾಗವು ಪಟ್ಟಣಂ ಸುಬ್ರಹ್ಮಣ್ಯಂ ಅಯ್ಯರ್ ಅವರ ಪ್ರತಿಭೆಯ ಸೃಷ್ಟಿ (ಸಂಗೀತ. ೨೯). [ಕದನ + ಕುತೂಹಲ]

**ಕದನಕೇಳಿ** (ನಾ). ಯುದ್ಧಕ್ರೀಡೆ; ಯುದ್ಧವಿನೋದ: ಆ ಮರುದ್ಗಣ ಮುನಿಗಣಂಗಳ ತೋಮರದ ತೋಟಿಯಲಿ ಕೆದಱಿತು ಕದನಕೇಳಿಯಲಿ (ತೊರರಾ. ೧-೮-೩೮). [ಕದನ + ಕೇಳ್ಕ (= ಕೇಳಿ)]

**ಕದನಕೋಳಾಹಳ** (ನಾ). ೧. ಯುದ್ಧದ ಕೋಲಾಹಲ, —ಗೊಂದಲ. ೨. ಯುದ್ಧದಲ್ಲಿ ಕೋಲಾಹಲವನ್ನುಂಟುಮಾಡುವವನು: ಮದಮುಖರಲ್ಲೈ ರಕ್ಕಸರು ತೋಱಿದ ಮಹೋತ್ಸಾಹವನು ಬಗೆಯದೆ ಕದನಕೋಳಾಹಳರು ದಳವುಳಿಸಿದರು ಧಾಳಿಯಲಿ (ತೊರರಾ. ೩-೫-೯). [ಕದನ + ಕೋಳಾಹಳ (= ಕೋಲಾಹಲ)]

**ಕದನಕೌತೂಹಲ** (ನಾ). = ಕದನಕುತೂಹಲ ೨: ಅತಿರಥ ಜಾಲ ಕವಿದುದು ಕದನಕೌತೂಹಲರ ಕೇರಿಯಲಿ (ಕುವ್ಯಾಕ. ೮-೧೨). [ಕದನ + ಕೌತೂಹಲ]

**ಕದನಕ್ಷೇತ್ರ** (ನಾ). = ಕದನಕಣ: ಕದನಕ್ಷೇತ್ರದೊಳಾಂತ ಶತ್ರು ಪಿಡಿಪಟ್ಟಂ ಕೂಡೆ ಕಣ್ಗೆಟ್ಟನೋಡಿದನಟ್ಟಾಡಿದನೆಂಬ ಮಾತವನ ವಂಶಕ್ಕೆಯ್ದುಗುಂ (ಪುಷ್ಪಪು. ೩-೧೮). [ಕದನ + ಕ್ಷೇತ್ರ]

**ಕದನಗಲಿ** (ನಾ). ಯುದ್ಧವೀರ: ಕುಣಿವ ಮೀಸೆಯ ಕದನಗಲಿಗಳು ಕವಿದರು (ಕುವ್ಯಾದ್ರೋ. ೧೦-೫೯); ರಿಪುಭಟ ಕದನಗಲಿಗಳು ಜೀಯೆನಲು (ಸಳಚ. ೬-೨); ಕದನಗಲಿಗಳಿಂದ ಮುತ್ತಿದ ತುರುಕರ ಸದೆದೆಬ್ಬಿಸು ನೀನೆಂದ (ಕಂಸವಿ. ೧೪-೫೨). [ಕದನ + ಕಲ್ಕ]

**ಕದನಗ್ಗಱ** (ನಾ). ಕದನದಲ್ಲಿ ಶ್ರೇಷ್ಠನಾದವನು; ಒಂದು ಬಿರುದು: ಕಾಲ್ತಿದೆ ಕದನಗ್ಗ[ಗ್ಗ]ಱ ಕಾಳೆಗಕೇಸರಿ ಕರಿರಿಪುವಿಕ್ರಮನ್ (ಎಇ. IX, ೧೪-೭; 800). [ಕದನ + ಅಗ್ಗಱ್ಕ]

**ಕದನತ್ರಿಣೇತ್ರ** (ನಾ). ಯುದ್ಧದಲ್ಲಿ ರುದ್ರನಂತೆ ಇರುವವನು; ಒಂದು ಬಿರುದು: ತ್ರಿಣೇತ್ರನುಮನಸುಂಗೊಳಿಸಿದ ಸಾಹಸದೊಳ್ ಕದನತ್ರಿಣೇತ್ರನುಂ (ಪಂಪಭಾ. ೧೪-೩೭ ವ); ಚಾಳುಕ್ಯಚೂಡಾಮಣಿ ಕದನತ್ರಿಣೇತ್ರ (ಸೌಇಇ. XX, ೫೫-೧೪; 1082). [ಕದನ + ತ್ರಿಣೇತ್ರ]

**ಕದನಪಥ** (ನಾ). ಕಾಳಗದ ಮಾರ್ಗ, —ರೀತಿ: ಭೀಮನ ಕದನಪಥವಿದೆಯೆನುತ ನಗುತೈತಂದನಾ ದ್ರೋಣ (ಕುವ್ಯಾದ್ರೋ. ೧೩-೨). [ಕದನ + ಪಥ]

**ಕದನಬಾಹಿರ** (ನಾ). ಯುದ್ಧಕ್ಕೆ ಹೊರಗಾದವನು; ಯುದ್ಧಕ್ಕೆ ಅಯೋಗ್ಯನಾದವನು: ನಿರುತವ ನುಡಿಯಲಮ್ಮರು ತಮ್ಮ ಮನದೊಳಗೊಡಬಡುವರೇ ಕದನಬಾಹಿರ ಕರ್ಣ ಹೋಗೆಂದ (ಕುವ್ಯಾಕ. ೯-೧೧). [ಕದನ + ಬಾಹಿರ]

**ಕದನಮಹೇಶ್ವರ** (ನಾ). = ಕದನತ್ರಿಣೇತ್ರ: ಪುರಿಕರ ಪುರವರೇಶ್ವರಂ ಕದನಮಹೇಶ್ವರಂ (ಸೌಇಇ. XX, ೪೭-೨೧; 1074). [ಕದನ + ಮಹೇಶ್ವರ]

**ಕದನಮಾರ್ತಂಡ** (ನಾ). ಯುದ್ಧದಲ್ಲಿ ಸೂರ್ಯನಂತೆ ಪ್ರಖರನಾದವನು; ಒಂದು ಬಿರುದು: ಜಗದೊರ್ವ್ವಗಣ್ಡಂ ಕದನಮಾರ್ತಂಣ್ಡ(ಂ)ಮರೆಸಂಕರುದ್ರಂ (ಸೌಇಇ. XX, ೪೧-೧೩; 1068). [ಕದನ + ಮಾರ್ತಂಡ]

**ಕದನರಾಗಿ** (ನಾ). ಕಾಳಗದಲ್ಲಿ ಪ್ರೀತಿಯುಳ್ಳವನು; ಯುದ್ಧೋತ್ಸಾಹಿ: ಕಡುಗಿ ನೂಕುವ ಕದನರಾಗಿಗಳೊಡನೆ ಕಾದುವ ಪಾರ್ಥತನಯನ ಬಿಡಿಸರಳು ಬೀಱಿದವು ರಮಣರನಮರವಧುಗಳಿಗೆ (ಕುವ್ಯಾದ್ರೋ. ೫-೬೬). [ಕದನ + ರಾಗ್ಕಿ]

**ಕದನಲಂಪಟ** (ನಾ). = ಕದನರಾಗಿ: ಕರಿ ಸಿಂಧುರಾಜನ ಹರಿಬವೆಮ್ಮದು ತಮ್ಮದೆಂದಬ್ಬರಿಸಿ ನೂಕಿತು ಕದನಲಂಪಟರಾಗಿ ಪಟುಭಟರು (ಕುವ್ಯಾದ್ರೋ. ೧೫-೨೩). [ಕದನ + ಲಂಪಟ]

**ಕದನಲಗ್ಗೆ** (ನಾ). ಯುದ್ಧದ ಧಾಳಿ: ಕದನಲಗ್ಗೆಯ ಕಹಳೆ ಬಹುವಾದ್ಯದ ಮಹಾದ್ಭುತ ರಭಸ ಮಿಗೆ (ಕುವ್ಯಾದ್ರೋ. ೧೩-೪೯). [ಕದನ + ಲಗ್ಗೆ]

**ಕದನವಿರಾಮ** (ನಾ). ಯುದ್ಧವನ್ನು ನಿಲ್ಲಿಸುವಿಕೆ; ಯುದ್ಧವಿರಾಮ (Ceasefire. ಪತ್ರಿನಿ. ೧೩). [ಕದನ + ವಿರಾಮ]

**ಕದನಾನಕ** (ನಾ). ಯುದ್ಧಭೇರಿ; ರಣವಾದ್ಯ: ದಿಗ್ಭಿತ್ತಿವಿಭೇದಿ ಪೆರ್ಚೆ ಕದನಾನಕ ರಾವಂ (ಪಂಪಭಾ. ೮-೯೨). [ಕದನ + ಆನಕ]

**ಕದನಾರ್ಥಿ** (ನಾ). ಕದನವನ್ನು ಬಯಸುವವನು; ಯುದ್ಧಾಪೇಕ್ಷಿ: ನೀ ಕದನಾರ್ಥಿಯೇ ದಿಟ ತೋಱಿಸಾದಡೆ ಬಾಹುವಿಕ್ರಮವ (ಕುವ್ಯಾಗ. ೨-೨೭). [ಕದನ + ಅರ್ಥಿ]

**ಕದನಾಳಾಪ** (ನಾ). ಯುದ್ಧದಲ್ಲಿ ವೀರರು ಆಡುವ ಮಾತು; ವೀರಾವೇಶದ ಮಾತು: ಬೆಂಗಾಹಿನಲಿ ನೂಕುವ ಬಲ ಸಮರ್ಥರ ಜೋಕೆಯಲಿ ಕುರುಬಲಕೆ ಕದನಾಳಾಪವಾಯ್ತೆನುತೆಚ್ಚನಭಿಮನ್ಯು (ಕುವ್ಯಾದ್ರೋ. ೬-೩). [ಕದನ + ಆಳಾಪ (= ಆಲಾಪ)]

**ಕದನಿ** 'ಕದಿನಿ' ನೋ.

**ಕದನಿಸು** (ಕ್ರಿ). ಕಾಳಗಮಾಡು; ಹೋರಾಡು: ಮುಂಡನು ಕೋಪಾಟೋಪದಿಂದ ಮೇಲ್ವರಿದು ಬಂದು ಕದನಿಸಲು (ಭೈರಸೂ. ೧೧೮). [ಕದನ + -ಇಸ್ಸು]

**ಕದನೋದ್ದಾಮ** (ನಾ). ೧. ಯುದ್ಧದಲ್ಲಿ ಮಿಗಿಲಾದವನು, —ಪ್ರಚಂಡ: ಕದನೋದ್ದಾಮರಸ್ತ್ರಾಭ್ಯಾಸವನು ಮಾಡಿದರು ದ್ರೋಣನಲಿ (ಕುವ್ಯಾಆ. ೬ ಸೂಚನೆ). ೨. ಯುದ್ಧದ ಉತ್ಸಾಹ; ಕದನೋತ್ಸಾಹ: ಮಾರ್ತಾಂಡತನಯನ ವಧೆಗೆ ನೇಮವ ಕೊಂಡು ಕದನೋದ್ದಾಮದಲಿ ಹೊಱವಂಟನಾ ಪಾರ್ಥ (ಕುವ್ಯಾಕ. ೧೮ ಸೂಚನೆ). [ಕದನ + ಉದ್ದಾಮ]

**ಕದನ್ನ** (ನಾ). ಕೆಟ್ಟ ಅನ್ನ ಅಥವಾ ಕೀಳಾದ ಆಹಾರ: ನೀನಾರೆಂಬ ಱವಾಗೆ ಸಾಕು ಸಿರಿಯೇಂ ದಾರಿದ್ರ್ಯಮೇಂ . . . ಪಾಲುಣಿಸೇಂ ಕದನ್ನದುಣಿಸೇಂ (ರತ್ನಾಶ. ೧೨೩); ತಂಗಲುಲ್ಲು ಕದನ್ನಮಲ್ಲು ಪೂರಣಗಡುಬುಂಟು ಓಗರಮುಂಟು (ರಾಮಾಶ್ವ. ೨೩-೨೨); ಎರಡು ಹಿಡಿ ಕದನ್ನದ ಸಲುವಾಗಿ ಧರ್ಮನೀತಿ ಮತ್ತು ಮನುಷ್ಯತ್ವಕ್ಕೆ ತಿಲಾಂಜಲಿಯನ್ನು ಕೊಟ್ಟರಾ? (ಕುರುಕ್ಷೇ. ೧೦೨). [ಸಂ.]

**ಕದನ್ನಭುಜ** (ನಾ). ಕೆಟ್ಟ ಅನ್ನ ಉಂಡು ಬದುಕುವವನು: ಕನಕನಿರೆ ಲಗ್ನದೊಳ್ ಕ್ಷತತನು ವಿತ್ತಸ್ಥಾನದೊಳ್ ಕದನ್ನಭುಜಂ (ಜಾತತಿ. ೧೪-೯). [ಸಂ. ಕದನ್ನಭುಜ್]

**ಕದಪು** 'ಕದಂಪು' ನೋ.

**ಕದಪ್ಪ** (ನಾ). ಒಂದು ಊರಿನ ಹೆಸರು: ವಾಸಿಷ್ಟ ಸಗೋತ್ರಾಯ ತೈತ್ತಿರೀಯಾಯ ತಗರಾಧಿವಾಸಿನೇ ಚತುರ್ವೇದಾಯೋಂಬರ ಜೇದ(ಡ?)ಕುಲನಾಮಧೇಯಾಯ ಜ್ಯೇಷ್ಠ ಶರ್ಮ್ಮಣೇ ರೋಲ್ಲೂಜು ಕ್ಕುತ್ತರತಃ ಕದಪ್ಪಗ್ರಾಮ (ಇಇ. VI, ೭೩-೧೬; 535). [?]

**ಕದಬದ,** ಕದಬೊದ (ನಾ). ೧. ಕಳವಳ; ಭ್ರಾಂತಿ: ಬದುಕಿ ದೆನೆನುತ್ತ ಭಯದಿಂದ ಶುಕ ಬಿದ್ದೋಡಿ ಕದಬದದೊಳಸುರೇಶಗೆಜಿಗಿ ನಡುಗಿ ದೀನವದನದಿಂ (ವೆಂಕಾರಾ. ೬-೯-೭). ೨. ತಿರಸ್ಕಾರ. 'ಕದ ಬದಂಗೈ' ಪರಾ. **ಕದಬೊದ :** ೩. ಸಡಗರ; ಸಂಭ್ರಮ (?) : ಕದಬೊದವಾಗಿ ಹೆಂಗಳು ಹೋಗಿ ನೃಪಗೆ ಹೇಳಿದೊಡಣ್ಣ ತಮ್ಮನಿಂತೆಂದು ಮೊದಲು ಕಡೆಯೊಳು ಹುಟ್ಟಿದರನಱಿಯಬಾರದದಕೆ ಯೋಚಿಸಿ ಕಳು ಹಿದೆರು (ಭರಚ. ೨೮-೩೪).
[?. / ಸಂ. ಕದ್ವದ = ಅಸ್ಪಷ್ಟವಾಗಿ ಮಾತಾಡುವ, ಕ್ಷುದ್ರ, ಹೀನ]

**ಕದಬದಂಗೈ** (ಕ್ರಿ). ಕೀಳುಮಾಡು; ತಿರಸ್ಕರಿಸು: ಉದಕಮಂ ದೂಷಿಸುವರುತ್ತಮಫಲಂಗಳಂ ಕದಬದಂಗೈವರ್ (ವೆಂಕಾರಾ. ೫-೧-೨೪). [ಕದಬದ + ಗೈ (< ಕೆಯ್$_1$)]

**ಕದಬದಂಗೊಳ್,** ಕದಬದಂಗೊಳ್ಳು (ಕ್ರಿ). ಕಳವಳಿಸು; ಭ್ರಾಂತಿ ಗೊಳ್ಳು: ಇಲ್ಲಿಯುದಿತಮಾಗದು ದಾರಿ ತಿರುತಿರುಗಿ ಬೇಸಾರಿ ಕದಬದಂ ಗೊಳಲೇನು (ವೆಂಕಾರಾ. ೫-೬-೬೭); ಪದುಮಾಕ್ಷಿಯಸುಗಳಂ ಕಳೆಯ ಲಿಚ್ಛೈಸುತಿರೆ ಕದಬದಂಗೊಂಡು ಕಂಗೆಟ್ಟಾನು ಚಿಂತಿಸಿದೆ (ವೆಂಕಾರಾ. ೫-೧೯-೩೩). **ಕದಬದಂಗೊಳ್ಳು :** ಭಯದಿಂದ ಗ್ರಹಗಳೆಲ್ಲಂ ಚದರಿ ಕದಬದಂಗೊಳ್ಳಲು (ವೆಂಕಾರಾ. ೫-೧-೨೯). [ಕದಬದ + ಕೊಳ್$_1$]

**ಕದಬದಂಗೊಳ್ಳು** 'ಕದಬದಂಗೊಳ್' ನೋ.

**ಕದಬದಲ್** 'ಕದಲುಬದಲು' ನೋ.

**ಕದಬದಿಸು,** ಕದಬಳಿಸು (ಕ್ರಿ). ೧. ಅಸ್ಥಿರವಾಗು; ಅಲುಗಾಡು; ಸ್ಥಿರತೆಯನ್ನು ನೀಗಿಕೊ: ಉದಧಿಗಳು ತುಳುಕಾಡೆ ಗಿರಿಗಳು ಕದಬಡಿ [ದಿ]ಸೆ ರಣಭೂತಸಂತತಿ ಕೆದಱೆ ಮೃತ್ಯುಂಜಯ ಮಹಾದೇವನೆ ಸುರಸ್ತೋಮ (ಉತ್ತರಾ. ೧೧-೬೦). ೨. ಕಳವಳಗೊಳ್ಳು; ಕ್ಷೋಭೆ ಗೊಳ್ಳು: ಕದಬದಿಸಿದನು ಸುರಪ ತಲೆಮತ್ತು ದಿಸಿದುದ ಕಂಡಕಟ ಮುಂದಱಿಯದೆ ವರೂಥವ ಕಳುಹಿ ಕೆಟ್ಟೆವು ಕಲಹಕವನಿಪನ (ತೊರರಾ. ೬-೫೧-೧೪). **ಕದಬಳಿಸು:** ೨. ಪುತ್ರಮಿತ್ರಾದಿಗಳ ದುಃಖದಿಂ ಹದುಗಿರ್ದ ಹೇಳಿಗೆಯ ಹಾವಡಿಗರಹಿಯಂತೆ ಕದಬಳಿ [ಪಾಠಾಂ. ಲಿ]ಸಿ (ಲಶಿಚಂ. ೩೯-೪). [ಕದಬದ + -ಇಸು$_3$]

**ಕದಬಳಿ** (ನಾ). (?) : ಕಲ್ಲಿಗಟ್ಟಗುಡೆಯಲಿ ಗೋಲಿಯ ಚೀಲವನಿಕ್ಕಿ ಹಿಲ್ಲಿ ಕಟ್ಟೋಗರ ಕದಬಳಿಯಾ ತುದಿಯಲಿ ನಿಲ್ಲಿಸಿ ಪೆಗಲೊಳು ಕೊಂಬು ತೋಳನೆ ಪಿಡಿದು ಗೊಲ್ಲರೊಡಗೂಡಿ...ಗೋವುಗಳ ಕಾಯ್ದ (ಕನಕ. ೧೬-೨೦). [?]

**ಕದಬಳಿಸು** 'ಕದಬದಿಸು' ನೋ.

**ಕದಬಾಗಿಲು** (ನಾ). ಕದ ಮತ್ತು ಬಾಗಿಲುವಾಡ: ಕದಬಾಗಿಲಿರಿಸಿಹ ಕಳ್ಳಮನೆಯಿದು (ಪುರಂದ. ೧-೧೬೮-೧); ಯಕ್ಷಿಣಿಯಾಟದಂತೆ ಥಕ್ಕನೆ ತೆರೆವ–ಕಣ್ಮಾಯವಾಗುವ–ಎದ್ದರೆಯ ತಡೆಗಟ್ಟಾಗಿ ನಿಲ್ಲುವ–ಕದ ಬಾಗಿಲ್ಗಳೂ, ಈ ಮೊದಲಾದುವು ಅನಂತವಾಗಿರುವುವಂತೆ (ಬಿಟ್ಟಅ. ೪೯-೮). [ಕದ (< ಕದವು) + ಬಾಗಿಲು (< ಬಾಗಿಲ್)]

**ಕದಬೆ$_1$** (ನಾ). ಒಂದು ಪ್ರದೇಶದ ಹೆಸರು (?): ನಂಮ ಕದಬೆ ಮಂ×× ಳಿಯ ಸೀಮೆಯವಟಗಣ ಗಣಹಟನಲು ನಿಮುಗೆ ಸುತ್ರೆ ಗುತ್ತಗೆಯಗಿ ಕೊಟವಾಗಿ ಆಹಳಿಗೆ ಸಲುವ ಚತುಸೀಮೆ ಸರಗು (ಎಕ. XIV, ಮಳವ. ೧೪೫-೮; ?). [?]

**ಕದಬೆ$_2$** 'ಕದವೆ' ನೋ.

**ಕದಬೊದ** 'ಕದಬದ' ನೋ.

**ಕದರ** (ನಾ). ಖದಿರವೃಕ್ಷ; "ಬಿಳೇಕಾಚಿನ ಗಿಡ" (ಗಂಗಾಮ. ೬೯). 'ಕದಿರ' ಪರಾ. [< ಸಂ. ಖದಿರ]

**ಕದರಕಸ** (ನಾ). ಬಹಳಕಾಲ ಬದುಕುವ ಒಂದು ಸಸ್ಯ (*). [? + ಕಸ]

**ಕದರಗಿಣಿ** 'ಕದಿರುಗಿಣಿ' ನೋ.

**ಕದರಡಕೆ** (ನಾ). ೧. ಆರಿಸಿ, ಒಟ್ಟುಗೂಡಿಸಿದ ಅಡಕೆ: ಅಡಕೆಯ ಕೊಯ್ಲಿನಲ್ಲಿ . . . ಉದುರಿ ಚೆದರಿ ಬಿದ್ದ ಅಡಕೆಕಾಯಿಗಳನ್ನು ಆರಿಸಿ ಸಂಗ್ರಹಿಸುತ್ತಾರೆ. ಕುಟುಂಬದ ಬೇರೆಬೇರೆ ಸದಸ್ಯರು ಹೀಗೆ ತಮ್ಮ ತಮ್ಮ ಸ್ವಂತದ್ದನ್ನಾಗಿ ಒಟ್ಟುಗೂಡಿಸಿದ ಅಡಕೆ–ಕದರಡಕೆ (ಕದಕೆ. IV, ಪರಿವಿಡಿ); ಮಾನು ಮಾರುವ ನೆವದಿಂದ ಅದರ ಬೆಲೆಗೆ ನಾಲ್ಕೈದು ಮಡಿಯ ಬೆಲೆಯ ಕದರಡಕೆ ಮೆಣಸಿನಕಾಳುಗಳನ್ನು ಮನೆಯ ಹೆಗ್ಗಡಿ ತಮ್ಮನವರುಗಳಿಂದ ಸುಲಿದದ್ದೆಲ್ಲ ಭರ್ತಿಯಾಗಿತ್ತು! (ಮಲೆಮ. ೨೪೭). ೨. ಬಹಳ ಮೃದುವಾದ ಅಡಕೆ; ಉತ್ಕೃಷ್ಟವಾದ ಅಡಕೆ. 'ಗೋಟಡಕೆ' ಪರಾ. [ಕದರು$_1$ (< ಕದಡು$_1$) + ಅಡಕೆ$_1$]

**ಕದರಿಸು** 'ಕದಡಿಸು' ನೋ.

**ಕದರು$_1$** 'ಕದಡು$_1$' ನೋ.

**ಕದರು$_2$** 'ಕದಿರ್$_1$' ನೋ.

**ಕದರು$_3$** 'ಕದಿರ್$_3$' ನೋ.

**ಕದರುಕಡ್ಡಿ** (ನಾ). ೧. ತೆನೆ ಮುರಿದ ಕಡ್ಡಿ. ೨. (ಆಲಂ) ಸಣಕಲು: ಕೆಲವರಂತೂ ನೋಡುವುದಕ್ಕೆ ಕದರುಕಡ್ಡಿಗಳಾಗಿ ಕಗ್ಗ್ರಗೆ ಕಂಕರರಾಗಿರು ತ್ತಾರೆ (ಗರುಡಾ. ೫೦). [ಕದರು$_3$ (< ಕದಿರ್$_1$) + ಕಡ್ಡಿ]

**ಕದರುಬತ್ತ** (ನಾ). ಆರಿಸಿದ ಬತ್ತ; ಹೆಕ್ಕಲುಬತ್ತ: ಬತ್ತದ ಗದ್ದೆ ಯಲ್ಲಿಯೂ ಕದರುಗಳನ್ನು ಆರಿಸಿ ಸಂಗ್ರಹಿಸುವ ಬತ್ತ–ಕದರುಬತ್ತ (ಕದಕೆ. IV, ಪರಿವಿಡಿ). [ಕದರು$_1$ (< ಕದಡು$_1$) + ಬತ್ತ$_1$]

**ಕದರುಮಲ್ಲಿಗೆ** (ನಾ). ಒಂದು ಜಾತಿಯ ಮಲ್ಲಿಗೆ (*). [ಕದರು$_3$ (< ಕದಿರ್$_3$) + ಮಲ್ಲಿಗೆ]

**ಕದರ್ಚೆ** 'ಕತರ್ಚೆ' ನೋ.

**ಕದರ್ಥ** (ನಾ). ನಿಷ್ಪ್ರಯೋಜಕವಾದುದು; ನಿರರ್ಥಕವಾದುದು. [ಸಂ.]

**ಕದರ್ಥನ** (ನಾ). ೧. ತಿರಸ್ಕಾರ; ಅವಹೇಳನೆ. ೨. ಪೀಡಿಸುವಿಕೆ; ಕಾಟ; ಬಾಧೆ. 'ಕದರ್ಥಿಸು' ಪರಾ. ೩. ಪ್ರಯೋಜನವಿಲ್ಲದಂತೆ ಮಾಡುವಿಕೆ. [ಸಂ.]

**ಕದರ್ಥಿಸು** (ಕ್ರಿ). ಪೀಡಿಸು; ಕಾಡು; ಹಿಂಸಿಸು: ಭೂತಳಪತಿಯಂ ಕದರ್ಥಿಸಿದರಂಕದ ಷಷ್ಟಿಸಹಸ್ರನಂದನರ್ (ಅಜಿಪು. ೧೦-೧೦); ಅಂತು ನಿಚ್ಚನಿಚ್ಚಂ ಕದರ್ಥಿಸೆ [ಪ್ರಾಠಾಂ. ಕದರ್ಚಿಸೆ] ನೀಮಿಂತು ಬೆಸಕೆಯ್ದಲ್ಲ ದಿರರಪ್ಪೊಡೆ (ಅಜಿಪು. ೧೦-೧೦ ವ). [ಕದರ್ಥನ + -ಇಸು$_3$]

**ಕದರ್ಯ** (ನಾ). ಕೃಪಣ; ಲೋಭಿ: ಕುಡದೊಡಲೊಳಗಟ್ಟಾಡುವ ಕುಬುದ್ಧಿಯೋದಿನ ಕೇಡಂ ಕಾಣರೆ ಕದರ್ಯರೇಕೆಯೊ ಕೆಡುವರ್ (ಲೀಲಾವ. ೧-೪೮). [ಸಂ.]

**ಕದಲ್** (ನಾ). ತೆನೆ; ಹೊಡೆ. 'ಕದಲೊಡೆ' ಪರಾ. [< ಕದಿರ್$_1$ ?]

**ಕದಲಾರತಿ** (ನಾ). = ಕದಡಾರತಿ: ಕೂಡಲೇ ಶುಕ್ರಾಚಾರ್ಯರು ಹೊರಗೆ ಬಂದು ಸುಮಂಗಲೆಯರಿಂದ ಕದಲಾರತಿ ಮಾಡಿಸಿ (ದೇಯಾನಿ. ೧೫೯); ಕದಲಾರತಿ ಮಾಡಿ ದೃಷ್ಟಿತೆಗೆದು ಹಣೆಗೆ ಕುಂಕುಮದ ಬೊಟ್ಟಿಟ್ಟಳು (ಗಂಮಾಯಿ. ೬೨); ಸುವಾಸಿನಿಯರು ಕದಲಾರತಿಯನ್ನು ಮಾಡಿ, ವರನನ್ನು ಒಳಗೆ ಕರೆದೊಯ್ದರು (ಮಂಜುಕ. ೧೯೯). 'ಕದಡಾರತಿ' ಪರಾ. [ಕದಲು$_3$ + ಆರತಿ$_1$]

**ಕದಲಿ,** ಕದಳಿ$_2$ (ನಾ). ೧. ಬಾಳೆಗಿಡ. ೨. ಆನೆಯ ಮೇಲೆ ನಿಲ್ಲಿಸುವ ಪತಾಕೆ. ೩. ಒಂದು ಜಾತಿಯ ಜಿಂಕೆ : ಮಹಾಕಾಂತಾರವತಿ ದೂರದಲಿ ವೃಕ ಶಾರ್ದೂಲ ಕೇಸರಿ ಕದಲಿ [ಪಾಠಾಂ. ರದನಿ, ಕದಡಿ] ಮಾನಿಸರು ಸೋಂಕಿದೊಡೆ ಸೆಡೆಯವು (ಕುವ್ಯಾಅ. ೧೩-೧೬). **ಕದಳಿ$_2$ :** ೧. "ರಂಭಾ ಮೋಚೆ ಕದಳಿಯೆನಲು ಬಾಚೆಯಕ್ಕು" (ಮಂಗರಾ. ೩೪-೯); ಕೆಚ್ಚು ಕದಳಿಯೊಳುಳ್ಳಡದು ತಾ ಜಗಕೆ ಚಿತ್ರವಲ (ತೊರರಾ. ೩-೬-೧೮). ೨. "ಗಜಧ್ವಜದೊಳು ಕದಳಿಯೆಂಬುದು" (ಮಂಗರಾ. ೧೪೦-೯). ೪. ಒಂದು ಜಾತಿಯ ಬಾಳೆ; ಏಳೆಲೆವಾಳೆ. ೫. ಶಿವ; ಈಶ್ವರ. ೬. ಬಾವುಟ. ೭. ಆನೆ. ೮. ಮರ. ೯. ಕತ್ತಲೆ. ೧೦. ಅರಣ್ಯದ ಮಧ್ಯಭಾಗ; ವನಾಂತರ. ೧೧. ಮೂಲಿಕೆಗಳನ್ನು ಮಾರುವವನು; ಗಂದಿಗ. ೧೨. ಆಕಾಶ : "ಶಿವಂ ಗಗನ ಪತಾಕೆ ಸಾಮಜ ವನಾಂತರವೇಚೆಲೆವಾಚೆ ಭೂಜಮೂಲಿಗ [ಪಾಠಾಂ. ಮೂಳಿಗ] ತಮ ಮೆಂಬಿವುಂಕದಳಿಯಕ್ಕು" (ನಾನಾರ. ೪೪). ೧೩. [ವೀಶೈ] = ಕದಳಿಯ ಬನ : ಚೆನ್ನಬಸವಣ್ಣ ಉಳುವಿಗೆ ಪ್ರಭು ಕದಳಿಗೆ (ಮೋಳಮಾ. ೧೧೪-೪೪೮); ತ್ರಿಕೂಟಗಿರಿಯೊಳಗೊಂದು ಕಾಣಬಾರದ ಕದಳಿಯುಂಟು ನೋಡಾ (ಶರಚ. ೨೭೭); ಕರ್ಮವೆಂಬ ಕದಳಿ ಎನಗೆ ಕಾಯವೆಂಬ ಕದಳಿ ನಿಮಗೆ ಮಾಟವೆಂಬ ಕದಳಿ ಬಸವಣ್ಣಂಗೆ ಭಾವವೆಂಬ ಕದಳಿ ಚನ್ನಬಸವಣ್ಣಂಗೆ (ಮಹಾದೇ. ಕ. ೧೬೮-೩೩೨).

**ಕದಳಿಯಬನ** [ವೀಶೈ] = ಶ್ರೀಶೈಲದಲ್ಲಿರುವ ತಪಸ್ಸಿಗೆ ಅರ್ಹವಾಗಿರುವ ಗುಪ್ತಸ್ಥಳ : ಕದಳಿಯಬನವ ಹೊಕ್ಕು ಹೊಲಬ ತಿಳಿಯದನ್ನಕ್ಕ . . . ಬಜಿದೆ ಬಹುದೇ ಶಿವಜ್ಞಾನ (ಅವಚಂ. ೪೦-೧೭೪); ಚನ್ನಮಲ್ಲಿಕಾರ್ಜುನಯ್ಯನ ನಚ್ಚಿನ ಗಿರಿಯ ಸುತ್ತಿ ನೋಡುತ್ತ ಬಂದು ಕದಳಿಯಬನವ ಕಂಡೆ ನಾನು (ಮಹಾದೇ. ಕ. ೧೪೦-೩೩೭).

[ಸಂ. ಕದಲೀ]

**ಕದಲಿಸು** (ಕ್ರಿ). ೧. ಹೋಗಲಾಡಿಸು; ತೊಲಗಿಸು : ಅಮಲ ವಾಗ್ರುಚಿಯಿಂ ಭವ್ಯಾವಳಿಯ ಮನದ ಕಳ್ತಲೆಯಂ ಕದಲಿಸಿ (ಜಯಕಾ. ೧-೯); ನಾರಿ ಕೇಳ್ ನಿನ್ನ ಧೈರ್ಯವ ಕದಲಿಸದಿರು (ಕಂಸವಿ. ೯-೧೫೭). ೨. ಸರಿಸು; ಅಲುಗಿಸು : ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಜನಗಳ ಗುಂಪನ್ನು ಕದಲಿಸಿವೆ (ಯಕ್ಷಬ. ೨).

[ಕದಲು$_1$ + -ಇಸು$_3$]

**ಕದಲೀಪಾಕ** (ನಾ). [ಕಾವ್ಯಮಿ] ಬಾಳೆಹಣ್ಣಿನಂತೆ ಮೃದುವಾದ ಪಾಕ; ಅರ್ಥದೃಷ್ಟಿಯಿಂದ ಸುಲಭವಾಗಿರುವ ಕಾವ್ಯದ ಪಾಕ, —ಹದ ಪಾಕ : ಅರ್ಥಗಭೀರತೆಗೆ ಪಾಕವೆಂದು ಹೆಸರು . . . 'ದ್ರಾಕ್ಷಾಪಾಕ', 'ನಾರಿಕೇಳಪಾಕ' . . . ಇವೆರಡಕ್ಕೂ ಮಧ್ಯೆ ಬರುವಂತೆ 'ಕದಲೀಪಾಕ', 'ರಸಾಲಪಾಕ' ಮುಂತಾದವುಗಳನ್ನೂ ಹೇಳಬಹುದು (ಕೃಪಿಡಿ. ೨೨೫). [ಸಂ. (ಕದಲೀ + ಪಾಕ)]

**ಕದಲು$_1$** (ಕ್ರಿ). ೧. ಅಲುಗಾಡು; ಅಲ್ಲಾಡು : ಒದೆದು ಕುಣಿಯಲು ಹಸ್ತದೊಳಗದ ಕ[ಪಾಠಾಂ. ಮೆ]ದಲದಂತಿರೆ ಪಿಡಿಯಲು (ನಳಚ. ೨-೧೭). ೨. ನಡುಗು; ಕಂಪಿಸು : ಕದಲುವ ಚರಣ ಕಂಪಿಸುವ ನುಣ್ದೊಡೆಗಳ (ಮೋಹತ. ೧೯-೬೫); ಕದಡಿತು ಮಹಾರ್ಣವಂ ಕದಲಿದಂ ಕಚ್ಛಪಂ ಪುದುಗಿತೆಣ್ದೆಸೆಯಾನೆ (ಜೈಮಿಭಾ. ೧೩-೪೭). ೩. ಸ್ಥಳ ಬಿಟ್ಟು ಸರಿ; ಆಚೆಗೆ ಹೋಗು : ಪದುಳದಿಂ ಮಗ್ಗವನೊದಗಿಂದಲನುಮಾಡಿ ಕದಲು ನಿನ್ನೂರಿಗೆಂದೆನಲು (ಅಮುಸಾಂ. ೬-೪); ಲಲಿತೆಯು ಕುಳಿತ ಸ್ಥಳವನ್ನು ಬಿಟ್ಟು ಕದಲಲಿಲ್ಲ (ಪರಿಣೀ. ೧೯). 'ಕದಡು$_1$', 'ಕಲಡು$_1$' ಪರಾ.

[ದೇ. ‖ ತಮಿ. ಕದಟು; ಮಲ. ಕದರ್ರು; ತುಳು. ಕದಲು, ಕದೆಲು; ತೆಲು. ಕದಲು; ಪರ್ಜಿ. ಗದ್ಲ್]

**ಕದಲು$_2$** (ನಾ). = ಕದಡು$_2$. 'ಕದಲಾರತಿ' ಪರಾ.

[< ಕದಲು$_1$]

**ಕದಲು$_3$** (ನಾ). ರಾಶಿ : ಪುಣುಗಿನ ಕಾಪಿಗೆ ಶುಕ್ರವಾರ ಒಂದಕ್ಕೆ ನಾಲ್ಕು ಹಣಉ ಹೂಗದಲೆ ಕದಲು ವರ್ಷವೊಂದಕ್ಕೆ ಇಪ್ಪತ್ತುವರಹಾನೂ (ಎಕ. XIV, ಶ್ರೀರಂಗ. ೨-೧೭ ; 1529). 'ಕದಲೆ$_1$' ಪರಾ.

[?]

**ಕದಲುಬದಲು,** ಕದಬದಲ್ (ನಾ). ಅದಲುಬದಲು; ವ್ಯತ್ಯಾಸ : ಹೀಗೆ ಕದಲುಬದಲು ಮಾಡುತ್ತ ಹೋಗಬೇಕು (ಕೃಪಿಪ್ರ. ೨೦೮); ಅದು ಹೊಸ ಪ್ರಯೋಗದ ಕದಲುಬದಲುಗಳನ್ನು ತಾಳಿಕೊಳ್ಳಲಾಗುತ್ತಿತ್ತು (ರಾಜ್ಯಶಾ. ೨೭೯); ಚಾರುವಿಗೆ ತುಸು ಕದಲುಬದಲು ಮಾಡಿದಂತೆ ಮಾಡಿ (ಇಪ್ಪಕ. ೨೩೪). **ಕದಬದಲ್ :** ಗಂಧರ್ವಕಿನ್ನರ ಯುವತಿಯರು ಬೆಚ್ಚಿ ಕದಬದಲ್ ವ್ಯತ್ಯಸ್ತ ಕರಭೂಷಣಂಗಳಿಂದೊದಗಿ ಪತಿಗಳನಪ್ಪಿ ಬಾನೆಡೆಯನಡರಿದರು (ವೆಂಕಾರಾ. ೫-೧-೬). 'ಅದಲುಬದಲು' ಪರಾ. [ಕದಲು$_2$ + ಬದಲು]

**ಕದಲೆ$_1$** 'ಕದಳಿ$_1$' ನೋ.

**ಕದಲೆ$_2$** (ನಾ). ಒಂದು ಜಾತಿಯ ಮರ : ಕದಲೆ ಕಸಕೆ ಕಣೆಗಾಡಾ ಹಳುವಿನೊಳೊದವಿಹುದೆಲ್ಲಿ ನೋಡಿದರು (ಶ್ರೀಪಾಲ. ೭-೧೨). [?]

**ಕದಲೆ$_3$** (ನಾ). ಒಂದು ಸ್ಥಳದ ಹೆಸರು : ಶಕವರ್ಷಮೆಣ್ಬನೂಱ ಅಯ್ದನೆಯ ವರ್ಷಂ ಪ್ರವರ್ತ್ತಿಸುತ್ತಿರೆ ಕದಲೆಕಧಿಪಾಣ್ಡಾ ಎಱೆಯಮ್ಮಂ ನಿವುದಿ ತುರುಗೊಳೊಳ್ ಕಾದಿ ಸತ್ತೊಂ (ಎಇ. XXI, ೩೫-೩ ; 883).

[?]

**ಕದಲೆಗದಿರ್** (ನಾ). ಗುಂಪುಕೂಡಿದ ಕಿರಣ : ಪೊದಱುಗಟ್ಟುವ ಕದಲೆಗದಿರನುರದಿನುರವಣಿಸಿ ನೆತ್ತಿಯಿಂ ಪೊತ್ತು ನೆಗೆದು ಚಂಚುವಿಂ ಚಲ್ಲೆವೊಯ್ದು (ಅನಂಪು. ೭-೮೦ ವ).

[ಕದಲೆ$_1$ (< ಕದಳಿ$_1$) + ಕದಿರ್$_2$]

**ಕದಲೊಡೆ** (ಕ್ರಿ). ಹೊಡೆಹಾಯು; ತೆನೆಬಿಡು : ಕದಲೊಡೆದ ಬೆಳೆದ ಕಱವೆಯ ಕದಿರ್ಗಂಪಿಂಗೆಱಗಿ ಪಱಮೆಗಳ್ (ಅನಂಪು. ೧-೮೦).

[ಕದಲ್ (< ಕದಿರ್$_1$) + ಒಡೆ$_1$]

**ಕದನ,** ಕದವು$_2$ (ನಾ). ೧. ಕದಂಬವೃಕ್ಷ (?) : ಅಂತೆ ಬರೆ ವಟವೃಕ್ಷವೆ ಆಗ್ನೇಯದ ಕದವದ ಕೊಳಂ (ಎಕ. XI, ದಾವಣ. ೧೯-೧೫ ; 1043). **ಕದವು$_2$ :** ೨. ಒಂದು ಬಗೆಯ ಹುಲ್ಲು : ಕತಃ ಪೂರ್ವತಃ ಇಡುವಿಳಿಕ್ಕೆ ಕದವಿನ ಪುಲ್ಪದಿಯೆ ಕಳ್ಬಗಾಱೆಗಲ್ಲೆ ಪೊಲ ಎಲ್ಲೆ (ಎಕ. XII, ಗುಬ್ಬಿ. ೬೧-೯೫ ; 812). [< ಕದಂಬ ?]

**ಕದವಿಕ್ಕು** (ಕ್ರಿ). ೧. ಬಾಗಿಲನ್ನು ಮುಚ್ಚು, —ಹಾಕು : ಮನುಜರಾರುಂ ಹತ್ತಿರಿರಲಾಗದಿನ್ನೆಂದು ಅರಸಿಯಂ ಹಡಪಿಗನುಮಂ ಕಳುಪಿ ಕದವಿಕ್ಕಿ (ಸೌದರ. ೩೪-೧೯); ಸಾವಿರ ಕರದೊಳು ತಾವರೆ ಮೊಗವನು ರವಿಯೆತ್ತಿ ಮುದ್ದಿಸಿದಾಗ ನೋಡಿದ ನೈದಿಲೆ ತಗ್ಗಿಸಿ ತಲೆಯನು ಕದವಿಕ್ಕಿ ಕೊಂಡಿತು ಬೇಗ (ಇಂಚಾಪ. ೧೫೭-೬೪). ೨. ಬಾಗಿಲುವಾಡಕ್ಕೆ ಕದ ಜೋಡಿಸು : ಈ ಮನೆಗೆ ಇನ್ನೂ ಕದವಿಕ್ಕಿಲ್ಲ (ರೂಢಿ).

[ಕದವು$_1$ + ಇಕ್ಕು]

**ಕದವಿಡು** (ಕ್ರಿ). = ಕದವಿಕ್ಕು ೨ : ಹೊಸಮನೆಗೆ ಈ ದಿನ ಕದವಿಡುತ್ತಿದ್ದಾರೆ (ರೂಢಿ). [ಕದವು$_1$ + ಇಡು$_1$]

**ಕದವಿತಪಸಿ** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀ ಕದವಿತಪಸಿಯ ರಹಗೌಡ ಮುಲ್ಲೆಉಜಲಿ (?) ಕಾದಿ ಸತ್ತಂ (ಮೈಆರಿ. ೧೯೨೬, ೧೧೨-೧ ; ?); ಸ್ವಸ್ತಿ ಕದವಿತಪಸಿಯ ಮಾದಪ ಕಾದಿ ಸತ್ತಂ (ಮೈಆರಿ. ೧೯೨೬, ೧೧೪-೧ ; ?). [?]

**ಕದವು₁**, ಕದ, ಕದಹು₂ (ನಾ). ಬಾಗಿಲಿಗೆ ಜೋಡಿಸುವ ಹಲಗೆ; ಬಾಗಿಲಪಡಿ; ಕವಾಟ: "ಅರರೀ, ಕವಾಟಂ – ಈ ೨ ಕದವು" (ಹಲಾಯು. ೪೮–೧೩೩); ಕೊಯ್ಕುರ ಅಜಯ ಪಾಲ್ಗೊರವಕೊಳ ಸೂಡಿಪ ಕದವು ಪರಿವಲ್ಲಿ ಮುನ್ನಾಗಿ ಬಂದು (ಎಕ. IX, ಹೊಸಕೋ. ೧೧೦–೩ ; 900) ; ಬಾಗಿಲವನದುಹುತ್ತೆ ಕದವನಿಕ್ಕಿ ಒಳಗಂ ಪುಗುವೈಸಕ್ಕೆ ಅವರಿಂ ಮುನ್ನವೈತಂದು (ನಂಬಿರ. ೬–೫೭) ; ಅತ್ತಲಾ ಶಿವಪುರದ ಕದವು [ಪಾಠಾಂ. ಹ]ಗಳು ತವತವಗೆ ಘಣಘಣವೆನುತ ಬಿದ್ದವು (ಬಸವು. ೯–೧೫); ಆಂಜಲ ಲಿಂಗೋಜಿಗಳ ಕಯ್ಯಲು ಕದವಿಗೆ ಕಬುನದ ಕೆಲ್ಸಗಳನು ಮೂಡ್ಸಿ (ಎಕ. X (S), ಮುಳಬಾ. ೩–೧೦ ; 1430). **ಕದ**: ಕೆತ್ತ ಕದ ತೆಗೆಯದು (ಕುವ್ಯಾಅ. ೧೨–೭) ; ಬೆಚ್ಚಿ ಗೋವಳರೆಲ್ಲ ಮನೆಯ ಕದಂಗಳ ಹೊಚ್ಚಿಕೊಳಲು ನಡೆತಂದು (ನೇಮಿಸಂ. ೧೫–೧೧೩) ; ಕದವ ಮುಚ್ಚಿದಳಿದಕೋ ಚಿಲುಕ ಅಲ್ಲಾಡುತಿದೆ (ಪುರಂದ. ೨–೯೬–೧) ; ಕದ ತಿಂಬುವನಿಗೆ ಹಪ್ಪಳ ಈಡೇ ? (ಗಾದೆ). **ಕದಹು₂**: ಸುರಸದನದ ಕದಹುಗಳವೆಯ್ದೆ ತೆಱೆದುವು (ಶಾಂತೀಶ್ವ. ೬–೧೦೯) ; ಎಲೆ ಭವಿಷ್ಯಾನುರೂಪೆ ಕದಹಂ ತೆಱೆಯೆಂಬುದು ವಾಮಪದಾಬ್ಜದಿಂದವೆ ಕದಹ ತೆಗೆದನು ಮುಖದ ನಿದ್ರೆಯ ದ್ರುಪದಭೂಪತಿಯ (ಸಂಭಪ. ೧೮–೧೦೦).

[ದೇ. ‖ ತಮಿ. ಕದವ, ಕದವು ; ಮಲ. ಕದಹು, ಕದಗು ; ತೆಲು. ಗವನು, ಗವಕು = ಪುರದ್ವಾರ, ಗೋಪುರ]

**ಕದವು₂** 'ಕದವ' ನೋ.

**ಕದವೆ**, ಕದಬ್ಬೆ₂ (ನಾ). ತೆಂಗಿನ ನಾರು ; ಜುಂಗು : ಅಡಿಗೆಮನೆ ಸಾಮಾನುಗಳನ್ನು . . . ಸಾಬೂನು ಇಲ್ಲವೆ ಸೀಗೆಪುಡಿ ಉಪಯೋಗಿಸಿ, ಕದವೆಯಿಂದ ತಿಕ್ಕಿ ತೊಳೆದು, ತಕ್ಷಣ ಅವನ್ನು ಒರೆಸಿ ಇಡಬೇಕು (ಗೃಹವಿ. ೧೭೩). **ಕದಬ್ಬೆ₂**: ಇದೀ ಶ್ಮಶ್ರುಸಂಕಟವಾದರೋ, ವಿಪರೀತವಾಗಿ, ಕರಿಯ ಚಾಮರದ ಚವುರಿಯ ತುರುಗುಂಗೂದಲಂತೆ – ಕರಂಗಿಕಳ್ಗಿದ ಕದಬೆಯ ಗುಂಜಿನಂತೆ – ರೂಕ್ಷತೆಯ ಕಡುಗಪ್ಪಾಗಿ ಗೋಳಾಡುತ್ತಿರುವುದು (ಮಂತ್ರಶ. ೯೨–೧೯).

ಕದವೆಹಾಸು = ಜುಂಗಿನಿಂದ ಅಥವಾ ನಾರಿನಿಂದ ಮಾಡಿದ ಹಾಸಿಗೆ. [ದೇ. ‖ ತಮಿ. ಕದಪ್ಪೈ]

**ಕದಹು₁** 'ಕದುಬು₁' ನೋ.

**ಕದಹು₂** 'ಕದವು₁' ನೋ.

**ಕದಳ** (ನಾ). ಬಾಳೆಗಿಡ: ತಿಂತಿಣಿವಣ್ಣನಾಂತ ಕದಳಂ ಪದವಣ್ ಪುದಿದೀಳೆ (ಜಗವಿ. ೨–೧೫) ; ಕದಳಂ ಪ್ರೋನ್ಮಂಜುಳ ಕ್ಷಮೆಯೊಳಗೆ ಬೆಜು ವಡೆದು ನಿಲಲ್ (ಉದ್ಭದೇ. ೨–೨೩) ; ತಿಂತಿಣಿವಣ್ಣಳಾಂತ ಕದಳಂ ಬೀಡೆವಣ್ವರಿದ ದಾಡಿಮಚಯಂ (ಚೆಬಪು. ೧–೨೨).

[ಸಂ. ಕದಲ]

**ಕದಳಿ₁**, ಕದಲೆ₁ (ನಾ). ಗುಂಪು ; ಸಂದಣಿ ; ಸಮೂಹ: "ಗೊಂದಣ ತೆರಳ್ಕೆ ಸಾಲೊಬ್ಬುಳಿ ಹೊರಳಿ ಬಳಗ ದೊಂದುಳಿ ಕದಳಿ"(ಶಬ್ದಮಂ. ೫೪); ಕಾಱಿದರು ಕರುಳನು ಕುಸುರಿ ಖಂಡದ ಕದಳಿ ಮೈಗಳ ಚೂಣಿ ಮಲಗಿತು ತಾಱುಥಟ್ಟನಲಿ (ಕುವ್ಯಾದ್ರೋ. ೧೭–೨೧). **ಕದಲೆ₁**: "ಬಂಬಲ್, ತುಱುಗಲ್ . . . ಹೊರಳಿ, ಕದಲೆ . . . ಗೊಂದಣ (ಉಂದಲ್) – ಈ ೪೦ ಸಮೂಹಂ" (ಕಶಸಾ. ೧೧–೨೨೨) ; "ಕದಲೆ ಜಂಗುಳಿ ಪಸರಂ ಬಿಂದಮೊಟ್ಟೆಜೆಯು ತಿಂತಿಣಿ" (ಕವಿಕಂ. ೧೦೫). 'ಕದಲೆ ಗದಿರ್' ಪರಾ.

[ದೇ. ‖ ತಮಿ. ಕದಬ್ = ವಿಪುಲವಾಗಿರು, ತುಂಬಿರು]

**ಕದಳಿ₂** 'ಕದಲಿ' ನೋ.

**ಕದಳಿಕೆ** (ನಾ). ಆನೆಯ ಮೇಲೆ ನಿಲ್ಲಿಸುವ ಪತಾಕೆ, —ಧ್ವಜ: ಮೂಡಿಗೆಯ ಕದಳಿಕೆಯ ಕಂಡ [ಪಾಠಾಂ. ಜವನಿಕೆಯ ಕಂದ, ಜವನಿಕೆಯ ಕಂಡ]ಪಟಂಗಳುಮಂ (ಪಂಪಭಾ. ೫–೪೭ ವ) ; ಕರಿಯ ಬಿಳಿಯ ಝುಲ್ಲರಿಯ ಪುಲ್ಲಿಯ ಕದಳಿಕೆಯ ಕಡುಪಿನಿಂ (ಅನಂಪು. ೧೪–೬ ವ) ; ನಡುಗೆ ಧರಾತಲಂ ಕದಳಿಕಾ ಪರಿಘ ಪ್ರತಿಘಾತದಿಂ ಮುಗಿಲ್ ಪಡಲಿಡೆ . . . ಕೀಱಿ ತಾಗಿದುವೆರಟ್ಪಡೆಯಾನೆಗಳಾನೆಯೊಳ್ (ಪಂರಾಮಾ. ೧೩–೭೫) ; ಕದಳಿಕೆಯ ಪೊಯ್ಲೊಳಂಬರ ನದಿಯಿಂ ನೊರೆವಿಂಡು ಬಂದು ಮಂಡಳಿಸಿತ್ತೀ ರದನಿಯ ಮೇಲೆನೆ ಹರಿಗೊಪ್ಪಿದುದಾನೆಯ ಮೇಲೆ ಪಿಡಿದ ಧವಳಚ್ಛತ್ರಂ (ಜಗವಿ. ೧೪–೫೧) ; ಬಿಗಿದ ಜಿಂಚೆಯಂ ಮೊಗವರಿಗೆ ಕದಳಿಕೆಯ ಗಳೆ ನಿಂದ ಸಬಳಿಗರು (ಸೋಮಚ. ೫–೩೦) ; ಚಲಿತ ಘಂಟೆಗಳಲುಗುವ ಕದಳಿಕೆ ಸುತ್ತ ಮಿಳಿರ್ವ ಜಂಚಿಕೆಯ ಝುಲ್ಲಿಗಳೂ (ವರ್ಧಚ. ೫–೧೦೫). [ಸಂ. ಕದಲಿಕಾ]

**ಕದಳೀಗರ್ಭ** (ನಾ). ಬಾಳೆಯ ಮೋತೆಯ ಒಳಭಾಗ : ಕದಳೀಗರ್ಭ ಶ್ಯಾಮಂ ಮೃದುಕುಟಿಲ ಶಿರೋರುಹಂ (ಆದಿಪು ೧–೨೯).

[ಸಂ. ಕದಲೀಗರ್ಭ (ಕದಲೀ + ಗರ್ಭ)]

**ಕದಳೀಘಾತ** (ನಾ). ೧. ಒಮ್ಮೆಗೇ ಕಡಿದು ಬೀಳುವಂತೆ ಬಾಳೆಯ ಗಿಡಕ್ಕೆ ಹೊಡೆದ ಏಟು. ೨. [ಜೈನ] ಅಪಮೃತ್ಯು ; ಅಕಾಲ ಮೃತ್ಯು : ಕದಳೀಘಾತಂ ಜೀವಕ್ಕೆ ದುರಿತದಿಂದಕ್ಕುಮೆಂಬುದರ್ಹನ್ಮತಮಂತದು ಮಾಣ್ದರೆ ಬೇರ್ವೆರಸಾದುದು ಜಿನನೀಘಾತಿಗಳ್ಗೆ ಕದಳೀಘಾತಂ (ಶಾಂತಿಪು. ೧೧–೧೧೨) ; ತ್ರಿದಶೋಪಸರ್ಗಮಂ ಬಗೆಯದೆ ಕುಲನಗದಂತೆ ದೇಶಭೂಷಣ ಮುನಿಪರ್ ಸದಮಲ ಶುಕ್ಲಧ್ಯಾನದೊಳುದಾತ್ತರಿರೆ ಘಾತಿಗಾಯ್ತು ಕದಳೀಘಾತಂ (ಪಂರಾಮಾ. ೮–೪೯). ೩. [ಜೈನ] ಆಹಾರಪಾನಾದಿಗಳನ್ನು ಬಿಡುವುದರಿಂದ ಆಯುಷ್ಯ ಕಡಮೆಯಾಗುವುದು : ನಿರೋಧಮುಮಾಹಾರನಿರೋಧಮುಮೆಂಬೀ ಹೇತುಗಳಿಂದಮಾಯುಷ್ಯಂ ಖಂಡಿಸಲ್ಪಡುಗುಮದು ಕದಳೀಘಾತಮೆಂಬುದಕ್ಕುಂ (ಗೊಮ್ಮಸಾ. ೯–೧). [ಸಂ. ಕದಲೀಘಾತ (ಕದಲೀ + ಘಾತ)]

**ಕದಳೀದಳ** (ನಾ). ಬಾಳೆಯ ಎಲೆ : ಮಳಯಜ ರಸಲುಳಿತ ಕದಳೀದಳ ವ್ಯಜನ ಮಂದಮಾರುತಾಂದೋಳನದಿನೆಂತಾನುಂ ಮೂರ್ಛೆಯಿಂದೆಚ್ಚಱಿಸಿ (ಆದಿಪು. ೩–೨೩ ವ) ; ತನಯನಂ ಕದಳೀದಳಕ್ಕೆ ಕಳುಪಲ್ ಬಂದು ನಿಂದಿರ್ದು ಬಾಳೆಯೆಲೆಯಂ ಕೊಯ್ಯುತಿರಲಲ್ಲಿ (ಇಳರ ದೇ. ೫೪–೧೪). [ಸಂ. ಕದಲೀದಲ (ಕದಲೀ + ದಲ)]

**ಕದಳೀಪತ್ರ** (ನಾ). = ಕದಳೀದಳ : ಕದಳೀಪತ್ರದ ಗುಣ . . . ಅನ್ನದ ಮೇಲೆ ಅತ್ಯಪೇಕ್ಷೆಯೂ, ಪಿತ್ತಶಾಂತಿಯೂ ಆಗುವುದು (ಸಕವೈ. ೪೭).

[ಸಂ. ಕದಲೀಪತ್ರ (ಕದಲೀ + ಪತ್ರ)]

**ಕದಳೀವನ** (ನಾ). ೧. ಬಾಳೆಯ ತೋಟ : ಗಜಸೇನೆ ಕದಳೀವನವಲೇ ಕಲಿಭೀಮ ದಿಗ್ಗಜಗಾಢ ಪಡಹತಿಗೆ (ಕುವ್ಯಾಗ. ೧–೫೫). ೨. ಶ್ರೀಶೈಲದಲ್ಲಿರುವ ಒಂದು ಬಾಳೆಯವನ : ಕದಳೀವನಕ್ಕೆ ನಡೆಗೊಂಡನಲ್ಲಮದೇವ (ಪ್ರಭುರ. ಹ. ೪೬೨–೩೩೭). [ಸಂ. ಕದಲೀವನ (ಕದಲೀ + ವನ)]

**ಕದಳೀಷಂಡ** (ನಾ). ಬಾಳೆಯ ಗಿಡಗಳ ಹಿಂಡು, —ಸಮೂಹ : ಅತಿನಿಬಿಡ ಬಾಳ ಕದಳೀಷಂಡಂಗಳಂ ವನದುರ್ಗಂಗಳಿಂದೆ ಪಡಲ್ವಡಿಸಿಯುಂ (ಆದಿಪು. ೮–೪೧ ವ) ; ಆ ಮಹಾದ್ರಿಯ ತಪ್ಪಲಲಿ ನಿಸ್ಸೀಮ ಕದಳೀಷಂಡದಲಿ ರಘುರಾಮನಾಮ ಸುಧಾಭಿಷೇಕ ಸಮಗ್ರ ಸೌಖ್ಯದಲಿ ಭೀಮವಿಕ್ರಮನಿದ್ದನು (ಕುವ್ಯಾಅ. ೧೦–೧೨).

[ಸಂ. ಕದಲೀಷಂಡ (ಕದಲೀ + ಷಂಡ)]

**ಕದಱು** (ಕ್ರಿ). ಗದರು (?) : ಇಱಿ ಬಡಿ ನೂಂಕು ಕಟ್ಟು ಕದಱೆ ಬೊಡಮಾಗದು ಪೋಗಲೆತ್ತಲುಂ (ಲೋಕೋಪ. ೧೨–೧೦). [?]

**ಕದಟಿಕಟಿನಿ** (ನಾ). ಒಂದು ಊರಿನ ಹೆಸರು : ಕದಟಿಕಟಿನಿಗ್ರಾಮಂ (ಎಕ. VIII, ಸೊರಬ. ೩೩–೨ ; 420). [?]

**ಕದಾಚಿತ್** (ಅ). ಒಂದು ವೇಳೆ; ಯಾವಾಗಲಾದರೊಮ್ಮೆ: "ಕದಾಚಿತ್ ನಿನಗೆ ಪ್ರೇಮಭಂಗವಾದರೆ . . . ? " (ಮುಕ್ತಿ. ೫೨); ಕದಾಚಿತ್ ಹಿಂದಿನ ಕಾವ್ಯಲಕ್ಷಣಕಾರರು ತೋರಿಸದೆ ಬಿಟ್ಟಿರುವ ಯಾವುದೋ ಒಂದು ಕಾವ್ಯದ ಪ್ರಕಾರ – ಲೇಶವು ಸಿಕ್ಕಿದರೂ (ಧ್ವನ್ಯಾಲೋ. ೮). [ಸಂ.]

**ಕದಾಪಿ** (ಅ). ೧. ಒಮ್ಮೊಮ್ಮೆ; ಕೆಲವುವೇಳೆ. ೨. ಆಗಾಗ. ೩. ಎಂದಾದರೂ; ಯಾವಾಗಲಾದರೂ : ಪಂತರು ಕದಾಪಿ ಅಸತ್ಯ ವದಸೂದಿಲ್ಲಾ (ದೀಪಹ. II, ೨೬). [ಸಂ.]

**ಕದಾಯಿ** 'ಕಥಾಯಿ' ನೋ.

△ **ಕದಿ$_1$** (ಕ್ರಿ). ಕಳವುಮಾಡು ; ಅಪಹರಿಸು : ಹೋದರೆ ಅರಮನೆಗೆ ಹೋಗಿ ಕದಿಯಬೇಕು. ಇಲ್ಲದಿದ್ದರೆ ಸುಮ್ಮನಿರಬೇಕು (ಪಂಚಾಮ್ಮ. ೩೫).
[< ಕಳ್$_1$./ ತುಳು. ಕದಿಪು, ಕದುಪು, ಕದ್ಪು = ಕಳವು]

**ಕದಿ$_2$** (ಕ್ರಿ). ಆಕ್ರಮಿಸು ; ಸೆರೆಹಿಡಿ ; ಕಸಿದುಕೊಳ್ಳು (?) : ಬಲ್ವಡೆ ಸುದ್ರಕನ್ ಪ್ರಳಯಧನಿ ಮುತ್ತಿ ಅಣಿಯಂ ಕದಿವೊಂಗಂ ಚಲಮಱಿವೊಂಗಂ ಅಟ್ಟುವೊಂಗಂ ಕುಡಲಪ್ಪೊಂಗಂ ಒಬ್ಬನೊ ಆಚಾರ್ಯ್ಯಂ (ಎಇ. XXIV, ೨೬–೮ ; 885). [?]

**ಕದಿಕ** (ನಾ). ಕದಿಯುವವನು; ಕಳ್ಳ; "ತುಡುಗ" (ಜಾನಕೋ. ೩೪). [ಕದಿ$_1$ + –ಕ$_3$]

**ಕದಿಕಿ** (ನಾ). ಕಳವು ಮಾಡುವವಳು; ಕಳ್ಳಿ (ಕ). [ಕದಿಕ + –ಇ$_2$]

**ಕದಿಕೆ** (ನಾ). ಹುಲ್ಲಿನ ಉಗ್ರಾಣ: ಹೊಲದಲ್ಲಿ ತುಂಬಿದ, ತಲೆ ಎತ್ತಿನಿಂತ ಹೊಂಬಣ್ಣದ ಪೈರು ಮನೆಯಂಗಳ ಸೇರಿತು. ಕಣಜ – ಕದಿಕೆ (ಹುಲ್ಲಿನ ಉಗ್ರಾಣ)ಯನ್ನೂ ಸೇರಿತು (ಬಣ್ಣಮಾ. ೧೪೦). [← ತುಳು. ಕದಿಕೆ]

**ಕದಿನ** 'ಕದಿನಿ' ನೋ.

**ಕದಿನಿ**, ಕದನಿ, ಕದಿನ (ನಾ). ಉತ್ಸವ ಕಾಲದಲ್ಲಿ ಉಪಯೋಗಿಸುವ ಒಂದು ಬಗೆಯ ಫಿರಂಗಿ : ಗರ್ನಾಲು, ಕದಿನಿ ಮೊದಲಾದ 'ಮದ್ದು ಗುಂಡು'ಗಳ ಸದ್ದೂ ಕೇಳ ಬಂದಿತು (ಕಾನೂರು. ೪೬೫); ಹೊಲೆಯರೂ ದೀವರೂ ಕದಿನಿಗಳಿಗೆ ಮಸಿಹಾಕಿ ಕುಟ್ಟುವ ಕೆಲಸದಲ್ಲಿ ತೊಡಗಿದ್ದರು (ಮಲೆಮ. ೬೩೮); ಗರ್ನಾಲು, ಕದಿನಿ ಕೇಳಿಸುತ್ತದೆ ಎಂಬಾಗ ವಾದ್ಯದ ಸ್ವರವೂ ಕೇಳಿಸಿತು (ಸ್ವಪ್ನಹೊ. ೨೯೧). **ಕದನಿ** : ಆ ಗಂಟೆಗಲಾಟೆಯಲ್ಲಿ ಕದನಿ ಹೊಡೆದರೂ ಸಹ ಕೇಳಿಸುವುದಿಲ್ಲ (ಕಾನೂರು. ೧೨). **ಕದಿನ** : "ಹಬ್ಬದಕಾಲದಲ್ಲಿ ಹಾರಿಸುವ ಸಣ್ಣಫಿರಂಗಿ" (ಸಿರಿಕೋ. ೯೨).
[ದೇ. ‖ ತುಳು. ಕದಿನೊ]

**ಕದಿರ್$_1$**, ಕದರು$_2$, ಕದಿರು$_2$ (ನಾ). (ಧಾನ್ಯದ) ತೆನೆ, —ಹೊಡೆ ; ಕಣಿಶ : "ಕದಿರೆಂದೆನೆ ಧಾನ್ಯದ ತೆನೆ" (ಕವಿಕಂ. ೨೩೨); ಪೂ ಕದಿರ್ ಮಿಡಿ ದೋರೆ ಪಕ್ವಫಲಸಂತತಿಯಿಂ ದೊರೆವೆತ್ತು ಮಾಮರಂ (ಪುಣ್ಯಾಸ್ರ. ೩–೭೫); ಬಿತ್ತೊಂದರ್ಕೆ ಐವತ್ತಱಿಂ ಪೊಲಿವರ್ಪ ಕದಿರ ಬೆಳೆಯ (ರಾಮಾಶ್ವ. ೧೦೧–೨೧). **ಕದರು$_2$** : ಭತ್ತದ ಗದ್ದೆ ತುಂಬ ಪೋಲು ಕದರು. ಕದರಿನಲ್ಲಿನ್ನೂ ಹಾಲು ತುಂಬಬೇಕು (ಮೂರುದಾ. ೨೦೬). **ಕದಿರು$_2$** : ಕಂದ ಕದಿರು ತುಂಬೆ ಲೊಕ್ಕಿ ಸಹ (ಸೌಇಎ. ೧೯೨೯, ಮಂಗಳೂ. ೪೬೯–೧೬ ; 1370); ಕದಿರು ಜಲ ಪಾಷಾಣ ಸಹ ಮೂಲ ಧಾರೆಯನುಯೆರದುಕೊಟ್ಟು (ಎಇ. XX, ೮–೪ ; 1556); ಕದಿರನ್ನು ಮೊದಲಬಾರಿಗೆ ಕೊಯ್ದು ತಂದು, ಹೊಸತು ಊಟ ಮಾಡುವ ಸಂಪ್ರದಾಯ ಒಂದು ದೊಡ್ಡ ಹಬ್ಬ (ಜಾನಗೀ. ೮೬).
[ದೇ. ‖ ತಮಿ. ಮಲ. ತುಳು. ಕದಿರ್ ; ಕೊಡ. ಕದೀ]

**ಕದಿರ್$_2$**, ಕದಿರು$_3$ (ನಾ). ೧. ಕಿರಣ : "ಕದಿರೆನೆ ಕಿರಣಂ" (ಕರ್ಣಾನಿ. ೪೬); ಕದಿರ್ಗಳೊಳೆ ತುಱುಗಿ ಮೂಡಿದನುದಯಾದ್ರಿಯೊಳರುಣ ತರುಣ ಕಿರಣಪ್ರಸವಂ (ಕಾವ್ಯಸಾ. ೮೭೦ ಶೂದ್ರಕ); ಕೆಂಬಲ್ವೆಳಗು ಮೂಡು ವೆಳನೇಸರ್ಗದಿರನಣಕಿಸೆ (ಪದ್ಮರಾ. ೬–೧೦೧); ದೀಪಾಳಿ ಕತ್ತಲೆಯ ಭಯಕಂಜಿ ನೇಸರಗದಿರ್ಗಳಡಗಿದುವೊ ಮಱೆಯೊಳೆಂಬಂತೆ ಸಾಲ್ವಿಡಿದೊಪ್ಪಿತೆ (ಸೌಂದಪು. ೧೬–೧೬). ೨. ಕಾಂತಿ; ಹೊಳಪು : "ಕದಿರ್ ಮಿಂಚು ಡಾಳ ಹಬೆ ಪೊಗರೆಂದೆನೆ . . . ಕಾಂತಿಯೆನಿಕ್ಕುಂ" (ಕವಿಕಂ. ೧೦೦); ಮಿಂಚುಗಳ ಕದಿರ ಪರಪುವಂಬಕಗಳಿಗೆ ಕಾಡಿಗೆಯನೆಚ್ಚುತ (ವೆಂಕಾರಾ. ೫–೨–೩೯). 'ಕದಿರೇಱು' ಪರಾ. **ಕದಿರು$_3$** : ೧. ಪುದಿದೊಪ್ಪಿದವು ರನ್ನ ಮುತ್ತು ನೀಲಗಳಿಂದ ಕದಿರು ಮುಕ್ಕಣ್ಣನಿದಿರೊಳು (ಕುರಾಸಾಂ. ೩–೧೦೦).
[ದೇ. ‖ ತಮಿ. ಮಲ. ಕದಿರ್]

**ಕದಿರ್$_3$**, ಕದರು$_3$, ಕದಿರು$_4$, ಕದುರು (ನಾ). ಮರದಿಂದ ಅಥವಾ ಲೋಹದಿಂದ ಮಾಡಿದ ನೂಲು ತೆಗೆಯುವ ಕಡ್ಡಿಯಾಕಾರದ ಸಾಧನ : ಕರಟದ ಕದಿರಂತೆ ತಿಱ್ಱನೆ ತಿರುಗುತ್ತುಂ (ಧರ್ಮಾಮೃ. ೨–೧೧೨); ಆ ಕದಿರ ಕಡ್ಡಿಯಂ ನೀರೊಳಿಕ್ಕಿ ಆರ್ದಿದಾಗಳ್ (ಪುಣ್ಯಾಸ್ರ. ೩–೩೧ ವ); ಬೆರಳುಗಳನದ್ದಲು ಕದಿರ ತೋರದೊಳಗೆಳೆಯಾಗಲ್ (ಸೂಪಶಾ. ೧–೪೨). **ಕದರು$_3$** : ಅರಕಾಸಿಗೆ ಒಂದು ಕದರನೆ ಹೂಡಿ ಎಂಟೆಳೆಯದೊಂದು ರಾಟೆಯ ಪಿಡಿದು (ನಾಪದ. ೧೪೧); ಕದರಿನಿಂ ನೂಲು ತೆಗೆಯುವುದರಲ್ಲಿ (ನನ್ನಜೊ. ೧೦). **ಕದಿರು$_4$** : ಅಱಿವೆಂಬ ಕದಿರು ಭಕ್ತಿಯೆಂಬ ಕಯ್ಯಲ್ಲಿ ತಿರುಹಲಾಗಿ ಸುತ್ತಿತ್ತು ನೂಲು ಕದಿರು ತುಂಬಿತ್ತು (ಕವಿಚ. I, ೨೩೪ ಕದಿರಕಾಯಕದ ರೆಮ್ಮವ್ವೆಯ ವಚನ); ಹಂಚಿಯಂ ಕದಿರಲಮರಿಸಿ ಪಿಡಿದು ನೂಲುತುಂ (ಶರಚ. ೪೬). **ಕದುರು** : ಕದುರು ಮುಱಿಯೆ ಏನೂ ಇಲ್ಲ (ವಚಶಾ. I, ೩೧೩); ಮನೆಯಾದುದು ಪೇರಡವಿಯಾಯಿತ್ತು ಕದುರ ಮೊನೆಯಾಯಿತ್ತು (ವೀಶೈಪು. ೬–೫–೧).
[ದೇ. ‖ ತಮಿ. ಮಲ. ಕದಿರ್ ; ತುಳು. ಕದ್‌ರ್ ; ತೆಲು. ಕದುರು]

**ಕದಿರ** (ನಾ). ೧. ಒಂದು ಜಾತಿಯ ಮರ ; ಕಾಚಿನ ಮರ ; ಖದಿರ : "ಖಕಾರಕ್ಕೆ ಕಕಾರಂ . . . ಖದಿರ – ಕದಿರ" (ಶಮದ. ೨೫೫ ಪ್ರಯೋ); ಕದಿರ ಕಾಷ್ಟವ ಘುಟ್ಟಿಯಾಗಿಹುದೆಂದು ವಾನರವೂ ಬಿದಿರ ಕೊನೆಯಿಂ ಹಾರುತಿರುವಾಗ ಹಿಡಿದು (ವಿವೇಭ. ೪–೧೫). ೨. ಕಾಚು : ಕಂದಮೂಲ ಕದಿರ ಶಾಕ ಪುಷ್ಪಫಲಾದಿಗಳಂ. . .ತೊಱೆವುದಿಂತು (ಶಾಸ್ತ್ರಟೀ. ೫೫–೩).
[< ಸಂ. ಖದಿರ]

**ಕದಿರು$_1$** (ಕ್ರಿ). ಮಿಂಚು ; ಹೊಳೆ ; ಪ್ರಕಾಶಿಸು : ದೇವಕೇಂದ್ರದಿ ಕದಿರುತಿದ್ದ ಆಶೀರ್ವಾದ ಫಲಿಪ ಸುಮುಸಮಯ ಅವತೀರ್ಣವಾದಂತೆ (ಹೃದಸ. ೫೪); ಕಾರ್ಬೊನ್ ಕಣವೇ ಕೆಂಬೊನ್ನಾಗಿ ಕಿನಿಕಿನಿ ಕದಿರುವದು (ಅರಳು. ೨೬೩–೧೦).
[ದೇ. ‖ ತಮಿ. ಮಲ. ಕದಿರ್ ; ತೆಲು. ಕದುರು]

**ಕದಿರು$_2$** 'ಕದಿರ್$_1$' ನೋ.

**ಕದಿರು$_3$** 'ಕದಿರ್$_2$' ನೋ.

**ಕದಿರು$_4$** 'ಕದಿರ್$_3$' ನೋ.

**ಕದಿರುಗಡೆ** (ಕ್ರಿ). ತೆನೆಬಿಡು ; ಹೊಡೆಹಾಕು : ಅಲ್ಲಲ್ಲಿ ಗೆಣ್ಣೆಕ್ಕುವಲ್ಲಲ್ಲಿ ಕರ ನೀಡುವಲ್ಲಲ್ಲಿ ಕದಿರುಗಡೆವಲ್ಲಲ್ಲಿ ಪೂದುಂಬುವಲ್ಲಲ್ಲಿ ಪಾಲ್ದೀವುವಲ್ಲಲ್ಲಿ ಕಾಯಾಗುವ . . . ನೆಲ್ಲಗದ್ದೆಗಳತಿಮುದಂಬಡಿಸಿದವು (ಸಮ್ಯಕೌ. ೧–೨೨). [ಕದಿರು$_2$ (< ಕದಿರ್$_1$) + ಕಡೆ$_1$]

**ಕದಿರುಗಿಣಿ,** ಕದರಗಿಣಿ (ನಾ). ಒಂದು ಬಗೆಯ ಪಕ್ಷಿ: ಉಜ್ಜ್ವಲ ವರ್ಣದ ಗರಿಗಳುಳ್ಳ ಹಲವು ಬಗೆಯ ಸಣ್ಣ ಹಕ್ಕಿ, ಕದಿರುಗಿಣಿ (Sun-bird. ೩೪೮೩). **ಕದರಗಿಣಿ:** (೬). [ಕದಿರು? + ಗಿಣಿ (< ಗಿಳಿ)]

**ಕದಿರೇಱು** (ಕ್ರಿ). ಹೊಳಪೇರು; ಪ್ರಕಾಶಮಾನವಾಗು; ಉಜ್ಜ್ವಲವಾಗು: ಕದಿರೇಱಿದ ಕಂಜಾತಪ್ರಿಯನಂ ಪದೆದೀಕ್ಷಿಸುವಿನಕಾಂತದ ಕಲ್ಲೊಳಗುದಯಿಪ ಹಗ್ಗಿಯ ಪೊಲ್ (ಜಯಕಾ. ೨-೬೭).
[ಕದಿರ್$_2$ + ಏಱು$_1$ (< ಏಱ್$_1$)]

**ಕದಿರ್ಗಂಪು** (ನಾ). ತೆನೆಯ ಸುಗಂಧ, —ಸುವಾಸನೆ: ಕದಲೊಡೆದ ಬೆಳೆದ ಕಲವೆಯ ಕದಿರ್ಗಂಪಿಂಗೆಱಗಿ ಪಱಮೆಗಳ್ (ಅನಂಪು. ೧-೮೦).
[ಕದಿರ್$_1$ + ಕಂಪು]

**ಕದಿರ್ಜೊನ್ನ** (ನಾ). ಕಾಂತಿಮಯವಾದ ಬೆಳುದಿಂಗಳು: ಅಲರ್ಜೊಂಪಂ, ಕದಿರ್ಜೊನ್ನಂ (ಶಮದ. ೪೩ ಪ್ರಯೋ). [ಕದಿರ್$_2$ + ಜೊನ್ನ]

**ಕದಿರ್ದುಱುಗಲ್** (ನಾ). ಕಿರಣಗಳ ಸಮೂಹ, —ಗುಂಪು: ಪೊಳೆವಿಂದುಗಳ್ಗೆ ಬೆಂಗುಡೆ [ಪೊಳೆದುವು ಬೆನ್ನಿಂದ]ಮೆರ್ದೆಗೆ ಕದಿರ್ದುಱುಗಲೆನಲ್ ತೊಳಗಿದುವು ಮದನಶಿಖಿವಿಹ್ವಳ ಹೃದಯನ್ಯಸ್ತ ಹಸ್ತನಖದೀಧಿತಿಗಳ್ (ಕಾದಂಪೂ. ೬೦೬). [ಕದಿರ್$_2$ + ತುಱುಗಲ್]

**ಕದಿರ್ದೊಂಗಲ್** (ನಾ). ಕಿರಣಗಳ ಗೊಂಚಲು: ತಿಂಗಳ ತಣ್ಣನಪ್ಪ ಕದಿರ್ದೊಂಗಲೊಳಭ್ಯಸಿಸಿತ್ತೊ ಕಾಮುಬಾಣಂಗಳೊಳಾದಮೋದಿದುದೊ (ಚಂದ್ರಪು. ೧-೫೫); ಭೂವರರ ಕಿರೀಟರತ್ನಚಯದೊಳ್ ನಿಡುಗಣ್ಣದಿರ್ದೊಂಗಲ್ಗದೆ ಸೌಂದರವತಿಯೊಪ್ಪುವಾನನ ಸುಧಾರುಚಿಮಂಡಲದೊಳ್ (ಉದ್ಭಟ. ೯-೨); ತಿಂಗಳ ಕದಿರ್ದೊಂಗಲಂತೆ... ತಂಬೆಲರ ಬೆಡಂಗಿನಂತಿದೆ ನುಡಿ ನಿನ್ನ (ಕುರಾಸಾಂ. ೧-೫೯). [ಕದಿರ್$_2$ + ತೊಂಗಲ್]

**ಕದಿರ್ಮಳಿಗ** (ನಾ). ಒಬ್ಬಾತನ ಹೆಸರು: ಕ[ದಿ]ರ್ಮ್ಮಳಿಗ ಕೊಟ್ಟನೊನ್ದು ಲಿ(೦)ಙ್ಗಕೆ ಅ[ಸು]ಪಟ್ಟಿಗವೊನ್ದು ದೇಗುಲಕ್ಕೆ (ಸೌ ಇ ಇ. XI-i, ೩೫-೧೨; 933). [?]

**ಕದಿರ್ಮಿಡಿ** (ನಾ). ಒಂದು ಊರಿನ ಹೆಸರು: ಶ್ರೀಮತ್ ಕದಿರ್ಮ್ಮಿಡಿಯ ಮಹಾಜನಮಿನ್ನೂರ್ವ್ವರುಮಂ ಬರಿಸಿ (ಸೌಇಇ. XV, ೧-೧೫; 1059); ಊರಿಂ ಮೂಡ ಕದಿರ್ಮ್ಮಿಡಿಯ ಬಟ್ಟೆಯ [ಬೂ]ಹನ ತೋಂಟದಿಂ ತೆಂಕ (ಸೌಇಇ. XX, ೫೭-೩೦; 1084). [?]

**ಕದಿರ್ವರಿ** (ಕ್ರಿ). ಬೆಳಕು ಬೀರು; ಕಾಂತಿ ಹರಡು: ಮುರಿದು ಕದಿರ್ವರಿದು ರಣಕೇಸರಿಯಂ ಸುತ್ತಿಱಿದು ಗರವಸಂಗೊಳ್ಳಬಲಾಸ್ಫುರಿತಾಕ್ಷಿರುಚಿಗಳಸಿಪಂಜರದೊಳ್ ಸೆಱೆಗೆಯ್ದು ತರ್ಪವೊಲ್ ಸೊಗಯಿಸುಗುಂ (ಲೀಲಾವ. ೧೨-೫). [ಕದಿರ್$_2$ + ಪರಿ$_2$]

**ಕದೀಮ,** ಖದೀಮ (ನಾ). ೧. ಹಳಬ; ಪೂರ್ವಿಕ: ನೀನು ಅವರ ಕದೀಮ ಚಾಕರನಿದ್ದೀಯೇ (ರಾಜೇಂದ್ರ. ೧೮). ೨. ನುರಿತವನು; ಮಿಗಿಲಾದವನು; ಪ್ರಚಂಡ: ನಿಮ್ಮ ಕಾರ್ಯದರ್ಶಿಗಳಂಥ ಕದೀಮರನ್ನು ನಾನು ಹೇಗೆ ತಾನೆ ನಿಭಾಯಿಸುತ್ತೇನೆಯೋ ತಿಳಿಯದು (ರಂಗಕ. ೧೮); ಆನಂದ ಮುಖಂಡರೆನಿಸಿದ ಕಳ್ಳಪೇಟೆಯ ಕದೀಮರ ಬಳಿ ವಿರೋಧ ಕಟ್ಟಿಕೊಂಡ (ಮರಳಿ. ೧೧೫); ಅವರು ಎಂಥ ಕದೀಮ ಅಂತೀರಿ (ಪುನರು. ೫೫). **ಖದೀಮ:** ೨. ಹತ್ತು ಹಳೇ ಕಳ್ಳರು ಸೇರಿದರೆ ಒಬ್ಬ ಖದೀಮ ಇನ್ಸ್‌ಪೆಕ್ಟರು (ಕಲನಿ. ೧೦೭); ಅಕೌಂಟಿಗೆ ಒಬ್ಬ ಖದೀಮನನ್ನು ಗೊತ್ತುಮಾಡಿದ್ದೇನೆ (ಕಾಮಿಕಾಂ. ೨೩೨); ಪುಟ್ಟಮಲ್ಲ ಕುಸ್ತೀಲಿ 'ಖದೀಮ' ಒಂದು ಸಲಾನೂ ಸೋತದ್ದಿಲ್ಲ (ದಯ್ಯಮ. ೧೭).
[← ಅರ. ಪಾರ. ಹಿಂ. ಮರಾ. ಕದೀಮ್ = ಹಳೆಯ, ಪುರಾತನವಾದ]

**ಕದುಂಬು** 'ಕದುಬು$_1$' ನೋ.

**ಕದುಕಿಸು** (ಕ್ರಿ). ಕುಕ್ಕು; ಚುಚ್ಚು: ಕೋತಿಯವೊಲು ಬಂಧನದೊಳಿರ್ದೀ ಚೇಷ್ಟೆಯನೇ ತೋಱದೆಯೆಂಬವಳ ಮಾತಿಗೆ ಕದುಕಿಸಿದಂತಾಗೆ (ನೇಮಿಸಂ. ೮-೮೦). [ಕದುಕು (< ಕರ್ದುಂಕು) + -ಇಸು$_3$]

**ಕದುಕಿಱು** (ಕ್ರಿ). = ಕದುಕಿಸು: ಆಡಗ ಕದುಕಿಱಿದೊಱಲಿ ಕರೆದವು ಗಡಣವನು ಗೂಗೆಗಳು (ಕುವ್ಯಾಭೀ. ೫-೩೩); ಕೊಬ್ಬಿದ ಕಾಯವನು ಕದುಕಿಱಿದು ನೆತ್ತರ ನೊರೆಯ ಬಾಸಣಿಸಿ (ಕುವ್ಯಾದ್ರೋ. ೫-೪೮); ಮೊದಲು ಬೇಯಿಸಿದ ಬಾಳೆಯ ಹೂವನೊಂದಿನಿಸು ಕದುಕಿಱಿದು ತಿಳಿದುಪ್ಪ ಶುಂಠಿ ಬಿಳಿಯುಳ್ಳಿಯರೆದು (ಸೂಪಶಾ. ೪-೩೫).
[ಕದುಕು (< ಕರ್ದುಂಕು) + ಇಱು$_1$]

**ಕದುಕು** 'ಕರ್ದುಂಕು' ನೋ.

**ಕದುಕುನೋಟ** (ನಾ). ಕುಕ್ಕು ನೋಟ; ತೀಕ್ಷ್ಣ ದೃಷ್ಟಿ: ಕಾತುರದ ಮೇಲ್ಕದುಕುನೋಟದ ಹಸ್ತಿನಿಯರು (ಭೈರವೇ. ೨-೧೫); ತನು ಸ್ವಲ್ಪ ಕದ[ದು]ಕುನೋಟಂ ಕೊಂಕುನಡೆ (ಪ್ರಭುಚು. ೪-೮೩).
[ಕದುಕು (< ಕರ್ದುಂಕು) + ನೋಟ]

**ಕದುಕೇಱು** (ನಾ). ಚುಚ್ಚುವ ಗಾಯ; ಕುಕ್ಕಿ ಮಾಡುವ ಗಾಯ (?): ಕೈಕಾಲೋವದೆ ಹಗಱಟ್ಟು ಚೆಲ್ಲೆಯದಿಂ ಕದುಕೇಱನಿಱಿದು... ಬಾಧಿಸಿದಂ ಜತಿರಾಯನನಾ ಖಳನು (ಜಯಕಾ. ೧೩-೪೧); ಕದುಕೆ[ಕೇ]ಱ ತಿವಿದು ಶೂಲದೊಳಿಕ್ಕಿ ಬಾರೆಂದು ಹೃದಯಶುದ್ಧಿಯೊಳು ಪೇಳಿದನು (ರಾಮವಿ. ೨೦-೧೭). [ಕದುಕು (< ಕರ್ದುಂಕು) + ಏಱು$_4$ (< ಏಱ್$_4$)]

**ಕದುಪು$_1$** 'ಕದುಬು$_1$' ನೋ.

**ಕದುಪು$_2$** (ನಾ). ಹಿಂಡು; ಗುಂಪು; ಸಮೂಹ: ಕಾಡಾನೆಯ ಕದು[ದು]ಪುಗಳಿಂ ಸಿಂಹಸಂಘಾತದಿಂ ಪೆರ್ವುಲಿವಿಂಡಿಂ ಕಣ್ಗುರ್ವಂ ಪಡೆದು (ಪಂಪಾಮಾ. ೭-೧೨೩); ಬನಕ್ಕಾಗಿ ನೆಗೆದು ಕದುಪಂ ಕೂಡಲ್ ಮದಗಜರಾಜಂ ನಡೆವಂದದೆ (ಚಂದ್ರಪು. ೯-೧೮); ಕಾನನದಾನೆಯ ಕದುಪನಿರದೆ [ಪಾಠಾಂ. ಕಂಡು ಕುಸಿದ ಕದುಪನಿರದೆ] ಪಂಚಾನನ ಪೊಗುವ ತೆಱದೊಳು (ಕುರಾಸಾಂ. ೧೩-೫೬). [ದೇ. ‖ ತಮಿ. ಕದುಪ್ಪು; ತೆಲು. ಕದುಪು]

**ಕದುಬಿಸು** (ಕ್ರಿ). ಆತುರಪಡು; ಉತ್ಸಾಹಿಸು: ಮದಗಜದ ಸಮ್ಮುಖಕೆ ನಡೆದುಱೆ ಕದುಬಿಸುತೆ ಕೈನೀಡಿ ಕರೆವಗ್ಗದ ಹಲಾಯುಧ ನಿಂದನು (ಅಕ್ರೂಚ. ೭-೨೬); ಉರುಬಿಂ ಮಿಾಟ ಕದುಬಿಸುತ ಕುಂಕೆಡೆಯಲ್ಲಿ ನಿಲ್ಲಿಸುತ (ಕೃಷ್ಣವಿ. ೫-೧೮). [ಕದುಬು$_1$ + -ಇಸು$_3$]

**ಕದುಬು$_1$,** ಕದಹು$_1$, ಕದುಂಬು, ಕದುಪು$_1$ (ಕ್ರಿ). ೧. ಒತ್ತು; ಅದುಮು; ಹಿಸುಕು: ಸದಾಶಿವನ ಪೂಜಿಸುವೆನೆಂದು ಹೋದಡೆ ಕದುಬಿ ಹಿಡಿವವಯ್ಯಾ ಸಕಲವಿಪತ್ತುಗಳು (ಗಣಭಾ. ೩೩೫ ಚೆನ್ನವ); ಮೃದುರತಿಯಿಂದ ಪದ್ಮಿನಿಯ ಭೋಗಿಸಿ... ಕದುಬಿ ಚಿತ್ತಿನಿಯ ನೆರೆದು ಮಂದರತಿಯಿಂದ ಹದಗೊಳಿಸಿದನು ಹಸ್ತಿನಿಯ (ಭರಚ. ೧೫-೮೪); ಬೆಟ್ಟಗಳನೊತ್ತಿ ಕರದಿಂದ ಕದುಬಿದರುಂಟೆ (ಜೈಮಿಭಾ. ೨೩-೨೧). ೨. ಮುಸುಕು; ಮುತ್ತು; ಆವರಿಸು; ವ್ಯಾಪಿಸು: ತಿಮಿರವ ಕದುಬುವ ಮಾರ್ತಾಂಡನಂತೆ (ಎಕ. XII, ಪಾವುಗ. ೪೬-೩೧; 1670); ಕದುಬಿದವು ತಂಬಟೆದ ದನಿ ದಿಗುಸದನವನು (ಕುವ್ಯಾದ್ರೋ. ೪-೧೩); ಕಾವಳ ಕದುಬಿತಿನವಮಂಡಳವನು (ತೊರರಾ. ೩-೫-೯); ಒದಗಿ ಪೂಚಂಡಿನೊಳ್ ಕದುಬಿ ಕಾಶ್ಮೀರದೊಳ್ ಪದೆದು ಬಾವನ್ನ ಪಂಕದೊಳು (ಭೈರಸೂ. ೨೮೦-೪೪). ೩. ಆತುರಪಡು; ದುಡುಕು: ಆ ಪುರದಬಳಿಯರೆಲ್ಲರು ಕದುಬಿ ಕಂದರನೋಡೆಹಾಯಿದು ಮುದದಿ ಮಾಳಿಗೆಗಳನೇಱಿ ನೋಡಿದರು (ಅಂಜಚ. ೧೧-೨೭೮); ಹಿಂದಣವರು ಬೆಬ್ಬೆದೋಱುತ ಕದುಬಿ ತಿವಿದರು (ನಾಗಕು. ೭-೧೫); ಮುದವೇಱಿ ಮೊಗಸಿರಿವಡೆದು ಕದುಬಿಯವನ ಸೇವೆಗನುವಪ್ಪ ವಸ್ತುವನೊದವಿಪುದು (ಹದಿಬ. ೩-೧೧).

೪. ತಳಮಳಿಸು; ಗಾಬರಿಯಾಗು: ನಡೆನಡೆಯೆಂದು ಕದುಬಿ ಹರಿ [ಪಾಠಾಂ. ಗುದುಕಿ ಹರಿ, ಕುದುಕಿಕ್ಕಿ] ಹರಿದತ್ತಲಿತ್ತ ದಾರಿಯನಱಸುವ ನಿತಕೆ (ಹಚಕಾ. ೧೦–೮); ಕದುಬುವ ಕರಣದ ಚಿಂತೆ ನಿನ್ನದೆವನೆಯೊಳು ನಿಲ್ಲದಂತೆ ಸದಮಲ ಸದ್ಗುಣವಂತೆ . . . ನೀ ಬಾರೆ ಚಿತ್ಕಾಂತೆ (ಶಿವಗೀ. ೧೭೬–೮೭೧); ಅದರ ರಭಸಕೆ ನಿಲ್ಲಲರಿಯದೆ ಕದುಬಿ ಕಮರಿಯ ಬಿದ್ದ ಪಶುಗಳು ಪದರಿ ತಲ್ಲಣಗೊಂಡು (ಗೋಹಾಡು. ೫೧). ೫. ಹೊಟ್ಟೆಕಿಚ್ಚು ಪಡು; ಅಸೂಯೆ ಪಡು; ಕರುಬು: ಬಳೆದುದು ಸಿರಿಯೆಂದು ಕದುಬಿ ಮುಗಿದುದು ಕುಮುದಂ (ಚಂದ್ರಭ್ಯು. ೧೧–೨೦). ೬. ಅಧಿಕವಾಗು; ಅತಿಶಯವಾಗು: ಮದಕರಿಗಳ್ ಮದವುಡುಗಿ ಕಣ್ಣೀರನು ಕದುಬಿ ಸುರಿದವಂದಿನೊಳು (ಅನಂಚ. ೨೩–೪೬). ೭. ಆಕ್ಷೇಪಿಸು; ಪ್ರತಿಭಟಿಸು: ಕದನಕೆನ್ನೊಳು ಕೈದುಗೊಳ್ಳೆಂದು ಕೋಪದಿ ಕದುಬಿದನಾ ಸಿಂಹಚೂಡ (ಅನಂಚ. ೧೭–೫೪); ಎರ್ದೆಗೆಟ್ಟು ದೇವಿಯಂ ದೋಷಿಯೆಂಬರೆ ಜೀಯ ಪದುಳವಿಹುದೆಂದು ವಿನಯದೊಳಗ್ರಜಾತನಂ ಕದುಬಿ ನುಡಿದಂ ಭರತಂ (ಜೈಮಿಭಾ. ೧೮–೫೩). ೮. (ಗೂಢಲಿಪಿಯನ್ನು) ಓದು, —ಅರ್ಥೈರ್ಸು (?): ಇದು ಸಂಗಮೇಶ್ವರ ನಿರೂಪವಲ್ಲದೆ ಮಾಣದದಱ ದೆಸೆಯಿಂ ಸೂಕ್ತಸೂಕ್ತವಾಗಲಿ ಲಿಪಿಯ ಕದುಬುವೆನೆನುತ್ತ ತನ್ನೊಡನೆ ಬರೆವವರೊಳೊಯ್ಯನೆ ಪ್ರಸಂಗಂದೆಗೆದನು (ಸಿಂಗಿರಾ. ೭–೧೩). **ಕದಹು$_1$**: ೬. ತುಱುಗಿರ್ದ ಬಾಂಬೊಳೆಯ. . .ನೆಱೆದಿಂಗಳಂತಿರಲ್ಕವು ಕದಹಿ ಪರಿಯಲ್ (ಲಿಂಗಪು. ೧–೩). **ಕದುಂಬು**: ೩. ವೀರಜಂಭರಾಜಂ ಮುಂ ಬಲದೊಳ್ ಕದನಕ್ಕೆ ಕಡಂಗಿ ಕದುಂಬಿ ಸನ್ನದ್ಧನಾಗಿ ಸಂಭ್ರಮಿಸಿ (ಹಮ್ಮೀರ. ೩–೩೫ ವ). **ಕದುಪು$_1$**: ೩. ಕನಸಿನೊಳಂ ಮನಸಿನೊಳಂ ಜನಪತಿಯುಂ ನೆನೆದು ಕದುಪಿ ಕಾತರಿಸುತ್ತಂ (ಬೀಳವಂ. ೨–೮೮). [ದೇ.॥ ತಮಿ. ಕದುವು; ತುಳು. ಕದಿಯ; ತೆಲು. ಕದುಮು]

**ಕದುಬು$_2$** (ನಾ). ೧. ಉತ್ಸಾಹ; ಆವೇಶ; ಆತುರ: ಕದುಬಿನ ಮನ್ನೆಯರಿಗೆ ಮನ್ನೆಯರುಗಳು ಕದನದೊಳಿಱಿದಾಡಿದರು (ಕಂನವಿ. ೧೮–೧೦೦); ಆಕಂಠಂ ಮಗುೞ್ದೀಂಟಲುಂ ಕದುಬಂ [ತಳ್ಕಿಸಿ ಕೇಳಲುಂ] ನುಡಿಸಲುಂ ಮುಂಡಾಡಲುಂ ಪೂಣ್ದಪರ್ ಚದುರರ್ (ಚಿಕವಿ. ೪–೧೨೮); ಕದುಬು ವೆಗ್ಗಳಿಸಿ ಕಂಪಿಸಿತಂಗವಡಿಗಡಿಗೊದರೆ ನವಿರು ಬೆಮರುಗಳು (ಕೃಷ್ಣಗೋ. ೪–೪೯); ನೋಡುವ ಕದುಬಿನಿಂದ ಒದಗಿ ಬಂದ ಮನ್ಮಥನಿಂದ ಬರಿಸಿದವನಂತೆ ಎದೆಯಲ್ಲಿ ಕಾಣಿಸಿದನು (ವಚಕಾ. ೫೭–೧೮). ೨. ಭಯ; ಗಾಬರಿ; ಕಳವಳ: ನೆಗೆವೆರಲೆಯ ಮಱಿಯ ಪಿಂತಣೆರಡುಂ ಕಾಲ್ಗಳಂ ಪಿಡಿದೆೞೆವಧಟಂ ಕಂಡು ದಾದಿ ಕದುಬಿನೊಳ್ ಬೇಡ ಬೇಡೆಲೆ ಕಂದ . . . ಎನುತ್ತೆ (ಚಿಕವಿ. ೪–೮೯); ಬಿಗುಪುರ್ಗೊಂಡು ಕದುಬಿನಿಂ ಸಾರಸ್ವತಿಯ ಕಯ್ಯಂ ಬಿಟ್ಟಂ (ಮಿತ್ರಗೋ. ೩೩); ನಿನಗೆ ಇಷ್ಟೊಂದು ಕದುಬು ಎತ್ತಣಿಂದೆ ಬಂದಿತು (ವಚಕಾ. ೬೨). [< ಕದುಬು$_1$]

**ಕದುಬುಗೂಡು** (ಕ್ರಿ). ಭಯವನ್ನು ಹೊಂದು; ಗಾಬರಿಯಾಗು: ತರಳಿಕೆಯು ಕದುಬುಗೂಡಿ ಚಂದನರಸವ ಲೇಪಿಸಿ (ವಚಕಾ. ೩೩). [ಕದುಬು$_2$ + ಕೂಡು$_1$]

**ಕದುಬುಗೊಳ್** (ಕ್ರಿ). ೧. ತ್ವರೆಮಾಡು; ಆತುರ ಪಡು: ಗಜೇಂದ್ರನ ಮೊಱೆಯನಾಲಿಸಿದಂದು ಕದುಬುಗೊಂಡು ನೀಂ ಭರದೊಳೊದವಿದ ಕಟ್ಟೆಱಕದವನೆಂದುಂ (ಚಿಕಬ. ೫೭–೫); ಕದುಬುಗೊಂಬುದು ಕರಣ ಕವಿವುದಂತಃಕರಣ ಗದಗದಿಪುದು ಕರಚರಣ (ಗೀತಗೋ. ೩೩–೨); ಇವಳ ಸಾಹಿತ್ಯದ ಸವಿಗೆಳಸುತ್ತೆನ್ನ ಕಿವಿಗಳು ಕದುಬುಗೊಂಡಿಹವು (ಹದಿಬ. ೧–೨೫). ೨. ಗಾಬರಿಯಾಗು: ಅವಳಂ (ಕಂಡು ಕದುಬುಗೊಂಡು) (ಮಿತ್ರಗೋ. ೩೧); ಸಮಸ್ತವಾದ ಭೂಪಾಲರುಂ ಕದುಬುಗೊಂಡು ಮೈಜೋಡುಗಳಂ ಕೊಡಿಮೆಂದು (ಭಾರಶಾಂ. ೪). [ಕದುಬು$_2$+ ಕೊಳ್$_1$]

**ಕದುರು** 'ಕದಿರ್$_3$' ನೋ.

**ಕದುವಪವೇಪು** (ನಾ). ಒಂದು ಊರಿನ ಹೆಸರು: ಕದುವಪವೇಪು ನಾಮಗ್ರಾಮೇ (ಇಆ. XXX, ೯೦–೩೭; 614). [?]

**ಕದುಷ್ಣ** (ಗು). ತುಸು ಬೆಚ್ಚಗಾದ; ಉಗುರುಬೆಚ್ಚಗಿನ: ನಗೆಗಣ್ ಸೋರ್ವ ಕದುಷ್ಣವಾರಿಚಯದಿಂ ಬಿಂಬಾಧರಂ ಸುಯ್ಯ ಬೆಂಕೆಗಳಿಂ ನಾಡೆ ಬೆಡಂಗುಗೆಟ್ಟರವಿದಿಂತೇಕಾರಣಂ (ಪಂಪಭಾ. ೪–೬೮); ಅಪಾಂಗದಿಂ ಸುರಿವ ಕದುಷ್ಣಬಾಷ್ಪದೆ ವಿವರ್ಣಮಣೀಕೃತಮಾಗಿ ನಿಂದು (ಶಾಕುಂತ. ೩೭–೬೪). [ಸಂ.]

**ಕದೆ** (ಕ್ರಿ). ೧. ಕೂಡು; ಸೇರು. ೨. ನೆರೆ; ಸಂಭೋಗಿಸು. ೩. ಒತ್ತಲ್ಪಡು ಅಥವಾ ಹಿಂಡಲ್ಪಡು. ೪. ಹೆಚ್ಚಾಗು; ಅಧಿಕವಾಗು: ಪಿಡಿದೋರಂತಿರೆ ಜೇನ ಸೋನೆ ಕದೆದತ್ತೆಂಬಂತೆ ರಾಗಂಗಳಂ ಕಡುಪಿಂ ಕೇಳಿಸೆ (ವೃಷವಿ. ೧೭–೫). [ದೇ. ॥ ತಮಿ. ತೆಲು. ಕದಿ]

**ಕದ್ದಡಿಗ** (ನಾ). ಕಪ್ಪು ಮೈಯುಳ್ಳ ದಾಂಡಿಗ (?): ನಿದ್ದೆಗಣ್ಣೊಳಿರ್ದು ಗೂಗೆದಲೆಯನುದ್ದಂ ನೆಗಪಿ ಪರಿವ ಕದ್ದಡಿಗರು [ಪಾಠಾಂ. ಕದ್ದಲಿಗಳು, ಕದ್ದೆಗರು]ಮಂ (ಲೀಲಾವ. ೫–೧೩೪). [?]

**ಕದ್ದಮು** (ನಾ). ಒಂದು ಊರಿನ ಹೆಸರು: ನಗರಾದ್ದಕ್ಷಿಣದಿಗ್ಭಾಗೇ ಕದ್ದಮು ಗ್ರಾಮಂ ದತ್ತವಾನ್ (ಸೌಇಇ. XX, ೬–೨೦; 730). [?]

**ಕದ್ದಳಿಗ** (ನಾ). ೧. ಯುದ್ಧಕವಚವನ್ನು ಮಾಡುವವನು. ೨. ಕುದುರೆ ಮಾಲೀಸು ಮಾಡುವವನು; ಕಾಸದಾರ: ಕದ್ದಳಿಗ ದೂಸಿಗ ಬೂಸಗಂಧಿಗ ಕೊಲಪ ಚಿಪ್ಪಿಗ ಬಚ್ಚರಣೆ ಬಳೆಗಾಱ ಬೋಗಾಱ (ತೊರರಾ. ೫–೮–೫೩). [< ಕತ್ತಳ$_{1,2}$ + -ಇಗ ?]

**ಕದ್ದಾರು** (ನಾ). ಒಂದು ಬಗೆಯ ಸಸ್ಯ: "ತಳಕ – ಕದ್ದಾರು" (ಓಷಧಿ. ೬೫). [?]

**ಕದ್ದಾಳವಳ್ಳಿ** (ನಾ). ಒಂದು ಬಗೆಯ ಸಸ್ಯ; ಕತ್ತಾಳೆ: ಕದ್ದಾಳವಳ್ಳಿಯ ಪೊದಱ ಕರಿಯ ಮದವೆದ್ದ ಘಟೆಗಳೊದಗಿದವು (ವರ್ಧಚ ೧೧–೧೨೧). [< ಕದ್ದಾಳೆ ? + ವಳ್ಳಿ]

**ಕದ್ದಾಳೆ$_1$** (ನಾ). ಕಪ್ಪಾದ ತೊಗಟೆಯುಳ್ಳ ಒಂದು ಜಾತಿಯ ಮರ; ತಮಾಲವೃಕ್ಷ (ಶ). [?]

**ಕದ್ದಾಳೆ$_2$** 'ಕತ್ತಾಳೆ' ನೋ.

**ಕದ್ದಾಱು** (ನಾ). "ತಮಾಲ, ಕಾಲಸ್ಕಂಧ" (ನಾಚಿರಾ. ೬). [?]

**ಕದ್ದಿ$_1$, ಕದ್ದೆಹ, ಖದ್ದಿ** (ನಾ). ೧. ಅಪೇಕ್ಷೆ; ಬಯಕೆ (?) (ಶ). ೨. ಆತುರ; ಉತ್ಸಾಹ: 'ಕದ್ದಿಕಾಱ' ಪರಾ. **ಕದ್ದೆಹ**: ೨. 'ಕದ್ದೆಹಕಾಱ' ಪರಾ. **ಖದ್ದಿ**: ೨. 'ಖದ್ದಿಕಾಱ' ಪರಾ. [ಪ್ರಾ. ಖದ್ಯ?]

**ಕದ್ದಿ$_2$** (ನಾ). (ಕರಾ) ಬಾವಿಯ ಕಂಠ, —ದಡ (?): ಎರಡು ವರ್ಷದಲ್ಲಿ ಕಟ್ಟೆಗೆಗಳು ಮಣ್ಣುತಿಂದು ನಿಃಸ್ಸಾರವಾಗಿ ಬಾರಿ ಬಿದ್ದು ಕದ್ದಿಗಳು ಸರಿದು (ಕೃಷಿಪ್ರ. ೧೦೮). [?]

**ಕದ್ದಿಂಗಳು** 'ಕರ್ದಿಂಗಳ್' ನೋ.

**ಕದ್ದಿಕಾಱ, ಕದ್ದೆಹಕಾಱ, ಖದ್ದಿಕಾಱ** (ನಾ). ಆತುರವುಳ್ಳವನು; ಉತ್ಸಾಹವುಳ್ಳವನು: ಕಡಲ ದಾಂಟಿದ ಕದ್ದಿ [ಪಾಠಾಂ. ಖದ್ದಿ, ಬದ್ಧಿ, ಶುದ್ಧಿ] ಕಾಱನ ಕೋಪಶಿಖಿ ಮುಱಿದೆದ್ದುದು (ತೊರರಾ. ೬–೨೨–೩೨). **ಕದ್ದೆಹಕಾಱ**: ಮದ್ದಿನ ಚೀಲವ ಹೊತ್ತು ಸಾವ ಕದ್ದೆಹಕಾಱರಂತೆ ಕ್ಷುದ್ರಜೀವಿಗೆಲ್ಲಿಯದೋ ಸದ್ಗುರುಸ್ಥಲ (ಮೋಳಿಮಾ. ೧೬೦–೫೯); ತಾ ಕದ್ದ ಕಳವ ಪರಿಹರಿಸಿಕೊಳ್ಳಲಱಿಯದೆಯಿದಿರು ನೀವು ಬನ್ನಿಯೆಂದು ಕರೆವ ಕದ್ದೆಹಕಾಱನಂತೆ (ಮದೇವಮ್ಮ. ೫೭). **ಖದ್ದಿಕಾಱ**: ಕಲಹದ ಖದ್ದಿ [ಪಾಠಾಂ. ಕದ್ದಿ, ಬದ್ದಿ] ಕಾಱರ ದೇವದೇವಾದಿಗಳುಘೇಯೆನಲು (ತೊರರಾ. ೬–೩೮–೧೫). [ಕದ್ದಿ$_1$ + -ಕಾಱ]

**ಕದ್ದೆಯಿಸು** 'ಕದ್ದೈಸು' ನೋ.
**ಕದ್ದೆಹ** 'ಕದ್ದಿ₁' ನೋ.
**ಕದ್ದೆಹಕಾಱ** 'ಕದ್ದಿಕಾಱ' ನೋ.
**ಕದ್ದೆಱಯ್ಯ** (ನಾ). ಒಬ್ಬಾತನ ಹೆಸರು : ಕದ್ದೆಱಯ್ಯನ ಮಗಂ ಗುಜ್ಜ ನಂದಿ (ಎಕ. XII, ತಿಪಟೂ. ೧೦-೧೫ ; 930). [?]

**ಕದ್ದೈಸು,** ಕದ್ದೆಯಿಸು (ಕ್ರಿ). ೧. ಹಿಂದೆ ಮುಂದೆ ನೋಡು ; ಅನುಮಾನಿಸು ; ಸಂಕೋಚಪಡು ; ಅಳುಕು : ಕದ್ದೈಸದೆ ನೋಡು ಸ್ಮರನ ಬಾಯೊಳಗುರ್ಚಿ ಬಿದ್ದಂತೆ ಪಡಿಯಚ್ಚುವಡೆದ ಮುಗ್ಧಾಸ್ಪದ ಕಮನೀಯರೂಪನನನಿರುದ್ಧನ ನೋಡು (ಮೋಹತ. ೩೦-೩೨) ; ಖಗೇಶ್ವರನೆದೆಯ ಕದ್ದೈಸದೆ ಬಂದು ತಿವಿದ ಗಾಯವ ತಾಳಿದ್ದು ಕುಕ್ಕುರಿಸಿ ತುರ್ವಿಯಲಿ (ಮೋಹತ. ೩೮-೩೩) ; ಬದ್ಧವುಳ್ಳವ ನಿನ್ನ ಬಗೆ ಕಾಣಬಂತ ನಿರುದ್ಧಗೆ ಕೊಟ್ಟೆ ನೀ ನೆಲನ ಕದ್ದೈಸದೆ ಕಂದನಿಚ್ಚೆಯೊಳಿಹುದೆಂದು ಶುದ್ಧಾತ್ಮನಿತ್ತ ವೀಳೆಯವ (ಮೋಹತ. ೪೧-೫೮). **ಕದ್ದೆಯಿಸು :** ೨. ಬಯಸು ; ಅಪೇಕ್ಷಿಸು : ಪ್ರಸಾದಕೆ ಕದ್ದೆಯಿಸುತಂ ಬಂದನಾದ್ಯರೊಳಿದ್ದು ಕೋಡಗದಾಟವಾಡುವ ಭೃಂಗಿಯ್ಯೆತಂದ (ಬಸವು. ೨೯-೭).
[ಕದ್ದ₀ + -ಇಸು₃]

**ಕದ್ರು** (ನಾ). ೧. ನಸುಗೆಂಪು; ಗೋರೋಚನ ಬಣ್ಣ : "ಹರಿಃ (ಕ್ರಮಂ), ಕದ್ರುಃ, ಕಡಾರಃ, ಪಿಂಗಳಃ, – ಈ ೪ ನಸುಗೆಂಪು" (ಹಲಾಯು. ೧೨೧-೫೦). ೨. ಕಶ್ಯಪನ ಹೆಂಡತಿ; ಸರ್ಪಗಳ ತಾಯಿ: ನಿನಗೆ ಮೊದಲಲಿ ವಿವರಿಸುವೆ ನಾ ವಿನತೆ ಕದ್ರುಗಳ ವರತನುಜರ ವೈರ ಮಾರ್ಗವನು (ಸಂಭಪ. ೫-೪೨). [ಸಂ. ಕದ್ರು, ಕದ್ರೂ]

**ಕದ್ರೂಜ** (ನಾ). ಕದ್ರುವಿನ ಮಗ; ಸರ್ಪ. 'ಕದ್ರೂಜವೇಣಿ' ಪರಾ. [ಸಂ.]

**ಕದ್ರೂಜವೇಣಿ** (ನಾ). ಸರ್ಪದಂತೆ ನೀಳವಾದ ಜಡೆಯುಳ್ಳವಳು ; ನಾಗವೇಣಿ : ಕದ್ರೂಜವೇಣಿ . . . ಕ್ಷುದ್ರಗುಣರಹಿತೆ ಶ್ರೀಗಿರಿಜೆ (ನವಮೋ. ೩-೧೪). [ಕದ್ರೂಜ + ವೇಣಿ]

**ಕದ್ವದ** (ನಾ). ೧. ಕೆಟ್ಟ ಮಾತನ್ನಾಡುವವನು : "ಕದ್ವದಃ, ಗರ್ಹ್ಯವಾದೀ – ಈ ೨ ಹೊಲ್ಲಾಗಿ ನುಡಿವವಂ" (ಹಲಾಯು. ೬೨-೨೨೩). ೨. ಅಸ್ಪಷ್ಟವಾಗಿ ಮಾತನಾಡುವವನು; ತೊದಲುವವನು. ೩. ಹೀನನಾದವನು; ತುಚ್ಛ. [ಸಂ.]

**ಕಥವಬೂರ** (ನಾ). ಒಂದು ಊರಿನ ಹೆಸರು : ಎಲವರದ ಕಥವಬೂರ ಮಾಯಗಾವುಣ್ಡರ ಮಗ . . . ಮಣ್ಣಿಕಲ್ಲ ಊರೆಱವಿನೊಳ್ ಕಾದಿ ಸತ್ತವರ್ (ಎಕ. X, ಮುಳಬಾ. ೨೫೬-೬ ; 1000). [?]

**ಕನ್‌ಕುಟ್ಲು** (ನಾ). ಒಂದು ಬಗೆಯ ಸಸ್ಯ : ಲವಂಗ ಚೆಕ್ಕೆ, ದಾಲ್ಚಿನ್ನಿ, ಕನ್‌ಕುಟ್ಲು (ವೈಔಗಿ. ೨೧-೩೯೨). [?]

**ಕನ** (ನಾ). ಸ್ವಪ್ನ : ಕೆಟ್ಟ ಕನ ಕಂಡವಂ ನಿಟ್ಟಿಸುವೊಲಟ್ಟವಂ ನಿದ್ದೆ ನೆಮ್ಮದಿಯರಿಯೆ ! (ಹೆಬ್ಬೆರ. ೨೧-೫) ; ನೆನದೊಳಂ ಕನಶೊಳಂ ಮನನಿಸುವೆ ನೀನಲ್ಲಡಿನಿತು ತಿಳಿಸೆಳೆಯೊ ನಿನ್ನಯ ಗಾನಕೆ ? (ಗೀವಿಂ. ೮-೧೦೦). 'ಕನಸು' ಪರಾ.
[ದೇ. ‖ ತಮಿ. ತುಳು. ಕನ; ತೆಲು. ಕೋಲಾ. ನಾಯ್ಕಿ. ಕಲ]

**ಕನಂಗಹೂ** (ನಾ). ಒಂದು ಬಗೆಯ ಮರ; ಕಮಂದ ಮರ : ಕನಂಗಹೂ, ಕಮಂದಮರ, ಅಪೂರ್ವಚಂಪಕ, ವನಸಂಪಿಗೆ, ಕತ್ತೆ ಸಂಪಿಗೆ (ವೈಔಗಿ. ೧೬-೨೯೪). [ಕನಂಗ₀ + ಹೂ₂ (< ಪೂ₂)]

**ಕನಂಬರಿ** (ಕ್ರಿ). ಕನಸು ಬೀಳು; ಸ್ವಪ್ನ ಬೀಳು : ಶುಭಮುಹೂರ್ತದೊಳ್ ಕನಂಬರಿದಂತೆ ಚಕ್ರಲಕ್ಷಣಸಂಪನ್ನನೊರ್ವಂ ಸುಪುತ್ರಂ ಪುಟ್ಟಿದಂ (ಅದ್ಭುತ. ೫-೯). [ಕನ + ಬರಿ₂]

**ಕನಕ** (ನಾ). ೧. ಚಿನ್ನ; ಹೊನ್ನು : ಕನಕವೇ ಲೋಹಂಗಳೊಳ್ ಶ್ರೇಷ್ಠ (ಸೋಮೇಶ. ೪) ; ನೀನೊಲಿದಡೆ ಕಲ್ಲೆಲ್ಲ ಕನಕವಯ್ಯ (ಶಿಖಾರೀ. ೭೮-೫೮). ೨. ಒಂದು ಬಗೆಯ ಹೂವಿನ ಗಿಡ, —ಹೂವು . ಕದಂಬ ಕನಕ ಕರವೀರ ಕರ್ಣಿಕಾರ . . . ಮಲ್ಲಿಕಾದ್ಯನೇಕ ಸುರಭಿಕುಸುಮಂಗಳಂ (ಪಂಚತಂ. ೧೧೭-೪). ೩. ದತ್ತೂರ; ಮದ್ದುಗುಣಿಕೆಯ ಗಿಡ; ಉಮ್ಮತ್ತಿಯ ಗಿಡ : ಕನಕದ ಕಾಯನೊಂದು ದೆವಸಂ ತಿಱಿದಟ್ಟುಱಿ ಸುಣ್ಣದೂಜಲೊಳ್ ದಿನಮಿರಿಸಿ (ಲೋಕೋಪ. ೮-೩೧) ; ಅಕ್ಕಕ್ಕಿಳೆಯೊಳಸತ್ಕೃತಿ ಸಕ್ಕದದೊಳ್ ಸಮನಿಸಿದೊಡೆ ಸೇವ್ಯಮೆ ದತ್ತೂರಕ್ಕೆ ಕನಕಾಖ್ಯೆ ಬಂದವೊಲಕ್ಕುದದಂ ತಿಳಿದು ಕೇಳ್ವುದದನತಿನಿಪುಣರ್ (ರುಕ್ಮಾಂಗ. ೧-೨೩). ೪. ಮಂಗಳಗ್ರಹ; ಅಂಗಾರಕ : ಕನಕಂ ವೃಶ್ಚಿಕ ಮೇಷದೊಳ್ ನಿಲೆ ಚಮೂನಾಥಂ ಸುಕರ್ಮಾಟನಂ ಧನಿಭೂಪಂ (ಜಾತತಿ. ೧೭-೧೮) ; ಕನಕಂ ಶನಿಯಂ ಗೆಲ್ವೊಡೆ ಜನಾಧಿಪಾತ್ಮಜರ್ಗೆ ಪಿರಿದು ಸಂತಸಮಕ್ಕುಂ (ಜಟ್ಟಮ. ೭-೬೬) ; ವನಿತೆಯೊಳು ಕಮಲಾರಿಯಿದ್ದನು ಕನಕ ಮನ್ಮಥನೆಡೆಯೊಳಿದ್ದನು . . . ಭಗಣಚಕ್ರದಲಿ (ಕಾಶಿರಾ. ೧೩-೪೮). ೫. ಒಬ್ಬಾತನ ಹೆಸರು : ಕನಕನ ಬೇಳ್ವೆ ತಗುಳ್ದುದು ಕನಕನನೆಂಬೊಂದು ಮಾತು ಧರೆಗೆಸೆಯೆ ಸುಯೋಧನನ ಪುರೋಹಿತನಪ್ಪಾ ಕನಕಸ್ವಾಮಿಯನೆ ಮುನಿದು ಕೀರ್ತಿಗೆ ತಿಂದಳ್ (ಪಂಪಭಾ. ೮-೪೪). [ಸಂ.]

**ಕನಕಗಿರಿ** (ನಾ). ೧. ಚಿನ್ನದ ಬೆಟ್ಟ; ಮೇರುಪರ್ವತ : ಇನ್ನೂಱು ಕನಕಗಿರಿಗಳಿಂದಂ (ಆದಿಪು. ೧-೪೮ ವ) ; ಕನಕಗಿರಿ ಮೂಡಿದುದೋಯೆನಲುಜ್ವಳಿತವಾಗಿರಲು (ಬಸವು. ೫-೫೮). ೨. ಒಂದು ಊರಿನ ಹೆಸರು : ಹರಪನಹಳ್ಳಿ ಕನಕಗಿರಿ ಸೊಂಡೂರು ನೆಱೆ ದಿವ್ಯಗುಡಿಯ ಕೋಟೆಗಳ (ಕಂನವಿ. ೧೧-೧೩). [ಕನಕ + ಗಿರಿ₁]

**ಕನಕಚಂಪಕ** (ನಾ). ಒಂದು ಬಗೆಯ ಸಸ್ಯ : ನಾರೋಲಿ, ಮೂಢಮರ, ಮೂಢ, ಮೂಡಲಿ, ಕನಕಚಂಪಕ (ವೈಔಗಿ. ೫೭-೧೧೪೦).
[ಕನಕ + ಚಂಪಕ]

**ಕನಕತಮುಟೆ** (ನಾ). ತಮುಟೆಗಳಲ್ಲಿ ಒಂದು ಬಗೆ (+).
[ಕನಕ₀ + ತಮುಟೆ]

**ಕನಕತಾಳ** (ನಾ). ಚಿನ್ನದ ತಾಳ (?) : ನೂತನಗಾನವರವಿದ್ಯೆಯಂ ಕೃಪೆಯೊಳಿತ್ತು ಮತ್ತಂ ಮನೋಹರಕನಕತಾನ[ಳ]ಂಗಳಂ ಕುಡಲ್ (ಅರಾಚ. ೬-೨೬). [ಕನಕ + ತಾಳ (= ತಾಲ)]

**ಕನಕದಾಯಕ** (ನಾ). ಚಿನ್ನವನ್ನು ಕೊಡುವವನು; ಕುಬೇರ : ಕನಕದಾಯಕನ ವರಕೋಶ ಸರಿಯಲ್ಲವೆಂದೆನುತಿಹ ಚಿನ್ನವರದರಂಗಡಿಗಳೊಪ್ಪಿದವು (ರಾಮವಿ. ೩-೬೧). [ಕನಕ + ದಾಯಕ]

**ಕನಕದೋರಣ** (ನಾ). ಚಿನ್ನದ ತೋರಣ : ಮನೆಮನೆಗಳ ಬಾಗಿಲು ಬಾಗಿಲ ಮುಂದೆ ಕನಕದೋರಣದ ಸಾಲು (ಕಂನವಿ. ೨-೭೧).
[ಕನಕ + ತೋರಣ]

**ಕನಕನಗ** (ನಾ). = ಕನಕಗಿರಿ ೧ : ಕನಕನಗಸದನ ಚರಭವಮದನಮದದಮನ (ಬಸವು. ೬೧-೪೨). [ಕನಕ + ನಗ₂]

**ಕನಕಪತ್ರ** (ನಾ). ಚಿನ್ನದಿಂದ ಮಾಡಿದ ಓಲೆ : ಅಳವಟ್ಟ ಕರ್ಣದ ಕನಕಪತ್ರಂಗಳಿಂದ (ಭಿಕ್ಷಾಜ. ೨-೨೬).
[ಕನಕ + ಪತ್ರ]

**ಕನಕಪರ್ವತ** (ನಾ). = ಕನಕಗಿರಿ ೧ : ಒಡನೆ ಸುರಾಸುರರ್ ಕನಕಪರ್ವತಮಂ ಕಡೆಗೋಲ ಮಾಡಿ ಮೇಣ್ ಪೆಡೆ ಪಲವಪ್ಪ ವಾಸುಕಿಮಹೋರಗನಂ ಕಣೆಗಣ್ಣ ಮಾಡಿ (ಕಾವ್ಯಸಾ. ೯೩೮ ಶೂದ್ರಕ).
[ಕನಕ + ಪರ್ವತ]

**ಕನಕಪೀಠ** (ನಾ). ಚಿನ್ನದ ಆಸನ; ಹೇಮಾಸನ: ಅತ್ಯುನ್ನತ ಕನಕ ಪೀಠಮಂ ಮುನಿಗಿತ್ತು (ಜಗವಿ. ೨-೪೨). [ಕನಕ + ಪೀಠ]

**ಕನಕರಿಸು** 'ಕನವರಿಸು$_1$' ನೋ.

**ಕನಕವೃಷ್ಟಿ** (ನಾ). ಚಿನ್ನದ ಮಳೆ [ಕನಕ + ವೃಷ್ಟಿ]

**ಕನಕಾಚಲ, ಕನಕಾಚಳ** (ನಾ). = ಕನಕಗಿರಿ ೧: ಶಾಣೆಯ ಬೀಯದಲಿ ಬಡವಹುದೆ ಕನಕಾಚಲ (ಕುವ್ಯಾದ್ರೋ. ೧-೧೬). **ಕನಕಾಚಳ**: ಮಣಿ ಮಯಕಿರೀಟೋದಗ್ರ ವಿಸ್ಫುರಿತ ಸಂಚೂಳಿಕಾ ಕನಕಾಚಳಮನೆ ಪೋಲ್ತು (ಆದಿಪು. ೧೪-೧೦೮ ವ). [ಕನಕ + ಅಚಲ]

**ಕನಕಾಚಳ** 'ಕನಕಾಚಲ' ನೋ.

**ಕನಕಾಧ್ಯಕ್ಷ** (ನಾ). ಚಿನ್ನದ ಉಸ್ತುವಾರಿ ನೋಡಿಕೊಳ್ಳುವವನು; ಕೋಶಾಧಿಕಾರಿ (ಕಿ). [ಕನಕ + ಅಧ್ಯಕ್ಷ]

**ಕನಕಾದ್ರಿ** (ನಾ). = ಕನಕಗಿರಿ ೧: "ಮೇರು ಸುರಗಿರಿಯೆನಲು ಕನಕಾದ್ರಿಯದು" (ಮಂಗರಾ. ೯-೩೦); ಕನಕಾದ್ರಿಯನೆಳಸುವ ನೂತನ ಚಂದ್ರಿಕೆಯಂತಿರೆಳಸೆ ದಶನದ್ಯುತಿಗಳ್ . . . ನುಡಿದಂ (ಪುಷ್ಪಪು. ೫-೨). [ಕನಕ + ಅದ್ರಿ]

**ಕನಕಾಬ್ಜನೀಯ** (ನಾ). ೧. ಹೊಂದಾವರೆ ಹೂವಿನ ಸಮೂಹವುಳ್ಳದ್ದು (ಕಿ). ೨. [ಛಂದ] ಪ್ರತಿಯೊಂದು ಪಾದದಲ್ಲಿಯೂ ಹದಿನೇಳು ಅಕ್ಷರಗಳುಳ್ಳ ಒಂದು ವೃತ್ತದ ಹೆಸರು: ಕನಕಾಬ್ಜನೀಯಂ ನಜಭಜಜಲಗಂ (ಛಂದೋಂಬು. ೨-೧೯೩). [ಸಂ. (ಕನಕ + ಅಬ್ಜನೀಯ)]

**ಕನಕಾಭಿಷೇಕ** (ನಾ). ೧. ಚಿನ್ನದಿಂದ ಮಾಡುವ ಅಭಿಷೇಕ: ದೊರೆಯು . . . ಆ ಸೆಟ್ಟಿಯ ಮನೆಗೆ ಹೋಗಿ ಅವನು ಮಾಡಿದ ಕನಕಾಭಿಷೇಕವೇ ಮೊದಲಾದ ಮರ್ಯಾದೆಗಳನ್ನು ಹೊಂದಿ ಅರಮನೆಗೆ ಬಂದನು (ನೀತಿಚಂ. IV, ೬). ೨. ಪೌತ್ರನಿಗೆ ಮಗ ಹುಟ್ಟಿದಾಗ ಮುತ್ತಾತ ಅಥವಾ ಮುತ್ತಜ್ಜಿಗೆ ಆ ಮಗುವಿನ ಕೈಯಿಂದ ಚಿನ್ನದ ಹೂವುಗಳಿಂದ ಮಾಡಿಸುವ ಅಭಿಷೇಕ. [ಕನಕ + ಅಭಿಷೇಕ]

**ಕನಕಾಯ** (ನಾ). ಒಂದು ಬಗೆಯ ಔಷಧಿಗಿಡ: "ಚಿಕ್ಕನಬುಡ್ಡೆಗಿಡ, ಬುಡ್ಡಕಾಕರತೀಗೆ, . . . ಮಿಂಚುಬಳ್ಳಿ, ಕನಕಾಯ" (ಮೈಔಗ. ೧೬-೩೧೮). [?]

**ಕನಕಾರವಿಂದ** (ನಾ). ಚಿನ್ನದ ಬಣ್ಣದ ತಾವರೆ; ಹೊಂದಾವರೆ: ಕಲಿತಪೀಯೂಷದೀರ್ಘಿಕೆಗಳಿಂ ಕನಕಾರವಿಂದದ ಕೊಳಂಗಳಿಂದೆ (ಜೈಮಿಭಾ. ೨೪-೧೩). [ಕನಕ + ಅರವಿಂದ]

**ಕನಕಾಲುಕೆ** (ನಾ). "ಚಿನ್ನದ ಗಿಂಡಿ" (ಅಮರ-ಟೀಕೆ). [ಸಂ. ಕನಕಾಲುಕಾ]

**ಕನಕಾವಳಿ** (ನಾ). [ಜೈನ] ಒಂದು ವರ್ಷದಲ್ಲಿ ಎಂಬತ್ತುಮೂರು ಉಪವಾಸವಿರುವ ವ್ರತ: ಜಗನ್ನಂದನ ಗುರುಗಳಲ್ಲಿ ಶಿಷ್ಯತ್ವಮಂ ಪೂಣ್ದು ಕನಕಾವಳಿ ತಪಃಪ್ರಭಾವದೊಳ್ ಪ್ರಾಣ ಪರಿತ್ಯಾಗದಿಂ ಪ್ರಾಣತೇಂದ್ರನಾಗಿ (ಆದಿಪು. ೩-೬೪ ವ); ದೀಕ್ಷೆಗೊಂಡು ಕನಕಾವಳಿಯಂ ನೋಂತು ಮಹೇಂದ್ರಂಗೆ ದೇವಿಯಾಗಿ (ಚಾವುಂಪು. ೩೭೧-೧೬). [ಕನಕ + ಆವಳಿ$_1$ (= ಆವಲಿ)]

**ಕನಕೋದರ** (ನಾ). ಚಿನ್ನದ ಗರ್ಭವುಳ್ಳವನು; ಹಿರಣ್ಯಗರ್ಭ; ಬ್ರಹ್ಮ: ಕನಕೋದರಂ ಬಿರಿದು ಹೋಳಾಗಿ ನೆಲಕ್ಕೆ ಧೊಪ್ಪನೆ ಕೆಡೆದು ಮರಣವಾದಂ (ಗುರುಚಾ. ೨-೫೧). [ಕನಕ + ಉದರ]

**ಕನಗ** (ನಾ). ನೀಚ; ಅಧಮ; ಅಲ್ಪ: ಧನಧಾನ್ಯದ ಚಿಂತೆ ವನಿತೆಯರ ಚಿಂತೆ ಉದರದ ಚಿಂತೆ ಅನುದಿನದಲಿ ತನುವ ನೆನೆಸುತ ಕನಗನಂತೆ (ಪುರಂದ. ೫-೧೧೫-೨). [?]

**ಕನಗಗಾವ** (ನಾ). ಒಬ್ಬಾತನ ಹೆಸರು: ಇಲ್ಲಿಯ ಬೆಸಮಕ್ಕಳಾರೆನ್ದೊಡೆ ಕಾಜಗೊಡೆಯನುಂ ಕನಗಗಾವನುಂ ಬಿಳಿಯಾಚಾರಿಯು ಕುಬಾಚಾರಿಯು (ಎಕ. III, ನಂಜನ. ೧೩೯-೯ ; 915 ?). [?]

**ಕನಗಾಣ್** (ಕ್ರಿ). ಕನಸು ಕಾಣು: ತನುವಳಿಪ ನಾನೆಂದೊ ಕನಗಾಂಬ ವಿಷಯದಿಂದೆನಿತೊ ನಿಸದಮಗಾಧಮೆನಿತೊ ಸಾವಂ ನೆನದೊಳಂ ಕನದೊಳಂ ಮನನಿಸುವೆ (ಗಿರಿವಿಂ. ೮-೯೮). [ಕನ + ಕಾಣ್]

**ಕನಗು** (ನಾ). ಕಗ್ಗು; ಕಮಟು; ಜಿಡ್ಡು: ಅವನ ಮುಖದಲ್ಲಿ ಕನಗು ಸುರಿಯುತ್ತಿದೆ (ರೂಢಿ).

ಕನಗಿನ ನಟ್ಟು = ಒಂದು ಬಗೆಯ ದುರ್ವಾಸನೆಯ ಹುಲ್ಲು (ಕಿ). ಕನಗಿನ ಹುಲ್ಲು = ಕನಗಿನ ನಟ್ಟು (ಕಿ). [?]

**ಕನಗೇಜಿತ್ತಿ** (ನಾ). ಒಬ್ಬಾಕೆಯ ಹೆಸರು: ಕಿಬ್ಬುಂದ ಮಣ್ಡಲಿಕ ತನಯಯಾ ಕನಗೇಜಿತ್ತಿ ನಾಮಧೇಯಯಾ (ಮೈಆರಿ. ೧೯೦೮,೮; 700). [?]

**ಕನಪು** (ನಾ). ಕೋಪ; ಕನಲು: ಕುಮಾರರಿಗೆ ಕನಪು ಬಾರದೆ ಬಿಡದು ಮುಂದೀತನೆ ನುಡಿದವೊಲು ಬೇಜಿ ಭೂಮಿಯನನುವದಿಸಿ ಕೊಡುವುದೆ ಉಪಾಯವುಯೆಂದರಾ ನೃಪರು (ಸಾಳ್ವಭಾ. ೨೨-೩೧).

ಕನಪಾಗು = ಕೋಪವುಂಟಾಗು; ರೇಗು: ಕನಪಾಗಿ ಮಾದಿರಾಜಂ ವೀಣೆಯಂ ನುಡಿಸಲನುವಾಗದೆಮ್ಮ ತ್ರಿಪುರಾಂತಕನ ಮೆಚ್ಚಲ್ಲ (ಲಿಂಗಪು. ೨೬-೧೪). [ದೇ. ? ‖ ತಮಿ. ಕನಲ್ವು]

**ಕನರ್$_1$**, ಕನರು$_1$ (ಕ್ರಿ). ೧. (ರುಚಿಯಲ್ಲಿ) ಒಗರಾಗು; ಒಗರಾಗಿರು: "ಕನರ್ – ಅಪಕ್ವರಸೇ" (ಶಮುಧಾ); ಕೂರ್, ಕಸರ್, ಕನರ್, ಕೊನರ್ (ಶಬ್ದಾನು. ೫೦೬ ಪ್ರಯೋ). ೨. ಒಂದು ತೆರನಾದ ವಾಸನೆಯುಂಟಾಗು: ಕನರ್ವಂಗಜಾಂಬು ವಿಗಳತ್ಕೇಶಂ ಕರಂ ಶೋಭಿಸಲ್ ಕುಸುಮಾಸ್ತ್ರೋನ್ನತಕೇಳಿಯೊಳ್ ಬಿಡದೆ ತಾಂ ಬೆಚ್ಚಿರ್ದರಾ ಕಾದಲರ್ (ಉದ್ಭಟ. ೮-೧೧೯). **ಕನರು$_1$**: ೨. ಉಜ್ವಳ ಸಂಶ್ಲೇಷಮುಮರ್ಚೆ ಮೇಣ್ಕನರಿ ಕಂದರ್ಪಾಂಬು ತಳ್ಪೊಯ್ಯೆ . . . ಕೂಡಿದರುದಂಚತ್ ಪ್ರೇಮದಿಂ ಕಾದಲರ್ (ಉದ್ಭಟ. ೮-೧೧೫). [ದೇ. ‖ ತೆಲು. ಕನರು]

**ಕನರ್$_2$**, ಕನರು$_2$ (ನಾ). ೧. ಕಸುಗಾಯಿಯ ರುಚಿ; ಒಗರು; ಒಗಚು: ಓರೊಂದೆಡೆಯೊಳ್ ಸೊನೆಯ ಕನರಂ ಸವಿವ ಗಂಡುಗೋಗಿಲೆಯ ತುಂಡಖುಂಡದಿಂ (ಮಲ್ಲಿಪು. ೨-೩೩); ರೇಫಾಂತಕ್ಕೆ:— ಕನರ್ಗಳ್, ಕೊನರ್ಗಳ್, ತಳಿರ್ಗಳ್ (ಶಮದ. ೪೨ ಪ್ರಯೋ); ಎಳದಳಿರಂ ಕರ್ದುಂಕಿ ಕನರ್ಗೊಂದಿದ ತದ್ರಸಮಿಾಂಟಿದತ್ತು (ರಾಜಶೇ. ೧೦-೨೯). **ಕನರು$_2$**: ೨. ಸೊಗಡು; "ಸಗಟು ರುಚಿ, ಕಿಲುಬಿನ ರುಚಿ" (ಹಹಸ. ಕೋಶ); ಎಂದಿನತನಕ ನಮ್ಮ ಊರಿನ ಹೆಂಗಸರಿಗೆ ಕಬ್ಬಿಣಗಾಣದ ಕನರು ರುಚಿಸುವುದಿಲ್ಲವೋ ಅಂದಿನ ತನಕ ಮರದ ಗಾಣದ ಎಣ್ಣೆಗೆ ಗಿರಾಕಿ ಉಂಟೇ ಉಂಟು (ಹಹಸ. ೬೩). ೩. ಕಮಟು ವಾಸನೆ; ಕಮರು: ತುಸು ಹಿತಕರವೆ ಆಗಿದ್ದ ಬತ್ತಿಯ ತುದಿಯ ಕನರು ವಾಸನೆ ತುಂಬಿತು (ಮಲೆಮ. ೨೧೫). [< ಕನರ್$_1$. / ತುಳು. ಕನೆರ್]

**ಕನರು$_1$** 'ಕನರ್$_1$' ನೋ.

**ಕನರು$_2$** 'ಕನರ್$_2$' ನೋ.

**ಕನರುಗಾಯ್** 'ಕನಗಾರ್ಯ್' ನೋ.

**ಕನಗಾರ್ಯ್**, ಕನರುಗಾಯ್ (ನಾ). ಪಕ್ವವಾಗದ ಕಾಯಿ; ಕಸುಗಾಯಿ; ಒಗರುಗಾಯಿ: ಕನಗಾರ್ಯಂ ಕಚ್ಚಿ ಮೆಯ್ಯೊಕ್ಕರಿಸಿರೆ ಸೊನೆಯಂ ಮೊಕ್ಕಳಂ ಕಚ್ಚಿ ಕಿಜ್ಕಿಂದೆನುತುಂ (ಸೂಕ್ತಿಸು. ೧೦-೫೬); ನನೆ ಬಲ್ಲನೆ ಮೊಗ್ಗೆಯಲರ್ ಕನಗಾರ್ಯ್ ಕಾಯ್ ದೋರೆವಣ್ಣು ಪಣ್ (ಶಾಂತೀಶ್ವ. ೫-೧೦೦). **ಕನರುಗಾಯ್**: ನಸುಗಾಯ್ ಕನರುಗಾಯ್ ಕಸುಗಾಯ್ ಹುಳಿಗಾಯ್ (ತೊರರಾ. ೫-೩-೧೪). [ಕನರ್$_2$+ಕಾಯ್$_1$]

**ಕನರ್ಗೊನರ್** (ನಾ). ಒಗರು ರುಚಿಯ ಕುಡಿ ; ಒಗರುಳ್ಳ ಚಿಗುರು : ಕನರ್ಗೊನರಿಂ ಬಾಳಚೂತದ್ರುಮಮಂ ಚಾಪಳಮಂ ಪುಂಸ್ಕೋಕಿಲಕ್ಕೋಲಗಿಸೆ (ಮಲ್ಲಿಪು. ೨-೩೪); ಪೂಗುಡಿಯಂ ಮಱಿದುಂ ಮದಾಳಿಗಳ್ ಕನರ್ಗೊನರಂ ಕರ್ದುಂಕವೆ (ಚಂದ್ರಪ್ರ. ೨-೧೦೨); ಕನರ್ಗೊನರಂ ಕರ್ದುಕಿದಣಿದೋಱುವ ಕೋಗಿಲೆ (ಕಬ್ಬಿಗಾ. ೬೧); ಮಿಸುಪ ಮರಗಳ್ ಕನರ್ಗೊನರ್ ಚಿಗುರ್ ಚೆಂದಳಿರ್ . . . ಕರಂದೋಱಿ (ಪದ್ಮರಾ. ೮-೪). [ಕನರ್$_2$ + ಕೊನರ್$_3$]

**ಕನಲ್$_1$, ಕನಲು$_1$** (ಕ್ರಿ). ೧. ಸಿಟ್ಟಿಗೇಳು ; ರೇಗು ; ಕ್ರುದ್ಧನಾಗು : "ಕನಲ್ – ಕ್ರೋಧೇ" (ಶಮುಧಾ); ಕೋಪಪಾವಕಂ ನಿಱಿಸೆ ಕನಲ್ದ ರೋಷದಿಂ (ಪಂಪಭಾ. ೧೨-೩೧); ಕನಲ್ದಂ ಸ್ಯೆರಣಿವಂತನುದ್ಗುಣಯುತಂ ತಾಂ ನಿರ್ಗುಣಂ (ಸೋಮೇಶ. ೫೨) ; ಸದ್ಗುಣಂಗಳನೆ ಕೇಳ್ದು ಕನಲ್ವ ಖಳಂಗೆ (ಲೀಲಾವ. ೧-೩೯) ; ಸುಳಿವೆನ್ನನೊನಲ್ದು ಕನಲ್ದು ನೋಡಿದಂ (ದಶಕು. ೬-೮೮). ೨. ಕಾವೇರು ; ಕುದಿ : ಬೇಟದೊಳ್ ಕನಲ್ದುರಿವೆರ್ದೆ ನೋಡನೋಡಲೊಡನಾಱಿದುದು (ಪಂಪಭಾ. ೫-೧೬) ; ಕರ್ವಿನಗಾಣದೊಳ್ ಮಱುಗುವಾಣದೊಳಿಕ್ಷುಯ ಕುಂಡದೊಳ್ ಕನಲ್ದರ್ವಿಸು ವಚ್ಚಗೊಂಡದೊಳಗುರ್ವಿಸೆ ಸೀಳಿಸಿ (ಶಾಂತಿಪು. ೬-೯೫) ; ಚಕ್ಕನಪ್ಪಿ ಕೊಳ್ಳೆಂದಿಱಿವರ್ ಜಾರೆಯರ ಮೊಲೆಗೆ ಕೂರ್ಪರ ಪೇರುರದೊಳ್ ಕನಲೆ ಕಾಯ್ದ ಲೋಹದ ಗುಂಡಂ (ಅನಂಪು. ೯-೩೮). ೩. ಸಂಕಟಪಡು ; ಪರಿತಪಿಸು ; ಬೇಗುದಿಗೊಳ್ಳು : ಕಳಕಳಿಸಂ ಕನಲನೊನಲನಳ್ಕಂ ಬಳ್ಕಂ (ಅಜಪು. ೫-೯೦) ; ಪರವಧುಗೋತು ಕೂಡಲೆಡೆಯಿಲ್ಲದೆ ನೋಡಿ ಕನಲ್ದು ಜೋಲ್ದು (ಧರ್ಮಾಮೃ. ೧೩-೧೩೯). ೪. ಬಾಡು ; ಮ್ಲಾನವಾಗು : ದೀನಮಾನಸೆಯಾದ ಕಮಲಪ್ರಭೆಯ ಕನಲ್ದ ಮುದ್ದುಮೊಗಮಂ ನೋಡಿ (ಅರ್ಧನೇ. ೩-೧೦೫ ವ). **ಕನಲು$_1$** : ೧. ಭಿನ್ನವೇಷವ ತೊಟ್ಟು ಡಂಬಕನ ನುಡಿದಹೆವೆಂಬ ಉದ್ದಂಡರ ಗುಹೇಶ್ವರ ಕಂಡಡೆ ಕನಲುವ (ಅವಚಂ. ೧೦೭-೪೮೮) ; ಪಾರ್ಥನಕುಲರು ಕನಲಿದೊಡೆ ಕೈದೋಱುವೆನು (ಕುಮ್ಯಾವಿ. ೩-೬೯) ; ತಮ್ಮ ಮಕ್ಕಳು ಮೊಮ್ಮಕ್ಕಳೊಳು ಕಕ್ಕಸಗೊಂಡು ಕನಲಿ ಕಾದದೆ ಮಿಗೆಯಕ್ಕರನನುಗೊಳಿಸುವುದು (ಹದಿಬ. ೪-೨೯). ೩. ಮರಳಿ ಮರಳಿ ತಾ ಪಡೆಯದ ಭಾಗ್ಯಕೆ ಹೊರಹೊರಳುತ ಕನಲಲು ಬಂದೀತೆ (ಪುರಂದ. ೧-೧೫೭-೩) ; ತನಗಿಂದ ಬಲ್ಲಿದರೊಳು ಕಾದಿ ಕೈಸೋತು ಕನಲುವ ದುಕ್ಕವಂತಿರಲಿ (ಮೋಹತ. ೫-೪೭) ; ರಾಯರು ಮೊದಲನೆ ಸಲ ಇಂಥ ಮಾತನ್ನು ಕೇಳಿ ಕಸಿವಿಸಿಗೊಂಡರು, ಕನಲಿದರು (ಕನಕ. ೨೨). ೫. ಮೂದಲಿಸು ; ಗದರಿಸು : ಪಿಂತಪ್ಪರಂ ಕನಲುತ್ತೊರ್ವರನೊರ್ವರಲ್ಲಿ ಕೆಡೆಮೆಟ್ಟುತ್ತೆ ಬೀರುತಿರ್ಪ (ಕುಸುಮಾ. ೧೧-೪) ; ಯುಧಿಷ್ಠಿರನೃಪತಿ ಪಾರ್ಥನ ಕನಲಿದನು (ಕುಮ್ಯಾಅ. ೧೬-೮) ; ಮಾನವರ ದುರ್ಗುಣವನೇನೆಂದು ಬಣ್ಣಿಪೆನು ದಾನಗೆಯ್ಯೆನಲು ಕನಲುವರು ದಂಡವನು ಮೌನದೀಯುವರು (ಸರ್ವಜ್ಞ. ೬೭೦). ೬. ಬಾಧಿಸು ; ಕಾಡು ; ಪೀಡಿಸು : ಮನವ ನೋಡುವೆನೆಂದು ನಿನ್ನನು ಕನಲಿದೆವು ನಾವಿನ್ನೆಬರ (ಪ್ರಭುಲೀ. ೧೫-೨೧)
[ದೇ. ‖ ತಮಿ. ಕನಲ್ ; ತೆಲು. ಕನಲು]

**ಕನಲ್$_2$, ಕನಲು$_2$** (ನಾ). ೧. ಸಿಟ್ಟು ; ರೇಗುವಿಕೆ ; ಕೋಪ : "ಕಾಯ್ಪಿನಲ್ ಬಳಿಕಂ ಕಿನಿಸು ಕನಲ್ಕುನಿಸು" (ಶಬ್ದಮಂ. ೪೧) ; "ಕನಲೆನಲ್ ಕೋಪಮಕ್ಕುಂ" (ಕಶರ. ೨೧). ೨. ಬೆಂಕಿ ; ಉರಿ. 'ಕನಲ್ಗಿಡಿ' ಪರಾ. **ಕನಲು$_2$** : ೧. ಕಣ್ಣನೊಳಗಣ ಕನಲು ಮೂವರು ಅಣ್ಣಂದಿರ ಮನೆಯಾಯಿತು (ಬಬ್ಬಬಾ. ೩೦) ; ಅಷ್ಟು ಕೆಂಪಾಗಿ ಕಂಡಿತು . . . ಪ್ರಭಾಕರನ ಕಣ್ಣಲ್ಲಿ ಕಾಣುತ್ತಿದ್ದ ಕನಲಿನ ಕೆಂಪು (ಪ್ರಣಸ. ೨೯).
[< ಕನಲ್$_1$]

**ಕನಲಿಕೆ** 'ಕನಲ್ಕೆ' ನೋ.

**ಕನಲಿಸು** (ಕ್ರಿ). ೧. ಕೆರಳಿಸು ; ರೇಗಿಸು ; ಸಿಟ್ಟಿಗೇಳುವಂತೆ ಮಾಡು : ಕಯ್ಪಿಸರಂಬೆರಸು ನುಡಿದ ಭೀಮಸೇನನ ನುಡಿಗಳ್ ಕಿಡಿಗಳಂತೆ ತನ್ನ ಮನಮನೊನಲಿಸೆಯುಮೆರ್ದೆಯಂ ಕನಲಿಸೆಯುಂ (ಪಂಪಭಾ. ೬-೩೩ ವ); ಪಾಂಡವಜನಪರನು ಜೂಜಿನಲಿ ಸೋಲಿಸಿ ಕನಲಿಸಿದೆಯದಱಿಂದ ಬಲುಗೇಡಹುದು ನಿನಗೆ (ಕುಮ್ಯಾಅ. ೧-೧೨). ೨. ಉದ್ರೇಕಿಸು : ಆಶೆಗಳು ಅಶೆಯನು ಕನಲಿಸುವ ವಿಷ್ಣುಗಳು ಆಶೆಯೊಳಗಡಗಿ ಹೋಗುವ ಭಯಗಳು (ಸಮಾಲೋ. ೧೮೧). ೩. ಕಾಡು ; ಪೀಡಿಸು ; ಹಿಂಸಿಸು : ಶುಕಮುಸುರ್ದು ಕನಲಿಪಿನಿತಲ್ತು ಕದಂಪಂ ತಳೆದ ತಳದ ಕೆಂಪಡರ್ದಿರೆ ಮೌಕ್ತಿಕ ಕರ್ಣಪೂರಮುಂ ಶಿಖರಕಾಂಕ್ಷೆಯುಂ ಸೆಳೆದು ಸೆಳೆದು ಕನಲಿಪುದವಳಂ (ವರ್ಧಪು. ೪-೫೫). [ಕನಲ್$_1$ + -ಇಸು$_3$]

**ಕನಲು$_1$** 'ಕನಲ್$_1$' ನೋ.

**ಕನಲು$_2$** 'ಕನಲ್$_2$' ನೋ.

**ಕನಲ್ಕೆ, ಕನಲಿಕೆ** (ನಾ). ೧. ಕೋಪ ; ಕೆರಳುವಿಕೆ ; ಸಿಟ್ಟು : "ಕಿನಿಸನೆ ಕಾಯ್ಪನೆ ಸೆಣಸನೆ ಮುನಿಸನೆ ಮುಳಿಸನೆ ಕನಲ್ಕೆಯೆನೆ ಕೋಪಂ" (ಚತುನಿ. ೨೭) ; ಮತ್ಕುಲದ ಕರ್ವಿನ ಬಿಲ್ಲನನಂಗನಿಂದಗಲ್ಚಿರಿಸಿದರೀ ಪುರಾಂಗನೆಯರೆಂಬ ಕನಲ್ಕೆಯನಿಕ್ಷುಕೋಟ ಪಲ್ಮೊರೆವ ಪೊಲ್ (ಪುಷ್ಪಪು. ೨-೪೯) ; ಮುನಿ ಮುನಿದು ಪೀರ್ದುದಂ ರಾಜವಂಶಕುಠಾರಕನ ಕನಲ್ಕೆಗೆ ನೆಲಂ ಬಿಟ್ಟುದಂ (ಜೈಮಿಭಾ. ೬-೨) ; ಕೈತವಕ್ಕೆಕ್ಕತಳಂ ಕನಲ್ಕೆಗಿರವು (ಚಕವಿ. ೬-೬೪). ೨. ಬೇಗುದಿ ; ಪರಿತಾಪ : ಬಂಡು ಬಕ್ಕುಡಿಭಂಗ ಬಂಧನ ಕನಲ್ಕೆ ಕಳಕಳಮೆಂಬಿವು ಸರಸಿಜಂ ರತಿ ಸರಸಿ ಗಱಿವೂ ವಿಯೋಗ ಘನವಿರಹಿಜನದೊಳಗಲ್ಲದೆ ನೋಡಲಾ ನಾಡ ಹಿರಿಯೂರ ಪಟ್ಟಣದ ಪಾಳೆಯದ ಜನದೊಳಿಲ್ಲ (ಚಬಪು. ೬-೪೨). **ಕನಲಿಕೆ** : ೧. ತಮತಮಗೆ ಸಮತೆಯ ನುಡಿವರಲ್ಲದೆ ಕನಲಿಕೆಯ ಕಳೆದಿಪ್ಪರಾರು (ಸಮಾವ. ೧೪) ; ಕನಲಿಕೆಯ ನೆಱಿ ಬಿಟ್ಟು ಶುಕ್ರನ ತನುಜೆ . . . ಪರಿಣಯ ಮಾಡಿಕೊಂಡಳು ವರೆಯಯಾತಿಯನು (ಕುಮ್ಯಾಅ. ೭೦೩. ಪರಿ. ೩೨೭) ; ವಿಲಯಾದಿಭೈರವನ ಕನಲಿಕೆಯ ಕೋಲಾಹಳವನನುಕರಿಸಿ (ತೊರರಾ. ೬-೧೪-೯). ೨. ಕೌರವರಾಯನಾ ಕ್ಷಣ ಕನಲಿಕೆಯ ದುಗುಡದಲಿ . . . ಬಂದನು ತನ್ನ ಮಂದಿರಕೆ (ಸಂಭಪು. ೧೭-೫೨). [ಕನಲ್$_1$ + -ಕೆ]

**ಕನಲ್ಗಿಡಿ** (ನಾ). ಕನಲುವ ಕಿಡಿ ; ನಿಗಿನಿಗಿಕೆಂಡ : ಬಿಡುವುರಿಯೊಳ್ಗೆ ಸೂಸುವ ಕನಲ್ಗಿಡಿ ಬೀಸುವ ಪಾಸಮೋರೆಯಿಂದಿಡುವಱಿ ಪೊಯ್ವ ಕತ್ತಳಿಕೆ (ಚಂದ್ರಪು. ೫-೧೦೫). [ಕನಲ್$_1$ + ಕಿಡಿ$_1$]

**ಕನಲ್ಗೊಳ್ಳಿ** (ನಾ). (?) : ಆ ಅನುಜೊ ಇನ್ದು ಕನಲ್ಗೊಳ್ಳಿ ನನ್ದಿಯಾಲರಾವಿಟ್ಟದು (ಎಕ. VI, ಚಿಕ್ಕಮ. ೫೦-೩ ; ಸು. 480 ?). [?]

**ಕನಲ್ಚು** (ಕ್ರಿ). = ಕನಲಿಸು ೧ : ತನಗೆಡವಿಡದತಿ ಚಪಲಂ ಮನಮದು . . . ಬಿಡದೆ ಪಿಡಿದು ನೃಪರಂ ಕನಲ್ಚಿ ತನ್ನಿಚ್ಚೆಗೊಯ್ವುದೊಂದಚ್ಚರಿಯೇ (ಕಾದಂಪೂ. ೫೫೯). [ಕನಲ್$_1$ + -ಚು. / ತೆಲು. ಕನಲಿಂಚು]

**ಕನವನಿಸು** 'ಕನವರಿಸು$_1$' ನೋ.

**ಕನವರ, ಕಲವರ** (ನಾ). ೧. ನಿದ್ರೆ ಮತ್ತು ಎಚ್ಚರಿಕೆಯ ನಡುವಣ ಸ್ಥಿತಿ ; ಕನಸು : ಕನಸು ಮನಸು ಕನವರದೊಳಗಾ ನೃಪತನುಜಾತನ ನಿಂಬುಗೊಳಿಸಿ ಘನಮಾದ ಮೋಹ ಮರುಳುಗೊಂಡವೊಲು ಪುರವನಿತೆಯರಿರುತಿಹರು (ನೇಮಿಸಂ. ೮-೪೩) ; ಕನವರವಿಲ್ಲೊಂದು ಗುಜುಕಿಲ್ಲ ಮೇಲೊಂದು ತೊನೆದಾಟವಿಲ್ಲದೊಪ್ಪಿದರು (ಭರಚ. ೧೫-೧೦೬) ; ಕನವರದಿಂದ ಕಣ್ಣೆಗೆ ತೋಱಿತೆಂದಾಗ ಮನನೊಂದು ಮಱಿದೋಜಗಿರಲೂ (ಪೂಜ್ಯಚ. ೧೩-೨೨). **ಕಲವರ** : ೨. ಭ್ರಮೆ : ಬರಿಯೂಟವೋ ಕನಸೋ ಕಲವರವೋ (ಮುಂಕುಕ. ೩೨). [ದೇ. ತಮಿ. ತೆಲು. ಕಲವರ]

**ಕನವರಸು** 'ಕನವರಿಸು$_1$' ನೋ.

**ಕನವರಿ** (ಕ್ರಿ). ಕನಸು ಹರಿದುಹೋಗು; ಎಚ್ಚರಾಗು: ರಜನಿಯಿಮ ಯಿಮೆಯಿಂ ಮಧುದಿನಾಂತದ ಶಾಂತಿ ಕನವರಿಯುವಂತೆ (ಗಿರಿವಿಂ. ೩೨-೮). [ಕನ + ಪರಿ$_1$ (< ಪಱ$_1$)]

**ಕನವರಿಕೆ, ಕಣವರಿಕೆ, ಕಲವರಿಕೆ** (ನಾ). ೧. ನಿದ್ದೆಯಲ್ಲಿ ತನ್ನಷ್ಟಕ್ಕೆ ತಾನೇ ಮಾತಾಡಿಕೊಳ್ಳುವಿಕೆ, —ಬಡಬಡಿಸುವಿಕೆ; ಕನಸು ಕನವರಿಕೆ ಪಸಿವುಱ ದನಿ ಸೋಂಕುಗಳಾದಿ ಬೋಧೆಗೆ ವಿಭಾವಂ ದಲ್ (ರಸರ. ೯೨-೧೩೨); ೨. ಮತ್ತೆ ಮತ್ತೆ ಒಂದೇ ವಿಷಯವನ್ನು ಯೋಚಿಸುವಿಕೆ; ಹಳವಂಡ (ಉಕ): ಎಲ್ಲ ಕವನಗಳಲ್ಲಿಯೂ ಜೀವನ, ಮಹಾಜೀವನ ಎಂಬ ಕೂಗು ಕನವರಿಕೆ, ಕೊನೆಗೆ ಕನವರಿಕೆಯೂ ನಿಂತಿತು (ಮಹಾಗ. ೨೩೬). **ಕಣವರಿಕೆ**: ೨. ಕಲೋಪಾಸಕನ ಮನದರಿಕೆಯಾದ ಕಣವರಿಕೆಯು ಜಿಜ್ಞಾಸೆಯಿಂದ ಜೀವನಕ್ಕೆ ಹೋಗುವದು (ಸಾಹಿವಿ. ೧೪೫). **ಕಲವರಿಕೆ**: ೧. ಸ್ವಪ್ನದ ಕಲವರಿಕೆಯಿಂದ ಬೆಬ್ಬರ ಬಿದ್ದು (ಕಥಾಮೃ. IV, ೧೩೧). [ಕನವರಿಸು + -ಕೆ]

**ಕನವರಿಸು$_1$, ಕನಕರಿಸು, ಕನವನಿಸು, ಕನವರಸು, ಕಲವರಿಸು** (ಕ್ರಿ). ನಿದ್ದೆಯಲ್ಲಿ ತನ್ನಷ್ಟಕ್ಕೆ ತಾನೇ ಮಾತನಾಡಿಕೊಳ್ಳು, —ಬಡಬಡಿಸು: "ಕನವರಿಸು - ನಿದ್ರಾವಿಕಾರೇ" (ಶಮಧಾ); ಕನವರಿಸೆ ನಾಲ್ಕು ವೇದಮುಮೆನಗೆ ಮುಖೋದ್ಗತಮದಲ್ಲದಾಱಂಗದ ಮಾತನಿತೆ ಗಡ (ಪಂಪಭಾ. ೮-೫೩); ಮುನ್ನಿನ ನಿಜಲೀಲೆಯೋಲಗದ ಪೆರ್ಮೆಯ ಮಾತನದೊರ್ಮೆ ಸುಪ್ತಿಯೊಳ್ ಕನವರಿಸುತ್ತುಮಿರ್ಪ ಹರಿ ಗೋಪಿಗೆ ವಿಸ್ಮಯಮಂ ನೆಗಚ್ಚಿದಂ (ಜಗವಿ. ೩-೫೮); ಕನವರಿಸುತ್ತ ಖಳ ಸುಖಸುಪ್ತನಾದನು (ಕೌಶಿರಾ. ೨೪-೬). **ಕನಕರಿಸು**: ಅಗಲ ವನು ದಣಿದು ನಿಶ್ಚಿಂತನನಾಗಿ ಕನಕರಿಸಿದ್ದೇ ದೇವರ ಆಜ್ಞೆಯೆಂದು ಅವರು ತಿಳಿದುಕೊಳ್ಳುತ್ತಾರೆ (ಮುಂಬಯಿ. ೬-೧೦೯). **ಕನವನಿಸು**: ಕನವನಿಪ ಕಾಳರಾತ್ರಿಯ ದನಿಯಂತಾ ನೃಪನ ಕಿವಿಗೆ ದುಸ್ಸಹಮಾಯ್ತಾ ವನಿತೆಯ ನುಡಿ (ಪಂರಾಮಾ. ೬-೯೮); ತ್ರಿನಯನಪದಪಂಕಜಮಂ ಕನಸಿನೊಳಂ ಕಣ್ದು ಕನವನಿಪ್ಪಂ ಭರದಿಂದೆ ನಮಃಶಿವಾಯಮಂತ್ರಮಂ (ಸೌಇಇ. XI-ii, ೧೭೫-೨೮; 1124); ಅವಱೊಳು ಸ್ವಾತ್ಮನಗೃದ್ಧಿ ಉದಯದೊಳೊ ತ್ತಿದೊಡೆ ಮಗುಳ್ದೊಱಗುವುದುಂ ಕೆಲಸಂ ಮಾಳ್ಪುದುಂ ಕನವನಿಸುಪುದು ಮಕ್ಕುಂ (ಪಸಾರ. ೧೯-೧೫). **ಕನವರಸು**: ಮರುಳಾಗಿ ನುಡಿಯಿಪುದು ಮಜ್ಜೆ ತಾಮ್ರಚ್ಛಾಯೆ ತರಣಿಯಂಶಂ ಶರೀರಮನೊತ್ತರದೊಳೆ ಕನವರಸಿ ನುಡಿಸುತ್ತಿಹುದು (ಚಿಬಪು. ೫೮-೩೮). **ಕಲವರಿಸು**: ಕೂಡೆ ಕಲವರಿ ಸುತ್ತ ಮಿಗೆ ಮಾತಾಡಲಮ್ಮದೆ ಕಣ್ಗಳೊಳು ಕಡು ಕೋಡಿವರಿವಶ್ರುವಿನ ಲೆದ್ದಾ ಪೆಣನ ಬಳಿಗೈದಿ (ತಿಮ್ಮಸ್ತ್ರೀ. ೩-೩೩). [ಕನವರ + -ಇಸು$_3$]

**ಕನವರಿಸು$_2$** (ಕ್ರಿ). ಕನಸನ್ನು ಹರಿಸು; ನಿದ್ದೆಯಿಂದ ಎಚ್ಚರ ಗೊಳಿಸು: ಕಳ್ಳನಂಗಡಿಯಿಂ ಕೆರಳ್ವ ದನಿಯೆನ್ನ ಕನವರಿಸಿತೀ ನುಡಿಯಿಂ (ಗಿರಿವಿಂ. ೧೧೬-೨). [ಕನವರಿ + -ಸು$_1$]

**ಕನಸಾನ್** (ಕ್ರಿ). ಕನಸನ್ನು ಕಾಣು; ಸ್ವಪ್ನವನ್ನು ಕಾಣು: ಇಂದೆ ಮುಂಜಾನೆ ಕನಸಾಂತು ನಾನತಿ ಸಂಕಟಂಬಟ್ಟೆ (ಗೊಲ್ಲೊಥಾ. ೬-೧೩); ಮಲೆಯ ಘನಮೌನದೊಳು ಕನಸಾಂತು ನಿಂದಂತೆ (ಮಲೆದೇ. ೪೩-೭). [ಕನಸು + ಆನ್$_1$]

**ಕನಸಿಗ** (ನಾ). ಕನಸು ಕಟ್ಟುವವನು; ಕನಸುಗಾರ: ಸುಖ ಸಾಮ್ರಾಜ್ಯದ ಕನಸಿಗ ನೀನು (ಗರಿ. ೧೧೧-೧೬); ಎಲ್ಲ ಕನಸಿಗರನು ತಡೆದು ... ಇನ್ನು ಮನೆಗೆ ತೆರಳಿರೆನಲು (ಪಯಣ. ೧೨-೧೫); ಕುತುಕಿಗೆತ್ತಣ ಬಿಡುವು, ರಸಪದದ ಕನಸಿಗಗೆ ಬಲು ಕವಲ್ಲೊಡೆದ ಬಾಳ್ ಬಳಿಯ ದಾರಿಗ ನಿಗೆ (ಮಲೆದೇ. ೨೨-೧). [ಕನಸು + -ಇಗ]

**ಕನಸು, ಕಣಸು$_2$** (ನಾ). ೧. ಸ್ವಪ್ನ; ನಿದ್ದೆಯಲ್ಲಿ ಕಾಣುವ ನೋಟ: ಪುಟ್ಟಿದಂದಿಂ ತೊಟ್ಟಂತಪ್ಪುಣಸಂ ಕನಸಿನೊಳಪ್ಪೊಡಂ ಕಂಡಱಿಯದ ಮಗಂ (ವಡ್ಡಾರಾ. ೭೮-೨೦); ಅಟ್ಟಿಱನಿಟ್ಟುಳಿಗೊಂಡಲಂಪುಗಳ್ ಕನಸಿನೊಳಂ ಪಳಂಚಲೆವು[ವೆ]ನ್ನೆರ್ದೆಯೊಳ್ (ಪಂಪಭಾ. ೪-೧೦೬); ಇರುಳ್ ಕಂಡ ಕನಸುಗಳಂ ಪಗಲ್ ನೆನೆವಂತೆ (ಧರ್ಮಾಮೃ. ೧-೧೫೪); ಕನಸಿನ ಭತ್ತಕ್ಕೆ ಗೋಣಿಯಾಂಪರೆ (ಲೀಲಾವ. ೪-೭೦); ಮೂಗರು ಕಂಡ ಕನಸಿನಂತೆ ಮೆಱೆವಾತ್ಮಯೋಗವನಾರಾಡಬಹುದು (ಭರತ. ೨-೯೨). ೨. ಸುಳ್ಳು; ಅಸತ್ಯ; ಕಲ್ಪನೆ: ಉದಾರಮಹೇಶ್ವರನೀಶ್ವರವರ ಪ್ರಸಾದಮೆಲ್ಲಂ ತನಗೆ ನೆನಸಾಗೆಯುಂ ಕನಸಿನಂದಮಾಗಿ ತೋಱೆ (ಪಂಪಭಾ. ೧೧-೧೩೧ ವ); ಮರುಳಕ್ಕ ಕನಸಿನ ತೋಱೆಯೊಳ್ ನೀರ್ಗು ಡಿದು ತಣಿವನಱಿಸಿದರೊಳರೇ (ಶಾಂತಿಪು. ೪-೯೮); ಕನಸಲ್ಲಿದು ನಿಶ್ಚಯ ಮೆಂದಳ್ಕಳ್ಕಿ ನೋಡಿ (ಧರ್ಮಾಮೃ. ೩-೧೧೪); ಕನಕಂ ನೀರಕ್ಕರಂ ಪೆಂಡತಿ ಕನಸು ಸುತರ್ ಮಂಜು ... ಅಚಿರವು (ರಕ್ಷಾಶ. ೩೧). **ಕಣಸು$_2$**: ೧. ಕಣಸು ಬಿರಿದೊಡನೆ ನನಸು ನುಗ್ಗಿತು ಬಗೆಯ ಭೂಮಿಕೆಗೆ (ಶ್ರೀರಾಮಾ. ೫೨೪-೭೪೭); ತಿರಿವ ತಿರುಕರ ಕಣಸೆ, ನಿನಗೆ ನೆಲೆ ಇಲ್ಲೆ? (ಮಲೆದೇ. ೫-೬).

**ಕನಸಿನ ಗಂಟು** = (ಆಲಂ) ಅಸಾಧ್ಯವಾದುದು; ಕೈಗೆ ನಿಲುಕಲಾರದುದು: ಅವಳು ಹೆತ್ತ ನೂರು ಮಕ್ಕಳು ಕನಸಿನ ಗಂಟಾಯಿತು (ವಚಭಾ. ೩೬೦); ಶಸ್ತ್ರಾಸ್ತ್ರಗಳಿಂದ ಸುಸಜ್ಜಿತವಾದ ಸರಕಾರದೊಂದಿಗೆ ಹೋರಾಡಿ ಸ್ವಾತಂತ್ರ್ಯ ಗಳಿಸುವುದು ಕನಸಿನ ಗಂಟೆಂದು ನನ್ನ ಮನಸ್ಸೆಂದಿತು (ಕುರುಕಾ. ೧೫೦). **ಕನಸಿನ ಮಂಡಿಗೆ** = ಕನಸಿನ ಗಂಟು: ಹಣವಿಲ್ಲದೆ ಹೋದರೆ ಅವೆಲ್ಲ ಕನಸಿನ ಮಂಡಿಗೆಗಳಾಗಿಯೇ ಉಳಿಯುತ್ತವೆ (ಗ್ರಂಥಾಲ. ೧೧). **ಕನಸಿಲ್ಲದರ್** = ಕನಸಿಲ್ಲದವರು; ನಿದ್ದೆಯಿಲ್ಲದವರು; ದೇವತೆಗಳು: "ಕನಸಿಲ್ಲದರೆಮೆಯಿಕ್ಕದರನುನಯದಿಂ ಗಾಳಿವಟ್ಟಗರುಮಚ್ಚರರ್ ... ದೇವವ್ರಾತಕಮರ್ದ ನಾಮಂ" (ಕವಿಕಂ. ೩೨); ಕನಸಿಲ್ಲದರ್, ಸರಿದೋಱದರ್, ಎವೆಯಿಕ್ಕದರ್, ಜನ್ನಗೂಟರ್ ... - ಈ ೯ ದೇವರ್ಕಳ ಪೆಸರ್" (ಕಶಸಾ. ೨-೧೯). **ಕನಸುಕಟ್ಟು** = ಮನಸ್ಸಿನಲ್ಲಿ ಕಾಲ್ಪನಿಕ ಚಿತ್ರ ಮೂಡಿಸಿಕೊಳ್ಳು; ಗಾಳಿಗೋಪುರ ಕಟ್ಟು: ತರಗತಿಯಲ್ಲಿ ಕುಳಿತಂತೆಯೆ ಮನಸ್ಸು ಕನಸು ಕಟ್ಟುತ್ತಿತ್ತು (ಆಲಹೂ. ೫೨).

[ಕನ + -ಸು$_2$. / ತಮಿ. ಕನವು; ಮಲ. ಕಿನಾವು; ಕೊಡ. ಕೆನಚಿ.

**ಕನಸುಂಗುಳಿ** (ನಾ). ಕನಸುಗಾಣುವ ಸ್ವಭಾವದವನು; ಭ್ರಾಂತಿಗೆ ಒಳಗಾದವನು: ಪರಮ ಧರ್ಮ ನೀತಿಗಳನ್ನು ವಿಧಿಸಿ ಮುದ್ರೆಮಾಡಿದ ಶಾಸ್ತ್ರಗಳು ಕನಸುಂಗುಳಿಗಳೆಂದೆ (ಬೆಟ್ಟಅ. ೭೫-೮). [ಕನಸು + -ಕುಳಿ$_3$]

**ಕನಸುಗ** (ನಾ). = ಕನಸಿಗ: "ಸಸನ್, ಸಸಕಃ ಈ ೨ ಕನಸುಗಂ" (ಕಾಶಕ್ಯ. ೧೬೨). [ಕನಸು + -ಗ$_3$]

**ಕನಸುಗಾಣ್** (ಕ್ರಿ). = ಕನಸಾನ್: ಗಂಗೆಯ ಪೊನಲೊಳ್ ಪೋಪ ಕಲ್ಪವೃಕ್ಷಮಂ ತಾನೆ ಪಿಡಿದು ತೆಗೆದು ತಡಿಗೆ ಸಾರ್ಚಿ ಸುರಾಂಗನೆಯರೊಡನರ್ಚಿಸುವುದಂ ಕನಸುಗಂಡು (ಚಾವುಂಪು. ೮೧-೧೧); ತನ್ನ ವದನಾರವಿಂದಮಂ ಗಜರಾಜಂ ಬಂದು ಪುಗುವುದುಮಂ ಕನಸುಗಂಡು (ಅಜಿಪು. ೩-೧೨ ವ); ಭೀತಿಯಂ ಬಟ್ಟದನೆ ಕನಸುಗಂಡುಮ್ಮಳಂಗೊಂಡು (ಎಕ. VII, ಶಿವಮೊ. ೭೪-೨; 1112).

**ಕನಸುಗಾಣದರ್** = ದೇವತೆಗಳು: ಕನಸುಗಾಣದರ ಪುರಮಂ ಪೊಕ್ಕು ದೇಸಿಯೆಂದೆನಿಸಿ (ಸಿದ್ಧೇಪು. ೨-೧೪). **ಕನಸುಗಾಣದರ ಪಿರಿಯ** = ದೇವತೆಗಳ ಹಿರಿಯ; ಬ್ರಹ್ಮ: "ಕನಸುಗಾಣದರ ಪಿರಿಯಂ ಬರ್ಮ" (ಶಬ್ದಮಂ. ೯). [ಕನಸು + ಕಾಣ್]

**ಕನಸುಗಾರ** (ನಾ). = ಕನಸಿಗ : "ಹೌದು, ಅವನೊಬ್ಬ ಕವಿ, ಕನಸುಗಾರ . . ." (ಪುನರು. ೫೪೬).

[ಕನಸು + -ಗಾರ (< -ಕಾಱ)]

**ಕನಸುಗಾರಿಕೆ** (ನಾ). ಕನಸು ಕಟ್ಟುವಿಕೆ; ಸ್ವಪ್ನಶೀಲತೆ : ಕನಸುಗಾರಿಕೆ, ಹದಮೀರಿದ ಶೃಂಗಾರ. . . ಪುನರ್ನಿರ್ಮಿಸಿ ಆಗಿನ ಲೇಖಕರು ತಮ್ಮ ಕತೆ - ಕಾದಂಬರಿಗಳಲ್ಲಿ ಎರಕಹೊಯ್ದರು (ಹೊಸಕ್ಷಿ. ೨೮೦).

[ಕನಸುಗಾರ + -ಇಕೆ]

**ಕನಸುಣಿ** (ನಾ). ಕನಸಿನಲ್ಲಿಯೇ ಇರುವವನು; ಕಲ್ಪನಾಲೋಕದಲ್ಲಿಯೇ ಮಗ್ನನಾದವನು : ನೀನು ಕನಸುಣಿ . . . ಸತ್ಯ ಜಗದ ಪರಿವೆ, ಅರಿವು ನಿನಗಿಲ್ಲವಿನ್ನೂ (ಮುಕ್ತಿ. ೧೪೫); ಸಾಹಿತಿಯು ಕನಸುಣಿಯೆಂಬ ಆರೋಪಕ್ಕೂ ಪಾತ್ರನಾಗುತ್ತಾನೆ (ಸಾಸಮಾ. ೩೪).

[ಕನಸು + -ಉಣಿ]

**ಕನಸುದೋಱು** (ಕ್ರಿ). ಕನಸಿನ ಮೂಲಕವಾಗಿ ಕಾಣಿಸು; ಸ್ವಪ್ನದಿಂದ ಸೂಚಿಸು : ಮುನ್ನಿನ ರೂಪುವೆರಸಿ ಪುಟ್ಟುವ ಮಕ್ಕಳುಮಂ ಮೋಹದಿಂ ಕನಸುದೋಱಿ ಬಂದು ಪುಟ್ಟುವ ಮಕ್ಕಳುಮಂ ಕಂಡು ಮಱುಭವಮುಂಟೆಂದು ನಂಬುವುದು (ಧರ್ಮಾಮೃ. ೯-೫೧ ಅಡಿಟ).

[ಕನಸು + ತೋಱು$_1$ (< ತೋಱ್)]

**ಕನಾಗ** (ನಾ). ಒಂದು ಬಗೆಯ ಮರ : ಕನಕನ ಮರ, ಕನಾಗ (ವೈಔಗಿ. ೨೭-೫೨೩).

[?]

**ಕನಾಗಿ** (ನಾ). ಒಂದು ಬಗೆಯ ಮರ : ದೊಡ್ಡಜಾಜಿಕಾಯಿ, ಕನಾಗಿ (ವೈಔಗಿ. ೫೬-೧೧೧೮).

[?]

**ಕನಾತಿ** (ನಾ). ಏಟು; ಹೊಡೆತ : ಬೀಳಲಿ ಇನ್ನೂ ಎಲ್ಡು ಕನಾತಿ! ನಂಗೆ ಮಾತ್ರ ಬೆನ್ನಮ್ಯಾಲೆ ಇಕ್ಕಡಿಸ್ತಾರಲ್ಲಾ ? (ಮಲೆಮ. ೪೦೩). [?]

**ಕನಾತು** (ನಾ). ಡೇರೆಯಲ್ಲಿರುವ ಬಟ್ಟೆಯ ಗೋಡೆ : ಆ ಚಂದ್ರಶಾಲೆಗಳ ಮೇಲುಗಡೆ ಕನಾತಿನ ಫರದೆಗಳು ಜರಿಯ ಮೇಲುಕಟ್ಟುಗಳೂ ಕಟ್ಟಲ್ಪಟ್ಟಿದ್ದವು (ಶ್ರೀರಾಯ. ೪೫).

[← ಮರಾ. ಕನಾತ್, ಕನಾಥ್ ; ಅರ. ಕನಾತ್]

**ಕನಿ$_1$** (ಕ್ರಿ). ೧. ಹೊಳೆ; ಮಿಂಚು; ಪ್ರಕಾಶಿಸು : ದನುಜೇಂದ್ರನೊಡ್ಡು ಕರ್ಗನೆ ಕನಿಯುತ್ತಿರೆ ನೋಡೆ ಕಂಡು ವಾನರಚಿಹ್ನರ್ ಮುನಿಸನುವಿಸೆ ಕಾದುವ ತಕ್ಕಿನೊಳಾಹವಭೂಮಿಗೆಕ್ಕೆಯಿಂ ನಡೆತಂದರ್ (ಪಂರಾಮಾ. ೧೩-೨೧); ಎತ್ತೆತ್ತಲುಂ ಬಳ್ಳಿಮಿಂಚಂ ತಳೆದಾಶಾಮಂಡಲಂ ಕಟ್ಗನೆ ಕನಿಯೆ ಜಳಸ್ಫೀತಜೀಮೂತಜಾತಂ (ಜಗವಿ. ೪-೧೪). ೨. ಕಪ್ಪಾಗು; ಕರಿದಾಗು : ಕಾಮನ ಸುಟ್ಟ ಕಾಡಿಗೆನೆ ಕರ್ಗನೆ ಕ[ಪಾಠಾಂ. ಗ]ನಿತುದು ಮಲದ ಮುಸಿಯ ಮಣಕದಿನಂಗಂ (ಅರ್ಧನೇ. ೧-೮೬).

[ದೇ. ‖ ತಮಿ. ಮಲ. ಕನಿ ; ತುಳು. ಕನಿ, ಕಣಿ]

**ಕನಿ$_2$** (ಕ್ರಿ). ೧. ಕಳಿ; ಪಕ್ವವಾಗು. ೨. ಜಿಡ್ಡಾಗು; ಕಮರುವಾಸನೆಯನ್ನು ಪಡೆ : ಒಂದು ದಿವಸ ಬಿಸಿಲೊಳು ಪೋಗಿ ಬಲು ಹುರುಪೊಂದಿದ ಮೈಯೊಳು ಬೆಮರು ನಿಂದು ಕನಿತು ಮಿಗೆ ಮಲವುಣ್ಮಲು (ನೇಮಿಸಂ. ೭-೧೦೨). ೩. ಸ್ರವಿಸು; ಸೋರು; ಜೋನಿಯಾಗು : ಅವಳ ಹಣೆಗೆ ಪೆಟ್ಟಾಗಿ ಕನಿದು ಹೋಯಿತು (ಒಡ್ಡ ಉ. ೧೨೭); ಬೆಲ್ಲ ಕನಿಯುತ್ತದೆ (ರೂಢಿ). [ದೇ. ‖ ತಮಿ. ಮಲ. ಕನಿ]

**ಕನಿ$_3$** (ನಾ). ೧. ಮಿಂಚು; ಹೊಳಪು; ಕಾಂತಿ : ಹಣಗಿ ಮಾಡುವದೇನು ? ದೊರೆವಂದು ದೊರೆ ನೀನು ಕನಿಯ ಬಿಳಿ ಹರಳ ಗಣಿಯೇ (ಉಯ್ಯಾಲೆ. ೧೧೨-೯). ೨. ಮರುಕ; ದಯೆ; ಕರುಣೆ. 'ಕನಿಮನೆ' ಪರಾ. [< ಕನಿ$_1$. / ತಮಿ. ಮಲ. ಕನಿವು]

**ಕನಿಕರ** (ನಾ). ಮರುಕ; ದಯೆ; ಕರುಣೆ : ಆ ಹುಡುಗನನ್ನು ಕಂಡು ಕನಿಕರವೆನಿಸಿತು (ಮಹಾತ್ಮ. ೩೩).

[ದೇ. ‖ ತಮಿ. ತುಳು. ತೆಲು. ಕನಿಕರ]

**ಕನಿಕರಿಸು** (ಕ್ರಿ). ದಯೆ ತೋರು; ಅನುಕಂಪೆ ತೋರು : ಪೀಡಿತರ ನಿನಿಸು ಕನಿಕರಿಸದವ ಹೊಲೆಯ (ಗೀವಿಂ. ೧೬-೫); ಸಿದ್ಧಿವಿನಾಯಕ ಕಬ್ಬಿಗನನು ಕನಿಕರಿಸು (ಇಂಚಾಪ. ೩-೨).

[ಕನಿಕರ + -ಇಸು$_3$. / ತೆಲು. ಕನಿಕರಿಂಚು]

**ಕನಿಕಿಸು** (ಕ್ರಿ). ಹಿಂದು ಮುಂದು ನೋಡು; ತಡಮಾಡು (?) : ಕನಸಿನೊಳಾದರು ನಾ ಬಿಡೆ ಕನಿಕಿಸದೀ ಕ್ಷಣದಿ ಪಿರಿಯ ಧನ ಸುರಿಯುವುದೈ (ಹಮುಚ. ೮೭).

[?]

**ಕನಿಮನೆ** (ನಾ). ಕರುಣೆಯ ನೆಲೆ; ದಯೆಯ ಆಗರ : ತಾಯಿ ಕನಿಮನೆಯೇ ನೀ ಅಕ್ಕ ಅಕ್ಕರತೆಯೇ (ಗರಿ. ೭-೧). [ಕನಿ$_3$ + ಮನೆ]

**ಕನಿಲ್** (ನಾ). ಕರುಣೆ (?) : ಕನ್ನೆಯರು ಕನಿಲ ಪುಯ್ಯಲ ಮಾಡಲವರನು ಮನದೊಳಚ್ಚರಿವಟ್ಟು ಕೇಳ್ದನು (ಫಣಿಚ. ೪-೭೬). [< ಕನಿ$_3$]

**ಕನಿಷ್ಟ** (ಗು). ತೀರ ಅಲ್ಪವಾದ; ಅತ್ಯಂತ ಕೆಳಮಟ್ಟದ; ಅತಿ ಕಡಮೆಯ : ಅಜಿಯೊಳುರ್ಚಿ ಕೈದುವಂ ಪಿಡಿವವರೆಲ್ಲಮಣ್ಮುವೊಡಮಾಯುಗಮೇಕೆ ಕನಿಷ್ಟಮಪ್ಪುದೋ (ಕಾವ್ಯಸಾ. ೪೨೩ ಶೂದ್ರಕ); ವಿಷಧರಂಗಳ ತೊಡಿಗೆಯಿಂದಾಂ ಕನಿಷ್ಟವೇ (ವಾಗೀರ. ದೇ. ೨೭೧-೧೧).

[< ಸಂ. ಕನಿಷ್ಠ]

**ಕನಿಷ್ಠ** (ಗು). ೧. = ಕನಿಷ್ಟ. (ನಾ). ೨. ಅತಿ ಹೀನನಾದವನು; ಅತ್ಯಂತ ಕೆಳಮಟ್ಟದವನು : ಮಾತಿನಲ್ಲಿ ಕರ್ಕಶ ಮನದಲ್ಲಿ ಘಾತಕತನವುಳ್ಳವನ ಕನಿಷ್ಠವೆಂಬರು (ಅಖಂಡೇ. ೯೯-೨೫); ಕೀಳು ಅಂತ ಆಗದೆ ಅವರು ಕನಿಷ್ಠರು ಅಂತ ಆಗುತ್ತಲೇ ಇರಲಿಲ್ಲ (ಮುನಿಮಾ. ೧೨). ೩. ಚಿಕ್ಕವನು; ಕಿರಿಯ; ತಮ್ಮ; ಅನುಜ : "ಕನಿಷ್ಠಃ, ಅವರಜಃ, ಅನುಜಃ - ಈ ೩ ತಮ್ಮಂ" (ಹಲಾಯು. ೮೩-೩೫೧); ನಾನು ಕೂಡ ಕನಿಷ್ಠನನ್ನು ಅಪೇಕ್ಷಿಸುತ್ತೇನೆ (ಭಾಸನಾ. ೭-೧೦).

**ಕನಿಷ್ಠಪಕ್ಷ** = ಕಡೆಯ ಪಕ್ಷ; ತೀರ ಕಡಮೆಯೆಂದರೆ; ಏನಿಲ್ಲೆಂದರೂ: ಬಮ್ಮಲದೇವಿಗೆ ಕನಿಷ್ಠಪಕ್ಷ ಆರುಮಂದಿ ಮಕ್ಕಳಿದ್ದರು ಎಂದಂತಾಯಿತು (ಸವಶಿ. IX. ಪ್ರಸ್ತಾವನೆ). **ಕನಿಷ್ಠಸಂಖ್ಯೆ** = ಅತ್ಯಂತ ಕಡಮೆ ಸಂಖ್ಯೆ. [ಸಂ.]

**ಕನಿಷ್ಠಂಬಿಸಿಗೆ** (ನಾ). ಪ್ರಭವ ಮೊದಲಾದ ಅರುವತ್ತು ಸಂವತ್ಸರಗಳಲ್ಲಿ ಪ್ಲವಂಗದಿಂದ ಕೊನೆಯ ಇಪ್ಪತ್ತು ಸಂವತ್ಸರಗಳ ಗುಂಪು. 'ಅಧಮಬಿಸಿಗೆ' ಪರಾ.

[ಕನಿಷ್ಠ + ಬಿಸಿಗೆ]

**ಕನಿಷ್ಠತೆ** (ನಾ). ಅತ್ಯಲ್ಪತೆ; ಅತ್ಯಂತ ಕೆಳಮಟ್ಟ : ಅಳಿಪಿನ ಕನಿಷ್ಠ [ಪಾಠಾಂ. ನಿಕೃಷ್ಟ]ತೆಯುಮನಭಿಮಾನದುನ್ನತಿಕ್ಕೆಯುಮಂ ಬಗೆವುದಲ್ತೆ (ಜೀವಸಂ. ೧೫೭-೧೪ ವ). [ಸಂ. ಕನಿಷ್ಠತಾ]

**ಕನಿಷ್ಠವೃತ್ತಿ** (ನಾ). ಹೀನವಾದ ವೃತ್ತಿ; ಕೀಳುದರ್ಜೆಯ ಜೀವನೋಪಾಯ : ತ್ರಿಶಂಕುವಿನ ನಂದನಗಂ ಋಣಮಾಗೆ . . . ಸುಡುಗಾಡನೆ ಕಾಯ್ದು ಕನಿಷ್ಠವೃತ್ತಿಯಿಂ ನವೆಯೆನೆ (ಕಱಕಂ. ೭೭).

[ಕನಿಷ್ಠ + ವೃತ್ತಿ]

**ಕನಿಷ್ಠಾಚರಣ** (ನಾ). ೧. ಹೀನವಾದ ನಡವಳಿಕೆ. ೨. ಹೀನನಾದವನ ನಡವಳಿಕೆ : ಬಿಡು ಕನ್ಯಾರತ್ನಮನೀಗಡೆ ಚಕ್ರಿ ಪದದ್ವಯಕೆ ತಡೆದಿರದೆಜಗೇ ಪಡೆಮಾತೊ ಬಂದು ಕಾಣ್ ಕಂಡೊಡೆ ಪಥ್ಯಮಪಥ್ಯಮೀ ಕನಿಷ್ಠಾಚರಣಂ (ಶಾಂತಿಪು. ೩-೮೯). [ಕನಿಷ್ಠ + ಆಚರಣ]

**ಕನಿಷ್ಠಿಕೆ** (ನಾ). ಕಿರುಬೆರಳು; ಕಿಬ್ಬೆರಳು. [ಸಂ. ಕನಿಷ್ಠಿಕಾ]

**ಕನಿಷ್ಠೆ** (ನಾ). ೧. ಅತಿಹೀನಳಾದವಳು; ಅತ್ಯಂತ ಕೆಳಮಟ್ಟದವಳು : ಕನಿಷ್ಠೆ ನಿಷ್ಠುರೆ ಮದೋದ್ಧತೆ ಸಂಚಳೆ . . . ದುರಾತ್ಮೆಯಪ್ಪ ವಧು ಸಜ್ಜನವೋ (ಮದಶಿ. ೮–೭). ೨. ಅತ್ಯಂತ ಕಿರಿಯಳು; ಎಲ್ಲರಿಗಿಂತ ಚಿಕ್ಕವಳು. ೩. ತಮ್ಮನ ಹೆಂಡತಿ. ೪. ಕಿರಿಯ ಹೆಂಡತಿ. ೫. ಕಿರುಬೆರಳು : "ಅಂಗುಷ್ಠಮೆನಲು ತರ್ಜನಿಯು ಮಧ್ಯಾಂಗುಲಿ ಪವಿತ್ರಂ ಕನಿಷ್ಠೆಯೆಂದೈದು ಬೆರಲಿಂಗೆ ಪೆಸರಕ್ಕು" (ಮಂಗರಾ. ೯೬–೧೦). ೬. [ಕಾವ್ಯಮೀ] ನಾಯಿಕಾ ಪ್ರಭೇದಗಳಲ್ಲಿ ಒಂದು : ಜ್ಯೇಷ್ಠೆ ಕನಿಷ್ಠೆಯರೆಂಬ . . . ವನಿತೆಯರಿಂ (ವಿವೇಕ. ೨೨೮). [ಸಂ. ಕನಿಷ್ಠಾ]

**ಕನಿಸ** (ಗು). ಕೀಳಾದ; ಅಧಮ : ಉತ್ತಮ ಮಧ್ಯಮ ಕನಿಸವಾಗಿ (ಸೌಇಎ. ೧೯೩೪, ಪುಂಗನೂ. ೧೫೬–೧೦ ; 1419). [< ಸಂ. ಕನಿಷ್ಠ]

**ಕನಿಸು** (ಕ್ರಿ). (ಕರಾ) ದೀಪ ಹೊತ್ತಿಸು, —ಉರಿಸು, —ಹಚ್ಚು : ಸಂಜೆಯಾಯಿತು, ದೀಪ ಕನಿಸು (ರೂಢಿ). [ಕನಿ$_1$ + –ಸು$_1$]

**ಕನೀನಿ** (ನಾ). ೧. ಕಿರುಬೆರಳು. ೨. ಕಣ್ಣುಗುಡ್ಡೆ ; ಕಣ್ಣಿನ ಪಾಪೆ. [ಸಂ. ಕನೀನೀ]

**ಕನೀನಿಕೆ** (ನಾ). ೧. ಕಿರುಬೆರಳು. ೨. ಕಣ್ಣಿನ ಪಾಪೆ; ಕಣ್ಣಾಲಿ; ಕಣ್ಣುಗೊಂಬೆ: "ಕನೀನಿಕೆಯುದಕ್ಷಿಮಧ್ಯಂ ತಾರೆಯೆನಲಾಲಿ" (ಮಂಗರಾ. ೯೩–೨) ; ಕತ್ತಲೊಳಗೆ ಹೊತ್ತುಗಳೆಯುವವನ ಕನೀನಿಕೆಗಳು ವಿಸ್ತೃತವಾಗಿ ಅವನ ಕಣ್ಣುಗಳಿಗೆ ಬೆಳಕು ದುಸ್ಸಹವಾಗುತ್ತದೆ (ಮುಂಬಯಿ. ೫–೧೭೧) ; ನಯನಕೆ ಕನೀನಿಕೆ ಸಲ್ಲೆನೆನ್ನುವುದೆ (ಹೆಬ್ಬೆರ. ೨೫–೫೦); ರೋಗಿಗೆ ಓದಲಾಗುವುದಿಲ್ಲ. ಕನೀನಿಕೆ (pupil) ಅಗಲವಾಗುತ್ತದೆ (ಕಲರೋ. ೨೨). [ಸಂ. ಕನೀನಿಕಾ]

**ಕನೀಯ, ಕನೀಯಾಂಸ** (ನಾ). ೧. ಕಿರಿಯವನು; ತಮ್ಮ: "ಅನುಜಂ ಕನೀಯನವರಜನೆನಲು ತಮ್ಮನೆಂದು" (ಮಂಗರಾ. ೯೨–೧೧) ; ಕೇಳಗ್ನಿಭೂತಿಯೆ ನಾನಗ್ರಜನೆಂ ಕನೀಯನೆ ಕಳಾಸಂಪನ್ನನೈ (ಸುಕುಮಾ. ೫–೨೪) ; ಜ್ಯಾಯನ ರಾಜ್ಯಮನಯ್ಯ ಕನೀಯನಪೇಕ್ಷಿಸುವುದುಚಿತಮಲ್ತು (ಪಂರಾಮಾ. ೬–೧೨೬). ೨. ಅಧಮ; ಹೀನ; ಅಲ್ಪ : ಈ ರೂಪೀ ಶುಭಲಕ್ಷಣವಾರಯ್ಯೆ ಕನೀಯರಪ್ಪರೊಳ್ ಸಮನಿಸದೀ ಭೂರಿಭುಜನುದ್ಘಂ (ನೇಮಿಪು. ೫–೪೬) ; ಆ ಮಹಾಸಾಮ್ರಾಜ್ಯದ ಮಹೋದಯಕ್ಕೆ ಕನೀಯವೂ ಅಜ್ಞಾತವೂ ಆದ ಕಂಪಿಲರಾಜ್ಯ ಪ್ರಮುಖಕಾರಣವಾಯಿತೆಂದರೆ ಯಾರಿಗಾದರೂ ಆಶ್ಚರ್ಯವಾದೀತು (ನಂಜುಂಡ.III, ಪ್ರಸ್ತಾವನೆ). **ಕನೀಯಾಂಸ** : ೧. ಜ್ಯಾಯಾಂಸ, ಕನೀಯಾಂಸ, ವಿದ್ವಾಂಸ (ಶಮದ. ೮೭ ಪ್ರಯೋ). [ಸಂ. ಕನೀಯಸ್]

**ಕನೀಯಸಿ** (ನಾ). ಕಿರಿಯಳು ; ತಂಗಿ. [ಸಂ. ಕನೀಯಸೀ]

**ಕನೀಯಾಂಸ** 'ಕನೀಯ' ನೋ.

**ಕನುಸುರಗಿಡ** (ನಾ). ಒಂದು ಬಗೆಯ ಗಿಡ : ಕನುಸುರಗಿಡ, ಹರಕೆ (ವೈಔಗಿ. ೭೮–೧೬೦೬). [?]

**ಕನೆ** (ನಾ). ಇನ್ನೂ ಕರುಹಾಕದ ಹಸು ; ಮಣಕ ; ಕಡಸು ; ಪಡ್ಡೆ : ಅವರ ಪುರುಳೆನಿಸಿದ ಆಕಳುಗಳಲ್ಲಿ – ಈದ ಆವು; ಕಟ್ಟಿದ ಆವು; ಕನೆಯ ಆವು; ಬೆದೆಯ ಆವು (ಭಾಷಾಶಾ. ೨೫೬). [< ಕನ್ನೆ]

**ಕನೆಕೆಂದಾಳ** (ನಾ). ಒಂದು ಬಗೆಯ ಔಷಧಿ ಗಿಡ : ಕೆಂದಾಳ, ಕನೆಕೆಂದಾಳ (ವೈಔಗಿ. ೫೬–೧೧೨೭). [?]

**ಕನ್ನ$_1$** (ನಾ). ೧. ಗೋಡೆಯಲ್ಲಿ ಕೊರೆಯುವ ಕಂಡಿ, —ರಂಧ್ರ, —ಸುರಂಗ: "ಸುರಂಗಾ, ಸಂಧಿಃ–ಈ ೨ ಕನ್ನಂ" (ಹಲಾಯು. ೧೨೭–೮೬); ಕನ್ನವನಿಕ್ಕುವೊಡವನೀಶೋನ್ನತ ನೆಲಗಟ್ಟು ವಜ್ರಮಯಮೇಱುವರಾರ್ (ಧರ್ಮಾಮೃ. ೬–೧೮) ; ತನ್ನವಸರಕ್ಕಾಗಿ ಹಗಲುಗನ್ನವನಿಕ್ಕಿದರೆ ಕನ್ನ ಸವೆಯಲಿಲ್ಲ ಕಳವು ದೊರೆಯಲಿಲ್ಲ (ಮಹಾದೇ. ಕ. ೧೨೬–೩೦೫); ಕನ್ನದಿಂ ದಾಱಿ ಬಾರದಂತೆ ಮುಚ್ಚುವ ಫಳಹಮಂ ಕನ್ನದೊಳ್ ಸಂಧಿಸಿದ ಕಲ್ಲಂ ತೆಗೆವಿಕ್ಕುೞಿಂ (ದಶಕು. ೮–೯೯) ; ತನ್ನ ಬೀಡಿಂಗಂ ಚೇಟಕಮಹಾರಾಜನರಮನೆಗಂ ಕನ್ನಮಂ ಕಟ್ಟಿ ಪಯಣಮಂ ಮಾಡ್ಪಲ್ಲಿ ಕನ್ನದಿಂ ಮೂವರು ಕುಮಾರಿಯರಂ ತೆಗೆದು ತರ್ಪುದುಂ (ಪುಣ್ಯಾಸ್ರ. ೩–೪೪ ವ) ; ಗರುಡನ ತಱವರಿ [ಪಾಠಾಂ. ೪]ಕೆಯೊಳು ಹಾವು ಕನ್ನವ ಕೊಱೆದು ಬದುಕುವುದೇ (ಕುವ್ಯಾವಿ. ೯–೭೪) ; ಹರಿಪುರದರಸ ಚರರಿಂದಱಿದು ಕನ್ನದೊಳುರುಳಿ ಪೋದಂ ನಿಜಕುಟುಂಬಂಬೆರಸು ನಿಸಿಯಲ್ಲಿ (ಜ್ಞಾನಚಂ. ೨–೫೨) ; ಮಾರಿಯ ಮನೆಗೆ ಹೋತ ಕನ್ನ ಕೊರೆದ ಹಾಗೆ (ಗಾದೆ). ೨. ಕಳವು : ಕನ್ನದೊಳ್ ಸತ್ತ ಕಳ್ಳನ ತಾಯಂತೊಳಗೊಳಗಱುತೆ (ಅರ್ಧನೇ. ೭–೧೨ ವ).

[ದೇ. ‖ ತಮಿ. ಮಲ. ಕನ್ನ; ತುಳು. ಕನ್ನ, ಕನ್ನೊ, ಗನ್ನೊ ; ತೆಲು. ಕನ್ನ]

**ಕನ್ನ$_2$** (ನಾ). ಕೆನ್ನೆ ; ಗಲ್ಲ ; ಕಪೋಲ (ಕ).

[ದೇ. ‖ ತಮಿ. ಮಲ. ಕನ್ನ]

**ಕನ್ನ$_3$** (ನಾ). ಕಿವಿ ; ಕರ್ಣ : "ಣತ್ವಕ್ಕೆ ನತ್ವಂ :— ಕರ್ಣ – ಕನ್ನ" (ಶಮದ. ೨೬೫ ಪ್ರಯೋ).

[< ಪ್ರಾ. ಕಣ್ಣ. / ಸಂ. ಕರ್ಣ]

**ಕನ್ನ$_4$** (ನಾ). ಕಪ್ಪು; ಕೃಷ್ಣವರ್ಣ. ೨. ಒಬ್ಬಾತನ ಹೆಸರು : ಶ್ರೀಪುರುಷರ್ ರಾಜ್ಯಂಗೆಯೆ ಕಂಸ್ನ ಅರಸ × × × (ಎಕ. XII, ತುಮಕೂ. ೯೧–೫ ; 780) ; ಕಾಕಂ ಬಾಚಿ ಕುಂಭಯ್ಯನುಂ ಆಸೂಗೊರ ಕನ್ನನುಂ (ಎಕ. XI, ಚಿತ್ರದು. ೭೪–೧೨ ; 968) ; ಮಹಾಸಾಮನ್ತಂ ಕನ್ನನ ಬಣ್ಣಂ (ಸೌಇಇ. XI–i, ೪೭–೭ ; 995).

[< ಪ್ರಾ. ಕಣ್ಹ. / ಸಂ. ಕೃಷ್ಣ]

**ಕನ್ನ$_5$** (ನಾ). ನೀಚ ; ಅಧಮ (?) : ಸುಣ್ಣ ಕರ್ದಮ ಕ್ಷೀರವನ್ನು ಕೂಡಿಸಿ ದಿವ್ಯಾನ್ನದೊಡ ಉಂಬೊ ಕನ್ನನಂತೆ ಕಾಣರೊ ಅನ್ಯಾಯವಾಹದು (ವಿಸಾಸು. ೫೮–೧). [?]

**ಕನ್ನಕಂಡಿ** 'ಕನ್ನಗಂಡಿ' ನೋ.

**ಕನ್ನಕತ್ತರಿ** 'ಕನ್ನಗತ್ತರಿ' ನೋ.

**ಕನ್ನಕಳವು** 'ಕನ್ನಗಳವು' ನೋ.

**ಕನ್ನಕೈರ** (ನಾ). (?) : ಅಭಿಮಾನಮನ್ದರ ವಿಭವ ಪುರಂದರ ಸರಸ್ವತೀಗಣಲಲಾಟಪಟ್ಟ ಕನ್ನಕೈರದಿಶಾಪಟ್ಟ ವಾಜಿಕುಳಾಂಬರದ್ಯುಮಣಿ ಬನ್ಧುಜನ ಚಿನ್ತಾ[ಮ]ಣಿ ಶ್ರೀಮತ್ತ್ರಿಭುವನಮಲ್ಲದೇವ ಪದಾರಾಧಕಂ (ಸೌಇಇ. XX, ೬೯–೧೯ ; 1107). [?]

**ಕನ್ನಕ್ಕಿ** 'ಕನ್ನಿಕೆ$_1$' ನೋ.

**ಕನ್ನಗಂಡಿ, ಕನ್ನಕಂಡಿ** (ನಾ). ಕಳವುಗಂಡಿ; ಸುರಂಗಮಾರ್ಗ: ಕನ್ನಗಂ[ಪಾಠಾಂ. ಕಂ]ಡಿಯ ಕಟ್ಟಿಕೊಂಡು ನೇಮಿಯ ದಂಡ ಬನ್ನಬಡಿಸಬೇಕು (ಕುರಾಸಾಂ. ೧೯–೬೬). **ಕನ್ನಕಂಡಿ** : ನೆಲನ ಕೊಡಡೆ ಮಂತ್ರಿ ಕನ್ನಕ[ಪಾಠಾಂ. ಖ]ಂಡಿಗಳೆಡೆಗಳೊಳು ಬಲಿದನು ಮಂದಿಯನು (ಕುರಾಸಾಂ. ೩೯–೫). [ಕನ್ನ$_1$ + ಕಂಡಿ$_1$]

**ಕನ್ನಗತ್ತರಿ, ಕನ್ನಕತ್ತರಿ** (ನಾ) ಗೋಡೆಯಲ್ಲಿ ಕನ್ನ ಕೊರೆಯುವ ಕತ್ತರಿ; ಕನ್ನ ಹಾಕುವ ಸಾಧನ : ಅವನ ಬಾಯಲ್ಲಿ ಮಾತು ಬಲುಸವಿ; ಕಯ್ಯಲ್ಲಿ ಮಾತ್ರ ಕನ್ನಗತ್ತರಿ ಕೆಲಸ ! (ಕೃಷ್ಣಭೂ. ೮೯) ; ಕನ್ನಗತ್ತರಿ, ಮಂಕುಬೂದಿ ಎಲ್ಲಿ ? (ತುಂಗಭ. ೩೩). **ಕನ್ನಕತ್ತರಿ** : ಈ ಆಕರ್ಷಣದಲ್ಲಿ ದೇಶವ್ಯಾಪಿಯಾದ ಮನುಷ್ಯನ ಕನ್ನಕತ್ತರಿ, ವಿಶ್ವಭಾಂಡಾರದ ಗೋಡೆಯಲ್ಲಿ ಕನ್ನಹಾಕಲು ಯತ್ನಿಸುತ್ತಿದೆ (ನಿಬಂಧ. II, ೨೦೯).

[ಕನ್ನ$_1$ + ಕತ್ತರಿ$_2$]

**ಕನ್ನಗತ್ತಿ** (ನಾ). = ಕನ್ನಗತ್ತರಿ: "ಭಿತ್ತಿಭಿನ್ನಂ ಕನ್ನಗತ್ತಿ" (ಮಂಗರಾ. ೬೭-೫); ಅಜಿದು ಬೆರೆದರೆ ಕನ್ನಗತ್ತಿಯಲ್ಲಿ ಕಿವಿಮೂಗ ಕೊಯ್ವಿರೆಯ್ಯ ಒಲ್ಲೆನೊಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ (ವಚಶಾ. I, ೩೧೩); ಚೋರತ್ವದಿಂ ಧನಮನರ್ಜಿಸಲ್ ನೆನವುತಂ . . . ಕನ್ನಗತ್ತಿಯ ನೊಪ್ಪದಿಂ ಪಿಡಿದು ಬೇಗದಿಂ (ಪೆರುರ. ೧೩೫-೧); ಉರ್ಬಿದ ಮರ್ಬಿನೊಳ್ ನಿರಾಕುಳಮೆನೆ ಕನ್ನಗತ್ತಿಸಹಿತಂ ಪೂಜಿಮುಟ್ಟಿಂ (ದಶಕು. ೮-೯೯); ತಮ್ಮ ಕೈಯೊಳಗಿನ ಕನ್ನಗತ್ತಿಯಿಂದ ಇವರನ್ನು ಇರಿದು (ಮುಂಬಯಿ. ೩-೯೪). [ಕನ್ನ$_1$ + ಕತ್ತಿ]

**ಕನ್ನಗಳವು, ಕನ್ನಕಳವು** (ನಾ). ೧. ಕನ್ನ ಕೊರೆದು ಮಾಡುವ ಕಳವು; ಕನ್ನಹಾಕಿ ಕದಿಯುವಿಕೆ: ಕನ್ನದ ಬ್ರಹ್ಮಯ್ಯನೆಂಬ ಶರಣನು ಕನ್ನವನಿಕ್ಕಿ ಧನವ ತಂದು ಜಂಗಮಾರ್ಜನೆಯ ಮಾಡುವಲ್ಲಿ ತಮ್ಮ ಕನ್ನಗಳವಿನ ಮುಸ್ತಯಿದೆ ಸಹವಾಗಿ ಪೋಗುವಲ್ಲಿ (ಭೈರಸೂ. ೩೯೯); ತನ್ನ ಮಾತಾಪಿತರ ಬಗೆಯದೆ ನಿರಂತರಂ ಕನ್ನಗಳವಂ ಮಾಡುತಿರಲ್ (ಕೊಟ್ಟೂ ಬ. ೪-೪೪). ೨. ಕನ್ನಹಾಕಿ ಕದ್ದು ತಂದದ್ದು; ಕಳವಿನ ವಸ್ತು: ಆಳುಕದೊರ್ವ ಚರನು ಕನ್ನಗಳವು ತಂದು ಎನ್ನ ಮುಂದೆ ಇಳುಹಿಕೊಂಡು ಇರಲು (ಸುಸಾರ. ೭೭-೨). **ಕನ್ನಕಳವು**: ೧. ಮಾರ್ಜಾಲಂ ಕೆಲದಿನದೊಳ್ ಗತಜೀವಂಬಡೆದಾ ನಾಡೊಳ್ ದುರ್ಮತಿ ವಿದ್ಯುಚ್ಚರವೆಸರೊಳ್ ಜನಿಯಿಸಿ ಕನ್ನಕಳಂ[ಕಳವು]ಗಲ್ತು (ಜಯಕಾ. ೧೩-೩೮). [ಕನ್ನ$_1$ + ಕಳವು. / ತಮಿ. ಕನ್ನಕ್ಕಳವು]

**ಕನ್ನಗಳ್ಳ** (ನಾ). ಕನ್ನಹಾಕಿ ಕಳವು ಮಾಡುವವನು: "ನಿಶಿಚರಂ ಕನ್ನಗಳ್ಳಂ" (ಮಂಗರಾ. ೬೭-೫); ಬೆಂಬಲಮಿಲ್ಲದ ಕನ್ನಗಳ್ಳನಂತೆ ಜೋವಂ ಬೊತ್ತಿರ್ಪನಂ (ಶಾಂತಿಪು. ೪-೩೦ ವ); ಬಣ್ಣ ಬಜ್ಜವಣೆಯಲ್ಲಿ ನಡೆವ ಕನ್ನಗಳ್ಳರ ಶೀಲ ಇಲ್ಲಿಗೆ ಅಲ್ಲಿಗೆ ಮತ್ತೆಲ್ಲಿಗೂ ಇಲ್ಲ (ಏಲೇಶ್ವ. ೧೨೪); ಕನ್ನಗಳ್ಳನ ಮನೆಯಲ್ಲಿ ಬಟ್ಟಲು ಹೋಗಿ ಮಜುಗುವಂತೆ (ಅವಜಂ. ೨೯-೧೨೨); ಜವನೆಂಬ ಕನ್ನಗಳ್ಳಂ ತವಕದೊಳಸುವೆಂಬ ಧನವನೊಯ್ಯದೆ ಮಾಣಂ (ನೀತಿಸಾ. ೪೨೭). [ಕನ್ನ$_1$ + ಕಳ್ಳ$_1$]

**ಕನ್ನಗಾರ** (ನಾ). = ಕನ್ನಗಳ್ಳ: ಈ ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಕಳ್ಳರು, ಕನ್ನಗಾರರು, ತಲೆತಿರುಕರು, ಹಾವು, ಹುಲಿ . . . ಇವೇ ತುಂಬಿ ಹೋಗಿವೆ (ಇಪ್ಪಕ. ೩೭).

[ಕನ್ನ$_1$ + -ಕಾರ (< -ಕಾಜ). / ತಮಿ. ಮಲ. ಕನ್ನಕ್ಕಾರ]

**ಕನ್ನಗೊಯ್ಕ** (ನಾ). ಕನ್ನ ಕೊರೆಯುವವನು: ಕನ್ನಗೊಯ್ಕರ ವೋಲು ರಾತ್ರಿಯೊಳು ಸೇನೆಯಂ ಗನ್ನಕತಕದಿ ಕೊಂದ ರಕ್ಕಸನ ಸಾಹಸಗಳನ್ನು ಪೊಗಳಿದೆ (ತುರಂಗ. ೫೭-೯೯). [ಕನ್ನ$_1$ + ಕೊಯ್ಕ]

**ಕನ್ನಘಾತಕ** 'ಗನ್ನಗತಕ' ನೋ.

**ಕನ್ನಡ$_1$** (ನಾ). ೧. ಕರ್ನಾಟಕದೇಶ; ಕನ್ನಡ ಭಾಷೆಯನ್ನು ಮಾತನಾಡುವವರ ನಾಡು: "ಕನ್ನಡಮೇ ಕರ್ನಾಟನಾಮಂ" (ಕರ್ಣಾನಿ. ೪೧); "ಕನ್ನಡವೆ ಕರ್ಣಾಟಕಂ" (ಕಶರ. ೨೧); ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ (ಕವಿರಾ. ೧-೩೬); ಮಾಳವ ಮಗಧ ಕಾಶ್ಮೀರ . . . ಕನ್ನಡ ವಂಗ ಚೌಟ ಹೊಯ್ಸಳ ಮಲೆಯಾಳ ದೇಶಂಗಳೊಪ್ಪಿದುವು (ಮೋಹತ. ೨-೧೪); ಇಕ್ಕೇರಿಯ ಸೆಳೆದಾಗ ತುರುಕರ ಪಡೆ ನಡೆದುದು ಕನ್ನಡಕೆ (ಕಂನವಿ. ೧೧ ಸೂಚನೆ). ೨. ಕರ್ನಾಟಕದ ಭಾಷೆ; ದ್ರಾವಿಡ ಭಾಷೆಗಳಲ್ಲಿ ಒಂದು: ಸಮಸಂಸ್ಕೃತಂಗಳೊಳ್ ತಳ್ತಮರ್ದಿರೆ ಕನ್ನಡ ಮನಜಿದು ಪೇಟ್ಗೆಂಬುದಿದಾಗಮಕೋವಿದನಿಗದಿತಮಾರ್ಗಂ (ಕವಿರಾ. ೧-೫೧); ಸಕ್ಕದ ಕನ್ನಡಮೆಂಬೆರಡುಂ ಕವಿತೆಯನಮಳ್ವೆತ್ತಂತಿರೊಡನಡಪಿದಂ ಕುರುಳ್ಗಳ ಸವಣಂ (ಶಾಂತಿಪು. ೧-೧೦); ಕನ್ನಡದೊಳ್ಪಿನ [ಪಾಠಾಂ. ಬೆಳತಿನ]ನುಡಿಯಂ ಮುನ್ನಿದಜಿಕೊಳೆ ನೋಡಿ ತಿಳಿದುಕೊಳ್ವುದು ಚದುರಂ (ಕಬ್ಬಕಾ. ೭); ಕನ್ನಡಮೊಳಗೊಂದು ಕಥೆಯ ಪೇಳುವೆನದು ನಿನ್ನಾಜ್ಞೆ ಕಂಡಾ ನನ್ನೊಡೆಯ (ಭರಚ. ೧-೫); ಕನ್ನಡಕೆ ಹೋರಾಡು ಕನ್ನಡದ ಕಂದಾ ಕನ್ನಡವ ಕಾಪಾಡು ನನ್ನ ಆನಂದಾ (ಕೋಗಿಲೆ. ೪೭). ೩. ಕನ್ನಡ ನುಡಿಯ ಪ್ರಭೇದಗಳಲ್ಲಿ ಒಂದು: ನೆಗಟ್ದಿರ್ದ ಕನ್ನಡಂಗಳೊಳಗಣಿತ ಗುಣವಿದಿತಸಂಸ್ಕೃತೋಕ್ತ ಕ್ರಮಮಂ ಬಗೆದೊಂದುಮಾಡಿ ಪೇಟ್ದೊಡೆ ಸೊಗಯಿಸುಗುಂ ಕಾವ್ಯಬಂಧಂ (ಕವಿರಾ. ೧-೫೭); ಅಗ್ಗದ ಕನ್ನಡಂಗಳಿಂ ಬಾಸಣಮಾಗೆ ಪೇಟ್ದ ನೊಲವಿಂ (ಕಬ್ಬಿಕಾ. ೩೪೮); ಸಂದಿರ್ದಾ ಬಹುಭೇದ ಕನ್ನಡಗಳಂ ಬಲ್ಲಂ ಕವೀಶಂ ದಿಟಂ (ಕವಿಜ. ೪-೩). ೪. ಒಂದು ನಾಡಿನ ಅಥವಾ ಮಂಡಲದ ಹೆಸರು: ಕಂನಡ ನಾಲ್ಕು ಸಾಸಿರದ ಮುಂಮುಜಿದಂಡಂಗಳಿಗೆ ಮುಖ್ಯರಪ್ಪ ಶೈವರ ದೇವಿಸೆಟ್ಟಿಯರು (ಎಕ. XI, ದಾವಣ. ೩-೩೪; 1121). ೫. ಕನ್ನಡ ಭಾಷೆಯನ್ನು ಮಾತನಾಡುವ ಜನ: ಕಲ್ಲ ಬಾಲೆಯಾಗಿ ಬಿದ್ದಳಿಲ್ಲಿ ಕನ್ನಡರ ಕೈಗೆ ನವಶಿಲ್ಪ ಶಾಲೆಯಾಗಿ (ಸೂರ್ಯಪಾ. ೫೮-೪). ೬. ಒಂದು ಕುಲ ಅಥವಾ ವಂಶದ ಹೆಸರು. 'ಕನ್ನಡ ಶಾಖೆ' ಪರಾ. ೭. [ಸಂಗೀತ] ಒಂದು ರಾಗದ ಹೆಸರು: ಕನ್ನಡ-೨೯ನೇ ಮೇಳಕರ್ತ ಧೀರಶಂಕರಾಭರಣದಲ್ಲಿ ಜನ್ಯ. ಔಡವ ವಕ್ರ ಷಾಡವರಾಗ (ಸಂಗೀತಂ. ೧೪೭).

**ಕನ್ನಡದ ಖಗ** = ಗಿಳಿ; **ಕನ್ನಡವಕ್ಕಿ**: ಸನ್ನೆವಾತಿನ ಸತಿಯರೋದದ ಕನ್ನಡದ ಖಗ ಮೊರೆಯದಾಜಿಡಿಯುಂ ನಡೆಯದರಸಂಚೆ . . . ಎರಲೆಗಳ್ಪುಲ್ದಿನ್ನದಿಹವಾಯಕನ ಚಿಂತಾಲಯದೊಳು (ಮದೇಪು. ೫-೫೨).

**ಕನ್ನಡಸಂಧಿವಿಗ್ರಹಿ** = ಸಂಧಿವಿಗ್ರಹಕಾರ್ಯಕ್ಕೆ ನಿಯುಕ್ತನಾದ ಕನ್ನಡದೇಶದ ಅಧಿಕಾರಿ: ಶ್ರೀಮತ್ ಕನ್ನಡಸನ್ಧಿ(ನ್ಧಿ)ವಿಗ್ರಹಿ ದಣ್ಣನಾಯಕಂ ಚಾವಣರಸರ್ (ಎಇ. XVI, ೭೮-೨೭; 1037); ಕಡಿತವೆರ್ಗ್ಗಡೆ ಕನ್ನಡಸಂಧಿವಿಗ್ರಹಿ ದಂಡನಾಯಕಂ ಕಾಳಿಮರಸರ್ (ಕಇಆ. ೧-೧-೪; 1097); ಶ್ರೀಮನ್ಮಹಾಪ್ರಧಾನಂ ಕನ್ನಡಸಂಧಿವಿಗ್ರಹಿ ಮನೆವೆರ್ಗ್ಗಡೆ ದಂಡನಾಯಕ ಮಹಾದೇವಯ್ಯಗಳು (ಎಇ. XIII, ೪೮-೭೨; 1112). [?]

**ಕನ್ನಡ$_2$** 'ಕಣ್ಣಡ' ನೋ.

**ಕನ್ನಡಂಗೊಳಿಸು** (ಕ್ರಿ). ಕನ್ನಡಕ್ಕೆ ಅಳವಡಿಸು, —ಹೊಂದಿಸು: ಕನ್ನಡಗಬ್ಬಮಂ ಬಳಕೆಗನ್ನಡದಿಂದಲೆಗೆಯ್ವುದೇಕೆಯೋ ಮುನ್ನಿನ ಕನ್ನಡಂಗೊಳಿಸಿ ಪೇಟ್ವುದು (ಮೈಸೂಮ. ೧-೯). [ಕನ್ನಡ$_1$ + ಕೊಳ್$_1$ + -ಇಸು$_3$]

**ಕನ್ನಡಕ$_1$** 'ಕಣ್ಣಡಕ' ನೋ.

**ಕನ್ನಡಕ$_2$** (ನಾ). ದೃಷ್ಟಿದೋಷಕ್ಕಾಗಿ ಕಣ್ಣಿಗೆ ಹಾಕಿಕೊಳ್ಳುವ ಗಾಜಿನ ಸಾಧನ; ಚಾಳೀಸು; ಸುಲೋಚನ: ತಮ್ಮ ಕನ್ನಡಕವನ್ನು ಕೈವಸ್ತ್ರದಿಂದ ಒರೆಸುವ ನೆವದಲ್ಲಿ ತಮ್ಮ ಕಣ್ಣುಗಳನ್ನೂ ಒರೆಸಿಕೊಂಡರು (ಹೊಸಕ್ಷಿ. ೧); ಉಟ್ಟ ಸೀರೆಯು ಕಪ್ಪು ತೊಟ್ಟ ರವಿಕೆಯು ಕಪ್ಪು . . . ಕನ್ನಡಕವು ಕಪ್ಪು ಕೈಬಳೆ ಸಹ ಕಪ್ಪು (ಇಂಚಾಪ. ೮೭-೨೩).

[<ಕಣ್ + ಅಡಕ$_1$. / ತಮಿ. ಕಣ್ಣಾಡಿ, ಕಣ್ಣಡಿ; ಮಲ. ಕಣ್ಣಡ; ತುಳು. ಕನ್ನಡಕೊ]

**ಕನ್ನಡಗಬ್ಬ** (ನಾ). ಕನ್ನಡ ಕಾವ್ಯ; ಕನ್ನಡದಲ್ಲಿ ರಚಿಸಿದ ಕಾವ್ಯ: ಮಿಗೆ ಕನ್ನಡಗಬ್ಬಂಗಳೊಳಗಣಿತಗುಣ ಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸುವರ್ (ಕವಿರಾ. ೧-೨೭); ಇವನಜಿವರೆ ಕನ್ನಡಗಬ್ಬದೊಳ್ ತೊಡಂಕದೆ ಸಲ್ವರ್ (ಶಮದ. ೪೮). [ಕನ್ನಡ$_1$ + ಕಬ್ಬ$_1$]

**ಕನ್ನಡಗವಿತೆ** (ನಾ). = ಕನ್ನಡಗಬ್ಬ: ಕನ್ನಡಗವಿತೆಯೊಳಸಗಂಗನ್ನೂರ್ಮಡಿ (ಶಾಂತಿಪು. ೧-೧೧). [ಕನ್ನಡ$_1$ + ಕವಿತೆ]

**ಕನ್ನಡಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು : ಕನ್ನಡ ಗೌಳ . . . ಮೋಹನಗೌಳಂಗಳೆ ಗೌಳಮಿಶ್ರಂಗಳು (ವಿವೇಕ. ೨೩೫). [ಕನ್ನಡ$_1$ + ಗೌಳ]

**ಕನ್ನಡತನ** (ನಾ). ಕನ್ನಡದ ಗುಣ, —ಸತ್ತ್ವ, —ವೈಶಿಷ್ಟ್ಯ : ಭಾಷೆಯ ಕನ್ನಡತನವನ್ನು ಕಾಯ್ದು ಯಾವ ಪ್ರಯೋಗಗಳನ್ನೂ ಇಲ್ಲಿ ಮಾಡಬಹುದಾಗಿದೆ (ನವ್ಯಕಾ. ೪೪); ಗೆಲ್ಲಲಿ ಸತ್ಯವು ಗೆಲ್ಲಲಿ ಧರ್ಮವು ಗೆಲ್ಲಲಿ ಕನ್ನಡತನವು (ಇಂಚಾಪ. ೬೨-೯೯). [ಕನ್ನಡ$_1$ + -ತನ]

**ಕನ್ನಡವಕ್ಕಿ**, ಕನ್ನಡಹಕ್ಕಿ (ನಾ). ಗಿಳಿ; ಗಿಣಿ : "ಕನ್ನಹವಕ್ಕಿ, ಪಂಡಿತ ವಕ್ಕಿ – ಈ ೨ ಗಿಳಿ" (ಕಶಸಾ. ೧೦-೨೦೧); "ಕನ್ನಡವಕ್ಕಿಯುಮೆಂದುಜಿಕೆ ಪಂಡಿತವಕ್ಕಿ ಗಿಳಿಯುಮೆನೆ ಶುಕಮಕ್ಕುಂ" (ಕವಿಕಂ. ೬೭); ಮುದದಿಂದಂ ಕನ್ನಡವಕ್ಕಿಯ ಪಂಜರಮಂ ತಡೆಯದೆ ತಂದವನಿಪತಿಯ ಮುಂದಿಟುವುವುದುಂ (ಕಾದಂಪೂ. ೮೨); ಉಲಿವಾ ಕನ್ನಡವಕ್ಕಿಯ ನೋದಿಸುತಲೆಸೆದಳ್ (ಉದ್ಭಟ. ೧೦-೫೧); ಮಾಣಿಕದ ಬಣ್ಣದ ಕನ್ನಡ ವಕ್ಕಿ ಪಚ್ಚೆವಣ್ಣದ ಕಳಹಂಸೆ ಚಿತ್ರಿಸಿದರೋ ಬಿನದಕ್ಕೆನೆ (ಅನಂಪು. ೧೦-೨೫); ತೊಲಗದೆ ಪಕ್ಕದೊಳ್ ನಲಿವ ಕನ್ನಡವಕ್ಕಿಗಳೋಳಿ (ಕಬ್ಬಿಕಾ. ೧೨೮); ನಲಿದಾಡುವ ಕನ್ನಡವಕ್ಕಿ (ಶಬ್ದಾನು. ೯೬ ವ್ಯಾಖ್ಯಾ). **ಕನ್ನಡ ಹಕ್ಕಿ** : ಕನ್ನಡಹಕ್ಕಿಯಂಗವ ಹೊಕ್ಕು ನಿಜರೂಪ ನನ್ನಲ್ಲಿ ಕುಸುಮಾಜಿ ಮಾಜಿ ನಿನ್ನೊಡನುಸುರುತಿದ್ದೆನು (ಭರಚ. ೭-೫೫). [ಕನ್ನಡ$_1$ + ಪಕ್ಕಿ$_1$]

**ಕನ್ನಡವರಾಳಿ** (ನಾ). [ಸಂಗೀತ] ವರಾಳಿ ರಾಗದ ಉಪಾಂಗರಾಗ ಗಳಲ್ಲಿ ಒಂದು: ಸಿಂಧುವರಾಳಿ ಕನ್ನಡವರಾಳಿ ದ್ರಾಮಿಡವರಾಳಿ ಪ್ರಥಮವರಾಳಿಯೆಂಬ ನಾಲ್ಕು ರಾಗಂಗಳುಂ ಉಪಾಂಗವರಾಳಿಗಳು (ವಿವೇಕ. ೨೩೪). [ಕನ್ನಡ$_1$ + ವರಾಳಿ]

**ಕನ್ನಡವಾತು** (ನಾ). ಕನ್ನಡ ಮಾತು, —ನುಡಿ : ಸಕ್ಕದದೊಳು ಕನ್ನಡವಾತಂ ಸಮಚಿತ್ ಬೆರಸಿ ಜಯನೃಪಚಾರಿತ್ರಮನೋತುಸಿರ್ದಂ (ಜಯಕಾ. ೧-೨೩). [ಕನ್ನಡ$_1$ + ಮಾತು$_1$]

**ಕನ್ನಡವೀಣೆ** (ನಾ). ವೀಣೆಗಳಲ್ಲಿ ಒಂದು ಪ್ರಕಾರ: ಕಾರ್ಕರಿ ವೀಣಾ, ಕನ್ನಡವೀಣಾ ಮುಂತಾದ ತಂತೀವಾದ್ಯಗಳೂ . . . ಹೆಸರಿಸಲ್ಪಟ್ಟಿವೆ (ಸಂಗೀಚಂ. ೧೦೮). [ಕನ್ನಡ$_1$ + ವೀಣೆ]

**ಕನ್ನಡಶಾಖೆ** (ನಾ). ೧. ವೈದಿಕರಲ್ಲಿ ಒಂದು ಶಾಖೆ : ಕಂನಡ ಶಾಖೆಯ ವಿಶ್ವಾಮಿತ್ರಗೋತ್ರದ ವಿಷ್ಣುದೀಕ್ಷಿತರು (ಎಕ. VII, ಶಿಕಾರಿ. ೧೨-೧೪; 1192). ೨. ಕನ್ನಡದ ವಿಭಾಗ; ಕನ್ನಡ ಅಧ್ಯಯನ, ವ್ಯವಹಾರಗಳ ವಿಭಾಗ. [ಕನ್ನಡ$_1$ + ಶಾಖೆ]

**ಕನ್ನಡಹಕ್ಕಿ** 'ಕನ್ನಡವಕ್ಕಿ' ನೋ.

**ಕನ್ನಡಿ$_1$** (ನಾ). ಪ್ರತಿಬಿಂಬವನ್ನು ತೋರಿಸುವ ಕಂಚು, ರತ್ನ ಅಥವಾ ಗಾಜಿನ ಸಾಧನ; ಮುಕುರ; ದರ್ಪಣ : "ದರ್ಪಣಃ, ಮುಕುರಃ, ಆದರ್ಶಃ ಈ ೩ ಕನ್ನಡಿ" (ನಾಚರಾ. ೧೨೫); "ಕೈಪಿಡಿಯೆಂದು ಕನ್ನಡಿ" (ಕಶಸಾ. ೨೮-೬೦೧); ಕನ್ನಡಿ ಕಮನೀಯಾಕಾರಬಿಂಬಮುಂ ತಾಳ್ದುವವೊಲ್ (ಕವಿರಾ. ೩-೧೪೨); ಸುವರ್ಣಪೂರ್ಣಕಳಶಮುಂ ಕನ್ನಡಿಯುಂ ಪೂವುಮುಕ್ಕಿಯುಂ (ವಡ್ಡಾರಾ. ೭೮-೭); ಕಿಲುಂಬು ಗೊಂಡ ಕನ್ನಡಿಗೆಣೆಯಾಯ್ತು ಭಾನುವಳಯಂ (ಪಂಪಭಾ. ೬-೩೬); ಕರಿಯು ಕನ್ನಡಿಯೊಳಗಡಗಿದಂತಯ್ಯಾ ಎನ್ನೊಳಗೆ ನೀನಡಗಿದೆ (ಬಸವ. ೯೦೩); ಕೋಡಗಡ ಮೊಗಸಿರಿಗೆ ಕಾವಲಿಯೋಡು ಕನ್ನಡಿಯಾಯ್ತು (ಕುವ್ಯಾಕ. ೯-೧೫); ಮಂಚ ಬಾರದು ಮಡದಿ ಬಾರಳು ಕಂಚು ಕನ್ನಡಿ ಬಾರದು (ಪುರಂದ. ೩-೨೧೦-೧); ವರ ಕಾಂಚನಾದ್ರಿ ಕನ್ನಡಿಯೊಳಗೆಷ್ಟು ತೋರ್ಪ[ರ್ಪು]ದವಧಾರಿಸು (ರತ್ನಾಶ. ೧೨೪); ಅಂಗೈ ಹುಣ್ಣಿಗೆ ಕನ್ನಡಿ ಯೇಕೆ? (ಗಾದೆ). 'ಭೂತಗನ್ನಡಿ', 'ರಾವುಗನ್ನಡಿ' ಪರಾ.

**ಕನ್ನಡಿಯ ಗಂಟು** = (ಆಲಂ) ಕೈಗೆ ದಕ್ಕದ ವಸ್ತು : ಕಪಿಯರಸನೊಳು ನಂಟದಾಯ್ತು ಕನ್ನಡಿಯ ಗಂಟು (ವೆಂಕಾರಾ. ೪-೧೪-೩). [ದೇ. ‖ ತಮಿ. ಕಣ್ಣಾಡಿ, ಕಣ್ಣಾಡಿ; ಮಲ. ಕಣ್ಣಾಡಿ; ತುಳು. ಕಣ್ಣಾಡಿ, ಕನ್ನಡಿ, ಕನ್ನಟ್ಟಿ, ಕನ್ನೆಟ್ಟಿ; ಕೊಡ. ಕನ್ನಡಿ]

**ಕನ್ನಡಿ$_2$** (ನಾ). ಕಣ್ಣು ಗುಳಿಯಾಗುವಿಕೆ; ಕಣ್ಣಿನ ಅಡಿ (?): ಪೊಟ್ಟೆ ಪೊಟ್ಟಣಿ(ಳಿ)ಸೆ ಕನ್ನಡಿ ಗಂಟಲೆ ಕೆತ್ತು ಪೋಗೆ ಗೋಜೊಜಿಗಿರೆ ಮೂಗಿನೊಳ್ ನುಡಿಯೆ ಬಾಯ್ ಪಡೆ ದಷ್ಟನ ಸಾವು ನಿಶ್ಚಯಂ (ಲೋಕೋಪ. ೧೦-೯); "ಕಣ್ ಗುಟಿಯಹ" (ಲೋಕೋಪ. ಟೀಕೆ). [< ಕಣ್ + ಅಡಿ?]

**ಕನ್ನಡಿಎಲೆ** (ನಾ). ಒಂದು ಬಗೆಯ ಸಸ್ಯ : (ವೈಔಗಿ. ೪೨-೮೪೨). [ಕನ್ನಡಿ? + ಎಲೆ$_1$]

**ಕನ್ನಡಿಕಪಾಟು** (ನಾ). ಕನ್ನಡಿಯನ್ನು ಅಳವಡಿಸಿರುವ ಬೀರು, —ಕಪಾಟು : ಕನ್ನಡಿಕಪಾಟುಗಳಿಂದ, ಚಿತ್ರಪಟಗಳಿಂದ ಸಿಂಗರಿಸಿದುದು (ಹೊಸಂಸಾ. ೧). [ಕನ್ನಡಿ$_1$ + ಕಪಾಟು (< ಕಪಾಟ)]

**ಕನ್ನಡಿಕಾಯಕ** (ನಾ). ಕ್ಷೌರ ಮಾಡುವ ಕೆಲಸ : ಕನ್ನಡಿಕಾಯಕದ ಅಮ್ಮಿದೇವಯ್ಯಗಳ ವಚನ (ಸರ್ವವ. ೧೨೪). [ಕನ್ನಡಿ$_1$ + ಕಾಯಕ]

**ಕನ್ನಡಿಗ** (ನಾ). ೧. ಕನ್ನಡನಾಡಿನವನು; ಕನ್ನಡವನ್ನು ತಾಯಿನುಡಿಯಾಗುಳ್ಳವನು : ವಿಕಸಿತಪುಷ್ಪದಂತರಳಿ ಕನ್ನಡಿಗರ್ ಕರೆವಂತೆ ಬನ್ನಿ (ಪುಣ್ಯಾಸ್ರ. ೧-೯೪); ಅಯ್ಯಯ್ಯಾ ಚೆನ್ನಾದುದೆನೆ ಕನ್ನಡಿಗರು ರಯ್ಯಾ ಮಂಚಿದಿಯೆನೆ ತೆಲುಗಾ (ಭರಚ. ೧-೭). ೨. ಕನ್ನಡಕುಲ ಅಥವಾ ವಂಶದ ಹೆಸರು : ಕಾಶ್ಯಪ ಗೋತ್ರದೊಳ್ ಸದಾಚರಿತರೆನಿಪ್ಪ ಕನ್ನಡಿಗರೊಳ್ ಕುಲನಾಮದಿನೊಪ್ಪುವೆತ್ತ . . . ಅನಿಂದ್ಯಗುಣಾನ್ವಿತಂ (ಲೋಕೋಪ. ೧-೫ ಪೀಠಿಕೆ); ಕನ್ನಡಿಗಂ ವಂಶದೊಳುತ್ಪಂನಂ (ಕೊಲ್ಹಾಶಾ. ೨೩-೩೨; 1209); ಕನ್ನಡಿಗಕುಲಕೆ ರಂನದ ಕಂನಡಿಯೆನೆ . . . ಲಕ್ಷ್ಮೀಧರದೇವಂ (ಸೌಇಇ. IV, ೨೬೭-೪೧; 1380); ಹಲರು ಕನ್ನಡಿಗ ಹಲರು ನಾನಾ ದೇಸಿಯ ಹಲರು ಮಾಡಿದ ಧರ್ಮ್ಮ (ಎಕ. I, ೧೦; 1544). [ಕನ್ನಡ$_1$ + -ಇಗ]

**ಕನ್ನಡಿಗಿತಿ** (ನಾ). ಕನ್ನಡ ನಾಡಿನವಳು : ಆವುಜಿಗಿತಿ, ಕನ್ನಡಿಗಿತಿ, ಲೇಪಾಳಿಗಿತಿ (ಶಮದ. ೨೦೮ ಪ್ರಯೋ); ಗಾಣಿಗಿತಿ, ಅಸಗಿತಿ, ಕನ್ನಡಿಗಿತಿ (ಶಬ್ದಾನು. ೧೯೦ ಪ್ರಯೋ). [ಕನ್ನಡಿಗ + -ಇತಿ$_1$ (< -ಇತ್ತಿ)]

**ಕನ್ನಡಿಗೆ** (ನಾ). ಒಂದು ಸ್ಥಳದ ಹೆಸರು : ಕನ್ನಡಿಗೆಯ ಸಂಖರಸನ ಮಗಂ (ಇಆ. XIX, ೨೬೩-೪೫; 1054). [?]

**ಕನ್ನಡಿಗೋಡೆ** (ನಾ). ಕನ್ನಡಿಗಳಿಂದ ಅಲಂಕರಿಸಿದ ಗೋಡೆ: "ಕನ್ನವಡಮೆಂದು ಕನ್ನಡಿಗೋಡೆ" (ಕಶಸಾ. ೨೯-೬೧೮); "ಕನ್ನಡಿ ಗೋಡೆಯ ಪೆಸರದು ಕನ್ನವಡಂ" (ಚತುನಿ. ೬೬); (ಎದ್ದು, ಕನ್ನಡಿ ಗೋಡೆಯಲ್ಲಿ ಮತ್ತೆ ಮತ್ತೆ ಪರೀಕ್ಷಿಸಿಕೊಳ್ಳುತ್ತ ನೃತ್ಯಮಾಡುತ್ತಿರುವಳು) (ಬೆಟ್ಟಅ. ೨೫-೧೨). [ಕನ್ನಡಿ$_1$ + ಗೋಡೆ]

**ಕನ್ನಡಿಚ** (ನಾ). ಕನ್ನಡ ನಾಡಿನಲ್ಲಿ ಹುಟ್ಟಿದವನು : ಕನ್ನಡಿಗಂ, ಕನ್ನಡಿಚಂ (ಶಬ್ದಾನು. ೪೨೧ ಪ್ರಯೋ). [ಕನ್ನಡ$_1$ + -ಇಚ]

**ಕನ್ನಡಿತಿ** (ನಾ). = ಕನ್ನಡಿಗಿತಿ : ನೀಲಗಿರಿಯ ಕನ್ನಡಿತಿಯರ ಕುಣಿತದ ಹಾಡು – ಈ ಮುಂತಾದ ನಿದರ್ಶನಗಳು ಮೇಲಿನ ಮಾತಿಗೆ ಸಾಕ್ಷಿಯಾಗಿವೆ (ಕಸಾಚ. ೧). [ಕನ್ನಡ$_1$ + -ಇತಿ$_1$ (< -ಇತ್ತಿ)]

**ಕನ್ನಡಿತೊಟ್ಟಿ** (ನಾ). ಗೋಡೆಗಳನ್ನು ಕನ್ನಡಿಯಿಂದ ಅಲಂಕರಿಸಿದ ತೊಟ್ಟಿ : ಅರಮನೆಯ ಕನ್ನಡಿತೊಟ್ಟಿಯಲ್ಲಿ ದೇವರ ಪೂಜೆಯೂ ಡೋಲೋತ್ಸವವೂ ಆದ ನಂತರ . . . ಮರ್ಯಾದೆ ಮಾಡಿದರು (ಮಹಾವಂ. II, ೧೬೬). [ಕನ್ನಡಿ$_1$ + ತೊಟ್ಟಿ$_1$]

**ಕನ್ನಡಿಬಳೆ** (ನಾ). ಕನ್ನಡಿಗಳನ್ನು ಅಳವಡಿಸಿದ ಅರಗಿನ ಬಳೆ (೬). [ಕನ್ನಡಿ$_1$ + ಬಳೆ$_3$]

**ಕನ್ನಡಿಯ** (ನಾ). = ಕನ್ನಡಿಗ (?) : ಸ್ಥಿರಬುದ್ಧಿಯಲಿ ನೀವು ಸಾಧಿಸಿರೊ ಜನರೆಲ್ಲ ಅಜಿತು ನೋಡಿರೊ ಹಳೆಯ ಕನ್ನಡಿಯರೆಲ್ಲ (ಕನಕ. ೧೪೧-೫). [< ಕನ್ನಡಿಗ ?]

**ಕನ್ನಡಿವಣ** (ನಾ). ಕನ್ನಡಿಯ ಮೇಲೆ ಹಾಕುತ್ತಿದ್ದ ತೆರಿಗೆ; ವೇಶ್ಯೆಯರ ಮೇಲೆ ಹಾಕುತ್ತಿದ್ದ ತೆರಿಗೆ: ಕಂಭದ ನಾಲ್ವರ್ ಸೂಳೆಯರ ಮನೆವಣಮುಂ ಕನ್ನಡಿವಣಮುಮಂ ಬಿಟ್ಟ ಇದನಾವನೊರ್ವ್ವಂ ಪ್ರತಿಪಾಳಿಸಿದಂ (ಸೌಇಇ. IX–i, ೧೧೩–೧೫ ; 1054) ; ಮದುವೆಯ ಪನ್ನರ ಪಣಮುಂ ಸೂಳೆಯರಲ್ಲಿಯ ಕನ್ನಡಿವಣಮುಮಂ ಚಂದ್ರಾರ್ಕ್ಕತಾರಂ ಬಿಟ್ಟರ್ (ಎಕ. VII, ಶಿಕಾರಿ. ೨೯೫–೨೨ ; 1074). [ಕನ್ನಡಿ$_1$ + ಪಣ$_1$]

**ಕನ್ನಡಿವಿಡಿ** (ಕ್ರಿ). ಕನ್ನಡಿಯನ್ನು ಹಿಡಿ : ತಾಮರಸನಿಭಾಸ್ಯೆಗೆ ಸುರಕಾಮಿನಿ ಕಟ್ಟಿದಿರೊಳೆಸೆಯೆ ಕನ್ನಡಿವಿಡಿದಳ್ (ಆದಿಪು. ೭–೯) ; ಇದಿರೊಳೆ ಕನ್ನಡಿವಿಡಿದಿರ್ಪಜಿತತೀರ್ಥಕರ್ತೃಗೆ (ಅಜಿಪು. ೫–೭೪) ; ಕಲಶ ಕನ್ನಡಿವಿಡಿದು ನಡೆತಹ ವಿಲಾಸಿನಿಯರೊಗ್ಗಿನಿಂ (ಜೈ ಮಿ ಭಾ . ೧೭–೪೬). [ಕನ್ನಡಿ$_1$ + ಪಿಡಿ$_1$]

**ಕನ್ನಡಿವೇಂಟೆ** (ನಾ). (?) : ವಿತರ ಮಣಿದರ್ಪಣವನಂಬುಸೂತ್ರದಿ ದೃಢೀಕೃತದಿ ಕನ್ನಡಿವೇಂಟೆಗೆಂದು ಕಟ್ಟಿದೊಲು ಶೋಭಿತಮಾಗಿ ಹರಿದಶ್ವಬಿಂಬ ಬಿಂಬುತಿರ್ದುದಸ್ತಾಚಲಾಗ್ರದಲ್ಲಿ (ನಂದಿಮಾ. ೨೨–೬೧). [ಕನ್ನಡಿ$_1$ + ಬೇಂಟೆ ?]

**ಕನ್ನಡಿವೆಣ್** (ನಾ). ಕನ್ನಡಿ ಹಿಡಿಯುವವಳು : ಆರತಿ ಕಳಸ ಕನ್ನಡಿವೆಂಗಳೊಡನಕ್ರೂರ ಬಂದಿದಿರ್ಗೊಂಡ ಹರಿಯ (ಮೋಹತ. ೪೨–೨೦). [ಕನ್ನಡಿ$_1$ + ಪೆಣ್]

**ಕನ್ನಡಿಸು$_1$** (ಕ್ರಿ). ಕನ್ನಡವಾಗಿ ಮಾಡು; ಕನ್ನಡಕ್ಕೆ ಪರಿವರ್ತಿಸು : ಆ ಕೃತಿ ಮುನ್ನಂ ಚೆಲ್ವಿಂಗಾಕರಮೆನಿಸಿರ್ದು ಮತ್ತೆ ಕನ್ನಡಿಸಿತ್ತಿನ್ನೀ ಕವಿತೆಯಿಂ (ಕಾದಂಪೂ. ೬) ; ಗುರುರೂಪ ವಿಶ್ವಪತಿ ಕರುಣಿಸಿದ ತೆಜದಿನಾ ವರಪುರಾಣಾರ್ಥಮುಂ ಕನ್ನಡಿಸಿದೆಂ (ಸಾನಂಚ. ೧–೩) ; ಕವಿ ಸೋಮನಾಥನು ರಸಮೊಸರೆ ಮುನ್ನುಸುರ್ದುದನೆ ಕನ್ನಡಿಸಿ ಪೇಳು (ಬಸಪು. ೧–೧೬) ; ವಿವಿಧ ಜಾಗತಿಕ ಜ್ಞಾನವನ್ನು ಕನ್ನಡಿಸಬೇಕೆಂಬ ಉದ್ದೇಶದಲ್ಲಿ ಕೆಲಮಟ್ಟಿಗೆ ನಾವು ಮುಂದುವರಿಯುತ್ತಿದ್ದೇವೆ (ಸಾಸಮಾ. ೧೬). [ಕನ್ನಡ$_1$ + –ಇಸು$_3$]

**ಕನ್ನಡಿಸು$_2$** (ಕ್ರಿ). ೧. ಕನ್ನಡಿಯಂತೆ ವರ್ತಿಸು, —ಪ್ರತಿಬಿಂಬಿಸು, —ಪ್ರಕಟಿಸು, —ತೋರು : ಸಿರಿಗನ್ನಡಿ ಕನ್ನಡಿಪುದಾದುದಿಂದು ಶ್ರೀಯಂ (ಆದಿಪು. ೭–೧೦) ; ಭೀರುಗಳರೆಬರ್ ಕನ್ನಡಿಸಿದರ್ ಭಯಾನಕರಸಮಂ (ಗದಾಯು. ೪–೨೮) ; ಅಪಾಂಗದ ಪಾಂಗಿಂದೆಮೆ ಕನ್ನೆ ಕನ್ನಡಿಸಿದಳ್ ತನ್ನೊಂದಭಿಪ್ರಾಯಮಂ (ಜಗವಿ. ೧೦–೮೧) ; ತನ್ನಂತರಂಗದೊಳಿರ್ದಕುಟಿಲತೆಯ ಬಿತ್ತರಿಸಿ ಕನ್ನಡಿಸಿದಂ (ರೇವಣ. ೯೦–೫) ; ನೀರ್ಮಂಚದ ಮೇಲೆ ಬಯಲಗಲದ ಬಾನ್ಗನ್ನಡಿ ಕನ್ನಡಿಸಿದ ಹಾಗೆ (ಹೃದಸ. ೪೫–೧೦). ೨. ತಿಳಿಸು; ಹೇಳು; ವಿವರಿಸು : ಧರ್ಮಮೆಂಬ ನಡಿಯಂ ಕಂನಡಿಸಿ ಧರ್ಮರ್ಣವಂ (ಸೌಇಎ. ೧೯೨೯, ಕಾರ್ಕಳ್. ೫೨೬–೨೮ ; ?) ; ಪೌರಾಣಮಂ ಪೇಳ್ವ ಭಾಷೆ ಮೊದಲಾದ ತರ್ಕಂಗಳಂ ಕನ್ನಡಿಪ ಸ್ಥಾನಮಂ ಮಾಳ್ಪ . . . ಮುನಿವರರ್ ಕಣ್ಗೆಸೆದರು (ಚೆಬಪು. ೬೪–೨೬). [ಕನ್ನಡಿ$_1$ + –ಸು$_1$]

**ಕನ್ನಡಿಹರಳು** (ನಾ). ೧. ಕನ್ನಡಿಯ ಚೂರು, —ತುಂಡು. ೨. ಕನ್ನಡಕದ ಗಾಜು (೬). [ಕನ್ನಡಿ$_1$ + ಹರಳು (< ಪರಲ್)]

**ಕನ್ನಡಿಹಾವು** (ನಾ). ಮೈಮೇಲೆ ಕನ್ನಡಿಯಂತೆ ಹೊಳೆಯುವ ಚಿಹ್ನೆಗಳುಳ್ಳ ಹಾವು; ಉರಿಮಂಡಲ ಹಾವು: “ . . . ಅದನ್ನು ತೆಗೆದುಕೊಂಡರೆ ನಾಗರಹಾವಿಗೂ ಕನ್ನಡಿಹಾವಿಗೂ ಒಂದೇ ಬಿಲದಲ್ಲಿ ಇಟ್ಟಂತಾದೀತು ” (ಕಗದ್ಯ. ೬೯) ; ಶುದ್ಧ ಕನ್ನಡಿಹಾವು ಅದು ! (ಒಡ್ಡಿಉ. ೧೧೦). [ಕನ್ನಡಿ$_1$ + ಹಾವು (< ಪಾವು$_1$)]

**ಕನ್ನಡೀಕರಣ** (ನಾ). ಕನ್ನಡವಾಗಿ ಮಾಡುವಿಕೆ; ಕನ್ನಡಕ್ಕೆ ಒಗ್ಗಿಸುವಿಕೆ : ಅವನ ‘ಆದಿಪುರಾಣ ’ವು. . .ಜೈನಪರಂಪರೆಯ ಉಜ್ವಲವಾದ ಕನ್ನಡೀಕರಣವಾಗಿದೆ (ತವನಿ. ೧೨). [?]

**ಕನ್ನಡೇತರ** (ಗು). ಕನ್ನಡವಲ್ಲದ ; ಕನ್ನಡವನ್ನು ಬಿಟ್ಟು ಉಳಿದ : ಕನ್ನಡೇತರ ಕೃತಿಗಳಲ್ಲಿ ಸಿಗುವ ಆಧಾರಗಳನ್ನು ಪರಿಶೀಲಿಸಬಹುದು (ದ್ರಾವಿವಿ. ೭೦). [ಕನ್ನಡ$_1$ + ಇತರ]

**ಕನ್ನಪಯ್ಯ** (ನಾ). ಒಬ್ಬಾತನ ಹೆಸರು : [ಮು]ತ್ತಿನ ಸರಿಗೆಯ ನನುಕರಿಸಿ ಕನ್ನಪಯ್ಯಂ ಬರೆದಂ (ಸೌಇಇ. XI–i, ೧೧೧–೪೦ ; 1071). [< ಸಂ. ಕರ್ಣಪಾರ್ಯ]

**ಕನ್ನಪುರ** ‘ಕನ್ನವುರ ’ ನೋ.

**ಕನ್ನಪೇಜಿ** (ನಾ). ಒಬ್ಬಾತನ ಹೆಸರು : ಕೌಣ್ಡಿಲ್ಯಗೋತ್ರ ಕನ್ನಪೇಜಿನ ಮಗಂ ಬೇನೆಯ ಸೋಮೇಜ ಬೇನೆಯ ಸೋಮೇಜಿಯ ಮಗ[ಂ] (ಸೌಇಇ. XI–i, ೯–೭ ; 862). [ಕನ್ನ$_4$ + ಅಪ (< ಅಪ್ಪ$_1$) + ಎಜಿ$_4$]

**ಕನ್ನಮ** (ನಾ). ಒಬ್ಬಾತನ ಹೆಸರು : ತತುಪುತ್ರಂ ನೆಗಳ್ದಂ ನಿಜಾರಿಬಳವೊನ್ನಲು ಬನ್ನಮಂ ಕಂನಮಂ ತತುಪುತ್ರಂ ನೆಗಳ್ದಂ (ಕಇಅ. ೭೪–೧೨–೭ ; 1170). [ಕನ್ನ$_4$ + ಅಮ (< ಅಮ್ಮ$_1$)]

**ಕನ್ನಮಂಗಲ** (ನಾ). ಒಂದು ಸ್ಥಳದ ಹೆಸರು : ಕಾರ್ತಿಕ ಬಹುಳ ೨ಲು ಕಂನಮಂಗಲದ ಯಲಿಯಂಣಗೆ ಕೆರೆಕೊಡಗಿ ಹೊಲದ ಶಾಸನ (ಎಕ. X, ಚಿಂತಾಮ. ೧೨೯–೪ ; ?). [ಕನ್ನ$_4$ + ಮಂಗಲ]

**ಕನ್ನಮಜ್ಜೆ** (ನಾ). ಒಂದು ಪ್ರದೇಶದ ಹೆಸರು ; ಕನೋಜ (?) : ಅವಯವದಿಂದೆ ಸಾಧಿಸಿದ ಮಾಳವಮೇಳುಮನೆಯ್ದೆ ಗಂಗಮಾಳವಮೆನಲಕ್ಕರಂ ಬರೆದು ಕಲ್ಲಿಜಿಸುತ್ತೆ ಕಳಲ್ಚಿ ಚಿತ್ರಕೂಟಮನುಜಿ ಕನ್ನಮಜ್ಜೆಯ ಶ್ರಿಪಾನುಜನಂ ಜಯಿಕೇಸಿಯಂ ಮಹಾಹವದೊಳೆ ಮಾರಸಿಂಗ ನೃಪನಿಕ್ಕಿ ನಿಮಿರ್ಚ್ಚಿದನಾತ್ಮಶೌರ್ಯ್ಯಮಂ (ಎಕ. VII, ಶಿವಮೊ. ೬೪–೬೦ ; 1112 ?). [?]

**ಕನ್ನಮದಿಶಾಪಟ್ಟ** (ನಾ). ಕನ್ನಮನೆಂಬುವನನ್ನು ದಿಕ್ಕುದಿಕ್ಕಿಗೆ ಓಡಿಸಿದವನು ; ಒಂದು ಬಿರುದು : ಕನ್ನಮದಿಶಾಪಟ್ಟಂ ವೈರಿಘರಟ್ಟನಾಹವ ಮಲ್ಲನ [ಹ]ಣುವಂ ನಾಮಾಡಿ ಸಮಸ್ತ ಪ್ರಸಸ್ತಿಸಹಿತಂ . . . ಚಾವುಂಡರಾಯರಸರ್ (ಕಇ. IV, ೪೧–೭ ; 11ನೆಯ ಶತ). [ಕನ್ನಮ + ದಿಶಾಪಟ್ಟ]

**ಕನ್ನಮಿಕ್ಕಿಸು, ಕನ್ನವಿಕ್ಕಿಸು** (ಕ್ರಿ). ಕನ್ನಹಾಕಿಸು ; ಕಳವು ಮಾಡಿಸು : ಭಂಡಾರದ ಮನೆಯೊಳ್ ಕನ್ನಮಿಕ್ಕಿಸಿ (ವಡ್ಡಾರಾ. ೧೭೭–೩). **ಕನ್ನವಿಕ್ಕಿಸು** : ಅರಮನೆ ಸಾರೆಯುದಂ ಕನ್ನವಿಕ್ಕಿಸುವ ಮವನಿಂ ಮತ್ತಾರಜಿಯದವೋಲಿಕ್ಕುವಮೋರಣದಿಂದವನ ಕಾಲ್ಗೆ ಬಲ್ಸಂಕಲೆಯಂ (ದಶಕು. ೮–೨೮೫). [ಕನ್ನಮಿಕ್ಕು + –ಇಸು$_3$]

**ಕನ್ನಮಿಕ್ಕು, ಕನ್ನವಿಕ್ಕು** (ಕ್ರಿ). ಕನ್ನಹಾಕು ; ಕಳವುಮಾಡು : ಆಕೆಯ ಉಂದಿದ ಮನೆಯೊಳ್ ಕನ್ನಮಿಕ್ಕಿದೊಡೆ (ವಡ್ಡಾರಾ. ೧೯–೨) ; ಯುವತಿಯ ಕಣ್ಣುಂ ಮನಮುಂ ಜವನಿಕೆಯಂ ಕನ್ನಮಿಕ್ಕಲ [ಪಾಠಾಂ. ಮಿಡದ] ಡಹಡಿಸಿದುದೋ (ಅನಂಪು. ೬–೫೬).

**ಕನ್ನವಿಕ್ಕು:** ಒಡೆಯರೊಡವೆಯನೆಳಸೆ ಕೊಡದಿಪ್ಪುದುಂ ನಯವೆ ಕನ್ನವಿಕ್ಕುವಡೆ ಕತ್ತಿಯ ಪಿಡಿದು ನಡೆದಪೆಂ (ಬಸರ. ೧೩-೨೧); ಕನ್ನವಿಕ್ಕಿ ಮನೆಯೊಳಪೊಕ್ಕಾ ಸಾಸಿಗಂ . . . ಒಡವೆಯೆಲ್ಲವಂ ನೆಱೆ ಕೊಂಡಂ (ಧರ್ಮಪ. ೯-೧೯); ಬನ್ನವ ಪಟ್ಟು ಬಯ್ಕಲ್ಕೆ ಶಿವನೇನು ಕನ್ನವಿಕ್ಕಿದನೆ (ಸರ್ವಜ್ಞ. ೯೦೦).
[ಕನ್ನ$_1$ + ಇಕ್ಕು]

**ಕನ್ನಮಿಡು, ಕನ್ನವಿಡು** (ಕ್ರಿ). = ಕನ್ನಮಿಕ್ಕು: ನಾರಾಯಣನ್ ತನ್ನ ಮನೆಯನ್ಕನ್ನಮಿಟ್ಟು ಪುಗುತನ್ದೊಡೆ ಅಱಿದು ಪೊರಮಟ್ಟು (ಸೌಇಇ. IX-i, ೫-೧೧; 9ನೆಯ ಶತ). **ಕನ್ನವಿಡು:** ಕನ್ನವಿಡುವ ಕಳ್ಳನನ್ನು ಮನ್ನಿಸಿ ತಂದನಂತೆ (ಗಾದೆ). [ಕನ್ನ$_1$ + ಇಡು$_1$]

**ಕನ್ನಯ್ಯ** (ನಾ). ಒಬ್ಬಾತನ ಹೆಸರು: ಪ್ರತಿಪಕ್ಷ ಸೂದ್ರಕಂ ಶ್ರೀಮತ್ ಕನ್ನಯ್ಯಂ (ಎಕ. XI, ಚಿತ್ರದು. ೨೬-೪; 946); ಕನ್ನಯ್ಯಂ ಕಲ್ಲ ನಿಱಿಸಿದ (ಎಕ. VIII, ಸೊರಬ. ೫೩೧-೯; 967); ಸನ್ಧಿವಿಗ್ರಹಿ ಕಂನ್ನಯ್ಯ ಬರೆದಂ (ಎಕ. VIII, ಸೊರಬ. ೪೪-೧; 971).
[ಕನ್ನ$_4$ + ಅಯ್ಯ$_1$]

**ಕನ್ನರ** (ನಾ). ಒಬ್ಬಾತನ ಹೆಸರು. ℙ ಮುಖ್ಯವಾಗಿ ರಾಷ್ಟ್ರಕೂಟರ ಮೂರನೆಯ ಕೃಷ್ಣನ ಹೆಸರು: ಸ್ವಸ್ತಿಶ್ರೀ ಅಕಾಲವರಿಷಾ ಪ್ರಿಥುವೀ ವಲ್ಲವ ಮಾರಜಾದಿರಾಜಪರಮೇಶ್ವರಾ ಶ್ರೀಮತ್ಕನ್ನರ ಭಟಾರರ (ಎಇ. XXI, ೩೫-೨; 883); ಕನ್ನರಸ ಪೃಥಿವೀ ರಾಜ್ಯಂಗೆಯೆ (ಎಕ. VII, ಶಿಕಾರಿ. ೪೫-೪೮; 890?); ಪೊಸವೂರ ಬೇದಮ್ಮನುಂ ಕನ್ನರನುಂ ಕಳ್ಳವುಱಿಸೆಯ ರಟ್ಟನು (ಎಕ. XI, ಚಿತ್ರದು. ೭೪-೨೭; 968); ಕನ್ನರ ನಾದರದಿಂ ಕುಡೆ ಹೊನ್ನಂ ಮನಮೊಸೆದು ತೈಲಪಂ ಕುಡೆ ರನ್ನಂ ಮನ್ನಿಸಿ ಬಲ್ಲಾಳಂ ಕುಡೆ ಜನ್ನಂ ಕವಿಚಕ್ರವರ್ತಿವೆಸರಂ ಪಡೆದಂ (ಯಶೋಚ. ೧-೨೧). [ಕನ್ನ$_4$ + ಅರ$_4$ (< ಅರಸ$_1$)]

**ಕನ್ನವಚ್ಚ** (ನಾ). ಕಿವಿಯ ಆಭರಣ: ಎಳಗಲ್ಲದೊಳಿಟ್ಟ ದಿಟ್ಟಬೊಟ್ಟಂ ಕೆಳೆಗೊಂಡೊಪ್ಪುವ ಪಚ್ಚೆಗನ್ನವಚ್ಚಂ . . . ಎಳಗಂದಂ ಕಳೆಗುಂ ಜಗಕ್ಕೆ ಕಂದಂ (ಚಕವಿ. ೩-೪೪). [ಕನ್ನ$_3$ + ಪಚ್ಚ$_3$]

**ಕನ್ನವಟ್ಟ** (ನಾ). ಮದ್ದಳೆಯ ಚರ್ಮದ ಒಂದು ಭಾಗ: ಎಡಗೆಯ್ ಬಲಗೆಯ್ ತೋರಂ ಕಡುಸಣ್ಣಂ ಕದಳಿ ಕನ್ನವಟ್ಟಂ ತಾನೆಂಬೆಡೆಯೊಳ್ ಪ್ರಹರಣಮಿಂಪಂ ಪಡೆದಿರೆ ಸುರವಧು ಮೃದಂಗಮಂ ಬಾಜಿಸಿದಳ್ (ಚಂದ್ರಪು. ೧೧-೧೪೩). [?]

**ಕನ್ನವಟ್ಟಿಗೆ** (ನಾ). ಕಣಕದ ಪದರ, —ಕವಚ, —ಹೊದಿಕೆ: ನಸುಬಿಸಿಯ ಹೂರಿಗೆಯ ಕನ್ನ[ಪಾಠಾಂ. ಕೆಂ, ಕಣ್ಣ]ವಟ್ಟಿಗೆದೆಗೆದು ಹಸನಾಗಿ ಬಿಚ್ಚಲದು ಬಿಚ್ಚುಹೂರಿಗೆಯಾಯ್ತು (ಸೂಪಶಾ. ೧-೨೮). [? + ಪಟ್ಟಿಗೆ$_2$ (< ಪಟ್ಟಿಕೆ)]

**ಕನ್ನವಡ$_1$** (ನಾ). ತೆರೆ; ಜವನಿಕೆ; ಪರದೆ: "ಕಾಂಡಪಟಾವರಣೇನ = ಕನ್ನವಡದ ಮುಱೆಯಿಂ" (ನೀತಿವಾ. ೧೩-೧೮); ದುಗುಲದ ಕನ್ನವಡಂ ಗಟ್ಟಿದಂತೆ (ಮಲ್ಲಿಪು. ೧೧-೬೪). 'ಕಂಡವಡ' ಪರಾ.
[< ಸಂ. ಕಾಂಡಪಟ]

**ಕನ್ನವಡ$_2$** (ನಾ). ಕನ್ನಡಿಯ ಗೋಡೆ: "ಕನ್ನಡಿಗೋಡೆಯ ಪೆಸರದು ಕನ್ನವಡಂ" (ಚತುನಿ. ೬೬); "ಕನ್ನವಡಮದೆನೆ ಕವಿಗಳ್ ಕನ್ನಡಿ ಗೋಡೆಯುಮೆನಿಕ್ಕು" (ಕವಿಕಂ. ೨೩೮); ಬಳಸಿದ ಪೊನ್ನಕೋಂಟೆ ಪುರ ಲಕ್ಷ್ಮಿಯ ಕೈಗೆಯಲಿರ್ದ ತಾಣದೊಳ್ ಬಳಸಿದ ಪೊನ್ನ ಕನ್ನವಡ [ಪಾಠಾಂ. ಕಾಂಡಪಟ]ದಂತಿರೆ (ಆದಿಪು. ೧-೭೧); ಇದಿರ ಕನ್ನವಡದಲ್ಲಿ ತನ್ನ ಪ್ರತಿಬಿಂಬವನ್ನು ಕಂಡು, ನಟ್ಟಾಲಿಗಳಿಂದ ನಿರೀಕ್ಷಿಸುತ್ತ (ಬಿಟ್ಟಅ. ೨೪-೫). [ಕನ್ನಡಿ$_1$ + ಪಟ ?]

**ಕನ್ನವಾಡ** (ನಾ). ಒಂದು ಪ್ರದೇಶದ ಹೆಸರು: ಕನ್ನವಾಡ ಗಂಗವಾಡ ಬಳೆಯವಾಡರೆನ್ರ್ನಾಡಾಳ ಸಿಯಳಾಱ ಸಾಮಿ ಸರ್ಬರಸ ಕೊಟೋರ್ (ಮೈಆರಿ. ೧೯೨೯, ೧೧೮-೧; 870). [ಕನ್ನ$_4$ + ಬಾಡ$_1$]

**ಕನ್ನವಿಕ್ಕಿಸು** 'ಕನ್ನಮಿಕ್ಕಿಸು' ನೋ.

**ಕನ್ನವಿಕ್ಕು** 'ಕನ್ನಮಿಕ್ಕು' ನೋ.

**ಕನ್ನವಿಡು** 'ಕನ್ನಮಿಡು' ನೋ.

**ಕನ್ನವಿಲು** (ನಾ). ಒಂದು ಜಾತಿಯ ನವಿಲು; ಕರಿನವಿಲು (?): ಕಾಗೆ ಕನ್ನವಿಲು ಕಕ್ಕರ ಕಾಡೆ ಪಾರಿವ ಗೂಗೆ ಗಿಡುಗ (ಕುರಾಸಾಂ. ೨೭-೮೫). [< ಕರಿದು + ನವಿಲು (< ನವಿಲ್)]

**ಕನ್ನವುರ, ಕನ್ನಪುರ** (ನಾ). ಕಿವಿಯ ಆಭರಣ; ಕರ್ಣಪೂರ: "ಕನ್ನವುರಂ ಸಲೆ ಕರ್ಣಪೂರದೊಳ್" (ಕರ್ಣಾನಿ. ೩೩); ಮಿಸುಗುವ ಆರಂ ತೊಳಪ್ಪ ಕನ್ನವುರಂ ಚೆಲ್ವೆಸೆದಿರೆ ಬಲವರ್ಪ ವಿಟರ್ (ಕಾವ್ಯಾವ. ೪೪೦); ನೇವುರದ ಕನ್ನವುರದೆಕ್ಕಾವಳಿಯ ತೊಳಪ್ಪ ಮುತ್ತಿನಾರದ ಕಟಿಸೂತ್ರಾವಳಿಯ ಘನಸ್ತನೆಯರ್ (ಪಾರ್ಶ್ವಪು. ೧೨-೧೦); ಕನ್ನವುರ ಜಡಿದು ಕದಪಿನೊಳು ನಲಿಯೆ (ಗೀತಗೋ. ೬೭-೫). **ಕನ್ನಪುರ:** "ಕನ್ನಪುರ ಕರ್ಣಪೂರಂ" (ಕಶರ. ೨೦).
[< ಪ್ರಾ. ಕಣ್ಣಉರ, ಕಣ್ಣಊರ. / ಸಂ. ಕರ್ಣಪೂರ]

**ಕನ್ನವುರಿ** (ನಾ). ಒಂದು ಪ್ರದೇಶದ ಹೆಸರು: ಕನ್ನವುರಿ ವಿಷಯೇ ಸಿ[ಮ್ಮ]ಲಗೆ ಪೂರ್ವ್ವದಿಗ್ಭಾಗೇ (ಸೌಇಇ. XI-i, ೮-೧೨; 862).
[ಕನ್ನ$_4$ + ಪುರಿ$_6$]

**ಕನ್ನಸ** (ನಾ). ಪಕ್ಕ; ಪಾರ್ಶ್ವ (?): ಎರಡುಂ ಕನ್ನಸದಿಂ ತಗುಳ್ದ ಚಮರಂ ವೈರೋಚನಂ ನಾಗ್ರತಸ್ಸರ ರೇರೇ ನ ಚ ಪಾರ್ಶ್ವತಸ್ಸರ ನ ಹೋ ಪಾಶ್ಚಾತ್ಯ ಪಾಶ್ಚಾತ್ಯತಸ್ಸರಯೆಂದೊಡ್ಡಿನ ಮುಂತು ಪಿಂತು ಕೆಲನಂ ತಿರ್ದುತ್ತೆ ತಮ್ಮಿರ್ಬರುಂ ಮುರಜಂ ಬಾಯ್ತುರೆ ದೇವಸೇನೆ ನಡೆದತ್ತೋರಂತೆ ನೂಲ್ದೊಯ್ದವೊಲ್ (ಅನಂಪು. ೫-೪೪).
[ಪ್ರಾ. ಕಣ್ಣಾಸ = ಪರ್ಯಂತ, ಅಂತ್ಯಭಾಗ]

**ಕನ್ನಾಕನ್ನಡಿ** (ನಾ). ಹೊಳೆಯುವ ಕನ್ನಡಿ (?): ಕನ್ನಾಕನ್ನಡಿಗಳನ್ನೂ ತುಂಬುಗಳಸಗಳನ್ನೂ ತಳೆದ ವೇಶ್ಯಾಂಗನೆಯರು (ಬಿರುಗಂ. ೨೬-೯). [ಕನ್ನಾ ? + ಕನ್ನಡಿ$_1$]

**ಕನ್ನಾಗರು** (ನಾ). ಒಂದು ಬಗೆಯ ಸಸ್ಯ (?): "ಕೃಷ್ಣಸರ್ಪಃ — ಕನ್ನಾಗರು" (ಒಷಧಿ. ೩೯). [< ಕರಿದು + ನಾಗರು ?]

**ಕನ್ನಾಟಕ** (ನಾ). ೧. ಕರ್ನಾಟಕ ದೇಶ: ಆ ಕನ್ನಾಟಕ ದೇಶದಲ್ಲಿ ನೆಲೆಗೊಂಡಿರ್ಕುಂ (ಶ್ರೀಮಹಾ. ೧-೪೦). ೨. ಕನ್ನಡ ಭಾಷೆ: ಹೊದಲಿ ವಿಷಯೇ ಬೆದಿರೂರ್ ಮಯಾದತ್ತವಸ್ ಅಸ್ಯ ಸೀಮಾ: ಕನ್ನಾಟಕೇ ಪ್ರವಕ್ಷ್ಯಾಮಿ (ಮೈಆರಿ. ೧೯೨೫, ೧೦೫-೩೮; 634). [< ಸಂ. ಕರ್ಣಾಟಕ]

**ಕನ್ನಾಡು** (ನಾ). ಕನ್ನಡನಾಡು; ಕರ್ನಾಟಕ: ನೆರೆಯರಮನೆ ಕನ್ನಾಡಿನ ಭೂಪರಾ (ಗಿಳಿವಿಂ. ೪೬-೨); 'ಹೊಯ್ಸಳಮನೆತನ ಕನ್ನಾಡ ಸಂಪತ್ತನ್ನು ಸಂಸ್ಕೃತಿಯನ್ನು ರಕ್ಷಿಸಿಕೊಂಡು ಬರುವ ಕಸುವನ್ನು ಶಿವನು ಕೂಡಿಸಿಕೊಡಲಿ . . .' (ಸವತಿ. ೨೧೯). [< ಕರಿದು + ನಾಡು]

**ಕನ್ನಾಯಿ** (ನಾ). ಒಬ್ಬಾಕೆಯ ಹೆಸರು (?): ಸಾವಂತಪಂಡಿತರ ಕಂನಾಯಿಗಳ ಸುಪುತ್ರ ಕೇಸವಪಂಡಿತರು ಮೊಸಳೆವಾಡದಲು ಜೀರ್ಣ್ನೋದ್ಧಾರವಾಗಿ ಮಾಡ್ಸಿ . . . ಕಂನಾಯಿಗಳು ಮಾಡಿದ ಮೊಸಳೆ ವಾಡದ ಶ್ರೀ ಪಾರಿಸ್ವನಾಥಂಗೆ (ಸೌಇಇ. IX-i, ೩೮೭-೯; 1297); ಮದುವರಸನಾಯ್ಕರು ಸರ್ಗ್ಗಸ್ಥನಾದಲ್ಲಿ ಆತನ ಸತಿ ಬುಳ್ಳರಸಿ ಕಂನಾಯಿಗಳು ಗಂಡನ ವಿಜಯಶ್ರೀಯನೆಯಿದಿ ಸುರಲೋಕ ಪ್ರಾಪ್ತರಾದರು (ಎಕ. VII, ಶಿಕಾರಿ. ೨೩೯-೧೩; 1447). [ಕನ್ನ$_4$? + ಆಯಿ$_2$]

**ಕನ್ನಿಕೆ$_1$**, ಕನ್ನಕ್ಕಿ$_1$ (ನಾ). ಕುಮಾರಿ; ಕನ್ಯೆ: "ಕನ್ಯಾ, ಕುಮಾರೀ ಈ ಎರಡು ಕನ್ನಿಕೆಯ ಪೆಸರ್" (ನಾಚಿರಾ. ೧೧೬); "ಕೂಸೆಂದೆನೆ ಕನ್ನಿಕೆ" (ಕವಿಕಂ. ೨೩೩); ನೂತನ ಕನ್ನಿಕೆಯು ತಾನಾಗಿ ಜನಿಸಿದಳು (ಸಂಭಪ. ೧೩–೮); ಕಮಳವ್ವೆ ಬಾಚವ್ವೆ ಮೊದಲಾದಖಿಳ ರುದ್ರಕನ್ನಿಕೆಯರೊಲಿದು (ಚೆಬಪು. ೫–೨೮); ಅವರ ಕುಲದಲಿ ಹುಟ್ಟ ಶ್ರೇಷ್ಠಳೆನಿಸಿದ್ದ ಕನ್ನಿಕೆಯೊಬ್ಬಳು ನೀಚಕುಲದವನೊಬ್ಬನನ್ನು ಮದುವೆ ಮಾಡಿಕೊಳ್ಳುವ ಸಂದರ್ಭವೊದಿಗಿತ್ತೆಂದು ತಿಳಿಯಬಂತು (ಒಡೆಕ. ೧). **ಕನ್ನಕ್ಕಿ**: ಧರೆಯೊಳಗಿದ್ದ ಭಕ್ತರ ಕನ್ನಕ್ಕಿಗಳನು ನಿರುತ ವಿಚಾರಿಸುತಿರ್ದ (ದೇವಾಂಪು. ೯–೭೮); ಕನ್ನಕ್ಕಿಯಿರುವತನಕ ಹೆಸರು ಹೇಳುವ ಹಿಗ್ಗು (ನನಲ್ಲ. ೪–೧೦). [< ಸಂ. ಕನ್ಯಕಾ]

**ಕನ್ನಿಕೆ$_2$**, ಕರ್ನಿಕೆ (ನಾ). ಹೂವಿನ ಮಧ್ಯಭಾಗದ ಬೀಜಕೋಶ; ಕರ್ಣಿಕೆ: ಆ ವನವೆಂಬ ತಾವರೆಯ ಕನ್ನಿಕೆಯಂತೆ ಪೂವಿನ ಕೊಳವೊಂದಿರಲು (ಶ್ರೀಪಾಲ. ೧೨–೧೨). **ಕರ್ನಿಕೆ**: ಸರೋವರದ ನಡುವೆ ಕನ್ನಿರ್ಕೆವೊಲು ಮಂದರಮಿರ್ಪ್ಪುದು (ಕಇಅ. ೯೫–೪–೪; 12ನೆಯ ಶತ); ಸಾಸಿರದಳ ಕಮಲದ ಕರ್ನಿಕೆಯೊಳು (ಶರಚ. ೫೯೪). [< ಸಂ. ಕರ್ಣಿಕಾ]

**ಕನ್ನಿಕೋಂಬರೆ** (ನಾ). ದಂಪತಿಗಳ ಶಯನಗೃಹ: "... ನೀನು ಕನ್ನಿಕೋಂಬರೆಯನ್ನು ಸೇರುವಾಗ ಸೋತು ಸುಣ್ಣವಾಗಿದ್ದೆ" (ನಡೆದಾ. II, ೧೧೩೩). [← ಕೊಡ. ಕನ್ನಿಕೋಂಬರೆ]

**ಕನ್ನೀರ್**, ಕನ್ನೀರು (ನಾ). ಕರಿಯ ನೀರು: ತತ್ಪಶ್ಚಿಮತಃ ಕನ್ನೀ[ರ]ಸರಃ ತತ್ಪಶ್ಚಿಮತಃ ಜಂಬುಕಸರಃ ತತ್ಪ[ಚಿ]ಮತಃ ಭೂಮಿಸರಃ (ಸೌಇಇ. XX, ೬–೨೨; 730). **ಕನ್ನೀರು**: ಯಮುನೆಯ ಕನ್ನೀರನ್ನು ಸೂರ್ಯ ತನ್ನ ಹೊಂಬಿಸಿಲಿನಿಂದ ಮೆರಗು ಕೊಡುವಾಗ ಆ ತೀರದಲ್ಲಿ ನಿಂತು ನಮಾಜ ತೀರಿಸಿದ್ದು ! (ನೂರಜ. ೧೦). [< ಕರಿದು + ನೀರ್$_1$]

**ಕನ್ನೀರು** 'ಕನ್ನೀರ್' ನೋ.

**ಕನ್ನೀಲ** (ನಾ). ೧. ಕಪ್ಪುನೀಲ; ನೀಲರತ್ನ: ಅರುಣ ಮಣಿಯ ಕನ್ನೀಲದ ಪಳುಕಿನ ಕರುಮಾಡಗಳುರುಕಾಂತಿ (ಚಂಪ್ರಸಾಂ. ೩–೫೩). ೨. ಕಪ್ಪುಮಿಶ್ರವಾದ ನೀಲಿಯಬಣ್ಣ. ೩. ಕರಿ, ಬಿಳುಪು ಎರಡೂ ಬಣ್ಣ ಕೂಡಿದ ಕೂದಲಿನ ಕುದುರೆ: ಕಾಗೆಳ್ಳುವಕ್ಕಿಯಂ ಸವುಸಾರಿಕೆಯಂ ಬೆರಸಿದಂತೆ ಕಪ್ಪುಂ ಬೆಳ್ಪುಂ ನೇರಿತಾಗಿರಲು ತನುರುಹವೋರನೆ ಕನ್ನೀಲನೆಂಬ ಪೆಸರಂ ಪಡೆಗುಂ (ಅಶ್ವವೈ. ೨–೨೩); ಜನ್ನ ಜಿನ್ನಾರ ಚನ್ನಳಗ ಚೆಲುವ ಚೇರ ಕನ್ನೀಲ ಭೈರ ಕಂಕರಿಗಂ ಸನ್ನುತ ಸಾಂಬ್ರಾಣಿಯನೇಱಿ ನೃಪಕುಲರನ್ನರಿಗೆಂದು ತೋಱಿದನು (ಅಂಜಚ. ೬–೮೩). [< ಕರಿದು + ನೀಲ]

**ಕನ್ನುಡಿ** (ನಾ). ಕನ್ನಡ$_1$ ೨: ತಪಸ್ವಿ ಎಂಬುದಕ್ಕೆ ಕನ್ನುಡಿಯಲ್ಲಿ 'ಕಿತ್ತಡಿ' ಎಂಬ ಮೇಳದ ಮಾತಿದೆ (ಯಕ್ಷಪ್ರ. ೧೪೮); ಮಕ್ಕಳಿಗೆ ಕನ್ನುಡಿಯನ್ನು ಕಲಿಸುವದನ್ನು ಕಂಡು ಬಳಗದವರು ಹೀಯಾಳಿಸಿ ಕುಚೇಷ್ಟೆ ಮಾಡಿದರೂ (ಕಂನಾಸಾ. ೧೨೯). [?]

**ಕನ್ನೆ$_1$** (ನಾ). ೧. ಕುಮಾರಿ; ಕನ್ಯೆ: ಚಿಲಾತಪುತ್ರಂ ಕನ್ನೆಯಂ ಕೊಂದಂ (ವಡ್ಡಾರಾ. ೧೬೭–೯); ಈ ಕುಮಾರಂಗೆ ಲಕ್ಷ್ಮೀಸದನಂಗಾ ಕನ್ನೆಯಂ ಮುಂ ಕೊಡಿಸುವೆಂ (ಶಾಂತಿಪು. ೨–೮೦); ತನ್ನ ಮಗಳ್ ಚೆನ್ನೆಯಪ್ಪ ಕನ್ನೆಯಂ ಕುಡೆ ಮದುವೆಯಂ ಮಾಡಿಕೊಂಡು (ಪಂಚತಂ. ೧೮೬–೧೮); ಎಸೆವ ಕನ್ನೆಯನುಮಾ ವರಾಭಂಗೆ ಕಯ್ಗೂಡಿಸಲೊಡಂ (ಪದ್ಮರಾ. ೩–೭೬); ಇನ್ನೋದು ಕಾವ್ಯವನೆಂದನಾ ಪಾಡುವ ಕನ್ನೆಯಾ ಹೊತ್ತಗೆವಿಡಿದು (ಭರಚ. ೬–೨೫); ಕನ್ನೆಯಿವಳನು ಕೊಂದುತಿಂದರೆ ಎನ್ನ ನರಹರಿ ಮೆಚ್ಚನು (ಗೋಹಾಡು. ೯೪). ೨. ಕನ್ಯಾಮಾಸ; ಸೂರ್ಯನು ಕನ್ಯಾರಾಶಿಗೆ ಪ್ರವೇಶಮಾಡುವ ತಿಂಗಳು; ಚಾಂದ್ರಮಾನದ ಭಾದ್ರಪದಮಾಸಕ್ಕೆ ಸರಿಹೋಗುವ ಸೌರಮಾನದ ಮಾಸ: ಸುರಪತಿ ಯಮ ವರುಣ ಕುಬೇರರ ದೆಸೆ ತಲೆಯಾಗೆ ವಾಮಪಾರ್ಶ್ವದೊಳೆಂತುಂ ಚರವಾಸ್ತು ಕನ್ನೆ ಮೊದಲಾಗಿರೆ ಪಡುಗುಂ ಮೂಱು ಮೂಱು ಮಾಸಂಬರೆಗಂ (ಲೋಕೋಪ. ೩–೨೪); ಆಸಾಡಿ, ಸೋಣೆ, ಕನ್ನೆ – ಈ ಮೂರು ತಿಂಗಳೂ ಬಿಡುವು (ಅನಾಥೆ. ೧೯೯). ೩. ಕನ್ಯಾರಾಶಿ: ಮೃಗಲಾಂಛನಂಗೆ ವೃಷಭಂ ಬುಧಂಗೆ ಕನ್ನೆ ನಿಜೋಚ್ಚಂ (ಜಾತತಿ. ೧–೪೦). ೪. ಒಂದು ಬಗೆಯ ಸಸ್ಯ. 'ಕನ್ನೆ ಸೊಪ್ಪು' ಪರಾ. ೫. ಇನ್ನೂ ಸಾಗುವಳಿಯಾಗದ್ದು; ಮೀಸಲು ಮುರಿಯದುದು. 'ಕನ್ನೆನೆಲ' ಪರಾ. [< ಸಂ. ಕನ್ಯಾ]

**ಕನ್ನೆ$_2$** (ನಾ). ಒಂದು ನಾಡಿನ ಹೆಸರು: ಬಿದ್ದಣ ಚೋಳ ಮಹಾರಾಜರು ಕನ್ನೆಮೂನೂಱುಂ ಪೆಡಕಲ್ಲೆಂಟುನೂಱು . . . ಆಳುತ್ತುಂ (ಕಇಅ. ೧೧೭–೨೨–೧೮; 1073). [?]

**ಕನ್ನೆಕುಮಾರಿ$_1$** (ನಾ). ೧. ಪಾರ್ವತಿ; ದುರ್ಗಾದೇವತೆ. ೨. ಭಾರತದೇಶದ ದಕ್ಷಿಣ ಭೂಶಿರ. [< ಸಂ. ಕನ್ಯಾಕುಮಾರೀ]

**ಕನ್ನೆಕುಮಾರಿ$_2$** (ನಾ). ೧. ಲೋಳೆಸರ: "ಕಾರಕರಂಭಾ – ಕನ್ನೆಕುಮಾರಿ" (ಓಷಧಿ. ೩೨); ಅರಿಸಿನ ಕಾಗಿದೊಂಡೆ ಬಜೆ ವಾಕುಚಿ ಕನ್ನೆಕುಮಾರಿ . . . ಎಕ್ಕೆಯೆನಿಪ್ಪುವೆಲ್ಲಮಂ ಬೆರಸಿರೆ (ಖಮದ. ೧೩–೧೫೩). ೨. ಒಂದು ಮೂಲಿಕೆ (?): ಉರಿಮೂತ್ರಕ್ಕೆ:— . . . ಕನ್ನೆಕುಮಾರಿಯೆಂದರೆ ಅಡಿಕೆಚಿಟ್ಟಿನ ಬೇರಿನ ತೊಕ್ಕ ಸಕ್ಕರೆ ಸಹ ಹಾಲಲ್ಲಿ ಅರೆದು ಕುಡಿಯಲು ಮಾಣ್ಗುಂ (ವಿವೈವಿ. ೧೧೯). [?]

**ಕನ್ನೆಗಳ್ಳ** (ನಾ). ಕನ್ಯೆಯನ್ನು ಅಪಹರಿಸಿಕೊಂಡು ಹೋಗುವವನು: ಇನ್ನೆವರ ನಾವಱಿಯದಿದ್ದೆವು ಕನ್ನೆಗಳ್ಳನ ತನುಜನೆಂಬುದ ಭಿನ್ನವಿಲ್ಲದ ತಂದೆಮಕ್ಕಳ ಕಲಿತ ಕರ ಲೇಸು (ಕಾಶಿರಾ. ೧೯–೨೪). [ಕನ್ನೆ$_1$ + ಕಳ್ಳ$_1$]

**ಕನ್ನೆಗಾಲ** (ನಾ). ಕನ್ನೆಯಾಗಿರುವ ಕಾಲ; ಕನ್ಯಾವಸ್ಥೆ: ಕನ್ನಡಿಯನು ಮುಂದೆ ಪಿಡಿದೆಮಗತ್ತಿಗೆ ಚೆನ್ನಾಗಿ ನೋಡುನೋಡೆಂದು ಕನ್ನೆಗಾಲದೊಳೆಂದು ಕಾಡುವೆಯಲ್ಲವೆ (ಭರಚ. ೪೨–೧೦೯). [ಕನ್ನೆ$_1$ + ಕಾಲ$_1$]

**ಕನ್ನೆಗಿಡ** (ನಾ). ಇನ್ನೂ ಹೂವು ಕಾಯಿ ಬಿಡದಿರುವ ಎಳೆಯ ಗಿಡ (ಕ). [ಕನ್ನೆ$_1$ + ಗಿಡ (< ಗಿಡು)]

**ಕನ್ನೆಗೆಱೆ** (ನಾ). ೧. ಹೊಸದಾಗಿ ಕಟ್ಟಿಸಿದ ಕೆರೆ; ಹೊಸಕೆರೆ (?): ಅಲ್ಲಿಯ ಹಿರ್ಯಕೆಱೆ ಮೊದಲಾಗಿ . . . ಕನ್ನೆಗೆಱೆಯಾಗಿ ಕಟ್ಟಿಸಿ (ಎಕ. XVI, ತುಮ್ಕೂ. ೧೧೦–೨೮; 1163); ತದುಗ್ರಾಮದಲು ಕನ್ನೆಗೆಱೆಯ ಕಟ್ಟಿಸಿ ದೇವಾಲಯವನೆತ್ತಿಸಿ (ಮೈಆರಿ. ೧೯೪೧, ೨೬–೧೩; 1796). ೨. ಹೆಂಗಸರಿಗೆ ಮೀಸಲಾದ ಕೆರೆ (?): ಅಲ್ಲಿಯ ಸಿದ ಸಮುದ್ರವೆಂದು ಕಂನೆಗೆಱೆ ಕಟ್ಟುವ ಸಂಮಂಧ (ಎಕ. X, ಮುಳಬಾ. ೨೫೯–೬; 1447). [ಕನ್ನೆ$_1$ + ಕೆಱೆ]

**ಕನ್ನೆಗೋಗಿಲೆ** (ನಾ). ಹೆಣ್ಣು ಕೋಗಿಲೆ: ಕನ್ನೆಗೋಗಿಲೆ ತಾನೆ ಬಾಯ್ದೆಱೆದುದೊಯೆಂಬ ಬಿನ್ನಣವೆಸೆಯಲೋದಿದಳು (ಭರಚ. ೬–೨೫). [ಕನ್ನೆ$_1$ + ಕೋಗಿಲೆ]

**ಕನ್ನೆಗೋಸಾಸ** (ನಾ). ೧. ಕನ್ಯಾಸಹಸ್ರ, ಗೋವುಗಳ ಸಹಸ್ರ. ೨. ಕನ್ಯೆಯರ ಮೇಲೆ, ಗೋವುಗಳ ಮೇಲೆ ಮಾಡುವ ಸಾಹಸ: ಪರಹಿತವ್ಯಸನಿಗಳಲ್ಲದೆ ದುರ್ವ್ಯಸನಿಗಳಿಲ್ಲ ಗೋಸಾಸಮಲ್ಲದೆ ಕನ್ನೆಗೋಸಾಸಮಿಲ್ಲ (ಅಜಿಪು. ೧–೨೧ ವ). [ಕನ್ನೆ$_1$ + ಗೋ + ಸಾಸ$_0$ (< ಸಹಸ್ರ); ಕನ್ನೆ$_1$ + ಗೋ + ಸಾಸ (< ಸಾಹಸ)]

**ಕನ್ನೆತನ** (ನಾ). ಕನ್ನೆಯಾಗಿರುವಿಕೆ; ಕನ್ಯಾವಸ್ಥೆ: ಕನ್ನೆತನಂ ಗೆಯ್ಯಲ್ ಬಗೆಗುನ್ನಾಣ್ ಮಿಗೆ ಮನಮುಮಿಟ್ಟುವರಿಯಲ್ ಬಗೆಗುಂ (ಪಂಪಭಾ. ೪-೫೫); ತನ್ನ ಮುನ್ನ ಕನ್ನೆತನದೆಂದೆತ್ತಿ ಕೊಂಡಾಡಿದ ಮಾತಾಪಿತೃಪಕ್ಷದ ಜನನೀಜನಂಗಳ್ ನೋಡೆ (ಶಾಂತಿಪು. ६-६६ ವ); ಆಕೆಯ ಕನ್ನೆತನದಲಿ ನಿಲಿಸಿ ತಿರುಗಿದ ದಿನಪನಾಕ್ಷಣಕೆ (ಸಂಭಪ. ೧೪-೩೧); ಕನ್ನೆತನದ ಆ ಬಾಲೆ ಅವುಗಳಿಗೆ ಏನು ಉತ್ತರವನ್ನು ಕೊಡ ಬಲ್ಲಳು (ಜಯಂತ. ೧೮೫). [ಕನ್ನೆ$_1$ + -ತನ]

**ಕನ್ನೆತೊಟ್ಟೆ** (ನಾ). ಒಂದು ಬಗೆಯ ಔಷಧಿ ಗಿಡ (?): ಕನ್ನೆತೊಟ್ಟೆಯ ಬಡಗವರಿದ ಬೇರಂ ಸಿದ್ಧಿದಿನ ತಂದು ಅರ್ಚನೆಯ ಮಾಡಿ ಮಡಗಿ ಕೊಂಡು ನನೆ ಹೊರಟಾಗ ನಿತ್ಯವೂ ಮೂರು ಬಾರಿ ಮುಟ್ಟಸೆ ನನೆ ಮೇಲಕ್ಕೇರುವುದು (ಸಕವೈ. ೨೯೮). [ಕನ್ನೆ ? + ತೊಟ್ಟ$_3$]

**ಕನ್ನೆತ್ತರ್** 'ಕರ್ನೆತ್ತರ್' ನೋ.

**ಕನ್ನೆನೆಲ, ಕನ್ನೆಲ$_2$** (ನಾ). ಇನ್ನೂ ಸಾಗುವಳಿಯಾಗದಿರುವ ಕ್ಷೇತ್ರ; ಮಾಸಲು ಮುರಿಯದ ನೆಲ: ಸಂಶೋಧನೆ ಮಾಡಲಿಚ್ಛಿಸುವವರಿಗೆ ಇದು ಕನ್ನೆನೆಲವಾಗಿದೆ (ಸಂಶೋತ. ३೧); ಈ ಕ್ಷೇತ್ರ ಇನ್ನೂ ಕನ್ನೆನೆಲ. ಆಗಬೇಕಾದ ಕಾರ್ಯ ಅಗಾಧವಾಗಿದೆ (ದ್ರಾವಿವಿ. IV ಮುನ್ನುಡಿ). **ಕನ್ನೆಲ$_2$**: "ಹೊಸಭೂಮಿ; ಫಲವತ್ತಾದಭೂಮಿ" (ಜಾನಕೋ. ३೪). [ಕನ್ನೆ$_1$ + ನೆಲ]

**ಕನ್ನೆಮಾಡ** 'ಕನ್ನೆವಾಡ' ನೋ.

**ಕನ್ನೆಯಾಡು** (ನಾ). ಇನ್ನೂ ಬಲಿಯದಿರುವ ಆಡು; ಮರಿಹಾಕದ ಆಡು: ಕನ್ನೆಯಾಡನು ತಂದು ಬನ್ನಬಡಿಸುತ ಕೊಂದು ಉನ್ನತವ ಪಡೆವ ವಿಪ್ರನಿಂ ಆಗಸರ ಕುನ್ನಿ ಲೇಸು (ಸರ್ವಜ್ಞ. ೯३೪). [ಕನ್ನೆ$_2$ + ಆಡು$_3$]

**ಕನ್ನೆಯಾವು** (ನಾ). ಇನ್ನೂ ಕರುಹಾಕದಿರುವ ಹಸು; ಕಡಸು: ಕನ್ನೆಯಾವಿನ ಬೆನ್ನು ಹತ್ತಿ ಬರುತ್ತಿಡೆ ಒಂದು ಎಳಸು ಹೋರಿಕರು (ಸುವಸಂ. ६೫). [ಕನ್ನೆ$_1$ + ಆವು]

**ಕನ್ನೆಯ್ದಿಲ್** 'ಕರ್ನೆಯ್ದಿಲ್' ನೋ.

**ಕನ್ನೆಯ್ದಿಲು** 'ಕರ್ನೆಯ್ದಿಲ್' ನೋ.

**ಕನ್ನೆಲ$_1$** (ನಾ). ಕಲ್ಲು ತುಂಬಿದ ಗಟ್ಟಿನೆಲ; ಕಲ್ನೆಲ (?). [< ಕಲ್$_3$ + ನೆಲ]

**ಕನ್ನೆಲ$_2$** 'ಕನ್ನೆನೆಲ' ನೋ.

**ಕನ್ನೆಲ್ಲಿ** (ನಾ). ಒಂದು ಬಗೆಯ ನೆಲ್ಲಿ; ಕರಿನೆಲ್ಲಿ: ಜಾಲವಾಲಂ ನೆಲ್ಲಿ ಕನ್ನೆಲ್ಲಿ ಕಡವೊಡವು ಹಾಲೆಯಂಕೋಲೆ (ಸೋಮಚ. ३-೨). [< ಕರಿದು + ನೆಲ್ಲಿ]

**ಕನ್ನೆಲ್ಲು** (ನಾ). ಕರಿಯ ಬತ್ತ; ಕರಿನೆಲ್ಲು: "ಕೃಷ್ಣವ್ರೀಹಿ - ಕನ್ನೆಲ್ಲು" (ಓಷಧಿ. ३೮). [< ಕರಿದು + ನೆಲ್ಲು (< ನೆಲ್)]

**ಕನ್ನೆವಸದಿ** (ನಾ). ಹೊಸ ಬಸದಿ; ಒಬ್ಬನು ಕಟ್ಟಿದ ಬಸದಿಗಳಲ್ಲಿ ಮೊದಲನೆಯದು: ರೂವಾರಿ ದ್ರೋಹಘರಟ್ಟಾಚಾರಿ ಕನ್ನೆವಸದಿಯಂ ಮಾಡಿದ (ಮೈಎಂ. ೧೯३೯, ६६-२; 1130). [ಕನ್ನೆ$_1$ + ಬಸದಿ]

**ಕನ್ನೆವಾಡ, ಕನ್ನೆಮಾಡ** (ನಾ). ಕನ್ನಿಕೆಯರ ಉಪ್ಪರಿಗೆ, —ಅಂತಃಪುರ: ತನ್ನ ಚೆಂಬೊನ್ನ ಕನ್ನೆವಾಡಕ್ಕೆ ಪೋಪಳಂ ಜ್ವಳನಜಟ ನೋಡಿ (ಶಾಂತಿಪು. ೫-೧೮ವ); ನಾರದಂ ಗಗನವೀಥಿಯಿಂ ಮಿಥಿಲೆಗೆ ಬಂದು ಕನ್ನೆವಾಡದ ಬಾಗಿಲ್ವಾಡಮಂ ಪುಗುವಾಗಳ್ (ಪಂಚಾಮಾ. ೪-೮೧ ವ); ಎನ್ನಂ ಭೂಭುವನಪತಿ ನಲ್ಮೆಯಿಂ ಕನ್ನೆವಾಡಕಾ ಕ್ಷಣದೊಳಟ್ಟಿದಂ (ದಶಕು. ೧೧-೬೨): ಅರಸುಮಗಳಿಗು ಹೊರಗೆ ಹೋಗಗೊಡರ್ಕೆ! ನನ್ನ ಕನ್ನೆವಾಡದಿ ಕೂತು ನೋಡುತಿಹೆನು (ಸಚೀಗೀ. ೫६-೪); ಕನ್ನೆವಾಡದ ಬಾಗಿಲವರೆಗೂ ಕಳುಹಿಸುತ್ತ ರಾಣಿಯರಿಬ್ಬರೂ ಬಂದು ಅಲ್ಲಿ ನಿಂತರು (ಸವತಿ. ೧೫೧).

**ಕನ್ನೆಮಾಡ**: ತನ್ನ ಚೆಂಬೊನ್ನ ಕನ್ನೆಮಾಡದ ಮೇಗಣ ನೆಲೆಯ ಚೌಪಳಿಗೆಯ ಬಾಗಿಲೊಳ್ ನಿಂದು (ಪಂಪಭಾ. ೪-३೯ ವ); ಏಜಿಚಿದಳ್ ತರುಣಿ ತನ್ನಯ ರನ್ನದ ಕನ್ನೆಮಾಡಮಂ (ಕಾದಂಉ. ೧೯೮); ತನ್ನ ಕನ್ನೆಮಾಡದೋವರಿಯೊಳೊಂದು ದೆವಸಂ ಬೆಳ್ಪಸದನಂಗೊಂಡು ಸುಖ ಸುಪ್ತೆಯಾಗಿರೆ (ಜಗವಿ. ೧६-೧೧೫ ವ); ಹರುಷದಿಂದಲಿ ಕನ್ನೆಮಾಡದ ಪಿರಿಯ ಚೌಮಾಳಿಗೆಯಲತಿವಿಸ್ತರದಲೋಲಗಗೊಟ್ಟು (ಪ್ರಭುಲೀ. ೫-೧೮). [ಕನ್ನೆ$_1$ + ಮಾಡ$_1$]

**ಕನ್ನೆವುಯಿಲ್** (ನಾ). ೧. ಕನ್ನೆಯ ಕೂಗಾಟ, —ಹುಯಿಲು. ೨. ಪ್ರಪ್ರಥಮ ಹೋರಾಟ; ಮೊದಲನೆಯ ಯುದ್ಧ: ಮುನ್ನಿವನ ತಂದೆ ಮಧುರೆಯ ಮನ್ನೆಯನಂ ಗೆಲ್ವನಾವನಿದೆ ವೀಳೆಯಮೆಂಬನ್ನಂ ಚಿಕದೇವೇಂದ್ರಂ ಕನ್ನೆವುಯಿಲ್ಗೆಳಸಿ ನಮಿಸಿ ಮನ್ನಣೆವಡೆದಂ (ಅಪ್ರತಿ. ೧೪೫-೫). [ಕನ್ನೆ$_1$ + ಪುಯಿಲ್ (< ಪುಯ್ಯಲ್ ?)]

**ಕನ್ನೆವೆಣ್, ಕನ್ನೆವೆಣ್ಣು** (ನಾ). ಕನ್ಯಾವಸ್ಥೆಯ ಹೆಂಗಸು; ಕೊಡಗೂಸು: ಕನ್ನೆವೆಣ್ಗಳ ಕೆಳದಿಯರ ಕೂಡೆ ಶೈಶವೋದ್ಭಿನ್ನಯೌವನೆಯಾದ ವಿಷಯದೆ ಬರೆ (ಜೈಮಿಭಾ. ೨೯-३೦); ಕನ್ನೆವೆಂಗಳೊಡನೊಡನೆ ಸಡಗರಿಸುತಿದಿರೆವಂದು (ಮುರಾಜ. ೯६-೧೦೮); ಕಿರುಜವ್ವನದ ಕನ್ನೆವೆಣ್ಣು ದುಂಡಿಸಿದ ಸುಣ್ಣದ ಮೆಯ್ಯೊಬಗು (ಮಂತ್ರಶ. ೮೮-೧೮). **ಕನ್ನೆವೆಣ್ಣು**: ಅಲ್ಲಿರುವ ಕನ್ನೆವೆಣ್ಣುಗಳ ಮುಖಕಾಂತಿಗಳಿಂದ ಚಂದ್ರಮಂಡಲದ ಮಳೆ ಸುರಿದಂತೆ . . . ಇರುವುದು (ವಚಕಾ. ೪೯). [ಕನ್ನೆ$_1$ + ಪೆಣ್]

**ಕನ್ನೆವೆಣ್ಣು** 'ಕನ್ನೆವೆಣ್' ನೋ.

**ಕನ್ನೆವೆಱ** (ನಾ). ಬಾಲಚಂದ್ರ; (ಶುಕ್ಲಪಕ್ಷದ) ಎಳೆಯ ಚಂದ್ರ: ದಿನದಿನಕತಿ ಕಳೆಯೆತ್ತಿದಳು ಕನ್ನೆವೆಱಯಂತೆ (ತ್ರಿಭುತಿ. ३೦-೨೫). [ಕನ್ನೆ$_1$ + ಪೆಱ]

**ಕನ್ನೆವೇಟ** (ನಾ). ೧. ಕನ್ನೆಯು ಮಾಡುವ ಪ್ರಣಯ; ಕನ್ಯೆಯ ರತಿಭಾವ: ಎನ್ನ ಕಣ್ಗಳೊಳ್ ಸುಱುದುವು ತಾಮೆ ಕನ್ನಡಿಸಿದವ್ವುವು ಕನ್ನೆಯ ಕನ್ನೆವೇಟಮಂ (ಪಂಪಭಾ. ೪-६६). ೨. ಕನ್ಯೆಯ ವಿಷಯದಲ್ಲಿ ಉಂಟಾಗುವ ಪ್ರೇಮ: ತನ್ನ ಕನ್ನೆವೇಟದ ಚೆನ್ನೆಯಂ ನೆನೆದು (ಜಗವಿ. ೧६-೧६३ ವ); ಕನ್ನೆವೇಟದ ನೇಹವತಿಬಲ್ಲಿತಾತಂಗೆ (ನಂಬಿರ. ೧३-२२). [ಕನ್ನೆ$_1$ + ಬೇಟ$_3$ (< ಬೇಂಟ)]

**ಕನ್ನೆಸಾಸ** (ನಾ). ಕನ್ಯೆಯು ಮಾಡುವ ಸಾಹಸ: ಕೊಂತಿಯ ಕನ್ನೆಸಾಸ[ಪಾಠಾಂ. ಸಾಹಸ]ದಿನಾದ ಕನ್ನೆವೇಟದೊಳ್ (ಅರ್ಧನೇ. ೪-೧೦ವ). [ಕನ್ನೆ$_1$ + ಸಾಸ]

**ಕನ್ನೆಸೊಪ್ಪು** (ನಾ). ಒಂದು ಬಗೆಯ ಸೊಪ್ಪು: ಗುಬ್ಬಚ್ಚಿಬಾಳೆ, ಕನ್ನೆಸೊಪ್ಪು (ವೈಔಗಿ. ೨೪-६३೮). [ಕನ್ನೆ$_2$ + ಸೊಪ್ಪು]

**ಕನ್ನೇಶ್ವರ** (ನಾ). ಒಬ್ಬಾತನ ಹೆಸರು: ದೇವಕುಳಮಾಸೀತ್ ಕನ್ನೇಶ್ವರ ನ್ನಾಮ ಸ್ವನಾಮಧೇಯಾಂಕಿತ (ಇಅ. XIII, ೧೪-೪೦; 735). [?]

**ಕನ್ನೈದಿಲ್** 'ಕರ್ನೆಯ್ದಿಲ್' ನೋ.

**ಕನ್ನೈದಿಲು** 'ಕರ್ನೆಯ್ದಿಲ್' ನೋ.

**ಕನ್ನೈದಿಲೆ** 'ಕರ್ನೆಯ್ದಿಲ್' ನೋ.

**ಕನ್ನೈದಿಲೆರೆಯ** (ನಾ). ಚಂದ್ರ: ಕನ್ನೈದಿಲೆರೆಯನು ಬಂದನು ಕನ್ನೆಯ ಕನ್ನೆಯ ಬೆಳ್ಳನೆಯವನು ಬಂದನು (ಇಂಚಾಪ. ೧೧೧-३೮). [ಕನ್ನೈದಿಲ್ (< ಕರ್ನೆಯ್ದಿಲ್) + ಎರೆಯ (< ಎಱೆಯ)]

**ಕನ್ನೈಸು** (ಕ್ರಿ). ಕಂದು; ಕಪ್ಪಾಗು: ಬೀಗೆ ಬಿಂಬಾಧರಂ ಬಾಯುಗೆಯಿಂ ಕನ್ನೈಸೆ ಪೊಯ್ಲ್ಲಿಂ [ಪಾಠಾಂ. ಪಾಯ್ದುಗಿವನ್ನಂ ಬೆಂಗೆ ಪೊಯ್ದಾ] ಗುರುಕುಚಯುಗಳಂ ಸೊಪ್ಪುಸೊಪ್ಪಾಗೆ ಕಣ್ಗಳ್ ಮುಗಿವನ್ನಂ (ಲೀಲಾವ. ೨-೧३३). [ಕನ್ನ$_4$ + -ಇಸು$_3$]

**ಕನ್ಯಕಾಜಾತ** (ನಾ). ಮದುವೆಯಾಗದವಳು ಹಡೆದ ಮಗ; ಕಾನೀನ. [ಸಂ.]

**ಕನ್ಯಕೆ** (ನಾ). ಕುಮಾರಿ; ಕನ್ಯೆ: ಗರುಡನಾಭಿಯೆಂಬ ಗಾರುಡಿಗಂ ತತ್ಕನ್ಯಕೆಯಾಯುಷ್ಯಂ ಬರ್ಪಂತೆ ಬಂದು (ಸುಕುಮಾ. ೭–೮ ವ); ಕನ್ಯಕೆ ವಜ್ರಬಾಹುಗನುರೂಪೆ ಗಡಂ (ಪಂರಾಮಾ. ೨–೭); ಅಳಿಯಂ ಮೊಜೆಯಿಂ ಭಾಗ್ಯದಿನಳಿಯಂ ಸೌಭಾಗ್ಯದಿಂದಮಳಿಯಂ ಗುಣದಿಂದ ಳಿಯಂ ವಿತರಣ ಗುಣದಿಂದಳಿಯನೆನಿಪ್ಪಂಗೆ ಕುಡುಗೆ ಕೃತಿಕನ್ಯಕೆಯಂ (ಪುಷ್ಪಪು. ೧–೭೦). [ಸಂ. ಕನ್ಯಕಾ]

**ಕನ್ಯಸೆ** (ನಾ). ಕಿರುಬೆರಳು (?). [ಸಂ. ಕನ್ಯಸಾ]

**ಕನ್ಯಾಕುಮಾರಿ** (ನಾ). = ಕನ್ನೆಕುಮಾರಿ. [ಸಂ. ಕನ್ಯಾಕುಮಾರೀ]

**ಕನ್ಯಾದಾನ$_1$** (ನಾ). ೧. ಕನ್ಯೆಯನ್ನು ದಾನವಾಗಿ ಕೊಟ್ಟು ವಿವಾಹ ಮಾಡುವುದು: ಮೇದಿನಿಯನೊಲಿದಿತ್ತ ಫಲ ವಸ್ತ್ರಾದಿ ಕನ್ಯಾದಾನಫಲವಹುದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ (ಕುವ್ಯಾಆ. ೧–೨೦); ನೂಱು ಕನ್ಯಾದಾನವನು . . . ಧಾರೆಯೆಱೆದಿತ್ತಂತೆ ಫಲ ಕೈಸೇರುವುದು (ಹರಿಸಾ. ೧೧೭). ೨. ಮದುವೆಯಲ್ಲಿ ಕನ್ಯೆಗೆ ಕೊಡುವ ಬಳುವಳಿ: ಕನ್ಯಾದಾನಂಗೊಟ್ಟ ಭೂಮಿ (ಎಇ. XIX, ೨೦೮–೭; ?); ಹೆಣ್ಣಿಗೆ ಕಂನ್ಯಾದಾನವಾಗಿ ಸುಖದಿಂ ಭೋಗಿಸುವಂತಾಗಿ . . . ಬರೆಶಿಕೊಟ್ಟ ತಾಮ್ರಶಾಸನ (ಮೈಆರಿ. ೧೯೩೪, ೨೫–೨೧; 1394); ಮಾಣಿಸೆಟ್ಟಿಯ ಮಗ ನಾರಣಸೆಟ್ಟಿಯ ಮದವಳಿಗೆ ದೇವಕ್ಕ ಕನ್ಯಾದಾನವಾಗಿ ಕೊಟ್ಟ (ಸೌಇಇ. IX–ii, ೪೪೪–೩೩; 1433); ಹಿತ್ತಿಲು ಮನೆ ನೆಲ ಹೊಲ ಸಹವಾಗಿ ಗಂಡಿಗೆ ಮೂಲ ಹೆಂಡಿಗೆ ಕಂನ್ಯಾದಾನವಾಗಿ (ಮೈಆರಿ. ೧೯೩೪, ೧೪–೮; 1576). [ಸಂ. (ಕನ್ಯಾ + ದಾನ)]

**ಕನ್ಯಾದಾನ$_2$** (ನಾ). ಮದುವೆಗೋಸ್ಕರ ಕನ್ಯೆಯನ್ನು ಸ್ವೀಕರಿಸುವುದು (?). [ಸಂ. (ಕನ್ಯಾ + ಆದಾನ)]

**ಕನ್ಯಾಬ್ರತ** (ನಾ). = ಕನ್ಯಾವ್ರತ ೧: ಬಡನಂಟರ್ ಮದುವೆ ಮಾಡೆಯುಮೊಲ್ಲದೆ ಕನ್ಯಾಬ್ರತದೊಳ್ ಪತ್ತಿವೆಸಂಗೆಯ್ದು ಕಾಲಮಂ ಕಳೆವುತ್ತುಂ (ಶಾಂತಿಪು. ೪–೬೬ ವ). [< ಸಂ. ಕನ್ಯಾವ್ರತ]

**ಕನ್ಯಾರತ್ನ** (ನಾ). ಶ್ರೇಷ್ಠಳಾದ ಕನ್ಯೆ: ಅಂತು ಸುಭದ್ರೆಯೆಂಬ ಕನ್ಯಾರತ್ನಮಂ . . . ಆ ಪುರುಷರತ್ನಾಕರನೊಳ್ ನೆಱಪಿ (ಆದಿಪು. ೧೩–೮೦ ವ); ಇಂಥ ಕನ್ಯಾರತ್ನವು ದೊರೆಯಬೇಕಾದರೆ ಅನಂತಜನ್ಮದ ಸುಕೃತವು ಬೇಕು (ಮಂಜುಕ. ೧೫). [ಸಂ. (ಕನ್ಯಾ + ರತ್ನ)]

**ಕನ್ಯಾರಾಶಿ** (ನಾ). [ಜ್ಯೋತಿ] ಗ್ರಹಗಳು ಚಲಿಸುವ ಹನ್ನೆರಡು ರಾಶಿಗಳಲ್ಲಿ ಒಂದು: ಕನ್ಯಾರಾಶಿಸ್ಥಿತ ಚಂದ್ರಫಲ (ಜಾತತಿ. ೧೭–೬). [ಸಂ. (ಕನ್ಯಾ + ರಾಶಿ)]

**ಕನ್ಯಾರ್ಥಿ** (ನಾ). ಮದುವೆಗಾಗಿ ಕನ್ಯೆಯನ್ನು ಬೇಡುವವನು, —ಬಯಸುವವನು: ಕನ್ಯಾರ್ಥಿಯಾಗಿ ನೀಂ ಬಂದು ಬೇಡುವುದಿಳೆಯೊಳನ್ಯಾಯವಲ್ಲ (ಜೈಮಿಭಾ. ೯–೭). [ಸಂ. ಕನ್ಯಾರ್ಥಿನ್]

**ಕನ್ಯಾವಜ್ರ** (ನಾ). ಒಂದು ನಕ್ಷತ್ರಪುಂಜದ ಹೆಸರು: ಕಾಳಭೈರವ ಪ್ರಥಮ, ಸ್ವಾತೀ, ಚಿತ್ತಾ ಮತ್ತು ಉತ್ತರದ ನಕ್ಷತ್ರಗಳು ಸೇರಿ ಒಂದು ವಜ್ರಾಕೃತಿಯಾಗುತ್ತದೆ. ಇದಕ್ಕೆ ಕನ್ಯಾವಜ್ರವೆಂದು ಹೆಸರಿಟ್ಟಿದ್ದಾರೆ (ನಕ್ಷತ್ರ. ೬೦). [ಸಂ. (ಕನ್ಯಾ + ವಜ್ರ)]

**ಕನ್ಯಾವರಣ** (ನಾ). ೧. ಕನ್ಯೆಯನ್ನು ವರಿಸುವುದು; ಕನ್ಯಾಪರಿಗ್ರಹ: ಒಸಗೆಯಲಿ ನಿಸ್ಸಾಳತತಿ ಗರ್ಜಿಸಿದವಖಿಳಜನಂಗಳುತ್ಸಾಹಿಸಿತು ಕನ್ಯಾವರಣವಾಯಿತು ವೈದಿಕೋಕ್ತಿಯಲಿ (ಕುವ್ಯಾವಿ. ೧೦–೬೬). ನಿಲಿಸಿ ಮೆಟ್ಟಕ್ಕಿಯಲಿ ಮದುವಕ್ಕಳಿಗೆ ಕನ್ಯಾವರಣವಾದವು ಳಳಿಗೆ ವಟ್ಟಿಲ ಲಗ್ನದೋಂಪುಣ್ಯಾಹ ರಚನೆಯಲಿ (ತೊರರಾ. ೧–೧೩–೪೬). ೨. ಕನ್ಯೆಯನು ಅರಿಸುವುದು: ತನ್ನ ಪ್ರತಿನಿಧಿಯಾಗಿ ಹೋಗಿ ಕನ್ಯಾವರಣವನ್ನು ಮಾಡಿಕೊಂಡು ಬರಬೇಕೆಂದು . . . ಮಿತ್ರಪಾಲನನ್ನು ಪದ್ಮಿನಿಯ ಬಳಿಗೆ ಕಳುಹಿಸುತ್ತಿದ್ದನು (ಕವಿಕ. ೩೬). [ಸಂ. (ಕನ್ಯಾ + ವರಣ)]

**ಕನ್ಯಾವ್ರತ** (ನಾ). ೧. ಕನ್ಯೆಯಾಗಿಯೇ ಇರುವಿಕೆ, —ಇರುವುದು: ನಾನಿಂತು ಕನ್ಯಾವ್ರತದೊಳೆ ಕಳೆವೆಂ ಕಾಲಮಂ (ಕಾದಂಪೂ. ೯೭೮). ೨. ಕನ್ಯೆಯರು ಆಚರಿಸುವ ವ್ರತ: ಯೌವನದುನ್ನತಿ ನೆಱೆಯೆ ನೆಱೆಯೆ ಕನ್ಯಾವ್ರತಮೊಡನೆಱೆದುದು ತದೀಯ ಗುರುಜನವಿನುತಂ (ಶಾಂತಿಪು. ೫–೧೮). [ಸಂ. (ಕನ್ಯಾ + ವ್ರತ)]

**ಕನ್ಯಾಶುಲ್ಕ** (ನಾ). ಮದುವೆಯಾಗುವಾಗ ಮದುಮಗಳ ತಂದೆಗೆ ಕೊಡಬೇಕಾದ ದ್ರವ್ಯ, —ತೆರ: ಕನ್ಯಾಶುಲ್ಕಮುತಿದೋಷಕರ (ಜೈಮಿಭಾ. ೨೭–೨೯); ಅಂದಿನ ಕಾಲದಲ್ಲಿ, ಇಂದು ವರದಕ್ಷಿಣೆಯನ್ನು ಕೊಡುವಂತೆ ಕನ್ಯಾಶುಲ್ಕವನ್ನು ಕೊಡಬೇಕಾಗಿತ್ತು (ಪಂಜಪಂ. ೫೩). [ಸಂ. (ಕನ್ಯಾ + ಶುಲ್ಕ)]

**ಕನ್ಯಾಸೆರೆ** (ನಾ). ಕನ್ಯೆಯ ಸೆರೆ; ಮದುವೆಯಾಗದೆ ನಿಂತಿರುವ ಹೆಣ್ಣಿನ ಸ್ಥಿತಿ: ಕನ್ಯಾಸೆರೆ ಬಿಡಿಸಿದವರು ಪುಣ್ಯ ಕಟ್ಟಿಕೊಳ್ಳುತ್ತಾರೆ (ರೂಢಿ). [ಕನ್ಯಾ$_0$ + ಸೆರೆ$_3$ (< ಸೆಱೆ$_2$)]

**ಕನ್ಯೆ** (ನಾ). ೧. ಮದುವೆಯಾಗದವಳು; ಕುಮಾರಿ: "ನಾನಿನ್ನೂ ಕನ್ಯೆ" ಎಂದು ರಕ್ತದಲ್ಲಿ ಬೇಕಾದರೂ ಬರೆದುಕೊಡುತ್ತೇನೆ ಎಂದಳಂತೆ (ನಿಶಲು. ೧೧೭). ೨. [ನಾಟ್ಯ] ನಾಯಕಿಯರಲ್ಲಿ ಒಂದು ಪ್ರಕಾರ: ಕನ್ಯೆ, ಊಢೆಯರೆಂಬೆರಡು ಪ್ರಕಾರಮಾದ ನಾಯಕಿಯರಿಂ (ವಿವೇಕ. ೨೨೮). ೩. [ಜ್ಯೋತಿ] ಕನ್ಯಾರಾಶಿ: ಮತ್ತಮಾ ಖಗೋಳದಲ್ಲಿ . . . ಕನ್ಯೆ . . . ಮೀನವೆಂಬ ಪನ್ನೆರಡು ರಾಶಿಗಳೇ (ವಿವೇಕ. ೨೫೮). [ಸಂ. ಕನ್ಯಾ]

**ಕನ್ನಿಲ್ಲ** (ನಾ). ಒಬ್ಬಾತನ ಹೆಸರು: ಈ ಕಲ್ಲಂ ಕನ್ನಿಲ್ಲಮ್ಮಾಡಿದೊ (ಎಕ. VIII, ಸೊರಬ. ೮೫–೧೧; 876). [?]

**ಕಪ** (ನಾ). ಶ್ಲೇಷ್ಮ; ಕಫ: "ಕಫ – ಕಪ; ಗುಂಫನ – ಗುಂಪನ" (ಶಮದ. ೨೫೫ ಪ್ರಯೋ); "ಫಣಿ, ಪಣಿ; ಕಫ, ಕಪ" (ಶಬ್ದಾನು. ೧೯೨ ಪ್ರಯೋ). [< ಸಂ. ಕಫ]

**ಕಪಕಪ** (ನಾ). ಆತುರದಿಂದ ನುಂಗುವಾಗ ಉಂಟಾಗುವ ಶಬ್ದವನ್ನು ಅನುಕರಿಸುವ ಶಬ್ದ. 'ಗಪಗಪ' ಪರಾ.

**ಕಪಕಪನೆ** = ಆತುರವಾಗಿ; ವೇಗವಾಗಿ: ಎಂಥ ಮಾಂಸವಿದ್ದರೂ ತೋಳಗಳು ಅದನ್ನು ಕಪಕಪನೆ ತಿಂದುಬಿಡುತ್ತವೆ (ಮುಂಬಯು. ೫–೨೫೩). [?]

**ಕಪಟ$_1$** 'ಕಪ್ಪಡಿ$_1$' ನೋ.

**ಕಪಟ$_2$** 'ಕಪ್ಪಡ' ನೋ.

**ಕಪಟ$_3$** (ನಾ). ವಂಚನೆ; ನಟನೆ; ಮೋಸ: "ಕೈದವಂ ಕೈತಜತ್ಮುಕಮೆಂದು ಕಪಟಕ್ಕೆಯ್ದಿರ್ಪ ನಾಮ" (ಶಬ್ದಮಂ. ೫೩); ಕಪಟದಿಂದೆ ವಿಲಾಸಿನಿಯಾದ ವೇಷಮಂ ನೆನೆಯಿಸಿದಪ್ಪುದೀ ಪಸಿಯ ಬಣ್ಣಮಿವಳ್ಗೆ (ಕಾದಂಪೂ. ೩೮); ನಿನ್ನ ಕಪಟವನಱಿತೆ ವನದೊಳಗೆನ್ನನಟ್ಟಿದೆ ಮೃಗದ ಬಳಿಯಲಿ (ಕೌಶಿರಾ. ೪೩–೨೩). [ಸಂ.]

**ಕಪಟಕೃತ್ಯ** (ನಾ). ಮೋಸದ ಕಾರ್ಯ; ವಂಚನೆ: "ವೈಸಿಕಮೆನೆ ಕಪಟಕೃತ್ಯಮೆಂದಱಿಗೆ" (ಭಾರನಿ. ೧೨). [ಕಪಟ$_3$ + ಕೃತ್ಯ]

**ಕಪಟಕ್ರಿಯೆ** (ನಾ). ೧. = ಕಪಟಕೃತ್ಯ. ೨. ನಟನೆ: ಮಹಾದ್ಭುತ ಭಯ ರೌದ್ರ ಭಯಾನಕ ವೀರರಸಂಗಳನೆ ಕಪಟಕ್ರಿಯೆಯಿಂ ಪಿರಿದು ಮಾಡಿ ಪೇೞ್ವುದುಂ (ಪಂಚತಂ. ೪೩–೧೪). [ಕಪಟ$_3$ + ಕ್ರಿಯೆ]

**ಕಪಟಗಾರ** (ನಾ). ಮೋಸಗಾರ; ವಂಚಕ (ಕ).
[ಕಪಟ$_3$ + -ಗಾರ (< -ಕಾಜ)]

**ಕಪಟಗಾರ್ತಿ** (ನಾ). ಮೋಸಗಾರ್ತಿ; ವಂಚಕಿ (ಕ)
[ಕಪಟಗಾರ + -ತಿ$_1$ (< -ಇತ್ತಿ)]

**ಕಪಟತನ** (ನಾ). ಮೋಸಗಾರಿಕೆ; ವಂಚಕತನ; "ತಂತ್ರ" (ಗುವಿಮೋ. ಕ). [ಕಪಟ$_3$ + -ತನ]

**ಕಪಟತ್ವ** (ನಾ). = ಕಪಟತನ : ಮಾಡಿದುಪಕಾರವನು ಮಱೆತುಕೊಂಬರು ಮತ್ತೆ ಕೂಡಲೇ ಕಾದುವರು ಕಪಟತ್ವದಿಂದ (ಪುರಂದ. ೧-೨೮-೫).
[ಸಂ.]

**ಕಪಟನಾಟಕ** (ನಾ). ೧. ಸುಳ್ಳುವೇಷ ಕಟ್ಟಿ ಮೋಸಮಾಡುವಿಕೆ; ಮೋಸಕ್ಕಾಗಿ ಹೂಡುವ ನಟನೆ: ಅಪರಾಧಿ ನಾನಲ್ಲ ಅಪರಾಧ ವೆನಗಿಲ್ಲ ಕಪಟನಾಟಕಸೂತ್ರಧಾರಿ ನೀನೆ (ಪುರಂದ. ೨-೯೮ ಪಲ್ಲವಿ); ಅವನ ಕಪಟನಾಟಕವು ಈಗೀಗ ವ್ಯಕ್ತವಾಗುತ್ತಲಿದೆ (ರಾವಿಜ. ೩೦); ಇಬ್ಬರೂ ಕೂಡಿ ಒಂದು ಕಪಟನಾಟಕವನ್ನು ಆಡಿದೆವು (ಜಯಂತ. ೪೨೫). ೨. ಕಪಟನಾಟಕ ಆಡುವವನು; ಮಾಯಾವಿ: ಕಪಟನಾಟಕನು ಶ್ರೀಕೃಷ್ಣ ಕರದಿ ಪೊನ್ನಂಡೆಯಂ ಪಿಡಿದು (ನವಮೋ. ೧೦-೫೯).
[ಕಪಟ$_3$ + ನಾಟಕ]

**ಕಪಟಪಟು** (ನಾ). ಮೋಸಕಾರ್ಯದಲ್ಲಿ ನಿಪುಣನಾದ ವ್ಯಕ್ತಿ; ವಂಚನೆಯಲ್ಲಿ ನಿಷ್ಣಾತನಾದ ವ್ಯಕ್ತಿ: ಆತನ ಪೆಂಡತಿ ದುರ್ಮತಿ ಯೆಂಬಳ್ ಕುಲಟಿ ಕಪಟಪಟುವಪ್ಪುದಱಿಂ (ಪಂಚತಂ. ೨೭೧-೬); ಬಂದ ಸುಜನಮೃಗಧೀವರಂ ಕಪಟಪಟು[ಪಾಠಾಂ. ವಟು]ಕೌಶಿಕಂ ವಾಸಿಷ್ಠಮುನಿ ಹೋದ ಹೊತ್ತನಱಿದು (ಹಚಕಾ. ೩-೫).
[ಕಪಟ$_3$ + ಪಟು]

**ಕಪಟವಿದೂರ** (ನಾ). ಮೋಸದಿಂದ ದೂರನಾದವನು: ಕಪಟ ವಿದೂರಂ ರತಿಪತಿಹರಣಂ ಜಿತಭವಮರಣಂ ಕ್ಷಿತಿವರನಿದಿರೊಳ್ ನಿಂದಂ (ಹಮ್ಮಿ್ರ. ೨-೧೦). [ಕಪಟ$_3$ + ವಿದೂರ]

**ಕಪಟವೇಷ** (ನಾ). ಸಹಜವಲ್ಲದ ವೇಷ; ಕೃತ್ರಿಮವಾದ ವೇಷ.
[ಕಪಟ$_3$ + ವೇಷ]

**ಕಪಟಶಬರ** (ನಾ). ಬೇಡರವನ ವೇಷ ತೊಟ್ಟವನು; ನಿಜವಾದ ಬೇಡನಲ್ಲದವನು: ಮಾಣದೆಚ್ಚಂ ಕಪಟಶಬರನಂ ಕೊಳ್ಳೆನುತ್ತಮಿನ್ನ ಪಾರ್ಥಂ (ಶಬಶಂ. ೪-೩೯). [ಕಪಟ$_3$ + ಶಬರ]

**ಕಪಟಸನ್ಯಾಸ** (ನಾ). ತೋರಿಕೆಯ ಸನ್ಯಾಸ: ಅವಳದು ಕಪಟ ಸನ್ಯಾಸವೋ ನಿಜವಾದ ಭಕ್ತಿಯ ಭಾವವೋ ಜಗತ್ತಿಗೆ ತಿಳಿಸುವುದು ಅವನ ಉದ್ದೇಶ (ಶೂನ್ಯಕು. ೧೨೩). [ಕಪಟ$_3$ + ಸನ್ಯಾಸ]

**ಕಪಟಸನ್ಯಾಸಿ** (ನಾ). ಸನ್ಯಾಸಿಯ ಸೋಗು ಹಾಕಿದವನು; ಸನ್ಯಾಸಿಯ ವೇಷಧಾರಿ: ಅರ್ಜುನನಂತಹ ವೀರಾಗ್ರಣಿಯು ಆ ಭಾಮಿನಿಯನ್ನು ಹೊಂದಲು ಕಪಟಸನ್ಯಾಸಿಯಾಗಬೇಕಾಯಿತು (ಭಾರದ. ೪೮೬). [ಕಪಟ$_3$ + ಸನ್ಯಾಸಿ]

**ಕಪಟಸ್ಥ** (ನಾ). = ಕಪಟಗಾರ. [ಸಂ.]

**ಕಪಟಹೃದಯ** (ನಾ). ೧. ವಂಚನೆಯ ಮನಸ್ಸು ೨. ವಂಚನೆಯ ಮನಸ್ಸುಳ್ಳವನು: "ಕಱುಬನೆನೆ ಕಪಟಹೃದಯಂ" (ಭಾರನಿ. ೧೫).
[ಕಪಟ$_3$ + ಹೃದಯ]

**ಕಪಟಾತ್ಮ** (ನಾ). ೧. ಮೋಸಗಾರಿಕೆಯಿಂದ ತುಂಬಿದ ಮನಸ್ಸು; ವಂಚಕತನ: ಓಪ ಭೋಗವೆ ನಿನ್ನ ಯಾಗಸ್ಥಾಪನಂ ಕಪಟಾತ್ಮವೇ ತಪವು (ಬಸವು. ೪೧-೯). ೨. ಮೋಸಗಾರ; ಕಪಟಿ; ವಂಚಕ.
[ಸಂ. ಕಪಟಾತ್ಮನ್]

**ಕಪಟಿ** (ನಾ). ಮೋಸಗಾರ; ವಂಚಕ: ತಿಳಿದು ತಪ್ಪು ಮಾಡಿದವರು ಕಪಟಿಗಳು; ಮಿಥ್ಯಾಚಾರರು (ಶಕ್ತಿವಿ. ೧೦೩); ಹೀಗೆ ಕಪಟಿಗಳಾಗಿರ ಬಾರದು (ನೀತಿಚಿಂ. IV, ೩೦). [ಸಂ. ಕಪಟಿನ್]

**ಕಪಟಿಕ** (ನಾ). ೧. ಮೋಸಗಾರ; ಕಪಟಿ. ೨. ಮೋಸಗಾರಿಕೆ; ಕಪಟತನ (ಕ). [ಸಂ.]

**ಕಪಟಿಸು** (ಕ್ರಿ). ಕಪಟಮಾಡು; ಮೋಸಮಾಡು: "ಛದಯತಿ = ಕಪ ಟಿಸಿದಪಂ" (ಕಾಶಕ್ಯ. ೨೯೫). [ಕಪಟ$_3$ + -ಇಸು$_3$]

**ಕಪಟೆ$_1$** 'ಕಪ್ಪಡಿ$_1$' ನೋ.

**ಕಪಟೆ$_2$** (ನಾ). ಮೋಸಗಾತಿ: ಪಂಕರುಹಾರಾತಿಸುತಾಂಶದೊಳ್ ಕಪಟೆ ದುಶ್ಚಾರಿತ್ರೆ ಶುಕ್ರಾಂಶದೊಳ್ (ಜಾತತಿ. ೨೨-೩).
[ಕಪಟ$_3$ + -ಎ$_2$]

**ಕಪಟೋಪಾಧ್ಯ** (ನಾ). ಉಪಾಧ್ಯಾಯನ ಸೋಗು ಹಾಕಿದವನು; ಇವರು ಕಪಟೋಪಾಧ್ಯರೆಂಬುದನವನು ಬಲ್ಲನೆ (ಕುವ್ಯಾಅ. ೧೧-೯).
[ಕಪಟ$_3$ + ಉಪಾಧ್ಯ (< ಉಪಾಧ್ಯ$_1$)]

**ಕಪಡ** 'ಕಪ್ಪಡ' ನೋ.

**ಕಪಣಿ** 'ಕಪನಿ' ನೋ.

**ಕಪನಿ, ಕಪಣಿ, ಕಪಿನಿ, ಕಫನಿ** (ನಾ). ೧. ಬೈರಾಗಿಗಳು ತೊಡುವ, ತೋಳುಗಳಿಲ್ಲದ ಉದ್ದನೆಯ ಅಂಗಿ: ಇದೇನು ವೇಷ? ತಲೆಯಲ್ಲಿ ಜಡೆ, ಮೈಯಲ್ಲಿ ಕಪನಿ, ಕಯ್ಯಲ್ಲಿ ಜೋಳಿಗೆ (ಪರಿಸ. ೫೯). ಮೈಮೇಲೆ ಕಾವೀ ಬಣ್ಣದ ಕಪನಿ (ಕುರುಹಿಂ. ೨೩). **ಕಪಣಿ:** ೧. "ಉದ್ದನ್ನ ಅಂಗಿ" (ಜಾನಕೋ. ೩೪). ೨. "ಸಡಿಲವಾದ, ಪೂರ್ತಿತೋಳಿನ, ಬಿಳಿಯ ಬಟ್ಟೆಯ ಉಡುಪು: ಪಾದ್ರಿಯ ಕಪಣಿ" (surplice. ಇಂಕನ). **ಕಪಿನಿ:** ೧. ಧರಿಸಿರುವ ಆ ಕಪಿನಿಯಂತಹ ಅಂಜೂರವರ್ಣದ ನಿಲುವಂಗಿ . . . ಭಕ್ತಿಯ ಕಾಣಿಕೆಯನ್ನು ಒಪ್ಪಿಸುವಂತೆ ಬಲಾತ್ಕರಿಸುವಂತಿದೆ (ಮಲ್ಲಿ. ೨೧೮); ಕಪಿನಿಯನ್ನು ತೊಟ್ಟು ತಲೆಗೆ ಪಾಗನ್ನು ಸುತ್ತಿ ಒಬ್ಬ ಶಿವಾಚಾರಸ್ವಾಮಿಯಾಗಿ ಕಂಡನು (ಚಕರಾ. ೨೦). **ಕಫನಿ:** ೧. ಮೈಯಲ್ಲಿ ಹಸರುಬಣ್ಣದ 'ಕಫನಿ'ಯನ್ನು ತೊಟ್ಟು . . . ಔರಂಗ ಜೇಬನು ನಿಂತಿದ್ದನು (ಔರಂಗ. ೧೬೦); ಈ ಕಫನಿಯ ಕಳ್ಳ ತಾನು ದೊಡ್ಡ ಸ್ವಾಮಿಯೆಂದು ಹೇಳಿಕೊಂಡು . . . ಹಣವನ್ನೂ ಧಾನ್ಯವನ್ನೂ ಎತ್ತಿಕೊಂಡು ಬರುತ್ತಿದ್ದ (ನಾಪೋಲೀ. ೨೪೬).
[← ಅರ. ಪಾರ. ಕಫ್ನೀ; ಮರಾ. ಕಫಣೀ, ಕಫನೀ]

**ಕಪರ** 'ಕಪ್ಪಡ' ನೋ.

**ಕಪರಬಾಳೆ** 'ಕಪ್ಪುರವಾಳೆ' ನೋ.

**ಕಪರಸುಂಠಿ** (ನಾ). ಕಣ್ಣಿಲ್ಲದಿರುವ ಸಾವಿರಾರು ಕಾಲುಗಳಿರುವ ಒಂದು ಬಗೆಯ ಹುಳು; ಒನಕೆ ಮಂಡಿ; ಸಾವಿರ ಕಾಲಿನ ಹುಳು; ಬೆಟ್ಟಬೆನಕ (ಉಕ): ಕಪರಸುಂಠಿ ಹಾವಿಗೆ ಕಣ್ಣುಕೊಟ್ಟು ಕಾಲು ಪಡೆಯಿತಂತೆ (ರೂಢಿ). [?]

**ಕಪರ್ದ** (ನಾ). ೧. ಕವಡೆ: "ಕಪರ್ದಂ ವರಾಟಕಮೆನಲ್ಕವಡೆಯಕ್ಕುಂ" (ಮಂಗರಾ. ೧೨೨-೯). ೨. ಶಿವನ ಗಂಟುಗಟ್ಟಿದ ಜಡೆ; ಜಟೆ: "ಆ ಮಹಾಶಿವನ ಜಡೆಗಳು ಕಪರ್ದಮೆನಿಕ್ಕುಂ" (ಮಂಗರಾ. ೫-೧೪); ಕುಂಡಲದಿನೊಪ್ಪುವ ಸೋರ್ಮುಡಿಯಿಂ ಕಪರ್ದದಿಂದಂ ಕಮನೀಯ ವಸ್ತ್ರದೆ (ಉಮಾಶ. ೧೧); ಅರೆಗೆಂಪಿಡಿದ ಮುಡಿದ ಜಡೆಮುಡಿ ಬಾಂಗೂ ದಲನ ಕಪರ್ದಮಂ ಕೀಲ್ಮಾಡೆ (ರಾಮಾಶ್ವ. ೧೩೯-೮); [ಸಂ.]

**ಕಪರ್ದಕ** (ನಾ). ಕವಡೆ: ಅಂಥ ಜಿಗಟು, ರಿಪಿಜಿಡ್ಡು ಹುಡುಗರಿಗೆ ಕೂಡ ಎಷ್ಟು ಪ್ರಯತ್ನಮಾಡಿದರೂ ಅವರ ಕೈಯಿಂದ ಒಂದು ಕಪರ್ದಕ ವನ್ನೂ ಉಚ್ಚಿಕೊಳ್ಳಲು ಸಾಧ್ಯವಾಗಿದ್ದಿಲ್ಲ (ಇಪ್ಪಕ. ೨೯೯). [ಸಂ.]

**ಕಪರ್ದಿ$_1$** (ನಾ). ೧. ಜಡೆಗಟ್ಟಿದ ಕೂದಲುಳ್ಳವನು; ಶಿವ: ಬಾಲೆಯ ಬಾಲಭಕ್ತಿಗೊಲ್ದು ಕಪರ್ದಿ ಕನಸಿನೊಳ್ ಬಂದು (ರಾಮಾಶ್ವ. ೧೨೫–೧೮). ೨. [ಛಂದ] 'ಗುರು' ಚಿಹ್ನೆಗೆ ಇನ್ನೊಂದು ಹೆಸರು: ವ್ಯೋಮ ದ್ವಯಂ ಭಾನು ಕಪರ್ದಿಯುಗ್ಮಂ ತಾಮಾಗಿರಲ್ಕೆಂಟಚಿಕೂಳಾ ವಿರಾಮಂ ಈಮಾಚ್ಕೆಯಿಂದೋದಿದೊಡಿಂದ್ರವಜ್ರಂ ನಾ ಮಂ (ಛಂದೋಂಬು. ೨–೬೩). [ಸಂ. ಕಪರ್ದಿನ್]

**ಕಪರ್ದಿ$_2$** (ನಾ). = ಕಪರ್ದ೧: ಪ್ರೇಮಚಂದನಿಂದ ಒಂದು ಕಾಸು ಕಪರ್ದಿಯಷ್ಟು ಲಾಭವಾಗುತ್ತಿದ್ದಿಲ್ಲ (ತೊಳೆಮು. ೧೫೬); ಅವನು ಧನ ಪಿಶಾಚಿಯು. ತನ್ನ ಹಣದಲ್ಲಿಯ ಒಂದು ಕಪರ್ದಿಯನ್ನು ಬಿಡಲಾರನು (ಜಯಂತ. ೪೬೩). [< ಸಂ. ಕಪರ್ದ]

**ಕಪರ್ದಿಕ** (ನಾ). = ಕಪರ್ದ೧: '. . . ಇದರಲ್ಲಿಯ ಒಂದು ಕಪರ್ದಿಕ ಕೂಡ ಯಾರಿಗೂ ದೊರೆಯಲಾರದು' (ಇಂದುಮು. ೨೪); ಸತ್ಯಯುಗ ದಲ್ಲಿ ಒಂದು ಕಪರ್ದಿಕವನ್ನು ಕೊಟ್ಟರೆ ಏಳು ಕಲಶ ಶುದ್ಧಹೈಯಂಗ ವೀನವು ದೊರೆಯುತ್ತಿತ್ತು (ಕುಂಹಿಂ. ೮೫); ಹೀಗೆ ಮಾಡುವಾಗ ಮನೆ ತನದ ಆಸ್ತಿಯಲ್ಲಿಯ ಒಂದು ಕಪರ್ದಿಕಕ್ಕೂ ಕೈ ಹಚ್ಚುವ ಮನಸ್ಸು ಮಾಡಲಿಲ್ಲ (ದೀಪಹ. I, ೧೪೬).

[ಸಂ. ಕಪರ್ದಿಕಾ]

**ಕಪರ್ದಿಕಾಸು** (ನಾ). ಕವಡೆಕಾಸು; ತೀರ ಚಿಕ್ಕನಾಣ್ಯ: ಪ್ರಾಣ ಹೋದರೂ ಆವನು ಇನ್ನ ನನ್ನ ಕಪರ್ದೀಕಾಸು ಕಂಡಾನೇನು? (ಹನ್ನೊಂದ. ೧೧೧); ಕಂಗಾಲಪರಿಸ್ಥಿತಿಯಲ್ಲಿದ್ದ ಇವನಿಗೇನು ಆ ತಂದೆಯು ಕಪರ್ದಿಕಾಸಿನ ಸಹಾಯ ನೀಡಲಿಲ್ಲ (ದೋರಾಕ. ೨೦).

[ಕಪರ್ದಿ$_2$ + ಕಾಸು$_2$]

**ಕಪಲಿ** 'ಕಪಿಲೆ$_1$' ನೋ.

**ಕಪಲೆ** 'ಕಪಿಲೆ$_1$' ನೋ.

**ಕಪವಡಿಗ** (ನಾ). (?): ಕುಂಚವಡಿಗಂ, ಫುಲ್ಲವಡಿಗಂ, ಕಪವಡಿಗಂ [ಪಾಠಾಂ. (ಕಳ್ವಡಿಗಂ)ಕಳಸವಡಿಗಂ] (ಶಮುದ. ಮ. ೨೦೦ ಪ್ರಯೋ).

[ಕಪ? + -ವಡಿಗ]

**ಕಪಾಟ**, ಕಪಾಟು (ನಾ). ೧. ಬಾಗಿಲಿನ ಒಂದು ರೆಕ್ಕೆ, —ಪಡಿ; ಕದ. ೨. ಬಾಗಿಲು. ೩. ಕಣ್ಣಿಗೆ ಅಕ್ಕಪಕ್ಕ ಕಾಣದಂತೆ (ಕುದುರೆಗೆ) ಕಟ್ಟಿದ ಚರ್ಮದ ಪಟ್ಟಿ; ಕಣ್ಣುಪಟ್ಟಿ: ಕತೆ ಅಡ್ಡದಾರಿ ಹಿಡಿಯದೆ, ಹೆಳವದೆ, ಕಪಾಟ ಕಟ್ಟಿದ ಕುದುರೆಯಂತೆ ನಾಯಕನ ಗತಿಯನ್ನು ಹಿಂಬಾಲಿಸುತ್ತದೆ (ನಂಜುಂಡ. ೧೫೧). ೪. ಬಾಗಿಲುಳ್ಳ ನಿಲುಪೆಟ್ಟಿಗೆ; ಬೀರು; ಅಲ್ಮೈರ; ಅಲಮಾರು: ಆವನು ಒಂದು ಕಪಾಟದೊಳಗೆ ಜೇನು ತುಪ್ಪದ ಬುರುಡೆಯನ್ನು ಇಟ್ಟಿದ್ದನು (ಮುಂಬಯಿ. ೫–೮೩). **ಕಪಾಟು**: ೪. ಅವರು ತಮ್ಮ ಕಪಾಟಿನ ಕೀಲಿಕೈಯನ್ನು ದೇವರ ಮನೆಯಲ್ಲಿಯೇ ಇಟ್ಟು ಮರೆತುಬಿಟ್ಟರು (ಇತಿಶ್ರೀ. ೧೬೨); ಸಾಮಾನುಗಳನ್ನಿಡುವ ಕಪಾಟು ಗಳು, ಕೆಲಸದ ಮೇಜುಗಳು . . . ಮೊದಲಾದ ವ್ಯವಸ್ಥೆ (ಅಡುಸೌ. ೧೧); ಗ್ರಂಥಗಳನ್ನಿಡುವ ಕಪಾಟುಗಳು (ಗ್ರಂಥಾಲ. ೭). [ಸಂ.]

**ಕಪಾಟೆ** 'ಕಪ್ಪಡ' ನೋ.

**ಕಪಾಟು** 'ಕಪಾಟ' ನೋ.

**ಕಪಾಟೆ** 'ಕಪ್ಪಡ' ನೋ.

**ಕಪಾಯಿ** 'ಕಬಾಯಿ$_1$' ನೋ.

**ಕಪಾಯಿಮಾಲೀಸು$_1$** (ನಾ). ಒಂದು ಬಗೆಯ ಮಾಲೀಸು: ಆ ದಿವಸ ಹಯಾತನು ದೊಡ್ಡ ಕುದುರೆಯನ್ನು ಮಾಲೀಸು ಮಾಡುತ್ತಿದ್ದನು. ಕಪಾಯಿಮಾಲೀಸು ಆಯಿತು (ಚೆಂಗಾಳ್ವ. ೨೭).

[ಕಪಾಯಿ$_0$ + ಮಾಲೀಸು]

**ಕಪಾಲ$_1$**, ಕಪಾಳ$_1$ (ನಾ). ಕೆನ್ನೆ; ಗಲ್ಲ; ಕಪೋಲ. 'ಕಪಾಲಕ್ರಿಯೆ' ಪರಾ. **ಕಪಾಳ$_1$**: "ಕಪಾಳಿಗೆ ಹೊಡಿಸಿಕೊಂಡೀ, ಸುಮ್ಮನೇ ಹೋಗು" (ಬಿವರಿ. ೧೧೮); ಬಲಗಯ್ಯಿಂದ ಅತನ ಕಪಾಳಿಗೆ ಪ್ರಸಾದವನ್ನಿತ್ತಳು (ಬೆಸ್ತುಹಿಂ. ೧೬). 'ಕಪಾಳಮೋಕ್ಷ' ಪರಾ.

**ಕಪ್ಪಕಪಾಳ** = (ದ್ವಿರುಕ್ತಿ): ಪ್ರಹ್ಲಾದನಿಗೆ ಕಪ್ಪಕಪಾಳ ಹೊಡೆ ದಂತಾಗಿಹತ್ತಿತು (ನಿರಾಥ. ೯೧). [< ಸಂ. ಕಪೋಲ]

**ಕಪಾಲ$_2$**, ಕಪಾಳ$_2$ (ನಾ). ೧. ಮಡಕೆಯ ಚೂರು; ಹಂಚು; ಬೋಕಿ: "ಓಡಿನಲಿ ಕಪಾಲವೆಂಬುದು" (ಮಂಗರಾ. ೧೪೦–೯). ೨. ತಲೆ ಬುರುಡೆ; ತಲೆಚಿಪ್ಪು: "ಶಿರೋಸ್ಥಿ ಕರೋಟಿಯೆನೆ ಕಪಾಲಂ" (ಮಂಗರಾ. ೧೧೭–೬); ತಮತಮಗೆಲ್ಲಾ ಖಟ್ವಾಂಗಕಪಾಲತ್ರಿಶೂಲಧರ ದೇವರಾರು ಭಕ್ತರಾರು ಹೇಳಿರಯ್ಯಾ (ಬಸವ. ೮೧೮); ಕರದ ಬ್ರಹ್ಮಕಪಾಲ ಕಾಹುತಿಯನೀಯಬೇಕೆಂದೆನ್ನಲು (ಭಕ್ತಾಚ. ೩–೪೭). ೩. ಮುಚ್ಚಳ; ತಟ್ಟೆ. ೪. ಬಟ್ಟಲು; ಪಾತ್ರೆ. ೫. [ರಾಜ್ಯಶಾ] ಹದಿನಾರು ಬಗೆಯ ಸಂಧಿಗಳಲ್ಲಿ ಒಂದು ಪ್ರಕಾರ; ಸರಿಸಮಾನತೆಯಲ್ಲಿ ಮಾಡಿ ಕೊಳ್ಳುವ ಸಂಧಿ: ಸಂಪ್ರದಾನ ಕಪಾಲ ಉಪಹಾಸನ ಸಂತಾನ . . . ಸ್ಕಂಧೋಪನಯಮೆಂದು ಷೋಡಶವಿಧಮಕ್ಕುಂ . . . ಸಮಸಂಧಿ ಕಪಾಲಮೆಂಬುದಕ್ಕುಂ (ಪಂಚತಂ. ೨೨೦–೭); **ಕಪಾಳ$_2$**: ೪. ಕನಕ ಪಿಂಗಳ ಜಟಾಬಂಧಕಳಾಪನುಂ ದಂಡ [ಕಪಾಳ]ಹಸ್ತನುಂ . . . ಆಗಿ ವ್ಯಾಸ ಭಟ್ಟಾರಕಂ ಪುಟ್ಟುವುದುಂ (ಪಂಪಭಾ. ೧–೬೯ ವ). [ಸಂ.]

**ಕಪಾಲಕ್ರಿಯೆ** (ನಾ). ಕೆನ್ನೆಗೆ ಹೊಡೆಯುವಿಕೆ; ಕೆನ್ನೆಯ ಮೇಲೆ ಏಟುಹಾಕುವುದು: "ಪತ್ರವನ್ನೀಗಲೇ ಕೊಡು, ಇಲ್ಲದಿದ್ದರೆ ಕ್ಷಣಮಾತ್ರ ದಲ್ಲಿ ನಿನ್ನ ಕಪಾಲಕ್ರಿಯೆಯಾಗುವುದು" (ಯೋಧರು. ೧೦೪).

[ಕಪಾಲ$_1$ + ಕ್ರಿಯೆ]

**ಕಪಾಲಪಾಣಿ** (ನಾ). = ಕಪಾಲಹಸ್ತ: ಶೂಲಿ ಕಪಾಲಪಾಣಿ ದಯೆಯಿಂ ಬಂದಿರ್ದಂ (ಪಂಪಭಾ. ೧೦–೧೨೦); ಒಕ್ಕುಮಿಕ್ಕು ಪರೆದಂತಿರೆ ಪರ್ಬಿದ ಸಂಜೆಗೆಂಪು ತತ್ಕಾಲ ಕಪಾಲಪಾಣಿಧೃತ ಚಂದ್ರಕಪಾಲಮೆ ಪೀರ್ದುರ್ದೆಂದಿನಂ ಬಾಲರಸಾಲಪಲ್ಲವಸಮದ್ಯುತಿ ತದ್ಯುತಿ ಪಿಂಗಿತಾಕ್ಷಣಂ (ರಾಜಶೇ. ೧೧–೫೦). [ಕಪಾಲ$_1$ + ಪಾಣಿ$_2$]

**ಕಪಾಲಭಾತಿ** (ನಾ). [ಯೋಗ] ಒಂದು ಬಗೆಯ ಯೋಗ: ಯಿಡಾ ಪಿಂಗಳದ್ವಾರಂಗಳಲ್ಲಿ ಅತಿತೀವ್ರದಲ್ಲಿ ರೇಚಕ ಪೂರಕಂಗಳ ಮಾಡೂದು ಕಪಾಲಭಾತಿಯೆನಿಪುದೂ (ಶಿವಪ್ರ. ೬–೮). [?]

**ಕಪಾಲಶೂಲೆ** (ನಾ). ತಲೆನೋವು: ಗಂಡೂಷ ಗುಣ – ಸಕಲವಾದ ಕಂಠರೋಗವನ್ನೂ, ಶ್ಲೇಷ್ಮರೋಗವನ್ನೂ . . . ಕಪಾಲಶೂಲೆಯನ್ನೂ, ಕೆಮ್ಮನ್ನೂ, ಹಲ್ಲುನೋವನ್ನೂ . . . ಪರಿಹರಿಸಿ (ಸಕವೈ. ೨೭).

[ಕಪಾಲ$_2$ + ಶೂಲೆ]

**ಕಪಾಲಹಸ್ತ** (ನಾ). ಕಪಾಲವನ್ನು ಹಸ್ತದಲ್ಲಿ ಧರಿಸಿದವನು; ಶಿವ (ಕಿ). [ಕಪಾಲ + ಹಸ್ತ]

**ಕಪಾಲಿ$_1$** (ನಾ). = ಕಪಾಲಹಸ್ತ: ಎಲೆಯೆಲೆ ಕ[ಪಾಠಾಂ. ಕಾ] ಪಾಲಿ ಎಲೆಯೆಲೆ ಶಿಶುವಧೆಕಾಜಾ ಎಲೆಯೆಲೆ ಕರುಣವಿಲ್ಲದ ಕರ್ತಾ ಏನ್ನೆ ಇದೇನಂ ಮಾಡಿದೇ (ನಂಬಿರ. ೧೬–೭೨); ಭಜಕ ಕಾಮ್ಯದ ಕಪಾಲಿ ತ್ರಿಶೂಲಿ (ಉದ್ಭದೇ. ೭–೪೦). [ಸಂ. ಕಪಾಲಿನ್]

**ಕಪಾಲಿ$_2$** (ನಾ). ನೀರು ತುಂಬಿ ಸಾಗಿಸುವುದಕ್ಕಾಗಿ ಮಾಡಿದ ಚರ್ಮದ ಹಸುಬೆ: ಹೊಲದಲ್ಲಿ ಭಾವಿ ಇಲ್ಲದಿದ್ದರೆ ಒಂದು ಕೋಣ ವನ್ನು ಒಂದು ಕಪಾಲಿಯನ್ನು ಮತ್ತು ಒಂದು ಆಳನ್ನು ಅದಕ್ಕಿಟ್ಟು ಬಿಟ್ಟರೆ ನಾಲ್ಕೈದು ವರ್ಷಕ್ಕೆ ಫಲಗಳಾಗುವುವು (ಕೃಷಿಪ್ರ. ೧೩೮). 'ಪಕಾಲಿ' ಪರಾ. [← ಮರಾ. ಹಿಂ. ಪಖಾಲ್]

**ಕಪಾಲಿನಿ** (ನಾ). ೧. ಹೀನ ಕುಲದ ಹೆಂಗಸು; ಬ್ರಾಹ್ಮಣಸ್ತ್ರೀಗೆ ಬೆಸ್ತರಿಂದ ಹುಟ್ಟಿದವಳು: ದಾಸಿಯ ಬುರುಂಡೆಯ ಕಪಾಲಿನಿಯ ಭರ್ತಾರನುಳಿದವಳ . . . ಇನಿಬರೊಡನಾಡಿದೊಡೆ ಬಾಲೆಯರ್ ತವೆ ದುರಾಚಾರಮಂ ಕಲಿವರ್ (ಜೈಮಿಭಾ. ೫-೫೮). ೨. ಕೈಲಾಸದಲ್ಲಿ ಇರುವ ಶಕ್ತಿದೇವತೆಯರಲ್ಲಿ ಒಬ್ಬಳು: ವಾಣಿ . . . ಶಾಕಿನಿ ಕಪಾಲಿನಿ ಡಾಕಿನಿ ಕಾಳಿ (ಶಬಶಂ. ೬-೧೨). [ಸಂ. ಕಪಾಲಿನೀ]

**ಕಪಾಳ**$_1$ 'ಕಪಾಲ$_1$' ನೋ.

**ಕಪಾಳ**$_2$ 'ಕಪಾಲ$_2$' ನೋ.

**ಕಪಾಳಮೋಕ್ಷ** (ನಾ). ಕೆನ್ನೆಗೆ ಕೊಡುವ ಏಟು: ಅವಳ ಕರೆಗೆ ಅವನು ಓಗೊಟ್ಟು ನಿಲ್ಲಬೇಕು. ಇಲ್ಲವಾದರೆ ಕಪಾಳಮೋಕ್ಷ ಅವನಿಗೆ ತಪ್ಪಿದ್ದಲ್ಲ (ಹೊಸಕ್ಷಿ. ೬೦) [ಕಪಾಳ$_1$ (= ಕಪಾಲ$_1$) + ಮೋಕ್ಷ]

**ಕಪಾಳಶುದ್ಧಿ** (ನಾ). = ಕಪಾಳಮೋಕ್ಷ: ಆಗ ಅವನು ಛೀ! ನಾಯಿ ಎಂದು ಕಪಾಳಶುದ್ಧಿ ಮಾಡಿದನು. ಛಿ ಉಪ್ಪಾರ! ಎಂದು ಗಂಡನಿಗೆ ಮುಯ್ಯಿಗೆ ಮುಯ್ಯಿ ತೀರಿಸಿದಳು (ಕಥಾಮಂ. IV, ೩೯). [ಕಪಾಳ$_1$ (= ಕಪಾಲ$_1$) + ಶುದ್ಧಿ]

**ಕಪಾಳಿಸು** (ಕ್ರಿ). (?) "ನೆತ್ತಿಗೇರು": (ಯೋಗಾಂವಿ. ಕೋಶ); ಹಳಿವ ಸುಜಿನ ಘುಣ್ಣಿಂ ಸಡಿಲಿದ ಹಡಿಕೆಯ ಗಂಧ ಕಪಾಳಿಸಲಿರದೆ ಕರಾಂಘ್ರಿಗಳಿಂ ಕೊಡಹುತ್ತೊಗಡಿಸಿ ಸೆಡೆದು (ಯೋಗಾಂವಿ. ೧-೩೮). [ಕಪಾಳ$_1$ (= ಕಪಾಲ$_1$) + -ಇಸು$_3$]

**ಕಪಿ** (ನಾ). ಕೋತಿ; ಮಂಗ: "ಬಲೀಮುಖಃ, ಮರ್ಕಟಃ . . . ಹರಿಃ, ಕಪಿಃ, ಕೀಶಃ, ಶಾಖಾಮೃಗಃ, ವಾನರಃ – ಈ ೧೧ ಕೋಡಗಂ" (ಹಲಾಯು. ೩೯-೭೮); ಕಪಿಗೇಕಮಲಮಾಣಿಕವೆಂದನಾ ಭೀಷ್ಮ (ಕುವ್ಯಾಸ. ೯-೧೧); ಕಪಿಗಳ ಲಾಗುಗಳ ಲಂಘನೆಯಲೆಸೆದುದು ಪೂಗಣೆಯ ನಾಡುಂಬೊಲನವೊಲು ತತ್ಪುರೋದ್ಯಾನ (ತೊರರಾ. ೧-೯-೧೩). [ಸಂ.]

**ಕಪಿಂಜಲ, ಕಪಿಂಜಳ** (ನಾ). ೧. ಚಾತಕ ಪಕ್ಷಿ. ೨. ತಿತ್ತಿರಿ ಪಕ್ಷಿ: ಇದೆ ಕುಕ್ಕುಟರಭಸಮಿದೆ ಕಪಿಂಜಲ [ನಿನದಂ] (ಕಾದಂಪೂ. ೧೫೬). ೩. ಬಾಣನ ಕಾದಂಬರಿಯಲ್ಲಿನ ಒಬ್ಬ ಋಷಿಕುಮಾರನ ಹೆಸರು: ಕಪಿಂಜಲಂ ಬಾಯಳಿದ ಬ್ರಹ್ಮಣ್ಯಮೆಂದು ಬಿಡೆ ಪುಯ್ಯಲ್ಚಲ್ (ಕಾದಂಪೂ. ೯೧೮). **ಕಪಿಂಜಳ**: ೪. ಒಂದು ಬಗೆಯ ಪಾರಿವಾಳ: "ಕಪಿಂಜಳ ಮೆನಲು ಹೊಜಿಸು" (ಮಂಗರಾ. ೫೧-೬). ೫. ಲಾವುಗೆ: "ಲಾವುಗೆ ಕಪಿಂಜಳ [ಪಾಠಾಂ. ಲ]ಮೆನಿಕ್ಕು" (ಮಂಗರಾ. ೫೨-೧೧). [ಸಂ.]

**ಕಪಿಂಜಳ** 'ಕಪಿಂಜಲ' ನೋ.

**ಕಪಿಕಚ್ಚು** (ನಾ). = ಕಪಿತುರಚಿ (೬). [ಸಂ. ಕಪಿಕಚ್ಛೂ]

**ಕಪಿಕೇತು** (ನಾ). ೧. ಕಪಿಯನ್ನು ಅಥವಾ ಕಪಿಯ ಲಾಂಛನವನ್ನು ಧ್ವಜದಲ್ಲಿ ಉಳ್ಳವನು; ಹನುಮಧ್ವಜ; ಅರ್ಜುನ. ೨. [ಜೈನ] ತನ್ನ ಬಾವುಟದಲ್ಲಿ ಕಪಿಯ ಲಾಂಛನವುಳ್ಳವನು; ಸುಗ್ರೀವ: ಕಪಿಕೇತುವುದಾತ್ತಂ ಬಂದಂ ನಡೆವ ವರ್ಷಧರಶೈಲಮೆಂಬಿನಂ ಸುಗ್ರೀವಂ (ಪಂರಾಮಾ. ೧೦-೩). [ಕಪಿ + ಕೇತು]

**ಕಪಿಚ** (ನಾ). ಒಂದು ಬಗೆಯ ಸುಗಂಧದ್ರವ್ಯ; ಗುಗ್ಗುಳ; ಲೋಬಾನ; ಅಗಿಲು: "ಕಪಿಚ [ಪಾಠಾಂ. ಜ] ಮೆನಲಗಿಲೆನಿಕ್ಕುಂ" (ಮಂಗರಾ. ೯೯-೨೧). [< ಸಂ. ಕಪಿಶ]

**ಕಪಿತ** 'ಕಪ್ತಾನ' ನೋ.

**ಕಪಿತಾನ್** 'ಕಪ್ತಾನ' ನೋ.

**ಕಪಿತುರಚಿ** (ನಾ). ಒಂದು ಬಗೆಯ ಸಸ್ಯ; ನಸುಗುನ್ನಿ: "ಕಪಿಕಚ್ಛೂಃ . . . ನಸುಗುನ್ನಿೀಗಿಡ, ಕಪಿತುರಚೀಗಿಡ" (ಸಿದ್ಧಾಂತಿ. ೧೧೬). [ಕಪಿ + ತುರಚಿ (< ತುಱುಚಿ)]

**ಕಪಿತೆ** (ನಾ). ಮಂಗತನ; ಕಪಿಯ ಸ್ವಭಾವ: ನೀನಱಿ ಧರ್ಮಸಂಗತಿಯ ತಿಳಿದಾತ್ಮರಕ್ಷಣೆಯನೆಸಗು ಕಪಿತೆಯನು ಬಿಟ್ಟು (ವೆಂಕಾರಾ. ೪-೭-೧೪). [ಸಂ. ಕಪಿತಾ]

**ಕಪಿತ್ಥ** (ನಾ). ೧. ಬೇಲ; ಬೆಳುವಲದ ಮರ ಅಥವಾ ಹಣ್ಣು: ಪರಿಣತ ಕಪಿತ್ಥಫಳ ಪರಿಮಳಮಧುರ ದಧಿಯುಮಂ (ಆದಿಪು. ೧೧-೨೬ ವ); ಇಂತಿವೆಲ್ಲವು ನಿಮ್ಮಲಿ ಸಯವಾದ ಬಳಿಕ ಗಜಭುಕ್ತ ಕಪಿತ್ಥದಂತಿರ್ದೆಸಯ್ಯಾ (ಅಖಂಡೇ. ೩೩೩-೩೩). ೨. ಒಂದು ಬಗೆಯ ಗಿಡ; ಸುರುಸುರಿಕೆ: "ಕಪಿತ್ಥಂ – ಸುರುಸುರಿಕೆ" (ಓಷಧಿ. ೨೧). ೩. [ನಾಟ್ಯ] ನರ್ತನದ ಹಸ್ತಮುದ್ರೆಗಳಲ್ಲಿ ಒಂದು ಪ್ರಕಾರ: ಪತಾಕ, ಅರ್ಧಚಂದ್ರ . . . ಕಪಿತ್ಥ, ಶಿಖರಹಸ್ತ – ಮೊದಲಾದ ನೂರಾರು ಹಸ್ತಮುದ್ರೆಗಳಿವೆ (ಚಾಲಪ್ರ. II, ೯೧೯). [ಸಂ.]

**ಕಪಿತ್ಥಾಷ್ಟಕ** (ನಾ). [ವೈದ್ಯಶಾ] ಒಂದು ಬಗೆಯ ಗುಳಿಗೆ: ಕಪಿತ್ಥಾಷ್ಟಕ, ವಾದಕ್ಕಿ, ಹಿಪ್ಪಲಿಮೂಲ, ಲವಂಗ . . . ಕಲಸಿ ಸೇವಿಸುವುದು (ಸಕವೈ. ೩೨೭). [ಕಪಿತ್ಥ + ಅಷ್ಟಕ]

**ಕಪಿತ್ಥಾಷ್ಟಕವಟಕ** (ನಾ). [ವೈದ್ಯಶಾ] ಕಪಿತ್ಥಾಷ್ಟಕಲೇಹ್ಯದ ಮಾತ್ರೆ: ಕಪಿತ್ಥಾಷ್ಟಕವಟಕ – ಓವು, ಹಿಪ್ಪಲಿಮೂಲ . . . ಬೇಲದ ಮರದ ಮೇಣ ಇಷ್ಟನೂ ಮರ್ದಿಸಿ (ಸಕವೈ. ೩೪೫). [ಕಪಿತ್ಥಾಷ್ಟಕ + ವಟಕ]

**ಕಪಿಧ್ವಜ** (ನಾ). ೧. ಕಪಿಯನ್ನು ಅಥವಾ ಕಪಿಯ ಲಾಂಛನವನ್ನುಳ್ಳ ಪತಾಕೆ: ಆರಿವಂ ಪಾರ್ಥನಾದೊಡೆ ಕಪಿಧ್ವಜಮಿಹುದು (ಜೈಮಿಭಾ. ೧೨-೧೬). ೨. ಅರ್ಜುನ: ಕಪಿಧ್ವಜಂ ವನದಂತಿಯಂತೆ ಧ್ವಾಂಕ್ಷಧ್ವಜ ಮನುಡಿದು ಕೆಡೆವಿನಮೆಚ್ಚಾಗಳ್ (ಪಂಪಭಾ. ೧೨-೨೦೮ ವ). ೩. [ಜೈನ] ಕಪಿಯ ಲಾಂಛನದ ಧ್ವಜವುಳ್ಳವನು: ಇಲ್ಲಿಯವಾನರರು ಕಪಿಗಳಲ್ಲ; ಕಪಿಧ್ವಜರು (ಸಾಹಿಸ. ೯೮). 'ಕಪಿಧ್ವಜಕುಲ' ಪರಾ. [ಕಪಿ + ಧ್ವಜ]

**ಕಪಿಧ್ವಜಕುಲ** (ನಾ). ಕಪಿಯ ಪತಾಕೆಯನ್ನು ತಮ್ಮ ಗುರುತನ್ನಾಗಿ ಇಟ್ಟುಕೊಂಡವರ ಕುಲ: ಕಿಷ್ಕಿಂಧ ನಗರಾಧಿನಾಥನುಂ ಕಪಿಧ್ವಜಕುಲಧ್ವಜನುಂ . . . ಸುಗ್ರೀವಂ ನಿಮ್ಮನೋಲಗಿಸಲ್ ಬಂದಂ (ಪಂರಾಮಾ. ೧೦-೨ ವ). [ಕಪಿಧ್ವಜ + ಕುಲ]

**ಕಪಿನಿ** 'ಕಪನಿ' ನೋ.

**ಕಪಿಬಲೆ** (ನಾ). ಕೋತಿಗಳನ್ನು ಹಿಡಿಯುವ ಬಲೆ: ಎಲೆಲೆ ಕೋಡಗ ಕೊಲುತಲಿದೆ ಕಪಿಬಲೆಯ ಬೀಸಿರೊ ಬೀಳಗೆಡಹಿರೊ (ತೊರರಾ. ೫-೪-೨೧). [ಕಪಿ + ಬಲೆ$_1$]

**ಕಪಿಮುಷ್ಟಿ** (ನಾ). ೧. ಕಪಿಯ ಹಿಡಿತ. ೨. (ಆಲಂ) (ಕಪಿಯಂತೆ) ಬಹಳ ಬಿಗಿಯಾಗಿ ಹಿಡಿದುಕೊಳ್ಳುವಿಕೆ; ಏನನ್ನೂ ಬಿಟ್ಟು ಕೊಡದಿರುವಿಕೆ; ಜಿಪುಣತನ; ಅತ್ಯಾಶೆ; ಧನಲೋಭ: ನೀಡುವುದೇನನು ಕೊಳ್ಳುವುದೇನನು ಕಪಿಮುಷ್ಟಿಯಾದರೆ ನೀನು (ಇಂಚಾಪ. ೨೨೩-೩). [ಕಪಿ + ಮುಷ್ಟಿ$_2$]

**ಕಪಿಮುಷ್ಟಿಗಾರ** (ನಾ). ೧. ಹಟಮಾರಿ. ೨. ಕೃಪಣ; ಜಿಪುಣ: ಕಪಿಮುಷ್ಟಿಗಾರರಿಂದ ಹಣ ಬಿಡಿಸುವುದು ಬಹಳ ಕಷ್ಟ (ರೂಢಿ). [ಕಪಿಮುಷ್ಟಿ + -ಗಾರ (< -ಕಾಱ)]

**ಕಪಿರಾಜ** (ನಾ). ಕಪಿಗಳ ಒಡೆಯ; ಕಪಿಶ್ರೇಷ್ಠ; ಆಂಜನೇಯ. 'ಕಪಿರಾಜಧ್ವಜ' ಪರಾ. [?]

**ಕಪಿರಾಜಧ್ವಜ** (ನಾ). ತನ್ನ ಧ್ವಜದಲ್ಲಿ ಕಪಿರಾಜನನ್ನುಳ್ಳವನು; ಅರ್ಜುನ: ಬೆಂದುದು . . . ದ್ವಾಪರದೊಳ್ ಖಾಂಡವಂ ಕಪಿರಾಜಧ್ವಜನಿಂ (ಗದಾಯು. ೧-೨೫). [ಕಪಿರಾಜ + ಧ್ವಜ]

**ಕಪಿಲ** (ಗು). ೧. ಕೋತಿಯ ಬಣ್ಣವುಳ್ಳ(ಕ). ೨. ನಸುಗೆಂಪು ಬಣ್ಣದ; ಪಿಂಗಳವರ್ಣದ. (ನಾ). ೩. (ಗೋರೋಚನದಂತೆ) ಕೆಂಪು ಬೆರೆತ ಹಳದಿಬಣ್ಣ; ಮಾಸಲು ಗೆಂಪು; ನಸುಗೆಂಪು; ಕಂದು ಬಣ್ಣ: "ಪಿಂಗಃ, ಪಿಶಂಗಃ – ಈ ೨ ಕಪಿಲವರ್ಣಂ" (ಹಲಾಯು. ೧೨೧-೫೧). ೪. ಒಬ್ಬ ಋಷಿಯ ಹೆಸರು: "ಕಪಿಲಂ ಮರೀಚಿ ಜೈಮಿನಿ ಗೌತಮಂ . . . ಎಂದು ತ ಪ ಗೆ ಯ್ವ ಮುಖ್ಯ ಋಷಿಯರೆನಿಕ್ಕು" (ಮಂಗರಾ. ೬೬–೧೧). ೫. ಒಂದು ಬೆಟ್ಟದ ಹೆಸರು: ಶಿಖಿವಾಹನ ವೈಡೂರ್ಯ ಕಪಿಲ ಉಪಗಂಧಮಾದನ ಚಾರುಧಿಯೆಂಬೈದು ಬೆಟ್ಟಂಗಳೀ ಪಶ್ಚಿಮ ವಿಪುಲಾದ್ರಿಯ ಉತ್ತರ ಸು ಪಾ ರ್ಶ್ವ ಗಿರಿಯ ಅಂತರಾಳದಲ್ಲಿಹವು (ವಿವೇಕ. ೨೧೪). ೬. ತುತ್ಥ: "ಕಪಿಲಃ ? – ಕಪಿ, ತುರುಕ, ತುತ್ಥ" (ಒಷಧಿ. ೨೧). [ಸಂ.]

**ಕಪಿಲಗೆಂಪು** (ನಾ). ಕಂದುಮಿಶ್ರವಾದ ಕೆಂಪು: "ಬ ಭ್ರು ವೆನೆ ಕಪಿಲಗೆಂಪದಕ್ಕು" (ಮಂಗರಾ. ೧೩೧–೨೧). 'ಕವಿಲ್ಗೆಂಪು' ಪರಾ. [ಕಪಿಲ + ಕೆಂಪು]

**ಕಪಿಲಚಟ್ಟಿ** (ನಾ). = ಕಪಿಲಾಷಷ್ಠಿ: ಕಪಿಲಚಟ್ಟಿ ವ್ಯತೀಪಾತಪರ್ವ್ವ ನಿಮಿತ್ತವಾಗಿ (ಎಇ. V, ೧೯–೬೪ ; 1161). [< ಸಂ. ಕಪಿಲಾಷಷ್ಠೀ]

**ಕಪಿಲವರ್ಣ** (ನಾ). ಕಂದುಬಣ್ಣ: ಮಾಸಲುಗೆಂಪು; (ಗೋರೋಚನದಂತೆ) ಕೆಂಪು ಬೆರೆತ ಹಳದಿ: "ಕಡಾರಃ = ಕಪಿಲವರ್ಣಂ" (ಕಾಶಕ್ಯ. ೨೨೯). [ಕಪಿಲ + ವರ್ಣ]

**ಕಪಿಲಾರಂಗು** (ನಾ). ಒಂದು ಬಗೆಯ ಮರ: ಕುಂಕುಮದ ಮರ, ಕಪಿಲಾರಂಗು, ಹುಲೀಚೆಂಡು, ಚಂದ್ರಹಿಟ್ಟು, ಊರಬತ್ತಿ, ನ್ಯಾಮತಿ (ವೈಔಗಿ. ೫೨–೧೦೩೯). [?]

**ಕಪಿಲಾಷಷ್ಠಿಯೋಗ** (ನಾ). ೧. ಒಂದು ಅಪೂರ್ವ ಯೋಗ; ಭಾದ್ರಪದ ಮಾಸ, ಕೃಷ್ಣಪಕ್ಷ, ಮಂಗಳವಾರ, ರೋಹಿಣೀ ನಕ್ಷತ್ರ, ಹಸ್ತನಕ್ಷತ್ರಗತನಾದ ಸೂರ್ಯ, ವ್ಯತೀಪಾತ—ಇವುಗಳು ಷಷ್ಠೀ ತಿಥಿಯೊಡನೆ ಸೇರುವ ಒಂದು ಯೋಗ. ೨. (ಆಲಂ) ಒಂದೆಡೆಗೆ ಕೂಡಿ ಬರಲಾರದ ಸಂಗತಿ, ಆಕಸ್ಮಿಕವಾಗಿ ಕೂಡಿಬರುವಿಕೆ; ಅಲಭ್ಯಲಾಭ: ಈ ಕಪಿಲಾಷಷ್ಠಿಯೋಗ ಎಂದು ಬಂದೀತೊ ಅಂತ ಈಗೆರಡು ವರ್ಷ ಹಾದೀ ನೋಡ್ತಿದ್ದೆ (ಪಂಲ. ೧೧); ಇಂಥ ಕಪಿಲಾಷಷ್ಠಿಯೋಗವು ಎಲ್ಲರಿಗೂ ದೊರೆಯುವದಿಲ್ಲ (ಕಳ್ಳಕಾ. ೬). ℙ ಕಪಿಲಾ ಷಷ್ಠಿಯೋಗವು ಅರುವತ್ತು ವರ್ಷಕ್ಕೊಮ್ಮೆ ಕೂಡಿ ಬರುತ್ತದೆಯೆಂದೂ ಇದು ಅತ್ಯಂತ ಪುಣ್ಯಕರವಾದ ಕಾಲವೆಂದೂ ಹೇಳುತ್ತಾರೆ. [ಸಂ. ಕಪಿಲಾಷಷ್ಠೀಯೋಗ (ಕಪಿಲಾ + ಷಷ್ಠೀ + ಯೋಗ)]

**ಕಪಿಲು** 'ಕಪಿಲೆ₁' ನೋ.

**ಕಪಿಲೆ₁**, ಕಪಲಿ, ಕಪಲೆ, ಕಪಿಲು, ಕಪ್ಪಲಿ₁, ಕವಿಲೆ₁ (ನಾ). ವತ್ತುಗಳನ್ನು ಹೂಡಿ ಬಾವಿಯಿಂದ ನೀರೆತ್ತುವ ಒಂದು ಸಾಧನ: "ಕಪಿಲೆ ಚತ್ತಣಂ" (ಕವಿಕಂ. ೧೬೧); ಮೇಟು ಕೊಳಗ ಕಪಿಲೆಯ ಪಾವಂತಿಗೆ (ಮೈಆರಿ. ೧೯೩೪, ೨೬–೨೧ ; 1430); ಕೊಂಡ[ಮರ]ಸಯುನವರು ಅಗಸಿದ್ದ ಕಪಿಲೆಯ ಭಾವಿ (ಸೌಇಇ. IX–ii, ೫೩೩–೧೬ ; 1531); ಈ ಕೊಳದಾ ಭಾವೆ ಕಪಿಲೆಯು ನಟಸುತೆಮಗೀ ಭಾವವನು ತೋರಿಪುದು (ಅರ್ಚಾವಿ. ೨೦–೩೩). **ಕಪಲಿ**: ಕಪಲಿಯ ನೀರು ತೊಟ್ಟಿಯಲ್ಲಿ ಬೀಳುತ್ತಿತ್ತು (ಕಪಪು. ೩–೧೫). **ಕಪಲೆ**: ಸುವರ್ಣದಾಯ ಕೆಜಿ ಕುಂಟೆ ಕಾಲುವೆ ಏತ ಕಪಲೆ ಗೂಡೆ ಗುಯ್ಯಲು (ಎಕ. XII, ಶಿರಾ. ೩೧–೩೬ ; 1556); ಹಿಟ್ಟು ಬೀಸುವುದು, ಕಪಲೆ ಹೊಡೆಯುವುದು (ಗಾನಕ. ೧೦). **ಕಪಿಲು**: ಅನಾದಿಯಾಗಿ ನಡದು ಬಹ ಕಪಿಲು ಕೆರ್ರೆ ದಾರಿ ಮಾನು ಮರಡುವರು ಯೇನುವುಳ್ಳದ್ದನ್ನು (ಮೈಆರಿ. ೧೯೩೪, ೨೫–೨೦ ; 1374). **ಕಪ್ಪಲಿ₁**: ತೋಟಿಗನು ಒಂದೇ ಸಮ ಕಪ್ಪಲಿ ಹೊಡೆಯುವದರಲ್ಲಿ ತೊಡಗಿದ್ದ (ವೀನಾದ. ೫); ಕಪ್ಪಲಿಯೆಳೆಯುವ ಹತ್ತು ಹಗ್ಗ ಅದರ ಬಾಲದ ತುದಿಗೆ ಸಾಲಲಿಕ್ಕಿಲ್ಲ (ಗಾಳಿಪ. ೧೨); ಅಲ್ಲಿಯೇ ಕಪ್ಪಲಿ ಕುಣಿಯ ನೆಳಲಿನಲ್ಲಿ ಕುಸಿಬಿದ್ದರು (ಬೆಳಭಾ. ೩೫). **ಕವಿಲೆ₁**: (ಕ).

ಕಪಿಲೆಯ ಪಾವಂತಿಗೆ = ಕಪಿಲೆಬಾವಿಯ ಮೆಟ್ಟಿಲುಗಳ ಮೇಲೆ ಹಾಕಿದ ತೆರಿಗೆ (?): ಹಂದರಹಣ ಹರವಿಗೂಳು ಮೇಟುಕೊಳಗ ಕಪಿಲೆಯ ಪಾವಂತಿಗೆ ತಟ್ಟಿನ ಬೆಂಬಳಿಯ ಆರು ಹನ್ನೆರಡರ ದಂಡ (ಮೈಆರಿ. ೧೯೩೪, ೨೬–೨೨ ; 1430).

[ದೇ. ‖ ತಮಿ. ಕಪಿಲೈ, ಕವಲೈ; ಮಲ. ಕಪ್ಪ; ತೆಲು. ಕಪಿಲಿ]

**ಕಪಿಲೆ₂**, ಕಪಿಳೆ (ನಾ). ೧. ಕಂದು ಬಣ್ಣದ ಹಸು; ಮಾಸಲುಗೆಂಪಿನ ಆಕಳು: ಇದನು ಆವವನು ಅಳಿಪಿದಡೆ ವಾಣರಾಸಿಯಲಿ ತಡಿಯಲಿ ಕಪಿಲೆಯ ಕೊಂದ ಕರ್ಮ್ಮದಲ್ಲಿ ಹೋಹರು (ವೈಆರಿ. ೧೯೩೪, ೧೧–೩೦ ; 1417); ನಾನು ಹುಲಿ ಹಿಡಿದ ಕಪಿಲೆಯಂತೆ ನಡುಗುತಿರ್ದೆನೇ (ಛನವ. ೧೪). ೨. ಕಾಮಧೇನು (ಕ). ೩. ಒಂದು ಜಾತಿಯ ಮರ; ಶಿಂಶುಪ. ೪. ಒಂದು ಬಗೆಯ ಸುಗಂಧ ದ್ರವ್ಯ; ರೇಣುಕ ಬೀಜ. ೫. ಒಂದು ನದಿಯ ಹೆಸರು. ೬. ಆಗ್ನೇಯದಿಕ್ಕಿನ ದಿಗ್ಗಜದ ಹೆಂಡತಿ: ಐ ರಾ ವ ತ, ಪುಂಡರೀಕ . . . ಸುಪ್ರತೀಕವೆಂಬ ದಿಗ್ಗಜಗಳೆಂಟು ಅಭ್ರಮು, ಕಪಿಲೆ . . . ಅಂಜನಾವತಿಯರೆಂಬ ತಮ್ಮ ತಮ್ಮ ಸ್ತ್ರೀಗಜಗಳೊಡಗೂಡಿ ಕ್ರಮದಿಂ ಭೂಮಿಯಂ ವಹಿಸಿರ್ಪವು (ವಿವೇಕ. ೧೬೬). ೭. ಹಸು; ಆಕಳು: ಹೊನ್ನ ಕಪಿಲೆಯ ರಾವಣಶಾಖುದುಚ್ಛಿಷ್ಟದ ಹಾಲಿನಿಂದ ಕೂಳನಟ್ಟುಂಬವರನೇನೆಂಬೆ (ಬಸವ. ೫೮೪). **ಕಪಿಳೆ**: ೧. ಬ್ರಾಹ್ಮಣರ್ಗ್ಗನಿತು ಕಪಿಳೆಗಳಂ ಸಾಳಂಕಾರಂ ಮಾಡಿ ಕೊಟ್ಟ (ಎಕ. VI, ತರೀಕೆ. ೩೦–೪೫ ; 1185). [ಸಂ. ಕಪಿಲಾ]

**ಕಪಿಲೆಬಸವ** (ನಾ). ಕಂದುಬಣ್ಣದ ಗೂಳಿ (ಕ). [ಕಪಿಲೆ₂ + ಬಸವ]

**ಕಪಿವಲ್ಲಿ** (ನಾ). ೧. ಒಂದು ಬಗೆಯ ಹಬ್ಬುವ ಬಳ್ಳಿ; ಗಜಹಿಪ್ಪಲಿ: "ಕಪಿವಲ್ಲಿ – ಗಜಹಿಪ್ಪಲಿ" (ಒಷಧಿ. ೨೫). ೨. "ದೊಡ್ಡ ಹಿಪ್ಪಲಿ" (ಗಂಗಾಮ. ೭೦). [ಕಪಿ ? + ವಲ್ಲಿ₂]

**ಕಪಿವೃಕ್ಷ** (ನಾ). ಒಂದು ಬಗೆಯ ಮರ; ಬಿಕ್ಕೆಮರ: "ಕರ್ಪರಾಳಃ – ಗೊನಮರ, ಕಪಿವೃ[ಕ್ಷ] ?, ಬಿಕ್ಕೆ" (ಒಷಧಿ. ೨೫). [ಕಪಿ ? + ವೃಕ್ಷ]

**ಕಪಿವೃಷಭ** (ನಾ). ಕಪಿಗಳಲ್ಲಿ ಶ್ರೇಷ್ಠ; ವಾನರ ಕುಲದ ಮುಂದಾಳು: ವಿಷಯವಿಲ್ಲದೆ ಮಡುಹಿದರೆ ಕಪಿವೃಷಭನನು . . . ಎಂದು ಮೋಜಿಯಿಟ್ಟಳಲಿದಳು ತಾರೆ (ತೊರರಾ. ೪–೫–೧೦). [ಕಪಿ + ವೃಷಭ]

**ಕಪಿಶ** (ನಾ). ೧. ಕೋತಿಯ ಬಣ್ಣ; ನಸುಗೆಂಪು; ಕಪಿಲವರ್ಣ: "ನಸುಗೆಂಪಾಗಿರ್ದುದು ಕಪಿಶಮೆಂಬುದು" (ಹಲಾಯು. ೧೨೧–೫೦); ಹೋಮವೇದಿಯ ಸುತ್ತಲ್ ಅಂಜಿಸುತೆಸುರಚ್ಛಾಯಾಪುಂಜಂ ಸಂಧ್ಯಾಪಯೋದಕಪಿಶಂ ಚರಿಕುಂ (ಶಾಕುಂತ. ೪೪–೭೮). ೨. ಲೋಬಾನ; ಗುಗ್ಗುಳ; ಅಗಿಲು. [ಸಂ.]

**ಕಪಿಶೀರ್ಷ** (ನಾ). ೧. ಕೋತಿಯ ತಲೆ. ೨. ಸುತ್ತು ಪ್ರಾಕಾರದ ತುದಿಯ ಭಾಗ; ಕೋಟೆಯ ಮೇಲ್ಭಾಗ; ಕೋಟೆಯ ತೆನೆ; ಕುಂಬೆ: "ಕೋಟೆಯಗ್ರದೊಳ್ ಕಪಿಶೀರ್ಷಮೆಂದೆಂಬುದು" (ಮಂಗರಾ. ೧೩೮–೨); "ಕಪಿಮಸ್ತಕ ಕೋಟೆಯಗ್ರಮಿಂತಿವು ಕಪಿಶೀರ್ಷಮಕ್ಕು" (ನಾನಾರ. ೧೫೦). [ಕಪಿ + ಶೀರ್ಷ]

**ಕಪಿಳೆ** 'ಕಪಿಲೆ₂' ನೋ.

**ಕಪೀಂದ್ರ** (ನಾ). ೧. ಕಪಿಶ್ರೇಷ್ಠ: ಇದೆ ಸಮಸ್ತದ್ವೀಪವನದುರ್ಗದ ಕಪೀಂದ್ರರು (ತೊರರಾ. ೪–೮–೫). ೨. ಕಪಿಗಳ ಒಡೆಯ. [ಕಪಿ + ಇಂದ್ರ]

**ಕಪೀತನ** (ನಾ). **೧.** ಅಮಟೆಯ ಮರ; ಅಮ್ರಾತಕ; "ಅಂಬಾಡಿಯ ಗಿಡ" (ಗಂಗಾಮ. ೭೦). **೨.** ಅಶ್ವತ್ಥಮರ. **೩.** ಪೃಥುಶೃಂಗಿ. **೪.** "ಶಿಸವೆಯ ಮರ" (ಗಂಗಾಮ. ೭೦). [ಸಂ.]

**ಕಪುಲಿಕ್ಕುಱುಕ್ಕಿ** (ನಾ). ಒಂದು ಊರಿನ ಹೆಸರು: ಲೋಕಾಖ್ಯಳ್ ಅರಸತ್ತ್ರ್ವಮ್ಮಾರ್ವರ್ಷನಕ್ಕಾಕ್ತಿಗೆ ಕಪುಲಿಕ್ಕುಱುಕ್ಕಿ ಭಟಾರರ್ಕ್ಕೆ ಪೊಯ್ದ ಪೊನ್ನೂಱು ಗದ್ಯಾಣಮೆ (ಎಕ. X, ಕೋಲಾರ. ೧೧-೩ ; 753). [?]

**ಕಪೂಯ** (ಗು). **೧.** ಕೆಳತರಗತಿಯ; ಹೀನವಾದ; ಅಯೋಗ್ಯವಾದ. **೨.** ಕೆಟ್ಟವಾಸನೆಯುಳ್ಳ. [ಸಂ.]

**ಕಪೇಸು** (ಕ್ರಿ). ದೀರ್ಘವಾಗಿ ಚಿಂತಾಮಗ್ನನಾಗು; ಆಲೋಚನೆಯಲ್ಲಿ ಮೂಲೆ ಹಿಡಿದು ಕುಳಿತುಕೊ: ಚಂದ್ರಯ್ಯಗೌಡರೊಬ್ಬರೇ ತಮ್ಮ ಬೀರುವಿನ ಬುಡದಲ್ಲಿ ಕುಳಿತು ಕಪೇಸಬೇಕಾಯಿತು (ಕಾನೂರು. ೩೬೪). [< ತಪಿಸು ?]

**ಕಪೋಣಿ, ಕಪೋಳಿ** (ನಾ). ಮೊಳಕೈ: "ಮೊಳಕೈ ಕಪೋಣಿ[ಪಾಠಾಂ. ೪] ಕೂರ್ಪರಮೆಂದೆನಿಕ್ಕುಂ" (ಮಂಗಥಾ. ೯೫-೯). **ಕಪೋಳಿ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [< ಸಂ. ಕಫೋಣಿ]

**ಕಪೋತ** (ನಾ). **೧.** ಪಾರಿವಾಳ: ಘನತರುಶಾಖಾಗ್ರಾಮಾಗ್ರನಿಭೃತ ಪಾಂಡುರಕಪೋತಪಂಕ್ತಿಪ್ರಕರಂ (ಕಾದಂಪೂ. ೧೦೯); ಬಲ್ ಪಕ್ಕಿಗಳಂದು ಸಿಲ್ಕಿದವು ಮತ್ತವಱಲ್ಲಿ ಕಪೋತನೊಂದು ತಾಂ ಠಕ್ಕಿಸಿ ಕಲ್ಲಿಯಂ ಕಡಿದು ಕನ್ನದೊಳೋಡಿದುದು (ಹಮ್ಮಾರ. ೪-೬೨). **೨.** ಪಾರಿವಾಳದ ಬಣ್ಣ; ಬೂದುಬಣ್ಣ: ಆತ್ಮನ ಇರವು ಶ್ವೇತವೋ ಹರಿತವೋ ಕಪೋತವೋ ಮಂಜಿಷ್ಠವೋ ಕೃಷ್ಣವೋ (ಮೋಳಿಮಾ. ೮೯-೩೫೩); ಶ್ವೇತಪೀತ ಹರಿತ ಕಪೋತ ಕೃಷ್ಣ . . . ಇಂತೀ ದಶವರ್ಣದ (ತುಱುಗಾ. ೧೨). **೩.** ನಕ್ಷತ್ರರಾಶಿಗಳಲ್ಲಿ ಒಂದು: ಅಗಸ್ತ್ಯನಿಗೂ ಶಶರಾಶಿಗೂ ಮಧ್ಯೆ ಕಪೋತರಾಶಿಯ ಮೂರು ನಾಲ್ಕು ನಕ್ಷತ್ರಗಳನ್ನು ನೋಡಬಹುದು. ಕಪೋತರಾಶಿಯ ಪಾಶ್ಚಾತ್ಯನಾಮ ಕೊಲಂಬ – ಪಾರಿವಾಳ (ನಕ್ಷತ್ರ. ೨೦). **೪.** ಪಾರಿವಾಳಗಳನ್ನು ಇಡುವ ಪೆಟ್ಟಿಗೆ, —ಗೂಡು: "ಹೆಟ್ಟಿಗೆ ವಿಟಂಕಂ ಕಪೋತಂ [ಪಾಠಾಂ. ಕಪಾತಂ]" (ಮಂಗರಾ. ೫೯-೧೩); ವೃಕ್ಷಗುಲ್ಮಲತಾತೃಣಂಗಳಲಿ ಹುರಿಗೊಳಿಸಿ ಮೇಲಕೆ ಕಪೋತವನಿರೆ ರಚಿಸಿ (ಬಸವು. ೧೮-೩೮). **೫.** ಪಾರಿವಾಳದ ಹೆಸರಿನ ಮರ; ಹಾಲಿವಾಳದ ಮರ: ಕಪೋತದ ಬೊಟ್ಟಿನ ಕೆಂಡದಬ್ಬಿನೀವರನಭಿಧಾನಮಂ ತಳೆದ ಭೂರುಹಮೊಪ್ಪುಗುಮಾ ವನಾಂತದೊಳ್ (ರಾಜಶೇ. ೫-೫೭). **೬.** [ನಾಟ್ಯ] ನರ್ತನದಲ್ಲಿನ ಹಸ್ತಮುದ್ರೆಗಳಲ್ಲಿ ಒಂದು: ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತ ಹಸ್ತಗಳು ಯಾವುವೆಂದರೆ –೧. ಅಂಜಲಿ, ೨. ಕಪೋತ, ೩. ಕರ್ಕಟ (ಅಭಾನ್ವ. ೪೮). **೭.** = ಕಪೋತಲೇಶ್ಯೆ: ಅಪರ್ಯಾಪ್ತಿ ಕಾಲದೊಳು ಕೃಷ್ಣನೀಲ ಕಪೋತಂಗಳೆಂಬ ಅಶುಭಲೇಶ್ಯೆಯಕ್ಕುಂ (ಶಾಸ್ತ್ರಟೀ. ೩೮-೭). [ಸಂ.]

**ಕಪೋತಕ** (ನಾ). **೧.** ಪಾರಿವಾಳದ ಮರಿ; ಚಿಕ್ಕ ಪಾರಿವಾಳ: ಗಿಡುಗಗಳ ನಡುವೆ ತೊಡರಿದ ಕಪೋತಕದಂತೆ (ಗೊಲ್ಲೊಥಾ. ೩-೧೮). **೨.** = ಕಪೋತಾಂಜನ. [ಸಂ.]

**ಕಪೋತಪಾಲಿ** (ನಾ). ಪಾರಿವಾಳಗಳು ವಾಸಿಸಲು ಅಳವಡಿಸಿದ ಮರದ ಪೆಟ್ಟಿಗೆ, —ಗೂಡು: "ಕಪೋತಪಾಲೀ, ವಿಟಂಕಂ – ಈ ೨ ಕಪೋತ ವಟ್ಟಿಗೆ" (ಹಲಾಯು. ೫೧-೧೪೮). [ಸಂ. ಕಪೋತಪಾಲೀ]

**ಕಪೋತಪಾಲಿಕೆ** (ನಾ). = ಕಪೋತಪಾಲಿ: "ಕಪೋತಪಾಲಿಕಾ, ವಿಟಂಕಂ – ೨ ಹರ್ಮ್ಯವಿಹಾರಸ್ಥಾನಾದಿಗಳಲ್ಲಿ ಹಾಲುವಾಣದ ಹಕ್ಕಿ ಮುಂತಾದುವುಗಳು ಗೂಡಿಟ್ಟುಕೊಂಡಿರುವ ಲೋವೆ ಮರದ ಪಟ್ಟೀ ಹೆಸರು (ಸಿದ್ಧಾಂತಿ. ೯೧). [ಸಂ. ಕಪೋತಪಾಲಿಕಾ]

**ಕಪೋತಲೇಶ್ಯೆ** (ನಾ). [ಜೈನ] ಕರ್ಮಸಂಬಂಧದ ಬೂದುಬಣ್ಣ, ಕೃಷ್ಣ, ನೀಲ ಮೊದಲಾದ ಆರು ಲೇಶ್ಯೆಗಳಲ್ಲಿ ಮೂರನೆಯದು: ಮಹಾಬೀಭತ್ಸ ಕುತ್ಸಿತೋತ್ಪತ್ತಿಸ್ಥಾನಂಗಳೊಳುತ್ಕೃಷ್ಟ ಕೃಷ್ಣ ನೀಲ ಕಪೋತಲೇಶ್ಯಾನುಬಂಧರೌದ್ರಪರಿಣಾಮ ಪರಿಣತರುಂ (ಸುಕುಮಾ. ೧೧-೪೧ ವ); ತನ್ನಂತೆ ಗೆತ್ತು ಶಿಷ್ಟರುಮಂ ನಂಬಂ ಪಳಿವನಾರುಮಂ ಸಲೆ ಪೊಗಳ್ವಂ ತನ್ನಂ ಕೀರ್ತಿಸಿ ಕೊಡುವಂ ತನ್ನುಮನೆಂಪಂ ಕಪೋತಲೇಶ್ಯೆಯ ಜೀವಂ (ಶ್ರಾವಕಾ. ೭೧-೧೪). 'ಕಾಪೋತಲೇಶ್ಯೆ' ಪರಾ. [ಕಪೋತ + ಲೇಶ್ಯೆ]

**ಕಪೋತಹಸ್ತ** (ನಾ). [ನಾಟ್ಯ] ಒಂದು ಬಗೆಯ ಹಸ್ತಮುದ್ರೆ: (ಕಪೋತಹಸ್ತದಿಂದ ಕೂಡಿ) (ಶಾಕುಂತ. ೮೦). [ಕಪೋತ + ಹಸ್ತ]

**ಕಪೋತಾಂಘ್ರಿ** (ನಾ). ಒಂದು ಬಗೆಯ ಸುಗಂಧ ದ್ರವ್ಯ (ಕಿ). [ಕಪೋತ + ಅಂಘ್ರಿ]

**ಕಪೋತಾಂಜನ** (ನಾ). ತಿಳಿನೀಲಿಬಣ್ಣದ, ಪದರುಪದರಾಗಿರುವ ಒಂದು ಮೂಲ ಲೋಹ; ಸೌವೀರಾಂಜನ (ಕಿ). [ಕಪೋತ + ಅಂಜನ]

**ಕಪೋತಿ₁, ಕಬೋಜಿ** (ನಾ). ಕುರುಡ; ಅಂಧ: ದೇವರು ಅವರ ಸೊಸೆಯನ್ನು ನಡುಹರಯದಲ್ಲಿ ಕಿತ್ತುಕೊಂಡು ಅವರನ್ನು ಕಣ್ಣಿಲ್ಲದ ಕಪೋತಿಯನ್ನಾಗಿ ಮಾಡಿದ್ದನು (ರಾಜ್ಯೋದ. ೧೯). **ಕಬೋಜಿ:** "ಕಬೋಜಿ – ಕುರುಡ" (ಜಾನಕೋ. ೩೪). [ದೇ. ‖ ತಮಿ. ತೆಲು. ಕಬೋದಿ]

**ಕಪೋತಿ₂** (ನಾ). ಹೆಣ್ಣು ಪಾರಿವಾಳ: ಏಳು ಜನ್ಮದೊಳು ಬಾರೆಂದು ಕಳುಹಿದನಾ ಕಪೋತಿ ನೀನು (ಗುರುಚಾ. ೭-೮೭). [ಸಂ. ಕಪೋತೀ]

**ಕಪೋತಿಕೆ** (ನಾ). [ನಾಟ್ಯ] "ಒಂದು ತೆರನಾದ ಹಸ್ತಯುಗ್ಮವಿನ್ಯಾಸ" (ಪಂಪದೀ. ೬೮): ಸಂಧಿ ಪ್ರವೇಶವಿಷ್ಕಂಭಕಕಪೋತಿಕಾವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ (ಪಂಪಭಾ. ೨-೩೪ ವ). [ಸಂ. ಕಪೋತಿಕಾ]

**ಕಪೋಲ** (ನಾ). ಕೆನ್ನೆ; ಗಲ್ಲ: ಕರ್ಣೋತ್ಪಲಂಗಳ್ ಕಪೋಲಬಿಂಬಂಗಳೊಳ್ ಬಿಂಬಿಸೆಯುಂ (ಕಾದಂಪೂ. ೬೭); ತಾಂಬೂಲಚರ್ವಣಭರಿತ ಕಪೋಲರುಂ (ಜಗವಿ. ೪-೮೦ ವ); ಇಟ್ಟ ಕತ್ತುರಿಯ ತಿಲಕದ ಕಪೋಲದೊಳು ಜೌಗಿಟ್ಟೊಸಱುವಂತೊಟ್ಟಿಕೊಂಡ ಪುಣುಗಿನ ಕಂಪನು (ಹಚಕಾ. ೪-೩). [ಸಂ.]

**ಕಪೋಲಕಲ್ಪಿತ** (ಗು). ತಾನಾಗಿ ಕಲ್ಪಿಸಿಕೊಂಡ; ಕಾಲ್ಪನಿಕವಾದ: ಈ ವಿಚಾರಸರಣಿಯು ಕೇವಲ ನಮ್ಮ ಕಪೋಲಕಲ್ಪಿತವೆಂದು ಕೆಲವರ ಅಭಿಪ್ರಾಯ (ಜೀವಾತ್ಮ. ೨೯೪). 'ಸ್ವಕಪೋಲಕಲ್ಪಿತ' ಪರಾ. [ಕಪೋಲ + ಕಲ್ಪಿತ]

**ಕಪೋಲಪತ್ರ, ಕಪೋಳಪತ್ರ** (ನಾ). ಅಲಂಕಾರಕ್ಕಾಗಿ ಕೆನ್ನೆಯ ಮೇಲೆ ಬರೆಯುವ ರೇಖಾವಿನ್ಯಾಸ, ಮಕರಿಕಾಪತ್ರ ಮುಂತಾದುವು. 'ಕಪೋಲಪತ್ರೆ' ಪರಾ. **ಕಪೋಳಪತ್ರ:** ಸಿದ್ಧಕಾಮಿನಿಯರ ಕಪೋಳಪತ್ರದಿಂ ಮದನಕೇಳಿಯೊಳುದಿರ್ದ ಕನಕಕದಳೀದಳಪತ್ರಭಂಗಂಗಳಿಂ (ಮಲ್ಲಿಪು. ೧೦-೧೦೮). [ಕಪೋಲ + ಪತ್ರ]

**ಕಪೋಲಪತ್ರೆ** (ನಾ). ಕಪೋಲಪತ್ರದಿಂದ ಅಲಂಕೃತಳಾದವಳು: ಷಟ್ಪದ ಕುಂತಳೆ ಪತ್ರಭಂಗ ಪಲ್ಲವಿತ ಕಪೋಲಪತ್ರೆ (ಶಾಂತಿಪು. ೯-೨೦೦). [ಸಂ. ಕಪೋಲಪತ್ರಾ (ಕಪೋಲ + ಪತ್ರ + –)]

**ಕಪೋಲಫಲಕ, ಕಪೋಲಫಳಕ** (ನಾ). ಕೆನ್ನೆಯ ಚಪ್ಪಟೆ ಭಾಗ: ಪ್ರಲಂಬಕರ್ಣಾಭರಣಮಕರಿಕಾವಿತಾಡ್ಯಮಾನಕಪೋಲಫಲಕಂ (ಶಾಂತಿಪು. ೭-೧೩ ವ). **ಕಪೋಲಫಳಕ:** ಮೃದುತರಕಪೋಲಫಳಕಂ (ಕವಿರಾ. ೩-೧೭). [ಕಪೋಲ + ಫಲಕ]

**ಕಪೋಲಫಳಕ** 'ಕಪೋಲಫಲಕ' ನೋ.

**ಕಪೋಲಸ್ತಂಭ** (ನಾ). [ವೈದ್ಯಶಾ] ಒಂದು ಬಗೆಯ ರೋಗ: ನಸ್ಯದ ಗುಣ – ನಶ್ಯವಂ ಮಾಡಲು ದಾಡಾಬಂಧ, ಕಪೋಲಸ್ತಂಭ . . . ಸ್ವರ ಭಂಗ ಇವಿಷ್ಟನ್ನೂ ಪರಿಹರಿಸುವುದು (ಸಕವೈ. ೨೬).
[ಕಪೋಲ + ಸ್ತಂಭ]

**ಕಪೋಲಾರ್ಬುದ** (ನಾ). ದವಡೆಯಲ್ಲಿ ಆಗುವ ಒಂದು ಬಗೆಯ ಹುಣ್ಣು: ದವಡೆಗಳಲ್ಲಿ ಶ್ಲೇಷ್ಮದೋಷಗಳಿಂದ ತಿಮಿರ ಸಹಿತ ಬೊಕ್ಕೆ ಉಂಟಾಗುವುದು. ಅದು ಕಪೋಲಾರ್ಬುದ ಎಂಬ ರೋಗವನ್ನುಂಟು ಮಾಡುವುದು (ವೈದ್ಯಸಾ. II, ೧೨೬). [ಕಪೋಲ + ಅರ್ಬುದ$_2$]

**ಕಪೋಳಪತ್ರ** 'ಕಪೋಲಪತ್ರ' ನೋ.

**ಕಪೋಳಿ** 'ಕಪೋಣಿ' ನೋ.

**ಕಪ್ತಾನ, ಕಪಿತ, ಕಪಿತಾನ್** (ನಾ). ೧. ಹಡಗಿನ ಮುಖ್ಯಾಧಿಕಾರಿ: ಹಡಗುಗಳ ಕಪ್ತಾನರಿಗೆ, ದೀಪ ಸ್ತಂಭವು ಸಾಂಕೇತಿಕ ಚಿಹ್ನವಾಗಿ ಮಿನುಗು ವಂತೆ (ಹೇಮಂತ. ೧). ೨. ಸೇನಾಪತಿ; ದಂಡನಾಯಕ: ಅವನ ಸಂಗಡ ಮೂರು ಜನ ಕಪ್ತಾನರು ಇವರ ಸಂಗಡ ಭಾರಿ ಫೌಜು ಸಹ ರವಾನೆ ಮಾಡಿದರು (ರಾಜೇಂದ್ರ. ೨೨). **ಕಪಿತ**: **೨.** ವೀರ ಪರಿವಾರಾ ಸಯ ವಾಗಿ ಗೋವಯ ಪರಂಗದ ಕಪಿತನ ಮೇಲೆ ದಂ[ಡು] (ಕಇ. I, ೬೮–೬ ; 1577). **ಕಪಿತಾನ್**: **೨.** ಅದೇ ಕಪಿತಾನ್ ಬ್ರೌನ್ ಸಾಹೇಬರನ್ನು (ರಾಜೇಂದ್ರ. ೨೬). [← ಇಂ. Captain]

**ಕಪ್ಪ$_1$, ಕಪ್ಪು$_6$** (ನಾ). ಸಾಮಂತರಿಂದ ಅಧಿರಾಜನಿಗೆ ನಿಯತ ವಾಗಿ ಸಲ್ಲುವ ಹಣ, ಒಡವೆ ಮೊದಲಾದ ಕಾಣಿಕೆ; ಪೊಗದಿ: "ಕೊಟ್ಟಜಂ = ಕಪ್ಪಂ" (ಶಮದ. ಪರಿ. ೨). "ಕೊಂಬೊಡವೆ ಕಪ್ಪ ಮಕ್ಕುಂ" (ಮಂಗರಾ. ೬೯–೬); ಪೊಡರದೆ ಕಪ್ಪಙಿಾವ ಪರಮಂಡಳಿಕರ (ಆದಿಪು. ೨–೨೪); ವಿಭೀಷಣನ ಮೇಗಾಕ್ಷೇಪದಿಂ ಪೋಗಿ ವಸ್ತುಗಳಂ ಕಪ್ಪಮನಲ್ಲಿ ಕೊಣ್ಬು (ಎಕ. VII, ಶಿಕಾರಿ. ೧೨೬–೩ ; 1036) ; ಇರುಳು ರಾಯನ ಮನೆಗೆ ಕಪ್ಪವ ತೆಜುವುದೋ ಹಗಲು (ಕುವ್ಯಾದ್ರೋ. ೫–೫೪); ಎಲ್ಲೆಲ್ಲಿಯುತ್ತಮವಸ್ತುವಾಹನಗಳುಂಟಲ್ಲಲ್ಲಿ ಕಪ್ಪವ ಕೊಳುತ (ಭರಜ. ೨೦–೧೧). **ಕಪ್ಪು$_6$**: ಕಪ್ಪು, ಕಾಣಿಕೆ . . . ಎಂಬುವ ಅವರ ಜೀವನ ರೀತಿಯನ್ನು . . . ಸಾರುತ್ತವೆ (ಭಾಷಾಶಾ. ೨೫೬).
[ದೇ. ‖ ತಮಿ. ಮಲ. ಕಪ್ಪ ; ತುಳು. ಕಪ್ಪೊ ; ತೆಲು. ಕಪ್ಪ]

**ಕಪ್ಪ$_2$** (ನಾ). ಅಲಂಕಾರಕ್ಕಾಗಿ ಕೈಯಲ್ಲಿ ಧರಿಸುವ ಚಿನ್ನದ ಅಥವಾ ಬೆಳ್ಳಿಯ ಕಡಗ: ಬಲಗೈ ಮಣಿಕಟ್ಟಿನಲ್ಲಿ ಹೆಬ್ಬೆರಳು ದಪ್ಪದ ಬಂಗಾರದ ಕಪ್ಪವು ಹೊಳೆಯುತ್ತಿತ್ತು (ರೂಢಿ); ದೊರೆ ಗಾಯಕನಿಗೆ ಕಪ್ಪ ತೊಡಿಸಿದ (ರೂಢಿ). 'ಕಾಪು$_1$' ಪರಾ. [?]

**ಕಪ್ಪ$_3$** 'ಕಪ್ಪು$_3$' ನೋ.

**ಕಪ್ಪ$_4$, ಕಪ್ಪೆ$_3$** (ನಾ). ೧. (ಉಕ) (ಚಾಪೆಯ) ಚೀಲ: ೧. (ಖಾರೀಕು) ಉತ್ತತ್ತಿ, ಕಪ್ಪದೊಳಗಿಂದು (ಚಾಪೆ ಚೀಲದೊಳಗಿಂದು) (ಮುಂಬವ್ಯಾ. ೧೨೨). ೨. ಅಲಮಾರು ಮೊದಲಾದವುಗಳ ಗೂಡು. **ಕಪ್ಪೆ$_3$**: **೧.** ಖರ್ಜೂರವು ಕಪ್ಪೆಗಳಲ್ಲಿ ತುಂಬಿ ಬರುತ್ತದೆ (ಮುಂಬವ್ಯಾ. ೬).
[← ಮರಾ. ಕಪ್ಪಾ, ಕಪಾತ ; ಅರ. ಕಫಾತ್]

**ಕಪ್ಪಂಗವಿಯಾಗು** (ಕ್ರಿ). ದಟ್ಟೈಸಿ ಕವಿ; ಕತ್ತಲಿಸಿ ಕವಿ (?): ಅನ್ನೆಗಂ ಕಪ್ಪಂಗವಿ[ಪಾಠಾಂ. ರಿ]ಯಾಗಿ ಕವಿವ ದ್ರುಪದವಿಳಯಾನಳನಂ ದ್ರೋಣಂ . . . ವಿಳಯಕಾಳನೀಳಜಳಧರವರ್ಷಂಗಳಿಂ ನಂದಿಸೆಯುಂ ನಂದದೆ (ಪಂಪಭಾ. ೧೨–೨೦ ವ); ನಾಟ್ಯರಸಕೂಪಾರಂ ಮೇರೆದಪ್ಪಿ ಕಪ್ಪಂಗವಿಯಾಗಿ ಕವಿಯೆ (ಶಾಂತಿಪು. ೧೦–೬೨ ವ).
[ಕಪ್ಪು$_2$ ? + ಕವಿ$_1$ + ಆಗು$_1$]

**ಕಪ್ಪಂಗುಡು, ಕಪ್ಪಗೊಡು** (ಕ್ರಿ). ಕಾಣಿಕೆಯನ್ನು ಕೊಡು ; ಕಪ್ಪ ವನ್ನು ಒಪ್ಪಿಸು: ತಂದೆಗೆಂತಪ್ಪೊಡಂ ಕಪ್ಪಂಗು [ಪಾಠಾಂ. ಗೊ]ಡದ ಮಂಡಳಿಕರ್ಕಳ (ವಡ್ಡಾರಾ. ೧೪೬–೩). **ಕಪ್ಪಗೊಡು**: ಬಲ್ಲಹ ಕಾಡು ವಟ್ಟಿಯ ಕಪ್ಪಗೊಡದೆಟ್ಟಿನ್ದನ್ದು (ಸೌಇಇ. IX–i, ೬–೫ ; 9ನೆಯ ಶತ).
[ಕಪ್ಪ$_1$ + ಕುಡು$_1$ (< ಕೊಡು)]

**ಕಪ್ಪಂಗೊಳ್** (ಕ್ರಿ). ಕಪ್ಪವನ್ನು ತೆಗೆದುಕೊಳ್ಳು: ಸಮಸ್ತ ಕಪ್ಪಂಗೊಂಡೆಲ್ಲರುಮನಂಜಿಸಿ (ವಡ್ಡಾರಾ. ೧೪೬–೫) ; ಲಂಕೆಯ ವಿಭೀಷಣನನೊಂದೆ ದಿವ್ಯಾಸ್ತ್ರದೊಳೆಚ್ಚು ಕಪ್ಪಂಗೊಂಡ ವಿಕ್ರಮಾರ್ಜುನನ ವಿಕ್ರಮಮುಮಂ (ಪಂಪಭಾ. ೯–೫೨ವ) ; ಪ್ರತಿವಾಸುದೇವಂ ಸಕಲ ನೃಪ ಮಂಡಲಮನೊತ್ತಿ ಕಪ್ಪಂಗೊಂಡು (ಚಾವುಂಉ. ೪೬–೨೨); ಶಕ್ರನನೊಕ್ಕಲಿಕ್ಕಿ ನೆಜಿ ಕಪ್ಪಂಗೊಂಡ (ಕುಸುಮಾ. ೨–೪೬). [ಕಪ್ಪ$_1$ + ಕೊಳ್$_1$]

**ಕಪ್ಪಕಾಣಿಕೆ** 'ಕಪ್ಪಕಾಣ್ಕೆ' ನೋ.

**ಕಪ್ಪಕಾಣ್ಕೆ, ಕಪ್ಪಕಾಣಿಕೆ, ಕಪ್ಪುಕಾಣಿಕೆ, ಕಪ್ಪುಗಾಣಿಕೆ** (ನಾ). ಕಪ್ಪ ಮತ್ತು ಕಾಣಿಕೆ: ದೊರೆಗಳನಿಬರುಂ ಕಪ್ಪಕಾಣ್ಕೆಗಳಂ ತಂದೊಪ್ಪಿಸುವೆಡೆಯೊಳ್ (ಚಿಕವಂ. ೧೬೨–೯). **ಕಪ್ಪಕಾಣಿಕೆ**: ಕಪ್ಪಕಾಣಿಕೆಗಳನ್ನು ತಂದು ಧನಕನಕ ಸಂಗ್ರಹ ಮಾಡಿಕೊಳ್ಳಬೇಕಾಗಿತ್ತು (ವಚಭಾ. ೮೦) ; ಧಾಳಿ, ಲೂಟಿ, ಕಪ್ಪಕಾಣಿಕೆಗಳು – ಇವುಗಳಿಂದಲೇ ಅವನಿಗೆ ತೃಪ್ತಿಯಾಗಲಿಲ್ಲ (ಭಾರದ. ೪೨೨). **ಕಪ್ಪುಕಾಣಿಕೆ**: (ಗುವಿಮೋ. ಕಿ). **ಕಪ್ಪುಗಾಣಿಕೆ**: (ಕಿ). [ಕಪ್ಪ$_1$ + ಕಾಣ್ಕೆ]

**ಕಪ್ಪಕುರು** (ನಾ). ಹಿಮ್ಮಡಿ ಅಥವಾ ಕಂಕುಳಲ್ಲಿ ಏಳುವ ಒಂದು ಬಗೆಯ ಕುರು, —ಹುಣ್ಣು: ಕಪ್ಪಕುರುವೆದ್ದು ಬಹಳ ನೋವಾಗಿದೆ (ರೂಢಿ). [?. / ತೆಲು. ಕಪ್ಪಕುಱುಪು]

**ಕಪ್ಪಗಸೆ** (ನಾ). ಕರಿ ಅಗಸೆ ; ಎಳ್ಳಗಸೆ (ಕಿ).
[ಕಪ್ಪು$_4$ (< ಕರ್ಪು$_1$) + ಅಗಸೆ$_3$]

**ಕಪ್ಪಗಿ** (ಕ್ರಿ). ಕಪ್ಪಾಗಿ ವ್ಯಾಪಿಸು ; ಕರ್ರಗೆ ಆವರಿಸು: ಮಿಗೆ ಕಪ್ಪಗಿವ ಕತ್ತಲೆಯಿಂದ ಬೀಱಿತು ಭಯವನಾ ರಘುರಾಜಪುತ್ರರಿಗೆ (ತೊರರಾ. ೧–೧೦–೧). [ಕಪ್ಪು$_4$ (< ಕರ್ಪು$_1$) + ಅಗಿ$_1$]

**ಕಪ್ಪಗೆ** (ಅ). = ಕಪ್ಪನೆ. [ಕಪ್ಪು$_4$ (< ಕರ್ಪು$_1$) + –ಅಗೆ$_3$]

**ಕಪ್ಪಗೊಡು** 'ಕಪ್ಪಂಗುಡು' ನೋ.

**ಕಪ್ಪಟ$_1$** 'ಕಪ್ಪಡ' ನೋ.

**ಕಪ್ಪಟ$_2$** (?): ಹಾಕುವವು ದೊಡ್ಡ ಕಪ್ಪಟವಾದ ಕೊಳದಲಿ (ಬಜ್ಜರಾ. ೨–೬೩). [?]

**ಕಪ್ಪಟಿ** 'ಕಪ್ಪಡಿ$_2$' ನೋ.

**ಕಪ್ಪಟೆ$_1$** 'ಕಪ್ಪಡ' ನೋ.

**ಕಪ್ಪಟೆ$_2$** 'ಕಪ್ಪಡಿ$_1$' ನೋ.

**ಕಪ್ಪಡ, ಕಪಟ$_2$, ಕಪಡ, ಕಪರ, ಕಪಾಟ, ಕಪಾಟೆ, ಕಪ್ಪಟ$_1$, ಕಪ್ಪಟೆ$_1$** (ನಾ). ೧. ಬಟ್ಟೆ ; ವಸ್ತ್ರ: ಒಂದು ಪೊಟ್ಟಱಾಹಾರಮುಂ ವರಿಷಕ್ಕೊನ್ದು ಕಪ್ಪಡವುಮನಿಕ್ಕಿಯೋದಿಸಿ ಗುಣಶಾಸನದಿನಾಳ್ವಕ್ಕರಿಗ ವೃತ್ತಿ ಮತ್ತರಿರ್ಪತ್ತೈದು (ಎಇ. XX, ೬–೨೬ ; 1012) ; ನೀವೆ ಕೊಂಡು ಕೊನೆದಾಡಿಸುವ ನಿಮ್ಮ ಕಣ್ಣ ಮೊದಲ ಕಪ್ಪಡದ ಹಾಹೆ ಅನೆಂಬುದು (ಬಸರ. ೮–೩೧) ; ಒರ್ಪಿಡಿಗೂಱುಂ ಸಿತಗನ ಕಪ್ಪಡಮುಂ (ಶಮದ. ೬೬ ಪ್ರಯೋ) ; ತೊಳೆದೊಡೆ ಕಪ್ಪಡವು ಬೆಳ್ಪಡಗಳಾಗದಿವೆ ತೊಳೆದು ಕೊಡು (ಸಾಳ್ವಭಾ. ೧೨–೫೮) ; ನನ್ನ ಪ್ರಭುತ್ವವು ಉಸಿರಾಡದ ಕಪ್ಪಡದ ಬೊಂಬೆಯಾಯ್ತು (ವಿಜಸಾ. ೫). 'ಅರ್ಧಗಪ್ಪಡ' ಪರಾ. ೨. ಚಿಂದಿ ಬಟ್ಟೆ ; ಹರಕಲುಬಟ್ಟೆ. **ಕಪಟ$_2$**: **೧.** ಸಂಸಾರಸಂಗವ ಭೇದಿಸಿ ನೋಡುವಡೆ ದೂರವೆ? ಕಪಟ ಕನ್ನಡವೇ (ಅವಚಂ. ೬೬–೩೪೬).

**ಕಪಡ:** ೧. ಕಪಡ, ಲತ್ತಾ, ಬುಕ್, ನೆಕ್‌ಷೆ, ಚಿತಾರ, ಏನ್ ಷಾಮಾನ ನಿಮ್ಮಮನ್ಯಾಗ ಅದಾವೆ? (ಮೋಹನಿ. ೬೨). **ಕಪರ:** ೧. ದೇವರ × × × ಕಸ್ತೂರಿ ಸುಗಂಧ ಪರಿಮಳ × × ಗಳಿಗೆಉ ವಸ್ತ್ರ ಕಪರಗಳಿಗೆ (ಎಕ. X (S), ಮುಳಬಾ. ೩–೪೩ ; 1430). **ಕಪಾಟಿ:** ೩. ಲಂಗೋಟಿ : ಹುಡುಗನಿದ್ದಾಗ ಅತ ಒಂದು ಕಪಾಟ (ಲಂಗೋಟ) ಯನ್ನು ಮಾತ್ರ ಧರಿಸುತ್ತಿದ್ದ (ಬೇದಿಬಿ. ೪೫). **ಕಪಾಟೆ:** ೧. ಸೊಂಟ ದಲ್ಲಿದ ಕಪಾಟೆಯೊಂದನ್ನುಳಿದು ಬೇರೆ ವಸ್ತ್ರವಿರಲಿಲ್ಲ ಗಿರಿಯನ ಮೈಮೇಲೆ (ಮಣ್ಣುಹ. ೨೭). **ಕಪ್ಪಟ**$_1$ ೧. ಕೂಬಿನೊಂದು ದಳಿಂಬದ ಕಪ್ಪಟ ದೊಳ್ ಕಟ್ಟಿ ಕೊಟ್ಟಡೆ ಕೊಂಡು ಬರ್ಪನಂ (ಬಂಹರಿ. ೧೪–೩೦ ವ). **ಕಪ್ಪಟೆ**$_1$ : ೧. ಆ ಪ್ರಕಾರದಿಂ ಕೆಲವುದಿನಂ ಪೋಗಲವರ್ಗರ್ಧಕಪ್ಪಟಿ ತೀರ್ಥಕರರೆಂಬ ಪೆಸರಾಗಲ್ (ಪುಣ್ಯಾಸ್ರ. ೯–೧೮ ವ). 'ಅರ್ಧಕಪ್ಪಟಿ' ಪಠಾ. [< ಪ್ರಾ. ಕಪ್ಪಡ. / ಸಂ. ಕರ್ಪಟ]

**ಕಪ್ಪಡಯ** (ನಾ). ಒಬ್ಬಾತನ ಹೆಸರು : ತಮ್ಮಗಜೀಯು ಕಪ್ಪಡಯರ ಕಾಲಂ ಕರ್ಚ್ಚಿ ಧಾ ರಾ ಪೂ ರ್ವ ಕ ಂ ಮಾಡಿ ಬಿಟ್ಟ ವೃತ್ತಿ (ಎಕ. X, ಮುಳಬಾ. ೪೦–೩ ; 987). [ಕಪ್ಪಡ$_1$ + ಅಯ$_1$ (< ಅಯ್ಯ$_1$)]

**ಕಪ್ಪಡರು** (ಕ್ರಿ). ಕಪ್ಪು ಬಣ್ಣ ಹೊಂದು ; ಕಪ್ಪೇರು : ಕತ್ತಲೆ ಕಾಯ ಜಠರದೊಳಿರಲು ಸಲೆ ಪೂಜಿಮಡಿಸಿದನೆಂಬಂತೆ ಸತಿಯ ನುಣ್ಮೊಲೆದೊಟ್ಟು ಕಪ್ಪಡರಿದುವು (ಮೋಹತ. ೧೭–೮).

[ಕಪ್ಪು$_4$ (<ಕರ್ಪು$_1$) + ಅಡರು$_1$ (< ಅಡರ್)]

**ಕಪ್ಪಡಿ**$_1$, ಕಪಟ$_1$, ಕಪಟೆ$_1$, ಕಪ್ಪಟೆ$_2$, ಕಬ್ಬಟೆ (ನಾ). ಬಾವಲಿ : ಜಲಗಾಜನಂತೆ ಮಿಾಂಗುಲಿ ಟೈಕಂಗೊಂಡೋಲಗಿಸುವನಂತೆ ಕಪ್ಪಡಿ ದ್ರುಪದ ಪುತ್ರನಂತೆ ಶಿಖಂಡಿ . . . ಎಂದಿಂತುಮನೇಕ ಪಕ್ಷಿ ಜಾತಿಗಳಿಂ (ಬಂಹರಿ. ೮–೧೭) ; ಪಲವು ಕಪ್ಪಡಿಗಳು ನಿಶಾಂತವ ಕಳೆಯೆ ದೇಗುಲ ದೆಡೆಗೆ ಹರಿಯವೆ (ಕೌಶಿರಾ. ೧೪–೪೧). **ಕಪಟ**$_1$ : ಕರೀಸಿಂಹಗಳು, ಕಪಿಗಳು ಮತ್ತು ಪಾರಿವಾಳದಷ್ಟು ಭಾರಿ ಕಪಟಗಳು ಇವೆ (ಪ್ರವಾಇ. II, ೫೪). **ಕಪಟೆ**$_1$ : ಚಿಟ್ಟೆ ಕಪಟೆ, ಪಾತ್ರಗಿತ್ತಿ (ನಮ್ಮನು. ೨೪೦). **ಕಪ್ಪಟೆ**$_2$ : (ಕ). **ಕಬ್ಬಟೆ** : 'ಕಬ್ಬಟೆಹಕ್ಕಿ' ಪಠಾ.

[? . / ತೆಲು. ಗಬ್ಬಿಡಾಯ, ಗಬ್ಬಿಲಾಯಿ]

**ಕಪ್ಪಡಿ**$_2$, ಕಪ್ಪಟ (ನಾ). ೧. ಚಿಂದಿ ಬಟ್ಟೆಯನ್ನು ತೊಟ್ಟವನು ; ತಿರುಕ : ಬಡಕಪ್ಪಡಿ ತನ್ನಿಪ್ಪಾ ಗುಡಿಸಂ ಬಲ್ಲಿತ್ತು ಮಾಟ್ಪನೆಲ್ಲಂದದಿಂ (ಸಮುಪ. ೯–೬೨) ; ಶ್ರೀ ಸ್ವಾಮಿದೇವರ ಸಂನಿಧಾನದಲು ಸ್ವಾಮಿಯಾತ್ರೆಗೆ ಬಂದ ಕಪ್ಪಡಿಗಳ ಸತ್ರಕೆ ಮಲ್ಲರಸ ಬಿಟ್ಟ ಕೆಯಿ (ಸೌಇಇ. IX–i, ೨೫೨–೩೮ ; 1148) ; ಜಲಗಾಜನಂತೆ ಮಿಾಂಗುಲಿ ಟೈಕಂಗೊಂಡೋಲಗಿ ಸುವನಂತೆ ಕಪ್ಪಡಿ (ಬಂಹರಿ. ೮–೧೭). ೨. ಒಂದು ಊರಿನ ಹೆಸರು. ℙ ಕೃಷ್ಣಾ ಮಲಾಪಹಾರಿಗಳ ಸಂಗಮದಲ್ಲಿರುವ ಊರು : ಕೂಡಲ ಸಂಗಮೇಶ್ವರನಿಪ್ಪ ಕಪ್ಪಡಿಯ ಸಂಗಮವಂ ಪೊಕ್ಕು (ಬಸರ. ೨–೫೦). **ಕಪ್ಪಟ** : ನಿಚ್ಚ ಪವಾಡವ ಮೆರದ ಕಪ್ಪಟಯ ಸಂಗನ ಬಸವರಾಜೇಂದ್ರನು (ಎಕ. XII, ಮದ್ದಗಿ. ೮–೫ ; 1656).

[< ಸಂ. ಕರ್ಪಟಿನ್]

**ಕಪ್ಪಡಿಗ** (ನಾ). ಹರಕು ಬಟ್ಟೆಗಳನ್ನು ಧರಿಸಿದವನು ; ಭಿಕ್ಷುಕ : ಕಪ್ಪಡಿಗನಾಗಿ ಬಂದೆಂ ತಪ್ಪದೆ ಪಜಿಕಾಜನಾಗಿ ನಿಂದೆಂ (ಬಂಹರಿ. ೨೩–೫) ; ಕುಪ್ಪಳಿಸಿತೆನ್ನಜಿತಕಟಕಟ ಕಪ್ಪಡಿಗನಂತಾದೆನು (ನಿಭಾಗ. ೧೦–೧೩–೪). [< ಸಂ. ಕರ್ಪಟಿಕ]

**ಕಪ್ಪಡಿಗೆಜಿ** (ನಾ). ಒಂದು ಪ್ರದೇಶದ ಹೆಸರು : ಹುಲಿಗೊಳದ ಬಟ್ಟೆಯಿಂತೆಂಕ ಕ ಪ್ಪ ಡಿ ಗೆ ಜಿ ಯಿ ಂ ಮೂಡ (ಸೌಇಇ. XI–i, ೮೪–೩೧; 1049). [ಕಪ್ಪಡಿ$_2$ ? + ಕೆಜಿ]

**ಕಪ್ಪಡಿವೇಷ** (ನಾ). ಚಿಂದಿಬಟ್ಟೆ ಧರಿಸಿದ ಭಕ್ತನ ಸೋಗು (?) : ಕಪ್ಪಡಿ [ಪಾಠಾಂ. ಕಪ್ಪಟ, ಕಪಟ] ವೇಷದಿಂದಾನು ಬಂದಾಡುವೆ ಕಪ್ಪಡಿ ವೇಷದಿಂದ (ಬಸವ. ೩೪೧). [ಕಪ್ಪಡಿ$_2$ + ವೇಷ]

**ಕಪ್ಪಣಭಟ್ಟ** (ನಾ). ಒಬ್ಬಾತನ ಹೆಸರು : ಶ್ರೀಮತ್ಕವಿರಾಜವಲ್ಲಭಂ ಕಪ್ಪಣಭಟ್ಟರ ಲಿಖಿತಂ (ಎಕ. VIII, ಸೊರಬ. ೧೮೪–೩೦ ; 1033).

[ಕಪ್ಪಣ$_0$ + ಭಟ್ಟ]

**ಕಪ್ಪನೆ** (ಅ). ಕಪ್ಪಾಗಿ.

ಕಪ್ಪಕಪ್ಪನೆ (ದ್ವಿರುಕ್ತಿ) ಕಪ್ಪು ಕಪ್ಪಾಗಿ ; ಅತಿ ಕಪ್ಪಾಗಿ : ತನು ರುಚಿಯ ಮುಂದೆ ದಿನಪನ ಕಾಂತಿ ಕಪ್ಪಕಪ್ಪನೆ (ಹಚಕಾ. ೧–೪೧).

[ಕಪ್ಪು$_4$ (< ಕರ್ಪು$_1$) + –ಅನೆ$_1$]

**ಕಪ್ಪನೆಯ** (ಗು). ಕಪ್ಪಾದ ; ಕರಿಬಣ್ಣದ : ಕಪ್ಪನೆಯ ಕಲ್ಲಿನ ವಿಗ್ರಹಗಳನ್ನು ತೋರುತ್ತ ಕೂಗಾಡಿದನು (ಗೋಪುರ. ೩).

[ಕಪ್ಪು$_4$ (< ಕರ್ಪು$_1$) + –ಅನೆಯ್ಯ$_2$]

**ಕಪ್ಪರ**$_1$ 'ಕಪ್ಪುರ' ನೋ.

**ಕಪ್ಪರ**$_2$, ಕಪ್ಪರೆ, ಖಪ್ಪರ (ನಾ). ೧. ಮಡಕೆಯ ಚೂರು ; ಓಡು : ತುಳಿದೊಡೆಡೆ ಮಣ್ಣ ಕಪ್ಪ ರದಂತೆ ನೆಗ್ಗಿದುದು ಕೂರ್ಮ ಖರ್ಪರಂ (ಚಿಬಪು. ೮೭–೯). ೨. ಭಿಕ್ಷೆಬೇಡಲು ಬಳಸುವ ಮಣ್ಣಿನ ಪಾತ್ರೆ : ಹಸಿವಿಲ್ಲದೆ ಕಪ್ಪರವ ಹಿಡಿದು ; ಭಕ್ತಿಭಿಕ್ಷವ ಬೇಡ ಬಂದೆ (ಅವಚಂ. ೨೪೭–೧೧೨೩) ; ಅ ತಿ ಥಿ ಮ ಹ ತ್ತು ಗ ಳ ಕಪ್ಪರದ ಭಿಕ್ಷಕ್ಕೆ ಸರ್ವ್ವ ಮಾಂನ್ಯವಾಗಿ ಕೊಟ್ಟೆನು (ಎಕ. III, ನಂಜನ. ೪೮–೫ ; ?) ; ಕರದ ಕಪ್ಪರವುಂಟು ಹಿರಿದೊಂದು ನಾಡುಂಟು (ಸರ್ವಜ್ಞ. ೫೧೦). **ಕಪ್ಪರೆ** : ೨. ಕಪ್ಪರೆಪಿಡಿದು ತಿರಿದುಂಬುದನೆಳಸುವಂತ ಮಾನವರ್ಗೆ (ಭಾರಶಾಂ. ೮–೩೧) ; ಕಪ್ಪಡಮನುಟ್ಟು ಕಪ್ಪರೆವಿಡಿದು ಜೋಗಿಯಾಗಿ ಪೋಪೆಂ (ಚಿಕವಂ. ೧೧–೧೪). **ಖಪ್ಪರ** : ೨. ಉಪ್ಪುಗಾಯಿ ಕೆಲಬಲದೊಳೊಪ್ಪೆ ತೋಱುತ್ತಮಿರೆ ಖಪ್ಪರದೊಳಗೆ ಶಾಕಪಾಕಂಗಳೆಸೆವುತಿರೆ ಲಿಂಗಾರ್ಪಿತಂ ಮಾಡಿ (ಚನ್ನರ. ೮೨–೧೭). [< ಪ್ರಾ. ಖಪ್ಪರ. / ಸಂ. ಕರ್ಪರ]

**ಕಪ್ಪರಕಾಯಕ** (ನಾ). ಭಿಕ್ಷಾವೃತ್ತಿ (ಉಕ. ಕ). [ಕಪ್ಪರ$_2$+ ಕಾಯಕ]

**ಕಪ್ಪರಕೇಸಣ್ಣ** (ನಾ). ಒಬ್ಬಾತನ ಹೆಸರು : ಕಪ್ಪರಕೇಸಣ್ಣನ ಮಗಳ್ ಲಚಿಬೆದಜವ್ವೆ (ಎಕ. VII, ಶಿಕಾರಿ. ೪೫–೬ ; ಸು. 890 ?).

[ಕಪ್ಪರ$_0$ + ಕೇಸಣ್ಣ]

**ಕಪ್ಪರಗೊಡಗೆ** (ನಾ). ಭಿಕ್ಷುಕರಿಗೆ ದಾನ ಮಾಡುವುದಕ್ಕಾಗಿ ಕೊಟ್ಟ ಮಾನ್ಯ : ವಿರಕ್ತಗೊಡಗೆ ಕಪ್ಪರಗೊಡಗೆ ಆಗಿ ಕೊಟವಾಗಿ (ಮೈಅರ. ೧೯೩೫, ೧೬–೮ ; 1663). [ಕಪ್ಪರ$_2$ + ಕೊಡಗೆ (< ಕೊಡಂಗೆಯ್$_2$)]

**ಕಪ್ಪರಚಟ್ಟೆ**, ಕಪ್ಪರಶೆಟ್ಟೆ (ನಾ). ಒನಕೆಬಂಡೆಹುಳು : ಕಪ್ಪರಚಟ್ಟೆಗೆ ಸಾವಿರಕಾಲು (ರೂಢಿ). **ಕಪ್ಪರಶೆಟ್ಟೆ** : ಕಪ್ಪರಶಟ್ಟ, ಕಪರಸುಂಟಿ, ಸಾವಿರಕಾಲುಗಳಿವೆಯೆಂದು ಹೇಳಲಾದ ರೈಲಿನಂತೆ ಹರಿಯುವ ಒಂದು ಜಾತಿಯ ಕೆಂಪುಹುಳ. ಮುಟ್ಟದರೆ ಸುತ್ತಿ (ಸುಂಟಿ) ಕೊಳ್ಳುತ್ತದೆ (ವಸ್ತ್ರರು. ೩೨೯ ಟಿಪ್ಪಣಿ). 'ಕಪರಸುಂಠಿ' ಪಠಾ. [?]

**ಕಪ್ಪರಶೆಟ್ಟೆ** 'ಕಪ್ಪರಚಟ್ಟೆ' ನೋ.

**ಕಪ್ಪರಳ್ಳಿ** 'ಕಪ್ಪುರವಳ್ಳಿ' ನೋ.

**ಕಪ್ಪರಿ**, ಕಪ್ಪಲಿ$_2$, ಖಪ್ಪಲಿ (ನಾ). ೧. ಬಿಳಿಯ ತುತ್ಥ : ಇಂಗುಲಿಕಂ ನಾಗರಮಿಪ್ಪ ಕಪ್ಪರಿ [ಪಾಠಾಂ. ಕಪ್ಪಲಿ, ಖಪ್ಪಲಿ] ಗಳಂ (ಖಮದ. ೬–೮). ೨. ಒಂದು ಬಗೆಯ ಕಾಡಿಗೆ; ನೇತ್ರಾಂಜನ (ಕ). **ಕಪ್ಪಲಿ**$_2$ : ೧. ವಾಂತಿ ನಿಲ್ಲುವುದಕ್ಕೆ :– . . . ಗೌರಿ ಪಾಷಾಣ, ಕಪ್ಪಲಿ, ಮಣಿಸಿಲೆ ಇಷ್ಟನ್ನೂ (ವಿವೈವಿ. ೬೭). **ಖಪ್ಪಲಿ** : ೧. ಶೂಲೆಗೆ . . . ಖಪ್ಪಲಿ . . . ತೊಡೆವುದು (ವಿವೈವಿ. ೧೮೧). [< ಸಂ. ಕರ್ಪರೀ]

**ಕಪ್ಪರಿತುತ್ತ**, ಕಪ್ಪಲಿತುತ್ತ (ನಾ). ಬಿಳಿಯ ತುತ್ಥ: "ತುತ್ಥಕಂ – ಮಯೂರತುತ್ತ, ಕಪ್ಪರಿತುತ್ತ" (ಓಷಧಿ. ೭೧). **ಕಪ್ಪಲಿತುತ್ತ** : "ಕಫಮರ್ದನಃ – ಕಪ್ಪಲಿತುತ್ತ, ಯಲಹುರಿ, ಕೊಡಸಿಗ" (ಓಷಧಿ. ೨೬).
[ಕಪ್ಪರಿ + ತುತ್ತ]

**ಕಪ್ಪರಿತುತ್ಥ** (ನಾ). = ಕಪ್ಪರಿತುತ್ತ : "ಕಪ್ಪರಿತುತ್ಥ – ಖರ್ಪರಿ, ದಾರ್ವಿಕೆ, ತುತ್ಥ, ಕ್ವಾಥೋದ್ಭವ" (ನಾಚಿರಾ. ೬).
[ಕಪ್ಪರಿ + ತುತ್ಥ]

**ಕಪ್ಪರಿಸು**, ಕಬ್ಬರಿಸು (ಕ್ರಿ). ೧. ಆರ್ಭಟಿಸು ; ಗುಡುಗು (?) : ಅದಿರದೆ ಬರ್ಪ್ಪ ಚಪ್ಪರಿಪ ಕಪ್ಪರಿಪಾರ್ದ್ದಲಗೊತ್ತಿ ಶಸ್ತ್ರಮಂ ಬಿದಿರ್ದು ಮರಲ್ ಮರಲ್ಚಿನುತೆ (ಎಕ. VIII, ನಗರ. ೪೦–೬೪ ; 1087) ; ದಂಡ ಕಮಂಡಲುಡುಗೆಯ ಕಪ್ಪರಿಸಿಕೊಳುತೇಳುತ್ತೊಡನೊಡದೆಡೆಯ ತಡ ಹುತಲಿ (ಮದೇವು. ೭–೫೪) ; ಕಾವಲ ಜಮಾದಾರರ ಧ್ವನಿಯು ಅಬ್ಬರಿಸಿತು. ಕಪ್ಪರಿಸಿ ಎದ್ದ ; ಧ್ವನಿ ಬಂದ ನಿಟ್ಟನ್ನು ಗಾಬರಿಯಿಂದ ನೋಡಿದ (ನಶೂರ. ೧೨). ೨. ಕುಸಿ ಬೀಳು (?) : ಗೋವರ್ಧನನು ಹೈಮವತಿಯನ್ನು . . . ಪೂಜಿಸುತ್ತಿದ್ದ. ಅದಿಂದು ಪ್ರಬಲಭೂಕಂಪ ದಿಂದ ಕಪ್ಪರಿಸಿಕೊಂಡು ಬೀಳತೊಡಗಿತು (ಎರಸಿ. ೧೨೫). **ಕಬ್ಬರಿಸು** : ೨. ನಿಬ್ಬರದಿ ಬಾಂದಳಕೆ ಬಿಸುಡಲು ಕಬ್ಬರಿಸುತಂಬುಧಿಗುರುಳ್ದನು ಖಳನು ಮೂರ್ಛೆಯಲಿ (ಅನಂರಾ. ೧–೧೩–೧೯).
[? + –ಇಸು₃. / ತುಳು. ಕಪ್ಪರ್]

**ಕಪ್ಪರೆ** 'ಕಪ್ಪರ್ರ₂' ನೋ.

**ಕಪ್ಪಲ್₁**, ಕಪ್ಪಲು₁ (ನಾ). ಆನೆ, ಜಿಂಕೆ ಮೊದಲಾದ ಬೇಟೆಯ ಪ್ರಾಣಿಗಳನ್ನು ಹಿಡಿಯುವುದಕ್ಕಾಗಿ ತೋಡಿ ಮುಚ್ಚಿಟ್ಟ ಹಳ್ಳ, —ಕುಳಿ : (೬). **ಕಪ್ಪಲು₁** : "ವಾರೀ, ಗಜಬಂಧನೀ – ಆನೆಯನ್ನು ಹಿಡಿಯುವುದಕ್ಕೆ ಮಾಡಿದ ಕಪ್ಪಲು ಮುಂತಾದವುಗಳಿಗೆ ಹೆಸರು" (ಸಿದ್ಧಾಂತಿ. ೨೧೪).
[ದೇ. ‖ ತಮಿ. ಮಲ. ತುಳು. ಕಪ್ಪಲ್ ; ತೆಲು. ಕಪ್ಪಲಿ]

**ಕಪ್ಪಲ್₂**, ಕಪ್ಪಲು₂ (ನಾ). ಹಡಗು ; ನಾವೆ : ನಾವಿಕನ್ ಸಾಗಿಪನ್ ಪಯಣಮನ್, ಕಪ್ಪಲನ್ ತಲೆಕೆಟಗು ಮಾಡಿ (ಅಂತಿಗೊ. ೩೩–೬೬೪). **ಕಪ್ಪಲು₂** : ಎಡೆಯಾಡುತಿಹ ದೋಣಿ ದುಗ್ಗಿ ಕಪ್ಪಲು ದೊಡ್ಡ ಹಡಗು ಗಳಿರವ ನೋಡಿದರು (ಭರಚ. ೨೩–೯೬) ; ಹೊಲನರದು ಕೊಕ್ಕು ಮುಂಬೊಕ್ಕು, ಫಿನಿಷಿಯರ ಕಪ್ಪಲಿಂದೆಗರಿಸಿತು ಮುಂಬು ಬೊಂಬೆಯನು (ಪಾರಸಿ. ೧೩–೩೬೭).
[ದೇ. ‖ ತಮಿ. ಮಲ. ತುಳು. ಕಪ್ಪಲ್ ; ತೆಲು. ಕಪ್ಪಲಿ]

**ಕಪ್ಪಲಬೆಂಚೆ** (ನಾ). ಒಂದು ಪ್ರದೇಶದ ಹೆಸರು (?) : ಲೊಕ್ಕ ಕುಂಟಿ ಹಳ್ಳಿಗೆ ಪಡುವಲು ಕಪ್ಪಲಬೆಂಚೆ ಮೇರೆ (ಸೌಇಇ. IX–ii, ೫೩೫–೨೭ ; 1531). [ಕಪ್ಪಲ್₂ + ಬೆಂಚೆ]

**ಕಪ್ಪಲಿ₁** 'ಕಪಿಲೆ₁' ನೋ.

**ಕಪ್ಪಲಿ₂** 'ಕಪ್ಪರಿ' ನೋ.

**ಕಪ್ಪಲಿತುತ್ತ** 'ಕಪ್ಪರಿತುತ್ತ' ನೋ.

**ಕಪ್ಪಲಿಸತ್ವ** (ನಾ). = ಕಪ್ಪಲಿತುತ್ತ (?) : "ಮಧುಕ – ಇಪ್ಪೆ, ಕಪ್ಪಲಿ ಸತ್ವ" (ಓಷಧಿ. ೧೧೪) ; ಎಲೆಗಪ್ಪಲಿ ತೂಕ ೧, ಕಪ್ಪಲಿಸತ್ವ ತೂಕ ೨ . . . ಗುಳಿಗೆಯಂ ಮಾಡಿ (ಕೊಳ್ಳೆ ಶ್ವಾಸಕಾಸ ಇವೆಲ್ಲಾ ಮಾಣುವುವು) (ವಿವೈವಿ. ೭೨). [ಕಪ್ಪಲಿ₂ (< ಕಪ್ಪರಿ) + ಸತ್ವ]

**ಕಪ್ಪಲು₁** 'ಕಪ್ಪಲ್₁' ನೋ.

**ಕಪ್ಪಲು₂** 'ಕಪ್ಪಲ್₂' ನೋ.

**ಕಪ್ಪಲುನರಿ** 'ಕಪ್ಪಲ್ನರಿ' ನೋ.

**ಕಪ್ಪಲುಬೀಳು** (ಕ್ರಿ). ಗುಳಿಬೀಳು ; ಗುಂಡಿಬೀಳು ; ಮುಚ್ಚಿಕೊ (?) : ಧ್ಯಾನಗಹ್ವರ ಮುಖದಿ ಕಣ್ಣು ಕಪ್ಪಲುಬೀಳೆ ಅಂಗಾಂಗದೊಳು ಚೆಲುವ ಹೊಳೆಸುತಿಹ ಕಳೆಯೋ (ಮಲೆದೇ. ೨೮–೫).
[ಕಪ್ಪಲು₁ (< ಕಪ್ಪಲ್₁) + ಬೀಳು₁ (< ಬೀೞ್₁)]

**ಕಪ್ಪಲ್ನರಿ**, ಕಪ್ಪಲುನರಿ (ನಾ). ಒಂದು ಜಾತಿಯ ನರಿ (೬). **ಕಪ್ಪಲುನರಿ** : (೬) [ಕಪ್ಪಲ್ ? + ನರಿ]

**ಕಪ್ಪವೀ** (ಕ್ರಿ). ಕಪ್ಪವನ್ನು ಕೊಡು ; ಕಾಣಿಕೆಯಾಗಿ ಕೊಡು : ಕುಬೇರಂ ಮುನ್ನೆ ಭರಕ್ಕಳ್ಕಿ ಕಪ್ಪವಿತ್ತ ಪುಷ್ಪಕವಿಮಾನವಂ . . . ಏಱಿ (ಅನಂಪು. ೧೩–೮೫ ವ). [ಕಪ್ಪ₁ + ಈ₁]

**ಕಪ್ಪಶರ್ಮ** (ನಾ). ಒಬ್ಬಾತನ ಹೆಸರು : ಕತ್ತಿಶರ್ಮಣ ಪುತ್ರ ಪುತ್ರ ಕನ್ನಶರ್ಮಣ ಪುತ್ರ ಕಪ್ಪಶರ್ಮ್ಮಣ ಚತಾರಿ ಪುತ್ರ ಅಂಶಃ (ಇಆ. VII, ೧೫೭–೬೨ ; 668). [ಕಪ್ಪ₀ + ಶರ್ಮ]

**ಕಪ್ಪಸು** 'ಕರ್ಬಸು₂' ನೋ.

**ಕಪ್ಪಹಳ್ಳಿ** (ನಾ). ಒಂದು ಊರಿನ ಹೆಸರು : ಕಲ್ನಾಡು ಕೊಟ್ಟದು ಕಪ್ಪಹಳ್ಳಿ ಪರಿಹಾರ (ಎಕ. III, ತಿರುಮ. ೯೧–೧೦ ; 921).
[ಕಪ್ಪ₀ + ಹಳ್ಳಿ (< ಪಳ್ಳಿ₁)]

**ಕಪ್ಪಳಿ** (ನಾ). (?) : ನಿಯತ ದ್ವಿತ್ವಕ್ಕೆ – ಪಪ್ಪುಕಂ . . . ಕಪ್ಪಳಿ, ತಪ್ಪಡಿ (ಶಮದ. ೩೬ ಪ್ರಯೋ). [?]

**ಕಪ್ಪಱ** (ಕ್ರಿ). ಕಪ್ಪು ಕಳೆದುಹೋಗು ; ಕರಿಯಬಣ್ಣ ಇಲ್ಲವಾಗು : ತೊಡರ್ದ ತಟಿತ್ ಪ್ರಭಾಹತಿಗೆ ಕಪ್ಪಱದತ್ತನೆ ಮೇಘಮಾಲೆ ಬೆಳ್ಪಡರ್ದುದು (ಕುಸುಮಾ. ೭–೪೪).
[ಕಪ್ಪು₄ (< ಕರ್ಪು₁) + ಅಱ₁]

**ಕಪ್ಪಾಸೆಗದ್ದೆ** (ನಾ). ಒಂದು ಗದ್ದೆಯ ಹೆಸರು : ನಾರಾಯಣಭಟ್ಟರಿಗೆ ಕಪ್ಪಾಸೆಗದ್ದೆ ಮೂಡೆ ೧೦ (ಎಇ. XXVIII, ೨೮–೩೮ ; 1256).
[ಕಪ್ಪಾಸೆ₀ + ಗದ್ದೆ (< ಗಱ್ದೆ)]

**ಕಪ್ಪಿ** (ನಾ). ರಾಟೆ ; ಗಡಗಡೆ : "ಹಗ್ಗ ಮೊ.ವು ಮೇಲೆ ಹಾಯುವುದಕ್ಕೆ ಗಾಡಿ ಮಾಡಿರುವ, ಚೌಕಟ್ಟಿನಲ್ಲಿ ಅಳವಡಿಸಿರುವ, ಬಲಪ್ರಯೋಗದ ದಿಕ್ಕನ್ನು ಬದಲಾಯಿಸಲು ಅನುಕೂಲಿಸುವ, ಒಂದು ಸರಳ ಯಂತ್ರ ಸಲಕರಣೆ ; ರಾಟೆ ; ಕಪ್ಪಿ ; ಗಡಗಡೆ" (Pulley. ಇಂಕನಿ).
[ದೇ. ‖ ತಮಿ. ಮಲ. ತೆಲು. ಕಪ್ಪಿ. / ಮರಾ. ಕಪೀ, ಕಪ್ಪೀ]

**ಕಪ್ಪಿಡಿ** 'ಕರ್ಪಿಡಿ' ನೋ.

**ಕಪ್ಪಿಡು** 'ಕರ್ಪಿಡು' ನೋ.

**ಕಪ್ಪಿಮಯ್ಯ** (ನಾ). ಒಬ್ಬಾತನ ಹೆಸರು : ಅಯಯ್ಯನ ಮಗ ಕಪ್ಪಿಮಯ್ಯ ಆ ಧರ್ಮ್ಮಮಂ ಪ್ರತಿಪಾಳಿಸುತ್ತಮಿರಲ್ (ಎಕ. VII, ಶಿಕಾರಿ. ೨೮೭–೧೩ ; 1017). [ಕಪ್ಪಿಮ₀ + ಅಯ್ಯ₁]

**ಕಪ್ಪಿಯೆತ್ತಿಗೆ** (ನಾ). ಒಂದು ಯಂತ್ರಸಲಕರಣೆ : "ಭಾರ ಎತ್ತುವುದು, ಹಡಗಿನ ಹಾಯಿಗಳನ್ನು ಅಥವಾ ದೂಲಗಳನ್ನು ಜೋಡಿಸುವುದು, ಮೊ. ಕ್ಕೆ ಉಪಯೋಗಿಸುವ . . . ಯಂತ್ರಸಲಕರಣೆ : ಕಪ್ಪಿಯೆತ್ತಿಗೆ, ಎತ್ತಿಗೆ ಸಜ್ಜು" (Tackle. ಇಂಕನಿ). [ಕಪ್ಪಿ + ಎತ್ತಿಗೆ₀]

**ಕಪ್ಪಿಲೆದೆಱ** (ನಾ). ಒಂದು ಬಗೆಯ ತೆರಿಗೆ : ಆ ಸ್ಥಳಂಗಳಿಗೆ ಹೊಗೆ ದೆಱ ಮಗ್ಗದೆಱಕಾ × × × ಅಡುದೆಱ ಅಲೆದೆಱ ಕಪ್ಪಿಲೆದೆಱ ಮಂಣಿಯ ಹರ (ಎಕ. III, ಶ್ರೀರಂಗ. ೧೦೪–೬೨ ; 1200).
[ಕಪ್ಪಿಲೆ₀ + ತೆಱ₃]

**ಕಪ್ಪು₁** (ಕ್ರಿ). ಅಗೆ ; ತೋಡು : "ಕಪ್ಪು – ಖನನೇ" (ಶಮಧಾ). [?]

**ಕಪ್ಪು₂** (ಕ್ರಿ). ಮುಚ್ಚು ; ಹೊದಿಸು ; ಹರಡು ; ದಟ್ಟೈಸು. 'ಕಪ್ಪಂಗವಿ ಯಾಗು' ಪರಾ. [ದೇ. ‖ ತಮಿ. ಮಲ. ತೆಲು. ಕಪ್ಪು]

**ಕಪ್ಪು$_3$**, ಕಪ್ಪ$_3$, ಕರ್ಪು$_2$ (ನಾ). ೧. ಆನೆ, ಜಿಂಕೆ ಮೊದಲಾದ ಬೇಟೆಯ ಪ್ರಾಣಿಗಳನ್ನು ಹಿಡಿಯುವುದಕ್ಕಾಗಿ ತೋಡಿ ಮುಚ್ಚಿಟ್ಟ ಹಳ್ಳ, —ಕುಳಿ, —ಖೆಡ್ಡ: ಹೊಲದಣ್ಣ ಕಪ್ಪಿನಲ್ಲಿ ಬಿದ್ದ (ಕೋಲಶಾಂ. ೨೫); ಒಡ್ಡು ಬಲೆಯಂ ಕ್ರೋಡಂಗೆ ತಂದಾನೆಯಂ ಕೆಡಪಾ ಕಪ್ಪಿನೊಳ್ (ಉದ್ಭಟ. ೨-೫೦); ಬಟ್ಟಮೊಲೆಯಿಟ್ಟೆಡೆಯೊಳ್ ತೊಟ್ಟನೆ ಸಿಕ್ಕಿದ ಕಣ್ ಕಪ್ಪಿನೊಳ್ ಕೆಡೆದ ಮಱಿವುಲ್ಲೆಯಂತೆ ಮಿಡುಕಲಾರ್ತುದಿಲ್ಲ (ಕಬ್ಬಿಗಕಾ. ೭೮); ಕಪ್ಪಿನೊಳ್ ಬಿಡ್ಡ ಪೇರಾನೆಯಂ ಬಱಸಂದ ಮಱಿಗಳಂತೆ (ಚಕವಂ. ೪೨-೧). ೨. ತೋಟ, ಗದ್ದೆಗಳ ಸುತ್ತಲೂ ಮಾಡಿದ ಕಂದಕ; ಕಾಲುವೆ: ನವಗಂಧಶಾಲಿಯ ವನಕೆ ತಳಿಗಳಂ ಹೆಣೆವ ಕಪ್ಪಂ ತೋಡುವೆಸಕದಟ್ಟಳೆಯನಿಕ್ಕುವ (ಸಮ್ಯಕೌ. ೧-೨೪); ತೋಟದ ಗಡಿ ಕಪ್ಪಿನಿಂದಂ ತೆಂಕಲು (ಎಕ. VI, ಶೃಂಗೇರಿ. ೯-೩೪; 1757); ತೋಟದ ಕಪ್ಪುಗಳಲ್ಲಿಯೂ ಗದ್ದೆಯ ಒಡಗುಗಳಲ್ಲಿಯೂ ನೀರು ಹಸುಳೆಯತೆ ಯಾವಾಗಲೂ ಗಳಹುತ್ತ ತೊದಲುತ್ತ ಪರಿದಾಡುತ್ತಿತ್ತು (ಕಾನೂರು. ೩೫೭); ಬಾಳೆಯ ಗೊನೆಗೆ ಪೆಟ್ಟಾಗಬಾರದೆಂದು ಅವನು ಅದನ್ನು ತೋಟದ ಕಪ್ಪಿನಲ್ಲಿ ಸರಿಯಾಗಿ ಬೀಳುವಂತೆ ಬೀಳಿಸಿದ್ದನು (ಬಾಳವ್ಯೆ. ೧೦೬). **ಕಪ್ಪ$_3$**: ೧. ನಿಶಿತಚ್ಛವಿ(ತ್ವದಿ)ಯಪ್ಪ ಮಣ್ಣುಂ ಕಪ್ಪೆಯುಂ ಕಪ್ಪದಲ್ಲಿರ್ಕು (ಜಟ್ಟಮ. ೧೧-೧೫); "ಒಮ್ಮೆ ಕಪ್ಪದಲ್ಲಿ ಬಿದ್ದುನೊಂದ ಆನೆ ಹೊಸ ಮಣ್ಣುಮೇಲೆ ನೆಟ್ಟ ಬಾಳೆಗಿಡವನ್ನು ಕಂಡೊಡನೆ ಅಂಜುತ್ತದೆ" (ನಡೆದಾ. II, ೧೧೨೫). △ **ಕರ್ಪು$_2$**: ೧. ಕರ್ಪನಗುಬ್ಬಂ ಬಲೆಗಳನೊಡ್ಡಿಯುಂ (ರಾಮಾಶ್ವ. ೮೪-೩); ನಮ್ಮ ನಾರಾಯಣಯ್ಯ ಕರ್ಪಿನಲ್ಲಿ ಬಿದ್ದ ಆನೆಯ ಹಾಗೆ– ಅಲ್ಲವೆ? (ಬಟ್ಟಜೀ. ೫೫); ಕುಮರಿ ಬೆಳೆಗೆ ಆನೆಗಳ ಹಿಂಡು ಬಂದು ಹಾನಿಮಾಡಿದಾಗ ಕರ್ಪುತೋಡಿಸಿ, ಒಂದಾನೆಯನ್ನು ಹಿಡಿಸಿಯೂ ಬಿಟ್ಟರು (ಕುಡಿಕೂ. ೩೫).

[ದೇ. ‖ ತುಳು. ಕಪ್ಪು, ಕರ್ಪು]

**ಕಪ್ಪು$_4$** 'ಕರ್ಪು$_1$' ನೋ.

**ಕಪ್ಪು$_5$** 'ಕಪ್ಪ$_1$' ನೋ.

**ಕಪ್ಪು$_6$** (ನಾ). ೧. ಧ್ವಜ; ಸಂಕೇತ: "ಕಪ್ಪು–ಪಾಲಿ, ಕೇತು, ಧ್ವಜ, ಲಿಂಗ, ನಿಮಿತ್ತ" (ನಾಚಿರಾ. ೬). ೨. ಕವಲು ಇರುವ ಕಂಬ; ಕವೆ.

[ದೇ. ‖ ತಮಿ. ಕಪ್ಪು, ಕಮ್ಬು; ತುಳು. ಕಪ್ಪು]

**ಕಪ್ಪು$_7$** (ನಾ). ಕುಡಿಯಲು ಉಪಯೋಗಿಸುವ ಬಟ್ಟಲು: ಒಂದು ಬದಿಗೆ ಸ್ಟೋ, ಕಪ್ಪು, ಬಸಿ, ಮೊದಲಾಗಿ ಚಹದ ಸಾಹಿತ್ಯಗಳು ಗುಂಪಾಗಿ ಬಿದ್ದಿವೆ (ಕಿಡುಗು. ೪೬); ಅಂತೂ ಈ ಮೌನವನ್ನು ಕಪ್ಪು–ಬಸಿಗಳ ನಾದವೇ ಮುರಿಯಿತು (ಅಪನಾ. ೨೪೮). [← ಇಂ. Cup]

**ಕಪ್ಪುಕರ್ಣಿ**, ಕಪ್ಪುಕುರ್ಣಿ (ನಾ). ಒಂದು ಔಷಧಿಯ ಗಿಡ: ಕಪ್ಪುಕರ್ಣಿ, ಕಪ್ಪುಬೊಬ್ಬಿ (ಮೈಔಗಿ. ೩೨-೬೨೦). **ಕಪ್ಪುಕುರ್ಣಿ**: (೬). [?]

**ಕಪ್ಪುಕಾಣಿಕೆ** 'ಕಪ್ಪಕಾಣ್ಕೆ' ನೋ.

**ಕಪ್ಪುಕುರ್ಣಿ** 'ಕಪ್ಪುಕರ್ಣಿ' ನೋ.

**ಕಪ್ಪುಕೊರಳೆ** 'ಕಪ್ಪುಗೊರಲ' ನೋ.

**ಕಪ್ಪುಗಣ್** (ನಾ). ಕಪ್ಪಗಿರುವ ಕಣ್ಣು; ಕಾಡಿಗೆ ಕಣ್ಣು: ನಿಡಿದಾದ ಕಪ್ಪುಗಣ್ಗಳ ವಾರನಾರಿಯರು (ವೋಹತ. ೧೫-೨೬).

[ಕಪ್ಪು$_4$ (< ಕರ್ಪು$_1$) + ಕಣ್]

**ಕಪ್ಪುಗಾಡು** (ನಾ). ಕಪ್ಪು ಮುಸುಕಿದ ಕಾಡು; ಕತ್ತಲೆ ತುಂಬಿದ ಅಡವಿ: ಕುರುಡುಗತ್ತಲುಳ್ಳ ನಾಡು ಸೂರ್ಯನಿರದ ಕಪ್ಪುಗಾಡು ತನ್ನ ಕೊಂದುಕೊಂಬ ಜನ ಭಾವವಿರದ ತನನನ (ಮುಕ್ತಕಂ. ೩೧-೧೧).

[ಕಪ್ಪು$_4$ (< ಕರ್ಪು$_1$) + ಕಾಡು$_2$]

**ಕಪ್ಪುಗಾಣಿಕೆ** 'ಕಪ್ಪಕಾಣ್ಕೆ' ನೋ.

**ಕಪ್ಪುಗುಟಿ** (ನಾ). ಆನೆಗಳನ್ನು ಹಿಡಿಯುವುದಕ್ಕೋಸ್ಕರ ಮಾಡಿದ ತಗ್ಗು: "ವಾರೀ, ಗಜಬಂಧನೀ ಆನೆಯ ಹಿಡಿಯಲೋಸ್ಕರ ಮಾಡಿದ ಕಪ್ಪುಗುಟಿ" (ನಾಚಿರಾ. ೧೩೩). [ಕಪ್ಪು$_3$ + ಕುಟಿ$_2$]

**ಕಪ್ಪುಗೊರಲ**, ಕಪ್ಪುಕೊರಳ, ಕಪ್ಪುಗೊರಳ (ನಾ). ಕೊರಳಲ್ಲಿ ಕಪ್ಪು ಗುರುತುಳ್ಳವನು; ಕಪ್ಪಾದ ಕೊರಳು ಉಳ್ಳವನು; ನೀಲಕಂಠ; ಶಿವ: ಕಪ್ಪುಗೊರಲ [ಪಾಠಾಂ. ಳ]ನ ಕಣ್ಣೊಳಗೆ ಕಣ್ಣಪದೇವನು ತನ್ನ ನೇತ್ರವನೊಪ್ಪಲೊಪ್ಪಿಸಲೊಡನೆ (ಬಸವು. ೧೮-೬೨). **ಕಪ್ಪುಕೊರಳೆ**: ಕಪ್ಪುಕೊರಳನು ವೃತ್ರನಂ ಗೆಲಲು ದೇವೇಂದ್ರಗೊಪ್ಪಿಕೊಟ್ಟನು (ತುರಂಗ. ೫೫-೭). **ಕಪ್ಪುಗೊರಳೆ**: ಕಪ್ಪುಗೊರಳನ ಕರುಣದಿ ಇವನಱದು ಒಪ್ಪಿ ಹೇಳಿದನು (ಸರ್ವಜ್ಞ. ೧೦೪೨); ಆ ಕಪ್ಪುಗೊರಳನಾಣೆ ಊಟ ಸಪ್ಪೆಯಾಯಿತೆ (ಸೌಗಂಧಿ. ೧೬-೭).

[ಕಪ್ಪು$_4$ (< ಕರ್ಪು$_1$) + ಕೊರಲ್ + –ಅ$_7$]

**ಕಪ್ಪುಗೊರಳೆ** 'ಕಪ್ಪುಗೊರಲ' ನೋ.

**ಕಪ್ಪುದೋಱು** (ಕ್ರಿ). ೧. ಕಪ್ಪುಬಣ್ಣ ಕಾಣಿಸು; ಕಪ್ಪಾಗು: ರಂಜಿಸಿತು ಯವ್ವನದಿರವು ನಿಮ್ಮಯ್ಯಂದಿರಿಗೆ ಕುಡಿವರಿವ ಮೀಸೆಯ ಕಪ್ಪುದೋಱುವ ಬವರಿಗಡ್ಡಗಳ (ತೊರರಾ. ೪-೧-೧). ೨. (ಆಲಂ) ಕಳಂಕತಟ್ಟು; ಕುಂದುಬರು: ಕಪ್ಪುದೋಱದು ಕಲಿಗಳಿಬ್ಬರ ಸುಪ್ರತಾಪಕೆ (ತೊರರಾ. ೪-೪-೨೧); ತಪ್ಪದೀ ಯುವರಾಜನಾಡಿದ ಕಪ್ಪುದೋಱದ ಮಾತು (ತೊರರಾ. ೪-೧೨-೧೨).

[ಕಪ್ಪು$_4$ (< ಕರ್ಪು$_1$) + ತೋಱು$_1$ (< ತೋಱ್)]

**ಕಪ್ಪುನಿ** (ನಾ). ಒಂದು ನದಿಯ ಹೆಸರು. ☞ ಈಗಿನ ಕಪಿನೀ: ಕಪ್ಪುನಿ ನದೀ ಸಮೀಪೇ (ಮೈಆರಿ. ೧೯೩೬, ೫೩-೨೨; 550 ?).

[< ಸಂ. ಕಪಿನೀ]

**ಕಪ್ಪುಬೊಬ್ಬುಳಿ**, ಕಪ್ಪುಬೊಬ್ಬಿ (ನಾ). = ಕಪ್ಪುಕರ್ಣಿ (೬). **ಕಪ್ಪುಬೊಬ್ಬಿ**: ಕಪ್ಪುಕರ್ಣಿ, ಕಪ್ಪುಬೊಬ್ಬಿ (ಮೈಔಗಿ. ೩೨-೬೨೦).

[ಕಪ್ಪು$_4$ (< ಕರ್ಪು$_1$) + ಬೊಬ್ಬುಳಿ$_2$ (< ಬೊಬ್ಬುಲಿ)]

**ಕಪ್ಪುಬೊಬ್ಬಿ** 'ಕಪ್ಪುಬೊಬ್ಬುಳಿ' ನೋ.

**ಕಪ್ಪುರ**, ಕಪ್ಪರ$_1$, ಕರ್ಪುರ (ನಾ). ಆರತಿಗಾಗಿ ಹೊತ್ತಿಸುವ ಸುಗಂಧ ದ್ರವ್ಯ; ಸುವಾಸನೆಗಾಗಿ ಉಪಯೋಗಿಸುವ ಕರ್ಪೂರ: ಅದೇಂ ಮಗಮಗಿಸಿತ್ತೊ ಕತ್ತುರಿಯ ಕಪ್ಪುರದೊಂದು ಕದಂಬದಂಬುಲಂ (ಪಂಪಭಾ. ೪-೧೦೭); ವಸಂತರಾಜಂ ಕತ್ತುರಿಯ ಮಡಿಯೊಳ್ ಕಪ್ಪುರದ ಗಿಡುವನಿಟ್ಟು ಜಾಟಳಮನೆತ್ತಿ ಬೆಳೆಯಿಸಿದನೆಂಬಂತಿರ್ದ ಕರ್ಪೂರ ದ್ರುಮಂಗಳಿಂ (ಗಿರಿಕ. ೨-೭೧ ವ); ಸಸಿಯ ಶೀತಳದಂತೆ ಕಪ್ಪುರದೆಸೆವ ಕಂಪುಗಳಂತೆ (ಪ್ರಭುಲೀ. ೨-೧೩); ಕಪ್ಪುರವು ಒಂದು ಜಾತಿಯ ಗಿಡಗಳ ಹಾಲಿನಿಂದ ಆಗುತ್ತದೆ (ಮುಂಬಯಿ. ೪-೭೦). **ಕಪ್ಪರ$_1$**: ಆಗ ಗೋಸಾವಿಯು ಅವನಿಗೆ. . . ತೊಲಿ ಕಪ್ಪರ ಹಚ್ಚೆಂಟು ಊದಿನ ಕಡ್ಡಿ . . . ಇಷ್ಟು ತರಹೇಳುತ್ತಾನೆ (ಕಥಾಗ. ೧೨೮); ಕಪ್ಪರ ಮುಂತಾದ ಸುಗಂಧ ದ್ರವ್ಯಗಳಿಂದಲೂ ಹವೆಯ ದೋಷವು ತಕ್ಕಮಟ್ಟಿಗೆ ಕಡಿಮೆಯಾಗುತ್ತದೆ (ಮುಂಬಯಿ. ೫-೧೫೬). **ಕರ್ಪುರ**: ಮರನನಱವಂತು ಬಲ್ಲರೆ ಸಿರಿಖಂಡವನಣ್ಣ ಪಗಿನನಱವಂತಿರೆ ಕರ್ಪುರಮಂ ಬಲ್ಲರೆ (ಧರ್ಮಾಮೃ. ೧-೨೦೩); ನಿಮ್ಮ ಶರಣರ ಸಂಗವ ಮಾಡಿದಡೆ ಕರ್ಪುರದ ಗಿರಿಯನುರಿಕೊಂಬಂತೆ (ಮಹಾದೇ. ಕ. ೩೨-೮೭); ಕಂಪಿಡುವ ಕರ್ಪುರದ ವೀಳೆಯವಿತ್ತು (ಬಸರ.೩-೮೦); ಕರ್ಪುರವನುರಿಯಪ್ಪಿದವೊಲು (ಬಸವು. ೮-೬೦). [< ಸಂ. ಕರ್ಪೂರ]

**ಕಪ್ಪುರಗಂಧ** (ನಾ). ಕರ್ಪೂರ ಬೆರಸಿದ ಗಂಧ, —ಚಂದನ: ಕೆಲರು ಕಪ್ಪುರಗಂಧವನುಲೇಪಿಸಿದರಂಗದಲಿ (ನಳಚ.೧-೪೦). [ಕಪ್ಪುರ+ಗಂಧ]

**ಕಪ್ಪುರಗಂಧಿ** (ನಾ). ಕರ್ಪೂರದ ವಾಸನೆಯುಳ್ಳವಳು : ಸುಗುಣಾ ನಿರುದ್ಧಗೆ ಕಪ್ಪುರಗಂಧಿ ಸೇರಿದಳು (ಮೋಹತ. ೪೧–೪೫).
[< ಸಂ. ಕರ್ಪೂರಗಂಧಿ]

**ಕಪ್ಪುರಗಂಪು** (ನಾ). ಕರ್ಪೂರದ ಸುಗಂಧ : ಬಾಳದ ತಂಪಿನ ಕಪ್ಪುರ ಗಂಪಿನ ನೀರೆ ಜೀವನವೀಗವೆನಿಸುತಿದೇ (ಸಋಗೀ. ೧೯–೩೧೯).
[ಕಪ್ಪುರ + ಕಂಪು]

**ಕಪ್ಪುರಗರಡಗೆ** (ನಾ). ಕರ್ಪೂರವನ್ನು ಹಾಕಿಡುವ ಪಾತ್ರೆ, —ಭರಣಿ: "ಕರ್ಪೂರಕರಂಡಕ – ಕಪ್ಪುರಗರಡಗೆ" (ಶಮದ. ೨೯೩ ಪ್ರಯೋ).  [ಕಪ್ಪುರ + ಕರಡಗೆ (< ಕರಂಡಗೆ)]

**ಕಪ್ಪುರದಂಬುಲ** (ನಾ). ಕರ್ಪೂರದ ಪರಿಮಳ ಬೆರೆತ ತಾಂಬೂಲ : ಧಾತ್ರೀತಳಮಂ ಬೆಸಕೈಸಿಕೊಳ್ವೊಡಂ ಕಪ್ಪುರದಂಬುಲಮಂ ಮಾಣದೆ ಮೆಲ್ವೊಡಮುಳಿಪಿಲ್ಲದೆ ಪೂಜಿಸಿಂದ್ರವಂದ್ಯನ ಪದಮಂ (ಧರ್ಮಾಮೃ. ೬–೧೫೧).  [ಕಪ್ಪುರ + ತಂಬುಲ]

**ಕಪ್ಪುರದೀವ** (ನಾ). ಕಪ್ಪುರದ ದೀಪ; ಕರ್ಪುರದ ದ್ವೀಪ (?) : ಬರ್ಪರ್ ಪೋಪರಾರ್ಗಂ ಮನಂಗೊಳಿಸಲ್ ಕಪ್ಪುರದೀವವಿಟ್ಟವಿಡಿ ಜಾಗಂ ವಾರನಾರೀಜನಂಗಳೊಳಂದೊಪ್ಪೆ ನೃಪಂಗಲಂಪುವಡೆದತ್ತತ್ತಂ ಬಸಂತೋತ್ಸವಂ (ಶಾಂತಿಪು. ೮–೭೫).
[ಕಪ್ಪುರ + ದೀವ ?]

**ಕಪ್ಪುರಬೆಂಡೆ** (ನಾ). ಒಂದು ಬಗೆಯ ಸಸ್ಯ : "ಕಟುಕಿಫಲರಾಜ :— ಕಪ್ಪುರ ಬೆಂಡೆ" (ಓಷಧಿ. ೨೭).  [ಕಪ್ಪುರ + ಬೆಂಡೆ]

**ಕಪ್ಪುರವಚ್ಚ** (ನಾ). ಕಪ್ಪುರದ ತೊಡುಗೆ, —ಲೇಪನ (?) : ಅಮರ್ಚುವ ಕಪ್ಪುರವಚ್ಚವಾಗಳುಂ ಪೂಸುವ ಚಂದನಂ ಬಿಸುಪನಾಜಿಸ ಲಾಜವೆ ಸತ್ಯಭಾಮೆಯಾ (ಜಗವಿ. ೧೧–೨೦).
[ಕಪ್ಪುರ + ಪಚ್ಚ$_3$]

**ಕಪ್ಪುರವಟ್ಟು** (ನಾ). ಕರ್ಪೂರದ ಹಳಕು, —ಬಟ್ಟು, —ಬಿಲ್ಲೆ : ಜಡೆಗೆ ಪೂಸಿದರು ಕತ್ತುರಿ ಕಮ್ಮಲರ್ಗಳ ಬಿಡಯವಿಲ್ಲದೆ ಕೇವಣಿಸಿ ತಡೆ ಯದೆ ಕಪ್ಪುರವಟ್ಟುಗಳನು ಶಿರದೆಡೆಯಲ್ಲಿ ನೆಲೆಗೊಳಿಸಿದರು (ಮೋಹತ. ೧೪–೪೪).  [ಕಪ್ಪುರ + ಬಟ್ಟು$_2$ (< ಬಟ್ಟೆ$_1$)]

**ಕಪ್ಪುರವರ್ಷ** (ನಾ). ಒಬ್ಬಾತನ ಹೆಸರು; ಒಂದು ಬಿರುದು (?) : ವಾದ್ಯವಿದ್ಯಾಧರ[ನೊ]ಳ್ವರಸಂಕ[ಶಂಕ]ರಂ ಕಪ್ಪುರವರ್ಷನ್ರಿಪಗೆ ನೆಗರ್ದ್ದನೆಜೀಗ ಮಹೀಶ (ಸೌಇಇ. XX, ೫೦–೧೫ ; ?).
[ಕಪ್ಪುರ + ವರ್ಷ]

**ಕಪ್ಪುರವಳಿಕು** 'ಕಪ್ಪುರವಳುಕು' ನೋ.

**ಕಪ್ಪುರವಳುಕು**, ಕಪ್ಪುರವಳಿಕು, ಕಪ್ಪುರವಳ್ಕು (ನಾ). ಕಪ್ಪುರದ ಹಳುಕು ; ಕರ್ಪೂರದ ಹರಳು : ಅಮದಿಸೆಂದೆ ತೊಯ್ದು ಕಪ್ಪುರವಳು ಕಿಂದಜಂ ಕಡೆದು ಕಂಡರಿಪಂ ವಲಮೆನ್ನ ನಲ್ಲಳಂ (ಪಂಪಭಾ. ೫–೧೭); ಅರೆದೊಡೆ ಸೌಧಸಂತತಿಗೆ ಪಾಲ್ವೊದೆಯುಪ್ಪ ಕಟಲ್ಚಿ ಕೂಡೆ ಕಪ್ಪುರ ವಳುಕಪ್ಪಗುರ್ವನೊಳಕೊಂಡುದು ಚಂದ್ರಿಕೆ ಸಾಂದ್ರಭಾವದಿಂ (ಜಗವಿ. ೧೬–೧೧೯); ತಿಂಗಳ ತಿರುಳ ಪುತ್ರಿಕೆಯೊ ಕಪ್ಪುರವಳುಕಿನಲಿ ಬಿದಿ ಕಡೆದು ತಿದ್ದಿದ ಸಾಲಭಂಜಿಕೆಯೊ (ಸಾಳ್ವಭಾ. ೨೦–೪೫). **ಕಪ್ಪುರ ವಳಿಕು** : "ತವಲಾಯಿಯೆ ಕಪ್ಪುರವಳಿಕು ಜಗದಿ" (ಕವಿಕಂ. ೨೪೭); ಕಪ್ಪುರವಳಿಕಿನಳವಟ್ಟ ಜಗಲಿಗಳ ಮೇಲೆ ಪಸರಿಸಿದ ಕುಸುಮದೆಸಟಿ ಪಸೆಗಳೊಳಂ (ಚಂದ್ರಪು. ೬–೯೫ ವ). **ಕಪ್ಪುರವಳ್ಕು** : ಪರೆದುಗುವ ಪಂಚರತ್ನದ ಪರಲ್ಗಳುದಿರ್ದೆಸೆಯೆ ಸೌಧದೊಳೆ ಕೆದಱಿದ ಕಪ್ಪುರವಳ್ಕು ಗಳೆಸೆಯೆ (ಪಂಪಭಾ. ೩–೪೯).  [ಕಪ್ಪುರ + ಪಳುಕು]

**ಕಪ್ಪುರವಳ್ಕು**, ಕಪ್ಪುರವಳುಕು' ನೋ.

**ಕಪ್ಪುರವಳ್ಳಿ**, ಕಪ್ಪುರಳ್ಳಿ, ಕರ್ಪುರವಳ್ಳಿ (ನಾ). ೧. ಕಪ್ಪುರದ ಬಳ್ಳಿ: "ಪಾಷಾಣಭಿತ್ – ಹಿಟ್ಟಳಿಕ, ಕಪ್ಪುರವಳ್ಳಿ" (ಓಷಧಿ. ೯೫). ೨. ಕಪ್ಪುರದ ಪರಿಮಳವುಳ್ಳ ವೀಳೆಯದೆಲೆ ; ಸಾಂಬ್ರಾಣಿಯೆಲೆ : ಅಡಸಿದ ಪಾರಿಜಾತಕದ ಕಪ್ಪುರವಳ್ಳಿಯ ನೇಲವತ್ತಿಯಾಯ್ದುಡಕೆಯ ಭೀಮಸೇನಿಕದ ತಂಬುಲದಿಂ (ಶಾಂತಿಪು. ೧೦–೯೫); ಕಪ್ಪುರವಳ್ಳಿಯ ಬಿಳಿಯೆಲೆಯ ವೀಳೆಯುಮುಂ (ಕಾದಂಬ. ೧೮೪); ಎಳೆ ಅಡಕೆಯ ನಿಂಪುಳ್ಳವನೊಪ್ಪುವ ಕಪ್ಪುರವಳ್ಳಿಯ ಬಿಳಿಯೆಲೆಯನೊಲ್ದು ಮೆಲ್ದರ್ ಸತಿಯರ್ (ಪಾರ್ಶ್ವಪು. ೯–೩೬). **ಕಪ್ಪುರಳ್ಳಿ** : ೧. ಕರ್ಪೂರದ ಗಿಡ ಕಪ್ಪುರಳ್ಳಿ (ಮೈಔಗಿ. ೬–೧೧೪). **ಕರ್ಪುರವಳ್ಳಿ** : ೧. ಚಂದನವೃಕ್ಷಮಂ ಪುದಿದ ಕರ್ಪುರವಳ್ಳಿವೊಲ್ (ಶಾಂತಿಪು. ೯–೫೯).  [ಕಪ್ಪುರ + ಬಳ್ಳಿ]

**ಕಪ್ಪುರವಟಿ** (ನಾ). ಕರ್ಪೂರದ (ಹಳುಕುಗಳ) ಮಳೆ : ಕರತಳವಾರಿ . . . ಕೃಷ್ಣನ ಮೇಲೆ ಪೊದಟ್ದುದಂದು ಕಪ್ಪುರವಟಿಯಂತಿರಾಲಿವಟಿ ಯಂತಿರಲರ್ವಟಿಯಂತಿರೆತ್ತಲುಂ (ಜಗವಿ. ೧೪–೯೪).
[ಕಪ್ಪುರ + ಮಟಿ]

**ಕಪ್ಪುರವಾಳೆ**, ಕಪರಬಾಳೆ, ಕರ್ಪುರವಾಳೆ (ನಾ). ಒಂದು ಬಗೆಯ ಬಾಳೆ : ಕಪ್ಪುರವಾಳೆ ಕ್ರಮುಕ ಜಂಬೀರಗಳೊಪ್ಪುವ ಪಲಸ ರಸಾಲ . . . ಮೊದಲಾದ ನಾನಾ ತರು ತಪ್ಪಲೊಳೆಸೆವುವು (ಕಂಸವಿ. ೨–೩೨); ಎಲೆ ಉತ್ಪಳಿಕೆ, ಕಪ್ಪುರವಾಳೆಯ ರನ್ನದ ಜಗತಿಯನು ತಾವರೆಯ ಹೂವಿನಿಂದ ಗುಡಿಸು (ವಚಕಾ. ೫೦). **ಕಪರಬಾಳೆ** : "ಒಳ್ಳೆಯ ಕಪರಬಾಳೆ ಹಣ್ಣು ವೆಂಕಮ್ಮ . . . ದೇವರ ಪ್ರಸಾದ ಬೇಡ ಎನ್ನಬೇಡಿ" (ಪದ್ಮಸ. ೨೫೫). **ಕರ್ಪುರವಾಳೆ** : ಬೆಳೆದ ಕರ್ಪುರವಾಳೆಯಲರ್ದ ಕುಂಕುಮದಾ ಪುರಗಾಡು (ಶ್ರೀಪಾಲ. ೧೨–೩).
[ಕಪ್ಪುರ + ಬಾಳೆ$_1$ (< ಬಾಟೆ)]

**ಕಪ್ಪುರವೀಳೆಯ** (ನಾ). = ಕಪ್ಪುರದಂಬುಲ : ಆಳ ಬೋಳೈಸಿದನು ಕಪ್ಪುರವೀಳೆಯವ ಹಾಯ್ಕಿದನು (ಕುವ್ಯಾದ್ರೋ. ೧೫–೪೭).
[ಕಪ್ಪುರ + ವೀಳೆಯ]

**ಕಪ್ಪುರಶುಂಠಿ**, ಕರ್ಪುರಶುಂಠಿ, ಕರ್ಪುರಸುಂಟಿ (ನಾ). ಸುಗಂಧದ ಶುಂಠಿ, —ಸುಗಂಧದ ಬೇರು : ಚರ್ಮರೋಗಕ್ಕೆ ಕಪ್ಪುರಶುಂಠಿಯನ್ನು ತೇದು ಹಚ್ಚುವರು (ರೂಢಿ). **ಕರ್ಪುರಶುಂಠಿ** : "ವನಿತೆ ಷಡ್ಗ್ರಂಥಿ ಕರ್ಪುರಶುಂಠಿ ಕೌಂಡೆ ಕುಂಡಿನಿಯಕ್ಕು" (ಮಂಗರಾ. ೪೧–೩೩); ಕರ್ಪುರಶುಂಠಿ, ಗೋರಟಿ . . . ಕಷಾಯವ ಕಾಸಿ (ವೈದ್ಯಸಾ. I, ೧೭೬). **ಕರ್ಪುರಸುಂಟಿ** : (ಕ).  [< ಸಂ. ಕರ್ಪೂರಶುಂಠೀ]

**ಕಪ್ಪುರಸೆಟ್ಟಿ** (ನಾ). ಒಂದು ಬಗೆಯ ಪಕ್ಷಿ : ಗೌಜು ಕರ್ಕಟ ಕಪ್ಪುರ ಸೆಟ್ಟಿ ಚೆಲುವ ಬೆಳವ ಕುಕ್ಕಟಗ ಕಲುಕುಟುಕಾದಿ ತೋಟದ ಪಕ್ಕಿಗಳ ಕೊರಲುಲುಹಾದುದಾ ತಪೋವನದಿ (ಮೋಹತ. ೭–೧೭).  [?]

**ಕಪ್ಪುರಾಳ** (ನಾ). ಕರಿಯ ಬಣ್ಣದ ರಾಳ, —ಕಲ್ಲರಗು : "ನುಣು ಪಾಗಿಯೂ ಗಟ್ಟಿಯಾಗಿಯೂ ಒಡೆಯುವ ಸ್ವಭಾವವುಳ್ಳದ್ದಾಗಿಯೂ ಇರುವ ಕಪ್ಪನೆಯ ಒಂದು ರಾಳಪದಾರ್ಥ ; ಕಲ್ಲರಗು : ಕಪ್ಪುರಾಳ" (Asphalt. ಇಂಕಸಿ).  [ಕಪ್ಪು$_4$ (< ಕರ್ಪು$_1$) + ರಾಳ]

**ಕಪ್ಪುವಡೆ** (ಕ್ರಿ). ಕಪ್ಪುಬಣ್ಣವಾಗು ; ಕರಿದಾಗು : ಮೈಯ ಗೌರ ಕಾಂತಿ ಕಪ್ಪುವಡೆಯಹತ್ತಿದೆ (ಮೂರುದಾ. ೬೪).
[ಕಪ್ಪು$_4$ (< ಕರ್ಪು$_1$) + ಪಡೆ$_1$]

**ಕಪ್ಪುವೀಳ್** (ಕ್ರಿ). ಸಿಕ್ಕಿಬೀಳು ; ಬಲೆಬೀಳು (?) : (ಕಪ್ಪುವಿಳ್ದ ಆಕ್ರೋಶದಿಂದ) ಅಗಲಯ್ಯಾ, ಅಗಲಿ . . . ಹಾಳಾಗಿಯೇ ಹೋಗುತ್ತೇವೆ (ಬಿಟ್ಟಅ. ೧೪೪–೧೨).
[ಕಪ್ಪು$_3$ + ಬೀಳ್$_1$ (< ಬೀಟ್$_1$)]

**ಕಪ್ಪುಸಂತೆ** (ನಾ). ಕಳ್ಳಸಂತೆ; ಕಾಳಸಂತೆ; ಕದ್ದುಮುಚ್ಚಿಟ್ಟು ಕೊಂಡು ಹೆಚ್ಚಿನ ಬೆಲೆಗೆ ವ್ಯಾಪಾರ ಮಾಡುವಿಕೆ: ಒಂದಕ್ಕೆರಡು ಕೊಟ್ಟಾದರೂ ಕಪ್ಪುಸಂತೆಯಿಂದ ತಂದೇ ತರುತ್ತಾರೆ (ಪಂಚಭ. ೪೧). 'ಕಾಳಸಂತೆ' ಪರ್ಯಾ. [ಕಪ್ಪು$_4$ (< ಕರ್ಪು$_1$) + ಸಂತೆ]

**ಕಪ್ಪುಹಣ** (ನಾ). ಕಳ್ಳ ವ್ಯಾಪಾರದಿಂದ ಬಂದ ಹಣ; ಮೋಸದಿಂದ ಸಂಪಾದಿಸಿದ ಹಣ: ದೇಶದಲ್ಲಿ ಕಪ್ಪುಹಣ ಹೆಚ್ಚಾಗಿದೆ (ರೂಢಿ). [ಕಪ್ಪು$_4$ (< ಕರ್ಪು$_1$) + ಹಣ (< ಪಣ$_1$)]

**ಕಪ್ಪುಹಲಗೆ** (ನಾ). ಸೀಮೆಸುಣ್ಣದಿಂದ ಬರೆಯಲು ಬರುವಂತೆ ಸಿದ್ಧಪಡಿಸಿದ ಕರಿಯ ಬಣ್ಣದ ಫಲಕ; ಬೋರ್ಡು: ಕಪ್ಪುಹಲಗೆಯ ಒಂದು ಕಡೆ ಸಾರಾಂಶವನ್ನಾಗಿ ಬರೆಯಬೇಕು (ಶಿಕ್ಷದ. ೨೨೫); ಒಂದು ಕಪ್ಪುಹಲಗೆ (Black board)ಯನ್ನು ಒದಗಿಸಿದರೆ ಅವು ಅದರ ಮೇಲೆ ತಮಗೆ ತೋರಿದ್ದನ್ನೆಲ್ಲ ಬರೆದು ಸಂತೋಷಪಡುವುವು (ಗೃಹವಿ. ೧೪೦). [ಕಪ್ಪು$_4$ (< ಕರ್ಪು$_1$) + ಹಲಗೆ (< ಪಲಗೆ)]

**ಕಪ್ಪೆ$_1$** (ನಾ). ಸಾಮಾನ್ಯವಾಗಿ ನೀರಿನಲ್ಲಿ ಇರುವ ನಾಲ್ಕು ಕಾಲಿನ ಪ್ರಾಣಿ; ಮಂಡೂಕ; ಭೇಕ: ಕಪ್ಪೆಗಳುಮೆಸಡುಗಳುಮಿಲಿಗಳು ಮೊಂತಿಗಳುಂ ಮೊದಲಾಗೊಡೆಯ ಜೀವರಾಶಿಗಳಂ ಕೊಂದು ತಿನ್ಪೆ ಯಾದಯ್ (ವಡ್ಡಾರಾ. ೧೪೦–೪); ಪಾವಿಲ್ಲದೆಡೆಯೊಳ್ ಕಪ್ಪೆಗಳ್ ತಮ್ಮ ಗಜಜು ಗಜಜಾಗಿರ್ಪುವು (ಧರ್ಮಾಮೃ. ೧–೧೭೪); ಬಾವಿಯ ಕಪ್ಪೆ ಸಮುದ್ರಮಂ ಮೆಚ್ಚದಂತೆ (ಜೀವಸಂ. ೧೪೭–೫ ಪ); ಅಂಜುವರ ಮೇಲೆ ಕಪ್ಪೆಯಂ ಬಿಸುಟಿರೆಂಬಂತೆ (ಪ್ರಭ್ವಾ ಸ್ರ. ೧–೫೪ ವ); ಕಲ್ಲಿನೊಳಗೆ ಇರುವ ಕಪ್ಪೆಗೆ ಅಲ್ಲಿ ಉದಕ ಕೊಡುವ (ಪುರಂದ. ೧–೫೬–೧); ಕಪ್ಪೆ ತಕ್ಕಡಿಗೆ ಹಾಕಿದಂತೆ (ಗಾದೆ). [ದೇ.॥ ತುಳು. ಕೊಡ. ಕಪ್ಪೆ; ತೆಲು. ಕುವಿ. ಕಪ್ಪ; ಗೊಂಡಿ. ಕಪ್ಪೆ]

**ಕಪ್ಪೆ$_2$** (ನಾ). (ಉಕ) ಬೀಗ; ಕೀಲಿ: ಮನೆಗೆ ಕಪ್ಪೆ ಹಾಕಿದೆ (ರೂಢಿ). [?]

**ಕಪ್ಪೆ$_3$** 'ಕಪ್ಪು$_4$' ನೋ.

**ಕಪ್ಪೆ ಅರಭಟ್ಟ** (ನಾ). ಒಬ್ಬಾತನ ಹೆಸರು: ಕಪ್ಪೆ ಅರಭಟ್ಟನ್ ಶಿಷ್ಟಜನ ಪ್ರಿಯನ್ (ಇಅ. X, ೬೧–೧; 7ನೆಯ ಶತ). [ಕಪ್ಪೆ$_0$ + ಅರಭಟ್ಟ ?]

**ಕಪ್ಪೆಕೀಲಿ** (ನಾ). (ಉಕ) ಕೊಂಡಿಯ ಬೀಗ, —ಕೀಲಿ. [ಕಪ್ಪೆ$_2$ + ಕೀಲಿ]

**ಕಪ್ಪೆಕುಪ್ಪಳು** (ನಾ). ಒಬ್ಬನು ಬಾಗಿ ನಿಂತು ಇನ್ನೊಬ್ಬನು ಅವನ ಮೇಲೆ ಕೈಯೂರಿ ಕಪ್ಪೆಯಂತೆ ಜಿಗಿಯುವ ಆಟ. [ಕಪ್ಪೆ$_1$ + ಕುಪ್ಪಳು]

**ಕಪ್ಪೆಕುರ** (ನಾ). ಕಪ್ಪೆಯಾಕಾರದ ಕುರು (ಕ). [< ಕಪ್ಪಕುರು]

**ಕಪ್ಪೆಕೆಮ್ಮು** (ನಾ). ನಾಯಿಕೆಮ್ಮು; ಕೋಡಗ ಕೆಮ್ಮು: ಮಕ್ಕಳ ಕಪ್ಪೆಕೆಮ್ಮಿಗೆ – ತುಲಸಿ ಎಲೆಯ ರಸ ಒಂದು ಚಮಚೆಗೆ ಮೂರುಕಾಳು ಮೆಣಸಿನಪುಡಿ ಹಾಕಿಕೊಡುವುದು (ಮನೆಮ. ೨೪). [ಕಪ್ಪೆ$_1$ ? + ಕೆಮ್ಮು$_2$]

**ಕಪ್ಪೆಗಲ್** (ನಾ). ಒಂದು ಊರಿನ ಹೆಸರು: ಆನೆಯೂರ್ ಉತ್ತರ ಸ್ಯಾಮ್ ದಿಸಿ ಕಪ್ಪೆಗಲ್ಲೆ ಇನ್ತುಪೋಗಿ ರಾಜಂಗಾಬಿನೆ (ಮೈಆರಿ. ೧೯೩೯, ೧೧–೧೨; ?). [?]

**ಕಪ್ಪೆಗೂಂತು** (ನಾ). ಕಪ್ಪೆ ನೆಗೆತ; ಕಪ್ಪೆಯಂತೆ ಕುಪ್ಪುವುದು (?): ಮದವದ್ವೈರಿಯನಾಂತು ಪೊಯ್ಗೆ ಜಯಶೀಲಂ ವಿಷ್ಣು ವಿದ್ವಿಷ್ಟನುರ್ಬಿದ ಕತ್ತಾಜದೆ ಪಾಜು ಬಿಳ್ದ ತನಿಗಂಪಂ ಕಪ್ಪೆಗೂಂತಿಕ್ಕುತಿರ್ದ್ದುದು ವೀರ ರ್ಕ್ಕಳ ಬಿಳ್ದ ತೋಳ್ವಿಡಿದ ಖಳ್ಗಂ ಪೊಯ್ವ ಸೂಳ್ದೋಱುತಿರ್ದ್ದುದಿದೇ ನದ್ಭುತಮಾಯ್ತೊ ವೀರವಿಭವಂ ಸಂಗ್ರಾಮ ರಂಗಾಗ್ರದೊಳ್ (ಎಕ. V, ಬೇಲೂರು. ೧೭೧–೧೭, 1160; ಶಾಪಮಂ. ೬೧೬ ನೋ). [ಕಪ್ಪೆ$_1$ + ಗೂಂತು. P ತಮಿ. ಕೂತ್ತು = ಕುಣಿತ]

**ಕಪ್ಪೆಗೂಡು** (ನಾ). ಹಸಿಮಣ್ಣಿನಲ್ಲಿ ಕಾಲನ್ನಿಟ್ಟು ತಟ್ಟಿ, ಆಮೇಲೆ ಕಾಲು ಹೊರಕ್ಕೆಳೆದುಕೊಂಡು ಪೊಳ್ಳಾದ ಆ ಆಕೃತಿಯನ್ನು ಮನೆ ಯಂತೆ ಸಿಂಗರಿಸಿ ಆಡುವ ಮಕ್ಕಳಾಟಿಕೆ; ಗುಬ್ಬಿಗೂಡು (ಉಕ): ಕಪ್ಪೆಗೂಡು ಕಟ್ಟುವುದು, ಜಾರುಗುಪ್ಪೆ ಆಡುವುದು, ಓಡುವುದು – ಇವೇ ಮುಂತಾದವುಗಳನ್ನು ಮಾಡಲು ಪ್ರೋತ್ಸಾಹಿಸಬೇಕು (ಶಿಕ್ಷದ. ೧೦೮). [ಕಪ್ಪೆ$_1$ + ಗೂಡು]

**ಕಪ್ಪೆಗೋಲು** (ನಾ). ಕಪ್ಪೆ, ಏಡಿ ಮೊದಲಾದುವನ್ನು ಹಿಡಿಯುವ ಒಂದು ಸಾಧನ (?): ಅ ಹಳ್ಳದಾಗೆ ಒಂದೆರಡು ಕಾರೇಡಿ ಹಿಡುಕೊಂಡು ಬರಾನ, ಕಪ್ಪೆಗೋಲು ಹಾಕಿ (ಮಲೆಮ. ೧೩೪). [ಕಪ್ಪೆ$_1$ + ಕೋಲು$_1$ (< ಕೋಲ್$_1$)]

**ಕಪ್ಪೆಚಿಪ್ಪು** (ನಾ). ಒಂದು ಬಗೆಯ ಜಲಜಂತುವಿನ ಇಬ್ಭಾಗವಾದ ಚಿಪ್ಪು; ಪ್ರತಿಭಾಗವೂ ಒಳಭಾಗದಲ್ಲಿ ತಗ್ಗಾಗಿ ಹೊಳಪುಳ್ಳ ದಾಗಿರುವ ಚಿಪ್ಪು: "ಅಬ್ಧಿರೋಜಾ ಕಪ್ಪೆಚಿಪ್ಪು" (ಅಕಾನಿ. ೧–೧೭); ಕಪ್ಪೆಚಿಪ್ಪಿಗೆ ಸಮಾನವಾದ ಸುಳಿಯು ಶುಕ್ತಿಯೆನಿಸಿಕೊಂಬುದು (ಸೌಗಂಧಿ. ೩೧೪–೭); ಇಜ್ಜಲನ್ನು ತೇದು ಆ ಕಪ್ಪನ್ನು ಒಂದು ಕಪ್ಪೆಚಿಪ್ಪಿಗೆ ಬಳಿ ದಿಟ್ಟುಕೊಂಡಿದ್ದಾರೆ (ಬಾಣಅ. ೫೨). [ಕಪ್ಪೆ$_1$ + ಚಿಪ್ಪು (< ಸಿಪ್ಪು)]

**ಕಪ್ಪೆಬೀಗ** (ನಾ). = ಕಪ್ಪೆ ಕೀಲಿ (ಕ). [ಕಪ್ಪೆ$_2$ + ಬೀಗ$_1$]

**ಕಪ್ಪೆಬೈಸಣಿಗೆ** (ನಾ). ಕಪ್ಪೆಯಂತೆ ಕುಳಿತುಕೊಳ್ಳುವುದು (?): ಕುಳಿತುಕೊಂಡವನಾಗಿ ಭೂಮಿಯಲ್ಲಿ ಹಸ್ತಗಳನ್ನು ಚನ್ನಾಗಿ ಊರಿ ಕೊಂಡುಯೇಳುವಾಗ ಪಾದಗಳ ಹಿಂದಕೆ ತೆಗೆವದೂ ಅವದುಂಟು ಅದು ಕಪ್ಪೆಬೈಸಣಿಗೆಯೆಂದು ತಿಳಿಯಲ್ಪಟ್ಟಿತು (ಖಡ್ಗಟೀ. ೪–೬೦). [ಕಪ್ಪೆ$_1$ + ಬೈಸಣಿಗೆ]

**ಕಪ್ಪೆಯಸೊಪ್ಪು** (ನಾ). ಒಂದು ಬಗೆಯ ಸಸ್ಯ: "ಮಲಶುಕ್ತಿ – ಕಪ್ಪೆಯ ಸೊಪ್ಪು" (ಓಷಧಿ. ೧೧೯). [ಕಪ್ಪೆ ? + ಸೊಪ್ಪು$_3$]

**ಕಪ್ಪೆರೊಟ್ಟೆಗಿಡ** (ನಾ). ಒಂದು ಜಾತಿಯ ಗಿಡ: ಕಾಡುಕಡಲೆ, ಕಪ್ಪೇ ರೊಟ್ಟೇಗಿಡ (ಮೈಔಗಿ. ೫೨–೧೦೪೪). [ಕಪ್ಪೆ$_0$ + ರೊಟ್ಟೆ + ಗಿಡ (< ಗಿಡು)]

**ಕಪ್ಪೆಹುಣ್ಣು** (ನಾ). ಅಂಗೈಯಲ್ಲಾಗಲೀ ಹಿಮ್ಮಡಿಯಲ್ಲಾಗಲೀ ಆಗುವ ಒಂದು ಬಗೆಯ ಹುಣ್ಣು (ಕ). [ಕಪ್ಪೆ$_1$ ? + ಹುಣ್ಣು (< ಪುಣ್)]

**ಕಪ್ಪೇಱು** 'ಕರ್ಪೇಱು' ನೋ.

**ಕಫ** (ನಾ). ೧. ಶರೀರದಲ್ಲಿರುವ ಮೂರು ಧಾತುಗಳಲ್ಲಿ ಒಂದು: ಪದದಿಂ ನಾಭಿವರಂ ವಾತದ ತಾಣಂ ನಾಭಿಯಿಂದುರಂಬರೆಗಂ ಪಿತ್ತದ ತಾಣಮುರದಿನಾ ಮಸ್ತಕವರೆಗಂ ಕಫ [ಪಾಠಾಂ. ಖಪ]ದತಾಣಮಕ್ಕುಂ (ಲೋಕೋಪ. ೯–೨); ಕಫಪಿತ್ತಸಪರಿಪ್ಲುತಜರಾಮರಣ ಕಾಲ ಚಕ್ರಾಗ್ನಿಯಲ್ಲೀ (ವೀಶೈಪು. ೪–೨೧–೫೦). ೨. ಕೆಮ್ಮಿದಾಗ ಉಗುಳಿ ನೊಡನೆ ಹೊರಬೀಳುವ ಶ್ಲೇಷ್ಮ: ಎರಡೂ ಶ್ವಾಸಕೋಶಗಳಲ್ಲಿ ಕಫ ಕಟ್ಟಿಕೊಂಡಿತ್ತು (ಮನೋಸಂ. ೬೨). ೩. ಗೂರಲು ರೋಗ; ದಮ್ಮು: ಕಟುಕತ್ರಯದಿಂದಲ್ಲದೆ ಮಧುರಪ್ರಯೋಗದಿಂ ಕಫಮನಾವನುಪಶಮಿ ಯಿಸಿದಂ (ಪಾರ್ಶ್ವಪು. ೨–೪೨); ರೋಗಾದ್ರಿಯ ಹೊಡೆ ಭಸ್ಮಾಖ್ಯದಿ ಕಫರೋಗವನುರುಹದಜಿಂ (ಕಲ್ಯಾಕೇ. ೩೩); ಕಫ ಕೆಮ್ಮು ದಮ್ಮು ಹತ್ತುವದು ಮುಂತಾದ ಸರ್ವಲಕ್ಷಣಗಳು ಯಾವನಾದರೊಬ್ಬನಲ್ಲಿ ತತ್ಕಾಲಕ್ಕೆ ಕಂಡು ಬರದಿದ್ದರೂ (ಬ್ರಹ್ಮಜೀ. ೨೪). [ಸಂ.]

**ಕಫಣಿ** (ನಾ). ಮೊಳಕೈ. [ಸಂ.]

**ಕಫನಿ** 'ಕಪನಿ' ನೋ.

**ಕಫಿ** (ಗು). ಕಫ ಹೆಚ್ಚಾದ; ಕಫ ರೋಗದಿಂದ ಬಳಲುವ. [< ಸಂ. ಕಫಿನ್]

**ಕಫೋಣಿ** (ನಾ). = ಕಫಣಿ. [ಸಂ.]

**ಕಬಂಧ** (ನಾ). ೧. ಅಟ್ಟೆ; ತಲೆಯಿಲ್ಲದ ದೇಹ; ಮುಂಡ: "ಅಟ್ಟೆ ಕಬಂಧಮೆನಿಕ್ಕುಂ" (ಕವಿಕಂ. ೧೩೨); ಸ್ವಯಂಪ್ರಭಗೆ ತ್ರಿಪೃಷ್ಠನಶ್ವಗ್ರೀವನ ಕಬಂಧಮಂ ಸುಟ್ಟಿ ತೋಱಿ (ಶಾಂತಿಪು. ೫-೩೩ ವ); ದ್ವಿಟ್ಕಬಂಧಾಳಿ ಭೂಚಕ್ರವನೆತ್ತಂ ತೀವುವನ್ನಂ ಮುರಹರನಿಸುತೀರ್ದಂ (ಜಗವಿ. ೧೫-೨೫); ಅವನೀಪಾಲಕನನಜಸಿದೆನು ಕಳನೊಳು ಸಾಲ ಹೆಣಸೊಟ್ಟಿಲ ಕಬಂಧದ ರುಧಿರ ಪೂರದಲಿ (ಕುವ್ಯಾಗ. ೪-೨೭); ಪರಕಬಂಧಸಂಸಕ್ತಸರಕ್ತಶೀಕರ ಮುಖಮಿಳಿತಮಾಗಿಯುಂ (ರಾಜಶೇ. ೮-೧೧೫ ವ). ೨. ನೀರು. ೩. ಮೋಡ. ೪. ರಾಹು, ೫. ರಾಮನಿಂದ ಕೊಲ್ಲಲ್ಪಟ್ಟ ರುಂಡವಿಲ್ಲದ ಒಬ್ಬ ರಾಕ್ಷಸ: ಕಂಡರು ಭೈರವಾಡಂಬರದ ಘೋರ ಕಬಂಧರಕ್ಕಸನ (ತೊರರಾ. ೩-೧೨-೧೬); ಪಥದೊಳ್ ಕಬಂಧನಂ ಕೊಂದು... ಕಾಕುತ್ಸ್ಥನು (ಜೈಮಿಭಾ. ೧೮-೫); ಕಬಂಧನಂ ಕಂಡೊಡನೆ ನಡುಗಿದುದು ತನು ತಪನಕುಲಗೆ (ಶ್ರೀರಾಮಾ. ೨೬೪-೪೯). [ಸಂ.]

**ಕಬಂಧಕ** (ನಾ). = ಕಬಂಧ ೫: ಎಚ್ಚರು ಕೈಗಳನು ಕಳಚಲು ಕಬಂಧಕನ (ತೊರರಾ. ೩-೧೨-೧೭). [ಸಂ.]

**ಕಬಂಧನಾಟಕ** (ನಾ). ಮುಂಡದ ಕುಣಿತ, —ನೃತ್ಯ: ಸ್ಫುರಿತಶರನಿಕರಪಾತಿತನರೋತ್ತಮಾಂಗಂ ಕಬಂಧನಾಟಕರಂಗಂ ಸ್ಫುರಿತನವರುಧಿರ ರಂಗತ್ತರಂಗಮೊಪ್ಪಿದುದು ವೀರಭಟರಣರಂಗಂ (ಪಂಪಭಾ. ೧೩-೩೭). [ಕಬಂಧ + ನಾಟಕ]

**ಕಬಕ್ಕನೆ** 'ಕವಕ್ಕನೆ' ನೋ.

**ಕಬಚ** (ನಾ). ೧. ಕವಚ (೧). ೨. ಮೇಲಂಗಿ: ವಾಲಗ ಊದುತ್ತಿದ್ದವರು... ಹೊಸದಾಗಿ ತೋರುತ್ತಿದ್ದ ಕರಿಗೀರಿನ ಕಬಚ ಹಾಕಿದ್ದರು (ಮಲೆಮ. ೬೩೬). [< ಸಂ. ಕವಚ]

**ಕಬಜಾ** 'ಕಬಜೆ' ನೋ.

**ಕಬಜೆ, ಕಬಜಾ, ಕಬ್ಜಾ, ಕಬ್ಜೆ** (ನಾ). ಸ್ವಾಧೀನ; ವಶ: ಊರ ಒಕ್ಕಟ್ಟಿನ ಮುಂದೆ ಅವನು ಜಮೀನು ಕಬಜೆ ಪಡೆಯುವದಾಗಲಿ ಸಾಗು ಮಾಡುವದಾಗಲಿ ಶಕ್ಯವೆ? (ಕರವೀ. ೫೪); ಅವರು ತಯಾರಿಸಿದ ಸರಾಯಿಯು ಅವರ ಕಬಜೆಯಲ್ಲಿ ದೊರೆತದ್ದರಿಂದ, ರಾಘವೇಂದ್ರರಾಯರಿಗೆ... ದಂಡ ವಿಧಿಸಲಾಯಿತು (ಪಾನಕ. ೫೪). **ಕಬಜಾ**: ಜೆಳೆಯ ಕಬಜಾ ಪಡೆಯಲು, ಪಡದಪ್ಪ, ಬಾಪೂಸಾಹೇಬರ ಸಂಯುಕ್ತದಳವು ಸನ್ನದ್ಧವಾಯಿತು (ಗ್ರಾಮಾಯ. ೨೦೯); ನಾಳೆ ನಮ್ಮಾಗಳೇ ಅಲ್ಲಿಗೆ ಕಳಿಸಿ ಕಬಜಾ ತಗೊಂಡು ನಿನ್ನ ಹೆಸರಲೆ ಮಾಡಿಬಿಡತೀನಿ (ಬೆಳಭಾ. ೧೩೧). **ಕಬ್ಜಾ**: ಗೂಂಡಾಜನರ ನೆರವಿನಿಂದ ಅತನು ಜಮೀನ್ದಾರಿಕೆಯನ್ನು ಕಬ್ಜಾದಲ್ಲಿ ತೆಗೆದುಕೊಂಡ (ಜಮೀನ್ದಾ. ೩೮); "ಒಂದು ವರ್ಷದವರೆಗೆ 'ಕಬ್ಜಾ' ದಲ್ಲಿ ತೆಗೆದುಕೊಳ್ಳದ್ದು ಸಣ್ಣ ಮಾತೇ?" (ಕವಲು. ೮೪). **ಕಬ್ಜೆ**: ತನ್ನ ಆಸ್ತಿಯ ಕಬ್ಜೆಯ ಸಲುವಾಗಿ ನರಹರಿ ಮೊಗ್ಗಾವಿಗೆ ಬಂದಿದ್ದನೆಂದು ತಿಪ್ಪನು ಊರೆಲ್ಲ ಡಂಗುರ ಸಾರಿದನು (ಸಮಜೀ. ೬೮೪). [← ಅರ. ಕಬ್ಜಾ]

**ಕಬಟ** (ನಾ). ಮೋಸ; ವಂಚನೆ: "ಕಬಟ – ಕಪಟ = ವಂಚನೆ" (ತದ್ಭಕೋ. ೬); ಅಱಿಯಬಹುದೆಮ್ಮವರ ಕಬ[ಪಾಠಾಂ. ಪ]ಟದ ಕಱುಬುತನವಂಜದಿರೆನುತ ತೂಪಿಱಿದು ಹರಸಿದರ್ಸೈದೆಯಾಗೆಂದು (ತೊರರಾ. ೬-೧೨-೩೭). [< ಸಂ. ಕಪಟ]

**ಕಬಡಿ** 'ಕಬಡ್ಡಿ' ನೋ.

**ಕಬಡ್ಡಿ, ಕಬಡಿ** (ನಾ). ಒಂದು ಬಗೆಯ ಗುಂಪಿನ ಆಟ; ಗುಡುಗಿನಾಟ; ಹುತುತು (ಉಕ): ಕಬಡ್ಡಿಪಂದ್ಯದಲ್ಲಿ ನಮ್ಮ ಶಾಲೆಯವರು ಗೆದ್ದರು (ರೂಢಿ). **ಕಬಡಿ**: ಶಾಲೆಗಳಲ್ಲಿ ಕಬಡಿ, ಕೊಕ್ಕೊ ಆಟವಾಡುತ್ತಾರೆ (ರೂಢಿ). [← ಹಿಂ. ಕಬಡ್ಡೀ]

**ಕಬರಸ್ತಾನ, ಕಬರಸ್ಥಾನ** (ನಾ). (ಮುಸಲ್ಮಾನರ) ಶ್ಮಶಾನ, —ಹೆಣಗಳನ್ನು ಹೂಳುವ ಜಾಗ; ಗೋರಿ: ಮಾಹಾ ಹಾಜಿ ಜ ಮಹಮ್ಮದ ಖಾನ ಸಾಹೇಬರು ಮೊಹಬತ ಶಾಬಕಾತಿಗೆ ಕೊಟ್ಟ ಕಬರಸ್ತಾನ ಮಾಂನ್ಯದ ಹೊಲ (ಎಕ. IX, (S), ಆನೇಕ. ೩-೮; 17ನೆಯ ಶತ); ರಸೂಲಭಾಯಿ... ಕಬರಸ್ತಾನಕ್ಕೆ ಪ್ರಯಾಣ ಬೆಳೆಸಿದ್ದ (ದೀಪಹ. I, ೧೫೧). **ಕಬರಸ್ಥಾನ**: ಮುಸಂದೂರ ಕಬರಸ್ಥಾನದ ಬಗೆ ಕೊಟ್ಟ ಭೂಮಿ (ಎಕ. XIV, ಶ್ರೀರಂಗ. ೧೯೪-೨; ?). [← ಹಿಂ. ಕಬರಿಸ್ತಾನ್, ಕಬ್ರಿಸ್ತಾನ್; ಪಾರ. ಕಬ್ರಿಸ್ತಾನ್]

**ಕಬರಸ್ಥಾನ** 'ಕಬರಸ್ತಾನ' ನೋ.

**ಕಬರಿ** (ನಾ). ೧. ಹೆಣೆದು ಜಡೆಹಾಕಿದ ತಲೆಗೂದಲು; ಕಟ್ಟುಮುಡಿ; ಹೆರಳು: "ಕಬರಿ ಕುಂತಳಂ ವೇಣಿ ಧಮ್ಮಿಲ್ಲಮೆನಲಾ ಕಟ್ಟುಮುಡಿ" (ಮಂಗರಾ. ೯೪-೬); ರಿಪುಗಳ ಸೀಳಿ ಕರುಳನು ಮುಡಿಸದಿಹೆನೇ ನಿನ್ನ ಕಬರಿಯಲಿ (ಕುವ್ಯಾಉ. ೭-೧೨); ಶಬರೀ ಕಬರೀಪರಿಫುಲ್ಲಮಲ್ಲಿಕಾಮೋದರುರೀಧುರೀಣಂ (ದಮುಸ್ವ. ೩-೫೮); ಶುಭ್ರವಾದ ಸುರಗಿ ಪುಷ್ಪಗಳ ದಂಡೆಯಿಂದ ಕಬರಿಯನ್ನು ಅಲಂಕರಿಸಿದರು (ಶಾಂತಲಾ. ೪೧). "೨. ಜಾಲಿಯ ಗಿಡ. ೩. ಅಡವಿಯ ತುಳಸಿ. ೪. ಕೆಂಪು ಕಣಿಗಿಲೆ" (ಗುವಿಮೋ. ೬). [ಸಂ. ಕಬರೀ]

**ಕಬರಿಕಾಬಂಧ** (ನಾ). ಕಟ್ಟಿದಮುಡಿ; ಹೆರಳು; ವೇಣಿ: ಮೃಗಭೂಮುದ್ಧ ವಿಳಾಸಿನೀ ಕಬರಿಕಾಬಂಧಂಗಳಂ ಪೊತ್ತು ಮಲ್ಲಿಗೆಯೊಳಾ ಭಾವಿಸಿ (ಪಂಪಭಾ. ೪-೮೦). [ಸಂ. (ಕಬರಿಕಾ + ಬಂಧ)]

**ಕಬರಿಭರ** (ನಾ). = ಕಬರೀಭರ: ಗಳಿಯಿಸುತಿರೆ ಕಬರಿಭರಂ (ಗದಾಯು. ೧-೬೩). [ಕಬರಿ + ಭರ]

**ಕಬರಿಸು** (ಕ್ರಿ). ಹೊದಿಸು; ಬಟ್ಟೆಯಿಂದ ಮುಚ್ಚು: ಮನದಲ್ಲನಿತು ಬಳಲಿದಳೊಯೆನುತ ತೊಲಗಿದ ವಸ್ತ್ರವಲ್ಲಿ ಕಬರಿಸುತೆ ಮೂರ್ಛೆಯನು ನಾರೈಕೆಯಿಂದೆಬ್ಬಿಸಲು ಕಡ್ಡರವುತೆ (ನವನೋ. ೨೬-೮೨). [ಕಬರು[1] + -ಇಸು[3]]

**ಕಬರೀಭರ** (ನಾ). ಭಾರವಾದ ಮುಡಿ: ಗುರು ಕಬರೀಭರಸ್ತನಭರೋರುಭರಸ್ಥಿತಿಯಿಂ ಸ್ವಭಾವಮಂಥರಗತಿಯಪ್ಪ ತನ್ವಿಗೆ (ಜಗವಿ. ೨-೪೭); ಸೋರ್ದ ಕರ್ಪಿನುತ್ಪಳದಳಮಾಲೆಯಾಂತ ಕಬರೀಭರದಿಂ (ರಾಜಶೇ. ೧-೧೨೫); ಕಬರೀಭರಕ್ಕೆ ಕೊರಲ್ಕೊಂಕೆ... ಎತ್ತಂ ಪರಿದುಸೋವರ್ (ರಾಮಾಶ್ವ. ೯-೧೧). [ಸಂ. (ಕಬರೀ + ಭರ)]

**ಕಬರೀಭಾರ** (ನಾ). = ಕಬರೀಭರ: ಅಂತು ಕೃಷ್ಣೆಯ ಕೃಷ್ಣಕಬರೀಭಾರಮಂ ಮೇಗಿಲ್ಲದೆ ಪಿಡಿದು ತೆಗೆದು (ಪಂಪಭಾ. ೭-೫ ವ); ತನುಲತಾಂಗಿಯರ್ಕಳ ಕಬರೀಭಾರಕ್ಕಂ... ಬಳ್ಕಿ ಕರಮೆ ಬಡನಡು ನಡುಗಲ್ (ಕಾದಂಪೂ. ೧೦೦೪). [ಸಂ. (ಕಬರೀ + ಭಾರ)]

**ಕಬರು**[1] (ಕ್ರಿ). ಹೊದಿಸು; ಮುಚ್ಚು (?): ಉಭಯದಂಡಣಗಳಿಗೆ ಕಬರಿದ ಸುಪೊಂಬಟ್ಟೆಗವಸಣಿಕೆಯನ್ನು (ನವನೋ. ೨೪-೨೮). 'ಕಬರಿಸು' ಪರಾ. [< ಕವರು ?]

**ಕಬರು**[2] 'ಕವರ್[1]' ನೋ.

**ಕಬರು**[3] 'ಖಬರು' ನೋ.

**ಕಬರುದಾರು** 'ಖಬರ್ದಾರ್' ನೋ.

**ಕಬಲ, ಕಬಳ$_2$** (ನಾ). ೧. ತುತ್ತು; ಗ್ರಾಸ: ಸರಳಾನ್ನ ಸಿಕ್ಥ ಕಬಲಂ ಭಾವಿಸಲ್ಕೆ ತಾನುರುತರೋದುಂಬರದ ಪಣ್ಣಲ್ಲವೇ (ಅರಾಚ. ೧೦–೧೧); ಬಾಯೊಳಗಿರುವ ಪಿಂಡಂ ಕಬಲವಂ (ಬಾಹಟೀ. ೨–೫). **ಕಬಳ$_2$**: ೧. "ಕಬಳಮಾಡುತಿಯೆನಲ್ ತುತ್ತೆನಿಕ್ಕುಂ" (ಮಂಗರಾ. ೬೫–೭); ತತ್ಕಳಮ ಕಣಿಶ ಕಬಳ ಸಮುತ್ಕ ಶುಕಪ್ರಕರಮೆಸೆಯೆ (ಶಾಂತಿಪು. ೧–೬೦); ತಾ ಹಿಡಿದ ಕಬಳವನಿತ್ತನಾ ಮುನಿವರನ ಹಸ್ತದಲಿ (ಜೀವಂಚ. ೫–೬೨); ಮಾರಿಯಾ ಕಬಳಕ್ಕೆ ತಂದ ಕುಱಿಯಂತೆ (ಸಮ್ಯಕೌ. ೧೨–೨೪); ಏಳು ವಲ್ಲಿ ಮಲಗುವ ಸಮಯದಲ್ಲಿ ಪ್ರತಿ ಕಬಳಮಂ ನುಂಗುವಲ್ಲಿ (ಮಲ್ಲಚ. ೨–೯೦). ೨. ಬಾಯಿ ಮುಕ್ಕುಳಿಸುವುದು: ಮೊದಲು ಶ್ಲೇಷ್ಮಹರವಾದ ಚಿಕಿತ್ಸೆಯಂ ಮಾಡಿದಲ್ಲಿ ಆ ಬಳಿಕ ವಾತ ಪಿತ್ತಂಗಳು ತಾವೆ ಶಮನವಹು ದಾಗಿ ಸನ್ನಿಪಾತ ಜ್ವರದಲ್ಲಿ ತೀಕ್ಷ್ಣವಾದ ಗಂಡೂಷ, ತೀಕ್ಷ್ಣವಾದ ಕಬಳಂಗಳಂ ಮಾಡಿಸುವುದು (ಸಕವೈ. ೧೫೧). [< ಸಂ. ಕವಲ]

**ಕಬಲನ, ಕಬಳನ** (ನಾ). ೧. ತಿನ್ನುವಿಕೆ; ನುಂಗುವಿಕೆ. **ಕಬಳನ**: ೨. ಉಂಡೆಮಾಡುವಿಕೆ: ಪ್ರೇಮಿ ಸದ್ಯೋಜಾತ ಮಂತ್ರದಿಂ ಗ್ರಹಣವೈ ಸಾಮರ್ಥ್ಯದುಂಡೆಯಂ ಮಾಡಿಯೊಣಗಿಸುವುದಾ ವಾಮದೇವಾಗ್ರಮಂತ್ರ ದೊಳು ಕಬಳನ ಶೋಷಣಂಗಳೆಂದಱಿ ಕುಮಾರ (ವೀಶೈವು. ೭–೫–೧೮). [< ಸಂ. ಕವಲನ]

**ಕಬಲಾಳಿ** (ನಾ). ತುತ್ತುಗಳ ಸಾಲು, —ಸಮೂಹ (?): ಸಬಲಾಢ್ಯ ನೆಂದೆನಿಸಿ ಭರತನೈತಂದೊಡಂ ಕಬಲಾಳಿಯೆನಿಸುವೆಂ ಶಾಕಿನೀಗಣಕೆಂದು ಪಲ್ಮೊರೆದು ಗರ್ಜಿಸಿದನು (ವೆಂಕಾರಾ. ೨–೯–೧೩). [ಕಬಲ + ಅಳಿ$_4$ (= ಅಲಿ$_4$)]

**ಕಬಲಿ** 'ಕಬ್ಬಳಿ$_1$' ನೋ.

**ಕಬಲಿಕ್ಕು** (ಕ್ರಿ). ನುಂಗು (?): ಬಹಳತೆಯ ಭಣಿತೆಯಲಿ ಮಾಱಾಂತ ಹಿಮಕರಕುಲಚರನ ಘನವಿಗ್ರಹಕೆ ಕ[ಪಾಠಾಂ. ಗ] ಬಲಿಕ್ಕಿದಳು ಗಗನದ ತರಣಿ ಕಳವಳಿಸೆ (ತೊರರಾ. ೫–೧–೧೬). [ಕಬಲ ? + ಇಕ್ಕು]

**ಕಬಲಿತ, ಕಬಳಿತ** (ಗು). ೧. ತಿನ್ನಲ್ಪಟ್ಟ; ನುಂಗಲ್ಪಟ್ಟ. ೨. (ಆಲಂ) ವಶಪಡಿಸಿಕೊಂಡ. **ಕಬಳಿತ**: ದಿಲ್ಲಿ, ಕಾನ್ಯಕುಬ್ಜ, ಮಗಧ ಮೊದಲಾದ ಪ್ರಾಚೀನ ಸಾಮ್ರಾಜ್ಯಗಳೆಲ್ಲವೂ ಯವನರಿಂದ ಕಬಳಿತ ವಾಗಿದ್ದುವು (ಬಂಕಿಮು. ೧೭೩). [ಸಂ.]

**ಕಬಳ$_1$** 'ಕಬ್ಬಿಲ' ನೋ.

**ಕಬಳ$_2$** 'ಕಬಲ' ನೋ.

**ಕಬಳಂಗೊಳ್, ಕಬಳಗೊಳ್** (ಕ್ರಿ). ತುತ್ತುನುಂಗು; ತಿನ್ನು: ಮೃದು ಪಲ್ಲವಂಗಳಂ ಕಬಳಂಗೊಳುತ್ತುಂ (ವಡ್ಡಾರಾ. ೩೬–೨೦); ಕಬಳಂಗೊಂಡು ಸೊಗಡುದಂಬುಲಮಂ . . . ಬಗೆಯಂ ಬಂದಿವಿಡಿದು ಕೂಡಿದನಾ ಕಾದಲನು (ಜಯಕಾ. ೮–೪೬). **ಕಬಳಗೊಳ್**: ಕಬಳಿ[ಳ]ಗೊಂಡುದೊ ಬಯಲ ಭೂತಮೆಂಬಂತೆ (ನವಮೋ. ೧೨–೫೯). [ಕಬಳ$_2$ (= ಕಬಲ) + ಕೊಳ್$_1$]

**ಕಬಳಗೆಯ್** (ಕ್ರಿ). ತುತ್ತುಮಾಡು; ತಿನ್ನು; ಭಕ್ಷಿಸು: ಕಾಲತ್ರಯ ದೊಳು ಪರಿಪೂತವಹ ನೈವೇದ್ಯಮಂ ಕಬಳಗೆಯ್ದು ಸಲೆ ನೂತನವೆನಲು ಲಿಂಗಕೂಡಿಸುತ್ತಿರೆ (ಪಾಸೋಪು. ೪–೮೨). [ಕಬಳ$_2$ (= ಕಬಲ) + ಗೆಯ್ (< ಕೆಯ್$_1$)]

**ಕಬಳಗೊಳ್** 'ಕಬಳಂಗೊಳ್' ನೋ.

**ಕಬಳನ** 'ಕಬಲನ' ನೋ.

**ಕಬಳಾಹಾರ** (ನಾ). ತುತ್ತು ಉಣ್ಣುವಿಕೆ; (ಯತಿಗಳು) ಉಣ್ಣುವ ಲೆಕ್ಕದ ತುತ್ತು: ಲಾಭಾಂತರಾಯ ಕ್ಷಯದಿಂ ಪರಿತ್ಯಕ್ತ ಕಬಳಾಹಾರ ಕ್ರಿಯೆಯುಳ್ಳ ಕೇವಳಿಗಳ್ (ಶಾಸ್ತ್ರಟೀ. ೧೪–೧೨); ಕಬಳಾಹಾರ ನರರ್ಗಂ ಪಶುಗಳ್ಗೆಯಕ್ಕುಂ (ಶ್ರಾವಕಾ. ೬೫–೫); ಕ್ರೋಧಂ ಪುಟ್ಟಿ ಬೇರೆಯಾಗಿ ಕೇವಲಿಗಳು ಮಾತನಾಡುವರು ಕಬಳಾ ಹಾರಂಗೊಳ್ವರು (ಕಗವಿ. ೯೯ ರಾಜಾವಳೀಕಥೆ). [ಕಬಳ$_2$ (= ಕಬಲ) + ಆಹಾರ]

**ಕಬಳಿಗಿಡ** (ನಾ). ಒಂದು ಜಾತಿಯ ಸಸ್ಯ: ಕರಂಡ ಹಣ್ಣಿನ ಗಿಡ, ಕಬಳಿಗಿಡ, ಕಳಾಗಿಡ, ದೊಡ್ಡಕಾವಲಿ? (ಮೈಔಗಿ. ೧೮–೩೨೨). [?]

**ಕಬಳಿತ** 'ಕಬಲಿತ' ನೋ.

**ಕಬಳಿಸು** (ಕ್ರಿ). ೧. ನುಂಗು; ತಿನ್ನು; ಮುಕ್ಕು: ಧರೋತ್ತಿಷ್ಠ[ತ್ಸು] ಕಂದಂಗಳನೆ ಕಬಳಿಸುತ್ತುಂ (ಸೂಕ್ತಿಸು. ೩–೩೯); ಅಡಕುತಿರ್ದರು ಭಕ್ತರೆಲ್ಲರು ತುಡುಕಿ ಕಬಳಿಸುತಿರ್ದನಲ್ಲಮನು (ಪ್ರಭುಲೀ. ೨೩–೨೩); ಕಲಿತನವಂ ಕಬಳಿಸುವ ಶೌರ್ಯದಿಂ ಮೆಱೆವ ರಾವುತರ ಪುರೋಭಾಗ ದೊಳ್ ನಿಂತಿರುವ ಅಶ್ವಸೇನಾಪತಿ (ಸೌಗಂಧಿ. ೧೨೮–೧೮); ಹಸಿದ ಹೊಟ್ಟೆ ಒಂದು ಗಳಿಗೆಯಲ್ಲಿ ಹಿಟ್ಟನ್ನೆಲ್ಲಾ ಕಬಳಿಸಿತು (ಕಣ್ಣಿಜಿ. ೪೯). ೨. (ಆಲಂ) ಎತ್ತಿಹಾಕು; ಲಪಟಾಯಿಸು; ಮೋಸದಿಂದ ತೆಗೆದುಕೊಳ್ಳು: ಎಲ್ಲ ಚಿನ್ನವನ್ನು ತಾನೇ ಕಬಳಿಸಬೇಕೆಂದು ಅವನ ಯೋಚನೆ (ಕಥಕ. ೬೨); ಎರಡು ಹೊಲಗಳನ್ನೂ ಹೇಗಾದರೂ ಮಾಡಿ ಕಬಳಿಸಬೇಕೆಂದು ಅವರು ಹೊಂಚು ಹಾಕಿದ್ದರು (ಮಣ್ಣಿಮು. ೧೦೨). [ಕಬಳ$_2$ (= ಕಬಲ) + –ಇಸು$_3$]

**ಕಬಳೀಕರಿಸು** (ಕ್ರಿ). = ಕಬಳಿಸು: ಆ ಕರಣಗಳ ಸುಜ್ಞಾನಪ್ರಭೆ ಅನಂತಕೋಟಿ ಬ್ರಹ್ಮಾಂಡವನ್ನು ಕಬ್ಬಳೀಕರಿಸುವುದು (ಅವಚಂ. ೬೦೨–೨೬೧ ಟೀಕೆ); ಅಂತಹ ಅಪಾಯವು ಇಲ್ಲಿ ಬಹಳ ಸುಲಭವಾಗಿ ನನ್ನನ್ನು ಕಬಳೀಕರಿಸಲು ಬಾಯಿತೆರೆದು ಕಾದಿದೆ (ಪತಿ. ೧೦೭). [ಕಬಳೀಕರಣ$_0$ + –ಇಸು$_2$]

**ಕಬಾಡ, ಕವಾಡ** (ನಾ). ೧. ಎತ್ತಿನ ಮೇಲೆ ಹೇರಿ ತರುವ ಹೊರೆ; ಒಂದು ಎತ್ತು ಹೊರುವಷ್ಟು ಹುಲ್ಲು, ಸೌದೆ, ಮೊದಲಾದುದು; ಎತ್ತುಹೊರೆ: ಅರಿಯ ಬಲ ಪಾಱುಯೆತ್ತಿ ಬಂದರು ಕಬಾಡದ ನೆವ ದೊಳು (ಸೌಂದಕಾ. ೭–೩೧). ೨. "ಹುಲ್ಲು ಮಾರುವವ; ಒಂದು ಜಾತಿ". (ಜಾನಕೋ. ೩೪). **ಕವಾಡ**: ೧. ಹುಲ್ಲ ಹೇರುವಡೆ ಬಂದಿರುವ ಕವಾಡದ ಘುಲ್ಲಿಯ ಕೊಂಬಿನೆತ್ತುಗಳ (ಕಂಶವಿ. ೩–೬೨). ೩. (?): ಅಡಕೆ ಮೆಣಸು ಖೋಬರಿ ಕವಾಡ ಹೊರತಾಗಿ (ಎಕ. VIII, ತೀರ್ಥಹ. ೪೯–೧೮; 1641); ಖೋಬರಿ ಕವಾಡ ಹೊರ್ರತ್ತಾಗಿ ಹೇರ್ರಿಕೊಂಬ ಜ್ಜಿನಿಸೂ (ಮೈಆರಿ. ೧೯೪೩, ೩೭–೨೨; 1643); ಅಡಕೆ ಮೆಣಸು ಘುಲ್ಲಿಪಟ್ಟೆ ಖೊಬರಿ ಕವಾಡ ಅಕ್ಕಿ ಭತ್ತರಾಗಿ . . . ಜವಳಿ ಮುಂತಾಗಿ (ಎಕ. VII, ಶಿವಮೊ. ೨೮–೧೫; 1670); ಖೊಬರಿ ಕವಾಡ ಮುಂತಾದ ಗಡಸಿನ ಸರಕು ಹೊರತಾಗಿ (ಮೈಆರಿ. ೧೯೨೮, ೫೮–೯; 1674). [ದೇ. ? ॥ ತಮಿ. ಕಪಾಡ; ತೆಲು. ಕಬಾಡ. / ಸಂ. ಗವೋಢ]

**ಕಬಾಡಿ** (ನಾ). ಎತ್ತಿನ ಮೇಲೆ ಹೊರೆ ತಂದು ಮಾರುವವನು; "ಎತ್ತುಗಳ ಮೇಲೆ ಹೇರಿಕೊಂಡು ಹುಲ್ಲು ಮಾರುವವನು" (ಜಾನಕೋ. ೩೪). [ಕಬಾಡ + –ಇ$_3$]

**ಕಬಾಡಿಗ, ಕವಾಡಿಗ** (ನಾ). ೧. = ಕಬಾಡಿ: ಈ ಕಾಯಕವನ್ನೇ ಜೀವನಾಧಾರವನ್ನಾಗಿ ಮಾಡಿಕೊಂಡಿದ್ದ ಕಬಾಡಿಗರಿಗೆಲ್ಲ ಹಿರಿಮುಣಿಯಾತ (ಶರಚ. ೨). **ಕವಾಡಿಗ**: ೧. ಗಾಣಿಗರು ಕವಾಡಿಗರು ಹುವ್ವಾಡಿಗರು . . . ಮೊದಲಾದ ನಾನಾ ಜಾತಿ (ಸೌಗಂಧಿ. ೧೩೫–೭). ೨. ಹಾಲು ಮಾರುವವನು; ಗೊಲ್ಲ: ಈ ರಸ್ತೆಯಲ್ಲಿ ಕವಾಡಿಗರೇನಾದರೂ ಇದ್ದಾರೆಯೇ? ದನಕರು ಓಡಾಡಿ ಹೀಗೆ ಸಮೆದುಹೋಗಿದೆಯೆ? (ಮುಸೋನಂ. ೧೪೮). [ಕಬಾಡ + –ಇಗ]

**ಕಬಾಡು** (ನಾ). ಎತ್ತಿನ ಹೊರಿಯ ಮೇಲೆ ಹಾಕುವ ತೆರಿಗೆ (?) : ಬಿಟ ಬೇಗಾರ ಕಬಾಡು ಕುದುರೆ ಸುಂಕ ಯಿವು ಮೊದಲಾವೆಲ್ಲಾ (ಎಕ. X, ಕೋಲಾರ. ೨೪೭–೩೦ ; 1637). [< ಕಬಾಡ ?]

**ಕಬಾಬಚಿನ್ನಿ** (ನಾ). (ಮಸಾಲೆ ಮತ್ತು ಔಷಧಿಗೆ ಉಪಯೋಗಿಸುವ) ಕಬಾಬ ಎಂಬ ಗಿಡದ ಒಣಗಿದ ಹಣ್ಣು : ಕರ್ಪುರ ಚಿನ್ನಿ, ಕಬಾಬಚಿನ್ನಿ, ಕಂಕೋಳಚಿನ್ನಿ (ಮುಂಬವ್ಯಾ. ೧೪೭). [← ಹಿಂ. ಕಬಾಬಚೀನೀ ; ಮರಾ. ಕಬಾಬಚಿನೀ]

**ಕಬಾಬು** (ನಾ). ಕೆಂಡದಲ್ಲಿ ಸುಟ್ಟ ಮಾಂಸ ; ಸುಡುಬಾಡು ; ಒಂದು ಬಗೆಯ ಮಾಂಸದ ಅಡುಗೆ : ಈ ದನಗಳನ್ನೆಲ್ಲಾ ಕೊಯ್ದು ಕಬಾಬು (ಸುಟ್ಟ ಮಾಂಸ) ಮಾಡುವೆವು (ಕೋಹಿನೂ. ೧೩). [← ಪಾರ. ಹಿಂ. ಅರ. ಮರಾ. ಕಬಾಬ್]

**ಕಬಾಯಿ$_1$**, ಕಪಾಯಿ, ಕವಾಯಿ (ನಾ). ಮೊಳಕಾಲವರೆಗೆ ಇಳಿ ಬೀಳುವ ಅಂಗಿ ; ನಿಲುವಂಗಿ : ಜೀನಗೆಲಸದ ಕಬಾಯಿ ಪೈಕಣೆ ಸುತ್ತು ತಾನೆಸೆದಿರೆ ಬಾದುರನು (ಕುರಾಸಾಂ. ೧೮–೭೮) ; ಕಡಗ ಕಂಠಮಾಲೆ ಪದಕ ಕುಂಡಲವಿತ್ತನೊಡನೆ ಕುಲ್ಲಾಯಿ ಕಬಾಯಿ (ಭರಜ. ೨–೯೦) ; ಮಿಸುನಿಯಲಪ್ಪಿಟ್ಟ ಕಟ್ಟಾಣಿ ಮುತ್ತ ತೆತ್ತಿಸಿದ ಕಬಾಯಿ (ಕಂನವಿ. ೧೩–೪೦). **ಕಪಾಯಿ** : (೬). **ಕವಾಯಿ**: (೬). [← ಹಿಂ. ಕಬಾಯ್ ; ಪಾರ. ಕಬಾ ; ಮರಾ. ಕಬಈ ; ಕಬಾಈ.

**ಕಬಾಯಿ$_2$** (ನಾ). ಸಾರು ಮೊದಲಾದುವನ್ನು ಬಡಿಸುವುದಕ್ಕಾಗಿ ಉಪಯೋಗಿಸುವ ಚೂಪಾದ ಮುಖವಿರುವ ಪಾತ್ರೆ ; ಗೋಮುಖ ; ಕಾಗೆ. [< ಕಾಗೆ + ಬಾಯಿ ?]

**ಕಬಿಲೆತ್ತಿ**, ಕಬೆತ್ತಿ (ನಾ). (ಕರಾ) ಕಪಿಲೆ ಬಣ್ಣದ ಹಸು. **ಕಬೆತ್ತಿ** : ಒಂದು ಕುಡುತೆ ಕಬೆತ್ತಿ ಆಕಳದ ಹಾಲನ್ನು ಕಂಚಿನ ಗಿಂಡಿಯಲ್ಲಿ ಒಯ್ದು (ದಂಬನಾ. ೧೨) ; ಧನವಂತರೀ ಗುಳಿಗೆಯನ್ನು ಕಲಿಸಿ – ಸ್ವಲ್ಪ ಕಬೆತ್ತಿ ಹಸುವಿನ ಹಾಲು (ನಾಲ್ಕು) ಹನಿ ಮಾತ್ರ . . . ಅದರಲ್ಲಿ ಹಾಕಿ (ಕಂಬಹು. ೧೮). [← ತುಳು. ಕಬಿಲೆತ್ತಿ]

**ಕಬುನಕೆಲಸಿ** (ನಾ). ಕಬ್ಬಿಣದ ಕೆಲಸ ಮಾಡುವವನು ; ಕಮ್ಮಾರ: ಆ ಕಬುನಕೆಲಸಿ ಅಂಜಲವಿರುವೋಜಗಳಿಗೆ ಸ್ಥಾನದಲೂ ಸಿವದಿ ಹಳಿಲೂ ಗದೆ ಖ ೧ ಕಾಣಿಯಾಗಿ ಸಂದು (ಎಕ. X (S), ಮುಳಬಾ. ೩–೧೨ ; 1430). [ಕಬುನ್ನ (< ಕರ್ಪೊನ್) + ಕೆಲಸಿ]

**ಕಬುಲಾಯತಿ** 'ಕಬೂಲಾತಿ' ನೋ.

**ಕಬೂತರಖಾನೆ** (ನಾ). ಪಾರಿವಾಳಗಳನ್ನು ಇಟ್ಟು ಸಾಕುವ ಸ್ಥಳ; ಪಕ್ಷಿಶಾಲೆ : ಗುರಿಕಾರ ಕಬೂತರಖಾನೆ ಪುಟ್ಟಯ್ಯನ ಮಂಟಪ ಸೇವಾರ್ತ (ಎಕ. XIV, ಮೈಸೂರು. ೯೬–೪ ; 1798). [← ಪಾರ. ಹಿಂ. ಕಬೂತರ್ ಖಾನಾ]

**ಕಬೂರು** (ನಾ). ಒಂದು ಊರಿನ ಹೆಸರು : ಕೆಲ್ಲೂರುಂ ಕಬೂರು ಮೊಳನಿಕೆ ಕರ್ವೂರ ತುಜುವಂ (ಎಕ. XII, ತಿಪಟೂ. ೧೦–೫ ; 930). [?]

**ಕಬೂಲ್** 'ಕಬೂಲಿ' ನೋ.

**ಕಬೂಲಾತಿ**, ಕಬುಲಾಯತಿ (ನಾ). ಬರೆಹದಲ್ಲಾಗಲಿ, ಬಾಯಿ ಮಾತಿನಿಂದಾಗಲಿ ಮಾಡಿಕೊಂಡ ಒಪ್ಪಂದ ; ಸಮ್ಮತಿ ಪತ್ರ: ಬಲಾತ್ಕಾರದಿಂದ ಕಬೂಲಾತಿಯನ್ನು ಪಡೆದುಕೊಳ್ಳುವುದಕ್ಕಾಗಲೀ ಸ್ವತ್ತನ್ನು ವಾಪಸ್ ಪಡೆದುಕೊಳ್ಳುವುದಕ್ಕಾಗಲೀ ಮನಃಪೂರ್ವಕವಾಗಿ ಗಾಯ ಮಾಡೋಣ (ಗ್ರಾಮಾಕ. ೧೪೧). **ಕಬುಲಾಯತಿ**: ರೈತರೆಲ್ಲಾ ಕಬುಲಾಯತಿ ಬರೆಕೊಟ್ಟು ಪಾಲು ಒಪ್ಪಿಸಿದರ ನೀವೇನು ಮಾಡಾವರ ದೀರಿ ? (ಗ್ರಾಮಾಯ. ೯) ; "ಕಬುಲಾಯತಿ ಇಲ್ಲೇನೊ ?" (ವಿಜಶ್ರೀ. ೪೧). [← ಅರ. ಹಿಂ. ಕಬೂಲಿಯತ್]

**ಕಬೂಲಿ**, ಕಬೂಲ್, ಕಬೂಲು (ನಾ). ಒಪ್ಪಿಗೆ ; ಒಪ್ಪಂದ ; ಸಮ್ಮತಿ : ಈಗ ಜನರ ಕಬೂಲಿ ಇದ್ದರ ಕಾಳು ಹಂಚರಿ (ಗ್ರಾಮಾಯ. ೪೨) ; "ಅವನ ಕಬೂಲಿ ತಗೊಂಡ ಮ್ಯಾಲೆ ನನಗೆ ಹೇಳಿರಿ. ಅತಿಲ್ಲೊ ? (ಅನ್ನ. ೨೬೯). **ಕಬೂಲ್** : ಸ್ವಾರ್ಥ ಇರಲಿಕ್ಕಿಲ್ಲ, ಕಬೂಲ್ ! ಅದರ ಪರಾರ್ಥದರೂ ಏನದ ? (ಹೊಸಂಸಾ. ೫೭). **ಕಬೂಲು** : ಫರಾಶೀಸರ ಸಂಸ್ಥಾನದಲ್ಲಿ ಕಬೂಲು ಮಾಡಿಕೊಡರು (ಕಗವಿ. ೧೮೪ ರಾಜೇಂದ್ರನಾಮೆ); ಯಾರೂ ತಮ್ಮ ದೋಣಿಯಲ್ಲಿ ಹಾಕಿಕೊಂಡು ಬರುವುದಕ್ಕೆ ಕಬೂಲು ಮಾಡಲಿಲ್ಲ (ತಳಿರು. ೯೫).

**ಕಬೂಲಬಡು** = ಕಬೂಲಾಗು : ನಿಮ್ಮ ಸೌಭಾಗ್ಯವತಿಯವರಿಗೆ ಅದನ್ನು ಹೇಳಿದೆ. ಆದರೂ ಕಬೂಲಬಟ್ಟಾರೆ (ಎತ್ತಿಕೈ. ೭೫). **ಕಬೂಲ ಮಾಡಿಸು** = ಒಪ್ಪಿಸು ; ಸಮ್ಮತಿಸುವಂತೆ ಮಾಡು : ಆಕೆ ಶೇಷಣ್ಣನನ್ನು ಕಬೂಲಮಾಡಿಸಿದಳು (ವೈನಿ. ೪೩). **ಕಬೂಲಮಾಡು**, **ಕಬೂಲು ಮಾಡು**=ಒಪ್ಪು ; ಸಮ್ಮತಿಸು: "ಸರಿ, ಭೂತಗಳ ಅಸ್ತಿತ್ವ ಈಗಲಾದರೂ ಕಬೂಲ ಮಾಡುತ್ತೀಯೋ ಹೇಗೆ ?" (ನಡೆದಾ. II, ೯೦೫) ; ಹೇಳಿದ್ದಕ್ಕ ಕಬೂಲಮಾಡ್ತಿದ್ದೆ (ಗ್ರಾಮಾಯ. ೩೪) ; ಅವರು ಹೇಳಿದಂಥಾದ್ದನ್ನು ಕಬೂಲುಮಾಡಿ ಕೇಳಬೇಕು (ರಾಜೇಂದ್ರ. ೭೦). **ಕಬೂಲಾಗು** = ಕಬೂಲ ಮಾಡು : ಏನೊಂದು ಸಹಾಯ ಸಂಪತ್ತು ಬೇಕಾದರೂ ನಾವು ಮಾಡಿಕೊಡುತ್ತೇವೆಯಂತಾ ಕಬೂಲಾಗಿ ಹೇಳಿದರಿಂದ (ರಾಜೇಂದ್ರ. ೫೩) ; ಅರಶಿನವರು ಕಬೂಲಾಗದೆಯಿದ್ದು (ಹೈದರ. ೩೪). [← ಅರ. ಹಿಂ. ಕಬೂಲ್ ; ಮರಾ. ಕಬೂಲ್, ಕಬೂಲೀ]

**ಕಬೂಲಿಜಬಾಬು** 'ಕಬೂಲಿಜವಾಬು' ನೋ.

**ಕಬೂಲಿಜವಾಬು**, ಕಬೂಲಿಜಬಾಬು (ನಾ). ನ್ಯಾಯಾಲಯದಲ್ಲಿ ವಾದಿಯು ಪ್ರತಿವಾದಿಯ ಹೇಳಿಕೆಯನ್ನು ಒಪ್ಪಿಕೊಳ್ಳುವಿಕೆ ; ಆರೋಪಿಯು ತನ್ನ ತಪ್ಪನ್ನು ಒಪ್ಪಿಕೊಂಡು ಕೊಟ್ಟ ಹೇಳಿಕೆ : ಕಬೂಲ್ ಮಾಡದಿದ್ರ ಹಾಂಗ ಸಾಫ್ ಬರದು ಬಿಡತೇವಿ ಕಬೂಲಿಜವಾಬ ಕೊಟ್ರ ನಿನಗ ಮುಂದ ಫಾಯಿದೆ ಐತಿ (ಹೊಸಂಸಾ. ೧೧೬). **ಕಬೂಲಿಜಬಾಬು** : ಕಬೂಲಿಜಬಾಬು ಎಂದರೇನು ? (ಹುಚ್ಚಾಟ. ೪೮). [ಕಬೂಲಿ + ಜವಾಬು. / ಮರಾ. ಕಬೂಲೀ ಜಬಾಬ್]

**ಕಬೂಲು** 'ಕಬೂಲಿ' ನೋ.

**ಕಬೆಕ್ಕೋಲು** 'ಕವೆಗೋಲ್' ನೋ.

**ಕಬೆತ್ತಿ** 'ಕಬಿಲೆತ್ತಿ' ನೋ.

**ಕಬೋಜಿ** 'ಕಪೋತ$_1$' ನೋ.

**ಕಬ್ಜಾ** 'ಕಬಜೆ' ನೋ.

**ಕಬ್ಜಾಒತ್ತೆ** (ನಾ). (ಉಕ) ಒತ್ತೆಹಾಕಿದ ಆಸ್ತಿಯನ್ನು ನಿಗದಿ ಪಡಿಸಿದ ಅವಧಿಯ ವರೆಗೆ ಸಾಲಗಾರನ ವಶಕ್ಕೆ ಒಪ್ಪಿಸುವುದು. [ಕಬ್ಜಾ (< ಕಜಜೆ) + ಒತ್ತೆ]

**ಕಬ್ಜೆ** 'ಕಬಜೆ' ನೋ.

**ಕಬ್ಬ$_1$** (ನಾ). ಕಾವ್ಯ ; ಕವನ : ಈಗಡಿನ ನೆಗಚಿತ್ತಿಯ ಕಬ್ಬದೊಳೊಡಂಬಡಂ ಮಾಡಿದರ್ (ಕವಿರಾ. ೧–೩೨) ; ಮುನ್ನಿನ ಕಬ್ಬಮನೆಲ್ಲಮಿಕ್ಕಿ ಮೆಟ್ಟಿದುವು ಸಮಸ್ತಭಾರತಮುಮಾದಿಪುರಾಣ ಮಹಾಪ್ರಬಂಧಮುಂ (ಪಂಪಭಾ. ೧೪–೫೯) ; ಕೋಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ (ಧರ್ಮಾಮೃ. ೧–೪೯) ; ಕಬ್ಬಿಗರೋದುಗಬ್ಬವ ಹಾಡುಗಬ್ಬವ ಕಬ್ಬದೊಳೊರೆವರು (ಭರಜ. ೧–೬) ; ಅಂಜದೆಯುಳುಕದೆ ಪೇಳು ಪಲವಗೆ ಕಬ್ಬದೊಳ್ಪುಗಳ (ಹದಿಬ. ೧–೨೯).

[< ಪಾಲಿ. ಕಬ್ಬ, ಕವ್ಯ, ಕಬ್ಯ ; ಪ್ರಾ. ಕವ್ವ. / ಸಂ. ಕಾವ್ಯ]

**ಕಬ್ಬ$_2$** ಒಂದು ವಿಧವಾದ ಧಾನ್ಯ; ಕಂಬು (?) : ಕಬ್ಬದ ಕೆಯ್ಯಾನ್ಸು ಲಿಗಿಭ × × × ಗ್ಗೆ ಸರ್ಬ್ಬಬಾಧದಿವ್ಯಪರಿಹಾರಸ್ಸೇವ ಭೋಗಮ್ಮಾಡಿ ಕೊಟ್ಟನ್ (ಎಕ. XI, ಹೊಳಲ್ಕೆ. ೨೩–೪೨; 968). [?]

**ಕಬ್ಬ$_3$** 'ಕಬ್ಬಿ' ನೋ.

**ಕಬ್ಬಕ್ಕಿ** 'ಕರ್ಬಕ್ಕಿ' ನೋ.

**ಕಬ್ಬಕ್ಕಿವಿಂಡು** (ನಾ). ಕಬ್ಬಕ್ಕಿಗಳ ಹಿಂಡು : ಒಡನೆ ಕಬ್ಬಕ್ಕಿವಿಂಡನು ಕಂಡೆಱಗುವ ಕಡುಗಲಿ ಸಾಳ್ವನಂದದಲಿ (ಕಂನವಿ. ೧೯–೭೦).
[ಕಬ್ಬಕ್ಕಿ (< ಕರ್ಬಕ್ಕಿ) + ಪಿಂಡು$_2$]

**ಕಬ್ಬಗಣ್** (ನಾ). ಕಾವ್ಯದೃಷ್ಟಿ : ರಸಿಕಂಗಡವಿ ಸಗ್ಗಕ್ಕಿಂಮಿಗಿಲ್ ಸೊಗಸಲ್ತೆ ಜೊತೆಯಿರಲ್ಕೊಲಿದ ಪೆಣ್ ಮೇಣ್ ಕಾಣ್ಬ ಕಬ್ಬಗಣ್ (ಶ್ರೀರಾಮಾ. ೧೪೪–೭೭). [ಕಬ್ಬ$_1$ + ಕಣ್]

**ಕಬ್ಬಟೆ** 'ಕಪ್ಪಡಿ$_1$' ನೋ.

**ಕಬ್ಬಟೆಹಕ್ಕಿ** (ನಾ). ಬಾವಲಿ; ಕಪ್ಪಟೆ : "ಜತುಕಾ, ಜತೂಕಾ, ಅಜಿನಪತ್ರಾ–ಇ ಕಬ್ಬಟೆಹಕ್ಕಿ, ಕತ್ತಲವಕ್ಕಿ" (ಸಿದ್ಧಾಂತಿ. ೧೪೧).
[ಕಬ್ಬಟೆ (< ಕಪ್ಪಡಿ$_1$) + ಹಕ್ಕಿ$_1$ (< ಪಕ್ಕಿ$_1$)]

**ಕಬ್ಬಡವಿ** (ನಾ). ಒಂದು ಜಾತಿಯ ಮರ : "ಕಾಂತರ :—ಕಬ್ಬಡವಿ, ಕಂಚಿವಾಳ" (ಓಷಧಿ. ೨೯). [?]

**ಕಬ್ಬತ್ತಿ** (ನಾ). ಒಂದು ಮೂಲಿಕೆ : ಮದನಫಲಂ ಸೂರೆ ಕಬ್ಬತ್ತಿ ದಂತಿ ಪಿಪ್ಪಲಿ ಗುಡಂ ಯವಕ್ಷಾರಮುಮಂ ಮಿದಿದಿಡುಗೆ . . . ಕುದಿಸಿ ದುಗ್ಧದಿಂ ತಾನವಳ್ ರಜಸ್ವಲೆಯಕ್ಕುಂ (ಲೋಕೋಪ ೯–೧೭೩).
[< ಕರಿದು + ಪತ್ತಿ ?]

**ಕಬ್ಬದ್ದು** (ನಾ). ಕರಿಯ ಹದ್ದು ; ರಣಹದ್ದು (?) : ಮಿಕ್ಕಾದ ಕಿಱು ಹಕ್ಕಿಯ ಕೊಂದು ಕುಕ್ಕೆಯೊಳಗಿಟ್ಟು ಹೆಬ್ಬದ್ದ ಹಿಡಿದು ಕಬ್ಬದ್ದ ಬಾಣಸವ ಮಾಡಿ ಹುಲಿಯ ಹಲ್ಲ ಕಿತ್ತು (ಪ್ರಭೋಗ. ೧೫೮–೩). 'ಕಬ್ಬಾರೆ' ಪರಾ. [< ಕರಿದು + ಪದ್ದು (< ಪರ್ದು)]

**ಕಬ್ಬನ್ನಿ** (ನಾ). ಕರಿಯ ಬನ್ನಿಮರ : ಹೊನ್ನೆ ಕುಟಜಂ ಕಬ್ಬನ್ನಿ ಸೀವನ್ನಿ ತುಂಬುರು (ಕಾವ್ಯಸಾ. ೧೦೪೦ ಶೂದ್ರಕ).
[< ಕರಿದು + ಬನ್ನಿ$_1$]

**ಕಬ್ಬಪ್ಪು** 'ಕಬ್ಬಿವಪ್ಪು' ನೋ.

**ಕಬ್ಬರಿಸು** 'ಕಪ್ಪರಿಸು' ನೋ.

**ಕಬ್ಬರ್ತಿ** (ನಾ). ಬೆಸ್ತರವಳು ; ಕಬ್ಬಿಲಿತಿ : ಹಾರುವರು ಕಬ್ಬರ್ತಿಯಾತ್ಮಕುಮಾರರನು ನೆಚ್ಚೆಮ್ಮನತಿ ಬಲಾತ್ಕಾರದಲಿ ತಗುಳೆಳೆಯನಾಳದ ದ್ರೋಹಿ ನಿನ್ನವರ ತೋರು (ಜಿನಭಾ. ೭೯–೨೭). [< ಕಬ್ಬಿಲಿತಿ ?]

**ಕಬ್ಬಲಗಿತ್ತಿ** 'ಕಬ್ಬಿಲಿಗಿತ್ತಿ' ನೋ.

**ಕಬ್ಬಲಸು** (ನಾ). ಕಾಡುಹಲಸು : ನಿಂಬಿಗಳಾಲಜಾಲ ಕಬ್ಬಲಸುಗಳತ್ತಿ ಮತ್ತಿ . . . ಪರ್ಬಿದಿರುಣ್ಮದ ಬೆತ್ತಮೆತ್ತಲುಂ ಕಲಸಿರೆ ಕಾಡು ಕಳ್ತಲಿಸಿ ಕಂಗಳನಪ್ಪಿದುದು (ಹಾಲಾಸ್ಯ. ೪–೪). 'ಕಾಬ್ಬಲಸು' ಪರಾ.
[< ಕಾಡು$_2$ + ಪಲಸು]

**ಕಬ್ಬಲಿಗ** 'ಕಬ್ಬಿಲಿಗ' ನೋ.

**ಕಬ್ಬಲ್ಲು** (ನಾ). ಕರಿಯ ಹಲ್ಲು (?) : ಹೆಬ್ಬಾಕಲಲ್ಲಿರುವೊ ಕಬ್ಬಲ್ಲ ಬೆನವಗೆ ಕಬ್ಬಿನ ಜಲ್ಲೆ ನೆನಗಡಲೆ ಸಲಿಸುವೆ ಕಬ್ಬಲ್ಲ ಬೆನವಕೊಡು ಮತಿಯ (ಜಗೀತ. ೫). [< ಕರಿದು + ಪಲ್ಲು (< ಪಲ್)]

**ಕಬ್ಬಸ** 'ಕರ್ಬಸು$_2$' ನೋ.

**ಕಬ್ಬಸು** 'ಕರ್ಬಸು$_1$' ನೋ.

**ಕಬ್ಬಸುರಿ** 'ಕರ್ಬಸುರಿ' ನೋ.

**ಕಬ್ಬಳ** 'ಕಬ್ಬಳ್ಳ' ನೋ.

**ಕಬ್ಬಳ್ಳಿ$_2$** 'ಕರ್ಬಳ್ಳಿ' ನೋ.

**ಕಬ್ಬಳ್ಳ, ಕಬ್ಬಳ** (ನಾ). ಕರಿಯ ಹಳ್ಳ ; ಆ ಹಳ್ಳದ ಬಳಿಯ ಊರು : ಊರಿಂ ಪಡುವಲು ಕಬ್ಬಳ್ಳದಿಂ ಮೂಡ ಮತ್ತರಾಜು (ಸೌಇಇ. IX–i, ೨೪೯–೮೩; 1147). **ಕಬ್ಬಳ** : ಕಬ್ಬಳದ ಗುರುಗಳ ಮಗ ಹರಿಗ ಜೀಯನ ಮಗ (ಎಕ. XII, ಚಿಕ್ಕನಾ. ೧೭–೪೨; 1216).
[< ಕರಿದು + ಪಳ್ಳ]

**ಕಬ್ಬಳ್ಳಿ$_1$** 'ಕರ್ಬಳ್ಳಿ' ನೋ.

**ಕಬ್ಬಳ್ಳಿ$_2$** (ನಾ). ಒಂದು ಜಾತಿಯ ಪಕ್ಷಿ (?) : ಪಸುಂಬಂ ಕಱುತ್ತ ಕಬ್ಬಳ್ಳಿ ಬಂದೆಡದೊಳ್ ದೀಪ್ತದೊಳಾಂದುವೇಱುತು ಸೃಗಾಲಂ ತಿರ್ದಿಮೇಲ್ದಿಕ್ಷ್ಣಯಂ (ಅನಂಪು. ೧೩–೭೨). [?]

**ಕಬ್ಬಾತೆ** (ನಾ). ಒಂದು ಜಾತಿಯ ಪಕ್ಷಿ : ಕಬ್ಬಾತೆ ಹಕ್ಕಿಗಳ್ ಚಲಿವ ಪಕ್ಷಿ (ಸಿದ್ಧಕಾ. ೬–೩೩). [?]

**ಕಬ್ಬಾಯ್** 'ಕಬಾರ್ಯ್' ನೋ.

**ಕಬ್ಬಾರೆ** (ನಾ). ರಣಹದ್ದು ; ಹರಡೇ ಹಕ್ಕಿ : "ಕಬ್ಬಾರೆ ಪದ್ದು ಪಣ್ಣಂಚಿ (ಸಿದ್ಧಕಾ. ೬–೩೩) ; ಲೋಹಪೃಷ್ಠಃ, ಕಂಕಃ – ೨ ಹರಡೇಹಕ್ಕಿಯೆಂದರೆ ಹದ್ದುಗಳಲ್ಲಿ ಭೇದ, ಕಬ್ಬಾರೇ ಹದ್ದು" (ಸಿದ್ಧಾಂತಿ. ೧೩೮). 'ಕಬ್ಬದ್ದು' ಪರಾ. [?]

**ಕಬ್ಬಾಳ** 'ಕಬಾರ್ಳ' ನೋ.

**ಕಬ್ಬಾಳೆ** 'ಕವಾರ್ಳೆ' ನೋ.

**ಕಬ್ಬಿ, ಕಬ್ಬ$_3$** (ನಾ). ಕುದುರೆಯ ಬಾಯಲ್ಲಿ ಸೇರಿಸಿ ಕಟ್ಟುವ ಉಕ್ಕಿನ ತುಂಡು, —ಉಕ್ಕಿನ ಕಡಿ ; ಕಡಿವಾಣ : "ಕಬ್ಬಿ ಕವಿಯಕ್ಕು" (ಮಂಗರಾ. ೮೧–೧೩) ; ಕನಲ್ದು ನಂಟಿಸುವ ದುಷ್ಟತುರಂಗಚಯಕ್ಕೆ ಕಬ್ಬಿಯಂ ತುಡಿಸುವ (ನಳಚಂ. ೬೫೦) ; ಟೆಬ್ಬರಿಸುವಿಂದ್ರಿಯ ತುರಂಗದ ಕಬ್ಬಿ ಕಳಚಿತು (ಕುವ್ಯಾಕ. ೫–೧೧); ಕಬ್ಬಿಯ ಘುಣಘುಣತ್ಕಾರದ ಗಢಾವಣೆಯ . . . ಕುದುರೆ ಬೀಱುತು ಭಯವನಹಿತರಿಗೆ (ತೊರರಾ. ೬–೩೦–೩೩) ; ಇಕ್ಕೆಲದೊಳು ಕಬ್ಬಿಯೊಳು ಕಟ್ಟೆ ನೇಲುತಿರ್ಪುಕ್ಕಿನ ಗುಂಡುಗಳಿಂದ (ಕುರಾಸಾಂ.೯–೪೮). **ಕಬ್ಬ$_3$** : ಎಡಗಯ್ಯೊಳುತ್ತರೋಷ್ಠದ ಕಡೆಯಂ ಪಿಡಿದೊತ್ತಿ ಕಬ್ಬಮಂ ಬಲಗಯ್ಯೊಳ್ ಪಿಡಿದು ತೆಗೆದೊಂಗೆ ಪಶ್ಚಿಮದೆಡೆವರೆಗಂ ಸೀಳ್ದಡೇಂ ಬಲಸ್ಥನೊ ಕೃಷ್ಣಂ (ಬಂಹರಿ. ೬–೧೯).
[< ಪ್ರಾ. ಕವಿಅ. / ಸಂ. ಕವಿ, ಕವೀ, ಕವಿಕ]

**ಕಬ್ಬಿಕೋಲು** (ನಾ). ಒಂದು ಬಗೆಯ ಆಯುಧ : ಖಡ್ಗ . . . ಕಬ್ಬಿಕೋಲು . . . ಜವದಾಡೆಗಳೆಂಬ ಬತ್ತೀಸಾಯುಧಗಳಿಂ (ವಿವೇಕ. ೨೭೨). [ಕಬ್ಬಿ + ಕೋಲು$_1$ (< ಕೋಲ್$_1$)]

**ಕಬ್ಬಿಗ** (ನಾ). ಕಾವ್ಯವನ್ನು ರಚಿಸುವವನು ; ಕವಿ : ಕಬ್ಬಿಗನಪ್ಪಂ ಪರಮುನನೋಲಗಿಪುದು (ಸಮುಪ. ೬–೫೭) ; ತಾಮೆ ತಮ್ಮ ಮನದೊಳ್ ಸರ್ವಜ್ಞರೆಂದಿರ್ಪ ಕಬ್ಬಿಗರುಂ ಕಬ್ಬಿಗರೆಂಬ ಲೆಕ್ಕದೊಳಗೇಂ ಭೂಭೃತ್ ಸಭಾ ಭೂಷಣಂ (ಅರ್ಧನೇ. ೧–೩೫) ; ಸೊಗಯಿಸುವ ಕಬ್ಬಮಂ ಕಬ್ಬಿಗರಲ್ಲದೆ ಮೆಚ್ಚರ್ (ಕಬ್ಬಿಕಾ. ೮). [ಕಬ್ಬ$_1$ + -ಇಗ]

**ಕಬ್ಬಿಗಗಳ್ಳ** (ನಾ). ಕೃತಿಚೌರ್ಯಮಾಡುವವನು ; ಕಳ್ಳಕವಿ : ಕಳ್ವ ಕೊಳ್ವ ಖಳರಿರ್ಕೆಮ ಕಬ್ಬಿಗರಿರ್ಕೆವು ಕಬ್ಬಿಗಗಳ್ಳರೆಂದು ಕೂಸಾಡಿಸ ಬಾರದಕ್ಕರದ ರಾಜ್ಯದೋಳೀ ಕವಿಚಕ್ರವರ್ತಿಯಾ (ಶಾಂತಿಪು. ೧೨–೭೭).
[ಕಬ್ಬಿಗ + ಕಳ್ಳ$_1$]

**ಕಬ್ಬಿಗವಂದಿ** (ನಾ). ಕಾವ್ಯ ರಚಿಸುವ ಜನ ; ಸಾಮಾನ್ಯ ಕವಿ : ಪೊಸೆಯಿಪ ಕಮ್ಮಯಿಪ್ಪ ಸಮಕಟ್ಟುವ ಬಿನ್ನಣಮಿಲ್ಲದಕ್ಕೆ ರಂಜಿಸುವೆರ್ದೆಗೊಳ್ಳದೀಗಡಿನ ಕಬ್ಬಿಗವಂದಿಗಳೊಂದವಿಂದಿಗಳ್ (ಶಾಂತಿಪು. ೧೨–೭೬).
[ಕಬ್ಬಿಗ + ಮಂದಿ$_1$]

**ಕಬ್ಬಿಣ** 'ಕರ್ವೊನ್' ನೋ.

**ಕಬ್ಬಿಣಕಿಟ್ಟ** (ನಾ). ಕಬ್ಬಿಣದ ತುಕ್ಕು, —ಜಂಗು : "ಸಿಂಘಾಣ-ಕಬ್ಬಿಣಕಿಟ್ಟ" (ಗಂಗಾಮು. ೩೨೮). [ಕಬ್ಬಿಣ (< ಕರ್ವೊನ್) + ಕಿಟ್ಟ]

**ಕಬ್ಬಿಣಗೊಂಬೆ** (ನಾ). ಕಬ್ಬಿಣದ ಗೊಂಬೆ, —ಪ್ರತಿಮೆ: "ಸ್ಥೂಣ-ಕಬ್ಬಿಣಗೊಂಬೆ" (ಗಂಗಾಮು. ೩೪೦).
[ಕಬ್ಬಿಣ (< ಕರ್ವೊನ್) + ಗೊಂಬೆ]

**ಕಬ್ಬಿಣದ ಮರ** (ನಾ). ಒಂದು ಬಗೆಯ ಸಸ್ಯ : ಹುದಿಗೊಳ್ಳು, ಕಾಲ್ಮಧು, ಕಂಪಾಲೆ ಕಬ್ಬಿಣದಮರ (ವೈಔಗಿ. ೭೦–೧೪೩೫). [?]

**ಕಬ್ಬಿಣಸಲಾಕೆ** (ನಾ). ಕಬ್ಬಿಣದ ಸಲಾಕೆ, —ಸರಳು (ಕ).
[ಕಬ್ಬಿಣ (< ಕರ್ವೊನ್) + ಸಲಾಕೆ]

**ಕಬ್ಬಿಲ, ಕಬಳ್$_{1}$** (ನಾ). ೧. ಬೇಡ; ವ್ಯಾಧ : ಬಳಸಿದ ಪತ್ರಿಯಂ ಬರುತೆ ಕೆಪ್ಪಿನ ಕಾಲೊಳೆ ನೂಂಕಿ ತನ್ನ ಮುಕ್ಕುಳಿಸಿದ ತೋಯದಿಂ ಮಿಸಿಸಿ ಪತ್ರಿಯನೊಟ್ಟುತಮಿರ್ದ ಕಬ್ಬಿಲಂಗೆಳಸಿ (ಸಮಪ. ೧೦–೮೦). ೨. ಮೀನುಗಾರ; ಬೆಸ್ತರಪನು; ಜಾಲಗಾರ; ಅಂಬಿಗ : ತುಱುಗಾವ ಗೋವರಂ ಮತ್ತಱಕೆಯ ಕಬ್ಬಿಲರನೆಯ್ದೆ ಬೆಸಗೊಳುತುಂ (ಧರ್ಮಾಮೃ. ೮–೨೩) ; ಹಿರಿದಪ್ಪ ಜಲಧಿಯ ಮಡುವಿನೊಳಗೆ ಕರಿಯ ಕಬ್ಬಿಲ ಜಾಲವ ಬೀಸಿದ ನೋಡಯ್ಯ . . . ಕರಿಯ ಕಬ್ಬಿಲ ಜಾಲವ ಹೊತ್ತುಕೊಂಡು ಹೋದರೆ ನೆತ್ತಱಕೋಳುಯಾಡಿತ್ತ ಕಂಡೆನು (ಅವಚಂ. ೧೦–೩೭) ; ಕಬ್ಬಿಲ ಕಾಳಬೋವನ ಮಗ ಕಾವಬೋಗ (ಎಕ. VI, ಚಿತ್ರದು. ೧೨–೩೫ ; 1286); ಎನ್ನುವನು ರಾಧಾತನಯನೆಂಬರು ಕಬ್ಬಿಲನು ಮಿಗೆ ಸಾಕಿದನೆನ್ನುವನು (ಸಂಭಪ. ೧೪–೧೬). **ಕಬಳ್$_{1}$** : ೧. "ಬೇಡ" (ಚತುನಿ. ಕ. I, ೫೮). [?]

**ಕಬ್ಬಿಲಗಿತ್ತಿ** 'ಕಬ್ಬಿಲಿಗಿತ್ತಿ' ನೋ.

**ಕಬ್ಬಿಲತಿ** 'ಕಬ್ಬಿಲಿತಿ' ನೋ.

**ಕಬ್ಬಿಲದೆಱೆ** (ನಾ). ಮೀನುಗಾರರ ಮೇಲಿನ ತೆರಿಗೆ : ಹೊಗೆದೆಱೆ ಕಬ್ಬಿಲದೆಱೆ ಮಗ್ಗದೆಱೆ (ಎಕ. VI, ಕಡೂರು. ೪೯–೪೧ ; 1291).
[ಕಬ್ಬಿಲ + ತೆಱೆ$_{3}$]

**ಕಬ್ಬಿಲಪಡೆ** (ನಾ). ಕಬ್ಬಿಲರ ಗುಂಪು (?) : ಆನೆಗಳಿಗೆ ಹಯಾಳಿಗೆ ತಂದು ತಂದೆಱೆಯಲು ವಿಷಂ ಸವೆಯಲು ಚಂಡಿ ಕಬ್ಬಿಲಪಡೆ ನಡುಗುತಿರಲು (ಬಸಪು. ೫೯–೪೨). [ಕಬ್ಬಿಲ + ಪಡೆ$_{4}$]

**ಕಬ್ಬಿಲವಡಿಕೆ** (ನಾ). = ಕಬ್ಬಿಲದೆಱೆ (?) : ತಮ್ಮ ಬಿಲುವಡಿಕೆ ಮುಖ್ಯವಾಗಿ ಕಬ್ಬಿಲವಡಿಕೆ ಅವುದು ಬಂದಡಂ ಸರ್ವ್ವನಮಸ್ಯವಾಗಿ ಧಾರಾಪೂರ್ವ್ವಕಂ ಮಾಡಿ ಕೊಟ್ಟು ಬಿಟ್ಟ ಧರ್ಮ್ಮ (ಸೌಇಇ. IX–i, ೩೫೦–೧೧ ; 1282). [ಕಬ್ಬಿಲ + ?]

**ಕಬ್ಬಿಲಿಗ, ಕಬ್ಬಲಿಗ, ಕಬ್ಬುರಗ, ಕಬ್ಬುಲಿಗ** (ನಾ). ಮೀನುಗಾರ; ಜಾಲಗಾರ; ಅಂಬಿಗ : ಬೆನ್ನು ಅಸಗ ಚರ್ಮ ಜಾಡ ಪೃಷ್ಠಸ್ಥಾನ ಕಬ್ಬಿಲಿಗ ಒಳದೊಡೆ ಹೊಲೆಯ ಮೊಳಕಾಲು ಈಡಿಗ . . . ಇಂತೀ ಹದಿನೆಂಟು ಜಾತಿ ತನ್ನಲ್ಲುಂಟು (ವಚಶಾ. I, ೩೬೩) ; ಹರನ ಪ್ರಸಾದ ವೆಮಗಂ ಸಲ್ಲುದೆಂದು ಮಿಗೆ ಹೀನರಹ ಕಬ್ಬಿಲಿಗರು ನೆರೆದು (ಶಾಫಚ. ೧೨–೫೫) ; ಹಂಡೆಯವರು ಇವರು ಮೊದಲು ಕಬ್ಬಲಿಗೇರು, ಅವರೆ . . . ಮೀನ ಹಿಡಿಯುವ ಹೋರೆಯನ್ನು ಬಿಟ್ಟಿದ್ದಾರೆ (ಕಭಾಗ. ೧೩೩). **ಕಬ್ಬಿಲಿಗ** : "ಮೀನಗಾರ; ಅಂಬಿಗ" (ಜಾನಕೋ. ೩೪). **ಕಬ್ಬುರಗ** : ಹೊಳೆಯ ಹೊತ್ತನ್ನು ಅರಿಯ ಕಬ್ಬುರಗ (ಅಂಬಿಗ) ಕಾರ್ಯ ಅರಿಯ (ಹುಟ್ಟಿಹ. ೧೨೪). **ಕಬ್ಬುಲಿಗ** : ಕಬ್ಬುಲಿಗರೇ ಸಣಬು ಬಿತ್ತಬೇಕು, ಉಳಿದಾದ ಒಕ್ಕಲತನದವರು ಬಿತ್ತಿದರೆ, ಅವರಿಗೆ ಏನಾದರೂ ಕೇಡು ಆಗುವದು (ಕೃಷಿಪ್ರ. ೫೬). [ಕಬ್ಬಿಲ + -ಇಗ]

**ಕಬ್ಬಿಲಿಗಿತ್ತಿ, ಕಬ್ಬಲಗಿತ್ತಿ, ಕಬ್ಬಿಲಗಿತ್ತಿ** (ನಾ). ಕಬ್ಬಿಲ ಜಾತಿಯವಳು ; ಬೆಸ್ತರವಳು (ಕ). **ಕಬ್ಬಲಗಿತ್ತಿ** : ಕಂಡರ ಕಬ್ಬಲಗಿತ್ತಿ ಗೊಬ್ಬುನುಡಿ ಮಾತುಗಳು (ಲೋಕಗೀ. ೧೩೫–೧೫). **ಕಬ್ಬಿಲಗಿತ್ತಿ** : ಚಂಡಾಲನವ ಪರಾಶರ ಕುಸುಮಗಂಧಿಯಾಕೆ ಕಬ್ಬಿಲಗಿತ್ತಿ (ಸಿದ್ಧವ. ಕ. ೧೫೪–೫೧೯). [ಕಬ್ಬಿಲಿಗ + -ಇತ್ತಿ]

**ಕಬ್ಬಿಲಿತಿ, ಕಬ್ಬಿಲತಿ** (ನಾ). = ಕಬ್ಬಿಲಗಿತ್ತಿ : ಭೂಸುರರ ಗುರು ಕಬ್ಬಿಲತಿಗಲ್ಲಾವ್ಯಾಸನೊಗೆದನು (ಬಸಪು. ೫೭–೭೨) ; ವ್ಯಾಸನೊಗೆದನು ಕಬ್ಬಿಲಿತಿಗೆ (ಮೋಳಿಪು. ೪–೯೯). **ಕಬ್ಬಿಲತಿ** : ದೇವಲೋಕದ ಸೂಳೆ ಕಬ್ಬಿಲತಿ ನಾಯ್ಗಿತ್ತಿ ಪಾವು ಕುಱತೊತ್ತು ಕಮ್ಮಱನಸಗ ಮಾದಿಗಂ ನಾವಿಂದ ಬೇಡನಿವರಾದಿ ಜನನಂ ಗೋತ್ರವೆಂಬುದಂ ತಾ ವಹಿಸದೆ (ವೀಶೈಪು. ೭–೧೫–೨೨). [ಕಬ್ಬಿಲ + -ಇತಿ$_{1}$ (< -ಇತ್ತಿ)]

**ಕಬ್ಬಿಲೆ, ಕಬ್ಬಿಳೆ, ಕಬ್ಬೀಳೆ** (ನಾ). ಕಾಗೆ ; ವಾಯಸ : ಧನಲಾಭಮನ್ . . . ರುಜೆಯನೆಯ್ದೆ ಕಬ್ಬಲೆಯೆ ತಿಳಿವುಗುಂ ಮುಂಬಗಲೊಳ್ (ಲೋಕೋಪ. ೧೨–೩೫). **ಕಬ್ಬಿಳೆ** : ಮೂಜನೆಯ ಜಾವದಲ್ಲಿ ಕಬ್ಬಿಳೆ ಕರೆಯಲ್ ಈ ಪೇಟ್ದ ಕಾರ್ಯಂಗಳಂ ಸೂಚಿಸುವುದು (ಲೋಕೋಪ. ೧೨–೩೭ ಟೀಕು). **ಕಬ್ಬೀಳೆ** : ವೈರಿ ವಿನಾಶಂ ಧನಧಾನ್ಯಪ್ರವೃದ್ಧಿ ಕಬ್ಬೀಳೆ [ಪಾಠಾಂ. ಬ್ಬಿಳೆ] ಕರೆಯೆ ಯಾಮತ್ರಯದೊಳ್ (ಲೋಕೋಪ. ೧೨–೩೭).
[?]

**ಕಬ್ಬಿಸಿಲು** (ನಾ). "ಪ್ರಖರವಾದ ಬಿಸಿಲು" (ಅವಚಂ. ಕೋಶ) : ಕನ್ನಡಿಯುಂಡ ಬಿಂಬ ಕಬ್ಬುನ ಉಂಡ ನೀರು ಕಬ್ಬಿಸಿಲುಂಡ[ಪಾಠಾಂ. ಕುಪ್ಪಸ ಉಂಡ] ಅರಿಸಿನದಂತೆ ಗುಹೇಶ್ವರ ನಿಮ್ಮ ಶರಣರು (ಅವಚಂ. ೮೨–೩೬೭).
[< ಕಡಿದು + ಬಿಸಿಲು (< ಬಿಸಿಲ್)]

**ಕಬ್ಬಿಳೆ** 'ಕಬ್ಬಿಲೆ' ನೋ.

**ಕಬ್ಬೀಳೆ** 'ಕಬ್ಬಿಲೆ' ನೋ.

**ಕಬ್ಬು$_{1}$** (ಕ್ರಿ). ೧. ಬಳಸು ; ಸುತ್ತುಗಟ್ಟು (ಸ್ಯಾಂಡರ್). ೨. ಮೇಲೆ ಬೀಳು ; ಆಕ್ರಮಿಸು (ಸ್ಯಾಂಡರ್).
[ದೇ. ‖ ತಮಿ. ಮಲ. ತೆಲು. ಕಪ್ಪು]

**ಕಬ್ಬು$_{2}$** 'ಕರ್ವು$_{1}$' ನೋ.

**ಕಬ್ಬುಗುಳ್** 'ಕರ್ಬುಗುಳ್' ನೋ.

**ಕಬ್ಬುದೋಂಟೆ** 'ಕರ್ವುದೋಂಟೆ' ನೋ.

**ಕಬ್ಬುನ** 'ಕರ್ವೊನ್' ನೋ.

**ಕಬ್ಬುನಕೋಟೆ** (ನಾ). ಒಂದು ಊರಿನ ಹೆಸರು : ಅತ್ರಿಯಹಳ್ಳಿ ಕಬ್ಬುನಕೋಟೆ ನೆಲ್ಲಿಗೆಱೆ ಚೀಯನಹಳ್ಳಿ (ಎಕ. V, ಬೇಲೂರು. ೭೪–೧೨೧ ; 1261). [ಕಬ್ಬುನ + ಕೋಟೆ$_{2}$]

**ಕಬ್ಬುನಕೋಲು** (ನಾ). ಕಬ್ಬಿಣದ ಕೋಲು, —ಸಲಾಕೆ, —ಕಂಬಿ : ಕಬ್ಬುನಕೋಲುಗಳ ಪಿಡಿದಿಟ್ಟಣಿಸಿ ಬಹ ಕೊಟ್ಟಗಾಱರ (ಬಸಪು. ೬೦–೨೬) ; ಇಟ್ಟ ಕಬ್ಬುನಕೋಲ . . . ಪಿಡಿದಿಟ್ಟ ಚಕ್ರವು ಪಿಂಡವಾಳವು (ಸಾಳ್ವಭಾ. ೫–೧೫).
[ಕಬ್ಬುನ (< ಕರ್ವೊನ್) + ಕೋಲು$_{1}$ (< ಕೋಲ್$_{1}$)]

**ಕಬ್ಬುನಗಲ್** 'ಕರ್ಬೊಂಗಲ್' ನೋ.

**ಕಬ್ಬುಬಿಲ್ಲ** 'ಕರ್ವುವಿಲ್ಲ' ನೋ.

**ಕಬ್ಬುಬೆಕ್ಕು** (ನಾ). ಒಂದು ಜಾತಿಯ ಬೆಕ್ಕು : ಹುಲಿಜಾತಿ, ಹುಲಿ, ಹೆಬ್ಬುಲಿ . . . ಪುನುಗಿನ ಬೆಕ್ಕು, ಜವಾಜಿಬೆಕ್ಕು ; ಕೀರಬೆಕ್ಕು, ಕಬ್ಬುಬೆಕ್ಕು (ನಮ್ಮನು. ೨೩೯). [< ಕಬ್ಬೆಕ್ಕು ?]

**ಕಬ್ಬುರಗ** 'ಕಬ್ಬಿಲಿಗ' ನೋ.

**ಕಬ್ಬುಲಿ** 'ಕರ್ಬುಲಿ' ನೋ.

**ಕಬ್ಬುಲಿಗ** 'ಕಬ್ಬಲಿಗ' ನೋ.
**ಕಬ್ಬುವಿಲ್** 'ಕರ್ವುವಿಲ್' ನೋ.
**ಕಬ್ಬುವಿಲು** 'ಕರ್ವುವಿಲು' ನೋ.
**ಕಬ್ಬುವಿಲುಗಾಱ** 'ಕರ್ವಿಲ್ಲುಗಾಱ' ನೋ.
**ಕಬ್ಬುವಿಲ್ಲ** 'ಕರ್ವುವಿಲ್ಲ' ನೋ.
**ಕಬ್ಬುವಿಲ್ಲು** 'ಕರ್ವುವಿಲ್' ನೋ.
**ಕಬ್ಬುವಿಲ್ಲೆ** (ನಾ). ಕಬ್ಬಿನ ಜಲ್ಲೆ, —ತುಂಡು : ಉಪ್ಪಿನಕಾಯಿ ಹುರಿಮೆಣಸುಗಡಲೆ ಸಕ್ಕರೆ ಶುಂಠಿ ಕಬ್ಬುವಿಲ್ಲೆಗಳನುೞಿ ಮಾಱುವರ್ ಬರುತಿರ್ದರು (ಚಿಬವು. ೪೭–೪೨). [ಕಬ್ಬು$_2$ (< ಕರ್ವು$_1$) + ಬಿಲ್ಲೆ]
**ಕಬ್ಬುಳಿಗ** (ನಾ). = ಕಬ್ಬಿಗ : ಅಡುಗುಳಿಗಂ, ಅಡುಗಿಗಂ ; ಕಬ್ಬುಳಿಗಂ, ಕಬ್ಬಿಗಂ (ಶಬ್ದಾನು. ೪೧೦ ಪ್ರಯೋ). [ಕಬ್ಬ + -ಉಳಿಗ$_3$]
**ಕಬ್ಬೆಕ್ಕು** (ನಾ). ಕಾಡಿನ ಬೆಕ್ಕು : ಕಾಡುಕುರಿ, ಕಾಡುಹಂದಿ . . . ಕಬ್ಬೆಕ್ಕು, ಹಾರಬೆಕ್ಕು ಮುಂತಾದ ಪ್ರಾಣಿವರ್ಗಕ್ಕೆ ಕಾಡಿನಲ್ಲಿ ಮಿತಿಯೇ ಇರಲಿಲ್ಲ (ಪಂಜಪಂ. ೨) ; ಕಬ್ಬೆಕ್ಕು ಎಲ್ಲಿಯಾದರೂ ಮೇಲೆ ಹತ್ತಿ ಕುಳಿತಿದೆಯೋ (ಮಲೆಮ. ೩೭). 'ಕಾಟ್ಬೆಕ್ಕು' ಪರಾ.
[< ಕಾಡು$_2$ + ಬೆಕ್ಕು]
**ಕಬ್ಬೆಗಲ್** (ನಾ). ಎತ್ತಿನ ಹೆಗಲಿನ ಬಾವು, —ಊತ; ಉಬ್ಬಿದ ಹೆಗಲು : ಇನಿತುಮಂ ತಿಲತೈಲದೊಳಟ್ಟು ಪೂಸುಗುಬ್ಬರಿಸುತುಮಿರ್ಪ ಕಬ್ಬೆಗಲ ತಳ್ಪಿದು ಮಾಣ್ದುದಿದಾವ ವಿಸ್ಮಯಂ (ಲೋಕೋಪ. ೯–೨೧೩).
[< ಕರಿದು + ಪೆಗಲ್]
**ಕಬ್ಬೆಯ** (ನಾ). ಅಂಬಿಗ ; ಕಬ್ಬಲಿಗ : ಕಬ್ಬೇ[ಬ್ಬೆಯ]ರು :—ಇವರು ವಿಜಾಪುರದ ತಾಲ್ಲೂಕುಗಳಲ್ಲಿರುತ್ತಾರೆ . . . ಇವರಲ್ಲಿ ಕಬ್ಬಲಿಗೇರು ಬಾರಕೇರು ಎಂತಲೂ ಎರಡು ವರ್ಗಗಳಿವೆ (ಕಭಾಗೆ. ೧೫೩). [?]
**ಕಬ್ಬೇರು** (ಕ್ರಿ). ಕಪ್ಪು ಹಿಡಿ ; ಕುಟ್ಟು ಹಿಡಿ (?) : ಈ ಸಾಚೆಯು ಕಟ್ಟಿಗೆಯಿಂದ ಮಾಡಿದ್ದಾದರೆ ಅದು ನೀರಿನ ತಂಪಿನಿಂದ ಎಷ್ಟು ದಿವಸವಾದ ಕಾಲಕ್ಕೂ ಕಬ್ಬೇರಿ ಕೆಡದೆ ಇರುವದು (ಕೃಷಿಪ್ರ. ೧೧೧).
[ಕಪ್ಪು$_4$ (< ಕರ್ವು$_1$) + ಏರು$_1$ (< ಏಱ್$_1$)]
**ಕಬ್ಬೊಗೆ** 'ಕರ್ವೊಗೆ' ನೋ.
**ಕಬ್ಬೊನ್** 'ಕರ್ವೊನ್' ನೋ.
**ಕಬ್ಬೊಳೆ** (ನಾ). ಕರಿಯ ಹೊಳೆ ; ಕಪ್ಪುನದಿ : ಅಲರ್ಗಣ್ಣ ಥಾಳವಳ ಕದ ಕಾಂತಿ ಬಾಯ್ದೆಱೆಯ ಪೊಳಪೊಂದಲೊಡನೊಂದು ಬೆಚ್ಚು ಮುಪ್ಪುರಿಗೊಂಡು ಬೆಳೆದು ಬೆಳ್ವೊಳೆಯ ಕಬ್ಬೊಳೆಯು ಕೆಂಬೊಳೆಯ ಕೂಡಲ ತೆಱದಿ (ಸೌಂದವು. ೭–೫೦). [< ಕರಿದು + ಪೊಳೆ$_4$ (< ಪೊೞೆ$_1$)]
**ಕಬ್ಬೋರಿ** (ನಾ). ಒಂದು ಬಗೆಯ ಸಸ್ಯ: "ಗಗರ :—ಕೋಲು ಮಾನು, ಕಬ್ಬೋರಿ, ಕಿಱುಯೇಲಕ್ಕಿ, ಮುಂಡೀಚಲು" (ಓಷಧಿ. ೪೫). [?]
**ಕಮಂಗಿ** (ನಾ). ೧. ಒಂದು ಜಾತಿಯ ಮಂಗ (?) : " . . . ಹುಡುಗನನ್ನ ಕಮಂಗಿ ಹಾಗೆ ಮಾಡಿಬಿಟ್ಟಿದ್ದಾರೆ" (ನಡೆದಾ. II, ೧೦೩೧). ೨. ಬುದ್ಧಿಗೇಡಿ ; ವಕ್ರ : ಇದು ಸಂಸಾರ ಕಣೋ ಕಮಂಗಿ (ಅನ್ನಾವ. ೮೪). [?]
**ಕಮಂಡಲ** (ನಾ). ಯತಿಗಳೂ ಬೈರಾಗಿಗಳೂ ಉಪಯೋಗಿಸುವ ಜಲಪಾತ್ರೆ; ನೀರಿನ ಗುಂಡಿಗೆ: "ಜಲಪಾತ್ರೆಯ ಕಮಂಡಲಂ" (ಮಂಗರಾ. ೩೩–೨೫) ; ಬ್ರಹ್ಮನ ಕರಕಮಂಡಲದೊಳಗೆ ಹುದುಗಲಿರವಿಯ ಮಱೆಹೊಗಲಿ (ಕುವ್ಯಾಪ್ರೊ. ೮–೩೫) ; ಧಾರೆಯೆಱೆವಾ ಕಮಂಡಲಜಲಂ ಮೊದಲಿಲ್ಲವೇ (ವೀಶೈಪು. ೩–೧೪–೨೮) ; ಸುಬ್ಬಣ್ಣ ಕಕ್ಕಾವಿಯನ್ನು ಧರಿಸಿ ಕೈಯಲ್ಲೊಂದು ದಂಡವನ್ನೂ ಕಮಂಡಲವನ್ನೂ ಹಿಡಿದು ಬದರಿಕಾಶ್ರಮಕ್ಕೆ ನಡೆದ (ಹೊಸಕ್ಷಿ. ೨೫೩). [< ಸಂ. ಕಮಂಡಲು]
**ಕಮಂಡಲು** (ನಾ). = ಕಮಂಡಲ : "ಗುಂಡಿಗೆ ಕಮಂಡಲುವಕ್ಕು" (ಮಂಗರಾ. ೭೩–೯) ; ಮಹಾಋಷಿಯ ತಳೆದ ಕನಕಕಮಂಡು[ಡ]ಲುವಿನ ತೀರ್ಥೋದಕಂಗಳಿಂದಯ್ವರುಂ ಪವಿತ್ರೀಕೃತ ಪುಸ್ತಕರಾಗಿರ್ದು (ಪಂಪಭಾ. ೩–೧೧ ವ) ; ಚಂದ್ರಶೇಖರನು ಸ್ವಾಮಿಯು ಕೊಟ್ಟ ಕಮಂಡಲೂದಕವನ್ನು ಶೈವಲಿನಿಗೆ ಕೊಟ್ಟು. . .ಯೋಗನಿದ್ರೆ ಬರಿಸಿದನು (ಬಂಕಿಮು. ೧೦೦). [ಸಂ.]
**ಕಮಂದಮರ** (ನಾ). ಸಂಪಗೆ ಜಾತಿಯ ಒಂದು ಸಸ್ಯ : ಕನಂಗಹೂ ಕಮಂದಮರ, ಅಪೂರ್ವಚಂಪಕ, ವನಸಂಪಿಗೆ, ಕತ್ತಿಸಂಪಿಗೆ (ಮೈಔಗಿ. ೧೭–೨೯೪). [ಕಮಂದ$_0$ + ಮರ$_1$]
**ಕಮಂಧ** (ನಾ). = ಕಬಂಧ (೬). [< ಪ್ರಾ. ಕಮಂಧ. / ಸಂ. ಕಬಂಧ]
**ಕಮಕಮಮಾಡು** (ಕ್ರಿ). (ಉಕ) ನುಂಗಿ ನುಂಗಿ ಮಾತಾಡು : "ಇಲ್ಲಾ, ನನ್ನ ಕಡೀಗೆ ಮತ್ತ ಬ್ಯಾರೆ ಫೋಟೋ ಅವ. ಬ್ಯಾರೆ ಅವ" ಎಂದು ಕೇಶವನು ಕಮಕಮಮಾಡಿದನು (ಸಮುಚ್ಚೀ. ೨೫೨).
[← ಮರಾ. ಕಮಕಮಣೇ]
**ಕಮಕಾಳ** (ನಾ). (ಉಕ) ದಟ್ಟವಾದ ಕಪ್ಪು ; ಬಹಳ ಕಪ್ಪು : ಗಾಳಿ ಕೂಡ ಯಾವ ಮನೆಯ ಮೂಲೆಯನ್ನು ಸೇರಿತ್ತೋ ಯಾರು ಬಲ್ಲರು. ಮೇಲೆ ಕತ್ತಲು ಕಮಕಾಳ (ಗೀಚುಗೆ. ೧೧). [?]
**ಕಮಗಗ್ಗರೆ** 'ಕಮ್ಮಗಗ್ರೆ' ನೋ.
**ಕಮಚಿ** (ನಾ). ಚಾವಟಿ ; ಬೆತ್ತಗಳನ್ನು ಹೆಣೆದು ಮಾಡಿದ ಛಡಿ : ಹಚ್ಚನ್ನ ಕರಡ ಹಾಕಲಿ ಬೇಕೋ ನಿಚ್ಚಳ ನೀರ ಕುಡಿಸಲಿ ಬೇಕೋ ಸಂಸ್ಕಾರ ಎಂಬ ಕಮಚಿಲೆ ಹೊಡಿಯಲಿ ಬೇಕೋ (ಶಂಲಿಘ. ೪೭–೧).
[← ಹಿಂ. ಮರಾ. ಕಮಚೀ]
**ಕಮಟ** (ನಾ). ಆಮೆ. 'ಕಮಟವಾವುಗೆ' ಪರಾ. [< ಸಂ. ಕಮಠ]
**ಕಮಟವಾವುಗೆ** (ನಾ). ಆಮೆಯ ಆಕಾರದ ಪಾದುಕೆ: ಲಲಿತ ಪಚ್ಚೆಯ ಕಮಟಪಾವುಗೆ ಗೆಲುವ ಪದಪಂಕೇಜ ಚರಣದ (ಜಿನಭಾ. ೧೦–೨೦). [ಕಮಟ + ಪಾವುಗೆ]
**ಕಮಟು**, ಕಂಟು$_3$, ಕಮುಟು (ನಾ). ೧. ಗಬ್ಬುವಾಸನೆ ; ಅಸಹ್ಯ ವಾಸನೆ ; ವಿಶೇಷವಾಗಿ ಬಹಳ ದಿನ ಇಟ್ಟ ಕೊಬ್ಬರಿ, ಹೊಲಸು ಬಟ್ಟೆ ಮೊದಲಾದುವುಗಳಿಂದ ಬರುವ ವಾಸನೆ ; ತುಪ್ಪ ಅಥವಾ ಎಣ್ಣೆ ಸುಟ್ಟ ವಾಸನೆ : ಮೈತುಂಬಾ ಬೆವರು ಬರಿಸುವಂಥ ಕಮಟು ಹವೆಯಲ್ಲಿ ಸಂಜೆಯವರೆಗೂ ದುಡಿತ (ಮಣ್ಣುಹೆ. ೧೫೬) ; ಬೆಣ್ಣೆಗೆ ಕಮಟುನಾತ (rancidity) ಬರುತ್ತದೆ (ಮಾನಸಾ. ೭). **ಕಂಟು** : ೧. ಮನದಿ ಸೇರಿಹುದು ಷಡ್ವರ್ಗದಂಟು ಯಿದರೊಳಾರಿಪ್ಪರಲ್ಲಿಹುದು ದುರ್ಗುಣದ ಕಂಟು (ಭಕ್ತಸ. IV, ೭–೪) ; ಗಂಡನುಳ್ಳ ಸತಿ ನಂಟು ಕನ್ನಡಿಯೊಳಗಣ ಗಂಟು ಕಂಡವರಿಗೆಲ್ಲಾ ಕಂಟು ಭಂಡಾಟವುಂಟು (ಸಾರಂಗ. ೯). ೨. ದೀಪದ ಕುಡಿಯಲ್ಲಿರುವ ಕಪ್ಪು ; ದೀಪದ ತುದಿಯ ಕಿಟ್ಟ. **ಕಮುಟು** : ೧. ಮನೆಯಲ್ಲೆಲ್ಲಾ ಕಮುಟುವಾಸನೆ ತುಂಬಿಕೊಂಡಿದೆ (ರೂಢಿ).
[ದೇ. ‖ ತಮಿ. ಕವಿಚ್ಚು, ಕವುಲ್, ಕೌಲ್ ; ತುಳು. ಕವುಂಟು ; ತೆಲು. ಕವುಚು, ಕೌಚು]
**ಕಮಠ** (ನಾ). ೧. ಆಮೆ ; ಕೂರ್ಮ : "ಕಮಠ ಖರ್ಪರೆ ಸಮಂ ರಕ್ಕಸನ ಮೆಯ್" (ಶ್ರೀರಾಮಾ. ೧೮೧–೧೫೫). ೨. ಮಹಾವಿಷ್ಣುವಿನ ಹತ್ತು ಅವತಾರಗಳಲ್ಲೊಂದು ; ಕಮಠ ರೂಪಿಯಾದ ಮಹಾವಿಷ್ಣು ; ಆದಿಕೂರ್ಮ : ಕಮಠನುಂ ತೂಗಿದಂ ಹರ್ಷದಿಂದಂ (ಜಗಏ. ೩–೪) ; ಪಾಂಡವರು ಕಣನೊಳು ವೆಂಕಣಿಸಿದರು ಕಮಠ ಟೆಂಕಣಿಸೆ (ಕುವ್ಯಾಲು. ೧೧ ಸೂಚನೆ).

೩. (ಋಷಿಗಳ) ನೀರಿನ ಪಾತ್ರೆ. ೪. [ಜೈನ] ಒಬ್ಬ ವ್ಯಂತರನ ಹೆಸರು : ಅಗಣಿತಸಾಹಸ್ಯೈಕನಿಧಿ ಸಜ್ಜನಪೂಜ್ಯಗುಣಪ್ರಕಾಶಕಂ ಮಿಗೆ ಕಮಠೋಪಸರ್ಗಮನಡಂಗಿಸಿ (ಪಾರ್ಶ್ವಪು. ೧-೯). [ಸಂ.]

**ಕಮಠಾಧಿಪ** (ನಾ). ಕೂರ್ಮಗಳ ಪ್ರಭು ; ಆದಿಕೂರ್ಮ : ಕಿಡಿವಿಡೆ ಕರ್ಪರಂ ಸುಗಿದು ಮೆಯ್ದೆಗೆದಂ ಕಮಠಾಧಿಪಂ (ಪಂಪಾಮಾ. ೬-೮೩). [ಕಮಠ + ಅಧಿಪ]

**ಕಮಠಿ** (ನಾ). ೧. ಹೆಣ್ಣಾಮೆ. ೨. ಸಣ್ಣ ಆಮೆ. [< ಸಂ. ಕಮಠೀ]

**ಕಮಠೇಶ್ವರ** (ನಾ). ೧. ಒಂದು ಶಿವಲಿಂಗದ ಹೆಸರು ೨. "ಆದಿ ಕೂರ್ಮ; ಮಹಾದೇವನಿಗೆ ಅಗಸಾಲೇರು ಇಟ್ಟುಕೊಂಡ ಹೆಸರು" (ಗಂಗಾವು. ೭೧). [ಕಮಠ + ಈಶ್ವರ]

**ಕಮಡಿ** (ನಾ). ಬಿಳೀ ಮಗ್ಗದವರಲ್ಲಿ ಒಂದು ಪಂಗಡ (ಎಸಮೈ. VIII, ೯). [?]

**ಕಮತ** 'ಕಮ್ಮತ' ನೋ.

**ಕಮತಕಟ್ಟೆ** (ನಾ). ಬೇಸಾಯದ ವ್ಯವಸ್ಥೆ : ವಾಡೆಯ ಕಮತಕಟ್ಟೆ ತನಗೇನೂ ಸಂಬಂಧವಿಲ್ಲವೆನ್ನುವಂತೆ ಊರ ಕಾರಭಾರದಲ್ಲಿ ನಿರತನಾದ (ಗ್ರಾಮಾಯ. ೧೧); ಕಮತಕಟ್ಟೆ ಮಾಡಿಕೊಂಡು ನಿಂತ (ಕಪ್ಪುಹು. ೩೮). [ಕಮತ (< ಕಮ್ಮತ) + ಕಟ್ಟೆ$_1$]

**ಕಮತರತ** (ನಾ). ಕಡಮೆ ; ಕೊರತೆ : ದೇಸಾಯರ ಹೆಂಡತಿಗೆ ನಮಗ ಕಮತರತ ಇಲ್ಲ (ರಕ್ತಧ್ವ. ೩೨೫); "ನಮಗೇನ ಕಮತರತ ಐತಿ" (ಬಾಬಲ. ೧೦). [← ಪಾರ. ಕಮ್‌ತರ್ ; ಮರಾ. ಕಮತರ]

**ಕಮತಿಗ** 'ಕಮ್ಮತಿಗ' ನೋ.

**ಕಮನ** (ಗು). ೧. ಸುಂದರವಾದ ; ಮನೋಹರವಾದ : "ಕಮನಂ [ಪಾಠಾಂ. ದಮನಂ]ಶುಭಂ . . . ಸುಮನೋಜ್ಞಮತಿಕಾಂತಂ" (ಮಂಗರಾ. ೧೨೬-೨) ; ಇಂತೀ ಕಮನಚರಿತ್ರಂ ಶಿವಶರಣರ ಮುದ ನವವನಚೈತ್ರಂ (ಉದ್ಭದೇ. ೧-೨೭). ೨. ಬಯಸುವ ; ಕೋರುವ ; ಇಚ್ಛಿಸುವ. ೩. ಬಯಸತಕ್ಕ ; ಅಪೇಕ್ಷಣೀಯವಾದ. (ನಾ). ೪. ವಿಷಯಲಂಪಟ ; ಕಾಮುಕ : ತರುಣಿಯರ ಕಡೆಗಣ್ಣ ದಿಂಮುಗುಳ ಲೋಭದಿಂ . . . ಕಮನಜಂಗುಳಿ ಬಂದು ಬಂಧುರದಿ ಪರಿವೇಷ್ಟಿಸಿ ತರತರದಿ ನಿಂದಿರುವ ಪರಿಯಂ ನಿರೀಕ್ಷಿಸುತ (ವೆಂಕಾರಾ. ೧-೪-೨೪). ೫. ಕಾಮ ; ಮನ್ಮಥ. ೬. ಅಶೋಕವೃಕ್ಷ. [ಸಂ.]

**ಕಮನಂಬೆಱು** (ಕ್ರಿ). ಸೌಂದರ್ಯವನ್ನು ಪಡೆ ; ಮನೋಹರ ವಾಗು : ಕುಂದಿಲ್ಲದ ಕಮನಂಬೆತ್ತ ಸಿರಸ್ಸಿಂದೊಪ್ಪುವ ಮಾದೇವನ (ಉದ್ಭದೇ. ೬-೨೦). [ಕಮನ + ಪೆಱು$_1$]

**ಕಮನಿ** (ನಾ). ಹತ್ತಿ : "ಕಮನಿ – ಹತ್ತಿ" (ಒಷಧಿ. ೨೩). [?]

**ಕಮನೀಯ** (ಗು). ೧. ಸುಂದರವಾದ ; ಮನೋಹರವಾದ : ನಿನ್ನಾ ಮಿಮಳ ಯಶೋವಿಧುವೆಂಬುದು ಕಮನೀಯಂ ಶ್ಲೇಷರೂಪಕಾಲಂಕಾರಂ (ಕವಿರಾ. ೩-೨೧) ; ಕಮನೀಯ ಕಥೆಗಳಂ ಕೇಳುತಿರುಳಂ ಕಳೆದು (ಶ್ರೀರಾಮಾ. ೩೩-೧೩೭). ೨. ಬಯಸತಕ್ಕ ; ಅಪೇಕ್ಷಿಸತಕ್ಕ. [ಸಂ.]

**ಕಮನೀಯತೆ** (ನಾ). ಸೌಂದರ್ಯ ; ಮನೋಹರತೆ : ರನ್ನದುಯ್ಯಲನೇಱಿ ಚಂದ್ರಿಕಾಸಾಂದ್ರಪೀಯೂಷವಾರ್ಧಿಯೊಳೋಲಾಡುತೊಗೆತರ್ಪ ಕಮಳೆಯಂತೆ ಕಮನೀಯತೆಯನಪ್ಪುಕೆಯ್ದು (ರಾಜಶೇ. ೧೧-೧೮೮ ವ) ; ಮುಪ್ಪಿನಾರ್ಯರ ಹಾಡುಗಳಲ್ಲಿ ಶೈಲಿಯ ಸೊಬಗಿದೆ, ಭಾವದ ಬೆಡಗಿದೆ, ಕಾವ್ಯದ ಕಮನೀಯತೆಯಿದೆ (ಶರಚ. ೫೯೩) ; ಸೃಷ್ಟಿ ಕರ್ತನ ಕಮನೀಯತೆಯನ್ನು ಕುರಿತು ಮಹಮ್ಮದನು . . . ಆಲೋಚಿಸ ತೊಡಗಿದನು (ಪೈಗಂಬ. ೧೫).) [ಸಂ. ಕಮನೀಯತಾ]

**ಕಮನೀಯಸ್ವಾಂತ** (ನಾ). ಮನೋಹರವಾದ ಮನಸ್ಸುಳ್ಳವನು ; ಒಳ್ಳೆಯ ಮನಸ್ಸಿನವನು : "ದೇವವ್ರಾತಲತಾಂತವಾತ ಕಮನೀಯ ಸ್ವಾಂತಮೈಶ್ವರ್ಯಮೆಂದೀವಾಕ್ಯಂ ಸುಮನಾಭಿಧಾನಂ" (ನಾನಾರ. ೬೯). [ಕಮನೀಯ + ಸ್ವಾಂತ]

**ಕಮರಕ** (ನಾ). ಒಂದು ಜಾತಿಯ ಮರ : ಹುಣಿಸೆ, ಕಗ್ಗಲಿ, ಅಂಕೋಲೆ, ಕಮರಕ, ಮುರಕಲಿ (ನಮ್ಮನು. ೨೩೬). [?. / ಹಿಂ. ಕಮರಖ < ಸಂ. ಕರ್ಮರಕ]

**ಕಮರಕಸ** (ನಾ). ಒಂದು ಬಗೆಯ ಅಂಟು ; ಮುತ್ತುಗದ ಅಂಟು : ಕಮರಕಸ (ಒಂದು ಪ್ರಕಾರದ ಅಂಟು) (ಮುಂಬವ್ಯಾ. ೧೪೭). [← ಪಾರ. ಮರಾ. ಕಮರ್‌ಕಸ್]

**ಕಮರಬಂದ, ಕಮರಿಬಂದ, ಕಮ್ಮರುಬಂದು** (ನಾ). ಸೊಂಟಕ್ಕೆ ಕಟ್ಟುವ ಪಟ್ಟಿ ; ನಡುಕಟ್ಟು : ಸೂರ್ಯಪುಟವಿಜಾರದ ಮೇಲೆ ಶ್ರೀತ ಕನಕದ ಕಮರಬಂಧವದಱುಪರಿಯೊಳು ಜವದಾಡೆಯೊಪ್ಪಿ (ಪ್ರಭುಪು. ೯-೨೦೬). **ಕಮರಿಬಂದ** : ತೋಳ ಬಾಹುರಿಯಿಟ್ಟು ಕಮರಿಬಂದವ ಕಟ್ಟಿ . . . ಪೈಠಣಿಯನು ತೊಡಿಸಿ (ಜಿನರಾ. ೯-೫೨). **ಕಮ್ಮರುಬಂದು** : ಸವಾರರು ಬೂಟುಗಳನ್ನು ಹಾಕಿಕೊಂಡಿರುವಂತೆ ತೋರುತ್ತದೆ. ಕೆಲವು ನಿಲುವಂಗಿಯನ್ನೂ ಕಮ್ಮರುಬಂದನ್ನೂ ಧರಿಸಿವೆ (ಮೈವಾಸ್ತು. ೧೦೯). [← ಮರಾ. ಪಾರ. ಕಮರ್‌ಬಂದ್]

**ಕಮರಾಕ್ಷಿ** (ನಾ). ೧. ಕಮರಕ : ಕಮರಕ್‌ಮರ, ಕಮರಾಕ್ಷಿ, ದಾರೆ ಹುಳಿ (ಮೈಔಗಿ. ೧೧-೧೮೪). ೨. ಒಂದು ಬಗೆಯ ಹಣ್ಣು. [?. / ಹಿಂ. ಕಮರಖೀ]

**ಕಮರಿ** 'ಕಮ್ಮರಿ$_1$' ನೋ.

**ಕಮರಿಕೆ$_1$** (ನಾ). ಕಮರು ಆಗುವಿಕೆ ; ಸುಟ್ಟುಹೋಗುವಿಕೆ ; ಕನರು ಏಳುವಿಕೆ (ಕ). [ಕಮರ್ು$_2$ (< ಕಮಱು$_2$) + -ಇಕೆ]

**ಕಮರಿಕೆ$_2$** (ನಾ). ಒಂದು ಬಗೆಯ ಹಣ್ಣಿನ ಗಿಡ ; ಕರಮರ್ದಕ : "ಕೃಷ್ಣಪಾಕಫಲಃ, ಅವಿಗ್ನಃ, ಸುಷೇಣಃ, ಕರಮರ್ದಕಃ – ೪ ಕಮರಿಕೆ ಹಣ್ಣಿನ ಗಿಡ" (ಸಿದ್ಧಾಂತಿ. ೧೧೧). [?]

**ಕಮರಿಬಂದ** 'ಕಮರಬಂದ' ನೋ.

**ಕಮರಿಸು** (ಕ್ರಿ). ಬಾಡುವಂತೆ ಮಾಡು ; ಬತ್ತಿಸು ; ಕಂದಿಸು ; ಒಣಗಿಸು ; (ಅಡಿಗೆಯನ್ನು) ತಳಹತ್ತಿಸು ; ಅಡಿಹಿಡಿಸು : ಜೀವನದ ಪ್ರಬಲಹೋರಾಟವು ಸಾಹಿತ್ಯರಚನೆಯ ಒಲವನ್ನು ಕಮರಿಸುವದೆಂಬುದು ಒಂದು ದೃಷ್ಟಿ (ಕರ್ನಾಕ. ೩೫೬) ; ತಟ್ಟನೆ ಉತ್ಸಾಹವನ್ನು ಕಮರಿಸಿಕೊಳ್ಳುವುದಕ್ಕೆ ಹೆಗಡೆಯ ಕೆಚ್ಚು ಬಿಡಲಿಲ್ಲ (ದೇವಹೆಂ. ೧೮೪) ; ಅಪಮಾನ . . . ಅವನ ಮೋರೆಯ ಉತ್ಸಾಹವನ್ನು ಕಮರಿಸಿತು (ಬಾಬಲ. ೩೬). [ಕಮರು$_1$ (< ಕಮಱು$_1$) + -ಇಸು$_3$]

**ಕಮರು$_1$** 'ಕಮಱು$_1$' ನೋ.

**ಕಮರು$_2$** 'ಕಮಱು$_2$' ನೋ.

**ಕಮರುತೇಗು** 'ಕಮಱುದೇಗು$_2$' ನೋ.

**ಕಮರುಬೀಳು** (ಕ್ರಿ). (ಹುಲ್ಲು ಮೊದಲಾದುವುಗಳಂತೆ) ಸುಟ್ಟು ಹೋಗು ; ಸೀದುಹೋಗು (ಕ). [ಕಮರು$_2$ (< ಕಮಱು$_2$) + ಬೀಳು$_1$ (< ಬೀೞ್$_1$)]

**ಕಮಲ, ಕಮಳ** (ನಾ). ೧. ತಾವರೆ. ೨. ನೀಲೋತ್ಪಲ ; ಕನ್ನೆಯ್ದಿಲೆ. ೩. ನೀರು. ೪. ಕಿರಣ. ೫. ಚಂದ್ರ. ೬. ಒಂದು ಬಗೆಯ ಜಿಂಕೆ ; ಎರಳೆ. ೭. ಹಾವಸೆ. ೮. [ಛಂದ] ಪ್ರತಿಪಾದದಲ್ಲಿ ಏಳು ಅಕ್ಷರಗಳುಳ್ಳ ಒಂದು ವೃತ್ತದ ಹೆಸರು : ಭದ್ವಯುಗಂ ಕಮಲಂ (ಛಂದ. ೭೯).

೯. [ಜ್ಯೋತಿ] ಏಳು ಗ್ರಹಗಳೂ ನಾಲ್ಕು ಕೇಂದ್ರಗಳಲ್ಲಿದ್ದರೆ ಆಗುವ ಯೋಗ. 'ಕಮಲೋದ್ಭವ' ಪರ್ಯಾ. "ತಾವರೆಗೆ ಜಲಕೆ ಚಂದ್ರಗೆ ಶ್ರೀವಧುವಿಗೆ ನೈದಿಲಿಂಗೆ ಮೃಗನಾಮಕ್ಕುಂ ಹಾವಸೆಗೆ ಕಿರಣ ತತಿಗುಂ ತೀವಿದ ಬಳಿಕೆಂಟು ನಾಮ ಕಮಲಮೆನಿಕ್ಕುಂ" (ನಾನಾಕಂ. ೧೧); "ಕಮಲ ಜಲೋತ್ಪಲಾಂಶು ಮೃಗ ಪಾಚಸೆ ಗೋಮಿನಿ ಚಂದ್ರರೆಂದಿವುಂ ಕಮಲಮೆನಿಕ್ಕು" (ನಾ ನಾ ರ. ೩೦). **ಕಮಳ**: ೧. "ಕಮಲ ಶಬ್ದಕ್ಕೆ ಕಮಳಮಂತು ಸಂಸ್ಕೃತಂ" (ಶಂಜೀವ. ೩೧). [ಸಂ.]

**ಕಮಲಕುಲೋದ್ಭವ** (ನಾ). ಕಮಲದ ಮನೆಯಲ್ಲಿ ಹುಟ್ಟಿದವನು; ವಿಷ್ಣುವಿನ ನಾಭಿಕಮಲದಿಂದ ಜನಿಸಿದವನು; ಬ್ರಹ್ಮ: ಕಮಲಕುಲೋದ್ಭವ ಮಿಗೆ ವಿಷ್ಣುಮೂರ್ತಿ ರುದ್ರಾವತಾರನಿಜಾವಬೆಡಂಗಂ (ಗದಾಯು. ೧–೧೪). [ಕಮಲ + ಕುಲ + ಉದ್ಭವ]

**ಕಮಲಗಂಧಿ** (ನಾ). ಕಮಲದ ಹೂವಿನಂತೆ ಸುಗಂಧವುಳ್ಳವಳು; ಪದ್ಮಿನೀಜಾತಿ ಸ್ತ್ರೀ (ಕ). [ಸಂ. (ಕಮಲ + ಗಂಧ + –)]

**ಕಮಲಗರ್ಭ** (ನಾ). ಕಮಲದಲ್ಲಿ ಜನ್ಮತಾಳಿದವನು; ಬ್ರಹ್ಮ: ಕಮಲಗರ್ಭಂ ಗರ್ವಿಸಿದೊಡಂ ಪ್ರಮಥನಾಥನು ಮುನ್ನವನ ಪಂಚಮ ಶಿರವನಾಗ್ರಹಿಸುತಾಗ್ರಹಿಸುತಾಗಳೆ ಚಿವುಟಿ ಬಿಸುಟಿದನು (ಬಸಪು. ೫೪–೪೮). [ಕಮಲ + ಗರ್ಭ]

**ಕಮಲಜ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಕಮಲಜಂ ನೀಲದಿಂದ ಮಾಡಿದ ಸಾಲಭಂಜಿಕೆಗಳೊದವಿ ಜೀವಂದಳೆದವೋ ಎನಿಪ್ಪಂದದಿಂ ಬಂದರಂಗನೆಯರವನೀಶನೆಡೆಗೆ (ಹಚಕಾ. ೬–೪); ಮಾರ್ಗಣದ ಮೊದಲೊಳಾವಾಹನಂಗೈದು ಕಮಲಜನಂ ನಿಲಿಸಿ (ಜೈಮಿಭಾ. ೧೩–೪೨). [ಸಂ.]

**ಕಮಲಜಾಂಡ** (ನಾ). ಬ್ರಹ್ಮಾಂಡ; ವಿಶ್ವ: ಧಾಳಿಡುವ ಸೆಗಳಿಯಲಿ ತಳಪಾತಾಳಕದ್ದುದು ಕಮಲಜಾಂಡದ ಮೇಲಣಾವರಣಾಂಬು ಕುದಿದುದು (ಕುವ್ಯಾದ್ರೋ. ೧೯–೧೯); ನಿರುತ ಷಟ್ಪದಿಯಾದುವಿವು ಕಮಲಜಾಂಡದೊಳ್ ಪರಿಕಲಿಸಿ ಪಸರಿಸುಗೆ (ಭಾವಚಿಂ. ೧–೫). [ಕಮಲಜ + ಅಂಡ]

**ಕಮಲನಾಭ** (ನಾ). ಹೊಕ್ಕುಳಲ್ಲಿ ಕಮಲವುಳ್ಳವನು; ವಿಷ್ಣು: ಕಮಲನಾಭಂ ಕರುಣರಸಾರ್ದ್ರಹೃದಯನಾಗಿ (ಜಗವಿ. ೩–೫ ವ). [ಸಂ. (ಕಮಲ + ನಾಭ + –)]

**ಕಮಲಬಾಂಧವ** (ನಾ). = ಕಮಲಮಿತ್ರ: ಕನಕಕಮಲಗಳಿಂದ ಕಮಲಬಾಂಧವನಿಗೆ ಅರ್ಘ್ಯವನ್ನಿತ್ತನು (ಭಾಮಣಿ. ೨೩). [ಕಮಲ + ಬಾಂಧವ]

**ಕಮಲಭವ, ಕಮಳಭವ** (ನಾ). = ಕಮಲಜ: ಕಮಲಭವಂ ಮೊದಲೊಳ್ ಮಾತಂಗಿಯೆಂದು ತಾಂ ಮುಟ್ಟದೆ ಮಾಡಿದನಕ್ಕುಂ (ಕಾದಂಪೂ. ೫೧); ಕಮಲಭವಾದ್ಯರುಂ ಪಡೆವರೇ ಹರಿಪಾದ ರಜೋಲವ ಪ್ರಸಾದಮಂ (ಜಗವಿ. ೩–೪೨). **ಕಮಳಭವ**: ಕಮಳಭವಂಗಿಕ್ಕುವಮಳ ಚಮರರುಹಂಗಳ್ (ಜಗವಿ. ೧–೩೮). [ಸಂ.]

**ಕಮಲಮನೋಹರಿ** (ನಾ). [ಸಂಗೀತ] ಕರ್ಣಾಟಕ ಸಂಗೀತದಲ್ಲಿ ಒಂದು ರಾಗದ ಹೆಸರು: ಕಮಲಮನೋಹರಿರಾಗದ 'ಕಂಜದಳಾಯತಾಕ್ಷಿ'; ಗರುಡಧ್ವನಿರಾಗದ 'ಆನಂದ ಸಾಗರಮಿ', – ಈ ಕೆಲವು ಕೃತಿಗಳನ್ನು ಮಾತ್ರ ಅವರು ತಮ್ಮ ಕಚೇರಿಗಳಲ್ಲಿ ಹಾಡುತ್ತಿದ್ದರು (ಸಂಗೀತ. ೫). [ಕಮಲ + ಮನೋಹರಿ]

**ಕಮಲಮಿತ್ರ** (ನಾ). ಕಮಲಗಳ ಸ್ನೇಹಿತ; ಸೂರ್ಯ: "ಬೆಂಗದಿರಂ ಕಮಲಮಿತ್ರಂ" (ಚತುನಿ. I, ೧೮). [ಕಮಲ + ಮಿತ್ರ]

**ಕಮಲವೈರಿ** (ನಾ). ಕಮಲಗಳ ಶತ್ರು; ಚಂದ್ರ (ಕ). [ಕಮಲ + ವೈರಿ]

**ಕಮಲಷಂಡ** (ನಾ). ಕಮಲಗಳ ಸಮೂಹ: ಸಲ್ಲಲಿತ ಮೃದು ಮೃಣಾಳದಂಡಂಗಳೆನಿಪ ಕಮಲಷಂಡಂಗಳುಂ (ಪುಷ್ಪಪು. ೯–೨೨ ವ). [ಕಮಲ + ಷಂಡ]

**ಕಮಲಸಂಭವ** (ನಾ). = ಕಮಲಜ: ಸತ್ಯಲೋಕವನಾಳ್ದರಿಪ್ಪತ್ತು ಕಮಲಸಂಭವರು (ಜೈಮಿಭಾ. ೩೨–೩೧). [ಕಮಲ + ಸಂಭವ]

**ಕಮಲಸಖ** (ನಾ). = ಕಮಲಮಿತ್ರ: ಕಮಲಸಖನುದಯದಲಿ ಸಂಧ್ಯಾರಮಣಿಯಭಿವಂದನೆಗೆ ಸನ್ಮುನಿ ಸಮಿತಿ ಹಿಂಗಿದ ಹಿಂದೆ ಕೊಂಡೋಡಿತು ವನಾಂತರಕೆ (ಕುವ್ಯಾಅ. ೨೩–೫). [ಕಮಲ + ಸಖ]

**ಕಮಲಾಂಬಕ, ಕಮಳಾಂಬಕ** (ನಾ). ಕಮಲದಂತೆ ಕಣ್ಣುಳ್ಳವನು; ವಿಷ್ಣು; ಕೃಷ್ಣ: ಕಮಲಾಂಬಕಂ ಪವಮಾನನಂದನನ ಮೊಗನೋಡುತಿಂತೆಂದನು (ಜೈಮಿಭಾ. ೩೩–೧೪); ಕೇಶವ ಕೇಶಿಸೂದನ ಕಮಲಾಂಬಕ ಕ್ಲೇಶನಿವಾರಣ (ಅಕ್ಷಸಾಂ. ೬೧–೨). **ಕಮಳಾಂಬಕ**: ವಿಧಿ ಕಮಳಾಂಬಕ ಶತಮುಖಮುಖಾವನತಪದ (ಶಬಶಂ. ೪–೧೦೨). [ಕಮಲ + ಅಂಬಕ]

**ಕಮಲಾಕರ, ಕಮಳಾಕರ** (ನಾ). ೧. ಕಮಲಗಳ ನೆಲೆ, — ಉತ್ಪತ್ತಿಸ್ಥಾನ, — ಸರೋವರ: ಸಮರಾಕರಮಂ ಬಿಸುಟ್ಟು ಕಮಲಾಕರಮಂ ಪೊಕ್ಕಲವೊ ಮರುಳೆ ಬದರ್ಕಲ್ ಬಗೆವ (ಗದಾಯು. ೬–೧೨). ೨. ಕಮಲಗಳ ಸಮೂಹ; ತಾವರೆಗಳ ಗುಂಪು: ಕಮಲಾಕರದೊಳ್ ಸಂಕೋಚಮನಬಿಲಂ ಚಕ್ರವಾಕದೊಳ್ ಮಾಡದು ನಿನ್ನ ಮುಖೇಂದುಬಿಂಬಂ ಇಂದುಗೆ ಸಮನೆಂಬುದು ಮಿಗೆ ವಿರುದ್ಧರೂಪಕಮಕ್ಕುಂ (ಕವಿರಾ. ೩–೧೯). ೩. ಸೂರ್ಯ. ೪. ಚಂದ್ರ. ೩, ೪: ಕಮಲಾಕರನೆಯ್ದಲೊಡಂ ಕಮಲಾಕರನೆಯ್ದಲಾಗಿ ಕುಮುದಂ ಕುಮುದಂ ಕಮಲಾಳಿಗೆ ಕಮಲಾಳಿಗೆ ಸುಮದಂ ಸುಮದಂ ಹಾರಿತಪಕ್ಷಿಗೆ ಕೋರ್ಕುಂ (ಹಮ್ಮೀರ. ೩–೧೮). ☞ ಚಂದ್ರ, ಸೂರ್ಯಾರ್ಥಗಳು ಸಂಸ್ಕೃತ ಕೋಶಗಳಲ್ಲಿ ಇಲ್ಲ. **ಕಮಳಾಕರ**: ೧ ಮುನಿಕುಮಾರರೀರ್ವರ್ ಬರುತ್ತಮಿರೆ. [ಬಹುವಿದ್ಯಂ] ಕಮಳಾಕರಮಂ ಮಿಾಯಲ್ಕುಮರಂ ಬಂದಂ (ಕಾದಂಪೂ. ೨೦೦). ೨. ಸೊಗಯಿಸುವಾತ್ಮಕೇಳಿಕಮಳಾಕರಮಂ ನಗುವಬ್ಜಷಂಡವಂ . . . ಗಜಪತಿವೆರಸಿಂತು ಕನಸು ಪದಿನಾಱುಮನಂ ಬುಜವದನೆ ಕಂಡಳ್ (ಪುಷ್ಪಪು. ೯–೧೦೦, ೧೦೧). [ಕಮಲ + ಆಕರ]

**ಕಮಲಾಕ್ಷ, ಕಮಳಾಕ್ಷ** (ನಾ). ೧. ಕಮಲದ ಬೀಜ. ☞ ಇದನ್ನು ಜಪಸರದ ಮಣಿಯಾಗಿ ಬಳಸಲಾಗುತ್ತದೆ. ೨. ಕಮಲದಂತೆ ಕಣ್ಣುಳ್ಳವನು; ವಿಷ್ಣು; ಕೃಷ್ಣ. **ಕಮಳಾಕ್ಷ**: ೨. ಗೋಪಿ ಬಂದು . . . ತತ್ಕಮಳಾಕ್ಷನನೆತ್ತಿಕೊಂಡು (ಜಗವಿ. ೩–೩೧). [ಸಂ. (ಕಮಲ + ಅಕ್ಷಿ + –)]

**ಕಮಲಾಕ್ಷಿ** (ನಾ). ಕಮಲದಂತೆ ಕಣ್ಣುಳ್ಳವಳು; ಚೆಲುವೆ: ಗಲ್ಲಂಬಿಡಿದು ಕಮಲಾಕ್ಷಿಯಂ ಮುದ್ದುಗೈದು ಬೀಳ್ಕೊಳ್ವಿನಂ (ಜೈಮಿಭಾ. ೧೧–೧೫). [ಸಂ. ಕಮಲಾಕ್ಷೀ (ಕಮಲಾಕ್ಷ + –)]

**ಕಮಲಾಗಾರ** (ನಾ). ೧. ಕಮಲಗಳಿಗೆ ಆಗರವಾದದ್ದು; ಸರೋವರ. ೨. ಲಕ್ಷ್ಮಿಗೆ ನೆಲೆಯಾದವನು; ವಕ್ಷಸ್ಥಲದಲ್ಲಿ ಲಕ್ಷ್ಮೀದೇವಿಯನ್ನು ಧರಿಸಿಕೊಂಡವನು; ವಿಷ್ಣು: ಜಗದಾಧಾರ ಲಸದಾಚಾರ ಕಮಲಾಗಾರ . . . ಮುರಹರ ಸಲಹಬೇಕೆಂದ (ಕುವ್ಯಾಭೀ. ೩–೮೬). [ಸಂ. (ಕಮಲ + ಆಗಾರ; ಕಮಲಾ + ಆಗಾರ)]

**ಕಮಲಾಗ್ನಿ** (ನಾ). ಕಮಲಾಕಾರದಲ್ಲಿ ಉರಿಯುವ ಬೆಂಕಿ (?): ಬಿಲ್ವಪತ್ರೆಬೇರ ಮೇಲಣ ತೊಕ್ಕ ತೆಗೆದು . . . ಎಂಟು ಕೊಳಗ ನೀರಿನಲ್ಲಿ ನೆನೆಯ ಹಾಕಿ ಮೂರುದಿನದಮೇಲೆ ಕಮಲಾಗ್ನಿಯಿಂದ ಅಷ್ಟಾವಶೇಷವಾಗಿ ಕಷಾಯ ಕಾಯಿಸಿ (ಸಕವೈ. ೧೩೬). [ಕಮಲ + ಅಗ್ನಿ]

**ಕಮಲಾನನೆ,** ಕಮಳಾನನೆ (ನಾ). ಕಮಲದಂತೆ ಮುಖವುಳ್ಳವಳು: ತನ್ನಯ ಜೀವನವನುಳುಹೆನುತ ಕಮಲಾನನೆಗೆ ಕೈಮುಗಿದ (ಕು ವ್ಯಾ ವಿ. ೨-೨೭). **ಕಮಳಾನನೆ**: ಕಳಸಂಗಳ ಜಲಮಂ ಸುರಿದರಮುಳಕಮಳಾನನೆಯರ್ (ಕಾದಂಪೂ. ೬೩).
[ಸಂ. ಕಮಲಾನನಾ (ಕಮಲ + ಆನನ + –)]

**ಕಮಲಾಪ್ತ,** ಕಮಳಾಪ್ತ (ನಾ). = ಕಮಲಮಿತ್ರ: ಬನಗಳ್ತಲೆಯುಂ ಕಮಲಾ[ಪಾಠಾಂ. ಳಾ]ಪ್ತನ ಕದಿರುಂ ಕಾದಿ ಮಡಿವುತಳಿಯುಂ ಚಾಂಪೇಯನಿಕಾಯಮಾದುವು (ರಾಜಶೇ. ೨-೫೪). **ಕಮಳಾಪ್ತ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕಮಲ + ಆಪ್ತ]

**ಕಮಲಾಯತಾಂಬಕ** (ನಾ). ಕಮಲದಂತೆ ವಿಶಾಲವಾದ ಕಣ್ಣುಳ್ಳವನು; ಕೃಷ್ಣ: ನಾರಾಯಣಾಸ್ತ್ರದ ಬಾಧೆಯನು ಕಮಲಾಯತಾಂಬಕ ನಿಲಿಸಿ ಸಂತೈಸಿದನು ಪಾಂಡವರ (ಕುವ್ಯಾದ್ರೋ. ೧೯ ಸೂಚನೆ).
[ಕಮಲ + ಆಯತ + ಅಂಬಕ]

**ಕಮಲಾರಿ** (ನಾ). ಚಂದ್ರ: ವನಿತೆಯೊಳು ಕಮಲಾರಿಯಿದ್ದನು ಕನಕಮನ್ಮಥನೆಡೆಯೊಳಿದ್ದನು ಧನುವಿನೊಳಗಿನತನುಜನಿದ್ದನು ಭಗಣಚಕ್ರದಲಿ (ಕೌಶಿರಾ. ೧೩-೪೮). [ಕಮಲ + ಅರಿ$_6$]

**ಕಮಲಾಲಯೆ** (ನಾ). ಕಮಲವೇ ಮನೆಯಾಗಿರುವವಳು; ಲಕ್ಷ್ಮಿ.
[ಸಂ. ಕಮಲಾಲಯಾ (ಕಮಲ + ಆಲಯ + –)]

**ಕಮಲಾವಸಥ,** ಕಮಳಾವಸಥ (ನಾ). ೧. ಲಕ್ಷ್ಮಿಯ ವಾಸಸ್ಥಾನ, —ಮನೆ. ೨. ಕಮಲವೇ ವಾಸಸ್ಥಾನವಾಗಿ ಉಳ್ಳವನು; ಬ್ರಹ್ಮ. ೩. ಲಕ್ಷ್ಮಿಗೆ ವಾಸಸ್ಥಾನನಾದವನು; ಲಕ್ಷ್ಮೀಸಮೇತನಾದವನು; ವಿಷ್ಣು. **ಕಮಳಾವಸಥ.** ೨, ೩: ಜನನುತ ರಾಜಹಂಸನಯನಂ ಕಮಳಾವಸಥಂ . . . ಚತುರ್ಮುಖನೀಗೆ ರಾಗಮಂ (ಜಗವಿ. ೧-೨).
[ಸಂ. (ಕಮಲ + ಅವಸಥ; ಕಮಲಾ + ಅವಸಥ)]

**ಕಮಲಾಸನ,** ಕಮಳಾಸನ (ನಾ). ೧. ವಿಷ್ಣುವಿನ ನಾಭಿಯ ಕಮಲವೇ ಆಸನವಾಗಿ ಉಳ್ಳವನು; ಬ್ರಹ್ಮ: ಕೈಕಸಿಯಣುಗಂ ಕಣ್ಣೆತ್ತಿ ಕಮಲಾಸನನಂಗೆ ಕಾಲ್ಗೆರಗಿ ಕೈಜೋಡಿಸಿ ಕಡೆಗೆಂದಂ (ಅದ್ಭುತ. ೨೯-೭). ೨. ಯೋಗಾಭ್ಯಾಸದಲ್ಲಿ ಒಂದು ಆಸನ; ಪದ್ಮಾಸನ. **ಕಮಳಾಸನ**: ೧. ಕಂದೆಱೆದು ಕಮಳಾಸನನಂಗೆಱಗಿದರು ಭಕ್ತಿಯಲಿ (ಕುವ್ಯಾಕ. ೬-೩). [ಕಮಲ + ಆಸನ]

**ಕಮಲಾಸನೆ** (ನಾ). ಕಮಲವನ್ನೇ ಪೀಠವಾಗಿ ಉಳ್ಳವಳು; ಲಕ್ಷ್ಮಿ: ಅವಳು ಕಮಲಾಸನೆ ಎಂಬ ವಿಶೇಷತೆ ಬಂದದ್ದು ಈಚೆಗೆ (ಸೌಂದಸ. ೪೪). [ಸಂ. ಕಮಲಾಸನಾ (ಕಮಲ + ಆಸನ + –)]

**ಕಮಲಾಹಣ್ಣು** (ನಾ). ಒಂದು ಬಗೆಯ ಕಿತ್ತಳೆಹಣ್ಣು (?) (ಪ್ಯೆಶಿಗ. ೨೨-೪೦೪). [ಕಮಲಾ$_0$ + ಹಣ್ಣು$_3$ (< ಪಣ್$_2$)]

**ಕಮಲಾಳಿ** (ನಾ). ೧. ಕಮಲಗಳ ಸಮೂಹ. ೨. ಕಮಲದಲ್ಲಿ ಇರುವ ತುಂಬಿ. ೧, ೨: ಕಮಲಾಕರನೆಯ್ದಲೊಡಂ ಕಮಲಾಕರನೆಯ್ದಲಾಗಿ ಕುಮುದಂ ಕುಮುದಂ ಕಮಲಾಳಿಗೆ ಕಮಲಾಳಿಗೆ ಸುಮುದಂ ಸುಮುದಂ ಹಾರಿತ ಪಕ್ಷಿಗೆ ತೋರ್ಕುಂ (ಹವಿಮ್ಮರ. ೩-೧೮).
[ಕಮಲ + ಅಳಿ$_4$ (= ಆಲಿ$_4$); ಕಮಲ + ಅಳಿ$_5$ (= ಆಲಿ$_2$)]

**ಕಮಲಿನಿ,** ಕಮಳನಿ (ನಾ). ೧. ತಾವರೆಯ ಬಳ್ಳಿ: ಕಮಲಿನಿಗೆ ಕಮಲಬಂಧುಗೆ ಕುಮುದಿನಿಗಾ ಕುಮುದಿನೀಶ್ವರಂಗೆಂತೀಗಳ್ ತಮಗಂತಿರ್ಪಡೆಗಳ್ ದೂರಮಾದೊಡಂ ಪ್ರೀತಿ ಮಾಣದಾಕಲ್ಪಾಂತಂ (ಕಾದಂಉ. ೧೭೫). ೨. ಕಮಲಗಳ ಸಮೂಹ. ೩. ಕಮಲಗಳಿಂದ ತುಂಬಿದ ಪ್ರದೇಶ. ೪. ಕಮಲಗಳಿಂದ ತುಂಬಿದ ಕೊಳ, —ಸರೋವರ: ಆರಣ್ಯಕಮಲಿನಿಯಂತೆ ಮಾತಂಗ ಕುಲದೂಷಿತೆಯಂ (ಕಾದಂಪೂ. ೪೯).

**ಕಮಳಿನಿ**: ೧. ತದಗ್ರಕಲ್ಲೋಲಸಮಾಕ್ರಮಿತಾಬ್ಜಪತ್ರಮಾಳ್ದುದು ಕಮಳಿನಿ ತೊಟ್ಟಿರ್ದ ಹರಿತ ಕಂಚುಕದಿರವಂ (ಶಬಶಂ. ೨-೫೭); ಕಮಳಿನಿಯಂ ವಿಯೋಗಿನಿಯನೀಕ್ಷಿಸಿ . . . ನಿವೇದಿಸೆಂದಮೃತಮರೀಚಿ ಪೇೞ್ದು (ಪುಷ್ಪಪು. ೮-೯೮); ಕಮಳಕಾಮುಕನಂ ಕಂಡ ಕಮಳಿನಿಯಂತೆ ಮೊಗಮಲರ್ದು (ರಾಜಶೇ. ೧೧-೧೪೦ ವ). [ಸಂ. ಕಮಲಿನೀ]

**ಕಮಲೆ,** ಕಮಳೆ (ನಾ). ಲಕ್ಷ್ಮಿ: ಕಮಲೆಯೆನಿನ್ನೆಗಂ ಕುರುಮಹೀಪತಿಯೊಳ್ ನೆಲಸಿರ್ದಳ್ (ಗದಾಯು. ೯-೪). **ಕಮಳೆ**: "ಗೋಮಿನಿ ಲಕ್ಷ್ಮಿ ಪದ್ಮಮಂದಿರೆಯಾ ಹರಿಪ್ರಿಯೆ ಶ್ರೀ ಕಮಳೆಯಮಳೆ . . . ಸಿರಿಗಳ್ಕು ನಾಮಂ" (ಮಂಗರಾ. ೬-೧೮); ಅಂತಃಪುರಕಮಳದೊಳ್ ಕಮಳೆಯಂತೆ ಕಮನೀಯತೆಯನಪ್ಪುಕೆಯ್ದು (ರಾಜಶೇ. ೩-೧೧ ವ).
[ಸಂ. ಕಮಲಾ]

**ಕಮಲೇಕ್ಷಣ** (ನಾ). = ಕಮಲಾಕ್ಷ: ನೀರಜೋತ್ಪಲವರ್ಣನಾಡಿದನಾಡಿದಂ ಕಮಲೇಕ್ಷಣಂ (ಜಗವಿ. ೩-೫೩). [ಕಮಲ + ಈಕ್ಷಣ]

**ಕಮಲೇಶ** (ನಾ). ಕಮಲೆಯ ಪತಿ; ಲಕ್ಷ್ಮೀವಲ್ಲಭ; ವಿಷ್ಣು (ಶ).
[ಸಂ. (ಕಮಲಾ + ಈಶ)]

**ಕಮಲೋತ್ತರ** (ನಾ). ಕುಸುಬೆ ಗಿಡ (ಶ). [ಸಂ.]

**ಕಮಲೋತ್ಸವಕಾರಿ** (ಗು). ೧. ತಾವರೆಗಳಿಗೆ ಹಬ್ಬವನ್ನುಂಟುಮಾಡುವ; ತಾವರೆಗಳಿಗೆ ವೃದ್ಧಿಯನ್ನೊದಗಿಸುವ. (ನಾ). ೨. ಲಕ್ಷ್ಮಿಗೆ ಸಂತೋಷವನ್ನು ಉಂಟುಮಾಡುವವನು; ವಿಷ್ಣು. ೧, ೨: ಆ ಘನಸಮಯ . . . ವಿಧೃತಮದನಜನಕತ್ವಮಾಗಿಯುಂ ಕಮಲೋತ್ಸವಕಾರಿಯಲ್ತು (ಚಂದ್ರಪು. ೪-೮೨ ವ). ೩. ಕಮಲಗಳಿಗೆ ಹರ್ಷವನ್ನು ಉಂಟುಮಾಡುವವನು; ಸೂರ್ಯ.
[ಸಂ. ಕಮಲೋತ್ಸವಕಾರಿನ್ (ಕಮಲ + ಉತ್ಸವಕಾರಿನ್; ಕಮಲಾ + ಉತ್ಸವಕಾರಿನ್)]

**ಕಮಲೋದಯ** (ನಾ). ೧. ವಿಷ್ಣುವಿನ ನಾಭಿಕಮಲದಲ್ಲಿ ಜನ್ಮತಾಳಿದವನು; ಬ್ರಹ್ಮ. ೨. ಕಮಲೆಯ, ಎಂದರೆ ಲಕ್ಷ್ಮಿಯ (ಸಂಪತ್ತಿನ) ಉದಯಕ್ಕೆ ಕಾರಣನಾದವನು. ೧, ೨: ಕಮಲೋದಯನಖಿಲಮಹೀರಮಣನುಮಾಪ್ರಿಯನೆನಿಪ್ಪ ಗುಣದುನ್ನತಿಯಿಂ . . . ಇಱಿವಬೆಡಂಗಂ (ಗದಾಯು. ೧-೧೪).
[ಸಂ. ಕಮಲ + ಉದಯ; ಕಮಲಾ + ಉದಯ]

**ಕಮಲೋದರ** (ನಾ). ಹೊಟ್ಟೆಯಲ್ಲಿ ಕಮಲವುಳ್ಳವನು; ಕಮಲನಾಭ; ವಿಷ್ಣು: ಕಮಲೋದರನು ಕೈಕೊಂಡನಗ್ಗದನಾದಿಪುರುಷ ಶ್ರೀ ನಿಜವ ವಿಶ್ವಾತ್ಮಕಾಕೃತಿಯ (ಕುವ್ಯಾಭೀ. ೩-೬೪).
[ಕಮಲ + ಉದರ]

**ಕಮಲೋದ್ಭವ** (ನಾ). ೧. = ಕಮಲೋದಯ ೧. ೨. [ಜ್ಯೋತಿ] ಕಮಲವೆಂಬ ಯೋಗದಲ್ಲಿ ಹುಟ್ಟಿದವನು: ಕಮಲೋದ್ಭವಂ ಸಧನನಕ್ಕುಂ (ಜಾತತಿ. ೧೩-೧೭). [ಕಮಲ + ಉದ್ಭವ]

**ಕಮಳ** 'ಕಮಲ' ನೋ.

**ಕಮಳಕಾಮುಕ** (ನಾ). ಕಮಲಗಳಿಗೆ ಪ್ರಿಯನಾದವನು; ಸೂರ್ಯ: ಕಮಳಕಾಮುಕನಂ ಕಂಡ ಕಮಳಿನಿಯಂತೆ ಮೊಗಮಲರ್ದು (ರಾಜಶೇ. ೧೧-೧೪೦ ವ). [ಕಮಳ (= ಕಮಲ) + ಕಾಮುಕ]

**ಕಮಳದಳಕೊಡತಿ** (ನಾ). ಒಂದು ಬಗೆಯ ಕೊಡತಿ; ಕಮಲದಳದ ಆಕಾರವಾಗಿರುವ ಕೊಡತಿ: ಅಗಿವ ಬಡಿಗೆಯನಂಕುಶದ ಕಟ್ಟೆಗೆಯ ಧಾರೆಯ ಕಮಳದಳಕೊಡತಿಗಳ ಕೈಹಾರೆಗಳನಳವಡಿಸಿದರು ವಹಿಲದಲಿ (ಕುವ್ಯಾದ್ರೋ. ೩-೩).
[ಕಮಳ (= ಕಮಲ) + ದಳ (= ದಲ) + ಕೊಡತಿ]

**ಕಮುಳಬಂಧು** (ನಾ). ಕಮಲದ ಸ್ನೇಹಿತ; ಸೂರ್ಯ: ನಡುವಗಲ ಬಿಸಿಲ್ ತನ್ನಂ ಸುಡೆ ವನಕರಿ ಕಮಳಬಂಧುವೊಳ್ ದಿನಕರನೊಳ್ ಕಡು ಗಾಯ್ಪನೆ ಸರಸಿಜಮಂ ಕಿಡಿಸಲ್ ತಾಂ ಪೊಕ್ಕುದಾಗ ಬಗೆಗಾ ಕೊಳನಂ (ಕವಿರಾ. ೩–೧೧೫). [ಕಮುಳ (= ಕಮಲ) + ಬಂಧು]

**ಕಮುಳಭವ** 'ಕಮಲಭವ' ನೋ.

**ಕಮುಳಾಂಬಕ** 'ಕಮಲಾಂಬಕ' ನೋ.

**ಕಮುಳಾಕರ** 'ಕಮಲಾಕರ' ನೋ.

**ಕಮುಳಾಕರಬಾಂಧವ** (ನಾ). = ಕಮುಳಬಂಧು: ಕನಕಕಮುಳಂಗಳಿಂ ಕಮುಳಾಕರಬಾಂಧವಂಗರ್ಘ್ಯಮೆತ್ತಿ (ಪಂಪಭಾ. ೧೨–೧೦೮ ವ). [ಕಮುಳಾಕರ (= ಕಮಲಾಕರ) + ಬಾಂಧವ]

**ಕಮುಳಾಕ್ಷ** 'ಕಮಲಾಕ್ಷ' ನೋ.

**ಕಮುಳಾನನೆ** 'ಕಮಲಾನನೆ' ನೋ.

**ಕಮುಳಾಪ್ತ** 'ಕಮಲಾಪ್ತ' ನೋ.

**ಕಮುಳಾರ್ಥಿ** (ನಾ). ೧. ಕಮಲವನ್ನು ಬಯಸುವಂತಹದು. ೨. ಕಮಲೆಯನ್ನು (ಸಂಪತ್ತನ್ನು) ಬಯಸುವಂತಹದು. ೧, ೨: ಕಮುಳಾರ್ಥಿ ಮಂದಭಾವಂ ಕುಮುದಾತ್ತಮಪಾಯಗಮನ ಮೋಚನ ಚತುರಂ ಭ್ರಮರಹಿತಂ ವೈಭಾತಿಕಸಮೀರನೆನಸಗಿದುದು ಪೋಲ್ತು ಸುವಿಧಿಯ ಬಗೆಯಂ (ಪುಷ್ಪವು. ೧೩–೫೮).

[ಸಂ. ಕಮಲಾರ್ಥಿನ್ (ಕಮಲ+ಅರ್ಥಿನ್; ಕಮಲಾ+ಅರ್ಥಿನ್)]

**ಕಮುಳಾವಸಥ** 'ಕಮಲಾವಸಥ' ನೋ.

**ಕಮುಳಾಶ್ರಯ** (ನಾ). ೧. (ಒಂದು ಜಾತಿಯ) ಜಿಂಕೆಗಳಿಗೆ ನೆಲೆ, —ವಾಸಸ್ಥಾನ. ೨. ಕಮಲೆಗೆ (ಸಂಪತ್ತಿಗೆ) ಆಶ್ರಯ, —ಆಧಾರವಾದವನು. ೩. ತಾವರೆಗೆ ಆಸರೆಯಾದವನು; ಕಮಲಬಾಂಧವ. ೧, ೨, ೩: ವಿಪಿನಂ . . . ಕಮುಳಾಶ್ರಯಮಿದು ನಿನ್ನಂ ದ್ಯುಮಣಿಯನತಿ ಲಲಿತತಿಳಕಮಿದು . . . ನಿನ್ನಂ ಪಯೋಧಿಯಂ ಪೋಲ್ತಿರ್ಕುಂ (ಪುಷ್ಪವು. ೫–೬೬). [ಸಂ. (ಕಮಲ + ಅಶ್ರಯ; ಕಮಲಾ + ಆಶ್ರಯ)]

**ಕಮುಳಾಸನ** 'ಕಮಲಾಸನ' ನೋ.

**ಕಮುಳಿನಿ** 'ಕಮಲಿನಿ' ನೋ.

**ಕಮುಳೆ** 'ಕಮಲೆ' ನೋ.

**ಕಮುಱು**$_1$, ಕಮುರು$_1$, ಕೌರು$_1$, ಕೌಱು$_1$ (ಕ್ರಿ). ೧. "ದುರ್ಗಂಧದ ವಾಸನೆಬರು, ಕಟುವಾಸನೆಯಾಗು" (ಪ್ರಭಣ್ಣ. ೪೦೬). **ಕಮುರು**$_1$: ೨. ಬಾಡು; ಕುಂದು; ಒಣಗು; ಬತ್ತು: ಉರಿವ ದಾವಾನಲದೆ ಕಮರಿದ ಗರಿಗಳುಳ್ಳ ಮಯೂರಗಳು (ರಘುವಂ. ೧೮೪); ಕಮರಿದ ಬಳ್ಳಿ ಮತ್ತೆ ಹಬ್ಬಿತು (ಹಬ್ಬಬ. ೨೧); ಚಿಗಿತದಲ್ಲಿಯೇ ಕಮರಿ ಕರಕಾಗ ಬಾರದು (ದೀಪಹ. II, ೨೨೦); ಆಸೆ ಪ್ರಯೋಗದಲ್ಲಿಯೇ ಕಮರಿತು (ಹಕ್ಕಿನೋ. ೧೬); ಕಾವೇರಿಯ ಹೃದಯ ಬಾಡಿ ಕಮರಿಕೊಂಡಿತು (ಕಾವೇರಿ. ೧೦೬). ೩. ಸೀಯು; ಸುಟ್ಟುಹೋಗು (ಕ). **ಕೌರು**$_1$: ೨. ತೋರಲೇನೋ ಎಂಬ ಭೀತಿಯು ಕೌರುವಂತಿದೆ ನಿಮ್ಮ ವದನದೆ (ರಾಮಾಸಂ. ೬–೨–೫೧). **ಕೌಱು**$_1$: ೩. ಹೊಗೆದುದಾನನವಕ್ಷಿ ಕಿಡಿಗಳನುಗುಳಿದುವು ಹೊಗೆ ಸುತ್ತಿ ಕುಡಿಮೀಸೆಗಳು ಕೌಱಿದ [ಪಾಠಾಂ. ಕೆದಱಿದ] ವಂಗ ಕಾಹೇಱಿದುದು ಕಡುಹಿನಲಿ (ತೊರರಾ. ೨–೩–೮).

[ದೇ. ‖ ತಮಿ. ಕಮುಱು; ತೆಲು. ಕಮುರು]

**ಕಮುಱು**$_2$, ಕಮುರು$_2$, ಕವುರು, ಕವುಱು, ಕೌರು$_3$, ಕೌಱು$_2$ (ನಾ). ಸುಟ್ಟ ವಾಸನೆ; ಕೆಟ್ಟ ನಾತ; ಕಂಟು: ಸುಡುವ ಹೆಣಗಳ ಕಮುಱುಗಳನು . . . ಅರಯ್ಯುತ್ತ (ಹಚಕಾ. ೧೨–೧); ಕರ್ಬೊಗೆ ಕಮುಱು ದುರ್ಗಂಧ ಹತ್ತು ದಿಕ್ಕನು ತೀವಿತು (ಕೌಶಿರಾ. ೧೯–೩೭).

**ಕಮುರು**$_2$: ದೀಪದ ಮಕ್ಕು ಹೊಡೆದು ಬತ್ತಿಯನ್ನು ಸ್ವಲ್ಪ ಚಾಚಲು ಕಮುರುವಾಸನೆಯನ್ನು ಹರಡುತ್ತಾ . . . ಥಾಳಾಗಿ ಉರಿಯತೊಡಗಿತು (ಪ್ರಣಸ. ೭೭); ಹೆಣ ಕೊಳೆತ ನಾತವೂ ಸುಟ್ಟ ಕಮುರೂ ಸಧ್ಯ ಮೂಗ ನಿರಿದಿಲ್ಲ (ಅರರೋ. ೪೨); ಬೆವರಿನ ಕಮರಿನ ವಾಸನೆ ಇನ್ನೂ ಮೂಗಿಗೆ ಬಡಿಯುತ್ತಿರುತ್ತದೆ (ನಂಜುಂಡ. ೩೭); ಮೀನಿನ ಕುಕ್ಕೆಯಿಂದ ಕೆಳಗಿಳಿದ ಉಪ್ಪುನೀರು . . . ಕಮುರುನಾತವನ್ನು ಹುಟ್ಟಿಸಿತ್ತು (ಹೊಸಕ್ಷಿ. ೪೭). **ಕವುರು**: ಪುರಾತನತಡಿಯ ಕೊಳಕು ಕವುರೂ ಎದ್ದು ಕಾಣುತ್ತಿದ್ದುವು (ಮಲೆಮ. ೩೪೭). **ಕವುಱು**: ಹಾಲ ತಂದು ಭಾಜನದಲ್ಲಿ ನೀಡಿ ಕಾಸು ವಲ್ಲಿ ಚಟ್ಟಿ ಹತ್ತದೆ ಹಸುಕು ನಾಱದೆ ಕವುಱು (ಕಮುಱು) ಏಳದೆ (ಸರ್ವವ. ೧೦೭–೫೭೫ ಕೀಲಾರದ ಭೀಮಣ್ಣಗಳ ವಚನ); ಪಲವು ಕುಂಡಂಗಳ ಮಾಡಿ ಕವುಱು ಹೊಗೆಯುರಿಯ ಕೂಡಿಯೇಳಿಸಿ (ನೇಮಿಸಂ. ೧೭–೩೯). 'ಕವುಱಿಕೀಳ್' ಪರಾ. **ಕೌರು**$_3$: ಬಾಯ್ದರೆಯೆ ಸುಡಿಗ ಳೊಡನಾಡಿಯಾಗಿಯೆ ಸಿಡಿಯುವುದು ಪೊಲೆಯ ಕೌರುಗಳ್ (ಶ್ರೀರಾಮಾ. ೫೭೨–೨೭೨). **ಕೌಱು**$_2$: ಪೊಲಸಿನ ಗಂಧಮಂ ಪೊತ್ತು ಕಿಱುಕವ್ವರೆ ಗೊಳ್ವ ಕೌಱು ಪೊಗೆಯನಱಿಯಲಾದ ಬೇಡವಟ್ಟಮಂ ಕಂಡಂ (ಕಾದಂಬ. ೭೪೭); ಕವಿವ ಕರ್ಬೊಗೆಯ ಕೌಱು (ಹಚಕಾ. ೧೧–೪೧).

[< ಕಮುಱು$_1$]

**ಕಮುಱುದೇಗು**$_1$ (ಕ್ರಿ). ಕಮರುವಾಸನೆಯ ತೇಗನ್ನು ತೇಗು; ಅಜೀರ್ಣದಿಂದ ತೇಗು: ಮನದಣಿವನಕ ಉಂಡಱಿವೆಯನಾಂತು ಕಮುಱುದೇಗಿತು ಮರುಳ್ತಂಡ ಶಾಕಿನಿ ಡಾಕಿನಿಯರು (ಮೋಹತ. ೪೦–೭೨). [ಕಮುಱು$_2$ + ತೇಗು$_1$]

**ಕಮುಱುದೇಗು**$_2$, ಕಮರುತೇಗು (ನಾ). ಕಮರುವಾಸನೆಯ ತೇಗು; ಅಜೀರ್ಣದ ತೇಗು: ಕಮು[ಮು]ಱುದೇಗು [ಪಾಠಾಂ. ಕಮುಱು ತೇಗು] . . . ಕಾಣಿಸಿಕೊಂಬವು (ವೈದ್ಯಸಾ. I, ೧೯೧). **ಕಮರುತೇಗು**: ಸ್ವಲ್ಪ ಊಟಮಾಡಿದರೂ ಹೊಟ್ಟೆ ಉಬ್ಬರಿಸಿಕೊಳ್ಳುತ್ತೆ, ಕಮರುತೇಗು ಬರುತ್ತೆ (ಮನೋನಂ. ೨೭). [ಕಮುಱು$_2$ + ತೇಗು$_2$]

**ಕಮುಱುನಾತ** (ನಾ). = ಕಮುಱು$_2$: ಉರಿವ ಹೆಣಗಳ ಕಮುಱುನಾತವ ನುರಿಯ ನಾಲಗೆ ಮುಗಿಲ ಮುಟ್ಟುವ ಪರಿಯನು (ಸಾಳ್ವಭಾ. ೧೮–೪೫).

[ಕಮುಱು$_2$ + ನಾತ$_2$]

**ಕಮುಱುನಾಱು**, ಕೌಱುನಾಱು (ಕ್ರಿ). ಸುಟ್ಟವಾಸನೆ ಬರು; ಕೆಟ್ಟ ನಾತವಾಗು; ಕಂಟಾಗು: ತನುರೋಮಂಗಳನಿತುಂ ಕಮುಱುನಾತೊಡೆ (ಬಸವು. ೪೪–೨೭). **ಕೌಱುನಾಱು**: ಅಂಗದ ರೋಮರಾಜಿ ಪೇರುರಿಗೊಳೆ ಕೌಱುನಾರ್ತೊಡೆ (ವೃಷವಿ. ೨೯–೧೪೩). [ಕಮುಱು$_2$ + ನಾಱು$_1$]

**ಕಮಾಂತೊಟ್ಟಿ** (ನಾ). ಕಮಾನನ್ನು ಮುಂದುಗಡೆ ಹೊಂದಿರುವ ತೊಟ್ಟಿ: ಚಾಮರಾಜನಗರದಲ್ಲಿ ಕಮಾಂತೊಟ್ಟಿ ಸಂ‖ದ ಹೆಸರಿನಿಂದ ಪ್ರತಿಷ್ಠಿತರಾದ ಭದ್ರೇಶ್ವರ ದೇವಸ್ಥಾನಕ್ಕೆ (ಎಕ. XIV, ಚಾಮರಾ. ೨೩೩–೧; 1868). [ಕಮಾನ್$_0$ + ತೊಟ್ಟಿ$_2$]

**ಕಮಾಚ್** 'ಖಮಾಚು' ನೋ.

**ಕಮಾನು** (ನಾ). ೧. ಬಿಲ್ಲಿನ ಆಕಾರದ, ಅರ್ಧಚಂದ್ರಾಕೃತಿಯ ರಚನೆ: ಒಲೆಯ ಮೇಲುಭಾಗದಲ್ಲಿ ಒಂದು ಕಮಾನು ಮತ್ತು ಹೊಗೆನಳಿಗೆಯನ್ನು ನಿರ್ಮಿಸಿ (ಅಡುಸೌ. ೨೧); ತೋಳುಗಳನ್ನು ಕಮಾನಿನಾಕಾರದಲ್ಲಿ ತಲೆಯ ಮೇಲಕ್ಕೆತ್ತಿ ಹಿಡಿದಿದ್ದಳು (ಮಹಾತ್ಮ. ೮೭). ೨. ಕಮಾನುಗಳುಳ್ಳ ಕಟ್ಟಡ: ಇಬ್ಬರೂ ಪೋರ್ಚದ ಕಮಾನಿಗೆ ಬಂದು . . . ಹಸ್ತಗಳನ್ನು ಒತ್ತಿದರು (ಪ್ರೇಮುತ. ೭೨). ೩. ಪ್ರಯಾಣದ ಗಾಡಿಗೆ ಕಟ್ಟುವ ಅರ್ಧವೃತ್ತಾಕಾರದ ಚಪ್ಪರ; ಕೊಲ್ಲಾರಿ (ಉಕ): ಕಮಾನು ಕಟ್ಟಿದ ಬಂಡಿಯಲ್ಲಿ ಕುಳಿತು ಪೂರ್ವದಿಕ್ಕಿನಕಡೆಗೆ ಪ್ರಯಾಣಮಾಡಿದೆವು (ಪ್ರತಾಪ. ೪೩).

೪. ಪಿಟೀಲು ಮೊದಲಾದ ತಂತಿವಾದ್ಯಗಳನ್ನು ನುಡಿಸುವ ಜವೆಯ ಕೋಲು, —ಕುಡುಪು; ವಾದನ ದಂಡ: ಸ್ವರಗಳನ್ನು ಕಮಾನಿನ ನೆರವಿನಿಂದ ಹೊರಹೊಮ್ಮಿಸುವ ಸಾಧ್ಯತೆ . . . ಇವೆಲ್ಲ ಕಾರಣಗಳಿಂದಾಗಿ ಪಿಟೀಲು ಬಹಳ ಒಳ್ಳೆಯ ವಾದ್ಯವಾಗಿ ತೋರಿತು (ಸಂಗೀತ. ೯೫); ಕಮಾನನ್ನು ತಂತಿಯ ಮೇಲೆ ಎಳೆದು ಶಬ್ದ ಉತ್ಪತ್ತಿಮಾಡುವುದನ್ನೂ ಕಲಿತೆ (ನಾಡಿಗೇ. ೧೫).

[← ಪಾರ. ಹಿಂ. ಮರಾ. ಕಮಾನ್]

**ಕಮಾನುಕಂಡಿ** (ನಾ). ಕಮಾನಿನ ಆಕಾರದ ಬೆಳಕುಕಂಡಿ: "ಒಳಬಾಗುಳ್ಳ ಒಳಮಾಳಿಗೆಯಲ್ಲಿ ಬೆಳಕು ಬರುವುದಕ್ಕಾಗಿ ಮಾಡಿರುವ ಕಮಾನುಕಂಡಿ; ಬಾಲಚಂದ್ರಗವಾಕ್ಷ" (Lunette. ಇಂಕನಿ).

[ಕಮಾನು + ಕಂಡಿ$_1$]

**ಕಮಾನುಕೋಣೆ** (ನಾ). "ಕೋಟೆಯ ಗೋಡೆಯಲ್ಲಿ, ಗುಂಡು ಹಾರಿಸಲು ಕಂಡಿಗಳುಳ್ಳ ಕಮಾನುಕೋಣೆ" (Casemate. ಇಂಕನಿ).

[ಕಮಾನು + ಕೋಣೆ$_2$]

**ಕಮಾನುಗಾಡಿ** (ನಾ). ಕಮಾನು ಕಟ್ಟಿದ ಬಂಡಿ; ಕೊಲ್ಲಾರಿ ಬಂಡಿ (ಉಕ): ಅವರ ಮಾರ್ಗವಾಗಿ ಒಂದು ಕಮಾನುಗಾಡಿ ಬಂದಿತು (ಸಂಸ್ಕಾರ. ೧೪೫); ಆ ಗಾಡಿ ಬರೀ ಬಂಡಿ ಚಕ್ಕಡಿ ಅಲ್ಲ ಕಣೋ; ಕಮಾನುಗಾಡಿ! (ಮಲೆನಾ. ೧೭೬).

[ಕಮಾನು + ಗಾಡಿ$_2$]

**ಕಮಾನುಜುಟ್ಟು** (ನಾ). ಕಮಾನಿನ ಆಕಾರದಲ್ಲಿ ಕತ್ತರಿಸಿದ ತಲೆಗೂದಲು: ಜಡೆ ಹಾಕಿಸಿಕೊಂಡು ಚೆಂಡುಹೂ ಮುಡಿಯುವುದನ್ನು ಬಿಟ್ಟುಬಿಟ್ಟೆ. ಅದರ ಬದಲು ಕಮಾನುಜುಟ್ಟು ಬಿಡಿಸಿದ (ನನ್ನೂರು. ३೧೯).

[ಕಮಾನು + ಜುಟ್ಟು]

**ಕಮಾಯಿ** (ನಾ). ೧. ಕೆಲಸ; ಕಸುಬು: ಅವನು ಏನೂ ಕಮಾಯಿಯಿಲ್ಲದೆ ತಿರುಗುತ್ತಿದ್ದಾನೆ (ರೂಢಿ). ೨. ಗಳಿಕೆ; ಸಂಪಾದನೆ. ೩. (ಆಲಂ) ಹೂಟ; ಕೈವಾಡ; ಯುಕ್ತಿ: ಇದೆಲ್ಲಾ ನಿಮ್ದೆ ಕಮಾಯಿ! (ಪ್ರಕೃತಿ. ೧೭೬); ಕಲಿತವರದೆ ಏನೋ ಈ ಕಮಾಯಿ ಅಂತ ನಾ ಕೇಳ್ತೀನಿ (ಕುಮಾಕಾ. ೧೭೩); ". . . ನೋಡೀರಂತ ನಮ್ಮ ಕಮಾಯಾನ" ಎಂದು ರುದ್ರ ಸೂಚಿಸಿದ (ಗ್ರಾಮಾಯ. ೨೩೦).

[← ಹಿಂ. ಮರಾ. ಕಮಾಈ]

**ಕಮಾಯಿಷಿ** (ನಾ). ೧. ಕಂದಾಯದ ವಸೂಲಿ. ೨. ವ್ಯವಹಾರದಿಂದ ದೊರಕಿಸಿದ ಲಾಭ (ಕಿ).

[← ಪಾರ. ಕಮಾಯಿಷ್ = ವ್ಯವಹಾರ; ಮರಾ. ಕಮಾವೀಸ್]

**ಕಮಾಯಿಷಿದಾರ** (ನಾ). ೧. ಕಂದಾಯ ವಸೂಲ್ಮಾಡುವವನು. ೨. ಕಡಲ ತೆರಿಗೆಯ ಮೇಲಧಿಕಾರಿ (ಕಿ).

[ಕಮಾಯಿಷಿ + -ದಾರ$_4$]

**ಕಮಾಯಿಸು** (ಕ್ರಿ). ಗಳಿಸು; ಸಂಪಾದಿಸು: ಅವರಿವರಿಗೆ ಉಲ್ಟಾಸೀದಾ ಹೊಡೆದು ಮೋಸ ಮಾಡಿ ಕಾಸು ಕಮಾಯಿಸೋರಿಗೆ ಹೇಳೋ ಮಾತು (ನಮ್ಮಳ್ಳಿ. ३३).

[ಕಮಾಯಿ + -ಸು$_1$]

**ಕಮಾಲ್** 'ಕಮಾಲ' ನೋ.

**ಕಮಾಲ, ಕಮಾಲ್** (ನಾ). ೧. ಅತಿಶಯ; ಅದ್ಭುತ; ಆಶ್ಚರ್ಯ: ಇಂದಿನ ಕಚೇರಿ ಅಂದ್ರು ಕಮಾಲ ಆತು (ಗೀಚುಗ. ೧೩); ಅಂಥ ಕಾಳು ತಿಂದು ಸತ್ತರ ಏನೂ ಕಮಾಲ ಇಲ್ಲ (ಗ್ರಾಮಾಯ. ೧೪೫). ೨. ಕರಾಮತ್ತು; ಕೈವಾಡ. **ಕಮಾಲ್**: ೨. ಸ್ವಲ್ಪ ಮಿದುಳು ಖರ್ಚುಮಾಡಿ ಒಂದು ಕಮಾಲ್ ಮಾಡಿದೆ ನೋಡು (ಸ್ವಾಮಿಸ್ನೇ. ೧೭೨).

[← ಅರ. ಹಿಂ. ಕಮಾಲ್]

**ಕಮಾವೀಸದಾರ** (ನಾ). ಕಂದಾಯ ವಸೂಲು ಮಾಡುವವನು: ಎರಡು ಮೂರು ಗ್ರಾಮಗಳಿಗೆ ಒಬ್ಬೊಬ್ಬ ಕಮಾವೀಸದಾರ ಅಥವಾ ಕುಲಕರಣಿಯನ್ನು ನೇಮಿಸಿದ್ದನು (ಛತ್ರಶಿ. ೧೫೪).

[← ಮರಾ. ಕಮಾವೀಸದಾರ್]

**ಕಮಿತ್ರ** (ನಾ). ಪ್ರೇಮಿ; ಪ್ರಿಯತಮ. [ಸಂ.]

**ಕಮಿಲಾರೋಗ** (ನಾ). ಒಂದು ಬಗೆಯ ರೋಗ; ಕಾಮಾಲೆ; ಕಾಮಣಿ: ಅಜೀರ್ಣವಾತ, ಮೂಲವ್ಯಾಧಿ . . . ಕಮಿಲಾರೋಗ ಸಹಾಮಾಣುವುವು (ಸಕವೈ. ಪರಿ. ೪೯೨).

[ಕಮಿಲ್ಲಾ$_0$ (< ಕಾಮಾಲೆ) + ರೋಗ]

**ಕಮೀನ** (ನಾ). (ಕರಾ) ಒಂದು ಜಾತಿಯ ಮೀನು. [?]

**ಕಮುಂಗಱಿ** (ನಾ). ಒಂದು ಸ್ಥಳದ ಹೆಸರು: ಕಮುಙ್ಗಱಿಯ ಕಡುಹುರ ಭಟಾರ ಶಿಷ್ಯರುತ್ತನಿನ್ದಿಪುರಿಮಣ್ಣಲ ಭಟಾರರ ಶಿಷ್ಯನ್ತಿಯರ್ಕ್ಕಮುಂಗಱಿ ಕನ್ತಿಯರ್ಗ್ಗೆ (ಎಕ. X, ಕೋಲಾರ. ೯೦-೮೩; 903).

[?]

**ಕಮುಂತೆಗುಂಡಿ** (ನಾ). ಒಂದು ಸ್ಥಳದ ಹೆಸರು: ದಕ್ಷಿಣತಃ ಪರದಗೆಱೆಪಳ್ಳಂ ಪಶ್ಚಿಮತಮ್ಕುಮುನ್ತೆಗುಂಡಿಪಳ್ಳಂ ಉತ್ತರತೋ ಗೊಟ್ಟಿಗೆಱೆ ಪಳ್ಳಂ (ಮೈಆರಿ. ೧೯೪೪, ೧೫-೪೦; 725). [?]

**ಕಮುಟು** 'ಕಮಟು' ನೋ.

**ಕಮ್ಮ$_1$** (ನಾ). ಭೂಮಿಯನ್ನು ಅಳೆಯುವ ಒಂದು ಪ್ರಮಾಣ: ಅದಿತ್ಯದೇವರ್ಗ್ಗೆ ಮಣಲಪೊಱೆಯೊಳ್ ಕೊಟ್ಟ ತೋಣ್ಟದ ಕಮ್ಮ ಅಜುವತ್ತು (ಸೌಇಇ. IX-i, ೭೫-೯; 987); ಬಡಗಣದೆಸೆಯ ಹೂಡೋಂಟ ಕಂಮ ಮೂವತು (ಎಕ. VII, ಶಿಕಾರಿ. ೧೨೫-೬೨; 1019); ಕಗ್ಗಱೆಯ ಕೆಳಗೆ ಅಡಕೆದೋಂಟ ಕಮ್ಮವಿಪ್ಪತ್ತಯ್ದು (ಕಇ. IV, ೧೦-೬೪; 1171); ಬೆಟ್ಟದೋರೆಯಿಂ ತೆಂಕಲು ಕೊಟ್ಟ ಕೆಯಿ ಕದಿಮಂಣ ಕಮ್ಮ ೧೦೦೦ (ಕಇ. I, ೩೩-೨೮; 1746). [< ಕಂಭ ?]

**ಕಮ್ಮ$_2$** (ನಾ). ಒಂದು ಬಗೆಯ ಧಾನ್ಯ; ಕಂಬು (?): ಮೃಗಸಿರೆಯಾದಿಯಾಗೆಸೆವ ಪಂಚಕದೊಳ್ ಪುಗೆ ಬಿತ್ತುನೆಲ್ಗಳಂ . . . ಸೊಗಯಿಪ ಕಮ್ಮನಾಗಣಕಜುಟ್ಟನ ಪೇಟ್ಟನಯಾಗಮಂಗಳಂ (ಜಟ್ಟಮ. ೯-೭). [< ಕಂಬು ?]

**ಕಮ್ಮ$_3$**, ಕರುಮ, ಕರುಮ್ಮ (ನಾ). ೧. ಕೆಲಸ; ಕಾರ್ಯ. ೨. ಕರ್ಮ; ಕರ್ಮಫಲ: ತೆರೆಯಪ್ಪಂತೆವೊಲೆಮ್ಮ ಕಮ್ಮ [ಪಾಠಾಂ. ಮ್ಮ] ಮಿಳಿತುಂ (ಲೀಲಾವ. ೨-೫೫); ಇದನು ಅವವನು ಅಳಿಪಿದಡೆ ವಾಣರಾಸಿಯಲಿ ತಡಿಯಲಿ ಕಪಿಲೆಯ ಕೊಂದ ಕಮ್ಮದಲ್ಲಿ ಹೋಹರು (ಮೈಆರಿ. ೧೯೩೪, ೧೧-೩೦; 1417); ಅಮ್ಮಮ್ಮ ಮುಂ ಕಮ್ಮಮಂ ಗೆಲ್ವರೊಳರೆ (ಉದ್ಭದೇ. ೨-೨೩). **ಕರುಮ**: ೨. 'ಕರುಮಗತಿ' ಪರಾ. **ಕರುಮ್ಮ**: ೨. ಎನ್ನ ಅಱೀಗೆಯ್ತಂಗಳೆಂಬ ಕರುಮ್ಮಮಂ ಕಳೆದು (ಚಕಬ. ೨೪). [< ಸಂ. ಕರ್ಮನ್]

**ಕಮ್ಮಂಗಣೆ** (ನಾ). ಕಂಪಿನ ಬಾಣ; ಹೂವಿನ ಬಾಣ: ಕಮ್ಮಂಗಣೆಯಿಂದಮೆಚ್ಚನಿಮ್ಮಾವಿನ ಪೊದಱೊಳಿರ್ದು (ಶಮದ. ೧೭೬ ಪ್ರಯೋ).

[< ಕಮ್ಮಿತು + ಕಣೆ$_1$]

**ಕಮ್ಮಂಗಣೆಯ**, ಕಮ್ಮಗಣೆಯ (ನಾ). ೧. ಕಂಪಿನ ಬಾಣಗಳುಳ್ಳವನು; ಪುಷ್ಪಬಾಣಗಳುಳ್ಳವನು; ಕಾಮ: "ಕಮ್ಮಂಗಣೆಯಂ = ಕಾಮಂ" (ಶಮದ. ಪರಿ. ೨); "ಇಂಗೋಲ್ವಿಲ್ಲಂ, ಬಂಡುಣಿವೆದೆಯಂ, ಕಮ್ಮಂಗಣೆಯಂ . . . ಗಿಳಿದೇರಂ – ಇವು ೧೩ ಕಾಮದೇವಂಗೆ ಪೆಸರ್" (ಕಶಸಾ. ೨-೧೩); ಕಮ್ಮಂಗಣೆಯನ ನುಡಿಯನಾಲಿಸಿ (ಕಬ್ಬಿಕಾ. ೧೯೬); ಚೆಲ್ವೆಗಮುಮ ಕಮ್ಮಂಗಣೆಯನಧಿದೇವಿಗೆ (ಪದ್ಮರಾ. ೨-೩೮).

**ಕಮ್ಮಗಣೆಯ:** ೧. ವಸುದೇವ ಕಮ್ಮಗಣೆಯನಂದದೊಳಾ ವನದೊಳು ಸುಮ್ಮಾನದಿಂದಿರುತಿರಲು (ನೇಮಿಸಂ. ೮–೭೬); ಮೆಱೆದರಲ್ಲಿಯ ವಾರನಾರಿಯರು ಕಮ್ಮಗಣೆಯಂಗೆಸೆವ ದುರ್ಗದಂತೆ (ಭಿಕ್ಷಾಚ. ೨–೮); ಕಮ್ಮಗಣೆಯನ ಸದೃಶರೂಪ ಚಿತ್ತೈಸು (ಕಂನವಿ. ೧೨–೬೧). ೨. [ಜೈನ] ಬಾಹುಬಲಿ: ಅಮ್ಮ ಬಹಾಗ ಚಿಕ್ಕಮ್ಮನು ಬರಬೇಕು ಕಮ್ಮಗಣೆಯ ನೊಪ್ಪನದಕೆ (ಭರಚ. ೪೦–೯೮). [ಕಮ್ಮಂಗಣೆ + –ಅ$_7$]

**ಕಮ್ಮಂಗಳವೆ** 'ಕಮ್ಮಂಗಟಿವೆ' ನೋ.

**ಕಮ್ಮಂಗಟಿವೆ,** ಕಮ್ಮಂಗಳವೆ, ಕಮ್ಮಗಳವೆ, ಕಮ್ಮಗಟಿವೆ (ನಾ). ಸುವಾಸನೆಯ ನೆಲ್ಲು; ಗಂಧಶಾಲಿ: ಮತ್ತಭ್ರಮರಂಗಳ್ ಪಾಱೆ ಕಮ್ಮಂಗಟಿವೆಯ ಮಡಿಯೊಳ್ ಗಾಡಿವೆತ್ತಾಡುತಿರ್ಕುಂ (ಧರ್ಮನಾ. ೨–೩೦). **ಕಮ್ಮಂಗಳವೆ:** "ಗಂಧಶಾಲಿ – ಕಮ್ಮಂಗಳವೆ" (ಓಷಧಿ. ೪೬); ಪಸುರ್ವಡೆದು ಬೆಳೆದ ಕಮ್ಮಂಗಳವೆ ಕಣ್ಗೊಳಿಸುತಿರ್ಪುದಲ್ಲಿ (ಕವಿಚ. II, ೧೪೦ ರೇವಣ); ಕಾಹು ಕಮ್ಮಂಗಳವೆ ಮಡಿಗಳೊಳ್ (ಉದ್ಭದೇ. ೨–೧೫); ಎಲ್ಲಿ ನೋಡಿದರಲ್ಲಿ ಕಮ್ಮಂಗಳವೆ ಬೆಳೆದ ಹೊಲ (ಸಾಳ್ವಭಾ. ೧೩–೫೫). **ಕಮ್ಮಗಳವೆ:** ಎಲ್ಲೆಡೆಯೊಳುಂ ಬೆಳೆವ ಕಮ್ಮಗಳವೆ [ಪಾಠಾಂ. ವೆ]ಯ ಗದ್ದೆಯಲ್ಲಿ ಹಣ್ಣಾದ ತೆನೆಯುಂ (ಸಮ್ಯಕೌ. ೧–೨೩). **ಕಮ್ಮಗಟಿವೆ:** ಕಮ್ಮಗಟಿವೆಗಳನಂಗನ ಕಮ್ಮಟದಂತೆಸೆದುವು (ಲೀಲಾವ. ೫–೫೫). [< ಕಮ್ಮಿತು + ಕಟಿವೆ]

**ಕಮ್ಮಂಗೋಲ್,** ಕಮ್ಮಗೋಲ್ (ನಾ). = ಕಮ್ಮಂಗಣೆ. 'ಕಮ್ಮಂಗೋಲ' ಪರಾ. **ಕಮ್ಮಗೋಲ್:** ಕಮ್ಮಗೋಲಿಂದ ಮೂಜಗವ ನಂಡಲೆವಾತ ತಮ್ಮನು (ಭರಚ. ೪೭–೧೧೬). [< ಕಮ್ಮಿತು + ಕೋಲ್$_1$]

**ಕಮ್ಮಂಗೋಲ,** ಕಮ್ಮಗೋಲ (ನಾ). ೧. = ಕಮ್ಮಂಗಣೆಯ: ಗುಣ್ಪಡೆದ ಪೊರ್ಕುಟಿಂಬ ತಿಳಿಗೊಳಂ ಕಮ್ಮಂಗೋಲನೆಂಬ ಜಕ್ಕವಕ್ಕಿಯ ನೋಲಾಡಿಸೆಯುಂ (ಕಬ್ಬಿಕಾ. ೧೨೩); ಕಮ್ಮಂಗೋಲಗಿಮ್ಮಡಿ ರೂಪದಾಳ್ದ ವಲ್ಲಭನ ಅಡಿದಾವರೆಗಳ ಕಾಣದೆ (ಮೋಹತ. ೨೮–೮). **ಕಮ್ಮಗೋಲ:** ೧. ಕಮ್ಮಗೋಲನ ಪಿತನಾಗಿರಲು ಸುಮ್ಮನೆ ಕುಬುಜೆಗೆ ಸೋಲುವರೆ (ಪುರಂದ. ೪–೧೦೪–೩); ಹೆಮ್ಮಕ್ಕಳಾಟ ಲೇಸಲ್ಲೆಂದು ಹೊಱಪರು ಕಮ್ಮಗೋಲನ ಮೇಲೆ ದೂಱು (ಭರಚ. ೪೭–೨೮). ೨. [ಜೈನ] ಬಾಹುಬಲಿ: ಕಮ್ಮಗೋಲನ ರೂಪ ಶ್ರೀಪಾಂಡ್ಯ ಭೂಪತಾನೊಮ್ಮನದಿಂದ ಮಾಡಿಸಿದ (ಗೋಮಟೇ. ೩–೮೯). [ಕಮ್ಮಂಗೋಲ್ + –ಅ$_7$]

**ಕಮ್ಮಕ** (ನಾ). ಬಾಣ; ಅಂಬು; "ಬಿಲ್ಲು" (ಪ್ರಭಣ್ಣ. ೪೦೭): ಕೆಮ್ಮಿಸವಿಟ್ಟು ಗಿಳಿಗಳ್ ತಮ್ಮಂ ತುಡುಕದವೊಲಾಯುಧಂಬೇಱಿದವೋಲ್ ಕಮ್ಮಗಟವೆಗಳನಂಗನ ಕಮ್ಮಕ [ಪಾಠಾಂ. ಕಮ್ಮಟ, ಕಮ್ಮತ] ದಂತೆಸೆದುವೊಸೆದು ನೋಡಿವನರಸಾ (ಲೀಲಾವ. ೫–೫೫). [?]

**ಕಮ್ಮಗಂಧಿ** (ನಾ). ಸುಗಂಧವುಳ್ಳವಳು; ಸುವಾಸಿನಿ: ನಿನ್ನ ಸಾತ್ವಿಕದ ಕಮ್ಮಗಂಧಿಯ ಕಳುಸಲಿಳೆಗೊಲ್ವೆನೆಂದಿರ್ದ ನಿಮ್ಮನು (ಮದೇಪು. ೧–೫೮). [< ಕಮ್ಮಿತು + ಗಂಧಿ]

**ಕಮ್ಮಗಂಧಿನಿ** (ನಾ). = ಕಮ್ಮಗಂಧಿ: ಸುಮ್ಮನಿರಲು ಕಂಡು ಕಮ್ಮಗಂಧಿನಿಯರುವೊಮ್ಮೊಗವಾಗಿ ಚಿಕ್ಕಯ್ಯನ ತಮ್ಮನೆಗೆಳೆದೊಯ್ದು ಇಚ್ಛೆಯಱಿದು ಮನ ಪೆರ್ಮೆಯಱಿವೆವೆಂದರೊಲಿದು (ನಿಜಸಾಂ. ೫೦–೯೨). [< ಕಮ್ಮಿತು + ಗಂಧಿನಿ]

**ಕಮ್ಮಗಗ್ರೆ,** ಕಮುಗಗ್ಗರೆ (ನಾ). ಕಾಮಕಸ್ತೂರಿಯ ಗಿಡ; ಕಗ್ಗೊರಲೆ ಗಿಡ: "ಪರ್ಣಾಸಃ, ಕಠಿಂಜರಃ, ಕುಟೇರಕಃ– ೩ ಕಗ್ಗೊರ್ಲೇ ಗಿಡದ ಹೆಸರು. ಕಾಮಕಸ್ತೂರೀಗಿಡ, ಕಮ್ಮಗಗ್ರೇಗಿಡ" (ಸಿದ್ಧಾಂತಿ. ೧೧೪). **ಕಮುಗಗ್ಗರೆ:** ಕಮುಗಗ್ಗರೆ, ಕಾಮಕಸ್ತೂರಿ, ಸಬ್ಜಾಗಿಡ (ವೈಔಗಿ. ೫೭–೧೧೪೪). [?]

**ಕಮ್ಮಗಣೆಯ** 'ಕಮ್ಮಂಗಣೆಯ' ನೋ.

**ಕಮ್ಮಗಳವೆ** 'ಕಮ್ಮಂಗಟಿವೆ' ನೋ.

**ಕಮ್ಮಗಟಿವೆ** 'ಕಮ್ಮಂಗಟಿವೆ' ನೋ.

**ಕಮ್ಮಗಾರ** (ನಾ). ಲೋಹದ ಕೆಲಸ ಮಾಡುವವನು; ಕಮ್ಮಾರ (ಕ). [< ಸಂ. ಕರ್ಮಕಾರ]

**ಕಮ್ಮಗೆ** (ಅ). ೧. ಸುಗಂಧವಾಗಿ; ಮಧುರವಾಗಿ. ೨. ಸುಖವಾಗಿ; ಹಾಯಾಗಿ: ಕಮ್ಮನೆ, ಕಮ್ಮಗೆ (ಶಬ್ದಾನು. ೨೦ ಪ್ರಯೋ); ಬಿಸಿ ಬಿಸಿಯಾಗಿ ಕಮ್ಮಗೆ ಊಟಮಾಡಿ ಬೆಚ್ಚಗಿರುವ ಹಾಸಿಕೆ ಮೇಲೆ ಮಲಗಿ ನಿದ್ರಿಸುವುದು (ಕಮುಕ. ೨೩); ಕಮ್ಮಗೆ ಉಣಿಸಿ, ಬಿಮ್ಮಗೆ ಕಟ್ಟಿದ (ಗಾದೆ).

**ಕಮ್ಮಕಮ್ಮಗೆ** (ದ್ವಿರುಕ್ತಿ): ಕಮ್ಮಕಮ್ಮಗೆ [ಪಾಠಾಂ. ಕಮ್ಮಗೆ] ಕೆನೆಗೊಂಡ ಗೆಡ್ಡೆಮೊಸರಂ ಸುರಿದು (ಲೀಲಾವ. ೫–೭೦; ಕಾವ್ಯಸಾ. ೭೫೪ ನೋ). [< ಕಮ್ಮಿತು + –ಅಗೆ$_3$]

**ಕಮ್ಮಗೋಲ್** 'ಕಮ್ಮಂಗೋಲ್' ನೋ.

**ಕಮ್ಮಗೋಲ** 'ಕಮ್ಮಂಗೋಲ' ನೋ.

**ಕಮ್ಮಟ,** ಕಮ್ಮಳ, ಕಮ್ಮಾಟ (ನಾ). ೧. ಕರ್ಮಶಾಲೆ; ಕುಲಿಮೆ ಮನೆ: "ಆವೇಶನಂ ಶಿಲ್ಪಶಾಲಾ ಈ ೨ ಕಮ್ಮಟ ಮೊದಲಾದ ಶಿಲ್ಪಶಾಲೆಗಳ ಹೆಸರು" (ನಾಚಿರಾ. ೧೦೩); ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ (ಬಸವ. ೧೫೫); ಕಾಲನ ಕಮ್ಮಟಕ್ಕೆ ಗುಱಿಯಹ ಎನ್ನನು (ಸಿದ್ಧವ. ಕ. ೨೨೩–೭೩೪); ಅರಲಂಬುಗಳಂ ಮಾಡುವ ಕಮ್ಮಟಂ (ಜಯಕಾ. ೧೫–೪೨); ತಳಿರ್ಗಳ್ ದಳ್ಳುರಿ ಮುಸುಕಿದರ್ಳಿಗಳೆ ಪೊಸ ಮಸಿಗಳಾಗೆ ಮದನನ ಬಾಣಾವಳಿಯಂ ಕಾಸಲ್ ಚೈತ್ರೋಜ್ವಳಕಾರುಕನಿಟ್ಟ ಕಮ್ಮಟಂಬೊಲದೆಸೆಗುಂ (ರಾಜಶೇ. ೨–೫೬). ೨. ನಾಣ್ಯಗಳನ್ನು ಮುದ್ರಿಸುವ ಸ್ಥಳ; ಟಂಕಸಾಲೆ: ಉಂಡಿಗೆಯ ಕಂಮಟದಲು ತಿಂಗಳಿಗೆ ಸ ಒಂದು ಬಿಡಿಗಮ್ಮಟದಲು ತಿಂಗಳಿಗೆ ಹ ೧ (ಎಕ. XII, ಶಿರಾ. ೩೭–೧೯; 948); ಕುಕ್ಕನೂರು ಸಾಸಿವ್ವರ ವರಪುತ್ರ ನಚ್ಚಿನ ಕ[ಮ್ಮ]ಟದೊಡೆಯಂ ಚನ್ದೋಜನ ಮಗಂ (ಕಇಅ. ೭೭–೧೨–೭೮; 1170); ದಂಡಾಧಿಷ್ಠಾಯ ಕಂಮಟದ ಮಾಚೈಯ್ಯಂಗಳ ಬೆಸದಿಂ (ಎಕ. V, ಹಾಸನ. ೭೪–೧; 1174). **ಕಮ್ಮಳ:** ೩. ನಾಣ್ಯ. 'ಕಮ್ಮಳಿಗ' ಪರಾ. **ಕಮ್ಮಾಟ:** ೨. ಅಲ್ಲಿಯ ಕಮ್ಮಾಟದಚ್ಚಿನ ಮೊಳೆಯಯಕ್ಕಸಾಲಿಗಳು . . . ಮಾಡಿಕೊಟ್ಟ ಗದ್ಯಾಣವೊಂದು (ಸೌಇಇ. IX–i, ೨೯೫–೩೨; 1172).

[ದೇ. ‖ ತಮಿ. ಕಮ್ಮಟ್ಟ; ಮಲ. ಕಮ್ಮಟ್ಟ, ಕಮ್ಮಿಟ್ಟ. / ಪ್ರಾ. ಕಮ್ಮಟ್ಠಾಣ (< ಸಂ. ಕರ್ಮಸ್ಥಾನ)]

**ಕಮ್ಮಟಿ** (ನಾ). ಕರ್ಮಕಾರ; ಕಮ್ಮಾರ: ಮಸಗಿ ಮುಂದಣ ಬಡಗಿ ಕಮ್ಮಟಿ[ಪಾಠಾಂ. ಕಮ್ಮರ] ವಸುವಿಭೇದಕ ತಾಮ್ರಮರ್ದನ . . . ಹರದರ ಕೇರಿಗಳಲಿ (ತೊರರಾ. ೫–೮–೫೨). [ಕಮ್ಮಟ + –ಇ$_3$]

**ಕಮ್ಮಡು** 'ಕರ್ಮಡು' ನೋ.

**ಕಮ್ಮಡುಗೊರಲ್** (ನಾ). ಕರಿಯ ಮಡುವನ್ನು ಒಳಗೊಂಡ ಕೊರಲು; ಬಹಳ ಕಪ್ಪಾದ ಕೊರಳು: ಕಡುರಯ್ಯಮಾದುದಾ ಕಾಳಕೂಟದ ಕಮ್ಮಡುಗೊರಲಾ ಪರಶಿವನ (ಕುರಾಸಾಂ. ೬–೧೭). [ಕಮ್ಮಡು (< ಕರ್ಮಡು) + ಕೊರಲ್]

**ಕಮ್ಮಣೆ** 'ಕಮ್ಮವಣೆ' ನೋ.

**ಕಮ್ಮತ,** ಕಮತ, ಕಮ್ಮತ್ತ (ನಾ). ೧. ಸ್ವಂತ ಬೇಸಾಯ. ೨. ಸ್ವಂತ ಬೇಸಾಯದ ಭೂಮಿ: ಮತ್ತ ೫೦ ಮಡುವಣ ಸಿರಿಯ ಕಮ್ಮತದಲು ನಾರಣಯ್ಯ ನಾ[ಯೆ]ಕರ್ಗ್ಗೆ ಮತ್ತರು ೬೦ (ಕಇಅ. ೯–೩–೩೧೫; 1067);

ಗುಡಿಗೆಱೆಯ ಕಮ್ಮತವಳಗಾಗಿ (ಸೌಇಇ. XX, ೪೬–೪೦ ; 1072); ದೇವಿಯ ಕಂಮತದ ಭತ್ತ್ಥ(ಕೊಲ್ಹಾಶಾ. ೨೧(a)–೩೨; 1278). **ಕಮತ :** ೧. ವರ್ಷವೊಂದಕ್ಕೆ ಐದುನೂರು ಚೀಲ ಜೋಳ ಒಕ್ಕುವ ದೊಡ್ಡ ಕಮತ ಶರಣಪ್ಪನದು(ನೀನಮು. ೧೨); ಮನೆಯಲ್ಲಿ ನಾಕೆತ್ತಿನ ಕಮತವಿತ್ತು(ಅನ್ನ. ೨೦೦). ೨. ಆವೂರ ಕಂಮಾಜ ಬೊಂಮೋಜ ಶ್ರೀ ಮಹಾಬಳದೇವರ ಕಮತಕ್ಕೆ ಕೆಲಸಂ ಮಾಡಿದ ಹೊಙೆ ಹುಂಜ ಆಯದಾಯವಂ ಬಿಟ್ಟನು (ಸೌಇಇ. XV, ೧೬೨–೫; 1215). **ಕಮ್ಮತ್ತ : ೨.** ಶ್ರೀಮದರಸರ ಕಮ್ಮತ್ತದಿಂ ಪಡುವಲು (ಸೌಇಇ. XI–ii, ೧೬೩–೭೨ ; 1113); ಹುಳುವಳಿಯ ಕಂಮತ್ತದ ಬಂಡಿಯ ಹಳಿ ಮೋದೆಯ ಹಳಿಯ ನಾಡ ಸಮಸ್ಥ ಸಾಲು ಮೂಲೆಯೊಳಗಾದ ಪದಿನೆಂಟು ಸಮಯಕ್ಕೆ (ಸೌಇಇ. IX–ii, ೪೩೩–೧೨ ; 1408).

[ದೇ. ‖ ತಮಿ. ಕಮ್ಮತ್ತ ; ತೆಲು. ಕಮತ, ಕಮ್ಮತ]

**ಕಮ್ಮತವಗೆ** (ನಾ). ಕೊಡುಗೆ; ದಾನ (?) : ಮೂಲಸ್ತನದೇವರ್ಗ್ಗೆ ಗಾಣಮಾನ್ಯದೇವರ ಕಂಮತವಗೆ ವಡಿಕಲಮಾನ್ನ ಒರಸಿ ಹರಿ ಕಱುಇನ ಮಾಡುವರ್ (ಸೌಇಇ. IX–i, ೨೯೧–೩೪ ; 11ನೆಯ ಶತ). [?]

**ಕಮ್ಮತಿಗ,** ಕಮತಿಗ (ನಾ). ೧. ಬೇಸಾಯಗಾರ : ಇಳೆಹಾಳ ಬೊಮ್ಮಯ್ಯ ಗೆಯ್ಯಬಲ್ಲಹ ಕಮ್ಮತಿಗನಲ್ಲಯ್ಯ (ಬಸಪು. ೯–೪೬). ೨. ಬೇಸಾಯಕ್ಕಾಗಿ ಇಟ್ಟುಕೊಂಡ ಆಳು : ಶಿವ ನಿನ್ನ ಕಮ್ಮತಿಗರಾ ವೆಂದಱೆ (ವೀಕೈಪು. ೮–೧–೪೬). **ಕಮತಿಗ : ೧.** ಹಿರಿಯ ಕಮತಿಗನು ಹಕ್ಕಿಯೊಳಗೆ ಬಂದು ನಾಲ್ಕೂಕಡೆಗೆ ನೋಡಿ ಹೋದನು (ಮುಂಬಯಿ. ೪–೪೨); ವಾಡೆಯ ಕಮತಿಗನಾದ ಕರಿಯಪ್ಪ ಈಗ ಮುಂದೆ ಬರದೆ ನಿರ್ವಾಹವಿರಲಿಲ್ಲ (ಗ್ರಾಮಾಯ. ೪೫೦). ೨. ಮನೆಯ ಕಮತಿಗ . . . ಬೇಸಾಯಕ್ಕೆ ಸಂಬಂಧಿಸಿದ ಮಾತನ್ನು ಹೇಳುತ್ತಿದ್ದಾನೆ (ಕಾಗೆಕ. ೨೩); ಚಿನ್ನಪ್ಪನು ಕರಣಿಕರ ಕಮತಿಗ (ಕಾಣಕ್ಕೆ. ೨).

[ಕಮ್ಮತ + –ಇಗ]

**ಕಮ್ಮತ್ತ** 'ಕಮ್ಮತ' ನೋ.

**ಕಮ್ಮತ್ತಿ** (ನಾ). ಕರಿಯ ಮತ್ತಿಮರ : "ಸಾಲಃ, ಸರ್ಜಕಃ, ಅರ್ಶಃ, ಅಶ್ವಕರ್ಣಿಕಃ, ಸಸ್ಯಸಂವರಃ –ಈ ೫ ಕಮ್ಮತ್ತಿಮರ" (ನಾಚಿರಾ. ೧೧೭); ಅಲ ಬೇಲ ಕಮ್ಮತ್ತಿ . . . ಮೊದಲಾದ ಮರಗಳಿಂದ ಶೋಭಿತವಾಗಿ (ಇದ್ದ) ಮಹಾರಣ್ಯವನ್ನು ನೋಡಿ (ಕೃವಾಅ. ೧೫೦).

[< ಕರಿದು + ಮತ್ತಿ₂]

**ಕಮ್ಮನಾಗು** (ಕ್ರಿ). ಸುವಾಸನೆಯನ್ನು ಪಡೆ; ಕಂಪನ್ನು ಹೊಂದು : ಬಾವನ್ನ ವೃಕ್ಷದೊತ್ತಿನೊಳಿರ್ದು ಮರಗಳು ತಾವೆಲ್ಲ ಕಮ್ಮನಪ್ಪಂತೆ (ಭರಚ. ೨–೮೪).

[ಕಮ್ಮನೆ + ಆಗು₁]

**ಕಮ್ಮನೆ₁** (ಗು). ಸುಗಂಧವುಳ್ಳ; ಸುವಾಸನೆಯ : ನೂಱು ಪಿಂಡಮು ಮನಾಗಳೆ ತೀವಿದ ಕಮ್ಮನಪ್ಪ ತುಪ್ಪದ ಕೊಡದೊಳ್ ಸಮಂತು ಮಡ ಗಿಟ್ಟೊಡೆ (ಪಂಪಭಾ. ೧–೧೩೧); ನೆನೆದರ ಚಿತ್ತಮುಂ ನೆಱೆಯೆ ಕಮ್ಮನೆ ನೋಟ್ಪರ ಕಣ್ಣ ಬೆಳ್ಪು ಕಮ್ಮನೆ ಮಿಗೆ ಮಾತನಾಡುವರ ಮೆಲ್ನುಡಿ ಕಮ್ಮನೆ ಮೆಯ್ಗಳೆಯ್ದೆ ಕಮ್ಮನೆ (ಲೀಲಾವ. ೨–೨೮); ಕವಿದು ಪರಿಯೆ ರಸದೊಳ್ಗಂಪು [ಕ][ಪಾಠಾಂ. ಖ]ಮ್ಮನೆ ಕವಿತೆಯೊಂದನು ಪೇಳಿಸಿಂದು (ಹದಿಬ. ೧–೨೬); ಕಮ್ಮನೆ ಬಾಣಕ್ಕೆ ಸೋತು ಜುಮ್ಮನೆ ಮಾಮರವು ಹೂತು ಕಾಮಗಾಗಿ ಕಾದಿದೆ (ಗರಿ. ೧೧೭–೧೧).

[< ಕಮ್ಮಿತು + –ಅನ್ನೆ(< –ಅನೆಯ್ದು₂)]

**ಕಮ್ಮನೆ₂** (ಅ). ಸುವಾಸನೆಯಾಗಿ; ಸುಗಂಧದೊಡನೆ (೬). ಕಮ್ಮಕಮ್ಮನೆ (ದ್ವಿರುಕ್ತಿ) : ಕಮ್ಮಕಮ್ಮನೆ, ತಣ್ಣತಣ್ಣನೆ (ಶಮದ. ೧೯೩ ಪ್ರಯೋ).

[< ಕಮ್ಮಿತು + – ಅನೆ₁]

**ಕಮ್ಮಬೊಮ್ಮ** (ನಾ). ಕರ್ಮ ಮತ್ತು ಬ್ರಹ್ಮ : ನಿನ್ನಸ್ವಮಾ ಕಮ್ಮ ಬೊಮ್ಮ[ಪಾಠಾಂ. ಕರ್ಮಬೊಮ್ಮ, ಕಮ್ಮಬ್ರಹ್ಮ]ದ ಪಾಂಗಂ ಸಲೆ ಬೋಧಿಕುಂ ಬುಧರ್ಗೆ (ರಾಜಶೇ. ೩–೩೮).

[ಕಮ್ಮ₃ + ಬೊಮ್ಮ]

**ಕಮ್ಮಯಿಸು₁,** ಕಮ್ಮೈಸು₁ (ಕ್ರಿ). ೧. ಸುಗಂಧವನ್ನು ಬೀರು : ತಂಪು ತಣ್ಣಸುತಿರಲಿ ಕಂಪು ಕಮ್ಮಯಿಸಲಿ ಬಾಳದ ಬೇರಂತೆ (ಸಖೀಗೀ. ೪೧–೮೩೩). ೨. ವಾಸನೆ ಕಟ್ಟು; ಪರಿಮಳ ಕೊಡು. **ಕಮ್ಮೈಸು₁ :** ೨. ಇಳೆಯಂ ಚಂದನ ಕುಂಕುಮಾಂಬುಕಣದಿಂ ಕಮ್ಮೈಸಿ (ಅನಂಪು. ೧೪–೩೬). ೩. (ಆಲಂ) ಕೊಚ್ಚಿಕೊಳ್ಳು; ಹೊಗಳಿಕೊಳ್ಳು : ನೀವುಂ ನೀಟ್ಟಿರಿಸಿ ನಿಂದುಮಾಗಳ್ ಪೇಟ್ಕಮ್ಮೈಸುವರಿ ಬಿರುದುಮುಂ ಬೀರ ಮುಮಂ (ಗದಾಯು. ೭–೩೫).

[< ಕಮ್ಮಿತು + –ಇಸು₃]

**ಕಮ್ಮಯಿಸು₂,** ಕಮ್ಮೈಸು₂ (ಕ್ರಿ). ಪರಿಷ್ಕಾರಗೊಳಿಸು; ಶೋಭೆಗೊಳಿಸು; ಸೊಗಸಾಗಿಸು : ಎಕ್ಕಲಾವಣಂ ಪೊಸೆಯಿಪ ಕಮ್ಮಯಿಪ್ಪ ಸಮಕಟ್ಟುವ ಬಿನ್ನಣಮಿಲ್ಲದಕ್ಕೆ ರಂಜಿಸುವೆರ್ದೆಗೊಳ್ಳದೀಗಡಿನ ಕಬ್ಬಿಗ ವಂದಿಗಳೊಂದವಿಂದಿಗಳ್ (ಶಾಂತಿಪು. ೧೨–೭೬); ಕಡೆಯದ ಕಂಡರಿಸದ ಬೇರ್ಪಡಿಸದ ಕಮ್ಮಯಿಸದೊಂದಕೃತ್ರಿ(ತ್ರಿ)ಮ ರೂಪಂ ಪಡೆದ(ಂ?) ಸ್ವಯಂಭು ನೆಲದಿಂದೊಡೆದುದಯಂಗೆಯ್ದನಲ್ಲಿ ದಕ್ಷಿಣ ಸೋಮಂ (ಎಇ. XVI, ೩೯–೨೭ ; 1107). **ಕಮ್ಮೈಸು₂ :** ಕವಿಮಾರ್ಗದೊಳೊ ಖ್ವಾಣಿಪ ಕವಣಿಪ ಕಮ್ಮೈಸುವೆಡೆಯೊಳೊಖ್ವಾಣಿಸಲುಂ ಕವಣಿಸಲುಂ ಕಮ್ಮೈಸಲುಮಿವನಂತಾರ್ ಬಲ್ಲರೆನಿಸಿದಂ ಕವಿರತ್ನಂ (ಅಜಿಪು. ೧–೮೩).

[ಕಮ್ಮ₃ + –ಇಸು₃]

**ಕಮ್ಮಯ್ಯ** (ನಾ). ಒಬ್ಬಾತನ ಹೆಸರು : ಹುನುವಲ್ಲಳ್ಳಿಯ ಮದಗರ ಕಮ್ಮಯ್ಯನ(ಂ) ಮಗಂ(ನ) ಅರಿವಮ್ಮ ಗಾವುಣ್ಣುಗೆಯ್ಯೆ (ಎಕ. VIII, ಸೊರಬ. ೫೩೨–೪ ; 964).

[ಕಮ್ಮ₀ + ಅಯ್ಯ₁]

**ಕಮ್ಮರ₁** 'ಕರ್ಮರ₂' ನೋ.

**ಕಮ್ಮರ₂** (ನಾ). ಒಂದು ವೃತ್ತಿ; ಕೆಲಸಗಾರ (?) : ಶ್ರೀನರಸಿಂಘ ದೇವರ ಕಂಮರದೊಳಿರಡು ತೋಟಗರು ಮೂವರು ಅನ್ತು ೫ ವರ್ಗ್ಗ . . . ಮಾನ್ಯಮಂ ಬಿಟ್ಟರು (ಸೌಇಇ. IX–i, ೧೯೫–೪೦ ; 1115). [?]

**ಕಮ್ಮರ₃** 'ಕರ್ಮರ₁' ನೋ.

**ಕಮ್ಮರ₄** (ನಾ). ಒಂದು ಜಾತಿಯ ಪಕ್ಷಿ : ಗಿಜುಗಿರಳೆ ಕಮ್ಮರನಸಗ ಕೊಟ್ಟುಳೆ ಹೊಜಸು . . . ಎಂಬ ಪಕ್ಕಿಗಳವಜಿಕೊಳೊಪ್ಪಿದವು (ಸಾಳ್ವಭಾ. ೫–೨೧); ಕಮ್ಮರ ಹಕ್ಕಿಯು ಹೇಗೆ ಉಂಟಾಯಿತೆಂದು ನೀನು ಬಲ್ಲೆಯಾ (ಈಕಥೆ. ೧–೩).

[?]

**ಕಮ್ಮರ₅** 'ಕನ್ಮಱ' ನೋ.

**ಕಮ್ಮರಲ್** 'ಕಮ್ಮಲರ್₂' ನೋ.

**ಕಮ್ಮರಲು** 'ಕಮ್ಮಲರ್₂' ನೋ.

**ಕಮ್ಮರಿ₁,** ಕಮರಿ (ನಾ). ಕಡಿದಾದ ಬೆಟ್ಟದ ಪಕ್ಕ; ಆಳವಾದ ಕೊಳ್ಳ; ಪ್ರಪಾತ : "ಸಱಿಯೆ ಕಮ್ಮರಿಯಕ್ಕು" (ಕಬ್ಬಕೈ. ೭೦); ಧುರದೊಳ್ ಕಮ್ಮರಿಯೊಳ್ . . . ನೀರ್ಗಳೊಳ್ ಭರದಿಂ ದೇಹಮ ನಿಕ್ಕಿ (ಧರ್ಮಾಮೃ. ೫–೨೪೧); ಕಣ್ಣಮುಚ್ಚಿ ಕಮ್ಮರಿಯ ಹಾಯ್ದರೆಯೂ ಅಲ್ಲಿ ಪದವಿಯ ಕೊಡುವನು ನೀನೆ (ಸಮಾವ. ೮); ಅಲ್ಲಿಂ ಬೀಳುವೆ ನೆಂದೊಂದು ಕಮ್ಮರಿಯನು ಏಱಿ ನಿಂದು ಕೆಳಗೆ ನೋಡಿ ಚಕಿತಹೃದಯ ನಾಗಿ (ನೇಮಿಸಂ. ೭–೧೧೩). **ಕಮರಿ :** ಹಗಲು ಕಂಡ ಕಮರಿಯ ಇರುಳು ಬೀಳುವರೆ (ಅಖಂಡೇ. ೧೦೦–೨೮); ಮರೆಯಾದುದು ಪಗಲ್ಪೆಸಿರಿ ಪಡುವಣ ಕಮರಿಯೊಳು(ಮಾಂದಳಿ. ೪೯); ಅನೇಕವಾದ ಕಮರಿಗಳನ್ನು ಮುಚ್ಚಿಸಿ (ಮಹಾವಂ. II, ೧೨೪); ಎರಡು ಕಡೆಗಳಲ್ಲಿಯೂ ನೂರಾರು ಅಡಿ ಆಳದ ಕಮರಿಗಳು (ಬೈಸರ್ವೆ. ೧೨೧). [ದೇ. ‖ ತಮಿ. ಕಮರ್]

**ಕಮ್ಮರಿ$_2$**, ಖಮ್ಮರಿ, ಖುಮ್ಮರಿ (ನಾ). ಮಲ್ಲಯುದ್ಧದ ಒಂದು ವರಸೆ; ಕುಸ್ತಿಯ ಒಂದು ಪಟ್ಟು: ಮುಂಡೆ ಮುಷ್ಟಿ ಕಮ್ಮರಿ ಮುಹುಡಂ ಜವತ್ಸವಡಿ . . . ಎನಿಪ್ಪ ಜಟ್ಟಿಗರ ಬಿನ್ನಣವೊಪ್ಪೆ ಕಡಂಗಿ ಕಾದಿದರ್ (ತ್ರಿಪುವಿ. ೨೬–೧೮). **ಖಮ್ಮರಿ** : ಎಸೆವ ಮುಹಗ್ಗಳಂ . . . ಬಾಹುದಣೆ ಖ[ಪಾಠಾಂ. ಖು]ಮ್ಮರಿ ಕತ್ತರಿ ಖೋಡವಂಕುಶಂ (ಚಂದ್ರಪು. ೫–೭೮). **ಖುಮ್ಮರಿ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [?]

**ಕಮ್ಮರಿ$_3$** (ನಾ). "ಕರ್ಮಕ್ಕೆ ಶತ್ರುವಾದವನು, ಕೆಲಸ ಮಾಡದವನು" (ಪಂಪದೀ. ೪೩೬). 'ಕಮ್ಮರಿಯೊವಜ' ಪರಾ. [ಕಮ್ಮ$_3$ + ಅರಿ$_6$]

**ಕಮ್ಮರಿಗೆ** (ನಾ). = ಕಮ್ಮರಿ$_1$ : "ಕಮ್ಮರಿಗೆಯೊನಲುಭಯಪರ್ವತ ಮಧ್ಯಭಾಗದೊಳ್" (ಕಶರ. ೨೦). [ಕಮ್ಮರಿ$_1$ + –ಗೆ$_1$]

**ಕಮ್ಮರಿಯಮರ** (ನಾ). ಒಂದು ಬಗೆಯ ಮರ: "ದೀರ್ಘಪಾಶಿಕಾ – ಕಮ್ಮರಿಯಮರ" (ಒಷಧಿ. ೭೭). [ಕಮ್ಮರಿ ? + ಮರ$_1$]

**ಕಮ್ಮರಿಯೊವಜ**, ಕಮ್ಮರಿಯೋಜ (ನಾ). ನುಡಿದಂತೆ ನಡೆಯದ ಉಪಾಧ್ಯಾಯ; ಇತರರಿಗೆ ಉಪದೇಶಮಾಡಿದಂತೆ ತಾನೇ ನಡೆಯದ ಗುರು: ಬವರದೊಳೇಂ ಬಲ್ಲಂ ಕರಮೊವಜುಗೆಯಲ್ ಪೆಱರ್ಗೆ [ಕಂಡು] ತನಗಱಿಯಂ . . . ಕಮ್ಮಱ[ರಿ]ಯೊವಜಂ ಬಿಲ್ಲೊವಜನೆಂಬುದಂ ಮಾಡುವೆನೇ (ಪಂಪಭಾ. ೧೨–೩). **ಕಮ್ಮರಿಯೋಜ** : ಅಂತುಟು ಪೇೞ್ದು ಕೆಮ್ಮಗಿರೆ ಗಮ್ಮನೆ ಕಮ್ಮರಿಯೋಜನಾಗನೇ (ಆದಿಪು. ೨–೬೧); ಪದುಳಂ ಕುಳ್ಳಿರ್ದಮಗಾಯದ ಮಾತಂ ತಗುಳೆ ಗಳಪಿ ಪೋದಂ ಸಂದಿರ್ದದಟರೊಳಿಱಿದಱಿ[ಱ]ಯಂ ತಪ್ಪದೆ ಕಮ್ಮಱ[ರಿ]ಯೋಜನೆನಿಸಿದಂ ಬಿಲ್ಲೋಜಂ (ಗದಾಯು. ೨–೧೩); ಅಬಳಾಂಗ ಸಂಗತಂ ತಮ್ಮ ಶರೀರಮಾಗೆ ನೆಗಳ್ವನ್ಯತರಾಪ್ತರಶಸ್ತ್ರವೃತ್ತಕಂ ಕಮ್ಮರಿಯೋಜನಂದಮೆ ವಲಂ (ಎಕ. II, ೨೩೪–೫೫ ; 1180); ಧರ್ಮಮನೆ ಪಿಡಿವುದೆಂದಾ ತೆಱದಿಂ ನಡೆಯದೆ ಮಱೆಪಾನಿಂತಿರ್ದೊಡೆ ಕಮ್ಮರಿಯೋಜನೆಂಬ ನುಡಿಗೆಡೆಯಪ್ಪೆಂ (ಚಂದ್ರಪು. ೧೦–೧೨೪).

[ಕಮ್ಮರಿ$_3$ + ಒವಜ (< ಒವಝ)]

**ಕಮ್ಮರಿಯೋಜ** 'ಕಮ್ಮರಿಯೊವಜ' ನೋ.

**ಕಮ್ಮರಿವರಿ** (ಕ್ರಿ). ಕಮ್ಮರಿಯಲ್ಲಿ ಹಾರು (?) : ಬೇಱು ಮನವಾದೂ[ದ]ತ್ತೆಂದು ಬೇಱು ವೋದಳ್ ನೋಡವ್ವೆ ಕಮ್ಮರಿವಱ[ರಿ]ವಳು ನೋಡವ್ವೆ ಸಮಧಾತುವಿಲ್ಲ ನೋಡೆಮಗೆ (ಗಜೀವ. ೪೮).

[ಕಮ್ಮರಿ$_1$ + ಪರಿ$_2$]

**ಕಮ್ಮರಿವಾಯ್** (ಕ್ರಿ). ಕಮ್ಮರಿಯಲ್ಲಿ ಬೀಳು; ಕೊಳ್ಳದಲ್ಲಿ ಧುಮುಕು (?) : ಪಾರಿಷದೊಳ್ಕಡು ವೀರಿಯಗ್ಗದ ಪಾಂಡುಪುತ್ರರೀ ಕಲಿಯುಗದೇತರವಿಂಗೇಕೆಯೊ ಕಮ್ಮರಿವಾಯ್ದರು ಹಿಮದೊಳೆಂಬನವನಿಪತನಯ (ಸೌ ಇ ಇ. IX–i, ೧೬೧–೩೪ ; 1097); ದ್ರವ್ಯಮುಳ್ಳರಂ ಪೊರ್ದಿದೊಡಂ ಕಮ್ಮರಿವಾಯ್ದೊಡಂ ಮೊಱೆಯಿಟ್ಟೊಡಂ ದೊರೆಕೊಳ್ಳದು (ಧರ್ಮಾಮೃ. ೬–೧೬೬); ಪಿರಿದುಂ ಕಂಸನ ಭೀತಿಯಿಂದೆ ವಸುದೇವಂ ಮುಂದುಗೆಟ್ಟಲ್ಲಿ ಕಮ್ಮರಿವಾಯ್ದಂತಿರೆ ಪೊಕ್ಕಡಂಗೆ (ಜಗವಿ. ೩–೧೦).

[ಕಮ್ಮರಿ$_1$ + ಪಾಯ್$_1$]

**ಕಮ್ಮರಿವೀೞ್** (ಕ್ರಿ). ಕಮ್ಮರಿಯಲ್ಲಿ ಬೀಳು; ಕೊಳ್ಳದಲ್ಲಿ ಧುಮುಕು : ಕಮ್ಮರಿವಿೞ್ದಂತುತ್ತುಂಗಶಿಲೆಗಳಿಂ ಭರದಿಂ ಬಿೞ್ದು ಪರಿವ ಬಲ್ಡೊಱೆಯತಿಬಂಧುರವಡೆಯಿತ್ತು (ಜಯಕಾ. ೯–೧೧).

[ಕಮ್ಮರಿ$_1$ + ಬೀೞ್$_1$ (< ಬೀೞ್$_1$)]

**ಕಮ್ಮರು** (ನಾ). ಒಂದು ಬಗೆಯ ಸಸ್ಯ : "ಕಮಂಡಲುಃ – ಗೋಳಿ, ಕಮ್ಮರು" (ಒಷಧಿ. ೨೪). [< ಕರ್ಮರ$_2$ ?]

**ಕಮ್ಮರುಬಂದು** 'ಕಮರಬಂದ' ನೋ.

**ಕಮ್ಮರೆ$_1$** 'ಕರ್ಮರ$_1$' ನೋ.

**ಕಮ್ಮರೆ$_2$** (ನಾ). "ಕೈಬಳೆ" (ಕಾಲೂರ. ಟಿಪ್ಪಣಿ) : ಕಮ್ಮರೆಗಳುಲಿಯೆ ಬೆಳ್ಳಿಯ ಮಾತು ಮುಂದೇನು (ಕಾಲೂರ. ೬೩–೧೦೬). [?]

**ಕಮ್ಮಲರ್$_1$** (ಕ್ರಿ). ಸುಗಂಧಮಯವಾಗಿ ಅರಳು; ಹೂಬಿಡು : ಅಲರ್ದ ತಾವರೆಗೆಱೆಗಳಿಂ ಕಮ್ಮಲರ್ದ ಪೂದೋಂಟಂಗಳಿಂ (ಸಾಳ್ವಭಾ. ೧–೫೮). [< ಕಮ್ಮನೆ$_2$ + ಅಲರ್$_1$]

**ಕಮ್ಮಲರ್$_2$**, ಕಮ್ಮರಲ್, ಕಮ್ಮರಲು, ಕಮ್ಮಲರು (ನಾ). ಸುವಾಸನೆಯುಳ್ಳ ಹೂವು; ಸುಗಂಧ ಪುಷ್ಪ: ಕಚಾವಳಿಗಳಂ ಬಗಿಬಗಿದು . . . ಓರಣಂಗೊಳಿಸಿ ಕಮ್ಮಲರ್ಗಳಂ ಮುಡಿಸಿ (ಪದ್ಮರಾ. ೩–೪೪); ವಾಸನೆಯ ಕಮ್ಮಲರ್ಗಳ ಅಗಜಾಧಿಪತಿಗರ್ಪಿಸುತ್ತ (ಭಾವಚಿಂ. ೪–೧೦); ಬಾವನ್ನದಿಗುರಂ ಗೆಲ್ದು ಕಮ್ಮಲರ್ಗಳಂ ಸೂಡಿ (ಜೈಮಿಭಾ. ೧೧–೪೧); ಸುರಿತರ್ಪ ಕಮ್ಮಲರೆ ಪೆಮರ್ಳೆಯಾಗಿಸೆ (ಶಬಶಂ. ೧–೪೫). **ಕಮ್ಮರಲ್** : ಕಮ್ಮರಲಿಂ ವನಜಂಗಮವಲ್ಲರಿಗಳ್ ಬಂದಲ್ಲಿ ವಿರಚಿಪುವು ಪೂವಲಿಯಂ (ಜಗವಿ. ೧೬–೪೭). **ಕಮ್ಮರಲು** : ಅರಸಿಯರ ಮುಡಿಯಿಂ ಕೆಡೆದ ಕಮ್ಮರಲ ಮಾಲೆಗೆ ಕತ್ತುರಿಯ ಪುಡಿಗುದುರುಗಪ್ಪುರಕೆ . . . ತುಂಬಿಗಳುಱೆ ತಿರುಗುತಿರೆ (ಸಾಳ್ವಭಾ. ೪–೧೧). **ಕಮ್ಮಲರು**: ನಂದನದಲಿ ಸುರಹೊನ್ನೆಯ ಕಮ್ಮಲರುಗಳೊಪ್ಪಿದುವು (ಕಂನವಿ. ೫–೯೫); ಹಾಸಿಗೆಯ ಹೊಸಚಿಗುರು ಕೌಳುಡೆಯ ಕಮ್ಮಲರು ಮೆಯ್ಯುರಿಗೆ ಬಾಡಿ ಕಪ್ಪಾದ ಹಿರಿ ರಾಶಿಯೊರಗಿಹುದು (ನಡೆದಾ. I, ೪೬೧).

[< ಕಮ್ಮಿತು + ಅಲರ್$_2$]

**ಕಮ್ಮಲರಂಬ** (ನಾ). ಸುಗಂಧವಾದ ಹೂವಿನ ಬಾಣವುಳ್ಳವನು; ಮನ್ಮಥ: ಕಮ್ಮಲರಂಬನ ಮಗನ ಮೂರ್ತಿಯನು ಹಂಬಲಿಸುವ ಕುಮಾರತಿ (ಮೋಹತ. ೪೧–೩೧). [ಕಮ್ಮಲರಂಬು + –ಅ$_7$]

**ಕಮ್ಮಲರಂಬು** (ನಾ). ಸುಗಂಧಪುಷ್ಪದ ಬಾಣ; ಮನ್ಮಥನ ಬಾಣ : ಅವಳ ವಾಕ್ಯವ ಕೇಳ್ದು ಕಮ್ಮಲರಂಬಿನ ಗಾಯವ ಮಱೆದು (ಮೋಹತ. ೨೮–೪). [ಕಮ್ಮಲರ್$_2$ + ಅಂಬು$_2$]

**ಕಮ್ಮಲರು** 'ಕಮ್ಮಲರ್$_2$' ನೋ.

**ಕಮ್ಮಲರ್ಗಣೆಯ** (ನಾ). = ಕಮ್ಮಲರಂಬ : ನಮ್ಮ ಕೋಪಕ್ಕಂಜಿ ಕಮಲಜನಿರ್ಮಿಸಿದ ತಾನಾಗಬೇಕುಱೆ ಕಮ್ಮಲರ್ಗಣೆಯವಗೆ ತಾನಿನ್ನಳುಕೆದಿಟವೆಂದ (ಅಂಬಿಕಾ. ೩೪–೭೭). [ಕಮ್ಮಲರ್$_2$ + ಕಣೆ$_1$ + –ಅ$_7$]

**ಕಮ್ಮಲರ್ಗೋಲ್**, ಕಮ್ಮಲಿರ್ಗೋಲು (ನಾ). ಸುಗಂಧಪುಷ್ಪದ ಬಾಣ; ಕಾಮನ ಬಾಣ. 'ಕಮ್ಮಲಗೋಲ' ಪರಾ. **ಕಮ್ಮಲರ್ಗೋಲು** : ಕಂದರ್ಪದೇವನ ಕಮ್ಮಲರ್ಗೋಲುಗಳೆಂದವ ತಿಱಿದಿಕ್ಕಿದರು (ಮೋಹತ. ೨೪–೬೩). [ಕಮ್ಮಲರ್$_2$ + ಕೋಲ್$_1$]

**ಕಮ್ಮಲರ್ಗೋಲ** (ನಾ). ಸುಗಂಧಪುಷ್ಪದ ಬಾಣವನ್ನುಳ್ಳವನು; ಮನ್ಮಥ: ಮಂದಾನಿಲ ಕಮ್ಮಲರ್ಗೋಲಗೆ ನುಡಿದ (ಮೋಹತ. ೬–೨೩); ಮೂಲೋಕ ವಿಜಯ ಮೂಮಡಿ ವೀರ ಕಮ್ಮಲರ್ಗೋಲ ನಲ್ಲವೆ (ಮೋಹತ. ೯–೧೩). [ಕಮ್ಮಲರ್ಗೋಲ್ + –ಅ$_7$]

**ಕಮ್ಮಲರ್ಗೋಲು** 'ಕಮ್ಮಲರ್ಗೋಲ್' ನೋ.

**ಕಮ್ಮಲರ್ಮಾಲೆ** (ನಾ). ಸುವಾಸನೆಯುಳ್ಳ ಹೂವಿನ ಹಾರ: ಶಾಲೆಗಳಿಂದೆ ಕುಚ್ಚುಗಳಿಂದೆ ಕಮ್ಮಲರ್ಮಾಲೆ ಝುಲ್ಲರಿ ಝುಲ್ಲಿಯಿಂದೆ (ಮೋಹತ. ೧೪–೩೨). [ಕಮ್ಮಲರ್$_2$ + ಮಾಲೆ]

**ಕಮ್ಮಲರ್ಪಕ್ಕಿ** (ನಾ). ತುಂಬಿ; ಭ್ರಮರ: ವಿಲಸಿತ ಕುಸುಮ ಕೋದಂಡಕ್ಕೆ ಬಿಗಿದ ಕಮ್ಮಲರ್ಪಕ್ಕಿವೆದೆಯ ಜೇವೊಡೆದು (ಮೋಹತ. ೭–೩೭). [ಕಮ್ಮಲರ್$_2$ + ಪಕ್ಕಿ$_1$]

**ಕಮ್ಮಲ್ಲಿಗೆ** (ನಾ). ಪರಿಮಳವುಳ್ಳ ಮಲ್ಲಿಗೆ: ಆಭರಣಮಂ ತಳೆದು ಕಮ್ಮಲ್ಲಿಗೆ ದಂಡೆಗಳ್ತುಂಬಿಗುರುಳೊಳ್ ತುಱುಂಬಿ (ನಂದಿಮಾ. ೧೮-೩೦). [< ಕಮ್ಮಿತು + ಮಲ್ಲಿಗೆ]

**ಕಮ್ಮವಟ್ಟೆ, ಕಮ್ಮವಟ್ಟೆ, ಕಮ್ಮವಷ್ಟಿ** (ನಾ). ಅಧಿಕಾರ ಪತ್ರ (?); "ಅಧಿಕಾರ ಸೂಚಕವಾದ ಪಟ್ಟೆ ?" (ಸುಕುಮಾ. ಕೋಶ) : ದಾನ ಸನ್ಮಾನ ಪುರಸ್ಸರಮವರ ಪೂರ್ವವೃತ್ತಿಯುಮಂ ಕಮ್ಮವಟ್ಟ[ಪಾಠಾಂ. ಷ್ಟಿ]ಯುಮನಿತ್ತು (ಸುಕುಮಾ. ೨-೧೩ ವ). **ಕಮ್ಮವಟ್ಟೆ** : ತಮ್ಮನುಱಿ ಸೆಱೆಗೆಯ್ದು ತಮ್ಮ ಕಮ್ಮವಟ್ಟೆಯಂ ತಮ್ಮ ದಾಯಿಗಂಗೆ ಕೊಟ್ಟರೆಂಬ ಮಚ್ಚರದೊಳಂ (ಸುಕುಮಾ. ೨-೩೨ ವ). **ಕಮ್ಮವಷ್ಟಿ** : 'ಕಮ್ಮವಟ್ಟೆ' ಪ್ರಯೋಗದ ಪಾಠಾಂತರವನ್ನು ನೋಡಿ. [ಕಮ್ಮ$_3$ + ಪಟ್ಟ$_2$]

**ಕಮ್ಮವಟ್ಟೆ** 'ಕಮ್ಮವಟ್ಟೆ' ನೋ.

**ಕಮ್ಮವಣೆ, ಕಮ್ಮಣೆ** (ನಾ). [ಸಂಗೀತ] ಮೇಳ (?) : ಮಿಸುಕುತಿರಲನುಜಾಯಿ ಹೂಂಕಾರ ಒತ್ತರಿಸೆ ನುಣ್ಪು ನುಸುಳದೆ ಪೂಣ್ಕೆ ಕಮ್ಮವಣೆಗೆಡೆಗುಡಲು ತಣ್ಪುಸೊಂಪಿನೊಳೊಂದಿ ಕಾಳಾಸಕೆಡೆಗುಡಲು (ಅನ್ಸಾರ. ಹ. ೧೩೦-೨೯) ; ಬಾಗು ಡೊಕ್ಕರ ವಿವರ ಕಾಳಾಸ ಕಮ್ಮವಣೆ ಲೋಲಂಗಿತ . . . ತಾರ ಮಧುರ ಮಂದ್ರಂಗಳಿಂ ಹಾಡಿ (ಹಚಕಾ. ೭-೬). **ಕಮ್ಮಣೆ** : ಕೊಂಕು ಕಮ್ಮಣೆ ಪೆಸರಂ ಬೆಡಂಗುವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೧೬-೬೭ ವ). 'ಕಾಳಸೆ' ಪರಾ. [?]

**ಕಮ್ಮವಷ್ಟಿ** 'ಕಮ್ಮವಟ್ಟೆ' ನೋ.

**ಕಮ್ಮವಿಲ್ಲ** (ನಾ). (ಹೂವಿನ) ಪರಿಮಳವುಳ್ಳ ಬಿಲ್ಲುಳ್ಳವನು; ಮನ್ಮಥ : ಉಮ್ಮತ್ತೂರನಾಳುವ ಸಂಗಯ್ಯನು ಕಮ್ಮವಿಲ್ಲನ ಪಟ್ಟದಾನೆ (ಕಂನವಿ. ೨೫-೬೪). [< ಕಮ್ಮಿತು + ಬಿಲ್$_2$ + -ಅ$_7$]

**ಕಮ್ಮಸರ** (ನಾ). ಸುಗಂಧದ ಬಾಣ; ಹೂಬಾಣ : ಕಾಯಜನೆಸುಗೆಯ ಕಮ್ಮಸರಂಗಳ ಗಾಯದ ತನಿಸೊರ್ಕಿಂ ತಾಮರಸದಳಾಯತಲೋಚನಮಂ ಮುಚ್ಚೆ (ಜಯಕಾ. ೪-೩೭). [< ಕಮ್ಮಿತು + ಸರ$_4$]

**ಕಮ್ಮಹ** (ನಾ). ಒಂದು ಬಗೆಯ ಮಾನ್ಯ (?) : ತಾವರೆಯ ಕೆಱೆಯ ಹಿರಿಯ ತೂಂಬಿನ ಕೆಳಗೆ ಕೊಟ್ಟ ಕಂಮಹದ ಕೊಡಿಗೆ ತಱೆಯದ ಮದಿನಲು ತಂಮ ಹಳ್ಳಿಗೊಡಗೆಯಿಂದ ತೆಂಕಲು (ಎಕ. III, ಮಂಡ್ಯ. ೧೦೦-೧೪ ; 1336). [?]

**ಕಮ್ಮಳ** 'ಕಮ್ಮಟ' ನೋ.

**ಕಮ್ಮಳಿ** (ನಾ).=ಕಮ್ಮಳಿಗ (?): ಇದಕ್ಕೆ ಕಮ್ಮಳಿ ನಗೆಯುರಲ್ಲಕುಮ್ಮಣ್ಣ ಶತಂಗೇಸಿ ಕೆಟ್ಟಸ್ತ್ರುಱುಗುಳವೆಡಮಣ್ಣು: ಇದನಱಿದೊ ಮಾಪಾತಗನ್ (ಎಕ. III, ತಿರುಮ. ೯೧-೧೬ ; 921). [ಕಮ್ಮಳ (< ಕಮ್ಮಟ) + -ಇ$_2$]

**ಕಮ್ಮಳಿಗ** (ನಾ). "ನಾಣ್ಯ ಮಾಡುವವನು (?)" (ಶಾಪಮಂ. ಟಿಪ್ಪಣಿ) : ಬಳೆದನ್ತಾ ಬಿಜ್ಜಳಗೇನದಟಿಸೆದುದೋ ಪೇಳ್ಸಿಂಹಳಾಧೀಶ್ವರಂ ಬೆತ್ತಳಿಗಂ ನೇಪಾಳಕಂ ಘಟ್ಟವಳನಡಪದಾಳ್ಕೇರಳಂ ಗುಜ್ಜರಂ ಕಮ್ಮಳಿಗಂ ಮತ್ತಾ ತುರುಷ್ಕಂ ಕುದುರೆವೆಸದವಂ (ಎಕ. VII, ಶಿಕಾರಿ. ೧೯೭-೨೦ ; 1181 ? ; ಶಾಪಮಂ. ೯೪೨ ನೋ). [ಕಮ್ಮಳ (< ಕಮ್ಮಟ) + -ಇಗ]

**ಕಮ್ಮಱ, ಕಂಬಱ, ಕಂಬಾರ, ಕಂಬಾಱ, ಕಮ್ಮರ$_5$, ಕಮ್ಮಾರ, ಕಮ್ಮಾಱ, ಕರ್ಮಾರು** (ನಾ). ಕಬ್ಬಿಣದ ಕೆಲಸ ಮಾಡುವವನು : ಸಕ್ಷಿ ಕಮ್ಮಱ ಸತಿಗಂ ಬಡಗಿ ಮಾರಾಚಾರಿ ಜಲನಾಗಂ ಕೆರಗಾ ಬಿಟ್ಟಿಗನು ಮಿಸಗಂ ಬೀಮನುಂ (ಎಕ. III, ನಂಜನ. ೧೯೯-೨೩ ; 189 ?) ; ಕಮ್ಮಱರಿಲ್ಲದೆ ಖಡ್ಗಾದಿ ಶಸ್ತ್ರಂಗಳಾಗದು (ಧರ್ಮಾಮೃ. ೭-೪೭) ; ಕಾಸಿ ಕೆಂಗಲಿಪ ಕಿಡಿಗಳನುಗುಳ್ವ ಪಂಚಲೋಹದ ಗುಂಡನೆಲೆಲೆ ಕಕ್ಕಸದ ಕಮ್ಮಱರು ನಿಡಿದಿಕ್ಕುಳಗಳಿಂದವಚಿ ಪಿಡಿದು ತಂದು (ಸಿದ್ಧರಾ. ೭-೧೯) ; ಗಕಾರಲೋಪಕ್ಕೆ– ಕಮ್ಮಱಂ, ಕುಂಬಱಂ (ಶಮದ. ೧೯೯ ಪ್ರಯೋ) ; ಕುಸುಮಶರಾಸ್ತ್ರಮಂ ಸಸಿಯ ಸಾಣೆಯೊಳೀ ಮಧುವೆಂಬ ಕಮ್ಮಱಂ ಮಸೆಯಲೆವೇಡಿ ತೀಡಿದನೋ (ಪಾರ್ಶ್ವಪು. ೯-೯೮) ; ಬಳೆಗಾಱ ಕಮ್ಮಱನುಡಿಗ ಕುಂಬಱ ಕಂಚುಗಾಱರ ಕೇರಿ ಮೆಱೆದಿಹವು (ಸಾಳ್ವಭಾ. ೨-೮) ; ಕಮ್ಮವಂ ಮಾಡುವಂ, ಕಮ್ಮಱಂ (ಶಬ್ದಾನು. ४೧೨ ಪ್ರಯೋ). **ಕಂಬಱ** : ಒಂದು ಜನ್ಮದಲ್ಲಿ ನಿನ್ನ ಕಟ್ಟಿಗೆದೇವರ ಮಾಡಿ ಪೂಜಿಸಿ ಬಡಿಗ ಕಂಬಱನಾಗಿ ಹುಟ್ಟದೆ (ವಚರ. ೬೩). **ಕಂಬಾರ** : ಕಂಬಾರನ ಕರಿಸೇನ ಆಗಳೀಯ ಕಡಿಸೇನ (ಲೋಕಗೀ. ೧೨೭). **ಕಂಬಾಱ** : ದೇಗುಲಗಳಂ ಹದಿ ಸಲಿಸುವ ಕಂಬಾಱ ಚಿಕ್ಕಗೆ (ಎಕ. VIII, ಸಾಗರ. ೧೦೮-೫೭ ; 1042). **ಕಮ್ಮರ$_5$** : ಶಂಕ್ರಾಂತಿಯನ್ನು ನೆಲ್ಮಬ್ಬೆಯ ಕಮ್ಮರ ಬೀದಿ ಎರಡು ಕನ್ನೆದಾನಂಗೊಟ್ಟಂ (ಎಕ. VII, ಹೊನ್ನಾಳಿ. ೬೪-೪ ; 974) ; ಗಾಳಿಗೆ ಬೇರೆ ಮೈಸೋಂಕಿ ಹೊತ್ತಿತ ಬೆಂಕಿ ಕಮ್ಮರನ ಕುಲುಮಿ (ಮೂರ್ತಿಕಾ. ೫೧-೫); ಕಮ್ಮವನ್ನು ಮಾಡುವವನು ಕಮ್ಮರನು, ಕಮ್ಮಾರನು (ಹೊಸುಗ. ೮೭). **ಕಮ್ಮಾರ** : ನಾಲ್ಕು ನಾಡ ಬಡಗಿ ಕಂಮಾರ ಅಕಸಾಲೆ (ಎಕ. IX, ಮಾಗಡಿ. ೧೫-೨೭ ; 1315) ; ಆತನ ಸಹಪಾಠಿಗಳು . . . ಕಮ್ಮಾರರ, ಮಡಿವಾಳರ ಮಕ್ಕಳು (ಸಸ್ಯಕ. ೯೩). **ಕಮ್ಮಾಱ** : ಕಮ್ಮಾಱರ ಪಾಶುಪಾತ ಮರಿಯಾದೆಯಾ ಉಳ್ಳದಲ್ಲ ಎತ್ತಿಕೊಳ್ವೋನ್ ಪಞ್ಚಮಹಾಪಾತಕನಕ್ಕುಂ (ಎಕ. VI, ಕೊಪ್ಪ. ३೯-೧೪ ; 700) ; ಸಿಪ್ಪಿಗನಂತೆ ಪೊಲಿವರ್ ಕಮ್ಮಾಱನಂತೆ ಕಾಸಿ ಬಡಿವರ್ (ಧರ್ಮಾಮೃ. ३-೭३) ; ಕಮ್ಮಾಱ ಮಾಚೋಜನ ಮಗಂ (ಎಕ. VIII, ಸೊರಬ. ೮೬-೬; 1150); ಕೊಟ್ಟಾಣಿಗರು ಕಮ್ಮಾಱರು. . .ಬೇಹಾರಿಗಳು (ಕಂನವಿ. ೧೧-೪೧). **ಕರ್ಮಾರು** : ಮಣ್ಣ ಆಡಿವಿಡಿದು ಹಿಡಿವಲ್ಲಿ ಕರ್ಮಾರುಗಳಂತೆ (ದಾಸೋಸಂ. ३೦). [< ಪ್ರಾ. ಕಮ್ಮಾರ./ ಸಂ. ಕರ್ಮಾರ]

**ಕಮ್ಮಱಕಲ್** (ನಾ). ಒಂದು ಪ್ರದೇಶದ ಹೆಸರು : ಪಡುವ ಕಮ್ಮಱಕಲ್ ನೈರಿತಿಯೊಳ್ ಅವದಕಲ್ ತೆಂಕ ಪೇರೂರ ಪಳ್ಳಂ (ಎಕ. XI, ಮೊಳಕಾ. ೨೭-೫ ; 967). [ಕಮ್ಮಱ + ಕಲ್$_3$]

**ಕಮ್ಮಱಗೇರಿ** (ನಾ). ಕಮ್ಮಾರರ ಓಣಿ : ಒಱೆದು ಕಮ್ಮಱಗೇರಿಯೊಳು ತಾ ಹರಿಹರಿದು ಸೂಜಿಯನು ಮಾಱುವ ತೆಱದೊಳು (ಕೋಗಯ. ೨೬-೭೭). [ಕಮ್ಮಱ + ಕೇರಿ]

**ಕಮ್ಮಱಬರ್ಮ** (ನಾ). ಒಬ್ಬಾತನ ಹೆಸರು : ಶ್ರೀ ಚಣ್ಣದ ಬಸವಂಗಂ ಕಮ್ಮಱಬರ್ಮ್ಮಂ (ಎಕ. VII, ಶಿಕಾರಿ. ३೦೭-೫ ; 1016). [ಕಮ್ಮಱ + ಬರ್ಮ]

**ಕಮ್ಮಱವಟ್ಟಿಗ** (ನಾ). ಕಮ್ಮಾರ (?) : ಮು[ಮ]ಡಿವಾಳ ಮಾಲೆವೂಗಾಱ ಕುಂಬಱ ಕಂಚುವಡಿಗ ಕಮ್ಮಱವಟ್ಟಿಗರಾ (ಶ್ರೀಪಾಲ. ೧-೬೫). [ಕಮ್ಮಱ + ವಟ್ಟಿಗ ?]

**ಕಮ್ಮಱವಾಳ** (ನಾ). ಕಮ್ಮಾರ : ಮಾಚಿಗಾವುಣ್ಡ ಜಕ್ಕೋಜಗೆ ಕಮ್ಮಱವಾಳ ಕೊಟ್ಟ ಕೆಯಿ ಮತ್ತ ೫ (ಸೌಇಇ. IX-i, ೧೨३-೨೫ ; 1059). [ಕಮ್ಮಱ + - ವಾಳ$_1$]

**ಕಮ್ಮಱವಿಟ್ಟಿ** (ನಾ). ಕಮ್ಮಾರರು ಕೂಲಿಯಿಲ್ಲದೆ ರಾಜನಿಗೆ ಮಾಡಿಕೊಡುವ ಕೆಲಸ : ಅಡೆಕಲುವಣ ಹಡವಳೆಯ ಹದಿಯಱಾಯ ಕುಂಬಱಬಿಟ್ಟಿ ಕಂಮಱವಿಟ್ಟಿಯಿವೊಳಗಾಗಿ (ಮೈಆರಿ. ೧೯३೨, ೧೬-३३ ; 1069). [ಕಮ್ಮಱ + ಬಿಟ್ಟಿ]

**ಕಮ್ಮಱಿಕೆ, ಕಂಬಾರಿಕೆ, ಕಮ್ಮಾರಿಕೆ, ಕಮ್ಮಾಱಿಕೆ** (ನಾ). ೧. ಕಮ್ಮಾರರ ಕೆಲಸ; ಕಮ್ಮಾರರ ಉದ್ಯೋಗ. ೨. ಕಮ್ಮಾರರ ಮೇಲಿನ ತೆರಿಗೆ; ಹಿರಿಯೂರ ಬಡಿಗೆ ಕಂಮಱಿಕೆ ಅಕಸಾಲಿಕೆ ಪಂಚಾಳ ಕೊಲವರ್ತನೆ ಬೇಡಿಗೆಯೇನುಳುದನು ಸರ್ವಮಾನ್ಯವಾಗಿ ಕೊಟೆಉ (ಎಕ. IX (S), ಕಾನಕಾ. ೬೫-೧೬ ; 1380). **ಕಂಬಾರಿಕೆ** : (ಕ).

ಕಮ್ಮಾರಿಕೆ: ೧. ಕಮ್ಮಾರನು ಕಮ್ಮಾರಿಕೆಯ ಕೆಲಸವನ್ನೇ . . . ಏಕ ಪ್ರಕಾರವಾಗಿ ಮಾಡಿದರೆ (ಮುಂಬಯಿ. ೫–೨೫೪). ೨. ಪಾಗೊಂಡೆಯಲು ನಮಗೆ ಸಲುವ ಕಂಮಾರಿಕೆ ಕಾಣಾಚಿನು (ಎಕ. XII, ಪಾವುಗ. ೨–೬; 1602 ?). **ಕಮ್ಮಾಱಿಕೆ:** ೨. ಭರತೇಸ್ವರ ದೇವರ ಕಮ್ಮಾಱಿಕೆಯ ದಸವನ್ದವ ಗಂಗಯನ ಕೇತೋಜನು ಗಂಗನುಂ ದೇವರ್ಗ್ಗೆ ಕಾಲುಗಚ್ಚಿ ಕೊಟ್ಟರು (ಸೌಇಇ. IX–ii, ೧೯೩–೩; 1118). [ಕಮ್ಮಱ + –ಇಕೆ]

**ಕಮ್ಮಱಿತಿ** (ನಾ). ೧. ಕಮ್ಮಾರರ ಹೆಂಗಸು. ೨. ಕಮ್ಮಾರನ ಹೆಂಡತಿ: ಕಮ್ಮಱಿತಿ, ನಾವಿದಿತಿ (ಶಮದ. ೨೦೯ ಪ್ರಯೋ); ಕುಂಬಱಿತಿ, ಕಮ್ಮಱಿತಿ (ಶಬ್ದಾನು. ೧೯೮ ಪ್ರಯೋ). [ಕಮ್ಮಱ + –ಇತಿ$_1$(<–ಇತ್ತಿ)]

**ಕಮ್ಮಾಟ** 'ಕಮ್ಮಟ' ನೋ.

**ಕಮ್ಮಾತ್ಥಿವಾಯ** (ನಾ). ಒಂದು ಸ್ಥಳದ ಹೆಸರು: ತಸ್ಯ ಸೀಮಾನ್ತ ರಾಣಿ ಪೂರ್ವ್ವಸ್ಯಾನ್ದಿಸಿ(ಶಿ) ಕಮ್ಮಾತ್ಥಿವಾಯ (ಇಆ. XVIII, ೩೬೭–೨೧; 8ನೆಯ ಶತ). [?]

**ಕಮ್ಮಾಯಿಲ** (ನಾ). ಕೆಲಸ ಮಾಡುವವನು; ಕೆಲಸಗಾರ: ನೆಲಗಟ್ಟಂ ಕಟ್ಟಿ ಚೈತ್ರಧ್ವಜಮನೆ ನಿಱಿಸಲ್ಕೆಂದು ಬಂದಿರ್ದ ಕಮ್ಮಾಯಿಲ [ಪಾಠಾಂ. ಕರ್ಮಾವಿಲ, ತಮ್ಮಾಯಿಲ]ನಂ ಪೋಲ್ತಿರ್ದುದಾ ರಾಜನ ವಿಜಯಗಜಂ ಕಾಲರೂಪ ಪ್ರಕೋಪಂ (ಪಾರ್ಶ್ವಪು. ೩–೧೨೯).
[ಕಮ್ಮ$_3$ + –ಆಯಿಲ$_2$]

**ಕಮ್ಮಾರ** 'ಕಮ್ಮಱ' ನೋ.

**ಕಮ್ಮಾರಗಾತಿ** (ನಾ). = ಕಮ್ಮಱಿತಿ (ಕ).
[ಕಮ್ಮಾರ (< ಕಮ್ಮಱ) + –ಕಾತಿ$_6$]

**ಕಮ್ಮಾರಗಿತ್ತಿ**, ಕಂಬಾರಗಿತ್ತಿ (ನಾ). = ಕಮ್ಮಱಿತಿ (ಕ). ಕಂಬಾರಗಿತ್ತಿ: (ಕ). [ಕಮ್ಮಾರ (< ಕಮ್ಮಱ) + –ಗಿತ್ತಿ]

**ಕಮ್ಮಾರತಿ** (ನಾ). = ಕಮ್ಮಱಿತಿ (ಕ).
[ಕಮ್ಮಾರ (< ಕಮ್ಮಱ) + –ತಿ$_1$ (< –ಇತ್ತಿ)]

**ಕಮ್ಮಾರಸಾಲೆ** (ನಾ). ಕಮ್ಮಾರನು ಕೆಲಸಮಾಡುವ ಸ್ಥಳ: ಕಮ್ಮಾರಸಾಲೆಯಲ್ಲಿ ತಿದಿಯೊತ್ತುವ ಬೆಂಕಿ ಭುಗ್‌ಭುಗ್ ಎನ್ನುತ್ತದೆ (ಹೆಬ್ಬೆರ. ೧–೫). [ಕಮ್ಮಾರ (< ಕಮ್ಮಱ) + ಸಾಲೆ$_3$]

**ಕಮ್ಮಾರಿಕೆ** 'ಕಮ್ಮಱಿಕೆ' ನೋ.

**ಕಮ್ಮಾರಿಣಿ** (ನಾ). = ಕಮ್ಮಱಿತಿ: ಸಾಮಾನು ಎಲ್ಲಿ ಹೊರಟವು – ಎಂದು ಕಮ್ಮಾರಿಣಿ ಕೇಳಿದಳು (ಸ್ಮೃತಿಚಿ. ೨೬೬).
[ಕಮ್ಮಾರ (< ಕಮ್ಮಱ) + ?]

**ಕಮ್ಮಾರ್ಕೊಟ್ಟಿಲೆ** (ನಾ). ಒಂದು ಸ್ಥಳದ ಹೆಸರು: ಕುಣ್ಡುಸೋಮೆ ಎ ಕರ್ಗ್ಗಲ್ಲಾಱದೆ ಆನೆಗಲ್ಲೆ ಕಮ್ಮಾರ್‌ಕೊಟ್ಟಿಲೆಯ ಮುದುವುಣುಸೆ ಮಾಳ್ದಿಯುಳ್ ಕೂಡಿತ್ತು (ಎಕ. XVI, ಗುಬ್ಬಿ. ೭೫–೫೩; 733). [?]

**ಕಮ್ಮಾಳ** (ನಾ). = ಕಮ್ಮಾರ: ಶನಿವಾರ ಹುಡುತಿಯ ಕಂಮಾಳ ಬೊಂಮೋಜನ ಮಗ ಶಾಮೋಜ ನಿಲ್ಲಿಸಿದ ತಿರುಮಲದೇವರ ಕಂಬ (ಎಕ. X, ಗೋರೀಬಿ. ೭–೫; 1430); ಪ್ರಾಣವಾಯುವನು ಕೊಲುಮೆಯ ಬಾಲನ ಕೆಲಸಕಿರಿಸಿ ಬಾಳಿನ ಕಮ್ಮಾಳ ಉಸಿರಲಿ ಜೀವಾನಲದನುಪಾಲನ ನಡೆಸಿಹೆ; ಇಕೊ, ತಿದಿಯೊತ್ತುವ ತಾಳ (ಸುನೀತ. ೯೩).
[ದೇ. ‖ ತಮಿ. ಕಮ್ಮಾಳ]

**ಕಮ್ಮಾಱ** 'ಕಮ್ಮಱ' ನೋ.

**ಕಮ್ಮಾಱಗಾವುಂಡ** (ನಾ). ಒಬ್ಬಾತನ ಹೆಸರು: ಇದಕ್ಕೆ ಸಕ್ಕಿ ಜಮ್ಮೂರ ಪೆಮ್ಮಾಡಿಗಾವುಣ್ಡನು ಬಾಗೆಯೂರ ಕಮ್ಮಾಱಗಾವುಣ್ಡನು (ಎಕ. V, ಚನ್ನರಾ. ೨೫೧–೧೨; 925).
[ಕಮ್ಮಾಱ (< ಕಮ್ಮಱ) + ಗಾವುಂಡ (< ಗಾಮುಂಡ)]

**ಕಮ್ಮಾಱಚೆಱು** (ನಾ). ಒಂದು ಊರಿನ ಹೆಸರು: ಸೋಮಗ್ರಹಣದಂದು ಕಮ್ಮಾಱಚೆಱುವಿನ ಚಟ್ಟಗಾವುಣ್ಡ (ಸೌಇಇ. IX–i, ೧೧೪–೧೨; 1054). [ಕಮ್ಮಾಱ + ಚೆಱು$_0$. P ತೆಲು. ಚೆಱು = ಕೆರೆ]

**ಕಮ್ಮಾಱತೆರಿಗೆ** (ನಾ). ಕಮ್ಮಾರರ ಮೇಲಿನ ತೆರಿಗೆ: ಗಣಾರ ಕಂಮಾಱತೆರಿಗೆ ಕುರಿತೆರಿಗೆ ಮಾದಾರಿಕೆ ಉಪಿನ ಕಾವಲಿ . . . ಯಿಷ್ಟನು ಸರ್ವಮಾನ್ಯವಾಗಿ ಬಿಟ್ಟದು (ಎಕ. XIV, ಗುಂಡ್ಲುಪೇ. ೧೨೯–೮೪; 1521).
[ಕಮ್ಮಾಱ (< ಕಮ್ಮಱ) + ತೆರಿಗೆ (< ತೆಱಿಗೆ)]

**ಕಮ್ಮಾಱಿಕೆ** 'ಕಮ್ಮಱಿಕೆ' ನೋ.

**ಕಮ್ಮಿ$_1$** (ನಾ). ೧. ಕೆಲಸಗಾರ; ಕರ್ಮಿ. ೨. ಪಾಪಿಷ್ಠ; ದುಷ್ಕರ್ಮಿ: ಕಮ್ಮಿಗಳ ಕಳಕಳಿಕೆ ಕಡೆಯಾಯ್ತು ಮ್ಮದೋಡಿತನೀತಿ ಮುಸಲಿಯ ತಮ್ಮನಂಘ್ರಿಸರೋಜದರ್ಶನದಿಂದೆ ಮಧುರೆಯಲಿ (ಅಕ್ರೂಚ. ೬–೩೨). [< ಸಂ. ಕರ್ಮಿನ್]

**ಕಮ್ಮಿ$_2$** (ನಾ). ಕಡಮೆ; ಕೊರತೆ; ನ್ಯೂನತೆ: ಅದರಲ್ಲಿ ಯೇನಾದರೂ ಹೆಚ್ಚು ಕಮ್ಮಿಯಾದರೆ (ರಾಜೇಂದ್ರ. ೧೩೯); ಊರೊಳಗೆ ಜನಗಳೇ ಕಮ್ಮಿ (ಹುಟ್ಟಹ. ೬೩).

ಕಮ್ಮಿಜಾಸ್ತಿ = ಹೆಚ್ಚು ಕಡಮೆ: ಮತ್ತೆ ಸಿದ್ಧವಾಗಿರ್ದಲ್ಲಿ ಕಮ್ಮಿ ಜಾಸ್ತಿಯ ಲೆಖ್ಖವಿದ್ದ ರಹಿತರು ಸಹಿತ ಫೈಸಲಿಗೆ ಬರುವಂತೆ ಕರಣಿಕರಿಗುಸುರು ನೀನು (ಅರ್ಜಾವಿ. ೩೧–೩೮).
[← ಪಾರ. ಮರಾ. ಕಮಿ. / ತಮಿ. ಕಮ್ಮಿ]

**ಕಮ್ಮಿಗ** (ನಾ). ಕೆಲಸಮಾಡುವವನು; ಕಾರ್ಮಿಕ: "ಕಮ್ಮಿಗಂ, ಕರ್ಮಕರ್ತಾ" (ಶಬ್ದಾನು. ೪೧೨ ವ್ಯಾಖ್ಯಾ). [ಕಮ್ಮ$_3$ + –ಇಗ]

**ಕಮ್ಮಿತು, ಕಮ್ಮಿತ್ತು** (ಗು). ೧. ಒಳ್ಳೆಯ ವಾಸನೆಯುಳ್ಳ; ಸುಗಂಧದ: ಕಮ್ಮಿತಾಗೆ ಪಾಂಗಱಿದಮೃತೋಪಮಾನಮಿದು ತಾನೆನೆ ಮಾಱ್ಪುದು ಕ್ಷೀರದುಂಡೆಯಂ (ಲೋಕೋಪ. ೮–೧೦); ಕೀರ್ತಿವರ್ಮಂ ನಿರುತಂ ಪೊನ್ ಕಮ್ಮಿತಾದುದೆನಿಸಿದನಿಳೆಯೊಳ್ (ಸಮಪ. ೧–೪೮); ಸುವರ್ಣಂ ಕ[ಮ್ಮಿ][ಪಾಠಾಂ. ಕಂಪಿ]ತಾದಂತೆ (ಬಸರ. ೧೦–೪೮). (ನಾ). ೨. ಪರಿಮಳ; ಸುವಾಸನೆ: "ಸೌಸವಂ, ನಱು, ಕಮ್ಮಿತು . . . ಮಗಮಗಿಸು– ಈ ೭ ಪರಿಮಳಕ್ಕೆ ಪೆಸರ್" (ಕಶಸಾ. ೯–೧೬೭). **ಕಮ್ಮಿತ್ತು:** ೨. "ಕಂಪು ಕಮ್ಮಿತ್ತೆನಲ್ ಪರಿಮಳಂ" (ಕಶರ. ೨೦); ಕಂಪುಂ ಮನಸ್ತಾಪಮುಂ ಪುದಿದೆತ್ತಂ ಬರೆ ಸುಯ್ ಪೊದಱ್ದು ಬಿಸಿದುಂ ಕಮ್ಮಿತ್ತು ಮಾಯ್ತೋಪಳಾ (ಕಾವ್ಯಸಾ. ೫೮೮ ಶೂದ್ರಕ); ಕಸ್ತೂರಿ ಕಮ್ಮಿತ್ತೆಂದಿಳೆಯೊಳು ಜನಗಳು ಕೈಯೆತ್ತಿ ಹೊಗಳುವುದೇಕೆ (ಇಂಚಾಪ. ೨೧೯–೮೩).

ಕಮ್ಮಿತ್ತಾಗು, ಕಮ್ಮಿತಾಗು = ಸುವಾಸನೆಯುಳ್ಳದ್ದಾಗು; ಸುಗಂಧವಾಗು: ಕಮ್ಮಿತ್ತಾದ ತಾಂಬೂಲಮಂ ಸ್ವೀಕರಿಸಿ (ಉದ್ಭಟ. ೮–೬೮); ಪೊನ್ನದು ಕಮ್ಮಿತಾದ ತೆಱನಲ್ಲವೆ (ಕಬ್ಬಿಕಾ. ೧೬೬). **ಕಮ್ಮಿದಂ** = ಸುವಾಸನೆಯುಳ್ಳವನು: ಕಮ್ಮಿದಂ, ಕಮ್ಮಿದಳ್, ಕಮ್ಮಿತು (ಶಮದ. ೮೮ ಪ್ರಯೋ). **ಕಮ್ಮಿದಳ್** = ಸುವಾಸನೆಯುಳ್ಳವಳು: ಇಮ್ಮಿದಳ್, ಕಮ್ಮಿದಳ್ (ಶಮದ. ೨೦೮ ಪ್ರಯೋ). **ಕಮ್ಮಿದುವು** = ಸುಗಂಧವುಳ್ಳವು: ತಣ್ಣಿದುವುಂ ಕಮ್ಮಿದುವುಮಪ್ಪ ನೀರ್ಗಳಂ (ವಡ್ಡಾರಾ. ೧೦೪–೬); ಪುಷ್ಪವಾದುವೆಲ್ಲಂ ಕಮ್ಮಿದುವೇ (ಧರ್ಮಾಮೃ. ೫–೨೩೯); ಕಮ್ಮಿದುವಾದೆಲರೆಳೆಯಸುಗೆಯ ತಳಿರೆಲೆ ಬಿಜ್ಜಳ (ಜಯಕಾ. ೪–೪೦). [?]

**ಕಮ್ಮಿತ್ತು** 'ಕಮ್ಮಿತು' ನೋ.

**ಕಮ್ಮಿಸು** (ಕ್ರಿ). ಕಂಪು ಬೀರು; ಗಮಗಮಿಸು: ಕಮ್ಮಿಪ್ಪ ಸುಭದ್ರೆ ಮಾಮಿಡಿಕರಂಜಕೆಯಂಬಟೆ ನಿಂಬೆ ನೆಲ್ಲಿಗಾಯ್ . . . ಆದಿಯಾದುಪ್ಪಿನಕಾಯ್ಗಳಂ (ಲೀಲಾವ. ೫–೭೧); ಅಂಜಲಿಯ ಹೂವೆರಡುಕೆಯ್ಯ ಕಮ್ಮಿಸುವಂತೆ (ಹೆಬ್ಬೆರ. ೨೪–೨೨). [< ಕಮ್ಮು$_1$ + –ಇಸು$_3$]

**ಕಮ್ಮು$_1$** (ಕ್ರಿ). ಉಸಿರು ಸುಗಂಧವಾಗಿರು ; ಗಮಗಮಿಸು : "ಕಮ್ಮು [ಪಾಠಾಂ. ಕರ್ಮು] – ಗಂಧಶ್ವಾಸೇ [ಪಾಠಾಂ. ದಂತಸ್ವನೇ, ದಂತಸ್ವಾಸೇ, ದಂತಸ್ವಾನೇ]" (ಶಮಧಾ).

[**ದೇ.** ‖ **ತಮಿ.** ಕವ್ ; **ತೆಲು.** ಕಮ್ಮು]

**ಕಮ್ಮು$_2$** (ನಾ). ಸುಗಂಧ; ಪರಿಮಳ : "ಕಿಱುದು ನಾಂತ" (ಚತುನಿ. I, ೬. ೨೨). [< ಕಮ್ಮು$_1$. / **ತುಳು.** ಕಮ್ಮೆನ, ಕಮ್ಮನ]

**ಕಮ್ಮೆ** (ನಾ). ೧. ಒಂದು ನಾಡಿನ ಹೆಸರು : ಆ ಧರಣೀಪ್ರಿಯಾ ಕಟಾಕ್ಷಾಧರ ವಿಭ್ರಮ ಭ್ರಮಣಮಗ್ಗಳದಗ್ಗದ ಕಮ್ಮೆನಾಡು (ಶಾಂತಿಪು.೧-೪೩); ಅಗ್ಗಳಿಕೆಯ ಕಮ್ಮೆದೇಶವನಲಂಕರಿಸಿರ್ದುದು ಪುಂಗನೂರ್ (ಅಜಿಪು. ೧-೨೪). ೨. ಒಂದು ವಂಶ ಅಥವಾ ಕುಲದ ಹೆಸರು : "ಬ್ರಾಹ್ಮರೊಳು ಕಮ್ಮೆ ಮೊದಲಾದೆಂಟು ಕುಲವಕ್ಕು" (ಮಂಗರಾ. ೭೫-೭); ಜನಕಂ ಕಮ್ಮೆಕುಲಪ್ರದೀಪಂ (ಪಂಚತಂ. ೧೦-೭); ಬಾಗೆವಾಡಿಯೊಳಗೆಸೆದಿರ್ಪ ಅಗ್ರೇಶ್ವರಂ ಕಮ್ಮೆಕುಲದಿಂದೆ ಮೆಱೆದಿರ್ಪ ವಿಪ್ರನಿರ್ಪಂ (ಬಸರ. ೧-೯೮); ಜನ್ನಂ ಕಮ್ಮೆಗುಲದ ತೊಡವಿನ ರನ್ನಂ (ಯಶೋಚ. ೧-೨೦). ೩. ಕಮ್ಮೆವಂಶದಲ್ಲಿ ಹುಟ್ಟಿದವನು : ಮಾದಿಗ ಕೊಲುವ ಆಗದರ ಕಮ್ಮೆ ತನಗಾದವರ ಕೊಲುವ (ಸರ್ವಜ್ಞ. ೧೦೦೮).

[**ದೇ.** ‖ **ತಮಿ.** ಕಮ್ಮವಾರ್ ; **ತೆಲು.** ಕಮ್ಮ]

**ಕಮ್ಮೆಣ್ಣೆ** (ನಾ). ಪರಿಮಳದ ಎಣ್ಣೆ ; ಸುಗಂಧ ತೈಲ : ಒರ್ವ ತಳೋದರಿಯುಮ್ಮಹದಿಂದಂ ಕಮ್ಮೆಣ್ಣೆಯನುಗುರಿಸಿದಳ್ (ಉದ್ಭಟ. ೮-೧೪ ವ); ಕಮ್ಮೆಣ್ಣೆಯಿಂ ಮರ್ದನಂ ಪನ್ನೀರಿಂ ಮಜ್ಜನಂಬೊಗಿಸಿ (ಧರ್ಮಪ. ೨-೫೧ ವ); ಬಳಿವ ಕತ್ತುರಿಯ ಕರ್ದಮಂಗಳೊತ್ತುವ ಕಮ್ಮೆಣ್ಣೆಗಳ್ (ನಾಗಕು. ೫-೬೦ ವ); ಸಿರಂಬೊರೆದ ಕಮ್ಮೆಣ್ಣೆ ನೀರಾರದ ಕುರುಳ್ ಮೆಱೆಯೆ (ಚಿಬಪು. ೧೯-೨೪).

[< ಕಮ್ಮಿತು + ಎಣ್ಣೆ]

**ಕಮ್ಮೆಲರ್** (ನಾ). ಪರಿಮಳದ ಗಾಳಿ; ಸುಗಂಧ ಬೆರೆತ ಗಾಳಿ : ಕಮ್ಮೆಲರುಣ್ಮೆ ಪುಷ್ಪವೀಜನತತಿಯಿಂದೆ ಬೀಸುವ (ಕುಸುಮಾ. ೯-೧೦೧); ತೀಡುವೊಡಲ್ಲಿ ಕಮ್ಮೆಲರ್ ತೀಡುಗುಂ (ಶಮದ. ೨೫೦ ಪ್ರಯೋ); ಕೋಡುವ ಕಮ್ಮೆಲರ್ ಮೂಡುವ ಚೆಂದವಂ ನೇಹಿಗರಾಗೆ (ರಾಮಾಶ್ವ. ೬೦-೨೪). [< ಕಮ್ಮಿತು + ಎಲರ್]

**ಕಮ್ಮೆಲದೂ೯ಳಿ** (ನಾ). ಸುವಾಸನೆಯಾದ ಗಾಳಿಯಲ್ಲಿನ ದೂಳು : ಮಱಿದುಂಬಿ ಕಮ್ಮೆಲದೂ೯ಳಿಯೊಳ್ ಬಿದ್ದೆದ್ದು ಗಱಿ ಬೆಳರ್ವಣ್ಣವಾದಂತೆ (ಮೋಹತ. ೮-೨೩). [ಕಮ್ಮೆಲರ್ + ಪೂಳಿ]

**ಕಮ್ಮೆಳೆ** (ನಾ). ಒಂದು ಪ್ರದೇಶದ ಹೆಸರು : ಕಮ್ಮೆಳೆಯ ತಾಱೆಯ ಗೊಡಲ ಮೂಡನ ಮೆಯ್ಯ ಕಂಬ ನೂಱಱುವತ್ತು (ಎಕ. VI, ಚಿಕ್ಕಮ. ೨೨-೪೫ ; 1178). [?]

**ಕಮ್ಮೆೞು** (ಕ್ರಿ). ಸುವಾಸನೆ ಹೆಚ್ಚಾಗು (?) : ಲೋಕದೊಳು ಬಲ್ಲಬಲ್ಲ ಜಾಣರು ಆ ಆ ಹಣ್ಣಿನೊಳಗಳ ಪದ್ಮದೆಸಳೆ (ಳು)ಗಳ ಕಮ್ಮೆೞಿ ದೇವ ಬಳ್ಳೇಶ್ವರನ ಅನುಭಾವದ ಸರಿದೊಡಕು (ಸರ್ವವ. ೯೦-೪೯೮).

[< ಕಮ್ಮಿತು + ಏೞು$_1$ (< ಏೞ್$_1$)]

**ಕಮ್ಮೈಸು$_1$** 'ಕಮ್ಮಯಿಸು$_1$' ನೋ.

**ಕಮ್ಮೈಸು$_2$** 'ಕಮ್ಮಯಿಸು$_2$' ನೋ.

**ಕಮ್ರ$_1$** 'ಕರ್ಮರ$_2$' ನೋ.

**ಕಮ್ರ$_2$** (ಗು). ೧. ಮನೋಹರವಾದ; ಪ್ರಿಯವಾದ; ಮೋಹಕವಾದ : ಇಕ್ಷುಲಸದ್ರಸಾವಳೀಮಾತೃಕಮಾಮ್ರಕಮ್ರಪರಿಪಕ್ವ ಫಲೋತ್ಕರಸಾರಮಾತೃಕಂ (ಚಂದ್ರಪು. ೧-೯೦). (ನಾ). ೨. ಕಾಮುಕ : "ಕಮ್ರನೆನೆ ಕಾಮಿಯೆನೆ ಕಾಮುಕನೆನಿಕ್ಕು" (ಮಂಗರಾ. ೬೮-೮). [**ಸಂ.**]

**ಕಮ್ರತೆ** (ನಾ). ಇಷ್ಟವಾಗಿರುವುದು ; ಮನೋಹರತೆ ; "ಆಸೆಯನ್ನು ಉಂಟುಮಾಡುವುದು, ಸೌಂದರ್ಯ" (ಮಂಕುಕ. ಕೋಶ) : ಅಮೃತಕಣವಂ ಮರ್ತ್ಯವ್ಯೃಢಘಟದಿ ಬಯ್ತಿರಿಸಿ ... ಸಾಮ್ರಾಜ್ಯಮಧ್ಯದಲಿ ದುರ್ಭಿಕ್ಷವಾಗಿಪುದು ಕಮ್ರತೆಯೊ ನಮ್ರತೆಯೊ ? (ಮಂಕುಕ. ೧೯೦).

[**ಸಂ.** ಕಮ್ರತಾ]

**ಕಯ್$_1$** 'ಕೆಯ್$_1$' ನೋ.

**ಕಯ್$_2$** 'ಕೆಯ್$_2$' ನೋ.

**ಕಯ್$_3$** 'ಕೆಯ್$_3$' ನೋ.

**ಕಯ್$_4$** 'ಕೆಯ್$_4$' ನೋ.

**ಕಯ್$_5$** (ನಾ). ಕಹಿ; ತಿಕ್ತ; ವಿಷ : ಮದ್ದು ಕಯ್ಯಾ[ಪಾಠಾಂ. ಕಹಿಯಾ]ಗಿಹುದು ಮೊದಲದ ಮೆದ್ದರಡಗುವುದುದರವನು ಹೊದ್ದಿದ್ದ ರುಜೆ (ತೊರರಾ. ೬-೮-೫೭); ನಿಂಬವೃಕ್ಷ ಪರಮಾಮೃತವನೆಱೆದೊಡಂ ಕಯ್ಪು ಬಿಡದಂತೆ (ವೀಶೈಪು. ೩-೫-೨೮).

[**ದೇ.** ‖ **ತಮಿ.** ಕಯ, ಕೈ = ಕಹಿಯಾಗು ; **ಮಲ.** ಕೈ = ಕಹಿಯಾಗು ; **ಕೊಡ.** ಕಯ್ = ಕಹಿಯಾಗು]

**ಕಯಕೋಡು** 'ಖಯಖೋಡಿ' ನೋ.

**ಕಯಾಸ್** (ನಾ). ಕಲ್ಪನೆ; ಊಹೆ : (ಸಿದ್ಧಾಂತಿ. ೪೬೦ ೬). [?]

**ಕಯಿ** 'ಕೆಯ್$_2$' ನೋ.

**ಕಯಿಧಾರೆ** 'ಕೈಧಾರೆ' ನೋ.

**ಕಯಿನೀರ್** 'ಕೆಯ್ನೀರ್' ನೋ.

**ಕಯಿನೀರೆಱೆ** 'ಕೆಯ್ನೀರೆಱೆ' ನೋ.

**ಕಯಿಪಾಡಿ** (ನಾ). ಗದ್ದೆ ; ಹೊಲ ; ತೋಟ (?) : ಯಿದಕೆ ಬಿಟ್ಟ ಬಾಳುತೆಂಕ ಕಯಿಪಾಡಿಯೊಳಗೆ ತಾನು ಬದ್ಧ ಬ್ರಹ್ಮದಾಯದ ಮೂಲದ ಬಾಳಿನ ಚತುಃಸೀಮೆ ವಿವರ (ಸೌಇಇ. IX–ii, ೪೪೮-೧೧ ; 1442).

[< ಕೆಯ್$_4$ + ಪಾಡಿ ?]

**ಕಯಿಪು** 'ಕೌಪ' ನೋ.

**ಕಯಿರ$_1$, ಕೈರ$_2$, ಖೈರ$_2$** (ನಾ). ಕುದುರೆಯ ಒಂದು ಜಾತಿ; ಎಣ್ಣೆಗಪ್ಪು, ನಸುಗಪ್ಪು ಬಣ್ಣದ ಕುದುರೆ : "ತುರಗವರ್ಣಂ ಬಿಳಿಯದಾಗೆ ಕರ್ಕನೆನಿಕ್ಕು ... ಎಳಗಪ್ಪುದ್ದೋಱೆ ಕಯಿರಂ [ಪಾಠಾಂ. ಖೈರ]" (ಮಂಗರಾ. ೮೧-೧೪); ಜಂಬನನಾ ಕಯಿರ[ಪಾಠಾಂ. ರ]ನಂ ತನ್ನಿ (ಬಸಪು. ೫೯-೪೦). **ಕೈರ$_2$** : ಹರಿಯುಜ್ವಲ ನೀಲಾಂಬುರುಹದ ಮಧುಕರನ ಬಣ್ಣಮಾದೊಡೆ ಕೈರಂ (ಅಶ್ವಶಾ. ೨-೪) ; ಕರಿದಪ್ಪ ಕಾ(ಕವಿ)ಲವರ್ಣಂ ಖುರಮುಂ ಜಂಘೆ ಕರಿದಾಗಿ ತೋರ್ಪೊಡೆ ಬಣ್ಣಂ ವಿರಾಜಿಸುತಿರ್ಪೊಡಂತಾ ತುರಂಗಮುಂ ಕೈರ(ದ)ನೆಂದು ಪೇೞ್ವರ್ ಕೆಲಬರ್ (ಅಶ್ವಶಾ. ೨-೧೫) ; ಕರಿದಾಗಿ ಕಪಿಲವರ್ಣವಾಗಿ ಖುರವಳೆಯ ತೊಡೆಗಳು ಬಹಳ ಕಪ್ಪಾಗಿರೆ ಅದಂ ಕೈರನೆಂಬರೂ (ಅಶ್ವವೈ. ೨-೧೫ ಟೀಕು). **ಖೈರ$_2$** : "ತುರಗವರ್ಣಂ ... ಎಳಗಪ್ಪುದೋಱೆ ಖೈರ [ಪಾಠಾಂ. ಕಯಿರ]" (ಮಂಗರಾ. ೮೧-೧೪).

[?. / **ಹಿಂ.** ಕೈರಾ = ಕೆಂಪು ಬಿಳುಪಿನ ಮಿಶ್ರವರ್ಣ, ಕಂದುಬಣ್ಣ ; ಖೈರಾ = ಕಂದುಬಣ್ಣದ ; **ಮರಾ.** ಖೈರಾ = ಮಿಶ್ರವರ್ಣದ, ಕಂದುಬಣ್ಣದ]

**ಕಯಿರ$_2$** 'ಕಯ್ರ' ನೋ.

**ಕಯಿರಗುಳಿಗೆ** 'ಕಯ್ರಗುಳಿಗೆ' ನೋ.

**ಕಯಿರೊಕ್ಕ, ಕಯ್ರೊಕ್ಕ** (ನಾ). ಕೈಯಲ್ಲಿ ಕೊಡುವ ಹಣ ; ನಗದು; ರೋಖುಹಣ (ಉಕ) : ನಿಂಮ ಕೈಯ್ಯ ಕ್ರಯಕೆ ತೆಗೆದುಕೊಂಡದು ಕಯಿರೊಕ್ಕ ಗ ೧೦೦ ವರಹ ಅಕ್ಷಾರದಲು ಯಿವೆ ನೂರ್ರುವರಹಾನು ಮಹಾಜನಂಗಳಿಗೆ ನಾಲು ಸಲಿಸಿಕೊಟ್ಟು (ಎಕ. VI, ಕೊಪ್ಪ. ೫೭-೨೮ ; 1588).

**ಕಯ್ಯೊಕ್ಕ** : ಎರಡೆರಡು ಸಹಸ್ರ ವರಹಗಳ ಕಯ್ಯೊಕ್ಕದ ಕೂರ್ಪಿ ನಾರ್ಪುರ್ (ಬಿಟ್ಟಅ. ೫೪-೧೫). [ಕಯಿ (< ಕೆಯ್$_2$) + ರೊಕ್ಕ]

**ಕಯಿವಾಡ** 'ಕೆಯ್ವಾಡ' ನೋ.

**ಕಯಿವಾರ$_1$** 'ಕೆಯ್ವಾರ$_1$' ನೋ.

**ಕಯಿವಾರ$_2$** 'ಕೆಯ್ವಾರ$_2$' ನೋ.

**ಕಯಿಸು** 'ಕೆಯ್ಸು' ನೋ.

**ಕಯಿಹಾಳೆ** 'ಕೈಹಾಳೆ' ನೋ.

**ಕಯಿಾಮಿಾನು** (ನಾ). ಒಂದು ಜಾತಿಯ ಮಿಾನು (?) : ಪುನರಾವೃತ್ತಿಯನ್ನು ಬಹುಕಾಲ ಹೊಸದಾಗಿಡುವ ಪ್ರಯತ್ನವು ಕಯಿಾಮಿಾನನ್ನು ನೆಲದ ಮೇಲೆ ಎತ್ತಿಹಾಕಿ ಕೆಲವು ತಿಂಗಳು ಜೀವದಿಂದ ಇಡುವ ಪ್ರಯತ್ನದ ಹಾಗೆ (ನಿಬಂಧ. II, ೭). [ಕಯಿಾ ? + ಮಿಾನು (< ಮಿಾನ್$_3$)]

**ಕಯ್ಕೊಳ್** 'ಕೆಯ್ಕೊಳ್' ನೋ.

**ಕಯ್ಕೊಳಿಸು** 'ಕೆಯ್ಕೊಳಿಸು' ನೋ.

**ಕಯ್ಕೋಲ್** 'ಕೆಯ್ಕೋಲು' ನೋ.

**ಕಯ್ಕೋಳ್$_1$** 'ಕೆಯ್ಕೋಳ್' ನೋ.

**ಕಯ್ಕೋಳ್$_2$** 'ಕೈಯ್ಕೋಳ್$_1$' ನೋ.

**ಕಯ್ಗಡಿ** 'ಕೆಯ್ಗಡಿ' ನೋ.

**ಕಯ್ಗಣ್ಮು** 'ಕೆಯ್ಗಣ್ಮು' ನೋ.

**ಕಯ್ಗಳಿ** 'ಕೆಯ್ಗಱಿ' ನೋ.

**ಕಯ್ಗಾಣ** 'ಕೈಗಾಣ' ನೋ.

**ಕಯ್ಗಾಣಿಕೆ** 'ಕೆಯ್ಗಾಣ್ಕೆ' ನೋ.

**ಕಯ್ಗಾಣ್ಕೆ** 'ಕೆಯ್ಗಾಣ್ಕೆ' ನೋ.

**ಕಯ್ಗಾಪು** (ನಾ). ಕೈವಶ; ಅಧೀನ; ರಕ್ಷಣೆ: ಹಿರಿಯರು ಕಟ್ಟಾಳ್ತನದ ಸಾಹಸಿಕೆಯ ಪರಾಕ್ರಮದಿಂದ ಸಂಪಾದಿಸಿ ತಮ್ಮ ಕಯ್ಗಾಪಿಗೊಪ್ಪಿಸಿರುವ ರಾಜ್ಯಶ್ರೀಗೆ (ಬಿಟ್ಟಅ. ೨೪-೨೬). [ಕಯ್$_2$ (< ಕೆಯ್$_2$) + ಕಾಪು$_1$]

**ಕಯ್ಗಾಯ್** 'ಕೆಯ್ಗಾ$_1$' ನೋ.

**ಕಯ್ಗುಟಿಗ** 'ಕೈಗುಟಿಕ' ನೋ.

**ಕಯ್ಗುಡು** 'ಕೆಯ್ಗೊಡು' ನೋ.

**ಕಯ್ಗುತ್ತು** 'ಕೈಗುತ್ತು' ನೋ.

**ಕಯ್ಗೂಟ** 'ಕೈಗೂಟ$_2$' ನೋ.

**ಕಯ್ಗೂಡಿಸು** 'ಕೆಯ್ಗೂಡಿಸು' ನೋ.

**ಕಯ್ಗೂಡು** 'ಕೆಯ್ಗೂಡು' ನೋ.

**ಕಯ್ಗೆಯ್** 'ಕೆಯ್ಗೆಯ್' ನೋ.

**ಕಯ್ಗೆಯ್ಸು** 'ಕೆಯ್ಗೆಯ್ಸು' ನೋ.

**ಕಯ್ಗೆರೆ** (ನಾ). ಕೈಯಲ್ಲಿಯ ಗೆರೆ, —ರೇಖೆ : ಪರಿವಿಡಿದಪ್ಪಡೆಡಹದೆ ತಡೆಯದೆ ಕಯ್ಗ[ಯ್ಗೆ]ರೆಯನೋದುವವೋಲೋದಿದನು (ಕುರಾಸಾಂ. ೧೭-೬೩). [ಕಯ್$_2$ (< ಕೆಯ್$_2$) + ಗೆರೆ]

**ಕಯ್ಗೇಣ್** 'ಕೈಗೇಣ್' ನೋ.

**ಕಯ್ಗೊಡು** 'ಕೆಯ್ಗೊಡು' ನೋ.

**ಕಯ್ಗೊಳ್** 'ಕೆಯ್ಕೊಳ್' ನೋ.

**ಕಯ್ಗೊಳಿಸು** 'ಕೆಯ್ಕೊಳಿಸು' ನೋ.

**ಕಯ್ತ** 'ಕೆಯ್ತ$_2$' ನೋ.

**ಕಯ್ತಮ್ಮಟೆ** (ನಾ). ಕೈಯಲ್ಲಿ ಹಿಡಿದು ಬಾರಿಸುವ ಚಿಕ್ಕ ತಮ್ಮಟೆ : ಉಪ್ಪಂಗ ಏಕನಾದ ಕಯ್ತಮ್ಮಟೆ ಅಡ್ಡಕಟ್ಟಿಗೆ – ಒಂದೂ ಇಲ್ಲ ಕಣಾ (ಸುಗುಗಂ. ೧೧೪-೪). [ಕಯ್$_2$ (< ಕೆಯ್$_2$) + ತಮ್ಮಟೆ]

**ಕಯ್ತಾಳೆ** 'ಕೆಯ್ತಾಳ' ನೋ.

**ಕಯ್ತಾಳಗುಟ್ಟು** (ಕ್ರಿ). ಕೈಯಿಂದ ತಾಳಹಾಕು : (ಕಯ್ತಾಳಗುಟ್ಟಿಕೊಂಡು ಅಟ್ಟಹಾಸಮಾಡಿಬಿಡುವವನು) (ಬಿರುಗಂ. ೩೦-೮). [ಕಯ್ತಾಳ (< ಕೆಯ್ತಾಳ) + ಕುಟ್ಟು$_1$]

**ಕಯ್ತು** (ನಾ). ಕಹಿಯಾಗಿರುವಿಕೆ ; ಕಹಿ.

ಕಯ್ತುಬರ್ = ಕಹಿಯಾಗು : ಪುಳಿತ ಕಳ್ಳಲ್ತುಂ ಕರಂ ಕಯ್ತು ಬರ್ಪುದು (ಪಂಪಭಾ. ೪-೮೮). [ಕಯ್$_6$ + -ತು$_1$]

**ಕಯ್ತುಡುಕು** 'ಕೆಯ್ದುಡುಕು' ನೋ.

**ಕಯ್ದವ** 'ಕೈದವ' ನೋ.

**ಕಯ್ದಾಂಟೆ** (ನಾ). ೧. ಕೈಯ ತೀಟೆ; ಕೈತುರಿಕೆ. ೨. (ಅಲಂ) ದಂಡಿಸುವ ಆಸೆ : ನನ್ನ ಕಯ್ದಾಂಟೆಯನ್ನೊತ್ತಿ ಅಡಗಿಸಿಕೊಳ್ಳುವುದು ಬಹು ಕಷ್ಟವೇ ಆಯ್ತು (ಬಿಟ್ಟಅ. ೨೦-೧೨). [ಕಯ್$_2$ (< ಕೆಯ್$_2$) + ತೀಂಟೆ]

**ಕಯ್ದಾವಿಗೆ** 'ಕೆಯ್ದಾವಿಗೆ' ನೋ.

**ಕಯ್ದು** 'ಕೆಯ್ದು' ನೋ.

**ಕಯ್ದುಕಾಱ** 'ಕೆಯ್ದುಕಾಱ' ನೋ.

**ಕಯ್ದುಗೆಯ್** 'ಕೆಯ್ದುಗೆಯ್' ನೋ.

**ಕಯ್ದುಳಿಗ** (ನಾ). ೧. ಆಯುಧಗಳನ್ನು ಮಾಡುವವನು. ೨. ಆಯುಧಗಳನ್ನು ಬಳಸಿ ಜೀವಿಸುವವನು; ಆಯುಧ ಜೀವಿ. 'ಕಯ್ದುಳಿಗಿತಿ' ಪರಾ. [ಕಯ್ದು (< ಕೆಯ್ದು) + -ಉಳಿಗ]

**ಕಯ್ದುಳಿಗಿತಿ** (ನಾ). ೧. ಆಯುಧ ಮಾಡುವವನ ಹೆಂಡತಿ. ೨. ಆಯುಧ ಜೀವಿಯ ಹೆಂಡತಿ : ದೇವುಳಿಗಿತಿ, ಪಾಕುಳಿಗಿತಿ, ಕಯ್ದುಳಿಗಿತಿ (ಶಬ್ದಾನು. ೧೯೨ ಪ್ರಯೋ). [ಕಯ್ದುಳಿಗ + -ಇತಿ$_1$ (< -ಇತ್ತಿ)]

**ಕಯ್ನಱಿ** 'ಕೆಯ್ನಱಿ' ನೋ.

**ಕಯ್ನೆ** 'ಕೈನೆ' ನೋ.

**ಕಯ್ನೆರಂ** 'ಕೆಯ್ನೆರವು' ನೋ.

**ಕಯ್ನೆರವು** 'ಕೆಯ್ನೆರವು' ನೋ.

**ಕಯ್ಪಡವಲಗಿಡ** (ನಾ). ಕಹಿ ಪಡವಲಗಿಡ : "ಕುಲಕಂ, ಪಟೋಲಃ, ತಿಕ್ತಕಃ, ಪಟುಃ – ಳ ಕಯ್[ಪಾಠಾಂ. ಯ್ಪ]ಪಡವಲಗಿಡ" (ಸಿದ್ಧಾಂತಿ. ೧೨೯). [ಕಯ್$_6$ + ಪಡವಲ + ಗಿಡ (< ಗಿಡು)]

**ಕಯ್ಪರೆ** 'ಕೆಯ್ಪಱೆ' ನೋ.

**ಕಯ್ಪರೆಗುಟ್ಟು** 'ಕೆಯ್ಪಱೆಗುಟ್ಟು' ನೋ.

**ಕಯ್ಪವಾದು** (ನಾ). (?): ಆತಂಗ ಅಕ್ಕ ಹಗಲಯಕ್ಕಳ್ ×× ಕೊಳ್ಪದ ಕಯ್ಪವಾದು ಕೊಟ್ಟನ್ (ಎಕ. X, ಚಿಂತಾಮ. ೧೨೩-೧೬ ;1010). [?]

**ಕಯ್ಪಱೆ** 'ಕೆಯ್ಪಱೆ' ನೋ.

**ಕಯ್ಪಱೆಗುಟ್ಟು** 'ಕೆಯ್ಪಱೆಗುಟ್ಟು' ನೋ.

**ಕಯ್ಪಿಡಿ** 'ಕೆಯ್ಪಿಡಿ' ನೋ.

**ಕಯ್ಪಿಮಾಡು** (ಕ್ರಿ). ಒಪ್ಪಂದ ಮಾಡು (?) : ಕುಂದೂರ ಶ್ರೀ ಮೂಲಸ್ತಾನ ದೇವರಲ್ಲಿ ದೀಪದ ನಿತ್ಯದ ಕಾಣಿಕೆಯನು ಗಉಡಗಳುಸ್ತಗೆ ತೆಕ್ಕೊಂಡು ಬರುತಿರಲಾಗಿ ದೇವರ ನಂದಾದೀವಿಗೆ ಕಯ್ಪಿಮಾಡಿ ಕೊಟ್ಟವಾಗಿ (ಎಕ. III, ಮಳವ. ೯೦-೯; 1520). [ಕಯ್ಪಿ ? + ಮಾಡು$_1$]

**ಕಯ್ಪು** (ನಾ). = ಕಯ್ಪೆ : ಲವಲೇಶಮಾನುಮಿರದಿರೆ ಕಯ್ಪು ಜೀವನದಿ ಪವಳಿಸಿರನೇ ನರನು ? (ಮಂಕುಕ. ೮೭೦) ; ಬೇವಿನ ಕಹಿಯ ಕಯ್ಪೆನೆ ಗುಣಕೆ ಕಯ್ಪೆಯೆ ? (ಗಿಳಿವಿಂ. ೧೦೦-೧೬).

[ಕಯ್$_6$ + -ಪು$_1$. / ತಮಿ. ಕಯಪ್ಪು, ಕಶಪ್ಪು, ಕೈಪ್ಪು ; ಮಲ. ಕೈಪ್ಪು]

**ಕಯ್ಪು**, ಕಹಿ$_2$, ಕೈಪೆ, ಕೈಹಿ (ನಾ). ಕಹಿರುಚಿ; ತಿಕ್ತ: ಕಯ್ಪುಯುಣ್ಬರಂ ರಸಮೆ ಬಾರಿಕುಂ ಕೆಮ್ಮನಿರಿಂ (ಶಾಂತಿಪು. ೬–೭೭); ಪೈತ್ತಿಕಮಾಗಿರ್ದವರ್ಗೆ ಪಾಲ್ ಕಯ್ಪುಯುಪ್ಪವೊಲ್ (ಅಜಿಪು. ೨–೯೨); ವ್ರತಾಚರಣಂ ಮರ್ದನ ಕಯ್ಪುಯಂತೆ ವಿರಸಂ (ಕಾವ್ಯಾವ. ೧೦೨); ಗುಣಕೆ ಕಯ್ಪುಯೆ? (ಗೀವಿಂ. ೧೦೦–೧೬). **ಕಹಿ$_2$**: "ತಿಕ್ತಮೆನೆ ಕಹಿಯುಕ್ಕು" (ಮಂಗರಾ. ೬೫–೫); ಅಧರಕ್ಕೆ ಕಹಿ ಉದರಕ್ಕೆ ಸಿಹಿ ಕೂಡಲಸಂಗನ ಶರಣರ ವಚನ ಬೇವ ಸವಿದಂತೆ (ಬಸವ. ೧೭೧); ಒಗರುಪ್ಪು ಸಿಹಿ ಕಹಿ ಹುಳಿ ಕಾರಗಳ ತೆಗೆತೆಗೆದೀವುತಿಹನು ನಾಲಗೆಗೆ (ಭರಚ. ೪–೯೩). **ಕೈಪೆ**: 'ಕೈಪೆಸೊರೆ' ಪರಾ. **ಕೈಹಿ**: 'ಕೈಹಿಸೋರೆ' ಪರಾ.

[ಕಯ್$_5$ + –ಪು. / ತುಳು. ಕಯ್ಪು, ಕಯಿಪೆ, ಕೈಪೆ]

**ಕಯ್ಪುಸರ** (ನಾ). ಕಹಿಯಾದ ಧ್ವನಿ; ಕಠಿಣೋಕ್ತಿ (?): ಕಯ್ಪುಸರಂ ಬೆರಸು ನುಡಿದ ಭೀಮಸೇನನ ನುಡಿಗಳ್ ಕಿಡಿಗಳಂತೆ ತನ್ನ ಮನಮನೊನಲಿಸೆಯುಂ (ಪಂಪಭಾ. ೬–೭೩ ವ); ಏಜನೆ ಸೂಱೆಗೊಂಡು ನುಡಿವೀ ನುಡಿಯಲ್ಲದೆ ಮತ್ತಮಾಸನಂ ದೋಱುವ ಬಲ್ಪುದೋಱುವೆರ್ದೆ ದೋಱುವ ಕ[ಪಾಠಾಂ. ಕಾ]ಯ್ಪುಸರಂಗಳೆಮ್ಮನುಂತೇಱವು (ಪಂಪಭಾ. ೮–೨೦). [ಕಯ್ಪು + ಸರ$_3$]

**ಕಯ್ಪುಸೊರೆ**, ಕಯ್ಪುಸೋರೆ, ಕಹಿಸೋರೆ, ಕೈಪೆಸೊರೆ, ಕೈಪೆಸೋರೆ, ಕೈಹಿಸೋರೆ (ನಾ). ಕಹಿಯಾದ ಸೋರೆ: ಕಯ್ಪುಸೊರೆಯ ಕುಡಿಯೇಂ ಮಿಡಿಯೇಂ (ಗದಾಯು. ೩–೬೧); ಎಣ್ದೆಸೆಯನಡರ್ದನ್ನ ಕೀರ್ತಿಪ್ರಸರದ ಕುಡಿ ಕಯ್ಪುಸೊರೆಯ ಕುಡಿಯವೊಲಕ್ಕುಂ (ಯಶೋಚ. ೨–೫೫). **ಕಯ್ಪುಸೋರೆ**: ಕಯ್ಪುಸೋರೆಯ ಮಿಡಿಯುಂ ಕುಡಿಯುಂ (ಧರ್ಮಾಮೃ. ೯–೧೩೨). **ಕಹಿಸೋರೆ**: "ಊರ್ವಾರುಃ, ಕರ್ಕಟೀ ಈ ೨ ಕಹಿಸೋರೆ" (ನಾಚಿರಾ. ೧೧೨); ಕಹಿಸೋರೆ ಮುತ್ತಂತಾಯಿತ್ತು ಎನ್ನ ಭಕ್ತಿ (ಶೂನ್ಯಸಂ. ೯೬–೨೩); ಕಹಿಸೋರೆಯೊಳಗೆ ಹಿತವುಂಟೆ (ನೇಮಿಸಂ. ೧೨–೨೬). **ಕೈಪೆಸೊರೆ**: ಬೇವಿನಮರನಂ ಕೈಪೆಸೊರೆ ಪೊರ್ದುವಂತೆ (ಪಾರ್ಶ್ವಪು. ೪–೬೧ ವ); ಒರ್ಮಾನಂ ಕೈಪೆಸೊರೆಯ ರಸಂ (ಅಶ್ವಶಾ. ೧೧–೪೨). **ಕೈಪೆಸೋರೆ**: ಕೈಪೆಸೋಱೆ[ರೆ]ಯೊಳೆಱೆದ ಪಾಲೆಂತು ಕೈಪೆಯುಪ್ಪುದು (ಶಾಂತೀಶ್ವ. ೯–೧೫೬). **ಕೈಹಿಸೋರೆ**: "ಅಂಬುನಿರ–ಕೈಹಿಸೋರೆ" (ಅಕಾನಿ. ೧–೧೫).

[ಕಯ್ಪು + ಸೊರೆ$_2$]

**ಕಯ್ಪುಸೋರೆ** 'ಕಯ್ಪುಸೊರೆ' ನೋ.

**ಕಯ್ಪೊಡೆ** 'ಕೆಯ್ಪೊಡೆ' ನೋ.

**ಕಯ್ಪೊಯ್** 'ಕೆಯ್ಪೊಯ್' ನೋ.

**ಕಯ್ಬಂದಿ** (ನಾ). ಕೈಸೆರೆ: (ಅಹಿತವೀರರ ಕಯ್ಬಂದಿಯಲ್ಲಿ, ಪರಿವಾರ ಸಮೇತರಾದ ಪಾಳೆಯಗಾರರ ಬಳಸಿನೊಳಗೆ, ನಂಜಸೆಟ್ಟಿಯ ಪ್ರವೇಶ) (ಬಿರುಗಂ. ೧೩–೧೫). [ಕಯ್$_2$ (< ಕೆಯ್$_2$) + ಬಂದಿ$_1$]

**ಕಯ್ಬದುರ್ಕು** 'ಕೈಬದುರ್ಕು' ನೋ.

**ಕಯ್ಬಳೆ** 'ಕೆಯ್ಬಳೆ' ನೋ.

**ಕಯ್ಮರೆ$_1$** 'ಕೆಯ್ಮಱೆ$_1$' ನೋ.

**ಕಯ್ಮರೆ$_2$** (ನಾ). ಕೈಯಿಂದ ಮರೆಮಾಡುವುದು; ಕೈಯ ಮರೆ: (ಸಮೀಪಿಸಿ, ಮಲ್ಲರಾಜನ ಕಿವಿಗೆ ಕಯ್ಮರೆಯಲ್ಲಿ ವಾರ್ತೆಗುಡುವನು) (ಬಿರುಗಂ. ೩೪–೧೮); ಕಯ್ಮರೆಯ ಬೆರಳಳತೆಯ ಶತಭಾವಲೀಲೆಗಳ ಮೆಚ್ಚುಗಣ್ಣುಗಳಿಂದ ನೋಡಿ (ಮಂತ್ರಶ. ೫೭–೨೫).

[ಕಯ್$_2$ (< ಕೆಯ್$_2$) + ಮರೆ$_2$ (< ಮಱೆ$_2$)]

**ಕಯ್ಮಱೆ** 'ಕೆಯ್ಮಱೆ$_1$' ನೋ.

**ಕಯ್ಮಾಡು** 'ಕೆಯ್ಮಾಡು' ನೋ.

**ಕಯ್ಮಿಗು** 'ಕೆಯ್ಮಿಗು' ನೋ.

**ಕಯ್ಮಿಱು** 'ಕೆಯ್ಮಿಱು' ನೋ.

**ಕಯ್ಮುಗಿ** 'ಕೆಯ್ಮುಗಿ' ನೋ.

**ಕಯ್ಮೆ** 'ಕೆಯ್ಮೆ$_1$' ನೋ.

**ಕಯ್ಮೊಗ** (ನಾ). ೧. ಕೈಯ ಮೇಲೆ ಊರಿದ ಮುಖ: (ಅತ್ತ ನೋಡುತ್ತಿದ್ದ . . . ಕಯ್ಮೊಗನಾಗಿ ಚಿಂತಿಸುತ್ತಿರುವನು.) (ವಿಗಡ. ೧೨–೬). ೨. (ಆಲಂ) ಖಿನ್ನನಾಗಿರುವುದು: (ಕಯ್ಮೊಗದ ಬೇವಸದಿಂದಿದ್ದು . . . ಆತ್ಮವಿಡಂಬನದ ಬಿರುನಗೆ ನಕ್ಕು) (ಬಿಟ್ಟಅ. ೨೪–೪).

[ಕಯ್$_2$ (< ಕೆಯ್$_2$) + ಮೊಗ]

**ಕಯ್ಯಂಬು** 'ಕೈಯಂಬು' ನೋ.

**ಕಯ್ಯಡಕ** (ನಾ). ಕೈಹಿಡಿತ; ಕೈಚಮತ್ಕಾರ: ದುರ್ಯೋಧನಂ ಧರ್ಮಪುತ್ರನೊಳ್ ತಗುಳ್ದಾಡುತಿರ್ದಲ್ಲಿ ಕಯ್ಯಡಕದೊಳ್ ದುರ್ಯೋಧನಂ ನಾಟವಾಸಗೆಯುಂ ಪುಗಿಸಿಯಾಡಿ ವಸ್ತುವಾಹನಂಗಳೆಲ್ಲಮಂ ಗೆಲೆ (ಬಂಹರಿ. ೫೮–೭); ಕಯ್ಯಡಕಂಗಳಂ ಮಾಡಿಯುಂ . . . ಇಷ್ಟವಿಯೋಗಾನಿಷ್ಟಸಂಯೋಗಾದ್ಯಾರ್ತಧ್ಯಾನಂಗಳಿಂ ಪಂಚತ್ವಮನೆಯ್ದಿದ ವರ್ಗಳುಂ (ಪಸಾರ. ೩೫೬–೧೧).

[ಕಯ್$_2$ (< ಕೆಯ್$_2$) + ಅಡಕ$_1$]

**ಕಯ್ಯಳತೆ** (ನಾ). ಕೈಯ ಹಿಡಿತ: ರಾಜ್ಯದ ಆಯವ್ಯಯಗಳೆಲ್ಲಾ ದಳವಾಯಿಗಳ ಕಯ್ಯಳತೆಯಾಗಿದ್ದು (ವಿಗಡ. ೧೩–೨೪).

[ಕಯ್$_2$ (< ಕೆಯ್$_2$) + ಅಳತೆ]

**ಕಯ್ಯಳವಿ** 'ಕೆಯ್ಯಳವಿ' ನೋ.

**ಕಯ್ಯಳವು** 'ಕೆಯ್ಯಳವು' ನೋ.

**ಕಯ್ಯಳೆ** 'ಕೈಯಳೆ' ನೋ.

**ಕಯ್ಯಾನ್** 'ಕೆಯ್ಯಾನ್' ನೋ.

**ಕಯ್ಯಾನಿಸು** (ಕ್ರಿ). ಕೈಯೊಡ್ಡಿಸು; ಕೈನೀಡುವಂತೆ ಮಾಡು: ಪಂಪಾದೇವಿಯನು ಬಲಗೊಂಡು ಪೂಜಿಸಲವನ ತಂದವರ ತಂಬುಲಕೆ ಕಯ್ಯಾನಿಸುತಿಹಳು (ಕುರಾಸಾಂ. ೨೫–೩೫).

[ಕಯ್ಯಾನ್ (< ಕೆಯ್ಯಾನ್) + –ಇಸು$_3$]

**ಕಯ್ಯಾರ** 'ಕೆಯ್ಯಾರ' ನೋ.

**ಕಯ್ಯಾರೆ** 'ಕೆಯ್ಯಾರೆ' ನೋ.

**ಕಯ್ಯಾಲೆ** (ನಾ). ಕೈಯಿಂದ ತಿರುಗಿಸುವ ಕಬ್ಬಿನ ಗಾಣ: ದುಗ್ಗಳವ್ವೆಯು ತುದಿಯ ಕಬ್ಬ ಕಯ್ಯಾಲೆಯಲ್ಲಿ ಹಾಲ ಬೇಱೆ ತೆಗೆದು (ಭೈರಸೂ. ೩೮೮). 'ಕೈಗಾಣ' ಪರಾ.

[ಕಯ್$_2$ (< ಕೆಯ್$_2$) + ಆಲೆ$_1$]

**ಕಯ್ಯಿ** 'ಕೆಯ್$_2$' ನೋ.

**ಕಯ್ಯಿಕ್ಕು** 'ಕೆಯ್ಯಿಕ್ಕು' ನೋ.

**ಕಯ್ಯಿಗಾಣ** 'ಕೈಗಾಣ' ನೋ.

**ಕಯ್ಯಿಡು** 'ಕೆಯ್ಯಿಡು' ನೋ.

**ಕಯ್ಯುಗುರ್** 'ಕೈಯುಗುರು' ನೋ.

**ಕಯ್ಯೂಳಿಗ** (ನಾ). ಕೈಕೆಳಗಿನ ಊಳಿಗ, —ಸೇವೆ: ಕರುವಿಯನ್ನನ ಕಯ್ಯೂಳಿಗದ ಆಪ್ತವೀರರು (ಮಂತ್ರಶ. ೭–೧೪).

[ಕಯ್$_2$ (< ಕೆಯ್$_2$) + ಊಳಿಗ (<ಊೞಿಗ)]

**ಕಯ್ಯೆಡೆ** 'ಕೆಯ್ಯೆಡೆ' ನೋ.

**ಕಯ್ಯೆಡೆಗುಡು** 'ಕೈಯೆಡೆಗೊಡು' ನೋ.

**ಕಯ್ಯೆಡೆಗೊಡು** 'ಕೈಯೆಡೆಗೊಡು' ನೋ.

**ಕಯ್ಯೆತ್ತು** 'ಕೆಯ್ಯೆತ್ತು' ನೋ.

**ಕಯ್ಯೆಲೆ** (ನಾ). ಕೈಯಲ್ಲಿಯ ವೀಳ್ಯದೆಲೆ : ಕಾಯದೆ ಕಾಮುನಾರ್ದಿಸೆ ತೊವಲ್ಪಿಡಿವಂತೆಡಗಯ್ಯೊಳೊಪ್ಪೆ ತೋರ್ಪಾಯೆಲೆ ನೋಟ ಬೇಟದ ಕೊನರ್ ತಲೆದೋರ್ಪವೊಲಾಗೆ ಬಾಯೊಳಿರ್ದಾಯೆಲೆ ಕಣ್ಗೆವಂದೆಸೆಯೆ ಕಯ್ಯೆಲೆ ಕಯ್ಯೊಳೆ ಬಾಯ ತಬುಲಂ ಬಾಯೊಳೆ ತೋಱೆ ಮೆಯ್ಮಱೆದು ನೋಡಿದಳ್ ಸಮರೈಕಮೇರುವಂ (ಪಂಪಭಾ. ೪–೩೭).

[ಕಯ್$_2$ (< ಕೆಯ್$_2$) + ಎಲೆ$_1$]

**ಕಯ್ಯೇಱು** (ನಾ). ಆನೆಗಳು ಸೊಂಡಿಲಿನಿಂದ ಮಾಡುವ ಕಾಳಗ : ಕರಿಮಕರಂಗಳ ಬಿಬ್ಬಿರಿ ಬಿರಿದೊಡೆದ ಶುಕ್ತಿಪುಟೋದರಂಗಳೊಳ ಗಣಿಂದಮುಚ್ಚಳಿಸಿದ ತಾರಾತರಲ ಮುಕ್ತಾಫಲಂಗಳುಮನೞ್ತಿವಟ್ಟು ನೋಡುತ್ತುಂ (ಆದಿಪು. ೧೨–೭೯ ವ).

[ಕಯ್$_2$ (< ಕೆಯ್$_2$) + ಏಱು$_5$ (< ಏಱ್$_5$)]

**ಕಯ್ಯೊಡನೆ** 'ಕೈಯೊಡನೆ' ನೋ.

**ಕಯ್ಯೊಡ್ಡು** 'ಕೆಯ್ಯೊಡ್ಡು' ನೋ.

**ಕಯ್ಯೋಡು** (ನಾ). ಕೈಯಲ್ಲಿರುವ ಓಡು ; ಕಪಾಲ; ಭಿಕ್ಷಾಪಾತ್ರೆ : ಕಯ್ಯೋಡು, ಕಾಲ್ಗೆರೆ (ಶಬ್ದಾನು. ೩೦೫ ವಾಖ್ಯಾ).

[ಕಯ್$_2$ (< ಕೆಯ್$_2$) + ಓಡು$_2$]

**ಕಯ್ರ**, ಕಯಿರ$_2$, ಕೈರ$_1$, ಖೈರ$_1$ (ನಾ). ೧. ಒಂದು ಜಾತಿಯ ಮರ; ಕಗ್ಗಲಿ; ಖದಿರವೃಕ್ಷ. ೨. ಕಾಚು ; ಖದಿರ. 'ಕಯ್ರಗುಳಿಗೆ' ಪರಾ. **ಕಯಿರ$_2$** : ೨. 'ಕಯಿರಗುಳಿಗೆ' ಪರಾ. **ಕೈರ$_1$** : ೧. "ಖದಿರ, ಕೈರ" (ಶಬ್ದಾನು. ೧೬೦ ಪ್ರಯೋ). ೨. ಪರಿಮಳಂಬೆತ್ತ ಕೈರದ ಗುಳಿಗೆ ವೀಳ್ಯಮಂ (ಗುರುಚಾ. ೬–೭೦) ; ಕೈಕಾಲು ಮೋರೆಯ ತೊಳೆದು ಕೈರಾದ ಗುಳಿಗೆ ಕರ್ಪುರದ ವೀಳ್ಯವ ಹಾಕಿ (ಚಂದ್ರಹಾ. ೩–೫೦). **ಖೈರ$_1$** : ೧. ಕುಕ್ಕುರದಪ್ಪಂಗಂ ಮೆಲಲಿಕ್ಕುಗೆ ಮಾದಲದ ಪಣ್ಣೊಳಂ ಖೈ(ಖದಿ) ರದ ಬಿತ್ತಕ್ಕುಮನೆ ಕೂಡಿ ತಿನೆ ತಲೆದೋರ್ಕುಮೆ ತದ್ವಿಷಂ (ಖಮುದ. ೧೩–೩೬) ; ಕಸ್ತೂರಿ, ಖೈರದ ತೊಗಟೆ (ಮುಂಬವ್ಯಾ. ೧೦೦). ೨. 'ಖೈರಗುಳಿಗೆ' ಪರಾ.

[< ಪ್ರಾ. ಖಇರ. (< ಸಂ. ಖದಿರ)]

**ಕಯ್ರಗುಳಿಗೆ**, ಕಯಿರಗುಳಿಗೆ, ಕೈರಗುಳಿಗೆ, ಖೈರಗುಳಿಗೆ (ನಾ). (ಬಾಯಿಯ ಪರಿಮಳಕ್ಕೋಸ್ಕರ ತಾಂಬೂಲದೊಡನೆ ಅಥವಾ ಹಾಗೆಯೇ ಉಪಯೋಗಿಸುವ) ಒಂದು ಸುಗಂಧಮಾತ್ರೆ. ℙ ಕಾಚಿನ ಕಷಾಯದಲ್ಲಿ ಶ್ರೀಗಂಧ, ಅಗಿಲು, ರೇಣುಕ ಮೊದಲಾದ ಪರಿಮಳದ ವಸ್ತುಗಳನ್ನು ಅರೆದು, ಸಹಕಾರ ತೈಲವೆಂಬ ಸುಗಂಧದೆಣ್ಣೆಯಲ್ಲಿ ಕಲಸಿಕೊಂಡು ಮಾಡುವ ಗುಳಿಗೆ: "ಕಯ್ರಗುಳಿಗೆ ಮೊದಲಾಗಿ ಮುಖವಾಸಿಸುವ ಗಂಧಂ – ಆಮೋದಿ, ಮುಖವಾಸನ" (ನಾಚಿರಾ. ೬). **ಕಯಿರಗುಳಿಗೆ** : ಮೃಗಮದ ಶ್ರೀಖಂಡ ಕುಂಕುಮಂ ಶಿರವಚ್ಚೆ ನಗಜವಾದಿ ಕಯಿರಗುಳಿಗೆಯುಂ ತಂದಿಟ್ಟು (ಲಿಂಗಪು. ೧೬–೪೪). **ಕೈರಗುಳಿಗೆ** : ಬಿಳಿಯೆಲೆಯಾಸಿರಿ ಕೈರಗುಳಿಗೆ ಮುತ್ತಿನ ಸುಣ್ಣ ಪಸರವಿಟ್ಟರೆ (ಭರತ. ೪೭–೧೯). **ಖೈರಗುಳಿಗೆ** : ಖದಿರ ಕಷಾಯದ ತೋಯಂ ಪದಿನಾರ್ಮಡಿಯಾಗಿ ಕಲಸಿಕೊಂಡಾ ಪುಡಿಯಂ ಮಿದಿದು ಸಹಕಾರತೈಲದೊಳದಱಿಂದಂ ಖೈರ ಗುಱ[ಳಿ]ಗೆಯಂ ಮಾಱ್ಕೆ ಬುಧರ್ (ಲೋಕೋಪ. ೭–೧೦). [ಕಯ್ರ + ಗುಳಿಗೆ$_1$]

**ಕಯ್ರದಂಬುಲ**, ಕೈರದಂಬುಲ (ನಾ). ಕಾಚು ಹಾಕಿದ ತಾಂಬೂಲ; ಸುಗಂಧ ಕೂಡಿದ ತಾಂಬೂಲ (೬). **ಕೈರದಂಬುಲ** : "ಖದಿರತಾಂಬೂಲ – ಕೈರದಂಬುಲ" (ಶಮುದ. ೨೯೩ ಪ್ರಯೋ) ; (ಪುಡಿಗಪ್ಪುರದ ಕೈರದಂಬುಲವನ್ನು . . . ಬಾಯ್ಗೆ ಮೆಲ್ಲಮೆಲ್ಲಗೆಯೂಡಿ) (ಮಂತ್ರಶ. ೬೧–೧೬). [ಕಯ್ರ + ತಂಬುಲ]

**ಕಯ್ರವಂಶ** (ನಾ). ಒಂದು ವಂಶದ ಹೆಸರು : ಶ್ರೀಕಯ್ರವಂಶಾಧಿಪನ್ (ಸೌಇಇ. IX–i, ೩೯೨–೧ ; 8ನೆಯ ಶತ). [ಕಯ್ರ$_0$ + ವಂಶ]

**ಕಯ್ರೊಕ್ಕ** 'ಕಯಿರೊಕ್ಕ' ನೋ.

**ಕಯ್ಲುಳಿ** 'ಕೈಲುಳಿ' ನೋ.

**ಕಯ್ವಟ್ಟೆ** 'ಕೆಯ್ವಟ್ಟೆ' ನೋ.

**ಕಯ್ವರ್** 'ಕೆಯ್ವರ್' ನೋ.

**ಕಯ್ವರನಾಡು**, ಕಯ್ವಾರನಾಡು (ನಾ). ಒಂದು ನಾಡಿನ ಹೆಸರು : ಕಯ್ವರನಾಡಧಿಪತಿ ಅಪ್ಪುಲನ್ ತುರುಗೊಳೊಳ್ (ಮೈಆರಿ. ೧೯೨೪, ೪೯–೨ ; 9ನೆಯ ಶತ) ; ಕಯ್ವರನಾಡ ನೆಕ್ಕುನ್ದಿನಾಡ ಊರಾಳಿಯ ದೇವಭೋಗ (ಎಕ. IX, ಹೊಸಕೋ. ೩೨–೧೩ ; 950) ; ಕಯ್ವರನಾಡ ಬೇಬುಗಲ್ಲಹ ಬುಕಯ್ಯನಬು ಮಣಿಯಾಚರಿಯ ಅೞಿಯ (ಎಕ. X, ಕೋಲಾರ. ೧೪–೩ ; 1035). **ಕಯ್ವಾರನಾಡು** : ಕಯ್ವಾರನಾಡಾಸೇವೆ (ಎಕ. X, ಚಿಂತಾಮ. ೧೨೬ (a)–೩ ; 800) ; ಕಯ್ವಾರನಾಡ ಸಜಕ್ಕ ನೂರಾ ಕಿಟ್ಟಂಬಿ ಮಾಸರಗಾವುಣ್ಡನ ಮಗ (ಎಕ. IX, ಹೊಸಕೋ. ೧೧–೪ ; 1041). [?]

**ಕಯ್ವಳಿ** (ನಾ). ಕೈವಶ; ಅಧೀನ (?) : ಕಯ್ವಳಿಯ ಜಯಶ್ರೀಯುಂ ಮೆಯ್ವಳಿಯ ಶ್ರೀಯುಮಿರುವೆರಲು ಬಲ್ಲಾಳಂ ಸಯ್ವಳಿಯ ನಡದುಲೋಗರ ಬಾಯ್ವಾಯೊಳು ಬರ್ಪ್ಪ ಕೀರ್ತ್ತಿವನಿತೆಗೆ ಕೂರ್ಪ್ಪಂ (ಎಕ. XI, ಚಿತ್ರದು. ೭೯–೧೯ ; 1214). [ಕಯ್$_2$ (< ಕೆಯ್$_2$) + ಬಳಿ$_3$ (< ಬೞಿ$_3$)]

**ಕಯ್ವಾಯ್** (ಕ್ರಿ). ಸೆಣಸು ; ಹೋರಾಡು : ದಿನಕರಕಾಂತಿಯುಮಂ ನೀವಿಂ ಪರಿಕಿಸಿ ನೋಡಿಮೆಂದು ಸೂರ್ಯನೊಡನೆ ಕಯ್ವಾಯ್ದು ಮಧ್ಯಸ್ಥರಲ್ಲಿಗೆ ಬರ್ಪಂತೆ ಪೊಳೆವ ಪೊಂಗಾಲಿಗಳಿಂದೊಪ್ಪುವ ರದಂ[ಥಂ]ಗಳಿಂ (ಧರ್ಮಾಮೃ. ೮–೧೯೬). [ಕಯ್$_2$ (< ಕೆಯ್$_2$) + ಪಾಯ್$_1$]

**ಕಯ್ವಾರ್** 'ಕೈವಾರ್' ನೋ.

**ಕಯ್ವಾರ** 'ಕೆಯ್ವಾರ$_1$' ನೋ.

**ಕಯ್ವಾರಂಗೊಳ್** 'ಕೈವಾರಂಗೊಳ್' ನೋ.

**ಕಯ್ವಾರನಾಡು** 'ಕಯ್ವರನಾಡು' ನೋ.

**ಕಯ್ವಿಡಿ$_1$** 'ಕೆಯ್ವಿಡಿ' ನೋ.

**ಕಯ್ವಿಡಿ$_2$** 'ಕೆಯ್ಪಿಡಿ' ನೋ.

**ಕಯ್ವಾಸು** 'ಕೆಯ್ವಾಸು' ನೋ.

**ಕಯ್ವೊಯ್** 'ಕೆಯ್ವೊಯ್' ನೋ.

**ಕಯ್ವೋಗು** 'ಕೆಯ್ವೋಗು' ನೋ.

**ಕಯ್ಸನ್ನೆ** 'ಕೆಯ್ಸನ್ನೆ' ನೋ.

**ಕಯ್ಸಾರ್** 'ಕೆಯ್ಸಾರ್' ನೋ.

**ಕಯ್ಸು** 'ಕೆಯ್ಸು' ನೋ.

**ಕಯ್ಸೇರು** (ಕ್ರಿ). ಕೈಗೆ ಸಿಕ್ಕು (?) : ನೊಱಂಬವಾಡಿಯುಳಿ ಕಯ್ಸೇರೆ (ಮೈಆರಿ. ೧೯೪೧, ೪೫–೫ ; 800). [ಕಯ್$_2$ (< ಕೆಯ್$_2$) + ಸೇರು$_1$ ?]

**ಕಯ್ಸೊಪ್ಪು** (ನಾ). ಕಹಿಯಾದ ಸೊಪ್ಪು ; ಕಹಿ ಮೂಲಿಕೆ (೬).

[ಕಯ್$_5$ + ಸೊಪ್ಪು$_3$]

**ಕಯ್ಸೊರೆ**, ಕಯ್ಸೋರೆ (ನಾ). = ಕಯ್ಪೆಸೊರೆ: ಮೆಯ್ಸೊಂಕು, ಬಾಯ್ಸವಿ, ಕಯ್ಸೊರೆ (ಭಾಷಾಭೂ. ೩೨ ಉದಾ). **ಕಯ್ಸೋರೆ** : (೬).

[ಕಯ್$_5$ + ಸೊರೆ$_2$]

**ಕಯ್ಸೋಗೆ** (ನಾ). ಒಂದು ಸ್ಥಳದ ಹೆಸರು : ಕಯ್ಸೋಗೆ ವಡೆಯ ಬೆಳ್ವಜ್ಜರ ರಸವರ್ಮ್ಮ ಗಾಯಿಗ ತಾಗರತಿಯ ಮಹಾಜನಕ್ಕೆ ಸುವರ್ಣ್ಣ ದನಮುಂ ಕೊಟ್ಟು (ಎಕ. VIII, ಸೊರಬ. ೫೭೦–೯ ; 951). [?]

**ಕಯ್ಸೋರೆ** 'ಕಯ್ಸೊರೆ' ನೋ.

**ಕರ$_1$** 'ಕರಂ' ನೋ.

**ಕರ$_2$** (ಗು). ಉಗ್ರವಾದ; ತೀವ್ರವಾದ; ಕಟುವಾದ. (ನಾ). ೨. ಕತ್ತೆ: "ಖರ – ಕರ" (ಶಮುದ. ೨೫೫ ಪ್ರಯೋ). [< ಸಂ. ಖರ]

**ಕರ$_3$** (ನಾ). **೧.** ಕೈ; ಹಸ್ತ: "ಪಾಣಿ ಹಸ್ತಂ ಪಂಚಶಾಖಿ ಕರಮೆನಲು ಕೈ" (ಮಂಗರಾ. ೯೫–೮); ನಸುನಕ್ಕು ಪೊಯ್ಯೆ ಕರದಿಂ (ಪಂರಾಮಾ. ೯–೧೦೪); ಕರದಿ ಕಪ್ಪರವುಂಟು ಹಿರಿದೊಂದು ನಾಡುಂಟು (ಸರ್ವಜ್ಞ. ೫೧೦). **೨.** ಆನೆಯ ಸೊಂಡಿಲು: ಐರಾವತಕರಲೂನ ಸಲ್ಲಕೀಶಬಳ ಮುಮಪ್ಪ ಉದಯಗಿರಿಯಿಂ ಸೊಗಯಿಸುವ (ಪಂಪಭಾ. ೪–೧೮ ವ). **೩.** ಮೊಳಕೈಯಿಂದ ನಡುಬೆರಳ ತುದಿವರೆಗಿನ ಅಳತೆ; ಮೊಳ. **೪.** ತೆರಿಗೆ; ಕಂದಾಯ: "ಕರಮೆನಲ್ಕೆ ಸಿದ್ಧಾಯಮಕ್ಕುಂ" (ಮಂಗರಾ. ೭೯–೭); ಅಳಿ ಪರಿಮಳವ ಕೊಂಬಂದದಲೆ ನೀನಾಳ್ವಿಳೆಯ ಕರದರ್ಥವನು ತೆಗೆವೈ ಪ್ರಜೆಯ ನೋಯಿಸದೆ (ಕುವ್ಯಾಸ. ೧–೫೩); "... ಒಳ್ಳೆಯ ಜಮೀನು ಅನುಭವಿಸುವ ಮನುಷ್ಯ ಹೆಚ್ಚಿಗೆ ಕರ ತೆರಲೇಬೇಕು" (ಪುನರು. ೩೦೬). **೫.** ಕಪ್ಪ; ಕಾಣಿಕೆ: ಭೋಜರಾಜಂಗೆ ಕರಮಂ ತೆಱಲೆಂದು ಬಂದ ನಂದಗೋಪನಂ ಕಂಡು (ಜಗವಿ. ೩–೨೨ ವ). **೬.** ಕಿರಣ; ಕಾಂತಿ: ಪರ್ವಿದ ಮರ್ವಾಕ್ಷಣದೊಳೆ ಕಿಡುವಂತೆ ಚಂಡಕರ ಕರಹತಿಯಿಂ (ಪಂರಾಮಾ. ೧೩–೧೩೦); ತುಱುಗಿ ಕರಂಗಳಂ ಕೆದಱೆ ವಕ್ಷದೊಳುಜ್ವಳತಾರಹಾರಂ (ಪುಷ್ಪಪು. ೩–೭೪). **೭.** ನೀರು. **೮.** ಮೋಡ. **೯.** ರಕ್ತ. **೧೦.** ಗಾಳಿ. **೧೧.** ಎರಡು ಎಂಬುದರ ಸಂಕೇತ: "ಯಮುನಯನ ಕರ್ಣ ಕರ ಪದ ಯಮುಳಾಂಘ್ರಿ ... ಕಿವಿಗಳೆರಡಱ ನಾಮಂ" (ವ್ಯವಹಾ. ೯–೨). **೧೨.** ಆರು ಎಂಬ ಸಂಖ್ಯೆ: ಕರ [ಪಾಠಾಂ. ಅಱು, ಖರ] ಮಾತ್ರೆಗಳಕ್ಕುಮೋಜೆಯೊಳ್ (ಛಂದೋಂಬು. ೩–೧೯); "ಕಿರಣಂಗಳೊಳು ನೃಪಭಾಗದೊಳು ಜಲದೊಳಂಬುಜದೊಳನಿಲನೊಳು ಕೈಗಳೊಳು ಕರಮೆನಿಕ್ಕುಂ" (ಮಂಗರಾ. ೧೪೮–೪೩); "ಕಿರಣಂ ಕೀಲಾಲ ವಾರಿಪ್ರದ ಬಲಿ ಪವನಂ ಕೃತ್ಯ ರಾಜರ್ಥಹಸ್ತಂ ಕರ ಶಬ್ದಂ" (ನಾನಾರ. ೨೦); "ಕಿರಣಂ ಬಲಿಗಳ್ ಮೇಘಂ ಮರುತಾರುಣ ಕೃತ್ಯತತಿಗೆ ಕೈಯೆಂಬೆಂಟುಂ ಕರ ಶಬ್ದಮಕ್ಕು" (ನಾನಾಕಂ. ೫೨). [ಸಂ.]

**ಕರ$_4$** (ನಾ). ಅಪಾಯ; ಆಪತ್ತು: ಅರ[ಸ]ನ ಮೆ[ಯ್ಗೆ] ಕರಮೆಂಬು[ದ]ಂ ಕೇಳ್ದು × ಲ್ಲ ಮುನ್ದೆ ನಿನ್ದು ಕೂಱಾ ತೊಱದು ಮೂವತ್ತು ಗಾವುದ × × × ದೆವಸದೊಳೆಯ್ದಿ ಅರಸನಂ ಜಾಮಿಸಿ ನುರಿವುತ್ತಿಟ್ಟುದಂ ಕಣ್ಡು (ಸೌಇಇ. XI–i, ೧೧–೧೬; 865). [?]

**ಕರಂ, ಕರ$_1$, ಕರಮೆ, ಖರ$_1$** (ಅ). ಹೆಚ್ಚಾಗಿ; ವಿಶೇಷವಾಗಿ; ಬಹಳವಾಗಿ: "ನಾಡೆಯೆಡೆಯಾವಗಂ ನೆಱೆ ನೀಡುಂ ಕರಮಾದಮೆಯ್ದೆ ನೂಳದು ಪಿರಿದುಂ ... ಇವವ್ಯಯದೊಳಧಿಕಾರ್ಥಂ" (ಶಮುದ. ೩೦೪); ಚಿಂತಿಪಳ್ ಕಳವಳಿಪಳ್ ಕರಂ ಕಱಿಯೆ ನಂಬಿಪಳ್ (ಕಾವ್ಯಸಾ. ೯೯೩ ಶೂದ್ರಕ); ಒರ್ವರ್ ಋಷಿಯರ್ ನೀರಟ್ಟೆಯಿಂದಂ ಕರಂ ಸೇದೆಗೆಟ್ಟು (ವಡ್ಡಾರಾ. ೧೦೪–೪); ಎನ್ನಂ ಕರಂ ನಂಬಿದಂಬೆಯೊಳ್ (ಪಂಪಭಾ. ೧–೭೭); ಎನ್ನಂ ಕರಂ ಮನ್ನಿಸಿ ಮಾತಾಡಿದಪಂ (ಪಂಚತಂ. ೩೪–೬). **ಕರ$_1$**: ಅವನಿಪಾಲರು ಕಂಗಳಿಂದವೆ ಕಿವಿಗೆ ಕರವೊಳ್ಳಿದರು (ಕುವ್ಯಾದ್ರೋ. ೧೮–೨); ಕರ ಭಿನ್ನನಾದನು ತತ್‌ಪ್ರಜಾಕ್ಷೋಭಪ್ರವೃತ್ತಿಯಲಿ (ತೊರರಾ. ೧–೫–೧೭); ದೋಷಾಕರಂ ಜಡನಾಗಿ ಬೀದಿಯೊಳು ಕರ ಬಳಲಿ (ಭಾವಚಿಂ. ೨–೨೮). **ಕರಮೆ**: ಕೀಚಕಂ ಕಾಮದೇವಂ ಮಾಡಿದ ಯಾಚಕನಂತೆ ಕರಮೆ ನಾಣ್ಗೆಟ್ಟು (ಪಂಪಭಾ. ೮–೫೯ ವ); ಕರಮೆ ಬಣ್ಣಿಸಲ್ಕಱಿಯಂ ಫಣಿಪತಿ (ಸುಕುಮಾ. ೫–೫೦ ರಗಳೆ); ಸಾಸವೆಗುಡಿದಂತಿರೆ ಕರಮೆ ಮಱುಗಿ ತಳವೆಳಗಾದಂ (ಧರ್ಮಾಮೃ. ೧–೧೪೩). **ಖರ$_1$**: ವೃಜಿನ ಕೇಳ್ಮಿಟ್ಟುವುದು ಖರ ಹೊಲ್ಲೆಂದನಾ ಯೋಗಿ (ನಿಭಾಗ. ೧೧–೧೪–೧೯). [?]

**ಕರಂಕ** (ನಾ). **೧.** ಅಸ್ಥಿಪಂಜರ. **೨.** ತಲೆಬುರುಡೆ. **೩.** ತೆಂಗಿನ ಚಿಪ್ಪಿನಿಂದ ಮಾಡಿದ ಪಾತ್ರೆ. **೪.** ಭರಣಿ. **೫.** ಸಣ್ಣಪೆಟ್ಟಿಗೆ. 'ಕರಂಕವಾಹಿನಿ' ಪರಾ. [ಸಂ.]

**ಕರಂಕವಾಹಿನಿ** (ನಾ). ಭರಣಿ ಅಥವಾ ಸಣ್ಣಪೆಟ್ಟಿಗೆಯನ್ನು ತೆಗೆದುಕೊಂಡು ಯಾವಾಗಲೂ ಸಂಗಡ ಇರುವ ಪರಿಚಾರಿಕೆ: ಚಿತ್ತದೊಳ್ ಕೀಲಿಸೆ ಕಾವನಂಬವಱ ಬಿಣ್ಪಿನೊಳೊಯ್ಯನೆ ಜೋಲ್ದವೋಲೆ ತಾಂಬೂಲಕರಂಕ [ಪಾಠಾಂ. ಡ] ವಾಹಿನಿಯ ಮೇಲೆ ನೆಱಲ್ದಿರೆ ಬಾಲೆ ಲೀಲೆಯಿಂ (ಪಂಪಭಾ. ೪–೪೩); ಕೆಲದೊಳಿರ್ದ ಸಖೀ ಕದಂಬದ ಮೊಗಮಂ ನೋಡೆ ಸಂತತ ಸನ್ನಿಹಿತೆಯಪ್ಪ ತಾಂಬೂಲಕರಂಕವಾಹಿನಿ ಮಕರಿಕೆಯೆಂಬಳ್ (ಕಾದಂಪೂ. ೩೪೧).

[ಸಂ. ಕರಂಕವಾಹಿನೀ]

**ಕರಂಗಿ** (ನಾ). (?): ಸೂರಿಯಪುಟದೆ ಕರಂಗಿಯ ಮಾಸದ ಭಾರಿಗೆಲಸದ ಕಂಚುಕವ ನಾರಿಯರಾ ವೇಳೆಯೊಳು ತೊಟ್ಟು ನಡೆದರು ಮಾರನ ಬಳಗವೆಂಬಂತೆ (ಜ್ಞಾನಚಂ. ೧೮–೬೦). [?]

**ಕರಂಗು, ಕರಗು** (ಕ್ರಿ). **೧.** ನೀರಾಗು; ದ್ರವರೂಪವಾಗು; ಕರಗಿಹೋಗು: ದಿಶೋತ್ಕರಮನಿತುಂ ಕರಂಗಿ (ಕುಸುಮಾ. ೩–೩೧); ದೃಗುಶಿಖಿಯ ಸೆಕೆಯಿಂ ಜಡೆಗಳೆಡೆವುಡುಪತಿ ಕರಂಗಲು ಒಡನೆ ಸಸಿ ಕರಗಿದಡೆ ಸುಧೆ ತಲೆಯಿಂದಿಳಿದು ಪರಿಯೆ (ಬಸಪು. ೧೭–೧೯). **೨.** ಕೃಶವಾಗು; ಸೊರಗು: ಅತನುಪರಿತಾಪಿತಶರೀರನುಮಾಗಿ ಶಂತನು ಕರಂಗೆರ್ದೆಗಿಡೆ (ಪಂಪಭಾ. ೧–೭೧ ವ). **ಕರಗು**: **೧.** "ಕರಗು – ವಿಲೀನೇ" (ಶಮುಧಾ); ಭೀಮಸೇನಂ ತನ್ನ ತಲೆಯೊಳಂ ಮೆಯ್ಯೊಳಂ ಕರಗಿ ಸುರಿವರಗಿನುರಿಯ ಬಂಬಲ್ಗಳಂ ಪೊಸೆದು (ಪಂಪಭಾ. ೩–೬ ವ); ಮಂಜಿನ ಮಳೆಗೆ ಕುಲಗಿರಿ ಕರಗುವುದೆ (ಕುವ್ಯಾದ್ರೋ. ೨–೫೪); ಬಿಸಿಯಾಗದೆ ಬೆಣ್ಣೆ ಕರಗದು (ಗಾದೆ). **೨.** ವಿರಹಾನಳನಿಂ ಬೆಂದು ಕರಗಿ ಕೊರಗಿ (ವಡ್ಡಾರಾ. ೬೦–೧೭); ಕುಳಾಪವಾದದ ನುಡಿಯೆಯ್ತರೆ ಕರಗಿ ಕೊರಗಿ (ಶಾಂತಿಪು. ೩–೮೦ ವ); ತಿಱಿದಿಕ್ಕಿದ ತಳಿರಂತೆ ಕೊಗ್ಗನೆ ಕರಗಿ (ಸುಕುಮಾ. ೧೨–೨೪ ವ); ಬಂದಹನೆಂದು ಬಟ್ಟೆಯ ನೋಡಿ ಬಾರದಿದ್ದರೆ ಕರಗಿ ಕೊರಗಿದೆನವ್ವಾ (ಮಹಾದೇ. ಬ. ೧೪೨–೩೨೩). **೩.** ಮಾಯವಾಗು; ಇಲ್ಲದಾಗು; ಮರೆಯಾಗು: ಮುಗಿಲಂ ಕಂಡು ... ಮತ್ತೆ ನೋೞ್ಪನ್ನೆಗಂ ಕರಗಿದುದಂ ಕಂಡದುವೆ ನಿರ್ವೇಗಕ್ಕೆ ಕಾರಣಮಾಗಿ (ವಡ್ಡಾರಾ. ೧೦೯–೬); ಪವನಾಭಿಘಾತದಿಂದಂಬುವಾಹತತಿ ಕರಗುವಂತೆ ಕರಗುಗು ನಿನ್ನೀ ಸ್ತವಭೇಷಜದಿಂದಘ ಕರಗುವುದಲ್ತೆ (ಜಿನಾಲೆ. ೨೨); ಇಂದು ಕರಗಿದನಾಗಳ್ (ದಶಕು. ೧೦–೬೭); ಕಲ್ಪಾಂತದಲಿ ಕರಗಿದ ಧರೆಯನುದ್ಧರಿಸಿದೆನು ಯಜ್ಞವರಾಹರೂಪಿನಲಿ (ಕುವ್ಯಾದ್ರೋ. ೩–೭೧). **೪.** (ಆಲಂ) ಮರುಕಗೊಳ್ಳು; ಮೃದುವಾಗು; ಕನಿಕರಪಡು: ಎರ್ದೆ ಕರಗಿ ಕೊರಗಿದಂ ಧರಣೀಶಂ (ಆದಿಪು. ೪–೬೪); ಜೀವ ಕೌರವನಲ್ಲಿ ಕರಗುವುದೇನ ಹೇಳುವೆನು (ಕುವ್ಯಾದ್ರೋ. ೧–೨೭); ಹೃದಯ ಕರಗುವ ಮಾತನೆಂದುದು (ನಳಚ. ೨–೧೭). **೫.** ನೀರಾಗಿಸು; ದ್ರವರೂಪಗೊಳಿಸು: ಬಾಯೊಳಗೆಱೆವರರಗನು ಕರಗಿ (ನಿಭಾಗ. ೫–೧೧–೩೫); ಒರೆಗಲ್ಲ ರಜವ ಮೇಣದೊಳೊತ್ತಿ ತೆಗೆದದ ಕರಗಿ ಸುವರ್ಣ ಬಂಡುಗವ ನೆರೆದ ಯಾಚಕರಿಗೆ ಹಂಚಿ ಕುಡುವ ಚಿನ್ನವರದರೊಪ್ಪಿದರು ಕಟ್ಟೆಯಲಿ (ಮೋಹತ. ೩–೨೮).

[ದೇ. ‖ ತಮಿ. ಕರೈ; ಮಲ. ಕರಕ್ಕು; ತುಳು. ತೆಲು. ಕರಗು]

**ಕರಂಗೊಳ್** (ಕ್ರಿ). ಹಿಡಿದುಕೊಳ್ಳು: ಅತ್ವಂ ಬೆರಸು ಟಕಾರಕ್ಕೆ – ನಟ್ಟನಡು, ಕಟ್ಟಕಡೆ. ಕಟ್ಟಕಡೆಯ ಪೆರ್ವಟ್ಟೆ ಕರಂಗೊಂಡು [ಪಾಠಾಂ. ಕರಂಗೆಂಟು, ಕರಂಗೊಂಟು, ಕಡಂಗೆಂಟು] (ಶಮುದ. ಸ. ೨೦೪ ಪ್ರಯೋ).

[ಕರ ? + ಕೊಳ್$_1$]

**ಕೆರಂಜ₁** (ನಾ). ಒಂದು ಬಗೆಯ ಮರ; ಹುಲಿಗಿಲ ಮರ; "ಹುಲಿಯುಗುರುಗಿಡ" (ಅಮರ. ಟೀಕೆ): ಮುಂದ್ಯೈಸಿ ನಿಂದ ಕರಂಜದ ಪೂಗೊಂಚಲುಗಳುಮಂ (ಕಾದಂಉ. ೨೬೬); ತಿಳಕ ತಮಾಳ ತಾಳ ಸಹಕಾರ ಕರಂಜ ಕಡಂಬ ನಿಂಬ ಪಾಟಳ ತರುಸಂಘದಿಂ (ಎಕ. VII, ಶಿಕಾರಿ. ೨೩೫-೬೫; 1207). [ಸಂ.]

**ಕೆರಂಜ₂** (ನಾ). ಒಂದು ಊರಿನ ಹೆಸರು: ಅಸನ್ದಿ ವಿಷಯೇ ಕರಞ್ಜ ಗ್ರಾಮೇ ಚತುರ್ತ್ಥವರ್ತ್ತನೀ (ಮೈಆರಿ. ೧೯೪೩,೧-೫; 500). [?]

**ಕೆರಂಜ₃** (ನಾ). ಒಂದು ಬಗೆಯ ಪಾತ್ರೆ (?): ವೀಳ್ಯವ ನೀಡಿ ಗಿಂಡಿ ಕರಂಜ ಕಾಳಂಜಾಲಿವಟ್ಟಲನೂ ಕೂಡಿ ಚೌಷಷ್ಟ್ಯೋರನಾರಿಯರಾಡುತಿಹ ರೆಡಬಲದಿ (ಬಿಜ್ಜಪು. ೨೩-೩೫). [?]

**ಕೆರಂಜಕ** (ನಾ). ಒಂದು ಬಗೆಯ ಮರ; ಹುಲಿಗಿಲ ಮರ (ಕಿ). [ಸಂ.]

**ಕೆರಂಜಿ** (ನಾ): = ಕರಂಜಕ: ತದಿಕು ತಂಡಸು ತಡಸು ತಪಸಿಕ [ಪಾಠಾಂ. ಕು]ರಂಜಿ ಕರ್ಜೂರ (ತೊರರಾ. ೩-೧-೨೬). [< ಕರಂಜ₁]

**ಕೆರಂಜಿಕಾಯ್**, ಕರಂಜಿಕಾಯಿ, ಕರಚಿಕಾಯಿ, ಕರಜಿಕಾಯಿ, ಕರಜೀಕಾಯಿ, ಕರ್ಚಿಕಾಯಿ, ಕರ್ಜಿಕಾಯಿ, ಖರ್ಜಿಕಾಯಿ (ನಾ). ೧. ಕರಿದು ಮಾಡುವ ಒಂದು ಬಗೆಯ ಸಿಹಿ ತಿಂಡಿ; ಗಿಲಗಂಚಿ (ಉಕ): ಪುರಿಗಡಬು ತರಗು ಚಕ್ಕುಲಿ ಕರಂಜಿಕಾಯತಿರಸಂ ಚಿಗುಳಿ ಲಡ್ಡುಗೆ (ವೃಷವಿ. ೯-೭೮). **ಕರಂಜಿಕಾಯಿ:** ೧. ಚಕ್ಕಲಿ, ಕರಂಜಿಕಾಯಿ . . . ಇವೆಲ್ಲ ಇವೆ ನಮ್ಮ ಮನೆಯಲ್ಲಿ (ಕಸಾಚಿ. ೧೧೬). **ಕರಚಿಕಾಯಿ:** ೧. ಗೋದಾವರಿ ಖಾರದ ಕರಚಿಕಾಯನ್ನು ಇತರ ಕರಚಿಕಾಯಿಗಳಲ್ಲಿ ಸೇರಿಸಿ ಕಿಟ್ಟಿಗೆ ಹಾಕಿದಳು (ಗಂಮಾಯಿ. ೮೭). **ಕರಜಿಕಾಯಿ:** ೧. ಗಂಡಿನ ಮನೆಗೆ ಕಳುಹಿಸಿ ಕೊಡುವ ಚಕ್ಕುಲಿ ಕರಜಿಕಾಯಿಗಳನ್ನು ಕರಿಯುತ್ತ, ಹೆಂಗಸರು ಹಾಡುವ ಹಾಡುಗಳು (ಬೆಳುಮು. ೨೨). ೨. (ಕರಾ) ಉತ್ತುತ್ತೆ: ಕರಜಿಕಾಯಿ ಕೊಬರಿ ಜೊತೆಯಾಗಿ ತಿನ್ನಲು ಬಹು ರುಚಿ (ರೂಢಿ). **ಕರಜೀಕಾಯಿ:** ೧. ಚಿಗುಳಿ, ಕಡಬು, ತಂಬಿಟ್ಟು, ಕಡಲೆಯುಂಡಲಿಗೆ, ಕರಜೀಕಾಯಿ ಮೊದಲಾದ ಭಕ್ಷ್ಯಗಳಿಂದಲೂ (ಕೃವಾಸ. ೫); ಒಬ್ಬರಿಗೊಬ್ಬರು ಕರಜೀಕಾಯಿ, ಅನಾರಸ, ಬೂಂದಿ, ಜಿಲೇಬಿ ಮೊದಲಾದ ಮಧುರಪದಾರ್ಥಗಳ ತುತ್ತುಗಳನ್ನು ಮಾಡಿ ಬಾಯಲ್ಲಿ ಹಾಕಿದರು (ಮಂಜುಕ. ೬೬). **ಕರ್ಚಿಕಾಯಿ:** ೧. ಸಂಭ್ರಮದಿಂದ ಹೋಳಿಗೆ ಹುಗ್ಗಿ ಕರ್ಚಿಕಾಯಿ ಕಡಬು ಕಜ್ಜಾಯಗಳನ್ನು ಮಾಡಿದ ವಾಸನೆಯು ತಿಳಿದು (ಕೃಷಿಪ್ರ. ೧೧). **ಕರ್ಜಿಕಾಯಿ:** ೧. ತರಗು ಚಕ್ಕುಲಿ ಕರ್ಜಿಕಾಯ[ಯಿ]ಗಳ ಕರಕೆ ಬಾಯ್ಗುನುವರಿಸಿ ಕೊಡಲಾರ್ಗೆಂದು ಮರುಗಿದಳು (ಜಿರಾಮಾ. ೪-೩೧). **ಖರ್ಜಿಕಾಯಿ:** ೩. (ಆಲಂ) ಹುರುಳಿಲ್ಲದವನು; ಹೇಡಿ: ಅಯ್ಯೋ ಬಡಾಯಿಗಾರ ಕೊನೆಗೂ ಇಷ್ಟೇನೆ? ನೀನೊಬ್ಬ ಖರ್ಜಿಕಾಯಿ (ಮಲ್ಲಿ. ೨೦೬). 'ಕರಂಜಿಗ್ಗೆ₂' ಪರಾ.

[ಕರಂಜಿ₀ + ಕಾಯ್₄. / ತೆಲು. ಕರ್ಜಕಾಯ]

**ಕೆರಂಜಿಕಾಯಿ** 'ಕರಂಜಿಕಾಯ್' ನೋ.

**ಕೆರಂಜಿಕೆ**, ಕರಂಜಿಗ್ಗೆ₁ (ನಾ). ಉಪ್ಪಿನಕಾಯಿ ಹಾಕುವ ಒಂದು ಬಗೆಯ ಹುಳಿಕಾಯಿ; **ಕರಂಡಿಕಾಯಿ:** ಕಮ್ಮಿಪ್ಪ ಸುಭದ್ರೆ ಮಾಮಿಡಿ ಕರಂಜಿಕೆ [ಪಾಠಾಂ. ಡಿಕೆ]ಯುಂಬಟಿ ನಿಂಬೆ ನೆಲ್ಲಿಗಾಯ್ ಕಪ್ಪುರಗಂಪನೊಪ್ಪಿಸುತುಮಿರ್ಪ . . . ಉಪ್ಪಿನಕಾಯ್ಗಳಂ (ಲೀಲಾವ. ೫-೭೧). **ಕರಂಜಿಗ್ಗೆ₁:** ನೆಲ್ಲಿ ಹಿಪ್ಪಲಿ ಕರಂಜಿಗೆ [ಪಾಠಾಂ. ಜೀರಿಗೆ] ಬೆಲ್ಲವುದಿ ಬೆಲ್ಲವತ್ತ ಮಾಗುಳಿ ಬಿದಿರಕಳಿಲೆ . . . . ಕಾಯ್ಗಳಿಂದ ಸಮೆದೊಪ್ಪುವುಪ್ಪಿನಕಾಯ್ಗಳಂ ಮಾಳ್ಪುದು (ಸೂಪಶಾ. ೩-೧೬).

[< ಕರಂಡಿ]

**ಕೆರಂಜಿಗ್ಗೆ₁** 'ಕರಂಜಿಕೆ' ನೋ.

**ಕೆರಂಜಿಗ್ಗೆ₂**, ಕರಜಿಗೆ (ನಾ). = ಕರಂಜಿಕಾಯ್: ಸವೆದ ಗೋದುವೆಯ ಬಟ್ಟಿಂ ಸಣ್ಣ ಸಿಬೆಲೆಗಳ ಸವನಾಗಿ ಹಪ್ಪಳದಗಲದಲ್ಲಿ ಲತೆಯಿಱಿದು ಅವಕೆ ಹುರಿದೆಳ್ಳು ಸಕ್ಕರೆಯಿಕ್ಕಿ ಒಂದನಿಮ್ಮಡಿಸಿ ತುಪ್ಪದೊಳಗಡಲು ಅವು ಕ[ಪಾಠಾಂ. ಗ]ರಂಜಿಗೆಯಾದವು (ಸೂಪಶಾ. ೧-೪೪). **ಕರಜಿಗೆ:** ಕರಜಿಗೆಯ ಕಾಯಿ ದೋಸೆಗಳ ಹಸನಂ ಪುರೋಹಿತರೆ ಚನ್ನಾಗಿ ಸವಿ ಸವಿದು ನೋಡಿ (ಸಮ್ಮಕೌ. ೭-೨೭).

[ಕರಂಜಿ₀ + -ಗ್ಗೆ₁. / ಮರಾ. ಕರಂಜೀ]

**ಕೆರಂಜಿಗ್ಗೆ₃** (ನಾ). ಒಂದು ಊರಿನ ಹೆಸರು: ಕರಂಜಿಗೆಯ ಶ್ರೀ ಸಿದ್ಧಗಜ್ಜೇಶ್ವರ ದೇವರಂಗಭೋಗಕ್ಕಂ ನಿವೇದ್ಯಕ್ಕಂ (ಎಇ. XXVII, ೧೫-೪೦; 1114). [?]

**ಕೆರಂಟಿ**, ಕರಟ₁, ಗರಟೆ, ಗೆರಟೆ (ನಾ). ೧. ತೆಂಗಿನ ಚಿಪ್ಪು; ಚೊಟ್ಟಿ; ಪರಟೆ: ಸಜ್ಜಕಮಂ ತುಱುಂಬಿ ಪೊಲೆಗಳ್ಗೆ ಕರಂಟಿಮನಿಕ್ಕಿ ಕಟ್ಟಿ ಸತ್ಕಜ್ಜಳಮಂ ವಿಲೋಚನಯುಗಕ್ಕಿರದೂಡಿ . . . ವೃದ್ಧವಾರಯೋಷಿಜ್ಜನಮೊಪ್ಪಿತಲ್ಲಿ ವಿಟರಂ ಕರೆಯುತ್ತೆ (ಉದ್ಭಟ. ೧೦-೭೧). **ಕರಟ₁:** ೧. ಮಾರುಡದ ಕರಟದೊಳ್ ಸಂಚಾರಿಸಿ ಸುಟ್ಟು (ಲೋಕೋಪ. ೭-೬೩); ತೆಂಗಿನ ಕರಟದೊಳಗೆ ಕಿಱುವೆರಲ ಗಾತ್ರದ ವೆಜ್ಜವಂ ಮಾಡಿ (ಸೂಪಶಾ. ೧-೫೬); ಕೊಬ್ಬರಿಗೆ ಸಲ್ಲಬೇಕಾದ ಗಮನವನ್ನು ಕರಟಕ್ಕೆ ಸಲ್ಲಿಸಬೇಕಾಗಿದೆ (ಸಾಹಿಶ. ೫೫). ೨. ರಾಟೆಯಲ್ಲಿ ಕದಿರು ಹಿಡಿಯುವುದಕ್ಕಾಗಿ ಮಾಡಿದ ಚಿಪ್ಪಿನ ಹಿಡಿಕೆ: ತನ್ನ ಮನಕ್ಕೆ ಬಂದಂತೆ ನೆಗೆಯುತ್ತುಂ ಕರಟದ ಕದಿರಂತೆ ತಿಱ್ಱನೆ ತಿರುಗುತ್ತುಂ (ಧರ್ಮಾಮೃ. ೨-೧೧೨). **ಗರಟೆ:** ೧. ಜೋಕೆಯಿಂಗಾದರೊಳ್ಳಿತು ಪಾಲು ಮುಂದೆಯಂದರೆ ಗರಟೆ ನಿನಗೆಂಬರು (ತುರಂಗ. ೪-೫); ಹಗಲೆಲ್ಲ ಗರಟೆ ಹೆರೆಯುವುದಷ್ಟೆ ಕೆಲಸ ಅಂತ ತಿಳಿದಿರಾ? (ಅನಾಥ. ೩೧). **ಗೆರಟೆ:** ೧. ಮರದ ಅಥವಾ ತೆಂಗಿನ ಗೆರಟೆಯ ಸೌಟುಗಳೂ ಉಪಯೋಗಕ್ಕೆ ಬೀಳುತ್ತವೆ (ಅಡುಸೌ. ೩೩); ತೊಟ್ಟಿನಿಂದ ಬರುವ ಮೇಣವನ್ನೆಲ್ಲ ಒಂದು ಗೆರಟೆಯಲ್ಲಿ ಸಂಗ್ರಹಿಸಿಕೊಂಡನು (ಈಕಥೆ. ೫೨); ಗುಡ್ಡಗುಡ್ಡಕ್ಕೆ ಬೆಂಕಿ ಹಾಕಿ ತೂತು ಗೆರಟೇಲಿ ನೀರು ಹೊಯ್ದರು (ಗಾದೆ).

[?. / ಮರಾ. ಕರಟೀ, ಕರಂಟೀ. / ಸಂ. ಕರೋಟ, ಕರೋಟೀ= ತಲೆಬುರುಡೆ, ಬಟ್ಟಲು]

**ಕರಂಡ** (ನಾ). ೧. ಮುಚ್ಚಳವಿರುವ ಸಣ್ಣ ಪಾತ್ರೆ; ಭರಣಿ; ಕರಡಿಗೆ: ತಿಗುರನಿಕ್ಕುವ ಲೇಪಿಸುವ ತಟ್ಟೆಗಳ ತಿಲಕಾಂಜನ ಕರಂಡದ . . . ಸಾದು ಜವಾದಿಗಳ ಸಿಂಪುಗಳೆನೆಸೆದುದು (ಬಸವು. ೧೨-೧೧). ೨. ಬಿದಿರಿನಿಂದ ಹೆಣೆದ ಬುಟ್ಟಿ: ಕಾಱ್ಕಿಱ್ಚಿಗಂಜಿದಾತಂ ಪೆರ್ಮುಡುವಂ ಪೊಕ್ಕೊಡೆ ಬಾಱ್ಗುಮುದ್ಧತಿಯಿಂ ಕರಂಡಮಂ ಪೊಕ್ಕೊಡೆ ಕಱುಮುಱಿಯಾಗಿ ಬೇಗುಂ (ಧರ್ಮಾಮೃ. ೧೧-೪೬); ಕಸ್ತೂರಿಯ ಕರ್ಪೂರದ ಕಮ್ಮೆಣ್ಣೆಯ ಕಾವಿಗಪ್ಪಡದ ಕರಂಡಮಂ ಕೈಯೊಳ್ಕೊಂಡು (ರಾಮಾಶ್ವ. ೨೯-೧೮). ೩. ಒಂದು ಜಾತಿಯ ಗಿಡ. 'ಕರಂಡಹಣ್ಣಿನಗಿಡ' ಪರಾ.

[ಸಂ.]

**ಕರಂಡಕ** (ನಾ). = ಕರಂಡ ೧: ಸಕಳ ವಿದ್ಯಾರತ್ನ ಶುಂಭತ್ಕರಂಡಕಮಂ ಕಂಡೆಂ (ಸುಕುಮಾ. ೩-೨೧); ಪ್ರಭಾಮಂಡಲಂ ಮನಃ ಕರಂಡಕದೊಳಾ ಕನ್ಯಾರತ್ನಮಂ ತಳೆದು (ಪಂರಾಮಾ. ೬-೮ವ); ಚಿಂದಳಿರ ಕರಂಡಕಮರವಿಂದದಳ ಸ್ಫುಟಿಕೆ ಕದಳಿಯೆಲೆವಡಲಿಗೆ ಚೆಲ್ವೊಂದಿರೆ (ರಾಜಶೇ. ೧೦-೩೪); ಅವರೆಲ್ಲ . . . ಕೈಯಲ್ಲಿ ಕುಸುರೆಳ್ಳಿನ ಕರಂಡಕವನ್ನು ಹಿಡಿದುಕೊಂಡು ಅತ್ತಿತ್ತ ಹಾರಾಡಿದರು (ರಂಗರೋ. ೧೧೪).

[ಸಂ.]

**ಕರಂಡಗೆ,** ಕರಡಗೆ (ನಾ). ೧. = ಕರಂಡ ೧ : ಭೂವನಿತೆಯ ಕರ್ಪೂರದ ಕರಂಡಗೆ . . . ಪೊಸವೇಟದಿರ್ಕೆ ಸಯ್ಪಿನ ತಾಣಂ (ಶಾಂತಿಪು. ೯–೧೩೫); ಕಪ್ಪುರದ ಕರಣ್ಡಗೆಗೆಣೆಯಪ್ಪ ಸಭಾಮಂಟಪ[ಕ್ಕೆ] (ಸೌಇಇ. XI–i, ೪೫–೪೨ ; ೨೪೦). ೨. = ಕರಂಡ ೨ : ತುದಿ ಕಂಬಿಯೊಳು ಕರಂಡಗೆಯ ನೊಲಿದಳವಡಿಸಿ ಸದಮಳಂ ನಡೆದಂ (ಬಸರ. ೩–೧೧); ತತ್ಕರಂಡಗೆಯಿಂದಲೊಂದರಲು ನೆಲಕೆ ಬೀಳೆ (ವೀಶೈವು. ೨–೬–೫). **ಕರಡಗೆ:** ೧. ತುಂಬಿದ ಕರಡಗೆಗಳ ಲೋಲಪುತ್ರರಿಗೆ ನೀಡಿದನು (ಭರತ. ೨೭–೪೮). ೨. ಹೂವ ಕೊಯ್ಯ ಹೋಗಿ ಕರಡಗೆಯ ಮಱೆದೆ (ಅವಚಂ. ೧೯೩–೮೭೦); ಬಾಸಣಿಸಿದಗ್ಗವಣಿ ಕಯ್ಯ ಕರಡಗೆಯೆಸೆಯೆ (ಕಣ್ಣ ರ. ದೇ. ೧೩೩–೧೬). [< ಸಂ. ಕರಂಡಕ]

**ಕರಂಡಹಣ್ಣಿನಗಿಡ** (ನಾ). ಒಂದು ಬಗೆಯ ಗಿಡ : ಕರಂಡಹಣ್ಣಿನ ಗಿಡ, ಕಬಳಿಗಿಡ, ಕಳಾಗಿಡ, ದೊಡ್ಡಕಾವಲಿ, ಹೆಜ್ಜಾರಿಗೆ (ವೈ ಔ ಗಿ. ೧೮–೩೨೨). [ಕರಂಡ + ಹಣ್ಣು$_3$ (< ಪಣ್$_2$) + ಗಿಡ (< ಗಿಡು)]

**ಕರಂಡಿಕೆ** (ನಾ). ಚಿಕ್ಕ ಭರಣಿ; ಸಂಪುಟ: ಗುಟ್ಟಿನ ಸಂಗತಿಗೆದೆಯೆ ಕರಂಡಿಕೆ ಮುಚ್ಚಿದ ತುಟಿ ಬೀಗವದಕೆ (ಇಂಚಾಪ. ೨೦೬–೧೭). [ಸಂ. ಕರಂಡಿಕಾ]

**ಕರಂಡಿಗೆ,** ಕರಡಿಕೆ, ಕರಡಿಗೆ (ನಾ). ೧. = ಕರಂಡಿಕೆ : ಹಿತ್ತಾಳೆಯ ಕರಂಡಿಗೆಯೊಂದನ್ನು ತೆರೆದು ನೋಡಿದಾಗ (ಆಬೋಲೀ. ೬೭). **ಕರಡಿಕೆ:** ೧. ಒಳಕರಡಿಕೆಯಲ್ಲಿ ಚಿನ್ನದ ಉಂಗುರವಿದೆ (ಕಾವೇರಿ. ೨೦೪). **ಕರಡಿಗೆ:** ೧. ಪಚ್ಚೆಯ ಕರಡಿಗೆಗಳೊಳಂ ತೀವಿದ . . . ಸುಗಂಧವಸ್ತುಸಂದೋಹಮಂ (ಜಗವಿ. ೬–೧೮ ವ); ಚಾರುಚಂದ್ರೋಪಲದ ಕರಡಿಗೆಯೊಳಾ ನಿಶಾನಾರಿ ನೀಲದ ಹಾರಮಂ ಬಯ್ಚಿದಳೊ (ಹಚಕಾ. ೩–೮೭). ೨. ಬಿದಿರಿನಿಂದ ಹೆಣೆದ ಬುಟ್ಟಿ : ನಸುಕಿನಲ್ಲಿಯೇ ನಾನು ಕರಡಿಗೆ ತುಂಬ ಹೂ ತಂದು ಇಡುತ್ತಿದ್ದೆ (ಶ್ಯಾಮುತಾ. ೨೯). ೩. ವೀರಶೈವರು ಕೊರಳಿನಲ್ಲಿ ಧರಿಸುವ ಲಿಂಗದ ಪೆಟ್ಟಿಗೆ; "ಚೌಕ, ಲಿಂಗದಕಾಯಿ ಅಥವಾ ನಾಗವತ್ತಿಗೆ – ಇಷ್ಟಲಿಂಗವನ್ನು ಇಡುವ ಭರಣಿ" (ಶರಸಾ. ೨೪–೭): ಕರಡಿಗೆ ಬಿಟ್ಟು ಶಿವಪೂಜೆಗೆ ಹೋದಂತೆ (ಗಾದೆ). [< ಸಂ. ಕರಂಡಿಕಾ]

**ಕರಂಡೆ** (ನಾ). ಉಪ್ಪಿನ ಕಾಯಿಗೆ ಬಳಸುವ ಒಂದು ಬಗೆಯ ಹುಳಿಕಾಯನ್ನು ಬಿಡುವ ಗಿಡ; ಕರಂಜಿಕೆ: ಬೋಡು ಕಡಲೆಸೊಪ್ಪು, ಕರಂಡೆ, ಮುಂಡಿಗಿಡ (ವೈಔಗಿ. ೭೧–೧೪೬೦). [ದೇ. ‖ ತಮಿ. ಕರಣ್ಣೈ ; ತುಳು. ಕರಂಡೆ. / ಹಿಂ. ಕರವಂದ]

**ಕರಂದಿಗೆ** (ನಾ). ಒಂದು ಊರಿನ ಹೆಸರು : ಕರನ್ದಿಗೆ ನಾಮಗ್ರಾಮ (ಮೇ) ಪಶ್ಚಿಮಸ್ಯಾಂ ದಿಶಿ (ಇಆ. VII, ೨೧೩–೭೫ ; ಸು. 10ನೆಯ ಶತ); ಬಳಿಯ ಬಾಡಂ ಕರಂದಿಗೆಯಂ ರಾಯಮುರಾರಿ (ಬೊಂಕಶಾ. ೧೯೪೧, ಜತ್. ೧೦೮–೫೦ ; 1100). [?]

**ಕರಂದಿವಾಡ** (ನಾ). ಒಂದು ಪ್ರದೇಶದ ಹೆಸರು : ಕೊಪ್ಪರ ಪಂಚಶತ ಭುಕ್ತ್ಯನ್ತರ್ಗ್ಗತ ಕರಂದಿವ(? ವಾ)ಡೇ ಜಫಿ(?) ತ (?) ದೇಉಲವಾಡ ನಾಮಗ್ರಾಮಃ (ಇಆ. XI, ೧೧೨–೩೨ ; 754). [ಕರಂದಿ$_0$ + ವಾಡ]

**ಕರಂಪು** 'ಕರಂಬು$_2$' ನೋ.

**ಕರಂಬ$_1$** (ನಾ). ಸಸ್ಯದ ದೇಟು,—ಕಾವು : "ಕದಂಬ – ಕರಂಬ" (ಶಮದ. ೨೬೭ ಪ್ರಯೋ); "ಕರಂಬಮೆಂದು ಹಸುರ ಶಾಕದ ಕಾವು" (ಶಮದ. ನ. ೨೮೧ ಪ್ರಯೋ). [?]

**ಕರಂಬ$_2$** (ಗು). ಬೆರಸಿದ; ಮಿಶ್ರವಾದ. 'ಕರಂಬವಾಸಿಗ' ಪರಾ. [ಸಂ. ಕರಂಬ, ಕರಂಭ]

**ಕರಂಬವಾಸಿಗ** (ನಾ). ಬಗೆಬಗೆಯ ಹೂವುಗಳಿಂದ ಕಟ್ಟಿದ ದಂಡೆ,—ಬಾಸಿಂಗ; ಬೆರಕೆಗಂಪಿನ ಬಾಸಿಗ: ಒಯ್ಯರಮಾದುದಾಯ್ತು ಕಟ್ಟಿದ ಕರಂಬವಾಸಿಗದ ಕುಸುಮವಿಸರದ ಪಸರಂ (ಅನಂಪು. ೪–೭). [ಕರಂಬ$_2$ + ಬಾಸಿಗ]

**ಕರಂಬಿಡಿ** (ಕ್ರಿ). ೧. ಕೈಹಿಡಿ. ೨. ಮದುವೆಯಾಗು; ಪಾಣಿಗ್ರಹಣ ಮಾಡು : ಕಡುಚೆಲುವೊಪ್ಪೆ ಸಾರ್ದ ಪೊಸವೆಣ್ಣಿದನಾರಯೆ ಮುನ್ನಮೇಂ ಕರಂಬಿಡಿದೆನೊ ಮೇಣ್ ಕರಂಬಿಡಿಯೆನೋ ಎನುತಂ ಮನದಲ್ಲಿ ನಿರ್ಣಯಂಬಡೆಯದೆ (ಶಾಕುಂತ. ೬೭–೧೧೯). [ಕರ್$_3$ + ಪಿಡಿ$_1$]

**ಕರಂಬು$_1$** (ನಾ). ಸಾಗುವಳಿ ಮಾಡದ ಭೂಮಿ; ಸಾಗುವಳಿಯಾಗದಿರುವ ನೆಲ : ಕರಂಬಂ ಮತ್ತರಾಱುಮಂ ಕೊಟು ನಿಱಿಸಿದಳೀ ಶಾಸನಗಂಭ (ಎಇ. IX, ೨೬೯–೮೬ ; 1117); ತೆಂಕಲೆರಿಯ ಮತ್ತನ್ನಾಲುಕುಂ ಕರಂಬಂ ಮ[ತ್ತ]ರಾಱುಮಂ ಕೊಟ್ಟು (ಕಇಆ. ೮೨–೧೫–೮೬ ; 1117). [ದೇ. ‖ ತಮಿ. ಕರಮ್ಬು]

**ಕರಂಬು$_2$,** ಕರಂಪು (ನಾ). ಸುಟ್ಟವಾಸನೆ; ಕೆಟ್ಟವಾಸನೆ (?) : ಜಾಜ್ವಲ್ಯಜ್ವಲನ ಕುಂಡಗಳುಂ ಕರಂಬುನಾರ್ಪ ಕರಂಬುಮುಂ ಕಂಡು (ಮುಹಾನೀ. ೬–೧೧೮ ವ). **ಕರಂಪು:** ನಿಜ ಖಳ್ಗಕಾಳಿ ಕೈಮಿಕ್ಕುದು ತೇಜವಾಂ ಬಿರುದನೆಂಬನ ಮೀಸೆ ಕರಂಪುನಾರ್ಪ್ಪಿನಂ ಪೊಕ್ಕಳವಾಯ್ತು ರಾಜಗುಣವೀಕ್ಷಿಸಲೀ ಕಲಿವಿಷ್ಣುಭೂಪನೊಳ್ (ಎಕ. V, ಬೇಲೂರು. ೧೭೧–೧೯ ; 1160). [?]

**ಕರಂಭ** (ನಾ). ಒಂದು ಬಗೆಯ ತಿಂಡಿ, —ಖಾದ್ಯ; "ಮೊಸರಿನಲ್ಲಿ ಕಲಸಿದ ಹುರಿಹಿಟ್ಟು" (ಅಮರ. ಟೀಕ): "ಕರಂಭಃ, ದಧಿಸಕ್ತುಃ— ಈ ೨ ಮೊಸರೊಳ್ ಕಲಸಿದ ಸತ್ತುಗಂ" (ಹಲಾಯು. ೫೩–೧೬೬). [ಸಂ.]

**ಕರಂಭಕ** (ನಾ). = ಕರಂಭ. [ಸಂ.]

**ಕರಂಭತ್ತ** (ನಾ). ಕರಗಸ; ಗರಗಸ : ಕದನಮಾರ್ತ್ತಣ್ಡಂ ಮಣ್ಡಲೀಕಕುಮರ ಜಗದಳನರಿಮಂಣ್ಡಲೀಕ ಕುಮರ ತಲೆಯ ಕರ[ಂಭ]ತ್ತ(ಂ) ನೀವರದೇವ (ಕಇ. II, ೭–೧೬ ; 1030). [< ಪ್ರಾ. ಕರಪತ್ತ. / ಸಂ. ಕರಪತ್ರ]

**ಕರಕ** (ನಾ). ೧. ಕಮಂಡಲು; ಜಲಪಾತ್ರೆ : ಕರಕಧಾರಕನಾಗಿ ಯಕ್ಷಮಾಲಿಕನಾಗಿ ನಿರುತಮುಂ ರತಿಮುಕ್ತನಾಗಿ ನಿಶ್ಚಲನಾಗಿ . . . ಹೇಮಕೂಟಾಚಲಂ ಕಣ್ಗೆಸೆದುದು (ಚಿಬಪು. ೩೪–೧೪); ಸ್ಥವಿರನು [ಒಂದು] ಧರ್ಮ ಕರಕದಲ್ಲಿ ನೀರು ಹಿಡಿದುಕೊಂಡು (ಬುದ್ಧಪ. ೯೩ ಮಿಲಿಂದ). ೨. ಆಲಿಕಲ್ಲು; ಆಣಿಕಲ್ಲು: "ಕರಕಃ, ಘನೋಪಳಃ – ಈ ೨ ಆಲಿಕಲ್" (ಹಲಾಯು. ೧೧–೫೯); ಕಾರಮುಗಿಲ್ ನೀರ್ಮೊಗೆಯಲ್ ವಾರಿಧಿಯೆಂದೆಣಿಗಿ ಸುರಿವ ಕರಕಂಗಳವೊಲ್ (ಚಂದ್ರಪು. ೧೦–೫೧); ಕುಡುಮಿಂಚಂ ಕುಡುದಾಡೆಯೊಳ್ . . . ಕರಕಮಂ ಚಂಚತ್ತುಷಾರಂಗಳೊಳ್ ಪಡೆದು (ದಶಕು. ೯–೨೫); ಸಲಿಲದೊಳ್ ಕರಕ ಕಟ್ಟನೆ ಕರಗುವಂತೆ (ಮದೇಪು. ೩೩–೩೮). ೩. ದಾಳಿಂಬ; ದಾಡಿಮ : ಕರಕದ ಬಿತ್ತಿನ ಸಾಲೆ ಕೆಂಬಲ್ಲಾಗೆ ಮಱಿದುಂಬಿ ಕುಂತಳವಾಗೆ (ಜ್ಞಾನಚಂ. ೨೫–೩೭). ೪. ಕಾಡು; ಅರಣ್ಯ. ೫. ಆಳಲೆಯ ಮರ. ೬. ಪಕ್ಷಿಯ ಗೂಡು. ೭. ಕರಗ; ನೀರು ತುಂಬುವ ಕೊಡ: "ನೀಡ ಕಮಂಡಲಾಭಯ ಘನೋಪಲಮುಂ ಕರಗಂ ವನಾಂತರಂ ದಾಡಿಮಮಿಂತಿವೈದೆ ಕರಕಾಹ್ವಯಂ" (ನಾನಾರ. ೫೧). [ಸಂ.]

**ಕರಕಕಾಯಿ** (ನಾ). ಅಳಲೆ ಕಾಯಿ : ಕರಕಕಾಯಿ, ಉಸಿರಿಕಾಯಿ ಇದ ಸರಿಮಾಡಿ (ವಿವ್ಯವಿ. ೩೪). [ಕರಕ + ಕಾಯಿ$_4$ (< ಕಾಯ್$_4$)]

**ಕರಕಟಿಗ** (ನಾ). ಬಟ್ಟೆಯ ಮೂಟೆ (?): ಪಟಳಕ್ಕೆ ಪುಟದೆಱುಂ ಭಣ್ಣಯಂ[ಕೞ] ಕ್ಕೆ ದೆಱುಂ ಗೋಣಿಯುಂ ಕರಕಟಿಗ ೧೬ ಸೀರೆಯುಂ (ಸೌಇಇ. XX, ೨೮೩–೧೦ ; 1017). [?]

**ಕರಕಟ್ಟು** (ನಾ). ಕಟ್ಟುಪಾಡು; ವಿಧಿವಿಧಾನ (?): ನಂದಿಮುಖ ದಲಿ ದ್ವಿಜ ವಸಿಷ್ಠನು ಮಿಂದು ಪರ್ಜನ್ಯಾಂಗಹೋಮದ ಸಂದ ಕರ ಕಟ್ಟುಗಳ ಮೇಳವಿಸಿರುತ ಕೇಳಿದನು (ಸಂಭಪ. ೨೫–೨೨). [ಕರ? + ಕಟ್ಟು$_2$]

**ಕರಕದರಿ** (ನಾ). ಜೋಗೇರರಲ್ಲಿ ಒಂದು ಒಳಪಂಗಡ: ಜೋಗೇರು ಅಥವಾ ಬಾಳಸಂತೋಷರು :– ಇವರು ಮನೆಯಲ್ಲಿ ಮರಾಠೀಭಾಷೆ ಯನ್ನಾಡುತ್ತಾರೆ. ಇವರೊಳಗೆ ಹತ್ತುವೊಳಜಾತಿಗಳಿರುತ್ತವೆ. ಅವು ಹ್ಯಾಗಂದರೆ – ೧. ಬಾಬನಿ . . . ೫. ಕರಕದರಿ (ಕಭಾಗೆ. ೨೧೧). [?]

**ಕರಕನ್ನ** (ನಾ). ಕರಿಕಾದ ಅನ್ನ; ಹೊತ್ತಿ ಕಪ್ಪಾದ ಅನ್ನ: ಮಗುವಿಗೆ ಕರಕನ್ನ ಹೊಲ್ಲ (ಸರ್ವಜ್ಞ. ೧೨೪೯); ಇರಲೆನಗೆ ಕರಕನ್ನ ಉಣ್ಣಲು (ಕಎಪು. ೧–೩). [ಕರಕು (< ಕರಿಂಕು) + ಅನ್ನ$_3$]

**ಕರಕರ,** ಕರಕರಿ, ಕರಕರೆ, ಕರೆಕರೆ (ನಾ). ೧. ಅಗಿಯುವಾಗ ಆಗುವ ಹಲ್ಲಿನ ಶಬ್ದ; ಕೊಯ್ಯುವಾಗ ಇಲ್ಲವೇ ಕತ್ತರಿಸುವಾಗ ಉಂಟಾಗುವ ಶಬ್ದ; ಹುರುಬರಕಾದ ವಸ್ತು ಕೆರೆಯುವ ಶಬ್ದ: ಸಿಕ್ಕಿದುದನ್ನೆಲ್ಲಾ ಕರಕರ ತಿಂದು ಹಾಕುತ್ತಾನೆ (ರೂಢಿ); ಕಟುಕನಂತೆ ಅದರ ಕತ್ತನ್ನು ಕರಕರ ಕೊಯ್ದನು (ರೂಢಿ). ಲೇಖನಿಯ ಮುಳ್ಳು ಕರ ಕರ ಶಬ್ದಮಾಡುತ್ತಿದೆ (ರೂಢಿ). ೨. ಹಿಂಸೆ; ಕಿರುಕುಳ; ಕಾಟ; ಪೀಡೆ: ಕರಕರದ ನುಡಿಯನಾಲಿಸಿದನಾತುರದಿಂದ ಕರಗಿತತಿಥ್ಯೆಯರ್ (ವೆಂಕಾರಾ. ೨–೮–೧೧). **ಕರಕರಿ : ೨.** ಹರಕದಾಸ ನಾನು ಕರಕರಿಯನು ಮಾಡಿ ಪರರ ಪೀಡಿಸಿ ಉದರವೊರೆವ ದಾಸನು ನಾನು (ಮೋಕ್ಷದೀ. ೬೪–೨); ಕಪ್ಪು ಹೆಂಡತಿಯಂತ ಕರಕರಿ ಮಾಡಬ್ಯಾಡ (ಗರತಿ. ೧೨೪). **ಕರಕರೆ : ೨.** ಕರಕರೆ ಸಂಸಾರವ ನೀಗುವವರಾಗಿ (ಪುರಂದ. ೧–೬೯–೯); ಕರೆದ ಮೇಲವರಿತ್ತ ಬಾರದರೆಮಗೆ ಕರಕರೆಯೆನೆ ನಕ್ಕರೆಲ್ಲ (ಭರಜ. ೪–೨೬); ಕರಕರೆಯೇಕೆ ಸಾಕು ಚಿಕದೇವನೃಪಾಲಕನೊಲ್ಮೆವೆತ್ತಂ (ಅಪ್ರತಿ. ೨೩–೪); ಕಿವಿ ತುಂಬ ಕರಕರೆಯಾದರೆ . . . ಜಪವನ್ನಾದರೂ ಮಾಡಬೇಕು ಅಂದರೆ ಹೇಗೆ? (ಸರಸ. ೧೧); ಕರಕರೇ ದೇವರಿಗೆ ಕಾಯಿ ಬಾಳೇಹಣ್ಣು (ಗಾದೆ). **ಕರೆಕರೆ : ೨.** ನಾರಾಯಣನ ಮಾಯೆಯ ಕರೆಕರೆಗೆ ಶಿಲುಕಿದೆನು ಶಿವಶಿವ (ನಿಭಾಗ. ೧೧–೧೫–೮); ವಿರಹದಿ ನೊಂದವಳ ಕರೆಕರೆಗೆ ಗುಜುಮಾಡದಿರು (ನಳಚ. ೨–೩೯).

[ದೇ. ‖ ತಮಿ. ಕರಕರ; ತುಳು. ಕರಕರ; ತೆಲು. ಕರಕರ, ಕರಕರಿ]

**ಕರಕರಸು** 'ಕರಕರಿಸು' ನೋ.

**ಕರಕರಿ** 'ಕರಕರ' ನೋ.

**ಕರಕರಿಸು,** ಕರಕರಸು (ಕ್ರಿ). ಕಾಡು; ತೊಂದರೆಗೊಳಿಸು; ಪೀಡಿಸು: ಕರಕರಿಪ ಜೈನಮತಮಂ . . . ಕಳೆದು (ವಾಗೀರ. ದೇ. ೨೮೦–೨೩); ಕಾಳ್ಗಿಡೆವ ಕರಕರಿಪ ಸೆಣಸುವ ತಪ್ಪ ಸಾಧಿಸುವ . . . ಮಾರಿಗಾಜಿಜೆ ಸತ್ತು ಹುಟ್ಟುತಿಹರವನಿಪನ ಸತಿಪುತ್ರರು (ಹಚಕಾ. ೧೨–೩); ಕಂಡೊಡೆ ಕರಕರಿಸಂ ಪೊಯ್ದೊಡಂ ಬಯ್ಯಂ[ಯ್ಯೆಂ] (ಅನಂಪು. ೮–೧೩); ನಮ್ಮನು ಕರಕರಿಸಬೇಡೇಳೆ (ತೊರರಾ. ೬–೧೨–೧೬). **ಕರಕರಸು :** ಸಕಲಮುನಿ ಕುಲವನು ಕರಕರಸಿ [ಪಾಠಾಂ. ತರತರಿಸಿ] ಸಂಸಾರದಿರವಿನಿಂ ಸರ್ವರಂ ಮರುಳು ಮಾಡಿತ್ತು (ಮನೋವಿ. ೧–೪೦); "ಅಲೆದಲೆದು ಕಾಡಿ" (ಮನೋವಿ. ಟೀಕು). [ಕರಕರ + –ಇಸು$_3$]

**ಕರಕರೆ** 'ಕರಕರ' ನೋ.

**ಕರಕರೆಗೊಳ್,** ಕರಕರೆಗೊಳು, ಕರೆಕರೆಗೊಳ್ (ಕ್ರಿ). ೧. ಕೊರಗು; ವ್ಯಥೆಪಡು; ಪರಿತಪಿಸು; ಬೇಸರಿಸು: ನಿನ್ನ ನಿಜಜನಕನಳಿದೀವೂರ ಕಾನನದೊಳು ಮಾತೇನು ಮೃಗವಾಗಿ ಜನಿಯಿಸಿದನವನೊಳಗೆ ಪ್ರೀತಿಯಂ ಮಾಡಿ ಕರಕರೆ[ಪಾಠಾಂ. ಕರೆಕರೆ]ಗೊಂಬರೇ ಜನವಿನೂತೆ (ಸಮ್ಯಕೌ. ೯–೩೦). **ಕರಕರೆಗೊಳು : ೨.** ಉತ್ಸುಕನಾಗು; ಹಂಬಲಿಸು: ಪುರಜನಗಳು ನಿನ್ನ ಬರವ ಹಾರುತ ಕರಕರೆಗೊಳುತಿಹರೇಳು ಬೇಗ (ಭರಜ. ೪೪–೯). **ಕರೆಕರೆಗೊಳ್ : ೧.** ಅರಸು ಸುಷೇಣನೆಂಬವನತಿ ರೋಗದಿ ಮರಣವನೆಯ್ದೆ ಮತ್ತವನ ವರಮಾತೆ ವಸುಮತಿಯೆಂಬಳವನ ಮೇಲೆ ಕರೆಕರೆಗೊಂಡಾರ್ತದಿಂದ (ನೇಮಿಸಂ. ೩೩–೬೧). [ಕರಕರೆ (< ಕರಕರ) + ಕೊಳ್$_1$]

**ಕರಕರೆಗೊಳು** 'ಕರಕರೆಗೊಳ್' ನೋ.

**ಕರಕಲಿಸು** (ಕ್ರಿ). ಅತಿಶಯಿಸು (?): ಶಕ್ತಿಗಳೊಳು ನೀನೋರ್ವ ಳೆಂತಧಿಕವಖಿಳಾಮರರ ಮಧ್ಯದೊಳಗಾನೆಂತು ಮಿಗಿಲೆಂತುಟೊ ಪರ್ವಿ ಕರಕಲಿಪ ಮಂತ್ರಂಗಳೆಲ್ಲಕ್ಕಿದೇ ಉರ್ವಿಯೊಳು ಮಿಗಿಲುಮಿಗಿಲೆಂದು ದೆನ್ನಯ ವಾಕ್ಯ (ವೀಶೈಪು. ೬–೧೨–೩೫). [?]

**ಕರಕಲುರೋಗ** (ನಾ). ದಿನದಿನಕ್ಕೆ ಸೊರಗಿಹೋಗುವಂತೆ ಮಾಡುವ ರೋಗ; ಕ್ಷಯ: ಮಗು ಕರಕಲುರೋಗದಿಂದ ಬಳಲು ತ್ತಿದೆ (ರೂಢಿ). [ಕರಕಲು ? + ರೋಗ]

**ಕರಕವೃಷ್ಟಿ** (ನಾ). ಆಲಿಕಲ್ಲುಗಳ ಮಳೆ: ಖೇಚರವಿಮಾನ ಕೇತನದ ಕೋಳೊಳಂಬುದಮುಕ್ತಾಸಮುದಯಮುದಿರ್ದೊಪ್ಪಿದುವ ಭ್ರಮಾರ್ಗದಿಂ ಸುರಿವ ಕರಕವೃಷ್ಟಿವೊಲಿನಿಸಂ (ಶಾಂತಿಪು. ೨–೮೪). [ಕರಕ + ವೃಷ್ಟಿ]

**ಕರಕಷ್ಟ** (ನಾ). ೧. ಹೆಚ್ಚುಕಷ್ಟ, —ತೊಂದರೆ. ೨. ಹೀನತರ ವಾದುದು; ಕೀಳಾದುದು: ನಾಯಿಂದಲೂ ಕರಕಷ್ಟ ಕೆಲವು ದೈವಂ ಗಳು (ಬಸವ. ೫೫೫); ತರವಲ್ಲ ತಮ್ಮ ಅಸ್ಮರ ವಧುವ ಬಯಸುವದು ಕರಕಷ್ಟ ಬೇಡ ಕಾಣೊ (ಪಾಂಡಚ. ೩೦–೧೪). [ಕರ$_2$ + ಕಷ್ಟ]

**ಕರಕಾನಿ** (ನಾ). ಒಂದು ಬಗೆಯ ಔಷಧಿ ಸಸ್ಯ: (ವೈಔಗಿ. ೧೪–೨೬೩). [?]

**ಕರಕಾಱ** (ನಾ). ಪಾರುಪತ್ತೆಗಾರ (?): ಇರುಗೊಣದೇವ ಕರಕಾಱ ಚೆಂನಸದಾಶಿವ ದೇವರ ದಿಬ್ಯ ಶ್ರೀಪಾದಪದ್ಮಾರಾಧಕರು (ಎಕ. X, ಬಾಗೇಪ. ೩೫–೧೬ ; 1560). [?]

**ಕರಕಿ** (ನಾ). ಒಂದು ಬಗೆಯ ಸಸ್ಯ: ಉಡಿಪ್ಪೆಬಳ್ಳಿ, ಕರಕಿ (ವೈಔಗಿ. ೪೧–೮೦೫). [?]

**ಕರಕು$_1$** 'ಕರಿಂಕು' ನೋ.

**ಕರಕು$_2$** 'ಕೆರಂಕು$_2$' ನೋ.

**ಕರಕೂನ** (ನಾ). ಹೆಚ್ಚಾದ ಗೂನು ಉಳ್ಳವನು: ಶರಣಾಳಿಗಮನ ದುಗುಡವ ನೀಗಿಸುವ . . . ಪರಿಪರಿಯ ಕುಷ್ಠ ಕರಕೂನರಂ ಶುದ್ಧೈಸಿ ಕೊರಡು ಕೊನರಿಸಿ ಬರಡ ಕರಸಿ ಬಂಜೆಯಗೊರ್ಲಿದು ಮಕ್ಕಳ ಕೊಡುತಿರ್ದನೂ (ಜೋರಬ. ೨–೧೨). [ಕರ$_1$ (< ಕರಂ) + ಕೂನ$_1$]

**ಕರಕೆ** (ನಾ). ೧. ಕಮಂಡಲು; ಭಿಕ್ಷಾಪಾತ್ರೆ: ಪಾಪಕರ್ಮನವಂ ಮಾವನೆ ನಮ್ಮ ಕರಕೆಯೊಳ್ ಕಲ್ಲನಿಕ್ಕುವಂ ನಿಕ್ಕುವಂ ಪ್ರಭಾಕರ ಮಿತ್ರಂ (ಸುಕುಮಾ. ೨–೭೦); ಒಡೆದೋಡು ಎನ್ನ ಮನೆಯಲಿಲ್ಲದಂತೆ ಮಾಡಯ್ಯಾ ಕೊಡು ದೇವ ಎನ್ನ ಕೈಯಲ್ಲೊಂದು ಕರಕೆ [ಪಾಠಾಂ. ಕರಿಕೆ, ಗರಿಕೆ]ಯ (ಬಸವ. ೪೫೬; ಪದಗೋ. ೧೧೮–೧೨೬ ನೋ). ೨. ಆಲಿ ಕಲ್ಲು (೩). [ಸಂ. ಕರಕ]

**ಕರಕೆಡೆನೋಡು** (ಕ್ರಿ). ಬಹಳ ತುಚ್ಛವಾಗಿ ನೋಡು; ಅತಿಹೀನವಾಗಿ ಕಾಣು: ಏನ ಮಾಡಿದಡೆಯೂ ನಾನು ಅಂಜುವಳಲ್ಲ . . . ಚೆನ್ನಮಲ್ಲಿಕಾರ್ಜುನಯ್ಯ ಕರಕೆಡೆ [ಪಾಠಾಂ. ಕರಕೆಡ, ಕರಕಡೆ, ಕರಕೇಡ, ಕರಕರಕಾಡಿ] ನೋಡಿದಡೆ ಒಡಲನೂ ಪ್ರಾಣವನೂ ನಿಮಗೊಪ್ಪಿಸಿ ಶುದ್ಧಳಹೆನು (ಮಹಾದೇ. ಬ. ೩೦-೬೪).

[ಕರ$_1$ (< ಕರಂ) + ಕೆಡೆ$_1$ + ನೋಡು]

**ಕರಕೆಲೆ** (ನಾ). ಒಂದು ಬಗೆಯ ಸಸ್ಯ: (ವೈಔಗ. ೪೦-೭೯೭). [?]

**ಕರಕೋಪಲ** (ನಾ). ಆಲಿಕಲ್ಲು: ಕಱಿದುವು ಕಾಳಿಮುಮಂ ಮುಂಕಱಿದುವು ಮಿಂಚಂ ಬೞಿಕ್ಕೆ ಕರಕೋಪಲಮುಂ ಕಱಿದುವು . . . ಮುಗಿಲೆಳಗಾರೊಳ್ (ಚಂದ್ರಪ್ರ. ೪-೩೮). [ಕರಕ + ಉಪಲ]

**ಕರಕ್ಷೇತ್ರ** (ನಾ). [ನಾಟ್ಯ] ನೃತ್ಯದ ಒಂದು ಪ್ರಭೇದ: ಮೆಱೆವಂಗಪ್ರತ್ಯಂಗೋಪಾಂಗ . . . ಹಿರಿದಂಗಹಾರಮಂಡಲ ಕರಕ್ಷೇತ್ರದ ಬಿರುದಿನ ನಾಟ್ಯವಾಡಿದರು (ಕಂನವಿ. ೮-೬೩). [ಕರ? + ಕ್ಷೇತ್ರ]

**ಕರಗ** (ನಾ). ೧. ನೀರು ತುಂಬುವ ಕಲಶ, —ಕೊಡ: "ಕರ್ಕರೀ, ಕರಕಃ – ಈ ೨ ಕರಗಂ" (ಹಲಾಯು. ೫೩-೧೬೨); ಪಿರಿಯ ಕರಗಮಂ ತೆಕ್ಕನೆ ತೀವಿ . . . ನೀರ್ಗಳಂ ತಂದು (ವಡ್ಡಾರಾ. ೧೦೩-೨೮); ಸುತ್ತಿದ ಕರಗದ ನೀರುಮನೆತ್ತಿದ ಬೋನಮುಮನಿದಿರೊಳಿಟ್ಟರೆ (ಆದಿಪು. ೯-೧೨೬); ಕರಗದ ನೀರಂ ತಂದು ಕಾಲ್ಗಂ ಕೆಯ್ಗಮೆಱೆದು (ಜೀವಸಂ. ೧೯೯-೩೫ ವ). ೨. ಒಂದು ಉತ್ಸವದ ಹೆಸರು; ಭಕ್ತರು ತಲೆಯ ಮೇಲೆ ಕಲಶವನ್ನು ಹೊತ್ತು ನಡೆಸುವ ಉತ್ಸವ: ರಾತ್ರಿ ಕರಗವನ್ನು ನೋಡಿಕೊಂಡು ಬಂದಿದ್ದೆನಾದುದರಿಂದ . . . ಹೆಚ್ಚಿನ ನಿದ್ದೆ (ಎಳಜೀ. ೧೧೨); ಬೆಂಗಳೂರು ಕರಗ (ರೂಢಿ). ೩. ದಕ್ಷಿಣ ಭಾರತದಲ್ಲಿರುವ ಒಂದು ಜಾನಪದ ನೃತ್ಯ ಭೇದ: ತಮಿಳುನಾಡು ಮತ್ತು ಮಲಬಾರಗಳಲ್ಲಿ ಕರಗಂ ನೃತ್ಯಗಳನ್ನು ಕಾಣಬಹುದು. ಇದನ್ನು 'ಕುಡುತ್ತು' ನೃತ್ಯವೆನ್ನುತ್ತಾರೆ (ಭಾರಜಾ. ೧೨೫).

**ಕರಗದಮ್ಮ** = ಕರಗದ ಉತ್ಸವದಲ್ಲಿ ಪೂಜಿಸುವ ದೇವತೆ: ನಮ್ಮಗೆ ಕುಲದೈವ ಭೈರವರ ಜನಕ ತಾನು ಮನೆ ದೇವರು ಕರಗದಂಮನ ಪತಿ ತಾನಾದ ಕಾರಣ ನಂಮ್ಮಗೆ ದೇವತಾಂತರವಿಲ್ಲ (ಎಕ. X, ಚಿಕ್ಕಬ. ೪೦-೬; 1428 ?). **ಕರಗದವರ್** = ಕರಗ ಹೊರುವವರು: ಕರಗದವರಂತೆ ಸೂಚಾಯ್ತರಂತೆ ಕಂಚುಕಿಗಳಂತೆ (ಶಾಂತಿಪು. ೬-೧೧೯).

[< ಸಂ. ಕರಕ]

**ಕರಗಂದುಗ** (ನಾ). ಕೈ ಚೆಂಡು: "ಸೆಂಡು" (ಜತುನಿ. I, ೧೦೪).

[ಕರ$_3$ + ಕಂದುಗ (< ಕಂತುಕ)]

**ಕರಗಂಧ** (ನಾ). ೧. ಒಂದು ಬಗೆಯ ಸಸ್ಯ; ಪೃಥಕ್‌ಪರ್ಣಿ (ಕಿ). ೨. ಗರಿಕೆಹುಲ್ಲು; ಕರಿಕೆ: "ಕರ[ಪಾಠಾಂ. ಖರ]ಗಂಧಮೆನಲು ಕರಿಕೆ" (ಮಂಗರಾ. ೩೫-೧೪). [< ಸಂ. ಖರಗಂಧಾ]

**ಕರಗಂಬೊಱು** (ಕ್ರಿ). ೧. ತಲೆಯ ಮೇಲೆ ಕರಗವನ್ನು ಹೊತ್ತುಕೊಳ್ಳು, —ಇಟ್ಟುಕೊಳ್ಳು: ಕೆಲಸಂಬೊಕ್ಕಂ; ಕರಗಂಬೊತ್ತಂ (ಶಮದ. ೧೬೭ ಪ್ರಯೋ). ೨. (ಆಲಂ) ದೀಕ್ಷೆ ವಹಿಸಿಕೊಳ್ಳು: ದೇವಾಸುರಯುದ್ಧಕ್ಕೆ ಕರಗಂಬೊತ್ತಳೆಂಬಂತನವರತ ಬಾಷ್ಪವಾರಿಧಾರಾಪೂರ ಪರಿವಾರಿತ ಪಲ್ಲವನೇತ್ರೆಯುಂ (ಗದಾಯು. ೧-೫೫ ವ).

[ಕರಗ + ಪೊಱು]

**ಕರಗತ** (ನಾ). ಕೈವಶ; ಕೈಯಲ್ಲಿ ಸಿಕ್ಕಿದ್ದು; ಅಧೀನ: ತಾಯೆ ಕರಗತದ ಸಿರಿಯನವಸಿ ವನಕ್ಕೈದುವುದನೌಚಿತ್ಯ (ವೆಂಕಾರಾ. ೨-೯-೧೦); ಆ ಗೊಲ್ಲನು ತನ್ನ ಭಾಗ್ಯವು ಹೇಗೆ ಕರಗತವಾಯಿತೆಂಬ ವಿಷಯವುಯಾರಿಗೂ ತಿಳಿಯದಿರುವಂತೆ . . . ಇದ್ದನು (ಕವಿಕ. ೯). [ಕರ$_3$ + ಗತ]

**ಕರಗಪಡಿ** 'ಕರಗುಪಡಿ' ನೋ.

**ಕರಗಬಳ** 'ಕರಗವಳ' ನೋ.

**ಕರಗಮಾನ್ಯ** (ನಾ). ಕರಗಕ್ಕಾಗಿ ಬಿಟ್ಟ ಮಾನ್ಯ: ಯಿಟ್ಟಯ್ಯನು ಕಣಯ್ಯಗೆ ಬಿಟ್ಟ ಕರಗಮಾನ್ಯ ಹೊಲ ಖ ೧ (ಎಕ. X, ಮುಳಬಾ. ೧೯೯-೩; ?). [ಕರಗ + ಮಾನ್ಯ]

**ಕರಗವಳ, ಕರಗಬಳ** (ನಾ). ಕೊಡದಿಂದ ನೀರನ್ನು ಪೂರೈಸುವವನು; ನೀರಿನ ಆಳು: ಆರೋಗಿಸಿದಿಂ ಬೞಿಕ್ಕೆ ಕರಗವಳನೆಱೆದ ಚಂದ್ರಕಾಂತದ ಹಿಮಶಿಶಿರ ಸುರಭಿವಾರಿಯಿಂ ಕರತಲಪ್ರಕ್ಷಾಲನಂಗೆಯ್ದು (ಸುಕುಮಾ. ೧೧-೩೨ ವ). **ಕರಗಬಳ**: ವರುಣನೇ ಕರಗ[ಬಳ]ನಾಗೆ ತಾರಾಬಳಮೇಬಳಮಾಗೆ (ಸೌಇಇ. IX-i; ೧೩೯-೨೭; 1074).

[ಕರಗ + -ವಳ (< -ವಾಳ$_1$)]

**ಕರಗವಿಡಿ** (ಕ್ರಿ). ಕರಗವನ್ನು ಹೊರು: ತಾರಕೆಗಳೆ ಕೈದೀವಿಗೆಯಾಗೆ ನಕ್ಷತ್ರಮೆ ಹೂಮಾಲೆಯಾಗೆ ಜವನೆ ಸುರಿಗೆವಿಡಿವನಾಗೆ × × × ದೇವನೆ ಗಳೆವಿಡಿವನಾಗೆ ವರುಣನೆ ಕರಗವ[ವಿ]ಡಿವನಾಗೆ ಧನದನೆ ಭಂಡಾರಿಯಾಗೆ (ಸೌಇಇ. XV, ೨೧೧-೨೨; 1196). [ಕರಗ + ಪಿಡಿ$_1$]

**ಕರಗಲಂತಿಕೆ, ಕರಗಳಂತಿಕೆ** (ನಾ). ಕೈಗಡಿಗೆ; ನೀರಿನ ಕೈಗಿಂಡಿ (ಕಿ). **ಕರಗಳಂತಿಕೆ**: "ಕರಗಳಂತಿಕೆ[ಪಾಠಾಂ. ಗೆ]ಯೆನಲು ಕೈಗಡಿಗೆ" (ಮಂಗರಾ. ೬೨-೨೪). [ಸಂ. ಕರಗಲಂತಿಕಾ (ಕರ + ಗಲಂತಿಕಾ)]

**ಕರಗಳಂತಿಕೆ** 'ಕರಗಲಂತಿಕೆ' ನೋ.

**ಕರಗಳಂತಿಗೆ** (ನಾ). = ಕರಗಲಂತಿಕೆ: "ಕರಗಳಂತಿಗೆ [ಪಾಠಾಂ. ಕೆ] ಯೆನಲು ಕೈಗಡಿಗೆ" (ಮಂಗರಾ. ೬೨-೨೪).

[< ಸಂ. ಕರಗಲಂತಿಕಾ]

**ಕರಗಸ$_1$, ಗರಗಸ$_1$** (ನಾ). ಮರ ಮೊದಲಾದುವನ್ನು ಕೊಯ್ಯಲು ಮಾಡಿರುವ ಹಲ್ಲುಗಳುಳ್ಳ ಒಂದು ಬಗೆಯ ಆಯುಧ: ಮರಂಗಳಂ ಪೋೞ್ವಂತೆ ಕರಗಸಂಗಳಿಂದಮುದ್ದಂ ಪಿಡಿದು ಪೋೞ್ವುದುಂ (ವಡ್ಡಾರಾ. ೯೬-೩೦); ಅರಸಂಕ ಕರಗಸಂ ಬಿರುದರಂಕುಶ ವೈರಿವನದಾವಂ (ಎಕ. XI, ದಾವಣ. ೪೩-೩೭; 1164); ಭಕ್ತಿಯೆಂಬುದ ಮಾಡಬಾರದು ಕರಗಸದಂತೆ ಹೋಗುತ್ತ ಕೊಱೆಯುವುದು ಬರುತ್ತ ಕೊಯ್ವುದು (ಬಸವ. ೨೧೨); ಕರಗಸದ ನಡು ಬಡವಾದರೆಯೆ ಕುಯ್ದು ಕ್ಕದೇತರುವ (ಕುವ್ಯಾಅ. ೮-೨೮). **ಗರಗಸ$_1$**: ಗರಗಸದಂತೆ ಮೆಯ್ಯಂ ಕೊಱೆವರ್ (ಧರ್ಮಾಮೃ. ೩-೬೩); ಬಾಳೆಯ ಹಣ್ಣಿಗುಂಟೆ ಗರಗಸವು (ಚಬಪು. ೧೦-೬೦); ಗರಗಸವೇಕೆ ಕದಳಿಗೆ (ಮಲ್ಲಾರಿ. ೭-೨೨).

[ಪ್ರಾ. ಕರಕಯ, ಕರಗಯ. (< ಸಂ. ಕ್ರಕಚ)]

**ಕರಗಸ$_2$** (ನಾ). (ಕರಾ) ಒಂದು ಜಾತಿಯ ಮೀನು. [?]

**ಕರಗಸಿಗ** (ನಾ). ಕರಗಸದಿಂದ ಕೊಯ್ಯುವವನು; ಮರ ಕೊಯ್ಯುವವನು; ಬಡಗಿ: ಕರಗಸಿಗರೊಂದು ಭಾಗಂಬರಂ ಸೀಳ್ದು ನೂಲ ತಲೆಯೊಳ್ ಕೀಲಂ ಬೆಟ್ಟಿರ್ದ ಮರನಂ ಕಂಡು (ಪಂಚತಂ. ೩೦-೪).

[ಕರಗಸ$_1$ + -ಇಗ]

**ಕರಗಹಿ** (ನಾ). ಬಹಳ ಕಹಿ; ಅತಿ ತಿಕ್ತ: ನರಕದಲ್ಲಿ ಬೀಳುವ ಮನುಜರಿಗೆ ಶಿವಭಕ್ತಿ ಎಂಬುದು ಕರಗಹಿ ಕಾಣಾ (ದೇದಾವ. ೨೦-೩೦).

[ಕರ$_1$ (< ಕರಂ) + ಕಹಿ$_2$ (< ಕಯ್ಪು)]

**ಕರಗಳ್ಳ** (ನಾ). ಕೊಡಬೇಕಾದ ಕರಗಳನ್ನು ಕೊಡದೆ ತಪ್ಪಿಸಿಕೊಳ್ಳುವವನು (Tax-evader ಪತ್ರಿನಿ. ೮೧). [ಕರ$_3$ + ಕಳ್ಳ$_1$]

**ಕರಗಾಣ** (ನಾ). ಕೈಗಾಣ: ಎರಡು ನನ್ದಾದೀವಿಗೆಯುಂ ನಿಲಲಕ್ಕೆಂ ಮೊನ್ದು ಪೊಟ ನಿವೇದ್ಯಮುಱಿ ಕರಗಾಣದೆಣ್ಣೆಯುಮಿನ್ತಿನಿಸುವ ಬಿಟ್ಟ (ಎಕ. III, ನಂಜನ. ೧೩೪-೧೩; 1021). [ಕರ$_3$ + ಗಾಣ$_1$]

**ಕರಗಿಸು** (ಕ್ರಿ). ೧. ನೀರಾಗಿಸು; ದ್ರವರೂಪಗೊಳಿಸು: ಕಾಯ್ದು ವಜ್ರಮೂಷೆಯೊಳಿಕ್ಕಿ ಲೋಹಮಂ ಕರಗಿಸುವಂತೆ ಕರಗಿಸುವರುಂ (ಆದಿಪು. ೫-೮೫ ವ); ಚಂದ್ರಕಾಂತದ ಕಲ್ಲಂ ಕರಗಿಸುವೆನ್ನ ಸುಧಾಮಯ ಕರಂಗಳಿಂ ಹರನ ಚಿತ್ತಮುಂ ಕರಗಿಸುವೆಂ (ಗಿರಿಕ. ೬-೬೪); ಹದದಿ ಕರಗಿಸಿದ ತುಪ್ಪದೊಳ್ (ಸೂಪಶಾ. ೧-೩೬); ಅದುರನ್ನು . . . ಕುಲುಮೆಯೊಳಗೆ ಹಾಕಿ ಕರಗಿಸುವರು (ಮುಂಬಯಿ. ೪-೧೪೪). ೨. ಸವೆಯಿಸು; ನವೆಯಿಸು; ಕೃಶಮಾಡು: ಘನತಮಮಂ ಕರಗಿಸಿ ಭಾಸ್ವತ್ಕರಂಗಳಿಂ ಗಗನತಳಕ್ಕಿರದಡರ್ವ ವಿಸ್ಫುರದ್ದಿನಕರನಂ . . . ಕಂಡಂ (ಆದಿಪು. ೧೬-೪೮); ಕರಗಿಸುತಿರ್ದಪೆಯೆನ್ನಂ ಮರಣಮನೆನಗೇಕೆ ಮಾಡೆ ವಿಧಿ (ಕಾದಂಬ. ೬೭೧); ತನುವಂ ತಪದಿಂ ಕರಗಿಸುವೀ ನಿಸ್ಪೃಹತ್ವಮಂ ತಾಳ್ದುವನೇ (ಧರ್ಮಾಮೃ. ೬-೪೬); ಕರಗಿಸುವಂತೆ ಗರ್ವಘನಜಾಳಮಂ (ಪುಷ್ಪಪು. ೨-೨೫). [ಕರಗು (< ಕರಂಗು) + -ಇಸು$_3$]

**ಕರಗು** 'ಕರಂಗು' ನೋ.

**ಕರಗುಪಡಿ**, ಕರಗಪಡಿ (ನಾ). ೧. ಮಾರಾಟ; ಖರ್ಚಾಗುವುದು: ಕೊರವನ ಬಾಳೆಯ ಗೆಂಡೆಯ ಮಾನಿನ ಕರಗುಪಡಿಯನ್ನೈದಲ್ಪಹುದು ಹೊರಗಾವುದ ನೋಡದೆ ಕಂಗಳ ಜೀಇರಿಯೊಳ್ ನಿಲಿಸಿದರೇನಹುದು (ಭಕ್ತಿಸ. IV, ೧೨-೧೪); ಆಯಾದೇಶದಲ್ಲಿ ಬೆಳೆದದ್ದು ಅಲ್ಲಲ್ಲಿಯೇ ಕರಗುಪಡಿಯಾಗುತಿತ್ತು (ಮಾಮಂರಾ. ೧೨೪). ೨. ವ್ಯಾಪಾರೀಸರಕುಗಳ ಮೇಲಿನ ಸುಂಕ; ಮಾರಾಟ ತೆರಿಗೆ (ಕೈಸ್‌ಗ. ೫೫೨). **ಕರಗೆಪಡಿ**: ೧. ಹಸುರುವಾಣಿಯ ಜಿನಸುಗಳು ಕರಗಪಡಿಯಾಗುವುದಕ್ಕೆ ಪಣ್ಯದ ಅಂಗಡಿಯನ್ನು ನಿಬಂಧನೆ ಮಾಡಿದರು (ಮಹಾಪಂ. I, ೧೨೭). [ಕರಗು (< ಕರಂಗು) + ಪಡಿ$_3$]

**ಕರಗುಹ** (ನಾ). ಕರಗುವಿಕೆ; ಕ್ಷೀಣಿಸುವುದು: ಅನವರತ ದಾಸೋಹದಲ್ಲಿ ಮನ ಬೆರಸಿ ನಿಜತನು ಕರಗುಹಂ (ಶಿವಗೀ. ೧೬-೬೦). [ಕರಗು (< ಕರಂಗು) + -ಹ$_2$]

**ಕರಗ್ರ** (ನಾ). ಬಾಳೆಯೆಲೆಯಲ್ಲಿ ಅಗ್ರ ಅಥವಾ ಕುಡಿ ಕತ್ತರಿಸಿ ಉಳಿದ ಭಾಗ; ಬಾಳೆಯೆಲೆಯ ಬುಡದ ಭಾಗ; ಕಡೆಬಾಳೆ: ನಿನಗೆ ಅಗ್ರ ನನಗೆ ಕರಗ್ರ (ರೂಢಿ). [ಕರ ? + ಅಗ್ರ$_1$]

**ಕರಗ್ರಹಣ** (ನಾ). ೧. ಕೈ ಹಿಡಿಯುವಿಕೆ. ೨. ಮದುವೆ: "ಪರಿಣಯನಮುಪಯಾಮಮುದ್ವಾಹಮಾ ಕರಗ್ರಹಣಂ ವಿವಾಹಮಕ್ಕುಂ" (ಮಂಗರಾ. ೯೧-೭); ವಧೂವರರ್ಕಳ ಕರಗ್ರಹಣಂ ಬಗೆಗೊಂಡುದಾಕ್ಷಣಂ (ರಾಜಶೇ. ೮-೬೫). [ಕರ$_3$ + ಗ್ರಹಣ]

**ಕರಚಿ** (ನಾ). ಒಂದು ಬಗೆಯ ಮರ (?): ಕಕ್ಕೆ, ತಂಗಡಿ, ಕರಚಿ, ಹುಣಿಸೆ (ನಮ್ಮನು. ೨೩೪). [?]

**ಕರಚಿಕಾಯಿ** 'ಕರಂಜಿಕಾಯ್' ನೋ.

**ಕರಚುಗ** (ನಾ). ಒಂದು ಜಾತಿ ಅಥವಾ ಪಂಗಡ (?): ಕರಚುಗರ ಗುಜಯ್ಯಂಗೆ ಪೊನ್ನಳಜು ಒಮ್ಮರ್[ತ್ತ]ಲಂ ಕೊಟ್ಟ (ಎಕ. VIII, ಸೊರಬ. ೪೧೩-೧೭; 986). [?]

**ಕರಚುರಿ** 'ಕರಾಚೂರಿ$_1$' ನೋ.

**ಕರಚೋ** (ನಾ). ಒಂದು ಮರದ ಹೆಸರು: ಕರಚೋ ಅಥವಾ ಅಸನ ಗುರಗಿ (ಅಂಜುನ) ಸುಂದರ ಸರಳ ಎತ್ತರ . . . ಎಲೆಗಳನ್ನು ದನಗಳು ಪ್ರೀತಿಯಿಂದ ತಿನ್ನುತ್ತವೆ (ಕಭಾಗೆ. ೩೬). [?]

**ಕರಜ$_1$** (ನಾ). ಒಂದು ಬಗೆಯ ಮರ; ಹುಲಿಗಿಲ ಮರ; ಕರಂಜ: ಕರಜಂ ಕುಂದುರು ಜಟಿಮಾಂಸಿ ರುಜೆಯಿಪಂ ಸವನೆಗೊಂಡು ದೇಹಮ ಶಿಂಬಾಗಿರೆ ಧೂಪಿಸಿದಂದು ಮನೋಹರಗಂಧಂ ತಾನದಕ್ಕುಂ (ಲೋಕೋಪ. ೬-೨೯). [< ಸಂ. ಕರಂಜ]

**ಕರಜ$_2$** (ನಾ). ೧. ಕೈಯಲ್ಲಿ ಹುಟ್ಟಿದ್ದು; ಉಗುರು: ಕೈತಕದಳಮಂ ತುದಿಗೊಂಡು ಕರಜಮೊಪ್ಪಿದುದವಳಾ (ರಾಜಶೇ. ೬-೪೩). ೨. ಕೈಯಿಂದ ಮಾಡಿದುದು. ೩. ಒಂದು ಬಗೆಯ ಸುಗಂಧ ದ್ರವ್ಯ. [ಸಂ.]

**ಕರಜ$_3$** (ನಾ). (?): ನೇಸಜಿಗೆಯ ಕರಜದ ಕಡಿಮಣ್ಣಕೋಲಲ್ ಶ್ರೀಹಬ್ಬೇಶ್ವರದೇವರ್ಗ್ಗೆ ಕೊಟ್ಟ ಕಂಮ ೮೦೦ (ಮುಂಬರಾ. X, ೨೪೭-೬೦; 1219). [?]

**ಕರಜಾಂಶು** (ನಾ). ಉಗುರಿನ ಕಾಂತಿ, —ಹೊಳಪು: ನವಕರ್ಣಿಕಾರಮಂ ಕೊಯ್ವಳ ಬೆಳ್ಪೆಸೆವ ಕರಜಾಂಶು ತಳ್ತಿರೆ ರಸಲಿಪ್ತಂ ಕನಕ ಚಷಕಮೆನೆ ಕಣ್ಗೊಳಿಕುಂ (ರಾಜಶೇ. ೧೦-೩೪). [ಕರಜ$_2$ + ಅಂಶು]

**ಕರಜಾತ** (ನಾ). ೧. ಉಗುರು: ಕಟ್ಟಿ ಕಬರುತ ಮುರಿದು ಕರಜಾತ ರದಂಗಳಿಂ (ವೆಂಕಾರಾ. ೬-೩೧-೩). ೨. ಗುರುಗಳಿಂದ ಉಪದೇಶವನ್ನು ಪಡೆದು ನಿವೃತ್ತಿಮಾರ್ಗದಲ್ಲಿ ಪ್ರವೃತ್ತನಾದವನು; ಮರಿಸ್ವಾಮಿ; ಶಿಷ್ಯ: ಗುರು ಕರಜಾತರಾಗಬಾರದು (ಮೋಳಿಮಾ. ೩೯-೧೬೩); ಗುರು ಕರಜಾತನಾದೆನಾಗಿ ಅಣವಮಲ ಹೋಯಿತ್ತಯ್ಯ ಎನಗೆ (ಅಖಂಡೇ. ೮೨-೬೫). [ಸಂ.]

**ಕರಜಿಕಾಯಿ** 'ಕರಂಜಿಕಾಯ್' ನೋ.

**ಕರಜಿಗೆ** 'ಕರಂಜಿಗ್ಗೆ' ನೋ.

**ಕರಜಿಗೆಕಾಯ್** (ನಾ). = ಕರಂಜಿಕಾಯ್: ಕರಜಿಗೆಕಾಯತಿರಸ ಮನೋಹರದುಂಡೆ ತರಗುಚಕ್ಕುಲಿ ಬೀಸುರಿಗೆಯ ಗರುಗದ ಮುತ್ತಿನ ಸರವುದ್ದಿನೊಡೆಗಳ ತರುಣಿಯರಿಕ್ಕಿದರಾಗ (ಜ್ಞಾನಜಂ. ೨-೧೩೭). [ಕರಜಿಗ್ಗೆ$_0$ + ಕಾಯ್$_4$]

**ಕರಜಿಗೆಹಣ್ಣು** (ನಾ). ಒಂದು ಬಗೆಯ ಹಣ್ಣು: ಯೆಲದಹಣ್ಣು ಕರಜಿಗೆ ಹಣ್ಣು ಕಳವಿಗೆಯ ಮೊದಲಾದುವ ಪಣ್ಣಂ (ಶ್ರಾವಕಾ. ೧೩೨-೧೫). [ಕರಜಿಗ್ಗೆ$_0$ (< ಕರಂಜಿಕೆ ?) + ಹಣ್ಣು$_3$ (< ಪಣ್$_3$)]

**ಕರಜೀಕಾಯಿ** 'ಕರಂಜಿಕಾಯ್' ನೋ.

**ಕರಟ$_1$** 'ಕರಂಟ' ನೋ.

**ಕರಟ$_2$** (ನಾ). ೧. ಆನೆಯ ಗಂಡಸ್ಥಲ: "ಕರಟಂ ಕಟಂ ಗಂಡಮೆನಲು ಗಂಡಸ್ಥಳಂ" (ಮಂಗರಾ. ೪೬-೧); ಕರಟತಟಗಳಿತ ಮದರುಚಿರಮುಖತೇಜನಂ (ಆದಿಪು. ೬-೨೭ ರಗಳೆ); ತೀನೆರ್ದೊಡುರ್ದೆ ಕರಟಮನಾನೆಗಳ್ (ಲೀಲಾವ. ೮-೪೫). ೨. ಕಾಗೆ: ಬಂದುದಾ ಸಮಯದೊಳಗೊಂದು ಕರಟಂ ವೇಗದೆ (ವೆಂಕಾರಾ. ೫-೧೨-೩೬). ೩. ಕಪ್ಪೆ. ೪. ಆಕಾಶ. ೫. ಜೀವ. ೬. ಒಂದು ಬಗೆಯ ಚರ್ಮವಾದ್ಯ; ನಗಾರಿ: "ಆಗಸದೊಳು ಕಪ್ಪೆಯೊಳುಂ ಕಾಗೆಯೊಳಗಾನೆಯೊಳೆಸೆವ ಗಂಡಸ್ಥಳದೊಳ್ ವೇಗದ ಜೀವವಿದ್ಯೆದುಂ ತಾಗಿರೆ ಕರಟಾಖ್ಯಮುಪ್ಪುದು" (ನಾನಾರ್ಥಂ. ೧೧೩). [ಸಂ.]

**ಕರಟಕ** (ನಾ). ೧. ಕಾಗೆ. ೨. (ಪಂಚತಂತ್ರದಲ್ಲಿ ಬರುವ) ಒಂದು ನರಿಯ ಹೆಸರು: ಕರಟಕನು ದವನಕನುಮೆಂಬೆರಡು ನರಿಗಳ್ (ಪಂಚತಂ. ೨೬-೧೫). ೩. (ಅಲಂ) ಚಾಡಿಕೋರ; ಪಿಸುಣ (ಕ). [ಸಂ.]

**ಕರಟಲು** (ನಾ). (ಕರಾ) ಹೊಟ್ಟೆಕಿಚ್ಚು; ಮತ್ಸರ. [?]

**ಕರಟವ್ಯೂಹ** (ನಾ). ಕಾಗೆಗಳ ಗುಂಪು: ಪದ್ಮಾಸನಂ ಕರಟವ್ಯೂಹಮನೇಕೆ ಪುಟ್ಟಿಸಿದಂ (ಕವಿಚ. III, ೧೨೬). [ಕರಟ$_2$ + ವ್ಯೂಹ]

**ಕರಟಿ$_1$** (ನಾ). ಆನೆ: ವಿದ್ವಿಷ್ಟವಿದ್ಯಾಧರ ಕರಟಿಶಿರಶ್ಶುಕ್ತಿ ಸಂಭೂತ ಮುಕ್ತಾವಳಿಯೊಳ್ ಕಣ್ಣಟ್ಟ (ಆದಿಪು. ೧-೭೬). [< ಸಂ. ಕರಟಿನ್]

**ಕರಟಿ$_2$** (ನಾ). ಒಂದು ಬಗೆಯ ಆಯುಧ (?): ಕೊಬ್ಬಿ ಬೊಬ್ಬಿಱಿದು ಹರಿಗೆ ಕರಟಿಗೊಂಡು ಕಡುಬೇಗದಿವೊದಗಿ ಕಾಲಾಳಂ ಕೆಡಪಿ ಕುದುರೆಯ ಕೊಂದು (ಕಇ. I, ೬೩-೨೧; 1481). [?]

**ಕರಟು$_1$** (ಕ್ರಿ). ೧. ಹೊತ್ತಿಹೋಗು; ಕರಿಕಾಗು; ಸೀಕಲಾಗು: ಎಷ್ಟೆ ತೀರಿ ಕರಟಿದರೂ ಬತ್ತಿ ಒತ್ತಿ ತುಳಿದರೂ ತಮಸ್ಸು ಮುತ್ತಿ . . . ಈ ಚಿತ್ಕಣ ಘನ ಚಿರಂತನ (ನಡೆಬಂ. ೩); ಬೇಳೆ ಕರಟಿ ಹೋಗಬಹುದು (ವಾತ್ಸಲ್ಯ. ೮೧). 'ಕಂಟು' ಪರಾ. ೨. (ಆಲಂ) ನಿರ್ದಯವಾಗು; ಕರ್ಕಶವಾಗು: ನಿನ್ನ ಕರಟಿರುವ ಕಾರ್ಪಣ್ಯದ ಕಠಿಣಹೃದಯಕ್ಕೆ ಇದರಿಂದ ಅಪಾರವಾದ ಅಸೂಯೆಯಾಗಿರಬೇಕು (ಹೊಸಕ್ಷಿ. ೨೩೫). [ದೇ. ‖ ತುಳು. ಕರಂಟ್]

**ಕರಟು$_2$** (ಕ್ರಿ). ಬೆಳವಣಿಗೆ ನಿಂತುಹೋಗು; ನರಟುಬೀಳು: ಜಗ ಬೆಳೆದು ಚಿಗುರುತಿರೆ ಶಾಸ್ತ್ರ ಕರಟಿರಲಹುದೆ? (ಮಂಕುಕ. ೫೨೫). [ದೇ. ‖ ತಮಿ. ಮಲ. ಕರಡು = ಬೆಳವಣಿಗೆ ಇಲ್ಲದುದು]

**ಕರಟು$_3$**, ಕರಡು$_4$, ಕರುಟು$_1$ (ನಾ). ಸರಿಯಾದ ಬೆಳವಣಿಗೆ ಇಲ್ಲದುದು; ಬಡಕಲು; ನರಟು. 'ಕರಟುಬೀಳು' ಪರಾ. **ಕರಡು$_4$**: 'ಕರಡುಗಟ್ಟು' ಪರಾ. **ಕರಟು$_1$**: ಇಲಿಗಳು ಈ ಪ್ರದೇಶದ ಜನಗಳಂತೆ ಬೆಳವಣಿಗೆಯಲ್ಲಿ ಕರಟಾಗಿದ್ದುವು (ಗೃಹವಿ. ೨). [< ಕರಟು$_2$]

**ಕರಟು$_4$** (ನಾ). "ಬೆಳ್ಳಕ್ಕಿ" (ಗಂಗಾಮ. ೬೧). [< ಸಂ. ಕರೇಟು]

**ಕರಟುಕಾಯಿ** (ನಾ). ಕವಚವುಳ್ಳ ಕಾಯಿ: ಬಾದಾಮಿ, ಪಿಸ್ತ, ನೆಲಗಡಲೆ ಮುಂತಾದ ಕರಟುಕಾಯಿಗಳು (Nuts) (ಗೃಹವಿ. ೧೧). [ಕರಟು$_0$ (< ಕರಟ್$_1$) + ಕಾಯಿ$_4$ (< ಕಾಯ್$_4$)]

**ಕರಟುಬೀಳು**, ಕರುಟುಬೀಳು (ಕ್ರಿ). = ಕರಟು$_2$: ಪ್ರೋಟೀನು ತಾಯಿಯ ಆಹಾರದಿಂದ ಒದಗಬೇಕು. ಹೀಗೆ ಒದಗದಿದ್ದರೆ ಮಗುವು ಕರಟುಬೀಳುವುದು (ಗೃಹವಿ. ೯೮). **ಕರುಟುಬೀಳು**: ದೇಹದ ಬೆಳವಣಿಗೆಗೆ ಅವಶ್ಯವಾದ ಪ್ರೋಟೀನು ಉರಿದುಹೋಗುತ್ತದೆ. ಇದರ ಪರಿಣಾಮವಾಗಿ ದೇಹವು ಕರುಟುಬೀಳುತ್ತದೆ (ಗೃಹವಿ. ೪೪). [ಕರಟು$_3$ + ಬೀಳು$_1$ (< ಬೀೞ್$_1$)]

**ಕರಟುಮುರಟು**, ಕರಟುಮೊರಟು (ಗು). ಗಂಟುಗಂಟಾಗಿರುವ; ಒರಟೊರಟಾದ: ಕರಟುಮುರಟಾಗಿ ಬಿದ್ದಿದ್ದ ಈ ಚರಿತ್ರೆಗೆ ನನ್ನ ಕೈಲಾದಮಟ್ಟಿಗೆ ಒಂದು ರೂಪವನ್ನು ಕೊಡಲು (ಚಿತ್ರಪಾ. ೬, ಪೀಠಿಕೆ). **ಕರಟುಮೊರಟು**: ಅಡವಿಯೊಳಗಣ ಕರಟುಮೊರಟು ಸೊಟ್ಟಾಪಟ್ಟೆ ಕಟ್ಟಿಗೆಗಳನ್ನೂ ಕಸಗುಡ್ಡೆಗಳನ್ನೂ ಒಲೆಗುಪಯೋಗಿಸಿಕೊಂಡು (ಕಸಾಪ. I, ೫೯). [ಕರಟು$_3$ + ಮುರಟು$_2$]

**ಕರಟುಮೊರಟು** 'ಕರಟುಮುರಟು' ನೋ.

**ಕರಟೆ** (ನಾ). ಕಾಗೆ: ಚಟಕ ಚಾಟಣಕ ಚಕ್ರವಾಕ ಕರಟಿ ಬಳಾಹಕ ಗೃಧ್ರ ಪಿಕ ಮರಕುಟಿಗ (ಮದೇಪು. ೫-೯). [ಸಂ. ಕರಟ]

**ಕರಡ**, ಕರಡು$_2$, ಕರಡೆ$_1$ (ನಾ). ಕಾಡು ಅಥವಾ ಬೆಟ್ಟದ ಮೇಲೆ ಬೆಳೆದು ಒಣಗಿದ ಹುಲ್ಲು: "ವಕ್ರಿ ಮಾರುಳಿ ಕಂಬು ಕಸವೆ ಸಂದಂ ಕರಡಮಕ್ಕುಂ [ಪಾಠಾಂ. ಕರಡೆಯಕ್ಕು]" (ಮಂಗರಾ. ೩೩-೮); ಬಳೆದ ತಮವೆಂಬ ಕರಡಮ (?) ನಳವಲ್ಲದೆ ಸುಟ್ಟು ಕಿಡಿಸಲೆಂದಜನುದಯಾಚಲದೊಳ್ ತಗುಳ್ಚೆ. . .ಅರ್ಕನುದಯಂಗೆಯ್ದಂ (ಕಾವ್ಯಸಾ. ೮೬೧ ಶೂದ್ರಕ); ಕರ್ಮಂ ಕಿಚ್ಚುಪತ್ತಿದ ಕರಡದಂತೆ ಭಸ್ಮಮಕ್ಕುಂ (ಧರ್ಮಾಮೃ. ೧೪-೧೦೨); ಕಾಡುಗಿಚ್ಚಿನ ಕೈಯಲ್ಲಿ ಕರಡವ ಕೊಯಿಸುವಂತೆ (ಅವಚಂ. ೪೮-೨೦೪); ಕುರುಡು ಎತ್ತಿಗೆ ಕರಡವೇ ಕೈಲಾಸ (ಗಾದೆ). **ಕರಡು$_2$**: ಉರಿಸಲೆಳಸುವುದೆನ್ನನೀಗಳೆ ಪಿರಿದೆನಿಪ ರಾಗಾಗ್ನಿ ಕಾಳ್ಕಿಚ್ಚುರಿದು ಕರಡನು ಮರದ ತುದಿಯನುಮುರಿಸುವಂದದಲಿ (ಸೌನಂದ. ೧೦-೫೩); ಬರಡು ಎಮ್ಮೆಗೆ ಕರಡುಹುಲ್ಲು (ಗಾದೆ). **ಕರಡೆ$_1$**: "ವಕ್ರಿ ಮಾರುಳಿ ಕಂಬು ಕಸವೆ ಸಂದಂ ಕರಡೆಯಕ್ಕು [ಪಾಠಾಂ. ಕರಡಮಕ್ಕು]" (ಮಂಗರಾ. ೩೩-೮). [?. / ಮರಾ. ಕರಡ್]

**ಕರಡಅಂಜಿಹುಲ್ಲು** (ನಾ). ಒಂದು ಬಗೆಯ ಹುಲ್ಲು: ಬದೆಹುಲ್ಲು, ಖರಡಾಹಂಚೀಹುಲ್ಲು, ಕರಡಅಂಜಿಹುಲ್ಲು (ಮೈಔಗಿ. ೨೭-೫೧೪). [ಕರಡ + ಅಂಜಿಹುಲ್ಲು]

**ಕರಡಕ್ಕಿ** (ನಾ). ಚೆನ್ನಾಗಿ ತಳಿಸದೆ ಇರುವ ಅಕ್ಕಿ: ಎರಡೊಬ್ಬಿ ಮಾಡಿದರೆ ಕರಡಕ್ಕಿನಾದಾವ ಕರಡಕ್ಕಿ ಜ್ವಾಳನುರಿಯುವ (ಮಲ್ಲಿಗೆ. ೯೨). 'ಕುರುಡಕ್ಕಿ', 'ವಾರಕ್ಕಿ' ಪರಾ. [ಕರಡು$_3$ + ಅಕ್ಕಿ$_1$]

**ಕರಡಗೆ** 'ಕರಂಡಗೆ' ನೋ.

**ಕರಡಚ್ಚು** (ನಾ). ಮುದ್ರಣದ ಕಚ್ಚಾಪ್ರತಿ: ನಿನ್ನ ಶಕ್ತಿ ಕರಡಚ್ಚುಗಳನ್ನು ತಿದ್ದುವುದರಲ್ಲಿಯೇ ವಿನಿಯೋಗಹೊಂದುತ್ತಿದೆಯಲ್ಲ (ಲೋಕಕ. ೫೭). [ಕರಡು$_5$ + ಅಚ್ಚು$_3$]

**ಕರಡವುಲ್**, ಕರಡಹುಲ್ಲು (ನಾ). = ಕರಡ: ಬಿಲ್ಲೆತ್ತಡದ ಕರಡವುಲ್ ಬಿತ್ತರದ ಬಯಲ್ ಮಿಳಿರ್ದತ್ತು ಕುಳಿರ್ಪನಿಗಳಿಂದೆ, ತುರುಗೆಮೆಗಳಂ ಪೋಲ್ದು (ಶ್ರೀರಾಮಾ. ೨೬೮-೧೩೭). **ಕರಡಹುಲ್ಲು**: ಸುಂಕರೀ ಹುಲ್ಲು, ಕರೀವುನುಗದ ಹುಲ್ಲು, ಊಬಿನ ಹುಲ್ಲು, ಸಣ್ಣ ಊಬಿನಹುಲ್ಲು, ಕರಡಹುಲ್ಲು (ಮೈಔಗಿ. ೪೩-೮೪೪); ತಿಂಗಳಿಗೆ ೧ ಸಾರಿ ದುರ್ಗಕ್ಕೆ ಬಂದು ಕರಡಹುಲ್ಲನ್ನು ಕುಯಿದು ಬಣವೆ ಹಾಕಬೇಕು (ಚಿತ್ರಪಾ. ೪೯). [ಕರಡ + ಪುಲ್]

**ಕರಡಹುಲ್ಲು** 'ಕರಡವುಲ್' ನೋ.

**ಕರಡಿ$_1$** (ನಾ). ಮೈತುಂಬ ಉದ್ದವಾದ ಕೂದಲಿರುವ ಒಂದು ಜಾತಿಯ ವನ್ಯಮೃಗ: "ಋಕ್ಷಃ, ಅಚ್ಛಃ, ಭಲ್ಲಃ, ಭಾಲ್ಲೂಕಃ, ಭಲ್ಲೂಕಃ – ಈ ೫ (ಕರಡಿ)" (ಹಲಾಯು. ೩೮-೭೫); ಕರಡಿಯ ತೋಲಂ ಕಜ್ಜಲಪರಾಗದಿಂ ಪೂರೆದು ಪಿರಿದು ಜೇನೆಯ್ಯೊಳ್ ತಂದಿರಿಸಿದವೊಲ್ (ಶಾಂತಿಪು. ೮-೧೨೭); ಕರಡಿಗಂಜಿ ಪುಲಿಯ ಗುಹೆಯಂ ಪುಗುವಂತೆ (ಧರ್ಮಾಮೃ. ೬-೧೭೫); ಹಾಸಿಕಿಲ್ಲದೆ ಹಾವಿನ ಮೇಲೆ ಒಜಗಿದವ ಹೇಸಿಕಿಲ್ಲದೆ ಕರಡಿಯ ಕೂಡಿದ (ಪುರಂದ. ೨-೧೧-೧).

**ಕರಡಿಯುಮಗಳ್** = ಜಾಂಬವಂತನ ಮಗಳು; ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು: ಕರಡಿಯ ಮಗಳನಾಳ್ದ ನಿನಗೋಹೋ ಧರೆಯೊಳದ್ಭುತಾಕಾರರಾರೊ (ಜೈಮಿಭಾ. ೨-೫೯).

[ದೇ. ‖ ತಮಿ. ಮಲ. ತುಳು. ತೆಲು. ಕರಡಿ. / ಪ್ರಾ. ಕರಡೊ = ಹುಲಿ]

**ಕರಡಿ$_2$** 'ಕರಡೆ$_2$' ನೋ.

**ಕರಡಿಕಣ್ಣಿನಗಿಡ** (ನಾ). = ಕರಡಿಕಣ್ಣಿನ ಗೆಡ್ಡೆ: ಕತ್ತಾಳಿ, ಅನಾನಾಸ್, ಕರಡೀಕಣ್ಣಿನಗಿಡ, ಮಂಜು, ಈರುಳ್ಳಿ (ನಮ್ಮನು. ೨೩೮). [?]

**ಕರಡಿಕಣ್ಣಿನಗೆಡ್ಡೆ** (ನಾ). ಒಂದು ಬಗೆಯ ಔಷಧಿ ಸಸ್ಯ: ಕರಡಿಕಣ್ಣಿನಗೆಡ್ಡೆ, ಕೋಳಿಕುಟುಮನ ಗೆಡ್ಡೆ, ಶಿವಶಕ್ತಿ, ಲಾಂಗುಲಿಕ (ಮೈಔಗಿ. ೩೯-೭೭೭). [?]

**ಕರಡಿಕುಜುಕಿ** 'ಕರಡಿಗುಜುಕಿ' ನೋ.

**ಕರಡಿಕೆ** 'ಕರಂಡಿಗೆ' ನೋ.

**ಕರಡಿಗುಜುಕಿ**, ಕರಡಿಕುಜುಕಿ (ನಾ). ಒಂದು ಊರಿನ ಹೆಸರು: ಇಟ್ಟಿಗೆ ಸೊಣೆ ಎ ಬಡಗ್ಗೆ ಸಿಟ್ಟುರುಳಿ ಎ ಕರಡಿಗುಜುಕಿ ಮೇಲ ಕೋಡು ಜ್ಗಲ್ ಮೂಡ್ಯೆ ನೋಡಿ ನಡದು ಪುಣುಸೆ ಪೊಗರಿ ಎ (ಮೈಆರಿ. ೧೯೧೪, ೧೨-೨೦; 810). **ಕರಡಿಕುಜುಕಿ**: ಮೂಡ್ಯೆ ನೋಡಿ ನಡೆದು ಪುಣಸೆ ಪೊಗರಿ ಎ ಕರಡಿಕುಜುಕಿ ಮೇಲಕಾರಜಿ ಎ (ಎಕ. X (S), ಚಿಕ್ಕಬ. ೬೬-೨೧; 850). [?]

**ಕರಡಿಗೆ** 'ಕರಂಡಿಗೆ' ನೋ.

**ಕರಡಿಗೊಲ್ಲ** (ನಾ). ಕಾಡುಗೊಲ್ಲರಲ್ಲಿ ಒಂದು ಪಂಗಡ: (ಎಸಮೈ. XIV, ೩). [ಕರಡಿ$_1$ + ಗೊಲ್ಲ]

**ಕರಡಿಮಜಲು** (ನಾ). ೧. ಕರಡೆವಾದ್ಯವನ್ನು ಬಾರಿಸುವುದು. ೨. ಕರಡೆ ಎಂಬ ವಾದ್ಯ: ಹಳ್ಳಿಗಳ ವಾದ್ಯಗಳಾದ ಕರಡಿಮಜಲು, ಜೋಡುಸನಾದಿ, ಕಾಳೆ ಮೊದಲಾದವುಗಳ ಘೋಷಣೆಗೂ ಅಲ್ಲಿ ಸ್ಥಾನವಿತ್ತು (ಮಣ್ಣಿಮ. ೧೩); ಸನಾಯಿ, ಕರಡಿಮಜಲುವಾದ್ಯಗಳು (ಇಪ್ಪಕ. ೪೫೦).
[ಕರಡಿ$_2$ (< ಕರಡೆ$_2$) + ಮಜಲು]

**ಕರಡಿಮೇಳ** (ನಾ). = ಕರಡಿಮಜಲು: ಕರಡಿಮೇಳ (ಕರಡಿಮಜಲು)– ವೀರಶೈವರ ವಿಶಿಷ್ಟವಾದ ಮಂಗಲವಾದ್ಯ (ಶರಸಾ. ೨೪–೭).
[ಕರಡಿ$_2$ (< ಕರಡೆ$_2$) + ಮೇಳ (= ಮೇಲ)]

**ಕರಡು$_1$** 'ಕದಡು$_1$' ನೋ.

**ಕರಡು$_2$** 'ಕರಡ' ನೋ.

**ಕರಡು$_3$**, ಕರಡೆ$_3$, ಖರಡು$_1$ (ಗು). ೧. ಒರಟಾದ; ಒಡ್ಡಾದ; ನಯವಿಲ್ಲದ. (ನಾ). ೨. ದೋಷ; ಕಳಂಕ: ಕರಡೊಂದು ಪುಗದೆ ಕಟ್ಟಾಣಿಮುತ್ತನದಾವ ಶರಧಿ ಪೆತ್ತುದು (ಭರಚ. ೫೮–೪೪); ನಿಯತ ಸ್ಥಾನಿಯಲ್ಲ ಕರ್ಮದ ಕಾಟವಿಲ್ಲ ಕರಡಿಲ್ಲ (ಭಕ್ತಿಸ. IV, ೭–೫); ಗುಣದೊಳ್ ಕರಡೆಣಿಪ ಪಾಪಿಗಳಿಗರುಹದಿರಿ (ವಿವೇಥ. ೧೩–೧). **ಕರಡೆ$_3$**: ೧. 'ಕರಡೆಕಾಗದ' ಪರಾ. **ಖರಡು$_1$**: ೨. ಖರಡು ಘನವಾದರೆ ಜಾತಿ ಮುತ್ತೆ (ಶ್ರೀಕೃಪಾ. ೪೩).

**ಕರಡಾಗು** = ಅಶುದ್ಧವಾಗು; ಕೆಡು; ಹಾಳಾಗು: ಗಿರಿಗುಡ್ಡೆ ವನವೆಲ್ಲ ತಿರುಗಿತೂ ಕರಡಾಗಿ ಧೈರ್ಯವು ಕರಗಿತು (ಕೃಅಕಾ. ೪೯); ಆತನನ್ನು ತೀರ ಹೆಚ್ಚಿಗೆ ಮಾತನಾಡಿಸಿದರೆ ಇನ್ನಷ್ಟು ತಲೆ ಕರಡಾದೀತು (ಜಾರುದಾ. ೧೬೪); **ಕರಡುಮಾಡು** = ಕೆಡಿಸು; ಹಾಳುಮಾಡು: ಫಲಪೈರುಗಳನ್ನು ಕರಡುಮಾಡಿದ್ದರಿಂದಲು (ಎಕ. XII, ಕೊಡಗು. ೨೫–೯; 1824); ಯರಡು ಆನೆ ಬಂದು ಇವೆ. ರೈತರ ಪೈರುಪಚ್ಚೆ ಕರಡು ಮಾಡುತ್ತದೆ (ರಾಜೇಂದ್ರ. ೧೪೪); ನೀವು ಇದನ್ನೆಲ್ಲ ಎಣಿಸಿಕೊಂಡು ತಲೆ ಕರಡುಮಾಡಿಕೊಳ್ಳಬೇಡಿ (ಮುಗಿಯು. ೪೩೦).
[ದೇ. ॥ ತಮಿ. ಮಲ. ಕರಡು; ತುಳು. ಕರಡ್, ಕರಡು]

**ಕರಡು$_4$** 'ಕರಟ್ಟು$_3$' ನೋ.

**ಕರಡು$_5$**, ಖರಡು$_2$ (ನಾ). ೧. ಕಚ್ಚಾಪ್ರತಿ; ಪರಿಷ್ಕಾರವಾಗದೆ ಇರುವ ಪ್ರತಿ: ಮುಂದಿನ ವರ್ಷದ ಬಜೆಟ್ಟಿನ ಕರಡು ಸಿದ್ಧಗೊಳಿಸುವುದು (ಮರಳಿ. ೧೦೭); ರಾಜ್ಯಾಂಗ ರಚನೆಯ ಕರಡನ್ನು ಸಿದ್ಧಗೊಳಿಸಲು ... ಕರಡುನಿರ್ಮಾಣ ಸಮಿತಿಯೊಂದು (Drafting Committee) ರಚನೆಯಾಯಿತು (ದಿಲ್ಲಿಪ. ೧೨೩); ಕಣ್ಣು ಮುಚ್ಚುವವರೆಗೂ ಕರಡುಗಳನ್ನು ಗೀಚುವ ನನಗೆ ಲೇಖನ ಕಲೆ ಒಲಿಯುವುದೆ? (ಜನಜೀ. ೭೦). 'ಕರಡಚ್ಚು' ಪರಾ. ೨. ಕಚ್ಚಾಲೆಕ್ಕದ ಟಿಪ್ಪಣಿ; ರೋಜಕಿರ್ದಿ (ಉಕ): ಕರಡು ದಿನವಹಿ ವರ್ಗಮಾಸಾಂತಕಾದಿಗಳ ಬರೆದೋದಿ (ಚಬವು. ೭–೭). ೩. ನೋಡಿ ಬರೆಯುವುದು; ನಕಲು; ಕಾಪಿ: ಎಲ್ಲರೂ ಕರಡು (ಕಾಪಿ) ತೀಡತೊಡಗಿದರು (ಕಥಕ. ೪೪). **ಖರಡು$_2$೧**: ಬರೇ ಕರಡು ತೀಡಿ ತೀಡಿ ನಿನ್ನ ಮಿದುಳಂಬೋದು ಬರಡಾಗೇದ (ಪರಿಲ. ೧೮).
[← ಮರಾ. ಖರಡಾ, ಖರ್ಡಾ]

**ಕರಡುಕಟ್ಟು** 'ಕರಡುಗಟ್ಟು' ನೋ.

**ಕರಡುಗಟ್ಟು**, ಕರಡುಕಟ್ಟು (ಕ್ರಿ). ಮುರುಟಿಹೋಗು; ಸುಕ್ಕುಗಟ್ಟು: ಆ ನೆತ್ತರುಕಾಲುವೆಗಳನ್ನೂ, ಕೊತ್ತಿಬಿದ್ದು, ಕರಡುಗಟ್ಟಿದ ಆ ಮಾಂಸಖಂಡದ ರಾಶಿಗಳನ್ನೂ ನೋಡಿ ನನ್ನ ಹೃದಯ ಬೆಂದುಹೋಗಿದೆ (ಅಗ್ರಹ. ೫೯). **ಕರಡುಕಟ್ಟು**: ಬೇರೆಬೇರೆ ವೃತ್ತಿಗಳ ಜನರು ಇದ್ದಲ್ಲಿಯೇ ನಿಂತು, ಆ ವೃತ್ತಿ ಕಸಬುಗಳು ಕರಡುಕಟ್ಟುತ್ತವೆ (ರಾಜ್ಯಶಾ. ೩೫೭).
[ಕರಡು$_4$ (< ಕರಟ್ಟು$_3$) + ಕಟ್ಟು$_1$]

**ಕರಡುಗೊಳಿಸು** (ಕ್ರಿ). ಬೇಸರಗೊಳಿಸು; ವೈಮನಸ್ಯವನ್ನುಂಟುಮಾಡು (?): ನಿನ್ನ ಕವಡುನುಡಿಗಳಿಂದೆನ್ನಂ ಕರಡುಗೊಳಿಸುತಿರ್ಪೆ. ಆದಜಿನಾನಿಲ್ಲಿಂದಂ ಪೋಪೆಂ (ಮಿತ್ರಗೋ. ೩೧); ಇರದೆ ಸಕಲವ ತೊರೆಸಿ ಹೃದಯವ ಕರಡುಗೊಳಿಸುತ ತಿರುಗಿಸಿದ (ಯನಳ. ೬೬–೪).
[ಕರಡು + ಕೊಳಿಸು]

**ಕರಡುಪ್ರತಿ** (ನಾ). ಕಚ್ಚಾಪ್ರತಿ; ತಿದ್ದುಪಡಿಯಾಗಬೇಕಾದ ಪ್ರತಿ: ಕರಡುಪ್ರತಿ ತೆಗೆಯುವ ಒತ್ತುಯಂತ್ರದ ಒತ್ತಡವನ್ನು ಅವು ಅನೇಕ ಬಾರಿ ತಡೆಯಬೇಕಾಗುತ್ತದೆ (ಮುದ್ರಕ. ೧೪). [ಕರಡು$_5$ + ಪ್ರತಿ]

**ಕರಡುಬರ್ಬರ** (ನಾ). ಒಂದು ಬಗೆಯ ಬಿಳಿಯ ರತ್ನ: ವಾರಣಾಶಿಯೊಳು ತಾ ಪುಟ್ಟಿದೋರ್ಪುದತಿ ಬಿಳಿದು ನಿರ್ಮಲಮಾಗಿ ... ತುಂಬುರದಿ ಸೂಕ್ಷ್ಮದಿಂ ಕರಡು ಬರ್ಬರಮೆನಿಪುದೂ (ರತ್ನಶಾ. ೧೯–೧೧).
[ಕರಡು$_3$? + ಬರ್ಬರ]

**ಕರಡುಮುತ್ತು** (ನಾ). ದೋಷವುಳ್ಳ ಮುತ್ತು: ಕರಡುಮುತ್ತೆಲ್ಲ ಕಟ್ಟಾಣಿಯ ಕುಲವೆ (ಭರಚ. ೫೩–೮೬). [ಕರಡು$_3$ + ಮುತ್ತು$_5$]

**ಕರಡುಮುರುಡು** (ನಾ). = ಕರಟುಮುರಟು (೬).
[ಕರಡು$_3$ + ಮುರುಡು]

**ಕರಡುಸಾಲ** (ನಾ). ವಸೂಲಾಗದ ಸಾಲ; ಮುಳುಗು ಗಂಟು: "ಹಿಂದಕ್ಕೆ ಬಾರದ ಸಾಲ; ಸತ್ತಸಾಲ; ಕರಡುಸಾಲ" (Bad debt. ಇಂಕನಿ). [ಕರಡು$_3$ + ಸಾಲ$_1$]

**ಕರಡೆ$_1$** 'ಕರಡ' ನೋ.

**ಕರಡೆ$_2$**, ಕರಡಿ$_2$, ಕರಾಡಿ$_1$ (ನಾ). ಒಂದು ಬಗೆಯ ಚರ್ಮವಾದ್ಯ: "ಜರ್ಝರೀ – ಕರಡೆಯ ಹೆಸರು" (ನಾಚಿರಾ. ೯೬); ಕರಡೆಯ ತಾಳದ ಪಟಹದ ಮದ್ದಳೆಯ ಮಿಕ್ಕವಾದ್ಯಮುಮೊಳವೇ (ಗದಾಯು. ೩–೪೯); ನಟವಿಕಟ ಕಟಕ ಬಿಜ್ಜಂಬ ಕರಡೆಯ ದನಿಯ (ಬಸರ. ೧೧–೧೩೦); ಶ್ರುತಿಕಷ್ಟಂ ಬರೆ ಸಂಧಿ ಮಾಡಲಾಗದು ಕರಡೆಯ ಗಿರ್ಗಟಿದ ದನಿಪೊಲಮು ರವವೆಂದುಂ (ಶಮದ. ೬೩). **ಕರಡಿ$_2$**: ಗಡಗಡ ಝಲ್ಲೆಂಬ ಸಮಾಳ ಕರಡಿ ಕೌಸಾಳ ನಾದ (ಅಖಂಡೇ. ೨೦೬–೪೬); ಕರಡಿ ಕಂಸಾಳೆ ಚಿನ್ನಾಳೆಗಳ್ (ಸಿದ್ಧಕಾ. ೮–೬); ಕರಡಿ ಡಿಂಡಿಮ ಭೇರಿ (ಯನಳ. ೫೫). 'ಕರಡಿಮಜಲು', 'ಕರಡಿಮೇಳ' ಪರಾ. **ಕರಾಡಿ$_1$**: ಭದ್ರವೆಂಬ ಕರಾಡಿ ಶಾಸಕವೆಂಬ ನಗಾರಿ (ವಿವೇಕ. ೨೩೬).
[ದೇ. ॥ ತಮಿ. ಕರಡಿಕೈ./ಪ್ರಾ. ಕರಡಿ, ಕರಡಾ=ಒಂದುಬಗೆಯವಾದ್ಯ]

**ಕರಡೆ$_3$** 'ಕರಡು$_3$' ನೋ.

**ಕರಡೆಕಾಗದ** (ನಾ). (ಉಕ) ಒರಟುಕಾಗದ; ಉರುಟುಕಾಗದ; ಹೊಳಪಿಲ್ಲದ ಕೋರಿಕಾಗದ: ಅಂಗಡಿಕಾರರು ಬಳಸುವ ಕರಡೆ (ಕೋರಿ) ಕಾಗದಗಳು ಇಲ್ಲಿ ಆಗುತ್ತವೆ (ಅಕ್ಷರ. ೧೯೯).
[ಕರಡೆ$_3$ (< ಕರಡು$_3$) + ಕಾಗದ]

**ಕರಡೋಲೆ** (ನಾ). ಅಚ್ಚಿನ ಕರಡುಪ್ರತಿ.

**ಕರಡೋಲೆಯೋದುಗ** = ಕರಡೋಲೆಯನ್ನು ಓದಿ ತಪ್ಪುಗಳನ್ನು ತಿದ್ದುವವನು: ಕರಡೋಲೆಯೋದುಗನ ಜವಾಬ್ದಾರಿ ದೊಡ್ಡದು (ಮುದ್ರಕ. ೨೯). [ಕರಡು$_4$ + ಓಲೆ]

**ಕರಣ** (ನಾ). ೧. ಮಾಡುವಿಕೆ; ಕೆಲಸ; ಉದ್ಯೋಗ: ನಿನ್ನನಾಳ್ವೆನೆಂದು ಬಾಣಸಿನ ಕ[ಪಾಠಾಂ. ಶ]ರಣಕ್ಕೆ ನಿರೂಪಣಂಗೆಯ್ದಂ (ಪಂಪಭಾ. ೯–೫೪ ವ). ೨. ಉಪಕರಣ; ಸಾಮಗ್ರಿ; ಸಾಧನ; ಉಪಾಯ: ಕರಣ ಎಂದರೆ ಕರ್ಮ ನಡೆಯಲು ಬೇಕಾಗತಕ್ಕ ಉಪಕರಣಸಾಮಗ್ರಿ, ಎಂದರೆ ಬಂಡವಾಳ ವ್ಯವಸ್ಥೆ ಮೊದಲಾದ ಸಾಧನಗಳು (ಭಾರದ. ೩೫೭); ಒಳದೃಷ್ಟಿ ಸಾಕಲ್ಯದಾತ್ಮ ಸಂದರ್ಶನಕ್ಕೆ ಕರಣವದು (ಮಂಕುಕ. ೬೨೦).

೩. ಜ್ಞಾನೇಂದ್ರಿಯ: ನಂಬಿಯಣ್ಣನ ಕರಣಂ ಕೂಳ್ಗುದಿಗೊಂಡು (ನಂಬಿರ. ೧೯-೮೯); ಕರಣ ನಿರ್ಮಳವಾಯ್ತು ಮನವುಬ್ಬರಿಸಿತು (ಕುವ್ಯಾಉ. ೮-೬); ಕರಣಗಳ ತಡೆಯುವದೆ ಕಷ್ಟ (ಸರ್ವಜ್ಞ. ೫೩೦). ೪. ಸನ್ನೆ; ಸಂಕೇತ: ಅವನು ದೂರದಲ್ಲಿದ್ದವರನ್ನು ಕೈ ಕರಣ ಮಾಡಿ ಕರೆದ (ರೂಢಿ). ೫. ಒಡಲು; ಮೈ. ೬. ಹೊಲ; ಭೂಮಿ. ೭. ಉದ್ದೇಶ; ಕಾರಣ. ೮. ಕರಣಿಕ; ಗಣಕ; ಸೇನಬೋವ: ನಾಡ ಪೆರ್ಗ್ಗಡೆ ನಾಗದೇವಯ್ಯ ಪ್ರಮುಖ ಕರಣಮುಮಿಬ್ಬ (ಎಇ. XV, ೭೯-೧೪ ; 1050); ಎಕ್ಕಟಿಗನ್ಮಾರ್ಲ್ವತ್ತು ಮಾನಸರುಮಿರ್ದು ಬರಯಿಸಿದ ಶಾಸನ ಬರೆದ ಕರಣಂ ರೇವರಾಜಂ (ಸೌಇಇ. IX–i, ೨೩೧-೧೬ ; 1134); ಎಲ್ಲಾ ಕರಣಂಗಳಂ ಕರೆಯಿಸಿ ಭಂಡಾರದ ಲೆಕ್ಕವಂ ನೋಡಿ (ಬಸರ. ೮-೯೯). ೯. [ವ್ಯಾಕ] ತೃತೀಯಾ ವಿಭಕ್ತಿಯ ಅರ್ಥ: ಕಾರಕಮೆಂಬುದು ಕ್ರಿಯಾನಿಮಿತ್ತಂ; ಅದು ಕರ್ತೃವೆಂದುಂ, ಕರ್ಮವೆಂದುಂ, ಕರಣಮೆಂದುಂ . . . ಅಧಿಕರಣಮೆಂದುಂ ಷಡ್ವಿಧಮಾಗಿರ್ಪುದು (ಶಮದ. ೯೩ ವೃತ್ತಿ); ವಿಭಕ್ತ್ಯರ್ಥಗಳು ಕರ್ತೃ, ಕರ್ಮ, ಕರಣ . . . ಅಧಿಕರಣ ಎಂದು ಏಳು ವಿಧ (ಕೈಪಿಡಿ. ೫೩). ೧೦. [ನಾಟ್ಯ] ನರ್ತನದ ಒಂದು ಭಂಗಿ: ಕರಣಂ ರೇಚಕಮಂಗಹಾರಮಿನಿತೆಂದೋದುತ್ತುಮಿರ್ಪ (ಆದಿಪು. ೭-೧೧೯); ಎರಡು ಕಾಲುಗಳಿಂದಲೂ ಮಾಡುವ ಚಲನೆಗೆ 'ಕರಣ'ವೆಂದು ಹೆಸರು (ಅಭಾನ್ಯ. ೫೦). ೧೧. [ಜ್ಯೋತಿ] ತಿಥಿಯ ಅರ್ಧಭಾಗವನ್ನು ವ್ಯಾಪಿಸಿರುವ ಕಾಲವಿಶೇಷ: "ಅವಜಿಸೊಳೆಡೆಯಾಡುವ ಭವಾದಿಗಳು ಕರಣವಕ್ಕು" (ಮಂಗರಾ. ೨೧-೯). ೧೨. ಐದು ಎಂಬ ಸಂಖ್ಯೆಯ ಸಂಕೇತ: "ಶರ ಕರಣಮೈದು" (ಮಂಗರಾ. ೧೦೩-೮). [ಸಂ.]

**ಕರಣಗ್ರಂಥ** (ನಾ). [ಜೈನ] ಕರಣಾನುಯೋಗದ ಗ್ರಂಥ: ಲೋಗಾಣಿ ಸಂಗಾಣಿ ಮೊದಲಾಗೊಡೆಯ ಕರಣಗ್ರಂಥಂಗಳುಮನಿವೆಲ್ಲಮಂ ಕಲ್ತೊಡಲ್ಲದೆ ಪೇಟಲಾಗದು (ವಡ್ಡಾರಾ. ೬-೮). 'ಕರಣಾನುಯೋಗ' ಪರಾ. [ಕರಣ + ಗ್ರಂಥ]

**ಕರಣಗ್ರಾಮ** (ನಾ). ಇಂದ್ರಿಯ ಸಮೂಹ; ಪಂಚೇಂದ್ರಿಯಗಳು: ತಪಮಂ ಶೀಲಮನಪ್ಪುಕೆಯ್ದು ಕರಣಗ್ರಾಮಂಗಳಂ ಗೆಲ್ದು (ಪಂರಾಮಾ. ೧-೫). [ಕರಣ + ಗ್ರಾಮ]

**ಕರಣಚತುಷ್ಟಯ** (ನಾ). ನಾಲ್ಕು ಅಂತರಿಂದ್ರಿಯಗಳು: ಮನೋಬುದ್ಧಿ ಚಿತ್ತಾಹಂಕಾರಂಗಳೆಂಬ ಕರಣಚತುಷ್ಟಯಂಗಳ್ ತನ್ನ ಸ್ವರೂಪು (ಮನೋವಿ. ೧-೧೪ ಟೀಕು); ಇನ್ನು ಕರಣಚತುಷ್ಟಯದ ವಿವರವ ಹೇಳುವೆ ತಿಳಿ (ಜ್ಞಾನಸಿಂ. ೪-೪೮); ಪ್ರಬಲರಾದ ಶತ್ರುಗಳೆಂಬ ಬೆಂಕಿಯಿಂದ ಅವರ ಕರಣಚತುಷ್ಟಯಗಳು ಸುಟ್ಟುಹೋಗಿದ್ದವು (ರಾಜಸೂ. ೯೬). [ಕರಣ + ಚತುಷ್ಟಯ]

**ಕರಣಜಯಿತ್ವ** (ನಾ). ಇಂದ್ರಿಯಗಳನ್ನು ಗೆದ್ದಿರುವಿಕೆ; ಜಿತೇಂದ್ರಿಯತ್ವ: ಈತನುಂ ಕರಣಜಯಿತ್ವಮುಂ ಧರಿಸಿದಂತರಿನೀತನನಂತರಿಕ್ಷದೊಳ್ . . . ಕೀರ್ತಿಪರಲ್ತೆ ಚಾರಣರ್ (ಶಾಕುಂತ. ೨೭-೪೯). [ಕರಣ + ಜಯಿತ್ವ]

**ಕರಣತ್ರಯ** (ನಾ). ೧. ಮನಸ್ಸು, ವಚನ ಮತ್ತು ಕಾಯ ಎಂಬ ಮೂರು ಕರಣಗಳು: ಕರಣತ್ರಯ ಶುದ್ಧನೆಂದದೇಂ ಸ್ತುತಿಯಿಸಿದತ್ತೊ ಸಂತಸದೆ ಪೌರಜನಂ ಪ್ರಭುವಂಶಮೇರುವಂ (ಪುಷ್ಪಪು. ೩-೧೩೨); ನೆಗಳ್ದಪೆಂ ಕರಣತ್ರಯದಿಂ ಪ್ರಣಾಮಮಂ (ಶಬಶಂ. ೧-೬). ೨. [ಜೈನ] ಅಧಃಕರಣ, ಅಪೂರ್ವಕರಣ, ಅನಿವೃತ್ತಿಕರಣ ಎಂಬ ಮೂರು ತತ್ತ್ವಗಳು: ಮುನ್ನಮಧಃಪ್ರವೃತ್ತಮನಿವೃತ್ತಮಪೂರ್ವಮೆಂಬ ಕರಣತ್ರಯದಿಂ (ಮಲ್ಲಿಪು. ೧೪-೭೭). [ಕರಣ + ತ್ರಯ]

**ಕರಣಲಬ್ಧಿ** (ನಾ). [ಜೈನ] ಐದುಲಬ್ಧಿಗಳಲ್ಲಿ ಒಂದು; ಕರಣಪರಿಣಾಮಗಳ ಪ್ರಾಪ್ತಿ: ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿಯೆಂಬ ಲಬ್ಧಿಪಂಚಕಮುಮಂ (ಸುಕುಮಾ. ೩-೩೯ ವ). [ಕರಣ + ಲಬ್ಧಿ]

**ಕರಣವೃತ್ತಿ** (ನಾ). ಇಂದ್ರಿಯ ವ್ಯಾಪಾರ; ಇಂದ್ರಿಯಗಳ ಕಾರ್ಯ: ಕರಣವೃತ್ತಿಗಳಡಗುವುವು ಕೂಡಲಸಂಗನ ನೆನೆಯುತ್ತ ಉಂಡರೆ (ಬಸವ. ೭೮೬); ಬಲಿದ ಮಜವೆಯ ಕರಣವೃತ್ತಿಯ ಕಳವಳದ ಪಂಚೇಂದ್ರಿಯದ ಪರಿಚಲನ ಸಂಚದ . . . ಊರ್ಧ್ವಸ್ಖಲಿತ ದೀರ್ಘಶ್ವಾಸನಿದ್ದನು ಕೌರವರರಾಯ (ಕುವ್ಯಾಗ. ೧೦-೨). [ಕರಣ + ವೃತ್ತಿ]

**ಕರಣವೇದ್ಯ** (ಗು). ೧. ಇಂದ್ರಿಯಗಳಿಂದ ತಿಳಿಯುವ; ಇಂದ್ರಿಯ ಗೋಚರವಾದ. (ನಾ). ೨. ಇಂದ್ರಿಯ ಗೋಚರವಾದುದು: ಒಗೆವಾಚೆ ಬಿಸುಡೆಲ್ಲ ಕರಣವೇದ್ಯವನು ಮಿಗುವುದೇಂ? ರೂಪಾಖ್ಯೆಯೊಂದುಮಿಲ್ಲದ ವಸ್ತು (ಮಂಕುಕ. ೮೯೯). [ಕರಣ + ವೇದ್ಯ]

**ಕರಣವೇಳೆ** (ನಾ). "ಕರಣದ ಹೊತ್ತು" (ವಡ್ಡಾರಾ. ಟಿಪ್ಪಣಿ): ಮತ್ತಿರುಳಿನ ಕರಣವೇಳೆಯೊಳ್ ವಜ್ರಸೇನನೆಂಬ ಮಂತ್ರಿಯರಸಂಗಿಂತೆಂದು ಬಿನ್ನಪಂಗೆಯ್ದುಂ (ವಡ್ಡಾರಾ. ೮೧-೧೨). [ಕರಣ + ವೇಳೆ (= ವೇಲೆ)]

**ಕರಣಶಾಲೆ** (ನಾ). ಕರಣಿಕರ ಕಚೇರಿ; ಗಣಕರ ಕಚೇರಿ; ಸೇನಬೋವರ ಕಚೇರಿ: "ಗಣಕರೋರಂತೆ ಬರೆವ ಮನೆ ಕರಣಶಾಲೆಯೆನಿಕ್ಕು" (ಮಂಗರಾ. ೫೮-೧೦). [ಕರಣ + ಶಾಲೆ$_1$]

**ಕರಣಶುದ್ಧಿ** (ನಾ). ದೇಹ, ಮನಸ್ಸು, ಮಾತು ಈ ಮೂರರ ಶುದ್ಧಿ. 'ಕರಣಶುದ್ಧಿವಡೆ' ಪರಾ. [ಕರಣ + ಶುದ್ಧಿ]

**ಕರಣಶುದ್ಧಿವಡೆ** (ಕ್ರಿ). ತ್ರಿಕರಣಗಳಲ್ಲಿ ಶುದ್ಧಿಯನ್ನು ಪಡೆ: ಇದಿರ್ಗೊಳ್ವುದು ಕಾಲ್ಗರ್ಚುವುದುದಾತ್ತಮುಪ್ಪೆಡೆಯೊಳಿರ್ಪುದರ್ಚಿಪುದೆಜಗಿರ್ದು ಕರಣಶುದ್ಧಿವಡೆವುದು ಪದೆದನ್ನಮನೀವುದೆಂಬ ನವವಿಧಪುಣ್ಯ (ಆದಿಪು. ೪-೯೬). [ಕರಣಶುದ್ಧಿ + ಪಡೆ$_1$]

**ಕರಣಸಮಾಧಿ** (ನಾ). ಇಂದ್ರಿಯ ನಿಗ್ರಹ: ನಾರುಬೇರಿನ ಕುಟಿಲಕಪಟದ ಯೋಗವಲ್ಲಿದು ನಿಲ್ಲಿ ಭೋ ಕಾಯಸಮಾಧಿ ಕರಣಸಮಾಧಿಯೋಗವಲ್ಲಿದು ನಿಲ್ಲಿ ಭೋ (ಅವಚಂ.೧೩೯-೬೪೦). [ಕರಣ + ಸಮಾಧಿ]

**ಕರಣಸಾಲೆ** (ನಾ). = ಕರಣಶಾಲೆ: "ಕರಣಶಾಲಾ – ಕರಣಸಾಲೆ" (ಶಮದ. ೨೮೯ ಪ್ರಯೋ); ಇಹಪರದ ಲೆಕ್ಕಿಗಂ ನಡೆನಡೆದು ಕರಣಸಾಲೆಗೆ ಬಂದು ಕುಳ್ಳಿರ್ದು (ಬಸರ. ೫-೬೧). [ಕರಣ + ಸಾಲೆ$_3$]

**ಕರಣಹಸಿಗೆ** 'ಕರಣಹಸುಗೆ' ನೋ.

**ಕರಣಹಸುಗೆ, ಕರಣಹಸಿಗೆ** (ನಾ). [ವೀಶೈ] ದೇಹದಲ್ಲಿರುವ ಸಕಲ ತತ್ತ್ವಗಳನ್ನು ವಿಂಗಡಿಸಿ ಹೇಳುವಶಾಸ್ತ್ರ: ಕನ್ನಡವೂ ಕನ್ನಡಿಸಲಿನಾಳೆ ಬಾಳಿನೊಸಗೆಯ; ಜೀವನಕಲೆ ಬೆಳಗಲಲ್ಲಿ ತಿಳಿದು ಕರಣಹಸುಗೆಯ (ಸೂರ್ಯಪಾ. ೧೨೦-೧೬). **ಕರಣಹಸಿಗೆ**: "ಆತ್ಮನಸ್ಥೂಲವಲ್ಲದ, ಸೂಕ್ಷ್ಮವಲ್ಲದ ಪ್ರಮಾಣವಾದ ದೇಹದಲ್ಲಿರುವ ಸಕಲತತ್ತ್ವಂಗಳಿಂ ಬೇರೆ ಬೇರೆ ಹಸಿಗೆಯಂ ಮಾಡಿ ವಿಸ್ತರಿಸಿ ಹೇಳುತ್ತಿಹುದಾದ ಕಾರಣ ಶಾಸ್ತ್ರಕ್ಕೆ ತತ್ತ್ವವಿಭಾಗವೆಂಬಭಿಧಾನವು ಪ್ರಸಿದ್ಧವಾಯಿತ್ತೆಂಬುದೀ ಕರಣಹಸಿಗೆಯೆಂಬ ಶಬ್ದಕ್ಕರ್ಥವು" (ಚೆನ್ನಸಾ. ೨). [ಕರಣ + ಹಸುಗೆ(< ಪಸುಗೆ)]

**ಕರಣಾಗ್ರಣಿ** (ನಾ). ಗಣಕರಲ್ಲಿ ಅಧಿಕ; ಲೆಕ್ಕ ಪತ್ರಗಳ ಖಾತೆಯ ವರಿಷ್ಠ; ಕರಣಿಕರಲ್ಲಿ ಶ್ರೇಷ್ಠ: ಕಾಮರಾಜತನಯಂ ಕರಣಾಗ್ರಣಿ ಶಾನ್ತಿನಾಥನುದ್ದಾಮಪರಾಕ್ರಮಂ (ಸೌಇಇ. XX, ೨೪೮-೧೧ ; 1228); ಜನಪತಿ . . . ಮೂಡ ಮೊಗದಿಂ ಮಿಗೆ ಕುಳ್ಳಿರೆ ತತ್ಕುಮಾರ ಮಂತ್ರನಿಪುಣ ಕೋಶನಾಥ ಕರಣಾಗ್ರಣಿ ಸೂರಿ ಕವೀಂದ್ರ ಮಾನ್ಯ . . . ಬಲದಲ್ಲಿರವೇಳ್ಕುಂ (ಲಾಸ್ಯರಂ. ೧-೩೪). [ಕರಣ + ಅಗ್ರಣಿ]

**ಕರಣಾಧಿಪತಿತ್ವ** (ನಾ). ಲೆಕ್ಕಪತ್ರಗಳ ಖಾತೆಯ ಹಿರಿಯ ಅಧಿಕಾರ; ಕರಣಿಕಾಗ್ರಣಿಯ ಪದವಿ: ಅಧಿಕಾರದಕ್ಷನಧಿಕಂ ಶುಚಿಯೆಂದೊಸೆ ದೀಯೆ ಪೆತ್ತನಗ್ಗಳಿಕೆಯನಪ್ಪುಕೆಯಿದ ಕರಣಾಧಿಪತಿತ್ವಮನೆಂದೊಡಣ್ಣ ಕೇವಳನೆ (ಶಾಸಪ. ೬೧). [ಸಂ.]

**ಕರಣಾನುಯೋಗ** (ನಾ). [ಜೈನ] ನಾಲ್ಕು ಅನುಯೋಗಗಳಲ್ಲಿ ಒಂದು; ತ್ರಿಷಷ್ಟಿಶಲಾಕಾಪುರುಷರ ಚರಿತ್ರೆಯನ್ನು ಒಳಗೊಂಡ ಅನುಯೋಗ: ಕರಣಾನುಯೋಗಮೆಂಬುದು ತೀರ್ಥಕರ ಚಕ್ರವರ್ತಿ ರಾಮಕೇಶವಾದಿಗಳ ಭವಸಂತತಿಯುಮನವರನುಭವಿಸಿದ ಭೋಗಂಗಳುಮಂ ಪರಿಗ್ರಹಪರಿತ್ಯಾಗಾದಿಗಳುಮಂ ಪೇೞ್ವುದು (ಚಾವುಂಪು. ೩೯೦-೮). [ಕರಣ + ಅನುಯೋಗ]

**ಕರಣಿ**$_1$ 'ಕರಣೆ$_1$' ನೋ.

**ಕರಣಿ**$_2$ 'ಕರಣೆ$_2$' ನೋ.

**ಕರಣಿ**$_3$ (ನಾ). ೧. ಮಿಶ್ರಜಾತಿಯವಳು; ಬೆರಕೆ ಕುಲದವಳು. ೨. [ಗಣಿತ] ಪರ್ಯಾಪ್ತ ದಶಮಾಂಶರೂಪದಲ್ಲಿ ವ್ಯಕ್ತಪಡಿಸಲಾಗದ ಮೂಲ: ಶುಲ್ವಗಳಲ್ಲಿ ಸಂಖ್ಯೆಯ ವರ್ಗಮೂಲಕ್ಕೆ ಕರಣಿ ಎಂಬ ಹೆಸರಿದೆ (ಗಣಿತ. ೧೮೯). [< ಸಂ. ಕರಣೀ]

**ಕರಣಿ**$_4$ (ನಾ). ಕರಣಿಕ; ಲೆಕ್ಕಬರೆಯುವವನು; ಗಣಕ. [< ಸಂ. ಕರಣಿನ್]

**ಕರಣಿ**$_5$ (ನಾ). ಸೊಂಡಿಲು: ಕರಿ ವಿನೋದದಿ ಕುಡಿದ ಜಲವನು ಕರಣಿಯಲಿ ತೆಗೆತೆಗೆದು ರಿಪು ಮೋಹರಕೆ ಚೆಲ್ಲಿತು ಕಲ್ಪಮೇಘದ ಬಸುಱ ಬಗಿದಂತೆ (ಕುಮಾವ್ಯಾದ್ರೋ. ೩-೪೦). [?]

**ಕರಣಿಕ**, ಕರಣೀಕ (ನಾ). ಲೆಕ್ಕ ಬರೆಯುವವನು; ಗಣಕ; ಸೇನಬೋವ; ಕುಲಕರ್ಣಿ: ಕರಣಿಕನ ಹಗೆಗೊಂಡವಂಗೈಶ್ವರಿಯ ಹಾನಿ (ಕುವ್ಯಾಉ. ೩-೧೮); ಕರಣಿಕರ ಜೋಯಿಸರ ಜಗಜಟ್ಟಿಗಳ . . . ನಡುವೆ ವೊಡ್ಡೋಲಗಂಗೊಟ್ಟು ರಂಜಿಸುತಿರ್ದನು (ಸಮ್ಮಕೌ. ೨-೩); ಬರೆಯಿಸಿಕೊಂಡರು ಕಲೆಗಳ ಕಾಲನ ಕರಣಿಕರುಗಳ ಕೈಯಿಂದ (ಕುರಾಸಾಂ. ೧೨-೫೬); ಕರಣಿಕರು ಮಾಡಿದ ದ್ರೋಹಕ್ಕಾಗಿ ವಿಕ್ರಮರಾಯನು ಅವರನ್ನು ದಂಡಿಸುತ್ತಿದ್ದಾನೆ (ಸಂಶಕ. ೧೦೫). **ಕರಣೀಕ**: ಸಕಲದೇಶಗಳ ಲೆಕ್ಕವಂ ವಕ್ಕಣಿಸುವ ಕರಣೀಕರಂ (ಸೌಗಂಧಿ. ೧೨-೩); ಕರಣಿಕರನ್ನೂ ಹಸ್ತಕರನ್ನೂ ಕರತರಿಸಿ (ಕೃವಾಸ. ೧೦). [ಕರಣ + -ಇಕ]

**ಕರಣಿಕತನ**, ಕರಣೀಕತನ (ನಾ). ಕರಣಿಕ ವೃತ್ತಿ; ಸೇನಬೋವಿಕೆ: ಇಂದಿನಿಂದ ಕರಣಿಕತನವನ್ನು ಕಾಳಸರ್ಪಗಳಿಗೆ ವಹಿಸಿ, ನಿರಾತಂಕದಿಂದಿರುವೆವು (ವಿಗಡ. ೨-೫). **ಕರಣೀಕತನ**: (೬). [ಕರಣಿಕ + -ತನ]

**ಕರಣಿಕತ್ವ** (ನಾ). ಕರಣಿಕನ ಅಧಿಕಾರ, —ವೃತ್ತಿ: ಹಂಪೆಯ ಹರೀಶ್ವರ ದೇವರಿಗೆ ರಹಸ್ಯಮಂ ಬರೆವ ಕರಣಿಕರಿಗೆಲ್ಲ ಹಿರಿತನಮಂ ಕೊಟ್ಟಿತ್ತು ಕರಣಿಕತ್ವಕ್ಕೆ ಮಡಗಿಕೊಂಡಿರಲು (ಭೈರಸೂ. ೪೩). [ಕರಣಿಕ + -ತ್ವ]

**ಕರಣಿಕಮಂಡಲೀಕ** (ನಾ). ಕರಣಿಕರಲ್ಲಿ ಮುಖ್ಯ; ಕರಣಾಗ್ರಣಿ: ಕರಣಿಕ ಮಂಡಳೀಕರ್ಗೆಱಿದು ಕಟ್ಟಿಗೆಕಾಱರಿಂಗೆಱಿದು . . . ಅಲವಟ್ಟಿಪ ನಿಕ್ಕುವರಿಗೆಱಿದು (ಬಸವು. ೫೯-೨೭). [ಕರಣಿಕ + ಮಂಡಳೀಕ$_0$ (< ಮಂಡಲಿಕ)]

**ಕರಣಿಕಶಾಲೆ** (ನಾ). = ಕರಣಶಾಲೆ: ಇಕ್ಕೆಲದೊಳಗೊಪ್ಪುವ ಕರಣಿಕಶಾಳೆ. ಪೊಕ್ಕರಣೆಗಳಿರುತಿಪವು (ಅಂಜಚ. ೩-೩೫). [ಕರಣಿಕ + ಶಾಲೆ$_1$]

**ಕರಣಿಗ** (ನಾ). = ಕರಣಿಕ: ಶ್ರೀ ಮಹಾಬಲಿಬಾಣರಸರ ಕರಣಿಗವಳುಂಗವಮ್ಮನ ಕಂಭಂ (ಎಕ. X, ಮುಳಬಾ. ೧೨೪-೨; ಸು. 890). [ಕರಣ + -ಇಗ]

**ಕರಣಿಗೆ** (ನಾ). ಗಾರೆ ಕೆಲಸದ ಒಂದು ಸಾಧನ; ಕರ್ನೆ; ತೇಪೆ (ಉಕ.). [?. / ತಮಿ. ಕರಣೈ]

**ಕರಣೀಕ** 'ಕರಣಿಕ' ನೋ.

**ಕರಣೀಕತನ** 'ಕರಣೀಕತನ' ನೋ.

**ಕರಣೀಯ** (ಗು). ಮಾಡಬೇಕಾದ: ಮುನ್ನಮಿನ್ನುಂ ಕರಣೀಯಂ ನಿನ್ನವಾಕ್ಯಂ (ಆದಿಪು. ೨-೪೯); ಸುತ ಪೋಹದಿನೆಮಗಮದಶ್ರೀಯ ಮಾದೊಡಂ ಕರಣೀಯಂ (ಪಂರಾಮಾ. ೪-೧೧೧). [ಸಂ.]

**ಕರಣೆ**$_1$, ಕರಣಿ$_1$, ಕರ್ಣ$_1$, ಗರಣೆ$_1$ (ನಾ). ೧. ಗಡ್ಡೆ; ಮುದ್ದೆ; ಪಿಂಡ; ಗಟ್ಟಿ: ಚಂದ್ರಿಕೆಯ ಕರಣೆಗಳೆನಿಪ ಕೆನೆಮೊಸರನೊಲವಿಂದ ಲಿಕ್ಕಲ್ (ಇಹರ. ಹ. ೧೨೯-೩೦); ನೆತ್ತರ ಕರಣೆ ನೀರೊಳು ಬಿದ್ದುದನು ಕಂಡತ್ತರು ದಿಗ್ವನಿತೆಯರು (ಮೋಹತ. ೧೧-೨೯); ಮೂಗು ಬಾಯಿಗಳಿಂದ ರಕ್ತದ ಕರಣೆಗಳೇ ಬೀಳಹತ್ತಿತು (ಬಂಗಾಹ. ೭). ೨. ತಬಲ ಅಥವಾ ಮದ್ದಳೆಯ ಚರ್ಮದ ಮೇಲೆ ಚೆನ್ನಾಗಿ ನಾದ ಕೊಡುವುದಕ್ಕಾಗಿ ಅಂಟಿಸುವ ಕರಿಯ ಲೇಪ: ಎರಡು ಭಾಗಕ್ಕೂ ಕರಣೆ ಹಾಕಿ ಉಪಯೋಗಿಸುವ ವಾದ್ಯವೇ ತಬಲಾ ಎನ್ನಿಸಿದೆ (ಸಂಗೀತಂ. ೧೨೦). **ಕರಣಿ**: ೧. ಚಾಂಡಾಲನ ಗುಡಿಸಿಲಿನಲ್ಲಿ ತೂಗುಬಿದ್ದ ನಾಯಿಯ ಮಾಂಸದ ಕರಣಿಗಾಗಿ ಬಾಯ್ಬಿಡುತ್ತಲಿದ್ದಾನೆ! (ಅಶ್ವಮೇ. ೩೧); ಮೊದಲೇ ಕೆಂಪಗಿರುವ ಮುಖವು ಈಗ ಕೆಂಡದ ಕರಣಿಯಂತೆ ತೋರಹತ್ತಿತು (ಹಬ್ಬಬ. ೨೭೩). ೨. ಕರಣಿ ಸಿಡಿಯದಂತೆ ಮದ್ದಳೆಯ ಬಲಗಣ್ಣನೆತ್ತಿ ನೋಡಿ (ವಿರೂಪಾ. ೮೦). **ಕರ್ಣ**: ೨. ಅದ್ಗಣ ಬಡಿಬಡಿಯುವುದು; ಕರ್ಣ ತೀಡುವುದು (ಹಹಸ. ೪೩). **ಗರಣೆ**$_1$: ೧. ಅಳುತಿರುವ ಬಾಲಕನ ಕೈಯಲಿ ಮೆಲುವ ಹಿಂಡಿಯ ಗರಣೆಯಂ ಕೊಟ್ಟು (ಬಸಪು. ೨೪-೭೮). [ದೇ. ‖ ತೆಲು. ಕರುಡು]

**ಕರಣೆ**$_2$, ಕರಣಿ$_2$, ಕರ್ನೆ (ನಾ). ೧. ಹಿತ್ತಾಳೆಯ ದೊಡ್ಡ ತುತೂರಿಯಂತಹ ಊದುವ ವಾದ್ಯ: ಕೂಗಿಡುವ ಕಹಳೆ ಹೆಗ್ಗಹಳೆ ಚಿನಿಕಹಳೆ ಕರಣೆಯ ನಾದ (ಅಖಂಡೇ. ೨೦೬-೪೬); ಕರಣೆ ಭೂರುಗ ಢಕ್ಕೆ ಮರುಳೆ ದುಂದುಭಿಯು ಧರಣಿ ಬೆದರುವ ತೆರದಿ ನುಡಿವ ಭೇರಿಗಳು (ಹಮುಚ. ೨೩೩). **ಕರಣಿ**: ೧. ಕಾಳೆನುಡಿಯತಾವ ಕರಣಿ ಮಾತಾಡತಾವ ಸಾಲಸನಾದಿ ರಣಬಾಜೂ (ಲೋಕಗೀ. ೨೦೦-೪). **ಕರ್ನೆ**: ೧. ಹೆಗ್ಗಹಳೆ ಕರ್ನೆ ಭೂರುಗ ಮುಖ್ಯ ಪರಿಪರಿಯ ವಿವಿಧವಾದ್ಯರವ (ಘೋರಾಸು. ೩೧-೫೧); ಭೇರಿ, ಕಹಳೆ, ಕರ್ನೆ, ನಫೂರಿ, ನಗಾರಿ (ಗುರುದ. ೧೧); ೨. = ಕರಣಿಗೆ: ಗಾರೆಯವನು ಕರ್ನೆ ಬಿಟ್ಟುಬಂದಿದ್ದಾನೆ (ರೂಢಿ). [← ಮರಾ. ಕರಣಾ, ಕರ್ಣಾ; ಹಿಂ. ಕರನಾಈ; ಪಾರ. ಕರ್ನಾ, ಕರ್ನಾಯ್]

**ಕರಣೇಂದ್ರಿಯ** (ನಾ). ಜ್ಞಾನೇಂದ್ರಿಯ: ಲೋಚನಾಂಬುಗಳುಕ್ಕಿದವು ಕಳವಳಿಸಿದವು ಕರಣೇಂದ್ರಿಯಾದಿಗಳು (ಕುವ್ಯಾಆ. ೨೧-೫೩); ನೆರವಿ ಬೇರೊಂದಿಲ್ಲ ಭೂತದ ಹರಹು, ಕರಣೇಂದ್ರಿಯದ ಸಂದಣಿ (ಕುವ್ಯಾಭೀ. ೩-೫೨). [ಕರಣ + ಇಂದ್ರಿಯ]

**ಕರತನ** (ನಾ). ತೀಕ್ಷ್ಣತ್ವ; ಉಗ್ರತೆ; ಉದ್ದಂಡತೆ: ಖರಕಿರಣಂಗಳ ಕಾಯ್ಪಿನ ಕರತನದಿಂ ಚಂದ್ರಕಿರಣದುಜ್ವಳಿಕೆಯಿಂ (ಆದಿಪು. ೧೧-೭); ದುಶ್ಶಾಸನನೊಳ್ ಕರತನ [ಪಾಠಾಂ. ತರತಮ, ಕರತವ] ದಿಂದೆನ್ನೊಳಮಾ ಮರುತ್ಸುತಂ ಪೂಣ್ದ ಪೂಣ್ಕೆಯಂತೆವೊಲಕ್ಕುಂ (ಪಂಪಭಾ. ೧೧-೧೨೪). [ಕರ್ದ + -ತನ]

**ಕರತರ್ಜನ** (ನಾ). ಕೈಸನ್ನೆಯಿಂದ ಬೆದರಿಸುವುದು ಅಥವಾ ಭಯವನ್ನು ಸೂಚಿಸುವುದು: ನಾಲಗೆಯ ಮಾತು ಕಣ್ಣೊಳ್ ಕರತರ್ಜನಮಡರೆ ನಿಮಿರ್ದ ಪುರ್ವಿನ ಕೊನೆಯೊಳ್ ನೆಲಸಿದುದು ಯೌವನಂ ನೆಲಸಲೊಡಂ (ಚಂದ್ರಪ್ರ. ೫-೯೮).
[ಕರ್$_3$ + ತರ್ಜನ]

**ಕರತಲ**, ಕರತಳ (ನಾ). ಕೈಯ ಒಳಭಾಗ; ಅಂಗೈ: ಆತಂಗೆ ಮುಕ್ತಿ ಕರತಲದೊಳಿಹುದು (ವೀಶೈಪು. ೨-೬-೩೦). **ಕರತಳ:** ಮಜ್ಜಿಗೆಯೊಳಗಣ ಬೆಣ್ಣೆ ಕರತಳಕ್ಕೆ ಮುಳುಗಬೇಕು (ಕಾಲಸಂ. ೧೦೩-೫); ಕರತಳಂ ಕಂಡವರ್ಗೆ ರಾಗಮುನಲರ್ಚುತಿರೆ (ಇಹರ. ಹ. ೧೩೧-೨೮); ಅವನಿಪತಿ ದುಗುಡದಲಿ ಮೋಜಿಯಲವುಚಿದನು ಕರತಳವ (ಕುವ್ಯಾದ್ರೋ. ೧-೪).
[ಕರ್$_3$ + ತಲ$_1$]

**ಕರತಲಾಮಲಕ**, ಕರತಳಾಮಳಕ (ನಾ). ೧. ಅಂಗೈಯೊಳಗಿನ ನೆಲ್ಲಿ. ೨. (ಆಲಂ) ಅತ್ಯಂತ ಸ್ಪಷ್ಟವಾದುದು, —ಸ್ಫುಟವಾದುದು; ಚೆನ್ನಾಗಿ ತಿಳಿದುದು: ಕುರುಪಾಂಡವರ ಸಮಸ್ತ ಚರಿತ್ರಂಗಳು ನಿಮಗೆ ಕರತಲಾಮಲಕವಾಗಿ ಪ್ರತ್ಯಕ್ಷವಾಗಿರುವುವು (ಕೃವಾಆ. ೮೫); ದೇಶ ಕೋಸಲವಿದೆಕೊ ಕರತಲಾಮಲಕಮೆನೆ ಕಣ್ಗೊಳಿಸುತಿದೆ (ಶ್ರೀರಾಮಾ. ೧೦೨-೫೬); ಎಲ್ಲಾ ವಿಷಯಗಳೂ ರಾಯರಿಗೆ ಕರತಲಾಮಲಕವಾಗಿವೆ (ರಾಯಕ. ೬೫). **ಕರತಳಾಮಳಕ:** ೨. ಪರಮಾತ್ಮನಂತೆ ಲೋಕಾಲೋಕದ ವಸ್ತುಗಳುಮಂ ಕರತಳಾಮಳಕಮಾಗಱಿವುದಱಿಂ (ಪಂಪಭಾ. ೧೪-೩೭ ವ). [ಕರತಲ + ಆಮಲಕ]

**ಕರತಳ** 'ಕರತಲ' ನೋ.

**ಕರತಳಾಮಳಕ** 'ಕರತಲಾಮಲಕ' ನೋ.

**ಕರತಾಡನ** (ನಾ). ಕೈಗಳನ್ನು ಒಂದಕ್ಕೊಂದು ತಟ್ಟುವುದು; ಚಪ್ಪಾಳೆ: ಸಭೆಯೆಲ್ಲ ಸಂತೋಷದಿಂದ ಕರತಾಡನ ಮಾಡಿತು (ಶಾಂತಲಾ. ೧೯೯); ಕೂಡಲೇ ಸಭೆಯಲ್ಲಿ ಕರತಾಡನಗಳೂ ಹರ್ಷಸೂಚಕ ಧ್ವನಿಗಳೂ ತುಂಬಿ ಹೋದುವು (ರಂಗಕ. ೧೮). [ಕರ್$_3$ + ತಾಡನ]

**ಕರತಾಲ**, ಕರತಾಳ$_2$ (ನಾ). ೧. ಕೈಯಲ್ಲಿ ಹಿಡಿದು ಬಾರಿಸುವ ತಾಳ. ೨. ಬರಿ ಕೈಯನ್ನು ತಟ್ಟಿಕೊಂಡೇ ತಾಳ ಹಾಕುವುದು. **ಕರತಾಳ$_2$:** ೧. ಮುದ್ರಿಕೆಗಳ ಮೇಲೆ ಒಂದು ತಂತ್ರೀವಾದ್ಯ, ಕರತಾಳ ... ಮೃದಂಗ ಮತ್ತು ತಮ್ಮಟೆ ಚಿತ್ರಿತವಾಗಿವೆ (ಭಾರದ. ೧೩). ೨. ಭೂತಗಣ ಕರತಾಳದಲಿ ಕುಣಿದಾಡುತಿರ್ದವು ಪಾಡಿ ರಘುಪತಿಯ (ತೊರರಾ. ೩-೬-೧೩). [ಕರ್$_3$ + ತಾಲ$_3$]

**ಕರತಾಳ$_1$** 'ಕರತಾಳೆ' ನೋ.

**ಕರತಾಳ$_2$** 'ಕರತಾಲ' ನೋ.

**ಕರತಾಳಿ** 'ಕರತಾಳೆ' ನೋ.

**ಕರತಾಳೆ**, ಕರತಾಳ$_1$, ಕರತಾಳಿ (ನಾ). ಒಂದು ಜಾತಿಯ ಮರ: "ದ್ವಿಧಾಲೇಖ್ಯಂ-ಶ್ರೀತಾಳೆ, ಕರತಾಳೆ" (ಒಷಧಿ. ೭೬); ಜೇನುನೊಣದ ವಿಷಕ್ಕೆ – ಬಂಜೆ ಮಾಡುವಾಗಲಗೆಡ್ಡೆ, ಕರತಾಳೆಯ ಬೇರು, ಬದನೇ ಬೇರು, ಹೆಗ್ಗುಳದ ಬೇರು, ಇವಿಷ್ಟನು ನೀರಿಂದಲಾದರೂ ನಿಂಬೆಹಣ್ಣಿನ ರಸದಿಂದಲಾದರೂ ಅರೆದು ಜೇನುನೊಣ ಕಚ್ಚಿದ ಠಾವಿಗೆ ತೊಡೆಯಲು ಆದಜ ವಿಷ ಶಮನವಹುದು (ವೈದ್ಯಸಾ. II, ೨೨೨). **ಕರತಾಳ$_1$:** "ಕುಸಿಕತರುಃ – ಕರತಾಳಮರ" (ಒಷಧಿ. ೩೭). **ಕರತಾಳಿ:** "ಕರತಾಳಿ [ಪಾಠಾಂ. ಳ] ಹಿಂತಾಳಿ ತಾಳಿಯೆನಿಕ್ಕುಂ" (ಮಂಗರಾ. ೧೦೫-೧೫); "ಧನ್ಯಃ – ಕರತಾಳಿ" (ಒಷಧಿ. ೮೦).

[? / ಮರಾ. ಕರದಳ್, ಕರದಳೀ, ಕರ್ದಳ್, ಕರ್ದಳೀ = ಒಂದು ಬಗೆಯ ಹೂವಿನ ಗಿಡ]

**ಕರತ್ರಾಣ** (ನಾ). ರಕ್ಷಣಾರ್ಥವಾಗಿ ಕೈಗೆ ತೊಡುವ ಕವಚ; ಹಸ್ತಕವಚ; ಕೈಗಾಪು: ಕರತ್ರಾಣ ... ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾಧಿ ಸಾಧನವಿಶೇಷಂಗಳಿಂದಲುಂ (ವಿವೇಕ. ೨೬೨).
[ಕರ್$_2$ + ತ್ರಾಣ]

**ಕರದಂಟು** (ನಾ). (ಉಕ) ಕಡಲೆಹಿಟ್ಟು, ಕರಿದ ಅಂಟು ಸೇರಿಸಿ ಮಾಡಿ ಬಿಲ್ಲೆಯಾಕಾರವಾಗಿ ಕತ್ತರಿಸಿಟ್ಟ ಒಂದು ಬಗೆಯ ಸಿಹಿತಿಂಡಿ: ಐದುರೂಪಾಯಿಯ ಅಮೀನಗಡದ ಕರದಂಟು ತಂದು ತಿನ್ನಿಸುವೆನು (ಮೇದಿಮ. ೧೨); ಹಳ್ಳಿಯ ಮಿಠಾಯಿ ಅಂಗಡಿಯಲ್ಲಿಯ 'ಕರದಂಟು', 'ಖಾರ'ಗಳನ್ನೂ ಕೊಡಿಸದೆ ಇರುವುದಿಲ್ಲ (ಬರಹಾ. ೫೨); ಅವನ ಕೈಯಿಂದಲೇ 'ಕರದಂಟು' ಕಳ್ಳತನದಿಂದ ತರಿಸಿ ತಿನ್ನಿಸಿದ್ದಾಳೆ (ಬನಸಿ. ೯೭). [< ಕರಿ$_1$ + ಅಂಟು$_2$]

**ಕರದಂಡ$_1$** (ನಾ). ೧. ಕಮಲ; ತಾವರೆ. ೨. ಉಗ್ರವಾದ ಶಿಕ್ಷೆ; ತೀಕ್ಷ್ಣವಾಗಿ ದಂಡಿಸುವುದು. ೧, ೨: ಆ ರಾಜೇಂದ್ರಂ ಲೋಕೈಕವೀರಮಿತ್ರನಾಗಿಯುಂ ಕರದಂಡ ಪ್ರಿಯನಲ್ತು (ನಾಗಕು. ೨-೮೬ ವ).
[ಕರ್$_2$ + ದಂಡ]

**ಕರದಂಡ$_2$** (ನಾ). ಕೈಯಲ್ಲಿ ಹಿಡಿಯುವ ಕೋಲು; ಕೈಗೋಲು: ಕುಂತಳವನೂರ್ಧ್ವಕ್ಕೆ ಮುಡಿಗಟ್ಟಿ ಕರದಂಡವಾಂತವಳು ಬರಲು (ಪ್ರೌಢರಾ. ೮-೪೭). [ಕರ್$_3$ + ದಂಡ]

**ಕರದಮ** (ನಾ). = ಕರ್ದಮ: ಕರವಿಡಿದೆತ್ತುವದು ಭವಕರದಮದೊಳಗಿಂದ (ಮೋಕ್ಷದೀ. ೧೭೬-೧೬). [< ಸಂ. ಕರ್ದಮ]

**ಕರದೀಪ** (ನಾ). ಕೈಯಲ್ಲಿ ಹಿಡಿದುಕೊಳ್ಳಲು ಬರುವಂತೆ ಹಿಡಿಕೆಯುಳ್ಳ ಲೋಹದ ದೀಪ; ಕೈದೀವಿಗೆ (*).
[ಕರ್$_3$ + ದೀಪ$_2$]

**ಕರದೀವಿಗೆ** (ನಾ). = ಕರದೀಪ (*). [ಕರ್$_3$ + ದೀವಿಗೆ]

**ಕರದುಂದು** (ನಾ). ಮಿತಿಮೀರಿದ ಪೋಲುವೆಚ್ಚ; ಅತಿದುಂದುಗಾರಿಕೆ: ಬೀರಪ್ಪ ಬೀಗರನ್ನು ಎದುರುಗೊಳ್ಳಲು ಕರದುಂದು ನಡೆಸಿದ್ದ (ಬೆಂದಜೀ. ೧೧). [ಕರ$_1$ (< ಕರಂ) + ದುಂದು$_1$]

**ಕರಧೈರ್ಯ** (ನಾ). ಹೆಚ್ಚಿನ ಎದೆಗಾರಿಕೆ; ಅಧಿಕ ಧೈರ್ಯ: ಹರಗೆ ನಂದಿಯು ಲೇಸು ... ವರಯುದ್ಧ ಲೇಸು ಸುಭಟಂಗೆ ರಾಜಂಗೆ ಕರಧೈರ್ಯ ಲೇಸು (ಸರ್ವಜ್ಞ. ೭೧೦).
[ಕರ$_1$ (< ಕರಂ) + ಧೈರ್ಯ]

**ಕರನಾಶ** (ನಾ). ದೊಡ್ಡ ಕೇಡು; ಸಂಪೂರ್ಣ ನಾಶ: ಅರಸೊಲಿದು ನಡೆಸಿದರೆ ಸಿರಿಯಕ್ಕು ಜಸವಕ್ಕು ... ಮುನಿದರೆ ಕರನಾಶವಕ್ಕು (ಸರ್ವಜ್ಞ. ೭೩೨). [ಕರ$_1$ (< ಕರಂ) + ನಾಶ]

**ಕರನಿರಾಕರಣೆ** (ನಾ). (ಸರಕಾರಕ್ಕೆ) ತೆರಿಗೆಯನ್ನು ಕೊಡಲು ನಿರಾಕರಿಸುವುದು: ಅಂದಿನಿಂದಲೇ ಕರನಿರಾಕರಣೆ, ಉಪ್ಪಿನ ಸತ್ಯಾಗ್ರಹ ... ಆರಂಭವಾಗಬೇಕೆಂದು ಗಾಂಧೀಜೀ ತಿಳಿಸಿದರು (ಆತ್ಮಾರ್ಪ. ೧೩೭). 'ಕರಾಕರಣೆ' ಪರಾ. [ಕರ್$_3$ + ನಿರಾಕರಣೆ]

**ಕರನ್ಯಾಸ** (ನಾ). ಜಪ ಮತ್ತು ಪೂಜೆಯ ಕಾಲಗಳಲ್ಲಿ ಮಂತ್ರಪೂರ್ವಕವಾಗಿ ಬೆರಳುಗಳನ್ನು ಸ್ಪರ್ಶಿಸುವುದು: ಆ ಮಂತ್ರದಿಂ ಕರನ್ಯಾಸಂಗೈವಲ್ಲಿ (ವಿವೇಕ. ೮೩). 'ಅಂಗನ್ಯಾಸ' ಪರಾ.
[ಕರ್$_3$ + ನ್ಯಾಸ]

**ಕರಪ** 'ಕರೆಪ' ನೋ.

**ಕರಪಂದ** (ನಾ). ಸೊಂಡಿಲಿನ ಚಲನೆ, —ಅಲುಗಾಟ (?): ಗರುಡಭೀತಿ ಗಜಕರಪಂದ [ಪಾಠಾಂ. ವಾತ] ದುಷ್ಟಜಲಚರಸಂಗ (ಚಬಪು. ೩೭-೫೧). [ಕರ್$_3$ + ಪಂದ]

**ಕರಪಟಶಾಸ್ತ್ರ** (ನಾ). ಖರಪಟ್ಟನು ರಚಿಸಿದ ತಸ್ಕರಶಾಸ್ತ್ರ; ಚೋರ ವಿದ್ಯೆಯನ್ನು ಕಲಿಸುವ ಶಾಸ್ತ್ರ: ಅನುಂ ಕಳ್ಳುಪಾಯಮಂ ಪೇೞ್ವ ಕರಪಟಶಾಸ್ತ್ರಮಂ ಕಲ್ತೆಂ (ವಡ್ಡಾರಾ. ೧೨೮–೨೫).
[ಕರಪಟ್ಟ₀ (< ಸಂ. ಖರಪಟ, ಖರಪಟ್ಟ) + ಶಾಸ್ತ್ರ]

**ಕರಪತ್ರ₁** (ನಾ). ೧. ಕರಗಸ; ಗರಗಸ: "ಗರಗಸಂ ಕ್ರಕಚಮಾ ಕರ ಪತ್ರಮಕ್ಕು" (ಮಂಗರಾ. ೭೮–೩೮); ಮುದ್ಗರದ ಮುಸುಂಡಿಯ ಮುಸಲದ ಕರಪತ್ರದ ಮಚಿಯ ಸುರಿದುದಸ್ತ್ರದ ಮುಖದಿಂ (ಜಗವಿ. ೧೨–೩೪); ಸಾಣೆವಿಡಿದಿರ್ದ ಕರಪತ್ರಮಂ ಕೊಡಿಸಿದಂ (ಜೈಮಿಭಾ. ೨೬–೬೦). ೨. ಒಂದು ಬಗೆಯ ಆಯುಧ; ಒಂದು ಬಗೆಯ ಕತ್ತಿ (?): ಅರಿರಾಯರ ಶಿರಮಂ ನಿಜ ಕರಪತ್ರಂ ಕೊಳ್ವುದರಿದೆ (ಎಕ. V, ಅರಸೀ, ೧೦೮–೧೪; 1255). [ಸಂ.]

**ಕರಪತ್ರ₂** (ನಾ). ಅಚ್ಚುಮಾಡಿ ಹಂಚುವ ಚಿಕ್ಕ ಪ್ರಕಟಣೆ; ಹಸ್ತ ಪತ್ರ: "ನಾಳೆಯೇ ಒಂದು ಕರಪತ್ರ ಕಳಿಸಿ ನಿಮ್ಮ ಸಂಗೀತ ಕಚೇರಿ ಏರ್ಪಡಿಸುತ್ತೇವೆ . . ." (ಬಾಳ್ವೆ. ೧೯೬); ಕರಪತ್ರಗಳೂ ಹಂಚ ಲ್ಪಟ್ಟವು (ಕದಂಬ. ೧೨೮). [ಕರ₃ + ಪತ್ರ]

**ಕರಪಲ** (ನಾ). ೧. "ಸನ್ನಿಯಿಂದ ನರಳುತ್ತಿರುವ ರೋಗಿಯು ಹಾಸಿಗೆಯ ಬಟ್ಟೆಗಳನ್ನು ತಡಕಾಡುವುದು; ತಡಕಾಟದ ಸನ್ನಿ; ಕರಪಲ" (Carphology. ಇಂಕನಿ): ರಾತ್ರಿ ಮಾತು ನಿಂತಿತು ಕರಪಲ ಹೆಚ್ಚಾಯಿತು (ಸುಖವಿ. ೩೫). ೨. ಉದ್ದೇಶರಹಿತವಾದ ಅಂಗ ಚೇಷ್ಟೆ: ಏಕೆ ಕರಪಲ ಮಾಡುತ್ತಿರುವಿರಿ, ಸುಮ್ಮನಿರಿ (ರೂಢಿ).

**ಕರಪಲಚೇಷ್ಟೆ** = ಕೈ ಬೆರಳುಗಳನ್ನು ಸುಮ್ಮನೆ ಆಡಿಸುವುದು: ಕರಪಲಚೇಷ್ಟೆ ಮಾಡದಿದ್ದರೆ ಆತನಿಗೆ ಸಮಾಧಾನವಿಲ್ಲ (ರೂಢಿ).
[← ಇಂ. Carphology]

**ಕರಪಲಿ** (ನಾ). ಮಿತಿಮೀರಿದ ನರೆ, —ಕೂದಲಿನ ಬಿಳುಪು (?): ಕರುಮಾಡ ನೆಳಲೊಳಗೆ ನಿಂತು ಕಚನಿಚಯಗಳ ಕರಪಲಿಗೆ ಕರ್ಪಿಕ್ಕೆ ಬಾಚಿ ನುಣ್ಚಿಸಿ (ಪ್ರಭುಪು. ೪–೧೪೩). [ಕರ₃ + ಪಲಿ₀ (< ಪಲಿತ?)]

**ಕರಪಾಕ** (ನಾ). ಕೈಹದದ ಪಾಕ (?): ಮೃದ್ವಗ್ನಿಯಿಂದ ಪಾಕ ಮಾಡಿ ಕರಪಾಕದಲ್ಲಿಳುಹಿಕೊಂಡು ಆ ತೈಲವನ್ನು ಮೈಗೆ ಪೂಸೆ ವಾತ ಪಿತ್ತಜ್ವರ, ವಿಷಮಜ್ವರ ಸಹ ಬಿಡುವುವು (ಸಕವೈ. ೯೫). [ಕರ₃ + ಪಾಕ₂]

**ಕರಪಾಣಿ** (ನಾ). ಒಂದು ಬಗೆಯ ಇಸುಬು: ಕರಪಾಣಿ ಎಂಬ ಉಗ್ರ ವಾದ ಇಸುಬು ಅನೇಕ ಸಲ ಒಂದು ವರ್ಷವಾದರೂ ಹೋಗುವುದಿಲ್ಲ (ಗೃಹವಿ. ೧೪೯). [?]

**ಕರಪಾತ್ರ** (ನಾ). ೧. (ಏನನ್ನಾದರೂ ತೆಗೆದುಕೊಳ್ಳಲೆಂದು) ಒಡ್ಡಿದ ಅಂಗೈಯ ತಗ್ಗು; ಅಂಗೈಗುಳಿ; ಒಕ್ಕೈಗುಳಿ. ೨. ಕೈಯೊಳಗಿನ ಪಾತ್ರೆ. ೩. ಕೈಯೇ ಪಾತ್ರೆಯಾಗಿ ಉಳ್ಳವನು; ಅವಧೂತ; "ಭಿಕ್ಷಾಮೂರ್ತಿ" (ಘನವ. ಕೋಶ): ಒಡೆದ ಓಡಿನಲ್ಲಿ ಅಂಬಲಿಯನೆಱೆ ಯಲು ಎಲೆ ದೇವ ನನ್ನ ಮನದಲ್ಲಿ ನೊಂದೆನಾದರೆ ನಾನು ಕರಪಾತ್ರನಲ್ಲ ಅಪಾತ್ರನು (ಘನವ. ೪೦). [ಕರ₃ + ಪಾತ್ರ]

**ಕರಪಾತ್ರೆ** (ನಾ). ೧. ಚಿಕ್ಕಬಟ್ಟಲು; ಕೈಬಟ್ಟಲು: "ಕರಪಾತ್ರೆ ಕೈವಟ್ಟಲಕ್ಕು" (ಮಂಗರಾ. ೬೧–೨೦). ೨. ಭಿಕ್ಷಾಪಾತ್ರೆ: ಎನ್ನ ಕರ ಪಾತ್ರೆಗೆ ತಂದು ಭಿಕ್ಷವ ನೀಡಿದರೆ ಕೊಂಡುದೇ ಪ್ರಸಾದ ಒಕ್ಕುದೇ ಪದಾರ್ಥ (ಘನವ. ೧೮); ಕರಪಾತ್ರೆ ಹಿಡಿದು ಈ ನರಶರೀರದಿ ತನ್ನ ಆರುವ ತನಗೆ ತೋರಿ . . . ದೊರಕಿದಾ ಗುರು ದೊರಕಿದಾ (ಶರೀಫ. ೭). ೩. ಪಾತ್ರೆಯಾಗಿ ಅಳವಡಿಸಿಕೊಂಡ ಕೈ (?): ಕರಪಾತ್ರೆಯ ಗುಣ —ಇದರಲ್ಲಿ ಊಟಮಾಡುವುದರಿಂದ . . . ರಾಗದುಃಖಗಳನ್ನು ನಾಶ ಮಾಡುವುದು (ಸಕವೈ. ೪೮). [< ಸಂ. ಕರಪಾತ್ರ]

**ಕರಪಾದಿ** (ನಾ). ಕೈ ಕಾಲುಗಳುಳ್ಳ ಸಸ್ತನಿ ಪ್ರಾಣಿ: (ಕಾಲುಗಳು ಕ್ರಮೇಣ ಕೈಗಳಾಗಿ ಮಾರ್ಪಟ್ಟ) ಕೈಗಳುಳ್ಳ ಸಸ್ತನಿವರ್ಗದ ಪ್ರಾಣಿಗಳ ಹೆಸರು [ದ್ವಿಹಸ್ತಿಗಳೂ (ಮನುಷ್ಯ) ಚತುರ್ಹಸ್ತಿಗಳೂ, (ಕಪಿ) ಸಹ]: ಕರಪಾದಿಗಳು" (Chiropad. ಇಂಕನಿ). [< ಸಂ. ಕರಪಾದಿನ್]

**ಕರಪಾಲ** (ನಾ). ಕತ್ತಿ; ಖಡ್ಗ. [ಸಂ.]

**ಕರಪಾಲಿಕೆ** (ನಾ). ೧. ಖಡ್ಗ; ಒಂದೇ ಬಾಯಿ ಇರುವ ಚೂರಿ. ೨. ಚಿಕ್ಕದೊಣ್ಣೆ. [ಸಂ. ಕರಪಾಲಿಕಾ]

**ಕರಪೀಠ** (ನಾ). ೧. ಹೇಳವರು ತೆವಳುವಾಗ ಕೈಗೆ ಇಟ್ಟುಕೊಳ್ಳುವ ಚಪ್ಪಟೆಯಾದ ಮರದ ಹಲಗೆ. ೨. ನೆಲವನ್ನು ಧಮ್ಮಸ್ಸು ಮಾಡಲು ಉಪಯೋಗಿಸುವ ಮರದ ಸಾಧನ; ಬಡಿಮಣೆ; ಹೊಡೆಮಣೆ: "ಪೆಟ್ಟಣಿಗೆ ಕರಪೀಠ [ಪಾಠಾಂ. ಡ]ವಕ್ಕು" (ಮಂಗರಾ. ೪೭–೬). [ಕರ₃ + ಪೀಠ]

**ಕರಪೀಡನ** (ನಾ). ೧. ಕೈಯಿಂದ ಒತ್ತುವುದು, —ಹಿಂಡುವುದು: ೨. ತೆರಿಗೆಯ ಭಾರದಿಂದ ಪೀಡೆ ಕೊಡುವುದು. ೧, ೨: ಸುಗಂಧಿ ಯೆಂಬ ವಿಷಯಮುಂಟದಱೊಳ್ ಕರಪೀಡನಂ ಧೇನುಕುಚದೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಚಂದ್ರಪು. ೩–೯ ವ). ಸುರತಾಸಕ್ತೆಯ ಕುಚಂಗಳೆಂತಂತೆ ನಿರಾವರಣಂಗಳಾಗಿ ಪಱುವುವು ಕರಪೀಡನದಿಂದಮುಗ್ರ ಹಾರಚಯಂಗಳ್ (ಅನಂಪು. ೧೩–೩೦). ೩. ಮದುವೆ; ವಿವಾಹ. 'ಪಾಣಿಗ್ರಹಣ', 'ಪಾಣಿಪೀಡನ' ಪರಾ. [ಕರ₃ + ಪೀಡನ]

**ಕರಪುಟ** (ನಾ). ೧. ಬೊಗಸೆ. ೨. ಗೌರವಾರ್ಥವಾಗಿ ಮುಗಿದ ಕೈ; ಎರಡೂ ಕೈಗಳನ್ನು ಜೋಡಿಸುವಿಕೆ: ಮೆಯ್ಯನಿಕ್ಕಿ ನಿಟಿಳ ತಟಘಟಿತ ಕರಪುಟಯುಗಲನುಂ . . . ಆಗೆ (ಸುಕುಮಾ. ೧೨–೧೮ ವ); ನೊಸಲಲಿ ಕರಪುಟಾಂಜಲಿ ಮೆಱೆವುತಿರೆ ಬಿನ್ನಹವ ಮಾಡಿದರು (ಕುಮ್ಯಾಉ. ೮–೪೭); ಕಣ್ತೊಯ್ದು ಕರಪುಟಾಂಜಲಿಯೆತ್ತಿ ನಿಂದಾ ಸುಮಂತ್ರನಂ ಗುರುತಿಸಲ್ಕಾರದೆ (ಶ್ರೀರಾಮಾ. ೧೧೧–೩೧).
[ಕರ₃ + ಪುಟ₃]

**ಕರಪುರ** (ನಾ). ಒಬ್ಬಾತನ ಹೆಸರು: ರಣಮುಖದುಟ್ಟನಾ ಮಗನ್ ಕರಪುರನ್ ಬನ್ದು ಬಲ್ಲದಾ ತುಱುಗೊಳೆ (ಎಕ. X. ಮುಳಬಾ. ೯೨–೫; ಸು. 780). [?]

**ಕರಪುರಿ** (ನಾ). ಅಜೀರ್ಣ; ಕಟ್ರೆ (?): ಮೇದಿನಿಯೊಳತಿ ಬಿದಣ ಗೊಂಡು ಕರಪುರಿ ಹೆಚ್ಚಿ ವ್ಯಾಧಿಯೊಳು ನೊಂದು ನಡು ಬಗ್ಗಿ ಕಣ್ಗಳ ಮುಚ್ಚಿ ಹಾದಿಗಾಣದರು ಹಿರಿಯರೆಯಲ್ಲು (ಪ್ರಭುಪು. ೮–೬೮). [?]

**ಕರಪೆ** (ನಾ). ಒಂದು ಬಗೆಯ ಸಸ್ಯ; ಕರಿಬೇವು (?): ಕರಪೆ, ಕರಬೇ (ವೈನಿಘ. ೨೨–೪೦೦). [?]

**ಕರಬ₁** (ನಾ). ಕರಿಜೀರಿಗೆ: "ಕರಬ–ಕರಿಜೀರಿಗೆ" (ಅಕಾನಿ. ೫–೧೧). [?]

**ಕರಬ₂** 'ಕರೋಬ' ನೋ.

**ಕರಬದರ** (ನಾ). ೧. ಅಂಗೈಯ ಮೇಲೆ ಇರಿಸಿದ ಬೋರೆ ಹಣ್ಣು. ೨. (ಆಲಂ) ಅತ್ಯಂತ ಸ್ಪಷ್ಟವಾದುದು, —ಸ್ಫುಟವಾದುದು; ಚೆನ್ನಾಗಿ ತಿಳಿದುದು: ಗೋಕುಲದೊಳ್ ಕೃಷ್ಣಂ ಕೊಳಲ್ಗೊಳ್ವಿನಮಾ ದನಿಯಂ ಸವಿದು ಮೆಯ್ಮಱೆದು . . . ಮರಂಗಳುಂ ಮಾನಸರಂತೆ ನವಿರ್ದಳೆದಿರ್ಪುವೆಂಬಿವುಂ ಕರಬದರ ಸದೃಶಮಾದುವು (ಚಿಕವಂ. ೧೫೯–೧೧). [ಕರ₃ + ಬದರ]

**ಕರಬಾನು** (ನಾ). (?): ಕೀಲಾರು ಹಾಸುಮಂಚವು ಕರಬಾನು ಶಾಲು ಸಕಲಾಭರಣವು ಸೋಲುಮುಡಿಯಲಿ ಕರೆದು ಮನ್ನಿಸಿ ವಿಶಾಲದಿಂದಲಿ ತಂಗಿಗಿತ್ತ (ಚಂದ್ರಹಾ. ೪–೪೫). ℙ ಇದು 'ಕರಬೋನ'ದ ಅಪ ಲಿಖಿತವಿರಬಹುದೇ ? [?]

**ಕರಬಾಲ** (ನಾ). = ಕರವಾಲ (೩). [< ಸಂ. ಕರವಾಲ]

**ಕರಬಾಲಿಕೆ** (ನಾ). ಖಡ್ಗ ; ಕತ್ತಿ (೩). [< ಸಂ. ಕರಪಾಲಿಕಾ]

**ಕರಬಾಳಿ** 'ಕರ್ವಾಳೆ' ನೋ.

**ಕರಬೂಜ** ಕರಬೂಜು, ಕರಭೂಜ, ಕರಿಬುಜ, ಕರುಬೂಜು, ಕರ್ಬುಜ, ಕರ್ಬೂಜ, ಖರಬುಜ, ಖರಬೂಜು, ಖರ್ವೂಜ (ನಾ). ಸೌತೆಯ ಜಾತಿಗೆ ಸೇರಿದ ಕೆಕ್ಕರಿಕೆಹಣ್ಣಿನಂತಿರುವ ಒಂದುಬಗೆಯ ಹಣ್ಣು : ಒಬ್ಬರು ಮಾವಂತೆ ಒಬ್ಬರು ಹಲಸಂತೆ ಒಬ್ಬರು ಕರಬೂಜ ದಂತೆ (ಚಂದ್ರವೀ. ೫೫-೧೭). **ಕರಬೂಜು** : ಕರಬೂಜು ... ಕಫ ವಾತಕರ (ಅಷ್ಟಾಂಗ. ೧೩೬-೮೬ ಅರ್ಥ). **ಕರಭೂಜ** : ಕರಭೂಜದ ಹಣ್ಣುಗಳು, ಕುಂಬಳಕಾಯಿ ಇವುಗಳನ್ನು ಹೆಚ್ಚಾಗಿ ಬೆಳೆಯುವುದಿಲ್ಲ (ಪ್ರವಾಇ. I, ೨೦೬). **ಕರಿಬುಜ** : "ವೃತ್ತೋರ್ವಾರುಃ – ಕರಿಬುಜ, (ಕರ್ಬುಜ)" (ಓಷಧಿ. ೧೫೮). **ಕರುಬೂಜು** : (೩). **ಕರ್ಬುಜ** : "ತಿಕ್ತಫಲಂ – ಕರ್ಬುಜ" (ಓಷಧಿ. ೬೮). **ಕರ್ಬೂಜ** : ಕೆಕ್ಕರಿಕೆ, ಕರ್ಬೂಜ (ಮೈಔಗಿ. ೨೬-೪೮೭). **ಖರಬುಜ** : ಸವತೇಬೀಜ ಖರಬುಜ ... ಬಿತ್ತಿದರೆ ವಿಶೇಷ ಫಲವಾಗಿ ರೊಕ್ಕವಾಗುವುದು (ಕೃಷಿಪ್ರ. ೮೫). **ಖರಬೂಜು** : ತರಿಸ್ಯೆಯ ಝೋಳಿಗೆ ನೋಡ್ಯೆಯ ಅದರಲ್ಲಿ ಖರ ಬೂಜುಗಳೆರಡು (ಶನಿಮಾ. ೨೭). **ಖರ್ವೂಜ** : (೩).

[← ಹಿಂ. ಖರಬೂಜಾ ; ಪಾರ. ಖರ್ಬುಜಾ]

**ಕರಬೂಜು** 'ಕರಬೂಜ' ನೋ.

**ಕರಬೇ** (ನಾ). = ಕರಪೆ : ಕರಪೆ – ಕರಬೇ (ಮೈಔಗಿ. ೨೨-೪೧೦). [?]

**ಕರಬೋನ** (ನಾ). ಅಗಲವಾದ ಬಾಯುಳ್ಳ ಚಿಕ್ಕ ಜಲಪಾತ್ರೆ : "ಉಪ್ಪಟಂ ಕರಬೋನಮುಕ್ಕು" (ಮಂಗರಾ. ೬೨-೨೪) ; ವಿಜಯಶ್ರೀಗೆ ನಿಜ ಮಂದಿರವಲಾ ಬ್ರಹ್ಮಾಂಡ ಕರಬೋನಗಳಲಾ ಭುವನ ಧರಣಿ (ತೊರರಾ. ೬-೨೦-೮೪). ಪೆರ್ಗೊಡ ಪಾಸಿ ಕೊಪ್ಪರಿಗೆಗಳ ಅಡಲೊಡರ್ಚುವ ಪೊಂಭಾಂಡಗಳ ಕರಬೋನಗಡಣವ ಕೊಟ್ಟನುತ್ಸವದಿ (ಮೋಹತ. ೧೫-೧೯). [< ಸಂ. ಕರಭಾಜನ?]

**ಕರಭ** (ನಾ). ೧. ಮಣಿಕಟ್ಟಿನಿಂದ ಕಿರುಬೆರಳವರೆಗಿನ ಮುಂಗೈಯ ಹೊರಭಾಗ : "ಕಿಱುವೆರಳ ಮಣಿಬಂಧದೆಡೆ ಕರಭಮೆಂದೆನಿಕುಂ" (ಮಂಗರಾ. ೧೩೮-೪). ೨. ಹೆಬ್ಬೆರಳಿಗೂ ಉಂಗುರ ಬೆರಳಿಗೂ ನಡುವಿನ ಅಂತರ; ಚೋಟು : ಉಂಗುರದ ಬೆರಳಿಗೂ ಹೆಬ್ಬೆರಳಿಗೂ ಆಗುವ ದೂರವನ್ನು 'ಕರಭ' ಎಂದು ಕರೆಯುತ್ತಾರೆ (ಪ್ರವಾಇ. I, ೩೫೪). ೩. ಒಂಟೆ. "ರವಣಮುಷ್ಟ್ರಂ ಮಯಂ ಕರಭಂ ... ಎನಲೊಂಟೆಗಭಿಧಾನ ಮಕ್ಕುಂ" (ಮಂಗರಾ. ೫೫-೭) ; ಖರ ಕರಭ ಸೃಗಾಳ ಸಾರಮೇಯಾ ಕಾರಂಗಳಪ್ಪುತ್ಪತ್ತಿಸ್ಥಾನಂಗಳೊಳ್ ಪುಟ್ಟಿ (ಶಾಂತಿಪು. ೭-೮೮ ವ); ಪರಮಾಯುಷ್ಯಂ ... ಇಪ್ಪತ್ತಯ್ದು ಬೆಳ್ಗತ್ತೆಗಂ ಕರಭಕ್ಕಂ (ಜಾತಕಿ. ೮-೧೦). ೪. ಒಂಟೆಯ ಮರಿ. ೫. ಯಾವುದೇ ಪ್ರಾಣಿಯ ಮರಿ (೩). ೬ ಒಂದು ಬಗೆಯ ವಾದ್ಯ. ೭. ಒಂದು ನಕ್ಷತ್ರಪುಂಜದ ಹೆಸರು : "ಸಪ್ತರ್ಷಿ ನಕ್ಷತ್ರ ಮಂಡಲಕ್ಕೂ ಶರ್ಮಿಷ್ಠಾ ನಕ್ಷತ್ರಪುಂಜಕ್ಕೂ ಮಧ್ಯೇ ಇರುವ ಒಂದು ನಕ್ಷತ್ರಪುಂಜ : –ಕರಭ" (Camelopard. ಇಂಕನಿ) ; "ಕಿಱುವೆರಳಗ್ರದಿಂದ ಮಣಿಕಟ್ಟಿನ ಮಧ್ಯವದುಂ ಸುವಾದ್ಯಮುಂ ಕರಭ ಗಳೆಂತಿವುಂ ಕರಭಮೆಂದೆನಿಕುಂ" (ನಾನಾರ. ೧೬೨). [ಸಂ.]

**ಕರಭರಕ್ಷಮ** (ಗು). ಕಂದಾಯದ ಭಾರವನ್ನು ಹೊರಲು ಸಮರ್ಥ ವಾದ; ಹೆಚ್ಚು ಕಂದಾಯವನ್ನು ಗಳಿಸಿಕೊಡುವ (?) : ಅನೇಕ ಭೂದೇವ ಭೋಗಾಗ್ರಹಾರಂಗಳನಾಗ್ರಹದಿಂದಱಿದು ಕರಭರಕ್ಷಮ [ಪಾಠಾಂ. ಕ್ಷೇತ್ರ]ಮಪ್ಪ ನಾಡಂ ಬೇಡರಂತೆ ಪರಿಪರಿದು ನಿರವಶೇಷದಿಂ ಕಿಡಿಸಿಯುಂ (ಪಂಚತಂ. ೨೮-೯). [ಕರ್ $_3$ + ಭರ + ಕ್ಷಮ]

**ಕರಭೋಜ** 'ಕರಬೂಜ' ನೋ.

**ಕರಭೂಮಿ** (ನಾ). ಒಂದು ಪ್ರಕಾರದ ಭೂಮಿ; ಕಂದಾಯದ ಜಮೀನು (?) : ಹಿಪ್ಪರಗೆಯ ಸೀಮೆಯಿಂ ಮೂಡ ಕರ್ಣ್ಣವಳ್ಳಿಯ ಕರ ಭೂಮಿಗೆ ನಡೆವ (ಸೌಇಇ. XX, ೨೩-೨೦; 1029) ; ಪಡವಲು ಗೊಗ್ಗಿಯ ಕರಭೂಮಿ ಬಡಗಲು ಅಕ್ಕಸಾಲಿ ಕೇತನ ಭೂಮಿ (ಸೌಇಇ. XX, ೨೨೪-೨೫; 1295) ; ದೇವರಂಗಭೋಗಕ್ಕೆ ಬಿಟ್ಟ ಕರಭೂಮಿ ಮತ್ತರು (ಬೊಂಕಶಾ. ೧೯೩೩, ಹಾವೇರಿ. ೧೮೭-೩೪ ; ?). [ಕರ್ $_3$ + ಭೂಮಿ]

**ಕರಭೂಷಣ** (ನಾ). ಕೈಗೆ ತೊಡಿಸುವ ಆಭರಣ : "ಅಕು – ಕರ ಭೂಷಣ" (ಕಾಶಕ್ಯ. ೧೬೯). [ಕರ್ $_3$ + ಭೂಷಣ]

**ಕರಮು** $_1$ (ನಾ). ರೀತಿ ; ಕ್ರಮ (೩). [< ಸಂ. ಕ್ರಮ]

**ಕರಮು** $_2$ (ನಾ). ಒಂದು ಬಗೆಯ ನೃತ್ಯಗೀತೆ; ಮಳೆಗಾಲದ ನೃತ್ಯ ಗೀತ : ವರ್ಷಋತುವಿನ ನೃತ್ಯಗೀತಗಳನ್ನು ಕರಮ ಎಂದು ಕರೆಯು ತ್ತಾರೆ (ಭಾರಜಾ. ೮೮). [?]

**ಕರಮುರೆ** 'ಕಱಿಮುಱಿ' ನೋ.

**ಕರಮರ್ದ** (ನಾ). ಮುಳ್ಳುಗಳಿರುವ ಒಂದು ಹಣ್ಣಿನ ಗಿಡ; ಕರ ಮರಿಕೆ ಗಿಡ : ಬೆಳಲು ಕರಮರ್ದ ಶಂಖಿನಿ ಸಿಂಧುವಾರ ಗಿರಿಚೂತಂಗಳೂ ನುಡಿಸಿಕೊಂಬವು ಪಂಚಬಿಲ್ವವೆಂದು (ವೀಶೈಪು. ೭-೧೦-೩೬). [ಸಂ.]

**ಕರಮರ್ದಕ** (ನಾ). = ಕರಮರ್ದ (೩). [ಸಂ.]

**ಕರಮರ್ದನ** (ನಾ). ಕೈಯಿಂದ ಒತ್ತುವುದು, —ಪೀಡಿಸುವುದು: ಸಿಂಹ ಶಿಶುವನಿರದೊಡನಾಡಲ್ ಕರಮರ್ದನದಿಂದಂ . . . ಸೆಳೆಯು ತಿರ್ಪಂ ಬಲ್ಪಿಂ (ಶಾಕುಂತ. ೧೦೪-೧೭೭). [ಕರ್ $_3$ + ಮರ್ದನ]

**ಕರಮರ್ದಿ** (ನಾ). = ಕರಮರ್ದ (೩). [< ಸಂ. ಕರಮರ್ದಿನ್]

**ಕರಮಾನ್ಯ** (ನಾ). ತೆರಿಗೆಯಿಲ್ಲದ ದತ್ತಿ ; ಕರಭಾರದಿಂದ ಮುಕ್ತ ವಾದ ಭೂಮಿ ; ಚೆಂನಕೇಶವ ದೇವರ್ಗ್ಗೆ ಕರಮಾಂನ್ಯವೆನ್ನದೆ (ಬೊಂಕಶಾ. ೧೯೩೦, ಬಾಗೆವಾ. ೧೦೩-೫೨ ; 1165). [ಕರ್ $_3$ + ಮಾನ್ಯ]

**ಕರಮಾಪಕ** (ನಾ). "ಪ್ರಯಾಣ ಮಾಡಿದ ದೂರಕ್ಕೆ ಕೊಡಬೇಕಾದ ಬಾಡಿಗೆಯನ್ನು ಸೂಚಿಸುವ ಸಲಕರಣೆ : ಬಾಡಿಗೆಸೂಚಕ, ಕರ ಮಾಪಕ" (Taxi meter. ಇಂಕನಿ). [ಕರ್ $_3$ + ಮಾನ್ಯ]

**ಕರಮುಂಡು** (ನಾ). (ಕರಾ) (ಚಿತೆಯಲ್ಲಿ) ಅರ್ಧಮರ್ಧ ಸುಟ್ಟ ಹೆಣದ ಮುಂಡ : ಪಾಪಿಯದೇಹ ಕರಮುಂಡಾಗದೆ ಪೂರ್ಣ ಸುಟ್ಟೀತೆ ? (ರೂಢಿ). [ಕರ ? + ಮುಂಡು $_3$]

**ಕರಮುಕ್ತ** (ಗು). ೧. ಕೈಯಿಂದ ಬಿಡಲ್ಪಟ್ಟ. (ನಾ). ೨. ಕೈಯಿಂದ ಎಸೆಯುವ ಬಾಣ ಮೊದಲಾದ ಅಸ್ತ್ರ : "ಕೈಯಿಂದ ಬಿಡುತಿರ್ಪ ಶಸ್ತ್ರಂ ಕರಮುಕ್ತಮಕ್ಕುಂ" (ಮಂಗರಾ. ೮೬-೩೮) ; ಕರಮುಕ್ತವಾ ಯಂತ್ರಮುಕ್ತ ಮುಕ್ತಾಮುಕ್ತ ಉರುತರದ ಮೂದೆಱದ ಕೈದುಕಾಱರು ಸಿಂಗವಱಿಗಳೆನೆ ಕಡುಕೆಯ್ದು (ಸಾಳ್ವಭಾ. ೧೫-೧೪). [ಕರ್ $_3$ + ಮುಕ್ತ]

**ಕರಮೆ** 'ಕರಂ' ನೋ.

**ಕರಯಿಸು** 'ಕರೆಯಿಸು' ನೋ.

**ಕರರುಹ** (ನಾ). ಕೈಯಲ್ಲಿ ಹುಟ್ಟಿದುದು ; ಉಗುರು : ಮಿಳಿರ್ವಸಿಯ ಪಸಿಯ ಹೊಸಬಾಸುಳ ಕರರುಹರೇಖೆ ತುಱುಗಿ (ಆದಿಪು. ೧೨-೧೬) ; ಸುಂದರಿಯರ್ ಕೇಕರ ಕರರುಹ ರುಚಿ ಬೆರಸುತ್ತಿರೆ ಬೀಸಿದರೆಸೆವ ಧವಳ ತರ ಚಾಮರಮಂ (ರಾಜಶೇ. ೫-೧೯). [ಸಂ.]

**ಕರಲ** (ನಾ). ಗರಡಿ ಸಾಧನೆಯಲ್ಲಿ ಒಂದು ಗತಿಭೇದ : ಮೆಲ್ಲಗೆ ಯೊಳ್ ಡೊಕ್ಕರೆಯೊಂಟಿ ಮಂಡಿ ಕರಲಂ ಸೀಸಂ ಕರಂ ಕೊಂಕಸಂ ಮಗುಚಿಡ್ಡಿಂತೀ ಗತಿಭೇದದಿಂ ತೊಡಕಿ ತೋರ್ಕುಂ ಸಾಧಕ ಪ್ರೌಢಿಯಂ (ಚಿಕವಿ. ೪-೧೪೬). [?]

**ಕರಲಾಗು** (ನಾ). ಕೈಯ ಚಳಕ, —ಚುರುಕುತನ (?) : ಪರಿಯ ನಿಟ್ಟಿಸಿ ಬಳಸಿ ಬರುವ ಕರಿಗಮನೆಯರ ಕರಲಾಗಿನಿಂದ ನಿದ್ರಾಮದಾಕ್ಷಿಗಳಿಂದ ಬರುವ (ವೆಂಕಾರಾ. ೫-೮-೨೪). [ಕರ$_3$ + ಲಾಗು$_2$]

**ಕರಲು$_1$** 'ಕಱಲು' ನೋ.

**ಕರಲು$_2$**, ಕರ್ಲು$_2$ (ನಾ). ಗಿಡ್ಡು; ಕುಳ್ಳು; ನಿಲುವಿನಲ್ಲಿ ಅಥವಾ ಬೆಳವಣಿಗೆಯಲ್ಲಿ ಮೊಟಕಾದದ್ದು; ಇನ್ನೂ ಪೂರ್ತಿ ಬೆಳೆಯದಿರುವುದು : ಕರಲು ಮೊಗ್ಗೆಗಳನ್ನು ಹರಿದು ತಂದು ಏನು ಮಾಡುವವಳು? (ರೂಢಿ). **ಕರ್ಲು$_2$** : ತೋಂಟದಲ್ಲಿರ್ಪ ಕರ್ಲುಗಳ ಜಾತಮುದಕಂಬುಪ್ರವಾಹಮಿಲ್ಲದೆ ಬೆಂದಿತಯ್ಯ ಬೇಸಗೆ ಬೇಗೆಯಿಂ (ಮಹಾ ವಿ. ೧೪-೧೦೭).

[ದೇ. ‖ ತಮಿ. ಕಱಳೈ; ಮಲ. ಕರಳ = ಸಂಪೂರ್ಣವಾಗಿ ಬೆಳೆಯದಿರುವ ಹಣ್ಣು]

**ಕರಲೇಸು** (ನಾ). ಬಹಳ ಒಳ್ಳೆಯದು; ತುಂಬ ಚೆನ್ನು; ಅತಿ ಸುಂದರವಾದದ್ದು; ಒಳ್ಳಿಹ ವ್ಯೈಲಾರನವೊಳಗೆಲ್ಲ ಸಣಬು ಹೊಱಗಣ ಬಣ್ಣ ಕರಲೇಸಾಯಿತ್ತಯ್ಯಾ (ಬಸವ. ೨೮೦); ಪಿಡಿದು ಬಾಧಿಸೆ ಕೊಡುವ ಮನ್ನಣದುಡುಗರೆಯ ಸೊಬಗಿಂದೆ ಕಂತೆಯುನುಡುವುದೇ ಕರಲೇಸು (ಗಗತಾ. ೧೬-೪೭). [ಕರ$_1$ (< ಕರಂ) + ಲೇಸು$_1$]

**ಕರವಂಡಿ** (ನಾ). = ಕರಮರ್ದಕ: "ಕರವತಿಗೆ ಕರವಂಡಿ [ಪಾಠಾಂ. ವಂತಿ] ಯಕ್ಕು" (ಮಂಗರಾ. ૩೬-೧೬). [?]

**ಕರವಂಡಿಗೆ** 'ಕರವಂದಿಗೆ' ನೋ.

**ಕರವಂದ$_1$** (ನಾ). ಒಂದು ಬಗೆಯ ತೆರಿಗೆ : ತೋಂಟಕ್ಕೆ ಕರವಂದ ತಳಭೋಗಮು ಸತು ಮೊದಲಾಗೆ ಸರ್ವ್ವಬಾಧಾಪರಿಹಾರಂ (ಸೌಇಇ. XI-i, ೫೨-೬೪; 1007). 'ಕರವಡ' ಪರಾ. [?]

**ಕರವಂದ$_2$** (ನಾ). = ಕರಮರ್ದಕ : "ಕರವಂದಂ ಕರವಂದಿಗೆ ಬಱುವಣೆ ನಿರ್ದಗ್ಧಿಕಾಖ್ಯೆ" (ವಸ್ತುಕೋ. ૩೭-೨೮).

[< ಸಂ. ಕರಮರ್ದ]

**ಕರವಂದಿಗೆ**, ಕರವಂಡಿಗೆ, ಕರವಡಿಗೆ (ನಾ). = ಕರಮರ್ದ: "ಕರವಂದಂ ಕರವಂದಿಗೆ ಬಱುವಣೆ" (ವಸ್ತುಕೋ. ૩೭-೨೮). **ಕರವಂಡಿಗೆ** : "ಕೃಷ್ಣ ಪಾಕಫಲಃ, ಅವಿಗ್ನಃ, ಸುಷೇಣಃ, ಕರಮರ್ದಕಃ—ಈ ೪ ಕರವಂಡಿಗೆ" (ನಾಚಿರಾ. ೧೦೮). **ಕರವಡಿಗೆ** : (ಕಿ).

[ಕರವಂದ + -ಗೆ$_1$]

**ಕರವಟ್ಟೆ** 'ಕಱುಹಟ್ಟೆ' ನೋ.

**ಕರವಡ** (ನಾ). ಒಂದು ಬಗೆಯ ತೆರಿಗೆ : ಮತ್ತರ್ಕ್ಕೆಯುಮಂ ಕರವಡ ತಳಭೋಗ ತಳಾಱ ರಾಯವೊಳಗಾಗಿ ಸರ್ವ್ವಬಾಧಾಪರಿಹಾರವಾಗಿ (ಕಇ. II, ೧೦-૩೧; 1080). 'ಕರವಂದ$_1$' ಪರಾ. [?]

**ಕರವಡಿಗೆ** 'ಕರವಂದಿಗೆ' ನೊ.

**ಕರವತ** 'ಕರವತ್ತ' ನೋ.

**ಕರವತಕಾಟಿ**, ಕರವತ್ತಕಾಟು, ಕರವತ್ತುಕಾಟಿ (ನಾ). ಕರಗಸದ ಆಕಾರದಂತೆ ಕಾಣುವ ದಡಿ, —ಅಂಚು : ಕರವತಕಾಟ ಪತ್ತಲವುಟ್ಟು . . . ಕೈ ಬೀಸುತ್ತ ಹೊರಟ ಮಗಳು ಕರ್ನಾಟಕಗೊಂಬೆಯಂತೆ ಕಂಗೊಳಿಸುತ್ತಾಳೆ (ಗರಬಾ. ೬೧). **ಕರವತ್ತಕಾಟು** : ಕೆಲವರು ನಾಲ್ಕು ಬೆರಳು ಅಂಚಿನ ಜರದ ರುಂಬಾಲ, ಕರವತ್ತಕಾಟಿನ ಅಂಚಿನ ಧೋತರ . . . ಹರಳುಂಗುರ ಇಟ್ಟುಕೊಂಡು (ಮುಂಗಾಪು. ૩૩). **ಕರವತ್ತುಕಾಟಿ** : ಒಂದು ಕಾಶಿಯ ಪೀತಾಂಬರವನ್ನೂ, ಒಂದು ಗೇಣಂಚಿನ 'ಕರವತ್ತುಕಾಟೀ' ಧೋತರದ ಜೋಡನ್ನೂ ಮುಂದಿಟ್ಟನು (ಹಬ್ಬಬ. ೫೦).

[← ಮರಾ. ಕರವತ್‌ಕಾಠ್, ಕರವತೀಕಾಠ್]

**ಕರವತಧಡಿ** (ನಾ). = ಕರವತಕಾಟಿ : ಜರದೊಲ್ಲಿ ನಿಲುವಂಗಿ ಭರಜರಿ ಶಾಲುಗಳು ಕರವತಧಡಿಯ ಧೋತರ - ಉಡುಗರೆ (ಸಿದ್ಧಪು. ೧೭-೮೮).

[ಕರವತ + ಧಡಿ (< ದಡಿ$_2$)]

**ಕರವತಿ**, ಕರಕತ್ತಿ (ನಾ). = ಕರವತಿಗೆ$_1$ : ೧. ಮುಱಿದರು ದಂಡಗಳ ಮುಱಿದವನಿಗೀಡಾಡಿದರು ಕರವತಿಗಳನು ಖಳರು (ನಿಭಾಗ. ೧೦-೫೪-೨೨); ತ್ರಿದಂಡಧರ ಸನ್ಯಾಸಿ ಕೈಗೊಡೆ ಕರವತಿಗಳೆಸೆಯೆ (ನಿಭಾಗ. ೧೦-೭೨-೧೪). **ಕರವತ್ತಿ** : ತುರಿಪದೆ ಕೊಂಡು ಪೋಗಿ ಕರವತ್ತಿಯ ನೋತದನಿಟ್ಟು ಬಾಸುವಂ ನರಕದ ಮೇಲೆ ಬಾಸಿ ಬಳಿಕೊಯ್ದದ ನೋಡದೆ ತೀವಿ ತಂದು (ಸಮುಪ. ೧೪-૩೬). 'ಕರವತಿಗೆ$_1$' ಪರಾ.

[< ಸಂ. ಕರಪಾತ್ರ]

**ಕರವತಿಗೆ$_1$** (ನಾ). ೧. ಕರಪಾತ್ರೆ; ಜಲಪಾತ್ರೆ; ಕಮಂಡಲು. ೨. ನೀರಿನ ಬುದ್ದಲಿ; ಪಕಾಲೆ : ಕರವತಿಗೆಯ ಕೊಳೆ ನೀರ್ ಪಾರ್ವರಿಗಂ ಭಗವರಿಗಮಂತೆ ವ್ಯಾಧರಿಗಂ (ಸಮುಪ. ೬-೧૩); ತ್ವಕ್ಕಿನ ಇಕ್ಕೆ ಮಾಂಸದ ವಾಸ ಕರುಳಿನ ತಿರುಳು ನರದ ಕರವತಿಗೆ (ಆದವ.ಹ. ೧೫-૩೪); ಕರವತಿಗೆ ಹೊಂಗಳಸ ಹೊಂಗೊಪ್ಪರಿಗೆ ದೀಪಸ್ತಂಭ ಹೇಮದ ಸರಪಣಿಯ ಮಣಿಮಯ ಜಂತ್ರದ ಜೀವಪುತ್ರಿಗಳ (ಕುವ್ಯಾಗ. ೪-೧೫). [ಪ್ರಾ. ಕರವತ್ತಿಆ (< ಸಂ. ಕರಪಾತ್ರಿಕಾ)]

**ಕರವತಿಗೆ$_2$** (ನಾ). ಕೈ ಗರಗಸ : ಕೊಡತಿ ಕರವತಿಗೆ ಕೊಳಿಕ್ಕವಡ ದಂಡೆ ಕಯ್ ಹೊಡೆಯಿಟ್ಟಗೂಡುಗಳು ಕತ್ತಿ . . . ಸಿಂಹಪ್ರಕರವೆರಸಿ ಬೇಡರು ನೆರೆದರು (ಹಚಕಾ. ೫-೯).

[< ಸಂ. ಕರಪತ್ರಿಕಾ]

**ಕರವತ್ತ**, ಕರವತ, ಕರಹತ್ತ (ನಾ). ೧. ಕರಗಸ; ಗರಗಸ : ಅರಿರಾಯ ತಲೆಯ ಕರವತ್ತಂ (ಇಆ. V, ೧೫-೫; 1020); ಮಣ್ಡಳಿಕ ತಲೆಯ ಕರವತ್ತಂ (ಸೌಇಇ. IX-i, ೧೪೨-೬; 1079). **ಕರವತ** : ೨. ಕರಗಸದ ಆಕಾರದ ನಕ್ಷೆ ಅಥವಾ ಸೀರೆ, ಧೋತ್ರ ಮೊದಲಾದುವುಗಳ ಅಂಚು. 'ಕರವತಕಾಟಿ' ಪರಾ. **ಕರಹತ್ತ** : ೧. 'ಕರಹತ್ತಮಲ್ಲ' ಪರಾ. [< ಸಂ. ಕರಪತ್ರ]

**ಕರವತ್ತಕಾಟು** 'ಕರವತಕಾಟಿ' ನೋ.

**ಕರವತ್ತಿ** 'ಕರವತಿ' ನೋ.

**ಕರವತ್ತುಕಾಟಿ** 'ಕರವತಕಾಟಿ' ನೋ.

**ಕರವದಿ** (ನಾ). = ಕರಮರ್ದ (ಕಿ). [< ಸಂ. ಕರಮರ್ದೀ]

**ಕರವಸ್ತ್ರ** (ನಾ). ಚಿಕ್ಕ ಚೌಕ; ಕೈವಸ್ತ್ರ : ಜೇಬಿನಿಂದ ಕರವಸ್ತ್ರವನ್ನು ತೆಗೆದು ತಮ್ಮ ಹಣೆಯನ್ನು ಒರಸಿಕೊಳ್ಳುತ್ತಾ (ವೀರಯೋ. ૩೧).

[ಕರ$_3$ + ವಸ್ತ್ರ]

**ಕರವಳ$_1$** (ನಾ). ಖಡ್ಗಧಾರಿ : ಪರಿಚಾರಿಕೆಯರಿರಲಾಱದೆ ನುಸುಳ್ದೊಡೆ ಬಾಣಸಿಗರಿದೇನ್ನಾಣ ಪುತ್ತೆಂದು ಪೋಗೆ ಕರವಳರರಿದಾಯ್ತೆಂದು ಪಿಂಗೆ (ಧರ್ಮಾಮೃ. ೪-೧೫೯); ಅಂಗರಕ್ಕರುಂ ಕರವಳರುಂ ವಿಳಾಸಿನಿಯರುಂ ನಗೆಕಾಱರುಂ (ಪುಷ್ಪಪು. ೮-೪೨). [?]

**ಕರವಳ$_2$** (ನಾ). ಮಲ್ಲಯುದ್ಧದಲ್ಲಿ ಬೆನ್ನಡಿಯಾಗಿ ಬಿದ್ದಿರುವ ಪ್ರತಿಮಲ್ಲನ ಎರಡು ಪಾದಗಳನ್ನು ತಡೆದು ಅವನ ಹೊಟ್ಟೆಯ ಮೇಲೆ ಬಲವಾಗಿ ಕುಳ್ಳಿರುವುದು : ಅಂ ಪಿಡಿದುದೆ ಕತ್ತರಂ ಕರವಳಂ ಸೆರವಟ್ಟಣೆ ಹತ್ತೆ ಡೊಕ್ಕರಂ (ಅನಂಪು. ೨-೨೭). [?]

**ಕರವಳಯ** (ನಾ). ಕೈಬಳೆ; ಕೈಗೆ ತೊಡಿಸುವ ಕಂಕಣ : ಕರವಳ [ಪಾಠಾಂ. ಲೆ]ಯ ಕಟಿಸೂತ್ರ ಪದನೂಪುರ ನಿನಾದದ ಬೇಟಿವಱಿಗಳ ಸರಸಹಾಸ್ಯದ ಹಾಸಕದ (ತೊರರಾ. ೧-೫-೪೦).

[ಕರ$_3$ + ವಳಯ (= ವಲಯ)]

**ಕರವಳಿ**, ಕರಾವಳಿ, ಖರವಳಿ (ನಾ). ಸಮುದ್ರ ಅಥವಾ ಕಡಲ ದಂಡೆ,—ತೀರ ಪ್ರದೇಶ: ವಾರಿಧಿಯ ತಡಿವಿಡಿದು ನಡೆದುದು ಭೂರಿಬಲ ಕೊಂಕಣದ ಕೋಹುಗಳೋರಣದ ಕರವ [ಪಾಠಾಂ. ವಿ]ಳಿಯಲಿ (ತೊರರಾ. ೪–೯–೪). **ಕರಾವಳಿ :** ಪೂರ್ವ ಸಮುದ್ರ ಕರಾವಳಿಯಲ್ಲಿ ತಮ್ಮ ಕೀರ್ತಿಸ್ತಂಭವನ್ನು ನೆಡಿಸಿ (ಶಾಂತಲಾ. ೧೫೪); ಜಕ್ಕಣಿಯನ್ನು 'ದೆವ್ವ'ವೆಂದು ನಂಬಿ, ಪೂಜಿಸುವ ಸಂಪ್ರದಾಯವೂ ಕಡಲ ಕರಾವಳಿಯಲ್ಲಿದೆ (ಯಕ್ಷಬ. ೮). **ಖರವಳಿ :** ಶ್ರೀ ವಿಷ್ಣು ಸಮುದ್ರದ ಅಸೇಸನ ಖರವಳಿಯಲು (ಎಕ. VI, ಕಡೂರು. ೯೯–೩೭ ; 1143).
[ದೇ. ‖ ತಮಿ. ಕರ್ೖವಱಿ ; ಮಲ. ಕರವಱಿ]

**ಕರವಳಿಗೊಳ್** (ಕ್ರಿ). ಸಮುದ್ರತೀರವನ್ನು ಹಿಡಿ : ಹಿಡಿದು ಪಾಂಡ್ಯನ ಚೋಳ ಕೇರಳ ಪೊಡವಿಪರ ಬೆಸಗೊಂಡು ಮೂಡಣ ಕಡಲ ಕರವಳಿಗೊಂಡು [ಪಾಠಾಂ. ಗಳನು]ನೋಡುತ ಗಟ್ಟಬೆಟ್ಟಗಳ (ತೊರರಾ. ೪–೧೦–೫). [ಕರವಳಿ + ಕೊಳ್$_{1}$]

**ಕರವಾಡಿ** (ನಾ). ಒಂದು ಊರಿನ ಹೆಸರು : ಆಗ್ನೆಯ ಕಡಿವಾಗಿಲ ಕರವಾಡಿಯ ಹಲುಹಾಡಿಯ ಏವಂ ತ್ರಿಗ್ರಾಮಾ ತ್ರಿಸನ್ಧಿ ಸೀಮಾತ . . . ತಥಾ ಪಶ್ಚಿಮ ಕಜವಾಡಿಯ ಹಲುಹಾಡಿಯ ದ್ವೆ ಸಿಮೆ ಚಂಚರಿಸ್ರೊತ ಪ್ರಾಪ್ಯ (ಇಆ. VIII, ೯೫–೧ ; 444). [?]

**ಕರವಾಯಿ** (ನಾ). ಕಂಚುಗಾರನ ಒಂದು ಸಾಧನ; ಪಾತ್ರೆಗಳನ್ನು ಚಚ್ಚಲು ಉಪಯೋಗಿಸುವ ಹಾರೆಯಂತಹ ಅಡಿಗಲ್ಲು (೬).
[? . ತೆಲು. ಕರವಾಯಿ. / ಮರಾ. ಖರವಈ, ಖರವಾಈ]

**ಕರವಾಲ**, ಕರವಾಳ (ನಾ). ಕತ್ತಿ; ಖಡ್ಗ : ಕರವಾಲವನು ಪುಷ್ಪಸರವೆಂದು ಸೆಳೆವಾಡೆ ಪರಿಮಳವ ಸೂಸುವುದೆ? (ಮಂಕುಕ. ೧೩). **ಕರವಾಳ :** "ಕರವಾಳಮೆ ಕರವಾಳ್" (ಚತುನಿ. ೭೦); ಕರವಾಳ . . . ಚಕ್ರಚ್ಛುರಿಕಾದ್ಯಾಯುಧದೊಳ್ ಅಧಿಗತಶ್ರಮನಾದಂ (ಪುಷ್ಪಪು. ೪–೬೧); ಬಾಸೆಗಳ ಕರವಾಳ [ಪಾಠಾಂ. ಳಿ]ಗಳ ಕತ್ತುರಿಯ ತಿಲಕದ ಹರಿಗೆ ಹಲಗೆಗಳ (ಕುವ್ಯಾಆ. ೧೩–೩೪). [ಸಂ.]

**ಕರವಾಸ** (ನಾ). ಕೈಯಲ್ಲಿ ನಿಲ್ಲುವುದು : ನೀ ಸಮಾಧಾನದಲಿ ತಿಳಿ ಕರವಾಸವಾದಾಮಲಕದಂದದಿ (ನಿಭಾಗ. ೧೧–೨೪–೪). [ಕರ್$_{3}$ + ವಾಸ$_{3}$]

**ಕರವಾಳ್**, ಕರವಾಳು (ನಾ). = ಕರವಾಲ : ನಿನ್ನನೆ . . . ಕರವಾಳ ಬಾಯ್ಗೆ ಮಂಬಿನ ಮೊನೆಗಂ ಮಹಾರಥರ ತಿಂತಿಣಿಗಂ ಪಿಡಿದೆಂತು ನೂಂಕುವೆಂ (ಪಂಪಭಾ. ೧೧–೯೦); ಕರವಾಳಂ ಮಸೆವಂದದೆ ಮರವಾಳಂ ಮಸೆಯೆ ಕೂರಿತಕ್ಕುಮೆ (ಗದಾಯು. ೨–೨೩); ಕಿಬ್ಬ ಕರವಾಳ್ಗ ಮೆನಗಂ ಮಿಟ್ಟುವಿನಂತಿರ್ದ ಮಾರಿಗಂ ಬೆದಜದೆ (ಯಶೋಚ. ೧–೬೧); ಕರವಾಳೊಳ್ ಬಾಳ್ ಪಳಂಚುತ್ತುರಿಯುನುಗುಳೆ (ಕಾವ್ಯಸಾ. ೪೮೭). **ಕರವಾಳು :** ಭಕ್ತಜನಂಗಳಿಗೆ ಬಲದೋಳು ಹರನುದ್ದಂಡ ಕರವಾಳು (ಬಸವು. ೨೮–೪೬); ಕರವಾಳುಗಳ ಜೋಡಿಸಿ ಜೋದರಡರಿದರಂದು ಬೊಬ್ಬಿಱಿದು (ಕುವ್ಯಾದ್ರೋ. ೩–೫). [ಕರ್$_{3}$ + ಬಾಳ್$_{3}$]

**ಕರವಾಳ** 'ಕರವಾಲ' ನೋ.

**ಕರವಾಳು** 'ಕರವಾಳ್' ನೋ.

**ಕರವಿಕೀರ್ಣ** (ಗು). ೧. ಕೈಯಿಂದ ಚೆಲ್ಲಿದ, —ಎರಚಿದ. (ನಾ). ೨. ಕೊಡಹುವುದು ; ಚೆದರುವುದು : "ಕೊಡಹು – ಕರವಿಕೀರ್ಣೇ" (ಶಮುಥಾ). [ಕರ್$_{3}$ + ವಿಕೀರ್ಣ]

**ಕರವಿಡಿ** (ಕ್ರಿ). ಕೈಹಿಡಿ : ಕರವಿಡಿದು ಸಾರ್ಚುವೆತ್ತುವ ತುರಿಪದೆ ಕಯ್ಗುಡುವುದಕ್ಕೆ ಲಜ್ಜಿಸರರೆಬರ್ (ಕಾದಂಪೂ. ೫೭೦); ಪುರವನಿತೆಯರು ತಮ್ಮನಿಯರ ಕರವಿಡಿದಿರದ್ಯೆತಂದು (ಕಂನವಿ. ೫–೧೦೫); ಹೊನ್ನಕ್ಕ ಬಾರೆಂದು ಕರವಿಡಿದೆನ್ನ ತನ್ನೊತ್ತಿಗೆ ಬರಿಸಿ (ಹದಿಬ. ೧–೨೮). [ಕರ್$_{3}$ + ಪಿಡಿ$_{1}$]

**ಕರವಿಮೋಚನ** (ನಾ). ಕೈಯಿಂದ ಬಿಡಿಸಿಕೊಳ್ಳುವಿಕೆ : "ಚಲಕು, ಚಲಂಕು – ಕರವಿಮೋಚನೇ (ಕೈಯಿಂದ ಬಿಡಿಸಿಕೊಳ್ಳು)" (ಶಮುಥಾ). [ಕರ್$_{3}$ + ವಿಮೋಚನ]

**ಕರವೀರ** (ನಾ). ೧. ಕೆಂಪು ಕಣಿಗಿಲೆ ; ಕಣಿಗಿಲೆ : ಪಾದರಿ ಕರವೀರದ ಮೂಲಮರ್ಕಪುಷ್ಪಮುಮಂ ಕೊಂಡರೆದಂಬಿಲದೊಳ್ ಕುಡಿ (ಲೋಕೋಪ. ೧೦–೨೪); ಇರುವಂತಿಗೆಯು ಮುಡಿವಾಳ ಕರವೀರ ಬಕುಳ ಕೆಂಜಾಜಿಯ ಬನವಲ್ಲಿ (ಅಮುಸಾಂ. ೩–೩೬); ಸೇವಂತಿಗೆಯು ಮೊಲ್ಲೆ ಕರವೀರ ನಳಿನ ಚಂಪಕ . . . ಮುಂತಾದ ನಾನಾ ಪುಷ್ಪ ಪತ್ರೆಗಳನು ತಿಱಿದು (ರಾಘಚ. ೧೭–೭). **೨.** ಒಂದು ಊರಿನ ಹೆಸರು. ℙ ಈಗಿನ ಸೊಲ್ಲಾಪುರ : ಕರವೀರದ ಚೆಲುವಿನ ಕರುನಾಡಿಗೆ ಮರುಳಸಿದ್ಧ ಗುರು ಬರುತಿಹರು (ನವರಾ. ೫–೩೧). [ಸಂ.]

**ಕರವೇಱಿ** (ನಾ). ಬಲುಹೇಡಿ; "ಅತಿಶಯವಾಗಿ ಹೇಡಿ (?)" (ಗದಾಸಂ. ಟಿಪ್ಪಣಿ) : ಅಸುರ ಪ್ರಧ್ವಂಸಿಯೆಂಬರ್ ಜಗದ್ಗುರುವೆಂಬರ್ ಪೆಱರ್ಗೇಕೆ ತೇರನೆಸಪಂ ಧರ್ಮಾನುಜಂಗೇಕೆ ಕಿಂಕರನಾದಂ ಕರವೇಱಿಯಾದನದಱಿಂ ಸೂತಂ ಭಟಂ ಪೇಱಿಯೆಂಬರ ಮಾತೊಪ್ಪುಗುಂ (ಗದಾಯು. ೩–೪೩). [ಕರ$_{1}$ (< ಕರಂ) + ಪೇಱಿ (< ಪೇಡಿ)]

**ಕರವೊಳ್ಳಿತು** (ಅ). ಬಹಳ ಲೇಸು : ಮಾಣಿಕಸೆಟ್ಟಿಯ ಮಾತಿಂ ಮೆಚ್ಚಿ ನಕ್ಕು ಕರವೊಳ್ಳಿತೆಂದು ಬಸದಿಯನೂರೊಳಗೆ ಮಾಡಿಸಿ (ಮೈಆರಿ. ೧೯೩೨, ೧೬–೨೧ ; 1069). [ಕರ$_{1}$ (< ಕರಂ) + ಒಳ್ಳಿತು]

**ಕರಶಾಖೆ** (ನಾ). ಕೈ ಬೆರಳು. [ಸಂ. ಕರಶಾಖಾ (ಕರ + ಶಾಖಾ)]

**ಕರಶೀಕರ** (ನಾ). ಆನೆಯ ಸೊಂಡಿಲಿನಿಂದ ಸಿಡಿದುಬರುವ ನೀರಿನ ಕಣ; ತುಂತುರು (೬). [ಕರ್$_{3}$ + ಶೀಕರ]

**ಕರಸಂಪುಟ** (ನಾ). ೧. ಜೋಡಿಸಿದ ಕೈ; ಮುಗಿದ ಕೈ : ನಿಜನಿಟಿಲ ತಟಸಂಘಟಿತ ಕರಸಂಪುಟನಪ್ಪುದುಂ (ರಾಮಾಶ್ವ. ೧೦೫–೨). **೨.** "ಕಾಗದದ ಬಿಡಿ ಹಾಳೆಗಳು, ನಕಾಸೆಗಳು, ಮೊ. ನ್ನಿಡಲು ಉಪಯೋಗಿಸುವ . . . ಕೋಶ, ಸಂಪುಟ" (portfolio. ಇಂಕನಿ). [ಕರ್$_{3}$ + ಸಂಪುಟ]

**ಕರಸಾಣೆ**, ಖರಸಾಣೆ (ನಾ). ಹರಿತ ಮಾಡಲು ಉಪಯೋಗಿಸುವ ಕಲ್ಲು; ಮಸೆಗಲ್ಲು; ಸಾಣೆಗಲ್ಲು : "ಕರಸಾಣೆ – ಖರಶಾಣ = ಮಸೆಗಲ್ಲು" (ತದ್ಭಕೋ. ೬); ಮದನಾಸ್ತ್ರಂ[ಕ] [ಪಾಠಾಂ. ಖ]ರ ಸಾಣೆಗಾಣಿಸಿದುದೆಂಬಂತಾಗೆ (ಪಂಪಭಾ. ೮–೬೬). **ಖರಸಾಣೆ :** ವಜ್ರಮಂ ಖರಸಾಣೆಯಿಟ್ಟಂತೆ ಕೂರಿದನುಂ ಬಲ್ಲಿದನುಮಾಗಿ (ನೇಮಿಪು. ೫–೭೮ವ); ಖರಸಾಣೆಯಲ್ಲಿ ಗೊಡನೆಗೆಯ್ದ ರತ್ನಾಳಿಗುರುಕಾಂತಿ ಪೆರ್ಚುವಂದದೊಳು (ಚಂಪ್ರಸಾಂ. ೧–೫೮). [< ಸಂ. ಖರಶಾಣ]

**ಕರಸಾಮುದ್ರಿಕ** (ನಾ). ಅಂಗೈಯ ರೇಖೆಗಳನ್ನು ನೋಡಿ ಭವಿಷ್ಯವನ್ನು ನಿರೂಪಿಸುವ ಶಾಸ್ತ್ರ (ಪಾರಿನಿ. ೧೫). [ಕರ್$_{3}$ + ಸಾಮುದ್ರಿಕ]

**ಕರಸೀಕರ** (ನಾ). = ಕರಶೀಕರ (೬). [ಕರ್$_{3}$ + ಸೀಕರ]

**ಕರಸು** 'ಕರೆಯಿಸು' ನೋ.

**ಕರಸೆ** (ನಾ). (ಕರಾ) ಅಗಲವಾದ ಕೆರೆಮೀನು. [?]

**ಕರಸೊಬಗು** (ನಾ). ಅತಿ ಚೆಲುವು ; ಬಲುಸೊಬಗು : ಕರಸೊಬಗಾಗಿ ಸಿಂಗರಿಸಿದ ವಾರಸೌಂದರಿಯರಿದ್ದರು ಸಭೆ ತುಂಬಿ (ಭರಚ. ೪೭–೭೩). [ಕರ$_{1}$ (< ಕರಂ) + ಸೊಬಗು]

**ಕರಸ್ಥಲ**, ಕರಸ್ಥಳ (ನಾ). ೧. ಅಂಗೈ : ಕಾಣಬಾರದ ಲಿಂಗವು ಕರಸ್ಥಲಕ್ಕೆ ಬಂದರೆ ಎನಗಿದು ಸೋಜಿಗ (ಅವಚಂ. ೧೫–೬೦); ಕರಸ್ಥಲದಲ್ಲಿ ಲಿಂಗವ ಧರಿಸಿದ ಮತ್ತೆ ಪರದ್ರವ್ಯಕ್ಕೆ ಕೈಯಾನದಿರಬೇಕು . . . ನಿರ್ಲೇಪವಾದ ಶರಣ (ಮೋಳಿಮಾ. ೧೩೫–೫೨೨).

೨. [ವೀಶೈ] ಆರು ವಿಧದ ಶಿವಲಿಂಗಗಳಲ್ಲಿ ಒಂದು: "ಷಡ್ವಿಧ ಶಿವಲಿಂಗ:- ಇವು ಕರಸ್ಥಲ, ನಯನಸ್ಥಲ, ಹೃದಯಸ್ಥಲ, ಮಂತ್ರಸ್ಥಲ, ತ್ರಿಕೂಟಸ್ಥಲ, ಲಯಸ್ಥಲ ಎಂದು ಇರುತ್ತವೆ . . . ಈ ಸ್ಥಳದಲ್ಲಿ ಹೇಳಲ್ಪಟ್ಟಿರುವ ಕರಸ್ಥಲವು ಸುಚಿತ್ರವೆಂದು ಭಾವಿಸಬೇಕು" (ಶಿವಾಕೋ. ೬೭). ೩. ಹಂಪೆಯ ಬಳಿಯ ಒಂದು ಊರು (ಕಿ). **ಕರಸ್ಥಳ**: ೧. ಕೂಡಲಸಂಗಮದೇವಯ್ಯಾ ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ (ಬಸವ. ೬೪೩). ೨. "ಗುರು, ಲಿಂಗ, ಜಂಗಮ ಪ್ರಸಾದಿಸ್ಥಲಗಳಡಗಿದುದೇ ಕರಸ್ಥಳ" (ಶರಸಾ. ೨೪-೭).

**ಕರಸ್ಥಲದವರು** = ಅವಿವಾಹಿತರಾಗಿಯೇ ಉಳಿಯುವ ಕೆಲವು ಜಂಗಮ ಶಾಸ್ತ್ರಿಗಳು (ಕಿ). [ಕರ್₃ + ಸ್ಥಲ]

**ಕರಸ್ಥಳ** 'ಕರಸ್ಥಲ' ನೋ.

**ಕರಹ** 'ಕರೆಪ' ನೋ.

**ಕರಹಟ** 'ಕರಹಡ' ನೋ.

**ಕರಹಟಿಗ** (ನಾ). ೧. ಕರಹಟ ದೇಶದಲ್ಲಿರುವವನು. ೨. ಕಾವಲುಗಾರ; "ಪಹರಿಯವರು" (ಶಮುದ. ನ. ೨೦೮ ಅಡಿಟಿ): ನಿಯೋಗಕ್ಕೆ – ಅಡಪಿಗಂ, ಚಾಮರಿಗಂ, ಕರಹಟಿಗಂ (ಶಮುದ. ೧೯೬ ಪ್ರಯೋ). [ಕರಹಟ (< ಕರಹಡ) + -ಇಗ]

**ಕರಹಟ್ಟಿ** 'ಕಬುಹಟ್ಟಿ' ನೋ.

**ಕರಹಡ**, ಕರಹಟ, ಕರಹಾಡ, ಕರಾಟ್ಟ₂, ಕರಾಡ (ನಾ). ಒಂದು ಪ್ರದೇಶದ ಹೆಸರು: ದಲ್ಲನ ತನೂಭವಂ ಕರಹಡ[ಪಾಠಾಂ. ಟ]ದಿಂ ಮಲ್ಲಮನಂ ಬೆನ್ನಟ್ಟಿದ ಬಲ್ಲಾಳ್ತನದಿಂ ನಿಜೇಶನಂ ಮೆಚ್ಚಿಸಿದಂ (ಅಜಿಪು. ೧-೪೫); ಕರಹಡ ನಾಲ್ಪಾಸಿರದೊಳಗಣ ಕಟಿಂಬಡಿ ೩೦೦ ಜ (ಇಇ. XIX, ೧೯೦-೪೪; 1054); ಪಟ್ಟಸಾಹಣಿ ಕರಹಡನಾಡ ಪೆಗ್ಗಡೆ (ಕಇ. II, ೧೩-೨೨; 1115); ಕರಹಡೋ ದೇಶವಿಶೇಷಃ (ಶಬ್ದಾನು. ೪೧೯ ವ್ಯಾಖ್ಯಾ). **ಕರಹಟ**: ಕರಹಟದೊಳ್ ಬೇಂಟೆಯ ಕುಕ್ಕುರಿಯಾದಳ್ ಸತ್ಯಚಂದ್ರಮತಿಯುಂ (ಯಶೋಚ. ೩-೩೮). **ಕರಹಾಡ**: ಕರಹಾಡ ನಾಲ್ಸಾಸಿ[ರ]ಮಂ . . . ಆಳುತ್ತಮಿರೆ (ಕಇ. II, ೧೩-೧೭; 1115). **ಕರಾಟ್ಟ**: ಅಂಗ ಕರಾಟ (ಣ್) ಓಢ್ರಪಾರ ಸಿಂಧು ಮುಖ್ಯ ಸಹಸ್ರ ದೇಶ ಭಾಷಾಜ್ಞ (ಎಕ. VII. ಶಿವಮೊ. ೭೯-೨೨; 1154 ?). **ಕರಾಡ**: 'ಕರಾಡಸ್ಥ' ಪರಾ. ℙ ಈಗಿನ 'ಕರ್ಹಾಡ್' ಎಂಬ ಊರಿನ ಪರಿಸರ ಪ್ರದೇಶ. [< ಸಂ. ಕರಹಾಟ]

**ಕರಹಡಿಗ** (ನಾ). ಕರಹಡದೇಶದವನು; ಕರ್ಹಾಡ ದೇಶದಲ್ಲಿ ಹುಟ್ಟಿದವನು: ಕಾಲೂರೊಳಾದಂ ಪುಟ್ಟಿದಂ ಮೇಣ್, ಕಾಲೂರಿಗಂ, ಏವಂ ಕರಹಡಿಗಂ, ಒಳ್ಳೂರಿಗಂ (ಶಬ್ದಾನು. ೪೧೯ ಪ್ರಯೋ). [ಕರಹಡ+-ಇಗ]

**ಕರಹಡಿಚ** (ನಾ). = ಕರಹಡಿಗ: ಕರಹಡದೇಶದೊಳ್ ಪುಟ್ಟಿದಾತಂ ಕರಹಡಿಚಂ (ಭಾಷಾಭೂ. ೧೭೫ ಪ್ರಯೋ); ಒಳ್ಳುರಿಚಂ, ಬನಿಚಂ, ಕಲಿಚಂ, ಕರಹಡಿಚಂ (ಶಬ್ದಾನು. ೪೨೦ ಪ್ರಯೋ). 'ಅಲರಿಚ', 'ಕಾಲುರಿಚ' ಪರಾ. [ಕರಹಡ + -ಇಚ]

**ಕರಹಡಿಚಿ** (ನಾ). ಕರಹಡದಲ್ಲಿ ಹುಟ್ಟಿದವಳು; ಕರಹಡ ನಾಡಿನವಳು: ಕಾಲುರಿಚಿ, ಕರಹಡಿಚಿ (ಶಬ್ದಾನು. ೧೯೬ ಪ್ರಯೋ). [ಕರಹಡಿಚ + -ಇ₂]

**ಕರಹತ್ತ** 'ಕರವತ್ತ' ನೋ.

**ಕರಹತ್ತಮಲ್ಲ** (ನಾ). (ಶತ್ರುಗಳಿಗೆ) ಕರಗಸದಂತಿರುವವನು; ಒಂದು ಬಿರುದು: ಪರಬಳ ಕೃತಾಂತಂ ಕರಹತ್ತಮಲ್ಲಂ ಮಲ್ಲೆಯ ಸಾಹಣಿಯರುಂ (ಎಇ. XV, ೩೭-೪೧; 1189). [ಕರಹತ್ತ (< ಕರವತ್ತ) + ಮಲ್ಲ]

**ಕರಹಾಟ** (ನಾ). ೧. = ಕರಹಡ: ತೇಜಮಾರ್ತ್ತಣ್ಡಂ ಕರಹಾಟ ವಜ್ರ ಕಮಟ ಕೊಂಕಣ ಭಯಂಕರಂ (ಸೌಇಇ. XX, ೧೯-೨೯; 1015); ಮಗಧ ಕರ್ಣಾಟ ಗೊಲ್ಲ ಕರಹಾಟ ಗೌಳ . . . ಕಳಿಂಗಾದಿ ವಿಷಯಂಗಳಂ ಸಾಧಿಸಿ (ಧರ್ಮಾಮೃ. ೧೧-೭೧); ಮಧುರೆಗೆ ಬಡಗಲ್ ಖ್ಯಾತಿಯ ಕರಹಾಟಂ (ಜಟ್ಟಮ. ೭-೧೦೮). ೨. ಮರದ ಗಡ್ಡೆ; ಬೇರಿನ ಗಡ್ಡೆ: "ಕರಹಾಟಃ, ಕಂದಃ – ಈ ೨ ಮರದ ಗಡ್ಡೆ" (ಹಲಾಯು. ೩೦-೨೯); "ಸಸಿ ವಲ್ಲಿಗಳ ಗೆಡ್ಡೆ ಕರಹಾಟವೆನಿಸಿಕ್ಕು" (ಮಂಗರಾ. ೩೨-೫). ೩. "ತಾವರೆ ಗಡ್ಡೆ" (ಅಮರ. ಟೀಕೆ). [ಸಂ.]

**ಕರಹಾಟಕೆ** (ನಾ). ಒಂದು ಬಗೆಯ ಗಿಡ; "ಮಂಗಾರೆ ಗಿಡ" (ಅಮರ. ಟೀಕೆ). [ಸಂ.]

**ಕರಹಾಡ** 'ಕರಹಡ' ನೋ.

**ಕರಳಿ₁** (ನಾ). (ಕರಾ) ಒಂದು ಜಾತಿಯ ಏಡಿ. [?]

**ಕರಳಿ₂**, ಕರಳೆ, ಕರಾಳಿ₃ (ನಾ). ಒಂದು ಬಗೆಯ ಒರಟಾದ ನೂಲಿನ ಬಟ್ಟೆ: ಇಲ್ಲಿ ಕರಳಿಯರಿವೆಗಳಾಗುತ್ತವೆ (ಗ್ರೇಟಬ್ರಿ. ೬೪); ಜಾಜೂ ಮುಗುಳೂ ಕರಳಿಯು ಹಚ್ಚಡಗಳೂ ಗೋಕಾವಿ, ಮುರಗೋಡ, ಮನೊಳ್ಳಿಗಳಲ್ಲಿ ಆಗುತ್ತವೆ (ಬೆಳವ. ೪೭). **ಕರಳೆ**: ಮುನ್ನೊಳ್ಳಿ – ಇಲ್ಲಿ ಕರಳೆಯ ಹಚ್ಚಡಗಳೂ ಜಾಜೀಮುಗಳೂ ಮುಂತಾದ ಅಚ್ಚುಹಾಕಿದ ವಸ್ತ್ರಗಳು ಹುಟ್ಟುತ್ತವೆ (ಕಭಾಗ. ೫೦೬). **ಕರಾಳಿ₃**: ಕರಾಳಿ ಅರಿವೆ (ರೂಢಿ). [?]

**ಕರಳೆ** 'ಕರಳಿ₂' ನೋ.

**ಕರಟ್ಮಣಿ** (ನಾ). ಕರಡುಮಣಿ; ಕಚ್ಚಾರತ್ನ; ಸಾಣೆ ಹಿಡಿಯದಿರುವ ರತ್ನ: "ಕರಟ್ಮಣಿಯೆ ಕರಡುಮಣಿ" (ಸಂಜೀವ. ೨೧). [ಕರಡು₃ + ಮಣಿ₃]

**ಕರಾಂಗುಲಿ**, ಕರಾಂಗುಳಿ (ನಾ). ಕೈ ಬೆರಳು: ವೀಣೆಯಂ ಶ್ರುತಿಗೈದು . . . ಸರಳತರ ಕರಾಂಗುಲಿಯನಿಟ್ಟು (ರಾಜಶೇ. ೧೧-೮೭ ವ). **ಕರಾಂಗುಳಿ**: "ಕಿರಣ ಮೃಣಾಳ ಕಾಲ ತರುಭೇದ ಕರಾಂಗುಳಿಗಳ್ ಪ್ರಕಾಂಡಮಕ್ಕು" (ನಾನಾರ. ೬೧). [ಕರ್₃ + ಅಂಗುಲಿ]

**ಕರಾಂಗುಲಿಗೂಡು** (ಕ್ರಿ). ಕೈಬೆರಳುಗಳನ್ನು ಸೇರಿಸು: ಹೂಡಿ ಮಂಡಿಯ ಕಿವಿ ವರೆಗೆ ಕರಾಂಗುಲಿಗೂಡಿ ಬಾಣವ ತೂಗಿ ಬಿಡುತ (ಕಂನವಿ. ೧೯-೬೫). [ಕರಾಂಗುಲಿ + ಕೂಡು₁]

**ಕರಾಂಗುಳಿ** 'ಕರಾಂಗುಲಿ' ನೋ.

**ಕರಾಕರಣೆ** (ನಾ). ಕರವನ್ನು ವಸೂಲಿಮಾಡುವುದು; ತೆರಿಗೆ ವಸೂಲಿ: ಸೆಪ್ಟಂಬರ್ ತಿಂಗಳ ಕೊನೆವರೆಗೆ ವೆಚ್ಚದ ಕರಾಕರಣೆ ಒಟ್ಟು . . . ರೂ. ಕೂಡಿವೆ (ಹುಸಂಕ. ೧೯-೧೧-೫೯). 'ಕರನಿರಾಕರಣೆ' ಪರಾ. [ಕರ್₃ + ಆಕರಣೆ₁]

**ಕರಾಗ್ರ** (ನಾ). ೧. ಕೈಯ ತುದಿ. ೨. ಸೊಂಡಿಲಿನ ತುದಿ (ಕಿ). [ಕರ್₃ + ಅಗ್ರ₁]

**ಕರಾಚಿ** (ನಾ). ಒಂದು ಜಾತಿಯ ಮರ: ತುಪರ, ಉಡಿ, ಬಿಕ್ಕೆ, ಕರಾಚಿ, ಗೊರಿವಿ (ನಮ್ಮನು. ೨೩೬). [< ಕರಚಿ ?]

**ಕರಾಚೂರಿ₁**, ಕರಚುರಿ (ನಾ). ಖಡ್ಗ; ಕೈಗತ್ತಿ: ಖಡ್ಗ, ಕರಾಚೂರಿ . . . ಜವದಾಡೆಗಳೆಂಬ ಬತ್ತೀಸಾಯುಧಗಳಿಂ (ವಿವೇಕ. ೨೬೨); ಸುರಗಿ ಕರಾಚೂರಿ ಕಡಿತಲೆ ಪಟ್ಟಿಸ ಪ್ರಶು ಕೊಡಲಿ ಶಕ್ತಿ ಡಾಣೆ (ಭರಡ. ೨೦-೧೩೪); ಜಾಡಿಯ ಹರಿಗೆ ಸಿಂಗಾಡಿ ಕರಾಚೂರಿ ನೀಡುವ ಬಾಳುಗತ್ತಿಗಳ ಪಾಡುಪಂಥದ ಸುಭಟರು (ಕಂನವಿ. ೧೧-೧೪೮). **ಕರಚುರಿ**: ಕಟ್ಟಿದ ಗೇಣು ಸುರಗಿ ಕರಚುರಿಗಳಿಟ್ಟೆಸಲು ಕಾದಿದರು (ಅನಂಚ. ೨೪-೨೪). [ದೇ.? ‖ ತೆಲು. ಕರಾಚುರಿ, ಕರಾಚೂರಿ, ಕರಾಚುರಕತ್ತಿ]

**ಕರಾಚೂರಿ$_2$** (ನಾ). ಖಡಾಖಂಡಿತವಾಗಿ ಮಾತನಾಡುವವನು; ಖಂಡಿತವಾದಿ (ಕ). [ಕರಾಚೂರು + -ಇ$_3$]

**ಕರಾಚೂರು** (ನಾ). ಖಂಡಿತವಾದಿತ್ವ; ನಿರ್ಭಯಕವಾಗಿ ಮಾತನಾಡುವಿಕೆ (ಕ). [?]

**ಕರಾಟ$_1$** (ನಾ). ಕರಂಡ; ಸಂಪುಟ; ಪೆಟ್ಟಿಗೆ: "ಸಮುದ್ಗಕಃ, ಸಂಪುಟಕಃ — ೨ ಕರಾಟದ ಪೆಸರುಗಳು ಭರಣಿ, ಸಂಪುಟ" (ಸಿದ್ಧಾಂತಿ. ೧೮೩); ಕರ್ಪೂರದ ಕರಾಟಂಗಳು . . . ಮೊದಲಾದ ವಸ್ತುಗಳಿಂದ ತುಂಬಿ ತುಳುಕುತ (ಸೌಗಂಧಿ. ೧೯೦-೭); ಕರಾಟವನ್ನು ಬಗಲಿಗೆ ಹಾಕಿಕೊಂಡು . . . ಬಮ್ಮಲದೇವಿಯ ತೊಟ್ಟಿಯತ್ತ ನಡೆದನು (ಸವತಿ. ೨೩೫); ಶ್ರೀಶಂಕರರ ಕರಾಟದಲ್ಲಿನ ಔಷಧಿಗಳಲ್ಲಿ ಇದು ರಾಮಬಾಣದಂತಹದು (ಜೀವಾತ್ಮ. ೩೦೧). [ದೇ. ‖ ತೆಲು. ಕರಾಟ]

**ಕರಾಟ$_2$** 'ಕರಹಡ' ನೋ.

**ಕರಾಡ** 'ಕರಹಡ' ನೋ.

**ಕರಾಡಸ್ಥ**, ಕರ್ಹಾಡಸ್ಥ (ನಾ). ಕರಾಡ ಎಂಬ ಊರಿನವನು; ಮಹಾರಾಷ್ಟ್ರ ಬ್ರಾಹ್ಮಣರಲ್ಲಿ ಒಂದು ಪಂಗಡ: ಕರಾಡಸ್ಥರು– ಸಾತಾರಾ ಜಿಲ್ಲೆಯೊಳಗಿನ ಕರ್ಹಾಡ ಎಂಬ ಗ್ರಾಮವೇ ಇವರ ಮೂಲಸ್ಥಾನವು (ಕಭಾಗ. ೭೯). **ಕರ್ಹಾಡಸ್ಥ**: ಕರ್ಹಾಡಸ್ಥರು– ಸಾತಾರಾ ಜಿಲ್ಹೆಯೊಳಗಿನ ಕರ್ಹಾಡ ಎಂಬ ಗ್ರಾಮವೇ ಇವರ ಮೂಲಸ್ಥಳವು (ಬೆಳವ. ೯೧). [< ಸಂ. ಕರಹಾಟಸ್ಥ]

**ಕರಾಡಿ$_1$** 'ಕರಡೆ$_2$' ನೋ.

**ಕರಾಡಿ$_2$** (ನಾ). = ಕರಾಡಸ್ಥ: ಪುರೋಹಿತವರ್ಗ . . . ಕಂದಾವರ, ಕರಾಡಿ, ಕರ್ನಾಟಕ (ತುಳುನಾ. ೧೭೧). [ಕರಾಡ (< ಕರಹಡ)+-ಇ$_3$]

**ಕರಾತಳ** (ನಾ). "ಅಂಗೈ" (ಪಂಪಭಾ. ಕೋಶ): ಜೂದಿನೊಳುಕ್ಕೆವದಿಂದೆ ಗೆಲ್ದ ನಿನ್ನವನಿತಳಂ ಕರಾತಳದವೋಲ್ ತನಗಂ ಬೆಸಕೆಯ್ಕೆ[ಯ್ದು] (ಪಂಪಭಾ. ೭-೪೦). [< ಕರತಳ]

**ಕರಾದಿ** (ನಾ). ಮಲೆನಾಡಿನ ಜನರಲ್ಲಿ ಒಂದು ಜಾತಿ; ಕರೆ ಕಟ್ಟುವವರು: ಬೇಲರು, ಹೊಲೆಯರು, ಮಾದಿಗರು, ಕರಾದಿಯವರೂ ಆ ಸಾಹಸದಲ್ಲಿ ಭಾಗಿಯಾಗುತ್ತಿದ್ದರು (ಮಲೆಮ. ೬೫). [← ಅರ. ಪಾರ. ಮರಾ. ಖರಾದೀ]

**ಕರಾಧಾನ** (ನಾ). ತೆರಿಗೆ ಹಾಕುವಿಕೆ: "ಕರಾಧಾನ" ಎಂಬುದರಲ್ಲಿ ಸಾಧಾರಣವೋ ಸ್ಥಾನೀಯವೋ ವಿಶೇಷವೋ ಆದ ಯಾವುದೇ ಕರ ಅಥವಾ ಲಾಭದ ತೆರಿಗೆಯನ್ನು ಹಾಕುವುದೂ ಸೇರಿರುತ್ತದೆ (ಭಾಧಾನ. ೨೨೨). [ಕರ$_3$ + ಅಧಾನ]

**ಕರಾನೆ** (ನಾ). (ಕರಾ) ೧. ಕರೆಯುವಿಕೆ; ಹಯನ: ಮನೆಯಲ್ಲಿ ಕರಾನೆಯ ಹಸು ಬತ್ತಿತ್ತು (ಮುಗಿಯು. ೩೦೦); ಕರಾನೆಗೆ ಎಮ್ಮೆ ಕ್ರಯಕ್ಕ ಕೊಳ್ಳುವ ವಿಚಾರ (ಮರಮ. ೪೯). ೨. ಕರೆಯುವ ಹಸು ಅಥವಾ ಎಮ್ಮೆ: ಈ ಕರಾನೆಯಲ್ಲಿ ನಾಲ್ಕು ಸಿದ್ದೆ ಹಾಲಿದೆ (ಮರಮ. ೨೪೬). [< ಕರೆ$_2$ (< ಕಱ$_1$) + ಹಯನ?]

**ಕರಾನ್ವೇಷಣ** (ನಾ). ಕೈಯಿಂದ ಹುಡುಕುವುದು: "ಪುಡುಕು, ಪುಡುಂಕು – ಕರಾನ್ವೇಷಣೇ" (ಶಮಧಾ). [ಕರ$_3$ + ಅನ್ವೇಷಣ]

**ಕರಾಬು**, ಖರಾಬು (ಗು). ೧. ಕೆಟ್ಟ; ಸಾಗುವಳಿಗೆ ಯೋಗ್ಯವಲ್ಲದ; ಸಾಗುವಳಿ ಮಾಡದ. (ಕ). (ನಾ). ೨. ದೋಷವುಳ್ಳದ್ದು; ಕೆಟ್ಟದು. **ಖರಾಬು**: ೧. ಖರಾಬು ಜಮೀನಿನಲ್ಲಿರುವ ಮರಗಳು (ಗ್ರಾಮಾಕ. ೬೧). ೨. ನಂಮ ಶೀಮೆ ನಡುವೆ ಸರ್ವಸ್ವವಂನು ಅಪಹರಿಸಿಕೊಂಡು ಖರಾಬು ಮಾಡಿ ಇದ್ದೀರಿ (ರಾಜೇಂದ್ರ. ೪೧). [← ಅರ. ಮರಾ. ಖರಾಬ್; ಪಾರ. ಖರಾಬ್, ಖರಾಬಾ]

**ಕರಾಭರಣ** (ನಾ). ಕೈಗೆ ಹಾಕುವ ಒಂದು ಬಗೆಯ ಆಭರಣ: "ಕದಿರು ಕರಾಭರಣ ವಕ್ರತೆ ಬಲವರ್ಧ ಸಮಕಟ್ಟುಗಳೊಳಂ ಮುರಿ" (ಶಬ್ದಮಂ. ೧೦೬). [ಕರ$_3$ + ಆಭರಣ]

**ಕರಾಮತಿ**, ಕರಾಮತ್ತು, ಖರಾಮತ್, ಖರಾಮತಿ, ಖರಾಮತ್ತು (ನಾ). ಕೈಚಳಕ; ಕೈವಾಡ; ಚಾತುರ್ಯ; ಯುಕ್ತಿ; ಸಾಹಸ: ಸುದಕ್ಷರನ್ನು ವಧಿಸದಿದ್ದರೆ, ನನ್ನೀ ಕರಾಮತಿಯನ್ನಾದರೂ ಯಾರು ಮನ್ನಿಸುವರು? (ಅಂಬಿಕೆ. ೨೪); ಅವಳಿಗಾದರೂ ಗೊತ್ತಿರಬೇಕಲ್ಲ ತಮ್ಮ ತಮ್ಮನ ಕರಾಮತಿ (ಮೂರುದಾ. ೧೬೦); **ಕರಾಮತ್ತು**: ಪೋರ ಒಳ್ಳೇ ಕರಾಮತ್ತು ತೋರಿಸಿದ (ಮೋಜೀವ. ೧೩). 'ಪರವಾಯಿಲ್ಲ ನೌಕರಿಯಲ್ಲೂ ಕರಾಮತ್ತು ಉಂಟು' (ಬೆಳುಮ. ೨೪೯). **ಖರಾಮತ್**: ಇವರ ಮಾತಿನಲ್ಲಿ ಏನೋ ಖರಾಮತ್ ಇರಬೇಕು ಎಂದುಕೊಂಡ (ಸ್ವಾಮಿಸ್ನೇ. ೯೪). **ಖರಾಮತಿ**: ಸಾಹೇಬನ . . . ಖರಾಮತಿಯ ಬಗ್ಗೆ ಯಾವಾಗಲೂ ಸ್ಮೃತಿ ಉಳಿಯುವುದು (ಮೋಜೀವ. ೧೨೭). **ಖರಾಮತ್ತು**: ಅವನ ಔಷಧಿಯಲ್ಲಿ ಬಹಳ ಖರಾಮತ್ತಿದೆ (ದೌಲತ್. ೨೬೩). [← ಅರ. ಕರಾಮತ್; ಪಾರ. ಕರಾಮತ್, ಕರಾಮತೀ]

**ಕರಾಮತ್ತು** 'ಕರಾಮತಿ' ನೋ.

**ಕರಾಯಿ** (ನಾ). ಕ್ರಯ: ಅಂಗಡಿಕಾರನು ಆ ಹುಂಡಿಯು ತತ್ಕಾಲ ತಿರುಗಿಸುತ್ತಾನೆ, ಮತ್ತು ಆ ಕಾರಣದ ದೆಶೆಯಿಂದ ಸಕರಿನ ಕರಾಯಿಯ ಬೋಜೆಯು ಸುಮ್ಮಸುಮ್ಮನೆ ಆ ಸಾಮಿಗಳ ಮೇಲೆ ಬೀಳುತ್ತದೆ (ಮುಂಬವ್ಯಾ. ೯೦). [< ಸಂ. ಕ್ರಯ]

**ಕರಾರ**, ಕರಾರು$_1$, ಖರಾರು$_1$ (ನಾ). ನಿಬಂಧನೆ; ಷರತ್ತು; ಒಪ್ಪಂದ; ಕೌಲು: ತಿಂಗಳೊಂದಕ್ಕೆ ೬೫ ರೂ. ಕೊಡುವ ಕರಾರ ಮಾಡಿ ಆರು ವರ್ಷದ ಬಾಂಡು ಬರೆಯಿಸಿಕೊಂಡರು (ದಾಸಹು. ೭). **ಕರಾರು$_1$**: ಕುಂದೂರು ಕೆರೆಯವೊಡವನು ಕರಾರಾಗಿಯಂದಾಜ ಬರಸಿಕೊಂಡು ಗುತ್ತಿಗೆಯ ಮಾಡಲಿಕ್ಕೆ (ಅರ್ಜಾವಿ. ೩೧-೪೦); ಅಸ್ತಿಯ ಕರಾರಿನಲ್ಲಿ ತನ್ನ ಹೆಸರು ಬಿದ್ದೊಡನೆಯೇ ತಪೇಶ್ವರಿಯ ರೀತಿನೀತಿಯು ಬದಲಾಗಿ ಹೋಯಿತು (ಕಲಕ. ೭೬); ಆ ಕರಾರುಗಳಿಗೆ ನೀವು ಒಪ್ಪುವಿರಾದರೆ ಉಪವಾಸ ಮುರಿಯುವೆನು (ಅಮಗಾಂ. ೨೦). **ಖರಾರು$_1$**: 'ಖರಾರು ವಾಕ್ಕು' ಪರಾ. [← ಅರ. ಪಾರ. ಹಿಂ. ಮರಾ. ಕರಾರ್]

**ಕರಾರನಾಮೆ**, ಕರಾರುನಾಮೆ (ನಾ). ಬರೆಹದ ಮೂಲಕ ಮಾಡಿಕೊಂಡ ಒಡಂಬಡಿಕೆ; ಕೌಲು; ಲಿಖಿತ ಒಪ್ಪಂದ: ಮೀರಜಾಫರನ ಕೂಡ ಮಾಡಿಕೊಂಡ ನಿಜವಾದ ಕರಾರನಾಮೆಯಲ್ಲಿ ಓಮೀಚಂದನಿಗೆ ಕೊಡಲೊಪ್ಪಿದ ಹಣವನ್ನು ಕಾಣಿಸಿದ್ದಿಲ್ಲ (ಹಿಂದುಇ. ೨೪೫). **ಕರಾರುನಾಮೆ**: ಕರಾರುನಾಮೆಗಳ ಮೊಕರರು ಮಾಡಿ ಮೂರು ಸಂಸ್ಥಾನದಲ್ಲು ಮುಡಗಿದರು (ರಾಜೇಂದ್ರ. ೪೪); ಮದುವೆಯು ಒಂದು ಕಾಯಿದೆಯ ಮಾತು, ಕರಾರುನಾಮೆ (ಅಹಲ್ಯೋ. ೧೩೭); ಕರಾರುನಾಮೆ ಬರಶಿಕೊಡಬೇಕೆಂದು ಹೈದರಲ್ಲಿಖಾನರು ಕೇಳಿದರಾಗಿ ಕರಾರುನಾಮೆ ಬರಶಿಕೊಟಿ ವಿವರ (ಹೈದರ. ೬೫). [← ಹಿಂ. ಮರಾ. ಕರಾರ್‌ನಾಮಾ; ಪಾರ. ಕರಾರ್‌ನಾಮಹ್]

**ಕರಾರಪತ್ರ**, ಕರಾರುಪತ್ರ (ನಾ). = ಕರಾರನಾಮೆ: ನಾನು ಕರಾರಪತ್ರವನ್ನು ಬರೆದು ನೊಂದಣಿ ಮಾಡಿಸಿಕೊಡುತ್ತೇನೆ (ನೋಹಿನೀ. ೬೫). **ಕರಾರುಪತ್ರ**: "ಕಟ್ಟುಪಾಡು; ಒಡಂಬಡಿಕೆ; ಕರಾರುಪತ್ರ" (Bond. ೩೦೩೩). [ಕರಾರ + ಪತ್ರ]

**ಕರಾರು$_1$** 'ಕರಾರ' ನೋ.

**ಕರಾರು$_3$**, ಖರಾರ, ಖರಾರಿ$_2$, ಖರಾರು$_2$ (ನಾ). ಕುದುರೆಯ ಮೈಯನ್ನು ತಿಕ್ಕಿ ಸ್ವಚ್ಛಗೊಳಿಸುವ ಒಂದು ಸಾಧನ: ಕರಾರು ತೆಗೆದುಕೊಂಡು ಕೆರೆಯಲಿಕ್ಕಾರಂಭಿಸಿದ (ದಿನಾರಿ. ೩೭); ಕರಾರಿಂದ ಕೆರೆಕೆರೆದು ಮಾಲೀಷ್ ರಂಗೇಲಿ ಹಾಕುವುದಕ್ಕಾರಂಭಿಸಿದ್ದ (ದಿನಾರಿ. ೩೭). **ಖರಾರ**: ಒಂದು ಖರಾರವನ್ನು ತೆಗೆದುಕೊಂಡು ಎತ್ತುಗಳನ್ನು ತಿಕ್ಕ ಹತ್ತಿದನು (ಬಾಬಲ. ೩೭). **ಖರಾರಿ$_2$**: ಕುದುರೆಯ ಮೈಯಂತೆ ಅದಕ್ಕೆ ಮೇಲಿಂದ ಮೇಲೆ "ಖರಾರಿ"ಯಿಲ್ಲದೆ ನಡೆಯದು (ಗಾಳಿಪ. ೧೦೩). **ಖರಾರು$_2$**: ಅನೇಕರು ಮಾಲೀಸು ಮಾಡುವ ಖರಾರು ಮತ್ತು ಎಣ್ಣೆ ಗಡಿಗೆಗಳನ್ನು ಮಾಡುವುದನ್ನು ಜಾಗ್ರತೆ ಕಲಿತರು (ಪ್ರವಾಇ. I, ೬೭).
[← ಮರಾ. ಖರಾರಾ]

**ಕರಾರುನಾಮೆ** 'ಕರಾರನಾಮೆ' ನೋ.

**ಕರಾರುಪತ್ರ** 'ಕರಾರಪತ್ರ' ನೋ.

**ಕರಾರುಬಾಕಿ** (ನಾ). ಒಪ್ಪಂದದಂತೆ ಕೊಡಬೇಕಾದ ಬಾಕಿ (?): ಫವುಜಿಗೆ ಕರಾರುಬಾಕಿ ಮಾಡಬೇಕಾದ್ದಕ್ಕೆ ದಂಗೆ ಧರಣೆ ಆಗಿಯಿರುವುದನ್ನು ತಿಳಿದು (ಹೈದರ. ೭೧).
[ಕರಾರು$_1$ + (< ಕರಾರ) + ಬಾಕಿ$_2$]

**ಕರಾರುವಾಕ್ಕು**, ಖರಾರುವಾಕ್ಕು (ಗು). ಸರಿಯಾದ; ಹೆಚ್ಚು ಕಡಮೆ ಯಿಲ್ಲದ; ಕಟ್ಟುನಿಟ್ಟಾದ; ನಿಖರವಾದ: ಅಮುಖ್ಯವಾದ ಬೆಳೆಗಳಿಗೆ ಸಂಬಂಧಪಟ್ಟ ಪಟ್ಟಿಗಳು ಕರಾರುವಾಕ್ಕಾಗಿರಲಿಲ್ಲ (ಭಾಧಾನ. ೫೩); ಈ ನ್ಯಾಯಾಧೀಶ ಸ್ವಲ್ಪ ಕರಾರುವಾಕ್ಕಾದ ಆಸಾಮಿ (ಪುನರು. ೨೬). **ಖರಾರುವಾಕ್ಕು**: ಫ್ರಿಟ್ಸನು ... ಕೈಕೊಂಡ ಕಾರ್ಯಗಳಲ್ಲಿ ಬಹು ಖರಾರುವಾಕ್ಕಾದವನೂ ಶ್ರಮಸಹಿಷ್ಣುವೂ ಆಗಿದ್ದನು (ಸಸ್ಯಕ. ೮೩); ಆ ಮಂದಿರವನ್ನು ಖರಾರುವಾಕ್ಕಾಗಿ ... ಸಜ್ಜುಗೊಳಿಸಲಾಗಿತ್ತು (ಪುನರು. ೨೦೧).
[← ಪಾರ. ಕರಾರವಾಕಿಈ; ಮರಾ. ಕರಾರವಾಕೇ, ಕರಾರವಾಕಈ, ಕರಾರವಾಕೈ]

**ಕರಾಲ**, ಕರಾಳ (ಗು). ೧. ಬಲುದೊಡ್ಡ; ಮಹತ್ತಾದ; ಪ್ರಚಂಡ. ೨. ಭಯಂಕರವಾದ; ಕ್ರೂರವಾದ; ಭೀಷಣವಾದ: ನಿರ್ಲಯ ಲಯಕಾಲ ಸಾಯುಧಕರಾಲ ಕರಾಲ ಕರಾಲಸದ್ಭುಜಾ (ರಾಜಶೇ. ೧೩–೫೨). ೩. ವಿಕೃತವಾದ; ವಿಕಟವಾದ; ವಕ್ರವಾದ: "ವಿಕಟಂ ಕರಾಲ [ಪಾಠಾಂ. ಳ]ಮೆನಲು ಅತಿ ಡೊಂಕದಕ್ಕು" (ಮಂಗರಾ. ೧೩೩–೨೮). (ನಾ). ೪. ರಾಹು: ೫. ಯಮ. ೬. ಶಿವ. **ಕರಾಳ**: ೨. ಕರಾಳ ರಿಪುನಿರ್ಮೂಲ ಸರ್ವಾಪಘ್ನ ಭಸಿತೋದ್ಧೂಳ ಶಿವಲೀಲ (ಬಸಪು. ೩೮–೬೮); ಕಾಲನುದ್ದಂಡೋಗ್ರದಂಡ ಕರಾಳ ಬಾಧೆಗೆ ಬಿದ್ದೆಯಲ್ಲ (ಬಸಪು. ೪೯–೧೦); ಕರಾಳವದನದ ಬಿಗಿದ ಹುಬ್ಬಿನ ಮೇಲು ಗೋಪದ ಭೀಮ ಬಂದನು (ಕುವ್ಯಾಗ. ೨–೩೭). ೪. "ಅನಲೋತ್ಪಾತಂ ಕರಾಳಂ ಗ್ರಹವಿವರಮಿವುಂ ರಾಹುವಕ್ಕುಂ" (ಪಾನಾರ. ೭೭). ೭. ಒಂದು ನರಕದ ಹೆಸರು: ಮಲಭಕ್ಷಣ ... ಸುದಾರುಣವೆಂಬೈದು ಮಂತ್ರಿನರಕಂಗಳಿಂ ಕಲಿತಮಾಗಿ ಕರಾಳವೆಂಬರಸುನರಕವಿಹುದು (ವಿವೇಕ. ೧೮೦). ೮. ಒಂದು ಬಗೆಯ ಬಟ್ಟೆ: "ಕರಾಳ ಎಂದರೆ ಕಾಡು ಪ್ರಾಣಿಯ ಉಣ್ಣೆಯಿಂದ ಮಾಡಿದ ಬಟ್ಟೆ" (ಪ್ರವಾಇ. I, ೧೯೮ ಅಡಿಟ); ಉಡುಪುಗಳನ್ನು ಕೌಶೇಯ, ಕ್ಷೋಮ, ಕಂಬಳ ಮತ್ತು ಕರಾಳ ಎಂದು ನಾಲ್ಕು ತರಹ ಬಟ್ಟೆಗಳಿಂದ ಮಾಡಿರುತ್ತಾರೆ (ಪ್ರವಾಇ. I, ೧೯೮). [ಸಂ.]

**ಕರಾಲಂಬನ** (ನಾ). ಕೈಯಾಸರೆ; ಆಧಾರ; ಆಶ್ರಯ: ಕರಮೊಪ್ಪಿ ತೋರ್ಪುದು ಬನಂ ಲಕ್ಷ್ಮೀಕರಾಲಂಬನಂ (ಸುಕುಮಾ. ೧೦–೬೧).
[ಕರ್$_3$ + ಆಲಂಬನ]

**ಕರಾಲಿ**, ಕರಾಳಿ$_1$ (ನಾ). ಶಿವನ ಒಂದು ಶಕ್ತಿ: ಸಿರಿ ಶಚಿ ವಾಣಿ ರೋಹಿಣಿ ಕರಾಲಿ [ಪಾಠಾಂ. ಳಿ] ... ಶಕ್ತಿಯರ್ (ಶಬಶಂ. ೩–೧೨). **ಕರಾಳಿ$_1$**: ಆ ಕರಾಳಿಯು ಮಹಾವಿಕರಾಳಿ (ವೀಶೈಪು. ೨–೮–೨೧). [< ಸಂ. ಕರಾಲೀ]

**ಕರಾವಳಿ** 'ಕರವಳಿ' ನೋ.

**ಕರಾವು** 'ಕಱೆವು' ನೋ.

**ಕರಾಸ** (ನಾ). ಒಬ್ಬಾತನ ಹೆಸರು (?): ಇದಕ್ಕೆ ಸಕ್ಷಿ ಅಮಚ್ಚಾರ್ ತೆಲಮ್ಬುಯರ್ ಕರಾಸರ್ ರಗ್ಗ × × ಸರ್ (ಎಕ. IV, ಗುಂಡ್ಲುಪೇ. ೮೬–೫; 750). [?]

**ಕರಾಸಿ$_1$** (ನಾ). ಹರಿತವಾದ ಕತ್ತಿ (ಕ). [ಕರ್$_2$ + ಅಸಿ$_8$]

**ಕರಾಸಿ$_2$** (ನಾ). ಕೈಗತ್ತಿ. [ಕರ$_3$ + ಅಸಿ$_8$]

**ಕರಾಳ** 'ಕರಾಲ' ನೋ.

**ಕರಾಳಕೃತ್ಯ** (ನಾ). ಘೋರವಾದ ಕೃತ್ಯ; ಕ್ರೂರ ಕೃತಿ: ಅವರ ಕರಾಳಕೃತ್ಯಗಳು ಇತಿಹಾಸ ಪ್ರಸಿದ್ಧವಾಗಿ ಇಂದಿಗೂ ಕಣ್ಣಿಗೆ ಕಟ್ಟಿದಂತಾಗಿದೆ (ಖುಕ್ನಾರ. ೧೦೯ ಪೀಠಿಕೆ). [ಕರಾಳ (= ಕರಾಲ) + ಕೃತ್ಯ]

**ಕರಾಳದೃಷ್ಟಿ** (ನಾ). ಉಗ್ರದೃಷ್ಟಿ; ಕ್ರೂರ ದೃಷ್ಟಿ: ಆಂಗ್ಲರ ಕರಾಳ ದೃಷ್ಟಿ ಇವರನ್ನು ಪುನಃಪುನಃ ಚುಚ್ಚುತ್ತಿದೆ (ಧರ್ಮಸಾ. ೧೪೧).
[ಕರಾಳ (= ಕರಾಲ) + ದೃಷ್ಟಿ]

**ಕರಾಳಮತಿ** (ನಾ). ಕ್ರೂರ ಬುದ್ಧಿಯುಳ್ಳವನು: ಕರಾಳಮತಿ ಸುಡುಗಾಡಲೈತಂದಾಲಯವ ಹೊಕ್ಕನು ಕೃತಾಂತನ ಬಾಯ ಹೊಗುವಂತೆ (ಕುವ್ಯಾವಿ. ೩–೮೨). [ಕರಾಳ (= ಕರಾಲ) + ಮತಿ$_1$]

**ಕರಾಳಾಕೃತಿ** (ನಾ). ಘೋರವಾದ ಆಕೃತಿ; ಭೀಕರ ರೂಪ: ಮಹಾಕುಲನಗಂ ಬೀೞ್ವಂತೆ ಬೇೞೊಂದು ದೈತ್ಯ ಕರಾಳಾಕೃತಿ ಬೀೞೆ (ಜಗವಿ. ೩–೩೦). [ಕರಾಳ (= ಕರಾಲ) + ಆಕೃತಿ]

**ಕರಾಳಿ$_1$** 'ಕರಾಲಿ' ನೋ.

**ಕರಾಳಿ$_2$** (ನಾ). ಕುದುರೆಗಳಲ್ಲಿ ಒಂದು ಪ್ರಕಾರ: "ಯಾವ ಕುದುರೆಯ ಮೇಲುಹಲ್ಲುಗಳು ಕೆಳಗಣ ಹಲ್ಲುಗಳಿಂದ ಕಡಿಯಲ್ಪಡುವವೋ ಅದು ಕರಾಳಿಯೆನಿಸಿಕೊಳ್ಳುವದು" (ಸೌಗಂಧಿ. ೩೧೨–೨); ಕಾಗೆಯ ಹಾಗೆ ಸೂಚೀಮುಖವಾಗಿರಬಾರದು. ಕರಾಳಿಯಾಗಬಾರದು (ಅಶ್ವಟೀ. ೧೭–೧೦); ಕರಾಳಿಗಳಾದ ಕುದುರೆಗಳು (ಕೃವಾಅ. ೧೨೧). [?]

**ಕರಾಳಿ$_3$** 'ಕರಳಿ$_2$' ನೋ.

**ಕರಾಳು** (ನಾ). ಸೇವಕ; ಕೈಯಾಳು: ಸುರಗಿ ಚವುಡಯನ ಸಿಸುವೊ ಕರಿಕಾಲನ ಕರಾಳುವೊ (ಬಸಪು. ೪೭–೩೪). [ಕರ್$_3$ + ಆಳು$_3$ + (< ಆಳ್$_3$)]

**ಕರಿ$_1$** (ಕ್ರಿ). ೧. ಸುಟ್ಟು ಕರಿಕಾಗು; ಸೀದುಹೋಗು: "ಕರಿ – ಅತಿದಾಹೇ (ಸೀದುಹೋಗು)" (ಶಮಧಾ); ಪೊಸವೇಟಕಾಱರೆರ್ದಗಳ್ ಪೊಸಕಾರ ಪೊಡರ್ಪುಗಂಡ[ದೇ]ಂ ಕೂರಿತುವದೇಂ ಕಲಂಕಿದುವು (ಪಂಪಭಾ. ೭–೨೩); ಸೂಡಿದ ಬಾಸಿಗಮಾಗಳಂತೆ ದಳ್ಳುರಿ ತಗುಳ್ದಂದದಿಂ ಕರಿದುದು (ಕಬ್ಬಕಾ. ೩೧೩); ನವನಖರೇಖೆಗಳ್ ಕರಿತು ಪೋದುವು (ಸೂಕ್ತಿಸು. ೧೨–೭೯); ಸೊಡರಂ ಪೊತ್ತಿಸಿದನೊಂದಂ ... ಒತ್ತಿ ಕರಿಯದು ಬೇಯದಿರ್ಪಂ ತತ್ತನುವಿನೊಳಗುರುಪಿದಂ (ಬಸಪು. ೩–೬). ೨. ಹುರಿ; ಬೆಂಕಿಯಲ್ಲಿ ಸುಡು: ಕಾಯ್ದೋಡಿನೊಳ್ ಪುರಿವುದುಂ ಮೊರ್ಮರಾಗೆ ಕರಿವುದುಂ ಚಿಮಿಚಿಮಿಸೆ ತಾಳಿಸುವುದುಂ (ಸುಕುಮಾ. ೧೧–೪೭ ವ); ಮೆಯ್ಯಂ ಕೊಳ್ಳಿಯಿಂ ಕರಿದುಂ (ಧರ್ಮಾಮೃ. ೭–೧೦೫). ೩. ಎಣ್ಣೆ ಅಥವಾ ತುಪ್ಪದಲ್ಲಿ ಬೇಯಿಸು: ಅದನ್ನು ಯಾವುದರಲ್ಲೇ ಕರಿದಿರಲಿ ಅದರ ರುಚಿಯೇ ರುಚಿ (ಮಾರ್ಗದ. ೧೦೯); ಕರಿದ ಆಹಾರ ರುಚಿಯಾಗಿರುತ್ತದೆ (ಅಡುಸಾ. ೮೯).
[ದೇ. ‖ ತಮಿ. ಮಲ. ಕೊಡ. ಕರಿ]

**ಕರಿ$_2$** (ನಾ). ೧. ಸೀದು ಹೋಗುವಿಕೆ; ಕರಿಕು; ಇದ್ದಿಲು: ಸರಸಿಜಂಗಳುಮಾಕೆಯ ಮೆಯ್ ಸೋಂಕಿದನಿತಱೊಳೆ ಕಱಂಗಿ ಕರಿಯಪ್ಪುವು (ಕಾದಂಉ. ೩.೨೯); ಉರಿಯೊಳಗಣ ಕರ್ಪುರಕ್ಕೆ ಕರಿಯುಂಟೇ ಅಯ್ಯಾ (ಬಸಹೆ. ೫೭–೧೫೬): ನಿನ್ನೀನಗೆಮೊಗದ ಸಿರಿ ಸೀದು ಕರಿಯಾಯ್ತು (ಕುವ್ಯಾಸ. ೧೪–೨); ಕೆಟ್ಟ ಪ್ರಪಂಚವಿದು, ಸುಟ್ಟ ಕರೆ ನರಮನಸು (ಮಂಕುಕ. ೬೨೫). ೨. ಕರಿಯ ಬಣ್ಣ; ಕಪ್ಪು; ಮಸಿ: "ಕರಿದೆನಲ್ ಕರಿಯೆನಲ್ ಕರ್ಪೆನಲ್ ಕಪ್ಪಕ್ಕು" (ಕಶರ. ೨೦); ಅವರಂಗದೊಳಿರ್ದ ಮಾನಕಷಾಯದ ಉರಿಯ ಕರಿಯಂ ಕಳೆವುದುಂ (ಪುಣ್ಯಾಸ್ರ. ೧೦–೩೨ ವ); ಹಿಂದಣ ದಿನವೇ ಅವಳು ಜಗಲಿಗೆ ಕರಿಯನ್ನು ಸೇರಿಸಿ ಬಳಿದಿದ್ದಳು (ಹಾಹುತ್ತ. ೮೮). ೩. ಅಶುಭ; ಕಳಂಕ; ಅಮಂಗಳ. 'ಕರಿಗಾಲ', 'ಕರಿಮುಖ' ಪರಾ. ೪. ಸಂಕ್ರಾಂತಿ, ಗ್ರಹಣ, ಅಮಾವಾಸ್ಯೆ ಮೊದಲಾದ ದಿನಗಳ ಮರುದಿನ; ಅಶುಭಕಾಲ: ಸಂಕ್ರಮಣದ ಕರಿಯ ದಿವಸ ಕೂಡಲಸಂಗಮೇಶನ ಜಾತ್ರೆ ಜರಗುತ್ತದೆ (ಶಿಲಾಮು. ೧); ಸಂಕರಾತರಿ ಕರಿಯ ದಿನ ಮಿತ್ರರೆಲ್ಲಾ ಮಡಿಗಳುಟ್ಟು (ಮಲ್ಲಿಗೆ. ೪). ೫. ಸಸ್ಯಕ್ಕೆ ಬರುವ ಒಂದು ಬಗೆಯ ರೋಗ: ಗಿಡಕ್ಕೆ ಕರಿ ಹತ್ತಿದೆ (ರೂಢಿ).

**ಕರಿಕರಿಯಾಗು** = ಸೀದುಹೋಗು; ಸುಟ್ಟು ಕರಿಕಾಗು: ಉರಿದು ಕರಿಕರಿಯಾದೊಡಾಲದ ಮರದ ಬೂದಿಯ ಮೇಲೆ ನಿರ್ಮಳ ವರ ಭಸಿತಮಂ ತಳಿಯಲ್ (ಬಸಪು. ೫೦–೭೯). **ಕರಿಬಳಿ** = ಸುಟ್ಟ ತೆಂಗಿನ ಸಿಪ್ಪೆಯ ಕರಿಯನ್ನು ಸಗಣಿಯೊಂದಿಗೆ ಬೆರಸಿ ಸಾರಿಸು: ನೆಲಕ್ಕೆ ಸಲ್ಲಿಸುವ ಷೋಡಶೋಪಚಾರ ಅಲ್ಲಿಗೆ ನಿಲ್ಲಲಿಲ್ಲ. ಅದರ ಮೇಲೆ ಮತ್ತೆ ಕರಿಬಳಿಯುಉಂಟು (ಬಾಳಿಗಿ. ೫೧). **ಕರಿಯುಹರಿಯುವುದು** = ಕಾರ ಹುಣ್ಣಿಮೆಯ ದಿನ ಹೋರಿಗಳನ್ನು ಓಡಿಸಿಕೊಂಡು ಬಂದು ತೋರಣವನ್ನು ಹರಿಯುವ ಒಂದು ಉತ್ಸವ: ಕಾರ ಹುಣ್ಣಿಮೆಯಲ್ಲಿ ಕರಿಯಹರಿಯಲು ಹೊರಟ ಹೋರಿಗಳ ತೆರದಲ್ಲಿ ಮುನ್ನುಗ್ಗಿ ಮೋಡ (ಕರುಶ್ರಾ. ೧೬).

[< ಕರಿ$_1$. / ತಮಿ. ಮಲ. ತುಳು. ಕೊಡ. ಕರಿ]

**ಕರಿ$_3$** (ನಾ). ಒಂದು ಬಗೆಯ ಮೂಲಿಕೆ: "ಅಂಗುರ – ಕರಿ" (ಓಷಧಿ. ೫). [?]

**ಕರಿ$_4$** (ನಾ). ೧. ಸೊಂಡಿಲನ್ನುಳ್ಳದು; ಆನೆ: "ಕರಿಯಾನೆಯಕ್ಕು ಪೆಸರಿಂ" (ಕವಿಕಂ. ೫೯); ಕರಿಕರಿಗಲ್ಲದಿಱುಂಪೆಗೆ ಪರಿವುದೆ (ಯಶೋಚ. ೨–೫೪); ಕರಿಯ ಕೊಲ್ಲುವ ಹರಿಗೆ ಮರಿಯೆಂಬ ಶಂಕೆ ತಾನೇಕೆ? (ಶ್ರೀರಾಮಾ. ೨೮–೧೯). ೨. ಎಂಟು ಎಂಬ ಸಂಖ್ಯೆಯ ಸಂಕೇತ: "ಕರಿ . . . ವಾರಣಮಾರಯೆ ಯೆಂಟಕ್ಕೆ ನಾಮಂ" (ವ್ಯವಹಾ. ೯–೮). ೩. ಕನ್ನಡಿ. ೪. ಕಮಲ. ೫. ಕಸ್ತೂರಿ. ೬. ಸರ್ಪ. ೭. ಹಂಸ ೮. ಕೀರ್ತಿ. ೯. ಪರ್ವತ. ೧೦. ಕಾಂತಿ. ೧೧. ಕುದುರೆ. ೧೨. ವಿಷ್ಣು: "ಕರಿಯೆಂದೆನೆ ಗಿರಿಗಳಕ್ಕುಂ ಕಾಂತಿಗಳಕ್ಕುಂ ಕರಿಯೆನೆ ಗಜಹಯಮಕ್ಕುಂ . . . ಕರಿಯೆನೆ ಕನ್ನಡಿಯಕ್ಕು ಕರಿಯೆಂದೆನೆ ಕಮಲಮಕ್ಕು ಕಸ್ತುರಿಯಕ್ಕುಂ ಕರಿಯೆನೆ ಸರ್ಪಮರಾಳಂ ಕರಿಯೆಂದೆನೆ ಕೀರ್ತಿಯಕ್ಕು ಶಬ್ದಾಗಮದೊಳ್" (ಶಬ್ದರ. ೬, ೭). ೧೩. [ಛಂದ] ಆರು ಬಗೆಯ ಪ್ರಾಸಗಳಲ್ಲಿ ಒಂದು ಪ್ರಕಾರ; ಪದ್ಯದ ಪ್ರತಿ ಪಾದದ ಒಂದು ಮತ್ತು ಎರಡನೆಯ ಸ್ವರಗಳ ನಡುವೆ ಒಂದೇ ವಿಧವಾದ ಒಂದು ವ್ಯಂಜನ ಬಂದು ಅದರ ಹಿಂದಿನ ಸ್ವರವು ದೀರ್ಘವಾಗಿರುವ ಪ್ರಾಸ: ಹರಿ ಕರಿ ವೃಷಭ ತುರಂಗಂ ಶರಭ ಮಜಂಗಳುಮೆನಿಪ್ಪ ಷಟ್‌ಪ್ರಾಸಕ್ಕಂ (ಛಂದೋಂಬು. ೧–೪೭).

[< ಸಂ. ಕರಿನ್]

**ಕರಿಂಕು**, ಕರಕು$_1$, ಕರಿಕು$_2$, ಕರುಕು$_1$ (ನಾ). ಸುಟ್ಟು ಕಪ್ಪಾದುದು; ಮಸಿ; ಇದ್ದಿಲು ಮೊದಲಾದದ್ದು: ವಿಕಲ್ಪ ಬಿಂದುಗೆ . . . ಕರಿಂಕು, ಕರಿಕು (ಶಮದ. ೩೬ ಪ್ರಯೋ). 'ಕರಿಂಕುವರಿ' ಪರಾ. **ಕರಕು$_1$**: ಅಱಿಕೆಯಿಲ್ಲದಳ ಮನೆವಾರ್ತೆ ಅನ್ನದ ಕರಕು ಸವಿದಂತೆ (ಸರ್ವಜ್ಞ. ೧೭೨೫); ಈ ಹಣ್ಣಿನಿಂ ಕರಕು ಮಾಡಿ ಬೆಣ್ಣೆಯಲ್ಲಿ ಕಲಿಸಿ ನುಂಗಿಸಲು ಮಕ್ಕಳ ವಾಂತಿ ಗುಣ (ವಿವೈವಿ. ೧); ಬತ್ತಿಯೂ ಕೊನೆಗೆ ಕರಕು, ಕರಕು (ನವ್ಯಧ್ವ. ೮೭). **ಕರಿಕು$_2$**: ಮೆಯ್ಯ ಕರ್ಪೂ ಕರಿಕೋ ಪೇರಾನೆಯೋ ವಜ್ರಗೊಡ್ಡಿದ ನೀಲಾದ್ರಿಯೊ ಪೇಱಿದೆಂಬಿನ ಮಗುವರ್ಾದತ್ತು ಮತ್ತೊಂದಿಭಂ (ಜಗವಿ. ೧೬–೮); ಪಂಚವರ್ಣದ ಕೂಳರಾಶಿ ಕಜ್ಜಾಯದ ಕೆಂಚ ಕರಿಕಿನಿಡುಗುಡ್ಡೆ (ಭರಚ. ೨೦–೧೨೭). **ಕರುಕು$_1$**: ಬಿಳಿ ಅರುವೆಯ ಸುಟ್ಟ ಕರುಕು (ಸಕವೈ. ೩೨೩).

ಕರಿಕಾಗು = ಸುಟ್ಟು ಇದ್ದಿಲಾಗು; ಸೀದು ಕಪ್ಪಾಗು: ನಾಸಿಕದುಸಿರ ದಳ್ಳುರಿ ಮೂಕುತಿ ಗಂಧಗ್ರಾಸ ಸಂತಾಗಿ ಮೆಯ್ಯೊಳಗೆ ಪೂಸಿದ ಸಿರಿಗಂದ ಕರಿಕಾದುದು (ಮೋಹತ. ೨೮–೧೭); ಕರಿಕಾದುದಾಕ್ಷಣದೊಳಾ ದೈತ್ಯಸಂಕುಲಂ (ಚಬಪು. ೪೪–೪೮).

[ದೇ. ‖ ತಮಿ. ಕರುಗು; ಮಲ. ಕರಿಯು; ತುಳು. ಕರೆಂಚಿ; ತೆಲು. ಕ್ರಾಗು = ಸುಟ್ಟುಹೋಗು]

**ಕರಿಂಕುವರಿ**, ಕರಿಕುವರಿ (ಕ್ರಿ). ಸುಟ್ಟು ಕಪ್ಪಾಗು; ಕರಿಕಾಗು: ಪರವಾದಿಗಳ ಮೊಗಂಗಳ್ ಕರಿಂಕುವರಿದಂತೆ ಕಂದಿ ಕುಂದಿರೆ (ಆದಿಪು. ೨–೨೩); ಅರಿನೃಪ ವದನಾಂಬುರುಹಂ ಕರಿಂಕುವರಿದಿರೆ (ಪಂರಾಮಾ. ೧–೧೩೯). **ಕರಿಕುವರಿ**: ಅತಿ ಕರಿಕುವರಿದ ಕೋವೂರನೂರಂ ಮಾಡಿ ಕೃಪೆವೆರಸಿ ಹಾಡಿ (ಸಿದ್ಧರಾ. ೭–೩೫); ಆಡವಿ ಕರಿಕುವರಿದುದು (ಅನಂಪು. ೧೧–೩೯); ಉರಿ ಹೊಡೆದ ಕೆಂದಾವರೆಯ ವೋಲ್ ಕರಿಕುವರಿ[ಪಾಠಾಂ. ಕರಕುವರಿ, ಕರಕುವದೆ]ದುದು (ಕುವ್ಯಾಅ. ೧೬–೧೫).

[ಕರಿಂಕು + ಪರಿ$_2$]

**ಕರಿಂಕುವೀೞ್** (ಕ್ರಿ). = ಕರಿಂಕುವರಿ: ನೀರ್ದೆಗೆದ ಸರೋವರಂಗಳಿವು ಜೋಲ್ದು ಮಲಂಗೆ ಕರಿಂಕುವಿೞ್ದ ಬಾಳೆಗಳಿವು (ಚಂದ್ರಪು. ೫–೧೩೩).

[ಕರಿಂಕು + ಬೀೞ್$_1$]

**ಕರಿಂಕುವೋಗು** (ಕ್ರಿ). = ಕರಿಂಕುವರಿ: ತದ್ವಿರಹಾರ್ತೆ ಮೆಯ್ಯನಿಕ್ಕಿರೆ ಕರಿಂಕುವೋದೆಡೆಯ ಪಜ್ಜೆ ತಣ್ಬಸಲೆಗಳೊಳ್ (ವರ್ಧಪು. ೯–೫೯); ಕರಿಂಕುವೋಗಿ ಕರ್ಪೇಱದರಣ್ಯಭೂಮಿ ಬೆಮರೇಱದ ದೇಹಿಸಮೂಹಂ . . . ಇಲ್ಲದೆಲ್ಲಿಯುಂ (ಪುಷ್ಪಪು. ೮–೭೬). [ಕರಿಂಕು + ಪೋಗು$_1$]

**ಕರಿಂಕೇಳ್** 'ಕರಿಂಕೇೞ್' ನೋ.

**ಕರಿಂಕೇೞ್**, ಕರಿಂಕೇಳ್, ಕರಿಕೇೞ್ (ಕ್ರಿ). = ಕರಿಂಕುವರಿ. 'ಕರಿಂಕೇೞಿಸು' ಪರಾ. **ಕರಿಂಕೇಳ್**: ಅರಿಭೂಪಾಳರ ಮಿಾಸೆ ಭೋಂಕನೆ ಕರಿಂಕೇಳ್ವನ್ನೆಗಂ ತೇಜವಾವರಿಸಿತ್ತುವ್ವಿರ್ಯನ್ (ಎಕ. XI, ದಾವಣ. ೪೨–೨೩; ಸು. 1162). **ಕರಿಕೇೞ್**: ನಂದನವನಂ ಕರಿಕೆೞ್ದುದು ನೋಡೆ ಸುಯ್ದ ಸುಯ್ಯಿಂಕಿಯಿಂ (ಜಗವಿ. ೧೧–೨೪); ಆ ತವಸಿಯಂ ಮುಳಿದೆಚ್ಚೊಡೆ . . . ಪೂವಿನಂಬು ಕರಿಕೇೞದೆ (ಕಬ್ಬಕಾ. ೨೩೩).

[ಕರಿಂಕು + ಏೞ್$_1$]

**ಕರಿಂಕೇೞಿಸು** (ಕ್ರಿ). ಕರಿಕೇಳುವಂತೆ ಮಾಡು; ಕರಿಕಾಗಿಸು: ನರಗನುರಿಪಿದೊಡೆ ಕರಿಂಕೇೞಿಸಿದಾತನ ತೇಜದ ಬೀೞಲನನುಕರಿಪುವಾದು ಪೊಗೆದುರಿವುರಿಗಳ್ (ಪಂಪಭಾ. ೧–೩೫). [ಕರಿಂಕೇೞ್ + -ಇಸು$_3$]

**ಕರಿಂಚಿಲ್ಲು** (ನಾ). (ಕರಾ) ಕೊಟ್ಟಿಗೆ (?); "ಎಮ್ಮೆಯನ್ನು ಕಟ್ಟುವ ಹಟ್ಟಿ" (ನಾಡೋಜ. ೩೩ ಅಡಿಟ): ಆನೆ ಬಡವಾದರೂ ಕರಿಂಚಿಲ್ಲು ಹೊಗುವುದೆ? (ನಾಡೋಜ. ೩೩). [← ತುಳು. ಕಡೆಂಚಿಲ್]

**ಕರಿಅರಗಿನಮರ** (ನಾ). ಅರಗಿನ ಮರದಲ್ಲಿ ಒಂದು ಪ್ರಕಾರ: ಕರಿಅರಗಿನ ಮರ, ವಾರ್ನಿಷ್ ಮರ (ಮೈಔಗಿ. ೫೬–೧೦೫೭). [< ಕರಿದು + ಅರಗು$_3$ + ಮರ$_1$]

**ಕರಿಅರಿಸಿನ** (ನಾ). ಒಂದು ಬಗೆಯ ಸಸ್ಯ: ಕರಿಅರಿಸಿನ, ನಾರು ಕಚೂರ (ಮೈಔಗಿ. ೨೬–೪೯೯). [< ಕರಿದು + ಅರಿಸಿನ]

**ಕರಿಉಗನಿಹಂಬು** (ನಾ). ಒಂದು ಬಳ್ಳಿಯ ಹೆಸರು: (ಮೈಔಗಿ. ೪೬–೯೦೯). [< ಕರಿದು + ಉಗನಿ$_0$ (< ಉಗುನಿ) + ಹಂಬು$_1$]

**ಕರಿಉಪ್ಪಿಗಿಡ** (ನಾ). ಒಂದು ಗಿಡದ ಹೆಸರು: ಕರಿಉಪ್ಪಿಗಿಡ, ನಿಸ್ಪಟ್ ಗೇಗಿಡ, ಕರೀರ (ಮೈಔಗಿ. ೧೭–೩೦೩). [< ಕರಿದು + ಉಪ್ಪಿ + ಗಿಡ (< ಗಿಡು)]

**ಕರಿಉಮ್ಮತ್ತಿ** (ನಾ). ಕಪ್ಪು ದತ್ತೂರ: ಕರೀಉಮ್ಮತ್ತಿ, ದತ್ತೂರ (ಮೈಔಗಿ. ೨೯–೫೫೪). [< ಕರಿದು + ಉಮ್ಮತ್ತಿ (< ಉಮ್ಮತ್ತ)]

**ಕರಿಒಟ್ಟೆಹುಲ್ಲು** (ನಾ). ಒಂದು ಜಾತಿಯ ಹುಲ್ಲು: ದೊಡ್ಡ ಅಂಟು ಪುರಲೆಹುಲ್ಲು, ಕರಿಒಟ್ಟೆಹುಲ್ಲು (ಮೈಔಗಿ. ೬೯–೧೪೨೧). [< ಕರಿದು + ಒಟ್ಟೆ$_0$ + ಹುಲ್ಲು (< ಪುಲ್)]

**ಕರಿಕ** (ನಾ). ಕರಿ ಬಣ್ಣದವನು; ಕಪ್ಪು ಮೈಬಣ್ಣದವನು: ಕೃಷ್ಣ ವರ್ಣಮಂ ಪುಟ್ಟಿಸಿದಂತಿರೆ ಕರಿಕರ್ ಪೇಡಿಗಳತಿಪರುಷಸ್ವರ ಪರುಷ ನಯನ ಪರುಷಶರೀರರ್ (ಆದಿಪು. ೫–೧೧); ಒಬ್ಬಕೆಂಚನೊಬ್ಬ ಕರಿಕನೊಬ್ಬ ಶುದ್ಧ ಧವಳಿತನೆಂತಯ್ಯಾ (ಬಸವ ೫೪೩); ದೊಡ್ಡ ಕಂಗಳವನು ದೀರ್ಘದೇಹಿ ಡೊಳ್ಳೊಡಲ ಕರಿಕನು . . . ಮೋಹರದೊಳು ಬರುತಿರ್ದ (ಭರಚ. ೨೫–೫೭). [< ಕರಿದು + –ಕ$_3$. / ತುಳು. ಕರಿಯಿ]

**ಕರಿಕಕ್ಕೆ** (ನಾ). ಕರಿ ಕಕ್ಕೆಯ ಮರ: ಅತ್ತಿ ಕಪಿತ್ಥವಿಪ್ಪೆ ಖದಿರಂ ಮದನಂ ಕರಿಕಕ್ಕೆ ಬಿಕ್ಕೆ . . . ಮತ್ತಮನೇಕ ವೃಕ್ಷತತಿಯಿಂದೆಸೆದಿರ್ದುದು ತದ್ವನಾಂತರಂ (ನಳಚಂ. ೭೧). [< ಕರಿದು + ಕಕ್ಕೆ]

**ಕರಿಕಡ್ಡಿಹುಲ್ಲು** (ನಾ). ಒಂದು ಬಗೆಯ ಹುಲ್ಲು: ಶುಂಠಿಹುಲ್ಲು, ಕರಿಕಡ್ಡಿಹುಲ್ಲು (ಮೈಔಗಿ. ೫೯–೧೧೯೦). [< ಕರಿದು + ಕಡ್ಡಿ + ಹುಲ್ಲು (< ಪುಲ್)]

**ಕರಿಕನಾಡು** (ನಾ). ಒಂದು ನಾಡಿನ ಹೆಸರು: ಕರಿಕನಾಡ ಬಿದಿರ್ಕ್ಕಲ್ಲಾಳ್ದ ಕುಕ್ಕರ ಪಾಳಿಕ್ಕಾಱಿ ನಾಡಿಯರ್ ತುರಿದು (ಎಕ. IX. ಬೆಂಗಳೂ. ೩೬–೨; ಸು. 750). [ಕರಿಕ$_0$ + ನಾಡು]

**ಕರಿಕರಿಗಂದು**, ಕರಗರಿಗಂದು (ಕ್ರಿ). ಬೇಗೆಯಿಂದ ಬಾಡಿ ಕಪ್ಪಾಗು; ಸೀದುಹೋಗು: ನಾರಿಯರ ಬಟ್ಟಮೊಗದ ಮೆಯ್ಸಿರಿಗಂಡು ಕಱುಬಿ ಕರಿಕರಿಗಂದಿದನೊ (ಪದ್ಮರಾ. ೮–೭೫); ಅದಂ ಕೇಳ್ದು ಧೃತಿಗುಂದಿ ಕರಿಕರಿಗಂದಿ ಕಳವಳಿಸಿ ಕಂಗೆಟ್ಟು (ಚಿಬಪು. ೧೧–೫೨). **ಕರಿಗರಿಗಂದು**: ತೋಳಬಾಳ ನೆಬಿಲೊಳ್ ಕಱಂಗಿ ಕರಿಗರಿಗಂದಿ ಕುಂದಿ (ಜಗವಿ. ೨–೩೯ ವ). [ಕರಿ$_2$ + ಕರಿ$_2$ + ಕಂದು$_1$]

**ಕರಿಕರಿಗುಂದು** (ಕ್ರಿ). = ಕರಿಕರಿಗಂದು: ಕಾಳಗದಿಂದ ಪುರದಲಿನಿಂದು ಕರಿಕರಿಗುಂದುವ ಕ್ಷಿತಿಪಾಲನೇ (ಕುವ್ಯಾಸ. ೧–೭೮). [ಕರಿ$_2$ + ಕರಿ$_2$ + ಕುಂದು$_1$]

**ಕರಿಕಾಚಿಗಿಡ** (ನಾ). ಕರಿದಾದ ಕಾಚಿಹಣ್ಣಿನ ಗಿಡ: ಕರಿಕಾಚಿಗಿಡ, ಕಾಕಮುಂಚಿ, ಕೆಂಪುಕಾಚಿ (ಮೈಔಗಿ. ೭೦–೧೪೫೪). [< ಕರಿದು + ಕಾಚಿ + ಗಿಡ (< ಗಿಡು)]

**ಕರಿಕಾಯಿ** (ನಾ). ಕಾಯಿಪಲ್ಯ: ತಿರಿದುಂಬ ಜೋಗಿಗಳಿಗೆ ಕೇಳ್ಕೆ ಬರಿಯ ಅಂಬಲಿಯಾತಕೆ ಕರಿಕಾಯಿಗಳು ದೊರೆಯವೆ (ನಾಪದ. ೧೯೧). [? + ಕಾಯಿ$_4$ (< ಕಾಯ್$_4$). / ತಮಿ. ಮಲ. ಕಾಯ್ಕಱಿ]

**ಕರಿಕಾಳಿ** (ನಾ). ಒಂದು ಪಿಶಾಚಿ: ಕಾಳರಾತ್ರಿಯ ತೆಱದಿ ಕಾಳಿ ಕರಿಕಾಳಿ ಬೇತಾಳಿ ಚಂಡಾಳಿ ಚಾಮುಂಡಿ ಚಂಡಿ . . . ಪಿಶಾಚ ಪರಿಕರ ಮಿರ್ದುದು (ಕುಮರಾ. ೭–೫೫). [ಕರಿ ? + ಕಾಳಿ$_3$ (= ಕಾಲಿ)]

**ಕರಿಕಿ** (ನಾ). ಕಪ್ಪು ಬಣ್ಣದವಳು; ಕರಿಪಿ: ನಿಡುಗಣ್ಣಿ, ನಿಡುವೆರಲಿ, . . . ಕರಿಕಿ, ಬಿಳಿಕಿ, ಮುದುಕಿ (ಶಬ್ದಾನು. ೧೪೪ ಪ್ರಯೋ). [ಕರಿಕ + –ಇ$_2$]

**ಕರಿಕು$_1$** (ಕ್ರಿ). ಸುಟ್ಟು ಕರಿಕಾಗು, ಕಪ್ಪಾಗು: ತನು ಕರಿಕಿದರು, ನಂದದೇ ಕನಲುತಿರುವಾತ್ಮಗಳ ಕಿಡಿಯು (ನಲ್ಮೆ. ೩೮). [< ಕರಿಂಕು]

**ಕರಿಕು$_2$** ‘ಕರಿಂಕು’ ನೋ.

**ಕರಿಕುಗೊಳಿಸು** (ಕ್ರಿ). ಕರಿಕುಮಾಡು; ಸುಟ್ಟುಬಿಡು: “ನಿನ್ನ ಕಣ್ಣುಬೆಂಕಿ ಕರಿಕುಗೊಳಿಸುತಿದೆ ಜಗದೆಲ್ಲ ಐಶ್ವರ್ಯ ಪದವಿ ಹಿರಿ ಹೆಮ್ಮೆಗಳು” (ನಿಮ್ಮದ್ಯ. ೩). [ಕರಿಕು$_2$ (< ಕರಿಂಕು) + ಕೊಳ್$_1$ + –ಇಸು$_3$]

**ಕರಿಕುವಡೆ** (ಕ್ರಿ). ಕರಿಕಾಗು; ಕಪ್ಪಾಗು: ಕುಸುಮವೆಂದಳಿಗಳು ಮುಸುಕಲು ಗರಿಸೀದು ಮಸಿಯಂತೆ ಕರಿಕುವಡೆದವು (ಕರ್ಣಾಕ. ೨೨೯). [ಕರಿಕು$_2$ (< ಕರಿಂಕು) + ಪಡೆ$_1$]

**ಕರಿಕುವರಿ** ‘ಕರಿಂಕುವರಿ’ ನೋ.

**ಕರಿಕೃತ್ತಿ** (ನಾ). ಆನೆಯ ಚರ್ಮ: ಚೆಲ್ವಿಡಿದೆಸೆವೈಮೊಗಂ ಕಱೆಗೊರಲ್ ಕರಿಕೃತ್ತಿ ಮೃಗಾರಿಚರ್ಮದೊಳ್ಪುಡೆ . . . ವಿರಾಜಿಸೆ ರಂಜಿಸಿದಂ ಮಹೇಶ್ವರಂ (ರಾಜಶೇ. ೧೪–೯೫). [ಕರಿ$_4$ + ಕೃತ್ತಿ]

**ಕರಿಕೆ** ‘ಕಱುಂಕೆ’ ನೋ.

**ಕರಿಕೆಸವು** (ನಾ). ಕರಿಯ ಬಣ್ಣದ ಕೆಸವು, —ಶಾವೆ: ಬಸಲೆ ಸೊಪ್ಪು, ಬಿಳಿ ಕೆಸವು, ಕರಿಕೆಸವು . . . ಹೊಸ ಅಕ್ಕಿಅನ್ನ ಇವು ಜ್ವರದ ವರಿಗೆ ಅಪಥ್ಯ (ವೈದ್ಯಸಾ. I, ೫೬). [< ಕರಿದು + ಕೆಸವು]

**ಕರಿಕೇಟು** ‘ಕರಿಂಕೇಟು’ ನೋ.

**ಕರಿಕೊಡೆಹುಲ್ಲು** (ನಾ). ಒಂದು ಬಗೆಯ ಹುಲ್ಲು: ಚಿಕ್ಕಸಾಡೀ ಹುಲ್ಲು, ಕರಿಕೊಡೆಹುಲ್ಲು, ನಾಲೆಹುಲ್ಲು (ಮೈಔಗಿ. ೬೯–೧೪೦೮). [< ಕರಿದು + ಕೊಡೆ$_2$ + ಹುಲ್ಲು (< ಪುಲ್)]

**ಕರಿಕೊಮ್ಮೆ** (ನಾ). ಒಂದು ಮೂಲಿಕೆ; ಕರಿದಾದ ಕೊಮ್ಮೆ: ನಾಯಿಕೂಟೆ, ಕರಿಕೊಮ್ಮೆ (ಮೈಔಗಿ ೭–೧೨೬). ‘ಬಿಳಿಕೊಮ್ಮೆ’ ಪರಾ. [< ಕರಿದು + ಕೊಮ್ಮೆ]

**ಕರಿಕೊರ್ಲೆಹುಲ್ಲು** (ನಾ). ಒಂದು ಜಾತಿಯ ಹುಲ್ಲು: (ಮೈಔಗಿ. ೭೭–೧೩೭೭). [< ಕರಿದು + ಕೊರ್ಲೆ (< ಕೊಜಲೆ) + ಹುಲ್ಲು (< ಪುಲ್)]

**ಕರಿಕೊಳ್ಳಿ** ‘ಕರ್ಗೊಳ್ಳಿ’ ನೋ.

**ಕರಿಗ** (ನಾ). = ಕರಿಕ: ಹಿರಿಯ ಬೊಮ್ಮನು ಕೆಂಚ ಕಿಱಿಯ ಹರಿ ತಾ ಕರಿಗ (ಸರ್ವಜ್ಞ. ೨೧೯). [< ಕರಿದು + –ಇಗ]

**ಕರಿಗಂದು$_1$** (ಕ್ರಿ). ಬಾಡಿ ಕಪ್ಪಾಗು; ಸೀದು ಕರಿಕಾಗು: ಬೇಸಗೆಯ ಬಿಸಿಲೊಳು ಬೆಂದುದುಗೆ ಹೊಯ್ವಳ್ಳಿಯಲಿ ಕರಿಗಂದಿ (ಜೀವಂಚ. ೩–೪); ಬೆಂದು ಶೋಕಾಗ್ನಿಯಲಿ ನೆಱೆ ಕರಿಗಂದಿ (ನಿಭಾಗ. ೩–೧೪–೩೦). [ಕರಿ$_2$ + ಕಂದು$_1$]

**ಕರಿಗಂದು$_2$** (ನಾ). ಕಪ್ಪಾದ ಕಲೆ, —ಕಳಂಕ. ‘ಕರಿಗಂದುದೋಱು’ ಪರಾ. [< ಕರಿದು + ಕಂದು$_2$]

**ಕರಿಗಂದುದೋಱು** (ಕ್ರಿ). ಕಳಂಕವನ್ನು ತೋರು; ಕಳಂಕವನ್ನು ಪಡೆ (?): ನಮಗಿಲ್ಲಿ ಕರಿಗಂದುದೋಱಿದೆ ಕದನ (ಭರಚ. ೫೦–೫೬). [ಕರಿಗಂದು$_2$ + ತೋಱು$_1$ (< ತೋಱು್)]

**ಕರಿಗಜ್ಜಿಗೆ** (ನಾ). ಒಂದು ಆಭರಣ: ಮಾಗಾಯಿ ಅರಳೆಲೆ ಹುಲಿಯುಗುರುಗಳ ಸರಪಣಿ ಅಂದಿಗೆ ಕರಿಗಜ್ಜಿಗೆ ಮೊದಲಾದ ವಡವೆಗಳನಿಟ್ಟು (ಶಿವದ. ೧೮೩-೮). [< ಕರಿದು + ಗಜ್ಜಿಗೆ ?]

**ಕರಿಗಡುಬು** (ನಾ). ಕರಿದ ಕಡುಬು: ಉಂಡಲಿಗೆಯು ಕರಿಗಡುಬು ರಾಜಿಪ ಕಟ್ಟುಮಂಡಿಗೆ ಬಿಸಿಯ ದೋಸೆಗಳ (ಕಂನವಿ. ೮-೮೯); ಉಂಡಲಿಗೆ, ಕರಿಗಡುಬು . . . ಇವೆಲ್ಲವನ್ನೂ ಪರಿವಿಡಿಯಿಂದ ಎಡೆಮಾಡಿದರು (ಕರ್ಣಾಜ. ೧೬೦). 'ಹೊಯ್ಗಡುಬು' ಪರಾ.
[ಕರಿ$_1$ + ಕಡುಬು (< ಕಡುಂಬು)]

**ಕರಿಗಣಿಕೆ, ಕರಿಯಗಣಿಕೆ** (ನಾ). ಕಪ್ಪು ಹಣ್ಣುಗಳನ್ನು ಬಿಡುವ ಒಂದು ಜಾತಿಯ ಗಿಡ: ಹುಲ್ಲಿಕರುವಲ್ಲಿಹುದೆ, ಕರಿಗಣಿಕೆ ಹಣ್ಣು (ಅಹಲ್ಯೆ. ೪೮-೧೫). **ಕರಿಯಗಣಿಕೆ**: "ಕಾಪ್ರೋಲಿ – ಕರಿಯಗಣಿಕೆ" (ಓಷಧಿ. ೨೯). [< ಕರಿದು + ಗಣಿಕೆ$_2$]

**ಕರಿಗಬ್ಬು** (ನಾ). ಕಬ್ಬಿನಲ್ಲಿ ಒಂದು ಜಾತಿ; ಕರಿಯ ಕಬ್ಬು: ಕಬ್ಬಿನ ಜಾತಿಗಳು – ರಸದಾಳಿ, ರಾಮಗಬ್ಬು, ಕರಿಗಬ್ಬು . . . ಎಂದು ಅನೇಕವುಂಟು (ಮುಂಬಯಿ. ೫-೨೦೦).
[< ಕರಿದು + ಕಬ್ಬು (< ಕರ್ವು$_1$)].

**ಕರಿಗರಿಗಂದು** 'ಕರಿಕರಿಗಂದು' ನೋ.

**ಕರಿಗಾಡು** (ನಾ). ಸುಟ್ಟು ಕರಿಕಾದ ಅಡವಿ; ಬೆಂಗಾಡು: ಮೃಗಗಣ ವಿಹವೆ ಕರಿ [ಪಾಠಾಂ. ಬಜಿ]ಗಾಡೊಳೆಂದರು ಕಾಂತೆಯರು ಮಜುಗಿ (ನಿಭಾಗ. ೧೦-೪೩-೧೬). [ಕರಿ$_2$ + ಕಾಡು$_2$]

**ಕರಿಗಾಯಿ** (ನಾ). ಕರಿಯ ಬಣ್ಣದ ಪಗಡೆಕಾಯಿ,—ಆಟದ ಕಾಯಿ: ಹಳದಿ ಪಚ್ಚೆಯು ಕೆಂಪು ಕರಿಗಾಯಿ ನಮ್ಮಂಗ ಲಲಿತ ಹಾಸಂಗಿಯೊಳಿವೆ (ಕಂನವಿ. ೬-೧೧೮). [< ಕರಿದು + ಕಾಯಿ$_4$ (< ಕಾಯ್$_4$)]

**ಕರಿಗಾಲ** (ನಾ). ಕೆಟ್ಟ ಕಾಲುಳ್ಳವನು; ಅಶುಭ ವ್ಯಕ್ತಿ: ಈ ಕುಂಕುಮಕಂಟಕ ಕರಿಗಾಲನನ್ನು ರಮಾ ಕಕ್ಕಿ ಬೆಳಸಿಕೊಂಡು ಬಂದರು (ದೀಪಹ. I, ೩೫); ಯ್ಯಾರದಂದರ ಮತ್ತೇನು – ಆ ಶನೀದು. ಆ ಕರಿಗಾಲ ಮುಂಡೇಮಗನದು (ನಡುಮ. ೪೯).
[ಕರಿಗಾಲು + -ಅ$_7$. / ತಮಿ. ಕರಿಕ್ಕಾಲನ್]

**ಕರಿಗಾಲು** (ನಾ). ಕೆಟ್ಟ ಕಾಲು; ಅಶುಭವಾದ ಲಕ್ಷಣವುಳ್ಳಕಾಲು: ಕರಿಗಾಲ ಮುಂದ ಮಾಡಕೊಂಡ ಹುಟ್ಟಿಧಾಂಗ ಆಗೇತಿ ನನ್ನ ಜಲಮು! (ನಡೆದಾ. I, ೨೬೮).
[ಕರಿ$_2$ + ಕಾಲು$_1$ (< ಕಾಲ್$_1$). / ತಮಿ. ಕರಿಕ್ಕಾಲ್]

**ಕರಿಗಿ** (ನಾ). = ಕರಿಕಿ (ಕಿ). [ಕರಿಗ + -ಇ$_2$]

**ಕರಿಗುಡ್ಡು** (ನಾ). ಕರಿಯ ಗುಡ್ಡು; ಕಣ್ಣಿನ ಕರಿಯಗುಡ್ಡೆ; ಕನೀನಿಕೆ (ಕಿ). [< ಕರಿದು + ಗುಡ್ಡು$_2$ (< ಗುಡ್ಡೆ$_3$)]

**ಕರಿಗುಬ್ಬಿ** (ನಾ). ಕರಿಯ ಬಣ್ಣದ ಗುಬ್ಬಿ. [< ಕರಿದು + ಗುಬ್ಬಿ$_2$]

**ಕರಿಗೆಂಪು** (ನಾ). ಕಪ್ಪುಛಾಯೆ ಬೆರೆತ ಕೆಂಪು: ಕರಿ ಹಳದಿ, ಅಚ್ಚ ಹಳದಿ, ಕಿತ್ತಳೀ ಬಣ್ಣ, ಕೆಂಪು, ಕರಿಗೆಂಪು . . . ಈ ಪ್ರಕಾರ ಬಣ್ಣದ ಕ್ರಮುಗಳಿರುತ್ತವೆ (ಮುಂಬಯಿ. ೬-೨೦). [< ಕರಿದು + ಕೆಂಪು$_1$]

**ಕರಿಗೇರು** (ನಾ). ಕರಿಯ ಗೇರುಮರ: ಕರಿಗೇರು, ಗೊಡ್ಡುಗೇರುಮರ (ಮೈಔಗಿ ೬೯-೧೪೮೯). [< ಕರಿದು + ಕೇರು$_3$ (< ಕೇರ್$_2$)]

**ಕರಿಗೈ** (ನಾ). ಕೆಟ್ಟ ಕೈ; ಮುಟ್ಟಿದಲ್ಲೆಲ್ಲ ಕೆಡುಕನ್ನುಂಟುಮಾಡುವ ಕೈ; ಅಶುಭಹಸ್ತ. 'ಕರಿಗೈಯ' ಪರಾ.
[ಕರಿ$_2$ + ಕೈ (< ಕೆಯ್$_2$). / ತಮಿ. ಕರಿಕ್ಕೈ]

**ಕರಿಗೈಯ** (ನಾ). ಅಶುಭ ಹಸ್ತವುಳ್ಳ ವ್ಯಕ್ತಿ: ಕರಿಬಾಯಳಿರ ಹೊಲ್ಲ ಕರಿಗೈಯ ನೆರೆ ಹೊಲ್ಲ (ಸರ್ವಜ್ಞ. ೧೬೪೧). [ಕರಿಗೈ + -ಅ$_7$]

**ಕರಿಗೊನ್ನೆ** (ನಾ). ಒಂದು ಬಗೆಯ ಗೊನ್ನೆಮರ: ಕರೀಗೊನ್ನೆ, ಭವಂಗಬೀಜ, ಗಂಗುಂಗಹಂಬು, ಕಂಗೊಂದಿಬಳ್ಳಿ, ಗವನಗೊಂಗೆ (ವೈಔಗಿ. ೧೯-೩೫೦). [< ಕರಿದು + ಗೊನ್ನೆ]

**ಕರಿಗೊಬ್ಬಿ** (ನಾ). = ಕರಿಜಾಲಿ: ಕರಿಜಾಲಿ, ಕರಿಗೊಬ್ಬಿ (ವೈಔಗಿ. ೧-೮). [< ಕರಿದು + ಗೊಬ್ಬಿ (< ಗೊಬ್ಬುಳಿ)]

**ಕರಿಗೊಳ್$_1$, ಕರಿಗೊಳ್ಳು$_1$** (ಕ್ರಿ). ೧. ಸೀದು ಕರಿಕಾಗು; ಕಪ್ಪಗಾಗು: ಬೆಂದು ಕರಿಗೊಂಡಿಳೆಯ ಮೇಲೆ [ಪೊ]ನಲ್ಪೊಸಿದೊಲು (ಪರಶು. ೨೫-೨೧). **೨.** ಕಳಂಕ ಹೊಂದು; ಮಾಸು (?): ರಂಗಪಟ್ಟಣದೊಳಗೆ ರಂಗಭಕ್ತನು ಹುಟ್ಟಿ ರಂಗನ ಪೂಜೆ ಕರಿಗೊಳ್ಳಲಾ ಪಟ್ಟ ಭಂಗವಾದೀತು [ಪಾಠಾಂ. ಭಂಗವಾಗಲು ಪಟ್ಟ ಮಂಗನಾದೀತು] (ಸರ್ವಜ್ಞ. ೧೧೦೨). **ಕರಿಗೊಳ್ಳು$_1$**: ಒಂದು ವಿಧದ ಗಾಳಿಯಿಂದ ದಂಟಿನೊಳಗಿಂದ ಅಂಟುಸೋರಿ ಕಳೆಯು ಕರಿಗೊಳ್ಳುತ್ತದೆ (ಮುಂಬಯಿ. ೫-೧೯೭). [ಕರಿ$_2$ + ಕೊಳ್$_1$]

**ಕರಿಗೊಳ್$_2$, ಕರಿಗೊಳ್ಳು$_2$** (ಕ್ರಿ). ಗಾಢವಾಗು; ಗಟ್ಟಿಗೊಳ್ಳು; ಸ್ಥಿರವಾಗು (?): ತನುಭಾವವಳಿದು ಬ್ರಹ್ಮಭಾವ ಕರಿಗೊಂಡಲ್ಲದೆ ಅಷ್ಟಾದಶ ದೋಷಂಗಳಳಿಯವು (ಆದವ. ೭೮); ಪಡೆವುದಾಗದು ನಿಜಸುಖವ . . . ಏಕಾಗ್ರತೆ ಕರಿಗೊಂಡಲ್ಲದೆ (ಕೈವಲ್ಯ. ೭೬-೪೯); ಕರಿ[ಪಾಠಾಂ. ಜಿಕಿ]ಗೊಂಡ ಕಲ್ಮಷನಿಕರವನು ಕಡಿಖಂಡವನು ಮಾಡುತ್ತ (ನಿಭಾಗ. ೧೦-೩೧-೨); ದೃಢಭಕ್ತಿ ಕರಿಗೊಂಡೇಕತೆಯನೆಯ್ದಿ (ಸಿದ್ಧೇವು. ೨೨-೮೭). **ಕರಿಗೊಳ್ಳು$_2$**: ದುರ್ಬುದ್ಧಿ ಮಾನವರ ಭಾವದಲ್ಲಿ ಶಿವಜ್ಞಾನ ಕರಿಗೊಳ್ಳಬಲ್ಲುದೇ (ವಚಸಂ. ೯೬-೭೮); ಬಹುವಾಸನೆಯಜಿತು ಅದ್ವಯ ಪದದಲ್ಲಿ ಕರಿಗೊಳ್ಳುತ (ಕೈಕವ. ೫-೧೨೫-೪). [ಕರಿ ? + ಕೊಳ್$_1$]

**ಕರಿಗೊಳಿಸು$_1$** (ಕ್ರಿ). ಕರಿಕುಮಾಡು; ಸುಡು: ಕರಿಗೊಳಿಸಿ ಮೂಲೋಕವನ್ನಲೆದ ಬಲಶಾಲಿ (ವೆಂಕಾರಾ. ೬-೬೬-೫).
[ಕರಿಗೊಳ್$_1$ + -ಇಸು$_3$]

**ಕರಿಗೊಳಿಸು$_2$** (ಕ್ರಿ). ಗಟ್ಟಿಗೊಳ್ಳು; ನೆಲಸು; ಸ್ಥಿರವಾಗು: ಮೊಳೆ ಹೋರಿದ ಮುಂಬರಿಯದ ಗಾಡಿ ಕರಿಗೊಳಿಸುವ ಮಗಳ ನಿರೀಕ್ಷಿಸಿ ತಳೆದರು ತಂದೆತಾಯಿಗಳು ಮುದವ (ತ್ರಿಭುತಿ. ೨೦-೨೭); ಬಹುಮುಖವ ತವಿಸೇಕಭಾವನೆಯ ಕರಿಗೊಳಿಸಿ ಪೂರ್ಣದನುಮತಿಗೊಟ್ಟು ಸಂಶಯವ ಹರಿಸಿ (ಕೈಕವ. ೧-೨-೪). [ಕರಿಗೊಳ್$_2$ + -ಇಸು$_3$]

**ಕರಿಗೊಳ್ಳಿ** 'ಕರ್ಗೊಳ್ಳಿ' ನೋ.

**ಕರಿಗೊಳ್ಳು$_1$** 'ಕರಿಗೊಳ್$_1$' ನೋ.

**ಕರಿಗೊಳ್ಳು$_2$** 'ಕರಿಗೊಳ್$_2$' ನೋ.

**ಕರಿಗೊಜಡು** (ನಾ). ಸುಟ್ಟು ಕರಿಕಾದ ಮರದ ಕೊರಡು, —ಮೋಟು: ಕರಿಗೊಜಡನುಡುವಡರ್ದುವೆನಿಪ ಸರೆಗಾಲ್ಗಳಿಂ (ಕಾದಂಉ. ೨೭೧); ಶರಧಿಮಥನದ ಗರಳದುರಿ ತಾಗಿ ಸಿತಕಳೇವರವೆಯ್ದೆ ಸೀದು ಕರಿಗೊಜಡಾಗಿದೆ (ಸಾನಂಚ. ೨-೧೨೬); ಅಮೃತಮಥನ ಜನಿತ ವಿಷಾಗ್ನಿಯಿಂ ಬೆಂದು ಹರಿಯಸಿತಮೂರ್ತಿ ಕರಿಗೊಜಡಾಗೆ (ಪದ್ಮರಾ. ೧೧-೬೫). [ಕರಿ$_1$ + ಕೊಜಡು (< ಕೊಜಂಡು)]

**ಕರಿಘಟೆ** (ನಾ). ಆನೆಯ ಹಿಂಡು; ಗಜಸೇನೆ: ಕರಿಘಟೆಯಿರ್ಕೆಲಂ ಬಿಡಿದು ಕತ್ತಿಗೆಯಂ ಜಡಿಯುತ್ತಮಂಗರಕ್ಕರ ಪಡೆ ತಾಗೆ (ಪಂರಾವಾ. ೧೩-೭೮); ಕರಿಘಟೆ ಮೇಳವಿಸಿ . . . ಕವಿದುದು ಮತ್ಸ್ಯಪರಿವಾರ (ಕುವ್ಯಾವಿ. ೪-೪೧). [ಕರಿ$_4$ + ಘಟೆ]

**ಕರಿಚಿಕ್ಕು** (ನಾ). ಕರಿಕಲಾದ ಸೀಕು; ಪಾತ್ರೆಯ ತಳಕ್ಕೆ ಹತ್ತಿಕೊಂಡ ಆಹಾರ: ಕೊನೆಗೆ ಅವಳ ಪಾಲಿಗೆ ಉಳಿದದ್ದು ಬರೀ ಕರಿಚಿಕ್ಕು (ರೂಢಿ). [ಕರಿ$_1$ + ಚಿಕ್ಕು$_1$ (< ಸೀಕು$_1$)]

**ಕರಿಚು₁** 'ಕರಿಜು' ನೋ.

**ಕರಿಚು₂** (ನಾ). ಬೆರಣಿಯಿಂದ ಮಾಡಿದ ಬೆಂಕಿ: ತುಂಡಿಸಿದ ಸರಳಿನಿಂ ಮರಳಿನಿಂದಾ ಕರಿಚಿನಿಂ ವಾಜಿಗಳ ಗೊರಚಿನಿಂ (ಪರಶು. ೨೮–೨೮). [< ಸಂ. ಕರ್ಷೂ]

**ಕರಿಚುಳ್ಳಿ** (ನಾ). ಒಂದು ಜಾತಿಯ ಮುಳ್ಳುಪೊದೆ (ಕ). [< ಕರಿದು + ಚುಳ್ಳಿ₁]

**ಕರಿಚೇಳು** (ನಾ). ಕರಿ ಬಣ್ಣದ ಚೇಳು; ಎಮ್ಮೆಚೇಳು (ಕ). [< ಕರಿದು + ಚೇಳು (< ತೇೞ್)]

**ಕರಿಜಾಣೆಮರ** (ನಾ). ಒಂದು ಜಾತಿಯ ಮರ: (ಮೈಔಗಿ. ೪೧–೮೦೬). [? + ಮರ₁]

**ಕರಿಜಾಲಿ** 'ಕರ್ಜಾಲಿ' ನೋ.

**ಕರಿಜಿಗಿ** 'ಕರ್ಜಿಗಿ' ನೋ.

**ಕರಿಜೀನಂಗಿ** (ನಾ). ಒಂದು ಜಾತಿಯ ಗಿಡ: (ಮೈಔಗಿ. ೬೯–೧೪೧೬). [< ಕರಿದು + ಜೀನಂಗಿ]

**ಕರಿಜೀರಗೆ, ಕರಿಯ ಜೀರಿಗೆ** (ನಾ). ಕರಿಯ ಬಣ್ಣದ ಜೀರಿಗೆ; ಕಾಳ್ಜೀರಿಗೆ: "ಕಾಳಿಕಾ—ಕಾಕೋಳಿ, ಚೇಳುವಾಲಿ, ಕರಿಯದ್ರಾಕ್ಷೆ, ಕರಿಜೀರಗೆ, ಕೆಂಪಿನ ಸಾಸಿವೆ" (ಒಷಧಿ. ೨೮). **ಕರಿಯ ಜೀರಿಗೆ**: "ಅವಕುಂಚಿಕಾ–ಕರಿಯ ಜೀರಿಗೆ" (ಅಕಾನಿ. ೨–೨೩). [< ಕರಿದು + ಜೀರಗೆ]

**ಕರಿಜು, ಕರಿಚು₁** (ಕ್ರಿ). ಹಿಡಿದುಕೊಳ್ಳು; ಮುತ್ತು: "ಕೆಯ್ಕೊಳ್" (ಚತುನಿ. ಕ. I, ೬೯). **ಕರಿಚು₁**: (ಕ). [?]

**ಕರಿಜ್ವರ** (ನಾ). ಒಂದು ಬಗೆಯ ಜ್ವರ, —ರೋಗ: ಈ ಶಹರದಲ್ಲಿ "ಕರಿಜ್ವರ" ಎಂಬ ಹೆಸರಿನ ರೋಗವು ಉದ್ಭವಿಸಿತು (ವಿವರ್ಣ. ೧೦). [ಕರಿ₂ + ಜ್ವರ]

**ಕರಿಟೆಳ** (ನಾ). ಜಿಡ್ಡು; ಜಿಗುಟು: ಅಮೃತದಲೊದವಿದ ಅಜ್ಯವ ಧರಿಸಿದ ಜಿಹ್ವೆಗೆ ಕರಿಟೆಳ ಉಂಟೇ (ಮೋಳಿಮಾ. ೧೧೩–೪೪೪). [?]

**ಕರಿಣಿ** (ನಾ). ೧. ಹೆಣ್ಣಾನೆ; ಪಿಡಿ: ಪೋಗಲಾಱದೆ ಸುಳಿಸುಳಿದು ನಿಲ್ವ ಕರಿಣಿಗಳ ಚೀತ್ಕಾರದೊಳಂ (ಕಾದಂಪೂ. ೧೬೦); ಕರಿಣಿ ಕಾಡೆಮ್ಮೆಯೆಕ್ಕಲಗಳಿಂ . . . ಅಡವಿ ಚೆಲ್ವಾದುದು (ನಂದಿಮಾ. ೧೩–೧೫); ಹರಿಣಲೋಚನೆಯೆತ್ತಲೆನ್ನುತ ಕರಿಣಿಗಳ ಕಂಡರ್ಥಿಸಿದನಾ ಕರಿಗಮನೆಯಿರವ (ರಾಮಾಸಂ. ೩–೫–೩೦). ೨. (ಕಾಮಶಾಸ್ತ್ರದ ಮೇರೆಗೆ) ಸ್ತ್ರೀಯರ ಜಾತಿಗಳಲ್ಲಿ ಒಂದು; ಹಸ್ತಿನಿ: ಹರಿಣಿ ಬಡಬಾ ಕರಿಣೀಯಿಾ ಮೂರು ಪ್ರಕಾರ ಸ್ತ್ರೀ ಜಾತಿಯಿಹುದು (ಸೌಗಂಧಿ. ೪೯೩–೯). [ಸಂ. ಕರಿಣೀ]

**ಕರಿತಪೆಗಡೆ** (ನಾ). ರಾಜ್ಯದ ಲೆಕ್ಕಪತ್ರಗಳ ಇಲಾಖೆಯ ಪರಮಾಧಿಕಾರಿ; ಪ್ರಧಾನ ಕರಣಿಕ: ಕುನ್ದತ್ತೂರ ತುಱುಗೊಳೊ × × × ಕರಿತಪೆಗಡೆ × × ಅನ್ತಿಱಿದು (ಎಕ. X, ಮುಳಬಾ. ೨೪೩–೫; ಸು. 900). [< ಕಡಿತವೆರ್ಗಡೆ ?]

**ಕರಿತುಂಬೆ** (ನಾ). ಕರಿಯ ತುಂಬೆಗಿಡ (ಕ). [< ಕರಿದು + ತುಂಬೆ₂ (< ತುಂಬಿ₂)]

**ಕರಿತುಳಸಿ** (ನಾ). ಕರಿಯ ತುಳಸಿಯ ಗಿಡ; ಕೃಷ್ಣತುಳಸಿ: ಅಂಗಳದಿ ಬೆಳೆಸಿದ್ದ ಬಂಗಾರಗೊಂಡೆ ಹೂ, ಸಬ್ಜೆ, ದಾಸಾವಾಳ, ಕರಿತುಳಸಿ (ನವ್ಯಧ್ವ. ೫). [< ಕರಿದು + ತುಳಸಿ]

**ಕರಿದ** (ನಾ). (?): ಪಾರಿಶ್ವದೇವರಿಗೆ . . . ಹೂವಿನ ಪಡಿಗೆ ಜಾತಿ ಹವಳಕ್ಕೆ ತೊಲೆಗೆ ತಾ ೧ ಕರಿದಕ್ಕೆ ವೀ ೧ (ಎಕ. II, ೨೪೧–೨; ಸು. 1175). [?]

**ಕರಿದಂತ** (ನಾ). ಆನೆಯ ಕೊಂಬು; ಹಸ್ತಿದಂತ: ಕರಿದಂತಂ ಚಮರೀರುಹಂ . . . ಎಂಬೀ ವನಾಂತರ ಸಂಜಾತಮನಾತನೋಲಗಿಸಿದಂ ಸದ್ವಸ್ತುಸಂಘಾತಮಂ (ಪುಷ್ಪಪು. ೫–೧೦೨). [ಕರಿ₄ + ದಂತ]

**ಕರಿದಳ** (ನಾ). ಒಂದು ಔಷಧಿ ಸಸ್ಯ: "ಕಾಂಚನಕಂ – ಕರಿದಳ, ಚಿನ್ನ" (ಒಷಧಿ. ೩೧). [?]

**ಕರಿದಾನವ** (ನಾ). ಗಜಾಸುರ: ತೊಗಲನುಗಿದವನಮುವ ಕರಿದಾನವ ಕೆಸಗಿದಾನವ ಬ್ಯಾಹೂ? ದಾನವರಸೊಡ್ಡಳನಂದು (ಸರ್ವವ. ೧೬೭–೬೯೦). [ಕರಿ₄ + ದಾನವ]

**ಕರಿದಿಂಗಳು** 'ಕರ್ದಿಂಗಳ್' ನೋ.

**ಕರಿದಿನ** (ನಾ). ಅಮಂಗಳಕರವಾದ ದಿನ; ಕೆಟ್ಟ ದಿವಸ; ಗ್ರಹಣದ ಅಥವಾ ಸಂಕ್ರಾಂತಿಯ ಮರುದಿನ: ಹಬ್ಬ ಹರಿದಿನ, ಕರಿದಿನ ಎಲ್ಲ ದಿನಗಳಲ್ಲಿಯೂ ಅದೇ ಅರೆಬೆಂದ ಊಟ (ಜೀದಾನ. ೬). [ಕರಿ₂ + ದಿನ]

**ಕರಿದಿವಸ** (ನಾ). = ಕರಿದಿನ (ಕ). [ಕರಿ₂ + ದಿವಸ]

**ಕರಿದು** (ಗು). ೧. ಕಪ್ಪಾದ; ಮಸಿಬಣ್ಣದ. (ನಾ). ೨. ಕಪ್ಪು; ಮಸಿಯ ಬಣ್ಣವುಳ್ಳದ್ದು: "ಅಸಿತಂ, ಶಿತಿ(ಃ), ಕೃಷ್ಣಂ, ಕಾಳಂ, ನೀಳಂ, ಮೇಚಕಂ – ಈ ೬ ಕರಿದು" (ಹಲಾಯು. ೧೨೧–೪೯); ಪರೆದ ತನ್ನಧ್ವರಧೂಮದೆ ಕರಿದು ಮಾಡಿದಂ ನಿಜ ಯಶಮಂ (ಪಂಪಭಾ. ೧೪–೪೪); ಕರಿದಾದೊಡೆ ಕತ್ತುರಿಯಂ ಮುರುಡಾದೊಡೆ ಮಲಯಜಂಗಳಂ . . . ಇಳಿಕೆಯ್ವರೆ (ಯಶೋಚ. ೨–೪೨); ಬಿಳಿದು ಕರಿದೆಂಬಾಱು ವರ್ಣದ ಹೊಲಬು ಹೊದ್ದದ ಸೂರ್ಯಕೋಟಿಯ ಹೊಳಹು (ಕುವ್ಯಾಭೀ. ೩–೬೫); ಭರದಿಂದ ನೀಲಿಯ ಕರದಲಿ ತೊಳೆಯಲು ಕರಿದು ಪೋಗಬಲ್ಲುದೇ (ಪುರಂದ. ೧–೧೫೬–೨). 'ಬಿಳಿದು' ಪರಾ.

ಕರಿಯನ್ = ಕರಿಯ ಬಣ್ಣದವನು; ಕಪ್ಪಗಿರುವವನು: ಕರಿಯಂ, ಕರಿಯನಂ (ಶಬ್ದಾನು. ೧೬೬ ಪ್ರಯೋ). ಕರಿಯಳ್ = ಕರಿಯ ಬಣ್ಣದವಳು; ಕರಿಪಿ: ಕಡುಗರಿಯಳ್ ಕಡುನಿಡಿಯಳ್ ಕರಮೆ ಗುಜ್ಜೆ ಮೇಣ್ ಕರಮುಸಿಯಳ್ . . . . ಕಷ್ಟೆಯವಳ್ (ಲೋಕೋಪ. ೧೧–೬೦). [ದೇ. ‖ ತಮಿ. ಕರು; ಮಲ. ಕರಿ, ಕರು; ತುಳು. ಕರಿಯ]

**ಕರಿದೋಱು** (ಕ್ರಿ). ಕರಿಕು ಕಾಣಿಸು; ಕಪ್ಪು ಕಾಣಿಸು: ಉರಿಯುಂಡ ಕರ್ಪುರ ಕರಿದೋಱದಂತೆ . . . . ಎನ್ನಿರವು ಲಿಂಗದೊಳಗೆ ಲೀಯವಾಗಿ (ಶಿವಗೀ. ೬೯–೩೩೪). [ಕರಿ₂ + ತೋಱು₁ (< ತೋಱ್)]

**ಕರಿಧೂಪ** (ನಾ). ಒಂದು ಬಗೆಯ ಧೂಪ ದ್ರವ್ಯ: ಕರಿಧೂಪ, ಮಂಡಧೂಪ, ರಾಳಧೂಪ, ಹಾಲುಮಡ್ಡಿ (ಮೈಔಗಿ. ೧೬–೨೯೬). [< ಕರಿದು + ಧೂಪ]

**ಕರಿನೀರು** (ನಾ). ದ್ವೀಪಾಂತರ; ಗಡೀಪಾರು.

ಕರಿನೀರಿನ ಶಿಕ್ಷೆ=ಬೇರೆ ದ್ವೀಪದಲ್ಲಿ ವಾಸಮಾಡುವಂತೆ ಒತ್ತಾಯಪಡಿಸುವ ಶಿಕ್ಷೆ: ಸಾಯುವವರೆಗೆ ಕರಿನೀರಿನ ಶಿಕ್ಷೆಯನ್ನು ವಿಧಿಸಬೇಕು (ಸ್ಕೂಲವಿ. ೨೧೩); ತಿಲಕರಿಗೆ ಆರು ವರ್ಷ ಕರಿನೀರಿನ ಶಿಕ್ಷೆಯನ್ನೂ, ಸಾವಿರ ರೂಪಾಯಿ ಜುಲ್ಮಾನೆಯನ್ನೂ ವಿಧಿಸಿದರು (ಸ್ವಾವೀರ. ೬೩). [< ಕರಿದು + ನೀರು₁ (< ನೀರ್₁)]

**ಕರಿನೆರೆ** (ನಾ). ಅಜ್ಞಾನ ತುಂಬಿರುವಿಕೆ(?): ನನ್ನ ಮಿದುಳು ದಳವೇರಿ ದಳ್ಳಿಸಿತು ಸ್ವರ್ಣದೀಪ್ತಿ ಇಳಿಯೆ. ಮನದ ಕರಿನೆರೆಯ ಹುಳುಗಳೆಲ್ಲ ಹೊತ್ತೇರಿ ನಿದ್ದೆ ತಿಳಿಯೆ (ಅರಳು. ೧೯–೧೨). [?]

**ಕರಿನೆಲ** (ನಾ). ಕರಿಯ ನೆಲ; ಕಪ್ಪಾದ ಮಣ್ಣು ಇರುವ ಭೂಮಿ; ಎರೆಭೂಮಿ: ಕರಿ ನೆಲಕ್ಕೆ ಹತ್ತಿ, ಮರಳು ನೆಲಕ್ಕೆ ರಾಗಿ (ಗಾದೆ). [< ಕರಿದು + ನೆಲ]

**ಕರಿಪುಗಾಱು** (ಕ್ರಿ). ಕಪ್ಪನ್ನು ಕಕ್ಕು, —ಉಗುಳು: ಉರಿಮುಟ್ಟೆ ದರಳೆಯಂತಂಬರಮುರಿದತ್ತು . . . . ದಿಗ್ದ್ವಿರದರದಂಗಳ್ ಕರಮೆ ಕರಿಪುಗಾಱಿದುವಾಗಳ್ (ಪಂಪಭಾ. ೧೦–೩೬). [ಕರಿಪು (< ಕರ್ಪು₁) + ಕಾಱು₁ (< ಕಾಱ್)]

**ಕರಿಪೋತ** (ನಾ). ಆನೆಯ ಮರಿ : ಕಳಹಂಸ ಸಮೂಹವಿದು ಕರಿಪೋತ ಗಮನೆಯೇ (ಪ್ರೌಢರಾ. ೫-೨೫). [ಕರಿ$_4$ + ಪೋತ$_2$]

**ಕರಿಬಂಟೆ** (ನಾ). "ಕಣದಲ್ಲಿಯ ರಾಶಿಗೆ ಬರೆಯುವ ಕರಿಕಂಕಿ" (ಜಾನಕೋ. ೩೫). [< ಕರಿದು + ಬಂಟ ?]

**ಕರಿಬಟ್ಟು** (ನಾ). ಹಲ್ಲು ಉಜ್ಜುವುದಕ್ಕಾಗಿ, ಬೆರಣಿ ಸುಟ್ಟು ಮಾಡಿದ ಕರಿಕು : ಹಿಡೀ ಕರಿಬಟ್ಟೂ ಹತ್ತು ಕೇರೂ ತಿಂದಿರಬೇಕು (ತಿಡುಗು. ೧೫). [ಕರಿ$_2$ + ಬಟ್ಟು$_1$ (< ಬಟ್ಟ$_1$)]

**ಕರಿಬಸುರಿ** (ನಾ). ಬಸರಿ ಮರದಲ್ಲಿ ಒಂದು ಬಗೆ; ಕಪ್ಪು ಬಸರಿ ಮರ : ಸೆಲುವಾರದ ಮರ, ಕರಿಬಸುರಿ (ಮೈಔಗಿ. ೩೭-೭೨೮). [< ಕರಿದು + ಬಸುರಿ$_2$ (< ಬಸರಿ$_2$)]

**ಕರಿಬಳ್ಳಿ** 'ಕಬ್ಬರ್ಳಿ' ನೋ.

**ಕರಿಬಾಯಿ** (ನಾ). ಕೆಟ್ಟ ಬಾಯಿ; ಅಶುಭವನ್ನು ನುಡಿಯುವ ಬಾಯಿ.

**ಕರಿಬಾಯಳು** = ಕೆಟ್ಟ ಬಾಯಿ ಉಳ್ಳವಳು; ಅಶುಭವನ್ನು ನುಡಿಯುವವಳು : ಕರಿಬಾಯಳೆರ ಹೊಲ್ಲ ಕರಿಗೈಯ ನೆರೆ ಹೊಲ್ಲ (ಸರ್ವಜ್ಞ. ೧೭೪೧). [ಕರಿ$_2$ + ಬಾಯಿ$_1$ (< ಬಾಯ್)]

**ಕರಿಬಾಳೆ** 'ಕರ್ವಾಳೆ' ನೋ.

**ಕರಿಬುಜ** 'ಕರಬೂಜ' ನೋ.

**ಕರಿಬೇವು** (ನಾ). ಒಗ್ಗರಣೆಯಲ್ಲಿ ಉಪಯೋಗಿಸುವ ಬೇವು; ಕಾಲಶಾಕ : "ಅರ್ಜೆಯವನಿಯೆನೆ ಕರಿಬೇವು" (ಮಂಗರಾ. ೪೦-೩೨); ಕರಿಬೇವಿನಂಬಟೆಯ ತಂಡಸಿನಾಸಿನ ತುಂಬುರೆಕ್ಕೆ (ಸೂಕ್ತಿಸು. ೩-೨೪); ಅಂಬೆಹಳದಿ ಕಾರ್ಗೆಣಸು ನೀರುಳ್ಳಿ ಕೊತ್ತುಂಬರಿ ಕರಿಬೇವು ಸಹಿತ (ಮೋಹತ. ೪-೭೦); ಹುರಿದ ಕರಿಬೇವು ಮಾದಲದ ಸೊಪ್ಪಿಕ್ಕಿ ಯೋಗರವ ನೀರಿಂದ ತೆಗೆದಿಕ್ಕಿ (ಸೂಪಶಾ. ೩-೨೮).
[< ಕರಿದು + ಬೇವು. / ತಮಿ. ಕಱಿವೇಪ್ಪು; ಮಲ. ಕಱಿವೇಪ್ಪು; ತುಳು. ಕರಿಬೇವು; ತೆಲು. ಕಱಿವೇಮು]

**ಕರಿಬೋಳ** (ನಾ). ಒಂದು ಬಗೆಯ ಬೇರು : ಅಡಕೆ, ಕರೀಬೋಳ, ಅರಗು .... ಚೂರ್ಣಿಸಿ ತುಪ್ಪದಲ್ಲಿ ಕಲಸಿ ಗಾಯಕ್ಕೆ ಕಟ್ಟಿಸುವುದು (ವೈದ್ಯಸಾ. II, ೧೫೯). [< ಕರಿದು + ಬೋಳ$_3$ (< ಬೋೞ$_3$)]

**ಕರಿಮಣಿ** 'ಕರ್ವಣಿ$_1$' ನೋ.

**ಕರಿಮತ್ತಿ** (ನಾ). ಕರಿಯ ಮತ್ತಿ ಮರ; ಕಮ್ಮತ್ತಿಯ ಮರ : "ಖಗವೃಕ್ಷಃ —ಕರಿಮತ್ತಿ" (ಒಷಧಿ. ೪೩). [< ಕರಿದು + ಮತ್ತಿ$_2$]

**ಕರಿಮರ** 'ಕರ್ಮರ$_2$' ನೋ.

**ಕರಿಮಳಿಸಾರು** (ನಾ). ಮೆಣಸಿನಲ್ಲಿ ಒಂದು ಪ್ರಕಾರ : ಮೆಣಸಿನಲ್ಲಿ ಮೂರು ಜಾತಿಗಳುಂಟು; ಕರಿಮಳಿಸಾರು, ಸಾಂಬಾರ, ಅರಿಶಿಣ ಮೂರ್ತಿಗ (ಕಭಾಗ. ೨೭೫). [?]

**ಕರಿಮಾನಿ** (ನಾ). ಒಂದು ಊರಿನ ಹೆಸರು : ವಿಟ್ಟರಸನು ... ತೊಳ್ಳಗ್ರಾಮದ ಚೈತ್ಯಾಲಯಕ್ಕೆ ಕರಿಮಾನಿಯನ್ನು ಕೊಟ್ಟನು (ಕರ್ಣಾಅ. ೧೬೮). [?]

**ಕರಿಮೀನು** (ನಾ). ಒಣಗಿದ ಮೀನು. [ಕರಿ$_2$ + ಮೀನು (< ಮೀನ್$_3$)]

**ಕರಿಮುಖ$_1$** (ನಾ). ೧. ಕೆಟ್ಟಮುಖ; ಸುಟ್ಟಮೋರೆ. ೨. ಕೆಟ್ಟಮುಖವುಳ್ಳವನು; ಅವಲಕ್ಷಣದವನು. [ಕರಿ$_2$ + ಮುಖ]

**ಕರಿಮುಖ$_2$** (ನಾ). ಆನೆಯ ಮುಖವುಳ್ಳವನು; ಗಜಾನನ; ಗಣೇಶ : ಕರಿಮುಖನ ಬಲಗೊಂಡು ಗೀರ್ವಾಣಿಗೆ ನಮಸ್ಕರಿಸಿ (ರಾಮುಚ. ೧-೨). [ಕರಿ$_4$ + ಮುಖ]

**ಕರಿಮುತ್ತಲ** (ನಾ). ಕರಿಮುತ್ತುಗದ ಮರ : ಕರಿಮುತ್ತಲ (ಕಾಳಾಪಳಸ) ತಕ್ಕಮಟ್ಟಿಗೆ ದೊಡ್ಡದು ವಿಪುಲ. ಕಟ್ಟಿಗೆ ಬಹಳ ಗಟ್ಟಿ ಎಲ್ಲ ಕೆಲಸಕ್ಕೆ ಬರುತ್ತದೆ (ಕಭಾಗ. ೩೭). [<ಕರಿದು + ಮುತ್ತಲ (< ಮುಱುಗ)]

**ಕರಿಮುರಿ** (ನಾ). ಸುಟ್ಟು ಸುಕ್ಕಿದುದು; ಸೀದು ಮುರುಟಿಕೊಂಡುದು : ಬೆಂಕೆಯಂ ಪೊರ್ದಿದ ತಱಗಲೆಯಂತೆ ಕರಿಮುರಿಯಕ್ಕುಂ (ಧರ್ಮಾಮೃ. ೧೪-೧೦೨); ಸುಯ್ಯ ಬೆಂಕಿಯಿಂ ಕರಿಮುರಿಯಕ್ಕುಮೆಂದು ತೆಗೆದಪ್ಪಲುಮಮ್ಮಳೆ (ಅರ್ಧನೇ. ೩-೧೯೯); ಉರಿದು ಕರಿಮುರಿಯಾಗಿ ಬೆಂದ ನುಲಿಯಂತೆ (ವೀಶೈಪು. ೨-೪-೨೯). [ಕರಿ$_1$ + ಮುರಿ$_2$]

**ಕರಿಮುರಿಕ** (ನಾ). ಸೀದು ಮುರುಟಿದುದು.

**ಕರಿಮುರಿಕನಾಗು** = ಸೀದು ಮುರುಟಿಕೊಂಡಿರು : ರೂಪಱಿಯ ಲಾಗದಂತು ಕರಿಮುರಿಕನಾಗಿರ್ದ ಬೀಡತಿಯುಮಂ (ಪಂಪಭಾ. ೩-೭೮); ಉರಿವುರಿಯಿಂ ಕರಿಮುರಿಕನಾದುವುನ್ನದ ಪರಭೃತಷಟ್ಚರಣ ರಾಜಕೀರಕುಲಂಗಳ್ (ಪಂಪಭಾ. ೫-೯೦). [ಕರಿಮುರಿ + -ಕ$_8$]

**ಕರಿಮುರಿವೋಗು** (ಕ್ರಿ). ಸುಟ್ಟು ಮುರುಟಿಹೋಗು : ಸೊರ್ಕಿನ ಸೊವಡಿಂಗೞಿಗಿ ತುಱುಗಿದ ಪಱಮೆಗಳ್ ಕರಿಮುರಿವೋಗಿ ಧರೆಯ ಮೇಲುದಿರಲ್ (೧೦ಕ. ೨-೧೦೫ವ); ಕೇಳ್ವಾತನ ಕಿವಿಯುಮಂ ನಟ್ಟು ಕರಿಮುರಿವೋಕುಂ (ಶಮುದ. ೨೨೭ ಪ್ರಯೋ); ದವಾಗ್ನಿಗೆ ಸಿಲ್ಕಿದ ತರುಣದ್ವಿಜವೃಂದದಂತೆ ಕರಿಮುರಿವೋದರ್ (ವೃಷವಿ. ೩೮-೧೦೦). [ಕರಿಮುರಿ + ಪೋಗು$_1$]

**ಕರಿಮುಸ್ತೆ** (ನಾ). ಒಂದು ಬಗೆಯ ಸಸ್ಯ : "ಪಶುಃ, ಗೋವು, ಕರಿಮುಸ್ತೆ" (ಒಷಧಿ. ೯೦). [< ಕರಿದು + ಮುಸ್ತೆ]

**ಕರಿಮೆಣಸು** (ನಾ). ಕಪ್ಪು ಮೆಣಸು : (ಮೈಔಗಿ. ೬೨-೧೨೫೪). [< ಕರಿದು + ಮೆಣಸು (< ಮೆೞಸು)]

**ಕರಿಮೊಗ** (ನಾ). = ಕರಿಮುಖ$_2$ : "ಕರಿಮೊಗಂ, ಇಬಿದೇರಂ . . . ತಂದೆಯ ತಂದೆಯಿಲ್ಲದವಂ – ಈ ೭ ವಿನಾಯಕಂಗೆ ಪೆಸರ್" (ಕಕಸಾ. ೧-೪); ಕರಿಮೊಗಂ ಸುಂಡಲದೆ ಸ್ತನ್ಯಪಾನಂಗೆಯ್ವುತಿರಲು (ನವಮೋ. ೬-೨). [ಕರಿ$_4$ + ಮೊಗ]

**ಕರಿಮೊಳೆ** (ನಾ). ಸುಟ್ಟುಹೋದ ಮೊಳಕೆ; ಕರಿಕಾದ ಮೊಳಕೆ : ಕರಿಮೊಳೆಯೋಯ್ತು ಭಯಬೀಜ ಮಱವೆ ಗಱಿಗಟ್ಟಿತು (ಕುವ್ಯಾವಿ. ೨-೧೨). [ಕರಿ$_2$ + ಮೊಳೆ$_2$]

**ಕರಿಮೊಳೆಯೋಗು** 'ಕರಿಮೊಳೆವೋಗು' ನೋ.

**ಕರಿಮೊಳೆವೋಗು,** ಕರಿಮೊಳೆಯೋಗು (ಕ್ರಿ). ಮೊಳಕೆಯಲ್ಲಿಯೇ ಸೀದುಹೋಗು; ಸಂಪೂರ್ಣ ನಾಶವಾಗು : ಚಿತ್ತದುರು ಸಂದೇಹತರುವಿನ ಬಿತ್ತು ಕರಿಮೊಳೆವೋಯ್ತು (ಕುವ್ಯಾಕ. ೮-೬).
**ಕರಿಮೊಳೆಯೋಗು** : ದನುಜರ ಹೆಮ್ಮೆ ಕರಿಮೊಳೆಯೋಯ್ತು ದೇವಕಿಯುಮ್ಮಳಿಕೆ ಬಯಲಾಯ್ತು (ಅಕ್ರೂಚ. ೬-೩೨). [ಕರಿಮೊಳೆ + ಪೋಗು$_1$]

**ಕರಿಯ$_1$** (ನಾ). ಕಪ್ಪಗಿರುವವನು; ಕರಿಪ : ನಿಡಿಯಂ, ಗುಜ್ಜಂ, ಕೆಂಚಂ, ಕರಿಯಂ (ಶಮುದ. ೧೨೬ ಪ್ರಯೋ); ಕರಿಯಂ, ಕರಿಯನಂ (ಶಬ್ದಾನು. ೧೬೬ ಪ್ರಯೋ). [< ಕರಿದು + -ಅ$_7$]

**ಕರಿಯ$_2$** (ನಾ). ಒಂದು ಔಷಧಿ ಸಸ್ಯ (?) : ಲಾಮಂಚ, ಕರಿಯದ ಪಂಚಾಂಗ, ಜಲಗೊಟ್ಟಿ . . . ಇಷ್ಟು ಔಷಧಗಳನ್ನು ಸರಿಯಾಗಿ ಕೂಡಿ ಚೂರ್ಣವ ಮಾಡಿ (ವಿವೈವಿ. ೪೪). [?]

**ಕರಿಯಉಮ್ಮತ್ತ,** ಕರಿಯವುಮ್ಮತ್ತ, ಕರಿಯುಮ್ಮತ್ತ (ನಾ). ಕರಿಯ ದತ್ತೂರ, —ಮದ್ದುಗುಣಿಕೆ: "ಪರಾಜಿತಾ-ಹೆಗ್ಗಳ್ಳಂಗಡಲೆ, ತಗ್ಗಿ, ಕರಿಯಉಮ್ಮತ್ತ, ಕಿರಿಯಬನ್ನಿ" (ಓಷಧಿ. ೯೨). **ಕರಿಯವುಮ್ಮತ್ತ:** "ಕ್ರೂರ ಧೂರ್ತಃ-ಕರಿಯುಮ್ಮತ್ತ" (ಓಷಧಿ. ೩೮). **ಕರಿಯುಮ್ಮತ್ತ:** "ಕೃಷ್ಣವಾರ್ತಾ-ಕರಿಯವುಮ್ಮತ್ತ" (ಓಷಧಿ. ೩೯). [< ಕರಿದು + ಉಮ್ಮತ್ತ]

**ಕರಿಯಕಗ್ಗಲಿ** (ನಾ). ಕರಿಯ ಜಾಲಿ ಮರ: "ಪತ್ರತರುಃ – ಕರಿಯಕಗ್ಗಲಿ, ಬನ್ನಿ" (ಓಷಧಿ. ೯೨). [< ಕರಿದು + ಕಗ್ಗಲಿ$_1$]

**ಕರಿಯಕಣಿಗಿಲೆ** (ನಾ). ಕಣಿಗಿಲೆಯಲ್ಲಿ ಒಂದು ಜಾತಿ: "ಕೃಷ್ಣ ಕುಸುಮಃ – ಕರಿಯಕಣಿಗಿಲೆ" (ಓಷಧಿ. ೩೯). [< ಕರಿದು + ಕಣಿಗಿಲೆ (< ಕಣಗಿಲ್$_1$)]

**ಕರಿಯಕಳ್ಳಂಗಡಲೆ** (ನಾ). ಒಂದು ಔಷಧಿ ಸಸ್ಯ: "ನಾಗಬಲಾ – ಕರಿಯಕಳ್ಳಂಗಡಲೆ, ಬೆಳ್ಳಡಿಕಿಲು" (ಓಷಧಿ. ೮೫). [< ಕರಿದು + ಕಳ್ಳಂಗಡಲೆ]

**ಕರಿಯಕಾಮಕಸ್ತೂರಿ** (ನಾ). ಒಂದು ಬಗೆಯ ಕಾಮಕಸ್ತೂರಿ: "ಕೃಷ್ಣಾರ್ಜುಕಃ – ಕರಿಯಕಾಮಕಸ್ತೂರಿ, ಉತ್ತರಣೆ, ನವಿಲು" (ಓಷಧಿ. ೩೯). [< ಕರಿದು + ಕಾಮಕಸ್ತೂರಿ]

**ಕರಿಯಕೋಷ್ಟ** (ನಾ). ಒಂದು ಬಗೆಯ ಸಸ್ಯ: "ಇಂದೀವರಂ – ನೆಯ್ದಿಲು, ಶುಂಠಿ, ಕರಿಯಕೋಷ್ಟ" (ಓಷಧಿ. ೧೪). [< ಕರಿದು + ಕೋಷ್ಟ]

**ಕರಿಯಕ್ಕಿ** (ನಾ). ಒಂದು ಸಸ್ಯ (?): "ಔಷಧನ್ವಾ – ಕರಿಯಕ್ಕಿ, ಗಿರಿಕರ್ಣಿಕೆ" (ಓಷಧಿ. ೧೯). [?]

**ಕರಿಯಖಚೋರ** (ನಾ). ಒಂದು ಬಗೆಯ ಸಸ್ಯ: "ಶಂಖಪುಷ್ಪೀ – ಕರಿಯಖಚೋರ, ಅಗಸೆ" (ಓಷಧಿ. ೧೬೧). [< ಕರಿದು + ಖಚೋರ]

**ಕರಿಯಗಂಡುರಾಗಿ** (ನಾ). ರಾಗಿಯ ಜೊತೆಯಲ್ಲಿ ಬೆಳೆಯುವ ಒಂದು ಬಗೆಯ ಧಾನ್ಯ: "ಕ್ಲೀಬಃ-ಕರಿಯಗಂಡುರಾಗಿ" (ಓಷಧಿ. ೩೪). [< ಕರಿದು + ಗಂಡುರಾಗಿ]

**ಕರಿಯಗಣಜಿಲು** 'ಕರಿಯಗಣಜಿಲೆ' ನೋ.

**ಕರಿಯಗಣಜಿಲೆ,** ಕರಿಯಗಣಜಿಲು (ನಾ). ಒಂದು ಔಷಧಿ ಸಸ್ಯ: "ಕೃಷ್ಣಾಖ್ಯಃ-ಕರಿಯಗಣಜಿಲೆ" (ಓಷಧಿ. ೩೮). **ಕರಿಯಗಣಜಿಲು:** "ಶ್ಯಾಮಾ – ನಾಳಲು, ಕಟ್ಟವತ್ತಿಗೆ . . . ಕಲ್ಲತಿಗಡು, ಕರಿಯಗಣ(ಜಿ)ಲು" (ಓಷಧಿ. ೧೬೪). [< ಕರಿದು + ಗಣಜಿಲೆ]

**ಕರಿಯಗಣಿಕೆ** 'ಕರಿಗಣಿಕೆ' ನೋ.

**ಕರಿಯಗರುಗ** (ನಾ). ಕರಿಬಣ್ಣದ ಗರುಗ; ಕಾಡಿಗೆಗರುಗ; ಭೃಂಗರಾಜ: "ಕಪಿಲ – ಕರಿಯಗರುಗ" (ಓಷಧಿ. ೧೨); "ನೀಲ ಭೃಂಗರಾಜಃ – ಕರಿಯಗರುಗ" (ಓಷಧಿ. ೮೯). [< ಕರಿದು + ಗರುಗ]

**ಕರಿಯಗಸೆ** (ನಾ). ಕಪ್ಪು ಅಗಸೆ; ಎಳ್ಳಗಸೆ: ಬರಗು ಕರಿಯಗಸೆ ಜೀರಿಗೆ (ಸಿದ್ಧಕಾ. ೧೩-೪೩). [< ಕರಿದು + ಅಗಸೆ$_3$]

**ಕರಿಯಗಿರಿಕರ್ಣಿ** (ನಾ). ಒಂದು ಬಗೆಯ ಸಸ್ಯ: "ಅವ್ಯಕ್ತಗಂಧ ಕುಸುಮ – ಕರಿಯಗಿರಿಕರ್ಣಿ" (ಓಷಧಿ. ೯). [< ಕರಿದು + ಗಿರಿಕರ್ಣಿ]

**ಕರಿಯಗಿರಿಕರ್ಣಿಕೆ** (ನಾ). ಒಂದು ಬಗೆಯ ಸಸ್ಯ: "ಅಶ್ವಕುರಾ – ಕರಿಯಗಿರಿಕರ್ಣಿಕೆ" (ಓಷಧಿ. ೫). [< ಕರಿದು + ಗಿರಿಕರ್ಣಿಕೆ]

**ಕರಿಯಗಿಲು** (ನಾ). ಒಂದು ಸುಗಂಧದ್ರವ್ಯ; ಕಪ್ಪು ಅಗಿಲು: "ಕೃಷ್ಣಾಗುರುಃ – ಕರಿಯಗಿಲು" (ಓಷಧಿ. ೩೯). 'ಕಾರಗಿಲ್' ಪರಾ. [< ಕರಿದು + ಅಗಿಲು (< ಅಗಿಲ್)]

**ಕರಿಯಗುಂಜಿ** (ನಾ). ಒಂದು ಬಗೆಯ ಸಸ್ಯ: "ಕೃಷ್ಣರಕ್ತಿಕಾ – ಕರಿಯಗುಂಜಿ" (ಓಷಧಿ. ೩೯). [< ಕರಿದು + ಗುಂಜಿ]

**ಕರಿಯಗುರು** (ನಾ). = ಕರಿಯಗಿಲು (?): "ವರ್ಣಕಂ – ಕರಿಯಗುರು" (ಓಷಧಿ. ೧೪೬). [< ಕರಿದು + ಅಗುರು$_2$]

**ಕರಿಯಗುಳ್ಳ** (ನಾ). ಒಂದು ಬಗೆಯ ಸಸ್ಯ: "ಕೃಷ್ಣವಂತಿಕಾ – ಕರಿಯಗುಳ್ಳ" (ಓಷಧಿ. ೩೯). [< ಕರಿದು + ಗುಳ್ಳ]

**ಕರಿಯಗೋರಂಟೆ,** ಕರಿಯಗೋರಟೆ (ನಾ). ನೀಲಿ ಹೂ ಬಿಡುವ ಗೊರಟೆಗಿಡ: "ನೀಲಿ, ಝುಂಟಿ, ಬಾಣಃ – ಈ ೩ ಕರಿಯಗೋರಂಟೆ" (ಹಲಾಯು. ೩೪-೫೨). **ಕರಿಯಗೋರಟೆ:** "ನಷ್ಟಸಿತಕಃ – ಕರಿಯಗೋರಟೆ" (ಓಷಧಿ. ೮೪). [< ಕರಿದು + ಗೋರಂಟೆ]

**ಕರಿಯಗೋರಟೆ** 'ಕರಿಯಗೋರಂಟೆ' ನೋ.

**ಕರಿಯಜೀರಿಗೆ** 'ಕರಿಜೀರಗೆ' ನೋ.

**ಕರಿಯತಿಗಡು** 'ಕರಿಯತಿಗುಡೆ' ನೋ.

**ಕರಿಯತಿಗಡೆ** 'ಕರಿಯತಿಗುಡೆ' ನೋ.

**ಕರಿಯತಿಗುಡೆ,** ಕರಿಯತಿಗಡು, ಕರಿಯತಿಗಡೆ (ನಾ). ಒಂದು ಬಗೆಯ ಬಳ್ಳಿ: "ಶಾಮಾ, ಪಾಲಿಂಗೀ, ಸುಷೇಣೀಕಾ, ಕಾಲಾ, ಮಸೂರವಿದುಲಾ, ಅರ್ಧಚಂದ್ರಾ, ಕಾಲಮೇಷಿಕಾ – ಈ ೭ ಕರಿಯತಿಗುಡೆ" (ನಾಚಿರಾ. ೧೧೦). **ಕರಿಯತಿಗಡು:** "ಚೋರಮೂಷೀ – ಕರಿಯತಿಗಡು" (ಓಷಧಿ. ೫೮). **ಕರಿಯತಿಗಡೆ:** "ಅರ್ಧಚಂದ್ರಿಕಾ – ಕರಿಯತಿಗಡೆ" (ಓಷಧಿ. ೭). [< ಕರಿದು + ತಿಗುಡೆ]

**ಕರಿಯತುಂಬುರು,** ಕರಿಯತೂಬರ (ನಾ). ಒಂದು ಬಗೆಯ ಮರ: "ಕಾಳಬೀಜಃ – ಕರಿಯತುಂಬುರು" (ಓಷಧಿ. ೩೧). **ಕರಿಯತೂಬರ:** "ಕಾಕಪೀಲುಃ – ಕರಿಯತೂಬರ, ಕಿಳಿಯಯ ಕಾಗೆದೊಂಡೆ" (ಓಷಧಿ. ೩೦). [< ಕರಿದು + ತುಂಬುರು$_1$]

**ಕರಿಯದ್ರಾಕ್ಷೆ** (ನಾ). ಕಪ್ಪು ದ್ರಾಕ್ಷಿ: "ಅಜನಾ – ಕರಿಯದ್ರಾಕ್ಷೆ" (ಓಷಧಿ. ೨). [< ಕರಿದು + ದ್ರಾಕ್ಷೆ]

**ಕರಿಯನಖ** (ನಾ). ಉಗುರಿನ ಆಕಾರದ ಕಂದುಬಣ್ಣವುಳ್ಳ ಒಂದು ಸುಗಂಧ ದ್ರವ್ಯ: "ಶುಕ್ತಿ, ನಖ, ಕೋಲದಲ" (ನಾಚಿರಾ. ೩). [< ಕರಿದು + ನಖ]

**ಕರಿಯನಾಯದೊಳಸಿ,** ಕರಿಯನಾಯಿತೊಳಸಿ (ನಾ). ಒಂದು ಬಗೆಯ ಸಸ್ಯ: "ಗುಚ್ಛಾರಕಃ —ಕರಿಯನಾಯದೊಳಸಿ" (ಓಷಧಿ. ೪೯). **ಕರಿಯನಾಯಿತೊಳಸಿ:** "ಕೃಷ್ಣಫಲಾ – ಬಾವುಜಿಗೆ, ಹರಿದ್ರಾಕ್ಷೆ, ಕರಿಯನಾಯಿತೊಳಸಿ, ತೊಳಸಿ" (ಓಷಧಿ. ೩೯). [< ಕರಿದು + ನಾಯದೊಳಸಿ]

**ಕರಿಯನಾಯಿತೊಳಸಿ** 'ಕರಿಯನಾಯದೊಳಸಿ' ನೋ.

**ಕರಿಯನುಗ್ಗಿ** 'ಕರಿಯನುಗ್ಗೆ' ನೋ.

**ಕರಿಯನುಗ್ಗೆ,** ಕರಿಯನುಗ್ಗಿ (ನಾ). ಒಂದು ಬಗೆಯ ಸಸ್ಯ; ಕಪ್ಪುನುಗ್ಗೆ: "ಅಂಜನಪ್ರಿಯಾ – ಕರಿಯನುಗ್ಗೆ" (ಓಷಧಿ. ೮). **ಕರಿಯನುಗ್ಗಿ:** "ಮುಖಾನೋದಃ – ಕರಿಯನುಗ್ಗಿ" (ಓಷಧಿ. ೧೨೬). [< ಕರಿದು + ನುಗ್ಗೆ]

**ಕರಿಯನೆಯ್ದಿಲ್** (ನಾ). ಕಪ್ಪುಬಣ್ಣದ ನೈದಿಲೆ; ಕನ್ನೈದಿಲೆ: ಕರಿಯನೆಯ್ದಿಲ ಕಾವಿನೊಳ್ ಭಾವಿಸಿದ ನೂಪುರಮಂ (ಪಂಪಭಾ. ೫-೭೭). [< ಕರಿದು + ನೆಯ್ದಿಲ್]

**ಕರಿಯನೆಲಗುಳ್ಳ** (ನಾ). ಒಂದು ಬಗೆಯ ಸಸ್ಯ: "ವಿದಾರಿ, ಕ್ಷೀರಶುಕ್ಲ, ಇಕ್ಷುಗಂಧಾ, ಕ್ರೋಷ್ಟ್ರೀ – ಈ ೪ ಕರಿಯನೆಲಗುಳ್ಳ" (ನಾಚಿರಾ. ೧೧೦). [< ಕರಿದು + ನೆಲಗುಳ್ಳ]

**ಕರಿಯೆಳ್ಳು**, ಕರಿಯಯೆಳ್ಳು (ನಾ). ಕಪ್ಪು ಎಳ್ಳು : "ಶ್ರೀಪದ – ಕರಿಯೆಳ್ಳು" (ಓಷಧಿ. ೧೬೭). **ಕರಿಯಯೆಳ್ಳು** : "ಕೃಷ್ಣತಿಲಕಃ – ಕರಿಯಯೆಳ್ಳು" (ಓಷಧಿ. ೩೯). 'ಬಿಳಿಯೆಳ್ಳು' ಪರಾ.
[< ಕರಿದು + ಎಳ್ಳು (< ಎಳ್)]

**ಕರಿಯೇಲಕ್ಕಿ**, ಕರಿಯಯಾಲಕ್ಕಿ (ನಾ). ಒಂದು ಬಗೆಯ ಏಲಕ್ಕಿ : "ತುತ್ಥ – ನೀಲಿ, ಕರಿಯೇಲಕ್ಕಿ" (ಓಷಧಿ. ೭೦). **ಕರಿಯಯಾಲಕ್ಕಿ** : "ಉಪಕುಂಚ – ಕರಿಯಯಾಲಕ್ಕಿ" (ಓಷಧಿ. ೧೬).
[< ಕರಿದು + ಏಲಕ್ಕಿ]

**ಕರಿಯೊಡಲು** (ನಾ). ಕಪ್ಪು ಮೈ ; ಕರಿ ಬಣ್ಣದ ದೇಹ : ಹಜಕು ಗಡ್ಡದ ಕರಿಯೊಡಲ ಕಲಿ [ಪಾಠಾಂ. ಕೆಂಚುಮೀಸೆಯ] ಮಲಿನ ವಸನದಲಿ . . . ಕಾಣಿಸಿಕೊಂಡನು (ನಳಚ. ೪–೪).
[< ಕರಿದು + ಒಡಲು (< ಒಡಲ್)]

**ಕರಿಯೊನಕೆ** (ನಾ). ಕರಿಯ ಬಣ್ಣದ ಒನಕೆ ; ಕಪ್ಪು ಒನಕೆ : ಶರ್ಮವಿಲ್ಲದ ಗಂಡು ಕರಿಯೊನಕೆ [ಪಾಠಾಂ. ಕರಿಯ ಒನಕೆ]ಯ ತುಂಡು (ಕನಕ. ೫೦–೨). [< ಕರಿದು + ಒನಕೆ]

**ಕರಿಯೋಗು** 'ಕರಿವೋಗು' ನೋ.

**ಕರಿರ** (ನಾ). ೧. ಹರವಿ ; ನೀರಿನ ಪಾತ್ರೆ : "ಹರವಿ ಘಟಮಾ ಕರಿರ ಮೆನಿಸಿಕ್ಕು [ಪಾಠಾಂ. ಕರೀರಮೆನಿಕ್ಕು]" (ಮಂಗರಾ. ೬೨–೨೨). ೨. ಬಿದರಿನ ಕುಡಿ ; ಬಿದಿರ ಕಳಿಲೆ : "ಕರಿರ – ಕರೀರ = ಕಳಿಲೆ, ನೀರ ಪಾತ್ರೆ" (ತದ್ಭಕೋ. ೬). [< ಸಂ. ಕರೀರ]

**ಕರಿರಿಪು** (ನಾ). ಆನೆಗಳ ವೈರಿ ; ಸಿಂಹ : ಕರಿರಿಪು ಪುಟ್ಟೆ ವಿಂಧ್ಯಗಿರಿ ತಾವರೆ ಪುಟ್ಟೆ ಸರೋವರಂ . . . ಅಭಿಷ್ಟುತಮಪ್ಪವೊಲ್ (ಪುಷ್ಪಪು. ೧೨–೧೫) ; ಕರಿರಿಪು ಮತ್ಸರಂ ಮದಮೆ ದಂತಿ ವಿಮೋಹಮೆ ಖಡ್ಗಿ (ಶಬಶಂ. ೩–೨೮). [ಕರಿ$_4$ + ರಿಪು]

**ಕರಿಲಕ್ಕಿ** 'ಕರ್ಲಕ್ಕಿ' ನೋ.

**ಕರಿಲಾಮಂಚ** (ನಾ). ಕಪ್ಪು ಬಣ್ಣದ ಲಾಮಂಚ ಅಥವಾ ಬಾಳದ ಬೇರು : ಕಳ್ಳಂಗಡಲೆಬೇರು ಕರಿಲಾಮಂಚ ಕರಿತಿಗಡೆಬೇರು . . . ಕಷಾಯ ಕಾಯಿಸಿ (ಸಕವೈ. ೪೪೧ ಪಂ). [< ಕರಿದು + ಲಾಮಂಚ]

**ಕರಿಲಾವಂಚಹುಲ್ಲು** (ನಾ). ಒಂದು ಜಾತಿಯ ಸುಗಂಧದ ಹುಲ್ಲು.
[< ಕರಿದು + ಲಾವಂಚ (< ಲಾಮಂಚ) + ಹುಲ್ಲು (< ಪುಲ್)]

**ಕರಿಲಾವಗ** (ನಾ). ಕಪ್ಪು ಬಣ್ಣದ ಒಂದು ಹಕ್ಕಿ ; ಕಪ್ಪುಲಾವುಗೆ (ಕ). [< ಕರಿದು + ಲಾವಗ (< ಲಾವುಗೆ)]

**ಕರಿಲೊಕ್ಕಿ** 'ಕರ್ಲಕ್ಕಿ' ನೋ.

**ಕರಿವಕ್ಕಿ** 'ಕರ್ಬಕ್ಕಿ' ನೋ.

**ಕರಿವದನ** (ನಾ). = ಕರಿಮುಖ$_2$ : ಕರಿವದನ ಗುಹ ವೀರಭದ್ರರು ನೆರೆಯೆ . . . ಹರನು ನಂದಿಯನೇಱಿ ಭೂತಳಕಿಳಿದ ಸತಿಸಹಿತ (ಕೌಶಿರಾ. ೪೩–೪೧). [ಕರಿ$_4$ + ವದನ]

**ಕರಿವಿಂಡು** (ನಾ). ಆನೆಗಳ ಹಿಂಡು : ಕರಿವಿಂಡುಗಳು ಸಿಂಹದ ಹೊಲದಲಿ ಬಂದು ನೆಱೆ ಮೇವಕೊಂಡು ಜೀವಿಪುವೆ (ಕಂನವಿ. ೩–೪೭).
[ಕರಿ$_4$ + ಪಿಂಡು$_2$]

**ಕರಿವುನುಗ** (ನಾ). ಒಂದು ಬಗೆಯ ಹುಲ್ಲು : ಸುಂಕರೀ ಹುಲ್ಲು, ಕರೀವುನುಗದ ಹುಲ್ಲು, ಊಬಿನ ಹುಲ್ಲು, ಸಣ್ಣ ಊಬಿನ ಹುಲ್ಲು, ಕರಡ ಹುಲ್ಲು (ವೈಔಗಿ. ೪೩–೮೪೪). [< ಕರಿದು + ಉನುಗ$_0$]

**ಕರಿವೆಟ್ಟು** 'ಕರ್ವೆಟ್ಟು' ನೋ.

**ಕರಿವೈರಿ** (ನಾ). = ಕರಿರಿಪು : "ಹರಿ ಮೃಗೇಂದ್ರಂ . . . ಕರಿವೈರಿ ಕೇಸರಿಯೆನಲ್ ಸಿಂಹಮೆನಿಸಿಕ್ಕು" (ಮಂಗರಾ. ೪೭–೭). [ಕರಿ$_4$ + ವೈರಿ]

**ಕರಿವೊಡೆ** (ನಾ). ಒಂದು ಪ್ರದೇಶದ ಹೆಸರು : ಕರಿವೊಡೆ ವಿಷಯ ತೂಂಬು ವರವು ಪೂರ್ವ್ವತಟೇ ವಾರಿವೊಱೆ ತೂಂಬು ನಾಮ ಗ್ರಾಮಯೋಃ (ವೈಆರಿ. ೧೯೦೯, ೨–೧೮ ; 749). [?]

**ಕರಿವೋಗು**, ಕರಿಯೋಗು (ಕ್ರಿ). ಸುಟ್ಟು ಕರಿಕಾಗು : ಬೇಗೆಯ ಬೆಂಕಿಯಿಂ ಕರಂ ಬಜಬಜನಾಗಿ ತಾಳಿಸಿದ ವೋಲ್ ಕರಿವೋದುವು ಬೆಂದು ಬೆಟ್ಟುಗಳ್ (ಬಾಧಪು. ೪–೮೦). **ಕರಿಯೋಗು** : ಉರಿಯ ಪೊರೆಯೊಳಿರ್ದ ತರುಣಲತೆಗಳಂತೆ ವರನಾರಿಯರಂಗಲತಿಕೆ ಕರಿಯೋಗಿ ಕಂಗಳುಗಳು ಕೆಟ್ಟು ಕುರುಡರ ಪರಿಯೊಳೆಸೆದರಬಳೆಯರು (ಅಂಜಚ. ೯–೮೧). [ಕರಿ$_2$ + ಪೋಗು$_1$]

**ಕರಿಷ** 'ಕರಿಸ' ನೋ.

**ಕರಿಸ** ಕರಿಷ, ಕರಿಸೆ, ಕರುಸೆ$_1$ (ನಾ). ರಕ್ತ ; ನೊರೆ (?) : ಮೃಗ–ಕುಲಂ . . . ಬಾಯ್ಗೆ ಕರಿಸಂ ಬರೆ ನಾಲಗೆಗಿಱ್ಱು ನಟ್ಟ ದಿಟ್ಟಗಳೊಡನಳ್ಕಿ ಪೊಯ್ಯೆ ನಡೆಗೆಟ್ಟುವು (ಪಂರಾಮಾ. ೭–೯೩) ; ಕರಿಸ ಬಾಯಲಿ ಹಾಯ್ದು ಕಳಲಿದ ಕರದ ಕೈದುಗಳರಸುಗಳು ಬಾಯ್ದೆಱೆಯದೇ ನೆಲನೆನುತ ಪರವಶರಾದರಲ್ಲಲ್ಲಿ (ತೊರರಾ. ೧–೧೭–೪). **ಕರಿಷ** : ಜರಿದುದತಿರಥರಾಜಿ ಬಾಯಲಿ ಕರಿಷ ಹಾಯ್ದುದು ಭೂಮಿಪಾಲರ ಬಿರುದು ಮುದ್ರಿಸಿದವು ಸಮೀರಕುಮಾರನುರವಣೆಗೆ (ಕುವ್ಯಾದ್ರೋ. ೧೩–೧೯). **ಕರಿಸೆ** : ಅಳವಱಿದು ಕಾಯ್ದುಗುರ್ವಿಂದೊಳವಾಯಿಂ ಕರಿಸೆಯುಗುಱ್ದುವೆಯ್ದೆ ಮೃಗಂಗಳ್ (ಜಗವಿ. ೧೭–೬೫). **ಕರುಸೆ$_1$** : ಕರುಳಿನೊಟ್ಟಿಲ ಮುಱಿದ ತೊಡೆಗಳ ಕರದ ತುಂಡದ ಬಾಯ ಕರುಸೆಯ ನರಳಿ ಹೊರಳುವ ಭಟರ ಸಂದಣಿ ಬೀಱಿತದ್ಭುತವ (ತಿಮ್ಮಅ. ೬–೫೨). [?]

**ಕರಿಸಣ್ಣಜಂಬುಹುಲ್ಲು** (ನಾ). ಒಂದು ಬಗೆಯ ಹುಲ್ಲು : (ವೈಔಗಿ. ೨೮–೫೩೦). [? + ಹುಲ್ಲು (< ಪುಲ್)]

**ಕರಿಸಾಲು** (ನಾ). ಕೆಟ್ಟವರ್ಷ ; ಬೆಳೆಯಿಲ್ಲದ ಸಾಲು ; ಬರ : ಧಾರವಾಡದ ಭೂಮಿಗೆ ಕರಿಸಾಲೆಂಬುವದು ಗೊತ್ತೇ ಇಲ್ಲ (ಕಭಾಗಿ. ೪೫೭) ; ಕರಿಸಾಲು ಬರಗಾಲಗಳಲ್ಲಿ ಅದು ಬಡಬಗ್ಗರಿಗೆ ಬಹು ಸಹಾಯ ಮಾಡುತ್ತದೆ (ಬಾದಿಶಾ. ೭೦). [ಕರಿ$_2$ + ಸಾಲು$_2$ (< ಸಾಲ್$_2$)]

**ಕರಿಸೀಸ** (ನಾ). ಕರಿಯ ಸೀಸ (?) : "ಶೋಧನ – ಕಾಸೀಸ, ಕರಿಸೀಸ" (ಓಷಧಿ. ೧೭೨). [< ಕರಿದು + ಸೀಸ$_2$]

**ಕರಿಸು$_1$** (ಕ್ರಿ). ೧. (ಎಣ್ಣೆ ಅಥವಾ ತುಪ್ಪದಲ್ಲಿ) ಕರಿಯುವಂತೆ ಮಾಡು. ೨. ಸುಡು ; ಕಛ(ಕ). [ಕರಿ$_1$ + –ಸು$_1$]

**ಕರಿಸು$_2$** 'ಕರೆಯಿಸು' ನೋ.

**ಕರಿಸೆ** 'ಕರಿಸ' ನೋ.

**ಕರಿಸೇವಗೆ** (ನಾ). ಕರಿದ ಸೇವಗೆ : ನುಱುಗಿಸಿದ ಸಕಲ ಸಂಭಾರಮಂ ಹಸನಾದ ಕರಿ[ಪಾಠಾಂ. ತಱಿ]ಸೇವಗೆಯೊಳು ಸರಿಗೂಡಿಯುಕ್ಕರಿಸಿ . . . ನಱುಗಂಪನಿಕ್ಕಿ (ಸೂಪಶಾ. ೪–೫೬). [ಕರಿ$_1$ + ಸೇವಗೆ]

**ಕರಿಹಂಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಸಣ್ಣ ಕರೀಕಾಚಿ ಹುಲ್ಲು, ಅಕ್ಕಹುಲ್ಲು, ಕಾಡುಹಂಚೀಹುಲ್ಲು, ಕರೀಹಂಚೀಹುಲ್ಲು (ವೈಔಗಿ. ೮–೧೩೩). [< ಕರಿದು + ಹಂಚಿ$_1$ + ಹುಲ್ಲು (< ಪುಲ್)]

**ಕರಿಹಣೆ** (ನಾ). ಆನೆಯ ಹಣೆ. 'ಕರಿಹಣೆಗೊಡು' ಪರಾ.
[ಕರಿ$_4$ + ಹಣೆ$_1$ (< ಪಣೆ$_2$)]

**ಕರಿಹಣೆಗೊಡು** (ಕ್ರಿ). ಆನೆಯ ಹಣೆಯನ್ನು ಒಡ್ಡು : ಕರಿಯ ಕೊ[ೞ]ರೆಯೊಳು ತಿಳಿದು ಕರಿಹಣೆಗೊಟ್ಟು ಕರಿಗಳಿಂ ಕರಿಯ ಕೊಲ್ಲಿಸುವೆ (ಸೌಂದಕಾ. ೮–೫೬). [ಕರಿಹಣೆ + ಕೊಡು$_1$]

**ಕರಿಹಣ್ಣೆ** (ನಾ). ಒಂದು ಬಗೆಯ ಸಸ್ಯ : "ಶಲಃ – ಕರಿಹಣ್ಣೆ" (ಓಷಧಿ. ೧೩೦). [< ಕರಿದು + ಹಣ್ಣೆ]

**ಕರಿಹತ್ತಿ,** ಕರಿಯ ಹತ್ತಿ (ನಾ). ಕಪ್ಪು ಎಲೆ, ಕೆಂಪು ಹೂ ಬಿಡುವ ಒಂದು ಬಗೆಯ ಹತ್ತಿ ಗಿಡ: ಕರಿಹತ್ತೀ ಸೊಪ್ಪಿನ ರಸದಲ್ಲಿ ಮರ್ದಿಸಿ ತಾರೇಕಾಯ ಪ್ರಮಾಣದಲ್ಲಿ ಗುಳಿಗೆಯಂ ಮಾಡಿ (ವಿ ವೈ ವಿ. ೬೨).
**ಕರಿಯಹತ್ತಿ:** "ಪಿಚುಕಃ – ಕರಿಯಹತ್ತಿ" (ಒಷಧಿ. ೯೭).
[< ಕರಿದು + ಹತ್ತಿ (< ಪಟ್ಟಿ)]

**ಕರಿಹಾಸು** (ಕ್ರಿ). (ಚರ್ಮವನ್ನು) ಹದಮಾಡು, —ಹದಗೊಳಿಸು: ಚರ್ಮವನ್ನು ಕರಿಹಾಸುವದು ಮುಂತಾದ ಕೆಲಸ (ಮುಂಬಯಿ. ೬-೪೮).
[ಕರಿ ? + ಹಾಸು$_1$ (< ಪಾಸು$_1$)]

**ಕರಿಹಿಪ್ಪಲಿ ಬಳ್ಳಿ** (ನಾ). ಒಂದು ಜಾತಿಯ ಬಳ್ಳಿ; ನೆಲಹಿಪ್ಪಲಿ ಬಳ್ಳಿ. [< ಕರಿದು + ಹಿಪ್ಪಲಿ (< ಪಿಪ್ಪಲಿ) + ಬಳ್ಳಿ]

**ಕರಿಹುಲುಗಿಲು** (ನಾ). ಹುಲುಗಿಲದಲ್ಲಿ ಒಂದು ಜಾತಿ; ಕಪ್ಪು ಹುಲುಗಿಲು: ಕರಿಹುಲುಗಿಲ ಬೇರು . . . ಸುಗಂಧ ಕೋಷ್ಠ, ಇವಂ ಹುಳಿಯೆಲೆಯಲ್ಲಿ ಅರೆದು ಪೂಸಲು ಬಿಳಿಯ ಕುಷ್ಠ ಮಾಣ್ಗುಂ (ವಿವೈವಿ. ೮೦). [< ಕರಿದು + ಹುಲುಗಿಲು (< ಪುಲಿಂಗಿಲ್)]

**ಕರಿಹೆಸ್ಸರೆಮರ** (ನಾ). ಒಂದು ಜಾತಿಯ ಮರ: ಕರಿಹೆಸ್ಸರೆಮರ, ಹೆಸ್ಸರಿ (ಮೈಔಗಿ. ೬೭-೧೩೭೪). [< ಕರಿದು + ಹೆಸ್ಸರೆ + ಮರ$_1$]

**ಕರಿಹೊನ್ನೆ** (ನಾ). ಕಪ್ಪು ಹೊನ್ನೆ ಮರ: ಕಲ್‌ಮುತ್ತಗ, ಕಲ್ ಹೊನ್ನೆ, ಕರೀಹೊನ್ನೆ, ನೇಹಿ (ಮೈಔಗಿ. ೫೮-೧೧೭೫).
[< ಕರಿದು + ಹೊನ್ನೆ (< ಪೊನ್ನೆ)]

**ಕರೀಕುಲೂಫ** (ನಾ). ಬೀಗ (?): ಅರಶಿನವರ ಭೇಟಿ ತೆಗೆದುಕೊಂಡು ಕರೀಕುಲೂಫವಪ್ಪಿಶಿ ಕೋಟಿಗೆ ನಿಮ್ಮ ಠಾಣ್ಯ ಕಳುಹಿಸಬೇಕು (ಹೈದರ. ೩೩-೩೪). [?. +ಕುಲೂಫ. P ಹಿಂ. ಕುಲುಫ್; ಅರ. ಕುಲ್‌ಫ್]

**ಕರೀತ** 'ಖರೀತ' ನೋ.

**ಕರೀರ$_1$** (ನಾ). ೧. ಮರಳು ಭೂಮಿಯಲ್ಲಿ ಬೆಳೆಯುವ ಒಂಟೆಗೆ ಪ್ರಿಯವಾದ ಒಂದು ಬಗೆಯ ಮುಳ್ಳು ಪೊದೆ: "ಕರೀಉಪ್ಪಿಗಿಡ, ನಿಸ್ಪಟ್‌ಗೇಗಿಡ, ಕರೀರ (ಮೈಔಗಿ. ೧೭-೩೦೩). ೨. ಬಿದಿರಿನ ಮೊಳಕೆ; ಕಳಿಲೆ: "ಗಾಳಿಗೊಡರುವ ಬಿದಿರು ಕೀಚಕಂ ಮೊಳೆ ಕರೀರಂ" (ಮಂಗರಾ. ೩೮-೨೩); ಅವನ ಭುಜಮಂ ಕರೀರ [ಪಾಠಾಂ. ಕರಿಕರ]ಮಂ ಕಿಳ್ತಂತೆ ಕಿಳ್ತು (ರಾಜಶೇ. ೬-೮೭ ವ). ೩. ಹರವಿ; ನೀರಿನ ಪಾತ್ರೆ; ಹೂಜಿ; ಘಟ: "ಘಟಃ, ಕರೀರಃ – ಈ ೨ ಹರವಿ" (ಹಲಾಯು. ೫೩-೧೬೧); ಸ್ವಚ್ಛ ಕರೀರದೊಳ್ ಗೋಕ್ಷೀರಮಂ ತಂದು (ಚಂದ್ರಪ್ರಭು. ೫-೧೨೮); ಪೊಳೆವ ಸ್ಫಟಿಕ ಕರೀರದೊಳಿಟ್ಟ ದೀಪದಂತೊಳಹೊರಗ ಖಂಡವಾಗೆಸೆವ ತೇಜೋರಾಶಿ (ವೆಂಕಾರಾ. ೧-೨೩-೧೧). [ಸಂ.]

**ಕರೀರ$_2$** (ನಾ). ಆನೆಯ ಕೋರೆಯ ಬುಡ; ದಂತಮೂಲ: "ಕರೀರಂ [ಪಾಠಾಂ. ಕರರೀ, ಕರೀರೀ], ದಂತಮೂಲಂ – ಈ ೨ ಮೊದಲುಗೊಂಬು" (ಹಲಾಯು. ೩೭-೭೦); "ದಂತಮೂಲಂ ಕರೀರಂ ಮೊದಲಗೊಂಬಕ್ಕು" (ಮಂಗರಾ. ೪೭-೩). [ಸಂ. ಕರೀರಾ]

**ಕರೀರಕ** (ನಾ). ಜಗಳ; ಕಾಳಗ: "ಯದ್ಧೋತ್ಸುಕಂ ದೋರ್ಮಧ್ಯ ಮೆನೆ ಕರೀರಕ [ಪಾಠಾಂ. ಕರೀತರ, ಕಲೆಕರ]ಮೆನಲು ಜಗಳಕ್ಕೆ ನಾಮ ಮಕ್ಕುಂ" (ಮಂಗರಾ. ೧೩೩-೩೦). [ಸಂ.]

**ಕರೀರಿ** (ನಾ). ಆನೆಯ ಕೊಂಬಿನ ಬುಡ; ಗಜದಂತ ಮೂಲ (೬).
[ಸಂ. ಕರೀರೀ]

**ಕರೀಷ** (ನಾ). ಒಣಗಿದ ಸಗಣಿ: ಗುಡರಸೈಕ ವಿಮರ್ದದಿಂ ವಿಂಗಡಿಸಿ ಕೊಂಡಿಹ ಭಕ್ಷ್ಯಗಳ ಪಂಗಡದಿ ಮಧುರ ಭೇದಮುಂಟೀ ಸ್ಫುಟ ಕರೀಷ ದಲಿ ಪೊಡವೆರದಶುಚಿಯಿಂದ ಸೇವಿಸಬೆಡೆಯದುಂಟೀ (ವಿವೇಭ. ೧೫-೨೮). [ಸಂ.]

**ಕರು$_1$** 'ಕಱು$_2$' ನೋ.

**ಕರು$_2$** (ನಾ). ೧. ಎರಕ ಹೊಯ್ಯುವುದಕ್ಕಾಗಿ ಮಾಡಿದ ಅಚ್ಚು; ಎರಕದಚ್ಚು; ಪಡಿಯಚ್ಚು: ಕರು ಕರುವಿಂಗೆ ಕಣ್ದೆಱವಿ ಕಲ್ಪಿಸ ದೋಜೆಗೆ ನಚ್ಚಿನಚ್ಚು ಕಂಡರಣೆಗೆ ಮಂಡನಂ (ಮಲ್ಲಿಪು. ೨-೬೭). ೨. ಎರಕ ಹೊಯ್ದು ರಚಿಸಿದ ಬೊಂಬೆ; ಎರಕದ ಗೊಂಬೆ: ವಿರಹದ ಕರುವಿನಂತೆ ಕರುಣದ ಹಾಹೆಯಂತೆ (ಗಿರಿಕ. ೪-೧೧೯ ವ); ಒಪ್ಪಿದಳ್ ಲೆಪ್ಪದ ಕರುವಿನವೋಲ್ (ದಶಕು. ೬-೯೨); ಪಳುಕಿನ ಕರುವೆಂದೆನೆ ಧರೆಗಿಳಿತಂದಂ ಪವನ ಮಾರ್ಗದಿಂ ನಾರದಂ (ಪುಣ್ಯಾ ಸ್ರ. ೫-೬೦); ಉದಯದರುಣನ ಕರುವ ಹಿಡಿದಂದದಲಿ ವರ್ಣಚ್ಛವಿಯ ಲೊಪ್ಪುವ ಕುದುರೆಗಳ (ಕುವ್ಯಾವಿ. ೬-೫೪). ೩. ಉಬ್ಬು ಕೆತ್ತನೆಯ ಕೆಲಸ: ಕೆಲವಜಿಯೊಳ್ ವ್ಯಂಜನವಿಲ್ಲ; ಅವಾವೆಂದೊಡೆ—ಕರು, ತಣು (ಶಮದ. ೪೮ ಪ್ರಯೋ).
[ದೇ.‖ ತಮಿ. ಮಲ. ಕರು; ತುಳು. ಕರು, ಗರು; ತೆಲು. ಕರುಗು, ಕರುವು]

**ಕರು$_3$** (ನಾ). ೧. ತಳಪಾಯ; ತಳಹದಿ; ಮೂಲಸ್ತಂಭ; ತಲೆ ಗಂಬ; ಮುಹೂರ್ತ ಕಂಬ: "ಕರುಶಬ್ದಃ . . . ಗೃಹಾದಿ ನಿರ್ಮಾ ಪಣೇ ಸುಲಗ್ನಸ್ಥಾಪಿತ ಪ್ರಥಮಸ್ತಂಭವಾಚೀ" (ಶಬ್ದಾನು. ೨೯೭ ವ್ಯಾಖ್ಯಾ); ಗೋಪಸಮುದ್ರವೆಂದು ತಟಗಉಡಗೆ ಹೊಸ್ತಾಗಿ ಊರಕಟ್ಟಿ ಕರುವನಿಕ್ಕಿ ಊರಿಂ ಬಡಗಲು ಹೊಸ ಕೆಱೆಯನು ಕಟ್ಟಿದ ಸಂಮಂದದಿಂ (ಎಕ. IX, ಚನ್ನಪ. ೧೬೯-೮; 1416). 'ಕರುಕಂಭ' ಪರಾ. ೨. ನೆಲೆ; ಮೂಲಸ್ಥಾನ; ಆಕರ: ಪುರು[ಷಾ]ರ್ತ್ಥದ ನೆಲೆ ಸತ್ಯದ ಕರು (ಸೌಇಇ. XX, ೭೭-೨೭; 1118); ಸೌರಭದಿಂಪಿನಿಂದೆ ಕಂಪಿನ ಕರುವಾದ ಕೇದಗೆಯ ಮಂಟಪವೊಪ್ಪುವುದು (ಕುಸುಮಾ. ೧-೧೦೨); ಅಜಿತದ ತವರುಜ್ವಳ ಕೀರ್ತ್ತಿಯ ಕರುವೆನಿಪಂ ಸಲೆ ಹಲರಿಂದಬ್ಬಲೂರ ಸೋಮ ಗೌವುಂಡಂ (ಎಕ. VII, ಶಿಕಾರಿ. ೨೨೫-೭೭; 1204); ಸುರತರುವೆ ಮುಕ್ತಿಯ ಕರುವೆ (ಚೆಬಪು. ೬-೧೧). [ದೇ. ‖ ತಮಿ. ಕರು]

**ಕರು$_4$,** ಕರುವ (ನಾ). ಹಿರಿಮೆ; ಎತ್ತರ: ಕ[ಪಾಠಾಂ. ಕು]ರುವಾಗಿ ಹಾಡಿದೀ ಗೀತಮಂ ಬಲ್ಲೆವೆಂಬರಿಗೆ (ಸಿದ್ಧರಾ. ೯-೫೮). 'ಕರುನಾಡು', 'ಕರುಮಾಡ' ಪರಾ. ಕರುವ: 'ಕರುವವನೆ' ಪರಾ.
[ದೇ. ‖ ತಮಿ. ಕರುಮೈ; ಮಲ. ಕರುಮ = ಬಿರುಸು, ಗಟ್ಟಿತನ]

**ಕರುಂಗಲ್‌ಕುಱಿ** (ನಾ). ಕರಿಯ ಬಂಡೆಗಲ್ಲಿನ ಗಣಿ: ಅದಿನ್ ತೆಂಕು ಕರುಙ್ಗಲ್ ಕುಱಿ ಕರುಙ್ಗಲ್ ಕುಱಿಯಿಂದಿಟ್ಟು ಪಡುವ ಬಂದ ಪಳ್ಳದ (ಎಇ. X, ೭೭-೬೦; 892).
[ಕರುಂಗಲ್$_0$ + ಕುಱಿ$_2$. / P ತಮಿ. ಕರುಙ್ಗಲ್; ಮಲ. ಕರಿಙ್ಗಲ್ಲು]

**ಕರುಂಗಾಣಿಹತ್ತಿ** (ನಾ). = ಕರಿಹತ್ತಿ: ಕರೀಹತ್ತಿ, ಕರುಂಗಾಣಿಹತ್ತಿ (ಮೈಔಗಿ. ೪೦-೭೮೯). [ಕರುಂಗಾಣಿ ? + ಹತ್ತಿ (< ಪಟ್ಟಿ)]

**ಕರುಂಬ** (ನಾ). ಕರುಬುವವನು; ಅಸೂಯೆ ಪಡುವವನು: "ಈರ್ಷಕಃ, ಈರ್ಷಮಾಣಃ, ಈ ೨ ಕರುಂಬಂ" (ಕಾಶಕ್ಯ. ೧೨೦).
[ಕರುಂಬು$_2$ (< ಕಱುಂಬು$_2$) + -ಅ$_7$]

**ಕರುಂಬು$_1$** 'ಕಱುಂಬು$_1$' ನೋ.

**ಕರುಂಬು$_2$** 'ಕಱುಂಬು$_2$' ನೋ.

**ಕರುಕಂಭ** (ನಾ). ಕಟ್ಟಡದ ಆರಂಭಕ್ಕೆ ಶುಭಮುಹೂರ್ತದಲ್ಲಿ ನೆಡುವ ಕಂಬ: ವ್ಯೋಮಚ್ಛತ್ರದ ಪೊಸ ಪೊಂಗಾವನೆ ಭೂಮಿಯನಾ ಬಿದಿ ನಿರ್ಮಿಸುವಂದಿಕ್ಕಿದ ಕರುಕಂಭಂ (ಜಯಕಾ. ೧-೩೨); ಪರಮಾತ್ಮ ನಿರ್ದನು ತ್ರಿಜಗಕೆ ಬೆಳಗಿನ ಕರುಕಂಭವೊಂದ ನೆಟ್ಟಂತೆ (ಭರಚ. ೭೪-೨೯). [ಕರು$_3$ + ಕಂಭ]

**ಕರುಕಲು** (ನಾ). ಸುಟ್ಟು ಕರಿಕಾದುದು; ಕರಿಕು: ಮನೆ ಬೂದಿಯಾಯಿತು. ಕಾಳುಕಡಿಗಳೂ ಕರುಕಲಾದುವು (ಜವಿಾನ್ವಾ. ೧೩೫).
[ಕರಿಕು (< ಕರಿಂಕು) + -ಅಲು (<-ಅಲ್$_2$)./ ತಮಿ. ಕರುಗಲ್]

**ಕರುಕಿಸು** (ಕ್ರಿ). ಪರಿತಪಿಸು; ಬೇಗುದಿಗೊಳ್ಳು; ಸಂತಾಪಿಸು (?): ಕರಗಿಸಬೇಡ ದೇಹ ಸ್ಮರಿಸಿ ಚಿಂತೆಯ ನೀನು ಕರುಕಿಸದಿರು ಮನವ ಪರಿಪರಿಯಿಂದ (ಹಮಜ, ೫೧); ಸ್ಮರಿಸುತಲಿ ಶ್ರೀ ಹರಿಯ ಕರುಕಿಸದೆ ಮನದಿ (ಹಮಚ. ೧೨೪). [ಕರುಕು$_1$ (< ಕರಿಂಕು) + -ಇಸು$_3$]

**ಕರುಕು$_1$** 'ಕರಿಂಕು' ನೋ.

**ಕರುಕು$_2$** (ನಾ). ಒಂದು ಬಗೆಯ ಉಂಗುರ: "ಅಂಗುಳೀಯಕಂ, ಊರ್ಮಿಕಾ-೨ ಉಂಗುರದ ಹೆಸರು. ಅಂಗುಳಾಭರಣ, ಉರುಟು, ಕರುಕು, ಹರಳುಂಗುರ, ಬಿಲ್ಲೆಉಂಗುರ" (ಸಿದ್ಧಾಂತಿ. ೧೬೪). [?]

**ಕರುಗಟ್ಟು** (ಕ್ರಿ). ಎರಕಹೊಯ್ಯು: ಉರಗೇಂದ್ರ ಪುರದ ರಚನೆಗಳನಿಂದ್ರಪ್ರಸ್ಥಪುರದ ಬಲಮಂ ಹಿಳಿದು ಬಳಿಕ್ಕೈದೆ ಕರುಗಟ್ಟಿ [ಪಾಠಾಂ. ಬಳಿದು ಕರುವಂ ಕಟ್ಟಿ] ಸರಸಿಜದ ಕಂದನೀ ಪುರವ ನೆಱೆಯದೆ ಮಾಣಂ (ಹಚಕಾ. ೧-೩೯); ನೇಸಱ ಕಿರಣಂಗಳಿಂ ದೇಸೆವಡೆಯೆ ಕರುಗಟ್ಟಿದಂತೆ ಸುರುಚಿರತೆವೆತ್ತ ಜಿನ ಪ್ರತಿಮೆಯುಂ ಕಂಡು (ಪುಣ್ಯಾಸ್ರ. ೨-೬೪ ವ).
[ಕರು$_2$ + ಕಟ್ಟು$_1$. / ತಮಿ. ಕರುಕ್ಕಟ್ಟು]

**ಕರುಗಲ್ಲು** (ನಾ). ಕಾರ ಹುಣ್ಣಿಮೆಯ ದಿನ ಪೂಜಿಸುವ ಕಲ್ಲು; ಕಾರಹುಣ್ಣಿಮೆಯ ದಿನ ಹೋರಿಗಳು ಪಂದ್ಯದಲ್ಲಿ ಮುಟ್ಟಬೇಕಾದ ಗುರಿ; ಕಂಚ: ಕಲ್ಯಾಣನಗರದ ಕಾರಿಗಳೆಲ್ಲ ಕರುಗಲ್ಲ ಗೆಲ್ಲಕ್ಕೆ ನೆರೆದಿದ್ದುವಂತೆ (ಯಾವ ಹೋರಿ ಮೊದಲು ಕರುಗಲ್ಲನ್ನು ಮುಟ್ಟುವುದೋ ಅದು ಗೆದ್ದಂತೆ) (ಬೆಳುವ. ೨೧೪).
[ಕರು$_1$ (< ಕಱು$_2$) + ಕಲ್ಲು (< ಕಲ್$_3$)]

**ಕರುಗಾಣ** (ನಾ). ಒಂದು ಬಗೆಯ ಸಸ್ಯ: ಕರುಗಾಣ, ಸಿಂಬಳಿಕೆ (ವೈಔಗಿ. ೫೧-೧೦೩೧). [?]

**ಕರುಗು$_1$** 'ಕರ್ಗು$_1$' ನೋ.

**ಕರುಗು$_2$** (ನಾ). ಪಡಿಯಚ್ಚು: ಮೂಲೋಕದರಸಿಯರ ಲಾವಣ್ಯರಸ ಘಟ್ಟಿಯಂ ತೆಗದು ವಸುಮೂಸೆಯೊಳು ಕರಗಿ ಶಶಿಕಾಂತ ಕರುಗಿನಲಿ ಯೆರೆದಮೃತ ಶಿಲೆಯಿಂದ ಒಪ್ಪವಿಟ್ಟು (ನವಮೋ. ೧೭-೫೦).
[ಕರು$_2$ + -ಗು ?]

**ಕರುಗೊಳ್** (ಕ್ರಿ). ಎರಕವಾಗು; ಎರಕದಿಂದ ಪ್ರತಿಮೆಯಾಗು: ಓ ತಾಯಿತಂದೆ ಶಿವವೆಂದೆ ನಿಮಗೆ ಕರುಗೊಳುವ ಅರುವಿನಿಂದೆ ನೀವಿತ್ತ ಪಾಲು ನಮಗದುವೆ ಹಾಲು ಕರುಳಾಯ್ತು ಕರುವಿನಂತೆ (ಹೃದಸ. ೬-೮). 'ಕರುಗೊಳಿಸು' ಪರಾ. [ಕರು$_2$ + ಕೊಳ್$_1$]

**ಕರುಗೊಳಿಸು** (ಕ್ರಿ). ಎರಕಹೊಯ್ದು ಪ್ರತಿಮೆ ಮಾಡು; ಮೂರ್ತಿಗೊಳಿಸು: ಚತುರ್ಮುಖನಂಜನಾಚಲವ ಕರುಗೊಳಿಸಿ ಕಡೆದಸುಗೊಳಿಸಿ ಕರ್ಬುರಗೆ ಕೊಟ್ಟನೊಯೆಂಬ ಪೊಲು ಹನ್ನೆರಡು ಯೋಜನದಿ ಭ ವಿರಾಜಿಸಿತು (ತೊರರಾ. ೬-೨೯-೧೮). [ಕರುಗೊಳ್ + -ಇಸು$_3$]

**ಕರುಗೋಷ್ಠಿ** (ನಾ). ಕರುಗಳ ಕೊಟ್ಟಿಗೆ; ಕರುಹಟ್ಟಿ: ಕರುಗೋಷ್ಠಿಯ ಪೊಲ ಮೇರೆ ವಾಯವ್ಯದ ಮಿದಿಯ ಮೇಗಣ × ಜಾಲದಿನ್ದ (ಎಕ. X (S), ಚಿಕ್ಕಬ. ೧೦೬-೬೭ ; 850).
[ಕರು$_1$ (< ಕಱು$_2$) + ಗೋಷ್ಠಿ]

**ಕರುಚಿಯಅಪ್ಪ** (ನಾ). ಒಂದು ಬಗೆಯ ಕಜ್ಜಾಯ: [ಚ]ರುಪು ೧ ಕರುಚಿಯಅಪ್ಪ ೫ ಅತಿರಸ ೫ ಸುಖಿನಪ ೫ ಯೆಂಣೆಹೂರಿಗೆ ೫ ವಡೆ ೫ (ಸೌಇಇ. IV, ೨೫೦-೮ ; 1521). [ಕರುಚಿ ? + ಅಪ್ಪ$_2$]

**ಕರುಟು$_1$** 'ಕರಟು$_3$' ನೋ.

**ಕರುಟು$_2$** (ನಾ). ಉಂಡೆ (?): ಮಹಾದಿಲಿಂಗಕ್ಕೆ ಸ್ನಪನಂಮಾಡಿ ಶಿವಸಿದ್ಧ ಕಾದಗ್ಘವಣಿಯಟ್ಟಕಳಿ ಕರುಟು [ಪಾಠಾಂ. ಟ್ವ, ಟ್ರ] ಚಂದನಂಗಳ ನೊರಸಿ (ಸಿದ್ಧರಾ. ೮-೭೩). [?]

**ಕರುಟುಬೀಳು** 'ಕರಟುಬೀಳು' ನೋ.

**ಕರುಣ** (ನಾ). ೧. ಕನಿಕರ; ಮರುಕ; ದಯೆ: ಅಕಟಕಟಾ ಶಿವ ನಿನಗಿನಿತು ಕರುಣವಿಲ್ಲ (ಬಸವ. ೬೪); ಕರುಣದಿಂ ಶಶಿಧರಂ ನಾಟ್ಯವಾಡಿದ ನಿಲ್ಲಿ (ತಿರುರ. ೩); ನಿನಗೆ ಶೂಲಿಯ ಕರುಣವಾಯ್ತು (ಕಾವ್ಯಾದ್ರೋ. ೯-೧೦). ೨. ಕನಿಕರವನ್ನು ಹುಟ್ಟಿಸುವಂತಹದು. 'ಕರುಣಕಥೆ' ಪರಾ. ೩. [ಕಾವ್ಯಮಿಾ] ನವರಸಗಳಲ್ಲಿ ಒಂದು; ಶೋಕವೆಂಬ ಸ್ಥಾಯಿಭಾವದಿಂದ ಹುಟ್ಟುವ ರಸ: ಪ್ರಕಟತರ ಶೋಕಭಾವ ಪ್ರಕೃತಿ ಪರಂ ಕರುಣಮಾರ್ತಜನತಾ ವಿಷಯಂ (ಕಾವ್ಯಾವ. ೮೯); ಕರುಣಂ ಶೋಕದಿನಕ್ಕುಂ (ರಸರ. ೨-೫೦). ೪. ಒಂದು ಜಾತಿಯ ಮರ. [ಸಂ.]

**ಕರುಣಂಗೆಯ್** (ಕ್ರಿ). ೧. ಕನಿಕರಪಡು; ದಯೆತೋರು: ಕರುಣಂಗೆಯ್ದಂ ಮೃಗಗಣಪರಿವೃಥನಿನ್ನಂಜಬೇಡವಾದಂ ಪುಣ್ಯಂ ದೊರೆಕೊಂಡುದು ನಿನಗೀಗಳ್ (ಪಂಚತಂ. ೫೫-೨೦). ೨. (ಆಲಂ) ದಯಪಾಲಿಸು; ಅನುಗ್ರಹಿಸು: ಎನಗಿನ್ನೊಂದು ವ್ರತಮಂ ಕರುಣಂಗೆಯ್ಯೆಮೆಂದು ಪ್ರಾರ್ಥಿಸುವುದುಂ (ಧರ್ಮಾಮೃ. ೨-೨೦೬).
[ಕರುಣ + ಗೆಯ್ (< ಕೆಯ್$_1$)]

**ಕರುಣಂಬಡು** (ಕ್ರಿ). = ಕರುಣಂಗೆಯ್ ೧: ಎಂದು ಕರುಣಂಬಡೆ ನುಡಿದೊಡಗೊಂಡು ಪೋದಳ್ (ಪಂಪಭಾ. ೪-೯೯ ವ). [ಕರುಣ + ಪಡು$_1$]

**ಕರುಣಕಥೆ** (ನಾ). ಕನಿಕರ ಹುಟ್ಟಿಸುವ ಕಥೆ; ಶೋಕಮಯವಾದ ಕಥೆ: ಮೃದುವಾಗಿ ಹಾಡಿದೆನು ಕರುಣಕಥೆಯ (ಇಂಗೀತ. ೪೪-೨೨).
[ಕರುಣ + ಕಥೆ]

**ಕರುಣದೋಱು** (ಕ್ರಿ). = ಕರುಣಂಗೆಯ್ ೧: ಕರುಣದೋಱದೆ ನೃಪತಿ ಸತಿಯಳ ತೊಱೆದು ಬಿಸುಟನು ವನದೊಳಗೆ (ನಳಚ. ೫-೨೦).
[ಕರುಣ + ತೋಱು$_1$ (< ತೋಱ್)]

**ಕರುಣಪ್ರಸಾದ** (ನಾ). ಗುರುವು ಕರುಣೆಯಿಂದ ಕೊಟ್ಟ ಪ್ರಸಾದ: ಹರನ ಶಿಲೆಯೆಂದವಗೆ ಕರುಣಪ್ರಸಾದ ಎಂಜಲೆಂದವನಿಗೆ ನರಕ ತಪ್ಪುವದೆ (ಸರ್ವಜ್ಞ. ೫೧). [ಕರುಣ + ಪ್ರಸಾದ]

**ಕರುಣಮೋಹ** (ನಾ). ನಾಲ್ಕು ಬಗೆಯ ಮೋಹಗಳಲ್ಲಿ ಒಂದು: ಲಜ್ಜಾಮೋಹ, ವಿಭವಮೋಹ, ಕರುಣಮೋಹ, ನಿಜಮೋಹವೆಂಬ ಮೋಹ ಚತುಷ್ಟಯ ವಿಷಯೆರಿಂ (ವಿವೇಕ. ೨೨೯). [ಕರುಣ + ಮೋಹ]

**ಕರುಣಾಂಬು** (ನಾ). (ದುಃಖದಿಂದ ಬರುವ) ಕಣ್ಣೀರು; ದುಃಖಾಶ್ರು: ಸಕರುಣಾಂಬುಗಳೆಂಬೆನೇ ಕರುಣಾಂಬುಗಳಿವಲ್ಲ (ಬಸವು. ೧೮-೬೪). [ಕರುಣ + ಅಂಬು$_3$]

**ಕರುಣಾಂಬುಧಿ** (ನಾ). ದಯೆಯ ಸಮುದ್ರ: ದೇವ ಎನ್ನಂ ತೊತ್ತುಗೊಂಡ ಕರುಣಾಂಬುಧಿಯೆ (ನಂಬಿರ. ೯-೧೨೮). ತನ್ನಡಿಗಳಿಗೆ ಕೆಡೆದಿರ್ದವನನೆತ್ತಿ . . . ಮಾರಪ್ರಭು ಸರಸಕರುಣಾಂಬುಧಿಯೊಳಭಿಷಿಕ್ತನಂ ಮಾಡಿ (ಬಸವು. ३೦-३೦). [ಕರುಣ + ಅಂಬುಧಿ]

**ಕರುಣಾಕರ** (ನಾ). ದಯೆಯ ನೆಲೆ; ಕೃಪೆಯ ಮೂಲಸ್ಥಾನ: ಮಱುಗಿ ಕರುಣಾಕರಂ ಕಪರ್ದಿ ಕಯ್ದೆಗೆದು ನಿಂದಾಗಳ್ (ಶಬಶಂ. ೪-೮೮ ವ). [ಕರುಣ + ಆಕರ$_3$]

**ಕರುಣಾಕ್ರಂದನ** (ನಾ). ಕರುಣೆ ಹುಟ್ಟುವಂತೆ ಗಟ್ಟಿಯಾಗಿ ಅಳುವುದು, —ರೋದನ; ದುಃಖದಿಂದ ಅಳುವಿಕೆ: ಕರುಣಾಕ್ರಂದನಂಗೆಯ್ವುದುಮಾಗಳದಂ ಕಂಡು (ಗದಾಯು. ೧೦-೧೫ ವ).
[ಕರುಣ + ಆಕ್ರಂದನ]

**ಕರುಣಾಜನಕ** (ಗು). ಕನಿಕರ ಹುಟ್ಟಿಸುವ; ದಯನೀಯ: ಓಲೆಕಾರ ಗಂಗವ್ವನ ಸ್ಥಿತಿ ಇನ್ನಿಷ್ಟು ಕರುಣಾಜನಕವಾಗಿದೆ (ಸಮುಜೀ. ೧೩ ಪೀಠಿಕೆ); ಆ ನಗು ಮನೋಹರವಾಗಿಲ್ಲದಿದ್ದರೂ ಆಕರ್ಷಕವಾಗಿತ್ತು; ಕರುಣಾಜನಕವಾಗಿತ್ತು (ಪುನರು. ೧೯೩). [ಸಂ. (ಕರುಣಾ + ಜನಕ)]

**ಕರುಣಾಜಲಧಿ** (ನಾ). = ಕರುಣಾಂಬುಧಿ: ಕರುಣಾಜಲಧಿ ತಾನಾ ಕೌರವೇಂದ್ರನ ಹೊಳಲೊಳಗೆ ನಿಜಶರಣನಿಹ ಮನೆಗಾಗಿ ಬರುತಿರ್ದ (ಕುವ್ಯಾಉ. ೮–೫). [ಸಂ. (ಕರುಣಾ + ಜಲಧಿ)]

**ಕರುಣಾಧ್ವನಿ** (ನಾ). = ಕರುಣಾಕ್ರಂದನ: ಮಾರ್ದನಿವೆರಸಂದಱಿಪಿಂ ಕರುಣಾಧ್ವನಿ ಪೊಂಪುಱಿಯಾದುದು (ಶಾಂತಿಪು. ೯–೮೨). [ಸಂ. (ಕರುಣಾ + ಧ್ವನಿ)]

**ಕರುಣಾಪಾಂಗ** (ನಾ). ೧. ಕರುಣೆಯಿಂದ ತುಂಬಿದ ಕಡೆಗಣ್ಣಿನ ನೋಟ; ದಯಾದೃಷ್ಟಿ; ಕೃಪಾ ಕಟಾಕ್ಷ: ಮಾನಿನಿಯ ಕರುಣಾಪಾಂಗ ರಸಭಾಜನವು ಪುಣ್ಯವಲಾಯೆನುತ ಬೀಳ್ಕೊಂಡನಗ್ರಜೆಯ (ಕುವ್ಯಾವಿ. ೨–೪೯). ೨. ದಯಾದೃಷ್ಟಿಯುಳ್ಳವನು: ಕರುಣಾಪಾಂಗಂ ಸಿರಂಗಂ ಮೃಡಂ . . . ಕೂರ್ತಿಗೀಗೆ ನಿರ್ವಿಘ್ನಮಂ (ಹಮ್ಮಿರ. ೧–೬೭); ಕರುಣಾಪಾಂಗಂ ಪಾಲಿಕೆಮ್ಮನುಱಿ ಶಿವಲಿಂಗಂ (ರಾಜಶೇ. ೨–೧); ತಂದೆ ಹೆಳವನಕಟ್ಟೆ ರಂಗ ಕರುಣಾಪಾಂಗ (ಕರ್ನಾಕ. ೨೫೭). [ಕರುಣ + ಅಪಾಂಗ]

**ಕರುಣಾಪಾತ್ರ** (ನಾ): ಕನಿಕರಕ್ಕೆ ಯೋಗ್ಯನಾದವನು: ಅವನಂಥ ಕರುಣಾಪಾತ್ರನು ಮತ್ತು ಅವನಂಥ ಕರುಣಾವಂಚಿತನು ಜಗತ್ತಿನಲ್ಲಿ ಮತ್ತಿನ್ನಾರಿದ್ದಾರೆ! (ಇಪ್ಪಕ. ೩೦೩). [ಸಂ. (ಕರುಣಾ + ಪಾತ್ರ)]

**ಕರುಣಾರಸ** (ನಾ). = ಕರುಣ ೩: ವೀರರಸಂ ಸ್ಫುಟೋಕ್ತಿಯಿನುದಾರತಮಂ ಕರುಣಾರಸಂ ಮೃದೂಚ್ಚಾರಣೆಯಿಂದಮದ್ಭುತರಸಂ ನಿಬಿಡೋಕ್ತಿಗಳಿಂದಮಲ್ತೆ (ಕವಿರಾ. ೨–೯೭); ಈತನ ಚಿತ್ತದಲಿ ಕರುಣಾರಸಕೆ ಕಾಲಾಟವಾಯ್ತು (ಕುವ್ಯಾಕ. ೨೭–೪). [ಸಂ. (ಕರುಣಾ + ರಸ)]

**ಕರುಣಾರ್ತ** (ಗು). ದುಃಖದಿಂದ ಪೀಡಿತ. 'ಕರುಣಾರ್ತಸ್ವರ' ಪರಾ. [ಕರುಣ + ಆರ್ತ$_2$]

**ಕರುಣಾರ್ತಸ್ವರ** (ನಾ). ದುಃಖಾರ್ತವಾದ ಸ್ವರ: ಸಾಲೆಯ ಗುರುವು . . . ಆ ಕರುಣಾರ್ತಸ್ವರವನ್ನು ಕೇಳಿದನು (ಮುಂಬಯಿ. ೪–೩೮). [ಕರುಣಾರ್ತ + ಸ್ವರ$_1$]

**ಕರುಣಾಲು, ಕರುಣಾಳು** (ನಾ). ಕನಿಕರವುಳ್ಳವನು; ದಯಾಳು: ಕರುಣಾಲು [ಪಾಠಾಂ. ಳು] ಬಸವಂ ಲಿಂಗಜಂಗಮದೊಳು ಸೊಬಗನೆನಿಸಿ (ಬಸವು. ೧–೩೩). **ಕರುಣಾಳು**: ನಿಜಭಾಳವೊಂದಿಸಿ ವಂದಿಸಿದ ಕರುಣಾಳು [ಪಾಠಾಂ. ಲು] ವಂ . . . ಏಳೆನುತ ಕೈವಿಡಿದು (ಬಸವು. ೪೬–೬೫); ಕಾವನಾ ಕರುಣಾಳು ಮುಱಿವೊಗೆ (ಕೌಶಿರಾ. ೧೪–೫೩). [ಸಂ.]

**ಕರುಣಾಲುತನ** (ನಾ). ದಯಾಪರತೆ; ಕನಿಕರವನ್ನು ತೋರುವ ಸ್ವಭಾವ (ಕಿ). [ಕರುಣಾಲು + -ತನ]

**ಕರುಣಾವಂತ** (ನಾ). = ಕರುಣಾಲು: ಸಂತತಾಮಳ ಕೀರ್ತಿ ಕರುಣಾವಂತಮೂರ್ತಿ . . . ಸದ್ಗುರುವು (ಬಸವು. ೩–೬೭). [ಸಂ. ಕರುಣಾವತ್]

**ಕರುಣಾವಲೋಕನ** (ನಾ). ಕೃಪಾದೃಷ್ಟಿ; ಅನುಗ್ರಹದ ನೋಟ: ಅವುದರಿದಿವರಿಗೆ ಭವತ್ಕರುಣಾವಲೋಕನವುಂಟು (ಕುವ್ಯಾಅ. ೪–೧೪); ಏವುದೆಮ್ಮಯ ರಾಜ್ಯಸುಖವದನಾವ ಮೂಢನು ಬಯಸುವನು ಕರುಣಾವಲೋಕನವೆಮಗೆ ಸಾಕು (ಕೌಶಿರಾ. ೪೪–೯). [ಕರುಣ + ಅವಲೋಕನ]

**ಕರುಣಾಸಿಂಧು** (ನಾ). = ಕರುಣಾಂಬುಧಿ: ಪರಮ ಕರುಣಾಸಿಂಧು ಪಾವನ ಚರಿತೆ ಪದ್ಮಜಮುಖ್ಯ ಸಕಲಾಮರ ಸುಪೂಜಿತೆ ಲಕ್ಷ್ಮಿ ಕೊಡುಗೆಮಗಧಿಕ ಸಂಪದವ (ಕುವ್ಯಾಆ. ೧–೯). [ಸಂ. (ಕರುಣಾ + ಸಿಂಧು)]

**ಕರುಣಾಸ್ಪದ** (ನಾ). = ಕರುಣಾಪಾತ್ರ: ಯದುಗಳನ್ವಯದೊಳಗೆ ಕರುಣಾಸ್ಪದರು ಜನಿಸಿರಲು (ಕುವ್ಯಾಭೀ. ೩–೨೮). [ಕರುಣ + ಆಸ್ಪದ]

**ಕರುಣಾಸ್ಪದತೆ** (ನಾ). ಕನಿಕರಕ್ಕೆ ಎಡೆಯಿರುವುದು; ದಯೆಗೆ ಅವಕಾಶ: ಇದಱೊಳಾತಂಗಿಲ್ಲ ಕರುಣಾಸ್ಪದತೆ ನಿಷ್ಕಾರುಣ್ಯ ಭೂಯಂತ್ರದ ವಿನೋದಕ್ರೀಡೆ ಕೃಷ್ಣನದೆಂದನಾ ದ್ರೋಣ (ಕುವ್ಯಾದ್ರೋ. ೮–೬೨). [ಸಂ. ಕರುಣಾಸ್ಪದತಾ (ಕರುಣ + ಆಸ್ಪದತಾ)]

**ಕರುಣಾಸ್ಯ** (ನಾ). ಕರುಣೆಯನ್ನು ಹುಟ್ಟಿಸುವ ಮುಖ; ದುಃಖದಿಂದ ಕೂಡಿದ ಮುಖ: ಮಗನ ಕರುಣಾಸ್ಯಮಂ ಚಂದ್ರಚೂಡಂ ಕಂಡು (ಬಸರ. ೧–೫೩). [ಕರುಣ + ಆಸ್ಯ]

**ಕರುಣಾಳು** 'ಕರುಣಾಲು' ನೋ.

**ಕರುಣಿ** (ನಾ). = ಕರುಣಾಳು: ಕರುಣಿ ಕರುಣಿ ಕರುಣಂ ಲೇಸಾಯ್ತು ಅರ್ಚಿಸಿತಕ್ಕೆ ಫಲವಾಯ್ತು (ಬಸರ. ೪–೩೬); ಭಕ್ತವತ್ಸಲ ನೀ ಕರುಣಿ ತಾಂ ಭಕ್ತನಿಧಿ (ಬಸವು. ೧೦–೪೧). [< ಸಂ. ಕರುಣಿನ್]

**ಕರುಣಿತನ** (ನಾ). ದಯಾಪರತೆ; ದಯಾಗುಣ: ಕರುಣಿತನವನು ಮೆಱೆಯಲೋಸುಗವಿರದೆ ಗಗನೇಚರದ ಗತಿಯಲಿ ಬಂದನೈ ದ್ವೈಪಾಯನ ಪ್ರತಿಪ (ಕುವ್ಯಾದ್ರೋ. ೭–೨೦). [ಕರುಣಿ + -ತನ]

**ಕರುಣಿಸು** (ಕ್ರಿ). ಕನಿಕರವನ್ನು ತೋರು; ದಯೆತೋರು; ಅನುಗ್ರಹಿಸು: ವಿರಹಾನಳನಾ ತಾಪದೆ ಕರಗುಗುಮಿನ್ನಾಕೆಗಿನಿಸು ಕರುಣಿಸು ಮನದೊಳ್ (ಕವಿರಾ. ೩–೧೯೧); ಕರುಣಿಸಿ ದಯೆಯಿಂದಿನ್ನಿತ್ತುದೆ ಸಾಲ್ಗುಮೆಂಬರ್ (ಪಂಪಭಾ. ೯–೪೧); ಕುರುಡರ್ ಕುಱಿಯೊಳ್ ಕೆಡೆದೊಡೆ ಕರುಣಿಸಿ ತೆಗೆವವನೆ ನಂಟಂ (ಧರ್ಮಾಮೃ. ೭–೧೨೫); ವರ ವಚನ ನಿಮ್ಮದು ಕರುಣಿಸುವುದಮರತ್ವವನು ನಮಗೆ (ಕುವ್ಯಾಕ. ೬–೫). [ಕರುಣ + -ಇಸು$_3$]

**ಕರುಣೆ** (ನಾ). ೧. ದಯೆ; ಕನಿಕರ: ಪ್ರವಹಿಸಲಿ . . . ಎನ್ನ ಮನವಾ ಕರುಣೆ ತವರಿನೆಡೆಗೆ (ಮಲಿದೇ. ೨೧–೮); ಇದರಿಂದಲೇ ತಂದೆತಾಯಿತನವು ಸ್ನೇಹ ಕರುಣೆಯ ಸತ್ಯದ್ದುದ್ಯಾನವು (ಕರುಶ್ರಾ. ೭). ೨. ಕರುಣರಸ. ೩. ಒಂದು ಸಸ್ಯದ ಹೆಸರು: "ರಾಜಪ್ರಿಯಾ – ಕರುಣೆ" (ಓಷಧಿ ೧೩೭). [ಸಂ. ಕರುಣಾ]

**ಕರುಣೋದಯ** (ನಾ). ಕರುಣೆಯ ಹುಟ್ಟು; ದಯೆಯ ಆವಿರ್ಭಾವ: ಹರ ಕರುಣೋದಯಮಾದಂತರುಣೋದಯಮಾಗೆ (ಬಸರ. ೪–೫೭); ಆದಿಮೂರುತಿ ನೀನು ನೆಱೆ ಕರುಣೋದಯ ಹೃದಯಾಂಗಣದಿ ಜ್ಞಾನೋದಯವನೆನಗಿತ್ತು ರಕ್ಷಿಸು (ಹರಿಸಾ. ೨೨); ಹರ ಕರುಣೋದಯವಾದರ ಸಾಧ್ಯವು ತಾನೆಂಬುದಾವುದಿನ್ನುಂಟು (ಇಂಚಾಪ. ೫೦–೩೬). [ಕರುಣ + ಉದಯ]

**ಕರುದೋಱು** (ಕ್ರಿ). ಪಡಿಯಚ್ಚನ್ನು ತೋರು; ಎರಕದ ಅಚ್ಚನ್ನು ಕಾಣಿಸು (?): ಕರುದೋಱೆ ಕರುವ ಶೋಧಿಸಿ ಲೋಹರಸವೆಱೆದರುಹನ ಪ್ರತಿಮೆದೋರ್ಪಂತೆ (ಭರಚ. ೬೬–೧೦೮). [ಕರು$_3$ + ತೋಱು$_1$ (< ತೋಱ್)]

**ಕರುನಾಡು** (ನಾ). ೧. ಎತ್ತರವಾದ ನಾಡು. ೨. ವಿಶಾಲವಾದ ನಾಡು; ಕನ್ನಡ ದೇಶ: 'ಕರುನಾಡು' ಎಂದರೆ ವಿಸ್ತೃತ ನಾಡು = ಕರ್ನಾಡ = ಮಹಾರಾಷ್ಟ್ರ ಎಂಬ ನಿರುಕ್ತ ಹೇಳುವ ಮೋಹವಾದುದನ್ನೂ ನಮ್ಮಲ್ಲಿ ಕಾಣಬಹುದಾಗಿದೆ (ಕರ್ನಾಟ. ೧೯೬). [ಕರು$_4$ + ನಾಡು]

**ಕರುಬಿ** (ನಾ). ಕರುಬುಳ್ಳ ವ್ಯಕ್ತಿ : "ರೇಷ್ವಾ = ಕರುಬಿ" (ಕಾಶಕ್ಕ. ೫೮).
[ಕರುಂಬು$_2$ (< ಕಱುಂಬು$_2$) + -ಇ$_3$]

**ಕರುಬು$_1$** 'ಕಱುಂಬು$_1$' ನೋ.

**ಕರುಬು$_2$** 'ಕಱುಂಬು$_2$' ನೋ.

**ಕರುಬುದೈವ** (ನಾ). ಹೊಟ್ಟೆಕಿಚ್ಚಿನ ದೈವ; ಮತ್ಸರದ ದೈವ: ಅರಿಯದಾ ಹೂಟವನು, ಕರುಬು ದೈವವನು, ನಾವೆಯೊಡೆಯರ ಕರಸಿ ಬೆಸಸಿದನ್ (ಪಾರಸಿ. ೧೫-೩೩೯). [ಕರುಬು$_2$ (< ಕಱುಂಬು$_2$) + ದೈವ]

**ಕರುಮ** 'ಕಮ್ಮ$_3$' ನೋ.

**ಕರುಮಗತಿ** (ನಾ). ಕರ್ಮದ ಗತಿ; ದೈವಗತಿ : ಬರುವುದಿಂತೆತ್ತಣಿನೊ ಬೇಡದ ಪ್ರಾರಬ್ಧ ಕರುಮಗತಿ ಕೃತ್ರಿಮವೊ (ಮಂಕುಕ. ೩೦೭).
[ಕರುಮ (< ಕಮ್ಮ$_3$) + ಗತಿ]

**ಕರುಮಾಡ, ಕರುವಾಡ, ಕರುವಾಡು** (ನಾ). ಉಪ್ಪರಿಗೆ; ಮಹಡಿ: "ಕರುಮಾಡಂ ನೆಲೆವನೆಯುಪ್ಪರಿಗೆಯುಮೆನೆ ಸೌಧ" (ಕವಿಕಂ. ೧೪೪); ಕರುಮಾಡದ ಮೇಗಣ ನೆಲೆಯೊಳಿರ್ದು (ವಡ್ಡಾರಾ. ೧೧೭-೯); ಕರುಮಾಡಮನಾದರದಿಂದಮೇಱಿ (ಪಂಪಭಾ. ೪-೧೦); ಕಚದ್ರುಮಂ ನಿರ್ಬುದ್ಧಿಯೊರ್ವನೆ ಕರುಮಾಡದೊಳ್ ಶ್ವೇತ ಕಪೋತನಂತಿರ್ದು ಶತ್ರು ಸಂಗ್ರಹಣಕ್ಕೊಳಗಾದಂ (ಪಂಚತಂ. ೨೯-೨); ಏಳುನೆಲೆಯ ಕರುಮಾಡದುಪ್ಪರಿಗೆಯೊಳಗೆ (ಆದವ. ೭೭); ಸೀಳ್ದೊಂದು ಕಂಬದಗ್ರದೊಳಿರ್ದಾ ಕರುಮಾಡಮನೇಱಿ (ಜಗನಿ. ೬-೪೩). **ಕರುವಾಡ** : "ಕರುವಾಡಮೆನೆ ಉಪ್ಪರಿಗೆಯಕ್ಕು" (ಕಶರ. ೧೮); ಕರುವಾಡಂಗಳನೇಱಿ ವೃಕ್ಷಕುಲಮಂ ಸಾರ್ದೇಱಿಯೊಪ್ಪಿರ್ಪ ಗೋಪುರವ್ಯಂದಗಳನೇಱಿ (ಗಿರಿಕ. ೧೦-೧೦೦); ದೊರೆ ದೊರೆಗಳ ಮಂದಿರದೊಳು ರಾಜಿಪ ಕರುವಾಡದ ಕಳಸಗಳು (ಕಂಸವಿ. ೨-೭೫). **ಕರುವಾಡು** : ಬೇಕೆಂಬ ತಂದೆಯ ಕರುವಾಡುವಾಸನಯೇಕನಲ್ಲದೆಚಕ್ಕನು ನಾಸ್ತಿ (ದೇವಾಂಪು. ೧-೭೩). [ಕರು$_5$ + ಮಾಡ$_1$]

**ಕರುಮ್ಮ** 'ಕಮ್ಮ$_3$' ನೋ.

**ಕರುವ** 'ಕರು$_4$' ನೋ.

**ಕರುವಗಟ್ಟಿ** (ನಾ). ಎತ್ತರವಾದ ಗದ್ದೆ: ಕರುವಗಟ್ಟಿಯಿಂ ಬಡಗಲ್ ತಪೋಧನರ್ಗ್ಗೆ ವಕ್ಖಾಣಿಸುವ ಉಪಾಧ್ಯಾಯರ್ಗ್ಗೆ ಗಟ್ಟಿ ಮತ್ತರೊನ್ದು (ಸೌಇಇ. XI-i, ೧೧೬-೩೩ ; 1075). [ಕರುವ (< ಕರು$_4$) + ಗಟ್ಟಿ]

**ಕರುವಗೆಯ್, ಕರುವಗೆಯಿ** (ನಾ). ದಿಣ್ಣೆಯ ಹೊಲ: ಹೊಲಗೇರಿಯ ಪಡುವಣ ಕರುವಗೆಯ್ಯಿಂದಂ ತೆಂಕಲಾಱುಮತ್ತರು (ಸೌಇಇ. XI-i, ೫೦-೧೯; 1005); ಅ ಕೆಯ್ಯ ಸ್ಥಳಂ ಕರುವಗೆಯ್ಯಿಂ ಪಡುವಲು (ಸೌಇಇ. XI-ii, ೧೫೨-೩೮; 1103). **ಕರುವಗೆಯಿ** : ಕರುವಗೆಯಿ ಮತ್ತರು ಹನ್ನೊಂದು (ಎಇ. XVIII, ೧೮೫-೩೯ ; 1097).
[ಕರುವ (< ಕರು$_4$) + ಕೆಯ್$_4$]

**ಕರುವಗೆಯಿ** 'ಕರುವಗೆಯ್' ನೋ.

**ಕರುವಗೇರಿ** (ನಾ). ದೊಡ್ಡಕೇರಿ (?): ಮಾನ್ಯಗೇರಿಯಿಂ ಪತ್ತಿರೆ ತೆಂಕಲು ಕರುವಗೇರಿಯ ಬೀದಿಯಿಂ ಪತ್ತಿರೆ (ಸೌಇಇ. XV, ೧೧೧-೫೭ ; 1165). [ಕರುವ (< ಕರು$_4$) + ಕೇರಿ]

**ಕರುವಯ್ಯ** (ನಾ). ಒಬ್ಬಾತನ ಹೆಸರು : ಆತನ ಮಗಂ ಕರುವಯ್ಯನ ಅಮ್ಮಣ್ಣನು ಕಲ್ಲಂ ಮಾಡಿಸಿ ನಿಱಿಸಿದ (ಎಕ. VII, ಸೊರಬ. ೨೪೦-೯ ; 954). [ಕರುವ$_0$ + ಅಯ್ಯ$_1$]

**ಕರುವವನೆ** (ನಾ). ದೊಡ್ಡಮನೆ: ಆ ಯೆರಡು ಕೇರಿಯ ಕರುವವನೆಯೆರಡುಮಂ ನಾಲ್ಕುಮನೆಯುಂ ಮಾಡಿ ದೇವರ ಬ್ರಹ್ಮಪುರಿಯೊ[ಳು] ಗ್ರಿ(ಗೃ)ಹದಾನ ಭೂಮಿದಾನಮುಂ ನಾಕಿಮಯ್ಯಮ್ಮಾಡಿದ (ಎಇ. XVIII, ೧೮೫-೪೩ ; 1097). [ಕರುವ(< ಕರು$_4$) + ಮನೆ]

**ಕರುವಾಡ** 'ಕರುಮಾಡ' ನೋ.

**ಕರುವಾಡಿ** (ನಾ). ಒಂದು ಬಗೆಯ ಸಸ್ಯ : ಮುಸ್ಸಿ, ಕರುವಾಡಿ, ನೇರಲುತಾರೆ (ಮೈಔಗ. ೫-೮೨). [?]

**ಕರುವಾಡು** 'ಕರುಮಾಡ' ನೋ.

**ಕರುವಿಕ್ಕು** (ಕ್ರಿ). ಎರಕ ಹೊಯ್ಯು; ಅಚ್ಚೊತ್ತು; ಲೆಪ್ಪಹಾಕು : ಕಡೆಗಾಲದಗ್ನಿಯಲಿ ಕರುವಿಕ್ಕಿದುರಿಗೇಸರಿಯನಾದೊಡಂ ಸೀಳ್ವದಟು ಮಿಕ್ಕ ಶರಭಂಗಳಾ ಕೇಸರಿಗೆ ನಡುಗತೊಡಗಿದುವು (ಹಚಕಾ. ೫-೫೨).
[ಕರು$_2$ + ಇಕ್ಕು]

**ಕರುವಿಡಿಸು** (ಕ್ರಿ). ಎರಕ ಹೊಯ್ಯಿಸು; ಅಚ್ಚೊತ್ತಿಸು: ಚಿತ್ರಕನುಂ ತಾನುಮಲ್ಲದೆ ಪೆಜರಱಿಯದಂತು ಕರುವಿಡಿಸಿ ಲಾಕ್ಷಾರಸಾದಿಗಳಿಂ ಸಪ್ತಧಾತುಗಳಂ ಪಡೆದು (ಪಂರಾಮಾ. ೩-೨೫ ವ); ತನ್ನ ಗುರುಗಳ ರೂಪನೆ ಕರುವಿಡಿಸುವ ಕಡೆಯಿಸುವ ಕಂಡರಿಸುವ ಬೆಸನೆ ಬಸಮಾಗಿ (ಅರ್ಧನೇ. ೨-೫೪ ವ). [ಕರುವಿಡು + -ಇಸು$_3$]

**ಕರುವಿಡು** (ಕ್ರಿ). = ಕರುವಿಕ್ಕು : "ಕರುವಿಡು (ಕರು + ಇಡು) - ಲೇಪ್ಯ ಕರ್ಮಣಿ (ಎರಕಹೊಯ್)" (ಶಮುಧಾ); ಗಂಧರ್ವರುಯ್ಯಂದು ನಿನ್ನಂ ಕರುವಿಟ್ಟಂತಿರ್ದುದಿಲ್ಲಾ ನೆರೆದ ಕುರುಬಲಂ (ಪಂಪಭಾ. ೯-೫೫); ಕರಸ್ಥಲದ ಜ್ಯೋತಿಯದು ಕರುವಿಟ್ಟೆರಕವದು (ದೇವಾವ. ೧೦-೧೭); ಕರುವಿಟ್ಟ ಚಿಂತೆಯೆನೆ ಚಿತ್ರಿಸಿದಂತೆವೊಲಿರ್ದ ನಲ್ಲಳಂ (ವರ್ಧಪು. ೪-೭೭); ಉರಿಯ ಕರುವಿಟ್ಟಂತೆ ವಿಲಯದ ಹರನ ಖತಿ ಹೊಗೆವಂತೆ (ಕುವ್ಯಾಭೀ. ೨-೧೨); ಚಿತ್ರಿಸಬಾರದವನ ರೂಪು ಕರುವಿಟ್ಟು ಸೂತ್ರಿಸಿಯೆಱಿಯಲಶಕ್ಯ (ಭರಚ. ೧-೪೯).
[ಕರು$_2$ + ಇಡು$_1$]

**ಕರುವೀನ್** (ಕ್ರಿ). ಕರುಹಾಕು; ಮರಿಹಾಕು; ಈಯು : ಬಯಕೆದುರು ಕರುವೀಂಗೆ ಒಲ್ಮೆಗೆನೆ ಕಯ್ಯುಗಿಡನೊಡೆಯನಂ ನೆನೆದು (ಕಾಲೂರ. ೪೩-೫೭). [ಕರು$_1$ (< ಕಱು$_2$) + ಈನ್]

**ಕರುವೆ** (ನಾ). ಒಂದು ಬಗೆಯ ಸಸ್ಯ : "ಧರೋತ್ಥಿತಾ - ಕರುವೆ (ತುರುವೆ ?)" (ಒಷಧಿ. ೮೧). [?]

**ಕರುವೆಸ** (ನಾ). ಎರಕದ ಕೆಲಸ: ಸುತ್ತುಗತ್ತರಿಗೆ ವರೆಗೊಯ್ದು ಕರುವೆಸ ನಿದೆನಿಸಿ ಸುವ್ಯಕ್ತಮಾದ . . . ಪ್ರದೇಶ ಶುದ್ಧಿಯುಂ (ವರ್ಧಪು. ೭-೩ ವ).
[ಕರು$_2$ + ಬೆಸ$_1$]

**ಕರುವೇಱು** (ಕ್ರಿ). ಎರಕ ಹೊಂದು; ಮೂರ್ತಿಗೊಳ್ಳು: ಚೆಲುವಿನ ಕರುವೇತ್ತಿಹ ಗಂಡುಪುತ್ತಳಿಯ ಬಿತ್ತರವಡೆದೀ ಪಟ್ಟಣದೊಳಗೆ (ಕಂಸವಿ. ೯-೪೫). [ಕರು$_2$ + ಪೇಱು$_1$]

**ಕರುಷ** (ನಾ). ಒಂದು ತೂಕದ ಹೆಸರು: "ಭಾರಕ್ಕಿರ್ಛಾಸಿರ ತೊಲೆಯುಂ ಭಾರಕ್ಕಂ ಕರುಷವೆಂಟುಸಾಸಿರಮಕ್ಕುಂ" (ವ್ಯವಹಾ. ಅನುಬಂ. ೩-೧೧); ಕರುಷಕೆ ಗಿದ್ದಗೆ ನಾಲ್ಕುಂ (ವ್ಯವಹಾ. ಅನುಬಂ. ೩-೧೩).
[< ಸಂ. ಕರ್ಷ]

**ಕರುಷಕ** (ನಾ). ಭೂಮಿಯನ್ನು ಸಾಗುಮಾಡುವವನು; ಒಕ್ಕಲಿಗ; ಕೃಷಿಕ : ಕೋವಿದರು ಕರುಷಕರು ಪಣ್ಯಾಜೀವಿ ವಾಮನ ಮೂಕ ಬಧಿರಾಂಧಾವಳಿಗಳೊಪ್ಪಿದರು ಸಕಲದಿಶಾ ಸಮಾಗತರು (ಕುವ್ಯಾಆ. ೧೨-೨೧).
[< ಸಂ. ಕರ್ಷಕ]

**ಕರುಸೆ$_1$** 'ಕರಿಸ' ನೋ.

**ಕರುಸೆ$_2$** (ನಾ). (?) : ಹತ್ತಿ ಮಳವೆ ಗಯ್ಯಲವ್ ಭಂಡಿಯ ಕರುಸೆಯ ಮಳವೆಗೆರಡು ಬೀಸಿಗೆ ಜವಳಕ್ಕೆ ಪಲವರ್ ಪತ್ತು (ಎಇ. XIX, ೩೩-೨೮ ; 1135). [?]

**ಕರುಹಟ್ಟಿ** 'ಕಱುಹಟ್ಟಿ' ನೋ.

**ಕರುಹಾಕು** (ಕ್ರಿ). ೧. ಈಯು; ಈನು: ಹಸು ಇವೊತ್ತು ಕರುಹಾಕಿದೆ (ಯೋಧಪು. ೩). ೨. (ಕರಾ) (ಆಲಂ) ಸೋತುಹೋಗು: ಆ ವಿದ್ಯಾರ್ಥಿ ಪರೀಕ್ಷೆಯಲ್ಲಿ ಕರುಹಾಕಿದ (ರೂಢಿ).

[ಕರು$_1$ (< ಕಱು$_2$) + ಹಾಕು (< ಪಾಯ್ಕು$_1$)]

**ಕರುಹಾಲೆ** (ನಾ). ಒಂದು ಬಗೆಯ ಸಸ್ಯ: ಗೋಕರ್ಣ, ಕರುಹಾಲೆ (ಮೈಟಿಗಿ. ೭೫-೧೩೫). [?]

**ಕರುಳ್, ಕರುಳು** (ನಾ). ೧. ಹೊಟ್ಟೆಯೊಳಗಿನ ಸುರುಳಿಯಂತಿರುವ ಒಂದು ಪಚನಾಂಗ; ಅಂತ್ರ: "ಕರುಳದಾಂತ್ರಮಾಲೆ ಪುರೀತಂ" (ವಸ್ತುಕೋ. ೭೨-೨೮); ಅವನ ಕರುಳ ಪಿಣಿಲಿಂದೆನ್ನಂ ಮುಡಿಯಿಸುಗಾ ಮುಡಿಯುಂ (ಪಂಪಭಾ. ೭-೧೦); ನಿನ್ನ ಗಂಡುತನದ ಪುರುಳಂ ಕಂಡೆನ್ನ ತಂಗಿಯರ್ ಕರುಳಂ ಪಿಡಿದು ನಗೆಯೊಳ್ ಪೊರಳುತ್ತುಮಿರ್ದರ್ (ಪಂಚತಂ. ೨೮೪-೫); ಕರುಳ ಹೂಗೊಂಚಲಿನ ಮೂಳೆಯ ಬಿರಿಮುಗುಳ ನವಖಂಡದಿಂಡೆಯ (ಕುವ್ಯಾದ್ರೋ. ೬-೪೨); ಮುತ್ತಿನ ಹಾರವಿರಲು ಕರುಳಮಾಲೆ ಚಂದವೆ (ಪುರಂದ. ೨-೭೩-೪). ೨. (ಆಲಂ) ಅಂತಃಕರಣ; ಮಮತೆ; ಕನಿಕರ: ಕರುಳ ಕಲೆ ಪ್ರಕಟಿತವುಂಟೆ (ಬಸವ. ೮೨೫); ಕಂಗಳೊಳಗೆ ಕರುಳಿಲ್ಲ ಕಾಯದೊಳಗೆ ಮಾಯವಿಲ್ಲ (ಶೂನ್ಯಸಂ. ೧೨೨-೨೦); ಕಣ್ಣಱಿಯದೊಡಂ ಕರುಳಱಿಯದೆ (ಯಶೋಚ. ೩-೪೪); ಕೂಸಿನಲ್ಲಿನಿಸಾನು ಕರುಳಿಲ್ಲದಾಯ್ತು ಕ್ಕಟ (ಹೆಬ್ಬೆರ. ೩೩-೧೭). **ಕರುಳು**: ೧. "ಅಂತ್ರಂ ಪುರೀತಂ ಕರುಳು" (ಮಂಗರಾ. ೧೧೭-೫); ತಲೆಯಿಲ್ಲದ ತಲೆಯಾತಂಗೆ ಕರುಳಿಲ್ಲದ ಒಡಲು ನೋಡಾ (ಅವಚಂ. ೩-೯); ಸರಳ ಮೊನೆಯಲಿ ವೈರಿ ಸುಭಟರ ಕರುಳ ತೆಗೆದನು (ಕುವ್ಯಾದ್ರೋ. ೫-೭೭); ಉಡಿದ ತೊಡೆಗಳ ಮಿದುಳ ಖಂಡದ ಹಱಿದ ಕರುಳುಗಳ (ನಳಚ. ೯-೨೭); ಕರುಳು ಕಾಳಿಜಗಳು ಸುರಿವ ಖಾನರುಗಳ ನೆರವಿಯೊಪ್ಪಿತು ರಣದೊಳಗೆ (ಕಂನವಿ. ೧೫-೫೦). ೨. ಕರುಳು ಮಱುಗದೆ ಬಿಡುವುದೇ (ತೊರರಾ. ೪-೪-೬೩); ಕರುಳಿನ ಸತ್ಯ ಕರುಳಿಗರಿವಾಗದಿರುತ್ತದೆಯೆ? (ಹೊಸಕ್ಷಿ. ೨೩); ಅಂಗಾಲಿಗೆ ಹೇಸಿಗೆಯಿಲ್ಲ, ಕರುಳಿಗೆ ನಾಚಿಕೆಯಿಲ್ಲ (ಗಾದೆ).

**ಕರುಳಕುಡಿ, ಕರುಳಿನಕುಡಿ** = ಸಂತಾನ: ಇಂದು ಆ ಕರುಳಕುಡಿ ಎರಡೂ ಬಾಡತೊಡಗಿದ್ದವು (ದೀಪಹ. I, ೧೫೭); ಪಂತಮಾಮಾ ದತ್ತಕ ಮಾಡಿಕೊಂಡಿದ್ದರು. ಕರುಳಿನಕುಡಿಯನ್ನು ಕಲಮುವಮಾಡಿಕೊಂಡಿದ್ದರು. **ಕರುಳಬಳ್ಳಿ** = ಆಪ್ತ ಸಂಬಂಧ: ನೀರು ನೆಲಗಳ ಕರುಳಬಳ್ಳಿ ಹರಿದೀತೆಂದು ಈ ಉಸಿರು ಕಂಡೀತು ಒಂದೆ ಬೆಳಕನ್ನಂದು (ಸೂರ್ಯಪಾ. ೪೫-೧೩); **ಕರುಳಿನವರು** = ಆಪ್ತರು; ರಕ್ತಸಂಬಂಧಿಗಳು: ಸರಿಯ ಜನರು ನಗುತಲಿಹರು ಕರುಳಿನವರು ಕೊರೆಯುತಿಹರು . . . ಅಳುವ ಮಗುವ ತೋರಿ ತೋರಿ ಬೇಡುತಿರುವಳು (ವಿಸೀಗೀ. ೮೨-೧೫). **ಕರುಳುಕೊರೆ** = ಹೃದಯವನ್ನು ತಾಗು; ಮನೋವೇಧೆಯಾಗು: ಕೆದರುಗೂದಲ ಜಿಪ್ಪಿಯೊಬ್ಬಳು ತನ್ನ ಕರುಳುಕೊರೆಯುವ ಗೋಳಿನಿಂದ ಮತ್ತು ಅಳುಮೋರೆಯಿಂದ ಎಲ್ಲರ ಗಮನವನ್ನು ಸೆಳೆದಿದ್ದಳು (ಪುನರು. ೧೮೮). **ಕರುಳುಕರಗಿಸು** = ಮನಸ್ಸನ್ನು ಕರಗಿಸು; ಪ್ರೀತಿ ಹುಟ್ಟಿಸು: ಸರಳ ಅತಿಮುಗ್ಧ ನಿನ ಕಂವ ನಮದೆಲ್ಲ ಕರ[ರು]ಳು ಕರಗಿಸುವನು ಗುಣದಿಂದ (ಸಿದ್ಧಪು. ೩-೫೨). **ಕರುಳುಹರಿದುಕೊಳ್ಳು** = ಸಂಬಂಧವನ್ನು ಕಡಿದುಕೊಳ್ಳು: ವರದಾ ಹೋದಳೆಂದು ಕರುಳುಹರಿದುಕೊಳ್ಳಬಹುದೇ? (ಜಯಂತ. ೨೭೫)

[ದೇ. ‖ ಮಲ. ಕರಳ್, ಕರುಳ್, ತುಳು. ಕರಳ್, ಕಲ್ರ್; ಕೊಡ. ಕರೀ.]

**ಕರುಳಿರಿ** 'ಕರುಳಿಱಿ' ನೋ.

**ಕರುಳಿಱಿ, ಕರುಳಿರಿ** (ಕ್ರಿ). ಕರುಳನ್ನು ತಿವಿ; ಮನಸ್ಸು ನೋಯಿಸು: ಕರುಳಿಱಿವೀ ಕತೆ ಕಿವಿಯನ್ ಪೊಕ್ಕುಂ ಎನ್ನಯ ಮನಮುನ್ ಕೊಱಿದಪುದೆಂದೋ (ಬದ್ಧಪ್ರ. ೩೬-೭೮೮). **ಕರುಳಿರಿ**: ಬೆಳಗಿನಿಂದ ಮೇವಿಲ್ಲದೆ ಕರುಳಿರಿಯುವಂತೆ 'ಅಂಬಾ, ಅಂಬಾ' ಎಂದು ಅರಚುತ್ತಾ ಉರಿಬಿಸಿಲಿನಲ್ಲಿ ನಿಂತಿದ್ದ ಹಸುಗಳನ್ನು (ಪುನರು. ೨೮೭).

[ಕರುಳ್ + ಇಱಿ$_1$]

**ಕರುಳು** 'ಕರುಳ್' ನೋ.

**ಕರುಳುಗಡಿಕ** (ನಾ). ೧. ಕರುಳನ್ನು ಕತ್ತರಿಸುವವನು. ೨. (ಆಲಂ) ಹತ್ತಿರದ ನಂಟರನ್ನು ಕೊಲ್ಲುವವನು: ತಮ್ಮಯ ತಂಗಿ ದೇವಕಿ ಬಿರಿದೊಡವಳಂತೆ ಕರುಳುಗಡಿಕ ಗಡಾ ಮಗನು ನಿಷ್ಠುರನು ಪಾಪಿ ದುರಾತ್ಮನೆಂದಾ ತೆಜನನೆಲ್ಲವನಱುಹಿದಳು (ಸಾಳ್ವಭಾ. ೧೦-೧೭).

[ಕರುಳು (< ಕರುಳ್) + ಕಡಿಕ$_2$]

**ಕರುಳುಹರಕ** (ನಾ). ೧. ಕರುಳನ್ನು ಹರಿಯುವವನು. ೨. (ಆಲಂ) ಆಪ್ತಬಂಧುಗಳನ್ನು ಸುಲಿಗೆ ಮಾಡುವವನು (?): ಗುಂಡೇರಾಯ (ಕರುಳುಹರಕ ಗೃಹಸ್ಥನೊಬ್ಬ) . . . ರಾಯರ ಬೀಗ (ತಿಡುಗು. ೩೦).

[ಕರುಳು (< ಕರುಳ್) + ಹರಕ$_2$]

**ಕರುಳುಹುರಿ** (ನಾ). ಪ್ರಾಣಿಗಳ ಕರುಳಿನಿಂದ ತಯಾರಿಸಿದ ಹುರಿ: "ಕುರಿ, ಕುದುರೆ, ಕತ್ತೆ – ಇವುಗಳ ಕರುಳಿನಿಂದ (ಬೆಕ್ಕಿನದಲ್ಲ) ತೆಗೆದು ಹುರಿಮಾಡಿ, ಪಿಟೀಲು, ಟೆನಿಸ್‌ದಾಂಡು, ಮೊ. ಗಳಿಗೆ ಉಪಯೋಗಿಸುವ ಹುರಿ; ಕರುಳುಹುರಿ" (Catgut, ಇಂಕನಿ).

[ಕರುಳು (< ಕರುಳ್) + ಹುರಿ$_3$ (< ಪುರಿ$_3$)]

**ಕರುಳ್ತೊಡಕು** (ನಾ). (ಗರ್ಭನಾಳದಲ್ಲಿ) ಕರುಳು ಸಿಕ್ಕುಹಾಕುವಿಕೆ: ಅವನಿಜನರ್ಕಸುತಂ ಸಿಂಹ ವೃಷಾಜೋದಯದೊಳೇಕ ಲಗ್ನಸ್ಥಿತನಾಗೆ ವಿಲಗ್ನಗೃಹನವಾಂಶಕದವಯವದೊಳ್ ಸುತ್ತಿಸುಗೆ ಕರುಳ್ತೊಡಕಕ್ಕುಂ (ಜಾತತಿ. ೪-೩೧). [ಕರುಳ್ + ತೊಡಕು$_3$ (< ತೊಡಂಕು$_3$)]

**ಕರುಳ್ಪಿಣಿಲ್** (ನಾ). ಹೆಣೆದುಕೊಂಡಿರುವ ಕರುಳು: ರಣಾವನಿತಲಮಿರ್ದುದಂಕುರಿತಮಾದವೊಲೊಕ್ಕ ಕರುಳ್ಪಿಣಿಲ್ಗಳಿಂ (ಪಂರಾಮಾ. ೧೩-೪೯). [ಕರುಳ್ + ಪಿಣಿಲ್$_2$]

**ಕರೂರ** (ನಾ). ಒಬ್ಬಾತನ ಹೆಸರು: ವಿಳಾಸಯೊಟ್ಟಿಯಿಂ ಮೆಱೆವ ಕರೂರನ್ದ್ನಿಸಲಾಳಿಪೊರೀ ಸ್ತಿತಸಂಧ್ಯರ್ (ಎಕ. XIV, ಎಡತೊ. ೮೪-೩೧; 910). [?]

**ಕರೆ$_1$** (ಕ್ರಿ). ೧. ಬರಹೇಳು; ಬರಮಾಡು; ಆಮಂತ್ರಿಸು; ಆಹ್ವಾನಿಸು: "ಕರೆ – ಆಹ್ವಾನೇ, ವಸ್ತ್ರದಶೋಷಣ, ಗೋಕುಲೇಷು (ವಸ್ತ್ರದಶಾ = ಸೆರಗಿನ ತುದಿ; ಉಷಣ = ಮೆಣಸು)" (ಶಮಧಾ); ಮಗನಂ ಕರೆದೊಪ್ಪಿಸವೇಟಿ ಯುಧಿಷ್ಠಿರಂಗೆ ಮುಂ ಗೆಲ್ದ ವಸ್ತುವಾಹನ ಚಯಮಂ (ಪಂಪಭಾ. ೬-೭೬); ಇತ್ತಬಾಯಿತ್ತಬಾಯೆನುತಂ ತನ್ನ ಕೆಲಕ್ಕೆ ಕಾಂತೆ ಕರೆದು (ಕಾದಂಉ. ೨೪೦); ನಂಬಿ ಕರೆದೊಡೆ ಓ ಎನ್ನನೆ ಶಿವನು ನಂಬದೆ ನಚ್ಚದೆ ಬಱಿದೆ ಕರೆವರ ಕೊಂಬ ಮೆಟ್ಟಿ ಕೂಗೆಂದ (ಬಸವ. ೧೧೬); ಕರೆದು ಹೆಣ್ಣು ಕೊಟ್ಟರೆ ಅಳಿಯನಿಗೆ ಮಲರೋಗ ಬಂತು (ಗಾದೆ). ೨. ಕೂಗು; ಕುಕಿಲು; ಶಬ್ದಮಾಡು: ಪಲವುಂ ಕಾಗೆಗಳ್ ನೆರೆದು ಕರೆವ ಸರಮುಸಾಲಿಸಿ ಕೇಳ್ದು ಪೂರ್ವ ವೈರಮಂ ನೆನೆದು (ಪಂಚತಂ. ೨೦೨-೧೫); ಕಳಿಕೆಗೆಳಸಿ ಚಂಚುವನಿಟ್ಟೋರಂತೆ ಸವಿಸವಿದು ಸೊರ್ಕಿ ನಿರಂತರಂ ಕರೆದತ್ತು ಮಾವಿನೊಳ್ ಪರಪುಟ್ಟಂ (ಗಿರಿಕ. ೨-೪೨); ಕಿವಿಗಿನಿದಪ್ಪಂತಿರೆ ಕರೆವ ಕೋಗಿಲೆಯ ನುಣ್ಚರದಿಂದಂ ಬಿರಯಿಗಳ್ಗೆ ಮಾಡುವುದಟಿಲಂ (ಕಬ್ಬಿಕಾ. ೩೧); ಆಮ್ರಶಾಖೆಯೆಡೆಯೊಳ್ ಮಱಿಗೋಗಿಲೆ ಸಣ್ಣರಾಗದಿಂ ಕರೆಯೆ (ನಳಚಂ. ೫೦).

ಕರೆಕರೆ (ದ್ವಿರುಕ್ತಿ) : ಮುರಾರಿ ಕರೆಕರೆ ಧರಣಿಸುರರನು ಸರ್ವರನು ಬರಹೇಳು ಬೇಗದಲಿ (ಕುವ್ಯಾಅ. ೬೦೪. ೪-೫೨); ಕರೆಕರೆದಾಕ್ಷಣ ಕ್ರಯಕೀವ ಹರದರ ಸುರುಚಿರ ಗೃಹಗಳೊಪ್ಪಿದುವು (ಕಂನವಿ. ೬-೫೧). **ಕರೆಕಳಿವು, ಕರೆಕಳಿಸು** = ಬರಹೇಳು; ಬರುವಂತೆ ಹೇಳಿಕಳುಹಿಸು : ಮಾದಯನವರ ಅಣ್ಣತಂಮ್ಮಗಳ ಕರೆಕಳಿವಿ (ಎಕ. XI, ಹಿರಿಯೂ. ೭-೬; 1617 ?). ಬೀಗರನ್ನು ಕರೆಕಳಿಸಿದ್ದಾರೆ (ರೂಢಿ). **ಕರೆಕಳುಹು** = ಕರೆಕಳಿವು : ಅವರನ್ನು ಕರೆಕಳುಹಿದ್ದಾರೆ (ರೂಢಿ). **ಕರೆತರ್, ಕರೆತರು, ಕರೆತಾ** = ಕರೆದುಕೊಂಡು ಬರು : ಗಿಳಿಗಳ್ ಕರೆತಂದವು ತಮ್ಮ ಪೋತಮಂ (ಹವ್ಮಾರ. ೪-೬೨); ಭೀತಿಯಿಂದೋಡುತಿರ್ಪಲ್ಲರಂ ಕರೆತಂದು ಬೇರೆ ಮಠಗಳೊಳಿರಿಸಿ (ಚಬಪು. ೬-೨೦); ಎನಗೆಜಿಕವಾಗಿರುವನ ಕರೆತಂದರೆ ನೀಜ಼ಿ ನಿನಗೆ ಪರಿಪರಿ ಸೀರೆ ಜವಿಕೆಯಿತ್ತು ಪೊರೆವೆನು (ಕಂನವಿ. ೯-೪೩); ಈಕ್ಷಣ ಹೋಗಿ ಕರೆತಾ (ರೂಢಿ). **ಕರೆತರಿಸು** = ಕರೆದುಕೊಂಡು ಬರುವಂತೆ ಮಾಡು : ವಿಂಧ್ಯದ ಗಹನದಲು ಬಗಬರಲು ರೇಣುಕನೃಪತಿ ಕರೆತರಿಸಿ (ಸಂಭಪ. ೨೫-೫೫). **ಕರೆದುಕೊಳ್, ಕರೆಕೊ, ಕರೆದುಕೊ** = ೧. ಬರಮಾಡಿಕೊಳ್ಳು; ಸ್ವಾಗತಿಸು; ಸ್ವೀಕರಿಸು : ಸಲ್ಲೀಲೆಯಿಂ ತೀರ್ಚಿ ಸುಖದ ಸಂದಣಿಗಳಂ ಬಳಿಕ ಬಂದಲ್ಲಿ ಪುಗೆ ಕರೆದುಕೊಂಡಪೆವಯ್ಯ (ನಂಬಿರ. ೧-೮೫); ಅನುಗೆಡಲಾತನ ಹೊರಡಿಸಿ ಮತ್ತೊಬ್ಬ ಧನವುಳ್ಳ ಪುರುಷನ ಕರೆಕೊ (ಕಂನವಿ. ೬-೧೫೦). ೨. (ಮಗುವನ್ನು) ಎತ್ತಿಕೊಳ್ಳು: ಮಗು ಅಳುತ್ತಿದೆ, ಸ್ವಲ್ಪ ಕರೆದುಕೊ (ರೂಢಿ).

[ದೇ. ‖ ತಮಿ. ಕರೈ; ಮಲ. ಕರ; ತುಳು. ಕರೆ; ಪರ್ಜಿ. ಕೆರಿಪ್; ಕುರುಖ್. ಖರ್‌ಖ್ನಾ; ಮಲ್ತೊ. ಕಗ್ರೆ]

**ಕರೆ$_2$** 'ಕಜ಼ಿ$_1$' ನೋ.

**ಕರೆ$_3$** (ಕ್ರಿ). ಅಡಗು; ಮರೆಯಾಗು : "ಕರೆದಂ=ಅಡಂಗಿದಂ" (ಶಮದ. ಪರಿ. ೨). 'ತಲೆಗರೆ' 'ಮೆಯ್ಗರೆ' ಪರಾ. [ದೇ. ‖ ತಮಿ. ಕರ]

**ಕರೆ$_4$** (ನಾ). ೧. ದಡ; ತೀರ; ಮೇರೆ; ಸೀಮೆ : ಶ್ರೀಮತ್ ರಕ್ಕಸ ಬೆದ್ದೊಜ಼ಿಗರೆಯನಾಳುತ್ತಿರೆ (ಇಆ. VI, ೧೦೨-೮; 777); ಬಹುಶಾಸ್ತ್ರಶರಧಿಯ ಕರೆಯ ಕಂಡನು ಲವುಕಿಕದ ಕಲೆಯೆಲ್ಲವನು ತಿಳಿದ (ಸಾಳ್ವಭಾ. ೨೧-೧೨೦); ಸುಖವೆಂಬ ಕಡಲಿನ ಕರೆಯಲ್ತೆ ನಮ್ಮಯ ಪಂತಿ (ಭರಚ. ೪-೨೫); ಪೊಳೆಗಳ ಕರೆಯೊಳು ತೆವರೊಳು . . . ಉರು ಮೃಗವೆಸೆದಿರ್ದುವು (ಅನಂಚ. ೧೭-೧೧). ೨. ಬಟ್ಟೆಯ ಅಂಚು; ಸೆರಗಿನ ತುದಿಗೆ ನೇಯದೆ ಬಿಟ್ಟ ವಸ್ತ್ರದ ಎಳೆ: "ಕರೆ – ಆಹ್ವಾನೇ, ವಸ್ತ್ರದಶೋಷಣ, ಗೋಕುಲೇಷು (ವಸ್ತ್ರದಶಾ = ಸೆರಗಿನ ತುದಿ; ಉಷಣ = ಮೆಣಸು)" (ಶಮಧಾ); "ವಸನಾಂತಮಂಚಳಂ ವರ್ತಿಸಿಚಂ ದಶೆಯಂಚು ವಸ್ತಿಯಕ್ಕುಂ ಕರೆಗಳ್" (ವಸ್ತುಕೋ. ೭೭-೧೬); ಕರೆಗಳ್ ಮಿಳ್ಳಿಸೆ ಚಾಮರಂಗಳೆಲರರಿಂದಂ ಮೆಲ್ಪಿನಿಂ ನರ್ತಿಸುತ್ತಿರೆ (ಕಾದಂಪೂ. ೨೮).

**ಕರೆಗಣ್ಮಿಸು** = ತುಂಬಿ ಹರಿಯುವಂತೆ ಮಾಡು : ಕರುಣಾಮೃತವ ಕರೆಗಣ್ಮಿಸಿ ಪರಿಸುವ ಸಿರಿರಾಣಿಯಡಿಯ ಸೇವಿಪೆನು (ಹದಿಬ. ೭-೨). **ಕರೆಗಣ್ಮು** = ಮೇರೆ ಮೀರು; ತುಂಬಿ ತುಳುಕು; ಸೂಸಿ ಹರಿ: "ಕರೆಗಣ್ಮು (ಕರೆಗೆ + ಅಣ್ಮು) – ಕೂಲಾತಿಕ್ರಮಣೇ (ಮಿತಿಮೀರು)" (ಶಮಧಾ); ಸಪ್ತ ಸಮುದ್ರಂ ಕರೆಗಣ್ಮಿ ತನ್ನವಧಿಯಂ ದಾಂಟಿತ್ತು (ಪಂಪಭಾ. ೯-೯೪); ನಯನದೊಳ್ ಕರೆಗಣ್ಮಿದ ಹರ್ಷಬಾಷ್ಪವರ್ಷದಿಂ (ಪಂರಾಮಾ. ೧-೨೯).

[ದೇ. ‖ ತಮಿ. ಕರೈ; ಮಲ. ಕರ; ತುಳು. ಕೊಡ. ಕರೆ; ತೆಲು. ಕರ; ಬ್ರಾಹೂಈ. ಕರ್ರಕ್]

**ಕರೆ$_5$** (ನಾ). ಆಹ್ವಾನ; ಆಮಂತ್ರಣ : ಕಂಪಿನ ಕರೆಯಿದು ಸರಾಗವಾಗಿರೆ ಬೇರೆಯ ಕರೆ ಬೇಕೆ ? (ಸಖೀಗೀ. ೭೫-೩); ಕಂಬನಿಯ ಕರೆ ಕೇಳದೆ? (ಗಿಳಿವಿಂ. ೫೫-೩೬); ದುಷ್ಯಂತನಿಗೆ ಇಂದ್ರನಿಂದ ಕರೆ ಬರುತ್ತದೆ (ಧರ್ಮಸಾ. ೭೩). [< ಕರೆ$_1$]

**ಕರೆ$_6$** (ನಾ). ಕರಿಮೆಣಸು; ಎಳೆಯ ಕರಿಮೆಣಸಿನ ಗೊಂಚಲು : "ಕರೆ – ಆಹ್ವಾನೇ, ವಸ್ತ್ರದಶೋಷಣ, ಗೋಕುಲೇಷು (ವಸ್ತ್ರದಶಾ = ಸೆರಗಿನ ತುದಿ; ಉಷಣ = ಮೆಣಸು)" (ಶಮಧಾ); ಎಳಮಾವಿನ ಮಿಡಿ ಮಾಗುಳಿ ಮೆಣಸಿನ ಕರೆ ಬೆತ್ತಲಟ್ಟೆಯಿಾಳೆಯ ಗೊಲೆಯಿಂದಳವಟ್ಟಿರೆ ಲಾವಣಕಂಗಳನಿಕ್ಕಿದರ್ (ಸುಕುಮಾ. ೧೧-೩೦); ನಳನಳಿಸುವ ಮೆಣಸಿನ ಕರೆ ಹುಳಿಯಲ್ಲಂ ಬಿದಿರ ಕಜ಼ಿಲೆ ಯೇಲಕ್ಕಿಯ ಕಾಯ್ . . . ಬೇಜ಼ಿವೇಜ಼ಿ ಸವಿವಡೆದಿರವೇ (ನಳಚಂ. ೪೬೩); ಮೃಗಕುಲದ ಕಂಡಂಗಳಂ ಕೊರೆದು ವಲಿದು ಕರೆಗಳ ಲವಣಾದಿ ಸಂಬಾರಮಂ ಪಚ್ಚಿ ಬೇಯಿಸಿ (ನವಮೋ. ೯-೬). [? . / ತಮಿ. ಕಜ಼ಿ]

**ಕರೆ$_7$** (ನಾ). ಮಾಂಸದ ತುಂಡು, —ತುಣುಕು (?) : ಗಂಡನ ಪಿಡಿದು ನುಂಗಿದ ಮೀನ ತಾ ಚಿನಿಖಂಡವ ಕೊಯ್ವಂತೆ ಕೊಯ್ದು ಸಂಡಿಗೆಗೆಯಲು ಶಸ್ತ್ರದೊಳೂಜ಼ಿ ವರ ಮೇಲುಗೆಂಡದಿ ಕರೆಯ ಕಾಸಿದಳು (ಮೋಹತ. ೧೧-೪೭). [ದೇ. ‖ ತಮಿ. ಮಲ. ಕಜ಼ಿ]

**ಕರೆ$_8$** 'ಕಜ಼ಿ$_2$' ನೋ.

**ಕರೆ$_9$** 'ಖರೆಯ' ನೋ.

**ಕರೆಕಟ್ಟು** (ಕ್ರಿ). ಸೀರೆ, ಕಂಬಳಿ ಮೊದಲಾದುವುಗಳ ಅಂಚಿನ ಎಳೆಗಳನ್ನು ಹೆಣೆದು ಕಟ್ಟು : ಈ ಕಂಬಳಿಗೆ ಬಣ್ಣದ ಕರೆಕಟ್ಟಿರುತ್ತದೆ (ಮುಂಬಯಿ. ೫-೧೨೩); ಸೀರೆಗೆ ಕರೆಕಟ್ಟಿಸಬೇಕು (ರೂಢಿ).

**ಕರೆಕಟ್ಟುವವನು** = ಕಂಬಳಿಗೆ ಕರೆಕಟ್ಟುವುದೆ ಉದ್ಯೋಗವಾಗಿರುವ ಕುರುಬ (ಕ). [ಕರೆ$_4$ + ಕಟ್ಟು$_1$]

**ಕರೆಕರೆ** 'ಕರಕರ' ನೋ.

**ಕರೆಕರೆಗ** (ನಾ). ಕರೆಕರೆ ಮಾಡುವವನು; ತೊಂದರೆ ಕೊಡುವವನು : "ಕುಥಃ, ಕೋಥನ್, ಕೋಥಕಃ, ಈ ೩ ಕರೆಕರೆಗಂ (ಕಾಶಕ್ಯ. ೨೪೮). [ಕರೆಕರೆ (< ಕರಕರ) + –ಗ$_3$]

**ಕರೆಕರೆಗೊಳ್** 'ಕರಕರೆಗೊಳ್' ನೋ.

**ಕರೆಕಾಡು** (ನಾ). (ಕರಶ) ಸಾಗುವಳಿ ಭೂಮಿಯ ಸುತ್ತಲೂ ಇರುವ ಕಾಡು : ಸೆಟ್ಟರ ಆಸ್ತಿ ಚಿನ್ನದಂತಹ ಆಸ್ತಿ. ಅದಕ್ಕೆ ಬೇಕಾದಷ್ಟು ನೀರೂ ಕರೆಕಾಡು ಇದೆ (ಮಣ್ಣನಂ. ೧೫); ಸಾಕಷ್ಟು ಕರೆಕಾಡಿಲ್ಲದ ಆಸ್ತಿಗೆ ಇಷ್ಟೊಂದು ಕ್ರಯವೇಕೆ ? (ರೂಢಿ). [ಕರೆ$_4$ + ಕಾಡು$_2$]

**ಕರೆಗಂಟೆ** (ನಾ). ಕರೆಯುವ ಸಂಕೇತವಾಗಿ ಬಾರಿಸುವ ಗಂಟೆ; ಎಚ್ಚರಿಸುವ ಗಂಟೆ: ಶ್ರೀಧರ ಕರೆಗಂಟೆ ಬಾರಿಸಿದಾಗ ಬಾಗಿಲು ತೆಗೆದುದು ಮಾತ್ರ ಯಶೋದೆ (ವಾತ್ಸಲ್ಯ. ೩೬); ಕರೆಗಂಟೆಯನ್ನು ಒತ್ತುವ ಮೊದಲು ಕರವಸ್ತ್ರದಿಂದ ತಲೆಯನ್ನು ಒರಸಿಕೊಂಡ (ಹೊಸಕ್ಷಿ. ೨೭೩). [ಕರೆ$_1$ + ಗಂಟೆ$_2$]

**ಕರೆಗಣ** (ನಾ). ನೀರು ತಳಿದು ಗಟ್ಟಿಮಾಡಿದ ಕಣ : "ಕಣವನ್ನು ಮಾಡುವಾಗ ನೀರುಗ್ಗಿ ಊಬೊಗೆದು ಮೇಟಿಯಿಲ್ಲದೆ ನೆಲವನ್ನು ತುಳಿಸುವುದಕ್ಕೆ 'ಕರೆಗಣ'ವೆಂದು ಕರೆಯುವರು" (ಕನ್ನಜಾ. ೧೩೧ ಅಡಿಟಿ). 'ನೀರುಗಣ' ಪರಾ. [ಕರೆ ? + ಕಣ$_1$ (< ಕಳ$_3$)]

**ಕರೆಗಲ್ಲು** (ನಾ). ೧. ಗಡಿಯ ಕಲ್ಲು; ಊರು ಕಟ್ಟುವಾಗ ನೆಟ್ಟು ಪ್ರತಿವರ್ಷ ಪೂಜೆಮಾಡಲಾಗುವ ಎರಡು ಕಲ್ಲು (ರೀವ್). ೨. "ಊರ ಅಗಸಿಯ ಬಾಗಲಲ್ಲಿರುವ ಕಲ್ಲು" (ಪ್ರಭಣ್ಣ. ೪೨೧).

[ಕರೆ$_4$ + ಕಲ್ಲು (< ಕಲ್$_3$)]

**ಕರೆಗಾರ** (ನಾ). ಕರೆಕಟ್ಟುವವನು (*).
[ಕರೆ$_4$ + -ಗಾರ (< -ಕಾಱ)]

**ಕರೆಗೊಯ್** (ಕ್ರಿ). (ಹೊಸವಸ್ತ್ರ ಮೊದಲಾದುವುಗಳ) ಸೆರಗಿನ ಕೊನೆಯನ್ನು ಕೊಯ್ದು ಉಡಲು ಆರಂಭಿಸು: ಕರೆಗೊಯ್ದ ಸೀರೆಯಂತೆ ರಾಶಿಗೆ ಬಂದಾರಂಬದಂತೆ (ಧರ್ಮಾಮೃ. ೧೦-೫).
[ಕರೆ$_4$ + ಕೊಯ್$_1$]

**ಕರೆತ$_1$** (ನಾ). ಆಹ್ವಾನ; ಕರೆ: "ಕ್ರುಶ - ಆಹ್ವಾನೇ, ಕರೆತದೊಳ್" (ಕಾಶಕ್ಯ. ೧೫೦); "ಹೂತಿಃ, ಹೂತಂ, ಆಹ್ವಾನಂ, ಈ ೩ ತೊಲಗಿಕೆಯುಂ, ಕರೆತವುಂ" (ಕಾಶಕ್ಯ. ೧೬೩). [ಕರೆ$_1$ + -ತ$_2$]

**ಕರೆತ$_2$** (ನಾ). ಹಾಲನ್ನು ಕರೆಯುವಿಕೆ: "ದುಹ - ಪ್ರಪೂರಣೇ, ಕರೆತದೊಳ್" (ಕಾಶಕ್ಯ. ೧೬೩). [ಕರೆ$_8$ (< ಕಱೆ$_1$) + -ತ$_2$]

**ಕರೆದುಡ್ಡು** (ನಾ). ಒಂದು ನಾಣ್ಯದ ಹೆಸರು: ಶಾಹೂ ದುಡ್ಡಲ್ಲದೆ ಶಾಹೀ ದುಡ್ಡು ಅಥವಾ ಕರೆದುಡ್ಡು ನಡಿಯುತ್ತಿತ್ತು (ಕಭಾಗೆ. ೨೮೧).
[ಕರೆ ? + ದುಡ್ಡು]

**ಕರೆನಾಡು** (ನಾ). ೧. ಕಡಲ ತೀರದ ಪ್ರದೇಶ; ಕರಾವಳಿ: ನಮ್ಮ ಹಿರಿಯರು . . . ಉತ್ತರಕನ್ನಡ, ದಕ್ಷಿಣ ಕನ್ನಡ, ಮಲೆಯಾಳ ಮೊದಲಾದ ಕರೆನಾಡುಗಳಲ್ಲಿ ಬಂದು ನೆಲಸಿದರು (ಕಂನಾಸಾ. ೧೦). ೨. ಕಡಲ ಕರೆಯಿರುವ ನಾಡು; ಸಮುದ್ರದ ದಂಡೆಯುಳ್ಳ ದೇಶ: ಮುನ್ನೀರ್ ಮೊಱಂಗು ಕರೆನಾಡೇ (ಅಶ್ವತ್ಥಾ. ೧೬-೩೫೨). [ಕರೆ$_4$ + ನಾಡು]

**ಕರೆಪ, ಕರಪ, ಕರಹ, ಕರೆಯ, ಕರೆಹ** (ನಾ). ಕೂಗು; ಕರೆಯುವಿಕೆ; ಆಹ್ವಾನ: ಅಂಕದ ಕಳಕೆ ನಡೆವ ಮಾಸಾಳ್ಗಳ ಕಂಬಿಯವರ ಕರೆಪಕ್ಕೆಳ್ದು ತಳುಮಾಡದೆ ಪೊಱಮಡುವೆಕ್ಕಟಿಗರ (ಜಯಕಾ. ೧೨-೧೪). **ಕರಪ**: ಅರಸರ ಕರಪಂ ತನಗಾದರದಿಂದಾಗಳ್ ಬರಲ್ಕೆ (ನೇಮಿಸಂ. ೧೪-೧೨೦); ಪಡಿಯರಗರಪದಿಂದವೆಯೊರ್ವನಪಾಲ ನಡೆತಂದಾವೋಲಗವ ಕಡುನೇಹದಿಂ ಹೊಕ್ಕು (ಶ್ರೀಪಾಲ. ೪-೮). **ಕರಹ**: ಕಿವಿಯಲಿಕ್ಕಿದೋಲೆಯಂತೆ ಸೂಳೆಯರ ಕರಹದಂತೆ (ಧರ್ಮಾಮೃ. ೮-೧೪೬ ಅಡಿಟ); ಕರಹದೆ ಸೂಳೆ ಸುತ್ತುವಳೊ ಕುತ್ತುವಳೋ ಮನೆವಾರ್ತೆಗೀವಳೋ (ಅನಂಪು. ೮-೪೯); ನರಿ ಮೊಲಂಗಳ ಹಕ್ಕಿ ಹರಿಣಿಯ ಕರಹವೇಗುವವೆಂದು ಜಱಿದನು ಶಕುನ ಕೋವಿದರ (ಕುವ್ಯಾಸ. ೧೩-೪). **ಕರೆಯ**: ಕಾದುವರೆ ನೀವು ನಮ್ಮ ಕರೆಯಮಂ ಕಳುಪಿದರೆ ನಾವು ಬಂದೇವು (ತುರಂಗ. ೩೯-೪). **ಕರೆಹ**: ಸೂಳೆಯ ಕರೆಹದಂತೆ ಕುಂಟಣಿಯ ಕೂರ್ಮೆಯಂತೆ (ಧರ್ಮಾಮೃ. ೬-೧೨೨); ಸೂಱಾಯ್ತ್ತರ ಕರೆಹಮಂ ಸನ್ನೆಗೆಯ್ವಂತೆ ರಾಜಾಂಗಣದೊಳಗೆ ಮಂಗಳಾಚಾರ ಸಂಗೀತಕಮಂ ನೆಗಟ್ವ (ಅನಂಪು. ೫-೫ ವ). [ಕರೆ$_1$ + -ಪ$_2$]

**ಕರೆಬಂಟೆ** (ನಾ). ತಿಳಿನೀಲಿ ಹೂವುಬಿಡುವ ಒಂದು ಬಳ್ಳಿ (*). [?]

**ಕರೆಬಯಲು** (ನಾ). ನದಿಯ ಅಂಚಿಗಿರುವ ಭೂಮಿ: "(ಪ್ರವಾಹ ಬಂದಾಗ ಮುಳುಗಿಹೋಗುವ) ನದಿಯ ಪಕ್ಕದ ಚಪ್ಪಟೆಯ ಭೂಮಿ; ಕರೆಬಯಲು" (Holm. ಇಂಕನಿ).
[ಕರೆ$_4$ + ಬಯಲು (< ಬಯಲ್)]

**ಕರೆಬರೆ** (ನಾ). ಅಂಚಿನ ಪ್ರದೇಶ; ಆಸುಪಾಸು: ಮುದುಕ ಇಪ್ಪತ್ತೈದು ಬಟ್ಟೆ ಭೂಮಿ ಮತ್ತು ಅದಕ್ಕೆ ತಗಲಿದ್ದ ಕರೆಬರೆಗಳನ್ನು ಬಿಟ್ಟು ಹೋಗಿದ್ದ (ಮಸಕೂ. ೬). [ಕರೆ$_4$ + ಬರೆ ?]

**ಕರೆಮರ$_1$** 'ಕರೆಮುರ್ರೆ$_2$' ನೋ.

**ಕರೆಮರ$_2$** (ನಾ). ಒಂದು ಜಾತಿಯ ಮರ: (ಮೈಔಗಿ. ೩೧-೫೯೬).
[ಕರೆ ? + ಮರ$_1$]

**ಕರೆಮುರ್ರೆ$_1$** 'ಕಱಿಮುಱಿ' ನೋ.

**ಕರೆಮುರ್ರೆ$_2$, ಕರೆಮರ$_1$, ಕರೆಮುರೆ** (ನಾ). = ಕರೆಬರೆ: ಅಡಕೆ ಸಲುವ ಕರೆ[ಬ]ಮರೆ ಸಹವಾಗಿ (ಸೌಇಎ. ಕಾರಕಲ್, ೪೬೮-೧೪; 1394). **ಕರೆಮರ**: ಈ ಚತುಸೀಮೆಯ ಕರೆಮರ ಜಲಪಾಷಾಣ ನಿಧಿ ನಿಕ್ಷೇಪ ಸಹಿತ ಮೂಲವಾಗಿ ಕೊಂಡ ಯಿಾ ಕ್ಷೇತ್ರಕ್ಕೆ (ಸೌಇಇ. IX-ii, ೪೫೬-೨೫; 1402). **ಕರೆಮುರೆ**: ಈ ಭೂಮಿಗಳಿಗೆವುಳ್ಳ ಕರೆಮುರೆ ಮನೆ ಬಾವಿ ಹಲಸು ಮಾವು ಸುಂಬೆನಿಕ್ಕಿ ಉರ್ಕ್ಕಂದ್ರ್ದ ಕದಿರು ಜಲ ಪಾಷಾಣ ಸಹ ಮೂಲಧಾರೆಯನು ಯೆರದು ಕೊಟ್ಟು (ಎಇ. XX, ೮-೪೧; 1556). [ಕರೆ$_4$ + ಮರೆ ?. / ತುಳು. ಕರೆಮುರೆ]

**ಕರೆಮುರೆ** 'ಕರೆಮುರ್ರೆ$_2$' ನೋ.

**ಕರೆಯ** 'ಕರೆಪ' ನೋ.

**ಕರೆಯಟ್ಟು** (ಕ್ರಿ). ಕರೆಯನ್ನು ಕಳಿಸು; ಕರೆಕಳಿಸು: ಮುಕ್ತ್ಯಂಗನೆ ಕರೆಯಟ್ಟಿದಾ ದೂತಿ ಬಂದು ಪೊರೆಸಾರ್ದು ಪೇಳ್ವಂತೆ ನೃಪನ ಕೆನ್ನೆಯೊಳೊಂದು ನರೆಯಿದ್ದುದಾ ಸಮಯದೊಳು (ಭರಜ. ೬೬-೧೯).
[ಕರೆ$_2$ + ಅಟ್ಟು$_2$]

**ಕರೆಯಿಸು, ಕರಯಿಸು, ಕರಸು, ಕರಿಸು$_2$, ಕರೆಸು** (ಕ್ರಿ). ಬರಮಾಡು; ಹೇಳಿಕಳುಹಿಸು; ಆಹ್ವಾನಿಸು: ಬೇ[ಳ್ಪ] ವಿಪ್ರೋತ್ತಮರಂ ಕರೆಯಿಸಿ (ಸೌಇಇ. XI-i, ೧೪-೧೬; 872); ಶಕುನಿಗರಂ ಕರೆಯಿಸಿ ಈ ಶಕುನಮದೇನಂ ಪೇೞ್ದಪ್ಪುದೆಂದು ಬೆಸಗೊಳ್ವುದುಂ (ಪಂಚತಂ. ೧೨೬-೧೩); ಸುರಗುರುವಂ ಕಳಿಪಿ ಕಾಮನಂ ಕರೆಯಿಸಿ (ಗಂಕ. ೨ ಕಥಾಗರ್ಭ); ಒಬ್ಬ ಓಲೆಕಾರನನ್ನು ಕಳುಹಿ ಭರಮನನ್ನು ಕರೆಯಿಸಿದರು (ಜೀವರಂ. ೨೯). **ಕರಯಿಸು**: ತುಂಬುರನಂ ಕರಯಿಸಿ ನೀನಾಗಳು ಬೊಪ್ಪದೇವಂಗೇನಂ ಬಿನ್ನೈಸುತಿರ್ದೆ (ನಂಬಿರ. ೪-೯೪). **ಕರಸು**: ಮರುತ್ಪುತ್ರಂ ಬಱಿಯಟ್ಟಿ ಕರಸಿ ತೋಱಲ್ಕೆ (ಗದಾಯು. ೮-೪೪); ಕರಸೆ ಬಂದ ಪರಿಜನಂಗಳ್ವೆರಸು (ನಂಬಿರ. ೧೨-೧೧); ರವಿತನೂಜನ ಕರಸಿ ಪಂತಿಯಲಿ (ಕುವ್ಯಾಭೀ. ೧-೧೬); ದ್ವಿಜರ ಸನ್ನುತ ಚೆಟ್ಟದ ಚಾಮೇಂದ್ರ ಕರಸಿ (ಕಂನವಿ. ೪-೬೪). **ಕರಿಸು$_2$**: ಬಂಟರನೆಲ್ಲರ ಕ[ಪಾಠಾಂ. ಬ]ರಿಸೋದು ರೊಕ್ಕ ಕಂಠಿ ಸರಿಗೆಯನು ಗಳಿಸೋದು ರೊಕ್ಕ (ಪುರಂದ. ೨-೪೮-೪); ದೊರೆ ರಾಯನರಸೇಂದ್ರನ ದಳಪತಿಯಾಗ ಕರಿಸಿ ಬೇಹಿನ ಚರರುಗಳ (ಕಂನವಿ. ೧೫-೪); ಮುಖ್ಯಮುಖ್ಯ ಪಾಳೇಗಾರರನ್ನು ರಾಜಧಾನಿಗೆ ಕರಿಸಿಕೊಂಡು . . . ನೇಮಿಸಿದನು (ಮುಂಬಯಿ. ೪-೮೧). **ಕರೆಸು**: ಅವರೊಳೊಬ್ಬರಂ ಕೊಂಬುದೆಂದಲ್ಲಿ ತನ್ನಯ ರಾಣಿವಾಸಮಂ ಕರೆಸುತಂ (ಇಹರ. ೩೫); ಜಿನಕುಲವೃಂದಮಂ ಕರೆಸಿದೊಡವರು ಭೂಪಾಲಕನ ಸಭೆಗೆ ಬಂದು (ಬಸಪು. ೫೧-೧೦); ಏನು ಕರೆಸಿದಿರ್ರೈ ಪ್ರಯೋಜನವೇನು (ಕುವ್ಯಾಸ. ೨-೧೦). [ಕರೆ$_1$ + -ಇಸು$_3$]

**ಕರೆಯೋಲೆ** (ನಾ). ಕರೆಯುವ ಕಾಗದ; ಆಮಂತ್ರಣ ಪತ್ರಿಕೆ: ನಾಲ್ವಡಿಕೃಷ್ಣರ ಮದುವೆಯ ಕರೆಯೋಲೆ ಸೀಕೆಯ ಗೌಡರ ಮನೆಗೆ ಬಂದಿತ್ತು (ಇಂಚಾಪ. ೬-೨೩). [ಕರೆ$_1$ + ಓಲೆ]

**ಕರೆವಟ್ಟಣ** (ನಾ). ಗಡಿಯಲ್ಲಿರುವ ಪಟ್ಟಣ; ಕಡಲತೀರದಲ್ಲಿರುವ ಪಟ್ಟಣ; ರೇವುಪಟ್ಟಣ: ಮುತ್ತಿನ ಹೊಳೆಗೆಮ್ಮ ರಾಯನ ಕಾವಲು ಸುತ್ತಣ ಕರೆವ[ಪಾಠಾಂ. ಪ]ಟ್ಟಣಗಳು ತೆತ್ತು ಸುಂಕವ ಸುಖದೊಳಗಿಹರು (ಕುರಾಸಾಂ. ೧೦-೧೮). [ಕರೆ$_4$ + ಪಟ್ಟಣ]

**ಕರೆವಿಡಿ** (ಕ್ರಿ). ದಂಡೆಯನ್ನು ಹಿಡಿ; ತೀರ ಪ್ರದೇಶವನ್ನು ಅನುಸರಿಸು: ಕರೆವಿಡಿದು ಬಳೆಯುವಟ್ಟಣಮುರಿವುದು ಎಱೆಯಂಗ ನೃಪನ ಕೋಪಾನಳನಿಂ ಸ್ಮರಿಯಿಸಿದುದು ರಾಮಶರಸ್ಫುರಿತಾಗ್ನಿಯನಬ್ಧಿವೀಚೀನಿಚಯಾಚಕಿತಂ (ಎಕ. V, ಬೇಲೂರು. ೬೧-೪೪; 1117).
[ಕರೆ$_4$ + ಪಿಡಿ$_1$]

**ಕರೆವು** (ನಾ). ಕೂಗು; ಆಹ್ವಾನ; ಆಮಂತ್ರಣ: ಇದೋ ಅರೆವೋ ಮರೆವೋ ಅವಳಿಜವಳಿ ತರವೋ ಧ್ರುವಾಸ್ಮೃತಿಯಾ ಕರೆವೋ (ಸೂರ್ಯಪಾ. ೨-೧೬). [ಕರೆ$_1$ + -ವು]

**ಕರೆವೆರಸು** (ಕ್ರಿ). ಸೆರಗಿನ ತುದಿಯಿಂದ ಕೂಡು; ಅಂಚುಳ್ಳದ್ದಾಗಿರು; ಕರೆಕಟ್ಟಿರು: ಕರೆವೆರಸಿದ ಪೊಸದುಗುಲದ ತೆರಳ್ಕೆವೆತ್ತುಡೆ . . . ಏಂ ಮನಂಗೊಳಿಸಿದುದೋ (ಆದಿಪು. ೪-೩೬).

[ಕರೆ$_4$ + ಬೆರಸು$_1$]

**ಕರೆಸು** 'ಕರೆಯಿಸು' ನೋ.

**ಕರೆಹ** 'ಕರೆಪ' ನೋ.

**ಕರೆಹಟ್ಟಿ** (ನಾ). ಹಾಲು ಕರೆಯುವ ಸ್ಥಳ: ಪೀಂಚಲು ಕಣ, ಕರೆಹಟ್ಟಿ, ಸೌದೆಕೊಟ್ಟಿಗೆಗಳನ್ನು ಬಳಸಿ ಹಿತ್ತಲು ಕಡೆಯ ಬಾಗಿಲಿಗೆ ಹೋದಳು (ಮಲೆಮ. ೨೨೨). [ಕರೆ$_2$ (< ಕಱೆ$_1$) + ಹಟ್ಟಿ$_1$ (< ಪಟ್ಟಿ$_1$)]

**ಕರೆಹಟ್ಟಿಗ** (ನಾ). "ಗೋಷ್ಠಾಧಿಕಾರಿ; ಗೊಲ್ಲ" (ಪ್ರಥಣ್ಣ ೪೨೨).

[ಕರೆಹಟ್ಟಿ + -ಗ$_3$]

**ಕರೇಟು** (ನಾ). ಕೊಕ್ಕರೆ; ಕರಟು: ಕೃಕರ ಕರೇಟು ಕುಕ್ಕುಟ . . . ಪ್ರಕರದಿಂದೆ ವಿರಾಜಿಕುಮುನ್ನತಂ ವನಂ (ಹವಿಶ್ಮರ. ೪-೭೨).

[ಸಂ.]

**ಕರೇಣು** (ನಾ). ೧. ಹೆಣ್ಣಾನೆ; ಪಿಡಿ: ಬೞಿವೞಿಗೊಟ್ಟ ಮದಕರಿ ಕರೇಣು ಜಾತ್ಯಶ್ವ ಶಶಿತಾರ ಹಾರ ವಸ್ತುಗಳಂ ಕೆಯ್ಕೊಂಡು (ಪಂಪಭಾ. ೪-೪ ವ); ಇಭಂ ಕರೇಣುಗೆ ಲವಂಗದಳಂಗಳನೀವ ಚಿತ್ರಮುಂ ತಳೆದು (ಮಲ್ಲಿಪು. ೨-೭೩). ೨. ಹೇಡಿ; ಪುಕ್ಕಲು ಮನುಷ್ಯ. ೩. ಧೂಳು. ೪. ಒಂದು ಜಾತಿಯ ಮರ; ಕರ್ಣಿಕಾರವೃಕ್ಷ: "ಪೆಣ್ದಂತಿಯತೀವಭೀರು ರಜಭೂಜ ವಿಶೇಷ ಕರೇಣುವಾಚಕಂ" (ನಾನಾರ. ೧೨೧).

[ಸಂ.]

**ಕರೇತರ** (ನಾ). ಜಗಳ; ಕಾಳಗ: "ದೋರ್ಮರ್ಧ್ಯಂ, ಕರೇತರಂ - ಈ ೨ ಜಗಳಂ" (ಹಲಾಯು. ೧೨೫-೭೬); "ದೋರ್ಮರ್ಧ್ಯಮೆನೆ ಕರೇತರ [ಪಾಠಾಂ. ಕರೀರಕ, ಕಲೆಕರ] ಮೆನಲು ಜಗಳಕ್ಕೆ ನಾಮಮುಕ್ಕುಂ" (ಮಂಗರಾ. ೧೩೩-೩೦). [ಸಂ.]

**ಕರೋಟ** (ನಾ). ತಲೆಬುರುಡೆ: ಮಲ್ಲಿಗೆ ಸರದಂದದಿ ಪರಿಮಳಿಸುವ ಮಾಲಿಕೆಯೆಂದು ಕರೋಟಗಳನ್ನುರದಲ್ಲಿರಿಸಿದವನಲ್ಲಾ (ಭಕ್ತಿಸ. ೨೦-೧). [ಸಂ.]

**ಕರೋಟಿ$_1$** (ನಾ). ಆನೆಗಳನ್ನು ಕಟ್ಟುವ ಲಾಯ: ಅವರ ಮನೆ ಕರೋಟಿ ಹತ್ತಿರ ಇದೆ (ರೂಢಿ). [?]

**ಕರೋಟಿ$_2$** (ನಾ). = ಕರೋಟ: ನೆತ್ತರ ಕಡಲ್ ಪರಿವಟ್ಟೆ ಕರೋಟಿಗಳ ಸಂದಣಿಸುವ ಭೂತಕೋಟಿಗಳಿನೊಪ್ಪಿರೆ (ಎಕ. V, ಅರಸೀ. ೧೦೨(a)-೪೭; 1100?); ಮುದದಿಂ ತಾಳ್ದ ಕರೋಟಿ ಮಧ್ಯಕಮದರ್ಾ ಕೂರ್ಮಾನನಂ ನಿನ್ನ ಪೇರೆರ್ದೆಯೊಳ್ (ಶ್ರೀಸೋಶ. ೨೮). [ಸಂ.]

**ಕರೋಟಿಮಾಲಿ** (ನಾ). ತಲೆಬುರುಡೆಯ ಮಾಲೆಯನ್ನು ಧರಿಸಿದವನು; ಶಿವ: ಕಣ್ಗೆಸೆದಂ ತ್ರಿಶೂಲಿಯಸಮ ಕರೋಟಿಮಾಲಿ (ಭಕ್ಶಾಚ. ೧-೧೪). [< ಸಂ. ಕರೋಟಿಮಾಲಿನ್]

**ಕರೋಟಿಮಾಲೆ** (ನಾ). ತಲೆಬುರುಡೆಗಳ ಮಾಲೆ: ಇಕ್ಕಿದ ಕರೋಟಿ ಮಾಲೆಯೊಳಗಿಪ್ಪ ರುದ್ರರು ಕೋಟಿ (ಅವಚಂ. ೨೫೧-೧೧೪೪); ಹರನ ಕೊರಳಲ್ಲಿಪ್ಪ ಕರೋಟಿಮಾಲೆಯ ಶಿರದ ಲಿಖಿತವ ಕಂಡು (ಬಸವ. ೫೩೯); ಎಸೆವ ಕರೋಟಿಮಾಲೆಯುತ ಸೋಮಸಮಾಖ್ಯೆಯೆ ಸೋಮನೆಂದು ಬಣ್ಣಿಸುವುದು ಧಾತ್ರಿ (ಎಕ. VII, ಶಿಕಾರಿ. ೨೩೬-೫೨; 1174).

[ಕರೋಟಿ$_2$ + ಮಾಲೆ]

**ಕರೋಡ**, ಕರೋರ (ನಾ). ನೂರು ಲಕ್ಷ; ಒಂದು ಕೋಟಿ (+). **ಕರೋರ**: ಒಂದು ಕರೋರ ದಾಮುಗಳುತ್ಪನ್ನವಾಗುವ ಪ್ರದೇಶಗಳು ಒಬ್ಬೊಬ್ಬ ಅಧಿಕಾರಿಯ ಕಯ್ಕೆಳಗೆ ಕೊಡಲ್ಪಟ್ಟವು (ಅಕ್ಬರ. ೧೨೬).

[← ಹಿಂ. ಕರೋಡ್]

**ಕರೋಡಗಿರಿ** (ನಾ). ೧. ದಾರಿಯ ಸುಂಕ; ಜಕಾತಿ: ನಮ್ಮಲ್ಲಿಯ 'ಜಕಾತಿ' ಹೈದರಾಬಾದ ನಿಜಾಮಶಾಹಿಯಲ್ಲಿ 'ಕರೋಡಗಿರಿ'ಯಾಗುತ್ತದೆ (ಭಾಷಾಶಾ. ೧೨). ೨. ದಾರಿಯ ಸುಂಕವನ್ನು ವಸೂಲಿ ಮಾಡುವ ಖಾತೆ: ಅವರು ಕರೋಡಗಿರಿಯಲ್ಲಿ ಕೆಲಸಮಾಡುತ್ತಿದ್ದಾರೆ (ರೂಢಿ). [← ಮರಾ. ಕರೋಡಗಿರೀ]

**ಕರೋತಿ** (ನಾ). ಕರಿಯ ಓತಿ; ಕಪ್ಪನೆಯ ಓತಿ (?): ರಸದ ಬಾವಿಯಲ್ಲಿ ಆಸಿಯ ಮಡುವ ಕಲಕಿ ಕತ್ತರಿವಾಣಿಯ ಗೊತ್ತ ಕೊಯ್ದು ಕರೋತಿಯ ಕಣ್ಣ ಕುತ್ತಿ ಅಸ್ವನಚಿತ್ತವ ಕಿತ್ತು (ಅಜಿಮಾ. ೪೦). [?]

**ಕರೋಬಾ**, ಕರಬ್ಬ$_2$ (ನಾ). ಒಂದು ಬಗೆಯ ಸಸ್ಯದ ಬೀಜ. 'ಕರೋಬಾಮಣಿ' ಪರಾ. **ಕರಬ್ಬ$_2$**: ಬೆಲೆಯಿಲ್ಲವಾಯಿತೆ ಚಿನ್ನಕೆ ರನ್ನಕೆ ಕರಬದ ಮಣಿಗೆಯೆ ಬೆಲೆಯೆ (ಚಂದ್ರವೀ. ೬೧-೪೨).

[← ಇಂ. Carob]

**ಕರೋಬಾಮಣಿ** (ನಾ). ಕರೋಬಾ ಬೀಜದ ಮಣಿ: ಕರೋಬಾಮಣಿಯನ್ನೂ ಉಪಯೋಗಿಸಬಹುದು . . . ಕರೋಬಾಮಣಿಗೆ ಗ್ರೀಕ್ ಭಾಷೆಯಲ್ಲಿ ಎಲೆಕ್ಟ್ರಾನ್ ಎಂದು ಹೆಸರು (ಭೌತವಿ. ೩೨೨).

[ಕರೋಬಾ + ಮಣಿ$_3$]

**ಕರೋರ** 'ಕರೋಡ' ನೋ.

**ಕರೋರ್ಧ್ವ** (ನಾ). ಕೈಯ ಮೇಲುಭಾಗ; ಮೇಗೈ: "ಕರೋರ್ಧ್ವ [ಪಾಠಾಂ. ರ್ಧ್ವ] ಮೆನಲ್ಕೆ ಮೇಗೈಗೆ ನಾಮಮುಕ್ಕುಂ" (ಮಂಗರಾ. ೯೫-೮).

[ಕರ$_4$ + ಊರ್ಧ್ವ]

**ಕರೋಲ**, ಕರೋಲು (ನಾ). ಚಿಕ್ಕ ತುಪಾಕಿ; ಪಿಸ್ತೂಲು: ಕೈಯಲ್ಲಿದ್ದ ಉಕ್ಕಿನ ಆಲಗ ಹಾಕಿದಂಥಾ ಕರೋಲದಿಂದ . . . ತಿವಿಯಲು ಯತ್ನಿಸಿದನು (ಚಿತ್ರಪಾ. ೫೩). **ಕರೋಲು**: ಕರೋಲು ಭಾಲೇಕಾರರು, ಕೊತ್ತಲಗಾರರೇ ಮೊದಲಾದವರು (ಬಿಸಂಕ. ೭-೨-೬೫).

[← ಮರಾ. ಕರೋಲ್, ಕರೋಳ್ = ಬಂದೂಕು ಹಿಡಿದಿರುವ ಸಿಪಾಯಿ; ತುರ್ಕಿ. ಕರಾವುಳ್]

**ಕರೋಲು** 'ಕರೋಲ' ನೋ.

**ಕರ್ಕ$_1$** (ನಾ). (ಕರಾ) ಗಸಿ; ಗಷ್ಟು: ಕಷಾಯ ಮಾಡಿ, ತಿಳಿ ಬಗ್ಗಿಸಿಕೊಂಡು ಕರ್ಕವನ್ನು ಬಿಸಾಡು (ರೂಢಿ). [< ಸಂ. ಕಲ್ಕ]

**ಕರ್ಕ$_2$** (ಗು). ೧. ಬಿಳಿಯ ಬಣ್ಣದ. ೨. ಶ್ರೇಷ್ಠವಾದ; ಉತ್ತಮವಾದ. (ನಾ). ೩. ಏಡಿ; ನಳ್ಳಿ: ಕ್ರೌಂಚ ಸಾರಸ ಭೇಕ ಬಕ ಕರ್ಕ ಮತ್ಸ್ಯಾದಿ ಜೀವಿಗಳೆನಿತಿದ್ದರೇನು (ಇಂಚಾಪ. ೮೩-೫). ೪. ಬಿಳಿಯ ಕುದುರೆ: "ತುರಗವರ್ಣಂ ಬಿಳಿಯದಾಗೆ ಕರ್ಕನೆನಿಕ್ಕು [ಪಾಠಾಂ. ಕರ್ಕಳನಕ್ಕು]" (ಮಂಗರಾ. ೮೧-೧೪). ೫. ಬೆಂಕಿ; ಅಗ್ನಿ. ೬. ಜಲಪಾತ್ರೆ. ೭. ಕನ್ನಡಿ. ೮. [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ನಾಲ್ಕನೆಯದು; ಕರ್ಕಾಟಕ ರಾಶಿ. ೯. ಏಡಿ ಹುಣ್ಣಿನ ರೋಗ; ಅರ್ಬುದ ರೋಗ. 'ಕರ್ಕರೋಗ' ಪರಾ. [ಸಂ.]

**ಕರ್ಕಂಡ**, ಕರ್ಗಂಡ, ಕರ್ಗಡ (ನಾ). ಈರಿ; ಈಲಿ; ಪಿತ್ತಕೋಶ; ಯಕೃತ್ತು: "ಕರ್ಕಂಡಮಂಘ್ರಿಫಲಮೆನೆ ಕಾಲಖಂಡಮೆನಿಸಿಕ್ಕು" (ಮಂಗರಾ. ೧೧೮-೭). **ಕರ್ಗಂಡ**: ನಾನಾ ಮೃಗಾನೀಕದ ಕರ್ಗಂಡಂಗಳಂ . . . ನುಂಗುತ್ತುಂ (ಶಾಂತೀಶ್ವ. ೩-೭). **ಕರ್ಗಡ**: "ಯಕೃತ್ ಎಂಬುದು ಕರ್ಗಡ?" (ಹಲಾಯು. ೧೦೪-೧೩). [?]

**ಕರ್ಕಂಧು** (ನಾ). ಬೋರೆಯ ಗಿಡ; ಬದರಿ; "ಎಲಚಿ" (ನಾಚಿರಾ. ೬.); "ಎರದತರು ಕರ್ಕಂಧು ಬದರಿ ಕುವಳಿಯೆನಿಕ್ಕು" (ಮಂಗರಾ. ೩೪–೧೧); "ಕರ್ಕಂಧೂಃ, ಬದರೀ, ಕೋಲೀ, ಘೋಂಟಾ – ೪ ಎಳಚೀ ಗಿಡದ ಹೆಸರುಗಳು" (ಸಿದ್ಧಾಂತಿ. ೧೦೫).
[ಸಂ. ಕರ್ಕಂಧು, ಕರ್ಕಂಧೂ]

**ಕರ್ಕಟ** (ನಾ). ೧. ಏಡಿ; ನಳ್ಳಿ. ೨. ಒಂದು ನರಕದ ಹೆಸರು: ಜಳೂಕ . . . ಕರ್ಕಟ ಗಂಡಕವೆಂಬೈದು ಮಂತ್ರಿನರಕಂಗಳ ಸಹಾಯದಿಂ ಮಹಾಪದ್ಮವೆಂಬರಸು ನರಕವಿಹುದು (ವಿವೇಕ. ೧೮೦). ೩. [ಜ್ಯೋತಿ] ಮೇಷಾದಿ ಹನ್ನೆರಡು ರಾಶಿಗಳಲ್ಲಿ ನಾಲ್ಕನೆಯ ರಾಶಿ. ೪. [ನಾಟ್ಯ] ನೃತ್ಯಹಸ್ತಗಳಲ್ಲಿ ಒಂದು ಪ್ರಕಾರ: ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತ ಹಸ್ತಗಳು ಯಾವುವೆಂದರೆ– ೧. ಅಂಜಲಿ, ೨. ಕಪೋತ, ೩. ಕರ್ಕಟ (ಅಭಾನ್ಯ. ೪೮). ೫. ಕಮಲದ ಬೇರು. ೬. ಗಟ್ಟಿಯಾದದ್ದು; ಕರ್ಕಶವಾದದ್ದು. ೭. ಸೌತೆಬಳ್ಳಿ, —ಕಾಯಿ: ಗಿಳಿ ಪಕ್ಕದವೊಳಿರುತಿಹುದು ಖದ್ಯೋತ ಪುಷ್ಪ ಕರ್ಕಟದ ಪಸುರಿನ ಮೇಲೆ ಬಿಂದುವಂತೇ (ರತ್ನಶಾ. ೧೬–೭). [ಸಂ.]

**ಕರ್ಕಟಕ** (ನಾ). ೧. ಏಡಿ; ನಳ್ಳಿ: "ಕರ್ಕಟಕ [ಪಾಠಾಂ. ಕರ್ಕಟ] ಮೆನೆ ಕುಳೀರಮೆನಲೇಡಿಯಕ್ಕು" (ಮಂಗರಾ. ೧೨೧–೭); ಕಾದುವು ಬಿಸಿಲಂ . : . ಕುಂಭೀರ ಕಮಠ ಕರ್ಕಟಕಂಗಳ್ (ಜಗವಿ. ೧೪–೧೨). ೨. =ಕರ್ಕಟ ೩: ತರುಣಿ ಮೃಗ ಕರ್ಕಟಕ ಶಾಕ್ವರ ವೃಶ್ಚಿಕ ಝಷ ಮಿವಬಲೆಗಳ್ ಸೌಮ್ಯಂಗಳ್ (ಜಾತತಿ. ೧–೨೨). [ಸಂ.]

**ಕರ್ಕಟಕವಾರಿ** (ನಾ). (?) : ಆಷಾಢಮಾಸದಂದಾ ಶೇಷಿಯ ಕರ್ಕಟಕ ವಾರಿ ತುರಗದ ಮೆಯ್ಯಂ ಲೇಪಿಸಿದಂತರಿಸಿನಮಂ ಭೂಷಣಮಂ ಪೂವ ಸಹಿತ ಮೆತ್ತುಗೆ ತುರಗಂ (ಅಶ್ವಶಾ. ೭–೭೭).
[ಕರ್ಕಟಕ ? + ವಾರಿ ?]

**ಕರ್ಕಟಕಶೃಂಗಿ** (ನಾ). ಒಂದು ಬಗೆಯ ಮೂಲಿಕೆ: "ಇಂದು ಖಂಡಃ – ಕರ್ಕಟಕಶೃಂಗಿ" (ಓಷಧಿ. ೧೪).
[ಕರ್ಕಟಕ + ಶೃಂಗಿ]

**ಕರ್ಕಟಶೃಂಗಿ** (ನಾ). =ಕರ್ಕಟಕಶೃಂಗಿ: "ನ(ಗ)ತಾಂಡಿಕಃ – ಕರ್ಕಟ ಶೃಂಗಿ" (ಓಷಧಿ. ೮೪). [ಕರ್ಕಟ + ಶೃಂಗಿ]

**ಕರ್ಕಟಿ** (ನಾ). ೧. ಸೌತೆಯ ಬಳ್ಳಿ: ಬಾಲ ಕರ್ಕಟಿಯೊಂದು ತಂತುವಿನಂದದೆ ಪ್ರೇಮವು ಕುಟಿಲವು ಮುಗುದೆ (ಗಾಥಾಸ. ೩–೧೦). ೨. ಹೆಣ್ಣು ಏಡಿ: ಅರ್ಭಕನಿಂದೆ ಧರಿಸಲ್ಪಟ್ಟ ಗರ್ಭಂ ಮಂದ ಕರ್ಕಟಿ [ಪಾಠಾಂ. ಕಕ್ಕಟ] ಗರ್ಭವಾಯಿತು (ಬಸಪು. ೩–೧೬).
ಕರ್ಕಟಿಯ ರಜ್ಜು = ಕೊಕ್ಕೆಯಿಂದ ಕೂಡಿರುವ ಹಗ್ಗ: ಕಿತ್ತ ಹಿಡಿಯಂ ಬಿಡುವ ಕಲ್ಲುಂ ಮತ್ತೆ ಮುಖವಾಯದ ತಿಳಕಮುಂ ಕರ್ಕಟಿಯ ರಜ್ಜು (ಬಸಪು. ೩೧–೩).
[ಸಂ. ಕರ್ಕಟಿ, ಕರ್ಕಟೀ]

**ಕರ್ಕಟಿಕೆ** (ನಾ). ಮಿಣಿಕೆ ಹಣ್ಣು; ಕರಬೂಜದ ಹಣ್ಣು: "ಕರ್ಕಟಿಕೆಯೆನೆ ಮಿನಿಕೆ" (ಮಂಗರಾ. ೪೧–೩೩). [ಸಂ. ಕರ್ಕಟಿಕಾ]

**ಕರ್ಕಡ** (ಗು). ಗಟ್ಟಿಯಾದ; ಬಲಶಾಲಿಯಾದ; ಒರಟಾದ: "ಖರಃ, ಕಠೋರಃ, ಕಠಿನಃ, ಕರ್ಕಡಃ, ಕರ್ಕಶಃ, ದೃಢಃ – ಈ ೬ ಬೆಟ್ಟದು" (ಹಲಾಯು. ೫೭–೧೮೭). 'ಕಕ್ಕಡ$_4$' ಪರಾ. [ಸಂ.]

**ಕರ್ಕಡವಂದಿ** (ನಾ). ಬಲಶಾಲಿಯಾದ ಹಂದಿ; ಉಗ್ರವಾದ ಹಂದಿ: ಎನ್ನ ಚೆನ್ನ ಕುನ್ನಿಯನೀ ಕರ್ಕ [ಪಾಠಾಂ. ಕ್ಕ] ಡವಂದಿ ಕೊಂದುದಿನ್ನಿದ ರೊಡನಳಿವೆಂ (ಗಿರಿಕ. ೧–೧೦೮). 'ಕಕ್ಕಡವಂದಿ' ಪರಾ.
[ಕರ್ಕಡ + ಪಂದಿ]

**ಕರ್ಕಡೆ, ಕಕ್ಕಟ$_1$, ಕಕ್ಕಟೆ, ಕಕ್ಕಡ$_1$, ಕಕ್ಕಡೆ, ಕಕ್ಕಣೆ, ಕಕ್ಕರ$_2$** (ನಾ). (ಗರಗಸದಂತೆ ಬಾಯುಳ್ಳ) ಒಂದು ಬಗೆಯ ಆಯುಧ (?): ಜವಮುಟಿದೊಂದು ಸೋಗೆನವಿಲೊಯ್ಯನೆ ಕರ್ಕಡೆ ಗಾಸಿಯಾಗಿ ಪಾಱುವುದುಂ (ಪಂಪಭಾ. ೫–೫೧); ಅದ್ದಿರ್ಡುವ ಕರ್ಕ್ಕಡೆ ಪಾಱುವ ಚಕ್ರಮೆಂದೊಡೇ (ಎಇ. XV, ೩೪೦–೧೨; 1071); ಜವನರವಾವು ಕೊಂಡುವೆನೆ ಕರ್ಕಡೆ ಕೊಂಡುವು (ಪಂರಾಮಾ. ೧೩–೬೧); ಮೋದುವ ಗದೆ ಪೊಯ್ವ ಬಾಳ್ ಬಿಡುವ ಕರ್ಕಡೆ (ಜಗವಿ. ೭–೫೯); ಜಯಶ್ರೀ ರಮಣಿಯ ಕೆಳದಿಯರ ಕೆಯ್ಯ ಕರ್ಕಡೆಗಳ ವೋಲ್ (ಪುಷ್ಪಪು. ೯–೭೦). **ಕಕ್ಕಟ$_1$**: ಕುಂತದಲುಲಿದು ತಿವಿದರು ಮುಟ್ಟವಿಸಿ ಕಕ್ಕಟ ಕಠಾರಿ ಕರಾಳಭೂಜದಲಿ (ತೊರರಾ. ೫–೪–೨೦). **ಕಕ್ಕಟೆ**: ಚಕ್ರಮುಗ್ರ ಖಡ್ಗಾಯುಧವಾದ್ರ್ದಂತೂಪ್ಪಿರ್ಡುವ ಕಕ್ಕಟೆಯೆಂಬವೊಲಿರ್ದಪರ್ (ಸೌಇಇ. IX–i, ೨೨೦–೮೮; 1175). **ಕಕ್ಕಡ$_1$**: ಕಕ್ಕಡ . . . ಜವದಾಡೆಗಳೆಂಬ ಬತ್ತೀಸಾಯುಧಗಳಿಂ (ವಿವೇಕ. ೨೬೨); ಕಠಾರಿ ಕಕ್ಕಡ ಪರಶು ಮುಖ್ಯಾಯುಧಂಗಳಿಂ ಭಾರಿಯಾಹವವಾಯ್ತು (ಚೆಬಪು. ೨೪–೫). **ಕಕ್ಕಡೆ**: ತೊಳಗುವ ಬಾಳ್ ತಟತ್ತಟಿಪ ಕಕ್ಕಡೆ ಬುಂಭುಕದೊಳ್ ತಗುಳ್ದು ಪಜ್ಜಳಿಸುವ ಪಂಚರಾಯುಧಂ (ಪಂಪಭಾ. ೧೦–೭೬); ಕವಿದಿಸುವಂಬು ಪಾರ್ದಿಸುವ ಕಕ್ಕಡೆ (ಪುಷ್ಪಪು. ೭–೭೪); ಕಕ್ಕಡೆಯ ಕುಂತದ ಪಿಂಡಿವಾಳದ ಕಡುಗಲಿಗಳುಱೆ ಮುಗ್ಗಿದರು (ಕುವ್ಯಾಭೀ. ೪–೩೮); ಕಕ್ಕಡೆಗಳಿಂ ಕೈಯಿಟ್ಟಯಿಂದಿಟ್ಟು (ಚಿಕವಿ. ೨–೪೭). **ಕಕ್ಕಣೆ**: ಕಡಿತಲೆ ಕರಗಸ ಕತ್ತಿಗೆ ಕೊಂತಂ ಕಕ್ಕಣೆ ಕಡುಸೆಲ್ಲೆಹಬಲ್ಲೆಹ (ವೀರೇಚ. ೨–೩೧). **ಕಕ್ಕರ$_2$**: ವರ ಕೃಪಾಣದಿ ಕೆಲಬರನು ಕಕ್ಕರದಿ ಕೆಲಬರ ಭಿಂಡಿಪಾಳದಿ ತಱಿದನಾ ಸುಕುಮಾರಂ (ಜೀವಂಚ. ೯–೩೩).
[ದೇ. ? ‖ ಮಲ. ಕಕ್ಕಡ = ಕಠಾರಿ. / ಸಂ. ಕರ್ಕಶ = ಖಡ್ಗ]

**ಕರ್ಕರ$_1$** (ಗು). ೧. ಬಿರುಸಾದ; ಗಟ್ಟಿಯಾದ. (ನಾ). ೨. (ರತ್ನಗಳಲ್ಲಿ) ಒಂದು ದೋಷ: ಕರ್ಕರವೆಂಬ ದೋಷಮದುಯೆಂತು ರುಜೆಯುಂಟನಿತ ಪುಟ್ಟಿಸಲು ಬಲುದದು ಮುಂತೆ ಪುಟ್ಟ ದೋಷಸಸಿನಕೆ ಫಲವು ದೋಷಗಳುಮೆರಡು ತಾನಿರದಿರ್ಪುದು (ರತ್ನಶಾ. ೬–೯).
[ಸಂ.]

**ಕರ್ಕರ$_2$** (ನಾ). ಒಂದು ಜಾತಿಯ ಜಲಪಕ್ಷಿ: "ಕಾರಂಡವಃ, ಕಾದಂಬಕಃ, ಕ್ರಕರಃ – ಈ ೩ ಕರ್ಕರಂ" (ಹಲಾಯು. ೪೨–೧೦೦); ಹಾರಿ ನಲಿಹ ಸೋಗೆನವಿಲು ಪುರಡಿ ಗವುಜ ಕರ್ಕರ ಲಾವುಗೆ ಗುಬ್ಬಿ ಆರಣ್ಯದೊಳು (ನಿಜಸಾಂ. ೫೯). [< ಸಂ. ಕ್ರಕರ]

**ಕರ್ಕರಿ** (ನಾ). ೧. ತಳದಲ್ಲಿ ಜಾಲರಿಯಂತೆ ರಂಧ್ರಗಳುಳ್ಳ ನೀರಿನ ಪಾತ್ರೆ: "ಕರ್ಕರಿಯು [ಪಾಠಾಂ. ಕರಕಂ] ಕರಗವಕ್ಕು" (ಮಂಗರಾ. ೬೨–೨೨). ೨. ಒಂದು ಬಗೆಯ ತಂತೀವಾದ್ಯ (?): ಸುರುಚಿರದ ಕರ್ಕರಿಯ ಶಾಂಕರಿಯ ಭಕ್ಷಿಣಿಯ ವಿಭ್ರಮುಗಳನ್ನು ಪಿಡಿದು ತರಹರಿಸಿ ರೇಚಕಂ ಪೂರಕಂ ಕುಂಭಕದಿ ಬೆರೆದು (ವೆಂಕಾರಾ. ೨–೩೫–೪೯).
[ಸಂ. ಕರ್ಕರೀ]

**ಕರ್ಕರೇಟು** (ನಾ). = ಕರೇಟು (೬). [ಸಂ.]

**ಕರ್ಕರೋಗ** (ನಾ). ಏಡಿ ಹುಣ್ಣಿನ ರೋಗ; ಅರ್ಬುದರೋಗ; ಕ್ಯಾನ್ಸರು. [ಕರ್ಕ$_2$ + ರೋಗ]

**ಕರ್ಕಲಗಿಡ** (ನಾ). ಹಳದಿ ಹೂವು ಬಿಡುವ ಒಂದು ಜಾತಿಯ ಪೊದೆ (೬). [ಕರ್ಕಲ ? + ಗಿಡ (< ಗಿಡು)]

**ಕರ್ಕಲು** (ನಾ). ಕರಿದ ಭಕ್ಷ್ಯ: ಕಾಯ್ಲೆಯವರು ಇರುವ ಮನೆಯಲ್ಲಿ ಕರ್ಕಲು ಗಿರ್ಕಲು ಮಾಡಬಾರದು (ಚೆಂಗಾಳ್ವ. ೧೮೯).
[ಕರಿ$_1$ + -ಕಲು$_2$ (< -ಕಲ್$_4$)]

**ಕರ್ಕವಾಡ** (ನಾ). ೧. ಒಂದು ಊರಿನ ಹೆಸರು. ೨. ಕರ್ಕವಾಡ ವೆಂಬ ಊರಲ್ಲಿ ತಯಾರಾದ ಸೀರೆ: ಭುವನಕೋಶದ ಸೀರೆ ಶುಭ್ರ ಪಟ್ಟಾವಳಿ ನವರಂಗವು ಕರ್ಕವಾಡ (ಅಮುಸಾಂ. ೪–೨೩); ನಿಂಬೆಯ ಕಾಯ ಪೊಪ್ಪುಳಿ ಕರ್ಕವಾಡಗಳೆಂಬ ಸೀರೆಗಳೊಪ್ಪಿ ಮೆಚಿಯೆ (ಅಮುಸಾಂ. ೪–೧೯). [?]

**ಕರ್ಕವೃತ್ತ** (ನಾ). = ಕರ್ಕಾಟಕ ಸಂಕ್ರಾಂತಿವೃತ್ತ: ವಿಷುವವೃತ್ತದ ದಕ್ಷಿಣಕ್ಕೂ ಉತ್ತರಕ್ಕೂ ೨೩॥ ಅಂಶಗಳ ಅಂತರದಲ್ಲಿ ಒಂದೊಂದು ವರ್ತುಲಗಳನ್ನು ಕಲ್ಪಿಸುವರು; ಅವುಗಳಿಗೆ ಯಥಾಕ್ರಮವಾಗಿ ಮಕರ ವೃತ್ತವೆಂತಲೂ ಕರ್ಕವೃತ್ತವೆಂತಲೂ ಹೆಸರುಗಳಿವೆ (ಮುಂಬಯಿ. ೬–೬೦). 'ಮಕರವೃತ್ತ' ಪರಾ. [ಕರ್ಕ$_2$ + ವೃತ್ತ]

**ಕರ್ಕಶ** (ಗು). ೧. ಬಿರುಸಾದ; ಕಠಿಣವಾದ; ನಿಷ್ಠುರವಾದ: ಘಟದಲ್ಲಿ ವೈಭವ ಆತ್ಮನಲ್ಲಿ ನಿರೋಧ ಆಚಾರದಲ್ಲಿ ಕರ್ಕಶ ಇಂತೀ ನಿಹಿತಾಚಾರಂಗಳಲ್ಲಿ ನಿರತನಾಗಿ (ಮೋಳಿಮಾ. ೧೦–೩೬); ನಿನ್ನ ಪದ ತಳಕ್ಕೆ ಕೆಂದಾವರೆ ಕರ್ಕಶಂ (ನಂಬಿರ. ೧೪–೧೯); ನುಡಿಗಳು ಕಿವಿಗೆ ಕರ್ಕಶವೀಗಲಾದೊಡೆ ಮುಂದೆ ಲೇಸು (ಕುವ್ಯಾಉ. ೯–೮). (ನಾ). ೨. ಯಮ. ೩. ಎಲಹುರಿ ಅಥವಾ ಎಲಹೂಲಿಮರ: "ಎಲಹುರಿಯ ಕರ್ಕಶಂ ಕತಕವಕ್ಕುಂ" (ಮಂಗರಾ. ೪೦–೩೧).
[ಸಂ.]

**ಕರ್ಕಶಕಾರಿ** (ನಾ). ಕಠೋರವಾಗಿ ವರ್ತಿಸುವವನು: ಸುತ್ತಲು ಚಾರಿ ವರಿದನು ಕದನಲಂಪಟ ವೈರಿ ಕರ್ಕಶಕಾರಿ ಕಪಿಗಳ ಮಾರಿ ಇಂದ್ರಾರಿ (ಕೌಶಿರಾ. ೨೮–೫೨). [< ಸಂ. ಕರ್ಕಶಕಾರಿನ್]

**ಕರ್ಕಶಗೊಳ್** (ಕ್ರಿ). ಬಿರುಸಾಗು; ಕಠೋರವಾಗು; ನಿಷ್ಠುರವಾಗು: ನೆಲೆಯ ಕಂಡಿಹೆನೆಂದು ಆವಾವ ಠಾವಿನಲ್ಲಿ ಕರ್ಕಶಗೊಂಬವಂಗೆ ಪ್ರಾಣಲಿಂಗಿ ಎಂಬ ಭಾವ ಒಂದೂ ಇಲ್ಲ (ಮೋಳಿಮಾ. ೭೯–೩೧೨); ಕಾಮ ನೀ ಬಹಳ ಕರ್ಕಶಗೊಂಡು ಬಂದುದೇಕೆ (ಮೋಹತ. ೭–೨೨).
[ಕರ್ಕಶ + ಕೊಳ್$_1$]

**ಕರ್ಕಶತೆ** (ನಾ). ಬಿರುಸು; ಕಠೋರತೆ: ಕರ್ವುನಕ್ಕಿಟ್ಟಳಮಪ್ಪ ಕರ್ಕಶತೆಯೆತ್ತಿದ ಕೆಚ್ಚಿನ ದಂಗೆ ಭೀತಿಯಂ ಪುಟ್ಟಿಸೆ ಬಂದು ಕಟ್ಟಿದಿರೊಳಿರ್ದನ ದೊರ್ವನಡುರ್ತು ಜಟ್ಟಿಗಂ (ಚಂದ್ರಪು. ೫–೬೦); ನೇತ್ರಗಳಲ್ಲಿ ತೀಕ್ಷ್ಣತೆ ಇತ್ತು; ಸ್ವರದಲ್ಲಿ ಕರ್ಕಶತೆಯಿತ್ತು (ಕೊತಕಾ. ೫೪).
[ಸಂ. ಕರ್ಕಶತಾ]

**ಕರ್ಕಶಯಿಸು** (ಕ್ರಿ). ಕರ್ಕಶಗೊಳ್ಳು; ಬಿರುಸಾಗು: "ಕಡ್ಡತೀಶ– ಕರ್ಕಶಯಿಸಿದಪುದೆಂಬುದು" (ಕಾಶಕ್ಯ. ೨೩). [ಕರ್ಕಶ + -ಇಸು$_3$]

**ಕರ್ಕಶಯೌವನ** (ನಾ). = ಕಕ್ಕಸಜವ್ವನ: "ಕರ್ಕಶಯೌವನ – ಕಕ್ಕಸಜವ್ವನ" (ಶಮದ. ೨೮೯ ಪ್ರಯೋ). [ಕರ್ಕಶ + ಯೌವನ]

**ಕರ್ಕಶಲೋಮ** (ನಾ). ಒರಟು ಕೂದಲುಳ್ಳವನು: ನಿಡಿಯಂ ಕರ್ಕಶಲೋಮಂ . . . ಘಟಪ್ರೋದ್ಭವಂ (ಜಾತತಿ. ೧೬–೧೧).
[ಕರ್ಕಶ + ಲೋಮ]

**ಕರ್ಕಶವಡೆ** (ಕ್ರಿ). ಕಠಿನವಾಗು; ಬಿರುಸಾಗು: ಉಪ್ಪಿನ ಕಡಲ ತಡಿಯಲಿ ಪುಟ್ಟಿ ಕರ್ಕಶವಡೆದ ರುದ್ರಾಕ್ಷಿಗಳನೊಡಲಲಿ ಧರಿಸುವುದನುಳಿದು (ಬಸವು. ೧೨–೧೯); ಕೆಂಪಡರ್ದ ಕಣ್ಣಾಲಿಗಳ ಕರ್ಕಶವಡೆದ ವದನದ . . . ರಕ್ಕಸಸೇನೆ ನಿಂದುದು (ತೊರರಾ. ೬–೧೯–೧೬). [ಕರ್ಕಶ + ಪಡೆ$_1$]

**ಕರ್ಕಶವೃತ್ತಿ** (ನಾ). ೧. ಕಠೋರವಾಗಿರುವಿಕೆ; ಕಠಿಣತೆ. ೨. ಕ್ರೂರ ಸ್ವಭಾವ ೧, ೨: ಕುಚಾಸನ್ನತೆ ನಿನ್ನ ಮೆಲ್ಲೆರ್ದೆಗೆ ಕರ್ಕಶವೃತ್ತಿಯನಿತ್ತುದಾಗದೇ (ಶಾಂತಿಪು. ೮–೮೪); ವಚನದೊಳಿಲ್ಲ ಪೆರ್ಮೊಲೆಯೊಳಲ್ಲದೆ ಕರ್ಕಶವೃತ್ತಿ (ಚಂದ್ರಪು. ೧೧–೧೯). [ಕರ್ಕಶ + ವೃತ್ತಿ]

**ಕರ್ಕಶಾಂಗ** (ನಾ). ಕಠಿನ ದೇಹ; ಬಿರುಸು ಮೈ: ಎಲೆಗೆ ಕಲು ಮೈಯಾದೆ ಕಡುಗೋಮಲತೆಯೆತ್ತಲು ಕರ್ಕಶಾಂಗದ ಬಲುಹಿದೆತ್ತಲು (ಕುವ್ಯಾವಿ. ೩–೭೬). [ಕರ್ಕಶ + ಅಂಗ$_2$]

**ಕರ್ಕಸ** 'ಕಕ್ಕಸ' ನೋ.

**ಕರ್ಕಸೈಲ** (ನಾ). ಒಂದು ಬಗೆಯ ಉಪ್ಪು: "ಕ್ರು(ಕೃ)ತ್ರಿಮಃ – ಅಟ್ಟುಪ್ಪು, ಚೀನಗರ್ಪುರ, ಕರ್ಕಸೈಲ" (ಒಷಧಿ. ೩೮). [?]

**ಕರ್ಕಳ** (ನಾ). ಬಿಳಿ ಕುದುರೆ: "ತುರಗವರ್ಣಂ ಬಿಳಿಯದಾಗೆ ಕರ್ಕಳ ನಕ್ಕು [ಪಾಠಾಂ. ಕರ್ಕನೆನಿಕ್ಕು]" (ಮಂಗರಾ. ೮೧–೧೪).
[< ಸಂ. ಕರ್ಕರ]

**ಕರ್ಕಾಟಕ** (ನಾ). ೧. ಏಡಿ; ನಳ್ಳಿ. ೨. ಒಂದು ಬಗೆಯ ಸಸ್ಯ: (ವೈಔಗ. ೫೫–೧೧೧೯). [ಸಂ.]

**ಕರ್ಕಾಟಕಶೃಂಗಿ** (ನಾ). = ಕರ್ಕಟಕಶೃಂಗಿ: "ಷಟ್ಪದಿಕ–ಕರ್ಕಾಟಕ ಶೃಂಗಿ" (ಒಷಧಿ. ೧೭೩); ತಕ್ಕೋಲ, ಜಾಜಿಕಾಯಿ, ಮೆಂಥ್ಯ, ಕರ್ಕಾಟಕಶೃಂಗಿ . . . ಇವಿಷ್ಟನೂ ಪ್ರತ್ಯೇಕ ಒಂದು ವರಹ ತೂಕವ ಸಣ್ಣನಾಗಿ ಕತ್ತರಿಸಿ ಚೂರ್ಣಿಸಿ (ವೈದ್ಯಸಾ. II, ೫೫).
[ಕರ್ಕಾಟಕ + ಶೃಂಗಿ]

**ಕರ್ಕಾಟಕ ಸಂಕ್ರಾಂತಿವೃತ್ತ** (ನಾ). [ಭೂಗೋಳ] ಭೂಗೋಲದ ಮೇಲೆ ಸಮಭಾಜಕ ವೃತ್ತದಿಂದ ಉತ್ತರಕ್ಕೆ ಇಪ್ಪತ್ತು ಮೂರೂವರೆ ಅಕ್ಷಾಂಶಗಳ ಅಂತರದಲ್ಲಿ ಇರುವಂತೆ ಭಾವಿಸಲಾಗುವ ರೇಖೆ: ವಿಷುವದ್ರೇಖೆಗೆ ಉತ್ತರಕ್ಕೆ ಇಪ್ಪತ್ತುಮೂರೂವರೆ ಅಕ್ಷಾಂಶಭಾಗಗಳ ದೂರದಲ್ಲಿ (ಸುಮಾರು ೧೬೨೦॥ ಮೈಲು) ಕರ್ಕಾಟಕ ಸಂಕ್ರಾಂತಿ ವೃತ್ತವೂ . . . ಇವೆ (ಭೂಗೋಳ. ೮). 'ಮಕರ ಸಂಕ್ರಾಂತಿ ವೃತ್ತ' ಪರಾ.
[ಕರ್ಕಾಟಕ + ಸಂಕ್ರಾಂತಿ + ವೃತ್ತ]

**ಕರ್ಕಾಟಶೃಂಗಿ** (ನಾ). = ಕರ್ಕಟಕ ಶೃಂಗಿ: "ಕುರುಟಗೆಗೆ ಕರ್ಕಾಟಶೃಂಗಿಯೆಂಬರು" (ನಾಚಿರಾ. ೧೧೦); ದುಸ್ಪಾಪಚತ್ವ, ಕರ್ಕಾಟಶೃಂಗಿ (ವೈಔಗ. ೬೨–೧೨೫೭). [ಕರ್ಕಾಟ$_6$ + ಶೃಂಗಿ]

**ಕರ್ಕಾರು** (ನಾ). ಕುಂಬಳದ ಬಳ್ಳಿ, —ಕಾಯಿ: "ಕ[ಪಾಠಾಂ. ವ] ರ್ಕಾರು ಕೂಷ್ಮಾಂಡವೆನೆ ಕುಂಬಳಂ" (ಮಂಗರಾ. ೪೪–೪೬).
[ಸಂ.]

**ಕರ್ಕಿ$_1$** (ನಾ). ೧. ಒಂದು ಸಸ್ಯದ ಹೆಸರು: (ವೈಔಗ. ೧೯–೩೫೩). ೨. ಒಂದು ಊರಿನ ಹೆಸರು. [?]

**ಕರ್ಕಿ$_2$** (ನಾ). [ಜ್ಯೋತಿ] ಕರ್ಕರಾಶಿ: ದಿನನಾಥಂ ಮೇಷದೊಳ್ ಶೀತರುಚಿ ವೃಷಭದೊಳ್. . . ಧಿಷಣಂ ಕರ್ಕಿಯೊಳ್ ಸಂತಮಿಂತಿರ್ಪಿನಂ (ಸುಕುಮಾ. ೧೦–೨೬); ದಿನನಾಥಂ . . . ನಿಲೆ ಕರ್ಕಿಯೊಳ್ ಪರಜನಪ್ರೇಷ್ಯಂ ಖಳಂ ದ್ರವ್ಯಹೀನನತಿಕ್ಲೇಶ ಪಥಶ್ರಮಾಕುಲನೆನಿಕ್ಕುಂ (ಜಾತತಿ. ೧೭–೧೫). [ಸಂ.]

**ಕರ್ಕಿಸೆಲ್ಲಿ** (ನಾ). ಒಂದು ಬಗೆಯ ಸಸ್ಯ: ಜಾವನಿಗಾಲೆ, ಸಣ್ಣಸಲ್ಲೆ, ಕಾಯೋರಿ, ಕರ್ಕಿಸೆಲ್ಲಿ, ಕಾಡುಪತಂಗ (ವೈಔಗ. ೪೦–೭೯೯). [?]

**ಕರ್ಕೇತನ** (ನಾ). ಒಂದು ವಿಧವಾದ ರತ್ನ: ಪದ್ಮರಾಗ ಪುಷ್ಯರಾಗ ಸಸ್ಯ ಕರ್ಕೇತನ ಇಂದ್ರನೀಲಂ ಮೊದಲಾಗೊಡೆಯ ಅನರ್ಘ್ಯಮಪ್ಪ ಕಂಕಣಂಗಳುಮಂ (ವಡ್ಡಾರಾ. ೧೪೮–೧೪); ಪವಳದೆಸೆವ ಕಂಬಂ ಕರ್ಕೇತನದ ತೊಲೆ ಪೊನ್ನ ಪೊಸಜಂತೆ (ಕಾವ್ಯಾವ. ೫೧೮); ಇಂದ್ರನೀಲದ ಭದ್ರದೊಳಂ ಕರ್ಕೇತನದ ಜಾಳಿಗೆಯೊಳಂ (ಪಂಪಭಾ. ೩–೭೪ ವ); ತೋರ್ಕೆವೆತ್ತ ಕರ್ಕೇತನದ ನೆಲೆಪಾಡಂಗಳೊಳಂ (ಪಂರಾಮಾ. ೫–೩೪ ವ). [ಸಂ.]

**ಕರ್ಕೊಂಚೆ** (ನಾ). ಒಂದು ಜಾತಿಯ ಹಕ್ಕಿ; ಕ್ರೌಂಚ (+). [< ಕರಿದು + ಕೊಂಚೆ$_4$]

**ಕರ್ಕೋಳ, ಕರ್ಕೋಳಿ, ಕರ್ಕೋಲ**(ನಾ). ಒಂದು ಸುಗಂಧದ ಮರ; ಆ ಮರದಿಂದ ಸಿದ್ಧಪಡಿಸಿದ ಸುಗಂಧ ದ್ರವ್ಯ: ಅಭಿಷೇಕಂಗೆಯ್ದು ಕಾಳಾಗರು ಕರ್ಕೋಳ ಜಾತೀಫಲ . . . ಕುಂದುರುಷ್ಕಾದಿ ಸುಗಂಧದ್ರವ್ಯ ಸಹಿತನಾಗಿ (ಅಜಿಪು. ೪–೭೦ವ). **ಕರ್ಕೋಳಿ:** ಸಿರಿಸಂ ಪದಿಂಬು ಕರ್ಮರಬೆರಸು ಪಿಂಡೆ ಸಕ ಕರ್ಕೋಳಿ ತಿಲಕಂ ಬಿಲುವರ ನಿರುಪಂ ಬೀಡೆ (ಅಟ್ಟಮ. ೧೧–೩೪). **ಕರ್ಕೋಲ:** (+). [< ಸಂ. ಕಕ್ಕೋಲ]

**ಕರ್ಕೋಳಿ** 'ಕರ್ಕೋಳ' ನೋ.

**ಕರ್ಕೋಟ** (ನಾ). ೧. ಎಂಟು ಮಹಾಸರ್ಪಗಳಲ್ಲಿ ಒಂದು. ೨. (ಆಲಂ) "ಕೆಟ್ಟಮನುಷ್ಯ" (ಗಂಗಾಮ. ೭೩). [ಸಂ.]

**ಕರ್ಕೋಟಕ**(ನಾ). ೧. ಕರ್ಕೋಟ೧: ಅರಿದರಿದು ಕಾಯಲ್ಕೆ ಬಳಿಕೀ ವುರಗವಿದು ಕರ್ಕೋಟಕನ ಬಗೆ. (ಬಸಪು. ೪೬–೩೩); ಗುಳಿಕ ತಕ್ಷಕ ಶಂಖ ಕರ್ಕೋಟಕಾದಿ ಫಣಿಗಳ ತಂಡದಿಂದೆ (ಜೈಮಿಭಾ. ೨೪–೩೨). ೨. ನಾಡಿಗಳಲ್ಲಿ ಒಂದು ಬಗೆ: ಮಯೂರನಾಡಿ . . . ಕರ್ಕೋಟಕನಾಡಿ, ಸಮರನಾಡಿ, ಸಂತೋಷನಾಡಿ – ಇಂತೀ ನಾಡಿಗಳೊಳಗಾದ ಶರೀರದಲ್ಲಿ (ಶರಚ. ೪೮೦). [ಸಂ.]

**ಕರ್ಕೋಟಕಿ**(ನಾ). ಹಾಗಲ ಬಳ್ಳಿ: "ಕಾಗಲು ಪೀತಪುಷ್ಪ ಕರ್ಕೋಟಕಿಯೆನಿಕ್ಕು" (ಮಂಗರಾ. ೪೪–೪೪). [?]

**ಕರ್ಕೋಲ** 'ಕರ್ಕೋಳ' ನೋ.

**ಕರ್ಕೋಲಕ** (ನಾ).=ಕರ್ಕೋಳ (ನಾಚಿರಾ. +). [<ಸಂ. ಕಕ್ಕೋಲಕ]

**ಕರ್ಗಂಟಿ** (ನಾ). ಕಪ್ಪುಬಣ್ಣದ ಹಸು; ಕರಿಯಾವು: ಬೆಳ್ದಾವರೆ, ಕರ್ಗಂಟಿ (ಶಬ್ದಾನು. ೩೪೪ ಪ್ರಯೋ). [< ಕರಿದು + ಗಂಟಿ$_1$]

**ಕರ್ಗಂಡ** 'ಕರ್ಕಂಡ' ನೋ.

**ಕರ್ಗಡ** 'ಕರ್ಕಂಡ' ನೋ.

**ಕರ್ಗತ್ತಲೆ** 'ಕರ್ಗಟ್ತಲೆ' ನೋ.

**ಕರ್ಗನೆ, ಕಗ್ಗನೆ, ಕಟ್ಗನೆ** (ಅ). ಕಪ್ಪಗೆ; ಕರ್ರಗೆ: ಕರ್ಗನೆ ಕರ್ಗಿದ ಸಮದ ಗಜಘಟಾಟೋಪದ ನಡುವೆ (ಪಂಪಭಾ. ೧೦–೫೫ ವ); ಕಾಮನ ಸುಟ್ಟ ಕಾಡಿದೆನೆ ಕರ್ಗನೆ ಕನಿತುದು ಮಲದ ಮಸಿಯ ಮಣಕದಿನಂಗಂ (ಅರ್ಧನೇ. ೧–೮೬); ಆಶಾಮಂಡಲಂ ಕರ್ಗ[ಪಾಠಾಂ. ಟ್ಗ]ನೆ ಕವಿಯೆ (ಕಾವ್ಯಸಾ. ೮೨೯). **ಕಗ್ಗನೆ:** ನಿನ್ನ ಕಾವಿಗೆ ಕರಗಿ ಹೋಗುವದು ಕಗ್ಗನೇ ಸ್ನೇಹಲತೆ ಸಾಕು ಸರಿ (ಕರ್ನಾಕ. ೪೧೬). △ **ಕಟ್ಗನೆ:** ಅಡರ್ದತ್ತಿತ್ತಲುಂ ಬಳ್ಳಿಮಿಂಚಂ ತಳೆದಾಶಾಮಂಡಲಂ ಕಟ್ಗ[ಪಾಠಾಂ. ರ್ಗ]ನೆ ಕನಿಯೆ ಜಳಸ್ಫೀತ ಜೀಮೂತ ಜಾತಂ (ಜಗವಿ. ೪–೧೪). [ಕರ್ಗು$_1$ + -ಅನೆ$_1$]

**ಕರ್ಗಲ್, ಕರ್ಗಲ್ಲು** (ನಾ). ಕರಿಯ ಕಲ್ಲು: ಕರ್ಗಲ್ಮಾರದುಸಲ್ಲು ಪೆರ್ರಿಯ ಆಲ × × × ವಾರಿ ಮರಳ್ಪುಣುಸೆ (ಎಕ. II, ೩೫–೬; ಸು. 800); ಬನ್ದು ಕರ್ಗ್ಗಲ್ಲ ವೊಜಡಿಯುತ್ತರಸ್ಯಾನ್ ದಿಶಿ (ಮೈಅಂ. ೧೯೧೯, ೧೦–೭೧; 900); ಕರ್ಗಲ್ಲೆನಿತು ಬೆಳ್ಪಾದೊಡಂ ಬೆಲೆಗೆಯ್ಯುಮೇ ರತ್ನಮಾದೊಡೆ ಬೆಲೆಗೆಯ್ಗುಂ (ಧರ್ಮಾಮೃ. ೭–೪೫). **ಕಗ್ಗಲ್ಲು:** ಕರ್ಗ್ಗಲ್ಲು ಬಡಗಣ ಸೀಮೆ ಬಿಳಿಯ ಕಲ್ಲುಂ ಮೂಡಣ ಸೀಮೆ (ಸೌಇಇ. XI–i, ೬೫–೫೧; 1029). [< ಕರಿದು + ಕಲ್$_3$]

**ಕರ್ಗಲ್ಲಾಜಿ** (ನಾ). ಒಂದು ಪ್ರದೇಶದ ಹೆಸರು (?): ಕರ್ಗ್ಗಲ್ಲಾಜದೆ ಆನೆಗಲ್ಲೆ ಕಮ್ಮಾರ್ಕೊಟ್ತಲೆಯ ಮುದುವುಣುಸೆ ಮಾಳ್ದೆಯುಳ್ ಕೂಡಿತ್ತು ಸೀಮೆ (ಎಕ. XVI, ಗುಬ್ಬಿ. ೭೫–೫೩; 733). [ಕರ್ಗ್ಗಲ್ + ?]

**ಕರ್ಗಲ್ಲು** 'ಕರ್ಗಲ್' ನೋ.

**ಕರ್ಗಳ್ತಲೆ** 'ಕರ್ಗಟ್ತಲೆ' ನೋ.

**ಕರ್ಗಟ್ತಲೆ, ಕಗ್ಗತ್ತಲ್, ಕಗ್ಗತ್ತಲು, ಕಗ್ಗತ್ತಲೆ, ಕರ್ಗತ್ತಲೆ, ಕರ್ಗಳ್ತಲೆ, ಕಳ್ಗತ್ತಲೆ** (ನಾ). ಕಪ್ಪಾದ ಕತ್ತಲೆ; ದಟ್ಟವಾದ ಕತ್ತಲೆ; ಗಾಢಾಂಧಕಾರ. **ಕಗ್ಗತ್ತಲ್:** ಲೆಕ್ಕಿಸದೇನನು ನುಗ್ಗಿದ ನಾತನು ಕಗ್ಗತ್ತಲ್ಗಬ್ಬುವ ಸೀಳಿ (ಅಗ್ನಿಹಂ. ೭೩–೬೮). **ಕಗ್ಗತ್ತಲು:** ಜಗವೆ ಕಗ್ಗತ್ತಲು ನನಗವಳಿಂದಿಲ್ಲದಿರಲು (ಇಂಚಾಪ. ೧೫೦–೩೭); ಕಗ್ಗತ್ತಲಾದ ಪ್ರದೇಶಕ್ಕೆ ಹೋಗಲು ಎಂತಹರಾದರೂ ಹೆದರುತ್ತಾರೆ (ಜೀವಾತ್ಮ. ೨೦೬); ಈ ಕಗ್ಗತ್ತಲಲ್ಲಿ, ಈ ಬಾಗಿಲಲ್ಲಿ ಕುಳಿತು ನೋಡಿದರೆ ದೋಣಿಗಳ ಮಗ್ಗುಲಲ್ಲಿ ಕಿರಿಚಿಕೊಳ್ಳುವ ಜಲಪಿಶಾಚಿಗಳು (ಆರ್ಯಕ. ೪೭). **ಕಗ್ಗತ್ತಲೆ:** ಕಗ್ಗತ್ತಲೆಯ ಬಲುಗಂಡಿಯಲಿ ಸಿಲುಕಿತು ಕಂಗಳಂಗವಣೆ (ಕುವ್ಯಾದ್ರೋ. ೧೭–೬); ಕರೆದಳು ಕಗ್ಗತ್ತಲೆಯ ಕೌಳಿಕವ (ಮೋಹತ. ೩೧–೧೨); ಭೂತಪಿಶಾಚಾದಿ ಶಬ್ದಗಳನ್ನೇ ಕೇಳದ ಮಕ್ಕಳು ಕಗ್ಗತ್ತಲೆಯೊಳಗೆ ಏಕೆ ಕಿರಿಚಿಕೊಳ್ಳುತ್ತವೆ? (ಜೀವಾತ್ಮ. ೨೦೭); ಕಗ್ಗತ್ತಲೆಯ ಕೋಣೆಗಳಲ್ಲಿ ಗಾಢನಿದ್ರೆ ಮಾಡುತ್ತಿದ್ದ ಕರಡಿಗಳ ಬಗ್ಗೆ ಹರಟುತ್ತಾನೆ (ಪುನರು. ೨೨೧). **ಕರ್ಗತ್ತಲೆ:** ಸವೆಯದ ಕರ್ಗತ್ತಲೆಯ ತುಂಬಿದಳು ಹುಣ್ಣಿವೆಯ ಬೆಳ್ದಿಂಗಳ ಕಿಡಿಸಿ (ಮೋಹತ. ೨೯–೮). **ಕರ್ಗಳ್ತಲೆ:** ಕರ್ಗಳ್ತಲೆ [ಪಾಠಾಂ. ಕಳ್ಗತ್ತಲೆ]ಯಂ ಕಾಜುವ ಘನ ಮಾರ್ಗಣಮಂ ಬಿಡುವೆಂ (ಜಯಕಾ. ೭–೧೭). **ಕಳ್ಗತ್ತಲೆ:** ಕಡು ಮುನಿಸಂ ಕಳ್ಗತ್ತಲೆ [ಪಾಠಾಂ. ಕರ್ಗಳ್ತಲೆ]ಯಂ ಕಾಜುವ ಘನಮಾರ್ಗಣಮಂ ಬಿಡುವೆಂ (ಜಯಕಾ. ೭–೧೭); ಅಳುಂಬಮಾದ ಕಳ್ಗತ್ತಲೆಯೊಳ್ (ಯಾದವ. ೩–೭೧ ವ). [< ಕರಿದು + ಕಟ್ತಲೆ]

**ಕರ್ಗಾಮುಂಡ** (ನಾ). ಒಬ್ಬಾತನ ಹೆಸರು: ಕರ್ಗ್ಗಾಮುಣ್ಡರ ಕಲ್ಲಮನೂರ್ಗ್ಗಾಮು[ಣ್ಡುಗೆ]ಯ್ಕೆ (ಕಇ. I, ೧೪–೫; ಸು. 866). [< ಕರಿದು + ಗಾಮುಂಡ]

**ಕರ್ಗು$_1$, ಕಂಗು$_1$, ಕಗ್ಗು$_1$, ಕರುಗು$_1$, ಕಳ್ಗು, ಕಟ್ಗು$_1$** (ಕ್ರಿ). ಕಂದು; ಕಪ್ಪಾಗು; ಕಪ್ಪಿಡು: ಪಯೋಧರಂಗಳ ತುದಿ ಕರ್ಗಿ ತೋಜಿತು (ಕಾವ್ಯಸಾ. ೩೬೦ ಶೂದ್ರಕ); ಕರ್ಗಿದ ಕುರುಳ್ ಕೊಂಕಾಗಿ (ಪಂಪಭಾ. ೪–೭೪); ತೆರಳ್ದ ಮೊಗಂ ಕರ್ಗಿದ ಭಾಸೆ (ಪುಷ್ಪಪು. ೪–೪); ಮುಗಿಲ್ ಕರ್ಗಿಕೊಂಡಿರ್ಪೊಡಂ (ಅಟ್ಟಮ. ೮–೬೧). **ಕಂಗು$_1$:** (ಸ್ಯಾಂಡರ್). **ಕಗ್ಗು$_1$:** ಮೊಗಮೆಲ್ಲಂ ಕರಿಂಕುವರಿದಂತೆ ಕಗ್ಗಿಯುಂ ಕುಸಿಯ ತೆಗೆದ ತಲೆಯುಂತೆ ಕುಂಠೆಯುಳ್ಳ (ಧರ್ಮಾಮೃ. ೮–೨೩೨ ಅಡಿಟ); ಕಬ್ಬುನದ ಕಗ್ಗಿದ ಬಿಟ್ಟನಮರ್ಕವೆತ್ತ ಕತ್ತಳಮೆನಿಸಿತ್ತು ಪುತ್ತಗಳ ಮೆಯ್ಯ ಮಲಂ ಮಲಧಾರಿದೇವರ (ಎಕ. VIII, ತೀರ್ಥಹ. ೧೯೯–೧೨; 1093); ಆ ಸಿಂಗ ದುರುರವಕೊಡಲುಬ್ಬಿ ಬಿರಿಯಲು ವಾಸುಗಿಗಟ್ಟಿ ಕೊಳ್ಕುಜಿದು ಘಾಸಿಯಾಗುತಲಾನೆ ಮೊಗದ ಕಗ್ಗಿದ್ದ ಕೈಲಾಸದ ಗುಹೆಯನೆಯ್ದುದುದು (ವರ್ಧಚ. ೪–೩೬). **ಕರುಗು$_1$:** ಆರು ನೀವೀ ಕರುಗಿ ಮೊರೆಯುವ ನೀರ ಕಾಯಲ ಹಾಯುವವರು (ಇಂಗೀತ. ೬೬–೫). △ **ಕಳ್ಗು:** ಅದಿರ್ವಪುರ್ವಿನಿಂದಲೂ ಕಳ್ಗಿದ ಮೋಜ್ಚಿಯಿಂದಲೂ ಅಬ್ಬರಿಸುತ (ಕಗವಿ. ೯೫–೫). △ **ಕಟ್ಗು$_1$:** "ಕಟ್ಗು – ಕಾರ್ಷ್ಣ್ಯೇ (ಕಪ್ಪಾಗು)" (ಶಮಧಾ); ಅಲ್ಲಿಯ ಮಹಾನಾಗಂಗಳ್ ವಿಷಂ ಬೆರಸು ಸುಯ್ದು ಸುಯ್ಯ ಪೊಗೆಯೊಳಂ ಕಟ್ಗಿದ ಮೆಯ್ಯುಮಂ (ಪಂಪಭಾ ೫–೧೦೩ವ); ಕುವಲಯ ವನರುಚಿಯಿಂ ಜಾಹ್ನವಿಯ ಜಳಂ ಕರಮೆ ಕಟ್ಗಿ ತೋಜಿದಂತೆ (ಕಾವ್ಯಾವ. ೮೪೯); ನೆರೆದ ಮುಗಿಲ್ ಕಲಕುವುದನೀಕ್ಷಿಸಿ ತಮ್ಮ ಮನಂ ಕಲಂಕಿ ಕಟ್ಗಿರೆ (ಜಗವಿ. ೪–೯).

ಕರ್ಗಿಕೊಳ್ = ಬಾಡು; ಕಪ್ಪಿಡು; ಕಂಗು: ಉಮ್ಮಳಿಸಿದವೊಲ್ ಕರ್ಗಿಕೊಂಡುವವಜ ಮೊಗಂಗಳ್ (ಅರ್ಧನೇ. ೨–೨೨).

[ದೇ. ‖ ತಮಿ. ಕರುಕ್ಕು; ಮಲ. ಕರಿಕ್ಕ; ತೆಲು. ಕಗ್ಗು, ಕ್ರಾಗು]

**ಕರ್ಗುರ್ಗ₂** (ನಾ). ಕಪ್ಪು; ಕರಿಯ ಬಣ್ಣ ; "ಕರ್ಪುರ್ಗ" (ಚತುನಿ. ೬. I, ೩೪) [< ಕರ್ಗುರ್ಗ₁]

**ಕರ್ಗುಡಿ** (ನಾ). ಕಪ್ಪಾದ ಕುಡಿ; ಕರಿಕಾದ (ದೀಪದ) ಕುಡಿ: ಹೂವಿನ ಮುಗುಳರಳ್ದುವು ಕರ್ಗುಡಿಯಾಯ್ತು ದೀವಿಗೆ ಬೆಳ್ದಿಂಗಳಂದ (ಗೋಮಟೇ. ೧೩-೩೮). [< ಕರಿದು + ಕುಡಿ₂]

**ಕರ್ಗುಡಿಗತ್ತಲೆ** (ನಾ). (ಕರಾ) ದಟ್ಟವಾದ ಕತ್ತಲೆ: ಅಮಾವಾಸ್ಯೆಯ ಕರ್ಗುಡಿಗತ್ತಲೆಯಲ್ಲಿ ನಡೆಯಲಾಗದು (ರೂಢಿ). [ಕರ್ಗುಡಿ₀ + ಕತ್ತಲೆ (< ಕಟ್ಟಲೆ)]

**ಕರ್ಗುಡಿವಡು** (ಕ್ರಿ). ಕರಿಯ ಕುಡಿಯನ್ನು ಹೊಂದು; (ದೀಪದ) ಕುಡಿ ಕಪ್ಪಾಗು, —ಕರಿಕಾಗು: ಮೆಯ್ಯರಿಸಿನಂ ಕಂಪೋಡಿತೀ ಬೆಂದ ದೀಪಿಕೆಯುಂ ಕರ್ಗುಡಿವಟ್ಟುದೆನ್ನಿನಿಯನಿನ್ನುಂ ಬಾರನೇಕೆ (ಲೀಲಾವ. ೨-೪೮). [ಕರ್ಗುಡಿ + ಪಡು₁]

**ಕರ್ಗುಱುಕೆ, ಕಗ್ಗುಱುಕೆ** (ನಾ). ಒಂದು ಊರಿನ ಅಥವಾ ಪಾಳ್ಯದ ಹೆಸರು (?): ಕೋಟೆಯ ನೈರಿತ್ಯದ ಕರ್ಗುಱುಕೆಯ ತೆಂಕಲು ಬಿಟ್ಟ [ದು]ಕೆಯಿಮತ್ತರು ೨೬೦ (ಸೌಇಇ. VIII, ೩೬೪-೧೯; 1099). **ಕಗ್ಗುಱುಕೆ:** ಊರಿಂ ಮೂಡಣ ಕಗ್ಗುಱುಕೆಯಿಂ ಮೂಡಲು ಮತ್ತಱು ಮೂಱು (ಸೌಇಇ. IX-i, ೨೪೯-೫೮; 1147). [< ಕರಿದು + ಕುಱುಕೆ₂ (< ಕುಱುಕಿ)]

**ಕರ್ಗೆಂಪು** (ನಾ). ಕಪ್ಪು ಮಿಶ್ರವಾದ ಕೆಂಪು; ದಟ್ಟ ಕೆಂಪು: ಈಮೇಗಯ್ಯಗಂಡದುಪ್ಪುಳೂ ಕರ್ಗೆಂಪಿನ ಬೀರವಣ್ಣ (ಮಂತ್ರ ಶ. ೯೨-೧೫). [< ಕರಿದು + ಕೆಂಪು₁]

**ಕರ್ಗೆರೆ** (ನಾ). ಕರಿಯ ಗೆರೆ; ಕಪ್ಪಾದ ರೇಖೆ: ಕಾಮೋಜ ಪಿಡಿದ ಸೂತ್ರದ ಕರ್ಗೆಱ[ರೆ]ಯೆನೆ ರೋಮಾಳಿ ನಸು ಪಬಿರ್ ತೊಡಲ (ಮೋಹತ. ೨೩-೨೧). [< ಕರಿದು + ಗೆರೆ]

**ಕರ್ಗೆಱಿ, ಕಗ್ಗೆರೆ, ಕಗ್ಗೆಱಿ** (ನಾ). ಒಂದು ಸ್ಥಳದ ಹೆಸರು: ತೆಙ್ಕಣ ಕಡೆಗೋಡೋಡಂ ನಿಱಿಸಿದ ಕಲ್ಲಿನಮನ್ತೆ ಪಾಯೆ ಕನ್ನಲ್ಲಿಯದ ಕರ್ಗ್ಗೆಱಿಯ ಸೀಮೆಯೆ ಸೀಮೆಯಾಗಿ (ಎಕ. III, ನಂಜನ. ೨೬೯-೯೪; 904). **ಕಗ್ಗೆರೆ:** ಕಗ್ಗೆರೆಯ ತೋಟದ ಸಿದ್ಧೇಶ್ವರಸ್ವಾಮಿಯವರಿಗೆ ಸಮರ್ಪಿಸಿದ ಗ್ರಾಮದ ಶಿಲಾಶಾಸನದ ಕ್ರಮವೆಂತೆಂದರೆ (ಎಕ. XII, ಕುಣಿಗ. ೪೬-೧೧; 1664). **ಕಗ್ಗೆಱಿ:** ಪ್ರೋತ್ಸಾಹದಿಂ ಬಿಟ್ಟನಪ್ರತಿಮಲ್ಲಂ ಸವಣೇಱಬೆಕ್ಕ ಕಗ್ಗೆಱಿಯುಮಂ ಕಲ್ಪಾಂತರಂ ಸಲ್ವಿನಂ (ಎಕ. II, ೨೪೦-೪೧; ಸು. 1175); ನಿರಂಜನ ಗಣೇಶ್ವರಂ ಹರುಷದಿಂದೊಗೆದು ಸಿದ್ಧೇಶನಾಮವನಾಂತು ಕಗ್ಗೆಱಿಯ ತೋಂಟಕ್ಕೈದಿ (ಚಬಪು. ೬೩-೪೪); ಕಗ್ಗೆಱಿಯ ಪುತ್ತ್ರದಲಿ ಸ್ವರ್ಗವಱಿಯಲು ನೆಲಸಿ (ಮಡಿಕ್ಕಾ. IV, ೧೧೧೪ ಸಿದ್ಧೇಶ್ವರ ತ್ರಿವಿದಿ). [< ಕರಿದು + ಕೆಱಿ]

**ಕರ್ಗೊತ್ತಿಗೂಡಲ** (ನಾ). ಒಂದು ಊರಿನ ಹೆಸರು: ಮೂಡಯ್ತಾಡಿಲ ಪೆರ್ವ್ವಳ್ಳಮೇ ತೆಂಕಯ್ಯುಗರ್ಗೊತ್ತಿಗೂಡಲ ಪಳ್ಳಮೇ ಪಡುವಾಯ್ ಪೆರ್ಗೊಲ್ಲಿಯೆ (ಎಕ. V, ಹೆಗ್ಗಡ. ೪-೨೫; ಸು. 750). [?]

**ಕರ್ಗೊರಳ** (ನಾ). ಕಪ್ಪಾದ ಕೊರಳುಳ್ಳವನು; ನೀಲಕಂಠ; ಶಿವ: ಕರ್ಗೊರಳನ ಭರ್ಗನ ಜಿತಸುಮನೋಮಾರ್ಗಣನಂ... ಪೊಗಳ್ದಂ (ಉದ್ಭಟದೇ. ೩-೨೨). [< ಕರಿದು + ಕೊರಳ್ (< ಕೊರಲ್) + -ಅ₇]

**ಕರ್ಗೊಳ್ಳಿ, ಕರಿಕೊಳ್ಳಿ, ಕರಿಗೊಳ್ಳಿ** (ನಾ). ಕರಿಕಾದ ಕೊಳ್ಳಿ; ಸುಟ್ಟು ಕಪ್ಪಾದ ಕೊಳ್ಳಿ: ಗುಹಂ ಕಾಯ್ದಿಟ್ಟುದಂ ಶಕ್ತಿಯ ನೆಡೆಯೊಳೆ ಕರ್ಗೊಳ್ಳಿ ಪೊಲ್ ಬೀಱಿ ದರ್ಪಂ ನೆಗಲ್ದೊಂಕಾರದಿಂ ಚಪ್ಪರಿಸಿ ಕೆಡೆಪಿದಂ ಕೃಷ್ಣ ನಾಜ್ಞಾಸಮಗ್ರಂ (ಜಗಪಿ. ೧೮-೪೧). **ಕರಿಕೊಳ್ಳಿ:** ಅಳಿಯಿದಿರ್ಗಲ ರಾಸಿ ಮೂಗುಗೋಗಿಲೆ ಕರಿಕೊಳ್ಳಿ ಕೆಂದಳಿರೆ ಕೇಸುರಿ (ಅರ್ಧನೇ. ೫-೨೨). **ಕರಿಗೊಳ್ಳಿ:** ಬಿಸಿಲ ಬೆಂಕಿಯಿಂ ಹೊಗೆದೆಯ್ದೆ ತರುನಿಕರವುರಿದು ಕರಿಗೊಳ್ಳಿಯಂತೆ ಕಾಯ್ಪೇಱಿ (೧೦೪. ೯-೨೬ ವ); ಗಳಗಳನೆ ಮುನ್ನ ಬೆಂದುಳಿದಿರ್ದ ಕರಿಗೊಳ್ಳಿಗಳನೆಲ್ಲವಂ ಸಿದುಗಿ ತಂದೊಟ್ಟಿ (ಹಚಕಾ.೧೮-೩೫); ಅರೆಬೆಂದುಳಿದ ಕರಿಗೊಳ್ಳಿಯಂ ತಂದೊಡೆ (ಧರ್ಮಪ.೮-೧೬ ವ). [< ಕರಿದು + ಕೊಳ್ಳಿ₁]

**ಕರ್ಗೋಡಗ** (ನಾ). "ಕರಿಯ ಮಂಗ, ಮುಸು, ಸಿಂಗಳೀಕ" (ಪ್ರಭಣ್ಣ). [< ಕರಿದು + ಕೋಡಗ]

**ಕರ್ಚ** (ನಾ). ಒಂದು ಜಾತಿಯ ಮೀನು: ಕಾರವಾರದಲ್ಲಿ ಕರ್ಚ ಯೆಂಬ ಜಾತಿಯನ್ನು (ಮೀನನ್ನು) ಕೊಲ್ಲುವುದಿಲ್ಲ (ಕಭಾಗ. ೬೭). [?]

**ಕರ್ಚರೆ** (ನಾ). "ದೇಹದ ಒಂದು ಭಾಗ" (ಪಂಪಭಾ. ಕೋಶ): ನಡು ಪುರ ಬೆನ್ ಬಸಿಱು ತೊಳಕು ಕರ್ಚರೆ[ಪಾಠಾಂ. ಚರಡೆ, ಜರರೆ] ಮುಯ್ಯು ಮುಸುಂಬು ಮೂಗು... ಎಂಬೆಡೆಯನೆ ನಟ್ಟುವುರ್ಚಿದುವು ನೇರ್ದುವು ಸೀಳ್ದುವು ಪಾರ್ಥನಂಬುಗಳ್ (ಪಂಪಭಾ. ೧೧-೧೩೬). 'ಕರ್ಜಱಿ?' ಪರಾ. [?]

**ಕರ್ಚಿ₁** (ನಾ). (ಕರಾ). ಕರಿಬಣ್ಣದವಳು; ಕರಿಪಿ; ಕರಿಕಿ: ಅವ್ವೆ ಕರ್ಚಿ ಮಗಳು ಬಿಳ್ಚಿ, ಮಗಳಿಗೆ ಹುಟ್ಟಿದ ಮಗಳು ರತಿರಂಭೆ (ಗಾದೆ). [< ಕರಿದು + -ಚಿ₁]

**ಕರ್ಚಿ₂** (ನಾ). ಉತ್ತಮವಲ್ಲದ್ದು; ಉತ್ಕೃಷ್ಟವಲ್ಲದ್ದು; ಸಾಮಾನ್ಯವಾದದ್ದು; ನಿತ್ಯ ಉಪಯೋಗಿಸುವಂತಹುದು; ಚಿಲ್ಲರೆ.
**ಕರ್ಚಿಯೆಲೆ** = ೧. ಸಾಮಾನ್ಯವಾದ ಎಲೆ. ೨. ಇಸ್ಪೀಟಾಟದಲ್ಲಿ ಕೆಳದರ್ಜೆಯ ಎಲೆ. **ಕರ್ಚಿಅಡಕೆ** = ಸಾಮಾನ್ಯ ಅಡಕೆ. [← ಮರಾ. ಖರ್ಚೀ]

**ಕರ್ಚಿಕಾಯಿ** 'ಕರಂಜಿಕಾಯ್' ನೋ.

**ಕರ್ಚಿಸು₁, ಕಚ್ಚಿಸು** (ಕ್ರಿ). ೧. ಹಲ್ಲಿನಿಂದ ಕಡಿಯುವಂತೆ ಮಾಡು; ಕಡಿಸು: ಒಂದು ದಕ್ಕಂ ತಂಡದಱಿರಡು ಕಡೆಯುಮಂ ತಾವಡಸಿ ಕರ್ಚಿ ನಡುವೆಯಾವೆಯಂ ಕರ್ಚಿಸಿಕೊಂಡು (ಪಂಚತಂ. ೧೫೬-೧೫). **ಕಚ್ಚಿಸು:** ೧. ಮಹಾಸುರದ ಫಣೆಗಳಲಿ ಕಚ್ಚಿಸಿ (ಸಂಭಪ. ೧೭-೫೩). ೨. ಹಚ್ಚು; ಹೊತ್ತಿಸು: ಮೇಣದ ಬತ್ತಿಯನ್ನೂ ದೀಪದ ಕಡ್ಡಿಯನ್ನೂ ಹೊರಗೆ ತೆಗೆದು ದೀಪವನ್ನು ಕಚ್ಚಿಸಿದನು (ಪಿಶಾಪ. ೧೨೩). [ಕರ್ಚುರ್ಗ₁ + -ಇಸು₃]

**ಕರ್ಚಿಸು₂** (ಕ್ರಿ). ತೊಳೆಯಿಸು; ತೊಳೆಯುವಂತೆ ಮಾಡು: ಪ್ರಿಯಸಖಿಯೆನಿಸಿದ ಮದಲೇಖೆಯೆಂಬಳಿಂ ನೃಪನ ಕಾಲ್ಗಳಂ ಕರ್ಚಿಸಿದಳ್ (ಕಾದಂಬ. ೪೭). [ಕರ್ಚುರ್ಗ₂ (< ಕಚ್ಚು) + -ಇಸು₃]

**ಕರ್ಚುರ್ಗ₁, ಕಚ್ಚು₁** (ಕ್ರಿ). ೧. ಹಲ್ಲಿನಿಂದ ಹಿಡಿ, —ಕಡಿ: "ಕರ್ಚು–ಖಾದನೇ, ಪ್ರಕ್ಷಾಲನೇ, ತಂಡುಲ ಪ್ರಕ್ಷಾಲಜಲೇ ಚ" (ಶಮಧಾ); ಕೊಲ್ಲಿಂ ಬಿಸುಡಾಯುಧಮಂ ಪುಲ್ಲಂ ಕರ್ಚೇಱು ಪುತ್ರಂ (ಕವಿರಾ. ೩-೧೯೯); ಕೀಟಂ ಕರ್ಚಿ ದಿಂಡುಮುಗುಬ್ದು ಕೆಡೆದ ಜಾತ್ಯಶ್ವಂಗಳುಂ (ಪಂಪಭಾ. ೧೦-೧೧೬ ವ); ನಿಚ್ಚಲೊಂದೊಂದು ಮೀನಂ ಕರ್ಚಿಕೊಂಡು ಪೋಗಿ (ಪಂಚತಂ. ೮೪-೧೮); ಕೇದಗೆಯೆಸಱಿಸಟಿಂ ಕರ್ಚಿ ಪಾಱಿತ್ತೊ (ಕಾವ್ಯಸಾ. ೩೨೩). ೨. ಮುದ್ದಿಸು; ಚುಂಬಿಸು: ತೊಡೆಯನೇಱಿಸಿಕೊಂಡು ಕದಪಂ ಕರ್ಚಿ (ಧರ್ಮಾಮೃ. ೩-೨೪೧); ಕಪೋಲಮಂ ಕರ್ಚುವನುಕರ್ಚುವಂ (ಉದ್ಭಟ. ೧೧-೨). **ಕಚ್ಚು₁:** ೧. ಕಳ್ಪ ಬೆಳ್ಪ ವಟ್ಟಲ್ ಬಾಯೊಳ್ ಬೆಚ್ಚಂತಿರೆ ಸತಿ ಶಶಿಯಂ ಕಚ್ಚಿ ನೆಲಕ್ಕಿಟಿದ ರಾಹುವಂ ನೆಱಿ ಪೋಲ್ತಳ್ (ಕಾವ್ಯಸಾ. ೯೬೩ ಶೂದ್ರಕ); ಮಾದೆಗನಂತೆ ಬಾರಿತ್ತುವರ್ ನಾಯಂತೆ ಕಚ್ಚಿ ತೆಗೆವರ್ (ಧರ್ಮಾಮೃ. ೩-೬೩);

ಹುಲಿ ಕರಡಿಗಳು ಕಚ್ಚಿ ನೊಂದನೋ (ಸಿದ್ಧರಾ. ೨-೩೪). ೩. (ಅಲಂ) ಬಾಧೆಪಡು; ನೋಯು: ತಲೆಯ ಶೂಲೆ ಪಿರಿದಕ್ಕುಂ ವುಬ್ಬ ಸಂಬಡುಗುಂ ಹೊಟ್ಟೆ ಕಚ್ಚುಗುಂ ಮೈ ನಿಗುರುಗುಂ (ಬಾಲಚಿ.೧೩೨-೧೪). ೪. (ಅಲಂ) ಬಾಧಿಸು; ನೋವನ್ನುಂಟು ಮಾಡು: ಅಲ್ಲಿ ಚಳಿಯು ಕಚ್ಚದು (ಅನಿಲ. ೧೬-೧೮). ೫. (ವ್ಯೆಗೆ) ಅಂಟಿ ಸೋರು, — ಇಳಿ: ಎಣ್ಣೆಯನ್ನು ಲಾಳಿಕೆಯಿಂದ ಹಾಕದಿದ್ದರೆ ಕಚ್ಚುತ್ತದೆ (ರೂಢಿ).

[ದೇ. ‖ ತಮಿ. ಕಚ್ಚು; ತುಳು. ತುಚ್ಚು; ಕೋಲಾ. ಪರ್ಜಿ. ಕಚ್ಚ್; ಗಡಬ. ಕಚ್ಚ್, ಕಸ್; ಗೊಂಡಿ. ಕಸ್‌ಖಾನಾ; ಕುಇ. ಕಚ್ಚ; ಕುವಿ. ಕಚಳ]

**ಕಚುರ್ಗ₂** 'ಕಟ್ಟು' ನೋ.

**ಕಚುರ್ಗ₃, ಕಚ್ಚು₃** (ನಾ). ೧. ತೊಳೆಯುವಿಕೆ; ಪ್ರಕ್ಷಾಲನ: ಸೆಟ್ಟಿಯಾರ್ಗ್ಗೆ ಸಾಸಿರ್ವ್ವರ ಸನ್ನಿಧಾನದಲ್ ಕಾಲ್ಗಚ್ಚಾರ್ಗಿ ದಾನಂಗೊಂಡಂ (ಎಇ. XIX, ೨೧೯-೭; 1037). ೨. ಪಾದ ತೊಳೆದ ನೀರು; ಪಾದೋದಕ: "ಅಲುಂಬು ಕರ್ಚಿನ್ನೆ ಕಾಲಿನುದಕಂ" (ಕವಿಕಂ. ೧೮೩). ೩. ಅಕ್ಕಿ ತೊಳೆದ ನೀರು; ಕಲಗಚ್ಚು: "ಕರ್ಚುರ-ಖಾದನೀ, ಪ್ರಕ್ಷಾಲನೀ, ತಂಡುಲ ಪ್ರಕ್ಷಾಲಜಲೇ ಚ" (ಶಮುಧ). **ಕಚ್ಚು₃**: ೩. ಅಮೃತವಳ್ಳಿ ಕೊಡಶಿಯ ಬಳಹು ಅಷ್ಟ ಮದುಕ ಇವಂ ಕಷಾಯ ಮಾಡಿ ಕೂಡಿ ಸಕ್ಕರೆ ಬೆರಸಿ ಅಕ್ಕಿಯ ಕಚ್ಚಿಂದೆಜೆವುದು (ಅಶ್ವಟೀ. ೯೫-೩); ಅಶ್ವತ್ಥಾಮನು ಹಾಲು ದೊರೆಯದ ಮೂಲಕ ಅಕ್ಕಿಯ ಕಚ್ಚನ್ನು ಕುಡಿದು ಕುಣಿದಾಡಿದಂತೆ (ಕುರಿಹಿಂ. ೧೧೫); ಗುರು ಹಾಲು ಇಲ್ಲದ ಪಾಡಿಗೆ ಕಚ್ಚು ಕುಡಿಸಿದ (ಮೂಕಮ. ೪೫). [< ಕಚ್ಚು]

**ಕಚುರ್ಗ₄, ಖರ್ಚು** (ನಾ). ವೆಚ್ಚ; ವ್ಯಯ: ಲಷ್ಕರಿನ ಕರ್ಚಿನ ಬಗ್ಗೆ ತಮ್ಮ ಕಡೆಯಿಂದ ಐದು ಲಕ್ಷ ಡಂಗಾಳಿ ಅಕ್ಕಿ ಕೊಡಿಸಬೇಕು (ರಾಜೇಂದ್ರ. ೪೦); ಈ ಪಾದ್ರಿ ದಾರಿಯ ಕರ್ಚಿಗೆ ಸ್ವಲ್ಪ ಹಣವನ್ನು ತೆಗೆದುಕೊಂಡು . . . ಹೊರಟನು (ಪ್ರವಾಇ. II, ೩); ಪ್ರಯಾಣದ ಕರ್ಚನ್ನು ಕೊಡಲು ನಮ್ಮ ಸಮಿತಿಯನ್ನು ಒಪ್ಪಿಸಿದ್ದೇನೆ (ಹುಚ್ಚುಹು. ೮೬). **ಖರ್ಚು**: ಅದರ ಖರ್ಚು ೪೦ ರೂಪಾಯಿ (ಎಕ. IX, ಕಾನಕಾ. ೯೦-೫೨; 1700); ಅವನ ಜೊತೆಯಲ್ಲಿ ಬರುವವರ ಖರ್ಚನ್ನು ಫಿರ್ಯಾದಿಯೇ ವಹಿಸಬೇಕಾಗಿತ್ತು (ಹುಟ್ಟಹ. ೨೧); ಆಲಸ್ಯದವನಿಗೆ ಎರಡು ಕೆಲಸ, ಲೋಭಿಗೆ ಮೂರು ಖರ್ಚು (ಗಾದೆ).

[← ಅರ. ಪಾರ. ಮರಾ. ಖರ್ಚ್]

**ಕರ್ಚುಂಗಲ್** (ನಾ). ಕಚ್ಚುವ ಕಲ್ಲು; "ಸೂಜಿಗಲ್ಲು" (ಶಮುದ. ನ. ಅಡಟ): ಸುರ್ಕುಂಗುರುಳ್, ಕರ್ಚುಂಗಲ್, ಚುರ್ಚುಂಗೊಳ್ಳಿ (ಶಮುದ. ನ. ೧೪೧ ಪ್ರಯೋ). [ಕರ್ಚು₁ + ಕಲ್₃]

**ಕರ್ಚುಂಗಲ್ಲ** (ನಾ). ಕಚ್ಚುವ ಕೆನ್ನೆ: ಸುರ್ಕುಂಗುರುಳ್, ಕರ್ಚುಂಗಲ್ಲಂ, ಚುರ್ಚುಂಗೊಳ್ಳಿ (ಶಮುದ. ೧೭೦ ಪ್ರಯೋ). [ಕರ್ಚು₁ + ಗಲ್ಲ₁]

**ಕರ್ಚುನೀರ್, ಕಚ್ಚುನೀರು** (ನಾ). ೧. ತೊಳೆದ ನೀರು; ಅಭಿಷೇಕ ಮಾಡಿದ ನೀರು: ಸಾಳಿಗ್ರಾಮದೊಂದು ಕರ್ಚುನೀರಿಂ ಪರಿಶುದ್ಧನಾದೊಡಲವಂ ಕಿಟ್ಟದಿರಿಂ (ರಾಮಾಶ್ವ. ೮೦-೨೧). **ಕಚ್ಚುನೀರು**: ೨. ಕಲಗಚ್ಚು: ಅವುಗಳಿಗೆ ನಿತ್ಯದಲ್ಲೂ ಸ್ವಲ್ಪ ಸ್ವಲ್ಪ ಅನ್ನವನ್ನು ಹುಳಿನೀರನ್ನು ಕಚ್ಚುನೀರನ್ನು ಹಾಕುತ್ತಿರಬೇಕು (ಕೃಷಿಪ್ರ. ೧೯).

[ಕರ್ಚು₂ (< ಕಟ್ಟು) + ನೀರ್₁]

**ಕರ್ಚುರ** 'ಕಚ್ಚೂರ' ನೋ.

**ಕರ್ಚೂರ** (ನಾ). ೧. ಒಂದು ಸುಗಂಧ ದ್ರವ್ಯ; ಕಚೋರ. ೨. ಚಿನ್ನ; "ಭಂಗಾರ" (ಗಂಗಾಮು. ೭೩). ೩. "ಅಂಬೀಹಳದಿ" (ಗಂಗಾಮು. ೭೩). [ಸಂ.]

**ಕರ್ಚೂರಕ** (ನಾ). ೧. ಕರ್ಚೂರದ ಗಿಡ. ೨. ಅರಸಿನ. [ಸಂ.]

**ಕರ್ಜರಿಗೆಡ್ಡೆ** (ನಾ). ಒಂದು ಬಗೆಯ ಗೆಡ್ಡೆ: "ಪೀತಕಂದಂ-ಕರ್ಜರಿ ಗೆಡ್ಡೆ" (ಒಷಧಿ. ೯೯). [ಕರ್ಜರಿ₀ + ಗೆಡ್ಡೆ (< ಗಡ್ಡೆ₁)]

**ಕರ್ಜಜಿ** (ನಾ). ದೇಹದ ಒಂದು ಭಾಗ (?): ನಖದೊಳ್ ಸೂಜಿಯುಂ ಪೆಟ್ಟಯುಂ ಜಾತಬೊಕ್ಕಣಂಗಟ್ಟಿಯುಂ ಕರ್ಜಜಿಯಸೂಜಿಯುಂ ಮೂಗಿಟ್ಟಜಿಯೆಯುಂ (ಅಜಿಪು. ೧೧-೧೦೨). 'ಕರ್ಚರೆ' ಪರಾ. [?]

**ಕರ್ಜಾಲಿ, ಕರಿಜಾಲಿ** (ನಾ). ಕರಿಯ ಜಾಲಿ ಗಿಡ: ಗಂಟುತುಂಬೆ, ಕರ್ಜಾಲಿಗಿಡ (ವೈಔಗಿ. ೫೦-೧೦೦೧). **ಕರಿಜಾಲಿ**: (ಅ).

[< ಕರಿದು + ಜಾಲಿ₁]

**ಕರ್ಜಿ** (ನಾ). ಒಂದು ಜಾತಿಯ ಸಸ್ಯ: ನಡುನಡುವೆ ಅಲ್ಲಲ್ಲಿ . . . ಬೆಮ್ಮಾರಲ, ಕರ್ಜಿ ಇತ್ಯಾದಿ ಪೊದೆಗಳು ಬೆಳೆದುಕೊಂಡಿದ್ದು (ಮಲೆಮ. ೫೫೨). [?]

**ಕರ್ಜಿಕಾಯಿ** 'ಕರಂಜಿಕಾಯ್' ನೋ.

**ಕರ್ಜಿಗಿ, ಕರಿಜಿಗಿ** (ನಾ). ಹತ್ತಿಗಿಡಕ್ಕೆ ಬರುವ ಒಂದು ರೋಗ; ಕಾಡಿಗೆ ರೋಗ; ಜಿಗಿ ಅಂಟುವ ರೋಗ. **ಕರಿಜಿಗಿ**: ಕರಿಜಿಗಿ ಬಿದ್ದು ಈ ವರ್ಷದ ಹತ್ತಿ ಪೀಕು ಹಾಳಾಯಿತು (ರೂಢಿ). [< ಕರಿದು + ಜಿಗಿ₄]

**ಕರ್ಜೀರಿಗೆ** 'ಕಡಜೀರಿಗೆ' ನೋ.

**ಕರ್ಜೂರ, ಕಜೂರ, ಕಜ್ಜುರ, ಕಜ್ಜೂರ** (ನಾ). ೧. ಖರ್ಜೂರವೃಕ್ಷ; ಉತ್ತುತ್ತೆಯ ಗಿಡ: ಬಾಚಿಯ ಕರ್ಜೂರದ ಕಿತ್ತೀಳೆಯ ಕಮ್ಮರದ (ಧರ್ಮಾಮೃ. ೧-೧೫೧); ತಡಸು ತಪಸಿ ಕುರಂಜಿ ಕ[ಪಾಕಾ. ಖ]ರ್ಜೂರ (ತೊರರಾ. ೩-೧-೨೬). ೨. ಖರ್ಜೂರದ ಹಣ್ಣು; ಉತ್ತುತ್ತೆ. **ಕಜೂರ**: ೧. (ಅ). **ಕಜ್ಜುರ**: ೧. ಕಜ್ಜುರ ಕಕ್ಕೆ ಕಡವ ಮೊಳಗು ನವಿಲ್ವಜ್ಜೆ ಗರಿಕೆ ಸಸಿ ನೇಸಜವೆಳಗಿಗೆ ವೆಜ್ಜಗೊಡದೆ ಬೆಳೆದಿರಲ್ (ಜಯುಕಾ. ೧೫-೨೪). **ಕಜ್ಜೂರ**: ೨. ನನಗೆ ಮತ್ತು ಪಚ್ಚಗೆ ಜೇನುತುಪ್ಪ ಕಜ್ಜೂರ ತರಿಸಿಕೊಟ್ಟನು (ಮೋದಿಮ. ೧೩೯). 'ಖರ್ಜೂರ' ಪರಾ.

[ಪ್ರಾ. ಖಜ್ಜೂರ (< ಸಂ. ಖರ್ಜೂರ)]

**ಕರ್ಜೇಡಿ** (ನಾ). ಕಪ್ಪು ಬಣ್ಣದ ಜೇಡಿಮಣ್ಣು: ಕುಶಾಗ್ರೀಯ ಬುದ್ಧಿಸಂಪತ್ತಿಯಿಂದು ಕರ್ಜೇಡಿಯ ಹೆಂಟೆಯನ್ನೀ ತಲೆಗೆ ತುರುಕಿರುವನು (ಮಂತ್ರಶ. ೮೯-೧೬). [< ಕರಿದು + ಜೇಡಿ]

**ಕರ್ಣ₁** 'ಕರಣೆ₁' ನೋ.

**ಕರ್ಣ₂** (ನಾ). ೧. ಕಿವಿ: "ಕರ್ಣಃ, ಶ್ರೋತ್ರಂ, . . . ಶ್ರವಣಂ-ಈ ೫ ಕಿವಿ" (ಹಲಾಯು. ೮೫-೩೬೨); ವಸುಕ್ಷೇಣನಾಲೋಕಾಂತಂಬರ ಮಳವಿ ಬಳೆಯ ಬಳದೆಸೆಕಮದೋರಂತೆ ಜನ[ಂಗಳ್] ಕರ್ಣೋಪಾಂತದೊಳೊಗೆದೆಸೆಯೆ ಕರ್ಣನೆಂಬನುಮಾದಂ (ಪಂಪಭಾ. ೧-೯೮). ೨. ಹಡಗಿನ ಚುಕ್ಕಾಣಿ. 'ಕರ್ಣಧಾರ' ಪರಾ. ೩. ಸೂರ್ಯನಿಂದ ಕುಂತಿಯಲ್ಲಿ ಜನಿಸಿದ ಮಗ: ನೆನೆಯದಿರಣ್ಣ ಭಾರತದೊಳಿಂ ಪೆಜರಾರುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ (ಪಂಪಭಾ. ೧೨-೨೧೭). ೪. (ಅಲಂ) ದಾನಶೂರ; ದಾನವೀರ. ೫. [ಗಣಿತ] ಬಹುಭುಜಾಕೃತಿಯ ಯಾವುದಾದರೂ ಎರಡು ಅಪಾರ್ಶ್ವಕೋನಗಳನ್ನು ಸೇರಿಸುವ ಸರಳರೇಖೆ; ಮೂಲೆಗೆರೆ: ಕಾಟಕೋಣ ತ್ರಿಕೋಣದಲ್ಲಿ ಕರ್ಣದ ವರ್ಗವು ಬೇರೆ ಎರಡು ಪಾರ್ಶ್ವರೇಖೆಗಳ ವರ್ಗಗಳ ಮೊತ್ತಗೆ ಸಮವಾಗಿರುವುದು (ಭೂಮಿಅ. ೪೮); ಈ ನೇಯ್ಗೆಯ ವೈಶಿಷ್ಟ್ಯವೇನೆಂದರೆ ಒಂದು ಮೂಲೆಯಿಂದ ಮತ್ತೊಂದು ಮೂಲೆಯವರೆಗೂ ಕಾಣುವ ಕರ್ಣ ಅಥವಾ ಗೆರೆ (ಗೃಹವಿ. ೭೪). ೬. ಎರಡು ಎಂಬ ಸಂಖ್ಯೆಯ ಸಂಕೇತ: "ಯಮು ನಯನ ಕರ್ಣ ಕರ ಪದ ಯಮಳಾಂಘ್ರಿ . . . ಬಾಹು ಕಿವಿಗಳೆರಡಜ ನಾಮಂ" (ವ್ಯವಹಾ. ೯-೨). [ಸಂ.]

**ಕರ್ಣಕಟುಕ** (ಗು). ಕಿವಿಗೆ ಕಹಿಯಾದ; ಕೇಳುವುದಕ್ಕೆ ಕಠೋರವಾದ: ಅನಂತವೀರ್ಯನ ದೃಪ್ತೋದಾತ್ತ ಕರ್ಣಕಟುಕ ವಚೋನಿಚಯ ನಿಶಿತಾಸ್ತ್ರಂಗಳ್ ನೆಱನನುರ್ಚೆ (ಶಾಂತಿಪು. ೪–೫೨ ವ).
[ಕರ್ಣ$_2$ + ಕಟುಕ$_1$ (< ಕಡಿಕ$_2$)]

**ಕರ್ಣಕಠೋರ** (ನಾ). ಕೇಳುವುದಕ್ಕೆ ಕಠೋರವಾದುದು: ಕದನಕ್ಕೆ ಬಲವನೊಡ್ಡಂಬರವಂ ಸಡಗರದಿಂದೆಡೆವಿಡಿದುಗ್ಗಡಮಾದುದು ವೈರಿಭೂಪ ಕರ್ಣಕಠೋರಂ (ಹಮ್ಮೀರ. ೩–೩೦); ಅದರ ಖುರಪುಟ ಧ್ವನಿ ಕರ್ಣಕಠೋರವಾಗಿ ಕೇಳಿಸುತ್ತಿತ್ತು (ಪುನರು. ೪೪೩). [ಕರ್ಣ$_2$ + ಕಠೋರ]

**ಕರ್ಣಕುಂಡಲ** (ನಾ). ೧. ಒಂದು ಬಗೆಯ ಕಿವಿಯ ಆಭರಣ. ೨. ಒಂದು ಜಾತಿಯ ಹೂವಿನ ಗಿಡ (ಕಿ). [ಕರ್ಣ$_2$ + ಕುಂಡಲ]

**ಕರ್ಣಕುಲಿ** (ನಾ). [ಅಶ್ವಶಾ] ಕುದುರೆಗಳ ಕಿವಿಯ ಮುಂದಣ ರೇಖೆ: "ಕಿವಿಗಳ ಮುಂದಣ ರೇಖೆಗೆ ಸವನಿಕು ತಾಂ ಕರ್ಣಕುಲಿಯುಮೆಂಬೀ ಪೆಸರುಂ" (ಅಶ್ವಶಾ. ೯–೨೨). [ಕರ್ಣ$_2$ + ಕುಲಿ ?]

**ಕರ್ಣಕೋಟರ** (ನಾ). ಕಿವಿಯ ರಂಧ್ರ: ವಿಗಡ ಮೃದಲೆಗಳ ಘುಹಾಧ್ವನಿ ಬಗಿದುದ್ವೈ ತಾವರೆಯ ತನಯನ ಕರ್ಣಕೋಟರವ (ಕುವ್ಯಾದ್ರೋ. ೨–೪); ದೇವರನಾಡಿದ ಪರುಷತರ ವಾಕ್ಯಮಾರ್ಗಣಂ ಕರ್ಣಕೋಟರಮಂ ನಾಂಟೆ (ರಾಮಾಶ್ವ. ೩೫–೭).
[ಕರ್ಣ$_2$ + ಕೋಟರ]

**ಕರ್ಣಗತ** (ಗು). ಕಿವಿಗೆ ಬಿದ್ದ; ಕೇಳಿದ.
ಕರ್ಣಗತಮಾಡು = ತಿಳಿಸು (ಕಿ). [ಕರ್ಣ$_2$ + ಗತ]

**ಕರ್ಣಚಾಲನ** (ನಾ). ಕಿವಿಯನ್ನು ಅಲ್ಲಾಡಿಸುವಿಕೆ: ನೆರಪಿ ಭರಿಕೈಯನಬ್ಬಾಂಬುಗಳಂ ಬರೆ ಪೀದುರ್ ಕರ್ಣಚಾಲನದಿನವಂ ಮಿಗೆ ಪರಿಯಿಪ ಮದಕರಿಗಳ್ (ರಾಜಶೇ. ೬–೭೧). [ಕರ್ಣ$_2$ + ಚಾಲನ]

**ಕರ್ಣಚ್ಛೇದ** (ನಾ). ೧. ಕಿವಿ ಕೊಯ್ಯುವುದು. ೨. [ಗಣಿತ] ಒಂದು ಆಕೃತಿಯ ಹೆಸರು (ಪಾರಿಸಿ. ೧೯). [ಕರ್ಣ$_2$ + ಛೇದ]

**ಕರ್ಣಜ** (ನಾ). ೧. ಕಿವಿಯೊಳಗೆ ಹುಟ್ಟಿದುದು; ಕಿವಿಯ ಮಲ; ಗುಗ್ಗೆ. ೨. ಕರ್ಣನ ಮಗ; ವೃಷಸೇನ: ಚಿಗಿದನಾಗಸಕೆ . . . ಮೇಘನಾದಂ ಭೀಮಕರ್ಣಜರ್ ಬೆಜಗಾಗಲು (ಜೈಮಿಭಾ. ೪–೧೨).
[ಸಂ.]

**ಕರ್ಣಜಪ** (ನಾ). ಚಾಡಿ ಮಾತು; ಕೊಂಡೆಯ ನುಡಿ: ಶಾರ್ಙ್ಗಧರನುಮಾ ಮಂತ್ರಿವರ್ಗಮುಂ ನೋಡಿ ರಾಗಿಸಿ ಕರ್ಣಜಪದೊಳ್ ಮೂರ್ಖಾವ್ಯಾಸಂಗಮಂ ಬೆಸಗೊಳೆ (ಶಾಂತಿಪು. ೨–೨೫ ವ).
[ಕರ್ಣ$_2$ + ಜಪ]

**ಕರ್ಣಜಲೌಕೆ** (ನಾ). ನೂರಾರು ಕಾಲುಗಳುಳ್ಳ ಜರಿ; ಶತಪಾದಿ; ಲಕ್ಷ್ಮೀಚೇಳು. [ಸಂ. ಕರ್ಣಜಲೌಕಾ]

**ಕರ್ಣಜಾಪ್ಯ** (ನಾ). [ಜೈನ] ಐದು ಬಗೆಯಾದ ಮಂತ್ರಗಳಲ್ಲಿ ಒಂದು; (ಗಟ್ಟಿಯಾಗಿ ಹೇಳದೆ) ಕಿವಿಯಲ್ಲಿ ಹೇಳುವ ಮಂತ್ರ: ಮಂತ್ರಮೆಂಬುದು ಪಂಚವಿಧಮಕ್ಕುಮವಱೊಳು . . . ಕರ್ಣಜಾಪ್ಯಮಂತ್ರಂ ಶಿವಗತಿಗೆ ಕಾರಣಂ (ಚಾವುಂಪು. ೨೪೦). [ಸಂ.]

**ಕರ್ಣತಾಟಂಕ** (ನಾ). ಒಂದು ಬಗೆಯ ಕಿವಿಯ ಆಭರಣ; ಕಿವಿಯ ಓಲೆ: ಈ ಕಂಠಸೂತ್ರಮಿಾ ಕರ್ಣತಾಟಂಕಮಿಾ ಶ್ರೀಕರಂ ನಿಜಜನನಿಗೇಕೆಂದು ಬಿಡಿಸಿದ್ದೈ ಸಾಕಿನ್ನು (ಜೈಮಿಭಾ. ೨೩–೫೫).
[ಕರ್ಣ$_2$ + ತಾಟಂಕ]

**ಕರ್ಣತಾಡನ** (ನಾ). ಕಿವಿಗೆ ತಗಲುವುದು: ಅದೇ ನುಡಿ ಅನ್ಯರ ಬಾಯಿಂದ ಬಂದು ನಮ್ಮ ಕರ್ಣತಾಡನ ಮಾಡಿದಾಗಲೇ (ಹೊಸಕ್ಷಿ. ೩೬).
[ಕರ್ಣ$_2$ + ತಾಡನ]

**ಕರ್ಣತಾಳ** (ನಾ). ೧. = ಕರ್ಣಚಾಲನ: ತಳರ್ದುದು ಕರ್ಣತಾಳಪವನಾಹತಿಯಿಂ ಜಳರಾಶಿ (ಪಂಪಭಾ. ೧೧–೭೧). ೨. ತಾಳದಂತೆ ಅಗಲವಾದ ಕಿವಿ: ಮದಭೃಂಗಮಾಲೆಯಂ ಕೆದಱುತೆ ಕರ್ಣತಾ[ಪಾಠಾಂ. ವಾ]ಳದೆಲರಿಂ (ಶಬಶಂ. ೩–೪೧); ನಿಟಿಲವಲ್ಲಿದು ಪಾಸಱ ಕರ್ಣತಾಳ[ಪಾಠಾಂ. ಲ] ಮಲ್ಲಿದು ಚಲಪಕ್ಷಸಂಹತಿ (ಪಂರಾಮಾ. ೧೦–೧೫೯).
[ಕರ್ಣ$_2$ + ತಾಳ$_4$ (= ತಾಲ$_3$)]

**ಕರ್ಣದೂಷಿಕೆ** (ನಾ). "ಕುದುರೆಯ ರೋಗ ವಿಶೇಷ" (ಪಂರಾಮಾ. ಕೋಶ): ಮಾರ್ಬಲದಾನೆಗೆ ಕೂಟಪಾಕಳಂ ಕುದುರೆಗೆ ಕರ್ಣ[ಪಾಠಾಂ. ದಂತ]ದೂಷಿಕೆ ರಥಕ್ಕೆ ಸಿಡಿಲ್ ಭಟಮಂಡಲಕ್ಕೆ ಕೆಂಡದ ಮಱಯೆಂಬಿನಂ ಕಱದನಂಬಿನಂ ಪೆರ್ಮುಱಯಂ ಹಲಾಯುಧಂ (ಪಂರಾಮಾ. ೪–೬೬). [ಸಂ. ಕರ್ಣದೂಷಿಕಾ]

**ಕರ್ಣಧಾರ** (ನಾ). ಹಡಗಿನ ಚುಕ್ಕಾಣಿ ಹಿಡಿದಿರುವವನು; ಹಡಗಿನ ನಾವಿಕ: ಅತಿರಥಮಥನಂ ಕರ್ಣಧಾರನಲ್ಲನೆ ಕರ್ಣಂ (ಪಂಪಭಾ. ೧೨–೫೦); ಬಹಿತ್ರದಂತಿರೆಸೆದಿರ್ದ್ದಂ ಸೇಷಂ . . . ಕರ್ಣಧಾರನವೊಲಿರ್ದ್ದಂ ಪುಟ್ಟಿ ಪದ್ಮೋದ್ಭವಂ (ಎಕ. VI, ತರೀಕೆ. ೪೫–೮; 1196); ಕುರುಬಲಕರ್ಣಧಾರನು ನೀನು ವಿಶ್ವವಿಕರ್ಣ ನೀನೇ ರಕ್ಷಿಸು (ಕುವ್ಯಾದ್ರೋ. ೧–೧೭). [ಸಂ.]

**ಕರ್ಣಧಾರಕ** (ನಾ). = ಕರ್ಣಧಾರ: "ಪೋತ ನಿರ್ಯಾಮಕಂ ಕರ್ಣಧಾರಕನೆನಲ್ಕಾ ತುದಿಯ ಕೂಕಂಭದವನಕ್ಕು" (ಮಂಗರಾ. ೧೨೦–೪).
[ಸಂ.]

**ಕರ್ಣಧಾವಕ** (ನಾ). "ಕಿವಿಯನ್ನು ತೊಳೆಯುವ ಒಂದು ಉಪಕರಣ: ಕರ್ಣಧಾವಕ" (Aurilave. ಇಂಕನಿ).
[ಕರ್ಣ$_2$ + ಧಾವಕ]

**ಕರ್ಣನಳಿಕೆ** (ನಾ). ಕಿವಿಯ ಒಳಗಿರುವ ನಾಳ; ಕಿವಿಯ ನಾಳ (ಪಾರಿಸಿ. ೩೯). [ಕರ್ಣ$_2$ + ನಳಿಕೆ]

**ಕರ್ಣಪತ್ರ** (ನಾ). ೧. ಕಿವಿಯ ಆಭರಣ; ಒಂದು ಬಗೆಯ ಓಲೆ: "ಕೀಸು – ಕೃಶೀಕರಣೇ (ಸಣ್ಣಗೆ ಮಾಡು), ಕರ್ಣಪತ್ರೇ ಚ" (ಶಮಧಾ); "ಕೃಶೀಕರಣದೊಳ್ ಕರ್ಣಪತ್ರದೊಳು ಕೀಸಕ್ಕು" (ಶಬ್ದಮಂ. ೧೧೧); ಪೊಡೆಮಟ್ಟ ಶಶಿಪ್ರಭೆಯನಖಂಡಿತ ಕರ್ಣಪತ್ರ ಶೋಭಾಪಾತ್ರೆಯಾಗೆಂದು ಪರಸಿ (ಚಂದ್ರಪು. ೬–೯೧ ವ); ನಿಡುಜಡೆಯ ಧರಿಸುವ ನವ ಕರ್ಣಪತ್ರದ ಫಣೆಯ ಜಡಿವ ಕುಂಡಲದ (ಭಿಕ್ಷಾಚ. ೩–೧). ೨. ದೇವತಾ ವಿಗ್ರಹಗಳಿಗೆ ತೊಡಿಸುವ ಚಿನ್ನ, ಬೆಳ್ಳಿ ಮೊದಲಾದವುಗಳಿಂದ ಮಾಡಿದ ಕಿವಿ (ಕಿ). [ಕರ್ಣ$_2$ + ಪತ್ರ]

**ಕರ್ಣಪರಂಪರೆ** (ನಾ). ಕಿವಿಯಿಂದ ಕಿವಿಗೆ ಸಾಗಿ ಬರುವಿಕೆ; ಒಬ್ಬರಿಂದ ಇನ್ನೊಬ್ಬರಿಗೆ, ಅವರಿಂದ ಮತ್ತೊಬ್ಬರಿಗೆ ಹೀಗೆ ತಿಳಿದು ಬಂದದ್ದು: ನೀಮಿಾ ಯತಿಸ್ವರೂಪಮಂ ಕೈಕೊಂಡ ವಾರ್ತೆಯಂ ನಿಮ್ಮ ಮುನ್ನಿನ ಧರ್ಮಪತ್ನಿಯಪ್ಪ ಸೋಮದತ್ತೆ ನಿರ್ಣಯಮಾಗಿ ಕರ್ಣಪರಂಪರೆಯಿನಱದು (ಸುಕುಮಾ. ೫–೭ ವ).
[ಕರ್ಣ$_2$ + ಪರಂಪರೆ]

**ಕರ್ಣಪರೀಕ್ಷಕ** (ನಾ). ೧. ಕಿವಿಯನ್ನು ಪರೀಕ್ಷಿಸುವವನು. ೨. "ಕಿವಿಯ ಕುಹರವನ್ನು ಪರೀಕ್ಷಿಸುವ ಅಥವಾ ಕಿವಿಯಲ್ಲಿಯ ಧ್ವನಿಗಳನ್ನು ಆಲಿಸಿ ಕೇಳುವ ಸಲಕರಣೆ" (Otoscope. ಇಂಕನಿ).
[ಕರ್ಣ$_2$ + ಪರೀಕ್ಷಕ]

**ಕರ್ಣಪಾತ್ರ** (ನಾ). "ಕರ್ಣಪಾತ್ರ:—ಕಿರೀಟದ ಎರಡು ಪಕ್ಕಗಳಲ್ಲಿ, ಎಂದರೆ ಕಿವಿಗೆ ಅಡ್ಡವಾಗಿ, ಕುತ್ತಿರುವ ಆ ಕಿವಿಯಾಕಾರದ ಒಂದು ಬಗೆಯ ತೊಡಿಗೆ" (ಪಾರ್ತಿಸು. ೪೬). [< ಕರ್ಣಪತ್ರ]

**ಕರ್ಣಪಾಲಿಕೆ** (ನಾ). ಕಿವಿಯ ಹಾಲೆ; ಕಿವಿಯ ಕೆಳಗಿನ ಅಂಚು : ತ್ರಿಲೋಚನದ ಲಲನೆಗೆ ಕರ್ಣಪಾಲಿಕೆಯ ಕಾಮಿನಿಗೆ ಕಪೋಳದ ವಿಪುಳೆಗೆ (ಗಿರಿಕ. ೩–೯೧ ವ); ಕರ್ಣ[ಪಾಠಾಂ. ರ್ನ]ಪಾಲಿಕೆಯಿಂ ಕರಗಿ ಕೆನೆಗೊಂಡಿಳಿ ತರ್ಪ ಜವಾದಿಯ ಕೋಳ್ಗೆಸಜಂ (ರಾಜಶೇ. ೧೨–೧೦೭ ವ). [ಸಂ. ಕರ್ಣಪಾಲಿಕಾ]

**ಕರ್ಣಪಾಶ** (ನಾ). ಚೆಲುವಾದ ಕಿವಿ. [ಸಂ.]

**ಕರ್ಣಪಿಶಾಚ** (ನಾ). ಇನ್ನೊಬ್ಬರ ವಿಷಯವನ್ನು ತಂದು ಕಿವಿಯಲ್ಲಿ ಹೇಳುವಂತೆ ಮಂತ್ರಬಲದಿಂದ ವಶಪಡಿಸಿಕೊಂಡ ಪಿಶಾಚಿ: ರಾಘವನ ಸುದ್ದಿಯನೀಕೆಗೆ ಪೇಟ್ದುದಾಗದೇ ಕರ್ಣಪಿಶಾಚಂ (ಪಂರಾಮಾ. ೧೧–೯೧). [ಕರ್ಣ$_2$ + ಪಿಶಾಚ]

**ಕರ್ಣಪಿಶಾಚಿ** (ನಾ). ೧. = ಕರ್ಣಪಿಶಾಚ. ೨. (ಆಲಂ) ಚಾಡಿಕೋರ: ನಾನು ಎಡಬಡಂಗಿ–ಹೊರಗೆ ಭಟ್ಟಂಗಿ, ಆಪ್ತರ ಕಿವಿಯಲ್ಲಿ ಕರ್ಣಪಿಶಾಚಿ (ಹೊಸಕ್ಷಿ. ೨೩೯). [ಸಂ. ಕರ್ಣಪಿಶಾಚೀ]

**ಕರ್ಣಪೂರ** (ನಾ). ಕಿವಿಯ ಆಭರಣ; ಕನ್ನವುರ: ಕಾಂತ ಕಾಂತಾಗಣ ಕರ್ಣಪೂರ ಕುಸುಮಾಭರಣಾಳಿಗೆ ಯೋಗ್ಯಮಾಗಿ (ಆದಿಪು. ೪–೯೪); ಸಜ್ಜನ ಜನ ಕರ್ಣ್ಣಪೂರ ನೆನಸಿಟ್ಟ ನೆಗಟ್ತೆಯ ಸೆಟ್ಟಿ ಲಕ್ಕಣಯ್ಯನ್ (ಸೌಇಇ. XX, ೫೫–೨೮; 1082); ಶ್ರುತಿಯಶ್ರುಜಲವನು ನಿರ್ಮಿಸಿದವೆನೆ ಕರ್ಣಪೂರದ ಮುತ್ತು ಸೂಸಿದವು (ಕುವ್ಯಾಗ. ೧೧–೧೮). [ಸಂ.]

**ಕರ್ಣಫಲ** (ನಾ). ಅಡಕೆ (?) : ಕೆಲರು ಕರ್ಣಫಲ ಯಲೆಗಾಚು ಪಿಡಿದು ಸನ್ನದ್ಧರಾಗಿರ್ದರರಸಿ ಬಳಿವಿಡಿದು (ಶ್ರೀಕೃಪಾ. ೩೭). [?]

**ಕರ್ಣಬಿಂದು** (ನಾ). [ಗಣಿತ] ಕರ್ಣದ ವಿರುದ್ಧವಾದ ಮೂಲೆಗಳ ಬಿಂದು (ಪಾರಿನಿ. ೨೯). [ಕರ್ಣ$_2$ + ಬಿಂದು]

**ಕರ್ಣಭೂಷಣ** (ನಾ). ಕಿವಿಯ ಆಭರಣ. [ಕರ್ಣ$_2$ + ಭೂಷಣ]

**ಕರ್ಣಮಂತ್ರ** (ನಾ). ಸಾಯುವ ಸ್ಥಿತಿಯಲ್ಲಿರುವವರ ಕಿವಿಯಲ್ಲಿ ಹೇಳುವ ಮಂತ್ರ. [ಕರ್ಣ$_2$ + ಮಂತ್ರ]

**ಕರ್ಣಮಲ** (ನಾ). ಕಿವಿಯ ಒಳಗೆ ಉಂಟಾಗುವ ಕೊಳೆ, —ಗುಗ್ಗೆ : "ಗುಗ್ಗೆ; ಕಿವಿಯ ಮೇಣ; ಕರ್ಣಮಲ" (Cerumen. ಇಂಕನಿ). [ಕರ್ಣ$_2$ + ಮಲ$_3$]

**ಕರ್ಣಮೂಲ** (ನಾ). ಕಿವಿಯ ಬುಡ: "ಕರ್ಣಮೂಲಂ (ತು) ಚೂಳಿಕಾ – ಈ ೨ ಕಿವಿಯ ಮೊದಲ್" (ಹಲಾಯು. ೩೬–೬೪); ನನ್ನ ಕರ್ಣ ಮೂಲ ಕೆಂಪೇರುತ್ತಿತ್ತು (ನಿಬಂಧ. II, ೮೪). ೨. [ವೈದ್ಯ] ಕಿವಿಯ ಬುಡದಲ್ಲಿ ಊದಿಕೊಳ್ಳುವಿಕೆ,—ಬಾವು: ಈ ಸನ್ನಿಪಾತದಿಂ, ಕರ್ಣಮೂಲವೆಂಬ ಬಾವಿಗೆ ಜಿಗುಳೆಗಳಂ ಬಿಟ್ಟು ರಕ್ತವ ತೆಗೆಯಿಸುವುದರಿಂ ಕರ್ಣಿಕಾಗ್ರಂಥಿ ಶಮನಹುದು (ಸಕವೈ. ೧೬೦). [ಕರ್ಣ$_2$ + ಮೂಲ]

**ಕರ್ಣಮೋಟಿ** (ನಾ). ಚಾಮುಂಡಿ; ದುರ್ಗಾದೇವಿಯ ಒಂದು ಅವತಾರ: "ಚಾಮುಂಡಾ, ಕರ್ಣಮೋಟೀ, ಚರ್ಚಾ, ಭೈರವೀ – ಈ ೪ ಚಾಮುಂಡಿಯ ಪೆಸರ್" (ಹಲಾಯು. ೪–೧೮). [ಸಂ. ಕರ್ಣಮೋಟೀ]

**ಕರ್ಣರಸಾಯನ** (ನಾ). ಕಿವಿಗೆ ಆಪ್ಯಾಯಮಾನವಾದುದು : ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ (ಪಂಪಭಾ. ೧೨–೨೧೭); ಇದು ಪಿರಿದುಂ ಬುಧಾವಳಿಗೆ ಕರ್ಣರಸಾಯನಂ (ಚಂದ್ರಪು. ೧–೪೯). [ಕರ್ಣ$_2$ + ರಸಾಯನ]

**ಕರ್ಣರೇಖೆ** (ನಾ). ಚೌಕೋನದಲ್ಲಿ ಮೂಲೆಗಳನ್ನು ಕೂಡಿಸುವ ರೇಖೆ: ಸಮಾಂತರ ಚೌಕೋಣದಲ್ಲಿ ಕರ್ಣರೇಖೆಗಳು ಪರಸ್ಪರ ಸಮಭಾಗವಾಗಿವೆ (ಭೂಮಿಅ. ೫೦); ಈ ನೇಯ್ಗೆಯ ಬಟ್ಟೆಗಳಲ್ಲಿ ಕರ್ಣರೇಖೆಗಳು ಕಂಡುಬರುವುದಿಲ್ಲ (ಗೃಹವಿ. ೭೪). [ಕರ್ಣ$_2$ + ರೇಖೆ]

**ಕರ್ಣರೋಗ** (ನಾ). ಕಿವಿಯ ರೋಗ: ಕರ್ಣರೋಗ, ಹೃದ್ರೋಗ, ವಾತರೋಗ, ಇವೇ ಮುಂತಾದ ರೋಗಗಳು (ಸಕವೈ. ೨೯). [ಕರ್ಣ$_2$ + ರೋಗ]

**ಕರ್ಣವೃತ್ತಿ** (ನಾ). ೧. ಕರ್ಣನ ನಡವಳಿಕೆ. ೨. (ಆಲಂ) ಔದಾರ್ಯ; ದಾನಶೀಲತೆ: ಮನೆಮನೆಯೊಳಗಂ ದೈನ್ಯೇತರಕಾರಕ ಸುವದಾನ್ಯತೆಯಂ ಕರ್ಣವೃತ್ತಿಯಿಂ ಬಿತ್ತರಿಪಂ (ಮೈಸೂಮ. ೫–೭೮). [ಕರ್ಣ$_2$ + ವೃತ್ತಿ]

**ಕರ್ಣವೇಧ** (ನಾ). ಕಿವಿ ಚುಚ್ಚುವುದು : ಕರ್ಣವೇಧ, ಮೌಂಜೀಬಂಧನ, ವಿವಾಹ ಮೊದಲಾದ ಪ್ರಸಂಗಗಳಾದರೂ ಎಲ್ಲರವೂ ಕೂಡಿಯೇ ಆಗಿರುವವು (ತುಳಸಿ. ೧೦೪). [ಕರ್ಣ$_2$ + ವೇಧ]

**ಕರ್ಣವೇಷ್ಟನ** (ನಾ). ಕಿವಿಯ ಆಭರಣ. [ಕರ್ಣ$_2$ + ವೇಷ್ಟನ]

**ಕರ್ಣಶಂಖ** (ನಾ). ಕಿವಿಯೊಳಗಿರುವ ವಕ್ರನಾಳ: "ಒಳಗಿವಿಯಲ್ಲಿರುವ ಶಂಖಾಕಾರದ ತಿರುಪುನಾಳ; ಕರ್ಣಶಂಖ" (Cochlea. ಇಂಕನಿ). [ಕರ್ಣ$_2$ + ಶಂಖ]

**ಕರ್ಣಶೂಲ** (ನಾ). ೧. ಕಿವಿನೋವು. ೨. ಕಿವಿಗೆ ಶೂಲದಂತೆ ಇರಿಯುತ್ತಿರುವುದು : ತದೀಯ ಪರುಷಭಾಷಿತಂ ತನಗೆ ಕರ್ಣಶೂಲಮಾಗೆ (ಜಗವಿ. ೩–೧೪ ವ). [ಕರ್ಣ$_2$ + ಶೂಲ]

**ಕರ್ಣಶೂಲೆ** (ನಾ). = ಕರ್ಣಶೂಲ ೧ : ಸೈಂಧವವನ್ನು ಹೋತನ ಮೂತ್ರದಲ್ಲರೆದು ಕಿವಿಯಲ್ಲೆರೆಯೆ ಕರ್ಣಶೂಲೆ ಮಾಣ್ಗುಂ (ವಿವೈವಿ. ೬೦). [ಕರ್ಣ$_2$ + ಶೂಲೆ]

**ಕರ್ಣಸಂಭವ** (ನಾ). = ಕರ್ಣಜ ೨: ಈ ಕರ್ಣಸಂಭವಂ ಕಲಿ ಚೆಲ್ವನತಿಬಲಂ (ಜೈಮಿಭಾ. ೨೪–೧೧). [ಕರ್ಣ$_2$ + ಸಂಭವ]

**ಕರ್ಣಾಕರ್ಣಿ** (ನಾ). ಕಿವಿಯಿಂದ ಕಿವಿಗೆ ಹರಡಿದ ಮಾತು: ರಾಜಕುಮಾರಿಯ ಕೀರ್ತಿ . . . ಕರ್ಣಾಕರ್ಣಿಯಾಗಿ ಬೆಳೆದುಕೊಂಡು ಹೋಯಿತು (ಕಲ್ಲಿಕಾ. ೧೮); ನಾಲ್ಕೂ ಕಡೆಗೆ ಕರ್ಣಾಕರ್ಣಿಯಾಗಿ ಸುದ್ದಿ ಹಬ್ಬಿ ಹೋಗುವದು (ಇಪ್ಪಕ. ೪೦). [ಸಂ.]

**ಕರ್ಣಾಕರ್ಣಿಕೆ** (ನಾ). = ಕರ್ಣಾಕರ್ಣಿ: ಕವಿ ಇದನ್ನೂ ಕವಿದೇವನ ಕನ್ನಡ ಕೃತಿಯಿಂದಲೋ, ಇಲ್ಲವೇ ಕರ್ಣಾಕರ್ಣಿಕೆಯಾಗಿ ಕೇಳಿಯೋ ಪಡೆದಿರಬಹುದು (ಕುಮಾಸಾಂ. ೧೮೧). [ಸಂ. ಕರ್ಣಾಕರ್ಣಿಕಾ]

**ಕರ್ಣಾಟಿ** (ನಾ). ೧. ಕನ್ನಡ ಭಾಷೆ: ಸರಸ ಕರ್ಣಾಟಾ[ಪಾಠಾಂ. ಟಕ]ದಿ ಭಾಷಾವಿಶಾರದಂ ವರ ಕವಿಪ್ರಕರ ಮಾನಸರಾಜಹಂಸಂ (ಚಬಪು. ೧–೨೩). ೨. ಕನ್ನಡ ನಾಡು : ಕರ್ಣಾಟ ಕೋಶಲ ಮಂದ ಭದ್ರ ಕುಂತಳ ಮಹಾಚೀನಕ ವಿದೇಹ (ಚಬಪು. ೬–೫೦); ತುರಗದಳವ ಕೂಡಿಕೊಟ್ಟು ಕರ್ಣಾಟವನಿರದೆ ಸಾಧಿಸು ಹೋಗೆಂದ (ಕಂನವಿ. ೧೧–೮). ೩. ಕನ್ನಡ ಜನ : ಅತಿ ಸುಭಟ ಮದೋತ್ಕಂಠಮಿದು ಕರ್ಣಾಟಬಲಂ (ಆದಿಪು. ೨೩–೪೫ ವ). ೪. [ಸಂಗೀತ] ಒಂದು ರಾಗದ ಹೆಸರು : ಮಾಧವಿ . . . ಕರ್ಣಾಟ ಬಂಗಾಳಮೆಂಬಿಪ್ಪತ್ತು ರಾಗಂಗಳೇ ರಾಗಾಂಗದಿಂದುದಿಸಿದವು (ವಿವೇಕ. ೨೩೩). [ಸಂ.]

**ಕರ್ಣಾಟಕ** (ನಾ). ೧. = ಕರ್ಣಾಟ ೧ : ಕರ್ಣಾಟಕ ವ್ಯಾಕರಣ ಛಂದಸ್ಸಲಂಕಾರ ಶಬ್ದಂಗಳ ಅನುಗೊಳಿಸಿ (ಚಬಪು. ೧–೨೮). ೨. = ಕರ್ಣಾಟ ೨: ಶ್ರೀರಂಗಪಟ್ಟಣ ಕರ್ಣಾಟಕವೆಂಬ ನಾರಿಯ ನೊಸಲೊಳು ಮೆಱೆವ ಚಾರು ರನ್ನದ ಬೊಟ್ಟನಂತಿಹುದು (ಕಂನವಿ. ೧೧–೭೭). [ಸಂ.]

**ಕರ್ಣಾಟಕವಿಷಯ** (ನಾ). ಕರ್ಣಾಟಕ ದೇಶ; ಕನ್ನಡ ನಾಡು.

ಕರ್ಣಾಟಕವಿಷಯಜಾತಿ = [ಛಂದ] ಕನ್ನಡದಲ್ಲಿ ರೂಢಿಯಾಗಿರುವ, ಕನ್ನಡಕ್ಕೆ ವಿಶಿಷ್ಟವಾದ ಅಂಶಗಣದ ಛಂದಸ್ಸು: ಕರ್ಣಾಟಕವಿಷಯಜಾತಿಯಂ ಕೇಳ್ ಪೇಟ್ವೆಂ (ಛಂದೋಂಬು. ೫–೨). [ಕರ್ಣಾಟಕ + ವಿಷಯ]

**ಕರ್ಣಾಟಗೌಳ** (ನಾ). [ಸಂಗೀತ] ಒಂದು ಉಪಾಂಗ ರಾಗದ ಹೆಸರು : ಕರ್ಣಾಟಗೌಳ . . . ದ್ರಾವಿಡಗೌಳವೆಂಬೇಳುಂ ಉಪಾಂಗ ಗೌಳರಾಗಂಗಳು (ವಿವೇಕ. ೨೩೪). [ಕರ್ಣಾಟ + ಗೌಳ]

**ಕರ್ಣಾಟಾಶ್ವ** (ನಾ). ಕರ್ಣಾಟದೇಶದ ಕುದುರೆ ; ನಾಟಿಕುದುರೆ ; ತಟ್ಟು : "ಪೃಷ್ಠ್ಯ, ಸ್ಥೌರೀ . . . ಕರ್ಣಾಟಾಶ್ವದ ಹೆಸರು, ತಟ್ಟು" (ಸಿದ್ಧಾಂತಿ. ೨೧೪). [ಕರ್ಣಾಟ + ಅಶ್ವ]

**ಕರ್ಣಾಟಿ** (ನಾ). ಕನ್ನಡ ದೇಶದವಳು ; ಕನ್ನಡಿತಿ : ಕರ್ಣಾ[ಟೀ] [ಪಾಠಾಂ. ಟಕ] ಕರ್ಣಪೂರಂ ಲಾಟೀ ಲಲಾಮಮಂ (ಪಂಪಭಾ. ೧-೧೪೮ ವ). [ಸಂ. ಕರ್ಣಾಟೀ]

**ಕರ್ಣಾಭರಣ** (ನಾ). ಕಿವಿಯ ಆಭರಣ : ಪ್ರಲಂಬ ಕರ್ಣಾಭರಣ ಮಕರಿಕಾವಿತಾಡ್ಯಮಾನ ಕಪೋಲಫಲಕಂ (ಶಾಂತಿಪು. ೭-೧೩ ವ) ; ಅವರ ಪದಕ ಕಿರೀಟ ಕಂಕಣ ವಿವಿಧ ಕರ್ಣಾಭರಣ ಕೇಯೂರ (ಕುಮಾ್ಯಕ. ೪-೨೩). [ಕರ್ಣ$_2$ + ಆಭರಣ]

**ಕರ್ಣಾಭ್ಯರ್ಣ** (ನಾ). ಕಿವಿಯ ಹತ್ತಿರ ; ಕಿವಿಗೆ ಸಮೀಪ : ರಣಪಟಹ ರವಂ ದಿಗ್ವಾರಣ ಕರ್ಣಾಭ್ಯರ್ಣಮಂ ಪಳಂಚಲೆಯೆ (ಪಂರಾಮಾ. ೧೧-೫೧) ; ತದೀಯ ಕರ್ಣಾಭ್ಯರ್ಣವಂ ಪೊರ್ದಿ (ಜಗವಿ. ೨-೪೨ ವ). [ಕರ್ಣ$_2$ + ಅಭ್ಯರ್ಣ]

**ಕರ್ಣಾಮೃತ** (ನಾ). ಕಿವಿಗೆ ಅಮೃತವಾದುದು ; ಕೇಳುವುದಕ್ಕೆ ಮಧುರವಾದದ್ದು : ಭಂಗಿಸಬೇಡ ಸಾಕಂತಿರಲಿ ಕರ್ಣಾಹವದ ಕರ್ಣಾಮೃತವ ಸುರಿ ಸಾಕು (ಕುಮಾ್ಯಕ. ೧-೧೬) ; ಈ ಸಾರಸಪಕ್ಷಿಗಳ ಕಲಕಲ ಕರ್ಣಾಮೃತವಾಗಿದೆ (ರಾಕ್ಷಮು. ೪೩). [ಕರ್ಣ$_2$ + ಅಮೃತ]

**ಕರ್ಣಾಯತ** (ಗು). ಕಿವಿಯವರೆಗೆ ಎಳೆದ : ಕರ್ಣಾಯತಾಸ್ತ್ರದಿ ಹರೆಗಡಿದು ರಿಪುರಾಯನಲ್ಲಿಗೆ ರಥವ ಬಿಟ್ಟನು ಸೂಠಿಯಲಿ ಕರ್ಣ (ಕುಮಾ್ಯಕ. ೧೧-೩೩). [ಕರ್ಣ$_2$ + ಆಯತ$_1$]

**ಕರ್ಣಾವತಂಸ** (ನಾ). ಕಿವಿಯ ಆಭರಣ, —ಅಲಂಕಾರ : ಈ ಜವ್ವನಿಗ ತವಸಿ ತೊಟ್ಟಿರ್ಪ ಕರ್ಣಾವತಂಸಂ ಪೊಸತು (ಕಾದಂಪೂ. ೭೬೦) ; ಶರಣಾವಳಿಗೆ ಮಾಡಳೆ ಮಗಳು ಕರ್ಣಾವತಂಸವನೊತ್ತಿಯಿಟ್ಟಾ ನೂಲಹಬ್ಬವನು (ಬಸವು. ೪೨-೧೧) ; ಪೇಳ್ದನಾ ಭೂಪಂಗೆ ಸಕಲ ಜನ ಸಂತತಿಗೆ ಕರ್ಣಾವತಂಸಮೆನೆ ರಂಜಿಸುವ ಮಧುರತರ ಸತ್ಕಥೆಯನು (ಜೈಮಿಭಾ. ೨-೩). [ಕರ್ಣ$_2$ + ಅವತಂಸ]

**ಕರ್ಣಾವಧಿ** (ನಾ). ಕಿವಿಯವರೆಗಿನ ಮೇರೆ : ಪೂಗಣೆಗಳಯ್ದುಮನೊರ್ಮೆಯೆ ಪೂಡಿಕೊಂಡು ಕರ್ಣಾವಧಿಯಾಗೆ ತೀವಿ ತೆಗೆದು (ಮಲ್ಲಿಪು. ೧೪-೪೧). [ಕರ್ಣ$_2$ + ಅವಧಿ]

**ಕರ್ಣಿ$_1$** (ನಾ). = ಕರಣಿ$_3$ (ಕ). [< ಸಂ. ಕರಣೀ]

**ಕರ್ಣಿ$_2$** (ಗು). ೧. ಕಿವಿಗೆ ಸಂಬಂಧಿಸಿದ. ೨. ಚುಕ್ಕಾಣಿಯುಳ್ಳ. (ನಾ). ೩. ನೇಗಿಲಿನ ಕುಡ, —ಕುಳ : "ಕುಶಿರಮೆನೆ ಪಾಳಮೆನೆ ಕುಳು ಕರ್ಣಿಯೆನೆ ಕುಡಿನು" (ಮಂಗರಾ. ೧೯-೧). [< ಸಂ. ಕರ್ಣಿನ್]

**ಕರ್ಣಿಕಾಗ್ರಂಥಿ** (ನಾ). ಕಿವಿಯ ಬುಡದಲ್ಲಿ ಗಂಟುಕಟ್ಟಿದ ಬಾವು : ಕರ್ಣಮೂಲವೆಂಬ ಬಾವಿಗೆ ಜಿಗುಳೆಗಳಂ ಬಿಟ್ಟು ರಕ್ತವ ತೆಗೆಯಿಸುವುದರಿಂ ಕರ್ಣಿಕಾಗ್ರಂಥಿ ಶಮನಹುದು (ಸಕವೈ. ೧೬೦). [ಸಂ. (ಕರ್ಣಿಕಾ + ಗ್ರಂಥಿ)]

**ಕರ್ಣಿಕಾರ** (ನಾ). ಬೆಟ್ಟದಾವರೆ ; ಬೆಟ್ಟಗಣಿಗಿಲೆ ; ಕೊಸಗು : "ವೃಕ್ಷೋತ್ಪಳಃ, ಕರ್ಣಿಕಾರಃ – ಈ ೨ ಕೊಸಗು" (ಹಲಾಯು. ೩೩-೪೬) ; "ಬೆಟ್ಟದಾವರೆ ಕೊಸಗೆಂದುಱಿ ಕರ್ಣಿಕಾರ" (ಕವಿಕಂ. ೫೫) ; ಅದ್ರ್ರ ಕೇಸರಂ ಬೆರಸಿದ ಚೆಲ್ವು ತಳ್ತಿಸಬಿದೇನೆಸೆದಿರ್ದುದೊ ಕರ್ಣಿಕಾರದಾ (ಆದಿಪು. ೧೧-೧೧೭). [ಸಂ.]

**ಕರ್ಣಿಕೆ** (ನಾ). ೧. ಕಮಲದ ಮಧ್ಯಭಾಗ, —ಬೀಜಕೋಶ : ಸಹಸ್ರದಳ ಸುವರ್ಣ ತಾಮರಸಮುಮದಱ ಕರ್ಣಿಕೆಯ ಮೇಲೆ ಸಿಂಹಾಸನಮುಮಂ ವಿಗುರ್ವಿಸಿ (ಪಂರಾಮಾ. ೧೬-೨೯ ವ) ; ಭೂಮಿಯೊಳೀ ನಿಧಿಯರವಿಂದ ಕರ್ಣಿಕೆಯೆನಿಪ್ಪಾ ಅಂದದಿಂ ವಿಜಯಾವತಿಯೊಳು ಎಳೆಗರ್ಪಿದಂದವಡೆಯಿತು (ಜೀವಂಸಾಂ. ೪-೭೩) ; ದನುಗೂರೊಳ್ ಭಾಸುರ ಕರ್ಣಿಕೆವೊಲ್ ರಾಜಿಪ ಪರಮಠದೊಳ್ ಪರಮಹಂಸನೆನೆ ರಂಜಿಸಿದಂ (ರಾಜಶೇ. ೧-೬೨). ೨. ಕಿವಿಯಲ್ಲಿ ಅಲಂಕಾರಕ್ಕಾಗಿ ಇಟ್ಟುಕೊಳ್ಳುವ ಹೂವು ಮೊದಲಾದುವು : "ತಾಳಕಂ ತಾಳಪತ್ರಂ ಕರ್ಣದೋಲೆಯಾ ಮೇಲಿಪ್ಪ ಕೊಪ್ಪು ಪುಷ್ಪಾದಿಗಳು ಕರ್ಣಿಕೆಗಳ್" (ಮಂಗರಾ. ೯೯-೨೩). ೩. ಆನೆಯ ಸೊಂಡಲಿನ ತುದಿ. ೪. ಹಣ್ಣಿನ ತೊಟ್ಟು. ೫. ಕಾಳಗದ ಕಣ. ೬. ತೀರ್ಥ. ೭. ಅಪ್ಸರೆ. ೮. ಕನ್ನಿಕೆ ; ಕೊಡಗೂಸು. ೯. ನಡುಬೆರಳು : "ಶುಂಡಾಲ ಕರಾಗ್ರದೊಳ್ ಶ್ರವಣ ಕುಂಡಲದೊಳ್ ವನಜಾತ ಮಧ್ಯದೊಳ್ ಬಾಲೆಯೊಳಾಹವಂಗಳೊಳ್ ತೀರ್ಥದೊಳುಂ ನಿಜ ಕರ್ಣಿಕಾಹ್ವಯಂ" (ನಾನಾರ. ೨೨). [ಸಂ. ಕರ್ಣಿಕಾ]

**ಕರ್ಣಿಕ್ಕೆ** (ನಾ). [ಅಶ್ವಶಾ] ಕುದುರೆಯ ಶಿಶ್ನಾಗ್ರ : ಶಿಶ್ನಾಗ್ರಕೆ ಕರ್ಣಿಕ್ಕೆಯೆ ಪೆಸರುಮದಿನ್ನು ತುರಗಾಗಮದೊಳ್ (ಅಶ್ವಶಾ. ೯-೫೦). [< ಕರ್ಣಿಕೆ ?]

**ಕರ್ಣೀರಥ** (ನಾ). ಮುಸುಕು ಹಾಕಿರುವ ರಥ ; ಸ್ತ್ರೀಯರ ಮೇನೆ, —ಪಲ್ಲಕ್ಕಿ. [ಸಂ.]

**ಕರ್ಣೇಂದ್ರಿಯ** (ನಾ). ಕೇಳುವ ಇಂದ್ರಿಯ ; ಕಿವಿ. [ಕರ್ಣ$_2$ + ಇಂದ್ರಿಯ]

**ಕರ್ಣೇಜಪ** (ನಾ). (ಅಲಂ) ಚಾಡಿಕೋರ ; ಪಿಸುಣ : ಆತಂ ಕರ್ಣೇಜಪರ ಮಾತಂ ಕೇಳ್ದು ಕೈಕೊಂಡನೆಂಬುದಂ ಸಂಜೀವಕಂ ಭಾವಿಸಿ (ಪಂಚತಂ. ೧೩೯-೧೦) ; ಪಱಿಗಂಜದೆ ಕರ್ಣೇಜಪರಱಿನುಡಿ ದಿಟಮೆಂದೆ ಡಂಗುರಂ ಬಡಿಯಿಸಿ (ಪಂರಾಮಾ. ೯-೧೦). [ಸಂ.]

**ಕರ್ಣೋತ್ತಂಸ** (ನಾ). ಕಿವಿಯ ಆಭರಣ : ಕರ್ಣೋತ್ತಂಸದ ಹಂಸತಿಳಕದ ಪೆಱಿಯ ಕುತ್ತುಂಗಱಿಯ ಮತ್ತಂ ಪಲತೆಱದ ಪೆಸರ ಪಚ್ಚಮುಂ ಸಮೆದು (ಮಲ್ಲಿಪು. ೬-೮೦) ; ನಮ್ಮ ಪುರೀ ಪುರಂಧ್ರಿಯರ ಕರ್ಣೋತ್ತಂಸಮಂ ನಾಡೆ ಕಾದಾತಂ (ಚಂದ್ರಪು. ೫-೧೧೩). [ಕರ್ಣ$_2$ + ಉತ್ತಂಸ]

**ಕರ್ಣೋತ್ಪಲ** (ನಾ). ಕಿವಿಯಲ್ಲಿ ಅಲಂಕಾರಕ್ಕಾಗಿ ಇಟ್ಟುಕೊಳ್ಳುವ ನೀಲ ಕಮಲ, —ಕನ್ನೈದಿಲೆ : ನೆಲಸಿ ಕಿವಿಯೊಳ್ . . . ಪೊಳೆವುದೊಳ್ಪನೆಂದೀ ಕರ್ಣೋತ್ಪಲಮುಮಂ (ಕವಿರಾ. ೩-೧೧೬) ; ಕರ್ಣೋತ್ಪಲಂ ಲೋಲಲೋಚನ ಚಂದ್ರಾತಪದಿಂದರಲ್ದುದು (ಮಲ್ಲಿಪು. ೬-೮೫). [ಕರ್ಣ$_2$ + ಉತ್ಪಲ]

**ಕರ್ತ** (ನಾ). ೧. ಮಾಡುವವನು ; ನಡಸುವವನು ; ರಚಿಸುವವನು : ಚರಣಂಗಳ್ ನಾಲ್ಕಱೊಳಂ ಪರಿಕಿಸೆ ಕರ್ತಂಗೆ ಕವಿಗೆ ಲೇಖಕನಪ್ಪಂಗಿರದಕ್ಕುಮಪಾಯಂಗಳ್ (ಛಂದೋಂಬು. ಪರಿ. ೧-೨೪). ೨. ಸೃಷ್ಟಿಕರ್ತ ; ಒಡೆಯ ; ದೇವರು : ಜಗದ ಕರ್ತ[ಪಾಠಾಂ. ತೃ] ಕೂಡಲಸಂಗಮದೇವನೊಬ್ಬನೇ ಕಾಣಿರಣ್ಣಾ (ಬಸವ. ೫೩೧) ; ಮರ್ತ್ಯಲೋಕದ ಮಹಾಮನೆ ಹಾಳಾಗಿ ಹೋಗಬಾರದೆಂದು ಕರ್ತನಟ್ಟಿದನಯ್ಯ ಒಬ್ಬ ಶಿವಶರಣನ (ಅವಚಂ. ೨೨೨-೧೦೦೭). ೩. ಯಜಮಾನ ; ಮುಖಂಡ. 'ಇರ್ಕರ್ತರು' ಪರಾ. [< ಸಂ. ಕರ್ತೃ]

**ಕರ್ತನ** (ನಾ). ಕತ್ತರಿಸುವಿಕೆ ; ಕಡಿತ : ಬಹುದುಸ್ಸಹ ಕಠಿನತರ ಕ್ರೂರ . . . ಮರ್ದನ ಕರ್ತನ ವಿದಳನ . . . ತೀವ್ರವೇದನಾರೂಪಂಗಳಾಗಿ (ವಿವೇಕ. ೧೮೧). [ಸಂ.]

**ಕರ್ತಬಗಾರಿ,** ಕರ್ತಬುಗಾರಿ (ನಾ). ೧. ಚಾತುರ್ಯ; ಕೌಶಲ; ಕರ್ತೃತ್ವ ಶಕ್ತಿ. ೨. ಚತುರನಾದ ವ್ಯಕ್ತಿ: ಅವರಿಗೆ ನಿಮ್ಮಂಥಾ ಒಬ್ಬ ಕರ್ತಬಗಾರಿ ಮನಶ್ಯಾನ ಬೇಗತನಾನ ಬೇಕಾಗಿತ್ತು (ಮುಗಿಮು. ೮೫). ಕರ್ತಬುಗಾರಿ: ೨. ಪೈಗಳು ಒಳ್ಳೇ ಕರ್ತಬುಗಾರಿಗಳು (ಅಬೋಲೀ. ೪೧). [< ಸಂ. ಕರ್ತವ್ಯಕಾರಿನ್]

**ಕರ್ತಬುಗಾರಿ** 'ಕರ್ತಬಗಾರಿ' ನೋ.

**ಕರ್ತಬ್ಯ** (ನಾ). = ಕರ್ತವ್ಯ: ಪಂಚಾಸ್ಯರಿಗೆ ಕರ್ತಬ್ಯ[ಪಾಠಾಂ. ವ್ಯ]ವ್ವೈ (ನಿಭಾಗ. ೪-೯-೩೫). [< ಸಂ. ಕರ್ತವ್ಯ]

**ಕರ್ತರಿ** (ನಾ). ೧. ಕತ್ತರಿಸುವ ಸಾಧನ; ಕತ್ತರಿ: ಕರ್ಮಪಾಶವ ಹರಿದು ಕಳೆವ ಕರ್ತರಿಯಂತೆ (ವೀಶೈಪು. ೬-೧೨-೩೧). ೨. ಚಿಕ್ಕ ಕತ್ತಿ; ಕಠಾರಿ. ೩. ಬಾಣದ ಹಿಂಭಾಗ; ಗರಿಕಟ್ಟುವ ಭಾಗ; ಪುಂಖ: "ತೆತ್ತಿಸುವ ಹಿಳಿಕು ಕರ್ತರಿ ಪುಂಖಮುಕ್ಕು" (ಮಂಗರಾ. ೮೬-೩೪). ೪. ಕತ್ತರಿಯಾಕಾರ (?): ಉಭಯ ಪಾರ್ಶ್ವಗಳಲ್ಲಿಯೂ ಕೊಂಬುಗಳಿಂದ ತಿವಿದರೆ ಕರ್ತರಿಯನಿಸಿಕೊಳ್ಳುವದು (ಸೌಗಂಧಿ. ೨೬೮-೯). [ಸಂ. ಕರ್ತರೀ]

**ಕರ್ತರಿಗಾಲು** (ನಾ). ಖಡ್ಗಯುದ್ಧದಲ್ಲಿ ಒಂದು ವರಿಸೆ, —ಪಟ್ಟು: ದೇಹ ದೀರ್ಘತ್ವದಿಂದ ಹಾರಿಬೀಳುವ ಹಾಗೆ ಯರಡು ಕಾಲ್ಗಳು ವ್ಯತ್ಯಯವಾಗಿ ನಿಲುವದೂ ಯಾವದುಂಟು ಅದು ಕರ್ತರಿಗಾಲು(ಕರ್ತರಿಹಾರ)ಯಂದು ನುಡಿಯಲ್ಪಡುವುದು (ಖಡ್ಗಟೀ. ೪-೬೩). [ಕರ್ತರಿ + ಕಾಲು$_1$ (< ಕಾಲ್$_1$)]

**ಕರ್ತರಿಜಲ** (ನಾ). ಮುಟ್ಟಿದರೆ ಕೈಯನ್ನು ಕತ್ತರಿಸುವ ವಿಷೋದಕ: ಕರ್ತರಿಜಲವ ಕಂಡು ಮತ್ಯ್ರದ ಮನುಜರು ಗೊತ್ತಾಗದೆ ನೀರು ಕುಡಿಯಲು ಹೋದರೆ ಕತ್ತರಿಸಿ ಹೋಗುವವು ಬೆರಳುಗಳು (ಸಿದ್ಧಪು. ೬-೨೮). 'ಕತ್ತರಿವಾಣಿ' ಪರಾ. [ಕರ್ತರಿ + ಜಲ$_1$]

**ಕರ್ತರಿಪ್ರಯೋಗ** (ನಾ). [ವ್ಯಾಕ] "ಕ್ರಿಯಾಪದವು ಕರ್ತೃವಿನ ಲಿಂಗವಚನ ಪುರುಷಗಳನ್ನು ಅನುಸರಿಸುವುದು . . . ಕರ್ತರಿ ಪ್ರಯೋಗ" (ಮಧ್ಯಮ. ೧೬೮): ಕರ್ತರಿ ಪ್ರಯೋಗದಲ್ಲಿ ಕರ್ತೃಪದವು ಪ್ರಥಮಾ ವಿಭಕ್ತಿಯಲ್ಲಿರುತ್ತದೆ (ಮಧ್ಯಮ. ೧೬೮). 'ಕರ್ಮಣಿ ಪ್ರಯೋಗ' ಪರಾ. ℙ ಇವು ಭಿನ್ನಪದಗಳಾದರೂ ಸಂಸ್ಕೃತದಲ್ಲಿರುವಂತೆಯೇ ಕನ್ನಡದಲ್ಲೂ ಕೂಡಿಸಿ ಬಳಸುವುದು ರೂಢಿಯಲ್ಲಿದೆ. [ಸಂ.]

**ಕರ್ತರಿಮಂಡಿ** (ನಾ). ಖಡ್ಗಕಾಳಗದಲ್ಲಿ ಒಂದು ಭಂಗಿ: ಆ ಪ್ರಕಾರದಲ್ಲೇ (ಚಾಚುವ ಮಂಡಿ)ಯಿದ್ದವನಾಗಿ ಮುಂದುಗಡೆಯಲ್ಲಿ ಯರಡು ಚಾಚುವದು ಮಡಿಉದು ಅದನ್ನು ಕರ್ತರಿಮಂಡಿಯಂಬರೂ (ಖಡ್ಗಟೀ. ೪-೬೭). [ಕರ್ತರಿ + ಮಂಡಿ$_2$]

**ಕರ್ತರಿವಾಣಿ** (ನಾ).= ಕರ್ತರಿಜಲ: ಉದ್ವೃತ್ತರಂ ಕೂಡಿ ಸಂಹರಿಸಲು ಕರ್ತರಿವಾಣಿಯಾಯ್ತುರು ಯಶೋವೃತ್ತಿವಿತಾನಕ್ಕೆ ತಾಂ ಪರಿನಿಗಾಯ್ತೊಸೆದಾಗಳುಂ . . . ಭುಜದಣ್ಡೋಗ್ರಾಸಿ ಧಾರಾಜಳಂ (ಸೌಇಇ. IX-i, ೧೧೮-೬೪; ಸು. 1057). 'ಕತ್ತರಿವಾಣಿ' ಪರಾ. [ಕರ್ತರಿ + ವಾಣಿ$_1$]

**ಕರ್ತರಿಸು** (ಕ್ರಿ). = ಕತ್ತರಿಸು: ಏಕ ಜೀವನಕಾಗಿ ಬಹುಜನರ ಕರ್ತರಿಸಿದಂತ್ಯಕಿನ್ನುಳಿದರುಂ ನೀನೇ ಸಮರ್ಥಂ (ಜಿನಮು. ೩೭-೩೮). [ಕರ್ತರಿ + -ಸು$_1$]

**ಕರ್ತರೀಮುಖ** (ನಾ). [ನಾಟ್ಯ] ಅಸಂಯುತ ಹಸ್ತಪ್ರಕಾರಗಳಲ್ಲಿ ಒಂದು: ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ—೧. ಪತಾಕ, ೨. ತ್ರಿಪತಾಕ, ೩. ಕರ್ತರೀಮುಖ (ಆಭಾನ್ಯ. ೪೭). [ಸಂ. (ಕರ್ತರೀ + ಮುಖ)]

**ಕರ್ತಲಿಸು** 'ಕಟ್ಟಲಿಸು' ನೋ.

**ಕರ್ತಲೆ** 'ಕಟ್ಟಲೆ' ನೋ.

**ಕರ್ತವ್ಯ** (ನಾ). ಮಾಡಬೇಕಾದುದು; ಮಾಡಲೇಬೇಕಾದ ಕೆಲಸ: ವಿಶ್ವರೂಪಂ ಕರ್ತವ್ಯಮನಱಿಪಿ ತನ್ನ ದಿವ್ಯರೂಪನಡಂಗಿಸಿ (ಜಗವಿ. ೩-೬ ವ). [ಸಂ.]

**ಕರ್ತವ್ಯಚ್ಯುತ** (ನಾ). ಮಾಡಬೇಕಾದ ಕೆಲಸವನ್ನು ಬಿಟ್ಟವನು; ಕರ್ತವ್ಯಭ್ರಷ್ಟ: ತಿಳಿದವರು ಹೀಗೆ ಕರ್ತವ್ಯಚ್ಯುತರಾದರೆ ಮಾಡುವುದಾದರೂ ಏನು (ಸಮಜೀ. ೭೩೭). [ಕರ್ತವ್ಯ + ಚ್ಯುತ]

**ಕರ್ತವ್ಯನಿಷ್ಠೆ** (ನಾ). ಮಾಡಬೇಕಾದ ಕೆಲಸದಲ್ಲಿ ಶ್ರದ್ಧೆ, —ವಿಶ್ವಾಸ: ಇದಕ್ಕೇ ನಾನು ಕರ್ತವ್ಯನಿಷ್ಠೆಯೆನ್ನೋದು (ಪುನರು. ೨೪). [ಕರ್ತವ್ಯ + ನಿಷ್ಠೆ]

**ಕರ್ತವ್ಯಪ್ರಜ್ಞೆ** (ನಾ). ಕರ್ತವ್ಯ ಬುದ್ಧಿ: ಕರ್ತವ್ಯಪ್ರಜ್ಞೆಯಿಂದ ಅವನು ಮನೆಬಿಟ್ಟು ಮಾಸ್ತಿನಿಕೋವನನ್ನು ನೋಡಲು ಹೋದನು (ಪುನರು. ೨೨೨). [ಕರ್ತವ್ಯ + ಪ್ರಜ್ಞೆ]

**ಕರ್ತವ್ಯಭ್ರಷ್ಟ** (ನಾ). = ಕರ್ತವ್ಯಚ್ಯುತ: ಕಷ್ಟಪಡಲಾರದೆ ಕರ್ತವ್ಯಭ್ರಷ್ಟರಾಗಿ ತಪ್ಪು ಮಾಡಿದರೆ ಮತ್ತೆ ಈ ತಪ್ಪಿನ ಫಲವಾಗಿ ಇನ್ನೂ ಹೆಚ್ಚು ಕಷ್ಟಪಡಬೇಕಾಗುತ್ತದೆ (ನಿಶಉ. ೧೨೨). [ಕರ್ತವ್ಯ + ಭ್ರಷ್ಟ]

**ಕರ್ತವ್ಯಮೂಢ** (ನಾ). ಏನು ಮಾಡಬೇಕೆಂದು ತಿಳಿಯದವನು: ಆ ಚಿಂತೆಯಲ್ಲಿ ಅವನು ಕರ್ತವ್ಯಮೂಢನಾದನು (ರೂಢಿ). [ಕರ್ತವ್ಯ + ಮೂಢ]

**ಕರ್ತವ್ಯಲೋಪ** (ನಾ). ಮಾಡಬೇಕಾದ ಕೆಲಸವನ್ನು ಮಾಡದೆ ಇರುವುದು: ಒಪ್ಪಿಕೊಂಡ ಮೇಲೆ ಕರ್ತವ್ಯಲೋಪ ಮಾಡಬಾರದು (ರೂಢಿ). [ಕರ್ತವ್ಯ + ಲೋಪ]

**ಕರ್ತವ್ಯಸಾರ** (ನಾ). ಕರ್ತವ್ಯವೇ ಪ್ರಧಾನವಾಗಿ ಉಳ್ಳವನು; ಕರ್ತೃತ್ವಶಾಲಿ: ಅರಯೆ ನೃಪರಾರುಂ ವಾಕ್ಸಾರರ್ ಕರ್ತವ್ಯಸಾರರಲ್ಲರ್ (ಗದಾಯು. ೨-೭). [ಕರ್ತವ್ಯ + ಸಾರ$_2$]

**ಕರ್ತಾರ,** ಕರ್ತಾರ (ನಾ). ೧. ಸೃಷ್ಟಿಕರ್ತ; ದೇವರು: ಕರ್ತಾರಂಗೆಜಗುವುದತಿವರ್ತಿತ್ವಂ ಪೊಲ್ಲದು (ಶಾಂತಿಪು. ೧೧-೫೨); ಮತ್ರ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ (ಬಸವ. ೧೫೫); ಕರ್ತಾರನ ಕಮ್ಮಟದಲ್ಲಿ ಚಿಕ್ಕಮಕ್ಕಳ ಕೈಯ ಇಕ್ಕು ಗೋಳಿನೊಳಗಾಯಿತ್ತು ನೋಡಾ (ಮೋಳಿಮಾ. ೧೨೩-೪೬೯). ೨. ಮಾಡುವವನು; ಕರ್ತ: ಕರ್ತಾರರಂ, ಕರ್ತೃ (ಭಾಷಾಭೂ. ೧೦೩ ಉದಾ). ೩. ನುರಿತವನು; ನಿಷ್ಣಾತ: ತಾವು ಸ್ವತಃ ಜ್ಯೋತಿಶ್ಶಾಸ್ತ್ರದ ಕರ್ತಾರರಾದ್ದರಿಂದ . . . ಮಗನ ಜನ್ಮಪತ್ರಿಕೆಗಳನ್ನು ಮಾಡಿಕೊಡಬೇಕು (ಭಾಮೃತ. ೩೦೬). ಕರ್ತಾರ: ೧. ಕರ್ತಾರ ಕೂಡಲಸಂಗಮದೇವಾ ನಿಮ್ಮ ತೊತ್ತುಗೆಲಸವ ಮಾಡದವನ ಸಂಸಾರವೇನವನ (ಬಸವ. ೧೫೭); ತಿಪ್ಪೆಯಂತಹ ಒಡಲೊಳಗೆ ಕರ್ತಾರನಜಿಸಿಹೆನೆಂಬ ಅಣ್ಣಗಳಿರಾ ನೀವು ಕೇಳಿರೋ (ಲಿಂಗವ. ೧೩-೫೨); ಕೊಡುವ ಕರ್ತಾರ ಬೇರೆ ಇರುತಿರೆ ಬಿಡುಬಿಡು ಚಿಂತೆಯನು (ಪುರಂದ. ೧-೫೬ ಪಲ್ಲವಿ). ೪. ಒಡೆಯ; ಪ್ರಭು: ಈ ನಿಕ್ಷೇಪ ಕರ್ತಾರವಿನ ಹೆಸರ ತಿಳಿಯಲೋದುವನ್ನಬರ ಅತ ನಮ್ಮ ಹೆತ್ತಯ್ಯನೆಂಬ ಹೆಸರೊಂದಿತ್ತು (ದೇದಾವ. ೧೩-೨೦). ೫. ಕಾರಣ; ನಿಮಿತ್ತ: ಇಂತೀ ಭ್ರಾಂತಿಗಂ ಕರ್ತಾರವಾವುದು (ಅನಂಪು. ೯-೪೪). [< ಸಂ. ಕರ್ತೃ]

**ಕರ್ತಾರ** 'ಕರ್ತಾರ' ನೋ.

**ಕರ್ತುಕ** (ನಾ). = ಕರ್ತಾರ ೧: ಪೊಡವಿ ಆಕಾಶ ತಾನೇಕವಾಗಿ ಒಡೆಯ ಕರ್ತುಕನ ಜೋಕಾಲಿ ಜೋಲಿ (ಶರೀಫ. ೩೧-೨). [< ಸಂ. ಕರ್ತೃಕ]

**ಕರ್ತೃ** (ನಾ). ೧. ಮಾಡುವವನು; ರಚಿಸುವವನು; ಕಾರಣವಾದವನು: ತನು ಪಾದ್ಯಂ ನಾಲಗೆ ಪಾದನದಂಡಂ ಕರ್ತೃವಾತ್ಮಂ (ಶಮುದ. ೩೪) ೨. ಒಡೆಯ; ಪ್ರಭು: "ಕರ್ತೃವಿನೊಳಂ ದ್ರವದ್ರವ್ಯದಾನದೊಳೆಜಿ" (ಶಬ್ದಮಂ. ೧೧೮). ೩. ಮೂಲಪುರುಷ: ಮಠದಲ್ಲಿ ಅವರು ಕರ್ತೃವಿನ ಗದ್ದುಗೆ ಸ್ಥಾಪಿಸಿದರು (ರೂಢಿ). ೪. [ವ್ಯಾಕ] ಧಾತು ಹೇಳುವ ಕ್ರಿಯೆಯನ್ನು ಸ್ವತಂತ್ರವಾಗಿ ನಡಸುವವನು: ಪ್ರವಿದಿತ ತತ್ಕರ್ಪಂ ಕರ್ತೃವಿನೀಪ್ಸಿತತಮ ಪದಾರ್ಥಂ (ಶಮುದ. ೧೨೭); ಇರ್ಬರ್ ಕರ್ತೃಗಳ್ಗೆ ನಿಮಿತ್ತಮಪ್ಪ ಸತಿಸಪ್ತಮಿಗೆ ಎಕಾರಮಕ್ಕುಂ (ಶಮುದ. ೨೪೯ ವೃತ್ತಿ). ೫. ಬಾಧ್ಯಸ್ಥ; ಯಜಮಾನ. [ಸಂ.]

**ಕರ್ತೃತ್ವ** (ನಾ). ೧. ಮಾಡುವಿಕೆ; ಮಾಡುವ ಗುಣ: ಸಕಲ ಕರ್ತೃತ್ವಾದಿಭೊಃಕ್ತೃತ್ವಕ ಕವಿದಾತ್ಮಂಗಿಲ್ಲ (ಕುವ್ಯಾಭೀ. ೩–೫೫); ಆತ್ಮವಸ್ತುಗಳಿಗೆ ಚೇತನತ್ವ, ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವ ಮೊದಲಾದ ವ್ಯವಹಾರಗಳಿರುವುವು (ಹಿಂದಸಾ. ೨೩೯). ೨. ಒಡೆತನ; ಯಾಜಮಾನ್ಯ; ಅಧ್ಯಕ್ಷತೆ. [ಸಂ.]

**ಕರ್ತೃತ್ವಶಾಲಿ** (ನಾ). ಚೆನ್ನಾಗಿ ಕೆಲಸ ಮಾಡುವ ಗುಣವುಳ್ಳವನು: ಬಿಟ್ಟೀ ಉಪವಾಸ ದುಡಿಯಲು ಕೂಡ ಸಿದ್ಧರಾಗಿರುವ ಕರ್ತೃತ್ವಶಾಲಿಗಳಿಗಾಗಿ ಬೇಟೆ (ಚಿತಸ. ೨೪); ಅವನು ಸ್ವತಃ ಕರ್ತೃತ್ವಶಾಲಿಯಲ್ಲ (ಇಪ್ಪಕ. ೩೫೮). [< ಸಂ. ಕರ್ತೃತ್ವಶಾಲಿನ್]

**ಕರ್ತೃಪದ** (ನಾ). [ವ್ಯಾಕ] ಕರ್ತೃವಾಚಕವಾದ ಪದ: ಕ್ರಿಯಾಪದಂ ಕರ್ತೃಪದದೊಡನೆ ಕೂಡಿದುದಾಗಿ ಎಲ್ಲಿ ಏನೆಂಬಾಪೇಕ್ಷೆಯಂ ಬಯಸುವುದು ಅದು ಸಕರ್ಮಕಮಕ್ಕು (ಶಮುದ. ನ. ೨೬೩ ವೃತ್ತಿ); ಕ್ರಿಯಾಪದವು ಹೇಳುವ ಕೆಲಸವನ್ನು ಯಾರು ಮಾಡಿದರು ಅಥವಾ ಯಾವುದು ಮಾಡಿತು ಎಂಬುದನ್ನು ತಿಳಿಸುವ ಪದಕ್ಕೆ ಕರ್ತೃಪದ ಎಂದು ಹೆಸರು (ಮಧ್ಯಮ. ೯). 'ಕರ್ಮಪದ' ಪರಾ. [ಕರ್ತೃ + ಪದ]

**ಕರ್ತೃಪ್ರಾಮಾಣ್ಯ** (ನಾ). ಮಾಡಿದವನ ವಿಷಯದಲ್ಲಿ ನಂಬಿಕೆ, —ಪ್ರಾಮಾಣ್ಯ: ಯಜ್ಞಾಗಮಕ್ಕೆ ಕರ್ತೃಪ್ರಾಮಾಣ್ಯಮಿಲ್ಲ (ಕಗವಿ. ೩೮). [ಕರ್ತೃ + ಪ್ರಾಮಾಣ್ಯ]

**ಕರ್ತೃಸಾದಾಖ್ಯ** (ನಾ). [ವೀಶೈ] ಐದು ಸಾದಾಖ್ಯಗಳಲ್ಲಿ ಒಂದು: ಕರ್ತೃಸಾದಾಖ್ಯಸ್ವರೂಪವಾದ ಗುರುಲಿಂಗದಲ್ಲಿ ಮಕಾರಮಂತ್ರಸ್ವರೂಪವಾದ ಜಿಹ್ವೇಂದ್ರಿಯ ಸಂಯೋಗವ ಮಾಡಬಲ್ಲಾತನೆ ಪ್ರಾಣಲಿಂಗಿ (ಅಖಂಡೇ. ೨೪೫–೪೮). [ಕರ್ತೃ + ಸಾದಾಖ್ಯ]

**ಕರ್ತೆ**$_1$ 'ಕಟ್ಟೆ' ನೋ.

**ಕರ್ತೆ**$_2$ (ನಾ). (?): ಗವಜಿಗಳಯ್ನೂರ್ವ್ವರುಮಭಿನವ ಸೋಮೇಶಂಗೆ ಮಿಂದಿನಲು ಪಣಮೊಂದಂ ಧ್ರುವಮಾಗೆ ಪಸುಂಬುಗೆ ಹಾಗವನೆಱಕದೆ ಕರ್ತೆಯಲ್ಲಿ ಬೇಳೆಯನಿತ್ತರ್ (ಸೌಇಇ. IX–i, ೧೬೫–೬೧; 1099). [?]

**ಕರ್ತ್ರರ್ಥ** (ನಾ). [ವ್ಯಾಕ] ಕರ್ತೃರೂಪವಾದ ಅರ್ಥ: ಧಾತುವಿನ ಮೇಲೆ ಆಖ್ಯಾತಪ್ರತ್ಯಯಗಳು ಕರ್ತ್ರರ್ಥದಲ್ಲಿಯೂ ಕರ್ಮಾರ್ಥದಲ್ಲಿಯೂ ಬರುತ್ತವೆ (ಕೈಪಿಡಿ. ೪೩). [ಕರ್ತೃ + ಅರ್ಥ]

**ಕರ್ದ** (ನಾ). ಹದ್ದು: "ಕರ್ದಃ – ಪರ್ದು" (ಕಾಶಕ್ಕ. ೭). [?]

**ಕರ್ದಟಿಕಿ** (ನಾ). ನೀರಿನಲ್ಲಿ ಬೆಳೆಯುವ ಜೊಂಡು; ಪಾಚಿಬಳ್ಳಿ: ಅತಿಮಧುರ, ಬೇಲದ ತಿರುಳು (ಹಣ್ಣು), ಪಾಚಿಬಳ್ಳಿ (ಕರ್ದಟಿಕಿ), ಮಗ್ಗಾರೆಕಾಯಿ (ಸಕವೈ. ಪರಿ. ೪೩೮). [< ಸಂ. ಕರ್ದಟ]

**ಕರ್ದಡಿಗ** (ನಾ). ಕರಿಯ ದಾಂಡಿಗ; ಪಾಪಿಷ್ಠನಾದ ದಡಿಯ: ಕೆಡೆಕೆಡೆಯೆಂದರಮಗನೊದೆದೆಡಗಾಲೊಳ್ ತೊಡದುರ್ಕರುಳೊಳೇನಿರ್ದಂ ಕರ್ದಡಿಗಂ ಗೋವಳನಿಕ್ಕಿದ ತೊಡರೊಳ್ ಮಿಗೆ ಕೋದೆಬಲ್ವಪಾಪೆಯ ತೆಜದಿಂ (ಅರ್ಧನೇ. ೮–೧೧೮). [< ಕರಿದು + ದಡಿಗ]

**ಕರ್ದನಿ** (ನಾ). ಕೆಟ್ಟ ಧ್ವನಿ; ವಿಕಾರವಾದ ಧ್ವನಿ; ಆರ್ತನಾದ: ಮನೆಯ ಮುಂದಜಿಸಿ ಕಾಣದೆ ಹೆಮ್ಮೈಸಿಯೆ . . . ಕರ್ದನಿ[ಪಾಠಾಂ. ಮಾಧ್ವನಿ]ಯಿಂದ ಕರೆವುತಿರೆಯಕಟ ಮಲುಹಣನ ವಿಕಳತೆಯ ನುಡಿಯೆಂದು ಬಂದು (ಗುಧಚ. ೬೭–೧೦೪).

[< ಕರಿದು + ದನಿ$_2$]

**ಕರ್ದಮ** (ನಾ). ೧. ಕೆಸರು; ಕದಡು; ಪಂಕ: ಉರ್ವರಾಭಾಗದುರ್ದಮಮಂ ಕರ್ದಮಮಂ ಕಟಿಲ್ಲಲತುಳೋದ್ಯತ್ಫೇನಮಂ ಸಿಂಧುಯೂಥಮನೋರಂತಿರೆ ಮಾಡಲಾದುದೆನಸುಂ ನಿರ್ನೀರದಂ ಶಾರದಂ (ಪುಷ್ಪಪು. ೪–೮೭). ೨. (ಸುಗಂಧವನ್ನು ಬೆರಸಿ) ಕದಡಿದ ನೀರು; ಸುಗಂಧದ ಕಲ್ಕ: ಮೃಗಮದ ಕರ್ದಮ ಸಂಪಾದಿತ ರೇಖಾಮಂಡಿತ ಗಂಡಸ್ಥಳನುಂ (ಆದಿಪು. ೮–೪೧ ವ); ಚಂದನ ಕರ್ದಮದಣ್ಪು . . . ಬಗೆಗೊಂಡುದು ಕೋಮಲಾಂಗಿಯಾ (ಜಗವಿ. ೨–೭೧). ೩. ಕೊಳೆ; ಪಾಪ. 'ಕರ್ದಮಂಗರ್ಚು' ಪರಾ. ೪. ಮಾಂಸ. ೫. ಒಬ್ಬ ಪ್ರಜಾಪತಿಯ ಹೆಸರು. [ಸಂ.]

**ಕರ್ದಮಂಗರ್ಚು** (ಕ್ರಿ). ೧. ಕೆಸರನ್ನು ತೊಳೆ. ೨. (ಆಲಂ) ದೋಷವನ್ನು ತೆಗೆದುಹಾಕು: ಗುರುಕೃಪಾಪೀಯೂಷವಾರಿಯಿಂದಿರದೆ ಮುನ್ನಿನ ಜನ್ಮ ಕರ್ದಮಂಗರ್ಚುತ್ತೆ (ಅರಾಚ. ೧–೯೮).

[ಕರ್ದಮ + ಕರ್ಚು$_2$ (< ಕಬ್ಬು)]

**ಕರ್ದಮಂಬೊರೆ** (ಕ್ರಿ). ಕೆಸರನ್ನು ಮೆತ್ತು; ಕೊಳೆಯನ್ನು ಲೇಪಿಸು: ಮೆಯ್ಯ ಜಲವಶ್ರುಜಲೌಘದೆ ನಾಂದು ಕರ್ದಮಂಬೊರೆದವೊಲಾಗಲ್ (ಜಗವಿ. ೬–೯೬).

[ಕರ್ದಮ + ಪೊರೆ$_2$]

**ಕರ್ದಮಜಾತೆ** (ನಾ). ೧. ಕೆಸರಿನಲ್ಲಿ ಹುಟ್ಟಿದವಳು; ಲಕ್ಷ್ಮಿ. ೨. ಸುವಾಸನೆಯ ಕುಲದಲ್ಲಿ ಹುಟ್ಟಿದವಳು. ೩. ಪಾಪದಿಂದ ಹುಟ್ಟಿದವಳು. ೧,೨,೩: ಸ್ತ್ರೀಜನಕೆ ಸಹಜಮಿದು ಮೇಲೆ ಕರ್ದಮಜಾತೆ ಮಾಜುವಳೆದೆಯೊಳಿರ್ದ ಕೃಷ್ಣತೆಯನು (ಜೈಮಿಭಾ. ೭–೯).

[ಕರ್ದಮ + ಜಾತೆ]

**ಕರ್ದಮಿತ** (ಗು). ಕೆಸರಾದ; ಕೆಸರಿನಿಂದ ತುಂಬಿದ: ಯಾಮದ್ವಿಪೇಂದ್ರ ಪ್ರತಾನ ಕಟೋನ್ಮುಕ್ತಮದೌಘ ಕರ್ದಮಿತಕಾಂತಂ ರಾಜಗೇಹಾಜಿರಂ (ಚಂದ್ರಪು. ೧–೧೫೧). [ಸಂ.]

**ಕರ್ದರಿ** (ನಾ). ಕಪ್ಪಾದ ದರಿ; ಕತ್ತಲು ಮುಸುಕಿದ ಕಮ್ಮರಿ: ಪೆರ್ಬೆಟ್ಟದಿಟ್ಟೆಡೆಯ ಕರ್ದರಿಯ ಧೂಳಿ ಸೆಜ್ಜರಕೆ ಪಾದದಂಡದಿಂ ಮಗುಟ್ಟಿ ಕಾಡಾನೆಯ ಕಡುಪಿನ (ಮಲ್ಲಿಪು. ೭–೪).

[< ಕರಿದು + ದರಿ$_1$]

**ಕರ್ದಾದಾರ** (ನಾ). ಭೂಮಿಯನ್ನು ಸಾಗುಮಾಡುವವನು; ಸಾಗುವಳಿದಾರ: ಆ ಭೂಮಿಯಲ್ಲಿರಬಹುದಾದ ಕರ್ದಾದಾರನ ಸ್ವಂತ ಮಾಲುಗಳು, ಬಾವಿ, ಮಂಟಪ, ದೇವಾಲಯ, ಇತ್ಯಾದಿಗಳನ್ನು ಆಗಿಂದಾಗ್ಗೆ ಸೀಸದ ಕಡ್ಡಿಯಿಂದ ಒಂದು ಬುಕ್ಕಿನಲ್ಲಿ ಗುರುತು ಹಚ್ಚುತ್ತಾ ಬರಬೇಕು (ಭೂಮಿಅ. ೨೨). [← ಪಾರ. ಕರದಕಾರ್]

**ಕರ್ದಾಳಿ** 'ಕತ್ತಾಳೆ' ನೋ.

**ಕರ್ದಿಂಗಳ್, ಕದ್ದಿಂಗಳು, ಕರಿದಿಂಗಳು, ಕಬ್ಬಿಂಗಳ್** (ನಾ). ೧. ಕೃಷ್ಣಪಕ್ಷ; ಅಮಾವಾಸ್ಯೆ: ಕರ್ದಿಂ[ಪಾಠಾಂ. ಕ್ದಿಂ]ಗಳಿರುಳೊಳ್ ಕಟ್ಟಲೆಯೊಳ್ (ವಡ್ಡಾರಾ. ೯೨–೧೩); ಭಂಗವಡೆದೆಸೆಗುಮವರ ಗೃಹಂಗಳ್ ಮಾಣಿಕದ ಸಂಜೆಯಿಂ ನೀಲದ ಕರ್ದಿಂಗಳಿಂ (ಸೂಕ್ತಿಸು. ೪–೧೫೧); ಕರಿದು + ತಿಂಗಳ್ = ಕರ್ದಿಂಗಳ್ (ಶಮುದ. ಮ. ೧೭೯ ಪ್ರಯೋ); ಕರ್ದಿಂಗಳ ಬಾನಿನ ಅರಿಲಂತೆ (ಅನಿಕೇ. ೩೩–೮). ೨. ಅಮಾವಾಸ್ಯೆಯ ಚಂದ್ರ.

**ಕದ್ದಿಂಗಳು** : ೧. ಇವೊತ್ತು ಅಮಾಸೆ, ಕದ್ದಿಂಗಳು. ಪೂರಾ ಕೆಟ್ಟ ಕಾಲವಂತೆ! (ಮಲೆಮ. ೮೦೨); ಕದ್ದಿಂಗಳಿನಲ್ಲಿ ಶ್ರೀಪತಿಯ ಬ್ಯಾಟರಿ–ಬೆಳಕಿನಲ್ಲಿ ಹೊಳೆಯ ಕಡೆ ನಡೆದರು (ಸಂಸ್ಕಾರ. ೭೬); ವೈಶಾಖದ ಬೆಳುದಿಂಗಳು ಮುಗಿದು ಕದ್ದಿಂಗಳು ಬೆಳೆಯುತ್ತಿದೆ (ಬೆಳುಮ. ೨೭). **ಕರಿದಿಂಗಳು** : ೧. (ಕ). △ **ಕಱ್ಪಿಂಗಳ್** : ೧. ಪೋಡುಂಗಾಜಂ ಸೋರ್ಕೆ ತೂಂಕಡಿಂದಿರುಳ್ ಕಱ್ಪಿಂಗಳ್ ಕಡು ಗತ್ತಲೆಯೊಳ್ ಬಂದು (ವಡ್ಡಾರಾ. ೧೫೬–೯). [< ಕರಿದು + ತಿಂಗಳ್]

**ಕರ್ದು** (ಕ್ರಿ). = ಕರ್ದುಂಕು ೧ : ಅಸವಸದಿಂ ಕುಕ್ಕುಟ ತಾಂ ಬಸುರಾಸೆಗೆ ಪೋಗಿ ಕಸವ ಕರ್ದುವುದಲ್ಲದೆ ಹಸಿದರೆ ಹಂಸೆಯು ತಿಪ್ಪೆಯಂ ಕಸವಂ ಕರ್ದುವುದೆ (ನೀತಿಸಾ. ೭೩೪). [< ಕರ್ದುಂಕು]

**ಕರ್ದುಂಕು**, ಕದುಕು, ಕರ್ದುಕು (ಕ್ರಿ). ೧. ಕೊಕ್ಕಿನಿಂದ ಕುಕ್ಕು; ಕಚ್ಚು; ಕಡಿ; ಚುಚ್ಚು : "ಕರ್ದುಕು, ಕರ್ದುಂಕು – ಲಘು ಚಂಚು ಘಾತನೇ (ಕೊಕ್ಕಿನಿಂದ ಮೆಲ್ಲಗೆ ಕುಕ್ಕು)" (ಶಮಧಾ); ತನ್ನ ತಮ್ಮನ ಕಣ್ಣಂ ಕರ್ದುಂಕುವ ಕಾಗೆಗಳುಮಂ . . . ಕಂಡು (ಗದಾಯು. ೫–೩ ವ); ನಸು ಕರ್ದುಂಕಿ ನವರಸಮಂ ಸವಿಸವಿದು (ಗಿರಿಕ. ೩–೧೦೩ ವ); ಕನಗೋ ನರಂ ಕರ್ದುಂಕಿ ದನಿದೋಱುವ ಕೋಗಿಲೆ (ಕಬ್ಬಿಕಾ. ೬೧); ಅಲವಣ್ಣಿಂದ ಧರಮಂ ಗಿಳಿ ಕರ್ದುಂಕಿದುದು (ಚಿಬಪು. ೧೦–೬೪). ೨. ಮುದ್ದಿಡು; ಚುಂಬಿಸು : "ಕರ್ದುಂಕಿದಂ ಕರ್ದುಕಿದನೆಂದೆನಲ್ಕೆ ಲಘುವಾಗಿಯೆ ಚುಂಬಿಸಿದಾತನೊಳ್" (ಕರ್ಣಾನಿ. ೮೭); ಪಲ್ಲವಾಧರವ ಕರ್ದುಂಕಿದು ಪೊಳೆವ ಕೆಂಬಲ್ಲಿಗೆ ರಸದಂಬುಲವ ಮೆಲ್ಲಗೆ ಸಾರ್ಚಿ ನಾಲಗೆಯಿಂದೆ ರತಿದೇವಿ ಬಲ್ಲಂತೆ ಶಾಖಮಾಡಿದಳು (ಮೋಹತ. ೧೬–೫೯). **ಕದುಕು** : ೧. ಚಕೋರೀಚಯಂ ಚಂಚುವಿಂದಂ ಕದುಕಲ್ಸಾರ್ದಪ್ಪುದು (ಎಕ. II, ೧೨೭–೧೩೫; 1115); ನೆಲನ ಸವೆಸಿತು ನೇಸಱಿನ ಕಂಗಳನು ಕದುಕಿತು (ಕುವ್ಯಾಭೀ. ೧–೪೮); ಗಿಳಿ ಹಣ್ಣು ಕದುಕಿ ನುಡಿ ಹದಗೊಡುವದು (ನೆಲಮು. ೨೩). **ಕರ್ದುಕು** : ೧. ಮೀರ್ವರುಣಧ್ವಜಂಗಳ ನೆಬಲ್ಗಳ ನೊಂದೆರೆಗೆತ್ತು ವಾರ್ಧಿಯೊಳ್ ಪೊಳೆವೆಳವಾಳೆಗಳ್ ಕರ್ದುಕೆ (ಕಾವ್ಯಸಾ. ೭೬ ಶೂದ್ರಕ); ಒಳಗೞಿಯದೆ ಪಚ್ಚೆಯ ಸಿಲೆಗಳನಂಚೆಯ ಪಿಂಡುಕಂಡು ಪಾವಸೆಗೆತ್ತವ್ವಳಿಸಿ ಕರ್ದುಕುತ್ತುಂ (ಶಾಂತಿಪು. ೨–೯೮); ಕೋಜಡಂ ಕರ್ದುಕಿ [ಪಾಠಾಂ. ಕಡಿದು] ಚಂಚು ನೊಂದು ಕುಸಿದ ಪಿಕನಿಕರದಂತೆ (ಹಚಕಾ. ೮–೭೧). ೨. ಕುಟಿಲಾಳಕಿಯರ ನುಣ್ಗಲ್ಲ ತೊಂಡೆವಣ್ದುಟಿಯ ಕರ್ದುಕಿ . . . ಮಾಗಿಯ ಹಿಮ ವಿಟನಂತೆ ಕಣ್ಗೆ ರಂಜಿಸಿತು (ಮೋಹತ. ೪–೫೫); ಪಾಯ್ದೊಡನವನೊಮ್ಮೆ ಪಲ್ಗೊನೆ ತಣಿವಂತೆ ಬಾಯ್ದೆಱೆಗರ್ದುಕೆ (ಚಿಕವಿ. ೬–೪೯ ಸಾಂಗತ್ಯ). [ದೇ.॥ ತೆಲು. ಕದುಕು = ತಿನ್ನು]

**ಕರ್ದುಕು** 'ಕರ್ದುಂಕು' ನೋ.

**ಕರ್ದುಗು** (ನಾ). ಒಂದು ಊರಿನ ಹೆಸರು : ಕರ್ದುಗಿನ ಸ್ವಯಂಬು ದೇವರ ದೇಗುಲದ ಪೂಲಿಯ ಪಣ್ಡಿತರ . . . ಶಿಷ್ಯರಪ್ಪ ಕಾಳಗ್ನಾನಿ ವಖ್ಖಾಣಿಜೀಯರ್ಗ್ಗೆ (ಸೌಇಇ. XI–i, ೪೬–೮; 1007). ℙ ಈಗಿನ ಗದುಗಿನ ಹೆಸರು. [< ಸಂ. ಕೃತಕ ?]

**ಕರ್ನ** (ನಾ). ಕಿವಿ; ಕರ್ಣ : ಆದಿಮಧ್ಯಾಂತದ ಕಥಾಮೃತವ ಬೀಜಾಗ ದಂತೆನ್ನ ಕರ್ನ ಕೋಟರಕೆ ಸೈಗಱೆದನೀ ಮಲ್ಲಣಾರ್ಯಂ (ವೀಶೈಪು. ೩–೧–೩); ನಿಮ್ಮ ನುಡಿ ಬಲು ಸೊಗಸು ಕರ್ನದೋಳ್ ನೆಲಸಿ ತುಳುಕಾಡುತಿದೆ (ತುರಂಗ. ೯೧–೧). [< ಸಂ. ಕರ್ಣ]

**ಕರ್ನಲ**, ಕರ್ನಲ್ಲು (ನಾ). ಸೇನಾಪತಿ; ದಳಪತಿ : ತಮ್ಮ ದೋಸ್ತರಾದ ಕರ್ನಲ ಕುಲೂಸಸಾಹೇಬರವರ ಹೆಸರಿನಲ್ಲಿ (ಎಕ. IX, ಚನ್ನಪ. ೫–೩; 1799). **ಕರ್ನಲ್ಲು** : ಸಾಹಸವ ತೋರ್ಪವೆಂದಾವರಿಸಿ ಜರ್ನಲ್ಲುಕರ್ನಲ್ಲು ಮೊದಲಾದ ಸರದಾರರೈತಂದರು (ವರ್ಷವ. ೩–೫೪). [← ಇಂ. Colonel]

**ಕರ್ನಲ್ಲು** 'ಕರ್ನಲ' ನೋ.

**ಕರ್ನಾಟ** (ನಾ). = ಕರ್ಣಾಟ ೨ : ಸಮಗ್ರ ಕರ್ನಾಟದೇಶ ಭೂವರ್ಗ್ಗ ಭರ್ತ್ತಾರಂ (ಎಕ. VI, ಕಡೂರು. ೧೬೨–೧೧; ಸು. 450 ?); ಕರ್ನಾಟ ಧರಣೀವಜ್ರ ಕವಾಟಾಯಿತ ವಿಕ್ರಮಃ (ಎಕ. VII, ಶಿವಮೊ. ೨–೧೧; 1641). [< ಸಂ. ಕರ್ಣಾಟ]

**ಕರ್ನಾಟಕ** (ನಾ). = ಕರ್ಣಾಟಕ : ಗುಮ್ಮಟನಾಥ ಸಚ್ಚರಿತವೆಂಬೀ ಕಾವ್ಯಮಂ ಪೇಳ್ದು ಮಾಣದೆ ಕರ್ನಾಟಕದಿಂದೆ ಮುತ್ತೆರಚಿಸಿ (ಬಾಧಪು. ೧–೪೮). [< ಸಂ. ಕರ್ಣಾಟಕ]

**ಕರ್ನಾಲಿ** (ನಾ). ಒಂದು ಬಗೆಯ ಗೆಡ್ಡೆ (?) : ಮಾವಿನ ಗೊಟ್ಟೆ . . . ಕರ್ನಾಲಿ, ನೈದಿಲಗೆಡ್ಡೆ, ಕಡಲೆಯ ಹಿಟ್ಟಿನೊಳಗೆ ಕೊಳ್ಳೆ ಗರ್ಭಸ್ತಂಭನ (ವಿವೈವಿ. ೮೮). [< ಕೊಡನಾರಿ ?]

**ಕರ್ನಿಕೆ** 'ಕನ್ನಿಕೆ$_2$' ನೋ.

**ಕರ್ನೆ** 'ಕರಣ್ಣೆ' ನೋ.

**ಕರ್ನೆತ್ತರ್**, ಕನ್ನೆತ್ತರ್ (ನಾ). ಕರಿಯ ರಕ್ತ : ಕರ್ನೆತ್ತರಿರ್ಮೆ ಯ್ಯೊಳಂ ಪಾಯ್ತರೆ ಜೀವಂ ಬಿಟ್ಟು . . . ಕರ್ವೆಟ್ಟಿ ಬೀೞ್ವಂತಿರೆ ಬಿಟ್ಟಂ (ಪಂಪರಾಮಾ. ೧೩–೧೨೮); ಕುಡಿವೆಂ ದುಶ್ಶಾಸನೋರಃಸ್ಥಳಮ ನಗಲೆ ಪೋೞ್ದಾರ್ದು ಕರ್ನೆ [ಪಾಠಾಂ. ಕನ್ನೆ, ಕೆನ್ನೆ]ತ್ತರಂ (ಕಾವ್ಯಾವ. ೮೧೯; ಪಂಪಭಾ. ೭–೧೩ ನೋ). **ಕನ್ನೆತ್ತರ್** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [< ಕರಿದು + ನೆತ್ತರ್]

**ಕರ್ನೆಯ್ದಿಲ್**, ಕನ್ನೆಯ್ದಿಲ್, ಕನ್ನೆಯ್ದಿಲು, ಕನ್ನೈದಿಲ್, ಕನ್ನೈದಿಲು, ಕನ್ನೈದಿಲೆ, ಕರ್ನೈದಿಲ, ಕರ್ನೈದಿಲು (ನಾ). ಕರಿಯ ಕಮಲ; ನೀಲೋತ್ಪಲ : ಕರ್ನೆಯ್ದಿಲ ಬಾಸಿಗಂ ನಿಮಿರ್ವ ಪೋಲ್ ನಿಮಿರ್ದತ್ತು ಕಟಾಕ್ಷವೀಕ್ಷಣಂ (ಶಾಂತಿಪು. ೮–೮೬); ನಿಜತೇಜಂ ಸೀಳ್ದ ಕರ್ನೆಯ್ದಿಲವೊಲಿರೆ ತನುಚ್ಛಾಯೆಯಿಂ (ಶಮುದ. ೨೧೪ ಪ್ರಯೋ); ಕರ್ನೆಯ್ದಿಲ ಕಣ್ಣ ಕಾಂತೆ ತನ್ನ ನುಣ್ಗಲ್ಲಕೆ ಸರಿಯೆಂದು ಮಾಣಿಕಗನ್ನಡಿವಿಡಿ ದೊರ್ವರಳಿಹಳು (ಮೋಹತ. ೪–೧೪). **ಕನ್ನೆಯ್ದಿಲ್** : ಈ ದೃಗ್ಯುಗಳಂ ಕನ್ನೆಯ್ದಿಲಂತಿರ್ದಪುದು (ಕಾದಂಉ. ೬೩೨); ನಾಭಿಕೂಪೋಪಜಾತಂ ನೀರೇಜಂ ನೀಳ್ದ ಕನ್ನೆಯ್ದಿಲವೊಲಿರೆ (ಭಾಷಾಭೂ. ೧೭೫ ಉದಾ). **ಕನ್ನೆಯ್ದಿಲು** : ಕನ್ನೆಯ್ದಿಲು ತಾವರೆಗೊಳ ಲಾಮಂಚದಿಂ ನೆಗಳಿದ ಪರ್ಣಶಾಲೆ (ಮೋಹತ. ೪–೫೪); "ಕಂದೋತ್ಥಂ – ಕನ್ನೆಯ್ದಿಲು" (ಓಷಧಿ. ೨೨). **ಕನ್ನೈದಿಲ್** : ನಗೆಮಲ್ಲಿಗೆ ಮೊಗದಾವರೆ ಕಣ್ಣಾಡಿ ಸೊಗಸುವ ಕನ್ನೈದಿಲಾಗೆ (ಕಂಸವಿ. ೬–೯೯). **ಕನ್ನೈದಿಲು** : ಕನ್ನೈದಿಲುಗಳೆಸಳುಗಣ್ಣ ಕಾಂತಿಯಿಂದ (ಕಂಸವಿ. ೯–೮೨); "ಜಾಲನಖಃ – ಕನ್ನೈದಿಲು" (ಓಷಧಿ. ೬೨). **ಕನ್ನೈದಿಲೆ** : ಹುರುಗಿಲು, ಚಿತ್ರಮೂಲ ಮಂಜಿಷ್ಠೆ, ಕನ್ನೈದೆ[ದಿ]ಲೆ ಬೇರು, ಬಿಲ್ವಪತ್ರೆ ಬೇರು . . . ಮೆಣಸು ಇವುಗಳನ್ನು ಕಷಾಯ ಕಾಯಿಸಿ ಸೇವಿಸೆ ಶ್ಲೇಷ್ಮ ಜ್ವರ ನಾಶವಾಗುವುದು (ಸಕವೈ. ೯೦); ಮೊಗವ ತಾವರೆಯೊಳು ಕಣ್ಣನು ಕನ್ನೈದಿಲೆಯೊಳು ಮಾಡಿದ ಬ್ರಹ್ಮನು ನಿನ್ನ ಈ ಮನವನು ಕಲ್ಲೊಳು ಮಾಡಿದನೇನು (ಇಂಚಾಪ. ೧೭೬–೩೨). **ಕರ್ನೈದಿಲ** : ಒಳ್ನುಡಿಯ ಕರ್ನೈದಿಲ ಮಳ್ಳಿವಿಯು ದೀರ್ಣ ತಾಪಸಧೈರ್ಯದ (ಭಾವಚಿಂ. ೪–೨೧). **ಕರ್ನೈದಿಲು** : "ಅಸಿತೋತ್ಪಲಂ – ಕರ್ನೈದಿಲು" (ಓಷಧಿ. ೭). [< ಕರಿದು + ನೆಯ್ದಿಲ್]

**ಕರ್ನೈದಿಲ** 'ಕರ್ನೆಯ್ದಿಲ್' ನೋ.

**ಕರ್ನೈದಿಲು** 'ಕರ್ನೆಯ್ದಿಲ್' ನೋ.

**ಕರ್ಪ$_1$** (ನಾ). ಒಂದು ಬಗೆಯ ಸಸ್ಯ : ಕಲ್ಲುಹೆಟ್ಟೆ, ಕಾಡುಪೆ, ಕರ್ಪ (ವೈಔಗಿ. ೫೦–೯೯೩). [?]

**ಕರ್ಪ$_2$** (ನಾ). ಒಬ್ಬಾತನ ಹೆಸರು : ನಿತಾಂತಂ ಧರೆ ಬಣ್ಣಿಕುಂ ಬುಧ ಸಮೂಹಂ ಕರ್ಪಣಂ ಕರ್ಪ್ಪಣನಂ (ಸೌಇಇ. XX, ೫೭–೪೦ ; 1084) ; ಕರ್ಪರಸ ಕಾಳಿದಾಸ ಭಟ್ಟರಳಿಯಂ ಕವಿತಾಮನೋಹರಂ ಕವಿ[ತ]ಳರ ಕರ್ಪರಸಂ ಬರೆದ (ಸೌಇಇ. XX, ೫೦–೩೨ ; 1084). [?]

**ಕರ್ಪಟ** (ನಾ). ೧. ಬಟ್ಟೆ; ವಸ್ತ್ರ : "ಚೇಲಂ, ಚೀರಂ, ವಾಸಃ, ಕರ್ಪಟಂ . . . ಪಟಃ – ಈ ೧೦ ಸೀರೆ" (ಹಲಾಯು. ೯೦–೩೯೪); ಜರ್ಜರ ಪಾರ್ಪ್ಪರ್ವ ವಿಸ್ತೀರ್ಣ ಜೀರ್ಣ ಕರ್ಪಟಾವೃತ ಕಟಿತಟನುವಾಗಿ ಬಂದು ಕಣ್ಮುಚ್ಚಲೆಡೆವೇಡೆ (ಪಂಪಭಾ. ೩–೩೧ ವ) ; ಪೂಗಳಂ ಕೆದಱಿ ಕರ್ಪಟಮಂ ಪಱಿದಿಕ್ಕಿ ಸೀಳ್ದು . . . ಬಿಡದೆ ಕಾಡಿದುದಾ ಕಪಿ ತಾಪಸರ್ಕಳಂ (ಪಂಚತಂ. ೨೬೧–೨); ಎನಗೊಂದು ಕರ್ಪಟಮುಂಟೀತಂಗಮದು ದೊರಕಿದುದಿಲ್ಲ (ಕಗವಿ. ೧೦೫–೨೪). ೨. ಹರಕಲುಬಟ್ಟೆ; ಚಿಂದಿಬಟ್ಟೆ. [ಸಂ.]

**ಕರ್ಪಟಿ** (ನಾ). = ಕಪ್ಪಡಿ (೬). [< ಸಂ. ಕರ್ಪಟಿನ್]

**ಕರ್ಪಟಿಕ** (ನಾ). = ಕರ್ಪಟಿ : ಕಾನ್ಥಿಕ ಗಾಯಕ ದೀನ ಹೀನ ಕರ್ಪ್ಪಟಿಕ ಜಟಾಧರ ದ್ವಿಜ ದಿಗಂಬರ ತಾರ್ಕಿಗ × × ದಿಗಳ (ಸೌಇಇ. XX, ೧೧೧–೩೦ ; 1129). [ಸಂ.]

**ಕರ್ಪಡ** (ನಾ). ೧. = ಕಪ್ಪಡ೧ : ಕರ್ಪಡ ಪರಿಕರನಾಗಿರ್ದು (ಅಶ್ವಶಾ. ೯೦–೪). ೨. ಕೊಳೆಬಟ್ಟೆ ; ಮಲಿನವಸ್ತ್ರ : ಬೀಸುವಲೆ ಬೆಳ್ವಾರಂ ಸೊಡರ್ಮಡ್ಡಿ ಕರ್ಪಡಮುಂಟೆಡ್ಡಣಮುಳ್ಳಣಂ . . . ಬಡಿಕೋಲ್ಗಳೊಪ್ಪೆ ಜವದಿಂದೇಳ್ದಂದರಂದಾ ಧೀವರರ್ (ಶಬಶಂ. ೩–೨೩). [< ಸಂ. ಕರ್ಪಟ]

**ಕರ್ಪಣ** (ನಾ). ಒಂದು ಆಯುಧ : ಶೂಲ, ಮುಸಲ, ಮುದ್ಗರ . . . ಕರ್ಪಣ . . . ಮೊದಲಾದ ಆಯುಧಗಳಿಂದ ಈ ಸಮಂತಪಂಚಕವು ಎಷ್ಟು ಭಯಂಕರವಾಗಿರುವದು (ಭಾಸನಾ. ೧೦೨–೧೮). 'ಕಂಪಣ್ಣ' ಪರಾ. [ಸಂ.]

**ಕರ್ಪರ** (ನಾ). ೧. ಕಪ್ಪರ; ಕಡಾಯಿ : "ಕಟಾಹಃ, ಕರ್ಪರಃ – ಈ ೨ ಕೊಪ್ಪರಿಗೆ" (ಹಲಾಯು. ೫೨–೧೬೦); ಮಲಹರಂ ಜಂಗಮನಾಕಾರದಿಂ ಬಂದು ನಿರ್ಮಲಸಿದ್ಧರ ಕರ್ಪರವನಿರಿಸಿ ಪೋಗಿ . . . ಬೇಡಿ ಕಾಡುತ್ತಿರಲು (ಗುರುಚಾ. ೧೦–೬೯). ೨. ಚಿಪ್ಪು; ತಲೆಬುರುಡೆ : ಕಿಡಿವಿಡೆ ಕರ್ಪರಂ ಸುಗಿದು ಮೆಯ್ದೆಗೆದಂ ಕಮಠಾಧಿಪಂ ಪಡಲ್ವಿಡೆ ಪಡೆಗಳ ಫಣಿಪ್ರಭು ಮೊಗಂದಿರಿದಂ (ಪಂರಾಮಾ. ೬–೮೩). ೩. ಒಂದು ದೇಶದ ಹೆಸರು : ಕುರು ಕುಕುರ ಕರಹಾಟ ಕರ್ಪರ ಯವಂತಿಕ ಪಾರಿಯಾತ್ರ ಕರ್ಣಾಟ . . . ಮೊದಲಾದ ದೇಶದ ಶರಣಸಂಕುಲಂ ಬರುತಿರ್ದುದು (ಚಿಬಪು. ೬–೫೦). ೪. ಬಾಣಲೆ ; ಓಡು. 'ಖರ್ಪರ' ಪರಾ. [ಸಂ.]

**ಕರ್ಪರಿ** (ನಾ). ೧. = ಕಪ್ಪರಿತುತ್ತ. ೨. ಮೈಲುತುತ್ತ : "ಮಯೂರ ಕಂಠಂ ಕರ್ಪರಿಯೆನಿಕ್ಕು" (ಮಂಗರಾ. ೪೩–೪೨). 'ಖರ್ಪರಿ' ಪರಾ. [ಸಂ. ಕರ್ಪರೀ]

**ಕರ್ಪಾಸ** (ನಾ). ಹತ್ತಿಯ ಗಿಡ. 'ಕಾರ್ಪಾಸ' ಪರಾ. [ಸಂ.]

**ಕರ್ಪಾಸಿ** (ನಾ). = ಕರ್ಪಾಸ. [ಸಂ. ಕರ್ಪಾಸೀ]

**ಕರ್ಪಿಡಿ, ಕಪ್ಪಿಡಿ** (ಕ್ರಿ). ಕಪ್ಪಾಗು ; ಕರಿಬಣ್ಣ ತುಂಬಿರು : ಕರ್ಪಿಡಿದ ಪಣೆಗಟ್ಟು ಕೆಯ್ಪೊಡೆ ಬೆಡಂಗನೊಳಕೊಳೆ (ಪಂಪಭಾ. ೧೦–೭೧); ಒಡಲುಂ ಮನಮುಂ ಕರ್ಪಿಡಿದು ಕೃಷ್ಣಲೇಶ್ಯೆಯಡರ್ಪಿರ್ಪಂತಿರ್ಪುವು (ಶಾಂತಿಪು. ೭–೯೯); ಕರ್ಪಿಡಿದ ತೊಟ್ಟಂ ತಮೋಗುಣಾನ್ವಿತ ರುದ್ರನಂ (ಪದ್ಮರಾ. ೮–೩೨). **ಕಪ್ಪಿಡಿ** : ಅಚ್ಚ ಕಸ್ತೂರಿಯ ವಾರಿಯಿಂ ನೆನೆದು ಕಪ್ಪಿಡಿದಂಬರ ಮೊಪ್ಪಲ್ (ಉದ್ಭಟ. ೯–೧೧೪); ಬಿರುದಿನ ಬಾವುಲಿಯ ಕಪ್ಪಿಡಿದ ಕಾಯದ . . . ರಾಯರಕ್ಕಸನೈದಿದನು ಧನುವ (ತೊರರಾ. ೧–೧೫–೧೧); ಕಪ್ಪಿಡಿದ ಫಲಾಳಿಯಿಂ ಜಂಬುನೇಱಿಲೆಗಳೊಪ್ಪಿದುವು (ಕಂಸವಿ. ೨–೪೪). [ಕರ್ಪು$_1$ + ಇಡಿ$_2$]

**ಕರ್ಪಿಡು, ಕಪ್ಪಿಡು** (ಕ್ರಿ). ಕರಿದಾಗು ; ಕಪ್ಪಾಗು : ಕಡೆಗಣ್ಣ ಕಾಂತಿಯ ಕಡುವೆಳದಿಂಗಳೊಳಂ ಮುಡಿಯ ಕರ್ಪಿಟ್ಟಳುರ್ಕೆ[ಪಾಠಾಂ. ಕರ್ಪಿನಿತಳುಕೆ]ಗಟ್ಟಲೆಯೊಳಂ (ಅನಂಪು. ೨–೨೦ ವ); ಲಲಾಟವಿಲೋಚನ ಮಿಂದುಲೇಖೆ ಕರ್ಪಿಟ್ಟ ಗಳಂ ಲಸದ್ದಶಭುಜಂ ಫಣಿಕುಂಡಲಮೊಪ್ಪಿರಲ್ (ದಶಕು. ೯–೬). **ಕಪ್ಪಿಡು** : ಮೂವನೂ ಬಂದಿರುವುದನ್ನು ಕಂಡು ರಾಮಕೃಷ್ಣನ ಮುಖ ಕಪ್ಪಿಟ್ಟಿತು (ತ್ಯಾಗಮು. ೪೪). [ಕರ್ಪು$_1$ + ಇಡು$_1$]

**ಕರ್ಪು$_1$, ಕಪ್ಪು$_4$, ಕಱ್ಪು$_2$** (ನಾ). ೧. ಕರಿಯತನ ; ಕರಿಯ ಬಣ್ಣ : ಮುಗಿಲ್ಗಳ ಕರ್ಪು ಪೀನಮೋಗಡಿಸಿದುದು (ಪಂಪಭಾ. ೭–೬೯) ; ಅರಸಿಯರ ಕಣ್ಣನೀರ್ಗಳ ಬೆರಸಿದ ಕಾಡಿಗೆಯ ಕರ್ಪುವೋಲ್ (ಅಜಿಪು. ೧೦–೪೪) ; ನಂದನಂ ತಳೆದುದು ಕೂಡೆ ಕೆಂಪಿನ ಪಸುರ್ಪಿನ ಕರ್ಪಿನ ಬೆಳ್ಪಿನಂದಮಂ (ಗಿರಿಕ. ೭–೩೯) ; ಪಱಪು (ಪಱವು) = ನರೆಗಿಕ್ಕುವ ಕರ್ಪು (ಶಮುದ. ಪರಿ. ೧). **ಕಪ್ಪು$_4$** : ೧. ಜಡೆಗಳಂ ಕಪ್ಪೆಸೆವ ಪೊಸಕುಂತಳಂ ಮಾಡಿ ಉಡುಪತಿ ಸುರಾಪಗೆಗಳಂ ಮುಡಿದ ಪೂ ಮಾಡಿ (ಇಹರ. ೩೧) ; ಕೆಳಗೆ ಬೆಳೆಹೊಲ ಕಪ್ಪು . . . ಹೊಳೆಕೆರೆಯ ಮಡು ಕಪ್ಪು ತಾಯ ಕಾಲ್ ತೊಳೆವ ಉಪ್ಪುಕಡಲದು ಕಪ್ಪು (ಹೊಂಗಳು. ೧೫) ; ಉಟ್ಟ ಸೀರೆಯು ಕಪ್ಪು ತೊಟ್ಟ ರವಿಕೆಯು ಕಪ್ಪು ಜಡೆ ಕಪ್ಪು ರಿಬ್ಬನ್ನು ಕಪ್ಪು (ಇಂಚಾಪ. ೮೭–೨೩). ೨. ಕಾಡಿಗೆ ; ತಿಲಕ : ಸೆಟ್ಟರ ಮಗ ಮಿಂದು ಒಪ್ಪಾಗಿ ಕೂತಾನ ಕಪ್ಪು ತಂದಿಡರೆ ನೊಸಲಾಗ (ಲೋಕಗೀ. ೩೨) ; ಕಪ್ಪಿಲ್ಲ ಕಣ್ಣೊಳು ಕೆಂಪಿಲ್ಲ ತುಟಿಯೊಳು ಮಾನಿನಿ ಬಿಚ್ಚಿದೆ ಹೆರಳು (ಇಂಚಾಪ. ೮೭–೨೫). ೩. ಕತ್ತಲೆ : ಮೇವಿಗೆಯ್ದಿದ ಗೋವು ಪಿಂತಿರುಗದಿರೆ, ಪುಡುಕುತದನಿತ್ತಣ್ಗೆ ಕಪ್ಪಿನೊಳ್ ತಪ್ಪಿ ಬರೆ (ಶ್ರೀರಶಮಾ. ೬೦೪–೮೮). △ **ಕಱ್ಪು$_2$** : ೧. ಚಂದ್ರಕಾಂತ ಘಟಿದೊಳ್ ತಂದಟ್ಟಿಯಿಂ ಪುಷ್ಪವಾಸನೆಗೆಂದಿಕ್ಕಿದ ನೀಳ ನೀರರುಹಮಂ ಪೋಲ್ದತ್ತು ಕಱ್ಪಿಂದುವಾ (ಪಂಪಭಾ. ೪–೫೧) ; ಕಣ್ಮಲರ ಬೆಳ್ಪುಗಳಾಲಿಯ ಕಱ್ಪಿನೊಳ್ ಪೊದಱ್ದು (ಪಂಪಭಾ. ೪–೭೪). [< ಕರಿದು + –ಪು$_2$]

△ **ಕರ್ಪು$_2$** 'ಕಪ್ಪು$_3$' ನೋ.

**ಕರ್ಪುರ** 'ಕಪ್ಪುರ' ನೋ.

**ಕರ್ಪುರಕಚರಿ** (ನಾ). ಔಷಧಿಗಾಗಿ ಉಪಯೋಗಿಸುವ ಒಂದು ಸುವಾಸನೆಯ ಬೇರು, —ಗಡ್ಡೆ : ಕರ್ಪೂರಕಚರಿ, ಕರ್ಪುರ ಚಿನ್ನಿ (ಮುಂಬವ್ಯಾ. ೧೪೭). [← ಮರಾ. ಕರ್ಪೂರಕಚರಿ ; ಹಿಂ. ಕಪೂರ್ಕಚರಿ]

**ಕರ್ಪುರಚಿನ್ನಿ** (ನಾ). ಒಂದು ಔಷಧಿ ಸಸ್ಯ, —ದ್ರವ್ಯ : ಕರ್ಪುರಕಚರ, ಕರ್ಪುರಚಿನ್ನಿ, ಕಬಾಬಚಿನ್ನಿ, ಕಂಕೋಳಚಿನ್ನಿ (ಮುಂಬವ್ಯಾ. ೧೪೭). [← ಮರಾ. ಕಪೂರಚಿನ್ನೀ]

**ಕರ್ಪುರವಳ್ಳಿ** 'ಕಪ್ಪುರವಳ್ಳಿ' ನೋ.

**ಕರ್ಪುರವಾಳೆ** 'ಕಪ್ಪುರವಾಳೆ' ನೋ.

**ಕರ್ಪುರವೀಟಿಕೆ** (ನಾ). ಕರ್ಪುರಸಹಿತವಾದ ವೀಳ್ಯ, —ತಾಂಬೂಲ : ಕರ್ಪುರವೀಟಿಕೆಯ ನೀಡು ನಾಲಗೆಯ್ಯುಂದೆಂಬ ನೀಱೆಯ ಗಾಡಿಯಂತಿದೆ ನುಡಿ ನಿನ್ನ (ಕುರಾಸಾಂ. ೧–೬೫). [ಕರ್ಪುರ (< ಕಪ್ಪುರ) + ವೀಟಿಕೆ]

**ಕರ್ಪುರಶುಂಠಿ** 'ಕಪ್ಪುರಶುಂಠಿ' ನೋ.

**ಕರ್ಪುರಸುಂಟಿ** 'ಕಪ್ಪುರಶುಂಠಿ' ನೋ.

**ಕರ್ಪುವೀಱು** (ಕ್ರಿ). ಕಪ್ಪುಬಣ್ಣವನ್ನು ಹರಡು ; ಕತ್ತಲೆಯನ್ನು ಉಂಟುಮಾಡು : ಇಂದ್ರನೀಲಮಣಿಜಾಲಿಕೆಯ ಮೇಚಕಮರೀಚಿಯೆ ಘಟ್ಟಿಗೊಂಡಂತೆ ಕರ್ಪುವೀಱುವ ಬಾಳತಮಾಳತರುಗಳೋವರಿಗಳೊಳ್ (ಜಗವಿ. ೧೬–೩೪ ವ). [ಕರ್ಪು$_1$ + ಬೀಱು$_1$ (< ಬೀಱ್$_1$)]

**ಕರ್ಪುರವೆರಸು** (ಕ್ರಿ). ಕಪ್ಪುಬಣ್ಣದಿಂದ ಕೂಡಿರು: ವಟೋರ್ವೀ ಜಂಗಳೆೀಗಳುವೊಡಗೂಡಿ ಕರ್ಪುರವೆರಸಿರ್ಪುವು ಪೆರ್ವಲದಿಂದಂ (ಧರ್ಮಾಮೃ. ೩-೧೫೪). [ಕರ್ಪು$_1$ + ಬೆರಸು$_1$]

**ಕರ್ಪುವೇಱು** (ಕ್ರಿ). ಕಪ್ಪುಬಣ್ಣವನ್ನು ತಾಳು: ತೋರಮೊಲೆಗಳ ಮೊಗಂಗಳ್ ರಾರಾಜಿಸಿ ಕರ್ಪುವೆತ್ತು (ಪಂರಾಮಾ. ೩-೯೫); ಕೆಂದಳದೊಂದು ಕೆಂಪು ಕಿಸುಸಂಜೆಯನಂಜಿಸೆ ಕರ್ಪುವೆತ್ತ ಕೇಸಂ ದಳವಾದ ಕಟ್ಟಿಲೆಯನೇಳಿಸೆ (ಕಬ್ಬಿಕಾ. ೧೩೦). [ಕರ್ಪು$_1$ + ಏಱು$_1$]

**ಕರ್ಪೂರ** (ನಾ). ಕಪ್ಪುರ; ಕಪ್ಪುರದ ಮರ: "ಕೋಲಕಂ, ಕರ್ಕೋಟಕಂ, ಕೋಶಫಲಂ— ಈ ೩ ಕರ್ಪೂರಂ" (ನಾಚಿರಾ. ೧೨೪); ಕರ್ಪೂರಂ ಸತತಂ ತೈಲದೊಳೆ ಕೂಡೆ ವಿಷಮೆನಿಸುವವೋಲ್ (ಪಾರ್ಶ್ವಪು. ೫-೨೨); ನೆಲ್ಲಿ ನೇಜಿಲು ನಗರೆ ಕಡಸಿಗೆ ಕಲ್ಲರಳಿ ಕರ್ಪೂರ ಕದಳಿಗಳಿಲ್ಲಿ ನೋಡಿವೆ ಭೂಮಿಸುತೆ (ತೊರರಾ. ೩-೧-೨೯).

ಕರ್ಪೂರದ ಉಂಡೆ = ೧. ಉಂಡೆಕರ್ಪೂರ; ಗಡ್ಡೆ ಕರ್ಪೂರ: ದೇವರ ಆರತಿಗೆ ಕರ್ಪೂರದ ಉಂಡೆ ಉತ್ತಮ (ರೂಢಿ). ೨. ನುಸಿಗುಳಿಗೆ, —ಉಂಡೆ; ಡಾಂಬರ ಗುಳಿಗೆ: ಉಲ್ಲನ್ ಬಟ್ಟೆಗಳನ್ನು . . . ಹುಳುಗಳ ಕಾಟದಿಂದ ತಪ್ಪಿಸಲು ಅವುಗಳ ಮಧ್ಯೆ ಕರ್ಪೂರದ ಉಂಡೆಗಳನ್ನು (Napthalene Balls) ಹಾಕಿ ವೃತ್ತಪತ್ರಿಕೆಗಳಲ್ಲಿ ಸುತ್ತಿಟ್ಟರೆ ಅವು ಕೆಡುವುದಿಲ್ಲ (ಗೃಹವಿ. ೮೩). [ಸಂ.]

**ಕರ್ಪೂರಅರಿಸಿನ** (ನಾ). ಒಂದು ಬಗೆಯ ಸಸ್ಯ: ಮಾವಿನಶುಂಠಿ, ಕರ್ಪೂರಅರಿಸಿನ (ಮೈಔಗಿ. ೨೬-೪೯೬). [ಕರ್ಪೂರ + ಅರಿಸಿನ]

**ಕರ್ಪೂರತೈಲ** (ನಾ). ಕಪ್ಪುರದ ಎಣ್ಣೆ (ಪಾರಿಭಾ. ೧೧). [ಕರ್ಪೂರ + ತೈಲ]

**ಕರ್ಪೂರಬಾಳೆ** 'ಕರ್ಪೂರವಾಳೆ' ನೋ.

**ಕರ್ಪೂರಬೆಂಡೆ** (ನಾ). ಒಂದು ಬಗೆಯ ಗಿಡ: "ನೇತ್ರಚ್ಯೋನ – ಕರ್ಪೂರಬೆಂಡೆ" (ಒಷಧಿ. ೮೯). [ಕರ್ಪೂರ + ಬೆಂಡೆ]

**ಕರ್ಪೂರಮಣಿ** (ನಾ). ಒಂದು ಬಗೆಯ ಸಸ್ಯ (?): "ಕರ್ಪೂರಸಂಜ್ಞಕಃ —ಕರ್ಪೂರಮಣಿ" (ಒಷಧಿ. ೨೬). [ಕರ್ಪೂರ + ಮಣಿ]

**ಕರ್ಪೂರವರ್ಷ** (ನಾ). ೧. ಕರ್ಪೂರದ ಮಳೆ. ೨. ಒಂದು ಬಿರುದು: ಪತಿ ಮೆಚ್ಚೆ ಗಣ್ಡನಾಳ್ದನ ಚಕ್ರಂ ಕರ್ಪೂರವರ್ಷಂ ಚತುರಚತುರಾನನಂ ಗುಣಮೇರು . . . ಶ್ರೀಮತ್ ಪಡವಳ್ಳ ತೈಲಪಯ್ಯಂ (ಸೌಇಇ. XI–i, ೫೨-೩೫; ಸು. 1007). 'ಕಪ್ಪುರವರ್ಷ' ಪರಾ. [ಕರ್ಪೂರ + ವರ್ಷ]

**ಕರ್ಪೂರವಳ್ಳಿ** (ನಾ). ಕಪ್ಪುರದ ಬಳ್ಳಿ; ಕರ್ಪೂರದ ಪರಿಮಳವುಳ್ಳ ವೀಳೆಯದೆಲೆ: (೬). [ಕರ್ಪೂರ + ಬಳ್ಳಿ]

**ಕರ್ಪೂರವಾಳೆ**, ಕರ್ಪೂರಬಾಳೆ (ನಾ). ಒಂದು ಬಗೆಯ ಬಾಳೆ: "ಅಂಧಕಃ–ಕರ್ಪೂರಬಾಳೆ; ಕುರುಡನು" (ಒಷಧಿ. ೨). **ಕರ್ಪೂರಬಾಳೆ**: ಕರ್ಪೂರಬಾಳೆ . . . ಸುಖಾರ್ಹ ಸಾರ್ವರ್ತುಕಮಾದ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೧೧). [ಕರ್ಪೂರ + ಬಾಳೆ$_1$ (< ಬಾೞೆ)]

**ಕರ್ಪೂರವೀಳೆಯ** (ನಾ). ಕರ್ಪೂರವನ್ನು ಹಾಕಿ ಸಿದ್ಧಗೊಳಿಸಿದ ತಾಂಬೂಲ: ಜಾಯಾಪತಿಗಳು ಕರ್ಪೂರವೀಳೆಯವಿಟ್ಟು . . . ಒಪ್ಪದಿ ಶಯನಸ್ಥರಾಗೆ (ಅಬ್ಬಲೂ. ೨-೧೬). [ಕರ್ಪೂರ + ವೀಳೆಯ]

**ಕರ್ಪೂರಶಿಲಾಜಿತು**, ಕರ್ಪೂರಶಿಲಾಜಿತ್ತು (ನಾ). = ಕರ್ಪೂರಶಿಲಾಧಾತು (೬). **ಕರ್ಪೂರಶಿಲಾಜಿತ್ತು**: "ಶಿಲಾಧಾತುಃ – ಕರ್ಪೂರಶಿಲಾಜಿತ್ತು" (ಒಷಧಿ. ೧೬೫). [ಕರ್ಪೂರ + ಶಿಲಾಜಿತು]

**ಕರ್ಪೂರಶಿಲಾಜಿತ್ತು** 'ಕರ್ಪೂರಶಿಲಾಜಿತು' ನೋ.

**ಕರ್ಪೂರಶಿಲಾಧಾತು** (ನಾ). ಔಷಧಿಗೆ ಉಪಯೋಗಿಸುವ, ಸುಗಂಧಮಯವಾದ, ಹಳಕುಹಳಕಾಗಿರುವ ಒಂದು ಬಗೆಯ ದ್ರವ್ಯ (೬). [ಕರ್ಪೂರ + ಶಿಲಾಧಾತು]

**ಕರ್ಪೂರಶುಂಠಿ** (ನಾ). = ಕಪ್ಪುರಶುಂಠಿ: "ಷಡೀ – ಕರ್ಪೂರಶುಂಠಿ" (ಒಷಧಿ. ೧೬೩). [ಸಂ.]

**ಕರ್ಪೂರಾರತಿ** (ನಾ). ಕಪ್ಪುರವನ್ನು ಹಚ್ಚಿ ಮಾಡುವ ಆರತಿ: ಪಂಚಾರತಿ, ಗೋಪುರಾರತಿ, ಕರ್ಪೂರಾರತಿ ಮುಂತಾದ ಎಲ್ಲ ಆರತಿಗಳನ್ನೂ ಮಾಡಿಸಿ, ಪ್ರಸಾದ ಸ್ವೀಕರಿಸಿದ್ದಾಯಿತು (ಗಂಮಾಯಿ. ೧). [ಕರ್ಪೂರ + ಆರತಿ$_1$]

**ಕರ್ಪೇಱಿಸು** (ಕ್ರಿ). ಕಪ್ಪುಗೊಳಿಸು; ಕರಿಕುಗೊಳಿಸು: ದೆಸೆಯಂ ಕಾಯ್ಪೇಱಿಸುತ್ತುಂ ತೃಣಕುಲಲತೆಯಂ ಸೀದು ಕರ್ಪೇಱಿಸುತ್ತುಂ . . . ದವಶಿಖಿಯವೊಲೆಲ್ದತ್ತಮೋಘಂ ನಿದಾಘಂ (ಗಿರಿಕ. ೯-೧೬). [ಕರ್ಪು$_1$ + ಏಱಿಸು]

**ಕರ್ಪೇಱು**, ಕಪ್ಪೇಱು, ಕಟ್ಪೇಱು (ಕ್ರಿ). ಕಪ್ಪಾಗು; ಕಪ್ಪುಬಣ್ಣ ತಾಳು: ಕರ್ಪೇಱಿತ್ತು ದೇವದ್ವಿರದದ ಘಟೆಯಿಂದಂ ನಭೋಭಾಗದೊಂದೊಂದೆಡೆ (ಆದಿಪು. ೭-೫೬). **ಕಪ್ಪೇಱು**: ಕಮಳಮುಕುಳಂಗಳೊಳು ಭೃಂಗಂಗಳಿಪ್ಪಂತೆ ಅಮರ್ದು ಕಪ್ಪೇಱಿ ಕುಚಯುಗಳ ಚೂಚುಕ[ವ]ಂತೆ (ಬಸರ. ೧-೧೧೨); ತ್ರಿವಳಿಗಳ್ ಮುಸುಳಿದುವು ಬಾಸೆ ಕಪ್ಪೇಱಿದುದು (ಜಿಬಪು. ೪-೧೧). △ **ಕಟ್ಪೇಱು**: ಗಂಧೇಭ ಚರ್ಮಂಗಳಂ ಪಸರಂಗೆಯ್ದನೊ ಶಂಭುವೆಂಬ ಬಗೆಯಿಂ ತಳ್ಪೊಯ್ದು ಕಟ್ಪೇಱಿ ಸೂಚಿಸಲಾರ್ಗಂ ವಶಮಾಗದಂತು ಕವಿದತ್ತುದ್ದಾಮ ಭೀಮಂ ತಮಂ (ಪಂಪಭಾ. ೪-೯೯). [ಕರ್ಪು$_1$ + ಏಱು$_1$ (< ಏಱ್$_1$)]

**ಕರ್ಬ** (ನಾ). ಒಂದು ದೊಡ್ಡ ಸಂಖ್ಯೆ; ಒಂದು ಸಾವಿರ ಕೋಟಿ: ಅಗ್ನಿಯದನು ಬಳಸಿಕೊಂಡೈದು ನಿರ್ಬುದದೊಳಂ ವಾಯುವದ ಬಳಸಿಕೊಂಡೈದು ಕರ್ಬದೊಳಗಾಕಾಶವದ ಬಳಸಿಕೂಂಡು (ವೀಶೈಪು. ೪-೧೩-೮). [< ಸಂ. ಖರ್ವ]

**ಕರ್ಬಕ್ಕಿ**, ಕಬ್ಬಕ್ಕಿ, ಕರಿವಕ್ಕಿ (ನಾ). ೧. ಒಂದು ಜಾತಿಯ ಹಕ್ಕಿ; ಕಬ್ಬಾರೆ: ಅಂಚೆ ಕೊಂಚೆ ಗಿಡಗ ಕರ್ಬ[ಪಾಠಾಂ. ಬ್ಬ]ಕ್ಕಿ ಪಾರಾವತಂ ಪರಪುಟ್ಟಂ ಚರಣಾಯುಧಂ (ರಾಜಶೇ. ೫-೫೯); ಪುರುಳಿ ಗುಬ್ಬಿ ಕರ್ಬಕ್ಕಿ ಮೇಲಪ್ಪ ಪಕ್ಕಿಗಳ್ ಮೆಲ್ಲನಿಯಿಂ ಪಾಡುಗುಂ (ಅದ್ಭುತ. ೪೦-೧೯). **ಕಬ್ಬಕ್ಕಿ**: ೧. ತನ್ನ ಸಿಬ್ಬುದ್ಧಿಯ ಬಿಟ್ಟು ಕಬ್ಬಕ್ಕಿಯ ಹಿಂಡನೊಲ್ಲದೆ ಸಿಬ್ಬುದ್ಧಿಯಾಗಿ ಅಲ್ಲಿಯೇ ಹೋಯಿತ್ತು (ಮಧುವ. ೨೬-೯); ಅಬ್ಬರಿಸಿ ಕಬ್ಬಕ್ಕಿ ಗಗನವ ಹಬ್ಬಿದಂತಿರೆ ಮುಸಗಿದವು ಘಲುಗುಣನ ಶರಜಾಲ (ಕುವ್ಯಾವಿ. ೭-೩೬); ಒಡನೆ ಕಬ್ಬಕ್ಕಿವಿಂಡನು ಕಂಡೆಱಗುವ ಕಡುಗಲಿ ಸಾಳ್ವನಂದದಲಿ (ಕಂನವಿ. ೧೯-೭೦); ಕಬ್ಬಕ್ಕಿ ಕಾಟ ಬಲುಕಾಟ (ಹಳ್ಳಿಯ. ೧೩೯). **ಕರಿವಕ್ಕಿ**: ೨. ಕರಿಯ ಬಣ್ಣದ ಒಂದು ಹಕ್ಕಿ: ಭೇರುಂಡ ಬೆಳುವ ಸಾಳುವ ಹದ್ದು ಕರಿವಕ್ಕಿ ಹಾರಿ ನಲಿಹ ಸೋಗೆ ನವಿಲು (ನಿಜಸಾಂ. ೫೯-೧೦). [< ಕರಿದು + ಪಕ್ಕಿ$_1$]

**ಕರ್ಬಟ್ಟೆ** (ನಾ). ಕರಿಯ ಹಾದಿ; ಹೊಗೆಯ ದಾರಿ. 'ಕರ್ಬಟ್ಟೆಗ' ಪರಾ. [< ಕರಿದು + ಬಟ್ಟೆ$_1$]

**ಕರ್ಬಟ್ಟೆಗ** (ನಾ). ಕರಿಯ ಹಾದಿಯುಳ್ಳವನು; ಕೃಷ್ಣವರ್ತ್ಮ: "ಇಂಗಳ ಕರ್ಬಟ್ಟೆಗ ತಾಂ ಮರಗೂಱನಿರದೆ ಮೂಜಡಿಯೆಂಬಂ" (ಕವಿಕಂ. ೩೪) [ಕರ್ಬಟ್ಟೆ + -ಗ$_3$]

**ಕರ್ಬಡ** 'ಖರ್ವಡ' ನೋ.

**ಕರ್ಬಣ್ಣ** 'ಕರ್ವಣ್ಣ' ನೋ.

**ಕರ್ಬರಲ್** (ನಾ). ಕರಿಯ ಹರಳು ; ಇಂದ್ರನೀಲಮಣಿ : ಕರ್ಬರಲ ಬಣ್ಣಮನೇಳಿಸುವ ಕಚಾವಳಿಗಳಂ ಬಗಿಬಗಿದು ಪುಡಿಗತ್ತುರಿಯನೆಯ್ದೆ ತಳಿದೋರಣಂಗೊಳಿಸಿ ಕಮ್ಮಲರ್ಗಳಂ ಮುಡಿಸಿ (ಪದ್ಮರಾ. ೩-೪೪).
[< ಕರಿದು + ಪರಲ್]

**ಕರ್ಬಲಾ** (ನಾ). ಮೊಹರಂ ಆಚರಣೆಯಲ್ಲಿ ನಡೆಯುವ ಮೇಳ : ಮೋಹರಮ್ಮ, ಅಲಾವಿ, ಕರ್ಬಲಾ ಮೇಳಗಳಿಗೆ ಚಿಕ್ಕವರಿರುವಾಗಲೇ ಪದ ಬರೆದುಕೊಡುತ್ತಿದ್ದರು (ಶರೀಫ. ೫೮). [←ಅರ. ಕರಬಲಾ]

**ಕರ್ಬಲೆ** (ನಾ). ಕರಿಯ ಬಲೆ; ಕಪ್ಪುಬಣ್ಣದ ಬಲೆ : ಕಾಲವನೇಚರಂ ಜಗದ ಲೋಚನ ಮೀನಕೆ ಬೀಸಿದ ನೆಗಳ್ದ ಕ[ಪಾಠಾಂ. ಕಾ]ರ್ಬಲೆವೋಲ್ ತಮಮೊಪ್ಪುಗುಂ (ರಾಜಶೇ. ೧೧-೨೩). [< ಕರಿದು + ಬಲೆ$_{1}$]

**ಕರ್ಬಸಿರು** (ನಾ). ಕರಿಯ ಹೊಟ್ಟೆ ; ಕಪ್ಪಾಗಿರುವ ಗರ್ಭ : ಸೂರ್ಯನು ಅತ್ತ ಕಿಸುರುರದ ಕರ್ಬಸಿರ ಮರೆಯೊಳಿಹನತ್ತ ಹೊತ್ತ ವರ್ಷದ ಭಾರವೆಳೆಯುತಿರಲೆಮ್ಮತ್ತ ಮತ್ತಗಜ ನಿಕುರುಂಬದಂತೆ ಬರುತಿಹುದು (ವಿಸೀಗೀ. ೩೭-೧೦). [< ಕರಿದು + ಬಸಿರು (< ಬಸಿಱ್)]

**ಕರ್ಬಸು$_{1}$**, ಕಬ್ಬಸು (ನಾ). ೧. ಹಸುವಿನ ಒಂದು ಜಾತಿ ; ಕರಿಯ ಹಸು (?) : ಅಗ್ಗದ ನಿಡುಗೋಡು ಮೇಡುಮುಮರುತ್ತುಮಿೞುಂಕಿದ ಕೆಚ್ಚಲೆತ್ತಮೆತ್ತಿದ ಕುಡಿವಾಲಮುಂದೆಸೆಯೆ ಕರ್ಬಸುಗಳ್ ಪರಿಗೊಂಡು ವಾಜಿಯೊಳ್ (ಪಂಪಭಾ. ೮-೧೦೪). ೨. ಕಾಡುದನ : ಕಾಟು – ಕರ್ಬಾ[ರ್ಬ]ಸು ಎಂದರೆ ಘಟ್ಟದ ಮೇಲಿನ ಕೋಣ ಎತ್ತುಗಳು (ತುಳುನಾ. ೫೪). **ಕಬ್ಬಸು** : ೧. ಸಲೆ ಕಬ್ಬಸು . . . ಕೆಚ್ಚಲನಿೞುಂಕಿಕರಂ ಕುಡಿವಾಲಮೆತ್ತ ಪಾಲ್ ಮೊಲೆಗಳಿನೆಚ್ಚು ಗಲ್ಗಲನುಗಲ್ ಪರಿತಂದುವು (ನೇಮಿಪು. ೧೦-೧೫೩). [< ಕರಿದು ? + ಪಸು$_{3}$]

**ಕರ್ಬಸು$_{2}$**, ಕಪ್ಪಸು, ಕಬ್ಬಸ (ನಾ). ಯಕೃತ್ತು; ಈರಿ ; ಪಿತ್ತಕೋಶ : ಬಿಸುನೆತ್ತರ್ ತೊಗಲೆಲ್ವು ಕರ್ಬಸು ಕರುಳ ಹಿಂದೊಂಡೆ ಖಂಡಂ ಮಿದುಳ್ ಬಸೆ ಶುಕ್ಲಂ ಕ್ರಿಮಿ ಕೀವು (ಪುಷ್ಪಪು. ೧೩-೪೯). **ಕಪ್ಪಸು** : ಕಾಳ್ಪುರಾಣ ಒಂದೆಸೆ ತಾನೊಂದೆಸೆಯಾಗಿ ಕರುಳು ಕಪ್ಪಸು ಕುಪ್ಪಳಿಸಿ ಸತ್ತಿರ್ದ [ಪಾಠಾಂ. ಕರುಳು ಕುಪ್ಪಳಿಸುತ್ತಿರ್ದ] ನಿತ್ಯ ನರಕಿಯಂ ಕಂಡು (ಬೊಮ್ಮರ. ೧೧೧-೧೭). **ಕಬ್ಬಸ** : ನೆತ್ತರುಂ ನೆಣನುಂ ಕರುಳುಂ ಕಬ್ಬಸಮುಮೆಲ್ವುಮಡಗುಮೊಡಗಲಸಿ ಸುರಿದು ಮುಂದೆ ಕುಪ್ಪಿಸಿ ಕುಪ್ಪೆಯಾಗಿ (ಲೀಲಾವ. ೬-೧೭ ವ). [?]

**ಕರ್ಬಸುಗಲಿ** (ನಾ). ಕಾಡುಪಶುವಿನಂತೆ ಶೂರನಾದವನು (?) : ನೆರವಿಯನುರುಳೆವಾಯ್ದುಗುರ್ವಿಸಿ ಪರಿವ ಕರ್ಬಸುಗಲಿಗಳುಮಂ (ಲೀಲಾವ. ೫-೧೩೩ ವ). [ಕರ್ಬಸು$_{1}$ + ಕಲಿ$_{2}$]

**ಕರ್ಬಸುರಿ** 'ಕರ್ವಸುರಿ' ನೋ.

**ಕರ್ಬಳ್ಳಿ**, ಕಬ್ಬಳಿ, ಕಬ್ಬಳ್ಳಿ$_{1}$, ಕರಿಬಳ್ಳಿ (ನಾ). ಒಂದು ಬಗೆಯ ಕರಿಯ ಬಳ್ಳಿ : ಕಂಠೀರವೋತ್ಕರದೊಳ್ ಕೋಡಗ ಮಾಧವೀಲತೆಯೊಳಂ ಕರ್ಬಳಿ ಚೆಂಬೊಂಗಳೊಳ್ನೆರೆದಿರ್ಪಂತಿರೆ ಕಬ್ರ್ಬನಂ (ಧರ್ಮಾಮೃ. ೭-೨೨೧) ; ತುಟ್ಟತುದಿವರೆಗಂ ಸುರ್ಬುಗೊಂಡು ಪರ್ಬಿದ ಕರ್ಬಳ್ಳಿ[ಪಾಠಾಂ. ಳಿ]ಯ ಪೆರ್ಬಳ್ಳಿಯ ಬಳಿಯುನಡರ್ದು (ರಾಜಶೇ. ೫-೫೫ ವ). **ಕಬ್ಬಳಿ** : "ಛಗಭಕ್ಷವೆನಲ್ಕೆದೆ ಕಬ್ಬಳಿ [ಪಾಠಾಂ. ಳ್ಳಿ]" (ಮಂಗರಾ. ೪೪-೪೫) ; ಸುರ್ಚುರಿಕೆ ಕಬ್ಬಳಿ ಹಾವುಸವುಂತೆ ಸೋರೆ ತಳ್ತಡರ್ದುವು ಬಳ್ಳಿವಳ್ಳಿಬನದೊಳ್ ಸಲೆ ಕಟ್ಟಲೆಯಿರ್ಕೆಯೆಂಬಿನಂ (ಸೂಕ್ತಿಸು. ೩-೨೬) ; ಕಾಡಕಳ್ಳಿ ಕಬ್ಬಳಿ ನೊಸೆದಬ್ಬೆ ಹುಲ್ಲುಗಳ್ ಬೆಳೆದು (ಕಂನವಿ. ೧೮-೩೯). **ಕಬ್ಬಳ್ಳಿ$_{1}$** : "ಛಗಭಕ್ಷವೆನಲ್ಕೆದೆ ಕಬ್ಬಳ್ಳಿ [ಪಾಠಾಂ. ಳಿ]" (ಮಂಗರಾ. ೪೪-೪೫). **ಕರಿಬಳ್ಳಿ** : ಉಣಾಮಿಣಗಿಡ, ಕರೀಬಳ್ಳಿ (ವೈಔಗಿ. ೭೬-೧೫೭೭). [< ಕರಿದು + ಬಳ್ಳಿ]

**ಕರ್ಬಾಯ್**, ಕಬ್ಬಾಯ್ (ನಾ). ಕರಿಯ ಬಾಯಿ ; ಕಪ್ಪಾದ ಬಾಯಿ : ಕಾರೊಸಡುಂ ಕರ್ಬಾಯುಂ ಪೇರೊಡಲುಂ ತೊಳಪ ದಾಡೆಯುಂ . . . ನಿಶಾಟರರ್ವಿಸಿ ತೋರ್ಪರ್ (ಕಾವ್ಯಾವ. ೨೨೦). **ಕಬ್ಬಾಯ್** : ಕೊರಟುದಲೆಯ ಕೊಳೆನಾಱುವ ಕಬ್ಬಾಯ ಸುರುಟು ಕಿವಿಯ ಸುಂಠಿವೆರಲ ಕಿಱಿದು ಕಿನಿಕೆ ಹತ್ತಿದ ಹಲ್ಗಳುಡುಗಿದೊಂದುರದ ಕುನುಂಗಿದ ಬೆನ್ನ (ನೇಮಿಸಂ. ೭-೧೦೩).
ಕಬ್ಬಾಯುಗುಬ್ಬಿ = ಕರಿಯಕೊಕ್ಕುಳ್ಳ ಗುಬ್ಬಿ : ಕಾಗೆ ನವಿಲು ಕಬ್ಬಾಯಗುಬ್ಬಿಯು ಕೊಂಚೆ ಗೂಗೆ ಮರವ ಪಾರಿವಾಣ (ಹರಿಸಾಂ. ೧೫-೭೨). [< ಕರಿದು + ಬಾಯ್]

**ಕರ್ಬಾಳ**, ಕಬ್ಬಾಳ (ನಾ). ಕರಿಯ ಲಾವಂಚ ; ಕರಿಯ ಬಾಳದ ಬೇರು : ಪರಿಮಳಿತ ಸೌಂದರಂ ಬಂಧುರಗಂಧಂ ಮದನರಾಗವರ್ಧನ ಕರಮಿಾ ಮರುವಂ ಕರ್ಬಾಳಮುಮಿರೆ ಮರುಳಲ್ಲವೆ ಕುಸುಮನಿಚಯದೊಳ್ ಪಾಯ್ದಳಿಗಳ್ (ಆದಿಪು. ೧೧-೧೨೭) ; ಕರ್ಬಾಳಂ ಬಾಳಂದ ವಾಯ್ತುಂ ನೆರಪನೊಲವಿನಿಂಗಾಳ್ಮನೋಜಂ ಮನೋಜಂ (ಅನಂಪು. ೮-೨೮). **ಕಬ್ಬಾಳ** : ಅರಿಸಿನ ಅಲ್ಲ ಮೂಳಬೀಜಂಗಳು ಕಗ್ಗೊಲಿಜಲೆ ಕಬ್ಬಾಳಂ ಅಗ್ರಬೀಜಂಗಳು (ಪಸಾರ. ೫೧೨-೧೦) ; ರಸಗಂಧ ಕಬ್ಬಾಳದೊಳಿರೆ ಪರಿಮಳವನು ಬಿಟ್ಟು (ಗೋಮಟೇ. ೯-೧೧೬). 'ಕರಿಯಬಾಳ' ಪರಾ.
[< ಕರಿದು + ಬಾಳ$_{1}$ (< ಬಾಱ)]

**ಕರ್ಬಾಳೆ** (ನಾ). ಕರಿಯ ಬಾಳೆಮೀನು (?) : ಕಣ್ಣಂಬು ಬಿರ್ದ ಕರ್ಬಾಳೆ [ಪಾಠಾಂ. ಕರ್ಬಾ]ಯಂತೆ ಕಾಗೆ ಹಱಿದ ಹಱುಗಲಂತೆ (ಲೀಲಾವ. ೨-೧೧೭). [< ಕರಿದು + ಬಾಳೆ$_{2}$]

**ಕರ್ಬಿತ್ತರ** (ನಾ). ಕಪ್ಪನೆಯ ಆವರಣ ; ಕರಿಯ ಹರಹು ; ಕತ್ತಲೆಯ ವಿಸ್ತಾರ : ಪಜ್ಜಳಿಸುತರಿಲೊಂದು ಬಾನ್ ಪಟದೊಳುರಿದುರಿದು ಕರ್ಬಿತ್ತರಕೆ ಬೆಂಕೆಗೆರೆಯ ಚಿತ್ತಾರಮಂ ಮೆತ್ತಿ ಬರೆದು (ಶ್ರೀರಾಮಾ. ೧೦೩-೮೫). [< ಕರಿದು + ಬಿತ್ತರ]

**ಕರ್ಬುರ** 'ಕರ್ವುರ$_{1}$' ನೋ.

**ಕರ್ಬುರಗರ್ದೆ** (ನಾ). ಕಬ್ಬು ಬೆಳೆವ ಭೂಮಿ ; ಕಬ್ಬಿನಗದ್ದೆ : ತೋಟ ಕಾಡಾರಂಬ ಕರ್ಬುರಗರ್ದೆಗಳೆಡೆಯಾಟದ ವ್ಯವಹಾರಿ ಜನರು (ಮೋಹತ. ೩-೩೦).
[ಕರ್ಬುರ (< ಕರ್ವುರ$_{1}$) + ಗರ್ದೆ (< ಗಱ್ದೆ)]

**ಕರ್ಬುರಗುಳ್**, ಕಬ್ಬುಗುಳ್ (ನಾ). ಒಂದು ಬಗೆಯ ಗುಳ್ಳೆ : ಶ್ರೀಗಂಧಂ ರುದಂತಿ ಜಟಾಮಾಂಸಿ . . . ಇವೆಲ್ಲಮನುದಕದಲ್ಲರೆದು ಪೂಸಲ್ ಕಂಚುಕೆ ಕರ್ಬುರಗುೞ್[ಳ್] ಕುಱು ವಿಸರ್ಪಂ ಉರಿಜ್ವರಂ ಗಾಯದ ಪುಣ್ಗಳ್ ಇವೆಲ್ಲಂ ಮಾಣ್ಬುವು (ಲೋಕೋಪ. ೯-೧೬೩ ಟೀಕೆ). **ಕಬ್ಬುಗುಳ್** : ಸಂಹರಿಕುಂ ಕಂಚುಕೆ ಕಬ್ಬುಗುಳ್ ತುಱು . . . ಎನಿಪೀ ದೋಷಂಗಳಂ ನಿಶ್ಚಯಂ (ಲೋಕೋಪ. ೯-೧೬೩).
[< ಕರಿದು + ಪುಗುಳ್$_{1}$]

**ಕರ್ಬುರಜ** 'ಕರಬೂಜ' ನೋ.

**ಕರ್ಬುರದ** (ನಾ). = ಕರ್ಬ : ಕರ್ಬುರದ ವಿಶ್ವಗಳವಶಂ ಬಿದ್ದಿವೆ ; ಅರ್ಬುರದ ತಾರೆಗಳಕ್ಷರ ತಿದ್ದಿವೆ (ಕೋಗಿಲೆ. ೫೮-೬೫). [?]

**ಕರ್ಬುರದೋಂಟೆ** 'ಕರ್ವುರದೋಂಟೆ' ನೋ.

**ಕರ್ಬುರನ** 'ಕರ್ವೊರನ್' ನೋ.

**ಕರ್ಬುರ$_{1}$** (ನಾ). ೧. ಬೂದುಬಣ್ಣ : ಶ್ವೇತ ಪೀತ ಹರಿತ . . . ಕರ್ಬುರ ಅಳಗ ಬೊಟ್ಟಳಗ ಇಂತೀ ದಶವರ್ಣ (ತುಜುಗಾ. ೫-೧೨) ; ಹರಿಯ ಕಾಳಿಮೆಯ ವಿಷದ ಕರ್ಬುರವ ನೀಲದ ನೀಲವ ಎಳೆದು ಕೊಂಡೊಡಗೂಡಿ ತುಳಿದು ಹಿಳಿದಬುಜಜಂ (ಸಿದ್ಧರಾ. ೭-೩೭).

೨. ಹಲವಾರು ಬಣ್ಣ ಬೆರೆತಿರುವುದು; ಮಿಶ್ರವರ್ಣ: "ಚಿತ್ರಃ, ಕಿರ್ಮ್ಮೀರಃ, ಶಬಳಃ, ಕಲ್ಮಾಷಃ, ಉನ್ಮಿಶ್ರಃ, ಕ(ರ್ಬು)ರ್ವುರಃ ... ಖಚಿತಂ – ಈ ೧೧ ಬೆರೆಪಿಡ್ದುದು" (ಹಲಾಯು. ೧೨೨–೫೪). ೩. ಕಪ್ಪು ಬಣ್ಣ: ಇರ್ದುದಿಂದ್ವಂಕ ಕರ್ಬುರಕಾಯಂ ಶಬರೀಚಯಂ ನೆರೆದು ಪಾನಕ್ರೀಡೆಯೊಳ್ ನಾಡೆಯುಂ (ಚಂದ್ರಪ್ರ. ೫–೫೭). ೪. ಚಿನ್ನ; ಹೊನ್ನು: "ಹೇಮ ... ಕರ್ಬುರಂ, ತಪನೀಯಂ – ಈ ೨೫ ಹೊನ್ (ಪೊನ್)" (ಹಲಾಯು. ೨೮–೨೧); ಪೊಳೆವ ಮುತ್ತಿನ ಲಂಬಣದಿಂ ವಿಚಿತ್ರಕರ್ಬುರ ಮಣಿತೋರಣಾವಳಿಗಳಿಂ ... ಒಪ್ಪುಗುಂ ವಿಮಳ ಪಟ್ಟಣಂ (ನಳಚಂ. ೧೪). ೫. ರಾಕ್ಷಸ; ದೈತ್ಯ: ಕರುಣಮಕ್ಕುಮೆ ಕರ್ಬುರರೊಳ್ (ವಿಷ್ಣುಪು. ೧೪–೭೯); ಭುವನಾವಳಿಯು ಗಬ್ಬರಿಸುತಿದೆ ಕರ್ಬುರರ ರಣರಭಸ (ವೆಂಕಟಾ. ೩–೧೧–೩೯). [ಸಂ.]

**ಕರ್ಬುರ೯₂** (ನಾ). ಒಂದು ಊರಿನ ಹೆಸರು: ಕುನ್ದಗೆ ಸೇವೆಯ ಕಳಿಯಮ್ಮ ಬೆಳ್ಮಣಿಯ ಪದುಮಣ್ಣನ್ ಕರ್ಬುರ ಸೋಮ (ಎಕ. VIII, ಸೊರಬ. ೧೧–೧೨ ; 800). [?]

**ಕರ್ಬುರತ್ವ** (ನಾ). ೧. ಬಣ್ಣ ಬಣ್ಣವಾಗಿರುವಿಕೆ; ಮಿಶ್ರವರ್ಣವಾಗಿರುವಿಕೆ (ಪಾರಿಭಾ. ೧೫). ೨. ಲೋಹದ ಮೂಲಧಾತುವಾದ ಕ್ರೋಮಿಯಂ (ಪಾರಿಭಾ. ೧೫). [ಸಂ.]

**ಕರ್ಬುರಿತ** (ಗು). ೧. ನಾನಾ ವರ್ಣವಾಗಿರುವ; ಮಿಶ್ರವರ್ಣವಾದ: ಪರಪಿದ ಕುಟಳಾಳಕದೊಳ್ ತಗುಳ್ದ ಶೀತೋದಕಮನೆ ಕರ್ಬುರಿತಮಾಗಿ ಸೊಗಯಿಸಿ ತೋರ್ಕುಂ (ಶಾಂತಿಪು. ೧೦–೫೩). ೨. ಕಪ್ಪಾದ; ಕರಿಯದಾದ: ನವೀನ ಪ್ರಸೂನ ಮಧುವಿಲೀನ ಮಧುಕರ ಪಟಲ ಕರ್ಬುರಿತ ರತ್ನಪಟಲಿಕೆಗಳಿಂ (ಪಂಪರಾಮಾ. ೧೨–೨ ವ); ಮಯೂಖಾಳಿಯಿಂದೆತ್ತಲುಂ ಪಾಂಡುರಿತಂ ಪೈಶಂಗಿತಂ ಕರ್ಬುರಿತ ಮರುಣಿತಂ ವ್ಯೋಮರಂಗಂ (ಚಂದ್ರಪ್ರ. ೧೨–೭೭). [ಸಂ.]

**ಕರ್ಬುರಿಸು** (ಕ್ರಿ). ಕಪ್ಪಾಗುವಂತೆ ಮಾಡು; ಕಪ್ಪಿಡಿಸು: ಅಡವಿಯಂ ನೋಡುತುಂ ಮರ್ಬು ಕರ್ಬು[ಪಾಠಾಂ. ರ್ಬ]ರಿಸಿ ಕವಿದೆಡೆಗಳಂ ನೋಡುತುಂ (ಒಹಿರ. ಹ. ೧೫೪–೨೪); ಕರಿಯ ದೇಹಂಗಳಿಂ ಸುತ್ತಿದ ಬೇವಿನ ದಂಡೆಗಳಿಂ ಫಿಡಿದ ಬಿಲ್ಲುಗಳಿಂದುಟ್ಟ ತೊವಲುಡೆಗಳಿಂ ... ಕರ್ಬುರಿಸಿ [ಪಾಠಾಂ. ಕಾರ್ಬುರಿಸಿದ, ಕಬ್ಬರಿಸಿ, ಕಬ್ಬುರಿಸಿರ] ಕಾಡೊಳ್ ಕೂಡೆ ಕರಿಯ ಬೆಳಗು ಕವಲ್ತು ಪರ್ವಿ ಪಲ್ಲವಿಸಿದ ಮಹಾಂಧಕಾರದೊಳ್ (ನಂಬಿರ. ೧೮–೩೨). [ಕರ್ಬುರ೯₁ + -ಇಸು₃]

**ಕರ್ಬುಲಿ, ಕಬ್ಬುಲಿ** (ನಾ). ಕರಿಯಬಣ್ಣದ ಹುಲಿ: ಬೇಡವಡೆ ... ನಡೆವ ನಂಜಿನ ಬಿಂಜದಂತೆಯುಂ ಕರ್ಬುಲಿಯ ಪಿಂಡಿನಂತೆಯುಂ ... ಅಗುರ್ವುಮದ್ಭುತಮುಮಾದುದು (ಪಂಪರಾಮಾ. ೪–೫೪ ವ). **ಕಬ್ಬುಲಿ**: ಮಬ್ಬೊಳುರಿ ಕಣ್ಣಿಂದ ಕಬ್ಬುಲಿಯನರಿವಂತೆ ತಮ್ಮಾರ್ಯತನವಿಂತಸೂಯೆಯಿಂ ಬಯಲಾಯ್ತು (ಹಬ್ಬರ. ೩೪–೧೫೭). [< ಕರಿದು + ಪುಲಿ]

**ಕರ್ಬುವಿಲ್** 'ಕರ್ವುವಿಲ್' ನೋ.

**ಕರ್ಬುವಿಲ್ಲ** 'ಕರ್ವುವಿಲ್ಲ' ನೋ.

**ಕರ್ಬೂಜ** 'ಕರಬೂಜ' ನೋ.

**ಕರ್ಬೂರ** (ನಾ). ೧. ಚಿನ್ನ; ಹೊನ್ನು. ೨. ಒಂದು ಬಗೆಯ ಗಿಡ; ಗಂಧಪತ್ರ. ೩. ಹಳದಿ ಬಣ್ಣದ ಒಂದು ಲೇಪನ ದ್ರವ್ಯ; ಅರಿದಳ. [ಸಂ.]

**ಕರ್ಬೆಳ್ಳೆ** (ನಾ). ಒಂದು ತೊರೆಯ ಹೆಸರು (?): ಮೂಡಣ ಬಟ್ಟೆಯಿಂ ಮೂಡ ಕರ್ಬ್ಬೆಳ್ಳೆಂವರಂ ಪಡುವ ಬೆಟ್ಟಂಬರಂ ತೆಂಕ ನಿಡಿಯ ಕಲುವರಂ ಬಿಟ್ಟ ಭೂಮಿ (ಸೌಇಇ. IX–i, ೧೩೩–೨೨ ; 1068). [< ಕರಿದು + ಪಳ್ಳ ?]

**ಕರ್ಬೇಡ** 'ಕರ್ವೇಡ' ನೋ.

**ಕರ್ಬೊಂಗಲ್**, ಕಬ್ಬುನಗಲ್, ಕರ್ಬೊನ್ನಗಲ್ (ನಾ). (ಕಬ್ಬಿಣವನ್ನು ತನ್ನ ಕಡೆಗೆ ಆಕರ್ಷಿಸುವ) ಸೂಜಿಗಲ್ಲು; ಆಯಸ್ಕಾಂತ: "ಕರ್ಬೊಂಗಲ್ ಸಲೆ ಸೂಚಿಕಲ್ಲು" (ಕವಿಕಂ. ೫೧); **ಕಬ್ಬುನಗಲ್**: "ಕಬ್ಬುನಗಲ್ಲಿಂದು [ಪಾಠಾಂ. ಕರ್ಬೊನ್ನಗಲ್ಲಿಂದು] ಸೂಜಿಕಲ್" (ಕಶಸಾ. ೪–೫೭). **ಕರ್ಬೊನ್ನಗಲ್**: "ಕರ್ಬೊನ್ನಗಲ್ಲಿಂದು ಸೂಜಿಗಲ್" (ಚತುರಾ. ೧೧೦). [ಕರ್ಬೊನ್ (< ಕರ್ವೊನ್) + ಕಲ್₃]

**ಕರ್ಬೊಂಜಲಾಕೆ** (ನಾ). ಕಬ್ಬಿಣದ ಸರಳು, —ಸಲಾಕೆ: ಪತಿಯ ನಿಧನ ವಾರ್ತೆಯಂ ಕೇಳಲೊಡಂ ಕರ್ಬೊಂಜಲಾಕೆಯೆರಡುಂ ಕೊಡಂಕೆಗಳನಿರಿದಂತೆ (ಮರಾಚ. ೧೭೫–೨೭).
[ಕರ್ಬೊನ್ (< ಕರ್ವೊನ್) + ಸಲಾಕೆ (< ಸಲಗ್ಗೆ)]

**ಕರ್ಬೊಗರ್** (ನಾ). ಕಪ್ಪುಬಣ್ಣದ ಹೊಳಪು; ಕರಿಯ ಕಾಂತಿ: ಕಕ್ಷಪುಟಂ ಕರ್ಬೊಗರನುಗುಳೆ ವಕ್ಷಃಶ್ರೀ ನೆಲೆನೋಲೆಗೆ ತಿಲಕವಿಕ್ಕೆ (ಬಸರ. ೧೦–೯೯); ವಿಟ ಜನಮನಕ್ಕೆ ಮನಸಿಜನ ಕೂರಸಿಯ ಕರ್ಬೊಗರುರ್ಬಿದೆಂಬ ಶಂಕೆಯನುಂಟುಮಾಡಿಯುಂ (ಕುಸುಮಾ. ೪–೨೯ ವ); ಕುಸುಮಶರನ ಕೂರಸಿಯ ಕರ್ಬೊಗರ ಪುರ್ವಿದೆಂಬ ಸಂದೆಗಮನೊಂದಿಸಿ (ಶಾಂತೀಶ್ವ. ೧೪–೧೮ ವ). [< ಕರಿದು + ಪೊಗರ್]

**ಕರ್ಬೊಗೆ** 'ಕರ್ವೊಗೆ' ನೋ.

**ಕರ್ಬೊನ್** 'ಕರ್ವೊನ್' ನೋ.

**ಕರ್ಬೊನ್ನಗಲ್** 'ಕರ್ಬೊಂಗಲ್' ನೋ.

**ಕರ್ಬೊನ್ನು** 'ಕರ್ವೊನ್' ನೋ.

**ಕರ್ಮ** (ನಾ). ೧. ಕೆಲಸ; ಕಸುಬು; ಉದ್ಯೋಗ: ಸರ್ವಜ್ಞರೀರ್ವರಾಗಲ್ಕೆ ತನಗಾಗಿ ಕರ್ಮವೆಸಗಿಹನೆ (ಸರ್ವಜ್ಞ. ೨೩); ದುಡಿಸುವುದೊಂದೇ ನಮ್ಮಯ ಕರ್ಮ (ಕಪಪು. ೩–೩೯). ೨. ದೇವರ ಅರ್ಚನೆ, ಯಜ್ಞ, ಯಾಗ ಮೊದಲಾದ ಆಚರಣೆಗಳು: "ಯಜನಾದಿಗಳ್ ಕರ್ಮಮುಕ್ಕು" (ಮಂಗರಾ. ೭೭–೧೨). ೩. ಸುಖದುಃಖಗಳಿಗೆ ಕಾರಣವಾದ ಪೂರ್ವಜನ್ಮದ ಕೃತ್ಯ: ಇಡೊಂದವಸ್ಥೆ ನಿಮಗೆನ್ನಯ ಕರ್ಮದಿನಾದುದು (ಪಂಪಭಾ. ೧೧–೪೯); ಕಾಲಕರ್ಮಗುಣಸ್ವಭಾವಗಳಾಲಯನು ತಾನಾಗಿ ಲಕುಮಿಯಾಲೋಲಿತತ್ತದ್ರೂಪವಾಮದಿ ಕರಸುತೊಳಗಿದ್ದು (ಹಸಾರ. ೭–೨೦); ಕರ್ಮವೆಂದರೆ ಸುಖದುಃಖಗಳಿಗೆ ಕಾರಣವಾದ ಪುಣ್ಯಪಾಪಗಳು (ಹಿಂದಸಾ. ೯೭). ೪. [ದ್ವೈತ] ಮೂಲವಾದ ಹತ್ತು ಪದಾರ್ಥಗಳಲ್ಲಿ ಒಂದು: ದ್ರವ್ಯ, ಗುಣ, ಕರ್ಮ ... ಅಭಾವ ಎಂದು ಪದಾರ್ಥಗಳು ಹತ್ತು (ಹಿಂದಸಾ. ೨೭೫). ೫. [ವ್ಯಾಕ] ದ್ವಿತೀಯಾ ವಿಭಕ್ತಿಯ ಅರ್ಥ: ಆವುದು ಮಾಡಲ್ಪೇಡಿದುದದು ಕರ್ಮಂ; ಅದಱೊಳ್ ದ್ವಿತೀಯಾವಿಭಕ್ತಿ ವರ್ತಿಸುಗುಂ (ಶಮದ. ೧೨೭ಪ್ರಯೋ); ಕರ್ಮವೆಂದರೆ ಕ್ರಿಯೆಗೆ ವಿಷಯವಾದದ್ದು (ಕೈಪಿಡಿ. ೫೪). ೬. [ಜ್ಯೋತಿ] ಕುಂಡಲಿಯಲ್ಲಿ ಲಗ್ನದಿಂದ ಹತ್ತನೆಯ ಸ್ಥಾನ: ಕರ್ಮ ದ್ವಿಚತುರ್ಥಮಂದಿರದೊಳಿಂದುಪ್ರೋದ್ಭವಂ ಶೋಭನಂ (ಜಾತತಿ. ೧೦–೯). ೭. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ: "ಖರ ರಸ ರಿತು ಕರ್ಮಾಂಗಂ ... ಷಟ್ಸ್ರಕೃಯಂಗಳಾಱಱ ನಾಮಂ" (ವ್ಯವಹಾ. ೯–೭). [< ಸಂ. ಕರ್ಮನ್]

**ಕರ್ಮಂದಿ** (ನಾ). ಯತಿ; ಸಂನ್ಯಾಸಿ: "ಭಿಕ್ಷುಃ, ಪರಿವ್ರಾಟ್, ಕರ್ಮಂದೀ, ಪಾರಾಶರೀ, ಮಸ್ಕರೀ – ೫ ಸಂನ್ಯಾಸಿಯ ಹೆಸರುಗಳು" (ಸಿದ್ಧಾಂತಿ. ೧೯೭). [< ಸಂ. ಕರ್ಮಂದಿನ್]

**ಕರ್ಮಕರ** (ನಾ). ಕೆಲಸಗಾರ; ಸೇವಕ: ದಿವಿ(ಜ)ಕರ್ಮಕರರ್ [ಕರ್ಮಕರರ್] ಬಟ್ಟೆಯಂ ಸಮಱಿ ಬಂದು (ಶಾಂತಿಪು. ೧೦–೨೪ ವ). [ಸಂ.]

**ಕರ್ಮಕರಿ** (ನಾ). ಕೆಲಸದವಳು; ಸೇವಕಿ (ಕ). [ಸಂ. ಕರ್ಮಕರೀ]

**ಕರ್ಮಕಾಂಡ** (ನಾ). ೧. ಯಜ್ಞ ಯಾಗಾದಿಗಳ ಅನುಷ್ಠಾನಕ್ಕೆ ಸಂಬಂಧಿಸಿದ ವೇದಭಾಗ: ಕರ್ಮಕಾಂಡ ಯೋಗಂಗಳೆಲ್ಲವೂ ಭವದ ತೆಕ್ಕೆಗೆ ಒಳಗು (ಅವಚಂ. ೨೬೫–೧೨೧೩); ವೇದ ಕರ್ಮಕಾಂಡ, ಜ್ಞಾನಕಾಂಡವೆಂದು ಎರಡು ಭಾಗವುಳ್ಳದ್ದು. ಪೂರ್ವಭಾಗ ಕರ್ಮಕಾಂಡ (ಹಿಂದಸಾ. ೧೮೬). ೨. [ಜೈನ] ಅಜೀವಕ್ಕೆ ಸಂಬಂಧಪಟ್ಟ ಸಿದ್ಧಾಂತ ಭಾಗ: ಗೊಮ್ಮಟಸಾರದಲ್ಲಿ ಕರ್ಮಕಾಂಡ, ಜೀವಕಾಂಡಗಳೆಂಬ ಎರಡು ಭಾಗಗಳಿವೆ (ರೂಢಿ). ೩. (ಅಲಂ) ದುಷ್ಕರ್ಮ ಅಥವಾ ದುರಾಚಾರದ ಪ್ರಕರಣ, —ಅಧ್ಯಾಯ: ವಿಧಾನಸಭೆಯಲ್ಲಿ ಶರಾವತಿ ಕರ್ಮಕಾಂಡವನ್ನು ಕುರಿತು ಬಿಸಿಬಿಸಿ ಚರ್ಚೆ (ರೂಢಿ).
[ಕರ್ಮ + ಕಾಂಡ]

**ಕರ್ಮಕಾಂಡಿ** (ನಾ). ಕರ್ಮಕಾಂಡವನ್ನು ಅನುಸರಿಸುವವನು: ಕಟ್ಟಾಚಾರದಲ್ಲಿದ್ದು ನಾನು ಅನುಸರಿಸಿಕೊಂಡು ನಡೆವನ್ನಕ್ಕ ಕರ್ಮಕಾಂಡಿಯಲ್ಲ (ಬಸವ. ೮೮೮); ಕಾಯದೊಳಗುಂಟೆಂದರೆ ಕರ್ಮಕಾಂಡಿಯಲ್ಲ ಜೀವದೊಳಗುಂಟೆಂದರೆ ನಾನಾ ಯೋನಿಯವನಲ್ಲ (ಮೋಳಿಮಾ. ೩–೮); ನಾನು ನನ್ನದೆಂಬಹಂಕಾರಿಮಮಕಾರಗಳುಳ್ಳಾತನೇ ಕರ್ಮಕಾಂಡಿಯೆನಿಸುವವನು (ವಿವೇಕ. ೧೬). [< ಸಂ. ಕರ್ಮಕಾಂಡಿನ್]

**ಕರ್ಮಕಾರ** (ನಾ). ೧. ಕೆಲಸಗಾರ; ಸೇವಕ; ಕೂಲಿಯಾಳು. ೨. ಕುಶಲತೆಯ ಕೆಲಸ ಮಾಡುವವನು. ೩. ಕಮ್ಮಾರ ೪. ಯಂತ್ರದ ಕೆಲಸಮಾಡುವವನು. [ಸಂ.]

**ಕರ್ಮಕೌಶಲ** (ನಾ). ಕೆಲಸಮಾಡುವುದರಲ್ಲಿ ನೈಪುಣ್ಯ: ಸತ್ಯಾನ್ವೇಷಣ, ಅನ್ವೇಷಣದ ಸಾಹಸ, ಸೌಂದರ್ಯಾನುಭವ, ಕರ್ಮಕೌಶಲ ಮತ್ತು ಅಂತಃಶಾಂತಿ ಇವು ಐದೂ ಉತ್ತಮ ಸಂಸ್ಕೃತಿಯ ಲಕ್ಷಣಗಳು (ಖುರ್ಸ್ಸಾರ. ೯೯). [ಕರ್ಮ + ಕೌಶಲ]

**ಕರ್ಮಕ್ಷಪಣ** (ನಾ). [ಜೈನ] ಒಂದು ವ್ರತ: ಸಕಲ ಶ್ರಾವಕವ್ರತಂಗಳಂ ಕೈಕೊಂಡು ನೂಱುನಾಲ್ವತ್ತು ದಿವಸಂ ನೆಱೆವ ಕರ್ಮಕ್ಷಪಣಮೆಂಬ ನೋಂಪಿಯಂ ನೋಂತು (ಚಾವುಂಪು. ೧೯–೮). [ಕರ್ಮ + ಕ್ಷಪಣ]

**ಕರ್ಮಕ್ಷಮ** (ನಾ). ಕೆಲಸಮಾಡುವ ಸಾಮರ್ಥ್ಯವುಳ್ಳವನು: "ಕರ್ಮಕ್ಷಮಃ, ಅಲಂಕರ್ಮೀಣಃ – ೨ ಅನಾಯಾಸವಾಗಿ ಕಾರ್ಯ ಮಾಡುವವನ ಹೆಸರು; ಕಾರ್ಯಸಮರ್ಥನು" (ಸಿದ್ಧಾಂತಿ. ೨೮೧).
[ಕರ್ಮ + ಕ್ಷಮ$_2$]

**ಕರ್ಮಕ್ಷಯ** (ನಾ). ೧. ಪಾಪಪುಣ್ಯರೂಪವಾದ ಕರ್ಮಬಂಧವು ಕ್ಷಯಿಸುವುದು, —ನಾಶವಾಗುವುದು. ೨. [ಜೈನ] ಇರುವ ಕರ್ಮವನ್ನು ನಾಶಮಾಡುವುದು ಮತ್ತು ಬರುವ ಕರ್ಮವನ್ನು ತಡೆಗಟ್ಟುವುದು: ಪ್ರಾಯೋಪಗಮನದಿಂ ಸಂನ್ಯಸನಂ ಗೆಯ್ದು ಕರ್ಮಕ್ಷಯಂಗೆಯ್ದು ಮೋಕ್ಷಕ್ಕೆ ಪೋದ (ವಡ್ಡಾರಾ. ೧–೧೦); ಉತ್ತಮ ದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾಭಮ ಮೋಘಂ ದೊರೆಕೊಳ್ವುದಕ್ಕೆಮಗೆ (ಆದಿಪು. ೧೦–೫೯); ಕರ್ಮಕ್ಷಯಕ್ಕೆ ಪಲವು ಕಾರಣಮೊಳವಾಗಿಯುಂ ಮುಖ್ಯಕಾರಣಂ ಸಮ್ಯಕ್ತ್ವಂ (ಚಾವುಂಪು. ೩–೬೦ ವ). [ಕರ್ಮ + ಕ್ಷಯ]

**ಕರ್ಮಗತಿ** (ನಾ). ಕರ್ಮದ ಫಲ, —ಪರಿಣಾಮ: ಎನ್ನ ಕರ್ಮಗತಿಯಿಂ ಬಿನ್ನಪಂಗೆಯ್ಯಲ್ವೇೞ್ಕುಂ (ಶಾಂತಿಪು. ೩–೬೦ ವ).
[ಕರ್ಮ + ಗತಿ]

**ಕರ್ಮಗಾಲೂರ್** (ನಾ). ಒಂದು ಊರಿನ ಹೆಸರು: ಹವಿರಕ್ಷತ ಗನ್ಧಪುಷ್ಪಾದಿಗಳ್ಗೆ ಕರ್ಮ್ಮಗಾಲೂರಾ ಪಡುವಣ . . . ಎಣ್ಬು ಮತ್ತಲ್ಗಟ್ಟಿ (ಕಇ. I, ೩–೧೮; 750). [?]

**ಕರ್ಮಚಾಂಡಾಲ** (ನಾ). ಹೀನಕಾರ್ಯಮಾಡುವವನು; ಭ್ರಷ್ಟ: ಹರಿಭಕುತಿಲೋಲುಪನೆನಿಸಿ ಶಂಕರನ ಬದ್ಧದ್ವೇಷಿಯಹ ಶಂಕರನ ಭಕ್ತಿಯೊಳಧಿಕವಾಗಿಯು ವೈಷ್ಣವರ ಮೇಲೆ ಎಱಕವಿಲ್ಲದ ಕರ್ಮಚಾಂಡಾಲರುಗಳೆಪ್ಪತ್ತೈದುಕೋಟಿಯು ನರಕದೊಳಗೋಲಾಡುತಿಹರು (ಕುವ್ಯಾಉ. ೩–೧೧೮). [ಸಂ.]

**ಕರ್ಮಚಾಂಡಾಳಿ** (ನಾ). ಹೀನ ಕಾರ್ಯಮಾಡುವವಳು; ಭ್ರಷ್ಟೆ: ಬಸುಱೆಱೆಪಿ ಪುತ್ರವಧೆಗೈದ ಸತಿಗೆ ದುರ್ಗತಿಗೆ ಕರ್ಮಚಾಂಡಾಳಿಗೆ ರಕ್ಕಸಿಗೆ ನೆಲೆಯಕ್ಕು ಮುಚ್ಚಿಸುವಸಿಪತ್ರವನಪ್ರವೇಶ ದುರ್ಗತಿದುಃಖಂ (ಪಸಾರ. ೬೦೪–೧೦). [< ಸಂ. ಕರ್ಮಚಾಂಡಾಲೀ]

**ಕರ್ಮಚಾರ** (ನಾ). ಕೆಲಸಗಾರ: ಸಿಬ್ಬಂದಿಯವನು: ನಮ್ಮ ಕರ್ಮಚಾರಿಗಳು ಈ ಮಾತನ್ನು ಅರಿತುಕೊಂಡು ಒಕ್ಕಲಿಗರೊಡನೆ ನಡೆದುಕೊಳ್ಳಬೇಕು (ಪ್ರೇಮಾಶ್ರ. ೨೫೯); ಕಾಯಸ್ಥರು ಪಾರಸಿ ಭಾಷೆಯನ್ನು ಕಲಿತು ರಾಜ್ಯದ ಕಾರ್ಯಾಲಯಗಳಲ್ಲಿ ಕರ್ಮಚಾರಿಗಳಾಗಿ ಪ್ರವೇಶ ಮಾಡಿದರು (ಉರ್ದುಪಾ. ೧೨). [< ಸಂ. ಕರ್ಮಚಾರಿನ್]

**ಕರ್ಮಜ** (ನಾ). ೧. ಅಶ್ವತ್ಥ ವೃಕ್ಷ. ೨. ಆಲದಮರ. ೩. ಕಲಿಯುಗ. ೪. ಸ್ವರ್ಗ. ೫. ನರಕ. ೬. [ದ್ವೈತ] ಪುಣ್ಯ ಪ್ರಭಾವದಿಂದ ದೇವತ್ವವನ್ನು ಪಡೆದವನು: "ಪೂರ್ವದಲ್ಲಿ ರಾಜರಾಗಿದ್ದು ಕರ್ಮದಿಂದ ದೇವತ್ವವನ್ನು ಹೊಂದಿದವರು ಕರ್ಮಜರೆನಿಸುವರು" (ಹಸಾರ. ೨೧–೨೨ ಟೀಕು). ೭. ಕರ್ಮದ ಫಲದಿಂದ ಉಂಟಾದುದು: ವ್ಯಾಧಿಯು ಕರ್ಮಜವೆಂದೂ, ದೋಷಜವೆಂದೂ, ಕರ್ಮದೋಷಜವೆಂದೂ, ಮೂರು ವಿಧವಾಗಿರುವುದು (ಸಕವೈ. ೨೩).
[ಸಂ.]

**ಕರ್ಮಜೀವಿ** (ನಾ). (ಜ್ಞಾನಹೀನವಾದ) ಕರ್ಮಾಚರಣೆಯಿಂದ ಜೀವಿಸುವವನು: ನಿನಗೆ ಪೂಜೆಯ ಮಾಡುವಲ್ಲಿ ನಾನು ಕರ್ಮಜೀವಿ ಸೀ ಪುಣ್ಯಜೀವಿ (ಮೋಳಿಮಾ. ೩೬–೧೫೧); ಪರಸಮಯದವನಾದಡೂ ಆಗಲಿ ಶಿವಸಮಯದವನಾದಡೂ ಆಗಲಿ ಮರ್ಮಗೆಟ್ಟು ನುಡಿವ ಕರ್ಮಜೀವಿಗಳ ಬಾಯಲ್ಲಿ ಬಾಲ್ಹುಳ ಸುರಿಯದೆ ಮಾಣ್ಬುದೆ ಹೇಳಾ (ಅಖಂಡೇ. ೨೬೭–೭). [< ಸಂ. ಕರ್ಮಜೀವಿನ್]

**ಕರ್ಮಠ** (ನಾ). ೧. ಕೆಲಸದಲ್ಲಿ ನಿಪುಣನಾದವನು: ನಿರ್ಭರಾಶಾಪಾಶಮೋಚನ ಕರ್ಮಕರ್ಮಠನು (ಬಸಪು. ೫೩–೩). ೨. ಧಾರ್ಮಿಕ ವ್ರತನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುವವನು: ಕರ್ಮಠನು ಯಾವಾಗಲೂ ಮಹಾತೀರ್ಥಗಳಲ್ಲಿ ಸ್ನಾನಮಾಡಬೇಕಾದದ್ದು ನಿಯಮ (ಕಭವಿ. ೧೯೧); ಸಾಯಣರು ವಿದ್ವಾಂಸರೂ, ಸದಾಚಾರ ಸಂಪನ್ನರೂ ಆದ ಕರ್ಮಠ ಬ್ರಾಹ್ಮಣರಾಗಿದ್ದರು (ರಾಜ್ಯೋದ. ೩೭); ಪೂರ್ವಪಂಕ್ತಿಗೆ ಹೇಳಬೇಕಾದರೂ, ಕರ್ಮಠರಾದ ಪಂಕ್ತಿಪಾವನ ಬ್ರಾಹ್ಮಣರಿಗೇ ಹೇಳುತ್ತಿದ್ದರು ಅವರು (ವಂಶವೃ. ೪೨೯). ೩. ಧಾರ್ಮಿಕ ಕರ್ಮಗಳ ನಿರ್ದೇಶಕ (ಕ). ೪. ಕರ್ಮಾಚರಣೆಯಲ್ಲಿ ಅತಿಯಾಗಿ ತೊಡಗಿರುವವನು; ಕರ್ಮಾಂಧ: ಕರ್ಮಠನ ಕರುಳೂ ಕರಗಿತು (ರೂಢಿ). [ಸಂ.]

**ಕರ್ಮಠತನ** (ನಾ). ಧರ್ಮಾಚರಣೆಯಲ್ಲಿ ಕಟ್ಟುನಿಟ್ಟಾಗಿರುವಿಕೆ; ಕರ್ಮಠನಾಗಿರುವಿಕೆ: ಅಮೇರಿಕೆಗೆ ಹೋಗಲು, ಹಡಗವನ್ನೇರಿದ ಕೂಡಲೆ ಇವರ ಕರ್ಮಠತನ ಸಡಿಲಾಗಹತ್ತಿತು (ಸೇನಾಹ. ೧೦೪).
[ಕರ್ಮಠ + -ತನ]

**ಕರ್ಮಠತೆ** (ನಾ). = ಕರ್ಮಠತನ: ನಮ್ಮ ಸುಶಿಕ್ಷಿತ ಮೇಧಾವಿಗಳಲ್ಲಿಯೂ ಒಂದು ಕೃತಕ ಭಾವಿಕತೆ, ಅಪ್ರಾಮಾಣಿಕವಾದ ಧಾರ್ಮಿಕತೆ, ಹೊಸಮಾದರಿಯ ಕರ್ಮಠತೆ ತಲೆಯೆತ್ತಿದೆ (ವಿಚಾವಾ. ೨೭).
[ಸಂ. ಕರ್ಮಠತಾ]

**ಕರ್ಮಡು,** ಕಮ್ಮಡು (ನಾ). ೧. ಕಪ್ಪಾದ ಮಡು; (ಆಳವಾಗಿ) ಕಪ್ಪಾಗಿ ಕಾಣುವ ಮಡು: ತಮಾಲವನಂಗಳ ಮರ್ವು ಪರ್ವಿ ಕರ್ಮಡುಗಳೊಳೆಯ್ದೆ ಮಾರ್ತೊಳಗೆ (ಕಾದಂಪೂ. ೬೩೯); ಜಗುನೆಯ ಕರ್ಮಡು ನೆಲನಂ ... ಪರ್ವಿದುದು (ಮಲ್ಲಿಪು. ೭–೨೧); ಈ ಕರ್ಮಡುವಿನೊಳ್ ಕಾಳಿಯ ಮಹಾ ಸರ್ಪನಿರ್ಪಂ (ಜಗವಿ. ೩–೭೯ ವ); ಕರಿದು ಮಡು, ಕರ್ಮಡು (ಶಬ್ದಾನು. ೩೩೪ ಪ್ರಯೋ). **ಕಮ್ಮಡು:** ೧. ಗಿಡುಗಳೊಳು ಹೊಕ್ಕು ಮಲ್ಲಯ್ಯ ಮಲ್ಲಯ್ಯ ಕಮ್ಮಡುಗಳೊಳು ಹೊಕ್ಕು ಮಲ್ಲಯ್ಯ (ಸಿದ್ಧರಾ. ೨–೫೯); ಜಯನೃಪನಡರ್ದಿಭಮಂ ಕೆನ್ನಂ ಪಿಡಿದು ತೊಱೆಯ ಕಮ್ಮಡುವಿನ ಕಡೆಗೆಳೆಯಿತ್ತು (ಜಯಕಾ. ೧೦–೪೩); ನೆಗೆದ ಜಗುನೆಯ ಕಮ್ಮಡುವಿನೊಳಗೊಗೆದ ಹೊಂದಾವರೆಯದಕ್ಕಸಳುಗಳು ಸಾಸಿರವುಂಟು (ಸಾಳ್ವಭಾ. ೧೨–೪೧); ಬೀಳ್ವೆನೋ ಶೈಲಾಗ್ರದಿಂದೆ ಕರ್ಮಡುವಿನೊಳಗಾಳ್ವೆನೋ (ಜೈಮಿಭಾ. ೧೩–೫೪). ೨. ಕಾಳಿಂದಿ; ಯಮುನಾನದಿ.

ಕಮ್ಮಡುವಿನಣ್ಣ = ಯಮುನೆಯ ಅಣ್ಣ; ಯಮಧರ್ಮ: ನಿತ್ಯ ಧರ್ಮಸುಶೀಲನಹ ಕಮ್ಮಡುವಿನಣ್ಣ ಸತ್ಯವಾನುವಿಗೆನಗೆ ಸತ್ಪುತ್ರ ಶತಕರಂ ಮರ್ತ್ಯಲೋಕದೊಳೀವುದು (ಲಕ್ಷ್ಮಭಾ. ೩–೩೧–೩೪).

[< ಕರಿದು + ಮಡು₂]

**ಕರ್ಮಣಿ₁** 'ಕರ್ವಣಿ₁' ನೋ.

**ಕರ್ಮಣಿ₂** (ನಾ). ನಿಷ್ಠನಾದ ಕೆಲಸಗಾರ; ಒಳ್ಳೆಯ ಕಾರ್ಯಕರ್ತ; ಕರ್ಮವೀರ: "ಕರ್ಮಣಿ[ಪಾಠಾಂ. ಠಂ] ಕರ್ಮಶೂರನೆನೆ ಬಲುಗೆಲಸಿಯಕ್ಕು" (ಮಂಗರಾ. ೭೦–೧೫).

[< ಸಂ. ಕರ್ಮಣ್ಯ]

**ಕರ್ಮಣಿಪ್ರಯೋಗ** (ನಾ). [ವ್ಯಾಕ] ಕರ್ಮರೂಪಾರ್ಥದ ಆಖ್ಯಾತ ಅಥವಾ ಕೃತ್ಪ್ರತ್ಯಯವನ್ನುಳ್ಳ ಪ್ರಯೋಗ: ಕನ್ನಡದಲ್ಲಿ ಸಹಜವಾಗಿ ಕರ್ಮಣಿಪ್ರಯೋಗವಿಲ್ಲ (ಕೈಪಿಡಿ. ೩೬೪); ಕರ್ತೃ ಯಾರೆಂಬುದು ಗೊತ್ತಿಲ್ಲದಿದ್ದಾಗ ಅಥವಾ ಕರ್ತೃವಿಗೆ ಗಮನ ಕೊಡುವ ಉದ್ದೇಶವಿಲ್ಲದಿದ್ದಾಗ ಕ್ರಿಯಾಪದವು ಕರ್ಮಣಿಪ್ರಯೋಗದಲ್ಲಿರುವುದುಂಟು (ಮಧ್ಯಮ. ೧೭೯); ಧಾತುವಿನಮೇಲೆ ಆಖ್ಯಾತ ಪ್ರತ್ಯಯವು ... ಕರ್ಮಾರ್ಥದಲ್ಲಿ ಬಂದಾಗ ಕರ್ಮಣಿಪ್ರಯೋಗ (ಶಬ್ದಾದ. ೬೬). 'ಕರ್ತರಿಪ್ರಯೋಗ' ಪರಾ. [ಸಂ.]

**ಕರ್ಮಣ್ಯ** (ನಾ). = ಕರ್ಮಣಿ₂. [ಸಂ.]

**ಕರ್ಮಣ್ಯೆ** (ನಾ). ಸಂಬಳ; ಕೂಲಿ [ಸಂ. ಕರ್ಮಣ್ಯಾ]

**ಕರ್ಮತ್ರಯ** (ನಾ). ಮೂರು ಬಗೆಯ ಕರ್ಮಗಳು; ಸಂಚಿತ, ಪ್ರಾರಬ್ಧ, ಆಗಾಮಿ ಕರ್ಮಗಳು; ಮನೋವಾಕ್‌ಕಾಯ ಕರ್ಮಗಳು: ತಾಪತ್ರಯಂಗಳಿಗೆನ್ನನು ಒಳಗುಮಾಡುವ ಕರ್ಮತ್ರಯಂಗಳು ಕೆಟ್ಟಕೇಡ ನೋಡಾ (ಘನವ. ೪೩).

[ಕರ್ಮ + ತ್ರಯ]

**ಕರ್ಮದಾನ** (ನಾ). ಬೌದ್ಧ ವಿಹಾರದ ಮೇಲ್ವಿಚಾರಕ: ವಿಹಾರದ ವಹಿವಾಟು ನೋಡಿಕೊಳ್ಳುವ ಕರ್ಮದಾನನು (ಕರ್ಮ = ಕೆಲಸವನ್ನು, ದಾನ = ಕೊಡುವವನು, ಅಂದರೆ ಬೇರೆಯವರಿಗೆ ಕೆಲಸವನ್ನು ಹಚ್ಚುವವನು) ಗಂಟೆ ಬಾರಿಸಿ ಸಂಜೆಗೆ ಸಕಾಲವನ್ನು ಸೂಚಿಸುತ್ತಾನೆ (ಪ್ರವಾಇ. I, ೨೯೧). [ಕರ್ಮ + ದಾನ]

**ಕರ್ಮದೋಷ** (ನಾ). ೧. ಕೆಲಸದಲ್ಲಿರುವ ದೋಷ, —ನ್ಯೂನತೆ. ೨. ಪೂರ್ವಾರ್ಜಿತ ಕರ್ಮದ ದುಷ್ಪರಿಣಾಮ. ೩. (ಕರ್ಮದಿಂದುಂಟಾದ) ಪಾಪ. ೪. ಪಾಪದ ಕಾರ್ಯ; ಕೆಡುಕಿನ ಕೆಲಸ.

[ಕರ್ಮ + ದೋಷ]

**ಕರ್ಮಧಾರಯ** (ನಾ). [ವ್ಯಾಕ] ತತ್ಪುರುಷ ಸಮಾಸದಲ್ಲಿ ಒಂದು ಬಗೆ; ಒಂದೇ ಆಶ್ರಯವನ್ನು ಬೋಧಿಸುವ ಎರಡು ಪದಗಳಿಂದ ಕೂಡಿದ ಸಮಾಸ: ಉತ್ತರ ಪದದರ್ಥಂ ಮೆಯ್ವೆತ್ತಿರೆ ತತ್ಪುರುಷಮಂತದೇಕಾಶ್ರಯಮಾಗುತ್ತುಮಿರೆ ಕರ್ಮಧಾರಯಂ (ಕಾವ್ಯಾವ. ೨೪೪); ಪರಪದದೊಳರ್ಥವರ್ತನಮಿರೆ ತತ್ಪುರುಷಂ ಸಮಂತದೇಕಾಶ್ರಯಮಾಗಿರೆ ಕರ್ಮಧಾರಯ (ಶಮದ. ೧೬೪); ವಿಶೇಷಣವು ವಿಶೇಷ್ಯದೊಡನೆ ಕೂಡಿ ಆಗುವ ಸಮಾಸವು ಕರ್ಮಧಾರಯ (ಕೈಪಿಡಿ. ೨೧). [ಸಂ.]

**ಕರ್ಮಧಾರೆ** (ನಾ). ಕಾರ್ಯಪರಂಪರೆ; ಕರ್ಮಗಳ ಸಾಲು: ಮೂರು ನಾಲ್ಕು ದಿನಗಳಲ್ಲಿಯೇ ಅವರ ಪುತ್ರಶೋಕ ಜೀವನದ ಅವಿಶ್ರಾಂತ ಕರ್ಮಧಾರೆಯಲ್ಲಿ ವಿಲೀನವಾಯಿತು (ಪ್ರೇಮಾಶ್ರ. ೫೪).

[ಕರ್ಮ + ಧಾರೆ]

**ಕರ್ಮನಿರ್ಜರೆ** (ನಾ). [ಜೈನ] ಇರುವ ಕರ್ಮವು ಕ್ಷಯಿಸುವುದು; ಕರ್ಮನಾಶ: ತಚ್ಚರಿತಮಂ ಕಾವ್ಯಂಗಳೊಳ್ಕೂಡೆ ಬಣ್ಣಿಸಿ ಪೇೞ್ದಾತನ ಕರ್ಮನಿರ್ಜರೆಯುನಂತಿಂತುಂತೆನಲ್ಬರ್ಕುಮೇ (ಆದಿಪು. ೧–೩೭); ಮುನಿವೃಂದಾರಕನ ನೆಗೞ್ತೆ ಕರ್ಮನಿರ್ಜರೆಗಾರ್ಮಂ (ಪುಷ್ಪಪು. ೧೩–೫೩). [ಕರ್ಮ + ನಿರ್ಜರೆ]

**ಕರ್ಮಪದ** (ನಾ). [ವ್ಯಾಕ] ಕರ್ಮಕಾರಕವನ್ನು ಹೇಳುವ ಪದ: ಕ್ರಿಯಾಪದವು ಹೇಳುವ ಕೆಲಸಕ್ಕೆ ಯಾವುದು ವಿಷಯವೋ ಅದನ್ನು ಕರ್ಮಪದ ತಿಳಿಸುತ್ತದೆ (ಮಧ್ಯಮ. ೯). 'ಕರ್ತೃಪದ', 'ಕ್ರಿಯಾಪದ' ಪರಾ. [ಕರ್ಮ + ಪದ₂]

**ಕರ್ಮಪರಿಪಾಕ** (ನಾ). ಪೂರ್ವಜನ್ಮದಲ್ಲಿ ಮಾಡಿದ ಕರ್ಮಗಳ ಫಲ, —ಪರಿಣಾಮ. 'ಕರ್ಮವಿಪಾಕ' ಪರಾ.

[ಕರ್ಮ + ಪರಿಪಾಕ]

**ಕರ್ಮಪಾಕ** (ನಾ). = ಕರ್ಮಪರಿಪಾಕ: ಸ್ಥಾವರನಾಮ ಕರ್ಮಪಾಕಾಧೀನಂಗಳ್ ಸ್ಥಾವರಂಗಳ್ (ಆದಿಪು. ೧೦–೬೧ ವ); ಗೋಮುಖವ್ಯಾಘ್ರನೋಲ್ ಬಂದೆಯೆಮ್ಮೊಡಗೂಡಿ, ಪೂರ್ವಜನ್ಮದ ಪಾಪದಾ ಕರ್ಮಪಾಕಂ ಬಪ್ಪವೋಲ್! (ಶ್ರೀರಾಮಾ. ೨೪೧–೩೫೮).

[ಕರ್ಮ + ಪಾಕ₂]

**ಕರ್ಮಫಲ, ಕರ್ಮಫಳ** (ನಾ). (ಪೂರ್ವಜನ್ಮದಲ್ಲಿ ಮಾಡಿದ) ಪಾಪಪುಣ್ಯಗಳ ಪರಿಣಾಮ: ಗುಣಿಯವಗುಣಿಯೊಡನಾಡಿದರೆ ಅದೆ ಆತನ ಕರ್ಮಫಲ ನೋಡಾ (ಬಸವ. ೮೫೯). **ಕರ್ಮಫಳ:** ರಾಜಸಭೆಯೊಳ್ ವಿದ್ಯೋತ್ತಮರೆನಿಸಿ ಸುಖಮಿರಲ್ಪಡೆಯೆಮೆಂಬುದಿದು ಪೂರ್ವಜನ್ಮ ಕೃತ ಕರ್ಮಫಳಂ (ಸುಕುಮಾ. ೨–೩೪). [ಕರ್ಮ + ಫಲ]

**ಕರ್ಮಫಳ** 'ಕರ್ಮಫಲ' ನೋ.

**ಕರ್ಮಬಂದಿ** (ನಾ). "ತನ್ನ ಕರ್ಮಕ್ಕೆ ಕಟ್ಟುಬಿದ್ದವನು, ಎಂದರೆ ತನ್ನ ಸೃಷ್ಟಿಗೆ ಕಟ್ಟುಬಿದ್ದ ದೇವರು" (೧೪ವಿಂ. ೧೩೭ ಟಿಪ್ಪಣಿ): ಈ ಲತೆಗೀ ಫಲಮನೊಂದಿಸಿದ ಸೃಷ್ಟಿಯ ಕರ್ಮಬಂದಿಗಿದೇನೊಪ್ಪದೆ? (೧೪ವಿಂ. ೧೦೫–೫೨). [< ಸಂ. ಕರ್ಮಬಂಧಿನ್]

**ಕರ್ಮಬಂಧ** (ನಾ). ಕರ್ಮದಿಂದ ಉಂಟಾಗುವ ಬಂಧನ: [ಸತ್] ಕರ್ಮಬಂಧಂ ಶುಭಮೆಂಬುದಕ್ಕುಂ (ಶಾಂತಿಪು. ೧೨–೫ ವ); ನೀನೀಗಳೆಮ್ಮಂ ಕಂಡ ದೂಸಱಿಂ ಕರ್ಮಬಂಧಂ ಶಿಥಿಲವಾದುದು (ಪಂರಾಮಾ. ೯–೧೫ ವ); ಯುತಯೋಗನೆನಿಪ ಜೀವಂ ಸತತಂ ದೃಢ ಕರ್ಮಬಂಧದೊಳ್ ತಾಂ ತೊಡರ್ಗುಂ (ಚಂದ್ರಪು. ೭–೧೯).

[ಕರ್ಮ + ಬಂಧ]

**ಕರ್ಮಬಂಧನ** (ನಾ). = ಕರ್ಮಬಂಧ: ತನಯರಿಲ್ಲದದಾವುದೊ ಕರ್ಮಬಂಧನಂ (ಸುಕುಮಾ. ೯–೧೦೨). [ಕರ್ಮ + ಬಂಧನ]

**ಕರ್ಮಭೂಮಿ** (ನಾ). ೧. ಕರ್ಮಾನುಷ್ಠಾನಕ್ಕೆ ಅವಕಾಶವಿರುವ ಸ್ಥಳ: ಭಾರತವು ದೇವತೆಗಳಿಗೂ ಕರ್ಮಭೂಮಿಯೆನಿಸಿಕೊಂಡಿದೆ (ಕಥಕ. ೩೬). ೨. [ಜೈನ] ಅವಸರ್ಪಿಣಿಕಾಲದ ಆರು ವಿಭಾಗಗಳಲ್ಲಿ ಐದು ಮತ್ತು ಆರನೆಯ ವಿಭಾಗಗಳಿಗೆ ಸಂಬಂಧಪಟ್ಟ ಭೂಮಿ; ಭರತ ಮತ್ತು ಐರಾವತ ಕ್ಷೇತ್ರಗಳೊಳಗಿನ ಆರ್ಯಖಂಡ: ಇದು ಕರ್ಮಭೂಮಿಯಂದಂ ಪೊದಟ್ದು ತೋಱಿದುದು ಭೋಗಭೂಮಿಸ್ಥಿತಿ ಕುಂದಿದುದು (ಆದಿಪು. ೬-೬೩); ಈ ಆರುಕಾಲಗಳಲ್ಲಿ ಮೊದಲ ಮೂರನ್ನು ಭೋಗಭೂಮಿ ಗಳೆಂದೂ, ನಾಲ್ಕನೆಯದನ್ನು ಕರ್ಮಕ್ಷಯ ಭೂಮಿಯೆಂದೂ, ಐದು ಮತ್ತು ಆರನೆಯ ಕಾಲಗಳನ್ನು ಕರ್ಮಭೂಮಿ ಗಳೆಂದೂ ಕರೆಯಲಾಗಿದೆ (ಭಾರದ. ೧೭೧). [ಕರ್ಮ + ಭೂಮಿ]

**ಕರ್ಮಮಾರ್ಗ** (ನಾ). ೧. ಕೆಲಸದ ರೀತಿ; ವ್ರತಾಚರಣೆಯ ವಿಧಾನ. ೨. [ತತ್ತ್ವಶಾ] ಪರಲೋಕ ಸಾಧನೆಯ ಮೂರು ಮಾರ್ಗಗಳಲ್ಲಿ ಒಂದು: ಎಲ್ಲ ಸಂಸ್ಕೃತಿಗಳೂ . . . ಅಧ್ಯಾತ್ಮಜ್ಞಾನದೆಡೆಗೇ ನಮ್ಮನ್ನು ಕರೆದುಕೊಂಡು ಹೋಗುತ್ತವೆ. ಅವುಗಳಲ್ಲಿ ಮುಖ್ಯವಾದುವು ಮೂರು. ಜ್ಞಾನಮಾರ್ಗ, ಭಕ್ತಿಮಾರ್ಗ, ಕರ್ಮಮಾರ್ಗ (ಧರ್ಮಸಾ. ೨೧). [ಕರ್ಮ + ಮಾರ್ಗ]

**ಕರ್ಮಯೋಗ** (ನಾ). [ತತ್ತ್ವಶಾ] ಫಲಾಪೇಕ್ಷೆಯಿಲ್ಲದೆ ಕರ್ಮವನ್ನು ಮಾಡುವುದು: ಕರ್ಮಯೋಗವೆಂದರೆ. . .ಯಥಾಶಕ್ತಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ಫಲಸಂಗತ್ಯಾಗಪೂರ್ವಕವಾಗಿ, ಭಗವತ್ಪ್ರೀತಿಗೋಸ್ಕರವೇ ಕರ್ತವ್ಯವೆಂಬ ಭಾವನೆಯಿಂದ ಆಲಸ್ಯವಿಲ್ಲದೆ ಪ್ರೀತಿಪೂರ್ವಕ ಮಾಡುತ್ತಿರುವುದು (ಹಿಂದಸಾ. ೨೫೭); ಕರ್ಮ ಕರ್ಮಯೋಗವಾಗಬೇಕಾದರೆ ಅದು ಅನಾಸಕ್ತವಾಗಬೇಕು (ಧರ್ಮಸಾ. ೧೧೫). [ಕರ್ಮ + ಯೋಗ]

**ಕರ್ಮಯೋಗಿ** (ನಾ). ಕರ್ಮಯೋಗವನ್ನು ಆಚರಿಸುವವನು: ಸಿದ್ಧರಾಮನು ವಿಶ್ವಪ್ರೇಮಿಯೂ ಕರ್ಮಯೋಗಿಯೂ ಆಗಿದ್ದನು (ಕಸಾಚ. ೧೪೧); ಜ್ಞಾನಯೋಗಿಯಾದವನು ಕರ್ಮಯೋಗಿಯೂ ಆಗಬೇಕು (ರೂಢಿ). [< ಸಂ. ಕರ್ಮಯೋಗಿನ್]

**ಕರ್ಮಯೋಗಿನಿ** (ನಾ). ಕರ್ಮಯೋಗವನ್ನು ಆಚರಿಸುವವಳು: ಆಕೆಗೆ ಯಾವ ವೇದಾಂತವೂ ಗೊತ್ತಿಲ್ಲ . . . ಆದರೂ ಆಕೆ ಕರ್ಮಯೋಗಿನಿ, ಮಹಾ ತಪಸ್ವಿನಿ (ಬನಸಿ. ೬೯). [ಸಂ. ಕರ್ಮಯೋಗಿನೀ]

**ಕರ್ಮರ$_1$, ಕಮ್ಮರ$_3$, ಕಮ್ಮರೆ$_1$** (ನಾ). ಕಂಚಿನಿಂಬೆಯ ಮರ: ಬಾಱಿಯ ಖರ್ಜೂರದ ಕಿತ್ತೀಱಿ[ಳಿ]ಯ ಕರ್ಮರದ ಮಾವಿನರನೇಱಿಲ ಕಂಚೀಱಿ[ಳಿ]ಯ . . . ಉದ್ಯಾನಂ (ಕಾವ್ಯಾವ. ೨೩೦). **ಕಮ್ಮರ$_3$**: "ಲಕುಚಃ, ಲಿಕುಚಃ, ಡುಹುಃ ಈ ೩ ನಿಂಬೆಯ ಮರ, ಕಮ್ಮರವೆಂದೂ ಎಂಬರು" (ನಾಚಿರಾ. ೧೦೮); ಬಾಱಿಯ ಮಾವಿನ ಕಮ್ಮರದೀಳೆಯ ತನಿವಣ್ಗಳಿಂದಮರ್ಚಿಸಿದಂ ಭೂಪಾಳಂ (ಪಂರಾಮಾ ೧೨-೬); ಬಾಱಿಯ ಕರ್ಜೂರದ ಕಿತ್ತೀಳೆಯ ಕಮ್ಮರದ ರಂಜಿಪಿಮ್ಮಾವಿನ (ಧರ್ಮಾಮೃ. ೧-೧೫೧); ಸಿರಿಸಂ ಕಂಮ್ಮರನೀಳೆ ಬಾಳೆ ವಕುಳಂ ದಾಳಿಂಬ . . .ಫನಸಾಂಬ್ರವತ್ತಿ (ಸೌಇಇ. IX–i, ೩೯೩-೪೦; 1236). **ಕಮ್ಮರೆ$_1$**: ಕಮ್ಮರೆ ನಿಂಬೆ ದಾಡಿಂಬೆ (ಕೃವಾಳ. ೨೨೮). [< ಸಂ. ಕಮ್ರ ?]

**ಕರ್ಮರ$_2$, ಕಮ್ಮರ$_1$, ಕಮ್ರ$_1$, ಕರಿಮರ** (ನಾ). ಒಂದು ಜಾತಿಯ ಮರ: ನೋಡೆ ನಾಡೆಳೆವಳ್ಳಿಯಂ ಸಮಂತು ಕಾಡ ಕರ್ಮರನೊಳ್ ಪತ್ತುಗುಡುವರೊಳರೇ (ರಾಮಾಶ್ವ. ೬೮-೪); ಕಿರಲ್‌ಬೋಗಿ, ಬೋವು ಮರ, ಹಿರಿಬೋಗಿ, ಕರ್ಮರ (ವೈಔಗಿ. ೪೪-೮೭೩). **ಕಮ್ಮರ$_1$**: ಹಾಲೆ ಹೊಂಗೇತಕಿ ವನಸಂಪಿಗೆ ಹಿಂತಾಲ ಹೆಮ್ಮರ ಕಮ್ಮರಗಳು (ಕಂಸವಿ. ೧೮-೩೬). **ಕಮ್ರ$_1$**: ಕಮ್ರ, ಕಮ್ಮಠ (ವೈಔಗಿ. ೪೨-೮೨೬). **ಕರಿಮರ**: ಕರಿಮರದಿಂದ ಮಾಡಿದ ಮೇಜು (ರೂಢಿ). [< ಕರಿದು + ಮರ$_1$]

**ಕರ್ಮರು** 'ಕಮ್ಮಱ' ನೋ.

**ಕರ್ಮಲ್ಲಿಗೆ** (ನಾ). ಕರಿಯ ಮಲ್ಲಿಗೆ; ಕರಿಮಲ್ಲಿಗೆ: ಮೆಲ್ಲಱುಗಂಪ ನೆರೆದು ಕರ್ಮಲ್ಲಿಗೆ ಸಾಲ್ನಿಲ್ಲದೆ ಮೈಗಣ್ಣನ ಬನ[ಕ]ಡರ್ಪೋಲ್‌ನಿಲಲಾಱಿಡಿ ವಿಚಕಿಲದಲರಿಂದೇಳ್ವುವು ಬಾನ್ಗೆ (ಉದ್ಭದೇ. ೨-೨೪).
[< ಕರಿದು + ಮಲ್ಲಿಗೆ]

**ಕರ್ಮವರ್ಗಣೆ** (ನಾ). [ಜೈನ] ಕರ್ಮ ಪರಮಾಣುಗಳ ಸಮೂಹ, —ಸ್ಕಂದ: ಅಣುಮಾತ್ರ ಪರಸಂಗ ಹೊದ್ದದೆ ಕರ್ಮವರ್ಗಣೆ ಬೇಱೆ ಹಂಸ ಬೇಱೆಂದು ತಣಿದು ತನ್ನೊಳು ನಿಂದು ನೋಡುತಿರ್ದನು (ಭರಚ. ೭೭-೪೪); ಅಂಟಾಗಿ ಬಿಱುಬಾಗಿ ಕರ್ಮವರ್ಗಣೆಯ ದೂಳುಂಟದು ಸಣ್ಣನೆನಿಪುದು (ಭರಚ. ೭೮-೩೪). [ಸಂ. ಕರ್ಮವರ್ಗಣಾ]

**ಕರ್ಮವಲೆ** (ನಾ). ಅರಿಸಿನ ಮುಂಡಿಗೆ ರೋಗ; ಕಾಮಾಲೆರೋಗ: "ಕರ್ಮವಲೆಯೆಂದೆನಲು ಕಾಮಾಲೆ" (ಮಂಗರಾ. ೧೧೪-೪).
[< ಸಂ. ಕಾಮಲಾ ?]

**ಕರ್ಮವಶ** (ನಾ). ಕರ್ಮಕ್ಕೆ ಅಧೀನವಾದುದು; ಕರ್ಮಕ್ಕೆ ಅನುಗುಣವಾದದ್ದು: ಅದು ನಿಮ್ಮುಪೇಕ್ಷೆಯೆಂದಱಿಯೆನಿದೆನ್ನ ಕರ್ಮವಶ[ಪಾಂ. ಫಲ]ಮೆಂದಱಿಯೆಂ ನಿಮಗಿಂತು ಸಾವುಮೇತೆಱದಿನಕಾರಣಂ ನೆಱೆಯೆ ಸಂಭವಿಸಿರ್ದುದೊ ಕುಂಭಸಂಭವಾ (ಗದಾಯು. ೪-೪೯). [ಕರ್ಮ + ವಶ]

**ಕರ್ಮವಾದ** (ನಾ). ಎಲ್ಲವೂ ಪೂರ್ವಕರ್ಮಾನುಸಾರ ಸಂಭವಿಸುತ್ತದೆಂಬ ವಾದ; ಕರ್ಮಮಾರ್ಗವನ್ನು ಎತ್ತಿಹಿಡಿಯುವ ವಾದ. 'ಕರ್ಮವಾದಿ' ಪರಾ. [ಕರ್ಮ + ವಾದ$_3$]

**ಕರ್ಮವಾದಿ** (ನಾ). ಕರ್ಮಮಾರ್ಗವನ್ನು ಎತ್ತಿ ಹಿಡಿದು ವಾದಿಸುವವನು; ಕರ್ಮಯೋಗವನ್ನು ಬೋಧಿಸುವವನು: ಶ್ರೀಶಂಕರಾಚಾರ್ಯರು ಪ್ರಚಂಡ ಬೌದ್ಧಿಕ ಕರ್ಮವಾದಿಗಳಾಗಿದ್ದರು (ಧರ್ಮಸಾ. ೧೫೦). [< ಸಂ. ಕರ್ಮವಾದಿನ್]

**ಕರ್ಮವಿದೂರ** (ನಾ). ಕರ್ಮಕ್ಕೆ ದೂರನಾದವನು; ಪಾಪರಹಿತನು: ಓವಿ ಕರ್ಮವಿದೂರ ನೀ ದುಃಖಾವಹಮನುಡುಗುಡುಗು (ಬಸಪು. ೩೦-೨೫). [ಕರ್ಮ + ವಿದೂರ]

**ಕರ್ಮವಿಪಾಕ** (ನಾ). ಪೂರ್ವಾರ್ಜಿತ ಕರ್ಮದ ಫಲ: ಕರ್ಮವಿಪಾಕಮಾರ ಬಗೆಗಂ ವೈಕಲ್ಯಮಂ ತಾರದೇ (ಪಂರಾಮಾ. ೯-೯೮).
[ಕರ್ಮ + ವಿಪಾಕ]

**ಕರ್ಮವಿಪಾಕಗತಿ** (ನಾ). ಕರ್ಮದ ಫಲವಾಗಿ ಬಂದೊದಗುವ ಸ್ಥಿತಿ: ತಮ್ಮ ಕರ್ಮವಿಪಾಕಗತಿ ನೆಱೆ ತಮ್ಮನೇ ಕೆಡಿಸುವುದು (ಕುವ್ಯಾಸ. ೧೪-೬೦). [ಕರ್ಮವಿಪಾಕ + ಗತಿ]

**ಕರ್ಮವಿರಹಿತ** (ನಾ). ಕರ್ಮದ ಕಟ್ಟಿನಿಂದ ಬಿಡುಗಡೆಯಾದವನು: ನಮ್ಮ ಕೂಡಲಸಂಗನ ಶರಣರು ಕರ್ಮವಿರಹಿತರು ಶರಣ ಸನ್ನಿಹಿತರು (ಬಸವ. ೫೭೭); ಕರ್ಮವಿರಹಿತನೆ ಕೇಳೆನ್ನ ದಾನಕ್ಕೆ ಸರಿಯಿಲ್ಲವೈ (ವೀಶೈಪು. ೪-೧-೨೭). [ಕರ್ಮ + ವಿರಹಿತ]

**ಕರ್ಮವೀರ** (ನಾ). ಕರ್ತವ್ಯ ನಿರ್ವಹಿಸುವುದರಲ್ಲಿ ಸಾಹಸಿ; ಕಾರ್ಯನಿಷ್ಠ; ಕಾರ್ಯತತ್ಪರ: ಕರ್ಮವೀರ ಟಾಟಾರವರ ಸಫಲಜೀವನಕ್ಕೆ ಇದಕ್ಕಿಂತ ಹೆಚ್ಚಿನ ಸ್ಮಾರಕ ಇನ್ನೇನು ಬೇಕು (ಕಪಪು. ೬-೮೯); ನನ್ನಿಕಾರ, ಕರ್ಮವೀರ, ಇಂದು ನಿನ್ನ ಭೇರಿ ಹೊಳಲ ಮುಂದೆ ಕೇಳಿ (ಮಾಂದಳ. ೩೯). [ಕರ್ಮ + ವೀರ]

**ಕರ್ಮವ್ಯಭಿಚಾರಿಣಿ** (ನಾ). [ಸಂಗೀತ] ಒಂದು ರಾಗದ ಹೆಸರು: ನಂದಯಂತಿ ಕರ್ಮವ್ಯಭಿಚಾರಿಣಿ ಕೌಶಿಕಿಯೆಂಬ ಹತ್ತುರಾಗಂಗಳು ಮಧ್ಯಮಗ್ರಾಮದಿಂ ಪುಟ್ಟಿದವು (ವಿವೇಕ. ೨೩೩).
[ಸಂ. ಕರ್ಮವ್ಯಭಿಚಾರಿಣೀ]

**ಕರ್ಮಶಾಲೆ** (ನಾ). ಕೆಲಸಮಾಡುವ ಸ್ಥಳ; ಕಾರ್ಯಾಗಾರ; ಕಾರ್ಖಾನೆ; ಕಮ್ಮಟ: "ಪಂಚಕಾರುಕರ ಮನೆ ಕರ್ಮಶಾಲೆಯಕ್ಕು" (ಮಂಗರಾ. ೫೮-೧೦). [ಕರ್ಮ + ಶಾಲೆ$_1$]

**ಕರ್ಮಶಾಸ್ತ್ರ** (ನಾ). ವ್ರತಾಚರಣೆಗಳ ವಿಧಿವಿಧಾನಗಳನ್ನು ತಿಳಿಸುವ ಅಥವಾ ಕರ್ಮಗಳನ್ನು ಬೋಧಿಸುವ ಶಾಸ್ತ್ರ: ಉಮೇಶನೊರ್ಬನೆ ಎನುತ ಕಾಣುತ್ತಿರಲಧಮ ಧೀಮನಂದೇತಕೆ ಕರ್ಮ ಶಾಸ್ತ್ರಂಗಳ ಬಲೆಗೆ ಸಿಕ್ಕಿ ಕುಮತಿಗಳು ನಾಯ್ವಾಲನುಂಡರೊ (ಬಸಪು. ೫೪-೨೯). [ಕರ್ಮ + ಶಾಸ್ತ್ರ]

**ಕರ್ಮಶೀಲ** (ಗು). ಕಾರ್ಯವನ್ನು ನಿಷ್ಠೆಯಿಂದ ಹಾಗೂ ಸಮರ್ಪಕವಾಗಿ ನೆರವೇರಿಸಬಲ್ಲ; ಉದ್ಯೋಗಿಯಾದ: ಅವನು ಶಾಂತಚಿತ್ತದ ಸತತ ಕರ್ಮಶೀಲ ಹುಡುಗನಾಗಿಯೇ ಇರುತ್ತಿದ್ದನು (ಬೆಂಜನ್. ೫೩). [ಸಂ.]

**ಕರ್ಮಶೂರ** (ನಾ). = ಕರ್ಮವೀರ. [ಕರ್ಮ + ಶೂರ]

**ಕರ್ಮಸಂನ್ಯಾಸ** (ನಾ). = ಕರ್ಮಸನ್ಯಾಸ: ಕರ್ಮಸಂನ್ಯಾಸ . . . ಮಾನವನ ಪ್ರಗತಿಗೆ ಕಾರಣವಾಗಲಾರದು (ಕರ್ನಾಟ. ೧೧). [ಕರ್ಮ + ಸಂನ್ಯಾಸ]

**ಕರ್ಮಸಂನ್ಯಾಸಿಕ** (ನಾ). = ಕರ್ಮಸನ್ಯಾಸಿ. [ಸಂ.]

**ಕರ್ಮಸಚಿವ** (ನಾ). ಕಾರ್ಯಾಧಿಕಾರಿ; ಪ್ರತಿನಿಧಿಯಾಗಿ ಅಥವಾ ನ್ಯಾಯದರ್ಶಿಯಾಗಿ ವಿಶೇಷವಾಗಿ ನೇಮಕಗೊಂಡ ಮನುಷ್ಯ. 'ನರ್ಮಸಚಿವ' ಪಠಾ. [ಕರ್ಮ + ಸಚಿವ]

**ಕರ್ಮಸನ್ಯಾಸ** (ನಾ). ಕರ್ಮಗಳನ್ನು ಬಿಡುವಿಕೆ: ಕರ್ಮಸನ್ಯಾಸಕ್ಕಿಂತ ಕರ್ಮಯೋಗವು ಹೆಚ್ಚಿನದು (ಧರ್ಮಸಾ. ೧೦೩). [ಕರ್ಮ + ಸನ್ಯಾಸ]

**ಕರ್ಮಸನ್ಯಾಸಿ** (ನಾ). ಎಲ್ಲ ಕರ್ಮಗಳನ್ನು ಬಿಟ್ಟುಕೊಟ್ಟವನು; ವಿರಕ್ತ: ಜೀವನದಲ್ಲಿ ಎಲ್ಲವನ್ನು ಹರಿದುಕೊಂಡು ಕರ್ಮಸನ್ಯಾಸಿಯಾಗಬೇಕೆಂದು ನಿಶ್ಚಯಿಸುತ್ತಿರುವಾಗ ರೂಪಾ ಸಂಬಂಧವನ್ನು ಪ್ರೇರೇಪಿಸಿದ್ದಳು (ಜಯಂತ. ೨೯೩). [< ಸಂ. ಕರ್ಮಸಂನ್ಯಾಸಿನ್]

**ಕರ್ಮಸಾಕ್ಷಿ** (ನಾ). ೧. ಎಲ್ಲ ಕಾರ್ಯಗಳನ್ನೂ ಕಾಣುವವನು. ೨. ಸೂರ್ಯ. ೩. ಪರಮಾತ್ಮ: ದೇಹಿವರ್ಗದ ಕೃತ ಪಾಪ ಪುಣ್ಯಫಲಮುಂ ಸಲೆ ತೂಗುವ ಕರ್ಮಸಾಕ್ಷಿಯುಂ ಪದುಳದೆ ತೊಟ್ಟಿಲೊಳ್ ಪಡಿಸಿ ತೂಗಿಧರ್ (ಜಗವಿ. ೩-೨೮); ಸಕಲ ಜೀವರ ಕರ್ಮ [ಪಾಠಾಂ. ಋಣ]ಸಾಕ್ಷಿಪ್ರಕರಚೈತನ್ಯಸ್ವರೂಪಾತ್ಮಕನು ನೀನಲ್ಲಿಲ್ಲ ಹುಸಿಯಲ್ಲೆಂದಳೆಂದುಮುಖಿ (ಕುವ್ಯಾಅ. ೨-೨೨). [< ಸಂ. ಕರ್ಮಸಾಕ್ಷಿನ್]

**ಕರ್ಮಸಾದಾಖ್ಯ** (ನಾ). [ವೀಶೈ] ಐದು ಸಾದಾಖ್ಯಗಳಲ್ಲಿ ಒಂದು: ಕರ್ಮಸಾದಾಖ್ಯ ಸ್ವರೂಪವಾದ ಆಚಾರಲಿಂಗದಲ್ಲಿ ನಕಾರ ಮಂತ್ರಸ್ವರೂಪವಾದ ಘ್ರಾಣೇಂದ್ರಿಯ ಸಂಯೋಗವ ಮಾಡಬಲ್ಲಾತನೆ ಪ್ರಾಣಲಿಂಗಿ (ಅಖಂಡೇ. ೨೪೫-೯೮). [ಕರ್ಮ + ಸಾದಾಖ್ಯ]

**ಕರ್ಮಸಾಧಕ** (ನಾ). ಕಾರ್ಯವನ್ನು ಸಾಧಿಸುವವನು, —ನೆರವೇರಿಸುವವನು [ಕರ್ಮ + ಸಾಧಕ]

**ಕರ್ಮಸಾನ** (ನಾ). ಕುದುರೆಯ ಕಡಿವಾಣಕ್ಕೆ ಸೇರಿಸಿದ ಮೊಳೆ: "ಮೊಳೆಗಳು ಕರ್ಮಸಾನಮುಕ್ಕುಂ" (ಮಂಗರಾ. ೮೧-೧೩). [?].

**ಕರ್ಮಸಿದ್ಧ** (ನಾ). ೧. ಕರ್ಮಸಿದ್ಧಿಯನ್ನು ಪಡೆದವನು. ೨. ವೈದಿಕ ಕರ್ಮಗಳಲ್ಲಿ ಸಿದ್ಧಿಪಡೆದವನು: ದ್ರೋಣನನ್ನು ಕೊಲ್ಲಬಲ್ಲ ಒಬ್ಬ ಮಗನನ್ನು ಪಡೆಯಬೇಕೆಂದು ಕರ್ಮಸಿದ್ಧರಾದ ಬ್ರಾಹ್ಮಣರನ್ನು ಹುಡುಕಿಕೊಂಡು ಹೊರಟನು (ವಚಭಾ. ೪೯). [ಕರ್ಮ + ಸಿದ್ಧ]

**ಕರ್ಮಸಿದ್ಧಿ** (ನಾ). ಕಾರ್ಯದಲ್ಲಿ ಜಯ; ಕರ್ತವ್ಯದಲ್ಲಿ ಗೆಲುವು. [ಕರ್ಮ + ಸಿದ್ಧಿ]

**ಕರ್ಮಸ್ಥಾನ** (ನಾ). ೧. ಕೆಲಸಮಾಡುವ ಸ್ಥಳ, —ಪ್ರದೇಶ. ೨. [ಜ್ಯೋತಿ] ಕುಂಡಲಿಯಲ್ಲಿ ಲಗ್ನದಿಂದ ಹತ್ತನೆಯ ಸ್ಥಾನ: ವಸುಧಾನಂದನ ಸೂರ್ಯರೊಂದಿ ನಿಲೆ ಕರ್ಮಸ್ಥಾನದೊಳ್ (ಜಾತಕ. ೨೧-೨೪). [ಕರ್ಮ + ಸ್ಥಾನ]

**ಕರ್ಮಸ್ಥಿತಿ** (ನಾ). ಕರ್ಮದಿಂದ ಉಂಟಾದ ಸ್ಥಿತಿ, —ಅವಸ್ಥೆ: ಮಸಿಯನೇಸುಕಾಲ ಬೆಳಗಿದರೆ ಬಿಳಿದಾಗಬಲ್ಲುದೆ ಕರ್ಮಸ್ಥಿತಿ ಬೆನ್ನಬಿಡದು (ಬಸವ. ೩೮೨); ವಿಪರೀತದ ಗತಿ ಗಹನತರವೇ ವಿಪುಳ ಕರ್ಮಸ್ಥಿತಿಯೆನುತ ತೂಗಿದನು ನಿಜಶಿರವ (ಕುವ್ಯಾಅ. ೮-೪೬). [ಕರ್ಮ + ಸ್ಥಿತಿ]

**ಕರ್ಮಾಂಗ** (ನಾ). ೧. ಕಾರ್ಯದ ಒಂದು ಭಾಗ. ೨. ಶ್ರಾದ್ಧ ಮೊದಲಾದ ಧಾರ್ಮಿಕ ಕಾರ್ಯದ ಅಂಗ, —ಭಾಗ: ಕರ್ಮಾಂಗಮಾಗಿರ್ದ ಪಿಂಡಮಂ ತೆಗೆದು ಮಡುವಿನೊಳೆ ಹಾಯ್ಕೆಂದೊಡೆ (ಜೈಮಿಭಾ. ೧೦-೩೦). ೩. ಕಾರ್ಯರೂಪವಾದ ಅಂಶ, —ಘಟಕ: ನಾಟ್ಯವು ಒಂದು ರಸಭೋಗವು. ಈ ರಸಭೋಗಕ್ಕಾಗಿ ಕೆಲವೊಂದು ಜ್ಞಾನಾಂಗಗಳೂ ಕರ್ಮಾಂಗಗಳೂ ಸಿದ್ಧವಿರಬೇಕಾಗುವುವು (ಪ್ರಬಂಧ. ೩೮). [ಕರ್ಮ + ಅಂಗ]

**ಕರ್ಮಾಂತರ** (ನಾ). ೧. ಬೇರೆ ಕೆಲಸ; ಇತರ ಕೆಲಸ: ಮಾಟಕೂಟಪ್ರಾಸಾದಾನೇಕ ಕರ್ಮಾಂತರಕೆಂದು ಆ ಕಲಿಗೆಜೆಯ ಕೆಳಗೆ ತುಂಬಿನ ಹೊರೆಯಲು ಬಿಟ ಗರ್ದೆ (ಸೌಇಇ. XX, ೬೬-೫೭; 1118). ೨. ಮೃತರಾದವರಿಗಾಗಿ ಮಾಡತಕ್ಕ ಅಪರಕ್ರಿಯೆ; ಉತ್ತರಕ್ರಿಯೆ: ರಾಜಮಾತೆಯರ ಕರ್ಮಾಂತರಗಳು ಮುಗಿಯುತ್ತಿದ್ದಂತೆಯೆ ಭೀಷ್ಮರ ಆರೋಗ್ಯ ಕೆಟ್ಟಿತು (ಶಾಂತಲಾ. ೧೮೮). [ಸಂ.]

**ಕರ್ಮಾಂತಿಕ** (ನಾ). = ಕರ್ಮಾಂತರ ೨: ಇವರಿಬ್ಬರ ಕರ್ಮಾಂತಿಕಗಳನ್ನು ತೀರಿಸುವ ವೇಳೆಗೆ, ಸೋಮಪ್ಪನು ಸಾಗರದ ಸಾಹುಕಾರರಲ್ಲಿ ಸಾಲಗಾರನಾಗಿದ್ದನು (ತುಂಬಿಕೊ. ೫೦). [ಸಂ.]

**ಕರ್ಮಾಂತ್ಯ** (ನಾ). ಕೆಲಸದ ಕೊನೆ; ಕಾರ್ಯದ ಮುಗಿತಾಯ: ಮುಂದೆ ಗುರುವನು ಬಂಧುಜನವನು ಹಿಂದೆ ಕರ್ಮಾಂತ್ಯದಲಿ ಸೇವಕವೃಂದವನು ಕೊಂಡಾಡುವುದು ಸಾಹಿತ್ಯಭಾವವಿದು (ಕುವ್ಯಾಉ. ೩-೬೬). [ಕರ್ಮ + ಅಂತ್ಯ]

**ಕರ್ಮಾಣು** (ನಾ). [ಜೈನ] ಜೀವನಿಗೆ ಅಂಟಿಕೊಳ್ಳುವ ಪುಣ್ಯ ಅಥವಾ ಪಾಪರೂಪವಾದ ಪುದ್ಗಲದ ಪರಮಾಣು: ಜೀವರ ಕರ್ಮಾಧೀನವಾಗಿ ಪುದ್ಗಲಪರಮಾಣುಗಳು ಪುಣ್ಯರೂಪವಾಗಿಯೂ ಪಾಪರೂಪವಾಗಿಯೂ ಪರಿಣಮಿಸಿ . . . ಜೀವರೊಡನೆ ಸೇರಿಕೊಳ್ಳುತ್ತವೆ. ಇವು ಕರ್ಮಾಣುಗಳೆಂದು ವ್ಯವಹರಿಸಲ್ಪಡುವುವು (ಹಿಂದಸಾ. ೮೨). [ಕರ್ಮ + ಅಣು]

**ಕರ್ಮಾಧಿಕಾರ** (ನಾ). ಕೆಲಸಮಾಡುವ ಅರ್ಹತೆ ಅಥವಾ ವೈದಿಕ ವ್ರತಾದಿಗಳನ್ನು ನಡೆಯಿಸುವ ಅಧಿಕಾರ. [ಕರ್ಮ + ಅಧಿಕಾರ]

**ಕರ್ಮಾಧೀಶ** (ನಾ). ಕರ್ಮಗಳ ಒಡೆಯ; ಕರ್ಮಗಳನ್ನು ನಿಯಮಿಸುವವನು: ಕರ್ಮಫಲಂಗಳಂ ಮಾಡಿಸುವ ಕರ್ಮಾಧೀಶನೀಶ್ವರನಸಮಕರ್ತನು (ಬಸಪು. ೫೪-೧೫). [ಕರ್ಮ + ಅಧೀಶ]

**ಕರ್ಮಾನುಷ್ಠಾನ** (ನಾ). ೧. ಕಾರ್ಯವನ್ನು ಮಾಡುವಿಕೆ. ೨. ವಿಶಿಷ್ಟ ಕರ್ಮಗಳನ್ನು ಆಚರಿಸುವಿಕೆ. [ಕರ್ಮ + ಅನುಷ್ಠಾನ]

**ಕರ್ಮಾಯತ್ತ** (ಗು). ಕರ್ಮಕ್ಕೆ ಅಧೀನವಾದ; ಕರ್ಮವನ್ನು ಅನುಸರಿಸಿದ; ಕರ್ಮವಶವಾದ: ಪುರಾತನಕರ್ಮಾಯತ್ತಮಲ್ತೆ ದೇಹಿಗಳೆಸಕಂ (ಪಂಪಾಮಾ. ೯-೯೩). [ಕರ್ಮ + ಆಯತ್ತ]

**ಕರ್ಮಾರ** (ನಾ). ೧. ಕರ್ಮಕಾರ; ಯಂತ್ರದ ಕೆಲಸಮಾಡುವವನು; ಶಿಲ್ಪಿ. ೨. ಕಬ್ಬಿಣದ ಕೆಲಸಮಾಡುವವನು; ಕಮ್ಮಾರ: 'ವಿಶ್ವಕರ್ಮ' (ಪ್ರಜಾಪತಿ) ಮತ್ತು 'ಕರ್ಮಾರ' (ಬ್ರಹ್ಮಣಸ್ಪತಿ) ಇವರು ಒಂದು ಬಗೆಯವರಾಗಿ ತೋರುತ್ತಾರೆ (ಕರ್ಣಾಟ. ೧೬). ೩. ಬಿದಿರು. [ಸಂ.]

**ಕರ್ಮಾರ್ಥ** (ನಾ). [ವ್ಯಾಕ] ಕರ್ಮರೂಪವಾದ ಅರ್ಥ: ಧಾತುವಿನ ಮೇಲೆ ಆಖ್ಯಾತಪ್ರತ್ಯಯಗಳು ಕರ್ತ್ರರ್ಥದಲ್ಲಿಯೂ ಕರ್ಮಾರ್ಥದಲ್ಲಿಯೂ ಬರುತ್ತವೆ (ಕೈಪಿಡಿ. ೪೩). 'ಕ್ರಿಯಾರ್ಥ' ಪರಾ. [ಕರ್ಮ + ಅರ್ಥ]

**ಕರ್ಮಾಲಯ** (ನಾ). ಕೆಲಸಮಾಡುವ ಸ್ಥಳ; ಕಾರ್ಖಾನೆ; ಕಾರ್ಯಾಗಾರ: ಮೋಟರುಗಳನ್ನು ತಯಾರಿಸುವ ಕಾರ್ಖಾನೆಗಳೆಂದರೆ, ಅವುಗಳಿಗಿಂತ ಹೆಚ್ಚಿನ ವ್ಯವಸ್ಥೆಯಿರುವ ಕರ್ಮಾಲಯಗಳಿಲ್ಲ (ಬಾಲಪ್ರ. I, ೪೧೨). [ಕರ್ಮ + ಆಲಯ]

**ಕರ್ಮಿ** (ನಾ). ೧. ಕೆಲಸಮಾಡುವವನು; ಕೆಲಸದಲ್ಲಿ ನಿರತನಾದವನು; ಕಾರ್ಮಿಕ. ೨. ಪುಣ್ಯಪಾಪಗಳನ್ನುಂಟುಮಾಡುವ ಕೆಲಸಗಳನ್ನು ಮಾಡುವವನು: ಭವಭವದಲ್ಲಿ ಬಹ ಕರ್ಮಿಯು ನಾನೇನೆಂಬೆ (ಅವಹಂ. ೧೬೭–೭೯೪); ನರಕದಲ್ಲಿ ಬೀಳುವ ಕರ್ಮಿಗಳಿಗೆ ಕೂಡಲಸಂಗನ ಶರಣರನುಭಾವ ನೆಲೆಗೊಳ್ಳದು (ಬಸವ. ೮೫೮); ಸುಖದುಃಖಕ್ಕೆ ಮಱುಗುವ ಕರ್ಮಿಗಳು ನಮಗೆಂತು ಸೇರುವುದುಚಿತಬೋಧೆಗಳು (ಕೌಶಿರಾ. ೨೩–೧೭). ೩. ದುಷ್ಕರ್ಮಿ; ಪಾಪಿಷ್ಠ: ಕೋಟಿಯನು ಕೊಟ್ಟರೂ ಕೂಟ ಕರ್ಮಿಯು ಹೊಲ್ಲ (ಸರ್ವಜ್ಞ. ೪೨೯). [< ಸಂ. ಕರ್ಮಿನ್]

**ಕರ್ಮಿಗ** (ನಾ). ಕೆಲಸಗಾರ; ಕಾರ್ಮಿಕ: ಬಡಗಿ ಬೇಸಾಯಿ ಕರ್ಮಿಗರೇನು ಯೋಗಿಗಳೊ! ಮುಡುಪವರ ಮನಸೆಲ್ಲ ಕೈಯ ದುಡಿತಕ್ಕೆ (ಮಂಕುಕ. ೭೭೮). [ಕರ್ಮ + -ಇಗ]

**ಕರ್ಮಿಷ್ಠ** (ನಾ). ೧. ಕಾರ್ಯನಿಷ್ಠ; ಬಹುಚಟುವಟಿಕೆಯುಳ್ಳವನು. ೨. ಕರ್ಮದಲ್ಲಿಯೇ ನಿರತನಾದವನು: ಕಷ್ಟನಂ ಕಳನಂ ಸಕಳಕರ್ಮಿಷ್ಠ[ಪಾಠಾಂ. ಷ್ಟ]ನಂ ದುರ್ಮಲ ನಿಳಯನಂ . . . ದುಷ್ಟಮಾನಸನಂ (ಬಸವು.೭೦–೫೫). [ಸಂ.]

**ಕರ್ಮೀನು** (ನಾ). (ಕರಾ) ಒಣಗಿಸಿದ ಮೀನು. [< ಕರ್$_2$ ? + ಮೀನು (< ಮೀನ್$_3$)]

**ಕರ್ಮೀರ** (ಗು). ೧. ಮಿಶ್ರವರ್ಣವುಳ್ಳ. (ನಾ). ೨. ಮಿಶ್ರವರ್ಣ. [ಸಂ.]

**ಕರ್ಮೀಸೆ** (ನಾ). ಕರಿಯ ಮೀಸೆ; ಕಪ್ಪು ಮೀಸೆ: ಗಂಡಸ್ಥಲವನ್ನೆಕೊನರುವ ಕರ್ಮೀಸೆ ತೊಂಡೆವಣ್ದುಟಿ ದೋರೆವಲ್ಲು (ಮೋಹತ. ೧೮–೬೩). [< ಕರಿದು + ಮೀಸೆ]

**ಕರ್ಮುಗಿಲ್, ಕರ್ಮುಗಿಲು** (ನಾ). ಕಪ್ಪು ಮೋಡ; ನೀಲಮೇಘ: ಪೊಳೆದಪುವು ಕಾರ ಕರ್ಮುಗಿಲೊಳಗೆಳಮಿಂಚುಗಳ್ (ಕಾದಂಉ. ೪೭೮). **ಕರ್ಮುಗಿಲು:** ಕಪ್ಪು ಹೆಪ್ಪಿನ ಕುರುಳ ಕರ್ಮುಗಿಲ ಬಸಿರಿಂದ ತೊಟ್ಟನೊಡೆಹೊಮ್ಮಿ, ಬಾನ ಈ ಕರೆಯಿಂದ ಆ ಕರೆಗೆ ಚಿಮ್ಮಿ ಒಡನಡಗುವುದೆ ತೇಜಂ (ಹೂಂಗಳು. ೧೭–೫). [< ಕರಿದು + ಮುಗಿಲ್]

**ಕರ್ಮುಗಿಲು** 'ಕರ್ಮುಗಿಲ್' ನೋ.

**ಕರ್ಮೂಗು** (ನಾ). ಕರಿಯ ಮೂಗು; ಕಪ್ಪುಬಣ್ಣದ ಮೂಗು: ಅಗುಳಿಸುತ ಬಾಯ ಸವರಿಯೊಗ್ಗಿಸುತ ಕ[ಪಾಠಾಂ. ಕಾ]ರ್ಮೂಗಿಂದ ನೆಲನ ವಾಸನಿಸಿ ಮೇಘಾಳಿಯನಾರೈವ ಚತುಷ್ಪದಿ ವೇಗದಿ ನಡೆದು ವಾಕ್ಷಣದಿ (ಮೋಹತ. ೧೯–೧೩). [< ಕರಿದು + ಮೂಗು$_1$]

**ಕರ್ಮೇಂದ್ರಿಯ** (ನಾ). ಕೆಲಸ ಮಾಡುವ ಅಥವಾ ಕರ್ಮಕ್ಕೆ ಕಾರಣವಾಗುವ ಇಂದ್ರಿಯ; ಕೈ, ಕಾಲು, ನಾಲಗೆ, ಜನನೇಂದ್ರಿಯ ಹಾಗೂ ಅಸನದ್ವಾರ: ವಾಕ್ಪಾಣಿ ಪಾದ ಪಾಯು ಗುಹ್ಯಂಗಳೆಂಬ ಕರ್ಮೇಂದ್ರಿಯಗಳೈದರ್ಕೆಯುಂ ಮನ ತಾನೆ ಪ್ರಾಣ ಮಾದುದು (ಮನೋವಿ. ೧–೧೪ ಟೀಕು); ಜ್ಞಾನೇಂದ್ರಿಯಂಗಳ ನೆನಹುಗೆಡಿಸಿ ಕರ್ಮೇಂದ್ರಿಯಂಗಳ ಕಾಲ ಮುಱಿದು (ಘನವ. ೫೫). [ಕರ್ಮ + ಇಂದ್ರಿಯ]

**ಕರ್ಮೋಡ** (ನಾ). = ಕರ್ಮುಗಿಲ್: ಆಗ ಪೂರ್ವಾಕಾಶದಲ್ಲಿ ಒಂದು ದೊಡ್ಡ ಕರ್ಮೋಡ ಸೂರ್ಯಬಿಂಬವನ್ನು ಪೂರ್ತಿಯಾಗಿ ಮುಚ್ಚಿತು (ಶಾಂತಲಾ. ೨೭೦). [< ಕರಿದು + ಮೋಡ$_1$]

**ಕರ್ರಗೆ** (ಅ). ಕಪ್ಪಾಗಿ: ರಾಮನಾಗಲಿ ಸೀತೆಯೇ ಆಗಲಿ ಮುಖವನ್ನು ಎಂದೂ ಸೊಟ್ಟಗೆ ಮಾಡಿಕೊಂಡಿರಲಿಲ್ಲ. ಕರ್ರಗೆ ಮಾಡಿಕೊಂಡಿರಲಿಲ್ಲ (ವಾರಾಕ್ಕೃ.೫೧); ಕಂಟದಿಂದ ಅಕ್ಷರಗಳನ್ನು ಕೊರೆದು ಅನಂತರ ಅವು ಕರ್ರಗೆ ಕಾಣುವಂತೆ ಮಾಡುತ್ತಿದ್ದರು (ಕನ್ನಸಂ. ೪೫). [< ಕರಿದು + -ಅಗೆ$_3$]

**ಕರ್ರನೆ** 'ಕಱ್ಱನೆ' ನೋ.

**ಕರ್ರಿಮರ** (ನಾ). ಒಂದು ಬಗೆಯ ಮರ: (ಮೈಔಗಿ. ೩೫–೬೮೪). [?]

**ಕರ್ಲಕ್ಕಿ, ಕರಿಲಕ್ಕಿ, ಕರಿಲೊಕ್ಕಿ** (ನಾ). ಒಂದು ಬಗೆಯ ಸಸ್ಯ. **ಕರಿಲಕ್ಕಿ:** ಕರಿನೆಕ್ಕಿ, ಕರಿಲಕ್ಕಿ, ನೆಚ್ಚುಕಡ್ಡಿ (ಮೈಔಗಿ. ೪೮–೯೫೪). **ಕರಿಲೊಕ್ಕಿ:** ಕರಿಲೊಕ್ಕಿಯ ರಸ . . . ಇದಂ ಹದದಲ್ಲಿ ಕಾಸಿ (ವಿವೈವಿ. ೭೨). [< ಕರಿದು + ಲಕ್ಕಿ]

**ಕರ್ಲು$_1$** 'ಕಱಲು' ನೋ.

**ಕರ್ಲು$_2$** 'ಕರಲು$_2$' ನೋ.

**ಕರ್ಲುಮಾಳ** (ನಾ). ಕರಲುಭೂಮಿ; ಕರಲು ಕಲ್ಲುಗಳ ಬಯಲು, —ಮೈದಾನ: ತೆಂಕಲ್ಲಿನ ಮೂಡವತ್ತು ಕರ್ಲುಮಾಳದಲ್ಲಿ ಮೂಡಮುಖನೆ ೧ (ಎಕ. III, ತಿರುಮ. ೬೩–೮೭೧; 1748). [ಕರ್ಲು$_1$ (< ಕಱಲು) + ಮಾಳ$_4$]

**ಕರ್ವಕ್ಕ** (ನಾ). ಕೃಷ್ಣಪಕ್ಷ: ತಾಮಸದ ಕರ್ವಕ್ಕದೊಳಂ (ಅಂಜಚ. ೧–೭೬). [< ಕರಿದು + ಪಕ್ಕ]

**ಕರ್ವಟ** (ನಾ). ಇನ್ನೂರರಿಂದ ನಾನೂರು ಹಳ್ಳಿಗಳ ನಾಡಿಗೆ ಕೇಂದ್ರವಾದ ಊರು; ವ್ಯಾಪಾರ ಕೇಂದ್ರವಾದ ಊರು. [ಸಂ. ಕರ್ವಟ, ಖರ್ವಟ]

**ಕರ್ವಟ್ಟೆ** (ನಾ). ಕರಿಯ ಬಟ್ಟೆ; ಕಪ್ಪುವಸ್ತ್ರ: ನವಮುಕುರವನೊಳಗಿಟ್ಟ ಕರ್ವಟ್ಟೆಯ ಗವಸಣಿಗೆಯಿದೆಂಬಂತೆ (ಶ್ರೀಪಾಲ. ೨–೯೬). [< ಕರಿದು + ಬಟ್ಟೆ$_2$]

**ಕರ್ವಣಿ$_1$, ಕರಿಮಣಿ, ಕರ್ಮಣಿ$_1$** (ನಾ). ೧. ಕಪ್ಪುಬಣ್ಣದ ಮಣಿ; ಇಂದ್ರನೀಲ. 'ಕರ್ವಣಿವಚ್ಚ' ಪರಾ. **ಕರಿಮಣಿ:** ೨. ಮೇಣ, ಮಣ್ಣು ಮೊದಲಾದುವುಗಳಿಂದ ಮಾಡಿದ, ಹೆಂಗಸರು ಕೊರಳಲ್ಲಿ ಧರಿಸುವ ಕರಿಯ ಬಣ್ಣದ ಮಣಿ: ಕತ್ತಿಗೆ ಕರಿಮಣಿಸರವೊಂದು (ರಾಮಾನೆ. ೧೧೦). **ಕರ್ಮಣಿ$_1$:** ೧. ಕರ್ಮಣಿಯ ಪಾಸರೆಯನ್ನೂ . . . ರಂಗುಮಾಣಿಕದ ಅಗಳ್ತೆಯನ್ನೂ, ನೀರಿನ ಧಾರೆಯನ್ನೂ ಕವಿಯು ವಿವರವಾಗಿ ವರ್ಣಿಸಿರುವನು (ಬಾಲಪ್ರ. II, ೬೨೪). ೨. ಕರ್ಮಣಿ ಸರದೊಳ್ ಚೆಂಬವಳಮಂ ಕೋದಂತಿರೆ (ರಾಮಾಶ್ವ. ೬–೧೫). [< ಕರಿದು + ಮಣಿ$_3$]

**ಕರ್ವಣಿ$_2$** (ನಾ). ಒಂದು ಬಗೆಯ ತೆರಿಗೆ, —ಸುಂಕ (?): ಊ[ರ] ಮೇಲೆ ಕರ್ವ್ವಣಿವೃದ್ಧಿಯಲ್ ಮೂಲಸ್ಥಾನ ಕಲಿದೇವ ಶ್ವಾಮಿಗೆ ವಿಷ್ಣುದೇವರ್ಗ್ಗೆ (ಸೌಇಇ. XI–i, ೯೨–೩೨; 1054). [?]

**ಕರ್ವಣಿವಚ್ಚ** (ನಾ). ಕಪ್ಪು ಮಣಿಯ ಆಭರಣ ; ಇಂದ್ರನೀಲದ ಅಲಂಕಾರ : ಸಂದ ಕರ್ವಣಿವಚ್ಚಂ ಕಿವಿಯೊಳ್ (ಚಿಕವಿ. ೬–೧೧).

[ಕರ್ವಣಿ$_1$ + ಪಚ್ಚ$_3$]

**ಕರ್ವಣ್ಣ, ಕರ್ಬಣ್ಣ** (ನಾ). ಕರಿಯ ಬಣ್ಣ ; ಕಪ್ಪುಬಣ್ಣ : ಎಲ್ಲಾ ಬಣ್ಣವೊಳಕೊಂಡ ಕರ್ವಣ್ಣದಂಗದಿಂದೆಲ್ಲ ಲಕ್ಷಣದಿಂದ (ವೀಶೈಪು. ೬–೫–೧೬); ಕಂಗಾಣಿಸದ ಪಾರಿಯ ಪಟ್ಟೆ ಕರ್ವಣ್ಣ ಗೊಂಗಡಿ ಮುಸುಕಿಟ್ಟುಕೊಂಡು (ಮೋಹತ. ೧೮–೨೩). **ಕರ್ಬಣ್ಣ** : ರಮಣಿಯರುಗಳ ಬಲ್ಮೊಲೆದೊಟ್ಟ ಕರ್ಬಣ್ಣ ತಮವೆಂದು ಹಿಡಿದೌಕಿದನು (ಮೋಹತ. ೧೯–೫೫).

[< ಕರಿದು + ಬಣ್ಣ]

**ಕರ್ವಸುರಿ, ಕಬ್ಬಸುರಿ, ಕರ್ಬಸುರಿ**(ನಾ). ಒಂದು ಬಗೆಯ ಮರ; ಕರಿಬಸುರಿಮರ : ತತ ಅಗತ್ಯ ಕರ್ವಸುರಿಗೊಳ (ಇಅ. VII, ೩೦೨–೪೮; 694). **ಕಬ್ಬಸುರಿ** : "ಪಕ್ಷಃ, ಜಟಿನ್, ಪಕ್ಕಟಿನ್ – ಈ ೩ ಕಬ್ಬಸುರಿಯ ಮರ"(ನಾಚಿರಾ. ೧೦೭). **ಕರ್ಬಸುರಿ**: "ಪರ್ಕಟಿ – ಕಲ್ಲತ್ತಿ, ಕರ್ಬಸುರಿ" (ಒಷಧಿ. ೯೧).

[< ಕರಿದು + ಬಸುರಿ (< ಬಸರಿ)]

**ಕರ್ವಾಳೆ** (ನಾ). ಕರಿಯ ಬಾಳದ ಬೇರು, —ಲಾಮಂಚ (?) : ಹಲಸಂದೆ, ಪರ್ಪಾಟಕ, ಕರ್ವಾಳ, ಕಳವಿಗೆಬೇರು . . . ಇವುಗಳನ್ನು ಕಷಾಯ ಕಾಯಿಸಿ ಜೇನುತುಪ್ಪವೆರಸಿ ಕುಡಿಯಲು ಪಿತ್ತಜ್ವರ ಪರಿಹಾರವಾಗುವುದು (ಸಕವೈ. ೭೯).

[< ಕರ್ಬಾಳ ?]

**ಕರ್ವಾಳೆ, ಕಬ್ಬಾಳೆ, ಕರಬಾಳೆ, ಕರಿಬಾಳೆ** (ನಾ). ಬಾಳೆಯಲ್ಲಿ ಒಂದು ಜಾತಿ ; ಕಪ್ಪುಬಾಳೆ : ಕರ್ವಾಳೆಯ ಕಂಬವೊ ತೊಡೆಯೋ (ನೇಮಿಸಂ. ೧೨–೨೨); ಕರ್ವಾಳೆಯನೇಳಿಪ ನುಣ್ದೊಡೆ (ಜಯಕಾ. ೨–೨೧). **ಕಬ್ಬಾಳೆ** : ಉರಿವ ಕಬ್ಬಾಳೆಯ ಪೊರೆವ ನಾಮಾಂಕಿತ ವರವೃಕ್ಷ (ಮೋಹತ. ೭–೬); ಎಸೆವಾ ದೇವಾಳೆ ಕಬ್ಬಾಳೆ ಹಸುರುಗುಂದದ ಪಚ್ಚೆ ನಾಡವು ಮಧುರಂಗ ಪಸರಿಸಿ ಮೆಱೆದುವರ್ತಿಯಲಿ (ಕಂನವಿ.೫–೮೬). **ಕರಬಾಳೆ** : ನೋಡು ಸುನಿ, ಹತ್ತು ಕರಬಾಳೆ ಹಣ್ಣುಗಳನ್ನು ತಂದುಕೊಡು (ಕಾವೇರಿ. ೧೯೨). **ಕರಿಬಾಳೆ** : ಬಾಳೆಯ ಕುಲದಲ್ಲಿ ಗುಜರಾಥಿ ರಸಬಾಳೆ ಸುಗಂಧಿ ಕರಿಬಾಳೆ (ಕೃಷಿಪ್ರ. ೧೫೬).

[< ಕರಿದು + ಬಾಳೆ$_1$ (< ಬಾೞೆ). / ತಮಿ. ಕರುವಾೞೈ]

**ಕರ್ವಿಲ್** 'ಕರ್ವುವಿಲ್' ನೋ.

**ಕರ್ವಿಲ್ಲ** 'ಕರ್ವುವಿಲ್ಲ' ನೋ.

**ಕರ್ವಿಲ್ಲು** 'ಕರ್ವುವಿಲ್' ನೋ.

**ಕರ್ವಿಲ್ಲುಗಾಱ, ಕಬ್ಬುವಿಲುಗಾಱ** (ನಾ). ಕಬ್ಬನ್ನೇ ಬಿಲ್ಲು ಮಾಡಿಕೊಂಡವನು; ಕಾಮ; ಮನ್ಮಥ : ಗಾಱಾದ ಶಂಬರಾಸುರನೆಂದು ಕರ್ವಿಲ್ಲುಗಾಱನ ಕೊಂಡಾಡಿದಳು (ಮೋಹತ. ೧೧–೬೭). **ಕಬ್ಬುವಿಲುಗಾಱ** : ನನೆಗಣೆಯನೊಲಿದರ್ಚಿಸುವ ಮೋಹನದ ಸಿರಿಯೊ ಕಬ್ಬುವಿಲುಗಾಱನೆ ನಲವಿನಾರಾಧಿಸುವ ಮಂತ್ರಾಧಿ ದೇವತೆಯೊ (ಸಾಳ್ವಭಾ. ೨–೨೫).

[ಕರ್ವಿಲ್ಲು (< ಕರ್ವುವಿಲ್) + -ಗಾಱ]

**ಕರ್ವು$_1$, ಕಬ್ಬು$_2$, ಕರ್ಬು, ಖರ್ವು** (ನಾ). ಇಕ್ಷುದಂಡ ; ರಸಾಲ : "ಕರ್ವಿನಲಿಕ್ಷು" (ಕರ್ಣಾನಿ. ೫೭); ಮೊದಲೊಳ್ ಸಮಾಸಪದಮುಮನೊದವಿಸಿ ಪೇೞ್ದುದಱ ತುದಿಯೊಳಸಮಾಸಪದಾಸ್ಪದಮಾಗಿ ನಿಱಿಸೆ ಕರ್ವಿ[ಪಾಠಾಂ. ಬ್ಬಿ]ನ ತುದಿಯಂತಿರೆ ವಿರಸಮುಕ್ಕುಂ (ಕವಿರಾ. ೨–೮೬); ಒರ್ವಳ್ ಕರ್ವಿನ ಬಿಲ್ಲ ತಿರುವಿಂ ಬರ್ದುಂಕಿ ಬರ್ಪಲರಂಬು ಬರ್ಪಂತೆ ಬಂದು (ಪಂಪಭಾ. ೪–೩೭ ವ); ಕರ್ವಿನ ಮಡಲಂತೆ ಕವಲ್ತುವಿರ್ದ ಕೆಯ್ದೊಲಗಳೆಸೆಗುಂ (ಕಾವ್ಯಾವ. ೨೦೭); ಉಭಯಪಕ್ಷದೊಳ್ತೀವಿ ಕರ್ವಿನ ತೋಂಟ ಪೂದೋಂಟಗಳ್ ಮೆಱೆದುವು (ಪದ್ಮರಾ. ೮–೧೮).

**ಕಬ್ಬು$_3$** : ಇಕ್ಷುಯಂತ್ರಗಳೊಳ್ ಕಬ್ಬಂ ಪಿೞಿವಂತೆ ಪಿೞಿವರುಂ (ಆದಿಪು. ೫–೮೫ ವ); ಕಬ್ಬು ಮೊದಲಿಂದಂ ಕಡೆವರಮಿನಿದಂತೆ ಕೆಲಂಬರಾದ್ಯಂತ ಮೊಳ್ಪಿದರ್ (ಧರ್ಮಾಮೃ. ೭–೨೪೧); ಸಂದುಸಂದನು ಕಡಿದು ಕಬ್ಬನು ತಂದು ಗಾಣದಲಿಕ್ಕಿ ಅರೆದಡೆ ಬೆಂದು ಪಾಕ ಗೂಳ ಸಕ್ಕರೆಯಾಗಿ ನೊಂದೆನೆಂದು ಸವಿಯ ಬಿಟ್ಟತ್ತೆ (ಮಹಾದೇ. ೫೮); ಐರಾವತಕೆ ಕಬ್ಬಿನಲಿಱಿದರಂಚಿಕೆಯುಂಟೆ (ಕುವ್ಯಾಮ್ರೋ. ೫–೫೫); ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇಕೆ ಕಬ್ಬ ಹೇಳಿಲೆ ಸರಸ್ವತಿಯೆ (ಭರಜ. ೧–೬). **ಕರ್ಬು** : ವೈನಾಕನೆಂಬೊನಾತನೊಂದು ದಿವಸಂ ಕರ್ಬಿನ ಕೆಯ್ಯನುೞಿಸ್ವಂ (ವಡ್ಡಾರಾ. ೧೮–೪); ಕರ್ಬಿನ ಬಿಲ್ಲ ಕೊಂಕಿನಂತೆ ಕೊಂಕಿಯುಂ . . . ಪುರ್ವುಗಳ್ (ಪಂಪಭಾ. ೨–೩೯ ವ); ಬೆಳಸಂ ಪೇಳ್ವಡೆ ಕರ್ಬ್ಬುಂ ಕಳವೆಯುಮಲೆಯಡಕೆ ತೆಂಗು ಮಾಉ ಫಲಂ (ಎಕ. VIII, ಸಾಗರ. ೧೧೯–೪೭; 1047); ಕರ್ಬಿನ ಕೋಲ್ಗಳ್ ಬಿಡದೊಂದನೊಂದೊರಸೆ ಪರ್ವಾಘಾತದಿಂದುರ್ಬಿ ಭೋರೆನೆ ಪಾಯ್ವುರ್ಪರಸಪ್ರವಾಹಜಯಂ (ಜಗವಿ. ೨–೯); ನೆಲ್ಲುಂ ಕೌಂಗಿಮ್ಮಾವುಂ ಮಲ್ಲಿಗೆಯುಂ ಬೆಳೆವುವಲ್ಲಿ (ಕರ್ಬಿನ ರಸದಿಂ) (ಶಮುದ. ಮು. ೭೯ ವೃತ್ತಿ). **ಖರ್ವು** : ಅನಿಮಿಷರ್ಗೀಯಲೆಂದಿನಿದನಿಂಬಿಟ್ಟು ಭೂವನಿತೆಯ ಕೈಯಲ್ಲಿ ಕೊಟ್ಟು ಘನಹರುಷದೊಳಟ್ಟಿದನು ನಾಗರೆಱೆಯನೆಂಬಿನ ಖರ್ವು [ಪಾಠಾಂ. ರ್ವ] ವಾಟೆಯೊಪ್ಪಿದವು (ಭೈರವೇ. ೧–೬೯).

[ದೇ. ‖ ತಮಿ. ಕರುಮ್ಬು ; ಮಲ. ಕರಿಮ್ಬು ; ತುಳು. ಕಮ್ಬುರ್]

**ಕರ್ವು$_2$** (ನಾ). ದೊಂಬಿ ; ದಂಗೆ : ಬೆಣ್ಣಗೂರ ಕರ್ವ್ವವೆ ಬಾಣಸಾಮಿ ಮಗನ್ ಪುಱಕಾಮನ್ ನೂಱು ಮಾನಸ ಒಡವೋಗುತಿರೆ ಅಱದಿಯೊಳ್ ಸತ್ತನ್ (ಎಕ. X, ಬಾರಿಂಗ್. ೪೫–೫; ಸು. 880 ?).

[ದೇ. ‖ ತಮಿ. ಕರುವಿ]

**ಕರ್ವುಗೋಲ್** (ನಾ). ಕಬ್ಬಿನ ಕೋಲು ; ಕಬ್ಬಿನ ಜಲ್ಲೆ, —ಗಣೆ : ಮಿಳಿರ್ವ ಮಿಡಿಯ ಗಿಳಿಯ ನುಡಿಯ ಪರಿವ ಕಾಲ ಕರ್ವುಗೋಲ ಚೆಲ್ವ ನಾಂತು ತೋರ್ಪ ಬನದ ನಡುವೆ (ಕಬ್ಬಿಕಾ. ೩೪೩).

[ಕರ್ವು$_1$ + ಕೋಲ್$_1$]

**ಕರ್ವುದೋಂಟ, ಕಬ್ಬುದೋಂಟ, ಕರ್ಬುದೋಂಟ, ಕರ್ವುದೋಟ** (ನಾ). ಕಬ್ಬಿನ ತೋಟ : ಈ ಕೆಂದಳಿರ ತುಱುಗಲೀಯಂಚೆಯಾ ಕರ್ವುದೋಂಟಂ (ಕಬ್ಬಿಕಾ. ೧೧೬). **ಕಬ್ಬುದೋಂಟ** : ಒಗುವ ಚೆಂದೆಂಗಿನೆಳನೀರ್ಗಳಿಂ . . . ದಾಡಿಮುದ ಫಳದ ರಸದಿಂದ ಕಬ್ಬುದೋಂಟ ಮಿಗೆ ಬೆಳೆದು (ಸೌಂದಪು. ೫–೯೩). **ಕರ್ಬುದೋಂಟ** : ಕುಱುಯ್ತು ಹಿಂಡಂ ತೋಳಂ ಪೊಕ್ಕಂತೆಯುಂ ಕರ್ಬ್ಬುದೋಂಟವನಾನೆ ಪೊಕ್ಕಂತೆಯುಂ . . . ಕುತ್ತಿ ನೂಂಕುತ್ತ ಬಪ್ಪಾಗಳು (ಎಕ. VIII, ಸೊರಬ. ೧೭೫–೧೦; 1156); ಕದಳೀಫಳದ ರಸದ ಪರಿಕಾಲ್ಗಳಿಂ ದೇವ ಮುದದಿಂದೆ ಕರ್ಬುದೋಂಟಂ ಬೆಳೆದವೆಲೆ ದೇವ (ನಂಬಿರ. ೯–೨೨); ಗಿರಿದುರ್ಗಂ ತಿಱಿಕಲ್ ಸಮುಗ್ರ ವನದುರ್ಗಂ ಕರ್ಬುದೋಂಟಂ ಜಲೋದರ ದುರ್ಗಂ ಕಡುಪಿಂದ ಮಿಾಂಟ ಮೊಗೆವಂತಾಪೋಕಶನಂ (ಸೂಕ್ತಿಸು. ೧–೨೩). **ಕರ್ವುದೋಟ** : ಶಾಲಿಯ ಗದ್ದೆ ಕರ್ವುದೋಟ ನಾನಾಪುಷ್ಪಜಾಲದ ಕನದನ್ನಸತ್ರದಾಲಯದಾ ಮೋಹದಗ್ಗಹವೆಸೆವುವು (ಕಂನವಿ. ೨–೧೨). [ಕರ್ವು$_1$ + ತೋಂಟ]

**ಕರ್ವುದೋಟ** 'ಕರ್ವುದೋಂಟ' ನೋ.

**ಕರ್ವುವಿಲ್, ಕಬ್ಬುವಿಲ್, ಕಬ್ಬುವಿಲು, ಕಬ್ಬುವಿಲ್ಲು, ಕರ್ಬುವಿಲ್, ಕರ್ವಿಲ್, ಕರ್ವಿಲ್ಲು, ಕರ್ವುವಿಲ್ಲು** (ನಾ). ಕಬ್ಬಿನ ಬಿಲ್ಲು ; ಇಕ್ಷು–ಚಾಪ ; ಮನ್ಮಥನ ಬಿಲ್ಲು : ಕರ್ವುವಿಲ್ಗದೇಂ ಸಿಲ್ಗದೆ ಕಂತು ಮಾಡಿದನೊ ತೋಮುರದುಪ್ಪರವಟ್ಟದೊಪ್ಪಮುಂ (ವರ್ಧಪು. ೨–೩); ಪುರ್ವಿನ ಕೊರ್ವು ಕರ್ವುವಿಲ್ಲಂ ಕೀಳ್ಮಾಡೆ (ಗಂಕ. ೨–೧೦೫ ವ);

ಇದರ್ಕೆ ತಕ್ಕುದಂ ಮಾಱ್ಪೆನೆಂದು ಕರ್ವುವಿಲ್ಗೆ ಕೈಯಂ ನೀಡೆ (ಕಬ್ಬಿಕಾ. ೨೨೮). **ಕಬ್ಬುವಿಲ್**: ಕಬ್ಬುವಿಲ್ ತುಂಬಿವೆದೆ ಪೂಸರಲ್ ಪೂಣ್ದಸಲ್ ನಿಬ್ಬರಮಿದೆಂದು ಮದನಂ (ಜೈಮಿಭಾ. ೬-೧೭). **ಕಬ್ಬುವಿಲು**: 'ಕಬ್ಬುವಿಲುಗಾಱ' ಪರಾ. **ಕಬ್ಬುವಿಲ್ಲು**: ಅಲರು ಗಣೆಗಳ ಕಬ್ಬುವಿಲ್ಲಿನ ತಳಿತ ಮಾವಿನ ಝಲ್ಲರಿಯ ಮಂಡಳಿಯ ಮನ್ಮಥ ರಾಜ ಸುಳಿದನು ರಾಮನಿದಿರಿನಲಿ (ತೊರರಾ. ೩-೧೨-೩೭); ಇದು ಮನೋಜನ ಕಬ್ಬುವಿಲ್ಲುಲಿ ಇದು ರತಿಯ ನೂಪುರದ ನುಣ್ಚರ (ಸಾಳ್ವಭಾ. ೮-೩೫). **ಕರ್ಬುವಿಲ್**: ಅಲರಂಬು ಕರ್ಬುವಿಲ್ ಕೋಮಲ ಸರಸಿಜನಾಳತಂತು ತಿರು (ಕವಿರಾ. ೩-೧೨೧); ಕರ್ಬುವಿಲ್ಗಳ ನೇವರಿಪವೊಲು ಮತ್ತಮೊರ್ವಳು ದೇವಿ ಕುಡುವುರ್ವುಗಳ ತಿದ್ದಿದಳೊಂದು ಸೊಬಗಿನಲಿ (ಸಾಳ್ವಭಾ. ೨೦-೨೩). **ಕರ್ವಿಲ್**: ನಿಡುಪುರ್ವಿಂಗೆ ಕರ್ವಿಲ್ಲ ಬಿಂಕಮಂ ಸುಂಕಮಿಕ್ಕಿದಂತೆ ನಗೆಮೊಗಕ್ಕೆ ಚಂದ್ರಮಂಡಲದೊಪ್ಪಮಂ ಕಪ್ಪಮಿಕ್ಕಿದಂತೆ (ಪುಣ್ಯಾಸ್ರ. ೨-೩೨ ವ); ಕಾಮಂ ಕಿಱುದುಂಬಿಯ ತಿರುವಂ ಕರ್ವಿಲ್ಗೇಱಿಸುತ (ಜಯಕಾ. ೪-೧೩); ಸ್ಮರನ ಕರ್ವಿಲ್ಲೆನಲು ಕನ್ನಡಕಿರುವ ವೊದಲಕ್ಷರದ ಭಾವವ ಧರಿಸಿ ಮೆರೆದಿಹವವಳ ಶ್ರುತಿಗಳ್ (ಜಿನಭಾ. ೧೮-೩೮). **ಕರ್ವಿಲ್ಲು**: ಇನಿರಸವಾಂತ ಕರ್ವಿಲ್ಲಿಗೆ ಭ್ರಮರ ಸಿಂಜಿನಿಗೈದು (ಮೋಹತ. ೫-೩೭). **ಕರ್ವುವಿಲ್ಲು**: ದಳ್ಳುರಿ ಸುತ್ತಿ ಸ್ಮರನ ಬಿಗಿದ ಬತ್ತಳಿಕೆ ಕರ್ವುವಿಲ್ಲು ಸಹಿತ ಸುಟ್ಟುಗಿದುದು ಉರಿ ನಭಸ್ಥಳಕೆ (ಮೋಹತ. ೭-೩೯). [ಕರ್ವು$_1$ + ಬಿಲ್$_2$]

**ಕರ್ವುವಿಲ್ಲ, ಕಬ್ಬುಬಿಲ್ಲ, ಕಬ್ಬುವಿಲ್ಲ, ಕರ್ಬುವಿಲ್ಲ, ಕರ್ವಿಲ್ಲ, ಕೌರ್ವಿಲ್ಲ** (ನಾ). ಕಬ್ಬನ್ನೇ ಬಿಲ್ಲುಮಾಡಿಕೊಂಡವನು; ಮನ್ಮಥ: "ಮದನಂ ಮಿಗೆ ಕರ್ವು ವಿಲ್ಲನೇ" (ಕರ್ಣಾನಿ. ೫೭); ರಕ್ಕಸಂ ಕರ್ವುವಿಲ್ಲ ನಟ್ಟುಳಿಗಾಱದೊಳ್ಪೆತನೆ ಪಲವುವಿಧದಿಂದೆಸೆವ ನರ್ತನಗಳ . . . ಆಡೆ (ಸಿದ್ಧೇಪು. ೫-೮); ಕರ್ವುವಿಲ್ಲನುರವಣಿಸುತ್ತೆ ಗಿಳಿದೇರನಡರಿ ಮಱಿದುಂಬಿ ತಿಂತಿಣಿ ನಾರಿಯಂ ಟಂಕರಿಸುವುದುಂ (ಶೇಷರಾ. ೭೩-೪೩). **ಕಬ್ಬುಬಿಲ್ಲ**: ಕಬ್ಬುಬಿಲ್ಲನ ಪಿತ ಪುರಂದರವಿಠಲ (ಪುರಂದ. ೧-೧೩೭-೩). **ಕಬ್ಬುವಿಲ್ಲ**: ಕಬ್ಬುವಿಲ್ಲನಂ ಖಂಡಿಸಿ ಕಾಸೆಯನಳಿದು ಸೀರೆಯನುಟ್ಟು ಗಂಡು ಹೆಣ್ಣಾಗಿ ನಿನಗೆ ವಧುವಾದೆನಯ್ಯ (ಘನವ. ೭೪); ಸುಖದಿಂದೆ ಪವಡಿಸಿದನೋ ಕಬ್ಬುವಿಲ್ಲನೆನೆ . . . ಮಲಗಿಹ ಚಂದ್ರಹಾಸನಂ ಕಂಡು (ಜೈಮಿಭಾ. ೩೦-೨೦). **ಕರ್ಬುವಿಲ್ಲ**: ಕರ್ಬುವಿಲ್ಲನಭ್ಯುದಯಮೆನಲ್ಕೆ ಕಣ್ಗೆಸೆದಳಾ ಕಮಲಾನನೆ (ಉದ್ಭಟ. ೬-೧೧೫); ಮಸಗಿ ಬಂದುದು ಪೆರ್ಬಡೆ ಕರ್ಬುವಿಲ್ಲನಾ (ಕಬ್ಬಿಕಾ. ೨೦೭). **ಕರ್ವಿಲ್ಲ**: ಪಾರ್ವತಿಯೆಱೆಯನ ವರದಿಂ ಮತ್ಪತಿ ಕರ್ವಿಲ್ಲಂ ಸಮ್ಮೋಹನರೂಪದಿನುರ್ವಿಯ ವಿಟರೆಲ್ಲೆರ್ದೆಯೊಳ್ನೆಲಸಿದಂ (ಜಯಕಾ. ೧-೬೩). **ಕೌರ್ವಿಲ್ಲ**: ಧರೆಯಱಿಯೆ ಕೌರ್ವಿಲ್ಲನುರಿಪಿದಗ್ಗದ ಗೆಲ್ಲದರಸ ಜಯ (ವೀಶೈಪು. ೧-೩-೧); ಕೌರ್ವಿಲ್ಲ ರೂಪ ಕವಿ ಲಕ್ಷ್ಮ ಪೇಳಿದನತಿ ಪೆಸರ್ವಡೆವ ತೆಱದೊಳ್ (ಲಕ್ಷ್ಮಭಾ. ೩-೮-೪೯).

**ಕರ್ವುವಿಲ್ಲು** 'ಕರ್ವುವಿಲ್' ನೋ.

**ಕರ್ವೂರ್** (ನಾ). ಒಂದು ಊರಿನ ಹೆಸರು: ಕರ್ವೂರ ತುಱುವಂ ನೊಱಿಮ್ಮನ ಪರಿ ಬನ್ದು ಹೆಮ್ಮಾರ್ಗೆಯ ಪಳ್ಳಿಯೊಳಿಕ್ಕೆ (ಎಕ. XII, ತಿಪಟೂ. ೧೦-೫; ಸು. 930). [? + ಊರ್]

**ಕರ್ವೆಟ್ಟು, ಕರಿವೆಟ್ಟು** (ನಾ). ಕರಿಯ ಬಣ್ಣದ ಬೆಟ್ಟ; ನೀಲಾಚಲ: "ಕರ್ವೆಟ್ಟೆಂದು [ಪಾಠಾಂ. ಕಱಿವೆಟ್ಟು] ನೀಲಾಚಲಂ" (ಕಶಸಾ. ೪-೪೭); ಕರ್ವೆಟ್ಟು ಬೀೞ್ವಂತಿರೆ ಬಿೞ್ದಂ ಭೂಮಿಯೊಳ್ (ಪಂರಾಮಾ. ೧೩-೧೨೮). **ಕರಿವೆಟ್ಟು**: "ಕರಿವೆಟ್ಟನೆ ನೀಲಾಚಲಂ" (ಕವಿಕಂ. ೪೯). [< ಕರಿದು + ಬೆಟ್ಟು$_2$]

**ಕರ್ವೆಲ್ಲಿ** (ನಾ). ಒಂದು ಸ್ಥಳದ ಹೆಸರು: ತತಃ ಕರ್ವ್ವೆಲ್ಲಿ ಕ್ಷೇತ್ರ ಮೂಲವರ್ (ಎಕ. VIII, ಸೊರಬ. ೩೩-೯; ಸು. 420). [?]

**ಕರ್ವೆಳಗು** (ನಾ). ಕಪ್ಪು ಛಾಯೆ: ನಡುಗಣ್ಣ ಕರ್ವೆಳಗಿನಿಂ ಮುನ್ನ ಪರಮ ನಿನಗಿದಿರಾದ ದುಷ್ಟ ಮನ್ಮಥನ ಪೂಸರ ಕರಿದು ಕರಿಯ ಮಲ್ಲಿಗೆಯ ಸರವಾದುದೆಂಬಂತೆ ಪಿಡಿದೆಸೆದಳಲ್ಲಿ (ವೀಶೈಪು. ೨-೩-೨೨); ತಂಪಾದ ಕರ್ವೆಳಗು ಕವಿದು ಕಣ್ಣಿಗೆ ಹಿತವಾಯಿತು (ಮಲೆಮ. ೨೪೩). [< ಕರಿದು + ಬೆಳಗು$_3$]

**ಕರ್ವೇಡ, ಕರ್ಬೇಡ** (ನಾ). ಕರಿಯ ಬಣ್ಣದ ಕಿರಾತ; ಕಪ್ಪುಬಣ್ಣದ ಬೇಡ: ಎಯ್ದಿದನಱಗುಲಿ ಕರ್ವೇಡನೆನ್ನ ಪೊಱಲಿಂಗಾಗಳ್ (ಕಾದಂಪೂ. ೧೮೩); ಮುನ್ನಮೊರ್ವನಱುಗುಲಿವೆಸರ ಕರ್ವೇಡಂ . . . ಬೇಂಟೆಯಾಡುತೆ (ರಾಮಾಶ್ವ. ೭೯-೧೩). **ಕರ್ಬೇಡ**: ಕರ್ಬೇಡರೆ; ಸುಡುಬಾಡು (ಶಮದ. ೭೭ ಪ್ರಯೋ). [< ಕರಿದು + ಬೇಡ$_1$]

**ಕರ್ವೊಗೆ, ಕಬ್ಬೊಗೆ, ಕರ್ಬೊಗೆ** (ನಾ). ಕಪ್ಪುಹೊಗೆ; ಕರಿಯ ಹೊಗೆ: ಬೇವ ಗುಗ್ಗುಳದ ಕರ್ವೊಗೆಯಿಂದಮುಗುರ್ವನಾಳ್ದು ಕತ್ತಲಿಸುವ ಚಂಡಿಕಾಭವನದೊಳ್ (ಕಾದಂಪೂ. ೩೬೫); ತೆರೆತೆರೆಗೊಂಡು ಜಾನ್ಗಡರ್ವ ಕರ್ವೊಗೆ ಕರ್ಗಿದ ನೀ[ರೆ] ಕೊರ್ವುವಂತಿರೆ (ಅರ್ಧನೇ. ೫-೨೧); ಚಕ್ರಯುಗಕ್ಕಗಲ್ಚಲಿಕ್ಕಿದ ಕಿಸುರ್ವಕ್ಕೆ ಕರ್ವೊಗೆಯೆನಿಪ್ಪಿನಮಾಯ್ತು ಮಹತ್ತಮಂ ತಮಂ (ಚಂದ್ರಪು. ೮-೧೯); ಮದನಾನಳನ ಕರ್ವೊಗೆಯಿದೆನಿಸಿ ಬಿರಯಿಗಳ ಕಣ್ಗಳೊಳು ಕಣ್ಪನಿಯನೊದವಿಸೆಯುಂ (ವರ್ಧಪು. ೬-೨೯ ವ). **ಕಬ್ಬೊಗೆ**: ಜಗವನಿತ್ತಲು ಕೌಱಿಡುವ ಕಾಲಾಗ್ನಿಯಿದೆ ಕಬ್ಬೊಗೆಯು ಕವಚದಲಿ (ಕುವ್ಯಾದ್ರೋ. ೧೯-೩೧); ಕಬ್ಬೊಗೆಯನು ಕಾಣುತುಬ್ಬೆಗವಡುತಾ . . . ತಬ್ಬಿಬ್ಬುಗೊಳಲು (ತ್ರಿಪುಸಾಂ. ೧೬-೧೮೩); ನಭೋಗ್ನಿಮುಖಿಯಿಂದುಗುವ ಕಬ್ಬೊಗೆಯೊ (ಗೊಲ್ಗೊಥಾ. ೧೩-೩೨೧). **ಕರ್ಬೊಗೆ**: ಕಾಳಾಗುರುವಿನ ಧೂಪದ ಕರ್ಬೊಗೆಯಿಂ (ಅಜಿಪು. ೩-೧೧ ವ); ಕರ್ಬೊಗೆಯಂ ನೆಗಪುವ ಕೊಂಬುಗಳ ಕಡುಬಿಸುಪು ಕಾಲ್ಗಳಂ ಸುಡೆ (ಗಿರಿಕ. ೯-೨೭ ವ); ಕರ್ಬೊಗೆ ಮಿಱು ತೋಱು ಕೆಂಗಿಡಿಗೆದಱು ದಾವಾಗ್ನಿ ಮುತ್ತಿತ್ತು ನಾಲ್ದೆಸೆಯನು (ಹಚಕಾ. ೧೦-೬); ಕರ್ಬೊಗೆ ಸುತ್ತಿ ದಳ್ಳುರಿ ಸುರಿದುದು (ಸಂಭಪ. ೧೮-೬೫). 'ಕಾರ್ಬೊಗೆ' ಪರಾ. [< ಕರಿದು + ಪೊಗೆ$_2$]

**ಕರ್ವೊನ್, ಕಬ್ಬಿಣ, ಕಬ್ಬುನ, ಕಬ್ಬೊನ್, ಕರ್ಬುನ, ಕರ್ಬೊನ್, ಕರ್ಬೊನ್ನು** (ನಾ). **೧.** ಕರಿಯ ಬಣ್ಣದ ಒಂದು ಲೋಹ: ಅವಳಿಳಿಸಿ ಪೊಕ್ಕ ಪೂಗೊಳಂ ಕಾಯ್ದ ಕರ್ವೊನ್ನ ಪುತ್ಥಳಿಯನಿಕ್ಕಿದಂತಿರುರ್ಕುವುದು (ವರ್ಧಪು. ೪-೫೮ ವ). **೨.** (ಕಬ್ಬಿಣದ) ಕುಳ ಮೊದಲಾದ ವಸ್ತು: ಕೆಯ್ವೊಲದಂತು ಕರ್ವೊನ್ನಿಂ ಸೊಗಯಿಸಿಯುಂ (ರಾಮಾಶ್ವ. ೧೦೩-೧೧). **ಕಬ್ಬಿಣ**: "ಕರ್ಬೊನ್ನು ಕಬ್ಬಿಣಂ" (ಕವಿಕಂ. ೫೧); ಕೀಱೆಂಬುದು ಕುದುರೆಯ ಬಾಯ ಕಬ್ಬಿಣದೊಳ್ (ಕಬ್ಬಿಕಾ. ೨೫); ಕಬ್ಬಿಣವು ಮಿಕ್ಕ ಧಾತುಗಳಿಗಿಂತ ಬಹಳ ಉಪಯೋಗವುಳ್ಳದ್ದಾಗಿದೆ (ಮುಂಬಯಿ. ೪-೧೪೩); ಗಿಡಗನನ್ನು ಪಂಜರದಲ್ಲಿ ಕೂಡಿದರೆ, ಸಲಾಕಿ ಚಿನ್ನವಾದರೇನು? ಕಬ್ಬಿಣವಾದರೇನು? ಅದು ಕಡಿಯದೆ ಬಿಟ್ಟೀತೆ (ಆರ್ಯಕ. ೪೧). **ಕಬ್ಬುನ**: "ಕಬ್ಬುನಂ ಕಬ್ಬಿಣಕ್ಕೊದಗುವುದು" (ಕಶರ. ೨೧); ಕಳೆಯದೆ ನಿಂದ ಕಬ್ಬುನದ ಕಗ್ಗಿದ ಬಿಟ್ಟನಮುರ್ಕೆವೆತ್ತ ಕತ್ತಳವೆನಿಸಿತ್ತು ಪುತ್ತಡರ್ದ ಮೆಯ್ಯಮಲಂ (ಎಕ. VIII, ತೀರ್ಥಹ. ೧೯-೧೨; 1093 ?); ಕಲ್ಲುಂ ಕಬ್ಬುನಮುಂ ನೋಡೆಲ್ಲಿಯುಮೋರಂತೆ ಪಡೆಯಲಪ್ಪುದು (ಧರ್ಮಾಮೃ. ೧೦-೬೬); ಎನ್ನ ಪಂಚೇಂದ್ರಿಯಂಗಳು ಕಬ್ಬುನ [ಪಾಠಾಂ. ಕಬ್ಬಿಣ, ಕಬ್ಬಿನ, ಕಪ್ಪುರ] ಉಂಡ ನೀರಿನಂತೆ ನಿಮ್ಮಲ್ಲಿ ಬೆರಸುಗೆ ಚೆನ್ನಮಲ್ಲಿಕಾರ್ಜುನಯ್ಯಾ (ಮಹಾದೇ. ೧೩೬-೩೨೬).

**ಕಬ್ಬೊನ್ :** ಒಲೆಯೊಳಗೆ ಕಬ್ಬೊ [ಪಾಠಾಂ. ಕಬ್ಬೊ‌ನ್]ನ್ನ ಹಗಣಂ ಹರಹಿಯಲ್ಲಿ ಎಳೆಯ ಬದನೆಯ ಕಾಯ್ಗಳಂ ಪಾಕಮಂ ಮಾಡಿ (ಸೂಪಶಾ. ೪–೧೮). **ಕಬ್ಬುನ :** ಕಾಯ್ದ ಕಬ್ಬುನದಿಂದಂ ಚುಚ್ಚಿ (ಸುಕುಮಾ. ೧೧–೪೪); ಕಬ್ಬುನಮೆನಿಸು ಕಾಯ್ದು ಮೃದುವಾದೊಡಂ ಕಮ್ಮರಿ ರಿಲ್ಲದೆ ಖಡ್ಗಾದಿ ಶಸ್ತ್ರಂಗಳಾಗದು (ಧರ್ಮಾಮೃ. ೭–೪೭); ಪರುಷಮೆ ಮುಟ್ಟೆ ಕಬ್ಬುನಮೆ (ಅನಂಪು. ೯–೪೭); ಕತ್ತಿ ತವೆ ಮುಸುಂಡಿ ಕಬ್ಬುನದ ಕೋಲ್ ಮುಖ್ಯ ವಿವಿಧಾಯುಧಂಗಳಿಂದ (ಚೆಬಪು. ೪೮–೪೭). **ಕಬ್ಬೊನ್ :** "ಪಾರಸವಂ ಲೋಹಂ ಗಿರಿಸಾರಮಯಸ್ತೀಕ್ಷ್ಣಮಾಯ ಸಾಖ್ಯಂ ಕಬ್ಬೊನ್" (ವಸ್ತುಕೋ. ೨೮–೫); ಕಾಯ್ದ ಕಬ್ಬೊನ್ನ ಪ್ರತಿಮೆಗಳನಪ್ಪವೇಱಿಮೆಂದು ತಳಾಱಂಗೆ ಬೆಸವೇಱಿಕ್ಕೊಡೆ (ವಡ್ಡಾರಾ. ೨೧–೨೧); ಕರಡಿಯ ತೊವಲೊಳ್ ಪುದಿದ ಕಬ್ಬೊನ್ನ ರಥಮುಂ (ಪಂಪಭಾ. ೧೨–೭೮). **ಕಬ್ಬೊನ್ನು :** ನಿನ್ನ ಕೃಪಾರಸದಿಂದೈಸೆಯಾನು ಕಬ್ಬೊನ್ನು ಚೆಂಬೊನ್ನಾದಂತೆ ಸನ್ನುತಿವಡೆದು (ಹದಿಬ. ೧–೩೫).

**ಕಬ್ಬಿಣದ ಕಡಲೆ, ಕಬ್ಬುನದಕಡಲೆ** = (ಆಲಂ) ಬಹಳ ಕಠಿನ ವಾದುದು : ಭಾರತದ ಕೇವಲ ತಾತ್ಪರ್ಯನಿರ್ಣಯ ಮಾಡುವದೂ ಒಂದು ಕಬ್ಬಿಣದ ಕಡಲೆಯಾಯಿತು (ಸಾಹಿಸಂ. ೪೯); ಕಬ್ಬುನದ ಕಡಲೆ ಯಂತೆ ಬೆಟ್ಟಿತಪ್ಪ (ಧರ್ಮಾಮೃ. ೩–೧೮೭).

[<ಕರಿದು + **ಪೊನ್./ ತಮಿ.** ಕರುಮ್ಪೊನ್; **ತುಳು.** ಕರ್ಬ, ಕಬ್ಬೊ‌]

**ಕರ್ವೊನಲು** (ನಾ). ಕಪ್ಪುನದಿ; ಯಮುನಾನದಿ; ಕಾಳಿಂದಿ : ಕಷ್ಟದಿ ನಡೆದು ಯಮುನೆಯ ದಡವನು ಸೇರಿದನು . . . ಆ ಕರ್ವೊನಲಿನ ನೀರ್ದಾರಿಯನು ನೋಡಿದನೆವೆಯಿಕ್ಕದೆ (ಅಗ್ನಿಹಂ. ೭೩–೭೨).

[< ಕರಿದು + **ಪೊನಲು** (< **ಪೊನಲ್**)]

**ಕರ್ಶಿತ** (ಗು). ೧. ತೆಳುವಾಗಿ ಮಾಡಲ್ಪಟ್ಟ ; ಕೃಶಗೊಳಿಸಿದ. (ನಾ). ೨. ಸೊರಗಿದವನು; ಕೃಶನಾದವನು : ಅತ್ತಲಾ ಪುಲಸ್ತ್ಯಜಂ ಪುತ್ರವ್ಯಸನಕರ್ಶಿತಂ, ತನ್ನ ಹೃದಯರಂಗದ ರಣದ ತುಮುಲಮಂ ರಣವಸ್ತ್ರಭೂಷಣಗಳಿಂ ಮರೆಸಿದನ್ (ಶ್ರೀರಾಮಾ. ೭೪೯–೧೭). [ಸಂ.]

**ಕರ್ಷ** (ನಾ). ೧. ಎಳೆಯುವಿಕೆ; ಎಳೆತ; ಸೆಳೆತ : ಏನೆಂಬುದೊಂದು ಹರ್ಷದ ಹಾನಿಯನೀ ಪರಮಕರ್ಷವೋ ಪಲಕಾಲಂ ತಾನಿರ್ದಂದದ ಚಿಂತಾಗ್ಲಾನಿ ಮನಂಬೊಕ್ಕುದರಸಿಗೆ (ಪುಷ್ಪಪು. ೩–೭೮). ೨. ಉಳುವಿಕೆ; ರೆಂಟೆಹೊಡೆಯುವಿಕೆ. ೩. ಚಿನ್ನ ಅಥವಾ ಬೆಳ್ಳಿಯ ಒಂದು ತೂಕದ ಪ್ರಮಾಣ; ೮೦ ಗುಲಗಂಜಿ ತೂಕ: "ಕರ್ಷ ಚತುಷ್ಟಯ ತುಲನಮುಮಾಮಿಷಮುಮಱಿಗೆ ತಾಂ ಪಲಮೆನಿಕುಂ" (ವಸ್ತುಕೋ. ೧೨೫–೪೩); "ನಾಲ್ಕುಂ ಸುವರ್ಣ ಕರ್ಷಂ ನಾಲ್ಕುಂ ಕರ್ಷಂ ಪಲಂ" (ವ್ಯವಹಾ. ೪–೨೫); "ಕರ್ಷವೆಂದರೆ ಮೂರುವರಹ ತೂಕ" (ವೈದ್ಯಸಾ. I, ೩೧೭). ೪. (ಒರೆಗಲ್ಲಿನ ಮೇಲೆ) ಉಜ್ಜುವಿಕೆ; ತಿಕ್ಕುವಿಕೆ. 'ಕರ್ಷೋಪಲ' ಪರಾ. [ಸಂ.]

**ಕರ್ಷಕ** (ನಾ). ೧. ಎಳೆಯುವ ಸಾಧನ; ಉಳುವ ಯಂತ್ರ: "ಎಳಕ, ಕರ್ಷಕ; ಎಳೆಯುವ, ಕರ್ಷಕ, —ಎಂಜಿನು" (Tractor. ಇಂಕನಿ). ೨. ಬೇಸಾಯಗಾರ; ಆರಂಭಗಾರ; ಕೃಷಿಕ: "ಕೃಷಿಕಂ ಕುಟುಂಬಿ ಕ್ಷೇತ್ರಾಜೀವಿ ಕರ್ಷಕಂ ಕೃಷಿಯ ಮಾಱ್ಪೊಕ್ಕಲಿಗನಕ್ಕು" (ಮಂಗರಾ. ೧೦೯–೧). [ಸಂ.]

**ಕರ್ಷಣ** (ಗು). ೧. ಸೆಳೆಯುವ. ೨. ಹಿಂಸಿಸುವ. (ನಾ). ೩. ಎಳೆಯುವಿಕೆ; ಸೆಳೆದುಹಾಕುವಿಕೆ : ದುಸ್ವಪ್ನ ದರ್ಶನಕರ್ಷಣಾರ್ಥವಾಗಿ . . . ಶಾಂತಿಕಕ್ರಿಯೆಗಳಂ ನೆಗೞ್ದು (ಆದಿಪು. ೧೫–೪೫ ವ); ನೀಂ ದೇವಕೀ ಗರ್ಭದ ಶಿಶುವನನಂತಾಂಶಮಂ ಕರ್ಷಣಂಗೆಯ್ದುದ ನಿಂಬಿಂ ತತ್ಸಪತ್ನೀ ಜಠರದೊಳಿರಿಸು (ಜಗವಿ. ೨–೫೯). ೪. (ಬಿಲ್ಲು ಮೊದಲಾದುದನ್ನು) ಬಗ್ಗಿಸುವಿಕೆ. ೫. ಉಳುಮೆ; ಸಾಗುವಳಿ: ಸ್ಥಿರಗೋಪಾಧ್ಯಾಯಕ್ಷ್ಮಾಪರಿಪಾಲ್ಯಕ್ಷೇತ್ರ ಕರ್ಷಣಂಗಳ್ ಕ್ರಿಯೆಗಳ್ (ಕವಿರಾ. ೧–೬೫). ೬. ಪೀಡಿಸುವಿಕೆ ; ಹಿಂಸೆ ; ವೇದನೆ : ಕರ್ಷಣ ಕುಟ್ಟನ ಪಾತನ ದುರ್ಭೋಗ್ಯ ನಾನಾ ವಿಧಾಸಂಖ್ಯಾತತೀವ್ರ ರೂಪಂಗಳಾಗಿ (ವಿವೇಕ. ೧೮೧). [ಸಂ.]

**ಕರ್ಷಣೀಯ** (ಗು). ೧. ಎಳೆದು ಹಾಕಬೇಕಾದ; ಸೆಳೆದು ಹಾಕಲು ಶಕ್ಯವಾದ. ೨. ಉಳುವುದಕ್ಕೆ ಯೋಗ್ಯವಾದ, —ಶಕ್ಯವಾದ. (ನಾ). ೩. ಎಳೆದುಹಾಕಲ್ಪಟ್ಟವನು; ಸೆಳೆದುಹಾಕಲ್ಪಟ್ಟವನು : ದುರ್ಗದ ಬಲಮುಳ್ಳೊಡಂ ಬಲೋಪೇತ ಸುಹೃದ್ವರ್ಗ ಬಲಾನ್ವಿತನಪನಯಮಾರ್ಗನೆನಿಪ್ಪವನೆ ಕರ್ಷಣೀಯನವೋಘಂ (ಪಂಚತಂ. ೨೧೪–೨೦). [ಸಂ.]

**ಕರ್ಷಫಲ** (ನಾ). ೧. ಒಂದು ಜಾತಿಯ ಫಲ; ತಾರೆಕಾಯಿ; "ಅಳಲೀಕಾಯಿ ; ತಾರೀಕಾಯಿ" (ಗಂಗಾಮು. ೭೪). ೨. ನೆಲ್ಲಿಕಾಯಿ.

[ಕರ್ಷ + ಫಲ]

**ಕರ್ಷು** (ನಾ). ೧. ಬೆರಣಿಯ ಕಿಚ್ಚು. ೨. ಜೀವನೋಪಾಯ. ೩. ವ್ಯವಸಾಯ ; ಕೃಷಿ; ಬೇಸಾಯ. ೪. ನೇಗಿಲು ಹೊಡೆದ ಗೆರೆ. ೫. ನದಿ ; ಹೊಳೆ. ೬. ಕಾಲುವೆ. [ಸಂ. ಕರ್ಷೂ]

**ಕರ್ಷೆ** (ನಾ). ಒಂದು ತೂಕದ ಪ್ರಮಾಣ; ೮೦ ಗುಲಗಂಜಿ ತೂಕ : "ಹತ್ತಣ [ಹತ್ತು ಹಣ] ತೂಕವೊಂದು ಗದ್ಯಾಣ ಅದು ನಾಲ್ಕಾಗಲೊಂದು ಕರ್ಷೆ" (ವಿವೇಕ. ೬). [ಸಂ. ಕರ್ಷ]

**ಕರ್ಷೋಪಲ** (ನಾ). ಚಿನ್ನವನ್ನು ಪರೀಕ್ಷಿಸಲು ಉಜ್ಜಿ ನೋಡುವ ಕಲ್ಲು ; ಒರೆಗಲ್ಲು : ತಂಬೆಲರೆಂಬ ಪೊಂಬರದನಲರ್ವೊನ್ನಂ ಪರ್ಣ ಕರ್ಷೋಪಲದೊಳೊರೆಯೆ ಸುರಿದು ಪರಿದ ಪೊಂಬುಡಿಯೆಂಬಂತೆ (ಶಬಶಂ. ೨–೪೨ ವ). [ಕರ್ಷ + ಉಪಲ]

**ಕರ್ಸಪಿಂಡ** (ನಾ). ಒಂದೇ ಗಂಟಿನಲ್ಲಿ ಕೊಡುವ ಮೊತ್ತ (?) : ಕೊಳಗುಪ್ಪೆ ಪೆಟ್ಟವಸಿ ಅರ್ಧಂ ಕಾನಸೊಪ್ಪಿನರ್ಧಂ ವಾರಲರ್ಧಂ ಕರ್ಸಪಿಣ್ಡಂ ನೂಱಿರ್ಪತ್ತೆಣ್ಟು ಕೊಂಬೆಗಾರೊಡಂ ಪಡೆಯಂಮೆಣ್ಟು ಮೂಡೆ ಜವುಳಿ ಒನ್ದು (ಎಇ. XXI, ೨೯–೧೫; ಸು. 8ನೆಯ ಶತ). [< ಸಂ. ಕರ್ಷಪಿಂಡ]

**ಕರ್ಹಾಡಸ್ಥ** 'ಕರಾಡಸ್ಥ' ನೋ.

**ಕಲ್$_1$, ಕಲಿ$_1$** (ಕ್ರಿ). ಕಲ್ತ (ಭೂತಕೃ) ; ಕಲ್ತು (ಭೂತನ್ಯೂ). ಅರಿತುಕೊಳ್ಳು ; ತಿಳಿ ; ಅಭ್ಯಾಸಮಾಡು : "ಕಲ್ – ಅಭ್ಯಾಸೇ, ಪಾಷಾಣೇ ಚ" (ಶಮಧಾ) ; ಜಡಜನಮುಮೆಲ್ಲಮೋದಂ ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ (ಕವಿರಾ. ೧–೧೦) ; ನಾಲ್ಕುಂ ನೃಪ ವಿದ್ಯೆಯನಾಡಲ್ ಕಲ್ತುಂ ನೆಱೆಯೆ ಕಲ್ತೆಯಿಲ್ಲಾಗದೇ (ಪಂಪಭಾ. ೭–೫೪) ; ಅಂಜದೆ ಬಿಲ್ಲಂ ಕಲ್ಲೆಂಬುದುಂ (ಧರ್ಮಾಮೃ. ೧೩–೪೩) ; ಅರಮನೆಗಲ್ತು ಸೂಳೆಮನೆಗಲ್ತು ಸವಣ್ಮನೆಗಲ್ತು ಕೂಡೆ ಬಲ್ಲರ ಬಗೆಗಲ್ತು ವಸ್ತುಕೃತಿಯಂ ಸಲೆ ಪೇೞ್ವುದು (ಕಾವ್ಯಾವ. ೨೦೫). **ಕಲಿ$_1$ :** ಋಷಿಯರ ಮಾರ್ಗಮಂ ಕಲಿಯಲೆಂದು ಕೃತಕವೈರಾಗ್ಯದಿಂ (ಧರ್ಮಾಮೃ. ೬–೨೮) ; ಕಲಿಯೆ ನಾನಾ ಹೃದ್ಯವಿದ್ಯಂಗಳಂ (ಸೋಮೇಶ. ೨೮) ; ನೀ ಕಲಿತ ಬಿಲುವಿದ್ಯಾತಿಶಯವುಂಟಾದೊಡೆಮ್ಮೊಳು ತೋಱು ಕೈಗುಣವ (ಕುಮ್ಯಾದ್ರೋ. ೫–೪೫) ; ಕಲಿತ ಬಿಜ್ಜೆಯ ಬಲ್ಲರಿಗೆ ಕೇಳಿಪುದೈಸೆ ಫಲವು (ಹದಿಬ. ೧–೨೯).

**ಕಲ್ತನ್** = ಕಲಿತವನು : ಮೊದಲೊಳ್ ಕಲ್ತಂಗಲ್ಲದೆ ಪದದೊಳ್ ಜಾಣುಂ ಬೆಡಂಗುಮಕ್ಕುಮೆ ಕೃತಿಯೊಳ್ (ಕವಿರಾ. ೧–೯). **ಕಲ್ತವರ್** (ಬಹುವ) : ಅಕ್ಷರಮಾತ್ರಮಂ ಬಯಸಿ ಕಲ್ತವರೊಳ್ ಗುಣಮೇಂ (ನಳಚಂ. ೫). [**ದೇ.** ‖ **ತಮಿ. ಮಲ.** ಕಲ್ ; **ತುಳು.** ಕಲ್ಪು]

**ಕಲ್**₂ (ನಾ). ಕಲಿಯುವಿಕೆ; ಅಧ್ಯಯನ. 'ಕಲ್ಲಾಯ್ತು' ಪರಾ. [< ಕಲ್₁]

**ಕಲ್**₃, ಕಲು₁, ಕಲ್ಲು (ನಾ). ಬಂಡೆ; ಶಿಲೆ; ಅರೆ; ಪಾಷಾಣ: ಈ ಕಲ್ಲಂ ಚಿಕ(ಂ)ಣ್ಣ × × × ಯಂ ಪೋದಿಯಮ್ಮ ಮಾಡಿಸಿದೋನ್ (ಸೌಇಇ. XI–i, ೧೦–೩೪ ; 864); ಉತ್ತರದಿಶಾಭಾಗದೊಳ್ ಸಮಚತುರಸ್ರಮಾಗೆ ನೆಲನನಳೆದು ಕಲ್ಲಂ ಪುಲ್ಲುಮಂ ಸೋದಿಸಿ (ಪಂಪಭಾ. ೨–೬೫ ವ); ಕಡಲೆಗಳಂ ತಿಂಬ ಮೊಗ್ಗು ಕಲ್ಗಳೊಳುಂಟೇ (ಧರ್ಮಾಮೃ. ೧–೧೨೫). **ಕಲು**₁ : ಮಗಂ ಬಱಸಿದ ಕಲು (ಮೈಅರಿ. ೧೯೪೧, ೨೩–೧೬ ; 1070); ಪರುಷವಂಗಣದ ಕಲು ಸುರಭಿ ಕಱಹಂ (ಹಚಕಾ. ೨–೧); ಕಲುಮರನ ಕೈದುಗಳ . . . ಭಟರುಬ್ಬಿಸಿದರಿನಸುತನ (ತೊರರಾ. ೪–೩–೧); ನಟ್ಟಡವಿಯೊಳು ಹಾವು ಹುಲಿ ಕಲು ಜಟ್ಟಿಗಂಗಳ ನೆರವಿಯೊಳು (ಸಾಳ್ವಭಾ. ೧–೨೨). **ಕಲ್ಲು** : ಬೆಟ್ಟಿತಪ್ಪ ಕಲ್ಲುಗಳುಳ್ಳ ಬೆಟ್ಟಮಂ ಸಿಡಿಲುಂ ನೀರುಂ ಭೇದಿಸುವಹಗೆ (ಪಂಚತಂ. ೧೬೬–೨೦); ಎನಿಸು ಕಾಲ ಕಲ್ಲು ನೀರೊಳಗಿರ್ದರೇನು ನೆನೆದು ಮೃದುವಾಗಬಲ್ಲುದೇ (ಬಸವ. ೯೯); ಕಾಷ್ಠಮಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್ (ಲೀಲಾವ. ೧–೧೩); ತಲೆ ಬಲ್ಲಿತೆಂದು ಕಲ್ಲನೆ ಹಾಯಬೇಡ (ಮೋಹತ. ೭–೨೩).

**ಕಲ್ಲಂ ನಿಱಿಸು, ಕಲ್ಲನಿಱಿಸು** = ಕಲ್ಲುನೆಡಿಸು; ಶಿಲಾಶಾಸನ ಸ್ಥಾಪಿಸು : ಕಾಳಬ್ಬೆ × × × ಯ್ದ ಬೀಳಿಸಿ ಕಲ್ಲಂನಿಱಿಸಿದೋರ್ (ಸೌಇಇ. XI–i, ೨೪–೧೪ ; 897); ಸಿರಿಯಕ್ಕಂ ಕಲ್ಲಂನಿಱಿಸಿದಳು (ಎಕ. VII, ಹೊನ್ನಾಳಿ. ೨೩–೬ ; 934); ಶ್ರೀಜನ್ನ ಕಲ್ಲನಿಱಿಸಿ (ಮೈಅರಿ. ೧೯೪೪, ೬–೩ ; ಸು. 808). **ಕಲ್ಲ ಹಾಯು** = ಕಲ್ಲಿಗೆ ಹಾಯು, —ತಾಕು : ನೀನು ಗರ್ವದಿ ತಲೆಯು ಬಲಿದೊಡಂ ಕಲ್ಲಹಾಯ್ದಪೆನೆಂಬುದಿದುವುಚಿತವೆ (ನವಮೋ. ೨೫–೨೩); ತಲೆ ಗಟ್ಟಿಯಾಗಿದೆಯೆಂದು ಕಲ್ಲ ಹಾಯುವದು . . . ಅಪಾಯವನ್ನೇ ತಂದೊಡ್ಡುವುದು (ಬೆನ್ನಬೇ. ೧೬೦). **ಕಲ್ಲು ಹುಯ್ಯಿಸು** = ಕಲ್ಲು ಕೆತ್ತಿಸು, —ಕಡೆಸು; ಕಲ್ಲಿನಲ್ಲಿ ಚಿತ್ರ ಮೊದಲಾದುವನ್ನು ಕಡೆಸು : ಎಷ್ಟೋ ಜನ ಬೆಟ್ಟಕ್ಕೆ ಹೋಗಿ, ಅಲ್ಲಿ ಕೋಳಿ ಕುರಿ ಬಲಿಕೊಟ್ಟು, ಕಲ್ಲುಹುಯ್ಯಿಸಿ ಬರುತ್ತಾರೆ (ನನ್ನೂರು. ೨೦೭).

[ದೇ. ‖ ತಮಿ. ಕಲ್ ; ಮಲ. ಕಲ್, ಕಲ್ಲು ; ತುಳು. ಕಲ್ ; ಕೊಡ. ಕಲ್ಲ್ ; ತೆಲು. ಕಲ್ಲು ; ಪರ್ಜಿ. ಕೆಲ್ ; ಬ್ರಾಹೂಈ. ಕಲ್]

**-ಕಲ್**₄, -ಕಲು₂ (ಪ್ರ) ಒಂದು ಭಾವನಾಮ ಪ್ರತ್ಯಯ. 'ಕಡುಗಲಿಸು' ಪರಾ. -**ಕಲು**₂ : 'ಉಳುಕಲು', 'ಸವಕಲು' ಪರಾ.

**ಕಲ**₁ (ನಾ). ೧. (ಮಣ್ಣಿನ) ಪಾತ್ರೆ; ಮಡಕೆ : ಕಲನೊಂದಂ ತೀವಿ ನೀರಂ ಪೊಸೆದು ಸಿಕತದೊಳ್ ಗಾಣಮಂ ಪೊಯ್ದು ಮತ್ತಂ ಶಿಲೆಯೊಳ್ ಧಾನ್ಯಂಗಳಂ ಬಿತ್ತಿಯುಂ . . . ನಿಷ್ಫಲೋದ್ಯೋಗಮನೊಡರಿಪುದೇಂ (ಪಂರಾಮಾ. ೧೩–೫೫); ಪಸಿಯ ಕಲದೊಳಗೆ ನೆಲ್ಲಿಯ ರಸಮಂ ಮೇಣ್ ಬೆಟಿಲ ರಸಮನೊರಸಿ (ಲೋಕೋಪ. ೮–೪೯); ಕಲವೊಂದಱೊಳೊಡನೆ ಬೆರೆದು ಬೇವೊಳ್ಪಿಸಱಂತೆ (ಜಯಕಾ. ೧–೧೮). ೨. ಹಡಗು : ಅಯಸ ಕುರುವದ ಸುತ್ತ ಬಳಸುತ ಕಲಂಗಳನ್ ಕಾವಲಿಹುದೆಲ್ಲ (ಪಾರಸಿ. ೧೫–೩೪೩).

[ದೇ. ‖ ತಮಿ. ಮಲ. ಕಲ ; ತುಳು. ಕರ ; ಕೊಡ. ತೆಲು. ಕಲ ; ಬ್ರಾಹೂಈ. ಕಲಂಡ್]

**ಕಲ**₂ (ನಾ). ಒಂದು ಅಳತೆ : ನಯಿವೇದ್ಯಕ್ಕೆ ದಿನ ಒಂದಕ್ಕಂ ಅಕ್ಕಿ ಒಂದು ಕಲಉ . . . ವರುಷ ೧ಕ್ಕೆ ಮೂನೂಱು ಅಱುವತ್ತ ಕಲ ಅಕ್ಕಿಉ (ಸೌಇಇ. IX–ii, ೪೬೩–೩ ; 1470). [← ತಮಿ. ಕಲ]

**ಕಲ**₃ (ನಾ). ಬೆರೆತುಕೊಂಡಿರುವಿಕೆ; ಸಮ್ಮಿಶ್ರಣ; ಸಂಕರ : 'ಕಲಬೆರಕೆ' ಪರಾ. [< ಕಲೆ₁]

**ಕಲ**₄, ಕಳ₆ (ಗು). ೧. ಮಧುರವಾದ; ಇಂಪಾದ : ಅಮೃತಾಬ್ಧಿ ವೀಚೀಕಲಸ್ವರಂ ನೆಗಱೆ ಭುವನಗುರುವಿಂತೆಂದಂ (ಪಂರಾಮಾ. ೧೬–೩೮). (ನಾ). ೨. ಮಧುರ ಧ್ವನಿ. ೩. ದೇಹಶಕ್ತಿ; ಆರ್ಪು. 'ಕಲಂಬಡೆ' ಪರಾ. ೪. ಮೂಕ (?). ೫. ತಾಳೆಮರ (?). ೬. ಆಚದ ಮರ; ಸಾಲವೃಕ್ಷ (?). ೭. ಚಿನ್ನ (?). **ಕಳ**₆ : ೧. 'ಕಳಕಂಠ' ಪರಾ. [ಸಂ.]

**ಕಲಊರ** (ನಾ). ಒಂದು ಊರಿನ ಹೆಸರು : ಪೆರ್ಮ್ಮನಡಿ ಕಲಊರ ಕಾಳೆಗದೊಳೆ (ಮೈಅರಿ. ೧೯೨೪, ೧೧೭–೬ ; ?). [?]

**ಕಲಂ**₁, ಕಲಮು₁, ಕಲಾಮು (ನಾ). ೧. ಲೆಕ್ಕಣಿಕೆ; ಚಿತ್ರ ಬಿಡಿಸುವ ಕುಂಚ. ೨. ಚಿತ್ರಣ ಪದ್ಧತಿ, —ವಿನ್ಯಾಸ, —ಶೈಲಿ : ಕಾಂಗ್ರಾ ಮತ್ತು ರಜಪೂತ ಕಲಂಗಳ ಚಿತ್ರಕಾರರ ಕೃತಿಗಳಲ್ಲಿ . . . ನೂರಾರು ಸುಂದರಚಿತ್ರಗಳು ದೊರೆಯುತ್ತವೆ (ಭಾರದ. ೫೮೧). **ಕಲಮು**₁ : ೧. ಇಂಥಾ ಬಣ್ಣವನ್ನೂ ಚಿತ್ರವನ್ನೂ ಸೃಷ್ಟಿಕರ್ತನು ಯಾವ ಕಲಮಿನಿಂದ ಬರೆದನೋ ಅದು ಎಷ್ಟು ಸೂಕ್ಷ್ಮವಾಗಿರಬಹುದು (ಮುಂಬಯಿ. ೫–೧೯೪). ೩. ಸಸ್ಯಗಳನ್ನು ಕಸಿಮಾಡುವಿಕೆ : ಇತ್ತೀಚೆಗೆ ಕಲಮು ಮಾಡಿದ ಮಾವಿನ ಗಿಡಗಳ ವೈಭವವಂತೂ ಹೇಳತೀರದು (ಬೆವರಿ. ೨೧೧); ಒಂದು ಆಕಳು ಆ ತೋಟವನ್ನು ಪ್ರವೇಶಿಸಿ ಅಲ್ಲಿ ಬೆಳೆಯಿಸಿರುವ ಕಲಮಿನ ಗಿಡಗಳನ್ನು ಮೇಯತೊಡಗಿತು (ಸಕುಮಂ. ೫೩); ಪಂತನು . . . ಹೂವಿನ ಗಿಡದ ಬಳಿಯಲ್ಲಿ ಕುಳಿತು ಆದಕ್ಕೆ ಕಲಮು ಕಟ್ಟುತ್ತಿರಲು (ಅಂಬಿಕೆ. ೧೯). **ಕಲಾಮು** : ೧. "ಕಲಾಮು[ಪಾಠಾಂ. ಮೂ] ಲೇಖನಿಕೆಯಕ್ಕು" (ಮಂಗರಾ. ೧೦೫–೧೫).

[← ಅರ. ಹಿಂ. ಮರಾ. ಕಲಮ್]

**ಕಲಂ**₂, ಕಲಮು₂, ಖಲಮು (ನಾ). ಪರಿಚ್ಛೇದ; ಭಾಗ : ಎರಡನೇ ಕಲಂ (ರಾಜೇಂದ್ರ. ೮೮); ಆ ಹಣವೆಲ್ಲಾ ಕೊಡಿಸುವ ಕಲಂ ೧ ಯಿಷ್ಟಾದರೆ ನಾವೂ ನಿಮ್ಮಲ್ಲಿ ಯಿನ್ನುಮೇಲೆ ನೌಕರೀ ಯಿರತಕ್ಕದಿಲ್ಲಾ (ಹೈದರ. ೧೦೭). **ಕಲಮು**₂ : ಅದರಲ್ಲಿ ಪ್ರಸಂಗ ಬಂದರೆ ಈ ದೇಶದ ಅರಸರ ಕೂಡ ಜಗಳ ಮಾಡಬಹುದು ಎಂಬುದೊಂದು ಕಲಮು ಇತ್ತು (ಮುಂಬಯಿ. ೬–೧೨೭); ಕೆಲವು ಕಲಮುಗಳನ್ನು ಯಥಾಸ್ಥಿತವಾಗಿ ಇಲ್ಲಿ ತೋರಿಸಿದೆ (ಮಹಾವಂ. II, ೫೯). **ಖಲಮು** : ಖಲಮು ಒಂದು : ಖಂದಾಯವನ್ನು ಹತ್ತುಪಟ್ಟು ಏರಿಸುವದು (ಜನನಾ. ೯೧).

[← ಮರಾ. ಕಲಮ್]

**ಕಲಂಕ**, ಕಳಂಕ (ನಾ). ೧. ಗುರುತು; ಕಲೆ; ಕಪ್ಪು. ೨. ಕುಂದು; ಪಾಪ; ದೋಷ : "ಕಱೆ ಕಳಂಕಮದು" (ಕಬ್ಬಿಕೈ. ೧೧); ನಿಮ್ಮ ಹಾಗು ನನ್ನ ಮರ್ಯಾದೆಗೆ ಕಲಂಕ ಹತ್ತುವಂತಹ ಪ್ರಸಂಗವು ಬೈಲಿಗೆ ಬಾರದಂತೆ ಮಾಡಬೇಕೆಂದು ಹೇಳಿರಿ (ಸ್ಕೂಲವಿ. ೨೧೨). ೩. ನಿಷ್ಠುರತೆ; ಕ್ರೂರನಿಂದೆ. ೪. ಕಬ್ಬಿಣಕ್ಕೆ ಹಿಡಿದ ತುಕ್ಕು. ೫. ಮೋಡ; ಮೇಘ. ೬. ನಿಂದೆ; ಅಪವಾದ. **ಕಳಂಕ** : ೧. "ಕಂದೆಂದುಂ ಕಱೆಯೆಂದುಂ ಸಂದೆಗಮಿಲ್ಲವು ಕಳಂಕ" (ಕವಿಕಂ. ೪೫). ೨. ನಿರ್ಮಳಮಪ್ಪ ನಿಜಾನ್ವಯಕ್ಕೆ ಕಳಂಕ ಪಂಕಾದ್ಯನೇಕಾಪವಾದವಾದುದು (ಸುಕುಮಾ. ೨–೩೨ ವ); ಕಲಿ ಮಲಿನ ಕುಭೃತ್ಸಂಗದ ಕಳಂಕಮಂ ಕರ್ಚಿ ಕಳೆಯಲೆಂದು (ಕಾದಂಪೂ. ೧೧); ತಮ್ಮ ವ್ಯಕ್ತಿತ್ವಕ್ಕೆ ಕಳಂಕ ಬರಬಾರದೆಂಬ ಹಿರಿಯ ಬಯಕೆಯಿರುತ್ತದೆ (ಶಿಕ್ಷದ. ೧೧೪). ೭. ಉಗ್ರತೆ; ತೀವ್ರತೆ : "ಕಡುಹಿನಲಿ ದೋಷದಲ್ಲಿ ಮಿಗೆ ಕಳಂಕಮದೆಂಬುದು" (ಮಂಗರಾ. ೧೪೨–೧೯); "ಲಕ್ಷ್ಮಂ ಪಾಪಮತೀವ ತೀವ್ರಮುಸಿತಂ ಮೇಘಂ ಕಳಂಕಾಹ್ವಯಂ" (ನಾನಾರ. ೮೭).

[ಸಂ.]

**ಕಲಂಕಿತ**, ಕಳಂಕಿತ (ಗು). ಕುಂದುಳ್ಳ; ದೋಷವುಳ್ಳ: ಅವನೊಬ್ಬ ಕಲಂಕಿತ ವ್ಯಕ್ತಿ (ರೂಢಿ). **ಕಳಂಕಿತ**: ಕಳಂಕಿತ ವ್ಯಕ್ತಿಗಳಿಗೆ ಏಳಿಗೆಯಿಲ್ಲ (ರೂಢಿ). [ಸಂ.]

**ಕಲಂಕಿನಿ**, ಕಳಂಕಿನಿ (ನಾ). ಕುಂದುಳ್ಳವಳು; ದೋಷವುಳ್ಳವಳು: ಮನೆತನದ ಹೆಸರು ಕೆಡಿಸುವಂಥ ಕಲಂಕಿನಿಯೆಂದು ನಾಮಕರಣ (ವಾತ್ಸಲ್ಯ. ೨೯೮). **ಕಳಂಕಿನಿ**: ಸೀತೆಗೂ ಕಳಂಕಿನಿ ಎಂಬ ಅಪವಾದ ತಪ್ಪಲಿಲ್ಲ (ರೂಢಿ). [ಸಂ. ಕಲಂಕಿನೀ]

**ಕಲಂಕು**$_1$, ಕಲಕು$_1$(ಕ್ರಿ). ೧. ಕದಡು; ಕದರು; ಬೆರಸು: "ಕಲಂಕು–ಆಲೋಡನೇ" (ಶಮಧಾ); ಸೂಸುವ ಕಣ್ಬನಿ ಕಣ್ಗಳೊಳ್ ಕಲಂಕಿದ ಬೆಳರ್ಗೆಂಪು ಕಣ್ಗೆವರೆ (ಆದಿಪು. ೧೨–೨೬); ತೊಱೆ ವಿಪರೀತದಿಂ ನೆಣನ ನೆತ್ತರ ಮದ್ಯದ ತೈಲದಂದದಿಂ ನೆಱೆದು ಕಲಂಕಿ ಬರ್ಪೊಡಱುದಿಂಗಳಿಗನ್ನರ ಸೇನೆ ಮೇಲೆ ಬಂದುಱದಿಱಿಗುಂ (ಲೋಕೋಪ. ೪–೪೯); ನೀರೊಳು ಕಲಂಕಿ ಗಜಾಶ್ವಸುವರ್ಣ್ಣರಾಜಿಯಂ (ಎಕ. XV, ಅರಸೀ. ೨೧೭–೩೦; 1232). ೨. ಕಡೆ; ಮಥಿಸು; ಕ್ಷೋಭೆಗೊಳಿಸು; ಅಲ್ಲೋಲಕಲ್ಲೋಲಮಾಡು: ಮಂದರದಿಂದಂಬುಧಿಯಂ ಕಲಂಕಿದಸುರಪ್ರಧ್ವಂಸಿವೋಲ್ (ಪಂಪಭಾ. ೭–೧೫); ಪರನರಪಾಳ ಸೈನ್ಯನವರಕ್ತ ಸರೋವರಮಂ ಕಲಂಕಿ (ಸೌಇಇ. XI–i, ೧೦೩–೬; 1070). ೩. ಕ್ಷೋಭೆಗೊಳ್ಳು; ಅಲ್ಲೋಲ ಕಲ್ಲೋಲವಾಗು: ಭೋಂಕನೆ ಕೇಳ್ದಿರ್ದ ಕದಡಿ ಕಲಂಕಿದ ಬಗೆವೆರಸು ನೆಗೆದು (ಪಂಪಭಾ. ೧೧–೧೧೨); ವಿಳಾಸವತಿ ಮಹಾದೇವಿ ಭೋಂಕನೆ ಮನಂ ಕಲಂಕೆ ಮಗನನಿಂತೆಂದಳ್ (ಕಾದಂಉ. ೫೦೩); ಚಿತ್ತಂ ಕಲಂಕಿ ಬಿಜ್ಜಳಂ ಮರುಳಾಗಿ (ಬಸರ. ೮–೧೦೩). ೪. ಕದಡುಗೊಳಿಸು; ಕೊಳೆಮಾಡು; ಕೆಡಿಸು: ಏಗುವೆ ನೇಗುವೆಂ ಕುಲವಂ ಕಲಂಕಿದಂ ಮುಗುಳಂ ಮಿಾಸಲ್ವೋಗಿಸಿದಂ (ನಂಬಿರ. ೧೨–೬೦). **ಕಲಕು**$_1$: ೧. ಕಲಿತನವ ನೀರೊಳು ಕಲಕಿದ್ಯೆ (ಕುವ್ಯಾಉ. ೬–೧೯); ಆ ಚಮಚ ತಗೊಂಡು ಚೆನ್ನಾಗಿ ಕಲಕಯ್ಯಾ ಕಷಾಯನಾ (ರಾಯಕ. ೧೦೮). ೨. ತೋಳ ತೀಟೆಯನವನ ನೆತ್ತಿಯ ಮೇಲೆ ಕಳೆವೆನು ಕಲಕುವೆನು ಕೌರವ ಬಲಾಂಬುಧಿಯ (ಕುವ್ಯಾಭೀ. ೧–೬೦). ೪. ಎಳೆನಗೆಗಳಲಿ ವೇದಪಾಠರ ಕಲಕಿ ಮಿಗೆ ವೇದಾಂತ ನಿಷ್ಠರ ಹೊಳಸಿ ದುವ್ವಾಳಿಸುವೆಮಗಿದಿರಾರು ಲೋಕದಲಿ (ಕುವ್ಯಾಅ. ೧೮–೧೪).
[ದೇ. ‖ ತಮಿ. ಕಲಕ್ಕು, ಕಲಙ್ಗು; ಮಲ. ಕಲಙ್ಗು; ತುಳು. ಕಲಂಕ್, ಕಲಂಕು; ಕೊಡ. ಕಲಕ್, ಕಲಂಗ್; ತೆಲು. ಕಲಗು, ಕಲಚು; ಕುರುಖ್. ಕಲಕ್ನಾ; ಮಲ್ತೊ. ಕಲ್ಗೆ]

**ಕಲಂಕು**$_2$, ಕಳಂಕು (ನಾ). ಕೊಳೆ; ದೋಷ: ಅಗ್ನಿಯ ಸೋಂಕಿದಲ್ಲಿ ಕನಕದ ಕಲಂಕು ಹೋಯಿತ್ತು ಜಲವ ಸೋಂಕಿದಲ್ಲಿ ದೇಹದ ಕಲಂಕು ಹೋಯಿತ್ತು (ಸಿದ್ಧವ. ೧೯೯–೬೩೭). **ಕಳಂಕು**: "ಕಳಂಕಿನೊಳ್ ತೀರ ದೋಹನದಲ್ಲಿ ಕಱೆ" (ಶಬ್ದಮಂ. ೧೧೭); ಕಳಂಕು ದೋಷಿ ಕೊಣ್ಡನಪ್ಪೊಡೆ ಬಾರಣಾಸಿಯೊಳಂ ಪ್ರಯಾಗೆಯೊಳಂ ಸಾಯಿ × × × ವಿಲೆಯುಮ . . . ಕೊನ್ದ ಮಹಾಪಾತಕಮ್ (ಎಕ. XI, ಚಿತ್ರದು. ೨೬–೧೭; 946 ?); ಅಱಿವ ಹೇಳುವರೆಲ್ಲರು ಮಱವೆಯಲ್ಲಿ ಬಿದ್ದು ಮೂಱಿಲಿ ಹಿಡಿದರಲ್ಲಾ ಅದು ಬಾಯಿಗೆ ಪಸಲೆ ಕೈಗೆ ಕಳಂಕು (ಮೋಳಿಮಾ. ೧೬೯–೬೩೦); ಹೃದಯದ ಕಳಂಕು ದೋಷಾಕರತೆ ನಷ್ಟಕಲೆ ಮೊದಲಾದ ದುರ್ಗುಣಂಗಳು ವೆರಸು ಬಿಡದಳುಕದುದಯವಪ್ಪಮೃತಕರನಂ (ಸಿದ್ಧರಾ. ೬–೫೧); ಪರಿಪೂರ್ಣ ಶಶಿ ಕಳಂಕುಗಳ ಕಳೆದು ತನ್ನ ವರ ಚೆಲ್ವಿಕೆಯ ತೋಱಲು (ಕಂಸವಿ. ೯–೧೩೩). [< ಸಂ. ಕಲಂಕ]

**ಕಲಂಗಡಿ** 'ಕಲ್ಲಂಗಡಿ' ನೋ.

**ಕಲಂದಾನಿ**, ಕಲಮುದಾನಿ (ನಾ). ೧. ಲೆಕ್ಕಣಿಕೆ ಹಾಗೂ ಮಸಿಯ ಕುಡಿಕೆಯನ್ನು ಇಡುವುದಕ್ಕಾಗಿ ಮಾಡಿದ ಮರದ ಪೆಟ್ಟಿಗೆ: ಖಾಸಾ ಮೊಹರ ಇದ್ದಂಥ ಕಲಂದಾನಿ (ರಾಜೇಂದ್ರ. ೨೮). ೨. ಒಂದು ಆಭರಣ (?): ೩೫ ಕಲಂದಾನಿಗೆ ಅಷ್ಟದಳದ ಹೂವು ದೊ ೧೫ ಚ್ಕ ೨೦ (ಎಕ. XIV, ನಂಜನ. ೨೮೯–೬೨; 1847). **ಕಲಮುದಾನಿ**: ೧. ಬಿಳಿಯ ಕಾಗದ ಹೃದಯ ಬಾಯಿ ಕಲಮು[ಮು]ದಾನಿ ನಾಲಿಗೆ ಎಂಬೊಂದು ಲೇಖಣಿಯು (ಪುರಂದ. ೨–೧೫–೫).
[← ಪಾರ. ಹಿಂ. ಕಲಮ್‌ದಾನ್; ಮರಾ. ಕಲಮದಾನೀ]

**ಕಲಂಧರ** (ನಾ). ಬೆರಕೆ ಜಾತಿಯವನು (?): ಶಾಪಯುಕ್ತರಂ ಕಂಡೆನು ಚತುರ್ವೇದ ನಿಂದಕ ಶ್ರಾವಕರ ಕಂಡೆ ಬೌದ್ಧ ಪ್ರಜಯವ ಕಂಡೆನುಂ ಪಾಂಚರಾತ್ರಿಕ ಕಲಂಧರರುಗಳ ಕಂಡೆ . . . ಕಂಡದಿಲ್ಲ ಕಲಾಮಾಲಿಶೇಖರ ಭಕ್ತಗಣಂಗಳಂ ಸ್ವಪ್ನದಲ್ಲಿ (ಏಕೋಪು. ೨–೭೨).
[< ಸಂ. ಕಲಂದರ]

**ಕಲಂಬ**, ಕಳಂಬ (ನಾ). ೧. ಕದಂಬ ವೃಕ್ಷ. ೨. ಸೊಪ್ಪಿನ ಕಾವು, —ದೇಟು, —ದಂಟು. ೩. ಅಂಬು; ಬಾಣ: ಎನಗೆಯಿದಿರೆ ನೀನೆನುತ ಪಾವಕ ಕಲಂಬವ ಬಿಟ್ಟನು (ಪ್ರಭುಪು. ೬–೩೧). ೪. ಚಕ್ರವಾಕ ಪಕ್ಷಿ. ೫. ಹಂಸಪಕ್ಷಿ; ಅಂಚೆ. ೬. ಕೆಂದಾವರೆ; ಕೆಂಪುತಾವರೆ. **ಕಳಂಬ**: ೩. ಈ ಕಳಂಬವ ಕಾಯ್ದುಕೊಳ್ಳೆನುತೆಚ್ಚನಾ ಪಾರ್ಥ (ಕುವ್ಯಾಶ. ೨–೫೨); ಕಂತು ಕಳಂಬ ಕದಂಬಂ ಸ್ವಾಂತವನೊಳಪೊಕ್ಕುದಂದು ಯತಿಪುಂಗವರಾ (ಹಮ್ಮಿರ. ೬–೨೫); "ಶತಪತ್ರ ಚಕ್ರವಾಕಂನುತ ಹಂಸಂ ಬಾಣ ನಾಲ್ಕು ಶಬ್ದ ಕಳಂಬಂ" (ನಾನಾಕಂ. ೫೦). [ಸಂ.]

**ಕಲಂಬಡೆ** (ಕ್ರಿ). ದೇಹಶಕ್ತಿಯನ್ನು ಪಡೆ; "ಜ್ಞಾನವನ್ನು ಪಡೆ; ವಿಧಾನವನ್ನು ತಿಳಿ?" (ಸುಕುಮಾ. ಕೋಶ): ಪಡೆಯದೆ ಮನುಷ್ಯಗತಿಯಂ ಪಡೆದುಂ ರತ್ನತ್ರಯಂಗಳಂ ಪಡೆಯದೊಡೇ ಪಡೆಮಾಕೊಬೇಗ ಮದುರ್ಂಬಡೆದುಂ ಕಲಂಬಡೆಯದಂತೆ ನಿಷ್ಫಲಮಲ್ತೇ (ಸುಕುಮಾ. ೧೨–೫೯). [ಕಲ್$_4$ ? + ಪಡೆ$_1$]

**ಕಲಂಬಾಸನ**, ಕಳಂಬಾಸನ (ನಾ). ಬಾಣವನ್ನು ಬಿಡಲು ಸಾಧನವಾದುದು; ಬಿಲ್ಲು; ಧನುಸ್ಸು: ಆ ಮಹಾತ್ಮಂಗೀಕೆ ಸೇರುವಡೆ ಧನುವ ನೊಡ್ಡಿ ಪಿನಾಕಪಾಣಿಯ ಜಾಣಪರನು ಬರಿಸಾ ಕಲಂ [ಪಾಠಾಂ. ಳಂ]ಬಾಸನವ ಗೆಲಿದಂಗೀವುದಾತನೆ ವಿಷ್ಣುವೀಗೆಂದ (ತೊರರಾ. ೧–೧೬–೩೦). **ಕಳಂಬಾಸನ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ಕಲಂಬ + ಆಸನ]

**ಕಲಂಬಿ**$_1$, ಕಲಬಿ, ಕಲುಬಿ (ನಾ). ೧. (ಕರಾ) ಅಲಮಾರು; ಕಪಾಟು: ಕಲಂಬಿಯ ಬೀಗದಕೈ ಇತ್ತಕೊಡು. ರೂಪಾಯಿ ತೆಗೆಯುತ್ತೇನೆ (ಒಡ್ಡಿಉ. ೭೦). **ಕಲಬಿ**: ೧. ತುಪ್ಪ ಬೆಣ್ಣೆ ಮೊದಲಾದವುಗಳನ್ನು ಇಟ್ಟು ಬೀಗ ಹಾಕಿದ ಒಂದು ಕಲಬಿ (ಕಾನೂರು. ೫೧); ಅಲ್ಲೆ ಇವೆ, ಐಗಳೆ, ಕಲಬಿ ಹಿಂದುಗಡೆ (ಮಲೆಮ. ೩೬೨). **ಕಲುಬಿ**: ೨. ತೊಟ್ಟಿ; ದೋಣಿ: ಮರದ ಅಥವಾ ತಾಮ್ರದ ಕಲುಬಿ ಎಂದರೆ ಉದ್ದವಾದ ಬಾದಾಮಿ ಆಕೃತಿಯ ತೊಟ್ಟಿಗಳು . . . ಆ ಕಲುಬಿಯೊಳಗೆ ಹದವಾದ ರೀತಿಯಲ್ಲಿ ನೀರನ್ನು ಬೆರೆಯಿಸಿ ಹರಳೆಣ್ಣೆಯಿಂದ ನೆನೆಯಿಸಿ (ಮಲೆಮಂ. ೨೪).
[← ತುಳು. ಕಲಂಬಿ, ಕಲೆಂಬಿ]

**ಕಲಂಬಿ**$_2$ (ನಾ). ಒಂದು ಜಾತಿಯ ಸೊಪ್ಪು (ಕ).
[← ತಮಿ. ಕಲಮ್ಬಿ]

**ಕಲಂಬು**$_1$ 'ಕಲುಂಬು$_1$' ನೋ.

**ಕಲಂಬು**$_2$ (ನಾ). ಒಂದು ಜಾತಿಯ ಮರ; ಕಡವಿನ ಮರ (ಕ).
[< ಸಂ. ಕಲಂಬ]

**ಕಲಕ,** ಕಲುಕ (ನಾ). ೧. ಬೆರಕೆ; ಮಿಶ್ರಣ; ಕಲ್ಕ (ಕ). ೨. ಕುದಿಸದೆ ಇರುವ ಔಷಧಿಗಳ ಮಿಶ್ರಣ (ಕ). **ಕಲುಕ:** ೧. ಮಂದಾಗ್ನಿ ವೆಗ್ಗಳಿಸಿದರೆ ಕಲುಕ ಕಷಾಯಂಗಳ ತೆಗೆದುಕೊಂಡಲ್ಲಿ ಪರಿಹಾರ ಮಪ್ಪುದು (ವಚಶಾ. II, ೧೦೦); ಮೆಣಸು ಜೀರಿಗೆಯರೆದುಕಲುಕ [ಪಾಠಾಂ. ಕಲ್ಕ]ದೊಳು ಹಾಕಿ (ಸೂಪಶಾ. ೪-೩೫). [< ಸಂ. ಕಲ್ಕ]

**ಕಲಕಂಠ,** ಕಳಕಂಠ (ನಾ). ೧. ಇಂಪಾದ ಧ್ವನಿಯುಳ್ಳದ್ದು; **ಕೋಗಿಲೆ:** ಮಾಂದಳಿರೆಸಱಂಟಿ ಚೀಱಿತು ಕಲಕಂಠ ನಿಚಯ (ಮೋಹತ. ೪-೪೮); ಕಲಕಂಠನುಲಿ ಘೋಷಿಸಿತು ಜಗಕೆ, ರಾಮಾಗಮನ ವಾರ್ತೆಯಂ (ಶ್ರೀರಾಮಾ. ೧೫-೪೦೩). ೨. ದುಂಬಿ; ಭ್ರಮರ. ೩. ಪಾರಿವಾಳ; ಕಪೋತ. ೪. ಹಂಸಪಕ್ಷಿ; ಅಂಚೆ. ೫. ಇಂಪಾದ ಧ್ವನಿ, —ಕಂಠ. **ಕಳಕಂಠ:** ೧. ಕಳಕಂಠಕ್ಕತನುಗೆ ಚಾಪಳತಾರೋಹಣ ವಿಕಾರಂ (ಮಲ್ಲಿಪು. ೨-೨೭); ತದ್ವನಾಂತ ಳತಾನೀಕದಿನುಣ್ಮುತಿರ್ಪ ಕಳಕಂಠಧ್ವಾನಸಂತಾನಂ (ಜಗವಿ. ೨-೬); ಬಲವರ್ಪಾಱದಿ ಬಗ್ಗಿಪ ಕಳಕಂಠಂ ತೊಂಡುಗೆಡೆವ ಗಿಳಿ (ರಾಜಶೇ. ೨-೩೮); "ಬಲ್ಲಿದ ಗಾನಾಱದಿ ಪಿಕಮುಲ್ಲಾಸದಿ ಮೂಱುನುಡಿಯು ಕಳಕಂಠಾಖ್ಯಂ" (ನಾನಾಕಂ. ೧೦೪). [ಸಂ.]

**ಕಲಕಂಡುಗ** (ನಾ). ಒಂದು ಅಳತೆ: ಇದರ್ಕ್ಕೆ ಕೊಟ್ಟವಿರ್ಕ್ಕೆಱನಿ ಕಣ್ಡುಗಂ ಕಲಕಣ್ಡುಗ ಮುಕ್ಕಣ್ಡುಗ (ಎಕ. X, ಕೋಲಾರ. ೮-೯; ಸು. 753). [ಕಲ್$_2$ + ಕಂಡುಗ (< ಖಂಡುಗ)]

**ಕಲಕಲ,** ಕಳಕಳ$_1$ (ನಾ). ೧. ಮಧುರ ಧ್ವನಿಗಳ ಬೆರಕೆ; ದುಂಬಿ, ಹಕ್ಕಿ ಮೊದಲಾದುವುಗಳ ಮಿಶ್ರಧ್ವನಿ: ಕೋಟಿಪಕ್ಷಿ ಕಲಕಲ ತುಮುಲ ಮಾಧುರ್ಯದಿಂ (ಶ್ರೀರಾಮಾ. ೧೨೬-೩೨); ಸಖಿಯೊಬ್ಬಳು ಹೊರಗೆ ಬಳೆಯ ಕಲಕಲವನ್ನು ಕೇಳಿದ ತನ್ನ ಸಖಿಯಿಂದ ಎಚ್ಚರಿಸಲ್ಪಡುತ್ತಾಳೆ (ಧ್ವನ್ಯಾಲೋ. ೧೧೪). ೨. ಗಜಬಜೆ; ಗಲಾಟೆ; ಗೊಂದಲ: ಕಲಕೋಡು ಮನೆಗೆ ಪೋಗು ಪೋಗೆಂಬಾ ಕಲಕಲ ಜನರೊಳುಣ್ಮಿದುದು (ಚಂಪ್ರಸಾಂ. ೨೦-೨೨). ೩. (ಅಲಂ) ತಳಮಳ; ಸಂಕಟ; ಚಿಂತೆ: ವಿಷದ ಮೊದಲನೆಯ ಬಟ್ಟಲವನ್ನು ಎತ್ತುವಾಗ . . . ಹೊಟ್ಟೆಯೊಳಗೆ ಕಲಕಲವೆದ್ದು (ಕೃಷ್ಣಾಕು. ೨-೧೭). **ಕಳಕಳ$_1$:** ೧. ಬಿಚ್ಚಳಿಪ ಪರಭೃತದ ಕಳಕಳದೊಳೆ ಮಸುಳ್ದುದು ದಿವಿಜಯುಗಳ ಕಳಕಳಳನಿನದಂ (ಆದಿಪು. ೬-೯೪); ಉಲಿವ ಮಂಗಳ ಪಾಠಕರ ಕಳಕಳದೊಳುಪ್ಪವಡಿಸಿದನವನಿಪತಿಳಕ (ಕುವ್ಯಾದ್ರೋ. ೯-೧೧). ೨. "ಕೋಲಾಹಳಃ, ಕಳಕಳಃ, ತುಮುಲಃ – ಈ ೩ ವ್ಯಾಕುಳಮಪ್ಪ ಧ್ವನಿ" (ಹಲಾಯು. ೨೩-೧೩೮); ಪಿರಿದುಂ ಕಳಕಳಮಾಗಿ ಅರಸಂಗಱಿಪಿ (ವಡ್ಡಾರಾ. ೧೧೧-೧೯); ಆಗಳಾ ಕಳಕಳಕ್ಕೆ ಮಜಲುಂದಿದಯ್ಯರುಮೆಚ್ಚುತ್ತಿದೇನೆಂದು ಬೆಸಗೊಳೆ (ಪಂಪಭಾ. ೩-೧೮ವ); ತಳಾಱರ್ . . . ರತ್ನದ ಬೆಳಗಂ ಕಂಡು ಕಳಕಳರವಮಂ ಮಾಡುವುದುಂ (ಧರ್ಮಾಮೃ. ೬-೮೬); ಅಗಿವ ಪಟಹ ಮೃದಂಗ ಕಹಳಾದಿಗಳ ಕಳಕಳ ರಭಸದಶದಿಕ್ಕುಗಳ ಮಾತಾಡಿಸೆ (ಕುವ್ಯಾಭೀ. ೧-೪೬). ೩. ಬಲಿದುಸುರ ಬಿಸುಸುಯಿಲ ಹಬ್ಬಿದ ಕಳಕಳದ ಕಂಬನಿಯ ಕಿಬ್ಬೊನಲಿಳಿವ ಕದಪಿನ ಹೊತ್ತ ದುಗುಡದ ಮುಖದೊಳೈತಂದ (ಕುವ್ಯಾಭೀ. ೧೦-೧೫); ಬಂಡು ಬಕ್ಕುಡಿ ಭಂಗಬಂಧನ ಕನಲ್ಕೆ ಕಳಕಳಮೆಂಬಿವು . . . ಜನದೊಳಿಲ್ಲ (ಜಿಬಪು. ೬-೪೨).

[ದೇ. ‖ ತಮಿ. ಕಲಕಲ, ಕಲಕಲಪ್ಪು; ಮಲ. ಕಳಕಳ; ತುಳು. ಕಲಕಲ, ಗಲ್‌ಗಲ್, ಕಳಕಳ, ಗಳಗಳ; ತೆಲು. ಕಲಕಲ]

**ಕಲಕಲಗುಟ್ಟು** (ಕ್ರಿ). ಕಲಕಲ ಶಬ್ದಮಾಡು: ನೆಲ ಬಿರಿವಂತೆ ನಾನಾ ವಾದ್ಯ ಮೊಳಗೆ ಮಾರ್ಬಲ ಕಲಕಲಗುಟ್ಟೆ ನಡೆಯೆ (ಭರಚ. ೫೩-೨೩). [ಕಲಕಲ + ಕುಟ್ಟು]

**ಕಲಕಲಾಟ** (ನಾ). = ಕಲಕಲ ೨. ಗರುಡಿಯಿಂದ ಸಾಧಕರ ಕಲಕಲಾಟ ಆಗಾಗ್ಗೆ ಕೇಳಿಸುತ್ತಿದೆ (ಹಚ್ಚೆರ. ೮-೩); ನೂರಾರು ರೀತಿಯ ವಿಚಿತ್ರ ಭಾವನೆಗಳ ಕಲಕಲಾಟ ನಡೆದಿತ್ತು ಆಕೆಯೊಳಗೆ (ಬರಹಾ. ೧೧೪). [ಕಲಕಲ + ಕುಟ್ಟು]

**ಕಲಕಲಿಸು,** ಕಳಕಳಿಸು$_1$ (ಕ್ರಿ). ೧. ಕಲಕಲ ಶಬ್ದಮಾಡು; ಗಜಬಜಿಸು: ಕಲಕಲಿಸಿತು ಸೇನೆ ಜಯಜಯಯೆಂದುಬ್ಬಿ ಘುಳುಘುಳಿಸುವ ವಾರ್ಧಿಯಂತೆ (ಭರಚ. ೪೦-೧೦೬); ಕಲಕಲಿಸುತ್ತ, ಕರೆಯುಂಗಯ್ಯಳನ್ನು ಮುನ್ನೀಡಿ, ಅಲ್ಲಯ್ಯುವ ಕಾದಲೆಯ ಇಂಪಿನ ಅರುಮೆಯಿಂದ (ಮಂತ್ರಶ. ೬೨-೩). **ಕಳಕಳಿಸು$_1$:** ೧. ಕಳಕಳಿಪಮರಿಯರಂ ಕಣ್ಣೊಳೆ ಬಗ್ಗಿಸುವಲ್ಲಿ (ಆದಿಪು. ೭-೧೫); ಕಳಕಳಿಪ ಕೋಗಿಲೆಗಳು (ಕಾದಂಪೂ. ೮೩೭); ವೃಥಾ ಕಳಕಳಿಸಿ ನುಡಿವರೆ ಮೂನ್ಮರು (ಕುವ್ಯಾದ್ರೋ. ೨-೫೧). ೨. ಕಿಲಕಿಲ ಎನ್ನು: ತಲೆಪಱಿದಾಗಳ್ ಕಳಕಳಿಸಿ ನಗುತುಮಿರ್ದುದು ತಳಿಗೆಯ ಮೇಲ್ (ಪಂಪಭಾ. ೩-೬೪); ದಯಾಮಿತ್ರಸೆಟ್ಟಿ ಬಾಯ ತಂಬುಲಂ ಸೂಸೆ ಕಳಕಳಿಸಿ ನಕ್ಕು (ಧರ್ಮಾಮೃ. ೧-೧೭೨); ಪವನಸುತ ಕಳಕಳಿಸಿ ನಗುತವೆ ಕೌರವೇಂದ್ರಂಗೆಂದನುತ್ತರವ (ಕುವ್ಯಾಭೀ. ೫-೧೨). ೩. (ಅಲಂ) ಸಂಕಟಪಡು: ಬಾಯ್ಬಿಡುವ ವಧುವಂ ನೋಡಿ ಕಳಕಳಿಸುತಖಿಳ ಬಂಧುಗಳು (ಮಹಾವಿ. ೬-೭); ನೆಳಲು ಇಲ್ಲದ ಬಳ್ಳಿ ಬಲವುಳ್ಳವನಾದರೂ ಕಳಕಳಿಸನೆ (ಗಾದೆ). ೪. ಆತುರಪಡು: ತಿಳಿಯದೆ ಹೋಗಿ ನೀವು ಸುಮ್ಮನೆ ಕಳಕಳಿಸಿದಿರಿ (ಭಾಷಾಶಾ. ೨೯); ಸುಧಾರಣೆಗಳನ್ನು ಆಚರಣೆಗೆ ತರಬೇಕೆಂಬ ತೀವ್ರಾಭಿಲಾಷೆಯಿಂದ ಕಳಕಳಿಸತೊಡಗಿದರು (ಕ್ರಿಯಾಶಿ. ೧೧೦). [ಕಲಕಲ + -ಇಸು$_3$]

**ಕಲಕಾಂಚಿ** (ನಾ). ಇಂಪಾಗಿ ಧ್ವನಿಮಾಡುವ ಒಡ್ಯಾಣ, —ಕಾಂಚಿ: ಉಲಿಯೆ ಕಲಕಾಂಚಿ ಮುಡಿಯಿಂದಲರುಗೆ (ರಾಜಶೇ. ೧೦-೭). [ಕಲ್$_4$ + ಕಾಂಚಿ$_3$]

**ಕಲಕಾಟ** (ನಾ). ಕಲಕಿಹೋಗುವಿಕೆ; ತಳಮಳ; ಕ್ಷೋಭೆ: (ಸಾಮಾಜಿಕದ ರಾಜಕೀಯದ) ಉಗ್ರಕ್ಷೋಭೆ; ಕಲಕಾಟ; ಪ್ರಾಕೃತಿಕ ಉಗ್ರಸಂಕ್ಷೋಭೆ (Convulsion. ಇಂಕನಿ). [ಕಲಕು$_1$ (< ಕಲಂಕು$_1$) + ಅಟ]

**ಕಲಕಾಡು** (ಕ್ರಿ). ಕದಡುಗೊಳಿಸು; ಕ್ಷೋಭೆಗೊಳಿಸು: ತಿಳಿಗೊಳನ ಕಲಕಾಡಿ ಬಿರಿದಚ್ಚಲರ ಧೂಳಿಗಳ್‌ಚೆಲ್ಲಾಡಿ . . . ಎಳವೆಲರೆಂಬ ಸೊಕ್ಕಾನೆ ತಾನೆ ತನ್ನಿಚ್ಛೆಯಿಂ ತಿರುಗುತಿದೆ (ಜೈಮಿಭಾ. ೩-೨೪); ಕಲಕಾಡಿದಾಗ ಕೆಸರು ಕೆಲಗೇರಿ ಬರಿಯ ಹೆಸರು (ಗಂಗಾತ. ೧೮-೧೧) [ಕಲಕು$_2$ + ಆಡು$_1$]

**ಕಲಕಾಲ** (ಅ). ಯಾವಾಗಲೂ; ಎಲ್ಲ ಕಾಲವೂ; ಸ್ಥಿರವಾಗಿ: ಕಲಕಾಲಾವೆಗ್ಗಳಿಯರಿಗೆ ದೂರಜಲನಿಧಿಯೊಳು ಪೊಕ್ಕು ನೆಲೆಯ ತಂದವರುಂಟೆ (ವಿಸಾಸು. ೨೨-೨); ಬಲು ದೈವಾಸಂಕೃತ ವಿಜಯವಿಠಲ ತಿಮ್ಮ ಕಲಕಾಲ ಜಾಗರವಾಗಿದ್ದ ಲೋಚನ (ತೀರ್ಥಮ. ೧೬೪); ಕಲಕಾಲ ದಾಸಯ್ಯನಾದರೆ ತಿರುಮಂತ್ರ ಹೇಳ್ಯಾನು (ಗಾದೆ). [← ತೆಲು. ಕಲಕಾಲ]

**ಕಲಕಿಸು** (ಕ್ರಿ). ೧. ಕಲಕುಗೊಳಿಸು; ಕದಡು: ಬಿದಿರಿನ ಬಡಿಗೆಗಳಿಂದ ಆ ನೀರನ್ನು ಕೆಲವು ಹೊತ್ತಿನ ತನಕ ಒಳಿತಾಗಿ ಕಲಕಿಸಿದ ಬಳಿಕ (ಮುಂಬಯ ೪-೫೫). ೨. ಹೇಳು; ನುಡಿ (?): ಸತ್ಯವ ತಪ್ಪದೆ ತಡೆಯದೆ ಮಾನಿನಿಯ ರನ್ನೆ ಕಲಕಿಸು ಬೇಗಂ (ಹಮಚ. ೧೯೭-೧೬); ಪಶುವ ಕೊಂದಡೆ ಕುಲವು ನಾಶವದಾಗಿ ಪೋಪುದು . . . ಕಲಕೆ[ಕಿ]ಸದಿರೆನಗೆ (ಹಮಚ. ೧೨೫-೧೧). [ಕಲಕು$_2$ + - ಇಸು$_3$]

**ಕಲಕು$_1$** 'ಕಲಂಕು$_1$' ನೋ.

**ಕಲಕು₂** (ನಾ). ಕೆಸರು ; ರಾಡಿ; ಕರ್ದಮ : ಮಳೆಗಾಲದಲ್ಲಿ ಕಲಕಾದ ಹೊಳೆಗಳು (ಮುಂಬಯಿ. ೫-೩೧೩) ; ಪುಲಿಕೇಶಿದೊರೆಯಾಳಿ ಕಲಕೆಲ್ಲ ತಿಳಿಯಾಗಿ ಬಲ ಕಾಣ ಕೇಳೊ ದೊಡಬಸವ (ಜನಗೀ. ೬೦-೩).

ಕಲಕಾಗು = (ಕದಡಿ) ಬಗ್ಗಡವಾಗು : ಕುಮಾರಿಯ ಅಂತಃಕರಣ ಕಾಸಾರವು ಕದಡಿ ಕಲಕಾಯಿತು (ಕೃಷ್ಣಾಕು. ೧-೧೧).

[< ಕಲಂಕು₁]

**ಕಲಕುನೀರು** (ನಾ). ೧. ಕದಡಿದ ನೀರು. ೨. ಬಣ್ಣ ಬೆರಸಿದ ನೀರು ; ಓಕುಳಿ : ಕಾಮನ ಹುಣ್ಣಿಮೆಗೆ ಕಲಕುನೀರು (ಗಾದೆ).

[ಕಲಕು₂ + ನೀರು₁ (< ನೀರ್₁)]

**ಕಲಕುಮಲಕು** (ನಾ). ಕದಡಿದ ಸ್ಥಿತಿ; ಕ್ಷೋಭೆ : ಈ ಕಲಕುಮಲಕು ಆದಾಗ ನಿನಗೆ ನಡದದ ಮ್ಯಾಲ ಕೆಳಗ (ಹೃದಸ. ೧೬-೮) ; ಕರುಳ ಕಲಕುಮಲಕಿನಲ್ಲಿ ಕುದಿದು ಕುದಿದ ಹಾಲೆ (ಗಂಗಾತ. ೧೦೪-೧೩) ; ಒಂದಿಲ್ಲೊಂದು ಕಂಟಕವು ಬಂದು ಜೀವನವು ಕಲಕುಮಲಕಾಗುವದು (ಕರ್ಣಾಕ. ೩೬೧) ; ಅರ್ಜುನನ ಮನಃಸ್ಥಿತಿ ಕಲಕುಮಲಕಾಗಿತ್ತು (ಬದುರಿ. ೮೬).

[ಕಲಕು₂ + ಮಲಕು₂]

**ಕಲಕೇತ** (ನಾ). ವೇಷಧಾರಿಯಾಗಿ ಹಣವನ್ನು ಸಂಪಾದಿಸುವವನು ; ಮಾಯಕಾರ : ಕಲಕೇತರಂತೆ ಊರ ಮಗನೆಂದು ಬಾಗಿಲಲ್ಲಿ ಇಱಿದುಕೊಂಬವನಂತೆ ಅವ ಮಾಡಿಕೊಂಡ ವ್ರತ ಆದಾರಿಗೆ ಯೋಗ್ಯ (ಎಲೇಶ್ವ. ೫೬) ; ಗುಮ್ಮಡಿಯಂತಪ್ಪ ತಾಯಿ ನೋಡೆನಗೆ ಕಲಕೇತನಂತಪ್ಪ ತಂದೆ ನೋಡೆನಗೆ (ಬಸವ. ೬೨೦) ; ಬೂತು ಕಲಕೇತರ್ಗಂ ಕರದೀವ ತೆಱದಿ ಸುರಸರನಱಿದೀವರೆ ಧಾತ್ರಿಯಲ್ಲಿ (ನೀತಿಸಾ. ೬೦೩) ; "ಒಂದು ಬಗೆಯ ಪಿಶಾಚಿ" (ಬಸವ. ಕೋಶ).

[< ಸಂ. ಕಲಹಕ್ಷೇತ್ರ ?]

**ಕಲಕೇತಿ** (ನಾ). ೧. ಮಾಯಗಾರ್ತಿ : ಮುರುಕುತೊಟ್ಟಿಲಿಗೊಂದು ಹರಕುಚಾಪೆಯ ಹಾಸಿ ಅರಚುಪಾಪನ ಮಲಗೀಸಿ ಅವರಕ್ಕ ಕಲಕೇತಿ ಹಾಡಿ ಹಿಗ್ಯಾಳ (ಹಳ್ಳಿಯ. ೬೬) ; ನೋಡು, ರಾಣಿ, ಈ ಕಲಕೇತಿ ಬಂದಳು (ಮಲ್ಲಿ. ೨೩೬). ೨. ಚದುರಿನ ಸವಿಮಾತನಾಡುವವಳು (ಕಿ).

[ಕಲಕೇತ + -ಇ₂]

**ಕಲಕೇತಿತನ** (ನಾ). ೧. ಮಾಯಾವಿತನ. ೨. ಸವಿಮಾತನಾಡುವ ಚಾತುರ್ಯ (ಕಿ).

[ಕಲಕೇತಿ + -ತನ]

**ಕಲಗಂಚಿ** 'ಕಲಗರ್ಚು' ನೋ.

**ಕಲಗಂಚು** 'ಕಲಗರ್ಚು' ನೋ.

**ಕಲಗಚ್ಚು** 'ಕಲಗರ್ಚು' ನೋ.

**ಕಲಗರ್ಚು**, ಕಲಗಂಚಿ, ಕಲಗಂಚು, ಕಲಗಚ್ಚು (ನಾ). ೧. ಅಕ್ಕಿ ತೊಳೆದ ನೀರು. ೨. ಮುಸುರೆ ನೀರು ; ದನಕರುಗಳು ಕುಡಿಯಲೆಂದು ಬಾನೆ ಅಥವಾ ದೋಣಿಯಲ್ಲಿ ತೌಡು, ಬೂಸ ಮೊದಲಾದುವನ್ನು ಬೆರಸಿಟ್ಟ ನೀರು : ಪರಮಾನ್ನಮಂ ಸೇವಿಸುವ ಭೋಗಿ ಕಲಗರ್ಚಿಂಗೆ ಮೋಹಿಸುವನೇ (ಪದ್ಮರಾ. ೬-೧೬) ; ಎಮ್ಮೆಗೆ ಕಲಗರ್ಚು ಕುಡಿಸಿಬಿಡು (ರೂಢಿ). **ಕಲಗಂಚಿ** : ೩. ಮುಸುರೆ ನೀರನ್ನು ಇಡುವ ಪಾತ್ರೆ, —ಬಾನಿ; "ಮುಸುರೆಡೋಣಿ" (ಜಾನಕೋ. ೩೫). **ಕಲಗಂಚು** : ೨. ಬೆಳೆ ಮಾಡಿಕೊಳ್ಳದಿದ್ದರೆ ಅರಗಾಲ ಬರಗಾಲಂಗಳಲ್ಲಿ ಏನೂ ಯುಕ್ತಿ ತೋಚದೆ ಕಲಗಂಚಿನಲ್ಲಿ ಬಿದ್ದ ಇಲಿಯಂತೆ ಒದ್ದಾಡಿ ಮರಣ ಹೊಂದುವರು (ಕೃಷಿಪ್ರ. ೧೬೦). **ಕಲಗಚ್ಚು** : ೨. ಕರಿಕೆಯ ಬೇರು ಕಲಗಚ್ಚಿನ ನೀರು ಸರಿಹೋಗುತ್ತದೆ (ದೀಪಹ. I, ೨೯) ; ಅಲ್ಲಿ ಮಂಗಳೆ ದನಕರುಗಳಿಗೆ ಕಲಗಚ್ಚು ಇಡುತ್ತಿದ್ದಳು (ಸರ್ವಮಂ. ೩೩೫).

[ಕಲ್₃ + ಕರ್ಚು₂ (< ಕಚ್ಚು)]

**ಕಲಗಾತಿ** (ನಾ). ಕಲಹ ಮಾಡುವವಳು ; ಜಗಳಗಂಟಿ : ಪುರಹರನ ಭಕ್ತರಿಗೆ ಭವಿ ನರಗುರಿಗಳು ಸಮನೆ ತೆರಳೆ ಕಲಗಾತಿಯರೇ (ಶರಲೀ. ೨೬೦-೩).

[< ಕಲಹಗಾರ್ತಿ ?]

**ಕಲಗೆಯ್** (ಕ್ರಿ). ಜಗಳವಾಡು ; ಯುದ್ಧಮಾಡು : ಈ ಮೂವರು ಕಿರುತೊಱೆ ಮರಿಯಾದೆ ಆಳೆಮತ್ತ ಕಾಡುವಟ್ಟ ಕಲಗೆಯ್ದನೆನ್ದು ಮುಣಿದು ವಲ್ಲೆವರಸ ದೇವಯ ಮೂಡಲ ಗೋವನ್ ಬರುಮಾನಟ್ಟದ (ಎಕ. X, ಶ್ರೀನಿವಾ. ೩೦-೫ ; ಸು. 800 ?).

[< ಕಲಹಗೆಯ್ ?]

**ಕಲಡು₁** (ಕ್ರಿ). ೧. ರಾಡಿಯಾಗು ; ಕೆಸರಾಗು : "ಕಲಡು–ಕಲುಷೇ" (ಶಮಧಾ). ೨. ಕ್ಷೋಭೆಗೊಳಿಸು : ವಿಚಾರದ ಬಗೆಗೆ, ಧರ್ಮದ ಬಗೆಗೆ, ಅವರಿಬ್ಬರಿಗೂ ನಡೆದ ವಾದವು ಇಬ್ಬರ ಮನಸ್ಸನ್ನೂ ಕಲಡಿತ್ತು (ದೂರಸ. ೨೦೪).

[< ಕದಡು₁]

**ಕಲಡು₂** (ನಾ). ಕ್ಷೋಭೆ : ಪ್ರಭುದ್ರೋಹದ ದುರಾಶೆಯ ಕಲಡು ಕಿಲುಬು ಸೋಂಕೂ ಪಾಡಳಿಯಿಸದ ಸರಲತೆ (ಬಿಟ್ಟಅ. ೧೮೬-೨).

[< ಕದಡು₂]

**ಕಲತಾನ** (ನಾ). ಇಂಪಾದ ನಾದ ; ಮಂಜುಳ ರವ : ನದಿಗಿರಿ ನಿರ್ಝರಜಲ ಕಲತಾನದಿ, ವಿಹಂಗ ಕೂಜನ ಮಧುಮಯಗಾನದಿ (ಪಾಂಚಜ. ೫೮).

[ಕಲ್₄ + ತಾನ]

**ಕಲತಾನಿ** (ನಾ). ದಪ್ಪನೂಲಿನ ಬಟ್ಟೆ ; ಕ್ಯಾನ್‌ವಾಸು : ಅರಿಶಿನ, ಹುಣಿಸೇಹಣ್ಣು . . . ಮುಂತಾದ ಕಲತಾನಿ ಚೀಲದೊಳಗೆ ತುಂಬಿ ಬರುವಂಥ ಜೀನಸು (ಮುಂಬವ್ಯಾ. ೧೪).

[← ಅರ. ಕತ್ತಾನ್ ; ಮರ. ಕಲತಾನೀ, ಕಂತಾನ್, ಕತಾನ್]

**ಕಲತಿ**, ಕಲ್ಲತ್ತಿ₂ (ನಾ). ಮಣ್ಣಿನ ಪಾತ್ರೆ ; ಮಡಕೆ : ಎಲೆ ಗೋಪಿ ನಿನ್ನ ಮಗನ ದೆಸೆಯಿಂದೆಮ್ಮ ಕಲತಿಯ ಮೊಸರು ಬದುಕದು ನೆಲಹಿನ ಬೆಣ್ಣೆಯುಳಿಯದು (ನೇಮಿಸಂ. ೧೫-೯೩). **ಕಲ್ಲತ್ತಿ₂** : ಚಿತ್ತ ಬೀಸಣಿಕೆ ಕಾಳಂಜಿ ಕನ್ನಡಿಯು ಕಲ್ಲತ್ತಿ ಚಾಮರ ಕುಂಚ ಪನ್ನೀರ ಪಕ್ಕಳೆಯು ಕತ್ತೂರಿ . . . ಪಿಡಿದೂಳಿಗದ ಕೋಮಲಾಂಗಿಯರು (ಪ್ರಭುಪು. ೪-೬೬).

[< ಸಂ. ಗಲಂತಿಕಾ]

**ಕಲತ್ತಣ್ಣ** (ನಾ). (?) : ಪಂಚಪರ್ವಕೆ ಕಲತ್ತಂಣ ತಳುತುಂಬಿ ದೀವಿಗೆಗೆ ಪರ್ವ್ವ ೧ಕ್ಕೆ (ಸೌಇಎ. ೧೯೩೨, ಉಡುಪಿ. ೩೩೮-೧೧ ; ?).

[?]

**ಕಲತ್ರ**, ಕಳತ್ರ (ನಾ). ೧. ಹೆಂಡತಿ ; ಮಡದಿ : ಶ್ರುತಿನುತಿಪಾತ್ರೇ ಶಿವನ ಕಲತ್ರೇ (ಉದ್ಭದೇ. ೧-೬). ೨. (ಹೆಂಗಸರ) ಕುಂಡೆ ; ಪಿರ್ರೆ : ಅಸ್ತೋಕ ಕಲತ್ರದಿನಿರವತಿಗೆಯ ಶಸ್ತಸ್ತಬಕ ಕಚದಿನೆಸೆವವಳಂ . . . ಅಳವೇ ಬಣ್ಣಿಸಲು (ಉದ್ಭದೇ. ೨-೪೯). **ಕಳತ್ರ** : ೧. "ದಾರಂ ಕಳತ್ರಂ ಗೃಹಂ ಗೃಹಿಣಿ . . . ಮಹಿಳೆಯೆನೆ ಹೆಂಡಿತಿಗೆ ನಾಮಮಕ್ಕುಂ" (ಮಂಗರಾ. ೯೦-೬) ; ನಿನ್ನ ಕಳತ್ರಮಿಾ ಧರಾವಧು (ಕವಿರಾ. ೩-೧೬೨) ; ಮೋಹಮಯಂ ನಿಗಳಂ ಕಳತ್ರಂ (ಪಂಪಭಾ. ೪-೧೨). ೨. "ಕಾಂಚೀಪದಂ, ಕಳತ್ರಂ ಜಘನಂ, ಶ್ರೋಣೀ, ಕಕುದ್ಮತೀ – ಈ ೫ ಜಘನಂ" (ಹಲಾಯು. ೮೪-೩೫೮). ೩. [ಜ್ಯೋತಿ] "ಲಗ್ನದಿಂದ ಏಳನೆಯ ಸ್ಥಾನ [ಪತ್ನಿಯ ವಿಚಾರವನ್ನು ತಿಳಿಸುವ ಸ್ಥಾನ]" (ಜಾತಿ. ಪರಿ. ೩೬೮).

[ಸಂ.]

**ಕಲಧೌತ**, ಕಳಧೌತ (ನಾ). ೧. ಚಿನ್ನ : ಅಪಗತಘಾತಿದ್ವಿಷದ್ವೀರ್ಯನಿರ್ದಂ ಕಲಧೌತಕ್ಷ್ಮಾಧರಂಬೊಲ್ (ಅಜಿಪು. ೬-೨೧) ; ಬಹುಳ ಕಾಲಾಗರು ಧೂಮಶ್ಯಾಮಲಿತ ಕಲಧೌತ ಧೂಪ ಘಟಂಗಳಿಂ (ಪಂರಾಮಾ. ೧೨-೨ ವ). ೨. ಬಿಳಿಯ ಬಣ್ಣ ; ಶ್ವೇತವರ್ಣ. ೩. ಮದ್ದುಗುಣಿಕೆ ; ಉಮ್ಮತ್ತದ ಗಿಡ ; ದತ್ತೂರ : ಪಾಲಾಶ ಕಲಧೌತ ಪುಷ್ಪಂಗಳುಂತುಳಸಿ . . . ಲಿಂಗಕ್ಕೆ ಪ್ರಕ್ಷಾಲಿಸಿ (ಗುರುಚಾ. ೬-೧೬). ೪. ಬೆಳ್ಳಿ : "ಉಮ್ಮತ್ತಂ ಬಿಳಿದುಂ ತೀವಿದ ಭಂಗಾರ ಬೆಳ್ಳಿ ಕಲಧೌತಾಖ್ಯಂ" (ನಾನಾಕಂ. ೮೨).

**ಕಳಧೌತ** : ೧. ತಟತಟ ತೊಳಗುವ ಕಳಧೌತ ಕಳಶಂಗಳೊಳ್ ತೆಕ್ಕನೆ ತೀವಿ (ಪಂಪಭಾ. ೧೪-೧೭ ವ); ಕಳಧೌತಚ್ಛವಿಕುಂದ ಕುಟ್ಮಲರದಂ (ಚಂದ್ರಪ್ರ. ೪-೭); ಕಲ್ಲೋಳು ಸುರುಚಿರ ಕಳಧೌತಮುಂ ಸುಪಾಲೊಳು ನೆಯ್ಯುಂ ಪೊರೆದಿಪ್ಪಂತಿರೆ ಜೀವಂ ಪೊರೆದಿಕ್ಕುಂ ದೇಹದಲ್ಲಿ (ಪರಮಾ. ೫೮-೬೩). ೪. "ಕಳಧೌತಂ ತಪನೀಯ ರೂಪ್ಯ ಯುಗದೊಳ್" (ವಸ್ತುಕೋ. ೧೨೩-೩೪). [ಸಂ.]

**ಕಲಧೌತಾಚಲ** (ನಾ). ಚಿನ್ನದ ಬೆಟ್ಟ ; ಮೇರು ಪರ್ವತ : ನೆಲೆಯಂ ನಿಟ್ಟಿಸಲಂತರಗೆಟ್ಟಾ ಕಲಧೌತಾಚಲದಿಂ ದಕ್ಷಿಣಗೊಂಡೊಲವಿಂ ತನ ಗುತ್ತರವೆನಿಸಿತ್ತೆಂದೇಳಿಸಿ ಮೇರುವನು . . . ಎಸೆದುದು ಶಂಕರನ ಮೃಗಾಂಕಾಂಕನ ವರಭವನ (ಉದ್ಭಟದೇ. ೫-೧೩). [ಕಲಧೌತ + ಅಚಲ]

**ಕಲನ** (ನಾ). ೧. ಮಾಡುವುದು ; ಉಂಟುಮಾಡುವುದು. ೨. ಸೇರಿಸುವುದು; ಜೋಡಿಸುವುದು; ಹೊಂದಿಸುವುದು. ೩. ಕಲೆ; ಕಳಂಕ; ಕಪ್ಪು. ೪. ಕಲಲ; ಗರ್ಭಾಣು. ೫. [ಗಣಿತ] "ಒಂದು ಗೊತ್ತಾದ ಪದ್ಧತಿಯ ಗಣನೆ" (Calculus. ಇಂಕನಿ); ಈ ರೀತಿಯಲ್ಲಿ ನ್ಯೂಟನ್ ಲೈಬ್ನಿಟ್ಸರಿಗೆ ಮುಂಚೆ ಕಲನಶಾಸ್ತ್ರ (Calculus)ದ ಭಾವನೆಗಳನ್ನು ಸ್ವಲ್ಪಮಟ್ಟಿಗೆ ಕೊಟ್ಟವರಲ್ಲಿ ಫರ್ಮಟನೂ ಒಬ್ಬನು (ಗಣಿಚ. ೧೨೩). [ಸಂ.]

**ಕಲನಿ** 'ಕಟನಿ' ನೋ.

**ಕಲನೆ** (ನಾ). = ಕಲನ ೨ : ಅಲಘು ತಪದಿಂ ನಿರಾಹಾರ ಪರ್ಣಾಹಾರ ಕಲನೆಯಿಂದೆಸಗಿದ ಮಹಾತಪದಿ (ವೆಂಕಾರಾ. ೩-೨-೨೩). 'ಕಲನೆಗೈ' ಪರಾ. [ಸಂ. ಕಲನ]

**ಕಲನೆಗೈ** (ಕ್ರಿ). ಒದಗಿಸು; ಏರ್ಪಾಟುಮಾಡು: ಕಲ್ಯಾಣಮಪ್ಪಂದದಿಂ ಕಲನೆಗೈವೇಳ್ಕು (ವೆಂಕಾರಾ. ೨-೨೧-೪).

[ಕಲನೆ + ಗೈ$_1$ (< ಕೆಯ್$_1$)]

**ಕಲಪರಟಿ** 'ಕಲ್ಪರಟಿ' ನೋ.

**ಕಲಪರಟೆ** 'ಕಲ್ಪರಟೆ' ನೋ.

**ಕಲಪು$_1$** (ನಾ). ಕೂಡಿಹಾಕಿದ ವಸ್ತು ; ಮನೆಗೆ ಬೇಕಾದ ಮರಮುಟ್ಟು ಮೊದಲಾದ ಪದಾರ್ಥಗಳ ಸಂಗ್ರಹ (?) : ಭೂಪಾಲಕನ ಶಿಲ್ಪಿಗರು ವಿಲಯ ಹೊಂದಿದ ಪುರದ ರಚನೆಯ ಕಲಪಿನಿಂ ಪೊಸತಾಗಿ ತ್ವರೆಯಲಿ ನಲವಿನಿಂ ಮಾಡಿದರು (ರಘುವಂ. ೧೮೮-೩೮). [?]

**ಕಲಪು$_2$** (ನಾ). (ಉಕ) ಕೂದಲು ಕರ್‍ರಗೆ ಕಾಣುವಂತೆ ಲೇಪಿಸುವ ಬಣ್ಣ : ಏನು ತಲೆ ಬಣ್ಣಿಸಲಿ ತಿಗಳಿ ಮೇಯುವ ಹೊಲವ ? ಕಲಪನ್ನು ಕಾಣವೇ ನನ್ನ ಕಣ್ಣು (ನಾದಲೀ. ೫೩-೪) ; ಓಣಿಗಳ ಸುತ್ತಿ ಕಲಪು ಹಚ್ಚಿದ ಮೀಸೆಗಳ ತೀಡುವಿ (ನವ್ಯಕಾ. ೩೯).

[← ಹಿಂ. ಕಲಪ್ ; ಮರಾ. ಕಲಪ್, ಕಲಫ್]

**ಕಲಪ್ಪಿರು** (ಕ್ರಿ). ಕೂಡಿರು ; ಬೆರತಿರು (?) : ಸಮರಾನಕಮಂ ಮಾಣಿಸಿ ಸಮುದಂ ಬರವೇೞ್ ಬಂದು ವಸುದೇವಂ ಸಂಭ್ರಮದಿನೆೞಗಲ್ಕೆ ತಾಂ ತೆಗದಮರ್ದಿ ಕಲಪ್ಪಿರ್ದನೊಂದು ಜಾವಂಬರೆಗಂ (ಮಹಾನೇ. ೫-೮೪). ℙ 'ಅಮರ್ದಿರಲಪ್ಪಿರ್ದಂ' ಎಂಬುದರ ಅಪಲಿಖಿತವಿರಬಹುದೆ?

[ಕಲಪು$_0$ + ಇರು (< ಇರ್). **P** ತಮಿ. ಕಲಪ್ಪು = ಸ್ನೇಹ]

**ಕಲಬತ್ತು, ಕಲ್ಪತ್ತು, ಕಲ್ಬತ್ತು, ಖಲಬತ್ತು** (ನಾ). ಔಷಧಿ, ಅಡಕೆ ಮೊದಲಾದುವನ್ನು ಕುಟ್ಟಲು ಹಾಗೂ ಅರೆಯಲು, ಕಲ್ಲು ಅಥವಾ ಲೋಹದಿಂದ ಮಾಡಿದ ಒರಳು ಮತ್ತು ಗುಂಡು: ಸಾಧುಗಳು ಕೈಯಲ್ಲಿ ಕಲಬತ್ತನ್ನು ತೆಗೆದುಕೊಂಡು ಅರತೆಗೆ ನಿಂತರು (ಚತಸ. ೫೩); ಕಾಂಪೌಂಡರ ಕಲಬತ್ತಿನಲ್ಲಿ ಏನೋ ಔಷಧ ತಯಾರಿಸುತ್ತಿದ್ದ (ವೈನಿ. ೭೯). **ಕಲ್ಪತ್ತು**: (ಕಿ). **ಕಲ್ಬತ್ತು**: (ಕಿ). **ಖಲಬತ್ತು** : ಒರಳುಗಳನ್ನೂ ಖಲಬತ್ತುಗಳನ್ನೂ ವಿಶೇಷವಾಗಿ ಈ ಶಿಲೆಯಿಂದ ಮಾಡುವರು (ಮುಂಬಯಿ. ೬-೨೪೬); ರಾಯರ ಖಲಬತ್ತಿಗೆ ರಾತ್ರಿ ಹಗಲು ವಿರಾಮವಿರಲಿಲ್ಲ (ಕಗದ್ಯ. ೧೨೩).

[← ಮರಾ. ಖಲಬತಾ, ಖಲಬತ್ತಾ]

**ಕಲಬಿ** 'ಕಲಂಬಿ$_1$' ನೋ.

**ಕಲಬಿಲಿ** (ನಾ). ಸದ್ದು ; ಗದ್ದಲ (ಕಿ). 'ಗಲಬಿಲಿ' ಪರಾ. [?]

**ಕಲಬೆರಕೆ, ಕಲೆಬೆರಕೆ** (ನಾ). ಹೊಂದಾವಣೆ ಇಲ್ಲದ ವಸ್ತು ಅಥವಾ ವಿಷಯಗಳ ಬೆರಕೆ; ಮಿಶ್ರಣ; ಸಂಕರ : ಪೂರ್ವ ಪಶ್ಚಿಮದ ಸಂಸ್ಕೃತಿಯ ಕಲಬೆರಕೆ ಸದ್ಯ ಬೇಡ (ಬಾಬಲ. ೮೦); ಕಲಬೆರಕೆಯ ಭಾಷೆಯನ್ನಾಡುವ ಜನರ ತವರೂರಾಗಿದೆ ಮಧುರೆ (ಹೊಸಕ್ಷಿ. ೨೯೨). **ಕಲೆಬೆರಕೆ** : ಈ ಮೊದಲು ರಾಜನೀತಿ ಮತ್ತು ಸಂಸ್ಕೃತಿಗಳು ಬೇರೆಬೇರೆಯಾಗಿದ್ದು ಈಗ ಇವುಗಳು ಕಲೆಬೆರಕೆಯಾಗಿ ಹೋಗಿರುವುದೇ ಇದಕ್ಕೆ ಕಾರಣ (ಶ್ರೇಷ್ಠಪ್ರ. ೧೫೪). [ಕಲ$_3$ + ಬೆರಕೆ]

**ಕಲಭ, ಕಳಭ** (ನಾ). ೧. ಆನೆಯ ಮರಿ ; ಮರಿಯಾನೆ. ೨. ಒಂಟೆಯ ಮರಿ. ೩. ಯಾವುದೇ ಪ್ರಾಣಿಯ ಮರಿ. **ಕಳಭ** : ೧. "ಕರಿಪೋತಮೆನೆ ಕಳಭಮೆನಲು ಮಱಿಗಳ್" (ಮಂಗರಾ. ೪೬-೧) ; ತಮ್ಮೊಡನೆ ನಲಿದಾಡುವ ಕಿಶೋರಕೇಸರಿಗಳಂ ಪಿಡಿದು ತೆಗೆವ ಕರಿಕಳಭಂಗಳುಮಂ (ಪಂಪಭಾ. ೧-೧೧೫ ವ); ಎಳೆಯ ಕಬ್ಬಿನ ಕೋಲ ವನಕರಿಕಳಭ ಕರದಲಿ ಮುಱಿವವೊಲು ನಿಱಿನಿಳಿಲು ನಿಟಿಲೆಂಬಬ್ಬರಣೆಗಬ್ಬರಿಸೆ ದಿಗುತಟವ (ತೊರರಾ. ೧-೧೫-೪೧). ೩. ಮುಕ್ತಾಮಾಲಕೆಯಂ ನವವಿಚಕಿಲಮಾಲಕೆಗೆತ್ತೆಳಸಿ ಸುೞಿವುವಳಿಕಳಭಂಗಳ್ (ಪಂರಾಮಾ. ೫-೧೧೬).

[ಸಂ.]

**ಕಲಮ, ಕಳಮ** (ನಾ). ೧. ನೆಲ್ಲು; ಬತ್ತ : ಆ ವಿಚಿತ್ರಶೋಭೆಯಂ ತಳೆದ ಕಲಮ ಕ್ಷೇತ್ರಂಗಳೊಳ್ (ಮಲ್ಲಿಪು. ೨-೧೯). ೨. ನೆಲ್ಲು ಬೆಳೆಯುವ ಸ್ಥಳ; ಗದ್ದೆ: ಪಾಮರಿಯರು ಕಲಮದೊಳು ಗಿಳಿಯ ಸೋವಲು (ತರ್ಕಕಾ. ೧-೩೪). **ಕಳಮ** : ೧. ಕಳಮ ಕಣಿಶ ಕಬಳ ಸಮುತ್ಕ ಶುಕಪ್ರಕರಮೆಸೆಯೆ (ಶಾಂತಿಪು. ೧-೬೦); ಸವಿಶೇಷಂ ಬೆಳೆದೊಪ್ಪಿ ತೋರ್ಪ ಕಳಮಂ (ಸುಕುಮಾ. ೧-೭೪); ಶಶಿ ಶಕಲಸಮ ಕಳಮ ತಂಡುಲನಿಕಾಯದಿಂ (ಚಂದ್ರಪ್ರ. ೬-೧೦೧); ಕಳಮಾದಿ ಧಾನ್ಯದ ರಾಶಿ ದೇಸಿವಡೆದೆಸೆದಿರ್ಪುದು (ರುಕ್ಮಾಂಗ. ೧-೧೧). 'ಕಳವೆ$_2$' ಪರಾ. [ಸಂ.]

**ಕಲಮಲ** (ನಾ). ಕಳವಳ; ತಳಮಳ; ಸಂಕಟ: ಸಾವಿನ ನೋವಿಗೆ ಕಲಮಲವೆದ್ದು ನೆಲವನ್ನೆಲ್ಲಾ ತುತ್ತುವೆನೆಂದು ಗದರುತ್ತಿಹುದು (ಗರಿ. ೬೧-೮); ನಿಮ್ಮನೆಲ್ಲ ನೆಲಸಮ ಮಾಡಿದಾಗ ಎದೆಯ ಕಲಮಲವು ಕಡಿಮೆಯಾದೀತು (ಜನನಾ. ೧೭); ವಸಂತನ ತಾಯಿಗಂತೂ ಮಗನ ಕಾಗದವು ಹೊಟ್ಟೆಯಲ್ಲಿ ಕಲಮಲವನ್ನೇ ಎಬ್ಬಿಸಿತ್ತು (ದೂರಸ. ೨೭೭); ಅವಳ ದನಿಗೆ ಹೊಟ್ಟೆಯಲ್ಲಿ ಕಲಮಲವೆದ್ದಿತು (ಮೂರುದಾ. ೩೧೯).

[← ಮರಾ. ಕಳಮಳ, ಕಲಮಲ]

**ಕಲಮು$_1$** 'ಕಲಂ$_1$' ನೋ.

**ಕಲಮು$_2$** 'ಕಲಂ$_2$' ನೋ.

**ಕಲಮುದಾನಿ** 'ಕಲಂದಾನಿ' ನೋ.

**ಕಲರವ** (ನಾ). ೧. ಮಧುರವಾದ ಧ್ವನಿ; ಇಂಪಾದ ರವ: ಹೇಮಂತ ಶೈಶಿರದ ಮಾಗಿ ಮಡಲಿಡೆ ತರಣಿ ಸೋಮನಂತಿರೆ ಬಿಸಿಲ್ಬೆಳ್ದಿಂಗಳವೊಲಾಗೆ ತಾಮರಸರಾಜಿ ನಸಿದುವು ಕುಗ್ಗಿದುವು ಕೋಗಿಲೆಯ ಕಂಠಕಲರವಗಳು (ಜೈಮಿಭಾ. ೨೮-೧). ೨. ಪಾರಿವಾಳ; ಕಪೋತ. ೩. ಕೋಗಿಲೆ. [ಕಲ$_4$ + ರವ]

**ಕಲಲ** (ನಾ). ರೇತಸ್ಸು ಸ್ತ್ರೀಯರ ಗರ್ಭಕೋಶವನ್ನು ಪ್ರವೇಶಿಸಿದ ಮೊದಲನೆಯ ರಾತ್ರಿಯಲ್ಲಿ ಉಂಟಾಗುವ ವಿಕಾರ; ಗರ್ಭಾಣು: ಕೃತದುಕೃತ ನಿಯಮೋಚಿತ ವಿಧಿಯಿಂ ಕಲಸಿ ಕಲಲಮಾಗಿ (ಯೋಗಾಂವಿ. ೧–೨೯); ಜೀವದಲ್ಲಿ ಪುಗಲೇ ಕದಿನದಲ್ಲಿಯುರ್ಜಿತ ಕಲಲವೆಂಬ ಪೆಸರಂ ತಾಳುತ್ತೈದು ದಿವಸಂಬರಂ ಮೆಜೆದಿರ್ಪುದು (ವೀಶೈಪು. ೪–೨೧–೩೮); ಮಾತೆಯ ರಜಸ್ಸು ಪಿತೃವೀರ್ಯಂಗಳೊಂದಾಗಿ ಸಾತಿಶಯದಿಂ ಪ್ರಥಮ ದಿನದಲ್ಲಿ ಕಲಲಮಹುದು (ಚೆಬಪು. ೫೮–೫). [ಸಂ.]

**ಕಲಲಕಣ** (ನಾ). ಕಲಲದ ಕಣ; ಜೀವಕಣ: (ಪಾರಿಶಿ. ೧೩).
[ಕಲಲ + ಕಣ$_3$]

**ಕಲಲಕಣಶಾಸ್ತ್ರ** (ನಾ). ಜೀವಕಣವನ್ನು ಕುರಿತ ವಿದ್ಯೆ: (ಪಾರಿಶಿ. ೨೬). [ಕಲಲಕಣ + ಶಾಸ್ತ್ರ]

**ಕಲಲು,** ಖಲಲು (ನಾ). ಹಾಳು; ಭಂಗ; ನಾಶ: ಮತಸಂಬಂಧವಾದ ಪೂಜೆಗೆ ಸೇರಿರುವ ಗುಂಪನ್ನು ಕಲಲು ಮಾಡೋಣ ಸಂವತ್ಸರ ಪರ್ಯಂತರ ಶಿಕ್ಷೆ (ಗ್ರಾಮಾಕ. ೧೮೯). **ಖಲಲು**: ನಿಮ್ಮ ವಂಶದ ಆಸ್ತಿ; ಇದನ್ನು ಯಾರೂ ಖಲಲು ಮಾಡುವಂತಿಲ್ಲ (ಮಲ್ಲಿ. ೧೮೦).
**ಕಲಲುಮಾಡು** = ಕೆಡಿಸು; ಭಂಗಪಡಿಸು.
[← ಅರ. ಖಲಲ; ಮರಾ. ಖಲಲ, ಖಲೇಲ]

**ಕಲವರ** 'ಕನವರ' ನೋ.

**ಕಲವರಿಕೆ** 'ಕನವರಿಕೆ' ನೋ.

**ಕಲವರಿಸು** 'ಕನವರಿಸು$_1$' ನೋ.

**ಕಲವಿಂಕ,** ಕಳವಿಂಕ (ನಾ). ಗುಬ್ಬಿ; ಗುಬ್ಬಚ್ಚಿ: "ಕಲವಿಂಕಃ, ಚಟಕಃ, ಗೃಹಬಳಿಭುಕ್, ನೀಲಕಂಠಃ:—ಈ ೪ ಗುಬ್ಬಿ(ಲು)" (ಹಲಾಯು. ೪೧–೯೦); ಕಲವಿಂಕದಂದದಿಂದೊಳಪೊಕ್ಕು ನೋಡಿದಂ (ವಂಕಾರಾ. ೫–೩–೩೫). **ಕಳವಿಂಕ**: ಮಿಡುಕಿ ಕಳವಳಿಪ ಕಳವಿಂಕಸಂಕುಳಂಗಳುಂ (ಚಂದ್ರಪು. ೫–೬೫ ವ); ಚಿಲಿಮಿಲಿಗ ಜಾಣ್ವಕ್ಕಿ ಚಕೋರಿ ಕಳಿಂಗ ಕಳವಿಂಕ . . . ಮುಖ್ಯವಿಹಂಗವಿವೆ (ತೊರರಾ. ೩–೧–೩೩); ಕಬ್ಬಕ್ಕಿ ಕಳವಿಂಕ ಪಿಂಗಳಿಕ ಸಾಳ್ವ (ರುಕ್ಮಾಂಗ. ೧೦–೫). [ಸಂ.]

**ಕಲವೆ,** ಕಲುವೆ (ನಾ). ತಾವರೆಹೂ. 'ಚೆಂಗಲವೆ' ಪರಾ. **ಕಲುವೆ**: (ಕಿ). [← ತೆಲು. ಕಲವ, ಕಲುವ]

**ಕಲಶ,** ಕಳಶ (ನಾ). ೧. ಬಿಂದಿಗೆ; ಕೊಡ; ಘಟ. ೨. ಪೂಜೆಯಲ್ಲಿ ನೀರು ತುಂಬಿ ಇಡುವ ಚೆಂಬು,—ಕುಂಭ; ಆರತಿಯಲ್ಲಿಡುವ ಗಿಂಡಿ: ನಾನಾವರ್ಣ ರಮಣೀಯ ದಿನದೇವಿ ತಾಂ ಬಾಲಾರ್ಕ ಕಲಶ ದೀಪಂಬಿಡಿದು (ಶ್ರೀರಾಮಾ. ೯೬–೯೯೭). ೩. ದೇವಾಲಯ ಹಾಗೂ ಮಂದಿರದ ಗೋಪುರಕ್ಕೆ ಹಾಕುವ ಕಂಚು ಅಥವಾ ಹಿತ್ತಾಳೆಯ ಅಲಂಕಾರದ ಶಿಖರ: ಕಲಶಂ ಚಂಡಪ್ರಭಂ ಪಂಜರಂ ಭಗಣಂ . . . ಗಗನಚ್ಛತ್ರದ ಹೇಮದಂಡಮೆನಿಸಲ್ ಸಾಲ್ದತ್ತು ಹೇಮಾಚಲಂ (ಜಗವಿ. ೧–೨೫). **ಕಳಶ**: ೨. ಕಳಶಂ ಕನ್ನಡಿ ರಂಗವಲ್ಲಿ ರಸವದ್ಗೀತಂ ವರಸ್ತ್ರೀಜನಂ ತಳಿರುಯ್ಯಲ್ . . . ಇಲ್ಲದ ಜನಾವಾಸಂಗಳಿಲ್ಲೆಲ್ಲಿಯುಂ (ಪುಷ್ಪಪು. ೨–೭೩). [ಸಂ.]

**ಕಲಶಜ,** ಕಳಶಜ (ನಾ). ೧. ಕೊಡದಲ್ಲಿ ಹುಟ್ಟಿದವನು; ಅಗಸ್ತ್ಯ. ೨. ದ್ರೋಣಾಚಾರ್ಯ: ಅಂತೆ ಗೆಯ್ವೆನೆಂದು ಕಲಶಜನನಿಬರ ಮೊಗಮಂ ನೋಡಿ (ಪಂಪಭಾ. ೨–೫೩ ವ); ಗುರುವರನ ಕಲಶಜನ ಕೊರೆದೆವು (ತಿಮ್ಮಶಾಂ. ೨–೯). ೩. ಅಗಸ್ತ್ಯ ನಕ್ಷತ್ರ. **ಕಳಶಜ**: ೨. ಸುರಸಿಂಧು ಪ್ರಿಯಪುತ್ರ ಕೇಳ್ ಕಳಶಜಾ ನೀಂ ಕೇಳ್ (ಪಂಪಭಾ. ೭–೧೫). ೩. ಕಳಶಜನುದಯದೊಳೊದವಿದ ಜಳಾಶಯಂ ತಿಳಿದುವು (ಶಾಂತಿಪು. ೧೦–೧೩೯). [ಸಂ.]

**ಕಲಶಪೂಜೆ** (ನಾ). ಮಂಗಳಕಾರ್ಯ ಅಥವಾ ಧರ್ಮಕಾರ್ಯಗಳಲ್ಲಿ ಶುದ್ಧೋದಕ ತುಂಬಿದ ಕಲಶಕ್ಕೆ ಮಾಡುವ ಪೂಜೆ: ಕಲಶಪೂಜೆ ಆದ ಮೇಲೆ ಮಂಗಳಕಾರ್ಯ ಪ್ರಾರಂಭವಾಗುತ್ತದೆ (ರೂಢಿ).
[ಕಲಶ + ಪೂಜೆ$_1$]

**ಕಲಶಪ್ರತಿಷ್ಠೆ** (ನಾ). ೧. ಪೂಜೆ ಮೊದಲಾದ ಸಂದರ್ಭದಲ್ಲಿ ವಿಧ್ಯುಕ್ತವಾಗಿ ಕಲಶವನ್ನಿರಿಸುವುದು. ೨. ದೇವಾಲಯದ ಗೋಪುರದಲ್ಲಿ ಅಲಂಕಾರದ ಕಳಸವನ್ನು ವಿಧಿ ಪೂರ್ವಕವಾಗಿ ಸ್ಥಾಪಿಸುವುದು,—ಇಡುವುದು: ದೇವಾಲಯಕ್ಕೆ ಕಲಶ ಪ್ರತಿಷ್ಠೆ ಮಾಡಿದರು (ರೂಢಿ).
[ಕಲಶ + ಪ್ರತಿಷ್ಠೆ]

**ಕಲಶಪ್ರಾಯ** (ನಾ). (ಅಲಂ) ಉತ್ತಮವಾದುದು; ಶ್ರೇಷ್ಠವಾದುದು: ಗದ್ಯಗಳಲ್ಲಿ ಆ ಕೃತಿ ಕಲಶಪ್ರಾಯವಾಗಿದೆ (ರೂಢಿ).
[ಸಂ.]

**ಕಲಶಪ್ರೋದ್ಭೂತ,** ಕಳಶಪ್ರೋದ್ಭೂತ (ನಾ). = ಕಲಶಜ ೧: ಎನ್ನೊಳ್ಪಿಸಂ ಪುಟ್ಟಿತೆನ್ನಂ ಕಲ[ಪಾಠಾಂ. ೪] ಶಪ್ರೋದ್ಭೂತನಂ ದೀಂಟಿದಂ (ರಾಜಶೇ. ೧–೧೦೨). **ಕಳಶಪ್ರೋದ್ಭೂತ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ಸಂ. (ಕಲಶ + ಪ್ರೋದ್ಭೂತ)]

**ಕಲಶರೇಖೆ** (ನಾ). [ಸಾಮುದ್ರಿ] ಅಂಗೈಯಲ್ಲಿರುವ ಕಲಶಾಕಾರದ ಒಂದು ರೇಖೆ: ಕಲಶರೇಖೆಯು ಡಮುರುರೇಖೆಯು ಮಕರಧ್ವಜರೇಖೆಯು ಇವು ಯಾವಾತನಿಗೆ ಉಂಟೋ ಅತನು ಅತ್ಯಂತ ಬುದ್ಧಿಶಾಲಿಯಾಗಿ ಕೀರ್ತಿವಂತನಾಗಿ (ಸಾಮುಲ. ೫೬–೪).
[ಕಲಶ + ರೇಖೆ]

**ಕಲಶವಿಡು** (ಕ್ರಿ). ೧. ಶಿಖರವನ್ನು ಇಡು; ಮುಡಿಯಿಡು. ೨. (ಅಲಂ) ಅತಿ ಹೆಚ್ಚಿನ ಶೋಭೆಯನ್ನುಂಟುಮಾಡು: ಕಲಶಸ್ತನೆಯರ್ ನಿಜ ಕುಚಕಲಶದ ಚೆಲ್ವಿಂಗೆ ಕಲಶವಿಟ್ಟಂತಿರ್ದರ್ (ಕಾದಂಪೂ. ೬೨); ನನ್ನ ವಿಜ್ಞಾನಸಂಪತ್ತಿನ ಧವಳಕೀರ್ತಿಗೆ ಕಲಶವಿಡಲೆಂದೇ ಅದು ಸೃಷ್ಟಿಯಾಗಿರಬೇಕೆಂದು ಒಳದನಿಯೊಂದು ಹೇಳುತ್ತದೆ (ಯೋಧಪು. ೫೭).
[ಕಲಶ + ಇಡು$_1$]

**ಕಲಶಸ್ಥಾಪನೆ** (ನಾ). ೧. ಕಲಶಪೂಜೆಗೆ ಮೊದಲು ಅದರ ಪೂರ್ವಾಂಗವಾಗಿ ಶಾಸ್ತ್ರೋಕ್ತರೀತಿಯಿಂದ ನೀರು ತುಂಬಿದ ಕಲಶವನ್ನಿರಿಸುವುದು. ೨. ಮದುವೆ ಮೊದಲಾದ ಶುಭ ಸಮಾರಂಭಗಳಲ್ಲಿ, ಕಲಶಗಳಲ್ಲಿ ನವಗ್ರಹಗಳನ್ನು ಆವಾಹನೆ ಮಾಡಿ, ಪೂಜಿಸಿ, ನೈವೇದ್ಯ ಸಲ್ಲಿಸುವ ಒಂದು ವಿಧಾನ (ಕಿ). [ಕಲಶ + ಸ್ಥಾಪನೆ]

**ಕಲಶಸ್ನಾನ** (ನಾ). = ಕಲಶಾಭಿಷೇಕ. [ಕಲಶ + ಸ್ನಾನ]

**ಕಲಶಾಭಿಷೇಕ** (ನಾ). ಮಂತ್ರೋಕ್ತವಾಗಿ ಕಲಶದ ನೀರಿನಿಂದ ಸ್ನಾನಮಾಡಿಸುವುದು: ಪಂಚ ಕಲಶೋದಕಗಳಿಂದ ಶಿಷ್ಯನಿಗೆ ಮಂತ್ರೋಕ್ತವಾಗಿ ಸ್ನಾನಮಾಡಿಸುವುದೇ ಕಲಶಾಭಿಷೇಕ (ಅಷ್ಟಾವಿ. ೧).
[ಕಲಶ + ಅಭಿಷೇಕ]

**ಕಲಶಿ** (ನಾ). ೧. ನೀರಿನ ಪಾತ್ರೆ; ಚೆಂಬು. ೨. ಒಂದು ಬಗೆಯ ಸಸ್ಯ (ಕಿ). [ಸಂ. ಕಲಶಿ, ಕಲಶೀ]

**ಕಲಶೋದಕ** (ನಾ). ಕಲಶದಲ್ಲಿ ತುಂಬಿದ ನೀರು: ಈ ಕಲಶೋದಕವೇ ಪಾದ್ಯವಾಗುವುದು (ಶಾಕುಂತ. ೧೨–೧೬). [ಕಲಶ + ಉದಕ$_1$]

**ಕಲಶೋದ್ಭವ,** ಕಳಶೋದ್ಭವ (ನಾ). = ಕಲಶಜ ೨: ಗುರುಸುತ ಶಲ್ಯ ಕಲಶೋದ್ಭವರು ಸೌಬಲರಾದಿ ಯಾದವರವನಿಪಾಲನ ಕಂಡರು (ಕುವ್ಯಾಭೀ. ೧–೨). **ಕಳಶೋದ್ಭವ**: ಕಳಶೋದ್ಭವನ ದೇಹವ್ಯಥೆಯ ಕೇಳ್ದು (ಕುವ್ಯಾದ್ರೋ. ೧–೪). [ಕಲಶ + ಉದ್ಭವ]

**ಕಲಸ**, ಕಳಸ$_1$ (ನಾ). ೧. = ಕಲಶ ೨ : ಮಾಣಿಕಗನ್ನಡಿ ಹೊನ್ನ ಕಲಸಗಳು ಕಾಣಿಸುತಿರೆ ನೃಪಕಟಕ . . . ಸೊಗಸಿದುದು (ಭರಚ. ೩೯–೬೬). ೨. = ಕಲಶ ೩ : ಮಲ್ಲಿಕಾರ್ಜುನದೇವರ ಜೀರ್ಣೋದ್ಧಾರವನು . . . ಸುವರ್ಣ ಕಲಸವ ಮಾಡಿಸಿ (ಎಕ. VII, ಶಿವಮೊ. ೧೦೨–೩೫ ; 1215). **ಕಳಸ$_1$** : ೧. ನಡೆತಂದರ್ ಸಂತಸದೆ ಪೊನ್ನ ಕಳಸದ ದಂತದ ಸಿವಿಗೆಗಳನೇಱಿ ಭೋಗಿಯರರೆಬರ್ (ಪಂಪಭಾ. ೯–೧೦೧). ೨. ಭಿತ್ತಿ ಇಲ್ಲದೆ ರತ್ನದ ಹೊದಿಕೆಯ ಮೇಲಿಪ್ಪ ಕಳಸವ ಕಂಡವರಾರನು ಕಾಣೆ (ಆದವ. ೭೬); ನಳಿನಮುಖಿಯರ ಸಕಲ ಸೃಷ್ಟಿಗೆ ಕಳಸವಿದು (ಕುವ್ಯಾಆ. ೧೩–೨೩) ; ಇಳೆಯೆಂಬ ಮನೆಗೆ ಕಳಸವೆನಿಸುವ ಬೆಳುಗುಳದ ಬೆಟ್ಟದೊಳು (ತ್ರಿಪುಸಾಂ. ೧–೭). ೩. (ಆಲಂ) ಗಣ್ಯವ್ಯಕ್ತಿ ; ಹಿರಿಯ : ಕೊಮಾರಪೈಕರಲ್ಲಿ ಕೆಲವು ಹಳ್ಳಿಗಳಿಗೆ ಕೂಡಿ ಕಳಸನೆಂಬ ಮುಖ್ಯ ಪಂಚನಿರುತ್ತಾನೆ (ಕಭಾಗೆ. ೧೮೧) ; 'ಎಣ್ಣೆಜೋಗಿ' ಬಂದು ಹಾಲುವಕ್ಕಿಯ ಶಕುನವನ್ನು ಒಡಚಿ ಹೇಳುವಾಗ 'ಈ ಬೀದಿಯಲ್ಲಿ ಒಂದು ಕಳಸ ಬೀಳಬೇಕು' ಎಂದು ನುಡಿದು (ಬೆಳುಮ. ೮೪).

[< ಸಂ. ಕಲಶ]

**ಕಲಸನ್ನ** (ನಾ). ೧. ಕಲಸಿದ ಅನ್ನ : ಕಲಸನ್ನಗಳ ಕರತಳದ ಮಧ್ಯದೊಳಿಟ್ಟು (ಕೃಷ್ಣಗೋ. ೨–೬೦). ೨. ಉಪ್ಪು, ಕಾರ, ಹುಳಿ, ಸೇರಿಸಿ ಒಗ್ಗರಣೆ ಹಾಕಿದ ಅನ್ನ ; ಚಿತ್ರಾನ್ನ : ಹಸನಾಗಿಯುದುರುದುರುವಂತಟ್ಟ ಕೂಳನಾಱಿಸಿ ಹಲವು ಭಾಗೆಯಂ ಮಾಡಿ ತನಿವಾಲ ಕೆನೆಮೊಸರ ಕೆನೆಯುಪ್ಪುಳ್ಳಿ ಹಸಿಯಲ್ಲಯೇಲಕ್ಕಿಯಿಕ್ಕುವುದು ಮತ್ತೊಂದಕೆ ಮೊಸರುಪ್ಪುಸದೆ ಮೆಣಸು ನೀರುಳ್ಳಿಯೇಲಕ್ಕಿ ಹಸಿಯಲ್ಲವಿಕ್ಕಿ ಮಾವಿನಕಾಯ ಚಿತ್ತಳಿಸಿವೊಸೆದದಂ ಹಾಕಿ ಮಾವಿನಕಾಯ ಕಲಸನ್ನವೆಂ [ಪಾಠಾಂ. ಕಲಸುಗೂಳೆಂ]ದು ಹೆಸರಂ ಕರೆವುದು (ಸೂಪಶಾ. ೩–೧೫) ; ಕಲಸನ್ನ, ಬೆಣ್ಣೆ, ಮೊಸರು, ಪಲ್ಯ . . . ಮೊದಲಾದ ತಿನಿಸುಗಳನ್ನೆಲ್ಲ ಬುಟ್ಟಿಯಲ್ಲಿ ಹಾಕಿದಳು (ಕಪಪು. ೩–೬೩). [ಕಲಸು$_2$ + ಅನ್ನ$_3$]

**ಕಲಸು$_1$**, ಕಲಿಸು$_2$ (ಕ್ರಿ). ಬೆರಸು ; ಕೂಡಿಸು ; ಕಲೆತುಕೊಳ್ಳುವಂತೆ ಮಿಶ್ರಣಮಾಡು : "ಕಲಸು – ಸಮ್ಮಿಶ್ರೇ" (ಶಮುಧಾ) ; ರಂಗದೊಳ್ ಸಣ್ಣಮಪ್ಪ ಪಿಟ್ಟನೊಳಾನುಂ ನೀರೊಳ್ ಕಲಸಿದ ಪಿಟ್ಟನೊಳಾನುಂ (ಚಾವುಂಪು. ೭೩); ಅಟ್ಟ ಅಶನವಾದಡೂ ಕಲಸುವದಕ್ಕೆ ಕೈ ಉಂಬುದಕ್ಕೆ ಬಾಯಿ ಬೇಕು (ಅವಚಂ. ೨೭೧–೧೨೪೬) ; ಈ ರಕುತದ ಜುಜುಜುಱಿನ ದೊಂಡೆಯಲಿ ಕಲಸಿದ ಕೂಳ ಮುದ್ದೆಗಳ (ಕುವ್ಯಾದ್ರೋ. ಪರಿ. ೨೮೫). **ಕಲಿಸು$_2$** : ಮೋಹ ರಾಗ ದ್ವೇಷ ತಾಪ ಶೋಕ ಹರುಷ ವೈಚಿಂತ್ಯವೆಂಬ ಏಳು ಮಲಂಗಳನೊಂದಾಗಿ ಕಲಿ[ಪಾಠಾಂ. ಲ]ಸಿ ತಿನ್ನುತ್ತ (ಆದವ. ೨೬) ; ಬೇಕಾದರೆ ಬರೇ ಕಳ್ಳೀಹಾಲಿನಲ್ಲೇ ಔಷಧ ಕಲಿಸಿ ಹಾಕಿಕೊಂಡೇನು" (ಕಂಬಹು. ೧೮).

ಕಲಕಲಿಸು (ದ್ವಿರುಕ್ತಿ) : ಲೇಸನಿತು ಶಂಕೆದೋಱದೆಯೆಲ್ಲ ಸಮವೆಂದು ಈಶಾವತಾರ ಕಲಕಲಿಸಿ ಯಾರೋಗಿಸುವುದು (ಗುರುಚಾ. ೭–೪೨).

[ದೇ. ‖ ತಮಿ. ಕಲ, ಕಲಶು, ಕಲವು ; ಮಲ. ಕಲರು ; ತುಳು. ಕಲಪು ; ಕೊಡ. ಕಲ ; ತೆಲು. ಕಲಯು, ಕಲಿಯು, ಕಲಪು ; ಕೋಲಾ. ಕಲ್ಪ್ ; ನಾಯ್ಕಿ. ಕಲ್ಪೆ ; ಕುವಿ. ಕಲ್ಪಲಿ]

**ಕಲಸು$_2$** (ನಾ). ೧. ಬೆರಕೆ ; ಮಿಶ್ರಣ : ಶೀನಪ್ಪನ ಮನಸ್ಸಿನಲ್ಲೂ ಇದೇ ರೀತಿಯ ಕಲಸು ಭಾವನೆ (ಅನಾಥೆ. ೨೨೭). 'ಕಲಸನ್ನ' ಪರಾ. ೨. (ಕರಾ) ಒಂದು ಬಗೆಯ ಮೇಲೋಗರ; ಕೂಟು : ಚೀನೀಕಾಯಿ ಕಲಸು ಊಟಕ್ಕೆ ಬಹು ರುಚಿ (ರೂಢಿ). [< ಕಲಸು$_1$]

**ಕಲಸುಗೂಳ್** 'ಕಲಸುಗೂೞ್' ನೋ.

**ಕಲಸುಗೂಳು** 'ಕಲಸುಗೂೞ್' ನೋ.

**ಕಲಸುಗೂೞ್**, ಕಲಸುಗೂಳ್, ಕಲಸುಗೂಳು (ನಾ). = ಕಲಸನ್ನ ೧: ಕಲಸುಗೂೞಿಂ ಕಾಗೆ ಸುತ್ತಿದಂತೆ ಬೆಳ್ಳಿಲಿಯ ಬಿಲದೊಳ್ ನೀರ್ ಪೊಕ್ಕಂತೆ (ಧರ್ಮಾಮೃ. ೨–೭೧) ; ಪವಣ್ಬುಗೆ ಕಲಸಿರ್ದ ತಣ್ಗಲಸುಗೂೞ ನಿಳಾಪತಿಗಿತ್ತನಬ್ಜೆಯಿಂ (ಲೀಲಾವ. ೫–೬೦) ; ಎಲೆಯಂ ಪಾಸಿ ಕಲಸುಗೂೞಿಂ ಬಡಿಸಿದೊಡುಂಡು (ಜೀವಸಂ. ೧೯೯–೩೫ವ). **ಕಲಸುಗೂಳ್** : ಚೆಲುವಹ ಕಲಸುಗೂಳ್ ಕಟ್ಟಿಕೊಟ್ಟು ಸಿದ್ಧೇಶ್ವರನ ಬೆಂಬಳಿಯಲ್ಲೆ ತಂದನು (ಸಿದ್ಧರಾ. ೨–೧೩). **ಕಲಸುಗೂಳು** : ಏಲಕ್ಕಿ ಪ ೧ ತಿರುವೆಟಿಗೆ ಕಲಸುಗೂಳಿನ ಅಕ್ಕಿ ಗ ೨ ಪ ೫ (ಎಕ. XV, ಬೇಲೂರು. ೨೪೮–೧೦ ; 1297) ; ಕೊಳಲರಾಗದ ರಹಿಯೊ ಕಲ್ಲಿಯ ಕಲಸುಗೂಳೋ ಹಳ್ಳಿಕಾತಿಯರೊಳಗುಡಿಯ ಹಾದರವೊ (ಕುವ್ಯಾಸ. ೨–೭೮) ; ಕಲಸುಗೂಳನು ತಿಂದು ಕಲ್ಲಿಯ ಚಳಕದಲಿ ಕೈಗೊಂಡು (ಕೋಗಯ. ೨೨–೯೭).

[ಕಲಸು$_2$ + ಕೂೞ್$_1$]

**ಕಲಸುಮೆಲಸು** (ನಾ). ಗಜಿಬಿಜಿ ; ಅವ್ಯವಸ್ಥೆ : ಇಲ್ಲಿ ಕಲಸುಮೆಲಸು ಮಾಡಬಾರದು (ಪುನರು. ೨೫೦). [ಕಲಸು$_2$ + ಮೆಲಸು ?]

**ಕಲಸುಮೇಲೋಗರ** (ನಾ). ೧. ಹುಳಿ, ಕೂಟು ಮುಂತಾದ ವ್ಯಂಜನ : ಕಲಸು ಮೇಲೋಗರ ೧ ಹುಳಿಶಾಕ ೧ (ಎಕ. VI. ಮೂಡಗೆ. ೩೯–೩೫ ; 1516 ?) ; ತುಪ್ಪ ಕಲಸುಮೇಲೋಗರ ತಾಳಿಲ ಮುಂತಾದ ಪಂಚಭಕ್ಷಕ್ಕೆ (ಎಇ. VIII, ೧೩೨–೨೯ ; 1586). ೨. ಕಲಸನ್ನ ; ಕದಂಬ : ಕಲಸಿದ ಕಲಸುಮೇಲೋಗರವನ್ನು ಬಿಸಾಡಿ, ಬೇರೆ ತಿಂದು ಕೈತೊಳೆದುಕೊಂಡು (ರಾಯುಕ. ೧೭). ೩. (ಆಲಂ) ಕಲಬೆರಕೆ ; ಸಂಕರ : ತಾನು ಅವನಿಗೆ ಕೊಟ್ಟ ಉತ್ತರಗಳೆಲ್ಲ ಅವಳ ಉದ್ವೇಗದಲ್ಲಿ ಕಲಸುಮೇಲೋಗರವಾಗಿತ್ತು (ಮುರುಕು. ೩೨) ; ನೋಡಿದಿರೇನ್ರಿ, ಎಲ್ಲ ಕಲಸುಮೇಲೋಗರವಾಗಿ ಹಾಳಾಯಿತು (ಪುನರು. ೧೦೯).

[ಕಲಸು$_2$ + ಮೇಲೋಗರ]

**ಕಲಸೋಗರ** (ನಾ). ೧. = ಕಲಸನ್ನ ೨ : ಚಪ್ಪರದ ಹೊಳೆಯಲು ಕಲಸೋಗರ ನೈವೇದ್ಯಕ್ಕೆ ಅಕ್ಕಿ ಮಣ (ಎಕ. XV, ಬೇಲೂರು. ೬೦–೩೭ ; 1485) ; ನೀರು ಮಜ್ಜಿಗೆಯ ಸವಿಮಾಡಿ ಸೋದಿಸಿಕೊಂಡು ನೀರುಳ್ಳಿ ಹಸಿಯಲ್ಲಮಂ ತೊಕ್ಕ ತೆಗೆದಗುಳ ತೋರದೊಳು ಕತ್ತರಿಸಿ ಹಾಕೆಯಾ ಕೂಳ ಕಲಸೋಗರಂ ತಾನಾಯಿತು [ಪಾಠಾಂ. ಕೂಳಿಕ್ಕಲದು ತಾ ಕಬಟ್ಟುವಾಯಿತು] (ಸೂಪಶಾ. ೩–೨೫) ; ಕಲಸೋಗರಮಂ ನಲಿದಿಕ್ಕಿ (ರಾಜಶೇ. ೪–೪೨) ; ಕಲಸೋಗರಮಂ ನಲಿದಿದಿರಿಗೀಯಲಱಿಯದೆ ಸಲೆ ಭುಂಜಿಪ ನೆಗ್ಗನಿಳೆಗೆ (ನೀತಿಸಾ. ೫೫೬). ೨. ಕಲಬೆರಕೆ : ಇನ್ನೊಂದು ದಿನ ಈ ಮೂರುಪದ್ಧತಿಗಳ ವಿಚಿತ್ರವಾದ್ಯಕಲಸೋಗರ (ಗಾನಕ. ೫).

[ಕಲಸು$_2$ + ಓಗರ]

**ಕಲಹ** (ನಾ). ೧. ಜಗಳ. ೨. ಕಾಳಗ; ಯುದ್ಧ : "ಸಮರಂ ಸಂಗ್ರಾಮಂ . . . ಸಂಯುಗಂ ಪ್ರಘಾತ ಕಲಹಂ" (ವಸ್ತುಕೋ. ೮೨–೧) ; ಕಲಹಂ ಮಾಡುವನೀ ಸ್ವಯಂವರಕೆ ಕೃಷ್ಣಂ ಬಂದೊಡೆ (ಜಗವಿ. ೯–೮) ; ಹೊದ್ದದೊರ್ಬೊರ್ಬರು ಕಲಹವಾಗೆದ್ದು ತಾವಿಱಿದಾಡಿದರು (ಬಸಪು. ೬೧–೩೭) ; ಈ ಕಲಹವಿಹಪರಕೊಳ್ಳಿತೆಂದುರವಣಿಸಿದನು ದ್ರೋಣ (ಕುವ್ಯಾದ್ರೋ. ೨–೩೮). ೩. ಬೈದಾಟ ; ಬೈಗಳು ; ದೂಷಣೆ ; ನಿಂದೆ. ೪. ಮೋಸ ; ಸುಳ್ಳು. ೫. ಕತ್ತಿಯ ಒರೆ ; ಖಡ್ಗಕೋಶ : "ಕಲಹಂ ಕೋಶ ಸಮಾಕಧೊಳ್" (ವಸ್ತುಕೋ. ೧೨೩–೩೪). ೬. ಹೊಡೆತ ; ಒದೆತ. [ಸಂ.]

**ಕಲಹಂದಾಳ್** (ಕ್ರಿ). ಜಗಳವಾಡು ; ಹೋರಾಡು : ತ್ರಿಜಗಧೀಶ್ವರನೊಳ್ ಮನೋಜ ಕಲಹಂದಾಳ್ದಗ್ನಿಗೀಡಾದ (ಸೋಮೇಶ. ೪೫).

[ಕಲಹ + ತಾಳ್$_1$]

**ಕಲಹಂಸ,** ಕಳಹಂಸ, (ನಾ). ೧. ಬೂದುಬಣ್ಣದ ಪಕ್ಕಗಳಿರುವ ಹಂಸ; ಕೆಂದುಬಣ್ಣದ ರೆಕ್ಕೆಯ ಅಂಚೆ: "ಕಕ್ಷ ಮಾಸೆ ಕಲಹಂಸಮ್ ಅಕ್ಕುಂ" (ಮಂಗರಾ. ೧೭೩ ಕ). **ಕಳಹಂಸ :** ೧. ಶರದಾಗಮದೊಳ್ ಕಳಹಂಸರವಂ ಪೆರ್ಚಿತ್ತು ಕಿವಿಗೆ (ಕವಿರಾ. ೩–೧೩೫); ಕಳಹಂಸಾಲಸ ಯಾನೆಯಂ . . . ಕಂಡಿರೆ ಪಲ್ಲವಾಧರೆಯಂ (ಪಂರಾ ಮಾ. ೯–೧೧೮); ಪೇಟ್ಟಿಂ ರಾಜವಿದ್ವತ್ಸಭಾ ಕಳಹಂಸಂ ಕವಿಭಾಳಲೋಚನ ನಿಳಾಸಂ ಸೇವ್ಯಮಂ ಕಾವ್ಯಮಂ (ಅನಂಪು. ೧–೪೭); ಎಲ್ಲಿ ನೋಡಲಿ . . . ಪಾಠಿವ ನವಿಲು ಪಿಕ ಕಳಹಂಸ ಕಲಕಲವು (ಮುಲ್ಲಾ ಶಾ. ೨೩). ೨. [ಸಂಗೀತ] ಒಂದು ತಾಳದ ಹೆಸರು: ಕಳಹಂಸ ಆದಿಲಲಿತ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮). [ಸಂ.]

**ಕಲಹಂಸೆ,** ಕಳಹಂಸೆ (ನಾ).=ಕಲಹಂಸ೧: "ನಸುಮಾಸಿದೆಱಂಕೆಗಳಿಂ ಕಲಹಂಸೆಗಳೆಂಬುದು" (ಹಲಾಯು. ೪೨–೯೯); "ಪಕ್ಷ ಮಾಸೆ ಕಲ [ಪಾಠಾಂ. ಳ]ಹಂಸೆಯಕ್ಕುಂ" (ಮಂಗರಾ. ೫೧–೭). **ಕಳಹಂಸೆ :** ಕಳಹಂಸೆದುಪ್ಪುಳುವಾಸಿನ ಮಂಚದೆ ಸೆಳೆದಪ್ಪೊ ಮೋಹನರೂಪ (ಕಂಸವಿ. ೯–೧೮೮). [ಸಂ. ಕಲಹಂಸ]

**ಕಲಹಕಂಟಕ** (ನಾ). ೧. ಜಗಳವಾಡುವವನು; ಜಗಳಗಂಟ. ೨. ಜಗಳ ಹಚ್ಚುವವನು: ನಿಮ್ಮಾನ್ವಯರು . . . ಬಹುಲೋಕಗಳ ಬಾಧಿಸುತ್ತೆ ಕಲಹಕಂಠ[ಟ]ಕರಾಗಲವರ ಬಲವಂತರಿಂ ಕೊಲಿಸೆ ನಿರ್ನಾಮವಾದರು (ನವಮೋ. ೧೯–೬೭). [ಕಲಹ + ಕಂಟಕ]

**ಕಲಹಕಾರಿ** (ನಾ). ಜಗಳ ಮಾಡುವವನು; ಜಗಳಗಂಟ: ಧರಣಿಸುತಾಂಶಕದೊಳ್ ಹಿಮಕರನಿರೆ ಸೂರ್ಯಾದಿಗಳ್ ನಿರೀಕ್ಷಿಸೆ ರಕ್ತಾನಿರತಂ ವಧರುಚಿಮಲ್ಲಂ ನರೇಂದ್ರನರ್ಥಪತಿ ಕಲಹಕಾರಿಯೆನಿಕ್ಕುಂ (ಜಾತತಿ. ೨೦–೧೮). [< ಸಂ. ಕಲಹಕಾರಿನ್]

**ಕಲಹಕೃಷ್ಣಕ** (ನಾ). ಕಲಹಕ್ಕೆ ಎಳೆಯುವವನು; ಜಗಳ ಹಚ್ಚುವವನು: ಆಕೆಯ ಮನದ ಮಾತ್ಸರ್ಯಚೇಷ್ಟೆಯಂ ಕಲಹಕೃಷ್ಣಕಂ ನಾರದನಱಿದು (ಜಗವಿ. ೧೨–೬೬ ವ). [ಕಲಹ + ಕೃಷ್ಣಕ]

**ಕಲಹಕೇತ** (ನಾ). =ಕಲಹಕಾರಿ (ಕ). 'ಕಲಹಕೇತಿ' ಪರಾ. [ಕಲಹ + ಕೇತ$_1$]

**ಕಲಹಕೇತಿ** (ನಾ). ಜಗಳಕ್ಕೆ ನೆಲೆಯಾದವನು; ಜಗಳಗಂಟ: ಕಲಹಕೇತಿಗಳಂತೆ ಕಂಡವರ ಕೆಣಕುತ್ತ ಪಲುಬುವೀ ರಕ್ಕಸರು ಕಂಡರಿಯರೆಂದಿಗುಂ (ವೆಂಕಾರಾ. ೩–೨–೨೧). [ಕಲಹಕೇತ + –ಇ$_3$]

**ಕಲಹಗಂಟಿ** (ನಾ). ಕಲಹಮಾಡುವ ಸ್ವಭಾವದವಳು; ಜಗಳಗಂಟಿ: ಕಲಹಗಂಟಿ ಸತಿ ಕರ್ಕಶೆಯಾದರೆ ಹಲವು ಪರಿಯಿಂದ ಹೊಱಗಾಗಬೇಕು (ಪುರಂದ. ೫–೨೩–೨); ಕಣ್ಣು ಹಬ್ಬಾಯಿತೆ ನಿನಗೆ ಕಲಹಗಂಟಿ ರುಕ್ಮಿಣಿ (ಶ್ರೀಕೃಪಾ. ೪೧). [ಕಲಹ + ಗಂಟಿ]

**ಕಲಹಗತಿ** (ನಾ). ಯುದ್ಧದ ಸ್ಥಿತಿ, —ಪರಿಣಾಮ: ಕಲಹಗತಿಯೇನಾಯ್ತು . . . ಕೌರವೇಶ್ವರನುಳಿದನೇ (ಕುವ್ಯಾಗ. ೪–೨). [ಕಲಹ + ಗತಿ]

**ಕಲಹಟಿ,** ಕಲಹಡಿ (ನಾ). ಕರಹಾಡ ದೇಶದ ಸ್ತ್ರೀ; ಕರಹಾಡದ ಹೆಂಗಸು; ಸೂಳೆ (?): ಕೆಲಬಲದವರ ಕೆಣಕುತ ಕೊಯ್ಲೆಗಳೊಳು ಕೆಲೆವುತ ಮೊಲೆಯ ಮೇಲುದನು ತೊಲಗಿಸುತೊಯ್ಯನೆ ನಡೆದುದು ನಲವಿಂದ ಕಲಹಟಿಯರು ದಂಡಿನೊಳಗೆ (ಕುರಾಸಾಂ. ೪೧–೬೦); ನಾಣಿಲಿ ಕಲಹಟಿ [ಪಾಠಾಂ. ಡಿ] (ಶಬ್ದಾನು. ೩೩೦ ಪ್ರಯೋ). **ಕಲಹಡಿ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [< ಸಂ. ಕರಹಾಟೀ]

**ಕಲಹಣಿ** 'ಕಲಹಟ' ನೋ.

**ಕಲಹಲಂಪಟ** (ನಾ). ಜಗಳದಲ್ಲಿ ಅತ್ಯಾಸಕ್ತಿಯುಳ್ಳವನು; ಜಗಳ ಹುಟ್ಟಿಸಲು ಆತುರನಾದವನು: ಅಂಬರತಳದೊಳ್ ಕಲಹಲಂಪಟಂ ನಾರದನಾರ್ದಿರೆ (೧೦ಕ. ೮–೨೬). [ಕಲಹ + ಲಂಪಟ]

**ಕಲಹಾಂತರಿತೆ** (ನಾ). ಪ್ರೀತಿಯ ಮಾತುಗಳನ್ನು ಆಡುತ್ತಿರುವ ಗಂಡನನ್ನು ಧಿಕ್ಕರಿಸಿ ಆಮೇಲೆ ಸಂತಾಪಗೊಳ್ಳುವವಳು: ಸ್ವಾಧೀನಭರ್ತೃಕೆ, ಖಂಡಿತೆ . . . ಕಲಹಾಂತರಿತೆಯರೆಂಬ ಎಂಟು ತೆಱದವಸ್ಥಾನಿಬದ್ಧರಾದ ಕಾಮಿನಿಯರಿಂ (ವಿವೇಕ. ೨೨೮). [ಸಂ. ಕಲಹಾಂತರಿತಾ]

**ಕಲಹಾರ್ಥಿ** (ನಾ). ಜಗಳ ಬಯಸುವ ವ್ಯಕ್ತಿ; ಕಲಹಕ್ಕೆ ಆತುರನಾದವನು: ಕಪಟಿ ಕಂಟಕಿ ಕಟಕಿ ಕಡುದುಷ್ಟೆ ಕಲಹಾರ್ಥಿ ವಿರಸಿ ಪರವಶೆ ಪಾದರಿ (ಜೈಮಿಭಾ. ೫–೬೧). [< ಸಂ. ಕಲಹಾರ್ಥಿನ್]

**ಕಲಹಾಶನ** (ನಾ). ೧. ಜಗಳವೇ ಅನ್ನವಾಗಿರುವವನು; ಜಗಳದಿಂದಲೇ ತೃಪ್ತಿಪಡುವವನು. ೨. (ಕಲಹಪ್ರಿಯನಾದ) ನಾರದ: ಅವರೊಳ್ ಕಲಹಾಶನಂ ತಾಂ ರಾಯನೊಡನೆ ಸರ್ವಾಂಗಸುಂದರಿಯಪ್ಪೀ ಕನ್ನೆ ಆರೆಂದಾರಯ್ಯೆ (ಅದ್ಭುತ. ೮–೨೪). [ಕಲಹ + ಅಶನ]

**ಕಲಹಾಳಿಗ** (ನಾ). ಜಗಳ ಹಚ್ಚುವುದೇ ಸ್ವಭಾವವಾಗಿರುವವನು; "ನಾರದ ದೇವ" (ಚತುವಿ. ಕ. I, ೮೭). [ಕಲಹ + –ಆಳಿಗ$_2$]

**ಕಲಹಿಸು** (ಕ್ರಿ). ಜಗಳವಾಡು; ಕಲಹಮಾಡು: ತನ್ನೊಳಗಭಿಮಾನಿಗಳು ಕಲಹಿಸಿ ಶಪಿಸೆ (ವಿವೇಕ. ೧೪೯); ಕಂಡವರ ಕೂಡೆಲ್ಲ ಕಲಹಿಪ ಮುಂಡರಿಗೆ ಹೇಳದಿರು ಮಱಿದೀ ಅನುಭವಾಮೃತವ (ಅಮೃತ. ೨–೨); ಕಲಹಿಸದಿರಾರೊಡನೆ ಪಿಸುಣನುಳಿ (ಕೈಕವ. ೩–೫೭–೩); ಪೋಗೆನುತ ಕಾಂತನೊಳ್ ಕಲಹಿಸಿದಳು (ಮಲ್ಲಾರಿ. ೨–೨೫). [ಕಲಹ + –ಇಸು$_1$]

**ಕಲಹೋದ್ಯುಕ್ತ** (ನಾ). ಜಗಳದಲ್ಲಿ ತೊಡಗಿರುವವನು; ಜಗಳಗಂಟ: ದನುಜೇಜ್ಯಂ . . . ಅಸ್ತನಿಕೇತಸ್ಥಿತನಾಗೆ ಕಾಮಿ ಕಲಹೋದ್ಯುಕ್ತಂ (ಜಾತತಿ. ೧೮–೧೩). [ಕಲಹ + ಉದ್ಯುಕ್ತ]

**ಕಲಾಂತರ,** ಕಳಾಂತರ (ನಾ). ೧. ಹಣದ ಮೇಲಿನ ಬಡ್ಡಿ: "ಬಡ್ಡಿಯರ್ಥಂ ಕಲಾಂ [ಪಾಠಾಂ. ಳಾಂ]ತರಂ ವೃದ್ಧಿಯಕ್ಕುಂ" (ಮಂಗರಾ. ೧೦೨–೨). ೨. [ಜ್ಯೋತಿ] ಒಂದು ರಾಶಿಯ ಅರುವತ್ತು ಕಲೆಗಳ ಪೈಕಿ ಯಾವುದಾದರೊಂದು ಕಲೆಯ ಮಧ್ಯಭಾಗ. **ಕಳಾಂತರ:** ೧. "ವೃದ್ಧಿ, ಕಳಾಂತರಂ–ಈ ೨ ಬಡ್ಡಿ" (ಹಲಾಯು. ೪೪–೪೧೮); ಗದ್ಯಾಣವಯ್ದಱ ಕಳಾನ್ತರದಿಂ (ಬೊಂಕಶಾ. ೧೯೩೩, ಹಾವೇರಿ. ೮೮–೩; ?). ೨. ನವಮ ನವಾಂಶಕಂ ಝಷವಿಲಗ್ನದೊಳಾಗಿರೆ ಶೀತರುಕ್ತನೂಭವನಿರೆ ಪಂಚವಿಂಶತಿ ಕಳಾಂತರದೊಳ್ ಮಿಕ್ಕವರಿರೆ (ಜಾತತಿ. ೮–೧೪). [ಸಂ.]

**ಕಲಾಕಲಾಪ,** ಕಳಾಕಳಾಪ (ನಾ). ಲಲಿತ ವಿದ್ಯೆಗಳ ಸಮೂಹ; ಅನೇಕ ಕಲೆಗಳ ಸಮೂಹ: ವ್ಯಸನ ವ್ಯಪೇತಮುಪನೀತ ಕಲಾಕಲಾಪಂ (ಕವಿರಾ. ೩–೨೨೯). **ಕಳಾಕಳಾಪ :** ಬಹುಕಳಾಕಳಾಪದಿಂ ಪಲ್ಲವಿಸಿದ . . . ವಧೂವರರಾಗ ವಿಷಯವಲ್ಲರಿ ಫಲಿತಮಾದುದೆನಿಸಿ (ಜಗವಿ. ೨–೫೨ ವ). [ಸಂ. (ಕಲಾ + ಕಲಾಪ$_2$)]

**ಕಲಾಕಲಿತ,** ಕಳಾಕಳಿತ (ಗು). ೧. (ಚಂದ್ರನ) ಕಲೆಯಿಂದ ಕೂಡಿದ: ಜಯಜಯಸುಧಾಕರಕಲಾಕಲಿತಕೋಟೀರ (ರಾಜಶೇ. ೧೪–೧೯ ರಗಳೆ). ೨. ಜಾಣ್ಮೆಯಿಂದ ಕೂಡಿದ. (ನಾ). ೩. ಕುಶಲ ವಿದ್ಯೆಗಳನ್ನು ಬಲ್ಲವನು: ಬಲಯುಕ್ತಂ ವಾಗ್ಮಿ ಕಲಾಕಲಿತಂ ಶರಣಾಗತೈಕರಕ್ಷಣದಕ್ಷಂ (ಪಂಚತಂ. ೨೧೭–೧೫). **ಕಳಾಕಳಿತ :** ೨. ವಾಕ್‌ಶ್ರೀಸುಭಗಂ ಕಳಾಕಳಿತಮೆಂಬ ನೆಗಱ್ತೆಯನಾಳ್ದ ಕಬ್ಬಮಂ ಕೂಸುಮನೀವುದೀವುದರಿಕೇಸರಿಗಲ್ಲದ ವಸ್ತುಗೀವುದೇ (ಪಂಪಭಾ. ೧–೯). ೧, ೩ : ಕಳಾಕಳಿತಂ ವಚನಾಮೃತಂ . . . ಮುನಿಚಂದ್ರದೇವನಾ (ಪುಷ್ಪಪು. ೧–೨೨). [ಸಂ. (ಕಲಾ + ಕಲಿತ)]

**ಕಲಾಕಾಂತ** (ನಾ). ಚಂದ್ರ. [ಸಂ. (ಕಲಾ + ಕಾಂತ$_2$]

**ಕಲಾಕುಸುರಿ,** ಕಲಾಕುಸುರು (ನಾ). ಕಲಾಮಯವಾದ ಅಥವಾ ನಯದ ಕೆಲಸ: ಪುಟ್ಟಪ್ಪನವರ ಕವಿವಾಣಿಯಲ್ಲಿ ಸಹಜವಾದ ಕಲಾಕುಸುರಿ ಕಂಡುಬರುತ್ತಿದೆ (ಸಾಪಮಾ. ೯೭). **ಕಲಾಕುಸುರು:** ನೇತ್ರಾನಂದಕರವಾದ ಕಲಾಕುಸುರಿನಿಂದ, ಬಣ್ಣಬಣ್ಣಗಳಿಂದ ಬಾಹ್ಯಾಂತರ ಭಿತ್ತಿಗಳು ಅಲಂಕೃತವಾಗಿದ್ದರೆ ಯಾವ ಅಭ್ಯಂತರವಿಲ್ಲ (ಗ್ರಂಥಾಲ. ೬). [ಕಲ್ಲಾ$_0$ + ಕುಸುರಿ]

**ಕಲಾಕುಸುರು** 'ಕಲಾಕುಸುರಿ' ನೋ.

**ಕಲಾಕೃತಿ** (ನಾ). ಕಲಾತ್ಮಕವಾದ ಕೃತಿ, —ಗ್ರಂಥ, ಶಿಲ್ಪ ಮೊದಲಾದ ರಚನೆ: ಅವರಣ್ಣನ ಮಕ್ಕಳು ಅವರ ಕಲಾಕೃತಿಗಳನ್ನು ಜೋಡಿಸಿಟ್ಟಿರುವರು ಗಾಜಿನ ಗೂಡೊಳು (ಇಂಚಾಪ. ೧೦–೩೯); ಈ ಗುಣದಿಂದ ಮಾತ್ರ ಒಂದು ಕಲಾಕೃತಿಯು ಸಾಮಾಜಿಕನನ್ನು ಆನಂದಗೊಳಿಸಲು ಸಮರ್ಥವಾಗುತ್ತದೆ (ನವ್ಯಕಾ. ೫೭) [ಸಂ. (ಕಲಾ + ಕೃತಿ)]

**ಕಲಾಕೋವಿದ,** ಕಳಾಕೋವಿದ (ನಾ). ಕಲೆಯಲ್ಲಿ ನಿಪುಣನಾದವನು; ಕಲಾಪ್ರವೀಣ: ನಾಗರಿಕಾದಿ ನಾನಾ ಕಲಾಕೋವಿದ ಜಾತಿ ನಾಯಕರ್ ಬಂದು ವಂದಿಸಿ ನಿಂದು (ಹವ್ಮ್ಯಾರ. ೨–೫೫ ವ). **ಕಳಾಕೋವಿದ:** ದನುಜೇಜ್ಯಂ... ದಂಪತಿಕ್ಷೇತ್ರದೊಳ್ ಧನವಂತಂ ಧರಣೀಶಕಾರ್ಯ ಭರಧುರ್ಯಂ ಸತ್ಕಳಾಕೋವಿದಂ (ಜಾತತಿ. ೧೭–೨೯). [ಸಂ. (ಕಲಾ + ಕೋವಿದ)]

**ಕಲಾಕೌಶಲ,** ಕಳಾಕೌಶಲ (ನಾ). ಕಲೆಯ ಕೆಲಸದಲ್ಲಿ ಚತುರತೆ, —ನಿಪುಣತೆ. **ಕಳಾಕೌಶಲ:** ಭಾರತಿಯಿಂ ನಾನಾ ಕಳಾಕೌಶಲಮುಂ... ಈಟಿಗೊಂಡು ಮೂಲೋಕದೊಳನುಪಮಮಿಾ ಕಾಂತೆ (ಪುಷ್ಪಪು. ೩–೨೫). [ಸಂ. (ಕಲಾ + ಕೌಶಲ)]

**ಕಲಾಕೌಶಲ್ಯ** (ನಾ). = ಕಲಾಕೌಶಲ: ಕಬ್ಬಿಣವಿಲ್ಲದಿದ್ದರೆ... ವಿದ್ಯಾಕಲಾಕೌಶಲ್ಯಗಳು ವೃದ್ಧಿಯಾಗಿ, ಜನರು ಈಗಿನಂತೆ ಉತ್ತಮಸ್ಥಿತಿಗೆ ಎಂದೂ ಬರುತ್ತಿರಲಿಲ್ಲ (ಮುಂಬಯಿ. ೪–೧೪೩). [ಸಂ. (ಕಲಾ + ಕೌಶಲ್ಯ)]

**ಕಲಾಜೀವಿ** (ನಾ). ಕಲೆಯ ಬಲದಿಂದಲೆ ಬದುಕುವವನು; ಕಲೆಯೇ ಜೀವನಾಧಾರವಾದವನು: ಕಲಾಜೀವಿಯಾಗಿ ಬಾಳಲು ಸಾಧ್ಯವಿಲ್ಲವೆ? (ರಂಗರೋ. ೧೯೭). [< ಸಂ. ಕಲಾಜೀವಿನ್]

**ಕಲಾತ್ಮಕ** (ಗು). ಕಲೆಯನ್ನು ಒಳಗೊಂಡ; ಕಲಾಮಯವಾದ; ಸುಂದರವಾದ: ಭಾವನೆಗಳ ಕೋಮಲತೆ ಹಾಗೂ ಕಲಾತ್ಮಕವಾಗಿ ಅವನ್ನು ಅಭಿವ್ಯಕ್ತಗೊಳಿಸುವದು ಸ್ತ್ರೀಯ ವೈಶಿಷ್ಟ್ಯ(ಕರ್ನಾಕ. ೩). [ಸಂ.]

**ಕಲಾದ,** ಕಳಾದ (ನಾ). ಅಕ್ಕಸಾಲಿಗ: "ಕಲಾ[ಪಾಠಾಂ. ಳಾ]ದಂ ಮುಷ್ಟಿಕನದಕ್ಕಸಾಲೆಯೆನಿಕ್ಕುಂ" (ಮಂಗರಾ. ೧೧೧–೧). **ಕಳಾದ:** "ನಾಡಿಂಧಮಃ, ಕಳಾದಃ, ಸುವರ್ಣಕಾರಃ, ಮುಷ್ಟಿಕಃ — ಈ ೪ ಅಕ್ಕಸಾಲೆ" (ಹಲಾಯು. ೯೬–೪೩೪). [ಸಂ.]

**ಕಲಾದಹನ** (ನಾ). ರೌರವಾಗಮದ ಒಂದು ಭೇದ: ಕಲಾದಹನ ರೌರವೋತ್ತರ ಕೌಮಾರ ಕಾಳ ಮಹಾಕಾಳ ಇಂದ್ರಾಗಮವೆಂದು ರೌರವಾಗಮದಾಱುಭೇದಂಗಳು (ವಿವೇಕ. ೭೧). [ಸಂ. (ಕಲಾ + ದಹನ)]

**ಕಲಾನಿ** (ನಾ). ಹಾವುಗಳನ್ನೇ ಆಹಾರವಾಗಿ ಉಳ್ಳವನು; ಗರುಡ. 'ಕಲಾನಿಕೇತನ' ಪರಾ. [< ಸಂ. ಕಲಾನಿನ್]

**ಕಲಾನಿಕೇತನ,** ಕಳಾನಿಕೇತನ (ನಾ). ೧. ಗರುಡಧ್ವಜ. ೨. ಲೋಕ ನಿರ್ಮಾಣಕ್ಕೆ ಆಶ್ರಯನಾದವನು; ಬ್ರಹ್ಮ. ೩. ಕಲೆಗಳಿಗೆ ಆಶ್ರಯನಾದವನು; ಕಲಾನಿಪುಣ. **ಕಳಾನಿಕೇತನ:** ೧, ೨, ೩: ಜನನುತ ರಾಜಹಂಸನಯನಂ ಕಮಳಾವಸಥಂ ಕಳಾನಿ ಕೇತನನೆನಿಸಿರ್ದ... ಲೋಕಪಿತನೊಲ್ದು ಚತುರ್ಮುಖನೀಗೆ ರಾಗಮಂ (ಜಗವಿ. ೧–೨). [ಸಂ. (ಕಲಾನಿನ್ + ಕೇತನ; ಕಲಾ + ನಿಕೇತನ)]

**ಕಲಾನಿಧಿ,** ಕಳಾನಿಧಿ (ನಾ). ೧. (ಹದಿನಾರು) ಕಲೆಗಳಿಗೆ ಆಶ್ರಯನಾದವನು; ಚಂದ್ರ. ೨. ಕುಶಲಕಲೆಗಳಿಗೆ ಆಶ್ರಯನಾದವನು; ಕುಶಲಕಲೆಗಳನ್ನು ಕಲಿತವನು; ಕಲಾವಿದ. **ಕಳಾನಿಧಿ:** ೧,೨: ಕಳಾನಿಧಿಯುದಯಂ ಖಳಂಗೆ ಸುಖದಾಯಕಮೇ (ಪಾರ್ಶ್ವಪು. ೧–೨೪). ೩. ಕುಶಲವಿದ್ಯೆಗಳ ಸಮೂಹ: ೧, ೩: ಶೃಂಗಾರಾಬ್ಧಿಯೊಳೊಗೆತಂದಂಗಜ ಜಯಲಕ್ಷ್ಮಿಯೆನೆ ಕಳಾನಿಧಿಸಹಿತಂ ಸಂಗಳಿಸಿ ಚೆಲ್ವನಾಕೆ ಬೆಡಂಗಿಂ ಪದ್ಮಾಂತರಂಗದೊಳ್ ರಂಜಿಸಿದಳ್ (ಪುಷ್ಪಪು. ೩–೨೪). [ಸಂ.]

**ಕಲಾಪ$_1$** (ನಾ). ಜಗಳ; ದೊಂಬಿ; ದಂಗೆ (ಕ). [ದೇ.॥ ತಮಿ. ಕಲಾಪ]

**ಕಲಾಪ$_2$,** ಕಳಾಪ (ನಾ). ೧. ಗುಂಪು; ಸಮೂಹ; ಸಂದಣಿ: ವಲ್ಕಲಾವೃತ ಕಟಿತಟನುಮಾಗಿರ್ದ ಜಟಾಕಲಾಪನುಮಾಗಿ ತಪೋವನಕ್ಕೆ ಪೋಪ ಭಾರ್ಗವಂ (ಪಂಪಭಾ. ೨–೪೫ ವ); ಯಕ್ಷಕುಮಾರ ಕರತಲಾಂದೋಲಿತ... ಚಂಚಚ್ಚಾರು ಚಾಮಿಾಕರ ಚಾಮರ ಕಲಾಪನುಂ (ಅಜಿಪು. ೭–೨೦ವ); ಲಂಬಕೂರ್ಚಕಲಾಪಂ ಸಿತಕಂಚುಕಂ ತ್ವರಿತದಿಂ ಬಂದಂ ಪ್ರತೀಹಾರಕಂ (ಪಂರಾಮಾ. ೨–೨). ೨. ನವಿಲಿನ ಗರಿ, —ಸೋಗೆ, —ಪುಚ್ಛ: ಮುಡಿಕಲಾಪದ ಬೆಡಗ ಸೋಲಿಪವು (ಕಾಶಿರಾ. ೯–೨೮). ೩. ಬತ್ತಳಿಕೆ. ೪. ಉಡೆನೂಲು; ಒಡ್ಯಾಣ. ೫. ಒಡವೆ; ಆಭರಣ ಮೊದಲಾದ ಅಲಂಕಾರ. ೬. ಚಂದ್ರ. 'ಕಲಾಪಕಲಾಧರ' ಪರಾ. ೭. ಕಲಿಯುಗವನ್ನು ಕೊನೆಗಾಣಿಸುವ ಕಲ್ಕಿಯು ಅವತರಿಸಲಿರುವ ಒಂದು ಗ್ರಾಮ (ಕ). **ಕಳಾಪ:** ೧. ಚುಂಬನಾದಿ ಬಹುಕಳಾಕಳಾಪದಿಂ ಪಲ್ಲವಿಸಿದ... ವಧೂವರ ರಾಗವಿಷಯವಲ್ಲರಿ ಫಲಿತಮಾದುದು (ಜಗವಿ. ೨–೫೨ ವ). ೨. "ಕಳಾಪಃ, ಬರ್ಹಃ — ಈ ೨ ಸೋಗೆ" (ಹಲಾಯು. ೪೧–೮೯); ಕನನ್ನೀರದ ಕಾಂತಿಯೆಲ್ಲಿದ ನುದಂಚಿತಚಂದ್ರಕಳಾಪನೆಲ್ಲಿದಂ(ಜಗವಿ. ೩–೯೦). ೩. "ತೂಣೀರಂ... ಬಾಣಾಶ್ರಯಃ, ಕಳಾಪಃ — ಈ ೮ ಮೂಡಿಗೆ" (ಹಲಾಯು. ೭೭–೩೧೧). ೪. "ಕಳಾಪಃ... ಕಟಿಸೂತ್ರಂ, ಸಾರಸನಂ — ಈ ೭ ಉಡೆನೂಲ್" (ಹಲಾಯು. ೯೨–೪೦೬). ೫. ನೀಲಾಂಬುದಶ್ಯಾಮನುಂ ಕನಕ ಪಿಂಗಳಜಟಾಬಂಧಕಳಾಪನುಂ... ವ್ಯಾಸಭಟ್ಟಾರಕಂ ಪುಟ್ಟುವುದುಂ (ಪಂಪಭಾ. ೧–೬೯ ವ). ೮. ಬಾಣ: ರೂಪಿದೊಳ್ಳಿತು ರೇಖೆಯುಚಿತ ಕಳಾಪವತಿಹಸನಾಯ್ತು ಬಾಣಸ್ಥಾಪನಕೆ ಮೆಚ್ಚಿದೆನು (ಕುವ್ಯಾಕ. ೧೧–೪೪). [ಸಂ.]

**ಕಲಾಪಂಡಿತ,** ಕಳಾಪಂಡಿತ (ನಾ). ಲಲಿತ ಕಲೆಗಳಲ್ಲಿ ನಿಪುಣನಾದವನು; ಕಲಾಭಿಜ್ಞ: ಅತಿಚತುರನೆನ್; ಕಲಾ[ಪಾಠಾಂ. ಳಾ] ಪಂಡಿತನೆನ್ (ಶಮದ. ೨೨೦ ಪ್ರಯೋ). **ಕಳಾಪಂಡಿತ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ. (ಕಲಾ+ಪಂಡಿತ)]

**ಕಲಾಪಕ,** ಕಳಾಪಕ (ನಾ). ೧. ಗುಂಪು; ಸಮುದಾಯ: ಶ್ರೀಕಾಲಾವಿಗ್ರುಗರವಡಿಗಳ ಶಿಷ್ಯರ್ ತಚಿಕಾಡ ಪೆಜ್ಜಿಡಿಯ ಮೊದೆಯ ಕಲಾಪಕದ ಗುರವಡಿಗಳ್ (ಎಕ. II, ೩೩–೩; ಸು. 700). ೨. ನಾಲ್ಕು ಪದ್ಯಗಳಲ್ಲಿ ಸಂಪೂರ್ಣಾರ್ಥ ಮುಗಿಯುವ ಕಾವ್ಯರಚನೆ: ಎರಡು ಪದ್ಯಗಳಲ್ಲಿ ಕ್ರಿಯೆ ಮುಗಿಯುವುದಾದರೆ 'ಸಂದಾನಿತಕ'; ಮೂರು ಪದ್ಯಗಳಲ್ಲಾದರೆ 'ವಿಶೇಷಕ'; ನಾಲ್ಕರಲ್ಲಾದರೆ 'ಕಲಾಪಕ'; ಐದರಿಂದ ಹೆಚ್ಚಿನ ಪದ್ಯಗಳಲ್ಲಾದರೆ 'ಕುಲಕ' (ಧ್ವನ್ಯಾಲೋ. ೧೪೧. ಅಡಿಟ). **ಕಳಾಪಕ:** ೧. ಪ್ರಕಟತೋಕ್ತಿ ವಿವಿಕ್ತಿ ಕಳಾಕಳಾಪಕಮುಪಾಹಿತ ಸಾಹಿತ್ಯವಿದ್ಯೆಯೊಳ್ (ಕವಿರಾ. ೩–೨೧೮). [ಸಂ.]

**ಕಲಾಪಕಲಾಧರ** (ನಾ). ಚಂದ್ರನ ಕಲೆಯನ್ನು ಧರಿಸಿದವನು; ಶಿವ: ಕರುಣಿಸು ಕಾಲಸಂಹರ ಕಲಾಪಕಲಾಧರ ಸಾರಸತ್ಕೃಪಾಕರ (ಶಬಶಂ. ೫–೨೦). [ಸಂ.]

**ಕಲಾಪತಿ** (ನಾ). ಕಲೆಗಳ ಒಡೆಯ; ಚಂದ್ರ. 'ಕಲಾಪತಿಕಲೆ' ಪರಾ. [ಸಂ. (ಕಲಾ + ಪತಿ)]

**ಕಲಾಪತಿಕಲೆ** (ನಾ). ಚಂದ್ರಕಲೆ: ಅಪರಾಶಾಪರ್ವತದಗ್ರದೊಳ್ ಕಲಾಪತಿಕಲೆ ಸಂಜೆ ಸರಿಯೆ ತೋರ್ಪವೊಲ್ (ರಾಜಶೇ. ೧೦–೮೯). [ಕಲಾಪತಿ + ಕಲೆ$_3$]

**ಕಲಾಪತ್ತು** 'ಕಲಾಬತು' ನೋ.

**ಕಲಾಪಮಾಲೆ** (ನಾ). ನವಿಲುಗರಿಗಳ ಕಟ್ಟು: ಕೇಕಿಯೆನೆ ಬಲ್ಮುಡಿ ತೋಱಿ ಕಲಾಪಮಾಲೆ ಸಂಗಳಿಸೆ ನಗೇಂದ್ರಜಾತೆಯೊಡನೆಳ್ತರುತಿರ್ದ ರಮರ್ತ್ಯ ನಾರಿಯರ್ (ಶಬಶಂ. ೩–೧೫). [ಕಲಾಪ + ಮಾಲೆ]

**ಕಲಾಪಿ**, ಕಳಾಪಿ (ನಾ). ಗಂಡು ನವಿಲು; ಸೋಗೆ. **ಕಳಾಪಿ**: ಕಳಾಪಿಗಳಾಡುವುವು ಮಧುರಕೇಕಾರವದಿಂ (ಅಜಿಪು. ೨–೧೭); ರಾಜತ್ಕಳಕಂಠನಿಸ್ವನೆ ಕಳಾಪಿಪ್ರಾಂಶು ಧಮ್ಮಿಲ್ಲೆಯೆಂಬ ನಿಜಾಕಾರಮನುಂಟುಮಾಡಿ (ಸುಕುಮಾ. ೯–೫೪). [< ಸಂ. ಕಲಾಪಿನ್]

**ಕಲಾಪಿಸ್ತ್ರೀ** (ನಾ). ಹೆಣ್ಣು ನವಿಲು: ಕಲಾಪಿಸ್ತ್ರೀಯುದರದಲ್ಲಿ ವಿಂಧ್ಯದೊಳೊಗೆದಂ (ಯಶೋಚ. ೩–೩೪). [ಕಲಾಪಿ + ಸ್ತ್ರೀ]

**ಕಲಾಪ್ರವೀಣ** (ನಾ). (ಲಲಿತ) ಕಲೆಗಳಲ್ಲಿ ಚತುರನಾದವನು: ಹರಿಶ್ಚಂದ್ರರಾಯನುನ್ನತಿಯಳಿವ ಕಾಣಬೇಕೆಂದಖಿಳ ಸಾಮಾರ್ಥದ ಕಲಾ ಪ್ರವೀಣನಂತಸ್ಥದೇಕಾಂತದೊಳು ಚಿಂತೆಯಿಂ ಭ್ರಾಂತಿಯೋಗದೊಳಿರ್ದನು (ಹಚಕಾ. ೩–೧). [ಸಂ. (ಕಲಾ + ಪ್ರವೀಣ)]

**ಕಲಾಬತು**, ಕಲಾಪತ್ತು, ಕಲಾಬತ್ತು (ನಾ). ಜರಿ; ಜರತಾರಿ; ಸರಿಗೆ(೬). **ಕಲಾಪತ್ತು**: ನನ್ನ ಮೊದಲನೇ ತಿಂಗಳ ಸಂಬಳದಲ್ಲಿ ನಿನಗೆ ಕಲಾಪತ್ತಿನ ಧರ್ಮಾವರದ ಸೀರೆ ತಂದುಕೊಡುತ್ತೇನೆ (ಇಬದು. ೬೭); ಹುಡುಗರು ಉದ್ದವಾದ ಕಲಾಪತ್ತಿನ ಅಂಚುಳ್ಳ ಲಂಗದಂತಹ ಬಟ್ಟೆಯನ್ನುಡುತ್ತಾರೆ (ಭಾರದ. ೫೬೪). **ಕಲಾಬತ್ತು**: ಕಲಾಬತ್ತಿನ ಕೆಲಸದ ಆನೆ ಜೀನು (ಎಕ. XIV, ನಂಜನ. ೨೯೨–೯೫; 1847); ಕಲಾಬತ್ತು ಇರುವ ಬಟ್ಟೆಗಳನ್ನು ತಿರುವಿ ಹಾಕಿ ಕಲಾಬತ್ತಿನ ಒಳಭಾಗವನ್ನು ಇಸ್ತ್ರಿ ಮಾಡಬೇಕು (ಗೃಹವಿ. ೯೫). [← ಮರಾ. ಕಲಾಬತು; ಹಿಂ. ಕಲಾಬತ್ತೂ]

**ಕಲಾಬತ್ತು** 'ಕಲಾಬತು' ನೋ.

**ಕಲಾಭಿಜ್ಞ** (ನಾ) ಕಲೆಯನ್ನು ತಿಳಿದವನು; ಕಲಾವಿದ: ಕಲಾಭಿಜ್ಞ ಪಂಚಭದ್ರ ವಿದಗ್ಧ ವಿಟನಾಯಕರಂ ನೋಡಿ (ಹವ್ಮಾರ. ೨–೯೨ ವ). [ಸಂ. (ಕಲಾ + ಅಭಿಜ್ಞ)]

**ಕಲಾಭಿಮಾನಿ** (ನಾ). ಕಲೆಯಲ್ಲಿ ಪ್ರೀತಿಯಿರುವವನು: ಇಂತಹ ಕಲಾಭಿಮಾನಿಯ ಎದುರಿನಲ್ಲಿ ತನ್ನ ಕಲಾನೈಪುಣ್ಯವನ್ನು ಪ್ರದರ್ಶಿಸದಿದ್ದರೆ . . . ಪ್ರಶಸ್ತಿ ಇಲ್ಲದೆ ಹೋಗುವುದು (ಶಾಂತಲಾ. ೨೨೫) [< ಸಂ. ಕಲಾಭಿಮಾನಿನ್]

**ಕಲಾಮಾಲಿ** (ನಾ). ಕಲೆಗಳ ಮಾಲೆಯನ್ನು ಉಳ್ಳವನು; ಚಂದ್ರ: ಮದೇಭೇಂದ್ರ ಹೋಮಾಮಯಾಹಿತ ಕಲಾಮಾಲಿ ನೇಮವಾಹ (ಉದ್ಭದೇ. ೩–೩೬). [< ಸಂ. ಕಲಾಮಾಲಿನ್]

**ಕಲಾಮು** 'ಕಲಂ$_1$' ನೋ.

**ಕಲಾಯ$_1$**, ಕಳಾಯ (ನಾ). ೧. ಬಟ್ಟಗಡಲೆ; ಬಟಾಣಿ **ಕಳಾಯ**: ೧. "ಕಳಾಯಃ, ಖಂಡಿಕಃ, ಸಾತೀನಃ – ಈ ೩ ಬಟ್ಟಗಡಲೆ" (ಹಲಾಯು. ೯೫–೯೨೮). ೨. ಒಂದು ಬಗೆಯ ಸಸ್ಯ: "ಅನಳಕಃ – ಕಳಾಯ, ಪುತ್ರಜೀವಿ" (ಒಷಧಿ. ೬). [ಸಂ.]

**ಕಲಾಯ$_2$** 'ಕಲಾಯಿ' ನೋ.

**ಕಲಾಯಗಾರ** 'ಕಲಾಯಿಗಾರ' ನೋ.

**ಕಲಾಯಿ**, ಕಲಾಯ$_2$ (ನಾ). ೧. ತಾಮ್ರ, ಹಿತ್ತಾಳೆ ಪಾತ್ರೆಗಳು ಕಿಲುಬಬಾರದೆಂದು ಅವುಗಳಿಗೆ ತವರದಿಂದ ಹಾಕುವ ತೆಳ್ಳನೆಯ ಲೇಪ; ಒಂದು ಧಾತುವಿನ ಮೇಲೆ ಇನ್ನೊಂದು ಲೋಹದ ಲೇಪ ಹಾಕುವುದು: ತಾಮ್ರ ಹಿತ್ತಾಳೆಗಳ ಪಾತ್ರೆಗಳಿಗೂ ಕಬ್ಬಿಣದ ತಗಡುಗಳಿಗೂ ತವರಿನ ಕಲಾಯಿ ಮಾಡುವರು (ಮುಂಬಯಿ. ೬–೨೧); ತಾಮ್ರದ ಪಾತ್ರೆಗಳನ್ನು . . . ಆಗಾಗ್ಗೆ ಕಲಾಯಿ ಮಾಡಿಸಬೇಕು (ಗೃಹವಿ. ೧೬೬). **ಕಲಾಯ$_2$**: ಪಾತ್ರೆಗಳಿಗೆಲ್ಲ ಕಲಾಯ ಮಾಡಿಸಬೇಕು (ಪ್ರಶ್ನೆ. ೪೧). ೨. (ಆಲಂ) ಪೂರ್ತಿ ಕ್ಷೌರ; ಪೂರ್ತಿ ತಲೆಯನ್ನು ಬೋಳಿಸುವುದು. [← ಹಿಂ. ಅರ. ಮರಾ. ಕಲಈ]

**ಕಲಾಯಿಕಾರ** 'ಕಲಾಯಿಗಾರ' ನೋ.

**ಕಲಾಯಿಗಾರ**, ಕಲಾಯಗಾರ, ಕಲಾಯಿಕಾರ (ನಾ). ಕಲಾಯಿ ಮಾಡುವವನು: ಜಾನ್‌ಬನ್ಯನ್ನನೆಂಬ ಕಲಾಯಿಗಾರನು . . . ಧರ್ಮೋಪದೇಶ ಮಾಡಿದ್ದಕ್ಕಾಗಿ ಅವನನ್ನು ಹಿಡಿಸಿ, ಬೆಡ್‌ಫರ್ಡದ ಸೆರೆಮನೆಯಲ್ಲಿ ೧೨ ವರ್ಷಗಳವರೆಗೆ ಇಟ್ಟರು (ಇಂಗ್ಲಂಡ. ೧೬೨) **ಕಲಾಯಗಾರ**: (೬). **ಕಲಾಯಿಕಾರ**: ಕೇರಿಯ ಜನರೆಲ್ಲ ಮಲಗುವ ತಯಾರಿಯಲ್ಲಿದ್ದರೂ—ಕಲಾಯಿಕಾರ ಬುಡಣಸಾಯಬನನ್ನು ಉಳಿದು (ಮೂರುದಾ. ೯೯). [ಕಲಾಯಿ + –ಕಾರ (< –ಕಾಱ]

**ಕಲಾರ** (ನಾ). ಪಾತ್ರೆಗಳನ್ನು ತುಂಬುವ ಪೆಟ್ಟಿಗೆ (?): ಕಡಾಯಿ ಮೊದಲಾದ ಕಂಚುಮುಟ್ಟುಗಳಂ ಕಲಾರಂಗಳಿಗೆ ತುಂಬುವಾಗ (ಸೌಗಂಧಿ. ೧೩೭–೧೫). 'ಕಡಾರ' ಪರಾ. [?. / ತಮಿ. ಕಲವಜ್ಜೈ = ಆಭರಣಾದಿಗಳನ್ನು ಇಡುವ ಕೊಠಡಿ]

**ಕಲಾಲ** (ನಾ). ಹೆಂಡ ಮೊದಲಾದ ಪೇಯಗಳನ್ನು ತಯಾರಿಸುವವನು, — ಮಾರುವವನು: ಸಿಂದೀ ತೆಗೆಯುವ ಜಾತಿಗಳು . . . ಕಲಾಲರು. ಶರೆಯನ್ನು ಮಾಡಿ ಮಾರುವುದೇ ಮುಖ್ಯ ಹೋರೆ (ಕಭಾಗ. ೧೮೧); ಕ್ರಾಮವೆಲ್ಲ ಕಲಾಲರ ಪೋರ (ಯಕ್ಷಪ್ರ. ೧೩೬). [← ಹಿಂ. ಮರಾ. ಕಲಾಲ. / ಪ್ರಾ. ಕಲ್ಲಾಲ < ಸಂ. ಕಲ್ಯಪಾಲ]

**ಕಲಾವಂತ** (ನಾ). ೧. ಕುಶಲ ಕಲೆಯನ್ನು ಬಲ್ಲವನು; ಕಲಾಕಾರ; ಕಲಾವಿದ: ಆದರೆ ಕಲಾವಂತನು ಒಂದು ಹೆಜ್ಜೆ ಮುಂದೆ ಹೋಗಿ . . . ಪ್ರಶ್ನೆಯನ್ನು ಕೇಳುತ್ತಾನೆ (ನವ್ಯಕಾ. ೮೯). ೨. ಗಾಯನ, ವಾದನ, ನರ್ತನಗಳನ್ನೇ ಉದ್ಯೋಗವಾಗಿ ಉಳ್ಳ ಜನ; ಗಾಯಕರ, ನರ್ತಕರ ಮನೆತನಕ್ಕೆ ಸೇರಿದ ಜನ: ಸಾರ್ವಜನಿಕ ಶಾಲೆಯೆಂದ ಬಳಿಕ ಕುಲವಂತರೂ ಹೋಗುತ್ತಾರೆ; ಕಲಾವಂತರೂ ಹೋಗುತ್ತಾರೆ (ಜಾರುದಾ. ೫೫); ಇವನ ಚಿಕ್ಕಪ್ಪನೊಬ್ಬ ಕಲಾವಂತ ಹುಡುಗಿಯನ್ನು ಮದುವೆಯಾಗಿ ಊರಿಗೆ ಸುಧಾರಣೆ ತಂದಿರಲಿಲ್ಲವೆ (ಮೂರುದಾ. ೧೭೪). [ಸಂ. ಕಲಾವತ್]

**ಕಲಾವಂತಿಕೆ**, ಕಲಾವಂತಿಗೆ (ನಾ). ಕಲಾಭಿರುಚಿ; ಕಲಾಕೌಶಲ: ಗೊಮ್ಮಟೇಶ್ವರ ಎಂಬ ಹೆಸರಿನಲ್ಲಿದ್ದ ಅವನ ಮೂರ್ತಿಗಳು ಕನ್ನಡನಾಡಿನ ಕಲಾವಂತಿಕೆಯ ಕೀರ್ತಿಸ್ತಂಭಗಳಾಗಿವೆ (ತವನಿ. ೧೩೭); ತನ್ನ ರೂಪ ಲಾವಣ್ಯಗಳಿಂದಲೂ ಕಲಾವಂತಿಕೆಯಿಂದಲೂ ರಾಜ್ಯದಲ್ಲೆಲ್ಲ ಜನಪ್ರಿಯತೆ ಪಡೆದ (ಆಶ್ರಮ. ೪೭). **ಕಲಾವಂತಿಗೆ**: ವಾತ್ಸ್ಯಾಯನನು ತನ್ನ 'ಕಾಮಸೂತ್ರ'ದಲ್ಲಿ ಆ ಕಾಲದ ಜನರ ಕಲಾವಂತಿಗೆಯನ್ನು ಕುರಿತು ಸ್ಪಷ್ಟಪಡಿಸಿದ್ದಾನೆ (ಭಾರದ. ೫೫೦). [ಕಲಾವಂತ + –ಇಕೆ]

**ಕಲಾವಂತಿಗೆ** 'ಕಲಾವಂತಿಕೆ' ನೋ.

**ಕಲಾವಂತಿನಿ** (ನಾ). ೧. ಕಲೆಯನ್ನು ಬಲ್ಲವಳು; ಕಲಾವಿದೆ. ೨. ಸೂಳೆ; ವೇಶ್ಯೆ: ಇದು ಅರಮನೆ, ಇದು ಕಲಾವಂತಿನಿಯರ ಸಾಲು . . . ಎಂದು ಕೈಮಾಡಿ ತೋರಿಸುತ್ತಾರೆ (ಮುಂಬಯಿ. ೫–೧೦೮). [< ಸಂ. ಕಲಾವತೀ ?]

**ಕಲಾವತಿ,** ಕಳಾವತಿ (ನಾ). ೧. ಕಲಾವಿದೆ. ೨. ತುಂಬುರುವಿನ ವೀಣೆ. ೩. ರಾಧೆಯ ತಾಯಿ. ೪. ಶಕ್ತಿದೇವತೆಗಳಲ್ಲಿ ಒಬ್ಬಳು (೩). **ಕಳಾವತಿ:** ೩. ಸಿರಿ ಶಚಿ ವಾಣಿ ರೋಹಿಣಿ ಕರಾಳಿ ಕಳಾವತಿ . . . ಎಂಬ ಶಕ್ತಿಯರ್ (ಶಬಶಂ. ೩–೧೨). [ಸಂ. ಕಲಾವತೀ]

**ಕಲಾವಿಜ್ಞಾನ** (ನಾ). ಕಲೆಯ ತಂತ್ರಗಳ ಜ್ಞಾನ; ಕಲಾತಂತ್ರ: ಇಲ್ಲಿ ಕಲೆ ಮತ್ತು ಕಲಾವಿಜ್ಞಾನ (Art–technic) ಗಳು ಒಂದೇ ಎಂಬ ಭ್ರಾಂತು ಹಿಡಿಯುವುದು (ಭಾಚಿತ್ರ. ೧೫). [ಸಂ. (ಕಲಾ + ವಿಜ್ಞಾನ)]

**ಕಲಾವಿದ,** ಕಳಾವಿದ (ನಾ). ೧. ಲಲಿತ ಕಲೆಯನ್ನು ತಿಳಿದವನು; ಕಲಾಕೃತಿಗಳನ್ನು ರಚಿಸಬಲ್ಲವನು: ಅವಳು ಕಲಾವಿದನೆಂದು ನನ್ನನ್ನು ಸಂಬೋಧಿಸಿದ್ದಕ್ಕೆ ನಾವಿಬ್ಬರೂ ಒಮ್ಮೆ ನಕ್ಕೆವು (ಹೇಮಂತ. ೩೯೩); ನಿಪುಣನಾದ ಕಲಾವಿದನು ವರುಷಗಟ್ಟಲೆ ದುಡಿದು ಅದರಲ್ಲಿ ತನ್ನ ಕಲಾಪ್ರೌಢಿಮೆಯ ಛಟ್ಟೆ ಇಳಿಸಿದ್ದನು (ಕಂಬಹು. ೧). **ಕಳಾವಿದ:** ೨. ಜಾಣ; ಚತುರ; ನಿಪುಣ: ಪಾವನಾತ್ಮನು ಪಾಶ ದಳನ ಕಳಾವಿದಂ (ಬಸವು. ೪೬–೧). 'ಕಾವ್ಯ ಕಳಾವಿದ' ಪರಾ. [< ಸಂ. ಕಲಾವಿದ್]

**ಕಲಾವಿದೆ** (ನಾ). ಲಲಿತ ತಲೆಯನ್ನು ತಿಳಿದವಳು: ಹೊಯಿಸಳೇಶ ರನ ಪಟ್ಟದರಸಿ ಶಾಂತಲಾದೇವಿ ಎಂತಹ ಕಲಾವಿದೆ (ಭಾರದ. ೪೮೯). [ಕಲಾವಿದ + –ಎ₂]

**ಕಲಾವಿಮರ್ಶಕ** (ನಾ). ಚಿತ್ರ, ಗಾಯನ ಮೊದಲಾದ ಕಲೆ ಗಳನ್ನು ವಿಮರ್ಶೆ ಮಾಡುವವನು: ಈ ಚಿತ್ರಗಳ ನಿರ್ಮಾಣತಂತ್ರ ವಿಶ್ವದ ಎಲ್ಲ ಕಲಾವಿಮರ್ಶಕರನ್ನೂ ದಿಗ್ಭ್ರಮೆಗೊಳಿಸಿದೆ (ಭಾರದ. ೫೨೫). [ಸಂ. (ಕಲಾ + ವಿಮರ್ಶಕ)]

**ಕಲಾವೆ** (ನಾ). ಒಂದು ಮೂಲಿಕೆ: "ಕಠಿನಪೃಷ್ಠಿಕಃ – ಕಲಾವೆ? " (ಓಷಧಿ. ೨೬). [?]

**ಕಲಾವೇದಿ** (ನಾ). = ಕಲಾವಿದ ೧. ಕಲಾವೇದಿ ಸತ್ಕರತಂ . . . ಕನ್ಯಾ ನಿವಾಸೋದ್ಭವಂ (ಜಾತತಿ. ೧೭–೬). [< ಸಂ. ಕಲಾವೇದಿನ್]

**ಕಲಾಶಾಸ್ತ್ರ** (ನಾ). ೧. ಕಾಮಶಾಸ್ತ್ರವನ್ನು ಕುರಿತ ಒಂದು ಅಶ್ಲೀಲ ಗ್ರಂಥ (೩). ೨. ಸೌಂದರ್ಯವಿಜ್ಞಾನ (ಪಾರಿಸಿ. ೨). [ಸಂ. (ಕಲಾ + ಶಾಸ್ತ್ರ)]

**ಕಲಾಶಿಕ್ಷೆ** (ನಾ). ಕಲೆಯ ವ್ಯಾಸಂಗ; ಕಲಾಭ್ಯಾಸ: ನಮ್ಮಯ್ಯನೆನ್ನಂ ಕಲಾಶಿಕ್ಷೆಗೆಂದು ಸುಲೋಚನೆಯ ಪಕ್ಕದೊಳಿರಿಸಿದೊಡೆ (ಜಾವುಂಪು. ೫೨–೩೪). [ಸಂ. (ಕಲಾ + ಶಿಕ್ಷಾ)]

**ಕಲಾಸ್,** ಖಲಾಸ್, ಖಲಾಸ, ಖಲಾಸು (ನಾ). ೧. ಮುಗಿತಾಯ; ಆಗಿಹೋಗುವಿಕೆ: ಐದೂವರೆಗೆ ಆ ಕೆಲಸ ಕಲಾಸ್ (ಚಿಂಗೂಲಿ. ೮೨). ೨. ತೀರಿಹೋಗುವಿಕೆ; ಸಾವು: ಈ ದಂಪತಿಗಳಲ್ಲಿ ಮೂರು ಜೊತೆಯು ಕಲಾಸಾಗಿ ಆ ಕಿರಿಯ ಜೋಡಿ ಮಾತ್ರ ಉಳಿಯಿತು (ಅಗರ. ೩೪). **ಖಲಾಸ್:** ೧. ಎಲ್ಲಾ ಖಲಾಸ್ ಆಗಿ ಹೋಯಿತು (ರೂಢಿ). ೨. ದೊಂಬಿಯಲ್ಲಿ ಹನ್ನೆರಡು ಜನ ಖಲಾಸ್ ಆದರು (ರೂಢಿ). **ಖಲಾಸ:** ೧. ಒಂದು ಕರುವನ್ನು ನಿನ್ನೆ ರಾತ್ರಿ ಗುಡ್ಡದಲ್ಲೇ ಖಲಾಸ ಮಾಡಿದೆ – ಹುಲಿ (ದಂಬನಾ. ೫). **ಖಲಾಸು:** ೧. ಅಪ್ಪು ಲಾಡುವನ್ನು ಒಬ್ಬನೇ ಖಲಾಸು ಮಾಡಿಬಿಟ್ಟಿದ್ದೀಯ (ರೂಢಿ). [← ಅರ. ಹಿಂ. ಮರಾ. ಖಲಾಸ್]

**ಕಲಾಸಿ,** ಕಳಾಸಿ, ಖಲಾಸಿ (ನಾ). ೧. ನಾವಿಕ; ಹಡಗಿನಲ್ಲಿರುವ ಮಜದೂರ: ತರುಣನಾಗಿದ್ದಾಗ . . . ಮಚ್ವೆಯೊಂದರಲ್ಲಿ ಕುಳಿತು, ಕಲಾಸಿಯಾಗಿ ಹೋದ ಧೀರನವನು (ಜಾರುದಾ. ೫೦); ಇಪ್ಪತ್ತು ಮೂವತ್ತು ಕಲಾಸಿಗಳ ಜೊತೆ ತೋಮ ದೋಣಿಯಲ್ಲಿ ಹುಟ್ಟುಹಿಡಿದು ಕೂತಿದ್ದ (ಹೊಸಕ್ಷಿ. ೫೭). **ಕಳಾಸಿ:** ೨. ಡೇರೆ ಅಥವಾ ಗುಡಾರ ಗಳನ್ನು ಹಾಕುವವನು ಮತ್ತು ಅವುಗಳನ್ನು ನೋಡಿಕೊಳ್ಳು ವವನು; ಕೈಕೆಳಗಿನವನು (ಕೈಸಗೆ. ೫೫೨). **ಖಲಾಸಿ:** ೧. ಒಡೆದು ಜಹಜು ಜಲಮಧ್ಯ ಮರಳಲಿ ಖಲಾಸಿ ಕೈಯ ಮುಗಿವ (ಚಂಡಿಮು. ೪೯). [← ಹಿಂ. ಖಲಾಸೀ; ಅರ. ಖಲಾಶೀ]

**ಕಲಾಸಿಪಡೆ** (ನಾ). "ಹಡಗಿನ ನೌಕರರ ಒಟ್ಟು ತಂಡ; ಕಲಾಸಿ ಪಡೆ" (Ship's Company. ಇಂಕಸಿ). [ಕಲಾಸಿ + ಪಡೆ₁]

**ಕಲಾಹೀನ,** ಕಳಾಹೀನ (ಗು). ೧. ಕುಶಲ ಕಲೆಯಿಲ್ಲದ, —ತಿಳಿ ಯದ: ಶಾಮನು ಕಲಾವಿದನಾಗಿ ಸಾಯುವುದಕ್ಕಿಂತ ಕಲಾಹೀನನಾಗಿ ಬದುಕುವದು ನನಗೆ ಬೇಕಾದ ಮಾತಾಗಿದೆ (ರಂಗರೋ. ೨೦೦). ೨. ಕಳೆ ಯಿಲ್ಲದ; ಕಾಂತಿಹೀನವಾದ; ಲಕ್ಷಣವಿಲ್ಲದ. **ಕಳಾಹೀನ:** ೨. ಜಗವಱಿಯೆ ತಾಂ ಕಳಂಕಂ ಕಳಾಹೀನ ಹಾವಗಿದುಗಿದ ವಿಷವಕ್ತ್ರ ದೋಷಿ (ಹಚಕಾ. ೪–೧೫). [ಸಂ.]

**ಕಲಿ₁** 'ಕಲ್₁' ನೋ.

**ಕಲಿ₂** (ನಾ). ೧. ಕಲಹ; ಜಗಳ. ೨. ಕಾಳಗ: "ಕಲಹದಲ್ಲಿಯುಂ ಕಲಿ ಯೆಂಬುದು" (ಹಲಾಯು. ೧೩೧–೩). ೩. ಬಂಟ; ಶೂರ; ವೀರ: "ಶೂರಂ ವಿಕ್ರಾಂತಂ ಕಲಿ ಚಾರ ಭಟಂ ವೀರಪುರುಷನಾತಂಗೆ ಪೆಸರ್" (ವಸ್ತುಕೋ. ೧೦೦–೧೨); ಕಲಿಯಾ[ದ]ಂ ಬಗೆದು ನೋಟ್ಪೊಡದ್ಭುತ ಮಾದಂ (ಕವಿರಾ. ೩–೧೯೦); ಕಲಿಯನೆ ಪಂದೆ ಮಾಣ್ಪ ಕಡುವಂದೆಯ ನೊಳ್ಗಲಿಮಾಟ್ಪ (ಪಂಪಭಾ. ೧೨–೯೨); ಕಲಿಯ ಕಾಲ ತೊಡರು ಛಲದಾಳಿ ಗಲ್ಲದೆ ಇಕ್ಕಬಾರದು (ಬಸವ. ೬೬೫); ಕಲಿಗಳೊಳ್ ಕಲಿ ಎಂದು ನೀನಿಂತು ನಿಲ್ವೆಯಾ (ಅಶ್ವತ್ಥಾ. ೮–೧೬೧). ೪. ತಾರೆಯ ಮರ: "ಕಲಿಃ, ಅಕ್ಷಃ, ವಿಭೀತಃ – ಈ ೩ ತಾಱಿ" (ಹಲಾಯು. ೧೧೧–೪೬೪). ೫. ನಾಲ್ಕನೆಯ ಯುಗ; ಕಲಿಯುಗ: "ಅತಿಧೀರಂ ಕಾಳಗ ಯುಗಮಿತಿ ಮೂಱಱೊ ಳೆಸೆವ ನಾಮ ಕಲಿಶಬ್ದಂಗಳ್" (ನಾನಾಕಂ. ೧೧೯). ೬. ಕಲಿಪುರುಷ: ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್ (ಇಅ. X, ೬೧–೬; 700); ಕೆಂಗರಿಗಣ್ಣ ಮೋಱೆಯ ಹರಕುಗಡ್ಡದ ಕರಿಯೊಡಲ ಕಲಿ [ಪಾಠಾಂ. ಕೆಂಚುಮಿಸೆಯ] ಮಲಿನವಸನದಲಿ . . . ಕಲಿಪುರುಷ ಕಾಣಿಸಿಕೊಂಡನು (ನಳಚ. ४–४). ೭. ಅರಳದೆ ಇರುವ ಹೂವು; ಮೊಗ್ಗು. ೮. ಅತ್ಯಂತ ಕೀಳಾದುದು, —ಕಡಮೆಯಾದುದು (೩).

**ಕಲಿಗಳಂಕುಸ, ಕಲಿಗಳಂಕುಶ** = ವೀರರಿಗೆ ಅಂಕುಶದಂತಿರು ವವನು; ವೀರರವೀರ; ಒಂದು ಬಿರುದು: ಸುಭಟರಾದಿತ್ಯ ಕಲಿಗಳಂಕುಸ ಸನಿವಾರ ಸಿದ್ಧಿ ಗಿರಿದುರ್ಗಮ್ಮಲ್ಲ (ಕಇ. ೭೪–೧೨–೧೩; 1170); ಕಲಿಗಳಂಕುಸಂ ಶ್ರೀ ವೀರಕಾವದೇವರಸರು (ಎಇ. XXVII, ೨೮–೨೪; 1256); ಸಿಂಹಲಾಂಛನ ಕಲಿಗಳಂಕುಶೇತ್ಯಾದಿ ಬಿರುದಾವಲೀ ಸಮನ್ವಿತ ಶ್ರೀಮಲ್ಲಭೂಪಸ್ಯ (ಕಇ. IV, ೫೪–೨೦; 1245). **ಕಲಿಗಳ ಮೊಖದ ಕೈ, ಕಲಿಗಳಮೊಗದಕಯ್, ಕಲಿಗಳಮೊಗದಕಯಿ** = ಶೂರರ ಮುಖದ ಮೇಲೆ ಕೈಯಿಂದ ಹೊಡೆಯುವವನು; ಒಂದು ಬಿರುದು: ಚಲದಂಕರಾಮ ರಾಯಗಂಡರದಾವಣಿ ಕಲಿಗಳ ಮೊಖದ ಕೈ ಸುಭಟ ಚೂಡಾಮಣಿ (ಎಇ. XXVII, ೨೮–೧೯; 1256); ಕಲಿಗಳ ಮೊಗದಕಯ್ಯಾಮಾದಿ ಸಮಸ್ತಪ್ರಸಸ್ತಿ ಸಹಿತಂ (ಕಇ. VI, ––– 1046). [ಸಂ.]

**ಕಲಿಂಗ**, ಕಳಿಂಗ (ನಾ). ೧. ಒಂದು ದೇಶದ ಹೆಸರು ; ಆ ದೇಶದ ಜನ ಅಥವಾ ರಾಜ. ℙ ಈಗಿನ ಕೋರಮಂಡಲ. ೨. ಆ ದೇಶದ ಸ್ಥಾಪಕನಾದವನು; ದೀರ್ಘತಮಸ್ಸು ಎಂಬ ಋಷಿಯ ಮಗ. ೩. ಒಂದು ಬಗೆಯ ನೀರ ಹಕ್ಕಿ; ಕುಕ್ಕುಟ. ೪. ಚಾತಕಪಕ್ಷಿ. ೫. ಸಾರಂಗ. ೬. ಒಂದು ಬಗೆಯ ಧಾನ್ಯ; ಇಂದ್ರಯವ. ೭. (ಆಲಂ) ಮೋಸಗಾರ; ವಂಚಕ. **ಕಳಿಂಗ** : ೧. ಅಂಗ ವರಾಳ ಸಿಂಗಳಿಕ . . . ಕಳಿಂಗ ಖಸಾನ್ಧ್ರ (ಸೌಇಇ. XX, ೪೬–೫ ; 1072) ; ಗೌಳಸಾಂಧ್ರ ಕಳಿಂಗ ಕುರುನೇಪಾಳ . . . ಧರಣೀಪಾಲತತಿ ಸಂದಣಿಸಿದುದು (ತೊರರಾ. ೧–೭–೧೮). ೭. ಹುಳುಕು ನೀತಿಗಳಾ ಕಳಿಂಗನನೊಲಿದು ಕೇಳುವ ಕೌರವೇಂದ್ರನು (ಸಂಭಪ. ೧೭–೩೪) ; ಕಳಿಂಗ ನೀತಿಯಲ್ಲಿ ನಿಪುಣನಾದ ವೈದ್ಯನು . . . ಕಾಲವನ್ನು ಕಳೆಯಲಾರಂಭಿಸಿದನು (ಬೆನ್ನಬೀ. ೪೨) ; ಆ ಕಳಿಂಗರು ಸಂಬಳಾನೇ ಕೊಡುವುದಿಲ್ಲ (ತುಂಗಭ. ೧೫). [ಸಂ.]

**ಕಲಿಂಜ** (ನಾ). ೧. ಚಾಪೆ. ೨. = ಕಲಿಂಜಕ. . . . [ಸಂ.]

**ಕಲಿಂಜಕ** (ನಾ). ಕಣಜ; ಉಗ್ರಾಣ. [ಸಂ.]

**ಕಲಿಂದ**, ಕಳಂದ (ನಾ). ೧. ತಾರೆಯ ಮರ; ಕಲಿದ್ರುಮ. ೨. ಯಮುನಾನದಿ ಹುಟ್ಟುವ ಬೆಟ್ಟ. 'ಕಲಿಂದಜೆ' ಪರಾ. **ಕಳಿಂದ** : ೨. 'ಕಳಿಂದಜೆ' ಪರಾ. [ಸಂ.]

**ಕಲಿಂದಜೆ, ಕಳಿಂದಜೆ** (ನಾ). ಕಲಿಂದಪರ್ವತದಲ್ಲಿ ಹುಟ್ಟಿದುದು ; ಕಾಲಿಂದಿ ನದಿ; ಯಮುನೆ. **ಕಳಿಂದಜೆ**: ನೀಲಿಯ ತನಿರಸಮೆಂಬಂತಿರೆ ಕಳಿಂದಜೆಯ ಕರ್ಮಡುವಿನೊಂದು **ಪೊಳೆ**ಪಿಂ (ರಾಮಾಶ್ವ. ೫೨–೨೧). [ಸಂ. ಕಲಿಂದಜಾ]

**ಕಲಿಂದನಂದಿನಿ** (ನಾ). = ಕಲಿಂದಜೆ. [ಸಂ. ಕಲಿಂದನಂದಿನೀ]

**ಕಲಿಕಂಗ** 'ಕಲಿಗಂಗ' ನೋ.

**ಕಲಿಕಸ್ತೂರಿ** (ನಾ). ಕಾಡುಕಸ್ತೂರಿ (೩). [ಕಲಿ$_0$ + ಕಸ್ತೂರಿ]

**ಕಲಿಕಾಂತಿ** (ನಾ). ಒಬ್ಬಾತನ ಹೆಸರು : ಚಿತ್ರವಾಹನರ್ಗ್ಗಾಗಿ ಕಲಿಕಾನ್ತಿ ಎಱಿದು (ಎಇ. IX, ೧೮–೧೬ ; 800). [?]

**ಕಲಿಕಾರಕ** (ನಾ). ೧. ಒಂದು ಬಗೆಯ ಗಿಡ; ತಪಸಿಗಿಡ. ೨. ಒಂದು ಜಾತಿಯ ಪಕ್ಷಿ. ೩. ಜಗಳವನ್ನುಂಟುಮಾಡುವವನು. ೪. ನಾರದ. [ಸಂ.]

**ಕಲಿಕಾಲ** 'ಕಲಿಗಾಲ' ನೋ.

**ಕಲಿಕಾಲಹೋಳಿ** (ನಾ). ಕಲಿಪುರುಷನ ಆಕೃತಿಯನ್ನು ಸುಟ್ಟು ಕುಣಿವ ಹೋಳಿಹಬ್ಬ; ಆ ಹಬ್ಬದಲ್ಲಿ ಹಾಡುವ ಹಾಡು (?): ಹೋಳಿಯನ್ನು ಶಿವಶರಣರೂ ಹರಿದಾಸರೂ ಆಡಿ ಹಾಡಿದ್ದಾರೆ. ಬಸವಾದಿ ಪ್ರಮಥರು ಆಡಿದ 'ಕಲಿಕಾಲಹೋಳಿ'ಯೇ ಇದಕ್ಕೆ ಸಾಕ್ಷಿ (ಕನ್ನಜಾ. ೧೭೫). [ಕಲಿಕಾಲ + ಹೋಳಿ ( = ಹೋಲಿ)]

**ಕಲಿಕಿ$_1$** (ನಾ). ಚೆಲುವೆ; ಸುಂದರಿ: ಕಲಿಕಿ ಯಾತನು ಕೇಳು ಕರ್ನಾಟದೇಶದ ಕರುಣದಿಂದಾಳುವ ಧೊರೆಯು (ಯನಳ. ೫೧) ; ಕಲಿಕಿ ಚಿತ್ರಾಂಗಿ ಸಣ್ಣವನ ತಾ ಬಯಸಿ ಸಹಜದಿಂದಂದೆ ಕಣ್ಣನೀರನು ತುಂಬಿ ಗಂಡಗೆ ಪೇಳಿ ಪಾರುಮಾಡಿದಳು (ಸಾರಂಗ. ೨೩). [← ತೆಲು. ಕಲಿಕಿ]

**ಕಲಿಕಿ$_2$** (ನಾ). ವಿಷ್ಣುವಿನ ಹತ್ತನೆಯ ಅವತಾರ; ಕಲ್ಕಿ: ತಾನೇ ಕಲಿಕಿಯವತಾರವನು ಕೈಕೊಂಡೊಲಿದು ನಿಂದು (ನಿಭಾಗ. ೧೨–೧–೩೫). [< ಸಂ. ಕಲ್ಕಿ]

**ಕಲಿಕೆ$_1$** 'ಕಲ್ಕೆ' ನೋ.

**ಕಲಿಕೆ$_2$**, ಕಳಿಕೆ$_1$ (ನಾ). ೧. ಹೂವಿನ ಮೊಗ್ಗು ; ಕೋರಕ: ಕಲಿಕೆಕವಲ್ತು ಮೂಡಿದುದು ಮಾಮರದೊಳ್ (ಲೀಲಾವ. ೯–೬೭) ; ಕಲಿಕೆಗಳೆಂಬ ಹರ್ಷಪುಳಕಾವಳಿಯಂ ತಳೆದಿರ್ಪಳಾಮ್ರ ಕೋಮಲೆ (ಕಾವ್ಯಸಾ. ೭೦೯) ; ಕೋಮಲ ಲತೆಗೆ ಕಲಿಕೆಗೆ . . . ಸೊಬಗ ಬೀಜುತ (ನಂದಿಮಾ. ೪–೧೬). **ಕಳಿಕೆ$_1$** : ೧. ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ ನಲಿವುದು (ಆದಿಪು. ೨–೯) ; ಸಹಕಾರಂ ತಾಳ್ದಿತ್ತು ಪುಳಕಮೆನೆ ಕಳಿಕೆಗಳಂ (ಚಂದ್ರಪ್ರ. ೨–೯೦) ; ಮಿಗೆ ಪಸುರಿಡಿದ ಕಳಿಕೆ ತುಱುಗಿ ಕಾವನ ಕೂರ್ಗಣೆಗಳ ಮೂಡಿಗೆಗಳಂತಿರೆ (ಪದ್ಮರಾ. ೮–೩೪). ೨. (ದೀಪದ) ಕುಡಿ, —ನಾಲಗೆ: ಮದನಮೋಹನದೀಪಕಳಿಕೆಯಂತೆಯುಂ ಕಾಮ ಕಲ್ಪಲತೆಯಂತೆಯುಂ (ಪಂರಾಮಾ. ೪–೨೯ ವ) ; ನಲಿದೆಣಗಿದನು ನಿಧಾನವೆಡೆಗೆ ದೀಪಕಳಿಕೆ ತಾನೆಣಗುವಂದದೊಳು (ಭರಚ. ೩–೬೦); ಕಳಿಕೆ ತೊಲಗಿದ ದೀಪದಂತೆ (ಜರಾಮಾ. ೨೩೮–೩). ೩. "ಹೀಚು ಗಾಯಿ" (ರಾಮಾಶ್ವ. ಕೋಶ) : ಬಕ್ಕೆವಲಸಿಂಗೆ ಕಳಿಕೆಯುಂ ತೆಂಗು ಕೌಂಗುಗಳ್ಗೆ ನೀಡುಗೊನೆಯಂ ಪತ್ತಿಸಿ ತೆತ್ತಿಸಿ ಬೀಸುವ ಪಲಗಾಳಿ (ರಾಮಾಶ್ವ. ೧೧೪–೨೨). ೪. ಒಂದು ಬಗೆಯ ಗದ್ಯ: "ಕಲಿಕಾ, ಉತ್ಕಲಿಕಾ, ಈ ೨ ಉದಾಹರಣ ಗದ್ಯಭೇದಂ" (ಕಾಶಕ್ಕ. ೧೧೪). [ಸಂ. ಕಲಿಕಾ]

**ಕಲಿಗ** (ನಾ). ಒಬ್ಬಾತನ ಹೆಸರು : ಜಕ್ಕಿಯಬ್ಬೆ ನಾಬ್ಗಾವುಣ್ಡುಗೆಯ್ಯುತ್ತಿರೆ ನಣ್ಣುವರ ಕಲಿಗಂ ಪೆರ್ಗ್ಗಡೆತನಂ ಗೆಯ್ಯೆ (ಎಕ. VII, ಶಿಕಾಂ. ೨೧೯–೧೨ ; 918). [?]

**ಕಲಿಗಂಗ**, ಕಲಿಕಂಗ (ನಾ). ಒಬ್ಬಾತನ ಹೆಸರು : ಶ್ರೀಮತ್ ಪೆರ್ಮ್ಮಾನಡಿಗಳ್ ರಾಜ್ಯಂಗೆಯ್ಯುತ್ತಿರೆ ಕಲಿಗಂಗ ದೇವಳಿಗೆಟ್ಟುತ್ತುವನಾಳುತ್ತುಮಿರೆ (ಎಕ. VI, ಚಿಕ್ಕಮ. ೪೨–೬ ; 959). **ಕಲಿಕಂಗ** : ನೆಲ್ಲಿವರ ಕಾಳಕನ್ನ ಕಲಿಕಙ್ಗರಾಣಿಜಿದೋಡಿಸಿ ಗಂಜ್ಜೀನಾಡಕ್ಕಲಿದೋಜೆಗಳುಂ ಗೊಂಬುಕ್ಕಿಅರಸರುಂ ಪಡೆದುದು (ಎಕ. X, ಮಾಲೂರು. ೯೬–೨ ; ಸು. 750). [ಕಲಿ$_2$ + ಗಂಗ]

**ಕಲಿಗಂಟಿಕ್ಕು** (ಕ್ರಿ). (ವೀರರಂತೆ) ಕೂದಲನ್ನು ಗಂಟುಹಾಕು (?) : ಬಾಹುಯುದ್ಧಸನ್ನದ್ಧನಾಗಿ ಕಲಿಗಂಟಿಕ್ಕಿ ಗಂಡುಡೆಯುಮನುಟ್ಟು (ಪಂಪಭಾ. ೮–೭೩ ವ) ; ಕಲಿಗಂಟಿಕ್ಕಿ ತೆರಳ್ದೆ ಬಿಗಿದುಟ್ಟು ಹೊಯ್‌ ಕೈಯನೆಂಬಂತಿರ್ದಂ (ಬಂಸೌರಿ. ೬–೪೫ ವ) ; "ವೀರಕಾಸೆಯ ಗಂಟನು ಹಾಕು." (ಪಂಪದೀ. ೨೯೦). [ಕಲಿಗಂಟು + ಇಕ್ಕು]

**ಕಲಿಗಂಟು** (ನಾ). ೧. (ವೀರರು) ಕೂದಲನ್ನು ಕಟ್ಟುವ ಒಂದು ಬಗೆ. 'ಕಲಿಗಂಟಿಕ್ಕು' ಪರಾ. ೨. ಬೆನ್ನ ಮೇಲೆ ನೇಲುವ ಸಡಿಲವಾದ ಮುಡಿ, —ಗಂಟು : ಬೆನ್ನನಪ್ಪಳಿಪ ಸೋರ್ಮುಡಿಯಂ ಕಲಿಗಂಟನಿಕ್ಕಿ (ಸೂಕ್ತಿಸು. ೧೪–೩೬) ; ಬೆನ್ನನಲೆವ ಕಲಿಗಂಟು ಕದಕ್ಕದಿಪುನ್ನತಕುಚತಟದೊಳ್ ನರ್ತಿಪ ಪೊಸರನ್ನದ ಪಂಚಸರಂ (ಜಯಕಾ. ೮–೫೮) ; ಕಲಿಗಂಟು ಕೆಲರಿಗೆ ಜಡೆ ಕೆಲರಿಗೆ ಮತ್ತೆ ಕೆಲರಲ್ಲಿ ತುಱುಬ ನಿಕ್ಕಿದರು (ಭರಚ. ೧೬–೨೫). 'ಎಣೆಗಂಟು' ಪರಾ. [ಕಲಿ$_2$ + ಗಂಟು]

**ಕಲಿಗಂಡತೊಂಡ** (ನಾ). ವೀರಾಧಿವೀರರಿಗೆ ತೊಂಡನಂತಿರುವವನು; ಮಹಾಶೂರ; ಒಂದು ಬಿರುದು : ನುಡಿದನ್ತೆಗಣ್ಡಂ ಕುನ್ನಾಲವಂಶಲಲಾಮ ಗುಣಗಣೋದ್ದಾಮ ಕಲಿಗಣ್ಡತೊಣ್ಡಂ ಕದನಪ್ರಚಣ್ಡ (ಸೌಇಇ. XI–i, ೯೭–೧೮ ; 1062). [ಕಲಿ$_2$ + ಗಂಡ$_1$ + ತೊಂಡ$_1$]

**ಕಲಿಗಲ** (ನಾ). ಬೆರಕೆಯಾದುದ್ದು ; ಮಿಶ್ರಣ : "ಕಲಿಗಲಮೆನೆ ಕೂಡೆ ಬೆರಸಿದ್ದಕ್ಕುಂ" (ರನ್ನಕಂ. ೧೧). [ಕಲಿ ? (< ಕಲ್$_3$) + ಕಲ್$_3$]

**ಕಲಿಗಳೆ** (ಕ್ರಿ). ಪ್ರತಾಪವನ್ನು ಕುಗ್ಗಿಸು; ಶೌರ್ಯವನ್ನು ಹೋಗಲಾಡಿಸು: ಮುಟ್ಟಿ ಬಂದುದು ಸೇನೆ ಕವಿದುದು ಕಟ್ಟಳವಿಯಲಿ ಕಲಿಗಳೆದು ಬಳಿಕಟ್ಟಿತಿಂಬ ಮಹಾಂತಕಂಗೌತಣವ ಹೇಳ್ವಂತೆ (ಕುವ್ಯಾದ್ರೋ. ೧೮-೧೮). [ಕಲಿ$_2$ + ಕಳೆ$_1$]

**ಕಲಿಗಳ್ಳ** (ನಾ). ಒಂದು ಬಿರುದು: ಬಟ್ಟೆಗೆಱೆನೆಱೆಮ್ಮೆ ಕಲಿಗಳ್ಳನೆಂಬೋ ××× [ಱ]ಯ ಬಾಚಿನೆನ್ದು (ಸೌಇಇ. XI-i, ೨೧-೭; 893). [?]

**ಕಲಿಗಾಲ, ಕಲಿಕಾಲ** (ನಾ). ಕಲಿಯುಗದ ಕಾಲ: ಸಸಿಯಿರ್ದಪ ನಮವಾಸೆಯ ಬಸದಿಂ ಕಾಣಲ್ಕೆ ಬಾರದಂತಿರೆ ಜಿನರುಂ ವಸುಧೆಯೊಳಿರ್ದಪರಿರ್ದುಂ ಮಿಸುಕುವ ಕಲಿಗಾಲದೆಸಕದಿಂ ತಲೆದೋಱರ್ (ಜಗವಿ. ೫-೧೯೪). **ಕಲಿಕಾಲ**: ಕಲಿಕಾಲದೊಳ್ ಕಲಿಗಳೊಳ್ಗಣ್ಡಂಬರಂ ಗಣ್ಡರೇ (ಎಕ. II, ೧೩೩-೭೬; 982); ಕಲಿಕಾಲಮನೊಕ್ಕು ಭೂತಳಂ ಕೃತಯುಗದಂತೆ ವರ್ತಿಪುದು (ಜಗವಿ. ೧-೬೪); ಕಲಿಕಾಲದ ಮಹಿಮೆ (ಮನೆಬಿ. ೧೨೫).

**ಕಲಿಕಾಲಕರ್ಣ** = ಕಲಿಯುಗದಲ್ಲಿ ಕರ್ಣನಂತಿರುವವನು; ದಾನಶೂರ; ಒಂದು ಬಿರುದು: ಕುಡಿಯರಾಭರಣಂ ನುಗುನಾಡರಾಮನೆನ್ದಡೆ ಕಲಿಕಾಲಕರ್ಣ್ಣನ ವಿನೋದದ ಚಾಗದ ಬೀರದಾಪ್ಪರ್ನ್ (ಎಕ. IV, ಹೆಗ್ಗಡ. ೧೮-೭; 1057). **ಕಲಿಕಾಲಮೇರು** = ಕಲಿಯುಗದಲ್ಲಿ ಚಿನ್ನದ ಬೆಟ್ಟದಂತೆ ಇರುವವನು; ಅತ್ಯಂತ ಧನಿಕ; ಒಂದು ಬಿರುದು: ಅಂತು ಪೊನ್ನಲವಾಗಲ್ ಕಲಿಕಾಲಮೇರು ವಿಬುಧಂ ಸೌಜನ್ಯರತ್ನಾಕರಂ ಬಲವನ್ತಂ ಪ್ರಭು ಶಾನ್ತಿಸೆಟ್ಟಿ (ಸೌಇಇ. XX, ೫೫-೩೫; 1082). **ಕಲಿಕಾಲವೇಳ** = ಒಂದು ಬಿರುದು: ಕಲಿಕಾಲವೇಳ ನೆನಿಸಿದ ಕಲಿಚಾಗಿಯನಿಱಿದು ಕೊಂದರೆಂಬುದುಮಾತಂ ಲಲಿತಾಂಗಿ ಕೇಳ್ದ ರವಿಗನ ಕುಲದೀಪಕಿ ಸಾಯಲೆಂದು ಕೊಂಡಕೆ ನಡೆದಳ್ (ಎಕ. IV, ಹೆಗ್ಗಡ. ೧೮-೨೦; 1057). **ಕಲಿಕಾಲಸರಸ್ವತಿ** = ಒಂದು ಬಿರುದು: ಆಶ್ರಿತಜನ ಕಲ್ಪಲತೆ ರೂಪ ವಿದ್ಯಾಧರಿ ಕಲಿಕಾಲಸರಸ್ವ[ತಿ] (ಸೌಇಇ. XX, ೨೩-೭; 1029). **ಕಲಿಗಳಂಕುಸ** = ಕಲಿಗಳಿಗೆ ಅಂಕುಶದಂತಿರುವವನು; ಒಂದು ಬಿರುದು: ಕುಂದುಗೊಳದ ಕಲಿಗೊಡಗೆ ಕಲಿಗಳಂಕುಸಂ ಕಾಮದೇವಂ (ಸೌಇಇ. XX, ೧೨೬-೫; 1186).

[ಕಲಿ$_2$ + ಕಾಲ$_1$]

**ಕಲಿಗೂಂಟಣಿ** (ನಾ). ದಿಟ್ಟೆಯಾದ ಕುಂಟಣಿ; ಗಟ್ಟಿಯಾದ ಕುಂಟಲಗಿತ್ತಿ, —ಕುಂಟಣಗಿತ್ತಿ: ಒರ್ವಳ್ ಸಱಿಯಂ ತಳ್ಕೈಸಿದಂತಪ್ಪ ಕಲಿಗೂಂಟಣಿ (ಲೀಲಾವ. ೨-೫೮ ವ). [ಕಲಿ$_2$ + ಕೊಂಟಣಿ]

**ಕಲಿಗೇಜಿಯ್ಯ** (ನಾ). ಒಬ್ಬಾತನ ಹೆಸರು: ಕಲಿಗೇಜಿಯ್ಯ ಈ ಕಲ್ಲನಿಱಿಸಿದೊಂ (ಎಕ. IV, ಹೆಗ್ಗಡ. ೧೧೬-೧೧; ಸು. 930). [?]

**ಕಲಿಗೊಡಗೆ** (ನಾ). ಬಲವಾದ ಕೋಟೆ, —ದುರ್ಗ (?): ಸಿಡಿಬಲೆಯು ಸಿಡಿ[ಲೇಳ್ಗೆ]ಯುಮಿಪ್ಪಂತಿರ್ದ್ದ ಕುಂದುಗೋಳದ ಕಲಿಗೊಡಗೆ ಕಲಿಗಳಂಕುಸಂ ಕಾಮದೇವನೆತ್ತಲುತ್ತವಳನಾಗಿಪ್ಪುದುಂ (ಸೌಇಇ. XX, ೧೨೬-೫; 1186). [?]

**ಕಲಿಗೊಳ್** (ಕ್ರಿ). ವ್ಯಸನಪಡು; ಕೊರಗು (?): ಇಂದುವಿನಲ್ಲಿ ಉದಯವಾದ ಅಲಿಕಲ್ಲಿನಂತೆ ಮುನಿಸ ಮಱೆದಿರ್ದಳವ್ವೆ ಅವನ ಸುಖದಲ್ಲಿ ಸುಖಿಯಾದಳು ಅಗಲಿದಡೆ ಕಲಿಗೊಂಡಳು ಮಹಾಲಿಂಗಗಜೇಶ್ವರದೇವರಲ್ಲಿ ಮನಸೋಂಕಿ ಮನ ಲೀನವಾದಳವ್ವಾ (ಕವಿಚ. I, ೧೯೭ ಗಜೇವ). [?]

**ಕಲಿಗೋಂಟೆ** (ನಾ). ಬಲವಾದ ಕೋಟೆ; ಭದ್ರವಾದ ದುರ್ಗ: ಪೋಗದ ಕಲಿಗೋಂಟೆ ಸಿಲ್ಕದ ವಿರೋಧಿ ಕುಟುಂಬಮಿಱುಂಬುಗೊಂಡಡಂಗದ ಖಳರನ್ನಮಂಡಳದೊಳಿಲ್ಲ (ಪುಷ್ಪಪು. ೫-೫೫). 'ನಡೆಗೋಂಟೆ' ಪಠಾ. **ಕಲಿಗೋಟಿಮಲ್ಲ** = ಶೂರನಾದ ಕೋಟೆಕಾಳಗದವನು; ಒಂದು ಬಿರುದು: ಕಲಿಗೋ[ಂ]ಟಿಮಲ್ಲರ ತೊಲಗದ ಗಣ್ಡರ ಅಗ್ಘ್ಟಿಣಗವುನ್ದನ ಮಕ್ಕಳ್ಬಮ್ಮುತ್ತ ಐಯ್ಯರು (ಎಕ. IV, ಹೆಗ್ಗಡ. ೧೦೪-೬; 1037).

[ಕಲಿ$_2$ + ಕೋಂಟೆ]

**ಕಲಿಚ** (ನಾ). ಕಾಲಲ್ಲಿ ಹುಟ್ಟಿದವನು; ಶೂದ್ರ: ಕಾಲೊಳ್ ಪುಟ್ಟಿದಂ ಕಲಿಚಂ, ಶೂದ್ರಃ (ಶಬ್ದಾನು. ೪೨೦ ವ್ಯಾಖ್ಯಾ).

[< ಕಾಲಿಚ]

**ಕಲಿಜ, ಕಲಿಜೆ, ಕಾಳಿಜ, ಕಾಳಿಜಿ** (ನಾ). ೧. ಪಿತ್ತಾಶಯ. ೨. ಮೂತ್ರಪಿಂಡ: ನಮ್ಮ ಶರೀರಕ್ಕೆ . . . ಯಕೃತ್ತು, ಉದರ, ಕರುಳು, ಕಲಿಜಗಳಿವೆ (ಬಾಳ್ವೆಬಿ. ೮೧); ಇತರ ಮುಖ್ಯಾಂಗವೆಂದರೆ ಕಲಿಜಗಳು (Kidneys) (ಬಾಲಪ್ರ. I, ೩೦೦). **ಕಲಿಜೆ**: ೧. ಆಹಾರಕೋಶ, ಕಲಿಜೆ ಇವುಗಳಿಂದ ಒಸರುವ ಎಂಜಲು ಜಠರರಸ . . . ಎಂಬ ರಸಗಳೊಡನೆ ಬೆರೆಸಿಹೋಗುತ್ತದೆ (ಪ್ರಾಣಿಶಾ. ೫). **ಕಾಳಿಜ**: ೧. ಮಾಳವನಳ್ಳಿದುಳ್ಗೆ . . . ಪಾಂಡ್ಯನ ಕಾಳಿಜಕ್ಕೆ ನೇಪಾಳನ ಬೆನ್ನ ಸುಂಟಿಗೆಗೆ (ಎಕ. IV, ಹುಣಸೂ. ೧೩೭-೧೭; 1162); ಕಾಳಿಜ ಹಾಯ್ದು ನೆತ್ತರು ಸುರಿದು ಹಱಿದೊಗಲಿನಲಿ ಹೊರಳಿತು ವೈರಿಪಾಯದಳ (ಕುವ್ಯಾವಿ. ೭-೬೯); ಕರುಳುರ್ಚಿ ಖಂಡ ಕತ್ತರಿಸೆ ಕಾಳಿಜ ಮಿಗೆ ಸುರಿಯೆ (ಕುರಾಸಾಂ. ೧೦-೪೪); ಕರುಳುಗಳೊಕ್ಕು ಕಾಳಿಜ ಹಾಯ್ದು ನಿಡುನರ ಹಱಿದು (ಕಂಸವಿ. ೧೪-೮೭). **ಕಾಳಿಜಿ**: ೧. ಖಂಡ ಕರುಳಿಲು ತೊವಲ್ವರ ತುಂಡಿಗೆ ಮಿದುಲಡಗು ತೊರಳೆ ನೆಣವಸೆ ನೆತ್ತಗ್ರೊಂಡ ಕಾಳಿಜಿಗಳಿಂ ಜವನುಂಡೊಗಡಿಸಿದಿಳೆಯ ಪೋಲ್ತುದಾ ರಣದ ಕಳಂ (ಕಳನ್ಯ. ೧-೪೬).

[← ಮರಾ. ಕಾಳೀಜ್; ಹಿಂ. ಕಾಲೇಜಾ]

**ಕಲಿಜೆ** 'ಕಲಿಜ' ನೋ.

**ಕಲಿಜೋದ** (ನಾ). ವೀರನಾದ ಯೋಧ, —ಭಟ: ಕರಿಗಳ ಕೆದಱಿದನು ಕಲಿಜೋದರಂಬಿನ ಸರಿಯ ಸೈರಿಸುತ (ಕುವ್ಯಾಗ. ೧-೬೧); ಕರಿಯನೇಱಿ ಕಲಿಜೋದರೆಲ್ಲೆಂದರು (ಕುರಾಸಾಂ. ೧೧-೨೫).

[ಕಲಿ$_2$ + ಜೋದ]

**ಕಲಿತ$_1$** (ನಾ). ೧. ಕಲಿತುದು; ಕಲಿಕೆ; ವಿದ್ಯೆ; ಪಾಂಡಿತ್ಯ: ಇನ್ನೆವರ ನಾವಱಿಯದಿದ್ದೆವು ಕನ್ನೆಗಳ್ಗನ ತನುಜನೆಂಬುದ ಭಿನ್ನವಿಲ್ಲದ ತಂದೆಮಕ್ಕಳ ಕಲಿತ ಕರಲೇಸು (ಕಾಶಿರಾ. ೧೯-೨೪). ೨. ಕಲಿಯುವಿಕೆ: ನೆಲೆಗೊಂಡುದೆಂತು ಪಾತಕಬುದ್ಧಿ ಯಾರಿಂದ ಕಲಿತವಾದುದು (ವೆಂಕಾರಾ. ೨-೭-೧೫). [ಕಲಿ$_1$ (< ಕಲ್$_1$) + -ತ$_2$]

**ಕಲಿತ$_2$** (ಗು). ೧. ಜೋಡಿಸಿದ; ಸೇರಿಸಿದ: ಶಿರಃಕಲಿತಕರನಲಿನನಾಗಿ ಗುರುಸ್ತವನಮಂ ಮಾಡುತ (ಬಸವಪು. ೩೯-೭). ೨. ಒಡಗೊಂಡ; ಕೂಡಿಕೊಂಡ; ಸೇರಿದ: ಸಂಭ್ರಮ ಕಲಿತ ಮಾನಸದೊಳೈತಪ್ಪ ಮರಿಯರುಮುಮರರು (ಬಸವಪು. ೧೯-೮೩); ಕೌರವನೃಪತಿ ಶಲ್ಯಗೆ ಹೇಳಿದನು . . . ಸುಧಾಕರಮೌಳಿಕೇಳೀಕಲಿತ ವಿಸ್ತರ ವರಕಥಾಂತರವ (ಕುವ್ಯಾಕ. ೬-೧); ಶರಹತಿಪರಿಗಳಿತ ಕ್ಷತಜಾತ ಕಲಿತಕಾಯರಜೀಯರ್ (ರಾಜಶೇ. ೬-೫೧). ೩. ತಿಳಿದ; ವಿದಿತವಾದ (?). ೪. ಎಣಿಕೆ ಮಾಡಿದ. ೫. ಮಾಡಿದ. ೬. ಹೊಂದಿದ; ಪಡೆದ. [ಸಂ.]

**ಕಲಿತನ** (ನಾ). ಬಂಟತನ; ವೀರತನ; ಶೌರ್ಯ: ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು ಮಿಕ್ಕ ತೋಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ (ಪಂಪಭಾ. ೧೦-೨೩); ಕಲಿತನದಿಂದಂ ಲೋಗರ್ ಪುಲಿಯಂ ಪಿಡಿದೊಡಮದೇಂ ಬಿಡೆಂಬರ್ (ಧರ್ಮಾಮೃ. ೧-೧೭೩); ಈಸು ನಮ್ಮಲಿ ತಾಗಿ ನಿಂದವರಾರು ಕೆಚ್ಚುಳ್ಳವರು ಕಲಿತನದ (ಕುವ್ಯಾದ್ರೋ. ೧೫-೬೫). [ಕಲಿ$_2$ + -ತನ]

**ಕಲಿದುರ್ಗಗಾಮುಂಡ** (ನಾ). ಒಬ್ಬಾತನ ಹೆಸರು : ಕಾದಳೂರ ಶ್ರೀ ವಿಕ್ರಮಗಾಮುಣ್ಡರುಂ ಕಲಿದುರ್ಗಗಾಮುಣ್ಡರುಂ (ಎಕ. II, ೩೫–೭ ; ಸು. 800). [ಕಲಿದುರ್ಗ$_0$ + ಗಾಮುಂಡ]

**ಕಲಿದ್ರುಮ** (ನಾ). ಕಲಿಪುರುಷ ಸೇರಿದ ಮರ; ತಾರೆಮರ: "ಕಲಿ ದ್ರುಮುಂ ಭೂತಗೃಹಂ" (ವಸ್ತುಕೋ. ೩೫–೧೨). [ಕಲಿ$_3$ + ದ್ರುಮ]

**ಕಲಿನ** (ನಾ). ಕಡಿವಾಣ: ಉಸಿರಲೇನಶ್ವಗಳ ರುಕ್ಮಮಾಣಿಕ್ಯದೊಳು ಪೊಸೆದು ಕೀಲಿಸಿ ರಂಗುವೆತ್ತ ಕಲಿನಗಳಿಂದೆ ಪಸುರು ತಾಪ್ತಿಯ ಹಲ್ಲಣ ಗಳಿಟ್ಟು ರಾಜಿಪವು ದಶಲಕ್ಷ ತುರಗವವಗಂ (ಪ್ರಭುಪು. ೬–೧೨೩); ಮಿಕ್ಕ ತೇರುವ ಗರಿಗಳಿಂ ಮಣಿಗಣಸ್ಫುರತ್ ಪಲ್ಲಯಣಮುಂ ಪೃಷ್ಠದೀ ಯಕ್ಕಡದ ಕಲಿನಂಗಳುಂ ವದನದಲ್ಲಿ ಮಿಗಿಲುಕ್ಕಿದ ಮಹಾರಜತದ ಕಲಶಗಳೊ (ಮಹಾವಿ. ೨೭–೧೩). [< ಸಂ. ಖಲೀನ]

**ಕಲಿನಾಶನ** (ನಾ). (ಕಲಿಯಿಂದಾದ) ಪಾಪ ನಿವಾರಣೆ, —ದೋಷ ನಿವಾರಣೆ : ಅಶ್ವಮೇಧಿಕಪರ್ವದಮಲ ಸತ್ಕಥೆ ಯೌವನಾಶ್ವಾದಿ ನೃಪರ ಚರಿತಂಗೇಳ್ದ ಮಾನವರ್ಗೈಶ್ವರ್ಯದಾರೋಗ್ಯದಾಯುಷ್ಯದಭಿವೃದ್ಧಿ ಕಲಿ ನಾಶನಂ ಧರೆಯೊಳು (ಜೈಮಿಭಾ. ೩೪–೪೨). [ಕಲಿ$_3$ + ನಾಶನ]

**ಕಲಿನಾಶಿನಿ** (ನಾ). (ಕಲಿಯಿಂದಾದ) ಪಾಪವನ್ನು ನಾಶಮಾಡು ವವಳು; ಪಾಪಹರೆ : ದೇವಿ ಕಾವೇರಿಯೆ . . . ಕಲಿನಾಶಿನಿಯೆ ತಾಯೆ ಕಾಯೆ (ಇಂಚಾಪ. ೧೨೩–೧). [ಸಂ. ಕಲಿನಾಶಿನೀ]

**ಕಲಿಪಟ್ಟು** (ನಾ). ಒಂದು ಪ್ರದೇಶದ ಹೆಸರು: ಕಲಿಪಟ್ಟೊಡೆಯ ಕುಱುಂಬಗಾವುಣ್ಡಂಗಂ (ಮೈಆರಿ. ೧೯೩೩, ೩೮–೬ ; 791). [?]

**ಕಲಿಪಿಲ್ಲಿ** (ನಾ). ಒಂದು ಬಗೆಯ ಮೂಲಿಕೆ: "ಕಂಪಿಕಂ ? –ಕಲಿಪಿಲ್ಲಿ" (ಓಷಧಿ. ೨೫). [?]

**ಕಲಿಪುರುಷ** (ನಾ). ೧. ಕಲಿಯುಗದ ಅಧಿದೇವತೆ. ೨. (ಆಲಂ) ದುಷ್ಟ; ಕೇಡಿಗ. ೩. (ಕರಾ) ಸೋಮಾರಿ: ಏಳೋ ಕಲಿಪುರುಷ, ಎಷ್ಟು ಹೊತ್ತಾಯಿತು (ರೂಢಿ). [ಕಲಿ$_3$ + ಪುರುಷ]

**ಕಲಿಮನ** (ನಾ). ೧. ಹೋರಾಡುವ ಮನಸ್ಸು; ಯುದ್ಧಾವೇಶವುಳ್ಳ ಮನಸ್ಸು: ಹೆಂಬಲಿಯಿಂದ ಹೆಚ್ಚಿದ ಮನದ ಮಸಕದ ಮತ್ಸರಂಗಳಲಿ ಕುಂದು ಹೆಚ್ಚಿನ ಪಾಡುಪಂಥದ ಕಂದು ಕಸರಿನ ಕಲಿಮನದ ಕಡುಹಿಂದ ಕಯ್ದುಡುಕಿದರು ಕದನಕೆ ಕಲಿಗಳಾಜಿಯಲಿ (ತೊರರಾ. ೪–೩–೬). ೨. ದೃಢವಾದ ಮನಸ್ಸು. ೩. ಪಾಪದ ಮನಸ್ಸು. ೪. ಶೂರ; ಧೀರ. [ಕಲಿ$_2$ + ಮನ]

**ಕಲಿಮಾಡು** (ಕ್ರಿ). ೧. ಹುರುಡುಗೊಳಿಸು; ಉದ್ರೇಕಗೊಳಿಸು: ನಾವು ಸಂಧಿಯ ನೆವದೊಳವದಿರ ಭಾವವನು ಕಲಿಮಾಡಿ ಕೋಪವ ತೀವಿ ಸಂಧಿಯ ಮುಱಿದು ಬಹೆವು (ಕುವ್ಯಾಉ. ೭–೧೩). ೨. ವೀರತ್ವ ವನ್ನುಂಟುಮಾಡು: ಅಂದು ಮುಱಿದ ಬಲವ ಕೂಡಿ ಕಲಿಮಾಡಿ ಬಿಡದೆ ಸಾಂಬಲ್ಯಯ ಭೂಪ ತುಡುಗಣಿತನದಲಾಲಂಬಾಡಿಯ ಕೊಂಡು (ಕಲ್ಕಸವಿ. ೧೭–೨೨). [ಕಲಿ$_2$ + ಮಾಡು$_1$]

**ಕಲಿಯ** (ನಾ). ಒಂದು ಮನೆತನದ ಹೆಸರು : ಗೌಡಿಕೆಯಂ ಕಲಿಯರ ಮಲ್ಲಿಸೆಟ್ಟಿ ಮಾಱಂ ಕೊಂಡು (ಎಕ. VII, ಶಿವಮೊ. ೩೪–೯೬ ; 1112 ?). [?]

**ಕಲಿಯಂಗ** (ನಾ). ೧. ಒಬ್ಬಾತನ ಹೆಸರು : ತದನುಜಂ ಕಲಿಯಂಗ ನಾನಿಂದುತ್ತರೋತ್ತರಂ ಗಂಗಾನ್ವಯಂ ಸಲುತ್ತುಮಿರೆ (ಎಕ. VII, ಶಿವಮೊ. ೪–೫೧; 1122). ೨. ಒಂದು ಪ್ರದೇಶದ ಹೆಸರು(?): ಇರ್ಕಣ್ಣುಗ ದಯ್ಯೊಳಂ ಕಲಿಯಜ್ಞನಿಂ ಪಡುವಣ ಮಣ್ಣು ಬಡಗಣ ಪಾಳೀವೆರಸಿ ಮೊಳೆವಡೆ ಏಟ್ಕಣ್ಣುಗಂ ಅದಿತ್ಯಭಟಾರಜ್ಗೆ ಎಳಬ್ಬೆಯಾ ಕೊಟ್ಟ ಮಣ್ಣು (ಎಕ. IV, ಎಳಂದೂ. ೨೫–೫ ; ಸು. 925). [?]

**ಕಲಿಯಮ್ಮ** (ನಾ). ಒಬ್ಬಾತನ ಹೆಸರು : ಜೇಬುಳಗೇರಿಗೆ ಕಲಿಯಮ್ಮ ಗಾಮುಣ್ಡಾಗೆಯ್ದೀ ಚೇದಿಯಮಾನ್ಮಾಡಿಸಿದೊನ್ (ಎಇ. XI, ೩೪–೭ ; 751); ಕುನ್ದಗೆ ಸೇವೆಯ ಕಲಿಯಮ್ಮ ಬೆಳ್ಮಣಿಯ ಪಡುವಣ್ಣಾನ್ (ಎಕ. VIII, ಸೊರಬ. ೧೦–೧೨ ; 800). [? + ಅಮ್ಮ$_1$]

**ಕಲಿಯಾರು** (ನಾ). ಒಬ್ಬಾತನ ಹೆಸರು : ಮಾನ್ದಾಉದ ಕಾಳೆಗದುಳ್ ಪಗೆ ಕಲಿಯಾರು ಮಗನ್ ಬೆಜ[ಯಿ]ತ್ತನ್ ಗಣ್ಡಪ್ರಕರನ್ . . . ತಾಗಿ ಪಲರನಿಱಿದು ಸತ್ತೊಡೆ (ಎಕ. X, ಮುಳಬಾ. ೨೨೮–೬; ಸು. 890). [?]

**ಕಲಿಯುಗ** (ನಾ). ಯುಗಗಳಲ್ಲಿ ಒಂದು; ನಾಲ್ಕನೆಯ ಯುಗ: "ಖಾಂಬರ ನಭಂ ಯುಗಳಾಗ್ನಿಯಬ್ಧಿಗಳ್ ಕಲಿಯುಗಮೆನಿಕ್ಕುಂ" (ಮಂಗರಾ. ೨೨–೧೪); ಕಲಿಯುಗೋದ್ಧರಣಾರ್ಥಸಂಭವ ಬಲಯುತಂ (ಬಸವು. ೩೪–೨); ಕಲಿಯುಗದ ಮಹಿಮೆಯು ಕಾಣಬಂತೀಗ (ಪುರಂದ. ೧–೨೮–೧).

**ಕಲಿಯುಗನೀಱ** = ಕಲಿಯುಗಕ್ಕೆ ಸುಂದರನಾದವನು; ಒಂದು ಬಿರುದು : ಕಲಿಯುಗನೀಱಂ ಕುನ್ದಮನಂಕಕಾಱ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ (ಎಕ. VII, ಶಿಕಾರಿ. ೩೦–೧೮ ; 1031); ರಾಯ ಪ್ರತಾ ಪಾದಿತ್ಯಂ ಗಣ್ಡ ಬಂಗಾಱಂ ಕಲಿಯುಗನೀಱಂ ರಿಪುನ್ರಿಪತಿ ಹೃತ್ಸಲ್ಲಂ (ಎಕ. VII, ಶಿಕಾರಿ. ೨೦ (a) –೮ ; 1032). **ಕಲಿಯುಗವಿಪರೀತ** = ಕಲಿ ಯುಗಕ್ಕೆ ವಿರುದ್ಧನಾದವನು; ಸತ್ಪುರುಷ; ಧರ್ಮಿಷ್ಠ; ಒಂದು ಬಿರುದು : ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್ ಮಾಧವನೀತನ್ ಪೆಱನಲ್ಲ (ಇಅ. X, ೬೧–೬ ; 700). [ಕಲಿ$_3$ + ಯುಗ]

**ಕಲಿಯೇರಿಸು** 'ಕಲಿಯೇಱಿಸು' ನೋ.

**ಕಲಿಯೇರು** 'ಕಲಿಯೇಱು' ನೋ.

**ಕಲಿಯೇಱಿಸು, ಕಲಿಯೇರಿಸು** (ಕ್ರಿ). ಕಲಿಯಾಗುವಂತೆ ಮಾಡು; ಹುರಿದುಂಬಿಸು; ಹುರಿಗೊಳಿಸು: ಬಲವ ಕಲಿಯೇಱಿಸಿ ಛಡಾಳ ದೊಳುಲಿವ ಪಟಹ ಮೃದಂಗ ಕಹಳಾವಳಿಯ (ಕುವ್ಯಾದ್ರೋ. ೧೭–೩೦); ಬಲಿದ ಬೊಬ್ಬೆಯ ಕಳಕಳಿಕೆ ಕಲಿಯೇಱಿಸಿತು ಕಡುಗಲಿಯನಾಹವದ (ತೊರರಾ. ೫–೬–೯). **ಕಲಿಯೇರಿಸು** : ಹೇರಳ ಮಂದಿಮಕ್ಕಳಂ ನೆರಹಿ ಮಾರ್ಮಲೆತು ಕೋಂಟೆಯಂ ಕಲಿಯೇರಿಸಿ ನಾಲ್ಕಾರು ತಿಂಗಳಪ್ಪನ್ನೆವರಂ ಕಾದಿಸಲ್ (ಕೆಳನೃ. ೫–೪೪). [ಕಲಿಯೇಱು + -ಇಸು$_3$]

**ಕಲಿಯೇಱು, ಕಲಿಯೇರು** (ಕ್ರಿ). ಪರಾಕ್ರಮಗೊಳ್ಳು; ಹುರಿಗೊಳ್ಳು; ಶೂರನಾಗು : ರಿಪು ನಿಷ್ಪಸರದಲಿ ಕಲಿಯೇಱಿದರೆ ಕೈಕೊಳ್ಳನೀಶ್ವರನ (ಕುವ್ಯಾಕ. ೨೩–೪೪); ರಣಕೆ ಕಲಿಯೇ[ಪಾಠಾಂ. ಕವಿದೇ]ಱುವರ್ ತೋಱುವರ್ ಸಾಸಮಂ (ಚಬಪು. ೧೬–೩೪); ಇಳಿದಿರ್ದ ಬಳಿಯಿಂದ ಪಾಳೆಯದೆಗೆದೊಡೆ ಕಲಿಯೇಱದ ನಮ್ಮ ಭಟರು ಸಲೆ ಭೀತಿಗೆ ಮನ ವಿಡುವರು (ಕಂಕವಿ. ೧೯–೫೨). **ಕಲಿಯೇರು** : ಭೂರಿಬಲ ಕಲಿಭೀಷ್ಮ ನಾಜ್ಞೆಯಿಂ ರಣಕೆ ಕಲಿಯೇರಿ ಬರೆ (ತುರಂಗ. ೪೬–೨೦). [ಕಲಿ$_3$ + ಏಱು$_1$ (< ಏಱ್$_1$)]

**ಕಲಿಲ** (ಗು). ೧. ಬೆರೆತಿರುವ; ಕೂಡಿದ; ಮಿಶ್ರಿತವಾದ. ೨. ಒಳಹೋಗಲಾಗದ; ತೂರಲಾಗದ. ೩. ಕಿಕ್ಕಿರಿದ; ತುಂಬಿದ. (ನಾ). ೪. ಹೆಪ್ಪುಗಟ್ಟಿರುವ ವಸ್ತು; ಗಟ್ಟಿಯಾದುದು: ಕಲಿಲಘನ ಫೇನ ಬುದ್ಬುದಾದಿ ಪರಿಣತಿಯಿಂ (ಆದಿಪು. ೫–೪೧ ವ); ಕಲಿಲವೆಂದರೆ ಅಗ್ರಹಿತ ಕಾಠಿಣ್ಯಮೆಂದು ಚಂದ್ರಸಂಹಿತೆಯಲ್ಲಿ ಹೇಳಿರು ವುದು ನೊಸರಿನಂತೆ ಹೆಪ್ಪುಗೊಂಬುದೆಂದರ್ಥ (ಬಾಹಟೀ. ೨–೧–೩೬ ವ).

೫. ಪಾಪ; ದೋಷ; ಕೊಳೆ: ಭವ್ಯಜೀವಿಗಳಾ ಕಲಿಲವ ತೊಳೆವ ಸಚ್ಚರಿತದೊಂದೊಲುಮೆಯ ತಿಳಿವಂತೆ (ವರ್ಧಚ. ೧-೪೧); ತಾನು ಮಾಡಿದ ಕಲಿಲದಿಂದಂ ಬೆಳೆದು ನೆಲಸಿದ ಬಿಳಿಯ ತೊನ್ನಿನ ರಸಿಗೆಯಿಂದಂ ನೆಱೆ ನಸಿದು ಮತ್ತೆ ಸತ್ತು (ಜ್ಞಾನಚಂ. ೩-೧೦೮); ದೀಕ್ಷೆಯನಾಂತು ಕಲಿಲವ ಕೆಡಿಸುವೆ ನಿಜದಿ (ಪೂಜ್ಯಚ. ೧೧-೧೪೨). [ಸಂ.]

**ಕಲಿಲವಿಜಯ** (ನಾ). ಪಾಪವನ್ನು ಗೆದ್ದವನು; ಜಿನ; ಅರ್ಹಂತ: ಭಕತಿಯಿಂದ ಕಲಿಲವಿಜಯ ಮಾತ್ರವಿನಾಚಲನ ಸೇವೆಯ ಮಾಡುತಲಿರಿಯೆಂದು (ಚಂಪ್ರಸಾಂ. ೨೩-೧೦೮). [ಕಲಿಲ + ವಿಜಯ]

**ಕಲಿಲಾರಿ** (ನಾ). ಪಾಪದ ವೈರಿ; ಪಾಪವನ್ನು ಕೆಡಿಸುವವನು; ಜಿನ: ಕುಲಹೀನನೆಂದೆಂಬಿರೆ ಆ ಕುವರನು ಕಲಿಲಾರಿ ಶಾಂತಿಜಿನಪನ ವಿಲಸದ್ವಂಶದ ಜಿನಚಂದ್ರಕುವರನು (ಜ್ಞಾನಚಂ. ೧೯-೧೪೦). [ಕಲಿಲ + ಅರಿ$_6$]

**ಕಲಿವಿಟ್ಟ** (ನಾ). ಒಬ್ಬಾತನ ಹೆಸರು: ಜಿಡುರಾಳ್ಗೆಟ್ಟಿತ್ತಱ ನಾೞ್ಗಾವುಣ್ಡಂ××× ಕಲಿವಿಟ್ಟನೊಳೆ ವಿರೋಧವಾಗಿ (ಎಕ. VIII, ಸೊರಬ. ೮೯-೬; 912). [ಕಲಿ$_2$ + ವಿಟ್ಟ]

**ಕಲಿವಿಟ್ಟಗೇತ** (ನಾ). ಒಬ್ಬಾತನ ಹೆಸರು: ಸುಜನಜನ ಚಿತ್ತನಿಳೆಯಂ ಸುಜನಂ ಕಲಿವಿಟ್ಟಗೇತನುರ್ಬ್ಬಿಗೇತಳದೊಳ್ (ಸೌಇಇ. XX, ೫೫-೪೦; 1082). [ಕಲಿವಿಟ್ಟ + ಕೇತ]

**ಕಲಿವಿಟ್ಟಯ್ಯ** (ನಾ). ಒಬ್ಬಾತನ ಹೆಸರು: ಕಲಿವಿಟ್ಟಯ್ಯನ ಲಿಖಿತ ಬಿಟೋಜನ ಸಿಲಾಕಮ್ಮ್ರ (ಮೈಆರಿ. ೧೯೨೯, ೭೮-೧೪; 964). [ಕಲಿವಿಟ್ಟ + ಅಯ್ಯ$_1$]

**ಕಲಿವಿಟ್ಟರಸ** (ನಾ). ಒಬ್ಬಾತನ ಹೆಸರು: ಕಲಿವಿಟ್ಟರಸರ್ ಬನವಾಸಿ ಪನ್ನಿರ್ಛಾಸಿರಮನಾಳುತ್ತಿರೆ (ಎಕ. VII, ಶಿಕಾರಿ. ೨೧೯-೭; 918). [ಕಲಿವಿಟ್ಟ + ಅರಸ$_1$]

**ಕಲಿವು** (ನಾ). ಕಲಿಯುವಿಕೆ; ಶಿಕ್ಷಣ; ವ್ಯಾಸಂಗ: ಈ ಕಲಿವು, ಈ ಅರಿವು ಕನ್ನಡ ನಾಡಿನಲ್ಲಿ ಮತ್ತೆ ತಲೆಯೆತ್ತಿದ್ದಾದರೆ (ಸಾಹಿಸಂ. ೧೭೧); ದೈಹಿಕ ಮಾನಸಿಕ ವ್ಯಾಪಾರಗಳಲ್ಲಿ ಆಗುವ ಪರಿವರ್ತನೆಯೇ ಕಲಿವು (ಶಿಕ್ಷದ. ೨೧೧). [ಕಲಿ$_1$ (< ಕಲ್$_1$) + -ವು]

**ಕಲಿಶೆ** (ನಾ). ಕೊಡ; ಕಲಶ: ವಿಲಸತ್ಪ್ರಸಾದ ಹೊಸಸುಣ್ಣದಾ ಭಾಂಡೆಯೊಳು ಕಳೆದು ಬೀಳಲು ಸುಣ್ಣವೆಲ್ಲವಂ ಸೇವಿಸಿದ ಕಲಿಶೆಯೊಳಗಾ ಸುಪ್ರಸಾದಿದೇವಂ (ಗುರುಚಾ. ೧೬-೧೬). [< ಸಂ. ಕಲಶ]

**ಕಲಿಸಿಂಗ** (ನಾ). ಬಲಶಾಲಿಯಾದ ಸಿಂಹ: ತೊಲಗದೆ ಗೆಡೆಗೊಂಡಿರ್ದ್ದುವು ಸಲೆ ಮುಳಿಸಂ ಬಿಟ್ಟು ಸೋಗೆಯುಂ ಪಾವುಗಳುಂ ಪುಲಿಯುಂ ಮಱಿವುಲ್ಲೆಗಳುಂ ಕಲಿಸಿಂಗಮುಮಾನೆಯುಂ ಕರಂ ನಲವಿಂದಂ (ಕಬ್ಬಿಕಾ. ೨೨೫). [ಕಲಿ$_2$ + ಸಿಂಗ]

**ಕಲಿಸು$_1$** (ಕ್ರಿ). ಹೇಳಿಕೊಡು; ಅಭ್ಯಾಸಮಾಡಿಸು; ಶಿಕ್ಷಣಕೊಡು: ಎನಿತೆನಿತಂ ಕಲಿಸಿದೊಡಂತನಿತನಿತುಂ ನೈಜಭಾವಮಕ್ಕುಂ (ಗದಾಯು. ೩-೫೮); ಕಲಿಸದೆ ಮುಂ ಪೆಱಪೆಱತಂ ಕಲಿಪುದು ಮಕ್ಕಳಿಗೆ ದೇವತಾರಾಧನೆಯಂ ಕಲಿಸುವುದು ಜೀವದಯೆಯುಂ (ಸಮುಪ. ೫-೧೧೮); ಕಲಿಸಿದಾತಂ ವರ್ಣಮಾತ್ರಂ ಗುರು (ಸೋಮೇಶ. ೮); ಜೀಯ ನೀನವಿವೇಕಿತನದಲಿ ಮಗನ ಹೆಚ್ಚಿಸಿ ಸಾಕಿ ಕಲಿಸಿದೆ ಕುಟಿಲತನವನು ಕುಹಕವಿದ್ಯೆಗಳ (ಕುವ್ಯಾದ್ರೋ. ೧-೫); ಕೆಲಸಿತನದ ವಿದ್ಯವ ವಿಶ್ವಕರ್ಮಗೆ ಕಲಿಸಿದಾಚಾರ್ಯ ತಾನೆನಿಸಿ (ಮೋಹತ. ೨೨-೧೧). [ಕಲ್$_1$ + -ಇಸು$_3$]

**ಕಲಿಸು$_2$** 'ಕಲಸು$_1$' ನೋ.

**ಕಲಿಹುಟ್ಟು** (ನಾ). ಒಂದು ಬಗೆಯ ಸಸ್ಯ: ಪಾದರಿ, ಕಾಲಾದ್ರಿ, ಪುರಳಿಮರ, ಕಲಿಹುಟ್ಟು, ಕಲ್ಲುಉದಿ (ಮೈಔಗಿ. ೭೨-೧೪೭೭). [?]

**ಕಲು$_1$** 'ಕಲ್$_3$' ನೋ.

**-ಕಲು$_2$** '-ಕಲ್$_4$' ನೋ.

**ಕಲುಂಬು$_1$**, ಕಲಂಬು$_1$ (ಕ್ರಿ). ಕದಡು; ಕಲಕು; ಕೊಳೆಮಾಡು: "ಕಲುಂಬು-ಕಲುಷೀಕರಣೇ (ಕದಡು)" (ಶಮುಧಾ); ಕಗ್ಗಲ್ಲೆರ್ದೆಯು, ಉದ್ದಂಡತೆಯು ಓರೊರ್ಮೆ ನನಗೇ ಆಳರನ್ನುಂಟುಮಾಡಿ ಕಲುಂಬಿತು (ಬೆಟ್ಟಅ. ೨೧೨-೨೪). 'ಕಿಲುಂಬು' ಪರಾ. **ಕಲಂಬು$_1$**: ಕಲಕು, ಕದಡು, ಕಲಡು, ಕಲಂಬು, ಕಲಸು (ಕಂನುಹು. ೮೧). [ದೇ. ‖ ತಮಿ. ಮಲ. ಕಳಿಮ್ಬು]

**ಕಲುಂಬು$_2$** (ನಾ). ಕದಡು; ಕೊಳೆ; ಕಲಂಕ; ಕಿಲುಬು: ಈಯೆರಡುಂ ದುರ್ಣಯವೆನ್ನ ಕೀರ್ತಿಗೆ ಕಲುಂಬಂ ಮಾಡುಗುಂ (ಪಂರಾಮಾ. ೬-೧೧೫); ಕನ್ನಡಿಯಂ ಪ್ರಯತ್ನದಿಂ ಬೆಳಗೆ ಪತ್ತುವಿಡದೆ ಕಲುಂಬಂ (ಪಂರಾಮಾ. ೧೧-೨೦). 'ಕಿಲುಂಬು' ಪರಾ. [< ಕಲುಂಬು$_1$]

**ಕಲುಂಬುಗೊಳ್** (ಕ್ರಿ). ಕಲಂಕ ಹೊಂದು; ಕಿಲುಬೇರು: ವಿಧುವಿಖ್ಯಾತಿ ಕಲುಂಬುಗೊಳ್ಗುಮಪವಾದಾತೋದ್ಯನಾದಂ ದಿಶಾವಧಿಯಂ ದಾಂಟುಗುಂ (ಪಂರಾಮಾ. ೧೨-೫೯); ಮತ್ಕುಲಕೀರ್ತಿ ಕಲುಂಬುಗೊಳ್ಳದೇ (ಪುಷ್ಪಪು. ೮-೩). [ಕಲುಂಬು$_2$ + ಕೊಳ್$_1$]

**ಕಲುಂಬೇಱು** (ಕ್ರಿ). = ಕಲುಂಬುಗೊಳ್: ಜಡಧಾರೆ ಸೋಂಕೆ ಸಿರಿಗನ್ನಡಿಗೆ ಕಲುಂಬೇಱುವಂತೆ (ಪಂರಾಮಾ. ೧೨-೫೬). [ಕಲುಂಬು$_2$ + ಏಱು$_1$ (< ಏಱ್$_1$)]

**ಕಲುಕ** 'ಕಲಕ$_1$' ನೋ.

**ಕಲುಕಟ್ಟು** 'ಕಲ್ಕಟ್ಟು' ನೋ.

**ಕಲುಕತ್ತಿ** (ನಾ). ಒಂದು ಬಗೆಯ ಸಸ್ಯ: ಸಣ್ಣಲೆ, ಕರಿಮರ, ಕಲುಕತ್ತಿ (ಮೈಔಗಿ. ೩೧-೬೦೦). [ಕಲು$_1$ (< ಕಲ್$_3$) + ಕತ್ತಿ ?]

**ಕಲುಕರಕ** (ನಾ). ಒಂದು ಮೂಲಿಕೆ; ಪಾಷಾಣಭೇದಿ: ಬಿಸಿಯನಾರಿಸಿ ಹಾಲ ಕಲುಕರಕ [ಪಾಠಾಂ. ಕಲಕರಗ]ದಾ ಬೇರ ರಸಮಿಕ್ಕಿ ಮತ್ತೊಮ್ಮೆ ಬಿಸಿಮಾಡಿ (ಸೂಪಶಾ. ೨-೪). [ಕಲು$_1$ (< ಕಲ್$_3$) + ಕರಕ]

**ಕಲುಕಱಿನಾಡು** (ನಾ). ಒಂದು ನಾಡಿನ ಹೆಸರು: ಶ್ರೀಮತು ಕಲುಕಱಿನಾಡಾಳ್ವರು ಜೊಕಜಿನಾಲಯಕ್ಕೆ ಮತ್ತಿಕ್ಕೆಱೆಯ ನಟ್ಟ ಕಲ (ಎಕ. IV, ನಾಗಮಂ. ೯೨-೧; ಸು. 1000 ?) [ಕಲುಕಱಿ$_0$ + ನಾಡು]

**ಕಲುಕು** (ನಾ). ಕೆರೆಯ ತೂಬಿನ ದುರಸ್ತಿಗಾಗಿ ಹಾಕುವ ಒಂದು ಬಗೆಯ ತೆರಿಗೆ (?): ನಾಲ್ಲಾವು ನಲ್ಲೆತ್ತು ಗ೯ ಪ೨ ಖಾಣನಿಬನ್ಧ ಪ೧ ಹಾ ೩ ಕಲುಕು ಹಾ ೨ ತೊಡುರು ಗ ೪ ಆನೆಯ ಸೆಗ ೬ ಪ ೧ ಹಾ ೨ (ಎಕ. V, ಹಾಸನ. ೮೪-೬೪; ಸು. 1230). [ದೇ. ‖ ತಮಿ. ಕಲಿಙ್ಗು = ಕೆರೆಯ ತೂಬು; ತೆಲು. ಕಲುಗ = ಹಳ್ಳ]

**ಕಲುಕುಟಕ** (ನಾ). ಒಂದು ಬಗೆಯ ಪಕ್ಷಿ: ಹಲುಬುವ ಗೌಜು ಕರ್ಪಟ ಕಪ್ಪುರಸೆಟ್ಟಿ ಚೆಲುವ ಬೆಳವ ಕುಕ್ಕುಟಗ ಕಲುಕುಟಕಾದಿ ತೋಟದ ಪಕ್ಕಿಗಳ ಕೊರಲುಲುಹಾದುದಾ ತಪೋವನದಿ (ಮೋಹತ. ೭-೧೭). 'ಮರಕುಟಕ' ಪರಾ. [ಕಲು$_1$ (< ಕಲ್$_3$) + ಕುಟಕ]

**ಕಲುಕುಟಿಕ** 'ಕಲ್ಕುಟಿಗ' ನೋ.

**ಕಲುಕುಟಿಗ** 'ಕಲ್ಕುಟಿಗ' ನೋ.

**ಕಲುಕುಟ್ಟಿಗ** 'ಕಲ್ಕುಟಿಗ' ನೋ.

**ಕಲುಗವಣೆ** (ನಾ). ಕಲ್ಲನ್ನು ಬೀಸಿ ಎಸೆಯುವ ಕವಣೆ: ಮಯ ರಚಿಸಿದನು ಕೋಟಾವಲಯ ಮುಗಿಲಟ್ಟಲೆಯ ಕೊತ್ತಲಗಳ ಮಹಾಡೆಂಕಣೆಯ ಕೆದರುವ ಮಕರ ಡಿಬ್ಬಿಗಳ ಕಲುಗವಣೆ ಕವಗೊರ್ಲು ಬಳಸುನೇಣ್ ಬಡಿಗೊಡತಿಯುರುಳ್ಗಳ (ಅನಂರಾ. ೫-೫-೧೨). [ಕಲು$_1$ (< ಕಲ್$_3$) + (< ಕವಣ್ಣೆ) ಕವಣೆ]

**ಕಲುಗುಂಡು** ‘ಕಲ್ಗುಂಡು’ ನೋ.

**ಕಲುಗೆಲಸ** ‘ಕಲ್ಲುಕೆಲಸ’ ನೋ.

**ಕಲುದರಸಿ** (ನಾ). ಒಂದು ಮೂಲಿಕೆ; ಒಂದು ಸುಗಂಧ ದ್ರವ್ಯ: “ವಾರ್ಷಿಕಂ, ತ್ರಾಯಮಾಣಾ, ತ್ರಾಯಂತ್ರೀ, ಬಲಭದ್ರಿಕಾ ಈ ೪ ತ್ರಾಯಮಾಣೆ ಎಂಬ ಗಂಧದ್ರವ್ಯ ಕಲುದರಸಿಯೆನಿಸುಗು” (ನಾಚಿರಾ. ೧೧೨); “ಬಲಭದ್ರಾ – ಕಲುದರಸಿ” (ಒಷಧಿ. ೧೦೫).
[ಕಲು$_1$ (< ಕಲ್$_3$) + ದರಸಿ]

**ಕಲುದಲೆ** (ನಾ). ೧. ಕಲ್ಲಿನಂತಹ ತಲೆ; ಗಟ್ಟಿಯಾದ ತಲೆ; ಗಡುಸು ತಲೆ: ಕರ್ಕಶಾಂಗದ ಕಲುದಲೆಯ ಹೇರೊಡಲ ಮಿಡುಕಿನ ಕಾಳ ರಕ್ಕಸರು (ಕುವ್ಯಾಸ. ೫–೪೯). ೨. ತಲೆಯಲ್ಲಿ ರತ್ನವುಳ್ಳದ್ದು; ಸರ್ಪ. ‘ಕಲುದಲೆಗೋಲು’ ಪರಾ. [ಕಲು$_1$ (< ಕಲ್$_3$) + ತಲೆ$_1$]

**ಕಲುದಲೆಗೋಲು** (ನಾ). ಸರ್ಪಾಸ್ತ್ರ: ನಿಲುವೊಡಚ್ಚರಿ ನಮ್ಮೊಡನೆಂದು ಕುಂಭಾಂಡ ಕಲುದಲೆಗೋಲೊಳಿಕ್ಕಿದನು (ಮೋಹತ. ೪೦–೫೬).
[ಕಲುದಲೆ + ಕೋಲು$_1$ (< ಕೋಲ್$_1$)]

**ಕಲುನೆಲ** (ನಾ). ಕಲ್ಲಿನ ನೆಲ; ಬಿರುಸಾದ ನೆಲ: ಇತ್ತಲೇತಕೆ ಬಿಜಯಮಾಡಿದಿರೊತ್ತದೇ ಕಲುನೆಲನು (ಕುವ್ಯಾಗ. ೮–೯).
[ಕಲು$_1$ (< ಕಲ್$_3$) + ನೆಲ]

**ಕಲುಪರಟಿ** ‘ಕಲ್ಪರಟಿ’ ನೋ.

**ಕಲುಪಿ** ‘ಕಲ್ಪಿ’ ನೋ.

**ಕಲುಬಿ** ‘ಕಲಂಬಿ$_1$’ ನೋ.

**ಕಲುಬೆಜ್ಜ** (ನಾ). ಕಲ್ಲೋಜ; ಕಲ್ಕುಟಿಗ: ಮಜ್ಜನವಾಳರ ಮಣಿಹ ಗಾಜಿರ ಕ[ಪಾಠಾಂ. ಟಿ, ಟೆ]ಲುಬೆಜ್ಜರ ಬೆಸದಾಳುಗಳ ಅಜ್ಜರ ಕೇರಿಕೇರಿಗಳಿಂದಾ ಪುರಿ ಪಜ್ಜಳಿಸುತ ಮೆಱೆದಿಹುದು (ಕುರಾಸಾಂ. ೪–೧೧೫).
[ಕಲು$_1$ (< ಕಲ್$_3$) + ಬೆಜ್ಜ$_1$]

**ಕಲುಮಕ್ಕಿ** (ನಾ). ಕಲ್ಲುಗಳಿಂದ ಕೂಡಿದ ದಿನ್ನೆಯ ಪ್ರದೇಶ, —ಎತ್ತರವಾದ ಪ್ರದೇಶ: ದಾನಮೂಲಕ್ಕೆ ಸಲುವ ಕುಳದೊಳಗೆ ಕಲುಮಕ್ಕಿಯಲು ಕಾಲೆಭೂಮಿ ಖ ೮ ಯೆಂಟು ಖಂಡುಗಕ್ಕೆ (ಎಕ. VI, ಕೊಪ್ಪ. ೫೮–೫ ; 1592 ?). [ಕಲು$_1$ (< ಕಲ್$_3$) + ಮಕ್ಕಿ$_1$]

**ಕಲುಮದ** ‘ಕಲ್ಮದ’ ನೋ.

**ಕಲುಮನ** (ನಾ). ಕಲ್ಲಿನಂತೆ ಇರುವ ಮನಸ್ಸು: ಕಲುಮನವಲಾ ನಿನಗಕಟ ನಿರ್ಮಳದ ಧರ್ಮಸ್ಥಿತಿ ರಹಸ್ಯವ ತಿಳುಪಿದವರಾರು (ಕುವ್ಯಾಕ. ೧೭–೧೨). [ಕಲು$_1$ (< ಕಲ್$_3$) + ಮನ]

**ಕಲುಮುಸ, ಕಲುಮಿಷ** (ನಾ). ಕೊಳೆ; ದೋಷ; ಪಾಪ: “ಪಾಪದೊಳ್ ಕಲುಮುಸಂ” (ಕರ್ಣಾನಿ. ೮೬); ಗಜಸ್ನಾನದಂತೆವೊಲೆಯ್ದೆ ನಿಷ್ಫಲಂ ಜಗ(ಲ ?)ದೊಳಗೆ ಮುಳುಗಿದೊರ್ಡಂ ಕಲುಮುಸಂ ಕಿಡುಗು[ಮೇ] (ಅರಾಚ. ೧೧–೨). **ಕಲುಮಿಷ**: ಕಲುಮಿಷವಿಲ್ಲದಿರೆ ಜಲಜನಾಭನ ಕೃಪಾಜಲಧಿಯಾಗಿ (ವಿಸಾಸು. ೨೮–೨).
[< ಸಂ. ಕಲ್ಮಷ]

**ಕಲುಮಳೆ** ‘ಕಲ್ಮಳೆ’ ನೋ.

**ಕಲುಮಾನಸ** (ನಾ). ಕಲ್ಲಿನಂತೆ ಮನಸ್ಸುಳ್ಳವನು; ನಿರ್ದಯನಾದವನು: ಅಲ್ಲಿರಗೊಡದಾ ಕಲುಮಾನಸನು ಜರಿಯಲ್ಲಿ ನೂಕುವ ಮಾಳ್ಕೆಯಲಿ . . . ಭೂತಳದಲ್ಲಿಗೆ ಕೆಡೆನೂಕುವನು (ತ್ರಿಪುಸಾಂ. ೯–೯೬).
[ಕಲು$_1$ (< ಕಲ್$_3$) + ಮಾನಸ]

**ಕಲುಮಾರಿ** (ನಾ). (?) : ಕುಲಜ ರತಿ ಸುಚಿ ಶುದ್ಧ ಕೋಮಲತನವು ಕಲುಮಾರಿಯರ ತೆರದಲಿ ನಿಲವು ಸೋಕಿಸುತಿಹವು ಮುಂದಣ ಕುರುಹು ಕೇಳು (ಕಕ್ಕೋಕ. ೯–೯೮). [?]

**ಕಲುಮಾವು** ‘ಕಲ್ಲುಮಾವು’ ನೋ.

**ಕಲುಮಿಷ** ‘ಕಲುಮುಸ’ ನೋ.

**ಕಲುಮ್ಮೆ** ‘ಕಲ್ಮೆಯ್’ ನೋ.

**ಕಲುಮೊರಡಿ** ‘ಕಲ್ಮೊರಡಿ’ ನೋ.

**ಕಲುವಳೆ** ‘ಕಲ್ಮಳೆ’ ನೋ.

**ಕಲುವಾದರಿ** (ನಾ). ಒಂದು ಬಗೆಯ ಪಾದರಿ: ಬೇಲ ಸೆಳ್ಳು ಸೀಗುರಿಯೊಡವರ ಬನ್ನಿ ಕಲುವಾದರಿ ಪಾದರಿಯಾದಿಯಾದ ಪೆರ್ಮರಗಳ ಕಾಡೊಳ್ಳೆತರುತಮಿರ್ದರ್ ವೈದ್ಯ ತನೂಜರಿರ್ವರ್ (ಪುಣ್ಯಾಸ್ರ. ೩–೭೪).
[ಕಲು$_1$ (< ಕಲ್$_3$) + ಪಾದರಿ$_2$]

**ಕಲುವಾಲೆ** (ನಾ). ಒಂದು ಬಗೆಯ ಸಸ್ಯ: “ಯೋಜನಃ – ಕಲುವಾಲೆ” (ಒಷಧಿ. ೧೩೨). [?]

**ಕಲುವಾಳೆ** ‘ಕಲ್ವಾಟಿ’ ನೋ.

**ಕಲುವಾಟಿ** ‘ಕಲ್ವಾಟಿ’ ನೋ.

**ಕಲುವೆ** ‘ಕಲವೆ’ ನೋ.

**ಕಲುವೆಸ** ‘ಕಲ್ವೆಸ’ ನೋ.

**ಕಲುಷ** (ಗು). ೧. ಕದಡಿದ; ಬಗ್ಗಡವಾದ. ೨. ಉದ್ವೇಗಗೊಂಡ; ಸಿಟ್ಟಿಗೆದ್ದ. (ನಾ). ೩. ರೋಷ; ಆವೇಶ; ಅಸಮಾಧಾನ: ಮುಳಿಸುಂ ನೋವುಂ ಕಲುಷಮುಮುಳುಂಬಮೆನೆ ತನಗರಾತಿಕಾಳಾನಳನೊಳ್ (ಪಂಪಭಾ. ೨–೫೮); ನಿನ್ನನುಜಾತೆಗೆ ವೈಧವ್ಯದೀಕ್ಷೆಯಂ ಕುಡುವುದು ಚದುರಲ್ಲೆಂದು ಕಲುಷಮಂ ಕಳೆದಳ್ (ಪಂರಾಮಾ. ೧೦–೧೬೮ ವ). ೪. ಪಾಪ; ಕಳಂಕ; ದೋಷ: ನೆನೆಯುದೆ ಕಲುಷವಶಂ ನಚ್ಚಿನ ವಿದ್ಯೆಗಳಂ ಕಡಂಗಿ ಕಾದುವ ಪದದೊಳ್ (ಪಂರಾಮಾ. ೧೦–೨೧೯); ಕಲುಷವದ [ಪಾಠಾಂ. ಷಿತವ] ನಪಹರಿಸಲಾಖಂಡಲನ ಬಳಿಗಜ ಬಂದು ಗಂಗಾಜಲದಲಭಿಷೇಕವನು ಮಾಡಿದನಾ ಸುರೇಂದ್ರಂಗೆ (ತೊರರಾ. ೧–೧೦–೩). [ಸಂ.]

**ಕಲುಷತೆ** (ನಾ). ಬಗ್ಗಡ; ಕೊಳೆ; ಕದಡು: ಕಲುಷತೆಯಂ ನಿಮಿರ್ಚಿ ತಿಳಿಪಲ್ಕಣಮಾಜದೆ ಮೇಘವಲ್ಲಭಂ ತಳರ್ದೊಡೆ. . . ನದೀಲಲನೆಯರೆಂದು ಕಂಠಗತಜೀವನವೃತ್ತಿಯನಾಳ್ದರ್ (ಪುಷ್ಪಪು. ೪–೮೯).
[ಸಂ. ಕಲುಷತಾ]

**ಕಲುಷಿ** (ನಾ). ಪಾಪಿಷ್ಠ; ದೋಷಿ: ಶಠನುಂ ಖಳನುಂ ಕೃತಘ್ನನುಂ ಕಲುಷಿಯುಮಾಬ್ಬುಮುಗ್ರನರಕಾಬ್ಧಿಗಭೀರಮನೆಯ್ದುವನ್ನೆಗಂ (ಸುಕುಮಾ. ೫–೪೪). [<ಸಂ. ಕಲುಷಿನ್]

**ಕಲುಷಿತ**(ಗು). ೧. ಕೊಳೆಯಾದ; ಕದಡುಗೊಂಡ; ಅಪವಿತ್ರವಾದ; ದೂಷಿತವಾದ: ಎಲವೋ ಕಪಟದ್ಯೂತಕೇಳೀಕಲುಷಿತಾಂತಃಕರಣ ನಿನ್ನೀ ಬಲಕೆ ಪತಿ ನೀನೋ ಕೃಪಾಚಾರಿಯನೊ ಗುರುಸುತನೊ (ಕುವ್ಯಾಗ. ೧–೨); ದುಃಖ ವ್ಯಥೆಗಳಿಂದ ಕಲುಷಿತವಾದ ಚಿತ್ತ ಮಳೆ ತೊಳೆದ ಮುಗಿಲಿನಂತೆ, ಶುಭ್ರವಾಗಿ ಪ್ರಫುಲ್ಲವಾಯಿತು (ಚಿತಂಬಾ. ೩೦). ೨. ರೋಷಗೊಂಡ; ಕೆರಳಿದ: ಪರಸ್ಪರ ಕಲಹ ಕಲುಷಿತ ಗೃಹಕೋಕಿಳಂಗಳೊಂದೊಂದಂ ತಿನೆ (ಆದಿಪು. ೨–೧೪ ವ). [ಸಂ.]

**ಕಲುಹಾರ** ‘ಕಲ್ಹಾರ’ ನೋ.

**ಕಲುಹೃದಯ** (ನಾ). ಕಲ್ಲಿನಂತೆ ಕಠಿನವಾದ ಹೃದಯವುಳ್ಳವನು; ನಿಷ್ಕರುಣಿ: ಖಳಗುಣಮನದೆಂದುಂ ಬಿಡದಿಹ ಕಲುಹೃದಯರ್ಗಾನ ವಿರತವಂಜುವೆನು (ಜಯಕಾ. ೧–೧೮); ಚಲವುಳ್ಳೊಡೆ ಬರಹೇಳೆಂದು ಮನ್ಮಥ ಕಲುಹೃದಯನ ಕರೆಸಿದನು (ಮೋಹತ. ೧೨–೪೨); ಹೆತ್ತವರಾವ ಕಲುಹೃದಯರೋ ಮಹಾದೇವ (ನಿಭಾಗ. ೪–೭–೧೪).
[ಕಲು$_1$ (< ಕಲ್$_3$) + ಹೃದಯ]

**ಕಲುಹೆ** (ನಾ). ಕಲಿಯುವಿಕೆ; ವಿದ್ಯೆ: ಜನಪನೀತಿಯೊ ಮೇಱು ಬೋೞಯತನವೊ ಬಿಲುಜಾಣಿಕೆಯೊ ಬಿಂಕವೊ ನಿನಗೆ ಕದನದ ಕಲುಹೆಯೋ ನಾವಱಿಯೆವಿದನೀಗ (ಕುವ್ಯಾಅ. ೨೦-೩೩); ಮನ ಮುಂಚುವುದು ಮಿಗೆ ವಂಚಿಸುವೃದಂಬುಗಳ ಗತಿ ಕೈಮನದ ಕಲುಹೆಗಳ (ಕುವ್ಯಾಕ. ೨೩-೧೦). [< ಕಲ್ಪು]

**ಕಲೆ**$_1$ (ಕ್ರಿ). ಸೇರು; ಬೆರೆತುಕೊಳ್ಳು; ಕೂಡು: ಇಂತು ನೀ ಭಾವಿಸಲು ನಿನ್ನ ಮಹಂತರಿಗೆ ಕಲೆಯುವುದೋ ಶುಕ್ರಾಂತನಾಗದಿರೆಂದು ಸಂತೈಸಿದನು ಧರ್ಮಜನ (ಕುವ್ಯಾದ್ರೋ. ಓರಿಇ. ೭-೩೮ ಅಡಿಟ); ತಲ್ಲಿಂಗಾಭಿಷೇಕ ವಾರಿಯು ಪರಿದು . . . ಗೋಮತಿಯ ನದಿಯು ಕಲೆಯಲು (ನವಮೋ. ೨೧-೨೫, ೨೬); ಆ ಸಮಾರಂಭದಲ್ಲಿ ನಾನಾಪಂಗಡದ ಜನ ಕಲೆತಿದ್ದರು (ರೂಢಿ). [ದೇ. ‖ ತಮಿ. ಕೊಡ. ತೆಲು. ಕಲ]

**ಕಲೆ**$_2$ (ನಾ). ೧. ಹಳೆಯ ಗಾಯದ ಅಥವಾ ಹುಣ್ಣಿನ ಗುರುತು: ಪವನಜನ ಕಿಬ್ಬದಿಯಲೆಱಗಿದ ಶಿವನು ಪೂರಾಯದಲು ಪವನಜನ ವಯವಕ್ಕಡಱ ಕಲೆಯಾಯ್ತು ಭೀಮಸೇನನಿಗೆ (ಸಂಭಪ. ೧೬-೩೪). ೨. ಕರೆ, ಕೊಳೆ ಬಿದ್ದು ಉಂಟಾದ ಗುರುತು; ಕಪ್ಪು; ಕಳಂಕ: ಕುಲದ ಕಲೆಯಂ ತೊಡೆದು ಪಾಲಿಪುದು (ಏಣಾರ. ೧೨೦); ಧುರದೊಳೆಚ್ಚಾಡಿ ಬಿಲ್ಲವರು ಬರೆಯಿಸಿಕೊಂಡರು ಕ[ಪಾಠಾಂ. ತ]ಲೆಗಳ ಕಾಲನ ಕರಣಿಕರುಗಳ ಕಯ್ಯಿಂದ (ಕುರಾಸಾಂ. ೧೨-೫೬); ಮೈಗೆ ಸುಟ್ಟ ಜಾಗಕ್ಕೆ ಗುರುತಾಗಿ ಕಲೆ ಉಳಿಯುತ್ತದೆ (ಹೊಸಕ್ಷಿ. ೨೬). [ದೇ. ‖ ಮಲ. ಕಲ; ತುಳು. ಕೊಡ. ಕಲೆ]

**ಕಲೆ**$_3$, **ಕಳೆ**$_6$ (ನಾ). ೧. ಯಾವುದಾದರೂ ವಸ್ತುವಿನ ಚಿಕ್ಕಭಾಗ, —ಅಂಶ, —ತುಂಡು; ಶಕಲ. ೨. ಚಂದ್ರಬಿಂಬದ ಹದಿನಾರನೆಯ ಒಂದು ಅಂಶ: "ಸುಧಾಕರನ ಶರೀರದಂಶ ತ್ಯಜಶೀಲ ವಿಕರ್ಮಗಳುಂ ಕಲಾಂಕಿತಂ" (ನಾನಾರ. ೧೫೧). ೩. ಕಾಲದ ಒಂದು ಗಣನೆ; ಒಂದು ಕ್ಷಣದ ಮೂವತ್ತನೆಯ ಒಂದು ಭಾಗ: "ಅಷ್ಟಾದಶ ಸ್ಥಿತಿಯ ಸಂಖ್ಯೆಯ ನಿಮೇಷಮದು ಕಾಷ್ಠೆಯಕ್ಕಾ ಕಾಷ್ಠೆ ಮೂವತ್ತು ಸಂಖ್ಯೆವರಲಪ್ಪು ಕಲೆಯಕ್ಕುಮಾ ಕಲೆಗಳವು ಮೂವತ್ತುಮಾಗಲ್ ಕ್ಷಣಾಖ್ಯಮಕ್ಕುಂ" (ಮಂಗರಾ. ೧೯-೫); ಪಲಬಗೆಯೊಳು ಪತಿಪದವನ ಗಲಿದೊಂದು ಕಲೆಯ ಕಲ್ಪದವೋಲೆಣಿಪುದು (ಹದಿಬ. ೮-೪೦). ೪. ಲಲಿತ ವಿದ್ಯೆ; ಕುಶಲವಿದ್ಯೆ: ಪುರನಗರ ಮೊದಲಾದುವುಗಳ ರಚನೆ . . . ನೃತ್ಯ, ವೈದ್ಯ ಮೊದಲಾದ ಅರವತ್ತುನಾಲ್ಕು ಕಲೆಗಳಿಗೂ ಆಗಮ ಶಾಸ್ತ್ರವು ಆಶ್ರಯವಾಗಿದೆ (ಭಾರದ. ೭೦). 'ಚೌಷಷ್ಟಿಕಲೆ' ಪರಾ. ೫. ವಿಭಜಿಸಲು ಸಾಧ್ಯವಿಲ್ಲದಷ್ಟು ಸೂಕ್ಷ್ಮ ಪರಿಮಾಣದ ವಸ್ತು; ಪರಮಾಣು. ೬. ಗರ್ಭ; ಭ್ರೂಣ. ೭. ಜಾಣ್ಮೆ; ಕೌಶಲ್ಯ; ಚಾತುರ್ಯ. ೮. ಕಾಂತಿ; ತೇಜಸ್ಸು; ಶೋಭೆ; ಹೊಳಪು. ೯. ದೋಣಿ; ನಾವೆ. ೧೦. ಹೆಂಗಸರ ರಜಸ್ಸು. ೧೧. [ಛಂದ] ಒಂದು ಮಾತ್ರಾಕಾಲ. **ಕಳೆ**$_6$: ೨. ನವಶಶಿಕಳೆಗಳನಮೃತದ್ರವಂಗಳೊಳ್ ತೀವಿ ತೀವಿ ನಿಱಿಸಿದರ್ (ಶಾಂತಿಪು. ೧-೬೨); ಇಂದುವ ಪದಿನಾಱುಂ ಕಳೆಯಿಂದಂ ಕಣ್ಗೊಳಿಸುವಂತೆ (ಮಲ್ಲಿಪು. ೨-೮). ೩. ಒದವಿದ ಮೂವತ್ತು ಕಾಷ್ಠೆ ಕಳೆಯೆನಿಸಿರ್ಕುಂ (ವ್ಯವಹಾ. ಅನುಬಂ. I, ೬-೨೯). ೪. ಅಱುವತ್ತುನಾಲ್ಕು ಕಳೆಗಳೊಳಱಿಯದುದಿಲ್ಲ (ಸುಕುಮಾ. ೨-೪೨); ಚೌಷಷ್ಟಿಕಳೆಗಳೊಱುದಿಟದಿಂ ತಾಂ ಬಲ್ಲಂ (ಎಇ. XX, ೧೨-೫; 1187). ೫. ವಾಗ್ದೇವಿ ಕೂರ್ತು ಪಯೋಜಾಸನನಂತೆ ಮಾೞ್ಕೆ ಕಳೆಯೊಳ್ ವಿದ್ವಜ್ಜನಾನೀಕಮಂ (ಪಂಚತಂ. ೩೧೨-೧೨). ೮. "ಕಳೆ ಪೊಳೆಪು . . . ಕಾಂತಿಯೆನಿಕ್ಕುಂ" (ಕವಿಕಂ. ೧೦೦); ನಳಿನಲೋಚನ ನಿನ್ನ ಮೂರ್ತಿಯ ಕಳೆ ಬೆಳಗುತಿದೆ ಲಹರಿಯಲಿ (ಹರಿಸಾ. ೧೯). ೧೨. ವೀರ್ಯ; ರೇತಸ್ಸು: ಸರಸಿರುಹಸಂಭವಂ ಸೋಲ್ತು ಕರಂ ಪರವಶನಾಗಲ್ಕಳೆ ಸೋರ್ದಿರಲದು ಕಳಶದೊಳಗಲ್ಲಿ ಕಳಶಜನೊಗೆವಂ (ಧರ್ಮಪು. ೩-೬೯). [ಸಂ. ಕಲಾ]

**ಕಲೆಗಟ್ಟು** (ಕ್ರಿ). ಹುಣ್ಣು ಅಥವಾ ಗಾಯ ಮಾದು ಕಪ್ಪುಗಟ್ಟು; ಹಕ್ಕಳೆಗಟ್ಟು (ಉಕ): ವ್ರಣಸಂದೋಹಿಣಿಯೆಂಬ ಘುಟಿಕೆಯ ಸಾಮರ್ಥ್ಯದಿಂ ಪುಣ್ಣೆಲ್ಲಂ ಕಲೆಗಟ್ಟಿ ಮೆಲ್ಲನೆ ಕಣ್ಣಿಂ ತೆಱೆದು (ಪುಣ್ಯಾಸ್ರ. ೪-೧೩ವ). [ಕಲೆ$_2$ + ಕಟ್ಟು$_1$]

**ಕಲೆಗಾರ** (ನಾ). ಕಲಾವಿದ; ಕಲಾಕಾರ: ತಲೆ ನರೆತಿರಲೇನು ಸಲೆ ಕಲಿತಿರಲೇನು ಕಲೆಗಾರನಾಗಿರಲೇನು (ಇಂಚಾಪ. ೯೮-೭೯). [ಕಲೆ$_3$ + -ಗಾರ (< -ಕಾಱ)]

**ಕಲೆಗಾರಿಕೆ** (ನಾ). ಕಲೆಯ ಚಾತುರ್ಯ; ಕಲಾವಂತಿಕೆ: ಆದರೂ ಭಾವಪ್ರಕಾಶನದಲ್ಲಿ ಎಂತಹ ಕಲೆಗಾರಿಕೆ (ಬಾಣಅ. ೧೨೯); ಇಷ್ಟೆಲ್ಲ ಕಲೆಗಾರಿಕೆಯಿದ್ದೂ ಕತೆ ಸಫಲವಾಗಿದೆಯೆಂದು ತೋರುವದಿಲ್ಲ (ಹೊಸಕ್ಷಿ. ೨೯೧). [ಕಲೆಗಾರ + -ಇಕೆ]

**ಕಲೆಗುಂದು**, ಕಳೆಗುಂದು (ಕ್ರಿ). ಕಾಂತಿ ಕಡಮೆಯಾಗು; ನಿಸ್ತೇಜವಾಗು; ಕಂದು: ಪೂಗೋಲ್ಗಳೆಲ್ಲಿ ತಳಿರ ಖಂಡೆಯ ಮೀನಧ್ವಜವೆಲ್ಲಿ ತೋಱಿಂದು ಕಲೆಗುಂದಿ [ಪಾಠಾಂ. ನಳಿನಾಕ್ಷಿ] ಹಲುಬಿದಳಳುತ (ಮೋಹತ. ೮-೭). **ಕಳೆಗುಂದು**: ಮುಖಶಶಿಮಂಡಲಂ ಕಂದಿ ಕಳೆಗುಂದಿ (ಸಿದ್ಧರಾ. ೧-೨೭); ಉಡುರಾಜಂ ಕಳೆಗುಂದಿ ಪೆರ್ಚದಿಹನೇ (ಸೋಮೇಶ. ೩೫); ಪಾಂಡವರ ಅಭ್ಯುದಯವನ್ನು ಕಂಡು . . . ಅವನು ಚಿಂತೆಗೊಳಗಾಗಿ ಕಳೆಗುಂದಿದನು (ವಚಭಾ. ೮೭). [ಕಲೆ$_3$ + ಕುಂದು$_1$]

**ಕಲೆಗೂಡು** (ಕ್ರಿ). ಒಟ್ಟಾಗಿ ಸೇರು, —ಕೂಡು: ಮೂರರೊಳಗಿದೆ ಒಂದು, ಕೇಂದ್ರದೊಳು ಬಾಹೊಂದು ಸಂದು ಬಿಡದಂತೆ ಕಲೆಗೂಡಿಕೊಂಡು (ಸೂರ್ಯಪಾ. ೨೭-೨). [ಕಲೆ$_1$ + ಕೂಡು$_1$]

**ಕಲೆತ** (ನಾ). ಶೇಖರಿಸುವಿಕೆ; ಸಂಗ್ರಹಣೆ: ಅಂಕಿ-ಅಂಶಗಳ ಜಮಾವಣೆ . . . ಮಾದರಿ ಕಲೆತಗಳ ಮೂಲಕ ಸಾಮಗ್ರಿ ಸಂಗ್ರಹ ನಡೆಯುತ್ತದೆ (ಸಂಶೋಧ. ೧೮೬). [ಕಲೆ$_1$ + -ತ$_2$]

**ಕಲೆದೋಱು**, ಕಳೆದೋಱು (ಕ್ರಿ). ೧. ಗುರುತನ್ನು ಕಾಣಿಸು; ಕುರುಹುತೋರು: ಉಭಯದ ಸೆಱಗು ಕಲೆದೋಱದೆ ನಿಂದುದು ಐಕ್ಯಾನುಭಾವ (ಮೋಳಿಮಾ. ೧೩೦-೫೦೫). **ಕಳೆದೋಱು**: ೨. ಹೊಳಪುಂಟಾಗು; ಕಾಂತಿಬರು: ಅಗ್ನಿಗೆ ಕಳೆದೋಱದಂದು ತರುಗಿರಿತೃಣ ಕಾಷ್ಠಂಗಳಿಲ್ಲದಂದು (ಅವಚಂ. ೨-೭). [ಕಲೆ$_2$ + ತೋಱು$_1$ (< ತೋಱ್)]

**ಕಲೆಬೆರಕೆ** 'ಕಲಬೆರಕೆ' ನೋ.

**ಕಲೆಬೆರೆ** (ಕ್ರಿ). ಮಿಶ್ರವಾಗು; ಸಂಕರವಾಗು: ಕೃತಿಯಲ್ಲಿ ಸುರೂಪ ಕುರೂಪಗಳು ಸತ್ಯಮಿಥ್ಯೆಗಳು ಕಲೆಬೆರೆತು ಹೋಗುವವು (ಸಾಹಿವಿ. ೮). [ಕಲೆ$_1$ + ಬೆರೆ$_1$]

**ಕಲೆಮುಟ್ಟು** (ಕ್ರಿ). ಕಳಂಕಿತವಾಗು; ಹೊಲಸಾಗು (?): ಮನೆಯೊಳಗಾನಿಲ್ಲದನಿತಱೊಳೆ ಎಡೆವೊತ್ತುವೊಲೆಯಂ ಕಲೆಮುಟ್ಟಲ್ಪೆತ್ತಂತೆ ಮನೆಯೊಳುಳ್ಳುದೆಲ್ಲಮಂ ಕಾಕಭೋಜನಂ ಮಾಡಿ ಕಿಡಿಸಿದೆಯೆಂದು ಸೊಸೆಯಂ ನೋಯೆ ನುಡಿದು (ಪಂಚತಂ. ೧೫೫-೫). [ಕಲೆ$_2$ + ಮುಟ್ಟು$_1$ ?]

**ಕಲೆವರೆಯಿಸು** (ಕ್ರಿ). ಕಲೆಯುವಂತೆ ಸೇರಿಸು, —ಕೂಡಿಸು: ಕಲಿಗಳಱಿದು ಸುರಪತಿ ಸುರಲೋಕದ ಬೆಲೆವೆಣ್ಗಳನಿತ್ತವರನು ಕಲೆವರೆ [ಪಾಠಾಂ. ರ]ಯಿಸಿ ಸಂತವಿಟ್ಟನು (ಕುರಾಸಾಂ. ೧೨-೬೨). [?]

**ಕಲೆವೆರಸು** (ಕ್ರಿ). ಕಲೆಯನ್ನು ಹೊಂದಿರು ; ಚಾತುರ್ಯ ಪಡೆದಿರು : ಜಗದೊಳ್ ಕಲೆವೆರಸಿ ಮುನ್ನಿನ ರೂಪುವೆರಸಿ ಪುಟ್ಟುವ ಮಕ್ಕಳುಮಂ . . . ಕಂಡು ಮಱುಭವಮುಂಟೆಂದು ನಂಬುವುದು (ಧರ್ಮಾಮೃ. ೯–೬೧ ಅಡಿಟ). [ಕಲೆ$_3$ + ಬೆರಸು$_1$]

**ಕಲೆವೆಱು, ಕಳೆವೆಱು** (ಕ್ರಿ). ಕಲೆಯನ್ನು ಪಡೆ, —ಹೊಂದು ; ಚೆಲುವಾಗು : ಛಂದಸ್ಸು ಲಕ್ಷಣಮಲಂಕಾರ ಭಾವರಸಮೊಂದಿ ಕಲೆ[ಪಾಠಾಂ. ಳೆ]ವೆತ್ತ ಸತ್ಕೃತಿ ಚಮತ್ಕೃತಿ ಯುಕ್ತಂ (ಜೈಮಿಭಾ. ೧–೬). **ಕಳೆವೆಱು:** ಕಳೆವೆತ್ತ ವಾರನಾರಿಯರ ಕನ್ನಿಕೆಯರ . . . ನೋಡಿ ನಗುತ (ಮೋಹತ. ೩–೨೩) ; ಲಲಿತ ವದನಾಂಬುಜದ ಕಾಂತಿಗಳ ಕಳೆವೆತ್ತು . . . ಆಂದೋಳಿಕಾರೋಹಣಂಗೈದು ಪೊಱಮಟ್ಟರು (ಜೈಮಿಭಾ. ೩೩–೨೧). [ಕಲೆ$_3$ + ಪೆಱು$_1$]

**ಕಲೆಹಾಕು** (ಕ್ರಿ). ಕೂಡಿಹಾಕು ; ಶೇಖರಿಸು : ಅನೇಕ ಉಪಯುಕ್ತ ಮಾಹಿತಿಗಳನ್ನೂ ಕಲೆಹಾಕಿದ್ದಾನೆ (ಸಸ್ಯಕ. ೫೨). [ಕಲೆ$_1$ + ಹಾಕು (< ಪಾಯ್ಕು$_1$)]

**ಕಲೇವರ, ಕಳೇವರ**(ನಾ). ಮೈ ; ದೇಹ ; ಶರೀರ : ಜೋಕೆಯೋಂಕಾರ ಸದ್ಬ್ರಹ್ಮ ರೂಪಂಗೆ ವಿದ್ಯಾಕಲೇವರೆಯಾದ ದೇವಿಗಂ ಶರಣೆಂಬೆಂ (ವೀಶೈಪು. ೨–೨–೩೩). **ಕಳೇವರ** : ತನ್ನ ನಲ್ಲನ ಕಳೇವರಮಂ ತಟ್ಟೈಸಿಕೊಂಡು (ಪಂಪಭಾ. ೨–೨೪ ವ) ; ತಳೆದನಶನಾದಿ ತಪದಿಂ ಕಳೇವರಂ ಬಡಬಡಾಗಿ (ಸುಕುಮಾ. ೯–೮) ; ಪ್ರಜ್ವಳಿಪ ನವವಿಧ ಲಿಂಗಮಂ ಕಳೇವರದೊಳೊಲಿದಳವಡಿಸಿ ತೋಱಿ (ಲಶಿಚಂ. ೫೩–೬೮). [ಸಂ.]

**ಕಲೋಪಾಸಕ** (ನಾ). ಕಲೆಯನ್ನು ಉಪಾಸಿಸುವವನು; ಕಲಾರಾಧಕ : ಕಲೋಪಾಸಕನ ಜೀವನದರ್ಶನದ ಅಂತರಾಳದಲ್ಲಿ ಸೌಂದರ್ಯದ ಪ್ರಜ್ಞೆಯು ನೆಲಸಿದೆ (ನವ್ಯಕಾ. ೫೬) ; ತನ್ನ ಮನ ಬಂದಂತೆ ವಸ್ತುವನ್ನು ಕಲ್ಪಿಸಿಕೊಂಡು ವರ್ಣಿಸಿ ಆನಂದಿಸುವುದು ಕಲೋಪಾಸಕನ ಕಾರ್ಯ (ಭಾರದ. ೨೮೦). [ಸಂ. (ಕಲಾ + ಉಪಾಸಕ)]

**ಕಲೋಪಾಸನೆ** (ನಾ). ಕಲೆಯ ಉಪಾಸನೆ, —ಆರಾಧನೆ : ಜನರ ಮನಸ್ಸು ಕಲೋಪಾಸನೆಗೆ ಬಹಳವಾಗಿ ಒಲಿಯುತ್ತಿತ್ತು (ಭಾರದ. ೪೪೫). [ಸಂ. ಕಲೋಪಾಸನಾ (ಕಲಾ + ಉಪಾಸನಾ)]

**ಕಲ್ಕ** (ನಾ). ೧. ಕದಡು ; ಅರೆದುಮಾಡಿದ ಸರಿ ; ಮಂದವಾದ ದ್ರವ : ಹುಣಿಸೆಯ ಹಣ್ಣ ಕಲ್ಕವಂಮಾಡಿ (ಸೂಪಶಾ. ೪–೫೨); ಶಿವಮಂತ್ರವೆಂದೆಂಬ ಕಲ್ಕವನೆ ಸವಿದು (ಪ್ರಭುಪು.೨–೧೪) ; ಸಲೆ ಕಲ್ಕಮಂ ಮಾಡಿ ಬಳಿಕೆ ಪಿಂಡಂಗೆಯ್ದು (ಆರಾಚ. ೧೩–೯) ; ಒಂದು ಅಡಕೆಯಷ್ಟು ಉತ್ತರಣೆಯ ಬೇರಿನ ಕಲ್ಕವು ಒಂದು ಪ್ರಸ್ಥ ಹಾಲನ್ನು ಗಟ್ಟಿಯಾಗಿ ಮಾಡುವುದು (ಭೀಮಸೂ. ೯ ಅಡಿಟ). ೨. ಪಾಪ : ನೆಲನಂ ಮುನ್ನಲೆದುದ್ಧತಾಸುರನಿಕಾಯಂ ಬದ್ಧರೋಷಾನ್ವಿತಂ ಕಲಿ ಕಲ್ಕ ಪ್ರಭವರ್ಕ್ಕ(ಗ)ಳಾಗೆ (ಎಕ. V, ಬೇಲೂರು. ೧೧೯–೧೩ ; ಸು. 1185). ೩. ಕೊಳೆ ; ಮೈಲಿಗೆ. ೪. ಗಸಿ ; ಗಷ್ಟು ; ಮಡ್ಡಿ. ೫. ಕಿವಿಯ ಮಲ ; ಗುಗ್ಗೆ. ೬. ಸುಳ್ಳು ; ಸಟೆ. ೭. ಗರ್ವ. [ಸಂ.]

**ಕಲ್ಕಂಗೂಡು** (ಕ್ರಿ). ಕದಡಾಗಿ ಕೂಡು ; ಅರೆದು ಬೆರಸಿದಂತೆ ಕೂಡು : ಸಪ್ತಧಾತುಗಳಂ ಜೀವಪದಾರ್ಥಮಂ ಪಡೆದು ಕಲ್ಕಂಗೂಡುವಂತೆಯ್ದೆ ಕೂಡಿ ಗುಣಶ್ಲಾಗರಮಾಗಿ ನಿಂದ ತನುವಂ (ಸಮುಪ. ೬–೭೧). [ಕಲ್ಕ + ಕೂಡು$_1$]

**ಕಲ್ಕಂಗೈ** (ಕ್ರಿ). ಕದಡುಮಾಡು ; ಕದಡನ್ನು ತಯಾರಿಸು : ಲೇಸೆನಿಪ ಕಬರೀ ಪ್ರಸೂನವ ಸೂಸಿ ವಕ್ಷೋಜಕೆ ಶಿರೋಜವ ಬಾಸಣಿಸಿ ಕಸ್ತೂರಿಯಂ ಕಲ್ಕಂಗೈದು ಪಣೆಗೆ ಪೂಸಿ (ಮದೇಪು. ೫–೫೧). [ಕಲ್ಕ + ಗೈ (< ಕೆಯ್$_1$)]

**ಕಲ್ಕಟ್ಟು, ಕಲುಕಟ್ಟು, ಕಲ್ಲುಕಟ್ಟು** (ನಾ). ೧. ಕಲ್ಲಿನಿಂದ ಕಟ್ಟಿದುದು; ಕಲ್ಲಿನ ರಚನೆ : ಪಿರಿಯ ಕೆಱೆಯ ಕಲ್ಕಟ್ಟಂಗೆರಡು ಪಣದ×ದೆ ಮೊದಲಾಗೆ ವರಿಶಕಾಳಲೊಂದು ಪಣವಂ ಬಿಟ್ಟರ್ (ಕಇ. II, ೮–೧೩ ; 1072). **ಕಲುಕಟ್ಟು :** ೧. ಎರಡು ಲಕಮಡಕೆಯ ಸುಂಕಮಂ ಕಱೆಯ ಕಲುಕಟ್ಟಂಗೆ ಬಿಟ್ಟ (ಕಇ. II, ೮–೩೨; 1072). **ಕಲ್ಲುಕಟ್ಟು :** ೨. (ರೇತಸ್ಸು) ಕಲ್ಲಿನಂತೆ ಗಟ್ಟಿಯಾಗುವ ಒಂದು ರೋಗ : ಶುಕ್ಲವು ವಾತದಿಂದ ಶುಕ್ಲಸ್ಥಾನವನ್ನೈದಿ ಕಲ್ಲಾಗುತಿರ್ಪುದು. ಅದನೆ ಕಲ್ಲುಕಟ್ಟು ಎಂದೂ, ಅಶ್ಮರಿ ಎಂದೂ ಪೇಳುವರು (ಸಕವೈ. ೩೭೦). [ಕಲ್$_3$ + ಕಟ್ಟು$_2$]

**ಕಲ್ಕಟ್ಟೆ** 'ಕಲ್ಗಟ್ಟೆ' ನೋ.

**ಕಲ್ಕಣಿನಾಡು** (ನಾ). ಒಂದು ನಾಡಿನ ಹೆಸರು : ಆಹಾರದಾನಕ್ಕಂ ಜೀರ್ಣೋದ್ಧಾರಕ್ಕಂ ಕಲ್ಕಣಿನಾಡ ಮೊಟ್ಟೆನವಿಲೆಯುಮಂ (ಎಕ. II, ೧೪೩–೨೦೮ ; 1131) ; ಶ್ರೀಮತು ಕಲ್ಕಣಿನಾಡ ಬೆಳ್ಳೂರ ಸ್ಥಳದಲು (ಎಕ. XIV, ನಾಗಮಂ. ೧೪೦–೬೩ ; 1224). [ಕಲ್ಕಣಿ$_0$ + ನಾಡು]

**ಕಲ್ಕದ್ರವ್ಯ** (ನಾ). [ವೈದ್ಯ] ಕಲ್ಕ ಅಥವಾ ಲೇಹ್ಯವನ್ನು ಸಿದ್ಧಪಡಿಸಲು ಹಾಕುವ ದ್ರವ್ಯ : ರಾಸ್ನಾದಿತೈಲ– ಒಂದು ಬಳ್ಳ ಮಜ್ಜಿಗೆ, ಒಂದು ಬಳ್ಳ ಎಣ್ಣೆಸಹ ಕೂಡ ಹನಿಸಿ ಕಾಯಿಸುವಾಗ ಹಾಕುವ ಕಲ್ಕದ್ರವ್ಯ (ಸಕವೈ. ೭೦). [ಕಲ್ಕ + ದ್ರವ್ಯ]

**ಕಲ್ಕಱನಾಡು** (ನಾ). = ಕಲ್ಕಣಿನಾಡು (?) : ದೇವಯ್ಯನಳಿಯ ಎಱಗಾರಿ ಸತ್ತೊಡೆ ಆತನ ಮಗಂ ಬೀಚಂಗಂ ಕಲ್ಕಱನಾಡ ನೆಟ್ಟೂರ ಕಲ್ನಟುಗೊಟ್ಟರ್ (ಎಕ. V, ಚನ್ನರಾ. ೨೬೨–೪೯ ; 971). [ಕಲ್ಕಱ$_0$ + ನಾಡು]

**ಕಲ್ಕಾವಲ್** (ನಾ). ಕಲ್ಲುಗಳನ್ನು ನೆಟ್ಟು ಮಾಡಿದ ಕಾವಲು : ಬಿಗಿದು ಕಲ್ಕಾವಲಂ ಪೋದರಾಳುಗಳು (ಕಾಲೂರ. ೯೦–೧೬೫). [ಕಲ್$_3$ + ಕಾವಲ್$_1$]

**ಕಲ್ಕಿ$_1$** (ನಾ). ವಿಷ್ಣುವಿನ ಹತ್ತು ಅವತಾರಗಳಲ್ಲಿ ಕೊನೆಯದು : ಏವೊಗಟ್ಟಿಂ ನಿಜಕಲ್ಕಿಮೂರ್ತಿಯಂ (ಜಗವಿ. ೧–೬೪) ; "ಕಲ್ಕಿ ! ಕಲ್ಕಿ !" ಎನ್ನುತ ಚೀರಿ ಕನಸೊಡೆದೆದ್ದೆ ! ಇನ್ನೆಲ್ಲಿಯ ನಿದ್ದೆ ? (ಪಾಂಚಜ. ೭೧–೧೯). [ಸಂ.]

**ಕಲ್ಕಿ$_2$** 'ಕಲ್ಗಿ' ನೋ.

**ಕಲ್ಕಿಸರ** (ನಾ). ಒಂದು ಬಗೆಯ ಅಲಂಕಾರ ವಸ್ತು : ಅವರು ತೊಟ್ಟ ಪೇಟಾಕ್ಕೆ ವಿಶಿಷ್ಟವಾದ ಕಲ್ಕಿಸರವನ್ನು ಸೇರಿಸಿ ಗೌರವಿಸಲಾಯಿತು (ಸಂಗೀತ. ೨೦). [?]

**ಕಲ್ಕುಟಿ** (ನಾ). = ಕಲ್ಲುಕುಟಿಕ : ಕಲ್ಕುಟನ ಹಕ್ಕಿಯೊಂದು 'ಕುಟುರ್, ಕುಟುರ್' ಎಂದು ಕೂಗಿ ಹಾರಿಹೋಯಿತು (ಅಗಸ್ತ್ಯ. ೪೫). [< ಕಲ್ಲುಕುಟಿಕ ?]

**ಕಲ್ಕುಟಿಕ** 'ಕಲ್ಕುಟಿಗ' ನೋ.

**ಕಲ್ಕುಟಿಗ, ಕಲುಕುಟಿಕ, ಕಲುಕುಟಿಗ, ಕಲುಕುಟ್ಟಿಗ, ಕಲ್ಕುಟಿಕ, ಕಲ್ಲುಕುಟಿಕ, ಕಲ್ಲುಕುಟಿಗ$_1$, ಕಲ್ಲುಕುಟುಕ, ಕಲ್ಲುಕುಟ್ಟಿಗ** (ನಾ). ಕಲ್ಲಿನ ಕೆಲಸ ಮಾಡುವವನು ; ಕಲ್ಲುಕೆತ್ತನೆ ಕೆಲಸದವನು ; ಕಲ್ಲುಕೆಲಸದ ಶಿಲ್ಪಿ ; ಕಲ್ಲೊಡ್ಡ : "ಕಲ್ಲಂ ಕುಟ್ಟುವಂ, ಕಲ್ಕುಟಿಗಂ" (ಶಬ್ದಾನು. ೨೪೮ ಪ್ರಯೋ) ; ಅಲ್ಲಿ ಬೆಸಗೆಯ್ವ ಕಲ್ಕುಟಿಗರ ಮನೆ (ಇಅ. XIX, ೨೭೩–೪೦ ; 1054). **ಕಲುಕುಟಿಕ :** ಲಿಂಗ ಘನವೆಂಬೆನೆ ಕಲುಕುಟಿಕನ ಕೈಯಲ್ಲಿ ಮಾಡಿಸಿಕೊಂಡು ಕಿಱಿದಾಯಿತ್ತು, ಭಕ್ತ ಘನವೆಂಬೆನೆ ತನುಮನಧನದಲ್ಲಿ ವಂಚಕನಾಗಿ ಕಿಱಿದಾದ ಇಂತೀ ತ್ರಿವಿಧದಲ್ಲಿ ಪರಿಣಾಮವಿಲ್ಲ ಪರಮಾರ್ಥವಿಲ್ಲ (ಅವಚಂ. ೧೦೬–೪೮೦).

**ಕಲುಕುಟಿಗ**: ಬೆಸಗೆಯ್ದಂ ಕಲುಕುಟಿಗಂ ಬಿಟ್ಟೋಜ (ಇಎ. ೧೯೪೭, ಹಾನಗ. ೨೩೬-೨೨; 974); ಕಲುಕುಟಿಗ ಬೀರೋಜಂಗ ಸುರೋಜಂಗ ರಾಯಗಟ್ಟಿಯಿಂ ಬಡಗ ಮತ್ತರು ೧೨ (ಸೌಇಇ. XI-i, ೧೧೬-೫೩; 1075); ಪ್ರತಿಮೆಯ ಚೆಲುವದುನೊಪ್ಪಂಗೆಟ್ಟುದೆಂದು ಕಲುಕುಟಿಗನ ತಂದದ ಸಾಣೆಯಿಕ್ಕಬೇಕೆನೆ (ಪುಣ್ಯಾಸ್ರ. ೨-೬೫); ಕುಟಿಲಕದನದೊಳೊದಗಿದದು ಕಲುಕುಟಿಗ ಶರಶತಕೋಟಿಯುಲಿ (ಕುವ್ಯಾ ಅ. ೧೨-೪೦); ಪೂಜಾರಿಗೆ ೧ ಭಾಗಿ ಕೆಲಸಿಗಳಿಗೆ ಕಲುಕುಟಿಗರಿಗೆ ಭಾಗಿ ೨ (ಎಕ. II, ೨೩೧-೪; ಸು. 1500). **ಕಲುಕುಟ್ಟಿಗ**: ಆ ದೇವಭೂಮಿಯೊಳಗೆ ಕಲುಕುಟ್ಟಗ ಮಡಿಯೋಜ (ಎಕ. VI, ಕಡೂರು. ೧೩೭-೬; 1216 ?). **ಕಲ್ಕುಟಿಕ**: ಕಲ್ಕುಟಿಕ ಮಲ್ಲೋಜ (ಸೌಇಇ. XX, ೪೧-೨೮; 1068); ರತಿವರನೆಂಬೊರ್ವ ಕಲ್ಕುಟಿಕ ಭರದಿ ಪೊಡೆವ ಕಟ್ಟುಗುಂಡೆಂದೆನಲಾ ತರುಣಿಗೊಪ್ಪಿದುವು ನಿತಂಬ (ಶ್ರೀಪಾಲ.೩-೫೧). **ಕಲ್ಲುಕುಟಿಕ**: ಆಯುಧಂಗಳಂ ಧರಿಸಿದ ವಡ್ಡರು ಯಂತ್ರಕಾರರು ಕಲ್ಲುಕುಟಿಕರು (ಸೌಗಂಧಿ. ೧೩೫-೧೫). **ಕಲ್ಲುಕುಟಿಗ$_1$**: ಬನ್ನಿಕೆಱೆಯಲು ಕಲ್ಲುಕುಟಿಗ ಕಾಳೋಜ ದೇವದಾಸಿಗಳಿಗೆ ಬಿಟ್ಟ ಬೆದ್ದಲೆ (ಎಕ. VII, ಶಿವಮೊ. ೯೭-೫೫; 1113); ಪುತ್ತೂರ ಶೀಮೆಯಲ್ಲಿ ಕಲ್ಲುಕುಟಿಗರ ತಲಾಸು ಮಾಡುವ ಹಾಗೆ ನಾವು ಹುಕುಂ ಕೊಟ್ಟು ಇದ್ದೇವೆ (ರಾಜೇಂದ್ರ. ೧೩೯). **ಕಲ್ಲುಕುಟುಕ**: ಪೊರಮಟ್ಟು ಕಲ್ಲುಕುಟುಕರ ಭಂಡಿಕಾರರಂ ಕರಸಿದನು (ನವಮೋ. ೨೧-೧೩). **ಕಲ್ಲುಕುಟ್ಟಿಗ**: "ಅಶ್ಮಕಾರಂ ಕಲ್ಲುಕುಟ್ಟಿಗಂ [ಪಾಠಾಂ. ಟಕಂ]" (ಮಂಗರಾ. ೧೧೧-೧); ಕಲ್ಲುಕುಟ್ಟಿಗರ . . . ಕಾರ್ಯದ ಫಲವಾಗಿ ಕಟ್ಟಡ ಒಂದಾಳು ಎತ್ತರ ನಿರ್ಮಾಣವಾಯಿತು (ಕೊನಭೇ. ೨೯). [ಕಲ್$_3$ + -ಕುಟಿಗ$_1$]

**ಕಲ್ಕುಟಿಗಗೆಱೆ** (ನಾ). ಒಂದು ಕೆರೆಯ ಹೆಸರು: ಕಲ್ಲುಟಿಗಗೆಱೆಯಲ್ಲಿ ಪರಲು ಮತ್ತರೊಂದು (ಎಇ. VIII, ೧೭೯-೧೧; 1082). [ಕಲ್ಕುಟಿಗ + ಕೆಱೆ]

**ಕಲ್ಕುಟಿಗವೆಸ** (ನಾ). ಕಲ್ಲು ಕೆತ್ತುವ ಕೆಲಸ; ಕಲ್ಕುಟಿಗನ ಕೆಲಸ; ಶಿಲ್ಪಿಯ ಕೆಲಸ: ಮೂರ್ಕಲ್ಕುಟಿಗವೆಸದೊಳಂ (ಎಇ. ೧೯೪೬, ಹಾನಗ. ೨೭೩-೪೬; 984). [ಕಲ್ಕುಟಿಗ + ಬೆಸ$_1$]

**ಕಲ್ಕುಟಿ** (ನಾ). ಒಂದು ಊರಿನ ಹೆಸರು: ಕಲ್ಕುಟಿಯ[ಂ] ಸರ್ವಾಭ್ಯಂತರಸಿದ್ಧಿಯಾಗಿ (ಸೌಇಇ. VIII, ೩೬೯-೯; 1075). [?]

**ಕಲ್ಕುಡ, ಕಲ್ಕುಡಕ** (ನಾ). (ಕರಾ) ಒಂದು ಕ್ಷುದ್ರದೇವತೆ: ಅದರ ಕೆಳಗೆ ಒಂದು ಚಿಕ್ಕ ಬಂಡೆಕಲ್ಲು. ಅದು ಕಲ್ಕುಡ ಎಂಬ ದೈವದ್ದಂತೆ (ರಕ್ತರೂ. ೪). **ಕಲ್ಕುಡಕ**: ಕಲ್ಕುಡಕನಿಗೆ ಹೇಳಿಕೊಂಡದ್ದಾಯಿತು (ನಡೆದಾ. II, ೧೨೩೦). [← ತುಳು. ಕಲ್ಕುಟ್ಟ, ಕಲ್ಕುಡೆ]

**ಕಲ್ಕುಡಕ** 'ಕಲ್ಕುಡ' ನೋ.

**ಕಲ್ಕುಪ್ಪೆ** (ನಾ). ಕಲ್ಲಿನ ಕುಪ್ಪೆ, —ಗುಡ್ಡೆ: ಅನ್ತೆಬನ್ದು ತೊಲ್ಕೊಱಡಿ ಎ ಕಲ್ಕುಪ್ಪೆ ಎ ಅನ್ತೆಬನ್ದು ಕೊನ್ದೆವಡಿ ಎ (ಮೈಆರಿ. ೧೯೩೬, ೫೩-೨೮; 550); ಕಲ್ಕುಪ್ಪೆಯೆ ಅನ್ತೆವೋಗಿ ಮುಕ್ಕಲ್ಲೆ ಪೋಗಿ ಅಡದಳಿಕಱೆಯ ಪಡುವಣ ಖಡೆಗೋಡೆ (ಎಕ. XVI, ತಿಪಟೂ. ೧೪೦-೬೯; 900). [ಕಲ್$_3$ + ಕುಪ್ಪೆ$_1$]

**ಕಲ್ಕೆ, ಕಲಿಕೆ$_1$** (ನಾ). ೧. ಕಲಿಯುವಿಕೆ; ಶಿಕ್ಷಣ; ವಿದ್ಯೆ: ದ್ರೋಣನ, ರಾಮನ ಕಲ್ಕೆಯೊಳಾದನ್ ಒಳಬೆಳಕಿಲ್ಲದ ಕಣ್‌ಕುರುಡಾದನ್ (ಅಶ್ವತ್ಥಾ. ೨೬-೫೧೩); ಎಮಗೆ ಹೊಸ ಹೊಸತು ಕಲ್ಕೆಗಳ ಕೇಳಿಗಳ ಕಲಿಸಬೇಕು (ನಡೆದಾ. I, ೪೫೫). **ಕಲಿಕೆ$_1$**: ೧. ತನ್ನಾಚಾರದ ಕಲಿಕೆಯನೆಲೆಯೆ ಧರಾಧೀಸ್ವರಂ ಬೊಪ್ಪದೇವಂ (ಎಕ. VIII (s), ಸೊರಬ. ೫೮೭-೩೮; 1201); ಈ ಕಲಿಕೆ . . . ಹಿಂದೂಗಳ ಮತಾಚಾರಗಳು ಎಂಬ ಪಾಠಗಳಲ್ಲಿ ಕೊನೆಗಾಣುತ್ತಿತ್ತು (ಭಾರದ. ೪೧೫); "ನಿಮ್ಮ ಕಲಿಕೆಯೇ ಹೆಚ್ಚಿನದಪ್ಪ. ನಮ್ಮದು ಪ್ರಯೋಜನವಿಲ್ಲದ್ದು. ಪುಸ್ತಕದ ಬದನೇಕಾಯಿ" (ಕುಸುಸಂ. ೪೭). ೨. ಕೌಶಲ; ಪ್ರೌಢಿಮೆ: ಪಾಂಡವ ಕೌರವ ಬಲದ [ಕಲಿಕೆ] [ಪಾಠಾಂ. ಕೈಕೇ, ಕೈಂಕೆ]ಯ ಪ್ರಧಾನ ನಾಯಕರ್ಕಳ್ (ಪಂಪಭಾ. ೧೩-೩೭ ವ). ೩. (ಆಲಂ) ಸಹಜವಲ್ಲದ್ದು; ಇನ್ನೊಬ್ಬರು ಹೇಳಿಕೊಟ್ಟದ್ದು; ಕೃತಕವಾದದ್ದು: ಉರಿವ ಬೆಂಕಿಗೆ ತಂಪು ತುಪ್ಪ ತಿಲ ಮೊದಲಾದ ಕುಲವಂ ಹಾಕಿ ಅನಲನ ಕೆಡಿಸಿಹೆನೆಂಬ ಕಲಿಕೆಯ ಮಾತಿನ ನೆರೆ ಬಾಲಕರ ಕಂಡು ಇವರಿಗೆ ಅಱಿಕೆ (ಮೋಳಮಾ. ೫೭-೨೩೯); ಭಿನ್ನಕೊಡದಲ್ಲಿ ಅಮೃತವ ತುಂಬಿದರೆ ಎಷ್ಟು ಹೊತ್ತು ಇರಲಾಪುದು ಖ್ಯಾತಿಯ ಭಕ್ತಿ ಕಲಿಕೆಯ ವಿರಕ್ತಿ ಆದಜಂತೆ ಕಂಡಯ್ಯ (ಆಖಂಡೇ. ೧೩೩-೧೦೭). [ಕಲ್$_1$ + -ಕೆ]

**ಕಲ್ಕೆಱೆ** (ನಾ). ಒಂದು ಊರಿನ ಹೆಸರು: ಕಲ್ಕೆಱೆಯಗೆಣ್ಣಯ್ಯನ ಮಗಳ್ ಅಯ್ಚಕಬ್ಬೆ (ಎಇ. XVII, ೮-೨೩; 1004); ಪೊಗೞ್ದರ್ ಸ್ವಾಯಂಭು ಗಡಂ ಕಡಂ ಸ್ವಾಯಂಭು ಮಳಲ್ ದಿವ್ಯಲಿಂಗಮಂ ಕಲ್ಕೆಱೆಯಲ್ (ಸೌಇಇ. XX, ೪೯-೪೬; 1076 ?). [ಕಲ್$_3$ + ಕೆಱೆ]

**ಕಲ್ಕೆಱೆತಿಭಟಾರೆ** (ನಾ). ಒಂದು ದೇವತೆಯ ಹೆಸರು (?): ಸಿಗ್ಗಾಮೆಯ ಕಳ್ಳವಳ್ಳದೆಱಿಎ ಶ್ರೀ ಕ[ಲ್ಕೆ]ಱೆತಿಭಟಾರೆಗೆ ಕೊಟ್ಟನ್ (ಕಇ. I, ೧೪-೮; ಸು. 866). [ಕಲ್ಕೆಱೆತಿ ? + ಭಟಾರೆ]

**ಕಲ್ಗಂಟೆ** (ನಾ). ಒಂದು ಬಗೆಯ ಸಸ್ಯ: ಮೊಗಲಿಂಗಮರ, ಕಲ್ಗೋಟಿ, ಕಲ್ಗಂಟಿ, ಗಂಟಿ (ಮೈಔಗಿ. ೬೮-೧೩೯೭). [ಕಲ್$_3$ + ಗಂಟೆ$_1$]

**ಕಲ್ಗಟ್ಟೆ, ಕಲ್ಕಟ್ಟೆ** (ನಾ). ಕಲ್ಲಿನ ಕಟ್ಟೆ: ಚಂದ್ರಕಾಂತ ಕಲ್ಗಟ್ಟೆ ಸೋಪಾನ ತಱ್ಕೊಳದ ಮಧ್ಯದಲಿ ನಾನಾರತ್ನ ಶೋಭಿತದ ಚಾವಡಿಯಲ್ಲಿ ಮೀನಾಂಕನಿರ್ದನೋಲಗದಿ (ಮೋಹತ. ೫-೩೨). **ಕಲ್ಕಟ್ಟೆ**: ಊರ ಮುಂದಿನ ಕಲ್ಕಟ್ಟೆ (ರೂಢಿ). [ಕಲ್$_3$ + ಕಟ್ಟೆ$_1$]

**ಕಲ್ಗಡಿಗೆ** (ನಾ). ಕಲ್ಲಿನಿಂದ ಮಾಡಿದ ಗಡಿಗೆ: ಈ ಪಾತ್ರೆಗಳಿಗೆ ಕಲ್ಗಡಿಗೆ ಕಲ್ಪರ್ಟಿಗಳೆನ್ನುವರು. ಇವು ಕಿಲುಬುವುದಿಲ್ಲ (ಮುಂಬಯಿ. ೩-೫೮). [ಕಲ್$_3$ + ಗಡಿಗೆ]

**ಕಲ್ಗರಿಕೆ** (ನಾ). ಒಂದು ಬಗೆಯ ಮರ: ಕಲ್‌ಗರಿಕೆ, ಡಾಲ್‌ಮರ, ಗವುಡ, ಮದಗಿರಿಬೇವು (ಮೈಔಗಿ. ೨೧-೩೮೦). [ಕಲ್$_3$ + ಗರಿಕೆ ?]

**ಕಲ್ಗಲೆ** (ನಾ). ಗಟ್ಟಿಯಾದ ಕಲೆ; ಗಾಯ ಮಾದು ಉಂಟಾದ ಹಕ್ಕಳೆ; ಶಾಶ್ವತವಾದ ಮಚ್ಚೆ: ರಾಹುವಗಿಯೆ ಕರಮೊಪ್ಪುವ ಹುಣ್ಣ ಕಲ್ಗಲೆಯೆನೆ ಬಂಧುರಮಾದ್ದುದಾ ಶಶಿಯಂಕ (ಶ್ರೀಪಾಲ. ೨-೯೧). [ಕಲ್$_3$ + ಕಲೆ$_2$]

**ಕಲ್ಗಾಣ** (ನಾ). ಕಲ್ಲಿನ ಗಾಣ (ಕಿ). [ಕಲ್$_3$ + ಗಾಣ$_1$]

**ಕಲ್ಗಿ, ಕಲ್ಕಿ$_2$** (ನಾ). ಶೃಂಗಾರ ಲಾವಣಿಗಳಲ್ಲಿ ಒಂದು ಪ್ರಕಾರ. ℙ ಪುರುಷನಿಗಿಂತ ಸ್ತ್ರೀ ಶ್ರೇಷ್ಠವೆಂದು ಸಾರುವ ಪಕ್ಷ: ಈ ಜಾತಿಯ ಹಾಡುಗಳಲ್ಲಿ 'ತುರಾ', 'ಕಲ್ಗಿ' (ಕಲ್ಕಿ) ಎಂಬವು ಮುಖ್ಯವಾದ ಪ್ರಭೇದಗಳು (ಕರ್ಣಾಸಂ. ೨೩); ಕಲ್ಗಿ, ತುರಾಯಿ ಎರಡು ಪಕ್ಷಗಳ ಮೇಳಗಳನ್ನು ಕರೆಯಿಸುವದಪರೂಪ (ದಾಸಹು. ೫೨). **ಕಲ್ಕಿ$_2$**: ಈ ಲಾವಣಿಗಳು ವಿಶೇಷವಾಗಿ 'ತುರಾ' ಮತ್ತು 'ಕಲ್ಕಿ'ಗಳೆಂಬ ಲಾವಣಿಗಾರರ ಸಂವಾದಗಳಿಗಾಗಿ ಬಳಕೆಯಲ್ಲಿ ಬಂದಿವೆ (ಕನ್ನಜಾ. ೯೧); 'ಕಲ್ಕಿ' 'ತುರಾ'ನ ನುಂಗ್ಬಿಡ್ತು (ದೆಯ್ಯಮ. ೨೨). 'ತುರಾ' ಪರಾ. [← ಮರಾ. ಕಲಗೀ]

**ಕಲ್ಗುಂಡಿಪುರ** (ನಾ). ಒಂದು ಊರಿನ ಹೆಸರು: ಕಲ್ಗುಣ್ಡಿಪುರ ದೂರಱಿವಿನೊಳು (ಮೈಆರಿ. ೧೯೩೭, ೨೧-೭; 896). [ಕಲ್ಗುಂಡಿ$_0$ + ಪುರ]

**ಕಲ್ಗುಂಡು**, ಕಲುಗುಂಡು, ಕಲ್ಲುಗುಂಡು (ನಾ). ಗುಂಡಾಗಿರುವ ಕಲ್ಲು; ಬಂಡೆಗಲ್ಲು: ಪಾದಾಗ್ರದಿಂ ಕೆರೆದು ಪೊಱಿದು ಕಲ್ಗುಂಡುಗಳ ನೇಳಿಸುತ್ತೆ (ಚಬಪು. ೪೪-೧೧). **ಕಲುಗುಂಡು**: ಸಾಲಿಗರ್ ಕಲುಗುಂಡಂ ತಲೆಗೇಱಿಪರ್ (ಸೋಮೇಶ. ೫೧); ಅಧಱೊತ್ತಿನಲಿ ಕಲುಗುಂಡುಗಳಗಳ್ಸುತ್ತುವರೆ [ಪಾಠಾಂ. ಗಳನುಂ ಸುತ್ತಿವರೆ] ಹಾಕಿಸಿದನವಗಡವಾಗೆ ದಾರಿಯಲಿ (ಬಸಪು. ೧೬-೧೦); ಒದಱಿ ಕಲುಗುಂಡು [ಪಾಠಾಂ. ಕಲುಗೆಯ್ದು, ಕೈಗೈದು]ಗಳ ಕಪಿಬಲ ಕೆದಱಿ ಹೊಕ್ಕುದು (ತೊರರಾ. ೬-೧೯-೨೫); ಅಂಗದ ಹಿರಿಯ ಕಲುಗುಂಡುಗಳ ಭರದಿಂ ಸುರಿದು ಕೊಂದನು ದನುಜರಟ್ಟೆಗಳಾಡೆ ರಣದೊಳಗೆ (ಕೌಶಿರಾ. ೨೫-೧೬). **ಕಲ್ಲುಗುಂಡು**: ಬೆಟ್ಟ ಹತ್ತುವಾಗ ಕಲ್ಲುಗುಂಡು ಎಡವಿ ಬಿದ್ದ (ರೂಢಿ). [ಕಲ್$_3$ + ಗುಂಡು$_2$]

**ಕಲ್ಗುಂಡುವಳೆ** (ನಾ). ಕಲ್ಲುಗುಂಡುಗಳ ಮಳೆ; ಶಿಲಾವೃಷ್ಟಿ: ಎಡಬಲದೊಳಿಟ್ಟಣಿಪರಂ ಮುಚ್ಚಿದರ್ ಕಲ್ಗುಂಡುವಳೆಗಳಿಂ (ಚಬಪು. ೪೨-೩೩). [ಕಲ್ಗುಂಡು + ಮಳೆ (< ಮೞೆ)]

**ಕಲ್ಗತ್ತಿ** (ನಾ). (ಕರಾ) ಒಂದು ಜಾತಿಯ ಮೀನು. [?]

**ಕಲ್ಗೊರವಿ** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೭೮-೧೬೦೮). [ಕಲ್$_3$ + ಗೊರವಿ]

**ಕಲ್ಗೋಟು** (ನಾ). ಒಂದು ಊರಿನ ಹೆಸರು: ಈಶಾನ್ಯದೊಳ್ ಕಪಾಳೇಶ್ವರಂ ಕಲ್ಗೊಟ್ಲ [ಕಲ್ಗೋಟು] ಪೊಲದ ಸೀಮೆ (ಸೌಇಇ. IX-i, ೧೨೧-೫೧; 1057). [?]

**ಕಲ್ಗೋಟೆ** (ನಾ). = ಕಲ್ಗರಿಕೆ: ಮೊಗಲಿಂಗ ಮರ, ಕಲ್ಗೋಟೆ, ಕಲ್‌ಗಂಟೆ, ಗಂಟೆ (ಮೈಔಗಿ. ೬೮-೧೩೯೬). [ಕಲ್$_3$ + ಗೋಟೆ ?]

**ಕಲ್ಚಾವಡಿ** (ನಾ). ಕಲ್ಲಿನಿಂದ ಕಟ್ಟಿದ ಚಾವಡಿ. [ಕಲ್$_3$ + ಚಾವಡಿ]

**ಕಲ್ಜೊಡರಿ** (ನಾ). ಒಂದು ಬಗೆಯ ಮರ: ಪಲಸಂ ಬಾೞೆ ಕಱುಂಕೆ ಕಲ್ಜೊಡರಿ ಬಿಲ್ಪಲ್ಲತ್ತಿ ಮುಳ್ಮುತ್ತವಂ ಕೊಲೆ . . . ಬಿದಿರ್ಕಮ್ಮರಂ (ಸೂಕ್ತಿಸು. ೩-೨೩). [ಕಲ್$_3$ + ಸೊಡರಿ]

**ಕಲ್ತನ** (ನಾ). ಕಲ್ಲಾಗಿರುವಿಕೆ; ಕಠಿನತೆ: ಕಲ್ಲಾದಹಲ್ಯೆಯುಂ ನುಡಿಸಿದಾ ರಾಮನಡಿ ಸೋಂಕಿಗುಂ ಕಿಡದೆನ್ನ ಕಲ್‌ತನಂ (ಶ್ರೀರಾಮಾ. ೧೧೦-೨೯೫). [ಕಲ್$_3$ + -ತನ]

**ಕಲ್ತೇಗ** (ನಾ). ಒಂದು ಬಗೆಯ ತೇಗ: ಮುಚ್ಚಿಲು, ಕಲ್ತೇಗ (ಮೈಔಗಿ. ೩೦-೫೮೮). [ಕಲ್$_3$ + ತೇಗ]

**ಕಲ್ತೊಟ್ಟಿ**, ಕಲ್ಲುತೊಟ್ಟಿ (ನಾ). ಕಲ್ಲಿನಿಂದ ಮಾಡಿದ ಚೌಕಾಕಾರದ ತೊಟ್ಟಿ: ಸಿರಿವೆತ್ತ ಕಲ್ತೊಟ್ಟಿಯೊಳಗೆ ನೀನೀಂದು ಕರುಣದಿಂ ಪೊರೆವೆ ಶರಣದಯಾಸಿಂಧು (ಕರ್ಣಾಕ. ೨೨೪). **ಕಲ್ಲುತೊಟ್ಟಿ**: ಕಲ್ಲುತೊಟ್ಟಿಯಲ್ಲಿ ನೀರು ತುಂಬಿದೆ (ರೂಢಿ). [ಕಲ್$_3$ + ತೊಟ್ಟಿ$_3$]

**ಕಲ್ದಲೆ** (ನಾ). ಒಂದು ಪ್ರದೇಶದ ಹೆಸರು (?): ಅಗ್ನಿಷ್ಟಗೆಯ ಧರ್ಮಕ್ಕೆನ್ದು ಬಿಟ್ಟ ಕಲ್ದಲೆಯ ಕೆಯಿ ಕಮ್ಮ ೩೦ (ಎಕ. VII, ಶಿಕಾರಿ. ೭೪-೧೧; 1010). [?]

**ಕಲ್ದೋಣಿ** (ನಾ). ಕಲ್ಲಿನಿಂದ ಮಾಡಿದ ದೋಣಿ, —ತೊಟ್ಟಿ: ದನಕರುಗಳ ನೀರಿಗೆ ಒಂದೊಂದು ಕಲ್ದೋಣಿ ಬಾನಿಗಳೂ . . . ಇರುವುವು (ಮಂತ್ರಶ. ೪೦-೯). [ಕಲ್$_3$ + ದೋಣಿ]

**ಕಲ್ನಂದಿ** (ನಾ). ೧. ಒಂದು ಬಗೆಯ ಸಸ್ಯ: ಕಲ್‌ನಂದಿ, ಜಗಳಗಂಟಿ, ಬಿಲ್ಕುನಿಕ (ಮೈಔಗಿ. ೩೧-೬೦೨). ೨. ಕಲ್ಲಿನಿಂದ ಕಡೆದ ನಂದಿ, —ಬಸವ: ಕಲ್ನಂದಿಯನ್ನು ಹುಲ್ಲು ಮೇಯಿಸಿದನು (ರೂಢಿ). [ಕಲ್$_3$ + ನಂದಿ]

**ಕಲ್ನಟ್ಟು** 'ಕಲ್ನಾಟ್ಟು$_2$' ನೋ.

**ಕಲ್ನಡು** 'ಕಲ್ನಾಟ್ಟು$_2$' ನೋ.

**ಕಲ್ನಡುಗೊಡು** 'ಕಲ್ನಾಟುಗೊಡು' ನೋ.

**ಕಲ್ನಾಟು$_1$** (ಕ್ರಿ). ವೀರನ ಸ್ಮರಣಾರ್ಥವಾಗಿ ಕಲ್ಲನ್ನು ನೆಡು: ಕಲ್ನಾಟ ಬಿಟ್ಟ ದತ್ತಿ (ಎಕ. XIV, ಮೈಸೂರು. ೧೨೬-೧೦; 900). [ಕಲ್$_3$ + ನಾಟು$_1$ (< ನಾಂಟು$_1$)]

**ಕಲ್ನಾಟು$_2$**, ಕಲ್ನಟ್ಟು, ಕಲ್ನಡು, ಕಲ್ನಾಟ್ಟು, ಕಲ್ನಾಡು (ನಾ). ಕಾದಾಡಿ ಮಡಿದ ವೀರನ ಸ್ಮರಣಾರ್ಥವಾಗಿ ಕಲ್ಲುನೆಟ್ಟು ಅವನ ಬಳಗಕ್ಕೆ ಬಳುವಳಿಯಾಗಿ ಕೊಟ್ಟ ದತ್ತಿ, —ಶಾಸನ: ಪಲರನಿಱಿದು ಸತ್ತೊಡೆ ಮೆಚ್ಚಿ ಕಡ್ಗಿವಗಿಯಾನ್ ಕಲ್ನಾಟು ಕೊಟ್ಟುದು (ಎಕ. X, ಮುಳಬಾ. ೨೨೮-೮; ಸು. 890); ಕೊಂಗನಾಡೆಪ್ಪತ್ತುಂ ದಯೆಗೆಯ್ದ ನಟ್ಟಿಱಿದು ಕಲ್ನಾಟನ್ಟು ಗೋವಿನ್ದರ (ಎಕ. XIV, ಎಡತೊ. ೩೧-೧೦; 900). **ಕಲ್ನಟ್ಟು**: ಮಾನಜ್ಗೆಱೆಯ ಕಲ್ನಟ್ಟು ಮಜ್ಗಳ (ಮೈಆರಿ. ೧೯೩೨, ೩೭-೧; 950). **ಕಲ್ನಡು**: ನಿಡುವುಟೆಯನೆ ಕಲ್ನಡಾಗೆ ಯೆತ್ತು (ಮೈಆರಿ. ೧೯೧೫, ೨೦-೯; 900); ಪೊಸಕೆಱೆಯುಳ್ಕಲ್ನಡು ಕಣ್ಣುಗ ಕೞನಿ ಕೊಟ್ಟೊದು (ಸೌಇಇ. IX-i, ೫-೧೪; 9ನೆಯ ಶತ). **ಕಲ್ನಾಟ್ಟು**: ಈ ಕಲ್ನಾಟ್ಟನೞಿದೊಟ್ಟ ಕೊಣ್ಡಾಳ್ದಜ್ಗೆ (ಎಕ. III, ತಿರುಮ. ೯೩-೮; 896 ?). **ಕಲ್ನಾಡು**: ಎಱೆಯಜ್ಗಜ್ಗೆ ಕಲ್ನಾಡು (ಎಕ. I, ೩-೧೨; 890); ಬೆಂಪೂರ್ಪ್ಪನ್ನೆರಡುಮಂ ಶಾಸನಬದ್ಧಂ ಕಲ್ನಾಡಿತ್ತನ್ (ಎಕ. IX, ಬೆಂಗಳೂ. ೮೩-೬; ಸು. 890); ವೀದಿಯ ಕಲ್ನಾಡು ಕೊಟ್ಟದು (ಎಕ. III, ತಿರುಮ. ೯೧-೮; 921). [< ಕಲ್ನಾಟು$_1$]

**ಕಲ್ನಾಟುಗೊಡು**, ಕಲ್ನಡುಗೊಡು, ಕಲ್ನಾಡುಗೊಡು (ಕ್ರಿ). ವೀರನ ಸ್ಮರಣಾರ್ಥವಾಗಿ ಕಲ್ಲುನೆಟ್ಟು ಅವನ ಬಳಗಕ್ಕೆ ದತ್ತಿಬಿಡು, —ಶಾಸನ ಹಾಕಿಸು: ವೀರವನಭ್ಯಂತರಿಸಿ ಶ್ರೀ ಕಲ್ನಾಟುಗೊಟ್ಟರ್ (ಎಕ. IX, ದೇವನ. ೧೦-೧೨; 948); ಬಾಳ್ಗಟ್ಟು ಕಲ್ನಾಟುಗೊಟ್ಟ (ಎಕ. XI, ಹೊಳಲ್ಕೆ. ೮೫-೯; 977). **ಕಲ್ನಡುಗೊಡು**: ಬೀರನೊಬವ್ವ ಮೆಚ್ಚಿ ಕಿಟ್ಕನಾಡ ಪಿರಿಯ ಬಿದಿರೂರ ಕಲ್ನಡುಗೊಟ್ಟಂ ಗಂಗನ ಮಕ್ಕಳ ಮಕ್ಕಳ್ವರೆಗಂ ಸಲ್ಗುಂ (ಎಕ. X, ಗೋರಿಬಿ. ೪-೨೩; ಸು. 920). **ಕಲ್ನಾಡುಗೊಡು**: ಕಿಱುವುಸು ಊರುಮಂ ಕಲ್ನಾಡುಗೊಟ್ಟರ್ (ಎಕ. IV, ಹೆಗ್ಗಡ. ೧೦೩-೧೨; ಸು. 910). [ಕಲ್ನಾಟು$_2$ + ಕೊಡು]

**ಕಲ್ನಾಟ್ಟು** 'ಕಲ್ನಾಟು$_2$' ನೋ.

**ಕಲ್ನಾಡು** 'ಕಲ್ನಾಟು$_2$' ನೋ.

**ಕಲ್ನಾಡುಗೊಡು** 'ಕಲ್ನಾಟುಗೊಡು' ನೋ.

**ಕಲ್ನಾರು**, ಕಲ್ಲನಾರು, ಕಲ್ಲುನಾರು (ನಾ). ೧. ಒಂದು ಜಾತಿಯ ಸಸ್ಯ; ದೆವ್ವಬಾಳೆ (ಉಕ). ೨. ಆ ಸಸ್ಯದ ಎಳೆ, —ನಾರು. ೩. ಒಂದು ಖನಿಜ; ಔಷಧ ಸಾಮಗ್ರಿ; ನಾರುನಾರಾಗಿರುವ ಕಲ್ಲು. **ಕಲ್ಲನಾರು**: ೨. ಮಿಂದು ಕಲ್ಲನಾರ ಸೀರೆಯನುಟ್ಟು (ಶ್ರಾವಕಾ. ೧೦೫-೨೦). **ಕಲ್ಲುನಾರು**: ೩. ಜೀರಿಗೆ, ಕಲ್ಲುನಾರು, ಕರೀಜೀರಿಗೆ . . . ಬೆಣ್ಣೆ ಮತ್ತು ಸಕ್ಕರೆಯಲ್ಲಿ ಮಿಶ್ರಮಾಡಿಕೊಡಲು ದಾಹಜ್ವರ ಗುಣವಾಗುವುದು (ಸಕವೈ. ೮೬). [ಕಲ್$_3$ + ನಾರು$_3$ (< ನಾರ್)]

**ಕಲ್ನಿಲೆ** 'ಕಲ್ನೆಲೆ' ನೋ.

**ಕಲ್ನಿಲೆನಿಲ್** 'ಕಲ್ನೆಲೆನಿಲ್' ನೋ.

**ಕಲ್ನಿಱಿಸು** (ಕ್ರಿ). ಕಲ್ಲನ್ನು ನಿಲ್ಲಿಸು; ಶಿಲಾಶಾಸನವನ್ನು ಸ್ಥಾಪಿಸು: ಅಕ್ಕರಂ ಬರೆದು ಕಲ್ನಿಱಿಸುತ್ತೆ (ಎಕ. VII, ಶಿವಮೊ. ೪-೪೫; 1122). [ಕಲ್$_3$ + ನಿಱಿಸು]

**ಕಲ್ನೆಲೆ,** ಕಲ್ನಿಲೆ (ನಾ). [ಜೈನ] ಬೇಸಗೆಯಲ್ಲಿ ಕಲ್ಲಿನ ಮೇಲೆ ನಿಂತು ಮಾಡುವ ತಪಸ್ಸು; ಹಾಗೆ ತಪಸ್ಸಿಗಾಗಿ ನಿಲ್ಲುವುದು: ಶಾಂತಮನುತಾಪಮನಾಱಿಸಿ ತಂ[ದುದಂ]ದು ಬರ್ದೊಂ ಪರಿದಿರ್ದ ವೋಲ್ ಮುನಿಗೆ ಕಲ್ನೆಲೆ ಬಲ್ನೆಲೆಯಂ ನಿದಾಘದೊಳ್ (ಶಾಂತಿಪು. ೯-೧೦೮); ಕಲ್ನೆಲೆಯದೇವರ್ ತಮ್ಮ ಗುರುಗಳೀಳಾಚಾರ್ಯ್ಯದೇವರ್ಗ್ಗೆ ಪರೋಕ್ಷವಿನಯ ನಿಸಿಧಿಗೆಯಂ ನಿಱಿಸಿದರ್ (ಎಕ. XIV, ಎಡತೊ. ೮೪-೧೮; 910); ಕಲ್ನೆಲೆಯಿದ್ದುಱಿ ಮಾಗಿಯಲ್ಲಿ ಮುತ್ತಾ ಸುರ ಬೆಳ್ಳ ವಾಸದೊಳಮಿರ್ದು (ಬಾಧಪು. ೫-೮೫); ಕಲ್ನೆಲೆ ಮರ ಮೊದಲ್ ಬೆಳ್ಳವಾಸಂ ಎಂಬಿವನಱಿವೆಂ (ಜೀವಸಂ. ೧೬೨-೨೯ ವ). **ಕಲ್ನಿಲೆ:** ತನ್ನುನಿಗೆ ಕಲ್ನಿಲೆಯಲ್ಲಿದು ಬೆಳ್ಳವಾಸಮೆಂಬುದನೆಸಗಿತ್ತು ಬೇಸಗೆಯ ಬೆಟ್ಟದ ಕಲ್ನಿಲೆ ನಿಂದ ಗೌರವಂ (ಅನಂಪು. ೪-೧೮). [ಕಲ್$_3$ + ನೆಲೆ]

**ಕಲ್ನೆಲೆದೇವ** (ನಾ). ಒಬ್ಬಾತನ ಹೆಸರು (?): ರವಿಕೀರ್ತ್ತಿ ಮುನೀನ್ದ್ರನೆನ್ನು ಪಟ್ಟಳಿಗೆಯೆ ಪೇಱಿದೆ ನೋಲ್ಪ ಕಲ್ನೆಲೆದೇವರ (ಎಕ. VI, ಮೂಡಿಗೆ. ೧೮-೨೪; ಸು. 1040). [ಕಲ್ನೆಲೆ + ದೇವ]

**ಕಲ್ನೆಲೆನಿಲ್,** ಕಲ್ನಿಲೆನಿಲ್ (ಕ್ರಿ). ಬೇಸಗೆಯಲ್ಲಿ ತಪಸ್ಸಿಗಾಗಿ ಕಲ್ಲಿನ ಮೇಲೆ ಸ್ಥಿರವಾಗಿ ನಿಲ್ಲು: ಪೊಱಲ ಪಡುವಣ ಬೆಟ್ಟದ ಮೇಗೇಕಸ್ಥಿರ ಯೋಗಂಗೊಂಡು ಕಲ್ನೆಲೆನಿಂದರ್ (ವಡ್ಡಾರಾ. ೧೬೦-೧೪); ಕಲ್ನೆಲೆ ನಿಂದು ಯೋಗದ ನಿಯೋಗದಿನಿರ್ಪುದುಂ (ಶಾಂತಿಪು. ೬-೧೦೮); ನುಸುಟ್ಟು ಪೋಗದೆ ಬೇಸಗೆಯ ನಾಲ್ಕುತಿಂಗಳುಂ ಕಲ್ನೆಲೆನಿಂದು (ಧರ್ಮಾಮೃ. ೧೧-೨೧೨); ಪೊಱಪೊಱಲೊಳ್ ಕಲ್ನೆಲೆ[ಪಾಠಾಂ. ಕಲ್ಮೆಲೆ] ನಿಂದಿರ್ದೊಡೆ (ಜೀವಸಂ. ೧೪೪-೨೧ ವ). **ಕಲ್ನಿಲೆನಿಲ್:** ಯೋಗಮುಂ ಕೈಕೊಂಡು ದಿವಸಕ್ಕಂ ಕಲ್ನಿಲೆನಿಲ್ (ವಡ್ಡಾರಾ. ೧೧೪-೬); ಬೇಸಗೆಯ ಬೆಟ್ಟದ ಕಲ್ನಿಲೆನಿಂದ ಗೌರವಂ (ಅನಂಪು. ೪-೧೮). [ಕಲ್ನೆಲೆ + ನಿಲ್]

**ಕಲ್ಪ** (ನಾ). ೧. ಕಟ್ಟಳೆ; ನಿಯಮ; ವಿಧಿ: ಶಾಂತರಾಗಿ ಕಷ್ಟ ಸುಖಗಳಲ್ಲಿ ಸಮಭಾಗಸ್ಥರಾಗಿ ನಮ್ಮನಮ್ಮ ಸಂಪದವನ್ನು ನಾವು ಅನುಭವಿಸುವುದು ಉತ್ತಮ ಕಲ್ಪ (ಭೀಷ್ಮಚ. ೧೪೨); ಕಲ್ಪೋಕ್ತವಾಗಿ ವ್ರತವನ್ನು ನಡೆಸಬೇಕು (ರೂಢಿ). ೨. ಯಜ್ಞಯಾಗಾದಿಗಳ ನಿಯಮಾದಿಗಳನ್ನು ವಿವರಿಸುವ ವೇದಾಂಗಗಳಲ್ಲಿ ಒಂದು: ಕಲ್ಪವೇ ಅಶ್ವಲಾಯನೀಯ, ಬೋಧಾಯನೀಯ ಆಪಸ್ತಂಬೀಯಾದಿ ಸೂತ್ರರೂಪದಿಂ ಯಜ್ಞಪ್ರಯೋಗಾದಿಗಳಂ ಕಲ್ಪಿಸುವುದು (ವಿವೇಕ. ೪). ೩. ಆಗಮಗಳಲ್ಲಿ ಒಂದು: ಮರೀಚಿಮಹರ್ಷಿ ಪ್ರೋಕ್ತವಾದ ಜಯ . . . ವಿಮಲ, ಕಲ್ಪಗಳೆಂಬ ಎಂಟು ಆಗಮಗಳು (ಭಾರದ. ೭೫). ೪. ಬ್ರಹ್ಮನ ಒಂದು ದಿವಸ ಅಥವಾ ಸಹಸ್ರಯುಗಗಳ ಕಾಲಾವಧಿ: ಒಂದಿರುಳನು ಕಲ್ಪ ಕಾಲದಂತೆಣಿಪಳು (ಹದಿಬ. ೬-೨೬); ಮೂರ್ಖಮನುಷ್ಯರು . . . ಕಲ್ಪ ಪರ್ಯಂತವಾಗಿ ಅವರು ನರಕದಲ್ಲಿ ಬೀಳುವರು (ತುಳಸಿ. ೨೧). ೫. ಪರ್ಯಾಯ. ೬. ಪ್ರಳಯ. ೭. ವೈದ್ಯಶಾಸ್ತ್ರದಲ್ಲಿ ಒಂದು ಪ್ರಣಾಲಿ. 'ಕಾಯಕಲ್ಪ' ಪರಾ. ೮. ಕಲ್ಪವೃಕ್ಷ. ೯. [ಜೈನ] ಸೌಧರ್ಮ, ಈಶಾನ ಮೊದಲಾದ ಹದಿನಾರು ಬಗೆಯ ಸ್ವರ್ಗ: ಆ ಪದಿನಾಱು ಕಲ್ಪಂಗಳ ಮೇಲೆ ನವಗ್ರೈವೇಯಕಂಗಳಿರ್ದುವು (ಅಜಿಪು. ೧೧-೨೯ ವ); ಕಡೆಯೊಳಯ್ದನೆಯ ಕಲ್ಪದುಪಪಾತತಲ್ಪದೊಳ್ ದೇವನಾದೈ (ಪಂಪಾರಾಮಾ. ೬-೫೭ ವ). ೧೦. [ಜೈನ] ಉತ್ಸರ್ಪಿಣಿ ಹಾಗೂ ಅವಸರ್ಪಿಣಿ ಕೂಡಿದ ಕಾಲಾವಧಿ: ಉತ್ಸರ್ಪಿಣಿಯುಮವಸರ್ಪಿಣಿಯುಂ . . . ಅವೆರಡುಂ ಕೂಡಿದೊಡೆ ಕಲ್ಪಮೆಂಬುದಕ್ಕುಂ (ಅಜಿಪು. ೩-೧೫ ವ). ೧೧. [ವೀಶೈ] ವಿಭೂತಿಯ ನಾಲ್ಕು ಪ್ರಕಾರಗಳಲ್ಲಿ ಒಂದು: ಆ ಸಮುಸ್ತ ಭಸಿತಂಗಳಾದೊಡೆ ಕಲ್ಪ, ಅನುಕಲ್ಪ, ಉಪಕಲ್ಪ, ಅಕಲ್ಪವೆಂದು (ವಿವೇಕ. ೭೪). [ಸಂ.]

**ಕಲ್ಪಕ** (ಗು). ೧. ಕಲ್ಪನಾಶಕ್ತಿಯುಳ್ಳ. 'ಕಲ್ಪಕತೆ' ಪರಾ. (ನಾ). ೨. ಮಾಡುವವನು; ರಚಿಸುವವನು; ನಿರ್ಮಾಣಕಾರ: ಹಂಫ್ರೀ ಡೇವಿಯೆಂಬ ಕಲ್ಪಕನು ಒಂದು ಚಮತ್ಕಾರವಾದ ಕಂದೀಲು ಮಾಡಿದನು (ಮುಂಬಯಿ. ೬-೪೦). ೩. ವ್ರತ; ನಿಯಮ. ೪. ಕ್ಷೌರಿಕ; ನಾಪಿತ; ನಾಯಿಂದ; ಕೆಲಸಿಗ (ಉಕ). ೫. ಕರುಣೆಯುಳ್ಳವನು: "ಕೃಪಾಳುಃ, ಕಲ್ಪಕಃ, ಕಲ್ಪಮಾನಃ–ಈ ೩ ಕರುಣಾಳು"(ಕಾಶಕ್ಕ. ೧೩೪). [ಸಂ.]

**ಕಲ್ಪಕತೆ** (ನಾ). ಕಲ್ಪನಾಶಕ್ತಿ; ಕಲ್ಪನಾಚಾತುರ್ಯ: ಎಳೆಯ ಮಗುವಿನ ಸರಳತೆಯನ್ನೂ ಕಲ್ಪಕತೆಯನ್ನೂ ಚಿತ್ರಿಸುವ ಈ ನಾಟಕ ತುಂಬ ಮುದ್ದಾಗಿದೆ (ಧರ್ಮಸಾ. ೭೪); ಈ ಕಲ್ಪಕತೆಯ ಓಜಸ್ಸಿಗೆ ಸರಿಸಮಾನವಾಗಿ ಬುದ್ಧಿಯ ತೇಜಸ್ಸು ತುಂಬಿದೆ (ನವ್ಯಕಾ. ೨೮). [ಸಂ. ಕಲ್ಪಕತಾ]

**ಕಲ್ಪಕಾಲ** (ನಾ). ೧. ಒಂದು ಕಲ್ಪಾವಧಿಯ ಕಾಲ. ೨. ಪ್ರಳಯ ಕಾಲ: ಪ್ರಕ್ಷುಬ್ಧಕಲ್ಲೋಲಕಲ್ಪಿತಕೋಲಾಹಲ ಕಲ್ಪಕಾಲ ರಭಸ ಸ್ಪರ್ಧಿಯಂ ವಾರ್ಧಿಯಂ (ಕಾವ್ಯಸಾ. ೭೫ ಶೂದ್ರಕ). ೩. [ಜೈನ] ಉತ್ಸರ್ಪಿಣಿ ಹಾಗೂ ಅವಸರ್ಪಿಣಿಕಾಲ ಎರಡೂ ಸೇರಿ ಆಗುವ ಕಾಲಾವಧಿ. [ಕಲ್ಪ + ಕಾಲ$_1$]

**ಕಲ್ಪಕುಜ,** ಕಲ್ಪಕುಜ (ನಾ). ಬೇಡಿದುದನ್ನು ಕೊಡುವ ಸ್ವರ್ಗಲೋಕದ ಒಂದು ಮರ: ಕಲ್ಪಕುಜಮಿತ್ತ ಮಹಾಸುಮನಃಪುಂಜದೆ ಹರಿಗರ್ಘ್ಯಮನಿತ್ತರ್ ಜಯಜಯಾನ್ವಿತರ್ ಬ್ರಹ್ಮಾದ್ಯರ್ (ಜಗವಿ. ೧-೫೨); ಇಷ್ಟಶಿಷ್ಟ ಕಲ್ಪಕುಜಂ (ಪುಷ್ಪಪು. ೧-೭೪). **ಕಲ್ಪಕುಜ:** ದಿಬ್ಯರತ್ನಂಗಳುಬ್ಬರದಿಂದಿರ್ಕ್ಕುವುದಗ್ರ ಕಲ್ಪ[ಕು]ಜವಿಕ್ಕುರ್ಗಂ (ಕಇ. IV, ೧-೧೦; 1204). 'ಕಲ್ಪವೃಕ್ಷ' ಪರಾ. [ಕಲ್ಪ + ಕುಜ]

**ಕಲ್ಪಕುಜಾತ** (ನಾ). = ಕಲ್ಪಕುಜ: ನಿನ್ನೊಳ್ತಾಂ ವ್ಯರ್ಥತೆಯಂ ಪಡೆಗುಂ ಪರಮಾರ್ಥವಚೇತನತೆಯಿಂದೆ ಕಲ್ಪಕುಜಾತಂ (ಕವಿರಾ. ೩-೪೪). [ಕಲ್ಪ + ಕುಜಾತ]

**ಕಲ್ಪಜ** (ನಾ). ೧. ಸ್ವರ್ಗದಲ್ಲಿ ಹುಟ್ಟಿದುದು: ಕಲ್ಪಜಾಲೇಪದಿಂ ಕಲ್ಪಜದಾಮಸ್ತೋಮದಿಂ ಕಲ್ಪಜಮಣಿಮಯಭೂಷಾಕದಂಬಂಗಳಿಂ ಕಲ್ಪಜವಸ್ತ್ರಾನೀಕದಿಂದರ್ಚಿಸಿದನೊಸೆದು ಸೌಧರ್ಮಕಲ್ಪಾಮರೇಂದ್ರಂ (ಮಲ್ಲಿಪು. ೧೩-೨೨). ೨. ಸ್ವರ್ಗದಲ್ಲಿ ಹುಟ್ಟಿದವನು; ದೇವತೆ: ಅಜಿತೇಂದ್ರನನಿತರರ್ ಕಲ್ಪಜೇಂದ್ರರಿಕ್ಕೆಲದೊಳೆಸೆದು ವೇಷ್ಟಿಸಿಬರೆ (ಅಜಿಪು. ೪-೨೫). [ಸಂ.]

**ಕಲ್ಪಜಪತಿ** (ನಾ). ಕಲ್ಪೇಂದ್ರ; ದೇವಪತಿ: ನಿಜ ಕುಸುಮಸ್ರಜಂ ಕೊರಗಿದತ್ತು ಮೊಗಂ ಕೊರಗಿತ್ತೆ . . . ಮನಂ ನಡುಗಿತ್ತೆ ಪೇಱ ಕಲ್ಪಜ ಪತಿಗೆಂದು ತಮ್ಮೊಳುಲಿದರ್ ಸುರರ್ (ಚಂದ್ರಪು. ೯-೫೬). [ಕಲ್ಪಜ + ಪತಿ$_1$]

**ಕಲ್ಪಡೆ** (ನಾ). ಕಲ್ಲಿನ ಸ್ತರ; ಶಿಲೆಯ ಪದರು: ಅರುಣಾದ್ರಿಗಿರಡೆ ಮಳೆಗರೆಯೆ ಕಣ್ಣೀರು ಕಲ್ಪಡೆಗಳಿಂ ಪರಿದು ವಾಹಿನಿಯಾದ ತೀರಿನಿಂದಾ ರಕ್ಕಸನ ಮೈಯ ಘಾಯಂಗಳಿಂದೊಗೆದು ರುಧಿರ ಪರಿದು (ನವಮೋ. ೧೨-೬೯). 'ಕಲ್ಪರೆ' ಪರಾ. [ಕಲ್$_3$ + ಪಡೆ$_3$]

**ಕಲ್ಪಣ** (ನಾ). ದೈವಕಲ್ಪನೆ; ಸಂಕಲ್ಪ (?): ಮಿತ್ರಬಂಧುಗಳೆಂಬ ಹಂಬಲವು ಬೇಡ ದತ್ತದಲ್ಲಿ ಬರೆದ ಕಲ್ಪಣವದು ತಪ್ಪದು (ಪುರಂದ. ೧-೧೫೯-೩); ಹರದೂ ಸಂಶಯ ಕಲ್ಪಣ ಹುರಿದೂ ತನು ನಾನೆಂಬರಿವ ಮರದೂ ಚಿದ್ಬಿಂದು ಮುತ್ತು ಸುರಿದೂ (ಚಿದಾವ. ೯೧-೧೪). [< ಕಲ್ಪನ ?]

**ಕಲ್ಪಣಿ** (ನಾ). ಕಲ್ಪಿಸಿಕೊಂಡು ಮಾತನಾಡುವವಳು; ಇಲ್ಲದ್ದು ಸಲ್ಲದ್ದನ್ನು ಹೇಳುವವಳು (?) : ಬಂದಾ ದೂತಿಗೆ ಬಾಯಿ ಮೇಲೆ ಬಡಿವನೆಂದಾಡ್ಡಳಾ ರುಕ್ಮಿಣಿ ಅಂದಾ ಮಾತನು ಕೇಳಿ ಸುಮ್ಮನಿಹದೂ ಚಂದಾಯಿತೇ ಕಲ್ಪಣೀ ಬಂದೇ ನಾ ಸ್ಮರಬಾಣ ತಾಕಲು ಬಲೂ (ಶ್ರೀಕೃಪಾ. ೮೭–೪). [?]

**ಕಲ್ಪಣೆ₁** (ನಾ). ಕಲ್ಲಿನ ಗಣಿ: ದೊಡ್ಡ ಬಂಡೆಯಿಂದ ಕಲ್ಲನ್ನು ಎಬ್ಬಿ ತೆಗೆಯುವಲ್ಲಿ ಮಾಡಿದ ತೋಡುಹಳ್ಳ; ಬಂಡೆನೆಲೆ; ಕಲ್ಲುಗುಣಿ; ಕಲ್ ಪಣೆ (Quarry. ಇಂಕನಿ). [ಕಲ್₃ + ಪಣೆ₄]

**ಕಲ್ಪಣೆ₂** (ನಾ). ಕಲ್ಪನೆ; ಊಹೆ: ತಿಳಿಯದನುಪಮವಚನ ಕಲ್ಪಣೆ ಗಳನು ತತ್ತಸ್ಥಾನದಲಿ ನೆಲೆಗೊಳಿಸಿ ದ್ರಾಕ್ಷಾಪಾಕದಂದದಿ ಕೇಳುವರ ಕರ್ನಗಳಿಗೆ ಸುಸ್ವಾರವನುಗರೆವಂ ತಿಳುಹನೆನ್ನೊಳು ಕಲ್ಪಣೆಯಾ ಗೈದೊಳಗೆನಿಲು ನಾ ರಚಿಪೆ ಕಾವ್ಯನ ಸಾರಭರಿತದಲಿ (ಬಜ್ಜಪು. ೩–೯). [< ಕಲ್ಪನೆ]

**ಕಲ್ಪತರು** (ನಾ). = ಕಲ್ಪಕುಜ: ಪಣ್ತ ಕಲ್ಪತರುವೆಂದಡದೇವಣ್ಣಿಪುದೋ ರೂಪವಿದ್ಯಾಧರಿಯ (ಸೌಇಇ. XX, ೪೯–೩೭; 1076 ?); ದತ್ತೂರ ಬಿತ್ತಿನಲ್ಲಿ ಕಲ್ಪತರು ಹುಟ್ಟಿತ್ತು ಕಲ್ಪತರುವಿನಗ್ರದಲ್ಲಿ ಯಿಟ್ಟಿಯ ಹಣ್ಣಾಯಿತ್ತು (ಅಜಿವಾ. ೪೮–೭೩); ವಸಂತರಾಜನ ಕಯ್ಯೊಳು ಕಲ್ಪತರುವಿನ ಸಸಿಯಂ ಕೈಲೆಡೆಗೊಡುವಂತೆ (ನಂಬಿರ. ೨–೮೩). [ಕಲ್ಪ + ತರು₂]

**ಕಲ್ಪತ್ತು** 'ಕಲಬತ್ತು' ನೋ.

**ಕಲ್ಪದ್ರು** (ನಾ). = ಕಲ್ಪಕುಜ: ಕಲ್ಪದ್ರುವಿಂ ಸತ್ತ್ವಗೌರವಯುಕ್ತಂ (ಜಗವಿ. ೨–೮೩). [ಸಂ.]

**ಕಲ್ಪದ್ರುಮ** (ನಾ). = ಕಲ್ಪಕುಜ: ಗೌರೀಲತಾಶ್ಲಿಷ್ಟಶಂಕರ ಕಲ್ಪದ್ರುಮ ನೀಗಭೀಷ್ಟಫಲಮಂ (ಗದಾಯು. ೧–೨); ಬಿದ್ದನ್ ವಾಲಿ, ಬಿದ್ದುದೆನೆ ಕಲ್ಪದ್ರುಮಂವೆರಸಿ ಸಗ್ಗದೈರಾವತಂ ನೆಲಕೆ (ಶ್ರೀರಾಮಾ. ೩೧೧–೨೮೦). [ಸಂ.]

**ಕಲ್ಪನ** (ನಾ). = ಕಲ್ಪನೆ. [ಸಂ.]

**ಕಲ್ಪನಾಕುಬ್ಜ** (ನಾ). ಕಲ್ಪನಾಶಕ್ತಿ ಅಲ್ಪವಾಗಿರುವವನು: ಭಾವ ಸತ್ಯವನರಿಯದಿರ್ಪ ಕಲ್ಪನಾಕುಬ್ಜರಿಗಿದಲ್ಪಮಲ್ತುದ್ಯಮಂ, ಕೇಳ್, ಸೇತುಬಂಧನ ಬೃಹದ್ದರ್ಶನಂ (ಶ್ರೀರಾಮಾ. ೫೯೦–೧೭೮). [ಸಂ.]

**ಕಲ್ಪನೆ** (ನಾ). ೧. ನಿಯಮ. ೨. ಯೋಜನೆ. ೩. ಕೃತಿ; ರಚನೆ, ಉಂಟುಮಾಡುವಿಕೆ. ೪. ಅಲಂಕಾರ. ೫. ಭಾವನೆ; ಊಹೆ; ಮಾನಸಿಕ ಚಿತ್ರ: ನಾನು ಸಹಿಸಿದ ಹಿಂಸೆಯ ಕಲ್ಪನೆ ನಿಮಗಿದ್ದಿದ್ದರೆ ಈ ಮಾತನ್ನು ನೀವು ಕೇಳುತ್ತಿದ್ದಿಲ್ಲ (ಕಮನೆ. ೧೧); ಕಲ್ಪನೆಯೊಳು ನಿನಗೇತರ ಬಡತನ ಸಂಕಲ್ಪ ಭವ್ಯವಾಗಿರಲಿ (ಇಂಚಾಪ. ೧೭೨–೪೮). [ಸಂ. ಕಲ್ಪನಾ]

**ಕಲ್ಪನೋಕ್ತಿಕಷ್ಟ** (ನಾ). [ಕಾವ್ಯಮೀ] ಕಾವ್ಯದೋಷಗಳಲ್ಲಿ ಒಂದು; ಕವಿಯ ಆಶಯವೇನೆಂಬುದನ್ನು ಊಹಿಸಲು ಕಷ್ಟ ವಾಗಿರುವುದು: ಶ್ರುತದುಷ್ಟಮರ್ಥದುಷ್ಟಂ ಶ್ರುತಿಕಷ್ಟಂ ಕಲ್ಪನೋಕ್ತಿ ಕಷ್ಟಮುಮೆಂದೀ ಕೃತಕೃತ್ಯಮಲ್ಲ ವಲ್ಲಭಮತದಿಂ ನಾಲ್ಕಕ್ಕು ಮಿಲ್ಲಿ ಕೃತಿದೋಷಂಗಳ್ (ಕವಿರಾ. ೧–೬೧). [ಸಂ. (ಕಲ್ಪನಾ + ಉಕ್ತಿ + ಕಷ್ಟ)]

**ಕಲ್ಪಪಾದಪ** (ನಾ). = ಕಲ್ಪಕುಜ: ಉದ್ಯಾನಕ್ರೀಡೆಯೊಳಾದ ಪರಿ ಶ್ರಮಮಂ ತನ್ಮನಿಪಾದಕಲ್ಪಪಾದಪಚ್ಛಾಯೆಯೊಳ್ ಕಳೆಯಲ್ಬರ್ಪಂತೆ ಬಂದು ಬಂದಿಸಿ (ಶಾಂತಿಪು. ೭–೬೭ ವ); ಸಕಳಜನಮಂ ನಿಜಪ್ರಸಾದ ಕಲ್ಪಪಾದಪದಿಂ ತಣಿಪಿ (ಮಲ್ಲಿಪು. ೯–೧೨೮). [ಕಲ್ಪ + ಪಾದಪ]

**ಕಲ್ಪಭೂರುಹ** (ನಾ). = ಕಲ್ಪಕುಜ: ನೀವೆ ಶರಣಂ ಶರಣಾಗತ ಕಲ್ಪಭೂರುಹಾ (ಸುಕುಮಾ. ೩–೨೭); ನುಡಿದರಾ ಮುನಿವರರು ಕಡಿದರು ಕೌರವಾನ್ವಯ ಕಲ್ಪಭೂರುಹವ (ಕುವ್ಯಾದ್ರೋ. ೧೮–೫೪). [ಕಲ್ಪ + ಭೂರುಹ]

**ಕಲ್ಪಮಹೀಜ** (ನಾ). = ಕಲ್ಪಕುಜ: ಕಲ್ಪಮಹೀಜದ ಪಕ್ಕದಿರ್ಕಲಂ ಬಿಡಿದು ಮಡಲ್ತು ತೋಜುವ ಲತಾವಳಿಗಳ್ಗೆಣೆಯಾಯ್ತು (ಆದಿಪು. ೨–೪). [ಕಲ್ಪ + ಮಹೀಜ]

**ಕಲ್ಪಮೇಘ** (ನಾ). ಪ್ರಳಯಕಾಲದ ಮೋಡ: ಬೆಂದುದು ಸುರೌಘದ ಗೆಲವು ಕರೆಯಾ ಕಲ್ಪಮೇಘವನುರಿಯ ಮಾಣಿಸಲಿ (ಕುವ್ಯಾಕ. ೭–೪೩). [ಕಲ್ಪ + ಮೇಘ]

**ಕಲ್ಪರಟೆ, ಕಲಪರಟ, ಕಲಪರಟೆ, ಕಲುಪರಟ, ಕಲ್ಪರ್ಟೆ** (ನಾ). ಕಲ್ಲಿನಿಂದ ಮಾಡಿದ ಬಟ್ಟಲು, —ಪಾತ್ರೆ. **ಕಲಪರಟ** : ಹಳಲು ಹಾವಾದರೆ ಗೆಳೆಯ ರಿಪುವಾದರೆ ಕಲಸಿಟ್ಟ ಅವಲಕ್ಕಿ ಕಲಪರಟ ನುಂಗಿದರೆ (ಪುರಂದ. ೩–೨೧೩–೨); ಕಲಕಡಿಗೆ, ಕಲಪರಟ, ಮುಚ್ಚಳ . . . ಮುಂತಾದ ಪಾತ್ರೆಗಳನ್ನು ಮಾಡುವರು (ಕಭಾಗ. ೩೦); ಕೈಯಲ್ಲಿ ಸಿಕ್ಕ ಕಲಪರಟಯಿಂದ ನಾಯಿಗೆ ಇಕ್ಕಿದರು. ಕಲಪರಟ ಒಡೆಯಿತು (ವೀನಾದ. ೨೫). **ಕಲಪರಟೆ** : ಸಣ್ಣ ಕಲಪರಟೆಯಲ್ಲಿ, ಅಷ್ಟು ರಂಗವಲ್ಲಿಯ ಪುಡಿ ಚೆಲ್ಲಿ (ದೀಪಹ. II, ೯೮). **ಕಲುಪರಟ** : ಕಲುಪರಟೆಯಲ್ಲಿ ಸಾರು ಮಾಡಿದ್ದರು (ರೂಢಿ). **ಕಲ್ಪರ್ಟೆ** : ಈ ಪಾತ್ರೆ ಗಳಿಗೆ ಕಲ್ಗಡಿಗೆ ಕಲ್ಪರ್ಟೆಗಳೆನ್ನುವರು; ಇವು ಕಿಲುಬುವದಿಲ್ಲ (ಮುಂಬಯಿ. ೩–೫೮). [ಕಲ್₃ + ಪರಟೆ]

**ಕಲ್ಪರೆ** (ನಾ). ಕಲ್ಲಿನ ಪದರ; ಶಿಲಾಸ್ತರ (ಕ). 'ಕಲ್ಪಡೆ' ಪರಾ. [ಕಲ್₃ + ಪರೆ₄ (< ಪೊರೆ₆)]

**ಕಲ್ಪರ್ಟೆ** 'ಕಲ್ಪರಟೆ' ನೋ.

**ಕಲ್ಪಲತೆ** (ನಾ). = ಕಲ್ಪಕುಜ: ಕಾಂತಿಗಳ ನಡುವಣ ತಾರಾಪತಿಯ ಕಳೆಯಂತೆ ಲತೆಗಳ ನಡುವಣ ಕಲ್ಪಲತೆಯಂತೆ (ಗಿರಿಕ. ೪–೪೩ ವ). [ಕಲ್ಪ + ಲತೆ]

**ಕಲ್ಪವಾಸಿಗ** (ನಾ). [ಜೈನ] ಸ್ವರ್ಗದಲ್ಲಿ ವಾಸಮಾಡುವವನು; ದೇವತೆ: ನವಗ್ರಹಮಂಡಲಮಲ್ತು ಕಲ್ಪವಾಸಿಗರ ವಿಮಾನಮಲ್ತು ಜನಕಂ ಬರುತಿರ್ದಪಂ (ಪಂರಾಮಾ. ೫–೨೭). [ಕಲ್ಪ + ವಾಸಿಗ]

**ಕಲ್ಪವೃಕ್ಷ, ಕಳ್ಪವೃಕ್ಷ** (ನಾ). ೧. = ಕಲ್ಪಕುಜ: ನಡುಗುವುಪವನದ ಕಲ್ಪವೃಕ್ಷಂಗಳುಮಂ (ಆದಿಪು. ೩–೩ ವ); ಸುಖದ ಫಲಪ್ರಾಪ್ತಿಯನಾಗಿಪ ಕಲ್ಪವೃಕ್ಷಮಲ್ಲದೆ ಧರ್ಮಂ (ಪುಷ್ಪಪು. ೧೩–೫೫). ೨. [ಜೈನ] ಚಕ್ರವರ್ತಿ ಗಳು ಮಾಡುವ ಒಂದು ಪೂಜೆ: "ಬೇಡಿದಂಗೆ ಬೇಡಿತನಿತ್ತು ಚಕ್ರವರ್ತಿಗಳು ಮಾಳ್ಪ ಪೂಜೆ ಕಲ್ಪವೃಕ್ಷ" (ಶ್ರಾವಕಾ. ೧೬೧–೩); ಜಗಜ್ಜನಜಂಗಮ ಕಲ್ಪವೃಕ್ಷಂ ಕಲ್ಪವೃಕ್ಷಮೆಂಬ ಮಹಾಮಹಿಮೆಯಂ ಮಹಾಪೂತ ಜಿನಾಲಯದೊಳ್ ಮುನ್ನಂ ಮಾಡಿ (ಆದಿಪು. ೪–೩೦ ವ); ಚಕ್ರವರ್ತಿಗಳ್ ಮಾಲ್ಪ ಕಲ್ಪವೃಕ್ಷಮೆಂಬ ಪೂಜೆಯುಂ (ಸುಕುಮಾ. ೬–೨೫ ವ). ೩. [ವೀಶೈ] ಒಂದು ಮಂತ್ರ: ಗಾಯತ್ರಿ . . . ಕಾಮಧೇನು ಕಲ್ಪವೃಕ್ಷ ಮಾಯಾ ಸಾವಿತ್ರಿ . . . ಮಹಾಮಂತ್ರಂಗಳಂ (ವಿವೇಕ. ೮೧). **ಕಳ್ಪವೃಕ್ಷ**: ೧. ಶಿಷ್ಟಜನ ಪೂಜೋತ್ಸಹರು ಆಶ್ರಿತ ಕಳ್ಪವೃಕ್ಷರು ಶರಣಾ[ಗತ] ವಜ್ರಪಂಜರರು (ಶಾಸಪ. ೩೫). [ಸಂ.]

**ಕಲ್ಪಾಂಗ** (ನಾ). ವಿಭೂತಿ ಬಳಿದ ಮೈಯುಳ್ಳವನು (?): ಕುಸುಮಾಕ್ಷತ ಫಲಹಸ್ತಂ ಪ್ರಸನ್ನಚಿತ್ತಂ ವ(ನ)ಯೋತ್ತಮ(ರ)ನ ಕಲ್ಪಾಂಗಂ ಹಸಿತವದನಂ ನಯೋಕ್ತಂ ಬೆಸಗೊಂಡಂದಕ್ಕು ಮಟೆಯು ಮಿದುವೊಂದು ಮತಂ (ಜಟ್ಟಮ. ೧–೩೭). [ಕಲ್ಪ + ಅಂಗ₂]

**ಕಲ್ಪಾಂಘ್ರಿಪ** (ನಾ). = ಕಲ್ಪಕುಜ : ಮೇರು[ವ] ಪೊನ್ ಕಲ್ಪಾಂಘ್ರಿಪ ದಾರವೆ ರಸದೊಜವು ಪರುಸವೇದಿಯ ಕಣಿ ಭಂಡಾರದೊಳುಂಟಿನೆ (ಪಂಪಭಾ. ೧–೨೮) ; ಸಕಲ ಜನಕ್ಕೆ ನೀನೆ ಕಲ್ಪಾಂಘ್ರಿಪನೈ (ಅಜಿಪು. ೮–೨). [ಕಲ್ಪ + ಅಂಘ್ರಿಪ]

**ಕಲ್ಪಾಂತ** (ನಾ). ಕಲ್ಪ ಮುಗಿಯುವ ಸಮಯ ; ಪ್ರಳಯ : ಕಲ್ಪಾಂತೋದಿತ ದ್ವಾದಶ ದಿನಕರ ಕಿರಣಾತಪ ತೀವ್ರಮಪ್ಪ ಮದನ ಸಂತಾಪಕ್ಕೆ (ಕಾದಂಪೂ. ೮೫೨) ; ಕಲ್ಪಾಂತ ಕೃತಾಂತನಂತೆ ಮಾಮಸಕಂ ಮಸಗಿ ಪೊಡೆವ ಸಿಡಿಲಂತೆ ಸಿಡಿಲ್ದು (ಪಂರಾಮಾ. ೧೧–೧೪೩ ವ) ; ಕದಡಿತಾಯಾಸ್ಥಾನ ಕಲ್ಪಾಂತದ ಮಹಾಸಿಡಿಲಂತೆ (ಕುವ್ಯಾಉ. ೨–೪೩). [ಕಲ್ಪ+ಅಂತ$_2$]

**ಕಲ್ಪಾಂತಕಾಲ** (ನಾ). ಪ್ರಳಯಕಾಲ : ಕಲ್ಪಾಂತಕಾಲ ಕ್ಷುಭಿತಾಂಭೋರಾಶಿ ಶಂಕಾವಹ ಬಲನಿಕರಂ (ಆದಿಪು. ೧೩–೭೮) ; ಆ ಕಲ್ಪಾಂತ ಕಾಲಂ ನೆಗೞ್ದುದು ಸಮರಂ ಭೀಮ ದುರ್ಯೋಧನೀಯಂ (ಗದಾಯು. ೮–೨೦). [ಕಲ್ಪಾಂತ + ಕಾಲ$_1$]

**ಕಲ್ಪಾಂತರ** (ನಾ). ಕಲ್ಪಕಾಲ; ಬಹುಕಾಲ : ಬಹಳೈಶ್ವರಿಯವಂತನೆ ಬಾಳು ಕಲ್ಪಾಂತರವ ಹಲವೆನುತ ಹರಸುತಿರೆ (ಕೌಶಿರಾ. ೪೩–೧೦). [ಸಂ.]

**ಕಲ್ಪಾಂತರಸ್ಥಾಯಿ** (ನಾ). ಕಲ್ಪಾಂತರದವರೆಗೆ ಉಳಿಯುವಂತದು ; ಬಹುಕಾಲ ಬಾಳತಕ್ಕದ್ದು : ಈಯೊಡಲಬ್ಬೆ ಪೇೞ್ಮೆನಗೇಂ ಕಲ್ಪಾಂತರಸ್ಥಾಯಿಯೇ (ಪಂಪಭಾ. ೯–೮೪). [< ಸಂ. ಕಲ್ಪಾಂತರಸ್ಥಾಯಿನ್]

**ಕಲ್ಪಾಂತಸ್ಥಾಯಿ** (ನಾ). = ಕಲ್ಪಾಂತರಸ್ಥಾಯಿ : ಕೃತಿಯಂ ಕಲ್ಪಾಂತಸ್ಥಾಯಿಯಂ . . . ಆೞ್ತಿಯೆ ಪೇೞ್ವೆಂ (ಅಜಿಪು. ೧–೭೭). [< ಸಂ. ಕಲ್ಪಾಂತಸ್ಥಾಯಿನ್]

**ಕಲ್ಪಾಮರ** (ನಾ). [ಜೈನ] ಕಲ್ಪಲೋಕಗಳಲ್ಲಿರುವ ದೇವತೆ: ಆ ಕಲ್ಪಾಮರನೊಸೆದಂ (ಆದಿಪು. ೩–೧) ; ಅದೇಂ ನಲಿದನೋ ಕಲ್ಪಾಮರಂ ಕಲ್ಪದೊಳ್ (ಸುಕುಮಾ. ೯–೩೫) ; ಚಾರಣಾಚ್ಯುತೇಂದ್ರ ಪ್ರಮುಖರಪ್ಪ ಕಲ್ಪಾಮರರುಮಂ (ಚಂದ್ರಪು. ೧೨–೧೧೩ ವ). [ಕಲ್ಪ + ಅಮರ$_3$]

**ಕಲ್ಪಾವನಿಜ** (ನಾ). = ಕಲ್ಪಕುಜ : ಅಮೃತಾನ್ನಮನೊಲ್ದೀಗುಮಾಗಳುಂ ಭೋಜನಾಂಗಕಲ್ಪಾವನಿಜಂ (ಆದಿಪು. ೫–೩೯) ; ತನುಜನಖಿಳಾರ್ಥ ಕಲ್ಪಾವನಿಜಂ (ಪುಷ್ಪಪು. ೩–೯೨) ; ಶ್ರೀವರನ ಚರಣಮಂ ಕಲ್ಪಾವನಿಜ ಪ್ರಸವಚಯದಿನರ್ಚಿಸಿ (ಜಗವಿ. ೨–೧). [ಕಲ್ಪ + ಅವನಿಜ]

**ಕಲ್ಪಾವನೀಜ** (ನಾ).=ಕಲ್ಪಕುಜ: ಇದಱೊಳ್ ದಿವ್ಯಸರೋವರಂಗಳಿದಱೊಳ್ ಕಲ್ಪಾವನೀಜಂಗಳ್ (ಪಂಪಭಾ. ೬–೩) ; ನಮಿತಜನ ಕಲ್ಪಾವನೀಜನು ನಮಿತಜನ ಮೃತ್ಯುಪ್ರಹರಣಂ (ಬಸವು. ೪೬–೪). [ಕಲ್ಪ + ಅವನೀಜ]

**ಕಲ್ಪಾಳಿಸು** (ಕ್ರಿ). ಕಲ್ಲನ್ನು ಸೀಳು, —ಹೋಳು ಮಾಡು : ಸೂಸಿ ಕಿಡಿಗಳನುದುರೆ ಕಲ್ಪಾಳಿಸುತ ಕಮಲಾಸನಾದ್ಯರ ಪಾಲಿಸಿದ ನರಸಿಂಹ (ತೀರ್ಥಮ. ೫೧–೪೫). [ಕಲ್$_3$ + ಪಾಳಿಸು]

**ಕಲ್ಪಿ**, ಕಲುಪಿ (ನಾ). ಕಲಿಯುವುದು ; ಕಲಿತುದು ; ವಿದ್ಯೆ : ಅಪಾಯಕೋಟಿಗೆ ಪವಣಿಲ್ಲ ಕಲ್ಪಿಗೆಡೆಯಾವುದೊ ಪಾೞಿಯ ಬಟ್ಟೆದಪ್ಪಿ ಮುಂ ನೆಗೞ್ದೆಡೆಯಿಲ್ಲ ಪೋಗು ಜಯಮಕ್ಕೆ (ಪಂಪಭಾ. ೭–೨೧) ; ಅರುಮನೆಯ್ದೆ ಕೊರ್ತ್ತು ಬಂಚಿಸುವುದೆ ಕಲ್ತ ಕಲ್ಪಿ (ಎಕ. II, ೧೩೩–೪೯ ; 982) ; ತಂದೆ ಕಡಂಗಿ ಕಲ್ಪಿಸುವ ಕಲ್ಪಿಯನೊಲ್ಲದೆ (ಸುಕುಮಾ. ೨–೮) ; ಬಿಟ್ಟರ್ ಕಲ್ಪಿಯ ಮಕ್ಕಳ್ಗೆ ಪಣವಯ್ದು ಪೊಸಕೊಯ್ಲಾಳಿಗೆ ಪಣವಯ್ದು (ಎಇ. XVI, ೩೩೧–೨೩ ; 1077) ; ಮೇಲೆ ನೀರ್ದೆಗೆವ ಕೋಮಳೆ ಕಾಮನ ಕಲ್ಪಿಯಿಂದಮೇನಳವಡೆ ಪತ್ರಕೂಟಮನೆ ಸುತ್ತುವಳೋ (ಚಂದ್ರಪು. ೭–೧೩೮). **ಕಲುಪಿ** : "ಶಸ್ತ್ರಶಿಕ್ಷಾಕ್ರಮೇಣ = ಆಯುಧಂಗಳ ಕಲುಪಿಯ ಕ್ರಮದಿಂ" (ನೀತಿವಾ. ೨೯–೮೮). [ಕಲ್$_1$ + –ಪಿ]

**ಕಲ್ಪಿತ** (ಗು). ೧. ಕಾಲ್ಪನಿಕವಾದ; ವಾಸ್ತವವಲ್ಲದ; ಕೃತಕವಾದ : ಅವರಿಗೆ ಸಕಲವೂ ಕಲ್ಪಿತ ; ಇವರಿಗೆ ಸಕಲವೂ ವಾಸ್ತವ (ಹಿಂದಸಾ. ೬೯) ; ಜೀವಜಗತ್ತುಗಳು ಮಿಥ್ಯೆ ಅಥವಾ ಕಲ್ಪಿತವೆನಿಸಲಾರವು (ಶಕ್ತಿವಿ. ೧೪) ; ಕಲ್ಪಿತ (Hipothetical) ಪ್ರಶ್ನೆಗಳಿಗೆನನ್ನಲ್ಲಿ ಉತ್ತರವಿಲ್ಲ (ಮುಕ್ತಿ. ೨೬೪). ೨. ಏರ್ಪಡಿಸಲ್ಪಟ್ಟ ; ಸಜ್ಜುಗೊಳಿಸಿದ. ೩. ಯೋಜಿಸಿದ; ಸೃಷ್ಟಿಸಿದ. ೪. ಊಹಿಸಿದ ; ಕಲ್ಪಿಸಿದ. (ನಾ). ೫. ಯುದ್ಧಕ್ಕೆಂದು ಸಜ್ಜುಗೊಳಿಸಿದ ಆನೆ. ೬. ಸಂಕಲ್ಪ ; ಯೋಜನೆ : ಕಾಯಕಲ್ಪಿತಂಗಳಿಲ್ಲದೆ ನಿಮ್ಮಿಂದ ನೀವೆ ಸ್ವಯಂಭುವಾಗಿರ್ದಿರಯ್ಯಾ (ಚನ್ನವ. ೪. ೭೫) ; ಕಾಳರಕ್ಕಸಿಯ ಬಸುಱಲ್ಲಿ ಒಬ್ಬ ಫಾಳಲೋಚನ ಹುಟ್ಟಿದ ಆತ ಕಾಲಸಂಹಾರಿ ಕಲ್ಪಿತನಾಶಕ (ಮೋಳಿಮಾ. ೧೮೨–೬೮೫) ; ಮೃಡನ ಕಲ್ಪಿತದಿನಹ ಬಡಕಾಯಕದೊಳಿಂತು ಒದಗಿ ಪಡಿಯಂ ಕೊಡುತಿರಲು (ಬಸವು. ೪೭–೫). [ಸಂ.]

**ಕಲ್ಪಿತೋಪಮೆ** (ನಾ). [ಕಾವ್ಯಮೀ] ಉಪಮಾಲಂಕಾರದಲ್ಲಿ ಒಂದು ಪ್ರಭೇದ : ಕಲ್ಪಿತೋಪಮೆಗೆ – ಮೃಗಮದ ಕಲ್ಪಿತಪತ್ರ ಭಂಗ ರಮ್ಯಂ ನಗೆಮೊಗಮುಜ್ವಳಕಾಂತಿ ನಾಡೆ ಸೌಮ್ಯಂ ಸೊಗಯಿಸುಗುಂ ಮೃಗಲಾಂಛನಾಭಿರಾಮಂ ಮೃಗಧರಬಿಂಬಮಿದೆಂಬಿನಂ ನಿಕಾಮಂ (ಕಾವ್ಯಾವ. ೬೭೫). [ಕಲ್ಪಿತ + ಉಪಮೆ]

**ಕಲ್ಪಿಸು**$_1$ (ಕ್ರಿ). ಕಲಿಸು ; ಹೇಳಿಕೊಡು ; ಶಿಕ್ಷಣಕೊಡು : ಎಲ್ಲಾ ಶಾಸ್ತ್ರಂಗಳುಮಂ ಕಲ್ಪಿಸಿ [ಪಾಠಾಂ. ನೋದಿಸಿ] ಪಂಡಿತನಂ ಮಾಡಿ ನಿಮಗೊಪ್ಪಿಸುವೊಂ (ವಡ್ಡಾರಾ. ೭೪–೭) ; ಭವ್ಯಜನಮಂ ಕಣ್ಣೂಱಿ ಕಲ್ಪಿಪ್ಪುಪಾಧ್ಯಾಯರ್ (ಆದಿಪು. ೧–೪) ; ವಿನೇಯಜನಮಂ ಕಲ್ಪಿಪ್ಪುಪಾಧ್ಯಾಯರಾಗಡುಮೆಮ್ಮಂ ಮನಮೊಲ್ದು ಕಲ್ಪಿಸುಗೆ ಸನ್ಮಾರ್ಗೋಪದೇಶಂಗಳಂ (ಸುಕುಮಾ. ೧–೪) ; ಕಲ್ಪಿಸವೇೞ್ವುದೇ ಪುರುಡಿನೊಳ್ ಪೆಂಡಿರ್ಗೆ ಪಾಂಡಿತ್ಯಮಂ (ಅರ್ಥನೇ. ೩–೩೨) ; ತಂದೆವಿರ, ತಾಯ್ವಿರ ಕಲ್ಪಿಸಿದುಕ್ತಿ (ಶಮದ. ೯೭ ಪ್ರಯೋ). [ಕಲ್ಪಿ + –ಇಸು$_3$]

**ಕಲ್ಪಿಸು**$_2$, ಕಳ್ಪಿಸು (ಕ್ರಿ). ೧. ಉಂಟುಮಾಡು ; ಹುಟ್ಟಿಸು ; ನಿರ್ಮಿಸು ; ಸೃಜಿಸು ; ಕಂಡುಹಿಡಿ : ಕಾರಣಕಥೆಗಳಂ ಕಲ್ಪಿಸದೆ ನೀನಿಲ್ಲಿ ಉಸುಕನೇ ನೋಡುತ್ತಿರು (ಬಸವು. ೨೧–೩೭) ; ನಿಖಿಲಲೋಕವನೆವೆಯಾಟದೆ ಸೃಜಿಸುವ ಮುಖಚತುಷ್ಟಯನ ಕಲ್ಪಿಸಿದ ಅಕಳಂಕ ಮೂರ್ತಿಯ ಮನದೊಳಗಿಂಬಿಟ್ಟು ಪ್ರಕಟಿಸು ತನಗೆ ಮೇಲ್ಗತೆಯ (ಮೋಹತ. ೨೯–೧) ; ಕುಶಿಕಸುತ ಮಾಯಾಹಿಯನು ಕಲ್ಪಿಸಿ ಹರಿಶ್ಚಂದ್ರನ ಕುಮಾರಕನಸುವನುಗಿದನು (ತೊರರಾ. ೩–೨–೨೯) ; ಒಡನಂದಿನ ಋಷಿಗಳು ತಮ್ಮ ಪೆಸರಲಿ ಬಿಡದೆ ತೀರ್ಥವ ಕಲ್ಪಿಸಲು (ಕಂನವಿ. ೫–೩೭) ; ವ್ಯಾಸಮುನೀಂದ್ರನು . . . ಮೂರುಮಂದಿ ಕುಮಾರಕರನ್ನು ಕಲ್ಪಿಸಿದನು (ಕೃವಾಅ. ೯೨). ೨. ಊಹಿಸು ; ಕಲ್ಪನೆಮಾಡು : ಕಂಗಳ ಬೆಳಗ ಕಲ್ಪಿಸಬಾರದು ಕರ್ಣದ ನಾದವ ವರ್ಣಿಸಬಾರದು (ಅವಚಂ. ೬೨–೨೭೩) ; ಇಲ್ಲದ ತಪ್ಪಂ ಕಲ್ಪಿಸಿ ಮೆಲ್ಲನೆ ಮುಳಿದೊಲ್ದು ಕೂರ್ಮೆಯಂ ಬಳೆಯಿಸುತುಂ (ಉದ್ಭಟ. ೧೦–೭೦). ೩. "ನಿರೀಕ್ಷಿಸು" (ಘನವ. ಕೋಶ) : ಕಾಮಧೇನುವಿನಲ್ಲಿ ಕಲ್ಪಿಸಿದ ಸವಿಯಿಪ್ಪುದಲ್ಲದೆ ಮರ್ತ್ಯದ ಪಶುವಿನಲ್ಲಿ ಉಂಟೇನಯ್ಯ (ಘನವ. ೪೭). **ಕಳ್ಪಿಸು** : ೧. ಕಿವಿಗಳೊಳಮಾಯುಮಂ ಪರ್ಚುವ ಕಳ್ಪಿಪ ತೆಱದಿನೆಸೆದುದಾಸ್ಥಾಯಿಕೆಯೊಳ್ (ಶಾಂತಿಪು. ೩–೭೭). [ಕಲ್ಪನ + –ಇಸು$_3$]

**ಕಲ್ಪುಂಜಿಕೆ** (ನಾ). ಕಲ್ಲಿನ ಕುಪ್ಪೆ, —ರಾಶಿ : ಹಳ್ಳಿಯಿಂದಂ ಪಡುವಲ್ ಕಲ್ಪುಜ್ಜಿಕೆಯುದೞಿಂ ಮೂಡಲೊಂದು ಮತ್ತರ್ಪ್ಪುಲರಕೆಯ್ಯುಮನ್ (ಎಇ. XVII, ೧೧೯–೨೦ ; 1124). [ಕಲ್$_3$ + ಪುಂಜಿಕೆ]

**ಕಲ್ಪೇಂದ್ರ** (ನಾ). [ಜೈನ] ಸ್ವರ್ಗಲೋಕವನ್ನಾಳುವ ಇಂದ್ರ: ಈಶಾನೇಂದ್ರ . . . ಅಭ್ಯಂತೇಂದ್ರ– ಈ ಪನ್ನಿಬ್ಬರು ಕಲ್ಪೇಂದ್ರರು (ಪ್ರತಿಷ್ಠಾ. ೬–೪). [ಕಲ್ಪ + ಇಂದ್ರ]

**ಕಲ್ಪೇಶ್ವರ** (ನಾ). = ಕಲ್ಪೇಂದ್ರ: ಕಲ್ಪೇಶ್ವರನನುರಾಗದಿನೊಡನೊಡನೆ ಸುರಿಯೆ ಪಾಲ್ಗಡಲೊಂದುಂಟಾಗದೆ ಮೇರುವ ತುದಿಯೊಳಂ (ಆದಿಪು. ೭–೮೭); ಬಿತ್ತರಿಸಿದರ್ ಗಂಧೋದಕಸ್ನಾನಮಂಗಳಮಂ ತೀರ್ಥಕರಂಗೆ ಮಂಗಳರವಂ ಕೆಯ್ಗಣ್ಮೆ ಕಲ್ಪೇಶ್ವರರ್ (ಪುಷ್ಪಪು. ೧೧–೪೭). [ಕಲ್ಪ + ಈಶ್ವರ]

**ಕಲ್ಪೊನ್ನೆ, ಕಲ್ಹೊನ್ನೆ** (ನಾ). ಒಂದು ಬಗೆಯ ಸಸ್ಯ: ಕಲ್‌ಹೊನ್ನೆ, ಕಿರಿಹೊನ್ನೆ, ಕಲ್‌ಪೊನ್ನೆ, ಹರಳುಹೊನ್ನೆ (ವೃಕ್ಷಿಗಿ. ೧೬–೨೮೬). **ಕಲ್ಹೊನ್ನೆ**: ಕಲ್‌ಹೊನ್ನೆ, ಕಿರಿಹೊನ್ನೆ (ವೃಕ್ಷಿಗಿ. ೧೬–೨೮೬). [ಕಲ್$_3$ + ಪೊನ್ನೆ]

**ಕಲ್ಪತ್ತು** ‘ಕಲಬತ್ತು’ ನೋ.

**ಕಲ್ಬಸರಿ, ಕಲ್ಲುಬಸರೆ, ಕಲ್ಲುಬಸುರಿ** (ನಾ). ಒಂದು ಬಗೆಯ ಬಸರಿ ಮರ (ಶಿ). **ಕಲ್ಲುಬಸರೆ**: ತಿಲಕ, ಕರಿತಿಲಕ, ಕಡವೆ, ಕಲ್ಲುಬಸರೆ . . . ಮೊದಲಾದ ಪುಷ್ಪಫಲಭರಿತವಾದ ವೃಕ್ಷಂಗಳನ್ನೂ (ಕೃವಾಅ. ೨೨೮). **ಕಲ್ಲುಬಸುರಿ**: “ಕಲ್ಲುಬಸುರಿ – ಪ್ಲಕ್ಷ, ಸುಪಾರ್ಶ್ವಕ, ಕಪೀತನ” (ನಾಚಿರಾ. ಶಿ). [ಕಲ್$_3$ + ಬಸರಿ]

**ಕಲ್ಬಾಗೆ** (ನಾ). ಬಾಗೆಯ ಮರದಲ್ಲಿ ಒಂದು ಬಗೆ; ಶಿರೀಷದ ಮರ: ಬಾಗೆ, ಕಲ್ಬಾಗೆ, ಹೊಂಬಾಗೆ (ವೃಕ್ಷಿಗಿ. ೯–೭೪). [ಕಲ್$_3$ + ಬಾಗೆ]

**ಕಲ್ಬಾನಿ** (ನಾ). = ಕಲ್ಬೋಣಿ: ದನಗಳಿಗೆ ಕಲ್ಬಾನಿಯಲ್ಲಿ ನೀರು ಹಾಕುತ್ತಾರೆ (ರೂಢಿ). [ಕಲ್$_3$ + ಬಾನಿ]

**ಕಲ್ಬಾನೆ** (ನಾ). ಒಂದು ಬಗೆಯ ಮರ: ಕಿರಲ್‌ಬೋಗಿ, ಬೋವು ಮರ, ಹಿರಿಬೋಗಿ, ಕರ್ಮರ, ಕಲ್‌ಬಾನೆ (ವೃಕ್ಷಿಗಿ. ೪೪–೮೭೩). [ಕಲ್$_3$ + ಬಾನೆ ?]

**ಕಲ್ಬಾಳಿ** ‘ಕಲ್ವಾಟಿ’ ನೋ.

**ಕಲ್ಬಿಕ್ಕೆ** (ನಾ). ಒಂದು ಬಗೆಯ ಬಿಕ್ಕೆಯ ಮರ: ಕಲ್‌ಬಿಕ್ಕಿ, ನರಿಬಿಕ್ಕಿ (ವೃಕ್ಷಿಗಿ. ೩೩–೬೩೩). [ಕಲ್$_3$ + ಬಿಕ್ಕಿ]

**ಕಲ್ಬಿಸ** ‘ಕಲ್ವಿಸ’ ನೋ.

**ಕಲ್ಬೊಂಬೆ** (ನಾ). ಕಲ್ಲಿನ ಬೊಂಬೆ; ಶಿಲಾಮೂರ್ತಿ: ಸಡಗರದೊಳಂ ಶಿವಾಲಯದ ಕಲ್ಬೊಂಬೆಗಳ್ ನಡೆದು ನರ್ತಿಸುತ್ತಿರ್ದುವು (ಚಬಪು. ೪–೩೪). [ಕಲ್$_3$ + ಬೊಂಬೆ]

**ಕಲ್ಬೋವು** (ನಾ). ಒಂದು ಜಾತಿಯ ಮರ: ಹೈಗ, ಉನ್ನಿಮರ, ಕಲ್‌ಬೋವು, ದೊಡ್ಡೆಲೆಭೋಗಿ (ವೃಕ್ಷಿಗಿ. ೪೪–೮೭೪). [ಕಲ್$_3$ + ಬೋವು]

**ಕಲ್ಮಡು** (ನಾ). ಕಲ್ಲಿನಲ್ಲಾದ ಮಡು; ಒಂದು ಮಡುವಿನ ಹೆಸರು (?): ಶಿವಾಪುರದ ಪೊಲಮೇರೆ ಪೂರ್ವ್ವದಿಶಾಭಾಗದೊಳ್ ಕಲ್ಮಡುವುಂ ಕೊಂಮದಿಬೆಟುವುಂ (ಸೌಇಇ. IX–i, ೧೨೧–೪೧; 1057). [ಕಲ್$_3$ + ಮಡ್ಡು]

**ಕಲ್ಮಣೆ** (ನಾ). ಕಲ್ಲಿನ ಮಣೆ; ಶಿಲಾಪೀಠ: ಈ ಕಲ್ಮಣೆಯ ಮೇಲ್ಕುಳಿತು ಗೀತೆಯನು ಕೇಳುವೆವು (ಚಂದ್ರಸ. ೭೪–೫). [ಕಲ್$_3$ + ಮಣೆ]

**ಕಲ್ಮದ, ಕಲುಮದ, ಕಲ್ಲುಮದ** (ನಾ). ಶಿಲಾಜಿತು: “ಅದ್ರಿಜತು – ಕಲ್ಮದ” (ಒಷಧಿ. ೫); ಗಾಯಕ್ಕೆ ಕಟ್ಟಲು ಕಲ್ಮದವನ್ನು ಹಿಡಿಕೊಡು ಶಿವಯ್ಯ ಧಾವಿಸಿಬಂದರು (ತ್ಯಾಗಮ. ೩೮). **ಕಲುಮದ**: “ಕಲುಮದ–ಗೈರೇಯ, ಅರ್ಥ್ಯ, ಗಿರಿಜ” (ನಾಚಿರಾ. ಶಿ). **ಕಲ್ಲುಮದ**: “ಅದ್ರಿಜಂ ಕಲ್ಲುಮದಂ” (ಅಕಾನಿ. ೧–೩೧); ತ್ರಿಫಲೆ, ಶೋಧಿಸಿದ ಕಲ್ಲುಮದ . . . ಚೂರ್ಣವ ಮಾಡಿ (ವಿವೈವಿ. ೪೪). [ಕಲ್$_3$ + ಮದ$_0$]

**ಕಲ್ಮನೆ** (ನಾ). ಬಂಡೆಗಲ್ಲಿನಲ್ಲಿ ಕೊರೆದ ಮನೆ, —ಗವಿ: ಮಂಗ(ಲೀ) ಸ(ಶ)ನಾ ಕಲ್ಮನೆಗೆ ಇತ್ತೊಡು (ಇಅ. X, ೬೦–೨; 7ನೆಯ ಶತ); ಬಾದಾಮಿಯ ಕಲ್ಮನೆಗಳನ್ನು ಕಾಣಬೇಕೆಂದಿದ್ದೇವೆ (ಹಾಡುಹು. ೯೭). [ಕಲ್$_3$ + ಮನೆ]

**ಕಲ್ಮರಿಗೆ, ಕಲ್ಲುಮರಗೆ, ಕಲ್ಲುಮರಿಗೆ** (ನಾ). ಕಲ್ಲಿನಿಂದ ಮಾಡಿದ ಮರಿಗೆ, —ಪಾತ್ರೆ: ಕಲ್ಮರಿಗೆಯಲ್ಲಿ ಉಪ್ಪಿನಕಾಯಿ ಇದೆ (ರೂಢಿ). **ಕಲ್ಲುಮರಗೆ**: ಕಲ್ಲುಮರಗೆಯಲ್ಲಿ ನೆನೆಸಿಟ್ಟಿದ್ದ ಅವಲಕ್ಕಿ . . . ತಿನ್ನುತ್ತಿದ್ದ (ಸಾಹೇಬ್. ೧೮); ಬಳಪದ ಕಲ್ಲಿನಿಂದ ನಮ್ಮ ದೇಶದಲ್ಲಿ ಕಲ್ಲುಮರಗೆಗಳನ್ನು ಮಾಡುತ್ತಾರೆ (ಗುಣಸಾ. ೬). **ಕಲ್ಲುಮರಿಗೆ**: (ಶಿ). [ಕಲ್$_3$ + ಮರಿಗೆ (< ಮರಗೆ)]

**ಕಲ್ಮಲರುಳಿ** (ನಾ). ಒಂದು ಪ್ರದೇಶದ ಹೆಸರು (?): ಪೆಟ್ಟನಸ್ಲಿ ಕೆಱೆಯ ಮೂಡ್ಕೆ ಕಡೆಗೋಡತ್ತಿ ಬಲಗ್ಗೆ ನಡದು ಕಲ್ಮಲರುಳಿ ಕೊಲಿಗ ನ್ಮೇಲಕಾರಜಿ ಎ ಇಟ್ಟಗೆ ಸೊಱೆ ಎ (ಎಕ. X (S), ಚಿಕ್ಕಬ. ೬೬–೨೦; ಸು. 850). [?]

**ಕಲ್ಮಷ** (ಗು). ೧. ಕೊಳೆಯಿಂದ ಕೂಡಿದ; ಮಲಿನವಾದ. ೨. ಪಾಪಯುಕ್ತವಾದ; ಪಾಪಿಷ್ಠವಾದ. (ನಾ). ೩. ಕೊಳೆ; ಗಸಿ: ಹೃದಯದ ಕಲ್ಮಷವೆಂತು ಮಾಣ್ಬುದು (ಬಸವ. ೪೧). ೪. ಪಾಪ: ಕಲ್ಮಷದ ಯುಗಧರ್ಮವೆಯ್ದೆ ಪೊರ್ದದು ತನಗೆ (ನಂಬರ. ೯–೪); ಕೇಳು ಭೂಕಾಂತ ನಿರ್ಮಳಚಿತ್ತನಾಗಿ ಕಲ್ಮಷವಳಿದು ಪ್ರೀತಿಯಿಂದಾಲಿಸುವದು (ಪ್ರೌಢರಾ. ೭–೨). ೫. ನರಕಲೋಕದ ಒಂದು ಭಾಗ; ಒಂದು ಬಗೆಯ ನರಕ. ೬. ಕುಂದು; ಕೊರತೆ. [ಸಂ.]

**ಕಲ್ಮಷಿಕೆ** (ನಾ). ಕಶ್ಮಲ; ದೋಷ (?): ಕಲ್ಮಷಿಕವಾಗಿ ತನ್ನೊಕ್ಕಲ್ ಮಕ್ಕಳೆನಿಕ್ಕಸಿರ್ಕಮಾದೊಡೆ ಪಾರ್ವಂ ಮಲ್ಲಲನೆ ಮುಱುಗಿ ಕೂಡೆ ಯೊಡಲ್ಮಸಿಯುಪ್ಪಿನೆಗೆಮೆಯ್ದೆ ಬೆದಬೆದಬೆಂದಂ (ಸುಕುಮಾ. ೨–೧೧೦). [?]

**ಕಲ್ಮಳೆ, ಕಲುಮಳೆ, ಕಲುವಳೆ** (ನಾ). ೧. ಕಲ್ಲುಗಳ ಮಳೆ: ಪೈಡಿಂಬಿನಗುತೆ ಸಂತತಂ ಕಱಿವ ಕಲ್ಮಳೆಗಳಂ ಸೃಜಿಸಿ ಬಲಮಂ ತವೆ ಪೊರಳ್ಚಿ (ಜೈಮಿಭಾ. ೪–೧೬). ೨. ಆಲಿಕಲ್ಲು ಮಳೆ. **ಕಲುಮಳೆ**: ೧. ಕಲುಮ[ಪಾಠಾಂ. ವ]ಳೆಯ ಕೋಲಾಹಲಕ್ಕವರಳುಕದಿಱಿದರು ಸುರಗಿಯಲಿ (ಕುವ್ಯಾಸ. ೩–೫೦). **ಕಲುವಳೆ**: ೧. ಮೂಱುಕೋಟಿಯ ಭಟರು ಕಱೆದರು ಕಲುವಳೆಯನು (ಕುವ್ಯಾಅ. ೧೨–೪೦). [ಕಲ್$_3$ + ಮಳೆ (< ಮಱೆ)]

**ಕಲ್ಮಾಟ** (ನಾ). ಕಲ್ಲಿನಲ್ಲಿ ಕೆತ್ತಿದ ಮೂರ್ತಿ; ಕಲ್ಲಿನಲ್ಲಿ ಕೊರೆದ ಪ್ರತಿಮೆ: ಬೆಣ್ಣೆಕಲ್ಲ ಸೀಮೆಯ ಕಾಳಗದಲ್ಲಿ ಲಾಜ ನಾಯಕನೆಜಿಯಮ್ಮ ಸತ್ತಡೆ ಕಲ್ಮಾಟಗೆಯ್ದುರು (ಶಾಸಪ. ೨–೧೧). ‘ಕಲ್ಮಾಟ್ಟು’ ಪರಾ. [ಕಲ್$_3$ + ಮಾಟ]

**ಕಲ್ಮಾಡ, ಕಲ್ಲುಮಾಡ** (ನಾ). ಕಲ್ಲಿನಿಂದ ಕಟ್ಟಿದ ಉಪ್ಪರಿಗೆ; ಕಲ್ಲಿನ ಮನೆ: ನಾಗರಿಕರ ತಾರುಣ್ಯಮದವ ಕಲ್ಮಾಡ ಹೊಗಳುತಿಹವು (ಮೇಘದೂ. ೭–೮). **ಕಲ್ಲುಮಾಡ**: ನಿದ್ದೆಯೆಂದರೆ ಕಲ್ಲುಮಾಡ ಜಡೆದಿಹ ಬೇಡಿ (ಸರ್ವಗೀ. ೬೩–೨). [ಕಲ್$_3$ + ಮಾಡ$_1$]

**ಕಲ್ಮಾಷ** (ಗು). ೧. ಮಿಶ್ರವರ್ಣವುಳ್ಳ; ಚುಕ್ಕೆ ಚುಕ್ಕೆಯಾದ: “ಚಿತ್ರಃ, ಕಿರ್ಮ್ಮಾರಃ, ಶಬಳಃ, ಕಲ್ಮಾಷಃ . . . ಖಚಿತಃ – ಈ ೧೧ ಬೆರಸಿದುದು” (ಹಲಾಯು. ೧೨೨–೫೪). ೨. ಕಪ್ಪು ಬಿಳುಪು ಕೂಡಿದ; ಬೂದುಬಣ್ಣವುಳ್ಳ: “ಕಲ್ಮಾಷಯೆಂಬುದು ಎಡವರ್ಣಂ” (ಹಲಾಯು. ೧೨೧–೫೧). ೩. ಕಪ್ಪುಬಣ್ಣದ (ಶಿ). [ಸಂ.]

**ಕಲ್ಮೀನ್** (ನಾ). ಒಂದು ಬಗೆಯ ಮೀನು: ಭರದಿ ತಾಂ ಕಲ್ಮೀನ್ಗ ಳೊಗೆವ ಕಲ್ಲೋಲದಿಂ (ಉದ್ಭಟ. ೩–೮೩). [ಕಲ್$_3$ + ಮೀನ್ಸ್]

**ಕಲ್ಮುತ್ತುಗ** (ನಾ). ಒಂದು ಬಗೆಯ ಮುತ್ತುಗದ ಮರ: ಕಲ್ ಮುತ್ತುಗ, ಕಲ್‌ಹೊನ್ನೆ, ಕರೀಹೊನ್ನೆ, ನೇಹಿ (ವೈಔಗಿ. ೫೮–೧೧೬೫). [ಕಲ್$_3$ + ಮುತ್ತುಗ (< ಮುಱುತ್ತುಗ)]

**ಕಲ್ಮುರಿ** (ನಾ). (ಕರಾ) ಒಂದು ಜಾತಿಯ ಮೀನು. [← ತುಳು. ಕಲ್ಮುರೊ]

**ಕಲ್ಮೆ** (ನಾ). ವಿದ್ಯೆ; ಪ್ರೌಢಿಮೆ; ಚಾತುರ್ಯ (?). 'ಕಲ್ಮೆವೆಱು' ಪರಾ. [ಕಲ್$_1$ + -ಮೆ$_1$]

**ಕಲ್ಮೆಯ್**, ಕಲುವ್ಮೈ (ನಾ). ಕಲ್ಲಿನಂತಹ ಮೈ; ಗಡುಸಾದ ದೇಹ: ಆರಾರ ಕಲ್ಮೆಯ್ಗಳೊಳ್ ನಾಂಟವೆನುತ್ತಂತೆಲ್ಲರುಂ ಬಾಯ್ವಿಡೆ ಗಡಣದೆ ಪೂಗೋಲ್ಗಳ್ಳೈತಂದುವಾಗಳ್ (ಕಬ್ಬಕಾ. ೩೦೩). **ಕಲುವ್ಮೈ** : ಎಲಿಗೆ ಕಲುವ್ಮೈಯಾದೆ ಕಡುಗೋಮಲತೆಯಿತ್ತಲು ಕರ್ಕಶಾಂಗದ ಬಲುಹಿ ದೆತ್ತಲು (ಕುವ್ಯಾವಿ. ೩–೮೭). [ಕಲ್$_3$ + ಮೆಯ್]

**ಕಲ್ಮೆವೆಱು** (ಕ್ರಿ). ಪ್ರೌಢಿಮೆ ಹೊಂದು; ಚತುರನಾಗು: ನನ್ನಗನ್ನಾದೆ ಕಲ್ಮೆವೆತ್ತರಿಭೂಭುಜರನ್ತಱು × × × ಕಲ್ಲಯದೇವರಿನ್ನಗರಮಂ ಬನ್ದಾನ್ತಿರೆ (ಸೌಇಇ. IX–i, ೨೨–೬; 923). [ಕಲ್ಮೆ + ಪೆಱು$_1$]

**ಕಲ್ಮೊರಡಿ**, ಕಲುವೊರಡಿ, ಖಲ್ಮೊಱಡಿ (ನಾ). ಕಲ್ಲಿನ ಗುಡ್ಡ : ಸುಮುಹೂರ್ತದೊಳು ಕರಲು ಕಲ್ಮೊರಡಿ ಬೆಳೆಯಲು (ಸಿದ್ಧರಾ. ೧–೩೭). **ಕಲುವೊರಡಿ** : ತಳಿರೆತ್ತ ಬಿಸಿಲೆತ್ತ ಹಂಸಶಿಶುವೆತ್ತ ಕಲುವೊರಡಿಯೆತ್ತ (ಸಿದ್ಧರಾ. ೨–೨೭). **ಖಲ್ಮೊಱಡಿ** : ಮೂಡಲು ಕರಿಯ ಖಲ್ಮೊಱಡಿಯೆ ಅಂತೆ ಬರೆ ವಟವೃಕ್ಷವೆ (ಎಕ. XI, ದಾವಣ. ೧೯–೧೪; 1043). [ಕಲ್$_3$ + ಮೊರಡಿ$_2$]

**ಕಲ್ಯ** (ಗು). ೧. ಸಿದ್ಧವಾದ; ಸನ್ನದ್ಧವಾದ. ೨. ಶಸ್ತ್ರಸಜ್ಜಿತವಾದ. ೩. ಮಂಗಳಕರವಾದ; ಶುಭ್ರವಾದ. ೪. ಎಚ್ಚರಿಕೆ ಕೊಡುವ; ತಿಳಿವಳಿಕೆ ನೀಡುವ; ಬೋಧಪ್ರದವಾದ (+). (ನಾ). ೫. ರೋಗವಿಲ್ಲದವನು; ಆರೋಗ್ಯವಂತ: "ಕಲ್ಯನೆನೆ ವಾರ್ತನೆನೆ ಕುತ್ತವಿಲ್ಲದನಕ್ಕು" (ಮಂಗರಾ. ೭೧–೧೯). ೬. ಬೆಳಗಿನ ಜಾವ; ಪ್ರಾತಃಕಾಲ: "ದ್ಯುಮುಖಂ . . . ಕಲ್ಯಮುಷಮೆಂದೆನಲು ಪ್ರಾಕ್ಕಾಲಮಕ್ಕು" (ಮಂಗರಾ. ೨೦–೮); ಕಲ್ಯದೊಳ್ ಕುಳಿರ್ವ ಮಂಜೊಳಗೊಂದಿದ ಮೊಲ್ಲೆವೂವನಾರಡಿವೊಲೆ ಭೋಗಿಸಲ್ಕಮುಳಿಯಲ್ಕಮಣಂ ಬಗೆದರ್ಪೊಡಾರೆ ನಾಂ (ಶಾಕುಂತ. ೬೭–೧೧೯). ೭. ಮದ್ಯ; ಮಾದಕವಾದ ಪಾನೀಯ: "ಮೈರೇಯಮಾಸವಂ . . . ಕಲ್ಯಮೆನೆ ಕಳ್ಳೆನಿಕ್ಕು" (ಮಂಗರಾ. ೬೫–೮). ೮. ನಿನ್ನೆ; ಹಿಂದಿನ ದಿವಸ: "ನಿನ್ನೆಯೆಂಬಲ್ಲಿಯುಂ ಕಲ್ಯಮೆಂಬುದು" (ಹಲಾಯು. ೧೩೫–೨೩); "ಪೂರ್ವದಿವಸಮಂ ನುಡಿಯೆ ಕಲ್ಯಮೆಂದೆಂಬುದು" (ಮಂಗರಾ. ೧೪೧–೧೩). ೯. ವೈರ; ಶತ್ರುತ್ವ. ೧೦. ಪರಸ್ಪರ ಬಂಧನ; ಒಬ್ಬರನ್ನೊಬ್ಬರು ಕಟ್ಟುವುದು ಅಥವಾ ಬಂಧಿಸುವುದು. ೧೧. ಚತುರನಾದವನು; ಕಲಾಭಿಜ್ಞ. ೧೨. ಕಿವುಡ ಹಾಗೂ ಮೂಕ: "ಆ ಹಗೆ ಪೂರ್ವವಾಸರ ಪರಸ್ಪರ ಬಂಧನ ಕಲ್ಯವಾಚಕಂ" (ನಾನಾರ. ೧೦೬). [ಸಂ.]

**ಕಲ್ಯದರಸಿ** (ನಾ). ಒಂದು ಮೂಲಿಕೆಯ ಹೆಸರು: "ತ್ರಾಯಮಾಣಕಾ – ಕಲ್ಯದರಸಿ" (ಒಷಧಿ. ೬೮). [ಕಲ್ಯ + ದರಸಿ]

**ಕಲ್ಯಾಣ** (ಗು). ೧. ಚೆಲುವಾದ; ಸುಂದರವಾದ. ೨. ಮಂಗಳಕರವಾದ; ಸುಖಕರವಾದ. (ನಾ). ೩. ಒಳಿತು; ಶುಭ; ಶ್ರೇಯಸ್ಸು; ಅದೃಷ್ಟ; ಮೇಲ್ಮೆ: "ಶ್ವಃ(ಸ್ವ)ಶ್ರೇಯಸಂ, ಕಲ್ಯಾಣಂ . . . ಮಂಗಳಂ – ಈ ೧೧ ಒಳ್ಪಿತರ್ಕೆ ಪೆಸರ್" (ಹಲಾಯು. ೨೦–೧೨೨); "ಕಲ್ಯಾಣಮೆಂದೆನಲೊಳ್ಪಿತಕೆ ಪೆಸರೆನಿಕ್ಕುಂ" (ಮಂಗರಾ. ೮–೨೬). ೪. ಚಿನ್ನ; ಹೊನ್ನು: "ಕಲ್ಯಾಣಮೆನಲೋರಂತೆ ನಿಷ್ಕಮೆನೆ . . . ಹೊನ್ನಿಂಗೆ ನಾಮಮಕ್ಕುಂ" (ಮಂಗರಾ. ೩೦–೪); ಕಲ್ಯಾಣಭೂಭೃತ್ಸದನ ಧನದ ಮಿತ್ರಂ . . . ಶ್ರೀಶೈವ ಶ್ರೇಯಮಂ ಮಾಟ್ಕೆಮಗನವರತಂ (ರಾಜಶೇ. ೧–೧). ೫. ಮದುವೆ; ವಿವಾಹ: ಹರಿವಿರಂಚಿಗಳಿಂದ ಮುನ್ನ ಉಮೆಯ ಕಲ್ಯಾಣದಿಂದ ಮುನ್ನ (ಬಸವ. ೨); ಗಿರಿಸುತೆಯ ಕಲ್ಯಾಣದೇಳ್ಗೆಯನೊರೆದುವವು ಸಹವಾಗಿ ಪಂಪಾವರನೊಳೈಕ್ಯಂಬಡೆದ ಹರಿದೇವಂಗೆ ವಂದಿಸುವೆ (ಶಂಕದಾ. ೧–೧೩). ೬. ವೈಭವ; ಉತ್ಸವ; ಕನ್ಯಾರತ್ನಮುಮಂಬರೋಚಿತ ಕಲ್ಯಾಣಂಗಳಿಂದಂ ಆ ಪುರುಷರತ್ನಾಕರನೊಳ್ ನೆರಪಿ (ಆದಿಪು. ೧೩–೮೦ ವ). ೭. [ಜೈನ] ಜಿನನಿಗೆ ಮಾಡುವ ಐದು ಮಹೋತ್ಸವ: ವಾಸುಪೂಜ್ಯಂಗೆ ಜನ್ಮಾಭಿಷವಣ ಕಲ್ಯಾಣಮಾಯ್ತು (ಶಾಸ್ತ್ರಟೀ. ೧೨–೧೨). 'ಪಂಚಕಲ್ಯಾಣ' ಪರಾ. ೮. ಒಂದು ಪಟ್ಟಣದ ಹೆಸರು. ℙ ಚಾಲುಕ್ಯರ ಹಾಗೂ ಕಲಚೂರ್ಯರ ರಾಜಧಾನಿ: ಕಲ್ಯಾಣದ ನೆಲೆವೀಡಿನೊಳ್ (ಹೈಆಸಿ. ೫–೬; 1088); ಕಲ್ಯಾಣವಱಿಯೆ ಕಟಕವಱಿಯೆ ಬೇಂಟೆಯನಾಡುತ್ತಿದ್ದೆ ಎನ್ನ ಕೈ ನೋಡಿ ಭೋ (ಅವಚಂ. ೧೨೦–೫೪೭); ಕೆಟ್ಟಿತು ಕಲ್ಯಾಣ (ಬಸವ. ೬೩೬). ೯. [ಛಂದ] ಒಂದು ಅಕ್ಷರವೃತ್ತದ ಹೆಸರು: ಕ್ಷೋಣೀ ವಾಯು ದಿನೇಶನೀಶ್ವರಂ ಬಾಣಸ್ಥಾನದೊಳಾಗೆ ವಿಶ್ರಮಂ ಜಾಣೇ ನೀಂ ತಿಳಿ ಬಂದೊಡಕ್ಕೆ ಕಲ್ಯಾಣಂ [ಪಾ ಠಾ ೦. ಕಲ್ಯಾಣೀ] ಪಂಕಜಲೋಚನೇ (ಛಂದೋಂಬು. ೨–೭೨). [ಸಂ.]

**ಕಲ್ಯಾಣಕಾರಕ** (ಗು). ೧. ಮಂಗಳವನ್ನುಂಟುಮಾಡುವ; ಶುಭಕರವಾದ. (ನಾ). ೨. ಒಂದು ಕನ್ನಡ ವೈದ್ಯಗ್ರಂಥದ ಹೆಸರು: ಸುಕರಂ ತಾನೆನೆ ಪೂಜ್ಯಪಾದ ಮುನಿಗಳ್ ಮುಂ ಪೇೞ್ದ ಕಲ್ಯಾಣಕಾರಕಮಂ . . . ಸೋಮುಂ ಪೇೞ್ದಂ (ಕವಿಚ. I, ೩೦೩). [ಸಂ.]

**ಕಲ್ಯಾಣಕ್ಷಾರ** (ನಾ). [ವೈದ್ಯ] ಒಂದು ಬಗೆಯ ಔಷಧಿ: ಕಲ್ಯಾಣಕ್ಷಾರ – ಶುಂಠಿ, ಹಿಪ್ಪಲಿ, ಮೆಣಸು, ಸಂವತ್ಸರ ಲವಣ . . . ಗಜಪುಟವ ಹಾಕಿ ಸಾಂಗ ಶೀತಳವಾದ ಮೇಲೆ ಆ ಕ್ಷಾರಗಳ ತೆಗೆದು ಕೊಂಡು . . . ಸೇವಿಸೆ (ಸಕವೈ. ೩೦೫). [ಕಲ್ಯಾಣ + ಕ್ಷಾರ]

**ಕಲ್ಯಾಣಗರ್ಭ** (ನಾ). ೧. ಹಿರಣ್ಯಗರ್ಭ; ಬ್ರಹ್ಮ. ೨. ಒಳ್ಳೆಯದನ್ನೆ ಉಂಟುಮಾಡುವವನು. ೧, ೨ : ವರವಾಣಿ ವಿಬುಧಸೇವಿತ ಚರಣಂ ಕಲ್ಯಾಣಗರ್ಭನಾಗಿಯುಮಜನಂತಿರೆ ಜಡಜಜನೆನಿಸದೆ ತದ್ಗುರು ಕರಕಂ ಜಾತಜಾತನೆನಿಸಿದನೀತಂ (ರಾಜಶೇ. ೧–೬೪). [ಕಲ್ಯಾಣ + ಗರ್ಭ]

**ಕಲ್ಯಾಣಘೃತ** (ನಾ). (ಜ್ವರಪರಿಹಾರಕ್ಕಾಗಿ ತುಪ್ಪದಲ್ಲಿ ಮಾಡಿದ) ಔಷಧಿ ದ್ರವ್ಯಗಳ ಒಂದು ಪಾಕ: ಕಲ್ಯಾಣಘೃತ – ತಾಳೀಸಪತ್ರೆ, ಆಳಿಲೆಕಾಯಿ . . . ಹಾಕಿ ತುಪ್ಪ ಉಳಿಯುವ ಹಾಗೆ ಪಾಕಮಾಡಿ, ಇಳುಹಿ ಕೊಂಡು ಉದಯದಲ್ಲಿ ಸೇವಿಸೆ ಚಾತುರ್ಥಿಕ . . . ಜೀರ್ಣಜ್ವರ ಇವಿಷ್ವರ ಪರಿಹಾರಮಕ್ಕುಂ (ಸಕವೈ. ೧೧೯). [ಕಲ್ಯಾಣ + ಘೃತ]

**ಕಲ್ಯಾಣಪೂರಿ** (ನಾ). ರೇಷ್ಮೆಯಲ್ಲಿ ಒಂದು ಬಗೆ: ಕಲ್ಯಾಣಪೂರಿ . . . ಇದರ ಹೊರ್ತು ಮತ್ತೂ ರೇಶ್ಮೆಯಲ್ಲಿ ಬಹಳ ಜಾತಿಗಳುಂಟು (ಮುಂಬವ್ಯಾ. ೧೧೦). [?]

**ಕಲ್ಯಾಣಬಾಳೆ** (ನಾ). ಬಾಳೆಯಲ್ಲಿ ಒಂದು ಬಗೆ: ಕಲ್ಯಾಣಬಾಳೆ ರುಚಿಯಾಗಿರುತ್ತದೆ (ರೂಢಿ). [ಕಲ್ಯಾಣ + ಬಾಳೆ$_1$ (< ಬಾೞೆ)]

**ಕಲ್ಯಾಣಮಂಟಪ** (ನಾ). ಮದುವೆ ಮೊದಲಾದ ಮಂಗಲಕಾರ್ಯಗಳಿಗಾಗಿ ಕಟ್ಟಿಸಿದ ಭವನ; ಮದುವೆ ಮನೆ. [ಕಲ್ಯಾಣ + ಮಂಟಪ]

**ಕಲ್ಯಾಣಮಂಡಪ** (ನಾ). = ಕಲ್ಯಾಣಮಂಟಪ: ಕಲ್ಯಾಣಮಂಡಪದಲ್ಲಿ ಸಂಗೀತ ನರ್ತನ ಇತ್ಯಾದಿ ಕುಶಲಕಲಾಪ್ರದರ್ಶನಕ್ಕಾಗಿ ಚಿತ್ರಫಲಕಗಳಿರುವುವು (ಹೊಯ್ಸವಾ. ೧೯). [ಕಲ್ಯಾಣ + ಮಂಡಪ]

**ಕಲ್ಯಾಣಮಿತ್ರ** (ನಾ). ಒಳ್ಳೆಯದಾಗುವಂತೆ ಸಹಾಯ ಮಾಡುವ ಮಿತ್ರ: ಗಭೀರ ಘೋರ ಸಂಸಾರಪಾರಾವಾರಪಾತಕ್ಕೆ ಪಲ್ಯಾಗಲೀಯದಾವೊಂ ಕಾವೊನದಱಿಂದಮೆ ಮಗೆ ನೀನೆ ಕಲ್ಯಾಣಮಿತ್ರನೈ (ಶಾಂತಿಪು. ೬-೯೦ವ). [ಕಲ್ಯಾಣ + ಮಿತ್ರ]

**ಕಲ್ಯಾಣಸೇವೆ** (ನಾ). ಕಡಲೆಯನ್ನು ಸಕ್ಕರೆ ಪಾಕದಲ್ಲಿ ಹಾಕಿ ಮಾಡಿದ ಒಂದು ಬಗೆಯ ಸಿಹಿ ತಿಂಡಿ; ಕಡಲೆ ಮಿಠಾಯಿ: ಹಳ್ಳಿಗೆ ಬಂದಮೇಲೆ ಊರಿನ ಮಕ್ಕಳಿಗೆಲ್ಲಾ ಚಿಕ್ಕ ಬತ್ತಾಸು-ಕಲ್ಯಾಣ ಸೇವೆ ಹಂಚುತ್ತಿದ್ದ (ಊರುಕ. ೩೧). [ಕಲ್ಯಾಣ$_0$ + ಸೇವೆ ?]

**ಕಲ್ಯಾಣಿ$_1$** (ಗು). ೧. ಮಂಗಳಕರವಾದ; ಶುಭವಾದ. ೨. ಸಂತೋಷವುಳ್ಳ; ಆನಂದವನ್ನು ಪಡೆದ. (ನಾ). ೩. ಶುಭವನ್ನು ನೀಡುವವಳು; ಮಂಗಳದಾತೆ: ವರದೆ ಕಲ್ಯಾಣಿ ಫಣಿವೇಣಿ ವಾಣಿ (ಜೈಮಿಭಾ. ೧-೪). ೪. ಪಾರ್ವತಿ: ಚೆಂದಳಿರುದ್ಯತ್ತಾಲವೃಂತಂ ಬಿಡಿದು ಪದೆಪಿನಿಂ ಬೀಸೆ ಕಲ್ಯಾಣಿ ತಾಂ ಕಣ್ಗೊಳಿಸಿರ್ದಂ ... ಭಾಳನೇತ್ರಂ (ಶಬಶಂ. ೩-೬೪). ೫. ಲಕ್ಷ್ಮಿ (ಕ). ೬. ಚೌಕಾಕಾರದ ಕಲ್ಲಿನ ಮೆಟ್ಟಿಲುಗಳಿರುವ ಕೊಳ; ಹೊಕ್ಕರಣೆ: ಬಲ್ಲಾಳನು ಈಶಾನ್ಯದಿಕ್ಕಿನಲ್ಲಿ ವಾಸುದೇವತೀರ್ಥವೆಂಬ ಕಲ್ಯಾಣಿಯನ್ನು ಮಾಡಿಸಿದನು (ಹೊಯ್ಸವಾ. ೨೩); ಗುಡ್ಡದ ಕೆಳಗೆ ಕಲ್ಯಾಣಿಯೊಂದರ ದಡದಲ್ಲಿರುವ ಕಟ್ಟೆಯನ್ನು ಪ್ರಸನ್ನರಾಯರ ಕಟ್ಟೆಯೆಂದು ಕರೆಯುತ್ತಾರೆ. (ಕಭವಿ. II, ೨೮೬). ೭. ಅದೃಷ್ಟವಂತೆ. ೮. [ಸಂಗೀತ] ಒಂದು ರಾಗದ ಹೆಸರು: ಕೌಶಿಕಿ ... ಕಲ್ಯಾಣಿ ... ಎಂಬ ಮೂವತ್ತುನಾಲ್ಕು ರಾಗಂಗಳು (ವಿವೇಕ. ೨೩೩). [ಸಂ. ಕಲ್ಯಾಣೀ]

**ಕಲ್ಯಾಣಿ$_2$** (ನಾ). ಒಂದು ಬಗೆಯ ಬಾಳೆ: ಭಾವಿಸಲು ಮರಬಾಳೆ ಕಲ್ಯಾಣ[ಣಿ] ಬೂದಿಬಾಳೆ (ನವಮೋ. ೨೫-೪೯); ಬಾಳೆಯ ಕುಲದಲ್ಲಿ ಗುಜರಾಥಿ, ರಸಬಾಳೆ, ಸುಗಂಧಿ, ಕರಿಬಾಳೆ, ಕಲ್ಯಾಣಿ, ಬೂದಿಬಾಳೆ (ಕೃಷಿಪ್ರ. ೧೫೬). [?]

**ಕಲ್ಲ$_1$** (ನಾ). ಕಿವುಡ; ಬಧಿರ. 'ಕಲ್ಲಮೂಕ' ಪರಾ. [ಸಂ.]

**ಕಲ್ಲ$_2$** (ನಾ). "ದಡ್ಡ; ತಿಳಿಗೇಡಿ" (ಜಾನಕೋ. ೩೫).
[← ಮರಾ. ಕಲ್ಲ = ಬರಿದಾದ, ಪೊಳ್ಳಾದ]

**ಕಲ್ಲಂಗಡಲೆ** 'ಕಳ್ಳಂಗಡಲೆ' ನೋ.

**ಕಲ್ಲಂಗಡಿ, ಕಲಂಗಡಿ** (ನಾ). ಕರಬೂಜದ ಜಾತಿಗೆ ಸೇರಿದ ಒಂದು ಹಣ್ಣಿನ ಬಳ್ಳಿ, —ಹಣ್ಣು: ಕಲ್ಲಂಗಡಿ, ಹೀರಿಯ ಬೀಜ, ಸಕ್ಕರೀ ಸವತಿ ಮೊದಲಾದವುಗಳನ್ನು ಸ್ವಲ್ಪ ಸ್ವಲ್ಪ ಗೊಬ್ಬರವನ್ನು ಹಾಕಿ ಬಿತ್ತಿದರೆ ವಿಶೇಷ ಫಲವಾಗಿ ರೊಕ್ಕವಾಗುವದು (ಕೃಷಿಪ್ರ. ೮೫); ಎರಡು ಕಲ್ಲಂಗಡಿ ಹಣ್ಣನ್ನು ಹಿಡಿದೆತ್ತಿ ಕಯ್ಯೊಂದರೊಳೆ ತರಬಹುದೆ (ಇಂಚಾಪ. ೧೯೭-೭೩). **ಕಲಂಗಡಿ**: ಕಲಂಗಡಿ ಕರಬೂಜು ... ಇವು ಕಫವಾತಹರ (ಅಷ್ಟಾಂಗ. ೧೩೭).
[←ಮರಾ. ಕಲಿಂಗಡ, ಕಲಂಗಡೀ. / ಸಂ. ಕಾಲಿಂಗ, ಕಾಲಿಂಗೀ]

**ಕಲ್ಲಂಗುಱಿಕೆ** (ನಾ). ಒಂದು ಊರಿನ ಹೆಸರು: ಹೊಲದ ಮೊಗೆವಾಡದೊಳಗೆ ಕಲ್ಲಂಗುಡದೊಳಗೆ ಕಲ್ಲಂಗುಱಿಕೆಯ ಬಟ್ಟೆಯಿಂ ಪಡುವಲು (ಎಇ. V, ೧೮-೪೧; 1142). [ಕಲ್$_3$ + ಕುಱಿಕೆ$_2$ (< ಕುಱುಕಿ)]

**ಕಲ್ಲಂಚಿ** (ನಾ). ಒಂದು ಜಾತಿಯ ಹಕ್ಕಿ (ಕ). [?]

**ಕಲ್ಲಕಮ್ಮಱಿ** (ನಾ). ಒಬ್ಬಾತನ ಹೆಸರು (?): ಆವನ್ ವಿಜಸಿತ್ತಿರ್ರಾಕಾಳೆಗದುಳ್ ಕುಡನಗರುಳ್ ಎಱಿದು ಸಗ್ಗರ್ ಪುಕ್ಕದುನ್ ಕಲ್ಲಕಮ್ಮಱಿ ವರದ (ಎಕ. X (s), ಚಿಂತಾಮ. ೧೬೬-೯; 8ನೆಯ ಶತ). [?]

**ಕಲ್ಲಕಾಯಿ** (ನಾ). ಆಲದ ಕಾಯಿ: "ವಟಫಲಂ – ಕಲ್ಲಕಾಯಿ" (ಒಷಧಿ. ೧೪೮). [ಕಲ್ಲ$_0$ + ಕಾಯಿ$_4$ (< ಕಾಯ್$_4$)]

**ಕಲ್ಲಚಾರಿ** (ನಾ). ೧. ಕಲ್ಲಿನಲ್ಲಿ ಕೆಲಸಮಾಡುವವನು; ಶಿಲಾಶಿಲ್ಪಿ. ೨. ಒಬ್ಬಾತನ ಹೆಸರು: ಮಲಯ್ಯಂ ವಾಲಬ್ಬೆಯಂ ಮಾಡಿಸಿದಂ ಮಾಡಿದಂ ಕಲ್ಲಚಾರಿ (ಎಕ. XIV, ಎಳಂದೂ. ೯೬-೪; 1000).
[ಕಲ್ಲು (< ಕಲ್$_3$) + ಆಚಾರಿ]

**ಕಲ್ಲಚ್ಚು** (ನಾ). ನಕ್ಷೆಯ ರೇಖೆಗಳನ್ನು ಅಥವಾ ಅಕ್ಷರಗಳನ್ನು ಒಂದು ವಿಧವಾದ ಮಸಿಯಿಂದ ಬರೆದು ಪ್ರತಿಗಳನ್ನೆತ್ತಲು ಉಪಯೋಗಿಸುವ ಕಲ್ಲಿನ ಸಾಧನ; ಶಿಲಾಮುದ್ರಣ: ಒಂದು ಕಲ್ಲಚ್ಚಿನ ಯಂತ್ರವನ್ನಿಟ್ಟು ಕಾಂಗ್ರೆಸು ಪ್ರಕಟಣೆಗಳನ್ನು ಹೊರಡಿಸುತ್ತಿದ್ದೆವು (ಧೂಮಮ. ೮೯); ನಮ್ಮ ಮೊದಲಿನ ಪುಸ್ತಕವು ಕಲ್ಲಚ್ಚಿ (Litho) ನಿಂದ ಮುದ್ರಣವಾಯಿತು (ಬಾಲಪ್ರ. II, ೧೦೦೬).
[ಕಲ್$_3$ + ಅಚ್ಚು$_3$]

**ಕಲ್ಲಟೆ** (ನಾ). (ಕರಾ) ಒಂದು ಜಾತಿಯ ಬಳ್ಳಿಯಲ್ಲಿ ಮಳೆಗಾಲದಲ್ಲಿ ಆಗುವ ಕಾಯಿ: ಕಲ್ಲಟೆಯಿಂದ ಮಾಡಿದ ಮಜ್ಜಿಗೆಹುಳಿ ಬಹಳ ರುಚಿಯಾಗಿರುತ್ತದೆ (ರೂಢಿ). [← ತುಳು. ಕಲ್ಲಟೆ]

**ಕಲ್ಲಡಿ** (ನಾ). ಒಂದು ಬಗೆಯ ಮೀನು: ಹೆಗ್ಗರಿಲುಂ ಕಲ್ಲಡಿ ಶಂಖಪಾಯನರಿಲುಂಬಂ ಸಾಣೆ ಮೂಗುಂ ... ಪಂದಿಗನೆಂಬ ಮೀನ್ದೆಗೆದನಾ ಭಕ್ತಂ ಮಹಾಲೀಲೆಯಿಂ (ತ್ರಿಪುವಿ. ೫೭-೮).
[? ./ ತುಳು. ಕಲ್ಲೇಡೆ]

**ಕಲ್ಲಡಿಕೆ** (ನಾ). ಅಡಕೆಯಲ್ಲಿ ಒಂದು ಬಗೆ; ಗಟ್ಟಿಯಾದ ಅಡಕೆ: ಕಲ್ಲಡಿಕೆಯು ಬಣ್ಣದಲ್ಲಿ ಹುರಮುಂಜೀ ಝಾಕಿ ಇದ್ದು ವಜನ್ನುಳ್ಳದಿರಬೇಕು (ಮುಂಬವ್ಯಾ. ೪೯). [ಕಲ್$_3$ + ಅಡಿಕೆ (< ಅಡಕೆ$_1$)]

**ಕಲ್ಲಡುಪು** (ನಾ). ಒಂದು ಊರಿನ ಹೆಸರು: ನಗರೂರ ಬೆಳ್ಳಿಯರುಂ ಮರವೂರ ವಣ್ಣಾಕರುಂ ಕಲ್ಲಡುಪಿನ ಮಾದಡಿಯುಮೋದೂರ ಜಯಚಾರುಂ ನರಸಾಕ್ಷಿ (ಮೈಆರಿ. ೧೯೨೭, ೧೧೮-೪೫; 726). [?]

**ಕಲ್ಲಣ** (ನಾ). ಒಬ್ಬಾತನ ಹೆಸರು: ಕಾಳಗಾವುಣ್ಡನ ಮಗ ಕಲ್ಲಣ ಬಟ್ಟೆಯ ಪೋಗುತಿರೆ (ಎಕ. VIII, ಸೊರಬ. ೪೪೫-೭; 975 ?); ಕರುವರ ಕಲ್ಲಣಂ ಹಂದಿಗೆಯ್ಯ ಸ್ಥಳಂ (ಕಇ. I, ೨೫-೮೩; 1186). [?]

**ಕಲ್ಲಣಂಬೆ, ಕಲ್ಲಣಬೆ** (ನಾ). ಕಲ್ಲಲ್ಲಿ ಬೆಳೆಯುವ ಅಣಬೆ, —ನಾಯಿಕೊಡೆ: ನಿನ್ನೀ ಮದನಮಿಥ್ಯೆಯ ಸವ್ಯಸಿದ್ಧಾಂತಗಳೆಂಬ ಕಲ್ಲಣಂಬೆಯ ಕಾಂತಾರದೊಳಗಣ ಮರ್ಕಟೀಪ್ರತಾನದಿಂದ ಹೊರಗಣ್ಗೆ ಬಂದು (ಮಂತ್ರಶ. ೫೯-೧೪). **ಕಲ್ಲಣಬೆ**: (ಕ).
[ಕಲ್$_3$ + ಅಣಂಬೆ (< ಅಳಂಬೆ)]

**ಕಲ್ಲಣಬೆ** 'ಕಲ್ಲಣಂಬೆ' ನೋ.

**ಕಲ್ಲಣುಗಿ** (ನಾ). ಕಲ್ಲಿನ ಮಗಳು; ಶೈಲಜೆ; ಪಾರ್ವತಿ: ನಿನ್ನಿಷ್ಟಮಂ ನಿಲ್ಲದಿತ್ತಪೆನು ಕರಿಮುಖನಾಣೆ ... ಎಂದು ಕಲ್ಲಣುಗಿ ನುಡಿಯಲ್ಕೆ (ಪ್ರೌಢರಾ. ೬-೫೪). 'ಕಡಲಣುಗಿ' ಪರಾ.
[ಕಲ್$_3$ + ಅಣುಗಿ (< ಅಣುಂಗಿ)]

**ಕಲ್ಲತಿಗಡು** (ನಾ). ಒಂದು ಔಷಧಿ ದ್ರವ್ಯ: "ಜನ್ಯನೀ – ಕಲ್ಲತಿಗಡು" (ಒಷಧಿ. ೬೦). [ಕಲ್$_3$ + ತಿಗಡು (< ತಿಗುಡೆ)]

**ಕಲ್ಲತ್ತಿ$_1$** (ನಾ). ಅತ್ತಿ ಜಾತಿಗೆ ಸೇರಿದ ಒಂದು ಮರ: ಅಲ್ಲಿಂ ಪಡುವ ಪಿರಿಯರೆಯ ಕಲ್ಲತ್ತಿ ಅಲ್ಲಿಂ ಪಡುವಲ್ಕಡವದ ಕೊಳ (ಎಕ. H, ೩೨೭-೭೭; 1181); ತಾಱಿ ಕಲ್ಲತ್ತಿ ಕರಿಬೇವು ಕಡವ (ಕುರಾಸಾಂ. ೪-೫); ಅತ್ತಿ, ಕಲ್ಲತ್ತಿ ... ಮೊದಲಾದ ವೃಕ್ಷಂಗಳಿಂದಲೂ (ಕೃವಾಸ. ೫೧).
[ಕಲ್$_3$ + ಅತ್ತಿ$_1$]

**ಕಲ್ಲತ್ತಿ$_2$** 'ಕಲತ್ತಿ' ನೋ.

**ಕಲ್ಲನಾರು** 'ಕಲ್ನಾರು' ನೋ.

**ಕಲ್ಲನೆ** (ಅ). ಹೆಚ್ಚಾಗಿ; ಉಲ್ಬಣವಾಗಿ: ಕಲ್ಲನೆ ಕಾಸಿದ ಕೆಂಡಮಂ ಪೊಗಂಗಿಡೆ ಗಿಡಿವರ್ (ಅನಂಪು. ೯–೩೫); ಗಜಂ ಕಲ್ಲನೆ ಕಾಯ್ದು ಪಾಯ್ದು ಪರದಂಘ್ರಿಗಳಂ ಪಿಡಿದೆತ್ತಿ ಸೇನೆಗಳ್ ತಲ್ಲಣಿಪಂತು ಪೊಯ್ಯೆ (ಮಹಾನೇ. ೧೨–೬೯).

**ಕಲ್ಲನೆ ಕನಲ್** = ಕೋಪದಿಂದ ಕಿಡಿಕಿಡಿಯಾಗು: ಕಲ್ಲನೆ ಕನಲುತ್ತಂ ಇರಲ್ (ಶಾಂತಿಪು. ४–೫೭ ವ); ಮೃಗಂಗಳ್ ಕಲ್ಲನೆ ಕನಲುತ್ತು ಮಿರ್ಪುವು (ಅಜಿಪು. ೯–೨೩); ಒಲ್ಲನೊನಲ್ದು ಕಲ್ಲನೆಕನಲ್ದು (ಅನಂಪು. ೧೩–೨೦ ವ).
[ಕಲ್$_0$ + -ಅನೆ$_2$ (< -ಅನೆಯ್$_2$)]

**ಕಲ್ಲಬೀಜ** (ನಾ). (?) : ಬೆಲ್ಲದ ಗೊಟ್ಟು ಕಲ್ಲಬೀಜವಾದಡೆ ಸಿಹಿ ಕುಗ್ಗುವದೇ ಮುಕುರದ ಸಾಕಾರ ಚಿಕ್ಕದಾದಡೆ ಪ್ರತಿಬಿಂಬ ಚಿಕ್ಕುದೇ (ಮೋಳಿಮಾ. ೪೧–೧೬೯). [ಕಲ್ ? + ಬೀಜ]

**ಕಲ್ಲಮ** (ನಾ). ಒಬ್ಬಾತನ ಹೆಸರು : ಕಗ್ಗಾರ್ಮುಣ್ಣರ ಕಲ್ಲಮನೂ ಗ್ಗಾರ್ಮುಣ್ಣುಗೆಯ್ಕೆ (ಕಇ. I, ೧೪–೬ ; 866). [?]

**ಕಲ್ಲಮೂಕ** (ನಾ). ಕಿವುಡ ಮತ್ತು ಮೂಕ.
[ಕಲ್ಲ$_1$ + ಮೂಕ]

**ಕಲ್ಲರಗು** (ನಾ). ಕಲ್ಲಿನ ಅಂಚು; ಕಲ್ಲಿನ ಪಕ್ಕ, —ಪಾರ್ಶ್ವ: ಅಗಲವಾದ ಕಲ್ಲರಗಿನ ಕಾಲುದಾರಿಯಲ್ಲಿ . . . ಹೆಂಗಸೊಬ್ಬಳು ಕಣ್ಣಿಗೆ ಬಿದ್ದಳು (ಪುನರು. ४೦೧). [ಕಲ್$_3$ + ಅರಗು$_3$]

**ಕಲ್ಲರಳಿ, ಕಲ್ಲರಳೆ** (ನಾ). ಅರಳಿಜಾತಿಗೆ ಸೇರಿದ ಒಂದು ಮರ: ನೆಲ್ಲಿ ನೇಱಿಲು ಪನಸ ಕಡಸಿಗೆ ಕಲ್ಲರಳಿ ಕರ್ಪೂರ ಕದಳಿಗಳಲ್ಲಿ ನೋಡಿವೆ ಭೂಮಿಸುತೆ (ತೊರಟಾ. ೩–೧–೨೯) ; "ಮಿಂಚುಳಿಕಾ – ಕಲ್ಲರಳಿ" (ಓಷಧಿ. ೧೫೩). **ಕಲ್ಲರಳೆ**: "ಅಸ್ವಥ ಸಮ್ಮಾರಃ – ಕಲ್ಲರಳಿ" (ಓಷಧಿ. ೯).
[ಕಲ್$_3$ + ಅರಳಿ$_1$]

**ಕಲ್ಲರಳೆ** 'ಕಲ್ಲರಳಿ' ನೋ.

**ಕಲ್ಲರಿಗೆ** (ನಾ). ಒಂದು ಜಾತಿಯ ಮರ : (ವೈಔಗ. ३೯–೭೬೩). [?]

**ಕಲ್ಲರೆ** 'ಕಲ್ಲಱೆ' ನೋ.

**ಕಲ್ಲರೆಬಯಲು** (ನಾ). ಕಲ್ಲುಬಂಡೆ ಇರುವ ಬಯಲು : ಕೋಟೆಯಿಂ ತೆಂಕಣ ಕಲ್ಲರೆಬಯಲೊಳಗೆ ತಳವೃತ್ತಿವೊನ್ದು (ಎಕ. VIII, ಸೊರಬ. ४೭೬–೧४ ; 939). [ಕಲ್ಲರೆ (< ಕಲ್ಲಱೆ) + ಬಯಲು (< ಬಯಲ್)]

**ಕಲ್ಲವಲ್ಲಿ** 'ಕಲ್ಲವಿಲ' ನೋ.

**ಕಲ್ಲವಿಲ, ಕಲ್ಲವಲ್ಲಿ, ಕಲ್ಲಾಬಿಲ್ಲಿ, ಕಲ್ಲಾವಿಲ್ಲಿ** (ನಾ). ಅಸ್ತವ್ಯಸ್ತವಾಗುವಿಕೆ; ಚೆಲ್ಲಾಪಿಲ್ಲಿ; "ಕಲಕಲ; ಬೊಬ್ಬಾಟ; ರಂಪಾಟ" (ಪ್ರಭಣ್ಣ) : ಕಣ್ಣಕಾಡಿಗೆಯಂ ಕೊಂಡಲ್ಲದೆ ನಿಲ್ಲಳ್ ನುಡಿದೊಡೆ ಕಲ್ಲವಿಲಂ ಮಾಡಿ ಬಾಯ ಕೆಂಪಂ ಕೊಳ್ವಳ್ (ಲೀಲಾವ. ೨–೮೮). **ಕಲ್ಲವಲ್ಲಿ** : ಧೈರ್ಯದ ಕದಂದೆಱೆದು ಕರಣಂ ಕಲ್ಲವಲ್ಲಿ[ಪಾಠಾಂ. ಕಲಿವಿಲಿ]ಯಾಗಿ ಸುಖಂ ಸೂಱೆವೋಗಿ (ಆದರ. ೧४೭–೧೭). **ಕಲ್ಲಾಬಿಲ್ಲಿ** : ನಿನ್ನ ಕಣ್ಣು ತೆಗೆದ ಮಂಗನ್ನ ಕಲ್ಲಾಬಿಲ್ಲಿ ಮಾಡುತ್ತಿದ್ದೆ (ನದೀಪ. ೭). **ಕಲ್ಲಾವಿಲ್ಲಿ** : ಹಣವನ್ನು ಕಲ್ಲಾವಿಲ್ಲಿ ಮಾಡಬೇಡಿರಿ (ಭಾರಥಿ. ೫) ; ಅವರ ಆಸ್ತಿಯೆಲ್ಲ ಕಲ್ಲಾವಿಲ್ಲಿಯಾಗಿ ಮನೆಯನ್ನು ಸಾಹುಕಾರರು ಜಪ್ತಮಾಡಿಸಿದರು (ಸ್ವೃತಿಚಿ. ೮೬). [?]

**ಕಲ್ಲಸೆರೆ** (ನಾ). ಕಲ್ಲಿನ ಪದರ, —ಎಳೆ (?) : ಒಳಗೆಱೆಯಬೆ ಕಲ್ಲಸೆರೆಯ ಕುಂಟೆ ಅದಱ ತದನಾನ್ತರ ಮುಟ್ಟುಂಬೆಯೊಟ್ಟಿಲ್ಲಯಾಲ(ಸೌಇಇ. IX–i, ४೧–೨೩ ; 11ನೆಯ ಶತ). [?]

**ಕಲ್ಲಹಳಿ** (ನಾ). ಒಂದು ಊರಿನ ಹೆಸರು : ಕಲ್ಲಹಳಿ ಮೂನೂಱು ಅಳ್ಗೆ (ಎಕ. X, ಗೋರೀಬಿ. ೧೩–೩ ; 1000).
[ಕಲ್$_3$ + ಹಳಿ$_0$ (< ಪಳ್ಳಿ$_1$)]

**ಕಲ್ಲಹಾವಸೆ, ಕಲ್ಲಹಾವುಸೆ** (ನಾ). ಕಲ್ಲಿನ ಮೇಲೆ ಉಂಟಾಗುವ ಹಾವಸೆ; ಕಲ್ಲುಹೂವು; ಪಾಚಿ : "ನಗರೋಗಃ – ಕಲ್ಲಹಾವಸೆ" (ಓಷಧಿ. ೮४). **ಕಲ್ಲಹಾವುಸೆ**: "ಪಲಿತಂ – ಕಲ್ಲಹಾವುಸೆ" (ಓಷಧಿ. ೯೧). [ಕಲ್ಲು (< ಕಲ್$_3$) + ಹಾವಸೆ (< ಪಾವಸೆ)]

**ಕಲ್ಲಹಾವುಸೆ** 'ಕಲ್ಲಹಾವಸೆ' ನೋ.

**ಕಲ್ಲಹೂ** 'ಕಲ್ಲುಹೂವು' ನೋ.

**ಕಲ್ಲಹೂವು** 'ಕಲ್ಲುಹೂವು' ನೋ.

**ಕಲ್ಲಱೆ, ಕಲ್ಲರೆ** (ನಾ). ಕಲ್ಲುಬಂಡೆ: ಕೆಱೆಯ ಕೆಳಗೆ ಗಂಗನ ಮತ್ತ ಶಿವಾಲೆಯ ಮಾದಕ ೫ಂ ಹುಡುವಲೆರೆಯೊಳಗೆ ಕಂ ೧ಂ ಕಲ್ಲಱೆಯ ಕಂ ೧೦ (ಎಕ. VI, ತರೀಕೆ. ೫೯–೨४; 1158); ಕಲ್ಲಱೆಗಳ ಮೇಲೆ ಧುಮ್ಮಿಕ್ಕಿ ನೃತ್ಯವನಾಡುವಂತೆ (ಮೋಹತ. ೧೯–೬४); ಅಱುವತ್ತು ಗಾವುದದಗಲಮುಮಾದ ಕಲ್ಲಱೆ ಇರ್ಕುಂ (ಚಕಬ. ३೬–೧೧). **ಕಲ್ಲರೆ**: ಭೀಮನಡಿಗದ್ದೆಯ ಸೂಳೆ ಬಯಲಗಡಿಯ ಕರಿಯ ಕಲ್ಲರೆ ಬಡಗಲು (ಎಕ. VII, ಶಿವಮೊ. ೨೬–೨४೨ ; 1542); ಪೊದೆಗಳ ನಡುವೆ ಕಲ್ಲರೆಯನ್ನು ಪ್ರವೇಶಿಸುತ್ತಿದ್ದ ಲಾಟೀನನ ಬೆಳಕು (ಮಲೆಮ. ೬೮೫).
[ಕಲ್$_3$ + ಅಱೆ$_4$. / ತಮಿ. ಕಲ್ಲಱೈ ; ಮಲ. ಕಲ್ಲಱ]

**ಕಲ್ಲಾಕಲ್ಲಿ** (ನಾ). ಕಲ್ಲುಕಲ್ಲುಗಳಿಂದ ಮಾಡುವ ಹೊಡೆದಾಟ: ಹೆಲ್ಲಾಹೆಲ್ಲಿ, ಕಲ್ಲಾಕಲ್ಲಿ, ಕೋಲಾಕೋಲಿ (ಶಬ್ದಾನು. ३३೧ ಪ್ರಯೋ); ಕಲ್ಲಾಕಲ್ಲಿ, ಅತ್ರ ಪ್ರಹರಣಂ (ಶಬ್ದಾನು. ३३೧ ವ್ಯಾಖ್ಯಾ).
[ಕಲ್$_3$ + ಕಲ್$_3$ + -ಇ$_3$]

**ಕಲ್ಲಾನೆ** (ನಾ). ೧. ಕಲ್ಲಿನಿಂದ ಮಾಡಿದ ಆನೆ. ೨. "ಬಲಶಾಲಿಯಾದ ಆನೆ" (ಪ್ರಭಣ್ಣ): ಇದೆ ಕಲ್ಲಾನೆಯಂ ಕುತ್ತು ಇದೆ ಪೆರ್ವುಲಿಯಂ ಕುತ್ತು (ರಾಮಾಶ್ವ. ೮४–೧३). [ಕಲ್$_3$ + ಆನೆ$_1$]

**ಕಲ್ಲಾಬಿಲ್ಲಿ** 'ಕಲ್ಲವಿಲ' ನೋ.

**ಕಲ್ಲಾಮೆ** (ನಾ). ಕಲ್ಲುಸಂದಿಗಳಲ್ಲಿ ವಾಸಮಾಡುವ ಆಮೆ; ನೆಲದ ಆಮೆ. 'ನೀರಾಮೆ' ಪರಾ. [ಕಲ್$_3$ + ಆಮೆ]

**ಕಲ್ಲಾಯ್ತ** (ನಾ). ಕಲಿಸುವವನು; ಗುರು; ಶಿಕ್ಷಕ: "ಕಲ್ಲಾಯ್ತನೆಂದು ವಿದ್ಯಾಶಿಕ್ಷಕಂ" (ಕಶಸಾ. ೧೭–३४३); ಸೂಱಾಯ್ತರ ಕಲ್ಲಾಯ್ತರ ಕಡಂಗಾಯ್ತರಚ್ಚುಳಾಯ್ತರ ರಭಸಂ (ಶಮದ. ೧೯೮ ಪ್ರಯೋ); ಕಬ್ಬಿಗರ್ಗೆ ನೀಂ ಕಲ್ಲಾಯ್ತನಕ್ಕುಂ (ರಾಮಾಶ್ವ. ೮೭–೨೫); ಕಲ್ಲಾಯ್ತರಿಮೆಯಿಂದೆಲ್ಲವರಿದಪನು (೧४ವಂ. ३–೧೧). [ಕಲ್$_2$ + -ಆಯ್ತ]

**ಕಲ್ಲಾರ, ಕಲುಹಾರ** (ನಾ). ಒಂದು ಬಗೆಯ ಜಲಪುಷ್ಪ; ನೈದಿಲೆ: "ಕಲ್ಲಾ[ಪಾಠಾಂ. ಕಲುಹಾ]ರಂ ಸುಗಂಧಿಕಂ ಕರ್ನೈದಿಲೆನಿಸಿಕ್ಕು" (ಮಂಗರಾ. ೧೨४–೧೭). **ಕಲುಹಾರ**: ಕಾರಿರುಳೆಂಬ ಕಾಂತೆಯ ಕಬರಿಯ ಕಲುಹಾರದ ಮಾಲೆ ಭೂತಳಕೆ ಆರೈಯದುರುಳ್ವಂದದಿ ಬೀಳ್ವುದಾ ಉಳ್ಕಾರಾಯನೀಕ್ಷಿಸುತಿರಲು (ನೇಮಿಸಂ. ३–೯३). [< ಸಂ. ಕಲ್ಹಾರ]

**ಕಲ್ಲಾರತಿ** (ನಾ). = ಉಪ್ಪಾರತಿ: ಶೇಷಗಿರಿಯಪ್ಪನ ಮುಂದೆಯೇ ಕಲ್ಲಾರತಿ ಎತ್ತಿ ದೃಷ್ಟಿ ತೆಗೆದಳು (ದೇವಹಂ. ೯೫). [< ಕದಲಾರತಿ ?]

**ಕಲ್ಲಾಲ** (ನಾ). ಆಲದ ಜಾತಿಗೆ ಸೇರಿದ ಒಂದು ಮರ: ಕಲ್ಲತ್ತಿ, ಕಲ್ಲಾಲ, ಕಾಲರಳಿಮರ (ವೈಔಗ. ३೭–೭೨೯); ನೆಲ್ಲಿ ನೇಱಳೆ ಬಿಕ್ಕೆ ಬೆಲ್ಲವತ್ತವು ಮತ್ತಿ ಕಲ್ಲಾಲವು (ನಿಜಸಾಂ. ೧೦–೫೬).
[ಕಲ್$_3$ + ಆಲ$_1$. / ತಮಿ. ಕಲ್ಲಾಲ್]

**ಕಲ್ಲಾಲೆ** (ನಾ). ಕಲ್ಲಿನ ಗಾಣ : ಸೂಲದ ಮೊನೆಯೊಳೇಱಿದ ಕಲ್ಲಾಲೆಯ ಬಸಿಱೊಳ್ ಸಿಲ್ಕಿದ . . . ಪಾಪಾತ್ಮರ ಬಾಟ್ಟನೆಯೆನಿಪ್ಪ ಯಮಲೋಕಮಂ (ರಾಮಾಶ್ವ. ೧೦೫–೨४); "ನಮ್ಮನ್ನು ಒಂದು ಕಲ್ಲಾಲೆಗಿತ್ತು ಅರೆದು ತೀರಿಸಿ ಬಿಡಿ" (ಸವತಿ. ३೧೬). [ಕಲ್$_3$ + ಆಲೆ$_1$]

**ಕಲ್ಲಾವಿಲ್ಲಿ** 'ಕಲ್ಲವಿಲ' ನೋ.

**ಕಲ್ಲಾಳ** (ನಾ). (ಕರಾ) ೧. ಹರಿಜನರಲ್ಲಿ ಒಂದು ಪಂಗಡ. ೨. ಆ ಪಂಗಡಕ್ಕೆ ಸೇರಿದವನು: ಬಿಂಕದ ಬಲ್ಲಾಳನಿಗೆ ಕದಲದ ನಾವು ಸುಂಕದ ಕಲ್ಲಾಳನಿಗೆ ಬೆದರುವ್ರದುಂಟೇ? (ಕೋಟಚೆ. ೨೨).

[← ತುಳು. ಕಲ್ಲಾಳ]

**ಕಲ್ಲಿ**$_1$ (ನಾ). ೧. ಹೆಣಿಕೆಯ ಬಲೆ; ಸರಗುಣಿಕೆಯ ಬಲೆ: ಈ ಗುಣ ಜಗದ ಸಂದೇಹಿಗಳಿಗೆ ಹಾಕಿದ ಕಲ್ಲಿ (ಪ್ರಭೋಗ. ೫೪); ಬಲ್ಲ ಬಲ್ಲಿದ ರೆಂಬುವರೆಲ್ಲರ ಬಲೆಯ ಕಲ್ಲಿಯೊಳಗೆ ತುಂಬಿದ (ವಚರ. ೪೩–೧೭೦); ಜಾಲಮನೊಪ್ಪಿರೆ ಮಾಟ್ಪ ಕಲ್ಲಿಯಂ ಕಾಸಿದ ಕಂಬಿಯಂ ಸಮೆವ (ಜಗವಿ. ೧೬–೧೬); ಬಾಣಾಸನವಲಗಂಬು ಕಲ್ಲಿ ಕೈಪೊಡೆಗಾಳಂ ... ವೆರಸು ಬನಕೆ ಬೇಡರ್ ನಡೆದರ್ (ಸೂಕ್ತಿಸು. ೩–೧೦೩); ಕಪೋತ ನೊಂದು ತಾಂ ಠಕ್ಕಿಸಿ ಕಲ್ಲಿಯಂ ಕಡಿದು ಕನ್ನದೊಳೋಡಿದುದು (ಹವಿಷ್ಮಾರ. ೪–೬೨). ೩. ನೂಲಿನಿಂದ ಹೆಣೆದ ಕಣ್ಣು ಕಣ್ಣಾಗಿರುವ ಚೀಲ; ಬಲೆಚೀಲ: ಒಲವಿಂದೀವೊಡೆ ಗೋವಂಗಲಗೆ ಕೊಬಿಲ್ ಕೋಡ ಕಾಳೆ ಕೋಲುಡೆದೋಲ್ ಕಂಬಲ ಕಲ್ಲಿ ಚೆಲ್ಲಿ ಪೀಲಿಯ ತಲೆಸುತ್ತಲ್ಲದೆ ಮಹಾಗ್ರಪೂಜೆ ವಿರುದ್ಧಂ (ಜಗವಿ. ೧೭–೨೨); ಕರ ಕುಂಡಲಂ ಪೆಗಲ ಕಲ್ಲಿ ಲಸತ್ಪದಕಂ (ದಶಕು. ೧೪–೧೯); ಕೊಳಲ ರಾಗದ ರಹಿಯೊ ಕಲ್ಲಿಯ ಕಲಸುಗೂಳೋ (ಕುವ್ಯಾಸ. ೨–೭೮); ನಡುವಿನ ಕಲ್ಲಿ ಕಯ್ಯೊಳಗೆ ಪಿಡಿದ ಸುರಗಿ ಮೆಚಿಯಲು ವನಚರಿಯರು ನಡೆದರು (ಕುರಾಸಾಂ. ೨೭–೭೨). [ದೇ. ‖ ತುಳು. ಕಲ್ಲಿ]

**ಕಲ್ಲಿ**$_2$ (ನಾ). ಕಿರೀಟ ಅಥವಾ ಪೇಟದ ಮೇಲೆ ಧರಿಸುವ ಒಂದು ಶಿರೋಭೂಷಣ: ವರ ತೋಳ ಭಾಪುರಿ ನವರತ್ನಖಚಿತದ ಸಿರಪೇಷ್ ತುರಾಯಿ ಕಲ್ಲಿಯನು ಸರಸಿಜಮುಖಿಯೊರ್ವ ಪಿಡಿದು ನಿಂದಿರ್ದಳು (ಕಂನವಿ. ೨೪–೬೯). [← ಮರಾ. ಕಲಗೀ]

**ಕಲ್ಲಿ**$_3$ (ನಾ). ಮಡಿಕೆ; ಪದರ.

ಕಲ್ಲಿದಾರಿಯಂಗಿ = ಪಕ್ಕಕ್ಕೆ ಮಡಿಕೆಗಳಿರುವ ಅಂಗಿ (೬). [?]

**ಕಲ್ಲಿ**$_4$ (ನಾ). ಬೇಲಿ (?): ಅಲ್ಲಿಂದ ಪಡುವಲು ಕಲ್ಲಿಯನೆಲೆ ಅಲ್ಲಿಂದಂ ಪಡುವಲು ಇಡೆವಾಳ ಕಟ್ಟೊಬ್ಬೆಯದಾರಿಯಯಲ್ಲೆಗಲ್ಲು (ಎಕ. XIV, ಮಂಡ್ಯ. ೧೧೫–೯೭; 1516). [? . / ತೆಲು. ಕಲ್ಲ]

**ಕಲ್ಲಿ**$_5$ (ನಾ). ಗಲ್ಲ; ಕೆನ್ನೆ. 'ಕಲ್ಲಿಮೀಸೆ' ಪರಾ.

[← ಪಾರ. ಕಲ್ಲ; ಮರಾ. ಕಲ್ಲಾ]

**ಕಲ್ಲಿಗೂಳು** (ನಾ). (ಕಲ್ಲಿಯಲ್ಲಿ) ಕಟ್ಟಿತಂದ ಅನ್ನ, —ಬುತ್ತಿ: ಕಲ್ಲಿಗೂಳನೆ ಕವರ್ತಿ ಬೆಣ್ಣೆ ಪಾಲ್ಗೆನೆಗಳಂ ಗೊಲ್ಲಪಳ್ಳಿಯಲಿ ಕದ್ದುಂಡು (ಲಕ್ಷ್ಮಭಾ. ೨–೨–೨೭); ಗೋವಳರ ಮೇಳದ ಕಲ್ಲಿಗೂಳ ಕೈಮುದ್ದೆಯಂ ತೆಗೆದುಂಡು (ಜೈಮಿಭಾ. ೬–೪೭); ದನಕರುಗಳಂ ಕಾಯುತ್ತ ಕಲ್ಲಿ ಗೂಳಂ ತಿನ್ನುತ್ತ (ಅರ್ಜವಿ. ೨೮–೨೮ ವ).

[ಕಲ್ಲಿ$_1$ + ಕೂಳು$_2$ (< ಕೂೞ್$_1$)]

**ಕಲ್ಲಿದ್ದಲು, ಕಲ್ಲಿದ್ದಿಲು** (ನಾ). ಕಲ್ಲಿನಂತೆ ಗಟ್ಟಿಯಾದ ಇದ್ದಿಲು: ಮರಗಳು ಭೂಮಿಯ ವಿವಿಧ ಪದರುಗಳಲ್ಲಿ ಅಡಗಿಹೋಗಿ ... ಕಲ್ಲಿದ್ದಲಾಗಿ ಪರಿಣಮಿಸಿದವು (ಸಸ್ಯಕ. ೧೩೨); ಈ ಕರಿಯ ದ್ವೀಪಕ್ಕೆ 'ಕಲ್ಲಿದ್ದಲು ಮೂಟೆ' ಎಂದು ಹೆಸರಿದೆ (ನಕ್ಷತ್ರ. ೭೩). ಕಲ್ಲಿದ್ದಿಲು: ಹೈದರಾಬಾದಿನಲ್ಲಿ ಕಲ್ಲಿದ್ದಿಲಿನ ಗಣಿಗಳಿವೆ (ದಭಾಇ. ೮).

[ಕಲ್$_3$ + ಇದ್ದಲು (< ಇರ್ದಲ್)]

**ಕಲ್ಲಿದ್ದಿಲು** 'ಕಲ್ಲಿದ್ದಲು' ನೋ.

**ಕಲ್ಲಿಬೋನ** (ನಾ). = ಕಲ್ಲಿಗೂಳು: ಕಲ್ಲಿಬೋನಾ ಸವಿದು ಸವಿದು ಡೊಳ್ಳು ಬೆಳಸಿಕೊಂಡ ಉದರ (ತೀರ್ಥಮು. ೧೫೮–೫). [ಕಲ್ಲಿ$_1$ + ಬೋನ$_1$]

**ಕಲ್ಲಿಮರು** (ನಾ). ಒಂದು ಬಗೆಯ ಭೂಮಿ: ಮುಂದಕ್ಕೆ ನಿಂಮ ಬಾಳಿಕೆಯಲು ಪಟ್ಟಲಬಿದ ಕಾರು ಬಿತು ಬಳ್ಳ ೩೦ ಅದಲು ಮು ೬೧ ಮಕ್ಕಿ ಕಲ್ಲಿಮರು ಮು ೬ ಬಿಟ್ಟು ಮು ೫[೩]ಅ(೦)ನ್ನು ಮುಡಿತಾದೆಮು ೧೨೦ (ಸೌಇಇ. IX–ii, ೪೩೦–೧೭; 1465). [?]

**ಕಲ್ಲಿಮೀಸೆ** (ನಾ). ೧. ಕೆನ್ನೆಯನ್ನು ಆವರಿಸಿಕೊಂಡಿರುವ ಮೀಸೆ; ಗಲ್ಲಮೀಸೆ: ಕೆಂಪೇರಿದ ತನ್ನ ಮುಖವನ್ನೆತ್ತುತ್ತ, ಕಲ್ಲಿಮೀಸೆಯನ್ನು ತಿರುವುತ್ತ, ಆತ ಕೇಳಿದ (ತಾಯಿ. ೬೯); ಅವನ ಕಲ್ಲಿಮೀಸೆ ಕಟಬಾಯಿಯ ಕಡೆಗೆ ಮುರಿದುಕೊಂಡಿತ್ತು (ಪುನರು. ೫೭೦). ೨. ಬೆಕ್ಕು, ನಾಯಿ, ಹುಲಿ, ಮೊದಲಾದವುಗಳ ತುಟಿಗೆ ಹೊಂದಿರುವ ಬಿರುಸಾದ ಉದ್ದನೆ ಕೂದಲು: (ಬೆಕ್ಕು, ಮೊ. ಗಳ) ತುಟಿಯ ಬಿರುಗೂದಲು, ಕಲ್ಲಿಮೀಸೆ (Whisker. ಇಂಕನಿ). [ಕಲ್ಲಿ$_5$ + ಮೀಸೆ]

**ಕಲ್ಲಿಯೂರು** (ನಾ). ಒಂದು ಊರಿನ ಹೆಸರು: ಗಜ್ಜರಾನೆಯ ಕುಪ್ಪ ಸ್ಥಳಕ್ಕೆ ಕುದುರೆಯಂ ಪಾಯ್ಸಿ ಸತ್ತೊಡೆ ಮೆಚ್ಚಿ ಕಲ್ಲಿಯೂರನಭ್ಯನ್ತರ ಸಿದ್ಧಿಯಾಗೆ ಕಲ್ನಾಡಿತ್ತನ್ (ಎಕ. XII, ಮದ್ದಗಿ. ೭೧–೧೦; ಸು. 920).

[ಕಲ್ಲಿ$_0$ + ಊರು$_3$ (< ಊರ್)]

**ಕಲ್ಲಿಯೋಗರ** (ನಾ). = ಕಲ್ಲಿಗೂಳು: ಹೆಗಲ ಕಂಬಳಿ ಕೈಯ ಕಲ್ಲಿಯೋಗರದಿಂದೆ ಮೊಗ ಬೆಮರೆ ತೇಕುತ್ತ ಪರಿತಂದು ಕಡುಪಿಂದೆ (ಬಸರ. ೯–೯೫). [ಕಲ್ಲಿ$_1$ + ಓಗರ]

**ಕಲ್ಲು** 'ಕಲ್$_3$' ನೋ.

**ಕಲ್ಲುಉದಿ** (ನಾ). ಒಂದು ಜಾತಿಯ ಮರ: ಪಾದರಿ, ಕಾಲಾದ್ರಿ, ಪುರಳಿಮರ, ಕಲಿಹುಟ್ಟು, ಕಲ್ಲುಉದಿ (ವೈಔಗಿ. ೭೨–೧೪೭೭).

[ಕಲ್ಲು (< ಕಲ್$_3$) + ಉದಿ$_0$]

**ಕಲ್ಲುಕಟ್ಟು** 'ಕಲ್ಕಟ್ಟು' ನೋ.

**ಕಲ್ಲುಕರಕ** 'ಕಲ್ಲುಕರಗ' ನೋ.

**ಕಲ್ಲುಕರಗ, ಕಲ್ಲುಕರಕ** (ನಾ). ಒಂದು ಜಾತಿಯ ಗಿಡ; ಕೆಂಗಾಂಚಾಳ ಗಿಡ: ಗರ್ಭನಾಶನಕ್ಕೆ ... ಕಲ್ಲುಕರಗನ ಬೇರು ಹಾಲಲ್ಲಿ ಅರೆದು ಕುಡಿಯಲು ನಾಶ (ವಿವೈವಿ. ೧೦೯). ಕಲ್ಲುಕರಕ: "ಅಶ್ಮಂತಕಃ – ಕಲ್ಲುಕರಕನ ಗಿಡು" (ಓಷಧಿ. ೫). [ಕಲ್ಲು (< ಕಲ್$_3$) + ಕರಗ?]

**ಕಲ್ಲುಕುಂಟಿ** (ನಾ). ಒಂದು ಚಿನ್ನದ ನಾಣ್ಯ: ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು, ಯಾವವೆಂದರೆ:—ಗಬರು, ಪ್ರಿಯಕಾವೇರಿ ... ಕಲ್ಲುಕುಂಟಿ, ದುರ್ಗಿ, ಇಕ್ಕೇರಿ (ಚಿತ್ರಪಾ. ೧೦೪). ℙ ಮದಕರಿನಾಯಕನ ಕಾಲದಲ್ಲಿ ಕಲ್ಲುಕುಂಟಿ ಟಂಕಸಾಲೆಯಲ್ಲಿ ಮುದ್ರಿಸಿದ ನಾಣ್ಯ.

[ಕಲ್ಲು (< ಕಲ್$_3$) + ಕುಂಟಿ$_3$]

**ಕಲ್ಲುಕುಟರಿ** (ನಾ). ಕಲ್ಲಿನ ಕುಪ್ಪೆ, —ಗುಂಪು: ಹೊಲದ ಮಧ್ಯದಲ್ಲಿ ಕಲ್ಲುಕುಟರಿ, ನಟ್ಟು, ಸಣ್ಣಸಣ್ಣಗಿಡಗಳು ... ಇದ್ದರೆ ಅವುಗಳ ಬೇರು ಸಹಿತ ಅಗಿದು ತೆಗೆಯಬೇಕು (ಕೃಷಿಪ್ರ. ೨೫).

[ಕಲ್ಲು (< ಕಲ್$_3$) + ಕುಟರಿ (< ಕುಟ್ಟರಿ)]

**ಕಲ್ಲುಕುಟಿಕ** 'ಕಲ್ಕುಟಿಗ' ನೋ.

**ಕಲ್ಲುಕುಟಿಗ**$_1$ 'ಕಲ್ಕುಟಿಗ' ನೋ.

**ಕಲ್ಲುಕುಟಿಗ**$_2$ (ನಾ). = ಕಲ್ಕುಡ: ಅಂದಿನ ಮಲೆನಾಡಿನಲ್ಲಿ ಭೂತ, ಪ್ರೇತ, ಪಿಶಾಚಿ ... ಜಟಿಗ, ಬ್ರಹ್ಮ, ಕಲ್ಲುಕುಟಿಗ ಮುಂತಾದ ಹಲವು ಹೆಸರಿನ ಹಲವು ಜಾತಿಯ ದೆವ್ವಗಳಿದ್ದವು (ಪಂಜಪಂ. ೨).

[← ತುಳು. ಕಲ್ಕುಡೆ]

**ಕಲ್ಲುಕುಟುಕ** 'ಕಲ್ಕುಟಿಗ' ನೋ.

**ಕಲ್ಲುಕುಟ್ಟಿಗ** 'ಕಲ್ಕುಟಿಗ' ನೋ.

**ಕಲ್ಲುಕೂವೆ** (ನಾ). ಒಂದು ಬಗೆಯ ಸುವಾಸನೆಯ ಹೂವು (೬). [?]

**ಕಲ್ಲುಕೆಲಸ,** ಕಲುಗೆಲಸ (ನಾ). ಕಲ್ಲಿನಿಂದ ಮಾಡಿದ ಕೆಲಸ: ಮನೆಯ ಕಲ್ಲುಕೆಲಸ ನಡೆದಿದೆ (ರೂಢಿ). **ಕಲುಗೆಲಸ:** ದೇಗುಲಮುಂ ಗರ್ಭಗ್ರಿಹ × × × ಕಲುಗೆಲಸವಂ ಮಾಡಿಸಿ (ಎಕ. VII, ಶಿವಮೊ. ೪೪–೧೭ ; ಸು. 1122) ; ಲಕ್ಷ್ಮಣೇಸ್ವರದೇವರ ಕಲುಗೆ[ಲಸ]ಕ್ಕೆ (ಸೌಇ. XX, ೧೬೭–೨೦ ; 1179) ; ಧೃತಿಮಾಡಿ ಇಲ್ಲಿ ತಲ್ಲಣವಿಲ್ಲದೀ ಕ್ಷೇತ್ರವ ಬಿಟ್ಟು ಹೋಗದಿರಿ ಕಲುಗೆಲಸಕ್ಕೆ ಜಾಜಿ (ಸಿದ್ಧರಾ. ೯–೬೦) ; ಆ ದೇವರ ಸಿಖರಪ್ರತಿಷ್ಟೆಯನು ಮಾಡಿಸಿ ಕಲುಗೆಲಸದ ವುಯ್ಯಾಲನೂ ಎತ್ತಿಸಿ (ಎಕ. XI, ಚಿತ್ರದು. ೨–೧೯ ; 1355). [ಕಲ್ಲು (< ಕಲ್$_3$) + ಕೆಲಸ]

**ಕಲ್ಲುಗರಗೆ** (ನಾ). ಒಂದು ಬಗೆಯ ಸಸ್ಯ: ಮದ್ದಾಲೆ, ನೇರಲು, ಮಾವು, ಕಲ್ಲುಗರಗೆ, ಗಂಧಗರಗೆ ಮುಂತಾದ ಗಗನಚುಂಬಿತ ವೃಕ್ಷಗಳು (ಪಂಜಪಂ. ೨). [ಕಲ್ಲು (< ಕಲ್$_3$) + ಗರಗೆ?]

**ಕಲ್ಲುಗಾರೆ** (ನಾ). ಕಲ್ಲಿನಂತೆ ಗಟ್ಟಿಯಾದ ಗಾರೆ; ಸಿಮೆಂಟು: "ಕಲ್ಲುಗಳನ್ನೂ ಇಟ್ಟಿಗೆಗಳನ್ನೂ ಬಂಧಿಸುವುದಕ್ಕಾಗಿಯೂ ಗಟ್ಟಿನೆಲ, ಗೋಡೆಯ ಮೈ, ವೊ. ವನ್ನು ರಚಿಸುವುದಕ್ಕಾಗಿಯೂ ಉಪಯೋಗಿಸುವ ಕಲ್ಲುಗಾರೆ; ಸಿಮೆಂಟು" (Cement. ಇಂಕನಿ). 'ವಜ್ರಗಾರೆ' ಪರಾ. [ಕಲ್ಲು (< ಕಲ್$_3$) + ಗಾರೆ$_2$]

**ಕಲುಗುಂಡು** 'ಕಲ್ಗುಂಡು' ನೋ.

**ಕಲ್ಲುಣಿಸು** (ನಾ). ಕಲ್ಲು ತಿನ್ನುವಿಕೆ: ಕೋಗಿಲೆಯ ನಿಡುಸರಂ ಪಾರಿವದ ಕಲ್ಲುಣಿಸು ಗೂಗೆಗಳ ಕಣ್ದೊಳಸು (ಜೈಮಿಭಾ. ೨೮–೩೮). [ಕಲ್$_3$ + ಉಣಿಸು$_2$]

**ಕಲ್ಲುತೊಟ್ಟಿ** 'ಕಲ್ತೊಟ್ಟಿ' ನೋ.

**ಕಲ್ಲುನಾರು** 'ಕಲ್ನಾರು' ನೋ.

**ಕಲ್ಲುನುಚ್ಚುಗೋಳಿ** (ನಾ). ಒಂದು ಜಾತಿಯ ಚಿಕ್ಕ ಪೊದೆ (ಕ). [ಕಲ್ಲು (< ಕಲ್$_3$) + ನುಚ್ಚುಗೋಳಿ]

**ಕಲ್ಲುಪಡುವಲ** (ನಾ). ೧. ಪಡುವಲದಲ್ಲಿ ಒಂದು ಬಗೆ; ಕೀಳ್ತರದ ಪಡುವಲ (ಕ). ೨. ತುದಿಯಲ್ಲಿ ಕಲ್ಲನ್ನು ಕಟ್ಟಿರುವ ಪಡುವಲ (ಕ). [ಕಲ್ಲು (< ಕಲ್$_3$) + ಪಡುವಲ]

**ಕಲ್ಲುಪ್ಪು** (ನಾ). ೧. ಕಣಿಯಿಂದ ತೆಗೆದ ಉಪ್ಪು; ಸೈಂಧವ ಲವಣ: ಬೆಳ್ಳಿಯ ಪರಿಯಾಣದ ಮೇಲಿರಿಸಿದ ಕಲ್ಲುಪ್ಪರಿಶನ ಜಾತಿಫಲಂಗಳ (ಜ್ಞಾನಚಂ. ೬–೭೩), ಕಲ್ಲುಪ್ಪು ಕೊಗ್ಗಿ ಮೊಸರಿವನೆಲ್ಲಮನೊಡಗೂಡಿಕೊಂಡು . . . ಬಲ್ಲವರಿಕ್ಕುಗೆ ಬಡವಂ ಬಲ್ಲಿದುವಕ್ಕುಂ (ಅಶ್ವಶಾ. ೭–೫೩); ತಾಮ್ರವರ್ಣವಾಗಿ ಕಲ್ಲುಪ್ಪಿನ ವರ್ಣವಾಗಿ ಭಿನ್ನವಾಗಿ . . . ಇರುವ ಮುತ್ತುಗಳಂ ಸರ್ವಥಾ ಮುಟ್ಟಕೂಡದು (ಸೌಗಂಧಿ. ೩೬೬–೬). ೨. ಪುಡಿ ಮಾಡಿರದ ಉಪ್ಪು; ಹರಳುಪ್ಪು. [ಕಲ್$_3$ + ಉಪ್ಪು$_1$]

**ಕಲ್ಲುಬಸರೆ** 'ಕಲ್ಬಸರಿ' ನೋ.

**ಕಲ್ಲುಬಸುರಿ** 'ಕಲ್ಬಸರಿ' ನೋ.

**ಕಲ್ಲುಬಾಂದು** (ನಾ). ಕಲ್ಲುಗಳನ್ನಿಟ್ಟು ಗುರುತಿಸಿದ ಗಡಿ, —ಮೇರೆ: ಕಲ್ಲುಬಾಂದುಗಳನ್ನು ಮೀರಿಹೋಗುವುದು ಹಿಂದೆ ನನ್ನೂರಿನವರಿಗೆ ದೊಡ್ಡ ತಪ್ಪು ಎಂಬ ಭಾವನೆಯಿತ್ತು (ನನ್ನೂರು. ೧೪೮). [ಕಲ್ಲು (< ಕಲ್$_3$) + ಬಾಂದು]

**ಕಲ್ಲುಬಾಳೆ** 'ಕಲ್ಬಾಟೆ' ನೋ.

**ಕಲ್ಲುಮದ** 'ಕಲ್ಮದ' ನೋ.

**ಕಲ್ಲುಮನಸ್ಸು** (ನಾ). ಕಲ್ಲಿನಂತಹ ಮನಸ್ಸು; ಕಠಿಣವಾದ ಮನ: ಅವನದು ಬಹಳ ಕಲ್ಲುಮನಸ್ಸು (ರೂಢಿ). [ಕಲ್ಲು (< ಕಲ್$_3$) + ಮನಸ್ಸು]

**ಕಲ್ಲುಮರಗೆ** 'ಕಲ್ಮರಿಗೆ' ನೋ.

**ಕಲ್ಲುಮರಿಗೆ** 'ಕಲ್ಮರಿಗೆ' ನೋ.

**ಕಲ್ಲುಮಾಡ** 'ಕಲ್ಮಾಡ' ನೋ.

**ಕಲ್ಲುಮಾವು,** ಕಲುಮಾವು (ನಾ). ೧. ಒಂದು ಜಾತಿಯ ಗಿಡ. ೨. ಮಾವಿನಲ್ಲಿ ಒಂದು ಪ್ರಕಾರ; ಕಾಡುಮಾವು (ಕ). **ಕಲುಮಾವು:** ೨. ಕಾಡಕದಳಿ ಕಲುಮಾವು ಬೇವು ತಾಳಿ ಹೊಂದಾಳೆಯಕ್ಕೆಯು ಕಕ್ಕೆ (ನವಮೋ. ೮–೯). [ಕಲ್ಲು (< ಕಲ್$_3$) + ಮಾವು]

**ಕಲ್ಲುಮುಳ್ಳು** (ನಾ). ೧. ಕಲ್ಲು ಮತ್ತು ಮುಳ್ಳು. ೨. ಸವೆದುಹೋದ ಬೀಸುವ ಕಲ್ಲು, ಅರೆಯುವ ಕಲ್ಲು, ಒರಳುಕಲ್ಲುಗಳ ಮೇಲೆ ಹುಯ್ಯಿಸುವ ಮುಳ್ಳು: ಗುಂಡಕಲ್ಲು ಸವೆದಿದೆ, ಕಲ್ಲುಮುಳ್ಳು ಹುಯ್ಯಿಸಬೇಕು (ರೂಢಿ). [ಕಲ್ಲು (< ಕಲ್$_3$) + ಮುಳ್ಳು (< ಮುಳ್$_2$)]

**ಕಲ್ಲುರದಾಳೆ** (ನಾ). ಒಂದು ಬಗೆಯ ಸಸ್ಯ: "ಅಶಾತೆ? – ಕಲ್ಲುರದಾಳೆ" (ಓಷಧಿ. ೩). [?]

**ಕಲ್ಲುರಾಳ** (ನಾ). "ಕಲ್ಲಿನಂತೆ ಗಟ್ಟಿಯಾದ ರಾಳ; ಕಲ್ಲುರಾಳ" (Stone pitch. ಇಂಕನಿ). [ಕಲ್ಲು (< ಕಲ್$_3$) + ರಾಳ]

**ಕಲ್ಲುರಿಗ** (ನಾ). ಕಡುಬು ಮಾಡುವವನು; ಭಕ್ಷ್ಯಮಾಡುವವನು (?): ಈ ನಕುಳಂ ಪೋದ ಭವದೊಳ್ . . . ದ್ರವ್ಯಲೋಲುಪನೆಂಬೊಂ ಕಲ್ಲುರಿಗನಾಗಿ (ಆದಿಪು. ೫–೧೮ ವ); "ಮಿಠಾಯಿಗಾರ, ರೇವಡಿಗಾರ" (ಆದಿಪು–ಕೋಶ); "ಕಲ್ಲು ಸುಡುವವನು" (ಪ್ರಥಣ್ಣ). [?]

**ಕಲ್ಲುರಿವೆ** (ನಾ). ಒಂದು ಬಗೆಯ ಸಸ್ಯ: ಕಲ್ಲುರಿವೆ, ಕಾಡುಗಿಡ, ಅಗ್ನಿವೇಂದ್ರಪಾಕು (ವೈಔಗಿ. ೬–೯೭). [?]

**ಕಲ್ಲುವರದ** (ನಾ). ಹರಳು ಕಲ್ಲಿನ ವ್ಯಾಪಾರಿ; ರತ್ನವ್ಯಾಪಾರಿ: ಕಲ್ಲುಕಣಿಯ ಕಲ್ಲುವರದಿ[ದ]ರುಗಳುಂ ಕೂಡಿದ್ದು (ಮೈಆರಿ. ೧೯೩೩, ೬೦–೫ ; 1173). [ಕಲ್ಲು (< ಕಲ್$_3$) + ಪರದ]

**ಕಲ್ಲುಶುಂಠಿ** (ನಾ). ಒಂದು ಬಗೆಯ ಶುಂಠಿ: ಕಲ್ಲುಶುಂಠಿ, ಕಾಡುಶುಂಠಿ (ವೈಔಗಿ. ೭೯–೧೬೨೫). [ಕಲ್ಲು (< ಕಲ್$_3$) + ಶುಂಠಿ]

**ಕಲ್ಲುಸಂಪಿಗೆಹಣ್ಣು** (ನಾ). ಒಂದು ಬಗೆಯ ಹಣ್ಣು: ಹಲಸಿನ ಹಣ್ಣೋ . . . ಕಲ್ಲುಸಂಪಿಗೆಹಣ್ಣೋ ಕುಯ್ಯುವುದು (ಮಲೆಮ. ೫೬೩). [ಕಲ್ಲುಸಂಪಿಗೆ$_0$ + ಹಣ್ಣು$_3$ (< ಪಣ್$_3$)]

**ಕಲ್ಲುಸಕ್ಕರೆ** (ನಾ). ಕಲ್ಲಿನಂತೆ ಗಟ್ಟಿಯಾದ ಸಕ್ಕರೆ; ಖಂಡಶರ್ಕರೆ: ಕಲ್ಲುಸಕ್ಕರೆ ಕೊಳ್ಳಿರೋ ನೀವೆಲ್ಲರು ಕಲ್ಲುಸಕ್ಕರೆ ಕೊಳ್ಳಿರೋ (ಪುರಂದ. ೧–೧೨೬ ಪಲ್ಲವಿ). [ಕಲ್ಲು (< ಕಲ್$_3$) + ಸಕ್ಕರೆ]

**ಕಲ್ಲುಸಬ್ಬಸಿಗೆ** (ನಾ). (ಮಸಾಲೆಗೆ ಉಪಯೋಗಿಸುವ) ಒಂದು ಬಗೆಯ ಸೊಪ್ಪು: ಹುಚ್ಚುನೆಲಬೇವು, ಕಲ್ಲುಸಬ್ಬಸಿಗೆ (ವೈಔಗಿ. ೫೭–೧೧೫೪). [ಕಲ್ಲು (< ಕಲ್$_3$) + ಸಬ್ಬಸಿಗೆ]

**ಕಲ್ಲುಸಾರ** (ನಾ). ಹಳ್ಳ, ಕಾಲುವೆ ಮೊದಲಾದುವನ್ನು ದಾಟಲು ಹಾಕಿದ ಕಲ್ಲು, —ಚಪ್ಪಡಿಕಲ್ಲಿನ ಸೇತುವೆ: ಸಲೀಸಾಗಿ ಕಲ್ಲುಸಾರದ ಮೇಲೆಯೆ ದಾಂಟಿ ಹೋಗುತ್ತಿದ್ದೆವಲ್ಲಾ? (ಮಲೆಮ. ೭೦೮). [ಕಲ್ಲು (< ಕಲ್$_3$) + ಸಾರ$_1$]

**ಕಲ್ಲುಸುಂಟಿ** (ನಾ). = ಕಲ್ಲುಶುಂಠಿ (ಕ). [ಕಲ್ಲು (< ಕಲ್$_3$) + ಸುಂಟಿ]

**ಕಲ್ಲುಸೋರೆ** (ನಾ). ೧. ಕಲ್ಲಿನ ಪಾತ್ರೆ; ಕಲ್ಲುಮರಗೆ. ೨. ಕಾಡುಸೋರೆಬಳ್ಳಿ (ಕ). [ಕಲ್ಲು (< ಕಲ್$_3$) + ಸೋರೆ$_1$ (< ಸೊರೆ$_2$)]

**ಕಲ್ಲುಹಾವು** (ನಾ). ಒಂದು ಜಾತಿಯ ಹಾವು. ℙ ಕಲ್ಲಿನ ಕೆಳಗೆ ಅಡಗಿಕೊಳ್ಳುವ ಅಭ್ಯಾಸವುಳ್ಳ ಹಾವು: ಗೋದಿನಾಗರ, ಕಲ್ಲುಹಾವು, ಜಡೆನಾಗರ (ನಮ್ಮನು. ೨೪೦). [ಕಲ್ಲು (< ಕಲ್$_3$) + ಹಾವು (< ಪಾವು$_1$)]

**ಕಲ್ಲುಹೂವು**, ಕಲ್ಲಹೂ, ಕಲ್ಲಹೂವು (ನಾ). ಕಲ್ಲಿನ ಮೇಲೆ ಬೆಳೆದ ಪಾಚಿ: "ಹಲವು ಕಲ್ಲುಹೂವುಗಳಿಂದ ತಯಾರಿಸಿದ ಧೂಮ್ರಬಣ್ಣ ಅಥವಾ ನೇರಿಳೇಬಣ್ಣ. ಒಂದು ಜಾತಿಯ ಕಲ್ಲುಹೂವು" (Cudbear. ಇಂಕನಿ). **ಕಲ್ಲಹೂ** : "ಕಾಲಾಮಸೂರ್ಯಕಂ, ಕಾಲಾನುಸೂರ್ಯಕಂ – ಕಲ್ಲಹೂ" (ಒಷಧಿ. ೩೨). **ಕಲ್ಲಹೂವು** : "ಕಾಲಾನು, ಸಾಯ್ಯಂ, ಕ್ರುದ್ಧಂ, ಅಶ್ಮಪುಷ್ಪಂ, ಶೀತಶಿವಂ, ಶೈಲೇಯಂ ಈ ೬ ಕಲ್ಲಹೂವು" (ನಾಚಿರಾ. ೧೧೦); "ಜೀರ್ಣಂ –ಕಲ್ಲಹೂವು" (ಒಷಧಿ. ೬೨).

[ಕಲ್ಲು (< ಕಲ್$_3$) + ಹೂವು (< ಪೂ$_2$)]

**ಕಲ್ಲುಹೆಟ್ಟಿ** (ನಾ). ಒಂದು ಬಗೆಯ ಸಸ್ಯ: ಕಲ್ಲುಹೆಟ್ಟಿ, ಕಾಡುಪೆ, ಕರ್ಪ (ಮೈಔಗಿ. ೫೦–೯೯೩). [ಕಲ್ಲು (< ಕಲ್$_3$) + ಹೆಟ್ಟಿ ?]

**ಕಲ್ಲುಹೋಳಕ** (ನಾ). ಒಂದು ಜಾತಿಯ ಪಕ್ಷಿ; ಕಾಡುಕೋಳಿ (+).

[ಕಲ್ಲು (< ಕಲ್$_3$) + ಹೋಳಕ ?]

**ಕಲ್ಲುಳಿ** (ನಾ). ಕಲ್ಕುಟಿಗನ ಉಳಿ; ಕಲ್ಲುಕಡೆಯುವ ಉಳಿ; "ಟಂಕ" (ನಾಚಿರಾ. ೬). [ಕಲ್$_3$ + ಉಳಿ$_5$. / ತಮಿ. ಕಲ್ಲುಳಿ]

**ಕಲ್ಲೂಕ** (ನಾ). ಒಂದು ಜಾತಿಯ ನೀರು ಪ್ರಾಣಿ; ಒಂದು ಜಾತಿಯ ಜಲಚರ (?) : ತಪಸಿಗೆ ಬಂದು ನಲ್ಲತನ ಶಾಂತವಿಂತಿರಬೇಡವೇ ಹೊಳೆಯ ಕಲ್ಲೂಕನಂ ಹಿಡಿದ ಗಾದೆ ನಿನಗೆಂದುಮೆಯ ವಲ್ಲಭನಿಳಿದ (ಲಿಂಗಪು. ೨೩–೩೬). [< ಕಲ್ಲೂರು$_2$ ?]

**ಕಲ್ಲೂರು$_1$** (ನಾ). ಒಂದು ಊರಿನ ಹೆಸರು: ಕಲ್ಲೂರುಗ್ರಾಮ ವಾಸ್ತವ್ಯ ಭಾರದ್ವಾಜಗೋತ್ರ (ಇಅ. XIII, ೨೪೯–೨೫; ?).

[ಕಲ್$_3$ + ಊರು$_3$ (< ಊರ್)]

**ಕಲ್ಲೂರು$_2$** (ನಾ). (ಕರಾ) ಒಂದು ಜಾತಿಯ ಮೀನು: ನಿಮಗೆ ಬೇಕಾದ ಹೊಳೆಯ ಮೀನು, ಮುಡಾವು, ಅಬ್ರೋಣಿ, ಕೂಸೆ, ಕಲ್ಲೂರು, ಕೊಂತಿ ಯಾವುದೂ ಇಲ್ಲ (ಹೊಸಕ್ಷಿ. ೫೪).

[← ತುಳು. ಕಲ್ಲೂರು]

**ಕಲ್ಲೆ$_1$** (ನಾ). ಗೊಂದಲ; ಕ್ಷೋಭೆ: ಒಂದಕ್ಷೋಹಿಣೀಬಲಂಬೆರಸು ಪ್ರಳಯದ ಮಾರಿಯುಮಾಕಾಶದ ಕವಿಯುಂ ನೆಲದ ಕಲ್ಲೆಯುಂ ಮುನ್ನಮೆ ಮೇರೆದಪ್ಪುವುದುಮಂ ತನ್ನೊಳಳವಡಿಸಿಕೊಂಡು ತಾಗಿದಾಗಳ್ (ಪಂಪಭಾ. ೧೨–೧೯ ವ).

ಕಲ್ಲೆಯುಂ ಕವಿಯುಂ, ಕಲ್ಲಿಯುಂ ಕವಿಯುಂ, ಕಲ್ಲೆಯುಂ ಕವಿಲೆಯುಂ = ಅಲ್ಲೋಲಕಲ್ಲೋಲ: ಸಮುದ್ರಂ ಬಹಿತ್ರಂ ಬೆದಱುವಂತು ತಿಟ್ಟನೆ ತಿರಿದು ಕಲ್ಲೆಯುಂ ಕವಿಯುಮಾಗೆ . . . ಕೂವ ಕಂಭಂ ಮುಱಿಯೆ (ಬಂಹರಿ. ೪–೧೪ ವ); ಗಜದೊಡ್ಡು ಗಂಡುಗೆಟ್ಟು ಬೆಂಗೊಟ್ಟು ನಿಲ್ಲದೋಡಿಯುಂ ಕಲ್ಲೆಯುಂ ಕವಿಯುಮಾಗಿ [ಪಾಠಾಂ. ತಲ್ಲೆಯುಂದಲ್ಲಿವಿಲ್ಲಿಯುಮಾಗೆ, ಕಲ್ಲಿಯುಂದಲ್ಲಿವಿಲ್ಲಿಯುಮಾಗೆ] (ಗಿರಿಕ. ೬–೭೬ ವ); ತುಱುಪಟ್ಟಿಯೆಲ್ಲಂ ಕಿಟ್ಟಲೆಯುಂ ಕಿಱಿಂದಲೆಯುಂ ಕಲ್ಲಿಯುಂ ಕವಿಯುಮಾದಪುದಿದೇನೆಂದು ಸಂಭ್ರಮಿಸಿ (ಲೀಲಾವ. ೫–೧೩೪); ಕಲ್ಲೆಯುಂ ಕವಿಲೆಯುಮಾಗೆ ಡೊಂಬರ ಬೀಡಂ ತೊಱೆ ಪಾಯ್ವಂತೆ ಕಳಕಳರವಂ ಪೆರ್ಚೆ (ಧರ್ಮಾಮ್ಯ. ೫–೨೦೭); ಕಲ್ಲೆಯುಂ ಕವಿಲೆಯುಮಾಗಿ ನೆರವಿ ಪೆಱಗೆ ಬರೆ (ಧರ್ಮಾಮ್ಯ. ೬–೧೦೪). [?]

**ಕಲ್ಲೆ$_2$** (ನಾ). ನವೆ; ತುರಿಕೆ: "ಕಲ್ಲೆ ಕಂಡೂತಿಯೊಳ್" (ಕಶಠ. ೨೦).

[?]

**ಕಲ್ಲೆ$_3$** (ನಾ). ನೀರಿನ ಹರವಿ, —ಗುಡಾಣ: "ಅಳಿಂಜರಂ ಮಣಿಜೆಯೆನೆ ಕಲ್ಲೆನಾಮಂ" (ಮಂಗರಾ. ೬೨–೨೩).

[< ಸಂ. ಖಲ್ಲ ?]

**ಕಲ್ಲೆಟ್ಟಿ** 'ಕಲ್ದೆಂಟಿ' ನೋ.

**ಕಲ್ಲೆಡೆ** (ನಾ). ಉಪ್ಪಿನಕಾಯಿಗೆ ಉಪಯೋಗಿಸುವ ಒಂದು ಬಗೆಯ ಹುಳಿಕಾಯಿ: ಕಲ್ಲೆಡೆ ಮಾಗಳಿ ಕರಿಲೆ ಉಪ್ಪಿನಕಾಯ ನಿಲ್ಲದೆ ಎಡೆ ಮಾಡಿದರು (ಮಾದೇಸಾಂ. ೩–೯೪). [?]

**ಕಲ್ಲೆಣ್ಣೆ** (ನಾ). ಬಾವಿ ತೋಡಿ ತೆಗೆಯುವ ಎಣ್ಣೆ; ಸೀಮೆಎಣ್ಣೆ; ಚಿಮಣಿಯೆಣ್ಣೆ (ಉಕ): ವಿಷಯಾಗ್ನಿಗೆ ಸುಖದಾಸೆಯ ಕಲ್ಲೆಣ್ಣೆಯ ಪಾನ (ಅಗ್ನಿಹಂ. ೮೫–೬೦); ಟೇಬಲ್ಲಿನ ಮೇಲೆ ಒಂದು ಕಲ್ಲೆಣ್ಣೆಯ ದೀಪ ಉರಿಯುತ್ತಿದೆ (ಇಪ್ಪಕ. ೪೦೮). [ಕಲ್$_3$ + ಎಣ್ಣೆ]

**ಕಲ್ಲೆದೆ** 'ಕಲ್ಲೆರ್ದೆ' ನೋ.

**ಕಲ್ಲೆದೆಗ** 'ಕಲ್ಲೆರ್ದೆಗ' ನೋ.

**ಕಲ್ಲೆರ್ದೆ**, ಕಲ್ಲೆದೆ (ನಾ). ೧. ಕಲ್ಲಿನಂತಹ ಎದೆ; ಕಠೋರವಾದ ಹೃದಯ: ಮೆಲ್ಲೆರ್ದೆಯುಂ ವಿಯೋಗಿಜನಕಂತದು ಕಲ್ಲೆರ್ದೆಯಪ್ಪುದಲ್ತೆ (ಕಾದಂಉ. ೩೨೮); ಕೂಡದರ ಕಲ್ಲೆರ್ದೆ ಪವ್ವನೆ ಸೀೞೆ (ಕಬ್ಬಿಕಾ. ೩೦೦); ಒಳ್ಗಬ್ಬಮುಮೊಳ್ನುಡಿಯುಂ ಗೇಯಮುಮುರ್ಚದ ಕಡುಗಲ್ಲೆರ್ದೆಯೆರ್ದೆಯನಂಬು ಮೇಣುರ್ಚುಗುಮೇ (ಕಾವ್ಯಾವ. ೨೦೯). ೨. ಕಲ್ಲಿನಂತಹ ಎದೆಯುಳ್ಳವನು; ನಿಷ್ಕರುಣಿ: ಅಗ್ಗಲಿಸಿಯೆ ನಿಂದುದೆಂತುಮಸು ಪೋಗದೆ ಕಲ್ಲೆರ್ದೆಯೆಂ ಮಹೀಪತೀ (ಕಾದಂಪೂ. ೯೨೧); ಅರಸನೇಂ ಕಲ್ಲೆರ್ದೆಯೋ ಮರವಾನಿಸನೋ ಕಲ್ಲುಂ ಮರನಿರ್ಪಂತಿರ್ದನಿಂತು ನಿಷ್ಕರುಣನೊ ಪೇೞು (ಅಜಿಪು. ೧೦–೫೩); ಕರುಣಂಗೆಟ್ಟಾಕೆ ಕೈಕೆ ಕಲ್ಲೆರ್ದೆಯಕ್ಕುಂ (ಪಂರಾಮಾ. ೭–೧೬೪); ಅತಿಚತುರ ಕವೀಶ್ವರ ವಿರಚಿತ ಕೃತಿ ಕಲ್ಲೆರ್ದೆಯೆನಿಪ್ಪ ಮೂರ್ಖಂಗೆ ಚಮತ್ಕೃತಿಯಂ ಮಾಡುಗುಮೆ (ಮಲ್ಲಿಪು. ೧–೩೫). **ಕಲ್ಲೆದೆ** : ೧. ತರುಣೀಜನದ ಕಲ್ಲೆದೆ ಗೋಂಟಿ ಕಾವನ ಹರಿದಾಳಿಗೀಡಾದುದಿಲ್ಲ (ನೇಮಿಸಂ. ೮–೨೯); ಇಲ್ಲದಿಹ ಕಾಲಕ್ಕೆ ಹೊಲ್ಲಹನು ಜನರಿಂಗೆ ಅಲ್ಲದ ಗುಣದ ಅರಸಿಂಗೆ ಸಾಲಕ್ಕೆ ಕಲ್ಲೆದೆಯು ಬೇಕು (ಸರ್ವಜ್ಞ. ೧೪೦೭); ನನ್ನ ಕಲ್ಲೆದೆಯನ್ನು ತನ್ನ ಸುಗುಣಗಳಿಂದಲೆ ಕರಗಿಸುತ್ತಲಿದಾನೆ (ವಚಕಾ. ೫೬). [ಕಲ್$_3$ + ಎರ್ದೆ]

**ಕಲ್ಲೆರ್ದೆಗ**, ಕಲ್ಲೆದೆಗ (ನಾ). = ಕಲ್ಲೆರ್ದೆ ೨: ಇಲ್ಲದ ಗುಣಗಳ ಬಲ್ಲರಿಚ್ಚೆಗತನದಲ್ಲಿ ಪೊಗಳೆ ಪೊಂಗಿ ನಲಿವ ಕಲ್ಲೆರ್ದೆಗರು ಕಡುಗಾಂಪರವನಿಯೊಳಗಿಲ್ಲನ್ಯರರಸುಗಳಿಂದ (ಕುರಾಸಾಂ. ೩೫–೮೫). **ಕಲ್ಲೆದೆಗ** : ಬಾಳ ಸಿಂಸೊಗಸುಗಳ ಪೆರ್ಚಿಪನು ಖೇಲಕನು, ಕೀಳ ದೆನಿಪವನೊರಟ, ಮಂಕ, ಕಲ್ಲೆದೆಗ (ಮಂಕುಕ. ೨೬೫).

[ಕಲ್ಲೆರ್ದೆ + –ಗ$_3$]

**ಕಲ್ಲೆರ್ದೆಗವಿ** (ನಾ). ೧. ಕಠೋರಹೃದಯವನ್ನುಳ್ಳ ಕವಿ. ೨. ಕಲ್ಲೊಳಗೆ ಇರುವ ಗುಹೆ; ಕಲ್ಲಿನ ಗವಿ. ೧, ೨: ಎಂದುದನೆನುತಿರ್ಪರ್ ಗಿರಿಯಂದದಿನತಿ ನಿಶಿತ ಸುಕವಿ ವಾಕ್ಕುಲಿಶಂ ಬೀಟ್ಟಂದೊಡಮೆರ್ದೆಯಂ ಸೀೞ್ದೊಡಮೊಂದಕ್ಕರಮಿಲ್ಲೆನಿಪ್ಪ ಕಲ್ಲೆರ್ದೆಗವಿಗಳ್ (ಲೀಲಾವ. ೧–೨೫). [ಕಲ್ಲೆರ್ದೆ + ಕವಿ$_6$ ; ಕಲ್ಲೆರ್ದೆ + ಗವಿ$_1$]

**ಕಲ್ಲೆರ್ದೆತನ** (ನಾ). ನಿರ್ದಯತೆ; ನಿಷ್ಕರುಣತೆ: ಕಲ್ಲೆರ್ದೆತನದಿಂದೆನ್ನಂತು ಬರ್ದನಾವನುಮೊಳನೇ (ಗದಾಯು. ೫–೨೮). [ಕಲ್ಲೆರ್ದೆ + –ತನ]

**ಕಲ್ಲೆರ್ದೆಯ** (ನಾ). ಕಲ್ಲುಮನಸ್ಸಿನವನು; ನಿರ್ದಯಿ: ಕುಡುವಿಲ್ಲಂ, ಕಲ್ಲೆರ್ದೆಯಂ (ಭಾಷಾಭೂ. ೧೩೧ ಉದಾ).

ಕಲ್ಲೆರ್ದೆಯಳ್ = ನಿರ್ದಯಳಾದವಳು; ಕಠೋರಮನಸ್ಸಿನವಳು: ಕಲ್ಲೆರ್ದೆಯಳೆನಿಸಿದೆನ್ನಂ ಕಾಣದೊಡನೆ ಸ್ವಭಾವ ಸರಳತೆಯ ನಪ್ಪುಕೆಯ್ದ ನಿಜಗುಣದಿಂ (ಕಾದಂಉ. ೩೯). [ಕಲ್ಲೆರ್ದೆ + –ಅ$_7$]

**ಕಲ್ಲೇರಿ** (ನಾ). ಕಲ್ಲಿನ ಕಟ್ಟೆ, —ದಿಬ್ಬ: ಅಡಕೆಯ ತೋಂಟದ ಗಡಿಯ ಕಲ್ಲೇರಿಯಾಗ್ನೇಯದೊಳ್ (ಎಕ. VIII, ಸಾಗರ. ೧೦೯–೬೦; 1079). [ಕಲ್$_3$ + ಏರಿ$_1$]

**ಕಲ್ಲೊಂಕಾ** (ನಾ). (ಕರಾ) ಒಂದು ಜಾತಿಯ ಮೀನು.
[← ತುಳು. ಕಲ್ಲಂಗೈ]

**ಕಲ್ಲೊಡ್ಡ** (ನಾ). ಒಡ್ಡರಲ್ಲಿ ಒಂದು ಪಂಗಡ; ಕಲ್ಲು ಒಡೆಯುವ ವೃತ್ತಿಯವನು (ಕ). 'ಮಣ್ಣೊಡ್ಡ' ಪರಾ.
[ಕಲ್$_3$ + ಒಡ್ಡ$_1$]

**ಕಲ್ಲೊಡ್ಡು** (ನಾ). ಕಲ್ಲಿನ ಗುಡ್ಡೆ; ಕಲ್ಲುದಿಣ್ಣೆ (ಕ).
[ಕಲ್$_3$ + ಒಡ್ಡು$_2$]

**ಕಲ್ಲೊತ್ತು** (ನಾ). ಅಂಗಾಲು ಅಥವಾ ಹಿಮ್ಮಡಕ್ಕೆ ಕಲ್ಲು ಒತ್ತಿ ಉಂಟಾಗುವ ಗಂಟು, —ಆಣಿ: ಮುಳ್ಳುಂ ಸಿವುರುಗಳುಂ ನಟ್ಟಲ್ಲಿಯ ಪೊಜವಂಡದಿರ್ದು ಬಾತೊಡೆ ಮತ್ತಂ ಕಲ್ಲೊತ್ತೆ[ತ್ತಿ]ಗರ್ಕದುಗ್ಧವ ಮೆಳ್ಳಿಸಿಯೊಲೆಗಲ್ಲ ಸೇಕಗೆಯ್ಯಲ್ ಮಾಣ್ಗುಂ (ಲೋಕೋಪ. ೯-೧೬೫).
[ಕಲ್$_3$ + ಒತ್ತು$_2$. / ತುಳು. ಕಲ್ಲೊತ್ತು]

**ಕಲ್ಲೊನಕೆ** (ನಾ). ಕಲ್ಲಿನ ಒನಕೆ: ತೊಳಲಿ ಕಲ್ಲಸುವೆ ಕಲ್ಲು ಕಲ್ಲೊರಳ ಕಲ್ಲೊನಕೆಯೆಂದಿವು ಮೊದಲಾಗೊಡೆಯವುಂ (ಪಸಾರ. ೬೨೭-೧೪).
[ಕಲ್$_3$ + ಒನಕೆ]

**ಕಲ್ಲೊರಳ್, ಕಲ್ಲೊರಳು** (ನಾ). ಕಲ್ಲಿನಿಂದ ಮಾಡಿದ ಒರಳು; ಒರಳು ಕಲ್ಲು: ಮದವಲರ್ದ ತನುವಂ ಕುಸುಱಿದಱಿದುಱಿ ಕಲ್ಲೊರಳೊಳಿಕ್ಕಿ (ಬಸವು. ೪೫-೨೮); ತೊಳಲಿ ಕಲ್ಲಸುವೆಕಲ್ಲು ಕಲ್ಲೊರಳ ಕಲ್ಲೊನಕೆಯೆಂದಿವು ಮೊದಲಾಗೊಡೆಯವುಂ (ಪಸಾರ. ೬೨೭-೧೪). **ಕಲ್ಲೊರಳು**: ಕಲ್ಲೊರಳಲ್ಲಿ ಹಾಕೀ ತಿರುವ್ಯಾರು ಅರಸಣವ (ಹುಟ್ಟಹ. ೧೪೮).
[ಕಲ್$_3$ + ಒರಳ್ (< ಒರಲ್$_1$)]

**ಕಲ್ಲೊರಳು** 'ಕಲ್ಲೊರಳ್' ನೋ.

**ಕಲ್ಲೊಲೆ** (ನಾ). (?): ದೈವ ತಾನೆ ಕಾಡಿದವುದು ನೋಡ ಕಲ್ಲೊಲೆಗೆ ಬಿತ್ತಿಯ ಬತ್ತಲೆದಾಱಿತೆನ್ನ ಬಾಯ್ ಕುಡಿದಪೆಂ (ಲೀಲಾವ. ೨-೧೨೬).
[?]

**ಕಲ್ಲೊಟ್ಟಿ** (ನಾ). ಕಲ್ಲಿನ ಬೇಲಿ: ಮೂಱು ನಿಱಿಗಲ್ಲನ್ನಿಱಿಸಿ ಕಲ್ಲೊಟ್ಟಿಯನ್ನಾಗೆ ಕಿಸುಕಾಡನೆತುಂ ಕೊಟ್ಟತ್ತು (ಎಕ. III, ನಂಜನ. ೨೬೯-೯೪; 904). [ಕಲ್$_3$ + ಒಟ್ಟಿ (< ಒಟ್ಟೆ)]

**ಕಲ್ಲೋಜ** 'ಕಲ್ಲೋಝು' ನೋ.

**ಕಲ್ಲೋಜತನ** (ನಾ). ಶಿಲ್ಪವಿದ್ಯೆ, —ಕಲೆ: ಬರ್ದಿಲರ ಬಡಿಗಿಗೆನಗೆ ವುಟ್ಟದಾತಂ ನನ್ನ ಕಲ್ಲೋಜತನಮವಗೆ ಗುಪ್ತವರಮಿರ್ಪುದಯ್ (ಶ್ರೀರಾಮಾ. ೫೮೭-೯೪). [ಕಲ್ಲೋಜ (< ಕಲ್ಲೋಝು) + -ತನ]

**ಕಲ್ಲೋಝು, ಕಲ್ಲೋಜ** (ನಾ). ಕಲ್ಲಿನ ಕೆಲಸವನ್ನು ಬಲ್ಲವನು; ಶಿಲ್ಪಿ: ಕೆಸಱು ಕಲ್ಲಾದಿಯಾಗಿ ಕಲ್ಲೋಝುರ ಕೆಲಸ ಭರತೋಜನ ಕಣ್ಣರಣೆ (ಸೌಇಇ. XI-ii, ೧೬೭-೧೦೩; 1125). **ಕಲ್ಲೋಜ**: 'ಕಲ್ಲೋಜತನ' ಪರಾ.
[ಕಲ್$_3$ + ಓಝು (< ಒವಝು)]

**ಕಲ್ಲೋಲ** (ನಾ). ದೊಡ್ಡ ಅಲೆ, —ತೆರೆ; ಹೆದ್ದೆರೆ: ಲೋಲಕಲ್ಲೋಲ ಪರಂಪರಾಪರಿಗತಂ ಪರಿದತ್ತು ನಗೋಪಕಂಠದೊಳ್ (ಅಜಿಪು. ೪-೬೩); ಕರುಣಾಮೃತಾಬ್ಧಿಯ ಕಲ್ಲೋಲಗಳಂತೆ (ಹದಿಬ. ೧-೨೧); ನೀಲ ಲೀಲಾಶೀಲಸಲಿಲ ಕಲ್ಲೋಲದಿಂ (ಶ್ರೀರಾಮಾ. ೧೨೬-೩೫).

**ಕಲ್ಲೋಲವಾಗು** = ೧. ಹೊಯ್ದಾಡು: ಮನಸ್ಸು ಕಲ್ಲೋಲವಾಯಿತು (ರೂಢಿ). ೨. ಚಲ್ಲಾಪಿಲ್ಲಿಯಾಗು; ಚದುರು: ಬಸವಣ್ಣ ಮೊದಲಾದ ಮಹಾಭಕ್ತರೆಲ್ಲ ಕಂಡರಯ್ಯ ಮಹಾಕೈಲಾಸವೆಂಬ ಬೆಳ್ಳಿಯ ಬೆಟ್ಟವನೇಱಿ . . . ಆ ಬೆಳ್ಳಿಯ ಬೆಟ್ಟ ಕಲ್ಲೋಲವಾಗಿ ಅಲ್ಲಿದ್ದವರ ನೆಲ್ಲಿಯು ಕಾಣೆ (ಮೋಳಿಮಾ. ೪೦-೧೬೮). [ಸಂ.]

**ಕಲ್ಲೋಲಮಾಲೆ** (ನಾ). ಅಲೆಗಳ ಸಾಲು, —ಪಂಕ್ತಿ: ಕೆಱೆತೆಱೆದ ಕಲ್ಲೋಲಮಾಲೆಗಳ ಲೀಲೆಗಳ . . . ಗಂಗೆಗವನಿಜೆ ಬಂದಳು (ಜೈಮಿಭಾ. ೧೯-೫); ನಮ್ಮಲ್ಲಿಯ 'ಫ್ಯಾಶನ್ನು' ಅಲ್ಲಿಗೇ ನಿಂತಿದ್ದರೂ ಪಾಶ್ಚಿಮಾತ್ಯರ ವಿಚಾರದ ಕಲ್ಲೋಲಮಾಲೆಯು ಅಲ್ಲಿಯೇ ನಿಂತಿಲ್ಲ (ವಿಚಾಮಂ. ೭೧).
[ಕಲ್ಲೋಲ + ಮಾಲೆ]

**ಕಲ್ಲೋಲೆ** (ನಾ). ೧. ಹರಳುಕಲ್ಲಿನ ಓಲೆ; ವಜ್ರದ ಓಲೆ: ಬೆಟ್ಟದ ಸೀರೆ ಬಟ್ಟನ ಬಟ್ಟುಂಗುರಯಿಟ್ಟ ಕಿವಿಯ ಕಲ್ಲೋಲೆ (ಶ್ರೀಪಾಲ. ೪-೭೨). ೨. (ಅಲಂ) (ಕಲ್ಲಿನಂತೆ) ಸ್ಥಿರವಾದ ಮುತ್ತೈದೆತನ; ಚಿರ ಮಾಂಗಲ್ಯ: ದೇವಿ ಲಕ್ಕದೇವಳಿಗೆಗಾಣು ನಿನ್ನೋಲೆ ಕಲ್ಲೋಲೆಯಕ್ಕೆ ನಿನ್ನ ನೋಂತ ನೋಂಪಿಗಾವುದು ಪಿರಿದು ಎಂದು ಪರಸಿ (ಲೀಲಾವ. ೧೪-೧೩೧ ವ). 'ಹರಳೋಲೆ' ಪರಾ. [ಕಲ್$_3$ + ಓಲೆ]

**ಕಲ್ವಟ್ಟು** (ಕ್ರಿ). ಕಂಡರಣೆ ಮಾಡು; ಕೆತ್ತು: ಕಲ್ವಟ್ಟ ಕೊಡುವುದಕ್ಕೆ ತಿರುವಾಯಿಮೊಟ್ಟ ಪುದಿಯನಾಲ್ ಒಡೆಯಾರ್ ಧಾರಾವರ್ಷಕಂ ಈವನು (ಮೈಆರಿ. ೧೯೪೬, ೨೮-೭; 1032).
[?./ ತಮಿ. ಕಲ್ವೆಟ್ಟು = ಕಲ್ಲಿನಲ್ಲಿ ಕೆತ್ತುವಿಕೆ]

**ಕಲ್ವತ್ತಿ** (ನಾ). ಒಂದು ಪ್ರದೇಶದ ಹೆಸರು: ಮೂಗುನ್ದ ಪನ್ನೆರಡು ಪುಲಿವಟ್ಟ ಪನ್ನೆರಡುಂ ಕಲ್ವತ್ತಿಯೇೞುಂ (ಎಕ. VIII, ಸೊರಬ. ೪೭೭-೧೪; 991). [?]

**ಕಲ್ವಟ್ಟೆ** (ನಾ). ಕಲ್ಲಿರುವ ದಾರಿ: ನೆತ್ತರ ತೆರೆಗಳ್ ಸುಟಿಸುಟಿ ದೊಡವರಿದುವು ಕಲ್ವಟ್ಟೆಯೊಳ್ ಭೋರ್ಗರೆದು ಪರಿವ ತೊಱೆಗಳ ತೆಱದಿಂ (ಪಂಪಭಾ. ೧೧-೩೬); ಕಲ್ವಟ್ಟೆಯೊಳ್ ಭೋರ್ಗರೆವ ತೊಱೆಯ ವೋಲ್ ರುಧಿರಜಳಂ (ಪಂಪಭಾ. ೧೨-೧೧೩); "ಕಲ್ಲುಗಳಿರುವ ಸ್ಥಳ" (ಪಂಪನಿ); "ಕಲ್ಲಿನ ಪ್ರದೇಶ" (ಪ್ರಭಣ್ಣ).
[ಕಲ್$_3$ + ಬಟ್ಟೆ$_3$]

**ಕಲ್ವಾನಸೆ** (ನಾ). ಕಲ್ಲಿನಂತಹ ಹೆಣ್ಣು; ಕರುಣೆಯಿಲ್ಲದವಳು: ಕಾಲ್ವಿಡಿಯೆ ನಿಜೇಶನವಳಗಲ್ಕೆಗಳೊಂದಂ ಕಲ್ವಂತೆ ಪಲಗೆವಿಡಿದಳ್ ಕಲ್ವಾನಸೆ (ಲೀಲಾವ. ೧೪-೨೮). [ಕಲ್$_3$ + ಮಾನಸೆ]

**ಕಲ್ವಾಳೆ** 'ಕಲ್ವಾಟೆ' ನೋ.

**ಕಲ್ವಾಟೆ, ಕಲುವಾಳೆ, ಕಲುವಾಟೆ, ಕಲ್ಬಾಳೆ, ಕಲ್ಲುಬಾಳೆ, ಕಲ್ವಾಳೆ** (ನಾ). ಒಂದು ಬಗೆಯ ಬಾಳೆ: ಬಲ್ವಡೆ, ಕಲ್ವಾಟೆ, ಪುಲ್ವನೆ (ಭಾಷಾಭೂ. ೩೧ ಉದಾ); ಬಲ್ಲಂಡಂ, ಕಲ್ವಾಟೆ (ಶಬ್ದಾನು. ೬೬ ಪ್ರಯೋ). **ಕಲುವಾಳೆ**: ಕಲುವಾಳೆ [ಪಾಠಾಂ. ಕಲ್ವಾಳೆ]ಯೆಲೆಗೊಯ್ದು ಬೆಳೆದ ಹಸಲೆಯ ಮೇಲೆ ಚೆಲುವನಾಗಿರಿಸಿ (ಕಣ್ಣರ. ೧೩೫-೧೭). **ಕಲುವಾಟೆ**: ಮಾಮರದ ನಿಂಬೆ ಕದಂಬಕ ದ್ರಾಕ್ಷಪಣ್ಗಳಿಂದೊಱದುವ ನಾಳಿಕೇರ ಫಳದಿಂ ಕಲುವಾಟೆಯೊಳೊಪ್ಪಿ ತೋರ್ಪ ಕಣ್ಗೆಸವರ ನೇಱಿಲಿಂ (ಕಇ. I, ೩೧-೭; 1252). **ಕಲ್ಬಾಳೆ**: ನೀರ ನೆರೆಯ ಕಲ್ಬಾಳೆ ಕಲೆಯ ನೆತ್ತಿದವು ಹೂವು ಮೂಡಿ (ಮೇಘದೂ. ೬-೨೧). **ಕಲ್ಲುಬಾಳೆ**: (ಕ). **ಕಲ್ವಾಳೆ**: ಕಲುವಾಳೆ ಪ್ರಯೋಗದ ಪಾಠಾಂತರವನ್ನು ನೋಡಿ.
[ಕಲ್$_3$ + ಬಾಟೆ. / ತಮಿ. ಕಲ್ವಾಟೈ]

**ಕಲ್ವುಲ್** (ನಾ). ಹುಲ್ಲಿನಲ್ಲಿ ಒಂದು ಪ್ರಕಾರ: ಕಱುಕೆ ಮರಗಱುಕೆ . . . ನೆಱೆದೀ ಚಿಕ್ಕಣಿಕೆ ಮಾನಿನಿ ಕಸಕೆ ಕಲ್ವುಲ್ [ಪಾಠಾಂ. ಕವಲ್ವುಲ್] (ಸೂಕ್ತಿಸು. ૩-೨೯). [ಕಲ್$_3$ + ಪುಲ್]

**ಕಲ್ವೆಟ್ಟು** (ಕ್ರಿ). ಕಲ್ಲನ್ನು ನೆಡು; ಶಿಲಾಶಾಸನವನ್ನು ಸ್ಥಾಪಿಸು: ನಾಲು ಪೂರ್ವಾಪರವನು ವಿಚಾರಿಸಿ ಕಲ್ವೆಟ್ಟ ಪ್ರ[ಮಾ]ಣನೂ ಓದಿಸಿ (ಸೌಇಇ.IX-ii, ೪೬೨-೧; 1467).
[ಕಲ್$_3$ + ಬೆಟ್ಟು$_1$. / ತಮಿ. ಕಲ್ವೆಟ್ಟು]

**ಕಲ್ವೆಸ, ಕಲುವೆಸ, ಕಲ್ಬೆಸ** (ನಾ). ಕಲ್ಲಿನ ಕೆಲಸ; ಶಿಲಾಕರ್ಮ: ದೇವರ ಕೈಯೊಳಗೆ ಕಲ್ವೆಸದೋಜಂಗೆ ಮತ್ತರಯ್ದು (ಕಇ. I, ೧೬-೪೯ ; 1055) ; ಅಲ್ಲಿಂ ಮೇಲಾದ ಅರ್ಥ ದೇವರ ಕಲ್ವೆಸಕ್ಕೆ ನಡೆವುದು (ಕಇಆ. ೬೯-೧೩-೪೨ ; 1088) ; ಕರು ಕರುವಿಂಗೆ ಕಣ್ದೆಱವಿ ಕಲ್ವೆಸ ದೋಜೆಗೆ ನಚ್ಚಿನಚ್ಚು ಕಂಡರಣೆಗೆ ಮಂಡನಂ (ಮಲ್ಲಿಪು. ೨-೬೩) ; ಅತಿವಿಸ್ತಾರದೆ ಕಲ್ವೆಸದೆ ಗೆಯ್ಸಿ ಬಾವಿಯಂ (ಸೌಇಇ. IX-i, ೨೪೯-೩೮ ; 1147) ; ವ್ರಿಡನನ ಸುಪ್ರತಿಷ್ಠೆಯನೆ ಮಾಡಿಸಿ ಕಲ್ವೆಸದಿಂದೆ ಗೇಹಮಂ ಪೊಡವಿಯೊಳೊಪ್ಪೆ ಮಾಡಿಸಿದರೆ (ಕಇ. IV, ೧-೫೮; 1204). **ಕಲುವೆಸ:** ಮಣ್ಡಲಿಯ ಪಟ್ಟದತೀರ್ತ್ಥದ ಬಸದಿಯಂ ಕಲುವೆಸನಾಗಿ ಮಾಡಿಸಿದ (ಎಕ. VII, ಶಿವಮೊ. ೪-೮೮ ; 1122) ; ಯಿ ಕಲುವೆಸನವ × × × ಈ ಶಾಸನವ ಹೊಯ್ದಾತನು ಕಲುಕಟ್ಟಿಗ ಜಡೆಯ ರಾಮೋಜನು (ಎಕ. XI, ಚಿತ್ರದ. ೩-೩೬ ; 1356). **ಕಲ್ಬೆಸ:** ಹಡವಳಿತಿ ಕಾಳವ್ವೆಯ ಹೆಸರ ಕಾಳೇಶ್ವರ ದೇವಾಲಯಮಂ ಕಲ್ಬೆಸನಂ ಮಾಡಿದ (ಎಕ. VII, ಶಿವಮೊ. ೫೫-೬೩ ; 1167). [ಕಲ್$_{3}$ + ಬೆಸ$_{1}$]

**ಕಲ್ಪೊಳೆ** (ನಾ). ಕಲ್ಲುಗಳಿಂದ ಕೂಡಿದ ನದಿ; ಕಲ್ಲುಗಳಲ್ಲಿ ಹರಿಯುವ ತೊರೆ: ಮರಕುಟಿಗವಕ್ಕಿದನಿ ಕಲ್ಪೊಳೆಯ ಮೊರೆ (ಶ್ರೀರಾಮಾ. ೫೨೩-೬೩೦). [ಕಲ್$_{3}$ + ಪೊಳೆ$_{4}$ (< ಪೊೞೆ$_{1}$)]

**ಕಲ್ಸಂದು** (ನಾ). ಒಂದು ಊರಿನ ಹೆಸರು: ಅನ್ತೆ ಬನ್ದು ಬೆಳ್ಗಲಿಯ ಇಗ್ಗಲಿಯ ಕಲ್ಸನ್ದಿನ ಮೂಱೂರ ಪೊಲಸನ್ದಿನ ಕೞಕೊಡಿಯನ ಕೆಱೆಯಿಂ (ಎಕ. III, ನಂಜನ. ೧೩೯-೨೩ ; 915 ?). [ಕಲ್$_{3}$ + ಸಂದು$_{2}$]

**ಕಲ್ಸರ** (ನಾ). ಕಲ್ಲಿನ ಕೊಳ: ತೆಂಕಣೇರಿಯ ಮೇಗಣ ಕವಿಲೆಯ ಕಲ್ಸರಂ (ಎಕ. VIII, ಸಾಗರ. ೧೦೮-೪೩ ; 1042). [ಕಲ್$_{3}$ + ಸರ$_{5}$]

**ಕಲ್ಸರಿ** (ನಾ). ಕಲ್ಲಿನ ಮಳೆ: ಕೆಯ್ಮ ಕಲ್ಸರಿಗೆ ಪತ್ತುವುದಕ್ಕಳಸಿತ್ತು ಪೊತ್ತ ಕಲ್ (ಪಾರ್ಶ್ವಪು. ೩-೧೩೬); ಬಲ್ಸೋನೆ, ಕಲ್ಸರಿ, ಬಾಯ್ಸವಿ (ಶಬ್ದಾನು. ೯೩ ಪ್ರಯೋ). [ಕಲ್$_{3}$ + ಸರಿ$_{6}$]

**ಕಲ್ಸಱಿಡು** (ನಾ). ಕಲ್ಲಿನ ಬಂಡೆಗಳ ಸಾಲು, —ಪಂಕ್ತಿ: ಅನ್ತೆ ಬರ ಕಲ್ಸಜಿಡು ಅನ್ತೆ ಬರೆ ಗುವಿಯುಜ್ಞಾಲು (ಮೈಆರಿ. ೧೯೨೧, ೧೦-೧೮೫ ; 967) ; × × × ಡ್ಡೆಯ ಕಲ್ಸಜಿಡು ಅಲ್ಲಿ ಬದಕೆರಿಯ (ಎಕ. VII, ಶಿವಮೊ. ೬೪-೧೦೧ ; 1112 ?). [ಕಲ್$_{3}$ + ಸಱಿಡು]

**ಕಲ್ಸುರಿ** (ನಾ). ಕಲ್ಲು ಸುರಿಯುವಿಕೆ(?): ಪರಿಮುರಿಯಾಡಿ ದಾವದುರಿಗಾಳಿಗಳೊಳ್ ಬಿಸಿಲೊಳ್ ಕನಲ್ವ ಕಲ್ಸು [ಪಾಠಾಂ. ಬ್ಬ, ಬ್ಬು] ರಿಯುರಿಯುಯ್ಯಲಾಡಿ ಪುಡಿಯಾಟಮನಾಡಿ ಚರಾಚರಂಗಳಂ ಕರಿಮುರಿಯುಪ್ಪಿನ್ಗುರಿವ ಹಂಚುವೊಲಿರ್ದೆಳೆಯೊಳ್ ಕೃತಾಂತನೆಚ್ಚುರಿಗಣೆಯಂತೆ ಬಂದುದು ಲಯಾನಿಳ ಕಲ್ಪನಿದಾಘಜಾನಿಳಂ (ಅರ್ಧನೇ. ೪-೬೪). [ಕಲ್$_{3}$? + ಸುರಿ$_{2}$?]

**ಕಲ್ಸೆಱಿ** (ನಾ). ಕಲ್ಲಿನ ಸೆರೆ: ಕಲ್ಸೆಜಿ; ಮೆಲ್ಸರಂ (ಶಮದ. ೬೮ ಪ್ರಯೋ). [ಕಲ್$_{3}$ + ಸೆಱಿ$_{2}$]

**ಕಲ್ಹತ್ತಿ** (ನಾ). ಒಂದು ಬಗೆಯ ಹತ್ತಿ ಮರ: ಕಲ್ಹತ್ತಿ ಕಿರಬೇವು ಕಾಡಾನುಗ್ಗೆಯ ಮರ ಗೂಢಾನಿಟ್ಟಯ್ಯ (ಹುಟ್ಟಹ. ೩೫). [ಕಲ್$_{3}$ + ಹತ್ತಿ (< ಪಟ್ಟಿ)]

**ಕಲ್ಹಾರ** (ನಾ). ಒಂದು ಬಗೆಯ ನೈದಿಲೆ; ಬಿಳಿನೈದಿಲೆ: ಕಲ್ಹಾರ ಸಾರಾಮೃತಶಶಿವಿಶದಾತ್ಮೀಯವಂಶಕ್ಕೆ ಚೂಡಾಮಣಿಯಂ (ಪಂಪಭಾ. ೭-೯೫) ; ಕುಮುದಕುವಲಯಕಲ್ಹಾರಂಗಳಿಂ ಕಂಗೊಳಿಪ ಚೊಪ್ಪೀದ ಸರಸಿಗೆ ಜನನಿವೆರಸು ಮಜ್ಜನಕ್ಕೆಂದು ನಡೆತಂದು (ಕಾದಂಪೂ. ೭೨೧) ; ಚೆನ್ನೆಸೆವ ಕಲ್ಹಾರಕುಸುಮದಿಂ ಪೊದಱಿದ ಕೊಳದಲ್ಲಿ ಪೊಕ್ಕಡಗಲು (ಪ್ರೌಢರಾ. ೮-೫) ; ಪೊಸಪರಿಮಳದ ಕಲ್ಹಾರ ಎಸೆವ ಕನ್ನೈದಿಲ (ಕಂನವಿ. ೨೩-೩೧). 'ಕಹ್ಲಾರ' ಪರಾ. [ಸಂ.]

**ಕಲ್ಹೆಂಟಿ, ಕಲ್ಲೆಟ್ಟೆ** (ನಾ). ಕಲ್ಲಿನಂತೆ ಗಡ್ಡೆಕಟ್ಟಿದ ಮಣ್ಣು; ಮಣ್ಣಿನ ಗಡ್ಡೆ: ಹಿರಿದು ಕರ್ಮವ ಮಾಡಿ ಹರಿವ ನೀರೊಳು ಮುಳುಗೆ ಕರಗುವದೆ ಪಾಪ ತಾ ಮುನ್ನ ಮಾಡಿದ್ದು ಎರೆಯಕಲ್ಹೆಂಟಿ (ಸರ್ವಜ್ಞ. ೯೨೮). **ಕಲ್ಲೆಟ್ಟೆ:** ಮತ್ತಮಾ ಪರುಷಂ ಕಲ್ಲೆಟ್ಟೆಯಾಯ್ತುದಾರ ಗುಣಮಂ (ಬೊಂಕಶಾ. ೧೯೩೬, ಸಿಂದಗಿ. ೮೮-೧೬ ; ?). [ಕಲ್$_{3}$ + ಹೆಂಟಿ$_{2}$ (< ಪೆಟ್ಟು$_{1}$)]

**ಕಲ್ಹೊನ್ನೆ** 'ಕಲ್ಪೊನ್ನೆ' ನೋ.

**ಕವ$_{1}$** (ಅ). ಕೋಪ, ರಭಸ, ಬೆದರಿಕೆಗಳನ್ನು ಸೂಚಿಸುವ ಮಾತು.

**ಕವಕವ, ಕವಕ್ಕವ** (ದ್ವಿರುಕ್ತಿ): ಅನುಕರಣಾವ್ಯಯಗಳು – ಗಟಿಗಟಿ, ಕವಕವ (ಕೈಪಿಡಿ. ೫೨) ; ಅನುಕರಣ ವಿಸಂಧಿಗೆ – ಕವಕ್ಕವ ಎಲೆ ಎಲೆ (ಶಮದ. ೬೧ ವೃತ್ತಿ). [?]

**ಕವ$_{2}$** (ನಾ). ಪರಿವಿಡಿ; ಕ್ರಮ: "ಕ್ರಮ – ಕವ" (ಶಮದ. ೨೬೩ ಪ್ರಯೋ) ; ಕವದಿನಮರಯಿರೆನೆವೆನಿಪ್ಪುವು ವರ್ತಿಕುಮನ್ಯಯುಷ್ಮದಸ್ಮದ್ವಿಷಯ ವ್ಯವಹೃತಿಗಳ್ಗೇಕಾನೇಕವಚನದಿಂ ಪ್ರತಿವಿಭಕ್ತಿಪುರುಷಾಖ್ಯಂಗಳ್ (ಕಾವ್ಯಾವ. ೩೬೯) ; ಕಣ್ಗಳೊಳಂಗನೆಯೆಚ್ಚಿಕೊಳ್ವ ಕಾಡಿಗೆಯುದಿರ್ದಂತೆ ಕರ್ಪುರ ಕವದಿಂದಡಿಯಿಟ್ಟುದು (ಅರ್ಧನೇ. ೨-೨೩) ; ಕವದಿಂ ನಾಲ್ಕೆರಡು ವಿಭೇದವನಾಳ್ದು ಮುನಿಯೊಳೆಸೆದುದು ಕವಲಿಂ ಕವಲಿಂ ವಿವಿಧಮೆನಿಪ್ಪ ಮತಿಶ್ರುತಂ (ಅನಂಪು. ೯-೧೦೦). [< ಸಂ. ಕ್ರಮ]

**ಕವಂಗ$_{1}$** (ನಾ). ಒಂದು ಮೂಲಿಕೆ: "ಕಲಿ(ಟ?)ಕಾ – ಕವಂಗ" (ಓಷಧಿ. ೨೩). [?]

**ಕವಂಗ$_{2}$** (ನಾ). ಹುಳಿ, ಸಾರು ಮೊದಲಾದುವುಗಳನ್ನು ಬಡಿಸಲು ಉಪಯೋಗಿಸುವ ಹಿಡಿಯುಳ್ಳ ಪಾತ್ರೆ; ಕಬಾಯಿ. [← ತುಳು. ಕವಂಗೊ]

**ಕವಕವ** (ನಾ). ಕಳವಳ; ಆತಂಕ; ಯೋಚನೆ: ದೊರೆತ ಸಮಯವನ್ನು ಕಳೆದುಕೊಳ್ಳಬಾರದೆಂಬ ಕವಕವ (ಕಭವಿ. II, ೨೧೮). [← ಮರಾ. ಖವಖವ]

**ಕವಕವಿಸು** (ಕ್ರಿ). ೧. ಗಹಗಹಿಸು: ಕವಕವಿಸಿ ನಗುತಿಬ್ಬರಾ [ಪಾಠಾಂ. ಖವಖವಿಸುತವರಿಬ್ಬರಾ] ಮುನಿನಿವಹಕಭಯವ ಕೊಡುತ (ತೊರರಾ. ೧-೧೧-೧೩). ೨. ತಳತಳಿಸು; ಚಕಚಕಿಸು: ಕವಕವಿಪ ಕಾಂತಿಗಳೊಳೊಪ್ಪಿಹ ಕಲಶಗೋಪುರದ (ಅಂಬಿಕಾ. ೩-೩೬) ; ಇವಗಾರು ತಲೆಗಳು ಕವಕವಿಸುತಿವೆ ದಕ್ಷದನುಜೆಯ ಕುವರನಹುದು (ಅಂಬಿಕಾ. ೨೭-೨೪). ೩. ವೇಗಗೊಳ್ಳು; ರಭಸಗೊಳ್ಳು: ಅವನೀಶನೆಯ್ದಿದನಾ ಭೂತಗಿರಿಗಾಗಿ ಕವಕವಿಸುತ ಪ್ರಸನ್ನದಲಿ (ಅನಂಚ. ೩-೫೯) ; ಜವಗತಿಯೊಳಂದತ್ತ ಸ್ಯಂದನ ಕವಕವಿಸಿ ಘಣಿಪುರವನೈದಿತು (ಅಂಬಿಕಾ. ೪೮-೩೯). 'ಖವಖವಿಸು' ಪರಾ. [ಕವಕವ$_{0}$ + –ಇಸು$_{3}$]

**ಕವಕ್ಕನೆ, ಕಬಕ್ಕನೆ** (ಅ). ಕೂಡಲೆ; ತಕ್ಷಣ: ನಿನ್ನ ನೀರೂ ಬೇಡ, ನಿನ್ನ ಕೆಲಸವೂ ಬೇಡ ಎಂದು ಕವಕ್ಕನೆ ಸಿಡಿದುಹೋದಿರಿ (ಕಮನೆ. ೪೬).

**ಕಬಕ್ಕನೆ:** "ಕೂಡಲೆ; ಗಬಕ್ಕನೆ" (ಜಾನಕೋ. ೩೪). [?]

**ಕವಚ** (ನಾ). ೧. ಹೊದಿಕೆ; ಆವರಣ: ಜೀವಭ್ರಮೆಯ ಕವಚವ ಕಳೆದು ಹೊಳೆಹೊಳೆವಾತ್ಮನಂದದಲಿ (ಕುವ್ಯಾವಿ. ೧೦-೫). ೨. ಯುದ್ಧದಲ್ಲಿ ಮೈಯ ರಕ್ಷಣೆಗಾಗಿ ತೊಡುವ ಉಕ್ಕಿನ ಅಂಗಿ; ಮೈಜೋಡು; ಕಂಚುಕ: "ಸನ್ನುತ ಕವಿವರರಿನಹುದು ಸವರ್ಗಂ ಕವಚಂ" (ಕವಿಕಂ. ೧೨೫) ; ಕಲಿಗಳುರಃಕವಾಟ ಕವಚಂಗಳ ಕಟ್ಟಲೆಯೊಳ್ . . . ಬರುತಿರ್ಪಳೆಂದುಮಭಿಸಾರಿಕೆಯಂದದೆ ರಾಜ್ಯಲಕ್ಷ್ಮಿ (ಕಾದಂಪೂ. ೧೩) ; ಹಿಳಿದ ಲೋಹದ ಸೀಸಕಂಗಳ ಬಲಿಸಿದರು ಹೋಳಾದ ಕವಚವ ಹೊಲಿಸಿದರು (ಕುವ್ಯಾಭೀ. ೫-೩೬) ; ಕವಚವಾರಿಗಭೇದ್ಯ ಬೊಮ್ಮನ ವರದಲಾಗಿನಲಿ (ಕೌಶಿರಾ. ೨೭-೧೪). ೩. ಹಾವಿನ ಪರೆ. ೪. ಚರ್ಮ.

೫. ರಕ್ಷಾಮಂತ್ರ; ರಕ್ಷೆ: ಕವಚ . . . ಅತ್ಮೈಕ್ಯಗಳೆಂಬ ಪಂಚ ಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (ವಿವೇಕ. ೮೦); ನಾನು ತಮಗಾಗಿ ಒಂದು ಫೇತ್ಕಾರಿಣೀ-ತಂತ್ರೋಕ್ತ ಕವಚವನ್ನು ಕೊಟ್ಟು ಕಳಿಸುವೆನು (ಕುಂಹಿಂ. ೧೬೭). ೬. ದೊಡ್ಡ ಧ್ವನಿ; ಸಾರಿ ಹೇಳುವಿಕೆ. ೭. ನಗಾರಿ; ಭೇರಿ: "ಕಂಚುಕಂ ಮರ್ಮರ ವರ್ಮ ಚರ್ಮ ಕುಟಜಂ ಪ್ರವಚಂ ಕವಚಾಭಿಧಾನಕಂ" (ನಾನಾರ ೮೯). [ಸಂ.]

**ಕವಚದೊಡು** (ಕ್ರಿ). ೧. ಕವಚವನ್ನು ಧರಿಸು: "ಕವಚಿತಂ ವರ್ಮಿತಂ ಸುಸನ್ನದ್ಧಮೆನಲುಂ ಕ[ಪಾಠಾಂ. ಚ]ವಚದೊಟ್ಟವನೆನಿಕ್ಕುಂ" (ಮಂಗರಾ. ೮೭-೩೧). ೨. (ಆಲಂ) ಯುದ್ಧಕ್ಕೆ ಸಿದ್ಧನಾಗು. [ಕವಚ + ತೊಡು$_1$]

**ಕವಚಹರ** (ನಾ). ಕೌಮಾರ ವಯಸ್ಸನ್ನು ಹೊಂದಿದವನು; ಪ್ರಾಪ್ತವಯಸ್ಕ: ಕವಚಹರನಾದ ನಿಜಸುತನತಿಬಳ ಕುಮಾರನಂ ರಾಜ್ಯಭಾರದೊಳ್ ನಿಜಿಸಿ (ಆದಿಪು. ೨-೪೯ ವ); ಅಗ್ರನಂದನಂ ಕವಚಹರಂ ಜಿತಾಹಿತಬಲಂ ಬಲನನ್ನನಿರಲ್ (ಪಂಪರಾಮಾ. ೬-೬೬). [ಸಂ.]

**ಕವಚಿ** (ನಾ). ಕವಚವನ್ನು ತೊಟ್ಟುಕೊಂಡವನು; ಕವಚಧಾರಿ: ರಣದಲ್ಲಿ ಜಯಿಸಿ ದೈತ್ಯರನು ಕವಚಿಗಳು ಶಿರಸ್ತ್ರಾಣ ತೆಗೆದು (ಮುಕ್ತಕಂ. ೨೩-೧೩). [< ಸಂ. ಕವಚಿನ್]

**ಕವಚಿತ** (ಗು). ೧. ಕವಚವನ್ನು ಧರಿಸಿದ, —ಹೊದಿಕೆಯುಳ್ಳ, —ಆವೃತವಾದ: ಕದನಪ್ರಮೋದ ರೋಮಾಂಚದಿ ಕವಚಿತಮಾದುವಿವರ ತನು (ಚಂದ್ರಪು. ೧೦-೬೩); ಪರಮಾಶೀರ್ವಚನ ಪರಿಕಲಿತ ಕವಚಿತ ಕಾಯ ಪಾಂಡವರಾಯ ಹೊಜವಂಟ (ಕುವ್ಯಾಭೀ. ೮-೩). (ನಾ). ೨. ಕವಚವನ್ನು ಧರಿಸಿದವನು: "ಕವಚಿತಂ ವರ್ಮಿತಂ ಸುಸನ್ನದ್ಧಮೆನಲುಂ ಕ[ಪಾಠಾಂ. ಚ]ವಚದೊಟ್ಟವನೆನಿಕ್ಕುಂ" (ಮಂಗರಾ. ೮೭-೩೧). [ಸಂ.]

**ಕವಚಿಸು** (ಕ್ರಿ). ಹೊದಿಸು; ಆಚ್ಛಾದಿಸು; ಆವರಿಸು: ಗೋಧಿಯಂ ಹರಹಿ ಅಷ್ಟದಳವಾರಿಜವಂ ನಿರ್ಮಿಸಿ ವಸ್ತ್ರಮುಂ ಕವಚಿಸಿ ಅದಱ ಮೇಲೆ ವ್ರೀಹಿಯಂ ಪಸರಿಸುತ್ತ (ವಿವೇಕ. ೧೧೩). [ಕವಚ + -ಇಸು$_3$]

**ಕವಚು** 'ಕವಿಚು$_1$' ನೋ.

**ಕವಟು**, ಕವಾಟು (ನಾ). ಬಾಗಿಲು; ಕದ: ಪರಿಪರಿಯ ಲೋವೆಗಳು ಚಂದಚಂದದ ವಜ್ರಕವಟುಗಳಿಂದ ಕಟ್ಟಿದ ಪಳೆಯ ಗುಡಿಗಳಗೊಂದಣದೊಳೆಸೆದಿಪ್ಪವುಪ್ಪರಿಗೆಗಳಸಂಖ್ಯೆಗಳು (ಕೌಶಿರಾ. ೩೯-೫). **ಕವಾಟು**: ಕವಾಟನೊಳಗೆ ಬೀಗ ಭದ್ರಮಾಡಿಡಲ್ಪಟ್ಟಿದ್ದ ಆ ವಸ್ತುಗಳು (ಕಾಬಝಾ. ೩೨). [< ಸಂ. ಕವಾಟ]

**ಕವಟೆ$_1$** 'ಕವಡೆ$_1$' ನೋ.

**ಕವಟೆ$_2$** (ನಾ). ಕೆನ್ನೆ; ದವಡೆ; ಕಪೋಲ (?): ಗಾಳಿ ತುಂಬಿ ಕವಟೆಯುಬ್ಬಿಸಿಕೊಳ್ಳುವ ಮತ್ತು ಅದನ್ನು ಪುನಃ ನಿಧಾನವಾಗಿ ಹೊರಗೆ ಬಿಡುವ ಚಾಳಿ ಅವನಿಗೆ ರಕ್ತಗತವಾಗಿ ಬೆಳೆದು ಬಂದಿತ್ತು; ಕವಟೆಯುಬ್ಬಿಸಿದಾಗ ಅವನ ಮುಖ ಮತ್ತಷ್ಟು ದುಂಡಗೆ ಕೆಂಪಾಗಿ ಕಾಣುತ್ತಿತ್ತು (ಪುನರು. ೪೫೧). [ದೇ. ‖ ತಮಿ. ಕವುಳ್; ಮಲ. ಕವಿಳ್]

**ಕವಟೆಕಾಯಿ** 'ಕವಡೆಕಾಯಿ' ನೋ.

**ಕವಟ್ಟ** (ನಾ). ಒಂದು ಊರಿನ ಹೆಸರು (?): ಶ್ರೀಎಱೆಯಗವೆ ಕವಟ್ಟದ ಲೊ ××× (ಎಕ. II, ೧೪೫; ಸು. 1000). [?]

**ಕವಡ** 'ಕವಡು$_3$' ನೋ.

**ಕವಡಂಚು** (ನಾ). ಧೋತ್ರದ ಅಥವಾ ಕಂಬಳಿಯ ಕರೆಗೆ ಕಟ್ಟುವ ಅಲಂಕಾರದ ಹೆಣಿಗೆಯ ಅಂಚು; ಕವಡೆಯಾಕಾರದ ಅಂಚು (ಕ). [ಕವಡೆ$_2$ + ಅಂಚು$_2$]

**ಕವಡಂಬು** 'ಕವಲಂಬು' ನೋ.

**ಕವಡಕಂಟಿಕೆ** 'ಕವಡುಗಂಟಕ' ನೋ.

**ಕವಡಗಂಟಿಕೆ** 'ಕವಡುಗಂಟಕ' ನೋ.

**ಕವಡಿ$_1$** (ನಾ). ಹೊದೆಯುವ ಬಟ್ಟೆ; ಕೌದಿ: ಆದಿತ್ಯದೇವರಂ ಪೂಜಿಸುವ ಮಾಣಿಗೆ ಮತ್ತ ೧ ಅಜ್ಜರ ಕವಡಿ ಕಚ್ಚುಟಕ್ಕೆ ಮತ್ತ ೨ ಮಟದ ತಪೋಧನರ್ಗ್ಗಂ ಅಭ್ಯಾಗತರ್ಗ್ಗಂ ಸತ್ರಕ್ಕೆ ಬಿಟ್ಟ ಮತ್ತ ೮ (ಸೌಇಇ. XX, ೫೧-೨೭; 1077). [< ಸಂ. ಕರ್ಪಟ]

**ಕವಡಿ$_2$** (ನಾ). ಮೋಸಗಾರ; ವಂಚಕ; ಕಪಟಿ: ಎಲ್ಲರುಂ ಕವಡಿಗಳು (ವೆಂಕಾರಾ. ೬-೧೭-೨೫). 'ಕವಡಿಗಂಟಕ' ಪರಾ. [ಕವಡು$_1$ + -ಇ$_3$]

**ಕವಡಿ$_3$** (ನಾ). ೧. ಬೇಲಿಯ ಮಧ್ಯದಲ್ಲಿ ಜನರು ಮಾತ್ರ ಹೋಗಲು ಅವಕಾಶವಾಗುವಂತೆ ದಾರಿ ಮಾಡಿ, ಅಕ್ಕಪಕ್ಕವಾಗಿ ನೆಟ್ಟಿರುವ ಎರಡು ಮರದ ಕಂಬಗಳು (?): ಅರ್ಜುನಿಯೆಂಬ ದೇವತೆ . . . ಅರ್ಜುನತರುಯುಗಮಾಗಿ ಕವಡಿಯ ನೆಟ್ಟಂದದಿ ಬೆಳೆದು (ನೇಮಿಸಂ. ೧೫-೧೦೦). ೨. (?): ಕಾಲುವಟ್ಟ ×× ಕವಡಿ ಮುಂತಾದ ಸಮಸ್ತ ಬೆವಹಾರಲು ××× ಪೂರ್ವ್ವಮರಿಯಾದೆ (ಸೌಇಇ. IX-ii, ೪೫೭-೯; 1455). [?]

**ಕವಡಿ$_4$**, ಕವೋಡಿ (ನಾ). (ಕರಾ) ಕುಟ್ಟಿದೊಣ್ಣೆ ಆಟದಲ್ಲಿ ಗೆದ್ದವರು ಮಾಡುವ ಜಯೋದ್ಗಾರ; ಉಸಿರುಕಟ್ಟಿ ನಿಗದಿಯಾದಷ್ಟು ದೂರ ಓಡುವ ಶಿಕ್ಷೆ. **ಕವೋಡಿ**: ಅವನ್ನ ಕವೋಡಿ ಅನ್ನಿಸದೆ ಬಿಡೋದಿಲ್ಲ (ರೂಢಿ). 'ಕಬಡಿ' ಪರಾ. [?]

**ಕವಡಿಕೆ$_1$** (ನಾ). ೧. ಕವಲಾಗಿರುವಿಕೆ; ಎರಡು ಭಾಗವಾಗಿರುವಿಕೆ: ಮನೆಯ ಮರಳು ಮುರುಳು ಸುಂಗಿ ಕವಡಿಕೆಯ ಕವಲು ಹಿರಿಯಿತ್ತು (ಬಬ್ಬುಬಾ. ೪೦). ೨. ಧೋತ್ರಕ್ಕೆ ಅಥವಾ ಕಂಬಳಿಯ ಕರೆಗೆ ಇರುವ ಜೋಡು ಹೆಣಿಕೆಯ ಅಂಚು (ಕ). ೩. ಒಂದು ಬಗೆಯ ಬಾಣ; ಎರಡಲಗಿನ ಬಾಣ.

ಕವಡಿಕೆಯಂಬು = ಕವಲುಬಾಣ: "ಕವಡಿಕೆಯಂಬು ಕಕ್ಷೇಪು ವಕ್ಕು" (ಮಂಗರಾ. ೮೭-೩೫). [ಕವಡು$_1$ (< ಕವಲ್$_2$) + -ಇಕೆ]

**ಕವಡಿಕೆ$_2$**, ಕೌಡಿಕೆ (ನಾ). ೧. = ಕವಡೆ$_2$: ಬಾಯೊಳ್ ಕವಡಿಕೆಗಳಂ ಪಲ್ಗಳಂತೆ ಮಾಡಿ (ವಡ್ಡಾರಾ. ೧೧೮-೧೭); ಒಂದು ಕೋಟಿ ಪೊನ್ನನೊಂದು ಕವಡಿಕೆಯಂ ಕುಡುವಂತೇನುಮುಪೋಹಮಿಲ್ಲದೆ ಕೊಟ್ಟು (ಸುಕುಮಾ. ೧೦-೧೧೮ ವ); ಕವಡಿಕೆಯುಂ ಕಾಚುಂ ಸಲ್ಲುಮೆ ಹೊನ್ನವೊಲೆಲ್ಲಿಯಾದೊಡಂ (ಸಮಪ. ೩-೧೧); ಮುಂಗೆಯ್ಯೊಳೆ ಜಲಜಲಿಸೆಯ ಶೋಭೆದೆ ಕಟ್ಟಿದಳ್ ಕವಡಿಕೆಯಂ (ಅರ್ಧನೇ. ೭-೫೪); ಕವಡಿಕೆಯೊಳಗೆ ಕಲು ಬಿದ್ದಂತೆ ಕೆದಱಿತು ವೈರಿ ಪಾಯಿದಳ (ಕುವ್ಯಾವಿ. ಓಂಇ. ೫-೭೧). ೨. ಕವಡೆಯಿಂದ ಆಡುವ ಆಟ: ಕವಡಿಕೆ ನೆತ್ತ ಮೊದಲಾದ ನಾಟಕದ ಮೊಗರಂಬವೆನಿಪ ಕವಾಟ ತೆಱೆಯದು (ಕುವ್ಯಾಸ. ೧೨-೪). **ಕೌಡಿಕೆ**: ೧. ಕೌಡಿಕೆರಾಶಿಯೊಳಗಿರ್ದ ಅರಿಭಯಂಕರ ಪಾಂಚಜನ್ಯದ ಪರಿಯಲಿ (ಕೌಶಿರಾ. ೧೦-೩೯). [< ಸಂ. ಕಪರ್ದಿಕಾ]

**ಕವಡಿಕೆ$_3$** (ನಾ). ಮೋಸ; ವಂಚನೆ; ಕಪಟ: ಇವರ ಹದನಿದು ಕರ್ಣನಾಡಿದ ಕವಡಿಕೆಯ ಬೆಸಗೊಳ್ಳಿರೈ (ಕುವ್ಯಾಕ. ೨೪-೪೬); ನೀವಿನ್ನು ಮುಂದೆ ಆ ಗಂಗರಾಜನ ಕವಡಿಕೆಯ ಕಾಲುಗಣ್ಣಿಗೆ ಸಿಲುಕುವಂತಿಲ್ಲ (ವೀರಬಂ. ೫೪). [ಕವಡು$_2$ + -ಇಕೆ]

**ಕವಡಿಗ** (ನಾ). ನಸುಗೆಂಪುಬಣ್ಣದ ಕೀಳ್ತರಗತಿಯ ಅಕ್ಕಿ (ಕ). [?]

**ಕವಡಿಗಂಟಕ** 'ಕವಡುಗಂಟಕ' ನೋ.

**ಕವಡಿದ್ವೀಪ** (ನಾ). ಒಂದು ದ್ವೀಪದ ಹೆಸರು: ಕವಡಿದ್ವೀಪಮು ಮಾದಿಯಾಗೆ ಪಲವುಂ ದ್ವೀಪಗಳಂ ಕೊಣ್ದು (ಎಇ. XIII, ೩೦೨-೯; 1125). [< ಕಪರ್ದಿದ್ವೀಪ ?]

**ಕವಡಿಸು** (ಕ್ರಿ). ಮೋಸಮಾಡು; ವಂಚಿಸು: "ಹೂರ್ಚ್ಛತಿ = ಕವಡಿಸಿದಪಂ" (ಕಾಶಕ್ಯ. ೧೨). [ಕವಡು$_2$ + -ಇಸು$_3$]

**ಕವಡು$_1$** 'ಕವಲ್$_2$' ನೋ.

**ಕವಡು$_2$**, ಕವಡ, ಕೌಡಿ (ನಾ). ೧. ಮೋಸ; ವಂಚನೆ; ಕಪಟತನ; ಠಕ್ಕು: "ಹ್ವೃ - ಕೌಟಲ್ಯೇ, ಕವಡಿನೊಳ್" (ಕಾಶಕ್ಯ. ೬೨); ತೆವರಿದರು ನಿನ್ನಯ ಕುಮಾರರ ನೆವದಿನತ್ತಲು ರಾಜ್ಯಲಕ್ಷ್ಮಿಗೆ ಕವಡ ಹಾಯ್ಕಿದರಿತ್ತಲೀ ರಘುರಾಮಚಂದ್ರಂಗೆ ವ್ಯವಹರಿಸಿತೀ ಕುಹಕತನ (ತೊರರಾ. ೨-೧-೩೩); ಠಕ್ಕಿನ ಪಟ್ಟಿಕ್ಕೆ ಕಾಳಿಯ ತವರ್ ಕವಡಿಂಗೆಡೆ ಸೂರ್ಕಿನಿರ್ಕೆ (ಚಕವಿ. ೬-೭೪); ಕವಡುಕುಟಿಲಗಳಿಲ್ಲ ಮನದೊಳು ಅರಸಿ ನೋಡಿದಡೆ (ಹಮುಚ. ೧೧೭-೮). ೨. ಭ್ರಾಂತಿ; ಭ್ರಮೆ: ವನಜಭವನಂಜಿದನು. . . ಮನುಜಮಾತ್ರನು ತನ್ನ ಕಾವನೆ ಕವಡಿದೇಕೆ (ಕೋಗಯು. ೭-೧೯). **ಕವಡ**: 'ಕವಡಗಂಟಕ' ಪರಾ. **ಕೌಡಿ**: 'ಕೌಡಿಕಾರ' ಪರಾ. [< ಸಂ. ಕಪಟ]

**ಕವಡು$_3$** (ನಾ). ಕದಡು; ಕೊಳೆ; ದೋಷ: ಆ ರಸ ಸವೆದು ಕೆಟ್ಟೊಳಸೇರುವದು ಮತ್ತದರ ದೆಸೆಯಿಂದಾ ಕವಡು ರಕ್ತದೊಳಾಗುವುದು ತದ್ರವದ ದೋಷವನುಂಡ ತನುಚರ್ಮವೆ . . . ವಿಕಲತೆಯನ್ನೈದಿಹುದು (ವಿವೇಭ. ೩-೪೩). [< ಕದಡು$_2$ ?]

**ಕವಡು$_4$** (ನಾ). ದಾಟುಗಾಲು; ದಾಪುಹೆಜ್ಜೆ: ಎಡೆವಿಡಿಯಲ್ಕವಡಿಂಕಟವಪ್ರವಮೋಜಿಯೆ ನಿಲ್ಲದನನ್ಧನ್ (ಎಕ. II, ೯೩-೩; ಸು. 700). ℙ 'ಎಡೆವಿಡಿಯಲ್ಕೆ + ಅವಡಿಂ' ಎಂದೂ ಬಿಡಿಸಬಹುದು. [← ತಮಿ. ಕವಡು]

**ಕವಡುಕಂಟಕ** 'ಕವಡುಗಂಟಕ' ನೋ.

**ಕವಡುಕಂಟಕತನ** 'ಕವಡುಗಂಟಕತನ' ನೋ.

**ಕವಡುಗ** (ನಾ). ಮೋಸಗಾರ; ಕಪಟಿ: "ಹ್ವರ್ತಾ, ಹ್ವರಕಃ, ಹ್ವರಃ, ಈ ೩ ಕವಡುಗಂ" (ಕಾಶಕ್ಯ. ೬೨). [ಕವಡು$_2$ + -ಗ$_3$]

**ಕವಡುಗಂಟಕ**, ಕವಡಕಂಟಕ, ಕವಡಗಂಟಕ, ಕವಡಿಗಂಟಕ, ಕವಡುಕಂಟಕ (ನಾ). ೧. ಮೋಸಗಾರ; ವಂಚಕ: ಈ ಕವಡುಗಂಟಕರಾದ ಅಂಗಡಿಕಾರರು (ಮುಂಬಯಿ. ೪-೧೭೫). ೨. ಮೋಸ; ವಂಚನೆ: ವಿಚಾರವು ಗುಹಾಧ್ವನಿಯಾದರೆ ಮಂದಿಯ ಸ್ವತ್ತು; ಗೂಡಾರ್ಥದ ಕವಡುಗಂಟಕವಾದರೆ ಮನದೊಳಗೆ ಮುಚ್ಚಿಟ್ಟ ಗಂಟು (ವಿಚಾಮಂ. ೬೨); ಕವಡು-ಗಂಟಕ ವಿಚಾರಸರಣಿ . . . ಜಾಣ್ಮೆಯ ಮಂದಹಾಸ ಒದವಿಸದೆ ಇಲ್ಲ (ಸುತ್ತುಮು. ೫). **ಕವಡಕಂಟಕ**: ೩. ಗೃಹಶಾಂತಿ ಮಾಡುವಾಗ ಹೂತಿಡುವ ವಿಕಾರವಾದ ಕಣಿಕದ ಗೊಂಬೆ (*). **ಕವಡಗಂಟಕ**: ೧. ಕವಡಗಂಟಕರು ಕೂಡಿ ತಮಗೆ ಅನುಕೂಲವಾಗುವಂತೆ ಠರಾವು ಪಾಸುಮಾಡಿಕೊಳ್ಳುವ ನಾಟಕವೂ ಅಲ್ಲ (ಅಪನಾ. ೪). **ಕವಡಿಗಂಟಕ**: ೨. ಕವಡಿಗಂಟಕ ಸ್ವಭಾವದ ನಮ್ಮ ಮಾನವರಂತೆಯೇ ದೇವತೆಗಳು ನಡೆದರೆ, ಅವರಿಗೂ ನಮಗೂ ಭೇದವೇನು ಉಳಿಯುವದು (ಶೈವಸು. ೧೪೭). **ಕವಡುಕಂಟಕ**: ೧. 'ಕವಡುಕಂಟಕತನ' ಪರಾ. [ಕವಡು$_2$ + ಕಂಟಕ$_1$]

**ಕವಡುಗಂಟಕತನ**, ಕವಡುಕಂಟಕತನ (ನಾ). ಮೋಸಗಾರಿಕೆ; ಠಕ್ಕುತನ; ವಂಚನೆ: ಶೇಷಪ್ಪನ ಕವಡುಗಂಟಕತನಕ್ಕೂ ಅವಕಾಶ ಉಳಿಯದಂತಾಗುವದು (ಗ್ರಾಮಾಯ. ೩೦೭). **ಕವಡುಕಂಟಕತನ**: ನನ್ನ ಬೆರಳುಗಳನ್ನು ನನ್ನ ಕಣ್ಣುಗಳಲ್ಲಿಯೇ ಚುಚ್ಚುವದು ಕವಡು ಕಂಟಕತನವಾಗಿದೆ (ಮಣ್ಣಮ. ೩೦೩); ಅಕಬರನ ಈ ಕುಟಿಲನೀತಿಯು . . . ಬಹು ಕವಡುಕಂಟಕತನದ್ದು (ಮಾತೃಭೂ. ೧೩); ಇಂಥ ಎದೆಯೊಡಕನಿಂದ ನಮ್ಮ ಪಾರುಪತ್ಯದ ಕವಡುಕಂಟಕತನದ ಕೆಲಸವಾಗುವದೇ (ವಿಚಲ. ೪). [ಕವಡುಗಂಟಕ + -ತನ]

**ಕವಡುಗಾರ್ತಿ** (ನಾ). ಮೋಸಗಾತಿ; ಕಪಟಿ: ಪೊಜನಲ್ಮೆಯ ಕವಡುಗಾರ್ತಿಯ ಕಲ್ಲೆರ್ದೆಯೊಳ್ ನಾಂಟಿದ ನಾಡಾಡಿ ನನ್ನಿಗ ಚೆನ್ನಿಗನ (ರಾಮಾಶ್ವ. ೧೩೬-೪). [ಕವಡು$_2$ + -ಗಾಜ (< -ಕಾಜ) + -ತಿ$_1$ (< -ಇತ್ತಿ)]

**ಕವಡುಗೊಲೆ**, ಕವಟ್ಗೊಲೆ (ನಾ). ಮೋಸದ ಕೊಲೆ; ಕಪಟದ ಕೊಲೆ: ಮುದಟ್ಗಂಟು, ಮುದುಡುಗಂಟು, ಕವಟ್ಗೊಲೆ, ಕವಡುಗೊಲೆ (ಶಬ್ದಾನು. ೮೩ ಪ್ರಯೋ). **ಕವಟ್ಗೊಲೆ**: ಮೇಲಿನ ಪ್ರಯೋಗವನ್ನು ನೋಡಿ. [ಕವಡು$_2$ + ಕೊಲೆ$_2$]

**ಕವಡುಗೋಡು** (ನಾ). ಕವಲು ಕವಲಾಗಿರುವ ಕೋಡು: ತಮ್ಮ ಕವಡುಗೋಡುಗಳಿಂದಿರ್ದಡಿಸಿ ತೋಡುವ ಕಡವೆ ಸಾರಂಗಂಗಳಂ (ಚಕವಂ. ೧೦೪). [ಕವಡು$_1$ (< ಕವಲ್$_2$) + ಕೋಡು$_5$]

**ಕವಡುತನ** (ನಾ). ಮೋಸಗಾರಿಕೆ; ಕಪಟ: ಅಂತಹ ಕವಡುತನಕ್ಕೆ ಕೈಯಿಕ್ಕಲು ನನಗದೇನು ಕಡಿಮೆ (ಸವತಿ. ೧೯೭). [ಕವಡು$_2$ + -ತನ]

**ಕವಡುನಡೆ** (ನಾ). ಮೋಸದ ನಡೆವಳಿಕೆ; ಮೋಸಗಾರಿಕೆ: "ಛದ್ಮಗತಾ, ಕವಡುನಡೆಯೊಳ್" (ಕಾಶಕ್ಯ. ೫೧). [ಕವಡು$_2$ + ನಡೆ$_2$]

**ಕವಡುನಡೆಗ** (ನಾ). ಮೋಸಗಾರ: "ತ್ಸರಃ = ಕವಡುನಡೆಗಂ" (ಕಾಶಕ್ಯ. ೫೧). [ಕವಡುನಡೆ + -ಗ$_3$]

**ಕವಡುನಿದ್ದೆ** (ನಾ). ತೋರಿಕೆಯ ನಿದ್ದೆ; ಕಳ್ಳನಿದ್ದೆ; ಕಪಟನಿದ್ರೆ: ಇಂತಿದೆಂದು ನಿರವಿಸಿ ತಿಳಿದಾ ಪಟಿಯರ್ ಪಟುನುಡಿಯಿಂ ಗೋವಳಗುವರನ ಕವಡುನಿದ್ದೆಯಂ ಪುಸಿಗೆಯ್ದರ್ (ಗೀತಗೋ. ೮-೧೯). [ಕವಡು$_2$ + ನಿದ್ದೆ]

**ಕವಡುನುಡಿ** (ನಾ). ಮೋಸದ ಮಾತು; ಠಕ್ಕಿನ ಮಾತು; ಕಪಟೋಕ್ತಿ: ಈ ತೆಜನ ಮಾಟದ ಕವಡುನುಡಿಯ ಕೊಂಕೆಂಬುದ ನಜಿಯದಾದೆಂ (ರಾಮಾಶ್ವ. ೧೧೮-೨೩). [ಕವಡು$_2$ + ನುಡಿ$_2$]

**ಕವಡುಬಿಜ್ಜೆ** (ನಾ). ಕಪಟವಿದ್ಯೆ; ಮಾಯಾವಿದ್ಯೆ: ಇಂತುಂ ತೀಜಿ ಪಿಂತಣ ಕವಡುಬಿಜ್ಜೆಯನುಜಿದು ಮೆಯ್ಗಾಳಗಕ್ಕೆ ತೊಡಂಗಿದರ್ (ಅದ್ಭುತ. ೪೫-೨೬). [ಕವಡು$_2$ + ಬಿಜ್ಜೆ$_2$]

**ಕವಡುಬೀಳ್** (ಕ್ರಿ). ಮೋಸಕ್ಕೆ ಸಿಕ್ಕು; ಮೋಸಹೋಗು (?): ಉಕ್ಕುವಾ ತುರಗಮನೆಯಿಂದಾಳುಮಂ ನೂಂಕೆ ದಕ್ಕಿತರಸಿನ ಹಿಂದೆ ಬಂದಾನೆ ನಿನಗೆ ಕೈಸಿಕ್ಕಿದೀ ಮಂತ್ರಿಯಿಂ ಕವಡುಬೀಳ್ವುದು ಮನೋರಥ ಮೊದಗಿ ನಡೆಯದೆಂದು ನಿಕ್ಕುವಂ ಚದುರಂಗವಾಡುವಂತೊರ್ವಳತಿಠಕ್ಕಿನಿಂ ಮೊದಲೊತ್ತೆಗೊಟ್ಟನಂ ನೂಂಕಿ (ಚಬಪು. ೧೦-೪೬). [ಕವಡು$_2$ + ಬೀಳ್$_1$ (< ಬೀೞ್)]

**ಕವಡುಮಾತು$_1$** (ನಾ). ಕವಲಾದಮಾತು; ಅಸಂಗತವಾದ ಮಾತು; ಸುಳ್ಳು ನುಡಿ (*). [ಕವಡು$_1$ (< ಕವಲ್$_2$) + ಮಾತು$_1$]

**ಕವಡುಮಾತು$_2$** (ನಾ). ಮೋಸದ ಮಾತು; ವಂಚನೆಯ ನುಡಿ. [ಕವಡು$_2$ + ಮಾತು$_1$]

**ಕವಡೆ$_1$**, ಕವಟೆ$_1$, ಕಾವಾಡೆ, ಕೌಟೆ, ಕೌಡೆ$_1$ (ನಾ). ಒಂದು ಬಗೆಯ ಗಿಡ. 'ಕಾಡಕವಡೆ' ಪರಾ. **ಕವಟೆ$_1$**: 'ಕವಟೆಕಾಯಿ' ಪರಾ. **ಕಾವಾಡೆ**: (*). **ಕೌಟೆ**: "ಕಾಳಿಂಗಂ - ಕೌಟೆ, ಕೆಕ್ಕರಿಕೆಯ ಫಲ" (ಓಷಧಿ. ೨೮). **ಕೌಡೆ$_1$**: ಎರಡುಂ ಪೋಟ್ಗಳ ಮಾಡಿ ಕೌಡೆ(ಟೆ)ಯೆಳಗಾಯಂ ತೀವಿ (ಖಮುದ. ೫-೯೨). [←ಮರಾ. ಕವಡಳ]

**ಕವಡೆ₂**, ಕವುಡೆ₂, ಕೌಡೆ₂ (ನಾ). ೧. ಕಪರ್ದಿ ; ಕಾಕಿಣಿ ; ವರಾಟ : "ಕಪರ್ದ ವರಾಟಕಮೆನಲ್ಕವಡೆಯಕ್ಕುಂ" (ಮಂಗರಾ. ೧೨೨–೯) ; ಇಂತೊಂದು ಕೋಟಿ ಪೊನ್ನನೊಂದು ಕವಡೆಯುಂ[ಪಾಠಾಂ: ಕವಡಿಕೆಯಂ] ಕುಡುವಂತೇನುಮಪೋಹಮಿಲ್ಲದೆ ಕೊಟ್ಟು (ಸುಕುಮಾ. ೧೦–೧೧೮ವ) ; ವೀರರ ಮೂಗಿಗೆ ಕವಡೆಯ ಕಟ್ಟಿ ನೀರ್ತರಿಸಿ . . . ಜಾಡಿಸಿಕೊಂಬ ಪ್ರವುಡೆಯರಿರ್ದರು (ಮೋಹತ. ೨೦–೩೯) ; ಹಲ್ಲೆಲ್ಲ ಕವಡೆಯ ಚೀಲವ ಕೊಡಹಿದಂತುದಿರ್ದುವು ಧರೆಗೆ (ಭರಚ. ೩೬–೫೮) ; ಖರನಂ ಸೌಮಿತ್ರಿ ಪುಟಿತ ಕವಡೆಗೆ ಬಗೆದಂ (ಶಬ್ದಾನು. ೨೯೫ ಪ್ರಯೋ). ೨. ಒಬ್ಬಾತನ ಹೆಸರು : ಸ್ವಸ್ತಿಶ್ರೀ ಮೆದಕೊಣ್ಣವಾರಾಮುಗನ್ ಕವಡೆ ಕೊಟ್ಟದುಸೊಡರುಂ (ಎಕ. VII, ಶಿಕಾರಿ. ೪೫–೨೪ ; ಸು. 890 ?). **ಕವುಡೆ** : ೧. ಗಜಂ ತುಳಿದೊಡೆದ ಕವುಡೆಯಂತಾಯ್ತು ಕಚ್ಛಪನ ಬೆನ್ (ಚೆಬವು. ೪೮–೨೨). **ಕೌಡೆ₂** : ೧. ಜೋಯಿಸ ಕೌಡೆಗಳನ್ನು ಮುಗುಚಿ ಪ್ರಶ್ನೆಫಲ ಹೇಳುತ್ತಾನೆ (ರೂಢಿ).

**ಕವಡೆಯಬೊಪ್ಪ** = ೧. ಒಬ್ಬಾತನ ಹೆಸರು : ಶಾನ್ತಿ ಜಿನೇಶ ತೀರ್ತ್ಥಮಂ ಕವಡೆಯಬೊಪ್ಪನುದ್ಧರಿಸಿದಂ (ಎಕ. VII, ಶಿಕಾರಿ. ೨೨೫–೬ ; 1204). ೨. (?) : ಅರಬೊಪ್ಪನೀ ಕವಡೆಯಬೊಪ್ಪನೆಂದು ನಡೆನೋಡಿದಜಟ್ಟಿರೊಳ್ (ಸೂಕ್ತಿಸು. ೭–೬೬). [< ಸಂ. ಕಪರ್ದ]

**ಕವಡೆಕಾಯಿ**, ಕವಟಿಕಾಯಿ, ಕವುಟಿಕಾಯಿ (ನಾ). ಕವಡೆಮರದ ಕಾಯಿ (ಕ). **ಕವಟಿಕಾಯಿ** : (ಕ). **ಕವುಟಿಕಾಯಿ** : ಅತಿಸಾರ ರೋಗಕ್ಕೆ ಪಥ್ಯಾಪಥ್ಯ ದ್ರವ್ಯಂಗಳಾವುವೆನೆ – ಪಡವಲದಕಾಯಿ . . . ಚಕ್ರವರ್ತದ ಸೊಪ್ಪು, ಕವುಟಿಕಾಯಿ, ಬೇಲದಹಣ್ಣು (ಸಕವೈ. ೩೫೨). [ಕವಡೆ$_1$ + ಕಾಯಿ$_4$ (< ಕಾಯ್$_4$)]

**ಕವಡೆಗಟ್ಟು** (ಕ್ರಿ). ಗಂಟುಕಟ್ಟು ; ದದ್ದಾಗು : ಏಟುಬಿದ್ದ ಜಾಗದಲ್ಲಿ ಕವಡೆಗಟ್ಟಿದೆ (ರೂಢಿ). [ಕವಡೆ$_0$ + ಕಟ್ಟು$_1$]

**ಕವಡೆಗೊಳ್ಳೆ** (ನಾ). ಒಂದು ಊರಿನ ಹೆಸರು: ನಿಂಬದೇವರಸರು ಕವಡೆಗೊಳ್ಳದಬಳಿಯಸುಂತೆಯ(ಎಇ.XIX,೩೨–೧೦;1132). [ಕವಡೆ? + ಕೊಳ್ಳ$_1$]

**ಕವಣ**, ಕವಣೆ₂ (ನಾ). ೧. ಹುಲ್ಲುಗಾವಲು ; ಕಾವಣ : ಕಲ್ಲನಂದಿಯನು ಭುಲ್ಲವಿಸಿ ಕವಣನ ಮೇಯ್ಸಿದಂ (ಸಿಂಗಿರಾ. ೪೩ ಸೂಚನೆ); ಮಣ್ಣೆತ್ತ ನಿಜದೆತ್ತ ಮಾಡಿ ನೀಂ ಮೇಯಿಸಿದೆ ಕವಣಮಂ (ಪಾಸೋಪು. ೩–೨೮). ೨.= ಕವಣಾಯ: ಸಿದ್ಧಾಯ ಬಿಟ್ಟ ಕೊಟ್ಟಣ. . .ಕವಣ ಕಡ್ಡಾಯದಂಕೆ ತಳವರಿಕೆ ಕೋರಾಯ ಗುತ್ತಿಗೆ ಅಪುತ್ರಿಕೆ ದಂಡ ಉಂಡಿಗೆಗಳು (ಸಿಂಗಿರಾ. ೨೨–೨೬). **ಕವಣೆ₂**: ೨. ಅಂಕೆಯ ಸೊಲ್ಲಿಗೆ, ಕವಣೆ . . . ಗುತ್ತಿಗೆಗಳೆಂಬ ಹದಿಮೂರು ಹೊಸ ಕರಗಳನ್ನು ನಿಯೋಜಿಸಿದರು (ಶರಜ. ೧೨೯). [← ತಮಿ. ಕವಣೈ]

**ಕವಣದಕಡ್ಡಿ** (ನಾ). ಬಜೆ : "ವಚಾ, ಉಗ್ರಗಂಧಾ – ಷಡ್ಗ್ರಂಥಾ – ಗೋಲೋಮಿ – ಶತಪರ್ವಿಕಾ – ಇ ಬಜೇ ಹೆಸರುಗಳು. ಇದನ್ನು ಮಕ್ಕಳ ತಾಯಿಯಂತಲೂ ಕವಣದಕಡ್ಡಿಯಂತಲೂ ಅನ್ನುವರು" (ಸಿದ್ಧಾಂತಿ. ೧೧೮). [?]

**ಕವಣಾಯ** (ನಾ). ಹುಲ್ಲುಗಾವಲಿನ ತೆರಿಗೆಯಿಂದ ಬರುವ ಆದಾಯ : ತಳಸಾರಿಗೆ ಕಾಣಿಕೆ ಕವಣಾಯ ದಣ್ಣದಾಯವಿನ್ನಿನಿತುಮಂ . . . ಕೊಟ್ಟರ್ (ಸೌಇಇ. IX–i, ೧೬೨–೧೮; 1106). [ಕವಣ + ಆಯ$_1$]

**ಕವಣಿ** 'ಕವಣೆ$_1$' ನೋ.

**ಕವಣೆ$_1$**, ಕವಣಿ (ನಾ). ಕಲ್ಲನ್ನು ಇಟ್ಟು ತಿರುಗಿಸಿ ಬೀಸಿ ಹೊಡೆಯುವುದಕ್ಕಾಗಿ ಮಾಡಿದ ಒಂದು ಜಾಳಿಗೆಯ ಹಗ್ಗ : ತೋಳ್ ಸೆಡೆದಿಟ್ಟ ತಕ್ಕಿನೊಳ್ ಕವಣೆಯ ಗುಂಡು ಪಾಯವು (ಅನಂಪು. ೧–೮೨) ; ನೆರಪಿದ ಕಲ್ಲುಂ ಕವಣೆಯುಮಿರೆ ಮಂಚಿಗೆಯುಂತಿರೆಸೆದುವಟ್ಟಣೆ ಪಲವುಂ (ಪಾರ್ಶ್ವಪು. ೩–೧೩೧) ; ಅಟ್ಟಳೆಯನಡರಿಯತಿ ಭರದಿ ಕವಣೆಗೆ ಕಲ್ಲನಿಟ್ಟು . . . ರಾಜಕೀರ ಪಾರಾವತವನು ಪಾರಿಸುವ (ಸಮ್ಯಕೌ. ೧–೨೬).

**ಕವಣಿ** : ಪಂನೆರಡುಸಾವಿರವರುಶಶ್ರೇಣಿವೊಲಂ ಕವಣಿಯ ಮಣಿಯ ಪರಿಯಾಣದಿಂ ತೋರ್ಕೆವೆತ್ತೆಯ್ತರೆ (ಸೌಇಇ. IX–i, ೩೪೦–೪; 1224); ಕೋಕನದ ತಂತುವಿಂ ಪೆಣೆದು ಕವಣಿಯ (ಪ್ರಭುಪು. ೩–೨೪) ; ಕವಣಿಯ ಕಲ್ಲು ಹಿಡಿದಿಲ್ಲ ಖಗಮೃಗ ಮೇವು ತೆನೆ ತಿಂದು ಸುಖಿಸುವವು (ಸಿದ್ಧಪು. ೩–೫೬). [ದೇ. ॥ ತಮಿ. ಕವಣ್, ಕವಣೈ ; ಮಲ. ಕವಣ, ಕವಿಣ ; ತುಳು. ಕವಣೆ]

**ಕವಣೆ₂** 'ಕವಣ' ನೋ.

**ಕವಣೆಗಲ್**, ಕವಣೆಗಲು, ಕವಣೆಗಲ್ಲು (ನಾ). ಕವಣೆಯಲ್ಲಿಟ್ಟು ಎಸೆಯುವ ಕಲ್ಲು : ಅಡಗಿರ್ದೆಸೆವ ಕಂಡಿಯ ಕಣೆಯ ರಾಶಿಯ ಕವಣೆ ಗಲ್ಲ[ಪಾಠಾಂ. ಗಲ್ಲುಗೆ]ಳಲಿ (ತೊರರಾ. ೬–೭–೯) ; ಬೀಳ್ವ ಕವಣೆಗಲ್ಗಳ ಬೀಜು ಗುಂಡುಗಳ ಘಾತಿಯಿಂ ಬಸವಳಿದು ಬೀಳುತಿರ್ದರ್ (ಚೆಬವು. ೪೨–೨೬).

**ಕವಣೆಗಲು** : ಅಜಿ ಸಜಿ ತೋರಗಲು ಕವಣೆ[ಣೆ]ಗಲು ಕಣೆ (ಸೌಇಇ. XX, ೧೨೬–೩ ; 1186). **ಕವಣೆಗಲ್ಲು** : ನವಣೆಯ ಬೋನಕ್ಕೆ ಹವಣಾದ ತೊಗೆಯಾಗಿ ಕವಣೆಗಲ್ಲಷ್ಟು ಬೆಣ್ಣೆಯಿಡಲೂಟದ ಹವಣನೋಡು (ಸರ್ವಜ್ಞ. ೧೬೧೮) ; ಎತ್ತುಗಲ್ಲುಗಳೆಂಬ ಕಲ್ಲುಕವಣೆಗಲ್ಲೊತ್ತಿದ ಗಾಯಗಳಿಂದ ನೆತ್ತಿಗಳೊಡೆದು (ಕಂನವಿ. ೧೪–೬೨). [ಕವಣೆ$_1$ + ಕಲ್$_3$]

**ಕವಣೆಗಲು** 'ಕವಣೆಗಲ್' ನೋ.

**ಕವಣೆಗಲ್ಲು** 'ಕವಣೆಗಲ್' ನೋ.

**ಕವಣೆಗೊಳ್** (ಕ್ರಿ). ಕವಣೆಯನ್ನು ಹಿಡಿ ; ಕವಣೆ ಉಪಯೋಗಿಸು : ಒಕ್ಕಲ ಕೆಯಿಗಳೆಗೆಜಿಗುವ ಪಕ್ಕಿಗಳಂ ಕವಣೆಗೊಂಡು ಕಾಯಲೆವೇಡಾ (ಸಮುಪ. ೧೪–೬೬). [ಕವಣೆ$_1$ + ಕೊಳ್$_1$]

**ಕವತೆ$_1$** 'ಕವರ್ತೆ$_1$' ನೋ.

**ಕವತೆ₂** (ನಾ). ಕವಲಾಗಿರುವಿಕೆ ; ಎರಡು ಟಿಸಿಲಾಗಿರುವಿಕೆ (ಕ). [< ಕವಲ್$_2$ + –ತೆ]

**ಕವದಿ** 'ಕವುಂದಿ' ನೋ.

**ಕವನ** (ನಾ). ೧. ಕಾವ್ಯ ; ಕವಿತೆ : ರಸಪ್ರಯೋಜನ ಭವನಂ ಕವನಂ (ಅನಿಕೇ. ೩೦–೧) ; ರವೀಂದ್ರರು ತಮ್ಮ ಕವನಗಳಲ್ಲಿ ಭಗವದ್ಗೀತೆಯ ಹೊನಲನ್ನು ಹರಿಸಿದರೆ (ಧರ್ಮ್ಮಸಾ. ೧೨೬). ೨. ಕಲ್ಪನೆ ; ವಿಚಾರ : ಅವಯವಗಳೆಲ್ಲರಿಗೆ ಸವನಾಗಿ ಇರುತಿರಲು ಭವಿ ಭಕ್ತ ಶ್ವಪಚ ಶೂದ್ರರಿಂವರಿಂತೆಂಬ ಕವನವೆತ್ತಣದು (ಸರ್ವಜ್ಞ. ೯೭೪). [ಸಂ.]

**ಕವನಿಸು** (ಕ್ರಿ). ಕವಿತೆಯನ್ನು ಕಟ್ಟು ; ಕಾವ್ಯರಚನೆ ಮಾಡು : ಕೆಲಕಾಲ ಮನೆಯಲ್ಲಿ ಕವನಿಸಲಾರದೆ . . . ಬಿಡುವಾದಾಗ ಸಾಲೆಯಲ್ಲೂ ಕವನಿಸುತ್ತಿದ್ದೆ (ಕಂನಾಸಾ. ೩) ; ಕವನಿಸಲೆ ? ಕತಿಸಲೆ ? (ರೂಪಸಂ. ೩೮). 'ಕತಿಸು' ಪರಾ. [ಕವನ + –ಇಸು$_3$]

**ಕವಯರ** (ನಾ). = ಕೆಯ್ವಾರ$_2$ (?) : ಧರೆಗೆೃಸಾಸಿರಬಿಲ್ಲಂ ತರದೊಳ್ ಪರ್ವಿದುದು ನೀಲಮಣಿಭೂಮಿ ನಭೋಂತರಮಂ ದ್ವಾದಶಯೋಜನ ವಿರಾಜಿತಂ ಕಂತುಕವಯರಂ ಬೀಸಿದವೋಲ್ (ಮಲ್ಲಿಪು. ೧೪–೧೧೫) ; ಕಜ್ಜಲದಿನೊಗೆದ ಮುಕ್ತಾಳಿಯಿಂದೆಯ್ದೆ ಶುಭ್ರಾಂಬುದಮಂ ತಾರಾಳಿಯಂ ಪೋಲ್ತೆಸೆವ ನೆಜಿ ನಭೋಭಾಗದಂತೊಪ್ಪಿ ಸುತ್ತಿರ್ದುದು ಜಂಬೂದ್ವೀಪಮಂ ವಾರಿಧಿ ಕವಯರಮಂ ಬೀಸಿದಂತಾಗೆ ಚೆಲ್ವಿಂ (ಧರ್ಮಾಮೃ. ೧–೫೫) ; ಕವಯರದಂತೆ ಬಟ್ಟತಳವಟ್ಟು ಕುಚಂ ಕಡುಕೊರ್ವಿ ಪರ್ವೆ (ಸೂಕ್ತಿಸು. ೪–೨೬). [< ಕೆಯ್ವಾರ$_2$ ?]

**ಕವಯಿತ್ರಿ** (ನಾ). ಕಾವ್ಯ ರಚಿಸುವವಳು ; ಕಬ್ಬಿಗಿತಿ : ಜಾನಪದ ಕಾವ್ಯದ ಕವಯಿತ್ರಿಯರ ಹೆಸರು ಸಿಕ್ಕುತ್ತಿಲ್ಲ (ಕರ್ನಾಕ. ೫೦) ; ಎದುರಿಗೆ ಕವಯಿತ್ರಿ ಕಂತಿದೇವಿ (ಸವತಿ. ೩೨). [ಸಂ. ಕವಯಿತ್ರೀ]

**ಕವರ್**₁, ಕಬರ್ು₃, ಕವರು₁ (ಕ್ರಿ). ೧. ದೋಚು ; ಸುಲಿ ; ಸೆಳೆದು ಕೊಳ್ಳು ; ಕಿತ್ತುಕೊಳ್ಳು : "ಕವರ್ದುದೀಬ್ದುದೆನೆ ಕವಿವರರಿಂ ಸೆಳೆದು ಕೊಂಡರ್ಥಮದು" (ಕವಿಕಂ. ೧೯೭); ಪ್ರಿ(ಪೃ)ಧಿ(ಥಿ)ವಿಯಾ ಬಿನ್ನಾಣಿಗಳಾ ಬಳ್ಳಿಗವರ್ತ್ತೆ ಇಲ್ಲ ದೋಸಿಗನ ಕವರ್ದುರ್ಬಟಿದೊರ್ಗೆ ಪರಿಹಾ[ರ]ವ್ (ಇಛ. X, ೧೬೪-೮ ; 7ನೆಯ ಶತ) ; ಕವರ್ದವರುಮೊಳರೆ ಕವಿಯಲ್ಲದರಂ (ಕವಿರಾ. ೧-೧೨) ; ಮನಮೆಲ್ಲಮಂ ಕವರ್ದಪಂ . . . ಅಂಗಜನ್ಮನ ಕವರ್ತೆಯ ದಂಡದ ಪಾಂಗಿದೆಂತುಟೋ (ಪಂಪಭಾ. ೫-೧೩). ೨. ಸೆರೆ ಹಿಡಿ ; ಮರುಳುಮಾಡು ; ವಶಪಡಿಸಿಕೊ : ಪೋ ಪು[ಗ]ಲ್ ಪು[ಗ] ಲೆನುತಿರ್ಪ ಪಕ್ಕಿ ಮನಮಂ ಕವರುತ್ತಿರೆ (ಪಂಪಭಾ. ೫-೩೫) ; ದ್ರೋಹ ರಪ್ಪವರಂ ಕವರ್ವಂತೆ ತಕ್ಕರನೇಕೆ ಕವರರ್ (ಧರ್ಮಾಮೃ. ೭-೯೩) ; ಸತ್ಕೃತಿಯಂ ತವೆ ಪೇಳ್ವುದು ಪೇಳದೊಡೇಂ ಕವರ್ವರೆ ಕೋಪಿಪರೆ ನಿಂದಿಪರೆ ದಂಡಿಪರೇ (ಗಿ.ರಿ.ಕ. ೧-೨೦) ; ಪ್ರಜೆಗಳನನ್ಯಾಯದಿಂ ಕವರ್ದುಂ ಕಟ್ಟಿಯುಂ ಕೊಳ್ವರ್ (ಪಸಾರ. ೩೦೫-೧೧). **ಕಬರು**₂ : ೧. ಗಿರಿಶಿಖರ ಗಳಲೆಚ್ಚು ತರುಗೊನೆಗಳಿಂದರೆದು ಕರಚರಣಗಳಲೊದೆದು ಕಚ್ಚಿ ಕಬರುತ ಮುಱಿದು ಕರಜಾತರದಗಳಿಂ (ವೆಂಕಾರಾ. ೬-೩೧-೩). **ಕವರು**₁ : ೧. ಕಲೆಗಳ ಕೂಟದಲಿ ಕೀಳ್ಪಡಿಸಿ ಸರ್ವಸ್ವವನು ನೆಱೆ ಕವರಿ (ತೊರರಾ. ೧-೫-೩೧) ; ಆ ವೃಷಭದತ್ತಸೆಟ್ಟಿಯ ಮನೆಯ ಕವರಲೆಂದೋವದೇ ಬಾಗಿಲ್ಗೆ ಬರಲ್ (ಪದ್ಮಕಾ. ೫-೫೨) ; ವನಚರರು ಕಡುಮುಳಿದು ಧನಕಾದಿ ವಸ್ತುವನು ಕವರಿಕೊಂಡು (ಜ್ಞಾನಚಂ. ೪-೧೪೪). ೨. ತೆವರಿದ ಪಟುಭಟರಸುವನೆಲ್ಲವ ಕಟ್ಟಿ ಕವರಿ ಕಾಲಗೆ ಸಮರ್ಪಿಸಿದ (ನೋಹತ. ೩೪-೮) ; ಹಾವಭಾವವಿಲಾಸವಿಭ್ರಮಗಳಿಂದ ಅವನ ಮನಸ್ಸನ್ನು ಕವರಲು ಹವಣಿಸುತ್ತಾಳೆ (ನಂಜುಂಡ. ೭೭).

**ಕವರ್ದುಕೊಳ್, ಕವರಿಕೊಳ್** = ಅಪಹರಿಸು ; ಸುಲಿದುಕೊಳ್ಳು : ಮನೆಯೊಳುಳ್ಳುದೆಲ್ಲಮಂ ಕವರ್ದುಕೊಂಡು (ವಡ್ಡಾರಾ. ೮-೧೭) ; ಮಲೆಪರೇ ಮಂಡಳಿಕರುಮನಸಿಯರಾಗೆ ಕವರ್ದುಕೊಂಡು (ಪಂಪಭಾ. ೬-೩೨ ವ) ; ಅವನ ವಿತ್ತದೊಳಗಿನಿತುಳಿಯದಂತೆಲ್ಲವಂ ಕವರ್ದುಕೊಂಡು ಬಱಗನ ಮಾಡಿ (ಜೀರಮು. ೮-೩೪) ; ನಾನಾಲೋಕಪಾಲಕರೊಳು ಧನವ ನೆಱೆ ಕವರಿಕೊಂಡು (ತೊರರಾ. ೧-೮-೩೭).

[ದೇ. ‖ ತಮಿ. ಕವರ್ ; ಮಲ. ಕವರು ; ತೆಲು. ಕಮುಚು]

**ಕವರ್**₂ (ನಾ). ೧. ಚಪ್ಪರ ; ಹೊದಿಕೆ : ಆ ನಾಡೊಳ್ ಕೀಱಿಂಬುದು ಕುದುರೆಯಬಾಯ ಕಬ್ಬಿಣದೊಳ್ ಕವರೆಂಬುದು ಚಪ್ಪರದೊಳ್ (ಕಬ್ಬಿಕಾ. ೨೫). ೨. "ರಥದ ಒಂದು ಭಾಗ" (ಪಂಪನಿ) : ಉಡಿದ ನೊಗಂ ಧ್ವಜಂ ಪಲಗೆ ಕೀಲ್ ಕವರಚ್ಚು ತುರಂಗಮುಂ ರಥಂ ಕಿಡೆ (ಪಂಪಭಾ. ೧೧-೩೮). [?]

**ಕವರ್**₃ (ನಾ). ರೋಷ ; ಆಗ್ರಹ : ಕವರಿಂದಗುರ್ವನೊಳಕೊಂಡಿರೆ ತಳ್ತಿಱಿದರ್ ಮಹಾರಥರ್ (ಪಂಪಭಾ. ೧೧-೩೮) ; "ಸಂಭ್ರಮ" (ಪ್ರಭಣ್ಣ) ; "ಕವರಿಂದೆ = ಕೊಳ್ಳೆಯಿಂದ" (ಪಂಪದೀ. ೩೯೩). [?]

**ಕವರ**₁ (ಗು). ೧. ಬೆರೆತ ; ಸಮ್ಮಿಶ್ರವಾದ ; ಕೂಡಿದ. (ನಾ). ೨. ಉಪ್ಪು. ೩. ಹೆಣೆದ ತಲೆಗೂದಲು ; ಜಡೆ. [ಸಂ.]

**ಕವರ**₂ 'ಕವರು₄' ನೋ.

**ಕವರಗಿ** (ನಾ). ಒಂದು ಗಿಡದ ಹೆಸರು : ಕವರಗಿ (ಕೇವಣ) ಸಣ್ಣಗಿಡ. ತೋಟೆಯ ಸಾರಿನಿಂದ ಹಗ್ಗಗಳಾಗುತ್ತವೆ (ಕಭಾಗ. ೩೭). [?]

**ಕವರಿ**₁ (ನಾ). ಮುಡಿ ; ಜಡೆ ; ಕಬರಿ. [< ಸಂ. ಕವರೀ]

**ಕವರಿ**₂ (ನಾ). ೧. ಒಂದು ಜಾತಿಯ ಬಳ್ಳಿ : "ಒರ್ವರಿ, ಕವರಿ, ತುಂಗಿ, ಖರಪುಷ್ಪೆ, ಅಜಗಂಧಿಕೆ" (ನಾಚಿರಾ. ೩). ೨. ಹಿಂಗಿನ ಸಸಿಯ ಎಲೆ (೩). [< ಸಂ. ಕಬರೀ ?]

**ಕವರಿಸು** (ಕ್ರಿ). ಅಪಹರಿಸು : ಕಳ್ವ ಪೆಂಡಿರಂ ಪಿಸುಣನಪ್ಪೊಡವುಟ್ಟಿದನಂ . . . ಕವರಿಸುವ ನಂಟನಂ ಗೆಂಟುಮಾಡುವಂತೆ (ಧರ್ಮಾಮೃ. ೫-೧೨೫).

[ಕವರ್₁ + -ಇಸು₃]

**ಕವರು**₁ 'ಕವರ್₁' ನೋ.

**ಕವರು**₂, **ಕೌರು**₂ (ಕ್ರಿ). ೧. ಆವರಿಸು ; ಆಕ್ರಮಿಸು : ಅಸೂಯದ ಕೋಟಲೆಯ ಕಡುಹೂಟ ಕವರಿತು ನೃಪನ ತನುಮನವ (ಕುವ್ಯಾಸ. ೧೨-೪) ; ಹೊತ್ತುತ ಹೊಗೆವುತ ಕತ್ತುತ ಕವರುತ . . . ಮನೆಯನೆಲ್ಲವ ನರೆಗಳಿಗೆಯೊಳೊತ್ತಿ ಹಿಡಿದುದಾ ಕಿಚ್ಚು (ನೇಮಿಸಂ. ೩೪-೭೩) ; ಕವರಿದಳೊ ಖಳಕುಲವನೆಲ್ಲವಾ ಸವರಿದಳೋ (ದೇವೀಮ. ೨-೭೧) ; ಅವನ ಮನಸ್ಸನ್ನು ಹುಚ್ಚು ಆಸೆ ಕವರಲಾರಂಭಿಸಿತು (ರೂಪಸ. ೨೫೮). ೨. ಹಲ್ಲಿನಿಂದ ಗೋರು ; ತಿನ್ನು ; ಕಚ್ಚು : ಕಡುಹಸಿದು ಹರಿದು ಕಲ್ಲಂ ಕವರಿದಂತೆ ನೀರಡಿಸಿ ಬಜುಗೆಱೆಯ ಪೊಕ್ಕಂತೆ (ಸೋಮಚ. ೨-೬೭) ; ಒಂದು ಕಾಯನ್ನೋ ಹಣ್ಣನ್ನೋ ಹಿಡಿದು ಹಲ್ಲುಗಳಿಂದ ಕವರುತ್ತ . . . ನಿಟ್ಟಿಸಿ ನೋಡುವುದು (ಪ್ರತಿಬಿಂ. ೨೨). **ಕೌರು**₂ : ೧. ಭೀತಿಯು ಕೌರುವಂತಿದೆ ನಿಮ್ಮ ವದನದೆ (ರಾಮಾಸಂ. ೬-೨-೫೧). [?]

**ಕವರು**₃ (ನಾ). ಶಾಖೆ : ಕೌರವರೂ ಪಾಂಡವರೂ ಒಂದೇ ಕವರಿನವರು (ರೂಢಿ). [< ಕವಲ್₂]

**ಕವರು**₄, **ಕವರ**₂ (ನಾ). ಹೊದಿಕೆ ; ರಟ್ಟು ; ರಕ್ಷಾಕವಚ ; ಲಕ್ಕೋಟೆ : ಗಂಡಸು ಅಂಚೆಯ ಕಾರ್ಡಿನಂತಾದರೆ ಹೆಂಗಸು ಕವರಿನ ಹಾಗೆ (ಇಂಚಾಪ. ೨೩೪-೫೯) ; ಬರೆದಾದ ಮೇಲೆ ಒಂದು ಕವರಿನಲ್ಲಿ ಹಾಕಿ ಕವರನ್ನು ಬಂದುಮಾಡಿದ (ಅಪನಾ. ೨೫೭) ; ಕವರು, ಪುಟಸಂಖ್ಯೆ, ಗ್ರಂಥದ ಬೆಲೆ, ವಿಳಾಸ (ನಿರಾಭ. ೧೭೫). **ಕವರ**₂ : "ರಕ್ಷಾಪತ್ರ– ಪುಸ್ತಕದ ಮೇಲಿನ ಕಾಗದ, ಕವರ" (ಗಂಗಾಮ. ೨೭೧).

[← ಇಂ. Cover]

**ಕವರುಕತ್ತಿ** (ನಾ). ಒಂದು ಬಗೆಯ ಕತ್ತಿ : ಎಳಕುಬಿಗೊಳ್ವಂಗೆಱಂ ಗೊಟ್ಟಂತಾಯ್ತು ಕವರುಕತ್ತಿಗೆ ಕಡಿತಂ ಬಂದಂತಾಯ್ತು (ಅರ್ಧನೇ. ೬-೭೦ ವ). [ಕವರು₀ + ಕತ್ತಿ]

**ಕವರ್ಗ** (ನಾ). [ವ್ಯಾಕ] 'ಕ' ಅಕ್ಷರಗಳ ಗುಂಪು : ವರ್ಗಗಳಿಗೆ ಕ್ರಮವಾಗಿ ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ ಎಂದು ಆಯಾವರ್ಗದ ಮೊದಲನೆಯ ವ್ಯಂಜನದ ಹೆಸರನ್ನು ಇಟ್ಟಿದ್ದಾರೆ (ಮಧ್ಯಮ. ೧೩). [ಕ₁ + ವರ್ಗ]

**ಕವರ್ಗಟ್ಟು** (ನಾ). ಚಪ್ಪರದ ಕಟ್ಟು : ಪೊಂಬಾಟಿಯ ಕಂಬಂಗಳಿಂ ಪಚ್ಚೆಯ ಪಲಗೆಗಳಿಂ . . . ಮಂದಾರದ ಮೊಳೆಸಾಲ್ಗಳಿಂ ಕಂಕೇಲ್ಲಿಯ ಕವರ್ಗಟ್ಟುಗಳಿಂ (ಕುಸುಮಾ. ೧೨-೧೫೭ ವ). [ಕವರ್₂ + ಕಟ್ಟು₂]

**ಕವರ್ಗಿ** (ನಾ). ಒಂದು ಬಗೆಯ ಸಸ್ಯ : ಮುರುಗಿಕಾಯಿ, ಭೂತ ಕರುಳು, ಕಾಡಕಲ್ನಾರು, ಕೌರಿ, ಕವರ್ಗಿ (ಮೈಔಗಿ. ೫೨-೮೩೨). [?]

**ಕವರ್ಗೋಲು** (ನಾ). ಕವಲುಗೋಲು (?) : ಮಯ ರಚಿಸಿದನು . . . ಕೊತ್ತಲಗಳ ಮಹಾಡೆಂಕಣೆಯ ಕೆದರುವ ಮಕರ ಡಿಬ್ಬಿಗಳಾ ಕಲುಗವಣೆ ಕವರ್ಗೋಲು ರಾಟಲ ಬಳಸು ನೇಣ್ ಬಡಿಗೊಡತಿಯುರುಳ್ಗಳ (ಅನಂರಾ. ೫-೫-೧೨). [ಕವರ್₀ + ಕೋಲು₁ (< ಕೋಲ್)]

**ಕವರ್ತೆ**₁, **ಕವತ್ತೆ**₁ (ನಾ). ೧. ಬಲಾತ್ಕಾರದಿಂದ ಕಿತ್ತುಕೊಳ್ಳುವುದು ; ಸುಲಿಗೆ ; ಲೂಟಿ : ಅಂಗಜನ್ಮನ ಕವರ್ತೆಯ ದಂಡದ ಪಾಂಗಿದೆಂತುಟೋ (ಪಂಪಭಾ. ೫-೧೩) ; ಕರಮುಳಿಪಿಂ ಕೂಡಿದೊಡೆ ಕೊಳೆಗಂ ಕವರ್ತೆಗಂ ಭಾಜನನಪ್ಪಂ (ಧರ್ಮಾಮೃ. ೯-೫೧) ; ಕರಂ ಕೊಲೆಯ ಮೇಲೆ ಕವರ್ತೆಯೆ (ಲೀಲಾವ. ೨-೩೦) ; ಲಂಚಂ ಕವರ್ತೆ ಸೆಱೆಕೋಳಿಂಚೆ ಬಱಂ . . . ಎಂಬಿವಱ ಪೆಸರುಮಿಲ್ಲಾ ನಾಡೊಳ್ (ಪುಷ್ಪಪು. ೨-೫).

**ಕವತೆ$_1$**: ೧. ಹಾದರ ಕ[ಪಾಠಾಂ. ಗ]ವತೆಯೆಂಬಿವರುಬ್ಬು ಹಿರಿದೆಂದ (ಕುವ್ಯಾ ಅ. ೧೪-೩೮); ಜವನ ಕವತೆಯೊ ಮೇಣು ಲಯಭೈರವನ ಕಾಲ್ದುಳಿಯೋಯೆನಲು ನಿಮ್ಮವರು ಮೆಱೆದರು ಕಲಿಕೆಗಳ ಕೌತುಕದ ರಣರಸವ (ತೊರರಾ. ೧-೧೧-೧೩). ೨. ಪೀಡೆ; ಹಿಂಸೆ: ಇತ್ತ ರೋಗದ ಕವತೆ ಬಳಿಕಿನೊಳತ್ತ ಸಾಲಿಗರುಱುಬೆ (ಪ್ರಹ್ಲಾಚ. ೮-೬೪).

[ಕವರ್$_1$ + -ತೆ]

**ಕವರ್ತೆ$_2$** (ನಾ). ಒಂದು ಬಗೆಯ ತೆರಿಗೆ: ಇನ್ತೀ ದಣ್ಡದೊಳಂ ಕವರ್ತ್ತೆಯೊಳವಪುತ್ರಿಕ ದ್ರವ್ಯದ ದಶವನ್ದದೊಳಂ ಪುಟ್ಟಿದ ದ್ರವ್ಯ ಮುವಂ . . . ದೇಯಿಂಗೆಱೆಗೆ (ಎಇ. XX, ೬-೪೦; 1012); ಮನೆದೆಱೆ ಮದುವೆದೆಱೆ ಊರುಟ್ಟಗೆ ತೌದೆ ಸುರಂದು ಕವರ್ತೆ ಸೇಸೆ ಒಸಗೆ (ಮೈಆರಿ. ೧೯೩೨, ೧೬-೩೦; 1069); ದಂಡದೊಳಂ ಕವರ್ತೆಯೊಳಂ ತೀರದೆ ದಂದುಗಂಗೊಂಬುದೆನಿತಾನುಮುಂಟು (ಚಿಕವಂ. ೪೫-೧೫).

[?]

**ಕವರ್ತೆಗೊಳ್** (ಕ್ರಿ). ಸುಲಿಗೆಮಾಡು; ಕಿತ್ತುಕೊಳ್ಳು; ಸೆಳೆದು ಕೊಳ್ಳು; ಅಪಹರಿಸು: ಸ್ವಯಂಪ್ರಭಾದೇವಿ ದೀಕ್ಷೆಗೊಂಡಳ್ ಕವರ್ತೆ ಗೊಂಡವೊಲಱಿವಂ (ಶಾಂತಿಪು. ೭-೪೭); ಪಿಡಿದೊತ್ತಿ ಗಂಟಲಂ ಮುಱಿದು ಕವರ್ತೆಗೊಳ್ವ ತೆಱದಿಂ (ಧರ್ಮಾಮೃ ೧೨-೧೧೪); ಕಣ್ಣುಮಂ ಮನಮುಮನೇಂ ಕವರ್ತೆಗೊಳಲಾರ್ತೆಸೆದಿರ್ಪುವೊ ಸೂಳೆ ಗೇರಿಗಳ್ (ಅನಂಪು. ೧-೧೯); ರಾಜಧರ್ಮವನೆಲ್ಲವ ನೀರೊಳಿಕ್ಕಿ ನೀನಹಿತಪುರವನು ಪೊಕ್ಕು ಕವರ್ತೆಗೊಂಡುದು ತಾನಿದು ಲೋಕಕ್ಕಪ ಹಾಸ್ಯಮೇನಲ್ತೆ (ಅಂಜಚ. ೧೨-೧೧೩); ಕಳುವ ಕಳ್ಳನಂ ಕರಗಿಸುವಕ್ಕ ಸಾಲೆಗಳನುಕ್ಕೆವದಿಂದ ಕವರ್ತೆಗೊಂಡು ಪೋಪರಸರವಂದಿರಂ ಮಱದು ತಿಂದೊಡೆಯುಳ್ಳಡೆ ತೋಱಲಾಗದೇ (ಪಸಾರ. ೯೩೩-೩).

[ಕವರ್ತೆ$_1$ + ಕೊಳ್$_1$]

**ಕವರ್ತೆವಟ್ಟೆ** (ನಾ). ಅಪಹಾರಮಾಡುವ ರೀತಿ; ಅಪಹಾರ ಮಾರ್ಗ: ಚಿಂತಿಸಿದನ್ ಏಕಾಂತದೊಳ್ ಉಕ್ಕೆವದ ಕವರ್ತೆವಟ್ಟೆಯಂ (ಶ್ರೀರಾಮಾ. ೨೧೬-೧೫೪). [ಕವರ್ತೆ$_1$ + ಬಟ್ಟೆ$_1$]

**ಕವರ್ತೆವಡು** (ಕ್ರಿ). ಸುಲಿಗೆಗೆ ಈಡಾಗು: ತನ್ಮಾನವಂ ಧನವಂತಂ ನೃಪರಿಂ ಕವರ್ತೆವಡು[ಪಾಠಾಂ. ಡೆ]ಗುಂ (ಜಾತತಿ. ೧೮-೨).

[ಕವರ್ತೆ$_1$ + ಪಡೆ$_1$]

**ಕವರ್ತೆವಡೆ** (ಕ್ರಿ). = ಕವರ್ತೆವಡು: ತನ್ಮಾನವಂ ಧನವಂತಂ ನೃಪರಿಂ ಕವರ್ತೆವಡೆ[ಪಾಠಾಂ. ಡು]ಗುಂ (ಜಾತತಿ. ೧೮-೨).

[ಕವರ್ತೆ$_1$ + ಪಡು$_1$]

**ಕವರ್ತೆವೋಗು** (ಕ್ರಿ). = ಕವರ್ತೆವಡು: ಅರಸರ ದೆಸೆಯಿಂ ಮನೆಯುಂ ಕವರ್ತೆವೋಪುದುಂ (ಆದಿಪು. ೩-೩೪ ವ); ನೃಪಸುತರಿಂ ಕವರ್ತೆವೋದಂತೆ ಬಿನ್ನನಾಯ್ತುದ್ಯಾನಂ (ಶಾಂತಿಪು. ೮-೫೮); ಕಿಡದು ಕವರ್ತೆವೋಗದು ಕಳಲ್ಕಣಮಾಗದು . . . ವಾಙ್ಮಯ ರತ್ನಚಯಂ ಜಿನೇಶನಾ (ಸಮಪ. ೨-೨೩). [ಕವರ್ತೆ$_1$ + ಪೋಗು$_1$]

**ಕವಲ್$_1$** (ಕ್ರಿ). ಕೊಂಬೆಯೊಡೆ; ಟಿಸಿಲೊಡೆ: "ಕವಲ್ – ಎರಡು ಭಾಗವಾಗು" (ಶಮುಧಾ); ತುಱುಗಿ ಕವಲ್ದು ಕತ್ತಲಿಪ ಚೂತ ಕುಜಂ ಗಳೊಳೊನ್ದಿ (ಎಇ. III, ೩೩೧-೨೮; 979); ತೊಟ್ಟನೆ ಬೇರೂಱಿದುವೋ ಕವಲ್ತುವೊ (ಆದಿಪು. ೭-೨೪); ಕರ್ವಿನ ಮಡಲಂತೆ ಕವಲ್ತುರ್ವಿದ ಕೆಯ್ವೊಲಗಳೆಸೆಗುಂ (ಕಾವ್ಯಾವ. ೨೦೭); ಕರಿಯ ಬೆಳಗು ಕವಲ್ತು ಪರ್ವಿ ಪಲ್ಲವಿಸಿದ ಮಹಾಂಧಕಾರದೊಳ್ (ನಂಬಿರ. ೧೮-೩೨); ಸಾನುತಳದೊಳ್ ಕವಲ್ತು ಜಲಜಲಿಸಿ ಪರಿವ ಬರಿವೊನಲೆಸೆಗುಂ (ವರ್ಧಪು. ೧೦-೧೪).

[ದೇ. ‖ ತಮಿ. ಕವರ್, ಕವ್ವೆ; ಮಲ. ತೆಲು. ಕವ]

**ಕವಲ್$_2$**, ಕವಡು$_1$, ಕವಲು$_1$, ಕವಲೆ$_1$, ಕೌಲು$_1$ (ನಾ). ೧. ಕವಲಾಗಿರುವಿಕೆ; ಟಿಸಿಲು; ಕವಲೊಡೆದ ಕೊಂಬೆ: "ಕವಲ್ಗಳ್ ಸ್ಕಂಧಾಗ್ರ ಪ್ರತತಿ ಬಹುಶಾಖಾಪರಿಕರಂ" (ವಸ್ತುಕೋ. ೩೧-೭); ಕವಲ್ಕವಲ್ತು ಪಲವುಂ ಕೊಂಬಾದುವೊಳ್ಕೊಂಬುಗಳ್ (ಆದಿಪು. ೧೧-೯೭); ಮುನಿಯೊಳೆಸೆದುದು ಕವಲಿಂ ಕವಲಿಂ ವಿವಿಧಮೆನಿಪ್ಪ ಮತಿಶ್ರುತಮವಧಿಮನಃಪರ್ಯಯಂ ಚತುರ್ವಿಧಬೋಧಂ (ಅನಂಪು. ೯-೧೦೦); ಪೊಸಮಣಿ ಗಂಬಮೆ ಮರಮೊದಲೆನೆ ಬಲ್ದೊಲೆಯೆಲ್ಲಂ ಬಹುಶಾಖೆಗಳೆನೆ ನವರಂಗಂ ಕವಲೆನೆ (ಜಯಕಾ. ೪-೫೦). ೨. ಎರಡಾಗುವಿಕೆ; ಭಿನ್ನತೆ; ಬದಲಾವಣೆ: ಪವಣುಂಟು, ಕವಲಿಲ್ಲಂ, ತೊದಳಿಲ್ಲದ ನುಡಿ (ಭಾಷಾಭೂ. ೩೫ ಉದಾ); ಬಗೆಗೇನುಂ ಕವಲಿಲ್ಲ ವಾಕ್ಯವೆರಡಿಲ್ಲಾದಾರ್ಯ್ಯದೊಳ್ ಮಾಂದ್ಯಮಿಲ್ಲ (ಎಕ. XI, ದಾವಣ. ೨೫-೬೩; 1224); ಕವಲಾದಜಿಹ್ವೆಯೊಡವಱಿವುದೇ ಸದ್ಗುಣಂ (ಸಮ್ಯಕೌ. ೧೧-೨೯). ೩. ವಂಶ ಅಥವಾ ಕುಲದ ಶಾಖೆ. **ಕವಡು$_1$**: ೧. 'ಕವಡುಗೋಡು' ಪರಾ. ೪. ಧೋತ್ರಕ್ಕೆ ಅಥವಾ ಕಂಬಳಿಯ ಕರೆಗೆ ಇರುವ ಜೋಡು ಹೆಣಿಕೆಯ ಅಂಚು. 'ಕವಡಂಚು' ಪರಾ. **ಕವಲು$_1$**: ೧. ಬೇರಿನಹೀನ್ದ್ರನಂ ನಡುವಿನಾಗಸಮುಂ ಕುಡಿಯಿಂ ದಿವಾಗ್ರಮುಂ ತಾರನಗಂಗಳಂ ಕವಲಿನೊಳ್ಪಿಲೆಯಿಂ ದೆಸೆಯಂ ಮುಗುಳ್ಗಳಿಂ (ಎಕ. VIII, ನಗರ. ೪೦-೩೨; 1077); ಹಿರಿಯರಂ ಕಿರಿಯರಂ ಬರಿಸಿ ನಮ್ಮಿತ್ತಂಡವ ಕವಲಿನೊಳ್ ಕಾಳಗದಿ ಮಡಿದರು (ತುರಂಗ. ೮೦-೭); ಬಳ್ಳಿಯ ಕವಲಿನಲ್ಲಿ ನನ್ನ ಏಕಾವಳೀಹಾರವು ಸಿಕ್ಕಿಕೊಂಡಿತು (ಕಾವ್ಯಸ. ೧೨). ೨. "ಕವಲೆನೆ ಬದಲು" (ಕಶರ. ೧೨೦); ಕವಲಿಲ್ಲದೆಮ್ಮನರ್ಚಿಪ ಭಕ್ತನಹುದೆಱಿಂದಜಭವ ಸುರೇಶ್ವರರ್ಗೆ ಬವರದೊಳ್ಮಣಿವನಲ್ಲ (ಜೈಮಿಭಾ. ೧೩-೩೩); ಮನ ಕವಲಿಲ್ಲದೆ ಪಂಚಪಂಗಳ ನೆರಪಿ ಸುಖಿಯಹುದರಿದೆ (ಜೀವಂಸಾಂ. ೧೨-೧೦). ೩. ನಿನ್ನ ಬೆಳವಿಗೆ ಯೆರಡು ಕವಲನ್ವಯಕೆ ಕೊಡದೇ ಸುಗತಿ ಸಂಪದವ (ಕುವ್ಯಾದ್ರೋ. ೫-೧೮). ೫. ಆಸರೆ; ಆಧಾರ; ಊರೆ: ಗಿಡಕ್ಕೆ ಕವಲು ಕೊಡು (ಜಾನಕೋ. ೩೬). **ಕವಲೆ$_1$**: ೧. ಆ ಮರನ ಹತ್ತಲಾಗಿ ಮರದ ಕವಲೆ ಸಿಹಿ ಇತ್ತು (ಮೋಳಿಮಾ. ೨೦೨-೭೫೨). **ಕೌಲು$_1$**: ೨. ಘೋರಸಂಗ್ರಾಮಗಳಾಗಿ ಕಿರೀಟ ಸಿಂಹಾಸನಗಳುರುಳಿ ರಾಜ್ಯಗಳೆದ್ದುಬಿದ್ದು ಕೌಲುಗಳಾಗಿ ಹೋಗಿ ರಾಷ್ಟ್ರರಾಷ್ಟ್ರಗಳ ಜೀವನಗಳಲ್ಲಿ ಮಹಾಪರಿವರ್ತನೆಗಳಾಗುತ್ತಿರುತ್ತವೆ (ಕಾನೂರು. ೧೩೭).

ಕವಲಾಗು = ಬದಲಾಗು; ಭಿನ್ನವಾಗು; ತಪ್ಪು: ತನಯನಾಡಿದ ನುಡಿಗೆ ಕವಲಾಗೆ ಧನುವ ಹಿಡಿಯೆನು (ಸಂಭಪ. ೨೦-೪೬); ಒಲುಮೆ ಕವಲಾಗುವ ಅಧೀರತೆ ನಿಮ್ಮದಲ್ಲವೆ (ಸವತಿ. ೨೬). ಕವಲಿಲ್ಲದಂ = ಎರಡಿಲ್ಲದವನು; ಭೇದವಿಲ್ಲದವನು; ಆತ್ಮ: "ಕವಲಿಲ್ಲದನೆಂದಾತ್ಮಂ" (ಕಶಸಾ. ೨೨-೪೫೨); "ಕವಲಿಲ್ಲದನಾತ್ಮನಕ್ಕುಂ" (ಕವಿಕಂ. ೧೮೫).

[< ಕವಲ್$_1$. / ತಮಿ. ಕವಲ್ಕೆ; ಮಲ. ಕವ, ಕವರ್, ಕವರ; ತುಳು. ಕಬರ್; ತೆಲು. ಕವಲು = ಅವಳಿಜವಳಿ]

**ಕವಲ**, ಕವಳ$_2$ (ನಾ). ೧. ಬಾಯಿತುಂಬುವಷ್ಟು ಆಹಾರ; ತುತ್ತು. ೨. ಬಾಯಿ ಮುಕ್ಕುಳಿಸುವಿಕೆ (ಕ). **ಕವಳ$_2$**: ೧. "ಜೇವಣಂ, ವಳಿಗೆ, ಕವಳಂ – ಈ ೩ ತುತ್ತಿಂಗೆ ಪೆಸರ್" (ಕಶಸಾ. ೨೨-೪೬೩); ಎಳವುಲ್ಲ ಕವಳಮುಂ ನೀಡುತ್ತುಂ (ಕಾದಂಉ. ೧೯೬); ಕತ್ತಲೆಗಿತ್ತಳ್ ಚಂದ್ರಕಲೆಯ ಕವಳಮನೊರ್ವಳ್ (ಅನಂಪು. ೪-೧೦೦); ವೀಳೆಯದ ಕರ್ಪುರದ ಕವಳದ ಕೈಚಳಕದಲಿ (ಕುವ್ಯಾಸ. ೨-೧೧೨); ಮದನಗೆ ರತಿ ತನ್ನ ತೊಂಡೆವಣ್ದುಟಿಯ ಕವಳವಿತ್ತಳೊಲಿದು (ಮೋಹತ. ೧೨-೯೦); ಮನೇಲಿ ಕವಳ ಕತ್ತರಿಸಿ ಕಾಡಿನ ಕೋಣ ಕಾದರು (ನಿಬಂಧ. II, ೧೬೨).

೩. ತಂಬುಲ: ತಂಬಾಕು ಮಿಶ್ರಿತ ಕವಳವು ಅವರ ಗಲ್ಲವನ್ನು ಯಾವಾಗಲೂ ಉಬ್ಬಿಸುತ್ತಿತ್ತು (ರಂಗರೋ. ೧); ಬಾಯಲ್ಲಿ ತುಂಬಿಬಂದ ಕವಳದ ಎಂಜಲ (ಮೂರುದಾ. ೧೩೮). [ಸಂ.]

**ಕವಲಂಬು, ಕವಡಂಬು** (ನಾ). ಕವಲಾದ ಬಾಣ; ಅರ್ಧಚಂದ್ರಾಕೃತಿಯ ಅಲುಗುಳ್ಳ ಬಾಣ: "ಅರ್ಧಚಂದ್ರಮೆನೆ ಕವಲಂಬು" (ಮಂಗರಾ. ೮೭–೩೫); ಪೆಱೆಯ ಮುಱಿಗಂ ಕಣಕೆನೆವೋಪಂ[ಬು] ಕವಲ[ಂಬುವೆಂ][ಪಾಠಾಂ. ಕವಲನೆಂ]ಬಂಕದಂಬೆತ್ತ[ಲುಂ] ತುಱುಗಿ (ಪಂಪಭಾ. ೧೩–೩೯); ಕವಲಂಬಾ ತಲೆಗಿಂಬೆನೆ (ಗದಾಯು. ೫–೩೯); ಕೀನಾಶನೆಂಬ ಕಿರಾತನೆಚ್ಚ ಕವಲಂಬಿನ ಮೊನೆಯಂತೆ (ಧರ್ಮಾಮೃ. ೧೩–೧೮೭); ಫಲುಗುಣನೊಂದು ಕವಲಂಬಿನಲಿ ಗುರುಗಳಿಗಿಂದು ವಂದಿಸಬೇಕೆನುತ ಕೀಲಿಸಿದನಾ ರಥವ (ಕುವ್ಯಾವಿ. ೮–೪೬); ಕವಲಂಬಿನಿಂದೆಚ್ಚೊಡಾ ಗೋಣ್ಕೊರದಲ್ ಕತ್ತರಿಸಿ (ಜೈಬಪು. ೪೯–೧೪). **ಕವಡಂಬು:** ನಾಯ ಬಾಯೊಳಗೆ ಕವಡಂಬುವಂ ತುಂಬುವಂ (ಹೆಬ್ಬೆರ. ೧೬–೨೨). [ಕವಲ್$_2$ + ಅಂಬು$_2$]

**ಕವಲಗೆ** (ನಾ). ಕವಲಾಗಿ ಬರುವ ಮೊಳಕೆ; ಟಿಸಿಲು: ಪರಿಮಿತ-ಗುಣಗಳಲ್ಲಿ ಪ್ರಮುಖಾಂಗಕ್ಕೆ ತಕ್ಕಂತಿರುವ ಉಪಾಂಗಗಳು; ಅದಕ್ಕನುವಾಗಿ ರೂಪುವಡೆದ ಕವಲಗೆಗಳು (ನಾಡೋಜ. ೩೬೧). [ಕವಲ್$_2$+ ಅಗೆ$_2$]

**ಕವಲಲಗಂಬು** (ನಾ). ಕವಲಾದ ಅಲಗನ್ನುಳ್ಳ ಬಾಣ: ಹಿಳುಕು ಕವಲಲಗಂಬು ಬೋಳೆ ತೊಡಕುಗಳೆನಿಪ್ಪ ಸರಳುಗಳ ಹೂಡುತೆಚ್ಚಾಡಿದರು (ವೀಶೈಪು. ೨–೭–೪೪). [ಕವಲ್$_2$ + ಅಲಗು$_2$ + ಅಂಬು$_2$]

**ಕವಲಿ** (ನಾ). ಕಾಲುವೆಯ ನೀರಿಗಾಗಿ ಕೊಡುವ ತೆರಿಗೆ; ನೀರಿನ ತೆರಿಗೆ (?): ಕಂಮಾರದೆಱೆ ಕುಂಬಾರದೆಱೆ ಗಣವಾರಿಕೆ ಕವಲಿ ಬೋಗಾಱಿಕೆ ಮಾದಱಿಕೆ ಮುಂತಾದ ಏನುಳ್ಳ ಸಖಲ ಸ್ವಾಮ್ಯವನು (ಮೈಆರಿ. ೧೯೩೮, ೭೮–೬; 1507). [?]

**ಕವಲಿಱಿ** (ಕ್ರಿ). ಕವಲೊಡೆದು ಹಬ್ಬು, —ಪಸರಿಸು, —ವಿಸ್ತರಿಸು: ರವಿ ಕರಕ್ಕೆಡೆಗುಡದಿಡಿದಿಡಿದು ಸುತ್ತಿಮುತ್ತಿ ಕವಲಿಱಿದು ಕವಿದ ಲತಾಂತಜಾಳದ ತಳ್ತ ನೆಳಲಿಂ (ಗಿರಿಕ. ೭–೧೧ ವ); ದಟ್ಟೈಸಿ ಕವಲಿಱಿದ ಕುಂತಳಂ (ನಂಬಿರ. ೪–೨೪); ಕೈದುಗಳ ಬಳ್ಳಿವೆಳಗು ಬಳಸಿ ಬಳೆದು ಕವಲಿಱಿದು ಕವಿಯೆ (ರಾಜಶೇ. ೬–೧೧ ವ). [ಕವಲ್$_2$ + ಇಱಿ$_2$]

**ಕವಲು$_1$** 'ಕವಲ್$_2$' ನೋ.

**ಕವಲು$_2$** 'ಕೌಲು$_2$' ನೋ.

**ಕವಲುಗಣೆ** 'ಕವಲ್ಗಣೆ$_1$' ನೋ.

**ಕವಲುಗಿಡ** (ನಾ). ಮಧ್ಯಮಗಾತ್ರದ ಗಿಡ (?).
[ಕವಲು$_0$ + ಗಿಡ (< ಗಿಡು)]

**ಕವಲುಗೊಳ್ಳು** (ಕ್ರಿ). ವ್ಯಾಪಿಸು; ಹಬ್ಬು: ಇಷ್ಟುಬೇಗ ಊರ ತುಂಬ ಕವಲುಗೊಂಡು ಸುದ್ದಿಯು ಹಬ್ಬಿದುದಕ್ಕೆ ವಿಸ್ಮಯಗೊಂಡನು (ಜಯಂತ. ೧೫೧). [ಕವಲು$_1$ (< ಕವಲ್$_2$) + ಕೊಳ್ಳು$_1$ (< ಕೊಳ್$_1$)]

**ಕವಲುಗೋಲು** 'ಕವಲ್ಗೋಲ್' ನೋ.

**ಕವಲುತೋಕೆ** (ನಾ). ಹಿಂದುಗಡೆ ಸೀಳಾಗಿರುವುದು, —ಕವಲಾಗಿರುವುದು: ಪೀಚಾಳೊಬ್ಬ ತನ್ನ ಕವಲುತೋಕೆಯ ಅಂಗಿಯನ್ನು ಕಳಚಿ ಬಿಸಾಡಿ (ಪುನರು. ೩೨೫). [ಕವಲು$_1$ (< ಕವಲ್$_2$) + ತೋಕೆ]

**ಕವಲುದಾರಿ** (ನಾ). ಮುಖ್ಯ ರಸ್ತೆಗೆ ಬಂದು ಸೇರುವ ಅಡ್ಡರಸ್ತೆ; ಸೀಳುದಾರಿ: ನಯಸೇನನು . . . ಆದರಲ್ಲಿಯೇ ಒಂದು ಕವಲುದಾರಿಯನ್ನು ಕಂಡುಹಿಡಿದಿದ್ದಾನೆ (ತವನಿ. ೮೬); ಮಾಲತಿಯ ಮನೆಯ ಹತ್ತಿರದ ಕವಲುದಾರಿಗೆ ಬಂದು ತಲುಪಿದ್ದರು (ಕಮನೆ. ೩೪).
[ಕವಲು$_1$ (< ಕವಲ್$_2$) + ದಾರಿ$_1$]

**ಕವಲುದೊಡಕು** (ನಾ). ಬಗೆಬಗೆಯಾದ ಕಷ್ಟ; ನಾನಾ ತೊಂದರೆ: ಸವನಿಸಿದುದೋ ಛಾಪು ದೈವದ ಕವಲುದೊಡಕಿಗೆ ಕಪಿಗಳಳವೇ ಜವನನಟ್ಟುವ ಮಾರಿ ಮಸಣಿಯು ಗಾದೆಯಾಯ್ತೆಂದು (ತೌಶಿರಾ. ೨೮–೪೯). 'ಕವಲ್ಬನ್ನ' ಪರಾ.
[ಕವಲು$_1$ (< ಕವಲ್$_2$) + ತೊಡಕು$_3$ (< ತೊಡಂಕು$_3$)]

**ಕವಲುದೋಱು** (ಕ್ರಿ). ಬದಲಾಗು; ಕಪಟವನ್ನು ತೋರಿಸು: ತಾ ಶುದ್ಧನಾಗಿ ನಡೆನುಡಿಯಲ್ಲಿ ಕವಲು[ಪಾಠಾಂ. ಕನಲು]ದೋಱದೆ ತನ್ನಲ್ಲಿ ಘನವೆಡೆಗೊಂಡ ಮಹಾನುಭಾವಿಗಳು (ಚನ್ನವ. ೫೦–೧೦).
[ಕವಲು$_1$ (< ಕವಲ್$_2$) + ತೋಱು$_1$ (< ತೋಱ್)]

**ಕವಲುನಾಲಗೆ** 'ಕವಲ್ನಾಲಗೆ' ನೋ.

**ಕವಲುಮನ** (ನಾ). ಇಬ್ಬಗೆಯಾದ ಮನಸ್ಸು; ಅಸ್ಥಿರವಾದ ಚಿತ್ತ: ಅವರು ಪಿತ್ರಾರ್ಜಿತದ ರಾಜ್ಯಪ್ರವರ ಪಾತ್ರರು ನಿನ್ನಸೂಯೆಯ ಕವಲುಮನದ ಕುಠಾರಬುದ್ಧಿಯ ಕಲುಷಭಾವನೆಯ ವಿವರಣೆಯನವರೆತ್ತ ಬಲ್ಲರು (ಕುವ್ಯಾಸ. ೧೨–೧೪). [ಕವಲು$_1$ (< ಕವಲ್$_2$) + ಮನ$_1$]

**ಕವಲುವಟ್ಟೆ** 'ಕವಲ್ವಟ್ಟೆ' ನೋ.

**ಕವಲೆ$_1$** 'ಕವಲ' ನೋ.

**ಕವಲೆ$_2$** 'ಕವಿಲ್$_3$' ನೋ.

**ಕವಲೆಣಿಕೆ** (ನಾ). ಬೇರೆಯ ಯೋಚನೆ; ಎರಡು ಬಗೆ: ಇದ್ದಿರಬಹುದೇ ಎಂಬ ಕವಲೆಣಿಕೆಗೆ ಎಡೆಗೊಡಬಾರದು (ನಾಡೋಜ. ೩೧).
[ಕವಲು$_1$ (< ಕವಲ್$_2$) + ಎಣಿಕೆ]

**ಕವಲೆತ್ತು, ಕೌಲೆತ್ತು** (ನಾ). ೧. ಬಗೆಬಗೆಯ ಆಟಗಳನ್ನು ಕಲಿಸಿ ವೇಷ ತೊಡಿಸಿದ ಎತ್ತು; ಕೋಲೆಬಸವ: ಈ ಗೂಳಿಗಳು ಹೆಜ್ಜೆ ಕಲಿತ ಕವಲೆತ್ತಿನಂತೆ ಕಾಣುವವು (ಸಾಹಿವಿ. ೮೦); ತಂದೆಯ ಮಾತಿಗೆ ಕವಲೆತ್ತಿನಂತೆ ಗೋಣುಹಾಕುವುದಿಷ್ಟೆ ನನ್ನ ಕರ್ತವ್ಯವಾಗಿತ್ತು (ಚಂದ್ರತಾ. ೩೮). **ಕೌಲೆತ್ತು:** ೧. ನಾವೇನು ಎಲ್ಲಾದಕ್ಕೂ ಕೌಲೆತ್ತಿನಾಂಗ ಗೋಣಹಾಕಬೇಕೂ ಅಂತ ಬರದಕೊಟ್ಟದ (ಹೊಸಂಸಾ. ೨೮). ೨. (ಆಲಂ) ಹೇಳಿದ್ದಕ್ಕೆಲ್ಲಾ ಹೂಗುಟ್ಟುವವನು; ಹೌದಪ್ಪ: ಅವನೊಬ್ಬ ಕೌಲೆತ್ತು. ಹೇಳಿದ್ದಕ್ಕೆಲ್ಲಾ ತಲೆ ಆಡಿಸ್ತಾನೆ (ರೂಢಿ). **ಕೌಲೆತ್ತಿನಕೆಲಸ** = ಕವಲೆತ್ತಿನಂತೆ ತಲೆಹಾಕುವುದು: ಬರೀ ಕೌಲೆತ್ತಿನಕೆಲಸ ಹೌದಲ್ಲೋ (ಮಿಂಚಿಹು. ೧೬).
[ಕವಲ್$_2$ (< ಕವಿಲ್$_3$) + ಎತ್ತು$_2$ (< ಎೞ್ತು$_1$)]

**ಕವಲೊಡೆ** (ಕ್ರಿ). ೧. ಕೊಂಬೆಹುಟ್ಟು; ಟಿಸಿಲಾಗು; ಹಬ್ಬು; ಪಸರಿಸು: ಅರಸನಲಿ ಬೇರೂಱಿ ಮುಗುಳಂಕುರಿಸಿದುದು ಭೀಮನಲಿ ನಕುಲನಲೆರಡುಮೂಱೆಲೆಯಾಯ್ತು ಸಹದೇವನಲಿ ಕವಲೊಡೆದು (ಕುವ್ಯಾಅ. ೧೧–೧೬); ಹರುಷದಿಂದ . . . ಸಿರಿಮುಡಿ ನಿಲ್ಲಲಾಱದೆ ಕವಲೊಡೆದುವು ಕೇಶಪಾಶ (ಮೋಹತ. ೧೭–೧೧); ಅಲಸದಾ ಶಿವಪೂಜೆ ಹುಲಸುಂಟು ಕೇಳಯ್ಯ ಬಲು ಕವಲೊಡೆದು ಬೇರಿಂದ ತುದಿತನಕ ಹಲಸು ಕಾತಂತೆ (ಸರ್ವಜ್ಞ. ೧೫೮); ಬೆಳೆಯುತ್ತ ಬೆಳೆಯುತ್ತ ಅವು ಕವಲೊಡೆದು ಒಂದು ಕಣ್ಣಿನಿಂದ ಅನೇಕ ಜಲ್ಲೆಗಳಾಗುತ್ತಲೆ (ವೃವಮ. ೪೮). ೨. ಸೀಳು; ಎರಡಾಗು; ಬದಲಾಗು: ಎಂದಿಗೂ ಕವಲೊಡೆಯದ ಗೆಳೆತನವೇ ಗೆಳೆತನ (ನೀಗಟ್ಟು. ೧೦೭); ನಿನ್ನ ನನ್ನಿಯ ನೆಲೆಯತ್ತಲ್ ನಡೆವ ಬಯಕೆ ಬೞಿ ಕವಲೊಡೆಗುಂ (ವಸ್ತುವಂ. ೧೫–೧೧೨); ದಾರಿ ಕವಲೊಡೆದಿದ್ದರೆ ನಾವು ಆಲೋಚಿಸದೆ ಯಾವುದಾದರೂ ಒಂದು ಕಡೆ ನುಗ್ಗುವಂತಿಲ್ಲ (ಶಿಕ್ಷದ. ೫೩೭). [ಕವಲ್$_2$ + ಒಡೆ$_1$]

**ಕವಲೊತ್ತು** (ನಾ). ಮರದ ಕಾಂಡ; ಬೊಡ್ಡೆ: "ಮರನ ಕವಲೊತ್ತು ಪ್ರಕಾಂಡಮೆನಿಸಿಕ್ಕು" (ಮಂಗರಾ. ೩೨–೩). [ಕವಲ್$_2$ + ಒತ್ತು$_2$]

**ಕವಲ್ಕೆ** (ನಾ). ಕವಲಾಗುವಿಕೆ; ಕವಲೊಡೆಯುವಿಕೆ: ಕವಲ್ಕೆ, ಮಡಲ್ಕೆ (ಶಬ್ದಾನು. ೫೫೭ ಪ್ರಯೋ).
[ಕವಲ್$_{2}$ + -ಕೆ]

**ಕವಲ್ಗಣೆ$_{1}$, ಕವಲುಗಣೆ** (ನಾ). = ಕವಲಂಬು: ನೆಱೆಗಲಿಯೆಚ್ಚ ಕವಲ್ಗಣೆ ಪಾಱೆತು ಪಱಿದರಿಭಟನ ಶಿರವನು (ನೇಮಿಸಂ. ೨೮-೭೮). **ಕವಲುಗಣೆ:** ಒಂಬತ್ತುಸಾವಿರ ಕೋಲು ಮಿಾಂಟೆಯ ಕವಲುಗಣೆ ಹನ್ನೆರಡು ಸಾವಿರವು (ಕುವ್ಯಾಕ. ೧೮-೨೨).
[ಕವಲ್$_{2}$ + ಕಣೆ$_{1}$]

**ಕವಲ್ಗಣೆ$_{2}$** (ನಾ). ಮರದಲ್ಲಿ ಕವಲು ಒಡೆಯುವ ಜಾಗ, —ಸ್ಥಳ; ಶಾಖಾಮೂಲ: [ಪೋಟ್ಗೆಳೆಡೆ]ಯಲ್ಲಿ ಕವಲ್ಗಣೆಯಲ್ಲಿ ಸುತ್ತಲುಂ ಗಿಳಿಗಳ ಹಿಂಡುಗಳ್ ನೆರೆದು (ಕಾದಂಪೂ. ೧೨೬); ಮೂಗಿಗೆ ಬರಲುವೋದ ಬೂರಗಮರಂ ಕೋಡುಕೋಡಿನ ಕವಲ್ಗಣೆಗಳಿಂ ಮಲೆತಲೆಗೆ ಕೋಡು ಮೂಡಿದ ತೆರನ ತೋರ್ಪಂತೆ (ಶ್ರೀರಾಮಾ. ೨೩೧-೯೦).
[ಕವಲ್$_{2}$ + ಕಣೆ$_{2}$ (< ಗೞಿ)]

**ಕವಲ್ಗಿಡಿ** (ನಾ). ಕವಲು ಕವಲಾಗಿ ಹಬ್ಬುತ್ತಿರುವ ಕಿಡಿ: ಬಿಡುವುರಿಯೆಣ್ಣೆ ಸೂಸುವ ಕವ [ಪಾಠಾಂ. ನ]ಲ್ಗಿಡಿ ಬೀಸುವ ಪಾಸವೋರೆಯಿಂ ದಿಡುವಱಿ . . . ಲಗ್ಗೆಯೊಟ್ಟಳದೊಳಿಟ್ಟಳವಾದುದು ಕೋಂಟೆಗಾಳೆಗಂ (ಚಂದ್ರಪು. ೫-೧೦೫; ಕಾವ್ಯಸಾ. ೪೭೫ ನೋ).
[ಕವಲ್$_{2}$ + ಕಿಡಿ$_{1}$]

**ಕವಲ್ಗುಡಿ** (ನಾ). ಕವಲೊಡೆದ ಕುಡಿ; ಚಿಗಿತು ಬಂದ ಶಾಖೆ: ಸಹಕಾರ ಕುಮಾರಕನ ಸೌಭಾಗ್ಯಮಂ ಕೊಂಕಿ ನಿಮಿರ್ದ ಕವಲ್ಗುಡಿಗಳೆಂಬ ನಳಿತೋಳ್ಗಳಿನಪ್ಪಿ ನಿಂದ ಮಲ್ಲಿಕಾ ವಲ್ಲಭೆಯೊಲವೆ ಪೇೞ್ವುದು (ಅನಂಪು. ೭-೮ ವ). [ಕವಲ್$_{2}$ + ಕುಡಿ$_{2}$]

**ಕವಲ್ಗೊಂಬು** (ನಾ). ೧. ಉಪಶಾಖೆ; ಕವಲೊಡೆದ ರೆಂಬೆ: ತೀವಿರ್ದತ್ತು ತಳಿರ್ ಮೊದಲ್ವಣೆ ಕವಲ್ಗೊಂಬೆಂಬುವೀ ಕೆಂದಳಿರ್ಮಿಂಗಲ್ಲದೆ ಮಾವುಗಳ್ಗೆ ಪೆಱವಕ್ಕಿಂತೇಂ ಬೆಡಂಗಕ್ಕುಮೇ (ಆದಿಪು. ೧೧-೯೭); ಎಳದಳಿರುಂ ಕೋರಕಮುಂ ಬಳಸಿರೆ ಕೊನೆಗೊಂಬಿನೊಳ್ ಕವಲ್ಗೊಂಬುಗಳೊಳ್ (ಮಲ್ಲಿಪು. ೫-೧೨); ಸೆಳೆಗೊಂಬು ಸೊಂಡಿಲ್ ಕವಲ್ಗೊಂಬು ಕೊಂಬುಗಳ್ ಬಳೆದ ಗ್ರಂಥಿಗಳೆಸೆವ ಕುಂಭಸ್ಥಳಂ (ಚೆಬಪು. ೪೬-೩) ೨. ಎರಡಾಗಿ ಟಿಸಿಲೊಡೆದ ಕೋಡು, —ಕೊಂಬು: ವಾನಪ್ರಸ್ಥಜನಂಗಳ ಧೌತವಸ್ತ್ರಪವಿತ್ರಾಕ್ಷಸೂತ್ರಂಗಳಂ ತಮ್ಮ ಕವಲ್ಗೊಂಬುಗಳೊಳ್ ನೇಱಿಸಿಕೊಂಡಿಂಬಿನೊಳವರೊಡನೆ ನಡೆವ ಸಾರಂಗಸಮೂಹಮುಮಂ (ಪಂಚತಂ. ೧೧೯-೩); ಎಳವಿಸಿಲೊಳ್ ಮುನಿಬಾಲರ್ ಜಲಧೌತಂಮಾಡಿ ಕಟ್ಟಿ ಸಾರಂಗಂ ನಿಶ್ಚಲತೆಯಿನಾಱಿಸುವುದು ವಲ್ಕಲ ಕೌಪೀನಂಗಳಂ ಕವಲ್ಗೊಂಬುಗಳೊಳ್ (ಜಗವಿ. ೧೬-೪೯).
[ಕವಲ್$_{2}$ + ಕೊಂಬು$_{2}$]

**ಕವಲ್ಗೋಟೆ** (ನಾ). ಒಂದು ಬಗೆಯ ಗಿಡ; ಕವಟೆ (?): ರಕ್ಕಸಿ ದಬ್ಬೆ ಕಾರೆ ಕರುಂಕೆ ಕಸಕೆ ಕವಲ್ಗೋಟೆ (ಶ್ರೀಪಾಲ. ೭-೧೩). [?]

**ಕವಲ್ಗೋಲ್, ಕವಲುಗೋಲು, ಕವಳುಗೋಲ್, ಕವುಳಗೋಲ್, ಕೌಳುಗೋಲ್** (ನಾ). ೧. ಕವಲಾದ ಕೋಲು; ಕವೆಗೋಲು: ಆಟದ ಕವಲ್ಗೋಲಿಂ . . . ಮುನಿಯ ಕಣ್ಗಳಂ ಕುರ್ಕಿದಳ್ (ರಾಮಾಶ್ವ. ೫೫-೪). ೨. "ಎರಡು ಮೊನೆಯುಳ್ಳ ಬಾಣ; ಅರ್ಧಚಂದ್ರಾಕೃತಿಯ ಬಾಣ" (ಪ್ರಭಣ್ಣ). **ಕವಲುಗೋಲು:** ೧. ಎರಡಡಿ ಉದ್ದದ ಕವಲುಗೋಲೂ, ಒಂದು ಕೃಷ್ಣಾಜಿನದ ಸುತ್ತೂ . . . ನಾರುಮಡಿಯೂ ಇವೆ (ನಡೆದಾ. I, ೫೫೦). ೨. ಕವಲುಗೋಲ್ಗೈದಱಿಲಿ ಕೃಪಕೌರವನ ತಮ್ಮಂದಿರ ಸುಸನ್ನಾಹವ ನಿಸಂಚಿಸಿ ಬಗಿದು (ಕುವ್ಯಾಕ. ೧೪-೨೪). **ಕವಳುಗೋಲ್:** ೨. ಕವಳು [ಪಾಠಾಂ. ಕೌಳು] ಗೋಲ ಹಿಡಿದು ಶ್ರವವ ಮಾಡಬಹುದಲ್ಲದೆ ಕಳನೇಱಿ ಕಾದುವುದರಿದು ನೋಡಾ (ಬಸವ. ೨೧೫). **ಕವುಳಗೋಲ್:** ೨. ಮಾತಿನ ಮಾಲೆಯ ಕವುಳ [ಪಾಠಾಂ. ಕವಲು] ಗೋಲ ಶ್ರವದಲ್ಲಿ ಸತ್ತವರೊಳರೆ ಅಯ್ಯಾ (ಬಸವ. ೨೦೯). **ಕೌಳುಗೋಲ್:** ೨. 'ಕವಳುಗೋಲ್' ಪ್ರಯೋಗದ ಪಾಠಾಂತರವನ್ನು ನೋಡಿ. [ಕವಲ್$_{2}$ + ಕೋಲ್$_{1}$]

**ಕವಲ್ದಲೆ** (ನಾ). ರೆಂಬೆಯು ಕವಲೊಡೆಯುವ ಸ್ಥಳ: ಪೆರ್ಮರದ ನಟ್ಟೆಗೊಂಬಿನ ಕವಲ್ದಲೆಯೊಳಿಟ್ಟ ಗೂಡುಗಳೊಳ್ ಗೂಡುಗೊಂಡಿರ್ದ ಕುಱುಳೆವಱಿಗಳ್ಗೆ ಕುಟುಂಕನಿಕ್ಕಿ (ಚಂದ್ರಪು. ೮-೪ ವ).
[ಕವಲ್$_{2}$ + ತಲೆ$_{1}$]

**ಕವಲ್ದೊಱೆ** (ನಾ). ಕವಲೊಡೆದಿರುವ ನದಿ; ಸೀಳುನದಿ: ಕಱಿಗೊರಲಾತನಾತ್ಮವಿಟತತ್ತ್ವಮನುಂಟೊಡೆತಾಗಿ ಮಾಡಿ ಬಾಂದೊಱೆಯುನೆಪೊತ್ತು ಗೌರಿಗೆ ಕ[ವ]ಲ್ದೊಱೆ [ಗೆಯ್ಸಿ]ದನೀ ಪ್ರದೇಶದೊಳ್ (ಪಂಪಭಾ. ೭-೭೫). [ಕವಲ್$_{2}$ + ತೊಱೆ$_{2}$]

**ಕವಲ್ನಂಬುಗೆ** (ನಾ). ಎರಡಾದ ನಂಬಿಕೆ; ಸುಳ್ಳು ಭರವಸೆ: ಪಡಿದಱಿವಾಗಿ ಬಂದ ಜಗದೇವರಾಯನ ಪಡೆಯ ನೋಡಿಸಿಯೂರುಗರ್ಗೆ ಕವಲ್ನಂಬುಗೆಯನಿತ್ತು ಪೊಱಮಡಿಸಿ (ಚಿಕವಂ. ೫೩-೧೬).
[ಕವಲ್$_{2}$ + ನಂಬುಗೆ]

**ಕವಲ್ನಾಲಗೆ, ಕವಲುನಾಲಗೆ** (ನಾ). ೧. ಜೋಡುನಾಲಗೆ; ಎರಡು ನಾಲಗೆ: ಬೇರೊಂದಱಿನೆರಡಾದ ಲತಿಕೆಯೋ ಮಾರಾನಲನ ಜವಳಿದಲೆಯೋ ಮದನೋರಗಮುಖದ ಕವಲ್ನಾಲಗೆಯೋ ಎಂಬಂತೆ (ಜಯಕಾ.೨-೯). **ಕವಲುನಾಲಗೆ:** ೨. ಕೊಟ್ಟಮಾತನ್ನು ಅಲ್ಲಗಳೆದು ಇನ್ನೊಂದನ್ನು ಆಡುವ ನಾಲಗೆ; ಸುಳ್ಳಾಡುವ ನಾಲಗೆ: ಪಕ್ಷಪಾತಸ್ಥಿತಿಯನಾಡೆವು ಕವಲುನಾಲಗೆಯಿಲ್ಲ ತನಗೆ (ಕುವ್ಯಾವಿ. ೯-೧೭).
[ಕವಲ್$_{2}$ + ನಾಲಗೆ]

**ಕವಲ್ಬಟ್ಟೆ** 'ಕವಲ್ವಟ್ಟೆ' ನೋ.

**ಕವಲ್ಬನ್ನ** (ನಾ). ಶಾಖೋಪಶಾಖೆಯಾಗಿ ಬರುವ ಕಷ್ಟ; ಬಗೆಬಗೆಯ ತೊಂದರೆ: ನಿನ್ನ ತಮ್ಮನ ಕೆನ್ನೆತ್ತರನೀಂಟುವಲ್ಲಿ ಭಯದಿಂದಳ್ಕುತ್ತೆ ಬೆನ್ನಿತ್ತುದಂ ನೆನೆ ಪಿಂತಿಕ್ಕಿದ ನಿನ್ನ ಮುನ್ನಿನ ಕವಲ್ಬನ್ನಂಗಳಂ ಕೌರವಾ (ಗದಾಯು. ೭-೩೯). [ಕವಲ್$_{2}$ + ಬನ್ನ]

**ಕವಲ್ವಟ್ಟೆ, ಕವಲುವಟ್ಟೆ, ಕವಲ್ಬಟ್ಟೆ** (ನಾ). = ಕವಲುದಾರಿ: ಕುರುಡಂ ಮುಂದೆ ಕವಲ್ವಟ್ಟೆಯಿರಲ್ಕಂದುಮಣಂ ಪದವನಿಡಲದೇನಱಿದಪನೇ (ಛಂದೋಂಬು. ೧-೨೯ ಅಡಿಟ). **ಕವಲುವಟ್ಟೆ:** ಒಳಗುಹೊಱಗೆಂಬೆರಡು ಬಟ್ಟೆಗಳೊಳಗೆ ನೀತಿ ಪ್ರೀತಿ ಮಾರ್ಗಗಳೊಳವು ತಾವೆರಡೆರಡು ಪಥದಲಿ ಕವಲುವಟ್ಟೆಗಳು (ಪ್ರಭುಲಿ. ೧೩-೬೩). **ಕವಲ್ಬಟ್ಟೆ:** ಮಾರ್ಗಕ್ರಮಣದಲ್ಲಿ ಈ ಬಗೆಯ ಕವಲ್ಬಟ್ಟೆಗೆ ಹೇಗೆ ಬಂದೆನೆಂಬದು ಅವನದವನಿಗೇ ಆಶ್ಚರ್ಯವೆನಿಸಿತು (ದಾಸಹು. ೮೮). [ಕವಲ್$_{2}$ + ಬಟ್ಟೆ$_{1}$]

**ಕವಲ್ವರಿ** (ಕ್ರಿ). ಶಾಖೋಪಶಾಖೆಯಾಗಿ ಹರಿ, —ಪಸರಿಸು, —ವಿಸ್ತರಿಸು: ನಿಜಕರಂಗಳಂ ಪಸರಿಸಿದಪುವೆನಿಸಿ ಕಾಂತಿಯಿಂ ಕವಲ್ವರಿವ ಮುಕ್ತಾಮಣಿಗಳ ಮಯೂಖದಿಂ (ವರ್ಧಪು. ೭-೯ ವ); ಪೌರವಿಲಾಸಿನೀ ನಯನಕಾಂತಿ ಕವಲ್ವರಿದೊಪ್ಪುತಿರ್ಪ ಶೃಂಗಾರರಸಪ್ರವಾಹದೊಳ್ (ದಶಕು. ೨-೨); ಹರಭಕ್ತಿಲತೆ ಕವಲ್ವರಿವುದೀತನಿಂ (ಪದ್ಮರಾ. ೨-೪೨).
[ಕವಲ್$_{2}$ + ಪರಿ$_{2}$]

**ಕವಲ್ವರಿಯಿಸು** (ಕ್ರಿ). ಹಬ್ಬುವಂತೆ ಮಾಡು; ವಿಸ್ತರಿಸು; ವರ್ಧಿಸು: ಕಾಂತಾಜನದ ಕಣ್ಣ ಪುಣ್ಯಮಂ ಕವಲ್ವರಿಯಿಸುತುಂ (ಗಿರಿಕ. ೭-೪೨ ವ).
[ಕವಲ್ವರಿ + -ಇಸು$_{3}$]

**ಕವಲ್ಪೊಗೆ** (ನಾ). ಶಾಖೆಶಾಖೆಯಾಗಿ ಹೊರಡುವ ಹೊಗೆ; ಪಸರಿಸುವ ಹೊಗೆ: ಉಗಿಬಗಿ ಮಾಡಿ ಧೂಪದ ಕವಲ್ಪೊಗೆಯೊಳ್ ತನಿಗಂಪನುಂಡು ತಣ್ಣಗೆ ತಣಿದು (ಪಂರಾಮಾ. ೩–೭೭). [ಕವಲ್$_2$ + ಪೊಗೆ$_2$]

**ಕವಹಟ್ಟೆ** (ನಾ). (?) : ನಾವಿಲ್ಲಿ ಒಬ್ಬ ಶೀಲವಂತನಿಧೇನೆಯೆಂದು ಕವಹಟ್ಟೆಯಂತೆ (?) ಕೂಗುತ್ತ ಕೊಱಚುತ್ತ ಆಲ ಬೊಬ್ಬಿಡುತ್ತ ಸೂಲವ ನೇಱುವ ಕಳ್ಳನಂತೆ ಬಾಹ್ಯದಲ್ಲಿ ಬಾಯಾಲುವೆ (ಏಲೇಶ್ವ. ೪೯). [?]

**ಕವಳ್$_1$** 'ಕಳವೆ$_1$' ನೋ.

**ಕವಳ್$_2$** 'ಕವಲ' ನೋ.

**ಕವಳಂಗೊಳ್** (ಕ್ರಿ). ತುತ್ತುತೆಗೆದುಕೊ ; ಆಹಾರವನ್ನು ಸೇವಿಸು; ಊಟಮಾಡು ; ಕಬಳಿಸು : ಕವಳಂಗೊಂಡೊಡದಂ ಪತ್ತುವಿಡಿಸಿ ಪಕ್ಕಾದ ರೂಪನಡಸುವ ಕರಿಯಂತೆ (ಶಾಂತಿಪು. ೮–೧೪೩) ; ಮಧುಮದ್ಯಮಾಂಸಂಗಳಂ ತೊಱೆದು ಕವಳಂಗೊಳ್ಳದಿರೆ (ಚಾವುಂಪು. ೩೮–೧೭) ; ಈ ತ್ರಿಜಗದ್ಭೂಷಣದ್ವಿರದಂ ಚತುರ್ದಿನಮೇಕಾರಣಂ ಕವಳಂಗೊಳ್ಳದೆಂಬುದಂ ಬೆಸಸಿಂ (ಪಂರಾಮಾ. ೧೫–೩೩ ವ).

[ಕವಳ್$_2$ (= ಕವಲ) + ಕೊಳ್$_1$]

**ಕವಳಪ್ರಥಿತ** (ಗು). (ತಾಂಬೂಲದ) ಕವಳವೇ ಮುಖ್ಯವಾದ ; ಕವಳ ಮೊದಲಾದ : ರಥದೊಳಗೆ ಮಾದ್ರೇಶನೀ ಸಮರಥನ ಸಂತೈಸಿದನು ಕವಳಪ್ರಥಿತಮಂತ್ರೌಷಧಿಗಳಲಿ (ಕುವ್ಯಾಕ. ೧೨–೩೨).

[ಕವಳ್$_2$ (= ಕವಲ) + ಪ್ರಥಿತ]

**ಕವಳಿ$_1$** (ನಾ). ಎಚ್ಚರ ತಪ್ಪುವಿಕೆ; ಮೂರ್ಛೆ ; ಬವಳಿ : "ಕವಳಿ–ಬವಳಿ ; ಮೂರ್ಛೆ (ಕವಳು)" (ಜಾನಕೋ. ೩೬).

**ಕವಳಿಹತ್ತು** = ಎಚ್ಚರದಪ್ಪು : ಬಳಲಿ ಬವಣಿಗೆ ಕವಳಿಹತ್ತಲು ನಿದ್ರಿಸುತ್ತಿದೆ ಮನವಿದು (ಹಾಡುಪಾ. ೫೩–೨೬).

[ದೇ. ‖ ತಮಿ. ಕಳ್ಳೈ ; ಮಲ. ಕವಲ ; ತೆಲು. ಕಳ]

**ಕವಳಿ$_2$** 'ಕಟಿವೆ' ನೋ.

**ಕವಳಿಕ** 'ಕವಳಿಗೆ$_1$' ನೋ.

**ಕವಳಿಕೆ** 'ಕವಳಿಗೆ$_1$' ನೋ.

**ಕವಳಿಗೆ$_1$**, ಕವಳಿಕ, ಕವಳಿಕೆ, ಕೌಳಿಕೆ, ಕೌಳಿಗೆ$_1$ (ನಾ). ೧. ವೀಳ್ಯದೆಲೆ ಮೊದಲಾದುವುಗಳ ಕಟ್ಟು : ಎಲೆವಸರಿಗರೆತ್ತಿ ಪಿಡಿವರು ಮುದದಿ ಬೆಳ್ಳೆಲೆಗವಳಿಗೆಯ (ನಾಗಕು. ೨–೫೬). ⓟ ಇಪ್ಪತ್ತು, ಐವತ್ತು, ನೂರು ಎಲೆಗಳಿಗೆ ಒಂದು ಕವಳಿಗೆಯಂತೆ ಅನೇಕ ಕಡೆಗಳಲ್ಲಿ ವ್ಯವಹಾರವುಂಟು. ೨. (ಕೈ ಬರೆಹದ) ಓಲೆಗರಿಯ ಕಟ್ಟು ; ಗ್ರಂಥ : ತಮ್ಮಯ್ಯಂ ಮಡಗಿಟ್ಟ ವಸ್ತುವಂ ನೋಟಪ್ಪೆನೆಂದು ಕವಳಿಗೆಯಂ ಬಿಟ್ಟು ನೋಟಪ್ಪನ್ನೆಗಂ (ಪಂಚತಂ. ೧೯೩–೨) ; ಮಾಣಿಯ ಕೌಂಕುಟ ಚರಿತ ಪುರಾಣದ ಕವಳಿಗೆ ಸಮಾನಮಾಯ್ತುಂ (ಅನಂಪು. ೨–೪೫) ; ಗೀತದವಸರದಿಂದಱಿಯಿರೇ ವಚನಭಂಡಾರದ ಕವಳಿಗೆಗಳ ತಂದು ನೋಡಿರೆ (ಬಸಪು. ೩೫–೪೫) ; ಬಸವ ಭಂಡಾರದ ಕವಳಿಗೆಗಳಂ ತರಿಸಿ (ವೃಷವಿ. ೨೩–೩೩ ವ). ೩. ಪಂಕ್ತಿ ; ಸಾಲು ; ಶ್ರೇಣಿ : ಸೆಳ್ಳುಗುರ್ಗಳ ಬಳ್ಳಿವೆಳಗಿಂಗೆ ಚಂದ್ರಕಳೆಯ ಕವಳಿಗೆಯನಡರ್ಪುಗುಡುವಂತೆಯುಂ (ಅನಂಪು. ೮–೭ ವ) ; ಪ್ರಮಥರುದ್ರ ಪುರಾತನಗಣೋತ್ತಮರ ಕವಳಿಗೆಗೈದಿ ಸಂದಿತ್ತು (ಬಸಪು. ೩೯–೬೨) ; ನಿನ್ನ ಸದ್ಗುರುಭಕ್ತಿ ಲಲಿತ ತನ್ನಿಷ್ಠೆ ಗಣಪುಂಗವರ ಕವಳಿಗೆಗೆ ಸಲೆಸಂದುದು (ಆರಾಚ. ೪–೪೪). ೪. ಇಪ್ಪಾರು ಚಾವಣಿಯ ಗೋಡೆಗೆ ತುದಿಯಲ್ಲಿ ಮಾಡಿರುವ ತ್ರಿಕೋನಾಕಾರ ; ಚಂದಾಯ ; ಗೇಬಲ್ಲು : ಹಳದಿಯ ಇಟ್ಟಿಗೆಗಳನ್ನು ತಂದು ಅಲ್ಲಿಯ ಕವಳಿಗೆ ಮನೆಗಳನ್ನು ಕಟ್ಟಿದರು (ಯೋಧಪು. ೬೨).
**ಕವಳಿಕ** : ೨. "ಕವಳಿಕಂ ಕೈಹಾಳೆ" (ಮಂಗರಾ. ೧೦೫–೧೪).
**ಕವಳಿಕೆ** : ೨. ಪುರಾತರ ವಚನ ಪ್ರಮಾಣದಿಂದ ವಿಚಾರಿಸಿ ಪುರಾತರ ಕವಳಿಕೆಗೆ ಯೋಗ್ಯವಾದ ಸ್ಥಲವನಂಗಂಗೊಂಡು (ವಚಶಾ. II, ೨೬೪). **ಕೌಳಿಕೆ** : ೪. ಆಶ್ರಮದಲ್ಲಿದ್ದದ್ದು ಒಂದೇ ಕಟ್ಟಡ. ಅದು ಕೌಳಿಕೆಯ ಕಟ್ಟಡ (ಚಿಂಗಾಳ್ವ. ೬೨). **ಕೌಳಿಗೆ$_1$** : ೧. ಎಲೆಯ ಹೇಱಿಂಗೆವೊಂದು ಕೌಳಿಗೆ ಎಲೆ (ಎಕ. VI, ತರೀಕೆ. ೮೦–೩೦ ; 1278).

[? . / ತಮಿ. ಕವಳಿಗೈ]

**ಕವಳಿಗೆ$_2$** (ನಾ). ೧. ಭಿಕ್ಷಾಪಾತ್ರೆ ; ಕಂಕುಳಲ್ಲಿಯ ಚೀಲ : ಪಟುಮತಿ ಬಳ್ಚಿಸಿದ ಕಯ್ಯ ಕವಳಿಗೆಯುಂ ಕರ್ಪಟಮುಂ ಬೆರಸು . . . ಬಾಗಿಲೊಳ್ ಬಂದಿರ್ದಂ (ಶಾಂತಿಪು. ೮–೧೨೬) ; ತೊಗಲೊಳ್ ಪಾಲಿರ್ದಾ ಕವಳಿಗೆ ಕಕ್ಷದೊಳಿರೆಯುಂ (ಸಮುಪ. ೧೪–೧೬೮) ; ಪಿಡಿದ ಕವಳಿಗೆಯುಟ್ಟ ಪುಲಿದೊವಲಿನಿಂದೊಪ್ಪೆ ಬರುತಿರಲು (ಸೇದಿರ. ೬೧–೧೮) ; ಕವಳಿಗೆ ಕಕ್ಷದೊಳ್ ಪುಟದ ಕುಪ್ಪಸಮೊಪ್ಪುವ ಯಜ್ಞಸೂತ್ರಕಂ (ಮಹಾಸೇ. ೧೦–೮೬). ೨. ಸಂಪುಟ ; ಕರಂಡಕ : ಕವಿತೆಗೆ ವಾಗ್ದೇವತೆ ಕಿಟ್ಕವಳಿಗೆ ವಿಡುವಂತೆ ತಂಬುಲಂದೀವಿದ ಪೊಂಗವಳಿಗೆಯಂ ಪಿಡಿದಂಬಿಕೆಗವಟಯ್ಸಿದಳೊರ್ವಳಿಂದ್ರವಧು ತಂಬುಲಮಂ (ಶಾಂತಿಪು. ೯–೧೮೦). ೩. ಥಾಲಿ ; ಲೋಟ : ಪಾನಕ ರುಚಿಯಾಗಿದೆ ಎಂದು ನಾಲ್ಕು ಕವಳಿಗೆ ಕುಡಿದ (ಪದ್ಮಸ. ೨೫೦) ; ಸ್ನಾನ ಮುಗಿಸಿ ದೇವರಿಗೆ ಒಂದು ಕವಳಿಗೆ ನೀರು ಹಾಕಿ (ದೇವಹೆಂ. ೨೧). [< ಸಂ. ಕಪಾಲಿಕಾ]

**ಕವಳಿಗೆ$_3$**, ಕೌಳಿಗೆ$_2$ (ನಾ). ಒಂದು ಬಗೆಯ ತೆರಿಗೆ (?) : ಇವರು ಯಾವ ಕಂದಾಯ ಕವಳಿಗೆಗಳನ್ನು ಕೊಡುವುದಿಲ್ಲ (ಪ್ರವಾಇ. I, ೧೩೧) ; ಕಂದಾಯ ಕವಳಿಗೆ ಕಳೆದು ಉಳಿದ ಹಣವನ್ನು . . . ಜಮಾ ಮಾಡುತ್ತ ಬಂದರಂತೆ (ಅವತಂ. ೮೮). **ಕೌಳಿಗೆ$_2$** : ಕಂದಾಯ, ಕೌಳಿಗೆಗಳಿಗೆ ಹಣವನ್ನು ಸಂಪಾದಿಸುವುದಕ್ಕೋಸ್ಕರ (ಟಾಕತೆ. ೮೪). [?]

**ಕವಳಿಗೆಗಟ್ಟು** (ಕ್ರಿ). ಒಟ್ಟಾಗಿ ಕಟ್ಟು ; ಜೋಡಿಸಿ ಕಟ್ಟು ; ಒಗ್ಗೂಡಿಸು : ಭುವನದೊಳುಳ್ಳಬಲಾಜನತತಿರೂಪ ಕವರಿಯುನನ್ಯಜ ಶಿಲ್ಪಿ ಕವಳಿಗೆಗಟ್ಟಿ ಕನಡಿಸಿದವೋಲು ದೇವಿಯವಯವದ ಶೋಭೆಯೊಪ್ಪಿದುದು (ಶ್ರೀಪಾಲ. ೧೧–೮೪). [ಕವಳಿಗೆ$_1$ + ಕಟ್ಟು$_1$]

**ಕವಳಿಗೆದೋಱು** (ಕ್ರಿ). ಕವಳಿಗೆಯನ್ನು ತೋರು ; ಗ್ರಂಥವನ್ನು ತೋರು : ಇರ್ವರುಂ ಕ್ಷಾಮದೇವಂಗೆ ಕಲೆಯ ಕವಳಿಗೆದೋಱಿದರಿವರ ಜೀವಿತಮಿಂತೆ ಸಲ್ಗುಂ (ಅನಂಪು. ೮–೩೧ ವ).

[ಕವಳಿಗೆ$_1$ + ತೋಱು$_1$ (< ತೋಱ್)]

**ಕವಳಿಗೆಸೂರು** (ನಾ). ಎರಡೂ ಕಡೆಗೆ ಇಳಿಜಾರಾದ ಸೂರು ; ಇಪ್ಪಾರು ಸೂರು (ಕ). [ಕವಳಿಗೆ$_1$ + ಸೂರು$_2$]

**ಕವಳಿಸು$_1$** (ಕ್ರಿ). ತಿನ್ನು ; ನುಂಗು : ದಶದಿಶೆಗಳಂ ಧವಳಿಸುತೆ ರಾತ್ರಿಯುಂ ಕವಳಿಸುತೆ ಮೂಡಿದಂ ಸೂರಂ ಚಕಿತಚಕೋರಂ (ಕೊಟ್ಟೂಬ. ೧೬–೫). 'ಕಬಳಿಸು' ಪರಾ. [ಕವಳ್$_2$ (= ಕವಲ) + –ಇಸು$_3$]

**ಕವಳಿಸು$_2$** (ಕ್ರಿ). ಆವರಿಸು : ಯಶೋವಲ್ಲರಿ ಲೋಕಮುಂ ಕವಳಿಸುತ್ತಿರ್ಪ್ಪುರ್ನ್ನಿದಂ (ಕಇಅ. ೧೨–೪–೬೩ ; 1148). [? + –ಇಸು$_3$]

**ಕವಳೀಕ** 'ಕೌಳಿಕ$_1$' ನೋ.

**ಕವಳೀಕರಣ** (ನಾ). ತಿನ್ನುವಿಕೆ ; ನುಂಗುವಿಕೆ. 'ಕವಳೀಕರಿಸು' ಪರಾ. [ಸಂ. ಕವಲೀಕರಣ]

**ಕವಳೀಕರಿಸು** (ಕ್ರಿ). ತುತ್ತುಮಾಡು ; ಕಬಳಿಸು : ಕಣ್ಣಿನಲ್ಲಿ ನೋಡಿ ಕವಳೀಕರಿಸಿದೆನೆಂದಡೆ ಅದು ಕವಳೀಕವೆಂಬೆ (ವಚಶಾ. I, ೮೫).

[ಕವಳೀಕರಣ + –ಇಸು$_3$]

**ಕವಳುಗೋಲ್** 'ಕವಲ್ಗೋಲ್' ನೋ.

**ಕವಳ್$_1$** 'ಕಳವೆ$_1$' ನೋ.

**ಕವಳ್ಳಿ₂** 'ಕಟಿವೆ' ನೋ.

**ಕವಳ್ಮಿಂಚು** (ನಾ). ಕವಲುಕವಲಾಗಿ ಹೊರಡುವ ಮಿಂಚು; ಬಳ್ಳಿಮಿಂಚು: ಅವನೀವಲ್ಲಭೆ ಕೊಂಡ ಬೆಳ್ಪಸದನಂ ನೀರೇಜಗರ್ಭಂ ವಿಯದ್ಧವಳಾಗಾರದೊಳಿಟ್ಟ ಪಾಲ್ಗೊಡೆ ಕವಳ್ಮಿಂಚಿಂ ದಿಗಂತಂ ಮುಟುಂಗುವಿನಂ ಪೂಸಿದ ಶಂಖಂ... ಪರ್ವಿತ್ತು ಚಂದ್ರಾತಪಂ (ಅನಂಪು. ೭-೮೬). [ಕವಳ್$_0$ (< ಕವಲ್$_2$) + ಮಿಂಚ್ಚು$_3$]

**ಕವಟ್ಗೊಲೆ** 'ಕವಡುಗೊಲೆ' ನೋ.

**ಕವಾಟ** (ನಾ). ೧. ಬಾಗಿಲು; ಕದ: "ಕವಾಟಮುರರಿಯೆನೆ ಕದವಕ್ಕು" (ಮಂಗರಾ. ೫೭-೪); "ಪಡಿಯು ಕವಾಟಂ" (ಕವಿಕಂ. ೧೪೫); ಶಂಖಂ ರಿಪುಹೃದಯಕವಾಟಪುಟವಿಘಟನಂ ನೋಡರಿಗಾ (ಪಂಪಭಾ. ೬-೪); ಕೋದಂಡಭಂಗಧ್ವನಿ ನೆಗಬ್ದುದು... ಸ್ಫುಟದಿಕ್ಕವಾಟಂ (ಜಗವಿ. ೬-೩೨); ಕೆತ್ತವು ನಿಳಯನಿಳಯಕವಾಟ (ಕುವ್ಯಾದ್ರೋ. ೭-೬); ಚೈತ್ಯಾಲಯವು ನಾನಾರತ್ನರಚಿತದ ಕವಾಟದಿಂ ತಾನೆಸೆವುದು (ಜೀವಂಸಾಂ. ೧೪-೧೫). ೨. ಕಪಾಟು; ಅಲ್ಮಾರು (ಕ). 'ಕಪಾಟ' ಪರಾ. [ಸಂ.]

**ಕವಾಟಿಕೆ** (ನಾ). ಒಂದು ಪ್ರಮಾಣ (?): ಅಡ್ಡತೂಕ ಗುಳಿಗೆಯಂ ಮಾಡಿ ಬಿಳಿ ಎಲೆಯಲ್ಲಿ ಕೊಡುವುದು. ಒಂದು ಕವಾಟಿಕಂ ಕೊಂಡೊಡೆ, ಮಂದಾಗ್ನಿ, ಶೂಲೆ, ಪಾಂಡುವಾತ, ಮೇಹ, ವಾತಶೂಲೆ ಇಷ್ಟೂ ಮಾಣುವುವು (ವೈವಿ. ೪೫). [?]

**ಕವಾಟಪುಟ** (ನಾ). ಬಾಗಿಲರೆಕ್ಕೆ, —ಕದ: ಜತುಗೃಹ ಕವಾಟಪುಟ ಸಂಧಿಗಳೊಳ್ (ಪಂಪಭಾ. ೩-೪ ವ). [ಕವಾಟ + ಪುಟ$_3$]

**ಕವಾಟಶಲಾಕೆ** (ನಾ). ಬಾಗಿಲಿಗೆ ಹಾಕುವ ಅಗುಳಿ: "ಕುಸಿ-ಕ್ಲೀಣತ್ವೇ, ಕವಾಟಶಲಾಕಾಯಾಂ ಚ (ಅಗುಳಿ)" (ಶಮಧಾ). [ಕವಾಟ + ಶಲಾಕೆ]

**ಕವಾಟು** 'ಕವಟು' ನೋ.

**ಕವಾಡ** 'ಕಬಾಡ' ನೋ.

**ಕವಾಡಗಿತ್ತಿ** (ನಾ). ಗವಳಿಗರ ಹೆಂಗಸು; ಗವಳಿಗಿತ್ತಿ (ಕ). [ಕವಾಡಿಗ (< ಕಬಾಡಿಗ) + -ಇತ್ತಿ]

**ಕವಾಡಸರಕು** (ನಾ). ಎತ್ತಿನ ಮೇಲೆ ಹೇರುವ ಸರಕು: ಅರ್ರಿಸಿಣ ಮೆಣ್ಸು ಮುಂತಾದ ಕವಾಡಸರಕಿನ ಹೆರ್ರಿಗೆಲ್ಲಾ ಕಾಸು ೨ದರ ಮೆರ್ರೆಯಲ್ಲು (ಮೈಅರಿ. ೧೯೩೦, ೪೫-೧೪; 1771). [ಕವಾಡ (< ಕಬಾಡ) + ಸರಕ್ಕು$_3$]

**ಕವಾಡಿಗ** 'ಕಬಾಡಿಗ' ನೋ.

**ಕವಾಡಿಗಗೇರಿ** (ನಾ). ಗವಳಿಗರ ಓಣಿ (ಕ). [ಕವಾಡಿಗ (< ಕಬಾಡಿಗ) + ಕೇರಿ]

**ಕವಾತು** 'ಕವಾಯಿತು' ನೋ.

**ಕವಾಯತು** 'ಕವಾಯಿತು' ನೋ.

**ಕವಾಯಿ** 'ಕಬಾಯಿ₁' ನೋ.

**ಕವಾಯಿತ** 'ಕವಾಯಿತು' ನೋ.

**ಕವಾಯಿತು, ಕವಾತು, ಕವಾಯತು, ಕವಾಯಿತ** (ನಾ). ೧. ಸೈನಿಕರೇ ಮೊದಲಾದವರು ಮಾಡುವ ಕಸರತ್ತು, —ವ್ಯಾಯಾಮ: 'ಸಮವಸ್ತ್ರ' ಧರಿಸಿ ಅನೇಕ ಬಾಲಕರು 'ಕವಾಯಿತು' ಮಾಡುತ್ತಿದ್ದರು (ಮುಗಿನಮ. ೫೫); ಎರಡು ಹೊತ್ತೂ ಕವಾಯಿತು ನಡೆಯುತ್ತದೆ (ಆಗಸ್ಟ್. ೮೨). **ಕವಾತು**: ೧. ಅಟ್ಟಿ ಅಡಿಯಿಟ್ಟು ನಡಸಿದೆ ಕವಾತ (ನಡೆಬಂ. ೧೦೩); ಸೇನಾಪಡೆ ಅವನ ಮುಂದೆ ಕವಾತುಮಾಡಲು ಹೋಗುತ್ತಿತ್ತು (ಪ್ರವಾಇ. II, ೭೪). ೨. (ಅಲಂ) ಬಹಳ ಶ್ರಮ (?): ಒಂದು ಪ್ರಾಕೃತಪದ್ಯವನ್ನು ಕವಾತುಮಾಡಿ ಹೃದ್ಗತಮಾಡಬಹುದು (ಶಿಕ್ಷದ. ೪೫). **ಕವಾಯತು**: ೧. ಕವಾಯತಿಗೆ ಹೋಗಿದ್ದ ದಂಡು ಒಳಗೆ ಬಾರದಂತೆ ಕೋಟೆಯ ಬಾಗಲುಗಳನ್ನು ಭದ್ರಪಡಿಸಿ (ಒಡೆಕ. ೧೯); ಮಕ್ಕಳು ಸಾಮೂಹಿಕ ಕವಾಯತು ಮಾಡಿದರು (ಕಪಪು. ೪-೩೫). **ಕವಾಯಿತ**: ೧. (ಕ).

**ಕವಾತಡ್ಡ** = ಕವಾಯಿತು ಮಾಡುವ ವಿಶಾಲ ಪ್ರದೇಶ: ಕಾಲೇಜಿನ ಎದುರಿನಲ್ಲಿ ದೊಡ್ಡ ಕವಾತಡ್ಡವಿದೆ (ರೂಢಿ).

[← ಅರ. ಕವಾಈದ್; ಹಿಂ. ಕವಾಯದ್; ಮರಾ. ಕವಾಇತ್, ಕವಾಯತ್]

**ಕವಾಲ** (ನಾ). ಹೆಂಡಮಾರುವವನು: "ಕವಾಲ – ಸಿಂದಿಮಾರುವವ" (ಜಾನಕೋ. ೩೫). [< ಸಂ. ಕಲ್ಯಪಾಲ]

**ಕವಾಲಿ** (ನಾ). (ಮುಸಲ್ಮಾನರಲ್ಲಿ ವಿಶೇಷವಾಗಿ ಪ್ರಚಾರದಲ್ಲಿರುವ) ಒಂದು ಮೇಳಗೀತ: ಇದಲ್ಲದೇ ಕೋಲಲ್ಲಿಯ ಕರೀಮಾ ಕವಾಲಿ ಅಂದನು (ಜೀದಾನ. ೬೬). [← ಅರ. ಕವ್ವಾಲ್; ಮರಾ. ಕವಾಲೀ]

**ಕವಿ₁** (ಕ್ರಿ). ೧. ಮುಸುಕು; ಮುತ್ತು; ಆವರಿಸು: "ಕವಿ –ಆಚ್ಛಾದನೇ" (ಶಮಧಾ); ಪುದಿದು ಕವಿದಿಡಿದ ತಮದೊಡ್ಡು (ಕಾವ್ಯಸಾ. ೮೭೦ ಶೂದ್ರಕ); ಕವಿದುವು ಕಾಳನೀಳಜಳದಾವಳಿ ವಾರಿಧಿಗಳ್ ಧರಿತ್ರಿಯಂ ಕವಿದುವು ಗಾಳಿಗಳ್ (ಪಂಪಭಾ. ೨-೭೭); ಪಸಿದೆಮ್ಮೆ ಬಳೆದ ಕೆಯ್ಯಂ ಪೊಕ್ಕಂತೆ ಬಡವರ್ ಕೂಟ ರಾಶಿಯಂ ಕವಿದಂತೆ (ಧರ್ಮಾಮೃ. ೭-೯೫); ಸಭೆ ಶಕ್ಕು ಕ[ಪ್ರಾಶಾಂ. ಗ]ವಿದಂತೆ ನೋಡುತಿರೆ (ತಿರುರ. ೧೬); ಹಿಳುಕು ಕವಿದವು ಭಟನ ಕೈಮೈಗಳಲಿ (ಕುವ್ಯಾದ್ರೋ. ೫-೫೬); ಹಾಲು ಬತ್ತಿಕೆ ಕವಿವರಗಿಳಿಗಳ ಹಿಂಡ ಮೇಲಕ್ಕೆಬ್ಬಿಸುವ ನಾರಿಯರ (ಕಂಸವಿ. ೫-೬೪). ೨. ಮರೆಮಾಡು; ಹೊದಿಸು: ಭೂತಂಗಳಾತನನೊಂದು ಬಿಲದೊಳಿಕ್ಕಿ ಕಲ್ಲಂ ಕವಿದೊಡೆ (ಚಾವುಂಪು. ೫೫-೪); ಕಣ್ಣಿಗೆ ಹೆರೆ ಕವಿದುರಗನ ತುಳಿದ ದೊರೆತನದೇಳ್ಗೆಯ ಕೋಟು (ನೋಹತ. ೩೯-೩೪). ೩. ತುಂಬು; ದಟ್ಟವಾಗು; ಮೇಳೈಸು: ಕವಿದ ಪುರ್ವುಂ ಕೋರಮಾಗಿ ನಿರ್ಮಾಂಸಮಪ್ಪ ಕಾಲ್ಗಳುಂ (ಪಂಪಭಾ. ೫-೪೬ ವ); ಭುವನಜನಮೆಲ್ಲಮೊರ್ಮೆಯೆ ಕವಿದುದೆನಲ್ (ಕಾದಂಪೂ. ೪೭೫); ತೊಲಗಿಸೋ ಮುಂದಿಯನು ತೆಗೆ ಬಾಗಿಲನೆನಲು ಕವಿದುದು ಸುರೇಂದ್ರನ ಲಲನೆಯರು (ಕುವ್ಯಾಅ. ೭-೪೮). ೪. ಎರಗು; ಮೇಲೆಬೀಳು; ದಾಳಿಮಾಡು: ಮದುವೆಯ ನೆರವಿಯಂ ಕಡಂದುಟು ಕವಿದಂತೆ (ಧರ್ಮಾಮೃ. ೨-೭೧); ತಿರುಗಿದರೆ ಬಲದಿಂದ ಕೈಮಾಡುವರು ಕವಿದರೆ ಸಿಡಿವರೆಡಬಲಕೆ (ಕುವ್ಯಾದ್ರೋ. ೩-೩೦); ಕಾಹೆನಿದಿರಲಿ ಕವಿವ ಕಾದುವ ಕೌಣಪರ (ತೊರರಾ. ೩-೬-೧೨). ೫. ಉದ್ವೇಗಗೊಳ್ಳು; ಉತ್ಸಾಹಿಸು: ಉನ್ನತ್ತಪಂಚವಿಂಶತಿ ಪ್ರಾಯಂ ಕವಿದು ಅರಮನೆಯಂ ಪೊಚಮುಟ್ಟು (ಬಸರ. ೮-೬೫); ಸರಳು ಸವೆಯಲು ಶಕ್ತಿಯಲಿ ಕಾತರಿಸಿ ಕವಿದಿಡೆ ಶಕ್ತಿಯನು ಕತ್ತರಿಸಿದನು (ಕುವ್ಯಾದ್ರೋ. ೧೦-೧೬); ಪ್ರಾಣವಲ್ಲಭನ ಪಾದಾರವಿಂದಂಗಳ ಕಾಣುತ ಕವಿದು ನಿಟ್ಟಿಪಳು (ಹದಿಬ. ೭-೪೩). ೬. ತೊಡು; ಧರಿಸು; ಇಟ್ಟುಕೊಳ್ಳು: ತಲೆನವಿರಂ ಪಚ್ಚುಗಂಟಿಕ್ಕಿ ಮಣಿಮಯ ಮಕುಟಮಂ ಕವಿದು (ಪಂಪಭಾ. ೧೨-೧೦೮ ವ); ಕವಿದುತ್ತಮಮಕುಟಮುಮನುತ್ತಮಾಂಗದೊಳಾಂತು (ಶಾಂತಿಪು. ೧೦-೧೦೪).

**ಕವಿದುಪಡು** = ದೊಪ್ಪನೆ ಬೀಳು: ದುಶ್ಯಳೆ ಕೇಳ್ದು ಮಲಮಲ ಮಱುಗಿ ತಮ್ಮಣ್ಣನಲ್ಲಿಗೆ ವಂದು ಕಾಲ ಮೇಲೆ ಕವಿದುಪಟ್ಟು (ಪಂಪಭಾ. ೧೧-೧೨೨ ವ). **ಕವಿದುಬೀಟು, ಕವಿದುಬೀಳು** = ಕಾಲನ್ನು ಮುಚ್ಚುವ ಹಾಗೆ ಮುಖವು ಅಡಿಯಾಗಿ ಬೀಳು: ತನ್ನ ನಂದನನ ಕಾಲ ಮೇಲೆ ಕವಿದುಬಿದ್ದು (ಗದಾಯು. ೩-೮೧ ವ); ಒಡೆಯರಡಿಗಳ ಮೇಲೆ ಬೀಳಲ್ಕೆ ತೊಡಗುವಂದದಿ ಕವಿದುಬೀಳ್ವಂ (ಬಸಪು. ೩-೩೮).

[ದೇ. ‖ ತೆಲು. ಮಲ. ಕವಿ; ತುಳು. ಕಬಿ, ಕಮಿ; ತೆಲು. ಕವಿ]

**ಕವಿ₂** (ನಾ). ೧. ಹೊದಿಕೆ; ಮುಚ್ಚಳ; ಆವರಣ: ಆಕಾಶದ ಕವಿಯುಂ ನೆಲದ ಕಲ್ಲೆಯುಂ ಮುನ್ನಮೆ ಮೇರೆದಪ್ಪುವುದುಮಂ (ಪಂಪಭಾ. ೧೨-೯೭); ಗೂಡಾರದ ಕವಿಯಂತಿರೆ ಮುಚ್ಚಿ ಪೋದ ಕವಿಯುಂ ಕವಿಯೇ (ಆದಿಪು. ೧-೪೬). ೨. ಕುದುರೆ ಕಣ್ಣಿಗೆ ಹಾಕುವ ಮರೆ; ಕಣ್ಮಡೆ: ಕವಿ ಪೊಜಗಿರೆ ಕೀಲೊಳಗಿರೆಯವಿರಳಮಾ ತುರಗ ಮುಖಮೊ ನೃಪಮಂದಿರಮೋ (ಶಮದ. ೧೧೯ ಪ್ರಯೋ); ಜೋಡು ಹಕ್ಕರಿಕೆ ಹಲ್ಲಣ ಮುರತಾಪಣೆಗೂಡಿದ ಕವಿಯ ಕೀಳುಗಳ ಜೋಡಿಸಿ ತುರಗವನೇಱಿ ರಾವುತರೊಡಗೂಡಿ ಬಂದರು (ಅಂಜಚ. ೬-೮೦). ೩. ಕವಿದಿರುವಿಕೆ; ತುಂಬಿರುವಿಕೆ: ಕಣ್ಪನಿಯ ಕವಿಯಿಂದೆ (ಬದ್ಧ ಪ್ರ. ೧೦). ೪. (ಅನಿರೀಕ್ಷಿತವಾಗಿ) ಮೇಲೆ ಬೀಳುವುದು; ಮುತ್ತುವುದು. 'ಕವಿಯೇಱು' ಪರಾ. ೫. "ಯುದ್ಧಭೇದಂ" (ಶಾಪಮಂ. ಟಿಪ್ಪಣಿ); ಕವಿದುರ್ಗ್ಗಂ ಚಾತುರಂಗಂ ಬವಸೆ ದಳವುಳಂ ಧಾಳಿ ಸೂಳೇಱಿನಿಪ್ಪಾಹವದೊಳ್ (ಎಕ. VII, ಶಿಕಾರಿ. ೧೩೬-೪೭; 1068); ಕವಿಯ ಕಾಳಗದಲ್ಲಿ ರವಿ ಬಂಟನಾಗೆ ಶಶಿ ದೆಸೆಗೆಟ್ಟು ಅರಸು ಬಂಟರ ಬಿಟ್ಟೋಡಿದ (ಮಧುವ. ೪೭); ಆ ಕವಿಯ ಕಾಳೆಗದೊಳ್ ಬಯಲಾಜಿಯೊಳ್ . . . ಪಿಡಿದನಿಂತೀವಣೀ ಕಲಿಕಾರ್ತವೀರ್ಯ್ಯನ್ (ಎಇ. XIII, ೧೯-೧೮; 1704). [< ಕವಿ₁]

**ಕವಿ₃** (ನಾ). ಆನೆ: "ಕವಿಯೆಂದೊಡಾನೆ" (ಕಬ್ಬಿಕೈ. ೮೧). [?]

**ಕವಿ₄** (ನಾ). ಕೋತಿ; ಕಪಿ: "ಕಪಿ, ಕವಿ; ದೀಪಿಕೆ, ದೀವಿಗೆ" (ಶಬ್ದಾನು. ೧೪೫-ಪ್ರಯೋ). [< ಸಂ. ಕಪಿ]

**ಕವಿ₅** (ನಾ). ೧. ಚತುರ; ಬುದ್ಧಿವಂತ; ವಿದ್ವಾಂಸ. ೨. ಕಾವ್ಯವನ್ನು ರಚಿಸುವವನು; ಕಬ್ಬಿಗ: "ಕವಿ, ಕವಿತ್ರ ಈ ೨ ಕವಿಯ ಹೆಸರು" (ನಾಚಿರಾ. ೧೨೫); ವಾಕ್ಶ್ರೀ ಸುಭಗಂ ಪುರಾಣಕವಿಯುಂ ಧರೆಗಾಗಿರೆ (ಪಂಪಭಾ. ೧೪-೬೧); ವಾಲ್ಮೀಕಿಯೆ ಕವಿ (ಜಗವಿ. ೧-೭). ೩. ದೈತ್ಯರ ಗುರು; ಶುಕ್ರ: ಕವಿ ಕನ್ಯಾನಿಳಯಸ್ಥನಾಗೆ ಖಳ ಕರ್ಮೋಪಾರ್ಜಿತಂ (ಜಾತತಿ. ೧೭-೩೦); ಕವಿರಿಪುಗುರು ಗುರುರಿಪು ಭೃಗುಪವರೇವಗೆನಲ್ಧರಿತ್ರಿ ಕವಿಗುರುಜನತೋಧ್ಭವಮೊದವೆ ಮಂತ್ರಗುಣಮೊಪ್ಪುವುದು ಮಹಾದೇವದಂಡನಾಥೋತ್ತಮನೊಳ್ (ಎಕ. VIII, ಸೊರಬ. ೨೮-೪೬; 1208 ?); ಗುರುಕವಿಗಳಿಂ ಬಳಕೆವೆತ್ತ ಸಚಿವರುಂಟು (ರಾಮಾಶ್ವ. ೧೨-೭). ೪. ನೀರು; ಜಲ. ೫. ಸೂರ್ಯ; ನೇಸರು. ೬. ನೀರ ಹಕ್ಕಿ; ಜಲಪಕ್ಷಿ: ಉದ್ಧತ ವೀರಾರಾತಿಯೂಥಂ ವಿಗತ ವಿಭವಮಾಗಿರ್ದ್ದಡಂ ರಂಜಿಕುಂ . . . ಸಕಳಕವಿನಿಕಾಯಸ್ವನಾಕೀರ್ಣ್ಣ ಕರ್ಣ್ಣಂ (ಎಕ. VIII, ಸೊರಬ. ೧೪೦-೯; 1198). ೩, ೬: ಕವಿರಾಜಾಲಂಕೃತಂ . . . ಸರದಂತಂಬರದಂತೆ ರಂಜಿಸಿದುದಾ ರಾಜೇಂದ್ರನೋಡ್ಡೋಲಗಂ (ರಾಜಶೇ. ೫-೨೦). ೭. ಕಡಿವಾಣ; ಖಲೀನ: "ಕವಿ ಶುಕ್ರ ಕಬ್ಬಿಣುದಕಂ ತವೆ ವಿದ್ವಾಂಸಕರಿಪ್ಪೆದು ಕವಿ ಶಬ್ದಂಗಳ್" (ನಾನಾಕಂ. ೯೬). [ಸಂ.]

**ಕವಿಂಜ**, ಕವಿಂಜಳ, ಕವಿಂಜು, ಕವುಂಜು, ಕವುಜಗ, ಕವುಜು, ಕೌಜಲು, ಕೌಜು, ಗವುಂಜು, ಗವುಜ್ಜು₁, ಗವುಜುಗ, ಗೌಜಲು, ಗೌಜ್ಜು₂ (ನಾ). ಒಂದು ಬಗೆಯ ಹಕ್ಕಿ: "ಕಪಿಂಜಲ, ಕವಿಂಜ" (ಶಬ್ದಾನು. ೧೬೦ ಪ್ರಯೋ). **ಕವಿಂಜಳ**: "ಕಪಿಂಜಳ – ಕಪಿಂಜಳ" (ಶಮದ. ೨೫೮ ಪ್ರಯೋ). **ಕವಿಂಜು**: "ಕಪಿಂಜಳ – ಕವಿಂಜು" (ಶಮದ. ೨೪೦ ಪ್ರಯೋ). **ಕವುಂಜು**: ಗಿಡುಗ ಮೊಲಂ ಕವುಂಜು ಮರೆ ಮುಂಗಲಿ ಕಕ್ಕರವಕ್ಕಿ ಕೋಡಗಂ (ಸೂಕ್ತಿಸು. ೩-೧೬೮); ಹರಿಣಿಯ ನವಿಲ ಕವುಂಜಿನ ಕರಿಣಿಯ . . . ಕಣ್ಣಂತಿರೆ ನಿಬಿಡಮಾಗಿ ತೋರ್ಪೊಡೆ ತುರಗದ ನಯನಂಗಳು ಚಿತಂ (ಅಶ್ವಶಾ. ೧-೨೪). **ಕವುಜಗ**: ಈ ಹಕ್ಕಿ ಕವುಜಗ ಹಕ್ಕಿಯ ಮೊಟ್ಟೆಯಷ್ಟು ಗಾತ್ರವಿದೆ (ಪ್ರವಾಇ. I, ೨೧). **ಕವುಜು**: (೬). **ಕೌಜಲು**: ಇಲ್ಲಿ ಕುದುಂಬಳು, ಕೌಜಲು, ನೀರ್ಕೋಳಿ, ಕಾಡುಕೋಳಿಗಳು ನೆಲದ ಮೇಲೆ ಓಡಾಡುತ್ತಿದ್ದರೆ (ಸ್ವಪ್ನಹೊ. ೧೨). **ಕೌಜು**: ಹಕ್ಕಿ ಹಾರಿತು ಕಾಮೆಂಬಾ ಕೌಜನು ಬಡಿದಾ ಹಕ್ಕಿ ತಾಮಸ ಕೊಂಚೆಯ ಕೊಂದ ಹಕ್ಕಿ (ಚದಾವ. ೧೧೩-೯). **ಗವುಂಜು**: ಹರಡೆ ಗವುಂಜು ಚಾದಗೆ (ಗಿರಿಕ. ೧-೭೪). **ಗವುಜ್ಜು₁**: ಗವುಜು ಚಿಳುವ . . . ಪಕ್ಕಿಗಳವಱೊಳೊಪ್ಪಿದವು (ಸಾಳ್ವಭಾ. ೫-೨೧). **ಗವುಜುಗ**: ಮುಂಗುರಿಗಳಿವು ಗವುಜುಗಗಳಿವು [ಪಾಠಾಂ. ಗೌಜುಗೆಗಳಿವು, ಗೌಧೆಯವಿವು, ಗೌಜುಗಳಿವನು] ಗಜಗಮನೆ ನೋಡು (ತೊರರಾ. ೩-೧-೩೧). **ಗೌಜಲು**: ಕಾಡಗೌಜಲು ಕರಿಯಲಾವುಗೆ . . . ಮೆರೆದುವು (ಗೋಹಾಡು. ೨೪). **ಗೌಜ್ಜು₂**: "ಖಂಜರೀಟಃ, ಖಂಜನಃ – ಈ ೨ ಗೌಜು" (ನಾಚಿರಾ. ೧೧೪); ಲಾವುಗೆ ಹರಡೆ ಗೌಜು ಟಿಟ್ಟಿಭ ಕುಕಿಲ ತುಜುವೆಗಣ್ಣಂ ಹಂಸೆ (ಹಚಕಾ. ೫-೪೨); ಹರಡೆ ಗೀಜಗ ಮರಗೊಡಲೆ ಕಾಬುಜುಲೆ ಲಾವುಗೆ ಗೌಜು ಪಾರಿವನಿರಿಲೆ ಸಾಳುವ (ಕುವ್ಯಾಆ. ೨೦-೫೩); ಗಿಡುಗ ಗಿಳಿ ಗೌಜುಸೋಗೆ ಸಜಲೆ . . . ಇರದೆ ಕೆಡಪಿದುದು (ಕುರಾಸಾಂ. ೨೭-೮೫). [< ಸಂ. ಕಪಿಂಜಲ]

**ಕವಿಂಜಳ** 'ಕವಿಂಜ' ನೋ.

**ಕವಿಂಜು** 'ಕವಿಂಜ' ನೋ.

**ಕವಿಕ** (ನಾ). ಕಡಿವಾಣ; ಖಲೀನ. [ಸಂ.]

**ಕವಿಕದಂಬಕ** (ನಾ). ಕವಿಗಳ ಸಮೂಹ, —ಗೋಷ್ಠಿ: ಬೆಳ್ಳಕ್ಕರಿಗಂಗಂ ವಿಷಯಮೆ ಕಾವ್ಯರತ್ನಮತಿಚತುರ ಕವಿಕದಂಬಕವಿಷಯಂ (ಆದಿಪು. ೧-೨೪); ಕೃತಿ ಚತುರ ಕವಿಕದಂಬಕದ ಬಗೆಯನುಗಿಯಲ್ವೇಡಾ (ಸುಕುಮಾ. ೧-೪೨). [ಕವಿ₅ + ಕದಂಬಕ]

**ಕವಿಕೆ** (ನಾ). = ಕವಿಕ (೬). [ಸಂ. ಕವಿಕಾ]

**ಕವಿಗೊಳ್₁** (ಕ್ರಿ). ಆವರಿಸು; ತುಂಬು: ದ್ರುಪದಾತ್ಮಜೆಯ ಕಂಬನಿಯೊಱತೆಯಾಱಲು ನುಡಿದನಾಕೆಯ ಕರಣದಲಿ ಕ[ಪಾಠಾಂ. ಕಿ]ವಿಗೊಂಡ ಕಳಕಳವನು ವಿಭಾಡಿಸಿದ (ಕುವ್ಯಾಆ. ೪-೧೫). [ಕವಿ₂ + ಕೊಳ್₁]

**ಕವಿಗೊಳ್₂** (ಕ್ರಿ). ಕಾವ್ಯದರ್ಶನ ಪಡೆ: ತನ್ನಂ ಮರೆವನ್ನಂ ಕವಿತನ್ನ ಕೃತಿಪ್ರಸರಮೆಂದುಮೊಸೆವೋಲ್ ನೆಗಳ್ದಂ ಬಿನ್ನಣಿ ತಾಂ ತನಿಸೊಬಗಿನ ಕಣ್ಣಂ ಪ್ರಣಿಧಾನಮಾರ್ಗದಿಂ ಕವಿಗೊಳ್ವಂ (ಸಂಸಪ. ೫೨-೮). [ಕವಿ₅ + ಕೊಳ್₁]

**ಕವಿಗೋಷಿ** (ನಾ). ಕವಿಗಳಗೋಷ್ಠಿ, —ಸಮೂಹ: ಸಮ್ಮೇಳನದಲ್ಲಿ ಕವಿಗೋಷ್ಠಿಯೊಂದು ಏರ್ಪಟ್ಟಿತ್ತು (ರೂಢಿ). [ಕವಿ₅ + ಗೋಷ್ಠಿ]

**ಕವಿಚು₁**, ಕವಚು, ಕವುಚು₁, ಕೌಂಚು, ಕೌಚು₁ (ಕ್ರಿ). ತಿರುವುಮುರುವಾಗು; ಅಡಿಮೇಲಾಗು; ಬೋರಲಾಗು; ಮಗುಚು; ತಲೆಕೆಳಗಾಗು: "ಕವಿಚು – ವಿಪರೀತಪತನೇ (ತಲೆ ಕೆಳಗು ಮಾಡು)" (ಶಮಧಾ); ಒಂದು ವರುಷದ ಕೂಸಂ ನಂದಿನಿಯೆಂಬ ದೇವತೆ ಪಿಡಿದೊಡಾ ಕೂಸು ನೆಲದಲ್ಲಿ ಕವಿಚಿ ಬೀಱುಗುಂ (ಬಾಲಚಿ. ೧೩೧-೪); ಆಪತ್ತಿನ ಪರ್ವತವೇ ಮೇಲ್ಗೆ ಕವಿಚಿಕೊಂಡ ಹಾಗೆ ಹೇಳಿದ ವೆಂಕಟಪತಯ್ಯ (ಮರಳ. ೧೯). **ಕವಚು**: (೬). **ಕವುಚು₁**: ಅಂಗಾತನೆ ಇಲ್ಲವೆ ಕವುಚಿ ಮಲಗಿ ನೀರಲ್ಲಿ ಈಸುತ್ತಾನೆ (ಸ್ವಪ್ನಹೊ. ೧೩); ಕವುಚಿದುದರಿಂದ ಮೋರೆ ತುಟಗಳಲೆಲ್ಲ ಮಣ್ಣಾಯಿತು (ನಡೆದಾ. I, ೪೪೪); ರಾಧಮ್ಮ ಹಾಸಿಗೆಯ ಮೇಲೆ ಕವುಚಿ ಮಲಗಿದ ನಿರ್ಮಲೆಯ ಬೆನ್ನು ಸವರುತ್ತ ಕುಳಿತರು (ಮೂರುದಾ. ೨೭೬); ಒಂದು ಬದಿ ಬೆಂದು ಕಂದುಬಣ್ಣ ತಳೆದಾಗ ದೋಸೆಯನ್ನು ಕವುಚಿಹಾಕಿ (ಅಡುಸೌ. ೯೫); ಕವುಚಿಬಿದ್ದರೂ ಮೂಗು ಮೇಲೆ(ಗಾದೆ). **ಕೌಂಚು**: (ಕರಾ)ಮಗು ಕೌಂಚುತ್ತದೆ(ರೂಢಿ).

**ಕೌಚು$_1$** : ಬಲೆಯ ಕೌಚಿ ಬಲೆಯೊಳಗೆ ಬಿಸುಟು ಪೋದನು (ವಾದಿಕೀ. ೧೧೭-೧೮); ತೇರಿನ ಮೊಗ್ಗರ ಕೌಚಲು (ವರ್ಧಚ. ೬-೭೬); ಕಾಯ್ದೆಣ್ಣೆ ಗುಂಬವನೆ ಕೌಚಿಯುರುಳ್ಚಿ (ಚಿಕವಿ. ೨-೪೭).

**ಕವುಚಿಮಲಗು** = ೧. ಬೋರಲಾಗಿ ಮಲಗು; ಮುಖ ಕೆಳಗೆ ಮಾಡಿ ಬೀಳು. ೨. (ಕರಾ) ಒಪ್ಪದಿರು; ಒಲ್ಲೆನೆನ್ನು.

[ದೇ. ‖ ತಮಿ. ಕವಿಬ್; ಮಲ. ಕವಿೞ್, ಕಮಿಳ್; ತುಳು. ಕಬ್ಬೆ, ಕಬ್ಯ = ತಲೆಕೆಳಗು; ಕೊಡ. ಕವಿ]

**ಕವಿಚು$_2$, ಕವುಚು$_2$, ಕೌಚು$_2$** (ಕ್ರಿ). ಹೊದಿಸು; ಆವರಿಸು; ಮುಚ್ಚು: ಎತ್ತ ತಾನೊಲಿದೇಳಲಾಱದೆ ನೆತ್ತಿಯೊಳು ಹುಲ್ಲಂ ಕವಿಚಿಕೊಂಡೆತ್ತುವವರಿಲ್ಲದೆ ಬಳಲುತಿರ್ದುದು (ಬಸವು. ೧೬೭-೬); ನಳನು ತಾನು ಉಟ್ಟಿದ್ದ ಬಟ್ಟೆಯನ್ನು ತೆಗೆದು ಅವುಗಳ ಮೇಲೆ ಕವಿಚಿದನು (ವಚಭಾ. ೧೩೨); ಕಂಬಳ ಕವಿಚಿಕೊಂಡು ಕುಳಿತನು (ಮುನಿಮಾ. ೬). **ಕವುಚು$_2$** : ಆನೆಯ ತಲೆಯನ್ನು ಕವುಚಿಹಾಕಿಕೊಂಡ ಮಾಯಾಚಾರಿಗೆ ಮೊದಲ ಪೂಜೆಯಾಯಿತು (ನನ್ನೂರು. ೩೦೬). **ಕೌಚು$_2$** : ನೀಲದ ವಸ್ತ್ರವೆನಿಸಿತು ಬಂದು ಕೌಚಿದ ಹೊಗೆ ಮಹಾಂಬರವ (ಪ್ರಹ್ಲಾಚ. ೭-೭೬). [ಕವಿ$_1$ + -ಚು]

**ಕವಿಚು$_3$** (ನಾ). ಹೊದಿಸುವಿಕೆ; ಹೊದಿಕೆ: “ಹ್ಲಗಿಃ, ಹ್ಲಗಂ, ಹ್ಲಗನೀಯಂ, ಈ ೩ ಕವಿಚು” (ಕಾಶಕ್ಯ. ೧೩೯). [< ಕವಿಚು$_1$]

**ಕವಿಚುಂಮುರ್ದಳೆ** (ನಾ). ಒಂದು ಬಗೆಯ ಮುದ್ದಳೆ (?): ನಡೆದೆಯ್ದಿ ಕವಿಚುಂಮುರ್ದಳೆಯನ್ನುರುಳ್ಚಿ ಎತ್ತಿಕೊಂಡು ವಾದ್ಯವನ್ನು ದಡಬಡನೆ ಬಡಿದು ಬಾಜಿಸಿ (ಮಂತ್ರಶ. ೯೬-೨). [ಕವಿಚು$_0$ + ಮುರ್ದಳೆ]

**ಕವಿತ** (ನಾ). ಕವಿಯುವಿಕೆ; ಆವರಿಸುವಿಕೆ: “ಹುಲ - ಹಿಂಸಾ ಸಂವರಣಯೋಃ, ಕೊಲೆಯೊಳಂ, ಕವಿತದೊಳಂ” (ಕಾಶಕ್ಯ. ೧೪೭). ‘ತಿವಿತ’ ಪರಾ. [ಕವಿ$_1$ + -ತ]

**ಕವಿತರ್, ಕವಿತರು** (ಕ್ರಿ). ಆವರಿಸು; ಸುತ್ತುಗಟ್ಟು; ಮುತ್ತು; ವ್ಯಾಪಿಸು: ಜಗದೀಶಂ ಲಯವಾರ್ಧಿಯಂತೆ ಕವಿತಂದೊಟ್ಟೈಸಿ ಬಂದಲ್ಲಿಯುಂ ಪುಗುವಾಗಳ್ (ಕಾವ್ಯಸಾ. ೪೩೭ ಶೂದ್ರಕ); ಕವಿತಂದಂ ಭೋಧಿಯೊಳ್ ಸೂಱುಸೂಱವೆ ಬೀೞ್ತಂದುವು (ಪಂಪಭಾ. ೧೩-೯೩); ಕವಿತರ್ಪ ನೆರವಿಯುಂ ಕನಲವೋರಿಗಳ್ ಕಂಡು ಬೆರ್ಚಿ (ಸುಕುಮಾ. ೭-೨); ಪೂವಿನಕೋಲ್ಗಳ್ ಗಡಣಿಸಿ ಕವಿತಂದು ನಾಂಟುವಾಗಳ್ (ಕಬ್ಬಿಕಾ. ೨೯೭). **ಕವಿತರು** : ತರತರದೊಳು ಕವಿತರುವ ಸರಸಕಟಾಕ್ಷವ ನೆಸಗಿಯೆನ್ನೊಳು (ಹದಿಬ. ೧-೨೧). [ಕವಿ$_1$ + ತರ್]

**ಕವಿತರು** ‘ಕವಿತರ್’ ನೋ.

**ಕವಿತಾಗುಣ** (ನಾ). ಕವಿತೆಯ ಗುಣ; ಕವಿತೆಯನ್ನು ಬರೆಯುವ ಗುಣ: ಆಗೊಮ್ಮೆ ಈಗೊಮ್ಮೆ ದೈವೀಕ್ಷಣ ಎಲ್ಲಿಯೋ ಒಬ್ಬನಲಿ ಕವಿತಾಗುಣ (ಕಲ್ಲೋಲ. ೫). [ಸಂ. (ಕವಿತಾ + ಗುಣ)]

**ಕವಿತಾಗೋಷ್ಠಿ** (ನಾ). ಕಾವ್ಯಗಳನ್ನು ರಚಿಸುವ ಅಥವಾ ವಾಚಿಸಿ ಸಂತೋಷಪಡುವ ಸಭೆ: ಕವಿತಾಗೋಷ್ಠಿಯೊಳ್ . . . ಪೊೞ್ತುಗಳೆವು ತ್ತಿರ್ದಂ ನರೇಂದ್ರಾತ್ಮಜಂ (ಪುಷ್ಪಪು. ೪-೭೭). [ಸಂ. (ಕವಿತಾ + ಗೋಷ್ಠಿ)]

**ಕವಿತಾಪ್ರೌಢ** (ನಾ). ೧. ಕಾವ್ಯರಚನೆಯಲ್ಲಿ ನಿಪುಣನಾದವನು. ೨. ಕಾವ್ಯವನ್ನು ಚೆನ್ನಾಗಿ ತಿಳಿದವನು; ಕಾವ್ಯಜ್ಞ: ಕವಿತಾಪ್ರೌಢನೆ ಸೋಲ್ವವೊಲ್ ಕೃತಿಯೊಳಜ್ಞಂ ಸೋಲ್ವನೇ (ಜಗವಿ. ೧-೧೩). [ಸಂ. (ಕವಿತಾ + ಪ್ರೌಢ)]

**ಕವಿತಾರಸ** (ನಾ). ಕಾವ್ಯದ ರಸ; ಕಾವ್ಯಾಸ್ವಾದ: ನೇರಿದುವೆನಿಪೆರಡುಂ ಕವಿತಾರಸಮಿಾ ಸವಣನೊರ್ವನೊಳ್ ನೆಲಸಿದುವು (ಶಾಂತಿಪು. ೧೨-೬೯). [ಸಂ. (ಕವಿತಾ + ರಸ)]

**ಕವಿತೆ** (ನಾ). ೧. ಕವಿಯ ಕರ್ಮ, —ವ್ಯಾಪಾರ; ಕಾವ್ಯರಚನೆ. ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗೞ್ತೆ ಲಾಭಮೆಂಬಿವೆ ವಲಂ (ಆದಿಪು. ೧-೩೭); ಗುಣವರ್ಮನೊಳ್ ಸಮಂ ಬರ್ಪವರಾರ್ ಕವಿತೆಯೊಳಂ . . . ವಾಗ್ವೃತ್ತಿಯೊಳಂ (ಪುಷ್ಪಪು. ೧-೬೪). ೨. ಕವಿತ್ವ; ಕಾವ್ಯ. [ಸಂ. ಕವಿತಾ]

**ಕವಿತೆಗಬ್ಬ** (ನಾ). ಹಾಡುಗಬ್ಬ; ಪದ್ಯಕಾವ್ಯ (?): ಎನ್ನ ಕವಿತೆಗ [ಪಾಠಾಂ. ಕವಿದೆಗೆ] ಬ್ಬದ ಬಗೆ ಈ ದಿವ್ಯಸಭೆಗೆ ಸಂಗತಮೆ (ಹದಿಬ. ೧-೪೫). [ಕವಿತೆ + ಕಬ್ಬ]

**ಕವಿತ್ತೊರ** (ನಾ). ಒಬ್ಬಾತನ ಹೆಸರು: ಕಾಡುವಟ್ಟಿ ಪೆಜ್ಜಱಿಕೆಕನ್ದಳ್ಳಿಯ ರಾಜಿಗದೊಳ್ತ × × ಚ್ಚನ್ ಕವಿತ್ತೊರನ್ ಪಸುವಳಿಧನುವೆಟ್ಟಿ ಕೊನ್ದು ಬಿಟ್ಟೂರ್ (ಎಕ. IX (S), ಹೊಸಕೋ. ೧೬೯-೨; ಸು. 800). [?]

**ಕವಿತ್ವ** (ನಾ). = ಕವಿತೆ ೨: ಇದು ನಿಜ್ಜಂ ಪೊಸತರ್ಣವಂಬೊಲತಿಗಂಭೀರಂ ಕವಿತ್ವಂ (ಆದಿಪು. ೧-೨೭); ಇವನಱಿದು ಪ್ರಯೋಗಿಸುವರ್ಗೆ ಕವಿತ್ವದೊಳ್ ತೊಡಂಕಿಲ್ಲ (ಶಮುದ. ೪೮ ವೃತ್ತಿ). [ಸಂ.]

**ಕವಿತ್ವಾಯಿಲ** (ನಾ). ಕವಿತ್ವದಿಂದ ಪ್ರಕಾಶಿಸುವವನು: ಸಂಸ್ಕೃತಪ್ರಾಕೃತೋಭಯಕವಿತ್ವಾಯಿಲರ ಶಿರೋಮಣಿಯೆನಿಪ ನಂದೀಶಕವಿಯ ಕೃಪೆಯಿಂ ಪ್ರಕಟಮಂ ಮಾಡಿದೆಂ (ರಾಘುಚ. ೧೯-೯೬). [ಕವಿತ್ವ + -ಆಯಿಲ$_2$]

**ಕವಿದಿ** ‘ಕವುಂದಿ’ ನೋ.

**ಕವಿದಿಳರ** (ನಾ). ಒಂದು ಬಿರುದು: ಕವಿತಾ ಮನೋಹರಂ ಕವಿ[ದಿ]ಳರ ಕರ್ಪರಸಂ ಬರೆದ (ಸೌಇಇ. XX, ೫೭-೩೭; 1084). [?]

**ಕವಿನೆರಳು** ‘ಕವಿನೆಳಲು’ ನೋ.

**ಕವಿನೆಳಲು, ಕವಿನೆರಳು, ಕೌನೆರಳು, ಕೌನೆಳಲು** (ನಾ). ಕವಿಯುವ ನೆಳಲು; ಛಾಯೆ: ವಿಶಾಲವಾದ ವೃಕ್ಷದ ಕವಿನೆಳಲಲ್ಲಿ ಒಬ್ಬ ಸ್ತ್ರೀಯು ಕುಳಿತುಕೊಂಡಂತೆ ಆ ನೌಕಾರೋಹಿಗಳೆಲ್ಲರಿಗೂ ಕಾಣಹತ್ತಿತು (ಅಂಬಿಕೆ. ೧೧೫). **ಕವಿನೆರಳು** : ಹಾರತಿರಲಿ ಗಾಳಿಗೆ ಬಿಚ್ಚಿದ್ದೆರಳು ವಾರಿಯಿರಲಿ ಕೊರಳು ಬಾಚತಿರಲಿ ಬೆರಳು ನೋಡ್ತೇನಿ ನಿನ್ನ ಕವಿನೆರಳು (ಸಖೀಗೀ. ಆ೩-೬); ನನ್ನಷ್ಟಕ್ಕೆ ಕವಿನೆರಳಿನಲ್ಲಿ ಕೂತು (ವೈನಿ. ೧೨). **ಕೌನೆರಳು** : ನಿನ್ನ ಸಾಮ್ರಾಜ್ಯಕ್ಕೆ ಯಾವುದ್ಯೋ ಕೌನೆರಳು ಕವಿದಿದೆ (ವಿಜಸಾ. ೬೯). **ಕೌನೆಳಲು** : ಮರುದಿನ ದುಃಖದ ಕೌನೆಳಲು ಅವಳ ನೋಟವನ್ನು ಆವರಿಸಿತ್ತು (ಚೀನಬಾ. ೬೦). [ಕವಿ$_1$ + ನೆಳಲು (< ನೆೞಲ್$_1$)]

**ಕವಿಪರಮೇಶ್ವರ** (ನಾ). ೧. ಕವಿಗಳಲ್ಲಿ ಪರಮ ಶ್ರೇಷ್ಠನಾದವನು. ೨. ಒಂದು ಬಿರುದು: ಕವಿಪರಮೇಶ್ವರನೆನಿಸಿದ ಕವೀಂದ್ರಚೂಡಾಮಣಿಯ ಕವಿತ್ವಂ (ಸುಕುಮಾ. ೧-೪೧). [ಕವಿ$_5$ + ಪರಮೇಶ್ವರ]

**ಕವಿಪುಂಗವ** (ನಾ). ಕವಿಶ್ರೇಷ್ಠ: ಕವಿಗಳೊಳಾ ಪುರಾಣಕವಿಪುಂಗವರೊಳ್ಪಿದರೀಗಳಿಲ್ಲ ಸತ್ಕವಿಗಳೆನಲ್ಕವೇಡ (ಗದಾಯು. ೧-೪೭); ಭಂಗುರಭಿದುರಚ್ಛಿದುರಪದಂಗಳ್ . . . ಸಂಗತಿವೆತ್ತಿರ್ಕುಂ ಕವಿಪುಂಗವಸಮಯವ್ಯವಸ್ಥೆಯಿಂದಂ (ಕಾವ್ಯಾವ. ೯೪೪). [ಕವಿ$_5$ + ಪುಂಗವ]

**ಕವಿಯಿಸು** (ಕ್ರಿ). ಕವಿಯುವಂತೆ ಮಾಡು: “ತರಿಸಿದಂ, ಬಡಿಸಿದಂ, ಕವಿಯಿಸಿದಂ” (ಭಾಷಾಭೂ. ೨೨೭ ಪ್ರಯೋ). [ಕವಿ$_1$ + -ಇಸು$_3$]

**ಕವಿಯೇಱು** (ನಾ). ರಾತ್ರಿ ಮಾಡುವ ಯುದ್ಧ; ಸೌಪ್ತಿಕ: “ಸೌಪ್ತಿಕಮೆಂಬುದು ಕವಿಯೇಱು” (ಹಲಾಯು. ೭೪-೨೯೮); ಬಂದ ಪೆರ್ಗಡೆಗಳಂ ಜಡಿದು ನುಡಿದು ಕಳೆಯೆ ವಿದ್ಯಾಶಕ್ತಿ ಮುಳಿದು ಕವಿಯೇಱಿಯೊಳಾತನನೆಳಸಿ ನರ್ತಕಿಯಂಕೊಂಡು ಪೋಪುದುಂ (ಚಾವುಂಪು. ೧೬೫); ಕಾದಂಬಸೈನ್ಯಂ ಕವಿಯೇಱಿಂಗೆಂದು ಬಂಕಾಪುರದೊಳಿರಲ್ (ಎಕ. V, ಬೇಲೂರು. ೧೯೩-೩೪; 1161). [ಕವಿ$_2$ + ಏಱು$_5$ (< ಏಱ್$_5$)]

**ಕವಿರಾಜ** (ನಾ). ೧. ಕವಿಗಳಲ್ಲಿ ಶ್ರೇಷ್ಠ. ೨. ಒಂದು ಬಿರುದು: ವನಜಾಕ್ಷಖ್ಯಾತಿಪೂತಂ ಕಥೆ ಕವಿ ಕವಿರಾಜಂ ವಚಸ್ಸುಂದರೀನೃತ್ಯನಿವಾಸಂ . . . ಮೆಚ್ಚೆ ರುದ್ರಾಂಕನೆ ಪೇಟ್ಟಂ (ಜಗವಿ. ೧-೨೨); ಭಾರತದೊಳ್ ಕವಿರಾಜ ಕುಮಾರವ್ಯಾಸಂ ನೆಗಳ್ದ ಶಬ್ದಂಗಳ ನಾನಾರಯಿದುಸುರ್ವೆಂ (ಭಾರನಿ. ೨). [ಕವಿ$_6$ + ರಾಜ]

**ಕವಿರಾಜಮಾರ್ಗ** (ನಾ). ೧. ಕವಿರಾಜರ ಮಾರ್ಗ, —ಸಂಪ್ರದಾಯ. ೨. ಕನ್ನಡದಲ್ಲಿ ಉಪಲಬ್ಧವಾಗಿರುವ ಪ್ರಥಮ ಗ್ರಂಥ; ಒಂದು ಲಕ್ಷಣಗ್ರಂಥ: ಸುನಿಶ್ಚಿತವಾದ ಒಂದು ಸಂಗತಿಯೆಂದರೆ ಕ್ರಿ. ಶ. ೯ನೆಯ ಶತಮಾನದಲ್ಲಿ ರಚಿತವಾದ 'ಕವಿರಾಜಮಾರ್ಗ'ವು ನಮಗೆ ನಿರ್ವಿವಾದವಾಗಿ ದೊರೆತ ಮೊದಲನೆಯ ಗ್ರಂಥ (ಕಸಾಚ. ೫).
[ಕವಿರಾಜ + ಮಾರ್ಗ]

**ಕವಿಲ್$_1$** (ಕ್ರಿ). ಮುತ್ತು; ಆವರಿಸು; ವ್ಯಾಪಿಸು: ಬಿಸಿಗದಿರ್ಗಳ್ ಕವಿಲ್ತೊಡನೆ ಸೂಸಿದುವಾದಮೆ ಸುಪ್ರಭಾತದೊಳ್ (ಸೂಕ್ತಿಸು. ೯-೬೮); ದೆಸೆಗೆ ಕವಿಲ್ತು . . . ಪೊರೆಯೇಱಿ ಕೊರ್ಬಿ (ದಶಕು. ೧-೨೭); ಹೊಗೆ ನಿಮಿರ್ದು ಕವಿಲ್ತು (ಶಾಂತೀಶ್ವ. ೧೪-೧೦೭). [< ಕವಿ$_1$]

**ಕವಿಲ್$_2$** (ಕ್ರಿ). ಕಪಿಲವರ್ಣವಾಗು; ಮಾಸಲುಕೆಂಪುಬಣ್ಣವಾಗು: ಕವಿಲ್ತಿರ್ದುದು ಕೂಡೆ ಸಂಜೆಗವಿದಂತೆ (ಪಂಪಭಾ. ೧೨-೨೫); ಒಗೆಯೆ ಕವಿ[ಪಾಠಾಂ. ವ]ಲ್ತು ಕಾಸೆ ಪೊಸಜನ್ನಿವರಂ (ಅರ್ಧನೇ. ೬-೨೩).
[< ಕವಿಲ್$_3$]

**ಕವಿಲ್$_3$, ಕವಲ್ಕೆ$_2$, ಕವಿಲ$_2$, ಕವಿಲು$_2$** (ನಾ). ೧. ಮಾಸಲುಗೆಂಪು ಬಣ್ಣ; ಕಪಿಲವರ್ಣ: ಸುರವಜರಪ್ರಸೂನ ರಜದಿಂ ಕವಿಲಾದ ಶಿರೋರುಹಂ (ಪಂಪಭಾ. ೧೨-೨೨೧); ಅಗಸಂ ಪೊಳೆವ ಪೊಂಗಱಿಯಿಂ ಕವಿಲಾಗೆ (ಪಂರಾಮಾ. ೧೩-೪೩); ಮಿಂಚಿನ ಬಣ್ಣಮೆಯ್ದೆ ಕವಿಲಾದೊಡೆ ಗಾಳಿಯುಮಕ್ಕು (ಜಟ್ಟಮ. ೬-೧೨). **ಕವಲ್ಕೆ$_2$**: ೨. ಗೂಳಿ; ಎತ್ತು. 'ಕವಲೆತ್ತು' ಪರಾ. **ಕವಿಲ$_2$**: ೧. 'ಕವಿಲಗೆಂಪು' ಪರಾ. **ಕವಿಲು$_2$**: ೧. "ಪಿಂಗಂ ಪಿಶಂಗಂ ಕವಿಲು" (ಮಂಗರಾ. ೧೩೧-೨೧).
ಕವಿಲ್ಗವಿಲ್ (ದ್ವಿರುಕ್ತಿ): ಪಯೋಜರಜಂಗಳೊಳ್ ಕವಿಲ್ಗವಿಲನುಮಾಗಿ ಬಂದ ಮಲಯಾನಿಲನೂದೆ (ಪಂಪಭಾ. ೨-೧೪).
[< ಸಂ. ಕಪಿಲ]

**ಕವಿಲ$_1$** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಕವಿಲರ ಮಗಳ್ದಿರ್ ಸರ್ವಸಜರ ಇಸದಿಗಳ್ಗೆ ಕೊಟ್ಟದು (ಎಕ. VII, ಶಿಕಾರಿ. ೪೫-೬೩; ಸು. 890 ?). [?]

**ಕವಿಲ$_2$** 'ಕವಿಲ್$_3$' ನೋ.

**ಕವಿಲಂದೆ, ಕವುಳಂದೆ** (ನಾ). ಒಂದು ಊರಿನ ಹೆಸರು. ℙ ಈಗಿನ ಕೌಲಂದೆ: ಕಗ್ಗೆರ್ಜಿಯ ಪೆಗ್ಗೆರ್ಯ್ಯಾಡಿಯ ಕವಿಲನ್ದೆಯ ಮುಟ್ಟಿಯ ಬೆಳ್ಳಂವ್ಯಾಡಿಯ (ಎಕ. XII, ನಂಜನ. ೨೬೯-೯೩; 904). **ಕವುಳಂದೆ**: ಇದಕ್ಕೆ ಸಾಕ್ಷಿಮಿಾ ಕಣೂರರು ಅಯಿರಣಕೀಟವರು ಅಣಗರು ಕಟ್ಟಿಯರು ಚಂಗರಸನು ತಲೆಪರಿಯಾ ಕೆಯ್ಯಾಳದೋರ್ ಕವುಳನ್ದೆಯಾರುಂ (ಸೌಇಇ. IX–i, ೪೭-೧೪; 9ನೆಯ ಶತ). [?]

**ಕವಿಲಗೆಂಪು** 'ಕವಿಲ್ಗೆಂಪು' ನೋ.

**ಕವಿಲಬೋಯ** (ನಾ). ಒಬ್ಬಾತನ ಹೆಸರು: ಕವಿಲಬೋಯಸ್ಯ ಗೌತಮ ಗೋತ್ರ ಕುಣ್ಣಶರ್ಮ್ಮಣ (ಇಆ. VII, ೧೮೭-೨೩; 668).
[ಕವಿಲ$_1$ + ಬೋಯ]

**ಕವಿಲು$_1$** (ನಾ). ಒಂದು ಬಗೆಯ ಆಟ: ಚಿಂದು ಜಕ್ಕಡಿ ಕವಿಲು ಗಜಲು ಭೈತು ತುರಿಗೆ ಅಂದೋಳಿತ ಮೊದಲಾದ ಆಟಗಳಿಂ ನೋಟಕರದಿಟ್ಟಿಗೆ ಮಧುರಮಾಗೆ (ವಿರೂಪಾ. ೯೦). [?]

**ಕವಿಲು$_2$** 'ಕವಿಲ್$_3$' ನೋ.

**ಕವಿಲೆ$_1$** 'ಕಪಿಲೆ$_1$' ನೋ.

**ಕವಿಲೆ$_2$** (ನಾ). ಚಲ್ಲಾಪಿಲ್ಲಿಯಾಗುವಿಕೆ (?): ಕಲ್ಲೆಯುಂ ಕವಿಲೆಯುಮಾಗೆ ಡೊಂಬರ ಬೀಡಂ ಕೊಜಿ ಪಾಯ್ವಂತೆ ಕಳಕಳರವಂ ಪೆರ್ಚೆ (ಧರ್ಮಾಮೃ. ೫-೨೦೭); ಕಲ್ಲೆಯುಂ ಕವಿಲೆಯುಮಾಗಿ ನೆರವಿ ಪೆಜಗೆ ಬರೆ (ಧರ್ಮಾಮೃ. ೬-೧೦೪). [?]

**ಕವಿಲೆ$_3$, ಕಉ[ವು]ಲೆ, ಕೌಲೆ, ಕೌವುಲೆ** (ನಾ). ಹಸು; ಕಂದುಬಣ್ಣದ ಕಪಿಲೆ: ಸಾಸಿರಂ ಕವಿಲೆಯಂ ಕೊನ್ದ ಪಾತಕನಕ್ಕೆ (ಮೈಆರಿ. ೧೯೩೬, ೫೩-೬೫; ಸು. 550); ಕವಿಲೆಯ ಸೆಗಣದ ರಸದೊಳಮವುಂಗುರಂ ಬೆರಸಿ ಕುಡಿಗೆ ಮೇಣ್ ಪೂಸುಗೆ. . . ಘೋಣಸಾಹಿ ವಿಷಮುಪಶಮಿಕುಂ (ಲೋಕೋಪ. ೧೦-೨೩); ದಮ್ಮಯ್ಯಾ ನಿಮ್ಮ ಧರ್ಮದ ಕವಿಲೆಯಾನಯ್ಯಾ (ಬಸವ. ೩೫೭); ಹುಲಿ ಕವಿ[ಪಾಠಾಂ. ಪಿ]ಲೆಯ ತಿಂದು ಮಿಕ್ಕುದ ನರಿ ತಿಂಬಂತೆ ಕಾಣಾ (ಚನ್ನವ. ೧೩-೬೭); ಹೊಜಗೆ ವೇಷದ ಕವಿಲೆ ಒಳಗೆ ಹಸುದಿಂಬ ಹುಲಿ (ಸೇದಿರ. ೬೧-೩). **ಕಉ[ವು]ಲೆ**: ಗಂಗೆಯ ತಡಿಯಲು ಕಉ[ವು]ಲೆಯ ಕೊಂದ ಪಾಪದಲಿ ಹೋಹರು (ಎಕ. X, ಚಿಂತಾಮ. ೮೬-೬; 1403). **ಕೌಲೆ**: ಯಿಾ ಕಲ್ಲನೊಡೆದಂಗೆ ಕಿತ್ತಂಗೆ ಕೌಲೆಯಂ ಹಾರುವನಂ ಕೊಂದ ಪಾಪ (ಎಕ. VIII, ತೀರ್ಥಹ. ೨೬-೨೨; 1250). **ಕೌವುಲೆ**: ಇಂತೀ ಧಂಮ್ಮ್ರಮ ಪ್ರತಿಪಾಳಿಸದಂಗೆ ಗಂಗೆ ವಾರಣಾಸಿಯಲ್ಲಿ ಕೌವುಲೆಯಂ ಬ್ರಾಹ್ಮಣರುಮಂ ಕೊಂದ ಫಲಮಕು (ಎಕ. XI, ದಾವಣ. ೮೪-೬೫; 1161).
ಕವಿಲೆಯಕಲ್ = ಗೋಕಲ್ಲು; ಕರುಗಲ್ಲು: ಮೂಡಣಮೇರೆ ಮಂಗಳೂರ ಹೊಲವೇರೆಯೊಡವಿನಕೊತ್ತುರ ಹೊರೆಯಣ ಕವಿಲೆಯಕಲ್ (ಶಾಸಪ. ೬೪); ಆ ಕೆಯ್ಗೆ ಗುಡ್ಡೆ ಈಶಾನ್ಯದೊಳ್ ಕವಿಲೆಯಕಲ್ ಆಗ್ನೇಯದೊಳ್ (ಎಇ. XVI, ೫೬-೩೨; 1053). ಕವಿಲೆಯಕಲ್ಸರ = ಕವಿಲೆಯಕಲ್ (?): ತೆಂಕಣೇರಿಯ ಮೇಗಣ ಕವಿಲೆಯಕಲ್ಸರಮಲ್ಲಿಂ ಮೂಡಲ್ಸೇತುಕೋಟಿವರಂ ಮೇರೆಯಾಗೆ (ಎಕ. VIII, ಸಾಗರ. ೧೦೮-೪೩; 1042). [<ಸಂ. ಕಪಿಲಾ]

**ಕವಿಲೆದುಱು** (ನಾ). ಕಂದುಬಣ್ಣದ ಹಸು; ಕಪಿಲಾಧೇನು: ಆ ಎನ್ನ ಪೂಜೆಯ ಕವಿಲೆದುಱುವಂ ಆ ಎನ್ನ ಮುದ್ದಿನೆಳಗಱುವಂ ಬಡವಾಗದಂತು ಪೇೞ್ದು (ರಾಮಾಶ್ವ. ೩೮-೨೫).
[ಕವಿಲೆ$_3$ + ತುಱು]

**ಕವಿಲೆವಣ್ಣ** (ನಾ). ಕವಿಲೆಬಣ್ಣ; ಚಿನ್ನದಬಣ್ಣ: "ಕವಿಲೆವಣ್ಣಮೆನೆ ಪೊಂಬಣ್ಣಮೆಂದು" (ಕಬ್ಬಿಕೈ. ೨೫); "ಕವಿಲೆವಣ್ಣಮೆಂದು ಪೊಂಬಣ್ಣಂ" (ಕಶಸಾ. ೧೧-೨೨೧). [ಕವಿಲೆ$_3$ + ಬಣ್ಣ]

**ಕವಿಲ್ಗಣ್** (ನಾ). ಕವಿಲೆಬಣ್ಣದ ಕಣ್ಣು; ಹೊಂಬಣ್ಣದ ಕಣ್ಣು: ಒಳಪೊಕ್ಕ ಕವಿಲ್ಗಣ್ಣಗುರ್ವಿನಿಂ ಕೆಂದಲೆಯಿಂದಕ್ಕುಳಿಸಿದ ಬಸುಱಿಂ ಕರಮಂ ತಿರುಪಿದ ಮರುಳನವರ ಕಯ್ಗಳ ಕರುಳಂ (ಬಂಹರಿ. ೨-೧೪).
[ಕವಿಲ್$_3$ + ಕಣ್]

**ಕವಿಲ್ಗೆಂಪು, ಕವಿಲಗೆಂಪು** (ನಾ). ಕಂದು ಮಿಶ್ರವಾದ ಕೆಂಪು; ಪಿಂಗಳವರ್ಣ: ಈಶಾನನ ಜಡೆಗಳವೊಲ್ಕಾಯ್ದ ಪೊನ್ನೀರ್ಗವಿಲ್ಗೆಂಪಿನ [ಪೆಂಪಂ] ಸಿಂಪಿಸುತ್ತಿರ್ದ ಹಿಮರುಚಿಗಳಂ (ಕಾದಂಉ. ೩೭೪). **ಕವಿಲಗೆಂಪು**: "ಬಭ್ರುವೆಂಬುದು ಕವಿಲಗೆಂಪು" (ಹಲಾಯು. ೧೨೧-೫೧). 'ಕಪಿಲಗೆಂಪು' ಪರಾ.
[ಕವಿಲ್$_3$ + ಕೆಂಪು$_1$]

**ಕವಿಲ್ವಣ್ಣ** (ನಾ). ಕಪಿಲವರ್ಣ: "ಕಪಿಲವರ್ಣಮೆನಿಕ್ಕುಂ ಕವಿಲ್ವಣ್ಣಂ" (ಚತುನಿ. ೭೭). [ಕವಿಲ್$_3$ + ಬಣ್ಣ]

**ಕವಿಲ್ಮೊಗೆ** (ನಾ). ಕಪಿಲವರ್ಣದ ಹೊಗೆ; ಮಾಸಲುಗೆಂಪಿನ ಹೊಗೆ: ಹೋಮಧೂಮದ ಕವಿಲ್ಮೊಗೆ ಪರ್ಬಿ ದಿಗನ್ತರಾಳದಿಂ ವ್ಯೋಮಮನೆಯ್ದೆ ನೀಳ್ದಿಸವುದು (ಸೌಇಇ. XI–ii, ೧೩೪–೮; 1087); ಕವಿವ ಕುಬೇರ ಧೂಪದ ಕವಿಲ್ಮೊಗೆಯಂ ನವಮೇಘಮಾಲಿಕಾನಿವಹಮೆಗೆತ್ತು (ಕಾವ್ಯಾವ. ೭೧೧). [ಕವಿಲ್$_3$ + ಪೊಗೆ$_2$]

**ಕವಿವೃಷಭ** (ನಾ). = ಕವಿಪುಂಗವ: ಸಮಸ್ತ ಕವಿವೃಷಭ ದೂರದೂಷಿತ ಮಾರ್ಗಂ (ಕವಿರಾ. ೧–೭೭). [ಕವಿ$_5$ + ವೃಷಭ]

**ಕವಿಶಿಷ್ಯ** (ನಾ). ಶುಕ್ರಾಚಾರ್ಯನ ಶಿಷ್ಯ; ರಾಕ್ಷಸ: ಮಾರಾಂತ ಕವಿಶಿಷ್ಯರೆಲ್ಲರಂ ಗೆಲ್ದು (ಕುಮಾವಿ. ೫೩). [ಕವಿ$_5$ + ಶಿಷ್ಯ]

**ಕವಿಸಮಯ** (ನಾ). [ಕಾವ್ಯಮೀ] ಲೋಕದಲ್ಲಿ ವಸ್ತುತಃ ಇಲ್ಲದಿರುವ ಕೆಲವು ವಿಷಯಗಳನ್ನು ಕಾವ್ಯದಲ್ಲಿ ಒಂದೇ ರೀತಿಯಾಗಿ ಹೇಳುತ್ತಾ ಕವಿಗಳು ರೂಢಿಗೆ ತಂದಿರುವ ಸಂಪ್ರದಾಯ: ಅತತ ಸತ್ಕವಿಸಮಯಂ ಜಾತಿದ್ರವ್ಯಕ್ರಿಯಾಗುಣಾಶ್ರಯಮಸದಾಖ್ಯಾತಿ ಸದ ಕೀರ್ತನಂ ನಿರ್ಣೀತಂ ನಿಯಮಾರ್ಥಮ್ಮೆಕ್ಕಮೆನೆ ನಾಲ್ಕುತೆಱಂ (ಕಾವ್ಯಾವ. ೮೫೫). [ಕವಿ$_5$ + ಸಮಯ]

**ಕವಿಸು** (ಕ್ರಿ). ೧. ಆವರಿಸು; ಹೊದಿಸು; ಮುಚ್ಚು: ರಣಚಮತ್ಕೃತಿ ಸುರರ ನಯನಾಂಗಣಕೆ ಕವಿಸಿತು ಕೌತುಕಾಂಬುಧಿಯ (ಕುವ್ಯಾಭೀ. ೪–೨); ಅಱುವೆಯ ಮೇಲೆ ಮಡಗಿ ಮೇಲೊಂದು ಕಳಸಿಗೆಯ ಕವಿಸಿ [ಪಾಠಾಂ. ಚಿ] (ಸೂಪಶಾ. ೩–೫); ಮೂರ್ಛೆಯ ಕವಿಸಿದಳು (ಮೋಹತ. ೩೧–೧೭). ೨. ಮೇಲೆ ಬೀಳುವಂತೆ ಮಾಡು; ಎರಗಿಸು; ಧಾಳಿ ಮಾಡು: ಕುನ್ನಿಗಳ ಕವಿಸು ಬೆನ್ನಡಗನುಱೆ ತಿನಿಸು (ಹಚಶಾ. ೭–೯); ನರಹುಳುಗಳಿವದಿರ ಕವಿಸಿ ಕಾಲವ ಕೊಲುವುದೇ (ಕುವ್ಯಾದ್ರೋ. ೨–೪೩); ಪವನಜನ ಕೈಘಾಸಿಗಾನದ ಬವರಿಗರನೀಕ್ಷಿಸುತ ರಥವನು ಕವಿಸಿದನು (ಕುವ್ಯಾಭೀ. ೫–೧೭). [ಕವಿ$_1$ + –ಸು$_1$]

**ಕವಿಹೃದಯ** (ನಾ). ಕವಿಯ ಮನಸ್ಸು: ಉತ್ತಮ ಗದ್ಯ ಕೂಡ, ಕವಿಹೃದಯದಿಂದ ತಡೆಯಿಲ್ಲದೆ ಹೊರಹೊಮ್ಮಿ . . . ಕಾವ್ಯವೆನಿಸುವುದು (ಸಂಶೋಧ. ೯೪). [ಕವಿ$_5$ + ಹೃದಯ]

**ಕವಿಳಾಸ** (ನಾ). ಕೈಲಾಸ: ಮನಂ ಬೆದಱೆ ಪೊಡವಟ್ಟನಂ ಬೇಗ ಶೀಘ್ರಂ ಕೊಂಡು ಬಾ ಕಂಡಾ ಎಲೆ ಪುಣ್ಯವೇ ಕವಿಳಾಸಕೆ (ಎಇ. XXIII, ೩೦–೧೭; 1765); ಮಲ್ಲಯನು ಹಲುಕೂರ ಬಾಗಿಲಲು ಕಾದಿ ಕವಿಳಾಸ ಪ್ರಾಪ್ತನಾದನು (ಮೈಆರಿ. ೧೯೩೭, ೧೪–೫; 1280). [< ಸಂ. ಕೈಲಾಸ]

**ಕವುಂಕುೞ್**, ಕಂಕುಳು, ಕಂಕುಱು, ಕೊಂಕುಳು, ಕೌಂಕುಳ್, ಕೌಂಕುೞ್ (ನಾ). ೧. ಬಗಲು; ಕಕ್ಷಪುಟ: "ಕವುಂಕುೞ್ – ಕೌಂಕುೞ್" (ಶಮುದ. ೧೫೭ ಪ್ರಯೋ). **ಕಂಕುಳು:** ೧. "ಕಂಕುಳೊಳು ಪೊದಱೆನೊಳು ಕಕ್ಷಾಭಿಧಾನಮಕ್ಕುಂ" (ಮಂಗರಾ. ೧೪೩–೨೨); ಕಂಕುಳೊಳಿಱುಂಕುವಂತಳವಡಿಸಿ ನಿತ್ಯ ಪಡಿವೊನ್ನಂ (ನಂಬರ. ೮–೭೫); ನಿರುತ ಕಂಕುಳ ಕುಶೆಯ ಕರಡಿಗೆ (ಸಂಭಪ. ೫–೭೪); ಕೆಡೆದ ರವಿಜನ ಕುಂಭಕರ್ಣನು ಹಿಡಿದು ಕಂಕುಳೊಳವುಚಿಕೊಂಡನು (ಕೌಶಿರಾ. ೨೫–೨೫); ಎಡದ ಕಂಕುಳೊಳೊಲಿದಿಱುಕಿದ ಪಚ್ಚಡದ ಜಚ್ಚು (ಭರಚ. ೪–೩); ಕಂಕುಳಲ್ಲಿ ದೊಣ್ಣೆ ಕೈಯಲ್ಲಿ ಶರಣಾರ್ತಿ (ಗಾದೆ). ೨. (ಮರದಲ್ಲಿ) ಕಾಂಡ ಮತ್ತು ರೆಂಬೆಗಳ ಸಂದು. **ಕಂಕುಱು:** ೧. "ಕಕ್ಷಗಳು – ತೋಳ ಮೊದಲುಗಳ್ ಎರಡೂ, ಕಂಕುಱು" (ನಾಚಿರಾ. ೬). **ಕೊಂಕುಳು:** ೧. ನರಕಕೀಳವಂದದಲಿ ಭೂಮಿಯ ಶಿರವ ಕೊಂಕುಳಲಿಕ್ಕಿ ದೈತ್ಯನು ಧರೆಯ ಕ್ಷೋಭೆಯಲಿ (ಸಂಭಪ. ೭–೫ ಅಧಿಕ); ಕೊಂಕುಳಲ್ಲಿ ಕುರು ಸಲ್ಲ ಕೊಂಕಣಿಗರ ನೆರೆ ಸಲ್ಲ (ಗಾದೆ).

**ಕೌಂಕುಳ್:** ಕಳಶಸ್ತನ ಬಾಹುಮೂಲ ನಿರ್ಮಳದ ಕೌಂಕುಳ ತೋಳ ನೆಗಹಿ ನೀರೆಱೆಯೆ (ಮೋಹತ. ೨–೩೦); ಒಂದು ದಿನ ಒಬ್ಬ ಸಿದ್ಧನು ವಿಭೂತಿಯಂ ಪೂಸಿ, ರುದ್ರಾಕ್ಷಿ ಸರವಂ ಧರಿಸಿ, ಕೌಂಕುಳಲ್ಲಿ ಜೋಗವಟ್ಟಿಗೆಯನಿರುಕಿ (ಬತ್ತೀಸ. ೫೩). **ಕೌಂಕುೞ್:** ೧. "ಕಕ್ಷಂ, ಬಾಹುಮೂಲಂ – ಈ ೨ ಕೌಂಕುೞ್" (ಹಲಾಯು. ೮೭–೩೭೧); "ಕವುಂಕುೞ್ ಕೌಂಕುೞ್" (ಶಮುದ. ೧೫೭ ಪ್ರಯೋ).

[ದೇ. ‖ ತಮಿ. ಕಮುಕ್ಕಟ್ಟು; ತುಳು. ಕಂಕುಳ; ತೆಲು. ಕೌಂಗಿಲಿ, ಕವುಗಿಲಿ = ಎದೆ; ಪರ್ಜಿ. ಕವ್ಕೊರ್, ಕವ್ಕೊಡ್]

**ಕವುಂಗಿನಿ** (ನಾ). ಒಂದು ಬಗೆಯ ಮರ: ಕಾಗೆದೊಂಡೆ ಕಹಿದೊಂಡೆ ಕವುಂಗಿನಿ ಹಾಲೆಯೇಲೆ (ಸೂಕ್ತಿಸು. ೩–೨೭). [?]

**ಕವುಂಗು**, ಕಂಗು$_2$, ಕೌಂಗು (ನಾ). ಅಡಕೆ; ಪೂಗ: ಕವುಂಗುಂ ತೆಂಗುಂ ಪಡಲಿಟ್ಟುವು (ಶಾಂತಿಪು. ೧೧–೧೭೩); ಪಣ್ಗೊನೆಗಳಿಂ ಗೊನೆಗೊಂಡ ಕವುಂಗು ಕಾಯ್ಗಳಿಂ ತುಱುಗಿದ ತೆಂಗು (ಸುಕುಮಾ. ೯–೪೭); ತಡಿವಿಡಿದೊಪ್ಪುವಾಮ್ರಮುರನೇಱಿಲಶೋಕೆ ಕವುಂಗು ತೆಂಗು (ಗಿರಿಕ. ೫–೧೭); ಕದಳಿ ಕಕ್ಕೆ ಕವುಂಗು ಕಮ್ಮರ . . . ಮಹೀಜಗಳರಸಿ ನೋಡು (ತೊರರಾ. ೩–೧–೨೭). **ಕಂಗು$_2$:** ದ್ವಿಖಣ್ಡುಕ ಕಂಗುಕ್ಷೇತ್ರಂ (ಮೈಆರಿ. ೧೯೪೨, ೩೪–೭೧; ೨ನೆಯ ಶತ); ಅಂಗಳದ ಮುಂದೆ ತೆಂಗು ಕಂಗುಗಳ ಸಣ್ಣ ತೋಟ (ಬಾಳಿಗಿ. ೯); ಪಿಲ (ಹಲಸು), ಪಿಜ (ಹೆಬ್ಬಲಸು), ಕಂಗು (ಅಡಿಕೆಮರ) (ತುಳುನಾ. ೧೫೩). **ಕೌಂಗು:** "ಪೂಗಂ ಪ್ರಜಮುಂ ಕೌಂಗುಂ" (ವಸ್ತುಕೋ. ೧೨೭–೫೧); ಪಣ್ಗೊಲೆಯಿಂ ಬಳ್ಕುವ ಕೌಂಗು (ಆದಿಪು. ೧–೭೭); ಕಳ್ಳಿಯಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ (ಧರ್ಮಾಮೃ. ೮–೫೧).

[< ಸಂ. ಕ್ರಮುಕ]

**ಕವುಂಜು** 'ಕವಿಂಜ' ನೋ.

**ಕವುಂಡೆ**, ಕೌಂಡೆ (ನಾ). ಒಂದು ಬಗೆಯ ಮರ: "ಕವುಂಡೆ, ಕೌಂಡೆ" (ಶಮುದ. ೧೫೭ ಪ್ರಯೋ); ನಯನಜಲಂಗಳುಣ್ಮುವೊಡೆ ಬಿಕ್ಕುವೊಡಂ . . . ಕವುಂಡೆ [ಪಾಠಾಂ. ಕೌಂಡೆ]ಯ ರಸಮಕ್ಕೆ (ಲೋಕೋಪ. ೯–೨೦೫). **ಕೌಂಡೆ:** "ಕೌಂಡೆ [ಪಾಠಾಂ. ಕಳುಡೇ] ಕುಂಡಿನಿಯಕ್ಕು" (ಮಂಗರಾ. ೪೧–೩೩). [?]

**ಕವುಂದಿ**, ಕವದಿ, ಕವಿದಿ, ಕವುದಿ, ಕೌಂದಿ, ಕೌದಿ (ನಾ). ಕಂತೆ; ತುಂಡು ಬಟ್ಟೆಗಳನ್ನು ಕೂಡಿಸಿ ಹೊಲಿದ ಹಚ್ಚಡ; (ಎತ್ತಿನ ಬೆನ್ನಿಗೆ ಹಾಕುವ) ಸಬರ: "ಕಂಥೆ ಕವುಂದಿ" (ವಸ್ತುಕೋ. ೫೦–೩೧). **ಕವದಿ:** ಕಾವಿಬಣ್ಣದ ಕವದಿಯ ಜೋಳಿಗೆಯ ಕುಂಟುಕಾಲಿಗೆ ವೈದ್ಯ (ಹುಚ್ಚಾಟ. ೨೮). **ಕವಿದಿ:** "ಕಂತೆ – ಕವಿದಿ" (ನಾಚಿರಾ. ೬). **ಕವುದಿ:** "ಕವುದಿಗಳೆಯ್ದೆ ಸಬರಮಕ್ಕು" (ಮಂಗರಾ. ೧೧೨–೩); ಕವುದಿಗಳಂ ಹೊಲಿವ ಕಾಯಕವೆ ತನಗಾಗಿ (ಬಸಪು. ೨೩–೩); ಕವುದಿಗೆ ಹಲ್ಲು ಬಂದಂತಾಡಿಸುವುದು ಕಾಲವೊ ಕರ್ಮವೊ (ಭರಚ. ೪೮–೯೧); ಮೂಱೆಳೆಯನುಟ್ಟಾತ ಹಾಱುವಡೆ ಸ್ವರ್ಗಕ್ಕೆ ನೂಱೆಂಟು ಎಳೆಯ ಕವುದಿಯನು ಹೊದ್ದಾತ ಹಾಱನೇಕಯ್ಯ (ಸರ್ವಜ್ಞ. ೯೨೭); ಎತ್ತು ಹಾರುವುದಕ್ಕಿಂತ ಮುಂಚೆ ಕವುದಿ ಹಾರಿತು (ಗಾದೆ). **ಕೌಂದಿ:** ಅಂತೆಯಾಗಲಿಯೆಂದು ಕೌಂದಿಯಂ ವುಟ್ಟಿರಲು (ಪ್ರಭುಪು. ೮–೯೭). **ಕೌದಿ:** ೪ ಕೌದಿಗೆ ಮೂಲೆ ಘಂಟೆ (ಎಕ. XIV, ನಂಜನ. ೨೮೯–೨೦; 1847); ಯಾನ ಎತ್ತು ಕುದುರೆ ಮೊದಲಾದವರ ಸ್ಥಾನ ಏರುವ ಬಳಿಯು ಅಸನ ಕೌದಿ ಹಲ್ಲಣ ಮೊದಲಾದವರ ಆಸಕ್ತಿ ಹೊಂದಿ ಕುಳ್ಳಿರುವಲ್ಲಿ ವೈಕಲ್ಯಂ ಶಕ್ತಿಯಿಲ್ಲದಿರೂಣವು (ಬಾಹಟೀ. ೨–೪–೫೧ ವ).

[ದೇ. ‖ ತಮಿ. ಕವನ್ದಿ, ಕವನ್ದಿಗ್ಗೆ; ಮಲ. ಕವಿಯನ್]

**ಕವುಚು$_1$** 'ಕವಿಚು$_1$' ನೋ.
**ಕವುಚು$_2$** 'ಕವಿಚು$_2$' ನೋ.
**ಕವುಚು$_3$** (ನಾ). ದುರ್ನಾತ; ದುರ್ವಾಸನೆ: ಕಂಕುಳೆಂಬುದು ಕವುಚಿನ ತವರುಮನೆ (ಅವಚಂ. ೧೦೪-೪೭೪); ಕಕ್ಷವೆಂಬುದು ಕವುಚಿನ ತವರು ಮನೆ (ಅವಚಂ. ೧೮೭-೮೪೨).
[ದೇ. ‖ ತಮಿ. ಕವಿಚ್ಚು; ತೆಲು. ಕವುಚು, ಕೌಚು]
**ಕವುಜಗ** 'ಕವಿಂಜ' ನೋ.
**ಕವುಜು** 'ಕವಿಂಜ' ನೋ.
**ಕವುಟೆಕಾಯಿ** 'ಕವಡೆಕಾಯಿ' ನೋ.
**ಕವುಡೆ** 'ಕವಡೆ$_3$' ನೋ.
**ಕವುತುಕ** (ಗು). ಆಶ್ಚರ್ಯಕರವಾದ; ಕುತೂಹಲವನ್ನು ಹುಟ್ಟಿಸುವ: ಭೂತಳ ಭೂನುತೆ ರುಗುಮಿಣಿಯಂಬಳ ಕವುತುಕ ಕಥೆಯನು ಕೇಳೀ (ಕಾಮುಕ. ೧-೧೫). [< ಸಂ. ಕೌತುಕ]
**ಕವುದಿ** 'ಕವುಂದಿ' ನೋ.
**ಕವುರ್$_1$** (ಕ್ರಿ). ಸ್ಪಂದಿಸು; ಹೊಯ್ದಾಡು (?): ಭೀಕರಾರಣ್ಯಸಂಚಾರ ಪದಶ್ರಾಂತಂ ಬೃಹತ್ಕರ್ದಮಿತ ತನು ಕವುರ್ವಳ್ಳೆ [ಪಾಠಾಂ. ವೊರ್ಱೀಚಿ] ಕಂದಾವಳೀಲೋಲುಪಂ ... ದೀರ್ಘದೇಹಂ ವರಾಹಂ (ಸೂಕ್ತಿ ಸು. ೩-೩೬). [?]
**ಕವುರ್$_2$** (ನಾ). (ಕುದುರೆಗಳಿಗೆ ಪ್ರಸಿದ್ಧವಾದ) ದೇಶಗಳಲ್ಲಿ ಒಂದು (?): ಖರ ಗಂಧರ್ವ ಕವುರ್ ಖರೋಷ್ಟ ವಿಭವಂ ಕಾಂಭೋಜ ಜಾಳಂಧರಂ ತುರಗಂ ... ಸೇಹುಣಮಾದಿಯಾಗಲಿನಿತುಂ ಕ್ಷೇತ್ರಂಗಳೊಳ್ ಪುಟ್ಟುಗುಂ (ಅಶ್ವಶಾ. ೬-೭೭). [?]
**ಕವುರಿ** (ನಾ). ಒಂದು ಬಗೆಯ ಸಸ್ಯ (ಕ). [< ಸಂ. ಕವರೀ ?]
**ಕವುರು** 'ಕಮುಱು$_2$' ನೋ.
**ಕವುಲು** 'ಕೌಲು$_2$' ನೋ.
**ಕವುಲುಕರಾರು** 'ಕೌಲುಕರಾರು' ನೋ.
**ಕವುಲುಮರ** (ನಾ). ಒಂದು ಬಗೆಯ ಮರ: ಗವುಜಲ್‌ಮರ, ಕವುಲು ಮರ... ಕಾವಲ್, ಹೆಣ್ಣುಮತ್ತಿ (ವೈಔಗಿ. ೧೮-೩೧೯). [? + ಮರ$_1$]
**ಕವುಷಲಿಪಿ** (ನಾ). ಒಂದು ಬಗೆಯ ಲಿಪಿ: ಕಾಕಲಿಪಿ, ಕವುಷಲಿಪಿ, ನಿಗಮಲಿಪಿ ... ಯಿಾ ಅಗಣಿತಲಿಪಿಗಳ ನೋಡಲರಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತ್ತಿದ್ದರು ವಿದ್ವಾಂಸರುಗಳೆಲ್ಲಾ (ಭಾಸ್ಕರ. ೭೭-೫). [ಕವುಷ ? + ಲಿಪಿ]
**ಕವುಸ್ತುಭ** (ನಾ). = ಕೌಸ್ತುಭ: ಕಲ್ಲಪ್ಪ ಹೇಮಸಾಗರದಲ್ಲಿಯ ಕವುಸ್ತುಭಮಿದೆನಿಪ ಕಮಳಾಭರಣದ ಕಲ್ಲಪ್ಪ ರುಚಿರಕಳೆಗಳ ಕಲ್ಲಪ್ಪನ (ಎಕ. XI, ಹೊಳಲ್ಕೆ. ೧೩೬-೬೬; 1307). [< ಸಂ. ಕೌಸ್ತುಭ]
**ಕವುಳಂದೆ** 'ಕವಿಲಂದೆ' ನೋ.
**ಕವುಳಗೋಲ್** 'ಕವಲ್ಗೋಲ್' ನೋ.
**ಕವುಳಿಗ** (ನಾ). ಮೋಸಗಾರಿಕೆ; ಡಂಭಕತನ: ನೋಡೆಲವೊ ಬಗೆದ ಕೋಪಾಟೋಪ ಮನ್ನವನ ಕವುಳಿಗವಿದಲ್ಲೆಂದನು (ತುರಂಗ. ೬೩-೮).
[< ಸಂ. ಕೌಲಿಕ]
**ಕವುಳು, ಕೌಳು$_2$** (ನಾ). ಕೆನ್ನೆ; ಕಪೋಲ; ಗಲ್ಲ: ಅವಳ ಕವುಳನ್ನು ಚಿವುಟಿ, ಒಳಕ್ಕೆ ಹೋದಳು (ಮುಗಿಯು. ೨೪೮); ಕವುಳುಗಳನ್ನು ಮೂಗು ಬಾಯಿಗಳಿಂದ ಪ್ರತ್ಯೇಕಿಸುತ್ತ, ಗೆಲವಿನಿಂದ ಕೂಡಿದ ಎರಡು ಗೀರುಗಳು (ಕಬಸಾ. XVI ಪೀಠಿಕೆ). **ಕೌಳು$_2$**: ಹಣೆಗೆ ಇಷ್ಟು ಕುಂಕುಮ, ಕಣ್ಣಿಗಿಷ್ಟು ಕಾಡಿಗೆ, ಕೌಳಿಗಿಷ್ಟು ಅರಿಸಿನ ಹಚ್ಚದಿದ್ದರೆ (ಬಾಲಪ್ರ. II, ೯೮೩).
[ದೇ.‖ ತಮಿ. ಕವುಳ್; ಮಲ. ಕವಿಳ್, / ಸಂ. ಕಪೋಲ]

**ಕವುಳುಡೆ, ಕೌಳುಡೆ** (ನಾ). ಮೆತ್ತೆ; ದಿಂಬು; ಲೋಡು: ಕನಲಂಬಾ ತಲೆಗಿಂಬೆನೆ ಕವುಳುಡೆ ಶರಮಂಚವೆರಸದಂತಿಯ ಹಾಸಂಬಿವು ಬಾಣಂ ಬಿಡದೆಸೆದಿರೆ (ಗದಾಯು. ೫-೩೯); ಕವುಳುಡೆ ಧವಳಚ್ಛತ್ರಮುಮಿವೊಪ್ಪೆ ಪಾಸಂ ಸಮಂತು ಪಾಸುವುದದಱೊಳ್ (ಮದಕ. ೧೦-೨೨). **ಕೌಳುಡೆ**: "ಮೂಡಾವಿಯೆಂದುಂ, ಕೌಳುಡೆಯೆಂದುಂ, ಮಲಗು" (ಕಶಸಾ. ೧೭-೩೨೪); ಬೆಳ್ಪೆಸೆದಿರ್ದ ಕೌಳುಡೆಯನೊಂದಂ ನೆಮ್ಮಿ ಕುಳ್ಳಿರ್ದ ಕೋಮಳೆಯಂ (ಕಾದಂಪೂ. ೧೦೧೩); ಹೈಮವತಿಯ ಕೌಳುಡೆಗಳೊ ನವಕಾಂತಿಲಕ್ಷ್ಮಿ ಸಂತಸದಿರ್ಪಡೆಗಳೊ (ಗಿರಿಕ. ೧೦-೫೮); ಅಂಚೆದುಪ್ಪುಳುವಾಸು ಕೌಳುಡೆ ಮಲಗು ಪೊಣ್ಮಂಚಿಯ ಮೇಲ್ಗಟ್ಟು (ಭರಚ. ೧೫-೨೭); ಸಿರಿಪೊಡವಿರಾಣಿಯರ ಕರ್ಬಟ್ಟೆಯ ಕೌಳುಡೆಗಳಂತೆಯುಂ ತೋರ್ಕೆವೆತ್ತ ತೋರದೊಡೆಗಳಿಂ (ಚಕವಂ. ೩೨-೨೧). [?]
**ಕವುಱಿಡು, ಕೌಱಿಡು** (ಕ್ರಿ). ಸುಟ್ಟವಾಸನೆ ಹೊಡೆ; ಹೊಗೆನಾತ ಬಡಿ: ಕೈಗೊಳ್ಳಿಯಲಿ ಕವುಱಿಡಲು [ಪಾಠಾಂ. ಕೌಱಿಡಲು] ಸುಟ್ಟರು ಮೋಱೆಗಳ (ತೊರರಾ. ೬-೧೧-೯). **ಕೌಱಿಡು**: ತೊಡೆದ ಭಸಿತಂ ಧೂಮವಿಡೆ ಮೆಯ್ಯ ರೋಮ ಕೌಱಿಡೆ (ಹಚಕಾ. ೨-೩೩); ಉರಿದವರಸನ ನಖನಿಕರ ಹೊಗೆವೆರಸಿ ಕೌಱಿಡಲೋಡಿ ಹೊಕ್ಕರು ನರ ವೃಕೋದರರು (ಕುವ್ಯಾಗ. ೧೧-೬೭); ಮೋಱೆಗಳ ಮೀಸೆಗಳ ಗಡ್ಡವ ಕೌಱಿಡಲು ಸುಡಬೇಕು (ತೊರರಾ. ೫-೬-೩೭); ಮಿಕ್ಕು ಸೂಸುವ ತೂಱುಗಿಡಿಗಳ ಕಣಾಳಿಗಳ ಕೌಱಿಡುವ ಪೊತ್ತುಗೆಗಳ (ಜೈಮಿಭಾ. ೧೩-೧೨).
[ಕವುಱು (< ಕಮುಱು$_2$) + ಇಡು$_1$]
**ಕವುಱು** 'ಕಮುಱು$_2$' ನೋ.
**ಕವುಱೇಳ್, ಕೌಱೇಳ್, ಕೌಱೇೞ್** (ಕ್ರಿ). ಸುಟ್ಟವಾಸನೆ ಹೊಡೆ; ಹೊಗೆನಾತ ಬಡಿ: ಸೂರ್ಯಂ ಕ್ಷುಧಾಪೀಡಿತನಱಸುತೆ ಕೆಯ್ಯಿಡೆ ನಿಸ್ಸಾರ ಕಾಷ್ಠಪ್ರಸರಂ ಕವುಱೆಳ್ದುದೋ [ಪಾಠಾಂ. ಕೌಱೆಳ್ದುದೋ] (ಗಿರಿಕ. ೯-೨೮). **ಕೌಱೇಳ್**: ಕೇಸುರಿಯ ಕಿಡಿಗಳ ಗಡಣದಲಿ ಕೌಱೆದ್ದು (ಕುವ್ಯಾಅ. ೨೦-೬೧). **ಕೌಱೇೞ್**: ಚಂದ್ರನ ಕರ್ಪೂರರಮನಾಂ ಬಿಸುಟ್ಟೆನದಱೊಳ್ ಕೌಱೇೞ್ದಂತಿರ್ಪವೋಲ್ (ದಶಕು. ೧೦-೧೨).
[ಕವುಱು (< ಕಮುಱು$_2$) + ಏಳ್$_1$ (< ಏೞ್$_1$)]
**ಕವೆ** (ನಾ). ೧. ಕವಲಾಗಿರ್ಪುವ ಮರದ ಕೋಲು; ಕವೆಗೋಲು: ಹೊತ್ತ ಕೊಂಗವ ಇಳುಹುವರಿಲ್ಲ ಸಡ್ಡೆಗೆ ಮೂಱು ಕವೆ ವೊಂದೆ ಬಿತ್ತವಟ್ಟ (ಕಲ್ಯಾಶಾಂ. ೧೦೨-೬); ಹಾಕಿದಿಚ್ಚಣಿಗೆಯ ಕಂಡು ಸುವೀರರು ನೂಂಕಿ ಕವೆಗಳಿಂದಲೊತ್ತೆ (ಅನಂಚ. ೧೮-೭೩). ೨. (ಆಲಂ) ಎರಡು ಮಾತು; "ಮೋಸ, ತಟವಟ" (ಹದಿಬ. ಕೋಶ): ಪವಣಿಲ್ಲದೆ ಪಲವಗೆ ಮಾತನಾಡದೆ ಕವೆಕೋಡುಗಳನು ಕಾಣಿಸದೆ (ಹದಿಬ. ೩-೨೪).
[ದೇ. ‖ ತಮಿ. ಕವೈ; ಮಲ. ಕವ; ತುಳು. ಕಬೆ]
**ಕವೆಕಡ್ಡಿ, ಕವೆಗಡ್ಡಿ** (ನಾ). = ಕವೆಗೋಲ್ ೧: ಬಸರಿಯರು ಸತ್ತರೆ ಅವರನ್ನು ಕಾಡುಗಿಡದಲ್ಲಿರಿಸಿ ಕತ್ತಿನ ನೇರಕ್ಕೆ ಕವೆಕಡ್ಡಿಯನ್ನು ಕೊಟ್ಟು ಎಲೆ ಮುಚ್ಚಿ ಗಡಿಗೆಯಲ್ಲಿ ನೀರಿಟ್ಟು ಬಂದುಬಿಡುತ್ತಿದ್ದರು (ಹುಟ್ಟಹ. ೬೮). **ಕವೆಗಡ್ಡಿ**: ಹಿಟ್ಟಿನ ದೊಣ್ಣೆ, ಕವೆಗಡ್ಡಿಗಳು ... ಎಲ್ಲವನ್ನೂ ಹೊರಗೆಸೆದು (ಸರ್ಪಮಂ. ೧೬). [ಕವೆ + ಕಡ್ಡಿ]
**ಕವೆಗಡ್ಡಿ** 'ಕವೆಕಡ್ಡಿ' ನೋ.
**ಕವೆಗೋಲ್, ಕಬೆಕ್ಕೋಲು, ಕವೆಗೋಲು** (ನಾ). ೧. ಕವಲಾಗಿರುವ ಕೋಲು. ೨. ಕವಲು ಬಾಯುಳ್ಳ ಒಂದು ಆಯುಧ: ಕವೆಗೋಲಿಂ ತಿವಿದಿಕ್ಕಿ ಕಕ್ಕಡೆಗಳಿಂ ಕೈಯಿಟ್ಟಯಿಂದಿಟ್ಟು (ಚಿಕವಿ. ೨-೪೭); ಕರಗಸದ ಇಟ್ಟಿಯ ಕವೆಗೋಲ ಇರ್ಕುಳಿಯ (ರಾಮಾಶ್ವ. ೭೯-೨೧).

**ಕಬೆಕ್ಕೋಲು:** ೧. ಕೈಯಲ್ಲೊಂದು 'ಕಬೆಕ್ಕೋಲು' ಹಿಡಿದು ಕೊಂಡೇ ಬಂದ (ಕೈಮಾಂಸ. ೫೪). **ಕವೆಗೋಲು:** ೧. ಹಸಿವಿದಿರ ಕವೆ [ಪಾಠಾಂ. ಡೆ] ಗೋಲಿನೊಳಗೆ ಕಟ್ಟಿ (ಸೂಪಶಾ. ೪-೫೪); ಚೀಳು ಬಾಣಗಳ ಜಾಟಳವುಪ್ಪಿನ ತಿತ್ತಿ ಸಾಲುವಿಡಿದ ಕವೆಗೋಲು (ಕಂನವಿ. ೧೧-೧೩೪); ಹಿಟ್ಟಿನ ಮಡಕೆ ಕವೆಗೋಲಿಗೆ ಮೂರುಕಡೆ ಅರಳೆ ಬತ್ತಿ ಹಚ್ಚಿದರು (ನನ್ನೂರು. ೨೮೮).

[ಕವೆ + ಕೋಲ್₁. / ತುಳು. ಕಬೆಕ್ಕೋಲು]

**ಕವೆಗೋಲು** 'ಕವೆಗೋಲ್' ನೋ.

**ಕವೆಯರ** 'ಕೆಯ್ವಾರ್ರ' ನೋ.

**ಕವೆಯಾರ** 'ಕೆಯ್ವಾರ್ರ' ನೋ.

**ಕವೋಡಿ** 'ಕವಡಿ₁' ನೋ.

**ಕವೋಷ್ಣ** (ಗು). ತುಸು ಬೆಚ್ಚಗಿನ; ಉಗುರು ಬೆಚ್ಚಗಾದ: ನಲ್ಲಳ ಕಟಾಕ್ಷದತ್ತಣಿಂ ಬಸಿವ ಕವೋಷ್ಣಬಾಷ್ಪವಾರಿಯಂ ತನ್ನುತ್ತರಿಗೆಯ ಕಿಟ್ಸೆಱಂಗಿನಿಂ ತೊಡೆದುಂ (ರಾಮಾಶ್ವ. ೨೦-೧೪). [ಸಂ.]

**ಕವ್ಯ** (ನಾ). ೧. ಪಿತೃದೇವತೆಗಳ ಒಂದು ವರ್ಗ. ೨. ಶ್ರಾದ್ಧಾದಿಗಳಲ್ಲಿ ಪಿತೃಗಳಿಗೆ ಕೊಡುವ ಪಿಂಡ: ದರ್ಭೆ ತಿಲ ಮೊದಲೆನಿಪ ವಸ್ತುಗಳು ಈ ಧರೆಯಲಹ ಹವ್ಯಕವ್ಯಗಳಾದುಭಯ ಕರ್ಮಗಳ ಬಯಕೆಗೆ ಸಾಧನಗಳಾದಂತೆ (ಗಗತಾ. ೧೪-೬೭); ಶ್ರದ್ಧೆಯಿಂ ಹವ್ಯಕವ್ಯಂಗಳಂ ಭಕ್ತಿಯಿಂ ದೇವತಾಪೂಜೆಯಂ ಗೆಯ್ಯುತುಂ (ಅದ್ಯತ. ೬-೧೫).

[ಸಂ.]

**ಕವ್ಯಱಿ** (ನಾ). ಒಂದು ಪ್ರದೇಶ (?): ಅತ್ತಿ ನೆಲ್ವಾಗಿಲ್ಕೆಱೆಯು ಕವ್ಯ(?)ಱೆಘುಳಿಯು ಅನೆ(?)ತ್ರಮು(?)ದಿಳಗು ಪನೆಕೊಡುಪಾದಿ ಮಣ್ಣು (ಇಆ. XIV, ೨೩೩-೬೧; 9ನೆಯ ಶತ). [?]

**ಕವ್ವರಿ** 'ಕವ್ವರೆ' ನೋ.

**ಕವ್ವರಿಗೊಳ್** 'ಕವ್ವರೆಗೊಳ್' ನೋ.

**ಕವ್ವರಿಸು** (ಕ್ರಿ). ಸುತ್ತುಗಟ್ಟು; ಮುತ್ತು; ಬಳಸು; ವ್ಯಾಪಿಸು; ಹಬ್ಬು: ಮಸಗಿ ಸುಱಿದು ನೆಗೆದು ಕವ್ವರಿಸಿ ಕವಿವ ಸೊರ್ಕಿನ ಸೊವಡಿಂಗಂ (ಅನಂಪು. ೨-೨೯ ವ); ಕಬ್ಬೊಗೆ ತುಂತುಱಗಿಡಿ ಸಹ ನಭವನು ಹಬ್ಬಿ ಕೊಬ್ಬಿತು ಕವ್ವರಿಸಿ (ನಾಗಕು. ೧೭-೬೮); ಕವ್ವರಿಸುವ ಕಾಂತಿರಸದಿಂದ ಸ್ನಪನ ಕಣ್ಣುವ್ವಳಿಸುವವೊಲೆಸೆದರು (ಭರಚ. ೧೩-೫೫).

[ಕವ್ವರೆ + -ಇಸು₃]

**ಕವ್ವರೆ, ಕವ್ವರಿ, ಕಾವ್ವರಿ, ಕೋವರಿ, ಕೌವರಿ, ಕೌವರೆ** (ನಾ). ೧. ಬಳಸಿ ಬರುವಿಕೆ; ಸುತ್ತುವಿಕೆ; ಭ್ರಮಣ. ೨. ಸಡಗರ; ಸಂಭ್ರಮ: ಸಕಲಾವನಿಯೊಪ್ಪುವ ಭೂಪರೆಯ್ದೆ ಕವ್ವರೆ ಮಿಗೆ ಕುಂಡಿನಾಪುರಕೆ ಬಂದುದು (ನಳಚಂ. ೨೫೧); ಪನಸದ್ರುಮದ ಗಡಣಮಿಡಿದೆಸೆಯುತ್ತಮಿರ್ದುವನಿಶಂ ಚೆಲ್ವುವಡೆದು ಫಲಭಾರದಿಂದಿಟ್ಟಣಿಸುತೆಲ್ಲೆಡೆಗಳೊಳು ನಾಡೆ ಕವ್ವರೆಯೊಳು (ಸಿದ್ಧೇಪು. ೨-೧೧). **ಕವ್ವರಿ:** ೧. ಕವ್ವರಿ, ಅವ್ವಳಿ (ಶಬ್ದಾನು. ೬೭ ವ್ಯಾಖ್ಯಾ). **ಕಾವ್ವರಿ:** ೧. ಕುಟ್ಟಿ ತಟ್ಟಿದ ಗಧೆಗಳೊಳು ಕಿಡಿ ಹುಟ್ಟಿ ಮಿಂಬುಳದಂತೆ ಕಾವ್ವರಿ [ಪಾಠಾಂ. ಕೌವ್ವರಿ] ಯಿಟ್ಟು (ಜಿರಾಪೂ. ೨೪೦-೨೯). **ಕೋವರಿ:** ೨. "ಸಂಭ್ರಮ; ದಾವರಿಸಿದುದು" (ಚತುನಿ. ಕಿ. I, ೨೦): ತರುಣಿ ಕಡಂಗಿ ಕೋವರಿಯೊಳಾತನ ಚಿತ್ತಪರೀಕ್ಷೆಗಾಗಿ ಬಂಧುರ ಹೃದಯಸ್ಥಳಂ ಬಗಿದುಪೊಕ್ಕಳೋ ನಾನಱಿಯೆಂ (ವೀರವಿ. ೩-೭೭). **ಕೌವರಿ:** ೨. "ಕೌವರಿ - ಸಂಭ್ರಮಂ" (ಶಮದ. ಪಂ. ೨); ಕೊಲ್ಲಾರಿಗಳ ಕೌವರಿ [ಪಾಠಾಂ. ರೆ] ಯೊಳು ನಡೆದರು ಸೊಗಸಿನಿಂ (ಚೀರಮ. ೫-೨೧); ಸಕಲಜನಮೆಯ್ದೆ ಕೀರ್ತಿಸಿದರಱದೀತನೇ ದಕ್ಷಿಣಾಮೂರ್ತಿಯೆಂದು ಕೌವರಿಯಿಂ (ಪಾಸೋಪು. ೧೧-೨).

**ಕೌವರೆ:** ೨. "ಕೌವರೆಯೆಂದು ಸಂಭ್ರಮಂ" (ಶಬ್ದಮಂ. ೫೨); "ಕೌವರೆ [ಪಾಠಾಂ. ರಿ] ಯೆಂಬ ಶಬ್ದಂ (ಕವ್ವರೆ - ಕೌವರಿ) = ಸಂಭ್ರಮದಲ್ಲಿಯುಂ, ಸಮುದ್ರದ ತೆರೆಯಲ್ಲಿಯುಂ" (ಶಮುದ. ಮು. ೩೦೭); ಕೌವರೆಯಿಂದೆ ಬಂದಭಟವಗುಸಿರೆ (ಪಾಸೋಪು. ೮-೨೩); ಬಸಂತಂ ಸಂತಸದೊಂದು ಕೌವರೆಯೊಳ್ ಬಂದನೆ (ರಾಮಾಶ್ವ. ೫೭-೭). [?]

**ಕವ್ವರೆಗೊಳ್, ಕವ್ವರಿಗೊಳ್, ಕೌವರೆಗೊಳ್** (ಕ್ರಿ). ೧. ಸಡಗರಿಸು; ಸಂಭ್ರಮಿಸು; ಆತುರಪಡು: ಜನಂ ಕೂಡೆ ಕವ್ವರೆಗೊಂಡೆಯ್ತರೆ ನೋಡಲೆಂದು ಪರಿದಳ್ ಚಕ್ರೇಶ ಸೌಂದರ್ಯಮಂ (ಆದಿಪು. ೧೧-೨೨); ಕವ್ವರೆಗೊಂಡು ನೋಟ್ಪ ಜನಮಂ ಕಂಡು (ಚಾವುಂಪು. ೧೦೮-೫); ಜವ್ವನಸೊಕ್ಕಿವರಿಗೆ ನೋಡು ಮಾಡವ ಕವ್ವರೆಗೊಂಡೇಱುತಹರೆ (ಭರಚ. ೫-೧೫). ೨. ಬಯಸು; ಮೋಹಿಸು: ತದ್ಗಂಧಮಂ ಕವ್ವರೆಗೊಂಡೋರಂತೆ ಸುತ್ತಿರ್ದಳಿಕುಳದ (ಕಾದಂಪೂ. ೧೨೨); ಮೆಯ್ಯ ಸುಯ್ಯ ಕಡುಗಂಪಿಂಗೆ ಕವ್ವರೆಗೊಂಡು ಮುಸುಱಿ ಮೊರೆವ ತುಂಬಿ (ಚಂದ್ರಪು. ೫-೬೫ ವ); ಅಂಗಸೌರಭಕೆ ಕವ್ವರೆಗೊಳ್ವಳಿಮಾಲೆ (ಕುಸುಮಾ. ೧೪-೧೧೭). ೩. ಚಕಿತವಾಗು; ಬೆರಗಾಗು; ಮರುಳಾಗು; ಭ್ರಾಂತಿಗೊಳ್ಳು: ಎಲ್ಲಿಯದೀ ಬೆಳಗೆಂದು ಕವ್ವರೆಗೊಂಡು ನಿಲ್ಲದೆ (ಅನಂಚ. ೨-೫೧); ಅವನು ಕವ್ವರೆಗೊಂಡು ಉತ್ತರಕೊಡದೆ ಮನೆಯತ್ತ ಓಟಬಿಟ್ಟನು (ಕನಕ. ೧೨೭). ೪. ಮುಸುಕು; ಮುತ್ತು; ಆವರಿಸು. 'ಕವ್ವರೆಗೊಳಿಸು' ಪರಾ. **ಕವ್ವರಿಗೊಳ್:** ೧. ಪೊಂಗೇದಗೆಯ ಪರಿಮಳಕ್ಕೆ ಕವ್ವರಿಗೊಂಡು ಬಪ್ಪ ತುಂಬಿವಿಂಡ ಝುಂಕಾರಮೆ ಗೀತಮಾಗೆ (ಧರ್ಮಪ. ೧-೪೦ ವ); ಆನೆಯ ಪಿಂಗಡೆ ಕವ್ವರಿಗೊಂಡು ಮತ್ತಾ ನಗರೀಜನವೆಲ್ಲಾ ಬರಲು (ಪ್ರಭುಂಜ. ೨-೮೨); ಫುಲ್ಲಾಸ್ತ್ರನಾಜೆಯೆಂದೆಲ್ಲ ಕವ್ವರಿಗೊಂಡೊದಗಿತು (ಭೈರವೇ. ೨-೪೨). **ಕೌವರೆಗೊಳ್:** ೧. ಕೌವರೆಗೊಂಡು ನೆರೆದು ಪರಿತಂದು ನೋಟ್ಪ ಪುರಜನಂಗಳಲ್ಲಿ (ಪಂಪರಾಮಾ. ೬-೧೭೭ವ). ೨. ಪಸಿದಂತಕನೋ ಕೆಳಲ್ದ ಕೇಸರಿಯೊ ಯುಗಾಂತದುಗ್ರಕರಮುಪ್ಪುರಿಯೋ ಕವಿತಪ್ಪುದೆಂದು ಕೌವರೆಗೊಳೆ ಕೌರವಾಗ್ರಣಿಯ ಸೇನೆ (ಮಹಾನೇ. ೧೨-೧೩೫).

[ಕವ್ವರೆ + ಕೊಳ್₁]

**ಕವ್ವರೆಗೊಳಿಸು** (ಕ್ರಿ). ೧. ಮರುಳುಗೊಳಿಸು; ಮೋಹಗೊಳಿಸು: ಬಲ್ಲಾಳಿಕೆಯಿಂ ಬಣ್ಣವಿಟ್ಟಂತೆ ತಿಣ್ಣಮಾದೊಡ್ಡಂಗಾಡಿ ಸಭೆಯ ಕಣ್ಗಳಂ ಕವ್ವರೆಗೊಳಿಸೆ (ಅನಂಪು. ೨-೨೭ ವ). ೨. ಮುಸುಕುವಂತೆ ಮಾಡು; ಆವರಿಸು: ತನ್ನ ತನುವಿನ ರಾಗಚಿಹ್ನಂಗಳಿಂ ವಿಟಪೇಟಕದ ಕಣ್ಣಾರಲ್ಗಳಂ ಕವ್ವರೆಗೊಳಿಸಿದ ಕಾಮುಕಿ (ಅನಂಪು. ೭-೩೭ ವ).

[ಕವ್ವರೆಗೊಳ್ + -ಇಸು₃]

**ಕವ್ವಲ್** (ನಾ). ಒಂದು ಬಗೆಯ ಮರ: "ಕಟಮೆನೆ ಕವ್ವಲಕ್ಕು [ಪಾಠಾಂ. ಕಟುವೆನೆ ಕಳವಲಕ್ಕು]" (ಮಂಗರಾ. ೩೬-೧೬). [?]

**ಕವ್ವೆಸುರಿಗೊಳ** (ನಾ). ಒಂದು ಕೊಳದ ಹೆಸರು (?): ಸಿರಿಗಾಳು ಗ್ರಾಮಸೀಮ್ನಿ ಪುಲಿವುತು ತತ ಅಗತ್ಯ ಕವ್ವೆಸುರಿಗೊಳಂ ತತಃ ಪೆಬ್ಬುಣ್ತು ತತ ಅಲ್ದೊರೆ ತತೋ ಅಲ್ಗೊಳ ತತೋ ನಿತ್ತಕೊಳ . . . ನೇಱುಲ್ಗೆಱೆ ತತಃ ಕುರುಪಕೆಱೆ (ಎಕ. XI, ದಾವಣ. ೬೬-೩೨; 694).

[ಕವ್ವೆಸುರಿ? + ಕೊಳ್₂]

**ಕಶಾಂಗ** (ನಾ). ಚಾವಟಿಯಂತಿರುವ ಅವಯವ (?): ಒಂದು ಕುಡಿಮಿಶೆಯಲ್ಲಿ ಮೂರು ವಿಭಾಗಗಳು - ಬುಡ (scape), ವೃಂತ (pedicel) ಇವೆರಡಕ್ಕೂ ಸಾಮಾನ್ಯವಾಗಿ ಒಂದೊಂದು ಭಾಗ, ಮತ್ತು ಬಹುಭಾಗಗಳುಳ್ಳ ಕಶಾಂಗ (Flagellum) (ಕೀಟಬಿ. ೧೪)

[ಸಂ. (ಕಶ + ಅಂಗ)]

**ಕಶಾದಂಡ** (ನಾ). ಛಾವಟಿ ; ಚಬಕ ; ಬಾರುಗೋಲು : "ಚಬಕಃ = ಕಶಾದಂಡಂ" (ಶಾಶಕ್ಯ. ೩೨); ಅವಜಾಯದವರೆಯೆನುತಾ ಕಶಾದಂಡದಿಂ ಬ್ರಹ್ಮನಂ ಪೊಡೆಯಲು (ವೀಶೈಪು. ೪-೮-೧೯) ; ಎನ್ನ ಗದಜದೆ ಕಶಾ ದಂಡದಿಂ ಹೊಡೆದನಯ್ಯ (ಭಾವಚಿಂ. ೧-೩೪).
[ಸಂ. (ಕಶಾ + ದಂಡ)]

**ಕಶಾಪ್ರಹಾರ** (ನಾ). ಛಾವಟಿಯ ಏಟು ; ಚಬಕದ ಹೊಡೆತ : ಆ ದಿನ ಇಬ್ಬರು ಖೈದಿಗಳಿಗೆ ಕಶಾಪ್ರಹಾರವಾಗಬೇಕಾಗಿತ್ತು (ಪುನರು. ೨೦೬) ; ವಾಜಶ್ರವಸನಿಗೆ ಆ ಮಾತುಗಳಿಂದ ಕಶಾಪ್ರಹಾರ ಮಾಡಿದಂತಾಗಿ (ಚಿತಂಬಾ. ೯೪). [ಸಂ. (ಕಶಾ + ಪ್ರಹಾರ)]

**ಕಶಾಭಿಘಾತ** (ನಾ). = ಕಶಾಪ್ರಹಾರ : ಮುಖಲೀನಖಲೀನಕಶಾಭಿ ಘಾತದಿಂ ತೊಟ್ಟನೆ ನೋವನೆಯ್ದಿದಂ (ಪಂರಾಮಾ. ೪-೧೧೫) ; ಕುದಿರೆ . . . ವಿವಿಧಾಯುಧಂಗಳೊಳಗೊಂದನೆ ಸ್ವೈರಿಸಲಾಜದಲ್ತೆ ಸಿಂಹದ ಮಜಿ ಮೇಘಘರ್ಜನೆಗೆ ಸ್ವೈರಿಸದಂತೆ ಕಶಾಭಿಘಾತಮಂ (ಅಶ್ವಶಾ. ೭-೭೦).
[ಸಂ. (ಕಶಾ + ಅಭಿಘಾತ)]

**ಕಶಾರ್ಹ** (ಗು). ಚಬಕದಿಂದ ದಂಡಿಸಬೇಕಾದ ; ಚಾಟಿಯಿಂದ ಹೊಡೆಯಲು ತಕ್ಕ. [ಸಂ.]

**ಕಶಿ** 'ಕಸ್ಕಿ' ನೋ.

**ಕಶಿಕಟ್ಟು** 'ಕಸಿಕಟ್ಟು' ನೋ.

**ಕಶಿಪು** (ನಾ). ೧. ಚಾಪೆ. ೨. ಹಾಸಿಗೆ. ೩. ತಲೆದಿಂಬು. ೪. ಆಹಾರ. ೫. ವಸ್ತ್ರ ; ಬಟ್ಟೆ : "ಕಶಿಪು ವಶನಾಚ್ಛಾದನಂ ಕೂಟು ಸೀರೆಯೆನಿಕ್ಕು" (ಮಂಗರಾ. ೮-೨೫) ; ಸರಳಗಜಚರ್ಮಂಗಳೇ ಕಶಿಪು ತಾನಿರ್ಪ ವರ ಗೃಹಮೆ ಕೈಲಾಸಪರ್ವತಂ (ಆರಾಚ. ೧೭-೧).
[?. / ತುಳು. ಕಜಿಪು = ಮೇಲೋಗರ]

**ಕಶೆ** (ನಾ). ೧. ಅಂಗಿಯ ಲಾಡಿ ; ಬಂಧನಸೂತ್ರ : ತೊಟ್ಟಿರುವುದು ನೀಲಿಯ ಅಂಗಿ, ಅದಕ್ಕೆ ಹಳದಿಯ ಕಶೆಗಳಿರುವುವು (ರಾಜಾಮು. ೮೧). ೨. ಚಬಕ ; ಚಾಟಿ ; ಚಮ್ಮಟಿಕೆ : ಶೃಂಗಕರದಿಂ ಕಶೆಯಿಂ ಕಡುಕಾಯ್ದು ಪೊಯ್ವುವೋಲಿರೆ ಸೆಳೆಮಿಂಚು (ರಾಜಶೇ. ೧-೧೧೪) ; ತುರಂಗಂಗಳಂ ಪೊಡೆದು ಕಶೆಗಳೊಳು (ವೆಂಕಾರಾ. ೬-೨೫-೨೨) ; ಕಶೆಗಳಿಂದ ಹೊಡೆದರೂ ನಾವು ಯಕ್ಷರೇ ಹೊರ್ತು ಮತ್ತೊಬ್ಬರಲ್ಲಾ (ಸೌಗಂಧಿ. ೫೧೧-೨). 'ಕಸ್ಸೆ' ಪರಾ.
[ಸಂ. ಕಶ, ಕಶಾ]

**ಕಶೆಪಾವುಡೆ** (ನಾ). ಲಾಡಿಯನ್ನುಳ್ಳ ಒಳಉಡುಪು ; ಲಾಡಿಲಂಗ : ಕಶೆಪಾವುಡೆ ನೆರಿಯ ಕೊನೆಯನ್ನು ಕೈಯಲ್ಲಿ ಹಿಂಡುತ್ತಾ . . . ದೂರದಲ್ಲಿ ತಲೆಬಾಗಿ ನಿಂತುಕೊಂಡಳು (ಇಬದು. ೪೦). 'ಕಸೆಪಾವಡೆ' ಪರಾ.
[ಕಶೆ + ಪಾವುಡೆ]

**ಕಶೇರು** (ನಾ). ೧. ಬೆನ್ನೆಲುಬು. ೨. ಒಂದು ಬಗೆಯ ಹುಲ್ಲು.
[ಸಂ.]

**ಕಶೇರುಕ** (ನಾ). = ಕಶೇರು. [ಸಂ. ಕಶೇರುಕ, ಕಶೇರುಕಾ]

**ಕಶ್ಮಲ** (ಗು). ೧. ಹೊಲಸಾದ ; ಕೊಳೆಯಾದ. (ನಾ). ೨. ಹೊಲಸು ; ಕೊಳೆ : ಒಳಗೆ ಆಚ್ಚುಕಟ್ಟಾಗಿದ್ದಿತು ; ಕಶ್ಮಲಗಳೇನೂ ಇರಲಿಲ್ಲ (ರಂಗಕ. ೧೧೩). ೩. ಖಿನ್ನತೆ ; ನಿರುತ್ಸಾಹ. ೪. ಮೋಹ. ೫. ಪಾಪ. ೬. ಮೂರ್ಛೆ. ೭. ಭಯ ; ಗಾಬರಿ. [ಸಂ.]

**ಕಶ್ಯ** (ಗು). ೧. ಚಬಕದಿಂದ ಹೊಡೆಸಿಕೊಳ್ಳಲು ಯೋಗ್ಯವಾದ ; ಛಾವಟಿಯಿಂದ ದಂಡಿಸಬೇಕಾದ. (ನಾ). ೨. (ಕುದುರೆಯ) ಸೊಂಟ, —ನಡು : "ನಡು ಕಶ್ಯಮಕ್ಕು" (ಮಂಗರಾ. ೮೧-೧೨). ೩. ಹೆಂಡ ; ಮದ್ಯ. [ಸಂ.]

**ಕಶ್ಯಪ** (ನಾ). ೧. ಆಮೆ ; ಕೂರ್ಮ. ೨. ಒಂದು ಬಗೆಯ ಮೀನು. ೩. ಒಂದು ಬಗೆಯ ಜಿಂಕೆ. ೪. ಒಬ್ಬ ಋಷಿಯ ಹೆಸರು : ಅದಿತ್ಯನ ಪಿತೃಮಾತೃಗಳಾದಾ ಕಶ್ಯಪನುಮದಿತಿಯುಂ (ಜಗವಿ. ೧-೭೫). [ಸಂ.]

**ಕಶ್ಯಪನಂದನ** (ನಾ). ೧. ಕಶ್ಯಪನ ಮಗ ; ಗರುಡ. ೨. ಅರುಣ.
[ಕಶ್ಯಪ + ನಂದನ]

**ಕಷ** (ನಾ). ೧. ಉಜ್ಜುವಿಕೆ ; ತಿಕ್ಕುವಿಕೆ. ೨. ಒರೆಗಲ್ಲು. [ಸಂ.]

**ಕಷಣ** (ನಾ). ೧. ಉಜ್ಜುವಿಕೆ ; ಘರ್ಷಣೆ ; ಮಸೆಯುವಿಕೆ : ಮಾದ್ಯದ್ಗಜಗಂಡಭಿತ್ತಿಕಷಣ ಪ್ರೋದ್ಭೇದದಿಂ ಸಾರ್ದು (ಪಂಪಭಾ. ೪-೨೨) ; ಗಜದಂತ ಕಷಣಕಂಪಿತಕುಜಕೂಜದ್ವಿಹಗರುತಮನಾಲಿಸಿ (ಅಜಿಪು. ೯-೨೬). ೨. ಒರೆ ಹಚ್ಚುವಿಕೆ. [ಸಂ.]

**ಕಷಾಯ** (ಗು). ೧. ಸುವಾಸನೆಯಿಂದ ಕೂಡಿದ ; ಪರಿಮಳದ. 'ಕಷಾಯತೋಯ' ಪರಾ. ೨. ಕೆಂಪಾಗಿರುವ. 'ಕಷಾಯಾಕ್ಷ' ಪರಾ. ೩. ಒಗರಿನಿಂದ ಕೂಡಿದ. 'ಕಷಾಯಕಂಠ' ಪರಾ. (ನಾ). ೪. ಸುಗಂಧ ; ಸುವಾಸನೆ : "ಕಷಾಯ ಕಟುತಿಕ್ತಗಳು ಸೌರಭ್ಯ ಮೆಂದೆನಿಪುವು" (ಮಂಗರಾ. ೧೪೧ ೧೪) ; ಕಮಳ ಕುವಳಯ ರಜಃ ಕಷಾಯ ಪರಿಮಿಳದಳಿಪಟಳಜಟಿಳಮಾಗಿ ಬಂದು ತೀಡುವ ಮಂದಾನಿಳನಿಂ (ಪಂಪಭಾ. ೮-೩೭ವ). ೫. ಕೆಂಪುಬಣ್ಣ ; ಕಂದುಗೆಂಪು. 'ಕಷಾಯವರ್ಣ' ಪರಾ. ೬. ಮಧುರವಾದ ಧ್ವನಿಯುಳ್ಳದ್ದು. ೭. ಮೂಲಿಕೆಗಳನ್ನು ಭಟ್ಟಿಯಿಳಿಸಿ ತೆಗೆದ ರಸ : "ಔಷಧಂ ಬೇಯಲು ಕಷಾಯಮೆನಿಸಿಕ್ಕು" (ಮಂಗರಾ. ೧೧೫-೭) ; ಕಷಾಯವನ್ನು ಕಾಯಿಸಿ, ಸಕ್ಕರೆ ಬೆರಸಿ ತೆಗೆದುಕೊಳ್ಳಲು ಪೈತ್ಯಜ್ವರ ಪರಿಹಾರವಾಗುವುದು (ಸಕವೈ. ೭೪) ; ವೈದ್ಯ ಕೊಡುವ ಕಹಿ ಕಷಾಯದಂತೆ (ಅಂತರಾ. ೪೯). ೮. ಚಹಾ, ಕಾಫಿ ಮೊದಲಾದವುಗಳ ಅರ್ಕ : ಒಂದರಲ್ಲಿ ಕಾಫಿಗೆ ಸಕ್ಕರೆ ಹೆಚ್ಚಿದ್ದರೆ . . . ಮತ್ತೊಂದರಲ್ಲಿ ಕಷಾಯ ಕಹಿ (ರಾಯಕ. ೯೪). ೯. ಗಿಡ, ಮರಗಳಿಂದ ಹೊರಡುವ ಜಿಗಿ, —ಅಂಟು, —ಗೋಂದು. ೧೦. ಕಳ್ಳಹಾದಿ : "ಕನ್ನಗತ್ತಿ ತುವರಂ ಕಷಾಯಂ ಕಳ್ಳಹಾದಿ ಯಕ್ಕುಂ" (ಮಂಗರಾ. ೬೭-೫). ೧೧. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : "ಕಷಾಯಂ . . . ಎಂದು ನಾಲ್ಕಜ ನಾಮಂ" (ವ್ಯವಹಾ. ೯-೪). ೧೨. [ಜೈನ] ಸುಖದುಃಖಗಳನ್ನು ಉಂಟು ಮಾಡುವ ನಾಲ್ಕು ಬಗೆಯ ದೋಷ : "ಕರ್ಮಕ್ಷೇತ್ರಂ ಕಷಂತೀತಿ ಕಷಾಯಾಃ ಎಂಬೀ ನ್ಯಾಯದಿಂ ಕರ್ಮಫಳಮಂ ಬೆಳಸಿ ಕುಡುವುದಂ ಕಷಾಯಮೆಂಬುದು" (ಪಸಾರ. ೫೬೬-೧೬) ; ಕಷಾಯಮಿಲ್ಲದುದಜಿಂ ದೇವತ್ವಮುಂ ಪೆತ್ತೆಂ (ಶಾಂತಿಪು. ೭-೨೦) ; ಅಪ್ರತ್ಯಾಖ್ಯಾನ ಕ್ರೋಧಕಷಾ ಯೋದಯದಿಂ ಪರಿಭವಾನಳನಳವಲ್ಲದಳುರೆ (ಸುಕುಮಾ. ೫-೭ವ) ; ಮಾನಕಷಾಯಕ್ಕೆ ತಕ್ಕನೆಡೆಗೊಟ್ಟಪನೇ (ಪಂರಾಮಾ. ೭-೨೦). [ಸಂ.]

**ಕಷಾಯಕಂಠ** (ನಾ). ೧. ಒಗರಾದ ಕಂಠ. ೨. ಮಧುರ ಧ್ವನಿಯ ಕಂಠ : ೧, ೨ : ಕಳಿಕೆಗರ್ಚಿದ ಕಷಾಯಕಂಠಮಾದ ಕಳಕಂಠದ ಕುಂಠಕಂಠಮುಮಂ ಶ್ರುತಿಪಥಕ್ಕತಿಥಿಮಾಡಿ (ಮಲ್ಲಿಪು. ೬-೨೪).
[ಕಷಾಯ + ಕಂಠ]

**ಕಷಾಯತೋಯ** (ನಾ). ಸುಗಂಧದ ನೀರು ; ಪನ್ನೀರು : ವೀತ ಸರ್ವಕಷಾಯಂಗೆ ಕಷಾಯತೋಯಸವನಂ (ಪುಷ್ಪಪು. ೧೧-೪೩).
[ಕಷಾಯ + ತೋಯ]

**ಕಷಾಯವರ್ಣ** (ಗು). ೧. ಕಂದುಗೆಂಪಾದ ; ಕಪ್ಪುಮಿಶ್ರವಾದ ಕೆಂಪುಬಣ್ಣವುಳ್ಳ : ಅಂಗರುಹ ಕೇಶವಾಲಚಯಂಗಳ್ ನಿಡಿಯವು ಕಷಾಯವರ್ಣಂಗಳ್ (ಅಶ್ವಶಾ. ೫-೧೩). (ನಾ). ೨. ಕಂದುಗೆಂಪು ; ಕಪ್ಪುಮಿಶ್ರವಾದ ಕೆಂಪುಬಣ್ಣ. [ಕಷಾಯ + ವರ್ಣ]

**ಕಷಾಯಸಲ್ಲೇಖನೆ** (ನಾ). [ಜೈನ] ಮನಃಕಷಾಯಗಳನ್ನು ನಿರ್ಮೂಲಗೊಳಿಸುವಿಕೆ : "ಕಷಾಯಸಲ್ಲೇಖನೆಯೆಂಬುದು ದುಃಪರಿಣಾಮೋತ್ಪತ್ತಿ ನಿಮಿತ್ತಂಗಳಪ್ಪ ಸಮಸ್ತವಸ್ತುಗಳಂ ತೊಱೆವುದು ಕಷಾಯಂಗಳನಡಗಿಸುವುದು" (ಶ್ರಾವಕಾ. ೧೫೭–೧೫).
[ಕಷಾಯ + ಸಲ್ಲೇಖನೆ]

**ಕಷಾಯಾಕ್ಷ** (ನಾ). ಕೆಂಪಡರಿದ ಕಣ್ಣು ಉಳ್ಳವನು; ಕೆಂಗಣ್ಣ : ಮುನಿದೊಡನೆ ಕೇಳರ್ದು ನುಡಿದನುಜನಂ ಕಷಾಯಾಕ್ಷನಂ... ಒಯ್ಯನೆರೆಂದು ತಿತಿಕ್ಷಾನ್ವಿತನನಾಕುಳಂ ನುಡಿಗುಂ (ಶಾಂತಿಪು. ೩–೯೦).
[ಸಂ. (ಕಷಾಯ + ಅಕ್ಷಿ + –)]

**ಕಷಾಯಿತ** (ಗು). ೧. ಒಗರೊಗರಾದ; ಕಹಿಯಾದ : ಪುರೋಡಾಶಪವಿತ್ರೋದರನುಂ ಸೋಮಪಾನಕಷಾಯಿತೋದರನುಮಾಗಿ [ಪಾಠಾಂ. ದಯದಿಂ ಪಾನಕಪಾಯಿತೋರಿ (ಪಂಪಭಾ. ೬–೩೮ ವ); ಅಮಳಕರಸದಿಂ ಕಷಾಯಿತಾಸ್ಯನಾದಂಗೆ ನೀರುಂ ಕ್ಷೀರರುಚಿಯಾಗಿ ತೋರ್ಪಂತೆ (ಶ್ರಾವಕಾ. ೧೦೨–೧೫). ೨. ಕೆಂಪೇರಿದ; ಕೆಂಪಾದ : ಅತಿರೋಷಕಷಾಯಿತ ಕಟಾಕ್ಷನಾಗಿ (ಶಬಶಂ. ೪–೫೯ ವ). [ಸಂ.]

**ಕಷಾಯೋದಕ** (ನಾ). ಪಂಚಪಲ್ಲವ ಮತ್ತು ಐದು ಮರದ ತೊಗಟೆಗಳಿಂದ ಕಾಯಿಸಿದ ನೀರು : ಅಯ್ದು ಕಷಾಯೋದಕದೊಳ್ ತೊಯ್ದು (ಶಾಂತಿಪು. ೨–೬೩); ಜಿನೇಂದ್ರಮಹಾಭಿಷೇಕದೊಳ್ ನಾಳಿಕೇರೇಕ್ಷುರಸಾಮ್ರರಸ ಘೃತಕ್ಷೀರದಧಿ ಕಷಾಯೋದಕ ಚತುಷ್ಕುಂಭೋದಕ ಗಂಧೋದಕ ಸವನಮಂ... ಮಾಳ್ಪ (ಸುಕುಮಾ. ೬–೨೫ ವ).
[ಕಷಾಯ + ಉದಕ]

**ಕಷೋಪಲ** (ನಾ). ಒರೆಗಲ್ಲು : ಸರಮೆಂಬ ಕಷೋ[ಪಾಠಾಂ. ಘೋ]ಪಲದಲ್ಲಿ ವಾಸರೇಶ್ವರಕರಮೆಂಬ ಪೊನ್ನೊರೆವೊಲೊಪ್ಪಿರೆ (ರಾಜಶೇ. ೧೨–೩೭). 'ಕಷೋಪಲ' ಪರಾ.
[ಕಷ + ಉಪಲ]

**ಕಷ್ಟ** (ಗು). ೧. ತೊಂದರೆ ಕೊಡುವ; ಕ್ಲೇಶದಾಯಕವಾದ : ಅಹೋ ಕಷ್ಟಂ ಸಂಸಾರಂ (ವಡ್ಡಾರಾ. ೪೮–೨೩); ಕಷ್ಟಂ ದುಃಖಾನಳಪರಿಪುಷ್ಟಂ (ಆದಿಪು. ೯–೫೦); ಹುಟ್ಟಿಸುವನಜನೆಂಬ ಕಷ್ಟದ ನುಡಿ ಬೇಡ (ಸರ್ವಜ್ಞ. ೨೧೨). (ನಾ). ೨. ಕಠಿಣವಾದದ್ದು; ಕರ್ಕಶವಾದದ್ದು; ಕಠೋರವಾದದ್ದು : ಕಷ್ಟ – ಕಟ್ಟ (ಶಮದ. ೨೪೩ ಪ್ರಯೋ). ೩. ಕೆಟ್ಟವನು; ನಿಕೃಷ್ಟ; ನೀಚ; ಹೀನ : "ನಿಕೃಷ್ಟನೆನೆ ಕಷ್ಟನೆಂದೆಂಬವಗೆ ನಾಮಮುಕ್ಕುಂ" (ಮಂಗರಾ. ೬೭–೪); ಆಂ ಪಿತೃವಿತ್ತಕ್ಕಾಸೆವಟ್ಟು ಕಷ್ಟನೆಯಾದೆಂ (ಪಂಚತಂ. ೧೯೩–೧೨); ಪುಲ್ಲಿಂ ಪವಿತ್ರಮಪ್ಪಡೆ ಪುಲ್ಲಿಂದಂ ಕಷ್ಟರಾಗವೇಳ್ಕುಂ ಪಾರ್ವರ್ (ಸಮಪ. ೧೧–೯೭); ಪರರ ಗುಣದುನ್ನತಿಯ ಸೈರಿಸದವನು ಕಷ್ಟನು (ಕುವ್ಯಾಅ. ೨೩–೪೧). ೪. ಶ್ರಮ; ದುಡಿತ; ಕೆಲಸ : ನೀವು ಕಷ್ಟಮಂ ಮಾಡಿ ಉಂಬುದುಳ್ಳಡೆ ನಮ್ಮ ಮನೆಯೊಳುಂಟು (ಕಗವಿ. ೧೫೦–೧೦). ೫. (ಕರಾ) ಹಗೆ; ಶತ್ರುತ್ವ : ದೊಡ್ಡವರೊಡನೆ ಬಡವ ಕಷ್ಟಕಟ್ಟಿಕೊಳ್ಳಬಾರದು (ರೂಢಿ). ೬. (ಉಕ) ಕ್ಷೌರ : ಮೋರೆಯ ಮೇಲೆ ಕಷ್ಟ ಬಹಳ ಬೆಳೆದುಬಿಟ್ಟಿದೆ (ತಿಡುಗು. ೮೦); ಅವನ ಹಳೆಯ "ಮಿಶಿನ್ನು" ನನ್ನ ತಲೆಯ ಮೇಲೆ ತಾಂಡವವಾಡಿ, ನಿಜವಾದ "ಕಷ್ಟ"ವಾಗುತ್ತಿತ್ತು (ಗಾಳಿಪ. ೧೯೬). ೭. ಒಂದು ನರಕದ ಹೆಸರು : ಅಂಬರೀಷಕ ಕಟಿತಪ್ತ. ಲೋಹಶಯನ, ವೈತರಣೀನದಿ ಕಷ್ಟವೆಂಬೈದು ಮಂತ್ರಿನರಕಂಗಳಿಂ (ವಿವೇಕ. ೧೮೦).
[ಸಂ.]

**ಕಷ್ಟಂಬಡು**, ಕಷ್ಟಪಡು, ಕಷ್ಟಬಡು (ಕ್ರಿ). ೧. ತೊಂದರೆಪಡು; ಶ್ರಮವಹಿಸು : "ಕಠಿತೀತಿ ಕಷ್ಟಂಬಟ್ಟನೆಂಬುದು" (ಕಾಶಕೃ. ೨೧). **ಕಷ್ಟಪಡು** : ೧. ಮನುಷ್ಯ ಕಷ್ಟಪಟ್ಟರೆ, ಶ್ರದ್ಧೆಯಿಂದ ದುಡಿದರೆ... ದುಸ್ಸಾಧ್ಯವಾಗಲಾರದು (ಜಗದಾ. ೩೭); ಕಷ್ಟಪಟ್ಟರೆ ಫಲವುಂಟು (ರೂಢಿ). ೨. ಕ್ಲೇಶಪಡು : ಎಷ್ಟು ಕಷ್ಟಪಟ್ಟೆ, ಏನು ಕಥೆ (ರಾಯಕ. ೭೭). **ಕಷ್ಟಬಡು** : (ಕಿ). [ಕಷ್ಟ + ಪಡು$_1$]

**ಕಷ್ಟಕಾರ** (ನಾ). (ಕರಾ) ಹೊಲ, ಗದ್ದೆ, ತೋಟಗಳಲ್ಲಿ ಅತ್ಯಂತ ಶ್ರಮವಹಿಸಿ ಕೆಲಸ ಮಾಡುವವನು, —ರೈತ; ಶ್ರಮಜೀವಿ.
[ಕಷ್ಟ + –ಕಾರ$_1$ (< –ಕಾಜ)]

**ಕಷ್ಟಕಾರಿ** (ನಾ). ದುಃಖವನ್ನು ಉಂಟುಮಾಡುವ ವ್ಯಕ್ತಿ; ಕ್ಲೇಶ ಕೊಡುವ ವ್ಯಕ್ತಿ : ಹೆಣ್ಣುಮಗಳೇ ಕಷ್ಟಕ್ಕೆಲ್ಲಾ ಮೂಲ; ಆ ಕಷ್ಟಕಾರಿಯನ್ನು ಕಳೆದುಕೊ (ವಚಭಾ. ೪೪). [< ಸಂ. ಕಷ್ಟಕಾರಿನ್]

**ಕಷ್ಟಜಾತಿ** (ನಾ). ವ್ಯಾಕುಲವನ್ನು ಉಂಟುಮಾಡುವ ಕುಲ, —ಜಾತಿ : ಕಷ್ಟಜಾತಿಯ ಜನ್ಮದಲಿ ಜನಿಸಿದೆ ಎನಗಿದು ವಿಧಿಯೆ (ಬಸವ. ೩೪೨). [ಕಷ್ಟ + ಜಾತಿ]

**ಕಷ್ಟತನ** (ನಾ). ವ್ಯಾಕುಲತೆ; ಕ್ಲೇಶ : ಉತ್ತಮಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊಱೆಯ ಹೊಱಿಸದಿರಯ್ಯಾ (ಬಸವ. ೩೪೩).
[ಕಷ್ಟ + –ತನ]

**ಕಷ್ಟತಿಕೆ**, ಕಷ್ಟತಿಕ್ಕೆ (ನಾ). = ಕಷ್ಟತನ : ಲೋಕದೊಳ್ ದಾರಿದ್ರ್ಯದಿಂ ಬಿಟ್ಟು ಕಷ್ಟತಿಕೆ[ಪಾಠಾಂ. ತೆ]ಯೊಂದುಮಿಲ್ಲ (ವಡ್ಡಾರಾ. ೧೮೪–೨೩). **ಕಷ್ಟತಿಕ್ಕೆ** : ಕಲಿ ಬಡಿವೆತ್ತನೆಂಬ ಕಷ್ಟತಿಕ್ಕೆಯಂ ಮಾಡಿ (ಧರ್ಮಾಮೃ. ೧೨–೩೮). [ಕಷ್ಟತೆ + –ಇಕೆ]

**ಕಷ್ಟತಿಕ್ಕೆ** 'ಕಷ್ಟತಿಕೆ' ನೋ.

**ಕಷ್ಟತೆ** (ನಾ). ೧. ಕಠೋರವಾಗಿರುವುದು; ಕ್ಲೇಶಕರವಾದುದು : ಲೋಕದೊಳ್ ದಾರಿದ್ರ್ಯದಿಂ ಬಿಟ್ಟು ಕಷ್ಟತೆಯ[ಪಾಠಾಂ. ತಿಕೆಯೊಂದು ಮಿ]ಲ್ಲ (ವಡ್ಡಾರಾ. ೧೮೪–೨೩). ೨. ತಿಳಿಯಲು ಕಷ್ಟವಾಗಿರುವಿಕೆ, —ಅಸಾಧ್ಯವಾದುದು : ಬಾಱ್ಕೆಯನಿತ್ಯತೆಯುಮಂ ವನಿತೆಯರ ಕಷ್ಟತೆಯುಮಂ... ಬಗೆದು (ಧರ್ಮಾಮೃ. ೭–೧೬೫). ೩. [ಕಾವ್ಯಮೀ] ಅರ್ಥ ದೋಷಗಳಲ್ಲಿ ಒಂದು : "ಕಷ್ಟತೆ–ಸುಲಭವಾಗಿ ಮನಸ್ಸಿಗೆ ಹಿಡಿಯದೆ ತಿಳಿದುಕೊಳ್ಳುವುದಕ್ಕೆ ಕ್ಲೇಶವನ್ನುಂಟುಮಾಡುವುದು" (ಕೈಪಿಡಿ. ೨೨೯). [ಸಂ. ಕಷ್ಟತಾ]

**ಕಷ್ಟತೆಗೆ** (ಕ್ರಿ). ಧಾವತಿಪಡು; ಶ್ರಮದ ಕೆಲಸಮಾಡು; ಕ್ಲೇಶಪಡು : ಮೊದಲಿನಿಂದಲೂ ಕಷ್ಟತೆಗೆಯುವುದರಲ್ಲೇ ಆಯಿತು ಅವರ ಜೀವನ (ಮೂರುದಾ. ೧೧೧). [ಕಷ್ಟ + ತೆಗೆ$_1$]

**ಕಷ್ಟದೆಸೆ** (ನಾ). ಕಷ್ಟದ ಕಾಲ; ಕ್ಲೇಶದ ಕಾಲ; ಕಠಿನ ಪರಿಸ್ಥಿತಿ : ಕಷ್ಟದೆಸೆಯಡಸಿರಲು ಮೋಹದ ದೃಷ್ಟಿ ಮುಗಿದುದು (ಕೌಶಿರಾ. ೪೩–೧೭).
[ಕಷ್ಟ + ದೆಸೆ$_1$]

**ಕಷ್ಟಪಡಿಸು** 'ಕಷ್ಟಬಡಿಸು' ನೋ.

**ಕಷ್ಟಪಡು** 'ಕಷ್ಟಂಬಡು' ನೋ.

**ಕಷ್ಟಬಡಿಸು**, ಕಷ್ಟಪಡಿಸು (ಕ್ರಿ). ತೊಂದರೆ ಕೊಡು; ಕಾಡು; ಪೀಡಿಸು; ಹಿಂಸಿಸು (ಕಿ). **ಕಷ್ಟಪಡಿಸು** : ಇಷ್ಟವಾದವರು ಕಷ್ಟಪಡಿಸ್ಯಾರೋ (ಗಾದೆ); ಸೇವಕರನ್ನು ಕಷ್ಟಪಡಿಸಬಾರದು (ರೂಢಿ).
[ಕಷ್ಟಬಡು (< ಕಷ್ಟಂಬಡು) + –ಇಸು$_3$]

**ಕಷ್ಟಬಡು** 'ಕಷ್ಟಂಬಡು' ನೋ.

**ಕಷ್ಟಮಾಡು** (ಕ್ರಿ). ೧. (ಮುಖ್ಯವಾಗಿ ಕೃಷಿ ವಿಚಾರದಲ್ಲಿ) ಶ್ರಮಪಟ್ಟು ಕೆಲಸಮಾಡು : ಆತ ನೆಲದಲ್ಲಿ ತುಂಬ ಕಷ್ಟಮಾಡಿದುದರಿಂದ ಇತ್ತೀಚೆಗೆ ಬೆಳೆ ತುಂಬ ಬರುತ್ತಿದೆ (ರೂಢಿ). ೨. ಕ್ಷೌರಮಾಡು.
[ಕಷ್ಟ + ಮಾಡು$_1$]

**ಕಷ್ಟವಸ್ತ್ರ** (ನಾ). ಒರಟು ಬಟ್ಟೆ; ಕೋರಾಬಟ್ಟೆ : ಹೀನದ್ರವ್ಯಂಗಳ್ಗೆ ಚಿತ್ತಮಂ ಮಾಡದ ಪೊನ್ನರಾಶಿಯಂತಪ್ಪ ಕಷ್ಟವಸ್ತ್ರಂಗಳ್ಗೆ ಬಗೆಯಂ ಮಾಡದ ದುಕೂಲವಸ್ತ್ರದಂತಪ್ಪ (ಧರ್ಮಾಮೃ. ೧೨-೨೪). [ಕಷ್ಟ+ ವಸ್ತ್ರ]

**ಕಷ್ಟಸಂಧಿ** (ನಾ). ಕಷ್ಟದ ಸಮಯ; ತೊಡಕಿನ ಸಂದರ್ಭ; ಕಠಿನ ಸನ್ನಿವೇಶ : ಈ ಸಿರ್ಕಿನ ಕಷ್ಟಸಂಧಿಗೆ ತಗುವ ಪ್ರತೀಕಾರವನ್ನೊಡ್ಡಿ ಗೆಲ್ಲಲಾಗುವುದೇನು (ಮಂತ್ರಶ. ೧೪-೧). [ಕಷ್ಟ + ಸಂಧಿ]

**ಕಷ್ಟಸಾಧ್ಯ** (ಗು). ಪ್ರಯಾಸದಿಂದ ಸಾಧ್ಯವಾಗುವ; ಶ್ರಮಸಾಧ್ಯವಾದ; ಕಠಿನವಾದ : ಸಾಮಾನ್ಯರಿಗೆ ರೇಷ್ಮೆಬಟ್ಟೆಗಳನ್ನು ಕೊಳ್ಳುವುದು ಕಷ್ಟಸಾಧ್ಯ (ಗೃಹವಿ: ೬೮). [ಕಷ್ಟ + ಸಾಧ್ಯ]

**ಕಷ್ಟಹರವೃಕ್ಷ** (ನಾ). ಒಂದು ಬಗೆಯ ಮರ; ಅಶೋಕ ವೃಕ್ಷ: "ವಂಜುಳಃ, ಅಶೋಕಃ – ೨ ಅಶೋಕವೃಕ್ಷ, ಕೆಂಪುಚಿನ್ನದ ಎಲೇಗಿಡ, ಆನಂದವೃಕ್ಷ, ಕಷ್ಟಹರವೃಕ್ಷ" (ಸಿದ್ಧಾಂತಿ. ೧೧೧). [ಕಷ್ಟಹರ$_0$ + ವೃಕ್ಷ]

**ಕಷ್ಟಾಂಶ** (ನಾ). ಕಠಿನವಾದ ವಿಷಯ; ಕ್ಲೇಶದ ವಿಷಯ : ಮಿತಿಯ ನರಿತಾಶೆ ಸಮುಚಿತವ ಮರೆಯದ ಯತ್ನ ತೈತಿಕ್ಷೆ ಕಷ್ಟಾಂಶದ ಪರಿಹಾರ್ಯತೆಗೆ . . . ಹಿತಗಳಿವು ನರಕುಲಕೆ (ಮಂಕುಕ. ೮೮೧). [ಕಷ್ಟ + ಅಂಶ]

**ಕಷ್ಟಾತ್ಮ**(ನಾ). ಕಷ್ಟದಿಂದ ಬದುಕುವವನು; ದುಃಖಿ : ಸಿಂಹದೊಳ್ ಕೂಡಿದಂದನಪತ್ಯಂ ಬಹುವಿತ್ತನುಜ್ಝಿತಸುಖಂ ಕಷ್ಟಾತ್ಮನಕ್ಕುಂ ನರಂ (ಜಾತತಿ. ೧೭-೩೪). [ಕಷ್ಟ + ಆತ್ಮ]

**ಕಷ್ಟಾರ್ಜಿತ** (ಗು). ಶ್ರಮದಿಂದ ಗಳಿಸಿದ: ನನ್ನ ಕಷ್ಟಾರ್ಜಿತವಾದ ಧನಕ್ಕೆ ಅಧರ್ಮವೆಂದು ಹೆಸರಿಟ್ಟು . . . ನಿಂದಿಸುತ್ತಿರುವನು (ಕವಿಕ. ೩). [ಕಷ್ಟ + ಆರ್ಜಿತ]

**ಕಷ್ಟಾಲು**, ಕಷ್ಟಾಳು (ಗು). ಶ್ರಮವಹಿಸುವ ಸ್ವಭಾವವುಳ್ಳ; ಪರಿಶ್ರಮಶೀಲ; ಉದ್ಯೋಗಶೀಲ (ಕಿ). **ಕಷ್ಟಾಳು** : (ಕಿ). [ಸಂ.]

**ಕಷ್ಟಾಶ್ರಯ** (ನಾ). ನೀಚತನಕ್ಕೆ ಆಶ್ರಯವಾದವನು; ನೀಚ; ಅಧಮ : ಪ್ರಿಯನದಾವನು ಕಠಿಣಕಷ್ಟಾಶ್ರಯನದಾವನು ಧರ್ಮಸುತ ಹೇಳೆಂದನಾ ಖಚರ (ಕುವ್ಯಾಅ. ೨೩-೪೦). [ಕಷ್ಟ + ಆಶ್ರಯ]

**ಕಷ್ಟಾಳು** 'ಕಷ್ಟಾಲು' ನೋ.

**ಕಷ್ಟಿಸು** (ಕ್ರಿ). ಕಷ್ಟಪಡು; ಕಷ್ಟಸಹಿಸು (?) : ಭ್ರಷ್ಟನಾಗುವುದೇನು ಚಂದೆ ಬಲು ಕಷ್ಟಿಸಿ ಭವದಲಿ ನೊಂದೆ (ಪ್ರಸಕೀ. ೭೫-೧). [ಕಷ್ಟ + -ಇಸು$_3$]

**ಕಷ್ಟೆ** (ನಾ). ೧. ಹೀನಳಾದವಳು; ನೀಚೆ : ಕಡುದೊಡ್ಡೆಯೆನಿಪೊಡಂ ನೋಟಿಪ್ಪೊಡೆ ಪುರುಷಾಕಾರೆಯಪ್ಪೊಡಂ ಕಷ್ಟೆಯವಳ್ (ಲೋಕೋಪ. ೧೧-೬೦); ದುರುಳೆಯರು ಕಷ್ಟೆಯರು ವಂಚಕಿಯರು ಜಗಳಗಂಟಿಯರು (ಬಸಪು. ೪೦-೫೩); ಘಾತಕಿಯೆ ಮತ್ಕುಲಕರಿಷ್ಟೆ ನೀನತಿಕಷ್ಟೆ ಪೋಗು ದುಷ್ಟೆ (ಜೈಮಿಭಾ. ೯-೧೮). ೨. ದುಃಖಪಡುವವಳು; ಕಷ್ಟಜೀವಿ : ವಿಷಮಂ ಬರೆ ಗಂಡಗಾಡಿ ದುಃಖದ ಕಣಿಯಕ್ಕುಮುಗ್ರರಿರೆ ಮೇಣವ ಲೋಕಿಸೆ ಕಷ್ಟೆ ನಿಶ್ಚಯಂ (ಜಾತತಿ. ೨೨-೨). [ಕಷ್ಟ + -ಎ$_2$]

**ಕಸ**, ಕಸವು$_1$ (ನಾ). ಕೆಲಸಕ್ಕೆ ಬಾರದ ವಸ್ತು; ಕೊಳೆ; ಹೊಲಸು : "ಅವಕರ ಸಂಕರಾಖ್ಯಮದು ಮನೆಯ ಕಸಂ" (ವಸ್ತುಕೋ. ೪೮-೨೧); "ಅವಕರಂ ಸಂಕರಂ ಕಸಮುಕ್ಕು" (ಮಂಗರಾ. ೬೦-೧೫); ಅವಗುಣಮಿನಿತಾದೊಡಮಾ ಕವಿತಾಬಂಧಮನಶೇಷಮಂ ದೂಷಿಸುಗುಂ ಸವಿಳಾಸಲೋಲಲೋಚನವಿವರಮನೆಡೆವೆತ್ತ ಕಸದವೋಲನವರತಂ (ಕವಿರಾ. ೧-೪೩); ಸಾರಣೆಯಂತಿರೆ ಕಸಮಂ ಪಿಡಿವರ್ ಕೆಲರ್ ಮಹಾಪುರುಷರ್ಕಳ್ (ಅಜಿಪು. ೧-೯೦); ಪದ ಕಸ ಸ್ವರ ರಸ (ಗಾದೆ). ೨. ಹೊಲಗದ್ದೆಗಳಲ್ಲಿ ಪೈರಿನ ನಡುವೆ ತಾನಾಗಿ ಬೆಳೆವ ಹುಲ್ಲು; ಕಳೆ : ತಂತಮ್ಮ ತಂದ ಪುಲ್ಲುಂ ಪುಳ್ಳಿಯುಂ ಮೊದಲಾದ ಕಸಂಗಳೆಲ್ಲಮಂ (ಪಂಚತಂ. ೨೬೬-೧); ಕಸದೊಡನೆ ಕೂಡಿ ಪೆರ್ಚಿದ ಸಸಿಯುಂ ಶಿಕ್ಷಿಸದ ಮಕ್ಕಳುಂ . . . ಒಪ್ಪಲಾರ್ಕುಮೆ (ಧರ್ಮಾಮೃ. ೨-೮೨); ಕಸಮಂ ಸೋದಿಸದೆ ಬಿತ್ತಿದೊಕ್ಕಲಿಗನ ವೋಲ್ (ಶಮದ. ೨೨೭ ಪ್ರಯೋ); ಹುಸಿವವನ ಬೇಹಾರ ಕಸ ಹತ್ತಿದಾರಂಬ. . . ಮಸಿವಣ್ಣವು (ಸರ್ವಜ್ಞ. ೪೫). ೩. ಹೆರಿಗೆಯಾದ ಮೇಲೆ ಬೀಳುವ ಮಾಸು; ಕೂಸಿನ ಚೀಲ; ಹೆರಿಗೆಯ ಸೆತ್ತೆ : ಕಸ (Placenta) ಬಿದ್ದಮೇಲೆ ಸೂಲಗಿತ್ತಿಯು ದೇಹವನ್ನು ಶುಚಿಮಾಡಿ (ಗೃಹವಿ. ೧೦೩). ೪. ಬಾವು; ಊತ : ಅವನ ಕಾಲಿಗೆ ಕಸವಾಗಿದೆ (ರೂಢಿ). **ಕಸವು$_1$** : ೧. ಅರ್ಥಿಗರ್ಥಮಂ ಕಸವಿನ ಲೆಕ್ಕಮೆಂದು ಕುಡಲುಂ (ಪಂಪಭಾ. ೧-೧೧೭); ಕಣ್ಣೊಳಗಣ ಕಸವಿನಂತುಳ್ಕದೆ (ಧರ್ಮಾಮೃ. ೭-೧೦೫); ಕ[ಣ್ಣೊ]ಳ್ ಕಸವು ಪುಗೆ ಕಿವಿಯನೂದುವರ್ (ಸಮುಪ. ೧೧-೪೯); ಕಸವು ಮನೆಯೊಳಿರ್ದೊಡೊಳ್ಳಿಕೆಯ್ಯದು (ಜೀವಸಂ. ೮-೯ ವ); ಹಣವೆಂಬುದೇ ನಮ್ಮ ಮನೆಯಲ್ಲಿ ಕಾಲಕಸವು (ಸಮ್ಯಕೌ. ೫-೯).

**ಕಸದಬೀಜ** = ತಾಂಬೂಲದಲ್ಲಿ ಉಪಯೋಗಿಸುವ ಒಂದು ಬಗೆಯ ಬೀಜ : ಕಸದ ಬೀಜ, ವೈನಕಾಳು – ಇತ್ಯಾದಿ ಸರಕು ತುಂಬಿದ್ದ ತಾಂಬೂಲದ ಚಂಚಿ (ಬೆಳುಮ. ೩೨).

[ದೇ. ‖ ತಮಿ. ಕಶಡು; ತುಳು. ಕಜವು, ಕಜಾವು; ತೆಲು. ಕಸವು, ಕಸುವು; ಕುರುಖ್. ಕಸ್ಸಾ; ಮಲ್ತೊ. ಕಸೆ. / ಸಂ. ಕಚ್ಚರ]

**ಕಸಂಗೊಳ್** (ಕ್ರಿ). ಮೇಲುಸುರು ಬಿಡು; ಏದು; ಹಿಸುಕಲ್ಪಡು; ಹಿಂಡಲ್ಪಡು (?) : ಸಂದಾಗಳ್ ಪಿಡಿದಾಂಕೆ ಡೊಕ್ಕರದೊಳಾತಂ ಕಸಂಗೊಂಡು ಮಬ್ಬಿರ್ಂದರ ಮೆಯ್ಯಜಿದಾಪುರ್ ಗೆಟ್ಟೊಜಗಿದಂ ಕೈಸನ್ನೆಯಂ ಮಾಡುತುಂ (ಚಿಕವಿ. ೪-೧೪೭); "ಕಸವಿಸಿಹೊಂದು, ಸಂತಪಿಸು" (ಪ್ರಭಣ್ಣ). [ಕಸ$_0$ + ಕೊಳ್$_1$]

**ಕಸಂದೆಗೆ** (ಕ್ರಿ). ಕಸವನ್ನು ಗುಡಿಸು; ಉಡುಗು : ಕಸಕಿಲ್ಬಿಡಿದು ಶಿವನಿಲಯದ ಕಸಂದೆಗೆದು (ಪಾಸೋಪು. ೧೩-೫೭). [ಕಸ + ತೆಗೆ$_1$]

**ಕಸಕಡ್ಡಿ** (ನಾ). ಕಸದೊಡನೆ ಬೆರೆತ ಕಡ್ಡಿ; ಕಸವಾದ ಕಡ್ಡಿ : ಕ್ರಿಮಿ ಕಸಕಡ್ಡಿ ಮರ ಮಣ್ಣೊಳೊಸೆದಪ್ಪೆನು (ಸಾನಂಚ. ೩-೫೪); ನಮ್ಮೂರಿನಲ್ಲಿ ಕಸಕಡ್ಡಿಗೂ ಆಗ ಬೆಲೆ (ಹುಟ್ಟಿಹ. ೬೫). [ಕಸ + ಕಡ್ಡಿ]

**ಕಸಕಣ್ಣು** 'ಕಸಗಣ್ಣು' ನೋ.

**ಕಸಕಸಿ** 'ಕಸಕಸೆ' ನೋ.

**ಕಸಕಸೆ**, ಕಸಕಸಿ, ಖಸಖಸಿ, ಗಸಗಸೆ (ನಾ). ೧. ಸಾಸುವೆಯ ಆಕಾರದ, ಬಿಳಿ ಬಣ್ಣವುಳ್ಳ ಒಂದು ಸಾಂಬಾರದ ಕಾಳು; ಅಫೀಮಿನ ಕಾಳು : ಜಾಯಿಕಾಯ್ ಪತ್ರೆ ಕಸಕಸೆಯೆಂಬ ತರತರದೊಳೆಸೆವ ಲಹರಿಗಳುಂ (ಚೆಬಪು. ೪೭-೪೫); ಅತಿಸಾರಕ್ಕೆ–ಅಫಿನಿ ೨ ತೂಕ, ಜಾಯಿಕಾಯಿ ೨ ತೂಕ, ಕಸಕಸೆ, ತೊರೆಸಾಣೆ ಹೂ . . . ಇವೆಲ್ಲವಂ ಪುಡಿಮಾಡಿ (ವಿವೈವಿ. ೪೫). ೨. ಒಂದು ಬಗೆಯ ಹುಲ್ಲು: "ಕಶೇರುಕ–ಕಸಕಸೆ" (ಬಾಹಟೀ. ೨-೨-೪ವ). **ಕಸಕಸಿ** : ೧. "ಖಸಃ–ಕಸಕಸಿ" (ಓಷಧಿ. ೪೨); ಕಸಕಸಿಯ ಹೂವು ಆದಾಗ ಬಹಳ ಸಂಭ್ರಮವಾಗಿ ಕಾಣಿಸುವದು (ಕೃಷಿಪ್ರ. ೧೯೭); ಕಸಕಸಿಯ ಬೀಜಗಳನ್ನು ಆಶ್ವಿನ ಕಾರ್ತಿಕಮಾಸಗಳಲ್ಲಿ ಬಿತ್ತುತ್ತಾರೆ (ಮುಂಬಯಿ. ೪-೩೯). **ಖಸಖಸಿ**: ೧. ಖಸಖಸಿ (ಮುಂಬವ್ಯಾ. ೨೫ ಪೀಠಿಕೆ). **ಗಸಗಸೆ**: ೧. ಗಸಗಸೆಯನ್ನು ಬೆಳೆಯುವುದಕ್ಕೂ, ಬ್ರಿಟಿಷ್ ಇಂಡಿಯಾದಲ್ಲಿ ಅದರ ವ್ಯಾಪಾರಕ್ಕೂ . . . ಅನುಮತಿ ಕೊಡಕೂಡದು (ದಾದಾನ. ೧೨೨).

[← ಪಾರ. ಮರಾ. ಖಸ್‌ಖಸ್; ಅರ. ಖಶ್‌ಖಶ್, ಖಸ್‌ಖಸ್]

**ಕಸಕಳಿ** (ನಾ). (?): ಅಸತ್ಯವಾದಮಂ ಪೊಸಯಿಸಿ ಜೀವನಿಲ್ಲ ಮೋಜಿ ಯಿಲ್ಲಜನಿಲ್ಲ ಪರತ್ರೆಯಿಲ್ಲೆನಲ್ ಕಸಕಳಿಯಂತು [ಪಾಠಾಂ. ಗಳಿಯಂತು] ನಾಲಗೆ ಪೊರಳ್ದುದು ರಾಜಸಭಾಂತರಾಳದೊಳ್ (ಆದಿಪು. ೨-೧೧). ℙ ಇದು ಮಿಥ್ಯಾಶಬ್ದ. 'ಎನಲ್ಕಸಕಳಿ' ಎಂಬುದನ್ನು 'ಎನಲ್ಕೆ + ಅಸಕಳಿ' ಎಂದು ಸರಿಯಾಗಿ ಬಿಡಿಸದೆ 'ಎನಲ್ + ಕಸಕಳಿ' ಎಂದು ತಪ್ಪಾಗಿ ಬಿಡಿಸುವುದರಿಂದ ಬರುವ ಅಪಶಬ್ದ. ಆದರೆ 'ಕಸಕಳಿ' ಎನ್ನುವುದಕ್ಕೆ 'ಕಸ + ಕಳಿ + -ಇ' ಎಂದು ನಿಷ್ಪತ್ತಿ ಹೇಳಿ, 'ಕಸಪೊರಕೆ, ಬರಲು' ಎಂದು ಅರ್ಥಯಿಸಬಹುದು. ಇದು ಕನ್ನಡದಲ್ಲೇ ಏಕೈಕ ಪ್ರಯೋಗವಾಗಿರುವುದರಿಂದಲೂ ಜ್ಞಾತಿ ಶಬ್ದಗಳು ಯಾವುದೂ ಕಾಣಿಸದಿರುವುದರಿಂದಲೂ ಅರ್ಥವನ್ನಾಗಲಿ, ನಿಷ್ಪತ್ತಿಯನ್ನಾಗಲಿ ಸಮರ್ಥಿಸುವುದು ಕಷ್ಟ. 'ಅಸಕಟಿ' ಪರಾ.

**ಕಸಕಿಲ್,** ಕಸಕಿಲು, ಕಸಿಕಿಲ್, ಕಿಸಿಕಿಲ್ (ನಾ). ಪೊರಕೆ; ಕಸಪೊರಕೆ; ಬರಲು: "ಕಸಕಿ[ಲೆನ]ಲ್ ಸಮ್ಮಾರ್ಜನಿ" (ವಸ್ತುಕೋ. ೫೦-೩೨); "ಸಮ್ಮಾರ್ಜನಿ ಪರಿಶೋಧಿಯೆನಲ್ ಕಸಕಿಲೆನಿಸಿಕ್ಕು" (ಮಂಗರಾ. ೬೦-೧೫); ಮುಟ್ಟಬಹುದೇ ಕಸಕಿಲಂ ರಜವನುಡುಗುವರೆ (ವೀಶೈಪು. ೨-೬-೧೬); ಪಟ್ಟದರಾಣಿಯಿಂದೀಗ ಕಸಕಿಲಂ ಪಿಡಿದು ಬೋಹರಿಸುವರೆ (ಗುರುಚಾ. ೫-೧೫); ಕಸಗುಡಿಸುವ ಕಸಕಿಲವೋಲ್ ಕಸವರಮಂ ಗಳಿಸಿ ಬಯ್ತು ಸಾವಂ ಕೃಪಣಂ (ನೀತಿಮಂ. I, ೩೬೩). **ಕಸಕಿಲು**: ನಮ್ಮೊಡತಿ ತಾನೆ ಕಸಕಿಲುವಿಡಿದು (ವೀಶೈಪು. ೨-೬-೧೫). **ಕಸಿಕಿಲ್**: ಎಲ್ಲಿರ್ದೊಡೇನು ಕಸಿಕಿಲ್ ಒಳ್ಳಿದರಾಮನೆಯೊಳಿರ್ದೊಡಂ ರಜಗಳೆವುದಕಲ್ಲದೆ ಮತ್ತಲ್ಲಿಯ ವನಿತಾ ಚೊಲ್ಲಿಹಕಂ ಚವಲಿಯಹುದೆ (ನೀತಿಸಾ. ೪೮೯). **ಕಿಸಿಕಿಲ್**: ನೊರೆ ಸುರಿವ ಬಾಯ್ಕನಿಕೆ ಹಡಿಕಿಗಳೋ ಕರದ ಕಿ[ಪಾಠಾಂ. ಕ]ಸಿಕಿಲ ಕಾಕರೋ (ಬಸವು. ೫೧-೩೫).
[ಕಸ + ?]

**ಕಸಕಿಲು** 'ಕಸಕಿಲ್' ನೋ.

**ಕಸಕಿಲುಗ** (ನಾ). ಕಸಗುಡಿಸುವವನು. 'ಕಸಕಿಲುಗಿತ್ತಿ' ಪರಾ.
[ಕಸಕಿಲು (< ಕಸಕಿಲ್) + -ಗ$_3$]

**ಕಸಕಿಲುಗಿತ್ತಿ** (ನಾ). ಕಸಗುಡಿಸುವವಳು: ಕುಶಲಮೋಹನ ಮುದ್ದು ಮಾಟಗಳಿಂದೆ ರಸಿಕನೊಲಿಸದಂಗನೆಯ ಕಸಕಿಲುಗಿತ್ತಿಯೆಂದೆಂಬರು (ಮದೇಪು. ೨೦-೪೩). [ಕಸಕಿಲುಗ + -ಇತ್ತಿ]

**ಕಸಕಿಲ್ಗೆಯ್ಮೆ** (ನಾ). ಕಸಗುಡಿಸುವ ಕೆಲಸ: ಕಸಕಿಲ್ಗೆಯ್ಮೆಯನೆಸಗುವ ಮುಸಕದೆ ಕಡುದಡ್ಡುವಿಟ್ಟ ಪಡಿಗದ ಪಟನೀರ್ಪಸೆಯಾಜಿದ ಪಾಟಿಗ್ಗೆಯ್ಮೆಂದಸತಿಯರಿಂದೆ ಪಿಡಿವರಯ್ಯೊ ಪೊಸ ಮುಡಿಮೆಯ್ಮಂ (ಚಿಕವಿ. ೬-೧೨೦). [ಕಸಕಿಲ್ + ಗೆಯ್ಮೆ (< ಕೆಯ್ಮೆ$_1$)]

**ಕಸಕು**$_1$ 'ಕಸುಕು' ನೋ.

**ಕಸಕು**$_2$ (ನಾ). ಬೆದರಿಸುವ ತಂತ್ರ; ಹೆದರಿಸುವ ಉಪಾಯ (?): ಕುಹಕ ಮತ್ತು ಲಾವಕಜನರು ವಿವಿಧ ಕಸಕುಗಳನ್ನು ರಚಿಸಿ ನಿರಪರಾಧಿಯಾದ ನನ್ನ ಪೀಡನೆಯ ಉದ್ದೇಶವುಳ್ಳ ಸಾಧನೆಗಳನ್ನು ನಡಿಸುವದರಿಂದ ನನ್ನ ಅಭಿಮಾನ ಭಂಗವಾದರೆ ನಾನು ಬದುಕಿರುವದಕ್ಕಿಂತ ಸಾಯುವದೇ ಲೇಸು (ವಾಗ್ದೇವಿ. ೧೪೮). [?]

**ಕಸಕುಪ್ಪೆ,** ಕಸಗುಪ್ಪೆ (ನಾ). ಕಸದ ರಾಶಿ; ತಿಪ್ಪೆ: ಕಸಕುಪ್ಪೆಯೊಳ್ ತಾಮರೆ ಮೂಡಿದುದಂ (ವಡ್ಡಾರಾ. ೮೫-೨೯); ಸೊಗಯಿಪ ಸೊಡಮತ್ತ ಕಸಕುಪ್ಪೆಯ ತಿಪ್ಪೆಯ ಮೇಗಿದೆತ್ತ (ಬಂಹರಿ. ೪-೫). **ಕಸಗುಪ್ಪೆ**: ಕಸಗುಪ್ಪೆಯೊಳೆಂಜಲಗುಟಿನಾಯ್ದು ಲಸಿ ತಿಂಬ ಮುಗುವಂ ಕಂಡು (ಧರ್ಮಾಮೃ. ೮-೧೬೫). [ಕಸ + ಕುಪ್ಪೆ$_1$]

**ಕಸಕುಳಿ** (ನಾ). "ಅಪರಿಪಕ್ವತೆ ?" (ಶಿವಗೀ. ಕೋಶ): ಕಾಕು ಸಟಿ [ಕಸಕುಳಿಯ] [ಪಾಠಾಂ. ಕುಸಾಕುಳಿಯ, ಕುಶಾಕುಳಿಯ, ಕುಸಕುಳಿ, ಕಸಾಕುಳಿ, ಕುಸಾಕುಳಿ] ಕಳೆದುಳಿದು ಶಿವಪಥವನಾಲೋಕಿಸಿ ಅಜಾತನಾಗಿಪ್ಪ ಸುಯಿದಾನಿ ಮುಗುದ (ಶಿವಗೀ. ೨೭-೧೧೬); "ಕಾಕು - ಸಟಿ - ಕಸಕುಳಿಯ: ಕೆಟ್ಟಂಥ ಮಾಯಾಪ್ರಪಂಚವನ್ನೂ, ಮಿಥ್ಯಾಸ್ವರೂಪವಾದ ದೇಹಪ್ರಪಂಚನ್ನೂ ಮತ್ತು ಇಂದ್ರಿಯವಿಷಯಪ್ರಪಂಚನ್ನೂ, ಕಳೆದು" (ಶಿವಗೀ. ೩೭೮-೧೧೬ ವ್ಯಾಖ್ಯಾ). [?]

**ಕಸಕೆ** (ನಾ). ೧. ಒಂದು ಜಾತಿಯ ಹುಲ್ಲು; ಒಂದು ತೃಣಧಾನ್ಯ: "ವಕ್ರಿ ಮಾರುಳಿ ಕಂಬು ಕಸಕೆ [ಪಾಠಾಂ. ಕಸವೆ]ಸಂದಂ ಕರಡೆಯಕ್ಕು" (ಮಂಗರಾ. ೩೩-೮). ೨. ಒಂದು ಮರ: ಕದಲೆ ಕಸಕೆ ಕಣಗಾಡಾ ಹಳುವಿನೊಳೊದವಿಹುದೆಲ್ಲಿ ನೋಡಿದರೂ (ಶ್ರೀಪಾಲ. ೭-೧೨). [?]

**ಕಸಗಣ್ಣು,** ಕಸಕಣ್ಣು (ನಾ). ಬೇನೆಹತ್ತಿದ ಕಣ್ಣು; ಉರಿಬಂದ ಕಣ್ಣು (ಕಿ). **ಕಸಕಣ್ಣು**: "ಬೇನೆಗಣ್ಣು" (ಜಾನಕೋ. ೩೬).
[ಕಸ + ಕಣ್ಣು (< ಕಣ್)]

**ಕಸಗಳೆ** (ಕ್ರಿ). ೧. ಕಸವನ್ನು ತೆಗೆ; ಕಸಗುಡಿಸು: ಪವನಂ ಕಸವಂ ಕಸಗಳೆದು ಮೆಲ್ಲಮೆಲ್ಲನೆ ತೀಡಿತ್ತು (ಶಾಂತಿಪು. ೩-೨೭); ಸಮುಜಿ ಕಸಗಳೆದ ತೆಜದಿಂದಮೆ ಸತ್ತರ್ (ನೇಮಿಪು. ೧೪-೧೨೭); ನಿನ್ನಳಿಪಿಂಗೆ ಬರ್ಪವಳ್ ಕಸಗಳೆವಾಕೆ ಮೇಣ್ಕುರುಡಿ ಮೇಣ್ಪೆಕಟಾಂಗದ ರಂಡೆ ಮೇಣದೇಂ ಬಸನಮೊ (ಜೀವಸಂ. ೧೪೧-೧೪). ೨. (ಅಲಂ) ತಿರಸ್ಕರಿಸು; ತೊರೆ; ಬಿಡು: ಕಸಗಳೆದು ಪಟಿಯರಂ ಪೊಸಪೊಸಂಬರಂ ನಲಿಯಿಸೂಲಿಸು ಸಲಿಸಾಸೆಗಳಂ (ಚಿಕವಿ. ೬-೯೪); ಭೋಗಭಾಗ್ಯಗಳನ್ನು ತೃಣಮೆಂದು ಕಸಗಳೆದು ಕೈವಲ್ಯಪದಕರಸ ಕರಣಮಂ ಸಲಿಸು (ಪರಶು. ೯-೯). [ಕಸ + ಕಳೆ$_1$]

**ಕಸಗು** (ಕ್ರಿ). ಕುಕ್ಕು; ಉಜ್ಜು; ತೀಡು: ಒದ್ದೆ ಮಾಡಿ ಕಸಗಿ ಹಿಂಡಿದರೆ ಎಳೆಗಳು ಹಿಸಿಯಬಹುದು (ಗೃಹವಿ. ೬೯).
[ದೇ. ‖ ತಮಿ. ಕಶಕ್ಕು, ಕಯಕ್ಕು; ಮಲ. ಕಶಕ್ಕು; ಕುರುಖ್. ಖಚ್ನಾ]

**ಕಸಗುಡಿಸು,** ಕಸಗೂಡಿಸು$_2$ (ಕ್ರಿ). ಕಸತೆಗೆ; ಕಸಹೊಡೆ: ಸಮ್ಮಾರ್ಜನೀ, ಶೋಧಿನೀ - ೨ ಕಸವಮಂ ಕಸಗುಡಿಸಲು ಕಟ್ಟಿ, ಚೀಪರಿ ಕಟ್ಟಿ, ಪರಕೆ, ಕಸಬರಲು, ಕೇರಸೋಣಿ (ಸಿದ್ಧಾಂತಿ. ೯೨). **ಕಸಗೂಡಿಸು**$_2$: ಒಂದು ದಿನ ಅವಳು ತನ್ನ ಗುಡಿಸಲಿನ ಅಂಗಳದ ಕಸಗೂಡಿಸುತ್ತಿದ್ದಳು (ಕಥಕ. ೪೮). [ಕಸ + ಗುಡಿಸು$_1$]

**ಕಸಗುಪ್ಪೆ** 'ಕಸಕುಪ್ಪೆ' ನೋ.

**ಕಸಗೂಡಿಸು**$_1$ (ಕ್ರಿ). ಕಳೆ ತೆಗೆಯದೆ ಬಿಡು; ಕಳೆಯನ್ನು ಬೆಳೆಸು: ಮಾನವನೆಂಬ ಬೆಳೆ ಭೂಮಿಯಲ್ಲಿ ಹುಟ್ಟಿದ ಅವಗುಣವೆಂಬ ಪ್ರಳಯದ ಕಸ ಆವ ಬಗೆಯಿಂದ ಹೋದರದು ಲೇಸು. ಹೊಲ ನೊಂದೀತೆಂದು ಕಸಗೂಡಿಸುವದೇ (ಮೋಳಿಮಾ. ೧೪೬ ಪ್ರಸ್ತಾವನೆ). [ಕಸ + ಕೂಡಿಸು]

**ಕಸಗೂಡಿಸು**$_2$ 'ಕಸಗುಡಿಸು' ನೋ.

**ಕಸಗೊಟ್ಟೆ** (ನಾ). ಕಸದ ರಾಶಿ; ತಿಪ್ಪೆ: ಸುಮತಿಯೆಂಬ ಹತ್ತಿಯ ಕೊಂಡು ಪುಣ್ಯಪಾಪವೆಂಬ ಕಸಗೊಟ್ಟೆಯ ಕಳೆದು ದೃಢವೆಂಬ ಬತ್ತಿಯಂ ತೀವಿ (ಚನ್ನವ. ಕ. ೫೪೭-೧೧೮೭). [ಕಸ + ಗೊಟ್ಟೆ]

**ಕಸಟಿ** (ನಾ). ಕೊಳಕ; ಹೊಲಸುಗಾರ: ಎಂತಹ ನಂಬಿಕೆ-ಘಾತುಕ, ಕಸಟಿ ಇರಬಹುದು (ಭೀಮುಕಾ. ೧೭೭). [ಕಸಟು + -ಇ$_3$]

**ಕಸಟು** (ನಾ). ಕೊಳೆ; ಹೊಲಸು; ದೋಷ: ಅಸೆ ಸಟಿ ಕುತ್ಸಿತಂ ದೀನತನ ಕಸಟುಗುಣ ರೋಷವರ್ತನೆ (ಪತಿಲ. ೧೪-೭).
[ದೇ. ‖ ತುಳು. ಕಸಂಟು; ತೆಲು. ಕಸಟು]

**ಕಸದಾರ** (ನಾ). ಕಸುವು ಉಳ್ಳದ್ದು; ಗಟ್ಟಿಯಾದದ್ದು; ಸತ್ತ್ವಯುತವಾದದ್ದು: ಅರಳಿ ಜಡ ಕಸದಾರ ಅಥವಾ ಕೆಡಕ ಇದು ನೋಡುವ ರೀತಿ (ಮುಂಬವ್ಯಾ. ೪೦). [← ಮರಾ. ಕಸದಾರ್]

**ಕಸನೀರು** (ನಾ). ೧. ಕಸ ಗುಡಿಸುವುದು ಮತ್ತು ನೀರು ತರುವುದು: ಕಸನೀರ ತರುವ ದಾಸಿಗೆ ಒಂದು ಶಿಸು ಹುಟ್ಟಿತ್ತು (ಸಿದ್ಧೇವ. ೧೩೦). ೨. (ಹೆರಿಗೆಯಾದ ಮೇಲೆ) ಕಸಬಿದ್ದೊಡನೆ ಬರುವ ನೀರು: ದಾಸಿಗೆ ಒಂದು ಶಿಸು ಹುಟ್ಟಿತ್ತು ನೋಡಾ ಶಿಶುವೆದ್ದು ತಾಯನಪ್ಪಲು ಕಸನೀರು ಅಜತುಹೋಯಿತ್ತು ಕಾಣಾ (ಸಿದ್ಧೇವ ೧೩೦). [ಕಸ+ನೀರು$_1$(< ನೀರ್$_1$)]

**ಕಸಪರಿಕೆ** 'ಕಸಪೊರಕೆ' ನೋ.

**ಕಸಪೊರಕೆ**, ಕಸಪರಿಕೆ, ಕಸಬರಿಕೆ, ಕಸಬರಿಗೆ (ನಾ). = ಕಸಕಿಲ್: ಹುಡುಗಿಯನ್ನು ಕಸಪೊರಕೆಯಿಂದ ಹೊಡಿದು ಹೊರಗೆ ಹೊರಡಿಸಿಬಿಡು (ದೇವೀಚೌ. ೯). **ಕಸಪರಿಕೆ:** ಅಂಚೆಯಾಳು ಕೈಲಿದ್ದ ಸೊಪ್ಪಿನ ಕಸಪರಿಕೆಯಿಂದ ನೆಲವನ್ನು ತಟ್ಟಿದನು (ಹುಟ್ಟಿಹ. ೨೬). **ಕಸಬರಿಕೆ:** ಗುಡಿಸಿ ಮುಗಿದೊಡನೆ ಕಸಬರಿಕೆಯನ್ನು ಹಿಡಿದುಕೊಂಡೇ ನನ್ನ ಬಳಿಗೆ ಬಂದಳು (ದೀಪದ. ೧೩೬). **ಕಸಬರಿಗೆ:** ಕಸಬರಿಗೆಯನ್ನು ತೆಗೆದುಕೊಂಡು ಶಿವೂನ ಬೆನ್ನನ್ನು ಝಾಡಿಸಿಬಿಟ್ಟಳು (ಕುರಿಹಿಂ. ೬೨); ಕಸಬರಿಗೆಯಿಂದ ಕಸ ಗುಡಿಸುತ್ತಿದ್ದರು (ಕಪವು. ೩-೭೪). [ಕಸ + ಪೊರಕೆ (< ಪರಕೆ$_2$)]

**ಕಸಬ** 'ಕಸಬೆ$_1$' ನೋ.

**ಕಸಬರಲ್**, ಕಸಬರಲು (ನಾ). = ಕಸಕಿಲ್: "ಸಮ್ಮಾರ್ಜನೀ = ಕಸಬರಲ್" (ಕಾಶಕ್ಕ. ೨೬೬). **ಕಸಬರಲು:** "ಚೀಪರಿಕಟ್ಟೆ, ಪರಕೆ, ಕಸಬರಲು" (ಸಿದ್ಧಾಂಶಿ. ೯೨); ಸ್ವಸ್ಥನಿರದೆ ಕಸಬರಲ ನೀ ತಂದು ತಂಗಿಯರಿಗೆಲ್ಲ ಹಗೆಯಾದೆ (ಹಳ್ಳಿಬಾ. ೬೨). [ಕಸ + ಬರಲ್]

**ಕಸಬರಲು** 'ಕಸಬರಲ್' ನೋ.

**ಕಸಬರಿಕೆ** 'ಕಸಪೊರಕೆ' ನೋ.

**ಕಸಬರಿಗೆ** 'ಕಸಪೊರಕೆ' ನೋ.

**ಕಸಬಳಿಸು** (ಕ್ರಿ). ಕಸಹೊಡೆಯಿಸು, —ತೆಗೆಯಿಸು: ಮಸಣಿಯಾ ಕೈಯ ಕಸಬಳಿಸುವರು (ಪುರಂದ. ೧-೧೪೫-೧). [ಕಸ + ಬಳಿಸು$_1$]

**ಕಸಬಾ** 'ಕಸಬೆ$_1$' ನೋ.

**ಕಸಬಿ$_1$** (ನಾ). ಸೂಳೆ: ಕಸಬಿಯರ ಓಣಿ (ರೂಢಿ). [ಕಸಬು + -ಇ$_2$]

**ಕಸಬಿ$_2$** (ನಾ). ಉದ್ಯೋಗಸ್ಥ; ಉದ್ಯೋಗ ಮಾಡುವವನು: ಕೈಗಾರಿಕೆಗಳನ್ನೆಲ್ಲ ಬಿಡಿಕಸಬಿಗಳ ಅಡ್ಡಕಸಬಿಗಳ "ಕೈ" ತಪ್ಪಿಸಿ ದೊಡ್ಡ ಪ್ರಮಾಣದಲ್ಲಿ ಅದೇ ಕಸಬಿಗಳನ್ನು ಕೂಲಿಗೆ ಇಟ್ಟು ನಡೆಯಿಸಬಾರದೇಕೆ (ಮಾವಾದ. ೯೭). [ಕಸಬು + -ಇ$_3$]

**ಕಸಬಿಣಿ** (ನಾ). (ಉಕ) ಸೂಳೆ; ವೇಶ್ಯೆ; ಬೆಲೆವೆಣ್ಣು: ಪಾತರದವರು . . . ಕಸಬಿಣಿಗಳಿದ್ದಲ್ಲಿ ಕುಣಿಯುವುದಿಲ್ಲ (ಕಭಾಗ. ೧೯೫). [← ಮರಾ. ಕಸಬೀಣ್; ಹಿಂ. ಕಸಬೀ, ಕಸಬಿನ್]

**ಕಸಬು**, ಕಸುಬು (ನಾ). ೧. ಕೆಲಸ; ಕಾಯಕ; ಉದ್ಯೋಗ: ಕಟ್ಟಡಗಳನ್ನು ಕಟ್ಟಿಸುವುದೂ ಒಂದು ಸಣ್ಣ ಕಸಬಾಯಿತು (ಭಾಗ್ಯಶಿ. ೮೯); ಮುಂದಲಿಗೆ ಕಸಬು ಸ್ವತಂತ್ರವಾದ ಕೈಗಾರಿಕೆಯಾಗಿ (ಹುಟ್ಟಿಹ. ೯). ೨. ಸೂಳೆಗಾರಿಕೆ; ವೇಶ್ಯಾವೃತ್ತಿ: ರಂಗಿಯ ತಾಯಿಯೂ ಸೂಳೆಯಾಗಿದ್ದವಳೇ. ಅವಳು ಕಸಬಿಗಾರಂಭಿಸಿದ ಹೊಸದರಲ್ಲಿ (ನಾವೋಲೀ. ೩೦೧); ಆಕೆ ಕಸಬಿನವಳಲ್ಲ (ಅನ್ನಪೂ. ೩೧). **ಕಸುಬು:** ೧. ನಿತ್ಯ ಜೀವನದಲ್ಲಿ ಇವರು ಬೇಸಾಯದ ಕಸುಬಿನವರು (ಯಕ್ಷಬ. ೧೮); ಬೇರೆ ಬೇರೆ ಕಸುಬಿಗೆ ಸೇರಿದ ವರ್ತಕರ ಅಂಗಡಿಗಳು ಬೇರೆಬೇರೆ ಇವೆ (ಪ್ರವಾಇ. II, ೧೫೬). ೨. ಕಾಸಿಂಬಿ ಇನ್ನೂ ಎಳಕಲು . . . ಹೊಸತಾಗಿ ಕಸುಬಿಗೆ ಇಳಿದವಳು (ಬೆಂಗಬ. ೧೬೮). [← ಅರ. ಕಸ್ಬ್; ಮರಾ. ಹಿಂ. ಕಸಬ]

**ಕಸಬುಗಾರ** (ನಾ). ಉದ್ಯೋಗಸ್ಥ; ಕೆಲಸಗಾರ. 'ಕಸಬುಗಾರಿಕೆ' ಪರಾ. [ಕಸಬು + -ಗಾರ (< -ಕಾಱ)]

**ಕಸಬುಗಾರಿಕೆ** (ನಾ). ಕೈಗಾರಿಕೆ; ಕೆಲಸ: ಮನುಷ್ಯನ ಕಸಬುಗಾರಿಕೆಯಲ್ಲಿರುವ ಕೌಶಲ್ಯವು ಸಂಪತ್ತಿನ ಉತ್ಪನ್ನಕ್ಕೆ ಮುಖ್ಯಸಹಾಯ (ಬಾಲಪ್ರ. I, ೧೭೭). [ಕಸಬುಗಾರ + -ಇಕೆ]

**ಕಸಬುದಾರ**, ಕಸುಬುದಾರ (ನಾ). = ಕಸಬುಗಾರ: ದೇಶದ ನಾನಾ ಭಾಗಗಳಿಂದ ಕಸಬುದಾರರು ಬಂದರು (ಕಪವು. ೪-೧೦೦). **ಕಸುಬುದಾರ:** ಇಬ್ಬರು ಮೂವರು ಕರಡಚ್ಚನ್ನು ತಿದ್ದುವ ಕಸುಬುದಾರರೂ ಅಸಾಧಾರಣವಾದ ಎಚ್ಚರಿಕೆಯಿಂದ ಓದಿ ನೋಡಿದ್ದರೂ ಕೂಡ (ಕನ್ನಸಂ. ೨೨೩). [ಕಸಬು + -ದಾರ್$_4$]

**ಕಸಬುದಾರಿ**, ಕಸುಬುದಾರಿ (ನಾ). ೧. ಉದ್ಯೋಗಸ್ಥ; ಕಸುಬಿನವನು: ಯಕ್ಷಗಾನ ಕಸಬುದಾರಿಗಳಲ್ಲಿ ಅತಿಮಾತಿನ ಅಧಿಕಪ್ರಸಂಗವಿಲ್ಲ (ಯಕ್ಷಬ. ೩೮); ಕಸಬುದಾರಿ ದಂಡಾಳುಗಳು ಮತ್ತು ತೋಳಗಳು ಜನಸಾಮಾನ್ಯರಿಗೆ ವಿಶೇಷ ಕಷ್ಟನಷ್ಟಗಳನ್ನುಂಟುಮಾಡುತ್ತಿದ್ದವು (ಯೋಧರು. ೨). ೨. ವಿಟ: ಅವನು ನನ್ನ ಕಡೆಗೇ ನೋಡುತ್ತಾನೆ. ಬಹುಶಃ ಕಸಬುದಾರಿ ರಸಿಕರು (ಪುನರು. ೧೪೮). **ಕಸುಬುದಾರಿ:** (ಗು). ೩. ಔದ್ಯೋಗಿಕ; ಔದ್ಯಮಿಕ: ಕಸುಬುದಾರಿ ಕೆಲಸಗಳು ನಡಿಯುವ ಮುಖ್ಯಸ್ಥಳಗಳು (ಭೂಗೋಳ. ೯೩). [ಕಸಬುದಾರ + -ಇ$_3$]

**ಕಸಬುಶಾಲೆ** (ನಾ). ವೃತ್ತಿ ಶಿಕ್ಷಣ ಶಾಲೆ; ಉದ್ಯೋಗ ಕಲಿಸುವ ಸಂಸ್ಥೆ. 'ವೃತ್ತಿಶಾಲೆ' ಪರಾ. [ಕಸಬು + ಶಾಲೆ$_1$]

**ಕಸಬೆ$_1$**, ಕಂಸಬೆ, ಕಸಬ, ಕಸಬಾ (ನಾ). ತಾಲ್ಲೂಕಿನ ಅಥವಾ ಅದರ ಭಾಗದ ಮುಖ್ಯಸ್ಥಳ: ಕಸಬೆಯೊಳಗೆ ಸೋಮೇಶ್ವರ ಕೆರೆ (ಎಕ. X, ಮುಳಬಾ. ೧೮-೧೭; 1234?); ವಕಲೇರಿ ಹೋಬಳಿ ಕಸಬೆವಳ[ಗೆ] (ಮೈಆರಿ. ೧೯೪೧, ೧೫-೯; 1746); ಶಿರಸ್ತೆದಾರರು ಸಹ ಕಸಬೆಯಲ್ಲಿ ಇದ್ದುಕೊಂಡು (ಮಹಾವಂ. II, ೫೭); ಆ ಪಾಳು ತಾವರೇಕೋಟೆಯೆಂಬ ದೊಡ್ಡ ಪಾಳ್ಯಪಟ್ಟಿನ ಕಸಬೆಯಾಗಿತ್ತು (ಸಕತ. ೬೬). **ಕಂಸಬೆ:** ದೇವರಪುರದ ಕಂಸಬೆಯಲು ಬೆದಲು ಭೂಮಿ ಬೀಜವರಿ (ಎಕ. XI, ಹೊಳಲ್ಕೆ. ೫೪-೧೩; 1755). **ಕಸಬ:** (ರೈಸ್‌ಗೆ. ೫೫೨). **ಕಸಬಾ:** ನರಶೀಪುರ ತಾಲ್ಲೂಕು ಬಂಡಿಹೊಳೆ ಹೋಬಳಿ ಪೈಕಿ ಕಸಬಾ ಬಂಡಿಹೊಳೇಗ್ರಾಮ (ಹುಟ್ಟಿಹ. ೩). [← ಹಿಂ. ಮರಾ. ಕಸಬಾ; ಅರ. ಕಶಬ್]

**ಕಸಬೆ$_2$** (ನಾ). = ಕಸಬಿ$_2$: ಕಸಬೇರ ಕಳೆದು ಬಸವೇರ ಬಿಟ್ಟು ದಾಟ ಬಂದಾಂವಾ (ಸಖೀಗೀ. ೯೨-೧೦); ಕಸಬೇರ ಧಾರಣಿ ಜಗತ್ತಿನ ತುಂಬ (ರಕ್ತಧ್ವ. ೧೦೬). [ಕಸಬು + -ಎ$_2$]

**ಕಸಬೋಹರಿಗೆ** (ನಾ). = ಕಸಕಿಲ್: ತಾನೇ ಕರದೊಳಾಂತು ಕಸ [ಪಾಠಾಂ. ರಜ] ಬೋಹರಿಗೆಯಂ ಪಿಡಿದು (ಗುರುಚಾ. ೫-೧೪). [ಕಸ + ಬೋಹರಿಗೆ]

**ಕಸಮುಸಗು** (ಕ್ರಿ). ಕೆರಳು; "ಮನಸ್ಸಿನ ಅಶಾಂತಿಯಿಂದ ರೇಗು" (ಸುಕುಮಾ. ಕೋಶ): ಕಸಮುಸಗಿ ಮಿಸುಗಿ ಭೃಂಗಪ್ರಸರಂ ಪಸರಿಸುವು ವೆಸೆವ ಬಿಸರುಹವನದೊಳ್ (ಸುಕುಮಾ. ೧೦-೫೭). [?. / ತೆಲು. ಕಸಿಮಸಗು]

**ಕಸಮಾಱಿ** (ನಾ). ಕಸಗುಡಿಸುವವಳು; ಕೀಳು ಹೆಂಗಸು (?): ಕಸಮಾಱಿಯ ಬರ್ದೆಯ ತಳ್ತ ಬಾೞ್ತೆಯಂ (ಚಿಕವಿ. ೬-೧೪೭). [ಕಸ + ಮಾಱಿ ?]

**ಕಸಮುಡುಗೆ** (ನಾ). = ಕಸಕಿಲ್: "ಸಮ್ಮಾರ್ಜನಿ, ಶೋಧಿನೀ – ಈ ೨ ಕಸಮುಡುಗೆಯ ಪೆಸರು" (ನಾಚಿರಾ. ೧೦೪). [ಕಸ + ಉಡುಗೆ$_0$]

**ಕಸಮುಸುರೆ** (ನಾ). ಕಸ ಮತ್ತು ಮುಸುರೆ; ಮನೆಗೆಲಸ: ಕಸ ಮುಸುರೆ ತೊಳೆಯಲು ಒಬ್ಬ ಸೇವಕಿ ಬೇಕು (ರೂಢಿ).
[ಕಸ + ಮುಸುರೆ (< ಮುಸುಱೆ)]

**ಕಸರ್**, ಕಸುರ್ (ಕ್ರಿ). ಒಗರಾಗಿ ಗಂಟಲುಕೆರೆ; ಒಗಚಾಗಿರು: "ಕಸರ್ - ಗಲಕಂಡೂತೌ (ಗಂಟಲು ಕೆರೆಯು)" (ಶ ಮ ಧಾ); ಕಸರ್ಪಂ, ಕಸರ್ವಂ (ಶಬ್ದಾನು. ೫೧೧ ಪ್ರಯೋ). **ಕಸುರ್**: ಕೃಷಿ ಪಟ್ಟಿಯಂ ಬೆಳೆಯಿಸುಗುಂ ಕಸುರ್ತುರ್ ಬರೆ ಸಾಲೆ(ವೆ)ಯೆ ಕ್ಷಾರದಿ ಕೋದ್ರವಂಗಳುಂ ಜಳನಿಧಿ ಮೇಖಳಾಖಿಳಮಹೀವಳಯಂ ಬೆಳೆಗುಂ ನಿರಂತರಂ (ಜಟ್ಟಮ. ೮-೧೪೨).
[ದೇ. ‖ ತಮಿ. ಕಶರ್, ಕಯರ್ = ಒಗರು]

**ಕಸರತ್ತು**, ಖಸರತ್ತು (ನಾ). ೧. ವ್ಯಾಯಾಮ; ತಾಲೀಮು: ಕಸರತ್ತನ್ನು ಮಾಡುವಾಗ ಮತ್ತು ಓಡುವಾಗ ಎಂದೆಂದೂ ಬಾಯಿಂದ ಶ್ವಾಸವನ್ನು ತಕ್ಕೊಳ್ಳದಿರುವುದು (ಬ್ರಹ್ಮಜೀ. ೨೦೯); ನಾಲಗೇಗೆ ಸ್ವಲ್ಪ ಕಸರತ್ತು ಕೊಡ್ರಣ್ಣಾ (ಸ್ವಾಮಿನ್ನೇ. ೮೩). ೨. ಅಭ್ಯಾಸ; ತರಬೇತಿ; ಕವಾಯಿತು: ಏನನ್ನಾದರೂ ಕಲಿಯಲಿ, ಮನಸ್ಸಿಗೆ ಕಸರತ್ತಾದರೆ ಸಾಕು ಎಂದು ವಾದಿಸುವುದು ಸೂಕ್ತವಲ್ಲ (ಶಿಕ್ಷದ. ೪೫). ೩. ಶಕ್ತಿಯ ಹಾಗೂ ಚಮತ್ಕಾರದ ಪ್ರದರ್ಶನ: ಕಥಕ್ ನೃತ್ಯವು ಒಂದು ಕಲೆಯೇ ಅಥವಾ ಕಸರತ್ತೇ ಎಂದು ಭ್ರಮಿಸುವಂತಾಗುತ್ತದೆ (ಅಭಾನ್ಯ. ೮೬); ಮೆದುಳಿನ ಕಸರತ್ತಿನಿಂದ ಬರುವ ಭಾಗ್ಯವಾದರೂ ಏನು? ಎಂಬ ಪ್ರಶ್ನೆ ಮೂರ್ಖರ ಪ್ರಲಾಪ (ಜೀವಾತ್ಮ. ೮). **ಖಸರತ್ತು**: ೩. ನನ್ನ ಖಸರತ್ತಿನ ಬುದ್ಧಿಯಿಂದ ಅವರನ್ನು ಕಟ್ಟಿ (ಕಲನಿ. ೩೪೪).
[← ಹಿಂ. ಮರಾ. ಕಸರತ್; ಅರ. ಕಸ್ರತ್]

**ಕಸರಾಬಸರ** 'ಕಸರಾಮುಸರ' ನೋ.

**ಕಸರಾಮುಸರ**, ಕಸರಾಬಸರ (ನಾ). ೧. ಅವ್ಯವಸ್ಥಿತವಾದದ್ದು; ಕಿಚಿಪಿಚಿ; ಹದಗೆಟ್ಟ ಬೆರಕೆ (ಕಿ). **ಕಸರಾಬಸರ**: ೨. "ರುಚಿಗೆಡಿಸಿಕೊಂಡು ತಿನ್ನುವುದು" (ಜಾನಕೋ. ೩೬). [?]

**ಕಸರಿ** (ನಾ). ೧. ಒಂದು ತರಹದ ನಂಜಿಕೆ; ಉಪ್ಪುಗಾಯಿ (?): ತಾಳದ ಸೀಕರಣೆ ಕಸರಿ ಪಚ್ಚಡಿಗಳು ಮೇಲಾದ ಷಡುರಸಗಳನು... ಬಡಿಸಿದರು (ಕಂನವಿ. ೮-೮೫); ನೆಲ್ಲಿಯ ಕಸರಿ ಹಿಂಡಿಯ ಕಸರಿ ಮಂಗರ್ವಳ್ಳಿಯ ಕಸರಿ (ಜ್ಞಾನಚಂ. ೩೯-೧೧೪). ೨. ಕಷಾಯ (?): ಕಸರಿಯ ನೀರಿಡುವುದು ಸಬ್ಬಸಿಗೆಯನರೆದಿಕ್ಕೆ ಮರನ ಮೊದಲೊಳದಂ ಸೇಕಿಸುವುದು (ಲೋಕೋಪ. ೬-೧೪). [?]

**ಕಸರಿಕೆ** (ನಾ). ೧. ಸೊರಗುವಿಕೆ; ಬಾಡುವಿಕೆ: ಕೆಂದಳದ ಸೆಕೆಯಲಿ ಕಪೋಲವು ಕಂದಿ ಕಸರಿಕೆಯಾಯ್ತು (ಕುವ್ಯಾವಿ. ೩-೫೫). ೨. ಮುಜುಗರ; ತ್ರಾಸ(?): ಕಸ[ಪಾಠಾಂ. ಕಿಸು]ರಿಕೆಯ ಕಾಪಥದ ಕಟ್ಟಾಯಸವು ತಡೆದುದು ನಿಮ್ಮ ರಾಯನ ಶಶಿಮುಖಿಯನು (ತೊರರಾ. ೨-೪-೧೬). ೩. ಅಸಮಾಧಾನ; ಮನಸ್ತಾಪ: ಮನದಲಿ ಕಂದು ಕಸರಿಕೆ ಬೇಡ ಕಾದಲಿ ಧರ್ಮನಂದನನು (ಕುವ್ಯಾಕ. ೨-೫); ಕಂದು ಕಸರಿಕೆ ನಮ್ಮ ಮೈತ್ರಿಯೊಳೊಂದುಮಿಲ್ಲದ ತೆಜದೆ (ರಾಮಾಸಂ. ೪-೧-೧೬). ೪. ಅನುಮಾನ: ಮನದಲಿ ಕಂದು ಕಸರಿಕೆಯಿಲ್ಲವಲೆ ನೀನೆಂದ ಮಾತನು ನಂಬಲೇ (ತೊರರಾ. ೫-೩-೯೮); ಕಂದು ಕಸರಿಕೆ ಹೋಗಬೇಕು ಮುಕುಂದನಲಿ ತನಗೆ (ನಿಭಾಗ. ೧೦-೬೭-೨೯). [ಕಸರು$_2$ + -ಇಕೆ]

**ಕಸರಿಸು** (ಕ್ರಿ). ಅಸಮಾಧಾನವುಂಟುಮಾಡು; ಅಸಹ್ಯವಾಗು: ಬಸನಿಗಳ ಗೊಟ್ಟಿ ತನಗಾಗಿಸೆ ಸಂತಸದೊದವನುತ್ತಮರ ಗೊಟ್ಟಿ ಕರಂ ಕಸರಿಸಿದುದೆರ್ದೆಯನೇಂ ಸೊಗಯಿಸುಗುಮೆ ಚೋರರಂಗೆ ಚಂದ್ರಿಕಾವಿಸ್ತಾರಂ (ವರ್ಧಪು. ೨-೩೫). [ಕಸರು$_2$ + -ಇಸು$_3$]

**ಕಸರು**$_1$ (ಕ್ರಿ). ೧. ಕಾಡು; ಪೀಡಿಸು: ಕಸರುತಿಹ ಪ್ರಜೆ ದುಷ್ಟಕಾಮಿನಿಯ ಧೂರ್ತತೆಯೊಳೆಸೆವ ಜರಬರಿಯ ರಾಜಸದಿಂದವೆಲ್ಲರೊಳ್ ಪುಸಿವ... ಜಡಮತಿಗಳಂ ಸಾಮಭೇದದಿಂದ ವಶಗೊಳಿಸಲಳವೆ (ವೆಂಕಾರಾ. ೬-೭-೧೪). ೨. ಗದರಿಸು; ಬಯ್ಯು: ನೀನು ಅನ್ಯಾಸಕ್ತಹೃದಯನು... ನನಗೆ ತಿಳಿಯದೇನು? ಎಂದು ಕಸರಿದಳು (ಕಥಾಸಾ. ೫).
[← ತೆಲು. ಕಸರು]

**ಕಸರು**$_2$, ಕಸುರು$_1$ (ನಾ). ೧. ಒಗರು; ಅಪಕ್ವತೆ; ಹೀಚು. 'ಕಸರುಗಾಯಿ' ಪರಾ. ೨. ಹಸಿಯಾಗಿರುವಿಕೆ; ಒಣಗದಿರುವಿಕೆ: ಗೋಟಡಿಕೆ ಕಸರಾಗಿದ್ದರೆ ಬೆಲೆ ಕಡಿಮೆ (ರೂಢಿ). ೩. ಅಸಮಾಧಾನ; ಕಳವಳ; ಬೇಗೆ: ಕುಂದು ಹೆಚ್ಚಿನ ಪಾಡು ಪಂಥದ ಕಂದು ಕಸರಿನ ಕಲಿಮನದ ಕಡುಹಿಂದ ಕಯ್ದುಡುಕಿದರು ಕದನಕೆ ಕಲಿಗಳಾಜಿಯಲಿ (ತೊರರಾ. ೪-೩-೬); ಅನಿಮಿಷರ ಮನದೊಳಗಿದ್ದ ಕಸರು ಚಿಂತೆಯ ಕಳದು (ಶ್ರೀಕೃಪಾ. ೯೩). ೪. ತೊಂದರೆ: ಕ್ರಿಮಿಕೀಟಗಳ ಕಸರಿಲ್ಲದಾ ಪುತ್ರದೊಳಗೆ ಮುನಿಪತಿ ತಪವನೆಸಗಿದಂ (ವೆಂಕಾರಾ. ೨-೨೧-೧೭). ೫. ದೇಹದೊಳಗಿನ ವಿಕಾರ. **ಕಸುರು**$_1$: ೧. ಕಾಯಿ ಕಸುರನು ತಿಂದು ಜೀವವ ಗಾಸಿಮಾಡುವುದೇಕೆ (ಜೀವಂಚ. ೧೨-೫).
[ದೇ. ‖ ತಮಿ. ಕಶರ್; ಕಚ್ಚಲ್; ತುಳು. ಕಸ್ರ್; ತೆಲು. ಕಸು; ಕುವಿ. ಕಸ್ಸ. / ಪ್ರಾ. ಕಸರ = ರೋಗವಿಶೇಷ]

**ಕಸರು**$_3$, ಕಸುರು$_2$, ಕಸರೆ (ನಾ). ೧. ಕಸ; ಕೊಳೆ: ನನ್ನ ಮೈಮೇಲಿನ ಕಸರು ತೆಗೆದು ಹಸನ ಮಾಡಿದರು (ಕಪಪು. ೪-೫೬); ಕಸರು ಕಳೆದು ತಮ ಹಿಂಜಿ ಬಂತು ರವಿಕಿರಣ ನೂಲುವಂತೆ (ಸೂರ್ಯ ಪಾ. ೨೮-೮); ಎಲ್ಲವೂ ಒಂದಿಷ್ಟಾದರೂ ಕಸರಿಲ್ಲದ ಮಾಣಿಕ್ಯದ ಮಾತುಗಳು (ಪಾರ್ತಿಸು. ೯೦). **ಕಸುರು**$_2$: ೧. ಆತ್ಮತೇಜಸ್ಸಿನ ಮುಂದೆ ಬಹಿರಂಗದ ವಸ್ತ್ರಭೂಷಣಲೇಪನಗಳು ಕಸದ ಕಸುರು (ತುಂಗಭ. ೮೩); ಬರಿ ಸ್ವಲ್ಪ ಕಸುರು ಬಿದ್ದಿದೆ (ಮುಂಗಾಪು. ೧೧೨). **ಕಸರೆ**: ೨. ಕೊಂದ ಪ್ರಾಣಿಯ ಕರುಳಿನಲ್ಲಿರುವ ಆಹಾರ, —ಕಸ: ಅಡಿಗೆಗಾಗಿ ಕುರಿಯನ್ನು ಕೊಂದು ಹೊಟ್ಟೆಯ ಕಸರೆಯನ್ನು ತೆಗೆದರು (ರೂಢಿ).
[?. / ತುಳು. ಕಸರ್]

**ಕಸರು**$_4$ (ನಾ). ೧. ಕೊರತೆ; ನ್ಯೂನತೆ. ೨. ಅಳತೆ ಅಥವಾ ತೂಕದಲ್ಲಿ ನ್ಯೂನತೆಯನ್ನು ತುಂಬಿಕೊಡಲೆಂದು ಸೇರಿಸುವ ಹೆಚ್ಚಿನ ಅಂಶ; ಹೆಚ್ಚಿಕೆ (ಕಿ). 'ಕೊಸರು$_3$' ಪರಾ. ೩. ನಾಣ್ಯಗಳ ವಿನಿಮಯದಿಂದ ಬರತಕ್ಕ ಲಾಭ (ಕಿ). ೪. ಸುಂಕ: ಕಸರು, ಸುಂಕ, ಊಬು, ಮುಳ್ಳು, ಕಂಟ (ಕಂಸುಹು. ೮೧).
[← ಮರಾ. ಕಸರ್; ಅರ. ಕಸ್ರ್]

**ಕಸರು**$_5$, ಕಸಿರು (ನಾ). ಸಾಮರ್ಥ್ಯ; ಶಕ್ತಿ: ಈಗ ನನ್ನಲ್ಲಿ ಕಸರಾದರೂ ಏನು ಉಳಿದಿದೆ (ಜವಿಮಾನ್ವಾ. ೧೩೫); ಮುದ್ದು ಸುಡು ಅಣ್ಣನ ಬುದ್ಧಿ ಏನ್ ಹೇಳಾಲೆ ಉದ್ದೀನ ಕಾಳಷ್ಟು ಕಸರಿಲ್ಲ (ಲೋಕಗೀ. ೭೫-೧೬). **ಕಸಿರು**: ಅದರಲ್ಲಿ ಹೊಸ ಕಸಿರೂ ಕಸವೂ ಕೂಡಿರಬಹುದು (ವಿಚಾಮಂ. ೭೨). [?]

**ಕಸರುಗಾಯಿ**, ಕಸುರುಗಾಯಿ, ಕಸುರ್ಗಾಯ್ (ನಾ). = ಕಸುಗಾಯ್ (ಕಿ). **ಕಸುರುಗಾಯಿ**: (ಕಿ). **ಕಸುರ್ಗಾಯ್**: ಕಾಯ್ ಕಸುರ್ಗಾಯ್ ಪಣ್ ದೋರೆವಣ್ ತನಿವಣ್ಣಿಲಿಂದೆಸೆಯೆಯುಂ (ರಾಮಾಶ್ವ. ೧೬-೨೪).
[ಕಸರು$_0$ (< ಕಸರ್) + ಕಾಯಿ$_4$ (< ಕಾಯ್$_4$)]

**ಕಸರೆ** 'ಕಸರು$_3$' ನೋ.

**ಕಸಲೆ** 'ಕುಸಾಲೆ' ನೋ.

**ಕಸವಯ್ಯ** (ನಾ). ಒಬ್ಬಾತನ ಹೆಸರು: ಮೆಣ್ಣಿ ಮುದುಳಗಾಮುಣ್ಡರ ಮಗಂ ಕಸವಯ್ಯ (ಎಕ. X, ಮುಳಬಾ. ೨೨೯-೫; 909).

[? + ಅಯ್ಯ$_1$]

**ಕಸವರ** (ನಾ). ಹೊನ್ನು; ಚಿನ್ನ; ಧನ; ಸಂಪತ್ತು: "ಕಸವರಂ= ಪೊನ್ (ಮಿಸುನಿ)" (ಶಮದ. ಪರಿ. ೨); ನಿನ್ನ ಕಸವರಮೆಂದುಂ ದೀನಾನಾಥರ ಕೆಯ್ಯದು (ಕವಿರಾ. ೩-೧೦೫); ಪಿರಿದು ಕಸವರಮನಿತ್ತೊಂ (ವಡ್ಡಾರಾ. ೧೧೮-೨೧); ಗೆಲ್ದ ಕಸವರಮೆಲ್ಲಂ ಬಂದುದು (ಪಂಪಭಾ. ೭-೪ ವ); ಬಿತ್ತದೆ ಬಂದ ಧಾನ್ಯದಂತೆ ಚಿಂತಿಸದೆ ಬಂದ ಕಸವರದಂತೆ (ಧರ್ಮಾಮೃ. ೮-೫೧); ಕಸವರಮಂ ಕಳೆದು ಕಸವನಾಂತವೊಲಕ್ಕುಂ (ರಾಜಶೇ. ೧-೨೧). 'ಕಡವರ' ಪರಾ. [< ಸಂ. ಕಾರ್ತಸ್ವರ]

**ಕಸವರಗಲಿ** (ನಾ). ಸಂಪತ್ತನ್ನು ದಾನಮಾಡುವುದರಲ್ಲಿ ಧೀರ: ಕಲಿತನದ ನೆಗಟ್ದ ಕಸವರಗಲಿತನದ ಪೊದಟ್ದ ಪರಮಕೋಟಿಗೆ ಪೆಱರಾರ್ ಸಲೆ ಕರ್ಣನಲ್ಲದೆ (ಪಂಪಭಾ. ೧೨-೯೯); ಕಲಿಯೆನೆ ನೆಗಟ್ದಳ್ ಕಸವರಗಲಿಯೆನೆ ಗುಣದಂಕಕಾರ್ತಿ ಮೊನೆಯೊಳ್ ಮನೆಯೊಳ್ (ಅಜಿಪು. ೧-೬೬). [ಕಸವರ + ಕಲಿ$_2$]

**ಕಸವರಬೇಟ** (ನಾ). ಹಣದಾಸೆಗಾಗಿ ಮಾಡುವ ಪ್ರಣಯ: ಚಃ ಕಸವರಬೇಟಮೆಂಬುದೆರೆಕೊಳ್ವರ ಬೇಟಂ (ಕಾವ್ಯಾವ. ೩೦೪).

[ಕಸವರ + ಬೇಟ$_2$ (< ಬೇಂಟ)]

**ಕಸವರವಸಿಱ** (ನಾ). ಹಿರಣ್ಯಗರ್ಭ; ಬ್ರಹ್ಮ: ಕಸವರವಸಿಜನೆನಿಸಿದ ಹೆಸರೆಸಕೆದ ಹೆಮ್ಮೆಯ ದೇವರು (ಉದ್ಭದೇ. ೧-೨).

[ಕಸವರ + ಬಸಿಱ್ + -ಅ$_7$]

**ಕಸವಿಸಿ, ಕಸಿಬಿಸಿ, ಕಸಿವಿಸಿ, ಕಾಸಾವೀಶಿ, ಕಾಸಾವೀಸಿ** (ನಾ). ಸಂಕಟ; ತಳಮಳ; ಕಳವಳ: ಎನ್ನ ಮಾನಸಕೆ ಕಸವಿಸಿಯಪ್ಪುದು (ಮಲ್ಲಚ. ೪-೭); ಆಗ ಶ್ರೀಪತರಾಯನಿಗೆ ಎಷ್ಟು ಕಸವಿಸಿಯಾಗಿರ ಬಹುದು (ಮೋಹಿನೀ. ೧೧೧); ನನ್ನೆದೆಯ ಕಸವಿಸಿಯ ಹೇಳತೀರದು ಆಗ (ಭಾವಜೀ. ೭-೧೨೭). **ಕಸಿಬಿಸಿ:** ಅಸಮಶರಪಿತನು ತಾಪಸರ ನುಡಿಗೇಳಿ ಬಹು ಕಸಿಬಿಸಿಯನಾಂತು (ಮಲ್ಲಾರಿ. ೪-೨೦); ಕಸಿಬಿಸಿಯ ಪಡುವ ಕರ್ಬರರ ತನುತತಿಗಳಿಂ (ಮಲ್ಲಾರಿ. ೭-೨೦). **ಕಸಿವಿಸಿ:** ಒಂದೆಡೆಗೆ ದುಗುಡದ ಹೊರೆ. ಇನ್ನೊಂದೆಡೆಗೆ ಯೋಚನೆಯ ಕಸಿವಿಸಿ (ನಿರೀಕ್ಷೆ. ೧೫೯); ಅಂತರಂಗದಲ್ಲಿ ಏನೋ ಕಸಿವಿಸಿ (ದೂಬೆಟ್ಟ. ೧೭೧). **ಕಾಸಾವೀಶಿ:** ಪ್ರಸೂತೀ ಘಾಳಿ ಕಾಸಾವೀಶಿಯೆನಿಪುದು (ಜ್ಞಾನಸಿಂ. ೩೧-೫೦). **ಕಾಸಾವೀಸಿ:** ಕಾಸಾವೀಸಿಯಿಂದ ಘಾಸಿ ಬೀಳುವದಲ್ಲ (ಮೋಕ್ಷದೀ. ೧೬೬-೬).

**ಕಸಿವಿಸಿಯಾಗು** = ಸಂಕಟವಾಗು; ತಳಮಳವಾಗು; ಕರಕರೆಯಾಗು: ಮಾಲತಿ ಸುದ್ದಿ ತಿಳಿಸಿದಾಗ ಎದೆಯಲ್ಲಿ ಕಸಿವಿಸಿಯಾಗಿತ್ತು (ವಾತ್ಸಲ್ಯ. ೩೧); ಆ ಕೆಲಸವನ್ನಷ್ಟು ಬೇಗನೆ ಮುಗಿಸುವುದಾಗಲಿಲ್ಲವಲ್ಲಾ ಎಂದು ರಂಗಮ್ಮನಿಗೆ ಕಸಿವಿಸಿಯಾಯಿತು (ರಂಗವ. ೩೬).

[← ಮರಾ. ಕಾಸಾವೀಸ್]

**ಕಸವಿಸಿಗೊಳ್ಳು, ಕಸಿವಿಸಿಗೊಳು, ಕಸಿವಿಸಿಗೊಳ್ಳು** (ಕ್ರಿ). ಕಳವಳಪಡು; ತಲ್ಲಣಿಸು; ಸಂಕಟಪಡು: ಹಸಿವೆಯ ಪರಿಹರಿಸುವೆ ಎನ್ನಯ್ಯ ಕಸವಿಸಿಗೊಳ್ಳದಿರು ಮನದೊಳು (ಸಿದ್ಧಪು. ೩-೮೩). **ಕಸಿವಿಸಿಗೊಳು:** ಬಿಸಿಅಲುಗಡ್ಡೆಯ ಬಾಯೊಳಗಿಟ್ಟಂತೆ ಕಸಿವಿಸಿಗೊಳುತಿದೆ ಜೀವ (ಇಂಚಾಪ. ೯೯-೮೪). **ಕಸಿವಿಸಿಗೊಳ್ಳು:** ತಾಯ್ತನದ ಕರುಳಿನ ತಳಮಳದ ನೋಟದಿಂದಲೂ ಕಸಿವಿಸಿಗೊಂಡು (ಜೀವಪ್ರ. ೮೮).

[ಕಸವಿಸಿ + ಕೊಳ್$_1$]

**ಕಸವಿಸಿಪಡು** 'ಕಸವಿಸಿಬಡು' ನೋ.

**ಕಸವಿಸಿಬಡು, ಕಸವಿಸಿಪಡು, ಕಸಿವಿಸಿಪಡು, ಕಾಸವಿಸಿಬಡು** (ಕ್ರಿ). ಸಂಕಟಪಡು; ಚಡಪಡಿಸು; ತಳಮಳಿಸು: ವಿಷದ ಮೊಲೆಯನುಂಡು ಕಸ[ಪಾಠಾಂ. ಸಿ]ವಿಸಿಬಡುತಿಹೆ (ಪುರಂದ. ೧-೮೦-೪); ಕಸವಿಸಿಬಡುವೆನು ಸಖಿದರ್ಶನ ಸಂಧಿಸುವದೆ ಸನಿಹದೆ (ಕರ್ಣಾಕ. ೪೨೪). **ಕಸವಿಸಿಪಡು:** ಕರುವನ್ನಗಲಿದ ಎಳೆಗಂದಿಯಂತೆ ಕಸವಿಸಿಪಡ ಹತ್ತಿದನು (ಶ್ರೀರಾಪ. ೨೩); ಸ್ವಾತಂತ್ರ್ಯವಿಲ್ಲದುದರಿಂದ ಅವರು ಕಸಿವಿಸಿಪಟ್ಟರು (ಮಹಾತ್ಮಾ. ೭೪); ಬೆದರಿದ ಪ್ರವಾಸಿಕರು . . . ಉಸಿರನ್ನು ಬಿಗಿಹಿಡಿದು ಕಸಿವಿಸಿಪಡ ಹತ್ತಿದರು (ಮುಗಿವು. ೧). **ಕಾಸವಿಸಿಬಡು:** ಆರಿಂದೊ ಕಾಸವಿಸಿಬಡುವದು ಒಂದೆ ಪ್ರಾಪ್ತಿ (ವಿಸಾಸು. ೮೦-೧).

[ಕಸವಿಸಿ + ಪಡು$_1$]

**ಕಸವು$_1$** 'ಕಸ' ನೋ.

**ಕಸವು$_3$** (ನಾ). ಕೇಡಿಗ; ದುಷ್ಟ; ಪ್ರಯೋಜನವಿಲ್ಲದವನು (?): ಕಸವಿಂಗಂ ಕಳುಚಿಂಗಂ ಡಸಿಕಿಂಗಂ ದೂರ್ತವಡೆಗಮುತಿಚಪಳರ್ಗಂ ಪುಸಿವರ್ಗಂ ಸಿತಗರ್ಗಂ . . . ಕುಡುವನುರ್ಕಿ ಕುಮಾರಂ (ಧರ್ಮಾಮೃ. ೨-೭೦). [?]

**ಕಸಹೆಡಿಗೆ** (ನಾ). ಕಸ ತುಂಬಿದ ಬುಟ್ಟಿ: ಸೂಳೆಯಂದದಿ ನಡೆವವಳ ತಲೆ ಬೋಳಿಸಿ ಕಸಹೆಡಿಗೆ ಹೊಱಿಸಬೇಕವಳ (ಪುರಂದ. ೨-೧೪-೨).

[ಕಸ + ಹೆಡಿಗೆ (< ಪೆಡಗೆ)]

**ಕಸಱ್, ಕಸಱು** (ನಾ). ನೋವಿನಿಂದ ಕೂಗುವುದು; ನರಳಿಕೆ: ಆಗಳಿಂಚರದೊಳ್ ಬೆರಸಿದ ತನ್ನ ಕಸಱನೆ ಕಿಱುಮಿಂಚಿನ ಬಳ್ಳಿಯ ಮೊಟಗುವೆತ್ತು ಮೂರ್ಛೆವೋಗಿ (ಲೀಲಾವ. ೧೦-೧೩ ವ). **ಕಸಱು:** ಬೆಳ್ಗಿಯುಂ ಬೇಸಱುಂ ಕಸಱುಂ ವಧಮುಂ ಬಂಧಮುಂ ಚ್ಛೇದಮುಂ . . . ಇವಱಿಂದ ವೇದನೀಯದಾಸ್ರವಮಕ್ಕುಂ (ಪಸಾರ. ೮೧-೫).

[ದೇ. ॥ ತಮಿ. ಮಲ. ಕದಱು = ನೋವಿನಿಂದ ಕೂಗು]

**ಕಸಱು** 'ಕಸಱ್' ನೋ.

**ಕಸಾಕಸಿ** (ನಾ). ಜಗ್ಗಾಟ; ಚೌಕಾಸಿ: ಕಾಸಿಗೂ ಕಸಾಕಸಿ ಮಾಡುವ ಅಂಗಡಿಗಾರನಾಗಲೀ ಸರಕಾರೀ ಅಲ್ಪಗುಮಾಸ್ತನಾಗಲೀ (ಹುಚ್ಚಮು. ೨೯).

[← ಮರಾ. ಕಸ್ಕಸಾ]

**ಕಸಾಪ** 'ಕಸಾಬ' ನೋ.

**ಕಸಾಬ, ಕಸಾಪ** (ನಾ). ಕಟುಕ; ಮಾಂಸವನ್ನು ಮಾರಿ ಜೀವಿಸುವವನು (+). **ಕಸಾಪ:** ಗಂಡುಮಕ್ಕಳೇನು, ತಂತಮ್ಮ ಹೆಂಡತಿಯರು ಪಕ್ಕಕ್ಕೆ ಬರೋವರೆಗೆ ಮಕ್ಕಳು, ಆಮೇಲೆ ಶುದ್ಧ ಕಸಾಪರು (ಮಹಾಗ. ೧೭೪). [← ಮರಾ. ಕಸಾಬ್; ಅರ. ಕಸ್ಸಾಬ್]

**ಕಸಾಯ, ಕಸಾಯಿ$_1$** (ನಾ). = ಕಷಾಯ: ಕಷಾಯ, ಕಸಾಯ (ಶಬ್ದಾನು. ೧೩೮ ಪ್ರಯೋ); ಶ್ಲೇಷ್ಮಂ ಕಸಾಯ ಗೋರಸದೆ ಕ್ಷೀರರಸದಿಂ ಕಿಡುಗುಂ (ಅಶ್ವಶಾ. ೭-೪೭). **ಕಸಾಯಿ$_1$:** (+). [< ಸಂ. ಕಷಾಯ]

**ಕಸಾಯಿ$_1$** 'ಕಸಾಯ' ನೋ.

**ಕಸಾಯಿ$_2$** (ನಾ). = ಕಸಾಬ. 'ಕಸಾಯಿಖಾನೆ' ಪರಾ.

[← ಅರ. ಮರಾ. ಹಿಂ. ಕಸಾಈ]

**ಕಸಾಯಿಖಾನೆ** (ನಾ). ದನ, ಕುರಿ ಮೊದಲಾದುವನ್ನು ಕೊಂದು ಕತ್ತರಿಸುವ ಸ್ಥಳ; ಕಟುಕರ ಅಂಗಡಿ: ಮನಸ್ಸಿಗಿಂತ ಮಾಂಸಕ್ಕೆ ಬೆಲೆಕೊಡುವ ಮನುಷ್ಯನಿದ್ದಾನೆ ಕಸಾಯಿಖಾನೆಯಲ್ಲಿ (ಸರಸ. ೧೧೨); ಅದು ಕಸಾಯಿಖಾನೆ. ಕಮಲಾಕಾಂತನನ್ನೂ ಒಬ್ಬನು ಹಿಡಿದು ಕೊಲ್ಲುವುದರಲ್ಲಿದ್ದನು (ಬಂಕಿಮು. ೩೭೮); ಕೊನೆಗೊಂದುದಿನ ಅವು ಕಸಾಯಿಖಾನೆಯನ್ನು ಸೇರುವುವು (ಬಾಲಪ್ರ. II, ೭೭೩).

[← ಅರ. ಮರಾ. ಕಸಾಈಖಾನಾ]

**ಕೆಸಾರಿಕೆ** (ನಾ). ಬೇನೆ; ಕಾಯಿಲೆ; ಜಡ್ಡು; ಅಸ್ವಾಸ್ಥ್ಯ: ಕಸಾರಿಕೆ ಗುಣವಾದ ಮೇಲಾದರೂ ಹೋಗುವೆನೆಂದರೆ ಕೇಳಲಿಲ್ಲ (ಪೂರ್ವರಂ. ೫೭). [ಕಸಾರೆ (< ಕಸಾಲೆ$_2$) + -ಇಕೆ]

**ಕೆಸಾರಿಕೆಜ್ವರ** (ನಾ). ಶರೀರದಲ್ಲಾದ ಗಾಯ ಮೊದಲಾದುವುಗಳಿಂದ ಬರುವ ಜ್ವರ; ನಂಜಿನ ಜ್ವರ. [ಕಸಾರಿಕೆ + ಜ್ವರ]

**ಕೆಸಾರೆ** 'ಕಸಾಲೆ$_2$' ನೋ.

**ಕೆಸಾಲೆ$_1$** 'ಕುಸಾಲೆ' ನೋ.

**ಕೆಸಾಲೆ$_2$**, ಕಸಾರೆ (ನಾ). = ಕಸಾರಿಕೆ: ಕಾಯಿಲೆ ಕಸಾಲೆ ಆದವರು ಬಂದರೆ . . . ಔಷಧಿಯನ್ನೋ ಸೂಜಿಮದ್ದನ್ನೋ ಕೊಟ್ಟು ಕಳಿಸುತ್ತಾರೆ (ಸುವಸಂ. ೨); ಅವನು ಹಳ್ಳಿಯಲ್ಲಿಯ ಅನೇಕ ಜನರ ಕಾಯಿಲೆ ಕಸಾಲೆಗಳನ್ನು ಕಡಿಮೆಮಾಡಿ (ಜನಜೀ. ೩೭). **ಕಸಾರೆ**: ತಮ್ಮ ಮನೆಯ ಕಾಯಿಲೆ ಕಸಾರೆಗಳಿಗೆ ಅವರನ್ನು ಕರೆಯಿಸಿದವರಲ್ಲ (ಜಾರುದಾ. ೬೯). [← ಅರ. ಕಸಾಲಾ = ದುಃಖ; ಮರಾ. ಹಿಂ. ಕಸಾಲಾ]

**ಕಸಿ$_1$** (ಕ್ರಿ). ೧. ಕುಸಿ; ಜರಿ; ಜಾರಿಬೀಳು: ಅವನ ಕೈಯಿಂದ ಪತ್ರಿಕೆಯು ಕಸಿದು ಕೆಳಗೆ ಬಿದ್ದಿತು (ಚಿನ್ನಬೀ. ೧೬೨). ೨. ಒಸರು; ದ್ರವಿಸು; ಜಿನುಗು: "ಜರಿ ಒಸರು ಜಿನುಗುಗಳೊಳು ಕಸಿ" (ಶಬ್ದಮಂ. ೧೧೧). [ದೇ. ‖ ತಮಿ. ಕಶಿ]

**ಕಸಿ$_2$**, ಕಸು$_1$ (ಕ್ರಿ). ಕಿತ್ತುಕೊಳ್ಳು; ಅಪಹರಿಸು: ನಮ್ಮ ಬಾಯಿಯ ತುತ್ತ ಕಸಿವ ಹಸಿವೆಯ ಕುತ್ತ (ಗಿಳಿವಿಂ. ೭೦-೧೬); ಪ್ರಜೆಯ ಧನಧಾನ್ಯವನು ಮಾನವನು ಕಸಿದಿತು (ನವರಾ. IV, ೪೬); ಅವಳಿಂದ ಸಮಾಜದ ಹಕ್ಕುಗಳನ್ನು ಕಸಿಯಬೇಡಿ (ಬದುಜ. ೧೬೨). **ಕಸು$_1$**: ನಿನ್ನನಾ ಕೇಸರಲ ತುರುಬಿಂದ ಕಸುವನ್ನಮೆತ್ತಿದೆನು (ಗಿಳಿವಿಂ. ೩೭-೮).

**ಕಸುಕೊಳ್, ಕಸುಗೊಳ್** = **ಕಸಿದುಕೊಳ್ಳು**: ಆರು ಕಸುಕೊಂಡರು ನಾಯಮಾಂಸ ತಿಂದಹಾಗೆ (ಎಕ. III, ಮಂಡ್ಯ. ೫೮-೧೧; ?); ಎಲ್ಲವನು ಕಸುಗೊಂಬ ಕಳ್ಳಭೊರೆಗೆ (ಜಗದಾ. ೧೩೨). [?]

**ಕಸಿ$_3$** (ನಾ). ಒಸರುವುದು; ಸ್ರಾವ; ತುಂತುರುಹನಿ; ಜಡಿ; ಜಿನುಗು; ತೇವ. (ಕ). [< ಕಸಿ$_1$]

**ಕಸಿ$_4$** 'ಕಸ್ತು$_2$' ನೋ.

**ಕಸಿ$_5$**, ಕಶಿ, ಕಸೆ$_1$, ಖಸ್ಸಿ (ನಾ). ೧. ಕತ್ತರಿಸುವಿಕೆ; ಸವರಿ ಹಾಕುವಿಕೆ. ೨. (ಹೋರಿ, ಮೊದಲಾದವುಗಳ) ಬೀಜ ಒಡೆಯುವಿಕೆ; ವೀರ್ಯಗುಂದಿಸುವಿಕೆ; ಹಿಡ (ಕ). ೩. ಗಿಡ, ಬಳ್ಳಿ ಮೊದಲಾದುವುಗಳಲ್ಲಿ ಒಂದರ ಶಾಖೆಯನ್ನು ಕತ್ತರಿಸಿ ಇನ್ನೊಂದಕ್ಕೆ ಅಂಟಿಸಿ ಬೆಳೆಯಿಸುವಿಕೆ; ಕಲಮು; ಹೀಗೆ ಬೆಳೆಯಿಸಿದ ಸಸ್ಯ: ಈ ಹೊಲದಲ್ಲಿ ಕಸೀಮಾವಿನ ಗಿಡ ಹಾಕಬೇಕು (ಹುಟ್ಟಿಹ. ೭೨); ಕೆಲವು ಪರೀಕ್ಷಕರು ಇನ್ನೂ ಮುಂದರಿದು ಪ್ರಾಣಿಗಳ ಕಸಿಯನ್ನು ಮಾಡತೊಡಗಿರುವರು (ಬಾಲಪ್ರ. II, ೬೬೫). **ಕಶಿ**: ೩. 'ಕಶಿಕಟ್ಟು' ಪರಾ. **ಕಸೆ$_1$**: ೩. ತೋಳುತೋಳಿನಲಿ ಕಸೆಯ ಮಾಡಿದೊಲು ಎದೆಯ ಬೆಸೆಯುತಿಹವು (ಹಾಡುಪಾ. ೨೬-೧೫); ಆ ಬಗೆಯ ಸಾಂಸ್ಕೃತಿಕ ಕಸೆಯಿಂದ ಸುಖವಿಲ್ಲ; ಸೊಗಸಿಲ್ಲ (ಯಕ್ಷಬ. ೩). **ಖಸ್ಸಿ$_2$**: ೩. (ರೀವ್).

**ಕಸಿಮಾಡು** = ೧. ಕಲಮುಮಾಡು: ಕಸಿಮಾಡಿದ ಮರವು ಚಿಗಿತು ಮತ್ತೆ ದೊಡ್ಡ ಮರವಾಗುವುದಿಲ್ಲವೋ (ಮುಂಬಯಿ. ೨-೨೪). ೨. ಕತ್ತರಿಸು: ದ್ರಾಕ್ಷಿಯನ್ನು . . . ತಕ್ಕಕಾಲದಲ್ಲಿ ಕಸಿಮಾಡುತ್ತಿರಬೇಕಾದದ್ದು ಅತ್ಯಾವಶ್ಯಕ (ವ್ಯವಮ. ೫೮). ೩. ದಂಡಿಸು; ಶಿಕ್ಷಿಸಿ ದಾರಿಗೆ ತರು; ತಿದ್ದು: ಆ ಪುಂಡನನ್ನು ಕಸಿಮಾಡಬೇಕಾಗಿದೆ (ರೂಢಿ). [← ಅರ. ಖಸೀ; ಮರಾ. ಖಚೀ, ಖಚ್ಚೀ, ಖಸೀ]

**ಕಸಿಂದಿ** (ನಾ). ಒಂದು ಜಾತಿಯ ಬಳ್ಳಿ (ಕ). [?. / ತೆಲು. ಕಸಿಂದ, ಕಸಿವಿಂದ]

**ಕಸಿಕ**, ಕಸುಕ$_2$ (ನಾ). ಕಸಿದುಕೊಳ್ಳುವವನು. (ಕ). **ಕಸುಕ$_2$**: (ಕ). [ಕಸಿ$_2$ + -ಕ$_3$]

**ಕಸಿಕಟ್ಟು**, ಕಶಿಕಟ್ಟು, ಕಸೆಕಟ್ಟು (ಕ್ರಿ). ಒಂದು ಕೊಂಬೆಗೆ ಇನ್ನೊಂದು ಕೊಂಬೆಯನ್ನು ಕೂಡಿಸಿ ಬೆಳೆಯುವಂತೆ ಮಾಡು; ಕಲಮು ಮಾಡು: ಒಂದು ಗಿಡವನ್ನು ಇನ್ನೊಂದಕ್ಕೆ ಕಸಿಕಟ್ಟಿ, ಮೂಲಗಿಡಕ್ಕಿಂತ ಬೇರೆಯಾದ ಬೀಜವೊಂದನ್ನು ಸೃಷ್ಟಿಮಾಡಿರುವನು (ಬಾಲಪ್ರ. I, ೪೨೪). **ಕಶಿಕಟ್ಟು**: ಕಶಿಕಟ್ಟಿದ ಕುಡಿರೆಂಬೆ ಕಾಂಡದೊಡನೆ ಕೂಡಿಬರುವುದಕ್ಕೆ ಹೆಚ್ಚುಕಾಲ ಬೇಕಾಗುವುದಿಲ್ಲ (ಲೋಕಕ. ೫೬). **ಕಸೆಕಟ್ಟು**: ಕಸೆಕಟ್ಟು (Grafting)ವುದರಿಂದ, ಪರಾಗ ವಿನಿಮಯದಿಂದ (Cross Pollonisation) ನಾನಾ ನವಸೃಷ್ಟಿಗಳುಂಟಾಗಿವೆ (ಬಾಲಪ್ರ. I, ೨೯೪). [ಕಸಿ$_5$ + ಕಟ್ಟು$_1$]

**ಕಸಿಕೆಲ್** (ನಾ). ಪೊರಕೆ (?): ನವಿಲ ಪೆರ್ಗರಿಯ ಬಿಗಿದುಟ್ಟು ಕಸಿಕಲ್ವಿಡುತವೆ ಗುಂಜಾವಿಸಿಗಂದಳೆದು ಶಿವಪಾದುಕೆಯ ಸವಿನಯದಿ ಪೊಳ್ತು ಕಣ್ಬೀರ್ಗಾಂತಿಯೊಳ್ಳಲವ ತುಂಬಿ ಕಂಕುಳೊಳಿಟುಂಕಿ ಸವಿಗಡಲಿನಳಿಯ ದುರ್ದೋಷ ಸಂಚಯಮುಮಂ ತವಿಸಿಕೊಂಬೆನುಮೆಂದು ಶಿವನ ರಾಜಾಂಗಣವ ಕವಲಿ ಮಾಡಲಿಜಿದ ಸಂತಸದಿ ಚಳೆಯಂಗೊಟ್ಟು (ಏಕೋಪ. ೧೨-೪). [< ಕಸಕಿಲ್ ?]

**ಕಸಿಕಿಲ್** 'ಕಸಕಿಲ್' ನೋ.

**ಕಸಿಕಿಸಿ** (ನಾ). ಹುರುಡು; ಸ್ಪರ್ಧೆ: ಇರ್ಪಡೆಯವರ್ಗಂ ರೋಸಂ ಪಿರಿದಾಗೆ ಕಸಿಕಿಸಿಯೊಳ್ ಪೊಣರ್ದರ್ (ಅದ್ಭುತ. ೪೬-೪). [?]

**ಕಸಿಕೊಂಬೆ** (ನಾ). "ಒಂದು ಗಿಡದ ಜೀವರಸವು ಅದರ ಕಾಂಡದ ಸೀಳಿನಲ್ಲಿ ಸೇರಿಸಿದ ಮತ್ತೊಂದರ ಅಂಗದಲ್ಲಿಯೂ ಕ್ರಮೇಣ ಹರಿದು ಎರಡೂ ಒಂದುಗೂಡುವುದಕ್ಕಾಗಿ ಇಟ್ಟು ಕಟ್ಟಿದ ಕೊಂಬೆ, ಕಣ್ಣು; ಕಸಿ; ಕಸಿಯಂಟು; ಕಸಿಕೊಂಬೆ" (Graft. ಇಂಕನಿ). [ಕಸಿ$_5$ + ಕೊಂಬೆ$_1$]

**ಕಸಿಗಾಯಿ** 'ಕಸುಗಾಯ್' ನೋ.

**ಕಸಿಗಿ** (ನಾ). ಒಂದು ಬಗೆಯ ಸಸ್ಯ ಅಥವಾ ಕಾಳು (ಕ). [?]

**ಕಸಿಗುಂದು** (ಕ್ರಿ). ಬಾಡು; ಒಣಗು (?): ಒಸೆದು ಮಂಜಂಗರೆಯೆ ಬೆಟ್ಟಗಳು ಜರಿದಪವು ಪಸುರ್ಗುತ್ತ ಮುರುಟುವವು ಹಿಮಕೆ ಅಂಘ್ರಿಪನಿಚಯ ಕಸಿಗುಂದುತಿಹವು ತಂಬೆಲರಿಂಗೆ ಕುಸುಮತತಿ (ನವನೋ. ೬-೩೪). [ಕಸಿ$_3$ + ಕುಂದು$_1$]

**ಕಸಿಬಿಸಿ** 'ಕಸವಿಸಿ' ನೋ.

**ಕಸಿಯ** (ನಾ). ಕಸುವು: ಜಡಿವ ಕಸಿ [ಪಾಠಾಂ. ಸ]ಯದ ಕಾಲರಭಸಕೆ ಹೆಡೆಗಳೀರೈನೂಜನಾಂತನ ನಂತನಳವಳಿದು (ನಿಭಾಗ. ೩-೮-೧೦). [< ಸಂ. ಕಶಾ, ಕಸಾ]

**ಕಸಿಯಂಟು** (ನಾ). "ಒಂದು ಗಿಡದ ಜೀವರಸವು ಅದರ ಕಾಂಡದ ಸೀಳಿನಲ್ಲಿ ಸೇರಿಸಿದ ಮತ್ತೊಂದರ ಅಂಗದಲ್ಲಿಯೂ ಕ್ರಮೇಣ ಹರಿದು ಎರಡೂ ಒಂದುಗೂಡುವುದಕ್ಕಾಗಿ ಇಟ್ಟು ಕಟ್ಟಿದ ಕೊಂಬೆ, ಕಣ್ಣು; ಕಸಿ; ಕಸಿಯಂಟು; ಕಸಿಕೊಂಬೆ" (Graft. ಇಂಕನಿ). [ಕಸಿ$_5$ + ಅಂಟು$_2$]

**ಕಸಿರು** 'ಕಸರು$_5$' ನೋ.

**ಕಸಿವಿಸಿ** 'ಕಸವಿಸಿ' ನೋ.

**ಕಸಿವಿಸಿಗೊಳು** 'ಕಸವಿಸಿಗೊಳ್ಳು' ನೋ.

**ಕಸಿವಿಸಿಗೊಳ್ಳು** 'ಕಸವಿಸಿಗೊಳ್ಳು' ನೋ.

**ಕಸಿವಿಸಿಪಡು** 'ಕಸವಿಸಿಬಡು' ನೋ.

**ಕಸಿಹಾಲು** (ನಾ). ಹಸಿಹಾಲು (?): ಅಚ್ಚ ಕಸಿಹಾಲ ನಿಚ್ಚ ಹೊಲೆಯರ ಮನೆಯ ಹುಚ್ಚುಗೊಂಡಿರುವ ಹೊಲೆನಾಯಿಗೆಜಿದಂತೆ ಮಚ್ಚಿ ಮಡದಿಯರಿಗುಣಿಸಲು. (ಗುರುಬೋ. ೨೩-೭).
[ಕಸಿ ? + ಹಾಲು$_1$ (< ಪಾಲ್$_1$)]

**ಕಸೀದೆ** 'ಕಸೂತಿ' ನೋ.

**ಕಸು**$_1$ 'ಕಸಿ$_2$' ನೋ.

**ಕಸು**$_2$, ಕಸಿ$_4$ (ಗು). ಅಪಕ್ವವಾದ; ಹೀಚಾದ; ಒಗರಾದ. 'ಕಸುಗಾಯ್' ಪರಾ. **ಕಸಿ**$_4$: 'ಕಸಿಗಾಯಿ' ಪರಾ.
[ದೇ. ‖ ತಮಿ. ಕಶಪ್ಪು; ತೆಲು. ಕಸು]

**ಕಸು**$_3$, ಕಸುವು (ನಾ). ೧. ಬಲ; ಕೆಚ್ಚು; ಸತ್ತ್ವ: ತಗ್ಗಿನ ಪ್ರದೇಶಗಳಲ್ಲಿ ತಕ್ಕಮಟ್ಟಿಗೆ ಕಸುವುಳ್ಳಂಥ ಕೆಂಪುಮಣ್ಣಿನ ಭೂಮಿ (ಕಭಾಗ. ೭); ಕೆಂಪುಭೂಮಿಯಲ್ಲಿ ಇದು ಕಸುವಿನಿಂದ ಬೆಳೆಯುತ್ತದೆ (ಬೆಳವ. ೨೭); ಅವನ ಅರ್ಧ ಕಸುವನ್ನು ಮುರಿಯಬೇಕೆಂದು ನಿಶ್ಚಯಿಸಿ (ಬಂಗಾಹೆ. ೬೪). **ಕಸುವು**: ಮೈಯಲ್ಲಿ ಕಸುವುಂಟು. ಎದೆಯಲ್ಲಿ ಕೆಚ್ಚುಂಟು (ಶಕಾರ. ೭೭); ನಿನ್ನ ಕೆನ್ನೆಯ ಗುಳಿಯೊಳು ಮುಳುಗಿಹುದೆನ್ನ ಕಸುವು (ಇಂಚಾಪ. ೨೧೭-೭೫); ಭೂಮಿಯು ಒಳ್ಳೇ ಕಸುವಿದ್ದರೆ ಬಿತ್ತಿದ ಎಂಟು ದಿವಸಕ್ಕೇ ಸಸಿಗಳು ಆಗುತ್ತವೆ (ಮುಂಬಯಿ. ೪-೨೬). ೨. ಸತ್ತ್ವವುಳ್ಳ ಆಹಾರ: ಕಸುವು ತಿನ್ನಬೇಕಪ್ಪ; ಕೆಲಸಾನೂ ಮಾಡಬೇಕು ಕಸುವ್ನೂ ತಿನ್ನಬೇಕು (ಬೆಳುಮು. ೨೫೭). [?]

**ಕಸುಕ**$_1$ (ನಾ). ಆಳು; ಸೇವಕ; ಎನಲು ತಿರುಗಿದನು ಹಡಪದ ಕಸುಕನು (ಹರಿಸಾಂ. ೭೮-೧೨೭). [?]

**ಕಸುಕ**$_2$ 'ಕಸಿಕ' ನೋ.

**ಕಸುಕಾಯಿ** 'ಕಸುಗಾಯ್' ನೋ.

**ಕಸುಕು**, ಕಸಕು (ನಾ). ೧. ಎಳಕಲು; ಬಲಿಯದೆ ಇರುವಂತಹದು; ಹೀಚು: ಹುಸುಕು ಕಸುಕಿನ ಹಸುರು ಹಣ್ಣಿನಾ ಹೊಸ ಹಳದಿ ನಸುಕಿನಾ ನೀಲಿ ಮುಂಜಾವಿನಲ್ಲಿ (ನನಲ್ಲ. ೧೪-೭); ಕುದಿಯಿಲ್ಲದೆ ಎಸರಿಲ್ಲದೆ ಕಸುಕಿಗೆ ಬಾಯ್ದೆರೆದವು (ನೆಲಮು. ೨೫); ಕಸುಕಾದ ದಾಳಿಂಬ ರಸತುಂಬಿ ಒಡೆದಂತೆ (ಕನ್ನಜಾ. ೨೦೧). ೨. ಅರೆಬೆಂದದ್ದು. **ಕಸಕು**$_1$: ೧. ನಿನಗೆ ಬಲೆ ಬೀಸಿದ್ದಾಲೆಂದ ಮೇಲೆ ಕಸಕು ಇರಲಾರಳು (ಅರಗಿ. ೭).
ಕಸುಕಸುಕು (ದ್ವಿರುಕ್ತಿ): ಅವನು ಇನ್ನೂ ಕಸುಕಸುಕು, ಆದೇ ಪಾಸಾಗಿ ಬಂದಿದ್ದಾನೆ (ಇಪ್ಪಕ. ೪೧೧). [ಕಸು$_2$ + -ಕು$_1$]

**ಕಸುಕುತನ** (ನಾ). ಒಗರು; ಅಪಕ್ವತೆ: ಭಕ್ತಿಪಂಥದ ದೀಕ್ಷೆ ಪಡೆದಿದ್ದರೇನು; ತಾರುಣ್ಯದ ಕಸುಕುತನವು ಎಲ್ಲಿ ಹೋಗುತ್ತದೆ (ಕರ್ಣಾಜ. ೮೬).
[ಕಸುಕು + -ತನ]

**ಕಸುಗ** (ನಾ). = ಕಸಿಕ: "ಕಸುಗ – ಮುಂಗೈಜೋರಿನಿಂದ ಅಸ್ತಿಪಾಸ್ತಿ ಕಸಿದುಕೊಂಡವ" (ಜಾನಕೋ. ೩೬). [ಕಸು$_1$ (< ಕಸಿ$_2$) + -ಗ$_3$]

**ಕಸುಗಾಯ್**, ಕಸಿಗಾಯಿ, ಕಸುಕಾಯಿ, ಕಸುಗಾಯಿ (ನಾ). ೧. ಬಲಿಯದಿರುವ ಕಾಯಿ; ಎಳಸಾದ ಕಾಯಿ; ಒಗರುಕಾಯಿ; ಹೀಚುಕಾಯಿ: ಕಸುಗಾಯಂ ಘೃತದೊಳ್ ಗುಡರಸದೊಳ್ ಮೇಣ್ ಮಧುವಿನೊಳಗೆ ತನಿವಣ್ಣಂ ನೋಯಿಸದೆ ತಿಱಿದಿರಿಸೆ (ಲೋಕೋಪ. ೮-೩೨); ನಸುನನೆಯನಪ್ಪಿದಳಿಕುಳದಂತೆ ಕಡುಹಸಿದು ಕಸುಗಾಯನಗಿದ ಗಿಳಿಗಳ ಬಳಗದಂತೆ (ಹಚಕಾ. ೮-೭೧); ತನಿವಣ್ಣಿರಲು ಕಸುಗಾಯನೇತಕೆ ಕೊಯ್ದೆ (ಬಸವು. ೪೮-೧೧); ನಸು ಮಿಡಿಗಾಯಿ ಕಸುಗಾಯ್ ದೋರೆಗಾಯಿಗಳ (ತೊರರಾ. ೧-೯-೧೨). **ಕಸಿಗಾಯಿ**: ೧. ನೆಜಿಪಕ್ವವಾದ ಫಲದ ಸವಿ ಕಸಿಗಾಯೊಳಿರುವುದೆ (ಕಂನವಿ. ೬-೧೯೪). **ಕಸುಕಾಯಿ**: ೧. ಮೇಲಿನ ಪಣಿಯೆಗಳಲ್ಲಿ ಇನ್ನೂ ಕಸುಕಾಯಿ; ಕೆಳಗಿನವು ಕೆಲವಕ್ಕೆ ಹಳದಿಬಣ್ಣ ಬಂದಿದೆ (ಬಾಳೆಗಿ. ೧೪೮). ೨. ಹಣ್ಣಾಗದ ಕಾಯಿ; ಹಸಿಯ ಕಾಯಿ. **ಕಸುಗಾಯಿ**: ೧. ಕಾಡೆಲ್ಲ ಕಸುಗಾಯಿ ನಾಡೆಲ್ಲ ಹೆಗ್ಗಿಡವು ... ಮಲೆನಾಡ ಕಾಡು ಸಾಕು (ಸರ್ವಜ್ಞ. ೧೬೨೧); ನಿನ್ನಿನದು ಕಸುಗಾಯಿ ಇಂದಿನದು ತುಸುಪಾಡು ನಾಳೆ ಹಣ್ಣಾದಾಗ ಬಂದೀತು ಹಾಡು (ಅರಳು. ೩೫೨-೧೭); ಅವನ ಕೌಮಾರ್ಯ ಬುದ್ಧಿಯ ಕಸುಗಾಯಿ ಈಗ ... ಹಣ್ಣಾಗುವಂತಾಯಿತು (ಒಡ್ಡಿಉ. ೩೭).
[ಕಸು$_2$ + ಕಾಯ್$_4$. / ತೆಲು. ಕಸುಗಾಯ]

**ಕಸುಗಾಯಿ** 'ಕಸುಗಾಯ್' ನೋ.

**ಕಸುಗಾಯ್ತನ** (ನಾ). ಹೀಚು; ಅಪಕ್ವತೆ: ದಶಗ್ರೀವನಾತ್ಮಮುಂ, ತನ್ನ ಕಸುಗಾಯ್ತನದೊಗರ್ ಕಳೆದು, ಪಣ್ತನಕೆ ತಿರುಗುತಿರ್ಪೊಂದು ಸೂಚನೆ ತೋರುತಿಹುದೆನಗೆ (ಶ್ರೀರಾಮಾ. ೭೦೬-೨೨೪). [ಕಸುಗಾಯ್ + -ತನ]

**ಕಸುಬು** 'ಕಸಬು' ನೋ.

**ಕಸುಬುಗತ್ತಿ** (ನಾ). ಆಯಾ ವೃತ್ತಿಗೆ ತಕ್ಕುದಾದ ಕತ್ತಿ: ಕಸುಬು ಗತ್ತಿಯನ್ನು ಮಸೆದು, ನಡುವಿಗೆ ಬಿಗಿದು ಗಳವನ್ನೇರಿ ಕಡಿಯ ತೊಡಗುತ್ತಾನೆ (ಶರಚ. ೩೨೨). [ಕಸುಬು (< ಕಸಬು) + ಕತ್ತಿ$_1$]

**ಕಸುಬುದಾರ** 'ಕಸಬುದಾರ' ನೋ.

**ಕಸುಬುದಾರಿ** 'ಕಸಬುದಾರಿ' ನೋ.

**ಕಸುರ್** 'ಕಸರ್' ನೋ.

**ಕಸುರು**$_1$ 'ಕಸರು$_2$' ನೋ.

**ಕಸುರು**$_2$ 'ಕಸರು$_3$' ನೋ.

**ಕಸುರು**$_3$ (ನಾ). (?): ಸುಕ್ಕಿ ಹಲುಗಳನೆಲ್ಲ ಯೆಕ್ಕಿಯೋಗರ ಮಾಡೆ ಡೊಕ್ಕೆಯೊಳಗಣ ಕಸುರ ಪರಪಿನಗೆ ನೀಡಿ (ಕಂಕ. ೭೯-೯). [?]

**ಕಸುರುಗಾಯಿ** 'ಕಸರುಗಾಯಿ' ನೋ.

**ಕಸುರ್ಗಾಯ್** 'ಕಸರುಗಾಯಿ' ನೋ.

**ಕಸುವು** 'ಕಸು$_3$' ನೋ.

**ಕಸುವುಪಡೆ** (ಕ್ರಿ). ಶಕ್ತಿಯನ್ನು ಹೊಂದು; ಬಲವಾಗು: ಹರಿಯುತ್ತ ಹೋದಂತೆ ಹರಿದ ನೆಲದ ಸತ್ತ್ವದಿಂದ ಹೆಚ್ಚುಹೆಚ್ಚು ಕಸುವುಪಡೆದು ಸೊಕ್ಕಹತ್ತಿತು (ಮೂರುದಾ. ೧೯೬). [ಕಸುವು (< ಕಸು$_3$) + ಪಡೆ$_1$]

**ಕಸುವುಹುಲ್ಲು** (ನಾ). ಒಂದು ಜಾತಿಯ ಹುಲ್ಲು; ಲಾವಂಚಹುಲ್ಲು (*). [ಕಸುವು (< ಕಸು$_3$) + ಹುಲ್ಲು (< ಪುಲ್)]

**ಕಸುಱು** (ಕ್ರಿ). ಕೋಪದಿಂದ ಮಾತಾಡು, —ಕೂಗು: ಹುಸಿವ ಕನಲ್ದು ಬಯ್ವ ನಿಡುಸುಯ್ವ ಕರಂ ಕಸುಱುತ್ತವಿರ್ಪ [ಬ]ಗ್ಗಿ[ಸು]ವ ಬಳಲ್ಕೆ ಬೇಸಱುಪ ... ತಪಸ್ವಿಯಲ್ಲಿ ಹೋಲಿಸುವುದೆ ಭಾವಿಸಲ್ಕಮೃತರಾಶಿ ಸುತಂ ಹರಸಕ್ತಿದೇವನನ್ (ಕಇ. IV, ೧-೯೦; 1204) [?]

**ಕಸೂತಿ**, ಕಸೀದೆ (ನಾ). ಬಣ್ಣಬಣ್ಣದ ದಾರಗಳಿಂದ ಬಟ್ಟೆಗಳಿಗೆ ಮಾಡುವ ಹೆಣಿಗೆಯ ಅಲಂಕಾರ: ಇವುಗಳಿಗೆ ಚಿನ್ನ ಮತ್ತು ಬೆಳ್ಳಿ ಜರತಾರಿಯ ಕಸೂತಿ ಹಾಕಿರುತ್ತಾರೆ (ಪ್ರವಾಇ. II, ೪೩); ಸೂಜಿಯ ಮೊನೆಗೆ ದಾರಿ ಬಿಡು, ದಾರವಾಡುವದು ಹೂವಿನ ಕಸೂತಿ (ನೆಲಮು. ೭೮); ಹೆಣಿಗೆ ಮತ್ತು ಕಸೂತಿ ಕೆಲಸಗಳನ್ನು ನಯವಾಗಿ ಮಾಡಿ ಕೊಡುತ್ತಾಳೆ (ಮಹಾತ್ಮಾ. ೮೭). **ಕಸೀದೆ**: ಅವಳಿಗೆ ತಕ್ಕಮಟ್ಟಿಗೆ ಹೊಲಿಗೆಯ ಕೆಲಸ, ರಂಗವಲ್ಲಿ, ಕಸೀದೆ ಮೊದಲಾದ ಕಲೆಗಳು ಗೊತ್ತಿದ್ದವು (ಸ್ಕೂಲಮಿ. ೮).
[← ಪಾರ. ಕಶಿದಹ್; ಮರಾ. ಕಶಿದಾ, ಕಶೀದಾ, ಕಸುದಾ; ಹಿಂ. ಕಶೀದಹ್, ಕಶೀದಾ]

**ಕಸೂತಿಹೂವಿನಗಿಡ** (ನಾ). ಒಂದು ಜಾತಿಯ ಪೊದೆ; ಲಂಟಾನ (*).
[? + ಗಿಡ (< ಗಿಡು)]

**ಕಸೂರಿ** (ನಾ). ಅಲಕ್ಷ್ಯ; ತಪ್ಪು; ದೋಷ (ಕೈಸಾಗ. ೫೫೨).
[← ಅರ. ಮರಾ. ಹಿಂ. ಕಸೂರ್]

**ಕಸೂಸಿ** (ನಾ). ಸೂಕ್ಷ್ಮವಾದ ಪರಿಶೀಲನೆ; ತನಿಖೆ: ಮಾಲಿನ ವರ್ಣನವನ್ನು ಬರಿಯದೆ ನಿತ್ಯದ ವಹಿವಾಟ ಪ್ರಕಾರ ಸರಸಾದ ಮಾಲನ್ನು ಕಸೂಸಿಯಿಂದ ಖರೇದಿ ಮಾಡಿ ಕಳಿಹಿಸಿರೆಂದು ಬರಿಯುತ್ತಾರೆ (ಮುಂಬವ್ಯಾ. ೯೪). [← ಮರಾ. ಕಸೋಶೀ]

**ಕಸೆ**$_1$ 'ಕಸ್ಸಿ$_5$' ನೋ.

**ಕಸೆ**$_2$ (ನಾ). ೧. ನೆಯ್ಗೆಯ ಎಳೆ: ನಿನ್ನ ಮತ್ತೆನ್ನೆದೆಯ ಕಸೆಗೆ ಕಸೆಯನು ಗೊಳಿಸಿ ನನ್ನಿ ನೇಕಾರಿತಿಯು ಮುಗಿಯದಿಹ ಬಟ್ಟೆಯನ್ನನವರತ ನೇಯುತಿಹಳು (ಗರಿ. ೮-೧೨); ಹೃದಯ-ಹೃದಯದ ಕಸೆಗಳನ್ನು ಅನುಗೊಳಿಸಿ ಪ್ರೀತಿಯೆಂಬ ನೇಕಾರಿತಿಯು ಎಂದೂ ಮುಗಿಯದ ದಿವ್ಯಾಂಬರವನ್ನು ನೇಯುತ್ತಿದ್ದಾಳೆ (ಗೊತ್ತುಗು. ೧೩೬). ೨. ಅಂಗಿಯ ಲಾಡಿ; ಬಂಧನ ಸೂತ್ರ: ಚಾಗದ ಪೆರ್ಮೆಯಂ ಮೆಱೆವ ಬೊಜಂಗರಿಕ್ಕಿದೆಕ್ಕಸರದ ಕಸೆಯು[ಪಾಠಾಂ. ಕಸಯ]ಮಂ ಸೆಳೆದುಂ (ಮಲ್ಲಿಪು. ೬-೪); ದೆಸೆದೆಸೆಯೊಳೆಸೆವ ಕಸೆಯವಟ್ಟಿಗಳ ವಂದನಮಾಲೆಗಳ ಕೆಂದಳಿರ ಗೊಂದಣಮೆಂಬ ಹಸ್ತವಿನ್ಯಾಸದೊಳಂ (ಅನಂಪು. ೬-೪೧ ವ); ಸಿತಚೋಳಮಂ ತೊಡಿಸಿ ಕಸೆಯನುರೆ ಕಂಟಿಕ್ಕಿ (ಸಿದ್ಧಕಾ. ೧೧-೧೪); ಬಿಗಿಯಾದ ನಾಡಿ ಹಾಕಿದ ಷರಾಯಿ, ಮೇಲೊಂದು ಕಸೆಯ ಅಂಗಿ ಧರಿಸಿ (ಶರಚ. ೮೧೭). ೩. ಚಾಟಿ; ಚಬಕ; ಬಾರುಕೋಲು: ಕಸೆಯನಿನಿಸಱಿಪಿ ಕುಡೆ ಲಂಘಿಸಿದುದು ಪನ್ನೆರಡುಯೋಜನಂಬರಂ . . . ತುರಂಗಮರತ್ನಂ (ಆದಿಪು. ೧೩-೩೯); ಸಣ್ಣವರುಗಳನೋದಿಸುತಿರ್ಪ ಕಸೆಯ ಕೋಲಣ್ಣಗಳ್ (ಮೋಹತ. ೩-೪೧); ಘೋಟಕಗಳನ್ನೇರಿ ನಿಜಕರ ಕಲಿತ ಕಸೆ[ಪಾಠಾಂ. ಶೆ]ಗಳಿಂ ತಾಡಿಸಲ್ (ವೆಂಕಾರಾ. ೧-೭-೮). 'ಕಶೆ' ಪರಾ. [< ಸಂ. ಕಶಾ]

**ಕಸೆ**$_3$ (ನಾ). (?): "ತೀಕ್ಷ್ಣಾಗ್ರೀ – ಕಸೆ" (ಒಷಧಿ. ೭೦). [?]

**ಕಸೆಕಟ್ಟು** 'ಕಸಿಕಟ್ಟು' ನೋ.

**ಕಸೆಗೊಳ್** (ಕ್ರಿ). ಚಾಟಿಯನ್ನು ತೆಗೆದುಕೊ; ಬಾರುಕೋಲು ಹಿಡಿ: ಕಸೆಗೊಂಡು ಮರದ ಕೊರಡೆಂದೆಣಿಸಿ – ಎಲ್ಲಿ ಆ ಕೃಷ್ಣನೆಂಬುವನು ಕರೆ; ತುಡುಗಿ, ಬಾಸುಳಂ ಬಿಡಿಸುವೆನು – ಎಂದು ಕೆಡೆಬಡಿದಳಹ ಮಲೆತು (ನಡೆದಾ. I, ೪೫೫). [ಕಸೆ$_2$ + ಕೊಳ್$_1$]

**ಕಸೆಗೋಲ್**, ಕಸೆಗೋಲು (ನಾ). ಬಾರುಕೋಲು; ಚಾಟಿ; ಚಮ್ಮಟಿಕೆ: ಎಡಗೈಯೊಳ್ ನಾಗೆಯಂ ಸಡಿಲ್ವಿಡಿದು ಬಲಗೈಯ ಕಸೆಗೋಲ ನಲುಗಿ ಚಪ್ಪರಿಸಿ ಜಡಿದಂ (ರಾಮಾಶ್ವ. ೨೯-೨೯). **ಕಸೆಗೋಲು**: ಹಳಗನ್ನಡದಲ್ಲಿ . . . ಚಮ್ಮಟಗೆ, ಕಸೆಗೋಲು, ಕೋರಡಾ ಮೊದಲಾದ ಪದಗಳನ್ನು ಕಾಣುತ್ತೇವೆ (ಭಾಷಾಶಾ. ೧೭೯). [ಕಸೆ$_2$ + ಕೋಲ್$_1$]

**ಕಸೆಗೋಲು** 'ಕಸೆಗೋಲ್' ನೋ.

**ಕಸೆಪಾವಡೆ** (ನಾ). ಲಾಡಿ ಲಂಗ; ಲಾಡಿಯನ್ನುಳ್ಳ ಒಳ ಉಡುಪು; (ಚಿ). 'ಕಶೆಪಾವುಡೆ' ಪರಾ. [ಕಸೆ$_2$ + ಪಾವಡೆ (< ಪಾವುಡೆ)]

**ಕಸೆಪು** (ನಾ). "ಹಾಸಿಗೆ" (ಪ್ರಸಭಾ. ಟೀಕ): ತಣಿರ ಮರದ ನೆಳಲಿಗೈದಿ ಘನಶ್ಯಾಮಲ ಕೃಷ್ಣ ತಣಿರು ಕಸೆಪು ತೊಡಿ ತಲೆಗಿಂಬು ಗೆಣೆಯರು ಮಾಡಿದರು (ಪ್ರಸಭಾ. ೫೬-೧೨). [?]

**ಕಸೇರು** (ನಾ). ಒಂದು ಜಾತಿಯ ಹುಲ್ಲು; "ಗುಡಕಂದ" (ಪಂಡಿತ). [ಸಂ.]

**ಕಸೋಟಿ** (ನಾ). ೧. ಒರೆಗಲ್ಲು: ಸತ್ಯಮಿಥ್ಯಗಳ ಕಸೋಟಿ ಯಾವುದು? (ರಾಜಾರ. ೬೪); ಭಾರತೀಯಜೀವನ, ವಿಜ್ಞಾನ . . . ಎಲ್ಲದರ ಕಸೋಟಿ ಧರ್ಮ (ಭಾರದ. ೫೭೯). ೨. ಪರೀಕ್ಷೆ.
[← ಮರಾ. ಹಿಂ. ಕಸೋಟಿ. / ಪ್ರಾ. ಕಸವಟ್ಟ; ಸಂ. ಕಷಪಟ್ಟಿಕಾ]

**ಕಸ್ತರು** (ನಾ). ಒಂದು ವಿಧವಾದ ಆಯುಧ (?): ಮಥಿಸಿದರ್ ಶಸ್ತ್ರದಲಿ ಕಸ್ತರಲಿ ಯತಿವೀರಖಗಸೇನೆ (ಜಿನಮು. ೨೮-೩೧). [?]

**ಕಸ್ತವತುಂಗ** (ನಾ). ವಿಷ್ಣುವಿನಿಂದ ಸ್ತುತಿಗೊಂಡ ಮಹಿಮಾವಂತ: ಮಸ್ತಕಗಂಗಂ ಕಸ್ತವತುಂಗಂ (ಹಾಲಾಸ್ಯ. ೧-೨೦ ರಗಳೆ).
[ಸಂ. (ಕಸ್ತವ + ತುಂಗ)]

**ಕಸ್ತಿ** (ನಾ). ೧. ಪರಿಶ್ರಮ; ಕಷ್ಟ. ೨. ಪರಾಕ್ರಮ; ಶಕ್ತಿ: ಕೇಳು ನಿನ್ನಳವಲ್ಲದಂತಪ್ಪ ಕಸ್ತಿಯಿದ ತಾಳಲಳವಲ್ಲ ಬಿಡು (ಲಶಿಚಂ. ೧೩-೧೧). ೩. ಕಲಹ; ಹೋರಾಟ: ಈ ಜಗಮಂ ಕೊಲ್ವವನೊಳ್ ಕಸ್ತಿಯೇ ಶಿವಾ ಎಂದುಸಿರ್ದಳ್ (ವೀರವಿ. ೭-೬೭); ಹೋಗುಹೋಗೈ ಸಿಂಹಕೇತು ನನ್ನೊಳು ಕಸ್ತಿ ಸಾಗದು (ನಾಗಕು. ೧೫-೭೬); ಹಸ್ತಿಬಲಭೀಮ ತಾ ಕಸ್ತಿಯಲಿ ಸಿಂಹಬಲನಸ್ತಿಯನು ಮುಱಿದು ಮಡುಹಿದನು (ಸರ್ವಜ್ಞ. ೧೨೦೪). ೪. "ಆವೇಶ, ಅಸೂಯೆ, ಬಲ" (ತ್ರಿಪುವಿ. ಕೋಶ): ಕೈಗೊಳಗಾದ ನರ್ಥಮಂ ಕೊಳಲಱಿ ಕೌಳಿಕಂಬಿಡಿದು ಕಣ್ಮಲರಿಂ ಸೊಗಸಿಕ್ಕಿ ಕಸ್ತಿಯೊಳ್ ಮುಳಿ ತಿಳಿಯೆಂಬ ದೂದವಿಯ ಜಾಣ್ಮೆಗೆ ಮೆಚ್ಚಿದನುರ್ವರೇಶ್ವರಂ (ತ್ರಿಪುವಿ. ೨೪-೧೭೫). ೫. ಒತ್ತಾಯ; ಹಿಂಸೆ: ವಸ್ತಿಯಿದ್ದಲ್ಲಿ ಕಸ್ತಿ ಮಾಡಬಾರದು (ಗಾದೆ). [?. / ಮರಾ. ಕಸ್ತೀ]

**ಕಸ್ತಿಡಿ** (ಕ್ರಿ). ಹಟಹಿಡಿ; ಪಟ್ಟುಹಿಡಿ: ಕ್ಷತ್ರಿಯರೊ ವಿಪ್ರರೋ ನಿಶ್ಚೈಸಬೇಕೆಂದು ಕಸ್ತಿಡಿದು ದ್ರುಪದ ಧೃಷ್ಟದ್ಯುಮ್ನ ಕುಲಗುರುವ ತರಿಸಿ (ತುರಂಗ. ೧೩-೪೧). [ಕಸ್ತಿ + ಹಿಡಿ$_1$ (< ಪಿಡಿ$_1$)]

**ಕಸ್ತಿಪಡು** (ಕ್ರಿ). ಆವೇಶವನ್ನು ಹೊಂದು; ಕೋಪಗೊಳ್ಳು (?): ಶುಕ್ರಾಚಾರ್ಯನು ಕಸ್ತಿಪಟ್ಟು " . . . ನನ್ನನ್ನು ಸಟೆ ಹೇಳುವವನ ಹಾಗೆ ಎಣಿಸುತ್ತಿದ್ದೀ" ಎನಲು (ಕೃವಾಳ. ೧೨೩). [ಕಸ್ತಿ + ಪಡು$_1$]

**ಕಸ್ತಿಬೀಳು** (ಕ್ರಿ). ಕಷ್ಟಬೀಳು (?): ಪಂಚಶತಕೋಟಿ ವಿಸ್ತೀರ್ಣದಿ ಗಭಸ್ತಿಯಂ ಪಸರಿಸುತ ಸೂರ್ಯನೀ ಲೋಕದೊಳು ಕಸ್ತಿಬೀಳದೆ ವಿಲಕ್ಷಣನಾಗಿ ತಳರ್ವಂತೆಯಿರಬೇಡವೇ ಯೋಗಿಯು (ಪ್ರಭುಶು. ೬-೯೯).
[ಕಸ್ತಿ + ಬೀಳು$_1$ (< ಬೀೞ್$_1$)]

**ಕಸ್ತು**, ಖಸ್ತು (ನಾ). ೧. ತೊಂದರೆ; ಪೀಡೆ; ರೋಗ. ೨. ತೀವ್ರ; ಸಕತ್ತು: ಆತನಿಗೆ ಮೂರುದಿವಸದಿಂದ ಕಸ್ತುಕಾಯಿಲೆ (ರೂಢಿ). ೩. ಗಟ್ಟಿ; ದೃಢ: ಕೌರವನೊಡನೆ ಸ್ವಸ್ಥದಿಂ ಪಾಂಡವರಂ ಕೂಡಿಕೊಂಡಿರುಯೆಂದು ಕಸ್ತಾಗಿ ಬುದ್ಧಿಯಂ ಪೇಳ್ದರು (ತುರಂಗ. ೨೬-೧೦). ೪. ಶ್ರಮ; ಕಷ್ಟ; ಈ ಹೊತ್ತು ನಾವು ಕಸ್ತು ಮಾಡಿದ ಕಾರಣ ಇಷ್ಟು ಬದುಕು ದೊರಕಿತು (ಮುಂಬಯಿ. ೩-೯೮). ೫. ಜಬರದಸ್ತು; ಜೋರು: ದೊರೆಯನ್ನು ತಾವು ಒಪ್ಪಿಸಿಕೊಡುವುದಿಲ್ಲವೆಂದು ಬಹಳ ಕಸ್ತು ಮಾಡಿ ಬೆನ್ನಹಾಕಿಕೊಂಡರು (ಚಿತ್ರಪಾ. ೩೪); ಇಬ್ಬರೂ ಕಸ್ತಿನಲ್ಲಿದ್ದಾರೆ, ಜೋರುದಾರರು (ಭೀಮಕಾ. ೪). **ಖಸ್ತು**: ೫. ಮುಚ್ಚುಮರೆ ಇಲ್ಲದೆ ಖಸ್ತು ಮಾಡಿದರಿಂದ (ರಾಜೇಂದ್ರ. ೬೬).
[←ಪಾರ. ಖಸ್ತ್=ಗಾಯಗೊಂಡ, ರೋಗಿ; ಮರಾ. ಖಸ್ತಾ, ಖಸ್ತ್]

**ಕಸ್ತುಕಾಱ**, ಕಸ್ತುಗಾರ (ನಾ). (ವ್ಯರ್ಥವಾಗಿ) ಶ್ರಮಪಡುವವನು: ಇಷ್ಟಲಿಂಗವ ಹಿಡಿವ ಕೈಯಲ್ಲಿ ಬಟ್ಟೆತ್ತು ಕುಚವ ಹಿಡಿದು ಉಚ್ಚೆಯ ಬಚ್ಚಲ ತೋಡುವ ಕಸ್ತುಕಾಱರನೊಪ್ಪೆನೆಂದ (ಸರ್ವವ. ೧೮೩-೮೩೭). **ಕಸ್ತುಗಾರ**: (ಚಿ). [ಕಸ್ತು + -ಕಾಱ]

**ಕಸ್ತುಗಾರ** 'ಕಸ್ತುಕಾಱ' ನೋ.

**ಕಸ್ತುಗೆಯ್** (ಕ್ರಿ). ಪರಿಶ್ರಮಿಸು; ಶ್ರಮಪಡು: ಅ ಪರಿಸ್ತರಣಂ ಕ್ಲಿಪ್ರಸಾಧ್ಯಮಾಗದಿರ್ಪುದಂ ಕಂಡು ಚಲದಿಂ ಕಸ್ತುಗೆಯ್ದು ನಿಂದೀರಯ್ದು ವರ್ಷಂಬರಂ ನೆಲದಂಡಿಳಿದು ಜೇರುಮುತ್ತಿಗೆಯನಿಕ್ಕಿ (ಕಳನೃ. ೯-೬೩).
[ಕಸ್ತು + ಗೆಯ್ (< ಕೆಯ್$_1$)]

**ಕಸ್ತುತಗಾದೆ** (ನಾ). ಹಣದ ವಸೂಲಿಗಾಗಿ ಮಾಡುವ ಒತ್ತಾಯ, —ಪೀಡೆ (ಕ). [ಕಸು + ತಗಾದೆ]

**ಕಸ್ತುರಿ** (ನಾ). ಕಸ್ತೂರಿಮೃಗದ ನಾಭಿಯಿಂದ ದೊರೆಯುವ ಸುಗಂಧದ್ರವ್ಯ; ಮೃಗಮದ: ಭಾವಕ್ಕೆ ಹೊಜಗಾದವಂಗೆ ಲೀಲೆಯುಂಟೀ ಆ ಗುಣ ಚಿಪ್ಪಿನ ಮುತ್ತಿನ ತೆಜ ಕಸ್ತುರಿಯ ಶುಕ್ಲದ ತೆಜ ಕದಳಿಯ ಕರ್ಪುರದ ತೆಜ (ಮೋಳಿವಾ. ೪-೧೨) ; ನಾಸಿಕೇಂದ್ರಿಯ ನಿನ್ನ ತನುಗಂಧಕೆಳಸಿ ಮೇಲ್ಲೂಸಿದ ಪುಣಗು ಕಸ್ತುರಿಯ ವಾಸನೆವಿಡಿಯದು (ಕಂಸವಿ. ೧೯-೮೨). 'ಕತ್ತುರಿ' ಪರಾ. [< ಸಂ. ಕಸ್ತೂರೀ]

**ಕಸ್ತುರಿಬೊಟ್ಟು** (ನಾ). ಕಸ್ತೂರಿ ಬೊಟ್ಟು; ಕಸ್ತೂರಿ ತಿಲಕ (ಕ). 'ಕಸ್ತೂರಿಬೊಟ್ಟು' ಪರಾ. [ಕಸ್ತೂರಿ + ಬೊಟ್ಟು$_2$ (< ಬಟ್ಟು$_1$)]

**ಕಸ್ತುರಿವೀಣೆ** (ನಾ). ಒಂದು ಬಗೆಯ ವೀಣೆ (?): ಜಾಣೆಯ ಕಸ್ತುರಿವೀಣೆಯ ಸದುಮೃದುವಾಣಿಯ ಚೆಲ್ವಿನ ಕಣಿಯ . . . ರಾಣಿಯ ರತಿಯೆಂದಾದವುದೊ (ಶತಸಾಂ. ೨೮-೪೩). [ಕಸ್ತುರಿ? + ವೀಣೆ]

**ಕಸ್ತೂರಿ** (ನಾ). ೧. ಒಂದು ಸುಗಂಧದ್ರವ್ಯ: "ಮೃಗನಾಭಿಃ, ಮೃಗಮದಃ, ಕಸ್ತೂರಿಕಾ – ಈ ೩ ಕಸ್ತೂರಿ" (ಹಲಾಯು. ೬೮-೩೯೦); ಸುಗಂಧ ಪಚ್ಚೆ ಕಸ್ತೂರಿಯ ಬಾಳೆ (ನವಮೋ. ೨೪-೪೯) ; ಸಾಂಬ್ರಾಣಿ, ಕಸ್ತೂರಿ, ಕರ್ಪೂರ . . . ಧೂಪ ಹಾಕುವಲ್ಲಿ ಧೂರ್ತಗ್ರಹಗಳಿಗೆಲ್ಲಾ ಉಚ್ಚಾಟನವಹುವು (ಸಕವೈ. ೩೩) ; ಕರಡಿಯ ಮೈಯಿಗೆ ಕಸ್ತೂರಿಯೇತಕೆ (ಇಂಚಾಪ. ೯೫-೬೩) ; ಕತ್ತೆ ಕಸ್ತೂರಿ ಹೊತ್ತಹಾಗೆ (ಗಾದ). ೨. ಗಂಗಡಿಕಾರರಲ್ಲಿ ಒಂದು ಪಂಗಡ: (ಎಸವೈ. XXVII, ೯). [ಸಂ. ಕಸ್ತೂರೀ]

**ಕಸ್ತೂರಿಅರಿಸಿನ** (ನಾ). ಸುಗಂಧದ ಅರಿಸಿನ: ಕಸ್ತೂರಿ ಅರಿಸಿನ, ಕಾಡು ಅರಿಸಿನ (ಮೈಔಗಿ. ೨೬-೪೯೮). [ಕಸ್ತೂರಿ + ಅರಿಸಿನ]

**ಕಸ್ತೂರಿಕಡ್ಡಿ** (ನಾ). ೧. ಕಸ್ತೂರಿಯನ್ನು ಲೇಪಿಸಿದ ಕಡ್ಡಿ, —ಶಲಾಕೆ (ಕ). ೨. ಕರಿಬಣ್ಣದಲ್ಲಿ ಬಿಳಿ ಚೌಕಗಳುಳ್ಳ ಬಟ್ಟೆ. ಕಸ್ತೂರಿಕಡ್ಡಿಸೀರೆ = ಬಿಳಿ ಚೌಕಗಳುಳ್ಳ ಕರೀಸೀರೆ (ಕ). [ಕಸ್ತೂರಿ + ಕಡ್ಡಿ]

**ಕಸ್ತೂರಿಕಾಂಡಕ** (ನಾ). ಕಸ್ತೂರಿ ಮೃಗದ ಅಂಡ, —ಬೀಜಕೋಶ: ಕಸ್ತೂರಿಕಾಂಡಕಂ ವನಹಸ್ತಿರದಂ ಹಸ್ತಿಮಸ್ತಕೋದ್ಭವ ಮುಕ್ತಾವಿಸ್ತಾರಮೆಂದು ತಂದು ಸಮಸ್ತ ವನಾಧೀಶರವನಿಪತಿಯಂ ಕಂಡರ್ (ಆದಿಪು. ೧೨-೬೭). [ಸಂ. (ಕಸ್ತೂರಿಕಾ + ಅಂಡಕ)]

**ಕಸ್ತೂರಿಕಾಸಾರ** (ನಾ). ಕಸ್ತೂರಿಯ ಕದಡು, —ದ್ರವ: ಚಂದನ ಸಾರ ಕಾಶ್ಮೀರ ಕಾಲಾಗರು ಕಸ್ತೂರಿಕಾಸಾರ ವಿವಿಧಲೇಪನಂಗಳಿಂ ಮೆಯ್ಯ ತಿಮಿರ್ದು (ಸುಕುಮಾ. ೧೧-೩೨ ವ). [ಸಂ. (ಕಸ್ತೂರಿಕಾ + ಆಸಾರ)]

**ಕಸ್ತೂರಿಕೆ** (ನಾ). = ಕಸ್ತೂರಿ (ಕ). [ಸಂ. ಕಸ್ತೂರಿಕಾ]

**ಕಸ್ತೂರಿಗೊಬ್ಬಳಿ, ಕಸ್ತೂರಿಗೊಬ್ಬಿ** (ನಾ). ಸುಗಂಧದ ಹೂ ಬಿಡುವ ಒಂದು ಬಗೆಯ ಜಾಲಿಮರ; ಸುಗಂಧಿಜಾಲಿ; ಕಸ್ತೂರಿಜಾಲಿ (ಕ). **ಕಸ್ತೂರಿಗೊಬ್ಬಿ**: ಕಸ್ತೂರಿಜಾಲಿ, ಕಸ್ತೂರಿಗೊಬ್ಬಿ, ಕಿರೀಜಾಲಿ (ಮೈಔಗಿ. ೧-೧೩). [ಕಸ್ತೂರಿ + ಗೊಬ್ಬಳಿ (< ಗೊಬ್ಬುಳಿ)]

**ಕಸ್ತೂರಿಗೊಬ್ಬಿ** 'ಕಸ್ತೂರಿಗೊಬ್ಬಳಿ' ನೋ.

**ಕಸ್ತೂರಿಜಾಲಿ** (ನಾ). = ಕಸ್ತೂರಿಗೊಬ್ಬಳಿ: ಕಸ್ತೂರಿಜಾಲಿ, ಕಸ್ತೂರಿಗೊಬ್ಬಿ, ಕಿರೀಜಾಲಿ (ಮೈಔಗಿ. ೧-೧೩). [ಕಸ್ತೂರಿ + ಜಾಲಿ$_1$]

**ಕಸ್ತೂರಿಬೆಂಡೆ** (ನಾ). ಒಂದು ಬಗೆಯ ಸಸ್ಯ: ಕಸ್ತೂರಿಬೆಂಡೆ, ಕಾಡು ಕಸ್ತೂರಿ (ಮೈಔಗಿ. ೪೩-೭೪೮). [ಕಸ್ತೂರಿ + ಬೆಂಡೆ]

**ಕಸ್ತೂರಿಬೆಕ್ಕು** (ನಾ). ಪುನುಗಿನ ಬೆಕ್ಕು: "ಗಂಧಮಾರ್ಜಾಲಃ – ಕಸ್ತೂರಿಬೆಕ್ಕು, ಪುಣುಗಿನ ಬೆಕ್ಕು" (ಒಷಧಿ. ೪೭). 'ಕತ್ತುರಿವೆಕ್ಕು' ಪರಾ. [ಕಸ್ತೂರಿ + ಬೆಕ್ಕು]

**ಕಸ್ತೂರಿಮಲ್ಲಿಗೆ** (ನಾ). ಮಲ್ಲಿಗೆಯಲ್ಲಿ ಒಂದು ಜಾತಿ: ಬಾಸ್ತಿ ಮಲ್ಲಿಗೆ, ಕಸ್ತೂರಿಮಲ್ಲಿಗೆ (ಮೈಔಗಿ. ೪೭-೯೩೭). [ಕಸ್ತೂರಿ + ಮಲ್ಲಿಗೆ]

**ಕಸ್ತೂರಿಮಾವು** (ನಾ). ಒಂದು ಬಗೆಯ ಮಾವು: "ಅತಿಸೌರಭಃ –ಕೇವಲ ಪರಿಮಳವುಳ್ಳ ಮಾವಿನ ಗಿಡ; ಕಸ್ತೂರಿಮಾವು, ಜೀರಿಗೆಮಾವು" (ಸಿದ್ಧಾಂತಿ. ೧೦೫). [ಕಸ್ತೂರಿ + ಮಾವು]

**ಕಸ್ತೂರಿಮೃಗ** (ನಾ). ೧. ಕಸ್ತೂರಿಯನ್ನು ಕೊಡುವ, ಕೊಂಬಿಲ್ಲದ ಜಿಂಕೆ: ಕಸ್ತೂರಿಮೃಗ, ಚಮರೀಮೃಗ, ಪುರುಷಮೃಗ . . . ಪವಿತ್ರ ಮೃಗಜಾತಿಗಳುಂ (ವಿವೇಕ. ೨೧೨) ; ತಿಬೇಟದೇಶದ ಪಶುಗಳಲ್ಲಿ ಶಾಲಿ ನುಣ್ಣೇಕುರಿಗಳೂ, ಕಸ್ತೂರಿಮೃಗಗಳೂ ಪ್ರಸಿದ್ಧ (ಮುಂಬಯಿ. ೪-೨೧೧). ೨. ಪುನುಗಿನ ಬೆಕ್ಕು (?): "ಲೋಮಶಮಾರ್ಜಾರಃ — ಕಸ್ತೂರಿ ಮೃಗ" (ಒಷಧಿ. ೧೪೪). [ಕಸ್ತೂರಿ + ಮೃಗ]

**ಕಸ್ತೂರಿರಾಜಾನ್ನ** (ನಾ). ಒಂದು ಬಗೆಯ ನೆಲ್ಲು; ಸುಗಂಧಿನೆಲ್ಲು; ಗಂಧಶಾಳಿ: ಪಿರಿಯ ರಾಜಾನ್ನ ಜೀರಿಗೆರಾಜಾನ್ನವು . . . ಪರಿಶೋಭಿಸುವ ಕಸ್ತೂರಿ ರಾಜಾನ್ನದ ವರಶಾಲಿಯ ಗದ್ದೆಯಿಹುವು (ಕಂನವಿ. ೫-೬೮). [ಕಸ್ತೂರಿ + ರಾಜಾನ್ನ]

**ಕಸ್ತೂರೀವರ್ಣ** (ನಾ). ಕಸ್ತೂರಿಯ ಬಣ್ಣ; ಕಪ್ಪು ಬಣ್ಣ: ಹೊಳೆಯುವ ಕೆಂದಳಗ ಕಸ್ತೂರೀವರ್ಣದೊಳು ಪರಿಮಳವಾಂತು ಮೆಱೆವ ಕಳಮೆಯ ತೆನೆಗಳು (ಕಂಸವಿ. ೫-೭೧). [ಸಂ. (ಕಸ್ತೂರೀ + ವರ್ಣ)]

**ಕಸ್ಥಿ** (ನಾ). = ಕಸ್ತಿ (?): ಕಸ್ಥಿ ಕಟ್ಟಿದರಿಂದಾದಯವೇನು ಫಲ ನಿಮ್ಮ ಚಿತ್ತವಪ್ಪಿದ ಹಾಗೆ ಸ್ವಾಮಿ (ಸೌಂದಕಾ. ೬-೨೮). [?]

**ಕಸ್ವರ** (ಗು). ೧. ಹೋಗುವ; ಚಲಿಸುವ. (ನಾ). ೨. ಸಂಪತ್ತು; ಐಶ್ವರ್ಯ; ಆಸ್ತಿ: "ಸಮರಂ ಕಸ್ವರಗರ್ದಭಂ ಪ್ರಕರಮುಕ್ಕುಂ" (ನಾನಾರ. ೪೭). ೩. ಜೀವಾತ್ಮ. ೪. ಪರಮಾತ್ಮ. ೫. ನಿತ್ಯವಾದುದು; ಶಾಶ್ವತವಾದುದು. ೬. ನಿರಂತರವಾದುದು. ೭. ವಸ್ತುಗಳ ಸಮೂಹ, —ಗುಂಪು. ೮. ಹಿಂಸೆ; ಘಾಸಿ ಮಾಡುವಿಕೆ: "ದ್ರವಿಣಂ ಕ್ಷೇತ್ರಜ್ಞ ವಸ್ತುಪ್ರತತಿ ಸತತ ನಿತ್ಯಂಗಳುಂ ಕಸ್ವರಾಖ್ಯಂ" (ನಾನಾರ. ೭೦). [ಸಂ.]

**ಕಹಕಹ** (ಅ). ೧. ಒಂದು ಅನುಕರಣ ಶಬ್ದ; ನಗುವನ್ನು ಸೂಚಿಸುವ ನಿಪಾತ: [ಎನೆ] ಕಹಕಹ ರುತಿಯಿಂ ನಕ್ಕು (ವರ್ಧಪು. ೧೬-೧೩). ೨. ಸಾರಸ ಪಕ್ಷಿಯ ಧ್ವನಿ: "ಕಹಕಹಮೆಂದು ಸಾರಸವಕ್ಕಿಯ ಧ್ವನಿ" (ಕಶಸಾ. ೧೦-೨೦೬). 'ಗಹಗಹ' ಪರಾ. [?]

**ಕಹಕಹಿಸು** (ಕ್ರಿ). ಸದ್ದುಮಾಡಿ ನಗು; ಕಳಕಳಿಸಿ ನಗು: ಹಾ! (ಕಹಕಹಿಸಿ), ಎಂದರೆ, ಇಂದು ನೀನು ಕುಡಿಯುವೆಯೇನು (ಬೆಟ್ಟಆ. ೯೭-೨೫). 'ಗಹಗಹಿಸು' ಪರಾ. [ಕಹಕಹ + -ಇಸು$_1$]

**ಕಹರಿ** (ನಾ). ಒಂದು ಬಗೆಯ ಪಾಕ: ಒಡೆಯನೊಂದೆರಡ ರವೆಯವ ಮಾಡಿ . . . ಜಡಿದು ಕರ್ಪೂರಮಿಕ್ಕಲು ಕಹರಿಯೆಂಬ ಕದಳೀಕುಸುಮ ಪಾಕಮಾಯ್ತು (ಸೂಪಶಾ. ೪-೫೯). [?]

**ಕಹರು** (ನಾ). (?): ಬಿಸಿಲ ಕಹರು ಮಂಜಿನ ಮುಂದಿಗೆಯನಿಟ್ಟು ಮನೆವೊಲೆಯದಂತೆ ಅನಲನ ತೊಲೆಯ ಹಾಕಿ ವೊಳೆಯ ಗಳುವ ಬೀಸಿ ಕೆಂಡದ ಹಂಜರಗಟ್ಟಂಗಟ್ಟಿ ಹಿಂಡುಗಟ್ಟಿಗೆ ಗಳುವಿನ ಸಂದಿಯಲ್ಲಿ ಅಡಗಿತ್ತು (ಚಕ್ಕವ. ೨೧೧-೪). [?]

**ಕಹಳಾರವ** (ನಾ). ಕಹಳೆಯ ಶಬ್ದ; ಕಾಳೆಯ ಧ್ವನಿ: "ರಿತ್ತರಿಜಿ ಜಗಜಗೆಂದೆನಲು ಕಹಳಾರವಂ" (ಮಂಗರಾ. ೨೪-೮); ಸುರಿಯದೆ ಮಾಣವಾಗಸದೆ ತಾರಗೆಗಳ್ ಕಹಳಾರವಂಗಳಿಂ (ಚಕವಿ. ೨-೧೦೪).

[< ಸಂ. ಕಾಹಲಾರವ (ಕಾಹಲಾ + ರವ)]

**ಕಹಳಾವಳಿ** (ನಾ). ಕಹಳೆಗಳ ಸಾಲು; ಕಾಳೆಗಳ ಸಮೂಹ: ಹೊಳೆವ ಸಿಂಧದ ಜಡಿವ ಕಹಳಾವಳಿಯ ಲಗ್ಗೆಯ ವಿವಿಧ ವಾದ್ಯದ ಕಳಕಳದ (ಕುವ್ಯಾದ್ರೋ. ೬-೨).

[< ಸಂ. ಕಾಹಲಾವಲಿ (ಕಾಹಲಾ + ಆವಲಿ)]

**ಕಹಳೆ, ಕಾಳೆ** (ನಾ). ಉದ್ದವಾಗಿ ಬಾಗಿರುವ ತುತ್ತೂರಿ, —ಕೊಂಬು: ಪಟುದುಲಿವ ಕಹಳೆ ಮಿಳ್ಳಿಪ ಪಟಯಿಗೆ ಸೂಳೈಪ ತಮ್ಮಟಂ (ವರ್ಧಪು. ೮-೪೯); ಮೃದಂಗ ನಿಸ್ಸಾಳ ಭೇರೀ ಶಂಖ ಕಹಳೆಗಳ ಬಹಳ ಧ್ವನಿಯುಣ್ಮೆ (ನಂಬಿರ. ೨-೯೦); ನಿರಂತರವೊದಜು ಬಯ್ದುವು ಕಹಳೆ ಬಿರುದಾವಳಿಯುಲತಿರಥರ (ಕುವ್ಯಾದ್ರೋ. ೪-೧೩); ಕೂಗಿಡುವ ಕಹಳೆ ಹೆಗ್ಗಹಳೆ ಚಿನಿಕಹಳೆ ಕರಣೆಯ ನಾದ (ಅಖಂಡೇ. ೨೦೬-೪೬); ಕಾರ ಹುಣ್ಣಿವೆ ಬರಲಿ . . . ಕರಿ ಹರಿದು ಮೆರೆಸೋಣ ಕಹಳೆ ಹಚ್ಚಿ (ನೆಲಮು. ೧೮). **ಕಾಳೆ**: ಕಾಳೆಯಾತಂಗೆರಡು ಮತ್ತರ್ (ಎಇ. IV, ೩೫೪-೩೬; 975); ಕಾಳೆಯಂ ಸೂಳೈಸುವ ತಿತ್ತಿರಿಯ ನೊತ್ತುವ ಕೊಳಲನೂದುವ (ಲೀಲಾವ. ೫-೧೩೪); ಮೇಲೆ ಹುಡಿಯಿಡೆ ಹೊಡೆವ ನಾನಾ ಕಾಳೆ ಶಂಖವು (ಸಂಭಪ. ೨೪-೬); ದೇಗುಲದಲ್ಲಿ ಊದಬೇಕು ಕಾಳೆ (ರಾಮನ. ೩೯).

[< ಸಂ. ಕಾಹಲ, ಕಾಹಲಾ]

**ಕಹಳೆಕಾಜ** (ನಾ). ಕಹಳೆ ಊದುವವನು: ತಾಳಧರಿಗಳ ಕಹಳೆಕಾಜರ ನಾಲಿಸುವ ಕಂಸಾಳಗಿತ್ತಿಯರತ್ತಲೊತ್ತರಿಸಿ (ಬಸಪು. ೫-೪೩).

[ಕಹಳೆ + -ಕಾಜ]

**ಕಹಿ$_1$** (ಕ್ರಿ). ವಿಷವಾಗು; ಕಹಿಯಾಗು: ಕಾರಣವಿದ್ದೇ ನೋವ್ರದೆ ಬೇವು? ತಾನೇ ಕಹಿವುದು, ಊಹಿಸಿ, ಕೊರಗಿ (ಸುನೀತ. ೩೦).

[< ಕಹಿ$_2$]

**ಕಹಿ$_2$** 'ಕಯ್ಪು' ನೋ.

**ಕಹಿಎಣ್ಣೆ, ಕೈಯೆಣ್ಣೆ$_2$** (ನಾ). ಕಹಿಯಾದ ಎಣ್ಣೆ; ಹರಳೆಣ್ಣೆ: ಕಹಿ ಎಣ್ಣೆಯಲ್ಲಿ ಗೋಮೂತ್ರ ಬೆರಸಿಯಾದರೂ ಹಾಲ ಬೆರಸಿಯಾದರೂ ಕೊಡಲು ಮಹೋದರ ಪರಿಹರ (ವೈದ್ಯಸಾ. I, ೩೨೮). **ಕೈಯೆಣ್ಣೆ$_2$**: ಒಂದು ಭಾಗ ಕೈಯೆಣ್ಣೆ, ಎರಡು ಭಾಗ ಎಳ್ಳೆಣ್ಣೆ, ನಾಲ್ಕು ಭಾಗ ತುಪ್ಪ ಇದೀಗ ತ್ರಿಸ್ನೇಹಭಾಗದ ಕ್ರಮ (ಸಕವೈ. ೩೧); ಅಫೀಮು ‖ ತೊಲ, ಕೈಯೆಣ್ಣೆ ೧ ಪಾವು ಇವುಗಳನ್ನು . . . ಕುಡಿಸುವುದು (ಗ್ರಾಮೂಕ. ೧೩೯); ಒಳ್ಳೆಣ್ಣೆ ತಂದೆನು ಕೈಯೆಣ್ಣೆಯಾಯಿತು (ಇಂಚಾಪ. ೧೨೯-೩೫).

[ಕಹಿ$_2$ (< ಕಯ್ಪು) + ಎಣ್ಣೆ. P ಕೈಯಿಂದ ತಯಾರಿಸಿದ ಹರಳೆಣ್ಣೆ ಎಂದೂ ಕೆಲವರು ನಿಷ್ಪತ್ತಿ ಹೇಳುತ್ತಾರೆ]

**ಕಹಿಕು** (ಕ್ರಿ). (ಕರಾ) = ಕಹಿ$_1$: ಹಳ್ಳಿಯವರಿಗೂ ಹಣ ಬೇಡವೆಂದಲ್ಲ; ರೂಪಾಯಿ ಕಹಿಕುತ್ತದೆಂದಲ್ಲ (ಬೆಟ್ಟಜೀ. ೩೧). [ಕಹಿ$_1$ + -ಕು$_1$]

**ಕಹಿಕೊಡ್ಸೀಗೆಗಿಡ** (ನಾ). ಒಂದು ಬಗೆಯ ಸಸ್ಯ: ಕುಡ್ಸಾಲು, ಕೊಜ-೯, ಕಹಿಕೊಡ್ಸೀಗೆ ಗಿಡ (ಸ್ಮೈಔಗಿ. ೪೪-೮೬೬).

[ಕಹಿ$_2$ (< ಕಯ್ಪು) + ಕೋಡ್ಸೀಗೆ (< ಕೊಡಸಿಗೆ) + ಗಿಡ (< ಗಿಡು)]

**ಕಹಿಕೋಟೆಕಾಯಿ** (ನಾ). ಒಂದು ಜಾತಿಯ ಕಾಯಿ; ಕಹಿಯಾದ ಕೋಟೆಕಾಯಿ: ಕಹಿಕೋಟೆಕಾಯಿ ೫ . . . ಮೆಣಸು, ತ್ರಿಫಲೆ ಪ್ರತ್ಯೇಕ ಒಂದೊಂದು ಮಾನ ಇವಂ ೮ ಗ ಅಲ್ಲವಂ ಕೂಡಿ (ವಿವೈವಿ. ೬೭).

[ಕಹಿ$_2$ (< ಕಯ್ಪು) + ಕೋಟೆಕಾಯಿ$_0$]

**ಕಹಿಗುಮ್ಮಳೆ** (ನಾ). ಒಂದು ಜಾತಿಯ ಗಿಡ: ಎಕ್ಕೆಬೇರು, ಕಹಿ ಗುಮ್ಮಳದ ಬೇರು . . . ಇವಂ ಸಮಾನಂಗೊಂಡು ಹಾಕಿ (ಸಕವೈ. ೧೬೯).

[ಕಹಿ$_2$ (< ಕಯ್ಪು) + ಗುಮ್ಮಳ$_0$]

**ಕಹಿಗುಳ್ಳ** (ನಾ). ಗುಳ್ಳದಲ್ಲಿ ಒಂದು ಜಾತಿ: ಹೊಂಗೆಬೀಜ, ಕಹಿಗುಳ್ಳ, ಮೂರು ಬೆಳ್ಳುಳ್ಳಿ, ಮೂರು ಮೆಣಸು . . . ಅಗಿದು ನುಂಗಿದರೆ ಛಳಿ ನಿಲ್ಲುವುದು (ಸಕವೈ. ೬೪). [ಕಹಿ$_2$ (< ಕಯ್ಪು) + ಗುಳ್ಳ]

**ಕಹಿತುಂಬೆ** (ನಾ). ಒಂದು ಬಗೆಯ ತುಂಬೆ: ಕಹಿತುಂಬೆಯ ರಸವಂ ಮೂರುದಿನ ಕುಡಿಯೆ ವಾಂತಿಯಾಗುವುದು (ವಿವೈವಿ. ೧೩೪).

[ಕಹಿ$_2$ (< ಕಯ್ಪು) + ತುಂಬೆ$_2$ (< ತುಂಬಿ$_2$)]

**ಕಹಿದರಸಿ** (ನಾ). ಒಂದು ಬಗೆಯ ಸಸ್ಯ: "ಯವಶಾಕ-ಕಹಿದರಸಿ" (ಓಷಧಿ. ೧೩೧); ಕಹಿದರಸಿಸೊಪ್ಪಿನ ರಸದಲ್ಲಾದರೂ . . . ವಿರೇಕವಂ ಮಾಡಿಸಲು ವಿಷಸರ್ಪವ್ಯಾಧಿಗಳು ಪರಿಹರವಹವು (ವೈದ್ಯಸಾ. I, ೩೬೨).

[ಕಹಿ$_2$ (< ಕಯ್ಪು) + ದರಸಿ]

**ಕಹಿದಸಲೆ** (ನಾ). ಒಂದು ಬಗೆಯ ಔಷಧಿ ಸಸ್ಯ: ಹೆಗ್ಗುಳ್ಳ, ಕಳ್ಳಂಗಡಲೆ, ರಾಸ್ಮೆ, ಕಹಿದಸಲೆ . . . ಕಷಾಯಂ ಕಾಯಿಸಿ ತೆಗೆದುಕೊಳ್ಳೆ ವಾತಜ್ವರ ಪರಿಹಾರವಾಗುವುದು (ಸಕವೈ. ೬೫).

[ಕಹಿ$_2$ (< ಕಯ್ಪು) + ದಸಲೆ$_0$]

**ಕಹಿದೊಂಡೆ** (ನಾ). ಕಹಿಯಾದ ತೊಂಡೆ: "ಕಹಿದೊಂಡೆ ನಾಳಿಯಕ್ಕು" (ಮಂಗರಾ. ೩೩-೮); ಕಡಸಿಗೆ ಕಾಗೆದೊಂಡೆ ಕಹಿದೊಂಡೆ ಕವುಂಗಿನಿ (ಸೂಕ್ತಿಸು. ೩-೨೬); ಅಡಿನ ಬೆಣ್ಣೆಯ ಕಾಡ ಕಗ್ಗೊಜಲೆ ಕಹಿದೊಂಡೆ ನಾತಗಳು ತೀಡಿದರೆ ಬಿಡವು (ಸರ್ವಜ್ಞ. ೧೯೪೫); "ಬಿಂಬೀ=ಕಹಿದೊಂಡೆ" (ವಿವೈವಿ. ೫೯). 'ಸಿಹಿತೊಂಡೆ' ಪರಾ.

[ಕಹಿ$_2$ (< ಕಯ್ಪು) + ತೊಂಡೆ$_3$]

**ಕಹಿನನ್ನಿ** (ನಾ). ಅಪ್ರಿಯವಾದ ಸತ್ಯ; ಕಟುಸತ್ಯ: ತಿಳಿಯಲಾ ಕಹಿನನ್ನಿ, ರಾಮಪಟ್ಟಾಭಿಷೇಕದ ನನ್ನಿ, ಹೃದಯವೊಡೆದಂತೆ ತತ್ತರಿಸಿ ಮಂಥರೆ (ಶ್ರೀರಾಮಾ. ೬೦-೧೬೩). [ಕಹಿ$_2$ (< ಕಯ್ಪು) + ನನ್ನಿ]

**ಕಹಿನಾಲಗೆ** (ನಾ). ಕಹಿಯಾದುದನ್ನು ಹೇಳುವ ನಾಲಗೆ; ಅಪ್ರಿಯವನ್ನು ನುಡಿಯುವ ನಾಲಗೆ: ಬ್ರಹ್ಮಶಿವನು ಜೈನನಾದರೂ ಕಹಿ ನಾಲಗೆಯವನು (ಸಾಹಿಸಂ. ೫೨) [ಕಹಿ$_2$ (< ಕಯ್ಪು) + ನಾಲಗೆ]

**ಕಹಿಪಡವಲ** (ನಾ). ಪಡವಲದಲ್ಲಿ ಒಂದು ಜಾತಿ: ಕಹಿಪಡವಲ, ಬಜೆ . . . ಇವುಗಳನ್ನು ಸಮದಿಂ ಕಷಾಯ ಕಾಯಿಸಿಕೊಡಲು ವಾತ ಜ್ವರಂ ಮಾಣ್ಗುಂ (ಸಕವೈ. ೬೫).

[ಕಹಿ$_2$ (< ಕಯ್ಪು) + ಪಡವಲ (< ಪಡಲ$_1$)]

**ಕಹಿಬ್ರಾಹ್ಮಿ** (ನಾ). ಒಂದು ಬಗೆಯ ಹಂಬು: ಕಹಿಬ್ರಾಹ್ಮಿಯ ಸೊಪ್ಪಿನ ರಸವನ್ನು ದೊಡ್ಡಮುರಗೆಯಲ್ಲಿ ತುಂಬಿ ಎರಡು ಘಳಿಗೆ ಕುಂದಿಸಿ ಕೊಳ್ಳೆ ಯೋನಿದೋಷ ಪೋಕು (ವಿವೈವಿ. ೮೬).

[ಕಹಿ$_2$ (< ಕಯ್ಪು) + ಬ್ರಾಹ್ಮಿ]

**ಕಹಿಮಣಿಕೆ** (ನಾ). = ಕಹಿಮೆಕ್ಕೆ.

[ಕಹಿ$_2$ (< ಕಯ್ಪು) + ಮಣಿಕೆ (< ಮಿಣಿಕೆ)]

**ಕಹಿಮೆಕ್ಕೆ** (ನಾ). ಕಹಿಯಾದ ಮೆಕ್ಕೆ: ಸಿಹಿಮೆಕ್ಕೆ ಕಹಿಮೆಕ್ಕೆ ಬಿತ್ತಿದಾಗಳೆ ಫಲವಹುವೆ (ಭರಚ. ೬೮-೫೬); "ತ್ರಪುಸ = ಕಹಿಮೆಕ್ಕೆ" (ವಿವೈವಿ. ೫೯). [ಕಹಿ$_2$ (< ಕಯ್ಪು) + ಮೆಕ್ಕೆ]

**ಕಹಿಸೋರೆ** 'ಕಯ್ಪುಸೊರೆ' ನೋ.

**ಕಹಿಹಾಗಲು** (ನಾ). ಹೆಚ್ಚು ಕಹಿಯಾದ ಹಾಗಲು: "ಕುಲಕಃ, ಪಟೋಲಃ, ತಿಕ್ತಕಃ, ಪಟುಃ ಈ ೪ ಕಹಿಹಾಗಲು" (ನಾಚಿರಾ. ೧೧೨).

[ಕಹಿ$_2$ (< ಕಯ್ಪು) + ಹಾಗಲು (< ಹಾಗಲ್)]

**ಕಹಿಹಾಲೆ** (ನಾ). ಹಾಲೆ ಮರದಲ್ಲಿ ಒಂದು ಜಾತಿ: ಕಹಿಹಾಲೆಬೇರು, ಶ್ರೀಗಂಧ . . . ಕಷಾಯ ಕಾಯಿಸಿ ಕೊಡಲು ದಾಹಜ್ವರ ಮಾಣುವುದು (ಸಕವೈ. ೮೨). [ಕಹಿ$_2$ (< ಕಯ್ಪು) + ಹಾಲೆ$_2$ (< ಪಾಲೆ$_2$]

**ಕಹಿಹೀರೆ** (ನಾ). ಹೀರೆಯಲ್ಲಿ ಒಂದು ಜಾತಿ: "ಖುಟಕಾ–ಕಹಿಹೀರೆ" (ಓಷಧಿ. ೪೪); ಕಹಿಹೀರೆಯ ಬೀಜ ಇಂಗು . . . ಹಿಪ್ಪಲಿ, ಇವಿಷ್ಟನು ಆಡಿನ ಮೂತ್ರದಲ್ಲಿ ಅರೆದು ವಮನ ನಸ್ಯಂಗಳ ಮಾಡಿಸಲು ಸರ್ಪವಿಷ ಶಮನವಹುದು (ವೈದ್ಯಸಾ. II. ೮೮). [ಕಹಿ$_2$ (< ಕಯ್ಪು) + ಹೀರೆ]

**ಕಹಿಹುಲ್ಲು** (ನಾ). ಒಂದು ಬಗೆಯ ಹುಲ್ಲು: "ಕಹಿಹುಲ್ಲು ರುಚಿಯುಕ್ತ" (ಮಂಗರಾ. ೩೩–೮). [ಕಹಿ$_2$ (< ಕಯ್ಪು) + ಹುಲ್ಲು (< ಪುಲ್)]

**ಕಹ್ಲಾರ** (ನಾ). ಎಳೆಗೆಂಪಿನ ಬಿಳಿಯ ನೈದಿಲೆ [ಸಂ.]

**ಕಹ್ವ** (ನಾ). ಕೊಕ್ಕರೆ; ಬಕಬಕ್ಷಿ [ಸಂ.]

**ಕಳ್$_1$, ಕಳು$_1$** (ಕ್ರಿ). ಕದ್ದು, ಕಳ್ದು (ಭೂತನ್ಯೂ). ಎತ್ತಿಹಾಕು; ಅಪಹರಿಸು: "ಕಳ್ – ಸ್ತೇಯೇ (ಕಳ್ಳತನ ಮಾಡು), ಮದ್ಯೇ ಚ" (ಶಮಧಾ); ಕಳ್ದೋನ್ ಮಹಾಪಾತಕನ್ (ಮೈಆರ್. ೧೯೩೬, ೧೬–೧೩; 450); ಕಳ್ಳ [ಪಾಠಾಂ. ಳ]ದಿರಿಂ ಪೆಱರ ವಸ್ತುವಂ (ವಡ್ಡಾರಾ. ೧೭೭–೧೨); ಕಳಿಪಂ ಕಳ್ವನಗುವರ್ ಪರ್ವ ಕೊಲಿಪಂ ಕೊಲ್ವಂ (ಆದಿಪು. ೫–೮೧); ಕೊಲ್ವ ಪಾಪಂ ಕಳ್ವ ಪೆಂಡಿರಂ . . . ಗೆಂಟುಮಾಡುವಂತೆ (ಧರ್ಮಾಮೃ. ೫–೧೨೫); ಕದ್ದನಂತಕನಾಱು ಸಾವಿರ ಕುದುರೆಯುಸುರುಗಳ (ಕುವ್ಯಾಕ. ೧೧–೩೮). **ಕಳು$_1$**: ನಾರಿ ತನ್ನ ಮನೆಯಲ್ಲಿ ಕಳುವೊಡೆ ತಾಯಮೊಲೆ ವಾಲು ನಂಜಾಗಿ ಕೊಲುವಡೆ ಇನ್ನಾರಿಗೆ ದೂಱುವೆ (ಬಸವ. ೨೬); ಪರೋಕ್ತಿಗಳರ್ಥಮಂ ಕಳುವುದಧಮತನವು (ಹಚಕಾ. ೧–೨೮); ಬೇಡವೆಂದರು ಬೇಡ ಕಳುವುದ ಬಿಡುವನೆ (ಭರಚ. ೩–೧೫); ತ್ಯಾಗಿಗಳು ಕಳುವರೆ ಪ್ರಜೆಯು ತಾನೆತ್ತ ಬಾಳುವುದು (ಸರ್ವಜ್ಞ. ೧೨೬೧). 'ಕದಿ' ಪರಾ.

**ಕಳ್ವಾಳ್** = ಕದಿಯುವ ಆಳು: ನಿರ್ದಯಮೆಂಬ ಬಿಲ್ವಡೆವೆರಸು ದುರಾಚಾರಮೆಂಬ ಕಳ್ವಾಳ್ವೆರಸು ರೌದ್ರಧ್ಯಾನಮೆಂಬ ಗುಪ್ತನಡೆವೆರಸು (ಧರ್ಮಾಮೃ. ೧೦–೮೭ ಅಡಿಟ).

[ದೇ. ‖ ತಮಿ. ಕಳ್; ಮಲ. ಕಳ್ಕ್ಕ, ಕಕ್ಕ; ತುಳು. ಕಂಡ್; ಕೊಡ. ಕಳ್; ಗೊಂಡಿ. ಕಲ್ಲಾನಾ; ಮಲ್ತೊ. ಗಲೆ]

**ಕಳ್$_2$, ಕಳ$_1$** (ನಾ). ಕಳವು; ಮೋಸ; ಸುಳ್ಳು. 'ಕಳ್ಪೊಡವೆ' ಪರಾ. **ಕಳ$_1$**: ಕೊಲೆಯುಂ ಪುಸಿಯುಂ ಕಳವುಂ (ವರ್ಧಪು. ೧೧–೪೫). [< ಕಳ್$_1$ ./ ತುಳು. ಕಳು]

**ಕಳ್$_3$, ಕಳ್ಳು** (ನಾ). ೧. ಹಾಲು; ರಸ. 'ಕಳ್ಳಿ$_2$' ಪರಾ. ೨. ಹೆಂಡ; ಸುರೆ; ಮದ್ಯ: "ಮೈರೇಯಮಾಸವಂ . . . ಮದಿರೆ ಸುರೆ (ಯಿರೆ) ಕಳ್ಳುಂ" (ವಸ್ತುಕೋ. ೯೨–೫); "ಕಳ್ – ಸ್ತೇಯೇ (ಕಳ್ಳತನಮಾಡು) ಮದ್ಯೇ ಚ" (ಶಮಧಾ); ಪಚ್ಚು ಪರಿಕಲಿಸಿ ಬೆನ್ನಂ ಮುಚ್ಚಿರೆ ಮುಡಿ ಕಳ್ಳ ಬೆಳ್ಳಿವಟ್ಟಲ್ ಬಾಯೊಳ್ ಬೆಚ್ಚಂತಿರೆ (ಕಾವ್ಯಸಾ. ೯೬೬ ಶೂದ್ರಕ); ಕುಡಿ ಕಳ್ಳನೆಂದು ಕರಗಿಸಿ ಕುಡಿಯಿಸುವರ್ ಲೋಹರಸಮಂ (ಆದಿಪು. ೫–೮೬); ಮೊದಲೊಳ್ ಸೊಕ್ಕಿದವಂಗೆ ಕಳ್ ವಿಷದಿನಕ್ಕಿರ್ದಂಗೆ ದುರ್ನಿದ್ರೆ (ಕಾದಂಪೂ. ೮೦೩); ಕಳ್ಳಂ ಮಾಣೆನೆ ನಿಮ್ಮಡಿ ಕಳ್ಳಿಲ್ಲದೊಡಿಂದೆ ಸಾವೆನೆನೆ (ಧರ್ಮಾಮೃ. ೧೦–೨೬೦); ಕಳ್ಳ ಮಡಕೆಯ ಪೂಜಿಸುವಂತೆ ಚಿಲು ಪಾಲುಳ್ಳ ಮಡಕೆಯ ಪೂಜಿಪರೆ (ಕುರಾಸಾಂ. ೧–೫೨). **ಕಳ್ಳು**: ೨. "ಮಧು, ಆಸವಃ . . . ವಾರುಣೀ, ಮಧು –ಈ ೨೮ ಕಳ್ಳು" (ಹಲಾಯು. ೫೫–೧೭೫); ಕಳ್ಳಿನಿಂದೆ ದೀಪಾಯನನಿಂದ ನಿತುಂ ಪುರಮುಂ ಬೇಗುಂ (ನೇಮಿಪು. ೧೪–೩೭); ಅಸುವಳಿವ ಭಂಗಿ ಮಾಂಸ ಪ್ರಸರದ ಕಳ್ಳುಗಳ ವಿಷಮನಱಿಗುಮವಶ್ಯಂ (ಖಮುದ. ೨–೧೬೮); ಕಪಿ ಕಳ್ಳ ಕುಡಿದು ಕಡಲ ದಾಂಟುವೆನೆಂದು . . . ಮೀನು ಮೊಸಳೆಗೆ ಆಹಾರವಾದಂತಾಯಿತಯ್ಯ ಎನ್ನ ಬಾಳು (ಘನವ. ೬–೪); ಕಳ್ಳನುಣ್ಣದಿರಣ್ಣ ಮಾಂಸವ ಕೊಳ್ಳದಿರು (ಸಾಳ್ವಭಾ. ೫–೪೭).

[ದೇ. ‖ ತಮಿ. ಕಳ್; ಮಲ. ಕಳ್, ಕಳ್ಳು; ತುಳು. ಕಲಿ; ಕೊಡ. ಕಳ್ಳೀ; ತೆಲು. ಕಲ್ಲು; ಕೋಲಾ. ಕಲ್; ನಾಯ್ಕಿ. ಕಳ್: ಗೊಂಡಿ. ಕಲ್; ಕುಇ. ಕಲು. / ಪ್ರಾ. ಕಲ್ಲಾ; ಸಂ. ಕಲ್ಯ]

**ಕಳ್$_4$ ಕಳು$_2$** (ನಾ). ನೂಲಿನ ಹಿಂಜಿ: (ಕ). **ಕಳು$_2$**: "ಸ್ತೇಯದೊಳು ಸುರೆಯೊಳ್ ನೂಲಪಿಂಜಿನೊಳ್ ಕಳು ಶಬ್ದ" (ಶಬ್ದಮಂ. ೧೧೩). [?]

**ಕಳ$_1$** 'ಕಳ್$_2$' ನೋ.

**ಕಳ$_2$** 'ಕಳ್ಳ$_2$' ನೋ.

**ಕಳ$_3$, ಕಣ$_1$, ಕಣವು** (ನಾ). ೧. ಧಾನ್ಯಗಳನ್ನು ಒಕ್ಕುವುದಕ್ಕಾಗಿ ಸಿದ್ಧಪಡಿಸಿದ ಸ್ಥಳ: "ಖಳದಾನಂ, ಖಳಃ – ಈ ೨ ಕಳಂ" (ಹಲಾಯು. ೯೫–೪೨೪); ಏಱುತೊರೆ ಕಳವೃತ್ತಿ ಕಱಿವೊನ್ ಪಞ್ಚಮಹಾಪಾತಕನಕ್ಕುಂ (ಎಕ. XVI, ತುಮಕೂ. ೧೦೨–೩; 775); ಬಿತ್ತುವಟ್ಟವ ಕಳದೊಳೆ ಕುಡುವರ್ (ಎಕ. IX, ಚನ್ನಪ. ೪೮–೧೪; 907 ?); ಪುಲಿಸಂ ಪೊತ್ತಾತನೆ ಕಳದಲಿ ಪಡುವುದು ಭತ್ತಮಳತೆಯಪ್ಪಿನಂ (ಸಮಪ. ೧೨–೭೦); ಕಳದೆಡೆಯಲ್ಲಿ ಮೇಟಿಯಿಪ್ಪಂತೆ ನಿಡಿದಾದ ವೃಷಭಾದ್ರಿಯಿಹುದು (ಭರಚ. ೩೬–೬೭). ೨. ಕಾಳಗದ ಸ್ಥಳ; ರಣರಂಗ: ಕಟ್ಟಿದುದೆ ಸುರಗಿ ಮೆಟ್ಟಿದುದೆ ಕಳಂ (ಆದಿಪು. ೩–೭೨); ಕಳಕೆ ಬಯಲುಗೆಕ್ಕತುಳಕ್ಕೆಳಿಯೊಳ್ಪಱಾಂಪರಿಲ್ಲದೆ (ಎಕ. VI, ಮೂಡಗೆ. ೨೨–೧೫; 1129); ಅಂಕ ಕಳನೇಱಿ ಕೈಮಱೆದಿರ್ದೊಡೆ ಮಾಱಂಕ ಬಂದಿಱಿವುದ ಮಾಣ್ಬನೆ (ಬಸವ. ೧೭೮); ದ್ರೋಣ ಹೊಕ್ಕನು ಕಾಳಗದ ಕಳನ (ಕುವ್ಯಾದ್ರೋ. ೨–೨೦). ೩. ಆಟದ ಮೈದಾನ; ಕ್ರೀಡಾಂಗಣ: ಕಳದ ಬಾಡಿಗೆ ಕೊಡಬೇಕು (ಕೋಟಚ. ೬); ಆಟದ ಕಳಕ್ಕೆ ತಂದ ಹುಲಿಯಂತಾದ ರಾಮಕೃಷ್ಣ (ತ್ಯಾಗಮ. ೩೦). ೪. ಸಸಿ ನೆಡುವ ಮಡಿ: ಗದ್ದೆಗೆ ತೋಡಿನ ನೀರು ಕುಡಿಸಿ ಅಗೆಸಿ ಕಳ ಮಾಡಿಸಿದರು: ಆ ಕಳದಲ್ಲಿ ಈ ತೆಂಗಿನ ಬೀಜಗಳನ್ನೂ ಅರ್ಧಮರ್ಧ ಹುಗಿಸಿದರು (ಬಾಳಿಗಿ. ೧೦೫). **ಕಣ$_1$**: ೧. ನಾನಾವಿಧಧಾನ್ಯಂಗಳಂ ಪದನಱಿದುಡುಗುವ ಕಣಂಮಾಡುವೊಕ್ಕುವಡುಕುವ (ಆದಿಪು. ೬–೭೭ ವ); ಬೆಳೆದ ಕೆಯ್ಯಂ ಕಂಡು ಕಣನಂ ಮಾಡುವಂತೆ (ಧರ್ಮಾಮೃ. ೧೪–೧೬೦); ಕಂತೆಯಂ ಕಟ್ಟಿ ಬಣಬೆಯನ್ನೊಟ್ಟಿ ಕಣನ ಮಾಡಿ ಮೇಟಿಯನ್ನೆಟ್ಟಿ (ವಚಶಾ. II, ೭೬); ಇಂತೀ ಚತುಸ್ಸೀಮೆಯ ಒಳಗೆ ಉಳ್ಳಂಥಾ . . . ಮನೆ ಬಾವಿ ಕೆಱೆ ಕಣ ಮಕ್ಕಿ (ಸೌಇಇ. IX–i, ೪೧೭–೧೦; 1377); ಎರಡು ಕಣಾ ಕಾಯ್ದು ದಾಸಯ್ಯ ಕೆಟ್ಟೆ (ಹುಟ್ಟಹ. ೬೪). ೨. ಕಾಲಭೈರವನ ಕಣನೋ ಮೇಣುಮಾಪ [ಪಾಠಾಂ. ಕದನದ ಕಳನೊ ಭೂಸ]ತಿಯ ಭ್ರಾಳಾಕ್ಷವೊ (ಹಚಕಾ. ೧–೩೬); ಕಣ[ಪಾಠಾಂ. ಳ]ನಲ್ಲಿ ಬಿನ್ನಣದ ಬೀರರಿಳಾಪತಿ ಮೆಚ್ಚೆ ಕಾದುವರ್ (ಪುಷ್ಪಪು. ೨–೬೦); ರಿಪುಗಳ ಕಡಿದು ಹರಹುತ ಬೀದಿವರಿದನು ಕಣನ ಮಧ್ಯದಲಿ (ಕುವ್ಯಾದ್ರೋ. ೬–೩೬); ಕೆಲವು ವಿವಾದಗ್ರಸ್ತ ಪ್ರದೇಶಗಳಿಂದಾಗಿ, ಎರಡು ರಾಷ್ಟ್ರಗಳೂ ಕಣಕ್ಕಿಳಿಯಬೇಕಾಯಿತು (ದಾನಚಿಂ. ೧೩೭). **ಕಣವು**: ೨. ಆ ಸಮರ್ಥರು ಕಣವಿನೋಳ್ ವೈರಿಬಲಮಂ ವಿಲಾಸದೋಳ್ ಸವರಿ (ತುರಂಗ. ೭೫–೯).

[ದೇ. ‖ ತಮಿ. ಮಲ. ಕಳ; ತುಳು. ಕಳ, ಕಲ; ಕೊಡ. ಕಳ; ತೆಲು. ಕಳ್ಳ; ಕೋಲಾ. ಕಲವೆ; ನಾಯ್ಕಿ. ಕಳವೆ; ಪರ್ಜಿ. ಕಲಿ; ಕುರುಖ್. ಖಲೀ. / ಸಂ. ಖಲ]

**ಕಳ$_4$** (ನಾ). ಕೆಡುಕ; ದುಷ್ಟ; ನೀಚ: ಸೀತೆಯ ಕದ್ದ ಕಳ್ಳನ ಕ[ಪಾಠಾಂ. ಖ]ಳನ ಸೆಜ್ಜೆಯ ಸದನಕ್ಕೆ ತಂದ (ತೊರರಾ. ೫–೨–೩೬); ಕಳರಮೊಗಮಂ ಕಾಣದೆ ಜಗಮನಿತುಮಿರ್ಕೆ (ಚಕವಿ. ೧–೯೭). [< ಸಂ. ಖಲ]

**ಕಳ$_5$** (ನಾ). ಕಳಶ (?): ರನ್ನದ ಹಲವು ಕಳಗಳು ಅಳ್ವೇರಿ ಬಿನ್ನಣ ಹಲವು ಜಂತ್ರಗಳೂ (ದ್ವಾದಶಾ. ೪೧–೯೫೬). [?]

**ಕಳ$_6$** (ನಾ). ಮೂಗ; ಮೂಕ. 'ಕಳಮೂಕ' ಪರಾ.
[< ಸಂ. ಕಡ]

**ಕಳ$_7$** 'ಕಲ$_4$' ನೋ.

**ಕಳಂಕ** 'ಕಲಂಕ' ನೋ.

**ಕಳಂಕಿತ** 'ಕಲಂಕಿತ' ನೋ.

**ಕಳಂಕಿನಿ** 'ಕಲಂಕಿನಿ' ನೋ.

**ಕಳಂಕು** 'ಕಲಂಕು$_2$' ನೋ.

**ಕಳಂಜಿ$_1$** (ನಾ). ಧಾನ್ಯವನ್ನು ಸಂಗ್ರಹಿಸುವ ಸ್ಥಳ; ಬಿದಿರಿನ ಗೂಡೆ: "ಕಳಂಜಿಯೆನೆ ಗಳಗೆ" (ಮಂಗರಾ. ೬೨–೨೧). 'ಕಣಂಜ' ಪರಾ.
[< ಕಣಂಜ]

**ಕಳಂಜಿ$_2$** (ನಾ). ಒಂದು ಬಗೆಯ ಸಸ್ಯ: ಸಣಬು (Sunhemp), ಕಳಂಜಿ, ಡೆಂಚಾ ಮೊದಲಾದ ಗಿಡಗಳನ್ನು ಬೆಳೆಯಿಸಿ ಅವುಗಳನ್ನು ನೆಲದೊಳಕ್ಕೆ ಉತ್ತುಬಿಟ್ಟರೂ ಆಯಿತು (ಬಾಲಪ್ರ. I, ೨೯೧). [?]

**ಕಳಂಜು** (ನಾ). ಹವಳ, ಮುತ್ತು ಹಾಗೂ ಸುಗಂಧದ್ರವ್ಯಗಳನ್ನು ತೂಗುವಾಗ ಬಳಸುವ ಒಂದು ಚಿಕ್ಕ ತೂಕದ ಪ್ರಮಾಣ: ಕಸ್ತೂರಿ ಕಳಂಜು ೫೧ = ಕುಂಕುಮ ಕಳಂಜು ೩೦ (ಸೌಇಇ. IX–ii, ೫೪೭–೩; 1532). 'ಕಣಂಜು' ಪರಾ.
[ದೇ. ‖ ತಮಿ. ಮಲ. ಕಳಞ್ಜು. / ಸಂ. ಕಲಂಜ]

**ಕಳಂತಿ** (ನಾ). ಕವಡೆ ಜೂಜಿನಲ್ಲಿ ಒಂದು ವರಸೆ (?): ಸಂದಿ ಕಳಂತಿ ಗಜಾಗರವೆಂದಚ್ಚಂ ಕೊಂಡು ಕವಡೆಯಂ ತೂಗಿಯಿನಿತ್ತೆಂದುಱಿ ಕೈಚಳಕಂ ಮಿಗೆ ಚೆಂದಮೆನಲ್ ಲಗ್ಗೆದೋಱಲಾಡುತ್ತಿರ್ದರ್ (ದಶಕು. ೮–೮೮). [?]

**ಕಳಂತೂರು** (ನಾ). ಒಂದು ಊರಿನ ಹೆಸರು: ಕಟವಪ್ರಶೈಲಮಡಱಿದ್ದೀನಮ್ಮಾ ಕಳನ್ತೂರನಂ ಬಾಲೇ ಪೆಗ್ಗೊರವಂ ಸಮಾಧಿ ನೆಱೆದೊನ್ (ಎಕ. II, ೨೨–೩; ಸು. 700).
[? + ಊರು$_3$ (< ಊರ್)]

**ಕಳಂಬ** 'ಕಲಂಬ' ನೋ.

**ಕಳಂಬರ್** (ಕ್ರಿ). ಯುದ್ಧರಂಗಕ್ಕೆ ಬರು; ಕಾಳಗಕ್ಕೆ ಬರು: ಮಂಣ್ಡಳಿಕಂ ಕುಂದಮಂಗೆ ಕುಪ್ಪಗಡ್ಡೆಯ ಬಯಲಂ ಕಳಂಬಂದು (ಎಕ. VIII, ಸೊರಬ. ೧೮೪–೭; 1033 ?). [ಕಳ$_3$ + ಬರ್$_1$]

**ಕಳಂಬಾಸನ** 'ಕಲಂಬಾಸನ' ನೋ.

**ಕಳಂಬುಗು** (ಕ್ರಿ). ರಣರಂಗವನ್ನು ಹೊಗು; ಕಾಳಗಕ್ಕೆ ತೊಡಗು: ತನ್ನನಲೆವಂಕಕಾಱನೊಳ್ ಪೊಣರ್ದು ಕಳಂಬುಗುವಂತೆ (ಜೀವಸಂ. ೫೦–೨೦ ವ). [ಕಳ$_3$ + ಪುಗು (< ಪೊಗು)]

**ಕಳಂಬೆತ್ತಿಗಟ್ಟು** (ನಾ). ಒಂದು ಕಟ್ಟೆಯ ಹೆಸರು (?): ಉತ್ತರ ಪೂರ್ವ್ವಸ್ಯಾನ್ದಿಶಿ ಕಳಮ್ಬೆತ್ತಿಗಟ್ಟು (ಎಕ. IV, ನಾಗಮಂ. ೮೫–೬೫; 776).
[?]

**ಕಳಂಬೇಱ್, ಕಳವೇಱ್** (ಕ್ರಿ). ಯುದ್ಧಭೂಮಿಯನ್ನು ಗೊತ್ತುಪಡಿಸು: ಕಾಳಗದ ಸ್ಥಳವನ್ನು ಹೇಳು: ದ್ವಂದ್ವಯುದ್ಧಮಂ ಪೊಣರ್ಚೆ ಕುರುಕ್ಷೇತ್ರಮಂ ಕಳಂಬೇಱ್ದು ಕಾದಿ ಸತ್ತೊಡೆ (ಪಂಪಭಾ. ೭–೧೩ವ). **ಕಳವೇಱ್**: ಕುರುಕ್ಷೇತ್ರಮಂ ಕಳವೇಱ್ದಟ್ಟಿದಂ (ಪಂಪಭಾ. ೯–೯೦). ಕಳವೇಱ್ದು ಕುರುಭೂಮಿಯಂ ಕಳಕವರ್ ವಂದಿರ್ದರ್ (ಪಂಪಭಾ. ೧೦–೫). [ಕಳ$_3$ + ಪೇಱ್]

**ಕಳಕಂಠ** 'ಕಲಕಂಠ' ನೋ.

**ಕಳಕಂಠಿ** (ನಾ). ಇಂಪಾದ ಧ್ವನಿಯುಳ್ಳದ್ದು; ಹೆಣ್ಣು ಕೋಗಿಲೆ: ತೆಂಬೆರ ಲರಲೇವುವೆಂಬ ಕಳಕಂಠಿಯ ಬಗ್ಗಣೆಯೇವುವೆಂಬ... ಬದ್ದರನಜಱಿಯಟ್ಟ (ಅಜಿಪು. ೬–೨೬). [< ಸಂ. ಕಲಕಂಠೀ]

**ಕಳಕಳ$_1$** 'ಕಲಕಲ' ನೋ.

**ಕಳಕಳ$_2$** 'ಖಳಖಳ$_1$' ನೋ.

**ಕಳಕಳಕಾಱ** (ನಾ). ಕೋಲಾಹಲ ಮಾಡುವವನು: ಕಳಕಳಕಾಱರಸುಗಳ ಕಾಱಿದರು (ಕುವ್ಯಾದ್ರೋ. ೧–೫೨).
[ಕಳಕಳ$_1$ (= ಕಲಕಲ) + –ಕಾಱ)]

**ಕಳಕಳತೆ** (ನಾ). = ಕಲಕಲ. 'ಕಳಕಳತೆವೆಱು' ಪರಾ.
[< ಸಂ. ಕಲಕಲತಾ]

**ಕಳಕಳತೆವೆಱು** (ಕ್ರಿ). ಕೋಲಾಹಲದಿಂದ ತುಂಬು; ಗಜಬಜೆಯಾಗು: ವೇದಶಾಸ್ತ್ರಾಗಮಪುರಾಣವನೋದುವ ಧ್ವನಿಯಿಂದೆ... ನಿಗಡ ನಿರೋಧ ಮದಗಜತತಿಯ ಬೃಂಹಿತನಾದದಲಿ ಕಳಕಳತೆವೆತ್ತಿಹುದಾಗಳಾಪುರವು (ಪ್ರಭುಲೀ. ೩–೫). [ಕಳಕಳತೆ + ಪೆಱು$_1$]

**ಕಳಕಳಾಪ** (ನಾ). (ಅರುವತ್ನಾಲ್ಕು) ಕಲೆಗಳ ಸಮೂಹ (?): ಸಂಸಾರ ಶರೀರಭೋಗ ನಿಸ್ಸಾರತೆಯನಱಿತುಂ ಕಳಕಳಾಪದೊಳ್ ನೆರೆದು ಜವ್ವನಂ ನೆಱೆಯೆ ನೆಱೆಯೆ (ಶಾಂತಿಪು. ೪–೮೬ ವ).
[< ಸಂ. ಕಲಾಕಲಾಪ]

**ಕಳಕಳಿ** (ನಾ). ಆಸ್ಥೆ; ಆಸಕ್ತಿ: ಎರಡನೆಯವರ ಸುಖದುಃಖದ ಸಲುವಾಗಿ ನಿನಗೆ ಮೊದಲು ಇಷ್ಟೆಲ್ಲ ಕಳಕಳಿಯಿತ್ತೇ (ಉದಸ್ಯೆ. ೭೮); ಹುಡುಗಿಯ ಶಿಕ್ಷಣದ ಬಗ್ಗೆ ಎಂತಹ ಕಳಕಳಿಯ ಮಾತನ್ನು ಬರೆದಿದ್ದಾನೆ (ಮೂರುದಾ. ೨೩೮); ಈ ಶತಕಗಳಲ್ಲಿ ಮಾಯಿದೇವನ ವಿದ್ವತ್ತೆ ಮತ್ತು ಕಳಕಳಿಗಳು ಮೆಚ್ಚುವಂತಿವೆ (ಕಸಾಚ. ೩೪೨). [?./ ಮರಾ. ಕಳಕಳ]

**ಕಳಕಳಿಕೆ** (ನಾ). ೧. ಗಜಬಜಿ; ಸದ್ದು; ಕೋಲಾಹಲ: ಸಭಾಮಂಡಲಿಯ ಸೌಹೃದ ವಾಗ್ವಿವಾದದ ಕಳಕಳಿಕೆ ದಿಗುತಟವ ಗಬ್ಬರಿಸಿದುದು ಗಾಢದಲಿ (ಕುವ್ಯಾಭೀ. ೧–೪೨); ಉಲಿವ ಮಂಗಳಪಾಠಕರ ಕಳಕಳಿಕೆ ಮಿಗೆ (ನಳಚ. ೯–೨೦); ಕಾಹುರದಲಾ ಕಳಕಳಿಕೆ ಕೇಳಿಸಿತರಿಭಯಂಕರಭಟನ (ತೊರರಾ. ೪–೩–೨). ೨. ದುಃಖ; ಚಿಂತೆ; ವ್ಯಸನ; ಕಳವಳ: ಮೋಹದ ಬೆಳವಿಗೆಯ ಗವಸಣಿಸಿದನು ಕಳಕಳಿಕೆ ಹಿಂಗಿದುದು (ಕುವ್ಯಾದ್ರೋ. ೮–೩೩); ತನ್ನ ನುಡಿ ತಪ್ಪುವುದೇ ಎಂದು ಕಳಕಳಿಕೆ ಹುಟ್ಟಿತು (ಬಿದುರಿ. ೧೩). [ಕಳಕಳ (= ಕಲಕಲ) + –ಇಕೆ]

**ಕಳಕಳಿಸು$_1$** 'ಕಲಕಲಿಸು' ನೋ.

**ಕಳಕಳಿಸು$_2$** 'ಕಱಕಱಿಸು' ನೋ.

**ಕಳಕುಳ** 'ಕಱಕುಱ' ನೋ.

**ಕಳಕೆ** (ನಾ). ಕಳೆದುದು; ನಷ್ಟ: ಕಳಕೆಯೇನಲ್ಲಿ ಮಿಕ್ಕುಳಿತವೇನವಱಿಂದೆ (ಮನೋವಿ. ೩–೩೧). [< ಕಳೆ$_1$ + –ಕೆ]

**ಕಳಗ$_1$, ಕಳಿಗೆ** (ನಾ). (ಉಕ) ೧. ಎತ್ತಿನ ಬಂಡಿಯ ಚೌಕಟ್ಟಿಗೆ ಎರಡೂ ಮಗ್ಗುಲಲ್ಲಿ ಸಾಲಾಗಿ ನಿಲ್ಲಿಸಿದ ಕಡ್ಡಿ, —ಕೋಲು; ಗುಜ್ಜುಗೋಲು: ಕಳಗಗಳಂತೂ ಸಾಮಾನ್ಯವಾಗಿ ಯಾವ ಚಕ್ಕಡಿಗೂ ಇದ್ದಂತೆ ತೋರಲಿಲ್ಲ (ಬೆಳಭಾ. ೧೭೭). **ಕಳಿಗೆ**: ೧. ತತ್ರಾಣಿಯನ್ನು ಗಾಡಿಯ ಕಳಿಗೆಗೆ ಕಟ್ಟಿದನು (ಬಾಬಲ. ೩೫). ೨. (?): ರೋಗದೊಡನೆ ಗುದ್ದಾಡಿ ಮೈಯು ಸಡಿಲಾಯ್ತು ಬಿಚ್ಚಿ ಕಳಿಗೆ (ಮಸಾಹಿ. ೨೫). [?]

**ಕಳಗ$_2$** (ನಾ). [ಸಂಗೀತ] ವಾದ್ಯಗಳನ್ನು ನುಡಿಸುವುದರಲ್ಲಿ ಒಂದು ಗತ್ತು, —ಪ್ರಕಾರ: ಪಲತೆಱದ ತಾಳಗಳ ಜತಿಗಳನಳವಡಿಸಿ ತುಡುಕಳಗ ಕತ್ತರಗಳನು ಮೂದೆಱನಾದ ಲಯದಲಿ ಕುಡುಪಡರೆ ನುಡಿಸೆ (ಸಾಳ್ವಭಾ. ೮–೫೬). [?]

**ಕಳಗ$_3$** (ನಾ). ಮಾಲೆಗಾರ (?): ಮಾಡಿದ ಕಳಗದವರು ಉಂಣಿ ಗೆಲ್ಲಿಯ (ಸೌಇಇ. ೧೯೨೯, ಉಡುಪಿ. ೪೯೮-೧೩ ; 1330). [?]

**ಕಳಗ$_4$** (ನಾ). ಎಚ್ಚರದಪ್ಪುವಿಕೆ; ಬವಳಿ; ಮೂರ್ಛೆ: ಹೊರಸಿನ ಮೇಲೆ ಹತವಾದ ಕಳಗ [ಪಾಠಾಂ. ಕೊಳಗ, ಕರುಳು, ಕಾಳಗ] ಹತ್ತಿದ ಪಶುವಿನ ಉತ್ಕ್ರಾಂತಿ (ಚನ್ನವ. ೮. ೨೩೪-೫೦೯). [?]

**ಕಳಗಾಡು** (ನಾ). ಕಣದ ಬಯಲು (?): ಹಿಪ್ಪೆಯಾದ ತಂಬುಲದಂತೆ ಧಾನ್ಯಂ ಪೋದ ಕಳಗಾಡಿನಂತೆ . . . ಕಡೆಯೊಳ್ ನಿಷ್ಫಲಮಪ್ಪ ರಾಜ್ಯ ಮುಮಂ (ಧರ್ಮಾಮೃ. ೯-೨೩ ಅಡಿಟ). [ಕಳ$_3$ + ಕಾಡು$_2$]

**ಕಳಗಿ** (ನಾ). ಆಡು: ಅಡು, ಮೇಕೆ, ಕಳಗಿ (ಕಂಸುಹು. ೬೮). [?]

**ಕಳಗೂಳ್** (ನಾ). (ರಾಶಿಯಿಂದ ತೆಗೆದುಕೊಂಡ) ಒಂದು ಹಿಡಿ ಅನ್ನ (?). [ಕಳ ? + ಕೂಳ್$_1$(< ಕೂೞ್)]

**ಕಳಚಿ** (ನಾ). ಒಂದು ಬಗೆಯ ಧಾನ್ಯ: ಯಿ ಬಾಳಿಗೆ ತೆಱು ಕಳಚಿ ಗೇಣಿ ಅನಾಮು ೧೭ (ಸೌಇಇ. IX–ii, ೫೪೦-೫೪ ; 1531) ; ಅಕ್ಕಿ ಮು ೨||೦ ಕಳಚಿ ಮು ೮ (ಸೌಇಇ. IX–ii, ೬೨೦-೫೭ ; 1546). [?]

**ಕಳಚು** 'ಕೞಲ್ಚು$_1$' ನೋ.

**ಕಳತಿಸು** (ಕ್ರಿ). ಕಳವಳಪಡು: ಅೞಲಿ ಬಱಲುತ್ತ ಕಳತಿಸುತಿಹುದೀಮುನಂ ತಿಳಿಯಲಱಿಯದು ನಿಜಸ್ಥಲವನೀದುರ್ಮನಂ (ದೀಕ್ಷಾಬೋ. ೧೨೯-೯).[?]

**ಕಳತೆ** (ನಾ). ಕಳಂಕ; ಕಳೆ; ಕಳಪೆ (?). 'ಕಳತೆಗೆಯಿ', 'ಕಳತೆ ಯಾಗು' ಪರಾ. [?]

**ಕಳತೆಗೆಯಿ** (ಕ್ರಿ). ಕಳಪೆಯಾಗಿ ಕಾಣು; ತುಚ್ಛವಾಗೆಣಿಸು (?): ಆವರೇನು ಪುಣ್ಯರೊ ವಿಪ್ರಸುತೆಯೆಂದು ಕಳತೆಗೆಯಿದನು ಎನ್ನ (ಉತ್ತರಾ. ೩೦-೪೭). [ಕಳತೆ + ಗೆಯ್ (< ಕೆಯ್$_1$)]

**ಕಳತೆಯಾಗು** (ಕ್ರಿ). ಕಳಂಕವಾಗು; ಕಳಪೆಯಾಗು; ಹೀನವಾಗು (?): ನಾ ನಿನ್ನಲಿ ಜನಿಸಿದೆದೆಱಿಂದಲಿ ಭವಕೆ ಕಳತೆಯಾದೆನೆನುತ್ತ ಸುಯಿದನು ಓರಿದು ಶೋಕದಲಿ (ಉತ್ತರಾ. ೩೦-೪೭). [ಕಳತೆ+ಆಗು$_1$]

**ಕಳತೆಱಿ** (ನಾ). ಕಣದ ಮೇಲಿನ ತೆರಿಗೆ: ಹತ್ತೊಕ್ಕಲ ಕಳತೆಱಿ (ಮೈಆರಿ. ೧೯೩೭, ೨೮-೫೯ ; 1148). [ಕಳ$_3$ + ತೆಱಿ$_3$]

**ಕಳತ್ರ** 'ಕಲತ್ರ' ನೋ.

**ಕಳಧೌತ** 'ಕಲಧೌತ' ನೋ.

**ಕಳನಿ** 'ಕೞನಿ' ನೋ.

**ಕಳನೇಱು, ಕಳವೇಱು** (ನಾ). ರಣರಂಗಕ್ಕೆ ಹೋಗು; ಯುದ್ಧಕ್ಕೆ ತೊಡಗು: ಕಾಮಂ ಕಳನೇಱುವಂತೆ ಸೆಜ್ಜೆಯನೇಱಿ (ಪಂಪಭಾ. ೩-೮೧ ವ); ಕಳನೇಱಿದಂಕನಂತೆ ಸೂಲಮೇಱಿದ ಕಳ್ಳನಂತೆ (ಧರ್ಮಾಮೃ. ೧೪-೧೦೪); ಕಳನೇಱಿ ಕೈ ಮಱಿದಂತಾಯಿತ್ತೆನ್ನ ಭಕ್ತಿ (ಬಸವ. ೨೯೭); ರಣದಲಿ ನರನೊಡನೆ ಕಳನೇಱಿದಾತನ ಸತಿ ಸುವಾಸಿನಿಯೆ (ಕುವ್ಯಾಕ. ೨೦-೩೯). **ಕಳವೇಱು**: ಕಳವೇಱಿ ಕೈಮಱಿ ದಂತಹುದು (ಕಂಕವಿ. ೧೧-೬೯). [ಕಳ$_3$+ ಏಱು$_1$ (< ಏಱ್$_1$)]

**ಕಳಪಿಳಿ, ಕಳಪಿಳೆ** (ನಾ). ಅಸ್ತವ್ಯಸ್ತತೆ; ಚೆಲ್ಲಾಪಿಲ್ಲಿ: ಹೊಡೆದು ರಥಗಳ ಪಿಡಿದು ಅಂಬರಕಿಡಲು ಕಳಪಿಳಿಯಾಗಿ ಕೀಲ್ಗಳು ಸಡಿಲಿ (ಶರಲೀ. ೫೬೦-೩೧). **ಕಳಪಿಳೆ**: ಸಂಸಾರವೇ ಕಳಪಿಳೆಯಾಯಿತು (ಮುಸುಗ. ೧೦೩). [?]

**ಕಳಪಿಳೆ** 'ಕಳಪಿಳಿ' ನೋ.

**ಕಳಪು** (ನಾ). (ಕರಾ) ತಪ್ಪಿಸಿಕೊಳ್ಳುವುದು; ಚಕ್ಕರು: ಶನಿವಾರ ಸಂಜೆಯ ಶಾಲೆಗೆ ಕಳಪು ಹಾಕುವ. ರಾತ್ರಿ ಮನೆಯನ್ನು ಸೇರಬಹುದು (ಮುಗಿಯು. ೧೪); ನಾನು ಕಳಪು ಹಾಕುತ್ತೇನೆ ಎಂದು ತಿಳಿದೆಯಾ (ಔದಾಲು. ೨೩೨). [?]

**ಕಳಪೆ, ಕಳವೆ$_3$** (ನಾ). ಕಡಮೆ ತರಗತಿಯದು; ಕೀಳಾದದ್ದು; ಕೆಟ್ಟದ್ದು; ತಿರಸ್ಕೃತವಾದುದು: ಕಳಪೆಯಾಗಿಹ ನೆಲವ ನಗುವ ಕೋಪನು ಮಾಳ್ಪೆ (ನೀಗಟ್ಟು. ೧೬೪); ಅಭಿಮಾನಗಳು ಕಡಿಮೆಯಾಗಿ ಕಳಪೆ ನೃತ್ಯಗಳು ಹೆಚ್ಚಿದವು (ಕಲ್ಯಾಚ. ೩೧); ಅವರು . . . ಇತರ ವಿದ್ವಾಂಸರಿಗೆ ಕಳಪೆಯಾದವರಲ್ಲ (ಗಾನಕ. ೫೭); ತಾನು ಬೆಳೆದ ಧಾನ್ಯದಲ್ಲಿ ಕಳಪೆಯಾಗಿ ಹೋಗುವ ನುಚ್ಚನ್ನೂ . . . ಕೋಳಿಗಳಿಗೆ ಹಾಕಿ (ನ್ಯವನು. ೬೮). **ಕಳವೆ$_3$**: (?). 'ಕೞಿಪು$_2$' ಪರಾ. [?]

**ಕಳಬಂಟಿ** (ನಾ). = ಕಳ್ಳಬಂಟ (?): ಹೊಳೆವ ಕಠಾರಿ ಕೈಗತ್ತಿತೋಮರ ಬಿಲ್ಲು ಬಲುದಡಿ ಪಿಡಿ ಚಕ್ರದಲಿ ಕಳಬಂಟಿ ಕಂಠವಿಚ್ಛೇದ ವಿನೋದದ ತಳವಜರೂರ ಕಾದಿಹರು (ಮೋಹತ. ೧೮-೧೦೩). [ಕಳ್$_2$ + ಬಂಟಿ]

**ಕಳಬಳ** (ನಾ). ಕಲಕಲ$_1$. 'ಕಳಬಳಿಸು' ಪರಾ. [?]

**ಕಳಬಳಿಸು** (ಕ್ರಿ). ಗಿಲಿಗಿಲಿ ಎನ್ನು; ಸದ್ದುಮಾಡು: ಲುಳಿತಕಿಂಕಿಣಿನಾದ ಕಂಕಣಧ್ವನಿ ಕೈಯ ಬಳೆಗಳುಲುಹು ಕಳಬಳಿಸೆ ಗಳಗಳ ಗುಳಗುಳ ನಲಿವುತ ಹರಿವ ತಣ್ಬೊಳೆಯಂತೆ ಹರಿದರೇನೆಂಬೆ (ಭರಚ. ೧೩-೧೦೨). [ಕಳಬಳ + -ಇಸು$_3$]

**ಕಳಭ** 'ಕಲಭ' ನೋ.

**ಕಳಮ** 'ಕಲಮ' ನೋ.

**ಕಳಮಕ್ಷೇತ್ರ** (ನಾ). ಭತ್ತದ ಗದ್ದೆ; ಗದ್ದೆಯ ಬಯಲು: ಕಳಮಕ್ಷೇತ್ರದುಪಾಂತನಂದನದೊಳ್ (ಜಗವಿ. ೨-೬); ಕಳಮಕ್ಷೇತ್ರ ಸಮೂಹದೊಳ್ ಸುೞಿದು (ಪುಷ್ಪವು. ४-೯೫). [ಕಳಮ (= ಕಲಮ) + ಕ್ಷೇತ್ರ]

**ಕಳಮಾಕ್ಷತ, ಕಳಮಾಕ್ಷತೆ** (ನಾ). ಮಂಗಳ ಕಾರ್ಯದಲ್ಲಿ ಬಳಸುವ ಅಕ್ಕಿಯ ಕಾಳು: ಪುಣ್ಯಪುಣ್ಯಾಂಗನಾಜನದ ತಳಿವ ಸಜಳಧವಳ ಕಳಮಾಕ್ಷತಂಗಳಿಂ (ಪಂರಾಮಾ. ೫-೧೧೧ ವ); ಸುರಭಿ ಪರಿಮಳ ವಿರಳ ಕಳಮಾಕ್ಷತಂಗಳಿಂ (ಪುಷ್ಪವು. ೯-೫). **ಕಳಮಾಕ್ಷತೆ**: ಸುಧೆ ಸಿರಿಗಂಪು ಕುಂಕುಮರಸಂ ಕಳಮಾಕ್ಷತೆ ರತ್ನದರ್ಪಣಂ ವಿಧುಮಣಿ ಪೂರ್ಣಕುಂಭ ಮೆಸೆದತ್ತು ವಿವಾಹಗೃಹಾಂತರಾಳದೊಳ್ (ರಾಜಶೇ. ೮-೧೧). [ಕಳಮ (= ಕಲಮ) + ಅಕ್ಷತ]

**ಕಳಮಾಕ್ಷತೆ** 'ಕಳಮಾಕ್ಷತ' ನೋ.

**ಕಳಮೂಕ** (ನಾ). ಮೂಗ ಮತ್ತು ಕಿವುಡ: "ಕಳಮೂಕನೆಂಬುವಂ ಮೂಗನುಂ ಕಿವುಡನುಂ" (ಹಲಾಯು. ೧೦೦-೪೫೫). [ಕಳ$_6$ + ಮೂಕ]

**ಕಳಮೆ** 'ಕೞಿವೆ' ನೋ.

**ಕಳಮೊಗೆ** (ನಾ). ಹೆಂಡದ ಮಡಕೆ, —ಮೊಗೆ: ಯಿದಕೆ ಅರು ತಪ್ಪಿದವರಿಗೆ. . . ಕಳಮೊಗೆ ನಾಯಿಂದರ ಮಕ್ಕಳು (ಸೌಇಇ. IX–ii, ೬೨೨-೨೧ ; 1547); ಕಳಮೊಗೆ ಕಲ್ಲು (ಸೌಇಇ. IX–ii, ೬೫೭-೨೧ ; 1555). [< ಕಳ್$_3$ + ಮೊಗೆ$_2$]

**ಕಳರು$_1$** (ಕ್ರಿ). ಕದಡು; ಕಲಕು: ಗರುಗ, ಹುರುಳಿ, ನೀಲಿ, ಈ ಮೂರನ್ನು ಜವಳಂಗೊಳ್ಳೆ ಕಳರಿ ಎಂಟು ಹಲ ನೀರಿಂದ ನೆನೆಯಲಿಡುವುದು (ವಿವೈವಿ. ೨೧೮). [?]

**ಕಳರು$_2$** (ನಾ). ಬೋಧನೆ: ಕಳರ ಪಾಡೋದುತಿದೆ ಕೆಂಗಣ್ಣ ಕಾಡಿನೊಳ್ ತಿಳಿದವರ್ ಪುರುಳರಿಯೆ ಹುದುಕಮಂ ತೆರೆಯೆ ಗಿಳಿಯದರಪುರುಳ ನೊರೆಯುವುದಲ್ತೆ (ಕಾಲೂರ. ೧೧೭-೨೪೪). [?. / ತಮಿ. ಕೞಱು]

**ಕಳರುತಿ** (ನಾ). ಮಧುರವಾದ ಧ್ವನಿ: ಪಂಚಮಸ್ವಾರದ ಕಳರುತಿ ತಮುಗಮರೆ (ಶಾಂತಿಪು. ೭-೮೧); ಹೇಮಂತದೊಳ್ಕೋಗಿಲೆ ಕಳರುತಿಯಿಂ (ಮಲ್ಲಿಪು.೩-೮೭); ಕಳರುತಿ ಮತ್ತಕೋಕಿಲಮನೀಕ್ಷಣಮುತ್ಪಲಮಂ. . . ಮಱಿಗೊಂಡು (ಪಂರಾಮಾ. ೯-೧೨೦). [ಕಳ್$_7$ (= ಕಲ್$_4$) + ರುತಿ]

**ಕಳಲ್ಚು** (ಕ್ರಿ). ಮಿಶ್ರವಾಗು ; ಬೆರಸು (?) : ಓರಂತೆ ತಾಳ ತೆಂಗಿನ ಸೀರೆಯ ಕಳ್ಗಳ್ ಕಳಲ್ಚೆ ನಿತ್ಯಗ್ರಹಮಂ ಪಾರಯ್ಸೆ ಕುಣಿದರರೆಬರ್ ಭೋರೆನೆ ಕೆಯ್ವುಜಿಯೆ ರಂಜಿವಜಿಯೆನೆ ವನದೊಳ್ (ಪುಷ್ಪವು. ೫-೯೮).
[?. / ತೆಲು. ಕಲಚು]

**ಕಳಲ್** 'ಕಟಲ್$_1$' ನೋ.

**ಕಳಲಿಕೆ** (ನಾ). ಕವಳಿ ; ಮೂರ್ಛೆ : ತಾತನಿಗೆ ಕಳಲಿಕೆ ಬಂದಿದೆ. ಬೇಗ ಒಂದು ಬೀಸಣಿಗೆ ತಾ (ವಂಶವೃ. ೪೪೬).
[ಕಳಲ್$_1$ (< ಕಟಲ್$_1$) + -ಇಕೆ]

**ಕಳಲಿಚು** 'ಕಟಲ್ಚು' ನೋ.

**ಕಳಲಿಸು** 'ಕಟಲಿಸು' ನೋ.

**ಕಳಲು$_1$** 'ಕಟಲ್$_1$' ನೋ.

**ಕಳಲು$_2$** 'ಕಟಲ್$_3$' ನೋ.

**ಕಳಲು$_3$** 'ಕಟಾಲೆ' ನೋ.

**ಕಳಲುಕಟ್ಟು** 'ಕಟಲೆಗಟ್ಟು' ನೋ.

**ಕಳಲೆ** 'ಕಟಾಲೆ' ನೋ.

**ಕಳಲೋದನ** (ನಾ). ಮೊಸರನ್ನ : ಕೋಳನೊಳಗೊಂದಿನಿಸ ತೆಗೆದು ನೀರೊಂದು ಸೆರೆ ಮುಚ್ಚಿರೆಯ ಮೊಸರಿನೊಳಗಿಕ್ಕಿ ಕಾರಗೆಣಸುಳ್ಳಿಯಾಲಕ್ಕಿ ಯುಪ್ಪಿಕ್ಕಲದು ತಾ ಶುದ್ಧ ಕಳಲೋ [ಪಾಠಾಂ. ಕಳವೆಯಕ್ಕಿಯೋ]ದನಂ (ಸೂಪಶಾ. ೩-೨೫). [ಕಳಲು$_2$ (< ಕಟಲ್$_3$) + ಓದನ]

**ಕಳಲ್ಚು** 'ಕಟಲ್ಚು' ನೋ.

**ಕಳವ$_1$** 'ಕಿಟವ' ನೋ.

**ಕಳವಂಜಳ** 'ಕಳೆವಂಜಳ' ನೋ.

**ಕಳವಲ್**, ಕಳವಲು (ನಾ). ಒಂದು ಬಗೆಯ ಮೂಲಿಕೆ : ಪು[ಲ್ಲುಂ] ಳ್ಳುಂಬುಣಿಸೆಯ ಸುಬೀಜಮಂ ಮೇಣ್ ಮತ್ತಂತಲ್ಲದೆ ಕಳವಲ ಬಿತ್ತಂ [ಪಾಠಾಂ. ಕಶವಲಬತ್ತಂ] (ಖಮದ. ೨-೮೬) ; ಮರಗಜುಕೆಯ ಬಳ್ಳಿಯ ಪೆರ್ಗುಜುಟಿಗೆಯಂ ಬ್ರಹ್ಮದಂಡೆಯಂ ಕಳವಲ್ ಚುಂಚು ರುಚಂ ಗಿಣಿಮೂಗಿಯ (ಖಮದ. ೧೬-೫೮). **ಕಳವಲು** : "ಷಾಜಾ- ಹತ್ತಿ, ಕಳವಲು" (ಓಷಧಿ ೧೭೩). [?]

**ಕಳವಲಿ, ಕಣಬಲಿ,** ಕಳವಳ್ಳಿ$_2$ (ನಾ). ಯುದ್ಧಭೂಮಿಗೆ ಕೊಡುವ ಬಲಿ ; ರಣಬಲಿ : ಕೊಂದು ಕಳವಲಿಯಿತ್ತು [ಪಾಠಾಂ. ಕಳದಲಿ ಮತ್ತೆ] (ಕುವ್ಯಾವಿ. ೧೦-೨೫) ; ತೊತ್ತಳದುಳಿದು ಕಳವಲಿ ಮಾಡಿದನು ನರಸಿಂಹ ನಿಮಿಷದಲಿ (ಪ್ರಹ್ಲಾಚ. ೧೪-೩೭). **ಕಣಬಲಿ** : ಕಠಾರಿಯಿಂ ತಿವಿತಿವಿದು ಕಾಳ್ಪಲವನು ಕಣಬಲಿಯ ಮಾಡಿದರು (ತುರಂಗ. ೫೯-೧೯). **ಕಳವಳ್ಳಿ$_2$**. 'ಕಳವಳಿಗೆಯ್' ಪರಾ.
[ಕಳ$_3$ + ಬಲಿ$_5$]

**ಕಳವಲು** 'ಕಳವಲ್' ನೋ.

**ಕಳವಸಿಗ** 'ಕಳ್ಳಸಿಗ' ನೋ.

**ಕಳವಳ** (ನಾ). ೧. ತಳಮಳ ; ಕಸವಿಸಿ ; ಚಿಂತೆ ; ವ್ಯಾಕುಲತೆ ; ಗಾಬರಿ : "ಆಕುಳಕಮುತ್ಪಿಂಜನಂ ಕಳವಳಕೆ ಪೆಸರಕ್ಕು" (ಮಂಗರಾ. ೧೨೮-೧೧) ; ಒಡಲ ಕಳವಳಕ್ಕಾಗಿ ಅಡವಿಯ ಪೊಕ್ಕೆನು (ಮಹಾದೇ. ಕ. ೪೬-೧೯) ; ಕಾಯದ ಕಳವಳದಲ್ಲಿ ಕೂಡದೆ (ಮಡಿಮಾ. ೫೧) ; ಕಟ್ಟೇಟದ ಕಳವಳದಿಂ ಲಜ್ಜೆಯಂ ಬಿಟ್ಟು (ಮಹಾನೀ. ೪-೧೭) ; ಒಳಗೆ ಢಗೆ ನಗೆ ಹೊಜಗೆ ಕಳವಳವೊಳಗೆ ಹೊಜಗೆ ನವಾಯಿ (ಕುವ್ಯಾಶ. ೨-೧). ೨. ಗೊಂದಲ · ಭ್ರಾಂತಿ.
[ದೇ. ‖ ತಮಿ. ಕಲವರ ; ತುಳು. ಕಳವಳ ; ತೆಲು. ಕಳವಳ, ಕಲವರ]

**ಕಳವಳಂಬಡು** (ಕ್ರಿ). ಚಿಂತೆಮಾಡು ; ವ್ಯಾಕುಲವಾಗು ; ತಳಮಳಿಸು : ನೋಟದೆ ಕೂರ್ತಳೆಂಬ ಭಾವಮನರಿದಿರ್ದೊಡಂ ಕಳವಳಂಬಡುಗುಂ ಮನಮಾಲಿಪನ್ನೆಗಂ (ಶಾಕುಂತ. ೩೫-೬೨). [ಕಳವಳ + ಪಡು$_1$]

**ಕಳವಳಗೊಳ್** (ಕ್ರಿ). ವ್ಯಾಕುಲವಾಗು ; ಚಿಂತಿಸು ; ತಳಮಳಿಸು : ಚಿತ್ತ ಕಳವಳಗೊಳುತಲಿದೆ ತಾನೇನು ಕಾರಣ (ಕಾಶಿರಾ. ೩೮-೨೯) ; ಅಳಿ ದುಳಿದ ಜನಪದದ ಜನ ಕಳವಳಗೊಳುತ [ಪಾಠಾಂ. ಕಳವಳಿಸಿ]ಕಂಗೆಟ್ಟಂಗ ಭೂಪನ ಬಳಿಗೆ ಬಂದು (ತೊರರಾ. ೧-೫-೧೭). [ಕಳವಳ + ಕೊಳ್$_1$]

**ಕಳವಳಿ$_1$** (ಕ್ರಿ). = ಕಳವಳಗೊಳ್ : ತಳೆದಪಂ ತಪಮಂ ಭರತನೆಂದಳ ವಳಿದು ಕಳವಳಿದು ಮೂರ್ಛೆಯ ತಳೆದು (ಕುಮುರಾ. ೫-೩೧) ; ಕಾರ್ಗಾಲದ ಕಾದಂಬಿನೀನಿನದಮಂ ಕೇಳ್ದ ಕಳಹಂಸೆಯಂತೆ ಕಳವಳಿದು ಮಲ್ಮಲ ಮಱುಗುತ್ತುಮಿರಲ್ (ಬಾಧವು. ೫-೬೧ ವ). [?]

**ಕಳವಳಿ$_2$** 'ಕಳವಲಿ' ನೋ.

**ಕಳವಳಿಕೆ** (ನಾ).=ಕಳವಳ ೧: ನಿಜ ಸುತನಳಿದ ವಾರ್ತಾವಚನದುಪಟಳಕೆ . . . ಕಳವಳಿಕೆ ಮೊಳೆತುದು ಕಟಕದಲಿ ದುಮ್ಮಾನಮಯವಾಯ್ತು (ಕುವ್ಯಾದ್ರೋ. ೭-೪) ; ಕರಣೇಂದ್ರಿಯದ ಬುದ್ಧಿಯ ಕಡುಹು ಕೈಗುಂದಿ ದುದು ಕಾಲೂಱಿದುದು ಕಳವಳಿಕೆ (ತೊರರಾ. ೫-೨-೭೭).
[ಕಳವಳ + -ಇಕೆ]

**ಕಳವಳಿಗ$_1$** (ನಾ). ಕಾತರಪಡುವವನು ; ತಳಮಳಿಸುವವನು ; ವಿಷಯಲಂಪಟ : ಇಂತಪ್ಪ ದುರಾಚಾರರುಂ . . . ಕೋಪಿಗಳುಂ ಕಾಮಿಗಳುಂ ಕಳವಳಿಗರುಂ ಕಷ್ಟರುಂ ದುಷ್ಟರುಂ (ಧರ್ಮಾಪ. ೩-೪೯ ವ) ; ಖಳನ ಮನದಿಂಗಿತವನಾಗಳೆ ತಿಳಿದು ಕಾಮಿನಿ ಬೆದಱಿದಳು ಕಳವಳಿಗ ಸೋತನು ಕೆಟ್ಟೆನೆಂದಳು ತನ್ನ ಮನದೊಳಗೆ (ಕುವ್ಯಾವಿ. ೨-೧೭) ; ಕಾಮಾತುರದ ಕಳವಳಿಗನಾ ಮಾರೀಚಗೆಂದನು (ತೊರರಾ. ೩-೮-೧೨).
[ಕಳವಳ + -ಇಗ]

**ಕಳವಳಿಗ$_2$** (ನಾ). ಕಳ್ಳತನದಿಂದ ಜೀವಿಸುವವನು ; ಕಳ್ಳ (ಕ).
[ಕಳವು + -ವಳಿಗ]

**ಕಳವಳಿಗೆಯ್** (ಕ್ರಿ). ಬಲಿಹಾಕು ; "ಸೀಳು (?)" (ಹಚಕಾ. ಕೋಶ) : ನಾಳಲ ಹೊಜಿಗಳಂ ಕೊಚ್ಚಿದಂತೆಲ್ಲರೂಡಲ ಕಳವಳಿಗೆಯ್ದು ಬೀದಿವರಿ ದೊಕ್ಕಲಿಕ್ಕಿತ್ತು ರಕ್ಕಸಮಿಗಂ (ಹಚಕಾ. ೬-೭)
[ಕಳವಳ್ಳಿ$_2$ (< ಕಳವಲಿ) + ಗೆಯ್ (< ಕೆಯ್$_1$)]

**ಕಳವಳಿಸು** (ಕ್ರಿ). ೧. ತಳಮಳಿಸು ; ಆತಂಕಗೊಳ್ಳು ; ಚಡಪಡಿಸು ; ದಿಗ್ಭ್ರಾಂತವಾಗು : "ಕಳವಳಿಸು - ಮನೋವೈಕಲ್ಯೇ" (ಶಮಧಾ.) ; ನಿಜಭೀತಿ ಮನಂಗೊಳೆ ಕಳವಳಿಸಿ (ಕವಿರಾ. ೨-೧೪೯) ; ಅಗಲ್ಕೆಗೆ ಕಾಯ್ಬುಳೊನಲ್ದು ಚಿಂತಿಪಳ್ ಕಳವಳಿವಳ್ (ಕಾವ್ಯಸಾ. ೯೯೩ ಸೂಪ್ರಕ) ; ಕೋಡಗದಂತುಮ್ಮಳಿಸಿ ಕಳವಳಿಸಿ ನೋಱಿಂ ತಲೆಯಂ ತಿರಿಪುತ್ತುಂ (ಧರ್ಮಾಮೃ. ೧-೧೪೧) ; ಅಪಜಯವಧೂವಿಭ್ರಮ ಕಟಾಕ್ಷದ ಛಾಯದಲಿ ಕಳವಳಿಸದವರಾರು (ಕುವ್ಯಾಕ. ೫-೧೫) ; ಅರಸನ ಮನಸ್ಸು ಕಳವಳಿಸಿತು (ವೀರಬಂ. ೧). ೨. ಸಂಭ್ರಮಗೊಳ್ಳು ; ಆತುರಪಡು ; ಸಡಗರಿಸು : ಪರಿದು ಪತ್ತಲವ್ವಳಿಸಿ ಕಳವಳಿಸಿ ಕೊಂಕಿ (ಕಾದಂಪೂ. ೭೪೫) ; ತಳಿವ ನಿನ್ನಂಬಿನ ಮಳೆಗೆ ಮನ ನಲಿವ ಚಾತಕಿಯಱಿಯೆಲಾ ಕಳವಳಿಸದಿರು ಕೊಳ್ಳಾದಡೆನುತೆಚ್ಚನು ಧನಂಜಯನ (ಕುವ್ಯಾಕ. ೧೪-೧೯) ; ನಳನೃಪ ಬಂದನಿದೆಯೆಂದೆನುತ ಕಳವಳಿಸಿ ನಿಲುಕಿ ನೋಡುವಳೊಮ್ಮೆ (ನಳಚ. ೬-೨). ೩. ಸಡಿಲವಾಗು ; ಶಿಥಿಲವಾಗು ; ಕುಸಿ : ಮನ ಮಱುಗು ವುದು ಕಳವಳಿಸುವುದು ಧೈರ್ಯ (ಕುವ್ಯಾದ್ರೋ. ೮-೯) ; ಮುನಿಪನುತ್ತರ ದಲಗು ಬೆನ್ನಲಿ ಮೂಡಿದುದು ಹೆಡತಲೆಗೆ ಸಾರ್ದುದು ಜಿಹ್ವೆ ಕಳವಳಿಸಿದವು ಕರಣಚಯ (ತೊರರಾ. ೧-೯-೨೮). [ಕಳವಳ + -ಇಸು$_1$]

**ಕಳವಳಿಸುಹ** (ನಾ). = ಕಳವಳ: "ಉತ್ಪಿಂಜನಂ, ಆಕುಳಿತಂ – ಈ ೨ ಕಳವಳಿಸುಹ" (ಹಲಾಯು. ೧೨೧–೪೬). [ಕಳವಳಿಸು + –ಹ$_2$]

**ಕಳವಿ** 'ಕಳವೆ$_1$' ನೋ.

**ಕಳವಿಂಕೆ** 'ಕಲವಿಂಕ' ನೋ.

**ಕಳವಿಗೆ$_1$** (ನಾ). ಒಂದು ಜಾತಿಯ ಹಣ್ಣು: ಯೆಲದ ಹಣ್ಣು ಕರಜಿಗೆ ಹಣ್ಣು ಕಳವಿಗೆಯ ಮೊದಲಾದುವ ಹಣ್ಣು . . . ತೊಱೆವುದುಂ ನಿಯಮ ಮೆಂಬುದು (ಶ್ರಾವಕಾ. ೧೩೨–೧೫); ಕಳ್ಳಿ ಪಲಸು . . . ಕರಡಿಗೆಯ ಕಳವಿಗೆಯ ಹಣ್ಣುಮಂ ತೊಱೆವುದು (ಪಸಾರ. ೮೨–೧೮).

[< ಕಳವೆ$_1$]

**ಕಳವಿಗೆ$_2$** (ನಾ). ೧. ಕಟುಕರೋಹಿಣಿ: "ಮತ್ಸ್ಯಪಿತ್ತಾ, ಕೃಷ್ಣಭೇ(ದೀ), ವಕ್ರಾಂಗೀ, ಶಕುಲಾದಸೀ – ಈ ೪ ಕಳವಿಗೆ" (ನಾಚಿರಾ. ೧೦೯); ಕುಡಿಯಿಸುಗೆ ಶಿವೆ ಕಳವಿಗೆ ಬಾಳಂ ಕಕ್ಕೆ ಮುಸ್ತೆ ಪರ್ಪಟಕಂ ಮುಟ್ಟಿಗೆ ಯೆಂಬಿವಿನಿತುಮಂ ಪೈತ್ತಿಗಜ್ವರಂ ದಾಹಮುಂ... ಅೞಿಗುಂ (ಲೋಕೋಪ. ೯–೧೮); ಅಳಲೆಕಾಯಿ, ಕಳವಿಗೆಬೇರು, ತಿಗಡೆ . . . ಕಷಾಯವಿಕ್ಕಿ ಕೊಡಲು ತ್ರಿದೋಷಜ್ವರಂ ಮಾಣ್ಗುಂ (ಸಕವೈ. ೧೧೧). 'ಕಳದಿಗೆ' ಪಠಾ. ೨. ಸಾರಣೆ ಗಿಡ; ಮುಳ್ಳಗಸೆ: "ಜನನಿ ಕಳವಿ[ಪಾಠಾಂ. ಲ]ಗೆಯೆ ನಿಕ್ಕುಂ" (ಮಂಗರಾ. ೪೦–೩೯). [?]

**ಕಳವು** (ನಾ). ೧. ಕಳ್ಳತನ; ಅಪಹಾರ; ಚೌರ್ಯ; ಕದಿಯುವಿಕೆ: "ಕಳವೆ ಚೌರ್ಯಂ ಸ್ತೇಯಂ" (ವಸ್ತುಕೋ. ೬೫–೮೨); "ವಿಚ್ಛಿತ್ತಿ ಚೌರ್ಯಂ ಸ್ತೇಯಮೆನಲ್ ಕಳವಕ್ಕು" (ಮಂಗರಾ. ೬೭–೫); ಹಿಂಸೆ ಪುಸಿ ಕಳವು . . . ತೊಱೆವುದು (ಶಾಂತಿಪು. ೬–೪೯); ಧರೆಯೊಳ್ ಕಳವುಂ ಕೊಲೆಯುಂ ಪ್ರಸಿದ್ಧಪಾಪಂಗಳಾಗಿರ್ದುಂ (ಧರ್ಮಾಮೃ. ೧–೧೮೭); ಕದ್ದ ಕಳವ ಮಱಸಿಕೊಂಡು ನಾ ಸಜ್ಜನನೆಂಬಂತೆ (ಮೋಳಿಮಾ. ೨೩–೯೧); ಹಿಂದೆ ರಾವಣ ಕಳವಿನಲಿ ಕದ್ದೊಯ್ದು ನಡವಿಯ ಲೆಮ್ಮ ಭಾಮಿನಿಯ (ತೊರರಾ. ೪–೧–೧೨). ೨. ವಂಚನೆ; ಮೋಸ: ಕುಡುವುದು ಕೂರ್ಮೆಯಲ್ಲಿ ಕಳವಿಲ್ಲದೆ ಮನ್ನಿಪ ಸೂಳೆಗೆ (ಶಮದ. ಪ. ೬೫ ಪ್ರಯೋ); ಎಲವೊ ಕೌರವ ಹಿಂದೆ ವಂಚಿಸಿ ಕಳವಿನಲಿ ಜೂಜಾಡಿ ರಾಜ್ಯವ ಗೆಲಿದ ಗರ್ವವನುಗುಳು (ಕುವ್ಯಾದ್ರೋ. ೧೦–೪೯). ೩. (?): ಪರಿಚಾರಕನ ವೇಳೆ ಸಾಹಿತ್ಯನ ಉಪಮೆ ಸಂಗೀತದ ಸಂಚು ತಾಳಧಾರಿಯ ಕಳವು . . . ಇಂತೀ ನಾನಾಗುಣಂಗಳ ಲಕ್ಷ್ಯಲಕ್ಷಿತವಂ ತಿಳಿದು (ಸರ್ವವ. ೧೩೮–೬೩೩).

[ಕಳ್$_1$ + –ವು. / ತಮಿ. ಮಲ. ತುಳು. ಕಳವು; ತೆಲು. ಕಲ್ಲ]

**ಕಳವುಗೆಯ್** (ಕ್ರಿ). ಕಳವುಮಾಡು; ಕದಿ: ಏನು ಹಱುವಿಲ್ಲದೆ ಕಳವಿ[ವು]ಗೆಯಿದಾ ನಿಮಿತ್ತದಿ ಪೊಳಲರಸನಾ ಭಾನುದತ್ತನ ಪುತ್ರರನು . . . ಹೊಳಲಿಂ ಹೊಱವಡಿಸೆ (ಸಾಳ್ವಭಾ. ೧೦–೨೯).

[ಕಳವು + ಗೆಯ್ (< ಕೆಯ್$_1$)]

**ಕಳವುವೋಗು** (ಕ್ರಿ). ಕಳವಾಗು: ಕಳವುವೋದ ಮನೆಯಂತೆ ಬ್ರಹ್ಮ ವ್ರತಕ್ಕೆ ಬೆರ್ಚಿ ತಲ್ಲಣಿಸದೆ (ಧರ್ಮಾಮೃ. ೧೪–೮೪).

[ಕಳವು + ಪೋಗು$_1$]

**ಕಳವೂಟ** 'ಕಳುವೂಟ' ನೋ.

**ಕಳವೆ$_1$**, ಕವಳ$_1$, ಕವಳೆ, ಕಳವಿ (ನಾ). ಕರಿಬಣ್ಣದ ಚಿಕ್ಕಚಿಕ್ಕ ಹಣ್ಣು ಬಿಡುವ ಮುಳ್ಳುಕಂಟಿ; ಕಮರಿಕೆ ಗಿಡ: ನೆಲ್ಲಿಯ ಕಾಯ್ ಕಳವೆಯ ಕಾಯ್ ಬೇಱೆವೇಱೆ ಸವಿವಡೆದಿರವೇ (ನಳಚಂ. ೪೬೩); ನೇಱಿಳೆಹಣ್ಣು ಕಳವೆಯ ಹಣ್ಣು ಯಲಚಿಯ ಹಣ್ಣು (ಬಸವು. ೧೮–೧೬). **ಕವಳೆ$_1$**: ಎಲವಂ ಸಂಪಗೆ ಹೊನ್ನೆ ಚೆನ್ನೆ ಕವಳಂ ಶಾಗಾಚಮಾಚಂ ಪುಲಿಂಗಿಲೆರಂ (ರಾಜಶೇ. ೫–೫೬). **ಕವಳೆ$_1$**: ಜಾಲಿ ಜಾನೆಯು ಬೋರೆ . . . ಕವಳೆಯು ಕಾಡ ಕದಳಿ ಕಲುಮಾವು ಬೇವು (ನವಮೋ. ೮–೯); ಕಣ್ಣು ಕವಳೆಯ ಹಣ್ಣು ಗಿಣಿಮಾವಿನೊಲು ಮೂಗು (ಜೀವಲ. ೫). **ಕಳವಿ**: "ಅಮ್ಲಪುಷ್ಪಫಲಾ– ಕಳವಿ" (ಓಷಧಿ.೯). [ದೇ. ‖ ತಮಿ. ಮಲ. ಕಳಾ; ತೆಲು. ಕಲಿವಿ, ಕಲಿವೆ]

**ಕಳವೆ$_2$** 'ಕಟವೆ' ನೋ.

**ಕಳವೆ$_3$** 'ಕಳಪೆ' ನೋ.

**ಕಳವೆಗೂಳು** (ನಾ). ನೆಲ್ಲಕ್ಕಿಯ ಅನ್ನ: ಸುಳಿದವಾರತಿ ಕರ್ಪುರದ ಪ್ರಜ್ವಲಿಪ ಮಾಣಿಕದೀಪ್ತಿಗಳ ಪಸ್ರುಗಳನೆಗೂಳಿನ ಬಟುವೆಗಳಲುಪ್ಪುಗಳ ಸೂಸಿಕೆಯ ಕಳಕಳದೊಳೊಪ್ಪಿದುದು (ತೊರರಾ. ೬–೫೫–೧೬).

[ಕಳವೆ$_2$ (< ಕಟವೆ) + ಕೂಳು$_2$ (< ಕೂೞ್$_1$)]

**ಕಳವೆಗೊಳ್ಳ** (ನಾ). ಒಂದು ಪ್ರದೇಶದ ಹೆಸರು: ಗೋವರ್ದ್ಧನೇಶ್ವರ ದೇವರ ನಿವೇದ್ಯಕ್ಕೆ ಕಳವೆಗೊಳ್ಳದಲ್ಲಿ ಗದ್ದೆ ಮತ್ತರೊನ್ದು (ಸೌಇಇ. XI–i, ೧೧೬–೫೨; 1075). [? + ಕೊಳ್ಳ$_1$]

**ಕಳವೆದೆನೆ** (ನಾ). ಬತ್ತದ ತೆನೆ: ಅರಿವಣ್ಣಾದ ಕಳವೆದೆನೆಗರ್ಚುತ್ತರಗಿಳಿ ಪಾಱಲ್ (ಜಯಕಾ. ೧–೪೦). [ಕಳವೆ$_2$ (< ಕಟವೆ) + ತೆನೆ$_1$]

**ಕಳವೇಱು** 'ಕಳನೇಱು' ನೋ.

**ಕಳವೇಟ್** 'ಕಳಂಬೇಟ್' ನೋ.

**ಕಳವೋಲೆ** (ನಾ). ಸುಳ್ಳುಕಾಗದ; ಮೋಸದಿಂದ ಸೃಷ್ಟಿಸಿದ ಪತ್ರ: ಮುದಿಗೌಡನುವೊಂದು ಕಳವೋಲೆ ಬರಸಿಕೊಂಡು ತಾಲು ಗೆದೆವೆಂದು ಬಂದರು (ಎಕ. XII, ಶಿರಾ. ೮೪–೧೧; 1612). [ಕಳವು + ಓಲೆ]

**ಕಳಶ** 'ಕಲಶ' ನೋ.

**ಕಳಶಗಾಣಿಕೆ** (ನಾ). ಕಳಶಪ್ರಾಯವಾದ ಕಾಣಿಕೆ; ಶ್ರೇಷ್ಠವಾದ ಕಾಣಿಕೆ: ತಿರುಕೊಳವಿನಾಚಿಯರು ಕೇಳಿ ತನ್ನ ಶಿರವ ಕತ್ತರಿಸಿಕೊಳಲು ಅಯಿದು ತಲೆಯನರಸ ಕಂಡು ಇದಕ್ಕೆ ಕಳಶ [ಪಾಠಾಂ. ಸ] ಗಾಣಿಕೆಗೆನ್ನ ಶಿರವೆಂದು ಕತ್ತರಿಸಿಕೊಂಬಾಗ (ಭೈರಸೂ. ೧೬೬–೫).

[ಕಳಶ$_1$ (=ಕಲಶ) + ಕಾಣಿಕೆ (< ಕಾಣ್ಕೆ)]

**ಕಳಶಜ** 'ಕಲಶಜ' ನೋ.

**ಕಳಶಪ್ರೋದ್ಭೂತ** 'ಕಲಶಪ್ರೋದ್ಭೂತ' ನೋ.

**ಕಳಶೋದ್ಭವ** 'ಕಲಶೋದ್ಭವ' ನೋ.

**ಕಳಸ$_1$** 'ಕಲಸ' ನೋ.

**ಕಳಸ$_2$** (ನಾ). ೧. ಜೋಡಣೆ; ಹೊಂದಿಕೆ. ೨. [ಸಂಗೀತ] ಹಾಡುಗಾರಿಕೆಯಲ್ಲಿ ಒಂದು ಬೆಡಗು (?): ಗತಿ ಗಹಗಹಿಸಲ್ ಕಳಸೋನ್ನತಿ ಗಮಕಂ ವಹಣಿ ಕೊಂಕುಬಾಯ್ ನುಣ್ಪನುಜಾಯ್ . . . ಉಣ್ಮೆ ಪಾಡಿದಂಮುನಿ ಋಷಭಂ (ವೀರವಿ ೬–೪೦). [?]

**ಕಳಸಂಬೊಱು** (ಕ್ರಿ). ಕಳಶವನ್ನು ಹೊರು, —ಹಿಡಿ: ಸಂಗಮ ದೇವಂಗೆ ಧರಾವಧು ಭಕ್ತಿಯಿಂ ಕಳಸಂಬೊತ್ತಳೆನಿಸಿ . . . ಕಳಶಮ ನಮರ್ಚೆಯುಂ (ವೃಷವಿ. ೯–೨೧ವ). [ಕಳಸ$_1$ (= ಕಲಸ) + ಪೊಱು]

**ಕಳಸಗಾಣ್** (ಕ್ರಿ). ಕೊನೆಗಾಣು; ಸಿದ್ಧಿಯನ್ನು ಪಡೆ; ಈಡೇರು: ಫಲಿಸಿತರಸಾ ನಿನ್ನ ಭಾಗ್ಯದ ಬೆಳಸು ನಿನ್ನೊಡವುಟ್ಟಿದನ ನುಡಿ ಕಳಸ ಗಂಡುದು (ಕುವ್ಯಾದ್ರೋ. ೧೫–೩). [ಕಳಸ$_1$ (= ಕಲಸ) + ಕಾಣ್]

**ಕಳಸಗಿತ್ತಿ** (ನಾ). ೧. ಕಳಶದಿಂದ ನೀರು ಹನಿಸುವವಳು: ಊಟದ ಉಪಚಾರಕೆ ಕಳಸಗಿತ್ತಿಯರು ನಿಂತಿಹರು (ಸಿದ್ಧಪು. ೧೮–೫). ೨. (ಮದುವೆಯಲ್ಲಿ) ಕಲಶ ಹಿಡಿಯುವವಳು. ☞ ಸಾಮಾನ್ಯವಾಗಿ ಮದುವಣಿಗನ ಅಕ್ಕ ಅಥವಾ ತಂಗಿ: ಏಳ ಕಳಸಗಿತ್ತೀ . . . ನೀನೂ ಸುರಗೀ ಎರಕೋಬೇಕಲ್ಲ (ವೈನಿ. ೯); ಕರೆಯದವರ ಮದುವೆಗೆ ಕಳಸಗಿತ್ತಿಯಾದಳಂತೆ (ಗಾದೆ). [ಕಳಸ$_1$ (= ಕಲಸ) + –ಗಿತ್ತಿ]

**ಕಳಸಜ** (ನಾ). = ಕಲಶಜ : ಹರಗೆ ಮುಖಸಂಹರಣಿಗಾದತ್ರೊರಸೊರಸು ನಿಟಲಕ್ಕೆ ಸೂರ್ಯಗೆ ಸುರಪತಿಗೆ ಕಳಸಜಗೆ ಮಸಗಿತ್ತಿರದೆ ಕೈಗಲಹ (ಮದೇಪು. ೨-೬೨). [< ಸಂ. ಕಲಶಜ]

**ಕಳಸಪೂಜೆ** (ನಾ). ಮಂಗಳಕಾರ್ಯ, ಧರ್ಮಕಾರ್ಯಗಳಲ್ಲಿ ಶುದ್ಧೋದಕ ತುಂಬಿದ ಕಳಸಕ್ಕೆ ಮಾಡುವ ಪೂಜೆ : ಕಳಸಪೂಜೆಗೆ ಗಂಗೆ ತರಬೇಕು (ರೂಢಿ). [ಕಳಸ$_1$ (= ಕಲಸ) + ಪೂಜೆ$_3$)]

**ಕಳಸಪ್ರಾಯ** (ನಾ). ಉತ್ತಮವಾದುದು; ಶ್ರೇಷ್ಠವಾದದ್ದು : ಆ ಊರಿಗೆ ಅವನು ಕಳಸಪ್ರಾಯನಾದ ವ್ಯಕ್ತಿ (ರೂಢಿ). [ಸಂ. ಕಲಸಪ್ರಾಯ]

**ಕಳಸಮಿಡು**, ಕಳಸವಿಡು (ಕ್ರಿ). ೧. ಶಿಖರವನ್ನು ಇಡು; ಮುಡಿಯಿಡು : ರಾಮೇಸ್ವರನಂ ಭಕ್ತಿಯೊಳರ್ಚ್ಚಿಸಿ ಪರಮೇಶನ ಬಲದೆ ಕಳಸಮಿಟ್ಟಂ (ಸೌಇಇ. XX, ೧೧೫-೪೭ ; 1146). ೨. (ಅಲಂ) ಶೋಭೆಯನ್ನುಂಟುಮಾಡು : ಭೂಮಿಗೆ ಕಾವ್ಯರತ್ನಮಿದೆ ಸಾರಮೆನಲ್ ನೆಗಚ್ಚೀ ಪುರಾಣಚೂಡಾಮಣಿಗಚ್ಚಿಯಿಂ ಕಳಸಮಿಟ್ಟು (ಶಾಂತಿಪು. ೧-೫೧); ಜಸಂಬಡೆದಂ, ಕಳಸಮಿಟ್ಟಂ (ಭಾಷಾಭೂ. ೧೩೪ ಉದಾ).

**ಕಳಸವಿಡು** : ೧. ಹಸುರ ನಗಿಸುತ, ಗದ್ದೆ ಹೊಲಗಳಲಿ ಬಂಗಾರ ಕಳಸವಿಟ್ಟು (ನೆಲಮು. ೧೫). ೩. (ಅಲಂ) ನೆರವೇರಿಸು; ಪೂರೈಸು : ಕಳ[ಪಾಠಾಂ. ಲಶ]ವಿಟ್ಟನು ಕೊಟ್ಟ ಭಾಷೆಗೆ ಎಲೆ ಸುಯೋಧನ (ಕುವ್ಯಾಸ. ೧೪-೩೫). [ಕಳಸ$_1$ (= ಕಲಸ) + ಇಡು$_1$]

**ಕಳಸವಡಿಗ** (ನಾ). ಕಲಶ ಹಿಡಿಯುವ ಸೇವಕ : ಕುಂಚವಡಿಗಂ, ಪುಲ್ಲವಡಿಗಂ, ಕಳಸವಡಿಗಂ [ಪಾಠಾಂ. ಕಳ್ಪಡಿಗಂ] (ಶಮದ. ೧೯೮ ಪ್ರಯೋ). [ಕಳಸ$_1$ (= ಕಲಸ) + -ವಡಿಗ]

**ಕಳಸವಿಡು** 'ಕಳಸಮಿಡು' ನೋ.

**ಕಳಸವೇರು** (ಕ್ರಿ). ಕಳಶವಿಟ್ಟಂತಾಗು ; ಮೇಲ್ಮೆಯುಂಟಾಗು : ಶ್ಯಾಮರಾಯನ ಅಭಿಪ್ರಾಯಕ್ಕೆ ಒಮ್ಮೆ ಕಳಸವೇರಿತು (ದೀಪಹ. II, ೧೫). [ಕಳಸ$_1$ (= ಕಲಸ) + ಏರು$_1$ (< ಏಱ್$_1$)]

**ಕಳಸಿಗ** (ನಾ). ಒಂದು ಬಗೆಯ ಸಸ್ಯ (?) : "ಉತ್ತಂಡುಕಿ (?) - ಕಳಸಿಗ, ಎಳ್ಳಗಸೆ" (ಒಷಧಿ. ೧೬). [?]

**ಕಳಸಿಗೆ** (ನಾ). ೧. ಕಲಶ; ಕಳಸ; ಪಾತ್ರೆ : "ಕ[ಪಾಠಾಂ. ಕಾ]ಳಸಿಗೆ ಕೌಶಿಕೆ ಮಲ್ಲಿಗೆಯೆನಿಕ್ಕು" (ಮಂಗರಾ. ೬೨-೨೩) ; ನಿಲಲಾಜದೆ ಹಳಿಲನೆ ಘಳಿಗೆವಟ್ಟಲ ಮೇಲೆ ಬೀಳೆ ಕಳಸಿಗೆಯೊಡೆದು ಘಳಿಗೆವಟ್ಟಲು ಮುಱಿದು ತಂಡುಲಂ ಚೆಲ್ಲಿ (ನಂಬಿರ. ೬-೪೬) ; ಉಳಿದ ಹಿಂಡಿಯ ದೊಡ್ಡ ಕಳಸಿಗೆಯೊಳಗೆ ಹೊಯ್ದು (ಸೂಪಶಾ. ೮-೨೩) ; ಕಳಸಿಗೆಯ ಪಾಯಸದಿ ಬಲು ಸರ್ಪರೂಪದಿ ಧರ್ಮದೇವತೆ ವಿಷವನುಗುಳಿದುದು (ಯಾದವ. ೮-೩೩). ೨. ಒಂದು ಅಳತೆ; ಹದಿನಾಲ್ಕು ಸೇರಿನ ಒಂದು ಅಳತೆ : ಮುಡಿಗೆ ಒಂದು ಕಳಸಿಗೆ 'ಪೊಲಿ' (ಬಡ್ಡಿ) (ಚಿಗುಬ. ೩೮); ಏನಿಲ್ಲವೆಂದರೂ ಒಂದು ಕಳಸಿಗೆಯುಷ್ಟು ಗೋಡಂಬಿಯನ್ನು ತಂದು ಕೂಡಿಸಿಕೊಡುತ್ತಿತ್ತು (ಪರಾವ. ೪೭); ಕಂಚಿನ ಮುಡಿಗೆ ನಾಲ್ಕು ಕಳಸಿಗೆಗಳು ಒಂದು ಕಳಸಿಗೆಗೆ ೧೪ ಸೇರುಗಳು (ಪ್ರವಾಇ. II, ೨೮೭ ಅಡಿಟ). [< ಕಳಸಿ. / ತುಳು. ಕಳಸಿಗೆ]

**ಕಳಸುತ್ತು** (ಕ್ರಿ). ಕಣವನ್ನು ಬಳಸು, —ಸುತ್ತು : ಕಳವಂಸುತ್ತಿದಂ, ಕಳಸುತ್ತಿದಂ (ಶಮದ. ೧೭೭ ಪ್ರಯೋ). [ಕಳ$_3$ + ಸುತ್ತು$_1$]

**ಕಳಸೆ** (ನಾ). ೧. = ಕಳಸಿಗೆ ೧ : ಅಂಕೋಲೆ, ಔಡಲ . . . ಈ ಸೊಪ್ಪುಗಳನ್ನು ಸಮಾನಂಗೊಂಡು ಕಳಸೆಯ ಕುಂಬಿ ಅಜಾಮೂತ್ರವ ಹೊಯ್ದು ಲೇಸಾಗಿ ಕುದಿಸಿ (ವಿವೈವಿ. ೮೪). ೨. = ಕಳಸಿಗೆ ೨ : ಈ ವರುಷ ಬೇಸಿಗೆಗೆ ಒಂದು ಕಳಸೆ ಒಳ್ಳೆಮೆಣಸಾದೀತು (ಬಾಳಿಗಿ. ೧೧೭) ; ಬೇಕಾದರೆ ಅಳತೆಮಾಡಿ ನೋಡಬಹುದು. ಕಳಸೆ ಬಡಿಗೆ ತರುತ್ತೇನೆ (ಮುಣ್ಣನಂ. ೩೫). [ದೇ ?. / ತುಳು. ಕಲಸೆ, ಕಳಸೆ. / ಸಂ. ಕಲಸ]

**ಕಳಸ್ಮಱಿ** (ನಾ). ಒಂದು ಊರಿನ ಹೆಸರು : ಗಜ್ಜಿಸೆಟ್ಟಿ ಕಳಸ್ಮಱಿ ಪನಟೆಯ ತು[ಱು]ಗೊಳೊಳ್ಕೊಂಡು ಪುಯ್ಯಲ್ವೋಗಿ ಅಸ್ತಿಱಿದು ಸಗ್ಗ ಮೇಱಿದನ್ (ಎಕ. X, ಕೋಲಾರ. ೨೪೫-೨ ; 960). [?]

**ಕಳಹ** (ನಾ). ಕಳೆಯುವಿಕೆ; ವ್ಯವಕಲನ : "ಗತಮದೂನಂ ಶೋಧನಂ ಕಳಹಮುಕ್ಕು" (ಮಂಗರಾ. ೧೩೦-೧೮). [ಕಳೆ$_1$ + -ಹ$_2$]

**ಕಳಹಂಸ** 'ಕಲಹಂಸ' ನೋ.

**ಕಳಹಂಸಿ** (ನಾ). ಹೆಣ್ಣು ಹಂಸ : ಬೆಡಂಗನ್ನುಂಟುಮಾಡಿದ ಕಳಹಂಸಿಯಂತೆ ಉಭಯಪಕ್ಷ ವಿಶುದ್ಧಿಯನಪ್ಪುಕೆಯ್ದು (ಮಲ್ಲಿಪು. ೪-೧೪೧). [ಸಂ. ಕಲಹಂಸೀ]

**ಕಳಹಂಸೆ** 'ಕಲಹಂಸೆ' ನೋ.

**ಕಳಹಲ** (ನಾ). (?) : ಶೂಲವೆಂದೊಡಳಿಯದಿಹವೆ ಸೂನವೆಂದೊಡಳಿಯದಿಹನೆ ಎಳೆವ ಹೂಟಿಯೆಂದಡಕಟ ಕಳಹಲಂಗಳೆಂದೊಡಕಟ ಬೈದೊಡಂತೆ ಬಡಿದೊಡಂತೆ ಹೊಯ್ದೊಡಂತೆ ಕೊಯ್ದೊಡಂತೆ (ಸಾನಂಚ. ೬-೫೬). [?]

**ಕಳಹುವೂಟ** 'ಕಳುವೂಟ' ನೋ.

**ಕಳಹೂಟ** 'ಕಳುವೂಟ' ನೋ.

**ಕಳಱು**$_1$ (ಕ್ರಿ). ೧. ಅಂಜು; ಭಯಪಡು; ಗಾಬರಿಯಾಗು : "ಪೆಳಱಳಱು ಕಳಱೆಂದು ಭೀತಿಯೊಳ್" (ಸಂಜೀವ. ೨೫) ; ಇಳಿದಳಿಯನೇಳದಂ ಸೂಕುಳಿಯೋಕುಳಿ ಕಳಲು ಕಳಱು ಪೆಳಱು ಮುಱುಕುಳಿಯಳಿಯಂ (ಶಮದ. ೨೬). ೨. "ಕಷ್ಟಪಡು, ಶ್ರಮಪಡು, ಅಂಡಲೆ, ಪೀಡಿಸು" (ಪ್ರಭಣ್ಣ). [ದೇ. ‖ ತಮಿ. ಕಳಱು = ಕೋಪಿಸು, ಗದರಿಸು]

**ಕಳಱು**$_2$ (ನಾ). ಒಂದು ಪ್ರದೇಶದ ಹೆಸರು : ಎಱ ಅಲಂಗಾಲ ಕಳಱಿಂದಂ ಮುದೂರ ಕಾಲುವೆಯ ದಾಟ (ಎಕ. XIV, ಎಳಂದೂ. ೧೭೦-೧೭ ; 12ನೆಯ ಶತ) [?]

**ಕಳಱು**$_3$ (ನಾ). ಜೌಗುನೆಲ; ಚೌಳುಭೂಮಿ : ತಾಗುಮಂ ಬಾಗುಮಂ ಪಳ್ಳಮುಮಂ ಕೊಳ್ಳಮುಮಂ ನೆಳಱುಮಂ ಕಳಱುಮನೆಱುಗಲುಮಂ ಗಿಡುದುಱುಗಲುಮಂ . . . ಕಳೆದು ಪೋಗಿ (ಲೀಲಾವ. ೬-೨೦). [? ./ ತಮಿ. ಕಳರ್]

**ಕಳಱುಗುಣಿಗ** (ನಾ). ಭೂಮಿಯನ್ನು ಅಳೆಯುವ ಒಂದು ಅಳತೆಯ ಕೋಲು (?) : ಕಾಳಿದಾಸಿಯುಂ ಕಳಱುಗುಣಿಗನ ಮತ್ತರ್ ೧ ಕತ್ತಿಗೆಯ ದಾವಣ್ಣಂ ಕಳಱುಗುಣಿಗನ ಮತ್ತರ್ ೧ ಅನ್ತು ಕಳಱುಗುಣಿಗನ ಮತ್ತರ್ ೨ (ಸೌಇಇ. IX-i, ೧೬೫-೫೨ ; 1099). [ಕಳಱು$_2$ + ಗುಣಿಗ]

**ಕಳಾಂಚನ** (ನಾ). (?) : ವಂಚನಾಮುಖದಿಂದ ಬಾಳ್ವ ಕಳಾಂಚನವ ಸೇರದ ವಿರಕ್ತಿರಸಾಂಚಿತ್ತ ಮನಸ್ಕರಿಗೆ ಪೇಳುವದೀ ಕಥಾಶ್ರುತಿಯಾ (ವಿವೇಭ. ೯-೧). [?]

**ಕಳಾಂತರ** 'ಕಲಾಂತರ' ನೋ.

**ಕಳಾಕಳಾಪ** 'ಕಲಾಕಲಾಪ' ನೋ.

**ಕಳಾಕಳಿತ** 'ಕಲಾಕಲಿತ' ನೋ.

**ಕಳಾಕುಳ** (ನಾ). ೧. ತೀಕ್ಷ್ಣವಾದ ವಿಷ. ೨. ಜಂಜಡ ; ಬಂಧನ : ಎಂತೆಂತು ಮಾಡಿದಡಂತಂತೆ ಲಯವು . . . ಇದೇನೊ ಎಳಕುಳಿ ಜಾಲೆಯ ಕಳಾಕುಳ ಬಿಡದು (ಸರ್ವವ. ೩೨-೧೬೧). [ಸಂ. ಕಲಾಕುಲ]

**ಕಳಾಕುಳಕಳಾಭೇದ** (ನಾ). (?) : ಅಂಗದಲ್ಲಿ ಲಿಂಗ ಸೋಂಕಿದ ಶರಣಂಗೆ ಕಾಯದೊಳಗುಳ್ಳ ಕರಣಂಗಳು ಕಳಾಕುಳ ಕಳಾಭೇದವಯ್ಯ ಸುಖದ ಸೊಂಕಿನ ಸೊಬಗ ಇನ್ನಾರಿಗೆಯೂ ಹೇಳಲಿಲ್ಲ (ಅವಚಂ. ೧೫-೬೧) ; "ಕುಳಸ್ಥಳವು ಸಂಚ ತಪ್ಪಿ ವ್ಯಾಕುಳವಾಗುವುದು" (ಅವಚಂ. ಕೋಶ). [?]

**ಕಳಾಕೋವಿದ** 'ಕಲಾಕೋವಿದ' ನೋ.

**ಕಳಾಕೌಶಲ** 'ಕಲಾಕೌಶಲ' ನೋ.

**ಕಳಾಗಿಡ** (ನಾ). ಒಂದು ಹಣ್ಣಿನ ಗಿಡ: ಕಳಾಗಿಡ, ದೊಡ್ಡಕಾವಲಿ (ಮೈಔಗಿ. ೧೮-೩೨೨). [?]

**ಕಳಾತೀತ** (ನಾ). ಕಲೆಗೆ ಅತೀತವಾದದ್ದು, —ಮೀರಿದ್ದು: ವೇದಾತೀತ ಷಡುವರ್ಣರಹಿತ ಅಷ್ಟತ್ರಿಂಶತ್ ಕಳಾತೀತ ವ್ಯೋಮಾತೀತ ಕೂಡಲಸಂಗಮದೇವ (ಬಸವ. ೯೫೩); ಶಿವಕಳೆಯೊಳು ಕೂಡೆ ಬಲಿದಾ ಲಿಂಗ ತಾನಾದಲ್ಲಿ ನಾದಬಿಂದು ಕಳಾತೀತನಾದ (ಚೆನ್ನಸಾ. ೫೦).

[ಸಂ. ಕಲಾತೀತ (ಕಲಾ + ಅತೀತ)]

**ಕಳಾದ** 'ಕಲಾದ' ನೋ.

**ಕಳಾಧರ** (ನಾ). ೧. ಕಲೆಗಳನ್ನು ತಿಳಿದವನು; ಕಲಾವಿದ; ವಿದ್ವಾಂಸ: ಸಕಳ ವಿದ್ಯೆಯನೀಗಳ್ ಪರಿವಿಡಿಗೆಯ್ವಂತೆ ಕಳಾಧರನಾಪಂ ಶ್ರೀಧರಂ (ಮಲ್ಲಿಪು. ೪-೧೩೪); ಕುಮಾರ ದಿಕ್ಕುಂಜರಂ ಪರ ವಿದ್ಯಾ[ಧಿಕಂ]ಸಕಳ ಕಳಾಧರಂ (ಸೌಇಇ. XX, ೭೧-೧೧; 1109); ಕವಿವರ್ಣ್ಯಂ ವಿಳಸತ್ ಕಳಾಧರಸಖಂ ಪ್ರದ್ಯುಮ್ನಗೋತ್ರಂ ರಮೋತ್ಸವಧಾಮಂ (ಎಕ. VI, ಕಡೂರು. ೬೬-೩೬; 1172). ೨. ಚಂದ್ರ: ಕಳೆಗುಂದಿದ ಕಳಾಧರನಂ ಕಂಡು ನಸುನಗುವಂತೆ (ರಾಜಶೇ. ೧೨-೩೯ ವ).

[ಸಂ. ಕಲಾಧರ]

**ಕಳಾನಿಕೇತನ** 'ಕಲಾನಿಕೇತನ' ನೋ.

**ಕಳಾನಿಧಿ** 'ಕಲಾನಿಧಿ' ನೋ.

**ಕಳಾನ್ವಿತ** (ನಾ). ಕಲೆಗಳನ್ನು ಹೊಂದಿದವನು; ಕಲಾಜ್ಞಾನವುಳ್ಳವನು; ಕಲಾವಿದ: ನಾನಾ ಕಳಾನ್ವಿತರ [ಪಾಠಾಂ. ಪ್ರಾ[illegible]]ನಿವಹ ವಿದ್ವೇನು ಕಲಾಪ್ರೌಢರಿಲ್ಲದೊಡೆ (ಹಚಕಾ. ೧-೨೩); ನಯವಿದರೆಲ್ಲ ಮಲ್ಲಿಯೆ ಕಳಾನ್ವಿತರಲ್ಲಿಯೆ ಪುಣ್ಯವಂತರಲ್ಲಿಯೆ (ಪುಷ್ಪಪು. ೯-೧೬).

[ಸಂ. (ಕಲಾ + ಅನ್ವಿತ)]

**ಕಳಾಪ** 'ಕಲಾಪ$_3$' ನೋ.

**ಕಳಾಪಂಡಿತ** 'ಕಲಾಪಂಡಿತ' ನೋ.

**ಕಳಾಪಕ** 'ಕಲಾಪಕ' ನೋ.

**ಕಳಾಪಿ** 'ಕಲಾಪಿ' ನೋ.

**ಕಳಾಪಿನಿ** (ನಾ). ಹೆಣ್ಣು ನವಿಲು: ಬಂದು ಕೀಡಿದುದು ಮಾರುತನಾತ್ತಕಳಾಪಿನೀರುತಂ (ಜಗವಿ. ೪-೩೪). [ಸಂ. ಕಲಾಪಿನೀ]

**ಕಳಾಪ್ರಣೀತೆ** (ನಾ). ಕಲೆಗಳಲ್ಲಿ ನಿಷ್ಣಾತಳಾದವಳು; ಕಲಾವಿಶಾರದೆ: ಮಾತೆ ಮಹೀಧ್ರಜಾತೆ . . . ಕಳಾಪ್ರಣೀತೆ [ಪಾಠಾಂ. ಪ್ರವೀಣತೆ] ಕಮನೀಯ ಕಟಾಕ್ಷೆ (ರಾಜಶೇ. ೫-೧೩೪).

[ಸಂ. ಕಲಾಪ್ರಣೀತಾ]

**ಕಳಾಭಾವ** (ನಾ). ಪ್ರಣಯ ಕಲೆಯ ರೀತಿ; ಪ್ರೀತಿಯ ಭಾವನೆ: ರಸಿಕ ಸುರತಾನಂದವಂ ಭಾವಿಸುವನುಪಲಾಲಿಸುವ ಕೂಟದ ಪೊಸಕಳಾಭಾವಂಗಳಂ ಮಲುಹಣನು ಭಾವಿಸುವ (ಬಸಪು. ೪೨-೨೩).

[ಸಂ. (ಕಲಾ + ಭಾವ)]

**ಕಳಾಯ** 'ಕಲಾಯ' ನೋ.

**ಕಳಾರುಂದ್ರ** (ಗು). ಕಳೆಗಳಿಂದ ಕೂಡಿದ, —ದಟ್ಟವಾದ: ಕಳಾರುಂದ್ರಂ ಚಂದ್ರಂ ಬೆಳಗೆ ನಭಮಂ (ಪುಷ್ಪಪು. ೮-೧೩).

[ಸಂ. (ಕಲಾ + ರುಂದ್ರ)]

**ಕಳಾವತಿ** 'ಕಲಾವತಿ' ನೋ.

**ಕಳಾವಿದ** 'ಕಲಾವಿದ' ನೋ.

**ಕಳಾಸ** 'ಕಾಳಸೆ' ನೋ.

**ಕಳಾಸಂಗೊಡು** (ಕ್ರಿ). ಪರಿಪೂರ್ಣಕಲೆಯನ್ನು ಪ್ರದರ್ಶಿಸು; ಮುಕ್ತಾಯ ಮಾಡು (?): ಧರಣೀಶ ಬಿಜ್ಜಳಂ ತನ್ನ ನಾಟಕಶಾಲೆಗುರುತರ ಸ್ನೇಹದಿಂ ದಂಡೇಶನಂ ಕರೆದು ಪರಮಮೋಹಿನಿಯ ಪಾತ್ರವತೋಱುತಿರೆ ಕಳಾಸಂಗೊಡುವ ಸಮಯದಲ್ಲಿ ಹರುಷದಿಂ ಜಂಗಮಂ ಜಂಬೀರಫಲದೊಳಿಡುತಿರೆ (ಲಶಿಚಂ. ೩೨-೩೯).

[ಕಳಾಸ (< ಕಾಳಸೆ ?) + ಕೊಡು$_1$]

**ಕಳಾಸಿ** 'ಕಲಾಸಿ' ನೋ.

**ಕಳಾಸಿಕೆ** (ನಾ). [ನಾಟ್ಯ] ನರ್ತನದಲ್ಲಿ ಒಂದು ವೈಖರಿ, —ಗತ್ತು: ತರುಣಿಯರತಿಹರುಷದಲಿ ಪರಿಪರಿ ಕೋಪು ಕಳಾಸಿಕೆಗಳ ತೋಱಿ ಭರದಲಿ ನಟಸಿದರಾಗ (ಕಂನವಿ. ೮-೩೨).

[ಕಳಾಸ (< ಕಾಳಸೆ) + -ಇಕೆ]

**ಕಳಾಸಿಸು** (ಕ್ರಿ). ಹೊಂದಿಸು; ಕಟ್ಟು (?): ಈಸು ದಿನ ಪರಿಯಂತ ತಪದಲಿ ಘಾಸಿಯಾದುದೆ ಸಾಕು ಬಱಿದೆ ಕಳಾಸಿಸದಿರೀ ನಾಟಕವನಿದಕಿನ್ನು ದಿನವುಂಟು (ಉತ್ತರಾ. ೯-೧೯). [ಕಳಾಸ (< ಕಾಳಸೆ) + -ಇಸು$_3$]

**ಕಳಾಸು** 'ಕಾಳಸೆ' ನೋ.

**ಕಳಾಹೀನ** 'ಕಲಾಹೀನ' ನೋ.

**ಕಳಿ$_1$** 'ಕಱಿ$_1$' ನೋ.

**ಕಳಿ$_2$** 'ಕಱಿ$_2$' ನೋ.

**ಕಳಿ$_3$** (ಕ್ರಿ). ೧. ಸಂತೋಷಪಡು; ಹಿಗ್ಗು: ಕಳಿದು ಮುಳಿದು ಹೊಳೆದು ಕಾಡಲೇಕೆ ಹಂಪೆಯರಸ (ಹಂಪೆರ. ೮-೧). ೨. ಸೊಕ್ಕು; ಮದವೇರು.

[ದೇ. ‖ ತಮಿ. ಮಲ. ಕಳಿ]

**ಕಳಿ$_4$** 'ಕಱಿ$_3$' ನೋ.

**ಕಳಿ$_5$, ಕಱಿ$_4$** (ನಾ). ೧. ಹಿಟ್ಟನ್ನು ಕುದಿಸಿ ಮಾಡಿದ ಒಂದು ಬಗೆಯ ಪಾಕ; ಅಂಬಲಿ; ಗಂಜಿ: ಕಳಿ ಹ[ಹು]ಳಿಯಾಗಿಯುಂ ಅಳೆಯಲ್ಲದಂತೆ (ಧರ್ಮಾಮೃ. ೧೧-೧೮೬ ಅಡಿಟ); ಕಳಿಯಂ ಕೊಳನುಂಬುದಾಯುಂಬಿಲಮಿವಱೊಳಾವುದುಂ ಮಾಡಿದೊಡಂ ಪ್ರೋಷಧೋಪವಾಸವೆಂಬುದಕ್ಕುಂ (ಶಾಸ್ತ್ರಟೀ. ೫೬-೬); ಕಳಿಯನೀ ತೆಜದೊಳೊಡಯಿಸಿಕೊಂಡ ಮಜ್ಜಿಗೆಯ ತಿಳಿಯನೀ ತೆಜದೊಳತಿರುಚಿಯಪ್ಪವೊಲು ಮಾಡಿ (ಸೂಪಶಾ. ೨-೪೫). ೨. ಕೆಸರುಮಣ್ಣು; ಜೇಡಿ ಮಣ್ಣು (?): ಬೆಂಮಣನ ಗಡಿಯಿಂದ ಪಡುವಲು ಕಳಿಯಿಂದಂ ಬಡಗಲು (ಸೌಇಇ. IX-ii, ೪೨೪-೩೬; 1401); ಅನಗಳಿಯ ಕಳಿಯ ತೋಟದ ಮೇಲೆ ಕಾರ್ತಿಕಮಾಸಕೆ ನಂದಾದೀವಿಗೆ (ಸೌಇಇ. IX-ii, ೪೫೨-೪೬; 1450); ಗುಡ್ಡಂ ಪಾಡಿಯ[ಕ]ಱಿಕೆಯ ಕಳಿಯಲ್ಲಿ (ಸೌಇಇ. IX-ii, ೪೬೪-೧೧; 1472); ಮೊನೆರ ಮಂಜನ ಕೈಯ್ಯಲಿ ಮೂಲವ ಕೊಂಡ ಕಳಿ ಸಹವಾಗಿ ಹಲರ ಬಗೆಯ ಕಳಿ ಹೊಳೆ ಉಂಟಾದದನು ಗದ್ದೆಯ ಮಾಡಿ (ಸೌಇಇ. IX-ii, ೪೭೧-೧೫; 1482). **ಕಱಿ$_4$:** ೧. "ಕಱಿ - ನಿಧನಾತಿದೂರಯೋಃ (ಕೊನೆಗಾಣು, ಸಾಯು, ಬಹುದೂರ ತೊಲಗು), ಸೌವೀರೇ ಚ (ಗಂಜಿ)" (ಶಮಧಾ); ಕಱಿಯೆಂದಂಬಿಲಮಕ್ಕುಂ" (ಕವಿಕಂ. ೨೪೩); ಒಲ್ಲಣಿಗೆಯನುಡಿಸಿ ತಲೆಯೊಳ್ ಕಱಿಯಂ ಪೊಯ್ದು (ವಡ್ಡಾರಾ. ೧೮-೨೩); ಸೂಜಿಮೊನೆಯೆನಿಸುವೆಣ್ಣೆಯುಂ ಬಂಗುಮಾದ ಕಱಿಯುಂ (ಸುಕುಮಾ. ೨-೬೮); ಮೂಱುಸೂಱ್ ಕರ್ಚಿ ಪೊಯ್ದೊಡೆ [ಕುದಿವ] ಸಱೊಳುತ್ತಮಮಕ್ಕುಂ ಪದೆದೊಪ್ಪಲ್ ಸಮರಸನಾಗಿರ್ಕು ಕಱಿಯ ನೆಱಿಯಲ್ಕನ್ನಂ (ಲೋಕೋಪ. ೮-೨); ಅಮದುರ್ವಳ್ಳಿಯ ಬೇರಂಚಾರಿಸಿ ಕಱಿಯುಂ ಕುಡಿಸಲ್ ವಾರಿ ಮರಱ್ದೋಡಲಾ ನರಂ ಜೀವಿಸುಗುಂ (ಖಮದ. ೨-೧೪೯).

[ದೇ. ‖ ತಮಿ. ಮಲ. ಕಳಿ ; ತೆಲು. ಕಲಿ]

**ಕಳಿ$_{6}$** (ನಾ). ಕಟ್ಟುವ ದಾರ (?) : ಬರೆಯಿಸಿದರ್ರೈರಾವತವ . . . ಬೀಸಿ ಬಿಗಿದರು ಕಳಿಯ ಪಟ್ಟಿಯುವ (ಸಂಭಪ. ೨೦-೯೧).
[← ತಮಿ. ಕೞಿ]

**ಕಳಿ$_{7}$** (ನಾ). ಸೊಕ್ಕು ; ಮದ. 'ಕಳಿನುಡಿ' ಪರಾ. [< ಕಳಿ$_{3}$]

**ಕಳಿಂಗ** 'ಕಲಿಂಗ' ನೋ.

**ಕಳಿಂಗಬ್ಬೆ** (ನಾ). ಒಬ್ಬಾಕೆಯ ಹೆಸರು: ಆಯ್ಚಬ್ಬೆ ಮಗಳ್ ಕಳಿಂಗಬ್ಬೆ (ಎಕ. XI, ದಾವಣ. ೧೭-೭ ; 889).
[ಕಳಿಂಗ (= ಕಲಿಂಗ) + ಅಬ್ಬೆ$_{1}$]

**ಕಳಿಂಗರಾಸ್ಮೆ** (ನಾ). ಒಂದು ಔಷಧಿ ದ್ರವ್ಯ : ಕಳಿಂಗರಾಸ್ಮೆ ಜಟಾ ಮಾಂಸಿ . . . ಸಮಾನವಾಗಿ ಕಷಾಯವಿಟ್ಟು ಸೇವಿಸೆ ಅಂತರ್ದಾಹ ಹೋಗುವುದು (ಸಕವೈ. ೮೩).
[ಕಳಿಂಗ (= ಕಲಿಂಗ) + ರಾಸ್ಮೆ]

**ಕಳಿಂಚು, ಕಳುಚು** (ನಾ). ಮೋಸ ; ವಂಚನೆ: ಇಂಚಿಯ ಪಸವಿನ ಬಜದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ . . . ಬಳೆದು ವಿರಿಂಚಿಯ ಕೆಯ್ಪಿಡಿವೊಲಾದುವಾ ನಾಡೂರ್ಗಳ್ (ಪಂಪಭಾ. ೮-೫೧) ; ಪಸೆಯೊಳ್ ಪಾವು ಕೊಂಡುದೆಂಬಂತೆನಗೆ ನಿನ್ನಂತಪ್ಪ ಪುರುಷನಂ ದೊರೆಕೊಳಿಸಿ ಕಳಿಂಚು ಮಾಡಿ ಕಳೆದ ದುರ್ವಿದಗ್ಧ ವಿಧಾತ್ರಂಗೆ ಮುನಿವೆನಾಂ (ಅರ್ಧನೇ. ೩-೨೮ ವ). **ಕಳುಚು** : ಕಸವಿಂಗಂಕಳುಚಿಂಗಂಡಸಿಕಿಂಗಂ ದೂರ್ತವಡೆಗಮತಿಚಪಳರ್ಗಂ ಪುಸಿವರ್ಗಂ ಸಿತಗರ್ಗಂ . . . ಕುಡುವ ನುರ್ಕಿ ಕುಮಾರಂ (ಧರ್ಮಾಮೃ. ೨-೭೦). [?]

**ಕಳಿಂಜಿ** (ನಾ). (?) : ಆನೆಗಳಿಯ ಒಳಗಣ ಕಳಿಂಜಿಯ ಹಿರಿಯ ಮನೆಯ ಕಳು ತುಳುವ ಹೆಗ್ಗಡಿತಿಗೆ ಯಿಱಿಸಿದ ಆರುವಾರದ ಬಾಳಿನ ವಿವರ (ಸೌಇಇ. IX–ii, ೪೨೪-೪೫ ; 1401). [?]

**ಕಳಿಂದ** 'ಕಲಿಂದ' ನೋ.

**ಕಳಿಂದಕನ್ಯೆ** (ನಾ). ಯಮುನಾ ನದಿ : ದಾಂಟದುದು ಕೃಷ್ಣನ ಬೀಡು ಕಳಿಂದಕನ್ಯೆಯಂ (ಜಗವಿ. ೧೬-೭೧). [< ಸಂ. ಕಲಿಂದಕನ್ಯಾ]

**ಕಳಿಂದಜೆ** 'ಕಲಿಂದಜೆ' ನೋ.

**ಕಳಿಅಡಕೆ** 'ಕಳಿಯಡಕೆ' ನೋ.

**ಕಳಿಕ$_{1}$** (ನಾ). ಜೋಳ: "ಯವನಾಳಮಾ ಕಳಿಕಮೆನೆ ಜೋಳಮುಕ್ಕುಂ" (ಮಂಗರಾ. ೧೧೦-೫). [?]

**ಕಳಿಕ$_{2}$** (ನಾ). ಒಂದು ಬಗೆಯ ಹೂವಿನ ಗಿಡ: ಹರಿದಿಯರ್ಗಜಾಪಿ ಕಳಿಕನ ಹೂವಿನ ಕುಚ್ಚಿನುರುವ ಸಬಳದಾಳುಗಳ ನೆರವಿಯೊಳು (ಕಂನವಿ. ೧೨-೩೩). [?]

**ಕಳಿಕಟ್ಟೆ** (ನಾ). ಒಂದು ಊರಿನ ಹೆಸರು : ಕಲಿಗಜ್ಜಂ ಆಯಪ್ಪದೇವ ನೊಳ್ಕಾದಿ ಕಳಿಕಟ್ಟೆಯೊಳ್ಸತ್ತ (ಎಕ. VII, ಕಡೂರು. ೧೪೦-೨; ಸು. 919). [?]

**ಕಳಿಕೆ$_{1}$** 'ಕಲಿಕೆ$_{2}$' ನೋ.

**ಕಳಿಕೆ$_{2}$** (ನಾ). ತೀರುವಿಕೆ; ಇಲ್ಲವಾಗುವಿಕೆ (?) : ಸಿದ್ಧರಸ ಹುಳಿವುವೇ ಕಾಮಧೇನುಗೆ ಕಳಿಕೆ ಹೊದ್ದುವುದೆ (ಸಿಂಗಿರಾ. ೪-೪೧).
[ಕಳಿ$_{1}$ (< ಕೞಿ$_{1}$) + -ಕೆ]

**ಕಳಿಕೆ$_{3}$** (ನಾ). ಕಣ; ಹನಿ; ಬಿಂದು (?) : ಕುಮುದಿನಿಗೆ ನೆಗೆದ ಬಾಷ್ಪ ಜಳಕಣಂಗಳಂತೆ ಮುಗುಳ್ದು ಮುಗಿವೆಸಟಿಗ್ಗಣ್ಗಳೊಳುಗುವ ತುಹಿನ ಕಳಿಕೆಗಳಿಂ (ಲೀಲಾವ. ೩-೨೦ ವ). [< ಸಂ. ಕಣಿಕಾ]

**ಕಳಿಕೆಗಚ್ಚುರ್** (ಕ್ರಿ). ಹೂವಿನ ಮೊಗ್ಗನ್ನು ಕಚ್ಚು, —ತಿನ್ನು: ಬಸಂತದೊಳ್ ಕಳಿಕೆಗಚ್ಚಿದ ಕೋಗಿಲೆಯಂತೆ (ಆದಿಪು. ೨-೯).
[ಕಳಿಕೆ$_{1}$ (= ಕಲಿಕೆ) + ಕಚ್ಚುರ್$_{1}$]

**ಕಳಿಗಿಸು** (ಕ್ರಿ). (?) : ಬಲೆಗಟ್ಟುವ ಬಿಲುದಿದ್ದುವರಂಬಿಗೆ ಹಿಳುಕಿಕ್ಕುವ ಪಿರಿತಳಗೆಯ್ವ ಕಳಿಗಿಸುವ ಕಾಡೆಜಿಯನ ನೆಜಿ ನೋಂತ ಬಲುಪೊಪ್ಪುವ ಬ್ಯಾಧರಲ್ಲಲ್ಲಿ (ಸೊಬಸೋ. ೧೮-೨೧) ; "ಕಳುಹಿಸು" (ಸೊಬಸೋ. ಕೋಶ). [< ಕಳುಹಿಸು$_{1}$]

**ಕಳಿಗೂಟ** (ನಾ). (ಎತ್ತಿನ ಹೆಗಲಿನಿಂದ) ನೊಗವು ಸರಿಯದಂತೆ ಹಾಕಿರುವ ಗೂಟ ; ತಡೆಗೂಟ ; ಕಡೆಗೂಟ.
[ಕಳಿ$_{4}$ (< ಕೞಿ$_{3}$) + ಗೂಟ (< ಗೂಂಟ)]

**ಕಳಿಗೆ$_{1}$** 'ಕಳಗ$_{1}$' ನೋ.

**ಕಳಿಗೆ$_{2}$** (ನಾ). ಕುಣಿಕೆ (?) : ಪಕ್ಕರಕ್ಕೆಯ ಕಂದವಕ್ಕರೆಯ ಕಡಿಯಾಣ ದುಕ್ಕಲದ ಮೊಗಮುಟ್ಟು ಮುಂತಾದ ಸಂಜೋಗಕಿಕ್ಕಿರ್ದ ಕಳಿಗೆಗಳೊಳೆಡವಿಡದೆ ಕೀಲಿಸಿದ ಮುಕ್ಕಣ್ಣ ರುದ್ರಾಕ್ಷೆಯಿಂ . . . ಹಲ್ಲಣಿಸಿದಕ್ಕಜದ ರಾಜಾಶ್ವವಾಶೀತಿ ಸಾಹಸ್ರ (ಚೇರಮ. ೧೧-೪೩). [?]

**ಕಳಿತಲೆ** (ನಾ). ಖಡ್ಗ ; ಕತ್ತಿ : ಇನ್ತನಪ್ಪಾತನುಜಯ್ವತೊಬ್ಬರ ಕಳಿತಲೆಯೊಳಿಜಿದಯ್ವತ್ತುಜುವರ ಸುರಿಗೆಯೊಳಿಜಿದೋನ್ (ಕಇಆ. ೩೯-೫೪-೫ ; ?). [< ಕಡಿತಲೆ]

**ಕಳಿನುಡಿ** (ಕ್ರಿ). ಸೊಕ್ಕಿನ ಮಾತಾಡು ; ಜಂಬಕೊಚ್ಚು : ಜಲಧಿ ಗಹನವೆ ನಿನ್ನೊಡನೆ ಹೊಕ್ಕಳವಿಗೊಡಗುವೆನೆಂದು ವಾಯಸ ಕಳಿ[ಪಾಠಾಂ. ಕುಳ]ನುಡಿದು ಹಾಜಿತ್ತು ಹಂಸೆಯ ಕೂಡೆ ಗಗನದಲಿ ಬಳಿಕ ತಲೆಕೆಳಗಾಗಿ ಸಾಗರದೊಳಗೆ ಬಿದ್ದುದು (ಕುವ್ಯಾಕ. ೯-೨೭). [ಕಳಿ$_{7}$ + ನುಡಿ$_{1}$]

**ಕಳಿನೊಗ** (ನಾ). ಕಳಿಗೂಟ ಸಹಿತವಾದ ನೊಗ ; ಕಡೆಗೂಟವಿರುವ ನೊಗ: ಕೈಮರದ ಕಳಿನೊಗ, ಸಂಪಿಗೆ ನೇಗಿಲು, ಹಾಲೆ ಮರದ ಹಿಡಿ . . . ಇವನ್ನು ಜೋಡಿಸಿ (ಜಾನಗೀ. ೯೦).
[ಕಳಿ$_{4}$ (< ಕೞಿ$_{3}$) + ನೊಗ]

**ಕಳಿಪು** 'ಕೞಿಪು$_{1}$' ನೋ.

**ಕಳಿಮಾವು** (ನಾ). ಒಂದು ಬಗೆಯ ಸಸ್ಯ : "ಮರುವಕಃ—ಮರುಗ, ಕಳಿಮಾವು, ಹಿರಿಯೆಲ" (ಓಷಧಿ. ೧೧೮).
[ಕಳಿ$_{0}$ + ಮಾವು]

**ಕಳಿಯಡಕೆ, ಕಳಿಅಡಕೆ** (ನಾ). ಬೇಯಿಸಿದ ಎಳಸಾದ ಅಡಕೆ; ಉತ್ತಮ ತರದ ಅಡಕೆ: ಬಿಳೀ ಚಿಗುರೆಲೆ ಕಳಿಯಡಕೆ (ಹುಟ್ಟಹ. ೧೦೧). **ಕಳಿಅಡಕೆ** : ಕಳಿಅಡಕೆ ಚಿಗುರೆಲೆ ಮೊದಲಾಗಬೇಕು (ಹಳ್ಳಿಬಾ. ೪೩). [ಕಳಿ$_{4}$ (< ಕೞಿ$_{3}$) + ಅಡಕೆ$_{1}$]

**ಕಳಿರಕ್ತ** (ನಾ). ಕೊಳೆತ ನೆತ್ತರು : ಸುತ್ತಿಹ ಹೊಲಸಿನ ಗಂಧವನಾ ಕಳಿರಕ್ತವವಾಸಮಲವ ಹಳೆವಸಿಯಂ ಮುತ್ತುವ (ಯೋಗಾಂವಿ. ೧-೩೮).
[ಕಳಿ$_{4}$ ? + ರಕ್ತ]

**ಕಳಿಲು** 'ಕೞಿಲೆ' ನೋ.

**ಕಳಿಲೆ** 'ಕೞಿಲೆ' ನೋ.

**ಕಳಿಲೆಬಿದಿರ್** 'ಕಳಿಲೆವಿದಿರ್' ನೋ.

**ಕಳಿಲೆವಿದಿರ್, ಕಳಿಲೆಬಿದಿರ್, ಕಳಿಲೆವಿದಿರು** (ನಾ). ಬಲಿಯದಿರುವ ಬಿದಿರು ; ಎಳೆಯ ಬಿದಿರು: ಕಳಿಲೆವಿದಿರ ಕಾಡಂ ಕರ್ವಾಳೆಯು ಹಳುವಂ ಮೊಗವಾಳೆಯ ಬಲ್ಗಾಡಂ ಬೆಳೆಗಸಕಿಲ ಬನವಂ ಜವನೋವದೆ ಕಮ್ಮರಿಗಡಿವಂತೆ (ಜಯಕಾ. ೬-೪೦). **ಕಳಿಲೆಬಿದಿರ್** : ಕಳಿಲೆಬಿದಿರ ಕುಡಿಯನು ಮುಜಿವಂದದಲಿ ಮುಜಿದು ಮಾಯದ ಮಡಿವಳನ ಮೊಳಕೈಗಳನೆರಡನು ಮುಜಿದು (ನೇಮಿಸಂ. ೧೬-೧೦೦). **ಕಳಿಲೆವಿದಿರು** : ಎಳೆಯ ಬಾಳೆಯುಕಾಯಿ ಚಿತ್ರಮೂಲಂ ಗಜಿಕೆ ಕಳಿಲೆವಿದಿರಿನ ನಾರು (ಸೂಪಶಾ. ೨-೩೪). [ಕಳಿಲೆ (< ಕೞಿಲೆ) + ಬಿದಿರ್$_{2}$]

**ಕಳಿಲೆವಿದಿರು** 'ಕಳಿಲೆವಿದಿರ್' ನೋ.

**ಕಳಿಲೇಱು** (ಕ್ರಿ). ಕಳಿಲಾಗು; ಹೊಡೆಯಾಗು: ಮೊಳೆಮೊಳೆತು ಕಳಿಲೇರ್ದುದೊಳಗೊಳಗೆ ಸುಳಿಮಿಳಿರ್ದೆಳದಳಿರ್ ಥಳಥಳಿಸುತಿಲೆಯಾಗಿ (ಪರಶು. ೧೨-೬). [ಕಳಿಲೆ (< ಕೞಿಲೆ) + ಏಱು$_1$ (< ಏಱ್$_1$)]

**ಕಳಿವಣ್** 'ಕೞಿವಣ್' ನೋ.

**ಕಳಿವಣ್ಣ** 'ಕೞಿವಣ್' ನೋ

**ಕಳಿವದ** 'ಕೞಿವದ' ನೋ.

**ಕಳಿವಱಿ** (ಕ್ರಿ). ೧. ಅತಿಶಯವಾಗು; ಮಿತಿಮೀರು: ಕಳಿವಱಿದು ಘೋರಪ್ರಹಾರದಿಂ ವೀರದಿಂ ಬಳಸಿ ಬಿದ್ದುದು ಮುಂದಿ (ಜೈ ಮಿ ಭಾ. ೨೬-೭); ಕಳಿವಱಿವ ಕೋಪದಿಂ ಮಂತ್ರಿ . . . ಚಂಡಿಕಾರ್ಜನೆಗೆ ನಡೆಯೆಂದು ಕಳುಹಿದೊಡೆ (ಜೈ ಮಿ ಭಾ. ೩೧-೫೨). ೨. ದಾಟು; ಆಚೆಗೆ ಹೋಗು: ಕಳಿವಱಿದು ಹಿಮಗಿರಿಯ ಮೂಲೆಗೆ ನಿಲುಕಿ ಸಕಲ ಮ್ಲೇಚ್ಛ ಭೂಪಾವಳಿಯ ಭಂಗಿಸಿ (ಕುವ್ಯಾಸ. ೬-೭).

[ಕಳಿ$_1$ (< ಕೞಿ$_1$) + ಪಱಿ$_1$]

**ಕಳಿವು$_1$** 'ಕೞಿವು' ನೋ.

**ಕಳಿವು$_2$** (ನಾ). ಏಣಿ; ಅಟ್ಟಣೆ (?): ಪೊಲನನೆಲ್ಲರುಮ್ಮೈದಿ ಬಿಲ್ಲರ ನಿಲಿಸಿ ಕಳಿವನು ಕಟ್ಟಿ ಮರಮೆಟ್ಟೊಲೆಯದೇಱಿಯೆ ಸಾತೆಯನು ನಿಂದೋಳಿಗಳ ಕಟ್ಟಿ (ಸಾಳ್ವಭಾ. ೫-೨೪). [?]

**ಕಳಿವು$_3$** (ನಾ). ಬರಡು; ಬಂಜೆ: ಮಳೆ ಬಾರದು ಬೆಳೆ ಬೆಳೆಯದು ಕಳಿವಾದವು ಕರೆವ ಹಯನು (ನೀತಿಸಾ. ೧೫೩).

[ಕಳಿ$_2$ (< ಕೞಿ$_2$) + -ವು]

**ಕಳಿವೆಡೆ** (?). (?): ತಳರ್ದಿರದೇಕಪಾರ್ಶ್ವನಿಯಮುಸ್ಥಿತಿ ದೃಷ್ಟಿಸುನಾಸಿಕಾಗ್ರದಿಂ ಕಳಿವೆಡೆ ಬಲ್ಪು ಬಲ್ಕಿರದೆ ಮೆಯ್ ಮಿಡುಕಾಡದೆ ಜೈನಭಕ್ತಿ ಸಂಚಳಿಸದೆ . . . ಆತ್ಮತತ್ವದೊಳ್ ನೆಲಸಿದ ಸತ್ಸಮಾಧಿವಿಧಿ ಜಕ್ಕಲೆ ನಾರಗಿದೆಕ್ಕಲಾವಣಂ (ಎಕ. VII, ಶಿಕಾರಿ. ೧೯೬-೭೪; 1212?). [?]

**ಕಳಿಸು$_1$** (ಕ್ರಿ). ಕಳವು ಮಾಡಿಸು; ಅಪಹಾರ ಮಾಡಿಸು; ಕದಿಸು: ಕಳಿಪಂ ಕಳ್ವನಗುರ್ವು ಪರ್ವೆ ಕೊಲಿಪಂ ಕೊಲ್ವಂ ಪರಸ್ತ್ರೀಯರಂ ಕೋಳಿಪಂ ಕೊಳ್ವನೆನಿಪ್ಪ ಪಾಪಿಯುಂ . . . ಘುಳುಮ್ಮನಿಱಿಗುಂ ಶ್ವಭ್ರಾಂತಮಂ ತಾಪಿನಂ (ಆದಿಪು. ೫-೮೧); ತುಱುವಂ ಕಳಿಸುವ ಕೃಷ್ಣೆಯ ನಿಱಿಯಂ ಪಿಡಿದುರ್ಚವೇಟ್ಟ (ಗದಾಯು. ೬-೧೦).

[ಕಳ್$_1$ + -ಇಸು$_3$]

**ಕಳಿಸು$_2$** (ಕ್ರಿ). ಕಳುಹಿಸು; ಕಳುಹು: ಆಳನ್ನು ಮನೆಗೆ ಕಳಿಸಿ ಒಬ್ಬನೇ ಬಂದಾಗ ಅವನಿಗೆ ಒಂದು ವಿಚಿತ್ರ ಕಣ್ಣಿಗೆ ಬಿತ್ತು (ಭಾರತಿ. ೪); ಆಕೆಯನ್ನು ಬಯ್ದು ಒಳಗೆ ಕಳಿಸಿ ಮಲಗಿಕೊಂಡೆ (ಸುವಸಂ. ೭೩).

[ಕಳಿ$_1$ (< ಕೞಿ$_1$) + -ಇಸು$_3$]

**ಕಳಿಹಿಸು** 'ಕಳುಹಿಸು' ನೋ.

**ಕಳಿಹು** (ನಾ). ಒಂದು ತೆರಿಗೆ (?): ನೂಲಹಬ್ಬಕ್ಕೆ ಮನೆಯಲ್ಲೊಂದು ಕಳಿಹು ಜೇಡರಲ್ಲಿ ಯಿನ್ತಿನಿತು . . . ಹೆಗ್ಗಡೆ ಲಕುಮಯ್ಯಂ ಕೊಟ್ಟ ವ್ರಿತ್ತಿ (ಎಕ. V, ಹಾಸನ. ೬೬-೪೭; ಸು. 1170). [?]

**ಕಳಿಳೆ[ಲ]** (ನಾ). ಸಾವಿಲ್ಲದವನು; ದೇವತೆ (?): ಕಲಿರೂಪಂ ಅಲ್ಲಿಂ ಬನ್ದು ಕಳಿಳೆ[ಲ]ರ ಲೋಕಕ್ಕೆ ಸನ್ದ (ಎಕ. VIII, ಸೊರಬ. ೨೪೦-೭; 954). [ಕಳಿ$_1$ (< ಕೞಿ$_1$) + ಇಲ್$_1$ + -ಅ$_7$]

**ಕಳಿಱ** (ನಾ). ಒಬ್ಬಾತನ ಹೆಸರು: ಕಲಿದೋರನಾನೋಡಿಸಿ ಪಲರಾ ನಿಱಿದು ಕೊನ್ದು ಗೆಲ್ದು ತಾನುಮ್ಮಡಿದು ಕಳಿಱನ್ ಸುರಾಲಯಮೇಱಿದಾನ್ (ಎಕ. VIII, ಸೊರಬ. ೫೪೨-೬; 800 ?). [?]

**ಕಳು$_1$** 'ಕಳ್$_1$' ನೋ.

**ಕಳು$_2$** 'ಕಳ್$_4$' ನೋ.

**ಕಳು$_3$** (ನಾ). (ಕರಾ) ನದಿಯನ್ನು ದಾಟುವ ಸ್ಥಳ; ಹಾಯ್ಗಡ: ಹೊಳೆಯ ಕಳು ಬಂದಿತು. ನದಿಯಲ್ಲಿ ಇಳಿತದ ನೀರು ಕಡಲಿಗೆ ಧಾವಿಸುತ್ತಿತ್ತು (ಮುರಮು. ೭೯). [< ಕೞಿ$_1$]

**ಕಳು$_4$** (ನಾ). ಒಂದು ತೆರಿಗೆ (?): ಮಗ್ಗದೆಱೆ ಹೊಗೆದೆಱೆ ಲವಣ ಪಂಚಕಾರುಕ ಕಳು . . . ಮುಖ್ಯವಾದ ಸರ್ವ್ವ ಆಯವನು (ಎಕ. IX, ಚನ್ನಪ. ೬೬-೧೪; 1288); ಆನೆಗಳಿಯ ಒಳಗಣ ಕಳಿಂಜಿಯ ಹಿರಿಯ ಮನೆಯ ಕಳು ತುಳುವ ಹೆಗ್ಗಡಿತಿಗೆ ಯಿರಿಸಿದ ಅರುವಾರದ ಬಾಳಿನ ವಿವರ (ಸೌಇಇ. IX-ii, ೪೨೪-೪೫; 1401). [?]

**ಕಳುಂಗೊಡು** (ಕ್ರಿ). ದಾನವಾಗಿ ಕೊಡು; ಆದಾಯವನ್ನು ಬಿಡು (?): ದೇವರ್ಗ್ಗೆ ನನ್ದಾದೀವಿಗೆ ನಡವಂತಾಗೆ ತಿಂಗಳ್ಗೆ ಪೊಂನ ಹಾಗವಡ್ಡಿಯೊಳೂರ್ಗ್ಗೆ ಕಳುಂಗೊಟ್ಟ ಗದ್ಯಾಣಂ ನಾಲ್ಕು (ಎಕ. IX, ದಾವಣ. ೧೪೦-೧೬; 1060). [ಕಳು$_4$ + ಕೊಡು]

**ಕಳುಂಬು** (ನಾ). ಕರೆಬೀಳುವಿಕೆ; ಹಾಳಾಗುವಿಕೆ; ಕೆಡುವಿಕೆ (?): ಉದಯಿಪ ರಾಸಿಯಂ ದಿನಪನೀಕ್ಷಿಸೆ ಪುಟ್ಟಿದ ಬಾಟಿ ಸಾಗು ಮತ್ತದ ಶನಿ ನೋಡೆ ಕಾಡಿಗೆ ಕುಜಂ ನಡೆನೋಡೆ ಕಳುಂಬು [ಪಾಠಾಂ. ಕಳಂಬು, ಕಳಂಜು] ರಾಹು ನೋಡಿದೊಡೆಲೆ(ದೆ) ಬಾಡುಗುಂ . . . ಇದ ನೋಡ ಬಿತ್ತಿಸುವ ಲಗ್ನಕೆ ದೋಷಮನಿಷ್ಟ ಬಿಟ್ಟುಗಾ (ಜಟ್ಟಮು. ೯-೧೮). 'ಕಿಲುಂಬು' ಪರಾ. [ದೇ. ‖ ತಮಿ. ಮಲ. ಕಳಿಮ್ಬು]

**ಕಳುಕ್** (ನಾ). ಒಂದು ಅನುಕರಣ ಶಬ್ದ: ಮನಂ ಕ [ಪಾಠಾಂ. ಕೊ] ಳುಕನೆ ಮುಱುಗಿ ನೆಗೆದ ಹರಿಯಂ ನುಡಿದಂ (ಪಂಪಭಾ. ೧೧-೧೧೨).

[ದೇ. ‖ ತಮಿ. ಕಳುಕ್; ತೆಲು. ಗಳುಕ್ಕು]

**ಕಳುಕು** (ನಾ). ಒಂದು ಬಗೆಯ ತೆರಿಗೆ: ನಲ್ಲೆತ್ತು ಕಳುಕು ಕಂಡಿಕೆವಣ ಖಾಣ ಸಿಬನ್ದಿ ನೂಲ ಹದಿಕೆ (ಎಕ. VI, ತರೀಕೆ. ೨೦-೨೪; 1185); ಕಳುಕು ಕಂಡಿಕೆವಣ ಆನೆಯ ಸೇಸೆ ಕುದುರೆಯ ಸೇಸೆ (ಮೈಆರಿ. ೧೯೪೦, ೩-೨೫; 1215); ನಿಬಂಧಪಣ ೫ ಹಾ ಕಳುಕು ಪಣ ೧ ಹಾ (ಎಕ. V. ಬೇಲೂರು. ೭೪-೧೩೭; 1261); ಕೊಳು ಖಾಣ ಕಳುಕು ಬೆದ್ದ . . . ಎಲ್ಲಾ ಕಿಱುಕುಳಂಗಳು (ಮೈಆರಿ. ೧೯೪೨, ೨೬-೨; 1270). [?]

**ಕಳುಗುಡಿ$_1$** 'ಕಳ್ಗುಡಿ' ನೋ.

**ಕಳುಗುಡಿ$_2$** (ನಾ). ಹೆಂಡಕುಡಿಯುವವನು; ಮದ್ಯಪಾನಮಾಡುವವನು: ಜವುಳಿಗ ಭಂಗಿಗ ಕಳುಗುಡಿ ಜೂಜಿಗ ಸುಂಕಿಗ ತಲೆಬೋಳಿಸಿ (ಕಂಕಿ. ೧೦೪-೧೦). [ಕಳು$_0$ (< ಕಳ್$_3$) + ಕುಡಿ$_2$]

**ಕಳುಚು** 'ಕಳಿಂಚು' ನೋ.

**ಕಳುಪು** 'ಕೞುಪು$_1$' ನೋ.

**ಕಳುವ** (ನಾ). ಸೇವಕ; ದೂತ (?): ಕೇಸವದೇವ ಒಡೇರ ಪದದ ಕಳುವ ದಂಡಿವಳ್ಳಿಯ ಬಿರಿದು ಬಿ[ಲುಂ]ಕೆಕಾರ ಬೀಡಿನ ಹನುಮ (ಕಇ. I, ೪೨-೮; 1423); ಕೇಸವದೇವ ಒಡೆಯರ [ಪದದ] ಕಳುವ ಲೊಕ್ಕಿಯ ಬಳಿಯ ಬಿರಿದು ಮಾರ್ಪಡೆಗಿಡಿಗ ಮಲೆವರಗಂಡ (ಕಇ. I. ೪೪-೮; 1423). [?]

**ಕಳುವಡೆ** (ನಾ). ಒಂದು ಬಗೆಯ ತೆರಿಗೆ (?): ಈ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ . . . ಮಾವಡೆ ಮರವಡೆ ಕಳುವಡೆ ನಾರಡೆ ಬಳುಕುನೀರು ಊರಸಂತೆ ಮೊದಲಾದ ಹಲ ಉಪಾಧಿಗಳು ಸಹ . . . ಸರ್ವಮಾನ್ಯವಾಗಿ (ಸೌಇಇ. IX-ii, ೪೭೬-೬; 1472). [?]

**ಕಳುವು$_1$** 'ಕೞುವು$_1$' ನೋ.

**ಕಳುವು$_2$** (ನಾ). ಬಲಿ; ಬಲಿಗಾಗಿ ಇಟ್ಟ ಪಿಂಡ: ಯಸ್ಯ - ಯಾವನ, ಬಲಿಂ - ಕಳುವನ್ನು, ಬಲಿಭುಜಃ - ಕಾಗೆಗಳು, ನ ಉಪಭುಂಜತೆ - ಮುಟ್ಟುವುದಿಲ್ಲ (ಬಾಹಟೀ. ೨-೫-೬೨ ವ). [?]

**ಕಳುವೂಟ,** ಕಳವೂಟ, ಕಳಹುವೂಟ, ಕಳಹೂಟ (ನಾ). ಮದುವೆಯಾದ ಬಳಿಕ ಬೀಗರನ್ನು ಕಳಿಸಿಕೊಡುವಾಗ ಹಾಕುವ ಊಟ; ಬೀಗರೂಟ: ಮದುವೆಯ ಕೊನೆಯ ದಿನದ ಕಳುವೂಟ ಒಂದಲ್ಲದೆ ಅನೇಕರೀತಿ ಗೊಂದಲಮಯವಾಗಿತ್ತು (ವೈನಿ. ೨೬) **ಕಳವೂಟ:** ಕಳವೂಟವು ಮದುವೆಯ ಕಾರ್ಯಕ್ರಮವನ್ನು ಕೊನೆಗಾಣಿಸಿತು (ಕಾರುಷ. ೧೫). **ಕಳಹುವೂಟ:** ಕಳಹುವೂಟ, ಅಳಿಯನನ್ನೂ ನಿಬ್ಬಣ ತೆರಳಿ ಸಾಗ ಕಳುಹಿಸುವುದು, ಇದೆಲ್ಲಾ ಸಾಂಗವಾಗಿ ಜರುಗಿದವು (ಮಾಮರಾ. ೭೪). **ಕಳಹೂಟ:** ಮದಿವಿ ಮುಗೀತು. ಎಲ್ಲಾರಿಗೂ ಇನ್ನ ಕಳಹೂಟ (ಅಮನಿ ೫೯).

[ಕಳುವು$_3$ (< ಕಟು್ಪು$_1$) + ಊಟ]

**ಕಳುಹಣ** (ನಾ). ಕಳಿಸುವಿಕೆ: "ಚಟ, ಚಿಟ, ಚುಟ – ಪ್ರೇಷ್ಯೇ, ಮಾನೇಚ, ಕಳುಹಣದೊಳಂ, ಅಳತೆಯೊಳಂ" (ಶಾಶಕ್ಕ. ೧೮).

[ಕಳುಹು (< ಕಟು್ಪು$_1$) + -ಅಣ]

**ಕಳುಹತ್ತು** (ಕ್ರಿ). (?): ಕೆಲರ್ ಕಳುಹತ್ತಿ ತೆರಳಿದರು (ಸೌಗಂಧಿ. ೭೯-೨).

[?]

**ಕಳುಹಿಸು,** ಕಳಿಹಿಸು (ಕ್ರಿ). ಕಳಿಸು; ಸಾಗಿಸು: ಚತುರಂಗಬಲವನು ಬೇಗದಲಿ ಕೊಳುಗುಳಕೆ ಕಳುಹಿಸು (ಕುವ್ಯಾಭೀ. ೧-೯); ವಿದೇಹ ಭೂಪನ ಚರರ ಕಳುಹಿಸಿ [ಪಾಠಾಂ. ದ] (ತೊರರಾ. ೧-೧೨-೩); ಊಳಿಗ ಜನವಂನ ಕಳುಹಿಸಿ (ಎಕ. VII, ಶಿವಮೊ. ೧೭-೧೩; 1696); ಅವನ ಹೆಂಡತಿ ಅವನನ್ನು ಶ್ರೀ ಕೃಷ್ಣನೆಡೆಗೆ ಕಳುಹಿಸಿದಳು (ಶಾಂಪಜೀ. ೨೮). **ಕಳಿಹಿಸು:** ಪರಭಾರೆ ಸ್ಟೇಶನ ಮೇಲೆ ಕಳಿಹಿಸಲಿಕ್ಕೆ ಸೋಯಿ ಆಗುತ್ತದೆ (ಮುಂಬವ್ಯಾ. ೧೮೬).

**ಕಳುಹಿಸಿಕೊಳ್** = ಬೀಳ್ಕೊಳ್ಳು; ನಿರೂಪ ತೆಗೆದುಕೊಳ್ಳು: ಆ ನದೀಸುತನಡಿಗೆಱಗಿ ರವಿಸೂನು ಕಳುಹಿಸಿಕೊಂಡು ಬಹಳ ಮನೋನು ರಾಗದಲೈದಿದನು (ಕುವ್ಯಾದ್ರೋ. ೧-೩೨); ಭರತನಾ ಸಹಭವ ಸಹಿತ ನಿಜಪಿತನ ಬೀಳ್ಕೊಂಡವನಿಜೇಶನ ಕಯ್ಯ ಕಳುಹಿಸಿಕೊಂಡು ಕೈಕೆಯನ ಭವನಕ್ಕೈದಿದನು (ತೊರರಾ. ೨-೧-೪); ವೃಂದಾರಕರುಗಳ ಹಿಂಡು ಬದುಕಿತೆಂದು ಜೀವನು ಕಳುಹಿಸಿಕೊಂಡಡರಿದ ಸುರಪುರಿಗೆ (ಮೋಹತ. ೫-೬೨).

[ಕಳುಹು (< ಕಟು್ಪು$_1$) + -ಇಸು$_3$]

**ಕಳುಹು** 'ಕಟು್ಪು$_1$' ನೋ.

**ಕಳೆ$_1$** (ಕ್ರಿ). ೧. ಬಿಡು; ತೊರೆ; ವಿಸರ್ಜಿಸು: "ಕಳೆ – ವಿಸರ್ಜನೇ, ಕಳಾಯಾಂ ಕ್ಷಳಂ" (ಶಮಧಾ); ಕಳೆಕಳೆ ಹರಿಗೆತ್ತಿದನರ್ಘ್ಯದರ್ಘ್ಯಮಂ ಧರ್ಮಸುತಾ (ಪಂಪಭಾ. ೬-೪೨); ಸಹಸ್ರಭೋಜನ ಮಾಡಿ ಬಲಿಯಂ ಕಳೆದು (ಎಕ. IV, ಹೆಗ್ಗಡ. ೧೬-೭; 1021); ಬಸವಂ ಜನ್ಮದುರಾಶೆಯಂ ಕಳೆದು ಕರ್ಮಾರಂಭವಂ ನೀಗಿ (ಬಸರ. ೩-೧); ನಿನ್ನ ಭಾಗ್ಯವ ನೊದೆದು ಕಳೆ ಕೇಡಾವುದೆಮಗೆ (ಕುವ್ಯಾಕ. ೫-೨೭). ೨. (ಕಸ, ಕೊಳೆ, ದೋಷ ಮೊದಲಾದುವನ್ನು) ತೆಗೆದುಹಾಕು; ಹೋಗಲಾಡಿಸು: ಕಸಮಂ ಕಳೆದು ಬಿತ್ತಿ ಬೇಲಿಯನಿಕ್ಕಿ (ಧರ್ಮಾಮೃ. ೭-೭೫); ಕಪ್ಪು ಕಿಂಚಿತ್ತಿರೆ ಕಳೆದಿನಿದಮೃತವ ಚಪ್ಪರಿದೀಂಟದಿರ್ದಪರೆ (ಮೋಹತ. ೧-೨೦). ೩. ನಿವಾರಣೆಯಾಗು; ಹೋಗು: ಮುನಿವಧದೋಷಮಾವ ತೆಱದಿಂ ಕಳೆಗುಂ (ಕಾದಂಪೂ. ೭೭೬). ೪. ತಳ್ಳು; ಹೊರದೂಡು; ಆಚೆಗೆ ನೂಕು: ಬ್ರಹ್ಮಚರ್ಯಹೀನರನೀ ಸಮಯದ ಗೊರವರ್ಕಳ್ ಕಳೆವೊರ್ (ಎಇ. VII, ೨೦೧-೧೯; 865); ಮನೆಯಿಂ ಪೆಂಡತಿಯನಟ್ಟಿ ಕಳೆದೊಡೆ (ವಡ್ಡಾರಾ. ೭೭-೧೬); ಈ ನಾಣಿಲಿ ಪಾರ್ವನ ನೆಟಿದು ಕಳೆಯಿಮೆಂಬುದುಂ (ಪಂಪಭಾ. ೨-೪೮ ವ); ಎನ್ನ ಮೆಯ್ಯ ದುರ್ಗಂಧಕ್ಕೆ ಪೇಸಿ ಕಂಡರೆಲ್ಲಮೆಟುಸು ಕಳೆಯೆ (ಚಾವುಂಪು. ೨೬-೭). ೫. ಬಟ್ಟೆ, ಆಭರಣ, ಮೊದಲಾದುವನ್ನು ಬಿಚ್ಚಿ ತೆಗೆ,—ಕಳಚು: ಉಟ್ಟುದಂ ಕಳೆಯದಿರ್ (ಕಾವ್ಯಸಾ. ೯೯೪ ಶೂದ್ರಕ); ಸುಯೋಧನಂ . . . ತೊಟ್ಟ ಸನ್ನಣಮನಪ್ಪೊಡಂ ಕಳೆಯದೆಯುಮರಮನೆಗೆ ಪೋಗದೆ (ಪಂಪಭಾ. ೧೧-೮೨ ವ); ಕೃತಕ ಪುರುಷಾಕಾರಚಿಹ್ನೆಗಳಂ ಕಳೆಯಲ್ ಮಱೆದು (ಪಂಚತಂ. ೧೯೫-೩); ಹಾವುಗೆಗಳಂಕಳೆದು ಮೆಯ್ಯಿಕ್ಕಿ (ಸಿದ್ಧರಾ. ೧-೩೬); ಮಣಿ ಭೂಷಣಂಗಳ ಕಳೆದು (ಮೋಹತ. ೨೧-೨೦); ಹಲವು ಜನುಮಗಳ ಬಟ್ಟೆ ಕಳೆವುದಿದೆ, ಕೆಲವಂ ಕಳೆದರು ಉಳಿವುದೊಂದು ಇದೆ (ಅರಳು. ೨೬೧-೧೫). ೫. ಒರಸು; ಉಜ್ಜಿ ತೆಗೆ; ತೊಡೆ: ಪೂರ್ವಾವನೀಪಾಲಪ್ರಶಸ್ತಿಗಳೊಳೊಂದೊಂದಂ ದಂಡರತ್ನದಿಂ ಸೀಂಟಿ ಕಳೆದು ನಿಜಪ್ರಶಸ್ತಿಗೆಡೆಮಾಡಿ (ಆದಿಪು. ೧೩-೭೧ ವ); ಅಪರಾಜಿತಾಬ್ಜಮಿತ್ರಂ ಕಳೆದಂ . . . ಅರಸಿಯರ ಮುಖಾಬ್ಜಶೋಕ ಹಿಮಜಲಮಂ (ಶಾಂತಿಪು. ೧-೯೫); ತನ್ನ ಮೇಲುದಱ ಸೆಱಂಗಿನಿಂದಾತನ ತಲೆಯ ಮೇಲೆ ಕೆದಱರ್ದ ಭೀಮಸೇನನ ಚರಣರಜಮಂ ತೊಡೆದು ಕಳೆದು (ಗದಾಯು. ೯-೨೨ ವ). ೬. ನಾಶಮಾಡು: ಪಗೆವರ ಗಂಟಲ ಬಳೆಯನೊಡೆದು ಕಳೆವುದನಸು ಕರಿಸುವಂತೆ ತೀವಿ ತೊಟ್ಟ ಮುಂಗೈಯ ಬಳೆಗಳ ನೊಡೆದು ಕಳೆದು (ಪಂಪಭಾ. ೮-೧೦೦ ವ); ಪುಣಿಸೆಯ ಕೊನರುಮುಪ್ಪುಂ ಕಣ್ಬೇನೆಯಂ ಕಳೆವುದು (ಧರ್ಮಾಮೃ. ೯-೧೦೮); ವರ ಹುತಾಶನಗಿಕ್ಕಿ ಕಳೆವೆನು ವರ ಕುಮಾರಕರಿಲ್ಲದಂಗವನು (ಕುವ್ಯಾಆ. ೨೫-೨೬). ೭. ಆರಿಸು; ಶಮನಗೊಳಿಸು; ಪರಿಹರಿಸು: ಸುಟುದೂದುವ ಗಾಳಿ . . . ಕಾಂತೆಯರ್ಕಳ ಪರಿಶ್ರಮಮುಮಂ ಕಳೆದತ್ತು (ಕಾವ್ಯಸಾ. ೭೮ ಶೂದ್ರಕ); ಅನುಶಯಮಾದುದಿಂದೆನಗೆ ಸಂಶಯಮುಮಂ ಕಳೆ ಕೌರವಾಂತಕಾ (ಗದಾಯು.೧-೫೬); ನಿನ್ನ ಕಂಗಳ ಬಱಿನ ಕಳೆವೆನು ಬೆನ್ನಲಿರು ನೃಪ ನೋಡು (ಕುವ್ಯಾದ್ರೋ. ೧೫-೬); ನಿನ್ನಯ ಮುನಿಸನು ಕಳೆವುದಕೆನ್ನಳವೆ (ಕಂನವಿ. ೬-೧೭೧).

**ಕಳೆದಿಡು** = ಬಿಟ್ಟುಕೊಡು; ತ್ಯಾಗಮಾಡು: ಕಳೆದಿಡುವುದೆ ಕಷ್ಟಂ ಭೂತಳರಾಜ್ಯವಿಮೋಹಮಚಿರರುಚಿಸಂಚಳಮಿಂತಳವುಗಿಡಿಸಿದುದು ಮನುಕುಲತಿಳಕನುಮಂ (ಆದಿಪು. ೧೪-೧೨೧). **ಕಳೆದುಕೊಳ್** = ೧. ಸ್ವೀಕರಿಸು; ತೆಗೆದುಕೊಳ್ಳು; ಕೈಗೆತ್ತಿಕೊಳ್ಳು: ಆ ಲೇಖನವಂ ಕಳೆದುಕೊಂಡು ನಿಮಿರ್ಚಿ ನೋಟ್ಪನ್ನೆಗಂ (ಕಾದಂಪೂ. ೮೦೦); ಪೊನ್ನೆಲ್ಲಮನೀತನೆ ಕಳೆದುಕೊಂಡುದರ್ಕೆ ಸಾಕ್ಷಿಯುಂಟು (ಪಂಚತಂ. ೧೨೧-೧೧); ಹರಿ ಕಳೆದುಕೊಂಡನು ನರಗೆ ಕೊಟ್ಟನು ಹೋಳಿಸಿದ ಕರ್ಪುರದ ವೀಳೆಯವ (ಕುವ್ಯಾದ್ರೋ. ೧೦-೩೬). ೨. ಸೆಳೆದುಕೊಳ್ಳು; ಒತ್ತಾಯದಿಂದ ಕಿತ್ತುಕೊಳ್ಳು: ಅತಂ ನೀತಿಬಾಹ್ಯನಪ್ಪುದಱಿಂ ಪೂರ್ವಾಪರ ವಿಚಾರ ವಿಕಳನಾಗಿ... ಅನೇಕರ ವೃತ್ತಿ ಪ್ರಪತ್ತಿಗಳಂ ಕಳೆದುಕೊಂಡು (ಪಂಚತಂ. ೨೮-೪); ಅಂತು ಭುಜಬಲಾಡಂಬರದಿನಂಬರಂಗಳಂ ಕಳೆದುಕೊಳ್ವುದುಂ (ಜಗವಿ. ೬-೯ ವ). ೩. ನೀಗಿಕೊಳ್ಳು; ಇಲ್ಲದಂತೆ ಮಾಡಿಕೊಳ್ಳು: ಅವುಗಳ ಮೂಲಸ್ವರೂಪವನ್ನು ಕಳೆದುಕೊಳ್ಳದೆ ಉಳಿಸಿಕೊಂಡವು (ದ್ರಾವಿವಿ. ೩೦). [ದೇ. ‖ ತಮಿ. ಕಳೈ; ಮಲ. ಕಳ; ತುಳು. ಕಳಿ, ಕಳೆ]

**ಕಳೆ$_2$** 'ಕಟು್$_1$' ನೋ.

**ಕಳೆ$_3$** (ನಾ). ೧. ಮುಖ್ಯಬೆಳೆಯ ನಡುವೆ ಬೆಳೆಯುವ ಹುಲ್ಲು,—ಕಸ: ಕಿತ್ತು ಕಳೆವಂ ಕ್ಷುತ್ಪಿಪಾಸಾದಿ ಕಳೆಗಳಂ (ಇಳಿರ. ದೇ. ೪೮-೨೨); ಗಂಧಶಾಲಿಯ ಬತ್ತದೊಳಗಿರ್ದ ಕಳೆಯ ಕೀಳ್ವಂದದೆ ಖಳರ ತೀರ್ಕಣಿಸಿ (ಮೋಹತ. ೪೨-೭೩); ಬೇಡವಾಗಿರುವ ಗಿಡವನ್ನು ಕಳೆಯೆಂದು ಭಾವಿಸಬೇಕು (ತರಬಿ. ೧೨). ೨. (ಅಲಂ) ವ್ಯರ್ಥವಾದದ್ದು; ನಿಷ್ಪ್ರಯೋಜಕವಾದದ್ದು: ಇಂದಿನ ಸಾಹಿತ್ಯ ಸೃಷ್ಟಿಯಲ್ಲಿ ಕಳೆಯೇ ಜಾಸ್ತಿ ಇದೆ (ರೂಢಿ).

[ದೇ. ‖ ತಮಿ. ಕಳೈ; ಮಲ. ಕಳ; ಕೊಡ. ಕಳೆ; ತೆಲು. ಕಲುಪು]

**ಕಳೆ$_{4}$** (ನಾ). ಹೆರಿಗೆಯ ಬೇನೆ, —ನೋವು: ರಮಾಬಾಯಿ ದಿನ ತುಂಬಿದ ಬಸುರಿ. ಅಂದಿನ ಮುಂಜಾವಿನಿಂದಲೂ ಅವರಿಗೆ ಕಳೆ ಬರತೊಡಗಿದ್ದವು (ಶ್ರೀರಂಗ. ೧೮). [ದೇ. ./ ತಮಿ. ಕಳೈ]

**ಕಳೆ$_{5}$** 'ಕೞಿ$_{2}$' ನೋ.

**ಕಳೆ$_{6}$** 'ಕಲೆ$_{3}$' ನೋ.

**ಕಳೆಕಟ್ಟು** 'ಕಳೆಗಟ್ಟು' ನೋ.

**ಕಳೆಕೀಳು** 'ಕಳೆಗೀಳ್' ನೋ

**ಕಳೆಗಟ್ಟು**, ಕಳೆಕಟ್ಟು (ಕ್ರಿ). ೧. ಸೊಗಸು ಹೆಚ್ಚಾಗು; ಬಣ್ಣವೇರು ; ಮನೋಹರವಾಗು : ನಾಲ್ಕಾರು ದಿನದ ಲೋಲಾನ ಸಹವಾಸದಿಂದ ಕಳೆಗಟ್ಟಿ ಹುಡುಗಿತನದ ಸಿಂಗಾರ ಮಿರುಗಿಡುತ್ತಿದ್ದಿತು (ಜಯಂತ. ೪೧೫) ; ಅವನಿಂದ ತನ್ನ ವೃಂದವಾದನಕ್ಕೆ ವಿಶೇಷ ಕಳೆಗಟ್ಟುತ್ತಿದೆಯೆಂಬ ಸತ್ಯವನ್ನು ಅರಿತನು (ಫಲಸಂ ೩೪ **ಕಳೆಕಟ್ಟು** : ೧. ಶೃಂಗಾರವು ಸರ್ವಜನಪ್ರಿಯವಾದ ರಸ. ಅದನ್ನು ವರ್ಣಿಸದಿದ್ದರೆ ಕಳೆಕಟ್ಟುವುದಿಲ್ಲ (ಭಾರದ. ೪೪೮). **೨.** ಸೊಬಗನ್ನು ಒದಗಿಸು ; ಸೊಗಸನ್ನು ಉಂಟುಮಾಡು : ಅವನ ಪಾತ್ರವಂತೂ ನಾಟಕಕ್ಕೇ ಕಳೆಕಟ್ಟು ಪಂತಿತ್ತು (ಆಲಹೂ. ೧೨).

[ಕಳೆ$_{6}$ (= ಕಲೆ$_{3}$) + ಕಟ್ಟು$_{1}$]

**ಕಳೆಗಳೆ** (ಕ್ರಿ). ಕಾಂತಿಗುಂದು ; ಬಣ್ಣಗೆಡು : ಪೂರ್ವಾದ್ರೀಂದ್ರದೊಳ್ ಚಂದ್ರಿಕೆ ಕಳೆಗಳೆದೀಗಳ್ಪಿಡಂಮೆಟ್ಟಿ ಪೋಗುತ್ತಿದೆ (ರಾಜಶೇ. ೧೩-೪೫).

[ಕಳೆ$_{6}$ (= ಕಲೆ$_{3}$) + ಕಳೆ$_{2}$ (< ಕೞಿ$_{1}$)]

**ಕಳೆಗೀಳ್**, ಕಳೆಕೀಳು, ಕಳೆಗೀಳು (ಕ್ರಿ). ಹುಲ್ಲು, ಕರುಕೆ ಮೊದಲಾದವನ್ನು ಕೀಳು; ಕಸವನ್ನು ತೆಗೆದುಹಾಕು : ಅಗೆವೊಯ್ವ ಕಳೆಗೀಳ್ವ ಬೆದೆಯ ಬಿಚ್ಚುವ ನೀರ ಬಗೆಯುಱಿದೂಡುವ (ಕುರಾಸಾಂ. ೨-೩೫). ಕೆಯ್ಯೊಳಗೆ ಕಳೆಗೀಳುತಿರೆ ಕಂಡು (ನಂಬಿರ. ೧೧-೬೩). **ಕಳೆಕೀಳು** : ಸಾಲುಗಳ ಮಧ್ಯದಲ್ಲಿ ಕಳೆಕೀಳುವುದನ್ನು . . . ಎತ್ತುಗಳ ಸಹಾಯದಿಂದಲೇ ಮಾಡಬಹುದು (ವ್ಯವಮ. ೨೧) ; ಹೊಲದಲ್ಲಿ ಕಳೆ ಕೀಳುತ್ತಿದ್ದ ರೈತರು (ಪುನರು. ೨೬೩). **ಕಳೆಗೀಳು** : ಪೊಜವೊಳಲ ಗದ್ದೆಗಳ ಕೆಸಱೊಳಗೆ ಕಳೆಗೀಳುತಿರಲು (ಸೌಂದಪು. ೧೧-೧೨).

[ಕಳೆ$_{3}$ + ಕೀಳ್$_{1}$ (< ಕೀೞ್$_{1}$)]

**ಕಳೆಗೀಳು** 'ಕಳೆಗೀಳ್' ನೋ.

**ಕಳೆಗುಂದಿಸು** (ಕ್ರಿ). ಕಾಂತಿಹೀನವಾಗುವಂತೆ ಮಾಡು ; ಕುಗ್ಗಿಸು ; "ಮಸುಳಿಸು" (ಗಂಗಾಮ.೨೫೨).

[ಕಳೆಗುಂದು (< ಕಲೆಗುಂದು) + -ಇಸು$_{3}$]

**ಕಳೆಗುಂದು** 'ಕಲೆಗುಂದು' ನೋ.

**ಕಳೆಗೆಡು** (ಕ್ರಿ). ಕಾಂತಿಹೀನವಾಗು ; ಬಣ್ಣಗೆಡು ; ನಿಸ್ತೇಜವಾಗು : ಚಿಂತೆಯನಾಳ್ದಂತೆವೊಲೋಷಧೀಶ್ವರಂ ಕಳೆಗೆಟ್ಟಂ (ರಾಜಶೇ. ೧೨-೧೩); ಈ ಮಗುವಿನ ದೇಹ ಕಳೆಗೆಟ್ಟು ಕಟ್ಟಿಗೆಯಂತಾಗಿದೆ (ವಚಭಾ. ೩೪೩) ; ಅಮಲನು ಕಳೆಗೆಟ್ಟ ಮುಖ ಮಾಡಿಕೊಂಡು ಹೊರಟುಹೋದನು (ಇಪ್ಪಕ. ೨೬೪).

[ಕಳೆ$_{6}$ (=ಕಲೆ$_{3}$) + ಕೆಡು$_{1}$]

**ಕಳೆಗೆದಱು** (ಕ್ರಿ). ಚೆಲುವನ್ನು ಬೀರು ; ಕಾಂತಿಯನ್ನು ಸೂಸು : ಮಾರುತಸ್ಪರ್ಶದಿಂ ಸೋಗೆಗಳ ಕಣ್ಗಳ ಕಳೆಗೆದಱುತಿಹ ಶಿಖಿಗಳಿಂ . . . ಸತ್ಯೇಂದ್ರನೆಸೆದಂ (ಭಾವಚಿಂ. ೪-೨೦).

[ಕಳೆ$_{6}$ (= ಕಲೆ$_{3}$) + ಕೆದಱು$_{1}$ (< ಕೆದೆಱ್$_{1}$)]

**ಕಳೆಗೇಡಿ** (ನಾ). ಕಳೆಯಿಲ್ಲದವನು; "ಅಸಡ್ಡಾಳ, ಕುರೂಪಿ" (ಜಾನಕೋ. ೩೬). [ಕಳೆ$_{6}$ (= ಕಲೆ$_{3}$) + -ಕೇಡಿ$_{1}$]

**ಕಳೆಗೊಡು** (ಕ್ರಿ). ಕಾಂತಿಯನ್ನು ಉಂಟುಮಾಡು ; ಸೊಗಸುಗೊಳಿಸು ; ಚೆಲುವಾಗಿಸು : ಕಳೆಗೊಡದ ನೆಲಸಿಲ್ಲ ಗೈರಿಕ ಬೆಳಗದಚಲಗಳಿಲ್ಲ (ಬಜ್ಜಪು. ೧೭-೫) ; ಬಂದಳು ಹೆಂಡತಿ ಜೀವಕೆ ಕೆಳೆಗೊಟ್ಟು ಕಳೆಗೊಟ್ಟರ್ದಳ್ (ನಲ್ಮೆ. ೪) ; ಪಕ್ಕವಾದ್ಯದವರೂ ತಮ್ಮ ಸಂಪೂರ್ಣ ಸಾಮರ್ಥ್ಯದಿಂದ ಕಚೇರಿಗೆ ಕಳೆಗೊಡುತ್ತಿದ್ದರು (ಸಂಗೀತ. ೫೫).

[ಕಳೆ$_{6}$ (=ಕಲೆ$_{3}$) + ಕೊಡು$_{1}$]

**ಕಳೆಗೊಳ್** (ಕ್ರಿ). ಬಣ್ಣವೇರು ; ರುಚಿಹೊಂದು ; ಸೊಗಸುಗೊಳ್ಳು; ಚೆಲುವಾಗು. 'ಕಳೆಗೊಳಿಸು' ಪರಾ. [ಕಳೆ$_{6}$ (=ಕಲೆ$_{3}$)+ ಕೊಳ್$_{1}$]

**ಕಳೆಗೊಳಿಸು** (ಕ್ರಿ). ರುಚಿಕೊಡು ; ಬಣ್ಣಕೊಡು ; ಚೆಲುವುಗೊಳಿಸು ಆ 'ಭಿಕ್ಷಾಂದೇಹಿ'ಗೆ . . . ಬಗೆಯನ್ನು ಹೊಸೆದು ಕಳೆಗೊಳಿಸಿ ಅಂತರಂಗದ ಹಾಡನ್ನು ಹಾಡುವ ಆದೊಂದು ಶಕ್ತಿ ಇರಲಿಲ್ಲ (ನಾಡೋಜ. ೩೪೩). [ಕಳೆಗೊಳ್ + -ಇಸು$_{3}$]

**ಕಳೆಜೂಟ** (ನಾ). (ಚಂದ್ರ) ಕಳೆಯನ್ನು ಜಟೆಯಲ್ಲಿಟ್ಟುಕೊಂಡವನು ; ಚಂದ್ರಚೂಡ ; ಶಿವ : ಎಳೆಯ ಮಾಂದಳಿರು ಪೊಟ್ಟುಳಿ ಮುದ್ದುಕೇಸರಿ ಕಳೆಜೂಟನಣುಗ ನೇಯುವನು (ಅಮುಸಾಂ. ೪-೨೫) ; ಕಳಶಕ್ಕೆ ಕಾಣಿಕೆಗಳನಿಕ್ಕಿ ಬಸವಣ್ಣ ಕಳೆಜೂಟನ ಪೊಗಳಿದನು (ನಿಜಸಾಂ. ೩೦-೧೭೮). [ಕಳೆ$_{6}$ (=ಕಲೆ$_{3}$) + ಜೂಟ$_{1}$]

**ಕಳೆತ** (ನಾ). ಕಳೆದು ಹಾಕುವಿಕೆ ; ತಪ್ಪಿಸುವಿಕೆ : "ನಷ್ಟ ; ಹಾನಿ ; ಅಪಹರಣ ; ಕಳೆತ" (Deprivation ಇಂಕನಿ.). [ಕಳೆ$_{2}$(< ಕೞಿ$_{1}$) +-ತ$_{2}$]

**ಕಳೆದುಂಬು** (ಕ್ರಿ). ಚೆಲುವು ತುಂಬಿರು ; ಕಾಂತಿಯುಕ್ತವಾಗು : ಬೆಚ್ಚನೆಯ ದೇಹ, ಕಳೆದುಂಬಿದ ಮುಖ (ಪುನರು. ೨೨೨).

[ಕಳೆ$_{6}$ (=ಕಲೆ$_{3}$) + ತುಂಬು$_{1}$]

**ಕಳೆದೆಗೆ** (ಕ್ರಿ). = ಕಳೆಗೀಳ್ : ಬಿತ್ತೊತ್ತಮ್ಮೆ ಹಥಗಿ ಕಳೆದೆಗೆದರಾ ಬೆಳೆಯು ಎತ್ತಗೈಯಬದ್ದ (ಸರ್ವಜ್ಞ. ೧೩೫೮). [ಕಳೆ$_{3}$ + ತೆಗೆ$_{1}$]

**ಕಳೆದೋಱು** 'ಕಲೆದೋಱು' ನೋ.

**ಕಳೆಬರ** 'ಕಳೇಬರ' ನೋ.

**ಕಳೆಮೆಳೆ** (ನಾ). ಕಳೆಸಸ್ಯಗಳ ಹೊದರು, —ಗುಂಪು : ಕಳೆಮೆಳೆಯ ಕಿತ್ತಲ್ಲದೆ ಹೊಲ ಶುದ್ಧವಲ್ಲ (ಮೋಳಮಾ. ೧೬೯-೯೩೧) ; ಧಾನ್ಯಗಳನ್ನು ಬಿತ್ತಿ ಕಳೆಮೆಳೆಯಂ ತೆಗೆದು (ವಚಶಾ. II, ೭೬). [ಕಳೆ$_{3}$ + ಮೆಳೆ]

**ಕಳೆಯಿಸು** (ಕ್ರಿ). ಆಚೆಗೆ ತಳ್ಳು ; ಓಡಿಸು : ಅಟ್ಟಿಯಿಸಿ ಪ[ಗೆ]ಯಂ ಕಳೆಯಿಸಿ (ಸೌಇಇ. XI-i, ೧೦-೧೨ ; 864) ; ಚಾಣಾಕ್ಯನೆಂಬ ಭಟ್ಟನಂ ನಂದಂ ಪರಿಭವಿಸಿ ನೂಂಕಿಯಟ್ಟೆ ಕಳೆಯಿಸಿದೊಡೆ (ವಡ್ಡಾರಾ. ೭೫-೭).

[ಕಳೆ$_{1}$ + -ಇಸು$_{3}$]

**ಕಳೆಯಿಳಿ** (ಕ್ರಿ). ಕಳೆಗುಂದು : ಕಲವಿಂಕನು ಕಳವಳಿಸಿ ಮೊಗದೊಳ್ ಮುಕ್ಕಾಲು ಕಳೆಯಿಳಿದು (ಸೌಗಂಧಿ. ೧೯೦-೧೫).

[ಕಳೆ$_{6}$ (= ಕಲೆ$_{3}$) + ಇಳಿ$_{1}$ (< ಇೞಿ$_{1}$)]

**ಕಳೆಯೇರು** 'ಕಳೆಯೇಱು' ನೋ.

**ಕಳೆಯೇಱು**, ಕಳೆಯೇರು (ಕ್ರಿ). ಕಾಂತಿ ಹೆಚ್ಚಾಗು ; ಬಣ್ಣವೇರು ; ಉತ್ಸಾಹಹೊಂದು ; ಸೊಗಸುಗೊಳ್ಳು : ಕರಣಂಗಳ್ ಕಳೆಯೇಱೆ ಲೋಚನಯುಗಂ ನೀರೇಱೆ (ಪಂಪಾಶ. ೧೮) ; ಸಮರೋತ್ಸವಮತಿ ಸಲೆ ಕಳೆಯೇಱಿದುದವಂಗೆ (ಶಬಶಂ. ೪-೫೭). **ಕಳೆಯೇರು** : ರಾಜರ ಘನತೆಯು ಅಡಗಿ ಪ್ರಜೆಗಳ ಪ್ರಭುತ್ವಕ್ಕೆ ಕಳೆಯೇರಿದೆ (ಪ್ರಬಂಧ. ೧).

[ಕಳೆ$_{6}$ (= ಕಲೆ$_{3}$) + ಏಱು$_{1}$ (< ಏಱ್$_{1}$]

**ಕಳೆವಂಜಳ**, ಕಳವಂಜಳ (ನಾ). ಒಂದು ಬಗೆಯ ಶ್ರೇಷ್ಠವಾದ ಅರಿಸಿನ (ಕ). **ಕಳವಂಜಳ** : "ತಿಗುರಿನ ಅರಿಸಿನ" (ಚತುನಿ. ಕ. 1, ೬೩). [ಕಳೆ$_{6}$ (=ಕಲೆ$_{3}$) + ಮಂಜಳ)]

**ಕಳೆವರ** 'ಕಳೇಬರ' ನೋ.

**ಕಳೆವೆಱು** 'ಕಲೆವೆಱು' ನೋ.

**ಕಳೆವೆಱೆ** (ನಾ). ಕಲಾಪೂರ್ಣನಾದ ಚಂದ್ರ; ಕಳೆಯುಳ್ಳ ಚಂದ್ರ: ತಾರಾಸಮುದಾಯ ಮಧ್ಯದಲಿ ಬೆಳಬೆಳಗುತ್ತ ಕಳೆವೆಱೆಯು ಶೋಭಿಸಿದನು (ನವಮೋ. ೨೬-೩೪). [ಕಳೆ$_6$ (=ಕಲೆ$_3$) + ಪೆಱೆ]

**ಕಳೇಬರ,** ಕಳೆಬರ, ಕಳೆವರ (ನಾ). = ಕಲೇವರ: ಗಂಗಾಜಲಸ್ನಾನ ಪರಿಪೂತ ಕಳೇಬರಂ (ರಾಮಾಶ್ವ. ೩೨-೧); ವಿಭೂತಿ ಶೋಭಿತ ಕಳೇಬರನ್ (ಶ್ರೀರಾಮಾ. ೪೭-೫೩೯); ನಾಗದೇವನ ಕಳೇಬರ (ದಾನಚಿಂ. ೧೫೫). **ಕಳೆಬರ:** ಅನೇಕ ಜಾತೀಯಂಗಳಾದ ಕಳೆಬರಗಳಂ ಪೆಗಲೊಳ್ ಪೊತ್ತು (ಸೌಗಂಧಿ. ೩೪೬-೧೩). **ಕಳೆವರ:** ಹಲವು ಕಾಲದ ತಪದಲೌಕಿದ ಕಳೆವರದ ಕರ್ದಮನು ನಿಮಿಷಕೆ ಕಳೆದು (ನಿಘಾಗ. ೩-೧೦-೧೨); ಕಾಂತನ ಕಳೆವರದ ಸೋಂಕಿನಲಿ ಕಳೆಯೇಱಿದಳು ಕಮಳಾಕ್ಷಿ (ಕೋಗಯು. ೧೫-೪೬). [ಸಂ. ಕಲೇವರ]

**ಕಳೇವರ** 'ಕಲೇವರ' ನೋ.

**ಕಳೊಸ** (ನಾ). ಒಬ್ಬಾತನ ಹೆಸರು: ನೊಕ್ಕಿ ಊರೊಳ್ ಅಗ್ಗಡಿ ಕಳೊಸ ಕೊಟ್ಟ ನೆಲ ತೆನೆನ್ದಕ ಕಾಡೆಱುಕು ಸಾಕ್ಷಿ (ಮೈಆರಿ. ೧೯೧೬, ೧೩-೭; 726). P 'ಅಗ್ಗಡಿ ಕಳೊಸ' ಎಂಬ ಸಮಸ್ತಪದವಿರಬಹುದೆ? [?]

**ಕಳೋನ್ನತ** (ನಾ). ೧. ಕಳೆಗಳಿಂದ ಉನ್ನತನಾದವನು; ಪೂರ್ಣಚಂದ್ರ. ೨. ಕಲಾಕೌಶಲ್ಯದಿಂದ ಶ್ರೇಷ್ಠನಾದವನು. ೧, ೨: ತನ್ನಯ ತನಯನನಮಳ ಕಳೋನ್ನತನಂ ನೋಡಿ ವಾರ್ಧಿ ಪೆರ್ಚುವ ತೆಱದಿಂ ತನ್ನಯ ತನಯನನಮಳ ಕಳೋನ್ನತನಂ ನೋಡಿ ಪೆರ್ಚುವಂ ನೃಪತಿಳಕಂ (ಚಂದ್ರಪು. ೫-೨). [ಸಂ. ಕಲೋನ್ನತ (ಕಲಾ+ ಉನ್ನತ)]

**ಕಳ್ಕನೆ** 'ಕಟ್ಕನೆ' ನೋ.

**ಕಳ್ಕನೆಗೆಯ್** (ಕ್ರಿ). ಬೆರಗಾಗು; ಸೋಜಿಗಪಡು (?): ಪರಿಜನಂ ಪುರಜನಂ ಕಂಡು ಕಳ್ಕನೆಗೆಯ್ವುತಿರೆ (ಪಾಸೋಪು. ೮-೪೪). [ಕಳ್ಕನೆ (< ಕಟ್ಕನೆ) + ಗೆಯ್ (< ಕೆಯ್$_1$)]

**ಕಳ್ಕುಡಿಹಿ** 'ಕಳ್ಗುಡಿಪಿ' ನೋ.

**ಕಳ್ಕೊಂತು** (ನಾ). ಒಂದು ಸ್ಥಳದ ಹೆಸರು: ಪ್ರಾಳ್ಕೊಳ ಕಳ್ಕೊನ್ತಿನ ದೆವನುರ ದ್ವಿಶನ್ದಿಯೆ (ಇಆ. VII, ೧೭೩; ೪೮೧ ?). [?]

**ಕಳ್ಗ** 'ಖಳ್ಗ' ನೋ.

**ಕಳ್ಗತ್ತಲೆ** 'ಕರ್ಗಟ್ಟಲೆ' ನೋ.

**ಕಳ್ಗಾಳಿ** (ನಾ). ಕಳ್ಳಿನಂತೆ ಪ್ರಭಾವ ಬೀರುವಗಾಳಿ; ಮಾದಕವಾದ ಗಾಳಿ: ಮಿಡುಳ್ಗೆ ಸಮ್ಮೋಹನಭ್ರಾಂತಿಯಂ ತೀವಿ, ಪುಸಿನಿದ್ದೆಯಂ ಪ್ರಜ್ಞೆಯಂ ಮಳ್ಳಿಪೋಲ್ ಕಳ್ಗಾಳಿಯಾಗಿ ತೀಡಿದನವನ ನಾಸಿಕದ ಸೀಮೆಯೊಳ್ (ಶ್ರೀರಾಮಾ. ೪೬೪-೫೨೨). [ಕಳ್$_3$ + ಗಾಳಿ]

**ಕಳ್ಗೀಳ** (ನಾ). ಹೆಂಡಕುಡುಕ: ಅವನು ವೈದ್ಯರ ಭಾಷೆಯಲ್ಲಿ ಹೇಳುವುದಾದರೆ ಕಳ್ಗೀಳನಾದನು (ಪುನರು. ೫೭೪). [ಕಳ್ಗೀಳು + -ಅ$_7$]

**ಕಳ್ಗೀಳು** (ನಾ). ಕುಡುಕತನ; ಮದ್ಯ ಲಾಲಸೆ: "ಮದ್ಯಕುಡಿಯುವ ಅತ್ಯಾಶೆ; ಕುಡಿತದ ಹುಚ್ಚು; ಕಳ್ಗೀಳು; ಮದ್ಯೋನ್ಮಾದ" (Dipsomania. ೩೦೭೧); ಅವನಿಗೆ ಕಳ್ಗೀಳು ಹೆಚ್ಚಾಗಿ ಬಾಳು ಹಾಳಾಯಿತು (ರೂಢಿ). [ಕಳ್$_3$ + ಗೀಳು$_3$]

**ಕಳ್ಗು** 'ಕರ್ಗು$_1$' ನೋ.

**ಕಳ್ಗುಡಿ,** ಕಳುಗುಡಿ$_1$, ಕಳ್ಳುಗುಡಿ (ಕ್ರಿ). ಹೆಂಡವನ್ನು ಕುಡಿ; ಸೆರೆಯನ್ನು ಕುಡಿ: ಕಳ್ಗುಡಿದವರಂದಮಿಂತು ಸಿರಿ ಸಾರ್ತರೆ ಸಾರ್ವುದು (ಪಂಪಭಾ. ೨-೪೯); ಕಳ್ಗುಡಿದರಂತೆ ಮತಿಗಿಡುತ್ತುಂ (ಧರ್ಮಾಮೃ. ೧-೧೬೦); ಅಡಗಿನ ಬಸನಿಗರ್ಗ್ಗಂ ಕಳ್ಗುಡಿವವರ್ಗ್ಗಂ ವೃತ್ತಿಲೋಪಂ (ಸೌಇಇ. IX-i, ೧೧೭-೩೭; 1055). **ಕಳುಗುಡಿ:** ಕಳುಗು [ಪಾಠಾಂ. ಕು]ಡಿದ ಮೂಳೆಯರು ನಗಿಸಿದರು ಬೀದಿಯ ಜನವನು (ಹಚಕಾ. ೪-೪೬). **ಕಳ್ಳುಗುಡಿ:** ಅಡಗಂ ತಿಂಬ ಮನುಜನಂ ಕಳ್ಳುಗುಡಿದ(ವ)ನುಂ ಪಾದರಿಗನುಂ (ಚಾವುಂಪು. ೯೬). [ಕಳ್$_3$ + ಕುಡಿ$_1$]

**ಕಳ್ಗುಡಿಕ** (ನಾ). ಹೆಂಡ ಕುಡಿಯುವವನು; ಹೆಂಡಕುಡುಕ: ಕೆಟ್ಟ ಕಳ್ಗುಡಿಕ ರಕ್ಕಸರ ತಾನೀಗಳೆಕ್ಕತುಳದಿಂದೆನ್ನ ಬಲವನುರಿ ಸದೆವುತಿಹರು (ಘೋರಾಸು. ೮-೫). [ಕಳ್$_3$ + -ಕುಡಿಕ]

**ಕಳ್ಗುಡಿಕಿ** (ನಾ). ಹೆಂಡ ಕುಡಿಯುವವಳು: ಕಳ್ಗುಡಿಕಿಗಳುಂ ನಿರ್ದಯರುಂ ಮಾಡದ ಪಾಪಮಿಲ್ಲ (ಧರ್ಮಾಮೃ. ೧೨-೧೪೯). [ಕಳ್ಗುಡಿಕ + -ಇ$_3$]

**ಕಳ್ಗುಡಿಪಿ,** ಕಳ್ಕುಡಿಹಿ, ಕಳ್ಗುಡಿಹಿ, ಕಳ್ಗುಡುಹಿ (ನಾ). ೧.= ಕಳ್ಗುಡಿಕಿ: ಕೂಸಂ ಕೊಂದು ಪೂಳ್ದು ಕಳ್ಗೆ ಕೊಟ್ಟು ಕುಡಿದ ಕಳ್ಗುಡಿಪಿಯ ಗೆಯ್ದ ಅಕೃತ್ಯಮನಾಕೆಯ ಮಗನಿಂದಮಱಿದು (ಚಾವುಂಪು. ೯೬-೧೧). **ಕಳ್ಕುಡಿಹಿ:** ೨. = ಕಳ್ಗುಡಿಕ: "ಪಾನಶೌಂಡಃ-ಕಳ್ಕುಡಿಹಿ" (ನೀತಿವಾ. ೧೪-೮). **ಕಳ್ಗುಡಿಹಿ:** ೨. ಮೆಯ್ಯೂಡ್ಡಕವಳಿದು ಕಳ್ಗುಡಿಹಿಯಂತೆ ತೂರಾಡುತ್ತ (ಬಿಟ್ಟಅ. ೨೧೫-೨೫). **ಕಳ್ಗುಡುಹಿ:** ೨. ನೆಱೆ ಕಳ್ಗುಡುಹಿಗಳಂ ಕಂಡಱಿಯದೆ ಕಳ್ಗುಡುಹಿಯೆಂದೊಡಾ ನುಡಿಗೆ ಕರಂ ಮಱುಗುವರೆನೆ (ಧರ್ಮಾಮೃ. ೯-೧೩೭). [ಕಳ್$_3$ + ಕುಡಿಪಿ]

**ಕಳ್ಗುಡಿಹ** (ನಾ). ಹೆಂಡ ಕುಡಿಯುವಿಕೆ; ಮದ್ಯಪಾನ: "ಪಾನಂ ಗೋಷ್ಠಿಕೆಯದಾ ಪಾನಂ ಶುಂಡಾ ಪ್ರಪಾನಂ ಕಳ್ಗುಡಿಹ" (ವಸ್ತುಕೋ. ೯೩-೬). [ಕಳ್$_3$ + ಕುಡಿಹ]

**ಕಳ್ಗುಡಿಹಿ** 'ಕಳ್ಗುಡಿಪಿ' ನೋ.

**ಕಳ್ಗುಡಿಹು** (ನಾ). = ಕಳ್ಗುಡಿಹುತನ. 'ಕಳ್ಗುಡಿಹುತನ' ಪರಾ. [ಕಳ್$_3$ + ಕುಡಿಹು]

**ಕಳ್ಗುಡಿಹುತನ** (ನಾ). ಕುಡುಕತನ: ಈ ಕಳ್ಗುಡಿಹು [ಪಾಠಾಂ. ಡಿಕ] ತನದಿಂದೆ ಬಗುಳ್ದೊಡೆಲವೆಲವೊ ಕಟ್ಟಾಳ್ಗಳೇ ಕಾಳಗಕೆ ನೀವೀಗ (ಜೆಬಪು. ೨೫-೭). [ಕಳ್ಗುಡಿಹು + -ತನ]

**ಕಳ್ಗುಡುಹಿ** 'ಕಳ್ಗುಡಿಪಿ' ನೋ.

**ಕಳ್ಗುಡುಹಿತನ** (ನಾ). =ಕಳ್ಗುಡಿಹುತನ: ಏನೆಲವೊ ಕಳ್ಗುಡುಹಿತನದ ಮಾತಿದು ನಿನಗೆ ತಾನುಚಿತವೇ ಬಗುಳದಿರ್ (ಜೆಬಪು. ೪೯-೯). [ಕಳ್ಗುಡುಹಿ (< ಕಳ್ಗುಡಿಪಿ) + -ತನ]

**ಕಳ್ಗೊಲೆ** 'ಕಟ್ಗೊಲೆ' ನೋ.

**ಕಳ್ಗೊಲೆಗೊಳ್ಳು** 'ಕಟ್ಗೊಲೆಗೊಳ್' ನೋ.

**ಕಳ್ಗೊಲೆವೊಯ್,** ಕಗ್ಗೊಲೆವೊಯ್ (ಕ್ರಿ). ಕಗ್ಗೊಲೆಯಾಗುವಂತೆ ಹೊಡೆ: ಪುಲ್ವಟ್ಟೆವಿಡಿದು ನಡೆಯುತ್ತಿರೆ ಕಾಣಲೊಡನೆ ಕಳ್ಗೊಲೆವೊಯ್ದಂ (ಜಯಕಾ. ೪-೧೦). **ಕಗ್ಗೊಲೆವೊಯ್:** ಎಡೆಯಾಡುವ ಬಟ್ಟೆಗರ ಕಗ್ಗೊಲೆವೊಯ್ವ ಕಡುವೇಗದಿಂ ಕಾವ ಚೋರ (ಚಂಪ್ರಸಾಂ. ೧-೧೩೭). [ಕಳ್ಗೊಲೆ (< ಕಟ್ಗೊಲೆ) + ಪೊಯ್$_1$]

**ಕಳ್ಚು** 'ಕಟ್ಚು' ನೋ.

**ಕಳ್ತ?** (?): ಪರಮೋತ್ಸಾಹದೆ ಪುಟ್ಟ ಸನ್ನವಿದುನ್ನೂನತ ಕಂಪರಾರ್ಥಿಕೃತನಂನಾವೊಂನಂವಮೆಂದೂತುದುದಾತ್ತದೊಲ್ಪರೆನುತ್ತಂ ತನ್ನ ನನ್ನೇಹ ಕಳ್ತವುರ್ (ಎಕ. XIV, ಎಡತೊ. ೩೧-೫; 900). [?]

**ಕಳ್ತನ, ಕಳ್ಳತನ** (ನಾ). ಕಳವು; ಚೌರ್ಯ: ತನಗೆ ಬೇಡಿದೊಡೀಯನೇ ಪೊಲಿದನಿತು ವಿತ್ತವನಾದೊಡಂ ಕಳ್ತನದ ಬುದ್ಧಿಯೊಳಿಂತು ವಿಶ್ವಾಸಮನುಳಿದು ಕಳೆದ (ಬಸವು. ೩೧-೧೫). **ಕಳ್ಳತನ**: ಎಲೆ ಕಳ್ಳತನಂಗಳನಣ್ಣ ಕಂಡೆವಾವೆನೆ (ಜಗವಿ. ೩-೫೦); ಕಳ್ಳತನದಲ್ಲಿ ಗೊಲ್ಲರ ಮನೆ ಹೊಕ್ಕು ಗುಲ್ಲುಮಾಡದೆಯವರ ಗಲ್ಲ ಕಚ್ಚಿದನು (ಪುರಂದ. ೧-೯೪-೨); ಇಲ್ಲಿ ಆಗಾಗ್ಗೆ ಕಳ್ಳತನ ದರೋಡೆಗಳು ನಡೆಯುತ್ತಲೇ ಇರುತ್ತವೆ (ಪ್ರತಾಪ. ೪೫). [ಕಳ್$_2$ + -ತನ]

**ಕಳ್ತಲ್** 'ಕಟ್ಟಲೆ' ನೋ.

**ಕಳ್ತಲಿಸು** 'ಕಟ್ಟಲಿಸು' ನೋ.

**ಕಳ್ತಲೆ** 'ಕಟ್ಟಲೆ' ನೋ.

△**ಕಳ್ತಿ** (ನಾ). ಕತ್ತಿ; ಖಡ್ಗ: ಭೂಕಾಂತಂ ದ್ವಾರದೆ ಬಿಗಿದೀ ಕಳ್ತಿಯ ನೀಳ್ಪು ತದ್ವಜೀರನ ದರ್ಪೋದ್ರೇಕವನಂಕದೆ ಮಗ್ಗಿಪ ಭೀಕರಭಟರಿಲ್ಲವೆಂದು ಚಿಂತಿಸುತಿರ್ಪಂ (ಕಳಸ್ಯ. ೩-೨೩). [< ಕತ್ತಿ]

**ಕಳ್ತಿ** 'ಕಟ್ಟಿ' ನೋ.

**ಕಳ್ತಿಗಿರುಬ** (ನಾ). ಕತ್ತಿಕಿರುಬ: "ರಾಮ - ಕಳ್ತಿಗಿರುಬನುಂ ಪರಶುರಾಮನುಂ, ದಶರಥರಾಮನುಂ" (ಕಾಶಕ್ಯ. ೧೪೯).

[ಕಳ್ತಿ (< ಕಟ್ಟಿ) + ಕಿರುಬ (< ಕಿಱುಬ$_1$)]

**ಕಳ್ತಿಗಿರುಬುಲಿ** (ನಾ). ಕಳ್ತಿಗಿರುಬ: "ರಾಮಃ - ಕಳ್ತಿಗಿರು(ಬಂ)ಬುಲಿ" (ಕಾಶಕ್ಯ. ೨೬೪).

[ಕಳ್ತಿ (< ಕಟ್ಟಿ) + ಕಿರುಬ (< ಕಿಱುಬ$_1$) + ಪುಲಿ]

**ಕಳ್ತೋಡು** (ಕ್ರಿ). ೧. ಕದ್ದುಓಡು; ಕಣ್ಣು ತಪ್ಪಿಸಿ ಓಡಿಹೋಗು. ೨. ಹೆಂಡವನ್ನು ತೋಡು, —ಸುರಿ. ೧, ೨: ಕಳ್ತೋಡುವ ಶೀಳಂ ಶೌಂಡಿಕರೊಳಲ್ಲದಿಲ್ಲಾ ನಾಡೋಳ್ (ಕಾವ್ಯಸಾ. ೧೦೨).

[< ಕಳ್$_1$ + ಓಡು$_1$; ಕಳ್$_3$ + ತೋಡು$_1$]

**ಕಳ್ಪಕುಜ** 'ಕಲ್ಪಕುಜ' ನೋ.

**ಕಳ್ಪಬ್ರಿಕ್ಷ** (ನಾ). = ಕಲ್ಪವೃಕ್ಷ: ಅಶ್ರುತಜನಕಳ್ಪಬ್ರಿಕ್ಷಹಿತಪಕ್ಷಕ್ಷಯಕರಕ್ಕರ್ಣಲಿಯುಗ ಗಾಂಗೇಯರ್ (ಕಇ. II, ೧೧-೭; 1080).

[< ಸಂ. ಕಲ್ಪವೃಕ್ಷ]

**ಕಳ್ಪವೃಕ್ಷ** 'ಕಲ್ಪವೃಕ್ಷ' ನೋ.

**ಕಳ್ಪಿಸು** 'ಕಲ್ಪಿಸ್ಸು' ನೋ.

**ಕಳ್ಪು** 'ಕಱಿಪು' ನೋ.

**ಕಳ್ಪೊಗುನೋಂಪಿ** (ನಾ). ಒಂದು ವ್ರತ (?): ನರಸಿಂಹಪಟ್ಟವರ್ಧನರು ಕಳ್ಪೊಗುನೋಂಪಿಯ ದಕ್ಷಿಣೆಯ ದಾನದಿಂದೆ (ಕಕುಲ. ೫-೬೬; 1185). [ಕಳ್ಪೊಗು$_0$ + ನೋಂಪಿ]

**ಕಳ್ಬಂಟೆ** (ನಾ). = ಕಳ್ಳಬಂಟ (?): ತನ್ನ ಯಡೆ ಕಳ್ಬಂಟರಲಿ ನೃಪನೆನ್ನುವದನಾನಾಗಲಾರ್ಪೆದಿನ್ನು ಹೊತ್ತನುಸರಿಸಿ ಗೆಲಬೇಕೆಂಬ ಯೋಚನೆಯ ತನ್ನ ಮನದೊಳಗಿಟ್ಟು (ಬಜ್ಜಪು. ೬೮-೨೩). [ಕಳ್$_2$ + ಭಂಟ]

**ಕಳ್ವಡಿಗ** (ನಾ). ಹೆಂಡವನ್ನು ಮಾರುವವನು; ಮದ್ಯವನ್ನು ಪೂರೈಸುವವನು: ವಡಿಗಕ್ಕೆ - ಕುಂಚವಡಿಗಂ, ಪುಲ್ಲವಡಿಗಂ, ಕಳ್ವಡಿಗಂ [ಪಾಠಾಂ. ಕಳಸವಡಿಗಂ] (ಶಮುದ. ೧೯೮ ಪ್ರಯೋ). [ಕಳ್$_3$ + -ವಡಿಗ]

**ಕಳ್ಸವಿ** (ನಾ). ಹೆಂಡದ ರುಚಿ: ಕಳ್ಸವಿಗೆ ಕುಡಿದು (ಶಮುದ. ೭೮ ಪ್ರಯೋ); ಮುಳ್ಸೆಱಂಗು, ಕಳ್ಸವಿಗೆ (ಶಬ್ದಾನು. ೯೩ ಪ್ರಯೋ).

[ಕಳ್$_3$ + ಸವಿ$_2$]

**ಕಳ್ಳ$_1$, ಕಳ್ಳ$_2$** (ನಾ). ಕಳವು ಮಾಡುವವನು; ಚೋರ; ತಸ್ಕರ: ಎಲ್ಲಮಂ ಕಳ್ಳರ್ ಕೊಂಡು ಪೋದರ್ (ವಡ್ಡಾರಾ. ೭೬-೧೫); ಸೂಲದೊಳ್ ನೊಂದು ನರಳ್ವ ಕಳ್ಳರಿಂ (ಕಾವ್ಯಸಾ. ೫೨೯ ಶೂದ್ರಕ); ಇರುಳುಂ ಪಗಲುಂ ಪಂಬಲಿಸಿ ಮಱುಗಿ ಕಳ್ಳನ ತಾಯಂತೆ... ಬೇಯುತ್ತುಂ (ಧರ್ಮಾಮೃ. ೧೦-೧೯೩); ಘಳಿಗೆಗೊಮ್ಮೆ ಸುಳಿದು ಹೋಹ ಕಳ್ಳನನಾರಯ್ಯ ಬಲ್ಲವರು (ಅವಚಂ. ೧೮೧-೮೧೪); ಇರುಳು ಕಳ್ಳನ [ಪಾಠಾಂ. ಗನ್ನದ] ಕೆಲಸ ದಿವದಾಚರಣೆ ಧರ್ಮದ ವಿರಸ (ತೊರರಾ. ೪-೪-೫೨); ತಾ ಕಳ್ಳ ಪರರ ನಂಬ (ಗಾದೆ). **ಕಳ್ಳ$_2$**: ಅನ್ತೆ ಬನ್ದು ಕಳರಾ ಬಾಯ್ಯಾಲುಳ್ ಕೂಡಿ (ಮೈಆರಿ. ೧೯೩೬, ೫೩-೨೪; 550); ಒಪ್ಪುದಿಪ್ಪುರೊ ಮನೆಮನೆ ಕಳಪ್ಪೊರ್ಕೊಡೆ (ಸೌಇಇ. IX-i, ೫-೯; 9ನೆಯ ಶತ).

**ಕಳ್ಳಕಾಕ** = ಕಳ್ಳ ಮತ್ತು ದುಷ್ಟ: ಅಲ್ಲಲ್ಲಿ ಕಳ್ಳಕಾಕರೂ... ಪ್ರಜೆಗಳನ್ನು ಹಿಡಿದು ಹಿಂಸಿಸತೊಡಗಿದರು (ಅಶ್ವಮೇ. ೨೭); ಕಳ್ಳಕಾಕರು ಹೊಂಚು ಹಾಕಲೂಬಹುದು (ತ್ಯಾಗಮು. ೧೧೭).

[ಕಳ್$_1$ + -ಅ$_7$. / ತಮಿ. ಮಲ. ಕಳ್ಳ; ತುಳು. ಕಳುವೆ; ಕೊಡ. ಕಳ್ಳೀ; ಗೊಂಡಿ. ಕಲ್ಲೆ, ಕಲ್ಲೀ]

**ಕಳ್ಳ$_2$** (ನಾ). ಗುಟ್ಟಾಗಿ ನಡೆಸುವ ವ್ಯವಹಾರ; ಮೋಸ. 'ಕಳ್ಳವೊಗು' ಪರಾ. [?. / ತುಳು. ಕಳ್ಳಿ]

**ಕಳ್ಳ$_3$** (ನಾ). ಒಂದು ಬಗೆಯ ಸಸ್ಯ: "ಕಾಹಳೆಯೆನಲ್ಕಳ್ಳಮುಕ್ಕುಂ [ಪಾಠಾಂ. ಕಾಕಾಳಿಯನೆ ಕಳವಲಕ್ಕುಂ]" (ಮಂಗರಾ. ೪೦-೩೨). 'ಕಳ್ಳನಗಿಡ' ಪರಾ.

[?. / ತಮಿ. ಕಳ್ಳಿ = ಒಂದು ಬಗೆಯ ಹುಲ್ಲಿನಿಂದ ಮಾಡಿದ ಚೀಲ]

**ಕಳ್ಳ$_4$** (ನಾ). ಹಲಸಿನ ಬೀಜದ ಮೇಲಿರುವ ಕವಚ, —ಪೊರೆಯ ಚೀಲ. [?]

**ಕಳ್ಳಂಕಡಲೆ** 'ಕಳ್ಳಂಗಡಲೆ' ನೋ.

**ಕಳ್ಳಂಕೆ** (ನಾ). ಕೈಚಳಕ; ಕೈವಾಡ (?): ಕರದ ಕಳ್ಳಂಕೆಯಲಿ ನೇತ್ರವ ತಿರುಹುತಿಹ ಬಿಂಕದಲಿ ಪಲ್ಲಳ ಗಿರಿವುತಿಹ ಕಪಿಯಂತೆ... ಮೋಸವಗರೆವುತಿಹನಾ ಶಕುನಿ (ಜಿನಭಾ. ೩೮-೩).

[ಕಳ್ಳ$_2$ + ಅಂಕೆ$_1$]

**ಕಳ್ಳಂಗಡಲೆ, ಕಲ್ಲಂಗಡಲೆ, ಕಳ್ಳಂಕಡಲೆ** (ನಾ). ಒಂದು ಜಾತಿಯ ಚಿಕ್ಕ ಸಸ್ಯ; ಬಲಾ ಎಂಬ ಮೂಲಿಕೆ; ಏಲಾವಾಲುಕ: "ಏಲಾವಾಲುಕ, ಯೇಲೇಯಂ, ಸುಗಂಧಿ, ಹರಿವಾಲುಕಂ, ವಾಲುಕಂ - ಈ ೫ ಕಳ್ಳಂಗಡಲೆ" (ನಾಚಿರಾ. ೧೧೦); ಕೊತ್ತುಂಬರಿ ಕಳ್ಳಂಗಡಲೆ ಶುಂಠಿ ಗಳ್ಕರುಷಮಿವಂ ಬೆರಸಿದೊರ್ಬಳ್ಳ ನೀರ್ (ಕಲ್ಯಾಕಾ. ೩-೨೯); ಪಲ್ಲಿಯಾನನದ ವಿಷಮುಱಿಗುಂ ಸಂಚಿಸಿ ಕಳ್ಳಂಗಡಲೆಯುಮಂ ಚೆಲ್ವಿಂ ಲೇಪಿಸಲ್ಕೆಯುಂ (ಖಮುದ. ೧೩-೯೨); ಅಸಥಿ ಕಳ್ಳಂಗಡಲೆಯ ಲೇಸೆನಿಸಿದ ಭದ್ರಮುಸ್ತೆಯಂ ಸಿತಸಹಿತಂ ಲೇಸಾಗಿ ಕೊಡಲು (ಸಾಳ್ವಸಾಂ. ೨೨). **ಕಲ್ಲಂಗಡಲೆ**: (೬). **ಕಳ್ಳಂಕಡಲೆ**: "ಏಲೆ - ಕಳ್ಳಂಕಡಲೆ" (ಓಷಧಿ. ೧೮). [?]

**ಕಳ್ಳಂಗಡಿ** (ನಾ). ಹೆಂಡದ ಅಂಗಡಿ; ಪಡಖಾನೆ: ಕರಿಯನು... ಮೈದಾನಿನಲ್ಲಿದ್ದ ಕಳ್ಳಂಗಡಿಗೆ ಹೋಗಿದ್ದನು (ಮುಂಗಾಮು. ೧೧೭).

[ಕಳ್$_3$ + ಅಂಗಡಿ (< ಅಂಗಾಡಿ)]

**ಕಳ್ಳಂದ** (ನಾ). ಕಳ್ಳತನದ ರೀತಿ; ಮೋಸದ ಮಾರ್ಗ: ಎಂದಿಗುಂ ಕುಶಿಕಾತ್ಮಜನು ಕಳ್ಳಂದವಿದನೊರೆದಿರೆಯ (ರಾಮಾಸಂ. ೪-೧-೭೫).

[ಕಳ್ಳ$_2$ + ಅಂದ]

**ಕಳ್ಳಂಬುಣುಸೆ, ಕಳ್ಳವುಣಿಸೆ** (ನಾ). ಒಂದು ನಾಡಿನ ಹೆಸರು: ಕಳ್ಳಂಬುಣುಸೆಯೊಳಗಾಗಿ ೯೩೦೦ ಬಾಳವ××××ಳ್ಳಿಯುಂ ಪರಿವಾರವುವಂ ... ತುಷ್ಪಮ್ಮಾರ್ಡಿ (ಎಕ. XI, ಚಿತ್ರದು. ೪೯-೭೧; 947). **ಕಳ್ಳವುಣಿಸೆ**: ಕನ್ನರನುಂ ಕಳ್ಳವುಣಿಸೆಯ ರಟ್ಟನು (ಎಕ. XI, ಚಿತ್ರದು. ೭೪-೨೭; 968).

[ಕಳ್ಳ ? + ಪುಣುಸೆ (< ಪುಣಿಸೆ)]

**ಕಳ್ಳಕಣ್ಣು** (ನಾ). ಕದ್ದುನೋಡುವ ಕಣ್ಣು : ಅಕ್ಕನನ್ನು ಅವ್ವ ಎಬ್ಬಿಸಿದಳು. ನಾನೂ ಕಳ್ಳಕಣ್ಣುಗಳನ್ನರಳಿಸಿದೆ (ವೈನಿ. ೯). [ಕಳ್ಳ$_2$ + ಕಣ್ಣು (< ಕಣ್)]

**ಕಳ್ಳಕಾಗದ** (ನಾ). ಸುಳ್ಳುಕಾಗದ; ಮೋಸದಿಂದ ಸಿದ್ಧಪಡಿಸಿದ ಕಾಗದ (ಕ). [ಕಳ್ಳ$_2$ + ಕಾಗದ]

**ಕಳ್ಳಕಿಂಡಿ** (ನಾ). ಕಳ್ಳರು ಮಾಡಿದ ಕಿಂಡಿ, —ಕಂಡಿ; ಕನ್ನದ ಕಿಂಡಿ (ಕ). [ಕಳ್ಳ$_2$ + ಕಿಂಡಿ]

**ಕಳ್ಳಕುಕ್ಕನಬಳ್ಳಿ** (ನಾ). ನಸುಗೆಂಪು ಹೂ ಬಿಡುವ ಒಂದು ಹಬ್ಬುವ ಬಳ್ಳಿ (ಕ). [?]

**ಕಳ್ಳಕುಣಿಕೆ** (ನಾ). ಎದೆಯ ಮೇಲ್ಭಾಗದಲ್ಲಿ ಶ್ವಾಸನಾಳಕ್ಕೂ ಗಂಟಲಿಗೂ ನಡುವೆ ಇರುವ ಕುಳಿ, —ಗುಣಿ; ಕಳ್ಳನಗುಣಿ (ಕ). [ಕಳ್ಳ$_0$ + ಕುಣಿಕೆ$_1$]

**ಕಳ್ಳಕುಪ್ಪಸ** (ನಾ). (ಉಕ) ಮೊದಲನೆಯ ಬಸಿರಿನಲ್ಲಿ ತವರಿನವರು ಗೋಪ್ಯವಾಗಿ, ಎಲ್ಲರಿಗಿಂತ ಮುಂಚಿತವಾಗಿ ಕುಪ್ಪಸ ಕೊಡುವ ಸಮಾರಂಭ : ತಂಗಿ ಗೌರಿಗೆ ಮೂರು ತಿಂಗಳು ತುಂಬಿತ್ತು. ಕಳ್ಳಕುಪ್ಪಸವೆಂದು ಸಣ್ಣ ಪ್ರಮಾಣದಲ್ಲಿ ಹಬ್ಬ ಮಾಡಿದರು (ತೇಮೋಡ. ೪೧). [ಕಳ್ಳ$_2$ + ಕುಪ್ಪಸ]

**ಕಳ್ಳಕೆಸರು** (ನಾ). ಮೇಲುನೋಟಕ್ಕೆ ಗಟ್ಟಿಯಾಗಿಯೇ ಕಂಡು, ಕಾಲಿಟ್ಟೊಡನೆಯೇ ಒಳಗೆ ಎಳೆದುಕೊಳ್ಳುವ ಕೆಸರು. 'ಕಳ್ಳಹುದುಲು' ಪರಾ. [ಕಳ್ಳ$_2$ + ಕೆಸರು (< ಕೆಸಱ್)]

**ಕಳ್ಳಕೊರಚ** (ನಾ). = ಕಳ್ಳಕೊರಮ. [ಕಳ್ಳ$_2$ + ಕೊರಚ (< ಕೊಱಚ)]

**ಕಳ್ಳಕೊರಮ, ಕಳ್ಳಕೊರವ** (ನಾ). ೧. ಕಳ್ಳತನ ಮಾಡುವುದರಿಂದ ಕೊರಮಜಾತಿಯವರಿಗೆ ಬಂದ ಹೆಸರು (ಎಶೆಮೈ. VII, ೧). ೨. ಪ್ರಸಿದ್ಧಕಳ್ಳ; ಖದೀಮಕಳ್ಳ: ನೀನು ಮುಗುವ ಸಾಕೋದ್ ನಿಜವೇನೆ ಕಳ್ಳಕೊರಮಣ್ಣರುತಾನೆ (ಹುಟ್ಟಹ. ೪೩). **ಕಳ್ಳಕೊರವ: ೨.** (ಕ). [ಕಳ್ಳ$_2$ + ಕೊರಮ (< ಕೊಱವ$_1$)]

**ಕಳ್ಳಕೊರವ** 'ಕಳ್ಳಕೊರಮ' ನೋ.

**ಕಳ್ಳಕೊಲೆ** (ನಾ). ಮೋಸದಿಂದ ಮಾಡುವ ಕೊಲೆ : ಬೆನ್ನಿಂವ ಕಳ್ಳಕೊಲೆ ಸುರಗಿಯಂತೆ, ಎತ್ತಣಿಂದೆರಗಿತೋ ಮೃತ್ಯು (ಹೊಂಗಳು. ೨೭-೧೧). [ಕಳ್ಳ$_2$ + ಕೊಲೆ$_2$]

**ಕಳ್ಳಗಂಟು** (ನಾ). ೧. ಗುಪ್ತವಾಗಿ ಶೇಖರಿಸಿದ ಹಣ; ಯಾರಿಗೂ ತಿಳಿಯದಂತೆ ಕೂಡಿಸಿಟ್ಟ ನಿಧಿ : ತುಡುಗಿನಿಂದ ಎಲ್ಲೆಲ್ಲಿಂದಲೋ ರೊಕ್ಕ ಕೂಡಿಸಿ ನೂರುರೂಪಾಯಿಯಷ್ಟು ಕಳ್ಳಗಂಟು ಮಾಡಿಕೊಂಡಿದ್ದಳು (ಹೊಸಕ್ಷಿ. ೧೮೮). ೨. ಒಳಗೇನೂ ಹುರಳಿಲ್ಲದಿದ್ದರೂ, ಮೇಲ್ನೋಟಕ್ಕೆ ಬೆಲೆಬಾಳುವ ವಸ್ತುಗಳನ್ನು ಉಳ್ಳದ್ದೆಂಬಂತೆ ಕಟ್ಟಿಟ್ಟ ಗಂಟು (ಕ). ೩. ಬಿಡಿಸಲಾಗದ ಗಂಟು; ಕಗ್ಗಂಟು (ಕ). [ಕಳ್ಳ$_2$ + ಗಂಟು]

**ಕಳ್ಳಗಂಡಿ** (ನಾ). ೧. ಗುಪ್ತದ್ವಾರ; ಕಳ್ಳಬಾಗಿಲು : "ಪ್ರಚ್ಛನ್ನಂ, ಅಂತರ್ದ್ವಾರಂ – ಈ ೨ ಕೋಟೆಯ ಬಾಗಿಲ ಪೆಸರು. ಕಳ್ಳಗಂಡಿಯೆಂದೆಂಬರು" (ನಾಚಿರಾ. ೧೦೪); ಎರಡು ಮೂರು ದಿನಗಳಲ್ಲೇ ಎಲ್ಲ ತೋಟಗಳೂ ಅವುಗಳ ಕಳ್ಳಗಂಡಿಗಳೂ ಅವನಿಗೆ ಪರಿಚಯವಾದವು (ಕಳಹು. ೧೩); ಆ ಕಳ್ಳಗಂಡಿಯೊಳಗಿಂದ ಒಬ್ಬೊಬ್ಬರು ಒಳಗೆ ಹೋಗುವುದಕ್ಕೆ ಸಿದ್ಧರಾದರು (ಕಪವು. ೨-೭೪). ೨. = ಕಳ್ಳಕಿಂಡಿ (ಕ). [ಕಳ್ಳ$_2$ + ಕಂಡಿ$_1$]

**ಕಳ್ಳಗುಪ್ಪೆ** (ನಾ). = ಕಳ್ಳಕುಣಿಕೆ : ಕಳ್ಳಗುಪ್ಪೆಗೆ ಗಾಳಿಯೇಱಿ ನಿಂದಿರೆ ನಿದ್ರೆ ನಿಲ್ಲದೆ ಜರಿದೋಡಿತಾಗ ಎಳ್ಳಷ್ಟು ಜಡನಿರದೋಡಿತು ನಡುನೊಸಲಲ್ಲಿ ಗಾಳಿಯ ನಿಲಿಸಿದರೆ (ಭರಚ. ೧೮-೯). [ಕಳ್ಳ$_0$ + ಕುಪ್ಪೆ$_0$ (< ಕುಪ್ಪಿ$_1$)]

**ಕಳ್ಳಗೊಡು** (ಕ್ರಿ). ಕದ್ದುಕೊಡು ; ಗುಪ್ತವಾಗಿ ಕೊಡು : ಧನಕನಕ ವಸ್ತುಭೂಷಣಗಳ ಪೆಟ್ಟಿಗೆಗಳಲ್ಲಿ ಸಾರಭಂಡ ಅನರ್ಘವಾದ ಹದಿನೇಳನ್ನು ತೆರಕಣಾಂಬಿಯ ವಿಕ್ರಮರಾಯರ ತುಂಗರಾಯನಿಗೆ ಕಳ್ಳಗೊಟ್ಟು ಕಳಿಹಿ (ಬಿಟ್ಟಅ. ೧೬೨-೨೧). [< ಕಳ್ಳ$_2$ + ಕೊಡು$_1$]

**ಕಳ್ಳಚೀಟು** (ನಾ). = ಕಳ್ಳಕಾಗದ (ಕ). [ಕಳ್ಳ$_2$ + ಚೀಟು$_2$]

**ಕಳ್ಳಚ್ಚು$_1$** (ನಾ). ಕಳ್ಳಮುದ್ರೆ (?) : ಪರದರೆಂತು ಕಿಸುಗಟ್ಟುಮಂ ಕಳ್ಳಚ್ಚುಮಂ [ಕಂಚುಮಂ] ಮಾಣ್ದೊರೆಗಂ ತೂಕಕ್ಕಂ ಬರ್ಪ ಪೊನ್ನಂ ಕೊಳ್ವರಂತೆ ಸುಖಹೇತುವಪ್ಪ ಸನ್ಮಾರ್ಗದೊಳ್ ನೆಗಟ್ಟುದು (ಧರ್ಮಾಮೃ. ೪-೩೬). [ಕಳ್ಳ$_2$ + ಅಚ್ಚು$_3$]

**ಕಳ್ಳಚ್ಚು$_2$** (ನಾ). ಕಪಟಪ್ರೀತಿ (?) : ಮುಚ್ಚುಮಱೆಗಳು ಕೆಚ್ಚುಗಳು ಮೊಳಚುಚ್ಚುಗಳು ಕಳ್ಳಚ್ಚುಗಳು (ಬಸವು. ೪೦-೬೧); ಬಱಿದೆ ಪತಿವ್ರತೆಯ ಕಳ್ಳಚ್ಚುಗಳ್ಮಚ್ಚುಗಳ್ (ಷಶಿಲ. ೨-೫೭). [ಕಳ್ಳ$_2$ + ಅಚ್ಚು$_4$]

**ಕಳ್ಳಜುಟ್ಟು** (ನಾ). ೧. "ತಲೆಯ ಹಿಂಭಾಗದ ಕುಳಿಯಲ್ಲಿ ಕೂದಲನ್ನು ಹರಕೆ ತೀರಿಸುವವರೆಗೆ ಬೋಳಿಸದೆ ಬಿಡುವುದಕ್ಕೆ ಕಳ್ಳಜುಟ್ಟು ಬಿಡುವುದೆಂದು ಅರ್ಥ" (ನನ್ನೂರು. ೨೩೫). ೨. ಕ್ರಾಪಿನ ನಡುವೆ ಕಂಡೂ ಕಾಣದಂತೆ ಇರುವ ಜುಟ್ಟು. [ಕಳ್ಳ$_2$ + ಜುಟ್ಟು]

**ಕಳ್ಳಜ್ವರ** (ನಾ). ಮೇಲ್ನೋಟಕ್ಕೆ ಕಾಣದೆ ಒಳಗೇ ಇರುವ ಜ್ವರ; ಅಂತಸ್ಥಜ್ವರ. [ಕಳ್ಳ$_2$ + ಜ್ವರ]

**ಕಳ್ಳಟಿಪ್ಪಣ** (ನಾ). ಮೋಸದ ಟಿಪ್ಪಣ; ಕೃತ್ರಿಮದ ಟಿಪ್ಪಣಿ: ಕಡುಟಕ್ಕು ; ಮಾಣಿಕಟಕ್ಕೆ ; ಪೊಸಟೊಪ್ಪಿಗೆ ; ಕಳ್ಳಟಿಪ್ಪಣಂ (ಶಮದ. ೬೫ ಪ್ರಯೋ). [ಕಳ್ಳ$_2$ + ಟಿಪ್ಪಣ]

**ಕಳ್ಳತನ** 'ಕಳ್ತನ' ನೋ.

**ಕಳ್ಳತಿ** (ನಾ). ಕಳ್ಳಿ; ಕದಿಯುವವಳು. 'ಕೆಲಸಗಳ್ಳತಿ' ಪರಾ. [ಕಳ್ಳ$_2$ + -ತಿ$_1$ (< -ಇತ್ತಿ)]

**ಕಳ್ಳದನ** (ನಾ). ತುಡುಗು ಮೇಯುವ ದನ ; ಕಳ್ಳತನದಿಂದ ಹೊಲಗದ್ದೆಗಳಲ್ಲಿ ಹೊಕ್ಕು ಮೇಯುವ ದನ (ಕ). [ಕಳ್ಳ$_2$ + ದನ]

**ಕಳ್ಳದನಿ** (ನಾ). ಸ್ವಾಭಾವಿಕ ಧ್ವನಿಯನ್ನು ಮರೆಸಿ ಆಡುವ ಕೃತಕ ಧ್ವನಿ : ಕಳ್ಳದನಿಯಲ್ಲಿ ಗುಣುಗುಣಿಸುವುದು ಶಾಸ್ತ್ರಕ್ಕೆ ಸ್ನಾನಮಾಡಿದಂತೆ (ಗಾಳಿಪ. ೪೧); "ಪ್ರಸಂಗ ಬಂದಾಗ ತಂತಿ ಮಾಡಿದರಾಯಿತು" ಎಂದು ಅವರು ಕಳ್ಳದನಿ ಕೂಡಿಸಿದರು (ಕುಂಕುಮ. ೩೨). [ಕಳ್ಳ$_2$ + ದನಿ$_2$]

**ಕಳ್ಳದಮ್ಮ** (ನಾ). ಕಳ್ಳನಾಣ್ಯ (?) : ಹಾದರಕ್ಕೆ ಹೋದರೆ ಕಳ್ಳದಮ್ಮ [ಪಾಠಾಂ. ಕಾಳದಮ್ಮ]ವಾಯಿತ್ತು ಹಾಳುಗೋಡೆಗೆ ಹೋದಡೆ ಚೇಳೂಱಿತ್ತು ಅಬ್ಬರವ ಕೇಳಿ ತಳವಾಱನುಟ್ಟ ಸೀರೆಯ ಸುಲಿದ (ಬಸವ. ೧೧೧); "ಅಧರ್ಮ" (ಬಸವ. ಕೋಶ). [ಕಳ್ಳ$_2$ + ದಮ್ಮ$_1$]

**ಕಳ್ಳದಾರಿ** (ನಾ). ೧. ಗುಪ್ತಮಾರ್ಗ : ಒಂದು ಕಳ್ಳದಾರಿಯಿಂದ ಅವರು ತಪ್ಪಿಸಿಕೊಂಡು ಓಡಿಹೋದರು (ನೀತಿಚಿಂ. I, ೧೮). ೨. ಕಳ್ಳರಿಗೆ ಮಾತ್ರ ತಿಳಿದಿರುವ ಮತ್ತು ಕಳ್ಳರಿಗೆ ಯೋಗ್ಯವಾದ ದಾರಿ (ಕ). ೩. ತಪ್ಪುದಾರಿ : "ಅಪಂಥಾಃ, ಅಪಥ – ೨ ತಪ್ಪುವ ದಾರಿಯ ಪೆಸರುಗಳು. ಕಳ್ಳದಾರಿ" (ಸಿದ್ಧಾಂತಿ. ೮೬). [ಕಳ್ಳ$_2$ + ದಾರಿ$_1$]

**ಕಳ್ಳದಾಳ** (ನಾ). "ಮೋಸದ ದಾಳ" (Cogged Dice. ಇಂಕನಿ) [ಕಳ್ಳ$_2$ + ದಾಳ]

**ಕಳ್ಳದಾಱಿ** (ನಾ). ಕಳ್ಳರು ಮಾಡುವ ದಾಳಿ; ಮೋಸದ ದಾಳಿ; "ದಟಿದುಟಿ" (ಚತುನಿ. ಕ. 1, ೩). [ಕಳ್ಳ$_2$ + ದಾಱಿ]

**ಕಳ್ಳನಗಿಡ** (ನಾ). ಒಂದು ಬಗೆಯ ಸಸ್ಯ : ಅಮೃತಬಳ್ಳಿ . . . ಸಬ್ಬಸಿಗೆ, ಕಳ್ಳನಗಿಡ ಇವನ್ನು ಹಸಿಯದಾಗಿರುವಾಗಲೇ ಉಪಯೋಗಿಸಬೇಕು (ಸಕವೈ. XII, ಪ್ರಸ್ತಾವನೆ). [ಕಳ್ಳ$_3$ + ಗಿಡ (< ಗಿಡು)]

**ಕಳ್ಳನಚವಲಿ, ಕಳ್ಳನಚವುಲಿ, ಕಳ್ಳನಚೌರಿ, ಕಳ್ಳನಚೌಲಿ** (ನಾ). ಒಂದು ಬಗೆಯ ಬಳ್ಳಿ : "ಸಾರಿಣಿ, ಪ್ರಸಾರಿಣಿ, ಕಟಂಭರಾ, ರಾಜಬಲಾ, ಭದ್ರಬಲಾ – ಈ ೫ ಹೆಸರಣಿ ಕಳ್ಳನಚವಲಿಯೆಂಬರು" (ನಾಚಿರಾ. ೧೧೨). **ಕಳ್ಳನಚವುಲಿ :** "ರಾಜಪರ್ಣೀ – ಕಳ್ಳನಚವುಲಿ" (ಒಷಧಿ. ೧೩೮). **ಕಳ್ಳನಚೌರಿ :** ಕಳ್ಳನಚೌರಿಯ ಬೇರು ಸೊಪ್ಪುಗಳ ಕಹಿ ಎಣ್ಣೆಯಲ್ಲಿ ಅರೆದು ಕುಡಿಯಕೊಡಲು. . . ಮಾಸು ಬೀಳುವುದು (ವೈದ್ಯಸಾ. I, ೪೫೯). **ಕಳ್ಳನಚೌಲಿ :** "ಇಂದ್ರಪಲ್ಲಿ – ಕಳ್ಳನಚೌಲಿ" (ಒಷಧಿ. ೧೪). [ಕಳ್ಳ₃ + ಚವಲಿ ?]

**ಕಳ್ಳನಚವುಲಿ** 'ಕಳ್ಳನ ಚವಲಿ' ನೋ.

**ಕಳ್ಳನಚೌರಿ** 'ಕಳ್ಳನ ಚವಲಿ' ನೋ.

**ಕಳ್ಳನಚೌಲಿ** 'ಕಳ್ಳನ ಚವಲಿ' ನೋ.

**ಕಳ್ಳನಮೆಳ್ಳಿ** (ನಾ). = ಕಳ್ಳನಗಿಡ : ಕಳ್ಳನಗಿಡ, ಕಳ್ಳನಮೆಳ್ಳಿ (ಮೈಔಗಿ. ೮-೧೪೨). [ಕಳ್ಳ₃ + ಮೆಳ್ಳಿ]

**ಕಳ್ಳನಹಂಬು** (ನಾ). = ಕಳ್ಳನಗಿಡ : ಕಳ್ಳನ ಹಂಬು, ಕಳ್ಳನಗಿಡ, ಕಳ್ಳನ ಮೆಳ್ಳಿ (ಮೈಔಗಿ. ೮-೧೪೨). [ಕಳ್ಳ₃ + ಹಂಬು₃]

**ಕಳ್ಳನಾಣ್ಯ** (ನಾ). ನಡೆಯದ ನಾಣ್ಯ; ಖೋಟಾನಾಣ್ಯ; ಖೊಟ್ಟಿ ನಾಣ್ಯ : ಕಳ್ಳನಾಣ್ಯ ಸಲುಗೆಗೆ ಸಲ್ಲದು ಕಳ್ಳನಾಣ್ಯವ ಸಲ್ಲಲೀಯರಯ್ಯಾ (ಬಸವ. ೧೯೮). [ಕಳ್ಳ₂ + ನಾಣ್ಯ]

**ಕಳ್ಳನೆವ** (ನಾ). ಸುಳ್ಳುನೆವ : ಅವನು ಬರಲಾಗದ್ದಕ್ಕೆ ಒಂದು ಕಳ್ಳನೆವ ಹೇಳಿದ (ರೂಢಿ). [ಕಳ್ಳ₂ + ನೆವ]

**ಕಳ್ಳನೋಟ** (ನಾ). ಕದ್ದು ನೋಡುವಿಕೆ : ಅವನಿಗೆ ನಾಚಿಕೆಯಾಗಿ . . . ಹುಡುಗರನ್ನೆಲ್ಲಾ ಕಳ್ಳನೋಟದಿಂದ ನೋಡುತ್ತಿದ್ದ (ಶಾಲೆಮ. ೧೬೩); ಬಾಗುವೆ ಬಳುಕುವೆ ಬಳೆಗಳನೆಣಿಸುವೆ ಕಳ್ಳನೋಟವ ಬೀರುತಿರುವೆ (ಇಂಚಾಪ. ೮೯-೩೫). [ಕಳ್ಳ₂ + ನೋಟ]

**ಕಳ್ಳಪತ್ರ** (ನಾ). = ಕಳ್ಳಕಾಗದ (೬). [ಕಳ್ಳ₂ + ಪತ್ರ]

**ಕಳ್ಳಪೇಟೆ** (ನಾ). ಕದ್ದು ಮುಚ್ಚಿ ಮಾರಾಟ ಮಾಡುವ ಪೇಟೆ; ಕಾಳಸಂತೆ; ಕಳ್ಳಸಂತೆ : ಕಳ್ಳಪೇಟೆ ಅಂದಮೇಲೆ ವ್ಯಾಪಾರ ಹೇಗೆ ಇರಬೇಕು (ಅವುಗಾಂ. ೧೩); ಆ ದಿನಸಿಯಷ್ಟೂ ಹಿಂದಿನಿಂದ ಕಳ್ಳಪೇಟೆಗೆ ಹೋಗುತ್ತಿತ್ತು (ಮರಳಿ. ೧೨). [ಕಳ್ಳ₂ + ಪೇಟೆ₂]

**ಕಳ್ಳಬಂಟ, ಕಳ್ಳಭಂಟ** (ನಾ). ೧. ಕಳ್ಳತನದಲ್ಲಿ ನಿಪುಣನಾದವನು; ಪಕ್ಕಾಕಳ್ಳ : ಕಳ್ಳಬಂಟ ಒಡೆಯಗೆ ಹಿತ (ಗಾದೆ). ೨. ಗೂಢಚಾರ : ಗುಪ್ತವಾಗಿ ಹೋಗಿ ವೈರಿಗಳ ಚಲನವಲನಗಳನ್ನು ತಿಳಿದು ಬರುವ ಆಳು : ಕಳ್ಳಬಂಟರಂ ಮನ್ನಣೆಯಿಂ ಸೆಜ಼ಿಗೆಯ್ದು ರಾಜೇಂದ್ರ ಭೂಪಾಲನೊಪ್ಪುತ್ತಿರೆ (ಹಮ್ಮಿರ. ೨-೧೦೭ ವ); ಕೋಟೆಯೊಳಗಣ ಸೈನಿಕರ ಒಡ್ಡನ್ನರಿಯಲು ಕಳ್ಳಬಂಟರನ್ನಟ್ಟಬಾರದೆಂಬುದೂ . . . ಅರ್ಥವಲ್ಲ (ಬೆಟ್ಟಅ. ೪೫-೧೬). **ಕಳ್ಳಭಂಟ :** ೧. ಇವನೂ ರಾತ್ರೆ ಹೊತ್ತು ಕಳ್ಳತನ ಮಾಡುತಾ ಸ್ವಲ್ಪ ದಿವಸದಲ್ಲಿಯೇ ಕಳ್ಳಭಂಟನಾದನು (ನೀತಿಚಿಂ. V, ೫). ೨. ನಮಗೆ ಬೇಹನ್ನಳವಡಿಸುವಂತೆ ಕಳ್ಳಭಂಟರಿಬ್ಬರನ್ನು ಕಳಿಹಿರಿ (ಬೆಟ್ಟಅ. ೭೦-೮). [ಕಳ್ಳ₂ + ಬಂಟ₁]

**ಕಳ್ಳಬಟ್ಟಿ, ಕಳ್ಳಭಟ್ಟಿ** (ನಾ). ಕಳ್ಳತನದಿಂದ ಇಳಿಸುವ (ಹೆಂಡದ) ಬಟ್ಟಿ : ಪಾನನಿರೋಧ ಜಾರಿಗೆ ಬಂದನಂತರ ಸಂಕಪೂಜಾರಿಯು ಕಳ್ಳಬಟ್ಟಿ ಸಾರಾಯಿ ಉದ್ಯಮದಲ್ಲಿ ನಿರತನಾಗಿದ್ದನು (ಪಂಜಪಂ. ೧೧೧). **ಕಳ್ಳಭಟ್ಟಿ :** ಪಾನನಿರೋಧ ಜಾರಿಗೆ ಬಂದಿರುವ ಕಡೆ ಕಳ್ಳಭಟ್ಟಿಯಿದೆ ಎಂಬುದು ನಿಜ (ರೂಢಿ). [ಕಳ್ಳ₂ + ಬಟ್ಟಿ₃]

**ಕಳ್ಳಭಂಟ** 'ಕಳ್ಳಬಂಟ' ನೋ.

**ಕಳ್ಳಭಟ್ಟಿ** 'ಕಳ್ಳಬಟ್ಟಿ' ನೋ.

**ಕಳ್ಳಮನಸ್ಸು** (ನಾ). ೧. ಬಿಚ್ಚುಮನಸ್ಸಿಲ್ಲದಿರುವುದು. ೨. ಮೋಸಗಾರನ ಮನಸ್ಸು : ಅವನದು ಕಳ್ಳಮನಸ್ಸು (ರೂಢಿ). [ಕಳ್ಳ₂ + ಮನಸ್ಸು]

**ಕಳ್ಳಮನೆ** (ನಾ). ಮೋಸದಮನೆ; ಕಪಟದ ಮನೆ : ಕದಬಾಗಿಲಿರಿಸಿಹ ಕಳ್ಳಮನೆಯಿದು ಮುದದಿಂದಲೋಲಾಡೋ ಸುಳ್ಳುಮನೆ (ಪುರಂದ. ೧-೧೬೮-೧). [ಕಳ್ಳ₂ + ಮನೆ]

**ಕಳ್ಳಮಾತು** (ನಾ). ಸುಳ್ಳುಮಾತು; ಕಪಟದ ಮಾತು : ಕಳ್ಳಮಾತುಗಳನ್ನು ನನ್ನ ಮುಂದೆ ಹೇಳಬೇಡ (ರೂಢಿ). [ಕಳ್ಳ₂ + ಮಾತು₁]

**ಕಳ್ಳಮಾಲು** (ನಾ). ೧. ಕಳವು ಮಾಡಿದ ಸರಕು; ಕದ್ದ ವಸ್ತು : ಪೋಲೀಸರು ಕಳ್ಳಮಾಲನ್ನು ವಶಪಡಿಸಿಕೊಂಡರು (ರೂಢಿ). [ಕಳ್ಳ₂ + ಮಾಲು₄]

**ಕಳ್ಳರುಜು** (ನಾ). ಮೂಲರುಜುವಿನಂತೆಯೇ ತೋರುವ ಕೃತಕ ರುಜು : "ಅಸಲಿನಂತೆಯೇ ತೋರುವ ಹಾಗೆ ಮೋಸಕ್ಕಾಗಿ . . . ಕಳ್ಳ ರುಜು (ಹಾಕುವುದು)" (Forgery. ಇಂಕನಿ). [ಕಳ್ಳ₂ + ರುಜು₂]

**ಕಳ್ಳವಾರ್ಡಿ** (ನಾ). ಒಂದು ಊರಿನ ಹೆಸರು : ಇದರ್ಗೆ ಸಾಕ್ಷಿ ಗೋಯಿನ್ದಯ್ಯನುಂ ಸನ್ದಿಗಾಲಜ್ಜವೂರದ ಕಳ್ಳವಾರ್ಡಿಯ ಮಹಾಜನಮುಂ (ಎಕ. IV, ಶ್ರೀರಂಗ. ೧೬೦-೧೭; ಸು. 800). [? + ಪಾಡಿ₁]

**ಕಳ್ಳವಣ, ಕಳ್ಳಹಣ** (ನಾ). ೧. = ಕಳ್ಳನಾಣ್ಯ : ಮುರಿಗಂಚು ತವರ ಹಿತ್ತಾಳೆ ತಾಂಬ್ರಯಿವು ಮೊದಲಾದ ಲೋಹವ ತನ್ನಿ ಕಳ್ಳವಣ ಕಂಡು ಬೆಳ್ಳಿ ಮೊದಲಾದ ರೊಕ್ಕವ ತನ್ನಿ (ಬಿಡವ. ೨೪೭). **ಕಳ್ಳಹಣ :** ೧. ಕರ್ಮಗಳು ನೆಜ಼ೆ ಕಳ್ಳಹಣಗಳು ಧರ್ಮಗಳವೆಡವಟ್ಟು ತಿಳಿಯಲು ನಿರ್ಮಲಜ್ಞಾನೈಕ ಸಾರವ ಕೇಳದಪರಂಜಿ (ಅಮೃತ. ೩-೯). ೨. ಕಳ್ಳತನದಿಂದ ಸಂಪಾದಿಸಿದ ಹಣ : ಕಳ್ಳಹಣ ಗಳಿಸಿ ರಕ್ಷಿಸುವುದು ಹೇಗೆ (ರೂಢಿ). [ಕಳ್ಳ₂ + ಪಣ₁]

**ಕಳ್ಳವತಿ** (ನಾ). ಮದ್ಯವನ್ನು ಬಟ್ಟಿಯಿಳಿಸುವ ಮತ್ತು ಮಾರುವ ಹೆಂಗಸು : ನೀನೆತ್ತಣನಾರ ಮಗನೆನೆ ಕಂಸಂ ಕೈಯ್ಯುಗಿದು ಕೌಶಂಬಿಯ ಕಳ್ಳವತಿ ಮಂಡೋದರಿಯ ಮಗನೆಂಬುದುಂ (ಅರ್ಥನೇ. ೬-೬೭ ವ). [ಕಳ್ಳವಳ + -ತಿ₁ (< -ಇತ್ತಿ)]

**ಕಳ್ಳವತ್ತಿಗೆ** (ನಾ). = ಕಳ್ಳವತಿ : ಪಿಡಿವೆತ್ತ ಕಳ್ಳನಂತೆ ಕಳ್ಳವತ್ತಿಗೆ ತಳವೆಳಗಾಗಿ (ಅರ್ಥನೇ. ೬-೬೯ ವ). [?]

**ಕಳ್ಳವರಿಕೆ** (ನಾ). ಕಳ್ಳಕೊಯಿಲು : ಗದ್ದೆಯಲ್ಲಿ ಏನಾದರೂ ಕಳ್ಳವರಿಕೆ ಆಗಿರುವುದೋ ಎಂದು ವಿಚಾರಿಸುವುದಕ್ಕೆ . . . ಹೊರಟು (ಕಥಾಮಂ. IV, ೩೦.) [ಕಳ್ಳ₂ + ಪರಿ₁ (< ಪಱ₁) + -ಕೆ]

**ಕಳ್ಳವಳ, ಕಳ್ಳವಾಳ** (ನಾ). ಕಳ್ಳನ್ನು ತಯಾರಿಸುವವನು; ಹೆಂಡ ಇಳಿಸುವವನು, —ಮಾರುವವನು : ಆ ಪೊಟಲ ಕಳ್ಳವಳನೊರ್ವನಾವನದೊಳೇನಾನುಂ ನಿಮಿತ್ತದೆ ತೊಟಲ್ವನದಂ ಕಂಡು ಕೊಂಡುಪೋದಂ (ನೇಮಿಪು. ೩-೭೦ ವ). **ಕಳ್ಳವಾಳ :** "ಕಳ್ಳವಾಳ – ಕಲ್ಯಪಾಲ = ಶೌಂಡಿಕ" (ತದ್ಭಕೋ. ೭). [< ಸಂ. ಕಲ್ಯಪಾಲ]

**ಕಳ್ಳವಳಿಕೆ** (ನಾ). ಒಂದು ಬಗೆಯ ತೆರಿಗೆ (?) : ಸ್ವಯಂಭು ಸೋಮೇಶ್ವರ ದೇವರ್ಗಾಳ್ವ ೧೨ರಡೂರ್ಗಳಾ ಜಲ್ಲಂ ಕಳ್ಳವಳಿಕೆ ಸಾದಂ ಬಣ್ಣಿಗೆಯನೆ ಪರಿಹಾರಂ ಮಾಡಿಬಿಟ್ಟಂ (ಎಇ. XXVIII, ೫-೧೪; 1082). [?]

**ಕಳ್ಳವಳ್ಳಿ** (ನಾ). ಒಂದು ಊರಿನ ಹೆಸರು : [ಮೂ]ಸಜಱ ಕಳ್ಳವಳ್ಳಿ ಪೆದ್ದಮನಾಳುತ್ತಮಿಬ್ದು (ಕಇ. I, ೧೪-೬; ಸು. 866). [?]

**ಕಳ್ಳವಾಸಗೆ₁** (ನಾ). ಕಳ್ಳ ಎಂಬ ಸಸ್ಯದಿಂದ ಮಾಡಿದ ಹಾಸುಗೆ (೬). [ಕಳ್ಳ₃ + ಪಾಸಗೆ₁]

**ಕಳ್ಳವಾಸಗೆ**$_2$ (ನಾ). ಮೋಸದ ಲೆತ್ತ : "ನಾಬಿವಾಸಗೆ – ಕಳ್ಳವಾಸಗೆ" (ಶಮುದ. ಪರಿ. ೧). [ಕಳ್ಳ$_2$ + ಪಾಸಗ್ಗೆ$_2$]

**ಕಳ್ಳವಾಳ** 'ಕಳ್ಳವಳ' ನೋ.

**ಕಳ್ಳವುಣಿಸೆ** 'ಕಳ್ಳಂಬುಣುಸೆ' ನೋ.

**ಕಳ್ಳವುಣುಯೂರ್** (ನಾ). ಒಂದು ಊರಿನ ಹೆಸರು : ಬಾಚಿಗಾವುಣ್ಡ ಕಂಭಯ್ಯನು ಕಳ್ಳವುಣುಯೂರ ಮಹಾಜನಮುಂ (ಎಕ. XI, ಚಿತ್ರದು. ೫೦–೨೧ ; 868). [? + ಊರ್]

**ಕಳ್ಳವೆಣ್** (ನಾ). ಕಪಟಸ್ತ್ರೀ; ಮೋಸಗಾತಿ; ಕಳ್ಳಿ : ಬಿಸುಗುವೆಂಗಳ ಕಳ್ಳವೆಂಗಳ ಗ್ರಾಮ್ಯಮಾನಿನಿಯರ ಕಲೆಯ ಪೇಳ್ವಂತೆ ಘನಪತಿಭಕ್ತೆಯ ಚದುರೆಯ ಕುಸುಮಾಜಿಯನುಭವಾರ್ಥವ ಹೇಳಬಹುದೆ (ಭರಚ. ೧೧–೧೧೯). [ಕಳ್ಳ$_2$ + ಪೆಣ್]

**ಕಳ್ಳವೆಳಜು** (ನಾ). ಕಳ್ಳರ ಹೆದರಿಕೆ, —ಭೀತಿ : "ಕಳ್ಳರತ್ತಣಿಂ ಪೆಳಜು, ಕಳ್ಳವೆಳಜು" (ಶಬ್ದಾನು. ೩೦೩ ಪ್ರಯೋ). [ಕಳ್ಳ$_1$ + ಪೆಳಜು$_1$]

**ಕಳ್ಳವೆಳ್ಳಿ** (ನಾ). ಕೀಳ್ತರದ ಬೆಳ್ಳಿ ; ಕಡಿಮೆ ಬೆಲೆಯ ಬೆಳ್ಳಿ ; ಕಂದು ಬೆಳ್ಳಿ (ಕಿ). [ಕಳ್ಳ$_2$ ? + ಬೆಳ್ಳಿ]

**ಕಳ್ಳವೆಳ್ಳಿವಟ್ಟಲ್** (ನಾ). ೧. ಕಳ್ಳಬೆಳ್ಳಿಯಿಂದ ಮಾಡಿದ ಬಟ್ಟಲು. ೨. ಕಳ್ಳು ತುಂಬಿದ ಬೆಳ್ಳಿಯ ಬಟ್ಟಲು. ೧, ೨ : ಕಳ್ಳವೆಳ್ಳಿವಟ್ಟಲ್ ಬಾಯೊಳ್ ಬೆಚ್ಚಂತಿರೆ (ಶಮುದ. ೨೪೯ ಪ್ರಯೋ).
[ಕಳ್ಳವೆಳ್ಳಿ + ಬಟ್ಟಲ್ ; < ಕಳ್$_3$ + ಬೆಳ್ಳಿವಟ್ಟಲ್]

**ಕಳ್ಳವೊಗು** (ಕ್ರಿ). ಕಳ್ಳತನದಿಂದ ಹೊಗು; ಗುಪ್ತವಾಗಿ ಪ್ರವೇಶಿಸು: ಧೂರ್ತದುರ್ಜನರೂ ಪಂಜುಗಳ್ಳರೂ . . . ತಂಡತಂಡವಾಗಿ ಕಳ್ಳವೊಕ್ಕು ಮರೆಗರೆದಿದ್ದು (ಬಿಟ್ಟಳ. ೧೪೯–೧೧). [ಕಳ್ಳ$_2$ + ಪೊಗು]

**ಕಳ್ಳವ್ಯಾಪಾರ** (ನಾ). ಮೋಸದ ವ್ಯವಹಾರ: ಭವಿಷ್ಯದಲ್ಲಿ ಈ ಕಳ್ಳ ವ್ಯಾಪಾರದಿಂದ ಬರುವ ಮರ್ಯಾದೆಯೆಷ್ಟು (ಹೊಸಕ್ಷಿ. ೨೪).
[ಕಳ್ಳ$_2$ + ವ್ಯಾಪಾರ]

**ಕಳ್ಳಶರಾಬು** (ನಾ). ಕಳ್ಳತನದಿಂದ ಸಾಗಿಸಿದ ಮದ್ಯ, —ಸಾರಾಯಿ, —ಹೆಂಡ : ಸೋಡಾ, ಬೀಡಾ, ಕಳ್ಳಶರಾಬು ಇವೆಲ್ಲ ಬರುತ್ತವೆ (ನಮ್ಮೂರು. ೩೦೩). 'ಕಳ್ಳಬಟ್ಟಿ' ಪರಾ. [ಕಳ್ಳ$_2$ + ಶರಾಬು]

**ಕಳ್ಳಸಂತೆ** (ನಾ). = ಕಳ್ಳಪೇಟೆ : ಕಳ್ಳಸಂತೆಯ ಗಾಡಿಗಳೆಲ್ಲ ಕರಿ ಅಡವಿಯಲ್ಲಿ ಹಾಯ್ದುಹೋಗುವುವು (ಪ್ರಣಸ. ೪೫) ; ಕಳ್ಳಸಂತೆ ಸಿರಿವಂತ ಸಭ್ಯರಾನರ್ಮ ಸಚಿವನೊಬ್ಬಾ (ಅರಳು. ೪೨೯–೨). [ಕಳ್ಳ$_2$ + ಸಂತೆ]

**ಕಳ್ಳಸಾಕ್ಷಿ** (ನಾ). ೧. ಸುಳ್ಳುಸಾಕ್ಷಿ. ೨. ಸುಳ್ಳುಸಾಕ್ಷ್ಯ ಹೇಳುವವನು (ಕಿ). [ಕಳ್ಳ$_2$ + ಸಾಕ್ಷಿ]

**ಕಳ್ಳಸಾಗಣೆ** (ನಾ). ಕಳವಿನ ಸರಕನ್ನು ಗುಪ್ತವಾಗಿ ಸಾಗಿಸುವಿಕೆ. 'ಕಳ್ಳಸಾಗಣೆಗಾರ' ಪರಾ. [ಕಳ್ಳ$_2$ + ಸಾಗಣೆ]

**ಕಳ್ಳಸಾಗಣೆಗಾರ** (ನಾ). ಕಳ್ಳಸಾಗಣೆ ಮಾಡುವವನು ; ಮಾಲುಗಳನ್ನು ಗುಪ್ತವಾಗಿ ಸಾಗಿಸುವವನು: ರಹದಾರಿಯಿಲ್ಲದೆಮಾದಕದ್ರವ್ಯಗಳನ್ನು ಮಾರುತ್ತಿದ್ದ ಜನ, ಕಳ್ಳಸಾಗಣೆಗಾರರು . . . ಇವರೆಲ್ಲ ಆ ಪಂಗಡಕ್ಕೇನೆ ಸೇರಿದವರು (ಪುನರು. ೪೧೩). [ಕಳ್ಳಸಾಗಣೆ + -ಗಾರ (<-ಕಾಜ)]

**ಕಳ್ಳಸಾಗಾಟ** (ನಾ). = ಕಳ್ಳಸಾಗಣೆ : ಗೋವೆಯಿಂದ ಕಳ್ಳಸಾಗಾಟ ಅಧಿಕಾರಿಗಳ ಕಣ್ತಪ್ಪಿಸಿ ನಡೆಯುತ್ತಲೇ ಇದೆ (ರೂಢಿ). [ಕಳ್ಳ$_2$+ ಸಾಗಾಟ]

**ಕಳ್ಳಸಿಗ, ಕಳವಸಿಗ** (ನಾ). ಹೆಂಡ ಇಳಿಸುವವನು ; ಈಡಿಗ: ಒರ್ವ ಕಳ್ಳಸಿಗಂ ಕಳ್ಳಂ ಕೊರ್ವಿಸುವ ಬೇರುಂ ಬಿಕ್ಕೆಯುಮಂ ಬೆರಟುತ್ತುಂ ಬಂದು (ಅರ್ಧನೇ. ೪–೧೧೪ ವ). **ಕಳವಸಿಗ:** "ಕಲ್ಲಪಾಲಃ = ಕಳವಸಿಗನೆಂಬಂ [ಪಾಠಾಂ. ಕಳ್ಳಮಾಡುವಂ]" (ನೀತಿವಾ. ೧೩–೮). [< ಕಳ್$_3$ + ಬಸಿಗ ?]

**ಕಳ್ಳಸಿಗಗೇರಿ** (ನಾ). ಹೆಂಡ ಇಳಿಸುವವರ ಬೀದಿ : ಕಳ್ಳಸಿಗಗೇರಿಯೊಳಗಣ ಕಳ್ಳೆಲ್ಲಮನೆಟಿದು ತರಿಸಿ . . . ಸೂಜಿಗೊಡುವಂ (ಧರ್ಮಾಮೃ. ೨–೨೮). [ಕಳ್ಳಸಿಗ + ಕೇರಿ]

**ಕಳ್ಳಹಣ** 'ಕಳ್ಳವಣ' ನೋ.

**ಕಳ್ಳಹಾದರ** (ನಾ). ಕಳ್ಳತನದಲ್ಲಿ ನಡೆಸುವ ವ್ಯಭಿಚಾರ (ಕಿ).
[ಕಳ್ಳ$_2$ + ಹಾದರ (< ಪಾದರ)]

**ಕಳ್ಳಹಾದಿ** (ನಾ). = ಕಳ್ಳದಾರಿ : "ತುವರಂ ಕಷಾಯಂ ಕಳ್ಳಹಾದಿಯಕ್ಕುಂ" (ಮಂಗರಾ. ೬೭–೫). [ಕಳ್ಳ$_1$ + ಹಾದಿ (< ಪಾದಿ$_1$)]

**ಕಳ್ಳಹುಂಡಿ** (ನಾ). ಮೋಸದ ಹುಂಡಿ ; ಕೃತಕವಾದ ಲೇವಾದೇವಿ ಕಾಗದ (ಕಿ). [ಕಳ್ಳ$_2$ + ಹುಂಡಿ$_2$]

**ಕಳ್ಳಹುದಲು, ಕಳ್ಳಹುದುಲು** (ನಾ). (ಉಕ) = ಕಳ್ಳ ಕೆಸರು : ತೋರಿಕೀಯ ಹಾದೀ ಕಳ್ಳಹುದಲೋ (ಹೊಸಂಸಾ. ೧೯). **ಕಳ್ಳಹುದುಲು :** ಕಳ್ಳಹುದುಲಿನ ದಂಡೆ ಆಚೆ ಈಚೆಗೆ ಚಾಚಿಕೊಂಡು . . . ಬಿದ್ದುಕೊಂಡಿದುದು (ಉಯ್ಯಾಲೆ. ೭೯–೧೧). [ಕಳ್ಳ$_2$+ ಹುದಲು (< ಪುದಿಲ್)]

**ಕಳ್ಳಹುದುಲು** 'ಕಳ್ಳಹುದಲು' ನೋ.

**ಕಳ್ಳಹುಳ** (ನಾ). ಒಂದು ಬಗೆಯ ಹುಳು; ತನ್ನ ಸುತ್ತಲೂ ಕಸಕಡ್ಡಿಗಳಿಂದ ಗೂಡನ್ನು ರಚಿಸಿಕೊಂಡು, (ಆಮೆಯಂತೆ) ತಲೆಯನ್ನು ಹೊರಚಾಚಬಲ್ಲ ಹುಳು (ಕಿ).
[ಕಳ್ಳ$_2$ + ಹುಳ (< ಪುಬು$_1$)]

**ಕಳ್ಳಹೃದಯ** (ನಾ). ಮೋಸಗಾರನ ಹೃದಯ : ಅವರಿದುರು ನಿಲ್ಲುವ ನೈತಿಕ ಧೈರ್ಯ ಆ ಕಳ್ಳಹೃದಯಕ್ಕೆ ಇದ್ದರಲ್ಲವೆ (ಹೊಸಕ್ಷಿ. ೨೫).
[ಕಳ್ಳ$_2$ + ಹೃದಯ]

**ಕಳ್ಳಹೆಜ್ಜೆ** (ನಾ). ಸದ್ದಾಗದಂತೆ ಮೆಲ್ಲಗೆ ಇಡುವ ಹೆಜ್ಜೆ: ಕಳ್ಳಹೆಜ್ಜೆಯನಿಡುತ ಬಂದು ನನ್ನೊಡನೆ ತಿಳಿಯದಾವುದೊ ಭಾಷೆ ನುಡಿಯುತಿರುವೆ (ನೆಲಮು. ೯೪) ; ತರಲನು ಕಳ್ಳಹೆಜ್ಜೆಯಿಡುತ್ತ ಹೊರಗೆ ಹೋದ (ಎರಸೆ. ೧೫). [ಕಳ್ಳ$_2$+ ಹೆಜ್ಜೆ (< ಪಜ್ಜೆ)]

**ಕಳ್ಳಹೊತ್ತು** (ನಾ). ಹೊತ್ತಲ್ಲದ ಹೊತ್ತು ; ಅವೇಳೆ (?) : ಬೆಲ್ಲಗಣಿಕೆಬೇರಂ ಆದಿವಾರ ತಂದು ಅರ್ಚನೆಯ ಮಾಡಿ ಕಿವಿಯಲ್ಲಿ ಕಟ್ಟಲು ರಾತ್ರಿಯಲ್ಲಿ ಕಳ್ಳಹೊತ್ತಿನಲಿ ಬಹ ಜ್ವರ ತೀರ್ಗುಂ (ಸಕವೈ. ೧೧೮).
[ಕಳ್ಳ$_2$ + ಹೊತ್ತು$_2$ (< ಪೊಟ್ತು)]

**ಕಳ್ಳಹೊನ್ನು** (ನಾ). = ಕಳ್ಳನಾಣ್ಯ : ಕಳ್ಳಹೊನ್ನಿಗೆ ದೊಡ್ಡ ಮುದ್ರೆ (ಗಾದೆ). [ಕಳ್ಳ$_2$ + ಹೊನ್ನು (< ಪೊನ್)]

**ಕಳ್ಳಳ್ಳುಳ್ಕು** (ನಾ). ಒಳಗಿನ ಭಯ ; ಒಳಗೇ ಅಂಜುವುದು (?) : ಚಹಕ್ಕೆ ಬಹಿಷ್ಕಾರ ಹಾಕಿಯೇ ಬಿಟ್ಟರು. ನಾಲ್ಕು ಆರು ದಿನ ಸಂದಿರಬಹುದು. ಎಲ್ಲರಿಗೂ ಕಳ್ಳಳ್ಳು[ಳ್ಕು] ಒಬ್ಬರಿಗೆ ಕಾಣದಹಾಗೆ ಮತ್ತೊಬ್ಬರು ಚಹದ ಅಂಗಡಿಗೆ ಹೋಗುವುದು (ಗಾಳಿಗು. ೪೪). [ಕಳ್ಳ$_2$ + ಅಳ್ಕು$_2$]

**ಕಳ್ಳಿಜಿವಲ್ಲಿ** (ನಾ). ಒಂದು ಊರಿನ ಹೆಸರು : ಕನ್ನ ಅರಸ × × ಸ್ವತು ಮುಂಗೆಳ ಕಳ್ಳಜಿವಲ್ಲಿ ಕಿತ್ತರಸಂ ವಜಿಗಟ್ಟನ ಮಗ ಪುಲಿಕಡ್ಡ ಅರಸರ್ ಸಿಯಗೆಲ್ಲರ್ (ಎಕ. XVI, ತುಮುಕೂ. ೯೧–೬ ; 775). [?]

**ಕಳ್ಳಾಟ** (ನಾ). ಕಳ್ಳತನದ ಆಟ ; ಕಪಟ : ಳಕಾರಕ್ಕೆ – ಮುಳ್ಳಾಗಿ ; ಕಳ್ಳಾಟಂ (ಶಮುದ. ೬೯ ಪ್ರಯೋ) ; ಈ ಸಲ ಅವನಿಗೆ ಅವಳ ಕಳ್ಳಾಟ ಗೊತ್ತಾಗಿಹೋಯಿತು (ಪಂಚಾಮೃ. ೮೩). [ಕಳ್ಳ$_2$+ ಆಟ]

**ಕಳ್ಳಾಳ್** (ನಾ). ೧. ಕಳವು ಮಾಡುವ ಮನುಷ್ಯ; ತುಡುಗ ; ಕಳ್ಳ : ಬಟ್ಟೆಯೊಳ್ ಪೋಪ ಬೆಳ್ವಾಳ್ ಕಳ್ಳಾಳ ಸರಮುಂ ಕೇಳ್ದಂತೆ ಪೆಪ್ಪಳಿಸಿ (ಪಂಚತಂ. ೭೪–೧೩). ೨. "ಹೆಂಡ ಕುಡಿದವನು" (ಪ್ರಭಣ್ಣ).
[ಕಳ್ಳ$_1$ + ಆಳ್$_3$]

**ಕಳ್ಳಿ$_1$** (ನಾ). ಕಳವು ಮಾಡುವವಳು ; ಕದಿಯುವವಳು ; ತುಡುಗಿ : ಕಳ್ಳರನ್ನು ಹಿಡಿಸಿದವಳನ್ನೇ ಕಳ್ಳಿಯೆಂದು ಹಿಡಿದುಕೊಡಲು ಹೋಗುತ್ತಿದ್ದರೇ (ಭಾರತಿ. ೪೪); ನೀನೊಬ್ಬ ಪಕ್ಕಾ ಕಳ್ಳಿಯಲ್ಲವೇನೇ (ಸುಂದರಿ. ೨೨). [ಕಳ್ಳ$_1$ + -ಇ$_3$]

**ಕಳ್ಳಿ$_2$** (ನಾ). ೧. ಮಂದವಾದ ಹಾಲನ್ನುಳ್ಳ ಒಂದು ಜಾತಿಯ ಗಿಡ ; ಬೇಲಿಗೆ ಬೆಳೆಯಿಸುವ ಗಿಡ : "ಸಿಹುಂಡಃ, ವಜ್ರದಃ, ಸ್ನುಕ್, ಸ್ನುಹೀ, ಗುಡಾ, ಸಮಂತದುಗ್ಧಾ ಈ ೬ ಕಳ್ಳಿ" (ನಾಚಿರಾ. ೧೧೦) ; ಬಳ್ಳಿಗಳ್ . . . ಕೆಲದೊಳ್ ಕಳ್ಳಿಯಿಡಲಡರ್ವುವು (ಆದಿಪು. ೧೨-೧೭) ; ಕಳ್ಳಿಯಂ ನಂಬಿ ತೆಂಗಿನ ತೋಂಟಮಂ ಕಡಿವ (ಧರ್ಮಾಮೃ. ೮-೫೧) ; ತೆವರಿಂಗೆ ಹೋದ ಸಾಲಕಳ್ಳಿ ಮೇರೆಯಾಗಿ (ಎಕ. XV, ಅರಸೀ. ೨೧೭-೬೮ ; 1232); ಬೆಳ್ಳಿ ಬೆಸೆಯಬೇಕಾದರೆ ಕಳ್ಳೀ ಹಾಲು ಬೇಕೆ (ಗಾದೆ). 'ಎಲೆಗಳ್ಳಿ', 'ಮುಳ್ಳುಗಳ್ಳಿ' ಪರಾ. ೨. (ಆಲಂ) ಕಳ್ಳಿಯ ಹಾಲಿನಂತಹ ಗುಣದವನು ; ಕೆಟ್ಟಮನುಷ್ಯ (ಕ). ೩. ಗಂಗಡಿಕಾರರಲ್ಲಿ ಒಂದು ಕುಲ (ಎಸಮೈ. XXVII, ೯).

[ದೇ. ॥ ತಮಿ. ಮಲ. ತುಳು. ಕೊಡ. ತೆಲು. ಕಳ್ಳಿ]

**ಕಳ್ಳಿಕೆ** (ನಾ). (ಕರಾ) ಹಲಸಿನಮರದ ಹೀಚುಗಾಯಿ : ತಾಡಪ್ಪನ ಆಸ್ತಿಯಲ್ಲಿನ ಮೂರು ಹಲಸಿನ ಮರಗಳಲ್ಲಿ ಕಳ್ಳಿಕೆಗಳು ಸಮೃದ್ಧವಾಗಿ ಮೂಡಿದರೂ ಹತ್ತೆಂಟು ಹಲಸಿನಕಾಯಿ ದೊರೆಯುವ ಸಂಪ್ರದಾಯ ವಿರಲಿಲ್ಲ (ದೇವಮ. ೬೪). [?. / ತುಳು. ಕಳ್ಳಿಕೆ, ಕಳ್ಳಿಗೆ]

**ಕಳ್ಳಿವೆಟ್ಟು** (ನಾ). ಕಳ್ಳಿ ಬೆಳೆದಿರುವ ದಿಣ್ಣೆ : ತೆಂಕಣ ಮೂಡಣ ಕೊನೆದುಮುದು ವನ್ನಿ ಕಾಜಲು ಮೂಡಣಸೀಮೆ ಕಳ್ಳಿವೆಟ್ಟನ ಮೂಡಣ ಪೊರೆಯೆಮ್ಬಾಜು ಬೆಳ್ಪ ಒಳಗು (ಮೈಆರಿ. ೧೯೨೭, ೧೨೨-೬೨ ; 400).

[ಕಳ್ಳಿ$_2$ + ಬೆಟ್ಟು$_2$]

**ಕಳ್ಳು** 'ಕಳ್$_3$' ನೋ.

**ಕಳ್ಳುಂಬಳ್ಳಿ** (ನಾ). ಒಂದು ಬಗೆಯ ಬಳ್ಳಿ (?) : ಎಸೆವ ಮಂಗಳ ಲಕ್ಷ್ಮಿಯ ಕಳ್ಳುಂಬಳ್ಳಿವಿಡಿದ ನಳಿತೋಳ್ಗಳೆನೆತ್ತಿ ಬಳಸಿಹ ದೀಪ ಪದ್ಮರಾಗದ ಪ್ರಾಕಾರದೊಳಗೆ (ಅನಂಪು. ೧೦-೨೪ ವ). [?]

**ಕಳ್ಳುಕೊಡ** (ನಾ). ಹೆಂಡದ ಕೊಡ : ಗುಳ್ಳಗೊರಜೆ ಕೂಡಿ ತಿಂದು ಕಳ್ಳುಕೊಡನ ಬಜಱುಮಾಡಿ (ಕನಕ. ೧೪೨-೪).

[ಕಳ್ಳು (< ಕಳ್$_3$) + ಕೊಡ$_4$]

**ಕಳ್ಳುಗುಡಿ** 'ಕಳ್ಗುಡಿ' ನೋ.

**ಕಳ್ಳುಗೊತ್ತು** (ನಾ). ಹೆಂಡ ಮಾರುವ ಸ್ಥಳ ; ಹೆಂಡದ ಅಂಗಡಿ : ವೆಂಕಣ್ಣನೂ . . . ಬಹಳ ಹೊತ್ತಾದ ಮೇಲೆ ಕಳ್ಳುಗೊತ್ತಿನಿಂದ ಹಿಂತಿರುಗಿದ್ದನು (ಮಲೆಮ. ೨೮೧). [ಕಳ್ಳು (< ಕಳ್$_3$) + ಗೊತ್ತು]

**ಕಳ್ಳುಣಿ** (ನಾ). ಕಳ್ಳು ಕುಡಿಯುವವನು ; ಹೆಂಡಗುಡುಕ : ಖಳನುಂ ಕಳ್ಳುಣಿಯುಂ ಘುಳುಮ್ಮನಿಱಿಗುಂ ಶ್ವಭ್ರಾಂತಮಂ ತಾಪಿಸಂ (ಆದಿಪು. ೫-೮೧) ; ಕಳ್ಳುಣಿ, ತುಡುಗುಣಿ (ಶಮದ. ೨೦೨ ಪ್ರಯೋ).

[ಕಳ್$_3$ + -ಉಣಿ]

**ಕಳ್ಳುಸುಗು, ಕಳ್ಳುಸುಬು** (ನಾ). (ಉಕ) ೧. (ಮೇಲ್ನೋಟಕ್ಕೆ ಗಟ್ಟಿಯಾಗಿ ಕಂಡರೂ) ಕೆಳಗೆ ಕುಸಿಯುವ ಉಸುಕು ; ಹುಸಿಮರಳು. ೨. (ಆಲಂ) ಒಳಗೊಂದು ಹೊರಗೊಂದು ಇರುವಿಕೆ; ಗೋಮುಖ ವ್ಯಾಘ್ರನಂತಿರುವಿಕೆ: ನಿಮ್ಮ ಹೃದಯದಲ್ಲಿ ಕಳ್ಳುಸುಗು ಇಲ್ಲವೆಂದು ತೋರುತ್ತ (ಶೀಪ್ರಶ್ನೆ. ೩೩೦). ೩. (ಆಲಂ) ಮೋಸಗಾರ; ಗೋಮುಖ ವ್ಯಾಘ್ರ: ಅವನನ್ನು ನಂಬಬೇಡಿ, ಅವನು ಕಳ್ಳುಸುಗು (ರೂಢಿ). **ಕಳ್ಳುಸುಬು :** ೧. "ಪೊಳ್ಳುಸುಬು ; ನುಂಗುಸುಬು" (ಜಾನಕೋ. ೩೬). [ಕಳ್ಳ$_2$ + ಉಸುಗು (< ಉಸುಕು)]

**ಕಳ್ಳುಸುಬು** 'ಕಳ್ಳುಸುಗು' ನೋ.

**ಕಳ್ಳೆ$_1$** (ನಾ). = ಕಳ್ಳಿ$_1$ : ಕೌಂಕುಱ ಮೇಲೆ ತ್ರಿಶೂಲಾಕೃತಿ ಘಳಿಯಿಸಿ ನಿಲೆ ಕಳ್ಳೆಯವಳೆ ತಾಟಕೆಯಕ್ಕುಂ (ಲೋಕೋಪ. ೧೧-೫೭) ; ಅವ ಕಳ್ಳೆ [ಪಾಶ್ಚಾಂ. ಬೆಕ್ಕಿ]ಯ ಬಸಿಱಿಂ ಬಂದೆನೆಂದಱಿಯೆಂ (ಅರ್ಧನೇ. ೬-೬೯ ವ) ; ಅದಱಿಂ ಕಳ್ಳೆಯರಿಂ ಪುಟ್ಟದಿಕ್ಕುಗುತ್ತಂ ಕಿಡುಗುಂ (ಖಮುದ. ೧೪-೫೫) ; ಕುಪಿತಮತಿಗಳು ಖೂಳೆಯರು ಕಳ್ಳೆಯರು ಚಳ್ಳೆಯರು (ಬಸವು. ೪೦-೫೪) ; ಕಳ್ಳೆಯರೊಳಗುಗಾಣೆಪರೆ (ಕುರಾಸಾಂ. ೨೫-೧೮). [ಕಳ್ಳ$_1$ + -ಎ$_2$]

**ಕಳ್ಳೆ$_2$** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೨೯-೫೬೨). [?]

**ಕಳ್ಳೆಮಳ್ಳೆ, ಕಾಳಮಾಳೆ** (ನಾ). (ಉಕ) ಕೈಚಾಚಿಕೊಂಡು ನಿಂತಲ್ಲಿಯೆ ಬುಗುರಿಯ ಹಾಗೆ ಸುತ್ತುವ ಮಕ್ಕಳಾಟ ; ಪ್ರಭೆ. . . ಎದ್ದು ಕೈಬೀಸಿ ಕಳ್ಳೆಮಳ್ಳೆ ಆಡಿದಳು (ಪಹಾರ. ೮೯). **ಕಾಳೆಮಾಳೆ :** ಚಿಕ್ಕಮಕ್ಕಳು ಗಿಮಿಗಿಮಿಯಾಗಿ ಕಾಳಮಾಳೆಯಾಡಲು ಅವರಿಗೆ ಸುತ್ತಲಿನ ಎಲ್ಲ ಪದಾರ್ಥಗಳು ತಿರುಗಿದಂತೆ ಕಾಣುವುದಿಲ್ಲವೆ (ಜ್ಯೋತಿಶ್ಯಾ. ೨೫).

[?]

**ಕಳ್ಳೇಱು$_1$** (ನಾ). ಕಪಟದ ಪೆಟ್ಟು ; ಮೋಸದ ಹೊಡೆತ : ದೈವಾಭಿಯೋಗದೊಳೊಪ್ಪವಿಡುವುದು ರಜನಿಯಲಿ ಕಳ್ಳೇಱ ಕದನದಲಿ (ಕುವ್ಯಾಗ. ೯-೧೨). [ಕಳ್ಳ$_2$ + ಏಱು$_4$ (< ಏಱ್$_4$)]

**ಕಳ್ಳೇಱು$_2$** (ನಾ). ಕಪಟದ ಯುದ್ಧ ; ಮೋಸದ ಯುದ್ಧ. 'ಕಳ್ಳೇಱುಗಾಱ' ಪರಾ. [ಕಳ್ಳ$_2$ + ಏಱು$_5$ (< ಏಱ್$_5$)]

**ಕಳ್ಳೇಱುಕಾಱ** 'ಕಳ್ಳೇಱುಗಾಱ' ನೋ.

**ಕಳ್ಳೇಱುಗಾಱ, ಕಳ್ಳೇಱುಕಾಱ** (ನಾ). ಮೋಸದ ಯುದ್ಧಮಾಡುವವನು : ಕಡಿಯಿರಿ ಮೈಸೂರ ಕಳ್ಳೇಱುಗಾಱರ ಪಡೆಯನೆನುತ ಬೊಬ್ಬಿಱಿದು (ಕಂಠವಿ. ೩-೬೬). **ಕಳ್ಳೇಱುಕಾಱ :** ಬಾಯಾಱದಿರಿ ಕಳ್ಳೇಱುಕಾಱನ ಕರುಳ ಹರಹುವೆನು (ಕುವ್ಯಾದ್ರೋ. ೧೬-೫೦).

[ಕಳ್ಳೇಱು$_2$ + -ಕಾಱ]

**ಕಳ್ಳೊಡಮೆ** (ನಾ). ಕಳವು ಮಾಡಿದ ವಸ್ತು ; ಕದ್ದ ಪದಾರ್ಥ, —ಮಾಲು : "ಅಪಹೃತಂ, ಉಪ್ತಂ — ಈ ೨ ಕಳ್ಳೊಡಮೆ" (ಹಲಾಯು. ೫೬-೧೮೪). [ಕಳ್$_1$ + ಒಡಮೆ]

**ಕಳ್ಳೊತ್ತೆ** (ನಾ). ಕದ್ದ ವಸ್ತುವಿನ ಒತ್ತೆ ; ಮೋಸದ ಒತ್ತೆ ; ರಹಸ್ಯವಾಗಿ ಇಡುವ ಒತ್ತೆ : ಕರಮೆ ಪುಸಿವಂಗಂ ಕಂಡಲ್ಲಿ ಸಿಡಿವಂಗಂ ಕಳ್ಳೊತ್ತೆಯಿಡುವಂಗಂ ಮೆಳಿದಂಗಂ . . . ಸೂಳೆಸುಖಂ ಸಲ್ಲುದಲ್ತೆ (ಮದಶಿ. ೧೦-೭೭). [ಕಳ್ಳ$_2$ + ಒತ್ತೆ$_1$]

**ಕಳ್ಳೋಲೆ** (ನಾ). ಸುಳ್ಳುಕಾಗದ ; ಮೋಸದ ಪತ್ರ : ಬೊಮ್ಮ ಬರೆಪಮನೆ ಬ್ರಹ್ಮಲಿಖಿತಮೆಂದುಂ ಸಬ್ಬನಿಸ ಬೊಮ್ಮೈಯನ ಕಳ್ಳೋಲೆಯೆಂದುಮೆರಡುಮರ್ಥಂಗಳ್ (ಅಪ್ರತಿ. ೧೨೫-೧೩) ; ಪರಪ್ರಯೋಗ ವಶದಿಂ ಕಳ್ಳೋಲೆಯಂ ಬರೆದು ವಂಚಿಸುವುದು ಕೂಟಲೇಖಕರಣಂ (ಪಸಾರ. ೬೧೨-೧). [ಕಳ್ಳ$_2$ + ಓಲೆ]

**ಕಱಂಗು** (ಕ್ರಿ). ಕಪ್ಪಾಗು ; ಕರಿದಾಗು : "ಕಱಂಗು — ಕಾಷ್ಣ್ಯೇ (ಕಪ್ಪಾಗು)" (ಶಮಧಾ) ; ಪೊಗೆಯೊಳಂ ಕಱಂಗಿ ಕಟ್ಟಿದ ಮೆಯ್ಯುಮಂ (ಪಂಪಭಾ. ೫-೧೦೩ ವ) ; ತನ್ನಯ ಮೇಲೆಸೆದಿರ್ದ ನೀಲನೀರಜವನದಿಂ ಕಱಂಗಿ ಕಮಲಾಕರದಿಂ ಪೊಱಮಟ್ಟಂ (ಗದಾಯು. ೭-೨೭) ; ಪೆಣ್ದುಂಬಿ ವಿಂಡಿಂ ಕಱಂಗಿದ ನೆಯ್ದಿಲ್ಗೊಳಂ (ಪಂರಾಮಾ. ೧-೧೧೦); ರಸೆಯುಮಂ ದೆಸೆಯುಮಾಗಸಮುಂ ಮುಸುಕಿಯರ್ವಿಸಿ ಕಱಂಗಿ[ದ] ರಾತ್ರಿಯೊಡ್ಡಿನಂತೆ (ಕುಮುರಾ. ೬-೧೨೭).

[ದೇ. ॥ ತಮಿ. ಮಲ. ಕಱುಪ್ಪು = ಮುಸುಕು]

**ಕಱಂಡು** (ನಾ). ಒರಟು ; ಕ್ರೂರ (?) : ಮುಳಿಸಿನೊಳಮಿಱಿಯಿಕ್ಕಿ ಕಾಡುವ ಕಱಂಡು ಬೊಜಗನಂ ಪಿಡಿದು (ಲೀಲಾವ. ೨–೧೯೫ ವ). [?]

**ಕಱಕು** (ನಾ). ಕರಿಕು (?) : ಕತ್ತುರಿಯೊಳು ಕಱಕಂ ಪುಟ್ಟಿ ಮಾಡ-ಲೀಶ್ವರನುಮೆ × × × ಯೊಳು ಬೆಳೆದಿರ್ದ್ದ (ಎಕ, VI, ತರೀಕೆ. ೮೧–೩೦ ; ಸು. 1180). [?]

**ಕಱಕಟೆ** (ಅ) ಪ್ರಚಂಡವಾಗಿ; ಉಗ್ರವಾಗಿ : ದೇವನೊಳ್ಪಿದನೆಂದು ಮುಯ್ಯಾನಲು ಬೇಡಾ ಕ[ಪಾಠಾಂ. ತ]ಱಕಟ ಕಾಡಿದನೊಳ್ಪಿದನೆ (ಬಸವ. ೧೪೮) ; "ಅತ್ಯುಗ್ರವಾಗಿ" (ಬಸವ. ಕೋಶ). [?]

**ಕಱಕೊಡಿಯ** (ನಾ). ಒಂದು ಊರಿನ ಹೆಸರು : ಮೂಱೂರ ಪೊಲಸನ್ನಿನ ಕಱಕೊಡಿಯನ ಕೆಱೆಯಿಂ (ಎಕ. III, ನಂಜನ. ೧೪೯–೨೩ ; 915 ?). [?]

**ಕಱಗುದುರೆ** (ನಾ). ಒಂದು ಊರಿನ ಹೆಸರು : ಪಲಂಬಿಯಿರ್ಪ್ಪತ್ತಱ ಬಳಿಯ ಗ್ರಾಮಂ ಕಱಗುದುರೆಯುತ್ತರ ದಿಗ್ಭಾಗದೊಳ್ (ಇಆ. X, ೨೫೨–೪೧ ; 1108). ⓟ ಈಗಿನ ಕರಿಗುದ್ರೈ. [?]

**ಕಱನೆ** (ನಾ). ಬಾವು; ಗಡುಸು; ಜಡ್ಡು (?) : ಪೆಣ್ಣತ್ತಿಯಾಗಿ ಪುಟ್ಟೆ ಪಿರಿಯವಪ್ಪ ಪೊಱೆಗಳಂ ಪೊತ್ತು ಪೋಗಿ ಬೆನ್ನೊಳ್ ನಾಳಿ ಬಿರ್ದು ಕಱನೆ[ಪಾಠಾಂ. ವೆ]ಯಾಗಿ ಪುಱಿತು ನಮೆದು ಸತ್ತು (ವಡ್ಡಾರಾ. ೯–೨).
[?. / ತಮಿ. ಕಱವುರ್ = ಬಿರುಸು]

**ಕಱಲು**, ಕರಲು₁, ಕರ್ಲು, ಕಱಳು (ನಾ). ಚೌಳು ನೆಲ; ಸೌಳು ನೆಲ; ಉಪ್ಪುನೆಲ; ಊಷರ ಭೂಮಿ : ಕಱಲ ಭೂಮಿಯಲ್ಲಿ ಕಱೆದ ವೃಷ್ಟಿಯ ತೆಱನಂತೆ ಅವರೆತ್ತ ಬಲ್ಲರು ಎನ್ನ ಸುಖದುಃಖವ (ಬಸವ. ೪೫೫); ಸುಮುಹೂರ್ತದೊಳು ಕಱಲು ಕಲ್ಮೊರಡಿ ಬೆಳೆಯಲು (ಸಿದ್ಧರಾ. ೧–೩೨) ; ಕುಪಾತ್ರಕ್ಕೆ ಮಾಡಿದ ದಾನಫಲ ಕಱಲು ನೆಲದೊಳ್ ಬೀಜವಾ . . . ಬಿತ್ತಿಯುಂ ಸತ್ಫಲಮನೀನಿಸು ಹಡೆಯದ ತೆಱದಿಂ (ಸಮ್ಯಕೌ. ೭–೧೦). **ಕರಲು₁** : ಕರಲು ಭೂಮಿಯಲ್ಲಿ ಬೆಳೆ ಬೆಳೆಯುವುದಿಲ್ಲ (ರೂಢಿ). **ಕರ್ಲು** : ಹೊಸಪುರದ ಕರ್ಲುಗದ್ದೆಗೆ (ಎಕ. III, ತಿರುಮ. ೬೩–೪೬೮ ; 1748) ; ಕರ್ಲುಭೂಮಿಯಲ್ಲಿ ಬತ್ತ ಬೆಳೆಯುವದಿಲ್ಲ (ಮುಂಬಯಿ. ೫–೨೦೦). **ಕಱಳು** : ಕಱಳ ಕೆಯಿ ಕಂಬ ೭೦ (ಎಕ. VI, ತರೀಕೆ. ೭೧–೫೨ ; 1154 ?) ; ರಾಮನಾಥ ದೇವರ ಕಱಳ ಗದ್ದೆಯ ಪಡುವಣ ಕಲ್ಲು (ಎಕ. VI, ತರೀಕೆ. ೮೩–೩೩ ; 1230 ?).
[ದೇ. ‖ ತಮಿ. ಕಳರ್ ; ಮಲ. ಕಱಿ]

**ಕಱವ** (ನಾ). ಒಂದು ಬಗೆಯ ಹೊನ್ನಿನ ನಾಣ್ಯ : ಸೋವರಸರು ಹಾಳ ಹೊಲೆ ಕೊಂಕಣಕುಳ ಮಗ್ಗ ೧ ಕಱವ ಗ ೧ ಹೊಂನನು ನಂದಾದೀವಿಗೆ ಆಚಂದ್ರಾರ್ಕ್ಕರ್ಸಾಇಯಾಗಿ ಬಿಟ್ಟ (ಎಕ. XIV, ತಿರುಮ. ೫೫–೮ ; 1426). [?]

**ಕಱವಾಡಿ** (ನಾ). ಒಂದು ಪ್ರದೇಶದ ಹೆಸರು : ತಥಾ ಪಶ್ಚಿಮ ಕಱವಾಡಿಯ ಹಲುಹಾಡಿಯ ದ್ವೈಸೀಮೆ ಚಂಚರಿ ಸ್ರೋತ ಪ್ರಾಪ್ಯ (ಇಆ. VIII, ೯೫–೧ ; 444 ?). [?]

**ಕಱವು** (ನಾ). ಸಿಟ್ಟು ; ಕೋಪ; ಕ್ರೋಧ : ಭತ್ತಗಳೆ ಯಾಹಾರ ಪುರುಷರ್ಗಳಿಗೆ ಪುತ್ರಮೋಹಮ್ಮಿಳಿದು ಸತಿಯರಲಿ ಪ್ರೇಮ ಹೆಚ್ಚಿ ತೋಱುವರು ಮತ್ಸ್ಯವೇ ಮಾಂಸವಾಡೆ ಕಱವು ಕ್ರೂರತ್ವ ಕಳವು ಪರಹಿಂಸೆ ಪೆರ್ಚುವುದು (ಲಕ್ಷ್ಮಭಾ. ೩–೧೫–೧೦).
[< ಕಱು₁ + –ವು]

**ಕಱವೆ** (ನಾ). (?) : ಮೂಡ ಕಱವೆಯ ಕಲ್ಪಡಗೆ ತೀರ್ತ್ಥದ ಕಲ್ಪಡುವ ಕಮ್ಮಱಕಲ್ ನೈರಿತಿಯೊಳೆ ಅವದ ಕಲ್ ತೆಂಕ ಪೇರೂರ ಪಳ್ಳಂ (ಎಕ. XI, ಮೊಳಕಾ. ೨೬–೫ ; 962). [?]

**ಕಱಸು** 'ಕಱೆಸು' ನೋ.

**ಕಱಹ** 'ಕಱೆಹ' ನೋ.

**ಕಱಳವಾಡ** (ನಾ). ಒಂದು ಊರಿನ ಹೆಸರು : ಹುಲಿಗೆಱೆ ಮುನ್ನೂಱರೊಳಗಣ ಬೆಂಕ್ಷೆಧಡಿಯೆಳ್ಪತ್ತಱ ಬಳಿಯ ಬಾಡ ಕಱಳವಾಡ ಸಹಿತಂ (ಸೌಇಇ. XX, ೧೪೪–೫೭ ; 1166). [?]

**ಕಱಳು** 'ಕಱಲು' ನೋ.

**ಕಱಿ** 'ಕಱ್ಕಿ' ನೋ,

**ಕಱಿಕೆ** 'ಕಱುಂಕೆ' ನೋ.

**ಕಱಿಗಂದು** 'ಕಱೆಗಂದು' ನೋ.

**ಕಱಿಗಲ್** (ನಾ). ಕರಿಕಾದ ಕಲ್ಲು ; ಕಪ್ಪಾದ ಕಲ್ಲು : ಒದವಿದ ಧೂಳಿಯಾವಗೆಯ ಧೂಳಿವೊಲಿರ್ದುದು ಬಿಟ್ಟು ಸುಟ್ಟ ಸುಣ್ಣದ ಕಱಿಗಲ್ಲ ಕೊಟ್ಟಲೆನಿಸಿರ್ದುದು (ಚಂದ್ರಪ್ರ. ೯–೭೯). [ಕಱಿ (< ಕಱ್ಕಿ₂) + ಕಲ್₃]

**ಕಱು₁** (ಕ್ರಿ). ಕಱುತು, ಕಱುತ್ತು (ಭೂತನ್ಯೂ); ೧. ಕೋಪಗೊಳ್ಳು; ಆವೇಶಹೊಂದು; ಕೆರಳು; ಮಸಗು; ಉದ್ವೇಗಗೊಳ್ಳು : ನೃಪನೀತಿಮಾರ್ಗ ಭೂತಲಪತಿವೋಲ್ ಕಱುತ್ತಱಗೆ ತಾಗಿ ದರಾತಿವೊಲಂತೆ ಮಾಣ್ದು ಪೆರ್ಬಲಮೊದವಾಯೆ (ಕಾವ್ಯಸಾ. ೪೬೩ ಶೂದ್ರಕ) ; ಸುಕುಮಾರಮೆನಿಪ್ಪ ಶರೀರಮಂ ಕಱುತ್ತಿನಿವಿರಿದೊಂದು ಘೋರತಪಕೊಡ್ಡಿದೆ (ಕಾದಂಪೂ. ೯೬೦); ಕಱುತು ಜವನೆಂಬ ಬಱಸಿಡಿಲೆಱಗಿದುದು (ಸುಕುಮಾ. ೨–೧೧) ; ದೂರಾವತೀರ್ಣ ಪಂಪಾವಾರಿಯನಿದನಱತು ಕಱುತು [ಪಾಠಾಂ. ಕುಱುತು] ತಳಮೆಯ್ಯುದ್ದವಿನಂ ನೀರಡಸಿ ನೀರ ಜಾನನೆ ಪೀರಲ್ (ಕಾವ್ಯಾವ. ೯೨೦) ; ಕೂರ್ಗೋಲಂ ಕಱುತ್ತು ತಾನುರ್ಚೆ ಕೋಪದಿಂ (ಶಾಂತೀಶ್ವ. ೩–೧೦೪). ೨. ಗುರಿಯಿಡು ; ಲಕ್ಷ್ಯವಿಡು : ಅವಯವದಿಂ ಕಱುತ್ತಿಱಿದು ಕೊಂದು (ಧರ್ಮಾಮೃ. ೧೦–೧೯೯).

**ಕಱುತ್ತಿಱಿ** = ತೀಕ್ಷ್ಣವಾಗಿ ಇರಿ ; ಚೆನ್ನಾಗಿ ಇರಿ : ತವೆ ಮಾಱಾಂತ ಬಲಂ ಕಱುತ್ತಿಱಿದು ತನ್ನಾಳ್ದಂ ಕರಂ ಮೆಚ್ಚೆ ಗೆಲ್ದವನಂ ಶ್ರೀವಧು ಪತ್ತುಗುಂ (ಪಂಪಭಾ. ೧೦–೪೪).
[ದೇ. ‖ ತಮಿ. ಮಲ. ಕಱು]

**ಕಱು₂**, ಕರು₂, ಕಱುವು (ನಾ). ೧. ಹಸು, ಎಮ್ಮೆ ಮೊದಲಾದುವುಗಳ ಮರಿ ; ವತ್ಸ : "ಆಕಳಾದುವಕೆ ಪುಟ್ಟಿದುವು ಕಱುವಕ್ಕು ಮಿಕ್ಕ ಮೃಗಪಕ್ಷಿ . . . ನಾಯ್ಗಳಲಿ ಪುಟ್ಟಿದುವು ಮಱಿಗಳಕ್ಕುಂ" (ಮಂಗರಾ. ೫೫–೮) ; ಸಂಧಿಸಿ ಪೇೞ್ದೊಡೆ ಕೃತಿಯೊಳಗೊಂದಿರದೆರಡಕ್ಕೆ ಬಿಟ್ಟ ಕಱುವಂ ಪೋಲ್ಗುಂ (ಕವಿರಾ. ೨–೯) ; ಕಱು ಸತ್ತಾವಿನಂತೆ ಮಱುಗುತ್ತುಂ (ಧರ್ಮಾಮೃ. ೧–೧೪೪) ; ಊಡದ ಆವಿಂಗೆ ಉಣ್ಣದ ಕಱುವ ಬಿಟ್ಟಂತೆ (ಬಸವ. ೧೯೯) ; ಕಱುಗಳಂ ಬಿಡಿರೆ ಬೇಗ ಮೊಲೆದೊಱೆದು ಮಱುಗುವವು ಕಱುವಂ ಬಿಡಿರೆ (ಬಸರ. ೯–೧೧೫) ; ತಾಯಿ ಕಱುಗಳ ಬಿಡದವೊಲು (ಕುವ್ಯಾಆ. ೧೪–೧೪). ೨. (ಆಲಂ) ಮಗು ; ಕಂದ ; ಕಂದಮ್ಮ : ಪಗೆವಡೆಯೊಡ್ಡುಗಳನೊಡೆಯಲ್ಕೆವೇೞ್ದೆರ್ದೆ ಧಗಮೆನೆ ಸೈರಿಸುವುಪಾಯಮಾವುದು ಕಱುವೇ (ಪಂಪಭಾ. ೧೧–೯೧) ; ಪೆತ್ತೆನಗೆ ಕಱುವೆ ಮಱುಕಮನೋವಿಂ ಮಾಡದೆ ಕೇಳ್ ಸಂತಸಮಂ ಮಾಡುವೊಡೀ ಮಾತನೆಯ್ದೆ ಮಾಣ್ಬುದು ಮಗನೇ (ಧರ್ಮಾಮೃ. ೮–೧೫೦). **ಕರು₂** : ೧. ಕೆಚ್ಚಲ ಕರುವನು ನೆಕ್ಕುವ ತುರುವೋ (ಅನಿಕೇ. ೩೦–೧೨). **ಕಱುವು** : ೧. ಪುರ್ವ್ವಸಿ[ದ್ಧಾ]ಯ ಕಱಿದು[ಕೊ]ಣ್ಣರಪ್ಪಡೆ ಕವಿಲೆಯುವ ಕಱುವುವನಱಿದರ ಲೋಕಕೆ ಸಲ್ಗು (ಸೌಇಇ. XI-i, ೩೫–೪ ; 933) ; ಹಸುವಿನ ಬಸಿಱಲ್ಲಿ ಕಱುವು ಹುಟ್ಟಿತ್ತು (ಮಹಾದೇ. ೩೧–೪).
[ದೇ. ‖ ತಮಿ. ಕನ್ರು ; ಮಲ. ಕನ್ನು ; ತುಳು. ಕಂಜಿ]

**ಕಱುಂಕೆ, ಕರಿಕೆ, ಕಱುಕೆ, ಕಱುಕೆ$_1$, ಗರಿಕೆ, ಗರುಕೆ, ಗಱುಕೆ, ಗಱುಂಕೆ, ಗಱುಕೆ (ನಾ).** ಒಂದು ಬಗೆಯ ಹುಲ್ಲು; ದೂರ್ವೆ; ಹರಿತಾಳಿ: "ದೂರ್ವಾ ಹರಿತಾಳೀ ನಾಮಕಂ ಕಱುಂಕೆಯೆನಿಕ್ಕುಂ" (ವಸ್ತುಕೋ. ೩೯-೩೮); ಎಳೆಯ ಕಱುಂಕೆ ನೇಱಿಲೆಲೆಯೆಂಬಿವನಿಂಬಿನೆ ಪೂಸಿ (ಲೋಕೋಪ ೮-೩೬); ತೀರದ ಕಱುಂಕೆಗೆಳಸುವ ಗೋರಾಜಿಯ ಲೀಲೆ ಕಣ್ಗೆ ಪಡೆದುದು ಚೆಲ್ವಂ (ಚಂದ್ರಪ್ರ. ೨-೨೬); ಕಱುಂಕೆ, ಕಱುಕೆ (ಶಮುದ. ೩೬ ಪ್ರಯೋ); ಎಸಳ ಕಱುಂಕೆಯೆಳೆಯ ನಿಡುಗೊನರಟ್ಟಿಸಿ ಕೋತ್ಪಲಲೋಚನೆಯರ್ . . ನಿರೀಕ್ಷಿಸಲ್ (ಜಯಕಾ. ೮-೧೭). **ಕರಿಕೆ:** ಪ್ರತಿದಿವಸ ಇಪ್ಪತ್ತೊಂದು ಕರಿಕೆಯ ಕಟ್ಟನ್ನು ಗಣಪತಿಗೆ ಏರಿಸುತ್ತಿದ್ದರು (ಶ್ಯಾಮತಾ. ೨೯); ಅಲಸಿಕೆಯ ಕರಿಕೆಯನು ಬೇರ್ವೆರಸಿ ಎಳೆಯುತ್ತ (ಸಾಸಮಾ. ೧೫೧). **ಕಱಿಕೆ:** ಬಿಳಿಯ ಕಱಿಕೆ ಕಣಿಗಿಲೆಲೆಯ ತೊಱೆಯ ತಡಿಯ ಮಳಲ ತಂದು ಗೌರಿಯ ನೋಡುವ ಬನ್ನಿರೇ (ಬಸವ. ೮೨); ಮಾವಿನ ಬಿತ್ತ್ರೆಳೆಯ ಕಱಿಕೆ ಶರ್ಕರೆಯನಿತಂ ಭಾವಿಸುವ ದಕ್ಕಿಗಚ್ಚಿಂ (ಕಲ್ಯಾಕಾ. ೫-೧೩); ಗುಡ್ಡಂಪಾಡಿಯ [ಕ]ಱಿಕೆಯ ಕಳಿಯಲ್ಲಿ ನಾಲ್ವಂಡೆಯಲಿ (ಸೌಇಇ. IX–ii, ೪೬೪-೧೧, 1472). **ಕಱುಕೆ$_1$:** "ದೂರ್ವಾ, ಶತಪರ್ವಿಕಾ ಸಹಸ್ರವೀರ್ಯಂ, ಭಾರ್ಗವಿ, ರುಹಾ, ಅನಂತಾ – ಈ ೬ ಕಱುಕೆ" (ನಾಚಿರಾ. ೧೧೨); ಕಳಶಂ ಕನ್ನಡಿ ತೋರಣ ಮೆಳದಳಿಸುವ ಕಱುಕೆ ಸೇಸೆ ಬಾಸಿಗದಿಂ (ಸಮಪ. ೧-೬೪); ಕಱುಕೆ ಕಲ್ಪದ್ರುಮದ ಸಂಪವಕೆ ಮುಳಿವಂತೆ (ದಕ್ಷಾರ ೧೬-೬). **ಗರಿಕೆ:** ಈ ಗರಿಕೆ ಚಿಗುರುಗಳಿಂದ ಶೋಭಿಸುತ್ತಿರುವ ಹಸುರು ಭೂಮಿಯಲ್ಲಿ (ಕಮಕ. ೪೫); ಒಂದು ಗರಿಕೆಗೂ ನಕ್ಷತ್ರಕ್ಕೂ ಇರುವ ಸಂಬಂಧ ತಿಳಿಯಿತು (ರಾಮಾನೆ. ೧೧೫). **ಗರುಕೆ:** ಹಸುರು ಗರುಕೆಯ ಪಳಪಳಿಸುವ ಚಿಗುರನ್ನು ಕೆತ್ತಿ (ಪುನರು. ೩). **ಗಱುಕೆ:** ಎಳೆಯ ಬಾಳೆಯಕಾಯ ಚಿತ್ರಮೂಲಂ ಗಱುಕೆ ಕಳಿಲೆವಿದಿರಿನ ನಾರು ತಳಿರು (ಸೂಪಶಾ. ೪-೩೪); ಗಱುಕೆಯ ತೊಳಚಿಯ ದಾಂಗುಡಿಯಿಂ ಚಿವುಂಟ (ರಾಮಾಶ್ವ. ೪೩-೧೩). **ಗಱುಂಕೆ:** ಕಡೆವಾಯ ಲೋಳೆಯೊಳ್ಪೊರೆದುಗುತರ್ಪ ಪಚ್ಚಪಸಿಯಚ್ಚ ಗಱುಂಕೆ (ಕಾದಂಪೂ. ೬೫೧); ಇಳಿದ ಕಟವಾಯ ಹೊಸನೊರೆಗಱುಂಕೆ ಗಳೆಸೆಯೆ (ಅನಾರ. ೫೩-೨೪). **ಗಱುಕೆ:** ಪುತ್ತದ ಮೇಲೆಳಗಱುಕೆಯೆ ಮುತ್ತಂ ಕುಶೆಯುಂ ಸಮಂತು ಸಮನಿಸಿದೊಡಂ (ಲೋಕೋಪ. ೫-೩೪); ಆನೆಗಳ್ ಗಱುಕೆ ಮೇವ ಮುಗಿಲ್ . . . ವಿಷಯಮಾಗಿರ ತೀರ್ವುದು ಶೈಲವರ್ಣನಂ (ಸೂಕ್ತಿಸು. ೩-೧).

[ದೇ. ‖ ತಮಿ. ಕಱುಕ; ತುಳು. ಕಱಿಕೆ; ತೆಲು. ಗಱಿಕ]

**ಕಱುಂಬ, ಕಱುಬ (ನಾ).** ೧. ಹೊಟ್ಟೆಕಿಚ್ಚಿನವನು; ಅಸೂಯೆಯುಳ್ಳವನು: ಮಂಡಳಿಕರಂ ಬೆಸಕೆಯ್ಸಿ ಕಱುಂಬರಂ ನಿರಾಕರಿಸಿ . . . ವಹೀತಳದರ್ಥಮೆಲ್ಲಮಂ ತರಿಸಿ (ಪಂಪಭಾ. ೬-೧೮); ಬೆಸನಿಗನಂ ಕಱುಂಬನನಿದಿರ್ಚುವನಂ ಬಱುದೂಱುಗಾಜನಂ ಕಸಗಳೆದು (ಚಕವಿ ೬-೧೧೪). **ಕಱುಬ:** ೧. ಕ[ಪಾಠಾಂ. ಬ]ಱುಬರನು ತಾಪಿಗಳ್ ಜಱಿವರೆಂದಾನಂಜಿ (ಮನೋವಿ. ೧-೬); ಕಱುಬರಹ ಪಾಂಡವರಿಗೀಗಲೆ ಹಱುವನೆನೆ (ಕುವ್ಯಾಅ. ೮-೨೧); ಕುಱುಬರಾದ ಕನಿಷ್ಠರಿಂತಿದನಱಿದರಾದೊಡೆ ಭೂಮಿಪಾಲಂಗಱುಹುವರು (ಪ್ರಭುಲೀ. ೫-೪೩); ಕಱುಬರಿದ್ದೂರಿಂದೆ ಕಾಡೊಳ್ಳಿತು (ಜೈಮಿಭಾ. ೨೮-೩೬). ೨. ಕಪಟಿ; ಮೋಸಗಾರ: "ಕಱುಬನೆನೆ ಕಪಟಹೃದಯಂ" (ಭಾರನಿ. ೧೫); ನಿನ್ನಹೊದ್ದದು ಕಲುಷಕಲಿಮಲದ ಕಱುಬರೀ ಕೌರವರು (ಕುವ್ಯಾಸ. ೧೧-೩೦); ಪರಮ ಮೈತ್ರನದೆಂದು ತಂಗಿಯ ಕೊಟ್ಟು ಬಳಿಕೀಗ ಕಱುಬರಂದದಿ ಹಲವ ನೆಣಿಸಿದಡಱಿವನೇ (ಕೋಗಯ. ೧೬-೭೬).

[ಕಱುಂಬು$_2$ + –ಅ$_7$]

**ಕಱುಂಬಗದ್ದೆ (ನಾ). (?):** ತೆಂಕಲು ಕಱುಂಬಗದ್ದೆಯ ಬಾಯಿಕಲು ಚಿಂಚಗಟ್ಟೆ ನಾಯಕರ ಗುಯ್ಯಲ ಹಳುಗಿನ ಹಳ್ಳದ ಮೂಡಣ ಬದುಕಿನ ನಟ್ಟ ಕಲು ಮೇರೆ (ಸೌಇಇ. IX–i, ೩೪೩-೫೬; 1226). [?]

**ಕಱುಂಬು$_1$ ಕರುಂಬು$_1$, ಕರುಬು$_1$, ಕಱುಬು$_1$ (ಕ್ರಿ).** ಹೊಟ್ಟೆಕಿಚ್ಚು ಪಡು; ಮತ್ಸರಿಸು; ಅಸೂಯೆ ಪಡು: "ಕಱುಂಬು ಅಸೂಯಾಯಾಂ" (ಶಮುಧಾ); ಮನುರಾಜೇಂದ್ರನ ಕೀರ್ತಿಯನನುವಿಂದಂ ನೋಡಿ . . . ಚಿಂತಿಸಿ ಕಱುಂಬಿ ನೊಂದಂ ಬೆಂದಂ (ಹಮ್ಮೀರ. ೨-೯೮). **ಕರುಂಬು$_1$:** "ಈರ್ಷತೆ = ಕರುಂಬಿದಪಂ" (ಕಾಶಕ್ಕ. ೧೨೦). **ಕರುಬು$_1$:** ನೀಂ ಪೆರರ ದಿಟ್ಟಸುತ ಕರುಬುವೆಯೊ (ಮುಂಕುಕ. ೨೦೦). **ಕಱುಬು$_1$:** ಉಱುಬಿ ನಡೆದು ಬರುತಿರೆ ವರುಣನ ಬಲ ಕಱುಬಿದರಸುರನಾಯಕರು (ಅಂಜಚ. ೬-೧೭೪); ದ್ರೌಪದಿಯ ಪೌಳಿಗೆ ಕಱುಬಿದವರಿಗೆ ಕಾಣಲಾಯ್ತು ಕೃತಾಂತನೋಲಗವ (ಕುವ್ಯಾಅ. ೧೧-೩೩); ಕಱುಬಿ ತೆಗಳ್ವಾ ಖುಳಂ ಖುಳಂ ಬಲ್ಲನೇ (ವಿವ್ಯಸೂ. ೧-೩೫). [ದೇ. ‖ ತಮಿ. ಮಲ. ಕಱುಪ್ಪು]

**ಕಱುಂಬು$_2$, ಕರುಂಬು$_2$, ಕರುಬು$_2$, ಕಱುಪು, ಕಱುಪ್ಪು, ಕಱುಬು$_2$, ಕಱುಹು (ನಾ).** ೧. ಹೊಟ್ಟೆಕಿಚ್ಚು; ಅಸೂಯೆ; ಮತ್ಸರ: "ಅಚ್ಚಱಮೆಂದುಂ, ಕಱುಂಬೆಂದುಂ, ಅಸೂಯೆ" (ಕಶಸಾ. ೨೨-೪೬೭); ತುಱುಗಿದ ಕುಱುಂಬಿನಿಂದಂ (ನೀತಿಮಂ. ೩೭೯). **ಕರುಂಬು$_2$:** ೧. "ಈರ್ಷ್ಯಾ, ಈರ್ಷಣಂ, ಈರ್ಷಣೀಯ ಈ ೩ ಕರುಂಬು" (ಕಾಶಕ್ಕ. ೧೨೦). **ಕರುಬು$_2$:** ೧. ನೀಂ ಪೇಳ್ದುದಂ ಕೇಳ್ದಿನಗೆ ಉಕ್ಕುತಿದೆ ಕರುಬು (ಚಂದ್ರಸ. ೫೩); ಗುರುವಿಗೆ ಕರುಬಿಲ್ಲ ತೀರ್ಥಕೆ ರುಚಿಯಿಲ್ಲ (ಇಂಚಾಪ. ೧೪೮-೨೯); ಅನ್ನರ ಸಂತೋಷವನ್ನು ಕಂಡು ಕರುಬಿರಲಿಲ್ಲ (ಬೆತಂಬಾ. ೧೪). **ಕಱುಪು:** ೧. ಮಱೆವುದು ಕಂದ ಪಾಂಡವರ ವೈರಮನೆನ್ನೊಡವೋಕೆ ಕೋಪಮುಂ ಕಱುಪುಂ (ಪಂಪಭಾ. ೧೧-೪೯); ಕಱುಪಿಂದ ಪೆಱರ ದಂಮ್ಮಮಂ ಮೇಣಳಿವಂ ತೆಱೆಗೊಳುವಂ ಪುಳುಕೊಂಡ್ಡದೊಳಱುವತ್ತು ಸಹಸ್ರಮುದುಭವಿಸಿಕು (ಎಕ. VI, ತರೀಕೆ. ೬೨-೨೬; 1104 ?); ಕಱುಪಿಂದಂ ತಾಳಲಕ್ಷ್ಮಂ ಮಸಗಿದ ಜವನಂತಾಗಳುಗ್ರೋಗ್ರಕೋಪಂ (ನೇಮಿಪು. ೧೪-೯೮). **ಕಱುಪ್ಪು:** ೧. ಆ ಬದ್ಧ ವೈರದಿನಿನಿತು ಕಱುಪ್ಪುಂ ಕಾಯ್ಪುಂ ನಿನಗಾದುದು (ಶಾಂತಿಪು. ೯-೯೦ ವ). **ಕಱುಬು$_2$:** ೧. "ಕಱುಬಕ್ಕಜಮೆಂದಸೂಯೆಯಕ್ಕುಂ" (ಕವಿಕಂ. ೧೯೬); ಮಱುದುಂಬಿಗುರುಳ ಮಾನಸಿಗೆ ತುಱುಬ ಸಿಕ್ಕಿದರು ನೋಳ್ಪರ ದೃಷ್ಟಿ ಕಣ್ಣಿಗೆ ಕಱುಬನಿಕ್ಕಿದರೆಂಬಂತೆ (ಮೋಹತ. ೨೩-೨೯). ೨. ಹೊಟ್ಟೆಕಿಚ್ಚಿನವನು; ಮತ್ಸರವುಳ್ಳವನು: ಕಱುಬು [ಪಾಠಾಂ. ಹಱುಕು]ಗಳು ನಾವ್ನೂಱು ಮಕ್ಕಳು ಹೊಱಗೆ ಬದುಕುವೆವೈಸಲೇ (ಕುವ್ಯಾಸ. ೧೩-೬೫). ೧. **ಕಱುಹು:** ೧. ಕಱುಹಿ [ಪಾಠಾಂ. ಡುಹಿ]ನ ಕಾಳಕೂಟದ ನದಿಗೆ ನಂಜಿನ ಹೊನಲು ಬೆರೆಸಿಹರೆ ವಾಳಿಯವೆ (ಕುವ್ಯಾಸ. ೧೪-೬೧).

ಕಱುಬಾಗು = ಹುರುಡಿಗೆ ಪಾತ್ರನಾಗು; ಸ್ಪರ್ಧೆಗೆ ಗುರಿಯಾಗು: ಅಭಿಮನ್ಯು, ಎನ್ನ ಕಱುಬಾದವನ್ (ಅಶ್ವತ್ಥಾ. ೩೩-೭೪೧).

[< ಕುಱುಂಬು$_1$]

**ಕಱುಂಬುತನ, ಕಱುಬತನ, ಕಱುಬುತನ (ನಾ).** ೧. ಅಸೂಯೆ; ಮತ್ಸರ; ಅಸಹನೆ: ಲೇಶಮುಂ ಕಱುಂಬುತನಮಿಲ್ಲದವರಾಗಿ ತಮಗೆ ವಿಹಿತಮಾದ ವರ್ಣಾಶ್ರಮ ಧರ್ಮಂಗಳನನುದಿನಮುಂ ತಪ್ಪದೆ ನಡಯಿಸುತ್ತಂ (ಭಾರಶಾಂ. ೨೫೧-೩೫). **ಕಱುಬತನ:** ೧. ಕಱುಬ[ಪಾಠಾಂ. ಬು]ತನವೇಕಕಟ ಪುಣ್ಯದ ಕೊಱತೆ ನಮ್ಮದು (ಕುವ್ಯಾದ್ರೋ. ೧೬-೪೯); ಮೊಲೆಗಂಡು ಪುರುಡಿಸಿ ಬೆಳೆದುದೆನೆ ನಡು ಬೆಳೆಯೆ ತಾವುಮುಳಿಸಿ ಮೊಗದೊಳು ಕಂದನಾಂತುವೊ ನೆರೆ ಕಱುಬತನದಿ (ಸಾಳ್ವಭಾ. ೩-೪೫).

**ಕಱುಬುತನ:** ೧. ಕಱುಬುತನಂ ಮಱುಕಮೆಂಬಿವೇಂಗೆಯ್ಕುವು ಪೇೞ್ (ಚಿಕವಿ. ೧-೪೪). ೨. ಕಪಟ; ಕುತಂತ್ರ: ಅಱಿಯಬಹುದೆಮ್ಮವರ ಕಪಟದ ಕಱುಬುತನವಂಜದಿರು (ತೊರರಾ. ೬-೧೨-೩೮).
[ಕಱುಂಬು$_3$ + ತನ]

**ಕಱುಕು** (ನಾ). ಕಪ್ಪು (?): ಮೆಯ್ಗಳ್ ಬೆಳರ್ತು ಕಾಲ್ಗಳ್ ಕೆಯ್ಗಳ್ ಬಡವಾಗಿ ಕಱುಕು ಪತ್ತಿದ ಪುರ್ಬಿಂ ಬಾಯ್ಗಡಸಿದ ಕಿಣವಲ್ಲಿಂ ಸುಯ್ಗೊಳಗಾಗಿರ್ದರಲ್ಲಿ ಸಂಕಲೆಯವರ್ಗಳ್ (ದಶಕು. ೫-೨೬). [< ಕಱಂಕು]

**ಕಱುಕುಚಿಗ** (ನಾ). ಕರುಗಳನ್ನು ಕಾಯುವ ಆಳು; ದನಗಾಹಿ; ಗೋಪಾಲ: ಕಱುಕುಚಿ[ಪಾಠಾಂ. ಡಿ]ಗ ಬಾಚಯ್ಯನಗ್ಗದ ಗಿಱುಗಟಿಯ ಶಿವದೇವನು (ಸಾನಂಚ. ೯-೬೮); ಗಾವುಂಡನೆಣ್ಬರ್ ಮಗಂದಿರುಂ ತನ್ನನಲೆದು ಬೆಸಕೆಯ್ಕೆ ಕಱುಕುಚಿಗನವರ್ಗೆ ಪಲ್ಮೊಱೆದು ಕನಲ್ದೊನಲ್ದು (ಜೀವಸಂ. ೨೦೨-೪೨ ವ); ಪರಮ ತಪೋಧನರೊರ್ವರ್ ಚರಿಗೆಗೆವರೆ ಕಂಡು . . . ಕಱುಕುಚಿಗ [ಪಾಠಾಂ. ಕುದುಗಿಚಿಗ]ನವರ ಕೆಯ್ಯಂ ಪಿಡಿದಂ (ಜೀವಸಂ. ೨೦೨-೪೩). ℙ 'ಕಱುಕುಟಿಗ' ಎಂಬುದರ ಅಪಲಿಖಿತವಿರಬಹುದು. [ಕಱು$_2$ + -ಕುಚಿಗ$_0$]

**ಕಱುಕುಟಿಗ** (ನಾ). ಕರುಗಳನ್ನು ಕಾಯುವವನು: ಕುಟಿಗ ಪ್ರತ್ಯಯಕ್ಕೆ-ಕಲ್ಕುಟಿಗಂ, ನೀರ್ಕುಟಿಗಂ, ಮರಕುಟಿಗಂ, ಕಱುಕುಟಿಗಂ (ಶಮದ. ೨೦೧ ಪ್ರಯೋ). [ಕಱು$_2$ + -ಕುಟಿಗ$_1$]

**ಕಱುಕೆ$_1$** 'ಕಱುಂಕೆ' ನೋ.

**ಕಱುಕೆ$_2$** (ನಾ). ಒಂದು ಪ್ರದೇಶದ ಹೆಸರು (?): ಅಗ್ನೇಯದ ದೆಸೆಯ ಲಾಳಿಗಿಗೆಱೆಯಿಂ ಮೂಡಲ್ ಕಱುಕೆಯ ಕಲ್ಲ ಪಡುವಣ ಮೊನೆ (ಸೌಇಇ. XI-i, ೧೧೬-೨೬; 1075); ಕಱುಕೆಯ ದಾಸಯನ ಕೆಱೆಯ ಕೆಳಗಣಗದ್ದೆ (ಎಕ. VII, ಚನ್ನಗಿ. ೬೧-೫೪; 1125); ದೇವರ ಅಗರದ ಕಱುಕೆಯ ತೆಂಕಕಡೆಯ ಹೊಸ ಮಂಟಪದ (ಸೌಇಇ. XI-ii, ೪೦೯-೨೧; 1365). [?]

**ಕಱುಗಂದಿ** (ನಾ). ಎಳೆಯ ಕರುವಿನ ತಾಯಿ; ಎಳೆಯ ಕರುವುಳ್ಳ ಹಸು: ಕಾತರಿಸಿ ಕಱುಗಂದಿ ಕಱುವಿಂಗೋತು ಮಱುಗುವವೋಲನಾಥರ ನಾತುರರನಬಲರನು . . . ಓತು ಸಲಹುವ (ನಿಭಾಗ. ೩-೧೩-೪೧).
[ಕಱು$_2$ + ಕಂದಿ$_1$]

**ಕಱುಗಾಹಿ** (ನಾ). ಕರುಗಳನ್ನು ಕಾಯುವವನು; ದನಗಾಹಿ; ಗೋಪಾಲ: ಪೊಱಗಿರ್ದ ಕಱುಗಾಹಿ ಕೇಳ್ದಾ ಬ್ರತಂಗಳ ಮೇಲೆ ಪ್ರೀತಿ ಸಮನಿಸೆ (ಪುಣ್ಯಾಸ್ರ. ೧೨-೨೨ ವ); ಕಱು ಕಱುಗಾಹಿಗಳನತಿ ಕರುಣದಲಿ ಕೈಗಾಯ್ದು ನಯನಾಪಾಂಗದಲಿ ನೋಡಿ (ನಿಭಾಗ. ೧೦-೧೩-೧); ಕಱುಗಾಹಿಯೆಳೆಗೊರಳನು ಮುಱಿಯ ಬಿಸುಟು (ಸಾಳ್ವಭಾ. ೧೨-೪೯).
[ಕಱು$_2$ + ಕಾಹಿ]

**ಕಱುಗಾಹಿತನ** (ನಾ). ಕರು ಕಾಯುವ ಕೆಲಸ: ಕಱುಗಾಹಿತನವನು ಧರಿಸಿದರು ಹರಿರಾಮರು (ನಿಭಾಗ. ೧೦-೧೧-೨೨).
[ಕಱುಗಾಹಿ + -ತನ]

**ಕಱುಗೊಳಗು** (ನಾ). ಕರುವಿನ ಗೊರಸು. 'ಕಱುಗೊಳಗುವಳ್ಳ' ಪರಾ. [ಕಱು$_2$ + ಕೊಳಗು]

**ಕಱುಗೊಳಗುವಳ್ಳ** (ನಾ). ೧. ಕರುವಿನ ಗೊರಸು ಊರಿ ಆದ ಹಳ್ಳ; ಕರುವಿನ ಗೊರಸಿನಷ್ಟು ಅಗಲವಾಗಿರುವ ಹಳ್ಳ. ೨. (ಅಲಂ) ಅತ್ಯಲ್ಪ ಅವಕಾಶ: ಕಡಲಂ ಕಱುಗೊಳಗುವಳ್ಳದೊಳದಕಗೆಯ್ವ ಅಘುಟಿತಘುಟನಾಸಮರ್ಥನಪ್ಪ ಜಗತ್ಪತಿಯೆ ಸರ್ವಮಂ ನಿರ್ವಹಿಸುಗೆ (ಚಿಕವಂ. ೧೩೨-೫೫). [ಕಱುಗೊಳಗು + ಪಳ್ಳ]

**ಕಱುತು** 'ಕಱು$_1$' ಪರಾ.

**ಕಱುತ್ತು** 'ಕಱು$_1$' ಪರಾ.

**ಕಱುದೇವಯ್ಯ** (ನಾ). ಒಬ್ಬಾತನ ಹೆಸರು: ಮಹಾಸಾಮನ್ತ ಕಱುದೇವಯ್ಯರಾನ್ವಯದೊಳ್ (ಎಕ. VII (S), ಶಿಕಾರಿ. ೩೬೮-೫; 902).
[?]

**ಕಱುಪು** 'ಕಱುಂಬು$_2$' ನೋ.

**ಕಱುಪೇೞ್** (ಕ್ರಿ). ಕೋಪವು ಹೆಚ್ಚಾಗು; ಮತ್ಸರವುಂಟಾಗು: ಕಱುಪೆಟ್ಟ[ಪಾಠಾಂ. ಕುಱುಪೆರ್ದ]ಪಗೆಯ ಬೀರ್ವರಿದುಱುಮಿಕೆಯ ಪೊಡಟ್ಟ ಗಂಡಮಚ್ಚರದೊದವಿಂ ನೆಱನನೆ ಮೂದಲಿಸುತ್ತುಂ (ಪಂಪಭಾ. ೧೨-೧೪೬). [ಕಱುಪು (< ಕಱುಂಬು$_2$) + ಏೞ್$_1$]

**ಕಱುಪ್ಪು** 'ಕಱುಂಬು$_2$' ನೋ.

**ಕಱುಬ** 'ಕಱುಂಬ' ನೋ.

**ಕಱುಬತನ** 'ಕಱುಂಬುತನ' ನೋ.

**ಕಱುಬು$_1$** 'ಕಱುಂಬು$_1$' ನೋ.

**ಕಱುಬು$_2$** 'ಕಱುಂಬು$_2$' ನೋ.

**ಕಱುಬುತನ** 'ಕಱುಂಬುತನ' ನೋ.

**ಕಱುಭೂಮಿ** (ನಾ). ಎತ್ತರವಾದ ಭೂಮಿ (?): ಇದರ ಸ್ತಾನ ಕಱುಭೂಮಿ ೧೧ (ಸೌಇಇ. XX, ೩೪೯-೧; 13ನೆಯ ಶತ).
[ಕಱು$_0$ (< ಕರು$_4$) + ಭೂಮಿ]

**ಕಱುವಳ** (ನಾ). ಕರುಗಳನ್ನು ಕಾಯುವವನು; ಗೋವಳ; ಗೋಪಾಲ: ಕಱುಗಳನು ಹೊಡೆಹೊಡೆ ಕೆಲಕೆನುತ ಹರಿಬಲರು ಹಿಂದಿರ್ದುಲಿಯೆ ಹೊಕ್ಕರು ಕೇಳದಾ ಕಱುವಳರು ಕಱುಸಹಿತ (ನಿಭಾಗ. ೧೦-೧೨-೨೬). [ಕಱು$_2$ + -ವಳ]

**ಕಱುವಿಡು** (ಕ್ರಿ). (?): ಕೊಲ್ಲನೂಱು ಬತ್ತದ ಮಣ್ಣು ನಾಲ್ಕಾ × × ಬೆದೆಗಟ್ಟಿದ್ದು ಯುಂ ನನ್ನಾವೆಳಕಿಂಗೆ ಕಱುವಿಟ್ಟ × × × (ಎಕ. IV, ಗುಂಡ್ಲುಪೇ. ೯೩-೩೪; 1049). [?]

**ಕಱುವು** 'ಕಱು$_2$' ನೋ.

**ಕಱುಹ** (ನಾ). ಕೋಪ (?): ಉಷ್ಣ ವಹ್ನಿಮುಖದೊಳ್ ಯುದ್ಧಂ ದಿಟಂ ಮಲ್ಲರೊಳ್ ಕಱುಹಂ ಮಿಥ್ಯೆಯೊಳಾಸೆ ದೇವಗತಿಯೊಳ್ ಸಂಕಾಕುಳಂ ಪುಲ್ಲೆಯೊಳ್ . . . ಅಲ್ಲದಿಲ್ಲ ಪೆಱತೇನಾಜಯ್ವಡಾ ದೇಶದೊಳ್ (ಪುಣ್ಯಾಸ್ರ. ೧-೧೧೪). [ಕಱು$_1$ + -ಹ$_2$]

**ಕಱುಹಟ್ಟಿ, ಕರವಟ್ಟಿ, ಕರಹಟ್ಟಿ, ಕರುಹಟ್ಟಿ** (ನಾ). ೧. ಕರುಗಳನ್ನು ಕಟ್ಟುವ ಸ್ಥಳ; ಕೊಟ್ಟಿಗೆ. ೨. (?): ಮಣಲ ಸರಣಿಯ ಹೊಸೆವರುಂ ಬಹ ಮಾರಿಯ ಮುದ್ದಾಡುವರುಂ × × ಳಿಯ ಸಂಬವರುಂ . . . ಕಱುಹಟ್ಟಿಯಂತೆ ನಡ್ಯೆಯುಲೀಯರುಂ ನೆಲ ಮುಕ್ಕಿ (ಎಕ. VIII (S), ಸೊರಬ. ೫೮೬-೫೯; 1201). **ಕರವಟ್ಟಿ:** ೧. ನಂಜಮಾಂಬೇಶ್ವರ ದೇವಸ್ಥಾನಕ್ಕೆ ಕರವಟ್ಟಿ ಭಕ್ಷೀ ಹುಲ್ಲಳೀ ಪುಟ್ಟಂಣನವರು (ಎಕ. XIV, ಚಾಮರಾ. ೨೦೮-೨; 1868 ?); ಬೊಕ್ಕಸಗಳಲ್ಲಿ ಉಗ್ರಾಣಗಳಲ್ಲಿ ಕೊಟ್ಟಿಗೆ ಕೀಲಾರಗಳ ಕರವಟ್ಟಿಗಳಲ್ಲಿ . . . ತಕ್ಕವರನ್ನಿರಿಸಿ ವಿಚಾರಿಸಿ ಕೊಳ್ಳುವೆಯ? (ಕೃವಾಸ. ೧೧). **ಕರಹಟ್ಟಿ:** ೧. ಆತನ ಕರಹಟ್ಟಿಯಲ್ಲಿ ಹಾಲು ಕರೆಯದೆ ದುಷ್ಟಗಳಾಗಿರುವ ಹಸುಗಳನ್ನು ಸಾಧುಗಳಾಗಿಯೂ . . . ಮಾಡುತ್ತಲಿರುವೆನು (ಕೃವಾವಿ. ೬). **ಕರುಹಟ್ಟಿ:** ೧. ಆ ಕರುಹಟ್ಟಿಯಲ್ಲಿಯ . . . ಆಕಳುಗಳನ್ನೂ ಕರಗಳನ್ನೂ ನೋಡಿದವರು ಧನ್ಯರೆಂತಲೇ ಹೇಳಲಾಗುವದು (ದೇವಜ. ೧೧೬); ನೀವು ಹೋಗಿರಿ ಚಿಕ್ಕ ಕರುಹಟ್ಟಿಯ ಬಾಗಿಲನ್ನು ತೆರೆಯಿರಿ (ಹತ್ತುಮ. ೩೧).
[ಕಱು$_2$ + ಹಟ್ಟಿ$_1$ (< ಪಟ್ಟಿ$_1$)]

**ಕಱುಹು** 'ಕಱುಂಬು$_2$' ನೋ.

**ಕಱಿ**$_1$, ಕರ್$_2$ (ಕ್ರಿ). **೧.** ಹಾಲನ್ನು ಹಿಂಡು, —ಸುರಿಸು : "ಕಱಿ – ದೋಹನೇ (ಹಾಲುಕರೆ), ಕಳಂಕೇ ಚ" (ಶಮಧಾ); ಕಾಮಧೇನು ಗಳಂತೆ ಕಱೆವ ಹೋಮಧೇನುಗಳಂ (ಪಂಚತಂ.೧೧೬–೧೯); ಮುಱುವಿಕ್ಕಿ ಪೊರೆದು ಗೊಡ್ಡಂ ಕಱೆದೊಡೆ ಪಾಲುಂಟೆ (ಧರ್ಮಾಮೃ. ೧೧–೪೦); ಸುರಭಿ ಕಱೆದರೆ ಧರಣಿ ದಣಿದುದು (ಸಂಭಪ. ೨೦–೧೩೫); ತುಱುಕಱು ಕಱೆದರೆ ಉಣಬಹುದಣ್ಣ ತುಱುಕಱು ಕಱೆದರೆ ಅತಿ ಪುಣ್ಯವಯ್ಯ (ಪುರಂದ. ೧–೧೭೭ ಪಲ್ಲವಿ); ಅಖಿಳ ವೃಕ್ಷಂಗಳ್ ಕೊನರ್ತುವೆಲ್ಲೆಡೆಯೊಳುಂ ಬರಡುಗಳ್ ಕೊಡವಾಲ್ಗಳಂ ಕಱೆಯತೊಡಗಿದವು (ಚಿಬಪು. ೪–೩೪). **೨.** ಮಳೆಯಂತೆ ಸುರಿ; ಸೂಸು; ವರ್ಷಿಸು: ಭವ್ಯವರ ಪುಂಡರೀಕರ್ಕಳ್ಗೆ ಧರ್ಮಾಮೃತಮಂ ಕಱೆಯುತ್ತಂ (ವಡ್ಡಾರಾ. ೧೫೫–೧೯); ಪೊಸಮಸೆಯಂಬು ಕಾರ ಮಱೆವೋಲ್ ಕಱೆಯುತ್ತಿರೆ (ಪಂಪಭಾ. ೧೧–೧೩೫); ಮುಗ್ಧಾಲಾಪವಿಂಪಂ ಕಱೆದು ಬಱಲು ದೆಂಬನ್ನೆಗಂ ಬತ್ತಿರಲ್ಬಾಯ್ (ಕಾದಂಉ ೫೨೩); ಕಣೆಗಳನಿರ್ವಲದ ಬಿಲ್ಲ ವೀರರ್ ಕಱೆದರ್ (ಜಗವಿ. ೭–೫೪); ಪರಿಜನಂ ಕಲುಗುಂಡ ಕಱೆಯದಿರಲ್ (ಹ ಚ ಕಾ. ೮–೬೫); ಕೌತುಕವ ಕಱೆದನು ಶೋಣಿತಾ ಮಲ ಬಹಳ ತೇಜದ ಹೊದೆಱ ಹೊಯಿಲಿನಲಿ (ಕುಮ್ವಾಭೀ. ೩–೬೭); ಕೈದೆಱಹಿಲ್ಲದೆ ಕಱೆದ ಕೊರ್ಗಣೆಯ (ಮೋಹತ. ೪೦–೩೨). **೩.** ಎರಚು; ಚೆಲ್ಲು: ಎತ್ತೆತ್ತಲುಂ ಕಱೆಯುತಿದೆ ಬಿಱುಗಾಳಿ ಧೂಳನು (ಜೈಮಿಭಾ. ೪–೧೦). **ಕರ್**$_2$ : **೧.** ಕರೆವ ತುರು ಕಾಣದಿಹುದು (ಕಾಲೂರ. ೮೦–೧೫೧). **೨.** ನೀ ಕರೆದೆಯ್ಯೆ ಅಮೃತಧಾರೆಗಳ (ವಿಸೀಗೀ. ೨೧–೭); ಸುಧೆಯನೆ ಕರೆವುದು ಚಂದ್ರನ ಬಿಂಬವು (ಇಂಚಾಪ. ೭೦–೩೯); ಮೃದುಕಿರಣ ವೃಷ್ಟಿಯನ್ನು ನಮ್ಮ ಮೇಲೆ ಕರೆಯುತ್ತ (ಜ್ಯೋತಿರ್ವಿ. ೮).

[ದೇ. ‖ ತಮಿ. ಮಲ. ಕಱ; ಕೊಡ. ಕರ]

**ಕಱಿ**$_2$, ಕರ್$_3$, ಕಱು (ನಾ). **೧.** ಕಪ್ಪು; ಕರಿಯ ಬಣ್ಣ: "ಕಱಿ ಕರ್ಬು" (ಕರ್ಣಾನಿ. ೭೯); ಕಱಿ ಕೊರಲೊಳ್ ಕಣ್ಬೊಸಲೊಳ್ ಪೆಱಿ ಮಕುಟದೊಳ್ (ಪಂಪಭಾ. ೧೦–೫೭); ಕೊರಲ ಕಱಿ ಶಿರದ ಪೆಱಿ ನೊಸಲುರಿಗಣ್ (ಗದಾಯು. ೯–೨). **೨.** ಬಣ್ಣದ ಗುರುತು, —ಕಲೆ : ಎಲೆಯಡಿಕೆ ಸುಣ್ಣದಿಂ ಪಲ್ ಕಱೆಯಪ್ಪುದು (ಧರ್ಮಾಮೃ. ೯–೧೦೮). **೩.** ಕಳಂಕ; ದೋಷ: "ಕಱಿ – ದೋಹನೇ (ಹಾಲು ಕರೆ), ಕಳಂಕೇ ಚ" (ಶಮಧಾ); "ಕಂದೆಂದುಂ ಕಱಿಯೆಂದುಂ ಸಂದೆಗಮಿಲ್ಲವು ಕಳಂಕ" (ಕವಿಕಂ. ೫೫); ಶಶಲಕ್ಷ್ಮದಂತೆ ಕಱಿಯಂ ತರ್ಕುಂ (ಕವಿರಾ. ೧–೯೭); ಆಯಸದೊಳಾದೀ ಕಱಿ ಕರ್ಚಿ ಪೋಗದೀ ಕೆಯ್ಮಾರೊಳ್ (ಶಾಂತಿಪು. ೪–೭೮); ಕಱೆಯಿಲ್ಲದ ತಪದೊದವಂ ಮೆಱೆಯಲ್ (ಎಕ.XII, ಶಿರಾ. ೯–೫೬; 1072); ಯಶೋವನಿತೆಯ ತಲೆಯೊಳ್ ಕಱಿಯಂ ಪೊಱಿಸುವುದುಚಿತವೆ ನಿನಗೆ (ಜಯಕಾ. ೭–೪೯). **೪.** ಮಾವಿನ ಕಾಯಿಯ ತೊಟ್ಟಿನಿಂದ ಬರುವ ರಸ, —ಸೊನೆ. **೫.** ವಿಷ; ನಂಜು: ತಾಂ ಕಱಿ (?) ಘನಂ ಗಡ ಬರ್ದುಂಕನವನೆನ್ನದಿರು ಬಿಂಕದ ಚರಾಚರ ವಿಷಂ ಪರಿಗುಮೆಲ್ಲಂ (ಖಮದ. ೧೬–೧೫೦). **ಕರ್**$_3$ : **೨.** ಬಟ್ಟೆ ಕರೆಯಾದ ತಕ್ಷಣ, ಆ ಕರೆಯನ್ನು ಆದಷ್ಟು ಬೇಗ ತೆಗೆಯಬೇಕು (ಗೃಹವಿ. ೬೯); ಬಾಳೆಯ ಕರೆ ಏನು ಮಾಡಿದರೂ ಹೋಗುವುದಿಲ್ಲ (ರೂಢಿ). **ಕಱು** : **೧.** 'ಕಱುಗಲ್', 'ಕಱುಗಂದು' ಪರಾ.

[ದೇ. ‖ ತಮಿ. ಕಱ್ಪು; ಮಲ. ತೆಲು. ಕಱ]

**ಕಱಿಇಲ್** (ಗು). ದೋಷವಿಲ್ಲದ; ನಿರ್ಮಲವಾದ; ನಿಷ್ಕಳಂಕವಾದ: ನೆಱೆದಾದ ವ್ರತಶೀಲನೊಪ್ಪಿಗುಣದಿಂ ಸ್ವಾಧ್ಯಾಯ ಸಮ್ಪತ್ತಿ ನಿವ್ ಕಱಿಇಲ್ಲಲ್ಲಪ ಧರ್ಮ್ಮದಾ ಸಸಿಮತಿ ಶ್ರೀಗನ್ತಿಯರ್ವ್ವನ್ದು (ಎಕ. II, ೬೩–೨; ಸು. 700).

**ಕಱಿಯಿಲ್ಲದಾತ** = ಕಳಂಕವಿಲ್ಲದವನು; ಒಂದು ಬಿರುದು (?): ಕೊಲ್ಲಬಿಗಣ್ಡ ತನೂಜೋ ಭ(ಭೀ)ಮಃ ಕಱಿಯಿಲ್ಲದಾತ ನಾಮಾಸೀತ್ (ಇಅ. XIII, ೨೪೯–೧೮; ?). [ಕಱಿ$_2$ + –ಇಲ್$_3$]

**ಕಱಿಕಂಠ** (ನಾ). ಕತ್ತಿನಲ್ಲಿ ಕಪ್ಪುಕಲೆಯುಳ್ಳವನು; ನೀಲಕಂಠ; ಶಿವ: ಸ್ಥಳವೃತ್ತಿಯಾಗಿ ಕಱಿಕಣ್ಠ ದೇವರ ಕೇರಿಯುಂ ತೆಂಕಲ್ (ಸೌಇಇ. IX–i, ೨೯೪–೩೦; 1164); ತಱಗೆಲೆ ಗಿಱಿಕೆನೆ ಕಱಿಕಂಠಂ ಬಂದ ಭಾವಕ್ಕೆ ಮೈಯುಕ್ಕಿ (ನಂಬಿರ. ೧೬–೪೨); ಕಱಿಕಂಠ ಮೋನ ಕಾತ್ಮಜೆ ಪಾಲಿಸಿದುದುಗೊಱಿಯ ನೋಡೆಂದು ತೋಱಿದಳು (ಮೋಹತ. ೨೬–೨೭). [ಕಱಿ$_2$ + ಕಂಠ]

**ಕಱಿಕಟ್ಟು** 'ಕಱಿಗಟ್ಟು' ನೋ.

**ಕಱಿಕಱಿಗಂದು** (ಕ್ರಿ). ಪೂರ್ತಿ ಕಪ್ಪಾಗಿ ಹೋಗು: ಕಱಿ [ಪಾಠಾಂ. ಱಿ]ಕಱಿಗಂದಿದಂ ಪೊಗದ ಮೈಸಿರಿ ಗಂಡಮೃತಾಂಶು ಲಜ್ಜೆಯಿಂ (ಧರ್ಮನಾ. ೩–೫೩).

[ಕಱಿ$_2$ + ಕಱಿಗಂದು]

**ಕಱಿಕೊರಲ** 'ಕಱಿಗೊರಲ' ನೋ.

**ಕಱಿಕೊರಳ** 'ಕಱಿಗೊರಲ' ನೋ.

**ಕಱಿಗಂದು**, ಕಱುಗಂದು (ಕ್ರಿ). ಕಪ್ಪಾಗು; ಕರಿದಾಗು: ಬಿರಯಿಗಳ ಮೆಯ್ ಸುಯ್ಯ ಬೆಂಕೆ ಸೋಂಕೆ ಕಱಿಗಂದಿದಂತೆ ಕಪ್ಪುವಿಡಿದಂಗ ಮೆಸೆಯೆ (ಪುಷ್ಪಪು. ೨–೩೯ ವ). **ಕಱುಗಂದು** : ಕಱುಗಂದಿದಾನನಂ ರಸಮಱತಧರಂ ಡಿಳ್ಳವಾಱಿದರ್ (ವೃಷವಿ. ೨೯–೨೬).

[ಕಱಿ$_2$ + ಕಂದು$_1$]

**ಕಱಿಗಟ್ಟು**, ಕಱಿಕಟ್ಟು (ಕ್ರಿ). ಕಪ್ಪುಗಟ್ಟು; ಕಪ್ಪುಕಲೆಯಾಗು: ಬಡಿದೆಡೆಯೊಳೊಡೆದ ಪುಣ್ಣೊಳನೆಡೆಯುಡುಗದೆ ರುಧಿರವೊಱಿತು ಕಱಿಗಟ್ಟುವಿನಂ (ಸುಕುಮಾ. ೪–೫೮); ಕಣ್ ವಿಷಮುಮಾಗಿ ಕೊರಲ್ ಕಱಿಗಟ್ಟೆ (ದಶಕು. ೯–೮). **ಕಱಿಕಟ್ಟು** : ಕಣ್ಣಕಪ್ಪುಗಳಿಂ ತುಟಿಗಳೊಳ್ ಕಱಿಕಟ್ಟಿ (ಸೌಗಂಧಿ. ೧೯೮–೫).

[ಕಱಿ$_2$ + ಕಟ್ಟು$_1$]

**ಕಱಿಗರ್ಚು** (ಕ್ರಿ). ಕಲಂಕವನ್ನು ತೊಳೆ; ಕಪ್ಪುಕಲೆಯನ್ನು ತೆಗೆದುಹಾಕು: ಚರ್ಚಲ್ ಶಶಿಶಿಱುವಂ ಕಱಿಗರ್ಚಲ್ ಘನಘಟೆಯ ನುರ್ಚಲಮರದ್ರುಮಮಂ ಸಾರ್ಚಲಿನನೆಂಬ ಸೊಡರನೊಡರ್ಚಿದುವೆನೆ ನೀಳ್ದುವಿದಱ ಶಿಖರ ಕರಂಗಳ್ (ಕಾವ್ಯಾವ. ೫೫೭).

[ಕಱಿ$_2$ + ಕರ್ಚು$_1$ (< ಕಚ್ಚು)]

**ಕಱಿಗಳೆ** (ಕ್ರಿ). ಕಪ್ಪನ್ನು ನಿವಾರಿಸು; ಕಳಂಕವನ್ನು ತೆಗೆದುಹಾಕು: ಕಱಿಗಳೆದು ಗರ್ಭಮುರ್ಚಿದ ನೆಱಿವೆಱಿಯಂ ಪಿಱಿಯೆ ಸುರಿವ ತನಿರಸ ದೊದವಂ (ಚಕವಿ. ೧–೧೭). [ಕಱಿ$_2$ + ಕಳೆ$_1$]

**ಕಱಿಗಱು** (ನಾ). ಕರೆಯುವ ಆಕಳಿನ ಕರು; ಎಳೆಯಕರು (?): ಪಾಂಡವರ ಕೂಡೆ ತುಱುವನೊಂದು ಕಱಿಗಱುವನಪ್ಪೊಡಂ ಪೋಗ ಲೀಯದೆ ಮಗುಟ್ಚಿ (ನೇಮಿಪು. ೧೦–೧೫೨ ವ).

[ಕಱಿ$_1$ + ಕಱು$_2$]

**ಕಱಿಗೊರಲ್**, ಕಱಿಗೊರಳು (ನಾ). ಕರಿಯ ಕೊರಳು; ಕಪ್ಪುಕಲೆಯುಳ್ಳ ಕಂಠ: ಗಜಾಜಿನಮುಂಟೆ ಪತ್ತು ತೋಳ್ ಕಱಿಗೊರಲುಂಟೆ ಕೆಂಜೆಡೆಗಳುಂಟೆ (ಪಂಪಾಶ. ೧೯); ಎಳವೆಱಿಯ ಬಾಂದೊಱಿಯ ... ಕಱಿಗೊರಲ ಫಣಿ ಕುಂಡಲದಭಯಕರದ (ಬಸವು. ೧೭–೧೧). **ಕಱಿಗೊರಳು** : ಕಱಿಗೊರಳವನ ಕೃತ್ರಿಮವೋ ಇದನಱಿಯಲರಿದೆನುತ (ಬಸವು. ೫೨–೧೫); ಕಱಿಗೊರಳ ಕೋಮಳನ ಮಸ್ತಕದುಷ್ಣ ವಾಱದಿರೆ (ಸಂಭಪ. ೬–೭).

ಕಱಿಗೊರಲಾತಂ = ಕಱಿಕಂಠ : ಕಱಿಗೊರಲಾತನಾತ್ಮ ವಿಟತತ್ವಮನುಂಟೊಡೆತಾಗಿ ಮಾಡಿ ಬಾಂಡೊಱೆಯನೆ ಪೊತ್ತು (ಪಂಪಭಾ. ೭-೭೫); ಭುವನಕೋಶಮಂ ತೀವುವುದುಂ ಬಱಿವಾಗೆ ಮಾೞ್ಪುದುಂ ಸಲೆ ಕಱಿಗೊರಲಾತಂಗೆ ಬಿನದಮೆಂಬರ್ ಶೈವರ್ (ಸಮುಪ. ೧೦-೫೧). **ಕಱಿಗೊರಳವ** = ಕಱಿಕಂಠ : ಕಱಿಗೊರಳವನ ರಜತಗಿರಿಗೇತೆಱದೊಳಾವಾಗೇಸು ದಿವಸಕೆ ಮೆಱೆದೆನಿಬರಂ ಕೂಡಿ ಹೋಹೆ (ಬಸವು. ೪೪-೭೮). [ಕಱ್$_2$ + ಕೊರಲ್]

**ಕಱಿಗೊರಲ, ಕಱಿಕೊರಲ, ಕಱಿಕೊರಳ, ಕಱಿಗೊರಳ** (ನಾ). = ಕಱಿಕಂಠ : ಕುಳ್ಳಿರ್ದಂ ನಡೆ ನೋೞ್ಪರೆ ಕಣ್ಗಳ ಹಬ್ಬಮೆಂಬಿನಂ ಕಱಿಗೊರಲಂ (ಕಬ್ಬಕಾ. ೧೭೮); ಕಾಮಂ ಕಱಿಗೊರಲನಿನಳಿದಂ (ಜಯುಕಾ. ೨-೬೩); ಕಱಿಗೊರಲನ ಕಣ್ಣ ದಳ್ಳುರಿಯಲಿ ಬೆಂದ ಕೊಱಿಗೊಳ್ಳಿ ನಿನಗೇಕೆ ಪಂತ (ಮೋಹತ ೧೨-೬೨). **ಕಱಿಕೊರಲ** : ಕಱಿಕೊರಲನೆಂದು ಲೋಕಕ್ಕೆಱಿಯನನೀಯಂದದಿಂದಮಕ್ಕುಮೆ ಪೊಗಟಲ್ (ಸಮುಪ. ೮-೫೭). **ಕಱಿಕೊರಳ** : ಜಗದೊಳು ಕಱಿಕೊರಳ ಪದಾಬ್ಜಭ್ರಿಂಗನೀ ವಸುಮತಿಯೊಳ್ (ಎಕ. VI, ಕಡೂರು. ೧೨೭-೩೨; 1202). **ಕಱಿಗೊರಳ** : ಕಱಿಗೊರಳನಕ್ಕಱಿಂ ಕರುಣದಿಂ ಕಳುಪುತಿರೆ (ಬಸರ. ೧-೮೭). [ಕಱಿಗೊರಲ್ + -ಅ$_7$]

**ಕಱಿಗೊರಳ** 'ಕಱಿಗೊರಲ' ನೋ.

**ಕಱಿಗೊರಳು** 'ಕಱಿಗೊರಲ್' ನೋ.

**ಕಱಿಗೊಳ್** (ಕ್ರಿ). ಕಪ್ಪು ಕಲೆಯನ್ನು ಹೊಂದು; ಕಳಂಕವನ್ನು ತಾಳು : ಪಡೆಯ ಪದಹತಿಯೊಳುರ್ವಿದ ಪುಡಿ ನೆಗೆದೊಗೆದಿಭಕರಾಗ್ರ ಶೀಕರದಿಂ ನಾಂದೆಡೆಯೊಳ್ ಕಱಿಗೊಂಡಿಡಿದಿರೆ ಪಡೆದುದು ಶಶಿಬಿಂಬ ಶಂಕೆಯಂ ರವಿಬಿಂಬಂ (ವರ್ಧಪು. ೮-೧೫). [ಕಱ್$_2$ + ಕೊಳ್$_1$]

**ಕಱಿತರ್** (ಕ್ರಿ). ಹಾಲನ್ನು ಹಿಂಡಿಕೊಂಡು ತರು; ಹಾಲನ್ನು ಕರೆದುಕೊಂಡು ಬರು : ಕಂದೆನಾವಿನ ಹಾಲನುಱಿ ಕಱಿತಂದದಱ ಮೇಲೆಱಿದೆಱಿದು (ಬಸವು. ೫೮-೨೨). [ಕಱ್$_1$ + ತರ್]

**ಕಱಿದೊವಲ್** (ನಾ). (ಹದಮಾಡುವುದಕ್ಕಾಗಿ) ಕಪ್ಪು ಬಳಿದು ಹಾಕಿದ ಚರ್ಮ : ಕಱಿದೊವಲ ಪಟಿಯ ಕುಱಿಯಂ ತೆಱಿದಂದಂ ಮೆಯ್ಯ ನಾತಂ (ಯಶೋಚ. ೨-೩೯). [ಕಱ್$_2$ + ತೊವಲ್$_2$ (< ತೋಲ್)]

**ಕಱಿಪುನ್ನಣಿಮಾಣಿ** (ನಾ). ಒಬ್ಬಾತನ ಹೆಸರು : ಪಾಱ್ವರ ಅಣ್ಣಕ್ಕರ್ಗಱಿಪುನ್ನಣಿಮಾಣಿಯಿಱಿದು ಬೀಟ್ಟಿನ್ (ಎಇ. XXIV, ೨೬-೧೧; ಸು. 885). [?]

**ಕಱಿಬೋನ** (ನಾ). (ನಿವಾಳಿಸುವುದಕ್ಕಾಗಿ ಮಾಡಿದ) ಕಪ್ಪು ಬಣ್ಣದ ಅನ್ನ : ನಡೆಮುಡಿ ಕಱಿಬೋನ ಕಳಸ ಕನ್ನಡಿ ಹೆಜ್ಜೊಡರುವೆರಸಿ ನಿನ್ನ ಬಳಿಗೆ ನಡೆವೆನು (ರಾಮುವಿ. ೭-೧೨೫); ಉಱಿ ಮೆಱೆವ ಮೊಗದ ನೀಱೆಯರು ಕಱಿಬೋನವಾಂತಾಪುರದ ಬೀದಿಗಳೊಳು ತಱುಬಿದರಂದು ಮೋಹರಿಸಿ (ಕುರಾಸಾಂ. ೨೧-೧೯). [ಕಱ್$_2$ + ಬೋನ$_1$]

**ಕಱಿಮನ** (ನಾ). ಕಳಂಕವುಳ್ಳ ಮನಸ್ಸು; ಕೆಟ್ಟಮನ : ಕಱಿಮನದ ಕ್ರೂರರಱಿಯಜನಳಿವ ಶೂದ್ರರಂ ನೆಱಿ ಯಾಚಿಪೆಯ್ದೆ ಸನ್ಯಾಸವಿಪ್ರಾಳುಱಿ ಸುಕೃತವಂ ಕ್ರಯಿಪ . . . ವಿಪ್ರರಹರೆಂದು (ಸಾನಂಚ. ೨-೧೪೧); ಮಾಯಾವಿಮೋಹದ ಕಱಿಮನದ ಕಲುಷಾತ್ಮರಮಳಜ್ಞಾನ ದೀಪವನು ಅಱಿಯದವರಲಿ ಗುಣವ ದೋಷವನಱಸುವರೆ (ನಿಭಾಗ. ೧೧-೮೬-೪೦); ಕಱಿಮನದ ರಕ್ಕಸರು ಹರಣವ ತೊಱೆದು ಮಹಿಯಲಿ ಹತ್ತುಕೋಟಿಗಳೊರಗಿದುವು (ಕೌಶಿರಾ. ೩೨-೭೭). [ಕಱ್$_2$ + ಮನ$_1$]

**ಕಱಿಮಱಿ, ಕರೆಮರೆ$_1$** (ನಾ). ೧. ಕಂದು ಮತ್ತು ಕುಂದು; ಲೋಪದೋಷ; ಕಳಂಕ : ಕಱಿಮಱಿಗಳೊಳವು ನೋೞ್ಪೊಡೆ ಪೆಱಪೆಱರ ಕುಲಕ್ಕೆ ಕೊಂಡ ಕೊಟ್ಟೆಡೆಗಳೊಳಂ ಕಱಿಯಿಲ್ಲ ತೈಲನಲ್ಲದೆ ಪೆಱನಾವೊಂ ಪಿಕ್ಕಿ ನೋೞ್ಪೊಡಿರ್ತಲೆಗೋಱಂ (ಕಾವ್ಯಾವ. ೨೧೧); ಕಿಱಿಯನೆಂದಾ ಪೊತ್ತು ನಾಂ ಕಱಿಮಱಿಯಳಿದು ಮನ್ನಿಸುವುದೆಲ್ಲಂ (ಬಸವು. ೩೨-೧೪); ತಾನಿರಲು ಕೀರ್ತಿಗೆ ಕಱಿಮಱಿಯಿದೆತ್ತಣದು (ನಿಭಾಗ ೪-೧೨-೮); ಕಱಿಮಱಿಯಿಲ್ಲದ ಬಲ್ಲವರಱಿತಕ್ಕೊಳಗಾಗದ . . . ಚಿನ್ಮಯಪ್ರಭಂ ಮೆಱೆದಿರ್ದಂ (ರಾಜಶೇ. ೧೪-೧೧೦). ೨. ಮುಚ್ಚುಮರೆ; ಮಾಯೆ ಮೋಸ : ಕಾತರಿಸಿ ಕಱಿಮಱಿಯನಾಡುವ ಮಾತನಱಿಯೆವು (ಬಸವು. ೩೬-೧೭); ಎಲೆ ತಾಯೆ ಕೇಳು ನಿನ್ನೊಳಗೆ ಕಱಿಮಱಿಯೇಕೆ (ಸಮ್ಯಕೌ. ೯-೧೭); ಕಱಿಮಱಿಯೇಕೆ ತನ್ನಾತ್ಮನೆ ದೇವನೆಂದಱಿಗಿ ನೋೞ್ಪವನೆ ಸುದೃಷ್ಟಿ (ಭರತೇ. ೬೦-೧೭). **ಕರೆಮರೆ$_1$** : ೨. ಈ ಮುರುಕ ಮುನಿಸು ಲಲ್ಲೆ ಗಂಭೀರ ಜಾಣ್ನುಡಿ ಕರೆಮರೆ ಭಯ ಭಕ್ತಿ ಗರ್ವ-ಇವನ್ನೆಲ್ಲ ಎಲ್ಲಿ ಕಲಿತಳೋ! (ಮಾವುಲ್ಲಿ ೪೭). [ಕಱ್$_2$ + ಮಱ್$_3$]

**ಕಱಿವು, ಕರಾವು** (ನಾ). ೧. ಕರೆಯುವ ಹಸು : ಕಱೆವ ಕಱಿವುಗಳ ಮೊಲೆಯೊಳು ಹಾಲು (ಸಮ್ಯಕೌ. ೧-೨೧). **ಕರಾವು** : ೧. ಅಲ್ಲಿಯೂ ಎರಡು ಎಮ್ಮೆ ಕರಾವುಗಳಿವೆ (ಕಾವೇರಿ ೧೯೦); ಕೊಟ್ಟಿಗೆ ತುಂಬ ಕರಾವು (ಎಮುಕ. ೨). ೨. (ಹಾಲು) ಕರೆಯುವಿಕೆ; ಹಯನು : ಅನೇಕ ವೇಳೆಗಳಲ್ಲಿ ಕಾಲಿನ ಬಾಧೆಯಿಂದ ಹಸುಗಳಿಗೆ ಕರಾವು ಕಡಿಮೆಯಾಗುವುದು (ಗ್ರಾಮಾಕ. ೧೪೫); ಸಾವಿರ ರೂಪಾಯಿ ಸಂಬಳ ತರುವವನಾದರೂ ಅಷ್ಟು ಕರಾವನ್ನು ಮನೆಯಲ್ಲಿ ಕಾಣನು (ಶ್ರೀಕಥೆ. ೩೮); ದೊಡ್ಡ ಕರಾವು ಉಳ್ಳ ಬೀರಕ್ಕನು ಅಚ್ಚೇರು ಹಾಲು ಬಾಳುವುದಿಲ್ಲವೇ (ನೀತಿಚಿಂ. IX, ೨೯). [ಕಱ್$_1$ + ಅವು]

**ಕಱಿವೆಟ್ಟು** (ನಾ). ಕರಿಯ ಬೆಟ್ಟ; ನೀಲಾಚಲ : "ಕಱಿವೆ [ಪಾಠಾಂ. ಕಱ್ವಿ, ಕರ್ವೆ]ಟ್ಟೆಂದು ನೀಲಾಚಲಂ" (ಕಶಸಾ. ೪-೪೭). [ಕಱ್$_2$ + ಬೆಟ್ಟು$_2$]

**ಕಱಿವೆರಸು** (ಕ್ರಿ). ಕಪ್ಪುಗುರುತನ್ನು ಹೊಂದು; ಕಳಂಕಗೊಳ್ಳು : ಕದಪಿದು ಪೊದಳ್ದ ಮಕರಿಕೆಯಂ ತಾಳದೆ ಕಱಿವೆರಸದ [ಪಾಠಾಂ. ಕಱಿವೆರೆವೆರಸದ] ಶಶಿಬಿಂಬದ ಪೋಲ್ವೆಯನಾಳ್ದುದೇಕೆ (ರಾಜಶೇ. ೩-೬೦). [ಕಱ್$_2$ + ಬೆರಸು$_1$]

**ಕಱಿಸು, ಕಱಸು** (ಕ್ರಿ). (ಮಳೆ) ಸುರಿಯುವಂತೆ ಮಾಡು; ಮಳೆಗರೆಯಿಸು : ಏಳುದಿನ ಪರಿಯಂತರಂ . . . ಕಱಿ[ಪಾಠಾಂ. ಱ]ಸಿದ ನಲಾ ಕನಕವೃಷ್ಟಿಯನು (ಬಸವು. ೫೮-೭೨); ಸುಧಾವೃಷ್ಟಿಯಂ ಕಱಿ[ಪಾಠಾಂ. ಱ]ಸಿದನು ಶರ್ಕರನು (ಬಸವು. ೫೭-೮೩). **ಕಱಸು** : ಧರೆಯೊಳಿಪ್ಪತ್ತೊಂದು ದಿನವಚ್ಚರಿಯ ಮಳೆಯಂ ಕಱಸಿ (ಬಸವು. ೨೫-೧೩). [ಕಱ್$_1$ + -ಸು$_1$]

**ಕಱಿಹ, ಕಱಹ** (ನಾ). ೧. ಹಾಲನ್ನು ಕರೆಯುವಿಕೆ : ಕುಂಟಣಿಯ ಕೂರ್ಮೆಯಂತೆ ಪಶುವಿನ ಕಱಿಹದಂತೆ (ಧರ್ಮಾವೃ. ೭-೧೨೨). **ಕಱಹ** : ೨. ಹಾಲನ್ನು ಕರೆಯುವುದು; ಹಸು : ಪರುಷವಂಗಣದ ಕಲು ಸುರಭಿ ಕಱಹಂ ಕಲ್ಪತರು ವನಂ (ಹಚಕಾ. ೨-೧); ಕೊಪ್ಪರಿಗೆ ಕೊಡಪಾನಮನ್ನಿತ್ತು ಬಿಡದೆ ಕಱಹಂ ಕೊಟ್ಟು ಸಡಗರಿಸಿ ನಮಿಸುತಂ (ಲಿಂಗಪು. ೩೬-೨೪). [ಕಱ್$_1$ + -ಹ$_2$]

**ಕಱ್ತಿಯಮ್ಮ** (ನಾ). ಒಬ್ಬಾತನ ಹೆಸರು : ರೋಣವ ಪಡೆದರ ಮಗ ಕಱ್ತಿಯಮ್ಮಙ್ಗ ಒನ್ದದಿತ್ಯ[ನದಾ]ನಂಗೊಟ್ಟ ಬೆಳ್ವಣಿಗೆಯಳೊನ್ದು ಮಟವಿಱಿಕ್ಗ (ಸೌಇಇ. XI-i, ೩೫-೭; 923). [?]

**ಕಜ್ಜು** (ಕ್ರಿ). ಕೆರಳು ; ರೋಷಗೊಳ್ಳು: ಗಣಮುತ್ತಿರ್ಗೆ ಎಚ್ಚೊಡೆ ಇಱಿದು ಬಾಳ್ ಕಿಱ್ತು ಇದಿರೆ ನಡದು ಕಜ್ಜುತ್ತಪೋಗಿ ತಱ್ತು ಸತ್ತ (ಸೌಇಇ. IX-i, ೬-೧೧ ; 9ನೆಯ ಶತ). [< ಕಜು$_1$ ?]

**ಕಜ್ಜನೆ, ಕರ್ರನೆ** (ಅ). ಕಪ್ಪಾಗಿ ; ಕರ್ರಗೆ: ಕಜ್ಜನೆ ಕಱಿಯವರಾಗಳೆ ಗಜ್ಜನೆ ಪರಿತಂದು (ಧರ್ಮಾಮೃ. ೩-೧೯೧) ; ಕಾರ್ಮುಗಿಲ್ಗಂ ಪರಪುಷ್ಟಚ್ಛಾಯೆಗಂ ಕಜ್ಜಳರುಚಿಗಮದೇಂ ಕಜ್ಜನಾಯ್ತೋ ತಮಂಧಂ (ಕಾವ್ಯಸಾ. ೮೯೭) ; ಮಾತ್ಸರ್ಯದೊಂದುಜ್ಜುಗಂ ಕಜ್ಜನೆ ಕಂದಿತ್ತು (ರಕ್ಷಾಶ. ೬೨). **ಕರ್ರನೆ** : ಕಾಯ ಕರ್ರನೆ ಕಂದಿದರೇನಯ್ಯ (ಮಹಾದೇ. ೨೫-೮) ; ಕರ್ರನೆ ಕನಿಯುತ (ಹಮುಜ. ೧೯). [ಕಱ್$_2$ + -ಅನೆ$_2$]

**ಕಟ್** 'ಕಟು' ನೋ.

**ಕಟಿಕಟಿ** (ನಾ). = ಕಟಿಕುಟಿ : "ಕಟಿಕಟಿಮೆಂದು ದೇಶಬಹುಳಾಕುಳದಲ್ಲಿ" (ಕರ್ಣಾನಿ. ೮೩) ; ರಾಜ್ಯಾಂಗಂಗಳ್ ಕಟಿಕಟಿಮಾಗಿರ್ದುವು (ಶಾಂತಿಪು. ೩-೧೦೭). [?]

**ಕಟಿಕಟಿಸು, ಕಳಕಳಿಸು$_2$** (ಕ್ರಿ). ತಳತಳಿಸು ; ಹೊಳೆ: ಕಟಕಟಿಸಿದನರ್ಕಂ (ಶಮುದ. ಪರಿ. ೧) ; ತರಣಿ ತಟತಟನೆ ಮೂಡಲೊಗೆದಂ ಕಟಕಟಿಸಿತರ್ಕಂ (ಸಂಜೀವ. ೧೦). **ಕಳಕಳಿಸು$_2$** : ಪೊಂಬರಿಯಾಣದೊಳು ವೀರ ರಾಮನ ಕಳಕಳಿಸುವ ಪಂದಲೆಯನು ತಳುವದಿರಿಸಿಕೊಂಡು ತಂದು ತೋಱಿಸಲು (ಕುರಾಸಾಂ. ೩೭-೮೧) ; ಕಳಕಳಿಸುವ ಮೊಗ ನೋಡುತ ನಗುತ ಹುಂಕೊಳುತ ನುಡಿವುತಿದ್ದರೊಸೆದು (ಭರಚ. ೪೧-೧೭೪) ; ಮೂರು ತಿಂಗಳಲ್ಲಿಯೇ ಗಂಗನಹಳ್ಳಿಯ ದೇವಾಲಯಗಳು ಕಳಕಳಿಸಿದವು. (ಹಬ್ಬಬ. ೭೪). [ಕಟಿಕಟಿ$_0$ + -ಇಸು$_3$]

**ಕಟಿಕುಟಿ, ಕಳಕುಳ** (ನಾ). ಅಸ್ತವ್ಯಸ್ತತೆ ; ದಿಗ್ಭ್ರಾಂತಿ ; ಚೆಲ್ಲಾಪಿಲ್ಲಿ; ಅಲ್ಲೋಲಕಲ್ಲೋಲ: "ಕಟಿಕುಟಿಂ=ಸ್ಥಾನವ್ಯಾಕುಲತೆ" (ಶಮುದ. ಪರಿ. ೧); "ಕಟಿಕುಟಿಂ ತಾಣಬಾಗುಳತೆ" (ಸಂಜೀವ. ೩); ಚಾತುರಂಗಮುಂ ಕಟಿಕುಟಿಮಾಗೆ ಪೇಱೆ ಪೆಸರಿಲ್ಲೆನೆ ಪಾಯಿಸಿ ತೇರನೆಯ್ದೆ (ಪಂಪಭಾ. ೮-೧೦೫) ; ಕೇಡಡಸಿದೊಡವು ಜಂತ್ರದ ಕೀಲ್ಕುಟಿದಂತೆ ಕಟಿಕುಟಿಮಕ್ಕು (ಧರ್ಮಾಮೃ. ೩-೫೪) ; ಕಟಿಕುಟಿಮಸ್ತಾಚಳದಿಂದಿಱಿವೆಡೆಗಳೊಳಾಗೆ (ಪಾರ್ಶ್ವಪು. ೧೦-೫). **ಕಳಕುಳ** : ಪಿರಂಗಿಯ ಗುಂಡುಗಳೊಳಹೊಕ್ಕು ಕೋಟೆಯ ಕೆಡಹಿ ಕಳಕುಳವನು ಮಾಡತೊಡಗಿದುವು (ಕಂಠವ. ೧೭-೭೭).

**ಕಟಿಕುಟಿಂಮಾಡು, ಕಳಕುಳಂಮಾಡು** = ಚೆಲ್ಲಾಪಿಲ್ಲಿಮಾಡು ; ಚದರಿಸು : ತನಗೊಡ್ಡಿದ ಕಳಿಂಗರಾಜ ಮತ್ತಮಾತಂಗ ಘಟೆಗಳಂ ಕಟಿಕುಟಿಂಮಾಡಿದಂ (ಪಂಪಭಾ. ೧೦-೧೦೭ ವ); ಸಾವಂತನ ಮೇಲೆ ಯೆತ್ತಿ ನಡೆದಲ್ಲಿ ಕಳಕುಳಂಮಾಡಿ ಸಮಸ್ತ ಸಂಪತ್ತುವಂ ಸೂಱೆಗೊಂಡು (ಮೈಆರಿ. ೧೯೨೯. ೭೨-೭ ; 1253). [?]

**ಕಟಿಚು** 'ಕಟಲ್ಚು' ನೋ.

**ಕಟನಿ, ಕಲನಿ, ಕಳನಿ** (ನಾ). ಸಾಗು ಮಾಡುವ ತರಿ ಭೂಮಿ; ಬತ್ತದ ಗದ್ದೆ: ಕಣ್ದುಕದಾವೆಡೆ ಕಟನಿ ನೆತ್ತರ್ಪರ್ಪಟ್ಟಿ (ಎಕ. X (s), ಶ್ರೀನಿವಾ. ೧೧೭-೭ ; 700) ; ಶ್ರೀಪುರುಷನಾಯಿಗೆಗೆ ಪಟ್ಟಗಟ್ಟಿ ಕೊಟ್ಟ ಕಟನಿ (ಎಕ. IX. ಹೊಸಕೋ. ೮೭-೮; ಸು. 720); ಇರ್ಕ್ಕಣ್ಡುಗಂ ಕಟನಿ ಪೆರ್ಗೆಱಿಯಾ ಕೆಱಿಗೆ ಅಱುಗಣ್ಡುಗಂ (ಎಕ. IV, ನಾಗಮಂ. ೮೫-೭೪ ; 776) ; ಅತಂಗೆ ಬಾಣರಸರ್ ಕೊಟ್ಟೊದು ಒಣ್ದು ಕಟನಿ ಕಲ್ನಾಡು (ಸೌಇಇ. ೧೯೬೨, ಪುಂಗನೂ. ೧೯೭-೧೦ ; 9ನೆಯ ಶತ). **ಕಲನಿ** : ಮೆಚ್ಚಿ ಮೂರು ಖಮ್ಡು ಸರ್ವಬಾದ ಪರಿಯಾರ ಕಲನಿ ಪ್ರಸಾದಗೆಯ್ದಾರ್ (ಸೌಇಇ. IX-i, ೧೧-೧೦ ; 9ನೆಯ ಶತ). **ಕಳನಿ** : ಬಾಗೆಊರೇಱಿನುಳ್ಳಿಱಿದು ವಿಟ್ಟಾರ್ ಮಾಳ್ಗಟ್ಟು ಚಿವಾನಿ ಕಳನಿ (ಎಕ. XVI, ತುಮಕೂ. ೯೯-೭ ; 780).
[ದೇ. ‖ ತಮಿ. ಮಲ. ಕಟನಿ]

**ಕಟಿಮ** 'ಕಟಿವೆ' ನೋ.

**ಕಟಿಮಚೂರ್ಣ** (ನಾ). ಅಕ್ಕಿಯ ಹಿಟ್ಟು : ಘೃತಾನ್ವಿತಂ ಕಟಿಮಚೂರ್ಣಮನಿಕ್ಕಿ ಬಱಿಕ್ಕೆ ಸೀರೆಯೊಳ್ ಮಾಸರಮಾಗೆ ಸೇವಗೆಯನೊತ್ತಿ (ಲೋಕೋಪ. ೮-೧೨). [ಕಟಿಮ (< ಕಟಿವೆ) + ಚೂರ್ಣ$_3$]

**ಕಟಿಮೆ** 'ಕಟಿವೆ' ನೋ.

**ಕಟಿರ್** (ಕ್ರಿ). ನೆಗೆ; ಜಿಗಿ; ಕುಪ್ಪಳಿಸು (?) : ಹರಿಯಧೀಶನ ಸೋಲಿಕುಮೇಱುವಲ್ಲಿ ಸಂಚಲಿಸದೆ ನಿಲ್ವೊಡಂ ಕಟರ್ದು ಪೆರ್ಚು ಪೊಡಂ ಬಲಚೇಷ್ಟೆಗೆಯ್ವೊಡಂ ಗೆಲಿಸುಗುಮಾವ ಸಂದೆಯಮು (ಮಿಲ್ಲದ ಧೀಶನುಮಂ) ಮಹಾಜಿಯೊಳ್ (ಲೋಕೋಪ. ೧೨-೨೨); "ಉಪ್ಪರಿಸು" (ಲೋಕೋಪ-ಟೀಕ). [?]

**ಕಟಿಲ್$_1$, ಕಳಲ್, ಕಳಲು$_1$** (ಕ್ರಿ). ೧. ಸೊರಗು ; ಬಡವಾಗು ; ಕುಗ್ಗು : "ಕಟಿಲ್ – ತನುತ್ವೇ (ಸಣ್ಣನಾಗು), ತಕ್ರ, ಮಂಜೀರಯೋಃ (ಕಾಲ್ಕಡಗ)" (ಶಮುಧಾ) ; ತಮ್ಮರಸುಗೆಟ್ಟು ಕಟಿಲ್ದೆರ್ದೆಗೆಟ್ಟರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರಿಂ ಮುಗುಳ್ದುಂ . . . ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೋ (ಪಂಪಭಾ. ೮-೮೫) ; ಕುನುಂಗಿ ಕಾಂತಿ ಕಟಿಲ್ದು ಸಾರ್ದನ ಪರಾಶಾದ್ರೀಂದ್ರಮುಂ ಚಂದ್ರಮುಂ (ಅನಂಪು. ೮-೬೨) ; ಅಗಿದು ಸುಗಿದು ಸುಯ್ಯುತ್ತಬಲ್ದರ್ ಕಟಲ್ದರ್ (ಪುಷ್ಪಪು. ೧೩-೯೨); ಎರ್ದೆಯಾಱಿ ಮನಂ ಕಟಿಲ್ದು (ದಶಕು. ೪-೨೫) ; ಬಗೆಯೊಳ್ ಬಲ್ಪು ಕಟಿಲ್ದೊಡಂ (ಚಕವಿ. ೬-೨೫೧). ೨. ಎದೆಗುಂದು ; ನಿರಾಸೆಯಾಗು : "ಕಟಿಲ್ದಂ= ಬಡವಾದಂ ; ಮನಮಿಕ್ಕಂ" (ಶಮುದ. ಪರಿ. ೧). ೩. ಕಳಚಿಕೊಳ್ಳು ; ಬೀಳು ; ಕುಸಿ ; ಶಿಥಿಲವಾಗು : ಅಂತು ಬಿಟ್ಟು ಸುಲಿದ ಮೊಟಕಾಲ್ಗುಳುಂ ಕಟಿಲ್ದ ಪಲ್ಗಳುಮೆಲ್ಲಡಗಾದ ಮೆಯ್ಗಳುಮುಡಿದ ಕೆಯ್ಗಳುಮಾಗಿ (ಪಂಪಭಾ. ೨-೩೧ವ) ; ವಜ್ರಘಾತದಿಂದಂದು ಕಟಿಲ್ದು ನುಚ್ಚುನುಱಿಯಾಗದೆ ನಿಲ್ಕುಮೆ ಪಾಪ ಪರ್ವತಂ (ಸಮುಪ. ೧-೪೭) ; ಗಾಳಿಯ ಕೋಳಿಂ ಕಟಿಲ್ದು ಪಳಿಕಿನ ಪಾಸಱಿಯೊಳ್ ಘಳಿಲನೆ ಬಿಟ್ಟು (ಲೀಲಾವ. ೬-೭೭) ; ಇಳೆ ಕಟಿಲ್ವಿನೆಗಂ ಮುಸಗಿ ತಾಗಿದುದು ತುರಗದಟಂ (ವರ್ಧಪು. ೮-೪೯) ; ತೇರಿನರಗೀಲ್ ಕಟಿಲ್ದುದು (ರಾಮಾಶ್ವ. ೯೧-೨೪). **ಕಳಲ್** : ೧. ಬಳಿಕ್ಕಾವೆಸಕಂ ಕೀಳಾಗದಾರಾರೊಳವು ಕಳಲದಾರಾರ (ಳವು ಕಳಲದಾರಾರ) ತೇಜಪ್ರಭಾವಂ (ಸೌಇಇ. IX-i, ೧೭೨-೨೭ ; 1186) ; ಕಂಪಿಸುತ ಕಳಲುತೆಂತಕ್ಕೆ ಮಜ್ಜನಕೆಱಿದು ಜೊಂಪಿಸುತ ಜೋಲುತ್ತಲೊಮ್ಮೆಯುಂ ಅಸುವರದು (ಸಾಮುರ. ೨೧೧-೧೯). ೩. ಭಸ್ಮದೊಡೆದೋಡುಗಳ ಮುಱಿದ ಗೂಡಂಗಳ ಕಳಲ್ದ ಶಿಬಿಕೆಗಳ (ಜೈಮಿಭಾ. ೩೧-೫೫). **ಕಳಲು$_1$** : ೧. ಕಳಲಿದೆವು ಕಂದಿದೆವು ಕುಂದಿದೆವು ಮುಂದುಗೆಟ್ಟಳವಳಿದೆವು (ಚಬಪು. ೫೭-೫೪). ೩. ಕಳಲಿ ಸೂಸಿದ ಕೇಶಪಾಶದ ಮಲಿನ ವಸನದ (ತೊರೆರಾ. ೫-೯-೨೪). ೪. ಪ್ರತಿಭಟಿಸು ; ವಿರೋಧಿಸು (?) : ತಿಳಿಯಲಿದು ತಪ್ಪಲ್ಲ ಗರ್ವಕೆ ಕಳಲುವರು ವಿನಯಕ್ಕೆ ಕೊಡುವರು ತಲೆಯನಿದು ಹಿರಿಯರಿಗೆ ಗುಣ (ಕುವ್ಯಾದ್ರೋ. ಓರಿಇ. ಪರಿ. ೨೪೯).

**ಕಟಿಲೆಗುಟ್ಟು, ಕಳಲೆಗುಟ್ಟು**=ಕಳಚಿಬೀಳುವಂತೆ ಕುಟ್ಟು: ಬಾಯ ಬೆತ್ತೆಱಿಯೆಯುಂ ಪಲ್ಲಂ ಕಟಿಲೆಗುಟ್ಟೆಯುಂ ನೀರೊಳಿಕ್ಕಿ ಮೆಟ್ಟೆಯುಂ (ಆದಿಪು. ೧೧-೧೧ವ) ; ಕಾಲಾಳ್ಗಳಂ ಕಟಿಲೆಗುಟ್ಟಿ (ಎಕ. VIII. ಸೊರಬ. ೧೯-೧೩ ; 1441 ?). **ಕಟಿಲೆನುಡಿ** = ೧. ಕಳಚುವಂತೆ ಮಾತಾಡು ; ಪರಿಹರಿಸುವಂತೆ ಮಾತಾಡು : ಶಲ್ಯನ ಹೃಚ್ಛಲ್ಯಮೆಲ್ಲಮುಂ ಕಟಿಲೆ ನುಡಿದೊಡೆ (ಪಂಪಭಾ. ೧೨-೯೯ವ). ೨. ಸ್ಪಷ್ಟವಾಗಿ ತಿಳಿಸು ; ಬಿಡಿಸಿ ಹೇಳು (?) : ಕಟಿಲೆನುಡಿದಬಳಿ ಬಗ್ಗಿಸಿ ಘಟಿಲನೆ ನಡೆಯೆಂದು ಜಡಿದು (ಕಾವ್ಯಾವ. ೨೭). [ದೇ. ‖ ತಮಿ. ಮಲ. ಕಟಲ್ ; ತುಳು. ಕಳೆ]

**ಕಟಿಲ್**$_2$ (ನಾ). ಕುಗ್ಗಿದ ಸ್ಥಿತಿ; ಬಿಚ್ಚುವಿಕೆ; ಶಿಥಿಲತೆ; ಬಾಡುವಿಕೆ. 'ಕಟಿಲ್ಚು' ಪರಾ. [< ಕಟಿಲ್$_1$]

**ಕಟಿಲ್**$_3$, ಕಳಲ್ಚು$_2$ (ನಾ). ಮೊಸರು; ಮಜ್ಜಿಗೆ: "ಕಟಿಲ್-ಮಜ್ಜಿಗೆ; ಅಂದುಗೆ; ತನುತ್ರಂ" (ಶಮದ. ಪರಿ. ೧); "ಕಟಿಲೆಂದು ದಧಿ" (ಕಶಸಾ. ೭-೧೩೫); ಪಬಿಗಟಿವೆಯ ಕೂಟ್‌ತಿವುದುಗಳೆದತೊವರಿಯ ತೊವೆ ಕಾಯ್ದುಟಿಸಿದ ತುಪ್ಪಂಕೋಡುವ ಕಟಿಲಲ್ಲದೆ ದಿವ್ಯಭೋಜನಂ ಪೆಜತುಂಟೇ (ಕಾವ್ಯಾವ. ೨೪೧); ಇದು ಬಾಟಿನ್ಕೊಸರಿದು ಕಟಿಲಿಂತಿದು ರುಚಿವೆತ್ತಿರ್ದ ಪಾನಮಿದು ಮಜ್ಜಿಗೆ ತಾನಿದು (ಸುಕುಮಾ. ೧೧-೩೧). **ಕಳಲ್ಚು**$_2$: ಕೆನೆಯ ತೆಗೆಯದೆ ಕಡೆದ ಕಳಲು ಗೋಳಕಮಾಯ್ತು (ಸೂ ಪ ಶಾ. ೨-೧೩); ತಣ್ಣನೆಯ ಕಳಲು ಹಸಿಯಲ್ಲಮಂ ಬಡ್ಡಿಸಲ್ (ಸಮ್ಯಕೌ. ೭-೨೪). [?]

**ಕಟಿಲ್**$_4$, ಕಟಿಲು (ನಾ). ಅಂದುಗೆ; ನೂಪುರ; ಕಡಗ: "ಕಟಿಲೆಂದುಂ . . . ನೂಪುರಂ" (ಕಶಸಾ. ೨೦-೪೧೩); "ಅಂದುಗೆಯೊಳ್ ಕಟಿಲೆಂದು ಪೊಂದುಗುಂ" (ಕರ್ಣಾಪಿ. ೮೩); ಕಾಲಲಿಟ್ಟ ಬ(ಕಟಿ)ಲ್ಗಳಿಂ (ಎಇ. XIX, ೧೯೪-೨; 1210); ಕಟಿಲೊಳೀಂ ಪಗೆ (ರಾಮಾಶ್ವ. ೨೦-೮). **ಕಟಿಲು**: "ನೂಪುರಮಕ್ಕುಂ ಸಂಗತಿಯಿಂ ಕಟಿಲು ನೇವುರಂ ಪುರುಳಿಂದಂ" (ಕವಿಕಂ. ೧೭೯). [ದೇ. ‖ ತಮಿ. ಮಲ. ಕಟಿಲ್]

**ಕಟಿಲಮಡು** (ನಾ). ಒಂದು ಪ್ರದೇಶದ ಹೆಸರು (?): ಆಗ್ನೇಯದಲು ಕಟಿಲಮಡು ತೆಂಕಲು ಬೆಲ್ಲದ ತ[ಟಿ]ಬಾಗು (ಬೊಂಕಶಾ. ೧೯೩೩, ಹಾವೇರಿ. ೫೩-೮೦; 1136). [?]

**ಕಟಿಲಿಸು**, ಕಳಲಿಸು (ಕ್ರಿ). ೧. ಕಳಚು; ಉದುರಿಸು; ಸಡಿಲಿಸು: ಅಲುಗದೆ ತಳಿರ್ತ ಮರಗಳೊಳಿಲೆಯಂ ಕಟಿಲಿಸದೆ ಪೂತ ಗಿಡುಗಳೊಳರಲಂ ಸಲೆ ಬಿರ್ಚದೆ ತಳ್ತ ಲತಾವಲಿಗಳೊಳ್ಕುಡಿಯನೂದುಗುಂ ಗಂಧವಹಂ (ಚಂದ್ರಪು. ೧೪-೨೨). **ಕಳಲಿಸು**: ೨. ಕುಗ್ಗಿಸು; ಕಡಿಮೆಮಾಡು: ಕಗ್ಗೊಲೆಯ ಕಾಮನ ಕೈಮೆಯನು ಕಳಲಿಸು ಕಟಾಕ್ಷದ ಕರುಣಭಾವದಲಿ (ತೊರರಾ. ೩-೪-೧೭); ಮಂಡೋದರಿ ನಿಜೇಶನ ಕಡುಹ ಕಳಲಿಸಿ ಕೆಲಕೆ ಸಾರಿಸುವನಿತರೊಳು (ತೊರರಾ. ೫-೩-೭೦). [ಕಟಿಲ್$_1$ + -ಇಸು$_3$]

**ಕಟಿಲು** 'ಕಟಿಲ್$_4$' ನೋ.

**ಕಟಿಲುಲಿ**, ಕಟಿಲುಳಿ (ನಾ). ನೂಪುರದ ಧ್ವನಿ; ಅಂದುಗೆಯ ನಾದ: ತೊಡೆ ದಡದಡಿಸೆ ನಡೆಗೆಟ್ಟು [ಕಟಿಲುಲಿಗೆ ಬಟಿಸಲ್ಕ] ಕಳಹಂಸ ಮಂಡಲಕ್ಕಯಶಮಂ ಮಾಡಿಸಿಯುಂ (ಕಾದಂಬ ೩೬). **ಕಟಿಲುಳಿ**: ಮಜಿದುಂಬಿಗಳ ಗಾವರಕ್ಕೆ ಜತಿಯನುಗ್ಗಡಿಸುವಂತೆ ಕಟಿಲುಳಿಯಿನುಲಿವ ಪಾರಿವಂಗಳಿಂ (ಚಂದ್ರಪು. ೧೨-೧೧೧ವ). [ಕಟಿಲ್$_4$ + ಉಲಿ$_2$]

**ಕಟಿಲುಳಿ** 'ಕಟಿಲುಲಿ' ನೋ.

**ಕಟಿಲೆ** (ನಾ). ಮುಳ್ಳುಗಳಿಂದ ಕೂಡಿದ ಸಣ್ಣ ರೆಂಬೆ: "ಕಟಿಲೆ = ಮುಳ್ಳು ವೆರಸಿದ ಗುಜ್ಜಗೊಂಬು" (ಶಮದ. ಪರಿ. ೧). [?]

**ಕಟಿಲೆಗಟ್ಟು**, ಕಳಲುಕಟ್ಟು (ಕ್ರಿ). ಹೆಡಮುರಿಗೆ ಕಟ್ಟು (?): ಮಲ್ಲರಂತೆ ಬರಿಯಂ ಪತ್ತಿ ಕಟಿಲೆಗಟ್ಟುವರ್ (ಧರ್ಮಾಮೃ. ೩-೭೩). **ಕಳಲುಕಟ್ಟು**: ಒಡನೆ ಕಳಲುಕಟ್ಟಿ [ಪಾ ಠಾಂ. ಕೆಳಲುಕಟ್ಟಿ] ಹೆಡಗೆಯ್ಯ ಬಿಗುಹಿಗೆ ಮೃಥಭಕ್ತನೋರ್ವನು ಪೋಪ (ಮೋಳಿಪು. ೨-೫೮). [ಕಟಿಲೆ ? + ಕಟ್ಟು$_1$]

**ಕಟಿಲ್ಚು**$_1$, ಕಳಚು, ಕಳಲಿಚು, ಕಳಲ್ಚು, ಕಟಿಚು (ಕ್ರಿ). ೧. ಬೇರ್ಪಡಿಸು; ಬೇರೆಮಾಡು; ಭೇದಿಸು: "ಕಟಿಲ್ಚು - ಪೃಥಕ್ಕರಣೇ" (ಶಮಧಾ); ಚಾರುಚರಿತ್ರ ತೀರ್ಥಬಲದಿಂದಘಕರ್ದಮಮಂ ಕಟಿಲ್ಚಿ (ಪಂರಾಮಾ. ೧-೧೪); ದೇಹದಿಂದಂ ಕಟಿಲ್ಚದೆ ತಾನನ್ಯಶರೀರಿಯಾದನಿದೆ ಯಂತ್ರಂ ತಂತ್ರಸಂಸಿದ್ಧಿಯೆಂದು (ದಶಕು. ೧೩-೫೪). ೨. ತೆಗೆ; ಬಿಚ್ಚು; ಕಳೆ: ನೃಪವಿಲಾಸಿನಿಯರ್ ತುಡುಗೆಯಂ ಕಟಿಲ್ಚಿ ತಡಿಯೊಳ್ ಬೈತಿಟ್ಟರಲ್ (ಪಂಚತಂ. ೮೬-೧೦); ತೊಡರ್ದ ಬಲೆಯಂ ಕಟಿಲ್ಚಿ (ಉದ್ಭಟ. ೪-೧೨೭ ವ), ನೂಪುರಮಂ ಕಟಿಲ್ಚಿ (ದಶಕು ೧೦-೭೫). ೩. ಪರಿಹರಿಸು; ಹೊಡೆದಟ್ಟು; ತೊಲಗಿಸು: ಕಟಿಲ್ಚಿ ಕಳೆಗೊಂದಿ ಮುಂದೆ ಬಾರದ ಪದಮಂ (ಕವಿರಾ. ೨-೫); ಬಿರುದರನೊತ್ತಿ ಬೀರರನಡಂಗಿಸಿ ಕೊಂಕಿಗರಂ ಕಟಿಲ್ಚಿ (ಪಂಪಭಾ. ೭-೧೮); ಪಳೆಯಲೆ ದೋಷತ್ರಯಮಂ ಕಳೆವವೊಲೆಳೆಯಲೆ ಕಟಿಲ್ಚುವುದೆ (ಉದ್ಭಟ. ೧೦-೭೩); ಆಚಾರ್ಯರ್ ದಯೆಯಿಂ ಕಟಿಲ್ಚುಗೆ ಮದೀಯ ಸ್ವಾಂತದಿಂ ಧ್ವಾಂತಮಂ (ಅನಂಪು. ೧-೩). ೪. ಉದುರಿಸು; ಹನಿಸು; ಬೀಳಿಸು: ಕೋಕಾಂಗನೆ ಕಣ್ಬನಿಯಂ ಕಟಿಲ್ಚಿ ಬೇದಿಸಿದಾಗಳ್ (ಕುಸುಮಾ. ೪-೨೦). ೫. ಸಡಿಲಿಸು; ತೆಗೆಯಿಸು: ಧರ್ಮದೊಳಮರ್ಥದೊಳಂ ಬಗೆಯಂ ಕಟಿಲ್ಚದು ದ್ವಾಸಿಸಿದಂ ಗಡಂತವನವರ್ಕೆ ಫಲಂ ಸುಖಮೆಂದು ಬಲ್ಲವಂ (ಪುಷ್ಪಪು. ೩-೬೧). ೬. ಕೇಳು; ಕಿತ್ತುಕೊಳ್ಳು: ಮೆಲ್ಲನೆ ನುಡಿದರ್ಥಮಂ ನೆಱೆ ಕಟಿಲ್ಚುವುದಾತನೊಳಂಬುಜಾನನೇ (ಶಾಂತೀಶ್ವ. ೧೧-೭೬). **ಕಳಚು**: ೧. ನಿನ್ನನು ಸೆಳೆದು ರಣದಲಿ ತೊಡೆಯ ಕಳಚುವ ಮೃತ್ಯುಭೀಮನ ಕಯ್ಯನೋಡು (ಕುವ್ಯಾಗ. ೫-೨೭); ಸುರೇಖೆಯ ತಳಪದಸ್ತ್ರದಲವಳ ಹಸ್ತವ ಕಳಚಲೆಚ್ಚನು (ತೊರರಾ. ೧-೧೦-೧೩). ೨. ವಿಕ್ರಾಂತಧೀರನ ನೋಡುತುಟ್ಟಳು ಕಳಚಿದಂಬರವ (ತೊರರಾ. ೨-೩-೪೧); ವರಶಿರೋಮಾಲೆಯಂ ಕಳಚಿ ಚಲ್ಲಣಮನುಟ್ಟು (ಚಿಬಪು. ೫೩-೧೧); ಅಸಿತಾಂಬರದ ಗವಸಣಿಗೆಯನು ಕಳಚಲ್ಕೆ (ಕೋಗಯ. ೨೭-೫). ೬. ಉಲುಕಿದರೆ ನಾಲಗೆಯ ತೊಡಬೆಯ ಕಳಚುವೆನು (ಕುವ್ಯಾಕ. ೧೧-೨೫); ಸೊಕ್ಕುಮುಱಿದು ನಿನ್ನ ಹಲ್ಲ ಕಳಚುವರಲ್ಲಿ (ಪುರಂದ. ೭-೩೯-೫). ೭. ಸಡಿಲು; ಜಾರು; ಬಿದ್ದು ಹೋಗು: ಮಹಿಮೆಯ ಕೀಲು ಕಳಚಿತು (ಕುವ್ಯಾವಿ. ೨-೧೩); ಕಳಚಿತರಸನ ಮನದ ಧೈರ್ಯಾಚಲದ ಬೈಸಿಕೆ (ತೊರರಾ. ೧-೧೭-೫). **ಕಳಲಿಚು**: ೨. ಕೌಸಲೆ ಕಳಲಿಚಿದ ಮುಡಿಯಿಂದ ಕಂಬನಿದುಳುಕೆ ಕೆಲಬಲಕಳವಳಿವುತೊಱಲಿದಳು ದೆಸೆದೆಸೆಗೆ (ತೊರರಾ. ೨-೩-೫೬). **ಕಳಲ್ಚು**: ೩. ರಾಜಪುತ್ರಸಚಿವಸಂಘದ ಕಿವಿಗೇನಾನುಮ ನೀವುದ ನಾಡುತೆ ಭೇದದಿಂ ಕಳಲ್ಚು [ಪಾಠಾಂ. ಮರಳ್ಚು]ವುದವನಂ (ಗಿರಿಕ. ೬-೧೮); ಕಂಟಕರಂ ಕಳಲ್ಚಿತಾಂ ರಾಯಮುರಾರಿಭೂಪತಿಗೆ ರಾಜ್ಯವನೂರ್ಜಿತವಾಗಿ ಮಾಡಿದಂ (ಕೊಲ್ಹಾಶಾ ೯-೧೪; 1147); ಮುನಿಸಂ ಕಳಲ್ಚಿ (ಗಿರಿಕ. ೧-೧೨೮ ವ). ೪. ನಭದೆಡೆಯುಡುಗಳಂ ಕಳಲ್ಚುವ ಸೂರ್ಯಮಂಡಲವನೊಡೆವ (ಚಿಬಪು. ೨-೨೪). ೭. ಖಳರ[ರ]ವಂ ಕಳಲ್ಚಿದುದು ಕಳ್ಪರ ಕೊಳ್ಳಿಯ ಬಾಧೆಯೆಮ್ಬ್ಬಗಳ್ದಳಿಱಿ ತೆರಳ್ಚಿ ತೂಱುದುದು (ಸೌಇಇ. XI-ii, ೧೫೨-೧೯; 1103). **ಕಟಿಚು**: ೭. ಜಂತ್ರದ ಕೀಲ್ ಕಟಿಚಿದಂತೆ ಕಟಿಕುಟಿಮಕ್ಕುಂ (ಧರ್ಮಾಮೃ. ೩-೫೮). [ಕಟಿಲ್$_1$ + -ಚು]

**ಕಟಿಲ್ಚು**$_2$ (ನಾ). ಕಳೆಯುವಿಕೆ; ನಿವಾರಣೆ: ಕಟ್ಟಲೆ ಕಟಿಲ್ಚು ಜಗತ್ತಿನ ಪುಣ್ಯದಚ್ಚು . . . ಪೂರ್ಣ ಶಶಾಂಕಮಂಡಲಂ (ಸೂಕ್ತಿಸು. ೮-೨೨೪). [< ಕಟಿಲ್ಚು$_1$]

**ಕಟಿವೆ**, ಕವಳ್$_3$, ಕವಳ್ಕೆ$_2$, ಕಳವೆ, ಕಳವೆ$_2$, ಕಟಿಮ, ಕಟಿಮೆ, ಕೌಳ್$_2$ (ನಾ). ಬತ್ತ; ನೆಲ್ಲು: "ಕಟಿವೆಯೆನೆ ಶಾಲಿಯಕ್ಕುಂ" (ಕವಿಕಂ. ೨೩೯); ಬೆಳೆದೊಱಗಿದ ಕಟಿವೆಗಳುಂ (ಕವಿರಾ. ೩-೧೬೬); ಒರ್ಮೊದಲೊಳೆರ್ದ ಕಟಿವೆಯ ಸಸಿವೊಲ್ (ಕಾವ್ಯಸಾ. ೮೭೦ ಶೂದ್ರಕ); ಜೋಳಮಂ ಬಿತ್ತಿ ಕಟಿವೆಯಂ ಬಯಸುವೆಗ್ಗನುಮಂ (ಧರ್ಮಾಮೃ. ೭-೧೬೮); ಒಲವಿಂ ಬಂದೆಱಗುವವೋಲ್ ತೆನೆಯಂ ಕಾಲ್ಗೆಱಗುವ ಕಟಿವೆಗಳ್ (ಕಬ್ಬಿಕಾ. ೨೩); ಕದಲೊಡೆದ ಬೆಳೆದ ಕಟಿವೆಯ ಕದಿರ್ಗಂಪಿಂಗೆಱಗಿ ಪಱಮೆಗಳ್ (ಅನಂಪು. ೧-೮೦). **ಕವಳ್ಕೆ**: (ಉಕ).

ಕವಳ್ಕೆ₂ : (ಉಕ). **ಕೞಮೆ** : ಬೆಳೆದ ಕೞಮೆಯ ಕೆಯ್ವೊಲಂಗಳಿಂದಲ್ಲಲ್ಲಿ (ಎಕ. VIII, ಸೊರಬ. ೧೩೮–೯ ; ಸು. 1145) ; ಕೞಮೆಯ ಕೆಯ್ಗಳು ಪಿರಿದೊಪ್ಪವಡೆದು ಗಿಳಿವಿಂಡು ನಿಪ್ಪಸರದಿ ಸರಿವವೊಲು (ಅಂಜಚ. ೧೩–೩೦೦) ; ಕೞಮೆಯ ತೆನೆಗಳು ಬಣ್ಣಸರಗಳೆನೆ ಬಳುಕುತ ನೀರೊಳು (ನಾಗಕು. ೨–೨೨). **ಕೞವೆ₂** : ಬೆಳಸಂ ಪೇಳ್ವಡೆ ಕಬ್ಬುಂ ಕೞವೆಯು ಮೆಲೆಯಡಕೆ ತೆಂಗು ಮಾಉಫಲಂ (ಎಕ. VII, ಸಾಗರ. ೧೧೯–೪೭; 1042); ಕೞವೆ ರಾಜಾನ್ನ, ಶಾಲ್ಯನ್ನಕ್ಕೆ 'ಓಗರದ ಉದಕವನೆಱೆದವರಾರಯ್ಯಾ (ಮಹಾದೇ. ೪೪) ; ಕೞವೆಮಯವಾ ನೆಲನು ಕಬ್ಬಿನ ಹಳುಮಯವಾ ಹೊಲನು (ತೊರರಾ. ೬–೬–೧೯) ; ಕೞವೆಯ ಮಡಿಯ ಸಾಲುಗಳು ಸಲೆ ಮೆಱೆದುವು (ಭಾವಚಿಂ. ೨–೮). **ಕೞಮ** : 'ಕಟಿವುಚೂರ್ಣ' ಪರಾ. **ಕೞಮೆ**: ಉಪಾಧ್ಯಾಯಂಗೆ ಕೞಮೆಯ ಕೂೞುಂ ಮಸಿಯುಂ ತುಪ್ಪಮುಮನುಣಲ್ಕೊಟ್ಟು (ವಡ್ಡಾರಾ. ೭೫–೨೦) ; ಅನಿಳಾಹತಿಯಿಂ ಕೞಮೆಯ ತೆನೆದುೞುಗಲೊಳೊಱೆತು ಪರಿವ ಪಾಲಂ (ಶಾಂತೀಶ್ವ. ೧–೯೪). **ಕೌಳ್ಕೆ₂** : 'ಕೌಳಿಕಂದಾಯ' ಪರಾ. [< ಸಂ. ಕಲಮ]

**ಕೞವೆಗಿಡು** (ನಾ). ಒಂದು ಬಗೆಯ ಸಸ್ಯ : "ಪಾಣಿಮರ್ದಕ – ಕೞವೆ ಗಿಡು" (ಓಷಧಿ. ೯೫). [?]

**ಕೞಿ₁**, ಕಳಿ₁, ಕಳೆ₂, ಕೞೆ₁ (ನಾ). **೧.** ಸಾಯು ; ತೀರು ; ಮಡಿ : "ಕೞಿ – ನಿಧನಾತಿದೂರಯೋಃ (ಕೊನೆಗಾಣು, ಸಾಯು, ಬಹುದೂರ ತೊಲಗು), ಸೌವೀರೇ ಚ (ಗಂಜಿ)" (ಶಮಧಾ); ಎರಡ್ಮೂಱು ತಿಂಗಳಿಂಗೆ ತಾಯ್ ಕೞಿದೊಡೆ (ವಡ್ಡಾರಾ. ೭೦–೧೩) ; ಕೞಿದವರ್ಗೞ್ವುದೞ್ತೊಡ ವರೇೞ್ವೊಡಮಂತವರಿಂ ಬೞಿಕ್ಕೆ ತಾಮುೞಿವೊಡಂ (ಪಂಪಭಾ. ೨–೨೭) ; ಕೞಿದ ಪುನಃಪ್ರಿಯವಿರಹದಿನಟಿಲ್ದು (ಕಾವ್ಯಾವ. ೨೦೧). **೨.** ದಾಟು ; ತಳ್ಳು ; ನೂಕು ; ಸಾಗಿಹೋಗು : ಕೊಳುಗುಳವಂ ಕೞಿ [ಪಾಠಾಂ. ಳಿ]ದು ಪೋಗಿ (ಪಂಪಭಾ. ೧೩–೭೧ ವ); ಏನಾನುಂ ಪ್ರಾಣಿಗಳಂ ತಿಂದು ಕಾಲಮಂ ಕೞಿವೆಂ (ಪಂಚತಂ. ೨೨೭–೧೭) ; ಮೂಱು ಕೋಟಿ ಕೋಟಿ ಸಾಗರೋಪಮಂ ಕೞಿದಿಂ ಬೞಿಯಂ (ಪಂರಾಮಾ. ೧–೬೭ವ). **೩.** ಸಂದುಹೋಗು ; ಕಳೆದುಹೋಗು ; ಹರಿದುಹೋಗು ; ಬಿದ್ದುಹೋಗು: ಕೞಿದ ನೀರ್ಗೆ ಬಂದಪುದೆ ಬೞಿಕ ಜರೆಗಂ ತಿರ್ದಲ್ (ಅಜಿಪು. ೨–೫೯) ; ಕತಿಪಯದಿನಂಗಳ್ ಕೞಿಯೆ ಸುದಾಮೆಗೆ ಪರಿಣಯನ ಪ್ರಾರಂಭವಾಗೆ (ಸುಕುಮಾ. ೭–೧೬ ವ) ; ಕೞಿದ ಸುಖಂಗಳಂ ಪರೆದ ಜವ್ವನಮಂ ದೊರಕೊಳ್ಳದರ್ಥಮಂ. . . ಮಗುೞ್ದಾಸೆ ಮಾಡಿಯುಮ್ಮೞಿಸುವರೇಕೆ (ದಶಕು. ೮–೨೬). **೪.** ನಿವಾರಿಸು ; ಹೋಗಲಾಡಿಸು : ಕಂಡೊಡಂ ಮಱೆದಿರ್ಪರ್ ಗಡ ಕಾಣದರ್ ಕೞಿವರೇ ವ್ಯಾಮೋಹ ಬಂಧಂಗಳಂ (ಅನಂಪು. ೯–೨೧) ; ಮನಮನೆ ನೆಲೆವನೆ ಮಾಡಿರ್ಪನಂಗನಂ ಕೞಿಯಲಾರ್ಗಮೇಂ ಬಂದಪುದೇ (ಲೀಲಾವ. ೩–೫೭) ; ಕೇಸರಿಯಂ ಕೊಂದದಱಸುವಿನೊಡನೆ ಕೞಿದಂ ಪೊದಟ್ದಂ ನಿಜ ಕೋಪತಮಮಂ (ಕುಸುಮಾ. ೧೪–೧೧೦). **೫.** ಕೈಮೀರು ; ಮಿತಿಮೀರು : "ಕೞಿದಂ=ಸತ್ತಂ; ದೂರಂಬೋದಂ ; ಕಯ್ಮೀಱಿದಂ"(ಶಮುದ.ಪರಿ. ೧); ಕರ್ಣನಿಶಿತ ವಿಕರ್ಣಹತಿಯಿಂದಮಸುರಾಂತಕಂ ಕೞಿಯೆ ನೊಂದು (ಪಂಪಭಾ. ೧೨–೨೧೦ ವ) ; ಕೞಿದ ಭವನಿಗಳದೊಳ್ ತೊಡರ್ದೞಿಮಾನಸನಿರ್ಕುಮಧಿಕನಿರ್ಕುಮೆ (ಚಂದ್ರಪು. ೧೩–೮೯). **ಕಳಿ₁**: **೧.** ಕಳಿದ ನಡವಿಯೊಳಯ್ಯನು (ಕುವ್ಯಾಭೀ. ೭–೨೮). **೨.** ಪಲವೂರ್ಗಳಂ ಕಳಿದು ನಡೆತಂದು (ಬಸರ. ೧೨–೧೭) ; ಸೊಗಸುಗಾತಿಯರೊಡನೆ ಬೇಸಗೆಗಳಿ [ಪಾಠಾಂ. ಳೆ]ವ ಭೋಗಿಜನ (ಪದ್ಮರಾ. ೮–೨೭) ; ಕಳಿದರಿವರೆಲೆ ಕೇಳು ಕುಶ ತತ್ಕಲುಷಕಾಂತಾರವನು (ತೊರರಾ. ೧–೧೧–೧) ; ಕಳಿದ ಹಗಲ ತಾವರೆಯಂತೆ ಜೌವನಗಳಿದ ಹೆಣ್ಣಿನ ಸ್ನೇಹದಂತೆ (ಕಂನವಿ. ೧೮–೧೨೦). **೩.** ಕಳಿದು ಮುಳಿದು ಸುಳಿದು ಹೊಳೆದು ಕಾಡಲೇಕೆ ಹಂಪೆಯರಸ (ಹಂಪೆರ. ೮–೧) ; ನಳಿನನಾಭನ ಕರುಣದೊಱತೆಯು ಕಳಿದರಾರೇಗುವರು (ಕುವ್ಯಾದ್ರೋ. ೭–೧೯) ; ಸುಳಿಯದಿರ್ಪುದು ಕರಿಣಿ ಕಳಿಯದಿರ್ಪುದು ಹರಿಣಿ (ಚಿಬಪು. ೩೫–೩೧). **೪.** ಅಕಟ ವಿಧಿಯನು ಕಳಿವರಾರ್ (ಜೀವಂಚ. ೫–೪೬). **ಕಳೆ₂**: **೨.** ಬಾಲಲೀಲೆಯಂ ಕಳೆದು ದಿವ್ಯ ಕನ್ನಿಕೆಯಾಗಿರ್ಪಲ್ಲಿ (ಗಿರಿಕ. ೧. ಕಥಾಗರ್ಭ) ; ಅರಮನೆಯ ಬಾಗಿಲ್ಗಳಂ ಕಳೆದು ಬರುತಿರ್ದನು (ಚಿಬಪು. ೬–೨) ; ಆನಂದವಡೆದು ಲಲಿತಾಂಗಿ ಅಂದಿನ ದಿನವ ಕಳೆಯಲು (ಕಂನವಿ. ೯–೫೮). **೩.** ಕಳೆದುವು ವೃದ್ಧಂಗೆ ದಂತಂಗಳೆಲ್ಲಂ (ಬಾಧಪು. ೫–೫೩) ; ಕಳೆದ ಹಲುಗಳನೊಡೆದ ಮೊಳಕಾಲ್ಗಳನು ತೋಱೆ (ಕುವ್ಯಾಅ. ೬–೬) ; ಕಣ್ಣ್ಯದಿಲಲರಿಕೆಯಿಂಪು ಕಳೆಯೆ ನಾಸಾನಿಲನ ಕಂಪು ಸುಳಿಯೆ (ಚಿಬಪು. ೧–೨). **೫.** (ಕತ್ತಿ ಮೊದಲಾದುವನ್ನು) ಒರೆಯಿಂದ ಕಳಚು ; ಹೊರದೆಗೆ ; ಕಳಚಿಕೊ : ಸತ್ಯವೆಂಬ ಕೂರಲಗನೆ ಕ[ಪಾಠಾಂ. ತ]ಳೆದುಕೊಂಡು ಸದ್ಭಕ್ತರು ಗೆದ್ದರು (ಬಸವ. ೬೭೭). **೬.** ತೆಗೆ ; ವಜಾಮಾಡು ; ವ್ಯವಕಲನ ಮಾಡು : ಕಳೆಯೆಂಬುದುಂ ಲೆಕ್ಕವೇಱಿಸಿಳಿಸುವಱೊಳಂ (ಪ್ರಭುಪು. ೩–೯). **ಕೞೆ₁** : **೧.** ಅಶುಭ ಕರ್ಮೋದಯದಿನೆನ್ನೊಡವುಟ್ಟಿದರುಂ ತಂದೆಯುಂ ಕೞೆದೊಡೆ (ಚಾವುಂಪು. ೨೬–೪). **೨.** ಅಂತಾಯಿರುಳುಂ ವಿಜಯಂ ವಿಜಯೋದ್ಯೋಗದೊಳ್ ಕೞೆಯೆ (ಪಂಪಭಾ. ೧೦–೪೮ ವ) ; ಕೞೆವನಿಂತು ಪೊೞ್ತಂ ನೃಪಂ (ಕಾದಂಪೂ. ೭೭) ; ಆವರಿರ್ವರುಂ ನಾನಾ ನದೀನದಾಂತರಾಳ ಸಂಪಜ್ಜನಪದಂಗಳಂ ಕೞೆದು (ಸುಕುಮಾ. ೨–೪೫ವ). **೪.** ಕಟ್ಟಿದುದಂ ಕೞೆಯಲಾರ್ಗಮೇಂ ತೀರ್ದಪುದೇ (ಪಂಪಭಾ. ೧೩–೩೦). **೬.** ದ್ವಿಗುಣಿಸಿ ವೃತ್ತಮನದಱೊಳ್ ಬಗೆದೊಂದಂ ಕೞೆದೊಡಕ್ಕುಮಂಗುಲಿಗಳವಂ (ಛಂದೋಂಬು. ೬–೨೬೬) ; ತಿಳಿದೇಶೀಯಮುಮ್ಮೈದಂ ಕೞೆ ನೀಂ . . . ಕ್ಷಾಳನಂ (ಶಮುದ. ೩೩) ; "ರಜತಂ, ರಜಿತಂ, ಉಟಿತಂ . . . ತ್ಯಜಿಸು, ಕೞೆ ಇಂತಿನಿತುಂ ಕೞೆವುದಕ್ಕೆ ಪೆಸರು" (ವ್ಯವಹಾ. ೧೧–೧೨ ವ).

**ಕೞಿದುಕೊಳ್** = ಕಸಿದುಕೊಳ್ಳು ; ಅಪಹರಿಸು : ದೇಗುಲಕೆ ಬಿಟ್ಟ ಕೆಯಂ ಪುವ್ವರ್ಸಿ[ಧ್ಧಾ]ಯ ಕೞಿದು[ಕೊ]ಣ್ಡರಪ್ಪಡೆ ಕವಿಲೆಯುವ ಕೞುವುವನೞಿದರ ಲೋಕಕೆ ಸಲ್ಗು (ಸೌಇಇ. XI–i, ೩೫–೪ ; 933). **ಕೞಿಯೆ** = ವೆಗ್ಗಳವಾಗಿ ; ಅತಿಶಯವಾಗಿ ; ಮಿತಿಮೀರಿ ; ಬಹಳವಾಗಿ : ವಿಯೋಗದಿಂ ನಿಜಜನದಿಂ ಕೞಿಯೆ ಪರಾರ್ಥಿಗಳುಂ ಬಾಯೞಿದು (ಕವಿರಾ. ೨–೨೩) ; ನಿಶಿತ ವಿಕರ್ಣ ಹತಿಯಿಂದಮಸುರಾಂತಕಂ ಕೞಿಯೆ ನೊಂದು (ಪಂಪಭಾ. ೧೨–೨೧೦ ವ) ; ಕೞಿಯೆ ಗಳಪದಿರ್ ನಡೆ (ಪಂಚತಂ. ೨೩೩–೭) ; ಕೂಸು ಕೞಿಯೆ ಬಳೆದುದು . . . ಕನ್ನೆಯುನಿನ್ನಿರಿಸಲಾಗ (ಸುಕುಮಾ. ೭–೭೧) ; ಕಹಳೆ ಮಿಳ್ಳಿಪ ಪೞಯಿಗೆ ಸೂಳೈಪ ತಂಬಟಂ ರಣರಸಮಂ ಕೞಿಱುವರಿಯಿಪಿನಂ (ವರ್ಧಪು. ೮–೪೯).

[ದೇ. ‖ ತಮಿ. ಮಲ. ಕೞಿ ; ತುಳು. ಕರಿ, ಕಳಿ]

**ಕೞಿ₂**, ಕಳಿ₂ (ಕ್ರಿ). **೧.** ಹಣ್ಣಾಗು ; ಮಾಗು ; ಪಕ್ವವಾಗು. 'ಕೞಿಯಲರ್' ಪರಾ. **ಕಳಿ₂**: **೧.** ಹತ್ತಿಯ ಹಣ್ಣು ಕಳಿತಿದ್ದರೇನು (ಸಿದ್ಧೇವ. ೩೨೫) ; ಕಳಿದ ಹಲಸಿನ ಹಣ್ಣು ತೊಳೆಗಳು (ಸೂಪಶಾ. ೫–೫೭) ; ಕಳಿತ ರಸಾಲ ನೇಱಿಲವಣ್ಗಳ ಪಿಕ ಗಿಳಿ ಚಂಚುಪುಟದಿ ಕೆದರ್ಕೆ (ಮೋಹತ. ೫–೨೩). **೨.** ಬಾಡು ; ಬತ್ತು ; ಇಳಿದುಹೋಗು : ನೆಱೆ ಕಳಿತ [ಪಾಠಾಂ. ಕಳಲ್ದ] ಮೆಚ್ಚೆನಲು ನವಿಲು ನರ್ತನಂಗೆಯ್ದುವು (ಹಚಕಾ. ೩–೩೬) ; ಕಳಿದ ತರಣಿಯ ಕಿರಣದಲಿ ದಿನ ಬಲದೊಳಾಯುಷ್ಯಾಭಿವೃದ್ಧಿಯು ಬೆಳವಿಗೆಗಳಹವು (ಕುವ್ಯಾಉ. ೩–೫೫) ; ಕಳಿದ ಪೂಗಳ ತೆಱದಿ ರೇಚಕದೆಲರಿನಿಂದುದುರಿದವು ತಾರೆಗಳು (ಸಾಳ್ವಭಾ. ೨೧–೧೦೪). [ದೇ. ‖ ತಮಿ. ಮಲ. ತೆಲು. ಕನಿ]

**ಕಱಿ₃**, ಕಳಿ₄ (ನಾ). ಚಿಲಕ, ಅಗುಳಿ, ನೊಗ ಮೊದಲಾದವುಗಳ ರಂಧ್ರದಲ್ಲಿ ಜೋಡಿಸುವ ಮರದ ಗೂಟ: ಒಯ್ಕನಾ ನೊಗದೊಳಾ ಕಱಿ ಮುನ್ನೆ ತಗುಳ್ದು ಛಿದ್ರದೊಂದೆಡೆಯೊಳ್ ಮತ್ತೆ ಬಂದು ಘಳಿಯಿಪ್ಪೊಡೆ (ಜೀವಸಂ. ೧೯೪–೨೪). **ಕಳಿ₄**: ಕೆಲವು ಪಯಣದಿಂ ದುತ್ತರ ದ್ವಾರದ ಬಳಿಗೈತಂದು ಚಕ್ರೇಶ ಘಳಿಲಸಾನೆಗಳಿಂದ ತೆಗೆಯಿಸಿ ಬಾಗಿಲ ಕಳಿಯನು ಪೊಱಮಟ್ಟನಾಗ (ಗೋಮಟೇ. ೧೧–೭೯).

[ದೇ. ‖ ತಮಿ. ಮಲ. ಕಱಿ]

**ಕಱಿ₄** 'ಕಳಿ₅' ನೋ.

**ಕಱಿಪು₁**, ಕಳಿಪು, ಕಳುಪು, ಕಳುವು₁, ಕಳುಹು, ಕಱಿಪ್ಪು, ಕಱುಪು, ಕಟ್ಪು (ಕ್ರಿ). ೧. ಕಳುಹಿಸು; ಬೀಳ್ಕೊಡು: ಕಾಳಗ ಕಿಡೆ ರಕ್ಕಸಮಣಿಯು ಕಱಿಪಿ ತನ್ನ ಬಲಮುಂ ಮಾರ್ಬಲಮುಂ ತನ್ನನೆ ಪೊಗೞೆ (ಎಕ. II, ೧೩೮–೫; ಸು. 940); ನಿಜತನೂಜೆಯನಳಿಯನೊಡನೆ ಕಱಿ[ಪಾಠಾಂ. ಱು]ಪುವುದ್ಯೋಗಮನೆತ್ತಿಕೊಂಡು (ಆದಿಪು. ೪–೫೩ ವ); ಆತಂಗೆ ಸಾಲ್ವನಿತು ಪೊನ್ನಂ ಕೊಟ್ಟು ಕಱಿಪಿ (ಧರ್ಮಾಮೃ. ೨–೧೮೧); ಬೆನ್ನನೆ ಭವ್ಯರ್ ಕಱಿಪುತ್ತೆ ಬಂದು ನಿಲೆ (ಪುಷ್ಪಪು. ೧೪–೧೩). ೨. (ಕಾಲವನ್ನು) ಕಳೆ; ನೂಕು; ತಳ್ಳು: ಇಂತೆ ಕಾಲಮಂ ಕಱಿಪುವೆಂ (ಚಾವುಂಪು. ೨೭–೧೭); ಇಂದಿನೊಂದಿರುಳಂ ಕಱಿಪಿ ನಾಳೆ ನಿಮ್ಮ ನೆಗೞ್ವುದಂ ನೆಗೞ್ವುದು (ಗದಾಯು. ೬–೬ ವ); ಕೆಳೆಯನೊಡಗೂಡಿ ಕಾಲಮಂ ಕಱಿಪುವಂತು . . . ಬೆಸಸು (ಕಾದಂಉ. ೬೧೮); ಎರಡುವರ್ಷಂಬರಂ ಧರ್ಮವಿಹಾರಂ ಮೌನವ್ರತದಿಂ ಕಱಿಪಿ (ಅನಂಪು. ೯–೧೧೩ ವ). ೩. ದಾಟು; ಕ್ರಮಿಸು: ಸಂಸಾರ ಸಮುದ್ರಮನುಪಾಯದಿಂ ಕಱಿಪುವುದು (ಧರ್ಮಾಮೃ. ೬–೨೧೧). **ಕಳಿಪು**: ೧. "ಕಳಿಪು – ಅನುಗಮನೇ" (ಶಮುಧಾ); ಮಂತ್ರಮುಂ ಬೆಸಸಿ ಕರುಣಂಗೆಯ್ದು ಕಳಿಪೆ (ಪದ್ಮರಾ. ೩–೧೭). **ಕಳುಪು**: ೧. ನಾನೆ ಸುಯ್ದಾನದಿಂದಂ ಬಂದು ಕಳುಪುವೆಂ (ಇಹರ. ೪೦); ಅಸುಗೀಶನನೊಳ್ನುಡುಕಂ ತರಲೆನುತೊನೆದು ಕಳುಪಿ (ಜಯಕಾ. ೨–೨೯); ನಿಜಸ್ಥಳಕೆ ಶ್ರೀಪತಿಮುಖ್ಯರಂತರಂಗಳನಱಿದು ಕಳುಪಿ (ಚಬಪು. ೨–೧೪). **ಕಳುವು₁**: ೧. ಅಕ್ಕರೆಯ ಮುದ್ದಣನು ನಿನಗೊರೆದು ಕಾದಿರನೆ? ರೊಕ್ಕ ಇಲ್ಲದೆ ಎಂತು ಕಳುವುದಿರಲಮ್ಮಾ? (ಕಎಪು. ೩೩೮); ಹೆಣ್ಣುಮಗಳನು ಕಳುವಿ ಕಣ್ಣೀಗೆ ನೀರ ತಂದು ನಿಂ[ತಾ]ಳು (ಜಗೀತೆ. ೮೯); ಹೇಳಿ ಕಳುವಿದರೆ ಬರುವೊಲ್ಲ ಮಲ್ಲಿಗೆ ಮಾಲೆ ಕಳುವಿದರೆ ಮನಸಿಟ್ಟ (ನಾಪದ. ೧೩). **ಕಳುಹು**: ೧. ಹಸೆಯ ಮೇಲಣ ಮೂತ ಬೆಸಗೊಳಲಟ್ಟಿದಡೆ ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು (ಮಹಾದೇ. ೭–೫); ನಾಯ ಕೊಲ್ಲದೆ ಕಳುಹಿದರೆ ಬೆಂಬಿಡನಲಾ ಮಱು ಕೊಳಿಸಿ (ಕುವ್ಯಾಕ. ೧೩–೩೧); ಕದನಕ್ಕೆ ಕಂದನ ಕಳುಹಬಹುದೇ (ತೊರರಾ. ೧–೯–೩೪). ೪. ಸಾಗಿಸು; ರವಾನಿಸು: ಸರಕನ್ನು ರೈಲಿನ ಮೂಲಕ ಕಳುಹುವರು (ರೂಢಿ). **ಕಱಿಪ್ಪು**: ೧. ಮಱೆವೊಕ್ಕೊನಂ ಕಾದು ಕಱಿಪ್ಪಿ ವೈರಿಬಲಕ್ಕೆ ಇದಿರನ್ನಡೆದು ಸತ್ತು (ಎಕ. XI, ಚಳ್ಳಕೆ. ೬–೩; ಸು. 925). **ಕಱುಪು**: ೧. ಬೆಸನನಿರ್ಮೆ ಕೇಳದಂತು ಪೂಣಿಸಿ ಕಱುಪಿ (ಆದಿಪು. ೧೩–೮೦ ವ); ಅವ ಜಾತಿ ಪೆಸರೇನೆಂಬುದಂ ಬೆಸಗೊಂಡು ಬಾಯೆಂದು ಪಾಯಸಮಂ ಕಱುಪಲ್ (ಪಂಚತಂ. ೧೪೦–೧೧). ೨. ಏಱು ದಿವಸಮುಂ . . . ರಸಾಯನಾಸ್ವಾದನದೊಳ ಮುತ್ತಾನಶಯ್ಯೆಯೊಳಂ ಕಱು[ಪಾಠಾಂ. ಱಿ]ಪಿ (ಆದಿಪು. ೫–೪೧ ವ). **ಕಟ್ಪು**: ೧. ವೈರಿದೂತನಂ ಭೇದಿಸಿ ವಸ್ತ್ರಮಾಭರಣ ಲೇಪನವಾದಿ ಸಮಸ್ತ ವಸ್ತುವಂ ವೇದಸಿ ಕಟ್ಪಿ ವೈರಿ ಗಡಿಯಂ ಭರದಿಂ ಪೊಱಮಟ್ಟು ಬಂದು (ಸೂಕ್ತಿಸು. ೧೭–೫೭).

[ಕಱಿ₁ + – ಪು₁. / ತಮಿ. ಕಱಿಪ್ಪು]

**ಕಱಿಪು₂** (ನಾ). ೧. ಕರೆ; ಕಳಂಕ; ದೋಷ: ಕಱಿಪಂ ತಂದು ನಿಂಕಮಿಕ್ಕಱಿಪಂ ಕಳಿವಂ ಚಲ ಕಱಿಪಂ ಕಂಜನೇತ್ರ × × ಕಱಿವಂ ಬಱಿಕಾತನಂ (ಕವಿರಾ. ೨–೧೨೯). ೨. ಕೀಳಾದುದು; ಕಳಪೆ: ಆ ರೂಪಿನ ಪೆಂಡಿರಿಂತು ಕಱಿಪಾ[ಪಾಠಾಂ. ಬಾ]ದೊಡೆ ಚಿಃ ಕೂರಿಸುವ ಕೂರ್ಪ ಮಾತಂ ಮಾರಿಗೆ ಕುಡು ಸಿರಿಯನೊಲ್ಲ ಸುಡು ಹೋಗು (ಯಶೋಚ. ೨–೬೩).

[ದೆ. ‖ ತಮಿ. ಮಲ. ಕಱಿಪ್ಪು]

**ಕಱಿಪೊಱೆ** (ನಾ). ಒಂದು ಹೊಳೆಯ ಹೆಸರು: ಎಳಗೊವನೂರ ಬಡಗಣ ಸೀಮೆಯುಳ್ ಕು(ಕೂ)ಡಿ ದಕ್ಷಿಣಸ್ಯಾನ್ದಿಸಿ(ಶಿ) ಕ(?)ಱಿಪೊಱೆ ಕ್ಕಾಲ್ ತೆನ್ನೆ(ನ್ನೊ)ಱ್ಪೆ (ಇಅ. XVIII, ೩೬೭–೨೩; 8ನೆಯ ಶತ).

[ಕಱಿ ? + ಪೊಱೆ₁]

**ಕಱಿಪ್ಪು** 'ಕಱಿಪು₁' ನೋ.

**ಕಱಿಯಲರ್** (ನಾ). ಹಳೆ ಹೂ; ಬಾಡಿದ ಹೂವು: ಕಱಿಯಲರಾದ ಸಂಪಗೆಯ ಬಣ್ಣದವೋಲೆ ಬೆಳರ್ತ ಬಣ್ಣದೊಳ್ (ಪಂಪಭಾ. ೪–೬೬).

[ಕಱಿ₂ + ಅಲರ್₂]

**ಕಱಿಯುಣ್** (ಕ್ರಿ). ಹೆಚ್ಚಾಗಿ ಊಟಮಾಡು; ಚೆನ್ನಾಗಿ ಉಣ್ಣು: ಮಾಜನಂಗಳ್ ಕಱಿಯುಂಡಾಪೋಚಿಪಲ್ಲಿ ನೆನೆದುದು ತನ್ನಂ (ಯಶೋಚ. ೩–೫೧).

[ಕಱಿ₁ + ಉಣ್]

**ಕಱಿಯೇಱು** (ಕ್ರಿ). ತೀವ್ರವಾದ ಗಾಯ; ತೀಕ್ಷ್ಣವಾದ ಹೊಡೆತ: ಕಱಿಯೇರ್ಪೆತ್ತಿಭವೈರಿಯು ನೆಱಿಕೆ ಶಿರಂ ಮಾಱ್ಪವೋಲವಂ ಮುಳಿಯಿಸೆ (ಶಾಂತಿಪು. ೭–೬೧).

[ಕಱಿ₁ + ಏಱು₄]

**ಕಱಿಯೋದು** (ಕ್ರಿ). ಪೂರ್ತಿ ಓದು; ಸಾಂಗವಾಗಿ ಓದು; ಓದಿನಲ್ಲಿ ಪಾರಂಗತನಾಗು: ಪಱಗಾಂಪರ ನುಡಿ ಮುತ್ತುಂ ಮೆಱಸುಂಗೋದಂದದಕ್ಕೆ ಭಾಷ್ಯಮನೊರ್ವಂ ಕಱಿಯೋದಿದಾತನಲ್ಲದೆ ಬಱಿವಱಿಯಿಂ ಬಂದು ಬರೆಯಲಾಗದಗಣ್ಯಂ (ಶಾಂತಿಪು. ೧೦–೧೮೧).

[ಕಱಿ₂ + ಓದು₁]

**ಕಱಿಲೆ**, ಕಣಿಲೆ, ಕಳಲು₃, ಕಳಲೆ, ಕಳಿಲು, ಕಳಿಲೆ (ನಾ). ೧. ಬಿದಿರಿನ ಮೊಳಕೆ, —ಕುಡಿ: "ಕಱಿಲೆ = ಬಿದಿರ ಕುಡಿ" (ಶಮುದ. ಪರಿ. ೧); ನೀನಿಂದು ಕಱಿಲೆಯಂ ತಿಂದ ಪಸುವಿನಂತಾನುಂ . . . ಮೆಯ್ಯಱಿಯದೆ (ಧರ್ಮಾಮೃ. ೬–೧೧೭); ನಳನಳಿಸುವ ಮೆಣಸಿನ ಕರೆ ಹುಳಿಯಲ್ಲಂ ಬಿದಿರ ಕಱಿಲೆಯೇಲಕ್ಕಿಯಕಾಯ್ (ನಳಚಂ. ೪೬೩); ನಿಡುಗಱಿಲೆಯ ಮೊನೆಯುರ್ಚಿದ ಜಡಧರಮೆಸೆದುದು (ಶಬಶಂ. ೩–೩೭); ಮುಂಗಾರ ಮೊಱಗಿನತ್ತಣಿಂ ಪೊಡೆಗಿಡುವೆಳಕಱಿಲೆಯೆನೆ (ರಾಮಾಶ್ವ. ೨೪–೨೩). **ಕಣಿಲೆ**: ೧. ಕಣಿಲೆ ಮಾಗುಳಿ ನಾಳಿ ಕಳಿಂಗವರೆಗೋಳಿಗುಂಪಸಲೆಗಳಂ ಮೂಲಂಗಿಯಿಂಗು ಕತ್ತುರಿಬಾಳೆಯದಿಂಡಲ್ಲ ಬೆಲ್ಲವತ್ತಂ (ಶಾಸ್ತ್ರಟೀ. ೫೩–೫); ಗೋರಿಲ್ಲ ಕಪಿಯು ಸಹ ಸಾಮಾನ್ಯ ಸಮಯದಲ್ಲಿ ಬಿದಿರು ಕಣಿಲೆಗಳನ್ನು ಮುರಿದು ಜೀವಿಸುವುದು (ಬಾಲಪ್ರ. III, ೧೭೪೦). ೨. ಎಳೆಯ ಕೂಸು: ಕಣಿಲೆಯ ಕೈಯಲ್ಲಿ ಕೊಟ್ಟ ಕಲ್ಲಿನಂತೆ (ಮೋಳಿಮಾ. ೫೬–೨೩೪). **ಕಳಲು₃**: ೧. ಎಳೆಯ ಬಾಳೆಯ ಹೊಡೆಯ ಕುದಿಸಿಯೆರಡಾಗಿ ಸಂಬಳಿಸಿ ಕದುಕಿಱಿದು ಮೆಣಸುಪ್ಪುಳ್ಳಿ ಹಸಿಯಲ್ಲ ಕಳಲು ಹುಣಿಸೆಯ ಹಣ್ಣ ಕಲ್ಕವಂ ಮಾಡಿ (ಸೂಪಶಾ. ೪–೫೨). **ಕಳಲೆ**: ೧. ಇದು ಕಳಲೆ ಸುಗ್ಗಿ, ನಾಳೆ ಕಳಲೇ ಪಲ್ಯ ಮಾಡಿ ರೊಟ್ಟಿಸುಡ್ತೇವೆ (ಬೆಳುಮ. ೨೫೭). **ಕಳಿಲು**: ೧. ಕೊಳಲಾಗಬಹುದಿತ್ತು, ಕಳಿಲಿದ್ದಾಗಲೇ ಕಡಿದ ಕಾಳ (ಉಯ್ಯಾಲೆ. ೮೭–೪). **ಕಳಿಲೆ**: ೧. ಕಳಿಲೆಯ ನಖದಲಿ ಚಿವುಟಲಹುದು ಮುಂದೆ ಲಳಿಗೆ ಕೂರುಗುರಿಗಂಜುವುದೇ (ಮೋಹತ. ೧೧–೧೩).

[ದೇ. ‖ ತಮಿ. ಕಱ್ಪೈ; ಮಲ. ಕಯುಲ್ಪ; ತುಳು. ಕಣಿಲೆ; ಪರ್ಜಿ. ಕಳೀರ. / ಪ್ರಾ. ಕರಿಲ್ಲ]

**ಕಱಿವಣ್**, ಕಳಿವಣ್, ಕಳಿವಣ್ಣು (ನಾ). ೧. ಚೆನ್ನಾಗಿ ಮಾಗಿದ ಹಣ್ಣು ; ಪಕ್ವಫಲ : ಗಿಳಿವಿಂಡುಗಳ್ ಕಱಿವಣ್ಗಳಂ ಕರ್ದುಂಕೆ (ದಶಕು. ೬-೨೫ ವ). ೨. ಇಳಿದು ಹೋದ ಹಣ್ಣು ; ಕೊಳೆಯುವ ಸ್ಥಿತಿಗೆ ಬಂದ ಹಣ್ಣು : ಫಳವೆಂದುಂ ಕಱಿವಣ್ಣಳಾಗವಲರೆಂದುಂ ಬೀಯುವು (ಜಗವಿ. ೨-೧೬). **ಕಳಿವಣ್** : ೧. ಕಳಿವಣ್ಗಳ ತಿನತೊಡಗಿದರು (ಮೋಹತ. ೧೯-೫೪) ; ಅವಗಂ ಕಳಿವಣ್ಗಳಿಂ ಕಣ್ಗೊಳಿಪ ಪಣ್ಮರಂಗಳಿಂ (ಅದ್ಭುತ. ೧-೧). **ಕಳಿವಣ್ಣು** : ೧. ಕಟ್ಟಿದಿರ ಕಳಿವಣ್ಣುಗಳ ಕಡಲಿಟ್ಟು ಸುರಿವ ಸುಧಾರಸದ ಹೊಂಗಟ್ಟುಗಳ ಫಲಭೂಜರಾಜಿಯ ಕಿತ್ತನಾ ಹನುಮ (ತೊರರಾ. ೫-೪-೫) ; **ಪೊಳೆವ ಪೊಂಬಾಳೆಯ** ಕಂಬ ಚೌದೆಸೆಯೊಳು ಕಳಿವಣ್ಣು ಸಹಿತೊಪ್ಪುತಿರಲು (ಕಂನವಿ. ೨೦-೩೧).

[ಕಱಿ₂ + ಪಣ್₃]

**ಕಱಿವದ**, ಕಳಿವದ (ನಾ). ೧. ಇಳಿವೊಗದ ಸ್ಥಿತಿ ; ಇಳಿದು ಹೋದ ಸ್ಥಿತಿ : ಕಱಿವದನಾದ ಬಾಸರ ಬಿಸಿಲ್ ತೆರೆಯಂತಿರೆ (ಅನಂಪು. ೭-೬೪). ೨. ಚೆನ್ನಾಗಿ ಮಾಗಿದ ಸ್ಥಿತಿ ; ಕಳಿತಸ್ಥಿತಿ : ಕಱಿವದನಾದ ಮಚ್ಚು... ಬೇಟದಿಂ ಪಱಿದಱಿನಣ್ಪಿನೊಳ್ ತೊಡರ್ದು ನೇಲ್ವವನೆಗ್ಗಿನ ಸುಗ್ಗಿಯಲ್ಲನೇ (ಸೂಕ್ತಿಸು. ೮-೩೯೪). **ಕಳಿವದ** : ೨. ಜಗುಳ್ದು ತಾವೇ ಬೀಳ್ವ ಕಳಿವದದ ಪಣ್ಗಳಿಂ (ಪದ್ಮರಾ. ೮-೩೫) ; ಕಳಿವದದಲೊಡೆದಿರ್ದ ಪಣ್ಗಳ ತಿಳಿರಸದೊಳೊಡಗೂಡಿ ಭೋರೆಂದುಲಿವ ನಿರ್ಝರವಾಹಿನೀ ತೀರದ ವನಂಗಳನು (ಉತ್ತರಾ. ೧೧-೨೫).

[ಕಱಿ₂ + ಪದ₁]

**ಕಱಿವು**, ಕಳಿವು₁ (ನಾ). ೧. ಸಾವು ; ನಾಶ ; ಅಂತ್ಯ : ಕಱಿವುಱಿವುಂ ಕಾವುಂ ಮೇವುಂ ತೋಡುಂ ಬೀಡುಂ (ಪಂಪಭಾ. ೫-೪೩ ವ) ; ಉಱಿವು, ಕಱಿವು ಎಂಬಿವು ಭಾವವಾಚಿಗಳ್ (ಶಮದ. ಪರಿ. ೧). ೨. ಸೋಲು ; ಪರಾಭವ : ಪರಶುರಾಮನಿನಾ ರಘುರಾಮನಿಂ ಸರಿತ್ಪತಿ ಕುವರಂಕ ರಾಮನಿನದೇಂ ಕಱಿವಾದುದೊ ಮೂಱು ಸೂಱಿೊಳಂ (ಗದಾಯು. ೧-೨೪). **ಕಳಿವು₁** : ೧. ನದೀಸುತನಳಿವಿನಲಿ ಗುರು ಕರ್ಣ ಶಲ್ಯರ ಕಳಿವಿನಲಿ ಕಟ್ಟಳಲ ಬಹಳಾಭ್ಯಾಸಿ ನೀನು (ಕುವ್ಯಾಶ. ೧-೫). ೨. ವಿವೇಕದ ಕಳಿವು ಚಿತ್ತದ ಸೆಱೆ ದುಹಾರದೊಳಿಳಿದವಕ್ಕಿಗಳಂತು ಸೋತೆನು ತಂದೆ ಕೇಳು (ಕುವ್ಯಾಸ. ೧೨-೩೬).

[ಕಱಿ₁ + -ವು]

**ಕಱಿವೂ** (ನಾ). ಬಾಡಿದ ಹೂ ; ಬಾಡಿ ಕಳಲಾದ ಹೂ : ಪೂಮರದಿಂ ಕಱಿವೂಗಳತ್ತಮಿತ್ತಂ ಕವಿದಲ್ಲಿ ಮೆಲ್ಲನುಗೆ (ಆದಿಪು. ೧-೬೧) ; ಕಣ್ಬ ನಿವಱಿಯಂ ಕಱಿವಂತಿರೆ ಕಱಿವೂಗಳಿನುಱೆ ಬೀತುವು (ಜಗವಿ. ೪-೫) ; ಇನಿಯಳ್ ಪೋದ ಬಱಿಕ್ಕಮೆನ್ನಿರವು ... ಸುಗಂಧಪೋದ ಕಱಿವೂ ವಿರ್ಪಂತೆ (ಅನಂಪು. ೧೨-೨೪) ; ಕಱಿವೂವನುಱಿವ ತುಂಬಿಪೊಲಳಿ ಕುಂತಳೆ ಪೊಜಗೆ ನೂಂಕಿ ಕಳೆದಳ್ (ದಶಕು. ೮-೮೬) ; ಒಳ್ಪಾಸಿಗಂ ಕಱಿವೂಪಾಳ್ದಿ ಕಟಿಲ್ದುಬೀಱಿಯುಡೆನೂಲ್ ಪಚ್ಚೊರ್ಂದೆ ಪೊನ್ನೇವುರಂ ಕಳನಾದಂಗೊಳೆ ಪೊಂಗಿ ಸಿಂಗರವುಯಿಲ್ಗೊಂಡೊಂದುವೇಂ ಗಲ್ಲಮುಂ (ಅಪ್ರತಿ. ೧೭-೨೧). [ಕಱಿ₁ + ಪೂ₂]

**ಕಱಿವೊಡಲ್** (ನಾ). ಸಾಯುವ ದೇಹ ; ಬಿದ್ದು ಹೋಗುವ ಶರೀರ : ಕೆಂಬಲ್ಲನೊಸೆದು ರಸದಾಳಿಂಬದ ಬಿತ್ತೆಂದು ಪೊಗಟ್ವ ಕವಿಗಳ ಮಾತಂ ನಂಬಿದೆನಲ್ಲದೊಡೇಂ ಗಡ ತಿಂಬುದೆ ಕಱಿವೊಡಲೊಳಿಱಿಗಿ ಖಳಕಾಲ ಶುಕಂ (ಕಾವ್ಯಸಾ. ೧೧೩೬).

[ಕಱಿ₁ + ಒಡಲ್]

**ಕಱುಪು** 'ಕಱಿಪು₁' ನೋ.

**ಕಱಿ₁** 'ಕಱು₁' ನೋ.

**ಕಱಿ₂**, ಕಳ್ಕೆ (ನಾ). ೧. ಬಿದಿರಿನ ಕೊಳವೆ ; ಕೊಳಲಿನಂತಿರುವ ಒಂದು ವಾದ್ಯ. ೨. ವೀಣೆಯ ಒಂದು ಭಾಗ (?) : ತನ್ನೆಡಗೈಯನೆ ನೇತ್ರವಟ್ಟಿಗೆಯೊಳ್ ಪುಗಿಸಿ ನಿರಂತರಂ ಕಱಿಯ ನೇಣನಣಂ ಬಲಿದೊತ್ತಿ ಹಸ್ತದೊಳ್ (ಧರ್ಮಪು. ೨-೨೧) ; ಸುಘೋಷೆಯೆಂಬ ವೀಣೆಯಂ ಕೊಂಡು ಕಱಿಯನಳವಡಿಸಿ ತಂತ್ರಿಯಂ ಸುತಂತ್ರಂ ಮಾಡಿ ಶವಣೆಯೆಂಬ ಪವಣಱಿದು ಪೊಯ್ದು (ಮಹಾನೇ. ೫-೧೪ ವ) ; ಕಱಿಯಂ ನೂಂಕಿ ಸಮಾನದಂಡಿಗೆಗಳಂ ಪೊಯ್ದು... ಬೀಣೆಯನೊಲ್ದು ಬಾಜಿಸಿದಳ್ (ಬಾಧಪು. ೬-೮೬). **ಕಳ್ಕೆ** : ೧. ಇನ್ನೀ ದಣ್ಣದೊಳಂ ಕವತ್ರೆಯೊಳ ಪುತ್ರಿಕದ್ರವ್ಯದ ದಶವಂದದೊಳಂ ಪುಟ್ಟಿದ ದ್ರವ್ಯಮುಮಂ ಕಳೆ ಮದ್ದಳೆಯ ಪಣಮುಂ ದೇಯಿಂಗೆಱಿಗೆ (ಎಇ. XX, ೬-೪೧ ; 1012).

[ದೇ. ॥ ತಮಿ. ಕಟ್ಟೈ ; ಮಲ. ಕಟಿ]

**ಕಱ್ಕನೆ**, ಕಕ್ಕನೆ, ಕಳ್ಕನೆ, ಗಕ್ಕನೆ, ಗಱ್ಕನೆ (ಅ). ಒಮ್ಮೆಲೆ ; ಇದ್ದಕ್ಕಿದ್ದಂತೆ ; ಚಕ್ಕನೆ ; ಒಮ್ಮಿಂದೊಮ್ಮೆಲೆ ; ಆಕಸ್ಮಿಕವಾಗಿ : "ಕಱ್ಕನೆ ಆಕಸ್ಮಿಕಂ" (ಶಮದ. ಪರಿ. ೧) ; "ಪವ್ವನೆಂದು ಕಱ್ಕನೆಯೆ ನುತ್ತೀ ಪರಿಯೊಳು ಸಿರೆ ... ಅಕ್ಕುಮಾಕಸ್ಮಿಕಮುಂ" (ಕವಿಕಂ. ೧೩೩) ; ಆ ಪೊಲೆಯನ ಬಾಯ ತುದಿನಾಲಗೆಯೊಳ್ ಕಱ್ಕನೆ ಉಱದ ಶ್ರೀ ರಾಮಧ್ಯಾನಂ... ನೆಗೆಱ್ದುದು (ರಾಮಾಶ್ವ. ೮೦-೧). **ಕಕ್ಕನೆ** : ಸಿದ್ಧಸಾಧಕರ ತಂಡ ಕಕ್ಕನೆ ಕಂಡು ಕೌತುಕಂಗೊಂಡು (ಮದೇಪು. ೩೧-೧೫). **ಕಳ್ಕನೆ** : ಗಿಳಿ ಕಂಡೊಱಲ್ದು ಬಂದಾ ಕಯ್ಯ ತೆನೆಗೆಱಗೆ ಮಾನಸವರಲ್ದು ಕಳ್ಕನೆ ಪಿಡಿದು ಕುಱುಕನೀವುತೆ ಬಿನದಿಸುತ್ತಿಸದಳು (ಪದ್ಮರಾ. ೮-೧೬) ; ಆನೆದಲೆಯ ನೆತ್ತರ್ಪುದಿದ ಮುತ್ತಂ ದಾಳಿಂಬ ಬೀಜಂಗೆತ್ತಿ ಕಳ್ಕನೆ ಮುಕ್ಕಲೊಡನೆ ಪಲ್ಗಳ್ ಮುಕ್ಕುವೋಗೆ (ರಾಜಶೇ. ೫-೫೫ವ). **ಗಕ್ಕನೆ** : ಶೋಣಿತಪುರಕೆ ಗಕ್ಕನೆ ಬಂದು (ಮೋಹತ. ೩೧-೩೦) ; ದೂಳಿಗೋಟೆಯ ಗಕ್ಕನೆ ಕೊಂಡರು (ಕಂನವಿ. ೧೧-೫) ; ನಕ್ಕಾಡರೆ ನಿನ್ನ ಸರಿಯರ ಮಕ್ಕಳು ಗಕ್ಕನೆ ಬಾರೆಂಬಳರಸ (ಚಂಪ್ರಸಾಂ. ೧೦-೧೧೬) ; ಅಕ್ಕಾನ ನೆನೆದರೆ ಗಕ್ಕನೆ ಪದ ಬರಲಿ (ಹಳ್ಳಿಬಾ. ೧೦). **ಗಱ್ಕನೆ** : ಗಱ್ಕನೆ ಕೊಳೆ ಕಡುಗಂಪಿನೊಳಟ್ಕಮೆ ಗೊಳಗಪ್ಪವೆಂದು ಮಧುಪಂಗಳ್ (ಆದಿಪು. ೧೧-೧೧೯) ; ಬಾಯೊಳಿಡದ ಮೊಸಜನವಳ ಮೊಗದೊಳ್ ಮುಕ್ಕುಳಿಸೆ ಕಣ್ಮುಚ್ಚುವುದುಂ ಗಱ್ಕನೆ ತಱಿಗೆಯ್ದು (ಚಕವಂ. ೯೫-೧೫) ; ಭಯತ್ರಸ್ತೆಯಪ್ಪ ಹದಿಬದೆಯ ಬಸಿಱಿಂ ಗಱ್ಕನೆ ಗರ್ಭಂ ಸೋರ್ದು (ರಾಮಾಶ್ವ. ೬೫-೧). [?]

**ಕಱ್ಕು** (ಕ್ರಿ). ಹೆದರು ; ಭಯಪಡು (?) : ಅಱುಗಿ ನೆಳಿಯಂಮ್ಮಿನೆಱಗಿ ಕಱ್ಕದೆ ತಳ್ತು ಮಱುವಕ್ಕಮಾದ ನೃಪರ್ಕಳನ್ (ಎಕ. VIII, ಸೊರಬ. ೨೨-೯ ; 800). [?]

**ಕಱ್ಕುಡಾಗು** (ಕ್ರಿ). (?) ಪಿರಿಯಾನ್ಗಳ್ಪಾನ್ನರೆದೊನ್ ಅವ x x x ಕಱ್ಕುಡಾದೊಂಗಂ ಅದುವೆ (ಎಕ. XIV, ತಿರುಮ. ೨೫೨-೧೦ ; ?). [?]

**ಕಱ್ಕೆ** (ನಾ). ಹೆದರಿಕೆ (?) : ಅಱ್ಕೆ, ಬಿಱ್ಕೆ, ಕಱ್ಕೆ, ಎಱ್ಕೆ (ಶಬ್ದಾನು. ೧೪೦ ವ್ಯಾಖ್ಯಾ). [<ಕಱ್ಕು]

**ಕಱ್ಗನೆ** 'ಕರ್ಗನೆ' ನೋ.

**ಕಱ್ಗು₁** 'ಕರ್ಗು' ನೋ.

**ಕಱ್ಗು₂** (ನಾ). ಕಪ್ಪು ; ಕಂದುಬಣ್ಣ. 'ಕಱ್ಗನೆ' ಪರಾ. [< ಕರ್ಗು]

**ಕಱ್ಗೊಲೆ**, ಕಗ್ಗೊಲೆ, ಕಳ್ಗೊಲೆ (ನಾ). ೧. ಭೀಕರವಾದ ಕೊಲೆ ; ಭಯಂಕರ ಕೊಲೆ ; ಕ್ರೂರವಾದ ಕೊಲೆ. 'ಕಱ್ಗೊಲೆಗೊಳ್' ಪರಾ. **ಕಗ್ಗೊಲೆ** : ೧. ತಳಿತ ಮಱವೆಯ ಪಾಳೆಯದ ಕಗ್ಗೊಲೆಗೆ ಕವಿವ ಗುರೂಪದೇಶಾವಳಿಯವೊಲು (ಕುವ್ಯಾದ್ರೋ. ೧೭-೧೨) ; ಪಾಂಡವ ಸೇನೆಯನು ಕಗ್ಗೊಲೆಯೊಳಗೆ ಕೊಲಲೇನು (ಕುವ್ಯಾಗ. ೯-೭) ;

ಆ ಚೋರಂ ಕಗ್ಗೊಲೆಯಿಂ ತಂದಪೆನರ್ಥಮನೆನುತ (ಜಯಕಾ. ೧೩-೩೯); ಇವೆ ಬಂದೆವು ಕಗ್ಗೊಲೆಗೆಚ್ಚರಿನೊಳಗಿದಿರಾಗೆಂದರಿಗಳ್ಗೆ ಮುದದಿಂದ ದೂತರನಟ್ಟೆ (ಕಂನವಿ. ೧೫-೨೨). **೨.** ತಾಳಲಾಗದ ಹಿಂಸೆ, —ಪೀಡೆ: ಕುಸುಮಾಯುಧನ ಕಗ್ಗೊಲೆಯ ಕಳಚುವುಪಾಯವನು ನೀ ಬಲ್ಲೆ (ಕುವ್ಯಾಅ. ೯-೩೨); ಕಗ್ಗೊಲೆಯ ಕಾಮನ ಕೈಮೆಯನು ಕಳಲಿಸು ಕಟಾಕ್ಷದ ಕರುಣ ಭಾವದಲಿ (ತೊರರಾ. ೩-೪-೧೭); ಹಾಡು ಹಗಲಲ್ಲೆ ಕಗ್ಗೊಲೆ (ನಡೆದಾ. I, ೩೭೭). **ಕಳ್ಗೊಲೆ:** **೧.** 'ಕಳ್ಗೊಲೆಗೊಳ್ಳು', 'ಕಳ್ಗೊಲೆವೊಯ್' ಪರಾ.

[< ಕಡಿದು + ಕೊಲೆ$_2$]

**ಕೞ್ಗೊಲೆಗೊಳ್,** ಕಳ್ಗೊಲೆಗೊಳ್ಳು (ಕ್ರಿ). ಸಾಮೂಹಿಕ ಕೊಲೆ ಮಾಡು; ಕಗ್ಗೊಲೆಮಾಡು: ಇಂತಿವರ್ ಕೞ್ಗೊಲೆಗೊಳ್ವನಂ ಕೋಂಟೆ ಕಿಱಿದುಮಗಱಿಸಿದುಮಾದುದಱಿಂ ಬೆದಱುವ (ಚಿಕವಿ. ೨-೪೪). **ಕಳ್ಗೊಲೆಗೊಳ್ಳು:** ಆ ಕೋಣೆಗೆ . . . ಲಗ್ಗೆಯೇರುವುದಾಗಲಿ, ಕಳ್ಗೊಲೆಗೊಳ್ಳುವುದಾಗಲಿ ಪ್ರಥಮತಃ ಆಗದು (ಬೆಟ್ಟಅ. ೪೫-೧).

[ಕೞ್ಗೊಲೆ + ಕೊಳ್$_1$]

**ಕೞ್ಚಿಸು** (ಕ್ರಿ). ತೊಳೆಯಿಸು: ಸೋಮಸಿಂಘ ಭಳಾರರ ಕಾಲಂ ಕೞ್ಚಿಸಿ (ಸೌಇಇ. IX-i, ೮೦-೨೫; 1018). [ಕೞ್ಚು + -ಇಸು$_3$]

**ಕೞ್ಚು,** ಕಚ್ಚು$_2$, ಕರ್ಚು$_2$, ಕಳ್ಚು (ಕ್ರಿ). ತೊಳೆ; ನೀರು ಹಾಕಿ ಸ್ವಚ್ಛಮಾಡು; ಪ್ರಕ್ಷಾಲಿಸು: ಇೞ್ನೂರ್ವೊ(ರ್ವ)ರುಂ ಕಾಲಂ ಕೞ್ಚಿ (ಇಅ. XII, ೨೧೯-೭೦; 814); ಮಹಾಜನ(ಅ)ಐವ[ದಿ]ನ್ಬ×[ಕಾ]ಲಂ ಕೞ್ಚಿ (ಸೌಇಇ. XI-i, ೧೩-೧೧; 869); ಕೂಚಿಭಟ್ಟಾರರ ಕಾಲ ಕೞ್ಚಿ ಧಾರೆಯನೆಱೆದು (ಎಕ. IV, ಚಾಮರಾ. ೧೮-೧೬; ಸು. 1000 ?). **ಕಚ್ಚು$_2$:** ದೇವಸಿಂಗಜಿಯರ ಪದಯುಗ್ಮಮಂ ಪಡೆದು ಕಚ್ಚಿದರರ್ತ್ಥಿಯೆ ಪುಣ್ಯಮೂರ್ತಿಗಳ್ (ಸೌಇಇ. XX, ೪೮-೫೮; 1076 ?); ಕನಕಸೇನ ಭಟ್ಟಾರಕ ದೇವರ ಕಾಲಂ ಕಚ್ಚಿ ಧಾರಾಪೂರ್ವಕಂ ಮಾಡಿ (ಕಇಅ. ೪೧-೫೮-೧೮; 1087); ತ್ರಿಭುವನ ಸಿಂಗಿ ಪಂಡಿತರ ಕಾಲಂ ಕಚ್ಚಿ (ಎಇ. XIX, ೧೯೨-೨೭; 1121). **ಕರ್ಚು$_2$:** ಮೆಯ್ಯ ಮಳಮೆಲ್ಲಮಂ ಕರ್ಚಿ ಕಳೆದು (ವಡ್ಡಾರಾ. ೧೧೭-೭); ಪುಳಿಯೊಳ್ ಕರ್ಚಿದ ಬಾಳ ಬಣ್ಣಮನೆ ಪೋಲ್ವಾಕಾಶಂ (ಪಂಪಭಾ. ೭-೭೧); ತನ್ನ ಮೆಯ್ಯೊಳ್ ಕೆನ್ನೆಯ್ಸಿದ ಕೆನ್ನೆತ್ತರಂ ಕರ್ಚಿ ಕಳೆದು (ಗದಾಯು. ೬-೧೩ ವ); ಸಮಚಿತ್ತಮೆಂಬ ಜಲದಿಂ ಸಮಸ್ತ ದುರಿತೌಘಪಂಕಮಂ ಕರ್ಚದೆ ವಿಕ್ರಮದಿಂ ತೊಳೆವಡೆ (ಪರಮಾ. ೬೨-೧೧೨). **ಕಳ್ಚು:** ಇಂದ್ರಶಕ್ತಿಪಂಡಿತದೇವರ ಕಾಲಂ ಕಳ್ಚಿ ಧಾರಾಪೂರ್ವಕಂ ಮಾಡಿ (ಸೌಇಇ. IX-i, ೨೭೯-೨೧; 1186).

[ದೇ. ‖ ತಮಿ. ಕೞುವು; ಮಲ. ಕೞುಕು; ಕೊಡ. ಕತ್ತ್; ತೆಲು. ಕಡುಗು, ಕಡು, ಕಡುವು; ಮಲ್ತೊ. ಕಜೆ]

**ಕೞ್ಚಾತ** (ನಾ). ಒಬ್ಬಾತನ ಹೆಸರು: ಕಮಣ್ಣಲಿಯ ಪೇರಮರಸರು . . . ಪಸುಂಗಾಯ ಕೞ್ಚಾತರು ಬಿರದರುಂ ಇ ಪೊಲನಂ ನಡಯಿಸಿ ದೋರ್ (ಎಕ. XVI, ಗುಬ್ಬಿ. ೭೫-೫೮; 733). [?]

**ಕೞ್ತಲಿಸು,** ಕತ್ತಲಿಸು, ಕರ್ತಲಿಸು, ಕಳ್ತಲಿಸು (ಕ್ರಿ). **೧.** ಕತ್ತಲೆಯನ್ನು ಉಂಟುಮಾಡು; ಕತ್ತಲೆ ಕವಿಸು; ಕತ್ತಲೆಯಾಗು; ಕಪ್ಪಾಗು: ಕಾಯ್ದುಱುಗಲಂ ಪೇಱಿರ್ದ ಚೆಂದೆಂಗು ಕೞ್ತುಸುತಿರ್ಪಲೆವಳ್ಳಿ (ಆದಿಪು. ೧-೬೭): ಚಿಂತಾಸಂತಾಪದೊಳ್ ದಿಗಂತಮೆಲ್ಲಂ ಕೞ್ತಲಿಸಿದುದೆಂಬಂತೆ ಕೞ್ತಲೆ ಕವಿಯೆ (ಕಾದಂಉ. ೩೪೮); ಕೞ್ತಲಿಸುವ ರಾತ್ರಿಯೊಳ್ ಕಾಣ್ಬ ಗೂಗೆಗಳಂತೆ (ವರ್ಧಪು. ೧೧-೧೯ ವ); ರಸೆಯುಂ ದೆಸೆಯುಂ ನೆಗಳ್ದಾಗಸಮುಂ ಕೞ್ತಲಿಸೆ (ಕುಸುಮಾ. ೪-೩೨); ಪಸುರ್ಗಪ್ಪಿಂ ಸುತ್ತಲುಂ ಕೞ್ತಲಿಪ ಪಸಲೆ (ಪುಷ್ಪಪು. ೩-೭೬). **೨.** ಕಾಣದಂತೆ ಮಾಡು; ಕುರುಡಾಗಿಸು: ಕೞ್ತಲಿಪೆನ್ ನಾನ್ ಕಾಣ್ಬ ಕಣ್ಣನ್ (ಅಶ್ವತ್ಥಾ. ೪೭೨). **ಕತ್ತಲಿಸು:** **೧.** ತುರುಗಿ ಕೞಲ್ದು ಕತ್ತಲಿಪ ಚೂತ ಕುಜಂಗಳೊಳ್ (ಎಇ. XIII, ೩೩೧-೨೮; 929); ಕತ್ತಲಿಪುದು ಪುದಿದೇಲಾಲತಾವನಪ್ರೋದ್ಯಾನಂ (ಕಾದಂಪೂ. ೯೮); ಪಾಪಿಯ ಮುಖದಂತೆ ಕತ್ತಲಿಪ ಕೊಳಂಗಳಿಂ (ಧರ್ಮಾಮೃ. ೩-೫೩); ತಳಿತ ಬೆಳುಗೊಡೆಗಳಲಿ ದೆಸೆ ಕತ್ತಲಿಸೆ (ಕುವ್ಯಾದ್ರೋ. ೧೧-೫); ಎತ್ತಿ ಬಹ ಸತ್ತಿಗೆಯ ಮೊತ್ತಂಗಳೆತ್ತಲುಂ ಕತ್ತಲಿಸೆ (ಜೈಮಿಭಾ. ೪-೧೯). **ಕರ್ತಲಿಸು:** **೧.** ಕೌಂಗು ತೆಂಗು ಕದಳೀ ಪನಸಾಮ್ರ ಜಂಬೂದ್ರುಮಾದಿ ನಂದನಂಗಳಿಂ ಕರ್ತಲಿಪ ನಾಗವಲ್ಲೀವನಂಗಳಿಂ (ಎಕ. VIII, ಸೊರಬ. ೧೩೮-೧೦; ಸು. 1145). **ಕಳ್ತಲಿಸು:** **೧.** ಕಳ್ತಲಿಸುವ ಮೆಳೆಯೊಳಗಂ ಪೊಕ್ಕು (ಗಿರಿಕ. ೧-೧೨೭); ಗಭೀರಮಾಗಿ ಕಳ್ತಲಿಸಿದ ತಮಾಲದ ತರುಗಳ ತಣ್ಣೆಳಲು (ಪದ್ಮರಾ. ೮-೨೭).

[ಕೞ್ತಲೆ + -ಇಸು$_3$]

**ಕೞ್ತಲೆ,** ಕತ್ತಲು, ಕತ್ತಲೆ$_1$, ಕರ್ತಲೆ, ಕಳ್ತಲ್, ಕಳ್ತಲೆ (ನಾ). ಮಬ್ಬು; ಅಂಧಕಾರ; ತಿಮಿರ: "ಕೞ್ತಲೆ = ಮರ್ವು(ಮರುವು)" (ಶಮದ. ಪರಿ. ೧); "ಕೞ್ತಲೆ ತಿಮಿರಂ" (ಕರ್ಣಾನಿ. ೧೨); ನಿನಗೆ ಪಗಲೊಳೇಂ ಕೞ್ತಲೆಯೇ (ಪಂಪಭಾ. ೧೨-೧೪೩); ಒಳಗೆ ಬೆಳಗು, ಪೊಱಗೆ ಕೞ್ತಲೆ (ಭಾಷಾಭೂ. ೫೯ ಉದಾ); ಕೞ್ತಲೆಯೊಳಾಕೆ ಭಯಾಕುಳೆಯಾಗಿ ದೂರಂ ಪೋಗಲಣ್ಮದೆ (ಪಂಚತಂ. ೧೫೫-೭); ಪಶ್ಚಿಮದಿಗ್ವಿಭಾಗದತ್ತೋಡುವದೊಂದು ಕೞ್ತಲೆಯ ಹಾದಿವೊಲಿರ್ದುದು ವಿಂಧ್ಯಪರ್ವತಂ (ಸೂಕ್ತಿಸು. ೩-೩). **ಕತ್ತಲು:** ಬುವಿಬಾನಂತರವೆಲ್ಲವ ಕತ್ತಲು ತುಂಬಿರಲು (ಗಣೇಶ. ೨೮-೧). **ಕತ್ತಲೆ$_1$:** ಹೃದಯದೊಳೊದವಿದ ಕತ್ತಲೆ ಚೆದಱುವಿನಂ (ಕಾದಂಪೂ. ೩೫೬); ಜ್ಯೋತಿಯೊಡನಾಡಿದ ಕತ್ತಲೆ ಕೆಟ್ಟ ಕೇಡ ನೋಡಿರಯ್ಯಾ (ಮಹಾದೇ. ಕ. ೬೨-೧೬೫); ಮಿಂಚುಬುಳುವಿಗೆ ಸೋಲುವುದೆ ಕತ್ತಲೆಯ ಕಟಕವು (ಕುವ್ಯಾದ್ರೋ. ೧-೨೯). **ಕರ್ತಲೆ:** ಭಾನೂದಯದೊಳ್ಕರ್ತಲೆಯನ್ತಿರೆ ರಿಪುಗಳ್ಕರ್ತಲೆವೆಸರಾದುದಾತನೊಕ್ಕಲ್ವೆಸರುಂ (ಸೌಇಇ. XI-i, ೪೫-೫; 980); ಹೃದಯಮೆಲ್ಲಮನೆಯ್ದೆ ಮೊಲಗರ್ತಲೆ ತೀವಿರೆ ಮುಂದುಗಾಣದೆ (ಸಮಪ. ೧೫-೧೦೫); ಎತ್ತೆತ್ತಲುಂ ಕತ್ತಲೆಗಳಿಟ್ಟಣಿಸಿವೆ (ಜೈಮಿಭಾ. ೪-೧೦). **ಕಳ್ತಲ್:** ನೆಳಲ ಕಳ್ತಲಿಂ ಕರ್ಪುಗೊಂಡಿಹುದಿರ್ಪುಗೊಂಡ ಸೂರ್ಯಾತಪಂ (ಶ್ರೀರಾಮಾ. ೧೩೨-೨೦೮). **ಕಳ್ತಲೆ:** ಮರವಾಯ್ದು ಕೊರ್ಬಿ ಬೆಳೆದ ಬಳ್ಳಿ ಬಿದಿರ್ಗಳ ನೆರವಿಂದ ಕಳ್ತಲೆ ರವಿಗೆ ಬಿರಿದಿಕ್ಕಿ ಬಿಂಕದಿಂದಾ ಬಿಂಜದಡವಿಯೊಳ್ಪರಿದಿರ್ಪುದದು ದೆಸೆದೆಸೆಗೆ (ಕುರಾಸಾಂ. ೪-೩); ಸುಲಭದಿಂ ಕಳ್ತಲೆಯು ಜಾರಿ ಚಿತ್ರಕೆ ನಲವ ತೋಱುವುದು (ವೆಂಕಾರಾ. ೫-೨-೧೨). [ದೇ. ‖ ತುಳು. ಕತ್ತಲೆ]

**ಕೞ್ತಲೆವಗೆಯ** (ನಾ). **೧.** ಸೂರ್ಯ: "ಕೞ್ತಲೆವಗೆಯಂ ಭಾಸ್ಕರಂ" (ಕರ್ಣಾನಿ. ೧೨). **೨.** ಕತ್ತಲೆಯ ವೈರಿ; ಚಂದ್ರ (ಕಿ).

[ಕೞ್ತಲೆ + ಪಗೆ$_2$ + -ಅ$_7$]

**ಕೞ್ತಲೆವಣಿ,** ಕತ್ತಲೆವಣಿ (ನಾ). ಕತ್ತಲೆಯ ರತ್ನ; ಚಂದ್ರ: "ಚಳಿಗದಿರಂ ಕೞ್ತಲೆವಣಿ . . . ಮಂಜುಗೈಯಂ ಚಂದ್ರಂ" (ಕವಿಕಂ. ೪೩). **ಕತ್ತಲೆವಣಿ:** "ಚಂದ್ರ ಚಳಿಗದಿರ ಕತ್ತಲೆವಣಿಯೆ ಶಶಿಯ ನಾಮಂ" (ಕಬ್ಬಿಕೈ. ೪೩). 'ದಿನಮಣಿ' ಪರಾ. [ಕೞ್ತಲೆ + ಮಣಿ$_3$]

**ಕೞ್ತಲೆವಱಿ** (ನಾ). ಕತ್ತಲೆಯ ಮರಿ; ಕತ್ತಲೆಯ ಸಂತಾನ: ಮಿಸುಗುವ ಕೞ್ತಲೆವಱಿಗಳೊಳಸವಸದಿಂ ಶಶಿಮರೀಚಿಗಳ್ ಪೊಣರ್ವವೊಲಂದೆಸೆದುವು ಮಲಯಜಸಾರಮನಸಿಯಳ ಕಚಕಿಕ್ಕುವಳ ನಖರಚ್ಛವಿಗಳ್ (ಉದ್ಭಟ. ೮-೧೯). [ಕೞ್ತಲೆ + ಮಱಿ]

**ಕೞ್ತಲೆವಿಡು** (ಕ್ರಿ). ಕತ್ತಲೆಯನ್ನು ಉಂಟುಮಾಡು,—ಕವಿಸು: ಕೞ್ತಲೆವಿಡುವ ತಮಾಲಂಗಳೊಳ್ (ಕಾದಂಬ. ೪೪೯).
[ಕೞ್ತಲೆ + ಬಿಡು$_1$]

**ಕೞ್ತು**, ಕತ್ತು$_3$ (ನಾ). ೧. ಕೊರಳು; ಕುತ್ತಿಗೆ; ಗೋಣು; ಕಂಠ: "ಕೞ್ತು, ತೊೞ್ತು, ಎೞ್ತು, ಪೊೞ್ತು (ಶಬ್ದಾನು. ೧೪೦ ವ್ಯಾಖ್ಯಾ). **ಕತ್ತು$_3$**: ೧. ತಮ್ಮ ಕೃತ್ಯವಲ್ಲದೆ ಮತ್ತೆ ಬಂದಡೆ ಕತ್ತ ಹಿಡಿದು ನೂಕುವರುಂಟು (ಏಲೇಶ್ವ. ೩೩); ತನ್ನಯ ಕತ್ತಿಗೊಡ್ಡಿದ ಕದನದಿರವನು ಹೇಳಲೇನು (ವೈರಾಕಾ. ೨–೬೧); ಕತ್ತ ಹಿಡಿದೀಗಳೀ ಬಾಯ್ಬಡಿಕನಂ ನೂಂಕು (ಚಬಪು. ೩೧–೨೩). ೨. ಹೆಗಲು: "ಕತ್ತಿನಲ್ಕದು ಪೆಗಲನಾಮ" (ಕಶರ. ೨೧). [ದೇ. ‖ ತಮಿ. ಮಲ. ಕೞುತ್ತು]

**ಕೞ್ತೆ**, ಕತ್ತೆ$_1$, ಕರ್ತೆ$_1$, ಕಳ್ತೆ (ನಾ). ಗರ್ದಭ; ರಾಸಭ: "ವಾಳೇಯಃ . . . ಗರ್ದಭಃ, ರಾಸಭಃ–ಈ ೫ ಕೞ್ತೆ" (ಹಲಾಯು. ೪೬–೧೨೫); "ಕೞ್ತೆಯೆನೆ ಗರ್ದಭಂ" (ಸಂಜೀವ. ೬); ಎಣ್ಬರೇಱಿದ ಕೞ್ತೆಯಂತೆ ದೆಸೆದೆಸೆಗೆ ಬೆಸೆವ ಪಚ್ಚಪಸಿಯೆಗ್ಗರುಮಂ ಕಂಡು (ಪಂಪಭಾ. ೪–೯೪ ವ); ಕೞ್ತೆಯಾಗಿ ನಾಯಾಗಿ ಬೞಿಕ್ಕ ವರಾಹನಾಗಿ ಚಾಂಡಾಲವಂಶದೊಳ್ ಪುಟ್ಟುವುಜ್ಜುಗಂ ನಿಮಗಾಯ್ತು (ಸುಕುಮಾ. ೪–೩೩); ಅಂತಾ ಸಿಂಹಂ ಮಱುಗುತ್ತಂಬಟ್ಟು ಗೊಂಕರ ಕೞ್ತೆಯಂ ಬಯಸಿ (ಪಂಚತಂ. ೨೮೨–೧೯); ಎಮಗೆ ವಿಶೇಷದಿಂದಿರ್ದು ಕಾಣ್ಬ ಸಗ್ಗದಿಂ ಕೞ್ತೆಯಿಂ ಸತ್ತು ಕಾಣ್ಬ ನರಕಮೇವುದು (ಜಗವಿ. ೪–೩೯ ವ). **ಕತ್ತೆ$_1$**: ಪಂದಿ ಕೆಯ್ಯಂ ತಿಂದೊಡೆ ಕತ್ತೆಯ ಕಿವಿಯಂ ಕೊಯ್ದರೆಂಬಂತೆ (ಧರ್ಮಾಮೃ. ೬–೬೩); ಎತ್ತು ಕತ್ತೆ ಕೋಣ ಭಂಡಿ (ಕಇ. II, ೨೧–೨೨; 1147); ಗೂಗೆಗಳಂತೆ ಪಲುಂಬಿ ಕತ್ತೆಗಳಂತೊಱಲಿ (ಬಸರ. ೮–೧೦೧); ತನಗಿಲ್ಲದಂಗನೆಗೆ ಕೂರ್ತವನಗ್ಗದ ಕತ್ತೆ[ಪಾಠಾಂ. ೞ್ತೆ]ಯಲ್ಲನೇ (ಪಾರ್ಶ್ವಪು. ೧೦–೬೯); ಕತ್ತೆ ಬಲ್ಲುದೆ ಹೊತ್ತ ಕತ್ತೂರಿಯ ಪರಿಮಳವ (ಪುರಂದ. ೧–೧೨೫–೧); ಕತ್ತೆ ಚಿತ್ರಗಾರನ ಮಿಂಡ (ಗಾದೆ). **ಕರ್ತೆ$_1$**: ಕಡುಪಿಲ್ಲದ ಕುದುರೆ ಗಾಡಿಯಿಲ್ಲದ ಬೆಲೆವೆಣ್ ನಡೆಯಿಲ್ಲದ ಕರ್ತೆ [ಪಾಠಾಂ. ರ್ತೆ] ಮನಕ್ಕೊಡಂಬಡಂ ಮಾೞ್ಕುಮರ್ತಿಯಂ ಮಾಡುಗುಮೇ (ಆದಿಪು. ೬–೯೬). **ಕಳ್ತೆ**: ಶಿವಭಕ್ತಿಯಿಲ್ಲದಾ ಕ್ಷಿತಿಸುರಂ ಶ್ರುತಿಯೆಂಬ ಪೊಱೆವೊತ್ತ ಕಳ್ತೆಯೆಂದುಂ ಸ್ಕಾಂದಮವನೋದಿಯೇಂ (ಪದ್ಮರಾ. ೧೦–೪೪); ಇದಕೆ ಅಳುಹಿದದು ಕಳ್ತೆಯ × × × ಕರಡುಗು (ಎಕ. VII, ಶಿವಮೊ. ೪೬–೧೧; 1688 ?).

[ದೇ. ‖ ತಮಿ. ಕತ್ತೈ, ಕೞುದೈ; ಮಲ. ಕೞುದ; ತುಳು. ಕೊಡ. ಕತ್ತೆ. / ಪ್ರಾ. ಗದ್ದಹ; ಸಂ. ಗರ್ದಭ]

**ಕೞ್ತೆಕುಟಿಗ** (ನಾ). ಕತ್ತೆಕಾಯುವವನು: ಕೞುಕುಟಿಗಂ, ಕೞ್ತೆಕುಟಿಗಂ (ಶಮದ. ೨೦೧ ಪ್ರಯೋ). [ಕೞ್ತೆ + -ಕುಟಿಗ$_1$]

**ಕೞ್ತೆಗಿರಿ** (ನಾ). ಒಂದು ಜಾತಿಯ ಔಷಧಿ ಸಸ್ಯ: ಜಲರುಹ ಕಂದಾನ್ವಿತ ಮಿರುಳೆಲೆಯೊಳ್ ಸಲೆ ಕೞ್ತೆಗಿರಿಯ ಬೂದಿಯ ತಳಿದೂಱಲೊಳಿಂಬಿನೆ ಕುದಿಯಿಸೆ (ಲೋಕೋಪ. ೮–೨೯); ತವಸಿಯ ತೊವಲೊಳಗೆ ಪುನರ್ನವಿಯುಮನಾ ಕೞ್ತೆಗಿರಿಯುಮಂ ಲೊಕ್ಕಿಯುಮಂ ಸವನಾಗಿ ಕೂಡಿಕೊಳ್ವುದು ಲವಣಸಮೇತಂ ತ್ರಿದೋಷಹರಣಂ ಪಿಂಡಂ (ಅಶ್ವಶಾ. ೬–೩೨). [?]

**ಕೞ್ತೆಯ**, ಕತ್ತೆಯ (ನಾ). ಒಬ್ಬಾತನ ಹೆಸರು (?): ಇದಕ್ಕೆ ಸಾಕ್ಷಿ . . . ಆಣಗರು ಕೞ್ತೆಯರು ಚಂಗರಸನು (ಸೌಇಇ. IX–i, ೪೬–೧೨; 9ನೆಯ ಶತ). **ಕತ್ತೆಯ**: ಕತ್ತೆಯ ಐಜಿ ಸೆಬಿ[ಟ್ಟಿ]ಯಮಗ ಚಂಡಯನ ನಿಷಿಧಿಕೆಯ ಕಲು[ಲ್ಲು] (ಇಆ. XII, ೧೦೧–೨; 12ನೆಯ ಶತ). [?]

**ಕೞ್ತೆಲೆವಾಡ** (ನಾ). ಒಂದು ಊರಿನ ಹೆಸರು: ತೆಂಕಣ ಭಾಗಂ ಕೞ್ತೆಲೆವಾಡದ ಪೊಲಂ ಪಡುವಣ ಭಾಗಂ ಪಳ್ಳಂ (ಸೌಇಇ. XI–i, ೪೮–೧೨; 1002). [?]

△ **ಕೞ್ದಿಂಗಳ್** 'ಕರ್ದಿಂಗಳ್' ನೋ.

**ಕೞ್ಪ** (ನಾ). = ಕಲ್ಪ. 'ಕೞ್ಪಕುಜಾತ' ಪರಾ.
[< ಸಂ. ಕಲ್ಪ]

**ಕೞ್ಪಕುಜಾತ** (ನಾ). ಕಲ್ಪವೃಕ್ಷ: ನಾಯಕಬ್ಬಾರ್ವಿಸಲ್ಮನೆಯೊಳು ಕೞ್ಪಕುಜಾತದನ್ತೆ ಕುಡಲುಂ (ಸೌಇಇ. XX, ೧೬೯–೩೮; ?).
[ಕೞ್ಪ + ಕುಜಾತ]

**ಕೞ್ಪಭೂಜ** (ನಾ).= ಕೞ್ಪಕುಜಾತ: ವಂದಿಜನ ಕೞ್ಪಭೂಜ ಕೋಳಾಲಪುರವರಾಧೀಶ್ವರಂ (ಎಕ. XI, ಹೊಳಲ್ಕೆ. ೧೨೧–೧೦; ಸು. 1249).
[ಕೞ್ಪ + ಭೂಜ]

**ಕೞ್ಪು$_1$** 'ಕಱಪು$_1$' ನೋ.

△ **ಕೞ್ಪು$_2$** 'ಕರ್ಪು' ನೋ.

**ಕೞ್ಪಾಂತ** (ನಾ). ಕಲ್ಪಾಂತ: ಕೞಾಂತ ದಿನಂಬರಂ ಪಡೆದು (ಇಆ. XVIII, ೩೯–೧೬೩; 1077). [< ಸಂ. ಕಲ್ಪಾಂತ]

△ **ಕೞ್ಪೇಱು** 'ಕರ್ಪೇಱು' ನೋ.

**ಕೞ್ಬಪ್ಪು** 'ಕೞ್ವಪ್ಪು' ನೋ.

**ಕೞ್ಬಪ್ಪುನಾಡು** (ನಾ). ಶ್ರವಣಬೆಳ್ಗೊಳ ನಾಡು: ಶ್ರೀ ದಿಣ್ಡಿಗರ್ಕೞ್ಬಪ್ಪುನಾಡು ಸಾಸಿರದೆಱ್ಬೋಱುಮಾನಾಳುತ್ತಿರ್ದು (ಮೈಆರ್. ೧೯೨೬, ೧೧೮–೪೦; 726); ಕೞ್ಬ[ಪಾಠಾಂ. ಬ್ಬ]ಪ್ಪುನಾಡನೆಯ್ದೆ ಪೋಗುತ್ತಂ (ವಡ್ಡಾರಾ. ೮೮–೧೬). [ಕೞ್ಬಪ್ಪು (< ಕೞ್ವಪ್ಪು) + ನಾಡು]

**ಕೞ್ಮು** (ಕ್ರಿ). = ಕೞ್ಚು: ಪುರ್ವಿನ ಮೋಡವಮ್ ನೆತ್ತರ ಕೆಂಚನ್ ಸೂಸುವ ಮೊಗಮನ್ ಕೆಡಿಸುತೆ ಕವಿಗುವಮ್, ಕೞ್ಮುತೆ ಪನಿಯಿನ್ ಚೆಲ್ವಿನ ಕದಪನ್ (ಅಂತಿಗೊ. ೨೪–೫೦೬). [← ತಮಿ. ಕೞುವು]

**ಕೞ್ವಪ್ಪು**, ಕಬ್ಬಪ್ಪು, ಕೞ್ಬಪ್ಪು, ಕಾೞ್ಬಪ್ಪು (ನಾ). ಒಂದು ಊರಿನ ಹೆಸರು. ℙ ಈಗಿನ ಶ್ರವಣಬೆಳುಗೊಳ: ಶ್ರೀಮಾನೇನಪ್ರರಮಪ್ರಭಾವ ರಿಷಿಯ್ಕರ್ಕೞ್ವಪ್ಪಿನಾ ವೆಟ್ಟದುಳ್ . . . ನೋನ್ತಿಮ್ಬಿನಿನ್ (ಎಕ. II, ೨೬–೧; ಸು. 700); ರಣಾವಲೋಕ ಶ್ರೀ ಕಮ್ಬಯ್ಯನ್ ಪೃಥುವೀ ರಾಜ್ಯಂಗೆಯೆ ಬ ×× ರಸರ್ಕೞ್ಬಪ್ಪು × × × ಪೆಗ್ಗರ್ಕೞ್ವಪ್ಪಿನಾ ಪೊಲದಿನ್ನಡಪು ಕೊಟ್ಟದು (ಎಕ.II, ೩೫–೪: ಸು. 800). **ಕಬ್ಬಪ್ಪು**: ಐಚಿಯಕ್ಕನು ಪರೋಕ್ಷವಿನಯಕ್ಕೆ ಕಬ್ಬಪ್ಪುನಾಡೊಳೊಮ್ಮಾಳಿಗೆ ಮಹಳಲು ಪಟ್ಟಸಾಲೆಯ ಮಾಡಿಸಿ (ಎಕ. II, ೧೪೧–೬೬; 1139). **ಕೞ್ಬಪ್ಪು**: ಸ್ವಸ್ತಿಶ್ರೀ ಇನುಜ್ಞೂರಾ ವೆಳ್ಳಗವಾಸಗುರವರ ಕೞ್ಬಪ್ಪಬೆಟ್ಟಂ ಮೇಲ್ಕಾಲಂಕೆಯ್ದಾರ್ (ಎಕ. II, ೨೮–೨; ಸು. 700); ಶ್ರೀಕೞ್ಬಪ್ಪುತೀರ್ತ್ಥ ಸನಾಥ ಬೆಳ್ಗೊಳ ನಿವಾಸಿ (ಎಕ. III, ಶ್ರೀರಂಗ. ೧೪೬–೫; ಸು. 900 ?); ಇದನೞಿದೊಂ . . . ಬಾಣರಾಸಿಯುಮಂ ಕೞ್ಬಪ್ಪುವಂ ಸಾಸಿರ ಕವಿಲೆಯುಮಂ . . . ರಿಷಿಯರುಮನೞಿದ ಪಾತಕನು (ಸೌಇಇ. IX–i, ೬೬–೩೬; 992). **ಕಾೞ್ಬಪ್ಪು**: ಅರಿಷ್ಟನೇಮಿದೇವರ್ ಕಾೞ್ಬಪ್ಪು ತೀರ್ತ್ಥದೊಳು ಮುಕ್ತಕಾಲಮ ಪಡೆದು × × × (ಎಕ. II, ೧೪–೨; ಸು. 800). 'ಕಟವಪ್ರ' ಪರಾ. [?]

**ಕೞ್ವಪ್ಪುಪರ್ವತ** (ನಾ). ಶ್ರವಣಬೆಳ್ಗೊಳದ ಬೆಟ್ಟ: ಶಾಸ್ತ್ರವಿದೋಯೇನ ಗುಣದೇವಾಖ್ಯ ಸೂರಿಣೇ ಕೞ್ವಪ್ಪುಪರ್ವತ ವಿಖ್ಯಾತೇ (ಎಕ. II, ೨೩–೨; ಸು. 700). [< ಕೞ್ವಪ್ಪು + ಪರ್ವತ]

**ಕಾ$_1$, ಕಾಯ್,$_1$ ಕಾಯಿ$_1$, ಕಾಯು$_1$** (ಕ್ರಿ). ಕಾದ (ಭೂತಕೃ); ಕಾದು$_2$ (ಭೂತನ್ಯೂ). ೧. ಕಾಪಾಡು; ಉಳಿಸು; ಪಾಲಿಸು; ರಕ್ಷಿಸು; ಸಲಹು: "ಕಾ – ರಕ್ಷಣೇ" (ಶಮುಧಾ); ಧರ್ಮಮಾನ್ ಕಾದೋರಾ ಕುಲಂ ಪಟ್ಟುಗೆ (ಎಕ. VI, ಕೊಪ್ಪ. ೩೭–೮ ; ಸು. 675); ಅನಿಬರುಂ ವೀರರ್ಕಳೇಂ ಕಾವರೇ (ಕಾವ್ಯಸಾ. ೪೩೬ ಶೂದ್ರಕ); ಪೆಂಪೆ ಱಕಂಬೆತ್ತಿರೆ ಕಾವೆನನ್ನ ನುಡಿಯಂ ಕೆಯ್ಕೊಂಡ ಕಟ್ಟಾಯಮಂ (ಪಂಪಭಾ. ೧೨–೧೮೯); ನುಡಿದನೆ ಕಾವುದನೇ ಎಱ್ದಿಗಿಡದಿರು ಜವನಿಟ್ಟ ರಕ್ಕೆ (ಎಕ. II, ೫೯–೯೭ ; 974); ಕೊಲೆ ಲೇಸು ಕಾವುದರಿದೆಂಬಂತೆ (ಧರ್ಮಾಮೃ. ೮–೮೦); ನೃಪತಿಗೆ ಕಾದು ಕೊಡಿರ್ಪೆ ಸೈಂಧವನನು (ಕುವ್ಯಾದ್ರೋ. ೧೪–೨೬). ೨. ಕಾವಲಿರು; ಪಹರೆಯಿರು; ಗಮನವಿಟ್ಟು ನೋಡಿ ಕೊಳ್ಳು: ಪುರೋಚನನುಂ ಪೆಱಗಣ ಕಾಪಂ ಕಣ್ಣಾಗಿಪಿನಲೆ ಕಾದಿರ್ಪನ್ನೆಗಂ (ಪಂಪಭಾ. ೩–೪ ವ); ಚಕ್ರವರ್ತಿಯ ಬಾಗಿಲಂ ಕಾವನಂತೆ ನಯಮುಂ ಬುದ್ಧಿಯುಮಾಱ್ಕೆಯುಂ ಬೆರಸು ನಡೆವಾತಂ (ಧರ್ಮಾಮೃ. ೫–೧೩೧); ನಮ್ಮಾಣ್ಮನ ಬೆಸದಿನೀ ವನವ ಕಾದಿಹೆವು (ಸಾಳ್ವಭಾ. ೬–೧೬); ನಿಮ್ಮಯ ದುರ್ಗಗಳನೆಚ್ಚಱಿಂದ ಕಾದಿರಿ (ಕಂಸವಿ. ೧೧–೧೧೬). ೩. ವಿಳಂಬಮಾಡು; ತಡೆ; ತಾಳು: ಕಾಯದೆ ಕಾಮನಾರ್ದಿಸೆ . . . ಮೆಯ್ಮಱೆದು (ಪಂಪಭಾ. ೪–೩೭). ೪. ಮುಚ್ಚಿಟ್ಟುಕೊಳ್ಳು; ಗುಪ್ತವಾಗಿ ಇರಿಸು: ನೀನೆನಗಿಂತು ನಿನ್ನ ಬಗೆಯಂ ಕಾದಕ್ಕ ಪೇೞಾರೊಳಂ ನುಡಿವೊ (ಆದಿಪು. ೩–೩೧). ೫. ಮನ್ನಿಸು; ಕ್ಷಮಿಸು: ಒಂದಪರಾಧವ ಕಾಯರೆ ಕರುಣಾಸಿಂಧುಗಳಾಗಿಯಿರ್ದವರು (ಮೋಹತ. ೮–೩೧); ಕಾವುದೆನ್ನಪರಾಧಶತಮನು (ಚೆಬಪು. ೪–೨೯). ೬. ನೋಡು; ನಿರೀಕ್ಷಿಸು: ಐದಿದಳ್ ಸಂಕೇತಭವನದೊಳ್ಕಾದಿರ್ಪ ಕಾಂತನೆಡೆಗೆ (ಜೈಮಿಭಾ. ೨೬–೯). **ಕಾಯ್$_1$**: ೧. ದುಷ್ಟರಂ ಜಡಿದು ಸದ್ಧರ್ಮಂಗಳಂ ಕಾಯ್ದು (ಧರ್ಮಾಮೃ. ೨–೮೪); ಹರ ಕೊಲ್ಲಲ್ ಪರ ಕಾಯ್ವನೇ (ಸೋಮೇಶ. ೨೯); ಇಂದು ಜೀವವ ಕಾಯ್ದೊಡೆ ನಿನ್ನ ಬಸಿಱೊಳು ಬಂವದರ್ಸೆ ನಾವು (ಕಂಸವಿ. ೧೫–೯೮). **ಕಾಯಿ$_1$**: ೧. ಮಹೀಪಾಳಕರೋಡಿ ಪೊಕ್ಕು ಗಹನಾಂತರದೊಳ್. . .ಹಣ್ಗಳನೆ ಹಣ್ಣನಲಮ್ಮದೆ ಕಾಯಿಕಾಯಿ ಬಲ್ಲಾಳ ನ್ರಿಪಾಳ ಎಂಬಿದನೆ ಪಂಬಲಿಸಿರ್ದುದು ವೈರಿಸಂಕುಳಂ (ಎಕ. VI, ಕಡೂರು. ೩೬–೧೬ ; 1203); ಚನ್ನಮಲ್ಲಿಕಾರ್ಜುನಯ್ಯಾ ಕೊಲ್ಲು, ಕಾಯಿ ನಿಮ್ಮ ಧರ್ಮ (ಮಹಾದೇ. ಕ. ೧೧–೨೨); ತಾಯೆ ಬಲ್ಲಂದದಲಿ ಕಂದನ ಕಾಯಿ ಮೇಣ್ ಕೊಲ್ಲು (ಕುವ್ಯಾಅ. ೩–೨೨). **ಕಾಯು$_1$**: ೧. ಕಮಲಲೋಚನ ಕಾಯುಕಾಯೆನುತಿರ್ದಳವನಿಸುತೆ (ಕಾಶಿರಾ. ೩೭–೧೫). ೨. ಕಾಯಲಾಱೆನು ರಂಗ ಕಂಡವರ ಬಾಗಿಲನು (ಪುರಂದ. ೨–೧೬೩–೧). ೬. ಭೂರಿ ದಕ್ಷಿಣೆಯನ್ನು ಹಂಚುವುದಕ್ಕೆ . . . ಸಮಯವನ್ನು ಕಾಯುತ್ತಿದ್ದರು (ವಾರಾಕ್ಯ. ೪೩). ೭. ದನಕರು, ಕುರಿ ಮೊದಲಾದುವನ್ನು ಮೇಯಿಸಿಕೊಂಡು ಬರು: ಕಱುಗಳಂ ಕಾಯಹೊಡೆದೊಡೆ (ಸಿದ್ಧರಾ. ೨–೧೩); ನಿಮ್ಮ ದನಗಳನ್ನು ಕಾಯಲೆ (ಬೆಳುವ. ೧).

**ಕಾದಿಡು, ಕಾಯ್ದಿಡು** = ಮೀಸಲಾಗಿಡು; ಮುಂದಿನ ಸಂದರ್ಭಕ್ಕಾಗಿ ಪ್ರತ್ಯೇಕವಾಗಿಡು; ಉಪಯೋಗಕ್ಕೆಂದು ತೆಗಿದಿಡು: ಪೊರ್ದುತೀಕಾದಿಟ್ಟ ಕಾಡಿನುರುವಲ್ಲಳಂ ಬಿರ್ದನಿಂ ಕಡಿವುದೇಂ (ಕಾಲೂರ. ೧೨೭–೨೭೦); ರಾಷ್ಟ್ರಪತಿಯವರ ಪರಿಶೀಲನೆಗಾಗಿ ಕಾಯ್ದಿಡಬೇಕೆಂದು ಖಡ್ಡಾಯವಾಗಿ ಕೋರುವ (ಭಾಧಾನ. ೨೧೩) **ಕಾದುಕೊಂಡಿರು** = ಹಾದಿ ನೋಡುತ್ತಿರು; ಹೊಂಚು ಹಾಕುತ್ತಿರು: ಕಾದುಕೊಂಡಿರ್ದ ದಂದುಗ ಮದುವೆಗೈತಂದು ಮೋದಿತೇಂ ನಿನ್ನ ಬಾಳ್ವೆಯನೆನ್ನ ಮಗಳೆ (ಕಾಲೂರ. ೧೭೬–೩೯೬). **ಕಾಯ್ದಿಟ್ಟದಳ** = "(ಸಂದರ್ಭಕ್ಕೆ ಬೇಕೆಂದು) ಮೀಸಲಿಟ್ಟ ಸೈನ್ಯ" (Reserve Force. ಪತ್ರಿನಿ. ೭೦). **ಕಾಯ್ದಿಟ್ಟಪೀಠ, ಕಾಯ್ದಿಟ್ಟ ಸ್ಥಳ** = (ಇಂಥವರಿಗಾಗಿಯೆ ಎಂದು) ಮೀಸಲಾಗಿಟ್ಟ ಪೀಠ ಅಥವಾ ಸ್ಥಳ (Reserved Seat. ಪತ್ರಿನಿ. ೭೦); ಇವರು ಕಾಯ್ದಿಟ್ಟ ಸ್ಥಳಗಳಿಗೂ ನಿಲ್ಲಬೇಕು ಎಂದು ಸರ್ವಾನುಮತದಿಂದ ನಿರ್ಧಾರವಾಯಿತು (ಅಪನಾ. ೯೫). **ಕಾಯ್ದುಕೊಳ್**=೧. ರಕ್ಷಿಸಿಕೊಳ್ಳು: ನಿನ್ನಯ ಗಡಣಿಗರ ಕರೆ ಕಾಯ್ದುಕೊಳಲಿ ಸುಯೋಧನಾದಿಗಳು (ಕುವ್ಯಾದ್ರೋ. ೧೬–೪೫). ೨. ಕಾವಲಿರು: ಗಜರಥಗಳ ತುರಗತತಿಯನಿನಿತೆಂದು ಬರೆದು ಲೆಕ್ಕಿಪೊಡೆ ಬೊಮ್ಮಾಂಡವಾ ಬಾಣನ ಪುರವನೆ ಕಾಯ್ದುಕೊಂಡಿಹವು (ಮೋಹತ. ೨೦–೨೮).

[ದೇ. ॥ ತಮಿ. ಮಲ. ತುಳು. ಕೊಡ. ಕಾ ; ತೆಲು. ಕಾಚು, ಕಾಯು; ಕೊಲಾ. ಕಾಯ್ ; ಪರ್ಜಿ. ಗಡಬ. ಕಾಪ್ ; ಕುಇ. ಕಾಪ ; ಕುವಿ. ಕಾಚಲಿ]

**ಕಾ$_2$** (ನಾ). ಸಮಾಸದಲ್ಲಿ 'ಕಾಡು' ಎಂಬ ರೂಪಕ್ಕೆ ಆದೇಶವಾಗಿ ಬರುವ ರೂಪ. 'ಕಾಕುರುಳು', 'ಕಾಬಾಳೆ' ಪರಾ.

[ದೇ. ॥ ತಮಿ. ಕಾ ; ಮಲ. ತುಳು. ತೆಲು. ಕಾನ]

**ಕಾಇಕಣಿ** 'ಕಾಯಿಕ್ಕಣಿ' ನೋ.

**ಕಾಂಕೆ$_1$** (ನಾ). ಶಾಖ; ಉಷ್ಣತೆ: (ಕಿ).

[ದೇ ॥ ತಮಿ. ಕಾಙ್ಗು ; ತೆಲು. ಕಾಕ]

**ಕಾಂಕೆ$_2$** (ನಾ). ಬಯಕೆ; ಅಪೇಕ್ಷೆ: ಪುಟ್ಟುತ ಪೆಳವನಾದವಂ ಘನ ತೀರ್ಥಯಾತ್ರೆಯ ಕಾಂಕೆ ಮಾಡಿದಂತೆ (ತಿರುಶ. ೧–೨೭); ಬಳಲುವದೇಕೆ ಬಹುಕರ್ಮ ಕಾಂಕೆಗಳಿಂದ ತೊಳಲುವದದೇಕೆ (ತಿರುಶ. ೯–೩೩).

[< ಸಂ. ಕಾಂಕ್ಷಾ]

**ಕಾಂಕ್ರೀಟು** (ನಾ). ಜಲ್ಲಿ, ಮರಳು, ಸಿಮೆಂಟುಗಳನ್ನು ನೀರಿನಲ್ಲಿ ಕಲಿಸಿ ಮಾಡಿದ ಮಿಶ್ರಣ: ಕಾಂಕ್ರೀಟಿನ ಗೋಡೆಯನ್ನು ಇರಿಸತೊಡಗಿದರು. (ಬಾಲಪ್ರ. III, ೧೭೬೮); ಕಾಂಕ್ರೀಟಿನಿಂದ ಕಟ್ಟಿದ ಅಂದವಾದ ಮನೆ (ಮೋಹಬ. ೪೨೧); ನಾಡೋಡಿಯವರ ಕಂಪೌಂಡಿನ ಗೋಡೆ, ಸಿಮೆಂಟು ಕಾಂಕ್ರೀಟು ಗೋಡ್ಡೆ (ಕಾಬಝೂ. ೭). [← ಇಂ. Concrete]

**ಕಾಂಕ್ಷಿತ** (ಗು). ೧. ಬಯಸಿದ; ಅಪೇಕ್ಷಿಸಲ್ಪಟ್ಟ. (ನಾ). ೨. ಬಯಕೆ; ಅಪೇಕ್ಷೆ: ಕಾಂಕ್ಷಿತದಿಂ ಕಸುಗಾಯಂ ಕೊಯಿದವಂಗಹುದೆ ತನಿವಣ್ಣು (ಬಸಪು. ೨೦–೨೬). ೩. ಬಯಸುವವನು; ಅಪೇಕ್ಷೆಯುಳ್ಳವನು: "ಕೃಷಕಃ . . . ಲುಬ್ಧಃ, ಅಭಿಲಾಷುಕಃ – ಈ ೬ ಕಾಂಕ್ಷಿತಂ" (ಹಲಾಯು. ೬೦–೨೦೮); ಸತತ ಶಾಂತಿಯ ಪಡೆದು ಸಂಶಯಮತಿಯ ತೊಡರಂ ಕಡಿದು ಸಹಜದ ಗತಿಯ ಪಡೆಯುವ ಕಾಂಕ್ಷಿತರಿಗಿದ ಸುತನೆ ಪೇಳು (ಗಗತಾ. ೨೨–೩). [ಸಂ.]

**ಕಾಂಕ್ಷಿಸು** (ನಾ). ಬಯಸು; ಅಪೇಕ್ಷಿಸು: ಸಮೀಪದೊಳ್ ಸಾರಂಗಮಿರ್ದೊಡಂ ಸಿಂಹಮೆಂದುಂ ಕಾಂಕ್ಷಿಸದು (ಪಂಚತಂ. ೫೦–೧೨); ಕಾಂಕ್ಷಿಸಿ ತನ್ನ ಮೆಚ್ಚಿದಾಹಾರಮುಮಕ್ಕೆ ಬಂದೊಡರೆ ಪಲ್ದೆಱೆದೋವದೆ ಕಂಡಕಂಡರಂ ಸೈರಣೆಗೆಟ್ಟು ಬೇಡದೆ (ಧರ್ಮಾಮೃ. ೪–೮೮).

[ಕಾಂಕ್ಷೆ + –ಇಸು$_3$]

**ಕಾಂಕ್ಷೆ** (ನಾ). ೧. ಬಯಕೆ; ಅಪೇಕ್ಷೆ: "ತೃಷ್ಣಾ, ಅಭಿಲಾಷಾ . . . ಗರ್ಧನಾ – ಈ ೬ ಕಾಂಕ್ಷೆ" (ಹಲಾಯು ೬೦–೨೦೯); ಪಾದರಮನಾಡಿಸು ವಾಡುವ ಕಾಂಕ್ಷೆಯೊಳ್ (ಸುಕುಮಾ. ೫–೪೪); ಕಾಂಕ್ಷೆಗಳ ಬೋಧಿಸುವ ಬಂಧು ಸಖರುಪಕಾರ ಯಕ್ಷಿಯರು ವ್ಯಾಕ್‌ಬೆತನಿಗೆಸಗಿದುಪದೇಶ (ಮಂಕುಕ. ೧೭೫). ೨. ಕಣ್ಣಿನ ಒಂದು ರೋಗ: (ಶ). [ಸಂ. ಕಾಂಕ್ಷಾ]

**ಕಾಂಕ್ಷೆದಪ್ಪು** (ಕ್ರಿ). ಬಯಕೆದಪ್ಪು; ಅಪೇಕ್ಷೆತಪ್ಪು: ಜಡಿವ ಹಾರಾವಲಯಗಳ ತೊಡಂಕ ತಪ್ಪಿಸದೆ ಕಡುಲಜ್ಜೆ ಕಾಂಕ್ಷೆದಪ್ಪೀ ವಡನೆ ದುಃಖಾನಲನು ವಡಲನಾವರಿಸೆ ತಾಂ ನಡೆಗೆಟ್ಟು ಸುಯ್ಯುತಾ (ನವಮೋ. ೭–೬). [ಕಾಂಕ್ಷೆ + ತಪ್ಪು$_1$]

**ಕಾಂಗಡಿ** (ನಾ). (ಚಾವಣಿಯಿಂದ ನೇತುಬಿಟ್ಟ) ಚೌಕಾಕಾರದ ತೊಟ್ಟಿಲು: ಅಂಗಡಿ ಭಾರಿ ಅದ್ದರಿಂದ, ಗುಳೋಪು, ಗುಂಡಾರು, ಕನಡಿ, ಕಾಂಗಡಿ, ಚುಂಗಡಿ, ಸಿಂಗಡಿಗಳ ಸಿಂಗಾರವೇನು ಕೇಳಬೇಕೆ (ದಿನಾರಿ. ೮೯). [?]

**ಕಾಂಗರೂ** (ನಾ). ಆಸ್ಟ್ರೇಲಿಯಾಖಂಡದಲ್ಲಿರುವ ಒಂದು ಪ್ರಾಣಿ: ಈ ಜನವ ಹೊಟ್ಟೆಯೊಳಗಿಟ್ಟುಕೊಂಡು, ಕಾಂಗರೂವಿನ ಹಾಗೆ ಜಿಗಿದ ನೂರಡಿ ಮುಂದೆ (ನೆಲಮು. ೫೦). [← ಇಂ. Kangaroo]

**ಕಾಂಗಾರ** 'ಕಾಮಗಾರ' ನೋ.

**ಕಾಂಗಾರಿ** 'ಕಾಮಗಾರಿ' ನೋ.

**ಕಾಂಗು**, ಕಾಗು$_1$ (ನಾ). ಕಡುನೀಲಿಬಣ್ಣ ಅಥವಾ ದಟ್ಟ ಕಪ್ಪು ಬಣ್ಣ: ಭೂರಮೆ ಕಜಂಗಿ ಬೆಳೆದಾರವೆಯೆಂಬ ಕಾಂಗಿನ ಸೀರೆಯನುಟ್ಟು (ರಾಮಾಶ್ವ. ೮೩–೧೫); ಒಂದು ಕಾಂಗಿನ ಸೀರೆ ಬೇಕು ಒಡೆಯ ಎಂದ (ಸ್ವಪ್ನಹೊ. ೮೯). **ಕಾಗು**$_1$: "ಕಾಗೆನಲ್ ಅತಿನೀಲಂ" (ಭಾರನಿ. ೫೫); ಕಿವಿಯಲಿ ಕೆಂದಳಿರನಳವಡಿಸಿ ಕಾಗಿನ ಕಪ್ಪಡವನುಟ್ಟು (ಬಸವು. ೨೯–೩); ಉಟ್ಟು ಕರಿಯ ಕಾಗಿನ ಸೀರೆಯಂ (ಜಯುಕಾ. ೧೩–೬೬); ಹೊಂಬಣ್ಣ ಮೈಗೆ ಮೋಹಿಸುವ ಕಾಗಿನ ದಟ್ಟ (ಭರಚ. ೧–೩೫); ಕರಿಯ ಕಾಗಿನ ಸೀರೆ ಗರಿಯೊಡೆದ ಹೊಂಬಾಳೆ (ನಾಪದ. ೨೧). ೨. ನೀಲಿ ಅಥವಾ ಕಪ್ಪು ಬಣ್ಣದ ಬಟ್ಟೆ: ಕಾಟ್ಗತ್ತಲೆ ಚೆಲ್ವಿಂಗುಟ್ಟ ಕರಿಯ ಕಾಗಿನ ಭಂಗಿಯನನುಕರಿಸುತಿರ್ದುವು (ಲೀಲಾವ. ೧೨–೨೬); ಪೊಚ್ಚ ಪೊಸ ಕಾಗಿನ ಕಚ್ಚೆಯನುಟ್ಟು (ದಶಕು. ೮–೧೦೦).

[ದೇ. ‖ ತಮಿ. ಕಾಜ್ಞಪ್ಪುಡೈವೈ; ಮಲ. ಕಾಙು; ತುಳು. ಕಾಂಗು]

**ಕಾಂಗುಸೀರೆ** (ನಾ). ಕಡು ನೀಲಿ ಬಣ್ಣದ ಅಥವಾ ದಟ್ಟಕಪ್ಪು ಬಣ್ಣದ ಸೀರೆ: ಊರ ಹೆಂಗಳೆಯರೋ ಒಮ್ಮತ ಎಂಬ ಹಾಗೆ ಕಾಂಗು ಸೀರೆಗಳಿಗೆ ಮನಸೋತವರು (ಜಾರುದಾ. ೩೩); ಎಲ್ಲರನ್ನೂ ಕರೆದು, ಎಣಿಸಿ ಕೊಟ್ಟ ಸೀರೆಗಳಲ್ಲಿ ಒಂದೇ ತೆರನ ಕಾಂಗುಸೀರೆಗಳೇ ಇದ್ದವು (ಕುಡಿಕೂ. ೧೮೬). [ಕಾಂಗು + ಸೀರೆ$_2$]

**ಕಾಂಗ್ರೆಸ್**, ಕಾಂಗ್ರೆಸ್ಸು (ನಾ). ೧. ಸಮ್ಮೇಳನ; ಪರಿಷತ್ತು. ೨. ಭಾರತದಲ್ಲಿರುವ ಒಂದು ರಾಜಕೀಯ ಪಕ್ಷ: ಕಾಂಗ್ರೆಸ್ ಸಂಸ್ಥೆಯಲ್ಲಿ ನಾಲ್ಕಾಣೆಯ ಸದಸ್ಯನೂ ಆಗಿ (ಸರ್ವಮಂ. ೧೬೬). **ಕಾಂಗ್ರೆಸ್ಸು**: ೨. ಕಾಂಗ್ರೆಸ್ಸಿನ . . . ಅಧಿವೇಶನ ಸಮಯ ಹತ್ತಿರಕ್ಕೆ ಬರುತ್ತಿತ್ತು (ದಾದಾನ. ೧೫೪); ಎಲ್ಲ ಕಡೆಗಳಲ್ಲಿಯೂ ಮಾಡಿದ ಹಾಗೆ ಪುಂಡುಗಂದಾಯ ಹೊರಿಸಿ ಕಾಂಗ್ರೆಸ್ಸಿನ ಸಂಪರ್ಕವಿರುವವರನ್ನು ಸಹ ಗತಿಹೀನರಾಗುವಂತೆ ಮಾಡಿಸದಿರಲಾರೆ (ಕುರುಕಾ. ೧೨೨). [← ಇಂ. Congress]

**ಕಾಂಗ್ರೆಸ್ಸು** 'ಕಾಂಗ್ರೆಸ್' ನೋ.

**ಕಾಂಚಣ** 'ಕಾಂಚಾಣ$_1$' ನೋ.

**ಕಾಂಚನ** (ನಾ). ೧. ಹೊನ್ನು; ಚಿನ್ನ; ಬಂಗಾರ: "ಹೇಮ, ಸ್ವರ್ಣ . . . ಕಾಂಚನಂ, ಕಾರ್ತಸ್ವರಂ . . . – ಈ ೨೫ ಹೊನ್ (ಪೊನ್)" (ಹಲಾಯು. ೨೯–೨೦); ಕಾಂಚನವೆಂಬ ನಾಯ ನಚ್ಚಿ ನಿಮ್ಮ ನಾನು ಮರೆದೆನಯ್ಯಾ. ಕಾಂಚನಕೆ ವೇಳೆಯಲ್ಲದೆ ಲಿಂಗಕ್ಕೆ ವೇಳೆಯಿಲ್ಲಾ (ಬಸವ. ೩೧೩); ಧನದನ ಕಾಂಚನಮಿವರನುದಿನಮೊರೆವ ಸುವರ್ಣರಜದ ತೂಕಕ್ಕೆ ವರಲ್ ಕನಸಿನೊಳಮಾಜದು (ಪುಷ್ಪವು. ೨–೮೬). ೨. ನಾಗಸಂಪಗೆ: "ಕಾಂಚನಂ ನಾಗಸಂಪಗೆ" (ಮಂಗರಾ. ೩೮–೨೫). [ಸಂ.]

**ಕಾಂಚನಂಬಿಡಿ** (ಕ್ರಿ). ೧. ಚಿನ್ನವನ್ನು ಹಿಡಿ. ೨. ನಾಗಸಂಪಗೆ ಮರವನ್ನು ಹಿಡಿ: ೧, ೨: ಫಣಿಯುವತಿಯಂತೆ ಪುನ್ನಾಗದೊಳ್ ಕ್ರೀಡಿಸಿದರೆಣಿಸಿ ಬೆಲೆವೆಣ್ಣಂತೆ ಕಾಂಚನಂಬಿಡಿದರ್ (ಚಿಬಪು. ೪೫–೪೦). [ಕಾಂಚನ + ಪಿಡಿ$_3$]

**ಕಾಂಚನಕದಳಿ** (ನಾ). ಒಂದು ಜಾತಿಯ ಬಾಳೆ; ಹೊಂಬಾಳೆ: ದ್ರಾಕ್ಷಾಫಳಮಂ ಕಾಂಚನ ಕದಳೀಫಳಮಂ ಗೃಹವನಮಹತ್ತರಂ ತಂದಿತ್ತಂ (ಮಲ್ಲಿಪು. ೪–೩೩). [ಕಾಂಚನ + ಕದಳಿ$_2$ (= ಕದಲಿ)]

**ಕಾಂಚನಪ್ರಸವ** (ನಾ). ನಾಗಕೇಸರ: "ನಾಗಕೇಸರಂ ಕಾಂಚನಪ್ರಸವಮುಕ್ಕುಂ" (ಮಂಗರಾ. ೩೮–೨೩). [ಕಾಂಚನ + ಪ್ರಸವ]

**ಕಾಂಚನಮಂಚ** (ನಾ). ಚಿನ್ನದ ಮಂಚ: ಚಂಚತ್ಕಾಂಚನಮಂಚೋಪಶೋಭಿತ . . . ಶಯ್ಯಾತಳದೊಳ್ (ಶಾಂತಿಪು. ೮–೮೩ ವ); ಮಂಚಕ್ಕೆ–ಕಾಂಚನಮಂಚ, ತೂಗುಮಂಚ, ರತ್ನಮಂಚ, ಸೆಳೆಮಂಚ (ಶಮದ. ೨೯೮ ಪ್ರಯೋ). [ಕಾಂಚನ + ಮಂಚ]

**ಕಾಂಚನಮಾಲೆ** (ನಾ). ೧. ಚಿನ್ನದ ಸರ: ಕಾಲಾಯಸದಿಂ ವಿನಿರ್ಮಿಸಿದ ಕಂಠಿಕೆ ಕಾಂಚನಮಾಲೆಯಂತುಪಾದೇಯಮೆನಿಕ್ಕುಮೇ (ಪಂಠಾಮಾ. ೧–೩೬). ೨. [ಛಂದ] ಒಂದು ಅಕ್ಷರ ವೃತ್ತದ ಹೆಸರು: ಮಿಂಚುವ ಚಂದ್ರಂಗಂಚಿತರುದ್ರರ್ ಚಂಚಲನೇತ್ರೀ ಕಾಂಚನಮಾಲೆ (ಛಂದೋಂಬು. ೨–೧೮). [ಕಾಂಚನ + ಮಾಲೆ]

**ಕಾಂಚನಮೃಗ** (ನಾ). ೧. (ರಾಮಾಯಣದ) ಚಿನ್ನದ ಜಿಂಕೆ; ಸ್ವರ್ಣಮೃಗ; ಹೊಮ್ಮರೆ. ೨. (ಅಲಂ) ಭ್ರಾಮಕವಾದ ಕಲ್ಪನೆ; ಮೋಸಗೊಳಿಸುವ ಬಯಕೆ: ತಮ್ಮ ನಡೆವಳಿಗೆ ಗಮನಕೊಡದೆ ಕಾಂಚನಮೃಗದ ಬೆಂಬತ್ತಿ ಓಡುವವರು ಈ ಜನ (ಭೂಮಿತಾ. ii, ಮುನ್ನುಡಿ). [ಕಾಂಚನ + ಮೃಗ]

**ಕಾಂಚನವರ್ಣ** (ನಾ). ಚಿನ್ನದ ಬಣ್ಣ; ಹೊಂಬಣ್ಣ; ಹಳದಿಬಣ್ಣ: ಪದಂ ಚಾರು ಕಾಂಚನವರ್ಣಂ (ಜಗಪಿ. ೧–೫೧). [ಕಾಂಚನ + ವರ್ಣ]

**ಕಾಂಚನವೃಷ್ಟಿ** (ನಾ). ಚಿನ್ನದ ಮಳೆ; ಸುವರ್ಣವೃಷ್ಟಿ: ಎನ್ನಯ ತಲೆಯೊಳ್ ಸುರಿವುದು ಕಾಂಚನವೃಷ್ಟಿ ಮೆಚ್ಚೆ ನಿಮ್ಮ ಮಹೀಶಂ (ಶಾಂತಿಪು. ೬–೨೫). [ಕಾಂಚನ + ವೃಷ್ಟಿ]

**ಕಾಂಚನಸರೋರುಹ** (ನಾ). ಚಿನ್ನದ ಬಣ್ಣದ ತಾವರೆ; ಹೊಂದಾವರೆ: ವಿಕಸಿತಮಾದ ಕಾಂಚನಸರೋರುಹಷಂಡದ ಪರ್ಬುಮಂ . . . ನೋಡಿ (ಜಗಪಿ. ೨–೮). [ಕಾಂಚನ + ಸರೋರುಹ]

**ಕಾಂಚನಾದ್ರಿ** (ನಾ). ಚಿನ್ನದ ಬೆಟ್ಟ; ಮೇರುಪರ್ವತ: ಕೌರವಾನುಜರಡೆಗೆಡೆದ ರಣ ಕಾಂಚನಾದ್ರಿಯ ಸಿಡಿಲ ಕಾಳೆಗದಂತೆ ಮೆರೆದಿರೆ ಕಂಡನಾ ದ್ರೋಣ (ಕುಮ್ಯಾದ್ರೋ. ೧೩–೩). [ಕಾಂಚನ + ಅದ್ರಿ]

**ಕಾಂಚನಾರಕ** (ನಾ). ಕೋವಿದಾರ ವೃಕ್ಷ; ಕಂಚಿವಾಳ: "ಕಾಂಚನಾರಕಮೆನಲ್ ಕೋವಿದಾರಮೆನಲ್ಕೆ ಕಾಂಚಿವಳಂ" (ಮಂಗರಾ. ೩೮–೨೩). [ಸಂ.]

**ಕಾಂಚನಾಲ** (ನಾ). = ಕಾಂಚನಾರಕ: (ಶ). [ಸಂ.]

**ಕಾಂಚನಿ** (ನಾ). ಅರಿಸಿನ: "ನಿಶಾಖ್ಯಾ, ಕಾಂಚನೀ . . . – ೫ ಅರಿಸಿನದ ಹೆಸರುಗಳು (ಸಿದ್ಧಾಂತಿ. ೨೪೫). [ಸಂ. ಕಾಂಚನೀ]

**ಕಾಂಚನಿಸು** (ಕ್ರಿ). ಚಿನ್ನದಂತೆ ಮಾಡು: ಕನಕಜಲ ಕಾಂತಿಯಂ ಸಿಂಚನಂಗೈದು ಕಾಂಚನಿಸಿದನು ಕಾನನ ಶ್ಯಾಮಾಂಬರಂ ಪೀತಮಪ್ಪಂತೆ (ಶ್ರೀರಾಮಾ. ೨೮೫–೧೮). [ಕಾಂಚನ + –ಇಸು$_3$]

**ಕಾಂಚಾಣ$_1$, ಕಾಂಚಣ** (ನಾ). ೧. ಚಿನ್ನ. ೨. (ಅಲಂ) ದುಡ್ಡು; ಹಣ: ಕುರುಡು ಕಾಂಚಾಣಾ ಕುಣಿಯುತಲಿತ್ತು ಕಾಲಿಗೆ ಬಿದ್ದವರ ತುಳಿಯುತಲಿತ್ತೋ ಕುರುಡು ಕಾಂಚಾಣಾ (ನಾದಲೀ. ೩೮–೨); ಪುಣ್ಯಾಕಾಂಕ್ಷಿಯಾದ ದಾನಶೀಲರು ಕಿಟಕಿಗಳಲ್ಲಿ ಕೈ ಚಾಚಿ, ತಂತಮ್ಮ ಕಾಂಚಾಣಗಳನ್ನು ಕೊಡವಿಕೊಳ್ಳುತ್ತಾರೆ (ಗಾಳಿಪ. ೧೫೦). **ಕಾಂಚಣ**: ೧. (ಕ). [< ಸಂ. ಕಾಂಚನ]

**ಕಾಂಚಾಣ$_2$** 'ಕಾಂಚಾಳ' ನೋ.

**ಕಾಂಚಾರ** 'ಕಾಂಚಾಳ' ನೋ.

**ಕಾಂಚಾಳ, ಕಾಂಚಾಣ$_2$, ಕಾಂಚಾರ, ಕಾಂಚಿವಾಳ** (ನಾ). ಒಂದು ಜಾತಿಯ ಮರ; ಕಂಚುವಾಳ: "ಕಾಂಚಾಳ (ಕಾಂಚಿವಾಳ) – ಕಾಂಚನಾಲ" (ತದ್ಭಕೋ. ೭); ನೆಗ್ಗಿಲುಂ ಕಾಂಚ್ಯಾ[ಚಾ]ಳಂ ಬೇಟ (ಜಟ್ಟಮ. ೧೧–೫೫). **ಕಾಂಚಾಣ$_2$**: ಮೊದಲಡಸಿ ಪುತ್ತು ಕಾಂಚಾಣ(ಳ)ದ ಬಡಗಣ ಮೆಯ್ಯೊಳಾಗೆ (ಲೋಕೋಪ. ೫–೩೫). **ಕಾಂಚಾರ**: ಬಸರಿ, ಅತ್ತಿ, ಹಲಸು, ಕಾಂಚಾರ, ಖರ್ಜೂರ, ಹುಣಿಸೆ, ಯಲಚಿ (ಶಿವದ. ೭–೮). **ಕಾಂಚಿವಾಳ**: ಪೂತು ತುಱುಗಿದ ಕಾಂಚಿವಾಳಂಗಳುಂ (ಲೀಲಾವ. ೬–೭೬). [< ಸಂ. ಕಾಂಚನಾಲ]

**ಕಾಂಚಿ$_1$** 'ಕಾವಂಚಿ' ನೋ.

**ಕಾಂಚಿ$_2$** (ನಾ). ೧. ಹೆಂಗಸರ ನಡುಕಟ್ಟು; ಉಡೆನೂಲು; ಡಾಬು; ಕಟಿಸೂತ್ರ: "ಕಳಾಪಃ, ಸಪ್ತಕೀ, ಕಾಂಚೀ, ಮೇಖಳಾ, ರಶನಾ, ಕಟಿಸೂತ್ರಂ, ಸಾರಸನಂ – ಈ ೭ ಉಡೆನೂಲ್" (ಹಲಾಯು. ೯೨–೪೦೬); "ರಸನೆ ಮೇಖಲೆ . . . ಸಾರಸನಮೆನಲುಡಿದಾರಮುಕ್ಕು" (ಮಂಗರಾ. ೧೦೧–೩೦); ತಾವೆ ಪೇಳವೆ ವಿರೋಧಿಯ ಪೆಣ್ಣರ ಕಂಕಣಂಗಳಿಲ್ಲದ ಕರಂ . . . ಕಾಂಚಿಯಿಲ್ಲದುಡೆ ನೂಪುರಮಿಲ್ಲದ ಪಾದಪಲ್ಲವಂ (ಕಇಆ. ೨–೩–೪೮; 1058); ಸಿಂಜಿನೀವಳಯ ಕಾಂಚಿಗಳೆಂಬವಱಿಂದದೊಂದು ಚೆಲ್ವೇಱಿರೆ (ಜಗವಿ. ೩–೧೦೧); ತಾತಿ ಮೊದಲಾದವಂ ಕಟ್ಟಿ ಚಂಚತ್ ಕಾಂಚಿಯುಂ ಬಂಧಿಸಿ (ಪದ್ಮರಾ. ೩–೪೫). ೨. ಒಂದು ಜಾತಿಯ ಮರ (ಕ). ೩. ಒಂದು ಊರಿನ ಹೆಸರು; ಕಂಚಿ: ಕಾಂಚಿಯೊಳು ನಾಟ್ಯ ನಮಿತ್ತಡಿಯನಾರೊಂದು ದಿವಸಂ . . . ದೇಗುಲಕೆ ಪೋಗಿ (ಬಸವು. ೧೭–೧). [ಸಂ. ಕಾಂಚೀ]

**ಕಾಂಚಿಕ** (ನಾ). ಅಂಬಲಿ; ಗಂಜಿ. [ಸಂ.]

**ಕಾಂಚಿತ** (ನಾ). ಅರ್ಚನೆ; ಪೂಜೆ: "ಕಾಂಚಿತಂ ಸಂಜ್ಞಿತಮೆಲನ್ನರ್ಚನಂ" (ಮಂಗರಾ. ೧೩೨–೨೭). [ಸಂ.]

**ಕಾಂಚಿವಾಳ** 'ಕಾಂಚಾಳ' ನೋ.

**ಕಾಂಚೀಕಳಾಪ** (ನಾ). = ಕಾಂಚಿ$_2$ ೧: ಕಾಂಚೀಕಳಾಪಮಂ ಕಟ್ಟಲಣಮೆ ನೆಱೆಯದಿದೆಂದಗ್ಗಳಿಸಿ ಕುಳಿಕೆಗಳಿನೇಂ ಕಣ್ಗೊಳಿಸಿದುದೊ[ ] ಸುಭಗೆಯಾದ ಸುದತಿಯ ಗರ್ಭಂ (ಪಂಪಭಾ. ೧–೧೪೩). [ಸಂ. ಕಾಂಚೀಕಲಾಪ (ಕಾಂಚೀ + ಕಲಾಪ)]

**ಕಾಂಚೀದಾಮ** (ನಾ). = ಕಾಂಚಿ$_2$ ೧: ಕಾಂಚೀದಾಮಮನೋಸರಿಸು ಮುಗ್ಧೆ (ಕಾದಂಪೂ. ೪೮೨); ಕಾಮಿನಿ ರನ್ನೆಯ ಪೊಱವಾಱು ಕಾಂಚೀದಾಮವೆರಸಿ ರಾಜಿಸಿತು (ಕಂನವಿ. ೯–೨೩). [ಸಂ. ಕಾಂಚೀದಾಮನ್ (ಕಾಂಚೀ + ದಾಮನ್)]

**ಕಾಂಚೀಪಟ್ಟಿಕೆ** (ನಾ). ನಡುಕಟ್ಟು; ನಡುವಿಗೆ ಇಟ್ಟುಕೊಳ್ಳುವ ಪಟ್ಟಿ: ಕಾಂಚೀಪಟ್ಟಿಕೆಯ ಆಕಾರದಲ್ಲಿರುವ ಉಕ್ಕಿನ ಒರೆಯೇನೋ ಇದೆ (ವಿಗಡ. ೪೭–೨). [ಸಂ. ಕಾಂಚೀಪಟ್ಟಿಕಾ (ಕಾಂಚೀ + ಪಟ್ಟಿಕಾ)]

**ಕಾಂಚೀಪದ** (ನಾ). ೧. ಡಾಬನ್ನು ಧರಿಸುವ ಸ್ಥಳ; ಸೊಂಟ; ಕಟಿ. ೨. ಹೆಂಗಸರ ಜಘನ: "ಕಾಂಚೀಪದಂ, ಕಳತ್ರಂ, ಜಘನಂ, ಶ್ರೋಣೀ, ಕಕುದ್ಮತೀ – ಈ ೫ ಜಘನಂ" (ಹಲಾಯು. ೮೪–೩೫೮). [ಸಂ. (ಕಾಂಚೀ + ಪದ$_2$)]

**ಕಾಂಜನಿ** (ನಾ). ಒಂದು ಜಾತಿಯ ಗಿಡ: "ಕೃಷ್ಣಾಭಾ – ಕಾಂಜನಿ" (ಓಷಧಿ. ೩೮). [?]

**ಕಾಂಜಿ** (ನಾ). = ಕಾಂಚಿಕ. [ಸಂ. ಕಾಂಜೀ]

**ಕಾಂಜಿಕ** (ನಾ). = ಕಾಂಚಿಕ: "ಅರನಾಳಮದೆನಲ್ ಧಾನ್ಯಾಮ್ಲಮೆನಲು ಸೌವೀರಮೆನೆ ಕಾಂಜಿಕಮೆನಲ್ಕೆ ಅಂಬಿಲಮುಕ್ಕುಂ" (ಮಂಗರಾ. ೬೪–೧). [ಸಂ.]

**ಕಾಂಜಿರ, ಕಾಂಜೀರ** (ನಾ). ಕಹಿಯಾದ ಕಿತ್ತಳೆಬಣ್ಣದ ಕಾಯಿ ಬಿಡುವ ಒಂದು ಬಗೆಯ ಗಿಡ; ಕಾಸರಕ; ಇಟ್ಟಿ (ಕ). **ಕಾಂಜೀರ**: "ಕಿಂಪಾಕಃ, ಮಹಾಕಾಳಃ – ಈ ೨ ಕಾಂಜೀರಂ" (ಹಲಾಯು. ೩೪–೫೦). "ಕಾಳಕೂಟಃ – ಕಾಂಜೀರ" (ಓಷಧಿ. ೩೧); ನಿಂಬ ಕಾಂಜೀರ ವಿಷ ಹಾಳಾಹಳಮೆಂದಿವಱ ಸಮಾನಮಪ್ಪುದಯಮನುಳ್ಳುವು (ಪಸಾರ. ೧–೧೬೦–೧); ಅಂಜದೆ ಮೆಲ್ಲುವನಾದಂ ಕಾಂಜೀರದ ಪಣ್ಣ (ಉಸಾರ. ೭೧). [ದೇ. ‖ ತಮಿ. ಕಾಞ್ಞಿರ, ಕಾಞ್ಞಿರೈ; ಮಲ. ಕಾಞ್ಞಿರವ್]

**ಕಾಂಜೀರ** 'ಕಾಂಜಿರ' ನೋ.

**ಕಾಂಡ** (ನಾ). ೧. ಸಸ್ಯದ (ರೆಂಬೆಯಿಲ್ಲದ) ಕೆಳಭಾಗ; ತಾಳು; ದಂಟು; ದೇಟು: "ನಾಳಂ, ಕಾಂಡಂ – ಈ ೨ ಕಂಡಿಕೆ" (ಹಲಾಯು. ೯೫–೪೨೫); ಸೊಗಯಿಸಿತುದ್ದಂಡ ಕಾಂಡ ಭಾಂಡೀರವಟಂ (ಜಗವಿ. ೪–೪೫); ಬೇರಿಗೆ ವಿಮುಖವಾಗಿ ಭೂಮಿಯ ಮೇಲೆ ಬೆಳೆಯುವ ಸಸ್ಯದ ಭಾಗವೇ ಕಾಂಡ (ಸಸ್ಯಶಾ. ೨೧). ೨. ಬಾಣ; ಶರ: ನಿಶಿತ ಕಾಂಡಂಗಳಿಂದೊಡ್ಡಿದ ಚತುರ್ಬಲಂಗಳ ಮೆಯ್ಯೊಳ್ ರೋಮರೋಮಂದಪ್ಪದೆ ನಡುವನ್ನಮೆಚ್ಚು (ಪಂಪಭಾ. ೧೧–೧೯ ವ). ೩. ಪ್ರಕರಣ; ಅಧ್ಯಾಯ; ಪರ್ವ: ರತ್ನ ಮನೆ ತಲುಪುವಾಗ . . . ಅಲ್ಲಿ ಅವಳಿಗಾಗಿ ಒಂದು ಹೊಸ ಕಾಂಡವೇ ಸಿದ್ಧವಾಗಿತ್ತು (ಕುಸುಸಂ. ೨೩೨). ೪. ಗುಂಪು; ಸಮೂಹ. ೫. ಸಮಯ; ಕಾಲ. ೬. ಶ್ರೇಷ್ಠವಿದ್ಯೆ; ಸುಜ್ಞಾನ. ೭. ನೀರು; ಜಲ. 'ಕಾಂಡಜ' ಪರಾ. ೮. ಗಗನ; ಆಕಾಶ. ೯. ನಿಂದೆ; ಅಪವಾದ. ೧೦. ತೆರೆ; ಪರದೆ. ೧೧. ಕೂಟ; ಮಿಲನ. ೧೨. ವೇಗ. ೧೩. ಕುದುರೆ; ಅಶ್ವ. ೧೪. ಕುತ್ಸಿತ ವರ್ಗ; ನೀಚ ಸಮೂಹ: "ಕೂರ್ಗಣೆಯೊಳ್ ಸಮೂಹದೊಳ್ ನಿಂದೆಯೊಳುಂ ತೆರೆಯೊಳ್ ಸುವಿದ್ಯೆಯೊಳ್ ನೀರ್ಗಗನಂಗಳೊಳ್ ಮಿಳನ ಶೀಘ್ರದೊಳುಂ ಸಲೆ ಕಾಂಡವಾಚಕಂ" (ನಾನಾರ. ೧೧೭); "ಅಂಬುಕೆ[ತೆ]ರೆ ನೆರವಿ ನಿಂದೆಗಳಂಬು ನಭಂ ಕೂಟ ಸೀರೆಯೊಳ್ಳೆಯ ವಿದ್ಯೆಗಳೊಂಭತ್ತು ಕಾಂಡಾಖ್ಯಂ" (ನಾನಾಕಂ. ೧೪೦). ೧೫. ನೀಚವಾದ ವಸ್ತು: "ಅರ್ವಾಣಂ . . . ಕಾಂಡಂ, ಬೇಟಂ, ಪಾಪಂ ರೇಫಸಂ – ಈ ೧೩ ಹೊಲ್ಲಹ ವಸ್ತು" (ಹಲಾಯು. ೫೬–೧೮೨). ೧೬. ಒಂದು ಜಾತಿಯ ಮರ. 'ಕಾಂಡವೃಕ್ಷ' ಪರಾ. [ಸಂ.]

**ಕಾಂಡಜ** (ನಾ). ನೀರಲ್ಲಿ ಹುಟ್ಟಿದುದು; ಕಮಲ. 'ಕಾಂಡಜಜ' ಪರಾ. [ಸಂ.]

**ಕಾಂಡಜಜ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಶ್ರೀಮತ್ಕಾಂಡಜಜಾಂಡಮಂಡಲ ಪಿಚಂಡಾಮ್ನಾಯ ಪಾಜಿಸ್ಥಿರಂ (ಹವಿಶ್ವಾ.ರ. ೧–೧). [ಸಂ.]

**ಕಾಂಡತಿಕ್ತೆ** (ನಾ). ಒಂದು ಬಗೆಯ ಸಸ್ಯ: "ಕಾಂಡತಿಕ್ತಾ – ನೆಲಬೇವು, ಮೆಣಸಿಗೆ" (ಒಷಧಿ. ೩೧). [ಸಂ. ಕಾಂಡತಿಕ್ತಾ]

**ಕಾಂಡಧಿ** (ನಾ). ೧. ಜಲಧಿ; ಸಮುದ್ರ. ೨. ಬತ್ತಳಿಕೆ; ತೂಣೀರ: ಕಾಂಡಧಿಯಿನೇಣವಾಹನ ಬಾಣಮಂ ತೆಗೆದು (ಜಗವಿ. ೧೩–೧೦೪ ವ). [ಸಂ.]

**ಕಾಂಡಪಟ** (ನಾ). ತೆರೆ; ಪರದೆ; ಜವನಿಕೆ: ಶ್ರೀ ತಳ್ತುರದೊಳ್ ಕೌಸ್ತುಭಜಾತದ್ಯುತಿ ಬಳಸಿ ಕಾಂಡಪಟದಂತಿರೆ (ಕವಿರಾ. ೧–೧); ಮನೆಯಾಣ್ಮನ ಕಣ್ಣೆಮೆಯೆ ಕಾಂಡಪಟಮಾಗೆಯುಂ[ಬಗೆ]ಯಾಣ್ಮನ ಕಣ್ಣೆಮೆಯ ದೂದವಿಯಾಗೆಯುಂ (ಪಂಪಭಾ. ೪–೮೧ ವ); ಇದುತ್ಪಲ ಲಕ್ಷ್ಮಿಯ ಮುಂಡನಕ್ಕೆ ಸುತ್ತಿದ ನವನೀಲ ಕಾಂಡಪಟಂ (ಚಂದ್ರಪು. ೮–೧೯). [ಸಂ.]

**ಕಾಂಡಪೃಷ್ಠ** (ನಾ). ಬೆನ್ನಮೇಲೆ ಬಾಣಗಳನ್ನು ಹೊತ್ತುಕೊಂಡು ಹೋಗುವವನು; ಯೋಧ: "ಶಸ್ತ್ರಾಜೀವಃ, ಕಾಂಡಪೃಷ್ಠಃ – ಈ ೨ ಕೆಯ್ದುವಿಡಿವವಂ" (ಹಲಾಯು. ೬೭–೨೫೧). [ಕಾಂಡ + ಪೃಷ್ಠ]

**ಕಾಂಡರಂಧ್ರ** (ನಾ). (ಸಸ್ಯದ) ಕಾಂಡದ ಮೇಲೆ ಇರುವ ಹಸಿರಿಲ್ಲದ ರಂಧ್ರ: ಕೆಲವು ಸಸ್ಯಗಳಲ್ಲಿ ಕಾಂಡದ ಮೇಲೆ ಹಸಿರಿಲ್ಲದ ರಂಧ್ರಗಳಿರುತ್ತವೆ. ಇವುಗಳನ್ನು ಕಾಂಡರಂಧ್ರ (Lentical) ಎಂದು ಕರೆಯಬಹುದು (ಸಸ್ಯಶಾ ೧೧೬). [ಕಾಂಡ + ರಂಧ್ರ]

**ಕಾಂಡರುಹೆ** (ನಾ). ಒಂದು ಔಷಧಿ ಗಿಡ; ಕಟುಕರೋಹಿಣಿ: "ಕಾಂಡ [ಪಾಠಾಂ. ಖಾಂಡ]ರುಹೆ ಮತ್ಸ್ಯಪಿತ್ತಮನೆ ಕಟುಕರೋಹಿಣಿ" (ಮಂಗರಾ. ೪೨–೬೪). [ಸಂ. ಕಾಂಡರುಹಾ]

**ಕಾಂಡವೃಕ್ಷ** (ನಾ). ಇಂಗುಳದ ಮರ: "ಕಾಂಡವೃಕ್ಷ – ಇಂಗುಳ" (ಒಷಧಿ. ೩೧). [ಕಾಂಡ + ವೃಕ್ಷ]

**ಕಾಂಡಸ್ಪೃಷ್ಟ** (ನಾ). ೧. ಸೈನಿಕ ವೃತ್ತಿಯವನು; ಯೋಧ. ೨. ಆಯುಧವೃತ್ತಿಯಿಂದ ಜೀವಿಸುವ ಬ್ರಾಹ್ಮಣ. [ಕಾಂಡ + ಸ್ಪೃಷ್ಟ]

**ಕಾಂಡಾಲ** (ನಾ). ಧಾನ್ಯಗಳನ್ನು ತುಂಬಿಡುವ ಬುಟ್ಟಿ; ಬಿದಿರುಗಳಿಂದ ಮಾಡಿದ ಗಳಗೆ; ಗೂಡೆ. [ಸಂ.]

**ಕಾಂಡಾಸನ** (ನಾ). ಬಿಲ್ಲು; ಧನುಸ್ಸು: ಷಟ್ಪತಕಾಂಡಾಸನೋತ್ಸೇಧ ಶರೀರನುಂ (ಆದಿಪು. ೬–೬೦ ವ). 'ಬಾಣಾಸನ' ಪರಾ. [ಕಾಂಡ + ಅಸನ]

**ಕಾಂಡಿಕೆ** (ನಾ). ಒಂದು ಬಗೆಯ ಬಳ್ಳಿ; ಹಾಲೆ: "ಹಾಲೆ ಕಾಂಡಿಕೆ [ಪಾಠಾಂ. ಕಾಟಿಕೆ, ತಾಡಗೆ] ಯಕ್ಕು" (ಮಂಗರಾ. ೪೪–೪೬); "ಕಾಂಡಿಕಾ – ಗಿರಿಕರ್ಣಿಕೆ" (ಒಷಧಿ. ೨೯). [ಸಂ. ಕಾಂಡಿಕಾ]

**ಕಾಂಡೀರ** (ಗು). ೧. ಬಾಣಗಳಿಂದ ಸಜ್ಜಾದ; ಬಾಣಗಳನ್ನು ಧರಿಸಿದ (ನಾ). ೨. ಬಾಣಗಳೇ ಆಯುಧವಾಗಿ ಉಳ್ಳವನು; ಬಿಲ್ಲುಗಾರ. ೩. ಒಂದು ಔಷಧಿ ಸಸ್ಯ: "ಕಾಂಡಕಟಕಃ – ಕಾಂಡೀರಃ" (ಒಷಧಿ. ೩೨). [ಸಂ.]

**ಕಾಂಡೇಕ್ಷು** (ನಾ). ೧. ಕೊಳವಳಿಕೆ ಗಿಡ: "ಇಕ್ಷುಗಂಧಾ, ಕಾಂಡೇಕ್ಷುಃ, ಕೋಕಿಲಾಕ್ಷಃ, ಇಕ್ಷುರಃ, ಕ್ಷುರಃ – ೫ ಕೊಳವಳಿಕೆ ಹೆಸರುಗಳು" (ಸಿದ್ಧಾಂತಿ. ೧೧೯). ೨. ದರ್ಭೆ; ಕಾಡುಕಬ್ಬು; ಹುಚ್ಚುಕಬ್ಬು: "ಕಾಂಡೇಕ್ಷು – ಬಿಳಿಯ ಕಬ್ಬು, ನಾಣಲು" (ಒಷಧಿ. ೨೯). [ಸಂ.]

**ಕಾಂಡೇರಿ** (ನಾ). ಒಂದು ಬಗೆಯ ಬಳ್ಳಿ: "ಕಾಂಡೇರಿ ಪವಿಮೂರ್ತಿ ಶೃಂಖಲೆಯಸ್ಥಿವಳ್ಳಿ ಮಂಗುರವಳ್ಳಿ" (ಮಂಗರಾ. ೪೩–೪೩). [ಸಂ. ಕಾಂಡೇರೀ]

**ಕಾಂತ₁** (ನಾ). ಕಕಾರದಲ್ಲಿ ಕೊನೆಗೊಳ್ಳುವ ಶಬ್ದ; ಕೊನೆಯಲ್ಲಿ ಕಕಾರವಿರುವಂತಹುದು: ಕಾಂತಕ್ಕೆ . . . ಒಟ್ಟು – ಪ್ರವಾಹೇ (ಶಮುಥಾ). [ಕ₁ + ಅಂತ₂]

**ಕಾಂತ₂** (ಗು). ೧. ಇಷ್ಟವಾದ; ಪ್ರಿಯವಾದ; ಅಪೇಕ್ಷಿಸಿದ. ೨. ಸುಂದರವಾದ; ಮನೋಹರವಾದ: ತೇಜೋವಂತನಿಳಾವಂತನಿಂದುಮಂಡಳಕಾಂತಂ (ಪಂಪಭಾ. ೪–೧೪); ಚಂಚಚ್ಚಂಚರೀಕ ಪ್ರಕರಶುಕಕುಲಾಲಾಪ ಕಾಂತಂ ವಸಂತಂ (ಕಾದಂಉ. ೬೭೪). (ನಾ). ೩. ಒಡೆಯ: ಗಂಡ; ಪತಿ: "ಕಾಂತಃ. . .ಅನುಕಃ – ಈ ೧೪ ಗಂಡಂ" (ಹಲಾಯು. ೮೨–೩೪೩); "ನಾಥನಿಂದ್ರಂ ಕಾಂತನೀಶ್ವರಂ . . . ಒಡೆಯಂಗೆ ನಾಮಮುಕ್ಕುಂ" (ಮಂಗರಾ. ೬೭–೬); ಕಾಂತನಲ್ಲಿಗೊಲ್ದಂಗನೆ ಬಂದಳ್ (ಪುಷ್ಪಪು. ೩–೧೨೧). ೪. ಪ್ರಿಯತಮ; ಪ್ರಿಯಕರನಾದವನು: ಕಾಂತರ ಬರವಾರ್ಗೆ ಹರ್ಷಮಂ ಪುಟ್ಟಿಸದೋ (ಪಾರ್ಶ್ವಪು. ೯–೬೫); ಐದಿದಳ್ ಸಂಕೇತಭವನದೊಳ್ ಕಾದಿರ್ದ ಕಾಂತನೆಡೆಗೆ (ಜೈಮಿಭಾ. ೨೬–೯). ೫. ಕಲ್ಲು; ಶಿಲೆ. 'ಚಂದ್ರಕಾಂತ', 'ಸೂರ್ಯಕಾಂತ' ಪರಾ. ೬. ಮನೆ; ನಿವಾಸ: "ಮೆಜೆವಲ್ಲಿ ಮನೆಯಲ್ಲಿ ಕಲ್ಲಿನಲಿ ಪತಿಯಲ್ಲಿ ಪ್ರೀತಿಯಲಿ ಕಾಂತಮಕ್ಕುಂ" (ಮಂಗರಾ. ೧೫೪–೬೪). ೭. ಚಂದ್ರ. ೮. ಕಬ್ಬಿಣ: ಕಾಂತ ಅಂದರೆ ಕಬ್ಬಿಣ – ಈ ಪಾತ್ರೆಗಳನ್ನು ಉಪಯೋಗಿಸುವುದರಿಂದ . . . ಪುಷ್ಟಿಯನ್ನೂ ಜಠರಾಗ್ನಿಯನ್ನೂ ಹೆಚ್ಚಿಸುವುದು (ಸಕವೈ. ೪೭). ೯. ಕೃಷ್ಣ. ೧೦. ಸ್ಕಂದ. ೧೧. ಸೂಜಿಗಲ್ಲು; ಅಯಸ್ಕಾಂತ. 'ಕಾಂತಕ್ಷೇತ್ರ', 'ಕಾಂತತ್ವ' ಪರಾ. ೧೨. [ಕಾವ್ಯಮಿಾ] ಕಾವ್ಯಗುಣಗಳಲ್ಲಿ ಒಂದು: ಸದಭಿಕಮನೀಯ ಗುಣಮಪ್ಪುದು ನಿಯತಂ ಕಾಂತಮೆಂಬುದಭಿಗೀತಾರ್ಥಂ (ಕವಿರಾ. ೨–೬೪); ಕಾಂತಂ ಸಮುಚಿತಲೋಕೋದಂತಂ ನಿನ್ನುದಯದಿಂದಮುದಯ ಧರಿತ್ರೀಕಾಂತ ದಿನಕಾಂತಕುಲ ಕೇಳಿಂತೀ ಲೋಕಮೆ ಕೃತಾರ್ಥಮೆಂದೀ ನುಡಿವೊಲ್ (ಉದಯಾ. ೫). [ಸಂ.]

**ಕಾಂತಕಾಮಿ** (ನಾ). ಚಕ್ರವಾಕಪಕ್ಷಿ: "ಕಾಂತಕಾಮಿ–ಚಕ್ರವಾಕ ಪಕ್ಷಿ" (ಒಷಧಿ. ೩೦). [ಸಂ. ಕಾಂತಕಾಮಿನ್]

**ಕಾಂತಕ್ಷೇತ್ರ** (ನಾ). ಅಯಸ್ಕಾಂತ ಶಕ್ತಿಯ ಕ್ಷೇತ್ರ: ಕಾಂತವು ತನ್ನ ಸಮಿಾಪದಲ್ಲಿರುವ ಮತ್ತೊಂದು ಕಾಂತದ ಧ್ರುವಗಳ ಮೇಲೆ ಬಲ ಪ್ರಯೋಗ ಮಾಡುವುದಷ್ಟೆ. ಇಂತಹ ಬಲವು ಕಂಡುಬರುವ ಸ್ಥಳವನ್ನು ಕಾಂತಕ್ಷೇತ್ರ (Magnetic field) ವೆಂದು ಕರೆಯುತ್ತಾರೆ. (ಭೌತವಿ. ೩೧೦). [ಕಾಂತ₂ + ಕ್ಷೇತ್ರ]

**ಕಾಂತಗುಣ** (ನಾ). = ಕಾಂತ: ಲೋಕದ ಪರಿಸ್ಥಿತಿಯನ್ನು ಮಿಾರದಂತೆ ಹೇಳುವುದು ಕಾಂತಗುಣ (ಭಾರಮಿಾ. ೧೮೫). [ಕಾಂತ₂ + ಗುಣ₂]

**ಕಾಂತಚೋದನೆ** (ನಾ). ಕಾಂತಶಕ್ತಿಯನ್ನು ಚೋದನೆಯಾಗುವಂತೆ ಮಾಡುವುದು: ಕಾಂತಶಕ್ತಿಯನ್ನಾಗಲೀ ವಿದ್ಯುಚ್ಛಕ್ತಿಯನ್ನಾಗಲೀ ಚೋದನೆಯಾಗುವಂತೆ ಮಾಡುವುದು; ಕಾಂತ (ಶಕ್ತಿ) ಚೋದನೆ, ವಿದ್ಯುಚ್ಛಕ್ತಿಚೋದನೆ (Induction. ಇಂಕನಿ). [ಕಾಂತ₂ + ಚೋದನೆ]

**ಕಾಂತತ್ವ** (ನಾ). ಕಾಂತಶಕ್ತಿ: ಕಾಂತತ್ವ ಮತ್ತು ವಿದ್ಯುತ್ತು (Magnetism and Electricity) ಇವುಗಳು ನೇರವಾಗಿ ನಮ್ಮ ಇಂದ್ರಿಯಗಳಿಗೆ ಗೋಚರವಾಗುವುದಿಲ್ಲ (ಭೌತವಿ. ೩೦೮). [ಸಂ.]

**ಕಾಂತಧ್ರುವಸೂಚಿ** (ನಾ). ಉತ್ತರಮುಖಿ; ದಿಕ್ಸೂಚಿ: "ಕಾಂತ ಧ್ರುವ ಸೂಚಿ; ಉತ್ತರಮುಖಿ; ದಿಕ್‌ಸೂಚಿ" (Compass. ಇಂಕಪ). [ಕಾಂತ + ಧ್ರುವ + ಸೂಚಿ]

**ಕಾಂತಪುಷ್ಪ** (ನಾ). ಒಂದು ಬಗೆಯ ಹೂವು; ಕೋವಿದಾರಪುಷ್ಪ; ಕಂಚಿವಾಳ: "ಕಾಂತಪುಷ್ಪ – ಕಂಚಿವಾಳ" (ಒಷಧಿ. ೩೦). [ಸಂ.]

**ಕಾಂತಬಲಮಾಪಕ** (ನಾ). "ಕಾಂತಬಲಗಳನ್ನು(ಮು., ಭೂಮಿಯ ಅಯಸ್ಕಾಂತ ಬಲಗಳನ್ನು) ಅಳೆಯುವ ಸಲಕರಣೆ (Magneto-meter. ಇಂಕಪ). [ಕಾಂತ$_2$ + ಬಲ + ಮಾಪಕ]

**ಕಾಂತಮಾಪಕ** (ನಾ). = ಕಾಂತಬಲಮಾಪಕ: ಸೂಚಿಯು ಅಂಶಗಳ ಗುರುತುಗಳ ಮೇಲೆ ತಿರುಗುವುದರಿಂದ ಕಾಂತವು ಯಾವ ದಿಕ್ಕಿಗೆ ತಿರುಗಿ ಕೊಂಡಿದೆಯೆಂದು ಗೊತ್ತುಮಾಡಬಹುದು. ಇಂತಹ ಉಪಕರಣಕ್ಕೆ ಕಾಂತಮಾಪಕವೆಂದು (Magnetometer) ಹೆಸರು (ಭೌತವಿ. ೩೧೬). [ಕಾಂತ$_2$ + ಮಾಪಕ]

**ಕಾಂತಲಕ** (ನಾ). ಒಂದು ಜಾತಿಯ ಮರ; ನಂದಿಮರ(?). [?]

**ಕಾಂತಶಕ್ತಿ** (ನಾ). ಅಯಸ್ಕಾಂತ ಶಕ್ತಿ: ಪರಮಾಣುಗಳಿಂದ ವಿದ್ಯುಚ್ಛಕ್ತಿ, ಕಾಂತಶಕ್ತಿ, ಗುರುತ್ವಶಕ್ತಿ ಮೊದಲಾದುವುಗಳುಂಟಾಗುವಂತೆ...ಶಕ್ತಿ ಉಂಟಾಗುತ್ತದೆ (ವಿಶಉ. ೨೩೪). [ಕಾಂತ$_2$ + ಶಕ್ತಿ]

**ಕಾಂತಸದ್ಮ** (ನಾ). ಗಂಡನ ಮನೆ; ಪತಿಗೃಹ: ಎಂತು ಕಳುಹುವೇ ಸುತೆಯ... ಚಿಂತೆ ಚಿತ್ತಕೆ ಪಿರಿದು ಕಾಂತಸದ್ಮಕೆ (ಶಾಕುಂತ. ೫೨ ಅಡಿಟ). [ಕಾಂತ$_2$ + ಸದ್ಮ]

**ಕಾಂತಳಗಿ** (ನಾ). = ಕಾಂತಲಕ: "ಕಾಂತಳಗಿ – ನಂದಿವೃಕ್ಷ" (ಒಷಧಿ. ೩೦). [< ಕಾಂತಲಕ]

**ಕಾಂತಾಂತಿಕ** (ನಾ). ಬಹುಮನೋಹರವಾದುದು; ಅತಿಸುಂದರವಾದುದು (?): ಸಂತತಮಿಂತಕ್ಕುಂ ಕಾಂತಾಂತಿಕಮತಿಶಯದ ಲಕ್ಷ್ಯಲಕ್ಷಣಯುಗದಿಂ (ಕವಿರಾ. ೩-೯೦). [ಕಾಂತ$_2$ + ಅಂತಿಕ]

**ಕಾಂತಾಕದಂಬ** (ನಾ). ಹೆಂಗಸರ ಗುಂಪು; ಸುಂದರಿಯರ ಸಮೂಹ: ಆ ಮಹಾವನಂ . . . ಕಾಂತಾಕದಂಬದಂತೆ ಲೋಹಿತ ಚಂದನಾಲಂಕೃತಮುಂ ತಮಾಲಪತ್ರಶೋಭಿತಮುಂ (ಚಂದ್ರಪ್ರ. ೫-೫೨ ವ); ಕೇಳಿದನು ಕಾಂತಾಕದಂಬದ ಘೋಳುಗಳ ಘೋಳೆಂಬ ನಗೆಗಳ (ಕುವ್ಯಾಅ. ೧೪-೧೨). [ಸಂ. (ಕಾಂತಾ + ಕದಂಬ)]

**ಕಾಂತಾಕೌಂತೇಯ** (ನಾ). ಸುಂದರಿಯರಿಗೆ ಅರ್ಜುನನಂತಿರುವವನು; ಮನಸ್ಸನ್ನು ಸೆಳೆಯುವವನು; ಒಂದು ಬಿರುದು: ಭಾಷಾಚತುರ್ಭುಜಂ ಸುಜನಮಕರಧ್ವಜಂ [ಕಾ]ನ್ತಾಕೌನ್ತೇಯಂ ಪತಿಹಿತವೈನತೇಯ[ಂ] (ಸೌಇಇ. VI, ೫೭೧-೩೫; 1077). [ಸಂ. (ಕಾಂತಾ + ಕೌಂತೇಯ)]

**ಕಾಂತಾಜಾಲ** (ನಾ). = ಕಾಂತಾಕದಂಬ: ಕಾಂತಾಜಾಲ ಕೆದಱಿದ ಕೇಶದಿಂದವ ಗೋಳಿಡುತ್ತಿರೆ (ಕೌಶಿರಾ. ೩೭-೫). [ಸಂ. (ಕಾಂತಾ + ಜಾಲ)]

**ಕಾಂತಾತತಿ** (ನಾ). = ಕಾಂತಾಕದಂಬ: ಯೌವನಶ್ರೀಭರಂ ಸಲೆ ಕಾಂತಾತತಿಗೆಲ್ಲ ಮೂರ್ಚಿತ ವಸಂತಂ ಸಂತತಂ ನಂದನಾವಲಿಗೆಲ್ಲಂ (ಜಗವಿ. ೨-೩). [ಸಂ. (ಕಾಂತಾ + ತತಿ)]

**ಕಾಂತಾದರ್ಶಿ** (ನಾ). ಮನೋಹರವಾದ ಆದರ್ಶವುಳ್ಳವನು (?): ಧರೆಯೊಳಗೆ ಶುಚಿಯಹನು ವೈಶ್ವಾನರನು ಕಾಂತಾದರ್ಶಿಯಹ [ಪಾಠಾಂ. ಮಾಯಾಕ್ರಾಂತಿ ಪಿಂಗದ] ಕವಿವರನು . . . ಈ ನಾಲ್ವರುಗಳಲ್ಲದೆ ಭುವನದೊಳಗನ್ಯತ್ರವಿಲ್ಲ (ಕುವ್ಯಾಉ. ೩-೧೧೭). [ಸಂ. ಕಾಂತಾಧರ್ಶಿನ್]

**ಕಾಂತಾದಿ ವಟಿಕ** (ನಾ). ಒಂದು ಬಗೆಯ ಔಷಧ (?): ಕೆಮ್ಮಿಗೆ... ಜಂಬ್ವಾದಿ ಗುಳಿಗೆ, ಕಾಂತಾದಿವಟಿಕ; ಹರಿದ್ರಾವಟಿಕ. . .ಶುದ್ಧ ರಸವಟಿಕ ಇವನ್ನು ಕೊಳ್ಳುವುದು (ವಿವೈವಿ. ೧೫೬). [ಕಾಂತಾದಿ + ವಟಿಕ ?]

**ಕಾಂತಾನತಿಮಾಪಕ** (ನಾ). "ಅಯಸ್ಕಾಂತಸೂಚಿಯ ಆನತಿಯಿಂದ ಭೂಮಿಯ ಅಯಸ್ಕಾಂತ ಬಲದ ಲಂಬತೀವ್ರತೆಯನ್ನು ಅಳೆಯುವ ಸಲಕರಣೆ" (Inclinometer. ಇಂಕಪ). [ಕಾಂತ$_2$ + ಆನತಿ$_1$ + ಮಾಪಕ]

**ಕಾಂತಾನುಕೂಲ** (ನಾ). ೧. ಮನೋಹರವಾಗಿ ಹೊಂದಿಕೊಂಡಿರುವ ತೀರ, —ದಂಡೆ. ೨. ಗಂಡನಿಗೆ ಹಿತವಾಗಿ ವರ್ತಿಸುವಿಕೆ: ೧, ೨.: ನೆರೆ ಪತಿವ್ರತೆಯಂತೆ ಕಾಂತಾನುಕೂಲದಿಂ ಧರೆಯ ಮಂಡಲದಂತೆ ಕುವಲಯಾನ್ವಿತದಿಂದೆ ಸರಸಿ ಶೋಭಿಸುತಿರ್ದುದು (ನವಮೋ. ೮-೩೩). [ಕಾಂತ$_2$ + ಅನುಕೂಲ]

**ಕಾಂತಾರ** (ನಾ). ೧. ಅಡವಿ; ಕಾಡು: "ಅರಣ್ಯಂ . . . ಕಾಂತಾರಂ . . . —ಈ ೯ ಅಡವಿ" (ಹಲಾಯು. ೩೫-೫೭); ಘೋರಕಾಂತಾರಕಾರಮನೊಂದು ಬೇಗೆ ಪರಿವಂತು ರಥಂ ಪರಿದತ್ತು ವೈರಿ ಕಾಂತಾರಮನಟ್ವಲ್ (ಪಂಪಭಾ. ೮-೯೮); ಈ ಕಾಂತಾರ ನಿರ್ಜಲವೈದಲಂಘ್ರಿಗೆ ಭಾರ (ಕುವ್ಯಾಅ. ೨೩-೧೨). ೨. ಕಷ್ಟವಾದ ದಾರಿ; ದುರ್ಗಮವಾದ ಮಾರ್ಗ: "ಅತಿ ಬೆಟ್ಟತ್ತೆನಿಪ್ಪ ಪೆರ್ಬಟ್ಟೆಯೇಂ ಕಾಂತಾರಮೆಂದೆಂಬುದು" (ಮಂಗರಾ. ೧೪೧-೧೪); "ಅಸ್ಥಿರ ಹೆದ್ದಾರಿಗಳುಂ ಪ್ರಸ್ತುತವಹ ವಿಪಿನವೆರಡು ಕಾಂತಾರಾಖ್ಯಂ" (ನಾನಾಕಂ. ೧೩೩) [ಸಂ.]

**ಕಾಂತಾರಕ** (ನಾ). ಒಂದು ಬಗೆಯ ಕೆಂಪು ಕಬ್ಬು. [ಸಂ.]

**ಕಾಂತಾರಚರ್ಯೆ** (ನಾ). [ಜೈನ] ಕಾಡಿನಲ್ಲಿ (ಭಿಕ್ಷೆಗಾಗಿ) ಸಂಚರಿಸುವುದು (?): ಸುಗುಪ್ತಿ ಗುಪ್ತರೆಂಬ ಗಗನಚಾರಣಯುಗಲಂ . . . ಮಾಸೋಪವಾಸದ ಪಾರಣೆಯೊಳ್ ಕಾಂತಾರಚರ್ಯೆಗೆ ಬರ್ಪುದುಂ (ಪಂರಾಮಾ. ೮-೬೭). 'ಕಾಂತಾರಭಿಕ್ಷೆ' ಪರಾ. [ಕಾಂತಾರ + ಚರ್ಯೆ]

**ಕಾಂತಾರಭಿಕ್ಷೆ** (ನಾ). = ಕಾಂತಾರಚರ್ಯೆ: ತನ್ಮುನಿಯುಗಳಂ . . . ಯೋಗ್ಯಕಾಲಾಪೇಕ್ಷೆಯಿಂ ಕಾಂತಾರಭಿಕ್ಷೆಗೆ ಬರುತಿರೆ (ಪಂರಾಮಾ. ೨-೫೨ ವ). [ಕಾಂತಾರ + ಭಿಕ್ಷೆ]

**ಕಾಂತಾಸಮ್ಮಿತ** (ನಾ). [ಕಾವ್ಯಮೀ] ಪ್ರೇಯಸಿಯಂತೆ ವಿಷಯಗಳನ್ನು ಪ್ರಿಯವಾಗಿ ತಿಳಿಸುವ ಸಾಹಿತ್ಯ; ಲಲಿತ ಸಾಹಿತ್ಯ: ಮನಸ್ಸಿಗೆ ಸಂತೋಷವಾಗುವ ವಿಷಯಗಳನ್ನು ರಮಣೀಯವಾದ ರೀತಿಯಲ್ಲಿ ಹೇಳುತ್ತ ನಮ್ಮ ಮನಸ್ಸನ್ನು ಸೆಳೆದುಕೊಂಡು ಕರ್ತವ್ಯಾಕರ್ತವ್ಯಗಳ ಸತ್ಫಲದುಷ್ಫಲಗಳು ನಮ್ಮನಮ್ಮ ಮನಸ್ಸಿಗೇ ತಾವಾಗಿಯೇ ಅಂಟುವಂತೆ ಪ್ರತಿಪಾದಿಸುವ ಕಾವ್ಯನಾಟಕಾದಿಗಳು 'ಕಾಂತಾಸಮ್ಮಿತ' (ಕೈಪಿಡಿ. ೧೬೮ ಅಡಿಟ). [ಸಂ. (ಕಾಂತಾ + ಸಮ್ಮಿತ)]

**ಕಾಂತಿ** (ನಾ). ೧. ಬೆಳಕು; ಹೊಳಪು; ತೇಜಸ್ಸು; ಕಿರಣ: "ಮಿನುಗು ತೊಳಪುಂ ಮಿಱುಗು ತಳಿಗದಿರ್ಪೊಳಪು ಹಬೆ ಮಿಂಚು ಡಾಳಂ ತಾವೆನಲ್ಕಾಂತಿಗೆ ಪೆಸರ್" (ಕಬ್ಬಕೈ. ೨೪). ಬೆಟ್ಟಗಳ ಗುಲಾಬಿ ಬಣ್ಣದ ಶಿಖರಗಳು ಉದಯಿಸುತ್ತಿದ್ದ ಸೂರ್ಯನ ಕಾಂತಿಯಲ್ಲಿ ಪ್ರಕಾಶಿಸುತ್ತಿದ್ದವು. (ಮಲೆನಾ. ೧೮). ೨. ಬಯಕೆ; ಅಪೇಕ್ಷೆ. ೩. ಚೆಲುವು; ಶೋಭೆ; ಸೌಂದರ್ಯ; ಲಾವಣ್ಯ: "ಲಕ್ಷ್ಮೀ, ಶ್ರೀ, ಕಾಂತಿ, ವಿಭ್ರಮಮೆಂಬಿವು ಶೋಭೆಯಲ್ಲಿಯುಂ ವರ್ತಿಸುಗುಂ" (ಹಲಾಯು. ೧೩೫-೨೭). ೪. ದೇಹಕ್ಕೆ ಮಾಡಿಕೊಳ್ಳುವ ಅಲಂಕಾರ. (?). ೫. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಚಂದ್ರನಾದೊಡೆ... ಕಾಂತಿ, ಜ್ಯೋತ್ಸ್ನೆ, ಶ್ರೀ, ಅಂಗದೆ, ಪೂರ್ಣೆ, ಅಮೃತ, ಕಾಮದಾಯಿನಿ ಎಂಬ ಷೋಡಶ ಕಳೆಗಳಿಂ ಭರಿತನಾಗಿ (ವಿವೇಕ. ೨೬೭).

೬. [ಕಾವ್ಯಮೀ] ಹತ್ತು ಕಾವ್ಯಗುಣಗಳಲ್ಲಿ ಒಂದು: ಶ್ಲೇಷ, ಪ್ರಸಾದ, ಸಮತೆ, ಮಾಧುರ್ಯ, ಸುಕುಮಾರತೆ, ಅರ್ಥವ್ಯಕ್ತಿ, ಉದಾರತ್ವ, ಓಜಸ್ಸು, ಕಾಂತಿ, ಸಮಾಧಿಗಳೆಂಬ ದಶ ಪ್ರಾಣವಿಡಿದು (ವಿವೇಕ. ೨೨೭). ೭. [ಸಂಗೀತ] ಜೋಡಣೆ; ಮೇಳ (?): ಕಾಳಸಿ ಬೈಸಿಕೆ ಪಟ್ಟ ಕಾಂತಿ ಕೊಂಕಣಿ ಕನುಜಾಯಿ . . . ಪೆಲ್ಲಣೆ ಕಳೆಯೆಂದಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸವಂ (ಜಗಪು. ೫-೩). [ಸಂ.]

**ಕಾಂತಿಗುಂದು** (ಕ್ರಿ). ಕಳೆಗೆಡು; ನಿಸ್ತೇಜವಾಗು; ಮಂಕಾಗು: ಕಾಂತಿಗುಂದುತ್ತಿದೆ ನಕ್ಷತ್ರಾಳಿ (ರಾಜಶೇ. ೧೩-೪೫). [ಕಾಂತಿ + ಕುಂದು₁]

**ಕಾಂತಿಗೂಡು** (ಕ್ರಿ). ಕಾಂತಿಯನ್ನು ಹೊಂದು; ಅಂದವಾಗು; ಕಳೆಗೊಳ್ಳು: ಪಿರಿದು ಭೂಷಣ ಕಾಂತಿಗೂಡಿದ ಕದಪಿನ ಗರುವನಾರು (ಕಂಸವಿ. ೯-೧೧೨). [ಕಾಂತಿ + ಕೂಡು₁]

**ಕಾಂತಿಗೆಡು** (ಕ್ರಿ). = ಕಾಂತಿಗುಂದು: ಮಾಸಾಧಿಪರ್ ಕಾಂತಿಗೆಟ್ಟರೆ ಗರ್ಭಕ್ಕೆ ತಿ ಪೀಡೆ (ಜಾತಕ. ೩-೪). [ಕಾಂತಿ + ಕೆಡು]

**ಕಾಂತಿದೋಱು** (ಕ್ರಿ). ಕಾಂತಿಯುಂಟಾಗು; ಕಳೆದೋರು: ಮಿಱುತು ಭುಜಶಕ್ತಿ ಮಿತಿಯಿಲ್ಲ ತನು ಕಾಂತಿದೋಱಿತು ಕಂತುನಂದನನಗೆ (ಮೋಹತ. ೩೪-೧೯). [ಕಾಂತಿ + ತೋಱು (< ತೋಱ್)]

**ಕಾಂತಿಪರ** (ನಾ). ಒಂದು ಬಗೆಯ ಸಸ್ಯ; ದವನ: "ಕಾಂತಿಪರ - ದವನ" (ಓಷಧಿ. ೩೦). [?]

**ಕಾಂತಿಭಾಸ** (ನಾ). ಬೆಳಕಿನ ಆಭಾಸ: ಅಕ್ಷಿಪಟಲವು ಕೆರಳಿ ಕಣ್ಣು ಗುಡ್ಡೆಯ ಮೇಲೆ ಒತ್ತುವುದರಿಂದ ಉಂಗುರುಂಗುರಗಳಾಗಿ ಕಾಣಿಸಿಕೊಳ್ಳುವ ಬೆಳಕಿನ ತೋರ್ಕೆ: ಕಾಂತಿಭಾಸ (Phosphene. ಇಂಕನಿ). [ಕಾಂತಿ + ಭಾಸ]

**ಕಾಂತಿಮಂತ** (ನಾ). ೧. ಕಾಂತಿಯನ್ನುಳ್ಳವನು; ತೇಜಸ್ವಿ: ಭದ್ರಾಕಾರನುಂ ಕಾಂತಿಮಂತನುಮಭಿರೂಪನುಮಾದಂ (ಶಾಂತಿಪು. ೯-೮೩ ವ). ೨. ಚಂದ್ರ. [ಸಂ. ಕಾಂತಿಮತ್]

**ಕಾಂತಿಮುದ್ರಣ** (ನಾ). ಒಂದು ಬಗೆಯ ಮುದ್ರಣ. ೧ ರಬ್ಬರು ನಯಗಂಬಳಿಯ ಮೇಲೆ ಜಿಡ್ಡುಮಸಿಯಿಂದ ಚಿತ್ರ ಅಥವಾ ಅಕ್ಷರವನ್ನು ಬರೆದು ಪ್ರತಿ ತೆಗೆಯುವ ವಿಧಾನ: ಕೆಲವು ಕಾಲಾನಂತರ ಲೋಹದ ತಗಡಿಗೆ ಬದಲಾಗಿ ರಬ್ಬರ್ ನಯಗಂಬಳಿಯನ್ನು ಉಪಯೋಗಿಸಲಾರಂಭಿಸಿದರು. ಇವುಗಳಿಗೆ ಕ್ರಮವಾಗಿ "ಕಾಂತಿಮುದ್ರಣ" ಅಥವಾ "ಫೋಟೋ ಲಿಥೋಗ್ರಫಿ" ಮತ್ತು "ಫೋಟೋಲಿಥೋ ಆಫ್ ಸೆಟ್" ಎಂದು ಹೆಸರು (ಮುದ್ರಕ. ೪). [ಕಾಂತಿ + ಮುದ್ರಣ]

**ಕಾಂತಿಯಿಡು** (ಕ್ರಿ). ಹೊಳಪಿಡು; ಬೆಳಗು: ಪುಣ್ಯದ ಚಿತ್ತಂ ಬೆಳಗುವಂತೆ ದಂತಪಂಕ್ತಿಯಂ ಕಾಂತಿಯಿಟ್ಟು (ಬಸರ. ೪-೬೩). [ಕಾಂತಿ + ಇಡು₁]

**ಕಾಂತಿವಂತ** (ನಾ). = ಕಾಂತಿಮಂತ ೧: ಇಂದ್ರಂಬೋಲ್ ವಿಭವಯುತಂ ಚಂದ್ರಂಬೋಲ್ ಕಾಂತಿವಂತಂ (ಶಮುದ. ೨೧೪ ಪ್ರಯೋ). [< ಸಂ. ಕಾಂತಿಮತ್]

**ಕಾಂತಿವರ್ಧಕ** (ಗು). ೧. ಕಾಂತಿಯನ್ನು ಹೆಚ್ಚಿಸುವ; ಅಂದಗೊಳಿಸುವ. (ನಾ). ೨. ಅಂದಗೊಳಿಸುವ ವಸ್ತು; ಅಂಗರಾಗ; ಪ್ರಸಾಧನ ವಸ್ತು: ಕೂದಲು, ಚರ್ಮ ಅಥವಾ ಮುಖಚ್ಛಾಯೆ - ಇವನ್ನು ಅಂದಗೊಳಿಸುವ (ವಸ್ತು): ಅಂಗರಾಗ; ಕಾಂತಿವರ್ಧಕ (Cosmetic. ಇಂಕನಿ). [ಕಾಂತಿ + ವರ್ಧಕ]

**ಕಾಂತಿವಿಡಿ** (ಕ್ರಿ). ಕಾಂತಿಯನ್ನು ಹೊಂದು; ಅಂದವಾಗು; ಕಳೆಗೊಳ್ಳು: ಕೇರಿಕೇರಿಯಲಿ ಪನ್ನೀರ ಚಳಯ ರನ್ನದೋರಣ ಪೊಂಗುರುಜುಗಳು ಮೇರೆಯಿಲ್ಲದೆ ಕಾಂತಿವಿಡಿದುವು (ಕಂಸವಿ. ೨೩-೨೬). [ಕಾಂತಿ + ಪಿಡಿ₁]

**ಕಾಂತಿಸ್ತಂಭ** (ನಾ). ದೀವಿಗೆಯ ಕಂಬ: "ಆ ದೀಪ್ತಿಯಿಹುದು ಕಾಂತಿಸ್ತಂಭಮೆನಿಸಿಕ್ಕುಂ" (ಮಂಗರಾ. ೬೧-೧೪). [ಕಾಂತಿ + ಸ್ತಂಭ]

**ಕಾಂತಿಹೀನ** (ಗು). ಕಾಂತಿಯಿಲ್ಲದ; ಅಂದವಿಲ್ಲದ; ಕಳೆಯಿಲ್ಲದ. 'ಕಾಂತಿಹೀನತೆ' ಪರಾ. [ಕಾಂತಿ + ಹೀನ]

**ಕಾಂತಿಹೀನತೆ** (ನಾ). ಕಾಂತಿಯಿಲ್ಲದಿರುವಿಕೆ; ಅಂದವಿಲ್ಲದಿರುವಿಕೆ; ಮಂಕು: ಈ ಕಲಾವಿದರೆಲ್ಲರ ಕೃತಿಗಳಲ್ಲೂ ಒಂದು ಬಗೆಯ ಕಾಂತಿಹೀನತೆ, ವಿವರ್ಣತೆ ಕಂಡು ಬರುವುವು (ಭಾರದ. ೫೩೩). [ಸಂ. ಕಾಂತಿಹೀನತಾ]

**ಕಾಂತೆ** (ನಾ). ೧. ಹೆಂಗುಸು; ಸ್ತ್ರೀ: "ಭಾಮಿನಿ ನಿತಂಬಿನಿ . . . ಸ್ತ್ರೀ ವನಿತೆ ನಾರಿ ಯೋಷಿತ್ಕಾಂತೆ ಮಹಿಳೆಯಬಳೆ" (ಮಂಗರಾ. ೮೯-೧); ಕಾಂತೆ ಪೊದಟ್ಟ ನಾಣ ಭರದಿಂದ (ಪಂಪಭಾ. ೩-೭೮); ಘನಮಹಿಮನಮೋಯೆನುತ ಕೈಮುಗಿದಿರ್ದಳಾ ಕಾಂತೆ (ತೊರರಾ. ೧-೧೨-೨೧). ೨. ಹೆಂಡತಿ; ಪ್ರಿಯೆ: ತನ್ನ ಬೆರಳುಂಗುರಂಗೊಟ್ಟು ಸಂತೈಸಿ ವೃಷಕೇತು ಕಾಂತೆಯಂ ಬೀಳ್ಕೊಂಡನು (ಜೈಮಿಭಾ. ೮-೧೨). [ಸಂ. ಕಾಂತಾ]

**ಕಾಂತ್ಯಾಕರ** (ನಾ). ೧. ಪ್ರಕಾಶದ ನೆಲೆ; ಚಂದ್ರ. ೨. ಚೆಲುವಿನ ನೆಲೆ: ೧, ೨: ಸರಸಿಜವಿರೋಧಿ ಕಾಂತ್ಯಾಕರಮಮೃತಮಯಂ ತ್ವದೀಯ ಮುಖಶಶಿಯುಂಟಾಗಿರೆ ಶಶಿಯದೇವುದೆಂಬುದು ನಿರುತಂ ಶ್ಲೇಷಾನುವಿದ್ಧಮಪ್ಪಾಕ್ಷೇಪಂ (ಕವಿರಾ. ೩-೧೦೨). [ಕಾಂತಿ + ಆಕರ]

**ಕಾಂತ್ಯಾಸ್ಪದ** (ನಾ). ೧. ಕಿರಣಗಳಿಗೆ ನೆಲೆಯಾದವನು. ೨. ಚೆಲುವಿಗೆ ನೆಲೆಯಾದವನು: ೧, ೨: ಉದಯಾರೂಢಂ ಕಾಂತ್ಯಾಸ್ಪದನನುರಕ್ತಾತ್ಮ ಮಂಡಲಂ ಕುಮುದಕರಂ ಮೃದುತರ ಕರಂಗಳಿಂದತಿ ಮುದಮಂ ಲೋಕಕ್ಕೆ ಪಡೆಗುಮಿಂತೀ ರಾಜಂ (ಕವಿರಾ. ೩-೧೧೯). [ಕಾಂತಿ + ಆಸ್ಪದ]

**ಕಾಂದಬೋರ್** (ನಾ). ಒಬ್ಬಾತನ ಹೆಸರು: ಸೇನ್ದ್ರಕ ಮಹಾರಾಜನ್ರ್ನಾಯಕರ್ಖಣ್ಣಮುಂ ಜೆಳುಗೂರಾಳ್ಗೆಯನಾಳುತ್ತುಂ ಕಾನ್ದಬೋರ್ ರಧಿಕಾರಿಗಳಾಗೆ (ಎಕ. VII, ಶಿಕಾರಿ. ೧೫೪-೫; ಸು. 685). [?]

**ಕಾಂದಲ್** (ನಾ). ಒಂದು ಬಗೆಯ ಸಸ್ಯ: ಕಾಂದಲ್, ಮದ, ಉಪ್ಪಾತಿ (ವೈಔಗಿ. ೧೧-೧೪೫). [?]

**ಕಾಂದವ** (ನಾ). (ಕಾವಲಿಯಲ್ಲಿ ಅಥವಾ ಬಾಣಲೆಯಲ್ಲಿ) ಬೇಯಿಸಿದ ಅಥವಾ ಹುರಿದ ರೊಟ್ಟಿ, ಮೊದಲಾದುವು. [ಸಂ.]

**ಕಾಂದವಿಕ** (ನಾ). ೧. ರೊಟ್ಟಿ ಸುಡುವವನು; ಭಕ್ಷ್ಯಮಾಡುವವನು. ೨. ಮಿಠಾಯಿ ಮಾಡುವವನು. [ಸಂ.]

**ಕಾಂದಾಭಜಿ** (ನಾ). ಈರುಳ್ಳಿಯ ಬಜ್ಜಿ: ದೋಸೆ, ಇಡ್ಡಲಿ, ಕಾಂದಾಭಜಿ . . . ಇನ್ನೂ ಏನನ್ನೋ ಒಂದು ಉಸಿರಿನಲ್ಲಿ ಹೇಳಿಬಿಟ್ಟನು (ಚಿಂದುಟ. ೪೦). [← ಮರಾ. ಕಾಂದಾಭಜೀ]

**ಕಾಂದಿಶೀಕ** (ನಾ). ದಿಕ್ಕುಗೆಟ್ಟವನು; ದಿಗ್ಭ್ರಮೆಯಿಂದ ಓಡುವವನು; ಭಯದಿಂದ ಪಲಾಯನ ಮಾಡುವನು: "ನಷ್ಟಃ, ಗೃಹೀತದಿಕ್, ಕಾಂದಿಶೀಕಃ, ಭಯದ್ರುತಃ - ಈ ೪ ದೆಸೆಗೆಟ್ಟವಂ" (ಹಲಾಯು. ೭೯-೩೨೫); ದ್ರವಿಳಕ್ಷಮಾಪರಿವೃಢಂ ಬೆನ್ನಿತ್ತಂ . . . ಪಾತಿತ ದ್ವಿಪಪತಾಕಂ ಕಾಂ[ದಿ]ಶೀಕಂ ಭಯಾಕುಳಿತಾನೀಕಂ (ಸೌಇಇ. XX, ೨೧-೨೬; 1019). [ಸಂ.]

**ಕಾಂದಿಸೀಕತೆ** (ನಾ). ದಿಕ್ಕುಗೆಡುವಿಕೆ; ದಿಗ್ಭ್ರಮೆ; ಹೆದರಿದ ಸ್ಥಿತಿ: ಘಟಕರ್ಣತನಯ ಕುಂಭಂ ಮಡಿಯೆ ನೋಡಿ ಖಳಭಟರೆಲ್ಲ ಕಾಂದಿಸೀಕತೆಯಿಂದಮೋಡುತಿರೆ (ವೆಂಕಾರಾ. ೬-೩೮-೧).
[< ಸಂ. ಕಾಂದಿಶೀಕತಾ]

**ಕಾಂದೇನವಮಿ** (ನಾ). (ಉಕ) ಆಷಾಢ ಶುದ್ಧನವಮಿ. ☞ ಆ ದಿನ ವಿಶೇಷವಾಗಿ ಈರುಳ್ಳಿಯಿಂದಲೇ ಅಡುಗೆಮಾಡುವರು: ಮನೆಯಲ್ಲಿ ಮಾವಿನ ಹಣ್ಣಿನ ವಾಸನೆ ಇಡಗಿದೆ. ಮೇಲಾಗಿ ಇಂದು 'ಕಾಂದೇನವಮಿ'! (ಸ್ಮೃತಿಚಿ. ೧೦೩).
[← ಮರಾ. ಕಾಂದೇನವಮೀ]

**ಕಾಂಪಿಲ್ಯ** (ನಾ). ಒಂದು ಬಗೆಯ ಸಸ್ಯ: "ಕಾಂಪಿಲ್ಯಃ . . . ಯೆಂಬುವ ಓಷಧಿ. ಇದನ್ನು ಘಟ್ಟದ ಕೆಳಗೆ 'ವಸಾರೆ' ಎನ್ನುವರು" (ಸಿದ್ಧಾಂತಿ. ೧೨೮).
[ಸಂ.]

**ಕಾಂಪಿಲ್ಯವಜ್ರ** (ನಾ). = ಕಾಪಿಲ್ಯ: "ಕಾಂಪಿಲ್ಯಃ . . . ರೋಚನಿಃ — ಈ ೫ ಕಾಂಪಿಲ್ಯವಜ್ರ" (ನಾಚಿರಾ. ೧೧೧).
[ಸಂ.]

**ಕಾಂಪಿಲ್ಲ** (ನಾ). = ಕಾಂಪಿಲ್ಯ.
[ಸಂ.]

**ಕಾಂಪು** 'ಕಾಪು' ನೋ.

**ಕಾಂಪೊಂಡು** 'ಕಾಂಪೌಂಡು' ನೋ.

**ಕಾಂಪೋಸ್ಟ್** (ನಾ). ೧. ಮಿಶ್ರಣ; ಸಂಯುಕ್ತ ವಸ್ತು. ೨. ಕೃತಕ ಗೊಬ್ಬರ. 'ಕಾಂಪೋಸ್ಟುಗೊಬ್ಬರ' ಪರಾ.
[← ಇಂ. Compost]

**ಕಾಂಪೋಸ್ಟ್‌ಗೊಬ್ಬರ** (ನಾ). = ಕಾಂಪೋಸ್ಟ್ ೨: ಹೊಸರಚನೆಯ ಕಾಂಪೋಸ್ಟ್‌ಗೊಬ್ಬರ (ವ್ಯವಮು. ೩೨); ಕಾಂಪೋಸ್ಟ್‌ಗೊಬ್ಬರಗಳನ್ನು ತಯಾರು ಮಾಡುವ ವಿಧಾನಗಳಿವು (ತರಬಿ. ೯).
[ಕಾಂಪೋಸ್ಟ್ + ಗೊಬ್ಬರ]

**ಕಾಂಪೌಂಡು, ಕಾಂಪೊಂಡು** (ನಾ). ೧. ಕಟ್ಟಡದ ಸುತ್ತಲೂ ಇರುವ ಆವರಣ, —ಬಯಲು; ಪೌಳಿ: ಮನೆಯ ಕಾಂಪೌಂಡಿನಲ್ಲಿ ಚಿಕ್ಕ ತೋಟ ಬೆಳಸಿದ್ದಾರೆ (ರೂಢಿ). **ಕಾಂಪೊಂಡು**: ೧. ಮನೆಯ ಕಾಂಪೊಂಡು ದಾಟುವಷ್ಟರಲ್ಲಿ . . . ಬಂದ (ರಾಯಕ. ೧೯). ೨. ಕಟ್ಟಡದ ಸುತ್ತ ಕಟ್ಟುವ ಗೋಡೆ: ಮನೆಯ ಏಕಾಂತತೆ (Privacy) ಯನ್ನು ರಕ್ಷಿಸಲು ಒಂದು ಕಾಂಪೌಂಡು ಎನ್ನುವ ಮೋಟು ಗೋಡೆಯನ್ನು ನಿವೇಶನದ ಸುತ್ತಲೂ ಹಾಕಿಸುವುದು (ಗೃಹವಿ. ೧೫೪).
[← ಇಂ. Compound]

**ಕಾಂಪೌಂಡರು** (ನಾ). ಡಾಕ್ಟರು ಹೇಳಿದಂತೆ ಔಷಧಿಯನ್ನು ಬೆರಸಿಕೊಡುವವನು: ಡಾಕ್ಟರಿಗೆ ಫೀಕೊಟ್ಟೆ. ಕಾಂಪೌಂಡರಿಗೇನೂ ಕೊಡುವದಿಲ್ಲವೇ (ಕಥಾವಿ. I, ೧೩೯). [← ಇಂ. Compounder]

**ಕಾಂಬು₁** 'ಕಾಣ್' ಪರಾ.

**ಕಾಂಬು₂** (ನಾ). ಒಬ್ಬಾತನ ಹೆಸರು: ಇಟ್ಟು ಕಾಂಬ ಕಮ್ಮಜರಾಬುವ × × × ಸರ್ವ್ವ ಪರಿಹಾರ ಕೊಟ್ಟೋರ (ಎಕ. VI, ಕೊಪ್ಪ. ೪೦-೪; ಸು. 700 ?).
[?]

**ಕಾಂಬಲ, ಕಾಂಬಳ** (ಗು). ೧. ಕಂಬಳಿಯಿಂದ ಹೊದಿಸಲ್ಪಟ್ಟ. (ನಾ). ೨. ಕಂಬಳಿಯ ಹೊದಿಕೆಯಿರುವ ಬಂಡಿ, —ರಥ. **ಕಾಂಬಳ**: "ಕಾಂಬಲಂ . . . ಕಂಬಳಿಯಿಂದ ಹೊದಿಸಲ್ಪಟ್ಟ ತೇರು ಕಾಂಬಳವೆನ್ನಲ್ಪಡುವುದು" (ಸಿದ್ಧಾಂತಿ. ೨೧೭).
[ಸಂ.]

**ಕಾಂಬವಿಕ** (ನಾ). ಶಂಖ, ಚಿಪ್ಪುಗಳ ವ್ಯವಹಾರಿ; ಶಂಖದಿಂದ ಒಡವೆಗಳನ್ನು ತಯಾರಿಸುವವನು.
[ಸಂ.]

**ಕಾಂಬಳ** 'ಕಾಂಬಲ' ನೋ.

**ಕಾಂಬೊಲ** (ನಾ). ಕಾಣುವಷ್ಟು ಪ್ರದೇಶ: ಒಳಹೊರಗು ಕಾಂಬೊಲದಿ, ಮುತ್ತ ಬಿತ್ತು (ಮುಕ್ತಕಂ. ೫೨-೧೯). 'ಕಣ್ಬೊಲ' ಪರಾ.
[< ಕಾಣ್ + ಪೊಲ]

**ಕಾಂಬೋಜ** (ಗು). ೧. ಕಂಬೋಜದಲ್ಲಿ ಹುಟ್ಟಿದ. (ನಾ). ೨. ಕಂಬೋಜದೇಶ. ☞ ಈಗಿನ ಆಫ್ಘಾನಿಸ್ಥಾನ.
[ಸಂ.]

**ಕಾಂಬೋಜಿ** (ನಾ). ೧. ಕಂಬೋಜ ದೇಶದ ಕುದುರೆ: ಸೈಂಧವನನಾಪನ್ನಗೇಂದ್ರ ಪ್ರಹರಮಂ ಕಾಂಬೋಜಿಯಂ ತನ್ನಿ (ಬಸಪು. ೫೯-೩೭). ೨. ಬಿಳಿ ಕಗ್ಗಲಿ ಮರ.
[ಸಂ. ಕಾಂಬೋಜ]

**ಕಾಂಬೋದಿ, ಕಾಂಬೋಧಿ, ಕಾಂಭೋಜಿ** (ನಾ). [ಸಂಗೀತ] ಒಂದು ರಾಗದ ಹೆಸರು: (೬). **ಕಾಂಬೋಧಿ**: ಮಾಳವಿಯಾಹೇರಿ ಕಾಂಬೋಧಿ . . . ಒಲ್ದು ಪಾಡಿದ (ತ್ರಿಭುತಿ. ೬-೩೦). **ಕಾಂಭೋಜಿ**: ಕೌಶಿಕಿ ವೇಳಾವಳಿ . . . ಕಾಂಭೋಜಿ . . . ಎಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದವು (ವಿವೇಕ. ೨೩೩); ಕೆಲಂಬರು ಕೆಳದಿಯರು ಕಾಲವರಿತು ಕಾಂಭೋಜಿ ರಾಗವನಾಲಾಪಿಸುವರು (ಸೌಗಂಧಿ. ೫೦೭-೧೬).
[?]

**ಕಾಂಬೋಧಿ** 'ಕಾಂಬೋದಿ' ನೋ.

**ಕಾಂಭೋಜ** (ನಾ). ೧. ಕಂಬೋಜ ದೇಶ: ಲಾಳ ಚೋಳ ವರಾಳಯವ . . . ಕರೂಷ ಕಾಂಭೋಜ (ತೊರರಾ. ೧-೭-೧೮); ಕಾಂಭೋಜ ಕುಂಭಿನೀಧವಾಂಭೋಧಿಬಾಡಬಕುಂಭಸಂಭವ ಪರಾಕು (ಯಾದಮು. ೩-೧ ವ). ೨. ಕಂಬೋಜ ದೇಶದದೊರೆ: ಮದವದತಿಬಲ ಶಕುನಿ ಸೈಂಧವನದಟ ನೃಪ ಕಾಂಭೋಜ . . . ಕುಳ್ಳಿರ್ದರು (ಕುವ್ಯಾಉ. ೮-೩೨). ೩. ಕಂಬೋಜದ ನಿವಾಸಿ, —ಪ್ರಜೆ: ಇದರಲ್ಲಿ ಯವನರು, ಕಾಂಭೋಜರು . . . ಹೆಸರು ಬರುವುದರಿಂದ ಇದು ಕ್ರಿ. ಪೂ. ೩ನೆಯ ಶತಮಾನದ ಹಿಂದೆ ರಚಿತವಾಗಿರಬೇಕು (ಭಾರದ. ೬೨). ೪. ಕಾಂಬೋಡಿಯಾ ದೇಶ: ಫ್ರೆಂಚ್ ಕೊಚ್ಚಿನ್ ಚೈನಾಕ್ಕೆ ವಾಯವ್ಯದಲ್ಲಿ ಕಾಂಬೋಡಿಯಾ (ಕಾಂಭೋಜ) ದೇಶವು ಇದೆ (ಭೂಗೋಳ. ೧೧೫). ೫. ಕಂಬೋಜ ದೇಶದ ಕುದುರೆ: "ಬಾಹ್ಲೀಕ ದೇಶದೊಳು ಪುಟ್ಟಿ ಕಾಂಭೋಜವು" (ಮಂಗರಾ. ೮೩-೨೧).
[ಸಂ.]

**ಕಾಂಭೋಜಕ** (ನಾ). ೧. ಕಂಬೋಜ ದೇಶ. ೨. ಕಂಬೋಜ ದೇಶದ ಕುದುರೆ: ಬಿಸಕಾಂಭೋಜಕ ಬಾಹ್ಲೀಕ ಸೈಂಧವಾರಟ್ಟ ತೈತಿಲಂ ವಾನೇಯಂ ಪೆಸರ ಕ್ಷೇತ್ರದ ಹಯಕಾ ಪೆಸರೆ ಪೆಸರ್ (ಅಶ್ವಶಾ. ೬-೭೬).
[ಸಂ.]

**ಕಾಂಭೋಜಿ** 'ಕಾಂಬೋದಿ' ನೋ.

**ಕಾಂಸ** (ನಾ). = ಕಾಂಸ್ಯ: ನಗರವ ನೋಡಬಂದಂತೆಸೆದುವು ನಾನಾ ಕಾಂಸ ಭಾಜನವೂ (ತರ್ಕಕೌ. ೧-೮೪).
[< ಸಂ. ಕಾಂಸ್ಯ]

**ಕಾಂಸಕ** (ನಾ). ಕಂಚು; ಕಾಂಸ್ಯ: ಕಟ್ಟಳೆಯೊಳಗಣ ಕಾಂಸಕ [ಪಾಠಾಂ. ಕಾಂಸ್ಯ]ದಂತೆ ಅಣಿಯೊಳಗಣ ಕೇಣದಂತೆ ಚಿನ್ನದೊಳಗಣ ಬಣ್ಣದಂತೆ ಪಟದೊಳಗಣ ತಂತುವಿನಂತೆ ಎನ್ನಲ್ಲಿ ಭಿನ್ನವಿಲ್ಲದಿದ್ದೆಯಲ್ಲಾ (ಆದವ. ೪೦); "ಬೆಣ್ಣೆ" (ಆದವ. ಕೋಶ).
[< ಸಂ. ಕಾಂಸ್ಯಕ]

**ಕಾಂಸದೇಹ** (ನಾ). ಕಂಚಿನ ಮೈ; ಕಂಚಿನಿಂದ ಮಾಡಿದ ದೇಹ: ಬ್ರಾಹ್ಮಣರ್ಗೆ ಸಾಯಿರ ಕವಿಲೆಯ[೦] ಸುವರ್ನ್ನ ಸ್ರಿಂಗಿಯುಂ ರಜತ ಖುರಮುಂ ಕಾಂಸದೇಹ ಸಮನ್ವಿತವಾಗಿ ಕೊಟ್ಟ ಫಲಮಂ ಪಡೆವರು (ಕಇಲಿ. ೭೯-೧೩-೪೫; 1088).
[ಕಾಂಸ + ದೇಹ]

**ಕಾಂಸಾಳ** 'ಕಂಸಾಳ' ನೋ.

**ಕಾಂಸುಳಿ** 'ಕಾಸುಳಿ' ನೋ.

**ಕಾಂಸ್ಯ** (ನಾ). ೧. ತಾಮ್ರ ಹಾಗೂ ತವರಗಳ ಮಿಶ್ರಣದಿಂದಾದ ಒಂದು ಲೋಹ; ಕಂಚು: "ಕಂಚು ಕಾಂಸ್ಯಾಹ್ವಯಂ" (ಕವಿಕಂ. ೨೧೦); ಕನಕದ ರಜತದ ಕಾಂಸ್ಯದ ಮನೆ ಮುಟ್ಟುರಿ ಮುಟ್ಟಿ ಕರಗಿ ಕಣ್ಣಟ್ಟುವು (ಪಂರಾಮಾ. ೧೧-೧೫೨). ೨. ಕಂಚಿನ ಜಾಗಟೆ: ಪ್ರಹ್ಲಾದನು ತಾಳವನ್ನೂ ಉದ್ಧವನು ಕಾಂಸ್ಯವನ್ನೂ . . . ಬಾರಿಸಿದರು (ಕಭವಿ. I, ೩). ೩. ಕಂಚಿನಿಂದ ಮಾಡಿದ ಕುಡಿಯುವ ಪಾತ್ರೆ; ಪಾನಪಾತ್ರೆ: (*). [ಸಂ.]

**ಕಾಂಸ್ಯತಾಲ, ಕಾಂಸ್ಯತಾಳ** (ನಾ). ಕಂಚಿನ ತಾಳ: (*). **ಕಾಂಸ್ಯತಾಳ**: ವೀಣಾ ವೇಣು ಮುರಜ ಕಾಂಸ್ಯತಾಳಲಯಾನುಗತ ಮೆನಿಸಿದಂತಃಪುರವಿಳಾಸಿನೀಜನಮುಂ (ಕಾದಂಪೂ. ೪೨೮). [?]

**ಕಾಂಸ್ಯತಾಳ** 'ಕಾಂಸ್ಯತಾಲ' ನೋ.

**ಕಾಂಸ್ಯತೋರಣ** (ನಾ). ಕಂಚಿನ ತೋರಣ: ಕಾಂಸ್ಯತೋರಣ, ತಳಿದೋರ್ಣರಣ (ಶಮುದ. ೨೯೮ ಪ್ರಯೋ). [ಕಾಂಸ್ಯ + ತೋರಣ]

**ಕಾಂಸ್ಯಯುಗ** (ನಾ). (ಮನುಷ್ಯನು) ಕಂಚಿನ ಆಯುಧಗಳನ್ನೂ ಸಲಕರಣೆಗಳನ್ನೂ ಬಳಸುವುದಕ್ಕೆ ಆರಂಭಿಸಿದ ಕಾಲ: ಭಾರತದಲ್ಲಿ ಕಾಂಸ್ಯಯುಗ ಹರಪ್ಪಸಂಸ್ಕೃತಿಯ ಆದಿಯಿಂದಲೂ ಇದ್ದಿತು (ಭಾರದ. ೧೪). 'ಶಿಲಾಯುಗ' ಪರಾ. [ಕಾಂಸ್ಯ + ಯುಗ]

**ಕಾಕ$_{1}$** 'ಕಕ್ಕ$_{2}$' ನೋ.

**ಕಾಕ$_{2}$** (ನಾ). ೧. ಕಾಗೆ; ವಾಯಸ: "ಕಾಗೆಯೆ ಕಾಕಂ" (ಕವಿಕಂ.೬೮); ನಾಳೆ ಪೆಣದೌತಣದಲುಣಬಡಿಸುವೆನು ಜಂಬುಕ ಕಾಕಸಂತತಿಗೆ (ಕುವ್ಯಾಕ. ೫-೮). ೨. (ಆಲಂ) ದುಷ್ಟ; ನೀಚ: ಪಾಪಪುಣ್ಯವಿಲ್ಲವೆಂದು ನುಡಿವ ಕಾಕರ ಮಾತ ಕೇಳಲಾಗದು (ಮೋಳಿಮಾ. ೩೮-೧೫೯); ಸ್ವಸ್ವರೂಪವ ಕಾಕರಿಗೆ ಕಾಣಿಸುವುದನುಚಿತ (ಪ್ರಭುಲೀ. ೭-೩೭); ಕಾಕರ ನುಡಿಯಿಂ ಕೊಜಂತೆ ಕೃತಿಗಪ್ಪುದೆ (ಹವ್ಮಿರ. ೧-೧೯); ಕಳ್ಳರೋ ಕಾಕರೋ ಏನೋ ಎಂಥದೋ ಕಂಡವರು ಯಾರು (ತುಂಗಭ. ೩೦). ೩. ಒಬ್ಬ ರಾಕ್ಷಸನ ಹೆಸರು. 'ಕಾಕಾರಿ' ಪರಾ. ೪. ಒಂದು ಜಾತಿಯ ಮರ: ಕ್ಷಿತಿಪಾಲ ಮರ, ಕಾಕಮರ (ಮೈಔಗ. ೭೯-೧೬೩೧). [ಸಂ.]

**ಕಾಕ$_{3}$** (ನಾ). ಕೇರಳದಿಂದ ಬಂದು ನೆಲಸಿರುವ ಮಾಪಿಳ್ಳೆ ಜಾತಿಯ ವ್ಯಕ್ತಿ: ನಮ್ಮ ಮನೆ ಪಕ್ಕದ ಕಾಕನ ಅಂಗಡಿ (ಮುಗಮಾ. ೪೯).
[← ಮಲ. ಕಾಕ್ಕ]

**ಕಾಕಂಗೆಡು** (ಕ್ರಿ). ತೊಲಗು; ಪರಿಹಾರವಾಗು (?): ಕಾಕರ ಕಿನಿಸು ಕುಜನರ ಕೂಡಾಳಿಕೆ ಕೂಕೆ ಕೈಕೊ ಕೌಕರಕನೆ ಕಾಕಂಗೆಟ್ಟು ಕಷ್ಟದ ಕಾರ್ಯ[ವೆಲ್ಲವು] ಕೈಂಕರ್ಯವಿತ್ತೋವು ರಂಗ (ಅಕ್ಷಸಾಂ. ೭೫-೮೧).
[ಕಾಕ ? + ಕೆಡು]

**ಕಾಕಂಬಾಟ್** (ನಾ). ಒಂದು ಊರಿನ ಹೆಸರು: ಜಕ್ಕಿ ಸುನ್ದರಿ ನೆಗೞ್ದ ಖ್ಯಾತಿಯ ಕಾಕಂಬಾಟಿೞಾತ್ಮತೆಯೊಳೊಪ್ಪೆಸೆಯೆ ಬಸದಿಯಂ ಮಾಡಿಸಿದಳ್ . . . ಇಂತಿದಕ್ಕೆ ಕಾಕಂಬಾಟಿ ಕಂಭಯ್ಯನುಂ . . . ಸಾಕ್ಷಿ (ಎಕ. XI, ಚಿತ್ರದು. ೭೪-೧೪ ; 968). [?]

**ಕಾಕಂಬಿ, ಕಾಕವಿ, ಕಾಕಿವೆ** (ನಾ). ಬೆಲ್ಲವಾಗುವುದಕ್ಕೆ ಸ್ವಲ್ಪ ಮುಂಚೆ ತೆಗೆದ ಕಬ್ಬಿನ ಹಾಲಿನ ಪಾಕ: ಕಾಕಂಬಿಯ ರಸವನು ಮೊಗೆಮೊಗೆದು (ಚಂಪ್ರಸಾಂ. ೧೪-೩೬); ಕಂಬಿಕಂಬಿಯೊಳು ಬಂದಿಳುಹಿದ್ದ ಕೋಟಿ ಕಾಕಂಬಿಯ ರಸವನೆ ಜರಿದನು (ಭರಚ. ೧೬-೭೭). **ಕಾಕವಿ**: ತುಪ್ಪ, ಜೇನುತುಪ್ಪ, ಕಾಕವಿ ಇವುಗಳನ್ನು (ಕಭಾಗ. ೨೯೦); ಆ ರಸವನ್ನು (ಕಬ್ಬಿನರಸ) ತುಸು ಕುದಿಸಿದರೆ ಕಾಕವಿಯಾಗುವದು (ಮುಂಬಯಿ. ೩-೪೫); ಕಬ್ಬಿನರಸವನ್ನು ಅರಗಾವಿನಲ್ಲಿ ಇಳಿಸಿದರೆ ಗಟ್ಟಿಯಾಗದೆ ತೆಳ್ಳಗಾಗುವುದು. ಅದೇ ಕಾಕವಿ (ಕಸಾಪ. ೧-೧೪೨). **ಕಾಕಿವೆ**: ಈ ಕಾಕಿವೆಯು ಸರಾಯಿ ಮಾಡುವುದರಲ್ಲಿ ಮುಖ್ಯವಾಗಿ ಉಪಯೋಗಿಸಲ್ಪಡುತ್ತದೆ (ಮುಂಬಯಿ. ೫-೨೦೧); ರಸವು ಅರಗುದಿ ಇರುವಾಗಲೇ ಇಳಿಸಿ, ಆರಿದ ನಂತರ ಮಣ್ಣಿನ ಕೊಡಗಳೊಳಗೆ ತುಂಬಿಟ್ಟರೆ ಅದೇ ಕಾಕಿವೆಯು (ಮುಂಬಯಿ ೫-೨೦೧).
[← ಮರಾ. ಕಾಕವೀ. / ಪ್ರಾ. ಕಕ್ಕಬ]

**ಕಾಕಂಬಿಸೀರೆ** (ನಾ). ಕಾಕಂಬಿ ಬಣ್ಣದ ಸೀರೆ: ಕಾಕಂಬಿ (ಬಣ್ಣದ) ಸೀರೇ ಕಣಕಾಲೀಗರುಸಾಣಾ ಕೆಣಕಿದರೆ ಅವಳೂ ಕಿಡಗಣ್ಣೇ (ಹುಟ್ಟಹ. ೯೬). [ಕಾಕಂಬಿ + ಸೀರೆ$_{2}$]

**ಕಾಕಚಿಂಚಿ** (ನಾ). ಗುಲಗಂಜಿ; ಗುಲಗಂಜಿ ಬಳ್ಳಿ. [ಸಂ. ಕಾಕಚಿಂಚಾ]

**ಕಾಕಚೋರ** (ನಾ). ಒಂದು ಬಗೆಯ ವನಸ್ಪತಿ: "ಚೋರಪುಷ್ಪೀ-ಕಾಕಚೋರ" (ಓಷಧಿ. ೫೮). [?]

**ಕಾಕಜಂಘೆ** (ನಾ). = ಕಾಕಚಿಂಚಿ: ಕೊಗ್ಗಿಯ ಕಾಕಜಂಘೆಯ ಹಿಕ್ಕವತ್ತಿಗೆಯೊಂದು ಸಂಭವಿಪ ಮೂಳಮನಲ್ಲದಂತದನಟ್ಟುವೊಳ್ದುಡು ಗಾಜ್ಯಮಂ (ಲೋಕೋಪ. ೯-೧೫೦); ಕಾಕಜಂಘೆ ಮಧು ಮತ್ತಿಯ (ವು)ಂಗುರ್ ಪ್ರಾಕಟಂ ಘೃತಸಮೇತಮಿವಂ ನಿರ್ವಾಕುಲಂ ನೆಗ(ರ)ಪಿ ಪೂಸುಗೆ ಪುಣ್ಗಳ್ ಪೋಕುಂ (ಅಶ್ವಶಾ. ೧೨-೧೮). [ಸಂ. ಕಾಕಜಂಘಾ]

**ಕಾಕಜ್ವರ** (ನಾ). ಮೈಯೆಲ್ಲಾ ಕಪ್ಪಾಗುವ ಒಂದು ಬಗೆಯ ಜ್ವರ; ಮೂರು ಮೂರು ದಿನ ಬಿಟ್ಟು ಬರುವ ಚಳಿಜ್ವರ (*).
[ಕಾಕ$_{2}$ + ಜ್ವರ]

**ಕಾಕಡ** (ನಾ). ಒಂದು ಜಾತಿಯ ಬಿಳಿ ಹೂ: ಕಾಕಡ ಹೂವಿನ ದಂಡೆ ಹೂ ಮುಡಿದ ಹೆಣ್ಣು ಕಂಡು ತಲೆ ಕೆರೆವ ಕೋತಿ (ಶಿಲಾಲ. VI, ಮುನ್ನುಡಿ); ಕಾಕಡ ಹೂವಿನ ಜತೆಯೊಳಗಿದ್ದರು ಘಮಘಮಿಸುವುದು ಮರುಗವು (ಚಂದ್ರವೀ. ೭೮-೧೦). [← ತಮಿ. ಕಾಕ್ಕಟ್ಟಾನ್, ಕಾಕ್ಕಣ]

**ಕಾಕತನ** (ನಾ). ದುಷ್ಟತನ; ನೀಚತನ: ಕಾಕತನದೆಣಿಕೆಯನ್ನೆಣಿಸಿ ಫಲವೇನು (ತುರಂಗ. ೫೨-೨೮); ಕಾಕತನವೆ ಹೊರ ಪೋಗೋ ಎಂದು ಜನುಮುನ ತಾನ-ವಿನಾಯಕರು (ಮುಕ್ತಕಂ. ೪೯-೧೬).
[ಕಾಕ$_{2}$ + -ತನ]

**ಕಾಕತಾಲನ್ಯಾಯ, ಕಾಕತಾಳನ್ಯಾಯ** (ನಾ). = ಕಾಕತಾಲೀಯ ನ್ಯಾಯ. **ಕಾಕತಾಳನ್ಯಾಯ**: ಆಯತಾಕ್ಷಿಯ ತಂದ ರಕ್ಕಸನಾಯ ನೇತಕೆ ಕಾಕತಾಳ[ಪಾಠಾಂ. ೪]ನ್ಯಾಯದಿಂದವೆ ಕಂಡೆವೈ (ತೊರರಾ. ೫-೭-೩೩). [ಕಾಕ$_{2}$ + ತಾಲ$_{2}$ + ನ್ಯಾಯ]

**ಕಾಕತಾಲೀಯ, ಕಾಕತಾಳೀಯ** (ನಾ). ೧. ಅಕಸ್ಮಾತ್ತಾಗಿ ನಡೆದುದು. ℙ ಕಾಗೆ ಕೂಡುವುದಕ್ಕೂ ತಾಳೆಯ ಹಣ್ಣು ಬೀಳುವುದಕ್ಕೂ ಸಮ ಎಂಬ ಹಾಗೆ ಆಗುವ ಘಟನೆ; ಅನಿರೀಕ್ಷಿತ ಘಟನೆ. ೨. = ಕಾಕತಾಲೀಯ ನ್ಯಾಯ. **ಕಾಕತಾಳೀಯ**: ೧. ಪೆಜರ . . . ನುಡಿವ ಪೆಂಪು ವಿಚಾರಿಪೊಡಂತು ಕಾಕತಾಳೀಯಮೆ (ಪುಷ್ಪಪು. ೧-೭೮); ಕಾಕತಾಳೀಯ ಕಥೆ ಲೋಕಚರಿತೆಯೊಳೆಷ್ಟೊ! (ಮಂಕುಕ. ೩೦೫). ೨. ಅದು ಬಟಿಕೆ ಕಾಕತಾಳೀಯದೆ ದೊರೆಕೊಂಡ ಪ್ರಮಾದದಿಂ (ಚಂದ್ರಪು. ೭-೨೧). [ಸಂ.]

**ಕಾಕತಾಲೀಯನ್ಯಾಯ, ಕಾಕತಾಳೀಯನ್ಯಾಯ** (ನಾ). ಲೌಕಿಕ ನ್ಯಾಯಗಳಲ್ಲಿ ಒಂದು. ℙ ಅಕಸ್ಮಾತ್ತಾಗಿ ಸಂಭವಿಸುವ ಕಾರ್ಯದ ಅಥವಾ ಘಟನೆಯ ಬಗ್ಗೆ 'ಕಾಗೆ ಕುಳಿತುಕೊಳ್ಳುವ ವೇಳೆಗೆ ಸರಿಯಾಗಿ (ಅನಿರೀಕ್ಷಿತವಾಗಿ) ತಾಳೆಹಣ್ಣು ಬಿದ್ದಂತೆ' ಎಂಬ ಉಪಮೆಯನ್ನು ಸೂಚಿಸುವ ನ್ಯಾಯ: ಕಾಕತಾಲೀಯನ್ಯಾಯದಿಂದ ಎಲ್ಲೋ ಒಂದೊಂದು ಕಡೆ ಯಮಕಾದಿಗಳು ಬಂದುಕೊಳ್ಳಬಹುದು. (ಧ್ವನ್ಯಾಲೋ. ೭೭).

**ಕಾಕತಾಳೀಯನ್ಯಾಯ** : ಕಾಕತಾಳೀಯನ್ಯಾಯದಂತೆ ರಾಜಣ್ಣನ ಆಪ್ತಮಿತ್ರನೊಬ್ಬ ಒಂದು ಕುದುರೆ ಸಹಿತವಾದ ಜಟಕಾ ಗಾಡಿಯಿದೆ ಯೆಂದೂ . . . ಹೇಳಿದ (ನಾಡಿಗೇ. ೪೬) ; ಕಾಕತಾಳೀಯನ್ಯಾಯದಂತೆ ಸಂಪ್ರಾಪ್ತವಾದ ಈ ಮೊಕದ್ದಮೆ ಹಿಂದಿನ ಘಟನೆಗಳನ್ನೆಲ್ಲ ನೆನಪಿಗೆ ತಂದಿತು (ಪುನರು. ೮೪). [ಕಾಕತಾಲೀಯ + ನ್ಯಾಯ]

**ಕಾಕತಾಳನ್ಯಾಯ** 'ಕಾಕತಾಲನ್ಯಾಯ' ನೋ.

**ಕಾಕತಾಳೀಯ** 'ಕಾಕತಾಲೀಯ' ನೋ.

**ಕಾಕತಾಳೀಯತೆ** (ನಾ). "ಸಾಮಾನ್ಯವಾಗಿ ಯಾವ ಸಂಬಂಧವೂ ಇಲ್ಲದಂತೆ ತೋರುವ ಘಟನೆಗಳು ಅಥವಾ ವಿಚಾರಗಳು ಆಶ್ಚರ್ಯವಾಗುವಂತೆ ಒಟ್ಟಿಗೆ ಸಂಭವಿಸುವುದು ; ವಿಚಿತ್ರ ಸಂಘಟನೆ ; ದೈವಘಟನೆ ; ಕಾಕತಾಳೀಯತೆ" (Coincidence. ಇಂಕನಿ). [ಸಂ. ಕಾಕತಾಲೀಯತಾ]

**ಕಾಕತಾಳೀಯನ್ಯಾಯ** 'ಕಾಕತಾಲೀಯನ್ಯಾಯ' ನೋ.

**ಕಾಕತಿಂದುಕ** (ನಾ). ಒಂದು ಬಗೆಯ ಮರ ; ಕರಿ ಕೋವಿದಾರ ಮರ ; ಕಾಗೆ ತೂಬರೆಗಿಡ : (ಶಿ). [< ಸಂ. ಕಾಕತಿಂದುಕಾ]

**ಕಾಕತುಂಡ** (ನಾ). ೧. ಒಂದು ಜಾತಿಯ ಕಪ್ಪು ಮರ : (ಶಿ). ೨. ಅಗುರು ; ಕಾಲಾಗುರು : "ಕಾಕತುಂಡಃ, ಅಗುರುಃ – ಈ ೨ ಅಗುರು" (ಹಲಾಯು. ೯೦–೩೯೧). [ಸಂ.]

**ಕಾಕತುಂಡಿ** (ನಾ). = ಕಾಕತುಂಡಿಕೆ : (ವೈಔಗ ೧೦–೧೬೬). [ಸಂ. ಕಾಕತುಂಡೀ]

**ಕಾಕತುಂಡಿಕೆ** (ನಾ). ೧. ಗುಲಗಂಜಿ ಬಳ್ಳಿ. ೨. = ಕಾಗೆದೊಂಡೆ : "ತಾಪಿಚ್ಛಃ, ಕಾಕತುಂಡಿಕಾ – ಈ ೨ ಕಾಗೆದೊಂಡೆ" (ಹಲಾಯು. ೩೪–೫೦) [ಸಂ. ಕಾಕತುಂಡಿಕಾ]

**ಕಾಕದೃಷ್ಟಿ** (ನಾ). ೧. ಕಾಗೆಯ ದೃಷ್ಟಿ. ೨. ಕೆಟ್ಟದೃಷ್ಟಿ ; ವಕ್ರ ದೃಷ್ಟಿ : ಶ್ಯಾಮರಾಯನ ಕಾಕದೃಷ್ಟಿ ಈ ಹೊಲದ ಮೇಲೆ ಬಿತ್ತು (ದೀಪಹ. II, ೨೮೮). [ಕಾಕ$_2$ + ದೃಷ್ಟಿ]

**ಕಾಕದೊಂಡೆ** (ನಾ). ಕಾಗೆದೊಂಡೆ : "ಕಾಕದೊಂಡೆ [ಪಾಠಾಂ. ತುಂಡಿ, ತೊಂಡೆ]ಯದು ಕಾಪಿತ್ತಮೆನಿಸಿಕ್ಕು" (ಮಂಗರಾ. ೩೮–೨೫). [ಕಾಕ$_2$ + ತೊಂಡೆ$_3$]

**ಕಾಕಧ್ವಜ** (ನಾ). ೧. ಕಾಗೆಯ ಚಿಹ್ನೆಯುಳ್ಳ ಧ್ವಜ ; ಕರ್ಣನ ಧ್ವಜ : ಕಪಿಧ್ವಜನು ಕಾಕಧ್ವಜವನ್ನು ಉಡಿದು ಕೆಡೆಯುವಂತೆಚ್ಚನು (ಭಾಮಣಿ. ೩೪). ೨. ಕಾಗೆಯ ಧ್ವಜವುಳ್ಳವನು ; ಕರ್ಣ. [ಕಾಕ$_2$ + ಧ್ವಜ]

**ಕಾಕನಾಸಿಕೆ** (ನಾ). ಒಂದು ಚಿಕ್ಕಗಿಡ ; ಕಾಗೆದೊಂಡೆ. [ಸಂ. ಕಾಕನಾಸಿಕಾ]

**ಕಾಕನಿಶೆ** (ನಾ). ಕಗ್ಗತ್ತಲಿನ ಇರುಳು ; ಅಮಾವಾಸ್ಯೆಯ ರಾತ್ರಿ : ಬೆಳ್ಳಿ ಬೆಳಗಲಿ ಕಾಕನಿಶೆಯಲ್ಲಿ ದಿಶೆಯಲ್ಲಿ ಧ್ರುವನ ಅನಂತ್ಯಕ್ಕೆ ಕೂಟ ಸಾಕ್ಷಿ (ಹೃದಸ. ೬೭–೭). [ಕಾಕ$_2$ + ನಿಶೆ]

**ಕಾಕಪಕ್ಷ** (ನಾ). (ಚವಲ ಕರ್ಮದಲ್ಲಿ ತೆಗೆಯದೆ) ತಲೆಯ ಎರಡೂ ಪಕ್ಕದಲ್ಲಿ ಬಿಟ್ಟಿರುವ ಜುಟ್ಟು ; ಜುಲ್ಪಿಯ ಕೂದಲು ; ಚಂಡಿಕೆ : "ಶಿಖಾ, ಕಾಕಪಕ್ಷಃ, ಶಿಖಂಡಿಕಾ – ಈ ೩ ಚೆಂಡಿಕೆ" (ಹಲಾಯು. ೮೮–೩೭೮) ; ಕಳುಹು ರಕ್ಷೆಗೆನ್ನೊಡನೆ ನಿನ್ನಾ ಜೇಷ್ಠನಂ, ಕಾಕಪಕ್ಷಧರ ಕಲಿ ರಾಮನಂ (ಶ್ರೀರಾಮಾ. ೨೮–೧೮). ೨. ಕಾಗೆಯ ರೆಕ್ಕೆ : ೧, ೨ : ಅಸುರಾರಿ ಕಾಕಪಕ್ಷದಿನೆಸೆದಿರ್ದಂ ಕಾಕಪಕ್ಷವಿಸರದ ತಚ್ಚಿಂದಸುರಗಣ ಮಿರ್ಕುಮಿಾ ರಣವಸುಧೆಯೊಳೆಂದಮರರೊಸಗೆವಜೆ ವಾಜಿಪಿನಂ (ಜಗವಿ. ೩–೬೮). [ಸಂ.]

**ಕಾಕಪತಾಕ** (ನಾ). = ಕಾಕಧ್ವಜ ೨ : ದುರ್ಯೋಧನ ಪ್ರಿಯಮಿತ್ರನಂ ಕಾಕಪತಾಕನಂ (ಜಗವಿ. ೧೫–೫ ವ). [ಸಂ. (ಕಾಕ$_2$ + ಪತಾಕಾ + –)]

**ಕಾಕಪದ** (ನಾ). ೧. ಕಾಗೆಯ ಕಾಲು, —ಪಾದ : ಎರಡೂರ್ಧ್ವ ರೇಖೆಯಂ ಪಾಯ್ದೆರಡಡ್ಡಂ ರೇಖೆ ಕಾಕಪದಮಂ ಪೋಲ್ತ(ಳ್ತ)ಂತಿರೆ ಭೂತಪೀಡೆಯಿಂದಂ ಮರಣಂ ಪದಿನಾಲ್ಕು ವರುಷದೊಳ್ [ಹಯಕಳ್ಕಂ] (ಅಶ್ವಶಾ. ೫–೧೭). ೨. ಬರೆಹದಲ್ಲಿ ಏನಾದರೂ ಬಿಟ್ಟುಹೋದು ದನ್ನು ಸೂಚಿಸುವ ಚಿಹ್ನೆ ; ಹಂಸಪಾದ. ೩. [ಕಾಮಶಾ] ರತಿ ಕ್ರೀಡೆಯ ಒಂದು ಬಂಧ. [ಕಾಕ$_2$ + ಪದ$_2$]

**ಕಾಕಪಾದ** (ನಾ). ೧. = ಕಾಕಪದ ೨ : ಹಸ್ತಪ್ರತಿಗಳಲ್ಲಿ ಬಿಟ್ಟು ಹೋಗಿರುವ ಭಾಗವನ್ನು ನಾವು ಕಾಕಪಾದ, ಹಂಸಪಾದ ಎಂದು . . . ಸೂಚಿಸಲಾಗಿದೆ (ಭಾರಪ. ೨೦). ೨. ರತ್ನದ ಒಂದು ದೋಷ : ಹಿಂತೆ ಮುಂತೆಸೆವ ರೇಖೆಗಳಿಗೀ ಫಲಮಕ್ಕು ಮುಂತೆ ಷಡ್ದಳಮಷ್ಟದಳಗಳಿಂ ತೋರ್ಪುದೋರಂತದಂ ತಿಳಿ ಕಾಕಪಾದಮುತ್ತವಿಸ್ತೀರ್ಣನಿಸ್ತೂಕಮಿರೆ ನಾಶವೂ (ರತ್ನಶಾ. ೪–೧೩). ೩. [ಸಂಗೀತ] ತಾಳದ ಷಡಂಗಗಳಲ್ಲಿ ಒಂದು : ಅನುದ್ರುತ, ದ್ರುತ, ಲಘು, ಗುರು, ಪ್ಲುತ ಮತ್ತು ಕಾಕಪಾದ ಇವೇ ಷಡಂಗಗಳು (ಸಂಗೀಚಂ. ೫೪). [ಕಾಕ$_2$ + ಪಾದ]

**ಕಾಕಪರ್ಣಿ** (ನಾ). ಒಂದು ಬಗೆಯ ಬಳ್ಳಿ ; ನರಿಹೆಸರು ಬಳ್ಳಿ : (ಶಿ). [ಸಂ. ಕಾಕಪರ್ಣೀ]

**ಕಾಕಪಿಂಡ** (ನಾ). (ಶ್ರಾದ್ಧಾದಿ ಕಾಲಗಳಲ್ಲಿ ಪಿತೃಗಳ ತೃಪ್ತಿಗೆಂದು) ಕಾಗೆಗಳಿಗೆ ನೀಡುವ ಪಿಂಡ : ಅವಗೆಲ್ಲಿ ಕಣ್ಣೀರು ಜೊಳ್ಳೆಳ್ಳು ತಣ್ಣೀರು ಮೇಲೆ ಕೀರ್ತಿಯ ಶುಭ್ರ ಕಾಕಪಿಂಡ (ಗರಿ. ೮೫–೧೫). [ಕಾಕ$_2$ + ಪಿಂಡ]

**ಕಾಕಪಿಟ್ಲೆ** (ನಾ). ಗಣಿಕೆಯ ಸೊಪ್ಪು ; ಕಾಕಮಾಚಿ : ಕಾಕ ಮಾಚಿಯು (ಗಣಿಕೆಯ ಸೊಪ್ಪು=ಕಾಕಪಿಟ್ಲೆಯ ಸೊಪ್ಪು) ತ್ರಿದೋಷ ಕುಷ್ಠನಾಶಕ (ಅಷ್ಟಾಂಗ. ೧೩೩–೭೨). [?]

**ಕಾಕಪೀಲುಕ** (ನಾ). ಒಂದು ಜಾತಿಯ ಮರ ; "ಕಾಗೆ ತೂಬರೆ" (ಅಮರ. ಟೀಕೆ). [ಕಾಕ$_2$ + ಪೀಲುಕ]

**ಕಾಕಪೋಕ** (ನಾ). ಅಲ್ಪನಾದವನು ; ನೀಚ ; ಕೀಳುಮನುಷ್ಯ : ಕೆಲಹೊತ್ತು ಕಾಕಪೋಕರ ಕಥೆಗಳಿಂದ ಕೆಲಹೊತ್ತು ಪರನಿಂದೆ ಪರವಾರ್ತೆ ಗಳಿಂದ ಕಾಲವ ಕಳೆದೇನೊ (ವಾದಿಕೀ. ೭೩–೩, ೪) ; ಕಾಕಪೋಕರ ನುಡಿಗಳಂ ಬಳಸಿದರೆ ಸುಲಭದಿಂದಪ್ಪ ಕಜ್ಜಂ ಪೋಗಿ ಕಳೆಗುಂದಿ ಹಾಸ್ಯ ಕೀಡಹುದಲ್ಲದೆ (ವೆಂಕರಾ. ೬–೨–೨೭). 'ಕಾಕುಪೋಕು' ಪರಾ. [ಕಾಕ$_2$ + ಪೋಕ./ ತಮಿ. ಕಾಕ್ಕನ್ ಪೋಕ್ಕ ; ತುಳು. ಕಾಕಪೋಕೆ]

**ಕಾಕಪೌರುಷ** (ನಾ). ೧. ಕಾಗೆಯ ಪೌರುಷ. ೨. (ಆಲಂ) ಶಕ್ತಿ ಯಿಲ್ಲದಿದ್ದರೂ ದುರಭಿಮಾನದಿಂದ ತೋರುವ ಪೌರುಷ ; ಒಣ ಜಂಬ. ೩. ಒಣಜಂಬದವನು : ವಾಯಸ . . . ಬಳಿಕ ತಲೆಕೆಳಗಾಗಿ ಸಾಗರದೊಳಗೆ ಬಿದ್ದುದು ಹಂಸೆ ತಂದಿಳೆಗಿಳುಹಿತಾ ಪರಿ ಕಾಕಪೌರುಷ ಕರ್ಣ ನೀನು (ಕುವ್ಯಾಕ. ೯–೨೭). [ಕಾಕ$_2$ + ಪೌರುಷ]

**ಕಾಕಪ್ಪಿ** (ನಾ). ನಿಷ್ಪ್ರಯೋಜಕ ವಸ್ತು ; ನಿಕೃಷ್ಟವಾದದ್ದು ; ಬೆಲೆ ಯಿಲ್ಲದ್ದು ; ಕಾಗೆಯ ಹೇಲು (?) : ಲೋಕದೊಳಗೆ ಮಾಣಿಕ ವೆಂಬೊದೆ ಸ್ವಲ್ಪ ತೂಕಾವಾದರನೇಕ ಬೆಲೆ ಇಪ್ಪದು ಕಾಕಪ್ಪಿಯಾಗಿ ರತ್ನಾಕರನಂತೆ ಕರ್ಮನೇಕಬಗೆಯಿಂದ ತಾ ಕುಳಿತು ಮಾಡಿದರು ವೈಕುಂಠ ವಾಗದು (ವಿಸಾಸು. ೯೮–೧) ; ಈ ಕಾಯಕೋಸುಗಾನೇಕ ಜನರ ಸೇವೆ ಕಾಕಪ್ಪಿಯಾಗಿ ವಸ್ತ್ರಾನ್ನ ಕಾಣದೆ ಮುಜುಗಿ ಸಾಕುವರಿಲ್ಲೆನುತಲಿ (ವಿಜಯು. ೯೬). [?]

**ಕಾಕಬಲಿ** (ನಾ). ಕಾಗೆಗಳಿಗೆ ಬಲಿಯೆಂದು ಕೊಡುವ ಅನ್ನ : (ಶಿ). [ಕಾಕ$_2$ + ಬಲಿ$_6$]

**ಕಾಕಬುದ್ಧಿ** (ನಾ). ೧. ಕಾಗೆಯ ಬುದ್ಧಿ. ೨. (ಆಲಂ) ಕೆಟ್ಟಬುದ್ಧಿ; ದುಷ್ಟತನದ ಬುದ್ಧಿ: ಕಾಕಬುದ್ಧಿಯ ಕಲಿತ ಕಷ್ಟದಾ ಗಂಡಾ (ಕರಿಕ. ೯೪–೨); ಕಾಕ[ಪಾ ಠಾಂ. ಕು] ಬುದ್ಧಿಯ ಬಿಟ್ಟು ಲೋಕ ನಾಯಕನ ನೆನೆ (ಪುರಂದ. ೧–೫೭ ಅನುಪಲ್ಲವಿ). [ಕಾಕ್ಕ₂ + ಬುದ್ಧಿ]

**ಕಾಕಬ್ಬು** 'ಕಾಗಬ್ಬು' ನೋ.

**ಕಾಕಭಾಜನ** (ನಾ). ೧. ಕಾಗೆಯ ಪಾಲು; ಕಾಗೆಗಳಿಗೆ ಯೋಗ್ಯವಾದುದು; ಕೆಡಿಸಲ್ಪಟ್ಟುದು: ಕುಡದೆ ಮಾಜಿಕೊಂಡಿರ್ದ ಲೋಭಿಯ ಧನಂ ಕಾಕಭಾಜನಮಪ್ಪುದು (ಜೈಮಿಭಾ. ೨೪–೩೭). ೨. (ಆಲಂ). ಅಪಾತ್ರನಿಗೆ ನೀಡುವ ಆಹಾರ ಅಥವಾ ಭಿಕ್ಷೆ: ಮನುಜರ್ ಗಾವಿಲರೇನನೆಂಬೆನಳಿಪಂಗಾರ್ತಂಗೆ ದಂಭಂಗೆ ದುರ್ಜನ ಶೀಲಂಗೆ . . . ಚಃ ಕಾಕಭಾಜನಮಂ ಮಾಡುವರಲ್ಲದಚ್ಛ ಶಿವಭಕ್ತರ್ಗೀಶಯುಕ್ತರ್ಗೆ ಲಾಂಛನ ಧಾರರ್ಗೊಲಿದೀವರಾರೊಳರೆ (ಪಂಪಾಶ. ೯೦). [ಕಾಕ್ಕ + ಭಾಜನ]

**ಕಾಕಭೋಜನ** (ನಾ). ೧. ಕಾಗೆಯ ಆಹಾರ. ೨. ಅಯೋಗ್ಯನಿಗೆ ನೀಡುವ ಆಹಾರ; ನೀಚನಿಗೆ ಮಾಡಿಸುವ ಭೋಜನ: ಮನೆಯೊಳಗಾರಿಲ್ಲದನಿತಱೊಳೆ ಎಡೆವೊತ್ತು ವೊಲೆಯಂ ಕಲೆ ಮುಟ್ಟಲ್ವೆತ್ತಂತೆ ಮನೆಯೊಳುಳ್ಳುದೆಲ್ಲಮಂ ಕಾಕಭೋಜನಂ ಮಾಡಿ ಕಿಡಿಸಿದೆ (ಪಂಚತಂ. ೧೫೫–೬). [ಕಾಕ್ಕ₂ + ಭೋಜನ]

**ಕಾಕಮಂಚಿ, ಕಾಕಮುಂಚಿ** (ನಾ). ಕೆಂಪು ಗುಳ್ಳ; ಹಬ್ಬು ಗುಳ್ಳ: ನುಗ್ಗೆ, ಹಾಗಲ, ಗಿಡ್ಡಹಾಗಲ, ಬಾಳೆ, ಬದನೆ, ಕಾಕಮಂಚಿ, ಮೊಳಲು ಬದನೆ (ನಮ್ಮನು. ೨೩೭). **ಕಾಕಮುಂಚಿ**: ಕರಿಕಾಚಿಗಿಡ, ಕಾಕ ಮುಂಚಿ, ಕೆಂಪುಕಾಚಿ (ಮೈಔಗಿ. ೭೦–೧೯೪೫). [ಸಂ. ಕಾಕಮಾಚೀ]

**ಕಾಕಮಾಚಿ** (ನಾ). ಗಣಿಕೆಯ ಸೊಪ್ಪು; ಕಾಚಿ ಗಿಡ: "ವಾಯಸಿಕಾಕ ಮಾಚಿ ಪೆಸರಿಂ" (ವಸ್ತುಕೋ. ೩೭–೨೬); ಕಾಕಮಾಚಿಯು . . . ತ್ರಿದೋಷ ಕುಷ್ಠನಾಶಕ (ಅಷ್ಟಾಂಗ. ೧೩೩–೭೨). [ಸಂ. ಕಾಕಮಾಚೀ]

**ಕಾಕಮಾಚೀಘೃತ** (ನಾ). [ವೈದ್ಯಶಾ] ಗಣಿಕೆಯ ರಸದಿಂದ ಮಾಡಿದ ಪಾಕ: ಕಾಕಮಾಚೀಘೃತ-ಬೆಲ್ಲ ಗಣಿಕೆಯ ರಸದಲ್ಲಿ ಒಂದು ಬಳ್ಳ ತುಪ್ಪವ ಹನಿಸಿ, ಹಿಪ್ಪಲಿ, ಶುಂಠಿ . . . ಪಾಕವನ್ನು ಮಾಡಿ, ಹದದಲ್ಲಿಳುಹಿಕೊಂಡು ನಿತ್ಯವೂ ಸೇವಿಸಲು ಸ್ವರಭಂಗ ಗುಣವಾಗುವುದು (ಸಕವೈ. ೧೭೩). [ಸಂ. (ಕಾಕಮಾಚೀ + ಘೃತ)]

**ಕಾಕಮಾರಿ** (ನಾ). ಒಂದು ಬಗೆಯ ಸಸ್ಯ: ಕಾಗೆಮರಿ, ಕಾಕಮಾರಿ, ಕಾಕೀಸೊಪ್ಪುಗಡ್ಡೆ (ಮೈಔಗಿ. ೬–೧೦೭); ಕಾಕಮಾರಿ (Anamirta Cocculus): ಇದು ಕೊಂಕಣ ಮತ್ತು ಮಲಬಾರತೀರದಲ್ಲಿ ಬೆಳೆಯುತ್ತದೆ. ಇದರ ಬೀಜವು ಬಹಳ ವಿಷವುಳ್ಳದ್ದು (ಸಸ್ಯಶಾ. ೧೩೭). [ಸಂ. ಕಾಕಮಾರಿನ್]

**ಕಾಕಮುಂಚಿ** 'ಕಾಕಮಂಚಿ' ನೋ.

**ಕಾಕಮುಖ** (ಗು). ೧. ಕಾಗೆಯಂತೆ ಮುಖವುಳ್ಳ. (ನಾ). ೨. ಕಾಗೆಯ ಮುಖ: ಕಾಕಮುಖದ ಮಯೂರ ಟಿಟ್ಟಿಭಕೋಕ ವದನದ . . . ಬಹುವಿಧದ ರೂಪದನೇಕ ಭೂತವ್ರಾತ ನೆರೆದಿದು (ಕುಮಾರ. ೯–೨೦). ೩. ಅಗುರು: "ಕಾಕಮುಖಮೆನಲಗುರುಂ" (ಮಂಗರಾ. ೯೯–೨೧). [ಕಾಕ್ಕ₂ + ಮುಖ]

**ಕಾಕಮುದ್ಗ** (ನಾ). ಒಂದು ಬಗೆಯ ಕಾಡುಹೆಸರು; ನರಿಹೆಸರು; "ಕಾಡು ಹೆಸರುಗಿಡ" (ಅಮರ. ಟೀಕೆ). [ಸಂ. ಕಾಕಮುದ್ಗಾ]

**ಕಾಕರತ್ನ** (ನಾ). ಅಶುಭರತ್ನ; ಕೀಳಾದ ರತ್ನ (?): ಲೋಕದೊಳು ಲಘುವಾದ ರತ್ನಮೌಕ್ತಿಕಗಳಂ ತೂಕ ವೆಗ್ಗಳಮಾದ ವಜ್ರಮಂ ಕೃತ್ರಿಮದ ಕಾಕರತ್ನಂಗಳಂ ಪಿಡಿಯದದ ವಜ್ರದಿಂದೊರೆಯೆ ಕಳೆ ಕುಂದಾಗಿರೆ (ರತ್ನಶಾ. ೧೨–೧೯). [< ಕಾಕ್ಕು₃ + ರತ್ನ]

**ಕಾಕರಲಿಪಿ** (ನಾ). = ಕಾಕಲಿಪಿ ೧: ಈ ಬರಹಗಳನ್ನು ನನ್ನ "ಕಾಕರಲಿಪಿ" ಯಿಂದ ಉದ್ಧರಿಸಿ ಅಚ್ಚಿಗೆ ಅಣಿಮಾಡಿದವರು ಗೊರೂರ್ ಅವರೇ (ರಾಮಾನಿ. ೯ ಪ್ರಸ್ತಾವನೆ). [ಕಾಕ? + ಲಿಪಿ]

**ಕಾಕರವ** (ನಾ). ಕಾಗೆಯ ಕೂಗು, —ಧ್ವನಿ: ಶುಕನೋದಿಂಗುಜಿಚೆಲ್ವೆ ಕಾಕರವ (ಸೋಮೇಶ. ೩). [ಕಾಕ್ಕ₂ + ರವ₂]

**ಕಾಕರಿಪು** (ನಾ). ಕಾಗೆಯ ವೈರಿ; ಗೂಗೆ: ಕುಕಿಲ ಸಾರಸ ಕಾಕರಿಪು ಜಾತಕ ಭರದ್ವಾಜಾದಿ ಪಕ್ಷಿ ಪ್ರಕರ ಬಿದ್ದುದು ಬಿಗಿದ ಕೇಸುರಿ ಕಣ್ಣೆವಲೆಗಳಲಿ (ಕುಮಾವ್ಯಾ. ೨೦–೫೨). [ಕಾಕ್ಕ₂ + ರಿಪು]

**ಕಾಕರಗಲ್ಲು** (ನಾ). (ಮೂಲೆ ಮೂಲೆಯಾಗಿರುವ) ಚೂಪುಗಲ್ಲು: ಕಕ್ಕೇಕಾಯ ತಿಂದು ಕೈತುಂಬ ನೀರ ಕುಡಿದು ಕಾಕರುಗಲ್ಲಾಗೆ ಹರಲೊತ್ತಿ ಸುಡುವಾಗ ಸಾಕಾಯ್ತು ತೌರೀನ ಮನೆವಾರು (ಜಗೀತೆ. ೫೫). [< ಕಂಕರೆ + ಕಲ್ಲು (< ಕಲ್₃)]

**ಕಾಕಲಿ, ಕಾಕಳಿ** (ನಾ). ಸೂಕ್ಷ್ಮವಾದ ಮತ್ತು ಅಸ್ಪುಟವಾದ ಮಧುರಧ್ವನಿ: ಜಿನುಗುವ ತುಂಬಿಯಿಂಚರಮೆ ಗಾಣರ ಕಾಕಲಿ [ಪಾಠಾಂ. ಳಿ] ಕೂಡೆ ಸೋರ್ವ ಮಾವಿನ ಸೊನೆ ಗಂಧಸಿಂಧುರ ಮದಂ (ಆದಿಪು. ೧೩–೬); ಕಾಕಲಿಗೆ ಕರಮೊಸೆದು ದೇವತೆ ತಲೆಯಂ ತೂಗಿದವೋಲ್ (ಲೀಲಾವ. ೧೧–೧೩). **ಕಾಕಳಿ**: ನನೆಗರ್ಚಿ ಕಾಕಳಿಯೊಳಾಣತಿಗೆಯ್ವ ಮದಾಳಿ (ಪಂಪಭಾ. ೫–೩೫); ಚಿರಮುಕ್ಕೆ ಕಾಕಳಿಯ ಹೂಂಕೃತಿ ಭೃಂಗಚಯಕ್ಕೆ (ಚಂದ್ರಪು. ೭–೭೬). ದಂಡಿಗೆವಿಡಿದಲ್ಲಲ್ಲಿ ಬತ್ತೀಸರಾಗಂಗಂಡು ಕಾಕು[ಕ]ಳಿಯೊಗದೆ ಕೊಂಡಾಡೆ ಜಾಣರು ಪಾಡುವ ಗಾಣರ ತಂಡವ ಕಂಡನಾ ನೃಪತಿ (ರಾಮುವಿ. ೧೧–೭೦). [ಸಂ. ಕಾಕಲೀ]

**ಕಾಕಲಿಪಿ** (ನಾ). ೧. ಅಂದವಲ್ಲದ ಲಿಪಿ; ವಕ್ರವಕ್ರವಾದ ಲಿಪಿ. ೨. ಲಿಪಿಗಳಲ್ಲಿ ಒಂದು ಪ್ರಕಾರ: ಖಗಲಿಪಿ, ಕದಂಬಲಿಪಿ, ಕಾಕಲಿಪಿ, ಕವುಷಲಿಪಿ . . . ಯೀ ಅಗಣಿತ ಲಿಪಿಗಳ ನೋಡಲರಿಯದೆ ಬಿಜ್ಜಳ ರಾಯನ ಸಭೆಯೊಳು ಕಳಕಳಗೊಳ್ಳುತಿದ್ದರು ವಿದ್ವಾಂಸರುಗಳೆಲ್ಲಾ (ಭಾಸ್ಕರ. ೭೭–೫). [ಕಾಕ್ಕ₀ + ಲಿಪಿ]

**ಕಾಕಲೇಱು** (ನಾ). ಒಂದು ಸ್ಥಳದ ಹೆಸರು: ಮೂಡ ಕಾಕಲೇಱು ಅಗ್ನೇಯದಲು ಸೊಳ ಕೂಡಲ ಪಳ್ಳಮುಂ (ಸೌಇಇ. IX–i, ೧೨೧–೫೨; 1057). [?]

**ಕಾಕವಿ** 'ಕಾಕಂಬಿ' ನೋ.

**ಕಾಕವೃದ್ಧಿ** (ನಾ). ಒಂದು ಬಗೆಯ ಸಸ್ಯ: "ಜಿತೇಂದ್ರಿಯಾಹ್ವಾ - ಕಾಕವೃದ್ಧಿ" (ಓಷಧಿ. ೬೨). [?]

**ಕಾಕಸರಳಿ** (ನಾ). ಒಂದು ಬಗೆಯ ಮರ: ಕಾಕಸರಳಿ, ಬೀಸರಳಿ, ಅಕ್ಕಸರಳಿ (ಮೈಔಗಿ. ೩೧–೬೦೫). [?]

**ಕಾಕಸ್ನಾನ** (ನಾ). ೧. ಕಾಗೆಯ ಸ್ನಾನ; (ತಲೆಯನ್ನು ಮಾತ್ರ ನೀರಲ್ಲಿ ಅದ್ದಿ) ಕಾಗೆಯು ಮಾಡುವ ಸ್ನಾನ. ೨. (ಆಲಂ) ಅವಸರದ ಸ್ನಾನ; ಅರ್ಧಂಬರ್ಧ ಸ್ನಾನ: ನಾವು ಮತ್ತೊಮ್ಮೆ ಕಾಕಸ್ನಾನ ತೀರಿಸಿ, ಥಾಲಿ ಹಸ್ತರಾಗಿ (ದೀಪಹ. II, ೭). 'ಗಜಸ್ನಾನ' ಪರಾ. [ಕಾಕ್ಕ + ಸ್ನಾನ]

**ಕಾಕಳಿ** 'ಕಾಕಲಿ' ನೋ.

**ಕಾಕಾ₁** 'ಕಕ್ಕ₃' ನೋ.

**ಕಾಕಾ₂** (ನಾ). ಇಷ್ಟ; ಮರ್ಜಿ (?).

ಕಾಕಾಹಿಡಿ = ಮರ್ಜಿಹಿಡಿ; ಮನವೊಲಿಸು; ಖುಷಿಪಡಿಸು: ಈ ಅಪರ ವಯಸ್ಸಿನಲ್ಲಿ ಕೆಲಸಗಳಿಗೆ ಅಪ್ಲಿಕೇಶನ್ ಬರೆಯುವುದು, ಹಲ್ಲು ಕಿರಿಯುವುದು, ಕಾಕಾಹಿಡಿಯುವುದು ಮುಂತಾದವುಗಳನ್ನು ಮಾಡುವುದು ಈಗ ಸಾಧ್ಯವಿಲ್ಲ (ನಾಡಿಗೇ. ೧೬೮). [?]

**ಕಾಕಾಂಗಿ** (ನಾ). ಒಂದು ಬಗೆಯ ಸಸ್ಯ; ಕಾಗೆದೊಂಡೆ: (*). [ಸಂ. ಕಾಕಾಂಗೀ]

**ಕಾಕಾಕ್ಷಿ** (ನಾ). ಕಾಗೆಯ ಕಣ್ಣು. 'ಕಾಕಾಕ್ಷಿ ನ್ಯಾಯ' ಪರಾ. [ಕಾಕ$_2$ + ಅಕ್ಷಿ]

**ಕಾಕಾಕ್ಷಿಗೋಳಕನ್ಯಾಯ** (ನಾ). (ಕಾಗೆ ಒಂದೇ ಕಣ್ಣು ಗುಡ್ಡೆಯನ್ನು ಹೊರಳಿಸಿ, ಒಮ್ಮೆ ಎಡಕ್ಕೆ ಒಮ್ಮೆ ಬಲಕ್ಕೆ ಹೀಗೆ ತನ್ನ ಎರಡೂ ಕಡೆಗೆ ದೃಷ್ಟಿಯಿಡುವಂತೆ) ಒಂದೇ ಯುಕ್ತಿಯಿಂದ ಎರಡು ಕಾರ್ಯಗಳನ್ನು ಸಾಧಿಸುವಿಕೆ; ಒಂದೇ ಪದವನ್ನು ಎರಡು ರೀತಿಯಿಂದ ಅನ್ವಯಿಸುವಿಕೆ: ಬಲವಂತರಪ್ಪ ಶತ್ರುಗಳ ನಡುವೆ ದುರ್ಬಲನಪ್ಪ ನೃಪನಾ ರಿಪುಗಳಂ ವಾಙ್ಮಾತ್ರದಿನತಿಸಂಧಾನಂಗೆಯ್ದು ತನ್ನ ಮನಮನೆನ್ನರುಮಱಿಯದಂತು ಕಾಕಾಕ್ಷಿಗೋಳಕನ್ಯಾಯದಿಂದಿರ್ಪುದು ದ್ವೈಧೀಭಾವಮೆಂಬುದಕ್ಕುಂ (ಪಂಚತಂ. ೨೧೯-೨೧). [ಕಾಕಾಕ್ಷಿ + ಗೋಳಕ (=ಗೋಲಕ) + ನ್ಯಾಯ]

**ಕಾಕಾಕ್ಷಿನ್ಯಾಯ** (ನಾ). = ಕಾಕಾಕ್ಷಿಗೋಳಕನ್ಯಾಯ: ಆ ಶಾಸ್ತ್ರಪದ್ಧತಿಗಳು ಕಾಕಾಕ್ಷಿನ್ಯಾಯದಂತೆ ಎರಡು ಪಕ್ಷಗಳಿಗೂ ಸಮನ್ವಯಿಸುತ್ತಿರುತ್ತವೆ (ಲಕ್ಷ್ಮೀಪ್ರ. ೮೭). [ಕಾಕಾಕ್ಷಿ + ನ್ಯಾಯ]

**ಕಾಕಾರಿ** (ನಾ). ೧. ಗೂಬೆ; ಗೂಗೆ: "ಕಾಕಾರಿ ಪಿಂಗಳಿ ನಿಶಾಟನಂ ಕೌಶಿಕಮೂಲೂಕಮೆನೆ ಗೂಗೆಯಕ್ಕುಂ" (ಮಂಗರಾ. ೫೦-೪). ೨. ಕಾಕಾಸುರನಿಗೆ ಶತ್ರುವಾದವನು; ರಾಮ. [ಕಾಕ$_2$ + ಅರಿ$_6$]

**ಕಾಕಾಳಿ** (ನಾ). ಕಾಗೆಗಳ ಗುಂಪು, —ಸಮೂಹ: ಸುಪರ್ಣಂಗೀಡೆ ಕಾಕಾಳಿ (ಸೋಮೇಶ. ೧೦). [ಕಾಕ$_2$ + ಆಳಿ$_4$ (=ಆಲಿ$_4$)]

**ಕಾಕಿ$_1$** ೧. ತಾರೆಗಿಡ; ಗಂಡು ಕಕ್ಕೋರ್ಲ. ೨. ಕೆಂಪು, ಹಳದಿ ಅಥವಾ ಕರಿಹಣ್ಣು ಬಿಡುವ ಒಂದು ಗಿಡ; ಕರಿಕಾಜಿ ಗಿಡ; ಕಾಕಮುಂಚಿ: ಗೋಕಾವಿ ಮುಂದಿನ ಕಾಕೀಯ ಗಿಡಗಳಿರಾ ತಾಯ ಹಡದಾವನ ಬರಹೇಳ (ಕನ್ನಜಾ. ೧೧೦); ಕಾಕೀಯ ಈ ಹಣ್ಣ ಕಯ್ತುಂಬ ಹಿಡಿಕೊಂಡು (ಕಜಾಗೀ. ೬). [?]

**ಕಾಕಿ$_2$** (ನಾ). ೧. ಹೆಣ್ಣು ಕಾಗೆ. ೨. [ಸಂಗೀತ] ಗಾಯಕ ದೋಷಗಳಲ್ಲಿ ಒಂದು: ೧. ಸಂದಷ್ಟ – ಹಲ್ಲುಕಚ್ಚಿ ಹಾಡುವವನು . . . ೯. ಕಾಕಿ – ಕಾಗೆಯಂತೆ ಕ್ರೂರವಾಗಿ ಹಾಡುವವನು (ಸಂಗೀಚಂ. ೧೦೩). [ಸಂ. ಕಾಕೀ]

**ಕಾಕಿ$_3$** 'ಖಾಕಿ' ನೋ.

**ಕಾಕಿಣಿ** (ನಾ). ೧. ಒಂದು ತೂಕದ ಪ್ರಮಾಣ; ಪಣದ ನಾಲ್ಕನೆಯ ಒಂದು ಭಾಗದಷ್ಟು ಅಥವಾ ಮಾಷದ ಕಾಲುಭಾಗದಷ್ಟು ತೂಕ. ೨. ಕವಡೆ. ೩. ಇಪ್ಪತ್ತು ಕವಡೆಯ ಬೆಲೆಬಾಳುವ ಒಂದು ನಾಣ್ಯ: ಕವಡೆಗಳಿಪ್ಪತ್ತಾಗಲು ಪವಣಿಸೆ ಕಾಕಿಣಿಯು ನಾಲ್ಕುಪಣ ಪದಿನಾರು ಭುವನದಿ ದ್ರಮ್ಮ (ಭಾಸ್ಕರ. ೭೬-೪). [ಸಂ. ಕಾಕಿಣೀ]

**ಕಾಕಿಣೀರತ್ನ** (ನಾ). [ಜೈನ] ಏಳು ಜೀವರತ್ನಗಳಲ್ಲಿ ಒಂದು; ಉಜ್ಜಿದರೆ ಅಥವಾ ಒರೆದರೆ ಬೆಳಕನ್ನು ಉಂಟುಮಾಡುವ ಒಂದು ರತ್ನ: ನಿರ್ಭೇದ್ಯ ತಮಸ್ತಮೋನಿರಸನ ಪ್ರಭಾಪ್ರಭೂತಗುಣೋಪೇತಮಪ್ಪ ಚಿಂತಾಜನನಿಯೆಂಬ ಕಾಕಿಣಿ[ೀ]ರತ್ನಮುಂ (ಆದಿಪು. ೧೧-೩ ವ); ವಿಜಯ ಪ್ರಶಸ್ತಿಯಂ ಕಾಕಿಣೀರತ್ನದಿಂ ಬರೆಯಿಸಿ (ಚಾವುಂಪು. ೩೯-೧೧); ಚಂದ್ರಾದಿತ್ಯರ ಬೆಳಗಿನೊಳಾವ ಬೆಳಗಂ ಬಯಸಿ ಬರೆದೊಡಾ ಬೆಳಗಂ ಪಡೆಯಲಾರ್ಪ ಕಾಕಿಣೀರತ್ನಮುಂ (ಜೀವಸಂ. ೧೭-೩೩ ವ). [ಸಂ. (ಕಾಕಿಣೀ + ರತ್ನ)]

**ಕಾಕಿನಿ** (ನಾ). = ಕಾಕಿಣಿ ೩: ೨೦ ವರಾಟಕ = ೧ ಕಾಕಿನಿ, ೪ ಕಾಕಿನಿ = ೧ ಪಣ, ೧೬ ಪಣ = ೧ ದ್ರಮ್ಮ, ೧೬ ದ್ರಮ್ಮ = ೧ ನಿಷ್ಕ (ಗಣಿಚ. ೨೮೨. ಅಡಿಟ). [ಸಂ. ಕಾಕಿನೀ]

**ಕಾಕಿಮಂದಲಿ** (ನಾ). ಒಂದು ಬಗೆಯ ಬಳ್ಳಿ: ಕಾಗೆದೂರಿಬಳ್ಳಿ, ಕಾಕಿಮಂದಲಿ (ವೈಔಗಿ. ೭೬-೧೫೪೮). [ಕಾಕಿ$_1$ + ಮಂದಲಿ$_0$]

**ಕಾಕಿವೆ** 'ಕಾಕಂಬಿ' ನೋ.

**ಕಾಕಿಸೊಪ್ಪುಗಡ್ಡೆ** (ನಾ). ಒಂದು ಬಗೆಯ ಸಸ್ಯ: ಕಾಗೆಮಾರಿ, ಕಾಕಮಾರಿ, ಕಾಕಿಸೊಪ್ಪುಗಡ್ಡೆ (ವೈಔಗಿ. ೩-೧೦೭). [ಕಾಕಿ$_1$ + ಸೊಪ್ಪು$_3$ + ಗಡ್ಡೆ$_1$]

**ಕಾಕಿಹಣ್ಣು, ಕಾಕೆಹಣ್ಣು, ಕಾಗೆಹಣ್ಣು** (ನಾ). ಕಾಕಿಗಿಡದ ಹಣ್ಣು: ಕಾಕಿಹಣ್ಣಲಿ ಹೊಡೆದ ಕಮಳದೂವಿಲಿ ಹೊಡೆದ (ಗರತಿ. ೬೯). **ಕಾಕೆಹಣ್ಣು**: "ಸದಾಶಿಕ್ತ – ಕಾಕೆಹಣ್ಣು" (ಓಷಧಿ. ೧೭೪). **ಕಾಗೆಹಣ್ಣು**: (ಕರಾ). ಕಾಗೆಹಣ್ಣು ನೋಡಲು ಚೆಂದ. ತಿನ್ನಲು ರುಚಿ (ರೂಢಿ). [ಕಾಕಿ$_1$ + ಹಣ್ಣು (< ಪಣ್$_3$)]

**ಕಾಕೀ** 'ಕಕ್ಕಿ' ನೋ.

**ಕಾಕೀಮುಖ** (ನಾ). ಸುಷುಮ್ನಾನಾಡಿಯ ತುದಿ; ಬ್ರಹ್ಮರಂಧ್ರ: ಧಾತುಗಳ ಪಟಲಗಳ ನೋಡೆ ಕಾ[ಪಾಠಾಂ. ತಾ]ಕೀಮುಖವ ಸಂಧಿಗಳ ಮೇರುಗಿರಿ ವರ್ಣಗಳ ಸೇರುವೆಗಳ ನೋಡುತಿರೆ (ವೆಂಕಾರಾ. ೨-೩೫-೪೮). [ಸಂ. (ಕಾಕೀ + ಮುಖ)]

**ಕಾಕು$_1$** (ನಾ). ಆಯಾಸ; ಹಿಂಸೆ: ನೂಕಿಸಿ ಕಟ್ಟಿ ಹಿಂಗ್ಯೆಯ್ಯ ಬಿಗಿದಗಸನ ಕಾಕುಮಾಡಿಯೆ ಕೊಲ್ಲಿಸುವೆನು (ಮಡಿಸಾಂ. ೧-೧೫). [← ತೆಲು. ಕಾಕು = ಗಾಸಿ]

**ಕಾಕು$_2$** (ನಾ). ಈರುಳ್ಳಿ ಮೊದಲಾದವುಗಳ ಕಟುವಾಸನೆ: (*). [?]

**ಕಾಕು$_3$** (ನಾ). ೧. ಭಯ, ಕೋಪ, ತಾಪ ಮೊದಲಾದ ಭಾವೋದ್ರೇಕದಿಂದ ಆಗುವ ಧ್ವನಿಯ ಬದಲಾವಣೆ; ಭಾವಸೂಚಕವಾದ ಧ್ವನಿಯ ಏರಿಳಿತ, —ಉಚ್ಚಾರಣೆಯ ಪಲುಕು: ಸಂಬುದ್ಧಿಯೊಳ್ ಹ್ರಸ್ವದೀರ್ಘಮೆಂಬೆರಡು ಕಾಕುಗಳಂ ವಿಕಲ್ಪದಿಂ ಪೇೞ್ವರ್ (ಶಮದ. ೧೨೩ ವೃತ್ತಿ); ಕೆಲವು ವೇಳೆ ಮಾತು ವ್ಯಂಗಸೂಚಕವಾಗಿರುತ್ತದೆ; ಆದರೆ ಅದನ್ನು ಹೇಳುವಾಗ ಉಪಯೋಗಿಸುವ "ಕಾಕು" ವಿನಿಂದ ಅದು ವಾಚ್ಯಸದೃಶವೇ ಆಗಿಬಿಡುವುದುಂಟು (ಭಾರವಿಶಾ. ೩೦೯); ಕೆಳದನಿಗಳು ಮತ್ತು ಬದಲಾಗುವ ಮಾತಿನ ಕಾಕುಗಳು ವಿಶಾಲವಾದ ಬಯಲುಮಂದಿರದಲ್ಲಿ ಗೊತ್ತಾಗುತ್ತಲೇ ಇರಲಿಲ್ಲ (ಸಾಹಿಪ್ರ. ೧೬೧). ೨. ವ್ಯಂಗ್ಯ; ಕೊಂಕುನುಡಿ: "ಕೊಂಕಿದ ನುಡಿ ಕಾಕುವೆಂಬುದು" (ಹಲಾಯು. ೨೩-೧೯೨); "ಅತಿ ಕೊಂಕುನುಡಿ ಕಾಕೆನಿಕ್ಕು" (ಮಂಗರಾ. ೨೬-೩); ಒಟ್ಟಿಜೆಯ ರೀತಿಯ ಕಾಕಿನ ನುಣ್ಪಿನ (ಪುಷ್ಪಪು. ೯-೮೩). ೩. ದೇಶ್ಯ; ದೇಶೀಯ: "ಕಾಕೆಂದು ದೇಸಿಯಂ" (ಕಬ್ಬಿಕೈ. ೬೫); "ಕಾಕೆಂದೆನೆ ದೇಸೀಯಂ" (ಕವಿಕಂ. ೨೯೭). ೪. ಗುಣುಗುಟ್ಟುವಿಕೆ. ೫. ಕೇಡು; ಕೆಡುಕು: ಜೀವ್ಯೋಪಕಾರಕೆ ಕಾಕ ನೆನೆಯದಿರು (ಕುವ್ಯಾಅ. ೨೧-೩೩). ೬. ಹಾಳು; ನಾಶ: ಏಕೆ ಸಾರಥಿ ರಥವ ಮುಂದಕೆ ನೂಕಿ ಗಂಟಲ ಕೊಯ್ಸಿ ಸುಡುಸುಡು ಕಾಕಲಾ (ಕುವ್ಯಾವಿ. ೬-೧೦); ಸಾಕು ಬಯಲ ಭಕ್ತಿಯೇಕಮ್ಮ ವನವನು ಕಾಕು ಮಾಡಿದೆ ರಾಯ ನೀನು (ಹರಿಸಾಂ. ೩೧-೫೮). ೭. ಕೀಳ್ತರಗತಿಯದು; ನೀಚವಾದುದು; ಕೀಳ್ಮಟ್ಟದ್ದು: ಈಕೆ ನಿನಗಹಳಲ್ಲ ನಿಂದಿರು ಕಾಕನಾಡದಿರು (ಕುವ್ಯಾವಿ. ೨-೧೪). ೮. ಕೆಟ್ಟ ಮನುಷ್ಯ; ನೀಚ: ಆ ಕಾಕುಗಳಪ್ಪರ ಮಾತಂತಾನಾವ ನಿಶ್ಚಯಮೆಂದು ನುಡಿದೊಡಂ (ಧರ್ಮಾಮೃ. ೨-೧೮೭); ಏನುವನಱಿಯದ ಕಾಕು ದುರ್ಬೋಧಕಂ ಕವಿಯೆನಿಸಿ ಕುಂದೇ ಮಹಾ ಕವಿಗೆ (ಹಚಕಾ. ೧-೨೪); ಮತಿಯುಳ್ಳ ಲೋಗರಿಂ ಕಾಕೆನಿಸಿಕೊಂಡೊಡೆ (ವೀಶೈಪು. ೫-೯-೧೦); ಈ ಕಥೆ ಸಜ್ಜನರಿಗೆ ಕರ್ಣಾಮೃತ ಕಾಕು ಪುರುಷರ್ಗತಿ ವಿಷವೂ (ಪೂಜ್ಯಚ. ೧-೫೩).

೯. ಸುಳ್ಳು; ಸಟೆ; ವ್ಯರ್ಥವಾದ ಮಾತು: ಇವೆಲ್ಲವು ಕಾಕು ಸಟೆ ಭ್ರಾಂತೆಂದು ತಿಳಿದು ನಿರ್ಧರ ನಿಜದಿ ನಿಂದರು (ಅವಚಂ. ೧೫೯–೭೨೪); ವೇದವನು ಹುಸಿಯೆಂಬ ರಜ್ಞಾನ ನಿರುಹರಣ ಪೌರಾಣಮುಂ ಕಾಕೆ [ಪಾಠಾಂ. ಳೆ]ಂಬರು (ಸೋಮಚ. ೧–೪೪); ಚಾಪತಂತ್ರ ಪಿನಾಕಿ ಯೇಱಿಸಿ ನುಡಿದ ನುಡಿಗಳು ಕಾಕಹುದೆ (ಕುವ್ಯಾದ್ರೋ. ೧–೪೨).

**ಕಾಕಾಗು** = ಹಾಳಾಗು; ಕೆಟ್ಟುಹೋಗು: ಕಾಕಾದುದು ಕಾರಿಯ ವೆಂದು ನುಡಿದನನೇಕ ದುಗುಡಭಾವದಲಿ (ಅಂಜಚ. ೫–೨೦೦); ಏಕಲಿಂಗ ನಿಷ್ಠೆ ಇಲ್ಲದಡೆ ಕಾಕಪ್ಪೆಯಮ್ಮ (ಶಿವಗೀ. ೧೬೧–೮೦೧ ವ); ಮೈಮಱೆದು ಕಾಕಪ್ಪರೆಂದೆಮ್ಮ ರಕ್ಷಿಸಲೆಯ್ದಿದ್ದೆ (ಭರಚ. ೨೮–೧೯). **ಕಾಕಬಳಸು** = ೧. ಕ್ರಮತಪ್ಪಿ ನಡೆ; ಅಡ್ಡದಾರಿ ಹಿಡಿ: ತಪ್ಪಿ ನಡೆದರೆ ಭ್ರಮಿಸು ವರು ಬುಧರು ಲೋಕ ನಮ್ಮನುದಾಹರಿಸುವುದು ಕಾಕನೇ ಬಳಸುವುದು (ಕುವ್ಯಾದ್ರೋ. ೧೮–೫೬); ಲೋಕದೊಳಗಣ ಮರ್ತ್ಯನೆಂದೇ ಕಾಕ ಬಳಸಿದೆ (ಅಂಬಿಕಾ. ೬–೪೩). ೨. ಕೆಟ್ಟಮಾತಾಡು; ವಕ್ರವಾಗಿ ನುಡಿ; ವ್ಯರ್ಥವಾದ ಮಾತನ್ನಾಡು; ಸಟೆಹೇಳು: ಏಕೆ ನಿಮಗೀ ಚಿಂತೆ ವೈರಿಯ ತಾಕುವೆನು ಕೊಡು ವೀಳೆಯವ ಬಿಡು ಕಾಕ ಬಳಸುವ ಹಿರಿದ ಗಳಹುವ ಮಗನೆ ತಾ ನಿಮಗೆ (ಕುವ್ಯಾದ್ರೋ. ಒರಿಇ. ೨೭೭ ಪರಿ); ಏಕೆ ನೃಪತಿ ವೃಥಾ ಮನೋವ್ಯಥೆ ಕಾಕ ಬಳಸಲುಬೇಡ ನೀನವಿವೇಕಿಯೇ (ನಳಚ. ೬–೧೭); ಕಾಕಬಳಸದಿರು ತಮ್ಮ ನಗೆಗೇಡ ಮಾಡಿದಿರೇಳು (ತುರಂಗ. ೩೮–೩). **ಕಾಕುಮಾಡಿಸು** = ವಿಕಾರಗೊಳಿಸು; ರೂಪು ಗೆಡಿಸು: ಈ ಕುದೃಷ್ಟಿಯನುದಯದಲ್ಲಿ ಊರಱಿಕೆಯೊಳ್ ಕಾಕು ಮಾಡಿಸಿ ನಮ್ಮ ನಗರಿಯ ಪೋಜಮಡಿಸಬೇಕು (ಸಮ್ಯಕೌ. ೮–೭೦). **ಕಾಕುಮಾಡು** = ೧. ಹಾಳುಮಾಡು; ನಾಶಪಡಿಸು; ಕೆಡಿಸು: ಲೋಕವನಾಳುವ ರಣದೇವರಾಯನು ಕಾಕುಮಾಡಿ ಲೋಕವ ಸುಲಿದಾನು (ಕಾಲಸಂ. ೧೫೩–೩೧); ಕಾಕುಮಾಡಿದನೆಂದು ಮನದೊಳಗಳಲು ಮಿಾರುತಿರೆ (ಕೌಶಿರಾ. ೪೩–೩೭); ಕಾಕು ಮಾಡುವ ಜವನೊಳಗಾಗಿ ಬಾಳ್ವುದು ಸಾಕು (ಭರಚ. ೪೫–೫೮); ಪಾಕಶಾಸನ ಪದವಿಯನು ನೆರೆ ಕಾಕುಮಾಡಿದನಾ ಮಹೀಶ (ದೇವೀಪು. ೨–೬೦). [ಸಂ.]

**ಕಾಕು$_{4}$** (ನಾ). ೧. (ದೂರದಲ್ಲಿರುವವನಿಗೆ ಕೇಳಿಸುವಂತೆ) ಗಟ್ಟಿಯಾಗಿ ಮಾಡುವ ಧ್ವನಿ: ಹುಲ್ಲೂರು ಸೀಮೆ ದೊರೆಮಗ್ಹಾಕಿದ ಕಾಕು ಕಣಿವೆ ಬಾಗಿಲಿಗೆ ಕದವಾಯ್ತು (ನಾಪದ. ೧೩೭); ಹೂವಯ್ಯ ಪುಟ್ಟಣ್ಣನ ಕಾಕನ್ನಾಲಿಸಿ, ಎದ್ದುಬಂದು (ಕಾನೂರು. ೩೮೯). ೨. ಚೀರಾಟ; ಬೊಬ್ಬೆ: ಕೋಪದಿಂ ಕಾಕು ಕೂಗಿದನಕ್ಕಿ ಸರಿವಂತೆ ಶಬರಿ (ಶ್ರೀರಾಮಾ. ೨೭೪–೨೮೧). ೩. [ಸಂಗೀತ] ಕೊಳಲಿನ ವಾದನದಲ್ಲಿ ಒಂದು ಧ್ವನಿಭಂಗಿ: ಭಣಿತೆ ಬೆಡಂಗು ಕಾಕು ಖಚರಂ ಗಮಕಂ ತಿರುಪಿಂಪು ... ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ಪಾಸಮಂ (ಜಗವಿ. ೫–೩); ಬೆಡಗು ಕಾಕ[ಪಾಠಾಂ. ಲ]ಂ ಕೊನರೆ ... ಬಾರಿಸುವ ಕೊಳಲ (ಅನಾರ. ೧೮೨–೩).

**ಕಾಕುಹಾಕು** = ಕೂಗು; ಕೇಕೆಹಾಕು; ಸಂಕೇತಧ್ವನಿ ಮಾಡು: ಅಲ್ಲಿರುವ ರಾಜಕನ್ಯೆಯರು ಕಾಕುಹಾಕಿ ನಗುವ ಹಾಗೆ ಕೆಲವು ಹೊತ್ತು ಪರಿಹಾಸವಂ ಮಾಡಲು (ಕೃವಾವಿ. ೬೪); ಕಾಕುಹಾಕಿದ ಕಂಡು ಬೇಕಾಗಿ ಬಂದೆ ಬಾರೋ ನನ ಗೆಣೆಯ ಬಯಲೀಗೆ (ಜಗೀತೆ. ೨೧); ಇಲ್ವಲಂ ತೆಕ್ಕನೆ ಪಿಶಾಚಿ ನುಡಿಯಿಂದೆ ದುರ್ಮಂತ್ರಮಂ ಕಾಕುಹಾಕುತೆ ಕೂಗಿ ಕರೆಯುವನ್ ತಮ್ಮನಂ (ಶ್ರೀರಾಮಾ. ೧೯೦–೩೯೬). [?]

**ಕಾಕುಗೀತ** (ನಾ). ಕೆಟ್ಟಗೀತ; ಕೀಳ್ತರಗತಿಯ ಗೀತ: ಪುಲಿದೊವಲೆಂದು ಕುಱಿದೊವಲಿನುಡೆಯುಟ್ಟು ಪಾವುಗೆಗಳೆಂದು ಮಣೆಗಳ ಮೆಟ್ಟಿ ಕಾಕುಗೀತಗಳನೆಸಗಿ (ಸಿಂಗಿರಾ. ೧೯–೧೨). [ಕಾಕು$_{3}$ + ಗೀತ]

**ಕಾಕುತನ** (ನಾ). ಕೆಟ್ಟತನ; ದುಷ್ಟತನ: ಏಕಾಂತವಾಸಿಗಳೆಲ್ಲರ ಹಿಡಿತಂದು ಲೋಕದ ಮಧ್ಯದೊಳಗಿರಿಸಿ ಕಾಕುತನದಲಿ ಕಾಡಿ ಏಡಿಸಿತ್ತು ನೋಡಾ ಮನವು (ಅಖಂಡೇ. ೨೫೭–೧೦೯); ಮಹೇಂದ್ರಜಾಲವ ನೀ ಕಲಿತು ಬಂದೆಮ್ಮ ಮುಂದಿಯ ಕಾಕುತನದಲಿ ಕಾಡಿದಾ ಮಗ್ಗಿನ್ನು [ಪಾಠಾಂ. ನೂಕಿ ಗರ್ಜಿಸುತಿರ್ದಯೆಮಗಿನ್ನೀಗ] ನಮ್ಮೊಡನೆ ನೂಕಲಱಿಯದು (ಪ್ರಭುಲೀ. ೧೩–೨೬); ಕಾಕುತನದೆಣಿಕೆಯನು ಬಿಡು (ತೊರರಾ. ೪–೧೧–೧೨); ನಾ ಕೇಳ್ದುದಿಲ್ಲಮೆನ್ನಿಷ್ಟಮುಂ ಸಲಿಸೆಂದು ಕಾಕುತನದಿಂದೆ ಮಂಥರೆಯೆನಗೆ ಬೋಧಿಸಲ್ (ಭರಥ. ೪–೮೮).
[ಕಾಕು$_{3}$ + -ತನ]

**ಕಾಕುತ್ಸ್ಥ** (ನಾ). ಕಕುತ್ಸ್ಥ ವಂಶದಲ್ಲಿ ಹುಟ್ಟಿದವನು; ರಾಮ: ಅರಣ್ಯಪ್ರವೇಶಮಂ ಮಾಡಿದಂ ... ಸತಿ ಸಹಿತ ಕಾಕುತ್ಸ್ಥನು (ಜೈಮಿಭಾ. ೧೮–೩). [ಸಂ.]

**ಕಾಕುದ** (ನಾ). ಅಂಗುಳು; ತಾಲು ಪ್ರದೇಶ. [ಸಂ.]

**ಕಾಕುದೈವ** (ನಾ). ಅಲ್ಪಶಕ್ತಿಯ ದೇವತೆ; ಕ್ಷುದ್ರದೇವತೆ: ಮೂರ್ಖರಾದರು ಜನರು ಲೋಕದೊಳಗೆ ಏಕದೇವನ ಬಿಟ್ಟು ಕಾಕುದೈವನ ಭಜಿಸಿ (ಪುರಂದ. ೧–೬೨ ಅನುಪಲ್ಲವಿ). [ಕಾಕು$_{3}$ + ದೈವ]

**ಕಾಕುನುಡಿ** (ನಾ). ಕೆಟ್ಟಮಾತು; ಕೊಂಕುಮಾತು: ಸಾಕು ಗೌತಮ ಮುನಿಯ ಮುಳಿಸಿನ ಕಾಕುನುಡಿ ಫಲಿಸುವುದೆ (ಕುವ್ಯಾಅ. ೧೩–೪೮); ಕಾಕುನುಡಿ ಸಟೆ ಕುಟಿಲ ಕುಹಕ ವ್ಯಾಪಾರವ ಹೊದ್ದನಯ್ಯ ನಿಮ್ಮ ಶರಣ (ಅಖಂಡೇ. ೧೦೫–೩೮). [ಕಾಕು$_{3}$ + ನುಡಿ$_{2}$]

**ಕಾಕುಪೋಕು** (ಗು). ಅಲ್ಪವಾದ; ಕೀಳ್ತರಗತಿಯ; ತುಚ್ಛವಾದ: ಎಲ್ಲಾದರೂ ಕಾಕುಪೋಕು ಚಿನ್ನವಾದರೆ ನಾನು ಹುಡುಗಿಯನ್ನು ಕೊಂಡು ಹೋಗಲಿಕ್ಕಿಲ್ಲ (ಸರಸ. ೮೯). ‘ಕಾಕಪೋಕ’ ಪರಾ.
[ಕಾಕು$_{3}$ + ಪೋಕು]

**ಕಾಕುಬಲ** (ನಾ). ೧. ಅಲ್ಪಬಲ; ಕೀಳಾದ ಶಕ್ತಿ. ೨. ಅಲ್ಪಬಲವುಳ್ಳವನು: ಸಾಕು ಸಾಕಂಜಿದೆನು ಮನುಜರು ಕಾಕುಬಲರು ನಿಜ ಸ್ವಭಾವವನೇಕೆ ಬಿಡುವೆವು ತಿಳಿದು ತಿಳಿಯೆವು ಕಂಡೊಡಂಜುವೆವು (ಕುವ್ಯಾಅ. ೧೦–೩೯). [ಕಾಕು$_{3}$ + ಬಲ]

**ಕಾಕುಬುದ್ಧಿ** (ನಾ). ಕೆಟ್ಟಬುದ್ಧಿ; ವಕ್ರಬುದ್ಧಿ: ಕಾಕು [ಪಾಠಾಂ. ಕ] ಬುದ್ಧಿಯ ಬಿಟ್ಟು ಲೋಕನಾಯಕನ ನೆನೆ (ಪುರಂದ. ೧–೫೭ ಅನುಪಲ್ಲವಿ).
[ಕಾಕು$_{3}$ + ಬುದ್ಧಿ]

**ಕಾಕುಮತಿ** (ನಾ). ವಕ್ರಬುದ್ಧಿಯುಳ್ಳ ವ್ಯಕ್ತಿ; ಕ್ಷುದ್ರಮತಿ: ಕಾಕುಮತಿಗಳು ನಾವು ಚಿತ್ತವ್ಯಾಕುಳಿತೆಯರು ನಾವು (ಬಸವು. ೪೦–೮೩).
[ಕಾಕು$_{3}$ + ಮತಿ$_{1}$]

**ಕಾಕುಮದ್ದು** (ನಾ). ಕೆಟ್ಟಮದ್ದು; ತುಚ್ಛವಾದ ಔಷಧಿ: ಲೋಕ ವಶ್ಯಕೆ ಮದ್ದು ಏಕಾಕಿ ಹೊಂಬೇರು ಆಕೆಯನೊಲಿಸಲದು ಮದ್ದು ಮಿಕ್ಕೆಲ್ಲ ಕಾಕುಮದ್ದು (ಸರ್ವಜ್ಞ. ೧೭೮೩).
[ಕಾಕು$_{3}$ + ಮದ್ದು$_{1}$ (< ಮರ್ದು)]

**ಕಾಕುಮನ** (ನಾ). ಕೆಟ್ಟಮನಸ್ಸು; ಅಳಿಮನ; ಕ್ಷುದ್ರಮನಸ್ಸು: ಶಿವಶಿವಾ ಈ ಕಾಕುಮನಕ್ಕೆ ಏನುಮಾಡಲಿ, ಹರಹರಾ ಈ ಕಳ್ಳಮನಕ್ಕೆ ಎಂತು ಮಾಡಲಿ (ಅಖಂಡೇ. ೧೪–೧೮). [ಕಾಕು$_{3}$ + ಮನ$_{1}$]

**ಕಾಕುಮನುಜ** (ನಾ). ಕೆಟ್ಟಸ್ವಭಾವದ ಮನುಷ್ಯ; ನೀಚ: ಕಾಕು ಮನುಜ [ಪಾಠಾಂ. ಜನ]ರ ಚಾಡಿ ನೀ ಕೇಳಿ ಕೋಪೋದ್ರೇಕ ಬೇಡೆಚ್ಚಱಿಕೆ (ಪುರಂದ. ೨–೪೫–೩); ಅರಸಿಕರಿಗಿದು ಪೇಳ್ವುದಲ್ಲ ಕಾಕು ಮನುಜರಿಗಿದು ಸಮರ್ಪಕವಾಗಿ ಸೊಗಸುವುದೇ (ಶಮಪಾಂ. ೧೦೨).
[ಕಾಕು$_{3}$ + ಮನುಜ]

**ಕಾಕುಮಾತು** (ನಾ). ಕೀಳುಮಾತು; ಕೆಟ್ಟಮಾತು: ಲೋಕ ವೀರೇಳಕೆ ನೆಜ಼ೆ ಬಲ್ಲಿದನು ಪಿನಾಕಿಯೆಂಬವು ಕಥೆಯೊಳಗೆ ನಾಕಿಗಳನು ಕೂಡಿ ತ್ರಿಪುರಕೆ ನಡೆದೀ ಕಾಕುಮಾತ [ಪಾಠಾಂ. ದನೆಂಬೀ ಕೊಜಿತೆಯ] ಕೇಳಬಹುದೆ (ತ್ರಿಪುಸಾಂ. ೩-೨೯); ಎತ್ತಣ ಕಾಕುಮಾತಿ[ಪಾಠಾಂ. ಮೂಳ]ಗೆ ಕೋಳುಹೋದೆನೊ ಕಾಮನೆಂಬವಗೆ (ಕುವ್ಯಾಅ. ೮-೨೧); ಕಾಕುಮಾತು ಆಡಬೇಡ, ಪೋಕವಿದ್ಯೆಗೆ ಹೋಗಬೇಡ (ಗಾದೆ). [ಕಾಕು$_3$ + ಮಾತು$_1$]

**ಕಾಕುಮೂಳ** (ನಾ). ದುಷ್ಟವ್ಯಕ್ತಿ; ನೀಚ: ಏಕೆ ನುಡಿದನೊ ಚಿತ್ರಸೇನನದೇಕೆ ನಾ ಕೈಕೊಂಡೆನೆತ್ತಣ ಕಾಕುಮೂಳ[ಪಾಠಾಂ. ಮಾತಿ]ಗೆ ಕೋಳುಹೋದೆನೊ ಕಾಮನೆಂಬವಗೆ (ಕುವ್ಯಾಅ. ೮-೨೧). [ಕಾಕು$_3$ + ಮೂಳ (< ಮೂಳಿ)]

**ಕಾಕುರುಳು, ಕಾಕುಳ್ಳು** (ನಾ). ಕಾಡಿನಲ್ಲಿ ಬಿದ್ದು ಒಣಗಿದ ಸಗಣಿ; ಕಾಡು ಬೆರಣಿ (ಕ). **ಕಾಕುಳ್ಳು**: "ಕಾಕುಳ್ಳು – ಕಾಡುಕುಳ್ಳು" (ಜಾನಕೋ. ೩೬); ಅಡವಿಗೆ ಹೋಗಿ ಕಲ್ಲು, ಕಟ್ಟಿಗೆ, ಕಾಕುಳ್ಳು ಮುಂತಾದವುಗಳನ್ನು ಆರಿಸಿ ತಂದು ಮಾರುವವರಿಗೆ ಏನು ಬಂಡವಲವು ಬೇಕಾಗುವದಿಲ್ಲವೆಂದು ತೋರುತ್ತದೆ (ಮುಂಬಯಿ. ೫-೨೫೦). 'ಕಾಟ್ಟುರುಳ್' ಪರಾ. [ಕಾ$_2$ + ಕುರುಳು$_3$ (< ಕುರುಳ್$_2$)]

**ಕಾಕುಲತೆ** 'ಕಕ್ಕುಲತೆ' ನೋ.

**ಕಾಕುಲಾತಿ** 'ಕಕ್ಕುಲತೆ' ನೋ.

**ಕಾಕುವಗರಣ** (ನಾ). ಕುತ್ಸಿತ ಬುದ್ಧಿಯಿಂದ ಹಗರಣ ಮಾಡುವವನು: ಕಾರುಕರು ಕಾಕುವಗರಣರು ಶಿವಶರಣರಾಕಾರದಿಂ ಬರೆ ... ನಿಜ ತಪಸ್ವಿಗಳ ಮಾಡಿ ತೋಱಿದ ಬಸವನು (ಸಿಂಗಿರಾ. ೧೯ ಸೂಚನೆ). [ಕಾಕು$_3$ + ಪಗರಣ]

**ಕಾಕುವೆಸರ್** (ನಾ). ಕೆಟ್ಟಹೆಸರು; ತುಚ್ಛವಾದ ಹೆಸರು: ಕೊಂಕಿನ ಅಗ್ಗದ ಕಾಕುವೆಸರ್ಗಳಿಂದ ಬೀಳ್ಗಳೆದು (ಬಿಟ್ಟಅ. ೮೫-೧೦). [ಕಾಕು$_3$ + ಪೆಸರ್]

**ಕಾಕುವ್ಯಂಜನೆ** (ನಾ). ಸ್ವರ ವ್ಯತ್ಯಾಸದಿಂದ ಬೇರೆಬೇರೆ ಭಾವಗಳನ್ನು ಅಭಿವ್ಯಕ್ತಿಗೊಳಿಸುವಿಕೆ: ಅವನ ಮನಸ್ಸಿನಲ್ಲಿ ಹಿಂದೆ ಎಂದೂ ಸ್ಫುರಿಸದಿದ್ದ ಅರ್ಥಗಳೂ, ಭಾವಗಳೂ ನಟರ ಅಭಿನಯದಿಂದಲೂ ಕಾಕುವ್ಯಂಜನೆಯಿಂದಲೂ ಸ್ಫುರಿಸುವುವು (ಪ್ರಬಂಧ. ೩೬). [ಕಾಕು$_3$ + ವ್ಯಂಜನೆ]

**ಕಾಕುಸೇವೆ** (ನಾ). ಕ್ಷುದ್ರರ ಸೇವೆ: ಕಾಕು ಸೇವೆಯಿಲ್ಲದ ಮನುಜನೆ ಕಾಶಿ (ದಾಸಪ. ೧೬೫ ಕ). [ಕಾಕು$_3$ + ಸೇವೆ$_1$]

**ಕಾಕುಳ್ಳು** 'ಕಾಕುರುಳು' ನೋ.

**ಕಾಕೂ** (ನಾ). ಕಕ್ಕಿ; ಚಿಕ್ಕಮ್ಮ: ಗಂಗಾಕಾಕೂ ನನಗೆಲ್ಲ ತಿಳಿಸಿ ಹೇಳುವರು (ಸ್ಮೃತಿಚಿ. ೫೩); ಉಮಾಕಾಕೂ ಅಡಿಗೆಯ ಮನೆಯಲ್ಲಿ, ಭೀಮಾಕಾಕೂ ಉಗ್ರಾಣದಲ್ಲಿ (ಸ್ಮೃತಿಚಿ. ೨೨೯). [← ಮರಾ. ಕಾಕೀ, ಕಾಕೂ]

**ಕಾಕೆ$_1$** (ನಾ). = ಕಾಕಿ$_1$: "ಕಾಕೆ ವಾಯಸಿ ಕಾಕಮಾಚಿಯುಕ್ಕು" (ಮಂಗರಾ. ೩೯-೨೫); ಕಟಿಯೊಳ್ ಕರ್ಚಿ ಕರಿಯ ಕಾಕೆಯ ರಸಮಂ ತೊಡೆದು (ಲೋಕೋಪ. ೯-೧೯೪); ಕಾಕೆಯ ಹಣ್ಣೊಂದು ಮೆಲಿದನೊಬ್ಬ ಶರಣನು (ಶರಚ. ೧೦೩). [ಸಂ. ಕಾಕಾ]

**ಕಾಕೆ$_2$** (ನಾ). ದುಷ್ಟೆ; ನೀಚಳು: ಕಪಟೆಯರು ಧೂರ್ತೆಯರು ಹಾಸ್ಯದ ಕುಪರಿಯರು ಕಾಕೆಯರು ನಿಷ್ಠುರ ಚಪಳೆಯರು ದುರ್ವ್ಯಸನಿಯರು (ಬಸಪು. ೪೦-೫೪). [ಕಾಕು$_3$ + -ಎ$_2$]

**ಕಾಕೆಹಣ್ಣು** 'ಕಾಕಿಹಣ್ಣು' ನೋ.

**ಕಾಕೇಂದು** (ನಾ). ಒಂದು ಬಗೆಯ ಸಸ್ಯ; "ಕಾಗೆ ತೂಬರೆ ಗಿಡ" (ಅಮರ. ಟೀಕೆ). [ಸಂ.]

**ಕಾಕೋಡುಂಬರಿಕೆ** (ನಾ). ಒಂದು ಜಾತಿಯ ಮರ; ಕಲ್ಲುಹತ್ತೀ ಗಿಡ. [< ಸಂ. ಕಾಕೋದುಂಬರಿಕಾ]

**ಕಾಕೋದರ** (ನಾ). ಹಾವು; ಸರ್ಪ: "ವಿಷಧರಃ ... ಕಾಕೋದರಃ, ಕಂಚುಕೀ ... ಭುಜಂಗಮಃ – ಈ ೨೫ ಪಾವಿನ ಪೆಸರ್" (ಹಲಾಯು. ೧೦೫-೧೮); ಕುಳಿಕನುಂ ಮುಂತಾದ ಕಾಕೋದರಾವಲಿಯೌಡಿಂದಗಿದತ್ತು (ವಿಷ್ಣುಪು. ೧-೫-೪೪). [ಸಂ.]

**ಕಾಕೋದರಶಾಯಿ** (ನಾ). ಹಾವಿನ ಮೇಲೆ ಮಲಗಿರುವವನು; ವಿಷ್ಣು (ಕ). 'ಶೇಷಶಾಯಿ' ಪರಾ. [ಸಂ. ಕಾಕೋದರಶಾಯಿನ್]

**ಕಾಕೋದರಾಭರಣ** (ನಾ). ಹಾವನ್ನೇ ಆಭರಣವಾಗಿ ಮಾಡಿಕೊಂಡವನು; ಶಿವ: ಕಾಕೋದರಾಭರಣನಮಳ ಕಾರುಣ್ಯಮ[ಂ] ಪಡೆದು ಪೋಪಳು ಪುಡುಕುತೆ (ನವಮೋ. ೮-೬೭). 'ಸರ್ಪಾಭರಣ' ಪರಾ. [ಕಾಕೋದರ + ಆಭರಣ]

**ಕಾಕೋಲ** (ನಾ). ೧. ಕಾಗೆ ಜಾತಿಯ ಒಂದು ದೊಡ್ಡಪಕ್ಷಿ; ಡೊಂಬಕಾಗೆ; ಮಂಡಕಾಗೆ; ಅಡವಿಯ ಕಾಗೆ: "ಕಾಕೋಲಃ, ಮೌಕುಳಿಃ, ದ್ರೋಣಃ, ಕೃಷ್ಣಕಾಕಃ, ವನಾಶ್ರಯಃ – ಈ ೫ ಅಡವಿಯ ಕಾಗೆ" (ಹಲಾಯು. ೪೧-೯೩). ೨. ಕಾಗೆ. ೩. ವಿರೋಧ; ಹಗೆತನ. ೪. ಒಂದು ಬಗೆಯ ವಿಷ. 'ಕಾಕೋಲಧರ' ಪರಾ. ೫. ಕಾಡುಕಿಚ್ಚು; ದಾವಾನಲ: "ವಿರೋಧಂ ಬಲಿಭುಗ್ವಿಷಂ ದವಮಿವುಂ ಕಾಕೋಲಮಕ್ಕುಂ" (ನಾನಾರ. ೯೮); "ವಿಷಜ್ವಲನಂ ಹಗೆ ಕಾಗೆ ನಾಲ್ಕು ಕಾಕೋಲಾಖ್ಯಂ" (ನಾನಾಕಂ. ೧೧೪). [ಸಂ.]

**ಕಾಕೋಲಧರ** (ನಾ). ವಿಷವನ್ನು ಧರಿಸಿರುವವನು; ಶಿವ (ಕ). [ಸಂ.]

**ಕಾಕೋಲಿ, ಕಾಕೋಳಿ$_1$** (ನಾ). ಒಂದು ಬಗೆಯ ಮೂಲಿಕೆ; ಜ್ವರವನ್ನು ಹೋಗಲಾಡಿಸಿ ತಂಪನ್ನುಂಟುಮಾಡುವ ಸಿಹಿಯಾಗಿರುವ ಒಂದು ಮೂಲಿಕೆ: (ಕ). **ಕಾಕೋಳಿ$_1$**: "ವಾಯುಲಸ್ವಾಲೀ, ಸ್ವಾದುರಸಾ, ಕಾಯಸ್ಥಾ ಈ – ೩ ಕಾಕೋಳಿ" (ನಾಚಿರಾ. ೧೧೧); ಕಾಕೋಳಿ, ಕ್ಷೀರಕಾಕೋಳಿ ... ಹದದಲ್ಲಿಳಿಸಿ ಸೇವಿಸಲು ಕಾಸ, ಶ್ವಾಸ, ಗುಲ್ಮ ... ಇವೆಲ್ಲಾ ಮಾಣುವುವು (ಸಕವೈ. ೪೪೪); "ಧ್ವಾಕ್ಷೋಳಿ – ಕಾಕೋಳಿ" (ಓಷಧಿ. ೮೧). [ಸಂ. ಕಾಕೋಲೀ]

**ಕಾಕೋಳಿ$_1$** 'ಕಾಕೋಲಿ' ನೋ.

**ಕಾಕೋಳಿ$_2$** (ನಾ). ತುಂಟ; ಉಂಡಾಡಿ: "ಕಾಕೋಳಿ – ತುಂಟ; ಉಡಾಳಟಪ್ಪು" (ಜಾನಕೋ. ೩೬); ದಾಯುಗೆಡಲು ತಿಳಿಯದೆ ಮತಿಹೂಳಿ ವಾಯಕೆ ಸುಖಿಸು ಕ್ವಾಕೋಳಿ (ಅವಧೂ. ೧೩). [?]

**ಕಾಕ್ಷಿ** (ನಾ). ಸುವಾಸನೆಯ ಮಣ್ಣು; ಸೌರಾಷ್ಟ್ರಮೃತ್ತಿಕೆ: (ಕ). [ಸಂ. ಕಾಕ್ಷೀ]

**ಕಾಕ್ಷೀವ** (ನಾ). ಒಂದು ಜಾತಿಯ ಸಸ್ಯ; ನುಗ್ಗೆ ಗಿಡ. [ಸಂ.]

**ಕಾಗಜ** 'ಕಾಗದ' ನೋ.

**ಕಾಗಡಿ** 'ಕಾವಡಿ' ನೋ.

**ಕಾಗಣಿ** (ನಾ). ೧. ಒಂದು ಕೆರೆಯ ಹೆಸರು: ಕಾಗಣಿ ತಟಾಕಮ್ (ಎಕ. I, ೧-೨೩; 466); ಅತ್ತಿಗಾಲಾ ಚವುತ್ತಕೆ ಕೊಟ್ಟಪ ಆರಾಟಿಯ ದೇವರಿಗೆ ಕಟ್ಟಿಮೇ ಕಾಗಣಿ ಕೆಜ಼ೆ ಕೊಟ್ಟುವೊರ್ (ಎಕ. III, ಮಳವ. ೮೭-೯; ಸು. 740). ೨. ಒಂದು ಮನೆತನದ ಹೆಸರು: ಬಡಗೆರೆ ನಾಡ ಲಕ್ಕಿಯೂರ ಕಾಗಣಿಯರ ಬಮ್ಮಗಾವುಂಡನ ಮಗಂ (ಎಕ. III, ಮಳವ. ೭೮-೭; 1183). [?]

**ಕಾಗದ, ಕಾಗಜ, ಕಾದಗ** (ನಾ). ೧. ಬಿದಿರು ಮೊದಲಾದುವುಗಳಿಂದ ಮಾಡಿದ, ಬರೆಯಲು ಉಪಯೋಗಿಸುವ ಹಾಳೆ: "ಪತ್ರಿಕೆಯೆನಲು ಕಾಗದಮಕ್ಕು" (ಮಂಗರಾ. ೧೦೫–೧೫); ಹಲಿಗೆ ತಾಳಾಪತ್ರ ಕಾಗದದೊಳಗೆ ನಿರ್ಮಲವಾಗಿ ಬರಹವ ಕಲಿತು ಶಾಸ್ತ್ರವ ನೋಡಲೆಳಸಿದರು (ಜಿನಭಾ. ೭–೩೨); ಕಾಗದದೊಳ್ ತವಾಕಾರಮಂ ಚಿತ್ರಿಸಿ (ಕೆಳನೃ. ೩–೭೪); ಸಕಲ ಗಗನ ಸ್ಥಳಂ ಕಾಗದಗಳಾದೊಡಂ . . . ಕಾರ್ತವೀರ್ಯಾರ್ಜುನಂ ನಿತ್ಯದೊಳ್ ಬರದೊಡಂ ಮುಗಿಯದು (ಅರ್ಜಾವಿ. ೨೮–೪೪); ಆ ಅಕ್ಷರಗಳ ಮೇಲೆ ಮಸಿ ಹಚ್ಚಿ, ಮೇಲೆ ಕಾಗದವನ್ನು ಹಾಕಿ ಹತ್ತೊತ್ತಿ ಮುದ್ರಿಸುತ್ತಿದ್ದರು (ಮುಂಬಯಿ. ೪–೨೦೪). ೨. ಬರೆಹವನ್ನುಳ್ಳ ಹಾಳೆ; ಓಲೆ: ಕಾಗದವೆಲ್ಲವ ಕೈಕೊಂಡು ಪಯಣೋದ್ಯೋಗವ ನೆನದಳಳ್ಳಿಯಲಿ (ಮೋಹತ. ೨೮–೩೮); ಕಟ್ಟಿದ್ದುದದಜ ಕಂಠದೊಳೆಂದು ಕಾಗದ ಬಿಟ್ಟು ನೋಡಿದನವನೀಶ (ಭರಚ. ೫೯–೮೩); ಈಬಾರಿ ರಿಜಿಸ್ಟರ್‌ಮಾಡಿ ಕಾಗದ ಹಾಕು (ರಂಗಕ. ೧೦೭). ೩. ಒಪ್ಪಂದ; ಕರಾರು; ಕಟ್ಟಳೆ; ಶಾಸನ: ಬರಸಿಕೊಟ್ಟ ಕಾಗದದ ದಾನಶಾಸನ (ಎಕ. XII, ಮದ್ದಗಿ. ೩೧–೪೦; 1650 ?); ಈ ಕಾಗದವ ಸೇನಭೋವರ ಕಡಿತಕೆ ಬರಸಿ ತಿರಿಗಿ ಇವರ ವಸಕೆ ಕೊಡುವದಾಗಿ (ಎಕ. VII. ಶಿವಮೊ. ೧೭–೧೫; 1696). ೧. ಕಾಗಜ: ಸಸಿಬಟ್ಟುಗಾಗಜದೊಳತನು ಕಸ್ತುರಿಮಸಿಯೊಳೊಸೆದು ಬರೆದಿರ್ದ ಮೋಹಾಗಮ್ಲೋಂಕಾರಮೋ (ಚಿಬಪು. ೯–೨೫). ೨. ಕಾಗಜವಂ ಬರೆದು ತಂಮ ತಂದೆ ಬಳಿಗೆ ಕಳುವಲಾಗಿ ಆ ಕಾಗಜವ ಪೋದಿಸಿಕೊಂಡು (ಮೈಆರಿ. ೧೯೩೧, ೧–೪೦; 1310); ಮದನನಟ್ಟಿದ ಕಾಗಜವೆನಿಸುವ ಚೆಲ್ವಿನೊದವಾದುದಾ ಚಿತ್ರಪಟವು (ನಾಗಕು. ೩–೫); ವಜೀರ ಮಲ್ಲುಕರ ಮೊತ್ತ ಕಳುಪಿದ ಕಾಗಜಗಳ ತಲೆಯೊಳು [ಪಾಠಾಂ. ಗಳನು ಕೂಡಿ ಜಗಳವ ತಲೆಯೊಳು] ಹೊತ್ತು (ಕುರಾಸಾಂ. ೩೭–೬೪); ನಿಲ್ಲದೆ ಕಾಗಜವನು ತಮ್ಮ ದಾತಾರನಲ್ಲಿ ಗಟ್ಟಿದರು (ಕಂನವಿ. ೧೩–೭೦). **ಕಾದಗ**: ೨. ನಿಮ್ಮ ತಂದೆಗೆ ಒಂದು ಕಾದಗ ಬರೆದು ತಿಳಿಸು (ರೂಢಿ).

ಕಾಗದಪತ್ರ=೧. ಕಾಗದದ ಮೂಲಕ ನಡೆಯುವ ವ್ಯವಹಾರ; ಪತ್ರವ್ಯವಹಾರ: ನನಗೂ ಅವನಿಗೂ ಕಾಗದಪತ್ರ ನಡೆದಿತ್ತು (ರೂಢಿ). ೨. ಮಾಡತಕ್ಕ ವ್ಯವಹಾರವನ್ನು ಕರಾರುವಾಕ್ಕಾಗಿ ಕಾಗದದಲ್ಲಿ ಬರೆದು ಕೊಡುವುದು; ದಾಖಲೆ ಪತ್ರ. ಕಾಗದದ ಹಣ= ಹುಂಡಿ, ಚೆಕ್ಕು, ಕರನ್ಸಿ, ನೋಟು ಮೊದಲಾದುವು; ನಗದು ನಾಣ್ಯಗಳ ಬದಲಾಗಿ ಉಪಯೋಗಿಸುವ ಕಾಗದ.

[← ಪಾರ. ಹಿಂ. ಮರಾ. ಕಾಗದ್; ಅರ. ಕಾಘಝ್]

**ಕಾಗದಹಾಳ** (ನಾ). "ಕಾಗದವನ್ನು ಹಾಳುಮಾಡುವವನು; (ಹಾಸ್ಯವಾಗಿ) ಕೀಳುತರಗತಿಯ ಬರಹಗಾರ" (Paper-stainer. ಇಂಕಲಿ). [ಕಾಗದ+ ಹಾಳ್$_3$]

**ಕಾಗದಳಿ, ಕಾಗದಾಳಿ** (ನಾ). (ಉಕ). ಕೆಂಪುಮಣ್ಣಿನ ಭೂಮಿ: ಮೊದಲನೇ ಜಾತಿಯ ಮೆಣಸು ಕಾಗದಳೀ ಭೂಮಿಯಲ್ಲಿ ಬೆಳೆಯುತ್ತದೆ (ಕಭಾಗ. ೨೭೫). **ಕಾಗದಾಳಿ**: ಈ ತೋಟಗಳಿಗೆ ಕಾಗದಾಳಿ ಎಂಬ ಕೆಂಪುಭೂಮಿಯು ಉತ್ತಮ (ಮುಂಬಯಿ. ೫–೨೧೭). [?]

**ಕಾಗದಾಳಿ** 'ಕಾಗದಳಿ' ನೋ.

**ಕಾಗಬ್ಬು, ಕಾಕಬ್ಬು** (ನಾ). ಒಂದು ಜಾತಿಯ ಹುಲ್ಲು; ಕಾಗೆಬಿದಿರು; ಕಾಗೆಗಬ್ಬು: "ಇಷೀಕಾ, ಕಾಶಃ – ೨ ಕಾಗಬ್ಬು" (ಹಲಾಯು. ೩೨–೩೭); "ಕಾಶಕುಸುಮಸ್ಕೀವ= ಕಾಗಬ್ಬಿನ ಪೂವಿನಂತೆ" (ನೀತಿವಾ. ೧೦–೪೮); ಕೊಬ್ಬಿ ಕೋಮಲವಾದ ನಿಗುರಿದ ನಿಬ್ಬರದ ನಿಡುಗಣ್ಣುಗಳ ಕಾಗಬ್ಬನಜಿಯದೆ ಕಬ್ಬಿನಿಚ್ಛೆಗೆ ಮೆಲುವ ಮರುಳಂತೆ(ಪ್ರಭುಲೀ. ೭–೭).

**ಕಾಕಬ್ಬು**: "ಗುಂದ್ರಃ, ತೇಜನಕಃ, ಶರಃ – ಈ ೩ ಕಾಕಬ್ಬು" (ನಾಚಿರಾ. ೧೧೨); ಕಬ್ಬಿನ ಬಿಲ್ಲೊ ಕಾಕಬ್ಬಿನ ಬಿಲ್ಲೊ ಸಾಹೆಬ್ಬಿದಿರಿನ ಕೊಂಕು ಬಿಲ್ಲೊ (ಭರಚ. ೫೦–೫೪). [ಕಾಡು$_3$ + ಕಬ್ಬು (< ಕರ್ಬು)]

**ಕಾಗಲು** (ನಾ). (ನೀರು) ಕಾಯುವಿಕೆ; ಕುದಿತ; ಮರಳುವಿಕೆ: ಬಂದ ಬಂದವರೆಲ್ಲರೂ ನೀರ ಕಾಸುವರಲ್ಲದೆ ಮಿಂದುವುಂಡು ಹೋಹವರ ನಾರನೂ ಕಾಣೆ. ಕಾಗಲೆತ್ತಿತ್ತು ಮೇಲು ಮಡಕೆಯಿಲ್ಲ ಸವುದೆ ಬೆಂದಿತ್ತು ಬೆಂಕಿಯ ಕಾಣೆ ಮಾವಾತ ಬಂದ ಉದಕವನೆಜೆವವರನಾರನೂ ಕಾಣೆ (ನಗೆಮಾ. ೨೮).

[< ಕಾಯ್. / ತಮಿ. ಕಾಯ್‌ಚಲ್; ಮಳ. ಕಾಚ್ಚಲ್]

**ಕಾಗಿ** (ನಾ). ಹೆಣ್ಣು ಕಾಗೆ: ಕೋಗಿಲೆ ಕಾಗಿಯಿಂ ಪೊರೆದ ಕಾರಣದಿಂ ಪರಪುಟ್ಟನಾದಪೋಲ್ (ಜಗವಿ. ೧೭–೪೧). [< ಸಂ. ಕಾಕೀ]

**ಕಾಗಿಕೊಮಾರ** (ನಾ). ಒಬ್ಬಾತನ ಹೆಸರು: ಕಳ್ಳಜಾವಲ್ಲಿ ಕಿತ್ತರಸಂ ವಜಿಗಟ್ಟನ ಮಗ ಪುಲಿ ಕಡ್ಡ ಅರಸರ್ ಸಿಯಗೆಲ್ಲಕ್ಕಾಗಿಕೊಮಾರನ್ ಕಿಕ್ಯೊರ್ಕಳತ್ತು ಒಗಬಳ್ಳಿಯುಳಿಜುದುವಿಟ್ಟೊಂ (ಎಕ. XVI, ತುಮಕೂ. ೯೧–೧೦; ಸು. 780). [?]

**ಕಾಗಿಣಿ** (ನಾ). ಒಂದು ಬಗೆಯ ನಾಣ್ಯ; ನಾಲ್ಕು ವೀಸ ಬೆಲೆಯುಳ್ಳ ನಾಣ್ಯ; ಕಾಣಿ: "ಕಾಗಿಣಿ ನಾಲ್ಕುವು ವೀಸಮು ಮಾಗಿರಲ್" (ವ್ಯವಹಾ. ೫–೨೯); ಜಗಮೆಲ್ಲಂ ದೇಸೆಗೆ ಕಯ್ಯುಗಿಗೆಮ ಕೊಟ್ಟಜಿಯನೊಂದು ಕಾಗಿಣಿಯುಮಂ (ಎಇ. XV, ೩೪೧–೪೭; 1072); ಕಾಗಿಣಿಗೆ ಮರಂ ಬೀಟಿಯ್ಯೋಗಿರ್ಕುಂ (ಪಂಚಾವಾ. ೬–೧೩೪). ಕಾಗಿಣಿ ನಾಲ್ಕು ವೀಸಂ . . . ದಶಂ ಪಣಮೆ ಪೊಂಗತಿ ಪೊಂಕರುಷಗಳಕ್ಕುಂ (ಶ್ರಾವಕಾ. ೫೮–೧೦); ಎಷ್ಟು ಹಣ ಅದ್ದ ಹಾಗ ವೀಸ ಬೇಳೆ ಕಾಗಿಣಿ ದುಗ್ಗಾಣಿ ಕಾಣಿ ಕವಡೆಗಳ ಗಂಟು ನೆರವಾಯ್ತು ? (ಬಟ್ಟಅ. ೫೪–೧೧).

[< ಸಂ. ಕಾಕಿಣೀ]

**ಕಾಗಿವೊಗೆ** (ನಾ). ಒಂದು ಊರಿನ ಹೆಸರು: ಶ್ರೀ ಶಿವಮಾರ ಸೀಯಗೆಲ್ಲಕ್ಕಾಗಿಮೊಗೆ ಊರೊಳ್ವಲ್ಲಹನಾ ಬಾಳದುಳ್ತುಮ್ಮುತುರ್ವ್ವರುಂ ಎಜಿದು ವಿಜಿದ್ದೊನ್ (ಎಕ. XVI, ತುಮಕೂ. ೮೯–೧; ಸು. 780) [?]

**ಕಾಗಿಯಗದ್ದೆ** (ನಾ). ಒಂದು ಬಗೆಯ ಗದ್ದೆ (?): ಕಾಗಿಯಗದ್ದೆ ಸ ೧ ಕೊ ೧೦ ತೋಟದ ಗದ್ದೆ ಕೊ ೧೦ (ಎಕ. VI, ಕಡೂರು. ೨೮–೩೧; 1153). [ಕಾಗಿ ? + ಗದ್ದೆ (< ಗಜ್ದೆ)]

**ಕಾಗು$_1$** 'ಕಾಂಗು' ನೋ.

**ಕಾಗು$_2$** (ನಾ). ಹಾಳು; ನಾಶ: ಕಾಗಾದ ಬಲವರಿದು ವ್ಯಾಘ್ರ ರಥ ರಥನೂಕಿ ಬೀಗಿದರ ಪಿಂದಿಕ್ಕಿ (ಜಿನಮು. ೩೬–೬೩). [< ಸಂ. ಕಾಕ$_3$]

**ಕಾಗುಡು** (ಕ್ರಿ). ಕಾಗಿನ ಬಟ್ಟೆಯನ್ನು ಉಡು; ಕಡುನೀಲಿವಸ್ತ್ರವನ್ನು ಧರಿಸು: ತಾಯಿಕ್ಕಿ ದೊಡ್ಡಮ್ಮ ಏನುಟ್ಟು ಮೆರೆದಾಳು ಕಾಗುಟ್ಟು ಕರಿದು ಮಸಕುಟ್ಟು . . . ಮೆರೆದಾಳು (ಹಳ್ಳಿಯ. ೩೫).

[ಕಾಗು$_1$ (< ಕಾಂಗು) + ಉಡು$_1$]

**ಕಾಗುಣಿತ** (ನಾ). ೧. ವ್ಯಂಜನಕ್ಕೆ ಸ್ವರ ಸೇರುವುದು; ಹಾಗೆ ಸೇರಿ ಉಚ್ಚರಿಸುವುದು. ℙ'ಕ' ಮೊದಲಾದ ವ್ಯಂಜನಗಳಿಗೆ ಸ್ವರಗಳು ಕೂಡಿ ಆಗುವ ಕ, ಕಾ, ಕಿ, ಕೀ ಇತ್ಯಾದಿ ಗುಣಿತಾಕ್ಷರ: ಕ್ರಮಕ್ರಮವಾಗಿ ಅಕ್ಷರಾಭ್ಯಾಸಗಳಾದ ನಂತರ ಕಾಗುಣಿತ ಬರಬೇಕು (ಭಾರದ. ೧೫೭); ಲಿಪಿಕಾರನು ಸಾಧಾರಣವಾಗಿ ಮಾಡಬಹುದಾದ ಕಾಗುಣಿತದ ಸ್ಖಾಲಿತ್ಯಗಳನ್ನು ತಕ್ಕಮಟ್ಟಿಗೆ ನೋಡಿ ಆಯಿತು (ಕನ್ನಸಂ. ೯೭); ಎಲ್ಲ ಗುಣಿತಗಳಿಗೆ ಒಟ್ಟಾಗಿ 'ಕಾಗುಣಿತ' 'ಕಾಬಳ್ಳಿ' ಎಂಬ ಹೆಸರುಗಳಾಗಿವೆ (ಸಂಶೋಧ. ೧೪); ಕಾಗುಣಿತ ಬಾರದವನಿಗೆ ಕಾವ್ಯ ಹೇಳುವುದು ಹೇಗೆ (ಗಾದೆ). [< ಕ$_1$ + ಗುಣಿತ]

**ಕಾಗುದುರೆ** (ನಾ). ಕಾಡು ಕುದುರೆ; ಪಳಗದ ಕುದುರೆ: ಕಾಗುದುರೆ ಗತ್ಕಂತ ಶಿಕ್ಷೆಗಳಾಗಬೇಕಲ್ಲವೆ ವಿಚಾರಿಸಲಾ ಗರುವ ಜಾತ್ಯಶ್ವಗೊಂದೇ ರಾಯ ರಾವುತರ ರಾಘೆ ವಾಘೆಯೆ ಸಾಲದೇ (ಪ್ರಭುಲೀ. ೧೩-೭೦).
[< ಕಾಡು$_2$ + ಕುದುರೆ]

**ಕಾಗುರುಳು** (ನಾ). ಕಾಗಿನ ಬಣ್ಣದ ಕೂದಲು; ಕಪ್ಪು ಕೂದಲು: ಸರಸಿಯೊಳು ನೀಲಾಭ್ರ ತುಂಬಿ ಬಿಂಬಿಸುವಂತೆ ಮೆರೆವ ಹಿಮಕಾಂತ ಪೀಠದಿ ವೃಷಾದೇವಿಯಳ್ ಸುರುಚಿರದ ಕಾಗುರುಳು ಪೊಳೆದು ರಾಜಿಸುತಿರ್ದುವು (ನವನೋ. ೨೩-೫).
[ಕಾಗು$_1$ (< ಕಾಂಗು) + ಕುರುಳು$_3$ (< ಕುರುಳ್$_2$)]

**ಕಾಗೆ** (ನಾ). 'ಕಾ ಕಾ' ಎಂದು ಕೂಗುವ ಕಪ್ಪುಬಣ್ಣದ ಒಂದು ಪಕ್ಷಿ; ಕಾಕ; ವಾಯಸ: "ಅರಿಷ್ಟಃ, ಕರಟಃ, ಕಾಕಃ . . . ವಾಯಸಃ – ಈ ೧೦ ಕಾಗೆ" (ಹಲಾಯು. ೪೧-೯೨); ಆಕಾಶದೊಳ್ ಕಾಗೆಗಳಂತಿರೆ ಪಾಜುವನಿತಲ್ಲದೆ (ವಡ್ಡಾರಾ. ೧೩೭-೧೮); ಕಾಗೆವೊಲಿಂತು ಬಿಲ್ಗೆ ಕರಮಂಜುವಿರ್ (ಪಂಪಭಾ. ೧೦-೧೨೨); ಕಾಗೆಯಂತೆ ಕಡೆಗಣ್ಣೊಳ್ ನೋಡುತ್ತುಂ (ಧರ್ಮಾಮೃ. ೫-೧೩೬); ಕಾಗೆಯೊಂದಗುಳ ಕಂಡರೆ ಕರೆಯದೆ ತನ್ನ ಬಳಗವನು (ಬಸವ. ೪೩೭); ಹದ್ದು ಕಾಗೆಯ ಮನೆಯ ಬಾಣಸವಿದ್ಯೆಯೆಮ್ಮದು (ಕುವ್ಯಾಭೀ. ೫-೨೩). **೨.** = ಕಾಕಮಾಚಿ: "ಕಾಗೆ [ಪಾಠಾಂ. ಕೆ] ವಾಯಸಿ ಕಾಕಮಾಚಿಯಕ್ಕುಂ" (ಮಂಗರಾ. ೩೯-೨೮).
**ಕಾಗೆಯಪಟ್ಟೆ** = ಕಾಗಿನ ಬಟ್ಟೆ; ಕರಿಯ ಬಟ್ಟೆ (?): ನೂಲ ಮಳವಿ ಒಂದಕಂ ಅಡ್ಡಹತ್ತಿಯ ಮಳವಿ ಒಂದಕಂ ಹಾಗ ಕಂಬಳಿಯ ಮಳವೆ ಒಂದಕ್ಕಂ ಹಾಗ ಕಾಗೆಯಪಟ್ಟೆ ಒಂದಕ್ಕಂ ವೀಸ ರತ್ನಗಂಬಳಿ ಜಂಬುಖಾನದ ಮಳವೆ ಒಂದಕ್ಕಂ ಹಾಗ ಓಲೆಯ ಮಳವೆ ಒಂದಕ್ಕಂ ಹಾಗ (ಎಕ. V, ಬೇಲೂರು. ೭೫-೮೯; 1382). **ಕಾಗೆಯಾಗು** = ಕಪ್ಪಾಗು: ಅವನು ತಿರುಗಿತಿರುಗಿ ಕಾಗೆಯಾಗಿದ್ದಾನೆ (ರೂಢಿ). **ಕಾಗೆ ಕಾರುಬಾರು** = ಎಲ್ಲ ಹಾಳುಮಾಡುವಿಕೆ; ಅವ್ಯವಸ್ಥೆ. ಅವನು ಕಾಗೆ ಕಾರುಬಾರುಮಾಡಿ ಹಾಳುಮಾಡಿದ (ರೂಢಿ).
[ದೇ. ‖ ತಮಿ. ಕಾಕ್ಕೈ, ಕಾಕ್ಕಾಯ್; ಮಲ. ಕಾಕ್ಕ, ಕಾಕನ್; ತುಳು. ಕಕ್ಕೆ, ಕಾಕ; ಕೊಡ. ಕಾಕೆ; ತೆಲು. ಕಾಕಿ; ಕೋಲಾ. ಕಾಕ; ಪರ್ಜಿ. ಗಡಬ. ಕಾಕಲ್; ಗೊಂಡಿ. ಕಾಕರ್; ಕುಇ. ಕಾಕ; ಕುರುಖ್. ಖಾಖಾ; ಬ್ರಾಹೂಈ. ಖಾಖೊ ./ ಪಾಲಿ. ಸಂ. ಕಾಕ]

**ಕಾಗೆಂಡೆ** (ನಾ). ಒಂದು ಜಾತಿಯ ಮೀನು: ಗಜಿ ಮೆಜಿವ ಕಾಗೆಂಡೆ ಯಯ್ಯುರೆಗ ದೊಂಡಿ . . . ಪರಿಪರಿಯ ಮೀನ್ಗಳಂ ಗುದಿಗೆಯ್ದರು (ಹಚಕಾ. ೫-೪೫); ಕೊರವಂ ಗೋಜಳೆ ಸಣ್ಣಗಣ್ಣನೊರವಂ ಕಾಗೆಂಡೆ ಹೆಗ್ಗುರ್ಬು . . . ಎಂಬ ಮೀನ್ದೆಗೆದಂ (ತ್ರಿಪುವಿ. ೫೭-೮); ಕಾಗೆಂಡೆ ಕೆಂಕಲ್ಸರಿತ್ಕೋಜವಂ ಚೀಳ್ಪಸಿಗಂ . . . ಬಣ್ಣಮೀನೆನಿಪಿವೆಲ್ಲಂ ಬೀಳ್ದುವು (ರಾಜಶೇ. ೫-೧೧೫). [?]

**ಕಾಗೆಕೂಟ** (ನಾ). **೧.** ಕಾಗೆಗಳ ಹಿಂಡು; ಕಾಗೆಗಳ ಸಮೂಹ: ಕಾಗೆಕೂಟದೊಲೆಲ್ಲ ಕುಲಗೆಟ್ಟಾಗಲಾಡಿದ ಹೊಮ್ಮು ನೃಪನೆಡೆಗಾಗುವದೆ (ಬಜ್ಜಪು. ೧೦೯-೫೯). **೨.** ಕಾಗೆಗಳ ಮೈಥುನ: ಕಾಗೆಕೂಟ ನೋಡಿದವರಿಗೆ ಮರಣವೆಂಬ ನಂಬಿಕೆ ಇದೆ (ರೂಢಿ). [ಕಾಗೆ + ಕೂಟ]

**ಕಾಗೆಗಣ್ಣು** (ನಾ). **೧.** ಕಾಗೆಯ ಕಣ್ಣಿನಂತೆ ಇರುವ ಚಿಕ್ಕ ಕಣ್ಣು. **೨.** ಒಂದೇ ಕಣ್ಣು; ಒಕ್ಕಣ್ಣು; "ಒಕ್ಕಣ್ಣು, ಚಿವುಗಣ್ಣು" (ಜಾನಕೋ. ૩૬). [ಕಾಗೆ + ಕಣ್ಣು (< ಕಣ್)]

**ಕಾಗೆಗಬ್ಬು** (ನಾ). = ಕಾಗೆ ಬಿದಿರು (?).: ಕಾಗೆಗಬ್ಬಿನ ಹುಲ್ಲು "ತೇಜನಕ – ಕಾಗೆಗಬ್ಬಿನ ಹುಲ್ಲು" (ಗಂಗಾಮ. ೧೫೭).
[< ಕಾಗಬ್ಬು ?]

**ಕಾಗೆಗೊಳ್ಳಿ** (ನಾ). (ಕರಾ). ಒಂದು ಜಾತಿಯ ಮೀನು [?]

**ಕಾಗೆಜೋಳ** (ನಾ). ಜೋಳದಲ್ಲಿ ಒಂದು ಪ್ರಕಾರ: ಮುಂಗಾರಿಯ ೧೬ ಜಾತಿಯ ಜೋಳಗಳ ಹೆಸರುಗಳು – ಮೂರುತಿಂಗಳ ಜೋಳ . . . ಚಿಜಕರ, ಕಾಗಿ[ಗೆ] ಜೋಳ (ಕಭಾಗ. ೨೭೧). [ಕಾಗೆ ? + ಜೋಳ]

**ಕಾಗೆತೊಬರೆಗಿಡ** (ನಾ). = ಕಾಕತಿಂದುಕ: "ಕಾಕೇಂದುಃ, ಕುಲಕಃ, ಕಾಕಃ, ಪೀಲುಕಃ, ಕಾಕತಿಂದುಕಃ – ೪ ಕಾಗಿ[ಗೆ]ತೂಬರೆಗಿಡ, ಇದಕ್ಕೆ ಕಸೇಚಟ್ಟೆಯೆಂದು ಕೆಲವರರ್ಥ ಹೇಳುವರು" (ಸಿದ್ಧಾಂತಿ. ೧೦೬).
[ಕಾಗೆ$_0$ + ತೂಬರೆ + ಗಿಡ (< ಗಿಡು)]

**ಕಾಗೆದಬ್ಬೆ, ಕಾಗೆದರ್ಭೆ** (ನಾ). ಒಂದು ಬಗೆಯ ಹುಲ್ಲು: "ದರ್ಭಪತ್ರ – ಕಾಗೆದಬ್ಬೆ" (ಓಷಧಿ. ೭೪). **ಕಾಗೆದರ್ಭೆ**: "ವಾಯುಸೇಕ್ಷುಕಃ – ಕಾಗೆದರ್ಭೆ" (ಓಷಧಿ. ೧೫೧). [< ಸಂ. ಕಾಕದರ್ಭ]

**ಕಾಗೆದರ್ಭೆ** 'ಕಾಗೆದಬ್ಬೆ' ನೋ.

**ಕಾಗೆದೊಂಡೆ** (ನಾ). = ಕಾಕತುಂಡಿಕೆ: "ತಾಪಿಚ್ಛಃ, ಕಾಕತುಂಡಿಕಾ – ಈ ೨ ಕಾಗೆದೊಂಡೆ" (ಹಲಾಯು. ೩೪-೫೦); ಕಾಗೆದೊಂಡೆಹಣ್ಣಿನಂತೊಳಗಶುಭಮುಂ ಪೊಜಗೆ ರಮಣೀಯಮುಂ (ಧರ್ಮಾಮೃ. ೬-೩೮); ಕಾಕತುಂಡಿ – ಕಾಗೆದೊಂಡೆ (ಶಮದ. ೨೯೩ ಪ್ರಯೋ). [ಕಾಗೆ + ತೊಂಡೆ$_3$]

**ಕಾಗೆನೇರಳೆ** (ನಾ). ಒಂದು ಜಾತಿಯ ನೇರಳೆ; ನಾಯಿನೇರಳೆ: "ನಾದೇಯೀ, ಭೂಮಿಜಂಬುಕಾ – ೨ ಕಾಗಿ[ಗೆ]ನೇರಳೇಗಿಡ, ನಾಯಿನೇರಳೇಗಿಡ, ನೆಲನೇರಳೇಗಿಡ, ಈ ೪ ಹೇರಳೇಗಿಡವೆಂದು ಕೆಲವರನ್ನುವರು" (ಸಿದ್ಧಾಂತಿ. ೧೦೫). [ಕಾಗೆ + ನೇರಳೆ (< ನೇಱಿಲ್)]

**ಕಾಗೆಪುರಳೆಗಿಡ** (ನಾ). ಒಂದು ಬಗೆಯ ಸಸ್ಯ: ಕಾಗೆಪುರಳೆಗಿಡ, ಪರ್ಪಾಟಕ (ವೈಔಗಿ. ೫೪-೧೦೮೭). [ಕಾಗೆಪುರಳೆ$_0$ + ಗಿಡ (< ಗಿಡು)]

**ಕಾಗೆಬಂಗಾರ, ಕಾಗೆಭಂಗಾರ** (ನಾ). ಒಂದು ಬಗೆಯ ಖನಿಜ; ಅಭ್ರಕ: ನಿನ್ನಂಥಾ ಚಿನ್ನ ಇದ್ದೂ ಈ ಹಾಳುಮನಸ್ಸು ಕಾಗೇಬಂಗಾರದ ಬೆಮೆ ಬಿಡೊಲ್ಲದಲ್ಲಾ . . . ಏನು ಹೇಳಲಿ? (ಪುಲ್ಲಿ. ೬೭). **ಕಾಗೆಭಂಗಾರ**: ಆಂಧ್ರದೇಶವು . . . ಕಾಗೆಭಂಗಾರ (ಮೈಕ) ಮತ್ತು ಲೋಹಮಂಡೂರ (ಮ್ಯಾಂಗನೀಸ್) ಇವುಗಳನ್ನು ಅತಿಶಯ ಪ್ರಮಾಣದಲ್ಲಿ ಪಡೆದಿದೆ (ದಭಾಇ. ೮). [ಕಾಗೆ$_0$ + ಬಂಗಾರ]

**ಕಾಗೆಬಂಜೆ** (ನಾ). ಒಂದು ಮಗುವನ್ನು ಪಡೆದಮೇಲೆ ಬಸಿರಾಗದಿರುವವಳು: "ಕಾಗೆಬಂಜೆ – ಒಂದೇ ಕೂಸು ಹಡೆದವಳು" (ಜಾನಕೋ. ૩૬). [< ಸಂ. ಕಾಕವಂಧ್ಯಾ]

**ಕಾಗೆಬಿದುರು** (ನಾ). = ಕಾಗಬ್ಬು: "ಗುಂದ್ರಃ, ತೇಜನಕಃ, ಶರಃ – ೩ ಕಾಗಿ[ಗೆ]ಬಿದ[ದು]ರು" (ಸಿದ್ಧಾಂತಿ. ೧೩೧).
[ಕಾಗೆ$_0$ + ಬಿದುರು$_2$ (< ಬಿದಿರ್$_2$)]

**ಕಾಗೆಭಂಗಾರ** 'ಕಾಗೆಬಂಗಾರ' ನೋ.

**ಕಾಗೆಮಾಯಿ** (ನಾ). (ಕರಾ) ಉದ್ದಬಾಲದ ಒಂದು ಚಿಕ್ಕ ಕಪ್ಪು ಹಕ್ಕಿ. [?]

**ಕಾಗೆಮಾರಿ, ಕಾಗೆಮೋರೆ** (ನಾ). **೧.** = ಕಾಕಮಾರಿ: ಕಾಗೆಮಾರಿ, ಕಾಕಮಾರಿ, ಕಾಕಿಸೊಪ್ಪುಗಡ್ಡೆ (ವೈಔಗಿ. ೬-೧೦೭). **೨.** = ಕಾಕಿಮಂದಲಿ: ಕಾಗೆಮಾರಿ ಬಳ್ಳಿ, ಕಾಕಿಮಂದಲಿ (ವೈಔಗಿ. ೭೬-೧೫೪೮); ಚಿತ್ರಮೂಲದ ಬೇರು, ಕಾಗೆಮಾರಿಯ ಬೇರು, ಮೂಕೊರತಿ ಬೇರು, ಈ ಮೂರನ್ನು ಸಮಾನಂಗೊಂಡು ಚೂರ್ಣವಂ ಮಾಡಿ (ವಿವೈವಿ.೧೨೭). **ಕಾಗೆಮೋರೆ**: **೧.** ಸೀಗೆ ಬಾಗೆಯ ಬೇರು ಕಾಗೆಮೋರೆಯ ಗಡ್ಡೆ ನಾಗರವು ಸತುವನೊಡಗೂಡೆ ಹೇಮ ತಾನಾಗಲೇ ಬಕ್ಕು (ಸರ್ವಜ್ಞ. ೧೯೬೩). **೨.** ಕಲ್ಪವೃಕ್ಷದಲ್ಲಿ ಕಾಗೆಮೋರೆಯ ಹಣ್ಣು ಬೆಳೆವುದೆ (ಘನವ. ೧೭). [< ಕಾಕಮಾರಿ]

**ಕಾಗೆಮೋರೆ** 'ಕಾಗೆಮಾರಿ' ನೋ.

**ಕಾಗೆರೋಗ** (ನಾ). ಮುಖವೆಲ್ಲ ಕಪ್ಪಗಾಗುವ ಒಂದು ರೋಗ: ಅವನಿಗೆ ಕಾಗೆರೋಗ ಬಡಿದಿದೆ (ರೂಢಿ). 'ಕೊಕ್ಕರೆರೋಗ' ಪರಾ. [ಕಾಗೆ + ರೋಗ]

**ಕಾಗೆಸೊಪ್ಪು** (ನಾ). (ಕರಾ) ಒಂದು ಬಗೆಯ ಸಸ್ಯ; ಚವಿಗಿಡ. 'ಕಾಕಿಹಣ್ಣು' ಪರಾ. [ಕಾಗೆ$_0$ + ಸೊಪ್ಪು$_3$]

**ಕಾಗೆಹಣ್ಣು** 'ಕಾಕಿಹಣ್ಣು' ನೋ.

**ಕಾಗೆಹೊಡಕ** (ನಾ). ಒಂದು ಬಗೆಯ ಪಕ್ಷಿ: ಕಾಳಿಂಗ, ಕಾಗೆ ಹೊಡಕನಂಥ ಹಕ್ಕಿಗಳು ನೆಲದ ತಗ್ಗಿಗೇ ಹಾರಾಡುವುವು (ಬಾಲಪ್ರ. III, ೧೩೯೩). [ಕಾಗೆ + ಹೊಡಕ ?]

**ಕಾಚ$_1$** (ನಾ). ೧. ಕಾಜು; ಗಾಜು: "ಗಾಜು ಕಾಚಂ" (ಮಂಗರಾ. ೧೦೦–೨೬); ಕಾಚಮೇಚಕಚಯಚ್ಛಾಯಾಂಬುವಿಂ ಗುಣ್ಪಿನಿಂ ಪುದಿದಿರ್ದತ್ತು ಸರೋವರಂ (ಪಂಪಭಾ. ೧೩–೭೨); ನೆಬಲೇನಿರ್ದುಪೊ ಕಾಚ [ಪಾಠಾಂ. ಮ] ಕುಟ್ಟಿಮ ತಳಾಂತರ್ದೇಶದೊಳ್ (ಲೀಲಾವ. ೨–೧೨೮); ಪಾಸಟಿಯಪ್ಪುದೆ ಕೋಗಿಲೆಗೆ ಕಾಗೆ ರನ್ನಕೆ ಕಾಚಂ (ನೀತಿಮಂ. I, ೧೫೮). ೨. ನೆಲಹು; ಕಾವಡಿ: "ಕಾಚಂ, ಶಿಕ್ಯಂ – ಈ ೨ ನೆಲಹು" (ಹಲಾಯು. ೧೨೫–೬೩); "ಕಾಚಂ[ಪಾಠಾಂ. ಚ್ಯಂ] ಶಿಕ್ಯಮವಲಂಬಮೆನೆ ನೆಲಹು" (ಮಂಗರಾ. ೬೩–೨೬). ೩. ಕಣ್ಣಿನ ಒಂದು ಬಗೆಯ ರೋಗ: ಕಾಚ, ಕಾಮಲ ಮೊದಲಾದ ಇಂದ್ರಿಯದೋಷಗಳು (ಹಿಂದಸಾ. ೧೩೭); ಕಾಚಕ್ಕೆ :—ಗರುಗದ ರಸದಿಂ . . . ಹಚ್ಚೆ ಕಣ್ಣುರೋಗಮಾಣ್ಗುಂ (ವಿವೈವಿ. ೧೭). [ಸಂ.]

**ಕಾಚ$_2$** (ನಾ). ಕಾಸೆ; ಚಡ್ಡಿ: ಕಟ್ಟಿದ ಕಾಚ ಕೂಡ ಒದ್ದೆಮುದ್ದೆಯಾಗಿತ್ತು (ಕರಿಕಂ. ೫). [← ಮರಾ. ಕಾಚ]

**ಕಾಚಕಿಲ್ಕ** (ನಾ). (?): ಉಪದಿಗ್ಧಪೇಚಕನನನುಪೂರ್ವಲಾಂಗೂಲನಂ ಕಾಚಕಿಲ್ಕ ಸಂವರ್ತಕನಂ ಪ್ರಶಸ್ತವಾಳಧಿಯಂ (ಶಾಂತಿಪು. ೧೦–೧೫೨ ವ). [?]

**ಕಾಚಕೆ** (ನಾ). (ಕರಾ) ಒಂದು ಜಾತಿಯ ಮೀನು. [← ಮರಾ. ಕಾಂಚಕಾ]

**ಕಾಚಕ್ಕಿ** (ನಾ). ೧. ತೆನೆಯಿಂದ ತೆಗೆದು ಸುಟ್ಟ ಕಾಳು; ಬೆಳಸಿ; ಉಮ್ಮಿಗೆ: ಕಾಚಕ್ಕಿಯೊಂದಿಗೆ ಎಳ್ಳುಬೆಲ್ಲ ಹಾಗೂ ತೆಂಗಿನ ತುರಿ ಸೇರಿಸಿ ತಿಂದರೆ ರುಚಿಯಾಗಿರುತ್ತದೆ (ರೂಢಿ). ೨. ಹುರಿದ ಅಕ್ಕಿ ಬಣ್ಣ; ಮಾಸಲು ಕೆಂಪು ಬಣ್ಣ: ಆಚೆ ಕೇರಿಯವಳೆ ಕಾಚಕ್ಕಿ ನೆರಿಯವಳೆ ಕಾಕ್ಹಾಕಿ ನನ್ನ ಕರೆಯೋಳೆ (ಹಳ್ಳಿಯ. ೫೮). [< ಕೇಸಕ್ಕಿ ?]

**ಕಾಚಗ** (ನಾ). ಒಂದು ವನಸ್ಪತಿ (?): ಇವಂ ಕಾಚಗ ರಸದಲ್ಲಿ ಕೊಡಲು ಪಾಂಡು ಮಾಣ್ಗುಂ (ವಿವೈವಿ. ೩೫). [?]

**ಕಾಚಗಣ್ಣು** (ನಾ). ಕಾಚರೋಗ ಬಡಿದ ಕಣ್ಣು; ಕಣ್ಣುಗುಡ್ಡೆಯ ಮೇಲೆ ಪರೆ ಕಟ್ಟಿದ ಕಣ್ಣು; ಮೋತಿಬಿಂದು ಆದ ಕಣ್ಣು: ನೀರುಗಣ್ಣು, ಮೆಳ್ಳಗಣ್ಣು, ಮಂಜುಗಣ್ಣು, ಕಾಚಗಣ್ಣು (ಶುಕಸ. ೩೨೮). [ಕಾಚ$_1$ + ಕಣ್ಣು (< ಕಣ್)]

**ಕಾಚತೊಂಡೆ** (ನಾ). = ಕಾಗೆದೊಂಡೆ (?): ಮೊಲನಾಗರಕ್ಕೆ ಕಾಚ ತೊಂಡೆಯ ಬೇರು, ಹವಳ ತೊಂಡೆಯ ಬೇರು . . . ಇವಂ ಸಮಾನಂಗೊಂಡು ಚೂರ್ಣವಂ ಮಾಡಿ (ವಿವೈವಿ. ೯೯). [? + ತೊಂಡೆ]

**ಕಾಚದ್ರವ್ಯ** (ನಾ). ಗಾಜುಮಾಡಲು ತಯಾರಿಸುವ ಮಿಶ್ರಣ: ಗಾಜು ತಯಾರಿಸಲು ಉಪಯೋಗಿಸುವ ಮರಳು ಮತ್ತು ದ್ರಾವಕ ವಸ್ತುಗಳ ಮಿಶ್ರಣ: ಕಾಚದ್ರವ್ಯ" (Frit. ಇಂಕನಿ). [ಕಾಚ$_1$ + ದ್ರವ್ಯ]

**ಕಾಚಭೂಷಣ** (ನಾ). ಗಾಜಿನಿಂದ ಮಾಡಿದ ಒಡವೆ: "ಬಳೆ– ಪ್ರವೃದ್ಧಾ, ಕಾಚಭೂಷಣೇ ಚ" (ಶಮುಧಾ). [ಕಾಚ$_1$ + ಭೂಷಣ]

**ಕಾಚಮಣಿ** (ನಾ). ಗಾಜಿನ ಮಣಿ: ಸ್ಫಟಿಕರೂಪದ ಬೆಣಚುಕಲ್ಲಿಗೆ ಸಂಸ್ಕೃತದಲ್ಲಿ ಕಾಚಮಣಿ ಎಂದೆನ್ನುವರು (ಮುಂಬಯಿ. ೬–೨೩೮). [ಕಾಚ$_1$ + ಮಣಿ$_3$]

**ಕಾಚಯ್ಯ** (ನಾ). ಒಬ್ಬ್ಯಾತನ ಹೆಸರು: ಕನ್ನರನಭಿಮತದೊಳೆ ಶಾಸನಮಂ ಬರೆದೊಂ ಸೇನಬೋವಂ ಕಾಚಯ್ಯಂ (ಎಕ. XI, ಚಿತ್ರದು. ೬೬–೩೬; 937). [ಕಾಚ$_0$ + ಅಯ್ಯ$_1$]

**ಕಾಚರಿಕೆ** 'ಕಾಸರಿಕೆ' ನೋ.

**ಕಾಚವಲಯ, ಕಾಚವಳಯ** (ನಾ). ಗಾಜಿನಿಂದ ಮಾಡಿದ ಬಳೆ; ಗಾಜಿನಬಳೆ: "ಬಾಲೆಯರ ಕಾಚವಲಯದೊಳು ವೃದ್ಧಿಯೊಳು ಬಳೆ" (ಶಬ್ದಮಂ. ೧೧೫). **ಕಾಚವಳಯ**: ಮನ್ನಣೆಯಿನಾದೇನಾನುಂ ದೀನಾರದಿನಂದು ಸಂದ ಗಾಂಧಾರಿ ವಿಷಯದೊಳ್ ಕಾಚವಳಯನಿಚಯಂ ಸ್ವೀಕರಿಸಿ ಪೋಗಿ (ನೇಮಿಪು. ೪–೯೬ ವ). [ಕಾಚ$_1$ + ವಲಯ]

**ಕಾಚವಳಯ** 'ಕಾಚವಲಯ' ನೋ.

**ಕಾಚವಿಭೂಷಣ** (ನಾ). ಗಾಜಿನ ಆಭರಣ. 'ಕಾಚವಿಭೂಷಣಂ ದುಡು' ಪರಾ. [ಕಾಚ$_1$ + ವಿಭೂಷಣ]

**ಕಾಚವಿಭೂಷಣಂದುಡು** (ಕ್ರಿ). ಗಾಜಿನ ಆಭರಣಗಳನ್ನು ಧರಿಸು: ಕಾಚವಿಭೂಷಣಂದುಡುವುದೇ ಮಣಿಭೂಷಣವಿರ್ದ ಮಾಟ್ಕೆಯಿಂ (ನೇಮಿಪು. ೧–೧೨೦). [ಕಾಚವಿಭೂಷಣ + ತುಡು$_1$ (< ತೊಡು$_1$)]

**ಕಾಚಶಿಲೆ** (ನಾ). ಕಪ್ಪುಗಾಜಿನಂತೆ ತೋರುವ ಒಂದು ಬಗೆಯ ಕಲ್ಲು: ಸೀಸೆಯ ಗಾಜನ್ನು ಹೋಲುವ ಕಪ್ಪಾದ, ಗಾಜಿನಂಥ (ರಚನೆಯ), ಶಿಲಾರಸ ಅಥವಾ ಜ್ವಾಲಾಮುಖಿಯ ಶಿಲೆ; ಕಾಚಶಿಲೆ (Obsidian. ಇಂಕನಿ). [ಕಾಚ$_1$ + ಶಿಲೆ]

**ಕಾಚಸ್ಥಾಲಿ** (ನಾ). ೧. ಗಾಜಿನಪಾತ್ರೆ. ೨. ಹಸಿರುಪಾದರಿ ಗಿಡ ಅಥವಾ ಅದರ ಹೂವು: "ಹಸುರುಪಾದರಿ, ಹೆಗ್ಗಜ್ಜುಗ" (ಅಮರ. ೬೭೪). [ಸಂ. ಕಾಚಸ್ಥಾಲೀ]

**ಕಾಚಾಪ್ಪಳ್ಳಿ** (ನಾ). ಒಂದು ಊರಿನ ಹೆಸರು: ಕೆಜುಗಾಲೂರ್ಪೊಸವಳ್ಳಿ ಮೀದುಂಣ್ಣವಳ್ಳಿ ಕಾಚಾಪ್ಪಳ್ಳಿ ಕಾತುಳ್ಳಮಳಿಯುಂ (ಮೈಆರಿ. ೧೯೩೦, ೩–೧೮; ಸು. 500). [?]

**ಕಾಚಿ$_1$** 'ಕಾವಂಚಿ' ನೋ.

**ಕಾಚಿ$_2$** (ನಾ). ಕ್ಷುದ್ರ ಹೆಂಗಸು; ಹೆಂಗಸನ್ನು ಜರೆಯುವ ಒಂದು ಬೈಗಳು (?): ದಾಸಿ ಕಾಚಿ ಪಿರಾಟ ಬಲ್ಲಿಪರಾಸಿ ಬಾಚಿಯೆನುತ್ತ (?) ಮೇಳದ ದಾಸಿಯಲೆದಾಲಯವ ಮಿಗೆ ಹೊಜವಟ್ಟು ಗುಡಿಗುಂಡ ವಾಸಮಹಮಂಕಿಯ ತಟಾಕೋದ್ದೇಶದಲಿ ಕಾದಿದ್ದ ವಿಟರೊಳಗಾ ಸಮಯದಲಿ ರಮಿಸುತ್ತಿದ್ದರು ಬಹಳ ಹರ್ಷದಲಿ (ಜೀವಂಚ. ೧೭–೯). [?]

**ಕಾಚಿತ** (ಗು). ೧. ನೆಲಹಿನಲ್ಲಿ ಅಥವಾ ಕಾವಡಿಯಲ್ಲಿ ಇಡಲ್ಪಟ್ಟ. ೨. = ಕಾಂಚಿತ. [ಸಂ.]

**ಕಾಚಿಮಾಚಿ** (ನಾ). ಒಂದು ಮೂಲಿಕೆ: "ಋದ್ಧಿ, ಋದ್ಧಿಫಲಾ– ಕಾಚಿಮಾಚಿಗಳು" (ಓಷಧಿ. ೧೮). [ಕಾಚಿ$_1$ (< ಕಾವಂಚಿ) + ಮಾಚಿ]

**ಕಾಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು: ಕಾಚಿಹುಲ್ಲಂ ತಂದು ಕಿಚ್ಚಿಕ್ಕಲದು ನಿಂದುದೆಲ್ಲರಂಗಡಿ ಸುಟ್ಟವು (ಗುರುಚಾ. ೧೩–೭೭). [ಕಾಚಿ$_1$ (< ಕಾವಂಚಿ) + ಹುಲ್ಲು (< ಪುಲ್)]

**ಕಾಚು$_1$** (ನಾ). ೧. ಕೈರದ ಮರ; ಖದಿರ ವೃಕ್ಷ: "ಖದಿರ – ಕಾಚು" (ಬಾಹಟೀ. ೨-೧-೧೬). ೨. ಖದಿರವೃಕ್ಷದ ರಸದಿಂದ ಮಾಡಿದ ಒಂದು ವಸ್ತು; ತಾಂಬೂಲದೊಡನೆ ಸೇವಿಸುವ ಒಂದು ಸುವಾಸನೆಯ ವಸ್ತು: ಕಾಚು ವೀಳೆಯಕಿಂಬು ಲೋಚನಾಂಜನಕಿಂಬು (ಸರ್ವಜ್ಞ. ೨೬೫); ಕಾಂಯಿ ಕತ್ತ ಕಾಚು ಕೊಬರಿ (ಮೈಆರಿ. ೧೯೩೬, ೨೬-೩೭; 1708); ಕಾಚನ್ನು ಕರಿಹಾಗಲದ ರಸದಲ್ಲಿ ಪೂಸಲು ಕಜ್ಜಿ ಮಾಣ್ಗುಂ (ವಿನ್ ವಿ. ೬೯).

[ದೇ. ‖ ತಮಿ. ಕಾಚು; ಮಲ. ಕಾಚ್ಚು, ಕಾತ್ತು, ಕಾಜ್ಜು; ತುಳು. ಕಾಚು, ಕಾಚಿ; ತೆಲು. ಕಾಚು. / ಮರಾ. ಕಾತ, ಕಾಥ್; ಹಿಂ. ಕತ್ತ]

**ಕಾಚು$_2$** 'ಕಾಜು' ನೋ.

**ಕಾಚು$_3$** 'ಕಾಸು$_2$' ನೋ.

**ಕಾಚುಗಾವಿ** (ನಾ). ಕಾಚಿನ ಹಾಗೆ ಬಹಳ ಕೆಂಪಾಗಿರುವ ಕಾವಿ ಬಣ್ಣ: ಹೋಳುದಲೆಯ ಕಾಚುಗಾವಿಯ ವಸನದ ನೆಲನುಡುಗುವ ಕಸಬರಿಗೆ ತಾಳಿದಡಟು ಕುಂಚವ ಪಿಡಿದಿಹ (ಅಬ್ಬಲೂ. ೪-೨೨).
[ಕಾಚು$_1$ + ಕಾವಿ]

**ಕಾಚುಲವಣ** (ನಾ). ಔಷಧಿಗಾಗಿ ತಯಾರಿಸಿದ ಒಂದು ಬಗೆಯ ಕಾಚಿನ ಬಣ್ಣದ ಉಪ್ಪು: ಕಾಚಲವಣ, ಸೈಂಧವ ಲವಣ, ಕಾಚು ಲವಣ, ಬಿಡುಲವಣ . . . ಸಣ್ಣನಾಗಶೆದು (ವೈದ್ಯಸಾ. I, ೮೮); ಕಾಚು ಲವಣ, ಸಮುದ್ರ ಲವಣ . . . ಸೈಂಧವ, ಶುಂಠಿಗಳ ಕಲ್ಕದಿಂದನುಪಾನ ವಿಕ್ಕಿಕೊಡಲು ಜಿಹ್ವಕಸನ್ನಿ ಗುಣಮಹುದು (ಸಕವೈ. ೧೬೭).
[ಕಾಚು$_1$ + ಲವಣ]

**ಕಾಜ$_1$** (ನಾ). ಕೆಲಸ; ಕಾರ್ಯ: ಲಚ್ಚುಗೆ ಇನ್ನೂ ಕಾಜಷ್ಟು ಕಡಿಮೆಯಾದ ಹಾಗೆ ಅಂತ ಹೇಳಿದರು (ಮುಂಗಾಮು. ೧೦೫). 'ಕಜ್ಜ$_1$' ಪರಾ.
[← ಹಿಂ. ಮರಾ. ಕಾಜ್]

**ಕಾಜ$_2$** (ನಾ). ಅಂಗಿ, ಕೋಟು ಮೊದಲಾದುವುಗಳಲ್ಲಿ ಗುಂಡಿ ಹಾಕುವುದಕ್ಕಾಗಿ ಮಾಡಿದ ತೂತು; ಗುಂಡಿಮನೆ: ಗುಂಡಿಗೆ ತಕ್ಕ ಕಾಜ ಮಾಡಬೇಕು (ರೂಢಿ). [← ಹಿಂ. ಕಾಜ್; ಮರಾ. ಕಾಜೇಂ]

**ಕಾಜಕತ್ತರಿ** (ನಾ). ಗುಂಡಿಯ ಕಾಜ ಕತ್ತರಿಸುವ ಒಂದು ಬಗೆಯ ಕತ್ತರಿ: "ಬಟ್ಟೆಯ ಅಂಚು ಬಿಟ್ಟು ಮುಂದಕ್ಕೆ ಕತ್ತರಿಸಲು ಅನುಕೂಲಿಸುವಂತೆ, ಕೀಲಿನ ಹತ್ತಿರ ಅಲಗುಗಳಲ್ಲಿ ತೆರಪುಳ್ಳ ಕತ್ತರಿ: ಕಾಜ ಕತ್ತರಿ" (Buttonhole scissor. ಇಂಕನಿ). [ಕಾಜ$_2$ + ಕತ್ತರಿ$_2$]

**ಕಾಜಗಾಜಿ** (ನಾ). ಕಾರ್ಯಕರ್ತ; ಮೇಲ್ವಿಚಾರಕ; ಪಾರುಪತ್ಯಗಾರ: ಮಯಿಸಿಗೆಯ ಕಾಜಗಾಜಂ ಚೌಧೊರೆ ಗೊರವಿಸೆಟ್ಟಿಯುಂ (ಎಇ. XIX. ೩೩-೨೨; 1135). [ಕಾಜ$_1$ + -ಗಾಜಿ (< - ಕಾಜಿ)]

**ಕಾಜವಾರ**, ಕಾಜಿವಾರ, (ನಾ). = ಕಾಂಜಿರ: (ಕ).
**ಕಾಜಿವಾರ**: (ಕ). [?. / ತುಳು. ಕಾಯರ್, ಕಾಯೆರ್]

**ಕಾಜಾಣ** (ನಾ). ಒಂದು ಬಗೆಯ ಪಕ್ಷಿ: ಕೋಗಿಲೆ ಕಾಜಾಣಗಳು ದನಿ ದೆಗೆದು ಹಾಡುತ್ತಿದ್ದುವು (ಗಿರಿನ. ೨೩೬); ಕೋಗಿಲೆ ಕಾಜಾಣವು ಕಾಮಳ್ಳಿ ಆಹ್ವಾನಿಸುತಿವೆ ಗಾನದೊಳಿಲ್ಲಿ (ಅಗ್ನಿಹಂ. ೧೨-೧೪); ಹಾಲಿವಾಣದ ಮರದಲ್ಲಿ . . . ಕಾಜಾಣವೊಂದು ಆಲಾಪನೆಗೆ ತೊಡಗಿತು (ಮಲೆಮ. ೪೦). [?]

**ಕಾಜಿ**, ಖಾಜಿ (ನಾ). ಮಹಮ್ಮದೀಯರ ಧರ್ಮಾಧಿಕಾರಿ; ನ್ಯಾಯಾಧೀಶ: ಕಾಜಿಯು ಗಂಗಾರಾಮುನನ್ನು ಜೀವಸಹಿತವಾಗಿ ಗೋರಿ ಮಾಡಿಬಿಡಬೇಕೆಂದು ಆಜ್ಞೆಮಾಡಿದನು (ಬಂಕಿಮ. ೯೦೧); ಇಂದು ಕಾಜಿಯಾದವ ನಾಳೆ ಪಾಜಿಯಾಗುತ್ತಾನೆ! (ನಿಷ್ಕಾಮ. ೧೪೩). **ಖಾಜಿ**: ಪೌಜಖಾನಗೆ ತೋಜಿ ಮೆಚ್ಚಿಸಿಕೊಂಡನಾ ಖಾಜಿ (ಕಂನವಿ. ೧೧-೯೨); ಮಕ್ಕೆಗೆ ಪೋಗಿ ಆ ಸಮಯುಗುರು ಖಾಜಿಯೊಡನೆ ಚದುರಂಗವಾಡುತ್ತ (ಗುರುಚಾ. ೩-೨೩); ಮುಸಲ್ಮಾನರ ಮತಸಂಬಂಧ ನೇಮಕವಾದ ಮೊಕದ್ದಮೆಗಳನ್ನು ವ್ಯವಸ್ಥೆಮಾಡುವುದಕ್ಕೆ ಖಾಜಿಗಳನ್ನು ಮಾಡಿದ್ದರು (ಮಹಾವಂ. II. ೨೬).
[← ಅರ. ಹಿಂ. ಕಾಜೀ]

**ಕಾಜಿನ್ಯಾಯ**, ಖಾಜಿನ್ಯಾಯ (ನಾ). ಎರಡು ಪಕ್ಷಕ್ಕೂ ಸಮಾಧಾನ ತರುವ ಸ್ಥೂಲ ನ್ಯಾಯ: ಈ ಕಾಜಿನ್ಯಾಯ ನನಗೆ ಬೇಕಾಗಿಲ್ಲ (ಚಂದತೋ. ೧೪೬). **ಖಾಜಿನ್ಯಾಯ**: ವೆಂಕಣ್ಣ, ಒಳ್ಳೆ ಖಾಜಿನ್ಯಾಯ ಮಾಡಿಬಿಟ್ಟೆರಲ್ಲಾ (ನಟಸಾ. ೩೪೭); ಜ್ಯೂಪಿಟರ್ ದೇವತೆ ಆಗ ಒಂದು ಖಾಜಿನ್ಯಾಯ ಮಾಡಿದಳು (ಕಲ್ಲಿಕಾ. ೧೯೬). [ಕಾಜಿ + ನ್ಯಾಯ]

**ಕಾಜಿವಾರ** 'ಕಾಜವಾರ' ನೋ.

**ಕಾಜಿವಾಳ** (ನಾ). ಒಂದು ಬಗೆಯ ಸಸ್ಯ; ಹೆಮ್ಮುಷ್ಟಿ: ಕಾಜಿವಾಳ- (ಹೆಮ್ಮುಷ್ಟಿ) ಬೀಜಗಳಿಗೆ ತುಪ್ಪವನ್ನು ಹಚ್ಚಿ ಕಾಘಿಯಂತೆ ಹುರಿಯಬೇಕು; ಅಂದರೆ ಶುದ್ಧವಾಗುವವು (ಗೃಹವೈ. ೭). [?]

**ಕಾಜು**, ಕಾಚು$_2$, ಗಾಜು (ನಾ). ೧. ಮರಳು, ಸೋಡಾ, ಮೊದಲಾದವುಗಳನ್ನು ಬೆರಸಿ, ಕರಗಿಸಿ ಪಾರದರ್ಶಕವಾಗಿಯೂ ಹೊಳಪಾಗಿಯೂ, ಭಿದುರವಾಗಿಯೂ ಆಗುವ ಹಾಗೆ ಮಾಡಿದ ಪದಾರ್ಥ: ಪಿರಿದೊಂದು ಕಾ[ಪಾಠಾಂ. ಗಾ]ಜಿನ ಬಟ್ಟಲೊಳ್ ಕಮ್ಮಿತಪ್ಪ ನೀರಂ ತೀವಿ (ವಡ್ಡಾರಾ. ೧೮೬-೧೬); ಕಲ್ಲ ಮೇಲೆ ಬಿರ್ದ ಕಾಜಿನ ಪೇಜಿನಂತೆ ನುಗ್ಗುಪ್ಪುದುಂ (ಧರ್ಮಾಮೃ. ೮-೧೨೪); ಗೋವಿಂದ ಚಮೂನಾಯಕ ನೊಳ್ಸೆಣಸುವವಂ . . . ಒಡೆದ ಕಾಜಂ ಪೋಲ್ಕುಂ (ಎಕ. VII, ಶಿಕಾರಿ. ೧೩೭-೩೬; 1114); ಕಾಜಿನ ಕುಪ್ಪಿಗೆಯಲಿಪ್ಪ ಕ್ಷೀರೆಣ್ಣೆಯಂತೆ (ಮೋಳಿಮಾ. ೧೬೧-೬೦೧); ತುಜುಗಾಹಿ ಕಾಜಿನ ಮಣಿಯು ಬಲ್ಲನು ಗಡ (ಕುವ್ಯಾಕ. ೯-೧೪). **ಕಾಚು$_2$**: ಬಂಡಾರವುಂ ಈಡಾಡಿ ಕಾಚಂ ಸಂವರಿಸುವ . . . ಎಗ್ಗನಂ ಪೋಲ್ವೆಂ (ಧರ್ಮಾಮೃ. ೩-೨೧); ಕವಡಿಕೆಯುಂ ಕಾಚುಂ ಸಲ್ಗುಮೆ ಹೊನ್ನವೊಲೆಲ್ಲಿಯಾದೊಡಂ (ಸಮುಪ. ೩-೧೧); ಯಾರನ್ನು ನೋಡುತ್ತಾನೋ ಎಂದು ತೋರಗೊಡದ ಕಪ್ಪು ಕಾಚಿನ ಗೊಗಲ್ಸ್ (ಮೂರುದಾ. ೨೪೩). **ಗಾಜು**: ೧. "ಕಾಚಂ ತಾ ಗಾಜೆನಿಪ್ಪುದು" (ಕವಿಕಂ. ೨೫೮); ಎಣಿಸದೆ ಗುಣಮುಂ ಗಾಜಿ[ಪಾಠಾಂ. ಚಿ]ನ ಮಣಿಯಂ ಮಾಜುವವೊಲ್ (ಅರ್ಥನೇ. ೧-೪೭); ಕುಜುಬರೂರಲಿ ಗಾಜು ಮಾಣಿಕ (ಕುವ್ಯಾಸ. (೯-೩೪); ಗಾಜಿನ ಮಂಟಪದೊಳಿರ್ದ ಬಸವಗೆ (ಬಿಜ್ಜಪು. ೭-೪೮). ೨. ಕನ್ನಡಕ; ಸುಲೋಚನ: ಈಗ ಆರು ತಿಂಗಳಿನಲ್ಲಿ ತಾನೇ ಆವನು ಹೊಸದಾಗಿ ಕಣ್ಣಿಗೆ ಗಾಜನ್ನು ತೆಗೆದುಕೊಂಡಿದ್ದಾನೆ (ದೂರಸ. ೨೧). ೩. ಕಣ್ಣಿನಲ್ಲಿರುವ ಪಾರದರ್ಶಕ ಭಾಗ: ಕಣ್ಣೊಳಗಿರುವ ಗಾಜು (Lense) ಜೀವವಿರುವವರೆಗೂ ಬೆಳೆಯುತ್ತಲೇ ಇರುವುದು (ನಿಮ್ಮದೃ. ೪೫). ೪. (ಕರಾ). ಬಳೆ: ಅವಳು ಚಿನ್ನದ ಗಾಜನ್ನು ಧರಿಸಿದ್ದಾಳೆ (ರೂಢಿ). [< ಸಂ. ಕಾಚ]

**ಕಾಜುಗೊಳ್** (ಕ್ರಿ). ಗಾಜನ್ನು ಕೊಳ್ಳು (?): ಆತನಿತ್ತ ಸಂಬಳದೊಡವೆಯುಂ ಕಾಜುಗೊಂಡು ಗಾಂಧಾರದೇಶದೊಳ್ ಮಾಜಿ ಬರುತ್ತಿರಲ್ (ಪುಣ್ಯಾಸ್ರ. ೪-೨೬ ವ). [ಕಾಜು + ಕೊಳ್$_1$]

**ಕಾಜುವೀೞ್** (ಕ್ರಿ). ಕಾಜಾಗಿ ಬೀಳು; ಕರಗಿ ಕಾಜಿನ ದ್ರವವಾಗಿ ಬೀಳು: ಮೂಷೆಯಿಟ್ಟ ತೆಜದಿಂ ಗ್ರಾವಸ್ಥಲಂ ಲೋಹಪಾದುವು ರೇಣುಸ್ಥಲಿ ಕಾಜುವಿೞ್ದುವು ನಿದಾಘದ್ರಾಘಿಪೋದ್ರೇಕದೊಳ್ (ಪಂರಾಮಾ. ೭-೯೭). [ಕಾಜು + ಬೀೞ್$_1$]

**ಕಾಟ**₁ (ನಾ). ತೊಂದರೆ; ಪೀಡೆ; ಉಪದ್ರವ: ಪುರಂದರನ ಗಣಿಕೆಯರ ಕಡೆಗಣ್ಣ ನೋಟಕ್ಕಂ ಕಾಟಕ್ಕಮುಳ್ಕದ ಶೌಚಾಂಜನೇಯುನ ಶೌಚಮುಮಂ (ಪಂಪಭಾ. ೯-೫೩ ವ); ಪರಸ್ತ್ರೀಯ ನೋಟಮಂ ಜವನ ಕಾಟಮೆನ್ನದೆ (ಧರ್ಮಾಮೃ. ೧೩-೧೩೪); ಕಟ್ಟಬೇಕು ಕಾಟದೆಮ್ಮೆ ಆದಜ ಹಯನ ಎಷ್ಟಾದರು ಉಣಬೇಕು (ಪುರಂದ. ೨-೫೫ ಪಲ್ಲವಿ); ತೋಟಕ್ಕಂತೂ ಯಾರ ಕಾಟವೂ ಇಲ್ಲ (ಹುಚ್ಚು ಹು. ೬೮).

**ಕಾಟಕೊಡು** = ಪೀಡಿಸು: ಶಾನುಭೋಗ ಇದ್ದೂ ಕಾಟಕೊಟ್ಟ, ಸತ್ತೂ ಕಾಟಕೊಟ್ಟ (ರೂಢಿ). **ಕಾಟಹಾಕು** = ಪೀಡಿಸು; ಒತ್ತಾಯಪಡಿಸು: ಗಂಡನಿಗೆ ಕಾಟಹಾಕಿ ನಾಲ್ಕಾರು ಗಡಿಗೆ ನೀರನ್ನು ಹೆಚ್ಚಾಗಿ ತರಿಸಿ (ಬೆಳುಮ. ೭೭).

[< ಕಾಡು₁. / ತಮಿ. ತುಳು. ಕೊಡ. ಕಾಟ]

**ಕಾಟ**₂ (ನಾ). ೧. ಕಾಡಿನಲ್ಲಿರುವವನು; ಬೇಟೆಗಾರ; ಬೇಡ. 'ಕಾಟಕ₂' ಪರಾ. ೨. ಒಬ್ಬಾತನ ಹೆಸರು: ಅಂಕಿತನಾಮಕ್ಕೆ – ಕಾಟಂ, ಕಸವಂ, ದೂಡಿಗಂ (ಶಮದ. ೭೬ ಪ್ರಯೋ). ೩. ಒಂದು ಕ್ಷುದ್ರದೇವತೆ: ವರಮಾಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮುಸಣಿಗೆಯೆನಿಪ್ಪ ಕೊಳೆದೆಯ್ವಂಗಳ್ (ಸಮುಪ. ೯-೧೨೮).

[ದೇ. ‖ ತಮಿ. ಮಲ. ಕಾಡ]

**ಕಾಟ**₃ (ನಾ). ಹೊಗೆಸೊಪ್ಪು, ಮೆಣಸಿನಕಾಯಿ, ಮೊದಲಾದವುಗಳ ಉಗ್ರವಾದ ವಾಸನೆ: (ಕಿ). [< ಗಾಟ₁?]

**ಕಾಟಕ**₁ (ನಾ). ತೊಂದರೆ ಕೊಡುವವನು; ಉಪದ್ರವಕಾರಿ: ಕೌರವರ್ ಕಾಟಕರ ಸೊಲ್ಲುಗಳ್ಕೇಳ್ದಿಮ್ಮ ದಣಿಸಿದರು (ತು ರ.೦ಗ. ೮೪-೨); ಕದನ ಹುಟ್ಟುವುದಣ್ಣ ಕಾಟಕರಿದ್ದಲ್ಲಿ (ನಾಪದ. ೯); ತಾಯಿಯಿಲ್ಲದ ತೌರು ಕಾಟಕರಿದ್ದಡವಿ (ಗಾದೆ). [ಕಾಟ₁ + –ಕ₃]

**ಕಾಟಕ**₂ (ನಾ). ಬೇಟೆಗಾರ: ಮಾಟಿಸಿ ಶಿಖಿಯೊಳು ಚಾಟಕತನದಲಿ ಕಾಟಕರತಿ ಭರದಿ (ಹಮಚ. ೧೮). [ಕಾಟ₂ + –ಕ₃]

**ಕಾಟಕತನ** (ನಾ). ತೊಂದರೆ ಕೊಡುವಿಕೆ; ಪೀಡೆ: ಮರಾಟರ ಆವೇಶಕ್ಕೂ, ಕಾಟಕತನಕ್ಕೂ ಖಾನನು ಮೆಚ್ಚಿದನು (ಛತ್ರಪ. ೭೦); ಬೂಟಕತನ ಮಾಡಿದರೆ ಕಾಟಕತನ ತಪ್ಪೀತೆ (ಗಾದೆ); ಪೀಠ ಸಿಕ್ಕಿದರೂ ಕಾಟಕತನ ಬಿಟ್ಟಾನೇ? (ಗಾದೆ). [ಕಾಟಕ₁ + –ತನ]

**ಕಾಟಕಸರು** (ನಾ). (ಉಕ). ವೆಚ್ಚವನ್ನು ಕಡಮೆ ಮಾಡುವುದು; ಮಿತವ್ಯಯ: ಕಾಟ-ಕಸರು ಮಾಡಿ ಕೊಳಿತ ಮಾನ ತರುವ (ಶ್ರೀಕಾಂತ. ೨೪೦); ಯಜಮಾನ್ರು ಖಳಿಸಿ ತಂದು ಹಾಕಿದ್ದರಾಗ ಕಾಟಕಸರು ಮಾಡಿ ವರ್ಷಾ ಆರಾರ ತೊಲಿ ಭಂಗಾರ ಮಾಡಿದಳು (ವೈಸಿ. ೧೨); ನಮ್ಮ ಮಕ್ಕಳ ಮುಂಜಿವಿಯಲ್ಲಿ ಬೇಕಾದರೆ ಕಾಟ-ಕಸರು ಮಾಡಿರಿ (ಸ್ಮೃತಿಚಿ. ೨೨೪). [← ಮರಾ. ಕಾಟ್‌ಕಸರ್]

**ಕಾಟಕಾಯ** 'ಕಾಟಕಾಯಿ' ನೋ.

**ಕಾಟಕಾಯಿ**, ಕಾಟಕಾಯ, ಕಾಟಗಾಯಿ (ನಾ). ದರೋಡೆ; ಸುಲಿಗೆ; ಕೊಳ್ಳೆ: ಇವಂ ಯುಧಾಯುದಾ ತುದಿಯನೀ ತುದಿವರಂ ಕಾಟಕಾಯಿಗಳನೆಬ್ಬಿಸದೆ ಬಿಡುವನೇನು (ಗೊಲ್ಲೊಥಾ. ೭-೧೬೨); ಪೋರ್ತುಗೀಸ ಕಾಟಕಾಯಿಯ ಕಾಲದ ಗೋವೆಯ ಇತಿಹಾಸವನ್ನು ಬರೆಯಬೇಕು (ಕಂನಾಸಾ. ೧೦). **ಕಾಟಕಾಯ**: ಅರಮನೇ ಬೊಕ್ಕಸಕ್ಕೆ ಯಾರೊ ಕನ್ನಹಾಕಿದ್ದರು. ಇತರ ಕಾಟಕಾಯಗಳು ಶತ್ರುಗಳ ದೆಸೆಯಿಂದ ಚಿಲ್ಲರೆಚಿಲ್ಲರೆಯಾಗಿ ಜರುಗುತ್ತಲೇ ಇದ್ದವು (ಚಿತ್ರಪಾ. ೬೦). **ಕಾಟಗಾಯಿ**: (ಕಿ). [← ಮರಾ. ಕಾಟಕಾಈ]

**ಕಾಟಕಿ** (ನಾ). ತೊಂದರೆ ಕೊಡುವವಳು; ಉಪದ್ರವದ ಹೆಂಗಸು: (ಕಿ). [ಕಾಟಕ + –ಇ₂]

**ಕಾಟಕುಳಿ** (ನಾ). ಕಾಡುವುದೇ ಸ್ವಭಾವವಾಗಿರುವ ವ್ಯಕ್ತಿ; ಕಾಟಕ: ನಾಡೊಳಗುಳ್ಳ ಕಾಟಕುಳಿ [ಪಾಠಾಂ. ಕೂಡಕುಳಿ] ದೇವರ ನೋಲಗಿಸುತ್ತುಂ (ಸಮುಪ. ೮-೨೩೦).

[ಕಾಟ₁ + –ಕುಳಿ₃]

**ಕಾಟಕೋಣ** 'ಕಾಟಕೋನ' ನೋ.

**ಕಾಟಕೋನ**, ಕಾಟಕೋಣ (ನಾ). (ಉಕ). ೧. ತೊಂಬತ್ತು ಅಂಶಗಳ ಕೋನ; ಸಮಕೋನ: ಬೆಳಕಿನ ಎರಡು ಕಿರಣಗಳನ್ನು . . . ಕಾಟಕೋನವಾಗಿ ಪ್ರಸರಿಸಿ ಅವುಗಳ ವೇಗವನ್ನು ಅಳೆಯಲಾಯಿತು (ವೈಜ್ಞಾಪ್ರ. ೧೬); ನೀರಿನ ಝುರಿಯೊಂದು . . . ಮೊದಲಿನ ಪ್ರವಾಹಕ್ಕೆ ಒಂದು ಕಾಟಕೋನವನ್ನು ಮಾಡುವಂತೆ ಮುಂದೆ ಹರಿದುಹೋಗುತ್ತಿತ್ತು (ಮೇದಿಮು. ೧೪೫). ೨. ಉಪ್ಪಾರನು ಬಳಸುವ ಚೌಕ ಪಟ್ಟಿ; ಮೂಲೆಮಟ್ಟ. **ಕಾಟಕೋಣ**: ೧. ಒಂದು ರೇಖೆಯು ಮತ್ತೊಂದು ರೇಖೆಯ ಬಳಿ ಬಂದು ಸೇರುವುದರಿಂದ ಎರಡು ಕೋಣವಾಗುತ್ತೆ. ಆ ಯೆರಡು ಕೋಣಗಳು ಸಮಾನವಾಗಿದ್ದರೆ ಅಂತಹ ಪ್ರತಿ ಒಂದು ಕೋಣಕ್ಕೂ ಕಾಟಕೋಣವೆಂಬ ಹೆಸರು (ಭೂಮಿಋ. ೧೦).

[← ಮರಾ. ಕಾಟಕೋನ, ಕಾಟಕೋಣ]

**ಕಾಟಗಾಯಿ** 'ಕಾಟಕಾಯಿ' ನೋ.

**ಕಾಟಗಾವುಂಡ** (ನಾ). ಒಬ್ಬಾತನ ಹೆಸರು: ಗುಣ್ಣಯ ಗಾವುಂಡನುಂ ಕಾಟಗಾವುಂಡನುಂ (ಕಇಅ. ೧೦೫-೧೧-೧೮; 1067).

[ಕಾಟ₂ + ಗಾವುಂಡ (< ಗಾಮುಂಡ)]

**ಕಾಟಣ್ಣ** (ನಾ). ೧.ಬೇಡರು ಪೂಜಿಸುವ ಸುಣ್ಣ ಬಳಿದ ವಿಗ್ರಹ: (ಕಿ). ೨. ಒಬ್ಬಾತನ ಹೆಸರು. ಕರಮೆಸೆದನು ಕಾಟಣ್ಣ ಕಂಪಿಲಭೂವರನ ಮುಮ್ಮೊನೆಯ ಪೌಜಿನೊಳು (ಕುರಾಸಾಂ. ೧೨-೯).

[ಕಾಟ₂ + ಅಣ್ಣ₁]

**ಕಾಟನಾಯಕ** (ನಾ). ಬೇಡರ ನಾಯಕ; ವನಚರರ ನಾಯಕ: ಕಾಟನಾಯಕನ ಮನೆಗೆ ಕನ್ನಹಾಕಿದರೆ ನೇತಾಡುವುದು ಎರಡು ಬಂಗಿ ಚೀಲ (ಗಾದೆ). [ಕಾಟ₂ + ನಾಯಕ]

**ಕಾಟರ** (ನಾ). ಕುದುರೆಯ ಜೀನು; ಹಲ್ಲಣ: ನೆಕ್ಲ್‌ದೋವ್ ಪಳಗಿದ ಕುದುರೆಯೊಂದಕ್ಕೆ ಕಾಟರ ಕಡಿವಾಣಗಳನ್ನು ಹಾಕಿ ಅಣಿಗೊಳಿಸುವಂತೆ ಆಳಿಗೆ ಅಜ್ಞೆ ಮಾಡಿದನು (ಪುನರು. ೬೮). [?]

**ಕಾಟಾ** (ನಾ). (ಉಕ). ತಕ್ಕಡಿ: ಕಮತಿಗ ಹತ್ತಿಯನ್ನು ಕಾಟಾಕ್ಕೆ ಹಚ್ಚಿ, ವಜನ ಮಾಪ ಸರಿಯಾಧದ್ದನ್ನು ತನಖಿಸಿ (ದೀಪಹ. II, ೧೬೫).

[← ಮರಾ. ಕಾಟಾ]

**ಕಾಟಾಚಾರ** (ನಾ). ಶ್ರದ್ಧೆಯಿಲ್ಲದೇ ಕಾಟಕ್ಕೆ ಮಾಡುವ ಕೆಲಸ; ಮನಸ್ಸಿಲ್ಲದೆ, ತೋರಿಕೆಗಾಗಿ ಮಾಡುವ ಕಾರ್ಯ; ಬೇಕಾಬಿಟ್ಟಿ ಕೆಲಸ: ಸಮಾಧಾನವಾದರೆ ನಂತರ ಹಣಕೊಡಿ. ತಾಯಿತ ಮಾತ್ರ ಕಾಟಾಚಾರದಿಂದ ತಯಾರಿಸುವುದಿಲ್ಲ (ದೇವಹಂ. ೧೮೭); ಕಾಟಾಚಾರಕ್ಕೆ ಬಾನ್ನೋದು ಏನಾದ್ರೂ ನೆವ ತಕ್ಕೊಂಡು ಜಗಳಾ ಆಡೋದು (ಅನ್ನಾವ. ೬೪). [ಕಾಟ₁ + ಆಚಾರ]

**ಕಾಟಿ**₁, ಕಾಟೆ, ಕಾಡೆ₁ (ನಾ). ರಾಗಿ ಅಥವಾ ಜೋಳದ ಗಂಜಿ; ಸಂಗಟೆ (ಉಕ): ಕಾಟಿಯನು ಹಾಕಿದರೆ ಓಟವಿಹುದಾ ರಟಿಗೆ (ಸರ್ವಜ್ಞ. ೧೯೯೨); ಈ ಬಡ ಒಕ್ಕಲಿಗರು – ಕರುಳಿಗೆ ಕಾಟಿಯೂ ಸಿಗದ ಒಕ್ಕಲಿಗರು – ಕೋರ್ಟಿಗೆ ಹೇಗೆ ಹೋದರು (ಪೋಡಶಿ. ೨೦೧). **ಕಾಟೆ**: "ತೆಳ್ಳನ ಗಂಜಿ; ಸಂಗಟೆ" (ಜಾನಕೋ. ೩೬); ನೊರೆವಾಲ ಚೆಲ್ಲಿ ಕಾಟಿಯು ಬಯಸಿ ಬಾಯಾರುವಂತೆ (ಸಿದ್ಧೇವ. ೩೯೬). **ಕಾಡೆ**₁: (ಕಿ).

[ದೇ. ‖ ತಮಿ. ಮಲ. ಕಾಟ; ತೆಲು. ಕಾಡಿ]

**ಕಾಟ$_2$** (ನಾ). ಒಂದು ಬಗೆಯ ಚಿಕ್ಕನಾಣ್ಯ: ಅರಮನೆಗೆಯೆತ್ತುವ ಕುಳ ಮೊದಲು ಕಾಟಯ ಹಂನೆರಡು ಯೆಂನು (ಸೌಇಎ. ೧೯೨೯, ಕಾರ್ಕಳ್. ೫೨೫–೧೪; 1346); ಗ್ರಾಮ ೧ಕ್ಕೆ ಆದಾಯ ಕಾಟ ೧೨೬೦ (ಮೈಆರಿ. ೧೯೩೪, ೨೮–೧೪; 1459); ಕಾಟಗೆ ಸರಿಗಂಡು ದಿವ್ಯಭೂಷಣವ ಕಿರೀಟ ಯಿಟ್ಟನು ದೆಸೆದೆಸೆಗೆ (ಭರಚ. ೭೭–೬); ಕುಬೇರನಲ್ಲಿ ಕಾಟಯನ್ನು ಯಾಚಿಸಿದಂತೆಯೇ ಸರಿ (ಭಾವೃತ. ೧೮೦).

**ಕಾಟಗ, ಕಾಟಗದ್ಯಾಣ** = ಒಂದು ಬಗೆಯ ಗದ್ಯಾಣದ ನಾಣ್ಯ: ಗ್ರಾಮ ೧ ಕಂ. ಮಂಗಲೂರ ಕಾಟಗ ೨೪೦. ಕೊಂಬ ಬತ್ತ (ಸೌಇಎ. ೧೯೨೯, ಮಂಗಳೂ. ೪೭೦; 1375); [ಮೇ]ಲಾಯದಿಂ ಕಾಟಗ ೩೦ ಹೊಂನನು (ಸೌಇಎ. ೧೯೩೨, ಉಡುಪಿ. ೩೦೩–೨೬; 1397); ಅಂತು ಕಾಟಗದ್ಯಾಣ ಯಿಪ್ಪತ್ತು ಹೊಂನು (ಸೌಇಇ. IX–ii, ೪೧೭–೨೦; 1377). [?]

**ಕಾಟ$_3$** (ನಾ). ಕಾಡೆಮ್ಮೆ ಅಥವಾ ಕಾಡುಕೋಣ: ಕಡವೆಯೂರ್ ಚಮರಿಯ ಹುರಮೆಂಟಡಿಯ ಹೊಳಲ್ ಕಾಟಯ ಕೊಟ್ಟಂ (ಜಯಕಾ. ೧೫–೨೩); ಒಡೆಯ ಗುರು ಜಯವಾಗಲೋಸುಗ ಹೊಡೆಸಿದರು ಕುಜಿ ಕೋಣ ಕಾಟಯ (ಕೌಶಿರಾ. ೨೧–೧೨); ಬೆಳೆದ ಪೈರನ್ನು ಆನೆ ಕಾಟಗಳ ಬಾಯಿಂದ ಉಳಿಸಿಕೊಳ್ಳಬೇಕು (ಕುಡಿಕೂ. ೧೧); ಇವುಗಳಲ್ಲಿ ನಮ್ಮ ದೇಶದ ಮಲೆಗಳಲ್ಲಿಯ ಕಾಟ ಅಥವಾ ಕಾಡ್ಕೋಣ ಒಂದಾಗಿದೆ (ಪ್ರಾಣಿಪ್ರ. ೨೮).

[ದೇ. ‖ ತಮಿ. ಕಾಟ್ಟು; ಮಲ. ಕಾಟ್ಟ; ತುಳು. ಕೊಡ. ಕಾಟ]

**ಕಾಟ$_4$** (ನಾ). ಒಂದು ಕ್ಷುದ್ರ ದೇವತೆ: ಕೂಂಕಿ ಝುಂಕಿಸುವ ಕುಮಾರಿ ಮಾಂಕರಿಪ ಪೂತಿನಿ ಹೂಂಕೃತಿಗೈವ ಭೈರವಂ ನೊಸಲುರಿಗಣ್ಣನಾಳ್ವ ಚೌಡೇಶ್ವರಿ ಕೂಂಕಿಜುದ್ದಾವರ್ಣ ಕಾಟಿಯುಂ (ಪಾರ್ಶ್ವಪು. ೧೫–೧೧೩).

[ಕಾಟ$_2$ + –ಇ$_2$]

**ಕಾಟ$_5$** (ನಾ). ೧. ಸೀರೆ ಅಥವಾ ಧೋತ್ರದ ಅಂಚು, —ದಡಿ; ಕಡ್ಡಿ: ರಾಮಾಚಾರಿ, ತೆಳ್ಳಗೆ ಎತ್ತರವಾದವನು . . . ದಬ್ಬಣ ಕಾಟಯ ಮೀಸೆ. ನಿಡಿದಾದ ಮೂಗು (ತಿಡುಗು. ೩೪); ಹೆಸರ ಡಪಳಾ ಸೀರಿಪಪ್ಪಳಾ ಜರ ಕಾಟ (ಕನ್ನಜಾ. ೧೪೭). ೨. (ಉಕ). ಮೈಕಟ್ಟು: ಅವನ ಕಾಟ ಚಲೋ ಇದೆ (ರೂಢಿ).

[← ಮರಾ. ಕಾಠೀ]

**ಕಾಟಕೆ** (ನಾ). ಕಾಡಿಗೆ (?): ಕಾಟಕೆಯ ರೂಪಿನಿಂದೊಪ್ಪುತಿಹ ಕೊಳವ ಕಂಡು (ಜಿನಮು. ೨೧–೧೦); ಕಾಟಕೆಯಂತೆ ಕಪ್ಪಾಗಿ ತಾಮ್ರವರ್ಣವಾಗಿ ಕಲ್ಲುಪ್ಪಿನ ವರ್ಣವಾಗಿ . . . ಯಿರುವ ಮುತ್ತುಗಳಂ ಸರ್ವಥಾ ಮುಟ್ಟ ಕೂಡದು (ಸೌಗಂಧಿ. ೩೭೫–೬). [< ಕಾಡಿಗೆ ?]

**ಕಾಟಮ** (ನಾ). ಒಂದು ಕ್ಷುದ್ರ ದೇವತೆ: ಮೈಲಾರ ಕೊಡೆವಿಡಿವ ನಡವಿಗೆ ಪೋಗಿ ಪೊಸ ಕಟ್ಟಿಗೆಯ ಭೈರವಂ ತರ್ಪ ಕಾಟಮಂ ಪುಸಿಯಲ್ಲ ಕಹಳೆಯೂದುವನು (ಪಾಸೋಪು. ೪–೫೭).

[ಕಾಟ$_4$ + ಅಮ (< ಅಮ್ಮ)]

**ಕಾಟಮೆ** (ನಾ). = ಕಾಟಮ: ಸಹಜವಾ ಬಲ ಚೀಟ ಕಾಟಮೆ ಕಹಳೆಯಂ ಪಿಡಿಯಲು (ಬಸವು. ೨೩–೨೦). [ಕಾಟಮ + –ಎ$_2$]

**ಕಾಟು$_1$** 'ಕಾಡು$_2$' ನೋ.

**ಕಾಟು$_2$** (ನಾ). ೧. ಹಲ್ಲಿನಿಂದ ಕಚ್ಚುವಿಕೆ; ಹಲ್ಲಿನ ಕಡಿತ. ೨. ಖಡ್ಗ, ಕೊಡಲಿ ಮುಂತಾದವುಗಳ ಹೊಡೆತದಿಂದ ಆದ ಕಚ್ಚು: (ಕಿ). [← ತೆಲು. ಕಾಟು]

**ಕಾಟು$_3$** (ನಾ). ಕತ್ತರಿ ಗುರುತು; ಬರೆದುದನ್ನು ಹೊಡೆದು ಹಾಕುವ ಕತ್ತರಿ ಚಿಹ್ನೆ: ಅವನ ಬರವಣಿಗೆ ಶುದ್ಧವಾಗಿಲ್ಲ, ಪುಟವೆಲ್ಲ ಚಿತ್ತು ಕಾಟುಗಳಿಂದ ತುಂಬಿಹೋಗಿರುತ್ತದೆ (ರೂಢಿ).

**ಕಾಟುಹಾಕು** = ಬರೆದುದನ್ನು ಹೊಡೆದುಹಾಕು: ಕಾಟುಹಾಕಿದ್ದು ನಿಮ್ಮದು, ಉಳಿದದ್ದು ಸರಸ್ವತಿಯದು (ತಿಂಮತ. ೫೫). **ಕಾಟುಗೀಟು** = ಕತ್ತರಿಗೆರೆ: ಶಬ್ದಕೋಶ ನೋಡಿ ನೋಡಿ ಪುನಃ ಪುನಃ ಕಾಟುಗೀಟು ಹಾಕುತ್ತ (ಇಪ್ಪಕ. ೨೯೬); ಲೆಕ್ಕಪತ್ರದ ಪುಟಗಳಲ್ಲಿ ಕಾಟುಗೀಟುಗಳು . . . ಅಕ್ಷಮ್ಯವಾದ ದೋಷಗಳು! (ತಕ್ಕಡಿ. ೫೮).

[← ಮರಾ. ಕಾಟ್]

**ಕಾಟುಗ** (ನಾ) ಕಾಟಕೊಡುವವನು; ಹಿಂಸಕ: ಆನು ಭಕ್ತನಲ್ಲಯ್ಯಾ . . . ಕಾಟುಗ ಕೆತ್ತುಗ ಪೋಲುಗನೆಂಬುದು ಎನ್ನ ಹೆಸರು (ಬಸವ. ೩೩೫); ಮಗನೆ ದುಃಸ್ಥಿತಿಯಾಯ್ತಲಾ ಕಾಟುಗನು ಕೊಂದನೆ ಕಾಂತೆ ಯನು (ನಿಭಾಗ. ೯–೧೭–೨೨). [< ಕಾಟಕ$_1$ ?]

**ಕಾಟುದನ** (ನಾ). (ಬೇಲಿ ಮುರಿದು) ಪೈರು ಮೊದಲಾದುವುಗಳನ್ನು ಕದ್ದು ತಿಂದು ಹಾಳುಮಾಡುವ ಪೋಲಿದನ: ಊರಿನ ಕಾಟುದನಗಳ ಬಾಯಿಗೆ ಅವು ಬೀಳದಂತೆ ಬೇಲಿಹಾಕುವುದು (ಮುಗಿಯು. ೩೬೧).

[ಕಾಟು$_1$ (< ಕಾಡು$_2$) + ದನ]

**ಕಾಟುನಾಯಿ** (ನಾ). ಪೋಲಿ ತಿರುಗುವ ನಾಯಿ: ಊರಲ್ಲಿ ಪ್ರಜೆಗಳಷ್ಟೇ ನಿರ್ಭೀತಿಯಿಂದ ಬೆಳೆದು ಬಂದಂಥ ಕಾಟುನಾಯಿಗಳ ಹಿಂಡಿದೆ (ಜಾರುದಾ. ೩೫). [ಕಾಟು$_1$ (< ಕಾಡು$_2$) + ನಾಯಿ (< ನಾಯ್)]

**ಕಾಟಿ** 'ಕಾಟ$_1$' ನೋ.

**ಕಾಟೆಜ** (ನಾ). ಒಬ್ಬಾತನ ಹೆಸರು: ತಾಚಿಂಯನುಂ ವೇಗೆಲನುಂ ಕಾಟಿಜನುಂ ದತ್ತಿಕ್ಕೆ ಪೊನವಿಟ್ಟಗಳಲನುಂ (ಎಕ. III, ನಂಜನ. ೧೩೯–೭; 915 ?). [?]

**ಕಾಟೋಜ** (ನಾ). ಒಬ್ಬ ಶಿಲ್ಪಿಯ ಹೆಸರು: ರೂವಾರಿ ಜಗದಳ ಕಾಟೋಜನ ಪುತ್ರ ನಾಗೋಜನ ಹಸ್ತಕೌಶಳ (ಎಕ. V, ಬೇಲೂರು. ೫೧–೨; ಸು. 1120). [ಕಾಟ$_2$ + ಓಜ$_1$ (< ಒವಝು$_1$)]

**ಕಾಟ್ಟೇರಿ** (ನಾ). (ಕಾಟ ಕೊಡುವ) ಒಂದು ಭೂತದ ಹೆಸರು: ಇದು ಭೂತದ ಕಾಟವೇ ನಿಜ! ಕಾಟ್ಟೇರಿಗೆ ಕೋಲ ಒಪ್ಪಿಸಿ ಇದನ್ನು ಹೊಡೆದು ಹಾಕಲಿಕ್ಕೇ ಬೇಕು! (ಬೆಂದಯು. ೬೮).

[ದೇ. ‖ ತಮಿ. ಕಾಟ್ಟೇಱೀ; ತೆಲು. ಕಾಟೇರಿ]

**ಕಾಠಾರಿ** 'ಕಟಾರ$_2$' ನೋ.

**ಕಾಠಿ** (ನಾ). ೧. ಕೋಲು. ೨. ಒಂದು ಅಳತೆಯ ಕೋಲು; ಕ್ಷೇತ್ರವನ್ನು ಅಳೆಯುವ ಒಂದು ಅಳತೆಯ ಪ್ರಮಾಣ: ೫೭ (ಚದರ) ಮೊಳಕ್ಕೆ ಒಂದು ಕಾಠಿ. ೨೦ ಕಾಠಿಗೆ ಒಂದು ಪಾಂಡು (ಕಭಾಗೆ. ೨೯೧).

[← ಮರಾ. ಕಾಠೀ]

**ಕಾಠಿಣ್ಯ** (ನಾ). = ಕಾಠಿನ್ಯ: ಎನ್ನಯ ಶಿರಸುವತಿಕಾಠಿಣ್ಯವಯ್ಯನ ಕರಯುಗಂ ಮೃದುವಾದವಿಂತೆಡೆವಿಡದೆ ಬಡಿವುದಕೆ (ಬಸವು. ೩೮–೩೪); ಕತ್ತಲೆಗೆ ಕಾಠಿಣ್ಯವನು ಚೈತನ್ಯವನು ಗಿರಿಗಳಿಗೆ ಕೊಲೆಗಡಿಕರಿಗೆ ನಿತ್ಯ ದೇಹವನೊಲಿದು ಕೊಟ್ಟರೆ ಲೇಸು ಬಳಿಕೇನು (ಕುವ್ಯಾಕ. ೬–೭).

[< ಸಂ. ಕಾಠಿನ್ಯ]

**ಕಾಠಿನ್ಯ** (ನಾ). ೧. ಕಠಿನತೆ; ಬಿರುಸುತನ; ಗಡಸುತನ; ಗಟ್ಟಿತನ. ೨. ತೀಕ್ಷ್ಣ; ನಿಷ್ಠುರತೆ; ಬಹಳ ಕಟ್ಟುನಿಟ್ಟಾಗಿರುವಿಕೆ; ಕ್ರೌರ್ಯ. ೩. ಕಷ್ಟವಾಗಿರುವಿಕೆ; ಕಷ್ಟ. [ಸಂ.]

**ಕಾಡ$_1$** (ನಾ). ೧. ಕಾಡಿನಲ್ಲಿರುವವನು; ಕಾಡುಮನುಷ್ಯ. ೨. ಕೆಲಸಕ್ಕೆ ಬಾರದವನು: (ಕಿ). [ಕಾಡು$_2$ + –ಅ$_7$]

**ಕಾಡ$_2$** 'ಕಾಡು$_3$' ನೋ.

**ಕಾಡಅಶ್ವತ್ಥ** (ನಾ). ಒಂದು ಬಗೆಯ ಮರ; ಕಾಡು ಅರಳಿಮರ: (ಕಿ). [ಕಾಡು$_2$ + ಅಶ್ವತ್ಥ]

**ಕಾಡಂಚಿ** (ನಾ). ಒಂದು ಬಗೆಯ ಸಸ್ಯ : ಹುಳಿಗಂಜಿ, ಕಾಡಂಚಿ, ಗಜ್ಜಿಗ ಬಳ್ಳಿ (ವೈಔಗಿ. ೭೮-೧೬೦೩). [ಕಾಡು$_2$ + ?]

**ಕಾಡಕಕ್ಕೊರಲೆ**, ಕಾಡಕಗ್ಗೊರಲೆ (ನಾ). ಒಂದು ಜಾತಿಯ ಸಸ್ಯ : "ವಿಷಘ್ನಃ—ನೆಲಗಡವ, ವೃಶ್ಚಿಕಾಳಿ, ಕಾಡಕಕ್ಕೊರಲೆ . . . ಬಕುಳ" (ಒಷಧಿ. ೧೫೪). **ಕಾಡಕಗ್ಗೊರಲೆ**: "ದೋಷೋಚ್ಛೇದಿ – ಕಾಡಕಗ್ಗೊರಲೆ" (ಒಷಧಿ. ೮೦). [< ಕಾಡು$_2$ + ಕಕ್ಕೊರಲೆ]

**ಕಾಡಕಗ್ಗೊರಲೆ** 'ಕಾಡಕಕ್ಕೊರಲೆ' ನೋ.

**ಕಾಡಕಚೋರ**, ಕಾಡಖಚೋರ (ನಾ). ಒಂದು ಬಗೆಯ ಸಸ್ಯ: "ಪಿ(ಶು)ಸುಕಾ – ಸ್ಪೃಕ್ಕೆ, ಹೆಣ್ಣುಗಿಳಿ, ಕಾಡಕಚೋರ" (ಒಷಧಿ. ೯೭). **ಕುಡಖಚೋರ**: "ದಂತನಾಮಾ – ಕಾಡಖಚೋರ" (ಒಷಧಿ. ೭೪). [< ಕಾಡು$_2$ + ಕಚೋರ]

**ಕಾಡಕಡನೆಗಿಡ** (ನಾ). ಒಂದು ಬಗೆಯ ಸಸ್ಯ : (ಕ) [< ಕಾಡು$_2$ + ಕಡನೆ$_0$ + ಗಿಡ (< ಗಿಡು)]

**ಕಾಡಕದಳಿ** (ನಾ). = ಕಾಡುಬಾಳೆ: ಕವಳಿಯು ಕಾಡಕದಳಿ ಕಲು ಮಾವು ಬೇವು (ನವಮೋ. ೮-೫). [< ಕಾಡು$_2$ + ಕದಳಿ (= ಕದಲಿ)]

**ಕಾಡಕಲ್ಹಾರು** (ನಾ). ಒಂದು ಬಗೆಯ ಸಸ್ಯ: ಕಾಡಕಲ್ಹಾರು, ಕೌರಿ, ಕರ್ವಗಿ (ವೈಔಗಿ. ೬೨-೮೬೨). [< ಕಾಡು$_2$ + ಕಲ್ಹಾರು]

**ಕಾಡಕಲ್ಲಟ್ಟಿ** (ನಾ). ಒಂದು ಬಗೆಯ ಗಿಡ: ಸೊಂಡೇಗಿಡ, ಕಾಡ ಕಲ್ಲಟ್ಟಿ, ಶುಂಡಕ್ಕಾಯಿ (ವೈಔಗಿ. ೭೧-೧೪೪೬). [< ಕಾಡು$_2$ + ಕಲ್ಲಟ್ಟಿ$_0$]

**ಕಾಡಕವಟೆ** 'ಕಾಡಕವಡೆ' ನೋ.

**ಕಾಡಕವಡೆ**, ಕಾಡಕವಟೆ, ಕಾಡುಕೌಟೆ (ನಾ). ಒಂದು ಬಗೆಯ ಸಸ್ಯ; ಇಂದ್ರವಾರುಣಿ: "ಇಂದ್ರವಾರುಣಿ – ಕಾಡಕವಡೇಕಾಯಿ" (ಗಂಗಾಪು. ೩೨); ಕಾಡ ಕವಡಿ[ಡೆ]ಯ ಬಿತ್ತು ಕುಂಥದಲೆ ಮಿತಿಮೀರಿ ಬೆಳೆವುವೆಂದಣಕಿಸುತೆ ನಲಿದು ಹಾಸ್ಯಂಗೆಯ್ದುದು (ಮಲ್ಲಚ. ೧೪-೩); ಮಬ್ಬಿನ ಮದಗುಣಿಕೆ ವಿಷಯದ ಕಾರಿಕಂಟಿ ಕೇಡಿನ ಕಾಡಕವಡಿ[ಡೆ] (ಮಾನಸ. ೭೯-೧೧). **ಕಾಡಕವಟೆ**: ಕಾಡಕವಟೆಕಾಯ ತಂದು ಚಲ್ಲಿಯ ಮಾಡಿ (ಸಾಳ್ವಸಾಂ. ೯). **ಕಾಡುಕೌಟೆ**: ಶುಂಠಿ, ಹಿಪ್ಪಲಿ, ಮೆಣಸು, ಕಾಡುಕೌಟೆಯ ಸೊಪ್ಪು. . . ಕಸಾಯಂ ಕಾಸಿ ಕುಡಿಯೆ ಕಂಠ ಕುಬ್ಜ ಸನ್ನಿ ಪರಿಹರವಹುದು (ಸಕವೈ. ೧೫೯). [< ಕಾಡು$_2$ + ಕವಡೆ$_1$]

**ಕಾಡಕವಿಲೆ** (ನಾ). ಕಾಡಾಕಳು; ಕಾಡಿನ ಹಸು: ಇದೆ ಕಾಡ ಕವಿಲೆಯುಚಯಕೆ ಕಾಲುಗಳನಿಕ್ಕಿ ಸಾರಂಗ ಚರಿಸಿದ ಜಾಡು (ನವಮೋ. ೧೬-೨೦). [< ಕಾಡು$_2$ + ಕವಿಲೆ$_3$]

**ಕಾಡಕಹಿನುಗ್ಗೆ** (ನಾ). ಒಂದು ಬಗೆಯ ಸಸ್ಯ: "ರಕ್ತಶಿಗ್ರು – ಕಾಡಕಹಿನುಗ್ಗೆ" (ಒಷಧಿ. ೧೩೪). [< ಕಾಡು$_2$ + ಕಹಿ$_2$ (< ಕಯ್ಪು) + ನುಗ್ಗೆ]

**ಕಾಡಕಳ್ಳ** (ನಾ). ಕಾಡಿನ ಕಳ್ಳ : ನಾಡಾಡಿ ದೈವಗಳ ಚಿನ್ನ ಬೆಳ್ಳಿಗಳಿಂದ ಮಾಡಿಕೊಂಡದೆಜ ಪೂಜೆಯನು ಮಾಡಿ ಕಾಡಕಳ್ಳರು ಬಂದು ಅವುಗಳನು ಕೊಂಡೊಯ್ಯೆ (ಪುರಂದ. ೧-೪೪-೩); ಅವನೊಮ್ಮೆ ಕಾಡಕಳ್ಳರ ಪಡೆಯ ನಡುವೆ ನೆಗೆದು (ಇಂಗೀತ. ೪೬-೬). [< ಕಾಡು$_2$ + ಕಳ್ಳ$_1$]

**ಕಾಡಕಳ್ಳಿ** (ನಾ). ಒಂದು ಜಾತಿಯ ಕಳ್ಳಿ: ಬಳ್ಳಿದುಬುಚಿ ನೆರೆ ಮುಳ್ಳು ನೆಗ್ಗಿಲು ಕಾಡಕಳ್ಳಿ ಕಬ್ಬಳಿ ನೊಸೆದಬ್ಬೆ ಹುಲ್ಲುಗಳ್ ಬೆಳೆದಾಗ (ಕಂಸವಿ. ೧೮-೩೯). [< ಕಾಡು$_2$ + ಕಳ್ಳಿ$_2$]

**ಕಾಡಕಾಗೆ** (ನಾ). ಡೊಂಬಕಾಗೆ; ದ್ರೋಣಕಾಕ: "ಶಿಶಿಕಾಕಂ ವನಾಶ್ರಯಂ ಮೌಕುಳಿ ದ್ರೋಣಮಾ ಕಾಕೋಳಮೆನೆ ಕಾಡಕಾಗೆ" (ಮಂಗರಾ. ೫೧-೪). [< ಕಾಡು$_2$ + ಕಾಗೆ]

**ಕಾಡಕಿರಿಯಹುರುಳಿ** (ನಾ). ಒಂದು ಬಗೆಯ ಹುರುಳಿ : "ತೃಷಾಪಹಾ – ಕಾಡ ಕಿರಿಯ ಹುರುಳಿ, ಕಾಡ ಹೆಸರು" (ಒಷಧಿ. ೬೨). [ಕಾಡು$_2$ + ಕಿರಿಯ (< ಕಿಱಿಯ) + ಹುರುಳಿ]

**ಕಾಡಕುಸುಬೆ** 'ಕಾಡುಕುಸುಬೆ' ನೋ.

**ಕಾಡಕೆಸು** (ನಾ). ಒಂದು ಬಗೆಯ ಕೆಸುವಿನ ಗೆಡ್ಡೆ : (ಕ). [< ಕಾಡು$_2$ + ಕೆಸು]

**ಕಾಡಕೊಂದೆಮರ** (ನಾ). ಒಂದು ಎತ್ತರವಾದ ಮರ : ಕಾಡಕೊಂದೆ ಮರ, ಕಕ್ಕೆ (ವೈಔಗಿ. ೬೨-೧೭೬೨). [< ಕಾಡು$_2$ + ಕೊಂದೆ$_0$ + ಮರ]

**ಕಾಡಕೊರಸ** (ನಾ). ಒಂದು ಊರಿನ ಹೆಸರು : ಕದ ಇಲ್ಯೂರ ಮೂಲ ಕ್ಷೇತ್ರಾನ್ತರಾನ್ತಃ ಕಾಡಕೊರಸ ಮೂಲಸ್ಯ ತತಃ ಪರ್ವ್ವತಮುದ್ಧ್ಯ ತತಃ ಉದಕ ಸಜ್ಞಮರ್ (ಎಕ. VIII, ಸೊರಬ. ೩೩-೧೧; ಸು. 420). [?]

**ಕಾಡಖಚೋರ** 'ಕಾಡಕಚೋರ' ನೋ.

**ಕಾಡಗರ್ಗರಿ** (ನಾ). ಒಂದು ಚಿಕ್ಕಮರ: (ಕ). [?]

**ಕಾಡಗಸೆ$_1$** (ನಾ). ಕಾಡಿನ ಹೆಬ್ಬಾಗಿಲು, —ಮಹಾದ್ವಾರ: ಕೋಡ ತೊಡಗಿತು ಚಂದ್ರಕಾಂತಶಿಲೆ ಮುಚ್ಚಿದುವು ಕಾಡಗಸೆ ಹಕ್ಕಿಗೆಯ್ದಿದವು ಹಲ ಮಿಗಗಳು . . . ನೇಸರಸ್ತಮಿಪ ಕಾಲದಲ್ಲಿ (ಸಮ್ಮುಕೌ. ೧೦-೨೪). [ಕಾಡು$_2$ + ಅಗಸೆ$_1$ (< ಅಗುಸೆ)]

**ಕಾಡಗಸೆ$_2$** (ನಾ). ಒಂದು ಜಾತಿಯ ಅಗಸೆ ಗಿಡ: ಕಾಡ[ಗ]ಸೆ[ಪಾಠಾಂ. ಕಾಡಸೆ]ಯಾ ಪಂಚಾಂಗಮಂ ದುಗ್ಧದಿಂ ವಿಹಿತಂ ತಾನೆನೆ ಪಾರದಾಖ್ಯ ದಿನದಂ ಸಮ್ಮರ್ದಿತಂ ಮಾಡಿ (ಖಮುದ. ೧೬-೧೪೨); "ಉದ್ದಾಲಕಃ – ನವಣೆ, ನರುವಲು, ಕಾಡಗಸೆ, ಹೆಮ್ಮರ" (ಒಷಧಿ. ೧೬). [ಕಾಡು$_2$ + ಅಗಸೆ$_2$]

**ಕಾಡಗುರಿಯೆಳ್ಳು** (ನಾ). ಒಂದು ಜಾತಿಯ ಗುರೆಳ್ಳು : (ಕ). [< ಕಾಡು$_2$ + ಗುರಿಯೆಳ್ಳು]

**ಕಾಡಗೆ** 'ಕಾಡಿಗೆ' ನೋ.

**ಕಾಡಗೊರವಿ** (ನಾ). ಒಂದು ಬಗೆಯ ಗೊರವಿಮರ (?): ಚಂಬೂ ಹೋಗೀ ಅವರ ತುಂಬೇಗಿಡವಾದೊ ಎಕ್ಕೀ ಹೋಗೀ ಕಾಡ(ಎ)ಗೊರ ವ್ಯಾದೊ (ಹುಟ್ಟಪ. ೪೪). [< ಕಾಡು$_2$ + ಗೊರವಿ]

**ಕಾಡಗೋಳಿ** (ನಾ). ಕೋಳಿಕುಟುಮನ ಗಿಡ : ಪ್ರಮೇಹದ ಕಲ್ಲಿಗೆ– ಕಾಡಗೋಳಿಯ ಬೀಜ ಅರ್ಧ ಹಣ ತೂಕವನ್ನು ಸಣ್ಣ ಬಿಳುಗಾರ ಇವನ್ನೂ ತಿಲತೈಲದಲ್ಲಿ ಕೊಡುವುದು (ವಿವೈವಿ. ೧೬೨). [< ಕಾಡು$_2$ + ಕೋಳಿ$_3$]

**ಕಾಡಗೌಟೆ** 'ಕಾಡುಗೌಟೆ' ನೋ.

**ಕಾಡಚಕ್ಕವತ್ತ** (ನಾ). ಒಂದು ವನಸ್ಪತಿ: "ಅರಣ್ಯವಾಸ್ತುಕಃ – ಕಾಡ ಚಕ್ಕವತ್ತ" (ಒಷಧಿ. ೯). [< ಕಾಡು$_2$ + ಚಕ್ಕವತ್ತ]

**ಕಾಡಚೆಂಬೆ** (ನಾ). ಒಂದು ಬಗೆಯ ಸಸ್ಯ: "ವನಜಂಬಾನುಜಃ – ಗಾವಟ, ಕಾಡಚೆಂಬೆ" (ಒಷಧಿ. ೧೪೯). [< ಕಾಡು$_2$ + ಚೆಂಬೆ ?]

**ಕಾಡಚ್ಚಿ** (ನಾ). ಒಬ್ಬಾಕೆಯ ಹೆಸರು: ಮಯ್ದುಮರಸರ ಸೂಳೆ ಕಾಡಚ್ಚಿ ಕಾಡಚ್ಚಿಯ ಮಗಳ್ ಕಾಡಬ್ಬೆ (ಎಕ. XI, ದಾವಣ. ೧೭-೫; 889). [ಕಾಡು$_2$ + ಅಚ್ಚಿ$_2$]

**ಕಾಡಜರುಚು** (ನಾ). ಕಾಡು ಹರಟೆ; ಕೆಲಸಕ್ಕೆ ಬಾರದ ಮಾತು: ಈ ದಿನಚರ್ಯೆಯ ಕಾಡಜರುಚಿನ ವಿಕಾರಪ್ರಕರಣಗಳಿಂದ ನನಗೆ ಬುದ್ಧಿ ಗಿಡುವಷ್ಟು ಬೇಸರಾಗಿದೆ (ಮಂತ್ರಶ. ೨೭-೧೭). [< ಕಾಡು$_2$ + ಜರುಚು$_1$ (< ಜಱುಚು$_2$)]

**ಕಾಡಜೀರಿಗೆ** (ನಾ). ಕಾಡಿನಲ್ಲಿ ಬೆಳೆಯುವ ಜೀರಿಗೆ : (ಕ). [< ಕಾಡು$_2$ + ಜೀರಿಗೆ (< ಜೀರಗೆ)]

**ಕಾಡಟ್ಟು** (ಕ್ರಿ). ಕಾಡಿಗೆ ಅಟ್ಟು, —ಓಡಿಸು; ಅಡವಿಪಾಲು ಮಾಡು: ಧರ್ಮವನ್ನಾವ ಕಾಡಟ್ಟಿದಿರಿ? (ಹೆಬ್ಬೆರ. ೩೩-೧೪೮). [ಕಾಡು$_2$ + ಅಟ್ಟು$_1$]

**ಕಾಡಡವಿ** (ನಾ). ಕಗ್ಗಾಡು; ಕೆಟ್ಟ ಅಡವಿ: ಯಾವ ಕಾಡಡವಿಯಲಿ ಜೇನುಂಡು ಬೆಳೆದಿದ್ದ ಜಾಂಬುವಂತನ ಹಿಡಿದು ತಂದಾನ? (ಸೂರ್ಯಪಾ. ೫೪-೫). [ಕಾಡು$_2$ + ಅಡವಿ]

**ಕಾಡಡಿಕೆ,** ಕಾಡುಅಡಿಕೆ (ನಾ). ಒಂದು ಬಗೆಯ ಅಡಕೆ: (ಕ). **ಕಾಡುಅಡಿಕೆ**: ಕಾಡುಅಡಿಕೆ, ಜಂಡರಿಗೆ (ಮೈಔಗಿ. ೬೨-೧೪೬). [ಕಾಡು$_2$ + ಅಡಿಕೆ (< ಅಡಕೆ$_1$)]

**ಕಾಡಣೆ,** ಕಾಡಣೆ (ನಾ). (ಕುದುರೆಯ ಕಾಲಿಗೆ) ಕಟ್ಟುವ ಹಗ್ಗ: ಬಾಪೂ ಸಾಹೇಬನ ಕುದುರೆಯ 'ಪಾಯಬಂದ ಕಾಡಣೆ'ಯನ್ನು ಬಿಚ್ಚಿಕೊಂಡು, ತಿರುಗಿ ಕೋಣೆಗೆ ಬಂದು ಬಾಗಿಲು ಹಾಕಿಕೊಂಡಳು (ಗ್ರಾಮಾಯ. ೧೪೧). **ಕಾಡಣೆ**: ಪ್ರದಕ್ಷಿಣಂಗೈದು ತೊಡರು ಕಾಡಣೆಯಂ ತೆಗೆಸಿ ಇಮ್ಮಡಿ ಘಂಟೇಂದ್ರ ನರೇಂದ್ರಂ ಹನುಮಗತಿಯಿಂದೇಱಿದಂ (ಬೀಳವಂ. ೧-೫೪ ವ). [← ಮರಾ. ಕಾಢಣೀ]

**ಕಾಡಣೆ** 'ಕಾಡಣೆ' ನೋ.

**ಕಾಡತುಂಬೆ** 'ಕಾಡುತುಂಬೆ' ನೋ.

**ಕಾಡತುರುವೆ** (ನಾ). ಒಂದು ಬಗೆಯ ಸಸ್ಯ: "ಖರಗಂಧಿನಿ – ಕಾಡ ತುರುವೆ" (ಓಷಧಿ. ೪೪). [< ಕಾಡು$_2$ + ತುರುವೆ (< ತುಱುವೆ)]

**ಕಾಡತುಸ** 'ಕಾಡುತೂಸು' ನೋ.

**ಕಾಡತುಳಸಿ** (ನಾ). ಅಡವಿಯ ತುಳಸಿ: "ಗಂಧನಾ – ಕಾಡತುಳಸಿ" (ಓಷಧಿ. ೪೪). 'ಕಾಡತೊಳಸಿ' ಪರಾ. [<ಕಾಡು$_2$+ ತುಳಸಿ (= ತುಲಸಿ)]

**ಕಾಡತೂಸು,** ಕಾಡುತುಸ (ನಾ). ಬಂದೂಕು, ಪಿಸ್ತೂಲುಗಳಲ್ಲಿ ಟ್ಟು ಹಾರಿಸುವ ಮದ್ದು ತುಂಬಿದ ಕೊಳವೆ; ತೋಟಾ: ಬಂದೂಕ ಗಳಲ್ಲಿ ಜಡಿಯತಕ್ಕಂಥ ಕಾಡತೂಸುಗಳೆಂಬ ನೆಣ ಹಚ್ಚಿದ ತೋಟ ಗಳನ್ನು ಸಿಪಾಯಿಗಳಿಗೆ ಕೊಟ್ಟರು (ಇಂಗ್ಲಂಡ. ೨೭೮); ಬಂದೂಕಿನಲ್ಲಿ ಕಾಡತೂಸು ತುಂಬಿ ಆದೆ. ಜೋಕೆ (ಬಂಗಾಹೆ. ೫೦). **ಕಾಡುತುಸ**: ಏನ ಒಂತುಸಾ; ಅದು ಕಾಡತುಸಾ? (ನಡುಮ. ೨೮). [← ಮರಾ. ಕಾಡ್‌ತೂಸ್, ಕಾಡ್‌ತುಸ್, ಕಾರ್‌ತುಸ್; ಹಿಂ. ಕಾರ್‌ತೂಸ್. / ಇಂ. Cartridge]

**ಕಾಡತೊಳಸಿ** (ನಾ). = ಕಾಡತುಳಸಿ: "ಉದ್ವೇಗಜನಕಃ – ಕಾಡ ತೊಳಸಿ" (ಓಷಧಿ. ೧೭). [< ಕಾಡು$_2$ + ತೊಳಸಿ]

**ಕಾಡತ್ತಿ** (ನಾ). ಒಂದು ಬಗೆಯ ಅತ್ತಿ; ಕಾಡು ಅತ್ತಿಯ ಮರ: "ವಾಯಸೀ– ಕಂಗುಂಗೆ, ಕಾಡದೊಂಡೆ, ಕಾಡತ್ತಿ, ಚೀಲೈತ, ಬಲ್ಲಗಣಿಕೆ" (ಓಷಧಿ. ೧೫೦). [ಕಾಡು$_2$ + ಅತ್ತಿ$_1$]

**ಕಾಡದಟು** (ನಾ). ಕಾಡುತನದ ಪರಾಕ್ರಮ; ನಾಗರಿಕವಲ್ಲದ ಶೌರ್ಯ: ಅನ್ನೆಗಂ ಹೆರರ ಕಯ್ಯ ಹಾರೈಸದೆಮ್ಮಾರ್ಪಂನಾಂ ನೆಮ್ಮ ಮುಂಬರಿದ ನಮಗೀಗಳೇಕೀ ಕಪಿಧ್ವಜರ ಕಾಡದಟನೊಂದು ಹಂಗು? (ಶ್ರೀರಾಮಾ. ೩೦೧-೧೯). [ಕಾಡು$_2$ + ಅದಟು]

**ಕಾಡದೇವದಾರು** (ನಾ). ಒಂದು ಬಗೆಯ ದೇವದಾರು ಮರ: "ಆಲೇಪನದ್ರುಮಃ – ಕಾಡದೇವದಾರು" (ಓಷಧಿ. ೧೩). [ಕಾಡು$_2$ + ದೇವದಾರು]

**ಕಾಡದೊಂಡೆ** (ನಾ). ಒಂದು ಬಗೆಯ ಬಳ್ಳಿ: "ವಾಯಸೀ – ಕಂಗುಂಗೆ, ಕಾಡದೊಂಡೆ" (ಓಷಧಿ. ೧೫೦). [ಕಾಡು$_2$ + ತೊಂಡೆ]

**ಕಾಡನರವಲು** (ನಾ). ತೋಟದಲ್ಲಿ ಬೆಳೆಯುವ ಒಂದು ಕಳೆ: (ಕ). [ಕಾಡು$_2$ + ನರವಲು (< ನಱವಲು)]

**ಕಾಡನಿಂಬೆ** 'ಕಾಡುನಿಂಬೆ' ನೋ.

**ಕಾಡನೊಱ** 'ಕಾಡುನೊಳ' ನೋ.

**ಕಾಡನೊಳ** 'ಕಾಡುನೊಳ' ನೋ.

**ಕಾಡಪಾಪ** 'ಕಾಡುಪಾಪ' ನೋ.

**ಕಾಡಪಾಪಟೆ,** ಕಾಡಪಾಪರೆ (ನಾ). ಕಾಡ ಕವಡೆಕಾಯಿ: (ಕ). **ಕಾಡಪಾಪರೆ**: (ಕ). [< ಕಾಡು$_2$ + ಪಾಪಟೆ]

**ಕಾಡಪಾಪರೆ** 'ಕಾಡಪಾಪಟೆ' ನೋ.

**ಕಾಡಪಾವಟೆ ಬಳ್ಳಿ** 'ಕಾಡುಪಾವಟೆ ಬಳ್ಳಿ' ನೋ.

**ಕಾಡಪೆಸಱು** (ನಾ). ಕಾಡ ಹೆಸರು: "ಮುದ್ಗಪರ್ಣಿ, ಕಾಕಮುದ್ಗಾ, ಸಹಾ – ಈ ೩ ಕಾಡಪೆಸಱು" (ನಾಚಿರಾ. ೧೧೦). [ಕಾಡು$_2$ + ಪೆಸಱು (< ಪೆಸಱ್)]

**ಕಾಡಬಗಲೆ** (ನಾ). ಒಂದು ವನಸ್ಪತಿ: ಒಡೆಯದೆ ಇದ್ದ ಬಾವಿಗೆ:– ಕಾಡಬಗಲೇ ಬೇರಂ ಅರೆದು ಪೂಸಲು ಒಡೆಯುವುದು (ವಿವೈವಿ. ೬೭). [ಕಾಡು$_2$ + ಬಗಲೆ]

**ಕಾಡಬಜ** (ನಾ). ಒಂದು ಬಗೆಯ ಕುರುಚಲುಗಿಡ: (ಕ). [< ಕಾಡು + ಬಜ]

**ಕಾಡಬಜೆ** (ನಾ). ಒಂದು ಜಾತಿಯ ಬಜೆ: (ಕ). [< ಕಾಡು$_2$ + ಬಜೆ]

**ಕಾಡಬಸಲೆ** 'ಕಾಡುಬಸಳೆ' ನೋ.

**ಕಾಡಬಾಳೆ** 'ಕಾಡುಬಾಳೆ' ನೋ.

**ಕಾಡಬೆಳಸು** (ನಾ). ಒಂದು ಬಗೆಯ ಸಸ್ಯ (?) : "ವರಣ – ಕಾಡ ಬೆಳಸು" (ಓಷಧಿ. ೧೪೫). [< ಕಾಡು$_2$ + ಬೆಳಸು ?]

**ಕಾಡಬ್ಬೆ** (ನಾ). ಒಬ್ಬಾಕೆಯ ಹೆಸರು: ಕಾಡಜ್ಜಿಯ ಮಗಳ್ ಕಾಡಬ್ಬೆ (ಎಕ. XI, ದಾವಣ. ೧೭-೬; 889). [? + ಅಬ್ಬೆ]

**ಕಾಡಮುಟೆ** (ನಾ). ಒಂದು ಜಾತಿಯ ಅಮುಟೆ ಮರ: ಗೊಡ್ಡಮುಟೆ, ಕಾಡಮುಟೆ (ಮೈಔಗಿ. ೬೧-೧೪೬೫). [ಕಾಡು$_2$ + ಅಮುಟೆ$_1$ (< ಅಂಬಟೆ)]

**ಕಾಡಮಲ್ಲಿಗೆ** 'ಕಾಡುಮಲ್ಲಿಗೆ' ನೋ.

**ಕಾಡಮಾಗಳಿ** (ನಾ). ಒಂದು ಬಗೆಯ ಸಸ್ಯ: ಮಾಗಳಿಬೇರು, ಕಾಡ ಮಾಗಳಿ ಬೇರು ... ಪಾಕಮಾಡಿ (ಸಕನೈ. ೧೧೫); ಕಾಡಮಾಗಳಿ, ನೆಲ್ಲಿಚಟ್ಟು ... ಕಷಾಯವ ಮಾಡಿ ಕೊಡಿಸಲು (ವೈದ್ಯಸಾ. I, ೩೬೨). [< ಕಾಡು$_2$ + ಮಾಗಳಿ (< ಮಾಗುಳಿ)]

**ಕಾಡಮಾದಲ** (ನಾ). ಒಂದು ಬಗೆಯ ಮಾದಲ ಮರ: ವನಬೀಜ ಪೂರಕಃ, "ವನಪೂರಬೀಜಕಃ – ಈ ಯೆರಡುಂ ಕಾಡಮಾದಲ" (ಓಷಧಿ. ೧೪೪). [< ಕಾಡು$_2$ + ಮಾದಲ]

**ಕಾಡಮಿಕ** (ನಾ). ಕಾಡಿನಲ್ಲಿರುವ ಮಿಕ; ಕಾಡಹಂದಿ: ಎಂಥ ಬೀಜಕು ಇಲ್ಲಿ ಮೊಳಕೆ ನಾಟುವ ಭಾಗ್ಯ. ಕಾಡಮಿಕ, ನರಿ ಸುಸುಳಿ ಆರು – ಪಾರು (ನೆಲಮು. ೨೨). [< ಕಾಡು$_2$ + ಮಿಕ]

**ಕಾಡರಸಿನ** 'ಕಾಡುಅರಿಸಿನ' ನೋ.

**ಕಾಡರಳಿ** (ನಾ). ಒಂದು ಜಾತಿಯ ಅರಳಿಮರ: (ಮೈಔಗಿ. ೩೭-೬೨೬). [ಕಾಡು$_2$ + ಅರಳಿ]

**ಕಾಡರಳೆ** (ನಾ). ಒಂದು ಜಾತಿಯ ಒರಟಾದ ಹತ್ತಿ: "ಭಾರ ದ್ವಾಜಿ, ವನ್ಯಾಸಾ – ಅಡವೀಹತ್ತಿಗಿಡ, ಕಾಡುಹತ್ತೀಗಿಡ, ಕಾಡುಅರಳೇ ಗಿಡ" (ಸಿದ್ಧಾಂತಿ. ೧೨೧). [ಕಾಡು$_2$ + ಅರಳೆ]

**ಕಾಡರು** (ನಾ). ಒಂದು ಪ್ರಾಣಿಯ ಹೆಸರು (?) : ಶರಭಕ್ಕೆ ಕೇಸರಿ ಕೇಸರಿಗಾಕರಿ ಕರಿಗಳಿಂದ ಕಾಡರಿಗೆ ಇರದೆ ಪುಲಿಗೆ ಪುಲ್ಲೆ ಸಾರಂಗ ವುರಗ ನಿರರೆ ವೈರಗಳ್ ಮತ್ತಿಲ್ಲ (ಅನಂಚ. ೧೩-೧೨೮). [?]

**ಕಾಡಲಿಟ್ಟೆ** (ನಾ). ಒಂದು ಜಾತಿಯ ಸಸ್ಯ: "ತಿಕ್ತಲಾ – ಕಾಡಲಿಟ್ಟೆ" (ಓಷಧಿ. ೬೪). [?]

**ಕಾಡಲಿಂಬೆ** 'ಕಾಡುನಿಂಬೆ' ನೋ.

**ಕಾಡಲ್ಲ** (ನಾ). ಕಾಡು ಶುಂಠಿ: "ಪೇಯಃ – ಕಾಡಲ್ಲ, ಗಂಜಿ" (ಓಷಧಿ. ೧೦೩). [ಕಾಡು$_2$ + ಅಲ್ಲ$_1$]

**ಕಾಡಲ್ವಾಗಿಲ್** (ನಾ). ಒಂದು ಸ್ಥಳದ ಹೆಸರು: ಕಾಡಲ್ವಾಗಿಲ ಚಬ್ಬಿಸೆಟ್ಟಿ ತುಱುಗೊಳೆ ತುಱುವನಿಕ್ಕಿಸಿ ಸತ್ತ (ಎಕ. IX, ದೊಡ್ಡಬ. ೯–೧೧; 918). [?]

**ಕಾಡವದವರ** (ನಾ). ಒಂದು ಬಗೆಯ ಸಸ್ಯ: "ಕಾಸಂಬರ್ಯಃ – ಕಾಡವದವರ" (ಓಷಧಿ. ೩೧). [?]

**ಕಾಡವರೆ** (ನಾ). ಒಂದು ಬಗೆಯ ಅವರೆ: "ಕನಿಲಿ – ಕಾಡವರೆ" (ಓಷಧಿ. ೨೦); ಹಾಡು ಹಾಡೋದ ಬಲ್ಲೊ ಹಾಡು ಮಗುಚೋದ ಬಲ್ಲೊ ಕಾಡವರೆ ಕಾಯ ಕುಯ ಬಲ್ಲೊ (ಹಳ್ಳಿಯ. ೫೯). [ಕಾಡು$_2$ + ಅವರೆ$_1$]

**ಕಾಡವಿಟ್ಟೆ** (ನಾ). ಒಂದು ಬಗೆಯ ಗಿಡ: "ಶಂಖಿನೀ – ದಶಸಿ, ಕಾಡವಿಟ್ಟೆ, ಭನ್ನಿ" (ಓಷಧಿ. ೧೬೦). [< ಕಾಡು$_2$ + ಇಟ್ಟೆ$_1$]

**ಕಾಡವೆ** (ನಾ). ಜಿಂಕೆಯ ಜಾತಿಗೆ ಸೇರಿದ ಒಂದು ಪ್ರಾಣಿ; ದೊಡ್ಡ ಜಿಂಕೆ; ಸಾರಂಗ: ಸಿಂಗವನಿಱಿದು ಎಕ್ಕಲನ ಹೊಕ್ಕು ತಿವಿದು ಬಡಿದು ಭಲ್ಲುಕನ ಕಾಡವೆಯ ಕೈಸೆಱೆವಿಡಿದು ಕಡುಭೀತಿಯಂ ಮೃಗಕುಲಕ್ಕೆ ಬೀಱುತ (ರಾಘಚ. ೧೬–೭೪). [< ಕಡವೆ$_2$ ?]

**ಕಾಡವೋಮ** 'ಕಾಡುಓಮ' ನೋ.

**ಕಾಡಶಹ** (ನಾ). ಚದುರಂಗದ ಆಟದಲ್ಲಿ ತನ್ನ ಕಾಯಿಯ ಮುಂದಿರುವ ಇನ್ನೊಂದು ತನ್ನದೇ ಆದ ಕಾಯಿಯನ್ನು ಬದಿಗೆ ಸರಿಸಿ ಪ್ರತಿಪಕ್ಷದ ರಾಜನಿಗೆ ಶಹ ಕೊಡುವಿಕೆ: ಶಿವಾಜಿಯು ನಮಗೆ ನಿಜವಾಗಿಯೇ ಶಹ ಕೊಡಬೇಕೆಂದು ಮಾಡಿರಬಹುದು. ಈ ಪ್ರಸಂಗದಲ್ಲಿ ನಾವು ಶಹಕ್ಕೆ ಕಾಡಶಹವನ್ನು ಕೊಡಲೇಬೇಕು (ಛತ್ರಪ. ೮೪). [← ಮರಾ. ಕಾಢಶಹಾ]

**ಕಾಡಸಂಪಗೆ** 'ಕಾಡುಸಂಪಿಗೆ' ನೋ.

**ಕಾಡಸಬ್ಬಸಿಗೆ** 'ಕಾಡುಸಬ್ಬಸಿಗೆ' ನೋ.

**ಕಾಡಸಬ್ಬಸೀಗೆ** 'ಕಾಡಸಬ್ಬಸಿಗೆ' ನೋ.

**ಕಾಡಸಾವೆ** 'ಕಾಡುಸಾಮೆ' ನೋ.

**ಕಾಡಸಿಂಬೆ** (ನಾ). ಒಂದು ಬಗೆಯ ಮರ: "ಕುಕ್ಕುಟ – ಕೋಳಿ, ಋಷಭಕ, ಹೆಮ್ಮರ, ಗರಿಯವರೆ, ಕಾಡಸಿಂಬೆ" (ಓಷಧಿ. ೩೪). [< ಕಾಡು$_2$ + ಸಿಂಬೆ]

**ಕಾಡಸಿವಕಳ್ಳಿ** (ನಾ). ಒಂದು ಬಗೆಯ ಮರ: "ವಾಸವವೃಕ್ಷಃ – ಕಾಡಸಿವಕಳ್ಳಿ" (ಓಷಧಿ. ೧೫೨). [< ಕಾಡು$_2$ + ಸಿವಕಳ್ಳಿ$_0$]

**ಕಾಡಸೂರಣ** 'ಕಾಡುಸೂರಣ' ನೋ.

**ಕಾಡಸೌತೆ** 'ಕಾಡುಸೌತೆ' ನೋ.

**ಕಾಡಸ್ವಾಮಿ** (ನಾ). ಒಬ್ಬಾತನ ಹೆಸರು: ತಿಪ್ಪೂರ ಕಾಡಸ್ವಾಮಿಗಳ್ಗೆ (ಇಆ. V, ೧೩೬–೪; 454 ಕೃಶಾ). [ಕಾಡ$_2$ + ಸ್ವಾಮಿ]

**ಕಾಡಹರಳುಗಿಡ** (ನಾ). ಬೇಲಿಗೆ ಹಾಕುವ ಒಂದು ತೆರದ ಕಂಟಿ: (ಕ). [< ಕಾಡುಹರಳು + ಗಿಡ (< ಗಿಡು)]

**ಕಾಡಹಾಕುಕಾರೆ** 'ಕಾಡುಹಾಕುಕಾರೆ' ನೋ.

**ಕಾಡಹಾಗಲ** 'ಕಾಡುವಾಗಲು' ನೋ.

**ಕಾಡಹಾಲೆ** (ನಾ). ಒಂದು ಬಗೆಯ ಹಾಲೆ ಗಿಡ: "ಧಾಮಾರ್ಗವಃ, ಘೋಷಕಃ ಈ ೨ ಕಾಡಹಾಲೆ – ಅದು ಪೀತವಾದಡೆ ಮಹಾಜಾಲಿಯೆನಿಸುಗು" (ನಾಚಿರಾ. ೧೧೦). [< ಕಾಡು$_2$ + ಹಾಲೆ$_2$ (< ಪಾಲೆ$_3$)]

**ಕಾಡಹುರುಳಿ** 'ಕಾಡುಹುರುಳಿ' ನೋ.

**ಕಾಡಹುಳಿಹೀರೆ** 'ಕಾಡುಹುಳಿಹೀರೆ' ನೋ.

**ಕಾಡಹೆಸರು** 'ಕಾಡುಹೆಸರು' ನೋ.

**ಕಾಡಾಕಳು** (ನಾ). ಕಾಡಿನ ಹಸು: "ಕಾಡಾವು – ಕಾಡಾಕಳು" (ಗಂಗಾಮು. ೭೯). [ಕಾಡು$_2$ + ಆಕಳು (< ಆಕಳ್)]

**ಕಾಡಾಕಾಡಿ** 'ಖಾಡಾಖಾಡಿ' ನೋ.

**ಕಾಡಾಗು** (ಕ್ರಿ). ೧. ಒರಟಾಗು; ಅಸಂಸ್ಕೃತವಾಗು: ಮೊದಲೇ ಶಿಕ್ಷಣವಿಲ್ಲದೆ ಕಾಡುಜನರಂತಿರುವ ನಮ್ಮ ಜನರು ಮತ್ತಷ್ಟು ಕಾಡಾಗುತ್ತಾರೆ (ಶಿಕ್ಷಮ. ೨೫). ೨. ಕಾಡುಪಾಲಾಗು; ಹಾಳಾಗು: ಗೋರೈಸಿದರ ನೋಡಿ ಕಾಡಾಗಿ ದೂಡಾಗಿ ಪೋಡಿಸುವೆನೆಂದ ಪ್ಯಾಲ (ಜನಮು. ೧೪–೩೬). [ಕಾಡು$_2$ + ಆಗು$_1$]

**ಕಾಡಾಟ$_1$** (ನಾ). (ಉಕ) ಕಾಟ; ಪೀಡೆ: ಅವನಿಗೆ ಶನಿಯ ಕಾಡಾಟ ತಪ್ಪಿಲ್ಲ (ರೂಢಿ). [ಕಾಡು$_1$ + ಆಟ]

**ಕಾಡಾಟ$_2$** (ನಾ). ಹಾಳು ಆಟ; ವ್ಯರ್ಥವಾದ ಆಟ: ನೀನು ಓದಬೇಕು . . . ಆ ಕಾಡು ಹುಡುಗರ ಜೊತೆ ಸೇರಿ ಕಾಡಾಟ ಆಡಬಾರದು (ಬೆಳುಮು. ೧೩೬). [ಕಾಡು$_2$ + ಆಟ]

**ಕಾಡಾಡಿ** (ನಾ). ೧. ಅಡವಿಯಲ್ಲಿಯೆ ತಿರುಗಾಡುವವನು; ಅರಣ್ಯವಾಸಿ; ಕಾಡುಮನುಷ್ಯ; ವನಚರ: ನೋಡಿರೆ! . . . ಮಱವಟ್ಟುನೋೞನದಿಂ ಪುರ್ಬುಗೊಂಡನಂತುಮಿರ್ಪ ಕಾಡಾಡಿರಾಯನೊಂದುಗೆಯ್ಮೆಯಂ! (ರಾಮಾಶ್ವ. ೬೦–೩); ಮುಂಚೆ ಮಾನವನು ಮಿಕ್ಕ ಕಾಡು ಪಶುಗಳಂತೆ ಕಾಡಾಡಿಯಾಗಿ ಬೇಟೆಯಾಡುತ್ತಿದ್ದನು (ಮಾವಾದ. ೭೧). ೨. (ಆಲಂ) ಅನಾಗರಿಕ; ಅಸಂಸ್ಕೃತ: ನೋಡಿರೈ ನಿರುಪಮವಲಾ ಕಾಡಾಡಿಗಳ ಕಲಿತನವನು (ಕುವ್ಯಾಭೀ. ೧–೫). [ಕಾಡು$_2$ + –ಆಡಿ$_1$]

**ಕಾಡಾಡಿತನ** (ನಾ). ೧. ಅಡವಿಯಲ್ಲಿ ತಿರುಗಾಡುವಿಕೆ, —ವಾಸಮಾಡುವಿಕೆ. ೨. ಅನಾಗರಿಕತೆ: ಮರಡಿಯಿಂದ ಮಹಡಿಯವರೆಗೆ, ಗವಿಯಿಂದ ಗೋಪುರದವರೆಗೆ, ಕಾಡಾಡಿತನದಿಂದ ನಾಗರಿಕತೆಯ ಶಿಖರದವರೆಗೆ . . . ಮುಂದೆ ಸಾಗಿ (ಮಾವಾದ. ೬೪). [ಕಾಡಾಡಿ + –ತನ]

**ಕಾಡಾಡು** (ನಾ). ಅಡವಿಯ ಮೇಕೆ; ಕಾಡುಮೇಕೆ: ಕಾಡುಕೋಣ, ಕಾಟಿ, ಕಾಡಾಡು, ಕಾಡುಕುದುರೆ (ನಮ್ಮನು. ೨೩೯). [ಕಾಡು$_2$ + ಆಡು$_3$]

**ಕಾಡಾಡುಬಳ್ಳಿ** (ನಾ). ಕಹಿ ಪಡವಲ: (ಕ). [? + ಬಳ್ಳಿ]

**ಕಾಡಾನೆ** (ನಾ). ಅಡವಿಯಲ್ಲಿ ವಾಸಮಾಡುವ ಆನೆ; ಕಾಡಿನ ಆನೆ: ಅರಸಂ ಕಾಡಾನೆಯಂ ಪಿಡಿಯಲ್ವೆದಿ (ವಡ್ಡಾರಾ. ೧೧೦–೧೪); ಬಾಟೆಯ ಚೆಲ್ವನಪ್ಪ ಬನಮಂ ಕಾಡಾನೆ ಪೊಯ್ದಂತೆ (ಪಂಪಭಾ. ೮–೮೦); ಕಾಡಾನೆಗಳೊತ್ತಿ ಕೀೞ್ತುಡೆಗೆಡೆದ ಮರಂಗಳಿಂ (ಕಾದಂಉ. ೨೬೬); ಸಿಲುಕುವುವು ಮೃಗಪಕ್ಷಿ ಹೂಡಿದ ಬಲೆಗಳಲಿ ಕಾಡಾನೆ ಬೀಸಿದ ಬಲೆಯ ಕೊಂಬುದೆ (ಕುವ್ಯಾಕ. ೧೩–೧೪). [ಕಾಡು$_2$ + ಆನೆ$_1$]

**ಕಾಡಾಯ** (ನಾ). ಕಾಡಿನ ವರಮಾನ; ಕಾಡಿನಿಂದ ಬರುವ ಆದಾಯ: ಎಕ್ಕಲಗಾವುಣ್ಣನೊಳವಾಗಿ ಪನ್ನೆರಡುಗಾವುಣ್ಣರ ನೆಲ್ಲವಾಟಿ ಗಾವುಣ್ಣನ ಬೀಯಮಾನಸದಿಂ ಬಳಿಕೆ ಕಾಡಾಯಮಂ ನೋಡಿಯುಂ ಕೀಟಿಕೊಕ್ಕಲ್ ಪಸುಗೆಗೆ ಮೂವತ್ತು ಮತ್ತರುಂ (ಸೌಇಇ. IX–i, ೬೬–೨೨; 992). [ಕಾಡು$_2$ + ಆಯ$_7$]

**ಕಾಡಾರಂಬ** (ನಾ). ೧. ಮಳೆಯ ನೀರಿನಿಂದ ಮಾಡುವ ವ್ಯವಸಾಯ; ಖುಷ್ಕಿ: ತೋಟ ಕಾಡಾರಂಬ ಕರ್ಬುಗರ್ದೆಗಳೆಡೆಯಾಟದ ವ್ಯವಹಾರಿ ಜನರು (ಮೋಹತ. ೩–೩೦). ೨. ಖುಷ್ಕಿ ಜಮೀನಿನ ಮೇಲಿನ ಕಂದಾಯ: ಬಾಲಗೆರೆ ಮಗ್ಗದೆರೆ ಕಾಡಾರಂಬ ನೀರಾರಂಬ (ಮೈಆರಿ. ೧೯೩೪, ೫೮–೨೦; 1434); ತೋಟ ತುಡಿಕೆ ಕಾಡಾರಂಬ ನೀರಾರಂಬ (ಹುಟ್ಟಹ. ೩). 'ನೀರಾರಂಬ' ಪರಾ. [ಕಾಡು$_2$ + ಆರಂಬ]

**ಕಾಡಾರಂಭ** (ನಾ). = ಕಾಡಾರಂಬ ೨ : ಚತುಸ್ಸೀಮೆವೊಳಗಾದ ಗದ್ದೆ ಬೆದ್ದಲು × × × ಕಾಡಾರಂಭ ನೀರಾರಂಭ (ಎಕ. X, ಕೋಲಾರ. ೧೭೮–೭; 1422 ?) ; ನೀರಾರಂಭ ಕಾಡಾರಂಭ ಅಡಕೆಯಮರ ತೆಂಗಿನಮರ (ಎಕ. VII, ಶಿವಮೊ. ೭೧–೨೮ ; 1431) ; ಯಿಾ ಗ್ರಾಮಕೆ ಕಾಡಾರಂಭ ನೀರಾರಂಭ (ಎಕ. XI, ಚಿತ್ರದು. ೩೧–೧೮ ; 1714). 'ನೀರಾರಂಭ' ಪರಾ. [ಕಾಡು$_2$ + ಆರಂಭ]

**ಕಾಡಾವು** (ನಾ). ಕಾಡು ಹಸು : ಕಾಡಾವುಮೂರಾವುಂ ಕಾಟ್ಪತ್ತಿಯುಂ ಪತ್ತಿಯುಂ . . . ಎಂತು ಲೋಕದೊಳೊಳವು (ಧರ್ಮಾಮೃ. ೯–೬೮) ; ಕಱಿವ ಕಾಡಾವುಗಳ ಬೃಂದದಿಂ ಮೆಲುಕಿಡುವ ಕಾನನದ ಮಹಿಷಂಗಳಿಂ (ಮಹಾವಿ. ೧೭–೨೮). [ಕಾಡು$_2$ + ಆವು]

**ಕಾಡಿ$_1$** (ನಾ). ಕಾಡಿನಲ್ಲಿ ವಾಸಿಸುವ ಹೆಂಗಸ್ಸು; ವನಚರಿ; ಬೇಡಿತಿ : (ಕ). [ಕಾಡು$_2$ + –ಇ$_2$]

**ಕಾಡಿ$_2$** (ನಾ). ಒಂದು ಅಳತೆ (?) : ಎತ್ತು ನಿಂತ ಗದ್ದೀಲಿ ಬಿತ್ತುತ ನಿಂತನ್ಯಾರೆ ಮುತ್ತಿನಂತ ಕಾಲು ನಿಡಿದೋಳು ಭಾಲಯ್ಯ ಖಂಡ್ಗವ ಬಿತ್ತಿ ಕಾಡಿ ಬೆಳೆವ (ಹಳ್ಳಿಯ. ೫೧). [< ಕಾಠಿ]

**ಕಾಡಿಕಾರ** 'ಕಾಡೀಕಾರ' ನೋ.

**ಕಾಡಿಕೆ, ಕಾಡಿಕ್ಕೆ** (ನಾ). ಕಾಡುವಿಕೆ ; ಕಾಟ ; ಪೀಡೆ : ಬೇಡಿದರ ಬೇಡಿಕೆಯನೀವುತ ಕಾಡಿದರ ಕಾಡಿಕೆಯ ಕೊಡುತಲು ನೀಡಿಗೆಡದರ ಮನದ ಬಯಕೆಯನೀವುತಿರುತಿರಲು (ಸಂಭಪ. ೯–೧೭). **ಕಾಡಿಕ್ಕೆ** : ಅಂಜುವರ ಮೇಲೆ ಕಪ್ಪೆಯಂ ಬಿಸುಟರೆಂಬಂತೆ ಬೆಚ್ಚಿ ನಿಚ್ಚಮದಱ ಕಾಡಿ[ಪಾಠಾಂ. ಟ]ಕ್ಕೆ ಕೋಟಲೆಗೊಳಲ್ (ಪುಣ್ಯಾಸ್ರ. ೧–೫೪). [ಕಾಡು$_1$ + –ಇಕೆ]

**ಕಾಡಿಕ್ಕೆ** 'ಕಾಡಿಕೆ' ನೋ.

**ಕಾಡಿಗ** (ನಾ). ೧. ಕಾಡುವವನು ; ಪೀಡಿಸುವವನು. ೨. ಬಾತು ಕೋಳಿ : "ನೀರಗೋಳಿ ; ಕಾಡುವವ" (ಗಂಗಾಮ. ೭೯). [ಕಾಡು$_1$ + –ಇಗ]

**ಕಾಡಿಗಾವುಂಡ** (ನಾ). ಒಬ್ಬಾತನ ಹೆಸರು : ಎರೆಊರ ಕಾಡಿಗಾವುಣ್ಡ ತನ್ನೂರ ತುಱುಗೊಳೊಳ್ ತುಱುವ × × ಕ್ಷಿಸಿ ಕಾದಿ ಸತ್ತ (ಎಕ. IV, ಗುಂಡ್ಲುಪೇ. ೧೪–೩ ; ಸು. 995). [ಕಾಡಿ$_0$ + ಗಾವುಂಡ (< ಗಾಮುಂಡ)]

**ಕಾಡಿಗೆ, ಕಾಡಗೆ** (ನಾ). ೧. ದೀಪದ ಕುಡಿಯಿಂದ ಹೊರಡುವ ಹೊಗೆಯ ಕಪ್ಪು, —ಮಸಿ : ಅಪೂರ್ವ ಶಿಲ್ಪಕೃತಮಪ್ಪ ಲೆಕ್ಕವಲಗೆಯಂ ಕಾಡಿಗೆಯೊಳ್ ಪುಟ್ಟಿಸಿ ಮೊಟ್ಟೆಗವಡಿಕೆಯೊಳೂರಸಿದಂತೆ (ಶಾಂತಿಪು. ೯–೧೪೩ ವ) ; ಸೊಡರ್ ಕಳೆಯುತಿರ್ಪುದು ತನ್ನ ಕಾಡಿಗೆಯನೆಂತು (ಜೀವಸಂ. ೮೧–೧೫) ; ಕಾಡಿಗೆಯೊಳಗೆ ಕಾರಿರುಳ ತಿರುಳ ರಸಮಂ ಕಲಿಸಿ (ಸಿದ್ಧರಾ. ೩–೩೧). ೨. ಕಣ್ಣಿಗೆ ಹಚ್ಚಿಕೊಳ್ಳುವ ಕಪ್ಪು ; ಅಂಜನ; ಕಜ್ಜಳ : "ಕಜ್ಜಳಂ, ಅಂಜನಂ, ಅಭಿಹಿತಂ ? – ಈ ೩ ಕಾಡಿಗೆ" (ಹಲಾಯು. ೯೧–೪೦೧) ; "ಕಜ್ಜಳಮದಂ[ಜನಂ] ಕಾಳಿಕಂ ವಿಷ್ಟಿಕೆಯೆನಲ್ಕೆ ಕಾಡಿಗೆ" (ಮಂಗರಾ. ೯೯–೨೩) ; ಕಾಣನೇಗೆಯ್ದುಂ ತನ್ನ ದೋಷಮಂ ಕಾಣದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯಂ (ಕವಿರಾ. ೧–೪೫) ; ಕಣ್ಮಲರ್ಗೆ ಕಾಡಿಗೆ ಬಿಣ್ಣಿತು ಪಾದಪಂಕಜಕ್ಕಲತಗೆ ಭಾರಂ (ಕಾದಂಪೂ. ೧೦೦೩) ; ಕಣ್ಣಿನ ಕಾಡಿಗೆ ಅಳಿಯಲಾಗಿ ಕಣ್ಣಿನ ಬಣ್ಣ ಕೆಟ್ಟಿತ್ತು (ಮೋಳಿಮಾ. ೨೦೯–೭೬೪) ; ಸಿರಿಮುಡಿಯ ಕಟ್ಟುವ ಸೂನ ಮುಡಿಸುವ ವರ ಕಟಾಕ್ಷಕೆ ಕಾಡಿಗೆಯನಿಡುವ (ಕುವ್ಯಾವಿ. ೧–೩೧). ೩. ಕಪ್ಪು ; ಕರಿದು. 'ಕಾಡಿಗೆಕಾಗದ' ಪರಾ. ಬೇಡುವಾತನ ಮೋಱೆ ಕಾಡಿಗೆಯು ಬಡಿದಿಕ್ಕು (ಸರ್ವಜ್ಞ. ೬೧೩). **ಕಾಡಗೆ** : ೨. ಮೆಲ್ಲದಂಪುಗಳೊಳಿಟ್ಟ ಕಾಡಗೆ ಬೊಟ್ಟುಂ (ಚಕವಿ. ೪–೮೯). ೩. ಕಪ್ಪುನೆಲ ; ಎರೆ (?) : ತೆಂಕಣ ಹೊಲದಲ್ಲಿಲ್ಲದ ಹಾಳಿನ ಮಸಿಗರ ಭಾವಿಗಿಟ್ಟ ಕಾಡಗೆಯ ಮಂಣು ೩೦೦ ಕೆಬ್ಬೆಯ ಹಾಳ ಮಂಣು ೧೦೦ (ಎಕ. IX, ಕಾನಕಾ. ೭೧–೧೩ ; 1259). [ದೇ. ‖ ತುಳು. ಕಾಡಿಗೆ ; ತೆಲು. ಕಾಟುಕ]

**ಕಾಡಿಗೆಕಾಗದ** (ನಾ). ಕಪ್ಪು ಹಚ್ಚಿರುವ ಕಾಗದ; ಕಾರ್ಬನ್ ಕಾಗದ : "(ಲೇಖನಗಳ ಪ್ರತಿಗಳನ್ನು ತೆಗೆಯುವುದಕ್ಕಾಗಿ ಉಪಯೋಗಿಸುವ) ಕಾಡಿಗೆ ಕಾಗದ" (Carbonpaper. ಇಂಕನಿ). [ಕಾಡಿಗೆ + ಕಾಗದ]

**ಕಾಡಿಗೆಗಣ್, ಕಾಡಿಗೆಗಣ್ಣು** (ನಾ). ೧. ಕಾಡಿಗೆಯಂತೆ ಅಚ್ಚಗಪ್ಪಾದ ಕಣ್ಣು : ಮುಂಗುಡಿಯಲೇಱುವ ಮುದ್ದುಮೊಗದ ಕಡುರಭಸದ ಕಾಡಿಗೆಗಣ್ಣ ತೇಜಿಯ ಪೊಡವಿಪರಿಗೆ ತೋಱಿದರು (ಅಂಜಚ. ೬–೮೪). **ಕಾಡಿಗೆಗಣ್ಣು** : ೧. ಕಾಡಿಗೆಗಣ್ಣಿಗೆ ಕಾಡಿಗೆ ತೀಡ್ಯಾಳ ಕಾಡಿಸ ಕಡೆಗೆ ಕಣ್ಣಿರುವಿ (ಮೂರ್ತಿಕಾ. ೪೭–೭). ೨. ಕಾಡಿಗೆ ಹಚ್ಚಿದ ಕಣ್ಣು : ಅಚ್ಚ ಪುಷ್ಪಳ ಕುಬುಸ ನಿಚ್ಚ ಕಾಡಿಗೆಗಣ್ಣ ಅಪ್ಪ ಗಿರಿರಾಜ ಕಳುವ್ಯಾನ (ಲೋಕಗೀ. ೧೫೦). [ಕಾಡಿಗೆ + ಕಣ್]

**ಕಾಡಿಗೆಗಣ್ಣು** 'ಕಾಡಿಗೆಗಣ್' ನೋ.

**ಕಾಡಿಗೆಗರಗು, ಕಾಡಿಗೆಗರಿಗೆ, ಕಾಡಿಗ್ಗರಗ** (ನಾ). ಒಂದು ಬಗೆಯ ಸಸ್ಯ : "ಭೃಂಗರಜ, ಭೃಂಗರಾಜ – ಕಾಡಿಗೆಗರಗು" (ಗಂಗಾಮ. ೨೪೪). **ಕಾಡಿಗೆಗರಿಗೆ** : ಗರುಗಲು, ಗರುಗದಗಿಡ, ಅಜಗರ, ಕಾಡಿಗೆಗರಿಗೆ (ವೈಔಗಿ. ೩೨–೬೨೫). **ಕಾಡಿಗ್ಗರಗ** : ಕಾಸೀಸವನ್ನು ಭೃಂಗರಾಜ (ಕಾಡಿಗ್ಗರಗ) ರಸದಲ್ಲಿ ತೊಯಿಸಲು ಶುದ್ಧವಾಗುವದು (ಔಷಧೀ. ೨೬). [ಕಾಡಿಗೆ + ಗರಗು$_1$ (< ಗರುಗ)]

**ಕಾಡಿಗೆಗರಿಗೆ** 'ಕಾಡಿಗೆಗರಗು' ನೋ.

**ಕಾಡಿಗೆಗುಡಿ** (ನಾ). ಕಪ್ಪಾದ (ದೀಪದ) ಕುಡಿ : ಬೆಳಗುವ ಕೈದೀವಿಗೆಗಳ ಬೆಳಗುಗಳೊಳಂ ಬಳ್ವಳ ಬಳೆದು ನಿಮಿರ್ವ ಕಾಡಿಗೆಗುಡಿಗಳ . . . ಕರ್ಪುಗಳೆಲ್ಲಮಂ ನೆರಂಬಡೆದು ಬಳೆದ ತಮೋಮದೇಭಘಟೆಯೊಡ್ಡು (ಆದಿಪು. ೧೨–೪ ವ) ; ಸೊಡರ್ಗುಡಿಗಳಿಂ ನಿಮಿರ್ದ ಕಾಡಿಗೆಗುಡಿಗಳ ನುಣ್ಗಪ್ಪಿನಿಂ (ಲೀಲಾವ. ೩–೬೫). [ಕಾಡಿಗೆ + ಕುಡಿ$_2$]

**ಕಾಡಿಗೆಗೂಡು** (ನಾ). ಕಣ್ಕಪ್ಪಿನ ಕರಡಿಗೆ; ಕಪ್ಪಿನ ಭರಣಿ : ಒಂದೇ ಸಮುದ ಕಾಡಿಗೆಗೂಡಿನಂತೆಸೆದಂಧಕಾರವದು (ಜಿರಾಮಾ. ೩೩೪–೧೩). [ಕಾಡಿಗೆ + ಗೂಡು]

**ಕಾಡಿಗೆಜೋಳ** (ನಾ). ೧. ಕಪ್ಪುಜೋಳ : (ಕ). ೨. ಕಾಡಿಗೆ ರೋಗ ಬಿದ್ದು ಕಪ್ಪಾದ ಜೋಳ : (ಕ). [ಕಾಡಿಗೆ + ಜೋಳ]

**ಕಾಡಿಗೆನೀರು** (ನಾ). ಕಾಡಿಗೆಯ ಮೆರುಗು, —ಹೊಳಪು : ತಳ್ವರ್ಟ್ಟೆಯ ಕಾಡಿಗೆ ನೀರಿನ ಬಟ್ಟೆಯ ಮುಱಿಗೆಗಳಿಂ ಸೋಲಿಪುವು ಸೀರೆ ವರದರ ಪಸರಂ (ಕಬ್ಬಿಕಾ. ೩೮). 'ಕಾಡಿಗೆವೊಗರ್' ಪರಾ. [ಕಾಡಿಗೆ + ನೀರು$_2$ (< ನೀರ್$_2$)]

**ಕಾಡಿಗೆಯಿಡು** (ಕ್ರಿ). ಕಾಡಿಗೆ ಹಚ್ಚು, —ಲೇಪಿಸು : ಕರಿಯ ಪಟ್ಟೆಯ ನುಟ್ಟು ಕಣ್ಗೆ ಕಾಡಿಗೆಯಿಟ್ಟು (ವೆಂಕಾರಾ. ೫–೨–೩೧). [ಕಾಡಿಗೆ + ಇಡು$_1$]

**ಕಾಡಿಗೆಯೆಚ್ಚು** (ಕ್ರಿ). = ಕಾಡಿಗೆಯಿಡು : ಅಮಳ್ವೆತ್ತರಂತೆ ಕಾಡಿಗೆಯೆಚ್ಚುವರಂತೆ ಅಂದುಗೆಯಿಡುವರಂತೆ (ಧರ್ಮಾಮೃ. ೨–೪) ; ಕಾಡಿಗೆಯೆಚ್ಚಿ ಪಲ್ ಸುಲಿದು ಕೆಂದಳಿರಂ ತಿಱಿದುಟ್ಟು (ಸೂಕ್ತಿಸು. ೩–೨೧೭). [ಕಾಡಿಗೆ + ಎಚ್ಚು]

**ಕಾಡಿಗೆರೋಗ** (ನಾ). ಗೋಧಿ, ಜೋಳ, ಮೊದಲಾದ ಪೈರಿಗೆ ಬರುವ, ಕಾಳನ್ನು ಕಪ್ಪುಗೊಳಿಸುವ ಒಂದು ರೋಗ: ಜೋಳವನ್ನು ಕಾಡಿಗೆ ರೋಗದಿಂದ ಉಳಿಸಬೇಕಾದರೆ ಆದರ ಬೀಜಗಳನ್ನು ಕಾಪರ್‌ಸಲ್ಫೇಟ್ (ನೀಲತುತ್ತೆ) ದ್ರಾವಣದಿಂದ ತೊಳೆಯಬೇಕು (ನಿರಶಾ. ೧೭). [ಕಾಡಿಗೆ + ರೋಗ]

**ಕಾಡಿಗೆವಿಡಿ** (ಕ್ರಿ). ಕಾಡಿಗೆಯನ್ನು ಹಿಡಿ: ರತಿದೇವಿಯ ಕಣ್ಣಿಗೆ ಕಾಡಿಗೆ ವಿಡಿದೆಚ್ಚಿದರು (ಮೋಹತ. ೧೭-೪೫).
[ಕಾಡಿಗೆ + ಪಿಡಿ$_1$]

**ಕಾಡಿಗೆವೆಟ್ಟು** (ನಾ). ಕಪ್ಪುಬೆಟ್ಟ; ನೀಲಪರ್ವತ; ಅಂಜನಾದ್ರಿ: ಕಾಡಿಗೆವೆಟ್ಟನಂತೆ ಕಾರಮೇಘದಂತೆ ಜವನ ಜಕ್ಕಂದೊಳಲಿಯಂತಿರ್ದ ಗಜಸಮಾಜದಿಂ (ಹಮ್ಮೀರ. ೩-೩೩ ವ).
[ಕಾಡಿಗೆ + ಬೆಟ್ಟು$_2$]

**ಕಾಡಿಗೆವೆರಸು** (ಅ). ಕಾಡಿಗೆಯಿಂದ ಕೂಡಿ; ಕಣ್ಣಿಗೆ ಹಚ್ಚಿದ ಅಂಜನದ ಸಮೇತನಾಗಿ: ನಗೆಮೊಗದೊಳ್ ಪರಕಲಿಸಿದ ಕಾಡಿಗೆವೆರಸಿಕೇಸರಿ ತಾಯ ಮನಮನಿಱ್ಕುಳಿಗೊಂಡಂ (ಪಂಪಭಾ. ೨-೮).
[ಕಾಡಿಗೆ + ಬೆರಸು$_2$]

**ಕಾಡಿಗೆವೊಗರ್** (ನಾ). ಕಾಡಿಗೆಯ ಹೊಳಪು, —ಶೋಭೆ; ಕಪ್ಪು ಕಾಂತಿ: ಪಚ್ಚೆಗೆ ಸಾರೆ ವಿಹಂಗ ಜಾತಿ ಕಾಡಿಗೆವೊಗರೇಳೆ ಮೂಡದೆಸೆ (ಪುಷ್ಪಪು. ೮-೭). [ಕಾಡಿಗೆ + ಪೊಗರ್]

**ಕಾಡಿಗೆಸೊಗಸಿನ ಹಕ್ಕಿ** (ನಾ). ಗೀಜುಗ ಪಕ್ಷಿ: "ಖಂಜರೀಟಃ, ಖಂಜನಃ – ೨ ಗೀಜುಗ ಹಕ್ಕಿ, ಕಾಡಿಗೆಸೊಗಸಿನ ಹಕ್ಕಿ, ಗೀಜಗಾರಹಕ್ಕಿ, ಗಾಜಲಹಕ್ಕಿ" (ಸಿದ್ಧಾಂತಿ. ೧೩೮).
[? ಕಾಡಿಗೆ + ಸೊಗಸು + ಹಕ್ಕಿ$_1$ (< ಪಕ್ಕಿ$_1$)]

**ಕಾಡಿಗ್ಗರಗೆ** 'ಕಾಡಿಗೆಗರಗು' ನೋ.

**ಕಾಡಿಟ್ಟಿ** (ನಾ). ಒಂದು ಬಗೆಯ ಗಿಡ; ಸಣಬಿನ ಗಿಡ: "ಶಣಪುಷ್ಪೀ – ಸಣಬು, ಕಾಡಿಟ್ಟಿ" (ಓಷಧಿ. ೧೬೧).
[ಕಾಡು$_2$ + ಇಟ್ಟಿ$_1$]

**ಕಾಡಿಪ್ಪೆ**, ಕಾಡುಇಪ್ಪೆ, ಕಾಡುಹಿಪ್ಪೆ (ನಾ). ಇಪ್ಪೆಯ ಮರದಲ್ಲಿ ಒಂದು ಜಾತಿ: "ತುಂಡಿಭಃ – ಕಾಡಿಪ್ಪೆ" (ಓಷಧಿ. ೭೧). **ಕಾಡುಇಪ್ಪೆ, ಕಾಡುಹಿಪ್ಪೆ**: ಕಾಡುಇಪ್ಪೆ, ಕಾಡುಹಿಪ್ಪೆ (ವೈಔಗ. ೧೨-೯೦೫).
[ಕಾಡು$_2$ + ಇಪ್ಪೆ$_1$ (< ಇರ್ಪೆ)]

**ಕಾಡಿಯರಗು** (ನಾ). = ಕಡ್ಡಿಯರಗು: (ಕ).
[ಕಾಡಿ$_0$ + ಅರಗು$_3$]

**ಕಾಡಿಯೂರ್** (ನಾ). ಒಂದು ಊರಿನ ಹೆಸರು: ಕವಿರಾಜರಾಜ ವಿಬುಧಪ್ರವರಂ ಶ್ರೀ ಕಾಡಿಯೂರನಲ್ಲಿಯ ಕಮಳೋದ್ಭವವಂಶಪ್ರೋತ್ತಮರಂ ನವೀನ ವರ್ಣನೆಯಿನೆಸೆಯಲಭಿವರ್ಣಿಸಿದಂ (ಎಇ. XIII, ೩೩೩-೭೪; 979); ತೆಂಕ ಕಾಡಿಯೂರ ಪೊಲ[ದ] × × × ನೂಜಿಯ್ಯತ್ತು ಮ[ತ್ತ]ರ್ಕೆಯ್ಯಂ ನಮಸ್ಯಮಾಗಿ ಬಿಟ್ಟಳ್ (ಸೌಇಇ. XX, ೧೮-೪೧; 980); ಕಾಡಿಯೂರ್ಗ್ಗೆರಿಯ ಮತ್ತರು (ಎಇ. XIII, ೪೯-೮೧, 1112). [ಕಾಡಿ$_0$ + ಊರ್]

**ಕಾಡಿರವಂತಿಗೆ** 'ಕಾಡಿರುವಂತಿಗೆ' ನೋ.

**ಕಾಡಿರವಂತಿಗೆ**, ಕಾಡಿರುವಂತಿಗೆ (ನಾ). ಇರವಂತಿಗೆಯಲ್ಲಿ ಒಂದು ಜಾತಿ: "ಮಧು ಬಹಳ – ಕಾಡಿರವಂತಿಗೆ" (ಓಷಧಿ. ೧೨೧). **ಕಾಡಿರುವಂತಿಗೆ**: "ವಾಸಂತೀ, ಮಾಧವೀ, ಲತಾ – ಈ ೩ ಕಾಡಿರುವಂತಿಗೆ" (ನಾಚಿರಾ. ೧೦೮); "ಬಹುನಾಮಿಾ – ಕಾಡಿರುವಂತಿಗೆ" (ಓಷಧಿ. ೧೦೬).
[ಕಾಡು$_2$ + ಇರವಂತಿಗೆ]

**ಕಾಡಿಸು** (ಕ್ರಿ). ಪೀಡಿಸು; ತೊಂದರೆ ಕೊಡು: ನಲ್ಲನೆನಗೀಯನಿ ಬರುಮಂ ಮೇಲುದೋಜು ಕಾಡಿಪನಜುದೆಂ (ಧರ್ಮಾಮೃ. ೭-೨೧೫). ಕಡುಹು ಮಿಗೆ ಲೋಕಂಗಳಂ ಪರಿದಡರಿಕೆನೆ ಕಾಡಿಸದೆ ರಭಸವನುಡುಗಿ ಮೆಲ್ಲನೆ ಪರಿಯೆನುತ್ತುಂ (ಬಸಪು. ೨೨-೩೯); ಬೆನ್ನಾಡಿ ಬಿಡದಿನನನೋಡಿಸಿ ಕಾಡಿಸುವಪ್ರತಿಮನೋಜಗೇಂ ದೊರೆ ಜಗದೊಳ್ (ಅಪ್ರತಿ. ೧೬-೧೨); ಒಕ್ಕಲಿಗರನ್ನು ಕಾಡಿಸೋದು ದೊರೆಗಳಿಗೆ ಒಳ್ಳೆಯದಲ್ಲ (ಕಥಾಮಂ. IV, ೧೨೫). [ಕಾಡು$_1$ + –ಇಸು$_3$]

**ಕಾಡೀಕಾರ**, ಕಾಡಿಕಾರ, ಕಾಡಿಖಾರ (ನಾ). ಗಾಜಿನ ಕನ್ನಡಿ ಮಾಡುವವರು ಮತ್ತು ಅಕ್ಕಸಾಲಿಗರು ಬಳಸುವ ಒಂದು ದ್ರಾವಕ ವಸ್ತು; ತೇಜಾಪಿನ ಎಣ್ಣೆ: ಶಂಖದ್ರಾವದಲ್ಲಿ ಬೆಳ್ಳಿಯನ್ನು ಚಲ್ಲಿ ಕುದಿಸಿದರೆ ಕಾಡೀಕಾರವುಂಟಾಗುತ್ತದೆ. ಇದು ಮೈಗೆ ಹತ್ತಿದರೆ ಮೈ ಸುಡುವದು (ಮುಂಬಯಿ. ೬ ೨೪). **ಕಾಡಿಕಾರ**: ೨ ಆಣೆ ತೂಕ ಕಾಡಿಕಾರವನ್ನು ಅರ್ಧಪಾವು ನೀರಿನಲ್ಲಿ ಹಾಕಿ ೧೫-೨೦ ತೊಟ್ಟುಗಳನ್ನು ಕಣ್ಣಿಗೆ ಹಾಕಬೇಕು (ಗ್ರಾಮಾಕ. ೧೪೪). **ಕಾಡಿಖಾರ**: ಕಾಡಿಖಾರದ ನೀರು ಮಾಡಿ ಅದರಲ್ಲಿ ಮೊದಲು ತಯಾರಮಾಡಿಕೊಂಡಂಥಾ ಕನ್ನಡಿಯನ್ನು ಮುಳುಗಿಸುತ್ತಾರೆ (ಮುಂಬಯಿ. ೫-೧೮೯).
[← ಮರಾ. ಕಾಡೀಕಾರ, ಕಾಡೇಖಾರ]

**ಕಾಡೀಖಾರ** 'ಕಾಡೀಕಾರ' ನೋ.

**ಕಾಡೀನೀರು** (ನಾ). ದ್ರಾಕ್ಷಿ, ಸೇಬು ಮೊದಲಾದವುಗಳ ಮದ್ಯದಿಂದ ತಯಾರಿಸಿದ ಹುಳಿನೀರು: ಗಾಯದೆಣ್ಣೆ, ಅಂಟು ಮುಲಾಮು ಮೊದಲಾದ್ದನ್ನು ಹಾಕುತ್ತಾ, ಬೇಕಾದಾಗ ಕಾಡೀನೀರಿನಲ್ಲಿ ಹುಣ್ಣುಗಳನ್ನು ತೊಳೆಯುತ್ತಾ . . . ಉಪಚರಿಸುತ್ತಾ ಇದ್ದನು (ಮಾಮರಾ. ೪೨).
[ಕಾಡಿ$_0$ + ನೀರು$_1$ (< ನೀರ್$_1$)]

**ಕಾಡೀರುಳ್ಳಿ**, ಕಾಡುಈರುಳ್ಳಿ (ನಾ). ಈರುಳ್ಳಿಯಲ್ಲಿ ಒಂದು ಜಾತಿ; ಅಡವಿಯ ಈರುಳ್ಳಿ: (ಕ). **ಕಾಡುಈರುಳ್ಳಿ**: (ವೈಔಗ. ೨೫-೪೬೯). [ಕಾಡು$_2$ + ಈರುಳ್ಳಿ]

**ಕಾಡು$_1$** (ಕ್ರಿ). ಏಡಿಸು; ಅವಹೇಳನ ಮಾಡು; ಹಿಂಸಿಸು; ಪೀಡಿಸು: "ಕಾಡು – ಅವಹೇಳನೇ (ಅವಮಾನ ಮಾಡು, ಬಾಧೆಮಾಡು), ಅರಣ್ಯೇ ಚ" (ಶಮುಧಾ); ಕಾಡುವೆನೆಂಬುದಲ್ಲದೆ ಸುಮಾರ್ಗದೊಳಾಗದು ಕಾಟ್ವೆನೆಂಬುದಂ . . . ಇಡಲಾಗದು (ಕವಿರಾ. ೨-೧೦೧); ಪೆಂಡತಿಯಾಗೆಂದು ಕೈಯಂ ಪಿಡಿದು ಕಾಡುತ್ತಿರ್ಪನ್ನೆಗಂ (ವಡ್ಡಾರಾ. ೧೫೮-೧); ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾಡುತ್ತಿರೆ (ಪಂಪಭಾ. ೯-೬೯); ಸಂಸಾರ ಬೆಂಬಿಡದೆ ಕಾಡಿಹುದಯ್ಯಾ (ಮಹಾದೇ. ೨-೨); ನೆರೆದ ನುಸಿಗಳು ಗಿರಿಯ ಕಾಡುವ ಸರಿಯ ನೋಡ್ಯೆ (ಕುವ್ಯಾದ್ರೋ. ೬-೭೫); ಓಡು ಮಾಣಿಕವು ಸರಿಯೆಂಬ ಜ್ಞಾನಿಯನು ಕಾಡುವಳೆ ಮಾಯೆ (ಸರ್ವಜ್ಞ. ೩೬೬). [?./ ತುಳು. ಕಾಡು]

**ಕಾಡು$_2$**, ಕಾಟು$_1$ (ನಾ). ೧. ಅಡವಿ; ಅರಣ್ಯ; ಕಾನನ: "ಕಾಡು – ಅವಹೇಳನೇ (ಅವಮಾನ ಮಾಡು, ಬಾಧೆಮಾಡು), ಅರಣ್ಯೇ ಚ" (ಶಮುಧಾ); "ಕಾಡಡವಿಯೊಳ್ ತೋಜುಗುಂ" (ಕಶರ. ೨೩); ನಾಡ ಕಾಡ ಬೆಳಸಿಂ ಬೆಳಸಾ ವಿಷಯಾಂತರಾಳದೊಳ್ (ಪಂಪಭಾ. ೧-೫೪); ಬಿಜುತೋಡಿ ಕಾಡೊಳ್ ಕೂಡಿದುರ್ವೆಲ್ಲಂ (ಪಂಚತಂ. ೨೦೩-೧೭); ಬಟ್ಟೆಯಂ ಬಿಟ್ಟು ಕಾಡಂ ಪುಗುವ (ಧರ್ಮಾಮೃ. ೩-೨೧); ಮೊಲನ ಕಾಹಿನ ಕಾಡಿನಲಿ ಹೆಬ್ಬುಲಿ ವಿಭಾಡಿಸುವಂತೆ (ಕುವ್ಯಾಕ. ೯-೩); ಕರಿಗಳಿಲ್ಲದ ಕಾಡು ಮಾಣಿಕದುರುಳಿಯಿಲ್ಲದ ಬೆಟ್ಟ (ಸಾಳ್ವಭಾ. ೧-೫೯). ೨. ಹೊಲ; ಭೂಮಿ: ಐವತ್ತು ಮತ್ತರ್ಕ್ಕೆಸುಕಾಡುಂ ಕೀಟ್ಕೆಜ್ ಮೂವತ್ತ ಮರ್ಡಿ ಕಾಡುಂ (ಸೌಇಇ. IX–i, ೪೭-೯, 9ನೆಯ ಶತ).

**೩.** (ಅಲಂ). ಅನಾಗರಿಕವಾದುದು ; ಅಸಭ್ಯವಾದುದು ; ಒರಟಾದದ್ದು : ತಿದಿ, ಕುಲಿಮೆ ಮುಂತಾದ ಸಾಹಿತ್ಯಗಳು ತೀರ ಕಾಡು ಇರುವ ಕಾರಣ ಅವರಿಗೆ ಈ ಕೆಲಸದಲ್ಲಿ ಲಾಭವಾಗುವದಿಲ್ಲ (ಮುಂಬಯಿ. ೬-೧೮); ಕನಸಿಗೆ ಕಾಡು-ಜಾಣ ಇಲ್ಲವೆ ಕೀಳು-ಮೇಲು ಎಂಬ ಭೇದಗಳಿಲ್ಲ (ಪಾಪಾಕ. ೨ ಮುನ್ನುಡಿ). **೪.** (ಅಲಂ). ಪ್ರದೇಶ. 'ಸುಡುಗಾಡು', 'ಹಳ್ಳಿಗಾಡು' ಪರಾ. **ಕಾಟು**$_1$ : (ಗು). **೫.** ಪೋಲಿತಿರುಗುವ ; ಕಾಡಾಡಿಯಾದ. 'ಕಾಟುನಾಯಿ' ಪರಾ. **೬.** ತೊಂದರೆ ಕೊಡುವ ; ಹಿಂಸೆಯನ್ನುಂಟುಮಾಡುವ. 'ಕಾಟುದನ' ಪರಾ.
[**ದೇ.** ‖ **ತಮಿ.** ಕಾಡು ; **ಮಲ. ತುಳು.** ಕಾಡು ; **ಕೊಡ.** ಕಡೀ ; **ತೆಲು.** ಕಾಡು]

**ಕಾಡು**$_3$, ಕಾಡ್ಮ (ನಾ). ಕರಿಯಬಣ್ಣ ; ಕಪ್ಪು : "ಆರಣ್ಯವವಹೇಳನಂಗಳೊಳು ಕರ್ಪಿನೊಳ್ಪಾರುಗುಂ ಕಾಡೆಂಬ ಶಬ್ದ" (ಶಬ್ದಮಂ. ೯೨). **ಕಾಡ್ಮ** : ಕಾಡಗುಜಿ ತನೆಯಾಗಿ ಬಂದು ವೂರೊಳಗೆ ಮೂಜು ಮಜಿಯಾಯಿತ್ತು. ಅವಜಿ ವರ್ನವೊಂದು ಕಾಡವೊಂದು ಯಲ್ಲರ ಕೂಡಿದ ಬಣ್ಣ ಹೆಂಗುಜಿಸತ್ತಿತ್ತು (ಮನುಗುಂ. ೯೭-೨೪). [< ಕಾಱು]

**ಕಾಡುಂಗೊಟ್ಟೆ** (ನಾ). ಒಂದು ಮೂಲಿಕೆ (?) : ಕಾಡುಂಗೊಟ್ಟೆಯ ತಂದು ನರಮೂತ್ರುದಿಂ ಕುದಿಸಂದಿಕ್ಕಿ (ಅಶ್ವವೈ. ೧೮-೩). [?]

**ಕಾಡುಅಡಿಕೆ** 'ಕಾಡಡಿಕೆ' ನೋ.

**ಕಾಡುಅರಿಸಿನ,** ಕಾಡರಸಿನ (ನಾ). ಒಂದು ಬಗೆಯ ಅರಿಸಿನ : ಕಸ್ತೂರಿ ಅರಿಸಿನ, ಕಾಡುಅರಿಸಿನ (ಮೈಔಗಿ. ೨೩-೪೧೮) ; ಪೀತದ್ರುಃ, ಕಾಲೇಯಕಃ . . . ಪರ್ಜನೀ ೭ ಮರದರಿಶಿನ, ಕಸ್ತೂರಿ ಅರಿಶಿನವೆಂದು ಕೆಲವರು, ಹೆಬ್ಬರಿಶಿನ, ಕಾಡುಅರಿಸಿನ (ಸಿದ್ಧಾಂತಿ. ೧೧೮). **ಕಾಡರಸಿನ** : (ಶಿ). [ಕಾಡು$_2$ + ಅರಿಸಿನ]

**ಕಾಡುಅವರೆಬಳ್ಳಿ** (ನಾ). ಒಂದು ಬಗೆಯ ಬಳ್ಳಿ : ಕಾಡುಅವರೆಬಳ್ಳಿ, ಕಾಡುತೊಗರಿಬಳ್ಳಿ (ಮೈಔಗಿ. ೩೯-೭೪೮).
[ಕಾಡು$_2$ + ಅವರೆ + ಬಳ್ಳಿ]

**ಕಾಡುಅಶೋಕ** (ನಾ). ಒಂದು ಬಗೆಯ ಮರ : ಹಾಸಿಗೆ ಮರ, ಕಾಡುಅಶೋಕ (ಮೈಔಗಿ. ೪೪-೮೬೮). [ಕಾಡು$_2$ + ಅಶೋಕ]

**ಕಾಡುಅಜ್ವಾನ** (ನಾ). ಒಂದು ಬಗೆಯ ಸಸ್ಯ : ಕಿರುಮಂಜಿ, ಅಜ್ವಾನ, ಕಾಡುಅಜ್ವಾನ (ಮೈಔಗಿ. ೬೯-೧೪೯೧). [ಕಾಡು$_2$ + ಅಜ್ವಾನ$_0$ (< ಅಜವಾನ)]

**ಕಾಡುಇಪ್ಪೆ** 'ಕಾಡಿಪ್ಪೆ' ನೋ.

**ಕಾಡುಈಜಿ** (ನಾ). ಒಂದು ಬಗೆಯ ಗಿಡ : ಸಣನಾತದ ಗಿಡ, ಕಾಡು ಈಜಿ (ಮೈಔಗಿ. ೧೫-೨೮೪). [ಕಾಡು$_2$ + ಈಜಿ]

**ಕಾಡುಈರುಳ್ಳಿ** 'ಕಾಡೀರುಳ್ಳಿ' ನೋ.

**ಕಾಡುಉತ್ತರಾಣಿ** (ನಾ). ಉತ್ತರಾಣಿ ಗಿಡದಲ್ಲಿ ಒಂದು ಬಗೆ : (ಮೈಔಗಿ. ೭೨-೧೪೭೦). [ಕಾಡು$_2$ + ಉತ್ತರಾಣಿ (< ಉತ್ತರಣಿ)]

**ಕಾಡುಎಳ್ಳು** 'ಕಾಡೆಳ್' ನೋ.

**ಕಾಡುಓಮ,** ಕಾಡವೋಮ (ನಾ). **೧.** ಓಮದಲ್ಲಿ ಒಂದು ಬಗೆ : ಕಾಡುಓಮ, ಹುಳಿಓಮ (ಮೈಔಗಿ. ೨೦-೩೬೬). **೨.** ಒಂದು ಬಗೆಯ ಸಸ್ಯ : ಕಾಡುಓಮ, ಕಾಡುಸೋಂಪು (ಮೈಔಗಿ. ೬೨-೧೨೪೫). **ಕಾಡವೋಮ** : **೨.** (ಶಿ). [ಕಾಡು$_2$ + ಓಮ$_1$]

**ಕಾಡುಕಂಚಿ** (ನಾ). ಕಂಚಿಯ ಮರದಲ್ಲಿ ಒಂದು ಬಗೆ : ಕಾಡು ಕಂಚಿ, ಕಾಡುಕಿತ್ತಲೆ (ಮೈಔಗಿ. ೬೦-೧೧೯೫). [ಕಾಡು$_2$ + ಕಂಚಿ$_1$]

**ಕಾಡುಕಂಬುಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಡುಕಂಬು ಹುಲ್ಲು, ಕಾಡುಕಂಚೀಹುಲ್ಲು (ಮೈಔಗಿ. ೩೪-೬೬೨).
[ಕಾಡು$_2$ + ಕಂಬು + ಹುಲ್ಲು (< ಪುಲ್)]

**ಕಾಡುಕಗ್ಗ** (ನಾ). ಹಾಳುಮಾತು ; ಕಾಡು ಹರಟೆ : ನಾವು ಬಡವರು ನಿಮ್ಮ ಕಾಡುಕಗ್ಗಕ್ಕೆ ದುಡ್ಡುಹಾಕುವುದಿಲ್ಲ (ಕಬಸಾ. ೩೫).
[ಕಾಡು$_2$ + ಕಗ್ಗ]

**ಕಾಡುಕಟುಕರೋಹಿಣಿ** (ನಾ). ಕಟುಕರೋಹಿಣಿಯಲ್ಲಿ ಒಂದು ಬಗೆ : (ಮೈಔಗಿ. ೪೨-೮೩೫). [ಕಾಡು$_2$ + ಕಟುಕರೋಹಿಣಿ]

**ಕಾಡುಕಡಲೆ,** ಕಾಡುಕಡೆಲೆ (ನಾ). ಕಡಲೆಯಲ್ಲಿ ಒಂದು ಬಗೆ (?) : (ಮೈಔಗಿ. ೧೦-೧೭೯). **ಕಾಡುಕಡೆಲೆ** : ದರ್ಸುಕ, ಕಾಡುಕಡೆಲೆ (ಮೈಔಗಿ. ೪೧-೮೦೭). [ಕಾಡು$_2$ + ಕಡಲೆ]

**ಕಾಡುಕಣಿಗಲು** (ನಾ). ಕಣಿಗಿಲಿನಲ್ಲಿ ಒಂದು ಬಗೆ : ಕೋತ್ತೀಗ, ಮದತೀಗ, ಕಾಡುಕಣಿಗಲು (ಮೈಔಗಿ. ೩೦-೫೮೯).
[ಕಾಡು$_2$ + ಕಣಿಗಲು$_0$ (< ಕಣಗಿಲೆ$_1$)]

**ಕಾಡುಕತ್ತರಿ** (ನಾ). ಒಂದು ಬಗೆಯ ಗಿಡ : ಒಳ್ಳೆ ಉಪ್ಪಿಗಿಡ, ಕತ್ತರಿ ಗಿಡ, ಕಾಡುಕತ್ತರಿ (ಮೈಔಗಿ. ೧೭-೩೦೮).
[ಕಾಡು$_2$ + ಕತ್ತರಿ$_1$]

**ಕಾಡುಕಬ್ಬು** (ನಾ). = ಕಾಕಬ್ಬು : ದರ್ಭೆ, ಹುಚ್ಚುಕಬ್ಬು, ಕಾಡುಕಬ್ಬು (ಮೈಔಗಿ. ೬೭-೧೩೭೦). [ಕಾಡು$_2$ + ಕಬ್ಬು$_2$]

**ಕಾಡುಕರಿಬೇವು** (ನಾ). ಕರಿಬೇವಿನಲ್ಲಿ ಒಂದು ಬಗೆ : (ಮೈಔಗಿ. ೨೨-೪೧೧). [ಕಾಡು$_2$ + ಕರಿಬೇವು]

**ಕಾಡುಕರ್ಣಕುಂಡಲ** (ನಾ). ಒಂದು ಬಗೆಯ ಸಸ್ಯ : (ಮೈಔಗಿ. ೪೫-೮೯೪). [ಕಾಡು$_2$ + ಕರ್ಣಕುಂಡಲ]

**ಕಾಡುಕಲ್ಲು** (ನಾ). ಒರಟುಕಲ್ಲು : ಕಾಡುಕಲ್ಲು ಅಥವಾ ಕಡಪಕಲ್ಲು ಹಾಸಿದ ನೆಲ, ಸಿಮೆಂಟ್‌ನೆಲ, ಮಣ್ಣಿನ ನೆಲ . . . ಹಾಕಿಸಿಕೊಳ್ಳುವರು (ಗೃಹವಿ. ೧೭೧).
[ಕಾಡು$_2$ + ಕಲ್ಲು (< ಕಲ್$_3$). / **ತಮಿ.** ಕಾಟ್ಟುಕ್ಕಲ್]

**ಕಾಡುಕಸ್ತೂರಿ** (ನಾ). ಒಂದು ಬಗೆಯ ಮೂಲಿಕೆ : ಕಸ್ತೂರಿಬೆಂಡೆ, ಕಾಡುಕಸ್ತೂರಿ (ಮೈಔಗಿ. ೪೩-೮೪೮). [ಕಾಡು$_2$ + ಕಸ್ತೂರಿ]

**ಕಾಡುಕಾಫಿಬೀಜ** (ನಾ). ಒಂದು ಬಗೆಯ ಸಸ್ಯ : (ಮೈಔಗಿ. ೭೫-೧೫೪೨). [ಕಾಡು$_2$ + ಕಾಫಿ + ಬೀಜ]

**ಕಾಡುಕಾಸಿಕಣಗಲು** (ನಾ). ಒಂದು ಬಗೆಯ ಸಸ್ಯ : (ಮೈಔಗಿ. ೭೪-೧೫೨೨). [ಕಾಡು$_2$ + ಕಾಸಿ ? + ಕಣಗಲು (< ಕಣಗಿಲೆ$_1$)]

**ಕಾಡುಕಿಚ್ಚು** 'ಕಾಡ್ಗಿಚ್ಚು' ನೋ.

**ಕಾಡುಕಿತ್ತಲೆ** (ನಾ). = ಕಾಡುಕಂಚಿ : ಕಾಡುಕಂಚಿ, ಕಾಡುಕಿತ್ತಲೆ (ಮೈಔಗಿ. ೬೬-೧೧೯೫). [ಕಾಡು$_2$ + ಕಿತ್ತಲೆ (<ಕಿತ್ತೀಳೆ)]

**ಕಾಡುಕಿರಿನಿಂಬೆ** (ನಾ). ಒಂದು ಬಗೆಯ ಗಿಡ : ಅರಮರಲು, ಕಾಡು ಕಿರಿನಿಂಬೆ (ಮೈಔಗಿ. ೬೬-೧೫೫೧). [ಕಾಡು$_2$ + ಕಿರಿನಿಂಬೆ]

**ಕಾಡುಕುಂಬಳ** 'ಕಾಡುಗುಂಬಳ' ನೋ.

**ಕಾಡುಕುದುರೆ** 'ಕಾಡುಗುದುರೆ' ನೋ.

**ಕಾಡುಕುಮಲೆ** (ನಾ). ಒಂದು ಬಗೆಯ ಸಸ್ಯ : (ಮೈಔಗಿ. ೨೩-೪೩೯).
[ಕಾಡು$_2$ + ಕುಮಲೆ$_0$]

**ಕಾಡುಕುರಿ** 'ಕಾಡುಗುಱಿ' ನೋ.

**ಕಾಡುಕುರುಳು** (ನಾ). ಕಾಡಿನ ಬೆರಣಿ : (ಶಿ). 'ಕಾಟ್ಟುರುಳ್' ಪರಾ. [ಕಾಡು$_2$ + ಕುರುಳು$_3$ (< ಕುರುಳ್$_3$)]

**ಕಾಡುಕುಸುಬಿ,** ಕಾಡಕುಸುಬೆ (ನಾ). ಕುಸುಬೆಯಲ್ಲಿ ಒಂದು ಬಗೆ : (ಶಿ). **ಕಾಡಕುಸುಬೆ** : "ಆರಣ್ಯಕುಸುಂಭ : - ಕಾಡಕುಸುಬೆ" (ಓಷಧಿ. ೯). [ಕಾಡು$_2$ + ಕುಸುಬಿ (< ಕುಸುಂಬೆ)]

**ಕಾಡುಕುರುಬ** 'ಕಾಡುಗುರುಬ' ನೋ.

**ಕಾಡುಕೆಂಪುಜೀರಿಗೆ** (ನಾ). ಒಂದು ಬಗೆಯ ಸಸ್ಯ : ಕಾಡುಕೆಂಪು ಜೀರಿಗೆ, ಹಾರಿವಾಣ (ವೈಔಗ. ೩೫-೬೭೭).
[ಕಾಡು$_2$ + ಕೆಂಪು + ಜೀರಿಗೆ (< ಜೀರಗೆ)]

**ಕಾಡುಕೊಕ್ಕರೆ** (ನಾ). ಒಂದು ಬಗೆಯ ಅಡವಿಯ ಕೊಕ್ಕರೆ ; ಕಾಡು ಬಕ ; ಕಬ್ಬಕ್ಕಿ : "ಕೃಕರಃ – ಕಬ್ಬಕ್ಕಿ ಹೆಸರು, ಕಕ್ಕರವಕ್ಕಿ, ಕಾಡು ಕೊಕ್ಕರಿ[ರೆ], ಕಾಡುಬಕ" (ಸಿದ್ಧಾಂತಿ. ೧೩೯). [ಕಾಡು$_2$ + ಕೊಕ್ಕರೆ]

**ಕಾಡುಕೊತ್ತಂಬರಿ** (ನಾ). ಒಂದು ಬಗೆಯ ಸಸ್ಯ : (ವೈಔಗ. ೪೨-೮೪೧). [ಕಾಡು$_2$ + ಕೊತ್ತಂಬರಿ (< ಕೊತ್ತುಂಬರಿ)]

**ಕಾಡುಕೋಣ** 'ಕಾಡ್ಗೋಣ' ನೋ.

**ಕಾಡುಕೋಳಿ** (ನಾ). ಅಡವಿಯ ಕೋಳಿ ; ಕಾಡಿನ ಕೋಳಿ : ಆಗಾಗ ಬರುವ ಕಾಡು ಕೋಳಿಗಳೂ ಅಲ್ಲಿ ಕಾಣುತ್ತವೆ (ಮಲೆನಾ. ೨೦) ; ಕಾಡುಕೋಳಿಗೆ ಸಂಕ್ರಾಂತಿಯೆ ? (ಗಾದೆ). 'ಕಾಟ್ಕೋೞಿ' ಪರಾ.
[ಕಾಡು$_2$ + ಕೋಳಿ (< ಕೋೞಿ)]

**ಕಾಡುಕೌಟೆ** 'ಕಾಡಕವಡೆ' ನೋ.

**ಕಾಡುಗಂಡುತುತ್ತೀಗಿಡ** (ನಾ). ಒಂದು ಬಗೆಯ ಸಸ್ಯ : (ವೈಔಗ. ೪೩-೮೫೭). [ಕಾಡು$_2$ + ಗಂಡುತುತ್ತಿ$_0$ + ಗಿಡ (< ಗಿಡು)]

**ಕಾಡುಗಂಧ** (ನಾ). ಒಂದು ಬಗೆಯ ಸಸ್ಯ : ಅಗಿಲು, ಕಾಡುಗಂಧ (ವೈಔಗ. ೩೨-೬೧೮). [ಕಾಡು$_2$ + ಗಂಧ]

**ಕಾಡುಗಣ್ಣು** (ನಾ). ಕಾಡಿಗೆ ಕಣ್ಣು ; ಕಪ್ಪು ಕಣ್ಣು : ಕಾಡುಗಣ್ಣ ನೋಳೆ ಕೂಡಿದ ಹುಬ್ಬಿನೋಳೆ (ಹುಟ್ಟಹ. ೪೭).
[ಕಾಡು$_3$ + ಕಣ್ಣು (< ಕಣ್)]

**ಕಾಡುಗತ್ತಲೆ** 'ಕಾಡುಗಳ್ತಲೆ' ನೋ.

**ಕಾಡುಗತ್ತೆ** (ನಾ). ಅಡವಿಯ ಕತ್ತೆ ; ಒರಟು ಕತ್ತೆ : (ಕ).
[ಕಾಡು$_2$ + ಕತ್ತೆ$_1$ (< ಕೞ್ತೆ)]

**ಕಾಡುಗರಿಕೆ** (ನಾ). ಒಂದು ಬಗೆಯ ಗರಿಕೆಹುಲ್ಲು : ಗರಿಕೆಹುಲ್ಲು, ಕಾಡುಗರಿಕೆ, ಕುಡಿಗರಿಕೆ (ವೈಔಗ. ೨೭-೫೨೧).
[ಕಾಡು$_2$ + ಗರಿಕೆ (< ಕಱುಂಕೆ)]

**ಕಾಡುಗರುಗಲುಗಿಡ** (ನಾ). ಒಂದು ಬಗೆಯ ಸಸ್ಯ : (ವೈಔಗ. ೫೭-೧೧೫೧). [ಕಾಡು$_2$ + ಗರುಗಲು + ಗಿಡ (< ಗಿಡು)]

**ಕಾಡುಗಸಗಸೆಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಡು ಗಸಗಸೆಹುಲ್ಲು, ಪಿನಿಹುಲ್ಲು (ವೈಔಗ. ೩೪-೬೫೭).
[ಕಾಡು$_2$ + ಗಸಗಸೆ (< ಕಸಕಸೆ) + ಹುಲ್ಲು (< ಪುಲ್)]

**ಕಾಡುಗಳ್ತಲೆ, ಕಾಡುಗತ್ತಲೆ** (ನಾ). ಕಗ್ಗತ್ತಲೆ; ದಟ್ಟವಾದ ಕತ್ತಲೆ : ಕವಿಯುತಿರೆ ಕಾಡುಗಳ್ತಲೆ, ತಂದನೂರಿಗವಳಂ (ಶ್ರೀರಾಮಾ. ೨೨-೫೮೪). **ಕಾಡುಗತ್ತಲೆ** : ಕಾಡುಗತ್ತಲೆಗೆ ಮೋಡಗತ್ತಲೆಯೂ ಸೇರಿ ಮಸಿ ಮುದ್ದೆಯಾಗಿ ಅಳಿಸಿಹೋಗಿದುದೆಲ್ಲ (ಚಂದ್ರಸ. ೧೦೧).
[ಕಾಡು$_2$ + ಕತ್ತಲೆ$_1$ (< ಕೞ್ತಲೆ)]

**ಕಾಡುಗಿಚ್ಚು** 'ಕಾಡ್ಗಿಚ್ಚು' ನೋ.

**ಕಾಡುಗಿಡ** (ನಾ). ಒಂದು ಬಗೆಯ ಸಸ್ಯ : ಕಲ್ಲುರಿವೆ, ಕಾಡುಗಿಡ, ಅಗ್ನಿವೇಂದ್ರಪಾಕು (ವೈಔಗ. ೬-೯೭).
[ಕಾಡು$_2$ + ಗಿಡ (< ಗಿಡು)]

**ಕಾಡುಗುಂಡುಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಡು ಗುಂಡುಹುಲ್ಲು, ಗಡ್ಡೆಗುಂಡುಹುಲ್ಲು (ವೈಔಗ. ೩೭-೭೩೪).
[ಕಾಡು$_2$ + ಗುಂಡು$_0$ + ಹುಲ್ಲು (< ಪುಲ್)]

**ಕಾಡುಗುಂಬಳ, ಕಾಡುಕುಂಬಳ** (ನಾ). ಒಂದು ಬಗೆಯ ಕುಂಬಳ ಬಳ್ಳಿ : ಕಾಡುಗುಂಬಳ, ಕಟಕಾಂಬ, ಹೀಲಗ (ವೈಔಗ. ೭೫-೧೫೩೬). **ಕಾಡುಕುಂಬಳ** : ಸೀಮೆಸೀಗೆ, ಕಾಡು ಕುಂಬಳ, ಅಂಡ್ರಿಕೆಹುಲ್ಲು . . . ಇಂಥ ನೂರಾರು ಕಾಡು ಜಾತಿಯ ಹುಲ್ಲು ಹೊದರು ಗಿಡಮರ ಬಳ್ಳಿ ಯಥೇಚ್ಛವಾಗಿ ಬೆಳೆದು (ಬೆಳುಮು. ೫೩). [ಕಾಡು$_2$ + ಕುಂಬಳ]

**ಕಾಡುಗುದುರೆ, ಕಾಡುಕುದುರೆ** (ನಾ). ಅಡವಿಯ ಕುದುರೆ; ಪಳಗದ ಕುದುರೆ : ಕಾಡುಗುದುರೆ [ಪಾಠಾಂ. ಕಾಡಕುದರೆ]ಗಳಾ ನಗದಿನಕಾಂತದ ಕೋಡುಗಲ್ಗಳ ಕೆಳಗಿರಲು ನೋಡೆ ಪಗಲೊಳದು ಮೆಱೆವುದು ತರಣಿಗಳಾಡುಂಬೊಲದಂತೆ ಕಣ್ಗೆ (ಕುರಾಸಾಂ. ೪-೧೭). **ಕಾಡುಕುದುರೆ** : (ಕ). [ಕಾಡು$_2$ + ಕುದುರೆ]

**ಕಾಡುಗುರುಬ, ಕಾಡುಕುರುಬ** (ನಾ). ಗಿರಿ ಜನರಲ್ಲಿ ಒಂದು ಪಂಗಡ ; ಬೆಟ್ಟದ ಕುರುಬ ; ಅಡವಿಯ ಕುರುಬ : ಕನಸಿನಲ್ಲಿಯೂ ಕಾಣದ ಇರುವ ಕಾಡುಗುರುಬನಂತೆ (ಸೌಗಂಧಿ. ೧೫೮-೧೧). **ಕಾಡುಕುರುಬ** : (ಕ). [ಕಾಡು$_2$ + ಕುರುಬ (< ಕುಱುಂಬ)]

**ಕಾಡುಗುಱಿ, ಕಾಡುಕುರಿ** (ನಾ). ಅಡವಿಯ ಕುರಿ ; ಕಾಡಿನಲ್ಲಿಯೆ ಹುಟ್ಟಿ ಬೆಳೆದ ಕುರಿ : ಕಾಡ[ಡು]ಗುಱಿ ತನೆಯಾಗಿ ಬಂದು ವೂರೊಳಗೆ ಮೂಱು ಮಱಿಯಾಯಿತ್ತು (ಮನುಗುಂ. ೯೭-೨೪). **ಕಾಡುಕುರಿ** : "ಕಾಡ್ಗುರಿ – ಕಾಡುಕುರಿ" (ಗಂಗಾಮು. ೬೯). [ಕಾಡು$_2$ + ಕುಱಿ$_2$]

**ಕಾಡುಗೆಣಸು** (ನಾ). ಗೆಣಸಿನಲ್ಲಿ ಒಂದು ಬಗೆ : (ಕ).
[ಕಾಡು$_2$ + ಗೆಣಸು (< ಗೆಣಸು)]

**ಕಾಡುಗೇರು** (ನಾ). ಒಂದು ಬಗೆಯ ಸಸ್ಯ : (ವೈಔಗ. ೬೯-೧೪೧೦).
[ಕಾಡು$_2$ + ಗೇರು (< ಕೇರ್)]

**ಕಾಡುಗೊಂಡೆ** (ನಾ). ಒಂದು ಬಗೆಯ ಗಿಡ : ಬೇಲಿಯಲ್ಲಿ ಮೆಂತೆ, ಬೆಕ್ಕಿನ ಬೂರಲ, ಕಾಡುಗೊಂಡೆಯ ಗಿಡಗಳು ಎದೆಯೆತ್ತರ ಬೆಳೆದು ಹೂವರಳಿಸಿ ನಿಂತಿದ್ದವು (ಮೂರುದಾ. ೯೦). [ಕಾಡು$_2$ + ಗೊಂಡೆ]

**ಕಾಡುಗೊಬ್ಬಿಗಿಡ** (ನಾ). ಒಂದು ಬಗೆಯ ಸಸ್ಯ : (ವೈಔಗ. ೬೯-೧೪೧೧). [ಕಾಡು$_2$ + ಗೊಬ್ಬಿ (< ಗೊಬ್ಬಳಿ) + ಗಿಡ (< ಗಿಡು)]

**ಕಾಡುಗೋಡು** (ನಾ). ೧. ಕಾಡಿನಿಂದ ಕೂಡಿದ ಶಿಖರ. ೨. ಕಾಡಿನ ಎತ್ತರವಾದ ಪ್ರದೇಶ : ಕಾಡುಗೋಡೆತ್ತರದೊಳಿರ್ದ ಪುಲ್ಮನೆಯೊಳಿರ್ದು ಸೀತಾದೇವಿ ತಾನುತ್ಕಂಠೆ, ನೋಡುತಿರ್ದಳ್ ತರಂಗೋಲ್ಲಾಸಮಂ (ಶ್ರೀರಾಮಾ. ೩೩೧-೫). [ಕಾಡು$_2$ + ಕೋಡು$_5$]

**ಕಾಡುಗೋಧಿ** (ನಾ). ೧. ಒಂದು ಬಗೆಯ ಹುಲ್ಲು : (ಕ). ೨. ಕಾಡಿನಲ್ಲಿ ತಾನಾಗಿ ಬೆಳೆಯುವ ಒಂದು ಬಗೆಯ ಗೋಧಿ : "ಗವೇಧುಃ, ಗವೇಧುಕಾ – ೨ ಕಾಡುಗೋಧಿ" (ಸಿದ್ಧಾಂತಿ. ೨೪೧).
[ಕಾಡು$_2$ + ಗೋಧಿ]

**ಕಾಡುಗೋಳಿಯಸೊಪ್ಪು** (ನಾ). ಒಂದು ಬಗೆಯ ಸೊಪ್ಪು : "ಆರಾಮ – ಗೋಳಿ, ಕಾಡುಗೋಳಿಯ ಸೊಪ್ಪು" (ಓಷಧಿ. ೧೩).
[ಕಾಡು$_2$ + ಗೋಳಿ$_2$ + ಸೊಪ್ಪು$_3$]

**ಕಾಡುಗೋಳು** (ನಾ). ಕಾಡಿನಲ್ಲಿರುವ ಜೀವಿಗಳೆಲ್ಲ ದುಃಖಿಸುವಿಕೆ; ಕಾಡೆಲ್ಲ ಗೋಳಿಡುವಿಕೆ : ಮರ ಮುರಿದು, ಹಳು ನಡುನಡುಗಿ, ಕಾಡು ಗೋಳಾಗಿ ಬಿದ್ದನು ಜಟಾಯು (ಶ್ರೀರಾಮ. ೨೪೯-೫೮೧).
[ಕಾಡು$_2$ + ಗೋಳು$_2$ (< ಗೋೞ್)]

**ಕಾಡುಗೌಟೆ, ಕಾಡಗೌಟೆ** (ನಾ). ಒಂದು ಬಗೆಯ ಬಳ್ಳಿ : "ಮೃಗೋರ್ವಾರುಃ – ಬೇಲಿಸೌತೆ, ಹಾವುಮೆಕ್ಕೆ, ಕಾಡುಗೌ(ಡೆ)ಟಿ" (ಓಷಧಿ. ೧೨೮). **ಕಾಡಗೌಟೆ** : "ವಿಚಿತ್ರಫಲಾ – ಕಾಡಗೌಟಿ" (ಓಷಧಿ. ೧೮೪). [ಕಾಡು$_2$ + ಗೌಟೆ (< ಕವಡೆ$_1$ ?)]

**ಕಾಡುಚುರುಚುರುಕನಗಿಡ** (ನಾ). ಒಂದು ಬಗೆಯ ಸಸ್ಯ : (ವೈಔಗ. ೩೭-೭೪೩). [ಕಾಡು$_2$ + ಚುರುಚುರುಕ$_0$ + ಗಿಡ (< ಗಿಡು)]

**ಕಾಡುಚೂರ್ಣಗೆಡ್ಡೆ** (ನಾ). ಒಂದು ಬಗೆಯ ಕಾಡು ಸೂರಣಗೆಡ್ಡೆ : ಕಂದಗೆಡ್ಡೆ, ಕಾಡುಚೂರ್ಣಗೆಡ್ಡೆ (ಮೈಔಗಿ. ೬-೧೦೨).
[ಕಾಡು$_2$ + ಚೂರ್ಣ + ಗೆಡ್ಡೆ (< ಗಡ್ಡೆ)]

**ಕಾಡುಜಂಬುನೇರಳೆ** (ನಾ). ಒಂದು ಬಗೆಯ ನೇರಳೆಗಿಡ: (ಮೈಔಗಿ. ೩೫-೬೮೮). [ಕಾಡು$_2$ + ಜಂಬುನೇರಳೆ]

**ಕಾಡುಜಟಾಮಾಂಸಿ** (ನಾ). ಒಂದು ಬಗೆಯ ಮೂಲಿಕೆ: (ಮೈಔಗಿ ೭೬-೧೫೭೦). [ಕಾಡು$_2$ + ಜಟಾಮಾಂಸಿ]

**ಕಾಡುಜಡೆನವಣೆಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಮೈಔಗಿ. ೩೪-೬೫೪). [ಕಾಡು$_2$ + ಜಡೆ + ನವಣೆ + ಹುಲ್ಲು (< ಪುಲ್)]

**ಕಾಡುಜನ** (ನಾ). ೧. ಕಾಡಿನಲ್ಲಿ ವಾಸಮಾಡುವ ಜನ. ೨.(ಅಲಂ). ಒರಟು ಜನ; ಅನಾಗರಿಕ ಮಂದಿ : (ಕ). [ಕಾಡು$_2$ + ಜನ]

**ಕಾಡುಜನಗಲು** (ನಾ). ಒಂದು ಜಾತಿಯ ಗಿಡ: ಕಾಡುಜನಗಲು, ಬಿಳಿಗಣಗಲು, ಗಿಡ್ಡ (ಮೈಔಗಿ. ೭೮-೧೬೦೪). [ಕಾಡು$_2$ + ?]

**ಕಾಡುಜನಾಂಗ** (ನಾ). ಗುಡ್ಡಗಾಡಿನಲ್ಲಿ ವಾಸಿಸುವ ಜನಾಂಗ; ವನ್ಯಜನಾಂಗ; ಗಿರಿಜನರ ಕುಲ: ಗೋಂಡಾ ಜನಾಂಗದವರು ಇಂದು ಕಾಡುಜನಾಂಗವಾಗಿರಬಹುದು (ದ್ರಾವಿವಿ. ೧೫೦).
[ಕಾಡು$_2$ + ಜನಾಂಗ]

**ಕಾಡುಜಾಜಿ** (ನಾ). ಜಾಜಿಗಿಡದಲ್ಲಿ ಒಂದು ಬಗೆ: (ಮೈಔಗಿ. ೫೫-೧೧೧೬).

ಕಾಡುಜಾಜಿಕಾಯಿ = ಕಾಡು ಜಾಜಿಯ ಕಾಯಿ : ಕಾಡುಜಾಜೀಕಾಯಿ – ಇವು ಬಹುಶಃ ಎಲ್ಲ ಕಡೆಯಲ್ಲಿಯೂ ಬೆಳೆಯುತ್ತವೆ (ಮುಂಬಯಿ: ೫-೨೧೧). [ಕಾಡು$_2$ + ಜಾಜಿ]

**ಕಾಡುಜಾಣೆ** (ನಾ). ಒಂದು ಬಗೆಯ ಸಸ್ಯ: ಕಾಡುಜಾಣೆ, ಕಾಲುವಾಮೆ (ಮೈಔಗಿ. ೪೦-೮೦೧). [ಕಾಡು$_2$ + ಜಾಣೆ ?]

**ಕಾಡುಜಾರಿಗೆ** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೩೮-೭೫೮).
[ಕಾಡು$_2$ + ಜಾರಿಗೆ]

**ಕಾಡುಜೀರಕ** (ನಾ). ಒಂದು ಬಗೆಯ ಸಸ್ಯ: ದೀವರಿಗೆ, ಚಿಕ್ಕ ಕಮರಾಕ್ ಮರ, ಕಾಡುಜೀರಕ (ಮೈಔಗಿ. ೩೮-೭೫೯).
[ಕಾಡು$_2$ + ಜೀರಕ]

**ಕಾಡುಜೀರಿಗೆ** (ನಾ). ಕಾಡಿನಲ್ಲಿ ಬೆಳೆಯುವ ಜೀರಿಗೆ; ಕರಿಜೀರಿಗೆ; ಕಹಿಜೀರಿಗೆ: ಸಹದೇವಿ, ಕರೀಜೀರಿಗೆ, ಕಾಡುಜೀರಿಗೆ (ಮೈಔಗಿ. ೨೦-೩೫೭). 'ಕಾಟ್ಜೀರಗೆ' ಪರಾ. [ಕಾಡು$_2$ + ಜೀರಿಗೆ]

**ಕಾಡುಜೋಳ** (ನಾ). ಒಂದು ಬಗೆಯ ಸಸ್ಯ: ಕಾಡುಜೋಳ, ಹುಚ್ಚುಜೋಳ, ಕಾಡುಕಂಬುಹುಲ್ಲು (ಮೈಔಗಿ. ೭೧-೧೪೫೫).
[ಕಾಡು$_2$ + ಜೋಳ]

**ಕಾಡುತಮ್ಮಟೇಬಳ್ಳಿ** (ನಾ). ಒಂದು ಬಗೆಯ ಬಳ್ಳಿ: (ಮೈಔಗಿ. ೧೬-೨೯೮). [ಕಾಡು$_2$ + ತಮ್ಮಟೆ + ಬಳ್ಳಿ]

**ಕಾಡುತುಂಬೆ, ಕಾಡತುಂಬೆ** (ನಾ). ಒಂದು ಬಗೆಯ ತುಂಬೆ ಗಿಡ: ಕಾಡುತುಂಬೇಗಿಡ, ರಣಭೇರಿ (ಮೈಔಗಿ. ೫೦-೯೯೦). **ಕಾಡತುಂಬೆ**: "ಊಷಾ – ಕಾಡತುಂಬೆ" (ಒಷಧಿ. ೧೭). [ಕಾಡು$_2$ + ತುಂಬೆ]

**ಕಾಡುತುತ್ತಿ** (ನಾ). ಒಂದು ಬಗೆಯ ಸಸ್ಯ: ದೊಡ್ಡಬೆಂಡೆ, ಕಾಡುತುತ್ತಿ (ಮೈಔಗಿ. ೭೬-೧೫೬೦). [ಕಾಡು$_2$ + ತುತ್ತಿ]

**ಕಾಡುತೆಂಗು** (ನಾ). ಒಂದು ಬಗೆಯ ತೆಂಗು: ಡಪ್ಪಾಲ, ಭೂಡಸಲ, ಬೆಟ್ಟತೆಂಗು, ಕಾಡುತೆಂಗು (ಮೈಔಗಿ. ೮-೧೪೦). [ಕಾಡು$_2$ + ತೆಂಗು]

**ಕಾಡುತೊಗರಿ** (ನಾ). ಒಂದು ಬಗೆಯ ತೊಗರಿ: (ಮೈಔಗಿ. ೧೦-೧೮೦). [ಕಾಡು$_2$ + ತೊಗರಿ (< ತೊವರಿ)]

**ಕಾಡುತೊಗರಿಬಳ್ಳಿ** (ನಾ). ಒಂದು ಬಗೆಯ ಬಳ್ಳಿ: ಕಾಡು ಅವರೆಬಳ್ಳಿ, ಕಾಡುತೊಗರಿಬಳ್ಳಿ (ಮೈಔಗಿ. ೩೯-೭೮೦).
[ಕಾಡುತೊಗರಿ + ಬಳ್ಳಿ]

**ಕಾಡುದಬ್ಬೆಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಮೈಔಗಿ. ೩೨-೬೨೨). [ಕಾಡು$_2$ + ದಬ್ಬೆ + ಹುಲ್ಲು (< ಪುಲ್)]

**ಕಾಡುದಾರಿ** (ನಾ). ಅಡವಿಯ ದಾರಿ: "ಕಾಂತಾರಂ ದುರ್ಗಮಂ ವರ್ತ್ಮ – ಚೋರ ಕಂಟಕಾದಿಗಳಿಂದ ಹೋಗುವದಕ್ಕೆ ಕಷ್ಟವಾಗಿರುವ ಕಾಡುದಾರಿ" (ಸಿದ್ಧಾಂತಿ. ೮೭). [ಕಾಡು$_2$ + ದಾರಿ$_1$]

**ಕಾಡುದಾಲಚಿನ್ನಿ** 'ಕಾಡುದಾಲ್ಚಿನ್ನಿ' ನೋ.

**ಕಾಡುದಾಲ್ಚಿನ್ನಿ, ಕಾಡುದಾಲಚಿನ್ನಿ** (ನಾ). ದಾಲಚಿನ್ನಿಯ ಮರದಲ್ಲಿ ಒಂದು ಬಗೆ: (ಮೈಔಗಿ. ೨೧-೩೯೧). **ಕಾಡುದಾಲಚಿನ್ನಿ**: (ಕ).
[ಕಾಡು$_2$ + ದಾಲ್ಚಿನ್ನಿ]

**ಕಾಡುದೊಂಬ** (ನಾ). ದೊಂಬರಲ್ಲಿ ಒಂದು ಬಗೆ; "ಒಂದು ಊರಲ್ಲಿ ನೆಲಸದೆ ಊರಿಂದೂರಿಗೆ ಅಲೆದಾಡುವ ದೊಂಬ" (ಎಸಮೈ. XIII, ೪). [ಕಾಡು$_2$ + ದೊಂಬ]

**ಕಾಡುದ್ದು** (ನಾ). ಒಂದು ಬಗೆಯ ಉದ್ದು: "ಹಯಪುಚ್ಛೀ, ಕಾಂಬೋಜೀ, ಮಾಷಪರ್ಣೀ, ಮಹಾಸಹಾ ಈ ೪ ಕಾಡುದ್ದು" (ನಾಚಿರಾ. ೧೧೧); "ಪುಷ್ಟಿಕಾ – ಕಾಡುದ್ದು" (ಒಷಧಿ. ೧೦೦).
[ಕಾಡು$_2$ + ಉದ್ದು$_2$ (< ಉಟ್ದು)]

**ಕಾಡುದ್ರಾಕ್ಷಿ** (ನಾ). ಒಂದು ಬಗೆಯ ದ್ರಾಕ್ಷಿ: ಕಾಡುದ್ರಾಕ್ಷಿ, ಬಿಳಿಹಂಬು (ಮೈಔಗಿ. ೬-೧೦೪). [ಕಾಡು$_2$ + ದ್ರಾಕ್ಷಿ (< ದ್ರಾಕ್ಷೆ)]

**ಕಾಡುನವಣೆಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಮೈಔಗಿ. ೩೪-೬೬೩). [ಕಾಡು$_2$ + ನವಣೆ + ಹುಲ್ಲು (< ಪುಲ್)]

**ಕಾಡುನಾಯಿ** (ನಾ). ಅಡವಿಯ ನಾಯಿ; ಕಾಡಿನಲ್ಲಿಯೆ ವಾಸಮಾಡಿಕೊಂಡಿರುವ ಒಂದು ಬಗೆಯ ನಾಯಿ: (ಕ). 'ಕಾಟುನಾಯಿ' ಪರಾ. [ಕಾಡು$_2$ + ನಾಯಿ (< ನಾಯ್)]

**ಕಾಡುನಿಂಬೆ, ಕಾಡನಿಂಬೆ, ಕಾಡಲಿಂಬೆ, ಕಾಡುಲಿಂಬೆ** (ನಾ). ನಿಂಬೆಗಿಡದಲ್ಲಿ ಒಂದು ಬಗೆ: ಕಾಡುನಿಂಬೆ, ದೊಡ್ಡಹುಳಿ (ಮೈಔಗಿ. ೧೨-೧೭೩). **ಕಾಡನಿಂಬೆ**: "ವ್ರಣರಂಜನೀ – ಕಾಡನಿಂಬೆ" (ಒಷಧಿ. ೧೪೯). **ಕಾಡಲಿಂಬೆ**: ಕಾಡಲಿಂಬೆ (ಮಾಕಡಲಿಂಬ) ಗಿಡ ಸಣ್ಣದು . . . ಭಾರ ಬಹಳ (ಕಭಾಗ. ೨೭). **ಕಾಡುಲಿಂಬೆ**: (ಕ).
[ಕಾಡು$_2$ + ನಿಂಬೆ]

**ಕಾಡುನೀರುದುರೆ** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೩೨-೬೦೯). [ಕಾಡು$_2$ + ನೀರುದುರೆ]

**ಕಾಡುನೀಲಿ** (ನಾ). ನೀಲಿ ಗಿಡದಲ್ಲಿ ಒಂದು ಬಗೆ: (ಮೈಔಗಿ. ೪೫-೮೯೬). [ಕಾಡು$_2$ + ನೀಲಿ]

**ಕಾಡುನುಗ್ಗಿ** (ನಾ). ನುಗ್ಗೆಯಲ್ಲಿ ಒಂದು ಬಗೆ: (ಮೈಔಗಿ. ೫೮-೧೧೬೫). 'ಕಾಟ್ನುಗ್ಗಿ' ಪರಾ.
[ಕಾಡು$_2$ + ನುಗ್ಗಿ (< ನುಗ್ಗೆ)]

**ಕಾಡುನುಡಿ** (ನಾ). ಅನಾಗರಿಕವಾದ ಮಾತು; ಒರಟು ಮಾತು: ಬೇಡಂಗೆ ಕೊಡೆ ಹೊಲ್ಲ ಅಡಿಂಗೆ ಮಳೆ ಹೊಲ್ಲ . . . ದ್ವಿಜನಿಗೆ ಕಾಡುನುಡಿ ಹೊಲ್ಲ (ಸರ್ವಜ್ಞ. ೯೪೯). [ಕಾಡು$_2$ + ನುಡಿ$_2$]

**ಕಾಡುನೊಣ** 'ಕಾಡುನೊಳ' ನೋ.

**ಕಾಡುನೊಸೆಹುಲ್ಲು** (ನಾ). ಒಂದು ಬಗೆಯ ಹುಲ್ಲು: ದೊಡ್ಡಹಂಚೀಹುಲ್ಲು, ಬಂಡೀಊಬಿನ ಹುಲ್ಲು, ಕಾಡುನೊಸೆ ಹುಲ್ಲು (ಮೈಔಗಿ. ೯-೧೪೭).
[ಕಾಡು$_2$ + ನೊಸೆ + ಹುಲ್ಲು (< ಪುಲ್)]

**ಕಾಡುನೊಳ**, ಕಾಡನೊಣ, ಕಾಡನೊಳ, ಕಾಡುನೊಣ (ನಾ). ನೊಣದಲ್ಲಿ ಒಂದು ಬಗೆ: (೬). **ಕಾಡನೊಣ**: (೬). **ಕಾಡನೊಳ**: "ದಂಶಕಃ–ಕಾಡನೊಳಂ" (ಕಾಶಕ್ಯ. ೮೦). **ಕಾಡುನೊಣ** : "ದಂಶಃ, ವನಮಕ್ಷಿಕಾ ಈ ೨ ಕಾಡುನೊಣ" (ನಾಚಿರಾ. ೧೧೫); ಹುಲೀ ಚೇಳು ಕಾಡುನೊಣ ಕ್ರೂರಜಂತುಗಳು ವೃದ್ಧಿಯಾಗಲು (ಅರ್ಕಮಾ. ೯೮).
[ಕಾಡು$_2$ + ನೊಳ]

**ಕಾಡುಪಂದಿ**, ಕಾಡುಹಂದಿ (ನಾ). ಅಡವಿಯ ಹಂದಿ; ಕಾಡುಮಿಕ: ಕಾಡ[ಡು] ಪಂದಿಗಳ ಬಲ್ಮೆಣದಿಂ ಪೊಲಸಟ್ಟ ನಾರ್ವ . . . ಕಯ್ (ಕಾದಂಪೂ ೧೮೪). **ಕಾಡುಹಂದಿ** : ನಿಂದಿಸಲೇಕೆ ಭೂ ತಸ್ಕರನೊಳು ಕಾಡ[ಡು]ಹಂದಿಯ ರೂಪಾಂತು ನೀನು ಅಂದಿನ ದಿನದೊಳಾತನ ಕೊಂದ ಧೈರ್ಯವನಿಂದಿಗೆ ತೋರು (ಮೋಹತ. ೪೦–೨೧); ಅವುಗಳಲ್ಲಿ ಕಾಡುಹಂದಿ, ಜಿಂಕೆ, ಕಿರುಬ ಮುಂತಾದ ಪ್ರಾಣಿಗಳು ಸೇರಿಕೊಂಡಿದ್ದವು (ಹುಟ್ಟಹ. ೨೪). 'ಕಾಳ್ಪಂದಿ' ಪರಾ. [ಕಾಡು$_2$ + ಪಂದಿ]

**ಕಾಡುಪತಂಗ** (ನಾ). ಒಂದು ಬಗೆಯ ಹುಲ್ಲು : ಕರ್ಕಿಸಲ್ಲಿ, ಕಾಡು ಪತಂಗ, ಮುರಿಗೆ (ಮೈಔಗಿ. ೪೦–೬೯೯). [ಕಾಡು$_2$ + ಪತಂಗ]

**ಕಾಡುಪಡವಲ** (ನಾ). ಪಡವಲದಲ್ಲಿ ಒಂದು ಬಗೆ: (ಮೈಔಗಿ. ೬೫–೧೫೪೭). [ಕಾಡು$_2$ + ಪಡವಲ]

**ಕಾಡುಪಾಪ**, ಕಾಡಪಾಪ (ನಾ). ಒಂದು ಬಗೆಯ ಕೋತಿ: ಕಡ ಲಾಚೆಗೆ.ಹೋಗಿಬಂದದ್ದೂಂತ ಕಾಡುಪಾಪನ್ನ ಕಟ್ಕೊಂಡ್ರಂತೆ ಯಾರೋ (ವೈದ್ಯವಿ. ೧೯); ಕೋತಿಗಳಲ್ಲಿ ಜಾತಿ : ಶಿಂಗಳೀಕ . . . ನಳ, ಅಡವಿ ಮನುಷ್ಯ, ಕಾಡುಪಾಪ (ನಮ್ಮನು. ೨೩೯). **ಕಾಡಪಾಪ** (೬).
[ಕಾಡು$_2$ + ಪಾಪ$_1$]

**ಕಾಡುಪಾರಿವಾಳ$_1$** (ನಾ). ೧. ಪಾರಿವಾಳದಲ್ಲಿ ಒಂದು ಬಗೆ; ಅಡವಿಯ ಪಾರಿವಾಳ: ಬಿಸಿಲಿನ ತಾಪವನ್ನು ತಾಳಲಾರದೆ ಗೂಡಿಗೆ ಸೇರಿದ್ದ ಕಾಡುಪಾರಿವಾಳಗಳು ಗುಟುರಿದಾಗ (ಬೆಳುಮ. ೧೨೨).
[ಕಾಡು$_2$ + ಪಾರಿವಾಳ$_1$]

**ಕಾಡುಪಾರಿವಾಳ$_2$** (ನಾ). ಒಂದು ಜಾತಿಯ ಮರ; ಹಾಲುವಾಣದ ಮರ : ಕಾಡುಪಾರಿವಾಳ, ಹಾಲುವಾಣ (ಮೈಔಗಿ. ೩೫–೬೭೯).
[ಕಾಡು$_2$ + ಪಾರಿವಾಳ$_2$]

**ಕಾಡುಪಾಲು** (ನಾ). ಅಡವಿಯ ಪಾಲು; ದಿಕ್ಕುಗೆಟ್ಟಿರುವುದು : ಅವನ ದುಡುಕಿನಿಂದ ಅವಳು ಕಾಡುಪಾಲಾದದ್ದಲ್ಲದೆ, ತಾನೂ ಕೊಳಚೆ ಯಲ್ಲಿ ಮುಳುಗಿ ಮೃತ್ಯುವಿಗೆ ತುತ್ತಾದನು (ಬಂಕಿಮ. ೬೩).

**ಕಾಡುಪಾಲುಮಾಡು** = ದಿಕ್ಕಿಲ್ಲದಂತೆ ಮಾಡು; ನಿರ್ಗತಿಕವಾಗಿ ಮಾಡು: ತಾನು ಪ್ರೀತಿಸಿದ್ದ ಹೆಂಗಸನ್ನು ಕಾಡುಪಾಲು ಮಾಡು ವಂತಿರಲಿಲ್ಲ (ಪುನರು. ೧೩೨). [ಕಾಡು$_2$ + ಪಾಲು$_2$ (< ಪಾಲ್$_2$)]

**ಕಾಡುಪಾವಟೆಬಳ್ಳಿ**, ಕಾಡಪಾವಟೆಬಳ್ಳಿ (ನಾ). ಒಂದು ಬಗೆಯ ಬಳ್ಳಿ: ಮಣಿತೊಂಡೆ, ಕಾಡುಪಾವಟಿ ಬಳ್ಳಿ (ಮೈಔಗಿ. ೫೩–೧೦೬೪).
**ಕಾಡಪಾವಟೆಬಳ್ಳಿ**: (೬). [ಕಾಡು$_2$ + ಪಾವಟಿ + ಬಳ್ಳಿ]

**ಕಾಡುಪಿಂಡಿ** (ನಾ). ಒಂದು ಬಗೆಯ ಮರ: ಕಾಡುಪಿಂಡಿ, ರಿಕ್ತ, ರಕ್ತಮರ (ಮೈಔಗಿ. ೪೮–೯೬೭). [ಕಾಡು$_2$ + ಪಿಂಡಿ]

**ಕಾಡುಪುಳ್ಳಂಪುರಸಿ** (ನಾ). ಒಂದು ಬಗೆಯ ಗಿಡ: (ಮೈಔಗಿ. ೩೦–೫೭೫). [ಕಾಡು + ಪುಳ್ಳಂಪುರಸಿ (< ಪುಳ್ಳಂಪುರಚಿ)]

**ಕಾಡುಪೆ** (ನಾ). ಒಂದು ಬಗೆಯ ಸಸ್ಯ: ಕಲ್ಲುಹಟ್ಟಿ, ಕಾಡುಪೆ, ಕರ್ಪ (ಮೈಔಗಿ. ೫೦–೯೯೩). [?]

**ಕಾಡುಬಂಬೆ** (ನಾ). ಒಂದು ಬಗೆಯ ಸಸ್ಯ: ಕಾಡುಬಂಬೆ ಬೇರಂ ಹಸಿಯ ಹಾಲಿಂ ಕುಡಿಯಲು ಜ್ವರ ಹರ (ವಿವೈವಿ. ೧೫೧). [ಕಾಡು$_2$ + ಬಂಬೆ$_0$]

**ಕಾಡುಬಕ** (ನಾ). = ಕಾಡು ಕೊಕ್ಕರೆ: "ಕೃಕರಃ – ಕಬ್ಬಕ್ಕಿ ಹೆಸರು, ಕಕ್ಕಕವಕ್ಕಿ ಕಾಡುಕೊಕ್ಕರಿ, ಕಾಡುಬಕ" (ಸಿದ್ಧಾಂತಿ. ೧೩೯).
[ಕಾಡು$_2$ + ಬಕ]

**ಕಾಡುಬರಗುಹುಲ್ಲು** (ನಾ). ಒಂದು ಜಾತಿಯ ಹುಲ್ಲು: ಕಾಡುಬರಗು ಹುಲ್ಲು, ಬೆಣ್ಣೆಅಕ್ಕಿ ಹುಲ್ಲು (ಮೈಔಗಿ. ೧೪–೨೪೫).
[ಕಾಡು$_2$ + ಬರಗು + ಹುಲ್ಲು (< ಪುಲ್)]

**ಕಾಡುಬಸಳೆ**, ಕಾಡಬಸಲೆ (ನಾ). ಒಂದು ಬಗೆಯ ಸಸ್ಯ : ಕಾಡು ಬಸಳೆ ಎಲೆಗಳಿಗೆ ವಂಶಾಭಿವೃದ್ಧಿ ಮಾಡುವ ಶಕ್ತಿ ಇದೆ (ಸಸ್ಯಶಾ. ೮೦).
**ಕಾಡಬಸಲೆ** : "ಮೂಲಪೋದ :—ಕಾಡಬಸಲೆ" (ಓಷಧಿ. ೧೨೭).
[ಕಾಡು$_2$ + ಬಸಳೆ (< ಬಸಲೆ)

**ಕಾಡುಬಳ್ಳಿ** (ನಾ). ಒಂದು ಬಗೆಯ ಸಸ್ಯ: ನೀಮುಖಾ, ಪರೇರಾ ಬೇರು, ಪದ್ದಳಿ, ಪಾಕ, ಕಾಡುಬಳ್ಳಿ (ಮೈಔಗಿ. ೨೧–೩೯೪).

**ಕಾಡುಬಾಳೆ**, ಕಾಡಬಾಳೆ (ನಾ). ಒಂದು ಬಗೆಯ ಬಾಳೆ; ಗಾಳಿ ಬಾಳೆ (ಕರಾ) : (೬). **ಕಾಡಬಾಳೆ**: ಕಾಡಬಾಳೆ ಎಂಬುದೊಂದು ಬಾಳೆಯ ಕುಲವು. ಅರಣ್ಯದಲ್ಲಿ ಹಾಗೂ ಶ್ರೀಶೈಲಾದಿ ಪರ್ವತಂಗಳಲ್ಲಿ . . . ತಮ್ಮಿಂದ ತಾವೇ ಬೆಳೆದು ಹಣ್ಣುಗಳಾಗಿ ಉದುರಿ ಬೀಳುತ್ತವೆ (ಕೃಷಿಪ್ರ. ೧೫೬). [ಕಾಡು$_2$ + ಬಾಳೆ (< ಬಾೞೆ)]

**ಕಾಡುಬಿಕ್ಕಿ** (ನಾ). ಒಂದು ಬಗೆಯ ಗಿಡ : (ಮೈಔಗಿ. ೬೧–೧೨೩೪).
[ಕಾಡು$_2$ + ಬಿಕ್ಕಿ]

**ಕಾಡುಬಿಲ್ವಪತ್ರೆ** (ನಾ). ಬಿಲ್ವಪತ್ರೆಯಲ್ಲಿ ಒಂದು ಜಾತಿ : (ಮೈಔಗಿ. ೫೦–೧೦೦೭). [ಕಾಡು$_2$ + ಬಿಲ್ವಪತ್ರೆ]

**ಕಾಡುಬಿಳಿಸಜ್ಜಬು ಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಡುಬಿಳಿಸಜ್ಜಬು ಹುಲ್ಲು, ಪಾಚಿಹುಲ್ಲು (ಮೈಔಗಿ. ೪೯–೯೮೭).
[ಕಾಡು$_2$ + ಬಿಳಿಸಜ್ಜಬು$_0$ + ಹುಲ್ಲು (< ಪುಲ್)]

**ಕಾಡುಬಿಳೀಸಾಮೆಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಡು ಬಿಳೀಸಾಮೆ ಹುಲ್ಲು, ಎಮ್ಮೆತಪ್ಪರೆ ಹುಲ್ಲು (ಮೈಔಗಿ. ೭೬–೧೫೬೨).
[ಕಾಡು$_2$ + ಬಿಳೀಸಾಮೆ + ಹುಲ್ಲು (< ಪುಲ್)]

**ಕಾಡುಬುಡುಮೆ** (ನಾ). ಒಂದು ಬಗೆಯ ಬುಡುಮೆ ಗಿಡ : (೬).
[ಕಾಡು$_2$ + ಬುಡುಮೆ]

**ಕಾಡುಬುಡ್ಡೆ** (ನಾ). ಒಂದು ಬಗೆಯ ಗಿಡ : (ಮೈಔಗಿ. ೨೫–೪೭೭).
[ಕಾಡು$_2$ + ಬುಡ್ಡೆ]

**ಕಾಡುಬೆಂಡೆ** (ನಾ). ಒಂದು ಬಗೆಯ ಬೆಂಡೆ : ತಣುಕು, ಕಾಡುಬೆಂಡೆ (ಮೈಔಗಿ. ೪೧–೮೨೨). [ಕಾಡು$_2$ + ಬೆಂಡೆ]

**ಕಾಡುಬೆಕ್ಕು** (ನಾ). ಕಾಡಿನ ಬೆಕ್ಕು; ಕಾಡು ಕೊತ್ತಿ : ಒಂದು ಕಾಡುಬೆಕ್ಕು ಈ ಮರದ ಬಳಿಗೆ ಬಂತು (ನೀತಿಚಿಂ. VIII, ೨೪). 'ಕಾಟ್ಬೆಕ್ಕು' ಪರಾ. [ಕಾಡು$_2$ + ಬೆಕ್ಕು]

**ಕಾಡುಬೆರಣಿ** (ನಾ). ಕಾಡಿನ ಬೆರಣಿ : "ಕರೀಷಃ, ಶುಷ್ಕಾಂತತ್ – ಒಣ ಸಗಣಿ, ಕಾಡುಬೆರಣಿ, ಮೂಥಲು" (ಸಿದ್ಧಾಂತಿ. ೨೪೮). 'ಕಾಟ್ಬೆರಣಿ' ಪರಾ. [ಕಾಡು$_2$ + ಬೆರಣಿ (< ಬೆಱಣಿ)]

**ಕಾಡುಬೆಳ್ಳುಳ್ಳಿ** (ನಾ). ಒಂದು ಬಗೆಯ ಬೆಳ್ಳುಳ್ಳಿ : ಕಾಡುಬೆಳ್ಳುಳ್ಳಿ, ಶಿರುನಾರುಗೆಡ್ಡೆ, ಸೀಮೆನರೀ ಈರುಳ್ಳಿ (ಮೈಔಗಿ. ೬೮–೧೮೯೭).
[ಕಾಡು$_2$ + ಬೆಳ್ಳುಳ್ಳಿ]

**ಕಾಡುಭಾಷೆ** (ನಾ). ಒರಟು ಭಾಷೆ; ಅನಾಗರಿಕ ಭಾಷೆ : (೬).
[ಕಾಡು$_2$ + ಭಾಷೆ]

**ಕಾಡುಮಂಜಿಪತ್ರೆ** (ನಾ). ಒಂದು ಬಗೆಯ ಸೊಪ್ಪು : (ಮೈಔಗಿ. ೯–೧೫೭). [ಕಾಡು$_2$ + ಮಂಚಿಪತ್ರೆ]

**ಕಾಡುಮಂದಾರ** (ನಾ). ಒಂದು ಬಗೆಯ ಸಸ್ಯ: ಕಾಡುಮಂದಾರ ಆನೆಪಾದ (ಮೈಔಗಿ. ೧೨-೨೧೩). [ಕಾಡು$_2$ + ಮಂದಾರ]

**ಕಾಡುಮದನಮುಸ್ತಿ** (ನಾ). ಒಂದು ಬಗೆಯ ಸಸ್ಯ: ಗೊಡ್ಡು ಈಚಲು, ಕಾಡುಮದನಮುಸ್ತಿ (ಮೈಔಗಿ. ೨೭-೫೦೮). [ಕಾಡು$_2$ + ಮದನಮುಸ್ತಿ]

**ಕಾಡುಮನುಷ್ಯ** (ನಾ). ೧. ಕಾಡಿನಲ್ಲಿ ವಾಸಿಸುವ ಮನುಷ್ಯ. ೨. ಒರಟು ವ್ಯಕ್ತಿ; ಅನಾಗರಿಕ; ಅಸಂಸ್ಕೃತ: (೬). [ಕಾಡು$_2$ + ಮನುಷ್ಯ]

**ಕಾಡುಮಲ್ಲಿಗೆ**, ಕಾಡಮಲ್ಲಿಗೆ (ನಾ). ಮಲ್ಲಿಗೆಯಲ್ಲಿ ಒಂದು ಬಗೆ; ಅಡವಿಮಲ್ಲಿಗೆ. ೨. (ಆಲಂ). ತನ್ನ ಮಕ್ಕಳನ್ನು ಕಾಡುಮಲ್ಲಿಗೆಯಾಗಿ ಬೆಳೆಸಲುಒಪ್ಪದೆ. . .ಶಹರಕ್ಕೆ ಬಂದಳು (ರಕ್ತಧ್ವ. ೯೩). **ಕಾಡಮಲ್ಲಿಗೆ:** ಪಾದರಿ ಕಾಡಮಲ್ಲಿಗೆ ಮೊಲ್ಲೆ ಹೊಂಬಣ್ಣಕೇದಗೆಯೆಲ್ಲ ಹೂವುಗಳ (ಮೋಹತ. ೧೯-೫೭). [ಕಾಡು$_2$ + ಮಲ್ಲಿಗೆ]

**ಕಾಡುಮಾವು** (ನಾ). ಒಂದು ಬಗೆಯ ಮಾವು: "ಗೂಢಬೀಜಃ – ಕಾಡುಮಾವು" (ಒಷಧಿ. ೫೦). [ಕಾಡು$_2$ + ಮಾವು]

**ಕಾಡುಮಿಗ** (ನಾ). ಅಡವಿಯ ಮೃಗ; ವನ್ಯಮೃಗ: ನಾಡನಾಳುವ ಅರಸು ರೂಢಿಗೀಶ್ವರನಕ್ಕು ಕಾಡುಮಿಗದಂತೆ ಮೊಱೆದುರಿಯಲಾ ನಾಡು ಕಾಡಾಗದಿಹುದೆ (ಸರ್ವಜ್ಞ. ೭೮೪). 'ಕಾಟ್ಮೃಗ' ಪರಾ. [ಕಾಡು$_2$ + ಮಿಗ]

**ಕಾಡುಮಿನಿಕೆಬಳ್ಳಿ** (ನಾ). ಒಂದು ಬಗೆಯ ಬಳ್ಳಿ: (೬). [ಕಾಡು$_2$ + ಮಿನಿಕೆಬಳ್ಳಿ]

**ಕಾಡುಮುರಿದ್ರಾಕ್ಷಿ** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೪೯-೯೮೫). [ಕಾಡು$_2$ + ಮುರಿದ್ರಾಕ್ಷಿ?]

**ಕಾಡುಮೃಗ** (ನಾ). ಕಾಡಿನಲ್ಲಿ ವಾಸಿಸುವ ಮೃಗ: ಹುಲಿ, ಕಿರುಬ, ತೋಳ ಮೊದಲಾದ ಕಾಡುಮೃಗಗಳು ಆ ಕಡೆ ಬಹಳ (ಕಳಹು. ೪). 'ಕಾಟ್ಮೃಗ' ಪರಾ. [ಕಾಡು$_2$ + ಮೃಗ]

**ಕಾಡುಮೆಂತ್ಯ** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೭೦-೧೪೩೩). [ಕಾಡು$_2$ + ಮೆಂತ್ಯ]

**ಕಾಡುಮೆಣಸಿನಗಿಡ** (ನಾ). ಒಂದು ಬಗೆಯ ಮೆಣಸಿನ ಗಿಡ: ಕಾಡುಮೆಣಸಿನ ಗಿಡ, ಕಾಡುಹಾಕುಕಾರೆ (ಮೈಔಗಿ. ೭೫-೧೫೨೮). [ಕಾಡುಮೆಣಸು + ಗಿಡ (< ಗಿಡು)]

**ಕಾಡುಮೆಣಸು** (ನಾ). ಒಂದು ಬಗೆಯ ಮೆಣಸು; ಅಡವಿಮೆಣಸು: "ಚವ್ಯ, ಚವಿಕೆ – ಕಾಡುಮೆಣಸು" (ನಾಚಿರಾ. ೬). 'ಕಾಟ್ಮೆಣಸು' ಪರಾ. [ಕಾಡು$_2$ + ಮೆಣಸು (< ಮೆಱಸು)]

**ಕಾಡುಮೇಡು** (ನಾ). ಕಾಡು ಮತ್ತು ಮೇಡು; ಅಡವಿ ಹಾಗು ಗುಡ್ಡ: ಕಾಡುಮೇಡುಗಳನ್ನೆಲ್ಲಾ ಉತ್ತು ಪೈರು ಬೆಳೆಯುವರು (ಹುಟ್ಟಹ. ೧೫೮). ನೀವು ಯಾವ ಸುಖವೂ ಇಲ್ಲದೆ ಹೇಗೆ ಕಾಡುಮೇಡು ಗಳಲ್ಲಿ ಕೃಶರಾಗಿ ಬಳಲುತ್ತೀರಿ? (ವಚಭಾ. ೧೦೯). [ಕಾಡು$_2$ + ಮೇಡು]

**ಕಾಡುಮೊಲ್ಲೆ** (ನಾ). ಮೊಲ್ಲೆಯಲ್ಲಿ ಒಂದು ಬಗೆ: ಕಾಡುಮೊಲ್ಲೇ ಬೇರು, ಈಶ್ವರೀ ಬೇರು . . . ಇವನ್ನು ಕಷಾಯವಿಟ್ಟು ಕೊಡಲು ಅಶ್ಮರೀ ರೋಗ ಹೋಗುವುದು (ಸಕವೈ. ೪೯೭). [ಕಾಡು$_2$ + ಮೊಲ್ಲೆ]

**ಕಾಡುಯಾಲಕ್ಕಿ** (ನಾ). ಏಲಕ್ಕಿಯಲ್ಲಿ ಒಂದು ಬಗೆ: ದೊಡ್ಡ ಯಾಲಕ್ಕಿ, ಕಾಡುಯಾಲಕ್ಕಿ (ಮೈಔಗಿ. ೬-೯೮). [ಕಾಡು$_2$ + ಯಾಲಕ್ಕಿ (< ಏಲಕ್ಕಿ)]

**ಕಾಡುರಾಗಿಹುಲ್ಲು** (ನಾ). ಒಂದು ಬಗೆಯ ಹುಲ್ಲು: ಕಾಡುರಾಗಿ ಹುಲ್ಲು, ಕೋಣದ ತಲೆ ಹುಲ್ಲು, ಕೋಳೀಕಾಲು ಹುಲ್ಲು (ಮೈಔಗಿ. ೨೮-೫೪೨). [ಕಾಡು$_2$ + ರಾಗಿ + ಹುಲ್ಲು (< ಪುಲ್)]

**ಕಾಡುರಿ** (ನಾ). ಕಾಡುಕಿಚ್ಚು; ದಾವಾನಲ; ಕಾಳ್ಗಿಚ್ಚು: ಅಡರ್ದ ಕಾಡುರಿ ಕಣ್ಗೆಸೆದಿರಲಾ ಗಿರಿ ಪಡಿಯಾದುದಾ ತ್ರಿಣಯನಿಗೆ (ಶ್ರೀಪಾಲ. ೪-೩೭). [ಕಾಡು$_2$ + ಉರಿ$_2$]

**ಕಾಡುರೂಢಿ** (ನಾ). ಒರಟು ಪದ್ಧತಿ; ಅನಾಗರಿಕ ಸಂಪ್ರದಾಯ: ಅಗ್ನಿಪರೀಕ್ಷೆಯಿಂದ ಅಪರಾಧಿಯ ದೋಷವನ್ನು ನಿರ್ಣಯಿಸುವ ಕಾಡು ರೂಢಿಯು ಪ್ರಚಾರದಲ್ಲಿತ್ತು (ಪ್ರಾಚೀಹಿಂ. ೬೪). [ಕಾಡು$_2$ + ರೂಢಿ]

**ಕಾಡುರೋಗ** (ನಾ). ಕೆಟ್ಟರೋಗ; ಉಗ್ರವಾದ ರೋಗ: ನಾಡೀ ನೋಡದೆ ಮದ್ದುಕೊಟ್ಟರೆ ಕಾಡುರೋಗ ಬರುವುದು (ರೂಢಿ). [ಕಾಡು$_2$ + ರೋಗ]

**ಕಾಡುಲವಂಗ** (ನಾ). ಒಂದು ಬಗೆಯ ಸಸ್ಯ: ಚಿಟ್ಟುತಾಂಡ್ರಿಮರ, ಕಾಡುಲವಂಗ, ಕ್ರೂರಮಾವು (ಮೈಔಗಿ. ೫೨-೧೦೩೪). [ಕಾಡು$_2$ + ಲವಂಗ]

**ಕಾಡುಲವಂಗಚೆಕ್ಕೆ** (ನಾ). ದಾಲ್ಚಿನ್ನಿ: ಕಾಡುಲವಂಗಚೆಕ್ಕೆ (ದಾಲ ಚಿನ್ನಿ) – ಇದರ ಗಿಡಗಳಾದರೂ ಎಲ್ಲ ಕಡೆಯಲ್ಲಿ ಹುಟ್ಟುತ್ತವೆ (ಮುಂಬಯಿ. ೫-೨೧೧). [ಕಾಡುಲವಂಗ + ಚೆಕ್ಕೆ]

**ಕಾಡುಲವಣ** (ನಾ). ಒಂದು ಬಗೆಯ ಉಪ್ಪು: "ಕಾಚಂ – ಗೌಜು, ಹುಜ್ಜತ್ತಿ, ಕಾಡುಲವಣ" (ಒಷಧಿ. ೨೮). [ಕಾಡು$_2$ + ಲವಣ]

**ಕಾಡುಲಿಂಬೆ** 'ಕಾಡುನಿಂಬೆ' ನೋ.

**ಕಾಡುವಟ್ಟಿ** (ನಾ). ಒಬ್ಬ ಪಲ್ಲವರಾಜನ ಹೆಸರು: ನಿರ್ವ್ವನೀತರಾ ಕಿಱಿಯಾಮಗನ್ದಿರ್ಕಾಡುವಟ್ಟಿಯರಿನ್ದಮ್ (ಎಕ. VI, ಚಿಕ್ಕಮ. ೫೦-೧; ಸು. 480); ಶ್ರೀಮತ್ ಕೊಙ್ಗೊಣಿ ಮುತ್ತರಸರಾ ಬೆಸದೆ ಕಾಡುವಟ್ಟಿ ದಣ್ಡಱಿದು ಕೊವಳಲದುಳ್ ಏಱಿದೋರ್ (ಎಕ. IX, ಹೊಸಕೋ. ೨೧-೩; ಸು. 750); ಕಾಡುವಟ್ಟಿ ಕೊಳಲಾಜನ ಮುನ್ನಮೆನಿಪ್ಪ ಪೆಂಪಿ ನುಚ್ಚಂಗಿಯ ಕೋಟೆಯಂ (ಎಕ. II, ೫೯-೯೨; 974). [?]

**ಕಾಡುವಾಗಲು**, ಕಾಡಹಾಗಲ, ಕಾಡುಹಾಗಲ, ಕಾಡುಹಾಗಲು (ನಾ). ಹಾಗಲದಲ್ಲಿ ಒಂದು ಬಗೆ: "ಕೂಲಕಾ – ಕಾಡುವಾಗಲು" (ಒಷಧಿ. ೨೮). **ಕಾಡಹಾಗಲ:** "ರುದ್ರಾ – ರುದ್ರಜಡೆ, ರವಿಪತ್ರ, ಕಾಡಹಾಗಲ" (ಒಷಧೀ. ೧೩೯). **ಕಾಡುಹಾಗಲ:** "ಕಾರವೆಲ್ಲಃ, ಕಟಿಲ್ಲಕಃ, ಸುಷವೀ – ೩ ಹಾಗಿಲಗಿಡ, ಈ ೩ ಶಬ್ದಗಳೂ ಹಾಗಲ, ಕಾಡು ಹಾಗಲ, ಗಡ್ಡೆಹಾಗಲ, ಬಂಜಿಹಾಗಲ – ಈ ಎಲ್ಲಾ ಹಾಗಲಕ್ಕೂ ಹೆಸರು ಗಳು" (ಸಿದ್ಧಾಂತಿ. ೧೨೯). **ಕಾಡುಹಾಗಲು:** "ಅಫಲತೊಟ್ಟಿ – ಕಾಡು ಹಾಗಲು" (ಅಕಾನಿ. ೧-೧೩). [ಕಾಡು$_2$ + ಹಾಗಲು (< ಪಾಗಲ್)]

**ಕಾಡುವಾಯ್** (ಕ್ರಿ). ಕಾಡನ್ನು ಹೊಗು; ಅಡವಿ ಸೇರು: ತಿಮಿಳ ವಡೆ ಪಡಲ್ಪಟ್ಟಡಳ್ಳಾಡೆ ಪಾಂಡ್ಯಂ ಸರಿದಂ ಬೆಟ್ಟಱಿದಂ ಕದ್ದುಗಿದು ಮಗರೆಗಂ ಕಾಡವಂ ಕಾಡುವಾಯ್ದನು (ಎಕ. XVI, ಚಿಕ್ಕನಾ. ೭೦-೭; 1235). [ಕಾಡು$_2$ + ಪಾಯ್$_1$]

**ಕಾಡುವಿಜ್ಜ** (ನಾ). ಒಂದು ಬಗೆಯ ಮೂಲಿಕೆ (?): "ಅಕ್ಷಿಪೀಲುಕಾ ಕಾಡುವಿಜ್ಜ" (ಒಷಧಿ. ೭). [ಕಾಡು$_2$ + ?]

**ಕಾಡುವುಸುಮಾನಿಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಮೈಔಗಿ. ೬೯-೧೪೦೧). [ಕಾಡು$_2$ + ಉಸಮಾನಿ (< ಉಸುಮುನಿ) + ಹುಲ್ಲು (< ಪುಲ್)]

**ಕಾಡುವೆಟ್ಟಿ** (ನಾ). ಒಂದು ವಂಶದ ಹೆಸರು: ವಿಕ್ರಮಾದಿತ್ಯರ್ ಕೊಂಗುಣಿ ಅರಸರ್ ಕಾಡುವೆಟ್ಟಿಯ ಮೇಲೆ [ವಿ]ಟ್ಟು (ಮೈಆರಿ. ೧೯೪೧. ೪೫–೨ ; 800 ?) ; ಕಾಡುವೆಟ್ಟಿ ಮುತ್ತರಸನ್ ಕೋಯಿಕೂರ್ಗೆ ಕ್ಲೇಶಕೆ ಬಂದಿರೆ (ಸೌಇಇ. IX–i, ೫–೭ ; 9ನೆಯ ಶತ). [?]

**ಕಾಡುಶಾವಂತಿ** (ನಾ). ಸೇವಂತಿಗೆಯಲ್ಲಿ ಒಂದು ಬಗೆ: ಕಾಡು ಶಾವಂತಿ, ಡಾಂಡಿಲಿಯನ್ ಹೂ (ಮೈಔಗಿ. ೭೩–೧೫೦೪). [ಕಾಡು$_2$ + ಶಾವಂತಿ (< ಸೇವಂತಿ)]

**ಕಾಡುಶುಂಠಿ** (ನಾ). ಒಂದು ಬಗೆಯ ಶುಂಠಿ: ಕಲ್ಲುಶುಂಠಿ, ಕಾಡು ಶುಂಠಿ (ಮೈಔಗಿ. ೭೯–೧೬೨೫). [ಕಾಡು$_2$ + ಶುಂಠಿ]

**ಕಾಡುಸಣ್ಣಪತ್ರಿಗಿಡ** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೫೮–೧೧೭೦). [ಕಾಡು$_2$ + ಸಣ್ಣಪತ್ರಿ + ಗಿಡ (< ಗಿಡು)]

**ಕಾಡುಸಂಪಿಗೆ**, ಕಾಡಸಂಪಗೆ (ನಾ). ಸಂಪಗೆಯಲ್ಲಿ ಒಂದು ಬಗೆ; ಗೋಳಸಂಪಿಕೆ (ಕರಾ): (ಕಿ). **ಕಾಡಸಂಪಗೆ**: "ವನಜ : –ಕಾಡ ಸಂಪಗೆ, ಮಾದಲ, ತೂಬರ" (ಓಷಧಿ. ೧೪೬). [ಕಾಡು$_2$ + ಸಂಪಿಗೆ (< ಸಂಪಗೆ)]

**ಕಾಡುಸಬ್ಬಸಿಗೆ**, ಕಾಡಸಬ್ಬಸಿಗೆ, ಕಾಡಸಬ್ಬಸೀಗೆ, ಕಾಡುಸಬ್ಬಸೀಗೆ (ನಾ). ಸಬ್ಬಸಿಗೆಯಲ್ಲಿ ಒಂದು ಬಗೆ: ಕಾಡುಸಬ್ಬಸಿಗೆ, ಚತುರಾಶಿಗಿಡ (ಮೈಔಗಿ. ೩೮–೭೫೩). **ಕಾಡಸಬ್ಬಸಿಗೆ**: "ಛತ್ರಾಂಕಿ – ಕಾಡಸಬ್ಬಸಿಗೆ" (ಓಷಧಿ. ೫೮). **ಕಾಡಸಬ್ಬಸೀಗೆ**: "ತೋಲಪರ್ಣೀ – ಕಾಡಸಬ್ಬಸೀಗೆ" (ಓಷಧಿ. ೭೩). **ಕಾಡುಸಬ್ಬಸೀಗೆ**: "ಶತಪುಷ್ಪಾ, ಸಿತಛತ್ರಾ, ಅತಿಛತ್ರಾ ಮಧುರಾಮಿಸಿಃ ಅವಾಕ್ಪುಷ್ಪೀ, ಕಾರವೀ – ೭ ಕಾಡುಸಬ್ಬಸೀಗೆ ಹೆಸರು" (ಸಿದ್ಧಾಂತಿ. ೧೨೯). [ಕಾಡು$_2$ + ಸಬ್ಬಸಿಗೆ]

**ಕಾಡುಸಬ್ಬಸೀಗೆ** 'ಕಾಡುಸಬ್ಬಸಿಗೆ' ನೋ.

**ಕಾಡುಸಾಮೆ**, ಕಾಡಸಾವೆ (ನಾ). ಒಂದು ಬಗೆಯ ಹುಲ್ಲು: ಕಾಡು ಕರೀಸಾಮೆ ಹುಲ್ಲು, ಕಾಡುಸಾಮೆ, ಕೆಂಪು ಸಣ್ಣಹಂಚಿ (ಮೈಔಗಿ. ೫೯–೧೧೯೨). **ಕಾಡಸಾವೆ**: "ಮುಸಲಿಕ – ಉಡುಗು, ಕಾಡಸಾವೆ" (ಓಷಧಿ. ೧೨೬). [ಕಾಡು$_2$ + ಸಾಮೆ$_2$]

**ಕಾಡುಸಾಸಿವೆ** (ನಾ). ಸಾಸಿವೆಯಲ್ಲಿ ಒಂದು ಬಗೆ: ಕಾಡುಸಾಸಿವೆ, ನಾಯಿಸಾಸಿವೆ (ಮೈಔಗಿ. ೨೨–೪೧೫). [ಕಾಡು$_2$ + ಸಾಸಿವೆ]

**ಕಾಡುಸೀಗೆ** (ನಾ). ಒಂದು ಬಗೆಯ ಸೀಗೆಮರ: ಕೆಂಪುಸೀಗೆ, ಕಾಡು ಸೀಗೆ, ಅಂತಿರಿಕೆ, ಚಂಡೆಮುಳ್ಳು (ಮೈಔಗಿ. ೧–೯). [ಕಾಡು$_2$ + ಸೀಗೆ]

**ಕಾಡುಸುಂಡೆ** (ನಾ). ಒಂದು ಬಗೆಯ ಗಿಡ: ಸೌಡಂಗೀಗಿಡ, ಕಾಡು ಸುಂಡೆ (ಮೈಔಗಿ. ೭೧–೧೪೫೦). [ಕಾಡು$_2$ + ಸುಂಡೆ]

**ಕಾಡುಸುವರ್ಣಗಡ್ಡೆ** (ನಾ). ಒಂದು ಬಗೆಯ ಸುವರ್ಣ ಗಡ್ಡೆ: ಕಾಡುಸುವರ್ಣಗಡ್ಡೆ, ಹಾವುಮರಿಗಿಡ (ಮೈಔಗಿ. ೯–೧೪೬). [ಕಾಡು$_2$ + ಸುವರ್ಣಗಡ್ಡೆ]

**ಕಾಡುಸೂರಣ**, ಕಾಡಸೂರಣ (ನಾ). ಸೂರಣಗಡ್ಡೆಯಲ್ಲಿ ಒಂದು ಬಗೆ: "ಅವನಿಕಃ – ಕಾಡುಸೂರಣ" (ಓಷಧಿ. ೬). **ಕಾಡಸೂರಣ**: "ಅರಣ್ಯಸೂರಣಃ – ಕಾಡಸೂರಣ" (ಓಷಧಿ. ೯); ಕಾಡಸೂರಣ, ಉದ್ದು, ಹಿಂಡಿ . . . ಮೊದಲಾದವನ್ನು ಮೂಲರೋಗದಲ್ಲಿ ಬಿಡುವದು (ವೈದ್ಯಸಾ. I, ೧೯೮). [ಕಾಡು$_2$ + ಸೂರಣ]

**ಕಾಡುಸೆಂಬೆ** (ನಾ). ಒಂದು ಬಗೆಯ ಮೂಲಿಕೆ: "ಅಗಮುಂ – ಕಾಡು ಸೆಂಬೆ" (ಓಷಧಿ. ೧೦). [ಕಾಡು$_2$ + ಸೆಂಬೆ]

**ಕಾಡುಸೆಣಬು** (ನಾ). ಒಂದು ಬಗೆಯ ಸಸ್ಯ: ಚುಂಚಲಿಗಿಡ, ಕಾಡು ಸೆಣಬು (ಮೈಔಗಿ. ೨೪–೪೪೯). [ಕಾಡು$_2$ + ಸೆಣಬು]

**ಕಾಡುಸೊಳ್ಳೆ** (ನಾ). ಸೊಳ್ಳೆಯಲ್ಲಿ ಒಂದು ಬಗೆ: "ದಂಶೀ – ಅಲ್ಪಾತಜ್ಜಾತಿಃ ಸ್ಯಾತ್ ಚಿಕ್ಕ ಕಾಡುನೊಣ, ಕಾಡುಸೊಳ್ಳೆ" (ಸಿದ್ಧಾಂತಿ. ೧೪೧). [ಕಾಡು$_2$ + ಸೊಳ್ಳೆ$_2$]

**ಕಾಡುಸೋಂಪು** (ನಾ). ಒಂದು ಬಗೆಯ ಸೋಂಪು,—ಓಮು: ಕಾಡು ಓಮು, ಕಾಡುಸೋಂಪು (ಮೈಔಗಿ. ೬೨–೧೨೪೫). [ಕಾಡು$_2$ + ಸೋಂಪು]

**ಕಾಡುಸೋನಾಮುಖಿ** (ನಾ). ಒಂದು ಬಗೆಯ ಮೂಲಿಕೆ: (ಮೈಔಗಿ. ೧೮–೩೩೫). [ಕಾಡು$_2$ + ಸೋನಾಮುಖಿ]

**ಕಾಡುಸೌತೆ**, ಕಾಡಸೌತೆ (ನಾ). ಸೌತೆಯಲ್ಲಿ ಒಂದು ಬಗೆ: "ಉರ್ವಾರುಕ ಶಬ್ದವು ಬಣ್ಣ ಸೌತೇಕಾಯಿಗೂ, ಕರ್ಕಟೀಶಬ್ದ ಕಾಡು ಸೌತೇಕಾಯಿಗೂ ಹೆಸರುಗಳು" (ಸಿದ್ಧಾಂತಿ. ೧೩೦). **ಕಾಡಸೌತೆ**: "ಕಪಿಲಾಕ್ಷಿ – ಕಾಡಸೌತೆ, ಕೆಂಪಿನ ಶಿಂಶುಪಾ" (ಓಷಧಿ. ೨೫). [ಕಾಡು$_2$ + ಸೌತೆ (< ಸವುಂತೆ)]

**ಕಾಡುಸ್ಥಿತಿ** (ನಾ). ಒರಟು; ಅನಾಗರಿಕತ್ವ; ಅಸಂಸ್ಕೃತ ಸ್ಥಿತಿ: ಮಿಕ್ಕ ಭಾಷೆಗಳೆಲ್ಲ ಇನ್ನೂ ಕಾಡುಸ್ಥಿತಿಯಲ್ಲಿಯೇ ಉಳಿದಿವೆ (ಮುಂಬಯಿ. ೫–೨೩೯). [ಕಾಡು$_2$ + ಸ್ಥಿತಿ]

**ಕಾಡುಹಂಚಿಕಡ್ಡಿ** (ನಾ). ಒಂದು ಬಗೆಯ ಹುಲ್ಲು: ಬಿಳಿ ಉನುಗದ ಹುಲ್ಲು, ಕಾಡುಹಂಚೀಕಡ್ಡಿ (ಮೈಔಗಿ. ೯–೧೪೯). [ಕಾಡು$_2$ + ಹಂಚಿ + ಕಡ್ಡಿ]

**ಕಾಡುಹಂಚಿಹುಲ್ಲು** (ನಾ). = ಕಾಡುಹಂಚೀಕಡ್ಡಿ: ಸಣ್ಣಕರೀಕಾಜಿ ಹುಲ್ಲು, ಅಕ್ಕುಹುಲ್ಲು, ಕಾಡುಹಂಚೀಹುಲ್ಲು, ಕರೀಹಂಚೀಹುಲ್ಲು (ಮೈಔಗಿ. ೮–೧೩೩); "ಭೂಸ್ತೃಣ – ಕಾಡುಹಂಚಿಯ ಹುಲ್ಲು" (ಓಷಧಿ. ೧೧೨). [ಕಾಡುಹಂಚಿ + ಹುಲ್ಲು (< ಪುಲ್)]

**ಕಾಡುಹ** (ನಾ). ಕಾಡುವಿಕೆ; ಕಾಟ; ಪೀಡೆ: "ಅಭಿಯೋಗ, ಅಧಿಗ್ರಹ – ಇದಿರೆದ್ದು ಕಾಡುಹ" (ನಾಚಿರಾ. ಕಿ.). [ಕಾಡು$_2$ + –ಹ$_2$]

**ಕಾಡುಹಂದಿ** 'ಕಾಡುಪಂದಿ' ನೋ.

**ಕಾಡುಹಂಬುತಾವರೆ** (ನಾ). ಒಂದು ಬಗೆಯ ಸಸ್ಯ: (ಮೈಔಗಿ, ೭೦–೧೪೩೯). [ಕಾಡು$_2$ + ಹಂಬು + ತಾವರೆ]

**ಕಾಡುಹತ್ತಿ** (ನಾ). ಅಡವಿಯ ಹತ್ತಿ; ಕಾಡಿನಲ್ಲಿ ಬೆಳೆವ ಹತ್ತಿ: "ಭಾರದ್ವಾಜಿ, ವನ್ಯಾಸಾ – ಅಡವೀಹತ್ತೀಗಿಡ, ಕಾಡುಹತ್ತೀಗಿಡ, ಕಾಡು ಅರಳೀಗಿಡ" (ಸಿದ್ಧಾಂತಿ. ೧೨೧). 'ಕಾಟ್ಪೆಟ್ಟಿ' ಪರಾ. [ಕಾಡು$_2$ + ಹತ್ತಿ (< ಪಟ್ಟಿ)]

**ಕಾಡುಹರಟೆ** (ನಾ). ಕೆಲಸಕ್ಕೆ ಬಾರದ ಮಾತು; ಗೊಡ್ಡುಹರಟೆ; ಹಾಳುಹರಟೆ: ಬೇಸಗೆಯ ದಿನವೆಲ್ಲಾ ಅಲ್ಲಿ ಮರದ ನೆರಳಿನಲ್ಲಿ ಕೂತು ಹಳ್ಳಿಯ ಜನರ ವಿಷಯ ಕಾಡುಹರಟೆ (ಯೋಧವು. ೭೭); ಕಾಡುಹರಟೆ ಹರಟುತ್ತ, ಗಂಡನ ಬದುಕನ್ನು ವ್ಯರ್ಥಗೊಳಿಸುವವಳು ಯಜಮಾನಿತಿಯಂತಿರುವ ಹೆಂಡತಿ (ರಾಮರಾ. ೨೦). [ಕಾಡು$_2$ + ಹರಟೆ]

**ಕಾಡುಹರಳು** (ನಾ). ಒಂದು ಬಗೆಯ ಹರಳುಗಿಡ: ತುರುಕುಹರಳು, ಮರಹರಳು, ಕಾಡುಹರಳು (ಮೈಔಗಿ. ೪೭–೯೪೩). [ಕಾಡು$_2$ + ಹರಳು]

**ಕಾಡುಹಾಕುಕಾರೆ**, ಕಾಡಹಾಕುಕಾರೆ (ನಾ). ಒಂದು ಬಗೆಯ ಸಸ್ಯ: ಕಾಡುಮೆಣಸಿನ ಗಿಡ, ಕಾಡುಹಾಕುಕಾರೆ (ಮೈಔಗಿ. ೭೫–೧೫೨೮). **ಕಾಡಹಾಕುಕಾರೆ**: (ಕಿ). [ಕಾಡು$_2$ + ಹಾಕುಕಾರೆ]

**ಕಾಡುಹಾಗಲ** 'ಕಾಡುವಾಗಲು' ನೋ.

**ಕಾಡುಹಾಗಲು** 'ಕಾಡುಹಾಗಲ' ನೋ.

**ಕಾಡುಹಾರಕಹುಲ್ಲು** (ನಾ). ಒಂದು ಬಗೆಯ ಹುಲ್ಲು: ಊದಲು, ಕಾಡುಹಾರಕಹುಲ್ಲು (ಮೈಔಗಿ. ೩೨–೬೨೧). [ಕಾಡು$_2$ + ಹಾರಕ + ಹುಲ್ಲು (< ಪುಲ್)]

**ಕಾಡುಹಿಪ್ಪೆ** 'ಕಾಡಿಪ್ಪೆ' ನೋ.

**ಕಾಡುಹೀರೆ** (ನಾ). ಕಾಡುಜಾತಿಯ ಹೀರೆ; ಕಹಿಹೀರೆ: "ಚೂರ್ಣಫಲಾ – ಕಾಡುಹೀರೆ" (ಓಷಧಿ. ೫೮); ಕಾಡುಹೀರೆ, ಕಹಿಸೋರೆ, ನಾಗದಾಳಿಬಳ್ಳಿ (ಮೈಔಗಿ. ೫೧-೧೦೨೫). 'ಕಾಟ್ಪೀರೆ' ಪರಾ.
[ಕಾಡು$_2$ + ಹೀರೆ (< ಪೀರೆ)]

**ಕಾಡುಹುರುಳಿ, ಕಾಡಹುರುಳಿ** (ನಾ). ಒಂದು ಬಗೆಯ ಸಸ್ಯ: ಕಾಡುಹುರುಳಿ, ನಾಗತಗರೆ, ಟೆಲಿಗ್ರಾಫ್ ಗಿಡ (ಮೈಔಗಿ. ೩೦-೫೭೨); "ಛತ್ರ – ಭುಜಪತ್ರ, ಕಾಡುಹುರುಳಿ" (ಓಷಧಿ. ೫೮). **ಕಾಡಹುರುಳಿ**: "ಕಟುತಿಕ್ತಾ – ಕಾಡಹುರುಳಿ" (ಓಷಧಿ. ೨೩).
[ಕಾಡು$_2$ + ಹುರುಳಿ]

**ಕಾಡುಹುಳಿಹೀರೆ, ಕಾಡಹುಳಿಹೀರೆ** (ನಾ). ಒಂದು ಬಗೆಯ ಹೀರೆ: "ಕರ್ಕಟಶೃಂಗಿಕಾ – ಕಾಡುಹುಳಿಹೀರೆ" (ಓಷಧಿ. ೨೭). **ಕಾಡಹುಳಿಹೀರೆ**: "ಮನಶ್ಶಿಲಾ – ಮಣಶಿಲೆ, ಕಾಡಹುಳಿಹೀರೆ" (ಓಷಧಿ. ೧೧೯).
[ಕಾಡು$_2$+ ಹುಳಿ$_2$ (< ಪುಳಿ) + ಹೀರೆ (< ಪೀರೆ)]

**ಕಾಡುಹುಳ್ಳಿ** (ನಾ). ಒಂದು ಬಗೆಯ ಬಳ್ಳಿ: ಶಂಕಪುಷ್ಪಬಳ್ಳಿ: (ಕಿ).
[ಕಾಡು$_2$ + ಹುಳ್ಳಿ (< ಪುಳ್ಳಿ)]

**ಕಾಡುಹೂವರಸಿ** (ನಾ). ಒಂದು ಬಗೆಯ ಮರ: (ಮೈಔಗಿ. ೬೬-೧೩೪೭). [ಕಾಡು$_2$ + ಹೂವರಸಿ (< ಹೂವರಸೆ)]

**ಕಾಡುಹೆಸರು, ಕಾಡಹೆಸರು** (ನಾ). ಹೆಸರುಕಾಳಿನಲ್ಲಿ ಒಂದು ಬಗೆ; ಅಡವಿಯ ಹೆಸರು: "ಮಕುಷ್ಟಕಃ, ಮಯುಷ್ಟಕಃ, ವನಮುದ್ಗಃ – ಕಾಡುಹೆಸರು ಕಾಳು" (ಸಿದ್ಧಾಂತಿ. ೨೩೯). **ಕಾಡಹೆಸರು**: "ಅರಣ್ಯಮುದ್ಗಃ – ಕಾಡಹೆಸರು" (ಓಷಧಿ. ೯). ಕಾಡಹೆಸರು, ಭದ್ರಮುಸ್ತೆ . . . ಜೀರಿಗೆ ಇವಂ ಸಮಭಾಗ ಕಷಾಯವಿಕ್ಕಿ ಕೊಡಲು ಪೈತ್ಯಜ್ವರವು ಗುಣವಾಗುವುದು (ಸಕವೈ. ೮೦). [ಕಾಡು$_2$ + ಹೆಸರು (< ಪೆಸಱ್)]

**ಕಾಡುಹೋರೆ** (ನಾ). ಕಾಡಿನಲ್ಲಿ ಮಾಡುವ ಕೆಲಸ; ಒರಟಾದ ಕೆಲಸ: ನಾವು ನಮ್ಮ ಕಾಡುಹೋರೆಯನ್ನು ಬಿಟ್ಟು ಒಕ್ಕಲತನವನ್ನು ಕೈಕೊಂಡ ಹೊತ್ತು (ಮುಂಬಯಿ. ೬-೨೮೮).
[ಕಾಡು$_2$ + ಹೋರೆ]

**ಕಾಡುಳ್ಳಿ** (ನಾ). ಒಂದು ಬಗೆಯ ಈರುಳ್ಳಿ: "ಕೃಷ್ಣಗಂಧಾ – ಕಾಡುಳ್ಳಿ" (ಓಷಧಿ. ೩೯). [ಕಾಡು$_2$+ ಉಳ್ಳಿ$_1$]

**ಕಾಡೆ$_1$** 'ಕಾಟೆ' ನೋ.

**ಕಾಡೆ$_2$** (ನಾ). ಒಂದು ಬಗೆಯ ಪಕ್ಷಿ; ಲಾವಕ್ಕಿ: ಕಾಗೆ ಕನ್ನವಿಲು ಕಕ್ಕಱ ಕಾಡೆ ಪಾರಿವ . . . ಹಸುಬಗಳನು ಸಾಳ್ವನಾಗಳಿರದೆ ಕೆಡಪಿದುದು (ಕುರಾಸಾಂ. ೨೭-೮೫).
[ದೇ. ‖ ತಮಿ. ಕಾಡೈ; ಮಲ. ಕಾಡ; ತುಳು. ಕಾಡೆ]

**ಕಾಡೆ$_3$** (ನಾ). ಒಂದು ಬಗೆಯ ಸಸ್ಯ: "ನಿದ್ರಾಲುಃ – ಬದನೆ, ಕಾಡೆ, ಕಗ್ಗೊರಲೆ" (ಓಷಧಿ. ೮೬). [?]

**ಕಾಡೆ$_4$** (ನಾ). ದೇಟು; ನಾಳ; ಕಾಂಡ: (ಕಿ). [< ಸಂ. ಕಾಂಡ]

**ಕಾಡೆ$_5$, ಕಾಢೆ** (ನಾ). (ಔಷಧಿಗಾಗಿ ವನಸ್ಪತಿ ಮೊದಲಾದುವನ್ನು ಕುದಿಸಿ) ಅರ್ಕ ತೆಗೆದ ನೀರು; ಕಷಾಯ: ಅಫೀಮಿನ ಗುಳಿಗೆಗಳನ್ನು ಸೇವಿಸಿ ಕುಸುಂಬೆಯ ಕಾಡೆಯನ್ನು ಕುಡಿದು ಹುರುಪಾದರು (ಬೆಳದೀ.೨೪); ಕಪಾಟನಲ್ಲಿಯ ಸೋನಾಮುಖಿ ಸೊಪ್ಪಿನಿಂದ ಕಾಡೆ ಮಾಡಿಕೊಡಿರಿ (ಸ್ತ್ರೀಶಿಚಿ. ೨೭೫). **ಕಾಢೆ**: ನೀನು ತುಳಸೀ ಕಾಢೆ ಕುಡಿಯೋದಿಲ್ಲ? (ರಕ್ತಧ್ವ. ೧೬೯); ಅಲ್ಲ್ಯಾರು ನಿನಗ ನಿನ್ನ ಪಿತ್ತದ ಕಾಢೆ ಮಾಡಿಕೊಡವರು? . . . ಮೊದಲ ಕಾಢೆ ಮಾಡಿ ತರಸ್ತೀನಿ (ಹೊಸಸಂ. ೧೨೨).
[← ಮರಾ. ಕಾಢಾ]

**ಕಾಡೆತ್ತು** (ನಾ). ಅಡವಿಯ ಎತ್ತು; ಕಾಡಿನ ಗೂಳಿ: ಕಾಡೆತ್ತುಗಳು ಬೇಸಗೆ ಕಾಲದಿಂದ ಹಿಡಿದು . . . ಇವರ ಮೇಲೆ ಬೀಳುತ್ತಿರುತ್ತವೆ (ಪ್ರವಾಇ. I, ೨೦). [ಕಾಡು$_2$ + ಎತ್ತು$_2$ (< ಎಱ್ತು)]

**ಕಾಡೆಮುಗಾವುಂಡ** (ನಾ). ಒಬ್ಬಾತನ ಹೆಸರು: ಶ್ರೀ ಕೊಣ್ಣಲಗಾಮುಣ್ಡರ ಮಗಳನ್ನಾರಿಯರ್ ಕಾಡೆಮುಗಾಮುಣ್ಡಙ್ಗೆ ಕೊಟ್ಟರ್ (ಎಕ. X, ಶ್ರೀನಿವಾ. ೨೫-೨; 950). [ಕಾಡೆಮು$_0$ + ಗಾವುಂಡ]

**ಕಾಡೆಮ್ಮೆ** 'ಕಾಡೆಮ್ಮೆ' ನೋ.

**ಕಾಡೆಮ್ಮೆವೋರಿ** (ನಾ). ಕಾಡುಕೋಣ: ಒಂದೊಂದೆಡೆಯೊಳರ್ಚಿಸಿದ ಕಾಡೆಮ್ಮೆವೋರಿಗಳ ಕಣ್ಗಳಂತಿರ್ದ ರಕ್ತೋತ್ಪಲಂಗಳುಮಂ (ಕಾದಂಉ. ೨೬೯). [ಕಾಡು$_2$ + ಎಮ್ಮೆವೋರಿ (< ಎರ್ಮೆವೋರಿ)]

**ಕಾಡೆರಳೆ** (ನಾ). ಕಾಡುಜಿಂಕೆ: ವಾಜಿಯನಿಳಿದನುಪಾದ ಕಾಡೆರಳೆಯ ಕಾಂತನಂತೆ (ಮೋಹತ. ೧೯-೩೧).
[ಕಾಡು$_2$ + ಎರಳೆ (< ಎರಲೆ)]

**ಕಾಡೆರ್ಮೆ, ಕಾಡೆಮ್ಮೆ** (ನಾ). ಕಾಡಿನ ಎಮ್ಮೆ: ವನಲಕ್ಷ್ಮಿಯ ಗೋಮಂಡಲದಂತಿರ್ದ ಕಡವಿನ ಕಾಡೆರ್ಮೆಯ ಪಿಂಡುಗಳಿಂದಂ (ಪಂಪಭಾ. ೭-೨೯ ವ); ಪಟ್ಟಿರ್ದವು . . . ಮೆಲ್ಕೊತ್ತುತ್ತೆ ಕಾಡೆರ್ಮೆಗಳ್ (ಜಗವಿ. ೪-೨೫); ಕೋಡೆಕೊಂಡುವು ಮಿಕ್ಕನಿಱಿವುತುಂ ಕಾಡೆರ್ಮೆ (ಅನಂಪು. ೯-೧೬ ರಗಳೆ). **ಕಾಡೆಮ್ಮೆ**: ತಡಂಮೆಟ್ಟಿ ಪರಿವ ಕಡವಿನ ಕಾಡೆಮ್ಮೆಯ ಮರೆಯ ಪಿಂಡುಗಳುಮಂ (ಪಂಪಭಾ. ೫-೪೮ ವ); ದಾಯಾದನಂತೆ ಮಲೆವ ಕಾಡೆಮ್ಮೆಗಳಿಂ (ಧರ್ಮಾಮೃ. ೧೩-೧೦೦); ಕಾಡೆಮ್ಮೆಯ ಕೋಡು ವರಹದಂತಿಯ ದಾಡೆ . . . ಭೇರುಂಡನ ರೂಢ ಪೆರ್ಗಱಿಯಿತ್ತರೊಲಿದು (ಮೋಹತ. ೧೯-೭೪); ಮೊಲ ಹುಲ್ಲೆ ಕಾಡೆಮ್ಮೆ ಚಮರಿಗಳ್ಮೊದಲಾದ ಪಲವು ಮೃಗಜಾತಿಯಂ (ಜೈಮಿಭಾ. ೨೮-೫೨).
[ಕಾಡು$_2$ + ಎರ್ಮೆ]

**ಕಾಡೆಹಕ್ಕಿ** (ನಾ).= ಕಾಡೆ$_2$: "ವಾರ್ತಿಕಃ – ಕಾಡೆಹಕ್ಕಿ" (ಓಷಧಿ. ೧೫೦).
[ಕಾಡೆ$_2$ + ಹಕ್ಕಿ (< ಪಕ್ಕಿ$_1$)]

**ಕಾಡೆಳ್**, ಕಾಡುಎಳ್ಳು, ಕಾಡೆಳ್ಳು (ನಾ). ಎಳ್ಳಿನಲ್ಲಿ ಒಂದು ಬಗೆ: ಸೂಳೆಯುಂ ಸಜ್ಜನಮುಂ ಕಾಡೆಳ್ಳು ಮೂರೆಳ್ಳುಮೆಂತು ಲೋಕದೊಳೊಳವು . . . ಅಂತು ತಿರುಕರು ಸಿರಿವಂತರುಮೊಳರ್ (ಧರ್ಮಾಮೃ. ೯-೭೮). **ಕಾಡುಎಳ್ಳು**: (ಮೈಔಗಿ. ೬೯-೧೪೧೩). **ಕಾಡೆಳ್ಳು**: "ಜರ್ತಿಳಮೆಂಬುದು ಕಾಡೆಳ್ಳು" (ಹಲಾಯು. ೯೫-೪೨೯). [ಕಾಡು$_2$ + ಎಳ್]

**ಕಾಡೆಳ್ಳು** 'ಕಾಡೆಳ್' ನೋ.

**ಕಾಡೆಱುಕು** (ನಾ). (?): ನೊಕ್ಕ ಊರೊಳೆ ಆಗ್ಗಡಿ ಕಳೊಸಕೊಟ್ಟ ನೆಲ ತೆನೆನ್ದಕ ಕಾಡೆಱುಕು ಸಾಕ್ಷಿ ಕೂಡಲೂರ್ ಪೊಜ್ಜುಗಲರು ಎಳ್ಮಡಿಯರು ಬದಿರಿಯರುವರ್ (ಮೈಆರಿ. ೧೯೦೬, ೧೩-೮; 726). [?]

**ಕಾಡೇಗೂಡೆ** (ನಾ). ಕಾಡೆ ತುಂಬಿದ ಗೂಡೆ, —ಕುಕ್ಕೆ (?): ಕಣ್ಣು ಮುಚ್ಚಿ ಕಾಡೇಗೂಡೆ ಉದ್ದಿನ ಮೂಟೆ ಉರುಳೇಹೋಯ್ತು ನವರ್‌ಹಕ್ಕಿ ಬಿಟ್ನೋ ಬಿಟ್ಟೆ (ಹುಟ್ಟಿಹ. ೧೨೬). [ಕಾಡೆ ? + ಗೂಡೆ ?]

**ಕಾಡೇಱು** (ನಾ). ಒಂದು ಸ್ಥಳದ ಹೆಸರು: ಸಾಲತ್ತ ಕಾಡೇಱಿನ ಪೇರೊಟ್ಟಿವಿ ಪಗನ್ತೆವಳ್ಳಮೆ ಗೋಸನ್ತನೆ ಕೊಂಡಿನ್ದಗೆಱೆ (ಎಕ. IV, ಎಡತೊ. ೬೦-೭೫; 890). [?]

**ಕಾಡೊಡಮೆ** (ನಾ). ಕಾಡಿನ ಸಂಪತ್ತು: ಕಾಡೊಡಮೆ ವೇಳೆ ಸಲೆ ಕೆಯ್ಗೂಡಿದುದೆನೆ ನೆಲದೊಳಿರ್ದ ನೆಲ್ಲಿಯ ಕಾಯುಂ ನೋಡ ನೆಲ ಮುಟ್ಟಲೞ್ತಿಯೊಳಾಡುವೊಡೀ ದೆವಸಮಲ್ತೆ ಬೇಂಟೆಯ ದೆವಸಂ (ಪಂಪಭಾ. ೫-೪೦); "ಕಾಡಿನ ವಸ್ತು" (ಪಂಪದೀ. ೧೯೩).
[ಕಾಡು$_2$ + ಒಡಮೆ]

**ಕಾಡೊಡೆತನ** (ನಾ). ಕಾಡಿನ ಒಡೆತನ: ಪಡೆಯೆ ಕಾಡೊಡೆತನವನೆಂಬ ನುಡಿಯರಳಿ ಸಿಡಿಯೆ ನಾಲಗೆಯಿಂದ (ಕಾಲೂರ. ೧೭೦–೩೭೯). [ಕಾಡು$_2$ + ಒಡೆತನ]

**ಕಾಡೊಡೆಯ** (ನಾ). ೧. ಕಾಡಿನ ದೊರೆ. ೨. ಬೇಡರ ಅರಸು: ಬಂದರನೇಕರ್ಬಳಸಂದು ಕಾಡೊಡೆಯನಂ ಕಾಂತಾರದೊಳ್ ಲುಬ್ಧಕರ್ (ಕಾದಂಪೂ. ೧೬೯); ಕಾಡೊಡೆಯನಂ ಜಡಿದು ನುಡಿದಂತುಂ ಸಾವೆನಲ್ಲದೆ ಕಾವುದಂ ಮಾಣೆನಾಂ ವ್ರತಮನೆಂಬುದುಂ (ವರ್ಧಪು. ೧೬–೬೦ ವ); ಅಡವಿಗಳೊಳ್ ಕಾಡೊಡೆಯರಂತೆ ಬಿರಯಿಗಳೆಂಬ ಮಿಗಂಗಳಂ ಬೇಂಟೆಯನಾಡಿಯುಂ (ಕಬ್ಬಕಾ. ೧೨೫) [ಕಾಡು$_2$ + ಒಡೆಯ$_1$]

**ಕಾಡೊಳ್ಪು** (ನಾ). ಕಾಡಿನ ಒಳ್ಪು; ಅರಣ್ಯ ಸೌಂದರ್ಯ: ಸೆರಪಿನಿಂ ಬೀಳ್ಕುಡುವ ಕಾಡೊಳ್ಪನುಂಡಂ (ಕಾಲೂರ.೬೦–೯೯). [ಕಾಡು$_2$+ ಒಳ್ಪು]

**ಕಾಡೋಜೆ** (ನಾ). ಒರಟುರೀತಿ; ಅನಾಗರಿಕವಾದ ಕ್ರಮ: ರಾಜಸಭೆಯಲಿ ಕುಹಕರಂ ಕೂಡಿಕೊಂಡೆಮ್ಮ ಜೂಜಿನೊಳ್ ಸೋಲಿಸಿವಸುಂಧರೆಯ ಕೊಂಡು ಕಾಡೋಜ[ಜೆ] ಯನ್ನೆನದರಸಿಯಂನೆಳಸಿ ವಸನಂಗಳಂ ಸುಲಿಸಿ (ತುರಂಗ. ೭೬–೪). [ಕಾಡು$_2$+ ಓಜೆ$_1$]

**ಕಾಡ್ಕೋಣ** 'ಕಾಡ್ಗೋಣ' ನೋ.

**ಕಾಡ್ಗಿಚ್ಚು, ಕಾಡುಕಿಚ್ಚು, ಕಾಡುಗಿಚ್ಚು** (ನಾ). ಕಾಡಿನ ಬೆಂಕಿ; ದಾವಾನಲ: ನಮ್ಮನು ಬಟ್ಟಬಯಲೊಳಗಿರಿಸಿದ್ದೈ ಹೊಗಗುಟ್ಟಿದ್ದೈ ಕಾಡ್ಗಿ[ಪಾಠಾಂ. ಳ್ಗಿ]ಚ್ಚಿನಲಿ (ತೊರರಾ. ೨–೩–೫೭); ನೋಡುತಲಿ ಕಾಡ್ಗಿಚ್ಚಿನಧಟವ ರೂಢಿಗೊಡೆಯಾ ಸತಿಯೊಳೊರೆದನು (ಹಮುಚ. ೬೬). **ಕಾಡುಕಿಚ್ಚು**: "ದವಃ, ದಾವಃ – ೨ ಕಾಡು, ಕಾಡುಕಿಚ್ಚು" (ಸಿದ್ಧಾಂತಿ. ೩೬೪). **ಕಾಡುಗಿಚ್ಚು**: ಕಾಡುಗಿಚ್ಚಿದ್ದರೆ ಅಡವಿಯ ಗುಜು(ಅವಚಂ.೨೧೪–೯೬೬); ಕಾಳಕೂಟವೊ ಕಾಡು [ಪಾಠಾಂ. ಳ]ಗಿಚ್ಚೋ ಕಾಲನೋ ಯಿದಕಂಜಲೇತಕೆ (ಬಸವು. ೫೬–೨೭). 'ಕಾಟ್ಕಿಚ್ಚು' ಪರಾ. [ಕಾಡು$_2$ + ಕಿಚ್ಚು]

**ಕಾಡ್ಗೋಣ, ಕಾಡುಕೋಣ, ಕಾಡ್ಕೋಣ** (ನಾ). ಅಡವಿಯ ಕೋಣ; ವನ ಮಹಿಷ: ಸೊಕ್ಕಿದೆಕ್ಕಲ ಕಾಡಾನೆ ಮಲೆ ಕಾಡ್ಗೋ[ಪಾಠಾಂ. ಡ್ಕೋ]ಣನಾಡುಂಬೊಲನ (ತೊರರಾ. ೩–೩–೫); ಕರಿ ಕಾಡ್ಕೋಣ ಜಂಬುಕ ಕಾನನಮೊಪ್ಪಿದುದು (ಜೀವಂಸಾಂ. ೨೦–೫); ಕರಿಯ ಕಾಡ್ಗೋಣಗಳು ಸಾರಗ ಉರಗ ಕಡವೆಗಳು (ಹಮುಚ. ೬೪). **ಕಾಡುಕೋಣ**: "ಲುಲಾಯಃ, ಮಹಿಷಃ, ವಾಹದ್ವಿಷತ್, ಕಾಸರಃ, ಸೈರಿಭಃ, ೫ ಕಾಡುಕೋಣದ ಹೆಸರುಗಳು" (ಸಿದ್ಧಾಂತಿ. ೧೩೪). **ಕಾಡ್ಕೋಣ**: ಅಬ್ಬರದ ಹುಲಿ ಹರ್ಯಕ್ಷಕುಲ ಮಲೆತಿಜುವ ಕಾಡ್ಕೋಣ (ತೊರರಾ. ೬–೧೯–೧೭). 'ಕಾಟ್ಕೋಣ' ಪರಾ. [ಕಾಡು$_2$ + ಕೋಣ]

**ಕಾಡ್ಹಳ್ಳಿ** (ನಾ). ಕಾಡುಹಳ್ಳಿ; ಕುಗ್ರಾಮ: ಕಾಡ್ಹಳ್ಳಿಗೌಡ ತಾನರಸಾಗಲಿಲ್ಲ (ಪುರಂದ. ೨–೫೬–೧). [ಕಾಡು$_2$+ ಹಳ್ಳಿ (< ಪಳ್ಳಿ)]

**ಕಾಢೆ** 'ಕಾಡ್ಯೆ$_5$' ನೋ.

**ಕಾಣ್, ಕಾಣು** (ಕ್ರಿ). ಕಂಡ$_3$ (ಭೂತಕೃ); ಕಂಡು$_4$ (ಭೂತನ್ಯೂ); ಕಾಂಬ$_1$, ಕಾಣ್ಬ, ಕಾಬ$_1$ (ಭವಿಕೃ). ೧. ನೋಡು; ಈಕ್ಷಿಸು: "ಕಾಣ್–ದರ್ಶನೇ" (ಶಮಧಾ); ಧನಮಾನ್ ಕಂಡು (ಎಇ. III, ೩೭೦–೫; 740); ಕಾಣನೇಗೆಯ್ದುಂ ತನ್ನ ದೋಷಮಂ ಕಾಣದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯಂ (ಕವಿರಾ. ೧–೪೫); ಅದೇಂ ಮರುಳಾದನೊ ಬಡಿ ಗಂಡನಿಲ್ಲ ಪಾಲನೆ ಕಂಡಂ (ಪಂಪಭಾ. ೬–೧೯); ಪೆಣನಂ ಕಂಡ ಪಂದೆಯಂತೆ ಕಣ್ಣಂ ಮುಚ್ಚುತ್ತುಂ (ಧರ್ಮಾಮೃ. ೧. ೪೪); ಘನವ ಕಾಣಲೀಯದು ದುಃಖ (ಮಹಾದೇ. ೨೪); ಹಗೆಯಾಳಿ ಮುಜಿದುದ ಕಾಬೆನೆಸುಗೆಯೆ ಕಾಣೆ ನಾನು (ಕುವ್ಯಾಕ. ೧೦–೨೪); ಆಯುಷ್ಮಿಕಾನಂದವನು ಕಾಂಬ ಮಧುರಭಾವವ ಬೆಳಸಿ ಸುತ್ತ (ನಡೆದಾ. I, ೪೫೦). ೨. ಭೇಟಿಯಾಗು; ಸಂದರ್ಶಿಸು: ತನ್ನ ಪೊಜಲ್ಗೆವೋಗಿ ತಾಯುಂ ತಂದೆಯುಮಂ ಕಂಡು (ವಡ್ಡಾರಾ. ೬೪–೧೮); ಏ ಪಡೆಮಾತೊ ಬಂದು ಕಾಣ್ ಕಂಡೊಡೆ ಪಥ್ಯಮಪಥ್ಯಮೀ ಕನಿಷ್ಠಾಚರಣಂ (ಶಾಂತಿಪು. ೩–೮೯); ದೇವರುಮಾ ಸಂಜೀವಕಂ ಬಂದು ಕಾಣಲೊಡಂ ಪರಮ ಮಿತ್ರನಂ ಕಂಡಂತೆ ಸಂಭ್ರಮವೆರಸು (ಪಂಚತಂ. ೫೫–೧೭); ಸೌಬಲರಾದಿ ಯಾದವರವನಿಪಾಲನ ಕಂಡರಂದೇಕಾಂತಭವನದಲಿ (ಕುವ್ಯಾಭೀ. ೧–೨). ೩. ಎಣಿಸು; ಭಾವಿಸು; ತಿಳಿದುಕೊ; ಅರಿತುಕೊ: ಮಗಂ ಕುರುಡಾದುದಂ ಕಂಡು (ವಡ್ಡಾರಾ. ೭೫–೨೧); ಪುಸಿ ಕಾಣ ಡಂಬಮಿದು ಖೇಚರನೀನಿದನೆಂತು ನಂಬಿದೋ (ಆದಿಪು. ೨–೮); ಕಂಡ ಕಜ್ಜಮಂ ದೇವರ್ಗಜಿಯೆ ಬಿನ್ನಪಂಗೆಯ್ದೆನ್ (ಪಂಚತಂ. ೯೪–೧೩); ಕೆಲವಂ ಮಾಳ್ಪವರಿಂದೆ ಕಂಡು (ಸೋಮೇಶ. ೨); ತಂದೆ ತನ್ನೊಡವುಟ್ಟಿದಾತನುಯೆಂದು ಕಾಂಬುದೆ ಧರ್ಮಮಾರ್ಗವು (ಕೌಶಿರಾ. ೩೬–೬೨); ರೊಕ್ಕ ಇಲ್ಲದಿರಲು ಬಹು ದುಃಖ ಕಾಣಕ್ಕ (ಪುರಂದ. ೨–೪೮–೩). ೪. ಹೊಂದು; ಪಡೆ: ಅನಿಬರ್ ತಾಂ ಮಾನ್ಯನೆಂದೆನ್ನದಾ ಮನುಜಂ ಸದ್ಗತಿ ಕಾಣನ್ಸೆ (ಸೋಮೇಶ. ೫೦); ಸತ್ತು ಕಾಣ್ಬ ಸಗ್ಗದಿಂದಿರ್ದು ಕಾಣ್ಬ ನರಕಮೆಲೇಸೆಂಬ ನಾಣ್ನುಡಿಯುಮುಂಟು (ಜಗವಿ. ೪–೩೯ ವ). ೫. ತೋರು; ಕಣ್ಣಿಗೆ ಬೀಳು; ಗೋಚರಿಸು: ಇಲ್ಲಿ ಪೋದಂ ವಿಕ್ರಾಂತತುಂಗಂ ಗಡಮುದನಜಿಯಲ್ಕಾಗದಿನ್ನೆಲ್ಲಿ ಕಾಣ್ಬಂ (ಪಂಪಭಾ. ೮–೩೦); ಅವನಿಗೆ ಪಾಂಡವರು ಕಂಡರು (ವಚಭಾ. ೩೬). **ಕಾಣು**: ೧. ಚಲಿಮಿಲಿಯೆಂದೋದುವ ಗಿಳಿಗಳಿರಾ, ನೀವು ಕಾಣಿರೇ (ಮಹಾದೇ. ೬೨). ೩. ನಿನ್ನನ್ನು ನನ್ನ ತಮ್ಮನಂತೆ ಕಾಣಲೇನು (ಮನೆಬೆ. ೨). ೪. ಹುಚ್ಚ ಹೊಟ್ಟೆಗೆ ಕಾಣದೆ ಎತ್ತಲೆಂದಜಿಯದೆ ಮರ್ತ್ಯದೊಳಗಿರ್ದಡೆ ನಿಶ್ಚಯದ ವಿರಕ್ತನೆ (ಮೋಳಿಮಾ. ೨೩–೯೦); ಹರಣವುಳಿವೊಡೆ ಕಾಣಲಹುದಖಿಳವಾ (ನವಮೋ. ೮–೨೩). ೫. ಪೆಣ್ಣುಪೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು (ಹರಿಬ. ೫–೭); ಈ ಕುರುಡ ಪ್ರಾಣಿಗೆ ಏನೂ ಕಾಣುವುದಿಲ್ಲ (ಮುಂಬಯಿ. ೩–೨೦); ಕಂಡದ್ದು ಹೇಳಿದರೆ ಕೆಂಡದಂಥಾ ಕೋಪ (ಗಾದೆ).

**ಕಂಡಾ, ಕಂಡೆಯ, ಕಂಡೆಯಾ, ಕಂಡ್ಯ, ಕಂಡ್ಯಾ** = ತಿಳಿದುಕೊಂಡೆಯಾ; ಅರಿತುಕೊಂಡೆಯಾ: ಅನುಪಮವಸಾಧ್ಯವಭೇದ್ಯ ಸೌರಾಷ್ಟ್ರಸೋಮೇಶ್ವರ ಲಿಂಗವದೆ ಕಂಡಾ (ಅದವ. ೨); ಮನಂ ಬೆದಜಿ ಪೊಡವಟ್ಟನಂ ಬೇಗ ಶೀಘ್ರಂ ಕೊಂಡು ಬಾ ಕಂಡ ಎಲೆ ಪುಣ್ಯವೇ ಕವಿಳಾಸಕೆ (ಎಇ. XXIII, ೧೯೪–೧೭; 1265); ಕನ್ನಡದೊಳಗೊಂದು ಕಥೆಯ ಪೇಳುವೆನದು ನಿನ್ನಾಜ್ಞೆ ಕಂಡಾ ನನ್ನೊಡೆಯ (ಭರತ. ೧–೫); ನಿನ್ನಂಘ್ರಿರಾಜೀವಮಂ ನೆನೆಯ್ದೊಮುಕ್ತಿಯನೆಯ್ದುವರ್ ಕಂಡ್ಯ ನಿನಗದೆಲ್ಲಿಯ ಪಾತಕಂ (ವೀಶೈಪು. ೨–೩–೫೫); ಚಿತ್ರೇಸಾಕ್ಷಾಧೀಶನು ಕಂಡ್ಯಾ ಮತ್ತಾಯೀಶನೆ ಭೀಮನು ಕಂಡ್ಯಾ (ಪರಗೀ. ೬–೧). **ಕಂಡವರು** = ೧. ಕಣ್ಣಿಗೆ ಬಿದ್ದವರು; ಸಿಕ್ಕ ಸಿಕ್ಕವರು. ೨. ಇತರರು; ಪರರು: ಕಂಡವರ ಮಕ್ಕಳನ್ನು ಬಾವೀಲಿ ದೂಡಿ ಆಳನೋಡಿದ ಹಾಗೆ (ಗಾದೆ); ಕಂಡವರ ಕಾಲು ಹಿಡಿದರೂ ಗಂಡನ ಮನೆಗೆ ಹೋಗೋದು ತಪ್ಪದು (ಗಾದೆ). ೩. ನೋಡಿದವರು. **ಕಂಡಕಂಡ** (ದ್ವಿರುಕ್ತಿ): ಚೆಲ್ವ ಶಿಶು ಬೀದಿಯೊಳ್ ಬಂದು ದೇಸಿಗನಾಗಿ ನಿಲ್ವಿನಂ ಕಂಡಕಂಡಬಲೆಯರ್ ಕರೆಕರೆದು (ಜೈಮಿಭಾ. ೨೮–೨೦). **ಕಂಡೆಗೊಳ್** = ಕಾಣು; ನೋಡು: ಅವನನೆಗಾವ ಬಿರಿಮುಗುಳ್ಗಾವಲರ್ಗವಚತ್ತರುಂತವೆಲ್ಲಂ ತವೆ ಪುಷ್ಪಾವಚಯದಿಂ ತಳಿರ್ಗಳ ಕಾವಣದೊಳ್ ಕಂಡೆಗೊಳ್ವನಂದಿನ ದಿವಸಂ (ಶಾಂತಿಪು. ೯–೭೭). **ಕಾಣಬರು** = ೧. ಕಾಣುವುದಕ್ಕೆ ಸಾಧ್ಯವಾಗು: ಕಾಣಬಾರದ ಬಯಲಿಂಗೆ ಮನೆಯ ಕಟ್ಟಿ (ಕೋಲಶಾಂ. ೨೩–೧೭).

೨. ಗೋಚರಿಸು; ಪ್ರಕಟವಾಗು: ಈತನನಿತಿನಿತೆಂದು ಯೋಚನೆಗೇತಜಲಿ ತಾವಿಲ್ಲ ಸತ್ವಗುಣಾತಿಶಯವೇ ಕಾಣಬಂದಿಹುದು (ತೊರರಾ. ೧-೮-೧೫); ಅಧಿಕ ಸುಜಾಣರ ಜ್ಞಾನಲೋಚನಕೆ ಕಾಣಬರ್ಪಂತೆ ಕನ್ನಡ ವಾಕ್ಯದೆ ನೆರೆಜಾಣ ಸತ್ಕೃತಿಯ ವಿಸ್ತರಿಸು (ಮೋಹತ. ೩-೧). ೩. ಗೊತ್ತಾಗು; ಚೆನ್ನಾಗಿ ತಿಳಿದುಬರು: ಒಂದರಗಳಿಗೆ ನೋಡಿದ ಮಾತ್ರದಿ ಕಾಣಬಂದುದಾ ವಿದ್ಯೆ ಕಂತುವಿಗೆ (ಮೋಹತ. ೧೧-೭೧); "ಶುದ್ಧಾಂತ – ಎಲ್ಲರಿಗೂ ಕಾಣಬಾರದೇಯಿರುವ ಅರಸಿನ ಅಂತಃಪುರ" (ಸಿದ್ಧಾಂತ. ೩೩). **ಕಾಣಗೊಡಿಸು** = ೧. ಕಾಣುವಂತೆ ಮಾಡು ೨. ಕಾಣುವ ಶಕ್ತಿಯನ್ನು ಒದಗಿಸು: ಕುರುಡರಿಗೆ ಕಾಣಗೊಡಿಸುವುದೇ ಮೊದಲಾದ ಪವಾಡಗಳನ್ನು ಮೆರೆಸುತ್ತ (ಗೊಲ್ಗೊಥಾ. IV, ಮುನ್ನುಡಿ). **ಕಾಣಗೊಡು** = ಕಾಣುವುದಕ್ಕೆ ಅವಕಾಶ ಕೊಡು; ತೋರಗೊಡು; ತೋರಿಸು.

[ದೇ. ‖ ತಮಿ. ಕಾಣ್; ಮಲ. ಕಾಣು. ಕೊಡ. ಕಾಣ್; ತೆಲು. ಕನು, ಕಾನು]

**ಕಾಣ$_1$** (ನಾ). ಒಂದು ಬಗೆಯ ಧಾನ್ಯ (?): ಉಪ್ಪು ತುಪ್ಪ ಕಾಣಂ ರಸಂ ವಜ್ಜಣಿಯುಂ ಎಣ್ಬತ್ತ ನಲ್ವರ ಕಯ್ಯುಲ್ ಮಲ್ಲಿಗ ಗಾದಯ್ಯ[೦] ಮಲ್ಲಿಗೇಶ್ವರಕ್ಕೆ ಕೊಣ್ಡುಬಿಟ್ಟ (ಇಅ. XII, ೨೫೬–೧೬; 971). [?]

**ಕಾಣ$_2$** 'ಖಾಣ' ನೋ.

**ಕಾಣ$_3$** (ನಾ). ೧. ಒಂದೇ ಕಣ್ಣು ಉಳ್ಳವನು; ಒಕ್ಕಣ್ಣ. ೨. ಕುರುಡ: ದಶ ಇಂದ್ರಿಯಂಗಳಿಗೆ ವಶವಾಗದಿರು . . . ದಿಶೆಯಜ್ಞಾತು ಕಾಣನಾಗದಿರು (ಪ್ರಸಕ್ತೀ. ೪೮–೧೦). ೩. (ಕವಡೆಯಂತೆ) ತೂತು ಬಿದ್ದುದು ಅಥವಾ ಒಡೆದದ್ದು. ೪. ಕಾಗೆ. [ಸಂ.]

**ಕಾಣ$_4$** (ನಾ). (ಕರಾ). ಒತ್ತೆ; ಈಡು; ಅಡವು. [?]

**ಕಾಣಒತ್ತೆ** (ನಾ). (ಕರಾ) ಒತ್ತೆಯಲ್ಲಿ ಒಂದು ವಿಧ; ತೋರುಒತ್ತೆ (ಉಕ). [< ಕಾಣ್ + ಒತ್ತೆ$_1$]

**ಕಾಣಕರಸೂನು** (ನಾ). ಶಿಲ್ಪ ಕೆಲಸದವನು (?): ಬಡಗಿಯು, ಆಕ್ಕಸಾಲಿಯು, ಧ್ವಜಕಾರನು, ಕಾಣಕರಸೂನು ಇವರೆಲ್ಲಾ ದಿವಾಕೀರ್ತಿ ಸಮರು (ಶುಕಸ. ೨೩). [?]

**ಕಾಣಭುಜ** (ನಾ). ಕಣಾದ ಪಕ್ಷದವನು; ವೈಶೇಷಿಕ ಪಂಥದ ಅನುಯಾಯಿ; ತಾರ್ಕಿಕ: ಯುಕ್ತಿಯ ನುಡುಗಿ . . . ಕಾಣಭುಜರ್ಕಳಿಂತು ತುಟಿ ಮಿಸುಕುವರು (ರಾಘಚ. ೧೪–೩೧). [ಸಂ.]

**ಕಾಣಯ** (ನಾ). ದೊಣ್ಣೆ; ಬಡಿಗೆ: ವೈದಿಕರಾ ಸ್ವಾನನ ಕರದಲಿ ಕಾಣಯವಿಡಿದು ಭರದಿ ಬಡಿಯಲವನಿಯ ಮೇಲೆ ಬಿದ್ದು ಹರಣ ಮಳಿವುತಿರಲು (ಜೀವಂಸಾಂ. ೧೨–೭). [< ಕಣೆಯ್ಯ]

**ಕಾಣಾಂಚಿ** 'ಕಾಣಾಚಿ' ನೋ.

**ಕಾಣಾಚಿ, ಕಾಣಾಂಚಿ, ಕಾಣಿಯಾಚಿ, ಕಾಳಾಂಚಿ, ಕಾಳಾಂಜಿ$_1$** (ನಾ). ವಂಶಪರಂಪರೆಯಿಂದ ಬಂದು ಸ್ವಾನುಭೋಗದಲ್ಲಿರುವ ಆಸ್ತಿ; ಪಿತ್ರಾರ್ಜಿತ ಆಸ್ತಿ; ಹಕ್ಕುದಾರಿ ಜಮಿನು: ವಿನಿಯೋಗದಬ್ರಾಹ್ಮಣರಿಗೆ ಸರ್ವಮಾನ್ಯವಾಗಿ ಕಾಣಾಚಿಯಾಗಿ ಕೊಟ್ಟ ಕ್ಷೇತ್ರ ಸ್ವಾಸ್ತಿಗಳು (ಸೌಇಇ. IV, ೨೫೫–೨೬; 1513); ದೇವತಾ ಪೂಜೆಯ ಮಾಡಿದವನ ವೊಡವೆ ಆತಗೆ ಕಾಣಾಚಿ ಸಲದು ಎಂದು ವೊಡಂಬಟ್ಟು ಬರಸಿದ ಶಿಲಾ ಶಾಸನ (ಸೌಇಇ. IX–ii, ೬೪೮–೨೦; 1552); ನಂಮ್ಮ ಕಾಣಾಚಿ ಸೀಮೆ ಕೆಳದಿ ಸೀಮೆಯೊಳಗಣ ಕಲಿಸೆಯ ಪೇಠೆಯ (ಮೈಆರಿ. ೧೯೩೦–೬೦–೧೧; 1573). **ಕಾಣಾಂಚಿ**: ಯೀ ಮಾನ್ಯವನು ನೀನು ಕಾಣಾಂಚಿಯಾಗಿ ಅನುಭವಿಸಲುಳವನು (ಎಕ. XII, ಪಾವುಗ. ೩೮–೧೨; 1560); ಕಾಣಾಂಚಿಯಾಗಿ ಪಾಲಿಪಲ್ಲಿ (ಎಕ. III, ತಿರುಮು. ೬೨–೪೪; 1622). **ಕಾಣಿಯಾಚಿ**: ಪರರುವ ಬಂದಿಸಿ ಬೇಡುವಂಗೆ ಧನದ ಒಲವರವಿಲ್ಲ ಪ್ರಾಣತ್ಯಾಗಿಗೆ ಕಾಣಿಯಾಚಿಯ ಕೇಣಸರವಿಲ್ಲ (ಮನುಗುಂ. ೬೦); ಅನತಪಗಳಿಗೆ ಕಾಣಿಯಾಚಿ ಕೊಟದು (ಸೌಇಎ. ಪುಂಗನೂ. ೧೫೬–೪; 1419); ನಂಬಿಗಳು ಅಪಚಿ ಅನತಪಗಳಿಗೆ ಕಾಣಿಯಾಚಿಯಾಗಿ ಕೊಟದು (ಎಕ. X, ಮುಳಬಾ. ೧೭೨–೪; 1496). **ಕಾಳಾಂಚಿ**: ಕೊಂಗುರ ಗಣಚಾರಿಗಳಿಗೆ ಕೊಟ ದತ ಕಾಳಾಂಚಿಯಾಗಿ ಕೊಟ ಕೊಡಗೆಯ ಗ್ರಾಮುಗಳಾ (ಮೈಆರಿ. ೧೯೩೦, ೩೦–೯; 1562); ನಂಮ ಕಾಳಾಂಚಿಗೆ ಸಲುವ ಬರೂರ ಸೀಮೆಯೊಳಗಣ ಚಿಕ್ಕಜಂಬಾನಿಲೂ (ಮೈಆರಿ. ೧೯೩೦, ೫೬–೧೩; 1597). **ಕಾಳಾಂಜಿ$_1$**: ಮಲ್ಲಪ್ಪಗೆ ಕಾಳಾಂಜಿಯಾಗಿ ಹಿತಿಸಿದ ಧರ್ಮಶಾಸನ (ಎಕ. IV, ಚಿಕ್ಕನು. ೪೮–೨೧; 1549).

[ದೇ. ‖ ತಮಿ. ಕಾಣಿಯಾಟ್ಚಿ, ಕಾಣಾಚಿ; ತೆಲು. ಕಾಣಾಚಿ, ಕಾಣಯಾಚಿ, ಕಾಣಿಯಾಚಿ]

**ಕಾಣಿ$_1$, ಕಾಣ್ಕೆ** (ನಾ). ೧. ಒಂದು ಚಿಕ್ಕ ನಾಣ್ಯ; ಪಣದ ಅರುವತ್ನಾಲ್ಕನೆಯ ಒಂದು ಭಾಗ: ವೀಸಂ ಎರಡು ಕಾಣಿ ಎರಡು (ಎಇ. XVIII, ೧೮೫–೩೭; 1097); ಕಾಣಿಯ ಸೋಲ ಆರ್ಧಕಾಣಿಯ ಗೆಲ್ಲ (ಬಸವ. ೧೧೫); ಎಲೆ ಮರುಳೆ ಕಾಣಿಗಾಡಿ ಕಡವರವನಂಬಿಲದ ಹುಳಿಗಾಡಿಯಮೃತಮಂ ಬಿಡುವರೆ (ಸೋಮಚ. ೧–೬೬); ಕಾಣಿಯ ಬೀಯದಲಿ ಬಡವಹುದೆ ಕನಕಾಚಲ (ಕುವ್ಯಾದ್ರೋ. ೧–೧೬); ಕಾಣಿಯನು ಗಳಿಸದ್ದ ಕಾಣಿಯನು ಈಯುವುದು (ಸರ್ವಜ್ಞ. ೬೯೪). ೨. ಒಂದು ಬಗೆಯ ಸುಂಕ: ಅರಸರ್ಗೆ ಸೇಸೆಯಿಂ ದರಸರ ಕಾಣಿಯೆಂದು ದಾಯದವಗ್ಗರ್ಗಳ ತೆಜಿಯೆಂದರುವಣಮೆಂದುಳಿವಣಂ (ಎಕ. XII, ಶಿರಾ. ೪೦–೯೮; 1040). ೩. ಕಾಣಿಕೆ: (೬). ೪. ಭೂಮಿಯ ಒಂದು ಅಳತೆ: (೬). ೫. ಆಸ್ತಿ; ಆನುವಂಶಿಕ ಹಕ್ಕುದಾರಿಕೆ. ೬. ತಕ್ಕಡಿಯ ತಟ್ಟೆಗಳು ಸಮತೂಕದಲ್ಲಿರುವುದು. ೭. ತಕ್ಕಡಿಯ ತಟ್ಟೆಗಳನ್ನು ಸಮತೂಕಕ್ಕೆ ತರಲು ಹಾಕುವ ತೂಕ, —ಪೇರು; ಭಾರದಾನಿ: ಏರುಪೇರಾದ ತಕ್ಕಡಿಯನ್ನು ದಾರಿಗೆ ತರುವ ಕಾಣಿಯಂತೆ (ಬೆಳುಮ. ೪); ತಕ್ಕಡಿಗೋ ಬೇಡ ಕಾಣಿ ತೂಗುತಿರಲಿ ಸತ್ಯವಾಣಿ (ಸೂರ್ಯಪಾ. ೨೪–೫). ೮. ಕಾಯುವವನು; ಕಾವಲುಗಾರ. ೯. ಹಣ; ಸಂಪತ್ತು. 'ಭೂಮಿಕಾಣಿ' ಪರಾ. **ಕಾಣ್ಕೆ**: ೧. ಕಾಣಿಯಂ ಗೆಲನರ್ಧಗಾಣಿಯಂ ಸೋಲನೀ ಜಾಣರೆ ಜಿಯಂ (ಕೊಟ್ಟುಬ. ೧೨–೩೧). ೧೦. (?): ಕಾಣಿಯ ಕಾಣ್ಕೆ ಸುವರ್ಣ ಕ್ಷೋಣಿದ್ರಕೆ (ಕಂದಶ. ೫).

**ಕಾಣಿಕಟ್ಟು** = ತಕ್ಕಡಿಯ ಎರಡೂ ಬಟ್ಟಲು ಸಮತೂಕವಾಗುವಂತೆ ಮಾಡು; ಕಡಿಮೆಯಿದ್ದ ಭಾಗಕ್ಕೆ ತೂಕಸೇರಿಸಿ ಸರಿಪಡಿಸು; ದಡಕಟ್ಟು: ಕಾಣಿ ಕಟ್ಟಿ ತೂಕಹಾಕು (ರೂಢಿ). 'ಪೇರುಕಟ್ಟು' ಪರಾ. [ದೇ. ‖ ತಮಿ. ಮಲ. ಕಾಣಿ; ತುಳು. ತೆಲು. ಕಾಣಿ]

**ಕಾಣಿ$_2$** (ನಾ). ಒಂದು ಬಗೆಯ ಸಸ್ಯ; ಮಾಚಪತ್ರಿ: "ಗ್ರಂಥಿಪರ್ಣ ಶಂಕಃ . . . ಕುಕ್ಕುರಂ – ಈ ೬ ಕಾಣಿಯೆಂಬ ಗಂಧದ್ರವ್ಯಂ" (ನಾಚಿರಾ. ೧೧೧). [?]

**ಕಾಣಿಕಾಱ** (ನಾ). ಕುಲಪರಂಪರೆಯಿಂದ ಬಂದ ಊರೊಟ್ಟಿನ ಜಮೀನಿನಲ್ಲಿ ಸಮಾನ ಹಕ್ಕು, ಪಾಲು ಉಳ್ಳವನು; ಪಾಲುಗಾರಿಕೆಯ ಹಕ್ಕುದಾರ: ದಿಂಬರ ಸೋಮುಕಗಳುಂಡನ ಮಕ್ಕಳು ರಾಮುಗಲುಂಡ ಮಂಚಿಗಲುಂಡ ಚಾಮುಗಲುಂಡ ಕೊಣಕಾಲನ ಮಗನಾ ಕೋಕ ತಂಮುನು ಯಿಂತೀ ಅನಿಬರು ಕಾಣಿಕಾಱನ ಭಾಗೆಯ ಬೇಕೆಂದಡೆ (ಎಕ. III, ಮಳವ. ೬೦–೮; 1153).

[ಕಾಣಿ$_1$ + –ಕಾಱ. / ತಮಿ. ಮಲ. ಕಾಣಿಕ್ಕಾರ]

**ಕಾಣಿಕೆ** 'ಕಾಣ್ಕೆ' ನೋ.

**ಕಾಣಿಕೆಗೊಡು** 'ಕಾಣ್ಕೆಗೊಡು' ನೋ.

**ಕಾಣಿಕೆಗೊಳ್** (ಕ್ರಿ). ಕಾಣಿಕೆಯನ್ನು ತೆಗೆದುಕೊಳ್ಳು,—ಸ್ವೀಕರಿಸು: ಸೊಂಪೊದವಿ ಬರಲು ವಿರಾಟ ಕಾಣಿಕೆಗೊಂಡು ನಡೆತಂದ [ಪಾಠಾಂ. ಕಾಣಿಸಿಕೊಂಡು ಬೆಸಗೊಂಡ] (ಕುವ್ಯಾವಿ. ೧-೧೭); ವರ ಸುಬುದ್ಧಿ ಪ್ರಮುಖ ಮಂತ್ರಿಗಳ್ ಬಂದರೊತ್ತರಿಸಿ ಕಾಣಿಕೆಗೊಂಡು (ಜೈಮಿಭಾ. ೧೭-೪೮). [ಕಾಣಿಕೆ (< ಕಾಣ್ಕೆ) + ಕೊಳ್$_1$]

**ಕಾಣಿಕೆಯ** (ನಾ). ಕಾಣಿಕೆಯವನು; ಕಾಣಿಕೆ ವಸೂಲು ಮಾಡುವವನು (?): ಯಿ ಗ್ರಾಮಕೆ ಅರಸುಗಳು ಗಣಾಚಾರಿಗಳು ಸುಂಕದವರು ನಾಡು ತಳವಾಱರು ಕುಳಸಿದಾಯ ಬೇಡಿಗೆ ಕಾಣಿಕೆಯರು ಆರು ಅಳುಪಿದರು ನಮ್ಮ ನಾಡಗಿ ತೆತ್ತು ಬಿಟ್ಟೆಉ(ಎಕ. XI, ಹೊಳಲ್ಕೆ. ೭೧-೧೯; 1540). [ಕಾಣಿಕೆ (< ಕಾಣ್ಕೆ) + -ಅ$_7$]

**ಕಾಣಿಕೆಯಿಕ್ಕು** (ಕ್ರಿ). ಕಾಣಿಕೆಯನ್ನು ಕೊಡು, —ಅರ್ಪಿಸು: ನಿಂದು ಕಾಣಿಕೆಯಿಕ್ಕಿ ರೊಕ್ಕದಾಸೆಯನಿತ್ತು ತಂದನು ದಂಡನಾ ನೆಲಕೆ (ಕಂನವಿ. ೧೧-೩). [ಕಾಣಿಕೆ (< ಕಾಣ್ಕೆ) + ಇಕ್ಕು]

**ಕಾಣಿಕೆಯಿಾ** 'ಕಾಣ್ಕೆಯಿಾ' ನೋ.

**ಕಾಣಿಕೆವರದ** (ನಾ). ಬೆಲೆಯುಳ್ಳ ಕಾಣಿಕೆಯ ವಸ್ತುಗಳನ್ನು ಮಾರುವವನು: (ಶ). [ಕಾಣಿಕೆ (< ಕಾಣ್ಕೆ) + ಪರದ]

**ಕಾಣಿಕೆವಿಡಿ** (ಕ್ರಿ). = ಕಾಣಿಕೆಗೊಳ್: ಕುಂದ ಗಂಧಿನಿಯ ಮೆಲ್ನುಡಿಯ ವಿಮಲ ಮೆಯ್ಗಂಧವ ಕಾಣಿಕೆವಿಡಿದು ಮಂದಗತಿಯನಾಂತು ಬೃಹಸ್ಪತಿಗಿದಿರಾಗಿ ಬಂದುದು ತಂಗಾಳಿ ಬನದಿ (ಮೋಹತ. ೫-೩೦). [ಕಾಣಿಕೆ (< ಕಾಣ್ಕೆ) + ಪಿಡಿ$_1$]

**ಕಾಣಿತೂಕ** (ನಾ). ತಕ್ಕಡಿ ಬಟ್ಟಲುಗಳನ್ನು ಸಮತೂಕ ಮಾಡುವುದಕ್ಕಾಗಿ, ಕಡಮೆ ಭಾರವಿದ್ದ ಕಡೆಗೆ ಇಡುವ ಹೆಚ್ಚಿನ ತೂಕ, —ಪೇರು: (ಶ). [ಕಾಣಿ$_1$ + ತೂಕ]

**ಕಾಣಿಪೇರು** (ನಾ). = ಕಾಣಿತೂಕ: (ಶ). [ಕಾಣಿ$_1$ + ಪೇರು$_2$]

**ಕಾಣಿಬೇಡು** (ಕ್ರಿ). ಹಣವನ್ನು ಬೇಡು, —ಕೇಳು (?): ಎಳಸಿ ನೋಡಿಯೆ ನೋಡಿಸುವ ಕೆಲಕೊಲೆವ ನಗಿಸುವ ಕಾಣಿಬೇಡುವ ಮುಳಿವ ಬಲುವನು ಜಾಣ್ನುಡಿಯಿ [ಪಾಠಾಂ. ಯ] ಕರಗಿಸುವ ದಟ್ಟಿಸುವ . . . ಬುದ್ಧಿಯ ಕಲಿಸುತಿರ್ದರ್ಳು ಮಗಳಿಗೋರ್ವ ವಿದಗ್ಧೆಯಿರುಳಿನಲಿ (ಜೀವಂಚ. ೧೭-೪೦). [ಕಾಣಿ$_1$ + ಬೇಡು$_1$]

**ಕಾಣಿಯಾಚಿ** 'ಕಾಣಾಚಿ' ನೋ.

**ಕಾಣಿಯಾಚಿಕಾಱ** (ನಾ). ಕಾಣಿಯಾಚಿಯ ಹಕ್ಕುದಾರ: ಸಾಧನವ ಬರದಾತ ಪುಟರಸರ ಮಗ ದೇವರಸನು ಸುಹಸ್ತವೊಪವೊಪ್ಪಗಳು ಶ್ರೀ ನಾರಸಿಂಹ ಕಾಣಿಯಾಚಿಕಾಱ ನಂಬಿಗಳವೊಪ್ಪಗಳು (ಎಕ. X, ಮುಳಬಾ. ೧೭೨-೨೧; 1496). [ಕಾಣಿಯಾಚಿ (< ಕಾಣಾಚಿ) + -ಕಾಱ]

**ಕಾಣಿಯಾಲ** (ನಾ). ಆರಂಭಮಾಡುವವನು; ಬೇಸಾಯಗಾರ: ಅಸಗರ ಹಲ ಗಾಣಿಗರ ಸುಂಕ ಪಲರ ಬೇಡಿಗೆ ನಾಯಿಂದನ ವರಿ ಕುಂಭಾರರು ಕಾಣಿಯಾಲರ ಬೇಡಿಗೆ ಕುಱಿದೆಱೆ ಗ್ರಾಮಗಳ ಬೇಡಿಗೆ ಉಪಲಿಗರ ಕಾವಲಿ (ಎಕ. XIV, ಗುಂಡ್ಲುಪೇ. ೧೨೯-೧೦೦; 1521). [ದೇ ॥ ತಮಿ. ಮಲ. ಕಾಣಿಯಾಳ]

**ಕಾಣಿಲ್ಲಮೆ** (ನಾ). ಕಾಣದಂತೆ ಇರುವಿಕೆ; ಅದೃಶ್ಯತೆ: ಪವನಜಂ . . . ಯೋಗತನುವಿಂದಗೋಚರನಾಗಿ, ಮೆಯ್ಮೆಳಲ್ ಕಾಣದಾದುದೆ ತನ್ನ ಕಾಣಿಲ್ಲಮೆಗೆ ಕುರುಹಾಗೆ ತಲೆಯೆತ್ತಿ ಕಂಡನಾಕಾಶಮಂ (ಶ್ರೀರಾಮಾ. ೪೩೨-೩೩೭). [ಕಾಣ್ + ಇಲ್ಲಮೆ]

**ಕಾಣಿಸು** (ಕ್ರಿ). ೧. ತೋರಿಸು; ಕಾಣುವಂತೆ ಮಾಡು; ಗೋಚರಪಡಿಸು; ಪ್ರಕಟಗೊಳಿಸು: ನೋಟಕರನತನುಮತ್ತದ್ವಿರದಂ ಕೋಡಂ ಕಾಣಿಸಿ ಪಿಡಿದೀಡಾಡುವುದೆಂಬಿನೆಗಮಾಡಿ ರಂಜಿಸಿದಳವಳ್ (ಆದಿಪು. ೯-೩೭); ಸೂಸುಗಳೞಿವಂ ಪ್ರಿಯಮಿತ್ರಾನುಜರೞಿವಂ ವಿಧಾತ್ರ ನೀಂ ಕಾಣಿಸಿಯಿನ್ನೇನಂ ಕಾಣಿಸಲಿರ್ದಪೆ (ಗದಾಯು. ೫-೨೯); ನಿಮ್ಮ ಲಿಖಿತವ ನಿಂದು ಕಾಣಿಸಿದಿರೇ ಎನುತೆ (ನಂಬಿರ. ೭-೭೧); ಮುಗಿಲ ತುಡುಕುವ ತೆನೆಗಳಾಳ್ವೇರಿಗಳು ಪಾತಾಳವನು ಕಾಣಿಸುವಗಳು (ನಳಚ. ೧-೨೧). ೨. ಒದಗು; ಉಂಟುಮಾಡು: ಪದನಂ ಕಾಣಿಸಿಕೊಳ್ವವಲ್ಲಿ ಮಱಗಳ್ (ಆದಿಪು. ೧-೫೧); ಜನಿಸಿದಾಗಳೆ ಮರಣಗಾಣಿಸಿಯನಿಮಿಷೇಶ್ವರನಿತ್ತ ಶಾಪದಿ ಪುನರಪಿಯು ತಾನೊಬ್ಬ ಹುಟ್ಟಿದ ಶಲ್ಯನಾಮದಲಿ (ಸಂಭಪ. ೮-೨೮). ೩. ಭೇಟಿ ಮಾಡಿಸು; ಸನ್ನಿಧಿಗೆ ಕರೆತರು, —ಒಪ್ಪಿಸು: ನಾಳಿನೋಲಗದೊಳ್ ತಂದು ಕಾಣಿಸೆಂಬುದುಂ (ಪಂಪಭಾ. ೯-೨೮೭); ಆತನನಾಂ ತಂದು ಕಾಣಿಸಿ ಕೂಡಿದಂದಿಂತೊಟ್ಟು ಇಂದುವರಂ (ಪಂಚತಂ. ೯೫-೧೧); ಕರೆಸಿ ತನ್ನ ಕುಮಾರಕರ ನೂರ್ವರನು ಕಾಣಿಸಿದನು (ಸಂಭಪ. ೩೪-೩೧). ೪. ತೋರು; ಕಣ್ಣಿಗೆ ಬೀಳು; ಗೋಚರವಾಗು: ಕಾಣಿಸುತ ಕಂಗಳಿಗೆ. . . ಅಕ್ಷೀಣ ಮೃಗ ಪುಟನೆಗೆದು ಹಾಱುತ (ಕುವ್ಯಾಅ. ಓಂ೩. ೨೬-೭); ಅವರನು ಕಾಣ್ಬಳು ತನ್ನ ತನುವವರಿಂಗೆ ಕಾಣಿಸದು (ಮೋಹತ. ೨೯-೧೪); ಪರವಾದಿಗಳ ಕಣ್ಗಳ್ಗೆ ಕಾಣಿಸದೆ ಗೋಪ್ಯದಿಂ (ಚಬಪು. ೩-೧೩); ತನ್ನ ಕಣ್ಣಿಗೆ ಮನುಷ್ಯರಾರೂ ಬೀಳಲಿಲ್ಲ. ನಿನಗೆ ಯಾರಾದರೂ ಕಾಣಿಸಿದರೆ (ಸರಸ. ೩೮). ೫. ಮನಸ್ಸಿಗೆ ತೋರು; ತೋಚು; ಭಾಸವಾಗು: ಅದು ಸರಿಯೆಂದು ನನಗೆ ಕಾಣಿಸುವುದಿಲ್ಲ (ರೂಢಿ). ೬. ಕಂಡುಕೊಳ್ಳು; ಅರಿತುಕೊಳ್ಳು: ನರನ ಧನುವಿನ ದನಿಯ ಕೇಳಿನು ಕರಗಿತಂತಃಕರಣವರ್ಜುನನಿರವ ಕಾಣಿಸಿ ಬಾಯೆನಲು ಕೈಕೊಂಡನಾ ಭೀಮ (ಕುವ್ಯಾದ್ರೋ. ೧೨-೪).

ಕಾಣಿಸಿಕೊಡು = ತೋರಿಸು; ಗಮನಕ್ಕೆತರು. ೨. (ಕರೆತಂದು) ಭೇಟಿ ಮಾಡಿಸು: ಮಂತ್ರಿಪುಂಗವರು ಮೇದಿನಿಯೊಳಗತ್ಯಧಿಕರಾದ ವರ್ಗಳನೆಯ್ದೆ ಕಾಣಿಸಿಕೊಡುತಿಹರು (ತ್ರಿಪುಸಾಂ. ೬-೩೦). ಕಾಣಿಸಿಕೊಳ್ = ೧. ಕಣ್ಣಿಗೆ ಬೀಳು; ಗೋಚರವಾಗು: ಅಲ್ಲಿಯ ಮಂದರಾಚಲದಲ್ಲಿ ಕಾಣಿಸಿಕೊಂಬಳೊಬ್ಬಬಲೆ (ಸಂಧಪ. ೩-೬); ತಾ ಕಾಣಿಸಿಕೊಳದೊಳಪೊಕ್ಕು ಚಿತ್ರಪಠಲೇಖನಗೆಯ್ದಳಿಲ್ಲರನು (ಮೋಹತ. ೨೯-೧೭). ೨. ಭೇಟಿಕೊಡು; ಸನ್ನಿಧಾನಕ್ಕೆ ಹೋಗು: ಅರಸಿ ಕಾಣಿಸಿಕೊಂಡಳೀ ನೃಪರರಸಿಯನು ಸುಕುಮಾರಕರನು . . . ಪಸಾಯ್ತೆಯರ (ಕುವ್ಯಾಸ. ೧೩-೧೨); ಬಂಭಾಪುರಿಗೆ ಬಂದು ಚಂಡಕೋದಂಡನಂ ಕಾಣಿಸಿಕೊಳ್ವುದು ಬೇಱ ಬೇಱ ದಂಡಿಳಿದಿರಲೊಡಂ (ಹಮ್ಮಿರ. ೨-೧೨೩ ವ). ೩. ತೋರ್ಪಡಿಸು; ಗೋಚರಿಸುವಂತೆ ಮಾಡು: ಜಾಣಸೇಕರ ನಿನ್ನೆಡೆಯೊಳಗೆಳ್ವಿನಿತೂಣೆಯವಿಡಿದ ಕಾರ್ಯಗಳ ಕಾಣಿಸಿಕೊಂಡೆನಾದೊಡೆ ಕೇಳು ಮುಡಿ ಮೊಲೆದಾಣವ ನಿನಗಿತ್ತಳಲ್ಲ (ಕಂನವಿ. ೬-೧೬೮). [ಕಾಣ್ + -ಇಸು$_3$]

**ಕಾಣು** 'ಕಾಣ್' ನೋ.

**ಕಾಣುಗ** (ನಾ). ಒಂದು ವಂಶದ ಹೆಸರು: ತಿಪ್ಪಗೌಂಡಂ ಕಾಣುಗ ವಂಶಾಗ್ರಗಣ್ಯನನುಪಮ ಪುಣ್ಯಂ (ಕಕುಲ. ೬-೪೫; 1216 ?). [?]

**ಕಾಣುಹ** (ನಾ). ಕಾಣುವುದು; ನೋಡುವಿಕೆ: ಅಲ್ಲಿ ಕಾಣುಹ ತಡಂ ನೆನೆದುಘೇಯೆಂದು ಮೆಯ್ಯಿಕ್ಕಿ (ಸಿದ್ಧರಾ. ೨-೨೫); ಹಂದಿಯ ಕಾಣುಹ ತಡಂ ಕೋಪಕಿಚ್ಚು ಭುಗಿಲೆಂದು (ಹಚಕಾ. ೭-೧). [ಕಾಣು (< ಕಾಣ್) + -ಹ$_2$]

**ಕಾಣೆ$_1$** (ನಾ). ಕಾಣದೆ ಅಡಗುವುದು; ಅದೃಶ್ಯತೆ. 'ಕಾಣೆಯಾಗು' ಪರಾ.

**ಕಾಣೆ ಅರ್ಜಿ** =(ಕರಾ). ಕಾಣದಾದ ವಸ್ತುವನ್ನು ಹುಡುಕಲು ಕೊಡುವ ಅರ್ಜಿ: ದನ ಕಾಣೆಯಾಗಿದೆ, ಅದಕ್ಕೇ ಕಾಣೆಅರ್ಜಿ ಸಲ್ಲಿಸಿದ್ದಾರೆ (ರೂಢಿ). **ಕಾಣೆಯಾಗು** = ಕಾಣದಂತಾಗು; ಅದೃಶ್ಯವಾಗು; ಮಾಯವಾಗು: ಇನಿತೊಂದು ಪೊೞ್ತು ತಡೆದಳ್ ಕಳಭಾಷಿಣಿ ಕಾಣೆಯಾಗಿ ಮುಂತಂದಿರವೇಟ್ಟ ತಾಣದೊಳೆ ಕಾಣಳೊ ಕಾಣದುದರ್ಕೆ ನಾಣ್ಚಿ ಮೇಣ್ ನಿಂದಳೊ ತಾಂ (ಕುಸುಮಾ. ೧೩-೧೦೨); ಮಗನು ಕಾಣೆಯಾದದ್ದು ತಿಳಿದೊಡನೆ ಅವರ ಹೃದಯವೂ . . . ಬಾಡಿಹೋಯಿತು (ಕಂಬಹು. ೯೧). [< ಕಾಣ್]

**ಕಾಣೆ$_2$** (ನಾ). (ಕರಾ). ಒಂದು ಬಗೆಯ ಮೀನು: ಚಕ್ರಕ್ಕೆ ಮೊರಂಟೆಯಾದರೆ ಆರು, ಬೈಗೆಯಾದರೆ ನಾಲ್ಕು, ಬಂಗ್ಡೆ, ಕಾಣೆ ಇವತ್ತು ಇಲ್ಲ (ಹೊಸಕ್ಷಿ. ೪೯). [← ತುಳು. ಕಾಣೆ, ಕಾನೆ]

**ಕಾಣೆ$_3$** 'ಕಾಣಿ$_1$' ನೋ.

**ಕಾಣ್ಕೆ**, ಕಾಣಿಕೆ (ನಾ). ೧. ಕಾಣುವಿಕೆ; ನೋಟ; ದರ್ಶನ: "ತೋರ್ಪನೆ ಕಾಣ್ಕೆ" (ರನ್ನಕಂ. ೧೨); ಜಗತ್ರಯದೀಪಕನ ಕಾಣ್ಕೆಗೊಳಗಾದುದು ಲೋಕತ್ರಯಂ (ಆದಿಪು. ೧-೪೭); ಕಿನ್ನರ ಯುಗ್ಮಮೆತ್ತ . . . ಈ ಕನ್ನೆಯ ಕಾಣ್ಕೆಯೆತ್ತ ಮನುಜಂಗೆನಗೆ (ಕಾದಂಪೂ. ೬೮೪); ಕುರುಡನ ಕಾಣ್ಕೆಯುಂ ವನಿತೆಯರ್ಗೆಳಸಿರ್ಪನ ರಾಜ್ಯಮುಂ ಮನಂ ಮುರಿವನ ಧೈರ್ಯಮುಂ (ಧರ್ಮಾಮೃ. ೬-೯೮); ಅಹುದೊ ಅಲ್ಲವೊ ನಾವು ಕಂಡ ಕಾಣ್ಕೆಯು ದೇವ (ಭರತೇ. ೪-೧೩). ೨. ಉಡುಗೊರೆ; ಉಪಾಯನ: ಆ ಗಿರಿರಾಜವಿಲಾಸಮುೞ್ತಿಯಂ ತಂದುದು ಕಾಣ್ಕೆಯಂ ತನಗೆ ತರ್ಪವೊಲ್ (ಶಾಂತಿಪು. ೫-೨); ಒಸೆದು ಕೊಟ್ಟಂ ಕಾಣ್ಕೆಯಂ ತನ್ನೃಪಂ (ಉದ್ಭಟ. ೭-೧೩೨). ೩. ಅರಸರಿಗೆ ಹಾಗು ಅಧಿಕಾರಿಗಳಿಗೆ ಒಪ್ಪಿಸಬೇಕಾದ ನಜರು, —ನಜರಾಣಿ: ಕರಣಂಗಳ ಕಾಣ್ಕೆಯೆಂದು ಮನ್ನೆಯದೆಙೆಯೆಂದರುವಣವೆನ್ದು . . . ಕೊಣ್ಡವರ್ಚ್ಚಣ್ಣಾಳರ್ (ಸೌಇಇ. IX-i, ೨೬೪-೩೭; 1174); ಅಱವಂತು ಕಾಣ್ಕೆಯಂ ಕೊಟ್ಟೆಱಗಿಸೆ (ಕುಸುಮಾ. ೧೨-೧೩); ಬಂದು ಕಾಣ್ಕೆಯನಿತ್ತು . . . ಬಿನ್ನವಿಸುತಿರೆ (ಚೆಬಪು. ೩೫-೪). **ಕಾಣಿಕೆ**: ೧. ನಿರಾಕಾರದಿಂದ ಕಾಬ ಕಾಣಿಕೆ ಇನ್ನಾವುದೊ (ಮೋಳಿಮಾ. ೫೬-೨೩೪); ಈತನೊಬ್ಬನ ಕಾಣಿಕೆಗೆ ಕೌತುಕವ ಕಱದನು (ಕುವ್ಯಾಭೀ. ೩-೬೬); ಕಣ್ಣೆರಡು ಕಾಣಿಕೆಯೆರಡೆ? (ಉಯ್ಯಾಲೆ. ೩-೧೪); ಕಣ್ಣು ಕಿರಿದಾದೊಡಂ ಕಾಣಿಕೆಯ ಹೊಲ ಹಿರಿದು (ಹೆಬ್ಬೆರ. ೧೫-೧೨೬). ೨. "ಉಪಾಯನಂ, ಉಪಗ್ರಾಹ್ಯಂ, ಉಪಹಾರಃ, ಉಪದಾ – ಈ ೪ ಕಾಣಿಕೆ" (ನಾಚಿರಾ. ೧೩೫); ಎಲರ ಕಂಪನೆ ಕಾಣಿಕೆಯಾಗಿ ಪೋಗಿ ನೀಂ ಕೊಟ್ಟು (ಜಗವಿ. ೬-೧೨); ನೃಪಪರಿವಾರವೆಲ್ಲವು ಬಂದು ಕಂಡುದು ಕಾಣಿಕೆಯ ನೀಡಿ (ಕುವ್ಯಾಭೀ. ೧-೩೨); ದೇವರಿಗೆ ಕಾಣಿಕೆ ಹಾಕಿ ತುಪ್ಪದ ದೀಪ ಹಚ್ಚುತ್ತಾಳೆ (ಹೊಸಕ್ಷಿ. ೨೨೦). ೩. ಮನ್ನೆಗಾಣಿಕೆ ಸೇಸೆ ತಪ್ಪನ್ನೆಯವಾಯ ದಾಯಮಿವು ಸಲ್ಲವು (ಸೌಇಇ. IX-i, ೨೫೧-೪೫; 1149); ಸಿದ್ಧಾಯ ಹೊದಕೆ ಹದಿಕೆ ಕಾಣಿಕೆ ಕಡ್ಡಾಯ (ಎಕ. X (S), ಚಿಂತಾಮ. ೨-೨೨; 1355); ಹಣ ವೊಕ್ಕಲು ಗುತ್ತಗೆ ಕಾಣಿಕೆ ಖಡ್ಡಾಯ ಬೆಳ್ಳಕರಣೆ ಬೆಳುದಡಂ ಎಸೆವೊಸಗೆ ಬಿಟ್ಟಬಿಡಾರ (ಕಇ. I, ೫೩-೨೭; 1433). ೪. ಕೊಡುಗೆ: ಚೀಣಾ ದೇಶವು ಪ್ರಪಂಚಕ್ಕೆ ಕೊಟ್ಟ ಮೊದಲ ಕಾಣಿಕೆಯೆಂದರೆ ಈಗ ಬಳಕೆಯಲ್ಲಿರುವ ಮಾದರಿಯ ಕಾಗದ (ಮುದ್ರಕ. ೭೭); ಪಾಠದ ಅಂತಿಮ ಉದ್ದೇಶ ಕಲಾಜೀವನ . . . ಸಾಧ್ಯವಾದವರು ಕೃತಿ ರಚಿಸಿ ತಾವೂ ಕಲಾರಾಜ್ಯಕ್ಕೆ ಕಾಣಿಕೆ ಸಲ್ಲಿಸಬಹುದು (ಶಿಕ್ಷದ. ೨೪೩).

**ಕಾಣ್ಕೆಮಾಡಿಸು** = ಭೇಟಿಮಾಡಿಸು; ಸನ್ನಿಧಾನಕ್ಕೆ ಕರೆತರು: ನಿನ್ನ ಚಾವಡಿಯ ಬಲ್ಲಿದರಗ್ರಗಣ್ಯರನ್ನೇ ಆಯ್ದು ನಮಗೆ ಕಾಣ್ಕೆಮಾಡಿಸು (ಮಂತ್ರಶ. ೨೩-೯). **ಕಾಣ್ಕೆಮಾಡು** = ತೋರಿಸು; ಕಾಣುವಂತೆ ಮಾಡು: ತಾಮರೆಗಂ ಚಂದ್ರಂಗಂ ತಾಮಸಮಂ ಕಳೆದು ಕಾಣ್ಕೆ ಮಾಟ್ಪಂತೆವೊಲಾ ತಾಮರಸನಿಭಾಸ್ಯೆಗೆ ಸುರಕಾಮಿನಿ ಕಟ್ಟಿದಿರೊಳೆಸೆಯೆ ಕನ್ನಡಿವಿಡಿದಳ್ (ಆದಿಪು. ೭-೯). [ಕಾಣ್ + -ಕೆ]

**ಕಾಣ್ಕೆಗೈ** (ಕ್ರಿ). ಕಾಣಿಕೆಯನ್ನು ನೀಡು; ನಜರಾಣಿಯನ್ನು ಕೊಡು: ವನಪಾಲಂ ಕಾಣ್ಕೆಗೈದಂ ವಿಚಕಿಲದಲರಂ (ರಾಜಶೇ. ೧೦-೨). [ಕಾಣ್ಕೆ + ಗೈ (< ಕೆಯ್$_1$)]

**ಕಾಣ್ಕೆಗೊಡು**, ಕಾಣಿಕೆಗೊಡು (ಕ್ರಿ).=ಕಾಣ್ಕೆಗೈ: ಋಷಿ ನಿವೇದಕಂ ಷಡೃತು ಫಲಂಗಳಂ . . . ಶ್ರೇಣಿಕ ಮಹಾರಾಜಂಗೆ ಕಾಣ್ಕೆಗೊಟ್ಟು (ಧರ್ಮಾಮೃ. ೧-೬೨); ಕಾಣ್ಕೆಗೊಟ್ಟೆಱಗಿ ಬಿನ್ನವಿಸಿ (ಸಿದ್ಧರಾ. ೯-೧); ಬಸಂತಂ ಮುಂತಾಗಿ ಬಂದು ಕಾಣ್ಕೆಗೊಟ್ಟು (ಕಬ್ಬಿಕಾ. ೩೩೩); ದೊರೆ ಸಕಲ ಸಂಭ್ರಮದಿನಿದಿರ್ಗೊಂಡು ಕಾಣ್ಕೆಗೊಟ್ಟರದೋಲಗಿಸಿ (ಪದ್ಮರಾ. ೩-೩೬); ರಾಜಶೇಖರನೆಮ್ಮಾಳ್ದನವಂಗೆ ಕಾಣ್ಕೆಗೊಡು ಕೊಳ್ಳೆಂದಿತ್ತು ತದ್ರತ್ನಮಂ (ರಾಜಶೇ. ೫-೧೨೫). **ಕಾಣಿಕೆಗೊಡು**: ಕಾಣಿಕೆಗೊಟ್ಟು ಚರಣಾಂಬುರುಹಕೆಱಗಿದೊಡೆ (ಸಂಭಪ. ೨೦-೨); ಮಂದಗಮನೆಯ ರಖಿಳ ವಸ್ತುವ ತಂದು ಕಾಣಿಕೆಗೊಟ್ಟು ಕೈಮುಗಿದೆಱಗಿ ನಿಂದಿರಲು (ನಳಚ. ೩-೨೯); ಶರಧಿ ರಾಮಗೆ ನವರತ್ನಭೂಷಣಗಳ ಪಿರಿದು ಕಾಣಿಕೆಗೊಡುವಂತೆ (ಕಂನವಿ. ೨೫-೮೦). [ಕಾಣ್ಕೆ + ಕೊಡು]

**ಕಾಣ್ಕೆಯೀ**, ಕಾಣಿಕೆಯೀ (ಕ್ರಿ).=ಕಾಣ್ಕೆಗೈ: ಆ ಕುಮಾರಿಯರಿರ್ವರಂ ಕಾಣ್ಕೆಯಿತ್ತು (ಭಾವಚಿಂ. ೫-೨೨). **ಕಾಣಿಕೆಯೀ**: ತಂದು ಮುಕ್ತಾಫಲಗಳನು ಮುದದಿಂದ ಕಾಣಿಕೆಯಿತ್ತು (ನಳಚ. ೩-೩೫); ಹೊಸ ನನೆ ಹೂ ಫಲಗಳ ಕಾಣಿಕೆಯಿತ್ತು (ಜೀವಂಸಾಂ. ೧-೧೩); ಚಂಗಳ್ವಾಧಿಪನು ಕದನದೆ ಸೋತು ಕಂಗೆಟ್ಟು ಕಾಣಿಕೆಯಿತ್ತ ಮಂಗಲ ಗಜಶಾಲೆ (ಕಂನವಿ. ೬-೩೦). [ಕಾಣ್ಕೆ + ಈ$_2$]

**ಕಾಣ್ಕೆವೊಲ** (ನಾ). ಕಣ್ಣು ಕಾಣುವಷ್ಟು ಕ್ಷೇತ್ರ; ಕಣ್ಣಳವಿ; ದೃಷ್ಟಿಪಥ: ಕಾಣ್ಕೆವೊಲದಂಚಿಂದೆ. . . ಹಾರುತೊಯ್ಯನೆ ತೇಲಿ ಬಂದತ್ತು (ಶ್ರೀರಾಮಾ. ೧೫೦-೨೩೯). [ಕಾಣ್ಕೆ + ಪೊಲ]

**ಕಾಣ್ವ** (ನಾ). = ಕಾಣ್ವ: ಕಾಣ್ವರು – ಇವರು ಯಜುರ್ವೇದದ ಪ್ರಥಮಶಾಖೆಯ ಬ್ರಾಹ್ಮಣರು (ಕಭಾಗ. ೭೮). [< ಸಂ. ಕಾಣ್ವ]

**ಕಾಣ್ಪಡಿಸು** 'ಕಾಣ್ಬಡಿಸು' ನೋ.

**ಕಾಣ್ಬಟ್ಟೆ** (ನಾ). ೧. ಕಾಣುವ ಹಾದಿ; ನೋಡುವ ಮಾರ್ಗ. ೨. ಕಾಣುವ ಅವಕಾಶ,—ಎಡೆ. 'ಕಾಣ್ಬಟ್ಟೆಗೆಡು' ಪರಾ. [ಕಾಣ್ + ಬಟ್ಟೆ$_1$]

**ಕಾಣ್ಬಟ್ಟೆಗೆಡು** (ಕ್ರಿ). ೧. ಕಾಣುವ ಹಾದಿಯನ್ನು ತಪ್ಪು. ೨. ನೋಡುವ ಅವಕಾಶವನ್ನು ಕಳೆದುಕೊಳ್ಳು: ಕಟ್ಟರಣ್ಯದೊಳ್ ಕಳುಹಿ ಬಾಯೆಂದು ನಿನಗೆ ಕೊಟ್ಟನೆ ನಿರೂಪಮಂ ತಾನೆನ್ನ ಕಾ[ಪಾಠಾಂ. ಕ]ಣ್ಬಟ್ಟೆಗೆಟ್ಟನೆ (ಜೈಮಿಭಾ. ೧೯-೧೮). [ಕಾಣ್ಬಟ್ಟೆ + ಕೆಡು]

**ಕಾಣ್ಬಡಿಸು**, ಕಾಣ್ಪಡಿಸು (ಕ್ರಿ). ಕಾಣುವಂತೆ ಮಾಡು; ತೋರಿಸು: ದೇವ ರಘುವರಸಿಂಹರಿಗೆ ಹರನ ಚಾಪಮಂ ಸಾವಧಾನದಲಿ ಕಾಣ್ಬಡಿಪುದೆನಲು (ವೆಂಕಾರಾ. ೧-೧೯-೧೯); ಲತಾಮಂಟಪಸ್ಥಾನಗಳ ದಿವ್ಯತರ ಸರಸಿಗಳನು ಪದುಳದಿಂ ಕಾಣ್ಬಡಿಸಿ (ವೆಂಕಾರಾ. ೩-೧-೩೨). **ಕಾಣ್ಪಡಿಸು**: ಶಶಿಧರಂ ನಿನಗಾವ ನೀರನ ಭವತ್ಕರಣಕೊಸಗೆಯಿಂ ಕಾಣ್ಪಡಿಸಿ ಹೊಳಸಿದಂ (ಪರಶು. ೭-೨೨). [ಕಾಣ್ + ಪಡಿಸು]

**ಕಾಣ್ಕೆ₁** (ನಾ). ನೋಟ; ದರ್ಶನ: ಜಾನದೊಳ್ ತಾಂ ಕಂಡ ಕಾಣ್ಕೆಗೆ ಮನುಷ್ಯತೆ ಲಭಿಸಿದತ್ತೊ (ಶ್ರೀರಾಮಾ. ೧೩೪-೨೪೯); ಕಾಣ್ಕೆಯಿರ್ಪೆಲ್ಲರ್ಗೆ ಅನುಭವ ಪ್ರತ್ಯಕ್ಷಮಂ (ಶ್ರೀರಾಮಾ. ೫೮೦-೧೭೪). [ಕಾಣ್ + -ಮೆ]

**ಕಾಣ್ಕೆ₂** (ನಾ). ಶೌರ್ಯ; ಪರಾಕ್ರಮ: "ಕಾಣೆ[ಣ್ಕೆ]ಯೆ ಬಲ್ಲಾಳ್ [ಪಾಠಾಂ. ಳ್ತನ]" (ಚತುನಿ. II, ೮೦); ರಾವಣನ ಹೋಮವನು ಕಾಣ್ಕೆಲಿ ಹನುಮ ಕೆಡಿಸಿದನು (ಕೌಶಿರಾ. ೩೮-೪೬); ಕಾಣ್ಕೆಯಿಂ ಕಾಣದಿಹ ಪೊಂಬೊಗರ ನುಡಿಯೆಲ್ಲಿ (ಕಾಲೂರ. ೩೧-೨೫). [?]

**ಕಾಣ್ವ** (ಗು). ೧. ಕಣ್ವ ಮಹರ್ಷಿಯ ಸಂಬಂಧವಾದ. (ನಾ). ೨. ಕಾಣ್ವಶಾಖೆಗೆ ಸೇರಿದವನು. 'ಕಾಣ್ವಶಾಖೆ' ಪರಾ. [ಸಂ.]

**ಕಾಣ್ವಶಾಖೆ** (ನಾ). ಶುಕ್ಲ ಯಜುರ್ವೇದದಲ್ಲಿ ಒಂದು ಶಾಖೆ; ಕಣ್ವ ಮಹರ್ಷಿಗೆ ಸಂಬಂಧಪಟ್ಟ ಒಂದು ವೇದಶಾಖೆ: ಯಜುರ್ವೇದ ಕಾಣ್ವಶಾಖೆಯ ಶತಪಥಬ್ರಾಹ್ಮಣದ ಕಡೆಯ ಕೆಲವು ಅಧ್ಯಾಯಗಳೇ ಬೃಹದಾರಣ್ಯಕ (ಭಾರದ. ೩೮). [ಕಾಣ್ವ + ಶಾಖೆ]

**ಕಾಣ್ವಿಕೆ** (ನಾ). ಕಾಣುವಿಕೆ; ನೋಟ; ದೃಷ್ಟಿ: ಸಕಲಲೋಕಂ ಬೇಱೆ ಸಕಲಾತ್ಮರುಂ ಬೇಱೆ ಸಕಲೇಶ್ವರನೊರ್ವನದಕೆ ಬೇಱೆಂಬ ಕಾಣ್ವಿಕೆಯಿಂ ಕನಿಷ್ಟನವನ್ಯೆಸೆ (ಅನುಸಾ. ೨-೮-೩). [< ಕಾಣ್ + -ಇಕೆ]

**ಕಾತಕರಿ** (ನಾ). ೧. ಕಾಚು, ಇದ್ದಲು, ಮೊದಲಾದುವನ್ನು ತಯಾರಿಸುವ ಜನರ ಒಂದು ವರ್ಗ. ೨. ಆ ವರ್ಗದ ವ್ಯಕ್ತಿ: ಕಾತಕರಿಗಳು – ಕೆಲವರು ಪೊಕ್ಕಲತನ ಮಾಡುವರು, ಕೆಲವರು ಕೂಲಿ ಮಾಡುವರು (ಕಭಾಗ. ೨೦೫). [← ಮರಾ. ಕಾತಕಡೀ, ಕಾತಕರೀ, ಕಾತೋಡೀ]

**ಕಾತಘಾತ** (ನಾ). ದ್ರೋಹ (?): ಮಾಟವೆಲ್ಲ ಪುಸಿಯು ಸತಿಯ ರಾಟವೆಲ್ಲ ಸಂಚು ಸನ್ನೆ ನೋಟವೆಲ್ಲ ಕಾತಘಾತ [ಪಾಠಾಂ. ಘನ್ನಘಾತಕ] ಕೂಟವೆಲ್ಲ ವಂಚನೆ (ಪುರಂದ. ೨-೧೬-೧). [?]

**ಕಾತರ** (ಗು). ೧. ಕಳವಳಗೊಂಡ. ೨. ಅಸ್ತವ್ಯಸ್ತವಾದ. ೩. ಅಂಜಿದ; ಕಂಗೆಟ್ಟ; ದಿಗಿಲುಗೊಂಡ. ೪. ಆಸಕ್ತಿಯಿಂದ ಕೂಡಿದ; ಉತ್ಸುಕತೆಯುಳ್ಳ; ಆತುರಪಡುವ: ಖಚರೇಂದ್ರನ ಕಾತರದೃಷ್ಟಿಘಾತ ಚಂದನ ಘನಸಾರ ಕರ್ದಮ ನದಿಂ (ಪಂರಾಮಾ. ೯-೧೬೮). (ನಾ). ೫. ಕಳವಳ; ಉದ್ವಿ ್ರಂಕ: ಕಾತರದ ನಿಲಯ ಕಷ್ಟಂಗಳಾಲಯ ದೈನ್ಯದಿರವು ದುರ್ಭಿಕ್ಷದೆರವು ಭೂತಳದಿ ಪರಸೇವೆಯೆಂಬುದು (ವೆಂಕಾರಾ. ೫-೫-೨೨); ಅವಳು ಕಾತರದಿಂದ 'ನಿನ್ನ ಕೈ ಮುಂದೆ ಚಾಚು ರಂಗಣ್ಣ' ಎಂದಳು (ರಂಗರೋ. ೧೮). ೬. ಉತ್ಸುಕತೆ; ಆತುರ; ಉತ್ಕಂಠೆ: "ನಿಸದಂ ಕಾತಳಮೆ ಕಾತರಂ ಕವಿವರರಿಂ" (ಕವಿಕಂ. ೨೪೬); ಸತಿಯನಾಕ್ಷಣದಿಂದಮಭೀಕ್ಷಿಪ ಕಾತರದೆಡೆಗೊಂಡು (ಕುಸುಮಾ. ೧೪-೧೧೬). ೭. ಅತಿ ಉತ್ಕಂಠಿತನಾದ ವ್ಯಕ್ತಿ; ದುಡುಕಿನವನು: ತನ್ನ ತವಕಕ್ಕೆ ನೆರೆವಾತನತಿಕಷ್ಟನೊತ್ತಂಬದಿಂ ಕೂಡುವಾತಂ ಮೂರ್ಖಂ ಮುನ್ನಮೆವಿ [ಪಾಠಾಂ. ಲಿ]ಕ್ಕಿ ನೆರೆವಾತಂ ಕಾತರಂ (ಮದತಿ. ೧೦-೭೯); ತಾನೆ ಕಡಂಗಿ ಪೊಂಗಿ ಮುಂದಱಿಯದೆ ಕಾತರ ನೀಟ್ಟುಕೊಳ್ವೆನೆಂದಾ ಹರಿಣಾಕ್ಷಿಯನಿರದೆ ಕಾಳೆಗಕ್ಕೊಡರಿಸಿದಂ (ಪಂರಾಮಾ. ೧೦-೧೨೫). ೮. ಹೆದರಿದವನು; ಭಯಸ್ಥ: "ಭೀರು ಕರಂ ಕಾತರಂ ಭಯಸ್ಥಂ ತ್ರಸ್ತಂ" (ವಸ್ತುಕೋ. ೧೦೦-೧೨). ೯. [ನಾಟ್ಯ] ಮೂವತ್ತೈದು ದೇಶೀಯ ಭೌಮ ಚಾರಿಗಳಲ್ಲಿ ಒಂದು: ಅಂದಂಬಡೆದಾ ತಾಣದೆ ಪಿಂದಣ್ಗೆಯ್ದುಲ್ಕೆ ಚಾರಿ ಕಾತರ ಮೆನಿಕುಂ (ಲಾಸ್ಯರಂ. ೬-೬೭).

**ಕಾತರವಾಗು** = ಆತುರಪಡು; ಲವಲವಿಸು; ಉತ್ಸುಕವಾಗು: ನನ್ನ ಕಿವಿಗಳು ನಿನ್ನ ಸುಮಧುರ ಸ್ವರವನ್ನು ಕೇಳುವುದಕ್ಕಾಗಿ ಕಾತರವಾಗಿವೆ (ಸೀತಾರ. ೧). [ಸಂ.]

**ಕಾತರಂಗಡಿ** (ನಾ). ಸಾಂಬ್ರಾಣಿ ಮಾರುವವರ ಅಂಗಡಿ (?): ಆಚೆಲ್ಹಾಕಿದರೆ ಈಚೆಲಿ ಗಮ್ಮನ್ನೋದೆ ಕಾತ[ಪಾಠಾಂ. ವಲ್ಲಪು]ರಂಗಡಿಲಿರುವೋ(ದೆ) ಸಾಂಬ್ರಾಣಿಯ ವಲ್ಲಕೆ ಕಂಕಣಕೆ ಅಣಿಮಾಡಿ (ನಾಪದ. ೧೨೩). [ಕಾತರ ? + ಅಂಗಡಿ (< ಅಂಗಾಡಿ)]

**ಕಾತರಗೊಳ್ಳು** (ಕ್ರಿ). ೧. ಉತ್ಸುಕನಾಗು; ಆತುರಪಡು. ೨. ವ್ಯಥೆಪಡು; ಕಳವಳಿಸು: ಆತನೂ ರಕ್ತದಲ್ಲಿ ತೊಯ್ದ ಮಕ್ಕಳನ್ನು ಕಂಡು ಕಾತರಗೊಂಡನು (ಝಾಅಣಿ. ೧೫). [ಕಾತರ + ಕೊಳ್ಳು₁ (< ಕೊಳ್₁)]

**ಕಾತರತೆ** (ನಾ). ೧. ಉತ್ಕಂಠತೆ; ಉತ್ಸುಕತೆ: ಕಾತರತೆಯನಪ್ಪುಕೆಯ್ಯೆ ಬಗೆ ನೋಡಿದನಾಕೆಯನಾ ಕುಮಾರಕಂ (ಪಂರಾಮಾ. ೪-೧೦); ವೃತ್ತಿ ಶಿಕ್ಷಣಕ್ಕಾಗಿ ಈಗ ಜನತೆಯಲ್ಲಿ ಹೆಚ್ಚಿನ ಕಾತರತೆ ಕಂಡು ಬರುತ್ತಿದೆ (ಶಿಕ್ಷದ. ೧೯೫). ೨. ದಿಗಿಲು; ಅಂಜಿಕೆ; ಕಳವಳ: ಮಗನು ಇನ್ನೂ ವರೆಗೆ ಮನೆಗೆ ಬಾರದಿರುವುದನ್ನು ನೋಡಿ ಅವನಲ್ಲಿ ಕಾತರತೆ ಉತ್ಪನ್ನವಾಯಿತು (ರಂಗರೋ. ೨೦೫). [ಸಂ. ಕಾತರತಾ]

**ಕಾತರಪಡು** (ಕ್ರಿ). ಉತ್ಸುಕತೆಯನ್ನು ಹೊಂದು; ಉತ್ಕಂಠಿತವಾಗು; ಲವಲವಿಸು: ಅವರನ್ನೂ ಕೃಷ್ಣೆಯನ್ನೂ ಎಂದಿಗೆ ನೋಡೇವು ಎಂದು ಕುರುದೇಶ ಕಾತರಪಡುತ್ತಿದೆ (ವಚಭಾ. ೬೬). [ಕಾತರ + ಪಡು₁]

**ಕಾತರಿಕೆ ಕಾತರಿಕ್ಕೆ** (ನಾ). ೧. ಉತ್ಕಂಠೆ; ಔತ್ಸುಕ್ಯ: ಅಲವರಿಸುವ ಕಡುವೇಟಗಾರ್ತಿಯ ಕಾತರಿಕೆಯಂ ಕಳೆಯಲ್ಪಡೆದೆವು (ಅರ್ಧನೇ. ೫-೨ ವ). ೨. ದಿಗಿಲು; ಕಳವಳ: ಭಟರಿಗಂ ಕಾತರಿಕೆ ಭೀತಿಗಳ್ ಪೊದ್ದಿದವು (ತುರಂಗ. ೫೮-೪೯). ಕಾತರಿಕ್ಕೆ: ೧. ಆಮರ್ದಪ್ಪುವ ಕಾಯ್ಪು ಮೇಲುವಾಯ್ದೊದಗುವ ಕಾತರಿಕ್ಕೆ . . . ಮೇಱೆದಪ್ಪಿದುದು (ಸೂಕ್ತಿಸು. ೧೪-೪೩). [ಕಾತರ + – ಇಕೆ]

**ಕಾತರಿಕ್ಕೆ** 'ಕಾತರಿಕೆ' ನೋ.

**ಕಾತರಿಗ** (ನಾ). ೧. ಆತುರವುಳ್ಳವನು; ಉತ್ಕಂಠೆಯುಳ್ಳವನು: ಕೌರವರಾಯನಲ್ಲಿಗೆ ಕಾಳೆಗದ ಕಾತರಿಗರಿವರಟ್ಟಿದರು ಭಟ್ಟರನು (ಕುವ್ಯಾಭೀ. ೧-೧); ಈ ಧರೆ ಸೂಳೆಯಾಗಿರಿ ದೂತಿ ತನ್ನೊಡತಿಗೆ ಬಪ್ಪ ಕಾತರಿಗರ ಕಲೆಯಾಂತ ಕುಂಟಣಿ (ಭರಚ. ೩೬-೮೪). ೨. ದುಡುಕುವವನು; ಆತುರಗಾರ: ಪರವೆಣ್ಣಾಟಸಿ ಕದ್ದ ಕಾತರಿಗನ ಕರುಣರಹಿತ ಯಮನು ಕನಲಿ ಪಿರಿದು ನುಂಗಲು ಬೇಡವೇ (ಅನಂಚ. ೧೭-೪೧). [ಕಾತರ + – ಇಗ]

**ಕಾತರಿಗತನ** (ನಾ). ೧. = ಕಾತರಿಕೆ ೧: ಸಾರ್ವಭೌಮತೆಯ ಸಿರಿಗೆ ಪಾಂಡವರನ್ಯರಾದೊಡೆ ಮೆಱೆಯಲಱಿವುದೆ ನಿಮ್ಮ ಸಿರಿ ಕಾತರಿಗತನವನು ಮಾಣು (ಕುವ್ಯಾಉ. ೯-೨೦). ೨. ದುಡುಕು ಸ್ವಭಾವ: ಮೋಹರವ ಬಯಸುವ ಕಡುಮನದ ಕಾತರಿಗತನ ಬೇಡವೆಂದಳಿಂದು ಮುಖಿ (ಕುವ್ಯಾದ್ರೋ. ಒರಿಇ. ೨೭೮-೯ ಪರಿ.). [ಕಾತರಿಗ + – ತನ]

**ಕಾತರಿಸು** (ಕ್ರಿ). ೧. ಉತ್ಕಂಠಿತನಾಗು; ಹಂಬಲಿಸು: ನೆನೆದಿರುಳುಂ ಪಗಲುಂ ನಿನ್ನನೆ ಪೀನಮೊಱಲ್ದು ಕಾತರಿಸುತ್ತುಂ (ಕವಿರಾ. ೨-೮೧); ಹಣ ಬಂಗಾರ ವಸ್ತ್ರಕಪ್ಪಡ ಬಟ್ಟೆಯಲ್ಲಿ ನೆಟ್ಟನೆ ಬಿದ್ದಿರಲು ಕಂಡು ಕಾತರಿಸಿ ಕೈಮುಟ್ಟ ಎತ್ತದ ಭಾಷೆ (ಆದವ. ೫೨); ಕಾಯುವ ಕರಗುತಿರ್ದಳು ಕಾತರಿಸಿ ಸದ್ಗುರುವನಱಸುವ ವೇಧೆಯಲಿ (ಪ್ರಭುಲೀ. ೧೭-೨); ನಿನ್ನ ಬಣ್ಣನೆಗೇಳ್ದು ಕಾತರಿಸುತಿದೆ ಮನಂ ಕಾಂತಾಧರರಸಕ್ಕೆಳಸಿ (ಶ್ರೀರಾಮಾ. ೮೯-೩೧೪).

೨. ಸಿಡಿಮಿಡಿಗೊಳ್ಳು; ವ್ಯಗ್ರವಾಗು; ಉದ್ವಿಗ್ನಗೊಳ್ಳು : ಜಂಕರಿಸಂ ಕಾತರಿಸಂ ಮಾಂಕರಿಸಂ ಬೆಕ್ಕಸಂಬಡಂ (ಅಜಿಪು. ೫-೮೯) ; ಧರ್ಮ ಬುದ್ಧಿಯ ಮೇಲೆ ಕಳವನಿಟ್ಟು ಕಾಪಟಿದು ಕಾತರಿಸಿ ನುಡಿಯೆ (ಪಂಚತಂ. ೧೭೧-೭) ; ಅತಿ ಕಾತರಿಸದಿರು ವಲಲ ಸೈರಿಸು ಸೈರಿಸಕಟೆನುತ (ಕುವ್ಯಾವಿ. ೩-೨೩) ; ಹಸಿದರಿಗೆ ಕಾತರಿಸದಿಕ್ಕು (ಸರ್ವಜ್ಞ. ೬೪೯). ೩. ಕಳವಳಿಸು; ವ್ಯಥೆಪಡು ; ಚಿಂತಿಸು : ಹೆಚ್ಚಿದಾನಂದಾತಿರೇಕಕೆ ಚಿತ್ತ ನೆಱೆಯದು ಹೂತು ಹಿಗ್ಗುವ ಪುಳಕರಾಜಿಗೆ ದೇಹ ಕಿಱಿದೆನುತ ಕಾತರಿಸಿದನು (ಕುವ್ಯಾದ್ರೋ. ೧೫-೨) ; ಶೋಕದ ಹೊರಿಗೆಯಲಿ ಕಾತರಿಸಿ ನಡೆದನು ನೃಪತಿ (ನಳಚ. ೫-೧೯). ೪. ಬೆದರು ; ಅಂಜು : ಕಾತರಿಸಿ ಕಂಗೆಟ್ಟು ಸೀತದ ಭೀತಿಯಲಿ ನಿಲಲಾಱದೋಡಿದವೀತಿಹೋತ್ರನ ಮೇಲೆ ರವಿ ಮಿಕ್ಕವರ ಪಾಡೇನು (ತೊರರಾ. ೩-೨-೪); ತಳವಾಱಿರಿದೆ ಬಂದರೆಂದು ಕಾತರಿಸಿ ಬೆದೆಗಾತಿಯರನು ಬಿಟ್ಟಗಲುವ ವಿಟರುಗಳೆದೆಗೇಡನೇನ ಬಣ್ಣಿಸುವೆ (ಮೋಹತ. ೧೮-೨೫) ; ಕೋತಿಗಳ ಕಾಳಗಕೆ ಕಲಿಗಳು ಕಾತರಿಸುವರೆ (ಕೌಶಿರಾ. ೩೪-೧೨). ೫. ತುಳುಕು ; ಉಕ್ಕು : ಕಣ್ಣಾಲಿಯಲಿ ಕಾತರಿಸಿದವು ಜಲಬಿಂದುಗಳು ಪುರುಹೂತ ನಂದನನ (ಕುವ್ಯಾಕ. ೧೬-೮).

[ಕಾತರ + -ಇಸು$_3$]

**ಕಾತರೆ** (ನಾ). ಅಂಜಿದವಳು ; ಕಳವಳಗೊಂಡವಳು : ಸಾಗರೆಯು ಕಾತರೆಯಾಗಿ ಮಾತಾಡಿಸಿದಳು (ದೇವಿಚೌ. ೧೦೭). [ಸಂ. ಕಾತರಾ]

**ಕಾತಲಾ** (ನಾ). ಒಂದು ಬಗೆಯ ಮೀನು : ಎರಡು ಕಡೆಯೊಳೂ ಎರಡು ಕಾತಲಾ ತೇಲಿ ಬಂದಿತ್ತು. ಅದರೊಳಗೊಂದನು ಗುರುಗಳೊಯ್ದರು, ಒಂದು ಗಿಣಿ ಒಯ್ದಿತ್ತು (ನಿಬಂಧ. II, ೩೭೩).

[< ಸಂ. ಕಾತಲ]

**ಕಾತಲಿಸು** (ಕ್ರಿ). ಕಾತರಗೊಳ್ಳು ; ಆಸಕ್ತನಾಗು : ಕಾತಲಿಸಿ ವಿಷಯಂಗಳೊಳ್ ಪಂಬಲಿಸದ ಗುಣಮೈದಣುವ್ರತಂ ಜಿನಮತದೊಳ್ (ಶಾಂತಿಪು. ೧-೮೮). [< ಕಾತರಿಸು]

**ಕಾತಳ, ಕಾತಳಿ** (ನಾ). = ಕಾತರ ೫ : "ನಿಸದಂ ಕಾತಳಮೆ ಕಾತರಂ" (ಕವಿಕಂ.೨೪೭); "ಸಿಡಿಮಿಡಿ ಕಾತಳಮೆನಲ್ಕೆ ತಳ್ಳಂಕ" (ಶಬ್ದಮಂ. ೫೧); "ಕಾತಳ ಮನೋಭ್ರಮೆಯಕ್ಕು" (ಕಶರ. ೨೨). ೨. ಹೆದರಿಕೆ; ಭಯ : "ಕಾತಳ – ಕಾತರ = ದಿಗಿಲು, ಗಲಿಬಿಲಿ" (ತದ್ಭಕೋ. ೬). **ಕಾತಳಿ** : "ಕಾತಳಿ [ಪಾಠಾಂ. ತಳ]ಯೆಂದು ಕಾತರಂ" (ಕಶಸಾ. ೩೦-೬೨೭); ಗಜೇಂದ್ರಂ ಭೂತಳಮಂ ತಿರುಗುತ್ತೆ ಬಲ್ಕಾತಳದಿಂ ಕಳಲ್ದು (ಹಾಲಾಸ್ಯ. ೩-೧೭). [< ಸಂ. ಕಾತರ]

**ಕಾತಳಿ** 'ಕಾತಳ' ನೋ.

**ಕಾತಳಿಗ** (ನಾ). = ಕಾತರಿಗ: "ಕಾತಳಿಗನೆನಲ್ ಕಾತುರಮಂ ತಳೆದಂ" (ಚತುನಿ. II, ೯೪). [ಕಾತಳ + -ಇಗ]

**ಕಾತಳಿಗತನ** (ನಾ). = ಕಾತರಿಗತನ : ಕಾತಳಿಗತನದ ಕಳವಳಿಕೆಯಿಂದ ತಲ್ಲಣಿಸುತ್ತ (ಮಂತ್ರಶ. ೧೨೯-೮). [ಕಾತಳಿಗ + - ತನ]

**ಕಾತಳಿಸು** (ಕ್ರಿ). ೧. ಕಾತರಿಸು ; ಹಂಬಲಿಸು ; ಆತುರಪಡು. ೨. ಕಳವಳಿಸು ; ವ್ಯಥೆಪಡು : ಕಾತಳಿಸಿಯೆಕಾರ್ಣವದಲಿ ನೀಂ ಕಡು ಬಳಲಿ ಭೀತನಾದುದರಿಂದ ತನ್ನ ಸ್ವರೂಪಮಂ ಪ್ರೀತಿಯಿಂ ತೋಱಿಸದೆ (ಲಕ್ಷ್ಮಭಾ. ೩-೧೪-೧೮). ೩. ಹೆದರು ; ಅಂಜು : ಜಾತಸ್ಯ ಮರಣ ತಪ್ಪದು ಯೇತಕೆ ಚಿಂತಿಸುವೆ ಬರಿದೆ ಹಣೆಯಲೆ ಬರದಿರೆ ಕಾತಳಿಸ ಬೇಡ ಮಾನವ ಭೀತಿಯ ಬಿಡು (ನೀತಿಸಾ. ೪೩೫).

[ಕಾತಳ + - ಇಸು$_3$]

**ಕಾತಿ$_1$** 'ಖತಿ$_1$' ನೋ.

**ಕಾತಿ$_2$** 'ಕತ್ತಿ$_1$' ನೋ.

**ಕಾತಿ$_3$** (ನಾ). ಆಶ್ರಯ; ನೆಲೆ (?) : ನೀತಿ ಮಂಟಪದೊಳಗೆ ಭೀತಿ ಶರಣರಿಗುಂಟೆ ಮಾತಿನಲಿ ಮೊದಲು ನೂರೊಂದು ಸ್ಥಲಗಳಿಗೆ ಕಾತಿ ನೀಯೆಂದ ಹರಳನಿಗೆ (ಕನ್ನಜಾ. ೨೩೮-೨೮). [?]

**ಕಾತಿ$_4$** (ನಾ). ಗರತಿ; ಮುತ್ತೈದೆ : ಆಕಳ ಹಾಲು ಕರೆಯಲಿ ಹರಿಯಾಗ ಕಾತೆದ್ದು ಮೊಸರ ಕಡೆಯಾಲಿ (ಜನಗೀ. ೬-೧) ; ನೂಕಿನ್ನು ಕೊಲ್ಲುದಕೆ ಕಾತೇರು ನಿಮಗೇನ (ಲೋಕಗೀ. ೧೩೬-೨೨) ; "ಕಾತಿ – ಹೊಂಡ ; ಗರತಿ ; ಗಂಗಾದೇವಿ" (ಜಾನಕೋ. ೩೬). [?]

**-ಕಾತಿ$_5$** (ಪ್ರ). ಒಂದು ಸ್ತ್ರೀವಾಚಕ ಪ್ರತ್ಯಯ. 'ಬಿಂಕಕಾತಿ' ಪರಾ.

[< -ಕಾರ್ತಿ]

**ಕಾತಿಕೆ, ಕಾದಿಗ್ಗೆ$_2$** (ನಾ). (ಕರಾ) ಕೃತ್ತಿಕೆಮಳೆ: ಕೇಳಿನ್ನು ಕಾತಿಕೆಯ ಮಳೆ ಮುಗಿದು ಬಂದು (ಗೀಳಿವಿಂ. ೧೨೩-೪೦) ; ಸುಗ್ಗಿಕಾಲದಲ್ಲಿ ನುಗ್ಗೆ ತಿಂದರೆ ಕಾತಿಗೆ ಕಾಲದಲ್ಲಿ ಜಗಲಿ ತಿಂದಾನೇ (ಗಾದೆ). **ಕಾದಿಗ್ಗೆ$_2$** : ಬೇಸಗೆಯ ಬೇಸರಂ ಬೀಸು ಕಾದಿಗೆಯೇ (ಗೀಳಿವಿಂ. ೪೮-೧). [< ಸಂ. ಕಾರ್ತಿಕ]

**ಕಾತು** 'ಕಾಯ್$_3$' ಪರಾ.

**ಕಾತುರ** (ನಾ). ಆತುರ; ಉತ್ಕಂಠತೆ : ಅಱಸಿಕೊಂಡವನಿದ್ದೆಡೆಗೆ ಪೋಗಿ ನಾರಿ ನಾ ನೆಱೆ ಮೋಹಿಸಿದೆ ನಿನಗೆಂದು ಕರೆದೊಡೆ ಕಾತುರ ಪುಟ್ಟಲಱಿಯದು (ಕಂನವಿ. ೯-೧೪೧). [< ಕಾತರ]

**ಕಾತುರತೆ** (ನಾ). = ಕಾತರತೆ : ವೈರಿಯನ್ನು ಕೊಲ್ಲುವ ಕಾತುರತೆಯಿಂದ ಇಬ್ಬರ ಹೃದಯಗಳೂ ಮೂಕಾಗಿದ್ದವು (ಬಂಗಾಹೆ. ೭೨); ನಮ್ಮನ್ನು ಕಾತುರತೆಯಿಂದ ವಿಚಾರಿಸುತ್ತಾನೆ (ಚೆಂಗೂಲಿ. ೧). [< ಕಾತರತೆ]

**ಕಾತೆ** (ನಾ). ಒಂದು ಬಗೆಯ ಭೂಮಿ : ಆ ಗ್ರಾಮಂಗಳಿಗೆ ಸಲುವ ಭೂಮಿಯ ನೀರುವರಿಯವೊಳಗಣ ಚತುಸೀಮೆಗೆ ಸಲುವ ಕಾತೆ ಕಾರು ಗದ್ದೆ ಮಕ್ಕಿ ಹಕ್ಕಲು ಕುಂಮರಿ ಕೊಡಗಿ ಕೋಹು ಕಾಡಾರಂಭ ಮುಂತಾಗಿ (ಎಕ. VI, ಕೊಪ್ಪ. ೫೧-೭ ; 1403). [?]

**ಕಾತ್ತಿಗೆ** (ನಾ). ಕಾರ್ತಿಕಮಾಸ (?) : ಲೋಕಾಖ್ಯಳ ಅರಸತ್ತ ರ್ಮಾ ವರ್ಷನಕ್ಕಾತ್ತಿಗೆ ಕಪುಲಿಕ್ಕುಱುಂಕ್ಕಿ ಭಟಾರಕ ಪೊಯ್ದ ಪೊನ್ ನೂಱು ಗದ್ಯಾಣಮೆ (ಎಕ. X, ಕೋಲಾರ. ೧೧-೩ ; 753). [< ಕಾರ್ತಿಕ ?]

**ಕಾತ್ಯಾಯನಿ** (ನಾ). ೧. ಪಾರ್ವತಿ; ದುರ್ಗೆ : "ಗಿರಿಜೆ ರುದ್ರಾಣಿಯಂಬಿಕೆ ಕಾಳಿ ಮೇನಕಾತ್ಮರುಹೆ ಕಾತ್ಯಾಯನಿ . . . ಶಿವೆಯೆನಲು ಗೌರಿಯಕ್ಕುಂ" (ಮಂಗರಾ. ೪-೧೨). ೨. ನಡುವಯಸ್ಸಿನ ವಿಧವೆ : (ಕಿ). ೩. ಯಾಜ್ಞವಲ್ಕ್ಯನ ಹೆಂಡತಿ. [ಸಂ. ಕಾತ್ಯಾಯನೀ]

**ಕಾತ್ಯಾಯನಿಕೆ** (ನಾ). ನಡುವಯಸ್ಸಿನವಳು: "ಅರ್ಧವೃದ್ಧಾ, ಕಾತ್ಯಾಯನಿಕಾ—ಈ ೨ ಹರೆಯದವಳ್" (ಹಲಾಯು. ೮೦-೩೩೦); "ನಡುಹರೆಯದವಳು ಕಾತ್ಯಾಯನಿಯಕ್ಕು" (ಮಂಗರಾ. ೮೯-೨). [ಸಂ. ಕಾತ್ಯಾಯನಿಕಾ]

**ಕಾದಂದೆ** (ನಾ). (?) : ಮೆಱುದೂರ ಮಾರನ್ದೆಯರ್ ವೆದಂಗದಿರ್ ಕಿತ್ತೂರ ವಯ್ಸರು ಕಾದನ್ದೆಯರ್ ಪೆರ್ವ್ವಯಲ ಕಪ್ಪಿವ್ವರು ಕೆದಱಿಯರು ಕುರ[ಬ]ರು ಗಣಿಯರು . . . ಸಾಕ್ಷಿ (ಇಆ. XIV, ೨೩೨-೫೮ ; 9ನೆಯ ಶತ). [?]

**ಕಾದಂಬ** (ನಾ). ಬೂದುಬಣ್ಣದ ರೆಕ್ಕೆಗಳುಳ್ಳ ಹಂಸಪಕ್ಷಿ, —ಅಂಚೆ: "ಕಳಹಂಸಂ ಕಾದಂಬಂ" (ವಸ್ತುಕೋ. ೪೨-೧೩) ; ಕಾದಂಬ ಭೃಂಗರವಂ ಕೀರ ಚಕೋರ ಸಾರಸ ಮಯೂರಾರಾವದಿಂ ಬನ್ನಿ ಮಿತ್ತಿರಿಮೆಂಬಂತೆ ವೊಲಾಯ್ತು (ಸುಕುಮಾ. ೪-೪೪). ೨. ಕದಂಬವೃಕ್ಷ; ಕಡಹದ ಮರ. ೩. ಕದಂಬದ ಹೂ; ಕಡಹದ ಹೂವು. ೪. ಕದಂಬವಂಶಕ್ಕೆ ಸೇರಿದವನು. ೫. ಬಾಣ; ಅಂಬು. ೧, ೨ : ಮತ್ತಮಾಘನಸಮಯಂ . . . ನಳಿನಭವಾಂಗದಂತೆ ಕಾದಂಬ ವಿತತಾಮೋದಪಾಹಮುಂ (ರಾಜಶೇ. ೮-೧೧೮ವ).

**ಕಾದಂಬ ಕಂಠೀರವ** = ಕದಂಬರಲ್ಲಿ ಸಿಂಹದಂತೆ ಇರುವವನು; ಒಂದು ಬಿರುದು: ಮಾರ್ಕ್ಕೊಲ ಭೈರವಂ ಸಮರಜಯಘಂಟಾರವಂ ಕಾದಂಬ ಕಣ್ಠೀರವಂ . . . ಶ್ರೀಮನ್ಮಹಾಮಣ್ಡಳೇಶ್ವರಂ ಕೀರ್ತಿವರ್ಮ ದೇವರ್ (ಸೌಇಇ. XX, ೪೧-೧೦; 1068). **ಕಾದಂಬ ಚಕ್ರಿ** = ಕದಂಬ ವಂಶದ ಅರಸು: ಕಾದಂಬ ಚಕ್ರಿ ಮಯೂರ ವರ್ಮ್ಮ . . . ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ (ಸೌಇಇ. XX, ೭೬-೧೧; 1118). [ಸಂ.]

**ಕಾದಂಬರಿ** (ನಾ). ೧. ಕದಂಬಪುಷ್ಪದಿಂದ ಮಾಡಿದ ಮದ್ಯ. ೨. (ಯಾವುದಾದರೂ) ಕಳ್ಳು; ಮದ್ಯ: "ಮೈರೇಯಮಾಸವಂ . . . ವಾರುಣ ಮದಿಷ್ಠೆ ಕಾದಂಬರಿ ಪರಿಸ್ರವಣ ಕಲ್ಯಮೆನೆ ಕಳ್ಳೆನಿಕ್ಕುಂ" (ಮಂಗರಾ. ೬೫-೮). ೩. (ಮಾಲ್ಯವತ್ಪರ್ವತದಲ್ಲಿರುವ) ಒಂದು ನದಿಯ ಹೆಸರು: ಮುನಿನಿಕರ ಸೇವಿತಮಪ್ಪ ಕಾದಂಬರಿಯೆಂಬ ಬೆಟ್ಟ ಪೊನಲಿಂ (ವಿರೂಪಾ. ೨೮ ವ). ೪. ಬಾಣಭಟ್ಟನಿಂದ ಸಂಸ್ಕೃತದಲ್ಲಿ ರಚಿತವಾದ ಒಂದು ಗದ್ಯಕಾವ್ಯದ ಹಾಗೂ ಅದರ ಕಥಾನಾಯಕಿಯ ಹೆಸರು. ೫. ಗದ್ಯಕಥಾ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಪ್ರಕಾರ: ಕಾದಂಬರಿ ಕರತಲ ರಂಗಭೂಮಿ; ಅಂಗೈ ಮೇಲಿನ ನಾಟಕ ಶಾಲೆ (ಕಾನೂರು. iii, ೮೦೪); ಕಾದಂಬರಿ ಎಲ್ಲ ಆಧುನಿಕ ಸಾಹಿತ್ಯಗಳಲ್ಲಿಯಂತೆ ಕನ್ನಡದಲ್ಲಿಯೂ ಅತ್ಯಂತ ಲೋಕಪ್ರಿಯವಾದ ಸಾಹಿತ್ಯ ಪ್ರಕಾರವಾಗಿ ಬೆಳೆದು ಬಂದಿದೆ (ನಡೆದಾ. II, ೧೨೮೧).
[ಸಂ. ಕಾದಂಬರೀ]

**ಕಾದಂಬಿನಿ** (ನಾ). ಮುಗಿಲುಗಳ ಗುಂಪು; ಮೇಘಮಾಲೆ: "ಚಲಿಸುತ್ತಿರುವ ಪೊಸತಪ್ಪ ಮುಗಿಲಮಾಲೆಯಂ ಕಾದಂಬಿನಿಯೆಂಬುದು" (ಹಲಾಯು. ೧೧-೬೦); ಕೃತಿ ಕಾದಂಬಿನಿ ರಸಮಂ ಕ್ಷಿತಿಜ ಸಭಾಕ್ಷಿತಿಗೆ ಸುರಿವ ಸಮಯದೆ (ರಾಜಶೇ. ೧-೩೭). [ಸಂ. ಕಾದಂಬಿನೀ]

**ಕಾದಂಬಿನೀನಾಥ** (ನಾ). ಮೇಘಾಧಿಪತಿ; ಇಂದ್ರ: ಮಾರುತೀ ಪರಮೋದಾರ ದಾರನೊಳ್ಕೂಡು ನಲ್ಲನೊಳ್ ಸಾರ ಕಾದಂಬಿನೀನಾಥನಾ ಗೂಢಗುಣಧಾಮನೊಳ್ (ಕವಿರಾ. ೨-೧೨೨); "ಚಂದ್ರ" (ಕವಿರಾ. ಟಿಪ್ಪಣಿ). [ಸಂ. (ಕಾದಂಬಿನೀ + ನಾಥ)]

**ಕಾದಗ** 'ಕಾಗದ' ನೋ.

**ಕಾದವ್‌ಕಣ್** (ನಾ). ಒಂದು ಸ್ಥಳದ ಹೆಸರು (?): ಪೂಲಿಕೆಱೆ ಕಾದವ್‌ಕಣ್ ಮೊರೈಡಿ ವಾಡಿ ಕೊಮರ ಮಂಗಲ-ಕೆಱೆ ಪಳ್ಳಮ್ (ಮೈಆರಿ. ೧೯೨೪, ೪೦-೧೧೦; 799). [?]

**ಕಾದಮ್ಮ** (ನಾ). ಒಬ್ಬಾತನ ಹೆಸರು: ನೂಪ್ಪ್ರದಿಂಬರುಮಿಬ್ಬ ದಯೆಗೆಯ್ಯೆ ಕಚ್ಚವರ ಕಾದಮ್ಮನ ಪುತವುರಂ ಬಿಡಿಸಿದೊಂ (ಇಅ. XII, ೨೨೫-೯; 916). [?]

**ಕಾದರಾಯಿ** (ನಾ). ಒಂದು ಬಗೆಯ ಬಟ್ಟೆ: ಕಪಡಾ ಜೀನಸುಗಳು . . . ೯ ಕಲಿಕಾ; ೧೦ ಕಾದರಾಯಿ (ಮುಂಬವ್ಯಾ. ೧೪೧).
[← ಮರಾ. ಕಾದರಾಈ. / ಇಂ. Corduroy]

**ಕಾದಲ್**$_1$, ಕಾದಲೆ$_1$ (ನಾ). ನಲ್ಮೆ; ಒಲವು; ಪ್ರೇಮ: ರತದ ಕಾದಲೆಸಾಱೆ ಪೊಡರ್ಪು ಮೇಱೆದಪ್ಪಿದುದೆನೆ (ಸೂಕ್ತಿಸು. ೧೪-೪೭). **ಕಾದಲೆ**$_1$: ಕಣ್ಣ ನಗೆಯ ಸೆಲೆಯೊಲು, ಬಿರಿವೂಗಳ ಕಾದಲೆಯೊಲು (ಗಿಳಿವಿಂ. ೩೯-೩೪).
[ದೇ. ‖ ತಮಿ. ಕಾದಲ್; ತೆಲು. ಗಾದಿಲಿ]

**ಕಾದಲ್**$_2$ (ನಾ). ಒಂದು ಬಗೆಯ ಸಸ್ಯ; ಕೂಳಗೆಡ್ಡೆ: ಒದವಿರ್ದ ಕಾದಲಂ ಬೆಲ್ಲದೊಳಂ ತುಪ್ಪದೊಳಮಟ್ಟು ತಿಂದೊಡಂ . . . ಕ್ರಿಮಿ ಪೋಕುಂ (ಲೋಕೋಪ. ೯-೧೧೪); ಮುಗಿಲಿದಿರೇಱೆ ಕಾದಲಲರೇಱೆ ಪೊಲಂ ಪಸುರೇಱೆ ಕಾಡಮಲ್ಲಿಗೆ ನನೆಯೇಱೆ (ಜಗವಿ. ೪-೪). [?]

**ಕಾದಲ** (ನಾ). ೧. ಪ್ರೀತಿಪಾತ್ರನಾದವನು; ಇನಿಯ; ನಲ್ಲ; ಪ್ರಿಯತಮ: "ನಲ್ಲರ್ಕಳೋಪರ್ಕಳಾ ಪ್ರಿಯರೊಳ್ ಕಾದಲರ್" (ಕರ್ಣಾನಿ. ೬೩); "ಕಾದಲಂ ನಲ್ಲಂ ಇನಿಯಂ ಓಪಂ ಮನದನ್ನಂ – ಈ ೫ ಪ್ರಿಯಂಗೆ ಪೆಸರ್" (ಕಶಸಾ. ೧೯-೩೮೯); ಸುಕೀರ್ತಿಯುಂ ಕಾದಲನ ವಿಯೋಗಂ ಕಾರಣಮಾಗೆ . . . ತನ್ನಂ ತಾನಿಱಿದು ಸತ್ತಳ್ (ವಡ್ಡಾರಾ. ೩೬-೨೭); ಕಾದಲಂಗೆ ಸಯ್ತಂತಿರು ನಾಣ್ಚದೆಂದು . . . ಬುದ್ಧಿವೇಳ್ದಂತೆ (ಪಂಪಭಾ. ೩-೭೮); ಕಾದಲನ ಕಾಲ್ವಿಡಿಪಿಂ ಕಳೆದಳ್ ಕನಲ್ಕೆಯುಂ (ಚಂದ್ರಪ್ರ. ೮-೬೨); ಎಳಸಿ ಕಾದಲರೊಡನಿರುತಿಹರಲ್ಲಿ ಕಾದಲೆಯರು (ಕುರಾಸಾಂ. ೩-೩೨). ೨. ಗಂಡ; ಒಡೆಯ; ಪತಿ: "ಕಾದಲನುಂ ನಲ್ಲನುಮೆಂಬೀ ಧರೆಯೊಳಗಿನಿಯನೋಪನಾ ಮನದನ್ನಂ ಸಾದರದೆ ಪತಿಯ ಪೆಸರುಗಳ್" (ಕವಿಕಂ. ೧೭೧); ಕಾದಲನಿಲ್ಲದ ಪೆಱಗೆ ನೋಯಿಪರೆ ನೀವೆನ್ನಂ (ಕಬ್ಬಿಕಾ. ೬೫); ಪಾಲ್ಗಡಲ ಮಗಳ ಕಾದಲನ (ರೇವಣ. ೧೧೪-೧).

**ಕಾದಲಳ್** = ಪ್ರೀತಿಪಾತ್ರಳಾದವಳು; ನಲ್ಲೆ; ಪ್ರೇಯಸಿ: ಒಲವಿನೊಳಾದ ಕಾಯ್ಪು ಮಿಗೆ ಕಾದಲನಂ ಬಿಸುಟಂತೆ ಪೋಪ ಕಾದಲಳ್ (ಪಂಪಭಾ. ೪-೧೦೮). [ಕಾದಲ್$_1$ + – ಅ$_7$]

**ಕಾದಲೆ**$_1$ 'ಕಾದಲ್$_1$' ನೋ.

**ಕಾದಲೆ**$_2$ (ನಾ). ೧. ಪ್ರೀತಿಪಾತ್ರಳಾದವಳು; ನಲ್ಲೆ; ಪ್ರಿಯೆ: ಕಾದಲೆಯೆಂದಿನಿಯಳ್ ತಾ ನೋಪಳೆಂದು ನಲ್ಲಳೆನಲ್ಕಂದನುನಯದಿಂ ಪ್ರಿಯೆ" (ಕವಿಕಂ. ೧೭೨); "ಕಾದಲೆಯನಲ್ಕೆ ಪ್ರಿಯೆತಮೆಗೊಪ್ಪಿದಭಿಧಾನ" (ಕಶರ. ೧೨೧); ಎಡೆವೋಪಾ ಜೋಡೆ ಕಾಮಂಗೆ ಕಾದಲೆಯಕ್ಕುಂ (ಪಂಪಭಾ. ೪-೮೪); ಕಾದಲೆಯರುಗಳು ತಮತಮಗೆ ಘರ್ಮೋದಕದಿಂ ಮೈದೊಳೆದು (ನವಮೋ. ೧೧-೨೧); ಆ ನಿನ್ನ ಕಾದಲೆ, ನಿನ್ನ ಹೊನ್ನ ಹಕ್ಕಿ (ತುಂಗಭ. ೧೦೩). ೨. ಹೆಂಡತಿ; ಮಡದಿ; ಸತಿ: ಕಾದಲೆವೆರಸೆಟ್ಟಂದು . . . ಮಲ್ಲಣನೊಳಪೊಕ್ಕು (ಉದ್ಭಟ. ೧೨-೬೩); ಕಾದಲೆ ನಿನ್ನ ನೋಯಿಸಿದೆನಹುದು ಮಱಿಯಾ ದೊಡ್ಡ ನೋವ ನೀನೆಂದ (ಭರತ. ೧೪-೭೬); ಕಾದಲೆ ನೋಳ್ಪುದೀತನ ಸಮಗ್ರ ಪರಾಕ್ರಮಮುರ್ವಿ ಪೆರ್ಚುಗುಂ (ಶಬಶಂ. ೪-೬೭). [ಕಾದಲ್$_1$ + – ಎ$_2$]

**ಕಾದಲ್ಮೆ** (ನಾ). ಒಲವು; ಪ್ರೀತಿ; ಸ್ನೇಹ: "ಕಾದಲ್ಮೆಯೆಂದು ಸ್ನೇಹಂ" (ಶಮದ. ಪರಿ. ೨); ಎಱಕಂ ತಕ್ಕಟ್ಟಱು ಕೂರ್ಪೊಱಲುಂ ಕಾದಲ್ಮೆಯೆನ್ನಲಿವು ಸುಸ್ನೇಹಂ" (ಕವಿಕಂ. ೧೭೩); ಮೆಯ್ವೆರ್ಚಿ ಕಾದಲ್ಮೆ ಕೆಯ್ಮಿಗುವನ್ನಂ (ಕಾವ್ಯಾವ. ೮೦೧); ತಂತಮ್ಮ ಮನದ ಮಚ್ಚರದ ಮಚ್ಚಿನ ಕಾದಲ್ಮೆಯಾಗಿ ಕೈಗೆಯ್ದು (ಅನಂಪು. ೧೨-೧೨ ವ); ತನ್ನಯ ಹೃದಯದೊಳಗಿರ್ದ್ದ ಕಾದಲ್ಮೆಯಿರವ ಕನ್ನಡಿಸಿ (ಸೌಂದಪು. ೮-೮೨); ನಿನ್ನೊಂದು ಕಾದಲ್ಮೆಯಿಂ ಮುದಮಂ ತಾಂ ಗುಡಿಗಟ್ಟೆ (ರಸರ. ೧-೫೨). [ಕಾದಲ್$_1$ + – ಮೆ]

**ಕಾದಳಕಾಂಡ** (ನಾ). ಬಾಳೆಯ ಕಂಬ; ಕದಳಿಕಾಂಡ: ಕಾದಳಕಾಂಡೋರು ಗವೇಂದ್ರಕಂಧರಂ . . . ಧರಣೀಶಸೂನು ತಳೆದಂ ಸಾಶ್ಚರ್ಯ ಸೌಂದರ್ಯಮಂ (ಚಂದ್ರಪ್ರ. ೪-೭).
[< ಸಂ. ಕಾದಲಕಾಂಡ)]

**ಕಾದಳೂರ್** (ನಾ). ಒಂದು ಊರಿನ ಹೆಸರು: ಕಾದಳೂರ ಶ್ರೀವಿಕ್ರಮ ಗಾಮುಣ್ಡರುಂ ಕಲಿದುರ್ಗಗಾಮುಂಡರುಂ (ಎಕ. II, ೩೫-೭; 800). [ಕಾದಳ್$_0$ + ಊರ್]

**ಕಾದಾಟ** (ನಾ). ಕದನ; ಹೋರಾಟ: ಅವರ ಕಾದಾಟ, ರಂಬಾಟ, ರಂಪಗಳು ನನಗೆ ಸರಿದೋರಲಿಲ್ಲ (ಆಲಹೂ. ೧೫೨); ಕಾದಾಟವನ್ನು ಲಕ್ಷ್ಯಪೂರ್ವಕವಾಗಿ ನೋಡಿದನು (ಬಂಗಾಹೆ. ೧೭). [< ಕಾದಾಡು]

**ಕಾದಾಡು** (ಕ್ರಿ). ಕದನವಾಡು; ಹೋರಾಡು: ತರುಗಳ್ ಜೀವಿಗಳಲ್ಲವೇ ಪ್ರತಿಮೆಗಳ್ ಕಾದಾಡವೇ (ಸೋಮೇಶ. ೧೮); ಅಂತು ಕಾದಾಡುತಿರ್ಪ ಕೋಟಿಗಳಂ ಕಂಡು (ದಶಕು. ೧೧-೫೦ ವ); ರಾಷ್ಟ್ರದ ಕೀರ್ತಿಗೌರವಗಳನ್ನುಳಿಸಲು ಕಾದಾಡಬೇಕಾದ ಸಂದರ್ಭ (ಶಿಕ್ಷದ. ೩೮೪). [ಕಾದು$_2$ + ಆಡು$_1$]

**ಕಾದಾಳಿ** (ನಾ). ಕಾದಾಟವೇ ಶೀಲವಾದವನು; ಹೋರಾಟಗಾರ: ಕಾದಾಳಿ ಭಟರು ಡಬ್ಬೆಯ ಬಾಗಿಲಲ್ಲಿ ಮಾತ್ರ ಅದ್ಭುತ ಪರಾಕ್ರಮವನ್ನು ತೋರುತ್ತಾರೆ (ಕಯಾತ್ರ. ೭). [ಕಾದು$_2$ + -ಆಳಿ$_3$]

**ಕಾದಾಳ್ತನ** (ನಾ). ಕಾದುವ ಪರಾಕ್ರಮ; ಯುದ್ಧಶೌರ್ಯ: ಬಱು ಬಡವು ಬಣಗುಗಳಂ ಕೊಂದೆ ತಿಂದೆನೆಂದೊಡೊಂದು ಕಾದಾಳ್ತನಮೆ (ರಾಮಾಶ್ವ. ೧೪೪-೧೭). [ಕಾದು$_3$ + ಅಳ್ತನ]

**ಕಾದಿ** 'ಖಾದಿ' ನೋ.

**ಕಾದಿಗೆ$_1$** (ನಾ). ಕಂದಕ; ಅಗಳ್ತೆ: ಸಾರವಸ್ತುಗಳಿಂ ನೆಱೆದಂಭೋರಾಶಿಯೆ ಕಾದಿಗೆ ಕಾವನುಂ ಸೀರಪಾಣಿ (ಪಂಪಭಾ. ೪-೩೨). [< ಸಂ. ಖಾತಿಕಾ]

**ಕಾದಿಗೆ$_2$** 'ಕಾತಿಕೆ' ನೋ.

**ಕಾದಿಯೂರ್** (ನಾ). ಒಂದು ಊರಿನ ಹೆಸರು: ಆತುಕೂರ್ಪನ್ನೆರಡುಂ ಬೆಳ್ವೊಲದ ಕಾದಿಯೂರಮಂ ಬಾಳ್ಗಿ ಮೆಚ್ಚುಗೊಟ್ಟು (ಎಕ. IV, ಮಂಡ್ಯ. ೪೧-೨೨; 950). [ಕಾದಿ$_0$ + ಊರ್]

**ಕಾದಿಸು** (ಕ್ರಿ). ೧. ಕಾದಾಡುವಂತೆ ಮಾಡು; ಹೋರಾಡಿಸು: "ಕಾದಿಸು – ಸಂಗರಕ್ರಿಯಾಯಾಂ" (ಶಮಧಾ); ಚಿತ್ರವಾಹನನೊತ್ತಿ ಪುಗುತ್ತನ್ದು ಕಾದಿಸೆ ಕಣ್ಣ (ಎಕ. VIII, ಸೊರಬ. ೧೦-೭; 800); ಸೋದರರೊಳ್ ಸೋದರರಂ ಕಾದಿಸುವುದು (ಆದಿಪು. ೧೪-೧೨೨); ಕುಕ್ಕುಟಾವಳಿಯನನುರಾಗದಿಂ ಕಾದಿಸುತೆ (ನಂಬಿರ. ೫-೧೧೧); ಮಗಧನ್ ತೊಡಕಿ ಕೋಟೆಯ ಮಾಡಿ ಭೀಮನ ಕಾದಿಸಿದ ಪರಿಯ (ಕುವ್ಯಾಸ. ೩-೩); ತಗರ ಕಾದಿಸುವ ಮಲ್ಲರ ಹೋರಿಸುತ್ತಿಹ . . . ರಾಜಪುತ್ರರು ಸೊಗಸಿದರು (ಕಂನವಿ. ೨-೭೬). ೨. [ಗಣಿತ] ಗುಣಿಸು: ಮತ್ತಂ ಕಾದಿಸು ಪೊಜಿಸು ಉತ್ತಮದಿಂ ಪೇಟಿ ಮೊದಲ ಗುಣಕಾರಂಗಳ್ (ವ್ಯವಹಾ.೧೦-೧೧). [ಕಾದು$_1$ + -ಇಸು$_3$]

**ಕಾದು$_1$** (ಕ್ರಿ). ಹೋರಾಡು; ಯುದ್ಧಮಾಡು; ಕದನಮಾಡು: "ಕಾದು – ಯುದ್ಧೇ" (ಶಮಧಾ); ಪಲ್ಲವರಂ ಕಾದೆಱದು (ವ್ಯೆಅರಿ. ೧೪೩೭, ೧೭-೧೧; 450); ಈತನೊಳ್ ಇದಿರ್ಚಿ ಕಾದುವ ಮರುಳ್ತನಂ ಬೇಡ (ಆದಿಪು. ೧೩-೫೭ ವ); ಬೇಡಿದರ್ಗಿಲ್ಲೆಂಬುದುಂ ಕಾದಿ ಸೋಲ್ವುದುಂ ಪೆಱವೆಣ್ಣಂ ಪೀಡಿಸುವುದುಂ ಕನಸಿನೊಳಪ್ಪೊಡಮಿಲ್ಲಂ (ಗದಾಯು. ೨-೭ ವ); ಕಾದಿ ಕೊಲುವೊಡೆ ಪಾಂಡುಸುತರು ಸಹೋದರರು (ಕುವ್ಯಾಉ. ೧೦-೧೨); ಆತ್ತೆ ನಾದಿನಿಯರೊಳಳುಕದೆ ಕಾದುವುನ್ಮತ್ತೆಯರೀ ಕೃತಿಗೇಳಿ . . . ಪತ್ತುಗೆನೆರಸಿ ಬಾಳುವರು (ಹದಿಬ. ೧-೫೮). [ದೇ. ॥ ತಮಿ. ತುಳು. ಕಾದು]

**ಕಾದು$_2$** (ನಾ). ಹೋರಾಟ; ಕದನ. 'ಕಾದಾಡು', 'ಕಾದಾಳಿ' ಪರಾ. [< ಕಾದು$_1$]

**ಕಾದು$_3$** 'ಕಾ' ಪರಾ.

**ಕಾದು$_4$** 'ಕಾಯ್$_2$' ಪರಾ.

**ಕಾದುವಟ್ಟೆ** (ನಾ). ಒಂದು ಪ್ರದೇಶದ ಹೆಸರು: ಕಾದುವಟ್ಟೆಬೀರಯ್ಯರ ವೀರವನಳ್ಳಂ ತರಿಸಿ ಶ್ರೀ ಕಲ್ನಾಟುಗೊಟ್ಟರ್ (ಎಕ. XI, ದೇವನ. ೧೦-೧೦; 948). 'ಕಾಡುವೆಟ್ಟೆ' ಪರಾ. [?]

**ಕಾದುವೆಟ್ಟೆ** (ನಾ). ಒಂದು ಸ್ಥಳದ ಹೆಸರು (?): ಕಾದುವೆಟ್ಟೆ ಜಗತುಂಗಗಾವುಣ್ಡನ ತಮ್ಮ ಕಾದ ಸುರಲೋಕ (ಎಕ. XI, ಹೊಳಲ್ಕೆ. ೧೩೫-೪; 527). [?]

**ಕಾದುಹ** (ನಾ). ಕಾದಾಡುವಿಕೆ; ಯುದ್ಧ: "ತುಮುಲ, ರಣಸಂಕುಲ – ಬೆರಸಿ ಕಾದುಹ" (ನಾಚಿರಾ. ೬). [ಕಾದು$_1$ + -ಹ$_2$]

**ಕಾದ್ರವೇಯ** (ನಾ). ೧. ಕದ್ರುವಿನ ಮಗ; ನಾಗ: ದೈತ್ಯಪತಿ ಪಾತಾಳಕಿಳಿದನು [ಕಾದ್ರವೇಯಾಧೀಶ ಪಾಲಿತದ] (ಉರರಾ. ೭-೪೧). ೨. ಹಾವು; ಸರ್ಪ: "ಕುಂಡಲಿ ಕಾದ್ರವೇಯನಹಿ ನಾಗಂ ವ್ಯಾಳನಾಶೀವಿಷಂ" (ವಸ್ತುಕೋ. ೧೯-೭); ಅಖಿಳ ಕಾದ್ರವೇಯ ವಿದ್ರಾವಣಂ . . . ಮುಕುಂದನಂ ಕಂಡು (ಪಂಚತಂ. ೧೬೧-೭). [ಸಂ.]

**ಕಾನ್**, ಕಾನ್$_1$, ಕಾನಿ, ಕಾನು (ನಾ). ೧. (ಬೆಟ್ಟದೆಡೆ ಇರುವ) ಕಾಡು; ಅಡವಿ; ಕಾನನ: ಬಳೆದಲೆದಾ ಕಾನ್ ಮಲೆಗಳನ್ ಆನ್ ಮಱೆವೆನೆ ಬನವಾಸೀ (ಅಶ್ವತ್ಥಾ. ೪೮೯); ಅಲೆವಯರ್ ಕಡಲನ್ ಕಾನ್ ಮಲೆವೀಡನ್ (ಅಂತಿಗೊ. ೩೭-೭೨೭). ೨. ಮಂದವಾಗಿರುವಿಕೆ; ದಟ್ಟಣೆ; ಸಾಂದ್ರತೆ. 'ಕಾನಿಡು' ಪರಾ. **ಕಾನ್$_1$**: ೧. ಚಿರಚೈತ್ರ ಮಿಂದೆಲ್ಲಿ ಆಸುಗೆಯಾ ಕಾನಂ (೧೪೭೦. ೧೧೭-೪). **ಕಾನಿ**: ೧. ಹಡುವಲುನನ್ದನವನ ಬಡಗಲು ಕಾನಿ ಮೂಡಲು ಸೇತುವಿಂಗೆ ಹೊಂಡದಾರಿ (ಎಕ. V, ಹಾಸನ. ೧೧೭-೪೮; 1123); ಕಾನಿಯಂ ಮೂಡಲು ತೋಟ ಕಮ್ಮ ೪೫೦ (ಸೌಇಇ. IX-i, ೨೩೩-೫೭; 1139); ಕಿಱುಹಾಳ ಕಾನಿಯ ಬಳಿಯ ಗದ್ದೆ (ಎಕ. VI, ತರೀಕೆ. ೭೧-೫೧; 1154); ಹಿರಿಯ ಕುಱುವದ ಕಾನಿಯ ಬಳಿಯಗದ್ದೆ (ಎಕ. XI, ಹೊಳಲ್ಕೆ. ೧೨೧-೫೨; 1240). **ಕಾನು**: ೧. ಕಾನೊಳಹೊಕ್ಕು ಕಾಲ್ಗೆಡದೆ (ಪ್ರಭುಂಜ. ೨-೭೩); ಮೆಕಲಮಕ್ಕಿ ಕಾನು ಕಾಡಾರಂಭ (ಬೊಂಕಶಾ. ೧೯೩೬. ಸಿರಸಿ. ೧೨೪-೨೩; 1521); ಅಲ್ಲಿಂದ ತಳರ್ದು ಬಹು ಕಾನು ಕಾನುಗಳೊಳಂ . . . ನೋಡುತ್ತ (ಪ್ರಭುಪು. ೮-೧೮೦); ಪರಿವಾರ ಸಹಿತಲೆ ಬಿದ್ದು ಕಾನುಮರಪುಡಿಯಾಗಿ (ತುರಂಗ. ೨೬-೩೪); ಗಿರಿಕೊಳ್ಳ ಕಾನುಗಳ ಬಾಯ ನುಡಿಸಿದೆ ಕೊಳಲು (ನೆಲಮು. ೪೧). [ದೇ. ॥ ತಮಿ. ಕಾನ್, ಕಾನ; ಮಲ. ತುಳು. ತೆಲು. ಕಾನ]

**ಕಾನ್‌ಮಿಗ** (ನಾ). ಕಾಡುಮೃಗ: ಅಳ್ವನವನ್ ಕಾನ್‌ಮಿಗಮನ್ (ಅಂತಿಗೊ. ೧೭-೩೨೭). [ಕಾನ್ + ಮಿಗ]

**ಕಾನ್$_1$** 'ಕಾನ್' ನೋ.

**ಕಾನ್$_2$** (ನಾ). ಕಿವಿ. 'ಕಾನಬಾವಲಿ' ಪರಾ. [← ಹಿಂ. ಮರಾ. ಕಾನ್]

**ಕಾನಕ** (ಗು). ಕನಕಕ್ಕೆ ಸಂಬಂಧಿಸಿದ; ಚಿನ್ನದಿಂದ ಮಾಡಿದ; ಚಿನ್ನದ: ಕರದೊಳ್ ಕಾನಕ ಚಾಮರಂಬಿಡಿದು (ಶಬಶಂ. ೧-೭೮). [ಸಂ.]

**ಕಾನಕಲ್ಲಟೆ** (ನಾ). (ಕರಾ) ೧. ಒಂದು ಬಳ್ಳಿಯ ಹೆಸರು. ೨. ಅದರ ಕಾಯಿ. [?]

**ಕಾನಕಾನಉತ್ತತ್ತಿ** (ನಾ). (ಉಕ). ಒಬ್ಬನನ್ನು ಕೂರಿಸಿ ಅವನ ಕಾಲುಗಳ ಮೇಲೆ ಕೈಯಿಡಿಸಿ ಅದರ ಮೇಲೆ ಹುಡುಗರು ಜಿಗಿಯುವ ಆಟ: (೬). [?]

**ಕಾನಗು** (ನಾ). ಒಂದು ಜಾತಿಯ ಮರ; ಹೊಂಗೆಯ ಮರ: (೬). [← ತೆಲು. ಕಾನುಗು]

**ಕಾನಡಾ** (ನಾ). [ಸಂಗೀತ] ಒಂದು ರಾಗದ ಹೆಸರು: ದೇಶೀಯ ರಾಗಗಳು . . . ಬೇಹಾಗ್, ಕಾನಡಾ (ಸಂಗೀಚಂ. ೩೫). [← ಮರಾ. ಕಾನಡಾ; ಹಿಂ. ಕಾನ್ಹಡಾ]

**ಕಾನತೇರು** (ನಾ). ಅರಿಸಿನ : ಉಭಯಂ ಗರೀರ ಕಾನತೇರಿನಿಂದ ಗ ೩ (ಮೈಆರಿ. ೧೯೪೩. ೪೪-೬೪ ; 1711). [← ತಮಿ. ಕಾನತ್ತೇಱು]

**ಕಾನನ** (ನಾ). ಕಾಡು ; ಅಡವಿ ; ಅರಣ್ಯ : "ಕಾನನದಲ್ಲಿ ಕಾಡು ಪಳು ಬಿಂಜವಡವಿಯುಮೆಂದು" (ಶಬ್ದಮಂ. ೨೨) ; ಘೋರ ವಿಭಾವಸುಗಳ ಭಯದಿಂದಾಕ್ರಂದಿಸುವಂ ಕಾನನದೊಳ್ (ಜಾತತಿ. ೧೯-೩೬); ಧ್ಯಾನವಿಲ್ಲದವ ಕಾನನಕ್ಕೆ ಹೋದರೇನು (ಗಾದೆ). [ಸಂ.]

**ಕಾನನಗಳೆ** (ಕ್ರಿ). ಅಡವಿಯನ್ನು ದಾಟು : ಇಳೆಯಮರರಲ್ಲಲ್ಲಿ ಗಿರಿವನಗಳ ನಿರೀಕ್ಷಿಸಿ . . . ಕಾನನಗಳೆದು [ಪಾಠಾಂ. ವಿಡಿದು] ಬೇಗದಲಿ (ನಳಚ. ೮-೧೨). [ಕಾನನ + ಕಳೆ$_1$ (< ಕಱೆ$_1$)]

**ಕಾನನಚರ** (ನಾ). ಕಾಡಿನಲ್ಲಿ ತಿರುಗುವವನು ; ವನಚರ; ಬೇಡ : ಕಾನನಚರ ಸಮರದೊಳಭಿಮಾನಮನುಳಿ (ಶಬಶಂ. ೪-೩೪). [ಸಂ.]

**ಕಾನನವಚನ** (ನಾ). ಕಾಡು ಹರಟೆ; ವ್ಯರ್ಥವಾದ ಮಾತು; ಹುರುಳಿಲ್ಲದ ನುಡಿ : ದಾನಿಗಳ ದಾನಿಯೆನಿಪೀ ಶ್ರೀನಿಧಿ ನೀಖಿರ್ದು ಮೆನಗೆ ಕೊರೆಯುಂಟಾಗಲ್ ಮೌನಿಗಳ ಗೀತಮೆಲ್ಲಂ ಕಾನನವಚನಂಗಳೆಂಬ ಪೆಂಪಂ ಪಡೆಗುಂ (ವಸ್ತುವಂ. ೧೪-೧೦೯). [ಕಾನನ + ವಚನ]

**ಕಾನನಾಂತಕ** (ನಾ). ೧. ಅರಣ್ಯವನ್ನು ಹಾಳುಮಾಡುವವನು ೨. ಬ್ರಹ್ಮನ ತಲೆಯನ್ನು (ಮುಖವನ್ನು) ಕತ್ತರಿಸಿದವನು. ೧,೨: ಹರನಂತೆಕಾನನಾಂತಕರ್. . . ಕಿರಾತರು ನೆರೆದರು (ಹಚಕಾ. ೫-೪). ಕಾನನಾರಿ ' ಪರಾ. [ಕಾನನ + ಆತಂಕ ; ಕ$_4$ + ಆನನ + ಆತಂಕ]

**ಕಾನನಾಂತರ** (ನಾ). ಕಾಡಿನ ಒಳಭಾಗ, —ಮಧ್ಯ : ಕಾನನಾಂತರದೊಳಗೆ ಚಂದ್ರಕಳೆಯಂತೆ (ಕಎಪು. ೩೪) ; ಝೇಂಕರಿಸಿದತ್ತು ಕುಸುಮಿತ ಕಾನನಾಂತರಂ (ಶ್ರೀರಾಮಾ. ೧೫-೪೦೧). [ಕಾನನ + ಅಂತರ]

**ಕಾನನಾನುಭವ** (ನಾ). ಅರಣ್ಯವಾಸದ ಅನುಭವ; ಅಡವಿಯ ಅನುಭವ: ಕಾನನಾನುಭವಕ್ಕೆ ಕಡೆಯಿನ್ನೇನು ನಮಗೆನುತ . . . ಕುಂತೀತನಯರಿದ್ದರು ಪರ್ಣಶಾಲೆಯಲಿ (ಕುವ್ಯಾಅ. ೨೩-೫). [ಕಾನನ + ಅನುಭವ]

**ಕಾನನಾರಿ** (ನಾ). ಕಾಡಿಗೆ ಶತ್ರುವಾದವನು ; ಕಾಡಿನ (ಜೀವಿಗಳ) ಶತ್ರು : ನೆರೆದುದು ಕಾನನಾರಿಗಳೆನಿಪ್ಪ ಶಬರಾಧಿಪರು (ಹಚಕಾ. ೫-೨). [ಕಾನನ + ಅರಿ$_6$]

**ಕಾನಬಾವಲಿ$_1$** (ನಾ). ಕಾಡಿನ ಬಾವಲಿ ಹಕ್ಕಿ. [ಕಾನ$_1$ (< ಕಾನ್) + ಬಾವಲಿ$_1$]

**ಕಾನಬಾವಲಿ$_2$** (ನಾ). ಕಿವಿಯಲ್ಲಿ ಧರಿಸುವ ಒಂದು ಆಭರಣ : (ಕ). [ಕಾನ$_2$ + ಬಾವಲಿ$_2$]

**ಕಾನಲ್** (ನಾ). ಕಾಡು ; ಅಡವಿ ; ಅರಣ್ಯ : ಕಾನಲ ಬಾನಲ ನೀರಂ ಮೀನೊಲ್ಗುಂ ರಾಜಹಂಸನೊಲ್ಗುಮೆ (ಕವಿಚ. II, ೨೬೩, ಯೋಗಾಮೃತ). [ಕಾನ್ + -ಅಲ್$_2$ ./ ತಮಿ. ಕಾನಲ್]

**ಕಾನಶಿರಿಕುಚ್ಚು, ಕಾನಶಿಲ್‌ಕುಚ್ಚು** (ನಾ). (ಬಸವನ) ಆಭರಣಗಳಲ್ಲಿ ಒಂದು : ಮೂಗುದಾರ ತುಂಡು ೨ ಕಾನಶಿರಿಕುಚ್ಚು, ೨ ಕೊಂಬಿನ ಅಣಸು (ಎಕ. XIV, ನಂಜನ. ೨೮೯-೭ ; 1847). **ಕಾನಶಿಲ್‌ಕುಚ್ಚು** : ಮೂಗುಧಾರ ತುಂಡು ೨ ಕಾನಶಿಲ್‌ಕುಚ್ಚು ೨ ಕೊಂಬಿನ ಅಣಸು (ಎಕ. XIV. ನಂಜನ. ೨೮೯-೭; 1847). [? + ಕುಚ್ಚು]

**ಕಾನಶಿಲ್‌ಕುಚ್ಚು** 'ಕಾನಶಿರಿ ಕುಚ್ಚು' ನೋ.

**ಕಾನಸೊಪ್ಪು** (ನಾ). ಒಂದು ಬಗೆಯ ತೆರಿಗೆ. ᴾ ಕಾಡುಸೊಪ್ಪಿನ ಮೇಲಿನ ತೆರಿಗೆ : ಕೊಳಗುಪ್ಪೆ ಪೆಱ್ಜವಸಿ ಅರ್ದ್ಧಂ ಕಾನಸೊಪ್ಪಿನರ್ದ್ಧಂ ವಾರದ್ಧಂ ಕರ್ಸಪಿಣ್ಡಂ ನೂಱರ್ಪತ್ತೆಣ್ಬು ಕೊಂಬೆಗಾರೊಡಂ ಪಡೆಯಂ ಮೆಣ್ಬುಮೂಡೆ ಜಮುಳಿ ಒನ್ದು (ಎಇ. XXI, ೨೯-೧೪ ; 8ನೆಯ ಶತ). [ಕಾನ$_1$ (< ಕಾನ್) + ಸೊಪ್ಪು]

**ಕಾನಿ** 'ಕಾನ್' ನೋ.

**ಕಾನಿಡು** (ಕ್ರಿ). ಮಂದ್ಯೆಸು ; ದಟ್ಟವಾಗು ; ನಿಬಿಡವಾಗು (?) : ಕಾನಿಡುವ ಕಬ್ಬೊಗೆಯ ಚೂರಿಸುವಾನನದ . . . ಬಸಿವ ವಿಷದಲಿ ಬಂದುದುರಗಾಸ್ತ್ರ (ಕುವ್ಯಾಕ. ೨೫-೧೮). [ಕಾನ್ ? + ಇಡು$_1$]

**ಕಾನೀನ** (ನಾ). ೧. ಮದುವೆಯಾಗದವಳ ಮಗ; ಕನ್ಯಾಪುತ್ರ. ೨. ಕರ್ಣ : ಕಾನೀನಂ ಬಂದೆತ್ತಿ ಬಿಲ್ಲನೇಱಿಸಿ ತೆಗೆಯಲ್ ತಾನಾರ್ತನಿಲ್ಲ (ಪಂಪಭಾ. ೩-೬೦). ಕಾನೀನಂ ದ್ರೋಣ ನದೀಸೂನುಗಳಱಿದಿಂಬಱಿಕ್ಕೆ ಪೆಱರೆನಗಿಲ್ಲ (ಗದಾಯು. ೩-೬೭) ; ಅರ್ಥಿಜನತಾ ಕಾನೀನಂ ಧರೆಗೆ ನೆಗಳ್ದ ಬಲ್ಲಾಳನೃಪಂ (ಎಕ. II, ೩೮೪-೯ ; 1135). ೩. ವ್ಯಾಸ. [ಸಂ.]

**ಕಾನು** 'ಕಾನ್' ನೋ.

**ಕಾನುಡಿ** (ನಾ). ಕಾಡುಮಾತು ; ಕೆಟ್ಟನುಡಿ (?) : ಮುಖಮುಂ ಕಮಲಾಕರಮುಂ ಸುಖವಾ ಕಾನುಡಿಯ ರಚನೆ ಹೃದಯಸ್ಥಾನದಿ (ಪಂಚಶ. ೩೪-೬೮). [ಕಾ$_2$ + ನುಡಿ$_2$]

**ಕಾನುತೋಟ** (ನಾ). ಕಾಡಿನ ಪಕ್ಕದಲ್ಲಿರುವ ತೋಟ (?) : ಹಿಂದುಹಿಂದಕ್ಕೆ ಜಾರುತ್ತಿದ್ದ ಕಾನು ತೋಟಗಳನ್ನು ಹಳದಿ ಬಣ್ಣದ ರೈಹೊಲಗಳನ್ನೂ . . . ನೋಡುತ್ತ ನಿಂತನು (ಪುನರು. ೪೬೬). [ಕಾನು (< ಕಾನ್) + ತೋಟ (< ತೋಂಟ)]

**ಕಾನೂ** (ನಾ). = ಕಾನೂನು : (ಕ). [← ಮರಾ. ಕಾನೂ]

**ಕಾನೂನು** (ನಾ). ಕಟ್ಟಳೆ; ನಿಯಮ; ಕಾಯಿದೆ: ಅವುಗಳಲ್ಲಿ ಮದ್ರಾಸು ಸೀಮೆಯ ನ್ಯಾಯ ವಿಮರ್ಶೆಯ ಕಾನೂನನ್ನು ಅನುಸರಿಸಿ ಆಡಳಿತವು ನಡೆಯುತ್ತಿತ್ತು (ಮಹಾವಂ. II, 45) ; ಕಾನೂನಿಗೆ ವ್ಯತಿರಿಕ್ತವಾಗಿ ಆಚರಿಸಲು ಬರುವಂತಿಲ್ಲ (ದೇಶಧು. ೪೦). ಜನರು ಸುಳ್ಳು ಹೇಳಿದರೆ ಅದು ಕಾನೂನಿನ ದೋಷವೆ (ಅಕಾರ. ೬೭). [← ಅರ. ಹಿಂ. ಮರಾ. ಕಾನೂನ್]

**ಕಾನೂನುದಾರ** (ನಾ). ಕಾನೂನುಗಳನ್ನು ಬಲ್ಲವನು ; ಕಾಯ್ದೆ ಪಂಡಿತ : ಭಾರಿ ಕಾನೂನುದಾರನ ಹಾಗೆ ಮಾತಾಡ್ತಿಯಲ್ಲೊ (ಬೆಳುವು. ೧೫೩). [ಕಾನೂನು + -ದಾರ$_3$]

**ಕಾನೂನುಬಾಹಿರ** (ನಾ). ಕಾಯ್ದೆಗೆವಿರುದ್ಧವಾದುದು, —ಅಕ್ರಮವಾದ್ದು : ಅಂಥ ಶಿಕ್ಷೆ ಕಾನೂನುಬಾಹಿರವೆಂದು ವಾದಿಸಿ . . . ಪಕ್ಷವಹಿಸಿಕೊಂಡಿದ್ದನು (ಪುನರು. ೨೦೭). [ಕಾನೂನು + ಬಾಹಿರ]

**ಕಾನೂನು ಭ್ರಷ್ಟ** (ನಾ). ಕಾನೂನಿಗೆ ಹೊರತಾದವನು ; ಶಾಸನವನ್ನು ಮೀರಿದವನು : ಕಾನೂನು ಭ್ರಷ್ಟನಾಗಿ ಪೋಲೀಸರ ಹೊಂಚು ಸಂಚುಗಳಿಗೆ ಗುರಿಯಾಗಿರುವ ವ್ಯಕ್ತಿ ಮೂರುಹೊತ್ತು ಅನೇಕ ಕೋಟಲೆಗಳನ್ನನುಭವಿಸಬೇಕಾಗುತ್ತದೆ (ಪುನರು. ೩೮೮). [ಕಾನೂನು + ಭ್ರಷ್ಟ]

**ಕಾನೂನುಮದುವೆ** (ನಾ). "ಮತ ಸಂಸ್ಕಾರವಿಲ್ಲದೆ, ಕೇವಲ ಒಪ್ಪಂದದ ಕಟ್ಟಳೆಯನ್ನನುಸರಿಸಿ ನಡೆಸಿದ ಮದುವೆ ; ಶಾಸನಿಕ ವಿವಾಹ" (Civil Marriage. ಇಂಕನಿ). [ಕಾನೂನು + ಮದುವೆ]

**ಕಾನೂನುಮುರುಕ** (ನಾ). ಕಾಯಿದೆ ಭಂಗಮಾಡುವವನು : ಕಾನೂನು ಮುರುಕರ ಮಾರ್ಪಾಟುಗಳನ್ನು ತಮಗೆ ತೋಚಿಹಂತೆ ಕಾನೂನಿನ ಪ್ರಕರಣಗಳಿಗೆ ಹೊಂದಿಸಿಕೊಂಡು ಅವರನ್ನು ಅಪರಾಧಿಗಳೆಂದು ಕರೆದು . . . ಅಟ್ಟುತ್ತಿದ್ದರು (ಪುನರು. ೫೫೩). [ಕಾನೂನು + ಮುರುಕ (< ಮುಱಿಕ)]

**ಕಾನೆ** 'ಖಾನೆ' ನೋ.

**ಕಾನೊಡ್ಡು** (ಕ್ರಿ). ದಟ್ಟೈಸು (?) : ಕಾಲುಂಗುರದಕ್ಕನ ಕರೆಯೋಕೆ ಬಂಪಾರೇನೆ ಕಾನೊಡ್ಡಿ ಹುಯ್ಯೋ ಮಳೆರಾಯ, ನಮ್ಮಕ್ಕನ ಹೋಗೋ ಪಯಣಾವ ಉಳಿಸಪ್ಪ (ಗೌರಪ. ೧೮). 'ಕಾನಿಡು' ಪರಾ. [ಕಾನ್ + ಒಡ್ಡು$_1$]

**ಕಾನೋಲೆ** (ನಾ). ಕರಚೀಕಾಯಿ ; ಕರ್ಜಿಕಾಯಿ : ಹೂರಣದ ಇಲ್ಲವೆ ಹೋಳಿಗೆ ಮಾಡಿದರೆಂದರೆ ಅದರೊಡನೆ ಒಂದು ಕಾನೋಲೆ ಇದ್ದದ್ದೇ (ಸ್ಮೃತಿಚಿ. ೩೮೦). [← ಮರಾ. ಕಾನೋಲಾ, ಕಾನೋಲೀ]

**ಕಾಪಟಿಕ** (ನಾ). ೧. ಕಪಟಿ; ಮೋಸಗಾರ; ವಂಚಕ; ಮಾಯಾವಿ: "ಜಾಲಿಕನೆನೆ ಕಾಪಟಿಕಂ" (ವಸ್ತುಕೋ. ೬೪-೭೬). ೨. ಹೊಗಳುಭಟ್ಟ: ನಟವೈದ್ಯಗಾಯಕ ಮೂಕಬಧಿರ ಕಾಪಟಿಕ ತಾಪಸ ನರ್ತಕಾಂಧ (ಮುನಿವಂ. ೧-೧೧೭). [ಸಂ.]

**ಕಾಪಟಿಗ,** ಕಾಪಾಟಿಕ (ನಾ). = ಕಾಪಟಿಕ ೧ : ತ್ರಿಜನ್ಮೋಹಕ ತಿಲಕ . . . ಬಂಧನಲ್ಲಿಗಾ ಕಾಪಟಿಗಂ (ದಶಕು. ೬-೧೩೧); ಮೇಗಣಿಯ ಮೋಹದಲಿ ಕಾಪಟಿಗನಟ್ಟಿದರೆ ಘನಚಿದ್ರೂಪನೈದಿದನು (ನ ಭಾ ಗ. ೧೦-೯೮-೨). **ಕಾಪಾಟಿಕ :** (ಶಿ).

[< ಸಂ. ಕಾಪಟಿಕ]

**ಕಾಪಟ್ಯ** (ನಾ). ಕಪಟತನ; ಮೋಸಗಾರಿಕೆ; ವಂಚನೆ: ಕಾಪಟ್ಯದಲ್ಲಿ ಬಹು ಜಾಣನಾದವನು ಇತರರಿಗೆ ನಮಸ್ಕಾರವನ್ನು ಮಾಡಲು ದೂರದಿಂದಲೇ ತನ್ನ ಕೈಯನ್ನು ಎತ್ತುವನು (ನೀತಿಚಿಂ. IV, ೨೩ ಅಡಿಟ). [ಸಂ.]

**ಕಾಪಡೆ** (ನಾ). ಕುದುರೆಯ ಅಲಂಕಾರಗಳಲ್ಲಿ ಒಂದು : ಗಂಗಾ ಜಮುನಾ ಸಾಮಾನು ೩ ಕಾಪಡೆ ೧ ಕೋಗೀರು ೨೭ ಕಿವಿ ೨ ಪಾದ ೪ ಬಾಲ ೫ ಷಿಡಕ್ರಿ ಪ್ರಧಾನ ೧ ಭಾಲೆ (ಎಕ. XIV, ೨೯೩-೧೪೩ ; 1847). [?]

**ಕಾಪಥ** (ನಾ). ೧. ಕಷ್ಟಕರವಾದ ಹಾದಿ; ಕುತ್ಸಿತವಾದ ದಾರಿ : ಅಡವಿಯ ಮಾರ್ಗದಲಿ ಕಲುಮುಳುಗಳೊಳು ಕಾಪಥಕೆ ಕೋಮಲ ಚರಣಗಳ ಕೊಡುತ ತೊಳಲಿದರು (ಕುವ್ಯಾ ಅ . ೮-೯೩); ಬಿಸಿಲಬೇಗೆಗೆ ಕಾಪಥದೊಳಮಾಯಸಂದೋಜದೆ . . . ಪೋಪಳ್ (ರಾಮಾಶ್ವ. ೩೩-೪); ತಳಿರಡಿ ನಡೆಯೆ ಕಾಪಥದೊಳೆಂತಪ್ಪುದವನಿಸುತೆಗೆ (ಶ್ರೀರಾಮ. ೬-೫೩). ೨. (ಆಲಂ) ದುರ್ಮಾರ್ಗ ; ಕೆಟ್ಟನಡತೆ : ಕುಬುದ್ಧಿವ್ಯಾಪಕನು ಧೃತರಾಷ್ಟ್ರನೆಂಬಪಕೀರ್ತಿ ಬಿಡಿಸಿ ಕಾಪಥಂಗಳ ನಿಲಿಸಿ (ಕುವ್ಯಾ ಉ . ೪-೨೧); ತಾ ಪ್ರರಾಕ್ರಮಿಯೆಂದು ಮನುಜನ ಕಾಪಾಥವನೈದುವನು (ಹರಿಸಾ. ೮೨). ೩. ಲಾಮಂಚದ ಬೇರು; ಉಶೀರ. [ಸಂ.]

**ಕಾಪಥೆ** (ನಾ). ಕೆಟ್ಟಮಾರ್ಗ ಹಿಡಿದವಳು : ಅಪಗೆ ಕಲಕುನೀರಾಂತು ಧಾರುಣಿಯೊಳು ಕಾಪಥೆಯಾಗೆ (ತರ್ಕಕೌ. ೬-೫೮). [ಸಂ. ಕಾಪಥಾ]

**ಕಾಪಟು** (ಕ್ರಿ). ೧. ರಕ್ಷಣೆ ಹಾಳಾಗು, —ಇಲ್ಲವಾಗು : ಕುದುರೆಗೆ ಕಾಪಟ್ಟು ಎಱಿಯಪ್ಪನ ಪಣಮೆ ಕಾದಿ ಸತ್ತ (ಎಕ. XI, ಜಗಳೂ. ೧೯-೩ ; 907) ; ಸೇದೆವಟ್ಟು ಬಾಯಂ ಬಿಟ್ಟು ಕಾಪಟಿದು (ಗದಾಯು. ೯-೨೦). ೨. ರಕ್ಷಣೆಯನ್ನು ಹಾಳುಮಾಡು : ಅಂತು ದುಷ್ಟಬುದ್ಧಿ ಧರ್ಮಬುದ್ಧಿಯ ಮೇಲೆ ಕಳವನಿಟ್ಟು ಕಾಪಟಿದು ಕಾತರಿಸಿ ನುಡಿಯೆ (ಪಂಚತಂ. ೧೭೧). [ಕಾಪು$_1$ + ಅಟು$_1$]

**ಕಾಪಾಟಿಕ** 'ಕಾಪಟಿಗ' ನೋ.

**ಕಾಪಾಡಿಸು** (ಕ್ರಿ). ಕಾಪಾಡುವಂತೆ ಮಾಡು ; ರಕ್ಷಿಸು : ಧರ್ಮವಂ ಕಾಪಾಡಿಸಿದರ್ವರ× × (ತಿಲಂಶಾ. ೬-೨೭ ; 1159).

[ಕಾಪಾಡು + - ಇಸು$_3$]

**ಕಾಪಾಡು** (ಕ್ರಿ). ಕಾಯು ; ಸಾಕು ; ಸಲಹು ; ರಕ್ಷಿಸು : ಈವರಿಂ ಮೇಗಟಿಂದು ಕೊಳಲಟಿದಯ್ವದಿಮ್ಬರುಂ ಕಾಪೂ(ಪಾ)ಡುವರ್ (ಇಆ. XII, ೨೫೭-೧೫ ; 971) ; ನಿರಪರಾಧಿಯ . . . ಕಾಪಾಡು ದೇವಕೀತನಯಾ (ಗಿಳಿವಿಂ. ೨೦) ; ಈ ಭಾಷೆ ತನ್ನ ಹಿಂದಿನ ವೈಶಿಷ್ಟ್ಯವನ್ನು ಇಂದಿಗೂ ಬಹುಮಟ್ಟಿಗೆ ಕಾಪಾಡಿಕೊಂಡು ಬಂದಿದೆ (ದ್ರಾವಿವಿ. ೧೧೬).

[ಕಾಪು$_1$ + ಆಡು$_1$]

**ಕಾಪಾಲ** (ಗು). ೧. ತಲೆಬುರುಡೆಗೆ ಸಂಬಂಧಪಟ್ಟ. ೨. ತಲೆಬುರುಡೆಯಿಂದ ಮಾಡಿದ. ೩. ಭಿಕ್ಷಾಪಾತ್ರೆಗೆ ಸಂಬಂಧಿಸಿದ. (ನಾ). ಭಿಕ್ಷಾಪಾತ್ರೆ. ೫. ತಲೆಬುರುಡೆ : 'ಕಾಪಾಲಧರ' ಪರಾ. ೬. ವಾಮಮಾರ್ಗದ ಒಂದು ಶೈವ ಪಂಥ ; ಆ ಪಂಥಕ್ಕೆ ಸೇರಿದವನು : 'ಕಾಪಾಲಮಾರ್ಗ' ಪರಾ. ೭. ಸೌತೆಯ ಬಳ್ಳಿ. [ಸಂ.]

**ಕಾಪಾಲಧರ** (ನಾ). ಕಪಾಲವನ್ನು ಧರಿಸಿದವನು ; ತಲೆಬುರುಡೆಯನ್ನು ಹಿಡಿದುಕೊಂಡವನು ; ಶಿವ : ಶ್ರೀ ಪರಮ ಘನಲಿಂಗರೂಪ ನಿರ್ಗುಣ ಸದಾ ಕಾಪಾಲಧರ (ವೀಶೈಪು. ೨-೪-೧). [ಸಂ.]

**ಕಾಪಾಲಮಾರ್ಗ** (ನಾ). ಕಾಪಾಲಿಕರ ಪಂಥ : ಸಲುವುದೇ ಕಾಪಾಲಮಾರ್ಗಕೆ ಹಳವ ತಹರೇ ಸಾಂಪ್ರದಾಯದ ನೆಲೆಯ ನಱಿವುದು ಸೂಜಿಯೇ (ಪ್ರಭುಲೀ. ೧೯-೨೨).

[ಕಾಪಾಲ + ಮಾರ್ಗ]

**ಕಾಪಾಲಿ** (ನಾ). = ಕಾಪಾಲಧರ : ಕಾಪಾಲಿಯಾದೊಡಂ ಬಯಸುವ ಸುವಸ್ತುವಿದು (ತಿರುರ. ೧೧-೨೦) ; ಕಾಪಾಲಿಯ ರೂಪಾಂತ ಶಿವಭಕ್ತಿ ಗುರುವುಮಾಪತಿ ವಿಶ್ವನಾಥ (ಅಬ್ಬಲೂ. ೧-೧೭).

[< ಸಂ. ಕಾಪಾಲಿನ್]

**ಕಾಪಾಲಿಕ,** ಕಾಪಾಳಿಕ (ನಾ). ೧. ತಲೆಬುರುಡೆಗಳಲ್ಲಿ ಭಿಕ್ಷೆ ಸ್ವೀಕರಿಸಿ ಅವುಗಳಲ್ಲಿಯೆ ಆಹಾರ ಪಾನೀಯಗಳನ್ನು ಸೇವಿಸುವ ಕ್ರಮವಿಟ್ಟುಕೊಂಡ ಒಂದು ಶೈವಪಂಥ : ಕಾಪಾಲಕವು ನರಕಪಾಲ ಭಿಕ್ಷಾಟನಾದಿಗಳಂ ವರ್ಣಿಸುವುದು (ವಿವೇಕ. ೧೧) ; ಲಕುಲೀಶ ಪಾಶುಪತದಲ್ಲಿ . . . ಕಾಪಾಲಿಕ, ಕೌಲ ಎಂಬ ಅತಿ ಮಾರ್ಗಿಕಗಳಾದ ಎರಡು ಶಾಖೆಗಳಿದ್ದವು (ಶೂನ್ಯಕು. ೪). ೨. ಕಾಪಾಲಿಕ ಪಂಥಕ್ಕೆ ಸೇರಿದವನು : ಭಜಿಸುವರು ಕಾಪಾಲಿಕರು ನೃಕಪಾಲಧರನೆಂದು (ಗಗತಾ. ೫-೬). **ಕಾಪಾಳಿಕ :** ೨. ಓಳಿಯ ಕೋಡು ಪಲ್ಲವರ ಪನ್ದಲೆಯಲ್ಲ ಮನೆಯ್ದಿದಟ್ಟ ಕಾಪಾಳಿಕರೂಱ ಸಾಱ ಪರಮಣ್ಣಾಳಿ ಕರ್ಕಳನ್ (ಎಕ. II, ೫೯-೮೭ ; 974). [ಸಂ.]

**ಕಾಪಾಳಿಕ** 'ಕಾಪಾಲಿಕ' ನೋ.

**ಕಾಪಿ$_1$,** ಕಾಫಿ$_1$ (ನಾ). [ಸಂಗೀತ] ಒಂದು ರಾಗದ ಹೆಸರು : ಪಲ್ಲವಿ ಶೇಷಯ್ಯರ್ ಅವರು ತಮ್ಮ ಒಂದು ತಿಲ್ಲಾನದಲ್ಲಿ ಉಪಯೋಗಿಸಿರುವ ಕಾಪಿರಾಗವು ಉಪಾಂಗ ಕಾಪಿರಾಗ (ಸಂಗೀತ. ೫೦). **ಕಾಫಿ$_1$ :** ಹಾಡುತ್ತಿದ್ದ ಧಾಟಿಗಳು ಫರಜು, ಕಾಫಿ, ಖಮಾಚು . . . ಆನಂದ ಭೈರವಿಯಂಥ ರಾಗಗಳಿಂದ ಕೂಡಿದ್ದುವು (ಜಾನಗೀ. ೧೧೬).

[?. ‖ ತಮಿ. ಕಾಫಿ. / ಮರಾ. ಹಿಂ. ಕಾಫೀ]

**ಕಾಪಿ$_2$** 'ಕಾಫಿ$_2$' ನೋ.

**ಕಾಪಿ$_3$** (ನಾ). ೧. ಪ್ರತಿ ; ನಕಲು : ನಕಲನ್ನು . . . ರವಾನಿಸಬೇಕು. ಮತ್ತೊಂದು ಕಾಪಿಯನ್ನು ತನ್ನ ಬಳಿ ಇಟ್ಟುಕೊಳ್ಳಬೇಕು (ಗ್ರಾಮಾಕ. ೫೨). ೨. ಅಕ್ಷರಗಳನ್ನು ಚೆನ್ನಾಗಿ ಬರೆಯುವ ಅಭ್ಯಾಸಕ್ಕೆಂದು ಶಾಲೆಯಲ್ಲಿ ನೋಡಿ ಬರೆಯುವ ಕ್ರಮ : ಅಕ್ಷರಗಳ ಪರಿಚಯವಾದ ಮೇಲೆ ಕಾಪಿ ಬರೆಸುವುದುಂಟು (ಶಿಕ್ಷದ. ೪೨೧).

**ಕಾಪಿಮಾಡು** = ೧. ಪ್ರತಿಮಾಡು ; ನಕಲುಮಾಡು : ನೀನು ಎಲ್ಲ ಸರಿಯಾಗಿ ಬರೆದಿದ್ದೀ ತಾನೆ ? ಯಾಕೆಂದರೆ ನಾನು ಕಾಪಿ ಮಾಡಿಕೊಳ್ಳಬೇಕು (ಶಾಲಿಮ. ೩೧). ೩. ಅನುಕರಣಮಾಡು ; ಇನ್ನೊಬ್ಬರ ಬರೆವಣಿಗೆ, ರೀತಿ, ವೇಷ, ಮೊದಲಾದುವನ್ನು ಇದ್ದಹಾಗೆ ಅನುಸರಿಸು. ೩. ಇನ್ನೊಬ್ಬರ ಬರವಣಿಗೆಯನ್ನು ನೋಡಿ ಕದ್ದು ಬರೆ : ಪರೀಕ್ಷೆಯಲ್ಲಿ ಕಾಪಿಮಾಡುತ್ತಿದ್ದಾಗ ಸಿಕ್ಕಿಬಿದ್ದ (ರೂಢಿ).

[← ಇಂ. Copy]

**ಕಾಪಿಕ್ಕು** (ಕ್ರಿ). ಕಾವಲಿಕ್ಕು; ರಕ್ಷಣೆಯಿಡು: ಸಿರಿ ತನ್ನಯ ನಲ್ಮೆಯ ಶಯ್ಯಾಮಂದಿರದೊಳಗದಿರದೆ ಚಂಡಾಳೀಕುಲಮುರವಣಿಯಿಂ ಪುಗೆ ದೋಷಂ ಪೊರ್ದುಗುಮೆನುತದು ಪುಗದಂತೆ ಭರದಿಂ ಕಾಪಿಕ್ಕಿದ ನವ ಚಂಪಕದರೆಮುಗುಳಿದು (ಜಯಕಾ. ೩-೪೪).
[ಕಾಪು$_1$ + ಇಕ್ಕು]

**ಕಾಪಿಗ** (ನಾ). ಕಾವಲುಗಾರ: ಮಜ್ಜನಕೆಳ್ಳನೊಣಗಿಸುತಿರೆ ಮುನಿ ರಾಜನ್ಯದಿ ಭಕ್ತಿಸೆ ಕಾಪಿಗರ್ ಕೊಂಡು ಜನಪತಿಯ ಪೊರೆಗೆ ತರಲ್ (ಚಬಪು. ೫೫-೨೮). [ಕಾಪು$_1$ + -ಇಗ]

**ಕಾಪಿಡು** (ಕ್ರಿ). ೧. ಕಾಪಾಡು; ಸಲಹು; ರಕ್ಷಿಸು: "ಕಾಪಿಡು – ಸಂರಕ್ಷಣೇ" (ಶಮಧಾ); ಪಾಪಿ ಬೈಚಪ್ಪ ಮಗನನು ಕಾಪಿಟ್ಟುಕೊಂಡಿರ ಲಜ್ಜೆಯದೆ ಕೊಂದೆನಗಾಪತ್ತನಿಂತು ಮಾಡಿದನು (ಕುರಾಸಾಂ. ೩೭-೭೯); ಎಮ್ಮಂ ಕಾಪಿಡುವುದೆಂದು ಹಮ್ಮೈಸುತ್ತೆ (ಚಿಕವಿ. ೬-೨೬೦ ವ); ಶ್ರೀಪತಿ ಯಿವರೆನ್ನ ಸೇವಕರೆಂದುಜಿ ಕಾಪಿಡುವನು ಕರುಣದೊಳು (ಹ ದಿ ಬ. ೨-೫೧); ಅವರು ನಿನ್ನನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗಳಂತೆ ಕಾಪಿಡುವರು (ಬೆನ್ನಬೇ. ೭೪); ಊರ ಕಾಳನ್ನು ಕಾಪಿಟ್ಟನೆಂದು . . . ಮೂರು ಕಳನಿ ನೆಲವನ್ನು ಕೊಟ್ಟನಲ್ಲಾ (ಸವತಿ. ೫೪). ೨. ಕಾವಲಿಡು; ಕಾಯುವುದಕ್ಕೆ ಯಾರನ್ನಾದರೂ ಇರಿಸು: ಎಂತು ಕಾಪಿಟ್ಟೊಡ ಮೇನ ಬೆಸಸಿದೊಡಮಂತರಂಗದೊಳನುಗೆಡದೆ (ಹ ದಿ ಬ. ೪-೭). ೩. (ಮಗುವಿನ) ಹಣೆಗೆ ಹಾಗೂ ಕೆನ್ನೆಗಳಿಗೆ ಬೊಟ್ಟಿಡು; ರಕ್ಷೆಯಿಡು: ತೂಪಿಜಿಽದು ಭಸಿತದಿಂ ಕಾಪಿಟ್ಟು (ಬಸರ. ೭-೧೪೧); ಪರಿಮಳಮಂ ಮುಡಿಸಿ ನೇಹಮಂ ಕಾಪಿಟ್ಟು . . . ಮನದೊಳ್ ತೂಪಿಜಿಽದು (ನಂಬಿರ. ೨-೧೧೨). [ಕಾಪು$_1$ + ಇಡು$_1$]

**ಕಾಪಿರಿಸು** (ಕ್ರಿ). ಕಾವಲಿಡು; ರಕ್ಷಣೆಗೆ ನಿಲ್ಲಿಸು: ವಿರಾಟನುತ್ತರನ ನಾತ್ಮತನೂಜನನಾ ಪೊಟಲ್ಗೆ ಕಾಪಿರಿಸಿ (ಪಂಪಭಾ. ೮-೯೦); ತನ್ನ ಬಾಗಿಲ್ಗೆ ತಕ್ಕರಂ ಕಾಪಿರಿಸಬೇಕೆಂದು (ಚಬಪು. ೫-೫೭).
[ಕಾಪು$_1$ + ಇರಿಸು]

**ಕಾಪಿಲ** (ಗು). ೧. ಕಪಿಲ ಋಷಿಗೆ ಸಂಬಂಧಪಟ್ಟ. ೨. ಕಪಿಲ ಮುನಿಯಿಂದ ರಚಿತವಾದ: 'ಕಾಪಿಲಸಿದ್ಧಾಂತ' ಪರಾ. (ನಾ). ೩. ಕಪಿಲಮುನಿಯ ಮತ; ಸಾಂಖ್ಯಮತ ಅಥವಾ ಸಾಂಖ್ಯ ದರ್ಶನ: ಕಾರಣವ ಪ್ರಕೃತಿಗೆ ಜಗತ್ತಿನ ಹಾರುವುದು ಕಾಪಿಲವು ಯೋಗವು ಹಾರುವುದು ಗುರುವಿಡಿದು ಶಾವಿನ ತೆರ ಜನ್ಮಾಂತರದರಿಗೆ (ವಿವೇಭ. ೯-೬). ೪. ಕಪಿಲಮುನಿ ರಚಿಸಿದ ಸಾಂಖ್ಯ ಶಾಸ್ತ್ರವನ್ನು ಬಲ್ಲವನು. ೫. ಕಪಿಲವರ್ಣ. [ಸಂ.]

**ಕಾಪಿಲಸಿದ್ಧಾಂತ**, ಕಾಪಿಳಸಿದ್ಧಾಂತ (ನಾ). ಕಪಿಲಮುನಿಯಿಂದ ರಚಿತವಾದ ಸಿದ್ಧಾಂತ; ಸಾಂಖ್ಯತತ್ತ್ವ: ಕಾಪಿಲಸಿದ್ಧಾಂತವೆಂದು ಸಾಂಖ್ಯವನ್ನು ಕರೆಯುತ್ತಾರೆ (ಹಿಂದಸಾ. ೪೮). **ಕಾಪಿಳಸಿದ್ಧಾಂತ**: ನಿಜೋಪನ್ಯಸ್ತಮಪ್ಪ ಕಾಪಿಳಸಿದ್ಧಾಂತಮುಮಂ ಯೋಗಶಾಸ್ತ್ರಮುಮಂ ತೋಱಲು (ಆದಿಪು. ೯-೯೩ ವ). [ಕಾಪಿಲ + ಸಿದ್ಧಾಂತ]

**ಕಾಪಿಲಸ್ನಾನ** (ನಾ). ಮೈಮೇಲೆ ನೀರುಸುರಿದುಕೊಳ್ಳದೆ, ಒದ್ದೆ ಬಟ್ಟೆಯಿಂದ ಒರಸಿಕೊಂಡು ಮಾಡುವ ಸ್ನಾನ: ಅಶಕ್ತರಾದವರು ಒದ್ದೆ ಬಟ್ಟೆಯಿಂದ ಮೈ ಒರಸಿ ಕೊಳೆಯನ್ನು ನಿವಾರಿಸುವುದಕ್ಕೆ ದೈವಿಕ ಅಥವಾ ಕಾಪಿಲಸ್ನಾನವೆನ್ನುತ್ತಾರೆ (ಆರ್ಯಧ. ೧೭೫).
[ಕಾಪಿಲ ? + ಸ್ನಾನ]

**ಕಾಪಿಶಾಯನ** (ನಾ). ೧. ಕಳ್ಳು; ಮದ್ಯ; ಹೆಂಡ. ೨. ಜೇನು ತುಪ್ಪ. [ಸಂ.]

**ಕಾಪಿಳಸಿದ್ಧಾಂತ** 'ಕಾಪಿಲಸಿದ್ಧಾಂತ' ನೋ.

**ಕಾಪು**, ಕಾಂಪು, ಕಾವು$_1$, ಕಾಹು$_1$ (ನಾ). ೧. ಕಾಯುವಿಕೆ; ಕಾವಲು; ಪಹರೆ: ಮಗನೆ ನೀಂ ತಳಾಜನಪ್ಪಂದು ನಿನ್ನ ಕಾಪಿನೊಳ್ ಕಳ್ದು ನಿನ್ನಂ ಕೊಲಿಸದಾಗಳೇನಾಯ್ತು (ವಡ್ಡಾರಾ. ೧೪೯-೮); ವಿಕ್ರಮಾರ್ಜನನಂ ಪೆಱಗಣ ಕಾಪಿಂಗಿರಲ್ವೇಱ್ದು (ಪಂಪಭಾ. ೮-೯೦ ವ); ಮೃಗಾಕ್ಷಿಯರ್ ಮೋಕ್ಷಪಥದ ಕಾಪಿನ ನಾಯ್ಗಳ್ (ಧರ್ಮಾಮೃ. ೭-೧೫೮); ವಿಘ್ನಂಗಳೊಂದದಂತಿರೆ ನಿಯಮುವೆಂಬ ಕಾಪಿಟ್ಟು (ಪದ್ಮರಾ. ೧೩-೧೪). ೨. ಮಗು ಹುಟ್ಟಿದ ಏಳನೆಯ ದಿನ ಮಾಡುವ ಒಂದು ಶುಭ ಕಾರ್ಯ: (ಕಿ). ೩. ಸುತ್ತಲೂ ಇರುವ ಬೇಲಿ; ಪ್ರಾಕಾರದ ಗೋಡೆ: ಅನಂಗನ ಕಾಪೆನೆ ಸೊಗಯಿಪುದು ಬಳಸಿದುದ್ಯಾನವನಂ (ಆದಿಪು. ೬-೯೧); ರತ್ನತ್ರಯಕ್ಕೆ ಕಾಪಾಗಿ ಬಳಸಿದ ಕೋಂಟೆಯಿದೆನಿಸಿರ್ದ ಪದಿಮೂಱು ಚಾರಿತ್ರಮುಮಂ (ಧರ್ಮಾಮೃ. ೧-೧೭೬); ಅಂಭೋನಿಧಿ ಬಳಸಿತ್ತು ಕಾಪಿನಂದದಿನಿಳೆಯಂ (ಕಶಾ IV, ೧-೯; 1204). ೪. ಕಡಗ; ಕಪ್ಪ: ಕೆಲವು ವರ್ಷಗಳ ಹಿಂದೆ ಕಾಪು, ಕಾಲ್ಮುರಿ, ಕೈಕಡಗ, ತೋಳ್ಬಂದಿ ಗಳನ್ನು ಸಹ ತೊಡುತ್ತಿದ್ದರು (ನಂಜುಂಡ. ೧೨೮). ೫. ಬಂಧನ. 'ಕಾಪುವಡೆ' ಪರಾ. ೬. (ದೃಷ್ಟಿದೋಷ ನಿವಾರಣೆಗಾಗಿ ಕೆನ್ನೆ ಯಲ್ಲಿಡುವ) ಕಾಡಿಗೆಯ ಬೊಟ್ಟು; ರಕ್ಷಾತಿಲಕ: ದಿಟ್ಟಿಯಕ್ಕೆನ್ನು ತಜನಿಟ್ಟ ಕಾಪಿನ ಕರಿಯ ಬೊಟ್ಟುಗಳೊ (ಸಿದ್ಧರಾ. ೧-೫೦); ಪರದೃಷ್ಟಿ ಪೊರ್ದದೊಲು ಕಾಪಿನ ಮಸಿಯ ಬೊಟ್ಟು ಹರುಷದಿಂದಿಟ್ಟು (ನವಮೋ. ೧೫-೩೦); ಪುಣಗಿನ ಕಾಪಿಗೆ ಪ್ರತಿ ಶುಕ್ರವಾರ ಒಂದಕ್ಕೆ ನಾಲ್ಕು ಹಣಲು (ಎಕ. XIV, ಶ್ರೀರಂಗ. ೨-೧೬; 1529). **ಕಾಂಪು**: ೧. ಚಾಳೊಕ್ಯ ಭೂಭುಜರ್ದ್ದಿವಿಕೇಳಿಯೊಳಿರೆ ಪೆಱಗೆನೆಱೆಯೆ ಕಾಂಪುವೊಲಿರ್ದರ್ (ಎಕ. VII, ಶಿಕಾರಿ. ೯೭-೧೪; 1192). **ಕಾವು$_1$**: ೧. ಹರಿದು ಕಾವಿ [ಪಾಠಾಂ. ಪಿ]ನ ದೂತರೈದಿದರರಸನೆಡೆಗೆ (ನಿಭಾಗ. ೧೦-೪-೨೦). 'ಕಾವುಕಟ್ಟು' ಪರಾ. **ಕಾಹು$_1$**: ೧. "ಕಾಹುಕಾಪಕ್ಕು" (ಕಶರ. ೨೪); "ಸರ್ಜಣಃ, ಉಪರಕ್ಷಣಃ – ಈ ೨ ಪಾಳಿಯದ ಕಾಹಿನ ಹೆಸರು" (ನಾಚಿರಾ. ೧೩೩); ಮೈಗೆ ಕಾಹ ಹೇಳುವರಲ್ಲದೆ ಮನಕೆ ಕಾಹ ಹೇಳುವರೆ (ಬಸವ. ೮೧೨); ಪಾತ್ರೆಯ . . . ಪೆಟ್ಟಿಗೆಯೊಳಿಟ್ಟು ಮುದ್ರಿಸಿ ತಾವೆ ಕಾಹಾಗಿ (ತಿರುರ. ೧೨); ಪುರದ ಕಾಹನು ಸಚಿವ ಸಾಮಂತರಿಗೆ ಸೇಮಿಸಿ (ಕುವ್ಯಾಸ. ೧೩-೯೮); ದಡಿಗ ದೈತ್ಯರ ಕಾಹು ಮಮ ಕುಮಾರತಿಯ ಗೋಪುರಕೆ (ಮೋಹತ. ೩೩-೧೭); ಹೆಂಗಳ ಸಮರಕ್ಕೆ ಖಡ್ಗವೆ ಹೂವಿನ ಬಂಡಾರಕಗ್ನಿಯ ಕಾಹೆ (ಭರತ. ೬-೮೪).

**ಕಾಪಿನವರ್** = ಕಾವಲುಗಾರರು: ಮುಂದೆ ಬಾಜಿಸುತ್ತಂ ಬಟಱಿಯಂ ಕಾಪಿನವರ್ ಪರಿತಂದು ಶೋಧಿಸಿ ನೋಡಿ (ಪಂಚತಂ. ೧೩೦-೧೪); ಒಯ್ಯನೆ ಕಾಪಿನವರಂ ಬಂಚಿಸಿ ಪೊಟಲಿಂ ಪೊಱಮಟ್ಟು (ಧರ್ಮಾಮೃ. ೭-೮೩); ಕಾಗಿನವರಿರೆ ಬಾಗಿಲಲಿ ನೀನೇ ಪರಿಯಲೆಯ್ತಂದೆ ಗೌಡಾ (ಬಸಪು. ೨೭-೫೩). **ಕಾಪಿನಾಳ್**, **ಕಾಂಪಿನಾಳ್** = ಕಾವಲಿನ ಆಳು; ಕಾವಲುಗಾರ: ದೇವರ ಕಾಪಿನಾಳ್ ದೇವ ಕಿನ್ನರ ಪನ್ನಗಾವಳಿ ವೊಟ್ಟನಪ್ಪಿನಮೆಚ್ಚು (ಪಂಪಭಾ. ೫-೯೪); ಕಾಪಿನಾಳ್ಗಳ ಕದ್ದು (ಭಾವಚಿಂ. ೬-೮); ನಾಲ್ಕುಮಯ್ದಾಱು ಬಲ್ಲುಱಿಯಂ ತಿಂದಡೆ ಕಾಂಪಿನಾಳ್ಕಡಿಗುಂ (ಪಸಾರ. ೯೩೫-೧೭).

[ಕಾ$_1$ + -ಪು. / ತಮಿ. ಮಲ. ಕಾಪ್ಪು; ತುಳು. ಕಾಪು, ಕಾಪ್ಪು; ತೆಲು. ಕಾಪು]

**ಕಾಪುಕಲಿ** (ನಾ). ರಕ್ಷಣೆಯಲ್ಲಿ ವೀರ, —ಶೂರ: ಕನ್ನಾನೂರು ರಾಜ್ಯ ದಲ್ಲಿ ಅನೇಕ ನಾಯರುಗಳನ್ನು ರಾಜನು ತನ್ನ ಸ್ವಹಸ್ತದಿಂದ ಕಾಪುಕಲಿ ಯೆಂದು ಶಸ್ತ್ರಗಳನ್ನು ದಯಪಾಲಿಸುವ ಪದ್ಧತಿ ಇದೆ (ಪ್ರವಾಇ. II, ೩೨೧).
[ಕಾಪು$_1$ + ಕಲಿ]

**ಕಾಪುಗಾಡು** (ನಾ). ಕಾಯ್ದಿಟ್ಟ ಕಾಡು; ರಕ್ಷಿತವಾದ ಅಡವಿ: **ಪೊಳೆವ ಪುಲ್ಲೆಗಳ ಬಟಿವಿಡಿದು ಕಾಪುಗಾಡಿನೊಳ್ ಸೋಹಿನ ಬೇಂಟೆಯ** ಬಿನದದಿನೀರ್ವರ ರಥಮುಂ ಬೇಱಿವೇಱೂದಲ್ಲಿ (ಅನಂಪು. ೧೧-೪೦ ವ). [ಕಾಪು$_1$ + ಕಾಡು$_2$]

**ಕಾಪುಗೊಡು** (ಕ್ರಿ). ಕಾವಲುಕೆಲಸ ಕೊಡು; ರಕ್ಷಣೆಯ ಉದ್ಯೋಗವನ್ನು ನೀಡು: ಅರಸನಾದ್ವಾರಕೆಯ ಸಿರಿಗೋಪುರದ ಬಾಗಿಲ ಕಾಪುಗೊಟ್ಟಹನಿರುತಿಹೆವು ನಾವಲ್ಲಿ (ಸಾಳ್ವ ಭಾ. ೧೯-೧೭). [ಕಾಪು$_1$ + ಕೊಡು]

**ಕಾಪುಗೊಳ್** (ಕ್ರಿ). ಕಾವಲಿರು; ಕಾಯು: **ಪೋ ಪುಗಿಲ್ ಪುಗಿಲೆನುತೆ** ಕರಂ ಕಾಪುಗೊಂಡು ಜಡಿವುದು ಪಿಕನಿಕರಂ (ಸುಕುಮಾ. ೧೦-೬೫); ಬೀದಿವೀದಿಗಳೊಳಾರುಮಂ ಸುಟಿಯಲೀಯದೆ . . . ಕಾಪುಗೊಂಡು ಬಳಸಿದ ತಳಾಱ ನಾಯಕರುಮಂ (ವರ್ಧಪು. ೯-೬೦ ವ); ದಂಡಧರಂ ಕಾಪುಗೊಂಡ ಪೊಟಲಂ ಪೊಕ್ಕಂ (ಚಕವಿ. ೨-೬೦). [ಕಾಪು$_1$+ ಕೊಳ್$_1$]

**ಕಾಪುಗೊಳಿಸು** (ಕ್ರಿ). ಕಾಪಾಡು; ರಕ್ಷಿಸು: ಅನುವಱಿತಖಿಲ ಪ್ರಜೆಗಳನನವಧಿ ದಯೆವೆರಸು ಕಾಪುಗೊಳಿಸುವರಿರ್ವರ್ (ಅಪ್ರತಿ. ೫೬-೧೪). [ಕಾಪುಗೊಳ್ + -ಇಸು$_3$]

**ಕಾಪುತಡೆ** (ನಾ). ಕೆಸರನ್ನು ತಡೆಯುವ ಸಾಧನ; ತಡೆಗಾಪು: ಆ ಬಂಡಿಯ ಮಿರುಗುಬಣ್ಣದ ಕಾಪುತಡೆಗಳು ಸೂರ್ಯರಶ್ಮಿಯಲ್ಲಿ ಥಳಥಳಿಸುತ್ತಿದ್ದವು (ಪುನರು. ೩೩೮). [ಕಾಪು$_1$ + ತಡೆ$_2$]

**ಕಾಪುರ** (ನಾ). ಸಂಸಾರ ಹೂಡುವಿಕೆ; ವಾಸ: ಹಳೆಯ ಮನೆಯೊಂದನ್ನು ಹೊಸದಾಗಿ ಬೆಲೆಗೆ ತೆಗೆದುಕೊಂಡು ಕಾಪುರಮಾಡಿದರು (ದಾಕೂಟ. ೮); ನ್ಯಾಯಮೂರ್ತಿಯೊಡನೆ ಕಾಪುರಮಾಡುವುದಕ್ಕೆ ತಾನೆ? ನಾನೂ ಮದರಾಸಿಗೆ ಹೊರಟೆ (ವಿವಧು. ೫೨). [← ತೆಲು. ಕಾಪುರ]

**ಕಾಪುರಾಪು** (ನಾ). ರಕ್ಷಾಕವಚ (?): ಅನಿಲಾತ್ಮಜಂಗೆ ಬಡತನ ಪೊರ್ದದಿಲ್ಲ ಬಜುಮ್ಮೆ ಬಿಗಿದುಟ್ಟಹ ಕಾಪುರಾಪವಂ ಬಿಡಿಸನು (ಕಱಿಕಂ. ೪೫). [?]

**ಕಾಪುರುಷ** (ನಾ). ೧. ಹೀನ ಮನುಷ್ಯ; ಕ್ಷುದ್ರ ಮನುಷ್ಯ: ಕಿಂಪುರುಷರ್ ಕಾಪುರುಷರಂತೆ ಬಾಯಂ ಬಿಡೆಯುಂ (ಪಂಪಭಾ. ೫-೮೮ ವ); ಇನ್ನುಳಿದ ಕಾಪುರುಷರಿಂ ಚಂದ್ರಹಾಸನಂ ಪೋಲ್ದಪರೆ (ಜೈಮಿಭಾ. ೨೯-೧೫). ೨. ಅಂಜುಬುರಕ; ಹೇಡಿ: ಪತಿಗಳು ಕಾಪುರುಷರೇ ನಿನ್ನವರು (ಕುವ್ಯಾವಿ. ೩-೨೫). [ಸಂ.]

**ಕಾಪುರುಷತನ** (ನಾ). ಹೀನ ನಡೆನಳಿಕೆ; ಕುತ್ಸಿತ ವೃತ್ತಿ: ಕಾಪುರುಷತನವುಳಿದು ಕೇಳಂಬಾಪತಿಯ ಪದಭಕ್ತನಾಗು (ಬಸಪು. ೨೭-೫೩). [ಕಾಪುರುಷ + -ತನ]

**ಕಾಪುವಡೆ** (ಕ್ರಿ). ೧. ಕಾವಲಿಗೊಳಗಾಗು; ಬಂಧನಕ್ಕೊಳ್ಳಗಾಗು: ಭೂಪಲಕ್ಷಣವಡಗೆ ಸಭೆಯಲಿ ಕಾಪುವಡೆದವನಂತೆ ಚಿಂತಿಸುತಿರ್ದನಾ ಕಂಸ (ಅಕ್ರೂಚ. ೨-೫). ೨. ರಕ್ಷಣೆ ಪಡೆ. [ಕಾಪು$_1$ + ಪಡೆ$_1$]

**ಕಾಪುವೆರಸು** (ಅ). ಕಾವಲು ಸಹಿತವಾಗಿ: ಕಾಪುವೆರಸು ಪೋಗಿ ಪೊಱಲ್ಗೆ (ವಡ್ಡಾರಾ. ೧೨೫-೨೮). [ಕಾಪು$_2$ + ಬೆರಸು$_2$]

**ಕಾಪುವೇೞ್** (ಕ್ರಿ). ಕಾವಲಿರೆಂದು ಹೇಳು; ಕಾವಲಾಗು: ಪಡೆವಳ್ಳನಂ ಪಡೆಗೆ ಕಾಪುವೇೞ್ದು (ಆದಿಪು. ೧೨-೭೪ ವ); ಪಂಚಪಾಂಡವರುಮಂ ಬೀಡಿಂಗೆ ಕಾಪುವೇೞ್ದು (ಗದಾಯು. ೯-೧ ವ); ನಾಲ್ವರ್ ಮನುಷ್ಯರನದರ್ಕೆ ಕಾಪುವೇೞ್ದು (ಪಂಚತಂ. ೨೩-೨೧); ರಾಮನಂ ಕನ್ನೆಗೆ ಕಾಪುವೇೞ್ದು (ಜಗನ್ನಿ. ೧೦-೮೭). [ಕಾಪು$_1$ + ಪೇೞ್]

**ಕಾಪುಹಲಸು** (ನಾ). ಒಂದು ಬಗೆಯ ಹಲಸು: ಬಕ್ಕೆಹಲಸು, ಅರಬಕ್ಕೆ ಹಲಸು, ಕಾಪು ಹಲಸು ಹೀಗೆ ಬಗೆಬಗೆಯ ಹಲಸಿನ ಮರಗಳಿವೆ (ಶ್ಯಾಮತಾ. ೧೧). [ಕಾಪು$_0$ + ಹಲಸು (< ಪಲಸು)]

**ಕಾಪೇಯ** (ಗು). ೧. ಕಪಿಗೆ ಸಂಬಂಧಪಟ್ಟ. (ನಾ). ೨. ಮಂಗಗಳ ಜಾತಿ; ಕಪಿಕುಲ: "ಗೋಲಾಂಗೂಲಮಾ ಕೃಷವಕ್ತ್ರನೆನೆ ಮುಸುವಕ್ಕವೞ ಸಂಯೋಗ ಕಾಪೇಯಮುಕ್ಕುಂ" (ಮಂಗರಾ. ೪೮-೯). 'ಕಾಪೇಯತನ' ಪರಾ. ೩. ಕಪಿಚೇಷ್ಟೆ; ಮಂಗತನ. [ಸಂ.]

**ಕಾಪೇಯತನ** (ನಾ). = ಕಾಪೇಯ ೩: ಲಂಕಾಧಿಪನ ಮನದಳಬಳವ ತಿಳಿ ಕಾಪೇಯತನದಗ್ಗಳಿಕೆಯನು ನೆರೆ ಬಳಸದಿಲ್ಲಿಗೆ ಬೇಗ ಬಾಯೆಂದ (ತೊರರಾ. ೪-೧೨-೧೫). [ಕಾಪೇಯ + -ತನ]

**ಕಾಪೋತ** (ನಾ). ೧. ಪಾರಿವಾಳದ ಬಣ್ಣ; ಬೂದು ಬಣ್ಣ. ೨. ಬಿಳುಪುಳ್ಳ ಒಂದು ಮೂಲಲೋಹ; ಕ್ನಾರ. ೩. ಪಾರಿವಾಳಗಳ ಗುಂಪು. ೪. ಬೂದುಬಣ್ಣದ ಕಣ್ಣಿಗೆ ಹಚ್ಚುವ ಒಂದು ಬಗೆಯ ಅಂಜನ; ಸೌವೀರಾಂಜನ. [ಸಂ.]

**ಕಾಪೋತಲೇಶ್ಯೆ** (ನಾ). = ಕಪೋತಲೇಶ್ಯೆ: ಮೂರು ನರಕಗಳಲ್ಲಿ ಕ್ರಮವಾಗಿ ಕಾಪೋತಲೇಶ್ಯವು ಜಘನ, ಮಧ್ಯಮ, ಉತ್ಕೃಷ್ಟವಾಗುವುದು. (ಜೈನಪ. ೪೪೮) [ಕಾಪೋತ + ಲೇಶ್ಯೆ]

**ಕಾಪೋತಿ** (ನಾ). ಬೂದುಬಣ್ಣದ ಸೀರೆ: ಬೂದಿ ಮೇಗವಣ್ಣಗೆ ಸೀರೆ ಕಂಡು ಕಾಪೋತಿ ಪಾಲಕಿಯು (ಅಮುಸಾಂ. ೪-೯). [?]

**ಕಾಪ್ಪಿ** (ನಾ). ಒಂದು ಬಗೆಯ ಸಸ್ಯ: (ವೈಔಗಿ. ೨೬-೫೬೦). [?]

**ಕಾಫರ**, ಕಾಫಿರ (ನಾ). ನಂಬಿಕೆಯಿಲ್ಲದವನು; ನಾಸ್ತಿಕ. ℙ ಮುಸಲ್ಮಾನರು ಅನ್ಯಮತೀಯನಿಗೆ ಕೊಟ್ಟ ಹೆಸರು: ಕಾಫರರುಗಳನ್ನು ಆದಷ್ಟು ಮುಸ್ಲಿಮರನ್ನಾಗಿ ಪರಿವರ್ತಿಸಬೇಕು (ಗೋಪುರ. ೨೨). ಕಾಫರರು ಹಿಂದುಗಳಾಗಿದ್ದುದೊಂದೇ ಅಪರಾಧವಾಗಿತ್ತು (ಕಥವಿ. I, 179). ಕಾಫಿರ: ನೀವು ಕಾಫಿರರನ್ನು ಪವಿತ್ರವೆಂದು ಭಾವಿಸಿ ಅವರೊಡನೆ . . . ಎಲ್ಲ ವ್ಯವಹಾರಗಳಲ್ಲಿ ಬಳಕೆಮಾಡುವಿರಾ (ಮಾಧವ. II, ೬೦). [← ಅರ. ಹಿಂ. ಕಾಫಿರ್; ಮರಾ. ಕಾಫರ್]

**ಕಾಫಿ$_1$** 'ಕಾಪಿ$_1$' ನೋ.

**ಕಾಫಿ$_2$**, ಕಾಪಿ$_2$ (ನಾ). ೧. ಒಂದು ಜಾತಿಯ ಸಸ್ಯ; ಬುಂದು: ಕಾಫಿ–ಈ ಗಿಡವು ೮-೧೦ ಅಡಿಗಳವರೆಗೆ ಎತ್ತರ ಬೆಳೆಯುತ್ತದೆ (ಸಸ್ಯಶಾ. ೧೩೪). ೨. ಅದರ ಬೀಜವನ್ನು ಹುರಿದು, ಮಾಡಿದ ಪುಡಿ. ೩. ಅಂತಹ ಪುಡಿಯಿಂದ ಮಾಡಿದ ಪಾನೀಯ: ಮೇಲೆ ಗಂಟೆಗೊಮ್ಮೆ ಆ ದರಿದ್ರ ಕಾಫಿ ಬೇರೆ (ಹನ್ನೊಂದ. ೮೪). **ಕಾಪಿ$_2$**: ೩. ಎಲ್ಲರಿಗೂ ತಿಂಡಿ ಕಾಪಿ ಏರ್ಪಾಡು ಮಾಡಿದ್ದರು (ರೂಢಿ). [← ಇಂ. Coffee]

**ಕಾಫಿದಾನಿ** (ನಾ). ಕಾಫಿಯ ಪಾತ್ರೆ: ಅವಳ ಹಾಸಿಗೆಯ ಬಳಿ ಕಾಫಿದಾನಿಯಿದ್ದ ಸಣ್ಣ ಮೇಜೊಂದಿತ್ತು (ಪುನರು. ೧೨೨). [ಕಾಫಿ$_2$ + ದಾನಿ$_2$]

**ಕಾಫಿರ** 'ಕಾಫರ' ನೋ.

**ಕಾಬ$_1$** 'ಕಾಣ್' ಪರಾ.

**ಕಾಬ$_2$**, ಕಾಬಾ (ನಾ). ಮಕ್ಕಾ ಕ್ಷೇತ್ರದ ಮಸೀದಿಯಲ್ಲಿರುವ ಒಂದು ಪವಿತ್ರವಾದ ಕರಿಯ ಕಲ್ಲು: ಹೆದರುವೆನು ಅರಾಬಿ ಕಾಬವನು ನೀ ಮುಟ್ಟಲಾರೆ (ಭಾರದ. ೪೦೫). **ಕಾಬಾ**: ಕ್ರಾಸ್ ಅಥವಾ ಕಾಬಾಗಳಲ್ಲಿ ಕೂಡಾ ಹಿಂದೂ ಜನರು ಪಾವಿತ್ರ್ಯವನ್ನು ಕಾಣುವರು (ಭಾರಸಂ. ೩೦೨). [← ಅರ. ಮರಾ. ಕಾಬಾ]

**ಕಾಬಳ್ಳಿ** (ನಾ). ಕಾಗುಣಿತ: ಇದರಿಂದ ಕಕಾರಾದಿಯಾದ ಎಲ್ಲ ಗುಣಿತಗಳಿಗೆ ಒಟ್ಟಾಗಿ 'ಕಾಗುಣಿತ,' 'ಕಾಬಳ್ಳಿ' ಎಂಬ ಹೆಸರುಗಳಾಗಿವೆ (ಸಂಶೋಧ. ೧೪). [< ಕ$_1$ + ಬಳ್ಳಿ]

**ಕಾಬಾ** 'ಕಾಬ$_2$' ನೋ.

**ಕಾಬಾಳೆ** (ನಾ). ೧. ಕಾಡುಬಾಳೆ: ಕಾಬಾಳೆ ದೀಪದ್ರಾಕ್ಷೆ ಕೇತಕೆ ತೋರಸೀಬಾಂತ ಬಿದಿರ್ವೆತ್ತಗಳ (ಮೋಹತ. ೧೯-೨೧); ಖರ್ಜೂರ ಮಾದಿಹ ಬಾಳೆ ಕಾಬಾಳೆ ಮೋದ ಸಕ್ಕರೆ ಮಾವು ನೇಱಿಲವಣ್ಣಳ ಯಾದವ ರಿತ್ತರಾಳ್ದನಿಗೆ (ಮೋಹತ. ೧೯-೫೫). ೨. ಕಡುಗೆಂಪು ಹೂವಾಗುವ ಒಂದು ತೋಟದ ಸಸ್ಯ: (ಕ). [ಕಾ$_2$ + ಬಾಳೆ (< ಬಾೞೆ)]

**ಕಾಬು** (ನಾ). ೧. ಸಂಧಿ; ಸಮಯ: "ಕಾ ಬು – ಸ ಮ ಯ" (ಜಾನಕೋ. ೩೭). ೨. ಹಿಡಿತ; ನಿಯಂತ್ರಣ; ಅಧಿಕಾರ. [← ತುರ್ಕಿ. ಮರಾ. ಕಾಬೂ]

**ಕಾಬುಜುಲೆ** (ನಾ). ಒಂದು ಬಗೆಯ ಪಕ್ಷಿ: ಹರಡೆ ಗೀಜಗ ಮರಗೊಡಲೆ ಕಾಬುಜುಲೆ ಲಾವುಗೆ ಗೌಜು ಪಾರಿವ (ಕುವ್ಯಾಅ. ೨೦-೫೩). [ಕಾ$_2$ + ಪುಜುಲೆ]

**ಕಾಬೆಕ್ಕು** (ನಾ). ಕಾಡಿನ ಬೆಕ್ಕು; ಕಾಡುಬೆಕ್ಕು: "ವನಸ್ಪತಿ ವನ ಮಾರ್ಜಾರಾಭ್ಯಾಂ = ಗಿಡವುಂ ಕಾ ಬೆ ಕ್ಕಂ ಬೆ ರ ಡ ಱಿಂ" (ನೀತಿವಾ. ೨೭-೧೭). 'ಕಾಟ್ಬೆಕ್ಕು' ಪರಾ. [ಕಾ$_2$ + ಬೆಕ್ಕು]

**ಕಾಬ್ಯ** (ನಾ). ಕಾವ್ಯ: ಕಾಬ್ಯ ಕರ್ತಾರನ . . . ಪೋಲಾಳ್ವದೇವನ ಪೆರ್ಮೆಯ ವಿಸ್ತಾರಮಂ ಪೇಳ್ವೊಡೆ (ಎಕ. XI, ದಾವಣ. ೨೫-೫೦; 1274); ಗದ್ಯ ಪದ್ಯಾನೀಕದಿಂದನವದ್ಯ ಕಾಬ್ಯಂಗಳನಲರ್ದು ಸುಹೃದ್ಯಮಾಗಲು (ಬಸಪು. ೨೭-೭). [< ಸಂ. ಕಾವ್ಯ]

**ಕಾಮ** (ನಾ). ೧. ಬಯಕೆ; ಅಪೇಕ್ಷೆ; ಇಚ್ಛೆ: "ಇಚ್ಛೆ ಕಾಂಕ್ಷೆ . . . ರುಚಿ ಕಾಮವಾಂಛೆ ಈಪ್ಸಿತಮೆನಲು ಬಯಕೆ" (ಮಂಗರಾ. ೧೨೮-೧೧); ತ್ರಿಣೇತ್ರಂ ಪ್ರೇಮಾಂಗಂ ಪೂರ್ಣಕಾಮಂ ಪರಮ ಪರಶಿವಂ (ಸೋಮೇಶ. ೧); 'ಕಾಮುಗಾಮಿ' ಪರಾ. ೨. ವಿಷಯಾಭಿಲಾಷೆ; ಭೋಗಾಸಕ್ತಿ: ಕಾಮುಕವಧಿಯ ಕಾಣೆ ನಾನೆಂದ (ಅಮೃತ. ೨-೯೦); ಕಾಮಕ್ಕೆ ಕಣ್ಣಿಲ್ಲ (ರೂಢಿ). ೩. ಮನಸ್ಸಿಗೆ ಬಂದಂತೆ ವರ್ತಿಸುವುದು; ಸ್ವೇಚ್ಛಾಚಾರ. ೪. ನಾಲ್ಕು ಪುರುಷಾರ್ಥಗಳಲ್ಲಿ ಒಂದು: ಧರ್ಮ ಅರ್ಥ ಕಾಮ ಮೋಕ್ಷವೆಂಬ ಚತುರ್ವಿದ ಫಲಪದಂಗಳ ನಾನೊಲ್ಲೆನಯ್ಯಾ (ಅಖಂಡೇ. ೧೭೧-೨೨). ೫. ಪ್ರೀತಿಯ ಅಧಿದೇವತೆ; ಮನ್ಮಥ; ಮದನ: ಕಾಮನ ಅಂಬಿನ ಗಣೆಯಲ್ಲಿಮೂವರು ಬಾಲೆಯರು ಹುಟ್ಟಿದರು (ಅಱಿಮಾ. ೨೭-೭೧); ಮುದದೆ ಕುಳ್ಳಿರೆ ಕಾಮನನೀಕ್ಷಿಸುತ್ತೆಗೋವಿಂದನ ನಿಂದಿತಂ ನುಡಿದನ್ (ಗಿರಿಕ. ೭-೩೦). ೬. ಒಂದು ಬಗೆಯ ಸಸ್ಯ.

**ಕಾಮನಕರಿ** = ಬೇವಿನ ಹೂ ಮತ್ತು ಚಿಗುರು: ಕಾಮನಕರಿ (ಬೇವಿನ ಹೂ ಚಿಗುರು)ಯನ್ನೂ ತಂದು ಕಣಜಗಳಲ್ಲಿಯೂ, ಕಾಳು ತುಂಬುವ ಹಗೆ – ಬಳತಗಳಲ್ಲಿಯೂ ಚೆಲ್ಲುವನು (ಕನ್ನಜಾ. ೧೭೭). **ಕಾಮನಬಿಲ್ಲು** = ಮಳೆಬಿಲ್ಲು; ಇಂದ್ರ ಧನಸ್ಸು: ತೋರೆ ಕಾಮನಬಿಲ್ಲ ಸೊಗಸಿನ ತೋರಣವು ಆಗಸದಲಿ (ಕಎಪು. ೩೦). **ಕಾಮನ ಹಬ್ಬ** = ಫಾಲ್ಗುಣ ಹುಣ್ಣಿಮೆ ದಿವಸ ಆಚರಿಸುವ ಹಬ್ಬ: ಇಂದು ಕಾಮನ ಹಬ್ಬ (ರೂಢಿ). **ಕಾಮನ ಹೂ** = ಬೇವಿನ ಹೂ: ಪ್ರಾಚೀನ ಋಷಿಗಳಿಗೆ ಕರ್ನಾಟಕದಲ್ಲಿ ಬೆಳೆಯುವ ಬೇವಿನ ಹೂವು (ಕಾಮನ ಹೂ) ದೃಷ್ಟಿಗೆ ಬಿದ್ದಂತೆ ಕಂಡುಬರುವುದಿಲ್ಲ (ಕನ್ನಜಾ. ೧೭೩). **ಕಾಮನ ಹುಣ್ಣಿಮೆ, ಕಾಮನ ಹುಣ್ಣಿವೆ** = ಫಾಲ್ಗುಣ ಮಾಸದಲ್ಲಿ ಬರುವ ಹುಣ್ಣಿಮೆ; ಹೋಳಿ ಹುಣ್ಣಿಮೆ: ಕಾಮನ ಹುಣ್ಣಿಮೆ ಹಣ್ಣಾಗಿ ಹರಿವಂತೆ . . . ಹೊನಲಾಗಿರೆ (ಸಖಿಗೀ. ೨೪-೪೯); ಕಾಮನಹುಣ್ಣಿವೆಗೆ ಕಲಕುನೀರು (ರೂಢಿ). [ಸಂ.]

**ಕಾಮಂಚ** 'ಕಾವಂಚಿ' ನೋ.

**ಕಾಮಂಚಿ** 'ಕಾವಂಚಿ' ನೋ.

**ಕಾಮಂಡ** (ನಾ). = ಕಮಂಡಲು (?): ಜುಟ್ಟು ಜನಿವಾರ ಬಿಸುಟು ತಾವೀಗರೊಟ್ಟೊಂದು ಕೌಪೀನವಾ ಕಟ್ಟಿ ಕಾಷಾಯ ಕಾಮಂಡ ದಂಡಗಳಾದ ವಿಟ್ಟ ಸನ್ಯಾಸಕೆಂದಾ (ಚಿದಾಕೋ. ೨-೧೦). [?]

**ಕಾಮಂಡಲಿ** (ನಾ). ೧. ಕಮಂಡಲುವನ್ನು ಹಿಡಿದುಕೊಂಡವನು; ಶಿವ. ೨. ಸಂನ್ಯಾಸಿ. ೧, ೨: ಪಶುಪತಿಯೆ ಗೋಪಟ್ಟಗಂ ಸಾರು ಕಱಿಕಂಠ ಸಸಿನೆ ವನಕೈದು ಶೂಲಿಯೆ ವೈದ್ಯಳಲ್ಲ ಕಾಮಂಡಲಿ ಧರಾತಳ ದೊಳು ವಸೆದು ಭಿಕ್ಷವ ಬೇಡು ಯಮಳಗಂಗಾಧರನೆ ಅಸಮಭಕ್ತರಿಗೆ ನೀರಡಕುಮಾಪತಿಯೆನಲು ನಸುನಗುತಲೈದಿ ಬಾಗಿಲ ತೆಗೆದುಯಿಾಶನೊಡ ವೆರೆದ ಹಿಮಗಿರಿಜೆ ಸಲಹಾ (ನವಮೋ. ೧೫-೨).

[ಕಾಮಂಡಲು$_0$ + –ಇ$_2$]

**ಕಾಮಕಥೆ** (ನಾ). ಕಾಮದ ಕಥೆ; ಶೃಂಗಾರಕಥೆ: ವಿನಯದಿಂ ಬಂದಿಸಿ ಧರ್ಮಮಂ ಬೆಸಗೊಂಡವರ್ ಧರ್ಮಮಂ ಪೇೞದೆ ಕಾಮಕಥೆಗಳಂ ಪೇೞ್ದೊಡೆ (ಚಾವುಂಪು. ೧೭೮). [ಕಾಮ + ಕಥೆ]

**ಕಾಮಕರ** (ನಾ). ೧. ತನ್ನ ಇಚ್ಛೆ ಬಂದಂತೆ ನಡೆದುಕೊಳ್ಳುವುದು; ಸ್ವೇಚ್ಛಾವೃತ್ತಿ. ೨. ಸೊಕ್ಕು; ಬಿಂಕ; ಗರ್ವ: "ಕಾಮಕರಂ ಸಮಗರ್ವ ಪೌರುಷಂ" (ಕರ್ಣಾನಿ. ೫೭). "ಬಿಂಕ ಪಂ ನಂ ಮು ಕ್ಕೆ ನಲ್ಗರ್ವವೂ" (ಶಬ್ದಮಂ. ೩೯); ಕಾಮಕರಂ ಕರಮಡಂಗಿ ನುರ್ಗಪ್ಪಿನೆಗಂ ಕಾಮಧನಡಂಗೆವೊಯ್ದಂ (ಶಮದ. ೨೪೭ ಪ್ರಯೋ). ಆದರ್ಕಾ ವಿಷ್ಣು ದೂತರ್ ಯಮಭಟರ ಕಾಮಕರಂ ಕರಂ ಕರಂಗುವಿನಂ ಮಾಂಕರಿಸುತೆ (ರಾಮಾಶ್ವ. ೮೦-೧೯). [< ಸಂ. ಕಾಮಕಾರ]

**ಕಾಮಕಸ್ತೂರಿ** (ನಾ). ತುಳಸಿ ಜಾತಿಗೆ ಸೇರಿದ ಒಂದು ಸುವಾಸನೆಯ ಸಸ್ಯ: ಕಾಮಕಸ್ತೂರಿ ನಿನ್ನ ಕಾಣದಲೆ ಇರಲಾರೆ (ಕನ್ನಜಾ. ೧೨೧); ತಂದೇನಿ ನಿನಗೆಂದ ತುಂಬಿತುರುಬಿನವಳ ಕಾಮಕಸ್ತೂರಿಯಾ ತೆನಿಯೊಂದ (ಮೂರ್ತಿಕಾ. ೩೭-೩). [ಕಾಮ + ಕಸ್ತೂರಿ]

**ಕಾಮಕಾತರತೆ** (ನಾ). ಕಾಮಾತುರತೆ; ಭೋಗಾಪೇಕ್ಷೆ: ಪರನೃಪ ಮಂಡಳಕ್ಕೆ ಭಯಮಂ ರಮಣೀನಿವಹಕ್ಕೆ ಕಾಮಕಾತರತೆಯಂ . . . ಇತ್ತನಂದು ಬಿತ್ತರಿಸೆ ಸನತ್ಕುಮಾರ ನಳಕೂಬರ ಕಂತುನಿಭಂ ನೃಪಾತ್ಮಜಂ (ಪುಷ್ಪಪು. ೪-೭೦) [ಕಾಮ + ಕಾತರತೆ]

**ಕಾಮಕಾತರೆ** (ನಾ). ಕಾಮದಲ್ಲಿ ಆತುರಳಾದವಳು; ಭೋಗಾಪೇಕ್ಷೆಯುಳ್ಳವಳು: ವಿಳಾಸವತಿ ರಾವಣಂಗೆ ಪಲಕಾಲಂ ಮುನ್ನೆಳಸಿರ್ಪ ಕಾಮಕಾತರೆ ಕೆಳದಿಗೆ ತಿಳಿವಂತು ತನ್ನ ತೆಱನಂ ಪೇೞ್ದಳ್ (ಪಂರಾಮಾ. ೧೦-೧೮೮). [ಸಂ. ಕಾಮಕಾತರಾ (ಕಾಮ + ಕಾತರಾ)]

**ಕಾಮಕಾಮಿನಿ** (ನಾ). ೧. ಭೋಗಾಪೇಕ್ಷೆಯುಳ್ಳವಳು; ವಿಷಯಾಸಕ್ತೆ: ಕಾಮಕಾಮಿನಿಯರ ಕಡೆಗಣ್ಣ ನೋಟದಿಂ ಪುಳಕಿಸದ ತಿಳಕಮಿಲ್ಲ (ಪುಷ್ಪಪು. ೯-೨೧ ವ). ೨. ಮನ್ಮಥನ ಹೆಂಡತಿ; ರತಿ.

[ಕಾಮ + ಕಾಮಿನಿ]

**ಕಾಮಕಾರ** (ನಾ). = ಕಾಮಕರ: 'ಕಾಮಕಾರಿಕೆ' ಪರಾ. [ಸಂ.]

**ಕಾಮಕಾರಿಕೆ** (ನಾ). ೧. ಇಷ್ಟಬಂದಂತೆ ವರ್ತಿಸುವಿಕೆ. ೨. ಗರ್ವಪಡುವಿಕೆ; ಉದ್ವೃತ್ತ ಸ್ವಭಾವ: ತಾಮಸ ತಲ್ಲಣ ತಬ್ಬಿಬ್ಬು ತಳ್ವಂಕ ಕಾಮಕಾರಿಕೆ ಕಟ್ಟಳಲ ಸೀಮೆಯಱಿಯದಳ ಸಲಹು ರಂಗಾಯೆಂಬ ಭಾಮೆಯನೆಂದು ಕಂಡಪೆನೊ (ಶತಸಾಂ. ೩೫-೭೮).

[ಕಾಮಕಾರ + –ಇಕೆ]

**ಕಾಮಕೊಟ** (ನಾ). ೧. ಸೂಳೆಗಾರಿಕೆ; ವ್ಯಭಿಚಾರ. ೨. ವ್ಯಭಿಚಾರಿ; ಜಾರ. [ಕಾಮ + ಕೂಟ]

**ಕಾಮಕೇರಿ** (ನಾ). ಸೂಳೆಗೇರಿ: ಕಾಮಕೇರಿಯ ಕುಲದ ಕಂದಗೆ ಭೂಮಿ ತೊಲಗದು (ಕಾಲಸಂ.೩೮-೯). [ಕಾಮ + ಕೇರಿ]

**ಕಾಮಕೇಲಿ** (ನಾ). ರತಿಕ್ರೀಡೆ; ಸಂಭೋಗ: ಎಲಾ ಗೆಳತಿ, ನೀನಾದರೂ ಶ್ರೀಕೃಷ್ಣನನ್ನು ನನ್ನೊಡನೆ ಕಾಮಕೇಲಿಯಾಡುವಂತೆಸಗು ಎಂದು ಬಿನ್ನೈಸಿಕೊಂಡಳು (ಅಭಿಮಾ. ೪೪). [ಕಾಮ + ಕೇಲಿ]

**ಕಾಮಕೊಣತಿ** (ನಾ). ಒಂದು ಬಗೆಯ ಕೊಡತಿ, —ಮರದ ಸುತ್ತಿಗೆ: ವಪ್ಪುವಂತಹ ಕಾಮದಾರು ಚಯಿವಕ್ಕೆ ಕಾಮಕೊಣತಿ ಎಂದು ಹೆಸರು (ಖಡ್ಗಟೀ.೨-೩೧). [ಕಾಮ + ಕೊಣತಿ (< ಕೊಡಂತಿ)]

**ಕಾಮಕೋಡ** (ನಾ). ಒಬ್ಬಾತನ ಹೆಸರು: ಮಗನ್ ಕಾಮಕೋಡನ್ (ಎಇ. IX, ೧೮-೪; 800) [?]

**ಕಾಮಕೋಳಾಹಳ** (ನಾ). ಕಾಮನನ್ನು ಸುಟ್ಟು ಕೋಲಾಹಲ ಮಾಡಿದವನು; ಶಿವ: ಕಾಮಕೋಳಾಹಳನು ದಕ್ಷನ ಹೋಮದಳವುಳ ಕಾಜ ಹರ ನಿಸ್ಸೀಮದಲಿ ಪುರಮೂಜ ಗೆಲಿದನು (ಕುವ್ಯಾಕ. ೭ ಸೂಚನೆ). [ಕಾಮ + ಕೋಳಾಹಳ (= ಕೋಲಾಹಲ)]

**ಕಾಮಕೌಶಲಿ** (ನಾ). ಕಾಮಶಾಸ್ತ್ರದಲ್ಲಿ ಕುಶಲನಾದವನು, —ನಿಪುಣ: ಜಾನಕಿಯ ಜೀವಜಾಡ್ಯಕೆ ಕಾಮಕೌಶಲಿ ದಶಗ್ರೀವನನು ದಿನಂ ಪ್ರಾಭಾತವೇಳೆಯೊಳ್ ನೀಡುವ ನಿನಾದ ಸುಖಭೇಷಜವೊ? (ಶ್ರೀರಾಮಾ. ೪೮೫-೨೮೯). [< ಸಂ. ಕಾಮಕೌಶಲಿನ್]

**ಕಾಮಕ್ಲಿಷ್ಟೆ** (ನಾ). ಕಾಮದಿಂದ ಖಿನ್ನಳಾದವಳು; ಕಾಮದಿಂದ ಕ್ಲೇಶಕ್ಕೊಳಗಾದವಳು; ವಿರಹಪೀಡಿತೆ: ಈ ಕೋಮಳೆ ಕಾಮಕ್ಲಿಷ್ಟೆ ಚಿತ್ರಕ್ಕೆಳಲೊಲವುಮಂ ಪುಟ್ಟಿಪಳ್ ನೋಡೆ (ಶಾಕುಂತ. ೩೫-೬೧). [ಸಂ. ಕಾಮಕ್ಲಿಷ್ಟಾ]

**ಕಾಮಗಣ** (ನಾ). ಕಾಮನ ಬಳಗ: ಕಾಮಗಣಂಗಳ ಕೂಡೆ ಕಾದಿ ಗೆಲಲಜಿಯದೆ (ಅನಚಂ. ೧೧೭-೪೮೫). [ಕಾಮ + ಗಣ]

**ಕಾಮಗಾಮಿ** (ನಾ). ತನ್ನ ಇಚ್ಛೆಬಂದಂತೆ ನಡೆಯುವವನು; ಸ್ವೇಚ್ಛಾಚಾರಿ; ಸ್ವೈರಚಾರಿ: (ಕಿ). [ಸಂ. ಕಾಮಗಾಮಿನ್]

**ಕಾಮಗಾರ**, ಕಾಂಗಾರ (ನಾ). ಕಾರಖಾನೆ ಮೊದಲಾದವುಗಳಲ್ಲಿ ಕೆಲಸಮಾಡುವವನು; ಕೆಲಸಗಾರ; ಕಾರ್ಮಿಕ: ಓವರಸಿಯರು ಕಾಮಗಾರರಿಗೆ ಸಂಬಂಧಿಸಿದ ಕೆಲವು ನೌಕರರೊಡನೆ ಅಲ್ಲಿಗೆ ಬಂದರು (ಅನ್ನ. ೧೯೫); ಗಿರಿಣಿ ಕಾಮಗಾರ ಸಂಸ್ಥೆ (ಯಕ್ಷಪ್ರ. ೧೪೧). **ಕಾಂಗಾರ**: ಬಂದೋಬಸ್ತು ಮಾಡುವ ಕಾಂಗಾರರಿಗೆ (ದೌಲತ್. ೩೮). [← ಹಿಂ. ಮರಾ. ಕಾಮಗಾರ. < ಸಂ. ಕರ್ಮಕಾರ]

**ಕಾಮಗಾರಿ**, ಕಾಂಗಾರಿ (ನಾ). (ಕಾರ್ಮಿಕರು ಮಾಡುವ) ಕೆಲಸ, —ಕಾರ್ಯ: ದೇವಸ್ಥಾನದ ಮುಂದೆ ಮಂಟಪ ಕಾಮಗಾರಿ ೨೦ ವರಹ ದರು (ಮೈಆರಿ. ೧೯೨೯, ೯೭-೭; 1593); ಕಾಮಗಾರಿ ಕೆಲಸ ಮಾಡುವ ಬಗ್ಗೆ ಆಳುಗಳ ಸಹ ದೊರಕಿಸಿ ಕೊಟ್ಟು (ರಾಜೇಂದ್ರ. ೭೩); ಕಾಮಗಾರಿ ಗಳನ್ನು ನಡೆಸಿದರು (ಮಹಾವಂ. II, ೩೪); ಅದರ ಪೈಕಿ ಅರ್ಧಭಾಗ ಮಟ್ಟೆ ಕಾಮಗಾರಿಗೆ ತಗಲತಕ್ಕದ್ದು; ಉಳಿದ ಅರ್ಧ ಛತ್ತರ್‌ಗಜ್ಜಿ ಕಾಮಗಾರಿಯದು (ಕೆಲನೆ. ೧೫೦). **ಕಾಂಗಾರಿ**: ಊರಿಗೆ ಅಗತ್ಯವಾದ ರಸ್ತೆ, ಚರಂಡಿ . . . ಬಾವಿ ಮುಂತಾಂದ ಕಾಂಗಾರಿಗಳಿಗೆ (ನಮ್ಮಳ್ಳಿ. ೪೩). [← ಹಿಂ. ಮರಾ. ಕಾಮಗಾರೀ]

**ಕಾಮಗಾರಿ ಶಿಕ್ಷೆ** (ನಾ). ಸಶ್ರಮ ಶಿಕ್ಷೆ; ಸೆರೆಮನೆಯಲ್ಲಿಟ್ಟು ಕಷ್ಟದ ಕೆಲಸಮಾಡಿಸುವ ಶಿಕ್ಷೆ: (ಕಿ). [ಕಾಮಗಾರಿ + ಶಿಕ್ಷೆ]

**ಕಾಮಗಿರಿ** (ನಾ). = ಕಾಮಗಾರಿ: ಮೂರು ಮೈಲಿನ ಆಚೆ ಬರಗಾಲ ಕಾಮಗಿರಿ ನಡೆದಂತೆ (ಮಣ್ಣಿಮ. ೧೯); ನಾನೂ ನಿನಗೊಂದು ಕಾಮ ಗಿರಿಯನ್ನೊಪ್ಪಿಸುವೆ (ಹಂಸಾ. ೬೬). [← ಮರಾ. ಕಾಮಗಿರೀ]

**ಕಾಮಗೀತೆ** (ನಾ). ಶೃಂಗಾರದ ಹಾಡು; ಕಾಮವನ್ನು ಪ್ರಚೋದಿಸುವ ಹಾಡು: ಪ್ರಾಚೀನ ಗ್ರೀಸಿನಲ್ಲಿ ಎಲ್ಲಾ ಕಡೆಗಳಲ್ಲೂ ಹರಡಿದ್ದ . . . ಕಾಮಗೀತೆಗಳೇ ವೈನೋದಿಕ ಜನ್ಮಭೂಮಿಯೆಂದು ಅರಿಸ್ಟಾಟಲನ ಮತ (ಅರಿಕಾ. ೨೧). [ಕಾಮ + ಗೀತೆ]

**ಕಾಮಗೌಂಡ** (ನಾ). ಒಬ್ಬಾತನ ಹೆಸರು: ಬಂಮಗೌಂಡ ಕೇತಗೌಂಡ ಮಾದಿಗೌಂಡ ಕಾಮಗೌಂಡ ನಾಲ್ವರ್ ಗೌಡುಗಳಂ (ಎಕ. VII, ಶಿವಮೊ. ೫೨-೮; ?). [ಕಾಮ + ಗೌಂಡ (< ಗಾಮುಂಡ)]

**ಕಾಮಗ್ರಹ** (ನಾ). ಕಾಮನ ಹಿಡಿತ; ಕಾಮಾವೇಶ: ಆ ಪೊಟಿಲನಾಳ್ವ ವಿಮಲಸೇನನ ಮಗಳ್ ಕಮಲವತಿಯ ಕಾಮಗ್ರಹಮಂ ಕಳೆವಲ್ಲಿ (ಚಾವುಂಪು. ೬೮). [ಕಾಮ + ಗ್ರಹ]

**ಕಾಮಚರ್ಯೆ** (ನಾ). ಇಂದ್ರಿಯ ಸುಖಾನುಭವ; ವಿಷಯೋಪ ಭೋಗ: ಒಟ್ಟು ಬದುಕನ್ನು ಬೆಳೆಯಿಸಲು ಪ್ರೇರಕವಾದ ಶಕ್ತಿಯನ್ನು ಕೇವಲ ಕಾಮಚರ್ಯೆಯೊಂದಕ್ಕೇ ಸೀಮಿತಗೊಳಿಸಿ . . . ಅದೇ ಸರ್ವಸ್ವ ಎಂದರೆ ಹೇಗಾದೀತು (ಸ್ವಪ್ನಹೊ. ೨೪೫). [ಕಾಮ + ಚರ್ಯೆ]

**ಕಾಮಚಾಪ** (ನಾ). ಮನ್ಮಥನ ಬಿಲ್ಲು; ಕಬ್ಬು: ಕಾಮಚಾಪದಿಂ ಜನಿಯಿಸಿದಿಕ್ಷು ಚಂದ್ರನಮರ್ದಿಂ ಮಡುಗೊಂಡ ಕೊಳಂ (ಪುಷ್ಪಪು. ೨-೩೭). [ಕಾಮ + ಚಾಪ]

**ಕಾಮಚಾರಿ** (ಗು). ೧. ಇಷ್ಟಬಂದಲ್ಲಿಗೆ ಹೋಗುವ ಶಕ್ತಿಯುಳ್ಳ; ಅನಿರ್ಬಂಧ ಸಂಚಾರ ಶಕ್ತಿಯುಳ್ಳ: ಕಾಮರೂಪಿಯುಂ ಕಾಮ ಚಾರಿಯುಮಪ್ಪ ವಿಜಯಾರ್ಧಪರ್ವತಮೆಂಬ ಯಾಗಹಸ್ತಿರತ್ನಮುಂ (ಆದಿಪು. ೧೧-೩೨). (ನಾ). ೧. ಮನಸ್ಸಿಗೆಬಂದಂತೆ ಕಲ್ಪಿಸುವುದು: ಅನುಮಾನವು ಕಾಮಚಾರಿಯಾದುದರಿಂದ ಅದು ಪರಮಾತ್ಮನ ಜ್ಞಾನವನ್ನು ಹುಟ್ಟಿಸಲೂ, ನಿರಾಕರಿಸಲೂ ಶಕ್ತಿಯಿಲ್ಲದಿರುವ ಪ್ರಮಾಣ ವೆಂದು ಕಠಶ್ರುತಿಯು ಹೇಳುವುದು (ಭಾರದ. ೨೯). ೨. ಸ್ವೇಚ್ಛಾ ವೃತ್ತಿಯುಳ್ಳ ವ್ಯಕ್ತಿ: ಕಾಕುಮುತಿಗಳು ನಾವು ಚಿತ್ತವ್ಯಾಕುಳತೆಯರು . . . ನಾವತಿ ಕಾಮಚಾರಿಯರು (ಬಸವು. ೪೦-೮೩). [< ಸಂ. ಕಾಮಚಾರಿನ್]

**ಕಾಮಚೇಷ್ಟೆ** (ನಾ). ಶೃಂಗಾರಚೇಷ್ಟೆ; ಕಾಮವಿಕಾರ: ಹಳ್ಳಿಗರಲ್ಲಿ ಮಕ್ಕಳಾಸೆಗಾಗಲಿ, ಬದುಕಿನಾಸೆಗಾಗಲಿ ಇಲ್ಲವೆ ಕಾಮಚೇಷ್ಟೆಗಾಗಲಿ . . . ಗಂಡು ಮದುವೆಯಾಗಲು ಹವಣಿಸಲು (ಕನ್ನಜಾ. ೧೦೫). [ಕಾಮ + ಚೇಷ್ಟೆ]

**ಕಾಮಚ್ಛತ್ರ** (ನಾ). ೧. ಕಾಮದೇವನ ಪೂಜೆಯಲ್ಲಿ ಉಪಯೋಗಿ ಸುವ ರಾಜೋಪಚಾರಗಳಲ್ಲಿ ಒಂದು: ಅತಿಮುಗುದೆಯಪ್ಪೆನ್ನ ಮಗಳ ಕಾಮಜ್ವರೋಜ್ಜೃಂಭ ತಾಪವಾರಿದಡೆ ಕಾಮನಂ ನೋನುವೆಂ. . . ಊರ್ಜಿತ ವಸಂತದೊಳು ಕಾಮಚ್ಛತ್ರವಿಡುವೆನೆಂದಜ್ಜಿ ಹರಸುತ್ತಿರ್ದಳು (ಹಚಕಾ. ೪-೨೭). ೨. ಸ್ತ್ರೀಯರ ಯೋನಿಯಲ್ಲಿರುವ ಒಂದು ನಾಡಿ; ಭಗಾಂಕುರ(?): ಸ್ಮರಗೃಹದೊಳೊಡನೊಂದು ಬೆರಳೊಂದೆ ನಾಡಿ ಯಿರಲಸರೆ ಕಾಮಾತಪತ್ರಮೆನಿಸಿ ಪಿರಿದಪ್ಪುವದಜಿಂದೆ ತರುಣಿ ಕೇಳದ ಕಾಯ್ದು ನೆರೆಯೆ ಕಾಮಛ[ಚ್ಛ]ತ್ರಮೆಂಬ ಪೆಸರೂ (ಜನವ. ೬-೨೮). 'ಕಾಮಾತಪತ್ರ' ಪಾಠಾ. [ಸಂ. (ಕಾಮ + ಛತ್ರ)]

**ಕಾಮಜ** (ಗು). ೧. ಕಾಮದಿಂದ ಹುಟ್ಟಿದ; ಸುಖಾಪೇಕ್ಷೆಯಿಂದ ಹುಟ್ಟುವ. (ನಾ). ೨. ಕಾಮನ ಮಗ; ಅನಿರುದ್ಧ: (ಕಿ). [ಸಂ.]

**ಕಾಮಜನಕ** (ಗು). ೧. ಕಾಮವನ್ನು ಉದ್ರೇಕಿಸುವ; ಕಾಮೋತ್ಪಾದಕ. (ನಾ). ೨. ಮನ್ಮಥನ ತಂದೆ; ವಿಷ್ಣು. [ಕಾಮ + ಜನಕ]

**ಕಾಮಜೇನಿ** (ನಾ). ಕಾಮಧೇನುವಿನಂತಹ ಹಸು: ಕಾಮಜೇಣಿಯೆ ಕಿರುಬನ ಬಾಯಿಗೆತುತ್ತಾದಮೇಲೆ ಅಂಥಿಂಥ ಸಾಮಾನ್ಯಹಸುಗಳು ಇವನ ಕಯ್ಯಲ್ಲಿ ಬದುಕುವುದುಂಟೆ (ಬೆಳುಮು. ೧). [< ಸಂ. ಕಾಮಧೇನು]

**ಕಾಮಜ್ವರ** (ನಾ). ವಿರಹದಿಂದ ಉಂಟಾದ ಜ್ವರ; ವಿರಹತಾಪ: ಇಂದುಕಿರಣಂಗಳಿಂದಂ ಚಂದನರಸದಿಂದೆ ಮಾಗಿಯಾ ನೀರಿಂದಂ ನಂದದು ಪರಿತಾಪಾನಳನಿಂದಜಾದೆಂ ನಿನ್ನ ಮೆಯ್ಯ ಕಾಮಜ್ವರಮಂ (ಕವಿರಾ. ೬-೧೬೪); ಕಾಮಜ್ವರದಿಂದೆ ಸಂತಾಪಿಸುತಿರೆ (ನವಮೋ. ೬-೫೮).
[ಕಾಮ + ಜ್ವರ]

**ಕಾಮಜ್ವರಿತ** (ನಾ). ಕಾಮಜ್ವರವೇರಿದವನು; ಮನ್ಮಥನಬಾಧೆಗೆ ಒಳಗಾದವನು: ಕಂಡನು ದೈವಗತಿಯಲಿ ಸುರವಧುವನಾಕ್ಷಣಕೆ ಕಾಮ ಜ್ವರಿತನಾದವನು (ಕುವ್ಯಾಅ. ೬-೧೮). [ಕಾಮ + ಜ್ವರಿತ]

**ಕಾಮಟಗಾರ** (ನಾ). ಕೆಲಸಗಾರ; ಕಾಮಾಟಿ: ತಮ್ಮ ಕೈಕಸಬಿನಿಂದ ದಂಡಿಗೆ ನೆರವಾಗಬಲ್ಲ ಕಾಮಟಗಾರರು ಲೆಕ್ಕವನ್ನು ಇಡುವ ಕಾರಕೂನರು ಮುಂತಾದ ಸೈನಿಕ ಸಹಾಯಕ ದಳದವರು (ಮಗಜ. ೬೪).
[ಕಾಮಟ್ಟ$_0$ + – ಗಾರ (< –ಕಾಜ)]

**ಕಾಮಣಿ** 'ಕಾಮಾಲೆ' ನೋ.

**ಕಾಮಣಿಗಣ್ಣು** (ನಾ). ಕಾಮಾಲೆರೋಗ ಬಡಿದ ಕಣ್ಣು; ಹಳದಿ ಬಣ್ಣಕ್ಕೆ ತಿರುಗಿ ಎಲ್ಲವೂ ಹಳದಿಯಾಗಿ ಕಾಣುವ ಕಣ್ಣು: ಕಾಮಣಿ ಗಣ್ಣಿಗೆ ಎಲ್ಲವೂ ಹಳದಿಯಾದಂತೆ ಕವಿಯ ಕಣ್ಣಿಗೆ ಹಸಿರಾಗಿ ತೋರುತ್ತದೆ ಈ ತೋಟ (ನವ್ಯಕಾ. ೩೩). [ಕಾಮಣಿ (< ಕಾಮಾಲೆ) + ಕಣ್ಣು (< ಕಣ್)]

**ಕಾಮಣ್ಣ** (ನಾ). ೧. ಕಾಮ; ಮನ್ಮಥ: ಸಿಟ್ಟಿಗೇಳುತ ಶಿವನು ಬಿಟ್ಟಾನೊ ಉರಿಗಣ್ಣು ಸುಟ್ಟು ಬೂದ್ಯಾದೊ ಕಾಮಣ್ಣ (ಕನ್ನಜಾ. ೧೭೫). ೨. (ಅಲಂ) ಚೆಲುವ; ಸುಂದರ: ಇಂತಹನ ಹೆಂಡತಿಯ ಕಣ್ಣಿಗೆ ಅದೇ ಪ್ರಾಯಕ್ಕೆ ಬಂದ ಕಾಮಣ್ಣ ಬಿದ್ದರೆ ಆಶ್ಚರ್ಯವೇನು (ಮೂರುದಾ. ೧೫೨). [ಕಾಮ + ಅಣ್ಣ$_1$]

**ಕಾಮತಂತ್ರ** (ನಾ). = ಕಾಮಶಾಸ್ತ್ರ: ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕಾಯುರ್ವೇದ ... ಲೋಕೋಪಕಾರಿಗಳಪ್ಪ ಶಾಸ್ತ್ರಂಗಳೆನಿತೊಳವನಿತುಮಂ ... ಉಪದೇಶಂಗೆಯ್ದು (ಆದಿಪು. ೮-೭೦ ವ); ಕಾಮತಂತ್ರದೊಳ್ ನಾಯಕ ನಾಯಕೀ ಭೇದ ಭಿನ್ನ ಕಲಾಕೌಶಲಮುಮಂ (ಅನಂಪು. ೬-೯ ವ). [ಕಾಮ + ತಂತ್ರ]

**ಕಾಮತಿ** (ನಾ). ಹೊಲದಲ್ಲಿ ಕೆಲಸಮಾಡುವವನು; ವ್ಯವಸಾಯಗಾರ: ಕಾಮತಿಗಳು ಅಥವಾ ಕುರೆಚಿಗೇ ಪೊಕ್ಕಲಿಗರು. ಇವರು ಮಳೆಗಾಲದಲ್ಲಿ ಒಂದು ಬಗೆಯ ಕುಂಚಿಗೆಯನ್ನು ಹೊದ್ದುಕೊಳ್ಳುವ ಕಾರಣ ಇವರಿಗೆ ಈ ಹೆಸರು ಬಂದಿದೆ (ಕಭಾಗ. ೧೪೦); ವ್ಯವಸಾಯಗಾರರು ... ಕಾಮತಿ, ಕಾಪು (ತುಳುನಾ. ೧೭೧). [← ಮರಾ. ಕಾಮತೀ]

**ಕಾಮತೃಷೆ** (ನಾ). = ಕಾಮತೃಷ್ಣೆ: ವಿಕೃತ ಕಾಮತೃಷೆಗೆ ಬಲಿಯಾದ ಹೆಣ್ಣಿನ ವೇದನೆ ... ಇಂತಹ ನೂರು ಬಗೆಯ ಸಮಸ್ಯೆಗಳಿವೆ (ವಿದ್ಯಾರಿ. ೧೪). [ಕಾಮ + ತೃಷೆ]

**ಕಾಮತೃಷ್ಣೆ** (ನಾ). ಕಾಮಾಸಕ್ತಿ; ಭೋಗಲಾಲಸೆ: ಕಾಮತೃಷ್ಣೆ, ಭವತೃಷ್ಣೆ, ವಿಭವತೃಷ್ಣೆಗಳಿಂದ ದುಃಖ ತಲೆಯೆತ್ತುತ್ತದೆ (ಭಾರದ. ೧೯೭).
[ಕಾಮ + ತೃಷ್ಣೆ]

**ಕಾಮದ** (ಗು). ೧. ಬಯಸಿದುದನ್ನು ಕೊಡುವ (ನಾ). ೨. ಸ್ಕಂದ. ೩. ಸೂರ್ಯ. ೪. ಶಿವ. ೫. ಗಂಗರಾಜನ ಒಂದು ಬಿರುದು: ಕಾಮಕರಂ ಕರಮುಡಂಗಿ ನುರ್ಗಪ್ಪಿನೆಗಂ ಕಾಮದನಡಂಗೆಪೊಯ್ದಂ (ಶಮದ. ೨೪೭ ಪ್ರಯೋ); ವಿಪರೀತಜಾತಚರಿತಂ ಭೂಪಾಲರೊಳ್ ಕಾಮದಂ (ಕಾವ್ಯಾವ. ೨೬೧). [ಸಂ.]

**ಕಾಮದಹನ** (ನಾ). ೧. ಕಾಮನನ್ನು ಸುಡುವುದು. ℙ ಶಿವನು ಕಾಮನನ್ನು ಸುಟ್ಟ ಸಂಕೇತವಾಗಿ ಫಾಲ್ಗುಣ ಪೂರ್ಣಿಮೆಯ ದಿವಸ ಕಾಮನ ಮೂರ್ತಿಯನ್ನು ಸುಡುವ ಸಾಂಪ್ರದಾಯಿಕ ಕ್ರಿಯೆ. ೨. ಕಾಮನನ್ನು ಸುಟ್ಟವನು; ಶಿವ.
[ಕಾಮ + ದಹನ]

**ಕಾಮದಹನಾಸನ** (ನಾ). [ಯೋಗ] ಯೋಗಾಸನಗಳಲ್ಲಿ ಒಂದು ಪ್ರಕಾರ: ಯೋಗಯೋಗ್ಯಾಸನಗಳಲ್ಲಿ ಶುದ್ಧಾಸನ ... ಕಾಮದಹನಾಸನ ... ಅರ್ಧಾಸನಾದಿಯೆಂಭತ್ತಾಲ್ಕಾಸನ ಭೇದಂಗಳ್ (ವಿವೇಕ. ೧೪೯). [ಕಾಮದಹನ + ಆಸನ]

**ಕಾಮದಾಯಿನಿ** (ನಾ). ೧. ಬಯಸಿದುದನ್ನು ಕೊಡುವವಳು. ೨. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಅಮೃತ, ಮಾನದ ... ಕಾಮದಾಯಿನಿಯೆಂಬ ಷೋಡಶ ಕಲೆಗಳಿಂ (ವಿವೇಕ. ೨೬೭).
[ಸಂ. ಕಾಮದಾಯಿನೀ]

**ಕಾಮದಾರ** (ನಾ). ೧. ಕೆಲಸಗಾರ; ಕಾಮಗಾರಿ ಮಾಡುವವನು: ಕಾಮದಾರನಾದರೆ ತನ್ನಷ್ಟಕ್ಕೆ ತಾನು ಆದಾನು (ಶಿಭ್ರಮು. ೧೯); ಆ ಮರ್ಯಾದೆ ತಮ್ಮ ಹಕ್ಕು ಎಂದು ಖಾತೆಯಲ್ಲಿಯ ಕಾಮದಾರರೂ ತಿಳಿಯುವರು (ಗಂಪಾಯ. ೭೯). ೨. ಸರಕಾರೀ ನೌಕರ, —ಅಧಿಕಾರಿ: ಸರಕಾರೀ ಕಾಮದಾರ ಮತ್ತು ವಕೀಲ ಜನರ ಮನೆಗಳಲ್ಲಿ ವಾದಿ ಪ್ರತಿವಾದಿ ... ಹೋಗಿ ಬರುವದು ನಡೆದಿದೆ (ಮುಂಜುಕ. ೮).
[← ಹಿಂ. ಮರಾ. ಕಾಮದಾರ್]

**ಕಾಮದುಘ$_1$** (ಗು). ಬಯಸಿದುದೆಲ್ಲವನ್ನೂ ಕೊಡುವ. [ಸಂ.]

**ಕಾಮದುಘ$_2$** 'ಕಾಮದುಘೆ' ನೋ.

**ಕಾಮದುಘೆ,** ಕಾಮದುಘ (ನಾ). ಬಯಸಿದುದೆಲ್ಲವನ್ನೂ ಕರೆಯುವ ದೇವಲೋಕದ ಹಸು; ಕಾಮಧೇನು: ಮನುಪ್ರಜಕೆ ಕಾಮಧು[ದು]ಘೆಯಂ ಮುದದೊದವಿನಿಂ ಕೀರ್ತಿಪೆಂ (ಉದ್ಭದೇ. ೧-೭). **ಕಾಮದುಘ:** ನಿತ್ಯ ಪರೀಕ್ಷಣ ಸ್ಥಳ ವಿಪರ್ಯಯ ಪ್ರತಿಪತ್ತಿದಾನಂಗಳಿಂ ನಿಯೋಗಿಗಳಂ ಕಾಮದುಘರಂ ಮಾಡಿಯುಂ (ಚಂದ್ರಪು. ೨-೭೦ ವ); ಭಕ್ತಿಸುರತರು ಸುರುಚಿರೋದಿತ ನಿತ್ಯ ಸದ್ಗುರು ಭಕ್ತಿಕಾಮದುಘ (ಬಸವು. ೩೯-೧); ಕಾಮಿತವಸ್ತುವಂ ನೆಗಳಲಾರ್ಪುದು ಕಾಮದುಘ (ರಾಜಶೇ. ೪-೯೦). [ಸಂ. ಕಾಮದುಘಾ]

**ಕಾಮದೃಷ್ಟಿ** (ನಾ). ಕಾಮಚೇಷ್ಟೆಯಿಂದ ಕೂಡಿದ ನೋಟ; ಕಾಮುಕದೃಷ್ಟಿ: ಅರಿವೆ ಹೆಚ್ಚಿದಂತೆ ಅಳತೆ ಮೀರಿದ ಕಾಮದೃಷ್ಟಿ ಬೆಳೆಯಲಿಲ್ಲವೆ (ಸ್ವಪ್ನಹೂ. ೨೪೬). [ಕಾಮ + ದೃಷ್ಟಿ]

**ಕಾಮದೇವ** (ನಾ). ೧. ಮನ್ಮಥ: ಆ ಕಮನೀಯ ವಿಲೋಕನನಾ ಕಾಲದ ಕಾಮದೇವನೆಂದೊ (ಆದಿಪು. ೮-೫೨). ೨. ಶಿವ. ೩. ವಿಷ್ಣು. ೪. [ಸಂಗೀತ] ಒಂದು ರಾಗದ ಹೆಸರು: ನೀಲೋತ್ಪಲಿಕಿ ... ಕಾಮದೇವ ದೇವನಾದೋತ್ತರ ವಸಂತ ಬಂಗಾಳವೆಂಬಿಪ್ಪತ್ತೆರಡು ರಾಗಂಗಳುಂ ಕ್ರಿಯಾಂಗದಿಂದ ಪುಟ್ಟಿದವು (ವಿವೇಕ. ೨೩೪).
[ಕಾಮ + ದೇವ]

**ಕಾಮಧನು** (ನಾ). ೧. ಮನ್ಮಥನ ಬಿಲ್ಲು. ೨. ಮಳೆ ಬಿಲ್ಲು; ಇಂದ್ರಧನುಸ್ಸು: ಮೇಘರೂಪಂ ಬೆತ್ತನಿಂದ ಪುಷ್ಪಕದ ಆ ನೆಳಲೆ ಸೇತುವೆಯಾಗೆ ಕಾಮಧನು ತನುವಾಗೆ ... ಅಡವಿಗಿಳಿದನಾ ಮಾರೀಚನುಪಮಾತೀತ ಕಾಮರೂಪಿ (ಶ್ರೀರಾಮಾ. ೨೩೦-೭೦). [ಕಾಮ + ಧನು]

**ಕಾಮಧೇನು** (ನಾ). ಬಯಸಿದುದನ್ನು ಕೊಡುವ ದೇವಲೋಕದ ಹಸು: ಆ ಕಾಮಧೇನುವೆ ಕೈಸಾರ್ದೊಡಂ (ಅನಂಪು. ೧-೬೦).
[ಸಂ.]

**ಕಾಮಧ್ವಂಸಿ** (ನಾ). ೧. ವಿಷಯಾಸಕ್ತಿಯನ್ನು ನಾಶಗೊಳಿಸಿದವನು; ಜಿತೇಂದ್ರಿಯ. ೨. ಕಾಮನನ್ನು ಸುಟ್ಟು ಕೊಂದವನು; ಶಿವ. ೧, ೨ : ಈ ಮಹಾಪುರುಷಂ . . . ಮನುಷ್ಯಧರ್ಮನಾಗಿಯುಂ ಧನಾಧ್ಯಕ್ಷನಲ್ತು ಕಾಮಧ್ವಂಸಿಯಾಗಿಯುಂ ತ್ರಿಲೋಚನನಲ್ತು (ಜಗವಿ. ೮–೧೦ ವ). [ಸಂ. ಕಾಮಧ್ವಂಸಿನ್]

**ಕಾಮನ** (ಗು). ೧. ಕಾಮತೃಷ್ಣೆಯುಳ್ಳ; ಕಾಮುಕನಾದ. (ನಾ). ೨. ಇಚ್ಛೆ; ಅಪೇಕ್ಷೆ. [ಸಂ.]

**ಕಾಮನಿ** 'ಕಾಮಾಲೆ' ನೋ.

**ಕಾಮನಿರ್ಜರೆ** (ನಾ). [ಜೈನ] ಕಾಮಗಳು ನಾಶವಾಗುವುದು; ಕಾಮಕ್ಷಯ : ತರದಿಂದೆ ಕಾಮನಿರ್ಜರೆ ಸರಾಗ ಸಂಯಮಗುಣಂ ಸ್ವಭಾವಮೃದುತ್ವಂ ಪರಿವರ್ತಿಪ ಬಾಳತಪಶ್ಚರಿತ್ರಮಿವು ದಿವಿಜರಾಯುಗಾಸ್ರವಮಕ್ಕುಂ (ಸುಕುಮಾ. ೮–೨೧). [ಕಾಮ + ನಿರ್ಜರೆ]

**ಕಾಮನೆ** (ನಾ). ಬಯಕೆ; ಆಸೆ; ಅಪೇಕ್ಷೆ: ಕಾಮನೆಗಳೆಲ್ಲ ಬೂದಿಯಾಗಿ ನಸುಕೆಲ್ಲ ಬೆಂಕಿಯಂತೆ ಸುಡುವ ಹಗಲಾಗಿ . . . ಧೈರ್ಯಗೆಡದೆ ಇದ್ದ ಜೀವ ಕಂಡ ಶಾಂತಿಯದು (ಸಮಜೀ. ೯೫೦); ಅಸಕ್ತಿಯಿಂದ ಕಾಮನೆಯು ಉಂಟಾಗುತ್ತದೆ (ಧರ್ಮಸಾ. ೧೩೨). [ಸಂ. ಕಾಮನಾ]

**ಕಾಮಪತ್ನಿ** (ನಾ). ಕಾಮನ ಹೆಂಡತಿ; ರತಿ : (ಶ). [ಕಾಮ + ಪತ್ನಿ]

**ಕಾಮಪಾಲ,** ಕಾಮಪಾಳ (ಗು). ೧. ಇಚ್ಛೆಯನ್ನು ಪೂರೈಸುವ. (ನಾ). ೨. ಬಲರಾಮ; ಬಲದೇವ: "ಬಲದೇವಃ . . . ಕಾಮಪಾಲಃ, ಹಲಾಯುಧಃ – ಈ ೧೪ ಬಲದೇವನ ಪೆಸರ್" (ಹಲಾಯು. ೬–೬೦); ಅಂತ ಗೋಪಾಲು ವಿನೋದದಿಂ ಕಾಮಪಾಲಂಬೆರಸು . . ., ಚರಿಯಿಸುತ್ತಿರ್ದಲ್ಲಿ (ಜಗವಿ. ೪–೩೪ ವ). ೩. ವಿಷ್ಣು. ೪. ಶಿವ. **ಕಾಮಪಾಳ**: ೨. "ಬಲನೀಳಕಕುಂಡಳಂ . . . ಮುಸಳ ಕಾಮಪಾಳಂ ರಾಮಂ" (ವಸ್ತುಕೋ. ೫–೨೫). [ಸಂ.]

**ಕಾಮಪಾಲಕ** (ನಾ). = ಕಾಮಪಾಲ ೨: ಕಾಮಪಾಲಕನಾಮವೊಪ್ಪಿಹನಾ ಮಹಾಬಲನಿರ್ದಕಾಲದಿ . . . ಕೃಷ್ಣನೆಂದೆನಿಪ ನಾಮದೇಹವ ಧರಿಸಿ ದೇವಕಿ ಭಾಮಿನಿಯೊಳವತರಿಸಿ (ಗಗತಾ. ೧೯–೧೪). [ಸಂ.]

**ಕಾಮಪಾಳ** 'ಕಾಮಪಾಲ' ನೋ.

**ಕಾಮಪ್ರಧ್ವಂಸಿ** (ನಾ). ೧. = ಕಾಮಧ್ವಂಸಿ ೨: ಕಾಮಪ್ರಧ್ವಂಸಿ ಗಂಗಾಜಳವಿಳಸಿತ ಜೂಟಸ್ಥಳಂ ಚಂದ್ರಚೂಡಾರಾಮಂ (ಕಇಅ. ೫೩–೪೨–೬೯; 1172). [ಸಂ. ಕಾಮಪ್ರಧ್ವಂಸಿನ್]

**ಕಾಮಬಾಣ** (ನಾ). ೧. ಮನ್ಮಥನ ಬಾಣ. ℙ ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ ಈ ಐದು ಪುಷ್ಪಗಳು. ೨. ಐದು ಎಂಬ ಸಂಖ್ಯೆಯ ಸಂಕೇತ : ಕಾಮಬಾಣಾವಳಿಯ ಪಾಂಗೆಯ್ದೆ ಗಣಮಕ್ಕೆ ನಡುವಣಕ್ಕರಕೆ (ಛಂದೋಂಬು. ೫–೬). [ಕಾಮ + ಬಾಣ]

**ಕಾಮಬ್ರಹ್ಮವ್ರತ** (ನಾ). [ಜೈನ] ಒಂದು ವ್ರತ : ಇಂತು ಭೋಗಬ್ರಹ್ಮವ್ರತಮಂ ಪತ್ತುವಿಟ್ಟು ಕಾಮಬ್ರಹ್ಮವ್ರತಮನುತ್ತರಕ್ರಿಯೆಯಪ್ಪಿನಂ ನಡೆಯಿಸಿ (ಚಾವುಂಪು. ೨೩೩). [ಕಾಮ + ಬ್ರಹ್ಮವ್ರತ]

**ಕಾಮಭಕ್ಷ** (ನಾ). ಬಯಸಿದ್ದನ್ನೆಲ್ಲ (ಸಿಕ್ಕಿದ್ದನ್ನೆಲ್ಲ) ತಿನ್ನುವವನು : (ಶ). [ಸಂ.]

**ಕಾಮಭರಿತ** (ನಾ). ಕಾಮದಿಂದ ತುಂಬಿದವನು; ವಿಷಯಾಸಕ್ತಿ ತುಂಬಿದವನು: ಕದನರುಚಿಗಳು ಕಾಮಭರಿತರು ಮದಸಮೇತರು ಯುಕ್ತಿಶೂನ್ಯರು ಬದುಕಬೇಕೆಂದಿಂತು ಸುಲಲಿತವಾಗಿ ರಚಿಸಿದನು (ಕೌಶಿರಾ. ೧–೭). [ಕಾಮ + ಭರಿತ]

**ಕಾಮಮಥನ** (ನಾ). ೧. ಇಚ್ಛೆಯನ್ನು ನಾಶಮಾಡಿಕೊಂಡವನು. ೨. ಮನ್ಮಥನನ್ನು ಸಂಹರಿಸಿದವನು. ೧, ೨: ಶಿವ: ಪ್ರದತ್ತಕಾಮುನುಮೆನಿಸಿರ್ದು ಕಾಮಮಥನಂ . . . ಅಹೀಂದ್ರಭೂಷಣಂ (ರಾಜಶೇ. ೧೪–೧೪೪). [ಕಾಮ + ಮಥನ]

**ಕಾಮಯಿತೃ** (ನಾ). ೧. ಬಯಕೆಯುಳ್ಳವನು. ೨. ಕಾಮುಕ : (ಶ). [ಸಂ.]

**ಕಾಮಯಿತೃತ್ವ** (ನಾ). ಬಯಸುವಿಕೆ : ಆನಂದಮಯನ ಪ್ರಕರಣದಲ್ಲಿ "ಅವನು ಬಹುವಾಗುವೆನು, ಹುಟ್ಟುವೆನು ಎಂದು ಕಾಮಿಸಿದನು" ಎಂದು (ಆನಂದಮಯನಿಗೆ) ಕಾಮಯಿತೃತ್ವವನ್ನು ಹೇಳಿರುವುದರಿಂದ (ಬ್ರಹ್ಮಭಾ. ೧೬೨). [ಸಂ.]

**ಕಾಮಯ್ಯ** (ನಾ). ಒಬ್ಬಾತನ ಹೆಸರು: ಆ ಕಲ್ಲಂ ಬರೆದ ಗಾಮಯ್ಯನ ಸೇನಬೋವ ಕಾಮಯ್ಯ (ಎಕ. XII, ತಿಪಟೂ. ೧೦೩–೧೯; 972). [ಕಾಮ + ಅಯ್ಯ₁]

**ಕಾಮರ** 'ಕಾಳ್ಮರ' ನೋ.

**ಕಾಮರಾಗ** (ನಾ). ಕಾಮಲಾಲಸೆ : ದಶಕಂಧರಂ ಸೀತಾನಿಬಂಧನವಚನ ಶ್ರವಣ ಸಂವರ್ಧಿತ ಕಾಮರಾಗನಾಗಿ (ಕಗವಿ. ೪೧–೨೧). [ಕಾಮ + ರಾಗ]

**ಕಾಮರೂಪ** (ನಾ). ೧. ಬೇಕಾದ ರೂಪವನ್ನು ಧರಿಸಬಲ್ಲವನು. ೨. ಬೇಕಾದ ರೂಪವನ್ನು ಧರಿಸಬಲ್ಲ ಸಿದ್ಧಿ; ರಾಜಸದ ದಶಸಿದ್ಧಿಗಳಲ್ಲಿ ಒಂದು : ಕೇಳನೂರ್ಮಿಯುವೊಂದು ಕೇಳು ದೂರಶ್ರವಣಯೆರಡದು . . . ಕಾಮರೂಪವು ಕೇಳು ತಾನೈದೆಲೆ (ಜ್ಞಾನಸಿಂ. ೨೦–೫೩). ೩. ಪಂಚ ಮಾಯಾಮಂತ್ರಗಳಲ್ಲಿ ಒಂದು : ಕಾಮರೂಪ ಘೋರದರ್ಶನ ಸಂಮೋಹನ ವಿಶ್ವರೂಪ ಗುಲ್ಮ ಸೃಷ್ಟಿಗಳೆಂಬ ಪಂಚ ಮಾಯಾಮಂತ್ರಂಗಳಂ (ವಿವೇಕ. ೮೧). ೪. ಅಸ್ಸಾಮದೇಶದ ಪಶ್ಚಿಮಭಾಗ : ಇವನ ಕೀರ್ತಿಯು ಕಾಮರೂಪ (ಅಸ್ಸಾಮಿನ) ದೊರೆಯ ಕಿವಿಗೂ ಮುಟ್ಟಿ (ಬಾಲಪ್ರ.II, 872). ೫. ಮನ್ಮಥನ ಆಕಾರ. ೬. ಮನ್ಮಥನಂತೆ ಬಹಳ ಸುಂದರನಾದವನು. ೭. [ನಾಟ್ಯ] ಒಂದು ಬಗೆಯ ನೃತ್ಯ: ವೈಷ್ಣವ ಸಂಪ್ರದಾಯದ ಅನುಭವದ ಬೆಳಕಿನಲ್ಲಿ ಶ್ರೀ ಶಂಕರದೇವ್ "ಕಾಮರೂಪ" ನೃತ್ಯವನ್ನು ಅಭ್ಯಸಿಸಿದರೆಂದೂ . . . ಭಾವಿಸಲಾಗಿದೆ (ಭಾರಜಾ. ೨೬). [ಕಾಮ + ರೂಪ]

**ಕಾಮರೂಪಿ** (ನಾ). ೧. ಇಷ್ಟಬಂದ ರೂಪವನ್ನು ಧರಿಸಬಲ್ಲವನು: ಕಾಮರೂಪಿಯುಂ ಕಾಮಚಾರಿಯುಮಪ್ಪ . . . ಯಾಗ ಹಸ್ತಿರತ್ನಮುಂ (ಆದಿಪು. ೧೧–೨ ವ); ಇದು ಕಾಮರೂಪಿಯಕ್ಕುಮಿದನೆಂತಜೆಯಲಕ್ಕುಂ (ಪಂಚತಂ. ೧೪೭–೨೨). ೨. ಮನ್ಮಥನಂತೆ ಸುಂದರವಾದ ದೇಹವುಳ್ಳವನು; ಸ್ಫುರದ್ರೂಪಿ: ಕಾಮರೂಪಿ [ಪಾಠಾಂ. ಪು]ಗಳಾದುದಕ್ಕಭಿರಾಮವಾಯಿತು (ಬಸವು. ೮–೩೬). ೩. ವಿದ್ಯಾಧರ. [ಸಂ. ಕಾಮರೂಪಿನ್]

**ಕಾಮರೂಪಿತ್ವ** (ಗು). ೧. ಇಷ್ಟಬಂದ ರೂಪವನ್ನು ತಾಳುವಿಕೆ. (ನಾ). ೨. ಬೇಕಾದ ರೂಪವನ್ನು ತಾಳಬಲ್ಲ ಸಿದ್ಧಿ : ಅಣಿಮಾ ಮಹಿಮಾ . . . ಕಾಮರೂಪಿತ್ವಾದಿ ಭೇದದಿಂ ಕ್ರಿಯಾಗೋಚರರ್ಧ್ಧಿ ಬಹುವಿಧಂ (ತತ್ತ್ವಪ್ರ. ೭೪). [ಸಂ.]

**ಕಾಮಲ** (ಗು). ೧. ಕಾಮವಾಸನೆಯಿಂದ ಕೂಡಿದ; ಅತ್ಯಂತ ವಿಷಯಾಸಕ್ತಿಯುಳ್ಳ; ಕಾಮುಕವಾದ. (ನಾ). ೨. ಕಾಮಾಲೆ ರೋಗ: ಕಾಚ ಕಾಮಲ ಮೊದಲಾದ ಇಂದ್ರಿಯದೋಷಗಳು (ಹಿಂದಸಾ. ೧೩೭). [ಸಂ.]

**ಕಾಮಲಂಪಟ** (ನಾ). ಕಾಮಾಸಕ್ತ; ಕಾಮುಕ; ವಿಷಯಾಸಕ್ತ: ಸ್ಮರನರಸಿ ಪತಿಶೋಕದಿಮ್ಮಾರಣ್ಯದೊಳ್ ಪೋಗುತಿರಲು ಶಂಬರ ಕಂಡು ಕರದೊಯ್ದು ಕಾಮಲಂಪಟನಾಗಲು (ನವಮೋ. ೧೩–೧೭).
[ಕಾಮ + ಲಂಪಟ]

**ಕಾಮಲತೆ** (ನಾ). ೧. ಪುರುಷರ ಗುಹ್ಯಾಂಗ; ಶಿಶ್ನ. ೨. ಒಂದು ಬಗೆಯ ಸಸ್ಯ: (ಮೈಔಗಿ. ೬೫–೧೩೩೭). [ಸಂ. ಕಾಮಲತಾ]

**ಕಾಮಲದೋಷ** (ನಾ). ಕಾಮಾಲೆಯಿಂದ ಉಂಟಾದ ದೋಷ: ಕಣ್ಣಿನಲ್ಲಿ ಕಾಮಲದೋಷ ಇದ್ದರೆ ಆದು ಬಿಳಿಯ ವಸ್ತುವನ್ನು ಹಳದಿಯ ವಸ್ತುವನ್ನಾಗಿ ಗ್ರಹಿಸುವುದು (ಭಾತತ್ವ. ೮೩೫).
[ಕಾಮಲ + ದೋಷ]

**ಕಾಮಲೆ**$_1$ 'ಕಾಮಾಲೆ' ನೋ.

**ಕಾಮವಟ್ಟ** (ನಾ). ಮರಗೆಲಸ ಮುಂತಾದ ಕರ್ಮಗಳನ್ನು ಮಾಡುವ ಶಾಲೆ; ಕರ್ಮಶಾಲೆ: ಸಮಂತು ಭಂಡಾರಮಂ ಬೊಕ್ಕಸಮನುಗ್ರಾಣಮಂ ಕಣಜ ಕಾಮವಟ್ಟ ಮುಂತಾದವಂ . . . ಎಂಬಿಂತಿವೆಲ್ಲವಂ ಪರಿಕಿಸಿ (ಪದ್ಮರಾ. ೪–೨೪); ಭಂಡಾರಬೊಕ್ಕಸ ಉಗ್ರಾಣ ಕಣಜ ಕಾಮವಟ್ಟ ಸುಂಕಸಾರಿಗೆ ಸ್ಥಿರಾದಾಯ ಚರಾದಾಯ . . . ಎಲ್ಲ ವಿವರಗಳನ್ನೂ ತಾವು ಕೃಪೆಯಿಟ್ಟು ಕೇಳಬೇಕು (ತುಂಗಭ. ೧೮). [?]

**ಕಾಮವರ್ಧಿನಿ** (ನಾ). ೧. ಪ್ರೀತಿಯನ್ನು ಹೆಚ್ಚಿಸುವವಳು. ೨. [ಸಂಗೀತ] ಒಂದು ರಾಗದ ಹೆಸರು: ಕಾಮವರ್ಧಿನೀ – ೫೧ನೇ ಮೇಳಕರ್ತರಾಗ (ಸಂಗೀತಂ. ೧೪೩). [ಸಂ. ಕಾಮವರ್ಧಿನೀ]

**ಕಾಮವಾದ** (ನಾ). ಮನಬಂದಂತೆ ಮಾತಾಡುವುದು: (*).
[ಕಾಮ + ವಾದ]

**ಕಾಮವಾಸನೆ** (ನಾ). ವಿಷಯೋಪಭೋಗದ ಇಚ್ಛೆ; ಕಾಮುಕ ಭಾವ: ಪ್ರಗತಿ ಪಥದಲ್ಲಿ ಮುನ್ನಡೆಯಬೇಕಾದ ನೀನು ಕೇವಲ ಕಾಮ ವಾಸನೆಯಿಂದ ಅಧಃಪಾತಾಳಕ್ಕಿಳಿಯ ಬಯಸುವೆಯಾ (ಹೇಮುಕೂ. ೩); ಕಾಮವಾಸನೆಯಿಂದ ಯಾರೂ ಈಕೆಯನ್ನುನೋಡಲಿಲ್ಲ (ಬೆನ್ನಬೇ.೧೮೭); ಏಳನೆಯ ನೆರೆಯ ಶ್ರಾವಕನು ವಿವಾಹಿತ ಸ್ತ್ರೀಯಲ್ಲಿಯೂ ಕಾಮ ವಾಸನೆಯನ್ನು ತ್ಯಜಿಸಿ ಪೂರ್ಣ ಬ್ರಹ್ಮಚರ್ಯೆಯನ್ನು ಪಾಲಿಸುತ್ತಾನೆ (ಭಾರದ. ೧೮೪). [ಕಾಮ + ವಾಸನೆ]

**ಕಾಮವಿಕಾರ** (ನಾ). ಕಾಮೋದ್ರೇಕ; ಕಾಮ ಲಾಲಸೆ; ವಿಷಯೋಪ ಭೋಗದ ಅಭಿಲಾಷೆ: ಕಾಮವಿಕಾರವಿದು ಹೊಲ್ಲ (ಬಸವು. ೪೦–೪೭); ಕಾಮವಿಕಾರವೇಕೆ ಶಿವಾರ್ಚಕಂಗೆ (ಬಸವು. ೪೦–೪೮).
[ಕಾಮ + ವಿಕಾರ]

**ಕಾಮವಿಹ್ವಲ** (ನಾ). ಕಾಮದಿಂದ ಪೀಡಿತನಾದವನು; ಕಾಮೋದ್ರೇಕದಿಂದ ವ್ಯಗ್ರನಾದವನು: ಹೀಗೆ ಕಾಮವಿಹ್ವಲನಾದ ನಿಯೋಗಿಗೆ ಏನು ಮಾಡಬೇಕೆಂಬುದು ತಿಳಿಯಲಿಲ್ಲ (ಸಮುಜೀ. ೬೬೬).
[ಕಾಮ + ವಿಹ್ವಲ]

**ಕಾಮವೃದ್ಧಿ** (ನಾ). ೧. ವಿಷಯಾಭಿಲಾಷೆಯ ಆಧಿಕ್ಯ. ೨. ಒಂದು ಮೂಲಿಕೆಯ ಹೆಸರು: "ಮನೋಜವೃದ್ಧಿ – ಕಾಮವೃದ್ಧಿ" (ಓಷಧಿ. ೧೨೨). [ಕಾಮ + ವೃದ್ಧಿ]

**ಕಾಮವೈರಿ** (ನಾ). ಕಾಮನ ಶತ್ರು; ಶಿವ: ಕಾಮವೈರಿಗೆ ಕಾಮಿಗಳು ಸರಿಯೇ (ಬಸವು. ೫೪–೨೧). [ಕಾಮ + ವೈರಿ]

**ಕಾಮಶಾಸ್ತ್ರ** (ನಾ). ಕಾಮವೆಂಬ ಪುರುಷಾರ್ಥಕ್ಕೆ ಸಂಬಂಧಪಟ್ಟ ವಿಷಯವನ್ನು ತಿಳಿಸುವ ಶಾಸ್ತ್ರ; ಪ್ರೇಮಕಲಾ ಶಾಸ್ತ್ರ; ರತಿಶಾಸ್ತ್ರ: ಮಹಾದೇವರಗಣಂ ನಂದಿಕೇಶ್ವರಂ ಸಹಸ್ರಾಧ್ಯಾಯದಿಂ ಕಾಮಶಾಸ್ತ್ರಮಂ ಪೇೞ್ದಂ (ಮದಶಿ. ೧–೫೮ ವ). [ಕಾಮ + ಶಾಸ್ತ್ರ]

**ಕಾಮಶಿಳೀಮುಖ** (ನಾ). ಮನ್ಮಥನ ಬಾಣ: ಕಾಮಶಿಳೀಮುಖಕ್ಕೆ ಕೋಮಳೆ ಸುಗಿದಿರ್ದಳ್ (ಪುಷ್ಪವು. ೬–೩೯).
[ಕಾಮ + ಶಿಳೀಮುಖ (= ಶಿಲೀಮುಖ)]

**ಕಾಮಶುದ್ಧಿ** (ನಾ). ೧. ಕಾಮಭಾವನೆಯನ್ನು ಗೆದ್ದಿರುವುದು; ಜಿತೇಂದ್ರಿಯತ್ವ. ೨. ತನ್ನ ಹೆಂಡತಿಯಲ್ಲಿ ಮಾತ್ರ ತ್ರಿಕರಣ ಪೂರ್ವಕವಾಗಿ ಅನುರಕ್ತನಾಗಿರುವುದು. ೧, ೨: ಕಾಮಶುದ್ಧಿಯೆಂಬುದು ವಿಗತ ಕಾಮರುಂ ಜಿತೇಂದ್ರಿಯರುಂ ಸ್ವದಾರ ಸಂತುಷ್ಟರು ಮಾಗಿಪ್ಪುದು (ಚಾವುಂಪು. ೨೪೧).
[ಕಾಮ + ಶುದ್ಧಿ]

**ಕಾಮಸಂಚಾರ** (ನಾ). ಬೇಕಾದಲ್ಲಿಗೆ ಪ್ರಯಾಣಮಾಡುವುದು; ಇಷ್ಟಬಂದಲ್ಲಿಗೆ ಹೋಗುವುದು: ಹತ್ತು ರೂಪಾಯಿಯ ಕಾಮ ಸಂಚಾರದ ರೈಲು ಟಿಕೀಟನು ತಂದೆ (ಇಂಚಾಪ. ೨೮–೩೦).
[ಕಾಮ + ಸಂಚಾರ]

**ಕಾಮಸನ್ನಿ** (ನಾ). ಅತಿಯಾದ ಕಾಮಲಾಲಸೆಯಿಂದುಂಟಾದ ಮತಿಭ್ರಮೆ: ಅವಳಿಗೆ ಹಿಂದಿನಿಂದ ಇವನು ಕೂಗುತ್ತ ಬರುವುದನ್ನು ನೋಡಿ ಗಾಬರಿಯಾಯಿತು. ಈ ಮನುಷ್ಯನಿಗೆ ಕಾಮಸನ್ನಿಯಾಗಿದೆ ಎಂದು ಕೊಂಡಳು (ತುಂಬಿಕೊ. ೭೧); ಕಾಮಸನ್ನಿಯ ಕಾಲಾಳೆ! ನೀಚ! ಚಾಂಡಾಲ! (ಬೆಳುಮು. ೨೨೧). [ಕಾಮ + ಸನ್ನಿ]

**ಕಾಮಸರ** (ನಾ). ಒಬ್ಬಾತನ ಹೆಸರು: ಆ ವನ್ಯದಿ ಕಾಮಸರ ಆಚರಿಯ ಮಗ ಕೇವಳಿ (ಎಕ. IX, ಹೊಸಕೋ. ೮೫–೫; 750).
[?]

**ಕಾಮಸೂತ್ರ** (ನಾ). ಕಾಮಶಾಸ್ತ್ರಕ್ಕೆ ಸಂಬಂಧಿಸಿದ ಸೂತ್ರ ಅಥವಾ ಅಂತಹ ಸೂತ್ರಗಳನ್ನೊಳಗೊಂಡ ಗ್ರಂಥ. 'ಕಾಮಸೂತ್ರಕಾರ' ಪರಾ. [ಕಾಮ + ಸೂತ್ರ]

**ಕಾಮಸೂತ್ರಕಾರ** (ನಾ). ಕಾಮಸೂತ್ರವನ್ನು ಬರೆದವನು; ವಾತ್ಸ್ಯಾಯನ: ಕಾಮಸೂತ್ರಕಾರ ವಾತ್ಸ್ಯಾಯನ ಷಡಂಗಲಕ್ಷಣವನ್ನು ನಿರೂಪಿಸಿದ್ದಾನೆ (ಭಾರದ. ೫೮೦). [ಸಂ.]

**ಕಾಮಹತ** (ನಾ). ಕಾಮದ ಆಘಾತಕ್ಕೆ ಗುರಿಯಾದ; ವಿಷಯಾ ಸಕ್ತಿಯಿಂದ ದೂಷಿತವಾದ: ಈ ಆನಂದ . . . ಕಾಮಹತವಾದ ಚೇತನಗಳಿಗೆ ಲಭಿಸದು (ಸೌಂದಸ. ೧೫). [ಸಂ.]

**ಕಾಮಹರ** (ನಾ). ಕಾಮನನ್ನು ನಾಶಪಡಿಸಿದವನು; ಶಿವ: ಸಿರಿಯಾಳ ಸೆಟ್ಟಿಯ ಮನೆಗೆ ನೀನಾವ ವ್ಯೋಮನದಿಯಂ ತಳೆದು ಪೋದೈ ಕಾಮಹರ (ಬಸವು. ೨೪–೭೪). [ಸಂ.]

**ಕಾಮಳೆ** 'ಕಾಮಾಲೆ' ನೋ

**ಕಾಮಳ್ಳಿ** (ನಾ). ಒಂದು ಬಗೆಯ ಪಕ್ಷಿ: ಕೋಗಿಲೆ ಕಾಜಾಣವು ಕಾಮಳ್ಳಿ ಆಹ್ವಾನಿಸುತಿವೆ ಗಾನದೊಳಿಲ್ಲಿ (ಅಗ್ನಿಹಂ. ೪); ಕೋಗಿಲೆ ಕಾಜಾಣ ಪಿಕಳಾರ ಕಾಮಳ್ಳಿಗಳ ದನಿಗಡಲಿನ ನಡುವೆ (ಚಂದ್ರವೀ. ೧೬೦–೪೦). [?]

**ಕಾಮಾಂಕಿಯ** (ನಾ). ಕುದುರೆಯಲ್ಲಿ ಒಂದು ಜಾತಿ: ಬಾಲಮುಮೆರ್ದೆಯುಂ ಕಣ್ಣುಂ ಕಾಲುಂ ಕರ್ಪೆಸೆದು ತೋಱೆ ಬದರದ ಕಾಯಂ ಪೋಲೆ ತನುಚ್ಛವಿ ಮೂಱುಂ ಮೇಲಾ ನಾಲ್ಕೆಡೆಯ ರಕ್ತಕಾಮಾಂಕಿಯಮುಂ (ಅಶ್ವಶಾ. ೨–೨೨). [?]

**ಕಾಮಾಂಕುಶ** (ನಾ). ೧. ಉಗುರು; ನಖ: "ಕಾಮಾಂಕುಶಾಃ, ಕರರುಹಾಃ, ಪುನರ್ನವಾಃ, ಪಾಣಿಜಾಃ, ನಖರಾಃ – ಈ ೫ (೬?) ಉಗುರ್" (ಹಲಾಯು. ೮೪–೩೫೭). ೨. ಪುರುಷನ ಜನನೇಂದ್ರಿಯ.
[ಕಾಮ + ಅಂಕುಶ]

**ಕಾಮಾಂಗ** (ನಾ). ಸಂಭೋಗ ಶೃಂಗಾರದ ಅಂಗ, —ಭಾಗ; ಶೃಂಗಾರಚೇಷ್ಟೆಗಳಿಗೆ ಉದ್ದೀಪಕವಾದ ಕಳ್ಳು, ನರ್ತನ ಮೊದಲಾದದ್ದು : ಕಳ್ಳುಪ್ಪುದು ತಪ್ಪದೆಂದು ಕುಡಿದರ್ ಕಾಮಾಂಗಮುಂ ಕಾಂತೆಯರ್ (ಪಂಪಭಾ. ೪-೮೮). ೨. ಮಾವಿನ ಮರ. ೩. [ಛಂದ] ಒಂದು ವೃತ್ತ: ವ್ಯೋಮಮಂ ಹರಂ ತಾಮಾಗಿರಲ್ ಶ್ಯಾಮಾಂಗಿ ಕೇಳ್ ಕಾಮಾಂಗಮಂ (ಛಂದೋಂಬು. ೨-೧೬).

[ಕಾಮ + ಅಂಗ$_2$]

**ಕಾಮಾಂಚ ಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಮೈಔಗಿ. ೨೭-೫೧೨).

[ಕಾಮಾಂಚ$_0$ + ಹುಲ್ಲು (< ಪುಲ್)]

**ಕಾಮಾಂತಕ** (ನಾ). = ಕಾಮಹರ. [ಕಾಮ + ಅಂತಕ]

**ಕಾಮಾಂಧ** (ಗು). ೧. ಕಾಮೋದ್ರೇಕದಿಂದ ಜ್ಞಾನಶೂನ್ಯವಾದ : 'ಭಾರ್ಯಾ ರೂಪವತೀ ಶತ್ರುಃ' ಎಂಬ ಮಾತು ಕಾಮಾಂಧವಾದ ಸಮಾಜಕ್ಕೆ ಮಾತ್ರ ಅನ್ವಯಿಸುವುದು (ಸಮಜೀ. ೭). (ನಾ). ೨. ಕಾಮದಿಂದ ವಿವೇಕವನ್ನು ಕಳೆದುಕೊಂಡವನು: ಕಂತುವೆ ಪರಮಾತ್ಮನಾಗೆ ತನ್ಮತಮೆ ಸಿದ್ಧಾಂತಮಾಗೆ ಕಾಮುಕೀಕಾಮುಕರೆ ಸಧರ್ಮರಾಗೆ . . . ಕಾಮಾಂಧರಾಗಿ (ಶಾಂತಿಪು. ೭-೧೦ ವ); ಕಾಮಾಂಧನಿಂತೆಂದನಲ್ತೆ (ಮದತಿ. ೧-೬೩). [ಕಾಮ + ಅಂಧ]

**ಕಾಮಾಂಧಕ** (ನಾ). = ಕಾಮಾಂಧ ೨: ಅವನವಳ ಮಾತಿಗೆ ಸಂದು ಕಾಮಾಂಧಕಗೆ ಕಾಣಿಸದೊಂದು ಕಾರ್ಯರ್ಣವ (ಬಸವು. ೨೮-೨೪); ಕಾಮಾಂಧಕಂಗಾ ಮೇಗೆ ಬಪ್ಪಾ ಕಾರ್ಯಮಂ ಕಾಣಿಸದೆನುತ ಮಱುಗಿ (ಬಸವು. ೪೫-೩). [ಕಾಮ + ಅಂಧಕ]

**ಕಾಮಾಂಧತೆ** (ನಾ). ಕಾಮದಿಂದ ಕುರುಡಾಗಿರುವಿಕೆ; ವಿವೇಕಶೂನ್ಯತೆ: ರಾಮನು ಕೋಪದಿಂದ – ಲಕ್ಷ್ಮಣಾ . . . ಇವಳ ಕಾಮಾಂಧತೆಗೆ ತಕ್ಕ ಶಿಕ್ಷೆಯನ್ನು ಮಾಡಿಕಳುಹಿಸು ಎಂದನು (ನೀತಿಚಿಂ. XII, ೨೬). [ಸಂ. ಕಾಮಾಂಧತಾ]

**ಕಾಮಾಕ್ಷಿ** (ನಾ). ೧. ದುರ್ಗೆ; ಪಾರ್ವತಿ. ೨. ಒಂದು ಬಗೆಯ ವೀಣೆ: ಕಿನ್ನರಿ ವೀಣೆ ಕಾಮಾಕ್ಷಿ ತಂಬೂರಿ ರುದ್ರವೀಣೆ (ವಚಸಂ. ೪೧೫-೮೯). ೩. ರುದ್ರಾಕ್ಷಿ: ಜತ್ತಿದಲೆಗಳ ಮೆಯ್ಯ ಬೂದಿಯ ಪೊತ್ತಿ ಬಿಗಿದುಡಿದಾರ ಕಚ್ಚುಟವಿತ್ತೆಜದ ಕಾಮಾಕ್ಷಿ ಕಂಠದ ಸಿಂಗಿನಾಥಗಳ (ಶಂಕದಾ. ೧೫-೪); ಕಿವಿಯೊಳೊಪ್ಪುವ ಕಾಮಾಕ್ಷಿ ಕಡಕು ಗಂಟೆತವೆ ಚಿನ್ನಸರ ಪೈರಣೆಯ ಚವಿಯಿಂದ . . . ನೃಪನೈತಂದ (ಕಂನವಿ ೨೦-೬೦). [ಸಂ. ಕಾಮಾಕ್ಷೀ]

**ಕಾಮಾಕ್ಷಿಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಮೈಔಗಿ. ೨೭-೫೧೮).

[ಕಾಮಾಕ್ಷಿ + ಹುಲ್ಲು (< ಪುಲ್)]

**ಕಾಮಾಟ** (ನಾ). ೧. ಕೂಲಿ ಕೆಲಸ; ಆಳಿನ ಕೆಲಸ: ಈ ಶಾಸನವ ಹೊಯಿದಾತ ಕಂಮಾರ ಬಿಕ್ಕೆಯನ ಮಗ ಸಿದ್ಧಂಣನೂ ಕಾಮಾಟದ ದಾಸ್ಯೆಯನ ಮಗ ನಂದೆಯಪ್ಪ ನಿಲ್ಲಿಸಿದ ಸಾಸನದ ಕಲ್ಲೂ (ಎಕ. XII, ಶಿರಾ. ೩-೧೭; 1583); ತಡಿಕೆಮಕ್ಕರಿ ಸಹ ಬಹ ಕಾಮಾಟದ ಬಿಡು ಮಂದಿಗೆ ಲೆಕ್ಕವಿಲ್ಲ (ಕಂನವಿ. ೧೧-೪೦); ಸೇನಾಪತಿ ಕಾಮಾಟವ ಕೂಡಿಕೊಂಡು ತಾಮುಸಮಾಡದೆ ಗಿಡವನು ಕಡಿಸೆಂದು ನೇಮವಿತ್ತು (ಜಿನರಾ. ೬-೯೯). ೨. ಕೆಲಸದ ಆಳು : ಕೊಟ್ಟಿಗೆ ಕಾಮಾಟ ಕ್ರಮುಕ ಬೆಳ್ಳವೆಗರು ಜಟ್ಟಿಗ ಗೀತ ಪಾಠಕರು (ಮೋಹತ. ೩೬-೪೩); ಸೈನ್ಯದ ಪಾಳೆಯ ಬಿಟ್ಟಲ್ಲೆಲ್ಲ ಕೆಲಸಮಾಡಲು ಕಾಮಾಟರು ಬೇಕಲ್ಲವೇ (ಕರ್ಣಾಜ. ೧೩೧).

ಕಾಮಾಟದವನು = ಕೂಲಿಯಾಳು; ಕೆಲಸದ ಆಳು : ಅಗುಳುತಿರೆ ಕಾಮಾಟದವರುಮುವರೊತ್ತಿನೊಳು . . . ಮಂತ್ರವಾದಿಗಳು ಮಂತ್ರಿಸಲು (ಪ್ರಭುಪು. ೭-೨೫); ವಿದುರನು ಕಳುಹಿಸಿದ ಕಾಮಾಟದವನ ಮುಖವಚನದಿಂದ ಅವನು ಮಾಡಿದ ಸುರಂಗಮಾರ್ಗದಿಂದ ಹೊರಟು (ಕೃವಾಅ. ೮೬); ಕುದ್ದಾಲಕನೆಂಬುವನು ತನ್ನ ಆರು ಲಕ್ಷ ಕಾಮಾಟದವರಂ ತೆಗೆದುಕೊಂಡು (ಮುದ್ರಾಮಂ. ೬೯); ಅರಸು ನಾಲ್ಕು ಜನ ಕಾಮಾಟದವರಂ ಪಡೆದು (ಬತ್ತೀಪು. ೩೧).

[< ಸಂ. ಕರ್ಮವಾಟ ?]

**ಕಾಮಾಟಿ** (ನಾ). ಕೆಲಸದವನು; ಕೂಲಿಯ ಆಳು; ಮಜದೂರ: ಕಾಮಾಟಿಯರ ಕರಸಿ ಪುರವ ಸಡಗರಿಸಲೆಂದು ಕಳುಹಲು (ನವಮೋ. ೩೪-೧೦); ಇದಂ ಬಗಿಸೆನಲ್ ಚಾರಕದೊಳೋರ್ವನಂ ಕರದು ಕಾಮಾಟಿಗರ ಕರತರಿಸಿ ಪುತ್ತಮಂ ಸರಿಯಾಗಿ ಬಗಿಸುತ್ತ (ಸಿದ್ಧಕಾ. ೭-೩); ಸಾಹೇಬರ ವಶಕ್ಕೆ ಇನ್ನೂರ ಮೂವತ್ತೈದು ಕಾಮಾಟಿಜನ ಮೊದಲು ಕೊಡಿಸಿದ್ದಲ್ಲದೆ (ರಾಜೇಂದ್ರ. ೭೪); ಹುಳುಗಳ ಈ ಕೆಲಸಕ್ಕೂ . . . ಗೋಡೆಕಟ್ಟುವ ಒಬ್ಬ ಕಾಮಾಟಿಯ ಕೆಲಸಕ್ಕೂ ವ್ಯತ್ಯಾಸವೇನು (ಜೀವಾತ್ಮ. ೨೦೧).

[?. / ತಮಿ. ಮಲ. ಕಾಮಾಟ್ಟಿ; ತುಳು. ಕಾಮಾಟಿ; ತೆಲು. ಕಾಮಾಟಿ. / ಮರಾ. ಕಾಮಾಠೀ]

**ಕಾಮಾಟಿಕೆ** (ನಾ). = ಕಾಮಾಟಿ : (ಕ). [ಕಾಮಾಟ + -ಇಕೆ]

**ಕಾಮಾಟಿಗ** (ನಾ). = ಕಾಮಾಟಿ : ಕರಸಿದ ಕಾಮಾಟಿಗರನಲ್ಲಿಗೆ ಬೇಗ ತರಿಸಿದ ಹಾರೆ ಗುದ್ದಲಿಯ (ಜಿನರಾ. ೬-೪೪); ಕಾಮಾಟಿಗರ ಅಂದು ಬಸವ ಕರಸಿದನು (ಶರಲೀ. ೨೩೭-೨); ಇದಕ್ಕೆ ಕಾಮಾಟಿಗನು ಕೋಮಟಿಗನು ತತ್ತ್ವಜ್ಞಾನಿಯು ನಿದರ್ಶನವಾಗಿಯಿರುತ್ತಾರೆ (ಅನಂತ. ೨೧). [ಕಾಮಾಟ + -ಇಗ]

**ಕಾಮಾತಪತ್ರ** (ನಾ). ಭಗಾಂಕುರ(?) : ಸ್ಮರಗೃಹದೊಳೊಡನೊಂದು ಬೆರಳೊಂದೆ ನಾಡಿಯಿರಲೊಸರೆ ಕಾಮಾತಪುತ್ರಮೆನಿಸಿ (ಜನವ. ೬-೨೮).

[ಕಾಮ + ಆತಪತ್ರ]

**ಕಾಮಾತುರ** (ನಾ). ೧. ಕಾಮದ ಆತುರ; ಮಿತಿಮೀರಿದ ಕಾಮಾಭಿಲಾಷೆ: ಓತು ತನ್ನಯ ಪೊರೆಯೊಳಿಹ ಕಾಮಾತುರಾಂಧನನಧಿಕಪಾಪ ಸಮೇತನಂ . . . ನೋಡಿ (ಬಸವು. ೪೧-೪). ೨. ಕಾಮದಿಂದ ಬಾಧಿಸಲ್ಪಟ್ಟವನು; ಕಾಮಲೋಲುಪ. [ಕಾಮ + ಆತುರ]

**ಕಾಮಾತುರವಡಸು** (ಕ್ರಿ). ಕಾಮೋದ್ರೇಕ ಆವರಿಸು; ವಿಷಯಾಸಕ್ತಿ ಹೆಚ್ಚಾಗು: ಪುರುಷನೊಬ್ಬನಿರಲ್ಕೆ ಕಾಮಾತುರವಡಸಿ ನಿನ್ನಂ ರಮಿಸುವುದು ನೀತಿಯಲ್ಲ (ಬಸವು. ೪೨-೩೨).

[ಕಾಮಾತುರ + ಅಡಸು]

**ಕಾಮಾತುರೆ** (ನಾ). ಕಾಮದಿಂದ ಉದ್ವೇಗಗೊಂಡವಳು; ಕಾಮುಕಿ : ಕಷ್ಟೆಯರು ವಂಚಕಿಯರು ಜಗಳಗಂಟೆಯರು ಕಾಮಾತುರೆಯರತಿದವಡಿತಿಯರಂತಃಕರಣಮಲಿನೆಯರು (ಬಸವು. ೪೦-೫೩).

[ಸಂ. ಕಾಮಾತುರಾ]

**ಕಾಮಾತ್ಮ** (ನಾ). = ಕಾಮುಕ: ರಾಜಕುಮಾರನು ಧರ್ಮಾತ್ಮನಾಗಿದ್ದವನು ಕಾಮಾತ್ಮನಾಗಿ ಪರಿಣಮಿಸಿದನು (ಭರಚಾ.೬).

[ಸಂ. ಕಾಮಾತ್ಮನ್]

**ಕಾಮಾರಿ**$_1$ (ನಾ). = ಕಾಮವೈರಿ: ಕಾಮಾರಿ ಜಂಗಮನಾಗಿ ಬಂದು ಸಿರಿಯಾಳನ ಮಗನ ಬೇಡಿದ (ಬಸವ. ೬೨೧); ಕಾಮಾರಿ ಹಿಡಿದಗ್ಗದ ಶರಾವಳಿಯದರ ಪರಿಯೆಂತೆಮಗೆ ತೋಱಿಂದ (ಕುವ್ಯಾವಿ. ೮-೩೦).

[ಕಾಮ + ಅರಿ$_6$]

**ಕಾಮಾರ್ರಿ₃** (ನಾ). ಒಂದು ಬಗೆಯ ಹಣ್ಣು (?): ಕದಳಿ ಕಾಮಾರಿ ಖರ್ಜೂರ ಕಿತ್ತಳೆ ಬದರಿ ಹಲಸು ಮಾವು ದ್ರಾಕ್ಷಂಗಳು (ವಾದಿಕೀ. I, ೧೪೯-೧. [?]

**ಕಾಮಾರ್ತಿ** (ನಾ). ಕಾಮಪೀಡೆ; ವಿರಹವ್ಯಥೆ: ಮೀಂಗಳ ಬಳಗದಿ ನಾಗ ಸಮಂ . . . ಉತ್ತುಂಗೋತ್ಕಳಿಕೆಯಿನಾದಂ ಕಾಮಾರ್ತಿಯನುಜ಼್ ಪೋಲ್ಸು ರದೆ ಕಂಗೊಳಿಪುದು ಮುನ್ನೀರ್ (ಉದ್ಭದೇ. ೨-೮). [ಕಾಮ + ಆರ್ತಿ₃]

**ಕಾಮಾರ್ಥ** (ನಾ). ೧. ನಾಲ್ಕು ಪುರುಷಾರ್ಥಗಳಲ್ಲಿ ಮೂರನೆಯದು; ಇಂದ್ರಿಯ ಸುಖಾಭಿಲಾಷೆ: ಪಟುವಪ್ಪಿಂದ್ರಿಯವರ್ಗದಿಂ ತನಗೆ ಮುಂ ಕಾಮಾರ್ಥಂ (ಶಾಂತಿಪು. ೬-೬೭). ೨. ವಿಷಯೋಪಭೋಗದ ಸಾಮಗ್ರಿ. [ಕಾಮ + ಅರ್ಥ]

**ಕಾಮಾಲೆ**, ಕಾಮಣಿ, ಕಾಮನಿ, ಕಾಮಲೆ, ಕಾಮಳೆ, ಕಾಮಿಣಿ, ಕಾಮಿಲೆ (ನಾ). ಮೈಯೆಲ್ಲ ಹಳದಿ ಬಣ್ಣಕ್ಕೆ ತಿರುಗಿ ಊದಿಕೊಳ್ಳುವ ಒಂದು ರೋಗ; ಅರಿಸಿನ ಮುಂಡಿಗೆ ರೋಗ: "ಕರ್ಮವಲೆಯೆಂದೆನಲು ಕಾಮಾಲೆ" (ಮಂಗರಾ. ೧೧೪-೪); ಹಾಲಸಿಗನೊರ್ವಂ . . . ಗುಲ್ಮಂ ಕ್ಷಯಂ ಕಾಮಾಲೆ ಪಾಂಡು ಕುಷ್ಠ ಭಗಂದರಾದಿಯಾದ ರೋಗವೆಲ್ಲಂಗಳಂ ಕೆಳೆವೆನೆನುತ್ತ (ಧರ್ಮಪ. ೯-೨೭ ವ); ಶರೀರದಲ್ಲಿ ಪಿತ್ತವು ಹೆಚ್ಚಿ ಕಾಮಾಲೆ ಬರುವಹಾಗಿರುವುದೆಂದೂ (ಗ್ರಾಮಾಕ. ೧೧೮); ಕಾಗೆ ಕೊಂದವನಿಗೆ ಕಾಮಾಲೆ (ಹುಟ್ಟಹ. ೧೧೧). **ಕಾಮಣಿ**: ಅವನಿಗೆ ಕಾಮಣಿಯಾಗಿದೆಯೆಂದು ಜನರು ಮಾತನಾಡಹತ್ತಿದರು (ಚೀನಬಾ. ೯೮); ನೀನು ನನ್ನನ್ನು ಕಾಮಣಿಯಾದ ಕಣ್ಣುಗಳಿಂದಲೇ ನೋಡುತ್ತಿರುವಿ (ಮಣ್ಣಮ. ೩೧೭); ಕಾಮಣಿಯಾದ ನಿನ್ನ ಕಣ್ಣಿಗೆ ಜಗತ್ತೇ ಹಸಿರಾಗಿ ಕಾಣುತ್ತದೆ (ಮುತ್ತೈದೆ. ೪೪). **ಕಾಮನಿ**: 'ಊದುಗಾಮನಿ' ಪರಾ. **ಕಾಮಲೆ**: (೩). **ಕಾಮಳೆ**: ಕಾಮಳೆಯುಂ ಪಾಂಡುರೋಗಮುಂ ರಕ್ತಪಿತ್ತಮುಂ ಪ್ರಶಮಿಸುಗುಂ (ಲೋಕೋಪ. ೯-೧೧); ಪುರುಷರ್ಕ್ಷಯ ಕಾಮಳೆ ಪಾಂಡುಗುಲ್ಮದಿಂದತಿಕೃಶರಾಗೆ (ಮುಂಬರಾ. X, ೨೬೭-೮೬; 1779). **ಕಾಮಿಣಿ**: ಅತಿಸಾರ, ಪ್ಲೀಹ, ಕಾಮಿಣಿ, ಉದರ ಈ ರೋಗಗಳು ಅಗಾಗ್ಗೆ ಬರುತ್ತವೆ (ಕಭಾಗ. ೪೧೬). **ಕಾಮಿಲೆ**: ಕಾಮಿಲೆ ಸಾರ್ವತ್ರಿಕವಾಗಿ ಹಬ್ಬಿದೆ (ಜಾರುದಾ. ೯೩); ಪಾಂಡು, ಕಾಮಿಲೆ, ಗುಲ್ಮ, ಪಿತ್ತ, ಅರೋಚಕ (ವಿವೈವಿ. ೧೧೧).
[ದೇ. ‖ ತಮಿ. ಕಾಮಾಲೈ; ಮಲ. ಕಾಮಿಲೆ; ತುಳು. ಕಾಮಲೆ, ಕಾಮೆಲಿ; ತೆಲು. ಕಾಮಿಲಾ. / ಸಂ. ಕಾಮಲ; ಮರಾ. ಕಾಮಿಣ್, ಕಾಮಿನ್]

**ಕಾಮಾಲೆಪಾಂಡು** (ನಾ). ಪಾಂಡುರೋಗದಲ್ಲಿ ಒಂದು ಬಗೆ: ಒಂದು ಹಿಡಿಕೆಯಲ್ಲಿ ಉಜ್ಜಿದ ಬೇವಿನಕಾಯಿ ತಂದು ಎಮ್ಮೆಯ ಮೊಸರ ನೀರಲ್ಲಿ ಅಟ್ಟು . . . ಕುಡಿಸಲು ಕಾಮಾಲೆ ಪಾಂಡುಮಾಡುವುದು (ವಿವೈವಿ. ೧೪೧). [ಕಾಮಾಲೆ + ಪಾಂಡು]

**ಕಾಮಾಸಕ್ತ** (ನಾ). ಕಾಮದಲ್ಲಿ ಆಸಕ್ತಿಯುಳ್ಳವನು; ಇಂದ್ರಿಯ ಸುಖಾಭಿಲಾಷಿ: ಅವರು ಕಾಮಾಸಕ್ತರಲ್ಲದೆಯಿದಿದರ್ಪೆಸೆ ತವೆ ಸರಸ್ವತಿಯರೊಳು ಪುಟ್ಟಸುವೆನೆಂಬಾಗ ನವಮಹಾಬ್ರಹ್ಮರನಜಂ ಸೃಜಿಸಿದಂ (ವೀಶೈವು. ೬-೧-೯). [ಕಾಮ + ಆಸಕ್ತ]

**ಕಾಮಾಸ್ತ್ರ** (ನಾ). ಕಾಮಬಾಣ: (೩). [ಕಾಮ + ಅಸ್ತ್ರ]

**ಕಾಮಿ₁** (ನಾ). ೧. ಕಾಮುಕ; ವಿಷಯಲಂಪಟ: ಕಾಮಿಗುಂಟೆ ಲಜ್ಜೆ ನಾಚಿಕೆ? ಕಾಮಿಗುಂಟೆ ಮಾನಾಪಮಾನವು? (ಬಸವ. ೫೧೪); ಕಾಮಿ ಕಣ್ಣಿಜಿವನಲ್ತು (ಅನಂಪು. ೧೧-೮೮); ಅನವರತಮುಂ ಕಾಮಿನೀ ಆ ಅನಘಮತಿ ನಿಷ್ಕಾಮಿ (ಬಸವು. ೪೪-೫೪); ಸುತೃಷ್ಣಾಲೋಲಚಿತ್ತನು ಕಾಮಿ ಮೃಗಯಾಕೇಳಿಲಂಪಟನು (ಕುವ್ಯಾಆ. ೨೩-೨೫). ೨. ಬಯಕೆಯುಳ್ಳವನು. ೩. ಮನ್ಮಥನ ಹೆಂಡತಿ; ರತಿ. [ಸಂ.]

**ಕಾಮಿ₂** (ಗು). ೧. ಬಯಸುವ; ಇಚ್ಛಿಸುವ. (ನಾ). ೨. ಕಾಮುಕ; ವಿಷಯಲಂಪಟ. ೩. ಪಾರಿವಾಳ. ೪. ಚಕ್ರವಾಕ ಪಕ್ಷಿ. ೫. ಗುಬ್ಬಚ್ಚಿ. ೬. ಶಿವ. [ಸಂ. ಕಾಮಿನ್]

**ಕಾಮಿ₃** (ನಾ). ಹೆಣ್ಣು ಬೆಕ್ಕು: ಕಾಮೀ (ಬೆಕ್ಕು) ಕೊಂದ ಪಾಪ ಕಾಶೀಗೆಹೋದರೂ ಬಿಡದು (ಹುಟ್ಟಹ. ೧೧೯); ಬಾಳೆ ಮಾಡತಾವ್ ಅಕ್ಕರೆ ಬರುವಂಗ ಕಾಮಿ ಬಾವುಗ ಜೋಡಾ (ಅರಳು. ೨೭೮). [?]

**ಕಾಮಿಕ** (ಗು). ೧. ಬಯಸಲ್ಪಟ್ಟ; ಅಪೇಕ್ಷಿಸಲ್ಪಟ್ಟ. (ನಾ). ೨. ಕಾಮದಿಂದ ನಡೆಸಿದ ಕೆಲಸ. ೩. ಒಂದು ಬಗೆಯ ಬಾತುಕೋಳಿ. ೪. = ಕಾಮಿಕಾಗಮ: ಕಾಮಿಕ, ಯೋಗಜ . . . ಕಿರಣ, ವಾಕುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಭಾರದ. ೬೨). [ಸಂ.]

**ಕಾಮಿಕಾಗಮ** (ನಾ). ಇಪ್ಪತ್ತೆಂಟು ಶೈವಾಗಮಗಳಲ್ಲಿ ಒಂದು: ಆ ಸಿದ್ಧಾಂತ ಭೇದಂಗಳಾವವೆಂದೊಡೆ ಕಾಮಿಕಾಗಮ ಯೋಗಜಾಗಮ ಚಿಂತ್ಯಾಗಮ . . . ಎಂಬಿಪ್ಪತ್ತೆಂಟು ದಿವ್ಯಾಗಮಗಳಕ್ಕುಂ (ವಿವೇಕ. ೬೮); ಕಾಮಿಕಾಗಮ ಮೊದಲು ಐದು ಆಗಮಗಳು ಸದ್ಯೋಜಾತ ಮುಖದಿಂದಲೂ . . . ಪ್ರಕಟವಾಗಿವೆ (ಭಾರದ. ೬೨). [ಕಾಮಿಕ + ಆಗಮ]

**ಕಾಮಿಜನ** (ನಾ). ಕಾಮಾಸಕ್ತವಾದ ಜನ; ಕಾಮಪೀಡಿತ ಜನ: ಕಾಮಿಜನದಂತೆ ಸಮುತ್ಕಳಿಕಾಕುಳಂ ಕೊಳಂ (ಪುಷ್ಪಪು. ೨-೫೩).
[ಕಾಮಿ₂ + ಜನ]

**ಕಾಮಿಣಿ** 'ಕಾಮಾಲೆ' ನೋ.

**ಕಾಮಿತ** (ಗು). ೧. ಅಪೇಕ್ಷಿಸಲ್ಪಟ್ಟ; ಬಯಸಿದ: ಕಾಮಿತಫಲಂಗಳ ನಿತ್ತವರ್ಗಳನು ನಲ್ಲ ಭಕ್ತರನಂದು ಮಾಡಿದ (ಬಸವು. ೯-೧೯). (ನಾ). ೨. ಬಯಕೆ; ಮನೋರಥ; ಇಚ್ಛೆ: ವೇದಿಸಲು ಸರ್ವಂ ಹವಾಯೆನುತೋಡುತಮಿದಂ ಭಸ್ಮವೆಂಬಾಪಾದಿತಾಥರ್ವೋಕ್ತಿ ಕಾಮಿತ ಸಿದ್ಧಿಯಾಯಿತ್ತು (ಬಸವು. ೪೩-೬೫). ೩. ಬಯಸಿದ ವಸ್ತು: ಕಾಮಿತವನಿವದಿರಿಗೆ ಕೊಟ್ಟರೆ ಕಾಮಹರ ಕಮಳಾಕ್ಷರಿಗೆ ಸಂಗ್ರಾಮದಲಿ ಜಯವಾಗದೆಂದಡಿಗಡಿಗೆ ಬೆರಗಾದ (ಕುವ್ಯಾಕ. ೬-೬). [ಸಂ.]

**ಕಾಮಿತಾರ್ಥ** (ನಾ). ಬಯಸಿದ ವಸ್ತು; ಅಪೇಕ್ಷಿಸಿದ ವಿಷಯ. 'ಕಾಮಿತಾರ್ಥದ' ಪರಾ. [ಕಾಮಿತ + ಅರ್ಥ]

**ಕಾಮಿತಾರ್ಥದ** (ನಾ). ಬಯಸಿದುದನ್ನು ಕೊಡುವವನು; ಇಚ್ಛೆಯನ್ನು ಪೂರೈಸುವವನು: ದಿವ್ಯಪ್ರಕಾಶನ ಕಾಮಿತಾರ್ಥದನ . . . ಪಶ್ಚಿಮರಂಗೇಶನ ಪದಕೆರಗುವೆನು (ಶತಸಾಂ. ೬೧-೧). [ಸಂ.]

**ಕಾಮಿತ್ವ** (ನಾ). ಕಾಮುಕತೆ; ವಿಷಯಲಂಪಟತೆ: ಶ್ರೀಶ್ವೇತಕೇತುವ್ರತಿಗೆ ಸುತನೆನಲ್ ಸಂದು ಕಾಮಿತ್ವದಿಂದಂ ದೇವತ್ವಂಗೆಟ್ಟು ಮರ್ತ್ಯೋದ್ಭವನೆನೆ ಶುಕನಾಸಂಗೆ [ಪುಟ್ಟಿರ್ದನೋ ತಾನಾ]ವೈಶಂಪಾಯನಂ (ಕಾದಂಉ. ೬೯೧). [ಸಂ.]

**ಕಾಮಿನಿ** (ನಾ). ೧. ಕಾಮಲಾಲಸೆಯ ಹೆಂಗಸು; ಕಾಮಾತುರವುಳ್ಳವಳು: "ಅತಿಶಯವಾದ ಕಾಮವುಳ್ಳವಳು ಕಾಮಿನಿಯೆನಿಸುಗು" (ನಾಚಿರಾ. ೧೧೬). ೨. ಹೆಂಗಸು; ಸ್ತ್ರೀ: "ಭಾಮಿನಿನಿತಂಬಿನಿ ಪ್ರಮದೆ ಸುಂದರಿ ಲಲನೆ ಕಾಮಿನಿ ವರವರ್ಣಿನಿಯೆನಲ್ಕೆ ಹೆಂಗೂಸೆನಿಕ್ಕು" (ಮಂಗರಾ. ೮೯-೧); ಕನಕ ಕಾಮಿನಿ ಭೂಮಿಗಾಗಿ ಹೊಡೆದಾಡಿ ಕೆಟ್ಟತ್ತೀ ಜಗವೆಲ್ಲ (ಅಖಂಡೇ. ೧೦೦-೨೮). ೩. ಚೆಲುವೆಯಾದ ಹೆಂಗಸು; ಸುಂದರಿ: ಮಂದಾಕಿನಿ . . . ಕೊರಲಂ ಬಂದಪ್ಪಿರ್ದಳೊ ಪೇಳೆಂಬಂದದಿನೆಸೆದತ್ತು ಹಾರವಾ ಕಾಮಿನಿಯಾ (ಕಾದಂಪೂ. ೪೮); ನೋಟದೊಳಲಂಪನಾರ್ಜಿಸಿ ಕಾಮಿನಿ ಕಾಮಪಾಶದಂತೆಯಿರೆ (ಸುಕುಮಾ. ೭-೧೨). ೪. ಪ್ರೀತಿಸುವ ಹೆಂಗಸು; ಅನುರಕ್ತೆಯಾದವಳು.
[ಸಂ. ಕಾಮಿನೀ]

**ಕಾಮಿಲೆ** 'ಕಾಮಾಲೆ' ನೋ.

**ಕಾಮಿಸು** (ಕ್ರಿ). ಬಯಸು; ಅಪೇಕ್ಷಿಸು; ಇಷ್ಟಪಡು: ಎಮ್ಮನ್ನರ ನೆಂದುಂ ಕಾಮಿಸಯೆನೆ (ಕಾದಂಬ. ೫೭೬); ನೃಪಕಾಂತೆಯಂ ಪಡೆದು ಕಾಮಿಸಿ ನೋಡಿ ಪೊರ್ದುವ ಗಾಂಪನುಂ ಮರುಳಲ್ಲವೆ (ಧರ್ಮಾಮೃ. ೬-೧೧೧); ಕಾಮಿಸಿದ ಫಲವಹುದು ನೆನೆದರಿಗೀ ಮರುತ್ಪಥಗಾಮಿನಿಯನು (ತೊರವೆ. ೧-೧೨-೧೪). [ಕಾಮ + -ಇಸು$_3$]

**ಕಾಮು** 'ಕಾವು$_3$' ನೋ.

**ಕಾಮುಕ** (ನಾ). ೧. ಕಾಮಾಸಕ್ತನಾದವನು; ವಿಷಯಲಂಪಟ; ವಿಟ: "ಕ್ರಮುಃ, ಕಾಮಿಾ, ಕಾಮುಕಃ —ಈ ೩ ಕಾಮಿ" (ಹಲಾಯು. ೬೩-೨೨೬); ಮಲಯಾನಿಲನುಂ ಮಲಯಜಜಲಮುಂ . . . ವಿಯೋಗಿಗಳೆರ್ದೆಯೊಳ್ ನೆಲಸಿರ್ದುವಟಲೆ ಪಾಪದ ಫಲಮಾದುವು ಯುಕ್ತಕಾರಿ ಕಾಮುಕಜನದಾ (ಕವಿರಾ. ೩-೩೭); ಚಾಂಡಾಳ ಸ್ವರೂಪದ ಕಾಮುಕರ ಡೋಳಿಯೊಂದು ಬಂದು ಮಲಗಿದವರ ಮೇಲೆ ದಾಳಿ ಮಾಡಿತು (ಹೇಮಂತ. ೨೮೬). ೨. ಅತಿಯಾಸೆಗಾರ; ಹೆಚ್ಚು ಬಯಸುವವನು. [ಸಂ.]

**ಕಾಮುಕಿ** (ನಾ). ೧. ಕಾಮಾತುರೆ: "ವೃಷಸ್ಯಂತೀ, ಕಾಮುಕೀ- ಈ ೨ ರತಿಯಲ್ಲಿ ಆಸೆಯುಳ್ಳವಳು" (ಸಿದ್ಧಾಂತಿ. ೧೪೮). ೨. ಸಂಭೋಗದ ಅಪೇಕ್ಷೆಯುಳ್ಳವಳು; ಸೂಳೆ: "ಶುಂಡಾಲ ಕಿಶೋರ ಕಾಮುಕಿಯ ರೆಂಬಿವಕಂ ಗಣಿಕಾಭಿದಾನಮುಂ" (ನಾನಾರ. ೯೯). [ಸಂ. ಕಾಮುಕೀ]

**ಕಾಮುಕೆ** (ನಾ). ಧನ, ವೈಭವ, ಮೊದಲಾದವನ್ನು ಪ್ರಬಲವಾಗಿ ಅಪೇಕ್ಷಿಸುವಳು: "ಇಚ್ಛಾವತೀ, ಕಾಮುಕಾ . . . ಬಹಳ ಆಸೆಯುಳ್ಳ ವಳು; ಧನವನ್ನು ಹಾರೈಸುವವಳು (ಸಿದ್ಧಾಂತಿ. ೧೪೮); ಪೂರ್ವಾಪ ಕಾರಿಯಾ ರಾಜ್ಯಕಾಮುಕೆ ಕೈಕಯೀಸುತಂ ದುಷ್ಟಮತಿಬಂದನಾ ಭರತಂ (ಶ್ರೀರಾಮಾ. ೧೫೮-೧೬೮). [ಸಂ. ಕಾಮುಕಾ]

**ಕಾಮುರುಳಿ** (ನಾ). ಒಂದು ಜಾತಿಯ ಪಕ್ಷಿ; ಕಾಡುಗಿಳಿ (?): ಪಿಕ್ಕುಳಿಕ ಚೆಂಬೂತ ಗೀಜಗ ಕುಕ್ಕು ಕೋಗಿಲೆ ಕಾಮುರುಳಿ ಬೆಳ್ವಕ್ಕಿ (ಸಾಳ್ವಭಾ. ೫-೨೨). [ಕಾ$_2$ + ಮುರುಳಿ$_0$]

**ಕಾಮೇಶ** (ನಾ). ೧. ಕುಬೇರ. ೨. ಬಯಕೆಗಳ ಒಡೆಯ; ಪರಮಾತ್ಮ. ೩. ಪರಮೇಶ್ವರ: ದೂರ್ವಾಸಮುನಿ ತವಕದಿಂದ ಚಂದ್ರಾವತಂಸನನುಪಾರ್ಜಿಸಿ ಭಕ್ತಿಯಿಂದ ಪ್ರತಿಷ್ಠೆಗೆಯ್ದಿರ್ದ ಕಾಮೇಶನಂ ಕಂಡನು ಹರಿಶ್ಚಂದ್ರನು (ಹಚಕಾ. ೧೦-೪೨). [ಕಾಮ + ಈಶ]

**ಕಾಮೇಷ್ಟಿ** (ನಾ). ಯಾವುದಾದರೊಂದು ಫಲಾಪೇಕ್ಷೆಯಿಂದ ಮಾಡುವ ಯಾಗ ಅಥವಾ ಪೂಜೆ. 'ಪುತ್ರಕಾಮೇಷ್ಟಿ' ಪರಾ. [ಕಾಮ + ಇಷ್ಟಿ]

**ಕಾಮೋತ್ಕಟ** (ನಾ). ಉತ್ಕಟವಾದ ಕಾಮಾತುರವುಳ್ಳವನು: ಮುಂದೆ ದೇವಾಲಯಕೆ ಬಂದು ಕಾಮೋತ್ಕಟಂ (ನಂಬಿರ. ೧೩-೬೬). [ಕಾಮ + ಉತ್ಕಟ]

**ಕಾಮೋದ್ಭವ** (ಗು). ೧. ಕಾಮದಿಂದ ಹುಟ್ಟಿದ, —ಉಂಟಾದ. (ನಾ). ೨. [ಛಂದ] ಅಕ್ಷರ ಛಂದಸ್ಸಿನಲ್ಲಿ ನಾಲ್ಕನೆಯ ಛಂದಸ್ಸಾದ ಪ್ರತಿಷ್ಠೆಯಲ್ಲಿ ಒಂದು ಭೇದದ ಹೆಸರು: ವ್ಯೋಮಂ ಹರಂ ತಾವಾಗಿರಲ್ ಶ್ಯಾಮಾಂಗಿಕೇಳ್ ಕಾಮೋದ್ಭವಂ [ಪಾಠಾಂ. ಕಾಮಾಂಗಮಂ] (ಛಂದೋಂಬು. ೨-೧೬). [ಕಾಮ + ಉದ್ಭವ]

**ಕಾಮ್ಯ** (ಗು). ೧. ಇಚ್ಛಿಸತಕ್ಕ; ಇಷ್ಟವಾದ. 'ಕಾಮ್ಯಕರ್ಮ' ಪರಾ. ೨. ಸೊಗಸಾದ; ಚೆಲುವಾದ; ಮನೋಹರವಾದ: ಚಂದ ಕಂಡುದನ್ನು ಬಯಸಿದಾಗ ಮನಸ್ಸು ಕಾಮ್ಯವಾದುದಕ್ಕೆ ಕಟ್ಟಿಕೊಳ್ಳುತ್ತದೆ (ಮನೋಣಂ. ೧೯೭). (ನಾ). ೩. ಬಯಕೆ; ಮನೋರಥ: ಅಂಬುಜಾರಿಯ ಪೋಲ್ವಕುವರನಂ ಪಡೆಯಲಾ ಕುಂಭಿನೀಶಂ ಕಂಡು ಕಾಮ್ಯಸಿದ್ಧಿಸಿತೆಂದುಹರ್ಷಾಂಬುಧಿಯೊಳಾಳುತ (ಪ್ರೌಢರಾ. ೮-೭೫). [ಸಂ.]

**ಕಾಮ್ಯಕರ್ಮ** (ನಾ). ಇಚ್ಛೆಯ ಸಿದ್ಧಿಗಾಗಿ ಆಚರಿಸುವ ಕರ್ಮ: ಜ್ಯೋತಿಷ್ಟೋಮಯಾಗಾದಿಕಮೇ ಕಾಮ್ಯಕರ್ಮವೆನಿಸುವುದು (ವಿವೇಕ. ೧೩೮); ಇದನಾಚರಿಸಿದೊಡೀ ಫಲವಪ್ಪುದೆಂಬುದು ಕಾಮ್ಯಕರ್ಮವೆನಿಪುದು (ಹದಿಬ. ೯-೧೦). [ಕಾಮ್ಯ + ಕರ್ಮ]

**ಕಾಮ್ಯಗುರು** (ನಾ). ಅಪೇಕ್ಷಣೀಯನಾದ ಗುರು; ಎಂಟು ಬಗೆಯ ಗುರುಗಳಲ್ಲಿ ಒಂದು ವರ್ಗ: ಪುಣ್ಯ ಕರ್ಮೋಪದೇಶದಿಂದಿಹಪರಂಗಳಲ್ಲಿ ಸುಖಪ್ರದಾತಕನೇ[ಪಾಠಾಂ. ದನೇ] ಕಾಮ್ಯಗುರು (ವಿವೇಕ. ೧೭); ಬೇಕೆನಿಸುವ ಸಂಪದವನು ತನಗಿಲ್ಲಿ ಮುಂದೆ ಪರಲೋಕದ ಲೇಸನು ಕೊಡುವನೆ ಕಾಮ್ಯಗುರುವಹನು (ಕೈವಲ್ಯ. ೯-೧-೧). [ಕಾಮ್ಯ + ಗುರು]

**ಕಾಮ್ಯದಾನ** (ನಾ). ೧. ಬಯಸಿದುದನ್ನೆಲ್ಲ ಪೂರೈಸುವ ದಾನ. ೨. ಹಿತಕರವಾದ ದಾನ; ತೆಗೆದುಕೊಳ್ಳಲು ಯೋಗ್ಯವಾದ ದಾನ: (ಕಿ). ೩. ಫಲಾಭಿಲಾಷೆಯಿಂದ ಮಾಡುವ ದಾನ. [ಕಾಮ್ಯ + ದಾನ]

**ಕಾಮ್ಯಾರ್ಥ** (ನಾ). ೧. ಯಜ್ಞ, ಯಾಗ, ವ್ರತ ಮೊದಲಾದ ಕಾಮ್ಯ ಕರ್ಮಗಳಿಂದ ಪೂರೈಸಿಕೊಳ್ಳುವ ಪ್ರಯೋಜನ; ಇಷ್ಟಾರ್ಥ: ಶ್ವೇತನಾ ರಂಭೋಪದೇಶದೊಳೋತು ಶಿವನಂ ಭಜಿಸು ತೊಲಿಸಿ ಪರೇತ ಪತಿಯಂ ಗೆಲಿದು ಕಾಮ್ಯಾರ್ಥಂಗಳಂ ಪಡೆದ (ಬಸವು. ೪೧ ಸೂಚನೆ). ೨. ಬಯಸತಕ್ಕ ವಿಷಯ ಅಥವಾ ವಸ್ತು. [ಕಾಮ್ಯ + ಅರ್ಥ]

**ಕಾಮ್ಯೇಷ್ಟಿ** (ನಾ). = ಕಾಮೇಷ್ಟಿ: ನಿತ್ಯೇಷ್ಟಿ ಕಾಮೇಷ್ಟಿ ಮೊದಲಾದವುಗಳಂ (ವಿವೇಕ. ೧೩೪). [ಕಾಮ್ಯ + ಇಷ್ಟಿ]

**ಕಾಯ್$_1$** 'ಕಾ$_1$' ನೋ.

**ಕಾಯ್$_2$, ಕಾಯಿ$_2$, ಕಾಯು$_2$** (ಕ್ರಿ). ಕಾಯ್ದು, ಕಾದು$_3$ (ಭೂತನ್ಯೂ). ೧. ಉಷ್ಣವಾಗು; ಕಾಯು; ಬಿಸಿಯಾಗು: ಕಾಯ್ದ ಬೆನ್ನೀರ್ ಮನೆ ಸುಡದೆಂಬೊಂದು ನುಡಿಯಪ್ಪೋಲ್ (ಪಂಪಭಾ. ೯-೩೮); ಅಶ್ವಪಚರ್ ಬಿಡದಜಿಯಾಗೋವಿನ ಪೃಷ್ಠಭಾಗಕ್ಕೆ ಕಾಯ್ದ ನೀರಂ ತಂದೆಱೆದು (ಪಂಚತಂ. ೧೯-೧೮); ಮುಳಿಸಿಂ ಪಗೆಯಂ ಕಂಡಂತೆ ಕಾಯ್ವನಿನ್ನುಂ ಸೂರ್ಯಂ (ಧರ್ಮಾಮೃ. ೩-೧೪೦); ಉರಿವರಿವ ಬಿಸಿಲ ಬೆಂಕಿಯ ಭರದೆ ಮುಟಲ್ದಿಂಟೆ ಕಾಯ್ದು ಸಿಡಿಯುತ್ತಿರೆ (ಜಗವಿ. ೧೭-೭೪); ಕಾಡುಗಿಚ್ಚಿದ್ದು ಕಾದಿಹ ಬೂದಿ ತನಿಗೆಂಡ ಜಾಡಿಪ ಕಿಡಿಹೊಗೆ (ಕಂಠವಿ. ೧೮-೪೭); ಕಾದ ಹಾಲು ಕಹಿಯಾದೀತೆ (ಗಾದೆ). ೨. ಸಿಟ್ಟಾಗು; ಕೋಪಗೊಳ್ಳು: "ಕಾಯ್ ಕೋಪಂ" (ಕಶಸಾ. ೨೨-೫೫೭); ಚಂಗಗಾವುಣ್ಡಂ ಪುಸಿಗೆ ಪೇಸುವೊಂ ಪಿಸುಣ್ಗೆ ಕಾಯ್ವ (ಸೌಇಇ. IX–i, ೭೭-೯ ; 981); ವಿಷ್ಣುದೇಹಂಗಳಂ ಶಂಕರನುಟ್ಟಂ ತೊಟ್ಟನೆಂದೀ ಶರಣರೆನೆ ಕರಂ ಕಾಯ್ವುರಯ್ಯೊ (ಪಂಪಾಶ. ೯೪); ಸುಕವಿ ಕಾವ್ಯಮನಾಲಿಸಿ ಕಾಯ್ವ ದುರ್ಜನ ಪ್ರಕರದ ಕರ್ಣಕೋಟರಮನೇಕೆಯೋ ಮಾಡಿದನಬ್ಜ ವಿಷ್ಟರಂ (ಪಂರಾಮಾ. ೧-೩೧); ಕಯ್ದು ಮುಟಿಯೆ ಕಯ್ಯಹರಿಗೆಯ ತೆಗೆದಿಟ್ಟು ಬಯ್ದು ಮೂದಲಿಸಿ ಬಂಕಿನೊಳು ಕಾಯ್ದುಱಿದಳಿಯಲವರನಮರ ಸ್ತ್ರೀಯರೊಯ್ದರು (ಕುರಾಸಾಂ. ೧೨-೬೮); ಪೋಪುದುಚಿತವೆ ಮಗಳೆ ಸಗ್ಗವೆಣ್ಣೆಂಬ ಮಾತಿಗೆ ಕಾಯ್ದು ನಟಿಕೆಯಂನೆಗ್ಗಿ (ಚಬವು. ೧೯-೨೭).

**ಕಾಯಿ**$_2$ ೧: (ಕ). **ಕಾಯ್ಯು**$_2$: ೧. ಶರೀರದಲ್ಲಿ ಜ್ವರ ಕಾಯುತ್ತಿದ್ದರೂ ಇಲ್ಲದೆಇದ್ದರೂ ಸಾಯಂಕಾಲದಲ್ಲಿ ಪಥ್ಯಮಂ ಕೊಡಿಸುವುದು(ಸಕವೈ.೬೩).

ಕಾಯ್ದರಭೀಮ = ತನ್ನ ಮೇಲೆ ಕೋಪಗೊಂಡವರಿಗೆ ಭಯಂಕರನಾದವನು; ಒಂದು ಬಿರುದು: ಮೊನೆಮುಟ್ಟೆಗಣ್ಡಂ ಮಱುವಕ್ಕರಾಮ ಕಾಯ್ದರ ಭೀಮಂ ದುರದೆಡೆ ರಾಮಂ ಮುಱಿವರ ಭೀಮಂ ರಾಜೇಂದ್ರ ಚೋಳ ಪಲ್ಲವಾದಿತ್ತಂ (ಮೈಆರಿ. ೧೯೨೮, ೩೧-೧೪; 1056). ಕಾಯ್ವರಗಂಡ = ಒಂದು ಬಿರುದು: ದುಷ್ಟಾಶ್ವಮಲ್ಲಂ . . . ಕಾಯ್ವರಗಂಡಂ ಅರಿತುರಗತಟ್ಟಸಂಘಟ್ಟಂ (ಸೌಇಇ. XI–i, ೭೮-೮೧; 1045). ಕಾಯ್ವರಜವ = ಒಂದು ಬಿರುದು: ಕಾಯ್ವರಜವಂ ಪ್ರತಿಬಲ ದಗ್ಗಱಿ (ಎಕ. XI, ಚಿತ್ರದು. ೨೬-೨; 946). ಕಾಯ್ವರಭೀಮ = ಕಾಯ್ದರಭೀಮ: ಬಳಂಜಿಗಂ ಕಾಯ್ವರಭೀಮ ಸಂಗ್ರಾಮ ರಾಮ ಆಳಿಂಗೆ ಬಳಂಜಿಗಂ (ಎಕ. XI, ಚಿತ್ರದು. ೩೪-೧೪; 1174).

[ದೇ. ‖ ತಮಿ. ಮಲ. ಕಾಯ್; ತುಳು. ಕಾಯು; ತೆಲು. ಕಾಗು; ಕೋಲಾ. ನಾಯ್ಕಿ. ಕಾಜ್]

**ಕಾಯ್**$_3$ (ಕ್ರಿ). ಕಾಯ್ತು$_2$ (ಭೂತಕೃ); ಕಾತು, ಕಾಯ್ತು (ಭೂತನ್ಯೂ). ಕಾಯಿಬಿಡು: "ಕಾಯ್ – ಫಲೋತ್ಪತ್ತೌ, ಕೋಪೇ ಚ" (ಶಮಧಾ); ತಳಿರ್ವರ್ದು ಪೂವುದು ಕಾಯ್ವುದಂತು ಕಾಯ್ತನಿತಱಿಕೊಳಂತು ನಿಂದು ಮನದೊಳ್ (ಪಂಪಭಾ. ೪-೧೦೨); ಬೇರ್ಗಳಂ ತುಱುಗಿರೆ ಕಾಯ್ತ ಬಕ್ಕೆ (ಎಕ. XI, ದಾವಣ. ೩೫-೩೮; 1160); ತಳಿರ್ತು ಪೂತು ಕಾಯ್ತುಲಸದೆ ಕಲ್ಪಪಾದಪದ ತಣ್ಣೆಱಲಲ್ಲಿ (ಅರ್ಧನೇ. ೧-೯); ಕಾಯ್ತ ತೆಂಗು ಸಾಲದೆ (ಕಬ್ಬಕಾ. ೧೯೨); ಕಾಣ್ಕೆಯಂ ಮಧುಸಖಂಗೊಲವಿಂ ಕುಡುವಂತೆ ಮೂವುಗಳ್ ಕಾತವು (ನಳಚಂ. ೫೪); ಪೂತುದವನೀ ಲತಾವಿತತಿ ಮಾಮರಗಳುರೆ ಕಾತುವು (ಚಿಬಪು. ೪೫-೧೦); ಕಾಯ್ತ ಕಲ್ಪಕುಜದಂತೆ (ಶಬಶಂ. ೨-೪೩); ಕಾತ ಮರಂ ಪೂತ ಬಳ್ಳಿ ಸುರ್ಕಿ ಸುಱಿದಾಡಿದುದು (ರಾಮಾಶ್ವ. ೫೨-೨).

[ದೇ. ‖ ತಮಿ. ಮಲ. ಕಾಯ್; ತೆಲು. ಕಾಯು]

**ಕಾಯ್**$_4$, ಕಾಯಿ$_4$ (ನಾ). ೧. ಮಿಡಿಗೂ ಹಣ್ಣಿಗೂ ನಡುವಿನ ಸ್ಥಿತಿ; ಅಪಕ್ವ ಫಲ: ತೋರನೆಲ್ಲಿಯ ಕಾಯಿಂ ಪಿರಿಯವಪ್ಪ ಮುತ್ತಿನ ಬ್ರಹ್ಮಸೂತ್ರಮನೆಟಲಿಕ್ಕಿ (ಪಂಪಭಾ. ೧೨-೧೦೮ ವ); ಜಳಜದ ಮೊಗ್ಗೆಯಂತೆ ಮುಗುಳಂತೆಳಯೆಕ್ಕೆಯ ಕಾಯ್ಗಳಂತೆ (ಕಾದಂಪೂ. ೧೭೮). ಪೂಮಿಡಿಯ ಪೂವಿನ ಕಾಯ್ಗಳ ಕಯ್ದುವುಳ್ಕುಗುಂ (ಶಾಂತಿಪು. ೭-೯೪); ಪುಣಿಸೆಯ ಪೂವೆಲ್ಲಂ ಕಾಯಪ್ಪುವೇ (ಧರ್ಮಾಮೃ. ೫-೨೩೯); ಪಣ್ಣಿರೆ ಕಾಯ ಮೆಲ್ವಕ್ಷುಣ್ಣವಿಟರ್ (ಉದ್ಭಟ. ೧೦-೭೪); ಇಕ್ಕೆಲದ ಬಲೆಯರ್ ಮಾತಾಡಿದರು . . . ಮೊಗ್ಗೆ ಮೊಲೆಗಳು ಮೆಕ್ಕೆಯ ಕಾಯ್ಗಳೆಂದೆನುತ (ಮೋಹತ. ೧೮-೬೫). ೨. ಬೀಜಕೋಶ; ತರಡು; ವೃಷಣ: ಎಡದೆಸೆಯವೊಂದೆ ಕಾಯ್ ಬಾತೊಡೆ (ಲೋಕೋಪ. ೯-೧೪೦). **ಕಾಯಿ**$_4$: ೧. ಕಾಯಿ ನೋರೆಹಣ್ಣು ಮೊದಲಾದವರಲ್ಲಿಯ ಗಂಧವನಱಿವುದು (ಆದವ. ೧೨); ಪರಿಪರಿಯ ಹೂ ಕಾಯಿ ಮೇಲೋಗರದ ಮಧುರಾಮ್ಲಾದಿ ಲವಣೋತ್ಕರ (ತೊರರಾ. ೧-೭-೭); ಕಾಯಿ ಪಣ್ಗಳ ತಾಳ್ದ ದುಂಬುರದ್ರುಮಗಳೊಪ್ಪಿದುವು (ಮೋಹತ. ೨೪-೪೭). ೩. ಪಗಡೆ, ಚದುರಂಗ ಮೊದಲಾದ ಆಟದ ಸಾಧನ: ಥಾಳಿಸುತ ಲೆತ್ತಗಳ ಹಾಸಿಗೆ ಮೇಲೆ ಚಿಟ್ಟೆಗಳಿಟ್ಟು ಲೆಕ್ಕದ ಮೇಲೆ ನಡಸಿದರುಭಯ ಮಂತ್ರಿಗಳ ವರ ಕಾಯಿಗಳಂ (ಜನಭಾ. ೩೬-೧೬). ೪. ಜಾಯಿಕಾಯಿ: ಅತಿಶಯದಿಯೆಲೆ ಕಾಂಚಿನೊಳಗೆ ಕಸ್ತುರಿವೆರೆದ ಗುಳಿಗೆ ಕಾಯ್ಲವಂಗ ಪತ್ರ (ನವಮೋ. ೨೬-೨೯); ಹೊಗೆಕಡ್ಡಿ, ಕಾಚು, ಕಾಯಿ, ಬಜೆ, ಲವಂಗ . . . ಇತ್ಯಾದಿ ಸರಕು ತುಂಬಿದ್ದ ತಾಂಬೂಲದ ಚಂಚಿ (ಬೆಳುಮ. ೩೨).

೫. ತೆಂಗಿನಕಾಯಿ: ಕಾಯಿ ಒಡೆದು ಕರ್ಪೂರ ಹಚ್ಚು (ರೂಢಿ). 'ಕಾಯಿಕಡುಬು', 'ಕಾಯಿರಸ' ಪರಾ. ೬. (ಆಲಂ) ವಿಫಲತೆ; ಕೈಗೂಡದಿರುವಿಕೆ; ಸೋಲು: ಹೋದ ಕೆಲಸ ಹಣ್ಣೋ ಕಾಯೋ (ರೂಢಿ).

[< ಕಾಯ್$_3$. / ತಮಿ. ಮಲ. ಕಾಯ್, ಕಾಯಿ; ತುಳು. ಕೊಡ. ಕಾಯ್; ತೆಲು. ಕಾಯ; ನಾಯ್ಕಿ. ಕಾಯ್ಕ = ಹಣ್ಣು]

**ಕಾಯ** (ನಾ). ೧. ಮೈ; ಒಡಲು; ದೇಹ; ಶರೀರ: "ತನುಗಾತ್ರಂ ವಿಗ್ರಹಮಪಘನಂ ಶರೀರಂ ಕಳೇಬರಂ ಕಾಯಂ" (ವಸ್ತುಕೋ. ೬೭-೧); ಕಾಯದ ಮೊದಲಿಂಗೆ ಬೀಜವಾವುದೆಂದಱಿಯದೀ ಲೋಕ (ಅವಚಂ. ೪-೧೨); ಮೈಮಱಸದೆ ಕಾಯಮನೋವಚನಗಳ ಆಯದಿಂದಳವಳಿಯದೆ (ಹದಿಬ. ೩-೯). ೨. ಕಿರುಬೆರಳ ಬುಡ. ೩. ಸಮೂಹ; ರಾಶಿ. ೪. ಮರದ ಕಾಂಡ. ೫. ವೀಣೆಯ ದೇಹ. ೬. ಮನೆ; ವಸತಿ. ೭. ಸ್ವಭಾವ. [ಸಂ.]

**ಕಾಯಂ**, ಕಾಯಮು, ಖಾಯಂ, ಖಾಯಮು, ಖಾಯಮ್ಮು (ಗು). ೧. ಸ್ಥಿರವಾದ; ಖಚಿತವಾದ; ಶಾಶ್ವತವಾದ: ಹಲವಾರು ಬಗೆಯ . . . ಪತ್ರಿಕೆಗಳಿಗೆ ಅವರು ಕಾಯಂ ಚಂದಾದಾರರಾಗಿದ್ದರು (ರತ್ನಗೋ. ೫). ೨. ತೀರ್ಮಾನಿಸಿದ; ನಿರ್ಣಯವಾದ. **ಕಾಯಮು**: "ಕಾಯಮು – ಸ್ಥಿರ, ನಿಶ್ಚಯ" (ಜಾನಕೋ. ೩೭). **ಖಾಯಂ**: ೧. ಒಂದು ವರ್ಷ ಆದ ಮೇಲೆ ಖಾಯಂ ಮಾಡೋ ವಿಷಯದ ಪರಿಶೀಲನೆ (ರಂಗವ. ೨೫೫). ಖಾಯಂ ನೌಕರಿ (ಧನಂಜ. ೨೭). **ಕಾಯಮು**: ೧. ಖಾಯಮಾಗಿ ಭಾರತಕ್ಕೇ ಹಿಂತಿರುಗುವುದಕ್ಕಾಗಿ (ಭಾಧಾನ. ೫). **ಖಾಯಮ್ಮು**: ೧. ಸಧ್ಯಕ್ಕೆ ಈ ಊರು ಖಾಯಮ್ಮೇನು (ಕೊನೆಭೇ. ೧೭); ಖಾಯಮ್ಮಾಗಿ ಪ್ರಪಂಚದಲ್ಲಿ ಶಾಂತಿ ನೆಲಸುವಂತೆ ಮಾಡುವುದೇ ಈ ಸಂಸ್ಥೆಯ ಉದ್ದೇಶ (ಅಂತಸಂ. ೨೨).

ಕಾಯಂಮಾಡು = ನೆಲೆಗೊಳಿಸು; ಸ್ಥಿರಗೊಳಿಸು: ಹೀಗೆ ಇರುವಲ್ಲಿ ತಾವು ಟಿಪ್ಪುಸುಲ್ತಾನರ ಸಂಗಡ ದೋಸ್ತಿ ನಡತೆ ಕಾಯಂಮಾಡಿಕೊಂಡು (ರಾಜೇಂದ್ರ. ೪೫); ಅವನಿಗೆ ಕೆಲಸವನ್ನು ಕಾಯಂಮಾಡಿದರು (ರೂಢಿ). ಕಾಯಂಬಾಬದಾರ = ಶಾಶ್ವತ ಹಕ್ಕುದಾರ: ಅರಸರು ಹೊಲಗಳನ್ನು ಹಾಕಿ ಕೊಟ್ಟಿರುವುದರಿಂದ ಇವರು ಊರ ಕಾಯಂಬಾಬದಾರರಾಗಿರುವರು (ಮಭಾರ. ೧೭೨). ಕಾಯಮಾಗು = ಸ್ಥಿರವಾಗು; ಸ್ಥಿರೀಕರಿಸಲ್ಪಡು: ಆದಕ್ಕೆ ರಸೀತಿ ಕೊಡತಕ್ಕದ್ದು ಮತ್ತು ಆ ವಿಕ್ರಯವು ಕಾಯಮಾಗತಕ್ಕದ್ದು (ಗ್ರಾಮಾಕ. ೩೯).

[← ಅರ. ಕಾಈಮ್; ಹಿಂ. ಮರಾ. ಕಾಯಮ್]

**ಕಾಯಂಗುತ್ತ**, ಖಾಯಂಗುತ್ತಾ (ನಾ). ಸ್ಥಿರವಾಗಿ ಗೊತ್ತುಪಡಿಸಿದ ಕಂದಾಯ. **ಖಾಯಂಗುತ್ತಾ**: ಒಂದೊಂದು ಪ್ರದೇಶವನ್ನು ಒಬ್ಬೊಬ್ಬ ಸರದಾರನಿಗೆ ಕೊಟ್ಟು ಅಂಥವರಿಂದ ಖಾಯಂಗುತ್ತಾ ಎಂಬುದಾಗಿ ನಿಗದಿಯಾಗಿ ವಸೂಲ್ಮಾಡಿಕೊಳ್ಳುತ್ತಿದ್ದರು (ಪಾಳಗಾ. ೧೭).

ಖಾಯಂಗುತ್ತಾಗ್ರಾಮ = "ಸ್ಥಿರವೆಂದು ಗೊತ್ತುಪಡಿಸಿದ ಭೂಕಂದಾಯದ ಮೇಲೆ ಸರಕಾರದಿಂದ ಕೊಡಲ್ಪಟ್ಟ ಭೂಮಿ" (ರೈಸ್ ಗ. ೭೭೪). [ಕಾಯಂ + ಗುತ್ತ (< ಗುತ್ತಗೆ)]

**ಕಾಯಂತರೀಕ** (ಅ). ಸ್ಥಿರವಾಗಿ; ಕಾಯಂ ಆಗಿ: ಅಲ್ಲಿ ಅನೇಕ ದಿನ ಧರಿಣಹಿಡಿದ ಮೇಲೆ ಕಾಯಂತರೀಕ ದೊರಕಿತು (ದೀಪಹ. I, ೧೮).

[← ಅರ. ಕಾಈಮ್ ತರೀಕ್]

**ಕಾಯಕ** (ಗು). ೧. ದೇಹಕ್ಕೆ ಸಂಬಂಧಿಸಿದ; ದೈಹಿಕವಾದ (ನಾ). ೨. ಶರೀರ; ದೇಹ: ಎಂದುವುಂ ಮನವಚನ ಕಾಯಕದಿಂದಲೀಶನನಲ್ಲದನ್ಯ ಥವೊಂದುವಱಿಯದ ಪರಮಭಕ್ತರು ಮುಗ್ಧರುಗಳಲ್ಲ (ಬಸಪು. ೧೨-೫೮).

೩. ದೇಹಶ್ರಮದ ಕೆಲಸ; ಕಸಬು; ದುಡಿಮೆ: ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡರೆ ನಿಮ್ಮಾಣೆ (ಬಸವ. ೪೫೨); ಕಾಯಕವೆಂದು ಕಾಯವ ಬಳಲಿಸದೆ . . . ಬೇಡಿ ಕಾಡಿ ಮಾಡುವುದು ದಾಸೋಹವೆ (ವಚಸಂ. ೨೩-೩); ಕಾಯಕ ಭಕ್ತನ ಆಯತವ ನೋಡಿರೋ ಕಾಯಕವ ಬಿಟ್ಟ ಮರುದಿನ ಕಪ್ಪರದ ಕಾಯಕವೆ ಬಕ್ಕು (ಸರ್ವಜ್ಞ. ೨೬೮); ನಾಯಕನಿಲ್ಲದ ಊರಲ್ಲಿ ಕಾಯಕ ಸಿಕ್ಕೀತೆ (ಗಾದೆ). ೪. [ವೀಶೈ] ಕೆಲಸನಮಾಡಿ ಅಥವಾ ಕಸಬಿನಿಂದ ಗಳಿಸಿದ್ದು; ಸಂಪಾದನೆ: ಛಲದಿ ಭಕ್ತರ ಕೈಯ ಗುದ್ದ ಗುದ್ದಿಸಿಕೊಂಡು ಸಲೆ ಕಾಯಕವ ತಂದು ಜಂಗಮಾರ್ಚನೆಯ ಮಾಡೆಂದು ಶಿವ ಪೇಳಿ ಪೋಗೆ (ಪ್ರಾಭರಾ. ೨-೨೪). ೫. [ವೀಶೈ] ಸಮರ್ಪಣ ಭಾವದಿಂದ ಮಾಡುವ ವೃತ್ತಿ,—ಕೈಂಕರ್ಯ: ಕಾಯಕದಲ್ಲಿ, ನಿರತನಾದರೆ ಗುರುದರುಶನವಾದಡೂ ಮರೆಯಬೇಕು, ಲಿಂಗಪೂಜೆಯಾದಡೂ ಮಱೆಯಬೇಕು (ಶೂನ್ಯಸಂ. ೨೨೬-೧). ೬. (ಆಲಂ). ದುಷ್ಟವೃತ್ತಿ; ಕೆಟ್ಟ ಕೆಲಸ: ಲಗ್ನವಾದ ಮೇಲಾದರೂ ಅವಳು ಸದಾಚಾರಿಯಾಗಬಹುದೆಂದು ನಂಬಿದ್ದೆನು. ಆದರೆ ಅವಳು ತನ್ನ ಕಾಯಕವನ್ನು ಬಿಡಲಿಲ್ಲ (ಸ್ಕ್ಯಾಲಮಿ. ೨೦೬); ಇಲ್ಲಿಗೆ ಬಂದು ಮತ್ತೆ ಯಾವ ಕಾಯಕ ಮಾಡುವನೋ ತಿಳಿಯದು (ಭಾರತಿ. ೨೬); ಭಟ್ಟಿಯ ಕಾಯಕ ಹಾಗೆಯೇ ಸಾಗಿತ್ತು (ಮಣ್ಣುಹೆ. ೨೧). [ಸಂ.]

**ಕಾಯಕಟ್ಟು** (ನಾ). ಪೀಡಾದಿಗಳು ಬಾರದಂತೆ ಮಂತ್ರ ಬಲದಿಂದ ದಿಗ್ಬಂಧನ ಮಾಡುವುದು; ರಕ್ಷೆಯಿಡುವುದು; ಕಟ್ಟುಮಾಡುವುದು: ಹಳ್ಳಿಗಳಿಗೆ ರೋಗ ಪೀಡಾದಿಗಳು ಬರುವುದನ್ನು ಸೂಚಿಸುತ್ತಾನೆ. ಊರಿಗೆ ಕಾಯಕಟ್ಟು ಮಾಡಿಸಿರೆಂದು ಹೇಳುತ್ತಾನೆ (ಕನ್ನಜಾ. ೧೮). [< ಕಾ$_1$ + ಕಟ್ಟು$_2$]

**ಕಾಯಕಗೌರವ** (ನಾ). ಕಸಬು ಅಥವಾ ವೃತ್ತಿಯ ಘನತೆ,—ಗೌರವ. (Dignity of labour. ಪತ್ರಿಸಿ.) [ಕಾಯಕ+ ಗೌರವ]

**ಕಾಯಕಪ್ಪರ** (ನಾ). ಕಪ್ಪರಕಾಯಕ (?) : ಕಾಯಕಪ್ಪರವೆಂದು ಕೈವತ್ತಿಸಿದನೀ ಜಗಕ್ಕೆ ಶಿವನು (ಸರ್ವವ. ೧೪೦-೬೮೯). [ಕಾಯ? + ಕಪ್ಪರ?]

**ಕಾಯಕಲ್ಪ** (ನಾ). ೧. ಮುಪ್ಪನ್ನು ಹೋಗಲಾಡಿಸಿ ಯೌವನವನ್ನು ತಂದುಕೊಡುವ ಒಂದು ಆಯುರ್ವೇದ ಚಿಕಿತ್ಸೆ: ಅತ್ತೆ ಒಂದು ತರಹೆ ಕಾಯಕಲ್ಪ ಹೊಂದುತ್ತಿರುವುದರಿಂದ ಕಳೆದುಹೋದ ಆಯುಸ್ಸನ್ನು ಮತ್ತು ಸ್ಫೂರ್ತಿಯನ್ನು ಹೊಂದಿ ಆಕೆ ವಿಜೃಂಭಿಸುತ್ತಾಳೆ (ನಾಡಿಗೇ. ೮೪). ೨. (ಆಲಂ). ಪೌಷ್ಟಿಕವಾದ ಆಹಾರ: ತಮ್ಮ ನಿರೀಕ್ಷಣೆಯಂತೆ ಅವರಿಗೆ ಅಲ್ಲಿ ಕಾಯಕಲ್ಪ ಯಾವಾಗಲೂ ತಪ್ಪುತ್ತಿರಲಿಲ್ಲ (ಬಿಸ್ತಕ. ೨೧). [ಕಾಯ + ಕಲ್ಪ]

**ಕಾಯಕಲಬ್ಧಿ** (ನಾ). ಕಾಯಕದಿಂದ ಮಾಡಿದ ಗಳಿಕೆ,—ಸಂಪಾದನೆ: ಕುಸುಮ ಮಾಲೆಗಳಂ ರಚಿಸಿ ತಂದೊಸೆದು ಭಕ್ತರಿಗಿತ್ತು ತಾ ನಿತ್ಯಶನ ಕಾಯಕಲಬ್ಧಿಯಲಿ ಜಂಗಮಕೆ ಮಾಡುತ್ತ (ಬಸಪು. ೨೨-೨೬). [ಕಾಯಕ + ಲಬ್ಧಿ]

**ಕಾಯಕವಿಡಿ** (ಕ್ರಿ). [ವೀಶೈ] ಸಮರ್ಪಣ ಭಾವದಿಂದ ವೃತ್ತಿಯನ್ನು ಅನುಸರಿಸು; ಕಸಬುಮಾಡು: ಕಾಯಕವಿಡಿದು ಬಂದ ದ್ರವ್ಯವೇ ಲಿಂಗಕ್ಕರ್ಪಿತ (ಸರ್ವವ. ೧೪೦-೬೮೯); ತನುತಮಗುಳ್ಳ ಕಾಯಕವಿಡಿದು ಭೂತಳದಲ್ಲಿ ಮೆಱೆವುತ್ತಿರ್ದರು (ಪ್ರಭುಲೀ. ೯-೯). [ಕಾಯಕ + ಪಿಡಿ$_1$]

**ಕಾಯಕಷ್ಟ** (ನಾ). ಮೈಮುರಿದು ದುಡಿಯುವಿಕೆ; ದೈಹಿಕ ಶ್ರಮ: ತಮ್ಮದೇ ಆದ ಹೊಲದಲ್ಲಿ ಅವರ ಕಾಯಕಷ್ಟ ಇನ್ನೂ ಹೆಚ್ಚಿತು (ಭ್ರಮಾನ. ೧೫೭). [ಕಾಯ + ಕಷ್ಟ]

**ಕಾಯಕಾಂತಿ** (ನಾ). ದೇಹದ ಕಾಂತಿ; ಮೈಹೊಗರು: ಲೀಲೆಯಡಗಿದ ಮುಖದ ಮುಸುಳಿದ ಕಾಯಕಾಂತಿಗಳ (ಕುವ್ಯಾಆ. ೨೩-೩೧). [ಕಾಯ + ಕಾಂತಿ]

**ಕಾಯಕಾರ** (ನಾ). ಮೂರ್ತಿಯನ್ನು ಪೂಜಿಸುವ ಕೆಲಸ; ಸೇವೆ; ಕೈಂಕರ್ಯ: ಶ್ರೀಯರಸನೆ ನಿನ್ನ ನಗೆ ಒಂದು ಬಗೆಯಾಗಿ ಕಾಯದೊಳಗೆ ಎನಗೆ ತೋಱುತಿದೆ ವಾಯುವಂದಿತ ನಮ್ಮ ವಿಜಯವಿಠ್ಠಲ ನಿನ್ನ ಕಾಯಕಾರ ಪೊಂದಿದವನೊ ನಾನು (ಮೋಕ್ಷದೀ. ೫೨-೧). [ಕಾಯ + ಕಾರ$_4$]

**ಕಾಯಕ್ಲೇಶ** (ನಾ). ೧. ಶಾರೀರಕ ಶ್ರಮ; ದೈಹಿಕ ಪೀಡೆ: ಕಾಯಕ್ಲೇಶ ಮತ್ತು ಅದಕ್ಕೆ ಮೂಲವಾದ ವಿಷಯಗಳು ಹಾಗೂ ವೇದತತ್ತ್ವಾರ್ಥಗಳನ್ನು ಯೋಚಿಸಬೇಕು (ಭಾರದ. ೫೪). ೨. [ಜೈನ] ಬಾಹ್ಯ ತಪಸ್ಸುಗಳಲ್ಲಿ ಆರನೆಯದು: ಕಾಯಕ್ಲೇಶಮೆಂಬಾಱನೆಯ ತಪಮನೆತ್ತಿಕೊಂಡು (ಆದಿಪು. ೬-೩೦ ವ). [ಕಾಯ + ಕ್ಲೇಶ]

**ಕಾಯಕ್ಷ** (ನಾ). ಕುದುರೆಯ ಸವಾರಿಯಲ್ಲಿ ಒಂದು ಬಗೆ (?): ದಾರಿಗತಿಲಯ ಪೊಯ್ಯುದ್ದ ಕಾಯಕ್ಷಂ ತಿತಿಕ್ಷೆ ಪಿತನದಿ ತುರ(ಗ?) ಸಮಾನಂ . . . ವಹಳಿ ಸತ್ಯಂ ದಾರಿಮೆಂಬ ಭೇದಂಗಳಿಂದಶ್ವಮನೇಱಲು ರೇಚಿಗ ನೃಪತಿ ತಾನೆ ಬಲ್ಲಂ (ಮದತಿ. ೧-೨೧). [?]

**ಕಾಯಗಟ್ಟು** (ಕ್ರಿ). ೧. = ಕಾಯಗೊಳ್. ೨. ದೇಹವನ್ನು ಬಂಧಿಸು. ೩. (ಆಲಂ) ಮೈದೋರು; ಉಂಟಾಗು: ತನು ನಡುಗಿತಡಿಗಡಿಗೆ ಡೆಂಡಣಿಸಿ ಕಾಯಗಟ್ಟಿತು ಭೀತಿ ಬಿರುದಿನ ಬಾಯೆಣಿಕೆ ಬಯಲಾಯ್ತು (ಕುವ್ಯಾಭೀ. ೮-೬೧). [ಕಾಯ + ಕಟ್ಟು$_1$]

**ಕಾಯಗುಣ** (ನಾ). ದೇಹದ ಗುಣ: ಒಲ್ಲೆನೆಂಬುದು ವೈರಾಗ್ಯ ಒಲಿವೆನೆಂಬುದು ಕಾಯಗುಣ (ಬಸವ. ೭೭೪); ಕಾಯಗುಣವ ಕರ್ಮದಿಂದ ಕಳೆದು (ಮೋಳಿವಾ. ೩-೨); ಕಾಯಗುಣ ನಾಸ್ತಿಯಾದಾತಭಕ್ತ (ಅವಚಂ. ೧೧೬-೪೮೧). [ಕಾಯ + ಗುಣ$_3$]

**ಕಾಯಗುಪ್ತಿ** (ನಾ). [ಜೈನ] ಮೂರು ಗುಪ್ತಿಗಳಲ್ಲಿ ಒಂದು; ದೇಹವನ್ನು ಲೌಕಿಕ ವಿಷಯಗಳಲ್ಲಿ ಪ್ರವರ್ತಿಸದಂತೆ ನಿಗ್ರಹಿಸುವುದು: ಮನೋವಾಕ್ಕಾಯ ಗುಪ್ತಿತ್ರಯಂ ಘನಮಾಗಿರ್ದೊಡೆ ಬಾರವಲ್ಲದೊಡವಂ ತಾಂಗಲ್ ಸಮರ್ಥರ್ಕಳಾರ್ (ಜೀವಸಂ. ೧೫೩-೪). 'ಗುಪ್ತಿ' ಪರಾ. [ಕಾಯ+ ಗುಪ್ತಿ]

**ಕಾಯಗೊಳ್** (ಕ್ರಿ). ದೇಹವನ್ನು ಧರಿಸು; ಮೈದಾಳು: ಅಗ ಹುಟ್ಟಿ ಬೇಗ ಸಾವ ಕಾಯಗೊಂಡ ಮಾನವ, ನೀ ದೇವರೆನಿಸಿಕೊಂಬುದಾವುದಂತರ ಹೇಳಾ? ದೇವರು ಸಾವರೆ? (ಅವಚಂ. ೧೧-೫೦೩); ಶರಣರ ನಿಜದ ನಿಲವನ್ನು ಕಾಯಗೊಂಡ ಮೂಢರೆಲ್ಲ ಕಾಣಬಾರದು (ಮೋಳಿವಾ. ೨೬ ಪ್ರಸ್ತಾವನೆ). 'ಕಾಯವಿಡಿ' ಪರಾ. [ಕಾಯ + ಕೊಳ್$_1$]

**ಕಾಯಚಿಕಿತ್ಸೆ** (ನಾ). [ವೈದ್ಯಶಾ] ಶಾರೀರಕ ರೋಗಗಳಿಗೆ ಮಾಡುವ ಒಂದು ಬಗೆಯ ವೈದ್ಯಕೀಯ ಚಿಕಿತ್ಸೆ; ಆ ಚಿಕಿತ್ಸೆಯನ್ನು ಬೋಧಿಸುವ ವೈದ್ಯಶಾಸ್ತ್ರದ ಭಾಗ: ವಾತ, ಪಿತ್ತ, ಶ್ಲೇಷ್ಮಗಳ ಪ್ರಾಬಲ್ಯದಿಂದ ಶರೀರದ ಎಲ್ಲಾ ಭಾಗಗಳಲ್ಲಿಯೂ ಉಂಟಾಗತಕ್ಕ . . . ವ್ಯಾಧಿಗಳಿಗೂ ಚಿಕಿತ್ಸೆಗಳನ್ನು ಬೋಧಿಸುವ ಭಾಗ ಕಾಯಚಿಕಿತ್ಸೆ (ಸುಜ್ಞಾಚಂ. ಪ್ರಕಳಾ). [ಕಾಯ + ಚಿಕಿತ್ಸೆ]

**ಕಾಯಜ** (ಗು). ೧. ದೇಹದೊಳಗೆ ಅಥವಾ ದೇಹದಿಂದ ಹುಟ್ಟಿದ. (ನಾ). ೨. ಮಗ. ೩. ಕಾಮ; ಮನ್ಮಥ. 'ಕಾಯಜಪಿತ' ಪರಾ. [ಸಂ.]

**ಕಾಯಜಪಿತ** (ನಾ). ಮನ್ಮಥನ ತಂದೆ; ಕೃಷ್ಣ : ಕಾಯಜಪಿತ ಕಾಗಿನೆಲೆಯಾದಿಕೇಶವರಾಯ ನೀನಲ್ಲದೆ ನರರು ಸ್ವತಂತ್ರವೆ (ಕನಕ. ೭೭-೩). [ಕಾಯಜ + ಪಿತ]

**ಕಾಯಜಾತ** (ನಾ). ಮಗ; ಪುತ್ರ : ಕಾಯಜಾತನ ಕಾಯವಂ ಕಾಯ್ವುದಾಯಿಯೆನ್ನದೆ (ಬಸವು. ೪೮-೧೨). [ಕಾಯ + ಜಾತ]

**ಕಾಯಜಾಂತಕ** (ನಾ). ಕಾಮನನ್ನು ಕೊಂದವನು ; ಶಿವ: ಕಾಯಜಾಂತಕನಣುಗಿನಣುಗನತಿಧೀಯುತ ವಿನಾಯಕಂ (ಉದ್ಭದೀ. ೧-೯) ; ದೇವದೇವನೆ ನಮೊ ಕಾಯಜಾಂತಕನೇ (ವೀಶೈವು. ೩-೨೪-೨೭). [ಕಾಯಜ + ಅಂತಕ]

**ಕಾಯಜಾರಿ** (ನಾ). ಕಾಮನವೈರಿ ; ಶಿವ : ಕಾಯಜಾರಿಗತಿಪ್ರಮಾದಂ ತಳುವು ಮಾಡಿದೊಡೆ (ಬಸವು. ೧೭-೪). [ಕಾಯಜ + ಅರಿ$_6$]

**ಕಾಯಡಕೆ** (ನಾ). ೧. ಹಣ್ಣಾಗದ ಅಡಕೆ. ೨. ಸುಲಿಯದೆ ಇರುವ ಅಡಕೆ: ಅಲ್ಲಿನ ಗಡುಗಳು ಪಿಂಗಾರ ಮೊಗಡ ಕಾಯಡಕೆ . . . ಉಳ್ಳವುಗಳಾಗಿದ್ದವು (ಭಾಷಾಶಾ. ೨೫೭). [ಕಾಯ್$_4$ + ಅಡಕೆ$_1$]

**ಕಾಯತ** (ನಾ). = ಕಾಯಸ್ಥ : (೬). [< ಸಂ. ಕಾಯಸ್ಥ]

**ಕಾಯತೊಟ್ಟೆ** (ನಾ). ಒಂದು ಬಗೆಯ ಸಸ್ಯ : "ವೃಂತಾ – ಹರೇಣುಕ, ಕಾಯತೊಟ್ಟೆ" (ಔಷಧಿ. ೧೫೪). [?]

**ಕಾಯದಾಯ** (ನಾ). ಒಂದು ಬಗೆಯ ತೆರಿಗೆ (?) : ಮನ್ನೆಯದ ಹೊನ್ನುಮಂ ಕಾ × × × ಕಾಯದಾಯ ಕಿಱುಕುಳವಿನಿತುಮಂ (ಸೌಇಇ. XX, ೧೦೭-೪೮ ; 1138). [?]

**ಕಾಯದೆ,** ಕಾಯಿದೆ (ನಾ). ೧. ನಿಯಮ ; ಕಟ್ಟಳೆ; ಶಾಸನ; ಕಾನೂನು : ಬರವಣಿಗೆ ಸರಿಯಾಗಿ ಕಾಯದೆಗೆ ಬದ್ಧವಾಗಿ ಇದೆಯೇ ಎಂದು ನೋಡಿಕೊಂಡ (ಮಹಾತ್ಮಾ. ೭೭) ; ಎಷ್ಟೋ ಜನ ಧನವಂತರು . . . ಕಾಯದೆಗೆ ಸಿಕ್ಕಿ ಕಣ್ಣುಕಣ್ಣು ಬಿಡುತ್ತಿರುತ್ತಾರೆ (ಜೀವಾತ್ಮ. ೨೭೩). **ಕಾಯಿದೆ:** ೧. ಮದ್ಯಪಾನವನ್ನು ನಿರೋಧಿಸುವುದಕ್ಕಾಗಿ ಕಾಯಿದೆ (ಕುರಿಹಿಂ. ೧೩೦) ; ತನ್ನ ಕಾಯಿದೆಗಳನ್ನು ಜಾರಿಗೆ ತನ್ನಿ (ಝೂರಾಣಿ. ೪೫೦). ೨. ವ್ಯವಹಾರಧರ್ಮಶಾಸ್ತ್ರ ; ನ್ಯಾಯ ಶಾಸ್ತ್ರ : ಬಿ.ಎ. ಆಗಿತ್ತು. ಮುಂದೆ ಕಾಯಿದೆ ಓದಲು ಆರಂಭಿಸಿದ್ದ (ಅಪನಾ. ೧೦). [← ಅರ. ಕಾಇದಾ ; ಹಿಂ. ಮರಾ. ಕಾಯದಾ]

**ಕಾಯದೆಭಂಗ** (ನಾ). (ಸರಕಾರೀ) ಕಾನೂನುಗಳನ್ನು ಮುರಿಯುವಿಕೆ ; ಶಾಸನಭಂಗ : ಕಾಂಗ್ರೆಸ್ ಸಮಿತಿಯವರು . . . ಕಾಯಿದೆ ಭಂಗವನ್ನು ಪ್ರಾರಂಭಿಸಲು ಕೇಳಿಕೊಂಡರು (ಕುರುಕಾ. ೧೧೧). [ಕಾಯದೆ + ಭಂಗ]

**ಕಾಯದೇಶೀರ,** ಕಾಯಿದೇಶೀರ್ (ಅ). ಕಾಯದೆಯ ಪ್ರಕಾರ ; ನಿಯಮಬದ್ಧವಾಗಿ; ಕಾನೂನುಬದ್ಧವಾಗಿ; ಶಾಸನಕ್ಕೆ ಅನುಗುಣವಾಗಿ : ವಕೀಲರ ಮಗಳನ್ನು ಮದುವೆಯಾದದ್ದು ಎಷ್ಟು ಕಾಯದೇಶೀರ ಆಗಿ ಪರಿಣಮಿಸಿತೆಂಬುದನ್ನು ಈಗ ಅರಿತನು (ಅನ್ನ. ೩೮೭). **ಕಾಯಿದೇಶೀರ್ :** ಎಲ್ಲವನ್ನೂ ಕಾಯಿದೇಶೀರ್ ಮಾಡಿಸಬೇಕು (ಜಾರುಸಾ. ೨೦೧) ; ಕೆಲವು ಸದಸ್ಯರ ಮೇಲೆ ಕಾಯಿದೇಶೀರ್ ಕೆಲಸ ಮಾಡುವ ವಿಚಾರವಿದೆ (ಅಪನಾ. ೨೨೩). [← ಮರಾ. ಕಾಯದೇಶೀರ್]

**ಕಾಯಪಲ್ಲೆ** 'ಕಾಯಿಪಲ್ಯ' ನೋ.

**ಕಾಯಪುಸಿ** (ನಾ). ದೇಹದ ಮಿಥ್ಯೆ : ಜೀಯ ಸದ್ಗುರುನಾಥ ಕಾಯಪುಸಿಯನೆ ತೋಱಿ ಮಾಯಪಾಶವನು ಹರಿಸುತ್ತ ಶಿಷ್ಯಂಗೆ ತಾಯಿಯಂತಾದ (ಸರ್ವಜ್ಞ. ೪೨). [ಕಾಯ + ಪುಸಿ$_2$]

**ಕಾಯಪ್ರವಿಚಾರ** (ನಾ). = ಕಾಯಪ್ರವೀಚಾರ : ಅರ್ಧಮಾಸನಿರ್ಯತ್ಸುರಭಿನಿಶ್ವಾಸನುಂ ಕಾಯ ಪ್ರವಿಚಾರನುಂ (ಆದಿಪು. ೨-೬೯ ವ) ; ಕಾಯ ಪ್ರವಿಚಾರ ಚತುಸ್ಸಹಸ್ರಪ್ರಿಯಪ್ರಮಾಧೀಶ್ವರನುಂ (ಚಂದ್ರಪು. ೪-೬೯ ವ). [ಕಾಯ + ಪ್ರವಿಚಾರ]

**ಕಾಯಪ್ರವೀಚಾರ** (ನಾ). [ಜೈನ] ಮನುಷ್ಯರಂತೆ ದೇಹಸುಖವನ್ನು ಪಡೆಯಬಲ್ಲ ದೇವತೆ ; ಸುರತೋಪಸೇವನೆಯ ವಿಷಯದಲ್ಲಿ ವಿಶೇಷವಾದ ಆಸಕ್ತಿಯುಳ್ಳ ದೇವತೆ : "ಕಾಯಪ್ರವೀಚಾರಾ ಮೈಥುನೋಪಸೇವಾರೂಪಪ್ರವೀಚಾರನಿರತನಿಳಿಂಪುರುಂ . . . ಭವನವಾಸಿಗರಿಂ ತೊಟ್ಟು ಈಶಾನ ಕಲ್ಪಂಬರಂ ಅಪ್ಪದೇವರ್ಕಳ್ ಮನುಷ್ಯರ ಪೋಲ್ ಸ್ತ್ರೀವಿಷಯಸುಖಮಂ ಅನುಭವಿಸುವರೆಂಬುದು ಸೂತ್ರ ತಾತ್ಪರ್ಯಂ" (ತತ್ತ್ವಪ್ರ. ೧೮೨) ; ಅಲ್ಲಿಯ ವೈಮಾನಿಕರೆಲ್ಲಂ . . . ಕಾಯ ಪ್ರವೀಚಾರರುಮಪ್ಪರ್ (ಸುಕುಮಾ. ೧೧-೬೧ ವ). [ಕಾಯ + ಪ್ರವೀಚಾರ]

**ಕಾಯಫಳ** (ನಾ). ಜಾಜಿಕಾಯಿ ; ಜಾಕಾಯಿ : ಕಾಯಫಳ (ಮುಂಬವ್ಯಾ. ೧೯೯). [← ಮರಾ. ಕಾಯ್‌ಫಳ್]

**ಕಾಯಬಲ** (ನಾ). ದೇಹಶಕ್ತಿ ; ಶರೀರ ಬಲ : ಕಾಯಬಲವು ಸಹಜವೆಂದೂ, ಕಾಲಜವೆಂದೂ, ಯುಕ್ತಿಕೃತವೆಂದೂ ಮೂರು ತೆರನಾಗಿರುವುದು (ಸಕವೈ. ೧೯). [ಕಾಯ + ಬಲ]

**ಕಾಯಭವ** (ನಾ). ಕಾಮ ; ಮನ್ಮಥ. 'ಕಾಯಭವರಿಪು' ಪರಾ. [ಕಾಯ + ಭವ]

**ಕಾಯಭವರಿಪು** (ನಾ). = ಕಾಯಜಾರಿ : ಕಾಯಭವರಿಪು . . . ಕಾಯಲಾಜನೊ (ಬಸವು. ೪೭-೬೪). [ಕಾಯಭವ + ರಿಪು]

**ಕಾಯಮಲ** (ನಾ). ಮೈಯ ಕೊಳೆ; ದೇಹದ ಕಶ್ಮಲ : "ಕೊಟಿ-ಜೀರ್ಣೇ, ಕಾಯಮಲೇ ಚ" (ಶಮಧಾ.). [ಕಾಯ + ಮಲ$_3$]

**ಕಾಯಮಾನ** (ನಾ). ಹಂದರ ; ಚಪ್ಪರ ; ಮಂಟಪ : "ಕಾವಣಮಂತದು ಕಾಯಮಾನಮೆಂಬುದೆನಿಕ್ಕುಂ" (ವಸ್ತುಕೋ. ೪೭-೯) ; ವಿರಾಜಮಾನ ರಕ್ತಾಶೋಕ ಪಲ್ಲವೋಲ್ಲಸಿತ ಕಾಯಮಾನದೊಳ್ (ಆದಿಪು. ೧೧-೭೪ವ) ; ಬಳ್ಳಿಳ ಬೆಳೆದ ಮೃದ್ವೀಕಾಲತೆಯ ಕಾಯಮಾನಂ (ಅನಂಪು. ೭-೧೧ವ) ; ಗಿರಿರಾಜನಾಲಯದ ಕಾಯಮಾನದ ಕೆಳಗೆ ಕಲ್ಯಾಣಮಪ್ಪುದೆಂದಡಿವಿಡಿದಳಗಜೆ ಶಿವನ (ಚಿಬಪು. ೩೭-೧೪). [ಸಂ.]

**ಕಾಯಮಾಱಿ** (ನಾ). (ರಾಜನ ಹಣಕ್ಕಾಗಿ) ದೇಹವನ್ನು ಮಾರಿಕೊಂಡವನು ; ಭಟ ; ಯೋಧ : ಅಡಗುದಱಿಯಾಯ್ತುಖಿಳ ಬಲ ದುಗ್ಗಡದ ವೀರರು ಕಾದಿ ಬಿದ್ದುದು ಕಾಯಮಾಱಿಗಳು (ಕುವ್ಯಾದ್ರೋ. ೧೦-೨೨). [ಕಾಯ + ಮಾಱು$_3$ + -ಇ$_3$]

**ಕಾಯಮುಕ್ತ** (ನಾ). ದೇಹಕ್ಲೇಶದಿಂದ ಮುಕ್ತನಾದವನು; ಶರೀರ ಬಂಧನವಿಲ್ಲದವನು : ಆಚಾರವಂಗಲೇಪವಾಗಿ ಕಾಯಮುಕ್ತನು ನೀನು, ನೋಡಯ್ಯ ! (ಅವಚಂ. ೨೩೧-೧೦೪೭). [ಕಾಯ + ಮುಕ್ತ]

**ಕಾಯಲ್** (ನಾ). ಮರಳು ದಿನ್ನೆಯ ಮೂಲಕ ಸಮುದ್ರದಿಂದ ಬೇರ್ಪಟ್ಟ ಭಾಗ ; ಉಪ್ಪುನೀರಿನ ಕೊಲ್ಲಿ ; ನದೀಮುಖ : ಅರುನೀರ್ವೀ ಕರುಗಿ ಮೊರೆಯುವ ನೀರ ಕಾಯಲ ಹಾಯುವವರು ? (ಇಂಗೀತ. ೭೭-೭). [ದೇ. ‖ ತಮಿ. ಮಲ. ಕಾಯಲ್]

**ಕಾಯವಂಚಕ** (ನಾ). ೧. ಮೈಗಳ್ಳ ; ಸೋಮಾರಿ : ಕಾಯ ವಂಚಕನಲ್ಲ, ಜೀವವಂಚಕನಲ್ಲ . . . ಕೂಡಲ ಸಂಗನ ಶರಣನುಪಮಾತೀತ ನೋಡಯ್ಯ (ಬಸವ. ೮೭೪). ೨. [ವೀಶೈ] ದೇಹ ಮೋಹವನ್ನು ಬಿಟ್ಟವನು ; ಕಾಯಮುಕ್ತ (?) : ಕಂತೆಯೊಳಗಣ ಕಪ್ಪಡವ ಹರಿದಲ್ಲದೆ ಕಾಯವಂಚಕನಲ್ಲ (ಮೋಳಿವಾ. ೧೫೫-೫೪). [ಕಾಯ + ವಂಚಕ]

**ಕಾಯವಿಕಾರಿ** (ನಾ). ದೇಹದ ವಿಕಾರಗಳಿಗೆ ಒಳಗಾದವನು; ವಿಷಯಲಂಪಟ: ಅಶನ ಕುಂದದು, ವ್ಯಸನ ಮಾಣದು . . . ಮಜ್ಜ ನಕ್ಕೆಱೆವೆನಯ್ಯ ಕಾಯವಿಕಾರಿಯಾನು (ಬಸವ. ೨೫೯). [ಸಂ. ಕಾಯವಿಕಾರಿನ್]

**ಕಾಯವಿಡಿ** (ಕ್ರಿ). ದೇಹವನ್ನು ಧರಿಸು; ಮೈದಾಳು: ಕಾಯವಿಡಿದುದಕೇನು ಫಲ ನಾರಾಯಣನನರ್ಚಿಸುವೆ (ನಿ ಭಾ ಗ. ೯-೩-೧೨); ಪ್ರಾಯದೆ ಹಣ ತೆಗೆಯದ ಸೂಳೆ ಕೃಷಿಯ ನಿರ್ವಾಯವಱಿಯದ ಪಾದಜರು ಕಾಯವಿಡಿದ ಮೃತಜೀವಿಯಂದದೆ ಬಹುಳಾಯಸಗೊಳ್ವರು (ಕಂನವಿ. ೬-೧೫೪). [ಕಾಯ + ಪಿಡಿ$_1$]

**ಕಾಯವೆರಸು** (ಕ್ರಿ). ದೇಹವನ್ನು ಹೊಂದಿರು; ಒಡಲೊಂದಿಗಿರು: ಕಾಯವೆರಸಿ ಕೈಲಾಸಕ್ಕೆ ಹೋಹೆನೆಂಬರು, ಇದು ಕ್ರಮವಲ್ಲ (ಮೋಳಿಮಾ. ೨೮೮-೬೯). [ಕಾಯ + ಬೆರಸು$_1$]

**ಕಾಯವ್ಯೂಹ** (ನಾ). ಯೋಗ ಪ್ರಭಾವದಿಂದ ಅನೇಕ ದೇಹಗಳನ್ನು ನಿರ್ಮಿಸಿಕೊಳ್ಳುವಿಕೆ: ಯೋಗಿಗಳು ಹೀಗೆ ಶರೀರವನ್ನು ನಿರ್ಮಿಸಿಕೊಳ್ಳುವುದಕ್ಕೆ ಕಾಯವ್ಯೂಹವೆಂದು ಹೆಸರು (ಬ್ರಹ್ಮಭಾ. ೪೫೮ ಅಡಿಟಿ). [ಕಾಯ + ವ್ಯೂಹ]

**ಕಾಯಶುಶ್ರೂಷೆ** (ನಾ). ೧. ದೇಹದ ಸೇವೆ. ೨. ದೇಹದಿಂದ ಮಾಡುವ ಸೇವೆ: ಈಯಖಿಳ ಗೃಹಕರ್ಮ ಸೇವೆಯಂ ಮಾಳ್ಪುದೇ ಕಾಯಶುಶ್ರೂಷೆಯೈ (ವೀಶೈಪು. ೭-೧೪-೮). [ಕಾಯ + ಶುಶ್ರೂಷೆ]

**ಕಾಯಸಂಗ** (ನಾ). ಶರೀರದ ಸಂಬಂಧ: ಕಾಯ [ಪಾಠಾಂ. ಕಾಮ] ಸಂಗ ನಿಸ್ಸಂಗವಾಗಿ ಇನ್ನಾವ ಸಂಗವನಱಿಯೆನಯ್ಯಾ ಮಿಗೆವೊಲಿದೆಯಾಗಿ ಅಗಲಲಾಱೆನು (ಬಸವ. ೪೮೮). [ಕಾಯ + ಸಂಗ$_2$]

**ಕಾಯಸಂಬಂಧ** (ನಾ). ದೇಹದ ಸಂಬಂಧ: ಕಾಯ ಸಂಬಂಧ ಜೀವ ಸಂಬಂಧ ಪ್ರಾಣಸಂಬಂಧ ಇಂತೀ ತ್ರಿವಿಧ ಸಂಬಂಧವನಱಿದಡೆ ಆತನೆ ಸಂಬಂಧಿ ಕಾಣಾ (ಅವಚಂ. ೪೩-೧೮೬). [ಕಾಯ + ಸಂಬಂಧ]

**ಕಾಯಸಂಬಂಧಿ** (ನಾ). ದೇಹದ ಸಂಬಂಧವುಳ್ಳವನು: ಲಿಂಗಬೇಱೆ ರೂಪ ನಿರೂಪನಲ್ಲ ಲಿಂಗ ಬೇಱೆ ಕಾಯಸಂಬಂಧಿಯಲ್ಲ (ಬಸವ. ೯೫೦). [ಕಾಯ + ಸಂಬಂಧಿ]

**ಕಾಯಸಮಾಧಿ** (ನಾ). [ಯೋಗಶಾ] ಸಮಾಧಿಗಳಲ್ಲಿ ಒಂದು ಬಗೆ: ನಾರು ಬೇರಿನ ಕಪಟದ ಯೋಗವಲ್ಲಿದು ನಿಲ್ಲಿ ಭೋ, ಕಾಯಸಮಾಧಿ ಕರಣಸಮಾಧಿಯೋಗವಲ್ಲಿದು ನಿಲ್ಲಿ ಭೋ (ಅವಚಂ. ೧೩೬-೬೪೦). [ಕಾಯ + ಸಮಾಧಿ]

**ಕಾಯಸಲ್ಲೇಖನ** (ನಾ). [ಜೈನ] ಒಂದು ಬಗೆಯ ವ್ರತ. ಮೂವತ್ತೆರಡು ತುತ್ತಿನಿಂದ ಆರಂಭಿಸಿ ದಿನವೂ ಒಂದೊಂದು ತುತ್ತು ಕಡಮೆ ಮಾಡುತ್ತಾ ಹೋಗುವ ಸಲ್ಲೇಖನ ವ್ರತ: ನಮ್ಮ ಅಜ್ಜನಿಗೆ ಕಷಾಯ ಸಲ್ಲೇಖನವೇ ಸಾಕು, ಕಾಯಸಲ್ಲೇಖನಕ್ಕೆ ನಾವಾರೂ ಒಪ್ಪಿಗೆ ನೀಡಲಾರೆವು ಎಂದು ಅತ್ತಿಮಬ್ಬೆ ಅಬ್ಬರಿಸಿದಳು (ದಾನಚಿಂ. ೨೪). [ಕಾಯ + ಸಲ್ಲೇಖನ]

**ಕಾಯಸಿದ್ಧಿ** (ನಾ). ಮುಪ್ಪು, ಬೇನೆ, ಗಾಯ ಮೊದಲಾದವುಗಳಿಂದ ದೇಹವನ್ನು ರಕ್ಷಿಸುವ ಸಿದ್ಧಿ (?): ಊರಿಗೆ ರಸ ನಿಂದಾಗವೆ ರಸಸಿದ್ಧಿ ಎಂಬೆ. ಅಸಿಗೆ ಶರೀರ ನಿಂದಲ್ಲಿಯೆ ಕಾಯಸಿದ್ಧಿಯೆಂಬೆ (ಮೋಳಿಮಾ. ೧೯-೭೬); ಕಾಯಸಿದ್ಧಿಯ ಪಡೆದ ಗರುವರು . . . ಸಾಯದುಳಿದವರಿಲ್ಲ ಕಾಲಾಧೀನರಾಗಿಹರು (ಅಮೃತ. ೨-೩೬). [ಕಾಯ + ಸಿದ್ಧಿ]

**ಕಾಯಸುಖ** (ನಾ). ದೇಹದ ಸುಖ: ವಾಯುವ ಜಯಿಸಿ ಕೆಲರುಕಾಣ್ಬ ರಾತ್ಮನ ವಾಯುವ ಜಯಿಸದೆ ಕೆಲರು ಕಾಯದೊಳಾತ್ಮನ ಕಾಣ್ಬರು ಕಾಂತಿಯೆ ಕಾಯಸುಖವೆ ಸುಳುಹಾಗಿ (ಭರಚ.೨-೭೫). [ಕಾಯ + ಸುಖ]

**ಕಾಯಸೂತಕಿ** (ನಾ). ದೇಹಸಂಬಂಧವಾದ ಮೈಲಿಗೆಯುಳ್ಳವನು: ಕಾಯಸೂತಕಿಗಳು ಗುರುವನಱಿಯರಾಗಿ, . . . ತ್ರಿವಿಧ ಸೂತಕಿಗಳು ಜಂಗಮನಱಿಯರಾಗಿ, ತ ನು ಶು ದ್ಧ ವಾ ಗಿ ಗುರುವನಱಿಯಬೇಕು (ಮೋಳಿಮಾ. ೨೩-೯೪). [ಕಾಯ + ಸೂತಕಿ]

**ಕಾಯಸ್ಥ** (ನಾ). ೧. ಕರಣಿಕ; ಸೇನಬೋವ: "ಕಾಯಸ್ಥಃ, ಅಕ್ಷರಜೀವಕಃ - ಈ ೨ ಸೇನಬೋವಂ" (ಹಲಾಯು. ೯೬-೪೩೨). ೨. ಕರಣಿಕ ವೃತ್ತಿಯನ್ನೇ ಕೈಕೊಳ್ಳುವ ಒಂದು ಜಾತಿ: ಕಾಯಸ್ಥರು ಪಾರಸಿ ಭಾಷೆಯನ್ನು ಕಲಿತು ರಾಜ್ಯದ ಕಾರ್ಯಾಲಯಗಳಲ್ಲಿ ಕರ್ಮಚಾರಿಗಳಾಗಿ ಪ್ರವೇಶಮಾಡಿದರು (ಉರ್ದುಪಾ. ೧೨); ನರೇಂದ್ರನಾಥರು ಕಾಯಸ್ಥ ಕುಲದಿಂದ ಬಂದವರು (ಭಾರದ. ೩೨೩). ೩. ಲೇಖನ ವೃತ್ತಿಯವನು; ಲಿಪಿಕಾರ: ಲೇಖನ ವೃತ್ತಿಯವನನ್ನು ಲಿಪಿಕಾರ ಅಥವಾ ಲಿಬಿಕಾರ ಎಂದು ಕರೆದಿದೆ . . . ಹನ್ನೊಂದನೆಯ ಶತಮಾನದಿಂದೀಚೆಗೆ ಅವನನ್ನು ಕಾಯಸ್ಥ ಎಂದು ಕರೆದಿದೆ (ಭಾರದ. ೧೦). [ಸಂ.]

**ಕಾಯಸ್ಥಿತಿ** (ನಾ). [ಜೈನ] ದೇಹ ಇರುವುದಕ್ಕೆ ಮಾಡಬೇಕಾದುದು; ಆಹಾರಗ್ರಹಣ: ಅಂತು ಕಾಯಸ್ಥಿತಿಯಂ ನಿರ್ವರ್ತಿಸಿ (ಆದಿಪು. ೧೦-೪೭); ಅವರ್ ಸಂಯಮ ಸಂರಕ್ಷಣಾರ್ಥಮಪ್ಪ ಕಾಯಸ್ಥಿತಿಯಂ ನಿರ್ವರ್ತಿಸಿ (ಪಂರಾಮಾ. ೯-೧೭). [ಕಾಯ + ಸ್ಥಿತಿ]

**ಕಾಯಾಂಗ** (ನಾ). ದೇಹದ ಅಂಗ; ಅವಯವ. 'ಕಾಯಾಂಗ ಪಟುತೆ' ಪರಾ. [ಕಾಯ + ಅಂಗ$_2$]

**ಕಾಯಾಂಗಪಟುತೆ** (ನಾ). ದೇಹದ ಅಂಗಗಳ ಸಾಮರ್ಥ್ಯ, —ಶಕ್ತಿ; ಅವಯವಗಳ ಚಟುವಟಿಕೆ: ಗರಡಿಸಾಮಿಂದೆ ನೀನೆದುರಾಳ ಗೆಲದೊಡೇಂ? ಬರದಿಹುದೆ ನಿನಗನಿತು ಕಾಯಾಂಗಪಟುತೆ? (ಮಂಕುಕ. ೫೯೬). [ಕಾಯಾಂಗ + ಪಟುತೆ]

**ಕಾಯಾಗ್ನಿ** (ನಾ). ಶರೀರದೊಳಗಿರುವ ಬೆಂಕಿ; ಜಠರಾಗ್ನಿ: ಕಾಯಾಗ್ನಿ ಬುದ್ಧಿ ಇಂದ್ರಿಯಬಲ . . . ಉಂಟುಮಾಡಿ ಅತ್ಯಂತ ಪೈತ್ಯ ರೋಗಗಳನ್ನು ಹೋಗಲಾಡಿಸುವುದು (ಸಕವೈ. ೩೮). [ಕಾಯ + ಅಗ್ನಿ]

**ಕಾಯಾಸ** (ನಾ). ಊಹೆ; ಅಂದಾಜು: ನನ್ನ ಕಾಯಾಸವು ನಿಜವಾದುದೆ (ಸ್ಮಶಾವೈ. ೮೪); ಜನರ ಕಾಯಾಸಕ್ಕೆ ಅನ್ಯ ಸಾಕ್ಷಿ ಪುರಾವೆ . . . ಬೇಕಿರಲಿಲ್ಲ (ದೀಪಹ. II, ೫೨).

ಕಾಯಾಸಕಟ್ಟು = ಅಂದಾಜು ಮಾಡು; ಊಹಿಸು: ಕನಕದಾಸರ ಕಾಲವು 16ನೆಯ ಶತಮಾನದ ಮಧ್ಯವೆಂದು ಕವಿಚರಿತೆಕಾರರು ಕಾಯಾಸ ಕಟ್ಟಿದ್ದಾರೆ (ಕವನಿ. ೧೫೪); ತನ್ನ ಕೆಲಸದ ವಿಷಯ ಇರಬಹುದೆಂದು ಕಾಯಾಸ ಕಟ್ಟಿದಳು (ಅನ್ನ. ೨೦೪). [← ಅರ. ಕಿಯಾಸ್; ಮರಾ. ಕಯಾಸ್]

**ಕಾಯಿ$_1$** 'ಕಾ$_1$' ನೋ.

**ಕಾಯಿ$_2$** 'ಕಾಯ್$_2$' ನೋ.

**ಕಾಯಿ$_3$** 'ಕಾಹಿ' ನೋ.

**ಕಾಯಿ$_4$** 'ಕಾಯ್$_4$' ನೋ.

**ಕಾಯಿಮ್ಮಸೆಟ್ಟಿ** (ನಾ). ಒಬ್ಬಾತನ ಹೆಸರು: ಈ ಧರ್ಮಮಂ ಕೈಕೊಣ್ಡು ನಡೆಯಿಸುವ ದಾತಾರಂ ಮನ್ನೆಯ ಕಾಯಿಂಮ್ಮಸೆಟ್ಟಿ (ಸೌಇಇ. XX, ೩೪-೨೨; 1053). [ಕಾಯಿಮ್ಮ$_0$ + ಸೆಟ್ಟಿ]

**ಕಾಯಿಕ** (ಗು). ದೇಹಕ್ಕೆ ಸಂಬಂಧಿಸಿದ; ದೈಹಿಕ; ಶಾರೀರಕ: ಪರಸ್ವಾಪಹಾರ, ಪರಹಿಂಸೆ, ಪರದಾರಗಮನ - ಈ ಮೂರು ಕಾಯಿಕವು (ಆರ್ಯಧ. ೧೧೯); ಮಾನವನ ಕಾಯಿಕ, ವಾಚಿಕ, ಮಾನಸಿಕ . . . ಕೃತಿಗಳೆಲ್ಲ ಕರ್ಮಪದದಲ್ಲಿಯೇ ಅಡಕವಾಗುತ್ತವೆ (ಧರ್ಮಸಾ. ೧೩೦). [ಸಂ.]

**ಕಾಯಿಕಟ್ಟು** 'ಕಾಯಿಗಟ್ಟು' ನೋ.

**ಕಾಯಿಕಡುಬು** (ನಾ). ತೆಂಗಿನ ತುರಿಯನ್ನು ತುಂಬಿಮಾಡಿದ ಕಡುಬು; ಕೊಬ್ಬರಿಗಡುಬು (ಉಕ): ಗಣೇಶನ ಹಬ್ಬಕ್ಕೆಕಾಯಿ ಕಡಬು(ರೂಢಿ). [ಕಾಯಿ$_4$(< ಕಾಯ್$_4$) + ಕಡುಬು (< ಕಡುಂಬು)]

**ಕಾಯಿಕೆತ್ತ** (ನಾ). (ಕರಾ). ತೆಂಗಿನಕಾಯಿಯ ಸಿಪ್ಪೆ, —ಮಟ್ಟೆ: ಮನೆಯಿಂದ ಕಾಯಿಕತ್ತದಲ್ಲಿ ಕೆಂಡ ತಂದು (ಸ್ವಪ್ನಹೊ. ೩೨).
[ಕಾಯಿ$_4$ (< ಕಾಯ್$_4$) + ಕತ್ತ$_1$]

**ಕಾಯಿಕಸರು**, ಕಾಯಿಕಸುರು (ನಾ). ಕಾಯಿ ಮತ್ತು ಹೀಚು: ಕಾಯಿಕಸರನು ತಿಂದು ನೀವು ಯಿರುತಿರಲೂ ನಾನು ದಿವ್ಯಾನ್ನ ಉಣ್ಣಬಹುದೆ (ಯನಳ. ೯೪); ಕಾಳುಕಡಿ, ಕಾಯಿಕಸುರು ಮೊದಲಾದುವುಗಳನ್ನು ಜೋಯಿಸನಿಗೆ ಕೊಟ್ಟು (ಕನ್ನಜಾ. ೧೮). **ಕಾಯಿಕಸುರು**: ಶ್ರಮಪಟ್ಟು ಕೆಲಸಮಾಡಿ ಕಾಯಿಕಸುರುಗಳನ್ನು ತಿಂದು ಮಳೆಯಲ್ಲಿ ನೆನೆದನು (ನೀತಿಚಿಂ. I, ೨೬). [ಕಾಯಿ$_4$ (< ಕಾಯ್$_4$) + ಕಸರು$_2$]

**ಕಾಯಿಕಸುರು** 'ಕಾಯಿಕಸರು' ನೋ.

**ಕಾಯಿಕಾವೃದ್ಧಿ**(ನಾ). ೧. ಅಸಲಿನಿಂದ ಬಂದ ಬಡ್ಡಿ. ೨. ಅಡವಾಗಿ ಇರಿಸಿದ ದನಕರು ಮೊದಲಾದುವುಗಳನ್ನು ಬಡ್ಡಿಯಲ್ಲಿ ಉಪಭೋಗಿಸುವುದು: (ಕಿ). [ಸಂ. (ಕಾಯಿಕಾ + ವೃದ್ಧಿ)]

**ಕಾಯಿಕೆ** (ನಾ). ಕಾಯುವಿಕೆ: (ಕಿ). [ಕಾ$_1$ + -ಇಕೆ]

**ಕಾಯಿಗ** (ನಾ). ಕಾಯಿಗಳನ್ನು ಮಾರುವವನು: ತಂಬುಲಂ ಪಣ್ಣ ಮೀತಂಗೆ ತಂಬುಲಿಗಂ. ಏವಂ ದವಸಿಗಂ, ದೂಸಿಗಂ, ಕಾಯಿಗಂ, ಪಣ್ಣಿಗಂ (ಶಬ್ದಾನು. ೪೦೫ ಪ್ರಯೋ). [ಕಾಯ್$_4$ + -ಇಗ]

**ಕಾಯಿಗಟ್ಟು**, ಕಾಯಿಕಟ್ಟು (ಕ್ರಿ). ಕಾಯಿಯಂತೆ ಗಟ್ಟಿಯಾಗು; ಗಡ್ಡೆಗಟ್ಟು; ಪೆಟ್ಟುತಾಕಿದ ಸ್ಥಳದಲ್ಲಿ ಕಾಯಿಯಂತೆ ಊದಿಕೊಂಡು ಗಡ್ಡೆಗಟ್ಟು: (ಕಿ). **ಕಾಯಿಕಟ್ಟು**: "ಬಿರುಸಾಗು" (ಜಾನಕೋ. ೩೭). [ಕಾಯಿ$_4$ (< ಕಾಯ್$_4$) + ಕಟ್ಟು$_{11}$]

**ಕಾಯಿಗಣ್ಣು** (ನಾ). ಕಣ್ಣುಗುಡ್ಡೆ ಹಾಳಾದ ಕಣ್ಣು; ಕುರುಡುಗಣ್ಣು: (ಕಿ).
[ಕಾಯಿ$_4$ (<ಕಾಯ್$_4$) + ಕಣ್ಣು (< ಕಣ್). / ತೆಲು. ಕಾಯಕನ್ನು]

**ಕಾಯಿದೆ** 'ಕಾಯದೆ' ನೋ.

**ಕಾಯಿದೇಶೀರ್** 'ಕಾಯದೇಶೀರ' ನೋ.

**ಕಾಯಿಪಲ್ಯ**, ಕಾಯಿಪಲ್ಲೆ (ನಾ). ಕಾಯಿ ಮತ್ತು ಸೊಪ್ಪು; ತರಕಾರಿ: ಈ ವೈದ್ಯರಿಗೆ ಇನ್ನುಮುಂದೆ ಕಾಯಿಪಲ್ಯಗಳನ್ನು ಬಡಿಸಬೇಡಿ (ಪ್ರತಾಪ. ೮೬). **ಕಾಯಿಪಲ್ಲೆ**: ಯಾವತ್ತು ಉಳಿದಾದ ಕಾಯಿಪಲ್ಲೆ ಯಾವತ್ತರ ಉತ್ಪನ್ನವು ಬೇರೆ (ಕೃಷಿಪ್ರ. ೧೬೩).
[ಕಾಯಿ$_4$ (< ಕಾಯ್$_4$) + ಪಲ್ಯ]

**ಕಾಯಿಪಲ್ಲೆ** 'ಕಾಯಿಪಲ್ಯ' ನೋ.

**ಕಾಯಿಪು** 'ಕಾಯ್ಪು$_1$' ನೋ.

**ಕಾಯಿಮೇಲೋಗರ** (ನಾ). ತೆಂಗಿನಕಾಯಿಯ ತುರಿಯನ್ನು ರುಬ್ಬಿ ಮಾಡಿದ ಮೇಲೋಗರ: ಬಾಳೆಯೆಲೆ ಕಾಯಿಮೇಲೋಗರಕ್ಕೆ ಹನ್ನೆರಡು ಹಣ (ಎಕ. VI, ಕೊಪ್ಪ. ೩೩-೨೨; 1448).
[ಕಾಯಿ$_4$ (< ಕಾಯ್$_4$) + ಮೇಲೋಗರ]

**ಕಾಯಿರಸ**, ಕಾಯ್ರಸ (ನಾ). ೧. ತೆಂಗಿನಕಾಯಿಯ ತುರಿಯಿಂದ ತೆಗೆದ ಹಾಲು; ತೆಂಗಿನ ಹಾಲು: ಪಾಯಸಕ್ಕೆ ಕಾಯಿರಸ ಬಡಿಸುತ್ತಾರೆ (ರೂಢಿ). ೨. (ಉಕ). ಒಂದು ಬಗೆಯ ಮೇಲೋಗರ; ನಂಜಿಕೆ. **ಕಾಯ್ರಸ**: ೨. ಕಾಯ್ರಸ ನೆಟ್ಟಗಾಗೇದ್ರವಾ ಆಮುಠ ನಿವ್ವಳಾಗೇದ (ಸಮಜೀ. ೩೩೬). [ಕಾಯಿ$_4$ (< ಕಾಯ್$_4$) + ರಸ]

**ಕಾಯಿಲೆ**, ಕಾಹಿಲೆ, ಖಾಯಿಲೆ (ನಾ). ವ್ಯಾಧಿ; ರೋಗ; ಅಸ್ವಸ್ಥತೆ; ಅನಾರೋಗ್ಯ: ದಂಡಿನಲ್ಲು ಕಾಯಿಲೆ ಅಜಾರಿ ಅದಂಥ ಜನರನ್ನು ವೀರರಾಜೇಂದ್ರಪ್ಯಾಟೆಗೆ ಕಳುಹುತ್ತೇನೆ (ರಾಜೇಂದ್ರ. ೭೭); ಕೊಳೆ, ಕಾಯಿಲೆ, ಕಿರುಕುಳಗಳ ಬಾಧೆಯೂ ಕಡಿಮೆ (ಅಡುಸಾ. ೨೪). **ಕಾಹಿಲೆ**: ಹರಿಹರರಾಯನ ಕಾಹಿಲೆ ಹೆಚ್ಚಿತೆಂಬುದೂ ನಮಗೆ ತಿಳಿದಿದೆ (ಇಂದುಮು. ೩೯). ಕಾಹಿಲೆಬಿದ್ದವರ ಆರೈಕೆ ನಾವೂ ಮಾಡುತ್ತೇವೆ (ಶ್ಯಾಮತಾ. ೬). **ಖಾಯಿಲೆ**: ಒಂದಾದ ಮೇಲೊಂದು ಖಾಯಿಲೆ ಬಿದ್ದು ಸಾಯುತ್ತಲೇ ಇದ್ದವು (ಶಾಲಿಮ. ೧೧೨); ಕೆಲಸಗಾರರು ಖಾಯಿಲೆ ಬೀಳುವರು (ಕೊನೆಭೇ. ೧೩). [← ಅರ. ಹಿಂ. ಮರಾ. ಕಾಹಿಲೀ]

**ಕಾಯಿಲೆಕಸಾರೆ** 'ಕಾಯಿಲೆ ಕಸಾಲೆ' ನೋ.

**ಕಾಯಿಲೆಕಸಾಲೆ**, ಕಾಯಿಲೆಕಸಾರೆ, ಖಾಯಿಲೆಕಸಾಲೆ (ನಾ). ರೋಗ ರುಜಿನ: ಈ ಹಾಳು ಕಾಯಿಲೆಕಸಾಲೆಯ ಕಿರಿಕಿರಿ ಇರಬೇಕು (ರಂಗನಾ. ೮೭). **ಕಾಯಿಲೆಕಸಾರೆ**: ತಮ್ಮ ಮನೆಯ ಕಾಯಿಲೆ ಕಸಾರೆಗಳಿಗೆ ಅವರನ್ನು ಕರೆಯಿಸಿದವರಲ್ಲ (ಜಾರುದಾ. ೭೯). **ಖಾಯಿಲೆಕಸಾಲೆ**: ಖಾಯಿಲೆಕಸಾಲೆಯಲ್ಲಿ ನಾನೇ ಅವಳಿಗೆಏನಾದರೂ ಮಾಡಿ ಹಾಕುತ್ತೇನೆ (ಅಕಾರ. ೧೧೭). [ಕಾಯಿಲೆ + ಕಸಾಲೆ$_2$]

**ಕಾಯಿಸ್‌ದಾರ್** (ನಾ). ಕಂದಾಯದ ಅಧಿಕಾರಿ: ಒಂದು ಡಿಸ್ಟ್ರಿಕ್ಟ್‌ನಲ್ಲಿ ಕಾಯಿಸ್‌ದಾರ್ ಎಂಬ ಅಧಿಕಾರಿ ಇರುತ್ತಿದ್ದನು, ಇವನು ಅಲ್ಲಿನ ಸುವರ್ಣಾದಾಯವನ್ನು ವಸೂಲ್ಮಾಡುತ್ತಿದ್ದನು (ಪಾಳಗಾ. ೧೨).
[← ಮರಾ. ಕಮಾವೀಸದಾರ್]

**ಕಾಯಿಸು$_1$** (ಕ್ರಿ). ೧. ದಾರಿನೋಡುವಂತೆ ಮಾಡು; ಕಾದಿರುವಂತೆ ಮಾಡು: ತಮ್ಮನ್ನು ಬಹಳ ಕಾಯಿಸಿದ ಹಾಗಾಯಿತು (ದೌಲತ್. ೧೪೬); ತಾವು ಬಂದುದು ತಿಳಿಯದೆ ಬಹಳ ಹೊತ್ತು ಕಾಯಿಸಿಬಿಟ್ಟೆ (ಚಿಕ್ಕದೇ. ೧೧೫); ಅವರನ್ನು ಕಾಯಿಸೋದಿಲ್ಲ (ಮುಕಿಮಾ. ೧). ೨. ಕಾಯುವ ಕೆಲಸಕ್ಕೆ ತೊಡಗಿಸು: ಓದುವ ಹುಡುಗನಿಂದ ದನ ಕಾಯಿಸಿದರು (ರೂಢಿ).

ಕಾಯಿಸಿಕೊಳ್ಳು = (ದನಕರು, ಮೊದಲಾದುವನ್ನು) ಕಾಯ್ದುಕೊಂಡು ಬರುವಂತೆ ಮಾಡು: ಅರುವೆಯ ಕೊಟ್ಟು ಕೂಲಿಗೆ ಕಱುವ ಕಾಯಿಸಿಕೊಂಡನಯ್ಯ... ತೊಱಿದಾಂಟದ ಕೂಲಿಗೆ ಕಱುವ ಕಾದೆ ಕಾಣಾ (ಶೂನ್ಯಸಂ. ೧೨೮-೩೭). [ಕಾ$_1$ + -ಇಸು$_3$]

**ಕಾಯಿಸು$_2$** (ಕ್ರಿ). ೧. ಕಾವುಕೊಡು; ಬಿಸಿಮಾಡು; ಬೆಚ್ಚಗೆ ಮಾಡು; ಬೇಯಿಸು; ಕುದಿಸು: ಪಾಲಂ ಕಾಯಿಸುವಂತೆ ಮನಮಂ ಬೆದಱಲೀಯದೆ (ಧರ್ಮಾಮೃ. ೬-೨೦೯); ಕಷಾಯವಂ ಕಾಯಿಸಿ... ಕೊಡಲು ಶೀತಜ್ವರಂ ಮಾಣ್ಗುಂ (ಸಕವೈ. ೬೪); ತುಪ್ಪ ಅಥವಾ ಎಣ್ಣೆ ಹಾಕಿ ಬೇಯಿಸುವುದಕ್ಕೆ ಕಾಯಿಸುವುದು ಎನ್ನುತ್ತಾರೆ (ಅಡುಸಾ. ೮೯). ೨. (ಅಲಂ). ರೇಗಿಸು; ಕೋಪವುಂಟುಮಾಡು: ನೀ ಶರಣೆಂದು ಬಂದ ರಿಪು ಭೂಪಾಳಕರ್ಕಳಂ ಕಾದು ಕಾಯಿಸಿ ಕೊಂದಾ ನೃಪ ವಿಕ್ರಮಾಂಕನ ಭುಜಸ್ತಂಭಂಬೊಲ್ (ಎಇ. XXVIII, ೫-೧೫; 1082).
[ಕಾಯ್$_2$ + -ಇಸು$_3$]

**ಕಾಯಿಸು$_3$** (ಕ್ರಿ). ಕಾಯಾಗುವಂತೆ ಮಾಡು; ಕಾಯಿಬಿಡುವಂತೆ ಮಾಡು: ಚಿಗುರಿಸಿ ಹೂವಿಸಿ ಕಾಯಿಸಿ ಪಣ್ಣಿಸಿ (ಸಬೀಗೀ. ೨೮-೫೧೭).
[ಕಾಯ್$_4$ + -ಇಸು$_3$]

**ಕಾಯಿಸು$_4$** (ನಾ). (ಕರಾ). (ಕೊಳ್ಳುವವರ) ಬಲವಾದ ಬೇಡಿಕೆ: ಬ್ಯಾರಿಗಳೆಲ್ಲ ಬರಿ ಸೈಕಲಿನಲ್ಲಿ ಹಿಂತಿರುಗಿದರು ಅಂತ ವರ್ತಮಾನವಪ್ಪ. ಅದ್ದರಿಂದ ನಮಗೆ ಇವತ್ತು 'ಕಾಯಿಸು' ಇರಬಹುದು ಅಂತ ನನ್ನ 'ನದುರು' (ಹೊಸಕ್ಷಿ. ೪೮). [← ಪಾರಾ. ಖ್ವಾಹಿಷ್; ಮರಾ. ಖಾಈಶ್]

**ಕಾಯಿಸೊಪ್ಪು** (ನಾ). = ಕಾಯಿಪಲ್ಯ : (ಸಿ).
[ಕಾಯಿ$_4$ (< ಕಾಯ್$_4$) + ಸೊಪ್ಪು$_3$]

**ಕಾಯಿಸೋರೆ** (ನಾ). ಒಂದು ಜಾತಿಯ ಸೋರೆ : (ಸಿ).
[ಕಾಯಿ$_4$ (< ಕಾಯ್$_4$) + ಸೋರೆ$_1$]

**ಕಾಯಿಹಾಲು** (ನಾ). = ಕಾಯಿರಸ ೧: ಹೋಳಿಗೆಗೆ ಕಾಯಿಹಾಲು ಇದ್ದರೆ ರುಚಿ ಜಾಸ್ತಿ (ರೂಢಿ).
[ಕಾಯಿ$_4$ (< ಕಾಯ್$_4$) + ಹಾಲು$_1$ (< ಪಾಲ್$_1$)]

**ಕಾಯಿಹುಳಿ** (ನಾ). ತೆಂಗಿನಕಾಯಿ ಹೆಚ್ಚಾಗಿ ಹಾಕಿ ಮಾಡಿದ ಒಂದು ಬಗೆಯ ಮೇಲೋಗರ. ಕಾಯಿಹುಳಿ ಬಲು ರುಚಿ (ರೂಢಿ).
[ಕಾಯಿ$_4$ (< ಕಾಯ್) + ಹುಳಿ (< ಪುಳಿ)]

**ಕಾಯಿಹೋರಿ** (ನಾ). ಎಳೆಯ ಹೋರಿ (?): ಎತ್ತುಗಳಲ್ಲಿ ಒಂದು ಕಾಯಿಹೋರಿ ಬೆದರಿ ಹಾರಿತು (ಕಥಾಮಂ. IV, ೬೨).
[ಕಾಯಿ$_4$ (< ಕಾಯ್$_4$) + ಹೋರಿ (< ಪೋರಿ$_1$)]

**ಕಾಯು$_1$** 'ಕಾ$_1$' ನೋ.

**ಕಾಯು$_2$** 'ಕಾಯ್$_2$' ನೋ.

**ಕಾಯೆಳೆ** (ನಾ). ಗಟ್ಟಿಯಾದ ದಾರ; ಒರಟು ದಾರ : (ಸಿ).
[ಕಾಯ್$_4$ + ಎಳೆ$_2$ (< ಎೞೆ$_2$)]

**ಕಾಯೋತ್ಸರ್ಗ** (ನಾ). [ಜೈನ] ಕೈ ಇಳಿಬಿಟ್ಟುಕೊಂಡು ದೇಹವನ್ನು ನೇರವಾಗಿ ಮತ್ತು ನಿಶ್ಚಲವಾಗಿರಿಸಿಕೊಂಡು ನಿಂತಿರುವುದು. ಮಹಿಷಗಿರಿಯೆಂಬ ಪರ್ವತದೊಳ್ ಪು[ಣ್]ತೀರ್ವನ್ನೆಗಂ ಕೈಯನೆತ್ತಿಕೊಳ್ವೆನೆಂದು ಕಾಯೋತ್ಸರ್ಗದಿಂ ನಿಂದೊನಂ (ವಡ್ಡಾರಾ. ೬೫-೧); ಭರತಂ ಕಾಯೋತ್ಸರ್ಗದೊಳಿರೆ (ಆದಿಪು. ೧೬-೩೭); (ಶ್ರಾವಕಾ. ೩೬೨ ನೋ).
[ಕಾಯ + ಉತ್ಸರ್ಗ]

**ಕಾಯೋರಿ** (ನಾ). ಒಂದು ಬಗೆಯ ಸಸ್ಯ : (ವೈಔಗ. ೪೦-೭೯೯). [?]

**ಕಾಯ್ಗುಳಿ** (ನಾ). ಕಾಯಿಗಳಲ್ಲಿ ವ್ಯವಹರಿಸುವವನು: ಲಂಚಮಂ ಕೊಳ್ವಂ ಲಂಚಂಗುಳಿ: ಏವಂ ಆಟಂಗುಳಿ, ಪಣಂಗುಳಿ, ಪೆಣ್ಗುಳಿ, ಕಾಯ್ಗುಳಿ (ಶಬ್ದಾನು. ೪೧೪ ಪ್ರಯೋ). [ಕಾಯ್$_4$ + -ಕುಳಿ$_3$]

**ಕಾಯ್ಗೊಂಡ** (ನಾ). ನೀರು ಕಾಯಿಸುವ ಹಂಡೆ; ನೀರು ಕುದಿಸುವ ಪಾತ್ರೆ: ಲಲಾಟಂ ತಪತಪನಾಂಶುವಿಂ ಸರೋವರಜಲಮೋರಂತಿರೆ ಕಾಯ್ಗೊಂಡದ ನೀರಂತಿರೆ ಕುದಿದತ್ತು (ಆದಿಪು. ೧೧-೪೮); ತತ್ತಟಗುದಿದು ಕಾಯ್ದ ಕಾಯ್ಗೊಂಡದೆಣ್ಣೆಯೊಳರ್ದಿಬರ್ದಿಸುತ್ತುಂ (ಅಜಿಪು. ೧೧-೧೦ ವ).
[ಕಾಯ್$_2$ + ಕೊಂಡ$_3$]

**ಕಾಯ್ತ$_1$** (ನಾ). ಕಾಯ್ಮೆ ಬಿಡುವುದು; ಕಾಯಿಬೀಡು: ಪಾಯ್ತಂ, ಪಾಯ್ತಂಗಳ್; ತೊಯ್ತಂ, ತೊಯ್ತಂಗಳ್; ಕಾಯ್ತಂ, ಕಾಯ್ತಂಗಳ್ (ಶಬ್ದಾನು. ೫೫೩ ಪ್ರಯೋ). [ಕಾಯ್$_4$ + -ತ$_2$]

**ಕಾಯ್ತ$_2$** 'ಕಾಯ್$_3$' ಪರಾ.

**ಕಾಯ್ತರ್** (ಕ್ರಿ). ಕಾದುಕೊಂಡು ಬರು; ಮೇಯಿಸಿಕೊಂಡು ಬರು: ನಂದನನವರ ಪಶುಗಳನಾರಯಿದು ಕಾಯ್ತಪ್ಪನನುದಿನವು (ಬಸವು. ೨೪-೨). [ಕಾಯ್$_1$ (< ಕಾ$_1$) + ತರ್$_1$]

**ಕಾಯ್ತು** 'ಕಾಯ್$_3$' ಪರಾ.

**ಕಾಯ್ದ** 'ಕಾಯ್$_2$' ಪರಾ.

**ಕಾಯ್ದಿಱಿ** (ಕ್ರಿ). ೧. ಗಿಡಮರಗಳಿಂದ ಕಾಯಿಗಳನ್ನು ಬಿಡಿಸಿಕೊಳ್ಳು. ೨. ಕೋಪಗೊಂಡು ತಿವಿ. ೧, ೨: ಕಾಯ್ದಿಱಿಯೆಂಬುದು ವೃಕ್ಷದೊಳ್ ಪೊಡೆಯೆಂಬುದು ಕುಕ್ಷಿಯೊಳ್ . . . ಅಲ್ಲದೆ ತನ್ನೊಳಿಲ್ಲ (ದಶಕು. ೧-೨೨ ವ). [ಕಾಯ್$_4$ + ತಿಱಿ$_1$; ಕಾಯ್$_2$ + ಇಱಿ$_1$]

**ಕಾಯ್ದು** 'ಕಾಯ್$_2$' ಪರಾ.

**ಕಾಯ್ದುಱುಗಲ್** (ನಾ). ಕಾಯಿಗಳ ಗೊಂಚಲು, —ತೊಡಂಬೆ, —ಜೊಂಪೆ: ಅಗರುವ ಧೂಮಲತಾ ಶಾಖೆಗಳೊಳ್ ಕಾಯ್ದುಱುಗಲೆಂದು ಬಗೆ ಬೆದಱುವಿನಂ ಮುಗಮುಗಿಸುವ ತನಿಗಂಪಿಂಗಗಲದೆ ಮೊಗಸಿದುವು ಮಧುಕರಪ್ರಕರಂಗಳ್ (ಪಂರಾಮಾ ೧೨-೯). [ಕಾಯ್$_4$+ ತುಱುಗಲ್]

**ಕಾಯ್ಪಾಱು** (ಕ್ರಿ). ೧. ಬಿಸಿ ಇಳಿ; ಕಾವು ಕಡಿಮೆಯಾಗು: ಹುರಿಗಡಲೆಯಂತಾನುಂ ಕಾಯ್ಪಾಱದೋಡಿನ ಜೋಳದೊಳ್ಮರಲಲರುವಂತಾನುಂ (ಶಾಂತಿಪು. ೭-೯೨). ೨. (ಆಲಂ) ಕೋಪಾವೇಶ ಕುಗ್ಗು, —ತಣ್ಣಗಾಗು: ವಯಲ್ಗೆ ಮೆಯ್ದೋಱುವವೆಂಬ ಪೂಣಿಗರಡಂಗಿ [ಕು]ನುಂಗಿ ಸಿಡಿಲ್ದು ಜೋಲ್ದು ಕಾಯ್ಪಾ[ಱೆ] ನಭಕ್ಕೆ ಪಾಱಿದುದು . . . ತೇಜದ ದಳ್ಳುರಿ ಪಾಂಡುರಾಜನಾ (ಪಂಪಭಾ. ೧-೧೧೯); ಮೂಱನೆಯ ಬಾಗಿಲೊಳ್ ಕಾಯ್ಪಾ [ಪಾಠಾಂ. ಕೈಮೀ]ಱದೆ ಶೂಲಾಯುಧಂ ವಿಭೀಷಣ ನಿರ್ದಂ (ಪಂರಾಮಾ. ೧೪-೩೮). [ಕಾಯ್ಪು$_1$ + ಆಱು$_1$]

**ಕಾಯ್ಪಿಡಿ** (ಕ್ರಿ). ೧. ಕಾವೇರು; ಬಿಸಿ ಹೆಚ್ಚಾಗು. ೨. ಕೋಪಾವೇಶಗೊಳ್ಳು: ಕಾಯ್ಪಿಡಿದುದ್ಧದ್ವಿಷಪವೈರಿಯರ್ಗಳ ಸಿರಂ ಬೀಳ್ವಂತಿರೆಚ್ಚಂ (ಶಬಶಂ. ೩-೬೧); ಕಾಯ್ಪಿಡಿದೊರ್ವರನೊರ್ವರಣ್ಮಿ ಪೊಡೆವರ್ ಕಲಿಗಳ್ (ಶಬಶಂ. ೪-೭೯). [ಕಾಯ್ಪು$_1$ + ಇಡಿ$_2$]

**ಕಾಯ್ಪು$_1$**, ಕಾಯಿಪು, ಕಾವು$_1$, ಕಾಹು$_3$ (ನಾ). ೧. ಬಿಸುಪು; ತಾಪ; ಉಷ್ಣತೆ; ಶಾಖ; ಸೆಕೆ: ಖರಕಿರಣಂಗಳ ಕಾಯ್ಪಿನ ಕರತನದಿಂ (ಆದಿಪು. ೧೧-೭); ದಾಹಜ್ವರಮಾದರಂತೆ ಕಾಯ್ಪಿಂದುರಿಯುತ್ತುಂ (ಧರ್ಮಾಮೃ. ೩-೩೨); ಗಾಳಿವಟ್ಟೆಯೊಳ್ ನಡೆವನ ಕಾಯ್ಪು ತಣ್ಣಗಿರೆ (ಕಬ್ಬಕಾ. ೨೯೭); ಶೀತಳೋಪಚಾರಮಂ ಮಾಡುತಿರಲವಳ ತನುವಿನೊಳು ಕಾಯ್ಪು ಮಿಗಿಲಾಯ್ತು (ಸೌಂದಪು. ೮-೧೯); ಬಿಸಿಲ ಕಾಯ್ಪಿಗೆ . . . ಬೆಮರೊಸೆದಿಳಿದುದು (ಅನಂಚ. ೪-೫೯). ೨. ಮುನಿಸು; ಕ್ರೋಧ; ರೋಷ: "ಕಾಯ್ಪೆನಲ್ ಕ್ರೋಧ ಶಬ್ದಂ" (ಕರ್ಣಾನಿ. ೨೩); "ಕಿಸುಗಣ್ಣು ಕಾಯ್ಪು ಸೆಣಸೆನೆ ಕೋಪಂ" (ಕವಿಕಂ. ೧೪೭); ಒಲವಿನೊಳಾದ ಕಾಯ್ಪು ಮಿಗೆ ಕಾದಲನಂ ಬಿಸುಟಂತೆ ಪೋಪ ಕಾದಲಳ್ (ಪಂಪಭಾ. ೪-೧೦೮); ಅಬದ್ಧವೈರದಿನಿನಿತು ಕಜುಪ್ಪುಂ ಕಾಯ್ಪುಂ ನಿನಗಾದುದು (ಶಾಂತಿಪು. ೯-೯೦ ವ); ಕೀನಾಶನವೊಲೆಯ್ತಂದು ಕಾಯ್ಪಂ ಕಿಳದೆ ತಲೆಯನಾ ವೀರನೇಂ ಮಾಣನ್ (ಎಕ. VII, ಶಿವಮೊ. ೬೪-೨; 1112); ಪ್ರಳಯರುದ್ರನ ಕಾಯ್ಪು ಬಡಬಾನಳನ ತೀವ್ರತೆ (ಸಾಳ್ವಭಾ. ೫-೩೦). ೩. ಉದ್ವೇಗ; ರಭಸ; ಉತ್ಕಟತೆ: ನನೆಯಂಬಂ ತೊಟ್ಟು ಕಾಮಂ ಮುಳಿದು ನರಪನಂ ನೋಡಿ ಭೋಂಭೋಂರೆನೆ ಕಾಯ್ಪಿಂದಾರ್ದು ಬಾಣಂ ನಡೆ (ಧರ್ಮಾಮೃ. ೧೦-೨೯); ಕಣ್ಪೊಲ್ತು ಕೂಡುವ ಕಾಯ್ಪಿಂದಭಿಸಾರಿಕಾಪದವಿಗಂದೊಂದಾಸೆಯಂ ಮಾಡುವಳ್ (ಅರ್ಧನೇ. ೩-೯೧); ಹರೆಯದ ಕಾಯ್ಪಿನ ತಾರವನಲುಕಿ ತೂರಿತು ಕಾಮವಿಚಾರ (ಕವಿಕಾ. ೧೦೨-೨); **ಕಾಯಿಪು** : ೨. ಕೊಂದಪನತಿ ಕುಪಿತಂ ಮಾಣನೆಂದಲ್ಲಿ ಬಳ್ಳುಕ್ತಿರೆ ಕಾಯಿಪಿಂದಾಳ್ದು ಪೊರ್ದಂಕೆಱಿಗನೆ ××× ನೆಂಬಿಬ್ಬರಂ ಗರ್ಬ್ಬದಿಂದಂ (ಎಕ. VIII, ಸಾಗರ. ೧೧೯-೨೩; 1042). **ಕಾವು$_2$** : ೧. ದೊಡ್ಡ ದೊಡ್ಡ ಮರಗಳು . . . ಭೂಗರ್ಭದ ಕಾವಿನಿಂದಲೋ ಏನೋ ಅರ್ಧಂಬರ್ಧ ಸುಟ್ಟು ಕಲ್ಲಿದ್ದಲಾಗಿ ಪರಿಣಮಿಸಿದವು (ಸಸ್ಯಕ. ೧೩೨); ಮಗುವಿನ ಮೈಕಾವನ್ನು ನಾಲ್ಕು ಗಂಟೆಗಳಿಗೊಂದು ಸಲ ಪರೀಕ್ಷಿಸಿ ಬರೆದಿಡಬೇಕು (ಗೃಹವಿ. ೧೪೭); ಈ ಕಲೆಗಳಲ್ಲಿರುವ ಅನಿಲಗಳ ಕಾವು ಸೂರ್ಯನ ಮೇಲ್ಮೈಕಾವಿಗೆ ಹೋಲಿಸಿದರೆ ಕಡಮೆ (ಆಕಾಶ. ೧೦). ೩. ಪ್ರೇಮದ ಕಾವು ಆರತೊಡಗಿತ್ತು (ನಡೆದಾ. II, ೯೫೭); ಅಪವಾದದ ಕಾವು ತಗ್ಗಲೆಂದು ನಾನು ಕಾಲೇಜಿನ ಕಡೆಗೇ ಹೋಗಲಿಲ್ಲ (ಅಲಹೂ. ೧೦೩). **ಕಾಹು$_3$** : ೧. 'ಕಾಹೇಱು' ಪರಾ.

ಕಾಯ್ಪಾಗು = ಬಿಸಿಯಾಗು ; ಶಾಖಹೊಂದು : ಚಂದ್ರಕಾಂತಿ ಕಾಯ್ಪಾಗಿರೆ (ಪಂಪಭಾ. ೨-೧೫) ; ಬಿಸಿಲೇರಿಕಾಯ್ಪಾಗಿ – ಅಹ – ಹೊಳೆ ಕರಗಿ, ಪದರಾಡಿ, ಬಾಯ್ಬಿಟ್ಟು (ಪಾರಸಿ. ೧೯-೧). ಕಾವುಕೂರು = (ಹಕ್ಕಿಗಳು) ಮೊಟ್ಟೆಗಳ ಮೇಲೆ ಕಾವುಕೊಡುವುದಕ್ಕಾಗಿ ಕುಳಿತುಕೊಳ್ಳು : ಎನ್ನ ಗಾನದ ಹಕ್ಕಿ ರೆಂಕೆಯಂ ಮುದುರಿ, ಕಣ್ಣವೆ ಮುಚ್ಚಿ, ಕಾವು ಕೂರುವುದಳಲಮೊಟ್ಟೆಯ ಮೇಲೆ (ಭಾವಗೀ. ೬೬). ಕಾವುಕೂರುವ ಸ್ನೇಹ = ಗಾಢವಾದ ಸ್ನೇಹ; ನಿಬಿಡವಾದ ಗೆಳೆತನ: ಅತಿ ಆಪ್ತತೆಯಲ್ಲಿ ಆವರಿಸಿಕೊಳ್ಳುವ, ಕಾವುಕೂರುವ ಸ್ನೇಹವಲ್ಲ ಅದು (ಹೊಸಕ್ಷಿ. ೨೨೯). ಕಾವುಕೊಡು = ೧. ಶಾಖಕೊಡು : ಎಣ್ಣೆ ಸವರಿ ಉಪ್ಪಿನ ಕಾವು ಕೊಟ್ಟರೆ ನೋವು ವಾಸಿಯಾಗುವುದು (ರೂಢಿ). ೨. ಬರೆ ಹಾಕು ; ಬರೆಯಿಡು : (ಕಿ). ಕಾವುಹಾಕು = ಕಾವುಕೊಡು : (ಕಿ).

[ಕಾಯ್$_2$ + -ವು$_2$]

**ಕಾಯ್ಪು$_2$** (ನಾ). = ಕಾವಲು : ಕಣ್ಣುಗಳ ಪಡೆದು ಕಾಯ್ಪಾಗಿ ಪರುಷೆಯನು ಬಸವಣ್ಣನಾಜ್ಞೆಯೊಳಿರ್ದುದಾ ಬೇಡಸಂದೋಹ (ಗುರುಚಾ. ೧೪-೩೬) ; ಬಳಿಕೆಂದನೇಂ ಮಗನೆ ಕಾಯ್ಪಿನೊಳತಿರುಳು (ಕಾಲೂರ. ೫೪-೮೩). [ಕಾಯ್$_1$ (< ಕಾ$_1$) + -ವು$_1$]

**ಕಾಯ್ಪುಗೊಳ್** (ಕ್ರಿ). ಮುನಿದುಕೊಳ್ಳು ; ಕೋಪಿಸು : ಎಱಗುವಳಿನಿವಹದ ಝುಂಕರಣಕ್ಕೆ ಕಾಯ್ಪುಗೊಂಡು (ಆದಿಪು. ೧೨-೫೨) ; ಭೀಕರಾಕಾರ ಮೂಕಾಸುರನಂ ತೊಟ್ಟನೆ ಕಟ್ಟೆದಿರೊಳ್ ಕಂಡು ಕಾಯ್ಪುಗೊಂಡು (ಶಬಶಂ. ೪-೧೭ ವ). 'ಕಾಪು' ಪರಾ. [ಕಾಯ್ಪು$_1$ + ಕೊಳ್$_1$]

**ಕಾಯ್ಪುಡುಗು** (ಕ್ರಿ). ಉತ್ಸಾಹಗುಂದು ; ಆವೇಶ ಇಳಿದುಹೋಗು : ಮಡಿದ ಕೆಡೆದ ಕಣ್ಣುಗೆಟ್ಟೋಡಿ ಪೋದ ಕಾಯ್ಪುಡುಗಿ ಪೂರಾಯಘಾಯಂಗಳಾ ಪಡೆವ ಭೂಚರರ (ವರ್ಧಸಾಂ. ೬-೧೪೩).

[ಕಾಯ್ಪು$_1$ + ಉಡುಗು$_1$]

**ಕಾಯ್ಪುವೆಱು** (ಕ್ರಿ). ೧. ಬಿಸಿಯಾಗು ; ಶಾಖಹೊಂದು : ಓರೊರ್ಮೆ ನಿಜತನುವ ತಾಪದಿಂ ಕಾಯ್ಪುವೆತ್ತ ಮುತ್ತಿನ ನುಣ್ಮಳಲ ಪುಡಿಯೊಳ್ ಪೊರಳ್ವ ಬೇವಸದೊಳ್ (ವರ್ಧಪು. ೪-೧೭ ವ). ೨. ತಾಪಗೊಳ್ಳು : ಕಾಯ್ಪುವೆತ್ತು ಕಣ್ಗಡೆ ಕಿಡಿಸೂಸೆ ನೋಡಿದುದು ನಿಂದು ಪುಳಿಂದರನುಗ್ರಸೂಕರಂ (ಶಬಶಂ. ೪-೭).

[ಕಾಯ್ಪು$_1$ + ಪೆಱು$_1$]

**ಕಾಯ್ಪೆ** (ನಾ). ಕಾಯಿತನ; ಕಾಯಾಗಿರುವಿಕೆ; ಕಯ್ಪೆ ; ಒಗರು (?) : ಒದವಿ ಪೊಸಬ್ಬು ಪಜ್ಜಳಿಪ ತೇಜದ ಸುಯ್ಯುಱಿ ಕಾಯ್ಪೆಯೋಡಿ ಪಣ್ತುದು ಬಿಸಿಲೆಂಬಿನಂ ಬಿಸಿಲೊಳಾದುದು ಕೆಂಪು (ಸೂಕ್ತಿಸು. ೮-೩).

[ಕಾಯ್$_3$ + ?]

**ಕಾಯ್ಪೇಱು** (ಕ್ರಿ). ಕಾವೇರು ; ರೋಷಾವೇಶ ತುಂಬು : ರೌದ್ರಂ ಬೆತ್ತು ಕಾಯ್ಪೇಱುವ ಸಮರರಸೋದ್ರೇಕದಿಂ (ಜಗವಿ. ೧೩-೬೯) ; ಆರು ಬೇಡೆಂದರು ಬಿಡವಾಯ್ತು ಕಾಯ್ಪೇಱಿ ಮಾರನೆಯ್ತಂದಿದ್ದ ಮೇಲೆ ಹೋರಾಟವಲ್ಲದೆ ಸಂತವಿನ್ನಾಗದೆಂದಾರಯ್ದರವರು ತಮ್ಮೊಳಗೆ (ಭರಚ. ೫೧-೩).

[ಕಾಯ್ಪು$_1$ + ಏಱು$_1$ (< ಏಱ್$_1$)]

**ಕಾಯ್ಬಿನದ** (ನಾ). ಕಾಯಿಗಳ ಆಟ ; ಪಗಡೆಯಾಟ : ಇರುತಿರ್ಪನಲ್ಲಿ ವತ್ಸರಪರಿಯಂತಂ . . . ನರಪತಿ ಕಾಯ್‌ಬಿನದದಿಂದೆ ಸಂತಸಗೋಳಪೆಂ (ಬಾಲಭಾ. ೧೦-೧೦). [ಕಾಯ್$_4$ + ಬಿನದ]

**ಕಾಯ್ಮನೆ** (ನಾ). ಸಾಕುವ ಮನೆ ; ರಕ್ಷಣೆಯ ನೆಲೆ : ತುಳುವರ ತಾಯ್ಮನೆಯುಳಿದರ ಕಾಯ್ಮನೆ – ನೀನೆಮ್ಮಯ ಮನೆಯಂಬೇ (ಗಿಳಿವಿಂ. ೪೬-೨). [ಕಾಯ್$_1$ (< ಕಾ$_1$) + ಮನೆ]

**ಕಾರ್$_1$** (ಕ್ರಿ). ತಿನ್ನು ; ಅಗಿ ; ಭಕ್ಷಿಸು : "ಕಾರ್ – ಖಾದನೇ (ಕಚ್ಚು), ಜಲದಾಗಮೇ ಚ" (ಶಮಧಾ) ; ಬೆಳೆದ ಪಸುರ್ಪುಲ್ಲೆಂದು . . . ಮರಕತದೊಡ್ಡುಂಗಲ್ಲನೆ ಕಾರ್ದು ಮೃಗಂಗಳ್ ಕಲ್ಲನೆ ಕನಲುತ್ತುಮಿರ್ಪುವು (ಅಜಿಪು. ೯-೨೩) ; ತೀರದ್ರುಮಾಂದೋಳಿತ ಫಲತತಿಯಂ ಕಾರ್ದು ಕಾರ್ದೊಯ್ಯನಲ್ಲಿಂ ತಳರ್ದು (ಕಾದಂಉ. ೭೩೬) ; ಮರುಳ್ವಱಿದ ಮೂಳೆಯಂ ಮೋಳಕಾಲಂ ಕಾರ್ವ್ವ ಮರುಳೆ (ಎಕ. VIII, ಸಾಗರ. ೧೦೮-೧೯ ; 1042) ; ಪೀರ್ವಡೆ ವಿಷಮಯವುದಕಂ ಕಾರ್ವಡೆ ವಿಷಮಯ ಮೆನಿಪ್ಪ ಮೃತ್ತಿಕೆ (ಪಾರ್ಶ್ವಪು. ೬-೭೯) ; ಪಚ್ಚೆವರಲ . . . ಪಸಲೆಗೆತ್ತು ಕಾರ್ದು ಕನಲ್ವ ಮುಗ್ಧಶಾಬಕದ ಮೊಗಮಂ (ಪುಷ್ಪಪು. ೩-೭೬ ವ).

[ದೇ. ‖ ಮಲ. ಕಾರು ; ಕುವಿ. ಕಾರಲಿ; ಕುರುಖ್. ಖಾರ್ನಾ ; ಮಲ್ತೊ. ಗರೆ]

**ಕಾರ್$_2$**, ಕಾರು$_2$ (ನಾ). ಮಳೆಗಾಲ ; ವರ್ಷಾಕಾಲ : "ಮೞೆಗಾಲಮೆ ಕಾರ್" (ಕರ್ಣಾನಿ. ೪) ; ಜಳದವೃಂದದವೋಲಿರೆ ಹಸ್ತಿಗಳ್ ಗಳಿತಧಾರೆಗಳಂತಿರೆ ಪತ್ತಿಗಳ್ ಬಳಸಿ ಕಾರ್ಗಣೆಯಾಯ್ತು ಮಹಾಹವಂ (ಕವಿರಾ. ೧-೧೪೪) ; ಪೊಸ ಮಸೆಯಂಬಂ ಕಾರ ಮೞೆವೊಲೆ ಕಱೆಯುತ್ತಿರೆ (ಪಂಪಭಾ. ೧೧-೧೩೫) ; ನಿತಂಬಿನಿ ಕಾರೊಳೆಸೆವ ಕಾದಂಬಿನಿಯಂದದೆ ಮಂದಮಂದಗಮನದೆ ನಡೆದಳ್ (ಕಾದಂಪೂ. ೩೮೦) ; ಜಲದೇವತೆಯರ್ ಕಾರೊಳಗಾಡುವೊಲಿರ್ದುದು (ಗಿಂಕ. ೪-೨೫) ; ಬಾಣಾವಳಿಯ ಸುರಿದನು ಸುರಿವ ಕೆಡುಹಿನ ಕಾರ ಮಳೆಯಂತೆ (ತೊರರಾ. ೩-೧೦-೧೭). ೨. ಮಳೆಯ ಮೋಡ ; ಮೇಘ. 'ಕಾರುವಟ್ಟೆ', 'ಕಾರೊಡ್ಡು' ಪರಾ. ಕಾರು$_2$ : ೧. ಕಾರ ಕಾದಂಬಿನಿಯ ನೆಲೆವನೆಯೊ (ಸಾಳ್ವಭಾ. ೫-೨). 'ಕಾರುಭತ್ತ' ಪರಾ. ೩. ಕೆಸರು ; ಅಟ್ಲು : ಗದ್ದೆಭೂಮಿಯಲ್ಲಿ ಮಕ್ಕಿ, ಬೈಲು, ಕಾರು ಎಂದು ಮೂರು ವಿಧವು (ಮುಂಬಯಿ. ೫-೨೧೨). 'ಕಾರುಗದ್ದೆ' ಪರಾ. ೪. ಮಳೆಯ ನೀರಿನಿಂದ ತೆಗೆಯುವ ಫಸಲು ; ಅಂಥ ಪಸಲು ಬೆಳೆಯುವ ಭೂಮಿ : ಕೆಱೆಯ ಕೆಳಗೆ ಕಾರು ಬೆಳೆವ ಕಮ್ಮ ೧೦೦ ಬೆದ್ದಲೆ (ಎಕ. VI, ಕಡೂರು. ೨೨-೨೧; 1090) ; ಸೌಮ್ಯನೀಕ್ಷಿಸದಿರೆಯುಂ ಕಾರು ಕಿಡುಗುಂ (ಜಟ್ಟಮ. ೮-೧೮೮) ; ಕಬ್ಬು ಕಾರುಳ್ಳವನೆ . . . ಗೊಬ್ಬರದ ಗಾಡಿ ಹೊಡೆಯೋನೆ (ಹಳ್ಳಿಬಾ. ೩೪).

ಕಾರಪರ್ಬ, ಕಾರಹಬ್ಬ, ಕಾರುಹಬ್ಬ = ಕಾರಹುಣ್ಣಿಮೆಯ ಉತ್ಸವ; ಜೇಷ್ಠಮಾಸದ ಹುಣ್ಣಿಮೆಯ ಉತ್ಸವ: ಕಾರಪರ್ಬ್ಬದಲು ದೇವರು ನಂದೀಶ್ವರದೇವರ ವುಪ್ಪಾರಕೆ ಪ. ೧ (ಎಕ. VI, ಕಡೂರು. ೪೯-೫೬ ; 1291) ; ಕಾರಹಬ್ಬದೊಳೆತ್ತು ಪೂಜ್ಯವಲ್ಲದೆ ಸಮರಧಾರುಣಿಗೆ ಯೋಗ್ಯವೇ (ಚಬಪು. ೪೪-೨೧); ಕಾರುಹಬ್ಬದಲ್ಲಿ (ಜ್ಯೇಷ್ಠ ಪೂರ್ಣಮಿ) ಇಲ್ಲಿ ಮಂಡಪ ಕಟ್ಟಿ ಬ್ರಹ್ಮದೇವನನ್ನು ಪೂಜಿಸುವರು (ಹೊಯ್ಸವಾ. ೯೫). ಕಾರಪುಣ್ಣಮಿ, ಕಾರಪುಣಮೆ, ಕಾರಹುಣ್ಣಿಮೆ, ಕಾರಹುಣ್ಣಿವೆ, ಕಾರಿಹುಣ್ಣಿಮೆ = ಜ್ಯೇಷ್ಠಮಾಸದಲ್ಲಿ ಬರುವ ಹುಣ್ಣಿಮೆ; ಮಳೆಗಾಳದಲ್ಲಿ ಬರುವ ಪೂರ್ಣಿಮೆ; ಕಾರಹಬ್ಬ: ಬಾದುಬೆ ಕಾರಪುಣ್ಣಮಿ ದೀಪಾಳಿಗೆ ಮೂಱು ಪರ್ವ್ವದೊಳಂ ಪ್ರತ್ಯೇಕವೊನ್ದು ಗದ್ಯಾಣ (ಎಇ. XX, ೬೮-೩೫ ; 1012) ; ಬಾದುಬೆ ದೀಪಾವಳಿ ಕಾರಪುಣ್ಣಮೆಯೆನಿಪ್ಪೀ ಮೂಱು ಪರ್ವ್ವಂಗಳೊಳ್ (ಸೌಇಇ. XI-i, ೫೨-೬೬; 1007) ; ಉತ್ತರ ಕರ್ಣಾಟಕದಲ್ಲಿ ಕಾರಹುಣ್ಣಿಮೆಯು ದನಗಳ ಹಬ್ಬ (ಕನ್ನಜಾ. ೧೭೮) ; ಕಾರಹುಣ್ಣಿಮೆ ಕರಕೊಂಡು ಬಂತು, ಉಗಾದಿ ಉಡುಗಿಕೊಂಡು ಹೋಯಿತು (ಗಾದೆ); ಕಾರಹುಣ್ಣಿವೆ ಕರಿ ಹರಿದು ಮಣ್ಣೆತ್ತು ನೀರನು ಕುಡಿದವು (ನೆಲಮು. ೧೨); ಮನೆಯಲ್ಲಿರುವ ಹಸು. . . ಇವನ್ನೆಲ್ಲಾ ಶಾಸ್ತ್ರೀಯವಾಗಿ ಪೂಜಿಸುವುದು ಕಾರಿಹುಣ್ಣಿಮೆಯ ದಿನ (ಸುವಸಂ. ೭೨).

[ದೇ. ‖ ತಮಿ. ಮಲ. ಕಾರ್; ತುಳು. ಕಾರ್, ಕಾರಿ; ತೆಲು. ಕಾರು]

**ಕಾರ್**$_3$, ಕಾರು$_3$ (ನಾ). ಸಮಾಸದಲ್ಲಿ ಕರಿದು ಎಂಬುದಕ್ಕೆ ಬರುವ ಆದೇಶ. 'ಕಾರಿರುಳ್$_2$', 'ಕಾರೊಡಲ್' ಪರಾ. **ಕಾರು**$_3$: "ಬರಿಸಕಾಲದೊಳ್ ಕಾಳವಣ್ಣದೊಳಂ ಖಾದನದೊಳಂ ಕಾರು" (ಶಬ್ದಮಂ. ೧೦೩). 'ಕಾರುಗತ್ತಲೆ$_1$' ಪರಾ. [< ಕರಿದು]

**ಕಾರ್ಅಜಿ** (ನಾ). ಕರಿಯ ಬಂಡೆ,—ಕಲ್ಲು; ಒಂದು ಸ್ಥಳದ ಹೆಸರು (?): ಬಡಗ್ಗೆ ನಡದು ಕಲ್ಮಲದುಳಿ ಕೊಲಿಗನ್ನೇಲ ಕಾರ್ಅಜಿವ ಇಟ್ಟಗೆ ಸೊಣವ (ಮೈಆರಿ. ೯೫೧೪, ೧೨-೨೦; 810). [ಕಾರ್$_3$ + ಅಜಿ$_4$]

**-ಕಾರ**$_1$ '-ಕಾಱ' ನೋ.

**ಕಾರ**$_2$, ಖಾರ$_1$ (ನಾ). ೧. ತೀಕ್ಷ್ಣವಾದ ರುಚಿ; ಕಟುವಾದದ್ದು; ತಿಕ್ತ: "ಕ್ಷಾರ – ಕಾರ" (ಶಮದ. ೨೬೨ ಪ್ರಯೋ); ಒಗರುಪ್ಪು ಸಿಹಿ ಕಹಿ ಕಾರಗಳ ತೆಗೆತೆಗೆದೀವುತಿಹನು ನಾಲಗೆಗೆ (ಭರಚ. ೪-೯೩); ಸಾರು ಬಹಳ ಕಾರವಾಗಿದೆ (ರೂಢಿ). ೨. ಒಂದು ಬಗೆಯ ಉಪ್ಪು; ಲವಣ. ೩. (ಅಲಂ). ಕೋಪ; ಸಿಟ್ಟು: ತನ್ನ ಅಯ್ಯನಿಗೆ ಏತಕ್ಕೆಯೋ ಹೇಗೆಯೋ ಅವಮಾನ ಮಾಡಿದರೆಂಬ ಕಾರದಿಂದ ತನ್ನ ಹುಟ್ಟೂರ ಶಿವಾಚಾರದವರ ಕುಳಗಳೆಗೆಲ್ಲಾ . . . ನೀಚ ಜಾತಿಯವರೊಡನೆ ಪಂತಿ ಯೂಟದ ಸವ್ಯವಹಾರವಾಗುವಂತೆ ಎಂತೋ ಏರ್ಪಡಿಸಿ (ಬಿಟ್ಟ ಅ. ೪೮-೧೭); ನನ್ನ ಮೇಲೆ ಅವನು ಕಾರವಾಗಿದ್ದಾನೆ (ರೂಢಿ). **ಖಾರ**$_1$: ೧. ಖಾರವಾದ ರುಚಿಯನಱುವುದು ಗುರುಲಿಂಗದಲ್ಲಿಯ ಶಿವಲಿಂಗ (ಆದವ. ೧೨); ಪುಣ್ಣಳೊಳ್ ಖಾರಮಂ ಪೂಸಿ ಮೈಯ್ಯೆವಿನಂ ಕಾಸಿ (ಬಂಹರಿ. ೧೩-೩೦); ಮೆಣಸಿನಕಾಯನ್ನೂ ಸಹ ಊರ ಹೊರಗೆ ಸುಟ್ಟುಕೊಂಡು ಬಂದು ಖಾರ ಅರೆಯುತ್ತಿದ್ದರು (ಹುಟ್ಟಹ.೨೭). [< ಸಂ. ಕ್ಷಾರ]

**ಕಾರ**$_3$ (ನಾ). ಬಂಧನ; ಸೆರೆ: "ಕಾರಂ ಬಂಧನಾಖ್ಯಮಕ್ಕು" (ಮಂಗರಾ. ೧೧೬-೧). 'ಕಾರಾಗೃಹ' ಪರಾ. [< ಸಂ. ಕಾರಾ]

**ಕಾರ**$_4$ (ನಾ). ೧. ಮಾಡುವುದು; ತಯಾರಿಸುವುದು. 'ಝೇಂಕಾರ' ಪರಾ. ೨. ವರ್ಣದ ನಿರ್ದೇಶನಕ್ಕೋಸ್ಕರ ವರ್ಣಗಳ ಮುಂದೆ ಹಚ್ಚುವ ಒಂದು ಸಂಸ್ಕೃತದ ಪ್ರತ್ಯಯ. 'ಅಕಾರ', 'ಇಕಾರ' ಪರಾ. ೩. ಕಂದಾಯ; ತೆರಿಗೆ; ಕರ. [ಸಂ.]

**ಕಾರಂಕ** (ನಾ). ಒಂದು ಜಾತಿಯ ಪಕ್ಷಿ: ಬರುಹಿ ಕಂಕ ಶಶಾದ ತ್ತಿತಿರಿ ವರಗಿಡಗ ಕಾರಂಕ ಟಿಟ್ಟಿಭ ಭರದ್ವಾಜಾದಿ ಖಗವಿರೆ ಕಂಡ ನಸುರೇಂದ್ರ (ಉತ್ತರಾ. ೯-೪). 'ಕಾರಂಡ' ಪರಾ. [?]

**ಕಾರಂಜಿ**, ಕಾರಾಂಜಿ (ನಾ). ನೀರಿನ ಚಿಲುಮೆ; ಬುಗ್ಗೆ: ಯಮರಾಜನಾಲಯದೊಳಿಕ್ಕಿದುರು ಕಾರಂಜಿಯ ಹುದೆಂಬೊಲು (ಪರಹು. ೩೧-೩೪); ಚಿಮ್ಮುವ ಕಾರಂಜಿ ಘಮ್ಮನೆ ಪುಷ್ಪದ ರಮ್ಯವಾದ ವನದೊಳಗೆ (ಶ್ರೀಕೃಪಾ. ೧೩); ಕೋಟೆಯೊಳಕ್ಕೆ ಕಾರಂಜಿಯ ನೀರು ಬರುವಂತೆ ಮಾಡಿಸಿ (ಮಹಾವಂ. I, ೯೦); ರತ್ನದ ರಸದಾ ಕಾರಂಜೀಯು ಪುಟಪುಟನೆ ಪುಟದು (ಗರಿ. ೧-೭). **ಕಾರಾಂಜಿ**: (ಃ).
[← ತಮಿ. ಕಾರಾಞ್ಜಿ = ಒಂದು ಬಗೆಯ ನೀರೆತ್ತುವ ಕಪಿಲೆ; ತುಳು. ಕಾರಂಜಿ]

**ಕಾರಂಜಿಮನೆ** (ನಾ). ಕಾರಂಜಿಗಳನ್ನುಳ್ಳ ಮನೆ: ಚಂದ್ರಶಾಲೆಗಳಿಂದಲೂ ನಿಬಿಡವಾದ ಕಾರಂಜೀಮನೆಗಳಿಂದಲೂ ಶೋಭಿತವಾಗಿ (ಕೃವಾಸ. ೮೭). [ಕಾರಂಜಿ + ಮನೆ]

**ಕಾರಂಡ** (ನಾ). ಒಂದು ಬಗೆಯ ನೀರು ಹಕ್ಕಿ: ಕಾರಂಡಂ ಕೆಂಗಣ್ಣಂ ಪೊಱಸು ಕೌಶಿಕಂ (ಕಾವ್ಯಸಾ. ೪೦, ಶೂದ್ರಕ); ಗಿಳಿ ಪುರುಳಿ ಪೆಂಗುರು ಕಾರಂಡಮಾಂದೆ ಮೊದಲಾಗೊಡೆಯ ಗಗನಚರಂ (ವಡ್ಡಾರಾ. ೯೭-೧೦); ಪಿಕ ಚಕ್ರವಾಕ ಚಕೋರ ಸಾರಸ ಹಂಸ ಬಕ ಕುರವಕ ಕಾರಂಡ (ಕುರಾಸಾಂ. ೪-೫೧). [ಸಂ.]

**ಕಾರಂಡವ** (ನಾ). = ಕಾರಂಡ: "ಕಾರಂಡವಃ ಕಾದಂಬಕಃ ಕ್ರಕರಃ –ಈ ೩ ಕರ್ಕರಂ" (ಹಲಾಯು. ೪೨-೧೦೦); ಕಮಲಂಗಳ ಮೇಲೆ ಕುಳಿತು ತೂಗಾಡುವ ಹಂಸ ಕಾರಂಡವ ಮೊದಲಾದ ಪಕ್ಷಿಗಳ್ (ಸೌಗಂಧಿ. ೨೩೧-೧೯). [ಸಂ.]

**ಕಾರಂಡವಕ್ಕಿ** (ನಾ).= ಕಾರಂಡ: "ಕಾರಂಡವಃಯೆಂದೆಡೆ ಕಾರಂಡವಕ್ಕಿ" (ನಾಚಿರಾ. ೧೧೫). [ಕಾರಂಡ + ಪಕ್ಕಿ$_1$]

**ಕಾರಕ**$_1$ (ನಾ). ಒಂದು ಬಗೆಯ ತೆರಿಗೆ. ℙ ಕೈಕೆಲಸಗಾರರ ಮೇಲೆ ಹಾಕುವ ತೆರಿಗೆ. 'ಅಸಗಕಾರಕ' ಪರಾ. [ಸಂ. ಕಾರುಕ]

**ಕಾರಕ**$_2$ (ಗು). ೧. ಉಂಟುಮಾಡುವ: ಏಕೆ ಪೇೞ್ ಮಗನೆ ನೆಗೞ್ವೈ ಕಾರ್ಯಂ ಮಿತ್ರಾದಿ ಕಾರಕಮೆಂಬುದಂ (ಪಂಪಭಾ. ೧೩-೧೦); ಸೃಷ್ಟಿಯಾ ಸ್ಥಿತಿ ಲಯಂಗಳಿಗೆ ತಾನೆ ಕಾರಕಮಹೇಶ್ವರನೆಂಬ ಬಗೆಯನಱಿಯದೆ ಕೆಟ್ಟಯ್ಯೆ (ವೀಶೈಪು. ೩-೩-೧೨); ಜ್ಞಾನ ಹುಟ್ಟಬೇಕಾದರೆ ಕಾರಣವು ಕಾರಕ, ಜ್ಞಾಪಕ ಎಂದು ಎರಡು ಪ್ರಕಾರವು (ಹಿಂದಸಾ. ೧೩೫). (ನಾ). ೨. ಮಾಡುವವನು; ರಚಿಸುವವನು; ಕ್ರಿಯೆಗೆ ಕಾರಣವಾದವನು: ಲೋಕಪಾವನ ಕಾರಕನಸಾ . . . ಕಾಲ್ನಡೆಯೊಳ್ ಇದಿರ್ವಂದೊಡನೆ ಸಾರ್ದುರ (ಬಸವು. ೫-೧೭). ೩. ಹಿಂಸೆ; ಪೀಡೆ; ದುಃಖ: (ಃ). ೪. [ವ್ಯಾಕ] ಕ್ರಿಯಗೆ ನಿಮಿತ್ತವಾಗಿರುವುದು; ಕರ್ತೃ, ಕರ್ಮ ಮೊದಲಾದುದು: ಆ ಕಾರಕಮೆಂಬುದು ಕ್ರಿಯಾನಿಮಿತ್ತಂ; ಅದು ಕರ್ತೃವೆಂದುಂ ಕರ್ಮವೆಂದುಂ ಕರಣಮೆಂದುಂ ಸಂಪ್ರದಾನಮೆಂದುಂ ಅಪಾದಾನಮೆಂದುಂ ಅಧಿಕರಣಮೆಂದುಂ ಷಡ್ವಿಧಮಾಗಿರ್ಪುದು (ಶಮದ. ೯೩ ವೃತ್ತಿ). [ಸಂ.]

**ಕಾರಕದೀಪಕಾಲಂಕಾರ** (ನಾ). [ಕಾವ್ಯಮೀ] ಒಂದು ಅರ್ಥಾಲಂಕಾರ: "ಒಂದೇ ವಸ್ತುವಿಗೆ ಸಂಬಂಧಪಟ್ಟ ಹಲವು ಕ್ರಿಯೆಗಳು ಕಾಲಕ್ರಮವನ್ನನುಸರಿಸಿ ವರ್ಣಿತವಾಗಿದ್ದಲ್ಲಿ ಕಾರಕದೀಪಕಾಲಂಕಾರವೆನ್ನಿಸಿಕೊಳ್ಳುವುದು" ಲಕ್ಷ್ಯ ಪೊಗೆದುದು ಪೊತ್ತಿದತ್ತು ಕಿಡಿಯಿಟ್ಟುದು ನಾಲ್ದೆಸೆದೋಱಿದತ್ತು ಬಾನ್ಗೊಗೆದುದು ಸಿಂದು ಪೊಂಬೆಳಗುಮಂ ಪರಪುತ್ತದು ಧಂ ಧಗಿಲ್ ಧಗಿಲ್‌ಧಗಿಲೆನುತಟ್ಟಿ ತಟ್ಟಿದುದು ಮುಟ್ಟಿತು ಸುಟ್ಟುದು ತಿಂದು ತೇಗಿದತ್ತಗಿಯದೆ ಸಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ (ಕೃಪಿಡಿ. ೨೬೨).
[ಕಾರಕ + ದೀಪಕ + ಅಲಂಕಾರ]

**ಕಾರಕಪದ** (ನಾ). [ವ್ಯಾಕ] (ಷಷ್ಠಿಯ ಹೊರತಾಗಿ) ವಿಭಕ್ತಿ ಪ್ರತ್ಯಯಗಳನ್ನು ಹೊಂದಿದ ಪದ; ಕರ್ತೃ, ಕರ್ಮ ಮೊದಲಾದ ಕಾರಕರೂಪದ ಅರ್ಥವನ್ನು ಹೇಳುವ ಪದ: ವಿಶೇಷಣಪದಂಗಳ್ ಪ್ರಥಮಾ ವಿಭಕ್ತಿಯಂ ಪಡೆದು ವಾಕ್ಯದ ಮೊದಲೊಳಿರ್ದು, ಅನ್ವಯಿಸುವಲ್ಲಿ ತುದಿಯ ಕಾರಕಪದದ ವಿಭಕ್ತಿಯನ್ ತಳೆವುವು (ಶಮದ. ೧೪೦ ವೃತ್ತಿ). [ಕಾರಕ$_2$ + ಪದ$_2$]

**ಕಾರಕಭ್ರಮೆ** (ನಾ). ತಾನೇ ಕರ್ತೃ ಎಂಬ ಭ್ರಮೆ; ತಾನೇ ಎಲ್ಲವನ್ನೂ ಮಾಡುವವನು ಎಂಬ ಭ್ರಾಂತಿ: ನಾನೇ ನನ್ನ ಹೆಂಡಿರು ಮಕ್ಕಳನ್ನು ಪೋಷಿಸುತ್ತಿರುವೆನು ಎಂಬ ಸ್ವತಂತ್ರ ಕರ್ತೃತ್ವಾಭಿಮಾನವೆ ಕಾರಕಭ್ರಮೆಯು (ಹಸಾರ. ೧೨-೨೯ ಟೀಕೆ).
[ಕಾರಕ$_2$ + ಭ್ರಮೆ]

**ಕಾರಕರಕಿ** (ನಾ). (ಕರಾ). ಒಂದು ಬಗೆಯ ಮೀನು. [?]

**ಕಾರಕರ್ದಿ**, ಕಾರಕಿರಿದಿ, ಕಾರ್ಕರ್ದಿ, ಕಾಲಕೀರ್ದಿ (ನಾ). ಅಧಿಕಾರದ ಅವಧಿ; ಆಡಳಿತದ ಕಾಲ: ಈ ಪದ್ಧತಿಯನ್ನೇ ತಮ್ಮ ಕಾರಕರ್ದಿಯಲ್ಲಿ ನವಾಬ ಹೈದರಲ್ಲಿಖಾನರೂ ಅನಂತರ ಟೀಪುಸುಲ್ತಾನರೂ ಅನುವರ್ತಿಸಿದ್ದರು. (ಮಹಾವಂ. II, ೧೩).

**ಕಾರಕಿರಿದಿ:** ಜಮಿನಾನುದಾರ ತ್ರಿಯಂಬಕ ಸಖಜಿ ಪಂಡಿತರ ಕಾರಕಿರಿದಿಯಲು (ಎಕ. IX, ಹೊಳಲ್ಕೆ. ೬೩-೬ ; 1716). **ಕಾರ್ಕೆರ್ದಿ:** ಪೂರ್ಣಯ್ಯನವರ ಕಾರ್ಕರ್ದಿಯಲ್ಲಿದ ಸ್ವಾಲಾವರ್ಷವೊಂದಕ್ಕೆ ಲಕ್ಷೈ ಲಕ್ಷರೂಪಾಯಿ . . . ಒಟ್ಟು ಹುಟ್ಟುವಳಿಯಾದಂತೆ ತಿಳಿದು ಬಂದಿದೆ (ಮಹಾವಂ. II, ೩೨). **ಕಾಲಕೀರ್ದಿ:** ನನ್ನ ಕಾಲಕೀರ್ದಿಯಲ್ಲಿ ಮನೆತನದ ಹೆಸರು ಕೆಟ್ಟಿತು ಎಂದು ಆಗಬಾರದು (ಮೂರುದಾ. ೫೮); ನರಸಿಂಗರಾಯರ ಅಜ್ಜಂದಿರ ಕಾಲಕೀರ್ದಿಯಲ್ಲಿ ದೇಸಗತಿಯು ಹೋದದ್ದು (ಬೆಳಭಾ. ೩).

[← ಪಾರ. ಕಾರ್‌ಕರ್ದ್; ಮರಾ. ಕಾರ್ಕೀರ್ದ್]

**ಕಾರಕವಶ** (ನಾ). [ವ್ಯಾಕ] ಕರ್ತೃ, ಕರ್ಮ ಮೊದಲಾದ ಕಾರಕಗಳ ಅಧೀನತೆ: ಧಾತುವಿವರ್ಜಿತಮರ್ಥೋಪೇತಂ ಲಿಂಗಂ ಮಮಿಂಕೆಯದದೊಳ್ ಎಂದಿಂತೀ ತೆಱದಿಂದೇಟಕ್ಕುಂ ಖ್ಯಾತ ವಿಭಕ್ತಿಗಳದರ್ಕೆ ಕಾರಕವಶದಿಂ (ಕಾವ್ಯಾವ. ೮೪); ನಾನಾ ತೆಱದ ಲಿಂಗಗಳ್ಗೆ ಪರವಾಗಿ ನಾಮವಿಭಕ್ತಿಗಳ್ . . . ಏೞಾಗಿ, ಕಾರಕವಶದಿಂ ಪತ್ತುಗುಂ (ಶಮದ. ೯೩ ವೃತ್ತಿ). [ಕಾರಕ$_2$ + ವಶ]

**ಕಾರಕವಿಭಕ್ತಿ** (ನಾ). [ವ್ಯಾಕ] ಕಾರಕ ನಿಮಿತ್ತವಾಗಿ ಬರುವ ವಿಭಕ್ತಿ ಅಥವಾ ಕಾರಕಗಳನ್ನು ತಿಳಿಸುವ ವಿಭಕ್ತಿ: ಬರಮಿಾಗೆಮುಗೆಂಬ ಕಾರಕಂ ಸಕ್ಕದವೇಸೋ ಕಾರಕವಿಭಕ್ತಿಯೊಳೊಂದೆ ಸಮಾಸಯುಕ್ತಿ ಲೇಸಕ್ಕುಂ (ಕವಿರಾ. ೧-೧೧೬). [ಕಾರಕ$_2$ + ವಿಭಕ್ತಿ]

**ಕಾರಕವಿರಹಿತ** (ಗು). [ವ್ಯಾಕ] ಕಾರಕಸಂಬಂಧವಿಲ್ಲದ: ನೀರಸಂ ಶೈಥಿಲ್ಯವರ್ಣಂ ಕಾರಕವಿರಹಿತಂ ಕ್ರಿಯಾಳಂಕಾರಹೀನವೆನಿಪ್ಪ ಪೊಳ್ಳಂ ತೂಱಿ ಕಳೆದು (ಬಸವು. ೧-೩೮). [ಕಾರಕ$_2$ + ವಿರಹಿತ]

**ಕಾರಕಿರಿದಿ** 'ಕಾರಕರ್ದಿ' ನೋ.

**ಕಾರಕುಱುವ** (ನಾ). ಒಂದು ಊರಿನ ಹೆಸರು: ತರ್ದವಾಡಿಯ ಬಳಿಯ ಕಾರಕುಱುವಂ ನಾಲ್ವತ್ತಱೊ[ಳ]ಗೆ ಪೆಡ್ಡೊರ್‌ಱಿಯ ಬಡಗಡಟಿಯ ತಂಗೊಡಗೆಯ ಬೀಡಿನೊಳ್ (ಸೌಇಇ. XI-i, ೧೧೬-೧೪; 1075); ಕಾರಕುಱುವದಲು ಮತ್ತೆ ೬ ಯಾಲೂರಲು ಮತ್ತೆ ೪ (ಕೊಲ್ಹಾಶಾ. ೨೧೧-೩೬; 1278). [?]

**ಕಾರಕೂನ**, ಕಾರ್ಕೂನ (ನಾ). ೧. ಗುಮಾಸ್ತ; ಕರಣಿಕ: ಚಿಕ್ಕ ಜೀನಸಿನ ಅಂಗಡಿಯವರಿಗೆ ಕಾರಕೂನರೇಕೆ (ಮೀರಿ. ೫೮); ಕಾರಕೂನ ಸಾವರಿಸಿಕೊಂಡು . . . ಯಾವುದೋ ಫೈಲಿನಲ್ಲಿ ಮಗ್ನನಾದ (ಬೆನ್ನುಹಿಂ. ೧೨); ಕಚೇರಿಯಲ್ಲಿ ಕಾರಕೂನನಾಗಿ ಜಾನಕಿಯ ಕೈಹಿಡಿದನು (ಮುತ್ತೈದೆ. ೯). ೨. ಸುಂಕ ವಸೂಲು ಮಾಡುವವನು: (ಕಿ). **ಕಾರ್ಕೂನ:** ಸರ್ಕಾರದ ಇಲಾಖೆ ಸೀಮೆ ಅಮಲುದಾರ ಕಾರ್ಕೂನರಿಗೆ ಸಹ ಪಂದು ತಾಕೀತು. ಇನಾಯತ ಮಾಡಿಸಬೇಕು (ರಾಜೇಂದ್ರ. ೧೧೬). [← ಪಾರ. ಮರಾ. ಕಾರ್‌ಕೂನ್]

**ಕಾರಕೂನಿ** (ನಾ). = ಕಾರಕೂನಿಕೆ: ಪಾಲಿ ಮತ್ತು ಅವಳ ತಂಗಿ . . . ಕಾರಕೂನಿಯನ್ನು ಮಾಡುತ್ತಿದ್ದರು (ಮಹಾತ್ಮಾ. ೩೧). [← ಮರಾ. ಕಾರಕುನೀ]

**ಕಾರಕೂನಿಕೆ** (ನಾ). ಕಾರಕೂನನ ಕೆಲಸ: ಎಲ್ಲಾದರೂ ಕಾರಕೂನಿಕೆ ಮಾಡಲು ಬರುವುದಿಲ್ಲವೆ (ವಾತ್ಸಲ್ಯ. ೨೪); ಒಂದು ಕಾರಕೂನಿಕೆಗಾಗಿ ಯತ್ನನಡೆಸಿದ್ದರೆ . . . ಎಂಬ ಮಾತಿನ ಓಟ (ಮುಂಗಾಪು. ೧೧೩). [ಕಾರಕೂನ + -ಇಕೆ]

**ಕಾರಕೆಯ್** (ನಾ). = ಕಾರಗದ್ದೆ (?): ಪಿರಿಯ ಕೆಱೆಗೆ ಕಾರಕೆಯ್ಯುಂ ತಿಱಿ ಬಿಟ್ಟೆಯಂ (ಇಎ. ೧೯೪೭, ಹಾನಗ. ೨೧೫-೨೬; 980). [ಕಾರ್$_2$ + ಕೆಯ್$_4$]

**ಕಾರಕ್ಕಿ** (ನಾ). ಕಪ್ಪು ಬಣ್ಣ ಕಟ್ಟಿದ ಅಕ್ಕಿ (?): ಕಾರಕ್ಕಿದಳಿದು ಕೆಂಗೂಳಿಟ್ಟು ನರಗಿತ್ತು ನಾರೆಳೆಗಟ್ಟಿ ನೋಡೆನುತವೆ ಆರುತ ಕುಣಿದು ಬತ್ತಲೆ ಹುರಿಕಾತಿಯರಾ ರುದ್ರಧರೆಯೊಳೊಪ್ಪಿದರು (ಶ್ರೀಪಾಲ. ೮-೧೯). [ಕಾರ್$_3$ + ಅಕ್ಕಿ$_1$]

**ಕಾರಖಾನೆ**, ಕಾರುಖಾನೆ, ಕಾರ್ಖಾನೆ (ನಾ). ಯಂತ್ರಗಳ ಸಹಾಯದಿಂದ ದೊಡ್ಡ ಪ್ರಮಾಣದಲ್ಲಿ ವಸ್ತುಗಳನ್ನು ತಯಾರಿಸುವ ಸ್ಥಳ, —ಸಂಸ್ಥೆ: ನಮ್ಮ ದೇಶದಲ್ಲಿ ಅಲ್ಲಲ್ಲಿಗೆ . . . ಅಚ್ಚು ಹಾಕುವ ಕಾರಖಾನೆಗಳು ಆಗಿವೆ (ಮುಂಬಯಿ. ೪-೨೧೬); ಕಾಸಿಂಬಜಾರಿನಲ್ಲಿ ರೇಷ್ಮೆ ಕಾರಖಾನೆಗಳು ವಿಶೇಷವಾಗಿದ್ದವು.(ಭೂಗೋಳ. ೪೫). **ಕಾರುಖಾನೆ:** (ಕಿ). **ಕಾರ್ಖಾನೆ:** ಕಚೇರಿಗೆ ಅಥವಾ ಕಾರ್ಖಾನೆಗಳಿಗೆ ಕೆಲಸಕ್ಕೆ ಹೋಗುವವರಿಗೆ ಫಲಹಾರ ಕಟ್ಟಿಕೊಡುವುದು (ಅಡುಸೌ. ೧೨೧).

[← ಪಾರ. ಮರಾ. ಕಾರ್‌ಖಾನಾ]

**ಕಾರಖಾನೆದಾರ** (ನಾ). ಕಾರಖಾನೆಯ ಒಡೆಯ: ಕಾರಖಾನೆದಾರರ ದೃಷ್ಟಿಯಿಂದ ಕೂಲಿಕಾರರು ಕ್ಷರರು ಆದರೆ ಅಕ್ಷರರೂ ಆಗಿದ್ದಾರೆ (ಭಾರಸಂ. ೬೨). [ಕಾರಖಾನೆ + -ದಾರ$_4$]

**ಕಾರಗತ್ತಲೆ** 'ಕಾರ್ಗತ್ತಲೆ$_1$' ನೋ.

**ಕಾರಗದ್ದೆ**, ಕಾರುಗದ್ದೆ (ನಾ). ಮಳೆಗಾಲದಲ್ಲಿ ಸಾಗುಮಾಡುವ ಗದ್ದೆ; ಕಾರುಭತ್ತ ಬೆಳೆಯುವ ಗದ್ದೆ: ದೇವರಕೆಱೆಯ ಕೆಳಗೆ ಕಾರಗದೆ . . . ಹುವಿನಗದ್ದೆ (ಎಕ. IX, ಕೊಡಗು. ೩೨-೧೪; 1210). ತಂಮ ಹರಿವರಿಯ ಭೂಮಿಯ ಕಾರಗದ್ದೆಯೊಳಗೆ (ಎಇ. XXVII, ೨೮-೩೧; 1256); ಆನೆಮೊಘೆಯ ಭೂಮಿಯೊಳಗೆ ನಡು ಬೈಲಲೂ ಕಾರಗದ್ದೆ ೧ ಕಂ (ಮೈಆರಿ. ೧೯೩೪, ೧೪-೩; 1516). **ಕಾರುಗದ್ದೆ:** ತಮ್ಮ ಹಿರೇರು ಕಾರುಗದ್ದೆಲಿ ಹನ್ನೆರಡು ಪಲ್ಲ ರಾಗಿ ಬೆಳ್ದಿದ್ರು (ಚಿತಸ. ೧೮). [ಕಾರ್$_2$ + ಗದ್ದೆ (< ಗಱ್ದೆ)]

**ಕಾರಗಪ್ಪೆ** (ನಾ). ಮಳೆಗಾಲದ ಕಪ್ಪೆ: ಗಡರ್ಗಬಕು ಗಬಕುಱಿಹ ಕೆಂದೊಡನೆಂದುವು ಕಾರಗಪ್ಪೆ ಕೆಱೆಗಳ ತಡಿಯೊಳ್ (ಸೂಕ್ತಿಸು. ೧೦-೨೦೨). [ಕಾರ್$_2$ + ಕಪ್ಪೆ$_1$]

**ಕಾರಗಲಸು** 'ಕಾರ್ಗಲಸು' ನೋ.

**ಕಾರಗಲಿಸು** 'ಕಾರ್ಗಲಸು' ನೋ.

**ಕಾರಗಾರ** (ನಾ). = ಕಾರಾಗಾರ: ಸಾಹಸರು ನಿಸಿತ ಕಂಟಕ ಕಲಿನ ವಿಡಿದು ಮುಂಬಲಿಗೆದೆಗೆದು ಅಹವೆನುವರಿಗೆ ಕೇಸರಿ ಕಾರಗಾರದಿಂ ಬಾಹಿರಕೆ ಬಹತುಲ್ಯದಿಂದ ಹೇಷಾರವದಿ ಕಾಹ ನಯನಗಳಿಂದ ಹೊರಡಲಿಟ್ಟರು ಖಲಿನಲೋಹಮಂ ಖಳ್ಳಿದುಗುಳಲು (ಜಿನಮು. ೫-೪೯).

[< ಸಂ. ಕಾರಾಗಾರ]

**ಕಾರಗಿಲ್**, ಕಾರಗಿಲು (ನಾ). ಕಪ್ಪು ಅಗಿಲು; ಕೃಷ್ಣಾಗರು; ಒಂದು ಸುಗಂಧ ದ್ರವ್ಯ: ಲೇಪಿಸಿದ ಕಾರಗಿಲ (ರೇವಣ. ೨೯-೩೬); ಪೊಂಬರಣೆಯ ಮೇಲೇನಿದು ತುಂಬಿಯ ಕೆತ್ತುರಿಯ ಬೊಟ್ಟೆ ಕಾರಗಿಲಣ್ಪೇ (ಚಿಕವಿ. ೬-೫೧). **ಕಾರಗಿಲು:** "ಕಾಲಾನುಸಾರ್ಯ = ಕಾರಗಿಲು" (ಬಾಹಟೀ. ೨-೨-೫೧ ವ). [ಕಾರ್$_3$ + ಅಗಿಲ್]

**ಕಾರಗಿಲು** 'ಕಾರಗಿಲ್' ನೋ.

**ಕಾರಗಿಲ್ದೂಳ್** (ನಾ). ಕಪ್ಪು ಅಗಿಲಿನ ಧೂಳು; ಕೃಷ್ಣಾಗರುವಿನ ಹುಡಿ: ಕಾಳಿಂದೀ ಜಲದಿಂದಮೇಂ ತೊಳೆದನೊ ತಣ್ಪಟ್ಟನೋ ಕಾರಗಿಲ್ದೂಳಿಂ . . . ಎಂಬಾಳಾಪಕ್ಕೆಡೆಯಾಗಿ ಮೂಜಗಮದೇನೊಪ್ಪಿತ್ತೊ ಪೆರ್ಮರ್ಬಿನಿಂ (ಚಿಕವಿ. ೬-೧೨).

[ಕಾರಗಿಲ್ + ದೂಳ್]

**ಕಾರಗೆಣಸು,** ಕಾರ್ಗೆಣಸು, ಖಾರಗೆಣಸು (ನಾ). ಅಲ್ಲ; ಹಸಿಶುಂಠಿ: ಮಾಮಿಡಿ ಕಾರಗೆಣಸು ನೀರುಳ್ಳಿಯುಪ್ಪುಮನವಜೊಳೊಡಬೆರಸಿ (ಸೂಪಶಾ. ೨-೧೬); ಮೂಲಂಗಿ ಮೂಗುಳಿ ಉಳ್ಳಿ ಕಾರಗೆಣಸು ಕಜ್ಜುರಿಯ ಸಣ್ಣನಂ ಸವಿದು (ಸಮ್ಯಕೌ. ೭-೨೮); ಆ ಕಟ್ಟೆಯಲು ಕಬ್ಬು ಕಾರಗೆಣಸು ಯೇನಾದರೂ ಬಿತ್ತಿಕೊಂಬಿರಿ (ವ್ಯೆಆರಿ. ೧೯೩೪, ೪೬-೭; 1637); ಒಂದು ಗುಳಿಗೆಯು ಕಾರಗೆಣಸಿನ ರಸದಿಂದ ಕೊಡಿಸಲು ಸಕಲಜ್ವರ . . . ಶಮನ (ವೈದ್ಯಸಾ. I, ೧೦೫). **ಕಾರ್ಗೆಣಸು:** ಅಂಬೆ ಹಳದಿ ಕಾರ್ಗೆಣಸು ನೀರುಳ್ಳಿ ಕೊತ್ತುಂಬರಿ ಕರಿಬೇವು ಸಹಿತ (ಮೋಹತ. ೪-೭೦). **ಖಾರಗೆಣಸು:** ಉಪ್ಪುಮೆಣಸು ಶುಂಠಿ ಏಲಕ್ಕಿ ಖಾರಗೆಣಸು ಯಿಪ್ಪನೂ ಕೊಡಿಸಿ ದಧ್ಯೋಹ್ನದ ಹರಿವಾಣವೊಂದು (ಸೌಇಇ. IX–ii, ೫೦೫-೭; 1517); ಖಾರಗೆಣಸು ತಿಂದು ಧ್ವನಿ ಹದ ಮಾಡಿಕೊಂಡು ಹಾಡಲಿಕ್ಕೆ ಬಂದಿದ್ದಳು (ಗಂಮಾಯಿ. ೩೮).

[ಕಾರ್‌$_2$ + ಗೆಣಸು (< ಗೆಬಿಸು)]

**ಕಾರಡಕೆ** (ನಾ). ಮಳೆಗಾಲದಲ್ಲಿ ಫಲವಾಗುವ ಅಡಕೆ; ಕಪ್ಪು ಬಣ್ಣದ ಅಡಕೆ (?): ಧರ್ಮಕ್ಕೆ ಬಿಟ್ಟ ಕಾರಡಕೆ (ಕಇ. V, ೧೯-೧೯; 1121); ದೇವರ ಪೂಜೆಗೆ ಅಜವಂಟಗೆಗಂ ಬಿಟ್ಟ ಧರ್ಮವೆಂತೆಂದಡೆ ಪೇಳಿಯಲು ಪಣವಯ್ದು ಕಾರಡಕೆ ಮೆಳಸಿನ ಪೇಜಿಂಗೆ ಅರೆವೀಸೆ (ಸೌಇಇ. IX–i, ೨೨೩-೪೪; 1127); ವಾಡಿ ವಾದಿವಾರದಂದು ಕಾರಡಕೆ ಮೆಳಸಿನ ಎತ್ತಿನ (ಇಎ. ೧೯೪೮, ಹಾಸಗ. ೧೭೬-೪೨; ?).

[ಕಾರ್‌$_2$ + ಅಡಕೆ$_1$]

**ಕಾರಡಗು** (ನಾ). ಕಪ್ಪಾದ ಮಾಂಸ; ಕಪ್ಪಿಟ್ಟ ಮಾಂಸ (?): ಕಡಂಗುವರ ಕಾರಡಗಂ ತಿನುತಿಪ್ಪ ಭೈರವಂ (ಕಇ. IV, ೧೧-೨೦; 1121); ಮಾಳವನಳ್ಳಿದುಳ್ಗೆ ಖಜನೀರಿಗೆ ಪಾಂಡ್ಯನ ಕಾಳಿಜಕ್ಕೆ ನೇಪಾಳನ ಬೆನ್ನ ಸುಂಟಗೆಗೆ ಚೋಳನ ಕಾರಡಗಿಂಗೆ . . . ಕಾಯ್ದು ಖಳ್ಗಮಾಕಾಳಿ ಯಡುರ್ತು ನಿಕ್ಕುವಳು ನಾಲಗೆಯಂ ನರಸಿಂಹಭೂಪನಾ (ಎಕ. IV, ಹುಣಸೂ. ೧೪೭-೧೭; 1162).

[ಕಾರ್‌$_3$ + ಅಡಗು$_3$]

**ಕಾರಡವಿ** (ನಾ). ಕತ್ತಲೆ ಮುಸುಕಿದ ಕಾಡು; ದಟ್ಟವಾದ ಅಡವಿ: ಕಾರಡವಿ, ಪೇರೊಕ್ಕಲ್, ಕಾರಿರುಳ್ (ಭಾಷಾಭೂ. ೧೪೫ ಉದಾ); ಕಾರಡವಿಯೊಳಬಿದಾವಿನ ಹೇರೊಡಲೊಳ್ (ದಶಕು. ೧೦-೧೪); ದೇವಿಯುಂ ಕಾರಡವಿಯೊಳು ಬಿದು ಲಕ್ಷ್ಮಣಂ ಪೋದನೆಂಬೊಡೆ (ರಾಮಾಶ್ವ. ೨೨-೧೪); ಅವಳ ಮನಸ್ಸು . . . ಭೂತಕಾಲದ ಕಾರಡವಿಯೊಳಗೆ ನುಗ್ಗಿ ಬಹುದೂರ ಹೋಯಿತು (ನಡೆದಾ. II, ೧೧೨೭).

[ಕಾರ್‌$_3$ + ಅಡವಿ]

**ಕಾರಡಿ** (ನಾ). (?): ಅಂಕಟಗದ್ದೆ ಕಾರಡಿಯ ಗದ್ದೆಯ ಮೇಲಣ (ಸೌಇಎ. ೧೯೩೦, ಕುಂದಾಪು. ೫೩೭-೩೦; 1371). [?]

**ಕಾರಣ$_1$** (ನಾ). ೧. ನಿಮಿತ್ತ; ಹೇತು; ಸಾಧನ: ಪರಲೋಕಮೆಂಬುದಾವೆಡೆಯದು, ಅದರ್ಕೆ ಕಾರಣಮುಪ್ಪ ಪಾಪ ಪುಣ್ಯಂಗಳೆತ್ತಣಿಂ ಬಂದುವು? (ಆದಿಪು. ೨-೯ ವ); ಪ್ರತಿಭಾನಂ ಕಾವ್ಯವಿದ್ಯಾಪ್ರಚಯ ಪರಿಚಯಂ ವೃದ್ಧಸೇವಾನುರಾಗಂ ಸತತಾಭ್ಯಾಸಪ್ರಯುತ್ನಂ ಕವಿತೆಗೆ ನಿಯತಂ ಕಾರಣಂ (ಕಾವ್ಯಾವ. ೪೨೪). ೨. ಉದ್ದೇಶ: ಒಲಿದು ನಿನ್ನನು ಭಜಿಸುವವರಿಗೆ ಕೊಲೆಗೆ ಕಾರಣವೇನು (ಹರಿಸಾ. ೫೭). ೩. ಆರಾಧ್ಯ ದೇವತೆ; ತಂದೆ: ಕಿಕ್ಕರೆಲ್ಲರೂ ಕಾರಣರಿಗೆ ಅಡ್ಡಬಿದ್ದರು (ಹುಲಿಹಾ. ೧೫೦). ೪. ಪ್ರಯೋಜನ; ಅಗತ್ಯ; ಆವಶ್ಯಕತೆ: ಮುಂದೆ ಕಾರಣವುಂಟೆನುತ ಸಂಕ್ರಂದನನು ಬಳಿಕಾ ಧನುವ ನಿಜಮಂದಿರದಲಿರಿಸಿದನಲ್ಲೆ ವಧೆಗರಿದಶಾನನನ (ತೊರರಾ. ೧-೧೭-೨೧). 'ಕಾರಣಬೀಳು' ಪರಾ. ೫. ಒಂದು ಮಹತ್ತರ ಕಾರ್ಯಕ್ಕಾಗಿ ಅವತಾರ ಮಾಡಿದ ಜೀವ. 'ಕಾರಣಕನ್ಯೆ', 'ಕಾರಣಪುರುಷ' ಪರಾ. ೬. ಮದುವೆಯೇ ಮೊದಲಾದ ಶುಭ ಸಮಾರಂಭ: ಅನಂತ ಹೆಚ್ಚಿಗೆ ಹೇಳದೆ ಕಾರಣಕ್ಕೆ ಹೋಗಬೇಕಾಯಿತು (ನಿಸರ್ಗ. ೨೨೧). ೭. ಶಿವಾಗಮಗಳಲ್ಲಿ ಒಂದು: ಕಾಮಿಕ, ಯೋಗಜ, ಅಂಚಿತ್ಯ ಕಾರಣ, ಅಜಿತ . . . ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಭಾರದ. ೬೨). 'ಕಾರಣಾಗಮ' ಪರಾ. ೮. ದೇಹದ ಮೂರು ಪ್ರಕಾರಗಳಲ್ಲಿ ಒಂದು: ಸ್ಥೂಲ, ಸೂಕ್ಷ್ಮ, ಕಾರಣವೆಂಬ ತನುತ್ರಯವನಜಿತು (ಮೋಳಿಮಾ. ೧೫೦-೫೭೦); ಕಳೆಯತಕ್ಕ ಶರೀರಗಳು ಸ್ಥೂಲವೆಂದೂ, ಸೂಕ್ಷ್ಮವೆಂದೂ, ಎರಡೇ ಅಲ್ಲದೆ ಕಾರಣವೆಂದಿನ್ನೊಂದೂ ಉಂಟೆಂದೂ ದೇಹಗಳನ್ನು ಮೂರಾಗಿ ವಿಂಗಡಿಸುವುದು ರೂಢಿ (ಅನ್ವಿತ. ೩-೩೮ ಟೀಕು). ೯. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು: ಕಾರ್ಯದೊಡನೆ ಹೇಳಿರುವ ಕಾರಣ ವರ್ಣನೆ ಕಾರಣಾಲಂಕಾರವಾಗುವುದು (ಕೈಪಿಡಿ. ೨೮೩). ೧೦. ಹಿಂಸೆ; ಯಾತನೆ: "ಯಾತನಂ ಕಾರಣಂ ದಂಡಣೆ(ನೆ)ಯೆನಿಕ್ಕು" (ಮಂಗರಾ. ೧೧೬-೧).

[ಸಂ.]

**ಕಾರಣ$_2$** (ಅ). ೧. ಆದುದರಿಂದ; ತತ್ಪರಿಣಾಮವಾಗಿ: ಕಾಲಾವಕಾಶ ಕಡಮೆ, ಕಾರಣ ನೀನು ತ್ವರೆ ಮಾಡಬೇಕು (ರೂಢಿ). ೨. ಓಸ್ಕರ; ಸಲುವಾಗಿ; ದೆಸೆಯಿಂದ: (ಶಿ). 'ಆದಕಾರಣ' ಪರಾ.

[< ಕಾರಣ$_1$]

**ಕಾರಣಂಬೇೞ್** (ಕ್ರಿ). ಕಾರಣವನ್ನು ಹೇಳು: ಅಱುತ್ತುಂ ಬಂದು ಗಾಂಗೇಯ ಧೃತರಾಷ್ಟ್ರರ್ಗೆ ಕಾರಣಂಬೇೞ್ದೊಡೆ (ಪಂಪಭಾ. ೨-೩೧ ವ).

[ಕಾರಣ$_1$ + ಪೇೞ್$_1$]

**ಕಾರಣಕನ್ನೆ** (ನಾ). ಒಂದು ಮಹತ್ತರ ಕಾರ್ಯಸಾಧನೆಗೋಸ್ಕರ ಅವತಾರ ಮಾಡಿದ ದೇವತಾಸ್ತ್ರೀ: ಆ ಲತಾಂಗಿಯ ರೂಪುರೇಖಾ ಜಾಲವನು ಚೆನ್ನಾಗಿ ತಿಳಿದು ಕೃಪಾಳು ನಿಶ್ಚೈಸಿದನು ಕಾರಣಕನ್ನೆಯಿವಳೆಂದು (ಪ್ರಭುಲೀ. ೩-೭೯). [ಕಾರಣ$_1$ + ಕನ್ನೆ$_1$]

**ಕಾರಣತಂತ್ರ** (ನಾ). ಕಾರಣಾಗಮದ ಏಳು ಭೇದಗಳಲ್ಲಿ ಒಂದು: ಕಾರಣತಂತ್ರ ಪಾವನತಂತ್ರ . . . ಈಶಾನತಂತ್ರವೆಂದು ಕಾರಣಾಗಮದ ಸಪ್ತಭೇದಂಗಳು (ವಿವೇಕ. ೭೦). [ಕಾರಣ$_1$ + ತಂತ್ರ]

**ಕಾರಣತನು** (ನಾ). ಜೀವಾತ್ಮನ ಸ್ಥೂಲ ಹಾಗು ಸೂಕ್ಷ್ಮ ಶರೀರಗಳಿಗೆ ಕಾರಣವಾದ ಅವಿದ್ಯೆ: ಸ್ಥೂಲತನು ಗುರುವಿಂಗೆ ಭಿನ್ನ ಸೂಕ್ಷ್ಮತನು ಲಿಂಗಕ್ಕೆ ಭಿನ್ನ ಕಾರಣತನು ಜಂಗಮಕ್ಕೆ ಭಿನ್ನ (ಮೋಳಿಮಾ. ೧೨೯-೫೦೧); ಎನ್ನ ಕಾರಣತನುವೆಂಬ ಕೈಲಾಸದ ಮೇಲೆ . . . ಕೇವಲ ಅದೃಶ್ಯ ಲೀಲೆಯನಾಡುವಾತನು ನೀನೆ ಅಯ್ಯ (ಅಖಂಡೇ. ೨೪೦-೮೬). 'ಕಾರಣಶರೀರ' ಪರಾ. [ಕಾರಣ$_1$ + ತನು$_2$]

**ಕಾರಣತೆ** (ನಾ). ಕಾರಣವಾಗಿರುವಿಕೆ: ಪ್ರಪಂಚದ ಉತ್ಪತ್ತಿ, ಸ್ಥಿತಿ, ಲಯಗಳ ಕಾರಣ ಬ್ರಹ್ಮವೆಂದು ತಿಳಿದೆವು. ಈ ಕಾರಣತೆಯೂ ಬ್ರಹ್ಮದಲ್ಲಿ ಕಲ್ಪಿತ (ಭಾರದ. ೨೩೩). [ಸಂ. ಕಾರಣತಾ]

**ಕಾರಣತ್ವ** (ನಾ). = ಕಾರಣತೆ: ಅರ್ಥವಾದಗಳೂ . . . ಬೇರೆಯ ಅರ್ಥವುಳ್ಳವಾಗಿ ದೇವಾದಿಗಳಿಗೆ ವಿಗ್ರಹಾದಿಗಳು ಉಂಟೆಂಬುದಕ್ಕೆ ಕಾರಣತ್ವವನ್ನು ಪಡೆಯಲಾರವು (ಬ್ರಹ್ಮಭಾ. ೪೯೪); ಹೀಗೆ ಸತ್ತ್ವ ದ್ರವ್ಯತ್ವಕಾರ್ಯತ್ವ ಕಾರಣತ್ವ ಮೊದಲಾದ ಸರ್ವವಿಷಯಗಳಲ್ಲೂ ಅನೇಕಾಂತವಾದವಿರುವುದು (ಹಿಂದಸಾ. ೭೭). [ಸಂ.]

**ಕಾರಣಪುರುಷ** (ನಾ). ೧. ಎಲ್ಲಕ್ಕೂ ಮೂಲಕಾರಣನಾದ ಪುರುಷ; ಪರಬ್ರಹ್ಮ: ಈ ಕಾರಣಪುರುಷನಿಂದ ವಿರಾಟ ಜನಿಸಿದನು. ಅವನಿಂದ ಈ ಕಾರ್ಯಪುರುಷನು ಜನಿಸಿದನು (ಭಾರದ. ೨೬).

೨. ಪ್ರೇರಕನಾದ ವ್ಯಕ್ತಿ ; ಕಾರಣನಾದ ಪುರುಷ: ಈ ಹೋರಾಟಕ್ಕೆ ವಿದ್ಯಾರಣ್ಯ ಮುನೀಂದ್ರರು ಕಾರಣಪುರುಷರಾಗಿ ನಿಂತಿದ್ದರು (ರಾಜ್ಯೋದ. ೨೦೫). ೩. ಅವತಾರ ಪುರುಷ ; ಮಹಾತ್ಮ: ಕಾರಣ ಪುರುಷರಿವರ್ ಸಾಧಾರಣರಲ್ಲರ್ (ಪಂರಾಮಾ. ೭-೩೯) ; ಉದ್ಧರಿಸು ಕಾರಣಪುರುಷ ಸರ್ವಜ್ಞ ಭಕ್ತಧುರೀಣ ನೀನೆನ್ನ (ಬಸವು. ೨೨-೬).
[ಕಾರಣ$_1$ + ಪುರುಷ]

**ಕಾರಣಬೀಳು** (ಕ್ರಿ). ಅವಶ್ಯವಾಗು ; ಅಗತ್ಯಬೀಳು : ವ್ಯವಹಾರದಲ್ಲಿ ಆಗಾಗ್ಗೆ ಅವುಗಳ ಕಾರಣ ಬೀಳುತ್ತದೆ (ಮುಂಬಯಿ. ೪-೮೮); ನನ್ನ ತಿಗಟೆಯನ್ನು ಮನೆಯಲ್ಲಿ ಮರೆತುಹೋಗಿದ್ದೆ. ಮುಂದೆ ಅದರ ಕಾರಣ ಬಿದ್ದುದರಿಂದ (ಮುಂಬಯಿ. ೪-೧೧೦).
[ಕಾರಣ$_1$ + ಬೀಳು$_1$ (< ಬೀೞ್$_1$)]

**ಕಾರಣಭಾವನೆ** (ನಾ). [ಜೈನ] ದರ್ಶನ ವಿಶುದ್ಧಿಯೆ ಮೊದಲಾದ ಹದಿನಾರು ಭಾವನೆ : ಈ ಹದಿನಾರು ಭಾವನೆಗಳು ತೀರ್ಥಂಕರ ಪದವು ಪ್ರಾಪ್ತವಾಗಲಿಕ್ಕೆ ಕಾರಣವಾಗಿರುವುದರಿಂದ 'ಕಾರಣಭಾವನೆ 'ಗಳೆಂದೂ ಇವುಗಳನ್ನು ಕರೆಯುವರು (ಜೈನಪ. ೫೭೧). [ಕಾರಣ$_1$ + ಭಾವನೆ]

**ಕಾರಣಮಾಲೆ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು : ಸಮಾಸೋಕ್ತಿ . . . ಕಾರಣಮಾಲೆ, ಏಕಾವಳೀ . . . ಉದಾತ್ತಾದ್ಯಲಂಕಾರಗಳೊಡಗೂಡಿ (ವಿವೇಕ. ೨೨೫). [ಕಾರಣ$_1$ + ಮಾಲೆ]

**ಕಾರಣಮೀಮಾಂಸೆ** (ನಾ). ಕಾರ್ಯ, ಕಾರಣಗಳ ಸಂಬಂಧದ ವಿವೇಚನೆ : ಮಗುವಾದರೋ ಪರಿಣಾಮವನ್ನು ಮಾತ್ರ ಕಾಣುತ್ತಾನೆ. ಕಾರಣಮೀಮಾಂಸೆಯು ಅವನ ಅಳವಿಗೆ ಮೀರಿದ್ದು (ಕಥಕ. ೯೩).
[ಕಾರಣ$_1$ + ಮೀಮಾಂಸೆ]

**ಕಾರಣಮೂರ್ತಿ** (ನಾ). = ಕಾರಣಪುರುಷ. ೩ : ತೆಲುಗ ಬೊಮ್ಮಯನೆನಲು ಲೋಕಂಗಳಿಗೆ ಕಾರಣಮೂರ್ತಿಯಾತನ ಬಲುಸರಳಿನಿಂ ಮರಣವದು ಸಿದ್ಧಿಸಿದೊಡಂ ನಿಮಗೆ ಫಲವಹುದು (ಬಸವು. ೩೪-೧೪).
[ಕಾರಣ$_1$ + ಮೂರ್ತಿ]

**ಕಾರಣಯೋಗಿ** (ನಾ). ಒಂದು ನಿಮಿತ್ತಕ್ಕಾಗಿ ಯೋಗಿಯಾದ ಜೀವ : ಹೋ ಮಾಣು ಕಾರಣಯೋಗಿ ವೇದಪಿತಾಮಹಾ ಎನಲಧ್ಯಯನ ನುಡುಗಿ (ಬಸವು. ೫೫-೫೨).
[ಕಾರಣ$_1$ + ಯೋಗಿ]

**ಕಾರಣರೂಪ** (ನಾ). ೧. [ದ್ವೈತ] ಭಗವಂತನ ಆರು ರೂಪಗಳಲ್ಲಿ ಒಂದು : ಭಗವದ್ರೂಪಗಳಲ್ಲಿ ಕಾರಣರೂಪ, ಅಂತರ್ಯಾಮಿರೂಪ, ಸ್ಥೂಲರೂಪ, ಅವತಾರರೂಪ, ವ್ಯಾಪ್ತರೂಪ, ಅಂಶರೂಪಗಳೆಂದು ಆರು ವಿಧಗಳುಂಟು (ಹಸಾರ. ೧೩-೨೭ ಟಿಪ್ಪಣಿ). ೨. [ದ್ವೈತ] ಜಗತ್ ಸೃಷ್ಟಿಗೆ ಕಾರಣವಾದ ವಿಷ್ಣುವಿನ ಐದು ಬಗೆಯ ರೂಪ: ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ಎಂಬೀ ೫ ರೂಪಗಳು ಕಾರಣರೂಪಗಳೆನಿಸುವವು (ಹಸಾರ. ೧೯-೨, ಟಿಪ್ಪಣಿ). ೩. [ವಿಶಿಷ್ಟಾ] ಬ್ರಹ್ಮನಿಗೆ ಬರುವ ಐದು ಅವಸ್ಥೆಗಳಲ್ಲಿ ಒಂದು : ಪರಬ್ರಹ್ಮನು ಸಮುದ್ರದಂತೆ ಅಪ್ರಚಲಿತಸ್ವಭಾವದಲ್ಲಿ ಅಕ್ಷರನೆಂದು ಕಾರಣರೂಪದಲ್ಲಿರುವನು (ಹಿಂದಸಾ. ೨೩೩).
[ಕಾರಣ$_1$ + ರೂಪ]

**ಕಾರಣವ** (ನಾ). ಮನೆತನದ ಮುಖ್ಯಸ್ಥ ; ಪೂರ್ವಿಕ ; ಪೂರ್ವಜ : ಪ್ರಾಕು ನಿಂಮ ಕಾರಣವರಂನು ನಂಮ ಕಾರಣವರು ಕೊಂದ ಪಾಪ ಪರಿಹಾರ ಉದ್ದಿಶ್ಯ ಪೆರಮಾಳು ಭಗವತಿಗೆ ನಾವು ಬಿಟ್ಟುಕೊಟ್ಟದ್ದು (ರಾಜೇಂದ್ರ. ೧೯).
[← ತಮಿ. ಮಲ. ಕಾರಣವನ್]

**ಕಾರಣಶರೀರ** (ನಾ). [ಅದ್ವೈತ] = ಕಾರಣತನು : ಈ ಶರೀರವು ಸ್ಥೂಲಶರೀರವೆನುತಲೂ ಸೂಕ್ಷ್ಮಶರೀರವೆನುತಲೂ, ಕಾರಣಶರೀರವೆನುತಲೂ ಮೂಱು ವಿಧಗಳು (ವೇಸಾರ. ೨) ; ಇಂತಹ ಸೂಕ್ಷ್ಮ ಸ್ಥೂಲ ಶರೀರಕ್ಕೆ ಕಾರಣವಾಗಿರುವ ಅವಿದ್ಯೆ ಎಂಬ ಅಜ್ಞಾನವೇ ವ್ಯಷ್ಟಿ ದೃಷ್ಟಿಯಿಂದ ಜೀವಾತ್ಮನಿಗೆ ಕಾರಣಶರೀರವಾಗಿಯೂ (ಹಿಂದಸಾ. ೧೯೨).
[ಕಾರಣ$_1$ + ಶರೀರ]

**ಕಾರಣಾಂತರ** (ನಾ). ಬೇರೆಯ ಕಾರಣ; ವಿಶಿಷ್ಟವಾದ ಕಾರಣ : ಅದರಲ್ಲಿ ತಪ್ಪೇನಮ್ಮ ? . . . ಕಾರಣಾಂತರದಿಂದ ಸಂಬಂಧ ಕೂಡಿಬರಲಿಲ್ಲ (ಮೂರುದಾ. ೧೨೦). [ಸಂ.]

**ಕಾರಣಾಗಮ** (ನಾ). ಆಗಮಗಳಲ್ಲಿ ಒಂದು : ಕಾಮಿಕಾಗಮ . . . ಕಾರಣಾಗಮ . . . ವಾತೂಲಾಗಮವೆಂಬ ಇಪ್ಪತ್ತೆಂಟು ದಿವ್ಯಾಗಮಗಳಕ್ಕುಂ (ವಿವೇಕ. ೬೮). [ಕಾರಣ$_1$ + ಆಗಮ]

**ಕಾರಣಾತ್ಮಕ** (ನಾ). = ಕಾರಣಪುರುಷ : ಕಾರಣಾತ್ಮಕನೆನಿಸಿ ಮರುಳರ ಸಾರನೊಳಗೊಲಿಸೆಲ್ಲರಿಗೆ ಲಿಂಗಧಾರಗೈದೆಯ ಬಸವಪನಿನ್ನೇಗೈಲಿ (ಬಜ್ಜವು. ೬೨-೩೮). [ಕಾರಣ$_1$ + ಆತ್ಮಕ]

**ಕಾರಣಿಕ** (ಗು). ೧. ಕಾರಣವಾದ; ಉತ್ಪಾದಕವಾದ; ಕಾರಕವಾದ. ೨. ಕಾರಣವನ್ನು ಹುಡುಕುವ ; ಕಾರಣವನ್ನು ದೃಢಪಡಿಸುವ. (ನಾ). ೩. ಇತರರ ಅಭಿಪ್ರಾಯವನ್ನು ತಿದ್ದಿ ಸರಿಪಡಿಸುವವನು ; ಪರೀಕ್ಷಕ ; ವಿಮರ್ಶಕ : "ಪರೀಕ್ಷಕಃ, ಕಾರಣಿಕಃ – ಈ ೨ ವಿಚಾರಮಂ ತಿರ್ದುವಾತಂ " (ಹಲಾಯು. ೬೪-೨೩೫); "ಕಾರಣಿಕನೆನೆ ಪರೀಕ್ಷಕನೆನಲು ಸರ್ವರ ವಿಚಾರವಂ ತಿದ್ದುವವನೆನಿಕು " (ಮಂಗರಾ. ೬೨-೨೩) ; ವನಜಭವ ಕಾರಣಿಕನಿಹನಾತಗುಸುರ್ದಪೆವು (ಪ್ರೌಢರಾ. ೧೧-೧೨) ; ಸಾರಗುಣಿಯಾಗು ನಿಜನ ತಿಳಿ ಸರುವರೊಳು ಕಾರಣಿಕನಾಗು (ಸರ್ವಜ್ಞ. ೧೫೫೮). ೪. ಒಂದು ಉದ್ದೇಶ ಅಥವಾ ಕಾರ್ಯಸಾಧನೆಗಾಗಿ ಜನ್ಮ ಧರಿಸಿದವನು ; ಕಾರಣಪುರುಷ : ಮತ್ಸರವಿಲ್ಲದ ಮಹಿಮನು, ಕರ್ಮವಿಲ್ಲದ ಕಾರಣಿಕನು (ಚೆನ್ನವ. ಕ.೧೩೨೦); ಧಾರುಣಿಗೆ ಕಾರಣಿಕನಪ್ಪ ಬಸವಂ ಸಂಗಸುಖದಿಂದಿರ್ಪಲ್ಲಿ (ಬಸರ. ೨-೧). ೫. ಉಪಾಧ್ಯಾಯ ; ಗುರು ; ಶಿಕ್ಷಕ. ೬. ಉದ್ದೇಶಪೂರ್ವಕವಾಗಿ ಮಾಡಿದುದು ; ಕುತಂತ್ರ : ಮರುತಸುತ ನೀ ಕೇಳು ಕೌರವ ಧರಣಿಪನ ಕಾರಣಿಕವಲ್ಲವೆ (ಕುವ್ಯಾಅ. ಓ೦೩. ೨೧-೧೦೦). ೭. ಅದ್ಭುತ ಕೃತ್ಯ ; ಪವಾಡ ; ಮಹಾತ್ಮ್ಯ : ಅಮ್ಮನವರ ಅಗಾಧ ಕಾರಣಿಕವನ್ನು ಕಂಡವರಿಗಿಂತಲೂ ಅಧಿಕವಾಗಿ ಅವನು ಬಣ್ಣಿಸಬಲ್ಲ. (ಸ್ವಪ್ನಹೊ. ೩೯). ೮. (ಉಕ) ಕೆಲವು ದೇವಸ್ಥಾನಗಳ ವಾರ್ಷಿಕ ಉತ್ಸವದಲ್ಲಿ ದೈವಾವೇಶದಿಂದ ಪೂಜಾರಿ ಹೇಳುವ ಭವಿಷ್ಯಸೂಚಕ ವಾಕ್ಯ. [ಸಂ.]

**ಕಾರಣಿಕಪುರುಷ** (ನಾ). = ಕಾರಣಪುರುಷ. ೧. ವಾರಣಾಸಿಗೆ ಹೋಹ ಕಾರಣವದೇನಯ್ಯ ಕಾರಣಿಕಪುರುಷನೊಳಗಿರಲು ಅಲೆವುದಕೆ ಕಾರಣವ ಹೇಳು (ಸರ್ವಜ್ಞ. ೩೭೫). [ಕಾರಣಿಕ + ಪುರುಷ]

**ಕಾರಣಿಕೆ** (ನಾ). ಮಹಿಮೆ ; ಮಹಾತ್ಮ್ಯ ; ಅದ್ಭುತ ಶಕ್ತಿ.'ಕಾರ್ಯ ಕಾರಣಿಕೆ ' ಪರಾ. [ಕಾರಣ$_1$ + ಇಕೆ / ತುಳು. ಕಾರಣಿಕ, ಕಾರ್ಣಿಕೊ]

**ಕಾರಣೀಕ** (ನಾ). = ಕಾರಣಿಕ. ೩. ಭೂತಳದೊಳಿಹ ಕಾರಣೀಕರ ನೀತರದಲವರಿಗುಚಿತಜ್ಞಾನ ಮಾರ್ಗದಲಿ ಓತು ಸದ್ಯೋನ್ಮುಕ್ತರೆನಿಸಿದನು (ಪ್ರಭುಲೀ. ೨೦-೪೪). [ಸಂ. ಕಾರಣಿಕ]

**ಕಾರಣೆ$_1$** ಕಾರಳೆ, ಕಾರುಳಿ, ಗಾರಣೆ (ನಾ). ಮನೆಯಗೋಡೆಗೆ ಕೆಳಭಾಗದಲ್ಲಿ ಬಣ್ಣದಿಂದ ಎಳೆಯುವ ಗೆರೆ ; ಮೇಜುಕಟ್ಟು : ಕತ್ತುರಿಯ ಸಾರಣೆಯಿಂ ಕುಂಕುಮದ ಕಾರಣೆಯಿಂ (ನಂಬಿರ. ೧೦-೫೮) ; ಮಾಂಸದ ಭಿತ್ತಿಗೆ . . . ರಕ್ತದ ಸಾರಣೆ, ಮಜ್ಜೆಯ ಕಾರಣೆ (ಆದವ. ೩೩);

ಕುಂಕುಮದ ರಸಗಳ ಕಾರಣೆಯ ನವಚಿತ್ರಪತ್ರದ ಬಹಳ ಭಿತ್ತಿಗಳ (ಕುವ್ಯಾವಿ. ೧೦-೪೮); ರಕ್ತಚಂದನದಲ್ಲಿ ಸಾರಣೆಕಾರಣೆ (ಭರಚ. ೨೦-೧೨೬); ರಂಗುಕಾರಣೆಯಿಡುವ ನಾರಿ ಇಲ್ಲ (ಅರುಣ. ೧೫). **ಕಾರಳೆ:** 'ಕಾರಳೆಗೊಳಿಸು' ಪರಾ. **ಕಾರುಳಿ:** ಸಾರಣೆಯ ಕಾರುಳಿಯ ರಂಗವಲಿಯ ಪೂವಲಿಯ ಕೇಸರದೊಳ್ (ಅನಂಪು. ೬-೪೧೧). **ಗಾರಣೆ:** (ಕಿ). [?]

**ಕಾರಣೆ$_2$** (ನಾ). ಹಿಂಸೆ; ಯಾತನೆ: (ಕಿ). [ಸಂ. ಕಾರಣಾ]

**ಕಾರಣೆಗೊಳ್** (ಕ್ರಿ). ಕಾರಣೆಯನ್ನು ಇಡು; ಕಾರಣೆಯಲಂಕಾರ ಮಾಡು: ಕಾರಣೆಗೊಂಡು ಕುಂಕುಮದಿಂದ ಸಾದಿನ ಸಾರಣೆಯನು ಮಾಡಿದರು (ಅಂಜಚ. ೫-೬೧); ಕಾರಣೆಗೊಂಬುದು ಕೇರಿಗಳನು ಸರ್ವ ನಾರಿಯರತಿಸಂಭ್ರಮದಿ (ಅಂಜಚ. ೧೧-೨೬೮). [ಕಾರಣೆ$_1$ + ಕೊಳ್$_1$]

**ಕಾರತಯ** (ನಾ). (?): ಪೇಳುವೊಡೆ ಕೇಮಿ ಅರಯೆ ಮುದ್ದಣಂ ಪಯಣ ಮೂಲಿತಿ ಪರಯ ಮಾರಯಕಾಳ ತಿಮ್ಮ ಸಗಾಳ ಮೇಲೊಂದಱಿಂ ಹತ್ತು ದಶಕಂಸ ಕಾರತಯನಗರೆಯಾಗಿ ತೇಯುಂ [ಪಾಠಾಂ. ತಾರತೆಯನಗರಿಯಾಗಿತೆಯಂ] (ಮಂಗರಾ. ೧೦೨-೪). [?]

**ಕಾರತುಂಡು** (ನಾ). ಒಂದು ಸ್ಥಳದ ಹೆಸರು: ಭೈರವದೇವಗಳಿಗೆ ವ್ರಿತ್ತಿ ೧ಕ್ಕಂ ಕಾರತುಂಡು ೪೦೦ ಅಡಕೆಯಮರ (ಎಕ. VIII, ತೀರ್ಥಹ. ೧೩೫-೩೨; ?). [?]

**ಕಾರದಾಣಿ**, ಖಾರದಾಣಿ (ನಾ). ಹುರಿದು ಅಥವಾ ಕರಿದು ಉಪ್ಪು ಕಾರ ಬೆರಸಿದ ದಾಣಿ; ಉಪ್ಪುಕಾರಹಚ್ಚಿದ ಸೇವು: ಕಾರದಾಣಿ, ಚಕ್ಕುಲಿ ಮುಂತಾದ ರಾಜಸ ಮತ್ತು ತಾಮಸ ಆಹಾರಗಳಿಂದ ಆದಷ್ಟು ದೂರಾಗಿರ್ರಿ (ಬ್ರಹ್ಮಜೀ. ೧೩೮). **ಖಾರದಾಣಿ:** ದೊಡ್ಡ ಪರಾತದಲ್ಲಿ ದೊಡ್ಡ ದೊಡ್ಡ ಒಟ್ಟಿದ ಖಾರದಾಣಿಯ ರಾಶಿ! (ವೈನಿ. ೧೫೩).
[ಕಾರ$_1$ + ದಾಣಿ (< ದಾನಿ$_2$)]

**ಕಾರಪಕ**, ಕಾರಹಕ, ಕಾರೋಪಕ (ನಾ). ದೇವಾಲಯ ಅಥವಾ ಇತರ ಕಟ್ಟಡಗಳನ್ನು ಮಾಡಿಸುವವನು; ಕಾರ್ಯನಿರ್ವಾಹಕ: ನಿರುಗುನ್ದ ಶೆಟ್ಟಿಯುಂ ಮಣಿಯಬ್ಬೆಯುಂ ಇವರಿಬ್ಬರು ಕಾರಪಕರಾಗಿ ಗೆಯ್ಸಿದರ್ (ಎಕ. IX, ಹೊಸಕೋ. ೧೦-೨೦; 1023). **ಕಾರಹಕ:** ಮಹಾಪ್ರಧಾನಂ ಸಂಧಿವಿಗ್ರಹಿ ಸಿಂಗರಸರ ಕಾರಹಕ ಸಿಂಗೆಯನಬ್ಬೆ ನಾಲಿಕಬ್ಬೆ ಭೀವರಸನಾಳ್ಕೆಯ ಚಿಱ್ಮಕೂರಲಗಳಿಸಿದ ಕೆಱೆ (ಸೌಇಇ.IX-i, ೨೨೭-೧೩; 1137). **ಕಾರೋಪಕ:** ಓರಂದಮಾಗಿ ತರದಿಂ ತಾರಾಧ್ವಕ್ಕೊಗೆದ ತದ್ಧ್ವಜಾಳಿ ಕುಬೇರಂ ಕಾರೋಪಕನೆನೆ ಬಳೆದಶಚೀರಮಣನ ಪುಣ್ಯಫಲದ ಬೆಳೆಗೈಯೆನಿಕುಂ (ಚಂದ್ರಪು.೧೫-೭೩). [<ಸಂ.ಕಾರಾಪಕ]

**ಕಾರಬಾರ** 'ಕಾರಭಾರ' ನೋ.

**ಕಾರಬಾರು** 'ಕಾರಭಾರ' ನೋ.

**ಕಾರಭತ್ತ** 'ಕಾರುಬತ್ತ' ನೋ.

**ಕಾರಭಾರ**, ಕಾರಬಾರ, ಕಾರಬಾರು, ಕಾರಭಾರು, ಕಾರುಬಾರು, ಕಾರುಭಾರ, ಕಾರುಭಾರು (ನಾ). ಆಡಳಿತ; ಕಾರ್ಯಭಾರ; ಅಧಿಕಾರ; ವ್ಯವಹಾರ: ಹೆಣ್ಣು ಮಕ್ಕಳಿಗೇಕೆ ಕಾರಭಾರ (ಜೀವರಂ. ೧೬); ನನಗೆ ತಿಳಿಯದೆ ಇಂಥ ಕಾರಭಾರ ನಡೆಯಬಾರದು (ರಂಗಕ. ೨೦); ಹದಿನೆಂಟು ಜಾತಿ ಹದಿನೆಂಟು ನೀತಿ ಹದಿನೆಂಟು ಕಾರಭಾರ (ಸೂರ್ಯಪಾ. ೫೩-೯). **ಕಾರಬಾರ:** ಅವರು ಸಾರಸ್ವತ ಪ್ರಸಾದದ ಮೊಗಸಾಲೆಯಲ್ಲಿ ಕುಳಿತು . . . ಕಾರಬಾರ ನಡೆಸುತ್ತಾರೆ (ನಿಬಂಧ. II, ೨೭೧); ಕಲ್ಲಪ್ಪನ ಕಾರಬಾರ (ಅಶೋಕ. ೧). **ಕಾರಬಾರು:** ಅಲ್ಲಿ ಗಂಗಕ್ಕೆಯ ತಮ್ಮ ಬಾಳಪ್ಪನ ಕಾರಬಾರು (ಒಡ್ಡಿಉ. ೧೫). **ಕಾರಭಾರು:** ಮೇಲೆ ವಿವರಿಸಿದ ಕಾರಭಾರನ್ನು ನೆನೆದರೆ ನನಗೇನು ಹೆಮ್ಮೆ ಇಲ್ಲ (ಕೆಲನೆ. ೩೬೩). **ಕಾರುಬಾರು:** ರಾಗ ಲೋಭದಿ ಮುಳುಗಿ ಮುಂದಣ ಕಾರುಬಾರುಗಳರಿಯೆ (ಹರಿಸಾ. ೫೫); ಅಡಿಗೆಮನೆ ಒಳಗೆ ಕಾರುಬಾರು ನಡೆಸುವವಳು ಚಿಕ್ಕಮ್ಮ (ಹೊಸಕ್ಷಿ. ೨೪೯); ಇಷ್ಟೆಲ್ಲ ಕಾರಬಾರು ನಡೆಸಿದವರಾರು (ಪುನರು. ೧೦೧). **ಕಾರುಭಾರ:** ಊರಲ್ಲಿ ಅವನ ತಂದೆ ಮುಂದಾಳಾಗಿ ಕಾರುಭಾರ ಮಾಡುತ್ತಿರುವಾಗ (ರಂಗರೋ. ೨೮). **ಕಾರುಭಾರು:** ಮನೆಯಲ್ಲಿ ಮುದುಕಿಯ ಆಟವೇನೂ ನಡೆಯುತ್ತಿರಲಿಲ್ಲ. ಎಲ್ಲಾ ಅವಳ ಸೊಸೆಯದೇ ಕಾರುಭಾರು (ನಾಪೋಲೀ. ೧೫೨).
[ಮರಾ. ಕಾರಭಾರ; ಪಾರ. ಕಾರೋಬಾರ್. / ಸಂ. ಕಾರ್ಯಭಾರ]

**ಕಾರಭಾರಿ**, ಕಾರುಬಾರಿ, ಕಾರುಭಾರಿ (ನಾ). **೧.** ಕಾರ್ಯನಿರ್ವಾಹಕ; ಆಡಳಿತಗಾರ: ನಾನು ರಾಮಪುರದ ಬಾಬೂರಾಯರ ಕಾರಭಾರಿಯಾಗಿದ್ದೇನೆ (ರತ್ನಗೋ. ೫೫); ಕಾರಭಾರಿಗಳು ಸರಕಾರದ ಡಾಕ್ಟರರೊಡನೆ ಬರುವರು (ಹೊಸಂಸಾ. ೯೫); ಸನ್ನಿಧಿಯಲ್ಲಿ ಕಾರಭಾರಿಗಳಾಗಿದ್ದ . . . ವಿರೂಪಾಕ್ಷಶಾಸ್ತ್ರಿಗಳವರಿಂದ ವೀಣಾವಾದನ ಮಾಡಿಸುತ್ತ (ಗುರುದ. ೨೩). **೨.** (ಆಲಂ) ಉಪದ್ವ್ಯಾಪಿ; ಅಧಿಕಪ್ರಸಂಗಿ: ನಿನಗೆ ಗಂಟುಬಿದ್ದ ಬೀಗ ನಿನಗಿಂತಲೂ ಕಾರಭಾರಿಯಾಗಿದ್ದ (ಮುಂಗಾಮು. ೧೦). **ಕಾರುಬಾರಿ:** **೧.** ಮಂತ್ರಿಗಳಿಗೆ ನಾನಾ ಇಲಾಖೆಗಳ ಕಾರುಬಾರಿಗಳೂ, ಆ ಕಾರುಬಾರಿಗಳಿಗೆ ಕೈಕೆಳಗಿನ ನೌಕರರೂ ಜವಾಬು ಕೊಡಬೇಕಾದವರು (ರಾಜ್ಯಶಾ. ೧೦೨). **ಕಾರುಭಾರಿ:** **೨.** ಅಂಥ ಇಂಥವರಲ್ಲ, ಮಹಾ ಕಾರುಭಾರಿಗಳು (ಆಳನಿ. ೬೮).
[← ಮರಾ. ಕಾರಭಾರೀ. / ಸಂ. ಕಾರ್ಯಭಾರಿನ್]

**ಕಾರಭಾರು** 'ಕಾರಭಾರ' ನೋ.

**ಕಾರಭೋಗ** (ನಾ). ಒಂದು ಬಗೆಯ ಬತ್ತ (?): ಖಂಡುಗ ಸಹ ಕಾರಭೋಗ ೧ಕೆ ಖ ೧ಕೆ (ಸೌಇಎ. ೧೯೩೪ ಪುಂಗನೂ. ೧೫೭-೬; 1426).
[ಕಾರ್$_2$ + ಭೋಗ$_1$]

**ಕಾರಮಜ್ಜಿಗೆ** (ನಾ). (ಉಕ) ಮಜ್ಜಿಗೆ ಸಾರು; ಪಳಿದ್ಯ: ಇಂದು . . . ಮಾಡಿದ ಕಾರಮಜ್ಜಿಗೆಯನ್ನೆ ಮರೆತುಬಿಟ್ಟಿದ್ದಾಳೆ (ಕ್ಷಿತಿಜ. ೯೮).
[ಕಾರ$_2$ + ಮಜ್ಜಿಗೆ]

**ಕಾರಮಣಿ**, ಕಾರಾಮಣಿ (ನಾ). ಅಲಸಂದೆ; ತಡಗುಣಿ: ಅರ್ಧಸೇರು ಕಾರಮಣಿ ತೆಗೆದುಕೊಂಡು ಬಾ (ರೂಢಿ). **ಕಾರಾಮಣಿ:** ಇವೊತ್ತು ನಮ್ಮ ಮನೆಯಲ್ಲಿ ಕಾರಾಮಣಿ ಸಾರು (ರೂಢಿ).
[ದೇ. ‖ ತಮಿ. ತೆಲು. ಕಾರಾಮಣಿ]

**ಕಾರಮುಳೆ** 'ಕಾರ್ಮುಟಿಕೆ' ನೋ.

**ಕಾರಮಿಂಚು** 'ಕಾರ್ಮಿಂಚು' ನೋ.

**ಕಾರಮುಗಿಲ್** 'ಕಾರ್ಮುಗಿಲ್' ನೋ.

**ಕಾರಮುಗಿಲು** 'ಕಾರ್ಮುಗಿಲ್' ನೋ.

**ಕಾರಮೇಘ** 'ಕಾರ್ಮೇಘ' ನೋ.

**ಕಾರಯಿತೃ** (ನಾ). **೧.** ಕೆಲಸ ಮಾಡಿಸುವವನು: ಸೇನೆಯ ಮೂಲಕವಾಗಿ ಯುದ್ಧ ಮಾಡುವ ರಾಜನನ್ನು ಯುದ್ಧಮಾಡುವವನು ಎನ್ನುವರು. ಹೀಗೆ ಕಾರಯಿತೃವಿನಲ್ಲಿ ಕರ್ತೃತ್ವವನ್ನು ಹೇಳುವ ಮಾತನ್ನು ಪ್ರಯೋಗಿಸುವುದುಂಟು (ಬ್ರಹ್ಮಭಾ. ೨೭೮). **೨.** ಕೆಲಸಕ್ಕೆ ಇಟ್ಟುಕೊಳ್ಳುವವನು, —ನೇಮಿಸಿಕೊಳ್ಳುವವನು. [ಸಂ.]

**ಕಾರಯಿತ್ರೀ** (ನಾ). ಕೆಲಸಮಾಡಿಸುವವಳು: ಪ್ರತಿಭೆಗೆ 'ಕಾರಯಿತ್ರೀ' ಎಂಬ ಹೆಸರನ್ನು ರಾಜಶೇಖರನು ಕೊಡುತ್ತಾನೆ (ಭಾರಮಿಾ.೧೫೯). [ಸಂ.]

**ಕಾರರಳು** (ನಾ). ಚರ್ಮದಮೇಲಿನ ಕರಿಯ ಚುಕ್ಕೆ, —ಗುರುತು: ಕೂದಲುಳ್ಳ ಒಂದೇ ಒಂದು ಕಾರರಳಿನ ಕೆನ್ನೆ (ಪುನರು. ೧೪). 'ಕಾರೆಳ್ಳು' ಪರಾ. [< ಕಾರೆಳ್ಳು]

**ಕಾರಲಗು** (ನಾ). ೧. ಕಪ್ಪುಖಡ್ಗ. ೨. ಕಪ್ಪುಬಾಣ (?): ಇದು ಚೋರರದೃಶ್ಯಾಂಜನಮಿದು ವೃದ್ಧಾಂಗನೆಯರೆಸೆವ ಪಲಿತೌಷಧಮಿಂತಿದು ಕಾಮನ ಕಾರಲಗೆನಿಸಿದುದಪದ್ಯಕ್ಸಾರಮಂಧಕಾರಮುಪಾರಂ (ಚಂದ್ರಪ್ರ. ೮-೨೦). [ಕಾರ್$_3$ + ಅಲಗು$_2$]

**ಕಾರಲವಣ** (ನಾ). ಕರಿಯ ಉಪ್ಪು: ಕಾರಲವಣ ನಿಷಿದ್ಧವೆಂದು ಬಿಟ್ಟು ಮತ್ತೆ ಬಿಳಿಯ ಲವಣವ ಬಳಸೂದು (ಏಲೇಶ್ವ. ೬೨).
[ಕಾರ್$_3$ + ಲವಣ]

**ಕಾರವಟ್ಟ** (ನಾ). ಖಡ್ಗಯುದ್ಧದಲ್ಲಿ ಒಂದು ವರಿಸೆ (?): ಮೊನೆಯೊಳು ಕಡುಗ ಕಾರವಟ್ಟಂ [ಪಾಠಾಂ. ವಾಟಂ]ಚಂಕ ತಟವದ್ದಳಂ ಪೊರಂಗಳೆಂಬಡ್ಡವೊಯಿಲಿಂ ನಿವಾರಿಸುತಿರ್ದರು (ಸೋಮಚ. ೫-೧೫). [?]

**ಕಾರವಾನ್**, ಕಾರ್ಥವಾನ (ನಾ). ೧. ಮರುಭೂಮಿಯಲ್ಲಿ ಯಾತ್ರೆ ಹೊರಟ ಪ್ರಯಾಣಿಕರ ಅಥವಾ ವ್ಯಾಪಾರಿಗಳ ತಂಡ: ಇದೋ ಇಲ್ಲಿ ನಡೆದಿದೆ ಬಾಳಿನ ಕಾರವಾನ್! ಇಂದು, ಇಲ್ಲಿ, ನಾಳೆ ಅಲ್ಲಿ, ಸಾಗಿದಾ ಕಾರವಾನ್ (ಕಾರವಾ. ೧೬). **ಕಾರವಾನ**: ೨. ವ್ಯಾಪಾರಿ: ಶನಿರಾಜನು ಮಾಯಾವೇಷವನ್ನು ಧರಿಸಿ ಕಾರವಾನನಾಗಿ ಬಂದನು (ಶನಿಮಾ. ೭).
[← ಅರ. ಪಾರ. ಕಾರವಾನ್. / ಇಂ. Caravan]

**ಕಾರವಾನ** 'ಕಾರವಾನ್' ನೋ.

**ಕಾರವಿ$_1$** (ನಾ). ೧. ಹಿಂಗಿನ ಗಿಡ, —ಎಲೆ. ೨. ಮಯೂರ ಶಿಖಿ ಎಂಬ ಗಿಡ. ೩. ಸಬ್ಬಸಿಗೆ; ಸದಕುಪ್ಪಿಗಿಡ: ಕಾರವೀ ಮರದ ಹೂ – ಇವು ತೊಗರೀಜೇನುನೊಣಗಳಿಗೆ ಅತಿಪ್ರಿಯ (ಕಭಾಗ. ೬೫). ೪. ಕರೀಜೀರಿಗೆ ಗಿಡ. [ಸಂ. ಕಾರವೀ]

**ಕಾರವಿ$_2$**, ಕಾರಿವಿ, ಕಾರುವೆ (ನಾ). ಒಂದು ಬಗೆಯ ಒರಟಾದ ಕೆಂಪು ಹತ್ತಿಯ ಬಟ್ಟೆ: ಆ ಪಟಗಳನ್ನು ಕಾರವಿಯಿಂದಾಗಲಿ ಪಡಮದಿಂದಾಗಲಿ ಮಾಡಿರುತ್ತಾರೆ (ಮುಂಬಯಿ. ೩-೧೧೩). **ಕಾರಿವಿ**: (೬). **ಕಾರುವೆ**: (೬).
[← ಪಾರ. ಖಾರಾ; ಹಿಂ. ಖಾರುಆ; ಮರಾ. ಖಾರವಾ]

**ಕಾರವಿಡು** (ಕ್ರಿ). ಕಾರವನ್ನು ಇಡು, —ಹಾಕು: ಅರಿಗಾದರು ಸತಿಯು ಮೀರಿ ಚೆಲುವಾಗಿರಲು ಆರಜೀಯರೆಂದು ಸಾರಿದರೆ ಕಣ್ಣೊಳಗೆ ಕಾರವಿಟ್ಟಂತೆ (ಸರ್ವಜ್ಞ. ೧೭೯೪). [ಕಾರ$_1$ + ಇಡು$_1$]

**ಕಾರವೇಲ್ಲ** (ನಾ). ಹಾಗಲಬಳ್ಳಿ: (೬). [ಸಂ.]

**ಕಾರಸಿ** 'ಕಾರಸೆ' ನೋ.

**ಕಾರಸಿಗೆಡ್ಡೆ** (ನಾ). ಒಂದು ಮೂಲಿಕೆ: "ಇಂದ್ರಿ – ಕಾರಸಿಗೆಡ್ಡೆ" (ಓಷಧಿ. ೧೩). [ಕಾರಸಿ (< ಕಾರಸೆ) + ಗೆಡ್ಡೆ (< ಗಡ್ಡೆ$_1$)]

**ಕಾರಸೆ**, ಕಾರಸಿ (ನಾ). ೧. ಗುಳ್ಳದ ಜಾತಿಯ ಒಂದು ಬಗೆಯ ಸಸ್ಯ: ಕಾರಸೆಯ ಗಡ್ಡೆಯಂ ಪಟನೀರಿಂ ಮುಜುದೊಂಡೆಯೆಲೆಯ ಬೇರಂ ಮೇಣ್ ಸೌವೀರದೆ ನಸ್ಯಂಗೆಯೆ (ಲೋಕೋಪ. ೯-೮೧); ಸುರವಾರಸುಗಂಧಿ ಕಾರಸೆ ಶ್ರೀಖಂಡಂ (ಗಂಧಂ) ಶರ್ಕರೆಯಂ ನೆಯ್ದಿಲ ಗೆಡ್ಡೆಯನರೆದವಜಿಂ ಕ್ಷೀರವರ್ತಿಕೆಯನನುನಯದಿಂ (ಅಶ್ವಶಾ. ೧೦-೧೭). ೨. ನಾಗದಮನಿಯೆಂಬ ಸಸ್ಯ: "ಕಾರಸೆ ನಾಗದಮನಿಯಕ್ಕುಂ" (ಮಂಗರಾ. ೪೫-೪೭). **ಕಾರಸಿ**: ೧. ಕಾರಸಿ ಜಂಚಿಗೆ ಬಿಲ್ವದ ಬೇರೀಶ್ವರಿ ಹತ್ತರಿಕ್ಕೆ ಕರಪರ್ಣಿಯಿವಂ ನೀರಿಂ ಕುಡಿಯಿಸೆ... ವಿಷಮಂ ಕಳೆಗುಂ (ಖಮದ. ೧೩-೧೪೫); ಕಾರಸಿಯ ಗಡ್ಡೆಯ ಅರೆದು ಗುದದಲ್ಲಿ ಪೂಸಲು ಮೂಲವ್ಯಾಧಿ ಹರ (ವಿವೈವಿ. ೧೪೧). [?]

**ಕಾರಸ್ಥಾನ** (ನಾ). ೧. ಕೆಲಸ ನಡೆಯುವ ಸ್ಥಳ; ಕಾರ್ಯಸ್ಥಾನ: ಲಂಚ ವಂಚನೆ ಚಾಡಿ ಛಿದ್ರ – ದ್ರೋಹಗಳ ಕಾರಸ್ಥಾನ (ತುಂಗಭ. ೧೧). ೨. (ಆಲಂ) ಒಳಸಂಚು; ಪಿತೂರಿ: ಕೃಷ್ಣನ ಕಾರಸ್ಥಾನವನ್ನು ತಿಳಿದವರು ನಗದೆ ಇನ್ನೇನು ಮಾಡಬಹುದು (ಕರ್ಣಾಕ. ೩೦೭); ಹೆಣ್ಣು ಇರುವ ಪ್ರತಿಯೊಬ್ಬರೂ ನಡೆಸುವ ಕಾರಸ್ಥಾನ ತಾನೆ ಅದು (ದುಂಬಿಕ. ೮).
[← ಹಿಂ. ಕಾರಸ್ಥಾನಾ, ಮರಾ. ಕಾರಸ್ಥಾನ್]

**ಕಾರಸ್ಥಾನಿ** (ನಾ). ಕಾರಸ್ಥಾನ ಮಾಡುವ ವ್ಯಕ್ತಿ: ಗೋದಿ ಇಷ್ಟು ಕಾರಸ್ಥಾನಿ ಇದ್ದಳು ಅಂತ... ಅನ್ನಿಸಿರಲಿಲ್ಲ (ರಕ್ತಧ್ವ. ೧೧೧).
[← ಮರಾ. ಕಾರಸ್ಥಾನೀ]

**ಕಾರಹಕ** 'ಕಾರಪಕ' ನೋ.

**ಕಾರಹಾರಿ** (ನಾ). (?): ಸೋರ್ವ ಮದಧಾರೆಯ ಮೆಯ್ಸಿರಿ ಕಾರಹಾರಿಗಿಟ್ಟಳಮನೆ ಬಿಟ್ಟನೊಟ್ಟಯಿಸಿವೇಂಟಿಡೆಯೊಳ್ತಿರಿಪಲ್ಲಿ ಚಿತ್ರಾಂಗಾವಳಿಯ ತೆರಳ್ಕೆವೆತ್ತ ತೆರೆಸುತ್ತಿದಪೊಲ್ಸುಟಿವೇಜಿ ತೋಜಿದಂ (ಅನಂಪು. ೧೧-೨೩). [?]

**ಕಾರಹುಲ್ಲು** (ನಾ). ಮಳೆಗಾಲದಲ್ಲಿ ಬೆಳೆಯುವ ಒಂದು ಬಗೆಯ ಹುಲ್ಲು: ನಲೀಮೀನಃ, ಚಿಲಿಚಿಮಃ — ಕಾರಹುಲ್ಲಿನೊಳು ತಿರುಗುವ ಮೀನಿನ ಹೆಸರುಗಳು ಅಂದರೆ ಜಂಬುಮೀನು, ಹುಲ್ಲುಮೀನು (ಸಿದ್ಧಾಂತಿ. ೬೩). [ಕಾರ್$_2$ + ಹುಲ್ಲು (< ಪುಲ್)]

**ಕಾರಳಗ** (ನಾ). ಬಿಳಿ ಮತ್ತು ಕಪ್ಪು ಮಿಶ್ರವಾದ ಮೈಬಣ್ಣವುಳ್ಳ ಕುದುರೆ: ತಳ್ಪೊಯ್ಯೆ ಕರ್ಪು ನೇರ್ಪಿಂ ಬೆಳ್ಪಿನ ಮೆಯ್ಯೊಳ್ ತುರಂಗಮಂ ಕಾರಳಗಂ (ಅಶ್ವಶಾ. ೨-೧೬). [ಕಾರ್$_3$ + ಅಳಗ$_1$]

**ಕಾರಳಿ** 'ಕಾರಣಿ$_1$' ನೋ.

**ಕಾರಳಿಗೊಳಿಸು** (ಕ್ರಿ). ಕಾರಣೆಮಾಡಿ ಅಲಂಕರಿಸು: ದಿವಾಕರನುದಯದೊಸಗೆಗಿಂದ್ರಂ ದಿಗುಭಿತ್ತಿಯಂ ಕುಂಕುಮಪಂಕದಿಂ ಕಾರಳಿಗೊಳಿಸಿದನೆಂಬಂತೆ [ಪಾಠಾಂ. ಕಾಲ್ವಳಿಗೊಂಡಂತೆ] ಸಂಜೆಗೆಂಪು ರಂಜಿಸೆ (ಕಾದಂಉ. ೪೯). [ಕಾರಳಿ (< ಕಾರಣಿ$_1$) + ಕೊಳ್$_1$ + -ಇಸು$_3$]

**ಕಾರಳ್ಳು** (ನಾ). ಒಂದು ಗಿಡದ ಹೆಸರು: "ವಿಲಪತ್ರಂ – ಕಾರಳ್ಳು" (ಓಷಧಿ. ೧೫೬). [?]

**ಕಾರಜೀವು** (ನಾ). ವಿವೇಚನೆಯಿಲ್ಲದ ಜ್ಞಾನ; ಅಜ್ಞಾನ: ಕಳವೆಂಬ ಕಾರಜೀವಿನೊಡೆತನಂ ಅಳವೆಂಬ ಅರ್ಪನೆಳಸಿದರೊಳಿಲ್ಲ (ಕುಜೀಲ್. ೨೯-೭). [ಕಾರ್$_3$ + ಅಜೀವು]

**ಕಾರಜಿ** (ನಾ). ಕರಿಯಬಂಡೆ, —ಕಲ್ಲು: ಕರಡಿಕುಜುಕಿ ಮೇಲ ಕಾರಜಿ ಎ ವಿಗ್ಗನಲೆ ಕುನ್ದ ಕುರ್ ಜುಕಿಯೆ ಮೂಡ್ಯೆ ಒಟ್ಟಿ ಎ (ಎಕ. X (S), ಚಿಕ್ಕಬ. ೬೬-೨೧; 850). [ಕಾರ್$_3$ + ಅಜಿ$_4$]

**ಕಾರಾಂಜಿ** 'ಕಾರಂಜಿ' ನೋ.

**ಕಾರಾಂಧ** (ನಾ). ದಟ್ಟವಾದ ಕತ್ತಲೆ; ಕಗ್ಗತ್ತಲೆ: ಕಾರಾಂಧದೊಳು ಈಗ ದಾರೀಯ ನೋಡೆ ಬನದಿ ತೋರಾದು ಕಣ್ಣಿಗೆ (ಹಮಚ. ೬೧).
[ಕಾರ್$_3$ + ಅಂಧ]

**ಕಾರಾಕಳ್** (ನಾ). ಕರಿಯಬಣ್ಣದ ಹಸು: ತುಜುಗಳೊಳ್ ಕಾರಾಕಳ್ ಪಾಲುಳ್ಳುದು (ಶಬ್ದಾನು. ೨೨೩ ಪ್ರಯೋ). [ಕಾರ್$_3$ + ಆಕಳ್]

**ಕಾರಾಗಾರ$_1$** (ನಾ). ಕಾರಖಾನೆ; ಕಾರ್ಯಾಲಯ: ಹತ್ತಾರು ಸಾವಿರ ಪ್ರಾಣಿಗಳು ಒಮ್ಮೆ ಕೂಗಿದರೆ ಅವುಗಳ ಶಬ್ದ ನೂರು ಕಾರಾಗಾರಗಳ (Workshop) ಸಬ್ದದಷ್ಟಾಗುತ್ತದೆ (ಪ್ರವಾಇ. I, ೨೭೦).
[< ಸಂ. ಕಾರ್ಯಾಗಾರ]

**ಕಾರಾಗಾರ$_2$** (ನಾ). ಕತ್ತಲೆಮನೆ; ಸೆರೆಮನೆ; ಕಾರಾಗೃಹ; ಜೈಲು: ಸಿಂಹಾಗಾರಂ ಕಾರಾಗಾರಮೆಂಬ ಶಬ್ದಂಗಳ್ಗೆ ಬಹುಳದಿನೀ ಲಕ್ಷಣಮಿಲ್ಲ (ಶಮದ. ೨೯೫ ಪ್ರಯೋ); ಕಾರಾಗಾರದ ಆ ಮಹಾದ್ವಾರವನ್ನು ಕಂಡಾಗ (ಆಗಸ್ಟ. ೩). [ಸಂ. (ಕಾರಾ + ಆಗಾರ)]

**ಕಾರಾಗೃಹ** (ನಾ). ೧. = ಕಾರಾಗಾರ₂ : ಪ್ರಸೂತಿಯಕ್ಕುಂ ವಧೂಟ ಕಾರಾಗೃಹದೊಳ್ (ಜಾತತಿ. ೪-೨೧). ೨. ಸೆರೆಮನೆಯ ವಾಸ; ಬಂದಿವಾಸ; ಜೈಲು: ಅವನಿಗೆ ಎರಡುಸಲ ಕಾರಾಗೃಹವಾಗಿತ್ತು (ಮಲೆನಾ. ೮೬). [ಸಂ. (ಕಾರಾ + ಗೃಹ)]

**ಕಾರಾಗೃಹವಾಸ** (ನಾ). = ಕಾರಾಗೃಹ. ೨: ಇವನು ಕಳ್ಳನಾದರೆ ಕಾರಾಗೃಹವಾಸವಿಲ್ಲ (ಜೀವಾತ್ಮ. ೨೬೬); ಇಂಡಿಯಾಕ್ಕೆ ಬರುವಾಗಲೂ ನಾನು ಹಂಟರ ಕಿಸೆಯ ಕಾರಾಗೃಹವಾಸದಲ್ಲೇ ಇರಬೇಕಾಗಿತ್ತು (ಕಂಬಹು. ೧೦೦). [ಕಾರಾಗೃಹ + ವಾಸ₂]

**ಕಾರಾಚ** (ನಾ). ಕರಿಯ ಆಚದ ಮರ: ಹೊನ್ನೆ ಚೆನ್ನೆ ಕವಳಂ ಕಾರಾಚಮಾಜಂ ಪುಲಿಂಗಿಲೆರಂ (ರಾಜಶೇ. ೫-೫೬); ಕಾರಾಚ ಕಗ್ಗಲಿ ಕಂಚಿಸಾಳಮರ ಸೂರಮಾರ್ಗವ ತಡೆದಿಹವು (ಕಂನವಿ. ೧೮-೩೭); ಬಿರುಗಾಳಿಯು ಕಾರಾಚದ ಮರವನ್ನು ಕೆಡಹುವಂತೆ (ಕೃನಾಉ. ೯೦). [ಕಾರ್₃ + ಆಚ₁]

**ಕಾರಾಚಿ** (ನಾ). ಒಂದು ಜಾತಿಯ ಮರ: (ಮೈಔಗಿ. ೪೨-೮೨೬). [?]

**ಕಾರಾಟ** (ನಾ). ರಾತ್ರಿಯ ಆಟ; ರತಿಕ್ರೀಡೆ (?) : ಕಾರಾಟ ಕರ್ದುಕಿ [ಪಾಠಾಂ. ಕದ್ರುಕಿ] ನೊಯ್ಯಾರ ಚುಂಬನಗಳ ಮೇರೆ (ಭೈರವೇ. ೨-೭೮). [ಕಾರ್₃ + ಆಟ]

**ಕಾರಾದಂಡ** (ನಾ). ಸೆರೆಮನೆಯ ಶಿಕ್ಷೆ; ಜೈಲುವಾಸದ ಶಿಕ್ಷೆ: ತನಗೆ ಯಾವಜ್ಜೀವನ ಕಾರಾದಂಡವಾಗಲಿಜೆಯೆಂದು, ಅದು ಮುಗಿದ ಮೇಲೆ ಗಲ್ಲಿನ ಹುಕುಮು ಹೊರಟದೆಯೆಂದು (ಇಪ್ಪಕ. ೬೪). [ಸಂ. (ಕಾರಾ + ದಂಡ)]

**ಕಾರಾಮಣಿ** 'ಕಾರಮಣಿ' ನೋ.

**ಕಾರಾಲಿಯ** (ನಾ). ಕಾರ್ಯಾಲಯ: ವರ್ದ್ಧಮಾನ ದೇವರು ಹೊಯ್ಸಳ ಕಾರಾಲಿಯದಲು ಅಗ್ರಗಣ್ಯರು ಸನ್ಯಸನದಿ ಮುಡಿಪಿದರ್ (ಮೈಆರ. ೧೯೨೯, ೪೧-೧೦; 11ನೆಯ ಶತ). [< ಸಂ. ಕಾರ್ಯಾಲಯ]

**ಕಾರಾವರ** (ನಾ). ಚರ್ಮದ ಕೆಲಸ ಮಾಡುವವನು; ಚಮ್ಮಾರ: (ಕಿ). [ಸಂ.]

**ಕಾರಾವಾಸ** (ನಾ). ಸೆರೆ; ಜೈಲುವಾಸ: ಅವರು ಕೊನೆಯವರೆಗೂ ಗಟ್ಟಿಗರಾಗಿ ಉಳಿದು ಕಾರಾವಾಸವನ್ನು ಅನುಭವಿಸಿದರು (ಕರವೀ. ೬೧). [ಸಂ. (ಕಾರಾ + ವಾಸ)]

**ಕಾರಾಸೇವೆ** (ನಾ). = ಕಾರದಾಣೆ: ಜಾತ್ರೆಯಲ್ಲಿ ಕಡ್ಲೆಪುರಿ ಮತ್ತು ಕಾರಾಸೇವೆಕೊಂಡು ಬಂದರು (ರೂಢಿ). [ಕಾರ + ಸೇವೆ₂]

**ಕಾರಾಳುಮೆ** 'ಕಾರಾಳ್ಮೆ' ನೋ.

**ಕಾರಾಳ್ಮೆ**, ಕಾರಾಳುಮೆ (ನಾ). ಬೇಸಾಯದ ಹಕ್ಕು; ಉಳುವ ಅಧಿಕಾರ: ಶಿವಮಾರಜಿ಼ ಅಪ್ಪೊ ಕುಣುಂಗಿಲ್ನಾಡಾಳೆ ಬಿಸಿಗೂರುಳ್ಬಾಬ್ವ ಪ್ರಜೆಗೆಲ್ಲಂ ಕೊಟ್ಟೊದು ಕಟ್ವಾಣಿ ಮಯ್ಯಾರ್ದಿ ಕಾರಾಳ್ಮೆಗೊಟ್ಟಾರ್ (ಎಕ. IX, ಮಾಗಡಿ. ೧೨೬-೫; 800). **ಕಾರಾಳುಮೆ**: ಪಡುಮಲ ದೇವಿಯರ ಕಯಿಂದ ಕಾರಾಳುಮೆ ಮೂಲವ ಕೊಂಡರಾಗಿ (ಸೌಇಎ. ೧೯೨೯. ಮಂಗಳೂ. ೪೬೫-೨೨; 1312); ತಂ[ಮ] ಕಾರಾಳುಮೆಯಲಾ ಬಹಂಥಾ (ಸೌಇಎ. ೧೯೨೯, ಮಂಗಳೂ. ೪೬೫-೪೧; 1312). [← ತಮಿ. ಕಾರಾಣ್ಮೈ]

**ಕಾರಿ₁** (ನಾ). ಕರಿಯ ಹೋರಿ, —ಎತ್ತು: ಬಟ್ಟಗಡಸು ಕೆಂದ ಕಾರಿಯು ಬೆಳ್ಳೆ ನೆಟ್ಟೆ ಕೊಂಬಿನ ಕಾರಿ ಜಾಲೆ ದಿಟ್ಟಸಿ ನೋಡುವ ಪಸುಗಳು ಎಸೆದುವು ಪಟ್ಟೆಯ ಸೀರೆಯಂದದಲಿ (ಕವಿಚ. III, ೧೦೬ ಮಾದೇಶ್ವರ ಸಾಂಗತ್ಯ); ಹಂಡ ಕೆಂದಗಳಿಲ್ಲ ಹುಂಡಿ ಕಾರಿಗಳಿಲ್ಲ ಗಂಡರಿದ್ದೊಬ್ಬ ಮಗನಿಲ್ಲ ಸೂಳೆಗೆರಡಂಡಿನಾರಂಬ (ಸರ್ವಜ್ಞ. ೧೯೨೬); ನೊಗದ ಉಭಯ ಕೊನೆಯಲ್ಲಿ ನೆಲೆಗೊಳಿಸಿ ಎಡಗೋಲಿನಲ್ಲಿ ಕಾರಿಯ ಹೂಡಿ (ಕೃಷಿಪ್ರ. ೩೫೫); ತನ್ನ ಕಾರಿಯೇ ಬೇರೆ ಕಾರಿಗಳಿಗಿಂತ ಮೊದಲು ಕಂಚವನ್ನು ಮುಟ್ಟಿ ಜಯ ಪಡೆವಾಗ (ಬೆಳುವು. ೨೧೪). [ದೇ. ‖ ತಮಿ. ತುಳು. ಕಾರಿ]

**ಕಾರಿ₂**, ಖಾರಿ (ನಾ). ೧. ಜವುಗು ಭೂಮಿ; ಚೌಳುನೆಲ. ೨. ಭೂಭಾಗದೊಳಕ್ಕೆ ನುಗ್ಗಿದ ಸಮುದ್ರಭಾಗ; ಕೊಲ್ಲಿ: ೩. ಹೊಳೆ ದಾಟುವ ಸ್ಥಳ; ಹಾಯ್ಗಡ: (ಕಿ). **ಖಾರಿ**: ೨. ಘಟ್ಟದಿಂದ ಬರುವ ನದಿಗಳ ನೀರನ್ನು ಸಮುದ್ರಕ್ಕೆ ಬೀಳದಂತೆ ಈ ಮರಳುದಿನ್ನೆಗಳ ಸಾಲು ತಡೆದಾಗ ನದಿಗಳು ಹರಡಿಕೊಂಡು ಆಳವಿಲ್ಲದ (ಲಾಗೂನ್) ಖಾರಿಗಳಾಗುತ್ತವೆ (ಭೂವಿವ. ೩೪೫). [ದೇ. ‖ ತಮಿ. ಮಲ. ಕಾರಿ, ತೆಲು. ಕಯ್ಯಿ. / ಮರಾ. ಖಾಡೀ]

**ಕಾರಿ₃** 'ಕಾರೆ'₂ ನೋ.

**ಕಾರಿ₄** (ನಾ). ೧. ಕಾರ್ಯ; ಕೆಲಸ. ೨. ಶಿಲ್ಪಿ. [ಸಂ.]

**ಕಾರಿಂಗೆಱೆ** (ನಾ). ಒಂದು ಊರಿನ ಹೆಸರು: ಹೆದರಂಗಟ್ಟವುಂ ಕಾರಿಂಗೆಱೆಯುಂ ಸಿರಿಂಗೆಱೆಯುಂ ಇಟ್ಟಗೆಯುಮಂತು ನಾಲ್ಕುಂ ಬಾಡವುಂ (ಎಕ. XI, ಚಿತ್ರದು. ೭೬-೨೨; 937). [?]

**ಕಾರಿಕ₁** (ನಾ). ಒಂದು ಬಗೆಯ ಸಸ್ಯ: "ಗಂಡೀರಃ – ಮುಂಡುಗಳ್ಳಿ, ಬಾಗೆ, ಕಾರಿಕ (ಓಷಧಿ. ೪೫). [?]

**ಕಾರಿಕ₂**, ಕಾರೀಕ, ಖಾರೀಕ (ನಾ). ಉತ್ತುತ್ತೆ; ಖರ್ಜೂರ: ಅರಿಷಿಣಂ ಕೊಬರಿ ಕಾರಿಕಮುಮರೆ (ಸಿದ್ಧಕಾ. ೧೩-೪೩). **ಕಾರೀಕ**: (ಕಿ). **ಖಾರೀಕ**: ಟೆಂಗಕ್ಕೆ ಸೂರ್ಯಾದವೇಳಯ್ಯ ಸಿದ್ಧರಾಮ ಖಾರೀಕ ಕೈ ಸುರ್ಯಾದವೇಳಯ್ಯಾ (ಮಲ್ಲಿಗೆ. ೪). [← ಮರಾ. ಖಾರೀಕ್]

**ಕಾರಿಕನ್ನು**? (ನಾ). (ಕರಾ). (ಪಣಿಯ ಜಾತಿಯ ಹೆಂಗಸರು ಉಡುವ) ಬಿಳಿಯ ವಸ್ತ್ರ: ಅವಳಿಗೊಂದು ಹೊಸ ಕಾರಿಕನ್ನು ತೆಗೆದು ಕೊಡಬೇಕಾಗುವುದು (ಧೂಮುಮು. ೨೮). [?]

**ಕಾರಿಕಾಕಾರ** (ನಾ). ಶಾಸ್ತ್ರಾರ್ಥವನ್ನು ಶ್ಲೋಕರೂಪವಾಗಿ ರಚಿಸಿರುವವನು: ಈ ತ್ರಿವಿಧ ಭೇದವು ಕಾರಿಕಾಕಾರನು ಮಾಡಿದ್ದಲ್ಲ. ಇದು ವೃತ್ತಿಕಾರನು ತೋರಿಸಿದ್ದು (ಭಾರಮೀ. ೫೬). [ಸಂ.]

**ಕಾರಿಕಾಸ್ಥಿತಿ** (ನಾ). ಹಿಂಸೆಯ ಸ್ಥಿತಿ: ಯಾತನಾವಸ್ಥೆ (?) : ಎಸೆವ ಸಲ್ಲಾಪ ಕಾರಿಕಾಸ್ಥಿತಿಯ ಕಿತ್ತಬಲ್ಲಂತೆ ನುಡಿವರ ಮಾತೆಂಬ ಗಜಿ಼ಕೆಯಂ ನಿಲ್ಲದೆ ತಿನುವದನು ಹಿಡಿಯೆನಲು (ಭಕ್ತಿಸ. III, ೨೨-೫). [ಸಂ. (ಕಾರಿಕಾ + ಸ್ಥಿತಿ)]

**ಕಾರಿಕೆ₁** (ನಾ). ೧. ಮಾಡುವವಳು; ವರ್ತಿಸುವವಳು. ೨. ನರ್ತಕಿ; ನಟಿ. ೩. ಹಿಂಸೆ; ಯಾತನೆ: 'ಕಾರಿಕಾಸ್ಥಿತಿ' ಪರಾ. ೪. ಶಾಸ್ತ್ರ ವಿಚಾರವನ್ನು ವಿವರಿಸುವ ಶ್ಲೋಕ: ಇದರ ಬಹುಭಾಗವು ಅನುಷ್ಟುಪ್ ಛಂದಸ್ಸಿನಲ್ಲಿ ಕಾರಿಕೆಗಳ ರೂಪದಲ್ಲಿದೆ (ಭಾರಮೀ. ೧೨); ಧ್ವನ್ಯಾಲೋಕದ ಕಾರಿಕೆ ವೃತ್ತಿಗಳು ಏಕಕರ್ತೃಕವೇ (ಧ್ವನ್ಯಾಲೋ. XXIII ಪೀಠಿಕೆ). 'ಕಾರಿಕಾಕಾರ' ಪರಾ. ೫. ಒಂದು ಬಗೆಯ ಸಸ್ಯ: "ಪಿಶಾಚೀ–ಗಂಧಮಾಂಸಿ, ಕಾಡುದ್ದು, ಕಾರಿಕೆ ಕಡುಹುರುಳಿ" (ಓಷಧಿ. ೯೭). ೬. ಕಸಬು; ಕೆಲಸ; ಉದ್ಯೋಗ: (ಕಿ). [ಸಂ. ಕಾರಿಕಾ]

**ಕಾರಿಕೆ₂**, ಕಾರ್ಕೆ (ನಾ). ಕಾರಿದುದು; ಕಕ್ಕಿದ್ದು; ವಾಂತಿ: ರಾಮನಲ್ಲಿ ಅನುರಕ್ತರಾಗಿ ಲಕ್ಷ್ಮಿಯ ವಿಲಾಸಗಳನ್ನು ಕಾರಿಕೆಯಂತೆ ತ್ಯಾಗಮಾಡುವ ಭಕ್ತರೇ ಮಹಾಭಾಗ್ಯಶಾಲಿಗಳಿರುವರು (ತುಳಸಿ. ೨೧೪); ಹಾಸಿ, ಹೊಚ್ಚಿ, ಚಹ ಮಾಡಿಕೊಟ್ಟವ ಅವನೇ. ಕಾರಿಕೆಯನ್ನು ತೆಗೆದವ ಶಿವಶಂಕರ (ಅಪವಾ. ೬೯). **ಕಾರ್ಕೆ**: "ಉದ್ಗಿರಣೇ, ಕಾರ್ಕೆಯೊಳ್" (ಕಾಶಕ. ೧೪೮). [ಕಾರು₁ (< ಕಾಱ್) + - ಇಕೆ]

**ಕಾರಿಗ** (ನಾ). ಕ್ಷೌರವನ್ನು ಲೇಪಿಸುವವನು : (ಶಿ). [ಕಾರ್$_1$+-ಇಗ]

**ಕಾರಿಗೆ**, ಕಾದಿಗೆ$_1$, ಖಾರಿಗೆ, ಗಾದಿಗೆ$_2$, ಗಾರಿಗೆ$_2$ (ನಾ). ಕಂದಕ; ಅಗಳ್ತೆ: "ಖಾತಿಕಾ – ಕಾರಿಗೆ, ಖಾರಿಗೆ, ಗಾರಿಗೆ" (ಶಮದ. ೨೭೭ ಪ್ರಯೋ); "ಕಾರಿಗೆ (ಗಾರಿಗೆ, ಕಾದಿಗೆ) ಖಾತಿಕಾ – ಕಂದಕ" (ತದ್ಭಕೋ. ೭); ಬಟ್ಟೆಯಿಂ ಪಡವಲೂರ ಮುನ್ನಣ ಪರಿವ ಕಾರಿಗೆಯಿಂ ಮೂಡಲೊಂದೆ ಸ್ಥಳಂ (ಸೌಇಇ. XV, ೩೬–೩೮ ; 1148). **ಕಾದಿಗೆ$_1$ :** ಅಂಭೋರಾಶಿಯೆ ಕಾದಿಗೆ ಕಾವನುಂ ಸೀರಪಾಣಿ (ಪಂಪಭಾ. ೪–೩೨). **ಖಾರಿಗೆ :** ಅದರ ತೆಂಕದೆಸೆಯ ಬಜೆಯ ಖಾರಿಗೆಯಿಂ ಪಡುವಲ್ (ಎಇ. XIII, ೨೧–೪೧ ; 1204) ; ವರ್ಗದ್ವಿತೀಯಾಕ್ಷರಂಗಳ್ಗೆ . . . ಖೊಪ್ಪರಂ, ಖಾಣಂ, ಖಾರಿಗೆ (ಶಮದ. ೧–೧೫ ಪ್ರಯೋ). **ಗಾದಿಗೆ$_2$ :** "ಗಾದಿಗೆಯೆ ಪರಿಖೆಯಕ್ಕುಂ" (ಕವಿಕಂ. ೧೪೧). 'ನೀರ್ಗಾದಿಗೆ' ಪರಾ. **ಗಾರಿಗೆ$_2$ :** "ಗಾರಿಗೆಯೆಂದು ಪರಿಖೆ" (ಕಶಸಾ. ೧೫–೨೪೮) ; ಸಮುದ್ರ ನೀರ್ಗಾರಿಗೆಯಾಗೆ ವರುಣನೇ ಕರಗ[ಬಳ]ನಾಗೆ ತಾರಾಬಳಮೇ ಬಳಮಾಗೆ (ಸೌಇಇ. XI–i, ೧೩೯–೨೭ ; 1074). [< ಸಂ. ಖಾತಿಕಾ]

**ಕಾರಿಡಿ** (ಕ್ರಿ). ಕಪ್ಪಿಡು ; ಕರಿದಾಗು : ಕಾರಿಡಿದು ಬಂದಂಥ ಸಲೆ ಪಯೋಧರದಂತೆತೋರುತಿದೆ ಕಡಲಣುಗಿಪತಿಯ ವರಶಾಮಾಂಗದೋಲ್ ಕಾರಿಡಿದು ಬಹ ಮೇಘವು (ಕುವಲ. ೩–೨೬). [ಕಾರ್$_3$ + ಇಡಿ$_1$]

**ಕಾರಿತೆ** (ನಾ). ಬಡ್ಡಿ ; ದುಬಾರಿ ಬಡ್ಡಿ : (ಶಿ). [ಸಂ. ಕಾರಿತಾ]

**ಕಾರಿದ್ದಲು**, ಕಾರಿದ್ದಿಲು (ನಾ). ಕರಿಯ ಇದ್ದಿಲು : ಈ ಗಡ್ಡವು ಕಾರಿದ್ದಲ ಬಾಳ್ವೊಗರ ಅವತಾರ (ಮಂತ್ರಶ. ೯೨–೧೨). **ಕಾರಿದ್ದಿಲು:** ಬಿದ್ದ ಸುಣ್ಣದ ಬಿಳಿಯೆಲೆಯನಾಯ್ದು ಪಿಡಿದು ಕಾರಿದ್ದಿಲಿನ ತಿಲಕ ಮನಿಟ್ಟು (ವಿಕೋಘ. ೫–೬೭). [ಕಾರ್$_3$ + ಇದ್ದಲು (< ಇರ್ದಲ್)]

**ಕಾರಿದ್ದಿಲು** 'ಕಾರಿದ್ದಲು' ನೋ.

**ಕಾರಿಯ** (ನಾ). ಕೆಲಸ ; ಕಾರ್ಯ : ಕಾಮಾಂಧಂಗೆ ಕಾಣಿಸದೊಂದು ಕಾರಿಯವು (ಬಸವು. ೨೮–೨೫) ; ಅವ ಕಾರಿಯಮಾವ ಕಾರಣವಾವು ದಭಿಮತ ಬೆಸಸೆನಲು (ಕುವ್ಯಾಆ. ಓಂಇ. ೩–೯) ; ನಯವಿಡಿದು ಕೊಂಬುದು ಕಾರಿಯವನು (ಕೌಶಿರಾ. ೩೭–೧೯); ನುಡಿದನಮರರಿಗೊಂದು ಕಾರಿಯವ (ಉರರಾ. ೩–೨೨). [< ಸಂ. ಕಾರ್ಯ]

**ಕಾರಿಯಗ** (ನಾ). ಕೆಲಸದಲ್ಲಿರುವವನು; ಕಾರ್ಯಮಗ್ನನಾದವನು: ಕಾರಿಯಗ ನೀನಕಟ ಪಾರಮಾರ್ಥವನರಿಯೆ (ಮನೋವಿ. ೯–೮). "ಸ್ಥೂಲ ದೃಷ್ಟಿಯುಳ್ಳಾತನು" (ಮನೋವಿ. ಟೀಕು). [ಕಾರಿಯ + –ಗ$_3$. / ಸಂ. ಕಾರ್ಯಗ]

**ಕಾರಿರುಳ್$_1$**, ಕಾರಿರುಳು$_1$ (ನಾ). ೧. ಮಳೆಗಾಲದ ರಾತ್ರಿ. ೨. ಮಳೆಯರಾತ್ರಿ : ಭೋರ್ಗರೆದೂದುವ ಗಾಳಿ ಸಿಡಿದು ಪೊಯ್ವ ಸಿಡಿಲ್ ಕಾರಿರುಳೊಳಗುರ್ವರಂ ಪಡೆದಿರೆ (ಆದಿಪು. ೬–೩೨). **ಕಾರಿರುಳು$_1$ :** ೧. ಕಾರಿರುಳಿನ ಮಿಂಚುಬುಳುವಂತೆ (ಅನಿಕೇ. ೩೩–೭). [ಕಾರ್$_2$ + ಇರುಳ್]

**ಕಾರಿರುಳ್$_2$**, ಕಾರಿರುಳು$_2$ (ನಾ). ಕತ್ತಲೆತುಂಬಿದ ರಾತ್ರಿ ; ಕಾಳರಾತ್ರಿ : ಕಾಂತನಲ್ಲಿಗೆ ನಡೆಯಲ್ಬಗೆದೆನಗೆ ಕಾರ ಕಾರಿರುಳೊಳ್ ಸಯ್ತುಡವಡಿಕೆಗಳಂ ತೊಡೆದತ್ತೆಡೆವರಿಯದೆ ಪೊಳೆವ ಮಿಂಚು (ಕವಿರಾ. ೩–೧೨೫) ; ಸಂದ ಕಾರಿರುಳ ಕನ್ನೆಯರು ಹಗಲಂ ನೋಡಲೆಂದು ಬಂದರೊ (ಹಚಕಾ. ೭–೩) ; ಕಂಗಳನು ಕಾರಿರುಳ ರಕ್ಕಸಿ ನುಂಗಿದಳು (ಕುವ್ಯಾದ್ರೋ. ೧೭–೩). **ಕಾರಿರುಳು$_2$ :** ಕಾರಿರುಳಿನಲಿ ಪರದೇಶಿ ಬಂದಿರಲುರಗವಾ ಊರೊಳಗೆ ಕೊಲುತಿಪ್ಪುದು (ಬಸವು. ೫೫–೨೬); ಕಾರಿರುಳು ಬರುವುದಂ ಬಯಸುತ್ತಿದ್ದು (ಸೌಗಂಧಿ. ೧೮೬, ೩೫). [ಕಾರ್$_3$ + ಇರುಳ್]

**ಕಾರಿರುಳು$_1$** 'ಕಾರಿರುಳ್$_1$' ನೋ.

**ಕಾರಿರುಳು$_2$** 'ಕಾರಿರುಳ್$_2$' ನೋ.

**ಕಾರಿವ** (ನಾ). ಸುಳ್ಳು ; ಕೃತ್ರಿಮ ; ತೋರಿಕೆ (?) : ಒಡಲ್ಗಳಂ ಕೆಲಂ ಕಾಣದು ಕಾಣ್ಬುದಾವು ದೊಡಲಲ್ತಿದು ಕಾರಿವಮೇನೊ[ಪಾಠಾಂ. ಮೆನ್ನೊ] ಡಲ್ಗೆ ನೀಂ ಪ್ರಾಣಮಮೋಘಮುಪ್ಪುದರಿನೋಪನೆ . . . ವಿಯೋಗಮ ನೆಂತು ಸೈರಿಪೆಂ (ಆದಿಪು. ೧೨–೩೬). [← ಪ್ರಾ. ಕಾರಿಮ]

**ಕಾರಿವಿ** 'ಕಾರವಿ$_2$' ನೋ.

**ಕಾರಿಸು** 'ಕಾಱಿಸು' ನೋ.

**ಕಾರಿಹುಣ್ಣಿಮೆ** 'ಕಾರ್$_2$' ಪರಾ.

**ಕಾರೀಕ** 'ಕಾರಿಕ$_2$' ನೋ.

**ಕಾರೀಷ** (ನಾ). ಒಣಗಿದ ಸಗಣಿಯ ರಾಶಿ; ಬೆರಣಿಯ ರಾಶಿ. [ಸಂ.]

**ಕಾರು$_1$** 'ಕಾಱು' ನೋ.

**ಕಾರು$_2$** 'ಕಾರ್$_2$' ನೋ.

**ಕಾರು$_3$** 'ಕಾರ್$_3$' ನೋ.

**ಕಾರು$_4$** (ನಾ). ೧. ತಯಾರಿಸುವವನು ; ಕುಶಲಕರ್ಮಿ; ಶಿಲ್ಪಿ : "ಪ್ರಕೃತಿಜನಂ ಶಿಲ್ಪಿಗಳರಿಗೆ ಕಾರುಗಳೆ ತಾವೆನಿಪ್ಪರ್" (ವಸ್ತುಕೋ. ೬೪–೭೩) ; ಕೂಡಿರಲ್ ಖಗಜಂ ಕೇಂದ್ರ ಗೃಹಂಗಳಲ್ಲಿ ಮೊದಲ ದ್ರೇಕ್ಕಾಣದೊಳ್ ಕಾರು (ಜಾತತಿ. ೨೧–೧೦) ; ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ಶೂದ್ರನು . . . ಕಾರು ಕುಶೀಲವ – ಕರ್ಮಗಳನ್ನು ಸಹ ಮಾಡಬಹುದೆಂದಿದ್ದಾನೆ (ಭಾರದ. ೫೫). ೨. ಕೈಗಾರಿಕೆ; ಕುಶಲ ಕರ್ಮ ; ಕಸಬುಗಾರಿಕೆ. 'ಕಾರುಕರ್ಮ' ಪರಾ. [ಸಂ.]

**ಕಾರು$_5$** 'ಕಾಱು$_3$' ನೋ.

**ಕಾರು$_6$** (ನಾ). ಸಣ್ಣ ಮೋಟಾರು ಬಂಡಿ : ಕಾರು ಹಾಯ್ದರೆ ಬಾಯ್ಗೆ ಸಿಡಿವುದು ಕೆಂಪುಗೋಧಿಯ ಕಿಚಡಿಯು (ನೆಲಮು. ೧೨); ಕಾರಿನೊಳಾಳಿನ ಮೈಗಾವಲೊಂದಿಗೆ ಕಾಲೇಜಿಗೈತಂದಳಿಕೆ (ಚಂದ್ರವೀ. ೬೭–೬೬) ; ಎಷ್ಟು ಗಾಡಿ ಎಷ್ಟು ಕಾರು ಓಡಾಡುತ್ತಿವೆ (ಸ್ವರ್ಗಬಾ. ೧೧೦). [← ಇಂ. Car]

**ಕಾರುಕ$_1$** (ನಾ). ಕಚ್ಚುವ ಸ್ವಭಾವದವನು (?) : "ಅಂಟುಕಂ, ಕಾರುಕಂ" (ಶಮದ. ೨೦೩ ಪ್ರಯೋ). [ಕಾರ್$_1$+–ಉಕ (<–ಉಗ)]

**ಕಾರುಕ$_2$** (ನಾ). ೧. ಕೈಕೆಲಸಗಾರ ; ಶಿಲ್ಪಿ : ಕೈದ ಮಾಡಿದ ಕಾರುಕ ಧೀರನಹನೆ (ನಗೆಮಾ. ೭೨) ; ಕಾರುಕ ಶಿಲೆಯ ತಂದು ತನ್ನ ಮನಕೆ ತೋಱುದುದ ಮಾಡಿದುದಿಲ್ಲವೇ ? (ಮೋಳಮಾ. ೧೬೪–೬೧೪) ; ಮದನನ ಬಾಣಾವಳಿಯಂ ಕಾಸಲ್ ಚೈತ್ರೋಜ್ವಳ ಕಾರುಕನಿಟ್ಟ ಕಮ್ಮಟಂಬೊಲ್ (ರಾಜಶೇ. ೩–೫೬). ೨. ಕೈಕೆಲಸಗಾರರ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಸುಂಕ ಕಾರುಕ ಹೊದಕೆ ಹೊಂಬಳಿ ಮಗಮೆವಟ್ಟೆ ಕಟ್ಟಿಗೆ ಸಹ ಸರ್ವ ಬಾಧೆ ಪರಿಹಾರವಾಗಿ (ಮೈಆರಿ. ೧೯೩೩ ; ೨೩–೪೯ ; 1384); ಸುಂಕ ಕಾರುಕ ಗ್ರಾಮ ಗದ್ಯಾಣ ಪಂಚಕಾರುಕ ಮೊದಲಾಗಿ ಸರ್ವಮಾನ್ಯವಾಗಿ (ಎಕ. VIII, ತೀರ್ಥಹ. ೯–೧೭ ; 1404) ; ಸುಂಕ ಕಾರುಕ ಗ್ರಾಮ ಗದ್ಯಾಣ ಪಂಚಕಾರುಕ ಗಾಣದೆಱ (ಎಕ. VII, ಶಿವಮೊ. ೭೧–೩೦ ; 1431). [ಸಂ.]

**ಕಾರುಕದೆಱ** (ನಾ). = ಕಾರುಕ$_2$ ೨ : ಒಂದು ಗಾಣದ ಡೊಂಕವಣ ಕಾರುಕದೆಱಯೊಂಡೆಲಯೊಕ್ಕಲ ಕಾರುಕದೆಱಯಿನಿತುಮುಂ ಸರ್ವ ಬಾಧಾ ಪರಿಹಾರವಾಗಿ ಕೊಟ್ಟರು (ಕಇ. IV, ೧೩–೬೫ ; 1165). [ಕಾರುಕ$_2$ + ತೆಱ$_3$]

**ಕಾರುಕರ್ಮ** (ನಾ). ಕೈಕೆಲಸ ; ಶಿಲ್ಪ : ಅರ್ಥಕಲ್ಪನೆಯ ಉದ್ಯೋಗಗಳು ಐದು ವಿಧ : ೧. ಪಾಶುಪಲ್ಯ ಅಥವಾ ಗೋರಕ್ಷ . . . ೪. ಕೈಗಾರಿಕೆ–ಕಾರುಕರ್ಮ (ಭಾರದ. ೩೫೭). [ಕಾರು$_4$ + ಕರ್ಮ]

**ಕಾರುಕಲ್ಲು** 'ಕಾರುಗಲ್ಲು' ನೋ.

**ಕಾರುಕಸೇವೆ** (ನಾ). ಕಾರುಕನ ಸೇವೆಗಾಗಿ ಬಿಟ್ಟ ದತ್ತಿ (?): ಶ್ರೀ ವೀರ ನಾರಸಿಂಹ ದೇವರಸರು ಪೃಥ್ವಿರಾಜ್ಯಂಗೆಯ್ಯುತ್ತಿರಲು ಅವರ ಮ××× ಕೊಟ ಕಾರುಕ ಸೇವೆ (ಮೈಆರಿ. ೧೯೪೦, ೫-೨; 13ನೆಯ ಶತ). [ಕಾರುಕ$_2$ + ಸೇವೆ]

**ಕಾರುಕಾರ್ಯ** (ನಾ). = ಕಾರುಕರ್ಮ: ಸರ್ವವಿಧ ಕಾರುಕಾರ್ಯಗಳಲ್ಲಿ ನಿಪುಣರಾದ ಶಿಲ್ಪಿಗಳೂ ತಂಡತಂಡವಾಗಿ ಬಂದು ನೆಲಸಿದರು (ಭೀಷ್ಮಚ. ೯೦). [ಕಾರು$_4$ + ಕಾರ್ಯ]

**ಕಾರುಕೃತ್ಯ** (ನಾ). = ಕಾರುಕರ್ಮ: (೬). [ಕಾರು$_4$ + ಕೃತ್ಯ]

**ಕಾರುಖಾನೆ** 'ಕಾರಖಾನೆ' ನೋ.

**ಕಾರುಗಂಟು** (ನಾ). ಒಂದು ಬಗೆಯ ಗಂಟು (?): ಹಾರುವ ಹಕ್ಕಿಯ ಹಿಡಿದೆ ಬೀಸುವ ಗಾಳಿಯ ಹಿಡಿದೆ ವೈಶಾಖದ ಬಿಸಿಲ ಹಿಡಿದೆ ಜಗವ ಹಾಸಿ ಕಟ್ಟಿದೆವೊಂದು ಕಾರುಗಂಟುವೊಂದು ಜಿಗುಳುಗಂಟುವೊಂದು ಕುಜುಹುಗಂಟು (ಮನುಗುಂ. ೧೮-೯೨). [?]

**ಕಾರುಗತ್ತಲು** 'ಕಾರ್ಗತ್ತಲೆ$_1$' ನೋ.

**ಕಾರುಗತ್ತಲೆ** 'ಕಾರ್ಗತ್ತಲೆ$_1$' ನೋ.

**ಕಾರುಗದ್ದೆ** 'ಕಾರಗದ್ದೆ' ನೋ.

**ಕಾರುಗಲಸು** 'ಕಾರ್ಗಲಸು' ನೋ.

**ಕಾರುಗಲ್ಲು,** ಕಾರುಕಲ್ಲು (ನಾ). (ಊರಿನ) ಗಡಿಕಲ್ಲು: ಮಾಧವರಾಯ ದೇವಸ್ಥಾನದ ಪೂರ್ವದಲ್ಲಿ ಕಾರುಗಲ್ಲು ಇದೆ (ಹೊಯ್ಸವಾ. ೯೫). **ಕಾರುಕಲ್ಲು**: (ಎಸಮೈ. XV, ೩೯). [ಕಾರು$_0$ + ಕಲ್ಲು (< ಕಲ್$_3$)]

**ಕಾರುಗತ್ತಲೆ** 'ಕಾರ್ಗತ್ತಲೆ$_1$' ನೋ.

**ಕಾರುಗೃಹ** (ನಾ). ಬಾಣಗಳನ್ನು ಮಾಡುವ ಮನೆ, —ಶಾಲೆ: "ಕಾರು [ಪಾಠಾಂ. ರ] ಗೃಹಮೆನಲು ಶರಸಾಲೆ [ಪಾಠಾಂ. ಸೆರೆಶಾಲೆ] ಯಕ್ಕು" (ಮಂಗರಾ. ೫೮-೧೦). [ಕಾರು$_4$ + ಗೃಹ]

**ಕಾರುಗೊರಲ** (ನಾ). ಕಪ್ಪುಕಂಠವುಳ್ಳವನು; ನೀಲಕಂಠ; ಶಿವ: ಪತಿದೇಹಿ ಎಂದೈದು ಬಾರಿ ಬೇಡಲು ಪಂಚಪುರುಷರಾಗಲಿ ಎಂದು ಕಾರುಗೊರಲಂ ಬೆಸಸಿ ಪೋದನು (ಪ್ರೌಢರಾ. ೨೦-೨೯). 'ಕಟಿಗೊರಲ' ಪರಾ. [ಕಾರು$_3$ (< ಕಾರ್$_3$) + ಕೊರಲ್ + -ಅ$_7$]

**ಕಾರುಣ** (ನಾ). = ಕಾರುಣ್ಯ: ಪರಮದೈವ ಪರಂಜ್ಯೋತಿ ಸ್ವರೂಪ ಸದ್ಗುರುವಿನ ಕಾರುಣಕರಪಲ್ಲವದೊಳಗೆ ಉದಯರಾದ ಶಿಷ್ಯ ಆತಪರಮಜ್ಯೋತಿಯ ಮರಿ (ಮೋಳಿಮಾ. ೧೦೩ ಪ್ರಸ್ತಾವ). [< ಸಂ. ಕಾರುಣ್ಯ]

**ಕಾರುಣಾತ್ಮ** (ನಾ). ಕರುಣೆಯುಳ್ಳವನು; ದಯಾವಂತ: ಕಾರುಣಾತ್ಮರು ಮೆಚ್ಚುತಿಹ ಕವಿತಾರಸವ . . . ತೋಱಿಸು (ಬಜ್ಜಪು. ೩-೧೦). [ಕಾರುಣ + ಆತ್ಮ]

**ಕಾರುಣಿಕ** (ನಾ). ಕರುಣೆಯುಳ್ಳವನು; ದಯಾವಂತ: ಕಾರು[ಪಾಠಾಂ. ರ]ಣಿಕರಿಲ್ಲಾ ಶಿವಾ ಎಂದೊಱಲಿದಳು ತರಳೆ (ಕುವ್ಯಾಸ. ೧೮-೧೦೭). [ಸಂ.]

**ಕಾರುಣ್ಯ** (ನಾ). ದಯೆ; ಮರುಕ; ಕರುಣೆ: ಮಹಿಷಮರ್ದಿನಿ ಭುಜಗಭೂಷಣನರಸಿ ಕೊಡು ಕಾರುಣ್ಯದಲಿ ಮತಿಯ (ಕುವ್ಯಾಅ. ೧-೧೦); ರತಿಯನ್ನು ಅವನು ಸುಡಲಿಲ್ಲ. ಅವಳಿಗೆ ಕಾರುಣ್ಯವನ್ನು ತೋರಿಸಿದನು (ಸಾಹಿಸ. ೧೪೩). [ಸಂ.]

**ಕಾರುಣ್ಯಂಗೆಯ್** (ಕ್ರಿ). ದಯೆ ತೋರು; ಕರುಣಿಸು: ಎನಗೆ ಕಾರುಣ್ಯಂಗೆಯ್ದಿರಿ (ಪಂಚತಂ. ೪೨-೧೧); ಅಡವದ ಬಂಮಣಯ್ಯನ ಸಮುಖಾದೇಶದಿಂ ಕಾರುಣ್ಯಂಗೆಯ್ದು ಸರ್ವ್ವಾನಮಸ್ಯಮಾಗೆ ಧಾರಾಪೂರ್ವಕಂ ಮಾಡಿ (ಕಇಅ. ೧೮-೧-೭೮; 1126). [ಕಾರುಣ್ಯ + ಕೆಯ್$_1$]

**ಕಾರುಣ್ಯಂಬಡೆ,** ಕಾರುಣ್ಯವಡೆ (ಕ್ರಿ). ದಯೆಯನ್ನು ಪಡೆ; ಅನುಗ್ರಹವನ್ನು ಹೊಂದು: ಕರುಣಾಬ್ಧಿಯಪ್ಪ ಶಂಕರನಂ ಕಿಂಕರತೆಯಿಂ ಸರಣ್ಬೊಕ್ಕು ತತ್ಕಾರುಣ್ಯಂಬಡೆದು ಪಗೆಯಂ ಪರಾಭವಿಪೆನೆಂದು (ಶಬಶಂ. ೪-೯೫). **ಕಾರುಣ್ಯವಡೆ**: ದೇವಕವಿಗಳ ಕಾರುಣ್ಯವಡೆದು ಸವಿಮಾತುಗಳ ವಿಸ್ತರಿಸುವೆ (ಮೋಹತ. ೧-೧೮). [ಕಾರುಣ್ಯ + ಪಡೆ$_1$]

**ಕಾರುಣ್ಯಚಿತ್ತ** (ನಾ). ದಯೆದಿಂದ ಕೂಡಿದ ಮನಸ್ಸು: ಮುಂದೆ ನಿಂದಿರ್ದ ಮೇದಿನೀದೇವಿಯ ದೈನ್ಯಭಾವಮಂ ವಿರಿಂಚಿ ಕಾರುಣ್ಯಚಿತ್ತದಿಂ ನೋಡಿ (ಜಗವಿ. ೧-೨೭ ವ). [ಕಾರುಣ್ಯ + ಚಿತ್ತ]

**ಕಾರುಣ್ಯನಿಧಿ** (ನಾ). ದಯೆಗೆ ಆಶ್ರಯನಾದವನು; ಕರುಣಾಕರ: ಬಳಿಕ ತಾಪಸವೃಂದವನು ಕಾರುಣ್ಯನಿಧಿ ಕಳುಹಿದ ತಪೋವನಕೆ (ಕುವ್ಯಾಉ. ೯-೫೦). [ಕಾರುಣ್ಯ + ನಿಧಿ]

**ಕಾರುಣ್ಯಾರ್ಗಳ** (ನಾ). ದಯೆಯಿಂದ ಶ್ರೇಷ್ಠನಾದವನು; ಕರುಣಾಳು: ಸ್ವರ್ಗನರಕದ ಗತಿವಿಭೇದ ನಿಸರ್ಗಚಿಹ್ನಂಗಳನು ಕಾರುಣ್ಯಾರ್ಗಳನು ಕರುಣಿಸಿದನಾ ಮುನಿನಾಥನವನಿಪಗೆ (ನಿಭಾಗ. ೫-೧೨ ಸೂಚನೆ). [ಕಾರುಣ್ಯ + ಅರ್ಗಳ$_2$]

**ಕಾರುಣ್ಯಾವಲೋಕನ** (ನಾ). ಕೃಪಾದೃಷ್ಟಿ; ದಯಾದೃಷ್ಟಿ: ನಿಮ್ಮ ಕಾರುಣ್ಯಾವಲೋಕನವೆಮ್ಮ ಸಿರಿ ಬೇಱಿಮಗೆ ಕಾಳಗದಮ್ಮಗೆಯ ವಿಕ್ರಮದ ವಿವರಣವಿದ್ಧ ಫಲಿಸುವುದೆ (ಕುವ್ಯಾವಿ. ೮-೫೩). [ಕಾರುಣ್ಯ + ಅವಲೋಕನ]

**ಕಾರುತಿಂಗಳು** (ನಾ). (ಕರಾ) ಸೌರಮಾನದಲ್ಲಿ ಮೂರನೆಯ ತಿಂಗಳು; ಮಿಥುನಮಾಸ: ಆಚಂದ್ರಾರ್ಕವಾಗಿ ಕಾರುತಿಂಗಳು ತಾರೆಯ ತಿಂಗಳಲಿ (ಸೌಇಎ. ೧೯೩೧, ಕುಂದಾಪು. ೩೫೭-೧೩; 1379); ಕಾರುತಿಂಗಳಲ್ಲಿ ಐತಾಳರು ಈ ಲಗ್ನಕ್ಕೆ ಏಕೆ ಒಪ್ಪಬೇಕು (ಮರಮ. ೨). [ಕಾರು$_2$ (< ಕಾರ್$_2$) + ತಿಂಗಳು (< ತಿಂಗಳ್)]

**ಕಾರುನೆಲ್ಲು** (ನಾ). = ಕಾರುಭತ್ತ: ಭಕ್ತರು ಹೆದರದೆ ಕೂಲಿಮಾಡಿ ಅದರಿಂದ ಬಂದ ವ್ರೀಹಿಯನ್ನು ಕುಟ್ಟಿ, ಆ ಅಕ್ಕಿಯನ್ನು ಸಮರ್ಪಿಸಿ, ಕಾರುನೆಲ್ಲನ್ನು ತಾವು ತೆಗೆದುಕೊಂಡು ಕಾಲವಂ ಕಳೆಯುತ್ತಿದ್ದರು (ಪುರಾವಿ. ೯೪). [ಕಾರು$_2$ (< ಕಾರ್$_2$) + ನೆಲ್ಲು (< ನೆಲ್)]

**ಕಾರುಪ್ಪು** (ನಾ). ಕರಿಯ ಉಪ್ಪು: "ರೋಮಕಂ - ಪತ್ರಕ, ಲವಣಭೇದ, ಕಾರುಪ್ಪು" (ಓಷಧಿ. ೧೪೦). [ಕಾರ್$_3$ + ಉಪ್ಪು$_1$]

**ಕಾರುಬಾರಿ** 'ಕಾರಭಾರಿ' ನೋ.

**ಕಾರುಬಾರು** 'ಕಾರಭಾರ' ನೋ.

**ಕಾರುಬೆಳೆ** (ನಾ). ಮಳೆಗಾಲದ ಬೆಳೆ: ಕಾರುಬೆಳೆಯ ಭತ್ತ (ರೂಢಿ). [ಕಾರು$_2$ (< ಕಾರ್$_2$) + ಬೆಳೆ$_2$]

**ಕಾರುಭತ್ತ,** ಕಾರಭತ್ತ (ನಾ). ಮಳೆಯಿಂದ ಬೆಳೆಯುವ ಬತ್ತ: ಮೂವತು ಕಾರುಭತ್ತ ಖ ೧೦ (ಎಕ. VI, ಕೊಪ್ಪ. ೫೮-೧೦; 1502). **ಕಾರಭತ್ತ**: ಕಾಲೆಭತ್ತ ಖ ೩೦ ಮೂವತು ಕಾರಭತ್ತ ಖ ೧೦ (ಎಕ. VI, ಕೊಪ್ಪ. ೫೮-೧೦; 1592). [ಕಾರು$_2$ (< ಕಾರ್$_2$) + ಭತ್ತ]

**ಕಾರುಭಾರ** 'ಕಾರಭಾರ' ನೋ.

**ಕಾರುಭಾರಿ** 'ಕಾರಭಾರಿ' ನೋ.

**ಕಾರುಭಾರು** 'ಕಾರುಭಾರ' ನೋ.

**ಕಾರುಭೂಮಿ** (ನಾ). ಒಂದು ಬಗೆಯ ಭೂಮಿ; ಜವುಗುನೆಲ; ಉಪ್ಪುನೆಲ: ಕಾರುಭೂಮಿಯು:—ಮಳೆಗಾಲದಲ್ಲಿ ಈ ಭೂಮಿಯ ಮೇಲೆ . . . ನೀರು ನಿಂತಿರುವ ಕಾರಣ ಆಗ ಇದರಲ್ಲಿ ಒಕ್ಕಲುತನವು ನಡೆಯುವುದಿಲ್ಲ (ಮುಂಬಯಿ. ೫-೨೧೪). [ಕಾರು$_3$ (< ಕಾರ್$_3$) + ಭೂಮಿ]

**ಕಾರುಮೋಡ** 'ಕಾರ್ಮೋಡ' ನೋ.

**ಕಾರವೆ** 'ಕಾರವಿ$_2$' ನೋ.

**ಕಾರುಶರ** (ನಾ). ಕಾರ್ಗಾಲ ಮತ್ತು ಶರತ್ಕಾಲ; ಆ ಕಾಲದಲ್ಲಿ ಬರುವ ಮಳೆ: ಸ್ಥಳಂಗಳಿಗೆ ಕಾರುಶರಕೆ ಸಹ ವರುಷ ೧ಕ್ಕೆ (ಬೊಂಕಶಾ. ೧೯೪೦, ಕುಮುಟ. ೧೧೩–೨೨; 1475). [ಕಾರು$_2$ (< ಕಾರ್$_2$) + ಶರ$_1$]

**ಕಾರುಸೇಸೆ** (ನಾ). ಮಳೆಯ ನೀರಿನಿಂದ ಬೆಳೆಯುವ ಫಸಲಿನ ಮೇಲೆ ಹಾಕುವ ತೆರಿಗೆ: ಕಾಡಾರಂಭ ಸುವರ್ನಾದಾಯವಾರ ಕಾರುಸೇಸೆ ಸಿದ್ಧಾಯ ಉಪ್ಪಿನ ಮೋಳೆ (ಸೌಇಇ. IX–ii, ೪೪೦–೨೪; 1419)
[ಕಾರು$_2$ (< ಕಾರ್$_2$) + ಸೇಸೆ$_1$]

**ಕಾರುಳಿ** 'ಕಾರಣೆ$_1$' ನೋ.

**ಕಾರೂಬಾಮಣಿ** (ನಾ). ಒಂದು ಬಗೆಯ ಹವಳ; ಶಿಲಾರಾಳ; ತೈಲಸ್ಫಟಿಕ: ಈ ದ್ವೀಪಗಳ ತೀರದಲ್ಲಿ ಸಮುದ್ರದ ಅಲೆಗಳು ದಡಕ್ಕೆ ತಳ್ಳಿದ ದೊಡ್ಡ ದೊಡ್ಡ ಕಾರೂಬಾಮಣಿಗಳು ಸಿಕ್ಕುತ್ತವೆ (ಪ್ರವಾಇ. I, ೩೦೨); ಕಾರೂಬಾಮಣಿ, ಶಿಲಾರಾಳ, ತೃಣಮಣಿ, ತೈಲಸ್ಫಟಿಕ, ಅಂಬರ್ (Amber. ಇಂಕನಿ). [ಕಾರೂಬಾ$_0$ + ಮಣಿ$_3$]

**ಕಾರೆ$_1$** (ನಾ). ಒಂದು ಬಗೆಯ ಹಣ್ಣುಬಿಡುವ ಮುಳ್ಳುಗಿಡ: "ತಿಕ್ತಕಿಯಿನಲ್ ಕಾರೆಯಕ್ಕು" (ಮಂಗರಾ. ೪೨–೩೭); ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ ದುರಾಸೆಯಿಂದ ಬಂದುದು ಅನರ್ಪಿತ (ಶೂನ್ಯಸಂ. ೨೫೩–೨೧); ಜೀವವುಳ್ಳೊಡೆ ಕಾರೆಯ ಸೊಪ್ಪನಾದೊಡೆ ತಿಂದು ಬದುಕಲುಬಹುದಲಾ (ಬಸಪು. ೫೮–೪೩); ಕಾರೆ ಬೋರೆ ಗುಳವತ್ತಿ ತುಂಬುರು ನಗರೆ ಮುಂತಾದ ಪಣ್ಗಳ ತಂದರು (ಮೋಹತ. ೧೯–೫೩); ಕಾರೆ (ಅಬನಸ) – ಮಧ್ಯಮ ಆಕಾರದ ವೃಕ್ಷ. ಇದರ ಗಂಡು ಅಚ್ಚ ಕರಿದಾಗಿರುತ್ತದೆ (ಕಭಾಗೆ. ೩೭); ಬೋರೆಗಿಡಕ್ಕೆ ಕಾರೇಹಣ್ಣು ಆದೀತೆ (ಗಾದೆ).

ಕಾರೆಮಟ್ಟು = ಕಾರೆಯಗಿಡದ ಪೊದೆ: ಹುಲಿಯು ಕಾರೆಮಟ್ಟಿನ ಅರೆಕಲ್ಲು ಗುಂಡಿಗೆ ಕಾಲೆತ್ತಿ ಅಭಿಷೇಕಮಾಡಿ (ಮಲೆಮ. ೧೭೫).

[ದೇ. ‖ ತಮಿ. ಕಾರೈ; ಮಲ. ಕಾರ; ತುಳು. ಕಾರೆ; ಕೊಡ. ಕಾರೆಮರ]

**ಕಾರೆ$_2$, ಕಾರಿ$_3$** (ನಾ). ಒಂದು ಬಗೆಯ ಪಕ್ಷಿ; ಮರಕುಟಿಗನ ಹಕ್ಕಿ: ಕೌಶಿಕಂ ಕುಣಿವ ನವಿಲ್ ಕಾರೆ ಗಿಳಿಯೇಳಿ ಬಾವಲಿ ಕೀರಂಚೆ ಪರಡೆ ಪರ್ದು ಹಸುಬಂ ಗಿಡುಗಂ (ಸೂಕ್ತಿಸು. ೩–೧೪೫). ಕಾರಿ$_3$: ಭೇರುಂಡಂ ಪೊಜಸು ಕಾಗೆಗಂಬೊಂದುರಿಗಂ ಕಾಜು[ರಿ]ಕಜುವಿಳೀ ಕೊಯ್ಕಂ (ಕಾವ್ಯಸಾ. ೧೦೪೩ ಶೂದ್ರಕ). [ದೇ. ‖ ಮಲ. ಕಾರಿ]

**ಕಾರೆ$_3$** (ನಾ). ಒಂದು ಬಗೆಯ ಕಂಠಾಭರಣ; ಕೊರಳಲ್ಲಿ ಧರಿಸುವ ಚಿನದ ಸರ: (ದಕ. ಕಿ). [ದೇ. ‖ ತಮಿ. ಕಾಜ್ಚಿ]

**ಕಾರೆ$_4$** (ನಾ). ೧. ಸೆರೆ; ಸಂಕೋಲೆ; ಬಂಧನ. 'ಕಾರೆಗೈ' ಪರಾ. ೨. ಯಾತನೆ; ದುಃಖ. [ಸಂ. ಕಾರಾ]

**ಕಾರೆ ಅಱುಕು** (ನಾ). ಒಬ್ಬಾತನ ಹೆಸರು: ಅದರ್ಕೆ ಸಾಕ್ಷಿ ಕೋಟ್ಟೆಜುರುವರ್ ಕಾರೆಅಱುಕುಂ (ಮೈಅರಿ. ೧೯೨೫, ೧೦೭–೩೭; ?). [?]

**ಕಾರೆಕಾಡು** (ನಾ). ೧. ಕಾರೆಮುಳ್ಳುಗಳಿಂದ ತುಂಬಿದ ಪೊದೆ. ೨. ಕಾರೆ ಪೊದೆಗಳಿಂದ ತುಂಬಿದ ಕಾಡು: (ಕಿ). ೩. (ಕರಾ) ಒಂದು ಊರಿನ ಹೆಸರು. [ಕಾರೆ$_1$ + ಕಾಡು$_2$. / ಮಲ. ಕಾರಿಕ್ಕಾಡು]

**ಕಾರೆಗಲಸು** 'ಕಾರ್ಗಲಸು' ನೋ.

**ಕಾರೆಗೈ** (ಕ್ರಿ). ಸೆರೆಹಿಡಿ; ಬಂಧಿಸು: ಖಳವಾರವೆಲ್ಲಪಹಾರವೆಸಗಿ ಸುಕುಮಾರ ಜಯಂತನ ಕಾರೆಗೈದಿಹರು (ಕುಮಾವಿ. ೨೩).
[ಕಾರೆ$_4$ + ಗೈ (< ಕೆಯ್$_1$)]

**ಕಾರೆನಾಡು** (ನಾ). ಒಂದು ಪ್ರದೇಶದ ಹೆಸರು: ಆದಿವಾರದನ್ನು ಕಾರೆನಾಡ ದೇವನೂರನುಳಗ್ಗೆಯರ ಕುಳದ ಮುಧಿಗವುಡನ (ಎಕ. VII, ಶಿಕಾರಿ. ೫೨–೧೦; 357 ?). [ಕಾರೆ$_0$ + ನಾಡು]

**ಕಾರೆಮಂಜು** (ನಾ). ಒಂದು ಬಗೆಯ ಮೂಲಿಕೆ: ಅತಿಮಧುರ, ಕಾಷ್ಠಿಮಂಜು ಇಷ್ಟನ್ನೂ ಸಮಚೂರ್ಣಮಾಡಿ . . . ಒಂದು ಗುಳಿಗೆಯನ್ನು ಅನುಪಾನವರಿತು ತೆಗೆದುಕೊಂಡರೆ ರಕ್ತಗ್ರಹಣೀ, ಹೊಟ್ಟೆನುಲಿ ಸಂಗ್ರಹಣಿ ಸಹ ನಿಲ್ಲುವುವು (ಸಕವೈ. ೪೮೪). [?]

**ಕಾರೆಮುಳ್ಳು** (ನಾ). ೧. ಕಾರೆಯ ಗಿಡದ ಮುಳ್ಳು. ೨. ಅಂತಹ ಮುಳ್ಳಿರುವ ಗಿಡ. [ಕಾರೆ$_1$ + ಮುಳ್ಳು (< ಮುಳ್$_2$)]

**ಕಾರೆಯ** (ನಾ). [ಜೈನ] ಜೈನಯತಿಗಳಲ್ಲಿ ಒಂದು ಪಂಗಡ: ಕಾರೆಯವನಾಳ್ವ ಜಯಸೇನಭಟರರುಂ (ಎಕ. III, ನಂಜನ. ೧೯೨–೫; 968); ಮೈಲಾಪಾನ್ವಯಮೆನಿಸಿದ[ಕಾ]ರೆಯ ಗಣ ಗಗನ ಚೂಡಾಮಣಿಗಳುಂ (ಇಆ. XVIII, ೩೧೧–೧೩; 11ನೆಯ ಶತ); ಅನ್ತಾ ಕಾರೆಯ ಗಣದೊಳತಿ ಪ್ರಸಿದ್ಧರುಂ ಮಹಾಪ್ರಬುದ್ಧ ×××× ಶಾಸನರುಂ (ಕಇ. I, ೩೨–೩; 1219). [?]

**ಕಾರೆರಕೆ** (ನಾ). ಕರಿಯ ರೆಕ್ಕೆ; ಕಪ್ಪಾದ ರೆಕ್ಕೆ: ಇರುಳ ಕಾರೆರಕೆ ಬೆಂಬತ್ತುತಿದೆ (ಗಿಳಿವಿಂ. ೫೦–೧೦). [ಕಾರ್$_3$ + ಎರಕೆ$_1$ (< ಎಱಂಕೆ)]

**ಕಾರೆಲೆ** (ನಾ). ಕರಿಯ (ವೀಳೆಯದ) ಎಲೆ: ಕಾರೆಲೆ ಹಣ್ಣಡಿಕೆಯ ಬಾಯೊಳಗಿಟ್ಟು ನಾರುವ ಮೈಗೆ ಮಲಿನವಾ ಸೀರೆಯನುಟ್ಟಿತಿ ನಲವಿಂದ ವಿಟನ ಸಾರುತಿರ್ದರು ದಾಸಿಯರು (ಜೀವಂಸಾಂ. ೧೯–೧೫).
[ಕಾರ್$_3$ + ಎಲೆ$_1$]

**ಕಾರೆಳ್ಳು** (ನಾ). ೧. ಕರಿಯ ಎಳ್ಳು: "ರುಹುಷ್ಕ – ಕಾರೆಳ್ಳು" (ಒಷಧಿ. ೧೩೯); ಕಾರ್ಯವಿನಾಯಕ ಕಾರ್ಯವ ನಡಸಯ್ಯ ಕಾರೆಳ್ಳು ಕಡಲೆ ನಿನಗೀವೆ (ನಾಪದ. ೧೮೫). 'ಬಿಳಿಯೆಳ್ಳು' ಪರಾ. ೨. ಹುಚ್ಚೆಳ್ಳು; ಗುರೆಳ್ಳು: ಸ್ನಾನ ಮುಗಿಸಿ ನಾಕು ದಶಮಿ, ಕಾರೆಳ್ಳಿನ ಹಿಂಡಿ . . . ಹೊಡೆದು ಥರಕಿ ಬಿಟ್ಟ ವಿಷಯ ಗೋವಿಂದಭಟ್ಟನಿಗೆ ಗೊತ್ತಿರಲಿಲ್ಲ (ದೀಪಹ. II, ೭). ೩. (ಮನುಷ್ಯರ ಚರ್ಮದ ಮೇಲಿರುವ) ಕರಿಯ ಮಚ್ಚೆ; ಎಳ್ಳಿನಾಕಾರದ ಕರಿಯ ಗಂತಿ: "ಜಡುಜಃ, ಕಾಲಕಃ, ಪಿಪ್ಪುಃ, ತಿಲಕಃ, ತಿಲಕಾಲಕಃ – ಈ ೫ ಕಾರೆಳ್ಳು" (ನಾಚಿರಾ. ೧೧೯); ಅಂಗಯ್ಯ ಕಾರೆಳ್ಳಿನಂತಿರ್ದ ಗರಳಮಂ ಮಂಗಳಮಯಂ ನೋಡಿದಂ (ನಂಬರ. ೨–೨೭); ಮೆಯ್ಯ ಕಾರೆಳ್ಳು ಮೊದಲಾದುವಂ ನೋಡಿ ಫಲಾಫಲಂಗಳಂ ಪೇಳ್ವುದು (ಶಾಸ್ತ್ರಟೀ. ೯೦–೩); ಬೆಲುಮತ್ತಿ ಕಾರೆಳ್ಳು ಸುಪ್ರದಕ್ಷಿಣವಾದ ಸುಳಿ ಕಡೆಗಂಗಳ ಕೆಂಪು . . . ಮೈಯ್ಯ ರೋಮಸಂಕುಳವೆಸೆದುವು ಚಕ್ರಧರಂ (ಭರಚ. ೬–೭೧); ಶರೀರದೊಳು ಕರಮೆಸೆದಿಹ ಕೆಮ್ಮಚ್ಚೆ ಕಾರೆಳ್ಳುಗಳೆರಲೊಪ್ಪಿತವನ ದಿವ್ಯಾಂಗ (ನಾಗಕು. ೨೫–೪೮). ೪. ಪುಪ್ಪುಸ; ಶ್ವಾಸಕೋಶ: "ತಿಲಕಂ, ಕ್ಲೋಮಂ–ಈ ೨ ಕಾರೆಳ್ಳು [= ಕರುಳು ? ಕೋಶ]" (ಹಲಾಯು. ೧೦೫–೧೪); "ತಿಲಕಮಾ ಕ್ಲೋಮಮೆನೆ ಕಾರೆಳ್ಳೆನಿಕ್ಕು" (ಮಂಗರಾ. ೧೧೭–೭).
[ಕಾರ್$_3$ + ಎಳ್ಳು (< ಎಳ್)]

**ಕಾರೇಕಾರ** 'ಕಾರೇಗಾರ' ನೋ.

**ಕಾರೇಗಾರ, ಕಾರೇಕಾರ** (ನಾ). ೧. ಕುಶಲ ಕಾರ್ಯಗಳನ್ನು ಮಾಡುವವನು; ಶಿಲ್ಪಿ; ಕೈಕೆಲಸಗಾರ: ಕಾರೇಗಾರರ ಮುಟ್ಟುಗಳು ಮತ್ತು . . . ಸಾಮಾನುಗಳು (ಗ್ರಾಮಾಕ. ೩೫); ಅನ್ಯದೇಶದಲ್ಲಿ ಹುಟ್ಟುತ್ತಿದ್ದ ಒಡವೆಗಳ ಜ್ಞಾನವು ಇಂಗ್ಲೀಷ ಕಾರೇಗಾರರಿಗೆ ಆಗಿ ಅಂಥ ಒಡವೆಗಳನ್ನು ಮಾಡುವ ಲವಲವಿಕೆಯು ಅವರಲ್ಲಿ ಹುಟ್ಟಬೇಕು (ಇಂಗ್ಲಂಡ. ೨೭೫); ಪಾಂಡ್ಯದೇಶದ ಕಾರೇಗಾರರು ಅತ್ಯಂತ ನಿಪುಣರು (ಶ್ರೀರಾಯ. ೩೩೯).

**ಕಾರೇಕಾರ**: ೨. ಕಾರ್ಯವನ್ನು ನಿರ್ವಹಿಸುವವನು; ಕಾರುಭಾರಿ: ಬೆಪ್ಪನಾಡ ನಾಯಕನ ಉತ್ತಯೆಂಬ ಕೊಡಗ ಕಾರೇಕಾರ ಉಪ್ಪಿಗೆ ಹರಾಮನಾಗಿ (ರಾಜೇಂದ್ರ. ೪).
[← ಪಾರ. ಕಾರೀಗರ್, / ಸಂ. ಕಾರ್ಯಕಾರ]

**ಕಾರೇಡ** (ನಾ). ಒಂದು ಬಗೆಯ ಪಕ್ಷಿ: ನವಿಲಸಗವಕ್ಕಿಯರಗಿಳಿ(ಣಿ) ಕಾರೇಡಂ ಗಿಡುಗಂ ಸಿಂಚಾಮಿನಿತುಂ ಗಮನಾಗಮದಲ್ಲಿ ತಾಂ ಪುಗೆ ಶುಭದಂ (ಲೋಕೋಪ. ೧೨–೧೯). [?]

**ಕಾರೇಡಿ** (ನಾ). ಕಪ್ಪು ಏಡಿ; ಕರಿಯ ನಳ್ಳಿ: ಡೊಗರಿನಿಂದ ಆಹಾರಾನ್ವೇಷಣೆಗಾಗಿ ಆಗ ತಾನೆ ಹೊರಗೆ ಬಂದಿದ್ದ ಕಾರೇಡಿಯೊಂದು ತನ್ನ ಬಳಿಗೆ ಕರಿಯ ಕೋಲು ಬರುತ್ತಿದ್ದುದನ್ನು ಕಂಡು ಬೆದರಿ . . . ಡೊಗರಿನ ಕಡೆಗೆ ಓಡತೊಡಗಿತು (ಕಾನೂರು. ೨೦).
[ಕಾರ್$_3$ + ಏಡಿ$_1$]

**ಕಾರೇಳು** (ನಾ). (?) : ಕನಸಂತರಿಕ್ಷಮುಂಗಧ್ವನಿ ಕಾರೇಳು ಕಲಿಸ ಲಕ್ಷಣಂಮತ್ತಂ ಮೇದಿನಿಕಂಪಮೆಂಬವಷ್ಟಾಂಗ ನಿಮಿತ್ತಂ ಬಗೆವೊಡವರ್ಗೆ ಶುದ್ಧಗೆಯಲ್ತೆ (ಧರ್ಮಾಮೃ. ೫–೧೫೮). [?]

**ಕಾರೊಕ್ಕಲ್** (ನಾ). ಹೊಲಗದ್ದೆಗಳಲ್ಲಿ ಕೆಲಸಮಾಡುವವನು; ಉಳುಮೆಗಾರ: ಮೇರು ಪೊಸಂತಿಲ್ ಕುಡಿತೆಯ ನೀರಂಬುಧಿ ಗಗನ ತಳಮೆ ಕೈ ದಿವಿಜಗಣಂ ಕಾರೊಕ್ಕಲೆಂದೊಡುಱಿದವರಾರಾತನ ಮಸಪ ಮಸಕದೆಸಕಮನಿಱಿಪರ್ (ಕಾವ್ಯಸಾ. ೨೩೯ ಶೂದ್ರಕ).
[ಕಾರ್$_2$ + ಒಕ್ಕಲ್$_2$]

**ಕಾರೊಡಲ್**, ಕಾರೊಡಲು (ನಾ). ಕರಿಯ ಮೈ; ಕಪ್ಪು ಬಣ್ಣದ ದೇಹ: ಬೆರೆತ ಮೋಱೆಯ ಗಂಟು ಪುರ್ಬಿನ . . . ತೋರ ಕಾರೊಡಲ (ಬಸವು. ೨೦–೧೨); ಅನುಪಮದ ಕಾರೊಡಲ ಬೇಡವಡೆ . . . ಐತರುತಿರ್ದುದು (ಜೈಮಿಭಾ. ೨೮–೪೦); ಕಾರೊಡಲ ಚಂಡಾಲರೆಳೆತಂದು . . . ಕಾಲ್ವೆರಳ ಕೊಯ್ದು ಕೊಂಡೋಡಿದರು (ಚಂದ್ರಸ. ೩೭). **ಕಾರೊಡಲು**: ಕಾರೊಡಲು ಮೇಗಡರ್ದ ಮೆಯ್ನವಿರು ಕೆಂಗಲಿಪ ತೋರಗಣು (ಹಚಕಾ. ೫–೨); ಕಾರೊಡಲು ಕೇಸುರಿಗಣ್ಣು . . . ನೆಲದಿ ಪೊರಳುತಿಹ ಭೂತಮಂ ಕಂಡು (ಪ್ರೌಢರಾ. ೧೦–೧೭). [ಕಾರ್$_3$ + ಒಡಲ್]

**ಕಾರೊಡಲ** (ನಾ). ಕರಿಯ ಮೈಯುಳ್ಳವನು; ಕೃಷ್ಣ; ವಿಷ್ಣು: "ತಾವರೆಗಣ್ಣಂ ಕಾವನಯ್ಯನುಂ ಕಾರೊಡಲಂ" (ಕವಿಕಂ. ೨೪); ಪಲಗಣ್ಣ ಕಾರೊಡಲ ಮಾತುವೆಣ್ಣೞೆಯರುಂ ತುಳಿಲ್ಗೆಯ್ವ (ರಾಘಚ. ೧–೪); ಕಾರೊಡಲನೆ ದೇವನಾದಿಲಕ್ಷ್ಮಿಯೆ ದೇವಿ (ಶತಸಾಂ. ೧೩–೭೨).
ಕಾರೊಡಲ ಕೆಳೆಯ = ವಿಷ್ಣುವಿನ ಮಿತ್ರ; ಶಿವ: ಬಾಂಬೊಳೆ ದಲೆಯ ಕಾರೊಡಲ ಕೆಳೆಯ (ನವಮೋ. ೩೩–೧).
[ಕಾರೊಡಲ್ + –ಅ$_7$]

**ಕಾರೊಡಲು** 'ಕಾರೊಡಲ್' ನೋ.

**ಕಾರೊಡ್ಡು$_1$** (ಕ್ರಿ). (ಮಳೆಯ) ಮೋಡವನ್ನು ಒಡ್ಡು, —ಕವಿಸು: ಕಾರೊಡ್ಡಿ ಹುಯ್ಯೊ ಮಳೆರಾಯ ತಂಗಿಯ ಇಂದಿನ ಪಯಣ ಉಳಿಯಲಿ (ಹಳ್ಳಿಬಾ. ೩೨–೭). [ಕಾರ್$_2$ + ಒಡ್ಡು$_1$]

**ಕಾರೊಡ್ಡು$_2$** (ನಾ). ಕರಿಯ ರಾಶಿ; ಕತ್ತಲೆಯ ಸಮೂಹ: ಬಿಗಿದ ಭೀತಿಯ ನಿಶಿಯ ಕಾರೊಡ್ಡು ಕರಗುತ್ತ, ನಗುವನಕ ಶಾಂತಿಯಿರಲು (ಇಂಗೀತ. ೨೭–೯). [ಕಾರ್$_3$ + ಒಡ್ಡು$_2$]

**ಕಾರೊಸಡು** (ನಾ). ಕಪ್ಪಾದ ಒಸಡು; ಕರಿಯ ಒಸಡು; ಕಾರೊಸಡುಂ ಕರ್ಬಾಯುಂ ಪೇರೊಡಲುಂ ತೊಳಪ ದಾಡೆಯುಂ (ಕಾವ್ಯಾವ. ೨೨೦); ಕಾರೊಸಡು, ಕಾರಿರುಳ್, ಪೇರೊಡಲ್ (ಭಾಷಾಭೂ. ೧೩೪ ಉದಾ). [ಕಾರ್$_3$ + ಒಸಡು]

**ಕಾರೊೞ್ತಿ** (ನಾ). ಕಪ್ಪು ಬಣ್ಣದ ಒರೆ, —ಕೋಶ: ಅರ್ಚಿಸಲೆಂದವನೊೞ್ತಿಯಿಂದುರ್ಚಿದ ಕೂರಲಗಿವೆನಿಸಿ ಕಣ್ಬೊಣರವು ಮೆಯ್ವೆರ್ಚಿದೊಡೆ ಮದನನಲ್ಲಿಯೆ ಸಾರ್ಚಿದ ಕಾರೊೞ್ತಿಗಳಂತೆ ಪುರ್ಬುಗಳೆಸೆಗುಂ (ಲೀಲಾವ. ೭–೮೭); ಬಡಬಾಸೆಯೆಂಬ ಕಾರೊೞ್ತಿಯೊಡನಿರೆ ದಿಗ್ವಿಜಯ ಕರ್ಚಿಸಲ್ ಮದನಂ ತಾಂ ಪಿಡಿದಸಿಯನುರ್ಚಿ ನಿಲಿಸಿದ ಬೆಡಂಗನಾಳ್ದುದು ತನೂದರೀತನುಮಧ್ಯಂ (ವೃಷವಿ. ೪–೧೦೩). [ಕಾರ್$_3$ + ಒೞ್ತಿ$_2$]

**ಕಾರೋತ್ತರ** (ನಾ). ಹೆಂಡದ ನೊರೆ, —ಬುರುಗು: (ಶ). [ಸಂ.]

**ಕಾರೋಪಕ** 'ಕಾರಪಕ' ನೋ.

**ಕಾರ್ಕಡೆ** (ನಾ). ಕಾರ್ಗಾಲದ ಕೊನೆ; ಮಳೆಗಾಲದ ಅಂತ್ಯ: ಸಂದಿರ್ದ ಮಾರ್ಗಶಿರದಂದೊಂದಿದ ಪುಣ್ಣಿಮೆಯ ದೆವಸ ರವಿ ಶಶಿ ಮುಗಿಲೊಳ್ ಬಂದುದಯಿಸೆ ಕಾರ್ಕಡೆಯಾ ಮುಂದಣ ಕಾಲಕ್ಕೆ ಮೞೆಗಳೊಳ್ಪನೆ ಪೇೞ್ಗುಂ (ಜಟ್ಟಮ. ೮–೮೦); ಎಡೆಯುಡುಗದೆ ಬೆಳಸು ಮರ್ಧಮುಂ ಮೞೆಯುಂ ಕಾರ್ಕಡೆ ಬೆಳೆಗುಂ ಪ್ರಜೆಗೆ ಭಯಂ ನಡುಕಂ (ಜಟ್ಟಮ. ೩–೮ ಪರಿ). [ಕಾರ್$_2$ + ಕಡೆ$_3$]

**ಕಾರ್ಕರಿ** (ನಾ). ಒಂದು ಬಗೆಯ ತಂತಿವಾದ್ಯ: ಆ ವಾದ್ಯಗಳ ಸಮೂಹದಲ್ಲಿ ಕಾರ್ಕರಿ, ವೀಣಾ, ಕನ್ನಡವೀಣಾ ಮುಂತಾದ ತಂತೀ ವಾದ್ಯಗಳೂ . . . ಹೆಸರಿಸಲ್ಪಟ್ಟಿವೆ (ಸಂಗೀಚಂ. ೧೦೮). [< ಸಂ. ಕರ್ಕರೀ]

**ಕಾರ್ಕರ್ದಿ** 'ಕಾರಕರ್ದಿ' ನೋ.

**ಕಾರ್ಕಶ್ಯ** (ನಾ). ಬಿರುಸು; ಕರ್ಕಶತೆ: ಕರ್ಬೊನ್ನಿಂದಂ ವಿಧಾತ್ರಂ ಸಮೆದನಿವನನೆಂಬೊಂದು ಕಾರ್ಕಶ್ಯದಿಂದಂ (ಕಾದಂಪೂ. ೧೬೫). [ಸಂ.]

**ಕಾರ್ಕೆ** 'ಕಾಱಿಕೆ' ನೋ.

**ಕಾರ್ಖಾನನೀಸ** (ನಾ). ಸರಕಾರೀ ಧಾನ್ಯ ಸಂಗ್ರಹಾಲಯಗಳನ್ನು ನೋಡಿಕೊಳ್ಳುವ ಅಧಿಕಾರಿ; ಉಗ್ರಾಣಾಧಿಕಾರಿ: ಕೋಟಿ ಕೋಟೆಗೂ ಬ್ರಾಹ್ಮಣನಾದ ಸುಭೇದಾರನೊಬ್ಬನೂ ಪ್ರಭುಜಾತಿಯವನಾದ ಕಾರ್ಖಾನನೀಸನೊಬ್ಬನೂ ಇರುತ್ತಿದ್ದರು (ಛತ್ರಶಿ. ೧೫೪).
[← ಪಾರ. ಮರಾ. ಕಾರಖಾನನವೀಸ್]

**ಕಾರ್ಖಾನೆ** 'ಕಾರಖಾನೆ' ನೋ.

**ಕಾರ್ಖೂನ** 'ಕಾರಕೂನ' ನೋ.

**ಕಾರ್ಗತ್ತಲೆ$_1$** (ನಾ). ಮಳೆಗಾಲದ ಕತ್ತಲೆ; ಕಾರ್ಮೋಡಗಳ ಕತ್ತಲೆ: (ಶ). [ಕಾರ್$_2$ + ಕತ್ತಲೆ (< ಕಟ್ಟಲೆ)]

**ಕಾರ್ಗತ್ತಲೆ$_2$**, ಕಾರಗತ್ತಲೆ, ಕಾರುಗತ್ತಲು, ಕಾರುಗತ್ತಲೆ, ಕಾರುಗಳ್ತಲೆ (ನಾ). ಕಪ್ಪಾಗಿ ಕವಿದ ಕತ್ತಲೆ; ದಟ್ಟವಾದ ಕತ್ತಲೆ; ಕಗ್ಗತ್ತಲೆ: ಕಾರ್ಗತ್ತಲೆ ಮಸಗೆ ಮುಸುಱುವ ಮಱಿದುಂಬಿಯ ಬಂಬಲೊಳಂ (ಕಾದಂಪೂ. ೧೧೭); ಎತ್ತ ನೋಡಿದೊಡೆ ಭೇದಿಸಲಳವಲ್ಲ ಕಾರ್ಗತ್ತಲೆ ಕವಿದುವಾಹವದೆ (ಮೋಹತ. ೪೦–೪೧); ಕಾಡಿಗೆಯಂತಹ ಕಾರ್ಗತ್ತಲೆಯಿಂದಾವೃತವಾಗುವುದೋ (ಜ್ಯೋತಿರ್ವಿ. ೫೭). **ಕಾರಗತ್ತಲೆ**: ಕಾರ್ಗೊಲೆಸೆಯೆ ಕಾರಗತ್ತಲೆಗವಿದು (ನವಮೋ. ೩೩–೧೯). **ಕಾರುಗತ್ತಲು**: "ಶಾರ್ವರಂ – ಕಾರುಗತ್ತಲು, ಘಾತುಕ" (ಸಿದ್ಧಾಂಶಿ ೩೭೧). **ಕಾರುಗತ್ತಲೆ**: ಕಣ್ಣುಗಳಂ ಮುಚ್ಚುತ್ತ ಬರುವ ಕಾರುಗತ್ತಲೆಯೊಳ್ (ಸೌಗಂಧಿ. ೮೩–೨). **ಕಾರುಗಳ್ತಲೆ**: ಮಾರಭೂಪತಿಯ ಸಮ್ಮೋಹನಾಂಜನಮೋ ಎನೆ ಕಾರುಗಳ್ತಲೆ ಕವಿದುದಲ್ಲಲ್ಲಿ (ವೆಂಕಾರಾ. ೫–೨–೩೨). [ಕಾರ್$_3$ + ಕತ್ತಲೆ (< ಕಟ್ಟಲೆ)]

**ಕಾರ್ಗಲಸು**, ಕಾರಗಲಸು, ಕಾರಗಲಿಸು, ಕಾರುಗಲಸು, ಕಾರೆಗಲಸು (ಕ್ರಿ). ೧. ಕೆಸರು ಕಲಸು (?): ಬಡವ ನಾನೊಂದು ನೇಗಿಲಲಿ ನಿನ್ನನು ಬೀಳಹೊಡೆದು ಕಾರ್ಗಲಸಿ ಗದ್ದೆಯನು ತಡೆಯದೆ ಸತ್ಕೀರ್ತಿ ಗಂಧಶಾಲಿಯ ಬಿತ್ತಿ ಪಡೆವೆನು ಫಲವ (ಮೋಹತ. ೩೮–೪೯).

**ಕಾರಗಲಸು** : ೨. ನೆಲಸಮಮಾಡು, —ಧ್ವಂಸಮಾಡು. ವೀರಭದ್ರನ ಮಸಕದಲಿ ದಕ್ಷನ ಬಲ ಕಾರಗಲಸಿದಂದದಲಿ (ಕಂನವಿ. ೧೫–೩೯. **ಕಾರಗಲಿಸು** : ೧. ನೆತ್ತರ ನೆಣದ ಕಾರಗಲಿಸಿನೋರಣೆಗೆಡೆದ ಖೇಚರಭೂಚರ ನಿಶಾಚರ ಪಙ್ತಿ ಪ್ರತಾನಂ ಜವನುಂಡು ಕಾಜಿ ಕಡಲಿಟ್ಟಂತಿರಿರ್ದುದು (ಅನಂಪು. ೧೪–೭ ವ). ೨. ಕಾರಗಲಿಸಿದನಮಮ ರಾಜಕುಮಾರ ಕಂಠೀರವನು ರಿಪುಪರಿವಾರವನು (ಕುವ್ಯಾದ್ರೌ. ೫–೧೦); ತಾರಕಾಸುರನುಪಟಳಕಂಜಿ ಜಗವೆಲ್ಲ ಕಾರಗಲಿಸಿದಂದದಲಿ ಊರೂರುಗಳ ಬಿಟ್ಟು ಸರ್ವಜನರು ಬಂದು ಸೇರಿದರ್ಗಿರಿ ತರುಗಳನು (ಕಂನವಿ. ೧೧–೫೫). **ಕಾರುಗಲಸು** : ೨. ಕಾರುಗಲಸಿದರಮಮ ಯದುಬಲ ವೀರರನು (ಕೋಗಯ. ೨೩–೪೯); ಭೂರಿ ರಥಿಕರ ಧನುವ ತುಂಡಿಸಿ ಕಾರಗಲಸಿದನಮಮ ಕಡುಹೆಂತುಟೋ ಕಪೀಶ್ವರನ (ಮೈರಾಕಾ. ೪–೫೫).
**ಕಾರೆಗಲಸು** : ೧. ಸೂಸುವ ಮುತ್ತಿನ ಸೇಸೆಗಳೊಳಾಲಿಕಲ್ಗಳ್ ಕಾರೆಗಲಸಿಕೊಳ್ವ ಮಟೆಯೊಳ್ (ಅರ್ಥನೇ. ೭–೪೩ವ).

[ಕಾರ್$_2$ + ಕಲಸು]

**ಕಾರ್ಗಾಲ** (ನಾ). ಮಳೆಗಾಲ; ವರ್ಷಾಕಾಲ: ಕಾರ್ಗಾಲಮಂ ಸೋಗೆ . . . ನೆನೆವಂತಾಂ ನೆನೆವೆಂ ಸರೋಜಮುಖಿಯಂ (ಆದಿಪು. ೧೨–೩೨); ಕಾರ್ಗಾಲದ ನವಿಲಂತಾನಂದಿತಚಿತ್ತರಾಗಿ (ಧರ್ಮಾಮೃ. ೮–೨೧೫); ಕಾರ್ಗಾಲದಭ್ರಮಾಲೆಗಳಮರಸರಣೆಯೊಳ್ (ಜೈವಿಭಾ. ೩–೪೦); ಇದುವೆ ಕಾಡಿಗೆ ಕಡೆವ ಕಾರ್ಗಾಲ (ಹೃದಸ. ೫೧೪).

[ಕಾರ್$_2$ + ಕಾಲ]

**ಕಾರ್ಗುಂತಳ** (ನಾ). ಕಪ್ಪಾದ ತಲೆಗೂದಲು; ಕರಿಯ ಕೂದಲು. 'ಕಾರ್ಗುಂತಳೆ' ಪರಾ. [ಕಾರ್$_3$ + ಕುಂತಳ (=ಕುಂತಲ)]

**ಕಾರ್ಗುಂತಳೆ** (ನಾ). ಕಪ್ಪಾದ ತಲೆಗೂದಲುಳ್ಳವಳು: ಸಂತಸವಡೆದೊರ್ವೆಸಲುಗೆ ವೆಗ್ಗಡತಿ ಕಾರ್ಗುಂತಳೆಯರಿಗೆ ಪೇಳಿದಳು (ಮೋಹತ. ೪–೭೪). [ಕಾರ್ಗುಂತಳ + –ಎ$_2$]

**ಕಾರ್ಗುರುಳು** (ನಾ). = ಕಾರ್ಗುಂತಳ: ಲಲಿತ ಕಾರ್ಗುರುಳು ಕಾಮುಗೆ ಮಲವುತಿಹರ ಕೊರಲ್ನುರುಲಿಡುವ ನೇಣಗುರುಳು (ನವಮೋ. ೨೫–೪೮).

[ಕಾರ್$_3$ + ಕುರುಳು (< ಕುರುಳ್)]

**ಕಾರ್ಗುರುಳೆ** (ನಾ). = ಕಾರ್ಗುಂತಳೆ: ಕಾರ್ಗುರುಳೆ ಕೇಕಿ ಧಮ್ಮಿಲ್ಲೆ ಕಂಬುಗ್ರೀವೆ (ನವಮೋ. ೨೦–೧೫). [ಕಾರ್ಗುರುಳು + –ಎ$_2$]

**ಕಾರ್ಗೆಣಸು** 'ಕಾರಗೆಣಸು' ನೋ.

**ಕಾರ್ಗೆಯ್** (ನಾ). = ಕಾರಗದ್ದೆ: ಕಾರ್ಗೆಯ್ಯ ಮೇರೆಯೊಳಿಟ್ಟ ಕೆಕ್ಕರಿಕೆ ಬಿರಿವಂತಾನುಂ ಮೆಯರ್ ಬಿರ್ಕುಬಿರ್ಕನೆ ನಿಬ್ಬರಂ ಬಿರಿದೊಳಜುಗುಂ (ಶಾಂತಿಪು. ೭–೯೨). [ಕಾರ್$_2$ + ಕೆಯ್$_2$]

**ಕಾರ್ಗೊಳಿಸು** (ಕ್ರಿ). ೧. ಕಪ್ಪುಮಾಡು. ೨. ಕಳಂಕ ತರು. ೩. ಕೆಡಿಸು; ನಾಶಮಾಡು (?): ಕೂಗಣೆಯ ಕೂರಸಿಯ ಬಲುಹನು ಕಾರ್ಗೊಳಿಪ ಪರಶುವನು ಧರಿಸಿದ ಭಾರ್ಗವ ಶ್ರೀರಾಮ ಜನಿಸಿದನವರ ಪುಣ್ಯದಲಿ (ಸಂಭಪ. ೨೬–೯). [?]

**ಕಾರ್ಗೋಲ್** (ನಾ). ಕತ್ತಲೆಯನ್ನುಂಟುಮಾಡುವ ಮಂತ್ರಾಸ್ತ್ರ; ತಿಮಿರಾಸ್ತ್ರ: ಬಳಿಕ ನೋಡೆಂದು ಕಾರ್ಗೋಲೆಸೆಯೆ ಕಾರಗತ್ತಲೆಗವಿದುಯೆತ್ತತ್ತ ನೋಡಲುಮಭೇದ್ಯಮಾಗಿಯಿರೆ . . . ಚಂಡಭಾಸ್ಕರ ಬಾಣಮಂ ತೆಗೆದು (ನವಮೋ. ೩೩–೧೯).

[ಕಾರ್$_3$ + ಕೋಲ್$_1$]

**ಕಾರ್ಚಿಬಳ್ಳಿ** (ನಾ). ಚಿಕ್ಕಚಿಕ್ಕ ಕಾಯಿಗಳನ್ನು ಬಿಡುವ ಒಂದು ಬಗೆಯ ಹಾಗಲ ಜಾತಿಯ ಬಳ್ಳಿ: (ವ್ಯಔಗಿ. ೫೪–೧೦೯೩).

[ಕಾರ್ಚಿ$_0$ + ಬಳ್ಳಿ]

**ಕಾರ್ಡು** (ನಾ). ೧. ರಟ್ಟು ಕಾಗದ. ೨. ಇಸ್ಪೀಟು ಆಟದ ಎಲೆ. ೩. ಗುರುತಿನ ಚೀಟಿ; ಹೆಸರು ಬರೆದ ಚೀಟಿ: ಬಂದವರ ಹೆಸರಿನ ಕಾರ್ಡುಗಳನ್ನು ಕಂಡೊಡನೆ ಗೋವರ್ಧನ ಅವರನ್ನು ಒಳಗಿನ ಕೋಣೆಗೆ ಕರೆದೊಯ್ದ (ರತ್ನಗೋ. ೨೦). ೩. ಅಂಚೆಯ ಕಾಗದ: ಗಂಡಸು ಅಂಚೆಯ ಕಾರ್ಡಿನಂತಾದರೆ ಹೆಂಗಸು ಕವರಿನ ಹಾಗೆ (ಇಂಚಾಪ. ೨೩೪–೫೬). [← ಇಂ. Card]

**ಕಾರ್ಡುದಾರ** (ನಾ). ಗುರುತಿನ ಚೀಟಿಯನ್ನು ಹೊಂದಿದವನು; ಕಾರ್ಡು ಉಳ್ಳವನು: ಕಾರ್ಡುದಾರರ ಉಪಟಳವಂತೂ ಹೇಳತೀರದು. ನಿನ್ನೆ ಮಧ್ಯರಾತ್ರಿಯವರೆಗೂ ಕೊಟ್ಟು ಕೊಟ್ಟು, ಲೆಕ್ಕವೇ ಸರಿಯಾಗಿಲ್ಲ (ದೇಶಧು. ೭೭). [ಕಾರ್ಡು + –ದಾರ$_3$]

**ಕಾರ್ತವೀರ್ಯ** (ನಾ). ೧. ಪ್ರಸಿದ್ಧರಾದ ಆರು ಚಕ್ರವರ್ತಿಗಳಲ್ಲಿ ಒಬ್ಬ; ಪರಶುರಾಮನಿಂದ ಹತನಾದ ಒಬ್ಬ ದೊರೆ: ಹರಿಶ್ಚಂದ್ರ ನಳ ಪುರುಕುತ್ಸವಪುರೂರವ ಸಗರ ಕಾರ್ತವೀರ್ಯರೆನಿಪ್ಪಱುವರತ್ಯವಿರಳದ ಚಕ್ರವರ್ತಿಗಳಕ್ಕವರ್ಗೆ ಪುಣ್ಯಶ್ಲೋಕರೆಂಬ ನಾಮಂ" (ಮಂಗರಾ. ೭೮–೨). ೨. ರಟ್ಟವಂಶದ ಒಬ್ಬ ದೊರೆ: ಪೃಥ್ವೀರಾಮೇನ ಯದ್ದತ್ತಂ ನಿವರ್ತ್ತನಂ ಕಾರ್ತ್ತವೀರ್ಯೇಣ ಭೂಯಃ ಸ್ವಗುರವೇ ದತ್ತಂ (ಸೌಇಇ. XX, ೧೦–೨೦; 875). ೩. ಒಬ್ಬ ಜೈನ ಚಕ್ರವರ್ತಿ: (ಶ). [ಸಂ.]

**ಕಾರ್ತಸ್ವರ** (ನಾ). ಚಿನ್ನ; ಭಂಗಾರ: ಕಾರ್ತಸ್ವರ ವಿಳಾಸ ಕಳಸಮುಖ ವಿಗಳಿತ ಸ್ಥೂಲ ದುಗ್ಧ ವಾರಿಧಾರಾ ಸಹಸ್ರಂಗಳ್ (ಆದಿಪು. ೭–೯೬ ವ); ಎರಡಿಭಮನೇಜು ಕಾರ್ತಸ್ವರದೆರಡುಂಕೆಲದೊಳಿರೆ (ಸುಕುಮಾ. ೯–೭೭).

[ಸಂ.]

**ಕಾರ್ತಾಂತಿಕ** (ನಾ). ಭವಿಷ್ಯ ಹೇಳುವವನು; ಜೋಯಿಸ; ದೈವಜ್ಞ: "ಕಾರ್ತಾಂತಿಕಂ . . . ಸುದೈವಜ್ಞನುತ್ತಮ ಜ್ಯೋತಿಷನೆನಿಕ್ಕು (ಮಂಗರಾ. ೭೫–೬); ಅನೇಕ ಕಾರ್ತಾಂತಿಕ ಸಂತಾನ ಸಂಛನ್ನಮುಮಪ್ಪಂತಃಪುರವಂ . . . ಪೊಕ್ಕು (ಚಂದ್ರಪು. ೩–೯೬ ವ). [ಸಂ.]

**ಕಾರ್ತಿ** (ನಾ). (ಕರಾ) ಕಾರು ತಿಂಗಳು: ಈ ಸಲದ ಕಾರ್ತಿಬೆಳೆ ಚೆನ್ನಾಗಿ ಬಂದಿದೆ (ರೂಢಿ). [← ತುಳು. ಕಾರ್ತಿ, ಕಾರ್ತೆಲ್]

**ಕಾರ್ತಿಕ** (ನಾ). ೧. ಚಾಂದ್ರಮಾನ ವರ್ಷದಲ್ಲಿ ಎಂಟನೆಯ ತಿಂಗಳು: ಪ್ಲವಸಂವತ್ಸರದ ಕಾರ್ತಿಕಂ ಮುದಮನೀಯೆ (ಆದಿಪು. ೧೬–೭೬); ಕಾರ್ತಿಕ ಪೌರ್ಣಮಿಯ ರಾತ್ರಿ ಕೃತ್ತಿಕಾದೀಪೋತ್ಸವ . . . ಆಚರಿಸಲ್ಪಡುತ್ತದೆ (ನಕ್ಷತ್ರ. ೯); ಕಾರ್ತಿಕವಾದ ಮೇಲೆ ಮಳೆಯಿಲ್ಲ, ಕರ್ಣ ತೀರಿಕೊಂಡ ಮೇಲೆ ಯುದ್ಧವಿಲ್ಲ (ಗಾದೆ). ೨. ಕಾರ್ತಿಕ ಮಾಸದಲ್ಲಿ ದೇವಾಲಯಗಳಿಗೆ ಮಾಡುವ ದೀಪೋತ್ಸವ: ಬಾ ಬಾಳ ದೇಗುಲಕೆ ಭಾವನರ್ತಕಿಯಾಗಿ ಹೊಸಭಾವ–ದೀಪಗಳ ದಿವ್ಯಕಾರ್ತಿಕವಾಗಿ (ಕರುಶಾ. ೧೨). ೩. = ಕಾರ್ತಿಕೇಯ: ನೋಡಿದವರೆಲ್ಲ ಅನ್ನುತ್ತಿದ್ದರು "ಅಹಾ ಇವನು ಹುಡುಗನಲ್ಲ; ಪ್ರತ್ಯಕ್ಷ ಕಾರ್ತಿಕ" ಎಂದು (ಇಪ್ಪಕ. ೩೦೦). [ಸಂ.]

**ಕಾರ್ತಿಕಾಯಿ** (ನಾ). = ಕಾರ್ಚಿಬಳ್ಳಿ: (ವ್ಯಔಗಿ. ೫೪–೧೦೯೩). [?]

**ಕಾರ್ತಿಕಿಕೆ** (ನಾ). ಕಾರ್ತಿಕ ಮಾಸ. [ಸಂ.]

**ಕಾರ್ತಿಕೇಯ** (ನಾ). ೧. ಕೃತ್ತಿಕೆಯರಿಂದ ಪೋಷಿಸಲ್ಪಟ್ಟವನು; ಸ್ಕಂದ; ಕುಮಾರಸ್ವಾಮಿ; ಷಣ್ಮುಖ: ಬಿನ್ನಪಂಗೆಯ್ದು ಬೇಂಟೆಯಾತಂಗೆ ಮೃಗ ವ್ಯಾಯಾಮ ಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು (ಪಂಪಭಾ. ೫–೪೭ ವ). ೨. ಒಂದು ಮೂಲಿಕೆ (?): ನೇತ್ರವಾಯುವಿಗೆ ಎಲೆಕಪ್ಪಲಿ . . . ಆಳಲೆಕಾಯಿ ಕರಿ ಕಾರ್ತಿಕೇಯ ಕರಿ ಇವು ಎಲ್ಲವೂ ಸಮಭಾಗ ಸಣ್ಣನಾಗಿ ತಿರುಹಿ . . . ಕಣ್ಣಿಗೆ ಹಚ್ಚುವುದು (ವಿವೈವಿ. ೧೩೫). [ಸಂ.]

**ಕಾರ್ತಿಗೆ** (ನಾ). = ಕಾರ್ತಿಕ ೧: ಪ್ರಥಮ ವಿಜಯ ಸಮ್ವತ್ಸರಂ ಕಾರ್ತ್ತಿಗೆ ಪುಣ್ಣಮೆ ಅನ್ದು (ಎಕ. III, ತಿರುಮ. ೧-೪; 726). [< ಸಂ. ಕಾರ್ತಿಕ?]

**ಕಾರ್ತೀಕ** (ನಾ). = ಕಾರ್ತಿಕ ೧: ಚೈತ್ರದಲ್ಲಿಯು ಶೋಕ . . . ಕಾರ್ತೀಕದಲಿ ಸಿದ್ಧಿ (ಗಗತಾ. ೪-೬೪); ಭಾವ ಸಂವತ್ಸರ ಕಾರ್ತೀಕ ಮಾಸ (ಶ್ರೀವಿದ್ಯಾ. ೧). [< ಸಂ. ಕಾರ್ತಿಕ]

**ಕಾರ್ತ್ಸ್ನ್ಯ** (ನಾ). ಒಟ್ಟು; ಮೊತ್ತ. [ಸಂ.]

**ಕಾರ್ನೀರು** (ನಾ). ಮಳೆಯ ನೀರು: ಪಡುಮೂಡಲ ಕಾರ್ನೀರನು ಎರೆವೆಲರಿನ ತೀಟ, ಬೀಳುವ ಬೀಜವೆ ಮೊಳೆತಿರೆ ತೆನೆ ಹಿಡಿಯುವ ಮಾಟ (ನಾದಲೀ. ೨೬-೬). [ಕಾರ್$_2$ + ನೀರು (< ನೀರ್$_1$)]

**ಕಾರ್ನೀಸು** (ನಾ). ಗೋಡೆಗಳ ಮೇಲ್ಭಾಗದಲ್ಲಿ ಮುಂದಕ್ಕೆ ಚಾಚಿಕೊಂಡಿರುವ ಅಲಂಕಾರ ಭಾಗ; ಕಪೋತ: ಇವುಗಳ ಮೇಲೆ ನಾಲ್ಕು ಅಂಗುಲ ಆಳದ 'ಕಾರ್ನೀಸು' ಅದರ ಮೇಲೆ ಕಟಾಂಜನದ ಮತ್ತು ವಿಗ್ರಹಗಳ ಗೋಪುರಗಳು ಇವೆ (ಹೊಯ್ಸವಾ. ೫೪). [← ಇಂ. Cornice]

**ಕಾರ್ಪಟಿಕ** (ನಾ). ೧. ತೀರ್ಥಯಾತ್ರೆ ಮಾಡುವವನು; ಯಾತ್ರಾರ್ಥಿ; ಯಾತ್ರಿಕ. ೨. ಮೋಸಗಾರ; ಕಪಟಿ. [ಸಂ.]

**ಕಾರ್ಪಣ್ಯ** (ನಾ). ೧. ಬಡತನ; ದಾರಿದ್ರ್ಯ: ಸೂತಮಾಗಧವರವಿಬುಧವೈತಾಳಿಕರ ಕಾರ್ಪಣ್ಯವಡಗಿದವು (ಕುವ್ಯಾಉ. ೧೧-೩೫); ಕಷ್ಟಕಾರ್ಪಣ್ಯವ ಕಾಣಿಸಿ ಕನಲದೆ ತುಷ್ಟಿವಡಿಪುದೊಲವಱಿತು (ಹದಿಬ. ೩-೧೮). ೨. ದೈನ್ಯ; ದೀನಸ್ಥಿತಿ; ಅಸಹಾಯಸ್ಥಿತಿ; ಕರುಣಾಜನಕವಾದ ಅವಸ್ಥೆ: ಧೈರ್ಯಂ ಧರಣಿಗೆ ಬಿರ್ದು ಕಾರ್ಪಣ್ಯಂ ಪುಟನೆಗೆದು (ನಂಬಿರ. ೧೪-೩೧); ಕಡುಕಾರ್ಪಣ್ಯದಿ ಕೇಳ್ವವೇ ಶಿಖಿಜಲೋರ್ವೀ ಮಾರುತಾಕಾಶಮಂ (ಸೋಮೇಶ. ೩೪). ೩. ದಯೆ; ಮರುಕ. 'ಕಾರ್ಪಣ್ಯತರ' ಪರಾ. ೪. ಜಿಪುಣತನ; ಕೃಪಣತೆ; ತ್ಯಾಗಬುದ್ಧಿಯಿಲ್ಲದಿರುವಿಕೆ: ನೃಪವರ ಯುಧಿಷ್ಠಿರನಾಳ್ವದೇಶದೊಳ್ಕಳವು . . . ಸೆರೆ ಕೃತಕ ಕಾರ್ಪಣ್ಯಂ . . . ಕರ್ಕಶಂಗಳಿವು ಮೊಳೆದೋಶವು (ಜೈಮಿಭಾ. ೨-೫). ೫. [ವಿಶಿಷ್ಟಾ] ಐದು ಪರಿಕರಗಳಲ್ಲಿ ಒಂದು: "ಕಾರ್ಪಣ್ಯವೆಂದರೆ ಭಕ್ತ್ಯಾದಿಗಳಲ್ಲಿ ಸಾಮರ್ಥ್ಯವಿಲ್ಲದೇ ಇರುವುದು ಮೋಕ್ಷಕ್ಕಿಂತಲೂ ಬೇರೆ ಪ್ರಯೋಜನವನ್ನೂ, ಭಗವಂತನಿಗಿಂತಲೂ ಬೇರೆ ರಕ್ಷಕರನ್ನೂ ಅಪೇಕ್ಷಿಸದಿರುವುದು" (ಹಿಂದಸಾ. ೨೬೩). [ಸಂ.]

**ಕಾರ್ಪಣ್ಯತರ** (ಗು). ದಯಾಪೂರ್ಣ; ಅತಿಶಯವಾದ; ಮರುಕವುಳ್ಳ: ಕ್ಷತ್ರಜಾತಿಯ ಜೀವನವಲೇ ಕಷ್ಟವಿದು ಕಾರ್ಪಣ್ಯತರವಾಗಿ ನೀವು ಸೈರಿಸಬೇಕು ನಮ್ಮ ಶರಾವಳಿಯನು (ಕುವ್ಯಾಶ. ೩-೩೨). [ಸಂ.]

**ಕಾರ್ಪಣ್ಯಪಡು** (ಕ್ರಿ). ದೀನವಾಗು; ದೈನ್ಯಾವಸ್ಥೆಯಿಂದ ಬೇಡು: ಕಾಯದಿಚ್ಛೆಗೆ ಕಂಡವರಿಗೆ ಕಾರ್ಪಣ್ಯಪಡದಿಪ್ಪುದೆ ಶೀಲ, ಲಿಂಗಾಣತಿಯಿಂದ ಬಂದುದ ಕೈಕೊಂಬುದೆ ವ್ರತ (ಪದಗೋ. ೭೧-೧೧೬). [ಕಾರ್ಪಣ್ಯ + ಪಡು$_1$]

**ಕಾರ್ಪಣ್ಯಭಾವ** (ನಾ). ೧. ಜಿಪುಣತನ; ಕೃಪಣತೆ. ೨. ಜಿಪುಣನಾದ ವ್ಯಕ್ತಿ: ಇಷ್ಟವಂಚಕನೇ ದುರಾತ್ಮನೆ ಕಷ್ಟನೇ ಕಾರ್ಪಣ್ಯಭಾವನೆ ಕಪಟಮಾನಸನೆ? (ಬಸಪು. ೪೫-೨೧). [ಕಾರ್ಪಣ್ಯ + ಭಾವ]

**ಕಾರ್ಪಣ್ಯವಕ್ತ್ರ** (ನಾ). ೧. ದೈನ್ಯದಿಂದ ಕೂಡಿದ ಮುಖ. ೨. ದೀನವಾದ ಮುಖವುಳ್ಳವನು: ಕಾರ್ಪಣ್ಯವಕ್ತ್ರಂ ತನುಗಾತ್ರಂ ದಿನನೇತ್ರಂ . . . ಜನಮಂ ಬೇಳ್ಪಾಸೆಯಿಂ ಸಾವಿನ ಪರಿಯೆನಿಪೀ ದೈನ್ಯಮಂ ಬಿಟ್ಟು (ರಕ್ಷಾಶ. ೨೧). [ಕಾರ್ಪಣ್ಯ + ವಕ್ತ್ರ]

**ಕಾರ್ಪಾಸ** (ಗು). ೧. ಹತ್ತಿಯಿಂದ ಮಾಡಿದ; ಹತ್ತಿಯಿಂದ ತಯಾರಿಸಿದ. (ನಾ). ೨. ಹತ್ತಿ: "ಪಿಚವುಃ, ಬಾದರಃ, ಕಾರ್ಪಾಸಃ – ಈ ೩ ಪಟ್ಟಿ" (ಹಲಾಯು. ೩೪-೪೯); ಕುಸುಂಭ ಕಾರ್ಪಾಸ ಸರ್ಷಪ ಜೀರಕ ಧಾನ್ಯಕಾದಿ ವಿವಿಧ ಧಾನ್ಯಭೇದಂಗಳುಂ (ಆದಿಪು. ೬-೭೨ ವ); ಗುರು ಶಿಷ್ಯಸಂಬಂಧ ಬಿತ್ತಳಿದ ಕಾರ್ಪಾಸದ ಪಾವಕದ ಸಂಗಮದಂತಿರಬೇಕು (ಮೋಳಿಮಾ. ೧೫೮-೯೫); ಕಿಡಿಗಳಘುಸಂಘುಕಾರ್ಪಾಸ ಪೃಥ್ವೀಧರಕೆ . . . ಭೃಂಗಿರಿಟಿಯ ಮೆಲ್ಲಡಿಗಳ್ (ಅರಾಚ. ೧-೧೬). ೩. ಹತ್ತಿಯಬಟ್ಟೆ; ನೂಲಿನ ಬಟ್ಟೆ: "ಕಾರ್ಪಾಸಂ, ಬಾದರಂ–ಈ ೨ ಹತ್ತಿಯಿಂದಾದ ಸೀರೆ" (ಹಲಾಯು. ೯೦-೧೩೬); "ಕಾರ್ಪಾಸಮೆನಲು ನೂಲು ವಸ್ತ್ರ" (ಮಂಗರಾ. ೧೦೧-೨೭); ಕರಡಿಯ ಮೈ ಜೋಡು ಕಾರ್ಪಾಸ ಕುಪ್ಪುಸ ಬಿರುದಿನ ತೋಳ ಪಾವಡೆಯ ದುರಗಲಿಗಳು (ಕಂನವಿ. ೧೧-೧೪೪). [ಸಂ.]

**ಕಾರ್ಪಾಸಚಾಪ** (ನಾ). ಅರಳೆ ಹಿಂಜುವ ಬಿಲ್ಲು; ಹತ್ತಿ ಎಕ್ಕುವ ಬಿಲ್ಲು, —ಬೆಸೆ: "ಬೆಸೆ–ಗರ್ವೇ, ಕಾರ್ಪಾಸಚಾಪೇ ಚ (ಹತ್ತಿ ಎಕ್ಕುವ ಬಿಲ್ಲು)" (ಶಮಧಾ). [ಕಾರ್ಪಾಸ + ಚಾಪ]

**ಕಾರ್ಪಾಸವಿವರಣ** (ನಾ). ಅರಳೆ ಹಿಂಜುವುದು, —ಎಕ್ಕುವುದು: "ಪಸುಗೆಯೊಳ್ ಕಾರ್ಪಾಸ ವಿವರಣದೊಳಂ ಪಿಂಜು" (ಶಬ್ದಮಂ. ೮೮). [ಕಾರ್ಪಾಸ + ವಿವರಣ]

**ಕಾರ್ಪಾಸಶೋಧನ** (ನಾ). ಅರಳೆಯಲ್ಲಿನ ಬೀಜ, ಕಸಕಡ್ಡಿಗಳನ್ನು ತೆಗೆಯುವುದು, —ಸೋಸುವುದು: "ಆ ಮೃಗಾಂಕನೊಳು ಕಾರ್ಪಾಸ ಶೋಧನದೊಳಂ . . . ಸಸಿ" (ಶಬ್ದಮಂ. ೧೧೨). [ಕಾರ್ಪಾಸ + ಶೋಧನ]

**ಕಾರ್ಪಾಸಿ** (ನಾ). ಹತ್ತಿಯ ಗಿಡ. [ಸಂ. ಕಾರ್ಪಾಸೀ]

**ಕಾರ್ಪಾಸಿಕ** (ಗು). ಹತ್ತಿಯಿಂದ ಮಾಡಿದ: ಈ ಲೇಖ್ಯವಸ್ತುವಿಗೆ ಪಟ, ಪಟಿಕಾ, ಕಾರ್ಪಾಸಿಕಪಟ ಎಂಬ ಹೆಸರುಗಳು ಸಂಸ್ಕೃತದಲ್ಲಿದ್ದುವಂತೆ (ಕನ್ನಸಂ. ೪೦). [ಸಂ.]

**ಕಾರ್ಬಟ್ಟೆ** (ನಾ). ಕಪ್ಪುಹಾದಿ; ಹೊಗೆಯ ದಾರಿ. 'ಕಾರ್ಬಟ್ಟೆಗ' ಪರಾ.

ಕಾರ್ಬಟ್ಟೆಯವ = ಬೆಂಕಿ; ಅಗ್ನಿ: "ಇಂಗಳನಲರ್ಗೆಳೆಯ ಪೊಗೆವಟವಿಗೆಯನಗ್ಗಿಹಗ್ಗಿಸಗ್ಗಿಗರಡಬಳಂ ಕೆಂಗಿಡಿಯನಮರ್ದ ವಶಿರಗೂಳ ಕಾರ್ಬಟ್ಟೆಯವ . . . ಎನೆ ಕಿಚ್ಚು" (ಕಬ್ಬಿಕೈ. ೨೦). [ಕಾರ್$_3$ + ಬಟ್ಟೆ$_1$]

**ಕಾರ್ಬಟ್ಟೆಗ** 'ಕಾರ್ವಟ್ಟೆಗ' ನೋ.

**ಕಾರ್ಬಣ್ಣ** (ನಾ). ಕರಿಯ ಬಣ್ಣ; ಕಪ್ಪುಬಣ್ಣ: ತಿಣ್ಣ ಜವ್ವನದ ಚಿಂಚಿತಿಯರ ಮೆಯ್ ಕಾರ್ಬಣ್ಣದ ಚೆಲ್ವ ನೋೞ್ಪರಿಗೆ (ಮೋಹತ. ೧೯-೬೨). 'ಕರ್ವಣ್ಣ' ಪರಾ. [ಕಾರ್$_3$ + ಬಣ್ಣ]

**ಕಾರ್ಬೊಗೆ$_1$** (ಕ್ರಿ). ಕರಿಯ ಹೊಗೆಯನ್ನು ಕಾರು: ಝುಗಝುಗಿಪ ಬೆಳ್ಳಿಯ ಕೋಂಟೆ ಕಮಲನಯನಂಗೆ ಕಾರ್ಬೊಗೆವ ಕಾರ್ಬೊನ್ನಿನದು ವೀರ ವಿದ್ಯುನ್ಮಾಲಿಗೆ (ಚಿಬಪು. ೪೧-೧೮). [ಕಾರ್$_3$ + ಪೊಗೆ$_1$]

**ಕಾರ್ಬೊಗೆ$_2$** (ನಾ). ಕಪ್ಪಾದ ಹೊಗೆ; ಕರಿಯ ಹೊಗೆ: ಕಾರ್ಬೊಗೆ ಗಗನಕಡರಿತು ಜಗವ ಮುಸುಕಿತು (ಕೌಶಿರಾ. ೨೭-೫೪); ಸುರಿವ ಕಿಡಿಯಡರಿದವು ಕಾರ್ಬೊಗೆ ಹರೆದುದು (ತೊರರಾ. ೫-೬-೩೨); ಮಹಾಕೋಪಾಗ್ನಿಯುರ್ವುತಿರೆ ಕಂಗಳೊಳ್ ನಾಸಿಕದೆ ಸೂಸೆ ಕಾರ್ಬೊಗೆ (ಚಿಬಪು. ೪೧-೯); ಕನ್ನೈದಿಲುಗಳ ಕಾಂತಿ ಲೋಕವ ಪರಿಕಲಿಸಿತ್ತು ಶೋಕಗಳ ವಿರಹಾಗ್ನಿಯ ಕಾರ್ಬೊಗೆ ಕವಿದಂತೆ (ಕುರಾಸಾಂ. ೨೭-೧೧೪). 'ಕರ್ವೊಗೆ' ಪರಾ. [ಕಾರ್$_3$ + ಪೊಗೆ$_2$]

**ಕಾರ್ಬೊನ್**, ಕಾರ್ಬೊನ್ನು (ನಾ). ಕರಿಯಬಣ್ಣದ ಲೋಹ; ಕಬ್ಬಿಣ: ಕಾರ್ಬೊನ್ನುಂ ತಿರುಗಿದವುದಯಸ್ಕಾಂತ[ಶಕ್ತಿ] ಯೆಲ್ಲಿತ್ತದ ಜೆರ್ಗೊಳ್ (ಕಾದಂಬ. ೬೪೭); ಪರುಷ ಸೋಂಕಿದ ಬಳಿಕ ಕಾರ್ಬೊನ್ನ ಕೇಡ ನೋಡಿರಯ್ಯ (ಸಿದ್ಧೇವ. ೬–೧); ಸೂಜಿಗಲ್ಲಿದಿರ ಕಾರ್ಬೊನ್ನಂತೆ (ಜಿಬಪು. ೨೦–೨೧). **ಕಾರ್ಬೊನ್ನು**: "ಕಾರ್ಬೊನ್ನು ಕಬ್ಬಿಣವದು" (ಕಶಶ. ೨೩). [ಕಾರ್$_3$ + ಪೊನ್]

**ಕಾರ್ಬೊನ್ಗಲ್** (ನಾ). ಸೂಜಿಗಲ್ಲು: "ಕಾ[ಪಾಠಾಂ. ಕ]ರ್ಬೊನ್ಗಲ್ಲೊಂದು ಸೂಜಿಗಲ್" (ಚತುಸಿ. II, ೧೧೦). [ಕಾರ್ಬೊನ್ + ಕಲ್$_3$]

**ಕಾರ್ಬೊನ್ನು** 'ಕಾರ್ಬೊನ್' ನೋ.

**ಕಾರ್ಮ** (ಗು). ೧. ಕಷ್ಟಪಟ್ಟು ಕೆಲಸಮಾಡುವ; ಉದ್ಯೋಗಶೀಲವಾದ: (ಕಿ). ೨. ಶ್ರಮಪೂರ್ಣವಾದ: (ಕಿ). (ನಾ). ೩. ಫಲವನ್ನು ಅಪೇಕ್ಷಿಸದೆ ಕರ್ಮವನ್ನು ಮಾಡುವ ಸ್ವಭಾವದವನು; ಕರ್ಮಶೀಲ. [ಸಂ.]

**ಕಾರ್ಮಡು** (ನಾ). ೧. ಕಪ್ಪಾದ ಮಡು; (ಆಳವಾಗಿ) ಕಪ್ಪಾಗಿ ಕಾಣುವ ನೀರಿನ ಕೊಳ. ೨. ಯಮುನಾನದಿ.

ಕಾರ್ಮಡುವಿನಣ್ಣ = ಯಮುನೆಯ ಅಣ್ಣ; ಯಮಧರ್ಮ: "ಜಕ್ಕಂದೊಟಲಿದೇರ ಕಾರ್ಮಡುವಿನಣ್ಣಂ ಜವಂ . . . ಯಮನ ನಾಮಂ" (ಕಬ್ಬಿಕೈ. ೧೪). [ಕಾರ್$_3$ + ಮಡು$_2$]

**ಕಾರ್ಮಣ** (ಗು). ೧. ಕ್ರಿಯೆಗೆ ಸಂಬಂಧಿಸಿದ. 'ಕಾರ್ಮಣಶರೀರ' ಪರಾ. (ನಾ). ೨. ಕೆಲಸವನ್ನು ಮುಗಿಸುವುದು; ಕಾರ್ಯದ ಪೂರೈಕೆ. ೩. ಮಂತ್ರ ತಂತ್ರಗಳ ಮೂಲಕ ವಶಮಾಡಿಕೊಳ್ಳುವಿಕೆ: "ಶೂಲೀಕರ್ಮ, ಸಂವನನಂ, ಕಾರ್ಮಣಂ, ವಶೀಕರಣಂ – ಈ ೪ ವಶಂ ಮಾಡುವುದು" (ಹಲಾಯು. ೧೧೯–೩೧); "ಶೂಲಿಕರ್ಮಂ ಕಾರ್ಮಣಂ ವಶೀಕರಣಮದು" (ಮಂಗರಾ. ೧೩೦–೧೭). ೪. ಮಾಯಾವಿದ್ಯೆ; ಜಾದುಗಾರಿಕೆ; ಯಕ್ಷಿಣೀವಿದ್ಯೆ. ೫. [ಜೈನ] ಐದು ಬಗೆಯ ಶರೀರಗಳಲ್ಲಿ ಒಂದು; ಕರ್ಮದಿಂದ ಆದುದು; ಕರ್ಮಸಮೂಹ: ಕರ್ಮದೊಳಾದುದು ಕಾರ್ಮಣಂ . . . ಕರ್ಮೋದಯದಿನಾದುದು ಕಾರ್ಮಣಂ, ಕರ್ಮಸಮೂಹಂ ಮೇಣು ಕಾರ್ಮಣಂ (ತಸೂವೃ. ೫೧); ಅನುಕ್ರಮದಿನಯ್ದು ಭೇದದಿನೌದಾರಿಕ ವೈ ಕ್ರಿ ೀ ಯ ಕ[ಮಾ] ಹಾರಕ ತೈಜಸಕಾರ್ಮಣಂಗಳಿವು ತನುವೆನಿಕುಂ (ಸುಕುಮಾ. ೮–೧೦); ಶಿಲೆಯೊಳಗಿರ್ಪುದು ಮೂಲಶರೀರವು ಒಳಗಿನ ತೇಜ ಕಾರ್ಮಣವು ಬೆಳಗನು ದಿಕ್ಕುದಿಕ್ಕುಗಳಿಗೆ ಬೀರುತ ತಳಲೋಕವನಾಗಮುಟ್ಟಿ (ಜ್ಞಾನಚ. ೪೫–೮೮). [ಸಂ.]

**ಕಾರ್ಮಣಶರೀರ** (ನಾ). = ಕಾರ್ಮಣ. ೫. ಕರ್ಮೋದಯದಿಂ ಕಾರ್ಮಣವರ್ಗಣೆಯಿಂ ಕಾರ್ಮಣಶರೀರಮಕ್ಕುಂ (ತತ್ತ್ವಪ್ರ. ೨೪೦). [ಕಾರ್ಮಣ + ಶರೀರ]

**ಕಾರ್ಮಣಿ** (ನಾ). ಕಪ್ಪುಬಣ್ಣದ ಮಣಿ; ಇಂದ್ರನೀಲ: ಕಂಡರಿಸಿದ ಕಾರ್ಮಣಿಯ ಗಂಭದಂತೆ ಕಡುರಯ್ಯಮಾಗಿ ಕಣ್ಗೊಳಿಸುತಿರ್ಪ ದುಂಡು ತೋಳ್ಗಳೊಂದು ಸಿರಿಗಯ್ಯಂ ನೆಲದೊಳೂರಿ (ಭಾರಶಾಂ. ೨೯–೧೯೨). [ಕಾರ್$_3$ + ಮಣಿ$_3$]

**ಕಾರ್ಮಮಲ** (ನಾ). [ಶೈವ] ಜೀವಾತ್ಮನ ಜನ್ಮಾಂತರಕ್ಕೆ ಕಾರಣವಾದ ಮೂರು ಮಲಗಳಲ್ಲೊಂದು: ಕಾರ್ಮಮಲವು ಜೀವಾತ್ಮನ ಸತ್ಕರ್ಮ ದುಷ್ಕರ್ಮಗಳಿಗನುಸಾರವಾಗಿ ಸುಖದುಃಖಗಳನ್ನುಂಟುಮಾಡಿ ಜನ್ಮಾಂತರಗಳಿಗೆ ಅವಕಾಶವನ್ನು ಕೊಡುವುದು (ಭಾರದ. ೨೧೧). 'ಕಾರ್ಮಿಕಮಲ' ಪರಾ. [ಕಾರ್ಮ + ಮಲ]

**ಕಾರ್ಮಳೆ** 'ಕಾರ್ಮಟಿ' ನೋ.

**ಕಾರ್ಮಟಿ**, ಕಾರಮಳೆ, ಕಾರ್ಮಳೆ (ನಾ). ಕಾರ್ಗಾಲದ ಮಳೆ; ಧಾರಾಕಾರವಾದ ಮಳೆ: ಕಾರ್ಮಟಿಯ ಬಿಜುಗಾಳಿ ಮೊದಲುಜುಬುಸಯ್ತು (ಅಶ್ವತ್ಥಾ. ೧೨–೧೪). **ಕಾರಮಳೆ**: ತಳ್ದಿಸುವಾಗಳು ಕಾರಮಳೆ ಕರ್ಜಿದಂತೆಯುಂ (ಎಕ. VIII, ಸೊರಬ. ೧೭೫–೭; 1156); ಕಾರ ಮಳೆಯೆ, ಕಪ್ಪತಮಳೆಯೆ! ಸುರಿಮಳೆಯೆ (ನಲಮು. ೧೫); ಕಾರವಳೆ ಬಿದ್ದರೂ ಕಾರ್ಯವಿಲ್ಲ (ಗಾದೆ). **ಕಾರ್ಮಳೆ**: ಪಿರಿದು ಜೀಮೂತಮಂಡಲ ಘೋರ್ಗರೆದಾಗ ಕರ್ಜಿವ ಕಾರ್ಮಳೆಗಳಂದದಲಿ (ಕಂಸವಿ. ೧೫–೩೧). [ಕಾರ್$_2$ + ಮಟಿ]

**ಕಾರ್ಮಿಂಚು**, ಕಾರಮಿಂಚು (ನಾ). ಮಳೆಯ ಮಿಂಚು; ಮಳೆಗಾಲದ ಮಿಂಚು: ಕೂರ್ಪಾಳ ತೊಳಪ್ಪ ನುಣ್ಗೊಗರದೆತ್ತಂ ಪರ್ವಿ ಕಾರ್ಮಿಂಚಿನಂತಿರೆ (ಕಬ್ಬಿಕಾ. ೨೫೨); ಕಾರ್ಮಿಂಚು, ಪೆಣ್ಮಣಿಗಳಾ ಕಣ್ಣ ನುಣ್ಮಿಂಚು (ಹೊಂಗಳು. ೧೬–೩). **ಕಾರಮಿಂಚು**: ಮಿಸುಪ ಸುಲಿಪಲ್ವೆಳಗೆಂಬ ಕಾರಮಿಂಚು (ಕಬ್ಬಿಕಾ. ೧೨೩); ಕಡೆಗಣ್ಣಳ ಹೊಳಹಿನ ಕಾರಮಿಂಚಿನ (ಕಂಸವಿ. ೯–೮೫). [ಕಾರ್$_2$ + ಮಿಂಚು$_2$]

**ಕಾರ್ಮಿಕ** (ಗು). ೧. ಕರ್ಮಸಂಬಂಧವಾದ; ಕ್ರಿಯಾತ್ಮಕವಾದ; ಕೆಲಸಮಾಡುವ: ಆತ್ಮಿಕವಾಗಿ, ಹಾರ್ದಿಕವಾಗಿ, ಕಾರ್ಮಿಕವಾಗಿ ಜೀವಿಯು ಯೋಗಿಯಾಗಬೇಕು (ಭಾರದ. ೧೧೯). (ನಾ). ೨. ಕೆಲಸ ಮಾಡುವವನು; ಕೆಲಸಗಾರ; ಶ್ರಮಜೀವಿ: ಬಂಡವಾಳಗಾರರಿಗೂ ಕಾರ್ಮಿಕರಿಗೂ ಉಂಟಾಗುತ್ತಿರುವ ಘರ್ಷಣೆಗಳ ಕಾರಣಗಳನ್ನು ಕುರಿತು (ಕ್ರಿಯಾಶಿ. ೧೫೧); ಪಕ್ಷದ ಕ್ರಾಂತಿ ಸ್ವರೂಪವನ್ನು ಕಾರ್ಮಿಕರು ಮತ್ತೂ ಉಜ್ವಲಗೊಳಿಸುವರೆಂಬುದು (ರಾಜಪ. ೬೧). [ಸಂ.]

**ಕಾರ್ಮಿಕಮಲ** (ನಾ). [ವೀಶೈ] ಜೀವನಿಗೆ ಅಂಟಿಕೊಳ್ಳುವ ಮೂರು ಬಗೆಯ ಮಲಗಳಲ್ಲಿ ಒಂದು: ಆಣವಮಲ, ಮಾಯಾಮಲ, ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದುಳಿದು ನಿರ್ಮಲನಾದ ಶಿಷ್ಯನು (ಅನಚಂ. ೨೭೩–೧೨೫೫); ತಾ ಮಾಡಿದೆನೆಂದರೆ ತನ್ನ ಕೆಳಗಣವೆ ಆಣವ ಮಾಯಿಕ ಕಾರ್ಮಿಕ ಮಲಂಗಳು (ಸೋಳಮಾ. ೩೩–೧೩೭); ಜೀವನು ದೇಹ ರಕ್ಷಣೆಗೆ ಬೇಕಾದ ಭೋಜ್ಯವಸ್ತುಗಳ ಸಂಗ್ರಹಣಕ್ಕಾಗಿ ಹೋರಾಡತೊಡಗಿರುವನು. ಈ ಬಗೆಯ ಹೋರಾಟಕ್ಕೆ ಕಾರ್ಮಿಕ ಮಲವೆನ್ನುತ್ತಾರೆ (ಶಕ್ತಿವಿ. ೪೩). [ಕಾರ್ಮಿಕ + ಮಲ]

**ಕಾರ್ಮಿಕಸಂಘ** (ನಾ). ಕೆಲಸಗಾರರ ಸಂಘ; ಕಸಬುದಾರರ ಸಂಘ: (ಪಾರಿಸಿ. ೮೫). [ಕಾರ್ಮಿಕ + ಸಂಘ]

**ಕಾರ್ಮುಂಬನಿ** (ನಾ). ಮಳೆಗಾಲದ ಮೊದಲ ಮಳೆಹನಿ: ಜೀಯ ನಿಮ್ಮಂಘ್ರಿದರ್ಶನವೆನ್ನದೋಷಕ್ಷಿಮಿರಜ್ಯೋತಿಯನ್ನ ಜೀವನ ಚಾತಕಕ್ಕೆ ಕಾರ್ಮುಂಬನಿಯಲಾ ನಿಮ್ಮ ಕರುಣರಸ (ಭಾವಚಿಂ. ೨–೨೭). [ಕಾರ್$_2$ + ಮುಂಬನಿ]

**ಕಾರ್ಮುಕ$_1$**, ಕಾರ್ಮೊಗ (ನಾ). ಮಳೆಗಾಲದ ಆರಂಭ, —ಪ್ರಾರಂಭ: ಬೇಟದತ್ತುಳಿಗಮನುಂಟುಮಾಡಿದುದೊ ಕಾಮನ ಕಾರ್ಮುಕದಂತೆ ಕಾರ್ಮುಕಂ (ಪಂಪಭಾ. ೭–೨೫); ಕಣ್ಗೊಳಿಸಿದತ್ತು ಕಾರ್ಮುಕದೊಳಿಂದ್ರಗೋಪಕಳಾಪಂ (ಜಗವಿ. ೪–೧೩); ಅಖಿಳ ಮಹೀದೇವರ್ ಶತಮುಖನಂ ತಣಿಪಲ್ಕೆ ಕೂಡೆ ಮಾಡುತ್ತಿರೆ ಕಾರ್ಮುಕದವೊಲೆಸೆಗುಂ ನಾನಾಮುಖಧೂಮಸ್ತೋಮದಿಂದಮೆನ್ನುಂ ವ್ಯೋಮಂ (ಎಇ. XVIII, ೧೯೨–೨೪; 1184). **ಕಾರ್ಮೊಗ**: ತರದಿಂ ಶಿಖಿ ಚಾದಗೆ ಮಧುಕರಮಂಚೆ ಪಯೋಧರಂಗಳನು ನಯದಿಂ ಕರೆದುವು ನೆರೆದುವು ಮೊರೆದುವು ಪರೆದುವು ತೊಜಿದುವು ನಿರಂತರಂ ಕಾರ್ಮೊಗದೊಳ್ (ಗಿರಿಕ. ೯–೩೪). [ಕಾರ್$_2$ + ಮುಕ]

**ಕಾರ್ಮುಕ$_2$** (ನಾ). ೧. ಬಿಲ್ಲು; ಧನುಸ್ಸು : ಗೊಲೆಗೊರ್ವೊದಲೊತ್ತಿದನಗುರ್ವು ಮೆಯ್ವೆತ್ತುದನಾ ಕಾರ್ಮುಕಮಂ (ಪಂರಾಮಾ. ೫-೮೮); ಲಲಿತಭ್ರೂಕಾರ್ಮುಕಂ ಕೇಕರರುಚಿ ನನೆಗೋಲ್ (ಜಗವಿ. ೨-೩೩); ಮಾರ ಕಾರ್ಮುಕ ಪುಬ್ಬು (ಶೀಥರ್ಮ. ೧೨೫). **೨.** [ಜ್ಯೋತಿ] ಒಂಬತ್ತನೆಯ ರಾಶಿ; ಧನುರಾಶಿ. [ಸಂ.]

**ಕಾರ್ಮುಕಕೋಟಿ** (ನಾ). ಬಿಲ್ಲಿನ ಕೊಪ್ಪು; ಧನುಷ್ಕೋಟಿ : "ಕಾರ್ಮುಕಕೋಟಿಃ, ಅಟನಿಃ – ಈ ೨ ಬಿಲ್ಲ ಕೊಪ್ಪು" (ಹಲಾಯು. ೭೬-೩೧೧). [ಕಾರ್ಮುಕ$_2$ + ಕೋಟಿ]

**ಕಾರ್ಮುಕಯೋಗ** (ನಾ). ೧. ಬಿಲ್ಲುಗಾರಿಕೆಯ ವಿದ್ಯೆ: ಜಾಗು ಧಣುಧಣು ಪೂತು ಕಾರ್ಮುಕಯೋಗಸಿದ್ಧನೆ ಮಝುರೆ ಕೋದಂಡಾಗಮ ತ್ರಿಪುರಾರಿಯೆಂದುದು ವಂದಿಸಂದೋಹ (ಕುವ್ಯಾಅ. ೧೫-೨೯). **೨.** [ಜ್ಯೋತಿ] ಶುಭಪ್ರದವಾದ ಯೋಗಗಳಲ್ಲೊಂದು; ಜನನ ಕಾಲದಲ್ಲಿ ಲಗ್ನದಿಂದ ದಶಮಸ್ಥಾನದ ಮುಂದೆ ಚತುರ್ಥ ಸ್ಥಾನದವರೆಗೆ ಏಳುರಾಶಿಗಳಲ್ಲೂ ಗ್ರಹಗಳು ನೆಲೆಸಿರುವ ಯೋಗ; ಚಾಪಯೋಗ. [ಕಾರ್ಮುಕ$_2$ + ಯೋಗ]

**ಕಾರ್ಮುಗಿಲ್$_1$**, ಕಾರಮುಗಿಲ್, ಕಾರಮುಗಿಲು, ಕಾರ್ಮುಗಿಲು$_1$ (ನಾ). ಮಳೆಗಾಲದ ಮುಗಿಲು, —ಮೋಡ : ಉರ್ಬಿ ಕಾರ್ಮುಗಿಲ ನೀರ್ವೊರ್ಲ್ ಕೋಶದಿಂದಂ ಮದಂ ಸುರಿಯುತ್ತಿರ್ಪುದುಮೊಪ್ಪೆ (ಆದಿಪು. ೧೨-೫೮); ಬಾಷ್ಪಬಿಂದುಗಳ ತಂದಲಂ ಕಱೆವ ಕಾರ್ಮುಗಿಲ ಮೊತ್ತಮೆನಿಸಿ (ವರ್ಧಪು. ೬-೨೯ವ); ಚಾದಗೆ ಕಾರ್ಮುಗಿಲ್ವನಿಯುನ್ ... ಪಾರ್ವ ತೆಱದಿ (ದಶಕು. ೨-೬೭); ಕಾರ್ಮುಗಿಲ ಮುಂಬನಿಗ ಳೋಡುವ ಬೇಗದಲಿ (ಸಂಭಪ. ೩೬-೪೪). **ಕಾರಮುಗಿಲ್** : ಅವರ ಕಣ್ಮಲರ್ಗಳುಂ ಕಾರಮುಗಿಲ್ಗಳುಮೊಡನೊಡನೆ ವಾರಿಧಾರೆಗಳಂ ಸುರಿದುವು (ಕಾದಂಉ. ೫೩೧); ಕೊಂದನು ಕಾರಮುಗಿಲಬ್ಬರದ ಬೊಬ್ಬಿಱಿತದಲಿ ಕಪಿಬಲವ (ತೊರರಾ. ೬-೧೭-೨೧). **ಕಾರಮುಗಿಲು:** ಬಾನ ಕರೆಯಲಿ ಹುದುಗಿ ಕಾರಮುಗಿಲಂತಿಹುವು ಬೆಟ್ಟ ಹಬ್ಬಿ (ಹೊಂಗಳು. ೫-೯). **ಕಾರ್ಮುಗಿಲು$_1$** : ಕುಡಿತೆಗಂಗಳ ನೋಟ ಕಾರ್ಮುಗಿಲೊಡೆದು ಮಿಂಚುವ ಮಿಂಚಿನಂದದೆ (ನಳಚ ೫-೫೩); ನೀರದಾಗಮಲಕ್ಷ್ಮಿ ಕಡು ಚೆಲುವಿನುಟ್ಟ ನೀಲಾಂಬರದ ಕಾಂತಿಯೆನೆ ಕಾರ್ಮುಗಿಲು ಪಸರಿಸಿದುದು (ಸಾಳ್ವಭಾ. ೧೬-೧೭). [ಕಾರ್$_2$ + ಮುಗಿಲ್]

**ಕಾರ್ಮುಗಿಲ್$_2$**, ಕಾರ್ಮುಗಿಲು$_2$ (ನಾ). ಕಪ್ಪುಮೋಡ; ನೀಲಮೇಘ : ಕಾರ್ಮುಗಿಲೆ ಗಜದ ರೂಪಾದುದು (ಜಗವಿ. ೬-೪೭); ಕಾರ್ಮುಗಿಲ ಸೊಂಪಡರ್ದ' ಸೋರ್ಮುಡಿ (ಸೌಂದಪು. ೭-೧೦); ತಿಳಿಯದೆನೆ ಕಾರ್ಮುಗಿಲ್ ಜಿರ್ಕರೆಯುತಿಹುದು (ಕಾಲೂರ. ೫೦-೭೩). **ಕಾರ್ಮುಗಿಲು$_2$** : ಮುಟ್ಟ ಮರಕತಶಿಲೆಯ ನೀಲದ ಬೆಟ್ಟದಿರವೆಂಬಂತೆ ಜಂಪಳವಿಟ್ಟು ಜಡಿದುದು ಕಾರ್ಮುಗಿಲು ಕತ್ತಲಿಸೆ ಕುಂಭಿನಿಯ (ತೊರರಾ. ೪-೬-೩); ಕುಡಿತೆಗಂಗಳ ನೋಟ ಕಾರ್ಮುಗಿಲೊಡೆದು ಮಿಂಚುವ ಮಿಂಚು (ನಳಚ. ೫-೫-೩); ತೋಱುವುದು ಕಾರ್ಮುಗಿಲೊ ಸೋರ್ಮುಡಿಯೊ (ವೆಂಕರಾ. ೫-೬-೩೫). [ಕಾರ್$_3$ + ಮುಗಿಲ್]

**ಕಾರ್ಮುಗಿಲು$_1$** 'ಕಾರ್ಮುಗಿಲ್$_1$' ನೋ.

**ಕಾರ್ಮುಗಿಲು$_2$** 'ಕಾರ್ಮುಗಿಲ್$_2$' ನೋ.

**ಕಾರ್ಮುಗಿಲೊಡ್ಡು** (ನಾ). ಕಾರ್ಮುಗಿಲ ಗುಂಪು, —ಸಂದಣಿ : ಕಾ[ಪಾಠಾಂ. ಕ]ರ್ಮುಗಿಲೊಡ್ಡಿನಿಂ ಕಱಂಗಿದ ಕಾರಿರುಳ ಘೋರಾಂಧಕಾರದೊಳ್ (ವರ್ಧಪು. ೧೧-೫೮); ಕಾರ್ಮುಗಿಲೊಡ್ಡುಗಳಂತಿವೆಂಬಿನಂ ಕೋಲ ಮಳೆಯಂ ಕಱೆದರ್ ಮಿಗೆ ಬಲ್ಲ ಬಲ್ಲಹರ್ (ಕಬ್ಬಿಕಾ. ೨೬೭). [ಕಾರ್ಮುಗಿಲ್$_1$ + ಒಡ್ಡು$_2$]

**ಕಾರ್ಮುಗಿಲ್ವಟ್ಟೆ** (ನಾ). ೧. ಕಾರ್ಮುಗಿಲ ದಾರಿ; ಆಕಾಶ. **೨.** ಮೋಡ ಕವಿದ ಬಾನು : (ಕ). [ಕಾರ್ಮುಗಿಲ್$_1$ + ಬಟ್ಟೆ$_1$]

**ಕಾರ್ಮೇಘ**, ಕಾರಮೇಘ (ನಾ). = ಕಾರ್ಮುಗಿಲ್$_1$. 'ಕಾರ್ಮೇಘಾಂಜನ' ಪರಾ. **ಕಾರಮೇಘ** : ಕಾರಮೇಘದೊಳು ಮಿಂಚಡಗಿ ತೋಱದ ತೆಱದಿ (ಶಿವಗೀ. ೧-೨). [ಕಾರ್$_2$ + ಮೇಘ]

**ಕಾರ್ಮೇಘಾಂಜನ** (ನಾ). ಕಾರ್ಮುಗಿಲಂತೆ ಕಪ್ಪಾದ ಕಾಡಿಗೆ, —ಅಂಜನ : ಗೌತಮನ ಶಾಪಶಕ್ತಿಯೋರಂತೆ ಬಹುಮುಖವಾಗಿ ಕೋರದಾಡೆಗಳಿಂದನಂತಭುಜವಾಗಿ ಕಾರ್ಮೇಘಾಂಜನಕ್ಕೆ ಸಮನಾಗಿ (ವೀಶೈಪು. ೪-೨-೩೨). [ಕಾರ್ಮೇಘ + ಅಂಜನ]

**ಕಾರ್ಮೊಗ** 'ಕಾರ್ಮುಕ$_1$' ನೋ.

**ಕಾರ್ಮೊಳಗು** (ನಾ). ಕಾರ್ಗಾಲದ ಗುಡುಗು : ನಿನ್ನ ಹೆಸರಂ ಕೊಂಡು ನಿಂದೆನಿದೊ ಸಿಡಿಗುಂಡು ನೂರ್ಮೆ ಮಾರ್ಮೊರಸೆ ಕಾರ್ಮೊಳಗನುರ್ವರೆಯಿಂ (ಗಳವಿಂ. ೭೦-೩); ಗುಡುಗುಡುಗುವ ಕಂಠದಿಂದ ಕಾರ್ಮೊಳಗ ಬೀರುತ (ಪಾಂಚಜ. ೧೦). [ಕಾರ್$_2$ + ಮೊಳಗು$_2$ (< ಮೊಱಗು$_2$)]

**ಕಾರ್ಮೋಡ**, ಕಾರುಮೋಡ (ನಾ). = ಕಾರ್ಮುಗಿಲ್$_1$ : ಕಾರ್ಮೋಡ ಬಿರಿದು ರವಿ ಬೆಳಗುವನು (ಮಂಕುಕ. ೭೮೫); ಒನಲುತಿರೆ ಕಾರ್ಮೋಡ ಪನಿವರಲ್ ಚೆಲ್ಲಿದುದು (ಕಾಲೂರ. ೪೫); ವರ್ಷಾಕಾಲದ ಕಾರ್ಮೋಡ ಅಂಬರದಲ್ಲಿ ಈಜುತ್ತಿದ್ದವು (ಫಲಸಂ. ೯೯). **ಕಾರುಮೋಡ** : ಕಾಡಿನ ಬಳಿಯಲ್ಲಿ ಕಾರುಮೋಡ (ಗಾದೆ). [ಕಾರ್$_1$ + ಮೋಡ]

**ಕಾರ್ಯ** (ಗು). ೧. ಮಾಡತಕ್ಕ; ಆಚರಿಸಲು ಯೋಗ್ಯವಾದ. (ನಾ). **೨.** ಮಾಡಬೇಕಾದುದು; ಕರ್ತವ್ಯ; ಕೆಲಸ. **೩.** ಸಮಾರಂಭ; ಆಚರಣೆ. 'ಲಗ್ನಕಾರ್ಯ' ಪರಾ. **೪.** ಕಾರಣದ ಫಲ; ಪರಿಣಾಮ; ಪ್ರಯೋಜನ : ಕಾರಣಮಿಲ್ಲದೆ ಕಾರ್ಯಂ ಪುಟ್ಟತೆಂದು ಪೇೞೆಯುದು ವಿಭಾವನಾಲಂಕಾರಂ (ಅಪ್ರತಿ. ೭೮-೩೩). **೫.** ಕಟ್ಟಳೆ; ಅಪ್ಪಣೆ; ನಿರೂಪ : ಸಾಳುವ ನರಸಿಂಗಯ್ಯದೇವ ಮಹಾ ಅರಸುಗಳು ತಿರುಪತಿಯ ಸ್ಥಾನಿಕರಿಗೆ ಅಟ್ಟಿದ ಕಾರ್ಯ (ಸೌಇಇ. IX–ii, ೪೬೨–೧ ; 1467). **೬.** ಉದ್ದೇಶ; ಗುರಿ : (ಕ). **೭.** [ಕಾವ್ಯಮೀ] ನಾಟಕದ ಐದು ಅರ್ಥಪ್ರಕೃತಿಗಳಲ್ಲೊಂದು : ಕಾರ್ಯ – ಕಥಾಪರಿಣಾಮ (ಕೈಪಿಡಿ. ೨೦೭). [ಸಂ.]

**ಕಾರ್ಯಕಲಾಪ** (ನಾ). ಕೆಲಸಗಳ ಸಮೂಹ; ಕಾರ್ಯಭಾರ : ನಮ್ಮ ಎಲ್ಲ ಕಾರ್ಯಕಲಾಪಗಳ ಕಾಲಕ್ರಮಕ್ಕೂ ನಾವು ಸೂರ್ಯನನ್ನೇ ನಂಬಿಕೊಂಡಿದ್ದೇವೆ (ನಕ್ಷತ್ರ. ೫೫); ಕೋರ್ಟಿನ ಕಾರ್ಯಕಲಾಪಗಳನ್ನು ಹತ್ತು ನಿಮಿಷ ಮುಂದಕ್ಕೆ ಹಾಕಿದೆ ಎಂದು ತಿಳಿಸಿ (ಪುನರು. ೫೩). [ಕಾರ್ಯ + ಕಲಾಪ]

**ಕಾರ್ಯಕಾರಣಿಕೆ** (ನಾ). ಸೇವೆ ಮೊದಲಾದ ಆಚರಣೆಗಳ ಮಹಿಮೆ, —ಪ್ರಭಾವ : ಇಲ್ಲಿಯ ಮಂಜುನಾಥದೇವರ ಕಾರ್ಯ ಕಾರಣಿಕೆ ಬಹಳವಾದುದರಿಂದ ಎಲ್ಲೆಲ್ಲಿಂದಲೂ . . . ಸಾವಿರಾರು ಜನರು ಬರುವರು (ದಕಜ. ೫೫). [ಕಾರ್ಯ + ಕಾರಣಿಕೆ]

**ಕಾರ್ಯಕಾರಿ** (ಗು). ೧. ಕೃತಿಯಲ್ಲಿ ಬರುವಂತಹ; ಆಚರಣೆಯಲ್ಲಿ ತರುವಂತಹ; ವ್ಯಾವಹಾರಿಕವಾದ : ಸಾಮಾಜಿಕ ವ್ಯವಸ್ಥೆಯನ್ನು ಸಾಧ್ಯವಾಗಬಹುದಾದ ಮಟ್ಟಿಗೂ ಕಾರ್ಯಕಾರಿಯಾಗಿರುವಂತೆ ಏರ್ಪಡಿಸಿ (ಭಾಧಾನ. IV, ೨೨); ಹೀಗೆ ನಾನು ಒಮ್ಮುಖವಾದ ಅಸ್ಪಷ್ಟವಾದ ಕಾರ್ಯಕಾರಿಯಲ್ಲದ ಮನೋಭಾವವನ್ನು ಒಪ್ಪಬಹುದೆಂದು ಊಹಿಸುವುದೂ ಕಷ್ಟ (ಮಲೆನಾ. ೧೭೮). **೨.** ಕೆಲಸವನ್ನು ಮಾಡುವ; ಕಾರ್ಯವನ್ನು ನಿರ್ವಹಿಸುವ. 'ಕಾರ್ಯಕಾರಿಮಂಡಲಿ' ಪರಾ. [ಸಂ. ಕಾರ್ಯಕಾರಿನ್]

**ಕಾರ್ಯಕಾರಿಮಂಡಲಿ** (ನಾ). ಕಾರ್ಯವನ್ನು ನಿರ್ವಹಿಸುವ ಮಂಡಲಿ; ಕಾರ್ಯನಿರ್ವಾಹಕ ಸಮಿತಿ: ವಾರ್ಷಿಕ ಸಭೆಯಲ್ಲಿ ಕಾರ್ಯಕಾರಿ ಮಂಡಲಿಗೆ ನಿನ್ನನ್ನೂ ಒಬ್ಬ ಸದಸ್ಯನನ್ನಾಗಿ ಚುನಾಯಿಸಿರುವರೆಂದು ತಿಳಿಯಿತು (ರಾಯಕ. ೩೮). [ಕಾರ್ಯಕಾರಿ + ಮಂಡಲಿ]

**ಕಾರ್ಯಕಾರಿಸಮಿತಿ** (ನಾ). = ಕಾರ್ಯಕಾರಿ ಮಂಡಲಿ: ಪಕ್ಷದ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಆ ವಿಷಯವನ್ನು ನಿರ್ಧರಿಸಲಾಯಿತು (ರೂಢಿ). [ಕಾರ್ಯಕಾರಿ + ಸಮಿತಿ]

**ಕಾರ್ಯಕ್ರಮ** (ನಾ). ೧. ಗೊತ್ತುಪಡಿಸಿದ ಕಾರ್ಯಗಳ ಪರಿವಿಡಿ. ೨. ಕಾರ್ಯಗಳ ವೇಳಾಪತ್ರಿಕೆ; ಒಂದಾದಮೇಲೊಂದರಂತೆ ನಡೆಯಬೇಕಾದ ಕೆಲಸಗಳ ಪಟ್ಟಿ: ಇಂದಿನ ಕಾರ್ಯಕ್ರಮ ಇನ್ನೂ ತಿಳಿದು ಬಂದಿಲ್ಲ (ರೂಢಿ). [ಕಾರ್ಯ + ಕ್ರಮ]

**ಕಾರ್ಯಕ್ಷಮ** (ಗು). ಕೆಲಸಮಾಡುವುದರಲ್ಲಿ ಸಮರ್ಥನಾದ; ಕಾರ್ಯದಕ್ಷ; ಕಾರ್ಯಪಟು. 'ಕಾರ್ಯಕ್ಷಮತೆ' ಪರಾ. [ಕಾರ್ಯ + ಕ್ಷಮ]

**ಕಾರ್ಯಕ್ಷಮತೆ** (ನಾ). ಕಾರ್ಯದಕ್ಷತೆ; ಕಾರ್ಯಪಟುತ್ವ: ಅಂದಿನ ಮಹಿಳೆಯರ ದಕ್ಷತೆ ಕಾರ್ಯಕ್ಷಮತೆಗಳಿಗೂ ಈ ಶತಮಾನಗಳ ಮಹಿಳೆಯರ ದಾಸ್ಯಕ್ಕೂ ಸಂಬಂಧವನ್ನು ಕಲ್ಪಿಸಬಹುದೇ ಎಂಬ ಸಂಶಯವುಂಟಾಗುತ್ತದೆ (ಕರ್ಣಾಕ. ೨೨). [ಸಂ. ಕಾರ್ಯಕ್ಷಮತಾ]

**ಕಾರ್ಯಕ್ಷೇತ್ರ** (ನಾ). ಕೆಲಸ ಮಾಡುವ ಸ್ಥಳ; ಕಾರ್ಯರಂಗ: ಅವರ ಕಾರ್ಯಕ್ಷೇತ್ರ ಬಹಳ ವಿಶಾಲವಾದದ್ದು (ರೂಢಿ). [ಕಾರ್ಯ + ಕ್ಷೇತ್ರ]

**ಕಾರ್ಯಗತ** (ಗು). ಕಾರ್ಯರೂಪದಲ್ಲಿ ಬಂದ; ನೆರವೇರಿಸಲ್ಪಟ್ಟ. ಕಾರ್ಯಗತಮಾಡು = ಆಚರಣೆಗೆ ತರು; ಕೃತಿಗೆ ಇಳಿಸು: ನಾಗಯ್ಯನವರು ಹಂಚಿಕೆಯನ್ನು ಹೇಗೆ ಕಾರ್ಯಗತಮಾಡಬೇಕು ಎಂಬುದನ್ನು ನಿರ್ಣಯಿಸುತ್ತಾರೆ (ಸವತಿ. ೨೨). [ಸಂ.]

**ಕಾರ್ಯಗೇಡಿ** (ನಾ). ೧. ಕಾರ್ಯವನ್ನು ಕೆಡಿಸುವವನು; ಕೆಲಸಗೇಡಿ. ೨. ಕೆಟ್ಟಕೆಲಸ ಮಾಡುವವನು; ಕೇಡಿಗ: ಪಾತಕರು ಮಾಯದಲಿ ಗೆಲಿದರು ಭೂತಳೇಶನ ತಲೆಯ ತಂದರು ಕಾರ್ಯಗೇಡಿಗಳು (ಕೌಶಿರಾ. ೧೭-೪೬). [ಕಾರ್ಯ + ಕೇಡಿ]

**ಕಾರ್ಯಗೌರವ** (ನಾ). ಕೆಲಸದ ಮಹತ್ವ; ಕಾರ್ಯದ ಘನತೆ: ಏನೋ ಒಂದು ಬಗೆಯ ಕಾರ್ಯಗೌರವದಿಂದಲೋ, ಸತ್ಕಾರ್ಯವನ್ನು ಮಾಡಬೇಕೆಂಬ ಸದ್ಭಾವನೆಯಿಂದಲೋ ಈ ಕಾರ್ಯಭಾರವನ್ನು ಹೊತ್ತು ನಿಂತಿದ್ದೇನೆ (ಗ್ರಂಥಾಲ. ೨೫). [ಕಾರ್ಯ + ಗೌರವ]

**ಕಾರ್ಯಜ್ಞ** (ನಾ). ಕಾರ್ಯವನ್ನು ತಿಳಿದ ವ್ಯಕ್ತಿ: ಕಾರ್ಯಜ್ಞಳು ನನ್ನ ಕಾರ್ಯಕ್ಕೆ ತಡೆಯನ್ನುಂಟುಮಾಡಳು (ಶಾಕುಂತ. ೯೨). [ಸಂ.]

**ಕಾರ್ಯತಂತ್ರಿ** (ನಾ). ಕಾರ್ಯಗಳನ್ನು ನಡೆಯಿಸುವವನು: ಸವಿನಯದಿ ಕುಂಭಿನಿಯೊಪ್ಪಿರೆ ಮರೆದ ಮಂತ್ರಿ ಬಹುಕಾರ್ಯತಂತ್ರೀ (ನವಮೋ. ೩-೨೨). [ಕಾರ್ಯ + ತಂತ್ರಿ]

**ಕಾರ್ಯತತ್ಪರ** (ಗು). ಕಾರ್ಯನಿಷ್ಠವಾದ; ಕೆಲಸದಲ್ಲಿ ಆಸಕ್ತ. 'ಕಾರ್ಯತತ್ಪರತೆ' ಪರಾ. [ಕಾರ್ಯ + ತತ್ಪರ]

**ಕಾರ್ಯತತ್ಪರತೆ** (ನಾ). ಕಾರ್ಯನಿಷ್ಠೆ; ಕೆಲಸದಲ್ಲಿ ಆಸಕ್ತಿ: ಇದು ನಿನ್ನ ಮನಃಶಕ್ತಿಗೆ ಹಾಕಿರುವ ಸವಾಲು . . . ಅದನ್ನು ಕಾರ್ಯತತ್ಪರತೆಯಿಂದ ಎದುರಿಸಬೇಕು (ದೂರಸ. ೨೪೮). [ಸಂ. ಕಾರ್ಯತತ್ಪರತಾ (ಕಾರ್ಯ + ತತ್ಪರತಾ)]

**ಕಾರ್ಯತ್ವ** (ನಾ). ಕಾರ್ಯದ ಗುಣ; ಕಾರ್ಯದ ಭಾವ: ಸತ್ತ್ವ, ದ್ರವ್ಯತ್ವ, ಕಾರ್ಯತ್ವ, ಕಾರಣತ್ವ ಮೊದಲಾದ ಸರ್ವ ವಿಷಯದಲ್ಲಿಯೂ ಅನೇಕಾಂತವಾದವಿರುವುದು (ಹಿಂದಸಾ. ೭೭). [ಸಂ.]

**ಕಾರ್ಯದಕ್ಷ** (ಗು). ಕೆಲಸದಲ್ಲಿ ನಿಪುಣವಾದ; ಚೆನ್ನಾಗಿ ಕೆಲಸ ಮಾಡುವ. [ಕಾರ್ಯ + ದಕ್ಷ]

**ಕಾರ್ಯದಕ್ಷತೆ** (ನಾ). ಕಾರ್ಯಪಟುತ್ವ; ಕೆಲಸದ ನೈಪುಣ್ಯ: ಈ ಕಾರ್ಯದಕ್ಷತೆಯನ್ನು ನೋಡಿ ಚಕ್ರವರ್ತಿಯು ಅವನಿಗೊಲಿದಿದ್ದನು (ಮಣಿಸ. ೫೨); ಪ್ರಾವೀಣ್ಯಕ್ಕೆ ಅನುಕೂಲವಾಗಿ ಕಾರ್ಯದಕ್ಷತೆ ಬರುತ್ತದೆ (ಕೀಟಬಿ. ೧೦). [ಕಾರ್ಯ + ದಕ್ಷತೆ]

**ಕಾರ್ಯದರ್ಶಿ** (ನಾ). ಸಂಘ, ಸಂಸ್ಥೆ ಅಥವಾ ಕಚೇರಿಯ ಕಾರ್ಯಗಳನ್ನು ನೋಡಿಕೊಳ್ಳುವ ವ್ಯಕ್ತಿ: ಕರ್ಣಾಟಕ ಸಂಘದ ಕಾರ್ಯದರ್ಶಿಗಳು ನಿಮಗೆ ತುಂಬಾ ಸ್ನೇಹಿತರೆಂದು ನನಗೆ ಗೊತ್ತು (ರಾಯಕ. ೭೮); ಕಾಶ್ಯಪ ಭಾರತೀಯ ಸಸ್ಯ ವಿಜ್ಞಾನ ಸಂಸ್ಥೆಯ . . . ಮೊದಲನೆಯ ಕಾರ್ಯದರ್ಶಿಯೂ ಆಗಿದ್ದನು (ಸಸ್ಯಕ. ೧೧೫). [ಸಂ. ಕಾರ್ಯದರ್ಶಿನ್]

**ಕಾರ್ಯಧಾರೆ** (ನಾ). ೧. ಕೆಲಸದ ವಿಧಾನ, —ಕ್ರಮ: ಎತ್ತೀಯಿತೆಂದೊಡೆ ಮೂಲೆಯಲಿ ಕಟ್ಟಿಸುವುದೆಂಬನ ಚಾಳಿಯೇತಕೆ ಕಾರ್ಯಧಾರೆಯ [ಪಾಠಾಂ. ದಾರ್ಯದ] ಕೀಲನಾರ್ಯೆದು ನಿಮ್ಮವರನಲ್ಲಿಗೆ ಕಳುಹಿ (ಬಸವು. ೨೮-೩೫). ೨. ಕೆಲಸಗಳ ಅನುಕ್ರಮ; ಶ್ರೇಣಿ; ಪರಂಪರೆ. [ಕಾರ್ಯ + ಧಾರೆ]

**ಕಾರ್ಯಧೀರ** (ನಾ). ಕೆಲಸ ಮಾಡುವುದರಲ್ಲಿ ನಿಪುಣ; ಕರ್ಮವೀರ: ಕಾರ್ಯಧೀರನು ಮಾತಿನ ಧೀರನಿಗಿಂತಲೂ ಮೇಲು (ವಚಭಾ. ೩೩೪). [ಕಾರ್ಯ + ಧೀರ]

**ಕಾರ್ಯಧುರಂಧರ** (ನಾ). ಕೆಲಸಮಾಡುವುದರಲ್ಲಿ ಸಮರ್ಥ, —ಮುಂದಾಳು: (*). [ಕಾರ್ಯ + ಧುರಂಧರ]

**ಕಾರ್ಯನಿಮಗ್ನ** (ನಾ). ಕೆಲಸದಲ್ಲಿ ವಿಶೇಷವಾಗಿ ಮುಳುಗಿರುವ: ಇಡೀ ವಿಶ್ವವೇ ಕಾರ್ಯನಿಮಗ್ನವಾಗಿದೆ (ಧರ್ಮಸಾ. ೧೩೧). 'ಕಾರ್ಯಮಗ್ನ' ಪರಾ. [ಕಾರ್ಯ + ನಿಮಗ್ನ]

**ಕಾರ್ಯನಿರ್ವಾಹಕ** (ಗು). ೧. ಕೆಲಸವನ್ನು ನಿರ್ವಹಿಸುವ. (ನಾ). ೨. ಕಾರ್ಯನಿರ್ವಾಹ ಮಾಡುವವನು; ಆಡಳಿತಗಾರ. [ಕಾರ್ಯ + ನಿರ್ವಾಹಕ]

**ಕಾರ್ಯನೀತಿ** (ನಾ). ಯಾವ ಕೆಲಸವನ್ನು ಹೇಗೆ ಮಾಡಬೇಕೆಂಬ ಕ್ರಮ, —ಧೋರಣೆ: ನಾವು ಶತ್ರುವಿನ ಹತ್ತಿರ ಸೇರಿಕೊಂಡು ತಕ್ಕ ಕಾರ್ಯನೀತಿಯನ್ನು ಹಿಡಿದರೆ . . . ಅವನನ್ನು ಕೊನೆಗಾಣಿಸಿಯೇ ಬಿಡುತ್ತೇವೆ (ವಚಭಾ. ೭೭). [ಕಾರ್ಯ + ನೀತಿ]

**ಕಾರ್ಯಪಟು** (ನಾ). =ಕಾರ್ಯದಕ್ಷ: ಕಾರ್ಯಪಟು, ಮಿತಭಾಷಿ, ವಾಕ್ಯಕೋವಿದನವಂ (ಶ್ರೀರಾಮಾ. ೨೮೨-೧೧೭). [ಕಾರ್ಯ + ಪಟು]

**ಕಾರ್ಯಪ್ರಣಾಳಿ** (ನಾ). ೧. ಕಾರ್ಯಾಚರಣೆ; ಕೆಲಸದ ನಡವಳಿಕೆ: ನ್ಯಾಯಾಲಯಗಳ ಕಾರ್ಯಪ್ರಣಾಳಿ ಮತ್ತು ಕಾರ್ಯವಾಹಿಗಳನ್ನು ವಿನಿಮಯಮಾಡುವುದಕ್ಕಾಗಿ ಸಾಧಾರಣ ನಿಯಮಗಳನ್ನು ರಚಿಸಿ ಸಾದರ್‍ಮಾಡಬಹುದು (ಭಾಧಾನ. ೧೨೪). ೨. ಕೆಲಸಗಳ ವಿಧಾನ; ಕೆಲಸಗಳನ್ನು ಮಾಡುವ ಕ್ರಮ, —ರೀತಿ. [ಕಾರ್ಯ + ಪ್ರಣಾಳಿ (= ಪ್ರಣಾಲಿ)]

**ಕಾರ್ಯಪ್ರವೃತ್ತ** (ಗು). ಕಾರ್ಯದಲ್ಲಿ ತೊಡಗಿದ; ಕೆಲಸ ಮಾಡಲು ಆರಂಭಿಸಿದ: ಮೂಲವಸ್ತುಗಳು ಕಾರ್ಯಪ್ರವೃತ್ತವಾಗುವಂತೆ ಉಚಿತವೆನಿಸುವ ಸನ್ನಿವೇಶಗಳನ್ನು ಒದಗಿಸುವುದಕ್ಕಾಗಿಯೇ ಶಾಲೆಗಳು ಏರ್ಪಟ್ಟಿರುವುದು (ಶಿಕ್ಷದ. ೧೦೨). [ಕಾರ್ಯ + ಪ್ರವೃತ್ತ]

**ಕಾರ್ಯಭರ** (ನಾ). ೧. ಕೆಲಸದ ಹೊರೆ; ಕಾರ್ಯದ ಭಾರ: ಎನ್ನೊಳಮಿಂ ತೀರದ ಕಾರ್ಯಭರಮಂ ತೀರ್ಚಲ್ ಪೆಜರ್ಗಂಡರೇನೊಳರ್ (ಗದಾಯು. ೨-೧೨). ೨. ಕೆಲಸದ ರಭಸ, —ತೀವ್ರತೆ. ೩. ಕೆಲಸದ ಬಾಹುಳ್ಯ; ಆಧಿಕ್ಯ. [ಕಾರ್ಯ + ಭರ]

**ಕಾರ್ಯಭರಧುರ್ಯ** (ನಾ). ಕೆಲಸದ ಹೊರೆಯನ್ನು ಹೊರಲು ಸಮರ್ಥನಾದವನು : ದನುಜೇಜ್ಯಂ . . . ದಂಪತಿಕ್ಷೇತ್ರದೊಳ್ ಧನವಂತಂ ಧರಣೀಶಕಾರ್ಯಭರಧುರ್ಯಂ ಸತ್ಕಳಾಕೋವಿದಂ (ಜಾತತಿ. ೧೭-೨೯). [ಕಾರ್ಯಭರ + ಧುರ್ಯ]

**ಕಾರ್ಯಭಾಗ** (ನಾ). ೧. ಕೈಕೊಂಡ ಕೆಲಸ; ಸಾಧಿಸಬೇಕಾದ ಕಾರ್ಯ. ೨. ಕೆಲಸದಭಾಗ, —ಅಂಶ : (ಕ). ೩. ಒಳಸಂಚು : (ಕ). [ಕಾರ್ಯ + ಭಾಗ]

**ಕಾರ್ಯಭಾರಿ** (ನಾ). ಕಾರ್ಯವನ್ನು ನಿರ್ವಹಿಸುವವನು; ವ್ಯವಸ್ಥಾಪಕ: ಶಾಸನ ಯೋಜನೆಗಳನ್ನು ಸಫಲಗೊಳಿಸಬೇಕಾದವನು ನಿಯುಕ್ತನಾದ ಕಾರ್ಯಭಾರಿ (ರಾಜ್ಯಶಾ. ೩೨೫). 'ಕಾರಭಾರಿ' ಪರಾ. [ಸಂ. ಕಾರ್ಯಭಾರಿನ್]

**ಕಾರ್ಯಮಂತ** (ನಾ). ಕಾರ್ಯವುಳ್ಳವನು ; ಕಾರ್ಯಶೀಲ : ಕಾಳಿಗನತಿಧವಳ ಯಶಂ ರಾಜಪೂಜಿತಂ ಸ್ಥಿರವಚನಂ ವಿವಿಧತರ ಕಾರ್ಯಮನ್ತಂ (ಸೌ ಇ ಇ. XX, ೩೧-೧೨ ; 1044). [< ಸಂ. ಕಾರ್ಯವತ್]

**ಕಾರ್ಯಮಗ್ನ** (ಗು). ೧. ಕೆಲಸದಲ್ಲಿ ಮುಳುಗಿದ; ಕಾರ್ಯತತ್ಪರವಾದ. (ನಾ). ೨. ಕೆಲಸದಲ್ಲಿ ಮುಳುಗಿರುವವನು; ಕಾರ್ಯತತ್ಪರನಾದವನು : ಸೈನಿಕ ದಾರಿ ತೋರಿ, ಮತ್ತೆ . . . ಕಾರ್ಯಮಗ್ನನಾದನು (ಪುನರು. ೫೧೦). [ಕಾರ್ಯ + ಮಗ್ನ]

**ಕಾರ್ಯಯೋಜನೆ** (ನಾ). ಕಾರ್ಯ ನಡೆಯಿಸುವ ಕ್ರಮ; ಆಗಬೇಕಾದ ಕಾರ್ಯಗಳ ವಿವರಗಳನ್ನು ಮುಂಚಿತವಾಗಿ ನಿರೂಪಿಸುವ ಕ್ರಮ, —ಹಂಚಿಕೆ : ಸರಕಾರವು ಹೊಸ ಹೊಸ 'ಪ್ಲ್ಯಾನ್'ಗಳನ್ನು ಎಂದರೆ ಕಾರ್ಯಯೋಜನೆಗಳನ್ನು ಮಾಡಬೇಕಾಗುತ್ತದೆ (ರಾಜ್ಯಶಾ. ೩೫೬). [ಕಾರ್ಯ + ಯೋಜನೆ]

**ಕಾರ್ಯರಂಗ** (ನಾ). ೧. ಕೆಲಸ ಮಾಡತಕ್ಕ ಸ್ಥಳ; ಕಾರ್ಯಕ್ಷೇತ್ರ: ತರ್ಕದ ಸಿದ್ಧಾಂತಕ್ಕೇ ಮರುಳಾಗಿ ಕಾರ್ಯರಂಗಕ್ಕಿಳಿಯದೆ . . . ಯಾವ ಕೆಲಸವೂ ಸಾಧಿಸುವಂತಿರಲಿಲ್ಲ (ಚಿತೆಸ. ೧೨೨). ೨. ಯೋಜನೆ ಕಾರ್ಯರೂಪಕ್ಕೆ ಬರುವ ಅವಸ್ಥೆ : ತನ್ನ ಮುಂದಿನ ಕಾರ್ಯರಂಗದ ಪೀಠಿಕೆಯನ್ನು . . . ವಿಸ್ತರಿಸಿದ (ಮುಂಗಾಮು. ೭೩). [ಕಾರ್ಯ + ರಂಗ]

**ಕಾರ್ಯಲಗ್ನ** (ನಾ). ಸಮಾರಂಭವು ನಡೆಯಬೇಕಾದ ಕಾಲ; ಮುಹೂರ್ತ : ವಿಘ್ನಮಾದುದು ರಾಮನುದ್ದಾಮಕಾರ್ಯಲಗ್ನದ ಯುದ್ಧಸಿದ್ಧತೆಗೆ (ಶ್ರೀರಾಮಾ. ೩೬೫-೮೬). [ಕಾರ್ಯ + ಲಗ್ನ]

**ಕಾರ್ಯವಾಸಿ** (ನಾ). ೧. ಕಾರ್ಯಸಾಧಕ; ಕಾರ್ಯದ ಉದ್ದೇಶವುಳ್ಳ ವ್ಯಕ್ತಿ : ಕಾರ್ಯವಾಸಿಯಾಗಿ ಬಂದಿದ್ದ ಕುಂತಿಯು ಬಿಸಿಲಿನ ತಾಪವನ್ನು ತಡೆಯಲಾರದೆ ಮುಸುಕುಹಾಕಿಕೊಂಡು ಕಾದು ನಿಂತಿದ್ದಳು (ವಚಭಾ. ೨೬೧). ೨. ಕೆಲಸದ ಒಳ್ಳೆಯ ಸ್ಥಿತಿ, —ಸಮರ್ಪಕತೆ : ಕಾರ್ಯವಾಸಿ ಕತ್ತೆಕಾಲು ಕಟ್ಟು (ಗಾದೆ). ೩. ಕಾರ್ಯಸಾಧನೆ; ಉದ್ದೇಶ ನಿರ್ವಹಣೆ : ಸತಿಯರು ಕಾರ್ಯವಾಸೆ[ಸಿ]ಗೆ ಸೋಲುವರಲ್ಲದೆ ಮನಮುಟ್ಟಿ ಸೋಲರು (ಭೈರಸೂ. ೩೯೪). [ಕಾರ್ಯ + ವಾಸಿ$_5$]

**ಕಾರ್ಯವಾಹಕ** (ನಾ). ಕೆಲಸದ ಹೊಣೆಯನ್ನು ಹೊತ್ತವನು; ಕೆಲಸವನ್ನು ನಿರ್ವಹಿಸುವವನು : ವಾಚಕರ ಹಾಗೂ ಗ್ರಂಥಾಲಯ ಕಾರ್ಯವಾಹಕರ ಅಮೂಲ್ಯವೇಳೆಯ ಉಳಿತಾಯವೇ ಗ್ರಂಥಸೂಚಿಯ ಅಸ್ತಿತ್ವದ ಉದ್ದೇಶ (ಗ್ರಂಥಾಲ. ೩೬). [ಕಾರ್ಯ + ವಾಹಕ]

**ಕಾರ್ಯವಾಹಿ** (ಗು). ೧. ಕಾರ್ಯವನ್ನು ನಿರ್ವಹಿಸುವ. (ನಾ). ೨. = ಕಾರ್ಯವಾಹಕ. [ಸಂ. ಕಾರ್ಯವಾಹಿನ್]

**ಕಾರ್ಯವಿಘಾತ** (ನಾ). ಕಾರ್ಯನಾಶ; ಕಾರ್ಯಕ್ಕೆ ವಿಘ್ನ : "ಪ್ರತಿಬಂಧಃ, ಪ್ರತಿಷ್ಟಂಭಃ . . . ಕಾರ್ಯವಿಘಾತವು" (ಸಿದ್ಧಾಂತಿ. ೩೧೪). [ಕಾರ್ಯ + ವಿಘಾತ]

**ಕಾರ್ಯವಿಧಾನ** (ನಾ). ಕಾರ್ಯದ ಕ್ರಮ, —ರೀತಿ : ನೀನಳವಡಿಸಿದ ಕಾರ್ಯವಿಧಾನಂಗಳಿವೆಮಗೆ ಪೊಸತೆ (ಜಗವಿ. ೧-೬೫). [ಕಾರ್ಯ + ವಿಧಾನ]

**ಕಾರ್ಯವಿಭಜನೆ** (ನಾ). ಕಾರ್ಯದ ಹಂಚಿಕೆ; ಕೆಲಸದಲ್ಲಿ ಬೇರೆ ಬೇರೆ ಭಾಗಗಳನ್ನು ಮಾಡಿ ಹಂಚಿಕೊಡುವ ವಿಧಾನ : ಜನ ಹೆಚ್ಚು ನಾಗರಿಕರಾದಂತೆಲ್ಲ 'ಕಾರ್ಯವಿಭಜನೆ' ಹೆಚ್ಚು ಸ್ಪಷ್ಟವಾಗುತ್ತ, ಪ್ರತಿಯೊಬ್ಬನೂ ಒಂದು ಬಗೆಯ ಕಾರ್ಯದಲ್ಲಿ ತೊಡಗುತ್ತಾನೆ (ಭೂವಿವ. ೧೭೯). [ಕಾರ್ಯ + ವಿಭಜನೆ]

**ಕಾರ್ಯವೀರ** (ನಾ). ಕಾರ್ಯದಲ್ಲಿ ನಿಪುಣ; ಕರ್ಮವೀರ : ಮಾತಿನ ವೀರರು ಕಾರ್ಯವೀರರನ್ನು ಸಂತೋಷಗೊಳಿಸುತ್ತ ಸೇವಿಸುತ್ತಿರುತ್ತಾರೆ (ವಚಭಾ. ೩೩೪). [ಕಾರ್ಯ + ವೀರ]

**ಕಾರ್ಯಶಾಲೆ** (ನಾ). ಕಾರ್ಯಾಲಯ; ಕೆಲಸದ ಸ್ಥಳ : ಪಾಂಡವರು . . . ಒಬ್ಬ ಕುಂಬಾರನ ಕಾರ್ಯಶಾಲೆಯಲ್ಲಿ ಇಳಿದುಕೊಂಡರು (ವಚಭಾ. ೫೦). [ಕಾರ್ಯ + ಶಾಲೆ]

**ಕಾರ್ಯಸಖ** (ನಾ). ಕಾರ್ಯಗಳಲ್ಲಿ ಮಿತ್ರ; ಕೆಲಸದಲ್ಲಿ ಸಹಾಯಕ: ಕಾರ್ಯಸಖಂ ಶಕುನಿ ಗಡಾ ಶೌರ್ಯಸಖಂ ಸೂತಜಂ ಗಡಾ (ಗದಾಯು. ೨-೨೭). [ಕಾರ್ಯ + ಸಖ]

**ಕಾರ್ಯಸಮಿತಿ** (ನಾ). = ಕಾರ್ಯಕಾರಿ ಸಮಿತಿ : ಪರಿಷತ್ತಿನ ಕಾರ್ಯಸಮಿತಿ (ರೂಢಿ). [ಕಾರ್ಯ + ಸಮಿತಿ]

**ಕಾರ್ಯಸಾಧನ** (ನಾ). ೧. ಕಾರ್ಯ ಸಿದ್ಧಿಗೆ ಬೇಕಾದ ಉಪಾಯ. ೨. ಕಾರ್ಯವನ್ನು ನೆರವೇರಿಸುವಿಕೆ : (ಕ). [ಕಾರ್ಯ + ಸಾಧನ]

**ಕಾರ್ಯಸಾಧನೆ** (ನಾ). ಕಾರ್ಯವನ್ನು ಪೂರೈಸುವಿಕೆ; ನೆರವೇರಿಸುವಿಕೆ : ಕಾರ್ಯಸಾಧನೆಗಾಗಿ ಕತ್ತೆಯ ಕಾಲಾದರೂ ಕಟ್ಟಬೇಕು ಎಂಬ ಆರ್ಯೋಕ್ತಿಯನ್ನು ನಾನು ಯಾವಾಗಲೂ ಶಿರಸಾವಹಿಸಿ ನಡೆದುಕೊಳ್ಳುತ್ತಿದ್ದೇನೆ (ಕಸಬು. ೭೦). [ಕಾರ್ಯ + ಸಾಧನೆ]

**ಕಾರ್ಯಸಿದ್ಧಿ** (ನಾ). ಕಾರ್ಯ ನೆರವೇರುವಿಕೆ; ಕೆಲಸದ ಜಯ : ಶುಭಕರಣದಿಂ ಕಾರ್ಯಸಿದ್ಧಿಯಕ್ಕು (ಗಗತಾ. ೪-೭೧). [ಕಾರ್ಯ + ಸಿದ್ಧಿ]

**ಕಾರ್ಯಸೂಚಿ** (ನಾ). ಕಾರ್ಯಗಳನ್ನು ಸೂಚಿಸುವ ಪಟ್ಟಿ; ಕಾರ್ಯಕ್ರಮ ಪಟ್ಟಿ : "ಸಭೆಯಲ್ಲಿ ಪರ್ಯಾಲೋಚಿಸಬೇಕಾದ ವಿಷಯಗಳ ಪಟ್ಟಿ, – ಕಾರ್ಯಸೂಚಿ" (Agenda. ಇಂಕನ). [ಕಾರ್ಯ + ಸೂಚಿ]

**ಕಾರ್ಯಸ್ಥಿತಿ** (ನಾ). ಕಾರ್ಯದ ಸ್ವರೂಪ, —ಸನ್ನಿವೇಶ : ಪ್ರತಿಕೂಲನಾಗಿ ನಿಲೆ ವಿಧಿ ಮತನಯಮನುಕೂಲಮಾಗಿ ನಿಲೆಯುಂ ಕಾರ್ಯಸ್ಥಿತಿಯಂ ಸಾಧಿಸಲಾಗದು (ಕವಿರಾ. ೩-೧೪೫); ಬೆಸಗೊಳಲೊಡನಾ ಭೂನಾಥಂ ನುಡಿದನದಜ ಕಾರ್ಯಸ್ಥಿತಿಯಂ (ಹಮ್ಮೀರ. ೨-೩). [ಕಾರ್ಯ + ಸ್ಥಿತಿ]

**ಕಾರ್ಯಾಂಗ** (ನಾ). ಕಾರ್ಯಗಳನ್ನು ನಡೆಸುವ ಅಂಗ, —ಶಾಖೆ : ಕಾರ್ಯಾಂಗವನ್ನೇ ಸರಕಾರ ಎಂದು ಕರೆಯುವುದು ಜನಕ್ಕೆ ವಾಡಿಕೆ (ರಾಜ್ಯಶಾ. ೬೪). [ಕಾರ್ಯ + ಅಂಗ$_2$]

**ಕಾರ್ಯಾಂತರ** (ನಾ). ೧. ಬೇರೆಯ ಕಾರ್ಯ; ಮತ್ತೊಂದು ಕೆಲಸ. ೨. ಕಾರ್ಯದ ಒಳವಿಷಯ, —ವಾಸ್ತವಾಂಶ : ಬೆಸಸುವುದೆನಗಾದಿತ್ಯಪ್ರಭ ನಿಮ್ಮ ಬಂದ ಕಾರ್ಯಾಂತರಮಂ (ಜಗವಿ. ೨-೪೨). [ಸಂ.]

**ಕಾರ್ಯಾಕಾರ್ಯವಿವೇಕ** (ನಾ). ಯಾವುದು ಮಾಡತಕ್ಕುದು, ಯಾವುದು ಮಾಡತಕ್ಕುದಲ್ಲ ಎಂಬ ವಿವೇಚನೆ; ಯೋಗ್ಯಾಯೋಗ್ಯ ವಿಮರ್ಶೆ: ಧರ್ಮಸಂಕಟದಲ್ಲಿ ಕರ್ಮಭ್ರಮಣೆಯಲ್ಲಿ ಕಾರ್ಯಾಕಾರ್ಯವಿವೇಕದಲ್ಲಿ ಅರ್ಜುನ ಈ ಪ್ರಶ್ನೆ ಹಾಕುತ್ತಾನೆ (ಭಾರದ. ೧೧೭). [ಕಾರ್ಯ + ಅಕಾರ್ಯ + ವಿವೇಕ]

**ಕಾರ್ಯಾಚರಣೆ** (ನಾ). ಕಾರ್ಯವನ್ನು ಮಾಡುವುದು; ಕೆಲಸವನ್ನು ಮಾಡುವಿಕೆ: ಸ್ವಭಾವಸಂಸಿದ್ಧವಾದ ಕಾರ್ಯಾಚರಣೆಯಿಂದ ಪಾಪವಿಲ್ಲ (ಭಾರದ. ೧೧೭); ಮಲಗಿದ್ದ ಕಾವೇರಿ ಎರಡು ತಾಸಿನ ಬಳಿಕ ತನ್ನ ಕಾರ್ಯಾಚರಣೆಯನ್ನು ಕೈಕೊಂಡಳು (ಕಾವೇರಿ. ೧೮೨). [ಕಾರ್ಯ + ಆಚರಣೆ]

**ಕಾರ್ಯಾತುರ** (ನಾ). ಕೆಲಸದ ವಿಷಯದಲ್ಲಿರುವ ಆತುರ; —ಉತ್ಕಂಠೆ: ಕಾರ್ಯಾತುರವಿರುವವರಿಗೆ ನಿದ್ರೆ ಹೇಗೆ ಬರುತ್ತದೆ? (ವಚಭಾ. ೭೧೫). [ಕಾರ್ಯ + ಆತುರ]

**ಕಾರ್ಯಾತ್ಮಕ** (ಗು). ಕ್ರಿಯಾರೂಪವಾದ. [ಸಂ.]

**ಕಾರ್ಯಾರ್ಥ**$_1$ (ನಾ). ಕಾರ್ಯದ ಉದ್ದೇಶ; ಕಾರ್ಯನಿಮಿತ್ತ: ನೆಗಟ್ದೇಕಾದಶರುದ್ರನಾದಿಪುರುಷಂ ದೇವಂ ಲಲಾಟೇಕ್ಷಣಂ . . . ದ್ರೋಣಂಗೆ ಕಾರ್ಯಾರ್ಥದಿಂ ಮಗನಾದಂ (ಗದಾಯು. ೨–೨೫). [ಕಾರ್ಯ + ಅರ್ಥ]

**ಕಾರ್ಯಾರ್ಥ**$_2$ (ಅ). ಕೆಲಸಕ್ಕಾಗಿ; ಯಾವುದಾದರೊಂದು ಪ್ರಯೋಜನಕ್ಕೋಸ್ಕರ: ಯಾಕೋ ಕೊಂಚ ದುಡ್ಡು ಬೇಕಿತ್ತಂತೆ, ಅದಕ್ಕೇ ಕಾರ್ಯಾರ್ಥ ಬಂದಿದ್ದರು (ಹೊಸಕ್ಷಿ. ೧೦೪). [< ಕಾರ್ಯಾರ್ಥ$_1$]

**ಕಾರ್ಯಾಲಯ** (ನಾ). ಕೆಲಸಮಾಡುವ ಸ್ಥಳ; ಕಚೇರಿ: "ಚಾವಡಿ, ಓಲಗ; ಕಚೇರಿ, ಕಾರ್ಯಾಲಯ" (ಕಂನುಹು. ೮೩); ಕನ್ನಡ ನಿಘಂಟು ಕಾರ್ಯಾಲಯ (ರೂಢಿ). [ಕಾರ್ಯ + ಆಲಯ]

**ಕಾರ್ಯಾವಳಂಬ** (ನಾ). ಕಾರ್ಯಕ್ಕೆ ಆಧಾರವಾದವನು; ಒಂದು ಬಿರುದು: ಕದನಪ್ರಚಣ್ಡಂ ಭಯವೆನ್ನುದೆಂಬಂ [ಕಾ] ರ್ಯಾವಳಂಬಂ ನಿಜ ನಾಮಾಂಕಮಾಳಾಪ್ರಶಸ್ತಿಸಹಿತಂ (ಕಇಅ. ೭–೨–೧೮೮ ; 1058). [ಕಾರ್ಯ + ಅವಳಂಬ (= ಅವಲಂಬ)]

**ಕಾರ್ವಗಲ್** (ನಾ). ಕಾರ್ಗಾಲದ ಹಗಲು; ಮಳೆಗಾಲದ ಹಗಲು: ಮಸಗಿತು ತುಂಬಿ ತುಳ್ಕುವವೊಟಿ ಕಾರ್ವಗಲವ್ವಳಿಪಂತೆ ಪಂತದಿಂದೆಸಗಿತು ಸುತ್ತ ಮುತ್ತಿಗೆಯನೊತ್ತರದಿಂ ಮುಗಿಲೊಡ್ಡುವಂದದಿಂ (ಚಿಕವಿ. ೨–೧೦೭). [ಕಾರ್$_2$ + ಪಗಲ್]

**ಕಾರ್ವಟ್ಟೆಗ**, ಕಾರ್ಬಟ್ಟೆಗ (ನಾ). ಕರಿಯ ಹಾದಿಯುಳ್ಳವನು; ಕೃಷ್ಣವರ್ತ್ಮ; ಅಗ್ನಿ: "ಅಗ್ನಿ ಮರಗೂಳಂ . . . ಪೊಗೆವಳಯಿಗೆಯ ಕಾರ್ವಟ್ಟೆಗನಿವ್ವೆದೆಯನಲನ ನಾಮವೂ" (ಶಬ್ದಮಂ. ೧೨); "ಅಗ್ನಿ ಕಾರ್ವಟ್ಟೆಗಂ" (ಕಶರ. ೨೩). **ಕಾರ್ಬಟ್ಟೆಗ**: ತುತಿಪೆಂ ಸಾಯಿರಗಯ್ಯಂ ಕುಳಿರ್ಗಯ್ಯಂ ಕಾರ್ಬಟ್ಟೆಗನೆಂಬೊಳ್ಗಣ್ಣವನಂ (ಉದ್ಭದೇ. ೩–೭೭). [ಕಾರ್$_3$ + ಬಟ್ಟೆ$_1$ + –ಗ$_2$]

**ಕಾವಾರ್** (ನಾ). ಬಲಿಷ್ಠವಾದ ಗಿಡ್ಡ ಕುದುರೆ: (*). [?]

**ಕಾರ್ವಿ** (ನಾ). (ಕರಾ) ಮೀನುಗಾರ, ಅಂಬಿಗ ಮೊದಲಾದ ವರ್ಗಕ್ಕೆ ಸೇರಿದ ವ್ಯಕ್ತಿ: ಅಂಬಿಗ, ಬೆಸ್ತ . . . ಕಾರ್ವಿ, ಮರಕಾಲ, ಮೊಗೇರ (ತುಳುನಾ. ೧೭೩); ಕುಂದಾಪುರದ ಕಾರ್ವಿಯರನ್ನು ಕರೆಯಿಸಿದರೆ ಈ ಮನೆಹಾಳನನ್ನು ಮಣ್ಣುಮುಕ್ಕಿಸುತ್ತೇನೆ (ದೇವಹೆಂ. ೨೧೯). [← ಮರಾ. ಖಾರವಾ, ಖಾರವೀ]

**ಕಾರ್ವಿಲ್ಲ** (ನಾ). = ಕರ್ವುವಿಲ್ಲ: ಅವನರಸಿ ಕಾರ್ವಿಲ್ಲನರಸಿಗಿಮ್ಮಡಿ ಚೆಲುವೆ ಯುವತಿಯರ ಕುಲರನ್ನೆ (ನವಮೋ. ೩–೨೨). [< ಕರ್ವುವಿಲ್ಲ]

**ಕಾರ್ವೆ**$_1$ 'ಕಾಲ್ವಾಯ್' ನೋ.

**ಕಾರ್ವೆ**$_2$ (ನಾ). ಒಂದು ಬಗೆಯ ಕೆಂಪುಬಣ್ಣದ ಶಾಲು; ಅಲವಾನ: ಬಸವನ ಆಭರಣ ಲೆಖ್ಖಾ . . . ೨ ಬುರುಕೀ ಕಾರ್ವೆ ೧ ಮೊಮುಜಾಮೆದು ಸಹಾ (ಎಕ. XIV, ನಂಜನ. ೨೮೯–೭ ; 1847). [← ಮರಾ. ಖಾರವೇ]

**ಕಾರ್ಶ್ಯ** (ನಾ). ೧. ಕೃಶವಾಗಿರುವಿಕೆ; ತೆಳ್ಳಗಾಗಿರುವಿಕೆ; ಬಡವು. ೨. [ಕಾವ್ಯಮೀ] ವಿಯೋಗಾವಸ್ಥೆಯಲ್ಲಿ ನಾಯಿಕಾ ನಾಯಕರಿಗುಂಟಾಗುವ ಹತ್ತು ಕಾಮಾವಸ್ಥೆಗಳಲ್ಲೊಂದು: ನಯನರತಿ ಚಿಂತೆಸಂಕಲ್ಪಯುತಂ ಜಾಗರತೆ ಕಾರ್ಶ್ಯಂ. . .ಮರಣಮಿಂತವಸ್ಥೆ ದಶವಿಧಮಕ್ಕುಂ (ರಸರ. ೧–೩೯). ℙ ಕೆಲವರ ಮತದಲ್ಲಿ ಈ ಕಾಮಾವಸ್ಥೆ ಮೂರು ಪ್ರಕಾರ: ಕಾರ್ಶ್ಯ, ಜಾಗರಣ, ಸಂತಾಪನವೆಂಬ ಅವಸ್ಥಾತ್ರಯ ಪ್ರೇಕ್ಷಕರಿಂ (ವಿವೇಕ. ೨೩೦). [ಸಂ.]

**ಕಾರ್ಷಾಪಣ** (ನಾ). ೧. ಕರ್ಷತೂಕದ ಒಂದು ಬಗೆಯ ಹಳೆಯ ಬೆಳ್ಳಿಯ ನಾಣ್ಯ; ಹದಿನಾರು ಆದ್ಯಮಾಪಕಗಳ ತೂಕದ ಒಂದು ನಾಣ್ಯ. ೨. ಒಂದು ಕರ್ಷ ತೂಕದ ಬಟ್ಟು. [ಸಂ.]

**ಕಾರ್ಷಿಕ** (ಗು). ೧. ಒಂದು ಕರ್ಷದ ಬೆಲೆ ಬಾಳುವ. (ನಾ). ೨. ಕಾರ್ಷಾಪಣ. ೩. ರೈತ; ಬೇಸಾಯಗಾರ. [ಸಂ.]

**ಕಾರ್ಷಿಕಮಲ್ಲಿಗೆ** (ನಾ). ಒಂದು ಬಗೆಯ ಬಳ್ಳಿ: "ಶ್ರೀಮಲ್ಲೀ–ಕಾರ್ಷಿಕಮಲ್ಲಿಗೆ" (ಓಷಧಿ. ೧೭೭). [ಕಾರ್ಷಿಕ$_0$ + ಮಲ್ಲಿಗೆ]

**ಕಾರ್ಷ್ಣಿ** (ನಾ). ೧. ಕೃಷ್ಣನ ಮಗ: ಬಿಲ್ಮಣಿಯೆ ಕಾರ್ಷ್ಣಿ ಕಡುಗೋಪದಿಂದಾಕ್ಷಣಂ . . . ಅವನ ಮೇಲೆ ನಡೆಯಲ್ (ಜೈಮಿಭಾ. ೧೨–೩೩). ೨. ಅರ್ಜುನನ ಮಗ; ಬಭ್ರುವಾಹನ. ೧, ೨: ಚಂಡಭುಜಬಲಯುತರ್ ಸುತ ಕಾರ್ಷ್ಣಿ ಕಾರ್ಷ್ಣಿಗಳ್ ಕಡುಪಿಂದೆ ಕಾದಿದರ್ (ಜೈಮಿಭಾ. ೨೨–೩೦). [ಸಂ.]

**ಕಾರ್ಷ್ಣಿಕೆ** (ನಾ). = ಕಾರ್ಷ್ಣ್ಯ: ಅಂಧಕಾರಾಬ್ಧಿಯಂ ಕುಡಿಯೆ ಪ್ರತಿಫಲಿಸಿ ತೋರ್ಪ ಕಾರ್ಷ್ಣಿಕೆಯೊ (ಹಚಕಾ. ೩–೮೭). [ಸಂ. ಕಾರ್ಷ್ಣಿಕಾ]

**ಕಾರ್ಷ್ಣ್ಯ** (ನಾ). ಕಪ್ಪು; ಕರಿಯ ಬಣ್ಣ: ನೀ ಪರಪುಟ್ಟನಾದೆ ನೋಡೀಗಳಿದರ್ಕೆ ನಿನ್ನ ತನುಕಾರ್ಷ್ಣ್ಯಮೆ ಸೂಚಕಮಲ್ಲವೇ (ಜಗವಿ. ೧೭–೪೧); ರವಿಚಂದ್ರಪ್ರಚುರ ಪ್ರಭಾಪ್ರಚಯಮಂ ಮೇಘಂ ಮುಸುಂಕುತ್ತೆ ಕಾರ್ಷ್ಣ್ಯ ವಿಶಿಷ್ಟಂ ತಟಿದಂಕುರಾಲ್ಪರುಚಿಯಂ ಬೀಜಿತ್ತು (ರಾಜಶೇ. ೮–೯೯). [ಸಂ.]

**ಕಾರ್ಷ್ಯ** (ನಾ). ಮತ್ತಿಮರ; ಶಾಲವೃಕ್ಷ: (*). [ಸಂ.]

**ಕಾಲ್**$_1$, ಕಾಲು$_1$ (ನಾ). ೧. ಮೊಣಕಾಲಿನಿಂದ ಪಾದದವರೆಗಿನ ಭಾಗ: ಶಿಲಾತಳದ ಮೇಲೆ ಕಾಲುಮಂ ಬಾಲಮುಮನುಡುಗಿಯಡಂಗಿಸಿ (ಪಂಚತಂ. ೧೬೬–೧೦); ವಜ್ರ ಶೃಂಖಲಮೆಂಬ ಕಡಗವ ಕಾಲ್ಗಿಡಿಸಿದನು (ಮೋಹತ. ೩೫–೭೭). ೨. ಪಾದ; ಅಡಿ; ಹೆಜ್ಜೆ: "ಅಡಿಯೆಂದು ಕಾಲೆಂದು ಪಾದಕ್ಕೆ ಪೆಸರಕ್ಕು" (ಶಬ್ದಮಂ. ೭೧); ನಿಮ್ಮ ಕಾಲಂ ತೊಳೆವೆವೆಂದು ಮಹಾದೇವಿ ತಾನೆ ಕಾಲಂ ಕರ್ಚಿ (ವಡ್ಡಾರಾ. ೭೮–೧೧); ನೀನ್ ಸಭೆಯೊಳ್ ಕಾಲ್ಗೆಜಗೆಜಗು ಕೊಲ್ಲೆಂ (ಪಂಪಭಾ. ೬–೫೮); ಗಜಿ ಪಾಚಿಲ್ಕಿಲ್ಲ ಕಾಲುಂ ಬಲಿಯವು ನಡೆಯಲ್ವೆಟ್ಟತು (ಕಾದಂಪೂ. ೧೯೧). **ಕಾಲು**$_1$: ೧. ಎನ್ನ ಕಾಲೇ ಕಂಭ ದೇಹವೇ ದೇಗುಲ (ಬಸವ. ೮೨೦); ಬೀಳುವುವು ಕೆಲಕೆಲವು ನಡು ತೊಡೆ ಕಾಲು ಖಂಡಿಸಿ (ತೊರರಾ. ೩–೩–೧೬). ೨. "ಕ್ರಮಂ ಪಾದಮಂಘ್ರಿಪದಮೆನೆ ಕಾಲು" (ಮಂಗರಾ. ೯೮–೧೮); ಹುಲಿಯ . . . ಕಾಲಿಗೆ ಐದೈದು ಹದನವಾದ ಉಗುರುಗಳು ಇರುತ್ತವೆ (ಮುಂಬಯಿ. ೪–೩೬). ೩. ಮಂಚ, ಕುರ್ಚಿಮುಂತಾದುವುಗಳನ್ನು ನಿಲ್ಲಿಸಲು ತಳಭಾಗದಲ್ಲಿ ಜೋಡಿಸುವ ಕೋಲು: ಚಿನ್ನದ ಕಾಲ ಬೆಳ್ಳಿಯ ಕಾಲ ಮಂಚ ಸುವರ್ಣದಡ್ಡಣೆ ಸುಪ್ಪತ್ತಿಗೆ (ಮೋಹತ. ೧೫–೧೭).

೪. ಜಡೆ ಹೆಣೆಯುವಾಗ ಮಾಡಿಕೊಳ್ಳುವ ಕೂದಲಿನ ಭಾಗ; ಹಗ್ಗ ಮೊದಲಾದುವುಗಳಲ್ಲಿಯ ಹೊಸೆದ ಎಳೆ: ಅವಳು ಮೂರು ಕಾಲಿನ ಜಡೆ ಹಾಕಿಕೊಂಡಿದ್ದಾಳೆ (ರೂಢಿ); ಮೂರು ಕಾಲಿನ ಹಗ್ಗ (ರೂಢಿ).

**ಕಾಲಂಪಿಡಿ, ಕಾಲುಹಿಡಿ** = ಪಾದಕ್ಕೆ ಬಿದ್ದು ಬೇಡಿಕೊಳ್ಳು: ಬಾಹುಬಲಿಯ ಕಾಲಂಪಿಡಿದು ಎಂತುಮೊಡಂಬಡಿಸಲಾಜದೆ (ಚಾವುಂಪು. ೬೯–೨೭); ಜೀವ ನಿನ್ನ ಕಾಲಂಪಿಡಿವೆಂ ಧರ್ಮಮನೆ ಮುಗುಳೆ ಬಲ್ವಿಡಿ ವಿಡಿಯಾ (ಅಜಿಪು. ೨–೬೩). **ಕಾಲಕಡಗ** = ಕಾಲ್ಗಡಗ: ಸಿಂಜಿನೀ, ಪಾದ ಕಟಕಃ – ಈ ೨ ಕಾಲಕಡಗಂ" (ಹಲಾಯು. ೯೨–೪೦೭); ಕಾಲಕಡಗಂ [ಪಾಠಾಂ. ತಾಲಿಕಡಗಂ] ಬಣ್ಣಸರವುಂ ತೋಳಬಂದಿಯೆನಿಪ್ಪ ಚೆಲ್ವಿನ ಬಾಲದೊಡಿಗೆಗಳ (ಬಸಪು. ೧೪–೪). **ಕಾಲಕಡೆಯು** = ಕಾಲ್ಗಡಗ: ಪಟ್ಟೆಯ ದಟ್ಟಿ ಪಳಿಯ ಚಲ್ಲಣ ಕಾಲಕಡೆಯ . . . ಮೆಜಿಯೆ (ಕುರಾಸಾಂ. ೧೧–೩೭). **ಕಾಲಕಸ, ಕಾಲುಕಸ** = ಬೆಲೆಯಿಲ್ಲದುದು; ತುಚ್ಛವಾದುದು: ಸೋಮಾಪುರದ ಜನರಿಗೆ ನಾನು ಕಾಲಕಸವಾಗಿ ಕಂಡೆನಲ್ಲವೆ (ಮನೆಬೆ.೧೦೪); ನಾನೇನಾದರೂ ಆಸೆಯನ್ನಿಟ್ಟುಕೊಳ್ಳಬಹುದಾದರೆ ನನ್ನ ನಾದಿನಿಯ ಕಾಲುಕಸವಾಗಿರಬೇಕು (ಕಮನೆ. ೧೧). **ಕಾಲಮೇಲೆ ಬೀೞ್**=ಪಾದಕ್ಕೆ ಬೀಳು; ನಮಸ್ಕರಿಸು: ರಕ್ಷಿಸವೇೞ್ಕುಮಾವತೆಱದಿಂದಸುವಂ . . . ಎಂದವಳ್ಕಾಲಮೇಲೆ ಬೀೞ್ವುದುಂ (ಕಾದಂಪೂ. ೯೪೭). **ಕಾಲವ**=೧. ಕೆಳಗಿನವನು; ಕೀಳ: ಕಾಲವರ ಕಯ್ಯಲ್ಲಿ ತಡೆವೆ ಮೇಲವರ ಕೋಲಿನಲ್ಲಿ ತಡೆವೆ (ಸರ್ವವ. ೮೧–೪೪೯). ೨. ಕಾಲಾಳು; ಪದಾತಿ: ಕಾಲವರ್ಬೀಳಿಸಿದರಹಿತರಂ ಪೊಯ್ದಾಡಿ (ಜೈಮಿಭಾ. ೨೨–೭). **ಕಾಲಹುಗುಳು** = ಕಾಲಿನಬಾವು; ಬೊಕ್ಕೆ, —ಹೊಪ್ಪಳೆ: "ಪಾದಸ್ಫೋಟ–ಕಾಲಹುಗುಳು" (ನಾಚಿರಾ. ೬). **ಕಾಲಿಗೆಬೀಳು**= ನಮಸ್ಕರಿಸು: ಕಾಲಿಗೆಬಿದ್ದು ಕೇಳಿಕೊಂಡ (ರೂಢಿ). **ಕಾಲಿಗೆ ಬುದ್ಧಿಹೇಳು** = (ಆಲಂ) ಓಡಿಹೋಗು; ಪಲಾಯನ ಮಾಡು: ತಮಗಿನ್ನು ಉಳಿಗಾಲವಿಲ್ಲೆಂದು ತಿಳಿದು ಕಾಲಿಗೆ ಬುದ್ಧಿಹೇಳತೊಡಗಿತು (ಚಿಕ್ಕದೇ. ೧೮೬); ಕೈಯಲ್ಲಿದ್ದ ಲಾಟೀನನ್ನು ಬಿಸಾಡಿ ಕಾಲಿಗೆಬುದ್ಧಿಹೇಳಿದೆ (ಪದ್ಮಸ. ೧೯೭). **ಕಾಲಿಲ್ಲದವ** = ಹೆಳವ: "ಪೆಟವಂ ಕಾಲಿಲ್ಲದವಂ" (ಶಮದ. ಪರಿ. ೧). **ಕಾಲೊಳಗೆ** = ಹಿಂಬಾಲಿಸಿ; ಅನುಸರಿಸಿ; ಪರಿಣಾಮವಾಗಿ: ಈ ಬಡತನದ ಕಾಲೊಳಗೇ ಹಿಂದಕ್ಕೊಮ್ಮೆ ಬೇನೆ ಬಿದ್ದಿದ್ದೆನು (ಮುಂಬಯಿ. ೩–೫೬). **ಕಾಲ್ಗಳೆಯಿಸು** = ಕಾಲಿಗೆ ಲೇಪಿಸು; "ಸಾರಣೆಮಾಡಿಸು" (ಪ್ರಭಣ್ಣ): ಜವಾದಿಯಂ ತೊಳೆಯಿಸುತೆ ಕರ್ಪೂರಮಂ ಸೊಗಸೆ ಕಾಲ್ಗ[ಪಾಠಾಂ. ಲ್ಗೆ]ಳೆಯಿಸುತೆ ಮೆದಿಸುತ್ತೆ ಸಾದಿನಿಂ (ಪದ್ಮರಾ. ೮–೮೯).

[ದೇ. ‖ ತಮಿ. ಮಲ. ಕಾಲ್; ತುಳು. ಕಾರ್; ಕೊಡ. ಕಾಲೀ; ತೆಲು. ಕಾಲು; ಕೋಲಾ. ಕಾಲ್; ಪರ್ಜಿ. ಕೇಲ್; ಗಡಬ. ಗೊಂಡಿ. ಕಾಲ್]

**ಕಾಲ್$_2$**, ಕಾಲು$_2$ (ನಾ). ಕೆರೆ, ನದಿ ಮುಂತಾದುವುಗಳಿಂದ ನೀರು ಹಾಯಿಸಲು ಮಾಡಿದ ನಾಲೆ; ಕಾಲುವೆ: "ಕಾೞ್ಪುರವೆನೆ ಕಾಲ್ಗೆ ಪೆಸರ್" (ಚತುನಿ. ೫೬); ಗೋಳಿಯ ಕೆಱೆಗೆ ಕಾಲ್ಗೆ ಒಮ್ಮರ್ತ್ತರ್ಕ್ಕೆಯುಲುಂ (ಮೈಆರಿ. ೧೯೪೧, ೨೯–೨; 797); ಮಹೇಶ್ವರ ಜಟಾಗ್ರದಿಂದಿಳಿದ ಗಂಗೆಯ ಕಾಲಿದೞೊಪ್ಪ ಬಪ್ಪನೀರ್ವರಿ (ಎಇ. XIII, ೪೪–೩೭; 1112); ಕಾಲ್ಗಳಿಲ್ಲದೆ ತೊಱೆ . . . ಇಲ್ಲದೆಲ್ಲಿಯುಂ (ಕಬ್ಬಿಕಾ. ೨೬); ಗಿಳಿ ಕರ್ದುಂಕಿದೊಡೆ ಬೀಳ್ವನಿದು ಮಾವಣ್ಣು ತನಿರಸದ ಕಾಲ್ಗಳಿಂ ಬೆಳೆವುವು (ಚೆಬಪು. ೧೧–೮); ಮಳಲೊಟ್ಟಿಲ್ ಪೊಱವಾೞ್; ಕಾಲ್ ಕಾಲ್ ಎಂ ತಡೆತಡೆದು ಪೋಪಳ್ (ರಾಮಾಶ್ವ. ೮–೧೩). 'ಪರಿಕಾಲ್' ಪರಾ. **ಕಾಲು$_2$**: ವಾರಿಜನಾಳಂ ಸೀೞ್ದು ನೂಲ್ಗೊಳ್ವ ಪೊಲವಯದಿಂ ತಂದನೀ ಕಾಲು ರಮ್ಯಂ ಬಗೆಯಲ್ (ಹೈಆರಿ. V, ೬–೧೨; 1088); ತಾಯಿ ಭೂದೇವಿ ಪಟ್ಟ ಕಷ್ಟವೆಂದರೆ . . . ಅವಳ ಕಾಲೊಣಗಿಮರಳಲ್ಲಿ ಹರಿದು ಹೋಯಿತು (ಹಗಲಿ. ೨೨). [ದೇ. ‖ ತಮಿ. ಮಲ. ಕಾಲ್]

**ಕಾಲ್$_3$**, ಕಾಲು$_3$ (ನಾ). ನಾಲ್ಕನೆಯ ಒಂದು ಭಾಗ; ¼ ಭಾಗ. 'ಕಾಲ್ತೊಲೆ' ಪರಾ. **ಕಾಲು$_3$**: ಓದೋ ಕಾಲು, ಬುದ್ಧಿಮುಕ್ಕಾಲು (ಸಮಾವ. ೬೩); ಒಂದು ಅರ್ಬುದ ನಾಲ್ವತೆರಡೂಕಾಲು ಕೋಟಿ ಜನ (ಮುಂಬಯಿ. ೬. ೪–೧೧೦). 'ಒಕ್ಕಾಲು', 'ಮುಕ್ಕಾಲು' ಪರಾ.

[ದೇ. ‖ ತಮಿ. ಮಲ. ತುಳು. ಕಾಲ್; ಕೊಡ. ಕಾಲೀ; ತೆಲು. ಕಾಲು]

**ಕಾಲ**, ಕಾಳ$_2$ (ಗು). ೧. ಕಪ್ಪುಬಣ್ಣದ. ೨. ಪೀಡಿಸುವ; ಹಿಂಸೆಕೊಡುವ. ೩. ಭಯಂಕರವಾದ: ಶಿಶುಗಳಾಱುಮದೀಕ್ರಮದಿಂದೆ ಕಾಲಕಾಲಾಕೃತಿ ಕಂಸನಿಂ ಲಯಮನೆಯ್ದಿರೆ (ಜಗವಿ. ೨–೫೬). (ನಾ). ೪. ಸಮಯ; ವೇಳೆ: "ದಿಷ್ಟಃ, ಕಾಲಃ, ಅನೇ (ಹಾಃ) ಹಸ್ – ಈ ೩ ಕಾಲದ ಪೆಸರ್" (ಹಲಾಯು. ೧೮–೧೦೫); ಕಾಲವಾವನನಾವ ಪರಿಯಲಿ ಕೀಳುಮಾಡದು (ಕುವ್ಯಾವಿ. ೧–೧೯); ಜಲದಿ ಮಿನಿನ ಕಾಲ ಬಹ ಭವಿಷ್ಯದ ಕಾಲ ಕಾಣುವಂತೆಮಗಿಲ್ಲ (ಹಬ್ಬೆರ. ೪೨–೧೨). ೫. ವರ್ಷ; ಸಂವತ್ಸರ. ೬. ಸನ್ನಿವೇಶ; ಸಂದರ್ಭ: ಕಾಲ ಕೆಟ್ಟು ಕಾಗೆ ರಾಗೀ ತಿಂತು (ಗಾದೆ); ಕಾಲಕ್ಕೆ ತಕ್ಕ ಕೋಲ (ಗಾದೆ). ೭. ಚಾಂದ್ರಮಾನದ ಪಕ್ಷ; ಮಾಸಾರ್ಧ. ೮. ಸಾವು; ಮರಣ: "ನಿಧನಂ . . . ಕಾಲಃ, ಸಂಸ್ಥಾ, ನಿಷ್ಠಾ, ಅಂತಃ, ನಿಮೀಳನಂ, ದೀರ್ಘನಿದ್ರಾ –ಈ ೧೨ ಸಾವು" (ಹಲಾಯು. ೧೦೩–೬). ೯. ಮೃತ್ಯುದೇವತೆ; ಯಮ: "ಶಮನಃ . . . ಕಾಲಃ, ಅಂತಕಃ – ಈ ೧೬ ಜವನ ಪೆಸರ್" (ಹಲಾಯು. ೧೩–೭೧); ಶಕ್ರಾದ್ಯರುಮಂ ಪರಿದಟ್ಟಿ ಮುಟ್ಟುವಾ ಕಾಲನೆನಾಂ (ಜಗವಿ. ೭–೨೭); ನಿನ್ನ ಕಾಲಂ ಬಿಟ್ಟೊಡೆನ್ನ ಕಾಲಂ ಬಿಡಂ (ಉದ್ಭದೇ. ೩–೨೭); ರಾಘವಂ ವಾಲಿಯಂ ಲೀಲಾಮಾತ್ರಮೆನೆ ಕಾಲನೆಡೆಗಟ್ಟಿ ಬಾಲೆಯಂ ಮೇಣ್ ವಿಶಾಲರಾಜ್ಯಮಂ ಸುಗ್ರೀವಂಗಿತ್ತಂ (ಅದ್ಭುತ. ೩೭–೪). ೧೦. ಫಲ; ಪರಿಣಾಮ; ಅದೃಷ್ಟ. ೧೧. ಶಕ್ತಿ; ಬಲ; ಸಾಮರ್ಥ್ಯ. ೧೨. ಪ್ರಳಯ: ಕಾಲಯಮನಂತತ್ಕುಗ್ರಮಂ ತಾಳ್ದಿದಾ ದಳವಾಯೇ ಬಳಿಮಾರಿಯ್ರೈ (ಸೋಮೇಶ. ೬೪). ೧೩. ಕಪ್ಪುಬಣ್ಣ. ೧೪. ಶಿವ: "ಭಾನುಜನೊಳು ಉಮೇಶನೊಳು ಕಱಿದಱೊಳು ಮೃತ್ಯುವಿನೊಳಂ ಕಾಲ ನಾಮಮಕ್ಕುಂ" (ಮಂಗರಾ. ೧೪೭–೩೮). ೧೫. ವಿಷ್ಣು. ೧೬. ಬ್ರಹ್ಮ: "ಕಾಲದೊಳು ಕೂಟದೊಳು ವಿಧಿಯೆಂದೆನಿಕ್ಕು (ಮಂಗರಾ. ೧೪೭–೧೯). ೧೭. ಶನಿಗ್ರಹ. ೧೮. ದಕ್ಷ. ೧೯. ಅರಸು; ಧರಾಧಿಪತಿ. ೨೦. ಎಲಚಿಹಣ್ಣು; ಬೋರೇಹಣ್ಣು. ೨೧. ಕರಿಯ ನಾಗರಹಾವು; ಅಷ್ಟ ಫಣಿಗಳಲ್ಲಿ ಒಂದು: ಇಂದ್ರಾಗ್ನಿ ಮೊದಲಾದೆಂಟು ದಿಕ್ಕಿನ ಭೂಮಿಯಂ ಕ್ರಮದಿಂ ಪೊತ್ತು ಅನಂತ . . . ಕಾಲವೆಂಬಷ್ಟಕುಲ ಫಣಿಗಳಿಕ್ಕು (ವಿವೇಕ. ೧೩೩). ೨೨. ಮಹಾನರಕಗಳಲ್ಲಿ ಒಂದು: ಸೂಚೀಮುಖ ಕಾಲಖಡ್ಗ . . . ಸಂತಾಪಗಳೆಂಬಯೆಂಟು ಮಹಾನರಕಂಗಳು (ವಿವೇಕ. ೧೭೯). ೨೩. ಬೆಂಕಿಯ ಏಳು ಜ್ವಾಲೆಗಳಲ್ಲಿ ಒಂದು. 'ಕಾಲಸರಣಿ' ಪರಾ. ೨೪. ಒಂದು ಬಗೆಯ ಸಸ್ಯ: (ಮೈಔಗಿ. ೪೪–೮೭೧); "ಅಂತಕನೊಳೆರದ ಪಣ್ಗಳು ದಕ್ಷನೊಳು ದಧಿಯೊಳಂತಕಾಂತಕನೊಳತಿ ರೌದ್ರದೊಳು ಪಕ್ಷದೊಳು ಕಂತುಪಿತನೊಳು ಕಾಲಮಕ್ಕು" (ಮಂಗರಾ. ೧೫೧–೫೬); "ಅಸಿತ ಫಲಂ ಭಯಂಕರ ಯುಗಂ ಯಮ ಶಂಕರ ವಿಷ್ಣು ಪಕ್ಷ ಸಾಹಸ ಸಮಯಂ ಧರಾಧಿಪತಿ ವತ್ಸರಂ ಎಂಬಿವು ಕಾಲವಾಚಕಂ" (ನಾನಾರ. ೫೬).

೨೫. [ವ್ಯಾಕ] ಕ್ರಿಯೆ ನಡೆದ ಅಥವಾ ನಡೆಯುವ ಸಮಯ; ಕ್ರಿಯಾಪದ ಸೂಚಿಸುವ ಸಮಯ: ಪ್ರಥಮ ಪುರುಷದಲ್ಲಿ ಕಾಲ ವಚನ ಲಿಂಗಭೇದವಿಲ್ಲದೆ . . . ಪ್ರತ್ಯಯವು ಸೇರುತ್ತದೆ (ಕೈಪಿಡಿ. ೪೪). ೨೬. [ತತ್ತ್ವಶಾ] ದ್ರವ್ಯಗಳಲ್ಲಿ ಒಂದು: ಪದಾರ್ಥದ ಪರಿವರ್ತನದಲ್ಲಿ ಕಾಲವು ಕಾರಣಸ್ವರೂಪದ್ದಾಗಿದೆ ಇದೂ ಒಂದು ದ್ರವ್ಯವಾಗಿದೆ (ಜೈನಪ. ೪೩೭); ಕಾಲ, ವಾಸನಾ, ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಹಿಂದಸಾ. ೨೭೫); **ಕಾಳ್ಕ**: ೧. ಮರಂ ಕಾಳಮಲ್ಲದ ಕಾಳದೊಳ್ ಫಲಪುಷ್ಪದೊಳ್ ನೆಱೆದಂದು (ಲೋಕೋಪ. ೪-೫೪); ಬಾಳನಾಳುವ ನೀನು ಬಾಳಿನಾಳಲ್ಲ ಕಾಳನಾಳುವ ನೀನು ಕಾಳದಾಳಲ್ಲ (ಗಿ೦. ೨೫-೧೪). ೧೦. ಕಾಳನೋ ರಾವಣನೋ ಶಿಶುಪಾಳನೋ ತಾನೆನಿಸಿ (ಎಕ. II, ೫೯-೯೫; 974); ಪ್ರಳಯ ಸಮಯದೊಳು ಮೇರೆಯಂ ಮಿಾಱಿ ಬರ್ಪ್ಪಾ ಕಡಲನಂ ಕಾಳನಂ (ಎಕ. VI, ಚಿಕ್ಕಮ. ೧೦೪-೨೦; 1707); ಯಾವ ಕಾಳನ ಖೂಳ ರಕ್ಕಸರಾರು ಬಂದರೊನುಗ್ಗುತ (ಹಾಡುಪಾ. ೩೭-೧೧). ೧೪. "ಶಶಿ ಕೃಷ್ಣಮಸಿತಂ ಮೇಚಕಂ ಕಾಳಮೆನೆ ಕಪ್ಪಿಗಕ್ಕುಂ" (ಮಂಗರಾ. ೧೩೧-೨೨); ಮುಂದೈಸಿದ ತಮಾಲವನದ ಕಾಳದೊಳಂ ಮುಗುಳ್ತ ಮಾಧವೀ ಲತೆಯ ಜೊನ್ನದೊಳಂ (ಮಲ್ಲಿ ಪು. ೩-೧೦೦೦ವ); ದಟ್ಟೈಸಿ ಮಡಲಿಱಿದ ಕಾಳದೊಳು ನಡುವಿರುಳು ನಟ್ಟ ಮುಳ್ಳುಗಳೆಡಹಿದ ಕಲ್ಲ (ಹಚಕಾ. ೧೨-೨೧). 'ಕಾಳರಾತ್ರಿ' ಪರಾ.

ಕಾಲವಾಗು = ಸಾಯು; ತೀರಿಕೊಳ್ಳು: ಅವನು . . . ತನ್ನ ತಂದೆ ಬಿಜ್ಜಳನ ಜೀವಮಾನದಲ್ಲೇ ಕಾಲವಾಗಿರಬೇಕು (ಮೂರು ಉ. ೯೬); ಹೆಂಡತಿ ಕಾಲವಾದಾಗ ಅವರಿಗೆ ಒಬ್ಬಳು ಮಗಳಿದ್ದಳು (ಕಳಹು. ೮). ಕಾಲಂಪ್ರತಿ = ಕಾಲಕಾಲಕ್ಕೆ; ಆಯಾಕಾಲಕ್ಕೆ: ಯೆಕಪನಾಯಕನ ಹೆಸರಲು ಯಿಕ್ಕಿದ ವೀರಗಲಿನನಂಲ್ಲಿ ಕಾಲಂಪ್ರತಿಯ ಯೆರೆವ ಅರವಟ್ಟಿಗೆಯ ಧರ್ಮಕೆ ಆ ಉದಕಯೆರೆವ ಬ್ರಾಹ್ಮಣಗೆ ವರುಷ ೧ಕ್ಕೆ ಬಿಟ್ಟ ಭತ್ತ . . . ಸರ್ವಸ್ವದ ವಿವರ (ಕಇ. III-i, ೧೪-೬೫; 1545). ಕಾಲತುಂಬು = ೧. ಅವಧಿ ಪೂರ್ಣವಾಗು; ಕಾಲಪಕ್ವವಾಗು: ಆವಾವವಸ್ತು ತನ್ನ ಸ್ಥಾನದಲ್ಲಿ ಕಾಲತುಂಬುವನ್ನಕ್ಕ . . . ಯೋಗ್ಯವಾದಂತೆ (ಮೋಳಿಮಾ. ೧೩೩-೫೧೫); ಸರಿಯಾದ ಸಂಗೀತ ಶಿಕ್ಷಣವನ್ನು ಕೊಟ್ಟರೆ ಕಾಲತುಂಬಿ ಬಂದಾಗ ಸಂಗೀತ ಪ್ರಪಂಚದಲ್ಲಿ ಹಿರಿತನದಲ್ಲಿ ಬೆಳಗಮರೆಂದರಿತು (ಸಂಗೀತ. ೫೨). ೨. ಆಯುಷ್ಯತುಂಬು; ಮರಣವೊದಗು: "ಕಾಲತುಂಬು = ಮರಣಬರು" (ಜಾನಕೋ. ೩೭). [ಸಂ.]

**ಕಾಲಂ** (ನಾ). ಪುಸ್ತಕ ಅಥವಾ ಪತ್ರಿಕೆಯೊಳಗೆ ಅಚ್ಚುಮಾಡುವಾಗ ವಿಂಗಡಿಸಿಕೊಂಡಿರುವ ಉದ್ದನೆಯ ಅಂಕಣ; ಸ್ತಂಭ: ಪತ್ರಿಕೆಯ ಒಂದು ಪುಟದಲ್ಲಿ ಎಂಟು ಕಾಲಂಗಳಿರುತ್ತವೆ (ರೂಢಿ).

[← ಇಂ. Column]

**ಕಾಲಂಕೆಯ್** 'ಕಾಲಂಗೆಯ್' ನೋ.

**ಕಾಲಂಗಾಣ್** (ಕ್ರಿ). ಕಾಲವನ್ನು ಕಾಣು, —ತಿಳಿ: ಗುಣಂಗೊಂಡಂ, ಕಾಲಂಗಡಂ, ಪ್ರಿಯಂನುಡಿದಂ(ಶಮದ.೧೭೭ ಪ್ರಯೋ). [ಕಾಲ+ಕಾಣ್]

**ಕಾಲಂಗಿ** (ನಾ). ಚಲ್ಲಣ; ಪ್ಯಾಂಟು; ಷರಾಯಿ: ಉದ್ದದ ಕಾಲಂಗಿ ಹಾಕಿ ದೊರೆಯ ಹಾಗೆ ಒಂದು ನಾಲ್ಕು ಇಂಗ್ಲೀಷು ಶಬ್ದಗಳನ್ನು ವೆಂಕಜ್ಜಿಯ ಮುಂದೆ ನಾರಾಯಣನೆನ್ನುತ್ತಿದ್ದ (ತ್ಯಾಗಮು. ೧೪೭).

[ಕಾಲ್$_1$ + ಅಂಗಿ$_2$]

**ಕಾಲಂಗುಲಿ** (ನಾ). ಕಾಲಿನ ಬೆರಳು: ಕಾಲು ನಾಲಗೆಗಳುಂ ಕಪ್ಪಾಗಿ ಮೇದಿನಿಯ ಮೇಲೆ ಕಾಲಂಗುಲಿಗಳೊರಗೆಯೊಳೊಂದದಿರೆ ಬಾಲೆಗೀ ಲಕ್ಷಣಂ ಮುತ್ತೈದೆತನಮಾಗಲಱಿಯದು (ಜೈಮಿಭಾ. ೫-೫೫).

[ಕಾಲ್$_1$ + ಅಂಗುಲಿ]

**ಕಾಲಂಗೆಯ್**, ಕಾಲಂಕೆಯ್, ಕಾಳಂಗೆಯ್ (ಕ್ರಿ). ಕಾಲವಾಗು; ಸಾಯು; ತೀರಿಕೊಳ್ಳು: ವಿದ್ಯಾಧರಂ ಕಾಲಂಗೆಯ್ದು ಸಿದ್ಧಾರ್ಥನೆಂಬೊಂ ಮಗನಾಗಿ ಪುಟ್ಟಿದೊಂ (ವಡ್ಡಾರಾ. ೪೨-೨೨); ಗುಣವತಿಯೆಂಬ ಮಗಳಾಗಿ ಮಿಥ್ಯಾಭಾವನೆಯಿಂ ಕಾಲಂಗೆಯ್ದೆನಿತಾನುಂ ಕಾಲಂ ತಿರ್ಯಗ್ಗತಿಯೊಳ್ ತಿರಿತಂದು (ಪಂರಾಮಾ. ೧೭-೩೯ವ); ಔಪಶಮಿಕಂ ಅಪರ್ಯಾಪ್ತಕಗ್ಗೆ ಎಂತೆಂದೊಡೆ ಚಾರಿತ್ರ ಮೋಹೋಪಶಮದೊಳೊಡಗೂಡಿ ಕಾಲಂಗೆಯ್ದರಂ ಕುಱಿತ್ತಾದುದು (ತತ್ತ್ವಪ್ರ: ೧೨). **ಕಾಲಂಕೆಯ್**: ಸ್ವಸ್ತಿಶ್ರೀ ಇನುಜ್ಜೂರಾ ಮೆಳ್ಳಗವಾಸ ಗುರುವರ್ ಕಟ್ಬಪ್ಪು ಬೆಟ್ಟಮ್ಮೇಲ್ಕಾಲಂ ಕೆಯ್ದಾರ್ (ಎಕ. II, ೨೮-೨; 700). **ಕಾಳಂಗೆಯ್**: ಕುರುರಾಜಂ ಕಾಳ[ಪಾಠಾಂ.ಲ]ಂಗೆಯ್ದೊಡವೇ ನೀಗಾಳಾಪಮೆ ತನುಜರಾಮುಮುಲ್ಲವೆ ಪೇಱಿಂ (ನೇಮಿಪು. ೧೨-೨೭೪).

[ಕಾಲ + ಕೆಯ್$_1$]

**ಕಾಲಂದಿಗೆ** 'ಕಾಲಂದುಗೆ' ನೋ.

**ಕಾಲಂದುಗೆ**, ಕಾಲಂದಿಗೆ (ನಾ). ಕಾಲಿನಲ್ಲಿ ಧರಿಸುವ ಕಡಗ; ನೂಪುರ; ರುಳಿ: ಶಿವನ ಪೂಜಾ ಸಂಭ್ರಮಂ ಮನೆಮನೆಗಳೊಳಗೆ ಭವನ ಕಾಲಂದುಗೆಯ ಧ್ವನಿ ಮನೆಮನೆಯೊಳಗೆ (ತಿರುರ. ೩-೧೩); ಕಾಲಂದುಗೆ ಬಂಡುಂಡಿರ್ದ ಪೆಣ್ದುಂಬಿಗಳ ರವಮನೊಟ್ಟೈಸೆ (ಪುಣ್ಯಾಸ್ರ. ೧-೪೨); ತಾಯೆ ನೀ ಕೆಡೆಮೆಟ್ಟೆನುತೆ ಕಾಲಂದುಗೆ ಪಾಯವಟ್ಟವ ತಂದಿಕ್ಕಿದರು (ಮೋಹತ. ೨೩-೪೭); ಡಾಬಾಗಲೀ, ಕಾಲಂದುಗೆಯಾಗಲೀ ಯಾವುದೂ ಇರಲಿಲ್ಲ (ಬಾಣಅ. ೨೩೯). **ಕಾಲಂದಿಗೆ**: ಘಟ್ಟ ವಣ್ಯಾಣ ಕಾಲಂದಿಗೆ (ವಿದಾಕ್ಯ. ೬-೧); ಕಾಲಂದಿಗೆ ಪಿಲ್ಲಿ ಮೇಲೆ ಹೊನ್ನುಡಿದಾರಾ (ಸೌಂದಕಾ. ೩-೩೯); ಘಲ್ಲೆಂದು ಮೊರೆಯುವ ಕಾಲಂದಿಗೆಗಳ ಶಬ್ದಂಗಳಿಗೆ ಸರಿಯಾಗಿ ತಾಳಗಳಂ ಪಿಡಿಯುವಂತೆ (ಸೌಗಂಧಿ. ೪೮೮-೧); ಊಳಿಗದ ಹೆಣ್ಣುಗಳ ಕಾಲಂದಿಗೆಯ ಧ್ವನಿಯ ಕೇಳಿ ಹೊರವಡುವ ಹಂಸೆಗಳಿಗೆ . . . ಸಂಕಲೆಯ ತೊಡಿಸು (ವಚಕಾ. ೫೪).

[ಕಾಲ್$_1$ + ಅಂದುಗೆ]

**ಕಾಲಕ** (ನಾ): ೧. (ಮನುಷ್ಯರ) ಚರ್ಮದ ಮೇಲೆ (ಹುಟ್ಟಿನಿಂದಲೇ ಬಂದಿರುವ) ಕಪ್ಪು ಚುಕ್ಕಿ, —ಮಚ್ಚೆ. 'ಕಾರೆಳ್ಳು' ಪರಾ. ೨. ಯಕೃತ್ತು. [ಸಂ.]

**ಕಾಲಕಂಠ**, ಕಾಳಕಂಠ (ನಾ). ೧. ಕೊರಳಲ್ಲಿ ಕಪ್ಪುಕಲೆ ಇರುವವನು; ಶಿವ; ನೀಲಕಂಠ: ಶೀಲವಂತರ ಕೈಯ ಕನ್ನಡಿ ಕಾಲಕಂಠನ ಕೂರಲಗು ಕರುಣಾಳು ಬಸವಂ (ಬಸಪು. ೧-೩೩). ೨. ಗುಬ್ಬಿ; ಗುಬ್ಬಚ್ಚಿ: "ಕಲವಿಂಕ ವಾಕಾಲ[ಪಾಠಾಂ.ಳ]ಕಂಠಮೆನೆ ಗುಬ್ಬಿ" (ಮಂಗರಾ. ೫೧-೬). **ಕಾಳಕಂಠ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ಕಾಲ್$_4$ + ಕಂಠ]

**ಕಾಲಕಂಠಕ** (ನಾ). ನೀರುಕೋಳಿ; ಭರತಪಕ್ಷಿ: (ಶ). [ಸಂ.]

**ಕಾಲಕಂಧರ**, ಕಾಳಕಂಧರ (ನಾ). = ಕಾಲಕಂಠ: "ಪರಮೇಶ್ವರಂ ಭರ್ಗನೀಶ್ವರಂ ಕಾಲಕಂಧರಂ. . .ಎನಲು ರುದ್ರಂ" (ಮಂಗರಾ. ೪-೧೧). **ಕಾಳಕಂಧರ**: ಕಾಳಕಂಧರನೀಕ್ಷಿಸುತ್ತಾಗ (ವೀಶೈಪು. ೩-೮-೨೫).

[ಕಾಲ್$_2$ + ಕಂಧರ]

**ಕಾಲಕಡು** 'ಕಾಲ್ಗಡ' ನೋ.

**ಕಾಲಕರ್ಮ** (ನಾ). ೧. ಕಾಲ ಮತ್ತು ಕರ್ಮ: ಹುಟ್ಟು ಸಾವಿನ ವಿಲಗ ಜೀವರ ಬಿಟ್ಟ ಠಾವಿದು ಕಾಲಕರ್ಮದ ಥಟ್ಟು ಮುರಿವಡೆದೋಡಿದೆಡೆಯಿದು (ಕುವ್ಯಾಉ. ೧-೨೧); ಕೇಳು ಸಚರಾಚರ ಸಮಸ್ತವು ಕಾಲಕರ್ಮಕೆ ಸಿಲುಕಿಹವು (ಅಮೃತ. ೨-೩೫). ೨. ಸಾವು: (ಶ).

[ಕಾಲ + ಕರ್ಮ]

**ಕಾಲಕರ್ಮರಹಿತ** (ನಾ). ಕಾಲ ಮತ್ತು ಕರ್ಮಗಳಿಲ್ಲದವನು: ಕಾಲಕರ್ಮರಹಿತರು ಭವವಿರಹಿತರು . . . ನಿಮ್ಮ ಶರಣರು (ಬಸವ. ೮೭೩). [ಕಾಲಕರ್ಮ + ರಹಿತ]

**ಕಾಲಕಲ್ಪ** (ನಾ). ಯಮನಿಗೆ ಸಮಾನನಾದವನು; ಯಮಸದೃಶ: ನವಗಾದೀ ಖೇದಮಂ ಬಿನ್ನವಿಪನಹಿಪತಲ್ಪಂಗೆ . . . ದಾನವ ಸೇನಾ ಕಾಲ ಕಲ್ಪಂಗೆ (ಜಗವಿ. ೧-೩೫). [ಸಂ.]

**ಕಾಲಕಳೆ** (ಕ್ರಿ). ೧. ಹೊತ್ತುಕಳೆ; ಸಮಯವನ್ನು ಕಳೆ: ತಮ್ಮೆಲ್ಲರೊಡನೆ ಕಾಲ ಕಳೆಯಲು ಅವಕಾಶವಾದುದು ನನಗೆ ತುಂಬಾ ಸಂತೋಷವಾಗಿದೆ (ರಾಯಸ. ೮೧). ೨. ಜೀವನ ಸಾಗಿಸು: ತಾಯಿ . . . ಬಡತನದಿಂದ ಕಾಲ ಕಳೆಯುತ್ತಾ ಅವನಿಗೆ ವಿದ್ಯಾಭ್ಯಾಸ ಮಾಡಿಸಿದಳು (ಮುಂಬಯಿ. ೪-೫೦). [ಕಾಲ + ಕಳೆ$_1$]

**ಕಾಲಕಾಲ** (ನಾ). ಯಮನನ್ನು ನಿಗ್ರಹಿಸಿದವನು; ಶಿವ: ಕಾಲಕಾಲಂ ಮೆಚ್ಚಿ ಕರುಣಾಲೋಲದಿಂ ಪ್ರಮಥತ್ವಮಂ ಕೊಡೆ (ಬಸವು. ೨೭-೪೬). [ಕಾಲ + ಕಾಲ]

**ಕಾಲಕೀರ್ದಿ** 'ಕಾರಕರ್ದಿ' ನೋ.

**ಕಾಲಕುದುರೆ** (ನಾ). (ಮಕ್ಕಳನ್ನು ಆಡಿಸುವುದಕ್ಕಾಗಿ) ಕುದುರೆಯ ಹಾಗೆ ಬೆನ್ನಮೇಲೆ ಮಗುವನ್ನು ಕೂರಿಸಿಕೊಂಡು ನೆಲದಮೇಲೆ ಮಂಡಿಯೂರಿ ಹರಿದಾಡುವ ಮನುಷ್ಯ: ಅಂದು ಅಮ್ಮನ ಕಂಕುಳಲಿ ಅಡುತ್ತಿದ್ದೆ. ಅಂದು ಅಪ್ಪನ ಕಾಲಕುದುರೆ ಮಾಡಿದ್ದೆ (ಕಎವು. ೯೨). [ಕಾಲ + ಕುದುರೆ]

**ಕಾಲಕೂಟ**, ಕಾಳಕೂಟ (ನಾ). ೧. ಒಂದು ಮಹಾವಿಷ; ಘೋರವಾದ ವಿಷ: ಈತಂಗಳ್ಗುಪಚಾರಂ ಪ್ರೇತೋಪಚಾರಂ, ಕೂಟಂ ಕಾಲಕೂಟಂ (ರಾಮಾಶ್ವ. ೧೦-೨೦); ಇವರೆಲ್ಲಾ ಜೀವನದಲ್ಲಿ ಸವಿದುದೇನನ್ನು? ಕಾಲಕೂಟವನ್ನು (ಭಾರದ. ೪೮೬). ೨. ಸಮುದ್ರ ಮಥನದಲ್ಲಿ ಹುಟ್ಟಿದ ಒಂದು ಉಗ್ರವಾದ ವಿಷ. 'ಕಾಲಕೂಟಗ್ರೀವ' ಪರಾ. ೩. ಒಂದು ಪರ್ವತ: ಪದ್ಮಕ ಸರಸ್ಸು, ಕಾಲಕೂಟ ಪರ್ವತ, ಶೋಣನದಿ . . . ಮುಂತಾದವುಗಳನ್ನು ದಾಟಿ ಅವರು ಗೋರಥ ಪರ್ವತದ ಹತ್ತಿರಕ್ಕೆ ಬಂದರು (ವಚಭಾ. ೭೮). **ಕಾಳಕೂಟ**: ೧. ಅಗಲ್ಕೆ ಮುಳಿಸಂಬೆರಡುಂಗಡ ಕಾಳಕೂಟಮಾಗಮರ್ದಿನ ಕಾಳಕೂಟದೊಡವುಟ್ಟಿದಳೆಂದಪೆನೆನ್ನ ನಲ್ಲಳಂ (ಆದಿಪು. ೧೨-೨೮); ಶಂಕಿತಂಗೆ ಪ್ರಸಾದ ಸಿಂಗಿ ಕಾಳಕೂಟ ವಿಷವು (ಬಸವ. ೭೭೧); ಕಾಳಕೂಟದ ತೊಱೆಗಳಲಿ ಜಲಕೇಳಯೇ (ಕುವ್ಯಾಸ. ೧೪-೩೮). [ಸಂ.]

**ಕಾಲಕೂಟಗ್ರೀವ** (ನಾ). ಕಾಲಕೂಟ ವಿಷವನ್ನು ಕಂಠದಲ್ಲಿ ಧರಿಸಿದವನು; ಶಿವ: ಕಾಲಕೂಟಗ್ರೀವ ಹರಿಕಂಕಾಳಧರ . . . ಹರ ನಿಮ್ಮನೆಲ್ಲಾ ಕಾಲದೊಳು ಕೀರ್ತಿಸುವೆನು (ಬಸವು. ೬೧-೫೨). [ಸಂ. (ಕಾಲಕೂಟ + ಗ್ರೀವಾ + –)]

**ಕಾಲಕ್ರಮಣ** (ನಾ). ೧. ಕಾಲದ ಚಲನೆ, —ಗತಿ. ೨. ಕಾಲಕಳೆಯುವುದು; ಸಮಯವನ್ನು ಕಳೆಯುವುದು; ಕಾಲಯಾಪನೆ: "ಈರ – ಕ್ಷೇಪೇ ಕಾಲಕ್ರಮಣದೊಳ್" (ಕಾಶಕ್ಕ. ೨೯೪). [ಕಾಲ + ಕ್ರಮಣ]

**ಕಾಲಕ್ರಮಣೆ** (ನಾ). = ೧. ಸಮಯವನ್ನು ಕಳೆಯುವುದು. ೨. ಜೀವನ ಸಾಗಿಸುವುದು: ಗುಣವಂತನಾಗಿ ನೀನು ಕಾಲಕ್ರಮಣೆಮಾಡು ಅನುದಿನದಲ್ಲಿ ಹರಿಸೇವೆಗೆ ವಿಮುಖನಾಗದೆ (ಜಗದಾ. ೫೪). [ಸಂ. ಕಾಲಕ್ರಮಣ]

**ಕಾಲಕ್ರಮೇಣ** (ಅ). ದಿನಕಳೆದಂತೆ; ಕಾಲಸರಿದಂತೆ; ನಿಧಾನವಾಗಿ: ಕಾಲಕ್ರಮೇಣ . . . ಹಾಲುಹಣ್ಣುಗಳನ್ನು ಆಹಾರದಲ್ಲಿ ಉಪಯೋಗಿಸಲು ಪ್ರಾರಂಭಮಾಡಿದರು (ಗೃಹವಿ. ೩). [ಸಂ.]

**ಕಾಲಕ್ರಿಯಾಮಾನ** (ನಾ). [ಸಂಗೀತ] ಕಾಲದ ಕ್ರಿಯೆಯ ಅಳತೆ; (ನಾಟ್ಯಾದಿಗಳ) ಕಾಲಪರಿಮಿತಿ; ಲಯದ ಒಂದು ಪ್ರಮಾಣ; ತಾಳ: "ಕಾಲಕ್ರಿಯಾ ಪ್ರಮಾಣಂ ತಾಳಮೆಂಬುದು" (ಹಲಾಯು. ೧೭-೯೪). [ಕಾಲ + ಕ್ರಿಯಾ + ಮಾನ]

**ಕಾಲಕ್ಷೇಪ** (ನಾ). ೧. ತಡಮಾಡುವುದು; ವಿಳಂಬಮಾಡುವುದು: ಕಾಲಕ್ಷೇಪಮಂ ಮಾಡಿ ನೀನಿರೆ ದೈತ್ಯೇಂದ್ರನಪಾಯಮಂ ನಿನಗೆ ಮಾಱ್ಕುಂ (ಪಂರಾಮಾ. ೧೧-೧೧೦); ಆಕೆವಾಳರು ವಿಗಡ ವೀರಾನೀಕವಿದೆ ತಲ್ಲಣದ ತಗಹಿನಲೇಕೆ ಕಾಲಕ್ಷೇಪವೆಂದನು ಕೌರವರ ರಾಯ (ಕುವ್ಯಾದ್ರೋ. ೧೭-೨೩). ೨. ಕಾಲಕಳೆಯುವುದು; ಕಾಲಹರಣ: ವೈಷ್ಣವಿಯು ದೇವಿಕಾಮಾತೆಯೊಡನೆಯೂ ಶ್ರೀದೇವಿಯೊಡನೆಯೂ ಕಾಲಕ್ಷೇಪ ಮಾಡುತ್ತಾ ಕೃಷ್ಣಪ್ಪನಾಯಕನ ನಿರೀಕ್ಷಣೆಯಲ್ಲಿದ್ದಳು (ಶ್ರೀರಾಯ. ೧೦೮). ೩. ಹರಿಕಥೆ; ಭಗವತ್ಕಥೆ: ಆ ಅರವತ್ತಮೂರು ಸಂತರ ಬಗ್ಗೆ ಕಾಲಕ್ಷೇಪಮಾಡುವಾಗ . . . ಈ ಹಾಡುಗಳನ್ನು ಉಪಯೋಗಿಸಿಕೊಂಡಿದ್ದಾರೆ (ಸಂಗೀತ. ೮೯). [ಕಾಲ + ಕ್ಷೇಪ]

**ಕಾಲಕ್ಷೇಪಿ** (ನಾ). ಕಾಲಕ್ಷೇಪವನ್ನು ಮಾಡುವವನು; ಕಾಲಕಳೆಯುವವನು: "ಈರಃ – ಕಾಲಕ್ಷೇಪಿ" (ಕಾಶಕ್ಕ. ೨೯೪). [ಸಂ. ಕಾಲಕ್ಷೇಪಿನ್]

**ಕಾಲಖಂಡ** (ನಾ). ೧. ಪಿತ್ತಕೋಶ; ಯಕೃತ್ತು: ಕಾಲಕ[ಖ]ಂಡಂ ಯಕೃನ್ಮತಂ" (ಹಲಾಯು. ೧೦೪-೧೩); "ಕರ್ಕಂಡಮುಂಘ್ರುಫಲಮನೆ ಕಾಲಖಂಡಮೆನಿಸಿಕ್ಕು" (ಮಂಗರಾ. ೧೧೪-೭). ೨. ಕಾಲದ ವಿಭಾಗ: ಯೂರೋಪಖಂಡದ ಇತಿಹಾಸದಲ್ಲಿ ಮಧ್ಯಯುಗದ ಕಾಲಖಂಡವನ್ನು ಅಂಧಕಾರಯುಗವೆಂದು ಕರೆಯುವರು (ಪ್ರಬಂಧ. ೬೮); ಇಂದಿನೀ ಉಪನ್ಯಾಸದಲ್ಲಿ ಹಲವು ದಶಕಗಳ ಕಾಲಖಂಡವನ್ನು ವ್ಯಾಪಿಸಬೇಕಾಗಿದೆ (ಮಸಾಹಿ. ೧೩). [ಕಾಲ + ಖಂಡ]

**ಕಾಲಗಣನ**, (ನಾ). ಕಾಲವನ್ನು ಎಣಿಸುವಿಕೆ; ಅಳೆಯುವಿಕೆ; ಕಾಲಮಾಪನ. 'ಕಾಲಗಣನ ವಿದ್ಯೆ' ಪರಾ. [ಕಾಲ + ಗಣನ]

**ಕಾಲಗಣನವಿದ್ಯೆ** (ನಾ). ಕಾಲ ವಿಭಾಗಗಳನ್ನು ಎಣಿಸಿ, ಗುಣಿಸಿ ನೋಡುವ ವಿದ್ಯೆ; ಜ್ಯೋತಿಶ್ಶಾಸ್ತ್ರ; ಜ್ಯೋತಿಷ. [ಕಾಲಗಣನ + ವಿದ್ಯೆ]

**ಕಾಲಗಣನಶಾಸ್ತ್ರ** (ನಾ). ನಡೆದ ಘಟನೆಗಳನ್ನು ಕಾಲಾನುಕ್ರಮವಾಗಿ ನಿರ್ದೇಶಿಸುವ ಕ್ರಮ: ಕಾಲಗಣನಶಾಸ್ತ್ರ; ಆಯಾ ಘಟನೆಯ ಕಾಲವನ್ನು ನಿರ್ದೇಶಿಸಿ ತೋರಿಸುವ ಕ್ರಮ; ಇದನ್ನು ತೋರಿಸುವ ಪಟ್ಟಿ; ಗ್ರಂಥ; ಘಟನಕಾಲಸೂಚಿ" (Chronology. ಇಂಕನಿ). [ಕಾಲಗಣನ + ಶಾಸ್ತ್ರ]

**ಕಾಲಗಣನೆ** (ನಾ). = ಕಾಲಗಣನ: ಈ ರೀತಿ ಕಾಲಗಣನೆ ಮಾಡುವ ಪದ್ಧತಿಯು ಕ್ರಿ. ಶ. ೫ನೆಯ ಶತಮಾನದ ಮೊದಲಿನಲ್ಲಿದ್ದಿತೆಂದು . . . ಪಂಡಿತರು ಅಭಿಪ್ರಾಯಪಡುತ್ತಾರೆ (ಕರ್ನಾಅ. ೮). [ಸಂ. ಕಾಲಗಣನಾ]

**ಕಾಲಗಣಿಕೆ** (ನಾ). ಕಾಲಿನ ಮೂಳೆ: ನಾ ಆಗಿದ್ದರೆ ಅವನಕಾಲಗಣಿಕೇನ ಮುರಿದು ಬಿಡುತ್ತಿದ್ದೆ (ರಂಗರೋ. ೩೧). [< ಕಾಲ್$_1$ + ಗಣಿಕೆ$_1$]

**ಕಾಲಗತಿ** (ನಾ). ೧. ಕಾಲಕಳೆದುಹೋಗುವುದು; ಸಮಯ ತೀರುವಿಕೆ: ಕಾಯವಿದು ನೆಲೆಯಲ್ಲ ಸಿರಿತಾ ಮಾಯರೂಪಿನ ಮೃತ್ಯುದೇವತೆ ಬಾಯ ಬಿಡುತಿಹಳಾವುದೀತನ ಕಾಲಗತಿಯೆಂದು (ಕುವ್ಯಾಉ. ೪-೧೧). ೨. ಮುಂದೆ ಒದಗತಕ್ಕ ಸ್ಥಿತಿ; ದೈವಗತಿ: ಸಹಜ ಪುರುಷರಿಹ ಯೇಕಾಂತ ಸಜ್ಜನನೆಗೆ ಕಾಲಿಡಲ್ಕಂಜುವಂ ಕಾಲಗತಿಯೆಂತಹುದೊ . . . ಪೋದೊಡೇನಪ್ಪುದೊ (ನವಮೋ. ೯-೨೪). [ಕಾಲ + ಗತಿ]

**ಕಾಲಗತ್ತಲೆ,** ಕಾಳಕತ್ತಲೆ, ಕಾಳಗತ್ತಲು, ಕಾಳಗತ್ತಲೆ (ನಾ). ದಟ್ಟವಾದ ಕತ್ತಲೆ; ಕಗ್ಗತ್ತಲೆ: (*). **ಕಾಳಕತ್ತಲೆ :** ಕೇಳಿಲ್ಲ ಕಂಡಿಲ್ಲ ಇಂಥ ಪುರುಷನ ಎಂದೂ ಕಾಳಕತ್ತಲೆಯಲ್ಲ ನೋಡ (ಜಗದಾ. ೧೪೩). **ಕಾಳಗತ್ತಲು :** ಸೂಜಿಮುಖಮಂ ಕೀಲಿಸುವೊಡರಿದೆನಿಸಿದಗ್ಗದ ಕಾಳಗತ್ತಲೊಳು [ಪಾಠಾಂ. ಸಿದುಱಿ ಕತ್ತಲೆಯ] ಮೊತ್ತದೊಳು (ಬಸವು. ೩೧-೪). **ಕಾಳಗತ್ತಲೆ :** ಬರಪಾರದೆ ದೂದವಿಯರ ಹರಿಸದೆ ಮಱಿ ಮುಂಜು ಕಾಳಗತ್ತಲೆಯೊಂದೋಸರಿಸಿದೆ(ಕಾದಂಉ.೩೧೮); ಸರಳ ಮಂಡಲ ಕಾಳಗತ್ತಲೆ ಕವಿಯಿತ್ತು (ಅವಚಂ. ೧೧೧-೫೦೪) ; ಕಾಳಗತ್ತಲೆಯೊಳಗೆ ಸೂರ್ಯನವೋಲು ಮೈದೋಱಿದೆಯಲಾ (ನಿಘಾ ಗ. ೩-೧೨-೩) ; ಮಳೆಯಿಂದ ಕಾಳಗತ್ತಲೆ ಹೆಚ್ಚಿತಾಗ (ಭರಚ. ೩೪-೬೮).
[ಕಾಲ + ಕತ್ತಲೆ (< ಕಟ್ಟಲೆ)]

**ಕಾಲಗರ್ಭ** (ನಾ). ಕಾಲದ ಬಸಿರು : ಅವರಹೆಸರು ಕಾಲಗರ್ಭದಿಂದ ಇನ್ನೂ ಮೊಳಗಿ ಕೇಳಿ ಬರ್‍ತಾ ಇದೆ (ವೀರಯೋ. ೧೭).
[ಕಾಲ + ಗರ್ಭ]

**ಕಾಲಗುಣ**$_1$ 'ಕಾಲ್ಗುಣ' ನೋ.

**ಕಾಲಗುಣ**$_2$ (ನಾ). ಕಾಲದ ಮಹಿಮೆ : ಹೊಲತಿಯರು ಬಂದಾವು ಸತಿಯರಾದಪ್ಪೆವೆಂಬುಲಿಹವೆಂಬುದು ಬಂದ ಕಾಲಗುಣವೋ ನಿಂದ ನೆಲದ ಗುಣವೋ (ಹಜಕಾ. ೭-೧೬). [ಕಾಲ + ಗುಣ]

**ಕಾಲಗೆಜ್ಜೆ** (ನಾ). ಕಾಲಿಗೆ ಕಟ್ಟಿಕೊಳ್ಳುವ ಗೆಜ್ಜೆ : ನಾಟ್ಯವಧುಗಳ ಕಾಲಗೆಜ್ಜೆಯ ರವಗತಿಮಾಡಿ ಶ್ರುತಿಗೆ ವಿಶಾಲದ ಸೊಗಸ ಬೀಱುದುವು (ಕಂಸವಿ. ೮-೫೯). [ಕಾಲ್$_1$ + ಗೆಜ್ಜೆ]

**ಕಾಲಘ್ನ** (ನಾ). = ಕಾಲಕಾಲ : ಆದ್ಯಂತಶೂನ್ಯಂ ಕಾಲಘ್ನಂ ಕಾಲರೂಪಂ (ರಕ್ಷಾಶ. ೮೭). [ಸಂ.]

**ಕಾಲಚಕ್ರ** (ನಾ). ೧. ಚಕ್ರದಂತೆ ಉರುಳುತ್ತಿರುವ ಕಾಲ; ಗತಿಶೀಲವಾದ ಕಾಲ : ಕಾಲಪಿಂಡಗಳೆಲ್ಲವೂ ಶಿವನ ನಿಲುಕಡೆಯನಱಿಯವೆ ಕಾಲಚಕ್ರದೊಳಗಾದುವೆಲ್ಲವೂ (ಬಸವ. ೮೭೯); ಕಾಲಚಕ್ರಂ ಪೊರಳೆ ಮುಚ್ಚಿದುದು ಬೆಳಕಕ್ಕುಂ ಇರ್ದುದಿಲ್ಲಕ್ಕುಂ (ಅಶ್ವತ್ಥಾ. ೫೧೬). ೨. (ಅಲಂ) ಸಾವು; ಮರಣ; ನಾಶ: ಆವಂಗೆ ಕಾಲಚಕ್ರ ಮನೋವದೆ ಮಾಡಲ್ಕೆ ಚಕ್ರಮಿದು ಬಗೆದುದೊ . . . ಅವನ ಬಲಮುನಿಂ ಸುಟ್ಟಪುದೋ (ಆದಿಪು. ೧೪-೫). ೩. ಒಂದು ಮತದ ಹೆಸರು : ಅತಿಶನೆಂಬ ಭಿಕ್ಷು, ೧೦೩೪ ರಲ್ಲಿ ಟಿಬೆಟ್‌ಗೆ ಬಂದು ಅಲ್ಲಿ 'ಕಾಲಚಕ್ರ'ವೆಂಬ ಮತವನ್ನು ಪ್ರಚಾರಮಾಡಿ ೧೦೫೩ ರಲ್ಲಿ . . . ತೀರಿಕೊಂಡ (ಭಾರದ. ೩೪೭). [ಕಾಲ + ಚಕ್ರ]

**ಕಾಲಜ** (ಗು). ಕಾಲದಿಂದ ಬಂದ; ವಯಸ್ಸಿನ ಮೂಲಕ ಉಂಟಾದ: ಕಾಯಬಲವು ಸಹಜವೆಂದೂ, ಕಾಲಜವೆಂದೂ, ಯುಕ್ತಿಕೃತವೆಂದೂ ಮೂರು ತೆರನಾಗಿರುವುದು . . . ಯೌವನದಲ್ಲಿ ಉಂಟಾದ ಬಲವು ಕಾಲಜವೆನಿಸಿಕೊಂಬುದು (ಸಕವೈ. ೧೯). [ಸಂ.]

**ಕಾಲಜಿತು** (ನಾ). ೧. ಯಮನನ್ನು ಗೆದ್ದವನು ; ಮೃತ್ಯುಂಜಯ; ಶಿವ. ೨. ಶ್ರೀರಾಮನ ಒಬ್ಬ ಸೇನಾನಿ : ಕೈವೀಸಿದಂ ಕಾಲಜಿನ್ಮುಖ್ಯ ಸೇನಾನಿಗಳ್ಗೆ (ಜೈಮಿಭಾ. ೨೦-೩೮). ೩. ಕಾಲಜಿತುವೆಂಬ ದಳಪತಿಸಹಿತ ಸುಮಿತ್ರಾತ್ಮಜಂ ನಗರಮಂ ಪೊಱಮಟ್ಟು (ಜೈಮಿಭಾ. ೨೦-೩೬).
[< ಸಂ. ಕಾಲಜಿತ್]

**ಕಾಲಜ್ಞ** (ನಾ). ೧. ಯಾವುದಾದರೂ ಕೆಲಸವನ್ನು ಮಾಡಲು ತಕ್ಕ ಕಾಲವನ್ನು ಬಲ್ಲವನು; ಕಾಲವನ್ನು ತಿಳಿದವನು. ೨. ಋತುಮಾನಗಳನ್ನು ಸರಿಯಾಗಿ ತಿಳಿದವನು ; ಜ್ಯೋತಿಷಿ. ೩. ಕೋಳಿ. [ಸಂ.]

**ಕಾಲಜ್ಞಾನ** (ನಾ). ೧. ಮುಂದೆ ಆಗುವುದನ್ನೆಲ್ಲ ತಿಳಿಯುವಿಕೆ; ಭವಿಷ್ಯಜ್ಞಾನ: ಸಕಲ ವಿಧದಿಂದೀವ ಜೀವರಿಗಱಿಯೆ ಕಾಲಜ್ಞಾನ ಹೇಳಿಂದ (ಜ್ಞಾನಸಿಂ. ೩೨-೧೦೧). ೨. ಭವಿಷ್ಯ ನಿರೂಪಣೆ; ಭವಿಷ್ಯ ಕಥನ: 'ದಿಮ್ಮಿಸಲೆನ್ನಿರೊ' ಎಂಬ ಪಲ್ಲವಿಯನ್ನು ಕರಸ್ಥಲದ ನಾಗಲಿಂಗಯ್ಯನು ತನ್ನ ಕಾಲಜ್ಞಾನದಲ್ಲಿ ಸಾರಲು ಬಳಸಿದ್ದಾನೆ (ಕನ್ನಜಾ. ೯೪). ೩. ವಾತುಲಾಗಮದ ಹನ್ನೆರಡು ಭೇದಗಳಲ್ಲಿ ಒಂದು: ವಾತೂಲ ಉತ್ತರವಾತೂಲ ಕಾಲಜ್ಞಾನ ಪರಾಜಿತ. . .ವಿಶ್ವಾತ್ಮಕಾಗಮವೆಂದು ವಾತೂಲಾಗಮದ ದ್ವಾದಶ ಭೇದಂಗಳು (ವಿವೇಕ. ೭೨).
[ಕಾಲ$_1$ + ಜ್ಞಾನ]

**ಕಾಲಜ್ಞಾನಿ** (ನಾ). ೧. ಕಾಲಜ್ಞಾನವುಳ್ಳವನು : ಇದಕ್ಕೆಲ್ಲಾ ಕಾರಣಗಳನ್ನೂ ಅರಿಯುವ ಕಾಲಜ್ಞಾನಿಗಳು ನಾವಲ್ಲ (ಭಾರದ. ೪೮೩). ೨. ಶಿವ : (*). [ಸಂ. ಕಾಲಜ್ಞಾನಿನ್]

**ಕಾಲಟ್ಟೆ** (ನಾ). ಕಾಲುಮಣೆ ; ಚಿಕ್ಕಗಡಗಂಚಿ (ಉಕ) : "ಕಾಲಟ್ಟೆ, ನಿಲುಚೌಕಟ್ಟು" (Flake. ೩೦೫ನಿ). [ಕಾಲ್$_1$ + ಅಟ್ಟ$_{1}$]

**ಕಾಲಡಿ**$_1$ (ನಾ). ೧. ಕಾಲಿನ ಅಡಿ ; ಪಾದ : ಇವರ ಕಾಲಡಿಗಳನೆಮ್ಮ ತಲೆಗಳೆಂಬ ತಾಮರೆಯ ಪೂಗಳಿಂದರ್ಚಿಸಿದೊಡಲ್ಲದೆ ಪಾಪಂ ಪಿಂಗದು (ವಡ್ಡಾರಾ. ೯೯-೧೭) ; ಪುರ್ವಳ್ಪಿ ಪಲ್‌ಕೆಕ್ಕೆ ಕಾಲಡಿಯೆಂದಿಂತಿವನುರ್ಚಿ ಪೋದುವಿಸೆ ತತ್‌ಸೌಜನ್ಯಕಂದಾಂಕುರಂ (ಶಾಂತಿಪು. ೪-೧೭) ; ಕಾಲಡಿಗಳ್ ಕೆಡಿಯಾಗೆ (ಕಬ್ಬಿಕಾ. ೨೭೩). ೨. ಕಾಲ ಕೆಳಗು : ಕುದುರೆ ತನ್ನ ಕಾಲಡಿಯ ಹುಲ್ಲನೆಲ್ಲ . . . ಮುಗಿಸಿದ ನಂತರ (ಪುನರು. ೨೪೯). ೩. ಒಂದು ಅಳತೆ : ಪೊಱಂಟನ ಮಲ್ಲನ ಕೋಲ ಮತ್ತರು ತೋಟ ಕಾಲಡಿಮತ್ತರು (ಎಇ. XIII, ೩೩೭-೯ ; 1173).
[ಕಾಲ್$_1$ + ಅಡಿ$_1$]

**ಕಾಲಡಿ**$_2$ (ನಾ). ಒಂದು ಊರಿನ ಹೆಸರು (?) : ಸ್ವಸ್ತಿಶ್ರೀ ಕಾಲಡಿಯ ಮಂಗಲದ ತುಱಿಕ್ಕೊಳ್ ಉದ್ಧತ್ತೋನ್ ಆಪದಿಂಬರೆ (ಮೈಆರಿ. ೧೯೨೭, ೮೫-೧ ; ?). [?]

**ಕಾಲತಂತ್ರ** (ನಾ). ಕಿರಣಾಗಮದ ಒಂಬತ್ತುಪ್ರಕಾರಗಳಲ್ಲಿ ಒಂದು: ಗರುಡಾಗಮ . . . ಕಾಲತಂತ್ರವೆಂದು ಕಿರಣಾಗಮದ ನವಭೇದಂಗಳು (ವಿವೇಕ. ೭೨). [ಕಾಲ + ತಂತ್ರ]

**ಕಾಲತಳೆ** (ನಾ). ಅಂಗಾಲು : ಕಾಲತಳಂ ತಣ್ಪಾಗಿರೆ ಸರುಜಂ (ಕಲ್ಯಾಕಾ. ೨-೨), [< ಕಾಲ್$_1$ + ತಳ (= ತಲ)]

**ಕಾಲತ್ರಯ** (ನಾ). ೧. ಭೂತ, ಭವಿಷ್ಯತ್ ಮತ್ತು ವರ್ತಮಾನವೆಂಬ ಮೂರು ಕಾಲ : ಅಪಗತಕಾಲತ್ರಯನನಾಪ್ತಗುಪ್ತಿತ್ರಯಂ (ಪುಷ್ಪಪು. ೧೪-೧೫). ೨. ಬೆಳಗು, ಮಧ್ಯಾಹ್ನ ಮತ್ತು ಸಾಯಂಕಾಲವೆಂಬ ಮೂರು ಹೊತ್ತು : ಕಾಲತ್ರಯ ಋತುಷಟ್ಕೋಚಿತಂಗಳಪ್ಪ ಫಲಪ್ರಸವಂಗಳೇಕಸಮಯ ಪ್ರಸವಮೆಂತಾದುದೆಂದು ವಿಸ್ಮಯಂಬಟ್ಟು (ಚಂದ್ರಪು. ೨-೭೮) ; ಕಾಲತ್ರಯಜಪಾನುಷ್ಠಾನಹೋಮದಲಿ ಪರಮ ಋಷಿಮಧ್ಯದಲಿ ನೀನಾಚರಿಸುವುದು (ಕುವ್ಯಾಕ. ೧೧-೭೦).
[ಕಾಲ + ತ್ರಯ]

**ಕಾಲತ್ರಯಪರಿಣಾಮಿ** (ಗು). ೧. (ಭೂತ, ಭವಿಷ್ಯತ್ ಮತ್ತು ವರ್ತಮಾನವೆಂಬ) ಮೂರುಕಾಲಗಳಲ್ಲಿಯೂ ಸೇರಿಕೊಳ್ಳುವ ; ಮೂರುಕಾಲಗಳನ್ನೂ ಹೇಳುವ: ಪರಿಭಾವಿಸೆ ಕಾಲತ್ರಯ ಪರಿಣಾಮಿಗಳೆನಿಸಿ ನೆಗೞ್ದ ಮೂಱುಂ ಕ್ರಿಯೆಯೊಳ್ ನಿರುತಂ ಪ್ರತಿಷೇಧಕ್ರಿಯೆ ಬರೆ ಭೂತಾರ್ಥದೊಳೆ ಸಲ್ವುದೆಂಬರ್ ಪಿರಿಯರ್ (ಶಮದ. ೨೨೨). ೨. ಮೂರು ಕಾಲಗಳಲ್ಲಿಯೂ ಬದಲಾವಣೆ ಹೊಂದುವ.
[ಕಾಲತ್ರಯ + ಪರಿಣಾಮಿ]

**ಕಾಲತ್ರಯವೇದಿ** (ನಾ). ಭೂತ, ಭವಿಷ್ಯತ್ ಹಾಗೂ ವರ್ತಮಾನವೆಂಬ ಮೂರು ಕಾಲಗಳನ್ನೂ ತಿಳಿದವನು; ತ್ರಿಕಾಲಜ್ಞಾನಿ: ಕಾಲತ್ರಯವೇದಿ . . . ಪುರಾಣಂಗಳಂ ಬೆಸಸೆ (ಚಾವುಂಪು. ೧೦–೧೧); ಈತಂ ಮುನ್ನಿನ ಭವದೊಳ್ ನೀತಿಯನುೞಿದು . . . ಈ ತೆಱದಿಂ ಕರ್ಮ ಕರ್ಮಫಲಮನುಂಡಪನಲ್ತೇ ಎಂದು ಕಾಲತ್ರಯವೇದಿಗಳ್ನುಡಿಯೆ (ಕಾದಂಪೂ. ೨೬೫); ವೇದವಿದಂ ಕಾಲತ್ರಯವೇದಿ ಬಹುಶ್ರುತಂ . . . ಪುರೋಹಿತನಕ್ಕುಂ (ಶಮದ. ೧೦೫ ಪ್ರಯೋ).

[ಸಂ. ಕಾಲತ್ರಯವೇದಿನ್]

**ಕಾಲದಂಡ,** ಕಾಳದಂಡ (ನಾ). ೧. ಯಮರಾಜನ ದಂಡಾಯುಧ: ಕಾಲದಂಡ ಪ್ರಚಂಡಮಪ್ಪ ತನ್ನ ಗದಾದಂಡಮಂ ಭುಜಾದಂಡದೊಳಳವಡಿಸಿ ಕೊಂಡು (ಗದಾಯು. ೩–೪೯ ವ); ಅಡಸುವ ಕಾಲದಂಡಮೆರೆಗೊಳ್ಳಸಿತೋರಗನೆಂಬ ಶಂಕೆನೂರ್ಮಡಿಸಿರೆ . . . ಕಯ್ನುಡಗಲ್ಕೆ ನೀಡಿ (ಕಾದಂಪೂ. ೧೮೪); ಕಾಲದಂಡದ ರೌದ್ರ ದಂಡ ಕರಾಳ ರಥ ಸೀಮಾಗ್ರ ದಂಡ ವಿಶಾಲ ವಿಮಲ ಬ್ರಹ್ಮದಂಡದ ಸಾಲು ಚೆಲುವಾಯ್ತು (ಕುವ್ಯಾಕ. ೭–೭). ೨. (ಆಲಂ). (ಯಮನ ದಂಡದಂತೆ) ನಾಶವನ್ನುಂಟು ಮಾಡುವವನು; ಮಾರಕ: ತತ್ತ ಅರಿಗಳ ಕಾಲದಂಡನು ಮಿತ್ತು ಮಾರಿಯ ಮರಣದೇವತೆಯೆತ್ತಲಡಗಿದೆ (ಕೌಶಿರಾ. ೩೭–೧೦). **ಕಾಳದಂಡ:** ೨. ಅಭಿನವಮದನಂ ವಿಪಕ್ಷಕಾಳದಣ್ಡಂ ವೀರಮಾರ್ತಣ್ಡಂ (ಎಕ. XI, ಚಿತ್ರದು. ೪೭–೭; 1067).

[ಕಾಲ + ದಂಡ]

**ಕಾಲದಂಷ್ಟ್ರ** (ನಾ). ಮೃತ್ಯುದೇವತೆಯ ದಾಡೆ, —ಕೋರೆಹಲ್ಲು: ಸ್ಥೂಲ ಸೂಕ್ಷ್ಮ ವಿವೇಕರಹಿತೇಷ್ಟಬಂಧುಜನ ಕಾಲದಂಷ್ಟ್ರಕೆ ನಿನ್ನ ಮೃದುಗೊಳಿಪ ಭಟರು (ಮಂಕುಕ. ೬೩೦). [ಕಾಲ + ದಂಷ್ಟ್ರ]

**ಕಾಲದರ್ಶಕ** (ನಾ). ಅತಿ ಸೂಕ್ಷ್ಮ ಕಾಲವನ್ನು ಅಳೆಯುವ ಯಂತ್ರ ಸಾಧನ: "(ಬಹಳ ಸೂಕ್ಷ್ಮ ಕಾಲಪರಿಮಾಣವನ್ನು ಅಳೆಯುವಂತೆ ರಚಿಸಿರುವ) ಕಾಲದರ್ಶಕ (Chronoscope. ಇಂಕನಿ).

[ಕಾಲ + ದರ್ಶಕ]

**ಕಾಲದರ್ಶಿ** (ನಾ). ತ್ರಿಕಾಲ ಜ್ಞಾನಿಯಾದವನು; ಮುನಿ: "ಮುನಿ ಕಾಲದರ್ಶಿ ವಾಚಂಯಮಂ ಋಷಿನಾಮಮೆನಿಕು" (ಮಂಗರಾ. ೭೬–೧೦). [ಸಂ. ಕಾಲದರ್ಶಿನ್]

**ಕಾಲದಲನ** (ನಾ). ಯಮನನ್ನು ಸೀಳುವಿಕೆ; ಶಿವನ ಒಂದು ಲೀಲೆ: ದಕ್ಷಾಧ್ವರಂ ಕಾಲದಲನ [ಪಾಠಾಂ. ಕಾಮದಹನ] ವಿಷಹರಣ . . . ಕಾಳಿಕಾಕಾಂಡದೊಳಗಾದ ಶಂಕರಲೀಲೆಗಳನು ಹಲವಿತಿಹಾಸ ಕಥನಮಂ ಪೇಳ್ವೆನೀ ಕಾವ್ಯದೊಳಗೆ (ಹಚಕಾ. ೧–೩೦). [ಕಾಲ + ದಲನ]

**ಕಾಲದಿ** (ನಾ). ಒಂದು ಊರಿನ ಹೆಸರು: ಕಾಲದಿಯ ನಾಯಿಮ್ಮರಸಂಗೆ ಶಾಸನಮಂ ತೋಱಿ ಪಡೆದ ಭೂಮಿಯೊಳಗೆ (ಇಅ. XVIII, ೩೯–೨೨; 999). [?]

**ಕಾಲದೂತ** (ನಾ). ಯಮನ ಆಳು; ಯಮದೂತ: ಕಾಲವಶದಲಿ ಕೌಶಿಕನನಾ ಕಾಲದೂತರು ತಂದರಾತನ ಮೇಲುಪೋಗಿನ ಸುಕೃತ ದುಷ್ಕೃತವನು ವಿಚಾರಿಸಲು (ಕುವ್ಯಾಕ. ೧೭–೧೬). [ಕಾಲ + ದೂತ]

**ಕಾಲದ್ದು** 'ಕಾಲಟ್ಟು' ನೋ.

**ಕಾಲದ್ರವ್ಯ** (ನಾ). [ಜೈನ] ಆರು ದ್ರವ್ಯಗಳಲ್ಲಿ ಒಂದು: ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಮೆಂಬ ಷಡ್ದ್ರವ್ಯಂಗಳ ಗುಣ ಪರ್ಯಾಯಮುಮಂ (ಸುಕುಮಾ. ೩–೩೯ ವ); ಆಕಾಶದ್ರವ್ಯದ ಪರಿವರ್ತನೆಗೆ ಈ ಕಾಲದ ಕಾಲದ್ರವ್ಯಮೆ ನಿಮಿತ್ತಮೆಂದಱಿವುದು (ಶಾಸ್ತ್ರಟೀ. ೧೧೧–೧). [ಕಾಲ + ದ್ರವ್ಯ]

**ಕಾಲಧರ್ಮ** (ನಾ). ೧. ಕಾಲಕ್ಕೆ ಅನುಗುಣವಾದ ನಡವಳಿಕೆ: ಕಾಲಧರ್ಮ, ದೇಶಧರ್ಮ ಇತ್ಯಾದಿಗಳಲ್ಲಿ ಕಾಲದೇಶಗಳಿಗುಚಿತವಾದ ನಡೆನುಡಿಗಳೆಂದರ್ಥವು (ಆರ್ಯಧ. ೧೧). ೨. ವಸಂತ ಮೊದಲಾದ ಋತುಗಳ ಸ್ವಭಾವ. ೩. ಮರಣ; ಮೃತ್ಯು: ಪಲಗಾಲಂಬರೆಗಂ ಜೀವಿಸಿರ್ದುಂ ಕಡೆಯೊಳೊಂದು ದಿನಂ ಕಾಲಧರ್ಮಮಂ ಕಾಣಲಿರ್ಪವಸರದೊಳ್ (ರಾಮಾಶ್ವ. ೭೯–೧೬); ರಾಮನು ಕಾಡಿಗೆ ಹೋಗಲು ದಶರಥನು ಕಾಲಧರ್ಮವನ್ನೈದಿದನು (ವಚಭಾ. ೪೦೫).

[ಕಾಲ + ಧರ್ಮ]

**ಕಾಲನಿ,** ಕಾಲೋನಿ (ನಾ). ವಸಾಹತು; ಮೊಹಲ್ಲಾ; ಕೇರಿ: ಇಲ್ಲಿ ಬಡವರ ಕಾಲನಿ (Colony) ಮಾಡಬೇಕು (ದೇಜ್ಯೋತಿ. ೧೬). **ಕಾಲೋನಿ:** ನರಸಿಂಹರಾಜ ಕಾಲೋನಿ (ರೂಢಿ).

[← ಇಂ. Colony].

**ಕಾಲನಿಷ್ಠೆ** (ನಾ). ಗೊತ್ತುಪಡಿಸಿದ ಕಾಲವನ್ನು ಕಟ್ಟುನಿಟ್ಟಾಗಿ ಪಾಲಿಸುವಿಕೆ; ಸಮಯನಿಷ್ಠೆ: ಸಂಧ್ಯಾವಂದನೆಯ ಬಗ್ಗೆಯೂ ಅಷ್ಟೇ ಕಾಲನಿಷ್ಠೆಯನ್ನುಳ್ಳವರಾಗಿದ್ದರು (ಸಂಗೀತ. ೧೧). [ಕಾಲ + ನಿಷ್ಠೆ]

**ಕಾಲಪಂಚಮ** (ನಾ). [ಜೈನ] ಐದನೆಯಕಾಲ: ಕಾಲಪಂಚಮಕೀ ವಿಧಿಯು ನೆರೆಯೊತ್ತಿ ಬಂದಿಹುದಾವಪರಿಯೊಳು ಪೀಡಿಸದೆ ಬಿಡದೆನಲು (ಬಿಜ್ಜಪು. ೧೧೧–೯೩). [ಕಾಲ + ಪಂಚಮ]

**ಕಾಲಪಥ** (ನಾ). ಕಾಲದ ಮಾರ್ಗ; ಕಾಲಗತಿ: ಕಾಲಪಥದಲ್ಲಿ ನನ್ನ ಪ್ರೇಯಸಿಯ ಮರಣವು ನೆಟ್ಟ ಮೇರೆಗಲ್ಲನ್ನು ದಾಟಿ ನನ್ನ ಜೀವನದ ಎರಡನೆಯ ಪರ್ವವನ್ನು ಕುರಿತು ಬರೆಯಲು ಹೊರಟರೆ . . . ನಾನು ಬರೆಯುವುದು ಸತ್ಯವೋ ಭ್ರಮೆಯೋ ಎಂಬ ಸಂಶಯ ಬರುತ್ತದೆ (ಯೋಧಪು. ೪೭). [ಕಾಲ + ಪಥ]

**ಕಾಲಪರಿಚ್ಛೇದ** (ನಾ). ಕೆಲವು ಸಮಯ ಇದ್ದು ಆ ಮೇಲೆ ಇಲ್ಲದಾಗುವಿಕೆ: "ಒಂದು ಕಾಲದೊಳುಂಟೊಂದು ಕಾಲದಲ್ಲಿಲ್ಲವೆನಿಸಿಕೊಂಬುದೇ ಪರಿಚ್ಛೇದ ಮಕ್ಕುಂ (ವಿವೇಕ. ೨೩); ಕೆಲಕಾಲವಿದ್ದು ಕಾಲಾಂತರದಲ್ಲಿ ಇಲ್ಲದಿರುವಿಕೆ ಕಾಲಪರಿಚ್ಛೇದ (ಭಾರದ. ೨೩೩).

[ಕಾಲ + ಪರಿಚ್ಛೇದ]

**ಕಾಲಪರಿವರ್ತನ** (ನಾ). ೧. ಕಾಲದ ಬದಲಾವಣೆ. ೨. [ಜೈನ] ಉತ್ಸರ್ಪಿಣೀ, ಅವಸರ್ಪಿಣೀ ಕಾಲಗಳ ಎರಡು ಆವೃತ್ತಿಗಳಲ್ಲೂ ಆದಿಯಿಂದ ಕೊನೆತನಕ ಜನನ ಮರಣಗಳನ್ನನುಭವಿಸುವುದು: "ಪರಿವರ್ತಿಸುವುತ್ಸರ್ಪಿಣ್ಯವಸರ್ಪಿಣೀಕಾಲಂಗಳೊಳ್ ತದಾದಿ ಪ್ರವೇಶ ಸಮಯದೊಳ್ಪುಟ್ಟಿ, ಕಟ್ಟಿದಾಯುಷ್ಯದ ವಿರಾಮದೊಳ್ಸತ್ತು ನಾನಾ ಭ್ರಮಣದಿಂ ಬಂದು ಪೂರ್ವೋಕ್ತ ಸಮಯದ ತದ್ವಿತೀಯಾದಿ ಸಮಯದೊಳ್ ಪುಟ್ಟುತ್ತುಂ ಸಾವುತ್ತುಮೆರಡುಂ ಕಾಲಮುಮನೀಮಾರ್ಗದಿಂ ಸಮಯೋತ್ತರ ವೃದ್ಧಿಯಿಂ ಪರಿಸಮಾಪ್ತಮಾಗೆ ನೆಱಮೆಯ್ದಿಸುವುದು ಕಾಲಪರಿವರ್ತನಮೆಂಬುದು" (ಸುಕುಮಾ. ೯–೬ ವ).

[ಕಾಲ + ಪರಿವರ್ತನ]

**ಕಾಲಪಾಯಕ** (ನಾ). ಕಾಲ್ಬಳದ ಯೋಧ; ಪದಾತಿ: ಕಾಲಪೆಂಡೆಯ ತೋಳ ಭಾಪುರಿ . . . ಒಪ್ಪುವ ಸುರಿಗಿಯ ಬಿಲ್ಲ ಕಾಲಪಾಯಕರೊಪ್ಪುತಿಹರು (ಕಂನವಿ. ೧೮–೬೩). [ಕಾಲ್$_{1}$ + ಪಾಯಕ]

**ಕಾಲಪಾಶ** (ನಾ). (ಜೀವನನ್ನು ಕಟ್ಟಿ ತನ್ನ ಪಟ್ಟಣಕ್ಕೆ ಎಳೆದುಕೊಂಡು ಹೋಗಲು) ಯಮನು ಉಪಯೋಗಿಸುವ ಹಗ್ಗ; ಯಮಪಾಶ: ಕಾಲಪಾಶದಲೆಳಸಿಕೊಂಬ ಕರಾಲಮತಿ ಸುಡುಗಾಡಲ್ಲೈತಂದಾಲಯವ ಹೊಕ್ಕನು ಕೃತಾಂತನ ಬಾಯ ಹೊಗುವಂತೆ (ಕುವ್ಯಾವಿ. ೩–೮೨).

[ಕಾಲ + ಪಾಶ]

**ಕಾಲಪುರುಷ** (ನಾ). ೧. ಕಾಲಕ್ಕೆ ಅಧಿಪತಿಯಾದ ದೇವತೆ: ಕೊನೆಗೆ ಯಾವುದು ನಿಲ್ಲಬೇಕೆಂಬುದನ್ನು ಕಾಲಪುರುಷನು ನಿರ್ಣಯಿಸಲಿ (ದ್ರಾವಿವಿ. ೮೬). ೨. ಮೃತ್ಯುದೇವತೆ; ಯಮ. ೩. ಯಮದೂತ: ಕಣ್ಬೊಲದೊಳ್ ಸುಟಿವ ಕಾಲಾಯಸ ಕಾಲಪುರುಷನಂ ಕಾಳೆಗಕ್ಕೆ ಜವಂ ನೆರಂಬಂದಪ್ಪನೆಂದುಂ (ಪಂರಾಮಾ. ೧೪–೧೨೮ ವ). ೪. ಮೇಷಾದಿ ಹನ್ನೆರಡು ರಾಶಿಗಳಿಂದಾದ ಪುರುಷಾಕಾರದ ಒಂದು ನಕ್ಷೆ, —ರೇಖಾಚಿತ್ರ. [ಕಾಲ + ಪುರುಷ]

**ಕಾಲಪೃಷ್ಠ** (ನಾ). ೧. ರಣಹದ್ದು. ೨. ಒಂದು ಬಗೆಯ ಜಿಂಕೆ. ೩. ಕರ್ಣನ ಬಿಲ್ಲು. [ಸಂ.]

**ಕಾಲಪೆಂಡೆಯ** 'ಕಾಲ್ಪೆಂಡೆ' ನೋ.

**ಕಾಲಪ್ರಜ್ಞೆ** (ನಾ). (ಒಂದು ಕೆಲಸ ಮಾಡಲು) ತಕ್ಕ ಸಮಯದ ಜ್ಞಾನ; ಕಾಲಯಾವುದೆಂಬ ತಿಳಿವಳಿಕೆ: ಇಡೀ ಕತೆಯಲ್ಲಿ ಕಾಲಪ್ರಜ್ಞೆ ಮಸುಕಾಗಿದೆ, ಸೇಲ್ಸಮನ್‌ನಿಗೆ ತಾನು ಸರಿಯಾಗಿ ಎಷ್ಟು ಹೊತ್ತಿಗೆ ಹೋಗಬೇಕೆಂಬುದು ಗೊತ್ತಿಲ್ಲ. ಗಡಿಯಾರ ಇದ್ದೂ ವ್ಯರ್ಥವಾಗಿದೆ (ಹೊಸಕ್ಷಿ. ೨೮೯). [ಕಾಲ + ಪ್ರಜ್ಞೆ]

**ಕಾಲಪ್ರವೃತ್ತಿ** (ನಾ). ಭೇದಿ; ಮಲವಿಸರ್ಜನೆ: ಮಗು ಆಹಾರವನ್ನು ಸರಿಯಾಗಿ ಸೇವಿಸದೇ ಇರುವಾಗ ಆದಕ್ಕೆ ಹೊತ್ತು ಹೊತ್ತಿಗೆ ಕಾಲಪ್ರವೃತ್ತಿ ಆಗುವುದಿಲ್ಲ. (ಗೃಹವಿ. ೧೪೬). [ಕಾಲ + ಪ್ರವೃತ್ತಿ]

**ಕಾಲಪ್ರೇರಣೆ** (ನಾ). ಅದೃಷ್ಟದ ಪ್ರೇರಣೆ; ದೈವದ ಪ್ರೇರೇಪಣೆ: ಒಬ್ಬ ಬೇಡತಿಯೂ ಆವಳ ಐದುಜನ ಮಕ್ಕಳೂ ಕಾಲಪ್ರೇರಣೆಯಿಂದ . . . ಅಕಸ್ಮಾತ್ತಾಗಿ ಅಲ್ಲಿಗೆ ಬಂದು (ವಚಭಾ. ೩೪). [ಕಾಲ + ಪ್ರೇರಣೆ]

**ಕಾಲಬಂಧು** (ನಾ). ೧. ಕಾಲಕ್ಕೆ ಒದಗುವ ನಂಟ. ೨. ಯಮನ ಅಧೀನನಾದವನು; ಮೃತ್ಯುಗೀಡಾದವನು (?): ಲೀಲೆಯ ಕುಣಿತು ಆಡುವರೆಲ್ಲರು ಕಾಲಸಂಹರನ ಬಂಧುಗಳು . . . ಶೈಲಾಂಗನೆಯ ಲೀಲೆಯ ಲಾಡುವರೆಲ್ಲರು ಕಾಲಬಂಧುಗಳು (ಮೋಳಿಮಾ. ೧೨–೪೩). [ಕಾಲ + ಬಂಧು]

**ಕಾಲಬದ್ಧ** (ಗು). ೧. ಒಂದು ಕಾಲಕ್ಕೆ ಸೀಮಿತವಾದ; ಕಾಲಾವಧಿಗೆ ಒಳಪಟ್ಟ: ನಿಸರ್ಗಜನ್ಯ ತಿಳಿವಳಿಕೆಯು ಸ್ಥಳಬದ್ಧವಾದುದು. ಗುರುಮುಖದಿಂದ ಬರುವ ತಿಳಿವಳಿಕೆಯು ಕಾಲಬದ್ಧವಾದುದು (ಗ್ರಂಥಾಲ. ೧). ೨. ಅದೃಷ್ಟದಿಂದ ಕಟ್ಟಲ್ಪಟ್ಟ; ದೈವವಶವಾದ. [ಕಾಲ + ಬದ್ಧ]

**ಕಾಲಬೀಟೆ** (ನಾ). ಕಾಲು ಬಿರಿಯುವುದು; ಕಾಲು ಒಡೆಯುವಿಕೆ: ಜೇನುಮೇಣಮಂ ಕಾಸಿ ತೊಡೆಯಲು ಕಾಲಬೀಟೆ ಹರ (ವಿವೈವಿ. ೬೭); ಆಲದ ಬೀಳು, ಗೇರ ಹರಳು . . . ಇವಿಷ್ಟನು ಸಮಾಂಶವಾಗಿ ಎಮ್ಮೆಯ ತುಪ್ಪದಲ್ಲಿ ಕಾಸಿ ಅಂಗಾಲಿಗೆ ಲೇಪಿಸಲು ಕಾಲಬೀಟೆ ಹೋಗುವುದು (ವೈದ್ಯಸಾ. II, ೧೬೮). [< ಕಾಲ್$_1$ + ಬೀಟ್$_2$]

**ಕಾಲಬೇಗ** (ನಾ). ಕಾಲಿನ ವೇಗ, —ಚಳಕ: ಐದು ವರುಷದ ಕುದುರೆಗೆ ಪರಾಕ್ರಮವು ಮಣಿತವು ಸಾಧಿಸಿ ತಿದ್ದಿದ ಕುಣಿತವು ಕಾಲಬೇಗವು ಉಂಟಾಗುವುದು (ಅಶ್ವಟೀ. ೨೪–೬). [< ಕಾಲ್$_1$ + ಬೇಗ]

**ಕಾಲಭೇದ** (ನಾ). ಬೇರೆ ಬೇರೆ ಕಾಲ; ಕಾಲದ ಪ್ರಕಾರ: ಕಾಲಭೇದವನಱಿಪುವ ಮುಂದಣವ್ಯಯಂಗಳೊಳ್ (ಶಮುದ. ೩೨೦ ವೃತ್ತಿ). [ಕಾಲ + ಭೇದ]

**ಕಾಲಭೇದಾಗಮ** (ನಾ). ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಗಳಲ್ಲೊಂದು: ಸ್ಥಿರ ಸಂಹಿತೆ . . . ಕಾಲಭೇದಾಗಮ . . . ದೇವೀ ಮತವೆಂದು ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಂಗಳು (ವಿವೇಕ. ೭೧). [ಕಾಲಭೇದ + ಆಗಮ]

**ಕಾಲಭೈರವ** (ನಾ). ಪ್ರಳಯ ಕಾಲದ ಶಿವನ ರೂಪ: ಜಗವನೊಂದೇ ಬಾರಿ ಕೊಳ್ವ ತವಕಕ್ಕೆ ಬಹುರೂಪಮಂ ತಾಳ್ದನೋ ಕಾಲಭೈರವನೆಂಬ ತೆಱನಾಗಲು (ಜೈಮಿಭಾ. ೧೬–೩೧). [ಕಾಲ + ಭೈರವ]

**ಕಾಲಭ್ರಮೆ** (ನಾ). ಯಾವ ಕಾಲ ಎಂದು ತಿಳಿಯದಿರುವಿಕೆ: ಇದು ಯಾವ ಮಾಸ? ಯಾವ ದಿವಸ? . . . ಆವಳಿಗೆ ಕಾಲಭ್ರಮೆಯಾಯಿತು (ನಿರಾಭ. ೫೫). [ಕಾಲ + ಭ್ರಮೆ]

**ಕಾಲಮಾನ** (ನಾ). ೧. ಕಾಲದ ಅಳತೆ. ೨. ಕಾಲ ಪರಿಸ್ಥಿತಿ; ಸಮಯದ ಸನ್ನಿವೇಶ, —ಸಂದರ್ಭ: ಅಂದಿನ ಕಾಲಮಾನಕ್ಕನುಸರಿಸಿ . . . ಮನಸ್ಸು ದುಷ್ಟವೃತ್ತಿಗಿಳಿದರೆ (ಚಿತಸ. ೭೧). [ಕಾಲ + ಮಾನ]

**ಕಾಲಮರ್ಯಾದೆ** (ನಾ). ಕಾಲದ ಮಿತಿ, —ಅವಧಿ: ಕಾಲಮರ್ಯಾದೆ ನನ್ನ ಜೀವಿತದ ವ್ಯಾಖ್ಯೆಯಾಗಿರದೆ ಉಪಯುಕ್ತವಾದ ಕಾರ್ಯಕರ್ತೃತ್ವವೇ ಆಗಿದೆ (ಸ್ಮೃತಿಚಿ. ೪೪೪). [ಕಾಲ + ಮರ್ಯಾದೆ]

**ಕಾಲಮಹಿಮೆ** (ನಾ). ಸಮಯದ ಮಹತ್ವ, —ಪ್ರಭಾವ. [ಕಾಲ + ಮಹಿಮೆ]

**ಕಾಲಮಾಪಕ** (ನಾ). ಕಾಲವನ್ನು ಅಳೆಯುವ ಯಂತ್ರವಿಶೇಷ: "ಕಾಲಮಾಪಕ (ಮು. ಶಾಖ ವ್ಯತ್ಯಾಸ ಕಾಲವ್ಯತ್ಯಾಸ ತೋರದಂತೆ ರಚಿಸಿ, ಸಮುದ್ರ, ಮೊದಲಾದ ಪ್ರದೇಶಗಲ್ಲಿ ರೇಖಾಂಶ ನಿರ್ದೇಶಕ್ಕಾಗಿ ಉಪಯೋಗಿಸುವುದು.)" (Chronometer. ಇಂಕನಿ). [ಕಾಲ + ಮಾಪಕ]

**ಕಾಲಮಾಪನ** (ನಾ). ಕಾಲದ ಅಳೆತ: (ಶಾಸ್ತ್ರೀಯ) ಕಾಲಮಾಪನ (Chronometry. ಇಂಕನಿ). [ಕಾಲ + ಮಾಪನ]

**ಕಾಲಮುಖ** (ನಾ). ೧. ಕಪ್ಪು ಮುಖವುಳ್ಳವನು: ಹಿಮವಂತ ಪರ್ವತೋಭಯಾಗ್ರಗತ ದ್ವೀಪ ನಿವಾಸಿ ಮಾನವರ್ ಮತ್ಸ್ಯಮುಖರುಂ ಕಾಲಮುಖರುಂ ಅಪ್ಪರ್ (ತತ್ತ್ವಪ್ರ. ೧೪೫). ೨. ಕಪ್ಪು ಮುಖದ ಕಪಿ; ಕೋಡಗ; ಮುಸು. ೩. ಕರಿಯ ಅಗುರು; ಕಾಲಾಗರು: "ಕಾಲ [ಪಾಠಾಂ. ಕಾಕ] ಮುಖಮೆನಲಗುರುಂ" (ಮಂಗರಾ. ೯೯–೨೧). ೪. ಯಮನ ಮುಖ, —ಬಾಯಿ: ಆ ಬರೀಮುಖಂ ಕಾಲಮುಖಮನೆಯ್ದಿತ್ತು (ಪಂಚತಂ. ೩೦–೧೦). [ಕಾಲ + ಮುಖ]

**ಕಾಲಮುರಿಗೆ** (ನಾ). ಕಾಲಲ್ಲಿ ಧರಿಸುವ ಆಭರಣ: ದೇಸೆ ಮರೆಯ ಉಪ್ಪುವಟ್ಟಣಿಗೆಯ ಕಾಲಮುರಿಗೆವೇಡೆಯುದ ಮುಂಗೆಯ್ಗಿಳಿವ ಉಳಿಯ ಸರದ ಸರಪಣಿಯ (ಧರ್ಮನಾ. ೨–೧೧೨ ವ). [ಕಾಲ್ + ಮುರಿಗೆ$_1$]

**ಕಾಲಮೂಲ** (ನಾ). ಒಂದು ವನಸ್ಪತಿಯ ಹೆಸರು: "ಕಾಲಪುಷ್ಪಿ–ಕಾಲಮೂಲ, ಮಾಗುಳಿ" (ಓಷಧಿ. ೩೦). [ಕಾಲ + ಮೂಲ]

**ಕಾಲಮೃತ್ಯು** (ನಾ). ೧. ಭಯಾನಕವಾದ ಮೃತ್ಯುದೇವತೆ: ಅಜಸಲೇತಕೆ ಕಾಲಮೃತ್ಯುವನಜಸುವರೆ ಕಾಲಾಗ್ನಿಯನು (ಕುವ್ಯಾಕ. ೯–೪). ೨. ಸಕಾಲದಲ್ಲಿ ಬರುವ ಮರಣ. [ಕಾಲ + ಮೃತ್ಯು]

**ಕಾಲಮೇಘ** (ನಾ). ೧. ಪ್ರಳಯ ಕಾಲದ ಮೇಘ; ಮೋಡ. ೨. ನೆಲಬೇವು: (ವೈಔಗಿ. ೬–೧೦೯). [ಕಾಲ + ಮೇಘ]

**ಕಾಲಮೇಷಿ** (ನಾ). ೧. ಮಂಜಿಷ್ಠೆ. ೨. ಕರಿಯ ತಿಗಡೆ. [ಸಂ. ಕಾಲಮೇಷೀ]

**ಕಾಲಮೇಷಿಕೆ** (ನಾ). = ಕಾಲಮೇಷಿ. [ಸಂ. ಕಾಲಮೇಷಿಕಾ]

**ಕಾಲಯಂತ್ರ** (ನಾ). ಕಾಲಸೂಚಕ ಯಂತ್ರ; ಒಂದು ಬಗೆಯ ಗಡಿಯಾರ: "ಕಾಲವನ್ನು ಅತ್ಯಂತ ನಿಷ್ಕರ್ಷೆಯಾಗಿ ತೋರಿಸುವ ಕಾಲಯಂತ್ರ: ಸೂಕ್ಷ್ಮಕಾಲಸೂಚಿ; ಕಾಲಲೇಖಕ; (ಕಾಲವನ್ನು ನಿಷ್ಕೃಷ್ಟವಾಗಿ ಗೊತ್ತುಮಾಡಲು ಥಟ್ಟನೆ ನಿಲ್ಲುವಂತೆಯೂ ಮತ್ತು ಥಟ್ಟನೆ ನಡೆಯಲಾರಂಭಿಸುವಂತೆಯೂ ಮಾಡುವ ಗಡಿಯಾರ, ನಿಲ್‌ಗಡಿಯಾರ" (Chronograph. ಇಂಕನಿ). [ಕಾಲ + ಯಂತ್ರ]

**ಕಾಲಯಗದೆ** (ನಾ). ಒಂದು ಬಗೆಯ ಗದ್ದೆ (?): ಕಾಲಯಗದೆ ಸಲಗೆ ಮೂಜು (ಮೈಆರಿ. ೧೯೩೭. ೨೦-೧೨; 1162). [?]

**ಕಾಲಯಮ**, ಕಾಳಯಮ (ನಾ). ೧. ಸಂಹಾರಕರ್ತನಾದ ಯಮ: ನೃಪಕುಲ ಕಾಲಯಮನಾಶ್ರಮಕೆ ಬಂದನು ರೇಣುಕಾಸುತನ (ಕುವ್ಯಾಆ. ೯-೧೪). ೨. ಯಮನಿಗೆ ಯಮ; ಶಿವ; ರುದ್ರ. **ಕಾಳಯಮ**: ೧. ಅಳು ಕಾಳು ಇದ್ದವನಾದರೆ ಕಾಳಯಮ ಬಿಟ್ಟಾನೆ (ಗಾದೆ). [ಕಾಲ್$_3$ + ಯಮ]

**ಕಾಲರ** 'ಕಾಲರಾ' ನೋ.

**ಕಾಲರಳಿಮರ** (ನಾ). ಒಂದು ಬಗೆಯ ಮರ: (ಮೈಡಿಗಿ. ೩೭-೭೨೯). [ಕಾಲ + ಅರಳಿ$_1$ + ಮರ]

**ಕಾಲರಾ**, ಕಾಲರ (ನಾ). ವಾಂತಿಭೇದಿ ರೋಗ: ಅಕಸ್ಮಾತ್ ಕಾಲರಾ ರೋಗಕ್ಕೆ ತುತ್ತಾಗಿ ಪಿತೃಶ್ರೀಯವರು ಸ್ವರ್ಗಸ್ಥರಾದರು (ಕುರುಕಾ. ೧೪೭); ಪ್ಲೇಗೂ ಕಾಲರಾ ತಗಲಿ ಮೃತರಾದರೆ (ಹುಟ್ಟಹ. ೬೪). **ಕಾಲರ**: ಊರಿನಲ್ಲಿ ಕಾಲರ, ಪ್ಲೇಗುಗಳು ತಲೆದೋರಿದಾಗ (ಕೆಲರೋ. ೧); ನೊಣಗಳು . . . ಆಮಶಂಕೆ, ಕಾಲರ, ವಿಷಮಶೀತ ಜ್ವರ ಮುಂತಾದ ರೋಗಗಳನ್ನು ಹರಡುತ್ತವೆ (ಗೃಹವಿ. ೧೪೯). [← ಇಂ. Cholera]

**ಕಾಲರಾಜ**, ಕಾಳರಾಜ (ನಾ). ೧. ಕಾಲದ ಅಧಿದೇವತೆ: ಕಾಲರಾಜನ ಜಗದ್ಗೃಹಪ್ರವೇಶಕ್ಕೆ ನಿಜಿಸಿದ ಕನಕ ಕಳಶ ಯುಗಳಮುಮಂ . . . ಪೋಲ್ತು (ಆದಿಪು. ೬-೫೧ ವ). ೨. ಮರಣದ ಅಧಿಪತಿ; ಯಮರಾಜ; ಮೃತ್ಯುದೇವತೆ: ಕಾಲರಾಜನೆಯ್ತಂದೊಡಾವನು ಮಿಲ್ಲಿಯುಮೆಂತು ಕಾಯಲಾಜಂ (ಜೀವಸಂ. ೩೬-೧೯ ವ). **ಕಾಳರಾಜ**: ೨. ಜರೆಬಂದೊಟ್ಟೈಸೆ ಮಾಣ್ದರ್ದಳಿಪೆನಗಿದೆ ಮುಂ ಸಾಲದೇ ಕಾಳರಾಜಂ . . . ಮಾಣ್ದರ್ದ [ಪಾಠಾಂ. ರ್ಪ್ದ]ನೇ (ಆದಿಪು. ೨-೪೯). [ಕಾಲ + ರಾಜ]

**ಕಾಲರಾತ್ರ** (ನಾ). ಒಂದು ನರಕದ ಹೆಸರು: ಕ್ರತು, ಪೂತಿಮಾಂಸ . . . ಪುಷ್ಪಾಸವೆಂಬೈದು ಮಂತ್ರನರಕಂಗಳಿಂ ಕೂಡಿ ಕಾಲರಾತ್ರವೆಂಬ ರಸುನರಕವಿಹುದು (ವಿವೇಕ. ೧೪೦). [ಸಂ. (ಕಾಲ + ರಾತ್ರಿ + -]

**ಕಾಲರಾತ್ರಿ**, ಕಾಳರಾತ್ರಿ (ನಾ). ೧. ಕಗ್ಗತ್ತಲೆಯ ರಾತ್ರಿ. ೨. ಪ್ರಳಯಕಾಲದ ರಾತ್ರಿ. ೩. ದುರ್ಗಾದೇವಿಯ ಒಂದು ರೂಪ. ೪. ದೀಪಾವಳಿಯ ಅಮಾವಾಸ್ಯೆ. **ಕಾಳರಾತ್ರಿ**: ೨. ಸೌಮಿತ್ರಿ ಲಯಸಮಯದ ಕಾಳರಾತ್ರಿಯಂತೆ ಸಾಗರಾವರ್ತಮಂ ಜೇವೊಡೆಯೆ (ಪಂರಾಮಾ. ೭-೧೧೫ ವ). ೩. ಕರಾಳಿ ಕಳಾವತಿ ಕಾಳರಾತ್ರಿ . . . ಮಾಲಿನಿಯೆಂಬ ಶಕ್ತಿಯರ್ (ಶಬಶಂ. ೩-೧೨). [ಕಾಲ್$_2$ + ರಾತ್ರಿ]

**ಕಾಲರಾಯ** (ನಾ). ೧. = ಕಾಲರಾಜ ೧: ಕಾಲರಾಯನ ಬೆರಳುಂಗರದೊಳು ಗಾಡಿ ಮಿರುಗುವ ಹೊಸ ಹೊಚ್ಚ ಹರಳು (ಇಂಚಾಪ. ೨೨೦-೪೯). ೨. ಕಾಲಯಮ: ಒಲುಮೆ ಎಂದೆಂದಿಗೂ ಹೊಳೆಯದಂತೆ ಹರಿಯುತ್ತ ಕಾಲರಾಯನ ಬಾಯ್ಗೆ ಬೀಳದಿರಲು (ಇಂಗೀತ. ೫೦). [ಕಾಲ್$_1$ + ರಾಯ]

**ಕಾಲರು** (ನಾ). (ಅಂಗಿಯ) ಕೊರಳ ಪಟ್ಟಿ: ಸೇದುವ ಹಗ್ಗದಂತಿರುವ ರುಮಾಲು, ಐದು ಗುಂಡಿಯ ಮುಚ್ಚು ಕಾಲರಿನ ಅಂಗಿ (ನಾಡಿಗೇ. ೧೦೬). [← ಇಂ. Collar]

**ಕಾಲರುದ್ರ** (ನಾ). ಕಾಲಭೈರವ; ಪ್ರಳಯರುದ್ರ: ಬಾಲನುರವಣಿಸಿದನು ಮುಸಗಿದ ಕಾಲರುದ್ರನ ರೂಪ ತಾಳ್ದನು ವೈರಿ ಸೇನೆಯಲಿ (ಕುವ್ಯಾದ್ರೋ. ೮-೨೭); ಕೆರಳ್ದೊಡೆ ಕಾಲರುದ್ರನಲ್ಲಾ ವೃಕೋದರನು (ಜೈಮಿಭಾ. ೨-೪೧). [ಕಾಲ + ರುದ್ರ]

**ಕಾಲಲಬ್ಧಿ** (ನಾ). [ಜೈನ] ಐದು ಬಗೆಯ ಲಬ್ಧಿಗಳಲ್ಲಿ ಒಂದು; ಆಧ್ಯಾತ್ಮಿಕ ಜೀವನ ಆರಂಭವಾಗುವುದಕ್ಕೆ ಪಕ್ವವಾದ ಕಾಲ ಬರುವಿಕೆ; ಅರಿವು ಹುಟ್ಟುವ ಕಾಲದ ಪ್ರಾಪ್ತಿ: ನಿಮ್ಮ ಮನದಿಂ ಮಿಥ್ಯಾಕಳಂಕಂ ತೆರಳ್ದಿನಿತುಂ ಪೋಗದು ಕಾಲಲಬ್ಧಿ ದೊರೆಕೊಂಡಂದಲ್ಲದೇಂ ಪೋಕುಮೇ (ಆದಿಪು. ೨-೨೨); ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿಯೆಂಬ ಲಬ್ಧಿ ಪಂಚಕಮುಮಂ (ಸುಕುಮಾ. ೩-೩೯ ವ); ಸತ್ಪುರುಷರದೇಕೆ ಬಂಜೆವಡಿಪರ್ ಗಡ ದುರ್ಲಭ ಕಾಲಲಬ್ಧಿಯಂ (ಚಂದ್ರಪು. ೨-೫೭). ಎಲ್ಲಕ್ಕೂ ಕಾಲಲಬ್ಧಿ ಬರಬೇಕು (ಶಾಂತಲಾ. ೫೩). [ಕಾಲ + ಲಬ್ಧಿ]

**ಕಾಲಲೀಲೆ** (ನಾ). ಕೊಲ್ಲುವ ಆಟ; ಸಂಹಾರರೂಪವಾದ ಕ್ರೀಡೆ: ರಾಕ್ಷಸನಾಶ ದುಶ್ಶಕುನಗಳ್ . . . ಲಂಕೆಯೊಳ್ ಬೀಸಿದುವು ಕಾಲಲೀಲೆಯ ಕಪಿಧ್ವಜಬಲದ ಮೃತ್ಯುಕರ ಕರವಾಲಮಂ (ಶ್ರೀರಾಮಾ. ೬.೨೬-೨೩೩). [ಕಾಲ + ಲೀಲೆ]

**ಕಾಲಲೇಖನ** (ನಾ). ಸಂಕೇತಾಕ್ಷರಗಳಿಂದ ಸಂವತ್ಸರವನ್ನು ತಿಳಿಸುವ ವಾಕ್ಯ: "ಯಾವುದಾದರೂ ನಿರ್ದಿಷ್ಟ (ಕ್ರಿಸ್ತ) ಸಂವತ್ಸರವನ್ನು ಗುಪ್ತವಾಗಿ ಸೂಚಿಸಲು ತಕ್ಕ ರೋಮನ್ ಅಂಕಿಗಳ ಸಂಕೇತಾಕ್ಷರಗಳಿಂದ ಕೂಡಿದ ವಾಕ್ಯ" (Chronogram. ಇಂಕನಿ). [ಕಾಲ + ಲೇಖನ]

**ಕಾಲವಶ** (ನಾ). ೧. ಕಾಲದ ಅಧೀನತೆ: ಅನ್ಯಾಂಗನಾಮಲ್ಲು ಸ್ಪೃಹೆಯಂ ತಾಳ್ದಿದನಲ್ತೆ ಕಾಲವಶದಿಂ ಲಂಕೇಶ್ವರಂ ವಿಸ್ಮಯಾವಹ (ಪಂರಾಮಾ. ೯-೫೬); ಜಲನಿಧಿಯೊಳಂ ತೆಪ್ಪ ತೇಲುವಂದದಿಯಿಳಾತಳ ಹೆಪ್ಪುಗೊಂಡುಯಿರುತಿರುತಿಹುದು ಕಾಲವಶದೊಳು ತಳಮುಳಗೊಂಬುದೆಂದು . . . ಬಲಿದು ಕೀಲಿಸಲು (ನವಮೋ. ೨-೧೪). ೨. ಮೃತ್ಯುದೇವತೆಯ ಅಂಕೆಗೆ ಒಳಪಟ್ಟವನು; ಮರಣಾಧೀನ: ನಿಚ್ಚ ನಿಶ್ಚಲರಾಗಿ ತಪವನು ಹೆಚ್ಚಿಸುವ ಸಚ್ಚರಿತರೆಲ್ಲರು ಕಾಲವಶರೆಂದ (ಅಮೃತ. ೨-೩೯).

ಕಾಲವಶನಾಗು = ಸಾಯು: ಇಷ್ಟರಲ್ಲೇ ನಾನು ಕಾಲವಶನಾಗುವೆನು (ರಾಮುರಾ. ೬೨). [ಕಾಲ$_1$ + ವಶ]

**ಕಾಲವಾಚಕ** (ಗು). [ವ್ಯಾಕ] ೧. ಕಾಲವನ್ನು ಹೇಳುವ,—ಸೂಚಿಸುವ. (ನಾ). ೨. ಕಾಲವನ್ನು ಸೂಚಿಸುವ ಪದ; ಕಾಲಸೂಚಕ ಪದ: ಕಾಲವಾಚಕಂಗಳಪ್ಪ ಅಂದು ಇಂದು ಉಂದು ಎಂದು ಎಂಬ ಶಬ್ದಂಗಳ್ (ಶಮದ. ೧೨೧ ವೃತ್ತಿ); ಅಂದು . . . ಏಗಳ್ ಎಂಬ ಕಾಲವಾಚಕಗಳ ಮೇಲೆಯೂ ಹತ್ತುವುದಿಲ್ಲ (ಕೈಪಿಡಿ. ೪೦). [ಕಾಲ + ವಾಚಕ]

**ಕಾಲವಾಚಿ** (ನಾ). = ಕಾಲವಾಚಕ ೨: ಕಾಲವಾಚಿಯಂದಿಂದುಂದೆಂಬುದುಮೇಕರೂಪಮಾಗಿರ್ಪುದು ಮೊದಲೆರಡುಂ ವಿಭಕ್ತಿಗಂ ಸಪ್ತಮಿಗಂ (ಶಮದ. ೧೨೧). [ಸಂ. ಕಾಲವಾಚಿನ್]

**ಕಾಲವಿಕಿರಣಯಂತ್ರ** (ನಾ). ಕಾಲಸೂಚಕವಾದ ಒಂದು ವಿದ್ಯುದ್ಯಂತ್ರ: "ಕಾಲಸೂಚಕ ವಿದ್ಯುತ್ ಸಂಕೇತಗಳನ್ನು ಹರಡುವ ಸಾಧನ; ಕಾಲವಿಕಿರಣಯಂತ್ರ" (Chronopher. ಇಂಕನಿ). [ಕಾಲ + ವಿಕಿರಣ + ಯಂತ್ರ]

**ಕಾಲವಿಪರೀತ** (ಗು). ಕಾಲಕ್ಕೆ ವಿರುದ್ಧವಾದ; ಸಮಯಕ್ಕೆ ಸಲ್ಲದ: ನನ್ನ ಮಾತುಗಳು ನಿರುಪಯೋಗಿಯೆಂದೂ ಕಾಲವಿಪರೀತವೆಂದೂ, ಕ್ರಾಂತಿಕಾರಕವೆಂದೂ ಅನಿಸುವವೆಂಬ ಭಯ ನನಗಿದ್ದೇ ಇದೆ. (ಪ್ರೇಮಾಶ್ರ. ೨೫೪). [ಕಾಲ + ವಿಪರೀತ]

**ಕಾಲವಿಪರ್ಯಾಸ** (ನಾ). ಕಾಲದ ಬದಲಾವಣೆ; ಕೆಟ್ಟಕಾಲ: ಈ ಕಾಲವಿಪರ್ಯಾಸದಿಂದ ನಿನಗೆ ಕಷ್ಟ ಪ್ರಾಪ್ತವಾದಂತಾಗುವುದಿಲ್ಲ (ವಚಭಾ. ೧೦೪). [ಕಾಲ$_1$ + ವಿಪರ್ಯಾಸ]

**ಕಾಲವಿಳಂಬ** (ನಾ). ತಡ; ಕಾಲವಿಮಾರುವುದು: ಗೌರೀದೇವಿಯು . . . ಅರ್ಧನಿಮಿಷವಾದರೂ ಕಾಲವಿಳಂಬ ಮಾಡದೆ (ಕವಿಕಾ. II, ೬೫); ಆದರ್ಶವನ್ನು ಬಿಡದೆ ಕಾಲವಿಳಂಬವಾದರೂ ಸರಿಯಾಗಿ ಅಭ್ಯಾಸ ಮಾಡಿಸಬೇಕು (ಶಿಕ್ಷದ. ೨೪೫). [ಕಾಲ + ವಿಳಂಬ (=ವಿಲಂಬ)]

**ಕಾಲವೇದಿ** (ನಾ). ಸಮಯ ಸಂದರ್ಭಗಳನ್ನು ತಿಳಿದವನು; ಯಾವ ಕಾಲಕ್ಕೆ ಯಾವುದು ಯೋಗ್ಯವೆಂಬ ವಿವೇಚನೆಯುಳ್ಳವನು: ಕಾಲವೇದಿ ವಿನೀತನವ್ಯಸನಾಳಿ ಸೂರಿ ರಹಸ್ಯ ಸತ್ಕೃತಿಪಾಲನಾನ್ವಿತಮಂತ್ರಿಯುಂಟೇ ರಾಯ ನಿನಗೆಂದ (ಕುವ್ಯಾಉ. ೭-೮೭). [ಸಂ. ಕಾಲವೇದಿನ್]

**ಕಾಲವೈಪರೀತ್ಯ** (ನಾ). = ಕಾಲವಿಪರ್ಯಾಸ: ಈ ಕೌರವರು ತಮ್ಮ ಸೊಸೆಯೂ, ಮಗಳೂ ಹೀಗೆ ಸಂಕಟಪಡುತ್ತಿದ್ದರೆ ಸಹಿಸಿಕೊಂಡಿದ್ದಾರೆ. ಇದೆಲ್ಲಾ ಕಾಲವೈಪರೀತ್ಯವೇ ಸರಿ (ವಚಭಾ. ೧೦೧).
[ಕಾಲ + ವೈಪರೀತ್ಯ]

**ಕಾಲವೈರಿ** (ನಾ). ಯಮನ ಶತ್ರು; ಶಿವ: ಕಾಲವೈರಿ ಪುರಾರ್ದನಾಜಿತಸುರಾಧ್ವರ ಧೀರ ಶಂಕರ ಚಂದ್ರಶೇಖರ ಪಾಲಯಾ (ಹಮ್ಮೀರ. ೮-೪೭).
[ಕಾಲ + ವೈರಿ]

**ಕಾಲವ್ಯಾಪಿ** (ಗು). ಕಾಲವನ್ನೆಲ್ಲ ತುಂಬುವ; ಎಲ್ಲ ಕಾಲಕ್ಕೂ ಅನ್ವಯಿಸುವ; ಶಾಶ್ವತವಾದ: (ಕ). [ಸಂ. ಕಾಲವ್ಯಾಪಿನ್]

**ಕಾಲಶಾಕ** (ನಾ). ಕರಿಬೇವು: ಕಾಲಶಾಕ (ಕರಿಬೇವು) . . . ಕಫ ವಾತ ನಾಶಕ (ಅಷ್ಟಾಂಗ. ೧೩೯). [ಸಂ.]

**ಕಾಲಶಿವ** (ನಾ). ಸಂಹಾರ ಕರ್ತೃವಾದ ಶಿವ; ರುದ್ರ; ಕಾಲಭೈರವ: ಕಾಲಶಿವಾರ್ಚನೆಯ ವೇಳೆ ಸಂಧಿಸಿತು (ಬಸಪು. ೪೮-೨).
[ಕಾಲ + ಶಿವ]

**ಕಾಲಶ್ರಾದ್ಧ** (ನಾ). ಪಿತೃಗಳಿಗಾಗಿ ಸಕಾಲದಲ್ಲಿ ಮಾಡುವ ಶ್ರಾದ್ಧ, —ವಾರ್ಷಿಕ ಶ್ರಾದ್ಧ: ತಂದೆತಾಯಿಗಳ ಕಾಲಶ್ರಾದ್ಧ ಮಾಡೋಣ, ಮಾಸ ಶಿವರಾತ್ರಿ ದಿವಸ ಒಂದು ತಿಂಗಳಿಗೆ ಒಂದು ಬಾರಿ ಪೌರ್ಣಮಿ ದಿವಸ . . . ಈ ಪ್ರಕಾರ ನಡೆಯುವಂತೆ ಏರ್ಪಾಡು ಮಾಡಿಸಿದ್ದನು (ಚಿತ್ರಪಾ. ೫೮). [ಕಾಲ + ಶ್ರಾದ್ಧ]

**ಕಾಲಸಂಸಾರ** (ನಾ). [ಜೈನ] "ಅವಸರ್ಪಿಣಿಯ ಪ್ರಥಮಸಮಯದೊಳ್ ಪುಟ್ಟುವುದದು ಕಾಲಸಂಸಾರಂ" (ಚಾವುಂಪು. ೨೮೩-೫).
[ಕಾಲ + ಸಂಸಾರ]

**ಕಾಲಸಂಹರ** (ನಾ). ಯಮನನ್ನು ಕೊಂದವನು; ಶಿವ: ಲೀಲೆಯ ಕುಣಿತು ಆಡುವರೆಲ್ಲರು ಕಾಲಸಂಹರನ ಬಂಧುಗಳು (ಮೋಳಿಮಾ. ೧೨-೪೩); ಶಿವ ಭವ . . . ಕಾಲಸಂಹರಾ (ಶಬಶಂ. ೫-೨೮).
[ಕಾಲ + ಸಂಹರ]

**ಕಾಲಸರಣಿ** (ನಾ). ಭಯಾನಕವಾದ ಬೆಂಕಿ: ಅರಿರಾಯ ಗಿರಿವಜ್ರ ದಂಡನಘುವನ ಕಾಲಸರಣಿ ನಿರ್ಮಲಧರ್ಮ . . . ರಾಜರಾಜಂಮದೀಶಂ (ಭಾವಚಿಂ. ೩-೩೫). [ಕಾಲ + ಸರಣಿ$_1$]

**ಕಾಲಸರ್ಪ**, ಕಾಳಸರ್ಪ (ನಾ). ೧. ಕರಿಯ ನಾಗ; ಕೃಷ್ಣಸರ್ಪ; ಕಾಳಿಂಗ ಸರ್ಪ: ಕೋಲಗುರುವಿನ ಮರಣವಾರ್ತಾ ಕಾಲಸರ್ಪನ ತಂದು ಸಂಜಯ ಹೇಳಿಗೆಯನೀಡಾಡಿದನು ಧೃತರಾಷ್ಟ್ರನಿದಿರಿನಲಿ (ಕುವ್ಯಾಕ. ೧-೧); ನನ್ನ ವಿಷಯದಲ್ಲಿ ಕಾಲಸರ್ಪವಾದ ನೀನು ಈ ಭೂಮಿಯಲ್ಲಿ ಹುಟ್ಟದೆಯೇ ಇದ್ದರೆ ಎಷ್ಟು ಚೆನ್ನಾಗಿದ್ದಿತು (ಕವಿಕ. ೫೧). ೨. [ಜ್ಯೋತಿ] ಒಂದು ಯೋಗ; ರಾಹುಕೇತುವಿನ ನಡುವೆ ಎಲ್ಲ ಗ್ರಹಗಳು ಇರುವ ಯೋಗ. **ಕಾಳಸರ್ಪ**: ೧. ಈ ಸುರಭಿತ ಸುಮಂಜರಿಯ ಹಿಂದೆ ಪೂತ್ಕರಿಸುವ ಕಾಳಸರ್ಪ (ಕಲ್ಲೋಲ. ೨೫-೧೪).
[ಕಾಲ + ಸರ್ಪ]

**ಕಾಲಸೂತ್ರ** (ನಾ). ೧. ಕಾಲನಿಯಮ. ೨. ಎಂಟು ನರಕಗಳಲ್ಲಿ ಒಂದು: ರೌರವ, ಧ್ವಾಂತ . . . ಕಾಲಸೂತ್ರಂಗಳೆಂಬುವೇ ಯೆಂಟು ನರಕಂಗಳು (ವಿವೇಕ. ೧೭೯). [ಸಂ.]

**ಕಾಲಸೂದನ** (ನಾ). = ಕಾಲಸಂಹರ: ಘನಕಾಲ ಕಾಲಸೂದನ ಕಲಾಧರನ ನೂತನ ಕಲಾಧರ ರಕ್ಷಿಸು (ಉದ್ಭದೇ ೩-೩೫). [ಕಾಲ + ಸೂದನ]

**ಕಾಲಸ್ಕಂಧ**, ಕಾಳಸ್ಕಂಧ (ನಾ). ಒಂದು ಬಗೆಯ ಮರ; ತಮಾಲ ವೃಕ್ಷ; ಹೊಂಗೆ ಮರ: (ಕ). **ಕಾಳಸ್ಕಂಧ**: "ಕಾಳಸ್ಕಂಧಂ ತಮಾಳಮೆನೆ ತಾಪಿಚ್ಛಂ" (ವಸ್ತುಕೋ. ೭೪-೮). [ಸಂ.]

**ಕಾಲಹರ** (ನಾ). ೧. = ಕಾಲಸಂಹರ: ಬಂದನುದ್ಧತ ಶೀಲತರ ಕಾಲಹರನೆಂಬ . . . ವಿಷಮವಿಷಧರನೆಂಬ (ನಂಬಿರ. ೭-೧೧೪). ೨. ಮರಣವನ್ನು ಪರಿಹರಿಸುವವನು; ಸಾವನ್ನು ಹೋಗಲಾಡಿಸುವವನು: ಕಾಲಹರನುದಯಮಿದಱೊಳ್ ಕಾಲಂಬಾರುತ್ತಿರಲದೇಕೆಂಬ ವೊಲಾಕಾಲದೊಳ್ ತರುಗಳೆಲ್ಲಂ ಲೀಲೆಯನಾಂತುವು ತಳಿರ್ತು ಪೂತುಂ ಕಾಯ್ತುಂ (ಚಂದ್ರಪು. ೧೨-೩೪). [ಸಂ.]

**ಕಾಲಹರಣ** (ನಾ). ೧. ಸಮಯವನ್ನು ಕಳೆಯುವಿಕೆ. ಇದ್ದಷ್ಟು ದಿನ ಕಾಲಹರಣ ಮಾಡಿದರೆ ಸಾಕು (ತ್ಯಾಗಮ. ೫೪). ೨. ತಡಮಾಡುವಿಕೆ: ಆ ಮೂಲ ಚೂಲದಲಿ ಕಾಲಹರಣವು ಮಾಡಲಿಹುದೆ ಹೊತ್ತು (ಪಾಂಚಜ. ೪೪); ಕಾಲಹರಣಮಾಡುವುದೊಂದು ದೊಡ್ಡ ಜಾಡ್ಯ (ರೂಪಸಂ. ೩೩); ಸುಮ್ಮನೆ ನಿಮ್ಮ ಕಾಲಹರಣ ಮಾಡಿದ ಹಾಗಾಯಿತು (ವೀರಯೋ. ೮೮).
[ಕಾಲ + ಹರಣ$_2$]

**ಕಾಲಹಾಕು** (ಕ್ರಿ). ಕಾಲವನ್ನು ಕಳೆ; ಜೀವನ ಸಾಗಿಸು: ಇವರು . . . ಹಳ್ಳಿಗಳ ಮನೆಗಳ ಜಗಲಿಯ ಮೇಲೆ ಕಾಲಹಾಕಿ ಬಿಡುತ್ತಾರೆ (ಹಳ್ಳಿಬಾ. ೪೧). [ಕಾಲ + ಹಾಕು$_1$ (< ಪಾಯ್ಕು$_1$)]

**ಕಾಲಟ್ಟು**, ಕಾಲದ್ದು (ಕ್ರಿ). ಕಾಲನ್ನು ಮುಳುಗಿಸು; ಕಾಲುಊರು: ಕೆಲಬರ್ ಮಿಥ್ಯಾತ್ವ ದುಃಖಂಗಳೊಳ್ ಕಾಲಟ್ಟಿರ್ದು ತಪಂಗಳಂ ನೆಗಟ್ದೊಡಂ ದುಷ್ಕರ್ಮರೆಂತಿರ್ದೊಡಂ . . . ಸತ್ತ್ವದೊಳಂ ಪೊಂದಿರ್ದರಂ ಪೋಲ್ವರೇ (ಧರ್ಮಾಮೃ. ೭-೪೭). [ಕಾಲ್$_1$ + ಅಟ್ಟು]

**ಕಾಲಾಂಜನ**, ಕಾಳಾಂಜನ (ನಾ). ೧. ಕರಿಯ ಅಂಜನ; ಕಪ್ಪು ಕಾಡಿಗೆ: "ಪುಟಾಲುಃ-ಕಾಲಾಂಜನ" (ಓಷಧಿ. ೧೦೦). **ಕಾಳಾಂಜನ**: ೧. "ನೀಲಾಂಜನಂ ಕಾಳಾಂಜನಂ" (ಓಷಧಿ. ೮೮). ೨. ಒಂದು ಪರ್ವತದ ಹೆಸರು: ಉತ್ತರ ಸುಪಾರ್ಶ್ವಗಿರಿಯ ಅಂತರಾಳದಿಲ್ಲಿಹವು ಶಂಕಕೂಟ ವೃಷಭ ಹಂಸ ಕಾಳಾಂಜನ ಶಿಖರಿಯಂಬೈದು ಗಿರಿಗಳು (ವಿವೇಕ. ೨೧೪). [ಕಾಲ + ಅಂಜನ]

**ಕಾಲಾಂತ** (ನಾ). ಆಯುಷ್ಯದ ಕೊನೆ; ಸಾವು: ಕಾರಂಗನೆಂಬದಟಂ . . . ಪೊರ್ದಿದನುರ್ಕಿಂ ನಿಜ ತಾತ ದಿಗ್ವಿಜಯದೊಳ್ ನಿಂದಾಂತು ಕಾಲಾಂತಮಂ (ಪುಷ್ಪಪು. ೫-೬೧). [ಕಾಲ + ಅಂತ$_2$]

**ಕಾಲಾಂತಕ** (ನಾ). ೧. = ಕಾಲಯಮ: ಕಾಲಾಂತಕನ ಹೆಬ್ಬೆಳಸು ಹುಲುಸಾಯ್ತು (ಕುವ್ಯಾಭೀ. ೯-೧೩); ಬಳಿಕ ರಣಭೀಷಣಂ ಭೀಷಣಂ ವಸುಮತಿಗೆ ಕಾಲಾಂತಕೋಪಮಂ ಕೋಪಮಂ ಪಸರಿಸಿದಂ (ಜೈಮಿಭಾ. ೧೭-೩೮). ೨. ಶಿವ: ಶರಧಿಯ ದಾಂಟಿಸಿ ಕಾಲಾಂತಕನೆ ಕಾಯೊ (ಸರ್ವವ. ೧-೩); ಕಾಲಾಂತಕಂ ಶಂಕರನೋಂಕಾರಂ (ರಾಜಶೇ ೧೪-೧೫೩).
[ಕಾಲ + ಅಂತಕ]

**ಕಾಲಾಂತರ** (ನಾ). ಬೇರೊಂದು ಕಾಲ; ಕಾಲಾವಧಿ: ಕೆಲವು ಕಾಲಾಂತರದಲಾತನು ಕಾದಿ ಗಂಧರ್ವರಲಿ ಮಡಿದನು (ಕುವ್ಯಾಆ. ೨-೩೧); ಕಾಲಾಂತರದಲ್ಲಿ ಅದು . . . ಅರ್ಥವಿಕಾಸ ಪಡೆದಿರಬಹುದು (ದ್ರಾವಿವಿ. ೪೩). [ಸಂ.]

**ಕಾಲಾಗರು** 'ಕಾಲಾಗುರು' ನೋ.

**ಕಾಲಾಗುರು**, ಕಾಲಾಗರು, ಕಾಳಾಗರು, ಕಾಳಾಗುರು (ನಾ). ಕರಿಯ ಅಗರು; ಕೃಷ್ಣಾಗುರು: ಕತ್ತುರಿ ಕಾಲಾಗುರು . . . ಎಂಬೀ ವನಾಂತರ ಸಂಜಾತಮನಾತನೋಲಗಿಸಿದಂ (ಪುಷ್ಪಪು. ೫-೧೦೨). **ಕಾಲಾಗರು**: ಕಾಲಾಗರು ಧೂಪಗಳಿಂದ ಯುಕ್ತಮಾದ ಗುಂಡಿಗೆಗಳಂ ಅಲ್ಲಲ್ಲಿರಿಸಿ (ಪುರುಚ. ೮೧). **ಕಾಳಾಗರು**: ನೆಗಬ್ದೀ ಕರ್ಪೂರ ಕಾಳಾಗರು ಮಳಯಮಹೀಜಂಗಳೇಳಾ ಲತಾಳೀಸ್ಥಗಿತಂಗಳ್ (ಪಂಪಭಾ. ೪-೨೩); ಅತಿ ಬಹಳ ದಹ್ಯಮಾನ ಕಾಳಾಗರು ಧೂಪವ್ಯಾಪ್ತ ಧೂಪ ಕುಂಭಂಗಳಿಂದಂ (ಪಸಾರ. ೧೧೩-೧೮). **ಕಾಳಾಗುರು**: ಕಾಳಾಗುರುವಿನ ಧೂಪದ ಕರ್ಬೊಗೆಯಿಂ (ಅಜಿಪು. ೯-೧೧ವ); ಕಾಳಾಗುರು ಪ್ರಮುಖ ಧೂಪಧೂಮಂಗಳಿಂ (ಪುಷ್ಪಪು. ೩-೫). [ಕಾಲ + ಅಗುರು$_2$]

**ಕಾಲಾಗ್ನಿ**, ಕಾಳಾಗ್ನಿ (ನಾ). ಪ್ರಳಯಾಗ್ನಿ; ಎಲ್ಲವನ್ನೂ ಸುಟ್ಟು ಹಾಕುವ ಕೊನೆಗಾಲದ ಬೆಂಕಿ: ಕಾಲಾಗ್ನಿ ಮಂಜಿನ ಮಳೆಗೆ ಮೈದೆಗೆವುದೆ (ತೊರರಾ. ೫-೫-೨೬); ರಾಮಬಾಣಂಗಳೈದಿದವು ಕಾಲಾಗ್ನಿಯಂತೆ (ಜೈಮಿಭಾ. ೨೧-೩೩). **ಕಾಳಾಗ್ನಿ**. 'ಕಾಳಾಗ್ನಿರುದ್ರ' ಪರಾ. [ಕಾಲ + ಅಗ್ನಿ]

**ಕಾಲಾಗ್ನಿರುದ್ರ**, ಕಾಳಾಗ್ನಿರುದ್ರ (ನಾ). ಪ್ರಳಯಾಗ್ನಿ ಸ್ವರೂಪನಾದ ರುದ್ರ; ಕಾಲರುದ್ರ: ರಸೆಯಿಂ ಕಾಲಾಗ್ನಿರುದ್ರಂ ಪೊಣಮಡುವ ವೋಲ್ ಪೊಣಮಟ್ಟು (ಗದಾಯು. ೭-೩೦); ರಕ್ಕಸರ ಕಾಲಾಗ್ನಿರುದ್ರನ ಬಲುಹ ನೀನಱಿಯೆ (ಕೌಶಿರಾ. ೩೮-೬). **ಕಾಳಾಗ್ನಿರುದ್ರ**: ಕಾಳಾಗ್ನಿರುದ್ರನ ಮೇಳಾಪವನಱಿಯದವರು ಕಾಳು ಬೇಳೆಯೆನುತಿಪ್ಪರಯ್ಯಾ (ಬಸವ. ೨೨೭). [ಕಾಲಾಗ್ನಿ + ರುದ್ರ]

**ಕಾಲಾಚಾರ** (ನಾ). ಕಾಲಕ್ಕೆ ತಕ್ಕ ಆಚಾರ, —ನಡವಳಿ: ಇದರೊಳಗಿನ ಆತ್ಮವೀರದ ಕತೆ ದೇಶಾಚಾರ ಕಾಲಾಚಾರಗಳನ್ನು ಮೀರಿ ಸಾರ್ವಕಾಲಿಕವಾದ ಸಾರ್ವದೇಶಿಕವಾದ ಗುಣವನ್ನು ಹೊಂದಿ ಗುರುತ್ವವನ್ನು ಪಡೆದಿದೆ (ವೀರಯೋ. VI ಮುನ್ನುಡಿ). [ಕಾಲ + ಆಚಾರ]

**ಕಾಲಾಟ** (ನಾ). ೧. ತಿರುಗಾಟ; ಸುಳಿದಾಟ; ಸಂಚಾರ: ಸೊಂದಿಗೋಡಗಂಗಳ ಕಾಲಾಟದಿನಲ್ಲೊಕ್ಕಲರಿಸುದಿರ್ದ ದೂಳಿಗಳ ನಮರ್ಚಿಯುಂ (ಕಬ್ಬಿಕಾ. ೫೪); ರಾಯದಳದೊಳಗೆ ಅನಿಲಜನ ಕಾಲಾಟ ಕದಳೀವನದ ಕಾಡಾನೆಯ ಮೃಗಾಳಿಯ ವನಚರರ ದೆಖ್ಖಾಳದಬ್ಬರ ಕಾಣಲಾಯ್ತೆಂದ (ಕುವ್ಯಾಕ. ೧೪-೪೫); ಮತಿಯವಶರಿಸಿದುದು ಕಾಲಾಟವಾದುದು ಕರಣವೃತ್ತಿಗಳ (ನಿಭಾಗ. ೩-೨-೫); ಕಾಲಾಟವುಳ್ಳವನಿಗೆ ಕಷಾಯದ ಗಸಣಿ ಯಾಕೆ (ಗಾದೆ). ೨. ನರ್ತನ; ಕುಣಿತ: ಕಾಲಾಟದಿಂ ಬುಬುಬೆಂದು ಕುಣಿವುತ (ಬಸಪು. ೯-೧೨). ೩. ವೇಗದ ಗತಿ; ರಭಸದ ನಡಗೆ: ನರನ ಶರಜಾಲವಿದು ಕಲ್ಪಾನಲನ ಕಾಲಾಟ (ಕುವ್ಯಾಸ. ೩-೧೯); ೪. ಪ್ರಹಾರ; ಹೊಡೆತ: ಎಮ್ಮೊಡೆಯನ ಕೈಯ ನನೆಯ ಕೋಲ ಕಾಲಾಟಮಂ ಕಾಣ್ಬರ್ (ಕಬ್ಬಿಕಾ. ೧೮೮). ಅಬಲೆಯರ ಕಡ್ಗೋರೆಗಳ ಕಾಲಾಟಕಳುಕದರುಂಟೆ (ತೊರರಾ. ೧-೫-೫೨); ಕಾವನ ಕೈದಿನ ಕಾಲಾಟದಂತಿದೆ ಕೋವಿದೆ ನಿನ್ನ ವಿಲಾಸ (ಕುರಾಸಾಂ. ೨೬-೧೫೩). ೫. ಕಾಲಿನಿಂದ ಹೊಡೆಯುತ್ತ ಹಿಂಸೆ ಕೊಡುವಿಕೆ: ಹೆಬ್ಬುಲಿಯ ಕಾಲಾಟದಲಿ ಮೃಗಶಿಶು ಮಲೆತಡೇನಗ್ಗಳೆಯನೇ (ಕುವ್ಯಾಕ. ೨೩-೪೩).

**ಕಾಲಾಟವಡಗು** = ನಡಗೆಯಿಲ್ಲದಾಗು; ನಿಶ್ಚೇಷ್ಟಿತವಾಗು; ಸಾಯು: ಸುಧನ್ವನಿಸುವಿಸುಗೆಯಂ ಪೇಳಲಱಿಯೆಂ ತಿರುಗುತಿರ್ದುದು ವರೂಥಂ . . . ಕಾಲಾಟವಡಗಿದವು ಕುದುರೆಗಳ್ (ಜೈಮಿಭಾ. ೧೩-೨೦). [ಕಾಲ್$_1$ + ಆಟ]

**ಕಾಲಾಟಿ** (ನಾ). ದೇವಸ್ಥಾನ ಮೊದಲಾದವುಗಳ ಕಾರ್ಯ ನಿರ್ವಾಹಕ: ಯೀ ಧರ್ಮವನು ಯೀ ಸ್ತಾನದಲು ಕಾಲಾಟಿಗಳಾದ ಧಂನ್ಯರು ಕರುವಕುಂದ ಮೂವತ್ತು ವ್ರಿತ್ತಿಕಾಜಙ ಕೈಯಲು . . . ನಡಸಬಹುದು (ಸೌಇಇ. IX–ii, ೪೫೧-೧೮; 1447).

[ದೇ. ‖ ತಮಿ. ಕಾಲಾಡಿ]

**ಕಾಲಾಡಿ** (ನಾ). ೧. ವೇಗವಾಗಿ ನಡೆಯುವವನು; ಶೀಘ್ರಗಾಮಿ: (*). ೨. ಅಲೆಮಾರಿ; ಪೋಲಿ: (*). [ಕಾಲಾಡು + -ಇ$_2$]

**ಕಾಲಾಡಿತನ** (ನಾ). ಅಲೆದಾಟ; ಸುತ್ತಾಟ; ಓಡಾಟ: (*).

[ಕಾಲಾಡಿ + -ತನ]

**ಕಾಲಾಡಿಸು** (ಕ್ರಿ). ೧. ಓಡಾಡಿಸು; ತಿರುಗಾಡಿಸು: ಹೋರಿಯನ್ನು ಕಾಲಾಡಿಸುವುದಕ್ಕಾಗಿ ಹಿಡಿದುಕೊಂಡು ಹೋಗಬೇಕು (ಬೆಳುಮ. ೧೬೮). ೨. ಕಾಲಿಂದ ಮಗುಚಿಸು, —ಕೆದರಿಸು: ಭತ್ತವನ್ನು ಕಾಲಾಡಿಸಿ (ರೂಢಿ). [ಕಾಲಾಡು + -ಇಸು$_3$]

**ಕಾಲಾಡು** (ಕ್ರಿ). ೧. ನಡೆದಾಡು; ಓಡಾಡು; ತಿರುಗಾಡು: ಗುಗ್ಗುರಿಗಲ್ಗುಂಡುಗಲ್ಗು ಮೊರಡಿ ಬೆಟ್ಟ ನುಗ್ಗುಗಲ್ಗುದುರೆಗಲುಗಳ ಮೊಗ್ಗರದೊಳ್ಕಾಲಾಡ ಬಾರದು ಬಲು ದುರ್ಗವದೀಗೆ (ಕುರಾಸಾಂ. ೨೦-೯೬). ೨. ಕಾಲಿನಿಂದ ಮಗುಚು, —ಕೆದರು: ಲಕ್ಷಮ್ಮ ಹರಡಿದ್ದ ಭತ್ತವನ್ನು ಕಾಲಾಡಲು ಹೋದಳು (ನಿಕಲು. ೨೦೧). [ಕಾಲ್$_1$ + ಆಡು$_1$]

**ಕಾಲಾಣೆ** (ನಾ). ಒಂದು ನಾಣ್ಯ; ಆಣೆಯ ಕಾಲುಭಾಗ: ಕರೆದದ್ದಕ್ಕೆ ನನಗೆ ಕಾಲಾಣೆ ಕೊಟ್ಟ (ಹನ್ನೊಂದ. ೪೪). [ಕಾಲ್$_3$ + ಆಣೆ$_5$]

**ಕಾಲಾತಿಕ್ರಮ** (ನಾ). ಕಾಲಮೀರಿ ಹೋಗುವುದು; ನಿರ್ದಿಷ್ಟ ಸಮಯ ಕಳೆದುಹೋಗುವುದು: "ಅತಿಮೂತ್ರಾತಿಶಯಂ ಸಮುದ್ರಕಟ ಕಾಲಾತಿಕ್ರಮಂ ತಾವಿವಿಂಶತಿವೇಲಾಖ್ಯ" (ನಾನಾರ. ೧೩೩).

[ಕಾಲ + ಅತಿಕ್ರಮ]

**ಕಾಲಾದ್ರಿ** (ನಾ). ಒಂದು ಬಗೆಯ ಸಸ್ಯ: (ವೈಔಗ. ೪೪-೮೬೯). [?]

**ಕಾಲಾಧಿಪತಿ** (ನಾ). ಕಾಲದ ಒಡೆಯ; ಕಾಲಪುರುಷ: ಅದೆಂತು ಅವರು ಬಿಡುವು ಮಾಡಿಕೊಳ್ಳುತ್ತಿದ್ದರೋ ಕಾಲಾಧಿಪತಿಯೇ ಬಲ್ಲ (ಕಬಸಾ. VIII ಪೀಠಿಕೆ). [ಕಾಲ + ಅಧಿಪತಿ]

**ಕಾಲಾಧೀನ** (ಗು). (ಸರ್ವವನ್ನೂ ನಾಶಗೊಳಿಸುವ) ಕಾಲಪುರುಷನ ಅಧೀನವಾದ; ಮೃತ್ಯುವಶವಾದ: ಹರಿಹರಬ್ರಹ್ಮಾದಿ ಲೋಕಾಂತರವನೈದಿದ ಸುಕೃತಿಗಳು ಧರೆ ಗಿರಿಗಳಿವು ಮೊದಲಾಗಿ ಕಾಲಾಧೀನವಾಗಿಹವು (ಅವ್ಯತ. ೨-೪೦).

**ಕಾಲಾಧೀನವಾಗು** = ಸಾಯು; ಮೃತವಾಗು: ರುದ್ರಮೂರ್ತಿಯ ತಂದೆಯು ಕಾಲಾಧೀನನಾದ ಮೊದಲ್ಗೊಂಡು ನಡೆದ ವಿಷಯಗಳನ್ನೆಲ್ಲ ವಿಚಾರಿಸಿ (ಕವಿಕಾ. II, ೪೬). [ಕಾಲ + ಅಧೀನ]

**ಕಾಲಾನ್** (ಕ್ರಿ). ಕಾಲನ್ನು ಪಡೆ; ಚೇತನಗೊಳ್ಳು (?): ಭೀತಿ ಬಿಟ್ಟುದೆ ಮನುಜರಿಗೆ ನಮ್ಮಾತಗಳ ಕೂಡಹುದಲ್ಲೆ ಕಾಲಾತುದೇ ಕಲಿತನವೆನುತ ಕೈಕೊಂಡರವಗಡಿಸಿ (ಕುವ್ಯಾಅ. ೧೮-೪೦). [ಕಾಲ್$_1$ + ಆನ್$_1$]

**ಕಾಲಾನಲ** (ನಾ). ೧. = ಕಾಲಾಗ್ನಿ: ಕೌರವ್ಯಕುಲ ಕಾಲಾನಲನುಂ . . . ಎನಿಸಿದ ಭೀಮಸೇನಂ (ಗದಾಯು. ೨-೧ವ). ೨. ಭಯಂಕರವಾದ ಅಗ್ನಿ; ದಳ್ಳುರಿ: ಸ್ಮರಕಾಲಾನಲತಪ್ತಮೆನಿಸಿದೆನ್ನಂಗಗಳಿಂ (ಶಾಕುಂತ. ೩೩-೫೮). [ಕಾಲ + ಅನಲ]

**ಕಾಲಾನುಕಾಲ** (ನಾ). ೧. ಕಾಲಾಂತರ; ಎಂದಾದರೊಂದು ಕಾಲ: ದೈವದೊಲ್ಮೆಯಿರಲಾ ಕಾಲಾನುಕಾಲಕ್ಕೆ ತಾಂ ಬಡವಂ ಬಲ್ಲಿದನಾಗನೇ (ಸೋಮೇಶ. ೩೫). ೨. ಕಾಲದಿಂದ ಕಾಲಕ್ಕೆ; ವರ್ಷದಿಂದ ವರ್ಷಕ್ಕೆ: (*). [ಸಂ.]

**ಕಾಲಾನುಕೂಲ** (ಗು). ೧. ಕಾಲಕ್ಕೆ ಅನುಕೂಲವಾದ; ಕಾಲಾನುಗುಣವಾದ. (ನಾ). ೨. ಕಾಲಕ್ಕೆ ಅನುಕೂಲವಾದುದು; ಯೋಗ್ಯವಾದ ಕಾಲ : ತಾನೆಯೆಲ್ಲಾ ಇನ್ನು ಗುಗ್ಗುಳವೀ ನಿಟಿಲನಯನಂಗೆ ಈ ಕಾಲಾನುಕೂಲಕ್ಕೆನುತ (ಬಸಪು. ೪೪-೨೦); ಇನ್ನೂ ಕಾಲಾನುಕೂಲ ಒದಗಿಬಂದಿಲ್ಲ (ರೂಢಿ). [ಕಾಲ + ಅನುಕೂಲ]

**ಕಾಲಾನುಕ್ರಮ** (ಗು). ೧. ಕಾಲಕ್ರಮಾನುಸಾರವಾದ. (ನಾ). ೨. ಕಾಲದ ಆನುಪೂರ್ವಿ, —ಪರಿವಿಡಿ; (ಒಂದಾದಮೇಲೆ ಒಂದರಂತೆ ಬರುವ) ಕಾಲದ ಯಥಾಕ್ರಮವಾದ ರೀತಿ : ದ್ರಾವಿಡ ಭಾಷೆಗಳು ಕಾಲಾನುಕ್ರಮದಲ್ಲಿ . . . ಬೇರೆ ಬೇರೆಯಾಗಿ ಬೆಳೆದು ಬಂದಿವೆ (ದ್ರಾವಿವಿ. ೬ ಹಿನ್ನೆಲೆ). [ಕಾಲ+ ಅನುಕ್ರಮ]

**ಕಾಲಾನುಕ್ರಮಣಿ** (ನಾ). ಘಟನೆಗಳ ಕಾಲಾನುಕ್ರಮವಾದ ಪಟ್ಟಿ: "ನಡೆದ ಘಟನೆಗಳನ್ನು ಕಾಲಾನುಕ್ರಮವಾಗಿ ಬರೆದಿಟ್ಟಿರುವ ಪಟ್ಟಿ, ಪುಸ್ತಕ: ಕಾಲಾನುಕ್ರಮಣಿ" (Chronicle. ಇಂಕನಿ). [ಕಾಲ + ಅನುಕ್ರಮಣಿ]

**ಕಾಲಾನುಪೂರ್ವಿ** (ನಾ).=ಕಾಲಾನುಕ್ರಮ ೨: ಕಾವ್ಯದಲ್ಲಿನ ಸಂಗತಿಗಳು ಕಾಲಾನುಪೂರ್ವಿಯಿಂದಲ್ಲದೆ ಕಾರಣಾನುಪೂರ್ವಿಯಿಂದ ಕೂಡಿರುವುದಲ್ಲದೆ (ಅರಿಕಾ. ೧೫೭). [ಕಾಲ + ಅನುಪೂರ್ವಿ]

**ಕಾಲಾನುಸರಣೆ** (ನಾ). ಕಾಲಕ್ಕೆ ಹೊಂದಿಕೊಳ್ಳುವುದು ; ಕಾಲಕ್ಕೆ ತಕ್ಕಂತೆ ನಡೆದುಕೊಳ್ಳುವುದು ; ಸಮಯಾನುವರ್ತನೆ : (*). [ಕಾಲ$_1$ + ಅನುಸರಣೆ]

**ಕಾಲಾನುಸಾರ** (ನಾ).=ಕಾಲಾನುಸರಣಿ : (*). [ಕಾಲ + ಅನುಸಾರ]

**ಕಾಲಾನುಸಾರ್ಯ** (ನಾ). ೧. ಒಂದು ಬಗೆಯ ಹಳದಿ ಬಣ್ಣದ ಸುವಾಸನೆಯ ಮರ: (*). ೨. ಅಗರು ಗಂಧ: "ಕಾಲಾನುಸಾರ್ಯಂ ಕರೇ ಅಗರು ಚಕ್ಕೆ ಅಗರುಗಂಧ ಶ್ರೀಗಂಧಕ್ಕು ಹೆಸರು" (ಸಿದ್ಧಾಂತಿ. ೧೭೯). ೩. ಸಾಂಬ್ರಾಣಿ. ೪. ಕಲ್ಲುಹೂವು. [ಸಂ.]

**ಕಾಲಾನುಸಾರ್ಯಕ** (ನಾ). ಅಗರು: "ಅಗರು ಕಾಲಾನುಸಾರ್ಯಕಂ" (ವಸ್ತುಕೋ. ೭೬-೧೧). [ಸಂ.]

**ಕಾಲಾಪ** (ನಾ). [ಸಂಗೀತ] ಸಪ್ತಸ್ವರಗಳ ಆಲಾಪನ ಕ್ರಮದ ಭೇದಗಳಲ್ಲೊಂದು : ಆಲಾಪ ಕಾಲಾಪ . . . ವ್ಯಾಪ್ತಿ ಮುಂತಾದ ಇಪ್ಪತ್ನಾಲ್ಕು ತೆಱದಲ್ಲಿ ಸರಿಗಮಪದನಿ ಎಂಬ ಸಪ್ತಸ್ವಂರಗಳ ಸಾರೋಹಣ ಅವರೋಹಣ ಮುಂತಾದ ನಾಲ್ವತ್ತಾಱು ಭೇದವಱಿಂದಾಲಾಪಿಸಿ ಕೇಳಿಸುವ (ವಿವೇಕ. ೨೩೭). [?]

**ಕಾಲಾಪಾನಿ, ಕಾಳಾಪಾಣಿ** (ನಾ). ಕರಿನೀರಿನ ಶಿಕ್ಷೆ; ದ್ವೀಪಾಂತರ ಶಿಕ್ಷೆ; ಗಡಿಪಾರು : ನಿಮ್ಮ ನಶೀಬದಾಗ ಕಾಲಾಪಾನಿಗೆ ಹೋಗೂದ ಅದ ಎಂದು ಕಾಣಿಸುತ್ತದೆ (ನಡೆದಾ. I, ೧೧೬). **ಕಾಳಾಪಾಣಿ** : ಸ್ತ್ರೀಯರಿಗೆ ಫಾಶಿ ಶಿಕ್ಷೆಯ ಬದಲು ಹೆಚ್ಚಾಗಿ ಕಾಳಾಪಾಣಿಗೆ ಸಾಗಿಸುತ್ತಿದ್ದರು (ಗರತಿ. ೧೫೯) ; ಅಧಿಕಾರಿಯು . . . ಆವಳಿಗೆ ಆಜನ್ಮ ಕಾಳಾಪಾಣಿಯನ್ನು ವಿಧಿಸಿದನು (ದೇವಿಪ್ರ. ೧೬೮). [← ಹಿಂ. ಮರಾ. ಕಾಲಾಪಾನೀ]

**ಕಾಲಾಯಸ, ಕಾಳಾಯಸ** (ನಾ). ಕಪ್ಪುಲೋಹ ; ಕಬ್ಬಿಣ : ವಸುಧಾಚಕ್ರಕ್ಕೆ ಕಾಲಾಯಸಗೃಹವರಣಂ . . . ಎಂಬಿನಂ ಬಂದುದು ಬಹುಳತಟಜ್ಜಾಲಮಂಭೋದ ಕಾಲಂ (ಕಾದಂಬ. ೫೨೯) ; ಕಾಲಾಯಸದಿಂ ವಿನಿರ್ಮಿಸಿದ ಕಂಠಿಕೆ ಕಾಂಚನಮಾಲೆಯಂತುಪಾದೇಯಮೆನಿಕ್ಕುಮೇ (ಪಂರಾಮಾ. ೧-೩೭) ; ಕಾಲಾಯಸಕೆ ಸಮಂ ನಿನ್ನ ಕಲ್ಲೆರ್ದೆ ಕರಗಿ ಮೆಲ್ಲಿತಪ್ಪುದು ದಿಟಂ (ಶ್ರೀರಾಮಾ. ೩೩೪-೭೯). **ಕಾಳಾಯಸ** : ಕಾಳಾಯಸವಳಯ ಭಯಂಕರಕರದ್ವಯಮುಮಂ (ಆದಿಪು. ೧೩-೪೫ವ); ಕರಮೆ ಕರಗಿಸಿದ ಕಾಳಾಯಸರಸಮುಂ (ಅಜಿಪು. ೧೧-೧೦ ವ). [ಸಂ.]

**ಕಾಲಾರಿ$_1$** (ನಾ). ಕರಿಯಪಕ್ಕಗಳುಳ್ಳ ಒಂದು ಹಕ್ಕಿ : (*). [?]

**ಕಾಲಾರಿ$_2$** (ನಾ). ಯಮನ ವೈರಿ ; ಶಿವ : ಕಾಲಾರಿ ಶಿವನ ನಾರಿ ಗಂಗಾಂಬಾವತಾರಿ . . . ಕಾವೇರಿ (ಭಾವಚಿಂ. ೨-೭) ; ಕಾಲಾರಿ ರುದ್ರ ಶರ್ವನೆ ಶಂಕರನೆ (ವೀಶೈಷು. ೩-೫-೧೧). [ಕಾಲ + ಅರಿ$_6$]

**ಕಾಲಾವದಿ** (ನಾ). ಸಾರುವೆ ; ಸಾರ : ಕಾಲಾವದಿ ಕಟ್ಟಿಕೊಂಡು ಮನೆಯ ಮಾಳಿಗೆಗೆ ಸುಣ್ಣ ಬಳಿದರು (ರೂಢಿ). [ಕಾಲ್$_1$ + ಅವದಿ ?]

**ಕಾಲಾವಧಿ** (ನಾ). ೧. ಗೊತ್ತುಪಡಿಸಿದ ಸಮಯ, —ಕಾಲಮಿತಿ : ಶಿಕ್ಷಣದ ಕಾಲಾವಧಿಯನ್ನು ಅತಿದೀರ್ಘವಾಗಿ ಹೆಚ್ಚಿಸುವುದೂ (ಶಿಕ್ಷದ. ೮೯). ೨. ವರ್ಷದ ಕೊನೆ. ೩. ಅಂತ್ಯ ; ಮುಕ್ತಾಯ : ಸೀತೆಯ ಬೇವಸಕ್ಕೆ ಕಾಲಾವಧಿಯಾದುದಿಲ್ಲೆನೆ (ಪಂರಾಮಾ. ೧೪-೧೮೪). [ಕಾಲ + ಅವಧಿ]

**ಕಾಲಾವಿರ್** (ನಾ). ಒಬ್ಬಾತನ ಹೆಸರು : ಶ್ರೀ ಕಾಲಾವಿರ್ಗುರವಡಿಗಳ ಶಿಷ್ಯರ್. . .ಕಲಾಪಕದ ಗುರವಡಿಗಳ್ (ಎಕ. II, ೩೩-೧ ; 700). [?]

**ಕಾಲಾಷ** (ನಾ). [ಸಂಗೀತ] ಸಪ್ತಸ್ವರಗಳ ಆಲಾಪನ ಕ್ರಮದ ಭೇದಗಳಲ್ಲೊಂದು : ಅಲಾಪ ಕಾಲಾಪ. . . ಕಾಲಾಷ . . . ವ್ಯಾಪ್ತಿ ಮುಂತಾದ ಇಪ್ಪತ್ನಾಲ್ಕು ತೆಱದಲ್ಲಿ ಸರಿಗಮಪದನಿಯೆಂಬ ಸಪ್ತಸ್ವರಂಗಳ . . . ಆಲಾಪಿಸಿ (ವಿವೇಕ. ೨೩೭). 'ಕಾಲಾಪ' ಪಠಾ. [?]

**ಕಾಲಾಹಿ, ಕಾಳಾಹಿ** (ನಾ). ಕಾಲಸರ್ಪ ; ಕೃಷ್ಣಸರ್ಪ : ಕಱುತ್ತಿಸುವುದುಂ ಕಾಲಾಹಿವೊಲ್ ಕೊಂಡು ತೊಟ್ಟನೆ ಬೆನ್ನಿಂ ಪೊಱಮಟ್ಟು ಪೋಗೆ (ಪಂರಾಮಾ. ೧೩-೯೦). **ಕಾಳಾಹಿ** : ಕಾಳಾಹಿ ಭೋಗದಲಿ ಹೊಳೆವ ಹೆಡೆಮಣಿಯಂತೆ (ಶ್ರೀರಾಮಾ. ೨೩-೩೧೭). [ಕಾಲ + ಅಹಿ]

**ಕಾಲಾಳ್$_1$, ಕಾಲಾಳು** (ನಾ). ಕಾಲುನಡೆಯ ಸೈನಿಕ; ಪದಾತಿ : "ಯಾತಂ ಪದಾತಿಕಂ ಪಾಯದಳ ಪತ್ತಿ ಪಾದಾತಂ ಪದಾಜಯಂ ಪದಿಕನೆನೆ ಕಾಲಾಳ್" (ಮಂಗರಾ. ೮೫-೨೬) ; ಕಾಲಾಳೊಳಂ ಕುದುರೆಯೊಳಮೊಳಗಂ ಬರಲಾನೆ ಬಲ್ಲೆಂ (ಪಂಪಭಾ. ೫-೪೩ ವ) ; ಕಾಲಾಳ್ಕಿದುವು (ಶಮದ. ೧೩೭ ಪ್ರಯೋ) ; ಕರಿಘಟೆಯ ತೇರಿನ ನಿಡುವರಿಯ ಕಾಲಾಳ ಕಳವಳವಾಯ್ತು ರಣದೊಳಗೆ (ಕುವ್ಯಾದ್ರೋ. ೯-೧೨) ; ಕುಟ್ಟಿ ಕೆಡಹಿ ಕಾಲಾಳ್ಗಳನುರೆ ಬೆನ್ನಟ್ಟಿ ತಿವಿದರ್ (ಕಂನವಿ. ೩-೨೦). **ಕಾಲಾಳು** : "ಪದಾತಿಃ, ಪತ್ತಿಃ . . .ಪದಃ, ಪದಿಕಃ – ಈ ೭ ಕಾಲಾಳು" (ನಾಚಿರಾ. ೧೩೪) ; ಸನ್ನೆ ಸಾವಿರಕಾಲಾಳಿನ ಸತ್ತ್ವವೈ (ಸೋಮೇಶ. ೭೬); ಕಡುಮನದ ಕಾಲಾಳು ಕಱಿದುದು ಖಡುಗಧಾರೆಯನು (ಕುವ್ಯಾದ್ರೋ. ೬-೩೯) ; ಕಾಲಾಳು ಪವುಱು ಮುರಿದು ವಾರುವಗಳ ಸಾಲೆಯೊಳು ಮಱೆಗೊಂಡವಾಗ (ಕಂನವಿ. ೩-೮೨). [ಕಾಲ್$_1$ + ಆಳ್$_3$]

**ಕಾಲಾಳು** 'ಕಾಲಾಳ್' ನೋ.

**ಕಾಲಾಳುಗೂಡು** (ಕ್ರಿ). ಕಾಲಾಳುಗಳನ್ನು ಹೊಂದಿರು ; ಪದಾತಿಗಳಿಂದ ಕೂಡಿರು : ತೇಜಿಗಳಾರು ಸಾವಿರ . . . ನಿಕರದ ಕರಿ ಕಾಲಾಳುಗೂಡಿದ ಪೌಜಿಯ ಕಲಾಸಖಾನ ತೋಱಿದನು (ಕಂನವಿ. ೧೧-೮೮). [ಕಾಲಾಳು (< ಕಾಲಾಳ್) + ಕೂಡು$_1$]

**ಕಾಲಿ, ಕಾಳಿ$_3$** (ನಾ). ೧. ದುರ್ಗೆ ; ಪಾರ್ವತಿ : ಕಾಲಿ[ಪಾಠಾಂ. ಶೂಲಿ] ಸೂಡಿದ ಪುಷ್ಪಮಾಲೆಯಂ ದುರ್ವಾಸ ಲೋಲಮುನಿ ಕುಡೆ (ಭಾವಚಿಂ. ೩-೧೦). ೨. ಕಪ್ಪು ಬಣ್ಣದವಳು ; ಕರಿಪಿ. **ಕಾಳಿ$_2$** : ೧. "ರುದ್ರಾಣೀ, ಶರ್ವಾಣೀ, ಕಾಳೀ . . . ಮೇನಕಾತ್ಮಜಾ – ಈ ೨೧ ಗೌರಿದೇವಿಯ ಪೆಸರ್" (ಹಲಾಯು. ೪-೧೫-೧೬) ; ಕಾಳಿ ಕಾಪಾಲಿಗೆ ಮದಂ ದೇವಗಜಕೆ . . . ತೊಡವಾಗಿರೆ (ಜೈಮಿಭಾ. ೧೮-೧೪). ೨. ಮಲ್ಲಣ್ಣನ ಹೆಂಡತಿ ಕೆಂಪಿ, ಹೆಸರು ಕೆಂಪಿಯಾದರೂ ಬಣ್ಣದಲ್ಲಿ ಮಾತ್ರ ಕಾಳಿ (ಮಲ್ಲಿ. ೯).

೩. ರಕ್ತಪಾನದಲ್ಲಿ ಆಸಕ್ತಿಯಿರುವ ಒಂದು ಬಗೆಯ ದೇವತೆ; ರಣಮಾರಿ: ಹೋಳಿರಡ ಬಿಸಾಡಿ ರಣದಲಿ ಕಾಳಿ ಕಂಕಾಳಿಯರು ದಣಿದರು (ಕೌಶಿರಾ. ೨೦-೩೪). [ಸಂ. ಕಾಲೀ]

**ಕಾಲಿಂಗ**, ಕಾಳಿಂಗ (ನಾ). ೧. ಕಲಿಂಗದೇಶ. ೨. ಕಲಿಂಗದ ಜನ. ೩. ಕಲಿಂಗದ ರಾಜ. ೪. ಆನೆ. ೫. ಕರಿಯನಾಗ; ಕೃಷ್ಣಸರ್ಪ. ೬. ಕಲಿಂಗದೇಶದ ಒಂದು ಮಹಾ ವಿಷಸರ್ಪ. 'ಕಾಲಿಂಗ ಮರ್ದನ' ಪರಾ. ೭. ಕಲ್ಲಂಗಡಿ ಹಣ್ಣು. ೮. ವಿಷದ ಸಸ್ಯ. **ಕಾಳಿಂಗ**: ೫. "ತನುವಿನಲಿ ಕಪ್ಪಿರಲು ಕಾಳಿಂಗನಕ್ಕು (ಮಂಗರಾ. ೧೯೯-೪). ೬. ಹತ್ತಿ ತುಳಿದ ಕಾಳಿಂಗನ ಹೆಡೆಗಳ ಅಹಂಕಾರ ಹಿಳಿದು (ನೆಲಮು. ೩೯). ೭. ಮಾಗಧ ಮರಿಚಂ ಸೈಂಧವ ನಾಗರ ಕಾಳಿಂಗಮಿಂಗು ಸರುಷಪದೊಳ್ ಸಂಯೋಗಂಗೆಯ್ (ಅಶ್ವಶಾ. ೧೧-೨೧). [ಸಂ.]

**ಕಾಲಿಂಗಮರ್ದನ**, ಕಾಳಿಂಗಮರ್ದನ (ನಾ). ಕಾಳಿಂಗ ಸರ್ಪವನ್ನು ಮರ್ದಿಸಿದವನು; ಕೃಷ್ಣ: (ಕ). **ಕಾಳಿಂಗಮರ್ದನ**: ಕಾಳಿಂಗ [ಪಾಠಾಂ. ಕಾಳಿಯ]ಮರ್ದನ ಕೃಷ್ಣಗೆ ಪೇಳಿ ಗೋಪ್ಯಮ್ಮ ಬುದ್ಧಿಯ (ಪುರಂದ. ೩-೧೪೬-೧). [ಕಾಲಿಂಗ + ಮರ್ದನ]

**ಕಾಲಿಂದಿ**, ಕಾಳಿಂದಿ (ನಾ). ೧. ಯಮುನಾ ನದಿ: ಕಾಲಿಂದಿಯ ನಮರಾಪಗೆ. . .ಪೋಲ್ತಿರೆ ಕಾಲದ ಮವುರ್ವಿ ಪರ್ವಿತುರ್ವೀತಳಮಂ (ಪುಷ್ಪಪು. ೮-೧೦೦). **ಕಾಳಿಂದಿ**: ೧. "ಕಾಳಿಂದಿ ದಿನಕರಾತ್ಮಜೆ ಯಮಾನುಜೆಯೆನಲು ಯಮುನೆಯಕ್ಕುಂ" (ಮಂಗರಾ. ೧೨೨-೧೧); ಮಂದಾಕಿನಿ ಪರಿದಾ ಕಾಳಿಂದಿಯೆಗೆತ್ತಾದಮಟ್ಟುಜಿಂದಂ ಕೊರಲಂ ಬಂದಪ್ಪಿರ್ದಳೊ ಪೇಜೆಂಬಂದದಿನೆಸೆದತ್ತು ಹಾರಮಾ ಕಾಮಿನಿಯಾ (ಕಾದಂಪೂ. ೪೮); ತೆಕ್ಕನೆ ತೀವಿ ಬಂದ ಕಾಳಿಂದಿಯಂ ಕಂಡು (ಜಗವಿ. ೩-೯ ವ). ೨. [ಸಂಗೀತ] ಒಂದು ಬಗೆಯ ರಾಗ: ಕೌಶಿಕಿ . . . ಕಾಳಿಂದಿ . . . ಎಂಬ ಮೂವತ್ತುನಾಲ್ಕು ರಾಗಂಗಳೀ ಭಾಷಾಂಗದಿಂದ ಪುಟ್ಟಿದವು (ವಿವೇಕ. ೨೩೪). [ಸಂ. ಕಾಲಿಂದೀ]

**ಕಾಲಿಂದಿವೈರಿ**, ಕಾಳಿಂದಿವೈರಿ (ನಾ). ಕಾಲಿಂದಿಯ ಶತ್ರು; ಬಲರಾಮ: (ಕ). **ಕಾಳಿಂದಿವೈರಿ**: "ನೀಲಾಂಬರಂ ರೇವತೀಶಂ ಹಲಾಯುಧಂ ಕಾಳಿಂದಿವೈರಿ . . . ರಾಮನೆನಲು ಬಲನಕ್ಕು" (ಮಂಗರಾ. ೭-೨೧). [ಕಾಲಿಂದಿ + ವೈರಿ]

**ಕಾಲಿಂದಿಸಹಜಾತ**, ಕಾಳಿಂದಿಸಹಜಾತ (ನಾ). ಕಾಲಿಂದಿಯ ಸಹೋದರ; ಯಮ: (ಕ). **ಕಾಳಿಂದಿಸಹಜಾತ**: "ಪ್ರೇತಪತಿ ಸಮವರ್ತಿ ಮೃತ್ಯು ಕಾಳಿಂದಿಸಹಜಾತಂ ಯಮಂ . . . ಕೃತಾಂತನಕ್ಕುಂ" (ಮಂಗರಾ. ೧೫-೧೦). [ಕಾಲಿಂದಿ + ಸಹಜಾತ]

**ಕಾಲಿಂದೀಕರ್ಷಣ**, ಕಾಳಿಂದೀಕರ್ಷಣ (ನಾ). ಹಲಾಯುಧದಿಂದ ಯಮುನಾನದಿಯ ಪ್ರವಾಹವನ್ನು ಎಳೆದವನು; ಬಲರಾಮ: (ಕ). **ಕಾಳಿಂದೀಕರ್ಷಣ**: "ಬಲದೇವಃ . . . ಕಾಳಿಂದೀಕರ್ಷಣಃ . . . ಹಲಾಯುಧಃ -ಈ ೧೮ ಬಲದೇವನ ಪೆಸರ್" (ಹಲಾಯು. ೬-೨೯,೩೦). [ಸಂ. (ಕಾಲಿಂದೀ + ಕರ್ಷಣ)]

**ಕಾಲಿಂದೀಭೇದನ** (ನಾ). = ಕಾಲಿಂದೀಕರ್ಷಣ: (ಕ). [ಸಂ. (ಕಾಲಿಂದೀ + ಭೇದನ)]

**ಕಾಲಿಂದೀಸೋದರ**, ಕಾಳಿಂದೀಸೋದರ (ನಾ). = ಕಾಲಿಂದಿಸಹಜಾತ: (ಕ). **ಕಾಳಿಂದೀಸೋದರ**: ಏಕಾಂಗದಿಂ ಯುದ್ಧಕೇಳಿಗೆ ಬಂದ ಕಾಳಿಂದೀಸೋದರನಂ ನೋಡಿ (ಜಗವಿ. ೭-೨೫). [ಸಂ. (ಕಾಲಿಂದೀ + ಸೋದರ)]

**ಕಾಲಿಕ** (ಗು). ೧. ಕಾಲಕ್ಕೆ ಸಂಬಂಧಿಸಿದ. ೨. ಆಯಾ ಕಾಲಕ್ಕೆ ತಕ್ಕ; ಸಮಯೋಚಿತವಾದ; ಸಂದರ್ಭೋಚಿತವಾದ. (ನಾ). ೩. ಆಯಾ ಕಾಲಗಳಲ್ಲಿ ಮಾಡುವ ಸಂಧ್ಯಾವಂದನೆ, ಶ್ರಾದ್ಧ ಮೊದಲಾದ ಧಾರ್ಮಿಕ ಕರ್ಮ: ದೈಶಿಕ ಕಾಲಿಕತ್ರಯಗಹನ ಕರ್ಮಗಳುಂಟು (ಹಸಾರ. ೯-೪). 'ಸಕಾಲಿಕ' ಪರಾ. [ಸಂ.]

**ಕಾಲಿಕಾದೇವಿ**, ಕಾಳಿಕಾದೇವಿ (ನಾ). ದುರ್ಗಾದೇವಿ: (ಕ). **ಕಾಳಿಕಾದೇವಿ**: ಊರಮುಂದೆ ಕಾಳಿಕಾದೇವಿಯ ಗುಡಿ ಇದೆ (ರೂಢಿ). [ಸಂ. (ಕಾಲಿಕಾ + ದೇವಿ)]

**ಕಾಲಿಕೆ**, ಕಾಳಿಕೆ (ನಾ). ೧. ಕಪ್ಪು; ಕತ್ತಲೆ: ಧರೆಗೆ ಗಗನಕೆ ಕಾಳಿಕೆಯ ಪಸರಿಸಿತು ಜೋದರ ಕೋದ ಶರಜಾಲ (ಕುವ್ಯಾಭೀ. ೪-೮೪); ಮಾಳಿಗೆ ಮನೆಯ ಕಾಳಿಕೆಯೊಳಗೆ ಹೂಳಿದ್ದ ವಸ್ತು ಇದೇನಯ್ಯಾ? (ಸಿದ್ಧೇವ. ೪೨೧); ಬೆಸುವ ಮೇಘದ ಕಾಳಿಕೆಯ ಖಂಡಿಸುವ ಮಿಂಚಿನ ಸಂಚರದ (ತೊರರಾ. ೪-೬-೬). ೨. ಮಾಲಿನ್ಯ; ಕುಂದು; ದೋಷ: ನೀರದ ಮಾಲಿಕೆಯಿಂ ತೊಲಗಿದ ಶಶಿ ಕಾಲಿಕೆಯಿಂ ಬೇರ್ಪಟ್ಟ ಕನಕಮಿರ್ಪಂತಿರ್ದಂ (ಪಂರಾಮಾ. ೧೬-೮೧). ೩. ಮೋಡಗಳ ಗುಂಪು; ಮೇಘಾವಳಿ: (ಕ). ೪. ತುಕ್ಕು; ಕಿಲುಬು. ೫. ದುರ್ಗೆ; ಪಾರ್ವತಿ. **ಕಾಳಿಕೆ**: ೧. ಅರಳುಗಂಗಳ ಬೆಳಗಿನಲಿ ತಮವಿರುಳು ಬೀತುದು ಬೆಸುವುದಾಗಲೆ ಕುರುಳ ಕಾಳಿಕೆಯಿಂದ ತತ್ಕಾಂತಾ ಕದಂಬದಲಿ (ಕುವ್ಯಾಆ. ೧೧-೨೭); ಕಾಳಾಗರು ಧೂಪಧೂಮದ ಕಾಳಿಕೆ ಮೇಲೆದ್ದು ನಭಕ್ಕೈದಿತಾಗ (ಗೋಮಟೇ. ೫-೯೩); ಸೂರ್ಯಮಂಡಲದ ಸುತ್ತಲೂ ಕಾಳಿಕೆ ಕಾಣಿಸಿಕೊಂಡಿತು (ರಾಜಸೂ. ೬೫). ೨. ಕುದಿಯಿಸುವು ದೆಣ್ಣೆಯಿಂ ಮುಂ ತದುಕಿಂ ಗುಗ್ಗುಳದಿನಕ್ಕೆ . . . ಆ ತೈಲದೊಂದು ಕಾಳಿಕೆ ಕಿಡುಗುಂ (ಲೋಕೋಪ. ೭-೧೩); ತದ್ವನಿತೆಯ ಹೃದಯದ ಕಾಳಿಕೆಯೆನೆ ಸೊಗಯಿಸಿದತ್ತು ಮೇಚಕತೆ ಚೂಚುಕದೊಳ್ (ಚಂದ್ರಪು. ೭-೮೬); ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ, ಒರೆ ಬಣ್ಣಕೆ ತಂದೆನ್ನ ಪುಟವಿಕ್ಕಿ ನೋಡಯ್ಯಾ (ಬಸವ. ೨೫೧); ಹಿಂದೊಮ್ಮೆ ಅವನ ಪ್ರಣಯದಲ್ಲಿ ಸಂಶಯ ಬಂದಿತ್ತು, ನಿಜ. ಆದರೆ ಆ ಶಂಕೆ ಬಂದಂದೇ ಆದರ ಕಾಳಿಕೆಯೂ ಕಳೆದುಹೋಗಿತ್ತು (ರೂಪಸ. ೩೯). ೪. "ಕಿಲುಬೆಂದೆನೆ ಕಾಳಿಕೆ" (ಕವಿಕಂ. ೧೯೭); "ಕಾಳಿಕೆ – ಕಾಲಿಕಾ = ಕಿಲುಬು." (ತದ್ಭಕೋ. ೭). [ಸಂ. ಕಾಲಿಕಾ]

**ಕಾಲಿಕ್ಕು** (ಕ್ರಿ). = ಕಾಲಿಡು: ಉಕ್ಕಿದುದು ಕಡುಶೋಕರಸ ಕಾಲಿಕ್ಕಿತಗ್ಗದ ಮಱವೆ (ತೊರರಾ. ೬-೪೭-೩೮); ನೀಲನು ಈ ಮೊದಲೆ ಪಶ್ಚಿಮಾಭಿಮುಖವಾಗಿ ಕಾಲಿಕ್ಕಿದ್ದನು (ಬಂಗಾಹ. ೧೫). [ಕಾಲ್$_1$ + ಇಕ್ಕು]

**ಕಾಲಿಗೆ** (ನಾ). ಭೂಮಿಯಲ್ಲಿ ವರ್ಷ ವರ್ಷ ಅದೇ ಬೆಳೆಯನ್ನು ತೆಗೆಯದೆ ವರ್ಷಕ್ಕೊಂದು ಬೆಳೆಯನ್ನು ಬದಲಿಸುವಿಕೆ; ಸರದಿ ಬೆಳೆ; ಆವರ್ತನ ಪೈರು; ಮೂರುವರ್ಷದವರೆಗೂ ಗೋಧಿಯನ್ನು ಬಿತ್ತಬೇಕು. ಈ ಪ್ರಕಾರ ಕಾಲಿಗೆಯನ್ನು ಮಾಡುತ್ತ ಹೋಗಬೇಕು (ಕೃಷಿಪ್ರ. ೮೩); ತೈಲಧಾನ್ಯದ ಕಾಲಿಗೆ, ಕಡಲಿಯ ಕಾಲಿಗೆ ಈ ಎರಡೂ ಕೂಡಿ ಮುಂದಿನ ವರ್ಷಕ್ಕೆ ಗೊಬ್ಬರದ ಹಾಗೆ ತ್ರಾಣವಾಗುವುದು (ಕೃಷಿಪ್ರ. ೪೬). [?]

**ಕಾಲಿಡು** (ಕ್ರಿ). ಹೆಜ್ಜೆಯಿಡು; ನಡೆ; ಸೇರು; ಪ್ರವೇಶಿಸು: ಶತದಳಾಯತಲೋಲ ದೃಗುದೀಧಿತಿಗಳಲ್ಲಿಯೆ ಸಿಕ್ಕಿ ಕಾಲಿಡಲಱಿಯದೋರಂತೆ ರತೀಶನೆಸುವ ನಿಶಾತಮಾರ್ಗಣ ಹತಿಗೆ ಗುಱಿಯಾದೆನು (ಬಸಪು. ೪೦-೭); ತಿಂತಿಣಿಯ ರಘುವರಚರಿತೆಯಲಿ ಕಾಲಿಡಲು ತೆರಪಿಲ್ಲ (ಕುವ್ಯಾಆ. ೧-೧೭); ಪುರುಷರಿಹ ಯೇಕಾಂತ ಸೆಜ್ಜೆವನೆಗೆ ಕಾಲಿಡಲ್ಕಂಜುವೆಂ (ನವಮೋ. ೯-೨೪); ಕಾಲಿಡಲ್ಕಾ ಶಿಲೆಯೊಳಾ ತುರಂಗದ ಖುರಂ ಕೀಲಿಸಿತು (ಜೈಮಿಭಾ. ೧೦-೧೧); ಸಂಜೆ ಕಾಲಿಟ್ಟಿತು (ಯೋಧಪು. ೬೯). [ಕಾಲ್$_1$ + ಇಡು$_1$]

**ಕಾಲಿಮೆ**, ಕ್ಶಾಳಿಮ, ಕಾಳಿಮೆ (ನಾ). ೧. ಕಪ್ಪು. ೨. ಕರೆ; ಕಲೆ; ಕಳಂಕ: ಕಾಮದ ಕೃತಿಯಾಗಿದ್ದರೆ . . . ಜಹಾಂಗೀರನಿಗೆ ಈ ಕಾಲಿಮೆ ಅಂಟದೆ ಹೋಗದು (ನೂರಜ. ೨೦). **ಕಾಳಿಮ:** ೧. ಎಸೆಗುಂ ಕುಚಭರ ಚೂಚುಕಯುಗಳ ಕಾಳಿಮಂ ದೇವಕಿಯಾ (ಜಗವಿ. ೨-೯೨); ಕಱಿದುವು ಕಾಳಿಮಮಂ ಕಱಿದುವು ಮಿಂಚಂ ಬೞಿಕ್ಕೆ (ಚಂದ್ರಪು. ೪-೩೮); ಕಾಳಿಮದ ಕೂಟಮೆನಗಿಲ್ಲ (ಜೈಮಿಭಾ. ೧೮-೧೪). **ಕಾಳಿಮೆ:** ೧. ಹರಿಯ ಕಾಳಿಮೆಯ ವಿಷದ ಕರ್ಬುರವ . . . ಎಳೆದುಕೊಂಡೊಡ ಗೂಡಿ ತುಳಿದು ಹಿಳಿದಬುಜಜಂ ಬೆಳಗು ಮುಳುಗಲು ಬಳಿದನೋ ಬಯಲನೆಂದೆನಿಸಿ (ಸಿದ್ಧರಾ. ೭-೩೭); ಮನಸ್ಸಿನ ಮೇಲೆ ಕವಿದಿದ್ದ ಕಥೇರಿ ಯಂತ್ರದ ಕಾಳಿಮೆ ತನ್ನಿಂದ ತಾನೇ ಕೊಚ್ಚಿಹೋಯಿತು (ಶ್ರೀಪ್ಕಪ್ರ. ೨೨೨). [< ಸಂ. ಕಾಲಿಮನ್]

**ಕಾಲಿಯಮ್ಮ** (ನಾ). ಒಬ್ಬಾತನ ಹೆಸರು: ಪೂಲಿಯೂ ಕೊಜ್ನಯೂ ಕಾಲಿಯಮ್ಮನೂ ಇಟ್ಟು ಕೊಟ್ಟರ್ (ಎಕ. VIII, ಸೊರಬ. ೨೨-೧೧; 800). [ಕಾಲಿ ? + ಅಮ್ಮ$_1$]

**ಕಾಲಿರಿಸು** (ಕ್ರಿ). = ಕಾಲಿಡು: ಮನೆಯೊಳಗೆ ಕಾಲಿರಿಸಿದ ಕೂಡಲೇ ಅದೇ ಮಾತು (ನಿರ್ದೋಷಿ. ೧೫). [ಕಾಲ್$_1$ + ಇರಿಸು]

**ಕಾಲಿಲಿ** (ನಾ). ಕಾಲಿಲ್ಲದವನು; ಹೆಳವ: "ಕುಂಟ, ಹೆಳವ, ಕಾಲಿಲಿ" (ಕಂನುಹು. ೮೧). 'ಪಲ್ಲಿಲಿ' ಪರಾ. [ಕಾಲ್$_1$ + – ಇಲಿ$_2$]

**ಕಾಲಿವೆ** 'ಕಾಲ್ವಾಯ್' ನೋ.

**ಕಾಲೀನ** (ಗು). = ಕಾಲಿಕ. ೧. 'ತತ್ಕಾಲೀನ' ಪರಾ. [ಸಂ.]

**ಕಾಲೀಯಕ** (ನಾ). ಅಗರುಚಕ್ಕೆ; ಅಗರುಗಂಧ. [ಸಂ.]

**ಕಾಲು$_1$** 'ಕಾಲ್$_1$' ನೋ.

**ಕಾಲು$_2$** 'ಕಾಲ್$_2$' ನೋ.

**ಕಾಲು$_3$** 'ಕಾಲ್$_3$' ನೋ.

**ಕಾಲುಂಗರ** 'ಕಾಲುಂಗುರ' ನೋ.

**ಕಾಲುಂಗಾರೆ** (ನಾ). (?): ಈ ದಂಡಿನ ಕಾಲುಂಗಾರೆಯವರೂ ಬಾಣ ಕಾರರೂ, ಕಳ್ಳಸಿಪಾಯಿಗಳಿಗೂ . . . ದೇಶವನ್ನು ಹೊಕ್ಕು ದೊಂಬಿ ಮಾಡಲುಪಕ್ರಮಿಸಿದರು (ಬಖೈರು. ೧೪). [?]

**ಕಾಲುಂಗುರ**, ಕಾಲುಂಗರ (ನಾ). ಹೆಂಗಸರು ಕಾಲುಬೆರಳಿಗೆ ಇಟ್ಟು ಕೊಳ್ಳುವ (ಬೆಳ್ಳಿಯ) ಉಂಗುರ; ಕಾಲುಸುತ್ತು; ಸುತ್ತುಂಗುರ: ನೆರೆದು ಪಳಂಚುವ ಕಾಲುಂಗುರದ ರವಂ (ಗಿರಿಕ. ೭-೫೧); ಮುಡಿ ಪೂಗಳಂ ಕೆದಱಿ ಕಾಲುಂಗುರಗಳೊದಱಿ (ಚಿಬಪು. ೫-೧೦); ಬಿರುದಿನ ಹೊನ್ನ ಕಾಲುಂಗುರವನಿಕ್ಕಿದರು (ಕಂಸವಿ. ೨೪-೨೩); ಉಂಗುರರವ ಕೇಳಿ ಕಾಲುಂಗುರ ರವ (ವಿಸೀಗೀ. ೧೧೯-೧). **ಕಾಲುಂಗರ:** ಕಾಲುಂಗರಗಳನಂದುಗೆಯ ಮುದ್ರಿಕೆ ಜಾಲ ಕೀಲಣಿಗಡಗ ಕೆಯ್ಯೊಳ್ತಾ (ವರ್ಧಸಾಂ. ೫-೬೧). [ಕಾಲ್$_1$ + ಉಂಗುರ]

**ಕಾಲುಕಟ್ಟು$_1$** 'ಕಾಲ್ಕಟ್ಟು' ನೋ.

**ಕಾಲುಕಟ್ಟು$_2$** 'ಕಾಲ್ಗಟ್ಟು' ನೋ

**ಕಾಲುಕಡಗ** 'ಕಾಲ್ಗಡಗ' ನೋ

**ಕಾಲುಕಣ್ಣಿ** 'ಕಾಲ್ಗಣ್ಣಿ' ನೋ.

**ಕಾಲುಕೀಳು** 'ಕಾಲ್ಕೀಳು' ನೋ.

**ಕಾಲುಕುಪ್ಪುಸ** 'ಕಾಲ್ಗುಪ್ಪಸ' ನೋ.

**ಕಾಲುಕುಬುಸ** 'ಕಾಲ್ಗುಪ್ಪಸ' ನೋ.

**ಕಾಲುಕೆಡು** 'ಕಾಲ್ಗೆಡು' ನೋ.

**ಕಾಲುಕೆದರು** 'ಕಾಲ್ಕೆದರು' ನೋ.

**ಕಾಲುಕೆರೆ** 'ಕಾಲ್ಕೆರೆ' ನೋ.

**ಕಾಲುಕೊರಡು** (ನಾ). ಕಾಲಿನ ಕೆಳಗೆ ಕಟ್ಟಿಕೊಳ್ಳುವ ಮರದ ಹಲಗೆ: "ನೀರ್ಗಲ್ಲಿನ ಮೇಲೆ ಓಡಾಡಲು ಅನುಕೂಲಿಸುವ ಒಂದು ತೆರದ ಕಾಲುಕೊರಡು" (Fen-runners. ಇಂಕನಿ). [ಕಾಲು$_1$ (< ಕಾಲ್$_1$) + ಕೊರಡು]

**ಕಾಲುಕೊಳಗ** (ನಾ). (ಕುದುರೆಯ) ಕಾಲಿನ ಗೊರಸು; ಖುರ ಪುಟ: ರಥಾಶ್ವಗಳು ಕಾಲುಕೊಳಗಗಳನ್ನು ಭೂಮಿಯಲ್ಲಿರಿಸದ ಹಾಗೆ ಕಡಿವಾಣವನ್ನು ಹಿಡಿದು ರಥವನ್ನು ನಡೆಸುವೆನು (ಕೃವಾವಿ. ೭೫). [ಕಾಲು$_1$ (< ಕಾಲ್$_1$) + ಕೊಳಗ (< ಕೊಳಗು)]

**ಕಾಲುಗಂಟು** (ನಾ). (ಕಾಲಿನ) ಹರಡು; ಮಣಿಗಂಟು: ಕಾಲು ಗಂಟಿನ ಮೇಲೆ ಎದ್ದಿದ್ದ ಎಕ್ಸಿಮಾವನ್ನು ತುರಿಸಿಕೊಂಡ (ಪ್ರಕ್ಷಿ. ೨). [ಕಾಲು$_1$ (< ಕಾಲ್$_1$) + ಗಂಟು]

**ಕಾಲುಗಗ್ಗರ** (ನಾ). ಕಾಲಲ್ಲಿ ತೊಡುವ ಕಡಗ; ನೂಪುರ: ನವರತ್ನಗಳ ಕಾಲುಗಗ್ಗರ ಪೊಂಗೆಜ್ಜೆ ಕಿವಿಯ ಮುತ್ತಿನ ಕುಚ್ಚುಗಳ (ಕಂಸವಿ. ೨೩-೯೦). [ಕಾಲು$_1$ (< ಕಾಲ್$_1$) + ಗಗ್ಗರ]

**ಕಾಲುಗಚ್ಚು** 'ಕಾಲ್ಗಚ್ಚು$_2$' ನೋ.

**ಕಾಲುಗಚ್ಚುಗೊಳ್** 'ಕಾಲ್ಗಚ್ಚುಗೊಳ್' ನೋ.

**ಕಾಲುಗಣ್ಣಿ** 'ಕಾಲ್ಗಣ್ಣಿ' ನೋ.

**ಕಾಲುಗವುಸು** (ನಾ). "ಪಾದಗಳಿಗೆ (ಬೆಚ್ಚಗಿರುವುದಕ್ಕಾಗಿ ಉಪಯೊಗಿ ಸುವ) ಹೊದಿಸುವ ಆವರಣ; ಹೊದಿಕೆ" (Foot-muff. ಇಂಕನಿ). [ಕಾಲು$_1$ (< ಕಾಲ್$_1$) + ಗವುಸು]

**ಕಾಲುಗಾಡಿ** (ನಾ). ಕಾಲಿನಿಂದ (ತುಳಿದು) ನಡೆಯಿಸುವ ಗಾಡಿ; ಬೈಸಿಕಲ್ಲು: ಕಾಲುಗಾಡಿಗಳ ಮೇಲೆ ಕುಳಿತು ತಿರುಗುವುದು . . . ಬಹುವಿಘಾತಕವದೆ (ಬ್ರಹ್ಮಜೀ. ೧೭೭); ಹಳ್ಳಿಯವರು ಬೈಸಿಕಲ್ಲಿಗೆ ಕಾಲುಗಾಡಿ ಎಂತಲೂ, ವಿದ್ಯುಚ್ಛಕ್ತಿ ಎಂದು ಹೇಳುವ ಬೆಳಕಿಗೆ ತಂತಿಯ ದೀಪ ಎಂತಲೂ ಹೇಳುವುದನ್ನು ಕೇಳಿದ್ದೇನೆ (ಕಬಸಾ. ೩೦). [ಕಾಲು$_1$ (< ಕಾಲ್$_1$) + ಗಾಡಿ$_2$]

**ಕಾಲುಗಾಲು** (ನಾ). ಖಡ್ಗದ ವರಸೆಯಲ್ಲಿ ನಿಲ್ಲುವ ಒಂದು ವಿಧಾನ: ಎರಡು ಕಾಲನ್ನು ಶೀಘ್ರವಾಗಿ ನೀಡಿ ಬಲಗಾಲನ್ನು ಎಡಗಾಲ ಮೇಲೆ ಚಾಚಿ . . . ಭೂಮಿಯಲ್ಲಿರಿಸಬೇಕು. ಈ ಸಾಧನೆಯ ಹೆಸರು ಕಾಲಾಗೆ ಕಾಲುಯೆಂದು, ಕಾಲಾಗೆಕಾಲನೆಯೆರಡು ಬಾರಿಯಿಂದ ಕಾಲುಗಾಲು ಯೆಂದು ಹೇಳುತ್ತಾರೆ (ಖಡ್ಗಟೀ. ೪-೨೨). [ಕಾಲು$_1$ (< ಕಾಲ್$_1$) + ಕಾಲು$_1$ (< ಕಾಲ್$_1$)]

**ಕಾಲುಗಾಹು** 'ಕಾಲ್ಗಾಪು' ನೋ.

**ಕಾಲುಗುಣ** 'ಕಾಲ್ಗುಣ' ನೋ.

**ಕಾಲುಗುರ್**, ಕಾಲುಗುರು (ನಾ). ಕಾಲ್ಬೆರಳಿನ ಉಗುರು, —ನಖ: ಮೃಗನೇತ್ರೆಯ ತೊಳಗುವ ಕಾಲುಗುರ್ಗಳ ನೂಪುರದ ಪೊಳೆವ ವಜ್ರಂಗಳ ಕಾಂತಿಗಳಡರೆ (ಮಲ್ಲಿಪು. ೩-೯೫); ಕಾಲುಗುರುದ್ದಮಾಗಿಯುಂ ಸೆಳ್ಳು ಗುರಲ್ಲದಂತೆ (ಧರ್ಮಾಮೃ. ೧೧-೧೮೭); ಕಾಲುಗುರ್ಗಳಿನೆನಸುಂ ಕಣ್ಗೊಳಿಪ ನಿಡಿಯ ಮೆಲ್ಲಡಿಯಹಳಾ (ಕಬ್ಬಿಕಾ. ೭೪). **ಕಾಲುಗುರು:** ಉಪರಿಚರ ವಸುರಾಯನು ಕೋಲಾಹಲಪರ್ವತಮಂ ಕಾಲುಗುರಿನಿಂದ ವಂದು ಯೋಜನ ದೂರ ಹಾರಿಸಲಿಲ್ಲವೆ (ಸೌಗಂಧಿ. ೨೩೫-೨೦). [ಕಾಲ್$_1$ + ಉಗುರ್]

**ಕಾಲುಗೆಡಿಸು** 'ಕಾಲ್ಗೆಡಿಸು' ನೋ.

**ಕಾಲುಗೆಡು** 'ಕಾಲ್ಗೆಡು' ನೋ.

**ಕಾಲುಗೊರಸು** 'ಕಾಲ್ಗೊರಸು' ನೋ.

**ಕಾಲುಗೊಲೆ** 'ಕಾಲ್ಗೊಲೆ' ನೋ.

**ಕಾಲುಚಾಚು** (ಕ್ರಿ). ೧. ಕಾಲನ್ನು ನೀಡು ೨. (ಆಲಂ) ಕಾಲಿಡು; ಪ್ರವೇಶಿಸು : ಶಿಕ್ಷಣದ ಎಲ್ಲ ವಿಷಯಗಳಲ್ಲಿ ಕಥೆ ಕಾಲು ಚಾಚತೊಡಗಿದೆ (ಕಥಕ. ೧೭). ೩. (ಆಲಂ) ಆರಾಮವಾಗಿರು; ವಿರಾಮವಾಗಿರು : ಸುಖವಾಗಿ ಕಾಲುಚಾಚಿ ಸಂಸಾರ ಮಾಡಬಹುದಿತ್ತು (ಹೊಸಕ್ಷಿ. ೨೪೮).
[ಕಾಲು$_1$ (< ಕಾಲ್$_1$) + ಚಾಚು$_1$]

**ಕಾಲುಚೀಲ** 'ಕಾಲ್ಚೀಲ' ನೋ.

**ಕಾಲುಜರಸು** (ನಾ). ದನಗಳಿಗೂ ಕುರಿಗಳಿಗೂ ಬರುವ ಕಾಲ ಹುಣ್ಣು : "(ದನಗಳಿಗೂ ಕುರಿಗಳಿಗೂ ಬರುವ) ಕಾಲುವ್ರಣದ ರೋಗ; ಕಾಲುಜರಸು" (Foot-rot. ಇಂಕನಿ). [ಕಾಲು$_1$ (< ಕಾಲ್$_1$) + ಜರಸು]

**ಕಾಲುಜಾರು** (ಕ್ರಿ). ೧. ಹೆಜ್ಜೆ ತಪ್ಪು ೨. (ಆಲಂ) ಅಡ್ಡದಾರಿಗೆ ಬೀಳು; ಕೆಟ್ಟದಾರಿ ಹಿಡಿ : ಸನ್ನಿವೇಶಗಳಿಗೆ ಮನೋದೌರ್ಬಲ್ಯಕ್ಕೆ ಬಲಿಯಾಗಿ ಹಲವು ಬಾರಿ ಅವನು ಕಾಲುಜಾರುವುದುಂಟು (ಸೋತುಗ. ೩. ೮೦೪); ಕ್ಷಣಿಕ ಸುಖಕ್ಕಾಗಿ ಕಾಲುಜಾರುವ ಹೆಂಗಸಿನ ಹಾಗಿರಲಾರಳು ಈಕೆ (ನಾಪೋಲಿ. ೨೩೪); ಮಗ ಊರಿಗೆ ಬರುತ್ತಾನೆ. ಅವನಿಗೆ ತಾನು ಕಾಲುಜಾರಿದ್ದು ತಿಳಿದರೆ? (ಹೊಸಕ್ಷಿ. ೫೯).
[ಕಾಲು$_1$ (< ಕಾಲ್$_1$) + ಜಾರು$_1$]

**ಕಾಲುಜ್ವರ** (ನಾ). "ದನಗಳಿಗೆ ಬರುವ ಕಾಲುಗೊರಸಿನ ರೋಗ". (ಎಸಮ್ಮೆ. XV, ೩೯). [ಕಾಲು$_1$ (< ಕಾಲ್$_1$) + ಜ್ವರ]

**ಕಾಲುಡಿ** (ಕ್ರಿ). ಕಾಲುಮುರಿ, —ಕತ್ತರಿಸು : ಕಯ್ಯುಡಿದುಮಾಗಳೆ ಕಾಲುಡಿದುಂ ಬಟಲ್ದು (ಪಂಪಭಾ. ೩-೫೮). [ಕಾಲ್$_1$ + ಉಡಿ$_1$]

**ಕಾಲುಡುಗು** (ಕ್ರಿ). ಕಾಲು ಸೋತು ಹೋಗು, —ಶಕ್ತಿಗುಂದು : ಉರಿಯ ಪೊಯ್ಲುಗಳೊಳಂದು ಕಾಲುಡುಗಿ ಬೀಳ್ವ ಬಹು ದನುಜರಿಂ ಮನುಜರಿಂ (ಚಿಬಪು. ೪೬-೨೩); ಬಲೆಯೊಪ್ಪಿಪುದು ಸೊಗಯಿಸುವ ಸಂಜೆಗೆಂಪದರಲ್ಲಿ ಸಿಲ್ಕಿ ಕಾಲುಡುಗಿ ಪಶ್ಚಿಮವಾರ್ಧಿಗೆ ಮಿಗೆ ಬೀಳ್ದು ದೆಂಬಿನಂ (ಕುಮಾಷ. ೪-೨೦೮). [ಕಾಲ್$_1$ + ಉಡುಗು$_1$]

**ಕಾಲುತೆಗೆ** 'ಕಾಲ್ತೆಗೆ' ನೋ.

**ಕಾಲುತೊಡಿಗೆ** (ನಾ). ಕಾಲಿನ ಆಭರಣ; ಕಾಲ್ಗಡಗ; ನೂಪುರ: "ಪಾದಾಂಗದಂ . . . ಕಾಲುಕಡಕ, ಕಾಲುತೊಡಿಗೆ" (ಸಿದ್ಧಾಂತಿ. ೧೭೫).
[ಕಾಲು$_1$ (< ಕಾಲ್$_1$) + ತೊಡಿಗೆ (< ತೊಡುಗೆ)]

**ಕಾಲುತೊಳೆ** ಕಾಲ್ತೊಳೆ' ನೋ.

**ಕಾಲುದಳೆ** 'ಕಾಲ್ದಳ$_2$' ನೋ.

**ಕಾಲುದಾರಿ** 'ಕಾಲ್ದಾರಿ' ನೋ.

**ಕಾಲುದೀಪ** (ನಾ). ಎತ್ತರವಾದ ಪೀಠವನ್ನುಳ್ಳ ದೀಪ; ದೀಪಮಾಲೆ ಕಂಬ; ಸಮೆ (ಉಕ) : ಅವರ ಅಂಗಡಿಯ ಕಾಲುದೀಪ (ನೀಲಾಂಜನ)ದ ಸುತ್ತು ಎಷ್ಟು ಹಾತೆ ಪತಂಗಗಳು ಇವೆಯೋ ಅಷ್ಟೇ ಗಿರಾಕಿಗಳನ್ನು ಕಾಣಬಹುದು (ಸರಸ. ೨೨); ನಿರ್ಮಲವಾದ ಕಾಲು ದೀಪ, ಅದರ ಮೇಲ್ಗಡೆಯಲ್ಲಿ . . . ದೇವರ ಪ್ರತಿಮೆ (ನಿಷ್ಕಾಮ. ೭೫).
[ಕಾಲು$_1$ (< ಕಾಲ್$_1$) + ದೀಪ]

**ಕಾಲುದುಳಿ** 'ಕಾಲ್ದುಳ$_2$' ನೋ.

**ಕಾಲುದೂಳಿ** 'ಕಾಲ್ದೂಳಿ' ನೋ.

**ಕಾಲುದೂಳು** 'ಕಾಲ್ದೂಳಿ' ನೋ.

**ಕಾಲುದೊತ್ತು** (ನಾ). ಅಡಿಯಾಳು; ಪಾದಸೇವಕ: ಹೊಟ್ಟೆ ಹಸಿದುಂಡು ಕಾಮನ ಕಾಲುದೊತ್ತಾಗಿ ಬಾಳಿ ಕಾಲನ ಬಾಯಿದುತ್ತಾಗಿ ಸತ್ತು (ಮೋಳಿಮಾ. ೧೩೨ ಪ್ರಸ್ತಾವ).
[ಕಾಲು$_1$ (< ಕಾಲ್$_1$) + ತೊತ್ತು (< ತೊಱು)]

**ಕಾಲುನಡೆ** 'ಕಾಲ್ನಡೆ' ನೋ.

**ಕಾಲುನೆಕ್ಕು** (ಕ್ರಿ). ೧. ಕಾಲನ್ನು ನೆಕ್ಕು. ೨. (ಆಲಂ) (ಸ್ವಾರ್ಥ ಸಾಧನೆಗಾಗಿ) ಹೆರವರ ಬಳಿ ಸಾಕಿದ ನಾಯಿಯಂತೆ ವರ್ತಿಸು; ಹೆರವರನ್ನು ಒಲಿಸಿಕೊಳ್ಳಲು ಕೀಳು ಮಟ್ಟದ ಸೇವೆಯನ್ನು ಮಾಡು : ದಾಸ್ಯವೇ ಮೈವೆತ್ತಂತೆ ಕಾಲುನೆಕ್ಕುವ ಶೌನಕ ಸ್ವಭಾವ ಅವನಲ್ಲಿ ರಕ್ತಗತವಾಗಿ ಬಂದಿತ್ತು (ಪುನರು. ೩೩೩); ನೀನು ಧನವಂತರ ಕಾಲುನೆಕ್ಕಲಿಕ್ಕೂ ಈಗ ಹಿಂಜರಿಯಲಾರೆ (ವಿಧಿವೈ. ೩೯).
[ಕಾಲು$_1$ (< ಕಾಲ್$_1$) + ನೆಕ್ಕು (< ನಕ್ಕು$_1$)]

**ಕಾಲುಪಚ್ಚೆ** (ನಾ). ಕಾಲುವೆ ನೀರಿನ ಫಸಲು; ಮಳೆಗಾಲದ ಪೈರು (?) : ಮರವಳಿ ಗದ್ದೆಯಲಿಗುಲಿ ತೆಂಗು ಮಾವು ಹಲಸು ಬಾಳೆ ಬದನೆ ಕಬಿನಾಲೆ ಕಾಲುಪಚ್ಚೆ ಉಪ್ಪಿನಕಾವಲೆ ಮೊದಲಾದ ಸಮಸ್ತ ಸುಂಕ ಸ್ವಾಮ್ಯಸುವರ್ಣಾದಾಯ ಸಹ ಸರ್ವಮಾನ್ಯ (ಎಕ. III, ಮಳವ. ೧೨೧-೧೬೦; 1424). [ಕಾಲು$_2$ (< ಕಾಲ್$_2$) + ಪಚ್ಚೆ ?]

**ಕಾಲುಪಳ್ಳಿ** 'ಕಾಲ್ಪಳ್ಳಿ' ನೋ.

**ಕಾಲುಪಾಯಕ** (ನಾ). ಕಾಲಾಳು; ಪದಾತಿ : ರಾಯಸದರ ರಾವುತರ ಕರಣಿಕ ಕಾಲುಪಾಯಕರನು ಜೋಯಿಸರ ನಾಯಕ ಮಕ್ಕಳುಗಳ ಕಳುಪಿದನು (ರಾಮವಿ. ೮-೧೩೦); ಕರಿಘಟೆಯನು ಕಲಕಿದ. ಹಯ ದೊಡ್ಡನು ಹರಹಿದ. ಕಾಲುಪಾಯಕರ ಹುರಿಯೊಡೆಯಿಸಿದನು (ಕುಮಾಸಾಂ. ೪೨). [ಕಾಲು$_1$ (< ಕಾಲ್$_1$) + ಪಾಯಕ]

**ಕಾಲುಪೆಂಡೆಯ** 'ಕಾಲ್ಪೆಂಡೆ' ನೋ.

**ಕಾಲುಪ್ಪರ** (ನಾ). ಕಾಲಿನಷ್ಟು ಎತ್ತರ: ಹುಡಿಗೆ ಕಾಲುಪ್ಪರ ದೊಡ್ಡವಳಾಗಲಿಕ್ಕೆಷ್ಟು ತಡ? ಸಾಂಬಪ್ಪನಿಗೊಂದು ಚಿಂತೆ ಪ್ರಾರಂಭಿಸಿತು (ಮಾನಿತೋ. ೧೧). [ಕಾಲ್$_1$ + ಉಪ್ಪರ$_2$]

**ಕಾಲುಫಳಿ** (ನಾ). ಕಾಲು ಇಡುವುದಕ್ಕೆ ಜೋಡಿಸಿದ ಹಲಗೆ; ಕಾಲು ಮಣೆ : ಧೀರ ಆದರ ಕಾಲುಫಳಿಯನ್ನು ಹತ್ತಿ ಒಳಕ್ಕೆ ನುಗ್ಗಿದನು . . . ಮೋಟಾರು ಸಾಗಿತು (ರಕ್ತಧ್ವ. ೧೫೫). [ಕಾಲು$_1$ (< ಕಾಲ್$_1$) + ಫಳಿ]

**ಕಾಲುಬಲ** 'ಕಾಲ್ಬಲ' ನೋ.

**ಕಾಲುಬಳೆ** 'ಕಾಲ್ಬಳೆ' ನೋ.

**ಕಾಲುಬೀದಿ** (ನಾ). ಪಾದಚಾರಿಗಳಿಗೆ ಮೀಸಲಾದ ರಸ್ತೆಯ ಪಕ್ಕಕ್ಕಿರುವ ಭಾಗ: ಮೆಲ್ಲನೆ ಅಡಿಗಳನ್ನಿಡುತ್ತ ಕಾಲುಬೀದಿಯ ಮೇಲೆಯೇ ನಡೆದಿದ್ದೆ (ಚಂದುಟ. ೭೫); ಕಾಲುಬೀದಿಯ ಮೇಲೆಯೆ ಮಲಗಿ ಆ ಇರುಳನ್ನು ಕಳೆದನು (ಭೂಮಿತಾ. ೮೪).
[ಕಾಲು$_1$ (< ಕಾಲ್$_1$) + ಬೀದಿ]

**ಕಾಲುಬೀಳು** 'ಕಾಲ್ಬೀಳು' ನೋ.

**ಕಾಲುಬೆಳೆಸು** (ಕ್ರಿ). ನಡೆ; ಹೆಜ್ಜೆಯಿಡು : ಅತೃಪ್ತ ಲಾಲಸೆಯಿಂದ ಅವಳು ಸೆರೆಮನೆಗೆ ಕಾಲು ಬೆಳೆಸಿದಳು (ಪುನರು. ೧೩೪).
[ಕಾಲು$_1$ (< ಕಾಲ್$_1$) + ಬೆಳೆಸು]

**ಕಾಲುಬೈರಿಗೆ** (ನಾ). ಕಾಲಿನಿಂದ ನಡೆಸುವ ಬೈರಿಗೆ: "ಕಾಲೊತ್ತು ವುದರಿಂದ ಕಂಡಿ ಕೊರೆಯಲಾಗುವ ಸಲಕರಣೆ; ಕಾಲುಬೈರಿಗೆ" (Foot-drill. ಇಂಕನಿ). [ಕಾಲು$_1$ (< ಕಾಲ್$_1$) + ಬೈರಿಗೆ]

**ಕಾಲುಮಡಿ$_1$** 'ಕಾಲ್ಮಡಿ$_1$' ನೋ.

**ಕಾಲುಮಡಿ$_2$** 'ಕಾಲ್ಮಡಿ$_2$' ನೋ.

**ಕಾಲುಮಣೆ** 'ಕಾಲ್ಮಣೆ' ನೋ.

**ಕಾಲುಮರೆ** 'ಕಾಲ್ಮರೆ' ನೋ.

**ಕಾಲುಮಾಡು** (ಕ್ರಿ). ೧. ಮುಂದಕ್ಕೆ ನಡೆ; ಚಲಿಸು : (ಶಿ). ೨. ಆರಂಭಿಸು : ಆ ವ್ಯಾಪಾರಕ್ಕೆ ಕಾಲು ಮಾಡಿದವನು (ರೂಢಿ).
[ಕಾಲು$_1$ (< ಕಾಲ್$_1$) + ಮಾಡು$_1$]

ಕಾಲೂರ್ಗೆ ಮೆಟಿಸು ಬೆಲ್ಲಮೆಂಬಂತೆ (ಧರ್ಮಾಮೃ. ೭-೨೨೯); ಕನ್ನಡ ಮೆನಿಪ್ಪಾ ನಾಡು ಚೆಲ್ವಾಯ್ತು . . . ಕಾ ಲೂ ರ್ಗ ಳಿಂ ಕೆಯ್ಗಳಿಂ (ಕಬ್ಬಕಾ. ೧೯); ವಿಲಸಿತಾರಾಮವಿಲ್ಲದ ಕಾಲೂರ್ಗಳಾ ಇಳೆಯೊಳಿಲ್ಲೆಲ್ಲಿ ನೋಡಿದರು (ಕುರಾಸಾಂ. ೨-೨೯). **ಕಾಲೂರ್ಱು₂**: ಕಾಲೂರಿನ ಗಡಿ ಬೇಲಿಯ ದಾಟದ ಚೆನ್ನೆಗೆ ನುಡಿವನು ಪಾಟಗಳ (ನಲ್ಕೈ. ೭).

[ಕಾಲ್₁ + ಊರ್]

**ಕಾಲೂರಿ** 'ಕಾಲೂರೆ' ನೋ.

**ಕಾಲೂರಿಗ** (ನಾ). = ಕಾಲುರಿಚ: ಪೊಟಲಿಗಂ, ಕಾ ಲೂ ರಿ ಗ ಂ (ಭಾಷಾಭೂ. ೧೭೫ ಪ್ರಯೋ); ಕಾಲೂರೊಳಾದಂ ಪುಟ್ಟಿದಂ ಮೇಣ್, ಕಾಲೂರಿಗಂ (ಶಬ್ದಾನು. ೪೯೧ ಪ್ರಯೋ). [ಕಾಲೂರ್ + -ಇಗ]

**ಕಾಲೂರ್ಱು₁** 'ಕಾಲೂಱು₁' ನೋ.

**ಕಾಲೂರ್ಱು₂** 'ಕಾಲೂರ್' ನೋ.

**ಕಾಲೂರೆ**, ಕಾಲೂರಿ (ನಾ). ೧. ಕಾಲಿಗೆ ಆಸರೆ: "ಪಾದಾಧಾರ; ಕಾಲೂರೆ; ನಿಂತುಕೊಳ್ಳಲು ಬೇಕಾದ ಸ್ಥಳ; ಆಶ್ರಯ; ಆಸರೆ; ನೆಲೆ" (Foot-hold. ಇಂಕನಿ). **ಕಾಲೂರಿ**: ೨. ಕಾಲುಮಣೆ; ಪಾದ ಪೀಠ: (ಕಾಲನ್ನು ಇಟ್ಟುಕೊಳ್ಳುವ) ಕಾಮಮಣೆ; ಕಾಲೂರಿ; ಪಾದ ಪೀಠ (Foot-stool. ಇಂಕನಿ). [ಕಾಲ್₁ + ಊರೆ]

**ಕಾಲೂಹೆ** (ನಾ). ಕಾಲಿಡಬೇಕಾದ ಸ್ಥಳವನ್ನು ಊಹಿಸುವುದು; ಕಾಲುಗಳಿಂದ ತಡಕಿ ನಡೆಯುವುದು: ಏನು ಮಂಜಿದೊ ಕಾಣೆ! ಕಣ್ದಪ್ಪಿದತ್ತೆನಗಮಾ ನಿತ್ಯಪರಿಚಿತ ಪಥಂ . . . ತೊರೆಯ ದಡಕೈದಿದೆನ್ ಕಾಲೂಹೆಯಿಂ (ಶ್ರೀ ರಾ ಮಾ. ೨೦೦-೧೫೮); ಗದ್ದೆಯಂಚಿನ ಮೇಲೆ ಕಾಲೂಹೆಯಿಂದ ಮುಂದುವರಿದನು (ಮಲೆಮ. ೮).

[ಕಾಲ್₁ + ಊಹೆ]

**ಕಾಲೂಳಿಗ** (ನಾ). ಅಡಿಯಾಳಾಗಿರುವಿಕೆ; ಚಾಕರಿ; ಸೇವಕ ವೃತ್ತಿ: ಕಾ ಲೂ ಳಿ ಗ ಗ ಳಿಂ ದ ದೊಡ್ಡ ದೊಡ್ಡ ಅಧಿಕಾರಿಗಳವರೆಗೆ ಎಲ್ಲಕ್ಕೂ ಬಿಗಿಗಟ್ಟಿಕೊಂಡು (ಬಿಟ್ಟಅ. ೧೪೩-೩).

[ಕಾಲ್₁ + ಊಳಿಗ (< ಊಟಿಗ)]

**ಕಾಲೂಱು**, ಕಾಲೂರು (ಕ್ರಿ). ೧. ಕಾಲನ್ನುಊರು; ಕಾಲಿಡು; ಪ್ರವೇಶಿಸು. ೨. (ಆಲಂ) ನೆಲಸು; ಸ್ಥಿರವಾಗಿ ನಿಲ್ಲು; ನೆಲೆಯಾಗು: ಎತ್ತೆತ್ತ ನೋಡಿದೊಡಂ ಶಾಲಿವನಂಗಳಿಲ್ಲದ ನೆಲಂ ಬೇಱಿಲ್ಲ ಕಾಲೂಱಿರಲ್ (ವರ್ಧಪು. ೧-೩೪); ಆ ಪಾರಣದ ತೋರಹತ್ತಂ . . . ರೌದ್ರ ರಸಮಂ ಕಱಿವ ಕಾರ ಮುಗಿಲೊಡ್ಡುಕಾಲೂಱಿದಂತಿರ್ಪುದು (ಅನಂಪು. ೧೩-೨೦ ವ); ಧಾತ್ರಿಯೊಳು ಕಾಲೂಱಿ ನಿಂತಿಹ ಪುತ್ರನುಂಟೇ (ಬಸವು. ೩-೭); ಸುಮ್ಮಾನ ಬೀತುದು ಬಿ ರು ದ ರಿ ಗೆ ಕಾಲೂಱಿತಪಮಾನ (ಕುವ್ಯಾಕ. ೫-೧೪); ಮೂಱು ಜನ್ಮದಲಸುರರಲಿ ಕಾಲೂಱಿ ವಿಕ್ರಮ ವಹ್ನಿಯಲಿ ಕಾಹೇಱಿ ವೈರದಲೆನ್ನನೇ ನೆನೆನೆನೆದು (ನಿಭಾಗ. ೩-೭-೩೪); ಸಿರಿ ಕಾಲೂಱಿರ್ಪಳೆಂದುಮಾ ಜ ನ ಪ ದ ದೊ ಳ್ (ದಮಸ್ತ. ೧-೪). **ಕಾಲೂರ್ಱು₁**: ೧. ಧರ್ಮಜಂ ಕಲಹವಿರುವಲ್ಲಿ ಕಾಲೂರ (ಹಬ್ಬರ. ೨೫-೪೩); ಕಾಲೂರಿತು ಮಳೆ ಕತ್ತೆತ್ತಿತು ಬೆಳೆ (ನಾದಲೀ. ೨೧-೧೩); ಭಯ ಭ್ರಾಂತಿಗಳಂತೂ ಇಲ್ಲಿ ಕಾಲೂರುವಂತಿಲ್ಲ (ಭಾರದ. ೨೮೧); ಅಲ್ಲಿಗೆ ಹೋಗಿ ಕಾಲೂರಿ ನಿಲ್ಲುವ ಪ್ರಸಂಗವೇ ಬರಲಿಲ್ಲ (ಮನೆಬೆ. ೧೪). ೩. (ಆಲಂ) ನಿ ತ್ರಾ ಣ ವಾ ಗು; ನಿಷ್ಕ್ರಿಯವಾಗು: ಅವನು ಕಾಲೂರಿ ಬಿಟ್ಟ (ರೂಢಿ). [ಕಾಲ್₁ + ಊಱು₁]

**ಕಾಲೆ** (ನಾ). ೧. ನೀಲಿ ಗಿಡ: "ನೀಲೀ-ಕಾಲಾ, ಕ್ಲೀತಕೀ, ಗ್ರಾಮಿಣಾ, ಮಧುಪರ್ಣಿಕಾ . . . ನೀಲೀಗಿಡದ ಹೆಸರುಗಳು" (ಸಿದ್ಧಾಂತಿ. ೧೧೭). ೨. ಹಿಪ್ಪಲಿ. ೩. ಮಂಜಿಷ್ಠೆ; ತಿಗಡೆ. ೪. ಕರಿಜೀರಿಗೆ. [?]

**ಕಾಲೆಡೆ** (ನಾ). ೧. ಕಾಲಿನ ಬಳಿ; ಕಾಲಿನ ನಡುವೆ: ಅಂತವರ ಕಾಲೆಡೆಗಳೊಳ್ ನುಗುಟ್ವುಗುಜ್ಜರಿಂ (ಅಜಪು. ೪-೭). ೨. "ಹೆಜ್ಜೆ ಇಡಲು ಸ್ಥಳ; ಕಾಲೆಡೆ; (ತಾತ್ಕಾಲಿಕವಾಗಿ) ನಿಲ್ಮೆಡೆ" (Pied a terre. ಇಂಕನಿ).

[ಕಾಲ್₁ + ಎಡೆ₃]

**ಕಾಲೆಣಿಕೆ** (ನಾ). (?): ನೆರವಿ ಬೇಱೊಂದಿಲ್ಲ ಭೂತದ ಹರಹು ಕರಣೇಂದ್ರಿಯದ ಸಂದಣಿ ಮರುತಸಂಚಕ ಬುದ್ಧಿ ಕರ್ಮೇಂದ್ರಿಯದ ಕಾಲೆಣಿಕೆ ನೆರೆಯಲೊಂದಾಗಿಹುದು (ಕು ವ್ಯಾ ಭೀ. ೩-೫೨); ಅಂಬುಜೋದ್ಭವ ಸೃಷ್ಟಿ ಜಗದೊಳು ತುಂಬಿಹವು ಕಾಲೆಣಿಕೆ ಕಟ್ಟಿಳೆದಂದಬಿಸಿವೆ ಮೂಱು ಲೋಕದೊಳು ನಾನಾ ಪ್ರಕಾರದಲಿ (ಕಕ್ಕೋಕ. ೩-೧೧).

[ಕಾಲ್₁ + ಎಣಿಕೆ ?]

**ಕಾಲೆಭತ್ತ** (ನಾ). ಬತ್ತದಲ್ಲಿ ಒಂದು ಪ್ರಕಾರ; ಕಾಲುವೆ ನೀರಿನಿಂದ ಬೆಳೆದ ಭತ್ತ (?): ಬಡಿಭತ್ತ ಕಾಲೆಭತ್ತ ಖ ೩೦ ಮೂವತು ಕಾರ ಭತ್ತ ಖ ೧೦ (ಎಕ. VI, ಕೊಪ್ಪ. ೫೪-೯; 1597). [ಕಾಲೆ ? + ಭತ್ತ]

**ಕಾಲೆಭೂಮಿ** (ನಾ). ಒಂದು ಬಗೆಯ ಭೂಮಿ; ಕಾಲುವೆಯ ಭೂಮಿ (?): ತ ಂ ಮ ದಾ ನ ಮೂಲಕ್ಕೆ ಸಲುವ ಕುಳದೊಳಗೆ ಕುಲುಮಕ್ಕಿಯಲು ಕಾಲೆಭೂಮಿ ಖ ೮ ಯೆಂಟು ಖಂಡಗಳ್ಕೆ (ಎಕ. VI, ಕೊಪ್ಪ. ೫೪-೫; 1592). [ಕಾಲೆ ? + ಭೂಮಿ]

**ಕಾಲೆಯಗದೆ** (ನಾ). ಒಂದು ಬಗೆಯ ಗದ್ದೆ; ಕಾಲುವೆಯ ಭೂಮಿ (?): ಕಾಲೆಯಗದೆ ಸಲಗೆ ಹದಿನೆಯ್ದು ಒಡೆಗೆರೆಯ ಕಾಲಯಗದೆ ಸಲಗೆ ಮೂಱು (ಮೈಆರಿ. ೧೯೩೭, ೩೦-೧೧; 1162).

[ಕಾಲೆ ? + ಗದೆ (< ಗಱ್ದೆ)]

**ಕಾಲೆಳೆ₁** (ಕ್ರಿ). ೧. ಕಾಲನ್ನು ಎಳೆದು ನಡೆ; ನಿಧಾನವಾಗಿ ಚಲಿಸು, —ಸರಿ: ಒಂದಾದ ಮೇಲೊಂದು ವರ್ಷಗಳು ಕಾಲೆಳೆದುಕೊಂಡು ಹೋಗುತ್ತಿದ್ದವು (ಯೋಧಪು. ೪೭). ೨. ಕಾಲು ಮುಂದಕ್ಕೆ ಚಲಿಸದೆ ತಡೆಗೊಳ್ಳು; ಸ್ತಂಭಿತವಾಗು: ತೊಲಗಿ ಪೋದಪೆವೆಂದು ಪೋಪರು ಕಾಲೆಳೆದೊಲವಿಂದೆ ಮಗುಳವ್ವವರು (ಮೋಹತ. ೧೮-೨೬). ೩. (ಆಲಂ) ಕೆಳಕ್ಕೆ ಎಳೆ; ಉರುಳಿಸು: ಜಾತಿಭೇದದಿಂದ ಈ ಗ್ರಾಮ ಕುಟುಂಬಗಳಲ್ಲಿ ಎಂದಿಗೂ ಎತ್ತಿ ಕಟ್ಟುವದು, ಕಾಲು ಎಳೆಯುವದು ಕಂಡು ಬರುವದಿಲ್ಲ (ಸ್ಮೃತಿಚಿ. ೧೨೨). [ಕಾಲ್₁ + ಎಳೆ₁ (< ಎೞೆ₁)]

**ಕಾಲೆಳೆ₂** (ನಾ). ಕಾಲುವೆಯ ಭೂಮಿ; ನೀರಾವರಿಯ ನೆಲ. 'ಕಾಲೆಳೆಗೊಡು' ಪರಾ. [ಕಾಲ್₂ + ಎಳೆ₅]

**ಕಾಲೆಳೆಗೊಡು** (ಕ್ರಿ). ಕಾಲುವೆಯ ಭೂಮಿಯನ್ನು ಕೊಡು: ಕದರೂರಗಾಮುಣ್ಡುಗಳುಮೊಕ್ಕಲು ಮೊದಗಿಟ್ಟು ಕಚ್ಚವರ ಪೊಟಲ ಸೆಟ್ಟಿಯ ಕಟ್ಟಿದ ಕೆಱೆಯ ಕಾಲೆಳೆಗೊಟ್ಟ ಕ್ರಮ (ಎಕ. III, ಮಂಡ್ಯ. ೧೪-೫; 907). [ಕಾಲೆಳೆ₂ + ಕೊಡು]

**ಕಾಲೇಜು** (ನಾ). (ವಿಶ್ವವಿದ್ಯಾಲಯಕ್ಕೆ ಸೇರಿದ ಉಚ್ಚ ಶಿಕ್ಷಣದ) ವಿದ್ಯಾಸಂಸ್ಥೆ: ಕಾಲೇಜಿರುವುದು ಊರ ಹೊರಗೆ ಪ್ರಶಾಂತ ಸ್ಥಳದಲ್ಲಿ (ಚಿಂದುಟ. ೫೪). [← ಇಂ. College]

**ಕಾಲೇಯ**, ಕಾಳೇಯ (ನಾ). ೧. ಕೇಸರಿ; ಕುಂಕುಮ ಕೇಸರಿ. ೨. ರಾಕ್ಷಸರಲ್ಲಿ ಒಂದು ವರ್ಗ, —ಪಂಗಡ: ಕಾಲೇಯರೆಂಬ ರಾಕ್ಷಸರು ಸಮುದ್ರದಲ್ಲಿ ಅವಿತುಕೊಂಡು (ವಚಭಾ.೧೪೭). **ಕಾಳೇಯ**: ೧. "ಕಾಳೇಯಮೆನಲು ಕಾಶ್ಮೀರಜಂ" (ಮ ಂ ಗ ರಾ. ೯೯-೨೨). ೩. ಕುಂಕುಮ: "ಕುಂಕುಮಂ . . . ಕಾಳೇಯಂ ಜಾಪಕಂ - ಈ ೭ ಕುಂಕುಮಂ" (ಹಲಾಯು ೪೯-೩೪೯). ೪. ಕಲಿ ಸಂಬಂಧವಾದುದು; ಕಲಿಯುಗದ್ದು: ಸಾಂದ್ರವಿಕಿರತ್ಕಾಳೇಯ ಪಾಪಾಂಧಕಾರ ನಿರಾಸೋಜ್ವಳ ಚಂದ್ರದೀಧಿತಿ (ಸೌಇಇ. XV, ೨೩೪-೨೫; 1169). [ಸಂ.]

**ಕಾಲುಮೂಳೆ** (ನಾ). ಆಭರಣವಿಲ್ಲದ ಕಾಲು; ಬೋಳುಕಾಲು: (ಕ).
[ಕಾಲು$_1$ (< ಕಾಲ್$_1$) + ಮೂಳೆ (< ಮೂಳಿ)]

**ಕಾಲುಮೆಟ್ಟು** (ನಾ). ೧. ಪಾದರಕ್ಷೆ; ಕೆರ; ಎಕ್ಕಡ: (ಕ). ೨. ಕಾಲುಗಳ ತುಳಿತ; ಪರಸ್ಪರ ಒಬ್ಬರ ಕಾಲನ್ನು ಇನ್ನೊಬ್ಬರು ತುಳಿಯುವುದು: (ಕ). ೩. (ಆಲಂ) ಜಗಳಕ್ಕೋಸ್ಕರ ಒಬ್ಬರನ್ನೊಬ್ಬರು ರೇಗಿಸುವಿಕೆ,—ಕೆಣಕುವಿಕೆ: ಗಜನಗರಿಯಲಿ ಕೌರವರಾಳ ಪಾಂಡವರಾಳ ಸೆಣಸಿನ ಕಾಲಮೆಟ್ಟುಗಳ ಸೂಳು ಮತ್ಸರ . . . ಚೂಳಿಗಲಹದ ಕದಡು (ಕುವ್ಯಾಅ. ೮-೧). [ಕಾಲು$_1$ (< ಕಾಲ್$_1$) + ಮೆಟ್ಟು$_2$]

**ಕಾಲುರಂಜು** (ನಾ). ೧. ಕಾಲುಧೂಳಿಯ ದೋಷ: ವನದೇವಿಯರ ದೃಷ್ಟಿ ತಾಕಿತದರಲ್ಲೆ ಕಾಲ್‌ರಂಜು ಆಯಿತೇ (ಸೌಂಗಂಧಿ. ೪೮-೪೨); ರಾತ್ರಿ ಮಲಗಿಕೊಳ್ಳುವುದಕ್ಕೆ ಮುಂಚೆ ಕಾಲುರಂಜು ತೆಗೆದುಬಿಡಿ (ಚೆಂಗಾಳ್ವ. ೧೪೪). ೨. ಕಾಲುಧೂಳಿಯ ದೋಷನಿವಾರಣೆಗಾಗಿ ಹಾಕುವ ದೃಷ್ಟಿ ಪರಿಹಾರ: ದೃಷ್ಟಿಯು ಚೆನ್ನಾಗಿ ತಟ್ಟಿದೆಯೆಂದು ಕಾಲರಂಜು ಹಾಕಲು ಹೋಗುವರು (ಮಧುನ. ೮೫).
[ಕಾಲು$_1$ (< ಕಾಲ್$_1$) + ರಂಜು]

**ಕಾಲುರಭತ್ತ** (ನಾ). ಒಂದು ಬಗೆಯ ಭತ್ತ: ಬನ್ನದತ್ತನು ಸೆಟ್ಟಿತ್ತಿ ದೇವಿಯಬ್ಬೆಯುನಿಜಿಸಿ × × × × ಕಾಲುರ ಭತ್ತ ಸಲಿಕೆ ಪತ್ತು ಗದ್ಯಾಣ (ಎಕ. VI, ಮೂಡಗೆ. ೧೯-೧೦; 1025). [?]

**ಕಾಲುರಿಚ** (ನಾ). ೧. ಹಳ್ಳಿಗ; ಗ್ರಾಮೀಣ: "ಕಾಲೂರೊಳ್ ಪುಟ್ಟಿದಂ, ಕಾಲುರಿಚಂ" (ಶಬ್ದಾನು. ೨೪೮ ಪ್ರಯೋ); ಪೊಟಲಿಂದ್ರಪುರಂ ಕಾಲೂರ್ ಪೊಟಲಿಂದ್ರರ್ ಕೊಟಲ ಮಾನಸರ್ ಕಾಲುರಿಚರ್ ಪೊಟಲಿಚರೆನೆ ಸೊಗಯಿಸುವುದು (ಕಾವ್ಯಾವ. ೩೩೫). ೨. ದಡ್ಡ; ಅಜ್ಞಾನಿ: "ಕಾಲುರಿಚಂ ತಾನೆ ಕೂಡೆ ಬೆಳ್ಳಕ್ಕರಿಗಂ" (ಕವಿಕಂ. ೧೫೬); ಕೃತಿವೆಸದೊಳಮೆಯ್ಯೊಳು ತೀವಿದ ತಪ್ಪಂ ರಸಿಕರ್ ಬಲ್ಲಂದದಿ ಬಲ್ಲರೆ ಕಾಲುರಿಚರ್ (ಜಯಕಾ. ೧-೧೬); ಸರಸರೊಡನಿರ್ದೊಡಂ ಕಾಲುರಿಚನವಂದಿರ ಗುಣಂಗಳಂ ಗ್ರಹಿಸಂ (ನೀತಿಮಂ. I, ೩೭೭). 'ಪೊಟಲಿಚ' ಪರಾ. [ಕಾಲೂರ್ + -ಇಚ]

**ಕಾಲುರಿಚೆ** (ನಾ). ಹಳ್ಳಿಯವಳು; ಗ್ರಾಮ್ಯೆ: ಕಾಲುರಿಚೆ, ಕರಹಡಿಚೆ (ಶಬ್ದಾನು. ೧೯೬ ಪ್ರಯೋ). [ಕಾಲುರಿಚ + -ಎ]

**ಕಾಲುವಟ್ಟೆ** (ನಾ). ಒಂದು ಬಗೆಯ ಸುಂಕ (?): ಬಸಜೂರಿಗೆ ಸಲುವ ಎರಡು × × × ಂದಣಗೆ ಕಾಲುವಟ್ಟೆ × × ಕವಡಿ ಮುಂತಾದ ಸಮಸ್ತ ಬೆವಹಾರಲು × × × ಪೂರ್ವಮರಿಯಾದೆ (ಸೌಇಇ. IX-ii, ೩೫೭-೯; 1455). [?]

**ಕಾಲುವಟ್ಟೆ** 'ಕಾಲ್ವಟ್ಟೆ' ನೋ.

**ಕಾಲುವಡೆ** (ನಾ). ಒಂದು ಬಗೆಯ ತೆರಿಗೆ; ಕಾಲುವೆಯ ತೆರಿಗೆ (?): ಆ ಗ್ರಾಮಕ್ಕೆ ವಳೆಯ ಶಾಸನವ ನೆಡಿಸಿಕೊಟ್ಟವಾಗಿ ನೀರುವಡೆ ಕಾಲುವಡೆ ಸ್ಥಾನಮಾನ್ಯ ಪೂರ್ವಮರಿಯಾದೆಯೆಂದು ಕೊಟ್ಟ ಶಿಲಾಶಾಸನ (ಎಕ. XIV, ಗುಂಡ್ಲುಪೇ. ೧೩೨-೧೮; 1540). [?]

**ಕಾಲುವಲೆ** 'ಕಾಲ್ವಲೆ' ನೋ.

**ಕಾಲುವಳಿ** 'ಕಾಲ್ವಳ್ಳಿ' ನೋ.

**ಕಾಲುವಳ್ಳಿ** 'ಕಾಲ್ವಳ್ಳಿ' ನೋ.

**ಕಾಲುವಾಮೆ** (ನಾ). ಒಂದು ಬಗೆಯ ಸಸ್ಯ: (ಮೈಪಿಗ. ೪೦-೮೦೧). [?]

**ಕಾಲುವಾಸಿ** (ನಾ). ನಾಲ್ಕನೆಯ ಒಂದು ಭಾಗ; ಕಾಲುಭಾಗ (ದಕ. ಕ). [ಕಾಲು$_3$ (< ಕಾಲ್$_3$) + ವಾಸಿ]

**ಕಾಲುವಿಡಿ** 'ಕಾಲ್ವಿಡಿ$_1$' ನೋ.

**ಕಾಲುವೆ** 'ಕಾಲ್ವಾಯ್' ನೋ.

**ಕಾಲುವೆಗಟ್ಟು** (ಕ್ರಿ). ೧. ನಾಲೆಯನ್ನು ನಿರ್ಮಿಸು. ೨. ಕಾಲುವೆಯಾಗು: ಕ್ಷೀರಾಭಿಷೇಕವನು ಓವಿ ಮಾಡಲು ಬೀದಿ ಬೀದಿಗೆ ತೀವಿ ಕಾಲುವೆಗಟ್ಟಿ ಹರಿಯೆ (ಬಸಪು. ೧೦-೫).
[ಕಾಲುವೆ (< ಕಾಲ್ವಾಯ್) + ಕಟ್ಟು$_1$]

**ಕಾಲುವೆದೆಗೆ** (ಕ್ರಿ). ಕಾಲುವೆಯನ್ನು ನಿರ್ಮಿಸು: ಬಲದಿ ತಳಿತ ಪತಾಕೆಯಬ್ಬರದೊಳಗೆ ಮೆಱೆದವು ಗಗನಗಂಗೆಯ ಹಲವು ಕಾಲುವೆದೆಗೆದವೆನೆ (ಕುವ್ಯಾದ್ರೋ. ಒರಿಇ. ೨೮೭ ಪಂ).
[ಕಾಲುವೆ (< ಕಾಲ್ವಾಯ್) + ತೆಗೆ$_1$]

**ಕಾಲುವೇಗ** (ನಾ). ನಡಗೆಯ ವೇಗ; ಶೀಘ್ರವಾದ ನಡಗೆ: ಕಾಲುವೇಗದ ಕುನಿವಿಡಿದ ಕಿರಾತರು ಸಾಲಿಟ್ಟು ನಡೆದರೊಗ್ಗಿನಲಿ (ಮೋಹತ. ೧೯-೧೦). [ಕಾಲು$_1$ (< ಕಾಲ್$_1$) + ವೇಗ]

**ಕಾಲುವೊಳೆ** 'ಕಾಲ್ವೊಳೆ' ನೋ.

**ಕಾಲುಷ್ಯ** (ನಾ). ೧. ಕೊಳೆ; ಮಾಲಿನ್ಯ; ಕಶ್ಮಲ. ೨. ಪಾಪ; ಪಾತಕ: ಭವ್ಯಂಗೆ ಕರ್ಮೋದಯಾಪಾದಿತ ಕಾಲುಷ್ಯಮುಳ್ಳನ್ನೆವರಂ ತದುಪಶಮಮೆಂತಕ್ಕುಮೆನೆ (ತತ್ತ್ವಪ್ರ. ೭೯); ಕಾಲುಷ್ಯ ತಿಮಿರಾರಿ ಪ್ರತ್ಯಕ್ಷವಾಗಿ ನಿನ್ನಿಷ್ಟಾರ್ಥಮೇನನಲ್ಕೆ (ಏಕೋಪು. ೬-೯). ೩. ಕಪಟ; ಮೋಸ: ಈ ಸೆಟ್ಟರ ಮತ್ತು ಭಟ್ಟರ ನಗುವಿನಲ್ಲಿ ಕಾಲುಷ್ಯವಿರಲಿಲ್ಲ (ಮಣ್ಣನಂ. ೮೫). [ಸಂ.]

**ಕಾಲುಸರ** 'ಕಾಲ್ಸರ' ನೋ.

**ಕಾಲುಸರಪಣಿ** (ನಾ). ಕಾಲಲ್ಲಿ ಧರಿಸುವ ಒಂದು ಆಭರಣ; ನೂಪುರ; ಅಂದುಗೆ: "ಅಂದಿಗೆ, ಕಾಲುಸರಪಣಿ, ಪಾಗಡ, ಕಾಲುಕಡಗು, ಕಾಲು ತೊಡಿಗೆ" (ಸಿದ್ಧಾಂತಿ. ೧೭೫).
[ಕಾಲು$_1$ (< ಕಾಲ್$_1$) + ಸರಪಣಿ (< ಸರಪಳಿ)]

**ಕಾಲುಸುತ್ತು** (ನಾ). ೧. ಕಾಲುಂಗುರ. ೨. = ಕಾಲುಧೂಳು.
[ಕಾಲು$_1$ (< ಕಾಲ್$_1$) + ಸುತ್ತು]

**ಕಾಲುಹಳ್ಳಿ** 'ಕಾಲ್ವಳ್ಳಿ' ನೋ.

**ಕಾಲುಹಾಕು** (ಕ್ರಿ). ೧. ಹೆಜ್ಜೆಯಿಡು; ನಡೆ: ನವ ಕುಮಾರನು ಜಾಗ್ರತೆ ಕಾಲುಹಾಕಿದನು (ಕಪಾಕುಂ. ೪೦); ಕಚೇರಿಯತ್ತ ಕಾಲುಹಾಕಿದೆ (ನಾಪೋಲಿ. ೯೫). ೨. (ಆಲಂ) ಮಧ್ಯೆ ಪ್ರವೇಶಿಸು; ತಲೆಹಾಕು; ಬರು: ಮೃತ್ಯು ಕಾಲುಹಾಕಿದ ಚಿಹ್ನವಾವುದೂ ಕಂಡು ಬರಲಿಲ್ಲ (ಸ್ಮೃತಿಚಿ. ೪೫೫). ೩. (ದಕ). (ಆಲಂ) ಉಪಪತಿ ಅಥವಾ ಉಪಪತ್ನಿಯನ್ನು ಇಟ್ಟುಕೊಳ್ಳು.
[ಕಾಲು$_1$ (< ಕಾಲ್$_1$) + ಹಾಕು (< ಪಾಯ್ಕು$_1$)]

**ಕಾಲುಹಾದಿ** (ನಾ). = ಕಾಲ್ದಾರಿ: ಕಪಾಲಕುಂಡಲೆಯು . . . ಕಾಲುಹಾದಿಗೊಂಡು ಒಬ್ಬಳೇ ಹೋದಳು (ಕಪಾಕುಂ. ೯೮).
[ಕಾಲು$_1$ (< ಕಾಲ್$_1$) + ಹಾದಿ]

**ಕಾಲುಹಾರು** (ಕ್ರಿ). ಆಧಾರ ತಪ್ಪು; ಗತಿಯಿಲ್ಲದಾಗು: ಎಂಥ ಕಾಲು ಹಾರಿದ ಸಂಸಾರಿಕ ಬಂದರೂ ಆ ಊರಲ್ಲಿ ಹೊಟ್ಟೆಗೂ ಬಟ್ಟೆಗೂ ಸಿಗುತ್ತಿತ್ತು (ಮಧುನ. ೨೦). [ಕಾಲು$_1$(< ಕಾಲ್$_1$) + ಹಾರು$_1$(< ಪಾರು)]

**ಕಾಲುಹಿಡಿ** 'ಕಾಲ್ವಿಡಿ' ನೋ.

**ಕಾಲುಹೊಳೆ** 'ಕಾಲ್ವೊಳೆ' ನೋ.

**ಕಾಲೂರ್, ಕಾಲೂರು$_2$** (ನಾ). ಕಾಲುನಡಿಗೆಯಿಂದ ಹೋಗತಕ್ಕ ಊರು; ಚಿಕ್ಕಹಳ್ಳಿ; ಕುಗ್ರಾಮ: ಕಾಲೂರ್ಗಳ ಗಂಡರ ಪೆಂಡಿರ ನಡೆಯುಡೆಯ ನುಡಿಯ ಮುಡಿಯ ಗಾಂಪಿಂಗೆ ಮುಗುಳ್ನಗೆ ನಗುತ್ತುಂ (ಪಂಪಭಾ. ೨-೯೭ ವ); ಅನಾಗತೋಕ್ತಿ ಕಾಲೂರಸನೇಕಮಂ ದ್ವಿಜರ್ಗೆಗೊಟ್ಟುದಱಿಂದಂ (ಎಕ. VIII, ಸಾಗರ. ೧೧೯-೫೪; 1042);

**ಕಾಲೇಯಕ** (ನಾ). ಒಂದು ಚಿಕ್ಕ ಸಸ್ಯ; ಮರದರಿಸಿನ: "ಪೀತದ್ರುಃ, ಕಾಲೇಯಕಃ . . . ಪರ್ಜನೀ – ಈ ೭ ಮರದರಿಶಿನ" (ಸಿದ್ಧಾಂತಿ. ೧೧೮). [ಸಂ.]

**ಕಾಲೇಳ್** 'ಕಾಲೇಟು್' ನೋ.

**ಕಾಲೇಳು** 'ಕಾಲೇಟು್' ನೋ.

**ಕಾಲೇಟು್**, ಕಾಲೇಳ್, ಕಾಲೇಳು (ಕ್ರಿ). ೧. (ವಿಶೇಷವಾಗಿ ನಿಷೇಧಾರ್ಥದಲ್ಲಿ) ಕಾಲುಕೀಳಲು ಮನಸ್ಸಾಗು; ಹೋಗಲು ಸಾಧ್ಯವಾಗು; ಕಾಲಲ್ಲಿ ಶಕ್ತಿಯಿರು: ಕಯ್ಯೇಟಿಬಿದೆ ದುಃಖಂಬಟ್ಟು ಕಾಲೇಟಿಬಿದೆ ಮೆಯ್ಮೆಲ್ಲಂ ತೊನ್ನುಗೊಂಡು ದುಃಖಂಬಟ್ಟು (ಧರ್ಮಾಮೃ. ೬–೧೭೭). **ಕಾಲೇಳ್**: ಮುದ್ದುವೆಣ್ಣಿಗೆ ಪೇಳಿದಳು ನಿನ್ನಬಿಟ್ಟು ಕಾಲೆದ್ದು ಪೋಪೆನೆ ಪೋಪುದಿಲ್ಲ (ನೇಮಿಹತ. ೨೯–೩). ೨. ತೊಡಗು; ಪ್ರವೃತ್ತನಾಗು: ಬಾಲತ್ವದೊಳ್ ದೀಕ್ಷೆಗಿವರೊಳಿಬ್ಬರ ಬುದ್ಧಿ ಕಾಲೇಳ್ವುದಹುದದು (ಭರತೇ. ೪೫–೧೭). **ಕಾಲೇಳು**: ೧. ಮುದ್ದು ನಗೆಗಳಂ ಕಂಡು ನಡೆಯಲ್ ಮುಂದೆ ಕಾಲೇಳದೆ (ಚೆಬವು. ೧೧–೧೪); ಕಾಲೇಳವು, ಊಟದ ಮೇಲೆ ರುಚಿಯಿಲ್ಲ (ಜಯಂತ. ೨೪೯).
[ಕಾಲ್$_1$ + ಏಟು್$_1$]

**ಕಾಲೈಕ್ಯ** (ನಾ). ನಾಟಕವನ್ನು ಆಡುವುದಕ್ಕೆ ಹಿಡಿಯುವ ಕಾಲವೂ ನಾಟಕದ ಕಥೆ ನಿಜವಾಗಿ ನಡೆಯುವುದಕ್ಕೆ ಹಿಡಿಯಬೇಕಾಗುವ ಕಾಲವೂ ಸರಿ ಸುಮಾರು ಒಂದೇ ಪರಿಮಿತಿಯುಳ್ಳದ್ದಾಗಿರುವುದು: ಅದ್ದರಿಂದಲೇ ಕಾಲೈಕ್ಯ ಸ್ಥಳೈಕ್ಯ, ಎಂಬುವು ನಾಟಕರಚನೆಯ ಸಮ್ಮತ ತತ್ವಗಳಾದವು (ಸಾಹಿಪ್ರ. ೧೭೪). [ಕಾಲ + ಐಕ್ಯ]

**ಕಾಲೊರಸು** (ನಾ). "ಕಾಲು ಒರಸುವುದಕ್ಕಾಗಿ ಬಾಗಿಲಲ್ಲಿ ಹಾಸುವ ತೆಂಗಿನ ನಾರಿನ ಚಾಪೆ" (Door-mat. ಇಂಕನ).
[ಕಾಲ್$_1$ + ಒರಸು$_2$]

**ಕಾಲೊಳ್ಪು** (ನಾ). ಕಾಲಿನ ಉದ್ದ; ವಿಸ್ತಾರ (?): ಗಿಂಗೆ ಮಳ ಸಿಂದಂ ಕಿಟಿದಕ್ಕ ಕಾಲೊಳ್ಪು ನಾಲ್ವರಲಳವಿಗ ಕಿಜಿದುಮುಕ್ಕ ತುರಗಂ ಬೆಟ್ಟದಿಂ ಪಿರಿದಕ್ಕವಳಯುಮುಂ ಭೂವಳಯದಿನತ್ತ ಪಿಂದುಮುಕ್ಕ (ಎಕ. II, ೧೩೩–೧೦೦; 982). [?]

**ಕಾಲೋಚಿತ** (ಗು). ೧. ಸಮಯಕ್ಕೆ ತಕ್ಕ; ಸಮಯೋಚಿತವಾದ; ಸಂದರ್ಭೋಚಿತವಾದ: ಮಾಟ್ಪುದು ಕಾಲೋಚಿತ ಸಂಧಿವಿಗ್ರಹದೊಳೊಂದಂ ಕಾರ್ಯಮಂ ಪ್ರಾಪ್ತಮುಪ್ಪುದನಾ ಪ್ರೋಕ್ತಮನುಂತೆ ರಾಭಸಿಕ ವಾಕ್ಯಾತಕ್ಕೆ ಮೆಯ್ದುರ್ಪದೇ (ಶಾಂತಿಪು. ೩–೭೩). (ನಾ). ೨. ಯೋಗ್ಯವಾದ ಸಮಯ; ಸರಿಯಾದ ಕಾಲ: ಕಾಲೋಚಿತ ಕೃದಿದಾ ತೃಣವೇ ಪರ್ವತವಲ್ಲವೇ (ಸೋಮೇಶ. ೧೬). ೩. ಕಾಲಕ್ಕೆ ಉಚಿತವಾದದ್ದು: ವೇದವ್ಯಾಸ ಮುನಿವರಂ ಬಂದು . . . ಕಾಲೋಚಿತವನಜೌತು ಹಯಮೇಧವಿಧಿಯಂ ತನಗೆ ಸೂಚಿಸೆ (ಜೈಮಿಭಾ. ೨–೫೫).
[ಕಾಲ + ಉಚಿತ]

**ಕಾಲೋಣಿ** (ನಾ). ಒಂದು ಬಗೆಯ ತೆರಿಗೆ: ಈ ಗ್ರಾಮುಗಳಿಗೆ ಸಲುವ ಕಾಲೋಣಿ ನೀರೋಣಿ ಅಕ್ಷಿಣಿ ಆಗಾಮಿ (ಎಕ. XIV, ಮೈಸೂರು. ೧೧೪–೬೩; 1663); ಸುಂಕ ಸುವರ್ಣಾದಾಯ ಕಲ ಕೊಠಾರ ಕಾಲೋಣಿ ನೀರೋಣಿಯೇನುಂಟಾದ ಸಕಲಾಯ ಸ್ವಾಮ್ಯವನು (ಎಕ. III, ತಿರುಮ. ೬೨–೧೬೬; 1667). [?]

**ಕಾಲೋದಕವಾರ್ಧಿ**, ಕಾಳೋದಕವಾರ್ಧಿ (ನಾ). ೧. [ಜೈನ] ಪ್ರಳಯಕಾಲದ ಪ್ರವಾಹದಿಂದ ಉಕ್ಕಿ ಬರುವ ಸಮುದ್ರ: ಕಾಲೋದಕವಾರ್ಧಿಯಂತೆ ಪರಿನಿಷ್ಕೃತ ಪುಷ್ಕರಾರ್ಧಮುಮಪ್ಪ ಸಂಗ್ರಾಮ ಭೂಮಿಯಂ ಪೊಜಮಟ್ಟು (ಚಂದ್ರಪು. ೧೦–೧೧೫ ವ). **ಕಾಳೋದಕವಾರ್ಧಿ**: ೨. [ಜೈನ] ಧಾತಕೀ ದ್ವೀಪ ಪುಷ್ಕರ ದ್ವೀಪಗಳ ನಡುವಣ ಸಮುದ್ರ: ಅಗಲ್ದು ಭಾಗಂ ಲವಣಾಬ್ಧಿಗೆ ಗುಣ್ಪಿನ ತಿಣ್ಪು ನೆಗಟ್ದ ಕಾಳೋದಕವಾರ್ಧಿಗೆ ನೀರ ತೆಳ್ಪು ದುಗ್ಧಾಬ್ಧಿಗೆ ದೊರೆ (ಶಾಂತಿಪು. ೩–೫). [ಕಾಲ + ಉದಕ + ವಾರ್ಧಿ]

**ಕಾಲೋಣಿ** 'ಕಾಲನಿ' ನೋ.

**ಕಾಲೋರಗ**, ಕಾಳೋರಗ (ನಾ). ಕೃಷ್ಣಸರ್ಪ; ಕರಿಯನಾಗ: (ಕ). **ಕಾಳೋರಗ**: ಕಡಂಗಿ ಕಾಳೋರಗನಂ ಕೂಸು ಪಿಡಿವಂತೆ ಪಿಡಿದಂ ಸಾಸಿಗನವಿವೇಕಿ ಸೀತೆಯಂ ದಶಕಂಠಂ (ಪಂಪರಾಮಾ. ೯–೧೬೧). ಹಾಳೂರೊಳಗೊಂದು ಮನೆಯ ಮಾಡಿ ಬಿದ್ದಿಹೆ [ಪಾಠಾಂ. ಬದುಕಿಹೆ] ನೆಂದು ಹೋದರೆ ಕಾಳೋರಗ ಬಂದು ಕಡಿಯಿತ್ತು ನೋಡಾ (ಅವಚಂ. ೭೪–೩೨೮). [ಕಾಲ$_2$ + ಉರಗ]

**ಕಾಲೋಹಣ** (ನಾ). ೧. ಒಂದು ಊರಿನ ಹೆಸರು; ಕಾಯಾವರೋಹಣ. ೨. ಅಲ್ಲಿ ತಯಾರಾದ ಬಟ್ಟೆ: ಕಾಲೋಹಣದ ಸಾಹಿಯಾಣದ ಚೀನದ ಮಹಾಚೀನದ ಪಟಿಯ ಚಿತ್ರಾವಳಿಯ ಪಟ್ಟಾವಟಿಯ . . . ಪುಟ್ಟಿಗೆಗಳನೊಟ್ಟಿ ಬೆಟ್ಟಾಗಿ ಪುಂಜಿಸಿ (ಸುಕುಮಾ. ೧೦–೯೧ ವ);
[< ಸಂ. ಕಾಯಾವರೋಹಣ]

**ಕಾಲ್ಕಂಬಿ** (ನಾ). ಒಂದು ಬಗೆಯ ಸಸ್ಯ: (ವೈಶಿಗಿ. ೩೮–೭೬೨). [?]

**ಕಾಲ್ಕಟ್ಟು**, ಕಾಲುಕಟ್ಟು$_1$ (ಕ್ರಿ). ೧. ಕಾಲುಗಳನ್ನು ಕಟ್ಟು, —ಬಂಧಿಸು: ಸಂಸಾರ ಬಲು ಮೊಟ್ಟೆ ಅದರೊಳು ಬಿದ್ದಿದ್ದೆ ಕಾಲ್ಕಟ್ಟ (ಪುರಂದ. ೨–೫೭–೩). **ಕಾಲುಕಟ್ಟು$_1$**: ೨. ಕಾಲಿಗೆ ಬೀಳು; ಕಾಲು ಹಿಡಿ: ಇಂಪಾದ ಮಾತುಗಳಿಂದಲೋ ಅವಶ್ಯವಿದ್ದರೆ ಕೈಮುಗಿದು ಕಾಲು ಕಟ್ಟಿಕೊಂಡು ಕಣ್ಣೀರು ಸುರಿಸುವುದರಿಂದಲೋ ವಶಪಡಿಸಿಕೊಂಡು ಅವಕಾಶ ಸಿಕ್ಕಿದಾಗ . . . ನಾಶಮಾಡಿ ಬಿಡಬೇಕು (ವಚಭಾ. ೩೪೦); ಕಾರ್ಯವಾಸಿ ಕತ್ತೇ ಕಾಲುಕಟ್ಟಿದ (ಗಾದೆ). [ಕಾಲ್$_1$ + ಕಟ್ಟು$_1$]

**ಕಾಲ್ಕಣ್ಣಿ** 'ಕಾಲ್ಗಣ್ಣಿ' ನೋ.

**ಕಾಲ್ಕಣ್ಣಿವಲೆ** 'ಕಾಲ್ಗಣ್ಣಿವಲೆ' ನೋ.

**ಕಾಲ್ಕೀಳು**, ಕಾಲುಕೀಳು (ಕ್ರಿ). ಸ್ಥಳಬಿಟ್ಟು ಹೋಗು; ಹೊರಟು ಹೋಗು; ಓಡಿಹೋಗು: ಬಿರುಗಾಳಿ ಮೈದೋರಿದ ಕ್ಷಣದಲ್ಲಿಯೇ ಕಾಲ್ಕೀಳುವ ಸಿದ್ಧತೆಯಲ್ಲಿಯೇ ಅವು ನಿಂತಿವೆ (ಬಂಗಾಹ. ೫೭). **ಕಾಲುಕೀಳು**: ಮನೆತನವೇ ಈ ಹಳ್ಳಿಯಿಂದ ಕಾಲುಕೀಳಬೇಕಾಯಿತು (ಮಣ್ಣಿಮ. ೧೩೬); ನಾವೀಗ ಜತೆಯಾಗಿ ಅಲ್ಲಿಂದ ಕಾಲು ಕೀಳತೊಡಗಿದ್ದೆವು (ಹೇಮಂತ. ೩೦೨); ಧೃತರಾಷ್ಟ್ರ ಧೃತಿಗುಂದಿ ಅಲ್ಲಿಂದ ಕಾಲು ಕಿತ್ತೋಡಿದ (ಬಿದುರೆ. ೩೩). [ಕಾಲ್$_1$ + ಕೀಳು (< ಕೀಟು್$_1$)]

**ಕಾಲ್ಕುಪ್ಪಸ** 'ಕಾಲ್ಗುಪ್ಪಸ' ನೋ.

**ಕಾಲ್ಕುಪ್ಪಳಿಸು** (ಕ್ರಿ). ೧. ಕಾಲಿನಿಂದ ಕುಪ್ಪಳಿಸು, —ಜಿಗಿ: (ಕ). ೨. ಕಾಲು ಕುಸಿದುಬೀಳು; ಕುಕ್ಕರಿಸು: ಬಲ್ಪಳಿದು ನಿಂದಿರಲಾಜದೆ ಕಾಲ್ಕುಪ್ಪಳಿಸಿ ಭೋಂಕನೆ ಕುಳ್ಳಿರ್ದು (೧ಂಕ. ೮–೭೭ ವ).
[ಕಾಲ್$_1$ + ಕುಪ್ಪಳಿಸು]

**ಕಾಲ್ಕೆದರು**, ಕಾಲುಕೆದರು (ಕ್ರಿ). ೧. ಕಾಲಿನಿಂದ ನೆಲವನ್ನು ಕೆದರು. ೨. (ಆಲಂ) ಜಗಳಕ್ಕೆ ಕೆಣಕು, —ಕೆರಳಿಸು: ಕಲಹಕ್ಕೆ ಕಾಲ್ಕೆದರಿ ಗರಿಯ ಪಸರಿಸಿ ತಮ್ಮ ತಲೆಯ ಬಿದಿರಿಸಿ . . . ಬಳಲ್ದ ಕಳಹಂಸ ಕಂಗೆಸೆದಿರ್ದವು (ನವಮೋ. ೮–೩೨). **ಕಾಲುಕೆದರು**: ೧. ಕಾಲುಕೆದರಿ ಜಗಳ ತೆಗೆಯುವ ಗೂಳಿ (ಮಣ್ಣುಹ. ೬೨). [ಕಾಲ್$_1$ + ಕೆದರು (< ಕೆದಜು್)]

**ಕಾಲ್ಕೆರೆ**, ಕಾಲುಕೆರೆ (ಕ್ರಿ). ೧. = ಕಾಲ್ಕೆದರು ೨: ಜಗಳಕ್ಕೆ ಕಾಲ್ಕೆರೆದು ನಿಂತಿದ್ದಾನೆ (ರೂಢಿ). **ಕಾಲುಕೆರೆ**: ಬಹುಮಂದಿ ಮಹಾರಥಿಕರೂನಿಂತು ಜಯಾಪೇಕ್ಷಿಗಳಾಗಿ ಯುದ್ಧಕ್ಕೆ ಕಾಲುಕೆರೆಯುತ್ತಿದ್ದರು (ಕೃವಾಭೀ. ೧೩೫);

ಆ ಪಾಳಯಗಾರರು ಕಾಲುಕೆರೆದು ಜಗಳವಾಡಿದರು (ಒಡೆಕ. ೪); ಇಂಗ್ಲೀಷರು ಸುಲ್ತಾನರಿಗೆ ಅಂಥ ಕಾಲು ಕೆರೆಯುವ ಕಾಗದ ಬರೆಯು ತ್ತಿರಲಿಲ್ಲ (ಕೃಷ್ಣಭೂ. ೯೫).

ಕಾಲ್ಕೆರೆದು ಜಗಳತೆಗೆ = ನಿಷ್ಕಾರಣವಾಗಿ ಜಗಳಕ್ಕೆ ತೊಡಗು: ಅವನು ಯಾವಾಗಲೂ ಕಾಲ್ಕೆರೆದು ಜಗಳ ತೆಗೆಯುತ್ತಾನೆ (ರೂಢಿ).
[ಕಾಲ್$_1$ + ಕೆರೆ$_1$]

**ಕಾಲ್ಕೆರ್ಪು**, ಕಾಲ್ಗೆರಹು (ನಾ). ಕಾಲಲ್ಲಿ ಮೆಟ್ಟುವ ಕೆರ; ಎಕ್ಕಡ: ಕಣ್ಣಪ್ಪನಿಂದಾ ಪೊತ್ತು ಕಾಲ್ಕೆರ್ಪೊರಸೊರಸಿ ನೆಜಿಕೆ ನೆತ್ತಿಯಲಿ ಸುಲಿದಿರ್ದ ಕಲೆಗಳ ಚಂದದಿಂ (ಬಸವು. ೩೮-೫೭). **ಕಾಲ್ಗೆರಹು**: ದುರುಳನೆಮ್ಮಂ ಕಾಣುತವೆ ಕಾಲ್ಗೆರಹಿನಲಿ ಮುಚ್ಚಿದನು ಮಾಂಸವನು (ಬಸವು. ೫೭-೩).
[ಕಾಲ್$_1$ + ಕೆರ್ಪು]

**ಕಾಲ್ಕೆಲಸ** (ನಾ). ಕಾಲಿನಿಂದ ಮಾಡುವ ಕೆಲಸ: ಬುದ್ಧಿಯ ಕೆಲಸ ಶ್ರೇಷ್ಠ; ತೋಳು ಕೆಲಸ ಮಧ್ಯಮ; ಕಾಲ್ಕೆಲಸ ಹೆಗಲಕೆಲಸಗಳು ಅಧಮ (ವಚಭಾ. ೩೩೭). [ಕಾಲ್$_1$ + ಕೆಲಸ]

**ಕಾಲ್ಕೈದು** (ನಾ). ಕಾಲನ್ನೇ ಆಯುಧವಾಗಿ ಉಳ್ಳದ್ದು; ಕೋಳಿ; ಚರಣಾಯುಧ: ಅಳ್ಕಿಸುವ ಹುಲಿಯಳಿವ ಪೇಳುವದೆನೆ ಕೂಗುತಿದೆ ಕಾಲ್ಕೈದು ಸುಸಿಲೊರೆಯೆ ನೆಲ್ಲೂರ ಕರೆದು (ಕಾಲೂರ. ೪೯-೧೭೨).
[ಕಾಲ್$_1$ + ಕೈದು (< ಕೆಯ್ದು)]

**ಕಾಲ್ಕೋ** 'ಕಾಲ್ಗೋ' ನೋ.

**ಕಾಲ್ಗಚ್ಚು$_1$** 'ಕಾಲ್ಗರ್ಚು$_1$' ನೋ.

**ಕಾಲ್ಗಚ್ಚು$_2$** 'ಕಾಲ್ಗರ್ಚು$_2$' ನೋ.

**ಕಾಲ್ಗಚ್ಚುಗೊಳ್**, ಕಾಲುಗಚ್ಚುಗೊಳ್ (ಕ್ರಿ). ಪಾದೋದಕವನ್ನು ತೆಗೆದುಕೊಳ್ಳು: ನಡುವಣ ಭಾಗಮಂ ಕಾಲ್ಗಚ್ಚುಗೊಂಡು [ಬಿಟ್ಟಬಾವಿ] (ಬೊಂಕಶಾ. ೧೯೩೩, ಹಾವೇರಿ. ೧೮೭-೨೮; ?). **ಕಾಲುಗಚ್ಚುಗೊಳ್**: ಕೈಯಲು ಕಾಲುಗಚ್ಚುಗೊಂಡು ಬಿಟ್ಟ ತೋಂಟ (ಸೌಇಇ. XX, ೩೩೪-೧೪; 13ನೆಯ ಶತ).
[ಕಾಲ್ಗಚ್ಚು$_2$ (< ಕಾಲ್ಗರ್ಚು$_2$) + ಕೊಳ್$_1$]

**ಕಾಲ್ಗಟ್ಟಿಗೆ** (ನಾ). ಕಾಲಿಗೆ ಅಡ್ಡಲಾಗಿ ಕಟ್ಟುವ ಕೊರಡು: ಮುಟ್ಟುವ ಫಣಿ ಹುಲಿ ಕರಡಿ ಸಿಂಹದ ಬಾಯ ಕಟ್ಟಿ ಬೇಂಟೆಯ ಪಡೆ ಮುಟುಹೆ ಬೆಟ್ಟುವ ಕಾಲ್ಗಟ್ಟಿಗೆ ಕಾಲ್ಗೆದಾಳ್ವಡಗಟ್ಟುವ ಬೇಡರೈದಿದರು (ಮೋಹತ. ೧೯-೧೭). [ಕಾಲ್$_1$ + ಕಟ್ಟಿಗೆ$_1$]

**ಕಾಲ್ಗಟ್ಟು**, ಕಾಲುಕಟ್ಟು$_2$ (ನಾ). ೧. ಕಾಲುಗಳನ್ನು ಕಟ್ಟುವ ಸರಪಣಿ; ಸಂಕೋಲೆ: "ಸಂಕಲೆ ಹಿಂಜೀರಂ ನಿಗಳಂ ಕಾಲ್ಗಟ್ಟುಗಳೂ ಳಂದುಕಾಭಿಖ್ಯಾನಂ" (ವಸ್ತುಕೋ. ೭೮-೩೩). "ನಿಗಳಃ, ಪಾದಬಂಧಃ . . . – ಈ ೫ ಆನೆಯ ಕಾಲ್ಗಟ್ಟು" (ಹಲಾಯು. ೩೭-೭೦).
**ಕಾಲುಕಟ್ಟು$_2$**: ೨. ಕಣಕಾಲಿಗೆ ತೊಡಿಸುವ ಕವಚ; ಜಂಘಾ ಕವಚ: ಕಂಬಳಿಯ ಚಡ್ಡಿ ಕಾಲುಕಟ್ಟು ತುಪ್ಪಟದ ಜೋಡು (ಆರ್ಯಕ. ೧). ೩. (ಆಲಂ) ಮದುವೆ; ವಿವಾಹ: (ಕ).
[ಕಾಲ್$_1$ + ಕಟ್ಟು$_2$]

**ಕಾಲ್ಗಟ್ಟೆ** (ನಾ). ಕಾಲುವೆ ಮತ್ತು ಕಟ್ಟೆ: ಮೇಲ್ಗಟ್ಟಿನ ಪಸುರ್ವಟ್ಟೆಯ ಪೊಲ್ಗಿಲಿಗಳ್ಸುಟಿಯೆ ಗಗನದೊಳ್ ಪಚ್ಚೆಯ ಸುಣ್ಣಲ್ಗಟ್ಟಿನ ಜಗಲಿ ಪೊಲಿರೆ ಕಾಲ್ಗಟ್ಟೆಯ ಮಡಿಗಳೆಸೆದುಪೋರೊಂದೆಡೆಯೊಳ್ (ಮಲ್ಲಿಪು. ೨-೧೭). [ಕಾಲ್$_2$ + ಕಟ್ಟೆ]

**ಕಾಲ್ಗಡ**, ಕಾಲಕಡು (ನಾ). ಹೊಳೆಯನ್ನು ಕಾಲಿನಿಂದ ದಾಟುವ ಸ್ಥಳ; ಹಾಯ್ಗಡ: (ಕ). **ಕಾಲಕಡು**: ಮಹಾನದಿಗಳು ಕಾಲ ಕಡುವಾಗಿ (ಸೌಗಂಧಿ. ೭೩೨-೧೮). [ಕಾಲ್$_1$ + ಕಡು$_2$]

**ಕಾಲ್ಗಡಗ**, ಕಾಲುಕಡಗ (ನಾ). ಕಾಲಿಗೆ ಹಾಕಿಕೊಳ್ಳುವ ಕಡಗ; ಕಾಲಬಳೆ: ಕುಂಡಲಯುಗ ಮುತ್ತು ಕಾಲ್ಗಡಗಮಂದುಗೆ ಕಂಕಣ ಕಿಂಕಿಣೀಗಣಂ. . . ತನಗೊಡಂಬಡೆ (ಅಜಿಪು. ೫-೬೨). **ಕಾಲುಕಡಗ**: ಚಿಂನ ಕಾಲುಕಡಗಂಗಳನಳವಡಿಸಿ (ಸೌಗಂಧಿ. ೨೫೩-೧೮); ಕತ್ತೆಗೆ ಯಾಕೆ ಕಾಲುಕಡಗ (ಗಾದೆ). [ಕಾಲ್$_1$ + ಕಡಗ]

**ಕಾಲ್ಗಡೆಯ** (ನಾ). = ಕಾಲ್ಗಡಗ: ಉಗ್ಗಡದ ಝುಲ್ಲರಿ ಫೇನದಿಂದ ಉರಗೆಜ್ಜೆ ಕಾಲ್ಗಡೆಯ [ಪಾಠಾಂ. ಲ್ಗಡಗ, ಲ್ಗಡಹ] ಬೊಬ್ಬುಳಿಕೆ ಮೊರಹುಗಳಿಂದಲಲಗು ಮೀನಿಂದೆ ಹಲ್ಲಣವೆನಿಪ್ಪ (ಭಾವಚಿಂ. ೮-೩).
[ಕಾಲ್$_1$ + ಕಡೆಯ$_1$ (< ಕಡೆ$_4$)]

**ಕಾಲ್ಗಣ್ಣಿ**, ಕಾಲಕಣ್ಣಿ, ಕಾಲುಕಣ್ಣಿ, ಕಾಲುಗಣ್ಣಿ, ಕಾಲ್ಕಣ್ಣಿ (ನಾ). ೧. ಕಾಲಿಗೆ ಹಾಕಿ ಎಳೆದು ಬೀಳಿಸುವ ಕಣ್ಣಿ, —ಕುಣಿಕೆಯ ಹಗ್ಗ. ೨. ಬಂಧನ. 'ಕಾಲ್ಗಣ್ಣಿವಲೆ' ಪರಾ. **ಕಾಲಕಣ್ಣಿ**: ೧. ಕೆಲಂಕೇಶ್ವರನ ಲೀಲೆಯಿದೆಂದು ಹೇಳುವರು ಮೂಲಭೂತವೆನಿಪ್ಪ ವಿದ್ಯೆಯ ಕಾಲಕಣ್ಣಿಯ ದೆಂದು ಕೆಲವರು ಹೇಳುವರು (ಅಮೃತ. ೫-೪೮). **ಕಾಲುಕಣ್ಣಿ**: ೧. "ಕಾಲು [ಪಾಠಾಂ. ಕೋಲು] ಕಣ್ಣಿಗಳು ವಟರಂ ವಟಮೆನಿಕ್ಕು" (ಮಂಗರಾ. ೧೧೨-೫); ಮರ್ತ್ಯರಿಗೆ ತೊತ್ತಾಗಿ, ಮಾಯಾಪಾಶದ ಕಾಲು ಕಣ್ಣಿಯೊಳು ಸಿಲ್ಕಿ ಕಾಮಂಗೆ ಗುಜಿಯಾಗಿ (ಆದವ. ೧೧-೧೯); ಶಕುನಿಯೊಡ್ಡಿದ ಕಾಲುಕಣ್ಣಿ [ಪಾಠಾಂ. ಕುಣಿಕೆ]ಯೊಳಾರು ಬೀಳರು (ಕುವ್ಯಾಸ. ೧೪-೨೫); ಆಯಾಸ ಕೃತ್ಯದ ಕಾಲುಕಣ್ಣಿಗಳ (ನಿಭಾಗ. ೨-೧-೯); ಸಲೆ ಕಾಲುಕಣ್ಣಿ ತಡಿಕೆ ಸೆಳೆಗೋಲಿನ ಬಲು ನಾಯಕರೊದ ಗಿದರು (ಹರಿಸಾಂ. ೧-೬೬). ೩. ಕಾಲುಗಳನ್ನು ಕಟ್ಟುವ ಹಗ್ಗ; ದಾವಣಿ: (ಕ). **ಕಾಲುಗಣ್ಣಿ**: ೧. ನೀವಿನ್ನು ಮುಂದೆ ಆ ಗಂಗ ರಾಜನ ಕವಡಿಕೆಯ ಕಾಲುಗಣ್ಣಿಗೆ ಸಿಲುಕುವಂತಿಲ್ಲ (ವೀರಬಂ. ೫೪). **ಕಾಲ್ಕಣ್ಣಿ**: ೧. ವಿರಹಿವಿಹಂಗದ ಕಾಲ್ಕಣ್ಣಿಗಳೋ ಸ್ಮರ ಗುಣಿಸುವ ಸುದ್ದಗೆರೆಯೊ (ಶ್ರೀಪಾಲ. ೩-೬೫); ಹೆಬ್ಬಲೆ ತೆರೆಸೀರೆ ಕಾಲ್ಕಣ್ಣಿ ಬೆಳ್ಳಾರ ಹಬ್ಬುಗೆವಲೆಗಳ ಹೊಜೆಯ (ಕುರಾಸಾಂ. ೨೭-೪೩). ಬಲ್ಮಿಡಿ ಬಿಟ್ಟು ತಮ್ಮ ಪಕ್ಷಿಗಳಾ ತೊಡರಲು ದೊಪ್ಪನೆ ಕೆಡೆದರು ಕಾಲ್ಕಣ್ಣಿ ತೊಡರಿ ಬೀಳ್ವಂತೆ ಹುಲ್ಲೆಗಳು (ಭರಚ. ೪೮-೭೮); ಮೊಲದ ಕಾಲ್ಕಣ್ಣಿ ಯಲಿ ದಿಗ್ಗಜ ನಿಲ್ಲುವುದೇ ಮುಂಗುಲಿಯ ಬೋನಿಗೆ ಹುಲಿಯ ಮಱಿ ದಕ್ಕುವದೇ (ಅಂಬಿಕಾ. ೧೮-೬೬). [ಕಾಲ್$_1$ + ಕಣ್ಣಿ]

**ಕಾಲ್ಗಣ್ಣಿವಲೆ**, ಕಾಲ್ಕಣ್ಣಿವಲೆ (ನಾ). ಕಾಲ್ಗಣ್ಣಿಯ ಬಲೆ; ಕಾಲಿಗೆ ತೊಡಕಿಸುವ ಕುಣಿಕೆಯ ಬಲೆ: ಕಣ್ಣಿವಲೆ ಹೊಡೆವಲೆ ಹೊಸೆದ ಕಾಲ್ಗಣ್ಣಿವಲೆ ತೆಳ್ಳುವಲೆ ಪುರಿಯೊಕ್ಕಣ್ಣವಲೆ (ಸಾಳ್ವಭಾ. ೫-೧೮).
**ಕಾಲ್ಕಣ್ಣಿವಲೆ**: ಕಣ್ಣವಲೆಗಳುರುಳ್ವಲೆ ಕಿಱುವಲೆ ಕಾಲ್ಕಣ್ಣಿವಲೆಗಳಂಟು ಕಣೆಯಿಂ (ಅನಂಚ. ೧೨-೧೪೯). [ಕಾಲ್ಗಣ್ಣಿ + ಬಲೆ]

**ಕಾಲ್ಗರ್ಚಿಸು** (ಕ್ರಿ). ಕಾಲನ್ನು ತೊಳೆಯಿಸು: ಅವರ ಕೆಯ್ಯೊಳ್ ಧಾರ ಪೂರ್ವಕಂ ಕಾಲ್ಗರ್ಚಿಸಿ ಕೊಣ್ದು (ಸೌಇಇ. XX, ೭೪-೩೨; 1112).
[ಕಾಲ್ಗರ್ಚು$_1$ + -ಇಸು$_3$]

**ಕಾಲ್ಗರ್ಚು$_1$**, ಕಾಲ್ಗಚ್ಚು$_1$ (ಕ್ರಿ). ಕಾಲುಗಳನ್ನು ತೊಳೆ: ಇದಿರ್ಗೊ ಳ್ವುದು ಕಾಲ್ಗರ್ಚುವುದುದಾತ್ತಮುಪ್ಪಿಡೆಯೊಳಿರಿಪುದರ್ಚಿಪುದೆಱಗಿರ್ಪುದು (ಆದಿಪು. ೪-೯೬); ಕಾಲ್ಗರ್ಚಿ ಧಾರಾಪೂರ್ವಕಂ ಮಾಡಿ (ಕಇ. II, ೧೩-೩೪; 1115); ನೀಂ ಗಳ ಕಾಲ್ಗರ್ಚಿದ ನೀರುಂ ಗಂಗೆಯನೀರುಮೆಂ ಬಿವೀ ನಿಖಿಳ ಜಗನ್ಮಂಗಳಕರಂಗಳ್ (ಕಾವ್ಯಾವ. ೯೧); ಆ ಜಾಹ್ನವೀ ಸಿಂಧುವೀತನ ಕಾಲ್ಗರ್ಚಿನ ನೀರೆನಲ್ (ಜಗವಿ. ೮-೯೪). **ಕಾಲ್ಗಚ್ಚು**: ನಾಗಚಂದ್ರ ಸಿದ್ಧಾಂತಿಗರ್ಗೆ ಕಾಲ್ಗಚ್ಚಿ ಬಿಟ್ಟ ಅಡಕೆಯ ತೋಂಟಂ (ಸೌಇಇ. XI-i, ೬೫-೪೬; 1028). [ಕಾಲ್$_1$ + ಕರ್ಚು$_1$ (< ಕಚ್ಚು)]

**ಕಾಲ್ಗರ್ಚು$_2$**, ಕಾಲುಗಚ್ಚು, ಕಾಲ್ಗಚ್ಚು$_2$ (ನಾ). ೧. ಪಾದ ತೊಳೆದ ನೀರು; ಪಾದೋದಕ. ೨. ಪಾದತೊಳೆದು ಮಾಡುವ ಪಾದಪೂಜೆ: ದಾಮೋದರ ಸೆಟ್ಟಿಯೊರ್ಗೆ ಸಾಸಿರ್ವರ ಸನ್ನಿಧಾನದಲ್ ಕಾಲ್ಗರ್ಚಾಗಿ ದಾನಂಗೊಂಡಂ (ಎಇ. XIX, ೨೧೯–೭ ; 1307) ; ಕಾಲ್ಗರ್ಚು ಕೈಧಾರೆಯಾಗಿ ಪಡೆದು (ಎಇ. XVI, ೪೮–೫೨; 1147); ಭೂಮಿಯುಂ ಕಾಲ್ಗರ್ಚು ಕೈಧಾರೆಯಂ ಕೊಂಡು . . . ಎರಡುಂ ಕೆಱೆಗೆ ಬಿಟ್ಟ ಧರ್ಮ್ಮ (ಸೌಇಇ. IX–i, ೩೩೦–೬೪ ; 1212). **ಕಾಲುಗಚ್ಚು.** 'ಕಾಲುಗಚ್ಚುಗೊಳ್' ಪರಾ. **ಕಾಲ್ಗಚ್ಚು$_2$.** 'ಕಾಲ್ಗಚ್ಚುಗೊಳ್' ಪರಾ. [< ಕಾಲ್ಗರ್ಚು$_1$]

**ಕಾಲ್ಗಳೆ** (ಕ್ರಿ). ೧. ಕಾಲನ್ನು ಕತ್ತರಿಸು; ಬುಡವನ್ನು ಕೊಯ್ಯು. ೨. ಕಾಲುವೆ ನೀರನ್ನು ಬಿಡು, —ಹಾಯಿಸು. ೧,೨: ಪಳಿಯುಂಟು ವಸ್ತ್ರ ಭೇದನದೊಳವಿಚಾರತ್ವದಳವಡಿಕೆಯುಂಟು ಮೃಗಕುಲದೊಳೀಕ್ಷಿಪಡೆ ಕಾಲ್ಗಳೆವುದುಂಟಚ್ಚ ಶಿರಪಚ್ಚೆಯೊಳು (ರೇವಣ. ೩–೫).

[ಕಾಲ್$_1$ + ಕಳೆ$_1$ ; ಕಾಲ್$_2$ + ಕಳೆ$_1$]

**ಕಾಲ್ಗಾಪು**, ಕಾಲುಗಾಹು, ಕಾಲ್ಗಾಹು (ನಾ). ೧. ಕಾಲ್ಬಲ; ಕಾಲಾಳು ; ಪದಾತಿ : ಸುತ್ತಿಱಿದ ಕಾಲ್ಗಾಪಿನ ಕಡಿತಲೆಯ (ಪಂಪಭಾ. ೩–೫೫ ವ); ಕಾಲ್ಗಾಪು ಕಾಲ್ಗಾಪಿನೊಳ್. . .ಕಾದೆ (ಪಂಪಭಾ. ೧೦–೯೩); ಕೊಂಡಾಡುವ ಕಾಲ್ಗಾಪಿನ ಗಂಡರ್ಕಱಿಸಿ ಕೆದಱಿ ನಿಟಿಲೆನೆ ಮುಱಿವೆಂ (ಕಬ್ಬಕಾ. ೨೪೪). ೨. ಹಿಂದಿನಿಂದ ಮಾಡುವ ರಕ್ಷಣೆ; ಬೆಂಗಾವಲು : ಲೋಹಖುರವಾಹಂ ಸುತ್ತಿ ಕಾಲ್ಗಾಪಿನೊಳ್ ಬರೆ (ಪಂರಾಮಾ. ೨–೧೧) ; ಕೈದಾಳಿನ ಕಾಲ್ಗಾಪಿಂ ಹಡೆಯಂ ಹಣ್ಣಿದ ಕರಿಘಟೆ ನೆರೆದುವು (ವೀರೇಚ. ೨–೨೮) ; ಕಾಲ್ಗಾಪಿನಣಿವೆರಸು ನಿಂದ ಜಾವದ ಮದಗಜಂಗಳುಮಂ (ವರ್ಧಪು. ೯–೫೬ ವ). **ಕಾಲುಗಾಹು :** ೨. ಇವರೆಲ್ಲರು ಮಾಯೆಯ ಕಾಲುಗಾಹಿನ ಸರಮಾಲೆ ಕಾಣಾ (ಅವಚಂ. ೭–೨೩) ; ತಿರುಹಿ ಬಿಸುಟುವು ಕಾಲುಗಾಹಿನ ತುರಗವನು (ಕುವ್ಯಾಭೀ. ೪–೭೭) ; ಕೇಳಸುಳನೇ ಕಾಲುಗಾಹಿನ ಯುಕ್ತಿಯಾವುದೆನೆ (ವೀಶೈಪು. ೫–೧೪–೧೦). **ಕಾಲ್ಗಾಹು :** ೨. ಸಕಲ ಸ್ವಾಮ್ಯವಂತರು ಅವರ ಕಾಲ್ಗಾಹಿನ ಬಿಲ್ಲಮೂಲೂರ್ಪಿಬ್ಬರು ಹೊಲಿಯ ಜಂಗುಲಿ ಸಹಿತ (ಎಕ. V, ಬೇಲೂರು. ೭೫–೬೬ ; 1382). [ಕಾಲ್$_1$ + ಕಾಪು]

**ಕಾಲ್ಗಿಡಿಸು** 'ಕಾಲ್ಗೆಡಿಸು' ನೋ.

**ಕಾಲ್ಗುಟ್ಟು** (ಕ್ರಿ). ಕಾಲಿನಿಂದ ಕುಟ್ಟು, —ಮಿದಿ: ಕುಟ್ಟ ಖಡಿವೊಟ್ಟ ಶಿರಚರಣ ಮೆದೆಯೊಟ್ಟನಗ್ರಹದೊಳಟ್ಟಿ ಬೆಟ್ಟಕಾಲ್ಗುಟ್ಟೆ[ಟ್ಟಿ]ಯಂತೆಇಟ್ಟ ಕೊಂತಗಳಿಂದ ಘಟ್ಟಿಸಿ (ಜಿನಮು. ೨೭–೧೨). [ಕಾಲ್$_1$ + ಕುಟ್ಟು$_1$]

**ಕಾಲ್ಗುಣ**, ಕಾಲಗುಣ, ಕಾಲುಗುಣ (ನಾ). ೧. ಕಾಲಿನ ಗುಣ. ೨. (ಆಲಂ) ಒಂದು ವ್ಯಕ್ತಿಯ ಆಗಮನದಿಂದ ಉಂಟಾಗುವ ಒಳ್ಳೆಯ ಅಥವಾ ಕೆಟ್ಟ ಪರಿಣಾಮ: ಸೊಸೆಯಾಗಿ ಬಂದ ಹುಡುಗಿಯ ಕಾಲ್ಗುಣ ಬಹಳ ಕೆಟ್ಟದ್ದೆಂದು ಆ ದಿನ ದೇವಿಯ ಹೇಳಿಕೆಯಾಯಿತು (ಸ್ಮೃತಿಚಿ. ೩೨). **ಕಾಲಗುಣ$_1$:** ೨. ಮನೆಹೊಕ್ಕ ಗಳಿಗೆಯ ಫಲವೋ, ಅಲ್ಲ ಅವಳ ಕಾಲಗುಣವೋ ತಿಳಿಯದು (ಒಡ್ಡಲು. ೧೭). **ಕಾಲುಗುಣ :** ೨. ಆಕೆಯ ಕಾಲುಗುಣದಿಂದಾಗಿ . . . ಕೆಲವು ವರ್ಷಗಳಲ್ಲೇ ಇಪ್ಪತ್ತೈದು ರೂಪಾಯಿ ಸಂಬಳದವರೆಗೂ ಏರಿದನು (ಬಾಗಿನ. ೫೧). [ಕಾಲ್$_1$ + ಗುಣ]

**ಕಾಲ್ಗುತ್ತು** (ಕ್ರಿ). ೧. ಕಾಲಿನಿಂದ ಒತ್ತು ; ಕಾಲಾಡಿಸು : ನೆತ್ತರ ತೊಱೆಗಳೊಳ್ಕಾಲ್ಗುತ್ತಿ ನೋಡಿಯುಂ (ಗದಾಯು. ೬–೨೮ ವ). ೨. (ಆಲಂ) ಪರೀಕ್ಷಿಸು; ವಿಚಾರಿಸಿ ನೋಡು : ಅವನೀವಂತುಟನೀಯದಂತುಟನದಂ ಬಲ್ಲಂತು ಕಾಲ್ಗುತ್ತಿ ನೋಡು (ಪಂಪಭಾ. ೯–೨೬). [ಕಾಲ್$_1$ + ಕುತ್ತು$_1$]

**ಕಾಲ್ಗುಪ್ಪಸ**, ಕಾಲುಕುಪ್ಪಸ, ಕಾಲುಕುಬುಸ, ಕಾಲ್ಕುಪ್ಪಸ (ನಾ). ೧. ಕಾಲಿಗೆ ತೊಟ್ಟುಕೊಳ್ಳುವ ಕುಪ್ಪಸ; ಕಾಲಿನ ಕವಚ ; ಪೈಜಾಮ ; ಷರಾಯಿ : ಕನತ್ಕನಕ ಕವಚಮಂ ತೊಟ್ಟು ಕಾಲ್ಗುಪ್ಪಸಮನಿಟ್ಟು ಸೀಸಕಮಂ ಸಿಂಗರಿಸಿ (ರಾಜಶೇ. ೬–೧೧ ವ). **ಕಾಲುಕುಪ್ಪಸ:** ೨. ಕಾಲುಚೀಲ; ಕಾಲುಮುಚ್ಚಿಗೆ: ಕಾಲುಕುಪ್ಪಸದವರು ಬರುವರು (ಕಾಲಸಂ. ೨೫–೨೯). **ಕಾಲುಕುಬುಸ :** ೨. ಅವಳು . . . ಕಾಲಿಗೆ ಕಾಲುಕುಬುಸ ತೊಡಿಸಿ ಬೂಟು ಹಾಕಿದ್ದಳು (ಹೇಮಂತ. ೨೧೮). **ಕಾಲ್ಕುಪ್ಪಸ :** ೧. ಚೆಂಗಾವಿಯ ಸಿಲುವಂಗಿಯನ್ನು ಧರಿಸಿದ್ದಾನೆ. ಆದೇ ಬಣ್ಣದ ಕಾಲ್ಕುಪ್ಪಸ (ತುಂಗಭ. ೨).

[ಕಾಲ್$_1$ + ಕುಪ್ಪಸ]

**ಕಾಲ್ಗುಱುಹು** (ನಾ). ಹೆಜ್ಜೆಯ ಗುರುತು : ಇದೆ ಸೋಮವಲ್ಲಿಯೆಡೆಯೊಳ್ ಮೊಲದ ಕಾಲ್ಗುಱುಹು (ಭಾವಚಿಂ. ೫–೧೦).

[ಕಾಲ್$_1$ + ಕುಱುಹು (< ಕುಱುಪು)]

**ಕಾಲ್ಗೆಡಿಸು**, ಕಾಲುಗೆಡಿಸು, ಕಾಲ್ಗಿಡಿಸು (ಕ್ರಿ). ಅಡ್ಡಗಟ್ಟು; ಕಾಲಿನ ಶಕ್ತಿಯನ್ನು ಉಡುಗಿಸು ; ಗಾಬರಿಗೊಳಿಸು ; ಧೈರ್ಯಗುಂದಿಸು : ಸಿಲ್ಕಿದವರಂ ಸೀಳ್ದು ಕಂಡರಂ ಕಾಲ್ಗೆಡಿಸಿ ಪೊಡೆದು ಕಡಂಗಿ ಕಾಯ್ಪೇಱಿ (ರಾಜಶೇ. ೬–೧೧ ವ) ; ಬಯ್ದು ಬಾಯ್ದಡಿಸಿ ಕಾಲ್ಗೆಡಿಸಿದಭೂರಿ ವಿಪ್ರೋತ್ತಮರನು (ಮಲ್ಲಾರಿ. ೧–೨೦). **ಕಾಲುಗೆಡಿಸು :** ಕುಸುರಿದಱಿದು ಕಾಲುಗೆಡಿಸಿ ವಸುಧೇಶನ ಮನ್ನೆಯರು ತುರುಕರನು ದೆಸೆಬಲಿಗೊಟ್ಟರು (ಕಂನವಿ. ೧೮–೧೧೯). **ಕಾಲ್ಗಿಡಿಸು :** ಅಗ್ಗಳಮಾಗಿ ಕಾಲ್ಗಿಡಿಸಲು . . . ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲೆಂ (ಶಾಂತಿಪು. ೩–೨೩ ವ).

[ಕಾಲ್ಗೆಡು + – ಇಸು$_3$]

**ಕಾಲ್ಗೆಡು**, ಕಾಲುಗೆಡು (ಕ್ರಿ). ಕಾಲು ಸೋಲು ; ಶಕ್ತಿಗುಂದು ; ನಿತ್ರಾಣವಾಗು : ಕಾಲ್ಗೆಟ್ಟನಂತೆ ಗತಿಗೆಟ್ಟು, ಬೆಸನಿಯಂತೆ ಪೆಂಪಂ ಬಿಟ್ಟು (ಧರ್ಮಾಮೃ. ೨–೧೦೫) ; ನಾಲ್ಕುಂ ದೆಸೆಯೊಳ್ ತನ್ನಾರ್ಪಿನಂ ಹುಲ್ಲೆಯನಱಸಿಯುವಂ ಕಾಣದೆ . . . ಬೆಳ್ಳೆರಳೆ ಪರವಶಂ ಬಿಟ್ಟು ಕಾಲ್ಗೆಟ್ಟುದಾಗಳ್ (ನಳಚಂ. ೭೨) ; ತುರಗಂ ದಡದಡಿಸಿ ನಡೆಯಲಾಱದೆ ಕಾಲ್ಗೆಟ್ಟರೆ (ಅಶ್ವಶಾ. ೧೩–೨೭) ; ಕಾನೊಳಹೊಕ್ಕು ಕಾಲ್ಗೆಡದೆ (ಪ್ರಭಂಜ. ೨–೭೩). **ಕಾಲುಗೆಡು :** ಮರನ ಸುತ್ತಿ ಕಾಲುಗೆಟ್ಟರಲ್ಲಾ ಭೂಸುರಾದಿಗಳು (ಮೋಳಿಮಾ. ೧೦೪–೪೧೬). ಈ ರಸಮಂ . . . ಅಲ್ಲದ ರಸಮಂ ಕೊಳ್ಳೆ ಕಾಲುಗೆಡೆ[ಡು]ಗು ಜ್ವರನಿಚಯ (ಸಾಳ್ವಸಾಂ. ೧೨); ಭಾವೆಯರಿಗೆ ಸೋಲದವರಾರು ಸುರಜಾಲ ಮುನಿ ನಿಕರದೊಳು ಸೋಲದವರಾರು ದಿಗುಪಾಲರೊಳುಮವನೋಡಿ ಕಾಲುಗೆಡದವರಾರು (ನವಮೋ. ೧೭–೫೩). [ಕಾಲ್$_1$ + ಕೆಡು$_1$]

**ಕಾಲ್ಗೆಡೆ** (ಕ್ರಿ). ಕಾಲಿಗೆ ಬೀಳು; ನಮಸ್ಕರಿಸು : ಈ ತೆರದಿ ಕಾಲ್ಗೆಡೆದ ಮದನನ ಮಾತಿಗತಿಸಂತೋಷಬಟ್ಟು (ಜೀವಂಚ. ೪–೭೦).

[ಕಾಲ್$_1$ + ಕೆಡೆ$_1$]

**ಕಾಲ್ಗೆರಹು** 'ಕಾಲ್ಕೆರ್ಪು' ನೋ.

**ಕಾಲ್ಗೆರೆ** (ನಾ). ಕಾಲಲ್ಲಿಯ ಗೆರೆ; ಪಾದರೇಖೆ: ಬಾನೊಳ್ ಪೊಱೆ ಬಾಂಬೊಱೆ ; ಏವಂ ಬಾಂದೊಱೆ . . . ಮೆಯ್ಯುಕ್ಕಲಿ, ಕಯ್ಯೊಕ್ಕೆಡು, ಕಾಲ್ಗೆರೆ (ಶಬ್ದಾನು. ೩೦೫ ಪ್ರಯೋ). [ಕಾಲ್$_1$ + ಗೆರೆ]

**ಕಾಲ್ಗೊರಸು**, ಕಾಲುಗೊರಸು (ನಾ). ಕಾಲಿನ ಗೊರಸು ; ಖುರ: ಅದರ ಕಾಲ್ಗೊರಸು ಮುದುರಿ ಬಿತ್ತು ಅದೂ ಬಿತ್ತು ; ತನ್ನ ಸವಾರರನ್ನೂ ಬೀಳಿಸಿತು (ಗಲಿಪ್ರ. ೩೬). **ಕಾಲುಗೊರಸು :** "ಶಫಂ, ಖುರಃ" – ೨ ಕುದುರೆಯ ಕಾಲುಗೊರಸಿನ ಹೆಸರು. (ಸಿದ್ಧಾಂತಿ. ೨೧೬).

[ಕಾಲ್$_1$ + ಗೊರಸು]

**ಕಾಲ್ಗೊಲೆ,** ಕಾಲುಗೊಲೆ (ನಾ). ತುಳಿದು ಕೊಲ್ಲುವಿಕೆ; ಕಾಲ್ತುಳಿತದ ಕೊಲೆ: ಬೀದಿವರಿಪುತಾನೆಗಳ ರಿಪುಬಲವನು ಭೇದಿಸಿ ಕಾಲ್ಗೊಲೆಗಳಲಿ ಸಾಧಿಸಿ ಕೊಲುವೆವು (ಕಂಸವಿ. ೮-೪೧); ಚೌಪಟದೇಜೂಟದೊಳ್ಚದುರಂ ತೋರ್ಪ ಕಯ್ಗೊಲೆ ಬಾಯ್ಗೊಲೆ ಮಯ್ಗೊಲೆ ಕಾಲ್ಗೊಲೆ ಕೋಲ್ಗೊಲೆಯಂ ಕಲಿಪ (ರಾಜಶೇ. ೬-೧೧ ವ). **ಕಾಲುಗೊಲೆ:** ಕಾಲುಗೊಲೆಯಲಿ ವಿಗಡ ಕರಿ ತುಳಿದಾಡಿತಿದಿರಿದಿರಾದ ಪಟುಭಟರ (ಕುವ್ಯಾದ್ರೋ. ೩-೧೬); ಕಾಲುಗೊಲೆಯಲಿ ಕೊಂದುದೈದಾಜೀಕು ಲಕ್ಷವನು (ಕೋಗಯು. ೨೧-೧೪). [ಕಾಲ್$_1$ + ಕೊಲೆ]

**ಕಾಲ್ಗೊಳ್** (ಕ್ರಿ). ಕಾಲನ್ನು ಪಡೆ; ಕಾಲಿನ ಮೇಲೆ ನಿಲ್ಲು: (೬). [ಕಾಲ್$_1$ + ಕೊಳ್$_1$]

**ಕಾಲ್ಗೊಳಿಸು** (ಕ್ರಿ). ನಿಲ್ಲಿಸು; ನಿಲ್ಲುವಂತೆ ಮಾಡು: (೬). [ಕಾಲ್ಗೊಳ್ + -ಇಸು$_3$]

**ಕಾಲ್ಗೋ,** ಕಾಲ್ಕೋ (ಕ್ರಿ). ೧. ಕಾಲುಗಳನ್ನು ಜೋಡಿಸು, —ಸೇರಿಸು: ನಯದಿಂದಂ ಬರೆದಂತೆಯುಂ ಕಡೆದು ತಂದಿಟ್ಟಂತೆಯುಂ . . . ನಿಱಿಸಿ ಕಾಲ್ಗೋದಂತೆಯುಂ ನಿರ್ಮಿದಂತೆಯುಮಿರ್ಕುಂ ಜಿನಬಾಲರೂಪಮೆರ್ದೆಯೊಳ್ ಮುಂ ಕಂಡಗಲ್ದಿರ್ದರಾ (ಶಾಂತಿಪು.೧೦-೫೫). ೨. ಮೇಲೇರಿ ಕುಳಿತುಕೊ; ಸವಾರಿ ಮಾಡು: "ಕಾಲಿಡು, ವಾಹನವನ್ನು ಏರು" (ಪಂರಾಮಾ. ಕೋಶ); ಪೊರಜೆವಿಡಿದು ಕೊರಲ ಬಳಿಗಳೊಳಿ ಕಾಲ್ಗೋದು ಪರಿಯಿಸುವ ರಸತ್ತಾರುಗರುಮಂ (ಪಂಪಭಾ. ೧೨-೬೦ ವ); ಕಾಲ್ಗೋದು ಗಂಧಾಂಧ ಸಿಂಧುರಮಂ (ಪಂರಾಮಾ. ೨-೧೧); ಇನ್ನುಂ ನಿಳಿಂಪೇಭಪೂರ್ವಾಸನದೊಳ್ ಕಾಲ್ಗೋಯದಿನ್ನುಂ ನಿಜಕುಲಿಶ ಮಹಾಸ್ತ್ರಕ್ಕೆ ಕೈನೀಡದಿನ್ನುಂ . . . ಕಾದದೇಕಿರ್ಪ (ಜಗವಿ. ೧೩-೬೦). ೩. ಬೆನ್ನ ಹಿಂದೆಯೇ ಬರು; ಹಿಂಬಾಲಿಸು; ಎಡೆಬಿಡದೆ ಅಟ್ಟಿಬರು: ತಱಿಯೊಳ್ ಚೌದಂತನೆನ್ನಾನೆಗೆ ಮಲೆದೊಡೆ ವೈಹಾಳಿಯೊಳ್ ದಿಗ್ಗಜಂ ಬೆಂಬಱಿಯೊಳ್ ಕಾಲ್ಗೋದೊಡೀ ಕಟ್ಟಣಕದ ಮದದೊಳ್ ಕರ್ಬೊಲ ಕರ್ಾವ ರೂಹುಂ ಸುಱಿದೋಡಿತ್ತಾದೊಡೆ (ಅನಂಪು. ೨-೩೦). **ಕಾಲ್ಕೋ:** ೧. ತಂಬೆಲರ್ ಮೈಮರೆದಡಂಗಿ ಹಂಬಲಿಸುತಿದೆ ಹೊತ್ತು ಕಾಲ್ಕೋದು ಮೆರವಣಿಗೆ ಮುಂಬರಿವ ದಾರಿಯಂ ತುಳಿಯಿತು ಕಡಂಗಿ (ಕಾಲೂರ. ೧೫೧-೩೩೨). [ಕಾಲ್$_1$ + ಕೋ]

**ಕಾಲ್ಚೀಲ,** ಕಾಲುಚೀಲ (ನಾ). ಕಾಲುಕುಪ್ಪಸ: ಕರಿಯ ಕಾಲ್ಚೀಲಗಳೂ . . . ಪಾದಗಳೂ ಎದ್ದು ಕಾಣುತ್ತಿದ್ದವು (ಪುನರು. ೨೪೬). **ಕಾಲುಚೀಲ:** ಕಾಲುಚೀಲಗಳನ್ನು ತೆಗೆದು, ಷರಾಯನ್ನು ಮೊಣಕಾಲ ಮೇಲಕ್ಕೆ ಮಡಿಸಿಕೊಂಡು (ರಂಗಕ. ೨೪). [ಕಾಲ್$_1$ + ಚೀಲ]

**ಕಾಲ್ಚೆಂಡು** (ನಾ). (ಕೈ ತಾಕಿಸದೆ) ಕಾಲಿನಿಂದ ಮಾತ್ರ ಆಡುವ, ಚರ್ಮದ ಹೊದಿಕೆಯುಳ್ಳ ಗಾಳಿ ತುಂಬಿಸಿದ ಚೆಂಡು: ಕಾಲ್ಚೆಂಡನಾಡಿದರ್ (ನವ್ಯಧ್ವ. ೧೧); ಕಾಲ್ಚೆಂಡುಗಳನೂದಿ ಅಭ್ಯಾಸವಾಗಿದೆ ಸೇದೆಯಾಗದು ನನಗೆಂದೆ (ಚಂದ್ರವೀ. ೯೫-೬೬). [ಕಾಲ್$_1$ + ಚೆಂಡು]

**ಕಾಲ್ತಿದೆ** (ನಾ). ಒಬ್ಬಾತನ ಹೆಸರು: ವಿಜಣನಾಯಗರಾ ಮಗನ್ ಕಾಲ್ತಿದೆ (ಎಇ. IX, ೧೭-೬; 800). [?]

**ಕಾಲ್ತುಳಿತ** 'ಕಾಲ್ದುಳಿತ' ನೋ.

**ಕಾಲ್ತೆಗಿಸು** (ಕ್ರಿ). ಕಾಲು ಕೀಳಿಸು; ಓಡಿಸು: (೬). [ಕಾಲ್ತೆಗೆ (< ಕಾಲ್ದೆಗೆ) + ಇಸು$_3$]

**ಕಾಲ್ತೆಗೆ** 'ಕಾಲ್ದೆಗೆ' ನೋ.

**ಕಾಲ್ತೊಡಕು** 'ಕಾಲ್ದೊಡಕು$_2$' ನೋ.

**ಕಾಲ್ತೊಡರ್** (ಕ್ರಿ). ಕಾಲಿಗೆ ತೊಡಕಿಕೊಳ್ಳು: ಅಱಸುವ ಬಳ್ಳಿ ಕಾಲ್ತೊಡರ್ದುದೆಂಬ ನಾಣ್ನುಡಿ ಪ್ರತ್ಯಕ್ಷಮಾದುದೆಂದು ರಾಗಿಸಿ (ಪಂಚತಂ. ೧೫೭-೮). [ಕಾಲ್$_1$ + ತೊಡರ್$_1$]

**ಕಾಲ್ತೊಲೆ** (ನಾ). ತೊಲೆಯ ನಾಲ್ಕನೆಯ ಭಾಗದಷ್ಟು ತೂಕ: (೬). [ಕಾಲ್$_1$ + ತೊಲೆ]

**ಕಾಲ್ತೊಳೆ** 'ಕಾಲ್ದೊಳೆ' ನೋ.

**ಕಾಲ್ದಳ$_1$** (ನಾ). ೧. ಕಾಲಿನ ತಳ; ಅಂಗಾಲು: ಕಾಲ್ದಳದೊ [ಪಾಠಾಂ. ಕಾಲ್ದುದಿಯೊ]ಳೊದೆಯಲ್ಕೆ ನಿನ್ನ ಮಗನೀತಂಗೆ ಸೋಲ್ದಪನೆ (ಜೈಮಿಭಾ. ೭-೪೧). [ಕಾಲ್$_1$ + ತಳ (= ತಲ)]

**ಕಾಲ್ದಳ$_2$,** ಕಾಲುದಳ (ನಾ). ಕಾಲಾಳುಗಳ ಸೇನೆ; ಪದಾತಿ; ಸೈನ್ಯ: "ಕಾಲ್ಬಲ" (ಪ್ರಭಣ್ಣ). **ಕಾಲುದಳ:** ಕಟ್ಟೊಟ್ಟಜೆಯಂ ಭಣ್ಣಾರಮುಮಂ ಕಾಲುದಳವೋ × × × ಪೆ ಬಲ್ಲಂ ಇನ್ನುಂ ನರಗನನೆ ನಾಳುವುದೆನ್ದು (ಎಕ. VI, ಕಡೂರು. ೧೪೭-೫; 972). [ಕಾಲ್$_1$ + ದಳ]

**ಕಾಲ್ದಾರಿ,** ಕಾಲುದಾರಿ (ನಾ). ೧. ಕಾಲ್ನಡಗೆಯಿಂದ ಹೋಗುವದಕ್ಕಾಗಿ ಮಾತ್ರ ಇರುವ ದಾರಿ. ೨. ಜನ ನಡೆದು ನಡೆದು ತಾನಾಗಿ ರೂಪುಗೊಂಡಿರುವ ದಾರಿ: ಜನರಿಗೆ ಬೇರೆ ಕಾಲ್ದಾರಿಗಳಿರುವ ಭವ್ಯವಾದ ರಾಜರಸ್ತೆ (ವಾತ್ಸಲ್ಯ. ೫೯). **ಕಾಲುದಾರಿ:** ಗಣಪತಿತೋಟದ ಕಾಲುದಾರಿಯಲ್ಲಿ ನಡೆದ (ಪದ್ಮಸ. ೧೫೮); ಕಾಲುದಾರಿಯನ್ನು ಹಿಡಿದು ಆ ವನಪ್ರದೇಶವನ್ನು ದಾಟಿದವಳು (ಶ್ರೀರಾಯ. ೨೧೫). [ಕಾಲ್$_1$ + ದಾರಿ]

**ಕಾಲ್ದುದಿ** (ನಾ). ಕಾಲಿನ ತುದಿ: ಉರ್ವರೆಯೊಳೆ ತಳ್ತ ಕಾಲ್ದುದಿ (ಶಬಶಂ. ೨-೭೯); ಸಗ್ಗಳೆಯ ನೀರಿಂದೆ ಕಾಲ್ದುದಿಯೊಳ್ ಬಸಿವ ನೆತ್ತರಂ ತೊಳೆದು (ಜೈಮಿಭಾ. ೨೮-೫೫). [ಕಾಲ್$_1$ + ತುದಿ]

**ಕಾಲ್ದುಳಿ$_1$** (ಕ್ರಿ). ಕಾಲಿನಿಂದ ತುಳಿ; ಮೆಟ್ಟು: ತುಂಡುತುಂಡಾಗಿ ಕತ್ತರಿಸಿ ಗಾಣದೊಳರೆದು ಹಿಂಡಿ ರಸಮಂ ತೆಗೆದು ಕಾಸಿ ಕಾಲ್ದುಳಿಯಲುಂ [ಪಾಠಾಂ. ಳಿತದಿಂ] ಖಂಡಶರ್ಕರೆಯಾದವು (ಚೆಬಪು. ೧೧-೧೧). [ಕಾಲ್$_1$ + ತುಳಿ$_1$ (< ತುಱಿ$_1$)]

**ಕಾಲ್ದುಳಿ$_2$,** ಕಾಲುದುಳಿ (ನಾ). ೧. ಕಾಲಿನ ತುಳಿತ; ಮೆಟ್ಟುವಿಕೆ: ಗಜಘಟೆಯ ಕಾಲ್ದುಳಿಗೆ ಹೆದೆಯಜಿಗಿಜಿಗಳಾದವು ವಾಸುಗಿಯ (ತೊರರಾ. ೬-೩೨-೪); ಪಡೆಯ ಕಾಲ್ದುಳಿಗಾಗ ಗಿಡುಬಳ್ಳಿ ಪೆರ್ಮ್ಮರ ಪುಡಿಯಾಗೆ (ಕಂಸವಿ.೧೨-೬); ಕಾಲ್ದುಳಿಯೊಳಳಿಜಾಗೆ ತೋತ್ರ್ತಳದುಳಿವಂ ರಣರಂಗ ಭೈರವಂ ಗೋವಿನ್ದ (ಸೌಇಇ. XX. ೮೭-೨೮; ?). ೨. ಕಾಲಿನಿಂದ ತುಳಿಯಲ್ಪಟ್ಟದ್ದು: ತರಣಿಯ ಮಧುಕರನಿಕರದ ಮರುತನ ಕಾಲ್ದುಳಿಯಿವೆಂದು ಪೂವಂ ಬಿಟ್ಟು ಗಿರಿಸುತೆ ಮನಃಕುಸುಮದಿಂ ಪರಮನನೇಕಾಂತ ಭೂಮಿಯೊಳ್ ಪೂಜಿಸುವಳ್ (೧೦ಕ.೩-೯೭). **ಕಾಲುದುಳಿ:** ೧. ವಿಗಡ ಭೀಮನ ಕಾಲುದುಳಿ ಕಂಪಿಸಿತು ಕಾನನವ (ಕುವ್ಯಾಅ. ೧೦-೭); ವನವನು ಘಾಸಿಮಾಡುತ ಕಾಲುದುಳಿಯಲಿ (ನಿಭಾಗ. ೧೦-೩೨-೭). [ಕಾಲ್$_1$ + ತುಳಿ$_2$ (< ತುಱಿ$_2$)]

**ಕಾಲ್ದುಳಿತ,** ಕಾಲ್ತುಳಿತ (ನಾ). ೧. ಕಾಲಿನಿಂದ ತುಳಿಯುವಿಕೆ; ಹಿಂಸಿಸುವಿಕೆ: ತುಂಡುತುಂಡಾಗಿ ಕತ್ತರಿಸಿ ಗಾಣದೊಳರೆದು ಹಿಂಡಿ ರಸಮಂ ತೆಗೆದು ಕಾಸಿ ಕಾಲ್ದುಳಿತದಿಂ [ಪಾಠಾಂ. ಳಿಯಲುಂ]ಖಂಡಶರ್ಕರೆಯಾದವು (ಚೆಬಪು. ೧೧-೧೧). **ಕಾಲ್ತುಳಿತ:** ೨. ಓಡಾಟ: ನಿನ್ನ ಕಾಲ್ತುಳಿತದಿಂ ಹಟ್ಟಿ ಮನೆ ತುಂಬಿತ್ತು (ಕಾಲೂರ. ೮೩-೧೫೮). [ಕಾಲ್$_1$ + ತುಳಿತ]

**ಕಾಲ್ದುಬುಗಲ್** (ನಾ). (?): ಅತಿಶಯಮಾಯ್ತು ಕಾಲ್ದುಬು[ಪಾಠಾಂ. ಕಾದುಬು]ಗಲಿಟ್ಟಳಮಾಯ್ತುರಚಲ್ಲಿ ಕೊಂದು ಕೂಗಿತು ಕಟಚಲ್ಲಿ (ಕಾವ್ಯಾವ. ೬೧). [?]

**ಕಾಲ್ದೂಳಿ**, ಕಾಲುದೂಳಿ, ಕಾಲುದೂಳು (ನಾ). ೧. ಕಾಲಿನ ದೂಳು; ಕಾಲುಗಳು ಎಬ್ಬಿಸಿದ ದೂಳು: ಹೂಳಿತಂಬುಧಿ ಕಪಿಬಲದ ಕಾಲ್ದೂಳಿಯಲಿ (ತೊರರಾ. ೬-೬-೫೭). ೨. ಊಟಮಾಡುವಾಗ ಬೇರೆಯವರ ಕಾಲುದೂಳಿನಿಂದ ಬರುವ ಅಸ್ವಸ್ಥತೆ. ೩. ಹೆರವರ ಕಣ್ಣನಂಜಿನಿಂದಾಗುವ (ಮಕ್ಕಳ) ಹೊಟ್ಟೆನೋವು: ಮಗುವಿಗೆ ಕಾಲ್ದೂಳಿಯಾಗಿದೆ (ರೂಢಿ). ೪. ಪಾದಧೂಳಿ; ಚರಣರಜ: ಮಹಾತ್ಮರ ಕಾಲ್ದೂಳಿಯಿಂದ ಈ ಮಂದಿರ ಪವಿತ್ರವಾಯಿತು (ರೂಢಿ). **ಕಾಲುದೂಳಿ**: (ಕ). **ಕಾಲುದೂಳು**: (ಕ). [ಕಾಲ್$_1$ + ದೂಳಿ]

**ಕಾಲ್ದೆಗೆ$_1$**, ಕಾಲುತೆಗೆ, ಕಾಲ್ತೆಗೆ (ಕ್ರಿ). ಕಾಲುಕೀಳು; ಓಡಿಹೋಗು; ಹೊರಟುಹೋಗು: ಕಾಲ್ದೆಗೆಯೆ ಬಿಳ್ದನಂ ಮಿಗೆ ಸಾಲ್ದೆಗೆದುದು ವಿಹಗವೀಥಿ ಮುಗಿಯುತ್ತಬ್ಜಂ ಜೋಲ್ದುವು (ಗಿಂಕ. ೪-೬೮); ಕಾಳಗ ಕಳುಕಿ ಕಾಲ್ದೆಗೆದ ಫೌಜನು ಕಂಡು (ಪ್ರಭಂಜ. ೨-೨೨); ಈ ಜಗತ್ತಿನಲ್ಲಿ ಜನ ಕೆಲವು ಕಾಲ ಒಟ್ಟಿಗೆ ಇರುತ್ತಾರೆ; ತಮ್ಮ ತಮ್ಮ ನಿಲ್ದಾಣ ಬರುತ್ತಲೇ ಅಲ್ಲಿಂದ ಕಾಲ್ದೆಗೆಯುತ್ತಾರೆ (ವಿದ್ಯಾರ. ೧೪೨). **ಕಾಲುತೆಗೆ**: ಸಿಂಹದ ಗರ್ಜನೆಗೆ ಮೃಗಗಳೆಲ್ಲಾ ಗಡಗಡ ನಡುಗಿ ನಿಲ್ಲಲಾರದೆ ಕಾಲು ತೆಗೆಯುತ್ತವೆ. (ಮುಂಬಯಿ. ೪-೨೧೨). **ಕಾಲ್ತೆಗೆ**: ಗೆಳತಿಯರು ಗಾಬರಿಯಾಗಿ ಅಲ್ಲಿಂದ ಕಾಲ್ತೆಗೆದರು (ಹೂಬಿಸಿ. ೩); ಹೋಗುವಾಸೆಯಿಲ್ಲ ಕಾಲ್ತೆಗೆವಾಸೆಯಿಲ್ಲ ಸುಮ್ಮನೆ ಮೇಲನಿಟ್ಟಿಸಿ ನಿಲ್ಲುವಾಸೆಯೆನಗೆ (ಮಲೆದೇ. ೬). [ಕಾಲ್$_1$ + ತೆಗೆ$_1$]

**ಕಾಲ್ದೆಗೆ$_2$** (ನಾ). ನಡಗೆ; ಗತಿ: ನಗೆಯೊಳ್ ಕೆಲಂಬರಂ ಸೋಲ್ತಂತೆ ನಿಲ್ವ ಕಾಲ್ದೆಗೆಯೊಳ್ ಕೆಲಂಬರಂ ವಿಟಮಾರ್ಗಮಂ ತೋರ್ಪ ಬಗೆಯೊಳ್ ಕೆಲಕೆಲಂಬರಂ . . . ಮರುಳ್ಮಾಡುತ (ಚಬಪು. ೧೯-೩೫).

[< ಕಾಲ್ದೆಗೆ$_1$]

**ಕಾಲ್ದೆಸೆ** (ನಾ). ೧. ಕಾಲಿನ ಎಡೆ; ಕಾಲಿನ ಬಳಿ: ಸುತ್ತಿನುಂಗುರ ಮದ್ದು ಮಣಿ ಯಂತ್ರಗಳ ತಂದು ತೆತ್ತಿಸಿದರು ಕಾಲ್ದೆಸೆಯ (ಮೋಹತ. ೧೬-೧೩). ೨. ಕೆಳಭಾಗ; ಅಡಿ: ಆ ಪುಟದ ಕಾಲ್ದೆಸೆಯ ಟಿಪ್ಪಣಿಯಲ್ಲಿ . . . ಒಂದು ಪದ್ಯವನ್ನು ಉದಾಹರಿಸಿ (ಸಾಹಿಸಂ. ೧೩೫).

[ಕಾಲ್$_1$ + ದೆಸೆ]

**ಕಾಲ್ದೊಡಕು$_1$** (ಕ್ರಿ). ಕಾಲು ತೊಡಕಿಕೊಳ್ಳು; ಕಾಲಿಗೆ ತೊಡರಿಕೊಳ್ಳು: ವಿಷಯದ ಕುಳಿಯೊಳಗೆ ಕಾಲ್ದೊಡಕಿ ಬಿದ್ದ ಸುಯೋಗಿಯಂದದಲಿ (ಕುವ್ಯಾಸ. ೧೬-೪೮); ತೊಳಲುತರಸುವ ಬಳ್ಳಿ ಕಾಲ್ದೊಡಕಿದಂತೆ (ಜೈಮಿಭಾ. ೨-೪೫). [ಕಾಲ್$_1$ + ತೊಡಕು$_1$ (<ತೊಡಂಕು$_1$)]

**ಕಾಲ್ದೊಡಕು$_2$**, ಕಾಲ್ತೊಡಕು (ನಾ). ೧. ಕಾಲಿಗೆ ಅಡ್ಡಿಯಾಗುವುದು; ಕಾಲಿಗೆ ತೊಡರಿಕೊಳ್ಳುವುದು: ಮೆಟ್ಟದ ಕಾಲ್ದೊಡಕಿನ ಕರುಳ್ಗಳ ಕಿಗ್ಗಟ್ಟಿನ ಸುರಗಿಯೊಳ್ ಕೊಚಿದು (ಮೋಹತ. ೩೫-೧೫). ೨. (ಆಲಂ) ಅಡ್ಡಿ; ತೊಂದರೆ; ಪ್ರತಿಬಂಧ; ವಿಘ್ನ. ೩. (ಆಲಂ) ತಡ; ವಿಳಂಬ: ನಿನ್ನೊಡನೆ ಬಂದಪೆನೆನುತ ಬೇಗದೊಳರ್ತಿಗೆಡಸದೆ ಘನಕುಚೆಯೆ ಬಾಯೆನುತ ಕಾಲ್ದೊಡಕೇಕೆ ಮಗುಳೆನುತ (ಬಸಪು. ೫-೩೧). **ಕಾಲ್ತೊಡಕು**: ೧. ದಾಂಪತ್ಯ ಜೀವನ ದಿವ್ಯಪಥದಲ್ಲಿ ಕಾಲ್ತೊಡಕೇ, ಇಲ್ಲವೇ ಪ್ರಬಲವಾದ ಪ್ರಚೋದಕ ಶಕ್ತಿಯೋ? (ಮೋಳಿಮಾ. ೧೨೭ ಪ್ರಸ್ತಾವ). ೨. ವಿಸಂಗತವಾದ ವರ್ಣನೆ ವಿವರಣೆಗಳು ಬಂದರೆ . . . ತುಂಬಾ ಕಾಲ್ತೊಡಕಾಗುವುವು (ಕಥಕ. ೭೯).

[ಕಾಲ್$_1$ + ತೊಡಕು$_2$ (< ತೊಡಂಕು$_2$)

**ಕಾಲ್ದೊಡರ್** (ನಾ). ೧. = ಕಾಲ್ದೊಡಕು$_2$. ೨. ಕಾಲಲ್ಲಿ ಧರಿಸುವ ಕಡಗ, —ಬಳೆ; ಬಿರುದಿನ ಕಾಲ್ಬಳೆ. 'ಕಾಲ್ದೊಡರ್ಗಟ್ಟು' ಪರಾ.

[ಕಾಲ್$_1$ + ತೊಡರ್$_2$]

**ಕಾಲ್ದೊಡರ್ಗಟ್ಟು** (ಕ್ರಿ). (ಬಿರುದಿನ) ಕಾಲ್ಬಳೆಯನ್ನು ಧರಿಸು: ಮಹಾಶೇಷನ ಒಳ್ಗಾಸೆಯುಟ್ಟು ಸುರನರಭುಜಂಗರುಗಳಸುಗಳ್ಗೊಂಬ ಕಾಲ್ದೊಡರ್ಗಟ್ಟಿ ನಡೆತಂದು (ಚಬಪು. ೩೧-೯).

[ಕಾಲ್ದೊಡರ್ + ಕಟ್ಟು$_1$]

**ಕಾಲ್ದೊಡಿಗೆ** (ನಾ). "ಕಾಲಿಗೆ ಹಾಕಿಕೊಳ್ಳುವ, —ತೊಡುವ ವಸ್ತುಗಳು (ಪಾದರಕ್ಷೆ, ಕಾಲ್ಚೀಲ, ಮೊ.) ಕಾಲ್ದೊಡಿಗೆ" (Foot-gear. ಇಂಕನಿ). [ಕಾಲ್$_1$ + ತೊಡಿಗೆ]

**ಕಾಲ್ದೊಡಜ಼್** (ನಾ). ಕಾಲ್ನಡೆಯಿಂದ ದಾಟಬಹುದಾದ ಹೊಳೆ; ಕಾಲುಹೊಳೆ; ಚಿಕ್ಕಹೊಳೆ: ಪೆರ್ದೊರ್ಜ಼್ ಕಾಲ್ದೊಡಜ಼ಿಯುಂ ಕಿಜ಼ು ದೊಜ಼್ ಪುಟಿಲ್ದೊಡಜ಼ಿಯುಮಾಯ್ತು (ರಾಮಾಶ್ವ. ೫೧-೨೭).

[ಕಾಲ್$_1$ + ತೊಡಜ಼್$_2$]

**ಕಾಲ್ದೊಳಸು** (ಕ್ರಿ). ಕಾಲಾಡಿಸು; ಕಾಲಿಡು: ಜಲವ ಹೊಕ್ಕನ ಹುಲ್ಲ ಕಚ್ಚಿದ ಖಳನ ತರುಗಿರಿ ಶಿಖರದಲಿ ಕಾಲ್ದೊಳಸಿದನ ವಲ್ಮೀಕ ಸಂಗತನನು ನಿರಾಯುಧನ ಕೊಲುವುದನುಚಿತವು (ಕುವ್ಯಾಗ. ೫-೨೮).

[ಕಾಲ್$_1$ + ತೊಳಸು$_1$]

**ಕಾಲ್ದೊಳೆ**, ಕಾಲುತೊಳೆ, ಕಾಲ್ತೊಳೆ (ಕ್ರಿ). ೧. ಕಾಲನ್ನು ತೊಳೆ: ಮಾನಿನಿ ಪತಿಯ ಕಾಲ್ದೊಳೆದು (ಶಿರುರ. ೭-೧೨); ಪೊಂಬಡಿಗವ ಸಾರ್ಚಿ ಬಿಸಿನೀರ ಗಿಂಡಿಯೊಳ್ ತಂದು ಕಾಲ್ದೊಳೆಯೆ (ಮೋಹತ. ೧೮-೯೯). **ಕಾಲುತೊಳೆ**: ೧. ನವವಧು ಮುತ್ತೈದೆಯರ ಕಾಲು ತೊಳೆದು ಆಶೀರ್ವಾದ ಪಡೆದಳು (ರೂಢಿ). ೨. (ಆಲಂ) ಮೂತ್ರ ವಿಸರ್ಜನೆ ಮಾಡು: ಅವರು ಕಾಲುತೊಳೆಯಲು ಹೋಗಿದ್ದಾರೆ. (ರೂಢಿ). **ಕಾಲ್ತೊಳೆ**: ೧. ಎಲ್ಲರುಂ ಕಾಲ್ತೊಳೆವರೆಲ್ಲರುಂ ಕಾಲ್ಪಿಡಿವರು (ಕಾಲೂರ. ೭೫-೧೩೭). [ಕಾಲ್$_1$ + ತೊಳೆ$_1$]

**ಕಾಲ್ನಡೆ**, ಕಾಲುನಡೆ (ನಾ). ೧. ಕಾಲುನಡಿಗೆ: ಮುನ್ನಿದರ್ ಪರಿಯಲೆರ್ದುರ್ ಕೈವಿಡಿದು ಕಾಲ್ನಡೆಯೊಳ್ . . . ನಡೆತಂದು (ನಂಬಿರ. ೨-೪೩); ಆನೆಯನಿಳಿದು ತಾಂ ಲೋಕಪಾಲನು ಕಾಲ್ನಡೆಯೊಳಿದಿರ್ವಂದು (ಬಸಪು. ೫-೧೭); ವಿಮಾನವಿಳಿದು ಕಾಲ್ನಡೆಯೊಳು ಮಾಗಧರಾಜ ಒಡೆಯನೊತ್ತಿಗೆ ಬರುತಿರ್ದನು (ಭರಚ. ೨೫-೫೧); ಆ ಬಿಜ್ಜಳಂ ಕಾಲ್ನಡೆಯೊಳೈತಂದು ಬಸವನರಮನೆಯ ಪುಗಲು (ಚಬಪು. ೬-೨೪). ೨. ದನ, ಕರು, ಕುರಿ ಮೊದಲಾದ ಚತುಷ್ಪಾದ ಪ್ರಾಣಿ: ಹಲವು ಕಾಲ್ನಡೆ ಇವನಿಗುಂಟೆಲೊ (ಕವಿಪು. ೧೯); ಅಲ್ಲಲ್ಲಿ ಕೆಲವು ಕಾಲ್ನಡೆಗಳು ಮೇಯುತ್ತಿದ್ದವು (ಕಾನೂರು. ೮೯); ಹಸು, ಎತ್ತು, ಎಮ್ಮೆ, ಕೋಣ, ಆಡು, ಕುರಿ, ಮೊದಲಾದ ಕಾಲ್ನಡೆಗಳನ್ನೂ ಸಾಕಿದನು (ಛತ್ರಶಿ. ೧೩೭). **ಕಾಲುನಡೆ**: ೧. ಇಳಿದು ದಂಡಿಗೆಯಿಂದ ಕರುಣಾಜಲಧಿ ಬಂದನು ಕಾಲುನಡೆಯಲಿ (ಕುವ್ಯಾಆ. ೧೪-೮); ಅಲ್ಲಿಂದ ತೆರಳಿದರಿವರು ಮೂವರು ಕಾಲುನಡೆಗಳಲಿ (ತೊರರಾ. ೨-೪ ೧೪).

[ಕಾಲ್$_1$ + ನಡೆ$_2$]

**ಕಾಲ್ನಿಗಳ** (ನಾ). ೧. ಕಾಲಿಗೆ ತೊಡಿಸುವ ಬಳೆ; ಕಾಲಂದುಗೆ. ೨. (ಆನೆಯ) ಕಾಲಿಗೆ ಕಟ್ಟುವ ಸಂಕೋಲೆ, —ಬೇಡಿ. ೧, ೨: ಕಟ್ಟಾಳು ಕಾಮದೇವನ ತಾತ್ಪರಿಯದ ಪಟ್ಟದಾನೆಯ ಬಂಧಿಸದೆ ಬಿಟ್ಟು ದುಂಟಾದೊಡೆಲ್ಲರ ಜಗಳ್ದುಳಿವುದೆಂದಿಟ್ಟರು ಕಾಲ್ನಿಗಳವನು (ಮೋಹತ. ೨೩-೪೮). [ಕಾಲ್$_1$ + ನಿಗಳ]

**ಕಾಲ್ಪಕ** (ನಾ). ಒಂದು ಬಗೆಯ ಸಸ್ಯ: (ಕ). [ಸಂ.]

**ಕಾಲ್ಪಡೆ** (ನಾ). ಕಾಲಾಳುಗಳ ಸೈನ್ಯ; ಕಾಲ್ಬಲ; ಪದಾತಿಗಳ ಪಡೆ: ಸುಮನಸರು ಕಾಲ್ಪಡೆಯ ಕೆಡಹಿದರೇನನೆಂಬೆ (ದೇವಿಪ್ರ. ೨೧).

[ಕಾಲ್$_1$ + ಪಡೆ$_2$]

**ಕಾಲ್ಪನಿಕ** (ಗು). ೧. ಕಲ್ಪಿತವಾದ; ಸತ್ಯವಲ್ಲದ: ನಮಗೆ ಕಾಣುತ್ತಿರುವ ಪ್ರಪಂಚವಾದರೋ ಕನಸಿನಲ್ಲಿ ಕಾಣುವ ಪದಾರ್ಥಗಳಂತೆ ಕೇವಲ ಕಾಲ್ಪನಿಕ (ಶಕ್ತಿವಿ. ೧೧); ಇದು ವಾಸ್ತವಿಕ ಸತ್ಯವಲ್ಲ, ಕಾಲ್ಪನಿಕ ಭಾವನೆ ಮಾತ್ರ (ಮುಕ್ಸಾರ. ೨೫ ಪೀಠಿಕೆ). (ನಾ). ೨. ಹೊಸದಾಗಿ ಕಲ್ಪಿಸುವವನು; ನಿರ್ಮಾಪಕ: ಮೂಲತತ್ತ್ವಗಳ ಶೋಧನೆಯಲ್ಲಿ ತೊಡಗಿರುವ ವೈಜ್ಞಾನಿಕ ಮತ್ತು ಆ ತತ್ತ್ವಗಳನ್ನವಲಂಬಿಸಿ ಹೊಸ ನಿರ್ಮಾಣಗಳನ್ನು ಮಾಡುವ ಕಾಲ್ಪನಿಕ (Inventor) ಇವರ ಸಹಕಾರದಿಂದ ಎಂತಹ ಪ್ರಗತಿಯುಂಟಾಗಬಹುದೆಂಬುದನ್ನು (ಭೌತವಿ. ೧೯೦). [ಸಂ.]

**ಕಾಲ್ಪರಿ** (ಕ್ರಿ). ಕಾಲು ಕೀಳು; ಓಡಿಹೋಗು: ಬಿಸುಸುಯ್ಯುತ್ತಿರೆ ಬೆರ್ಚಿ ಕಾಲ್ಪರಿಯೆ . . . ಝೋಂಪಿಸೆ ಕಷ್ಟಂ ಜಯಯಾತ್ರೆಯೊಳ್ (ಲೋಕೋಪ. ೧೨-೨೧). [ಕಾಲ್$_1$ + ಪರಿ$_1$]

**ಕಾಲ್ಪಳ್ಳಿ** 'ಕಾಲ್ವಳ್ಳಿ' ನೋ.

**ಕಾಲ್ಪಿ** (ಗು). ೧. ನಿಯಮವನ್ನು ಹೇಳುವ; ವಿಧಾಯಕವಾದ; ಮತಾಚರಣೆಯ ಸಂಬಂಧವಾದ; ಆಚಾರ ನಿಯಮದ: (ಕ). (ನಾ). ೨. ಭಾರತದ ವಾಯವ್ಯಪ್ರಾಂತದ ಒಂದು ಪ್ರದೇಶ: ಕಾಲ್ಪಿಯ ಕಲ್ಲುಸಕ್ಕರೆ (ಕ). [< ಸಂ. ಕಾಲ್ಪ]

**ಕಾಲ್ಪಿಡಿ** 'ಕಾಲ್ವಿಡಿ' ನೋ.

**ಕಾಲ್ಪಿಲ್ಲಿ** (ನಾ). ಕಾಲು ಬೆರಳಿಗೆ ಹಾಕಿಕೊಳ್ಳುವ ಒಂದು ಆಭರಣ: ಕಾಲ್ಪಿಲ್ಲಿ ಚಲಪಿಲ್ಲಿ ಕೈಬಳೆಯ ದನಿಯಲಿ (ಬಳ್ಳಾಬೆ. ೧೨). [ಕಾಲ್$_1$ + ಪಿಲ್ಲಿ]

**ಕಾಲ್ಪೀಠ** (ನಾ). ಕಾಲಿಡುವುದಕ್ಕಾಗಿ ಮಾಡಿದ ಪೀಠ; ಕಾಲ್ಮಣೆ: ರಾಮಣೀಯಕ ರತ್ನಖಚಿತವ ಸುಕಾಲ್ಪೀಠವಾ ಮಂಚದೊತ್ತಿನಲಿ ಸಾರ್ಚಿ (ನವಮೋ. ೧೪-೧೬). [ಕಾಲ್$_1$ + ಪೀಠ]

**ಕಾಲ್ಪೆಂಡೆ, ಕಾಲಪೆಂಡೆಯ, ಕಾಲುಪೆಂಡೆಯ** (ನಾ). ಕಾಲಲ್ಲಿ ಧರಿಸುವ ಬಿರುದಿನ ಬಳೆ: ಅಂದಿಗೆ ಪೊಂಗೆಜ್ಜೆ ಬಿರುದಿನ ಕಾಲ್ಪೆಂಡೆ (ವಿದಾಕ್ಯ. ೨೬-೧). **ಕಾಲಪೆಂಡೆಯ**: ಕಾಲಪೆಂಡೆಯ ಝುಣಝುಣರೆನಲೆಯ್ತಂದು ಗೌಳದೇಶದ ಭೂವರನು (ಜೀವಂಸಾಂ. ೧೧-೮). **ಕಾಲುಪೆಂಡೆಯ**: ಕಾಲುಪೆಂಡೆಯುವ ಧರಿಸಿ (ಕರಿಕ. ೧೬-೯). [ಕಾಲ್$_1$ + ಪೆಂಡೆ]

**ಕಾಲ್ಪೊರಜೆ** (ನಾ). (ಆನೆಯ) ಕಾಲಿಗೆ ಕಟ್ಟುವ ಹಗ್ಗ (?): ತಳೆದು ಕಾಲ್ಪೊರಜೆ [ಪಾಠಾಂ. ಲ್ಪರಜೆ] ಯ ಪೊಕ್ಕುಳ ಘಂಟೆಯನೆಳಲಿಕ್ಕಿ ಬಿಗಿದು ಗುಳವನು (ಕುರಾಸಾಂ. ೧೧-೨೫); ಕಾಲ್ಪೊರಜೆ ಪೊಕ್ಕುಳ ಘಂಟೆ ಗುಳ ತಳಸಂಕಲೆ . . . ಚಿನ್ನದ ಪೊರಜೆ ಮೊದಲಾದವು ಆನೆಯ ಅಲಂಕಾರಗಳು (ಕುಮಾಸಾಂ. ೩೬೦). [ಕಾಲ್$_1$ + ಪೊರಜೆ]

**ಕಾಲ್ಪೋಲಿರೂಪಾಯಿ** (ನಾ). ಒಂದು ಸಣ್ಣ ಬೆಲೆಯ ನಾಣ್ಯ; ಪಗೋಡ ನಾಣ್ಯದ ನಾಲ್ಕನೆಯ ಒಂದು ಭಾಗ: ಇದು ಸೂರ್ತಿ ವರಹ, ಇದು ಸೂರ್ತಿ ಹಣ, ಇದು ಕಾಲ್‌ಪೋಲಿ ರೂಪಾಯಿನ್ ಚಿಲ್ಲರೆ . . . ಇಂಥ ಸಣ್ಣ ನಾಣ್ಯವನ್ನು ನಾನು ಒಬ್ಬ ಎಂದಿಗೆ ಎಣಿಸಿ ಪೂರೈಸುವುದು (ಅದೂಟ. ೧೦). [?]

**ಕಾಲ್ಬಡಿ** (ಕ್ರಿ). ಕಾಲನ್ನು ಬಡಿ, —ಹೊಡೆ: ದನ ಒಮ್ಮೆ ಕಾಲ್ಬಡಿಯಿತು (ಕಾಲೂರ. ೬ ಕಥಾಸಾರ). [ಕಾಲ್$_1$ + ಬಡಿ$_1$]

**ಕಾಲ್ಬಲ, ಕಾಲುಬಲ** (ನಾ). = ಕಾಲ್ಪಡೆ: ವಿಜಾಪುರದ ಬಾದಶಹನು ೪೦ ಸಾವಿರ ಕುದುರೆಗಳನ್ನೂ ಅದಕ್ಕೆ ತಕ್ಕ ಕಾಲ್ಬಲ ಮುಂತಾದ ಯುದ್ಧ ಸಾಮಗ್ರಿಗಳನ್ನೂ ಕೊಟ್ಟು (ಕರ್ಣಾಜ. ೧೧೮). **ಕಾಲುಬಲ**: (ಕ). [ಕಾಲ್$_1$ + ಬಲ]

**ಕಾಲ್ಬಳೆ, ಕಾಲುಬಳೆ** (ನಾ). ಕಾಲಿಗೆ ಧರಿಸುವ ಬಳೆ; ಕಾಲ್ಗಡಗ: (ಕ). **ಕಾಲುಬಳೆ**: ಕಾಲುಸರ, ಕಾಲುಬಳೆ . . . ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲೆಮಂ. ೩೮). [ಕಾಲ್$_1$ + ಬಳೆ]

**ಕಾಲ್ಬಿಚ್ಚು** (ಕ್ರಿ). ಬೀಸುಗಾಲು ಹಾಕು; ದಾಟುಗಾಲು ಹಾಕು: ಒತ್ತರಿಸಿ ನಡವುತ್ತ ಕಾಲ್ಬಿ [ಪಾಠಾಂ. ಲ್ಬೆ] ಚ್ಚುತ್ತ ಒದೆವುತ . . . ತಪ್ಪುದಡಿಯಿಡುತ (ಬಸಪು. ೩೮-೧೬). [ಕಾಲ್$_1$ + ಬಿಚ್ಚು]

**ಕಾಲ್ಬಿರಿ** (ನಾ). ಮೋಟಾರು ಮೊದಲಾದ ವಾಹನಗಳಲ್ಲಿ, ಕಾಲಿಂದ ಒತ್ತಿ ವಾಹನವನ್ನು ನಿಲ್ಲಿಸುವ ಸಾಧನ; ಬ್ರೇಕು: ಮೋಟರಿನ ವೇಗವನ್ನು ಬೇಕಾದಂತೆ ಬದಲಿಸಲಿಕ್ಕೆ ಕೈಬಿರಿ, ಬಂಡಿಯನ್ನು ಬೇಕಾದಲ್ಲಿ ನಿಲ್ಲಿಸಲಿಕ್ಕೆ ಕಾಲ್ಬಿರಿ – ಇವೆರಡು ಮೋಟರು ಬಂಡಿಯ ಬೇರೆ ಮುಖ್ಯ ಅಂಗಗಳಾಗಿವೆ (ವಿಜ್ಞಾವಿ. ೫೯); ಆದರಲ್ಲಿರುವ ಕೈಬಿರಿ ಮತ್ತು ಕಾಲ್ಬಿರಿ (Foot–brake) ಗಳಿಂದ ಬಂಡಿಯನ್ನು ಬೇಕಾದಲ್ಲಿ ನಿಲ್ಲಿಸಬಹುದು (ಬಾಲಪ್ರ. I, ೫೨೪). [ಕಾಲ್ + ಬಿರಿ$_2$ (< ಬಿಱಿ)]

**ಕಾಲ್ಬೀಳು, ಕಾಲುಬೀಳು** (ಕ್ರಿ). ೧. ಕಾಲು ಹಿಡಿ; ಕಾಲಿಗೆ ಬೀಳು; ನಮಸ್ಕರಿಸು: ಕಂಡವರ ಕಾಲ್ಬಿದ್ದು ಕೈಮುಗಿದು ನಿಂತರ ಗಂಡನ ಮನಿನಿನಗ ಬಿಡದವ್ವ ತಂಗಿ (ಶರೀಫ. ೨೧); ಒಂದು ದಿನದ ಕೃಪಣತೆಯನ್ನು ಅವರೂ ತೋರಿಸಲಿ. ನೀನೂ ತೋರಿಸು. ಕಾಲುಬೀಳುತ್ತೇನೆ (ಜಯಂತ. ೩೨೯). ೨. ಕಾಲು ಸೋತುಹೋಗು: ನಡೆದೂ ನಡೆದೂ ಕಾಲುಬಿದ್ದುಹೋಯಿತು (ರೂಢಿ). [ಕಾಲ್$_1$ + ಬೀಳು$_1$ (< ಬೀೞ್)]

**ಕಾಲ್ಬೆರಳು** (ನಾ). ಕಾಲಿನ ಬೆರಳು: "ಪಿಲ್ಲಿಃ = ಬೆಳ್ಳುಂ; ಹೆಣ್ಣಳ ಕಾಲ್ಬೆರಳುಂಗರಂ" (ಕಾಶಕ್ಯ. ೪೯); ಅವನ ಕಾಲ್ಬೆರಳುಗಳ ಸಂದಿಯಲ್ಲಿ ಗಂಜಳ ಒಸರುತಿತ್ತು (ಪುನರು. ೨೬೮). [ಕಾಲ್$_1$+ ಬೆರಳು (< ಬೆರಲ್)]

**ಕಾಲ್ಬೇಗ** (ನಾ). ಕಾಲಿನ ವೇಗ; ನಡಗೆಯ ವೇಗ: ಕರುಣವನೆ ಪಡೆದು ಕಳುಹಿಸಿಕೊಂಡು ಕಾಲ್ಬೇಗವೆರಸಿ ತಿರುತಿರುಗಿ ನೋಡುತೆ ಪಾಳೆಯಂಬುಗುವ ಸುರರ ಸೇನೆಯ ಸಡಗರಂಗಂಡು (ಚಬಪು. ೪೯-೪೮). [ಕಾಲ್$_1$ + ಬೇಗ]

**ಕಾಲ್ಬೇಡಿ** (ನಾ). ಕಾಲಿಗೆ ತೊಡಕಿಸುವ ಸಂಕೋಲೆ: ಅವಳು ಮನೆವಾಳ್ತೆಯ ಕಾಲ್ಬೇಡಿಯಾಗಿ ಪರಿಣಮಿಸಬೇಕು (ಇಪ್ಪಕ. ೪೬೧); ಕಮ್ಮಾರನ ಸೂಚನೆಯಂತೆ ಕಾಲ್ಬೇಡಿಯನ್ನು ತೆಗೆಯಲಾಯಿತು (ಬಂಕಿಮ. ೩೦೨). [ಕಾಲ್$_1$ + ಬೇಡಿ]

**ಕಾಲ್ಭಂಟ** (ನಾ). ಕಾಲಾಳು; ಪದಾತಿ: ಕಾಲ್ಭಂಟರ ಶರೀರಗಳ ಮಧ್ಯದಲ್ಲಿ ಬಿದ್ದಿರುವ ದ್ರೋಣಾಚಾರ್ಯನ ಶರೀರವನ್ನು ಕಾಣಲಾರದೆ ತತ್ತರಬೀಳುತ್ತಲಿದ್ದರು (ಮಡಿಕ್ಯಾ. I, ೧೮೩ ಭಾರತವಚನ). [ಕಾಲ್$_1$ + ಭಂಟ]

**ಕಾಲ್ಮಗುಚ್ಚು** (ಕ್ರಿ). ಕಾಲುಗಳನ್ನು ಮಗುಚು, —ತಿರುಗಿಸು; ಅಡಿ ಮೇಲಾಗಿಸು: ಈಶ್ಮಿತ್ಯೋಪಚಾರ ಸಪರ್ಯೆಗೆ ಪ್ರಸನ್ನೆಯಾದಳೆನೆ ಕಣ್ದೆಱೆದು ಕೆಯ್ಯಲುಗಿ ಕಾಲ್ಮಗುಚ್ಚಿ ಸುಯ್ದಾಡಿದಳ್ (ರಾಮಾಶ್ವ. ೩೫-೧೪). [ಕಾಲ್$_1$ + ಮಗಚ್ಚು]

**ಕಾಲ್ಮಡಿ$_1$, ಕಾಲುಮಡಿ$_1$** (ಕ್ರಿ). ೧. ಕಾಲುಗಳನ್ನು ಮಡಿಚು. ೨. (ಆಲಂ) ಮೂತ್ರ ವಿಸರ್ಜನೆಮಾಡು: ರಾತ್ರಿ ಕಾಲ್ಮಡ್ಯಾಕ ಅಂತ ಎದ್ದು ಹೊರಗೆ ಬಂದೆ (ಗೀಚುಗ. ೯). **ಕಾಲುಮಡಿ$_1$**: ೧. ಕಾಲು ಮಡಿದು ಕುಳಿತುಕೊ (ರೂಢಿ). [ಕಾಲ್$_1$ + ಮಡಿ$_1$]

**ಕಾಲ್ಮಡಿ$_2$, ಕಾಲುಮಡಿ$_2$** (ನಾ). ೧. ಕಾಲನ್ನು ಮಡಿಚುವಿಕೆ: ಕೊಡದಲೆ ಬಳಲಿಂದ ಕಾಲ್ಮಡಿಯೂಡಿ ಕುಳಿತಿಹ ಗಜದಿರವನು ನೋಡಲೈದಿದ ರಾಮಲಕ್ಷ್ಮಣರನುಜರೊಡಗೂಡಿ (ಜಿರಾಮಾ. ೬೫-೧೬). **ಕಾಲುಮಡಿ$_2$**: ೨. (ಆಲಂ) ಮೂತ್ರ ವಿಸರ್ಜನೆ: ಕಾಲುಮಡಿ ಬಂದಿದಾವ ಬಾಗಿಲ ತೆರೀರಿ (ಮಲ್ಲಿಗೆ. ೩೬). [< ಕಾಲ್ಮಡಿ$_1$]

**ಕಾಲ್ಮಡಿ₃** (ನಾ). ಪಾದರಕ್ಷೆಯ ತಳಭಾಗ; ಅಟ್ಟೆ: ಅವರ ಅರೆಬೂಟ್ಸು ಗಳಿಗೆ ಕಾಲ್ಮಡಿ (sole)ಯೂ ಇರುವುದಿಲ್ಲ (ಬಾಲಪ್ರ. III, ೧೩೪೮). [ಕಾಲ್₁ + ಮಡಿ ?]

**ಕಾಲ್ಮಣೆ, ಕಾಲುಮಣೆ** (ನಾ). ೧. ಕಾಲುಗಳುಳ್ಳ ಪೀಠ: "ಹಂಗುಳಿಯೆನೆ ಕಾಲ್ಮಣೆ" (ಚತುನಿ. II, ೯೪). ಚಿತ್ರರದ ಕಾಲ್ಮಣೆಗಳಲ್ಲಿ ಚಿತ್ತರದಿಂ ಹತ್ತ ಹತ್ತರದೊಳ್ ಕುಳಿತು (ಸೌಗಂಧಿ. ೧೩೦-೧೬); ಒಂದು ಧನುಸ್ಸು ಕೆಲವು ಬಾಣಗಳು ಕಾಲ್ಮಣೆಯ ಮೇಲಿವೆ (ಆರ್ಯಕ. ೭೩). **ಕಾಲುಮಣೆ:** ೧. ನಟ್ಟನಡುವೆ ಹೊನ್ನ ಕಾಲುಮಣೆಯ ಮೇಲೆ ದಟ್ಟೈಸಿ ದರ್ಭೆಯ ಹೂವ (ಭರಚ. ೧೭-೫); ಮಾಯಾದೇವಿಯು ಕಾಲುಮಣೆಯೊಂದರ ಮೇಲೆ ಓಲೆಯ ಗ್ರಂಥವನ್ನಿಟ್ಟುಕೊಂಡು . . . ಓದುತ್ತಿರುವಂತೆ ಕಾಣುತ್ತಿದೆ (ತುಂಗಭ. ೧೧೩); ಮುದುಕ . . . ಕಾಲುಮಣೆಯ ತಳದಿಂದ ಎರಡು ಸೀಸೆಗಳನ್ನು ತೆಗೆದುಕೊಂಡು (ಮಲೆನಾ. ೬೫). ೨. ಕಾಲನ್ನು ಇಟ್ಟುಕೊಳ್ಳುವ ಮಣೆ; ಪಾದಪೀಠ: ನಾನು ಕಾಲುಮಣೆಯು ತಮ್ಮ ಮಹಾಪಾದ ಪೀಠಕೆ ತಮ್ಮಡಿಗಳು ಮುಟ್ಟಿದೊಡನೆ ಅರಳಿ ಕಮಲವಾದೆನು (ಅರಳು. ೪೭೦). [ಕಾಲ್₁ + ಮಣೆ]

**ಕಾಲ್ಮಧು** (ನಾ). ಒಂದು ಬಗೆಯ ಸಸ್ಯ: (ವೈಔಗಿ. ೭೦-೧೪೬೫). [?]

**ಕಾಲ್ಮರೆ, ಕಾಲುಮರೆ** (ನಾ). ಕಾಲಲ್ಲಿ ಹಾಕಿಕೊಳ್ಳುವ ಮೆಟ್ಟು; ಪಾದರಕ್ಷೆ: ಕಾಲ್ಮರೆಯಿಲ್ಲದಿದ್ದರೆ ಇಲ್ಲಿ ಮುಳ್ಳು ನೆಡುವುದಿಲ್ಲ (ನವವಿ. ೨೬); ಮದುವೆಯಲ್ಲಿ ವರನಿಗೆ ಕೊಡುವುದು ಕಾಲ್ಮರೆಯಲ್ಲ, ಮೊಚ್ಚೆ (ಕರ್ಣಾಪೂ. ೧೪೭); ನನ್ನ ಕಾಲ್ಮರೆ ಕಣ್ಮರೆಯಾಗಿದ್ದುವು (ಮುಂಗಾವು. ೧೧). **ಕಾಲುಮರೆ:** (೬).. [ಕಾಲ್₁ + ಮರೆ₂ (< ಮಱೆ₂)]

**ಕಾಲ್ಮುರಿ₁** (ಕ್ರಿ). ೧. ಕಾಲನ್ನು ಮುರಿ, —ತುಂಡುಮಾಡು. ೨. ಕಾಲು ಮುರಿದುಹೋಗು, —ತುಂಡಾಗು: ಮರದಿಂದ ಬಿದ್ದು ಕಾಲ್ಮುರಿದು ಹೋಯಿತು (ರೂಢಿ). [ಕಾಲ್₁ + ಮುರಿ₂ (< ಮುಱಿ₁)]

**ಕಾಲ್ಮುರಿ₂** (ಕ್ರಿ). ಕಾಲುಗಳನ್ನು ಒತ್ತು; ಪಾದಸೇವೆಮಾಡು (?): ಒಪ್ಪುತಿಹ ಪಾಲ್ಗಡಲ ತೆರೆಗಳ ತೆಪ್ಪದೊಳು ಫಣಿವಾಸನೊರಗೊರಗಿಪ್ಪ ಪ್ರಯೋಗದೊಳೊಲಿದು ಶ್ರೀ ತೊಳಸಿಯರು ಕಾಲ್ಮುರಿಯೆ (ದೇವಿಮ. ೧-೬). [ಕಾಲ್₁ + ಮುರಿ₁]

**ಕಾಲ್ಮುರಿ₃** (ನಾ). ಕಾಲಿಗೆ ಹಾಕುವ ಒಂದು ಬಗೆಯ ಒಡವೆ; ರುಳಿ: ಕೆಲವು ವರ್ಗಗಳ ಹಿಂದೆ ಕಾಪು ಕಾಲ್ಮುರಿ ಕೈಕಡಗ ತೋಳ್ಬಂದಿಗಳನ್ನು ಸಹ ಕೊಡುತ್ತಿದ್ದರು (ನಂಜುಂಡ. ೧೨೮). [ಕಾಲ್₁ + ಮುರಿ₃]

**ಕಾಲ್ಮುರುಕ** (ನಾ). ಕಾಲು ಮುರಿದು ಹೋದವನು; ಹೆಳವ: ಎಂತೆಂತಾ ದೇವರಿಗೆಲ್ಲಾ ಅಂತರಾಟ ಕಾಲ್ಮುರುಕ ದೇವರಿಗೆ ಕೈಲಾಸವೇ? (ಗಾದೆ). [ಕಾಲ್₁ + ಮುರುಕ (< ಮುಱುಕ)]

**ಕಾಲ್ಮೆಟ್ಟು** (ಕ್ರಿ). ೧. ಕಾಲಿಂದ ಮೆಟ್ಟು; ತುಳಿ; ಸ್ಪರ್ಶಿಸು: ಅರಮೆ ಕಾಲ್ಮೆಟ್ಟದರೆ ಪೊಂಪಳಿಯದಹುದು (ಕಾಲೂರ. ೩೭-೪೧). ೨. ಗೆಲ್ಲು; ಸಾಧಿಸು: ಕಾಲನ ಕಲಿಯ ಮೆಟ್ಟುವಡೆ ಗುರಿಯಲೆಡೆಗಟ್ಟುವಡೆ ಮೋಕ್ಷದ ಸಿರಿಯ ಕಾಲ್ಮೆಟ್ಟುವಡೆ ಬ್ರಹ್ಮದ ತುರಿಯದಾಖಂಡಾಶಯದ ಬೆಂಬಲವನೊದಗಿಪುದು (ಗಗತಾ. ೧೩-೫). [ಕಾಲ್₁ + ಮೆಟ್ಟು₁]

**ಕಾಲ್ಯ** (ಗು). ೧. ಸಮಯವು ಒದಗಿ ಬಂದಿರುವ; ಸಮಯಕ್ಕೆ ಸರಿಯಾದ; ಸಂದರ್ಭೋಚಿತವಾದ; ಕಾಲಕ್ಕೆ ತಕ್ಕ. ೨. ಆಯಾ ಋತುವಿಗೆ ತಕ್ಕುದಾದ: (೬). ೩. ಹಿತಕರವಾದ; ಪ್ರಿಯವಾದ; ಮಂಗಲಕರವಾದ. ೪. ಬೆಳಗಿನ; ಪ್ರಾತಃಕಾಲಕ್ಕೆ ಸಂಬಂಧಿಸಿದ. (ನಾ). ೫. ಬೆಳಗು; ಪ್ರಾತಃಕಾಲ: ಕಾಲ್ಯದೊಳಗಾ ವಿಭೀಷಣಂ ಪ್ರೇಮದಿಂದಣ್ಣನೆಡೆಗೈದಿ (ವೆಂಕಾಶಾ. ೬-೩-೧). ೬. ಬೆಳಗಿನ ಹೊತ್ತು ಮಾಡಬೇಕಾದ ಸಂಧ್ಯಾವಂದನೆ ಮೊದಲಾದ ಕಾರ್ಯ: ಪೋಟ್ರಿರೆಯೊಳುಪ್ಪವಡಿಸಿ ಕಾಲ್ಯಮಂ ತೀರ್ಚಿ (ಅದ್ಭುತ. ೩೯-೧೯); ಜಳಕಂಗೈದು ಕಾಲ್ಯಮನಾಗಿಸಿ (ರಾಮಾಶ್ವ. ೨೭-೪). [?]

**ಕಾಲ್ಯಕೃತ್ಯ** (ನಾ). ಬೆಳಗಿನ ಹೊತ್ತು ಮಾಡಬೇಕಾದ ಸ್ನಾನ ಸಂಧ್ಯಾವಂದನಾದಿ ಕರ್ಮ: ಪ್ರತಿನಿತ್ಯವೂ ಬ್ರಾಹ್ಮ ಮೂಹೂರ್ತದಲ್ಲಿ ಎದ್ದು ಸ್ನಾನಸಂಧ್ಯಾವಂದನಾದಿ ಕಾಲ್ಯಕೃತ್ಯಗಳನ್ನು ತೀರಿಸಿಕೊಂಡು (ಪುರಾವಿ. ೧೦೦). [ಕಾಲ್ಯ + ಕೃತ್ಯ]

**ಕಾಲ್ಯಪ್ರಭವ** (ನಾ). ಬೆಳಗಿನಲ್ಲಿ ಹುಟ್ಟುವಿಕೆ, —ಉದಯಿಸುವಿಕೆ, —ಉದಯ: ರಾಗಾಭ್ಯುದಯಮನೊಳಕೆಯ್ದೆಯ್ದೆ ಸಾಫಲ್ಯಮಂ ಕಣ್ಗೆರದಿತ್ತಳ್ ಕಾಂತೆ ಕಾಲ್ಯಪ್ರಭವದಿನಕನತ್ಕಾಂತಿಯೆಂಬಂದದಿಂದಂ (ಚಂದ್ರಪು. ೧೧-೧೪೮). [ಕಾಲ್ಯ + ಪ್ರಭವ]

**ಕಾಲ್ವಂತ** (ನಾ). ಕಾಲುಗಳನ್ನುಳ್ಳವನು: ಕಣ್ವಂತಂ, ಕಾಲ್ವಂತಂ (ಶಬ್ದಾನು. ೪೦೩ ಪ್ರಯೋ). [ಕಾಲ್₁ + -ವಂತ]

**ಕಾಲ್ವಟ್ಟೆ, ಕಾಲುವಟ್ಟೆ** (ನಾ). ಕಾಲುದಾರಿ: ಹೊಂನ್ನೊಜೆಯ ಪಳ್ಳಿಗೆ ಹೋದ ಕಾಲ್ವಟ್ಟೆಯಿಂ ತೆಂಕಲಿರ್ದ್ದ ಬೆಳ್ಗುಪ್ಪೆ ಆ ಕುಪ್ಪೆಯಿಂ ಸ್ವೈತು ಬಡಗಲ್ ಲಜ್ಜೆಯನ ಕಟ್ಟೆ (ಸೌಇಇ. IX-i, ೩೨೬-೯೭; 1206); ಬಟ್ಟೆಯ ಪಳ್ಳದೊಳ್ ಪಲವೊಜಂತೆಗಳಾದುವು ಕಾಡೊಳಿರ್ದ ಕಾಲ್ವಟ್ಟೆಗಳೆಲ್ಲಮೆಯ್ದುವುವು ನೀರ್ನೆಲೆಯಂ (ಸೂಕ್ತಿಸು. ೧೦-೯೩). **ಕಾಲುವಟ್ಟೆ:** "ವರ್ತ್ಮನಿ, ಏಕಪದಿ" (ನಾಚಿರಾ. ೬); ಕೆಟ್ಟಿತು ಕಾರ್ಯ ತುರುಕ ದಂಡಿಗೆ ಕಾಲುವಟ್ಟೆಯಾದುದು ಕರ್ನಾಟ (ಕುರಾಸಾಂ. ೩೬-೬೭). [ಕಾಲ್₁ + ಬಟ್ಟೆ₁]

**ಕಾಲ್ವಡೆ** (ಕ್ರಿ). ಕಾಲುಗಳನ್ನು ಪಡೆ, —ಹೊಂದು: ನಡೆದನಿಂದ್ರನ ಸಮ್ಮುಖಕೆ ಕಾಲ್ವಡೆದ ಸುರಗಿರಿಯಂತೆ (ನಿಭಾಗ. ೬-೧೧-೧೮). [ಕಾಲ್₁ + ಪಡೆ₁]

**ಕಾಲ್ವರಿ** (ಕ್ರಿ). ಕಾಲುವೆಯಾಗಿ ಹರಿ; ಮೆಲ್ಲಗೆ ಹರಿ: ರಾಜಬೀದಿಯ ಇಕ್ಕೆಡೆಗಳಲ್ಲಿ ಕಾಲ್ವರಿವ ಅನೇಕ ಪ್ರವಾಹಗಳು ಮನಸ್ಸಿಗೆ ಆನಂದವನ್ನು ಕೊಡುತ್ತವೆ (ಮುಂಗಾವು. ೩೪). [ಕಾಲ್₂ + ಪರಿ₁]

**ಕಾಲ್ವರಿಯಿಸು** (ಕ್ರಿ). ಕಾಲುವೆಯನ್ನು ಹರಿಯಿಸು: ತರದಿಂ ಪೊಂಬಾಟೆಗಳ್ ಪಣ್ಗೊಲೆಗಳುಗುವ ಪೆರ್ವಾಡಿನಿಂ ತೆಂಗುಗಳ್ ಕಾಯ್ವಿರಿಪಿಂ ಬರ್ಪಂಬುವಿಂ ಮಾವುಗಳೆಸೆವ ರಸಾಸಾರದಿಂ ಕರ್ವುಗಳ್ಸು ರ್ವರ ಸೋಂಕಿಂದೊಕ್ಕ ಸಾಱಿಂ ಬಳೆದು ಬಳೆವಂತೆಲ್ಲ ಪೊಂದಾಗಿಯೂ ನಾಗರಖಂಡ ಪ್ರಾಂತದೊಳ್ ಕಾಲ್ವರಿಯಿಸೆ ಬೆಳೆಗುಂ ಕೂಡೆ ಕೇದಾರವರ್ಗಂ (ಎಕ. VII, ಶಿಕಾರಿ. ೨೩೬-೭೩; 1174). [ಕಾಲ್ವರಿ + -ಇಸು₃]

**ಕಾಲ್ವಲಗೆ** (ನಾ). = ಕಾಲ್ಮಣೆ ೧: ಮಿಸುನಿಯ ಕಾಲ್ವಲಗೆಯ ಮೇಲೆ ಪದ್ಮಿನೀ ಬಸಿಜ ಬಗಿವೆನೆಂದೆಸುತ ಅಸಿಧಾರೆಯಲಿ ಮೆಲ್ಲಡಿರ್ದಯ ಬಗಿಯಲು (ಮೋಹತ. ೧೧-೪೦). [ಕಾಲ್₁ + ಪಲಗೆ]

**ಕಾಲ್ವಲೆ, ಕಾಲುವಲೆ** (ನಾ). ಒಂದು ಬಗೆಯ ಬಲೆ: ಕಾಲ್ವಲೆಗೆ ಬಲ್ಲಿದ ಚಮರಿಯಮಿಗ ಸಿಕ್ಕಿಕೊಂಡಂತೆ (ಮೋಹತ. ೪೦-೬೫). **ಕಾಲುವಲೆ:** ತೊಡಕುವಲೆ ತೋಱುವಲೆ ತೊಟ್ಟವಲೆ ಗೂಟವಲೆ ಕಣ್ಣಿವಲೆ ಕಾಲುವಲೆಯ (ಹಜಕಾ. ೫-೮). [ಕಾಲ್₁ + ಬಲೆ]

**ಕಾಲ್ವಲ್ಲಿದ** (ನಾ). ಕಾಲುಗಳಲ್ಲಿ ಬಲವುಳ್ಳವನು; ವೇಗಶಾಲಿ: ಪರಿಕಾಜರೊಳೀತಂ ಕಾಲ್ವಲ್ಲಿದಂ (ಶಮದ. ೧೩೩ ಪ್ರಯೋ); ಕಾಲ್ವಲ್ಲಿದನಾ ವೇಗಾಯಿಲನಿಂದ . . . ಅಟ್ಟಿರುವ ಒಪ್ಪನಿರೂಪದ ಓಲೆಯ (ಬೆಟ್ಟಅ. ೨೦೪-೧). [ಕಾಲ್₁ + ಬಲ್ಲಿದ]

**ಕಾಲ್ವಳಿ** 'ಕಾಲ್ವಳ್ಳಿ' ನೋ.

**ಕಾಲ್ವಳ್ಳಿ,** **ಕಾಲುಪಳ್ಳಿ,** **ಕಾಲುವಳಿ,** **ಕಾಲುವಳ್ಳಿ,** **ಕಾಲುಹಳ್ಳಿ,** **ಕಾಲ್ಪಳ್ಳಿ,** **ಕಾಲ್ವಳಿ** (ನಾ). ಒಂದು ಊರಿಗೆ ಸೇರಿಸಿಕೊಂಡಿರುವ ಚಿಕ್ಕಹಳ್ಳಿ; ಉಪಗ್ರಾಮ: ಬೆಳಸಿಂದೂರೂರ ಕಾಲ್ವಳ್ಳಿಗಳ್ ನೆಲೆಮಾಡಂಗಳಿನೊಪ್ಪೆ (ಮಲ್ಲಿಪು. ೨–೧೫); ನಾಡೊಳ್ ಕೊಟ್ಟ ಸ್ಥಲವೃತ್ತಿ ಕರ್ಬೂರರ ಕಾಲ್ವಳ್ಳಿ (ಎಇ. XIII, ೩೦–೪೫; 1204); ಅಳವಟ್ಟಪರ್ಪೊಬಿಲ್ಗಳಿಂ ಸುರುಚಿರ ಗ್ರಾಮಂಗಳಿಂ ರಂಜಿಪಗ್ಗಳ ಕಾಲ್ವಳ್ಳಿಗಳಿಂ ಪುರಂಗಳಿಂ (ಉದ್ಭಟ. ೩–೫). **ಕಾಲುಪಳ್ಳಿ**: ತಗ್ಗಿಳೂರಿತಿ ವಿಖ್ಯಾತ ಕಾಲುಪಳ್ಳೀಯುತಸ್ಯ ಚ (ಎಕ. III, ಮಳವ. ೧೨೧–೬೧; 1424). **ಕಾಲುವಳಿ**: ವಡ್ಡ ಶಾಂತಿಗ್ರಾಮದ ಕಾಲುವಳಿಯಪ್ಪ ಕೋರವಂಗಲದ (ಎಕ. V, ಹಾಸನ. ೬೧–೫೪; 1173); ತಂತಂನ ಕಾಲುವಳಿಗಳುಗೂಡಿದ ಹಳ್ಳಿಗಳು ಸಹಿತ (ಎಕ. XII, ಚಿಕ್ಕನಾ. ೨–೧೦; 1261); ಹೊಂಗನೂರಗ್ರಾಮ . . . ಆದಕೆ ಸಲುವ ಕಾಲುವಳಿಗಳೂ (ಎಕ. XIV, ಶ್ರೀರಂಗ. ೨೫೬–೩; 1564). **ಕಾಲುವಳ್ಳಿ**: ಗಂಗೆಯು ತಡಿಯಲೊಂದು ಐವಾಗಿಲ ಪಟ್ಟಣದ ಕಾಲುವಳ್ಳಿಯಲ್ಲಿ ಹುಟ್ಟಿ ಬೆಳೆದೆ (ಅವಚಂ. ೧೯೧–೮೬೫); ಕಲುಕಣಿ ನಾಡ ಬೆಳ್ಳೂರ ವಿತ್ತಿಯ ಬೆಳ್ಳೂರು ಆ ಕಾಲುವಳ್ಳಿಗಳು ಹಾಲೆ ಹಾಲು ಮಾವಿನ ಕೆರೆ (ಎಕ. V, ಬೇಲೂರು. ೬೪–೧೧೯; 1261). **ಕಾಲುಹಳ್ಳಿ**: ನಿಬ್ಬಯಲ ಮಹಾಜನಂಗಳಿಗೆ ಗೆಗ್ಗನಹಾಳನೂ ಪ್ರವಿಷ್ಟವಾಗಿ ಕಾಲುಹಳ್ಳಿಯಾಗಿ ಧಾರಾಪೂರ್ವಕಂ ಮಾಡಿಕೊಟ್ಟರು (ಮೈಆರಿ. ೧೯೩೮, ೫೨–೮; 1259). **ಕಾಲ್ಪಳ್ಳಿ**: ನೆಗಬ್ದ ನಾಗೇಂದ್ರ ಯಕ್ಷೇಂದ್ರ ದೇವೇಂದ್ರ ಪುರಂಗಳ್ ಭೋಗದಿಂ ಸಂಪದದಿನೆಸಕದಿಂದೆನ್ನ ಕಾಲ್ಪಳ್ಳಿಗಂ ಬಂದಪುವೇ (ಜಗವಿ. ೧೬–೬೫). **ಕಾಲ್ವಳಿ**: ಕಡಲೂರ ಗ್ರಾಮವಂದೂ. . . ಮೈದನಹಳ್ಳಿಗ್ರಾಮವಂದೂ ಅಂತೂ ಕಾಲ್ವಳಿಗ್ರಾಮ ಮೂರು (ಎಕ. V, ಹಾಸನ. ೮೬–೬೬; 1396). 'ಕಾಲೂರ್' ಪರಾ. [ಕಾಲ್$_1$ + ಪಳ್ಳಿ]

**ಕಾಲ್ಬಱಿ** (ನಾ). ಸಾರಿಸುವಿಕೆ; ಸಾರಣೆ: ಪನ್ನೀರ ನೀರ್ದಳಿಪದಿಂ ಕತ್ತುರಿಯ ಕಾಲ್ಬಱಿಗಳಿಂ ಕಪ್ಪುರವಳುಕಿನ ಕಡೆಗಳಿಂ (ಶಾಂತೀಶ್ವ. ೧೦–೧೧೬ವ). [ಕಾಲ್$_1$ + ಬಱಿ$_2$]

**ಕಾಲ್ಬಱಿಗೊಳ್** (ಕ್ರಿ). ಸಾರಿಸು; ಸಾರಣೆ ಮಾಡು; ಲೇಪಿಸು: ಕಮನೀಯ ಭಿತ್ತಿಭಾಗಂಗಳಂ ಕುಂಕುಮ ರಸದಿಂ ಕಾಲ್ಬಱಿಗೊಳ್ವಂತೆ . . . ಪಸರಿಸುವೆಳವಿಸಿಲಂ (ಲೀಲಾವ. ೩–೮೫); ಪೂವಲಿಗೆಯ್ವ ರಂಗವಲಿಯಿಕ್ಕುವ ಕಾಲ್ಬಱಿಗೊಳ್ವ ಬಾಯಿನಂದೀವುವ (ವರ್ಧಪು. ೬–೩). [ಕಾಲ್ಬಱಿ + ಕೊಳ್$_1$]

**ಕಾಲ್ವಾಯ್,** **ಕಾರ್ವೆ$_1$,** **ಕಾಲಿವೆ,** **ಕಾಲುವೆ,** **ಕಾಲ್ವೆ,** **ಕಾವಲ್ಕೆ$_3$,** **ಕಾವಲ್ಕೆ$_2$,** **ಕಾವುಲಿ** (ನಾ). ನೀರು ಹರಿಯುವುದಕ್ಕಾಗಿ ಮಾಡಿದ ತಗ್ಗು, —**ತೋಡು**: ಬಿಡುಜಡೆಯನೆ ಪರಿವ ಕಾಲ್ವಾಯಿಂ ಪುರರಮೆಯ ಪಸುರುಡೆಯ ಮಾಟ್ಕೆಯಿಂ ರಾಜಿಪಾರವೆಯಿಂ (ರಾಮಾಶ್ವ. ೧೨೨–೧೪); ಸುಯ್ವಾಕಡಲಾ ಕಾಲ್ವಾಯ ಮೇಲಿನ್ ತಣ್ಪನ್ ತರ್ಪಾಪೇರಡಿ ಬಾರಯ್ (ಅಂತಿಗೂ. ೧೦೬೪); ಸಾಲಿಡೆಸಸ್ ತನತುಗ್ರಕಾಲ್ವಾಯನ್, ಪೊಸನಾವಿಕಗೊರ್ಂದು ಎರ್ದೆನಡುಕಮ್ (ಬದ್ಧಪ್ರ. ೩೮–೮೩೦). **ಕಾರ್ವೆ**: ಮಾವಿನ ಚವುಡಕಾರ್ವೆಯಂತೆಂಕ ನಿಡುಗೆಱೆಯ ಕೆಳಗೆ (ಎಇ. XIX, ೧೯೬–೩೬; 1210). **ಕಾಲಿವೆ**: "ಗಿಡುಮರಕ್ಕೆಱೆವ ನೀರಕಾಲಿವೆಗಳು" (ಮಂಗರಾ. ೩೩–೬); ಸಕ್ಕರೆ ತುಪ್ಪ ಕಾಲಿವೆ ಹರಿಸಿ ಶುಕ್ರವಾದ ಪೂಜೆಯ ವೇಳೆಗೆ (ಪುರಂದ. ೧–೨೧೧–೪); ಊರ ಗುದ್ದಲಿ ತಂದು ನಾಡು ಕಾಲಿವೆ ತೆಗೆದ (ಗಾದೆ). **ಕಾಲುವೆ**: ಪರೆದು ಪರಿವ ಕಾಲುವೆಗಳಿಂ . . . ಮೆಱೆವುದು (ತಿರುರ. ೨–೬); ಗಗನಗಂಗೆಯ ಬಹಳ ಕಾಲುವೆಗಳೊ ಪತಾಕೆಗಳೊ (ಕುವ್ಯಾಭೀ. ೮–೪); ಮಂದಾಕಿನಿ . . . ನಂದನದೊಳು ಬಂದು ಪರಿದಾಡುವ ಚೆಲುವಿಂದೆ ಕಾಲುವೆಗಳೊಪ್ಪಿದುವು (ಮೋಹತ. ೨೪–೫೬); ನೀಲಾದ್ರಿ ಶಿಖರದಿಂದಿಳಿವ ಕಾಳಿಂದಿಯ ಕಾಲುವೆಯೆನೆ ಭದ್ರಗಜದ ಮೇಲು ಕಪೋಲದೆ ಸುರಿವ ಮದಕೆ. (ಕಂನವಿ. ೨೩–೧೦೩); ಒಂದು ಕಾಲುವೆಯನ್ನು ತೋಡಿ, ಹೊಳೆಯ ನೀರೆಲ್ಲಾ ಹಟ್ಟಿಗಳೊಳಗೆ ಹೋಗುವಂತೆ ಮಾಡಿದನು (ಮಣಿಸ. ೯೫). **ಕಾಲ್ವೆ**: "ಕಾಲೆಂದು ಕಾಲ್ವೆ" (ಕಬ್ಬಿಕ್ಕೆ. ೨೨); "ಕಾಲ್ವೆಯೆನೆ ಕುಲ್ಯ" (ಕಶರ. ೨೩); ಭೋರೆನೆ ಬಂದು ಕೀರಶಿಶುಗಳ್ ನೆಱೆ ತೂಗಿ ಜಗುಳ್ದು ಕಾಲ್ವೆಯಾ ಪೂರದೊಳೆಯ್ದೆ ಬಿಬ್ದು (ಶಾಂತೀಶ್ವ. ೧–೯೧). **ಕಾವಲ್ಕೆ$_3$**: ಕಾವಲಿಯ ದಾಂಟುವನಿತಕೆ ನೆಲಕಪ್ಪಳಿಸಿದೊಲು ಬಿದ್ದು (ಘ್ರಾಥರಾ. ೧೦–೩೧); ಕೆರೆಯೊಳಗಿಂದ ಎರಡು ಕಾವಲಿಗಳನ್ನು ತೆಗೆದಿದ್ದಾರೆ (ಕಭಾಗೆ. I, ೧೩); ಅದಕ್ಕೆ ಬಿಡುಗಾವಲಿಯ ನೀರಿನ ಹೊರ್ತು ಕಾವಲಿ ಇಲ್ಲದಲ್ಲಿ ಬೆಳೆಯುವುದಿಲ್ಲ (ಕೃಷಿಪ್ರ. ೫೯); ತುಂಗಭದ್ರೆಯ ಕಾವಲಿಯಲ್ಲಿ ಕಾಲು ತೊಳಕೊಂಡು (ಕುಮುದಿ. ೫). **ಕಾವಲ್ಕೆ$_2$**: ರಕ್ತದ ಕಾವಲೆಗಳು ಹರಿದವು (ಮುಂಬಯಿ. ೪–೧೦). **ಕಾವುಲಿ**: ಬಾವುಲಿ ಇಟಕೊಂಡು ಕಾವುಲಿ ತಿದ್ದುವ ಗಾಳಿ ಬಂದತ್ತ ಬಳುಕುವ ನನ ತಮ್ಮ ಬಾಳೆಯೆಲೆಗಿಂತ ಬಲು ಚೆಲುವ (ಹಳ್ಳಿಯ. ೬೭).

[ಕಾಲ್$_2$ + ಬಾಯ್. / ತಮಿ. ಕಾಲ್‌ವಾಯ್, ವಾಯಕ್ಕಾಲ್; ಮಲ. ವಾಯ್‌ಕ್ಕಾಲ್; ತುಳು. ಕಾಲಿವೆ; ತೆಲು. ಕಾಲವ, ಕಾಲುವ]

**ಕಾಲ್ವಿಡಿ,** **ಕಾಲುವಿಡಿ,** **ಕಾಲುಹಿಡಿ,** **ಕಾಲ್ಪಿಡಿ** (ಕ್ರಿ). ೧. ಕಾಲುಗಳನ್ನು ಹಿಡಿ: ಕೊಡಹಿ ಬಿಸುಟನು ಕೇಸರಿಯ ಕಾಲ್ಗಿಡಿದು ಸೀಳಿದ ಕರಿಗಳನು ಬೆಂಬಿಡದೆ ಹಿಡಿದಪ್ಪಳಿಸಿದನು ಶಾರ್ದೂಲ ಹೆಬ್ಬುಲಿಯ (ಕುವ್ಯಾಅ. ೩–೧೦). ೨. ಕಾಲಿಗೆ ಬೀಳು; ನಮಸ್ಕರಿಸು: "ಮೊಬ್ಗು . . . ಕಾಲ್ವಿಡಿ, ಮಣಿ, ಮೆಯ್ಸಿಕ್ಕು – ಈ ೯ ನಮಸ್ಕಾರಂ" (ಕಶಸಾ. ೨೨–೪೫೦); ಲಲ್ಲಯಿಪ ಕಾಲ್ವಿಡಿವೆಂಬುದನಿಂಬುಕೆಯ್ವಳಂ (ಆದಿಪು. ೩–೪೩); ನಲವಿಂ ಕಾಲ್ವಿಡಿದು ತಿಳಿಸಿ (ಕಬ್ಬಿಕಾ. ೬೧); ನಲ್ಲಳೆ! ನಿನ್ನ ಕಾಲ್ವಿಡಿದಪೆಂ ತಿಳಿ ಮಾನಮಿದೇಕೆ (ಶಮುದ. ೧೨೬ ಪ್ರಯೋ). **ಕಾಲುವಿಡಿ**: ೧. ಜಡಿದು ಝುಂಕಿಸಿ ಪೊಡೆಯ ಬಂದೊಡೆ ಕಾಲುವಿಡಿವಂತೆ ಅಡಿವಿಡಿದು ಪೊಡವಿಗೆ ಕೆಡಹಿ ತಾ ಹಿಡಿದೆಳೆವ (ಸಾಳ್ವಭಾ. ೧೧–೫೪). **ಕಾಲುಹಿಡಿ**: ೧. ದಮ್ಮಯ್ಯಾ ಎಂದು ಅವಳ ಕಾಲು ಹಿಡಿಯದಿದ್ದರೆ ಅವಳ ಮಾತು ಇನ್ನೆಲ್ಲಿಗೆ ಹೋಗುತ್ತಿತ್ತೋ (ಮೂರುದಾ. ೨೫೦); ಹೊತ್ತು ಬಂದಾಗ ಕತ್ತೆಯ ಕಾಲು ಹಿಡಿ (ಗಾದೆ). **ಕಾಲ್ಪಿಡಿ**: ಕಾಲ್ಪಿಡಿದು ಹಿರಿಯರಂ ನುಡಿದು ಪೊರಮಟ್ಟಂ (ಕಾಲೂರ. ೫೯–೯೬).

ಕಾಲ್ವಿಡಿಸಿಕೊಳ್ = ನಮಸ್ಕಾರ ಮಾಡಿಸಿಕೊಳ್ಳು; ಸೇವೆ ಮಾಡಿಸಿಕೊಳ್ಳು: ಕರೆವುದೆಂದು ಕಾಲ್ವಿಡಿಸಿಕೊಳ್ವದೆಂದು (ಪಂಪಾಶ. ೫). [ಕಾಲ್$_1$ + ಪಿಡಿ$_1$]

**ಕಾಲ್ವಿಡಿತ** (ನಾ). ಕಾಲುಹಿಡಿಯುವಿಕೆ; ನಮಸ್ಕಾರ; ಶರಣಾಗತಿ: ನುಡಿ ನೋಟ ಬಾಯ್ದೂಟ ಬೈದಾಟ ಕಲಹ ಕಾಲ್ವಿಡಿತವಿಲ್ಲದ ಕಾಂತೆಯರಿಗೆ ಕಡುರಸಿಕರು ಲೇಸುಮಾಡರೆಂದೊರ್ವಳು ನುಡಿದಳು (ಕುರಾಸಾಂ. ೨೮–೯೨). [ಕಾಲ್$_1$ + ಪಿಡಿತ]

**ಕಾಲ್ವೆ** 'ಕಾಲ್ವಾಯ್' ನೋ.

**ಕಾಲ್ವೇಂಟೆ** (ನಾ). (ವಾಹನವನ್ನೇರದೆ) ಓಡಾಡಿ ಆಡುವ ಬೇಟೆ. 'ಕಾಲ್ವೇಂಟೆಕಾಱ' ಪರಾ. [ಕಾಲ್$_1$ + ಬೇಂಟೆ]

**ಕಾಲ್ವೇಂಟೆಕಾಱ** (ನಾ). (ವಾಹನವಿಲ್ಲದೆ) ಓಡಾಡಿ ಬೇಟೆಯಾಡುವವನು: ಗ್ರಾಮಸಿಂಹಗಳ ಕಂಧರಪಾಶವಿಡಿದು ನಿಗಳವ ತಾಳ್ದ ಕಾಲ್ವೇಂಟೆಕಾಱರು ಕೂಡಿ ಮೃಗಯಾತ್ರೆಗೆ ತೆರಳಿದರು (ಮೋಹತ. ೧೯–೩). [ಕಾಲ್ವೇಂಟೆ + –ಕಾಱ]

**ಕಾಲ್ವೊಣೆ**, ಕಾಲ್ಪೊಣೆ(ನಾ). ೧. (ತನ್ನ)ಕಾಲಿನ ಜವಾಬುದಾರಿ; ಹೊಣೆಗಾರಿಕೆ; ಕಾಲಿನ ದುಡುಕು ಕೆಲಸದಿಂದ ಬರುವ ಹೊಣೆ, —ನಿಶ್ಚಯ: ತಲೆ ಪೋಪುದಕೆ ತನ್ನ ಕಾಲ್ವೊಣೆಯೆಂಬ ಧರೆಯು ನಾಳ್ನುಡಿ ತಪ್ಪದಾದುದು (ಜೈಮಿಭಾ. ೧೭-೫೨). **ಕಾಲ್ಪೊಣೆ**: (ಕ).
[ಕಾಲ್$_1$ + ಪೊಣೆ$_2$]

**ಕಾಲ್ವೊನಲ್** (ನಾ). ಕಾಲುವೆಯ ಪ್ರವಾಹ: ಕಣಿಶಾಗ್ರಭಾಗದಿಂ ಭೋರನೆ ಸೋರ್ವ ಪಾಲ್ವೊನಲೆ ಕಾಲ್ವೊನಲಾಗೆ ಜಲಪ್ರವಾಹಮಂ ಪಾರದೆ ಸಂತತಂ ಬೆಳೆಯುತಿರ್ಪ ಮಹಾಕಳಮ ಪ್ರಸಿದ್ಧಕೇದಾರ ಸಮಾಜದಿಂ (ಕುಸುಮಾ. ೨-೪೫). [ಕಾಲ್$_2$ + ಪೊನಲ್]

**ಕಾಲ್ವೊಯ್ಲು** (ನಾ). ಕಾಲಿನ ಏಟು; ಒದೆತ; ಪಾದಾಘಾತ: ನೀಱೆಯ ಕಾಲ್ವೊಯ್ಲಿನಸುಗೆ ತಳಿರ್ತಂತೆಯುಂ (ಕಬ್ಬಿಕಾ. ೩೨೧).
[ಕಾಲ್$_1$ + ಪೊಯ್ಲು]

**ಕಾಲ್ವೊಳೆ**, ಕಾಲುವೊಳೆ, ಕಾಲುಹೊಳೆ; ಕಾಲ್ಪೊಳೆ (ನಾ). ಕಾಲು ನಡಗೆಯಿಂದ ದಾಟಬಹುದಾದ ಹೊಳೆ; ತೀರ ತೆಳ್ಳಗೆ ಹರಿಯುವ ನದಿ: ಕೊಳಚೆ ನೀರೊಳಗಾಳುತೇಳುತ. ಜಲಧಿ ಕಾಲ್ವೊಳೆಯೆಂಬ ಭಂಡರ ಮುಳಿದು ಮಾಡುವುದೇನು (ಕುವ್ಯಾದ್ರೋ. ೫-೪೪); ಮಱವೆ ಬಲಿದುದು ವಿಮಲ ಲಜ್ಜಾಶರಧಿ ಕಾಲ್ವೊಳೆಯಾಯ್ತು ಬಣ್ಣಿಸಲಱಿಯೆ ಕುವರನ ದೇಹದಂತಸ್ತಾಪವೇದನೆಯ (ಜೀವಂಚ. ೧೦-೨೫); ಶರಧಿಯೇಳನು ಸುಱಿವ ವೈಶ್ವಾನರಗೆ ಕಾಲ್ವೊಳೆ ಗಣ್ಯವೇ (ಕೋಗಯ. ೨೫-೮೦). **ಕಾಲುವೊಳೆ**: ಕಾಲುವೊಳೆಗೇಕವನಿಪತಿ ಹಱಿಗೋಲು (ಕುವ್ಯಾದ್ರೋ. ೧೦-೫೧); ಮಳೆಗಾಲದೊಳುಬ್ಬಿ ಬೇಸಗೆಯೊಳು ಕಾಲುವೊಳೆಯಾದುದೆಂಬ ಸಿಂದೆಯನು ತಳೆಯದೆ. . .ಕುಲ್ಯಗಳಿಳೆಯಗಲದಿ ಚಲಿಸುವುವು (ಮೋಹತ. ೨-೩೮); ಕಾಲುಮ[ವೊ]ಳೆಗೇಕೆ ಹರಿಗೋಲೆನುತ ಸೂಠಿಯೊಳ್ಕೋಲ ಕಱಿದರು (ತುರಂಗ. ೬೩-೩೦). **ಕಾಲುಹೊಳೆ**: ಉಭಯ ಬಲದಗ್ಗಳದ ಹರುಷವಿಷಾದವಾರಿಧಿ ಕಾಲುಹೊಳೆಯಾಯ್ತು (ಕುವ್ಯಾದ್ರೋ. ೧೬-೫೧); ಯಾದವ ಬಲ ಮಹಾಬ್ಧಿಯ ಕಾಲುಹೊಳೆಯಂದದಲಿ ದಾಂಟುವೆನು (ಕೋಗಯ. ೨೩-೨೪); ಸ್ಥಿರ ಸಂಕಲ್ಪದ ಮುಂದೆ ಮಹಾ ಪರ್ವತವೂ ಒಂದು ಪರಮಾಣು; ಮಹಾಸಾಗರ ಒಂದು ಕಾಲುಹೊಳೆ (ತುಂಗಭ. ೬೬). **ಕಾಲ್ಪೊಳೆ**: ಕಳಿದು ಮಳೆಗಾಲವನು ಬಲುನದಿಗಳು ತೆಗೆದು ಕಾಲ್ಪೊಳೆಗಳಾಗಿರೆ (ತಿಮ್ಮಶಾಂ. ೪-೨). [ಕಾಲ್$_1$ + ಪೊಳೆ$_4$]

**ಕಾಲ್ವೊಱೆ** (ನಾ). ಕಾಲಿನ ಭಾರ; ಹೆಜ್ಜೆಯ ಭಾರ: ಮಸಗಿ ಸಂದಣಿಸಿ ಬರ್ಪ ಸೊಕ್ಕಾನೆಗಳ ಕಾಲ್ವೊಱೆಗೆ ನೆಲನೊಂದೆಸೆಗೊಲೆದು (ಕಬ್ಬಿಕಾ. ೨೮೮). [ಕಾಲ್$_1$ + ಪೊಱೆ]

**ಕಾಲ್ಸಂಖ್ಯೆ** (ನಾ). ನಾಲ್ಕನೆಯ ಒಂದು ಭಾಗ; ಕಾಲುಭಾಗದ ಸಂಖ್ಯೆ: ಮಹಾದ್ವೀಪ ಹತ್ತಾಗಲೀ ಮಹಿಯ ಬಿತ್ತರಮೆನಿಕ್ಕದಜನವಭಾಗ ಖಂಡಮುಕ್ಕೊತ್ತಿನಲ್ಲಿಹ ಪಾರ್ಥಿ ಭೂಸಂಖ್ಯೆಯಿಂ ಮೇಲೆ ಕಾಲ್‌ಸಂಖ್ಯೆ ಪೆರ್ಚೆ ತೋರ್ಕುಂ (ಮಂಗರಾ. ೯೬-೧೨). [ಕಾಲ್$_3$ + ಸಂಖ್ಯೆ]

**ಕಾಲ್ಸರ**, ಕಾಲುಸರ (ನಾ). ಕಾಲಲ್ಲಿ ಧರಿಸುವ ಸರ, —ಸರಪಣಿ: ಅಂದಿಗೆ ಕಾಲ್ಸರ ಗಗ್ಗರ (ಸೌಗಂಧಿ. ೧೨೭-೧೭). **ಕಾಲುಸರ**: ಗೆಜ್ಜೆ, ಕಾಲುಸರ, ಕಾಲುಬಳೆ, ಪಾಡಗ . . . ಡಾಬು ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲೆಮಂ. ೩೮). [ಕಾಲ್$_1$ + ಸರ$_6$]

**ಕಾಲ್ಸರಿ** (ನಾ). ಕಾಲುವೆಯಂತೆ ಸುರಿಯುವ ಮಳೆ: ಮೆಲ್ಸರಿ ಸೂಳ್ಸರಿ ಮುಗಿಲೊಳ್ಗಲ್ಸರಿ ತೆಳ್ಸರಿ ಕರಂಪೊಸಲ್ವರಿಯಿಪ ಬಂಬಲ್ಸರಿ ಬಲ್ಸರಿ ಕಾಲ್ಸರಿ ಸಾಲ್ಸರಿ ಸಲೆ ಸುರಿದು ಕಱಿದುವಿರುಳುಂ ಪಗಲುಂ (ರಾಜಶೇ. ೮-೧೧೨); ಜಡಿಮಳೆ ಜಪ್ಪಿತು . . . ಸಾಲ್ಸರಿ ಸೂಳ್ಸರಿ ಕಾಲ್ಸರಿ ಸುರಿದವು ಉಧೋ ಉಧೋ (ಕ್ರೌಂಚಧ್ವ. ೫೨). [ಕಾಲ್$_2$ + ಸರಿ$_6$]

**ಕಾಲ್ಸೊಲವು** (ನಾ). ಕಾಲು ಸೋತುಹೋಗುವಿಕೆ(?): ನೆಱೆಮೂಱು ಬೇಂಟೆಯುಮನಾಡಿತದಾಮಿಷಭಾರದಿಂದೆ ಜೀರ್ಗರೆಯುತುಮಂತೆ ಕಾಲ್ಸೊಲಪಿನಿಂ[ಪಾಠಾಂ. ಯುತೆ ಮಾಂಸವಾಂತೊಲವಿನಿಂ] ಬರುತಿರ್ದನ ದೋರ್ವ ಲುಬ್ಧಕಂ (ಜಗವಿ. ೧೬-೨೧; ಸೂಕ್ತಿಸು. ೩-೧೬೪ ನೋ).
[ಕಾಲ್$_1$ + ಸೊಲವು?]

**ಕಾಲ್ಪೊಣೆ** 'ಕಾಲ್ವೊಣೆ' ನೋ.

**ಕಾಲ್ಪೊಳೆ** 'ಕಾಲ್ವೊಳೆ' ನೋ.

**ಕಾವ್**, ಕಾವು$_5$ (ನಾ). ಒಂದು ಅನುಕರಣ ಶಬ್ದ: ಎಳಗೂಸೆಬ್ಬಿತ್ತು ಕಾವ್ಕಾವೆನೆ (ಲೀಲಾವ. ೯-೨೧). **ಕಾವು$_5$**: ಕೋಗಿಲೆಯ ಮಱಿ . . . ಕಾಗೆಯಂದದಿ ಕಾವು ಕಾವೆಂದಱಚುವುದೆ (ಬಸವು. ೩-೭೯). [?]

**ಕಾವ** (ನಾ). ಕಾಮ; ಮನ್ಮಥ: "ಇಂಗೋಲ್ವಿಲ್ಲ ಕಾವ ಮಿಂಬಟಿ ವಿಗೆಯಂ . . . ಅಲರ್ವಿಲ್ಲನೆಂದು ಕಾಮಂ" (ಕವಿಕಂ. ೨೭); ಪತ್ತಿ ಚಿತ್ತದೊಳ್ ಕೀಲಿಸೆ ಕಾವನಂಬು (ಪಂಪಭಾ. ೪-೪೩); ಆ ಶಶಿವಕ್ತ್ರೆಯರ್ ನೆಗಟ್ದ ಕಾವನ ಮಾಸವಳಂಬೊಲೊಪ್ಪಿದರ್ (ಧರ್ಮಾಮೃ. ೪-೧೪೪); ತಿರ್ದುವಂತೆ ಕಾವಂ ತನ್ನ ಪೂವಿನಂಬಂ (ಪದ್ಮರಾ. ೧-೪೩); ಕಾವನ ಮುಂಗೈಯ ಗಿಳಿಯಂತೆ ನುಡಿದುಱಿ ಕಾವನ ಬಿಲ್ಗೋಲ ಪಿಡಿದು ಕಾವನ ರಥವಾಜಿ ಭುಂಜಿಸದಂತೆ ಕೈಗಾವ ಪಾಮರಿಯರೊಪ್ಪಿದರು (ಮೋಹತ. ೨-೪೩).

**ಕಾವನಂಬು** = ಕಾಮಬಾಣ: ಅವನ ಕಾವನಂಬಿಗೆ ಮೆಯ್ಯೊಡ್ಡಿ ಸೆಳೆದು (ಕಂಸವಿ. ೯-೫೭). **ಕಾವನಗೆಲ್ಲ** = ಕಾಮನ ಗೆಲವು; ಮದನ ವಿಜಯ: ಕಾವನ ಗೆಲ್ಲಂ ಮೆಱೆಯುತಿರ್ಪುದು (ಕಬ್ಬಿಕಾ. ೩೪೯). **ಕಾವನಯ್ಯ**, **ಕಾವನೈಯ** = ಕಾಮನ ತಂದೆ; ವಿಷ್ಣು: "ಅಲರೊಡೆಯಂ . . . ಕಾರೊಡಲಂ, ಕಾವನಯ್ಯಂ – ಈ ೧೨ ವಿಷ್ಣುಗೆ ಪೆಸರ್" (ಕಶಸಾ. ೨-೯); ಕಾವನಯ್ಯ ಬಂದ ಕಾಣಿರೇನೆ (ಪುರಂದ. ೧-೧೪೦-೪); "ತಾವರೆಗಣ್ಣಂ ಕಾವನೈಯನುಂ ಕಾರೊಡಲಂ" (ಕವಿಕಂ. ೨೪). **ಕಾವನರಸಿ** = ಮನ್ಮಥನ ಹೆಂಡತಿ; ರತಿ: ಕಂಡು ಬಲ್ಲೆವು ಕಾವನರಸಿಗೆ ಸರಿಬಪ್ಪ ಪುಂಡರೀಕಾಕ್ಷಿಯರುಗಳ (ಕಂಸವಿ. ೧೦-೧೫). [< ಸಂ. ಕಾಮ]

**ಕಾವಂಚಿ**, ಕಾಂಚಿ$_1$, ಕಾಚಿ, ಕಾಮುಂಚ, ಕಾಮುಂಚಿ, ಕಾವುಂಜಿ (ನಾ). ೧. ಒಂದು ಬಗೆಯ ಹುಲ್ಲು; ಕಾಚಿಹುಲ್ಲು: (ಕ). **ಕಾಂಚಿ$_1$**: ೧. (ಕ). **ಕಾಚಿ**: ೧. 'ಕಾಚಿಹುಲ್ಲು' ಪರಾ. ೨. ಒಂದು ಬಗೆಯ ಬದನೆ; ಕೆಂಪುಗುಳ್ಳ; ಹಬ್ಬುಗುಳ್ಳ: ಮನೆ ಹಿತ್ತಲು ಕಾಚಿ ಹಲಸು ಮೆಣಸು ಮಾವು ಹುಲ್ಲು (ಎಕ. VIII, ತೀರ್ಥಹ. ೧೭೬-೩೨; 1415). **ಕಾಮುಂಚ**: (ಕ). **ಕಾಮುಂಚಿ**: (ಕ). **ಕಾವುಂಜಿ**: "ಭೂತಿಕ, ಭೂಸ್ತೃಣ" (ನಾಚಿರಾ. ಕ).
[ದೇ. ‖ ತಮಿ. ಕಾವಟ್ಟ; ಮಲ. ಕಾವಟ್ಟ; ತೆಲು. ಕಾವಂಚಿ]

**ಕಾವಂದ** 'ಖಾವಂದ' ನೋ.

**ಕಾವಗಲಹ** (ನಾ). ಪ್ರೇಮಕಲಹ; ರತಿಕ್ರೀಡೆ; ಸುರತ: ಭಾವಿಸೆ ಪಯೋಧರಮನೌಂಕಿದವರುಂಟೆ ಯೀ ಕಾವಗಲಹದ ಭಟರ ಭಾವವಿದು ಚೋದ್ಯಂ (ಚಿಬಪು. ೧೦-೬೮). [ಕಾವ + ಕಲಹ]

**ಕಾವಗವುಂಡ**, ಕಾವಗೌಡ (ನಾ). ಒಬ್ಬಾತನ ಹೆಸರು: ಕೂರ್ಪ್ಪ ಜನಕ್ಕೆಱಗಲಿ ಭಂಡಿಯೆನಿಪ್ಪಂ ಕಱಿಮುಱಿಯಿಲ್ಲದೊಳ್ಗಂಡ ಕಾವಗವುಂಡಂ (ಕಇ. I, ೨೪-೧೬; 1148). **ಕಾವಗೌಡ**: ಭುವನಂ ಬಣ್ನಿಪ ಕಾವಗೌಡ ವಿಭುವಿಂ[ದಂ] (ಕಇ. I, ೨೪-೧೬; 1148).
[ಕಾವ + ಗವುಂಡ (< ಗಾಮುಂಡ)]

**ಕಾವಗೌಡ** 'ಕಾವಗವುಂಡ' ನೋ.

**ಕಾವಚಿಕ** (ನಾ). ೧. ಕವಚವನ್ನು ಧರಿಸಿದ ಯೋಧ: ಮಾವಟಿಗ ರಂಬು ಚಾಪವ ಪಿಡಿದ ದೈತ್ಯರುಂ ಕಾವಚಿಕರಸಿಚಕ್ರ ತೋಮರ ಗದಾ ಯುಧವ ಪಿಡಿದ ಸಾಸಿರ ರಕ್ಕಸರ್ (ಧರಭ. ೬-೬೩). ೨. ಕವಚ ಧರಿಸಿದ ಯೋಧರ ಸಮೂಹ: "ಕಾವಚಿಕಂ ಕವಚಿಗಣಂ" (ವಸ್ತುಕೋ. ೧೦೩-೩೨). [ಸಂ.]

**ಕಾವಜಾತ್ರೆ** (ನಾ). ಕಾಮನ ಜಾತ್ರೆ; ಕಾಮೋತ್ಸವ: ಕೂಡ ಮೂರ್ಛೆಗೆ ಸಂದ ಸಮಸುಖದ ನೆರವಿಯಿದು ಕಾವಜಾತ್ರೆಗೆ ಬಂದು ಮೆಯ್ಮಿಕ್ಕಿ ಸುರತಸಿದ್ಧಾಂಜನವ ಬಯಸಿ ಭಜನೆಗೆ ಬೀಳ್ವರೋಯೆನಲ್ ಕಣ್ಗೆಸೆದರು (ಚಿಬಪು. ೧೦-೬೦). [ಕಾವ + ಜಾತ್ರೆ]

**ಕಾವಟೆ** (ನಾ). ಒಂದು ಬಗೆಯ ಸಸ್ಯ: (ವೈಶಿಗಿ. ೫೦-೧೦೦೮). [?]

**ಕಾವಟಿ** (ನಾ). (?): ಚಟುಳಬಲ ಮತ್ತೊಡನೆ ಗಗನಕೆ ಪುಟನೆಗೆದು ಪೌಲಸ್ತ್ಯಜನ ಕಾವಟಿ [ಪಾಠಾಂ. ಕೇವಟ, ಕೆವತಟಿ, ಕೆಪಸಟಿ, ಕವಚಿಟಿ] ಯನಪ್ಪಳಿಸಿದನು (ತೊರರಾ. ೬-೨೨-೧೯). [?]

**ಕಾವಡ** (ನಾ). ಬಣ್ಣದ ಅಂಚು, —ದಡಿ: (ಎಸಮೈ. I, ೩೦). [?]

**ಕಾವಡಿ**, ಕಾಗಡಿ (ನಾ). ೧. ಎರಡು ತುದಿಗಳಲ್ಲೂ ಭಾರ ಎತ್ತುವುದಕ್ಕೆ ಅನುಕೂಲವಾದ ಉಗ್ಗ, ಕಲ್ಲಿಗಳನ್ನು ಸೇರಿಸಿರುವ, ಹೆಗಲ ಮೇಲೆ ಹೊತ್ತು ತರುವ ಬಿದಿರಿನ ಗಣೆ, —ಕೋಲು; ಅಡ್ಡೆ: ಕಾವಡಿಯ ಕಂಬಿಯೊಳು ಘನಪಾತ್ರೆಗಳನಿರಿಸಿ (ಹಿಹರ. ೧೫೪-೧೧); ಧೂಪದ ಕಾವಡಿಯಂ ಪೊತ್ತಿರದೆ ಚಿಕ್ಕರಂ ಬರೆ (ಉದ್ಭಟ. ೧೧-೧೦೩); ಕಾವಡಿಯ ಪೊತ್ತರ್ಗೆ ಸನಯದಿಂ ಮಾರ್ಗವಂ ಬಿಡಿಯೆಂಬ ವರ್ಕೆಲರ್ (ಆರಾಜ. ೩-೮); ಕಡು ಮುದುಕ ತಾಯ್ತಂದೆಗಳ ಕಾವಡಿಯೊಳಿಟ್ಟಾಂ ಪೊತ್ತು ತಿರುಗುತಲಿ (ಅನಂರಾ. ೨-೩-೧೦); ಕಿರಿಚುತಿದೆ ಕಳ್ಳ ಕಾವಡಿ ಕೇಳು ಬಳಿಯೆ (ಗಿಳಿವಿಂ. ೧೨೪-೫೬); ಗವಳಿಗರು ಹಾಲುಮೊಸರಿನ ಕಾವಡಿಗಳನ್ನು ಹೊತ್ತುಕೊಂಡು (ಮಂಜುಳ. ೭). ೨. "ಅಡ್ಡೆಯ ಬುಟ್ಟಿ" (ಪ್ರಭಣ್ಣ): ಬಲ್ಲೆಣಸುಗಳನು ಕಾವಡಿಯೊಳಿಟ್ಟೈತರ್ಪ (ರೇವಣ. ೪-೧೧). ೩. ತೂಗುಯ್ಯಾಲೆ. **ಕಾಗಡಿ**: ೧. ಕಾಗಡಿಯ ಪೊತ್ತು ಯಾತ್ರೆಯ ತಿರುಗುವವದೇಕೆ (ತಿರುಶ. ೭-೩೧). ೩. ಹಜಾರದ ಕಾಗಡಿಯ ಮೇಲೆ ಕುಳಿತಿದ್ದರು (ನಾಲ್ಕುಮ. ೧೭).

[ದೇ. ‖ ತಮಿ. ಮಲ. ತುಳು. ತೆಲು. ಕಾವಡಿ. / ಪ್ರಾ. ಕಾವಡ]

**ಕಾವಡಿಗಾಣಿ** (ನಾ). ಕಾವಡಿ ಹೊರುವವನು; ಕಂಬಿಕಾರ: ಸುರಗಿಗಟ್ಟುವರಂತೆ ಅಮಳ್ವಡಿಗೀಜುವರಂತೆ ಕಾವಡಿಗಾಣನಂತೆ ಪಲ್ಲಂ ಸುಲಿವರಂತೆ ಮುನ್ನಿನ ದರ್ಶನಮುಂ ನಿಃಶಂಕೆಯುಮೆಂಬೆರಡುಮಂ ಲೇಸುಮಾಡುವುದು (ಧರ್ಮಾಮೃ. ೨-೪).

[ಕಾವಡಿ$_1$ + -ಗಾಣಿ (< -ಕಾಣಿ)]

**ಕಾವಡಿತೆರಿಗೆ** (ನಾ). ಕಾವಡಿಯ ಮೇಲಿನ ತೆರಿಗೆ: ಇವು ಪೂರ್ವ ಕಾಲದ ತೆರಿಗೆಗಳು :– ಮನೆತೆರಿಗೆ . . . ಕಾವಡಿತೆರಿಗೆ, ಮಾರಿಕೆ, ಉಪ್ಪಿನ ಮಾಳ, ಉಬ್ಬೆಕಾಣಿಕೆ (ನಮ್ಮನು. ೨೪೩).

[ಕಾವಡಿ$_1$ + ತೆರಿಗೆ (< ತೆಱಿಗೆ)]

**ಕಾವಣ$_1$** (ನಾ). ೧. ಹಂದರ; ಚಪ್ಪರ: "ಕಾವಣಮಂತದು ಕಾಯ ಮಾನಮುಂಬುದೆನಿಕ್ಕುಂ" (ವಸ್ತುಕೋ. ೪೬-೯); "ಕಾವಣಮೆಂದುಂ ಪಂದರೆಂದುಂ ಚಪ್ಪರಂ" (ಕಶಸಾ. ೨೦-೪೦೬); ನನೆಯ ಪಂದರುಮಂ ತಳಿರ ಕಾವಣಂಗಳುಮಂ (ಪಂಪಭಾ. ೫-೪೭ ವ); ಸಂಪಗೆಯ ಜೊಂಪದ ಚಂಪೆಯದೊಳಂ ಕಂಪನಪ್ಪಿರವಂತಿಯ ಕಾವಣಂಗಳೊಳಂ (ಕಬ್ಬಿಕಾ. ೨೩೮); ಕರುಳ ಕಾವಣ [ಪಾಠಾಂ. ಕಾಳಿಜ] ಮಜ್ಜೆಮಾಂಸದ ಹೊರಳಿಯಲಿ ಹೊದೆಸಿದುದು ನೆಲ (ತೊರರಾ. ೬-೧೩-೩೮). ೨. ತೋಪು: ಮಾವುಗಳ ಕಾವಣದೊಳ್ ನೆಲೆವೀಡುವಿಟ್ಟು (ಪುಣ್ಯಾಸ್ರ. ೫-೨೩). ೩. (ಆಲಂ) ಹೆಣಿಗೆ: ರಣದೊಳಂಜಿಸಿ ಸೆರೆನರದ ಕಾವಣದೊಳಗೆ ಕೈಯೂಜಿ ಮಿಗೆ ಹಳವೆಣನ ಹೊಲಸಿಗೆ ಹೇಸಿ ಹರಿದು (ಕುವ್ಯಾಗ. ೩-೧೨); ಉಸುರ ಬಿಡೆ ಹೊಜಬೀಳ್ವನೊಳದೆಗೆದುಸುರಿನಲಿ ಮುಳುಗುವನು ಮೂಗಿನ ಕಸುಮಳದ ಕಾವಣ[ಪಾಠಾಂ. ಳ]ದ ಕಲಿತ ಶ್ಲೇಷ್ಮ ಶರಧಿಯಲಿ (ತೊರರಾ. ೫-೨-೪೪). [< ಸಂ. ಕಾಯಮಾನ]

**ಕಾವಣ$_2$** 'ಕಾವಳ' ನೋ.

**ಕಾವಣ$_3$** (ನಾ). (?): ತಮ್ಮ ಕಾವಣ ಆಧಾಪನವಾಗಿ (ಇಎ. ೧೯೫೬, ಹಾನಗಲ್. ೨೪೯-೧೪; ?). [?]

**ಕಾವಣ$_4$** 'ಕಾವಣ್ಣ' ನೋ.

**ಕಾವಣ್ಣ**, ಕಾವಣ$_4$ (ನಾ). ಒಬ್ಬಾತನ ಹೆಸರು: ಮೂಕಿಯರ ಕಾವಣ್ಣಂಗೆ . . . ಕೊಟ್ಟ ಮತ್ತರ್ ಏಳು (ಇಅ. XVIII, ೪೦-೩೮; 999); ಪೊಂನಂಣನವರ ಮಕ್ಕಳು ಕಾವಣ್ಣನವರು (ಎಕ. XII, ಮದ್ದಗಿ. ೨೮-೯; 1319). **ಕಾವಣ$_4$**: ಕಾವಣದಂಡೇಶ್ವರನುಂ ಪ್ರಭುತೇಜಿರಾಜ ದಂಡಾಧಿಪನುಂ (ಕಇಅ. ೭೪-೧೨-೧೯; 1170); ಸಂದಗಸ್ತ್ಯಕುಲಜಂ ದಂಡಾಧಿಪಂ ಕಾವಣಂ (ಎಕ. VII, ಹೊನ್ನಾಳಿ. ೫೦-೨೭; ?); ದಾಸಿಸೆಟ್ಟಿಯ ಸುತನು ಕಾವಣ ಸೆಟ್ಟಿ (ಕಕುಲ. ೫-೩೧; ?). [ಕಾವ + ಅಣ್ಣ$_1$]

**ಕಾವದೇವ** (ನಾ). ೧. ಕಾಮದೇವ; ಮನ್ಮಥ: ಇಂತು ಕಾವ ದೇವನುಂ ಬಸಂತನುಂ ರೂಢಿವೆತ್ತು (ಕಬ್ಬಿಕಾ. ೨೪೫). ೨. ಕದಂಬ ಅರಸರಲ್ಲಿ ಒಬ್ಬಾತನ ಹೆಸರು: ಕಾದಂಬಚಕ್ರವರ್ತ್ತಿ ಚಂದಾವುರದ ತೈಲಪದೇವನ ಮಗ ಕಾವದೇವನ ಪೆಂಪೆಂತೆಂದೊಡೆ (ಎಕ. VIII, ಸಾಗರ. ೩೩-೨; 1000). [ಕಾವ$_3$ + ದೇವ]

**ಕಾವಧ್ವಂಸಿ** (ನಾ). ಕಾಮನನ್ನು ನಾಶಮಾಡಿದವನು; ಕಾಮಾಂತಕ: ಜನರುಗಳ ಕಾಮ ಕಾವಧ್ವಂಸಿ ಕರುಣಸಾಗರ ಮೂರ್ತಿ (ನವಮೋ. ೨೨-೬೫).'ಕಾಮಧ್ವಂಸಿ' ಪರಾ. [ಸಂ. ಕಾಮಧ್ವಂಸಿನ್]

**ಕಾವರ$_1$** (ನಾ). ಸೊಕ್ಕು; ಮದ; ಅಹಂಕಾರ: ನಾವುಗಳು ಈ ನರನ ಭಾವವನು ತಿಳಿಯದಲೆ ಕಾವರದಿ ನಿಂದಿಸಿದೊ (ಯಜೋರ. ೪೬); ಬಿಡದೊಂದು ಯೋಜನಕ್ಕಾ ವಿರೋಧಿಯ ರಥವ ನೀವು ನೋಡುವ ತೆರದಿಂದೆಚ್ಚು ರಿಪುವಿನ ಕಾವರ ಬಿಡಿಸಿದೆನೊ (ಕರ್ಣಾಕಾ. ೩೧). [?. / ತೆಲು. ಕಾವರ]

**ಕಾವರ$_2$**, ಕಾವುರ, ಕಾಹುರ$_1$ (ನಾ). ೧. ಕ್ರೋಧ; ಕೋಪ. ೨. ಉದ್ವೇಗ; ರಭಸ; ಆವೇಶ: ಕಾಮಲಂಪಟದಿಂದ ಫಲವಿಲ್ಲಗಳಿಗೆಯೂ ಕಾವರಕೆ ಕೆಟ್ಟು ಪೋದವರು ಪಲಕೆಲರುಂಟು (ಪ್ರೌಢರಾ. ೬-೫೭). **ಕಾವುರ**: ೧. "ಕಾವುರಮೆನೆ ಕೋಪಮೆಂದು ತಿಳಿಗೆ ವಿದಗ್ಧರ್" (ಭಾರನಿ. ೩೨). **ಕಾಹುರ$_1$**: ೧. ಸರಳಹರಹಿನ ಹೂಟವನು ಕಾಹುರದ ಕಡುಹಿನಲೊದೆದು ಬೊಬ್ಬಿಱಿದ್ದುರವಣಿಸಿದನು ಪಾರ್ಥಸೀತನ ಧನುವ ಖಂಡಿಸಿದ (ಕುವ್ಯಾಕ. ೧೪-೩೦); ತರಣಿಧಿಯ ಸಲಿಲವನು ಮೊಗೆ ದುಬ್ಬರಿಸುವೌರ್ವಾನಳನವೊಲು ಕಾಹುರದೊಳಂತಃಪುರದೊಳಿದ್ದುದು ಬಹಳ ಶೋಕಾಗ್ನಿ (ತೊರರಾ. ೨-೩-೧); ಕಮಲಜನ ಕಾಹುರವನೀಕ್ಷಿಸಿ ಕಮಲನಾಭನು ನಗುತಲೆಂದನು (ಅಂಬಿಕಾ. ೩೭-೨೪); ಪುಷ್ಕಲಂ ಕಾಹುರದಿ ನೆಂಗುಂ (ರಾಘವಾಶ್ವ. ೯೨-೧೮). ೩. ಉದ್ವೇಗವುಳ್ಳವನು; ದುಡುಕುವವನು: ನೀವತಿಮೋಹದಲಿ ಬಿಡೆ ಬೀಸಿ ಬಿದ್ದರೆ ಕಾಹುರರು ಕೌರವರ ಕೆಡಿಸುವರೆಂದನಾ ಕರ್ಣ (ಕುವ್ಯಾಅ. ೧೭-೧೭); ಎಲೆಲೆ ಕಣೆಗಳಿವೆಲ್ಲಿಯವೊ ಕಗ್ಗೊಲೆಯ ಕಾಹುರರಾರೊ (ತೊರರಾ. ೧-೧೧-೧೧); ಭೋಗಿಸುವ ಸನ್ಮೋಹಿಗಳಿಗಿದು ಸೇವ್ಯ ಮಿಕ್ಕಿನ ಕಾಹುರರು ತಾವೆತ್ತ ಬಲ್ಲರು ಶಾಸ್ತ್ರ ನಿರ್ಣಯವ (ಕಕ್ಕೋಕ. ೩-೧೬). ೪. ಸಂಭ್ರಮ; ಕಾತರ: ಕೃಷ್ಣನಲಿ ಹರಹಿಕೊಳುತಿದೆ ಜನನಿಕರ ಕಾಹುರದ ನೆರವಿಯದಂತಿರಲಿ ಮುನಿವರರು ಮುಗ್ಧರೆ ನೀವಿದಕೆ ಸಮ್ಮತಿಸಲೇಕೆ (ನಿಭಾಗ. ೧೦-೮೦-೭). [< ಕವ್ವರ?]

**ಕಾವರವೇರು** (ಕ್ರಿ). ಸಂಭ್ರಮಿಸು; ಸಡಗರಿಸು: ಮೈಪುಳಕವೇರಿ, ಕಣ್ಣು ಕಾವರವೇರಿ ಹರ್ಷಾತಿರೇಕದಿಂದಿದ್ದ ವೇಳೆಯಲ್ಲಿ . . . ಹೋಗಿ ಬಿಟ್ಟಿತು (ಬೆಳಗು. ೨೬). [ಕಾವರ್$_3$ + ಏರು$_1$ (< ಏಱು$_1$)]

**ಕಾವರಾಯ** (ನಾ). ಕಾಮರಾಜ; ಮನ್ಮಥ: ಕಾವರಾಯನಳಿಕುಳರವದ ಭೇರಿಯಿಂ ಪೊಯ್ಸುತ್ತೆ . . . ಪೊಱಮಟ್ಟನು (ಚೆಬಪು. ೩೫-೭); ಕಾವರಾಯನ ಪಟ್ಟದಾನೆಯೆಂದೆನಲಾ ಭಾವಕಿ . . . ಒಪ್ಪಿದಳು (ಕಂಸವಿ ೯-೩೭). [ಕಾವ್$_2$ + ರಾಯ]

**ಕಾವರಿಸು** (ಕ್ರಿ). ೧. ಕಾತರಿಸು; ಸಂಭ್ರಮಗೊಳ್ಳು: ಎತ್ತಣ ಭೀತಿಯೆಂಬಯೆಡೆಗೊಳ್ಳದೆ ಕಾವರಿಸುತ್ತಮಿರ್ಪ ಮುಚ್ಚಿತ್ತಪೊಳೀತನಾತ್ಮಪತಿಯೆಂಬವೊಲಿರ್ದಪುದು (ನಳಚಂ. ೨೭೪). ೨. ರಭಸವೇರು; ಆವೇಶಹೊಂದು: ಮಾಯಾವರಾಹನ ಸೃಜಿಸಿ . . . ವಲ್ಮೀಕವನು ಮುಱಿಗೊಂಡು ಕಾವರಿಸಿ ಘುಡುಘುಡಿಸಿ (ಅನಂರಾ. ೩-೩-೧೮); ಅಸ್ತ್ರ ಮಾವರಿಸಿ ಕಾವರಿಸಿ ಘುಡುಘುಡಿಸುತ (ಜಿನಮು. ೩೩-೨೫).
[ಕಾವರ್$_2$ + -ಇಸು$_3$]

**ಕಾವಲ್$_1$**, ಕಾವಲು (ನಾ). ೧. ಕಾಪು; ರಕ್ಷಣೆ; ಕಾಪಾಡುವಿಕೆ; ಕಾಯುವಿಕೆ:- ಕುಪ್ಪೆ ಒಡೆಯ ಕೊಸಿಗ ಕೊತ್ತದಿ ಕಾವಲ ಎನಾದಿಪೆರುರಾದರು ಸಮುಣರು . . . ಸಾಕ್ಷಿ (ಇಆ. XIV, ೨೩೨-೫೭; 9ನೆಯ ಶತ); ಕೋಟಿ ಕೊತ್ತಳದ ಕಾವಲ್ಗಳಂ ಬಲಿದರ್ (ಜೈಮಿಭಾ. ೯-೧೭). ೨. ಕಾಯುವವನು; ಕಾಪಿನ ಆಳು; ಕಾವಲುಗಾರ: ಕಾವಲಾಅಯದಿಕಳುಳ್ (ಎಕ. IX, ಹೊಸಕೋ. ೮೨-೩; 750); ಪಾರ್ವರಂ ಕಂಡೀ ಕಾವಲ್ ಕೂಸಂ ಕೊಂದುದಾಗಲೆವೇಟ್ಕುಮೆಂದು (ಪಂಚತಂ. ೧೮೯-೮); ಕಾವಲರಂ ಬಯ್ದು ಪೋಪುದುಂ (ರಾಮಾಶ್ವ. ೧೨-೩೦); ತುಱುಗಳನ್ ಕಾವಲರನ್ ಇಱಿದೊನ್ ಇವನ್ ಎಂದು (ಅಶ್ವತ್ಥಾ. ೧೧-೧೨). ೩. ದನಕರುಗಳನ್ನು ಮೇಯಿಸಲು ಮೀಸಲಾಗಿ ಇರುವ ಸ್ಥಳ: (ರೈಸ್‌ಗೆ. ೫೫೩). **ಕಾವಲು**: ೧. ನಿನ್ನ ಮಹಾಮನೆಯ ಕಾವಲ ಬಂಟ ನಾನೆಂಬುದ ನಿಮ್ಮ ಪ್ರಮುಥರೆಲ್ಲರು ಬಲ್ಲರು (ಅವಚಂ. ೨೩೧-೧೦೪೫); ಪುರದ ಬಾಗಿಲಿಗರಮನೆಗೆ ತತ್ಪುರದ ಕೇರಿಗಳೊಳಗೆ ಕಾವಲನಿರಿಸಿ ಹೊಕ್ಕರು (ತೊರರಾ. ೨-೫-೩೧); ಜಗವ ಜಯಿಸುವತಿ ಬಲಾಢ್ಯರ ಕಾವಲು (ವೆಂಕಾರಾ. ೫-೨-೮); ದೊಡ್ಡವರ ಕಾವಲಿದ್ದುದರಿಂದ ಮಠಕ್ಕೆ ಹೋಗಲೇ ಬೇಕಾಯಿತು (ಕಳಹು. ೭೭); ಕುರುಡ ಹೆಂಡತಿಗೆ ದೈವದ ಕಾವಲು (ಗಾದೆ). ೨. ಎಲ್ಲರು ಕಾವಲಾದರು ಕಾಮನ ಕಂಮ್ಮಟಕ್ಕೆ (ನಗೆಮಾ. ೧೫). ೩. ದನಗಳು ಕಾವಲಿಗೆ ಮೇಯಲು ಹೋಗಿವೆ (ರೂಢಿ). ೪. ಕಾವಲಿಟ್ಟಸ್ಥಳ; ಸೆರೆಮನೆ: ವಸುದೇವನೆಂಬವ ಪಿತನಂತೆ ಕಾವಲಲ್ಲಿ ಹುಟ್ಟಿದೆನಂತೆ ಮಾವಗಂಜಿಲ್ಲಿ ತಂದರಂತೆ (ಪುರಂದ. ೨-೨೦-೩).

ಕಾವಲಂದಿರು = ಕಾವಲುಗಾರರು: ಬಾಗಿಲ ಕಾವಲಂದಿರಮ್ಮಿಳೆ ಗೊರಸಿ ಸಾರಿದಂ ಸಜ್ಜೆವನೆಯ (ತುರಂಗ. ೭೬-೪೮). **ಕಾವಲಮನೆ** = ಸೆರೆಮನೆ; ಕಾರಾಗೃಹ: ರಾಣುವೆಯರಿತ್ತ ಕಾವಲಮನೆಗೆ ಯೇಸುವಂ ಕೊಂಡೊಯ್ದು (ಗೋಲ್ಗೊಥಾ. ೯-೨೪೧). ಕಾವಲಿನವ=ಕಾವಲುಗಾರ: ನನ್ನ ಕಾವಲಿನವರೂ ನನ್ನ ಮರಣವನ್ನು ತಪ್ಪಿಸಲಾರರು (ಮಣಿಸ. ೪೪).
[ಕಾ$_1$ + -ಅಲ್$_2$. / ತಮಿ. ಮಲ. ಕಾವಲ್; ತೆಲು. ಕಾವಲಿ]

**ಕಾವಲ್$_2$** (ನಾ). ಒಂದು ಬಗೆಯ ಸಸ್ಯ: ಗೌಜಲ್‌ಮರ . . . ಕಾವಲ್ . . . ಬೆಟ್ಟದ ಪರಂಗಿ (ಮೈಔಗಿ. ೧೮-೩೯). [?]

**ಕಾವಲಿ$_1$**, ಕಾವಲೈ$_3$ (ನಾ). ೧. (ಉಪ್ಪಿನ) ಮಾಳ. ೨. ಮಾಳದ ಮೇಲಿನ ತೆರಿಗೆ: ಅನುಕುಗಾಣ ಕಾವಲಿ ಪೊಲಗಾಜ ಹೊಜಗಾಜವೊ ಸುಂಕ ಕಾಣಿಕೆ ಕಡ್ಡಾಯ ಬಿಟ್ಟೆ (ಎಕ. III, ಮಂಡ್ಯ. ೨೮-೧೩; 1406); ಕುರಿತೆರಿಗೆ ಮಾದಾರಿಕೆ ಉಪಿನ ಕಾವಲಿ ಸುಂಕಯೆಲೆ ತಱಗು . . . ಸರ್ವಮಾನ್ಯವಾಗಿ ಬಿಟ್ಟುದು (ಎಕ. XIV, ಗುಂಡ್ಲುಪೇ ೧೨೯-೮೪; 1521). **ಕಾವಲೈ**: ೨. ಕಬಿನಾಲೆ ಕಾಲುಪಚ್ಚೆ ಉಪ್ಪಿನ ಕಾವಲೆ ಮೊದಲಾದ ಸಮಸ್ತ ಸುಂಕ ಸ್ವಾಮ್ಯ ಸುವರ್ಣಾದಾಯ ಸಹ ಸರ್ವಮಾನ್ಯ (ಎಕ. III, ಮಳವ. ೧೨೧-೧೬೦; 1424). [?]

**ಕಾವಲಿ$_2$**, ಕಾವಲೆ$_1$ (ನಾ). ಬಾಣಲಿ; ಹುರಿಯುವ ಹೆಂಚು: "ಕಂದುಃ, ಸ್ವೇದನಿಕಾ – ೨ ಕಾವಲಿ" (ಹಲಾಯು. ೫೨-೧೫೮); "ಕಂದು ಸ್ವೇದನಿಕೆಯದೆಂದರೆ ಕಾವಲಿಯೆನಿಕ್ಕುಂ" (ಮಂಗರಾ. ೬೩-೨೪); ಕಾಯ್ದುಂ ಕಾವಲಿಗಳೊಳ್ ಪೆರ್ಮರನಾಗೆ ತಾಳಿಸುವರುಂ (ಆದಿಪು. ೫-೮೫); ಮೇಳಿಸಿ ಜೀವಾವಳಿಗಳ ತಾಳಿಸುವರನಚ್ಚಗೆಂಡದೊಳ್ ಕಾವಲಿಯೊಳ್ (ಸುಕುಮಾ. ೧೧-೪೬); ಕೋಡಗದ ಮೊಗಸಿರಿಗೆ ಕಾವಲಿಯೋಡು ಕನ್ನಡಿಯಾಯ್ತು (ಕುವ್ಯಾಕ. ೯-೧೫); ಕಾವಲಿಯೊಳು ಹಾಕಿ ಹುರಿಸುವ ಯಮುನು (ಪುರಂದ. ೧-೧೩೪-೧೧); ಎಲ್ಲರ ಮನೆಯ ದೋಸೆ ತೂತು, ನಮ್ಮನೆಯಲ್ಲಿ ಕಾವಲಿಯೇ ತೂತು (ಗಾದೆ). **ಕಾವಲೆ$_1$**: ತನ್ನಂಗಮಂ ಖಂಡಿಸಿ ತೊಳಗುವಾ ಕಾಯ್ದ ಕಬ್ಬಿನದ ಕಾವಲೆಯಲ್ಲಿ (ಆರಾಚ. ೮-೭೫); ತೆಗೆ ತಿಲವನೌಪಾಸನದ ಕೊಳವಿಗಳ . . . ದೋಸೆಗಳ ಕಾವಲೆ[ಪಾಠಾಂ. ಲಿ]ಗಳನು (ತೊರರಾ. ೫-೮-೬೯).
[← ಪ್ರಾ. ಕಾಹಲ್ಲೀ. / ಸಂ. ಖಲ್ಲಿಕಾ]

**ಕಾವಲಿ$_3$** 'ಕಾಲ್ವಾಯ್' ನೋ.

**ಕಾವಲಿಕ್ಕು** (ಕ್ರಿ). ಕಾವಲಿಡು; ಪಹರೆಯಲ್ಲಿಡು: ಕಾವಲಿಕ್ಕಿಹ ನೆಱಿಯನೆಮ್ಮನು ಈವನದೊಳು (ಸಾಳ್ವಭಾ. ೬-೧೯).
[ಕಾವಲ್$_1$ + ಇಕ್ಕು]

**ಕಾವಲಿಗ** (ನಾ). = ಕಾವಲುಗಾಱ: ಒಳಸಂಚಿನವರಾಗಿರುವ ಶಂಕೆಯಿಂದ . . . ಕಾವಲಿಗರು ಚಿನ್ನರಂಗರನ್ನು ಮೈಸೂರಿಗೆ ದಾಟಿಸಿ ಬಿಟ್ಟಾಗ (ಬೆಟ್ಟಅ. ೫೬-೧೧). [ಕಾವಲ್$_1$ + -ಇಗ]

**ಕಾವಲಿದೆಱೆ** (ನಾ). ಒಂದು ಬಗೆಯ ತೆರಿಗೆ; ಉಪ್ಪಿನ ಮಾಳದ ಮೇಲೆ ಹಾಕುವ ತೆರಿಗೆ: ಉಪಿನ ಕಾವಲಿದೆಱೆ ಪ್ರತೇಕಂ ಪಣ ೫ ಉಪ್ಪು ಕೊಳಗ ೫ (ಸೌಇಇ. IX-i, ೧೪೫-೩೭; 1679); ಮಗ್ಗದೆಱೆ ಕಾವಲಿದೆಱೆ ಪಂಚಕಾರುಕ (ಎಕ. VI, ಕಡೂರು. ೪೯-೪೧; 1291); ಅಲೆದೆಱೆ ಅಡುದೆಱೆ ಮೊಟ್ಟೆ ಸುಂಕ ಕಾವಲಿದೆಱೆ ಅಡಿದೆಱೆ (ಎಕ. III. ಕೃಷ್ಣರಾ. ೮೧-೧೦; 1407). [ಕಾವಲಿ$_1$ + ತೆಱೆ$_3$]

**ಕಾವಲು** 'ಕಾವಲ್$_1$' ನೋ.

**ಕಾವಲುಕಟ್ಟೆ** (ನಾ). ಕಾವಲು ಇರುವ ಸ್ಥಳ; ಸುಂಕದ ಕಟ್ಟೆ; ಉಕ್ಕಡ: ಹಾದಿಯಲ್ಲಿ ಒಂದೇ ಅಲ್ಲ, ಎರಡು ಕಾವಲು ಕಟ್ಟೆ ಅವೆ (ಪ್ರಣಸ. ೭). [ಕಾವಲು (< ಕಾವಲ್$_1$) + ಕಟ್ಟೆ]

**ಕಾವಲುಗಾರ** 'ಕಾವಲುಗಾಱ' ನೋ.

**ಕಾವಲುಗಾಱ**, ಕಾವಲುಗಾರ (ನಾ). ಕಾಪಿನ ಆಳು; ಪಹರೆಯವನು: ದ್ವಾರ ಒಂಭತ್ತದಕೆ ಬಲು ಮೊನೆಗಾಱರಾದಾಳುಗಳ ಕಾವಲುಗಾಱರನು ಮಾಡಿ (ಹರಿಸಾ. ೮೯). **ಕಾವಲುಗಾರ**: ಅಲ್ಲಲ್ಲಿ ಕಾವಲುಗಾರರು ಪಹರೆ ಕೊಡುತ್ತಿದ್ದರು (ಶ್ರೀರಾಯ. ೧೨೯); ಇದ್ದ ಕಾವಲುಗಾರರೂ ನಿದ್ದೆಯಲ್ಲಿ ಮೈಮರೆತಿರುವರು (ವಾರಾಕ್ಯ. ೪೩).
[ಕಾವಲು (< ಕಾವಲ್$_1$) + -ಗಾಱ (< -ಕಾಱ)]

**ಕಾವಲುಗುದುರೆ** (ನಾ). ಕಾವಲು ನಿಂತ ಕುದುರೆ: ಕಾ[ಪಾಠಾಂ ಆ]ವಲುಗು [ಪಾಠಾಂ. ಕು]ದುರೆಗಳೆಯ್ದೊಂದು ಇಪ್ಪತ್ತು ಸಾವಿರ ಮುಸುಕಿಕವಿಯಲು (ಕುರಾಸಾಂ. ೧೯-೧೦೨).
[ಕಾವಲು (< ಕಾವಲ್$_1$) + ಕುದುರೆ]

**ಕಾವಲುದಳ** (ನಾ). ಕಾವಲುಪಡೆ.
[ಕಾವಲು (< ಕಾವಲ್$_1$) + ದಳ$_2$ (= ದಲ)]

**ಕಾವಲುನಾಯಿ** (ನಾ). ಮನೆ ಮೊದಲಾದುವನ್ನು ಕಾಯುವ ನಾಯಿ : ಕನ್ನಡದ ಕಾವಲುನಾಯಿ ನಾನು (ಕಜಸಾ. ೭೮).
[ಕಾವಲು (< ಕಾವಲ್$_1$) + ನಾಯಿ (< ನಾಯ್)]

**ಕಾವಲುಪಡೆ** (ನಾ). "ಕಾವಲಾಗಿರುವ ಸೈನ್ಯ ದಳ" (ಪತ್ರಿನಿ. ೬೨).
[ಕಾವಲು (< ಕಾವಲ್$_1$) + ಪಡೆ$_2$]

**ಕಾವಲೆ$_1$** 'ಕಾವಲಿ$_2$' ನೋ.

**ಕಾವಲೆ$_2$** 'ಕಾಲ್ವಾಯ್' ನೋ.

**ಕಾವಲೆ$_3$** 'ಕಾವಲಿ$_1$' ನೋ.

**ಕಾವಲೆ$_4$** (ನಾ). ಬಯಕೆ; ಆಸೆ (?) : ಮೂವತ್ತಿರ್ಕೋಟಿಯಸಂತಾವ ಗಮನುದಿನದಿನದಿನಡಕಿಕೊಂಡುಂ ಮತ್ತಾ ಕಾವಲೆಯದು ನೆಱೆಯದೆ ದುರ್ಭಾವೆ ಕರಂ ಬೇಡಿಯಟ್ಟಿದಳ್ ಮಱುದೆವಸಂ (ನೇಮಿಪು. ೪-೫೮).
[ದೇ. ‖ ತಮಿ. ಕವಲೈ]

**ಕಾವಲ್ಗುಡು** (ಕ್ರಿ). ರಕ್ಷಣೆಯನ್ನು ನೀಡು; ಪಹರೆಮಾಡು; ಕಾವಲಿರು: ಬಾಗಿಲ್ಗಳನ್ನೆಲ್ಲ ಮುಚ್ಚಿ ಶ್ರೀದ್ವಾರದೆಡೆಯಲ್ಲಿ ಕಾವಲ್ಗುಡುತ್ತಿರುವರು (ಬೆಟ್ಟಅ. ೪೪-೪); ಬಿಚ್ಚುಗತ್ತಿಯ ಕುದುರೆಯವರು ಕಾವಲ್ಗುಡುತ್ತ ನಡೆದರು (ಸವತಿ. ೧೫೭).
[ಕಾವಲ್$_1$ + ಕುಡು$_1$ (< ಕೊಡು)]

**ಕಾವಲ್ಜನ** (ನಾ). = ಕಾವಲುಗಾರ : (೩). [ಕಾವಲ್$_1$ + ಜನ]

**ಕಾವವಗೆಯ** (ನಾ). ಕಾಮನ ವೈರಿ; ಶಿವ: ಕಾವವಗೆಯನ ರೂಪಮಂ ಕಂಡೆಱೆದು ನೋಡಿ . . . ಸಾಷ್ಟಾಂಗದಿಂ ನಮಿಸಿ (ಪ್ರೌಢರಾ. ೯-೪೦).
[ಕಾವ$_2$ + ಪಗೆ + -ಅ$_7$]

**ಕಾವಳ$_1$**, ಕಾವಣ$_2$, ಕಾವುಳ$_1$, ಗಾವಳ (ನಾ). ೧. ಕತ್ತಲೆ; ಮಬ್ಬು; ಅಂಧಕಾರ: ನೀಂ ಸಟ್ಟೆಯ ರೂಪಗೊಂಡು ಪೋಗಿ ಸತ್ಯವತಿಯ ಕೆಲದೊಳ್ ಕಾವಳದೊಳ್ ನುಡಿಯುತ್ತುಮಿರೆಂದು ಅಟ್ಟೆ (ಚಾವುಂಪು. ೯೮-೯); ದಿವಸೋಳ್ಕಸಂಕುಳಂ ತೊಟ್ಟನೆ ಬಿಟ್ಟುವುಣ್ಮಿದುದು ಕಾವಳಕೊಂಡುವು ರಕ್ತವೃಷ್ಟಿಗಳ್ (ಜಗವಿ. ೧೨-೪); ಕಾವಳ ವಂಜಿಸುವುದೇ ಇನನ (ಕುವ್ಯಾವಿ. ಓರಿಇ. ೬-೫೧); ಕಾವಳ ಕದುಬಿತಿನಮಂಡಲವನು (ತೊರರಾ. ೩-೫-೯); ಕಾವಳ ಕವಿಯೆ ದೀಪಕೇಂ ಮುಪ್ಪಹುದೆ (ನಂದಿಮಾ. ೧೦-೫); ಮನಸ್ಸಿನಲ್ಲಿದ್ದ ಕಾವಳ ಕಳೆದು ಬೆಳಕು ತುಂಬಿದ ಹಾಗಾಯಿತು (ಅನಾಥೆ. ೧೭೪). **ಕಾವಣ$_2$** : ೨. ಮಂಜು : ಬೆಳಗಿನ ಜಾವ ಪೂರಾ ಚಳಿ ಆಗ್ತದೆ. ಕಾವಣ ಬಿದ್ದರೂ ಬೀಳಬೈದು (ಮಲೆಮ. ೨೫೫). **ಕಾವುಳ$_1$** : ೧. ಅವಿರಳಮಾಗೆ ಕವಿದ ಕಾವುಳಮಂ ಸೇನಾರಜೋಜಾಳಮೆಂದುಂ (ಶಂರಾಮಾ. ೧೪-೧೨೮ ವ); ಅಸವಸದಿಂದಿನ ನುಳಿದೊಡೆ ದೆಸೆ ಕಾವುಳ ಮಸಗಿ ಮಾನಿನಿಗೆ ಮಧು ಮಱುಕಂ ಸಸಿ ಬಿಸಿ (೧೦ಕ. ೪-೧೪೦); ಕವಿವ ಕಾವುಳಂ ಕಯ್ದುಗಳ ಪೊಸಮುಸೆಯ ಪೊಗರ ಕಾಳಿಮಂಗಳ ಕರ್ಪಿಂದುಂ (ಮಹಾನೀ. ೧೩-೪೪ ವ). **ಗಾವಳ** : ೧. (೩).
[ದೇ?. ‖ ತೆಲು. ಕಾವಿರಿ, ಕಾವುರೆ = ಕಪ್ಪುಹೊಗೆ, ಹೊಗೆಯಂತೆ ಇರುವ ವಸ್ತು. / ಮರಾ. ಕಾಹುರಾ = ಕತ್ತಲೆ]

**ಕಾವಳ$_2$**, ಕಾವುಳ$_2$ (ನಾ). [ಸಂಗೀತ] ಸ್ವರಗಳ ನಾಲ್ಕು ವಿಧಗಳಲ್ಲಿ ಒಂದು. **ಕಾವುಳ$_2$** : ಮತ್ತಮಾ ರಾಗಂಗಳಲ್ಲಿ ಪಾಡುವಲ್ಲಿ ಗ್ರಾಮವರ್ಜ್ಯಂಗಳಂ ತೊಱೆದು ಜನ್ಯಜನಕಂಗಳಂ ಬಳ್ಳಿಗೊಳಿಸಿ ಕಾವುಳ, ಬಬ್ಬೋಳ ನಾರಾಟ, ಮಿಶ್ರವೆಂಬಚತುರ್ವಿಧ ಸ್ವರಂಗಳಿಂದುರುಳಿಸಿ (ವಿವೇಕ. ೨೩೭). [?]

**ಕಾವಳಗವಿಸು** (ಕ್ರಿ). ಕತ್ತಲೆಗವಿಸು : ಶಶಿಯ ಮಂಡಲಕೆ ಕಾವಳಗವಿಸಿ ಮಾಯದಿಂ (ನವಮೋ. ೧೧-೨೮). [ಕಾವಳ$_1$ + ಕವಿಸು]

**ಕಾವಳಗೈಸು** (ಕ್ರಿ). ಕತ್ತಲೆಯನ್ನುಂಟುಮಾಡು : ದಿಗ್ಬಂಧನಂಗಳಗೈದು ಶಶಿಯ ಮಂಡಲಕೆ ಕಾವಳಗೈಸಿ (ನವಮೋ. ೨೭-೧೩).
[ಕಾವಳ$_1$ + ಕೈಸು (< ಕೆಯ್ಸು)]

**ಕಾವಳಗೊಳ್** (ಕ್ರಿ). ಕತ್ತಲೆಯನ್ನು ಹೊಗು; ಮರೆಮಾಡಿಕೊ: ಗಂಡರ ವಂಚಿಸಿ ಮೆಲ್ಲನೆ ಕಾವಳಗೊಂಡಾರುಮಱಿಯದೆ ತೆಱದಿ . . . ಪಾದರಕೆ ನಡೆವ ಮರುಳ್ವೆಂಡಿರ ತಂಡಮೊಪ್ಪಿದುದು (ನೇಮಿಸಂ. ೮-೯೭).
[ಕಾವಳ$_1$ + ಕೊಳ್$_1$]

**ಕಾವಳಸ್ಥಾಣ** (ನಾ). ಒಂದು ಸ್ಥಳದ ಹೆಸರು: ಪೂರುಬ್ಬಸ್ಥಾನ್ಸಿಶಿ ಕೃಷ್ಣಮೃತ್ತಿಕಾ ಹಾಕೊಬ್ಬ್ರ ಚಿಞ್ಚವೃಕ್ಷ ತಟಾಕದ ಹಾಕೊಬ್ಬ್ರ ಕಾವಳಸ್ಥಾಣ (ಇಅ. VII, ೧೭೩-೨; 481 ? ಕೈಶಾ). [?]

**ಕಾವಳಿ** (ನಾ). ಒಂದು ವಂಶದ ಹೆಸರು : ಕಾವಳಿಯರುಣುಗಯ್ಯ ತನ್ನ ತಮ್ಮ ನೊಳಮ್ಮರಸನ ಮಲ್ಲಪನ್ನಣ ಕಾದು ಮಣ್ಣಣ ಕೊನ್ದು (ಎಕ. IX, ಹೊಸಕೋ. ೪೮-೧; 980). [?]

**ಕಾವಳಿಸು** (ಕ್ರಿ). ೧. ಕತ್ತಲಿಸು; ಕತ್ತಲೆ ಮುಸುಕು : ಸಿಡಿಲೆಱಗಿದಂತೆ ನಂಜೇಱಿದಂತೆ ಸಂಜೆ ಕಾವಳಿಸಿದಂತೆ ರಾಯಂ ಮುಂದುಗೆಟ್ಟು (ರಾಮಾಶ್ವ. ೧೨೯-೧೧); ಕೌಶಿಕನ ಕಾವಳಿಸಿದ ಕಣ್ಗಳಿಂದ ಹರಳ್ದುವ ಅಂಜನಾದ್ರಿಯನ್ನು ಕಿತ್ತೆತ್ತಿ ಬೀಸಾಡಿಬಿಡದಿರೆನು (ಮಂತ್ರಶ. ೨೧-೭). ೨. (ಆಲಂ) ಮುತ್ತು; ಆಕ್ರಮಿಸು: ಹಾವಳಿಸಿಧೂವಳಿಸಿ ಕಾವಳಿಸಿದಹಿತರೊಳೆ ಗಾವರಿಸಿಯರಚುತಿಹ ಭೀಮನತಿ ಭೀತಿಗಂ ಗೋವರಿದು (ಜಿನವು. ೨೦-೩೦). [ಕಾವಳ$_1$ + -ಇಸು$_3$]

**ಕಾವಳೆ** (ನಾ). ಕಾವಲು ಕಾಪಿನ ಗಡಿ: ಯಿಂತೀ ಚತುಸೀಮೆಗಳಿಗೆ ವಾಮನ ಮುದ್ರೆಯ ಕಲ್ಲುಗಳೆ ಕಾವಳೆಯ ಶಾಸನವಾಗಿ ನಟಿಸಿ ಕೊಟ್ಟೆವಾಗಿ (ಎಕ. VIII, ತೀರ್ಥಹ. ೧೯೦-೫೭; 1407).
[< ಕಾವಲ್$_1$]

**ಕಾವಟಿ** (ನಾ). ಕಾವಲಿ; (ಉಪ್ಪಿನ) ಮಾಳ: ಚಂದ್ರಪ್ರಭದೇವರ ನಿವೇದ್ಯಕ್ಕಂ. . .ಬಿಟ್ಟ ಮೊಗೆ ಮತ್ತರು ಹನ್ನೆರಡು ಮನೆ ನಿವೇಸಣವೆರಡು ಪೂವಿನ ತೋಂಟಮೊಂದು ಗಾಣಮೊಂದು ಕಾವಟಿಮೊಂದು (ಸೌಇಇ. IX-i, ೨೨೧-೭೮; 1125). [< ಕಾವಲಿ$_1$]

**ಕಾವಾಕುಳ** 'ಕಾವಾಕೂಲ' ನೋ.

**ಕಾವಾಕೂಲ**, ಕಾವಾಕುಳ, ಕಾವಾಕೂಳ (ನಾ). ಹಳದಿ ಹೂಬಿಡುವ ಒಂದು ಸಸ್ಯ: ಕಾವಾಕೂಳ, ಕಾವಾಕೂಲ (ವೈಔಗಿ. ೪೮-೯೫೧). **ಕಾವಾಕುಳ** : (೩). **ಕಾವಾಕೂಳ** : ಕಾವಾಕೂಳ, ಕಾವಾಕೂಲ (ವೈಔಗಿ. ೪೮-೯೫೧). [?]

**ಕಾವಾಕೂಳ** 'ಕಾವಾಕೂಲ' ನೋ.

**ಕಾವಾಱು** (ಕ್ರಿ). ಕಾವು ಇಳಿ; ಉಷ್ಣತೆ ಇಲ್ಲವಾಗು; ತಣ್ಣಗಾಗು : ಅಪ್ಪು ಬೆರಸಿದ ಕಟ್ಟಿಗೆಯ ಕಿಚ್ಚಿನೊಳಗಿಕ್ಕಿದರೆ ಅದು ಚಿತ್ತ ಶುದ್ಧವಾಗಿ ಹೊತ್ತಬಲ್ಲುದೇ ಕಾವಾಱಿದ ಕಾಷ್ಠದಂತೆ (ಮೋಳಿಮಾ. ೧೪-೫೩).
[ಕಾವು$_2$ (< ಕಾಯ್ಪು$_1$) + ಆಱು$_1$]

**ಕಾವಿ** (ನಾ). ೧. ಕೆಂಪು ಬಣ್ಣದ ಮಣ್ಣು; ಜಾದು ಕಲ್ಲು: "ಜಾದು ಕಲ್ಲೆನೆ ಕಾವಿ" (ಶಬ್ದಮಂ. ೫೩); ಕುಂಬಾರರ ಮಣ್ಣು, ಕಾವಿ, ಪೀವಡಿ ಮುಂತಾದ ಮೃತ್ತಿಕೆಗಳು (ಮುಂಬಯಿ. ೬-೧೭). ೨. ಒಂದು ಬಣ್ಣ : ಕಾವಿಯಕಲ್ಲನರೆದು ಬಣ್ಣಮಿಕ್ಕಿ (ಸೂಪಶಾ. ೬-೬); ಹಳದಿ ಕಪ್ಪೆಳಗಾಯಿ ಬಿಳಿಗಾವಿ ಗಾವಿ ಎಳಗಾವಿ ಹೆಗ್ಗಾವಿ ತಳಿರಗಾವಿಗಳ ಪೋಲಿವ ನಾನಾ ಬಣ್ಣಗಳೊಪ್ಪಿ ಮೆಱೆವ (ಹಮುದ್ವಿ. ೮೨). 'ಚಂದ್ರಗಾವಿ' ಪರಾ. ೩. ಕಾವಿ ಬಣ್ಣದ ಬಟ್ಟೆ; ಕಾಷಾಯವಸ್ತ್ರ : ಓದಿ ಬೂದಿಯ ಪೂಸಿ ತೇದು ಕಾವಿಯ ಹೊದೆದು ಹೋಹಾತ ಯೋಗಿಯೆನಬೇಡ (ಸರ್ವಜ್ಞ. ೯೯೪)

ಸುಬ್ಬಣ್ಣ ಕಕ್ಕ ಕಾವಿಯನ್ನು ಧರಿಸಿ . . . ಬದರಿಕಾಶ್ರಮಕ್ಕೆ ನಡೆದ (ಹೊಸಕ್ಷಿ. ೨೫೩); ಸಂಜೆಗಿರಣ ನೆಯ್ದಿರುವ ಕಾವಿ ಆ ಮೇಘ ಲಿಂಗಕೆಂದು (ನೆಲಮು. ೩೪); ಮೈಮೇಲಿದ್ದುದು ಕಾವಿಯ ಬಟ್ಟೆ (ಕವಿಸೋ. ೩).

ಕಾವಿಯ ಸೀರೆ = ಕಾವಿ ಬಣ್ಣದ ಸೀರೆ: "ಕಾತ್ಯಾಯನಿ – ಅವಳೊರ್ವಳು ಒಪ್ಪಚ್ಚಿ ಮುದುಕಿಯಾಗಿ ಕಾವಿಯ ಸೀರೆಯನ್ನುಟ್ಟವಳು ಅಥವಾ ಗಂಡನಿಲ್ಲದವಳು" (ನಾಚಿರಾ. ೬).

[ದೇ. ‖ ತಮಿ. ಮಲ. ತುಳು. ತೆಲು. ಕಾವಿ]

**ಕಾವಿಕಲ್ಲು** 'ಕಾವಿಗಲ್' ನೋ.

**ಕಾವಿಖಣಿ** (ನಾ). ಕಾವಿಯ ಕಲ್ಲು; ಜಾದುಕಲ್ಲು: ಮಾಂಸವೆಂದಡೆ ಕಾವಿ ಖಣಿಯಂತಿಪ್ಪುದು (ಉದ್ಭೋಪ್ರ. ೫-೨೩-೧೫). [ಕಾವಿ + ಖಣಿ (< ಕಣ್ಣಿ)]

**ಕಾವಿಗಲ್, ಕಾವಿಕಲ್ಲು** (ನಾ). ಕಾವಿಯ ಕಲ್ಲು; ಗೈರಿಕ; ಜಾದು: ಬೆಟ್ಟುಗಳ ತಪ್ಪಲೊಳಿರ್ಪ ಅರಿದಳ ಕಾವಿಗಲ್ಗಳಿಂದಣ್ಪಟ್ಟು (ಚಿಕವಂ. ೬೨-೧). **ಕಾವಿಕಲ್ಲು**: ಆ ಆನೆಯ ನೆತ್ತರದಿಂದ ನೆನೆದು ಕಾವಿಕಲ್ಲು ಮೊದಲಾದ ಧಾತುಗಳಿಂದ ವಿಚಿತ್ರವಾದ ಪರ್ವತದ ಹಾಗೆ ಇರಲು (ಕೃವಾಭೀ. ೧೪೪); ಶಂಖವನು ಕಾವಿಕಲ್ಲನು ಅರೆದು ಮೊಲೆಹಾಲಿಂ ನಸ್ಯಮಂ ಮಾಳ್ಪುದು (ಸಕವೈ. ೧೯೧). [ಕಾವಿ + ಕಲ್$_3$]

**ಕಾವಿಟ್ಟಿಗೆ** (ನಾ). ಒಲೆಗಳಲ್ಲಿ ಉಷ್ಣತೆಯನ್ನು ತಡೆಯಬಲ್ಲ ಇಟ್ಟಿಗೆ: "ಅಗ್ನಿಷ್ಟಿಗೆ, ಒಲೆ ಮೊದಲಾದುವುಗಳಲ್ಲಿ ಉಪಯೋಗಿಸುವ ಕಾವು ತಡೆಯಬಲ್ಲ ಇಟ್ಟಿಗೆ; ಕಾವಿಟ್ಟಿಗೆ" (Fire-brick. ಇಂಕನಿ).

[ಕಾವು$_2$ (< ಕಾಯ್ಪು$_1$) + ಇಟ್ಟಿಗೆ]

**ಕಾವಿಸು** (ಕ್ರಿ). ಬಯಸು; ಅಪೇಕ್ಷಿಸು; ಕಾಮಿಸು: ದೇವಗುರು ಶಾಸ್ತ್ರಗಳೆ ಮುಕ್ತಿಯ. ಕಾವಿಸುವದಲ್ಲದೆಯು ಪ್ರತಿಯಾಗೀವುದಿಂನ್ನೊಂದಿಲ್ಲವು (ಜಿನಸಾ. ೧೧). [< ಕಾಮಿಸು]

**ಕಾವು$_1$** 'ಕಾಪು$_1$' ನೋ.

**ಕಾವು$_2$** 'ಕಾಯ್ಪು$_1$' ನೋ.

**ಕಾವು$_3$, ಕಾಮು** (ನಾ). ೧. ದಂಟು; ನಾಳ; ದೇಟು: ನೆಯ್ದಿಲ ಕಾವಂ ತುದಿಗೆಯ್ದೆ ಸೀಳ್ವ ತೆಜದಿಂ ಸೀಳ್ದಂ ಜರಾಸಂಧನಂ (ಪಂಪಭಾ. ೬-೨೭); ಮಾವಿನ ಹೂವಿನ ಕಾವಿನ ಅವಿನ ಮೊದಲಿಂದೆ ತೀವಿದಳಿಗಳ (೧೧೪. ೨-೩೮); ತಾವರೆಗಾವೊಳಾಗಿಸಿದ ಬಿಲ್ಗದಜೀರೆಳೆಯೇಱಿಸುತ್ತೆ (ರಾಜಶೇ. ೨-೧೭); ದಾವಶಿಖಿಯ ಮೇಲಿಕ್ಕಿದ ಜೋಳದ ಕಾವುಗಳಂತೆ ಪೊಗೆದವು (ಕುರಾಸಾಂ. ೨೩-೬೨). ೨. ಹಿಡಿ; ಹಿಡಿಕೆ: ಎಡದ ಕೆಯ್ಯೊಳ್ ಪೊಳೆಪ ಚೆಂಬೊನ್ನ ಕಾವಿನ ಚಾಮರಂ (ಪಂಪಭಾ. ೧೩-೧೦೪); ಕಾವಿಲ್ಲದೆ ಕೊಡೆವಿಡಿವೆನೆಂಬಂತೆ (ಧರ್ಮಾಮೃ. ೪-೫೦); ತನ್ನ ವಂಶ ತನಗೆ ಹಗೆಯಾಗಿ ಕೊಡಲಿಯ ಕಾವು ಕುಲಕ್ಕೆ ಮೃತ್ಯುವಾದಂತೆ (ಮೋಳಿಮಾ. ೧೨-೪೫); ಪಿಡಿದ ತ್ರಿಶೂಲಂ ಕೊಡೆಯ ಕಾವಾಗೆ (ನಂಬಿರ. ೬-೧೭); ಮತ್ತಕಾಶಿನಿಯರ ದಿಟ್ಟಿ ಶಂಖದ ಕಾವ ತೆತ್ತಿಸಿದಂತೆ ಶೋಭಿಸಿತು (ಮೋಹತ. ೨-೪೬); ಉಕ್ಕಿನ ಕೊಡಲಿಯಾದರೂ ಕಡಿಯಲು ಕಾವು ಬೇಕು (ಗಾದೆ). ೩. ಅಂಚು; ದಡ; ಕರೆ: ರಾಮೇಶ್ವರದ ಸೇತುವಿನ ಕಾವಿನೊಳ್ ಪಾಳ್ಯಮಂ ಬಿಟ್ಟು (ತುರಂಗ. ೧೯-೪೪). **ಕಾಮು**: ೧. "ನಾಳಃ, ನಾಳಾ – ೨ ನಾಳಂ. ತಾವರೆ, ನೈದಿಲೆ, ಮುಂತಾದವುಗಳ ದಂಟುಗಳಿಗೆ ಹೆಸರುಗಳು. ತಾವರೆ ಕಾಮುಗಳನ್ನುವರು" (ಸಿದ್ಧಾಂತಿ. ೪೦).

[ದೇ. ‖ ತಮಿ. ಮಲ. ಕಾಮ್ಪು; ತೆಲು. ಕಾಮು; ಗೊಂಡಿ. ಕಾಮೇ; ಕುವಿ. ಕಂಬ, ಕಾಂಬ]

**ಕಾವು$_4$** (ನಾ). ಭೂಮಿಯ ಒಂದು ಅಳತೆ (?): ಎರಡು ಕಾವಿನೆಳೆಯೊಳ್ತನ್ನಮ್ಮೆಚ್ಚಿದಲ್ಲಿ ಮೂಗಂ ಮಣ್ಣುತೋಣ್ಟ ಕಣ್ಣಗೊಳ್ವನ್ (ಎಕ. III, ಮಂಡ್ಯ. ೧೪-೯; 907). [?]

**ಕಾವು$_5$** 'ಕಾವ್' ನೋ.

**ಕಾವುಂಚಿ** 'ಕಾವಂಚಿ' ನೋ.

**ಕಾವುಕಟ್ಟು** (ನಾ). ರಕ್ಷಣೆಗಾಗಿ ಮಾಡುವ ಕಟ್ಟು; ರಕ್ಷಾಬಂಧನ: ಹೊಲಮಾಡಿ ಬಿಟ್ಟು ನಾಲ್ಕು ಮೂಲೆಗೂ ನಾಲ್ಕು ಲಿಂಗಮುದ್ರೆಕಲ್ಲು ನಡಿಸಿ ಕಾವುಕಟ್ಟು ಮಾಡಿಸಿ ಬಿಡು (ಬೆಳುವು. ೪೯).

[ಕಾವು$_1$ (< ಕಾಪು$_1$) + ಕಟ್ಟು$_2$]

**ಕಾವುಕವುದಿ** (ನಾ). "ಚಹದ ಪಾತ್ರೆಯನ್ನು ಬೆಚ್ಚಗಿಟ್ಟಿರುವುದಕ್ಕಾಗಿ ಉಪಯೋಗಿಸುವ ಕವುದಿ" (Tea-Cose. ಇಂಕನಿ).

[ಕಾವು$_2$ (< ಕಾಯ್ಪು$_1$) + ಕವುದಿ$_2$]

**ಕಾವುಗಣ್ಣು** (ನಾ). ಒಂದು ಬಗೆಯ ಕಣ್ಣು ನೋವು; ಉರಿಗಣ್ಣು: ಕಾವುಗಂಣು, ಉಷ್ಣಗಂಣು, ನೀರುಗಂಣು (ಪಿಸುರು ಇಲ್ಲದ) ಒಣ ಕಣ್ಣುನೋವು (Xerophthalmia. ಇಂಕನಿ).

[ಕಾವು$_2$ (< ಕಾಯ್ಪು$_1$) + ಕಣ್ಣು (< ಕಣ್)]

**ಕಾವುಜೇಡು** (ನಾ). ಒಂದು ಬಗೆಯ ಜೇಡಿಮಣ್ಣು: ಕಾವಿಟ್ಟಿಗೆ ಮಾಡಲು ಉಪಯೋಗಿಸುವ ಜೇಡುಮಣ್ಣು; ಕಾವುಜೇಡು (Fire-clay. ಇಂಕನಿ). [ಕಾವು$_2$ (< ಕಾಯ್ಪು$_1$) + ಜೇಡು]

**ಕಾವುತೆರೆ** (ನಾ). ಉಷ್ಣತೆಯನ್ನು ತಡೆಯುವ ತೆರೆ: "ಬೆಂಕಿಯ ಕಾವನ್ನು ತಡೆಯುವ ತೆರೆ; ಕಾವುತೆರೆ" (Fire-screen. ಇಂಕನಿ).

[ಕಾವು$_2$ (< ಕಾಯ್ಪು$_1$) + ತೆರೆ$_2$]

**ಕಾವುಪೆಟ್ಟಿಗೆ** (ನಾ). ಶಾಖ ಕೊಡಲು ಉಪಯೋಗಿಸುವ ಒಂದು ಬಗೆಯ ಕೃತಕವಾದ ಉಪಕರಣ: "ಹಕ್ಕಿಯ ಮೊಟ್ಟೆಗಳಿಂದ ಮರಿ ಮಾಡುವುದು, ಕಾಲಕ್ಕೆಮೊದಲು ಹುಟ್ಟಿದ ಮಕ್ಕಳನ್ನು ಬೆಳೆಸುವುದು, ಏಕಾಣುಜೀವಿಗಳನ್ನು ಅಭಿವೃದ್ಧಿಪಡಿಸುವುದು – ಈ ಕೆಲಸಗಳಿಗೆ ಉಪಯೋಗಿಸುವ ಕೃತಕ ಶಾಖೋಪಕರಣ; ಕಾವುಪೆಟ್ಟಿಗೆ" (Incubator. ಇಂಕನಿ). [ಕಾವು$_2$ (< ಕಾಯ್ಪು$_1$) + ಪೆಟ್ಟಿಗೆ]

**ಕಾವುಬಚ್ಚಲು, ಕಾವುಬಚ್ಚಲೆ** (ನಾ). ಒಂದು ಜಾತಿಯ ಬಸಳೆ; ಬಾಯಿಬಸಲೆ; ಉಪೋದಕಿ: "ಕಲಂಬೀ, ಉಪೋದಕಾ [ಪಾಠಾಂ. ಡಕೀ], ಮೂಲಕಂ, ಹಿಲಮೋಚಿಕಾ, ವಾಸ್ತುಕಂ, ಈ ಐದನ್ನು ಕ್ರಮವಾಗಿ ಬಳ್ಳಿ ಬಚ್ಚಲಸೊಪ್ಪು, ಕಾವು ಬಚ್ಚಲು, ಮೂಲಂಗಿ, ಚಿಲಿಕೆ ಸೊಪ್ಪು, ಚಕ್ರವರ್ತಿಸೊಪ್ಪು, ಈ ತರಕಾರಿಗಳಿಗೆ ಹೆಸರುಗಳು" (ಸಿದ್ಧಾಂತಿ. ೧೩೦). **ಕಾವುಬಚ್ಚಲೆ**: (೬). [?]

**ಕಾವುಬಚ್ಚಲೆ** 'ಕಾವುಬಚ್ಚಲು' ನೋ.

**ಕಾವುರ** 'ಕಾವರ' ನೋ.

**ಕಾವುಲಿ** 'ಕಾಲ್ವಾಯ್' ನೋ.

**ಕಾವುವಿಡಿ** (ಕ್ರಿ). ದೇಟು ಅಥವಾ ನಾಳವನ್ನು ಹಿಡಿ: ನೀಳಾಬ್ಜದ ಕಾವು ವಿಡಿದು ಕುಣಿದಳದೊರ್ವಳ್ (ಜಗವಿ. ೫-೨೨). [ಕಾವು$_3$ + ಪಿಡಿ$_1$]

**ಕಾವುಳ$_1$** 'ಕಾವಳ$_1$' ನೋ.

**ಕಾವುಳ$_2$** 'ಕಾವಳ$_2$' ನೋ.

**ಕಾವುಳಗವಿ** (ಕ್ರಿ). ಕತ್ತಲೆ ಮುಸುಕು; ಕತ್ತಲೆ ಕವಿ: ಮೊಗವೊಣಗಿ ಕಣ್ಗಂದಿ ಕಾವುಳಗವಿದೊಡಂ (ಆದರ. ೧೪೪-೮).

[ಕಾವುಳ$_1$ (< ಕಾವಳ$_1$) + ಕವಿ$_1$]

**ಕಾವೆ** (ನಾ). ಕುದುರೆ ವೇಗವಾಗಿ ಓಡುತ್ತಿರುವಾಗ ಅದನ್ನು ತಿರುಗಿಸುವುದು, ಸುತ್ತು ಹಾಕಿಸುವುದು, ಏರಿಗೆ ಒಯ್ಯುವುದು, ಇಳಿಸುವುದು, ಹಿಂದಕ್ಕೂ ಮುಂದಕ್ಕೂ ಓಡಿಸುವುದು, ಇತ್ಯಾದಿ: (೬).

ಕಾವೆ ತಿರುಗಿಸು = ಕುದುರೆಯನ್ನು ಓಡಿಸಿ, ತಿರುಗಿಸಿ, ಪಳಗಿಸು.

[← ಹಿಂ. ಮರಾ. ಕಾವಾ]

**ಕಾವೇರಿ** (ನಾ). ಒಂದು ನದಿಯ ಹೆಸರು : ಕಾವೇರೀ ಕಪಿನೀ ಶ್ರೀ ನದೀಭಿಃ (ಮೈಆರಿ. ೧೯೧೭, ೧೩-೧೩ ; 550) ; ಕಾವೇರಿಯಿಂದಮಾ ಗೋದಾವರಿವರಂ (ಕವಿರಾ. ೧-೩೭) ; ಕಾವೇರಿ ಸೋಂಕಿದರ ಪಾಪಮಂ ಸೋವೇರಿ ಕಾವೇರಿ ಸಕಲ ಸಸ್ಯಾದಿಯಂ ಕಾವೇರಿ ಹರಿದಳಾ ದೇಶದೊಳು ಹರಭಕ್ತಿರಸನಂತೆ (ಮಾದರ. ೩೧೮-೧) ; ಪರಿವ ಕಾವೇರಿಯ ಮಧ್ಯೋರ್ವಿ ಯೊಳಗೆ ನಿಲ್ಲುತೆ (ಕಂನವಿ. ೭-೯೮). [ಸಂ. ಕಾವೇರೀ]

**ಕಾವೇರಿಕೆ** (ನಾ). ೧. ಬಿಸಿ ಹೆಚ್ಚಾಗುವಿಕೆ. ೨. ಉತ್ಸಾಹ ಅಥವಾ ಉದ್ವೇಗ ಉಂಟಾಗುವಿಕೆ: ಮೀನಾಕ್ಷಿ ಕಲ್ಯಾಣ, ಕರ್ಣಾರ್ಜುನರ ಕಾಳಗಗಳಂಥ ತುಂಬ ಕಾವೇರಿಕೆಯ ಪ್ರಸಂಗಗಳನ್ನು ಕೊನೆಗೆ ಇರಿಸಿ ಕೊಳ್ಳುತ್ತಾರೆ (ಯಕ್ಷಬ. ೬೦). ೩. (ಆಲಂ) ಸಿಟ್ಟಾಗುವಿಕೆ. [ಕಾವೇರು + - ಇಕೆ]

**ಕಾವೇರು** 'ಕಾಹೇಱು' ನೋ.

**ಕಾವೋಜ** (ನಾ). ಒಬ್ಬ ಶಿಲ್ಪಿಯ ಹೆಸರು : ವಾಸ್ತುವಿ (ದ್ಯಾ) ಧರಂ ಕಾವೋಜನ ಬರಪ (ಇಅ. XIII, ೯೩-೪೦ ; 1084). [ಕಾವ + ಓಜ (< ಒವಜ್ಝ)]

**ಕಾವ್ಗುಡು** (ಕ್ರಿ). ಕಾವ್ ಕಾವೆಂದು ಕೂಗು : ಕರಿಕಾಗೆ ಕಾವ್ಗುಡಲು ಕೆಂಗಾಗೆ ಗೂಗಿಡುವ ನೋಟ ನಡುಹಗಲೊಳಗೆ ಕಾಣಬಹುದು (ಸಖೀಗೀ. ೫೮-೧). [ಕಾವ್ + ಕುಡು$_1$ (< ಕೊಡು)]

**ಕಾವ್ಯ** (ನಾ). ೧. ರಮಣೀಯವಾದ ಅರ್ಥವನ್ನು ಕೊಡುವ ಶಬ್ದಗಳ ಗುಂಪು ; ಕಬ್ಬ ; ಕವಿತೆ : ಕವಿ ಭಾವ ಕೃತಾನೇಕ ಪ್ರವಿಭಾಗ ವಿವಿಕ್ತ ಸೂಕ್ತ ಮಾರ್ಗಂ ಕಾವ್ಯಂ ಸವಿಶೇಷ ಶಬ್ದರಚನಂ ವಿವಿಧಾರ್ಥ ವ್ಯಕ್ತಿವರ್ತಿತಾಲಂಕಾರಂ (ಕವಿರಾ. ೧-೨೨) ; ಇರೆ ಶಬ್ದಾರ್ಥಂಗಳ್ ತತ್ಪರತೆಯಿನದು ಕಾವ್ಯಂ (ಕಾವ್ಯಾವ. ೪೩೦) ; ಈ ಕಾವ್ಯಮಂ ಪೇಳ್ವ ಕೇಳ್ವರೊಳಜ್ಞಾನಭರಂ ಕಿಡಲ್ಸುಖಭರಂ ಕೈಕೊಳ್ಗುವಾತ್ಯಂತಿಕಂ (ಜಗವಿ. ೧೮-೧೧೨) ; ಕಾವ್ಯಮಿದು ಭುವನದೊಳ್ ಸಕಲ ಜನದಿಂದ ಸುಶ್ರಾವ್ಯ ಮಪ್ಪಂತೆ (ಜೈಮಿಭಾ. ೧-೪). ೨. ಶುಕ್ರ : ಕಾವ್ಯನು ಕೇಂದ್ರತುಂಗದಿ ಧರಣಿಸುತ ಮೃಗವೇಱಿ ನಿಂದಿರೆ . . . ಪುತ್ರೋದಯಗಳಾದುವು ಭೂಪ ದಶರಥಗೆ (ಕಾಶಿರಾ. ೧-೬೬). ೩. ಕಾವ್ಯಕರ್ತ ; ಕವಿ (?) : ಪಂಡಿ ತಯ್ಯನು ನಿಮ್ಮ ಮೋಹದ ಪಂಡಿತಂ ಶಿವಯೆಮ್ಮ ಸಿರಿಪತಿ ಪಂಡಿತಯ್ಯನು ನಿಮ್ಮ ಕಾವ್ಯ[ಪಾಠಾಂ. ಬ್ಯ]ನು (ಬಸವು. ೯-೪೩). [ಸಂ.]

**ಕಾವ್ಯಕಂಜಾಸನ** (ನಾ). ಕಾವ್ಯಸೃಷ್ಟಿಯಲ್ಲಿ ಬ್ರಹ್ಮನಂತಿರುವವನು; ಕವಿಶ್ರೇಷ್ಠ : ಭವ್ಯಚಿಂತಾಮಣಿ ಸಕಲಕಳಾಕೋವಿದಂ ಕಾವ್ಯಕಂಜಾಸನ ನೆನ್ದಾನನ್ದದಿನ್ದಂ ಪೊಗಳೆ (ಎಕ. II, ೯-೩೬ ; 1100). [ಕಾವ್ಯ + ಕಂಜಾಸನ]

**ಕಾವ್ಯಕರ್ತಾರ** (ನಾ). ಕಾವ್ಯವನ್ನು ರಚಿಸುವವನು ; ಕವಿ : "ಕಾವ್ಯಕರ್ತಾರನೆನೆ ಕವಿಯೆನಿಕ್ಕುಂ" (ಮಂಗರಾ. ೧೦೬-೧೬). [ಕಾವ್ಯ + ಕರ್ತಾರ]

**ಕಾವ್ಯಕರ್ತೃ** (ನಾ). = ಕಾವ್ಯಕರ್ತಾರ : (ಕಿ). [ಕಾವ್ಯ + ಕರ್ತೃ]

**ಕಾವ್ಯಕೃತಿ** (ನಾ). ಕಾವ್ಯರಚನೆ; ಕಾವ್ಯಗ್ರಂಥ : ಪ್ರಕೃತಿಯಂತೆ ಪ್ರತಿಕೃತಿಮಾಡುವ ಕಲೆಯ ಸಂಸ್ಕೃತಿಯಿಂದ ಕಾವ್ಯಕೃತಿಯಾಗುವದು. ಪ್ರಕೃತಿಯ ಪ್ರತಿಕೃತಿ ಕಾವ್ಯಕೃತಿ (ಸಾಹಿವಿ. ೨೯). [ಕಾವ್ಯ + ಕೃತಿ]

**ಕಾವ್ಯಗಾಯನ** (ನಾ). ಕಾವ್ಯವನ್ನು ಹಾಡುವುದು, —ರಾಗ ಬದ್ಧವಾಗಿ ಹೇಳುವುದು : ಟಳಕರಿರುವಾಗ ಕಾವ್ಯಗಾಯನದ ಪರಂಪರೆ ಇನ್ನೂ ಆರಂಭವಾಗಿದ್ದಿಲ್ಲ (ಸ್ಮೃತಿಚಿ. ೨೮). [ಕಾವ್ಯ + ಗಾಯನ]

**ಕಾವ್ಯಜ್ಞ** (ನಾ). ಕಾವ್ಯವನ್ನು ತಿಳಿದವನು : ಶಾಸ್ತ್ರಜ್ಞನಖಿಲ ತರ್ಕಜ್ಞಂ ಕಾವ್ಯಜ್ಞಂ ದೈವಜ್ಞಂ (ಶಾಸಸ. ೯೨). [ಸಂ.]

**ಕಾವ್ಯನಾಮ** (ನಾ). ಕವಿ ಕಾವ್ಯರಚಿಸುವಾಗ ಇಟ್ಟುಕೊಳ್ಳುವ ಹೆಸರು : "ಕಾವ್ಯಾನಂದ" ಎಂಬುದು ಕರ್ತೃ ಪುರಾಣಿಕ ಸಿದ್ಧಯ್ಯನವರ ಕಾವ್ಯನಾಮ (ಗ್ರಂಥಾಲ. ೫೬). [ಕಾವ್ಯ + ನಾಮ]

**ಕಾವ್ಯಪ್ರಜ್ಞೆ** (ನಾ). ಕಾವ್ಯದ ವಿಷಯದಲ್ಲಿ ವಿಶೇಷವಾದ ತಿಳಿವಳಿಕೆ, —ಪ್ರಜ್ಞೆ : ಕನಕದಾಸರಲ್ಲಿ ಉಳಿದ ದಾಸರಿಂದ ಭಿನ್ನವಾದ ಕಾವ್ಯಪ್ರಜ್ಞೆ ಇದೆ ಎಂಬ ಸಂಗತಿ ಅವರ ಕೃತಿಗಳನ್ನು ಪರಿಶೀಲಿಸಿದರೆ ಸ್ಪಷ್ಟವಾಗುತ್ತದೆ (ಪರಿಶೀ. ೧೦೧). [ಕಾವ್ಯ + ಪ್ರಜ್ಞೆ]

**ಕಾವ್ಯಪ್ರಯೋಗ** (ನಾ). ೧. ಕಾವ್ಯರಚನೆ. ೨. ಕಾವ್ಯದ ಉಕ್ತಿಗಳನ್ನು ಪ್ರಯೋಗಿಸುವುದು,—ಉದಾಹರಿಸುವುದು. ೧,೨: ಚದುರರ್ ನಿಜದಿಂ ಕುಱಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್ (ಕವಿರಾ. ೧-೩೮). [ಕಾವ್ಯ + ಪ್ರಯೋಗ]

**ಕಾವ್ಯಪ್ರವೀಣ** (ನಾ). ಕಾವ್ಯರಚನೆಯಲ್ಲಿ ನಿಪುಣ : ದಿವಸೇಂದ್ರಂ ಕನ್ನೆಯೊಳ್ ಕೂಡಿರೆ ಲಿಪಿಗಣಿತಾಲೇಖ್ಯ ಕಾವ್ಯಪ್ರವೀಣಂ . . . ಅಕ್ಕುಂ (ಜಾತತಿ. ೧೭-೧೬). [ಕಾವ್ಯ + ಪ್ರವೀಣ]

**ಕಾವ್ಯಬಂಧ** (ನಾ). ಕಾವ್ಯದ ರಚನೆ, —ಶಯ್ಯೆ : ಬೆರಸಿರೆ ಸಮಾಸ ದೊಳ್ ಬಂಧುರಮಾಗದು ಕಾವ್ಯಬಂಧಮೆಂದುಂ ಕೃತಿಯೊಳ್ ದೊರೆ ಕೊಳ್ವ ಪದವಿಶೇಷ್ಯಾಂತರಂ (ಕವಿರಾ. ೨-೯೦). [ಕಾವ್ಯ + ಬಂಧ]

**ಕಾವ್ಯಮಯ** (ಗು). ಕಾವ್ಯಪ್ರಚುರವಾದ; ಕಾವ್ಯಗುಣಗಳಿಂದ ಕೂಡಿದ : ಕಾವ್ಯಮಯವಾದ ಇಂಥ ಪದ್ಯಗಳನ್ನು ಪ್ರತಿಯೊಬ್ಬ ಕನ್ನಡಿ ಗನೂ ಓದಿ ಆನಂದ ಪಡೆಯಬೇಕು (ಶಮುಪಾಂ. ೧೨೮). [ಸಂ.]

**ಕಾವ್ಯಮಲ** (ನಾ). ಕಾವ್ಯದೋಷ ; ಕಾವ್ಯದಪದ, ವಾಕ್ಯ, ಅರ್ಥ ಮೊದಲಾದುವುಗಳಲ್ಲಿಯ ದೋಷ. 'ಕಾವ್ಯಮಲವ್ಯಾವೃತ್ತಿ' ಪರಾ. [ಕಾವ್ಯ + ಮಲ$_3$]

**ಕಾವ್ಯಮಲವ್ಯಾವೃತ್ತಿ** (ನಾ). ಕಾವ್ಯದೋಷಗಳ ನಿವಾರಣೆ : ಇದು ಕಾವ್ಯಮಲವ್ಯಾವೃತ್ತಿಯೊಳ್ ವಾಕ್ಯವಾಕ್ಯಾರ್ಥ ದೋಷಾನುಕೀರ್ತನ ಪ್ರಕರಣಂ ದ್ವಿತೀಯಂ (ಕಾವ್ಯಾವ. ೪೯೪). [ಕಾವ್ಯಮಲ + ವ್ಯಾವೃತ್ತಿ]

**ಕಾವ್ಯಮರ್ಮ** (ನಾ). ಕಾವ್ಯದ ರಹಸ್ಯ, —ತಿರುಳು : ಸುಕವಿಯೆ ಬಲ್ಲನು ಮಿಕ್ಕವರರಿಯರು ಸುಕವಿಯ ಕಾವ್ಯಮರ್ಮವನು (ಇಂಚಾಪ. ೬೭-೨೫). [ಕಾವ್ಯ + ಮರ್ಮ]

**ಕಾವ್ಯಮೀಮಾಂಸೆ** (ನಾ). ಕಾವ್ಯದ ವಿಷಯದಲ್ಲಿ ವಿಚಾರ, —ಜಿಜ್ಞಾಸೆ; ಸ್ವರೂಪಲಕ್ಷಣಾದಿಗಳನ್ನು ವಿವರಿಸುವ ಶಾಸ್ತ್ರ : ಕಾವ್ಯದ ತಿರುಳನ್ನೂ, ಅದರ ನಿರ್ಮಾಣ ಕ್ರಮವೇ ಮೊದಲಾದುವನ್ನೂ ನಿರೂಪಿಸುವ ಕಾವ್ಯಮೀಮಾಂಸೆ (Poetics) ಎಲ್ಲ ಲಲಿತಕಲೆಗಳಿಗೂ ಸಮಾನ ವಿಷಯವಾಗಿರುವುದು (ಭಾರವೀಾ. ೮). [ಕಾವ್ಯ + ಮೀಮಾಂಸೆ]

**ಕಾವ್ಯರೇಖೆ** (ನಾ). ಕಾವ್ಯದ ಗುಣ, —ಮಟ್ಟ : ನಿಕಷಮಿಟ್ಟು ಪರೀಕ್ಷಿಸಿ . . . ಬುಧರಿರ್ದು ನೋೞ್ಪುದು ಪುರಾತನ ನೂತನ ಕಾವ್ಯ ರೇಖೆಯಂ (ಗದಾಯು. ೧-೪೭). [ಕಾವ್ಯ + ರೇಖೆ].

**ಕಾವ್ಯಲಿಂಗ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು : ವರ ಸಮರ್ಥನೀಯಾರ್ಥಕ್ಕೆ ಸಮರ್ಥನವು ಬೆರೆಯಲ್ಕೆ ಕಾವ್ಯಲಿಂಗವು (ಕುವಲ. ೧೧೪-೬೦) ; "ಸಹೃದಯರು ಒಪ್ಪುವ ಕಾರಣವನ್ನು ಕೊಟ್ಟು ಸಂದಿಗ್ಧವೋ ಅಸಂಭಾವ್ಯವೋ ಆದ ವಿಷಯವನ್ನು ಸಮರ್ಥಿಸಿದರೆ ಕಾವ್ಯಲಿಂಗಾಲಂಕಾರವಾಗುವುದು" ಲಕ್ಷ್ಯ :- ಬಾಣಂ ವಲ್ಲಭನಕ್ಕು ಮೆಂದು ಪಡೆದಾ ವಾಗ್ದೇವಿಗಬ್ಜೋದ್ಭವಂ ಜಾಣಂ ಬಾಣೆಯೆನಿಪ್ಪದೊಂದು ಪೆಸರಂ ಮುನ್ನಿತ್ತನೆಂದಂದು ಪೋ ಮಾಣನ್ನನ್ಯಕವಿಸ್ತುತಿವ್ಯಸನಮಂ ವಾಗ್ಜಾತಚಾತುರ್ಯಗೀರ್ವಾಣಂ ತಾನೆನೆ ಸಂದ ಬಾಣನೆ ವಲಂ ವಂದ್ಯಂ ಪೆಜರ್ ವಂದ್ಯರೇ (ಕೈಪಿಡಿ. ೨೮೪). [ಸಂ.]

**ಕಾವ್ಯವಸ್ತು** (ನಾ). ಕಾವ್ಯದಲ್ಲಿ ವರ್ಣಿಸಲ್ಪಡುವ ವಿಷಯ: ಆಧುನಿಕ ಕಾವ್ಯವಸ್ತುಗಳು ಕನ್ನಡದಲ್ಲಿ ಬಂದವು (ನವ್ಯಕಾ. ೨೪). [ಕಾವ್ಯ + ವಸ್ತು]

**ಕಾವ್ಯವಾಚನ** (ನಾ). ಕಾವ್ಯವನ್ನು ಓದುವುದು: ಈ ದಿನ ಸಾಹಿತ್ಯ ಪರಿಷತ್ತಿನಲ್ಲಿ ಕಾವ್ಯವಾಚನ ನಡೆಯುತ್ತದೆ (ರೂಢಿ). [ಕಾವ್ಯ + ವಾಚನ]

**ಕಾವ್ಯವಿದ** (ನಾ). = ಕಾವ್ಯಜ್ಞ: ರಸವತ್ಕಾವ್ಯವಿದರ್ ಪುರಾತನರೊಳಾದಂ[ಪಾಠಾಂ. ದೊಳಾರಂ] ಪೂಣ್ಕೆಯಿಂ ಪೇೞ್ದು ಜೋಯಿಸಗಬ್ಬಂಗಳನೆಯ್ದೆ ರಂಜಿಸದರಾರ್ (ಜಾತಕ. ೨೪-೪೧). [ಸಂ. ಕಾವ್ಯವಿದ್]

**ಕಾವ್ಯಸತ್ತೆ** (ನಾ). ಕಾವ್ಯದ ಆಧಿಪತ್ಯ; ಪ್ರಭುತ್ವ: ನಮ್ಮೀ ಚತುರ್ಮುಖ ಜಗತ್ ಕರ್ತೃ ತಾಂ ತನ್ನಲೀಲೆಯ ಕಾವ್ಯಸತ್ತೆಯ ಬೃಹತ್ ಕೃತಿಗಳಂ ಸೃಷ್ಟಿಸೆ ವಸುಂಧರೆಯೊಳಂತೆಯೇ ಕವೀಂದ್ರರ್ಕಳಂ ಪುಟ್ಟಿಪನ್ (ಶ್ರೀರಾಮಾ. ೩-೬೦). [ಕಾವ್ಯ + ಸತ್ತೆ]

**ಕಾವ್ಯಸಮಯ** (ನಾ). = ಕವಿಸಮಯ: ಅವುದಶೇಷಲೋಕ ವಿಷಯಸ್ಥಿತಿಯಲ್ತಖಿಳಾಗಮಾರ್ಥಮುಂ ಭಾವಿಪೊಡಲ್ತು ಸತ್ಕವಿ ಪರಂಪರೆಯಿಂ ಪರಿಗೀತಮಾಗಿ ನಿಷ್ಕೇವಳಮಾದ ರೂಢಿವಶದಿಂ ಸಲೆ ಸಲ್ವುದಿದಲ್ತೆ . . . ಕಾವ್ಯಸಮಯಂ (ಕಾವ್ಯಾವ. ೮೪೪). [ಕಾವ್ಯ + ಸಮಯ]

**ಕಾವ್ಯಸಮಾಧಿ** (ನಾ). ಕವಿತ್ವದ ಮೂಲಕ ಪಡೆಯುವ ತನ್ಮಯತೆ: ಕಾವ್ಯ ಸಮಾಧಿಯಿಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ (ಜಗವಿ. ೧-೧೭); ಕಾವ್ಯ ಸಮಾಧಿಯ ಧ್ಯಾನ – ಧಾರಣೆಗಳನ್ನೊಳಗೊಂಡ ದರ್ಶನವು ಕಾವ್ಯಯೋಗವೆನಿಸುವುದು (ಸಾಹಿವಿ. ೧). [ಕಾವ್ಯ + ಸಮಾಧಿ]

**ಕಾವ್ಯಸ್ತವ** (ನಾ). ಕಾವ್ಯವನ್ನು ಹೊಗಳುವಿಕೆ; ಕಾವ್ಯದ ಶ್ಲಾಘನೆ: ಮಿಡುಕದು ಖಳರಸನೆ ಸುಕವಿ ಕಾವ್ಯಸ್ತವ [ಪಾಠಾಂ. ಸ್ಥಳ]ದೊಳ್ (ರಾಜಶೇ. ೧-೪೧). [ಕಾವ್ಯ + ಸ್ತವ]

**ಕಾವ್ಯಾಂಗ** (ನಾ). ೧. ಕಾವ್ಯದ ಅವಯವ ಅಥವಾ ಭಾಗ: ರಸಂಗಳ್ . . . ಕಾವ್ಯಾಂಗಕ್ಕೆ ಸತ್ಕ್ರಿಯಾರೂಪಂಗಳು (ಕಾವ್ಯಾವ. ೭೯೩). ೨. ಕಾವ್ಯರಚನೆಗೆ ಅನುಕೂಲವಾದ ಸಾಧನ, —ಉಪಕರಣ; ಕಾವ್ಯಸಾಮಗ್ರಿ: ಕವಿಯು . . . ತನ್ನ ಎಲ್ಲ ಜ್ಞಾನವನ್ನೂ ಕಾವ್ಯಾಂಗವನ್ನಾಗಿ ಮಾಡಬೇಕಾದುದರಿಂದ ಆತನ ಹೊಣೆಗಾರಿಕೆಯು ಗುರುತರವಾದುದು (ಭಾರದ. ೪೪೪). [ಕಾವ್ಯ + ಅಂಗ₂]

**ಕಾವ್ಯಾಂತರಾಳ** (ನಾ). ಕಾವ್ಯದ ಅಂತರಾಳ, —ತಿರುಳು: ಹಲವೋದುಗರಾದ ಕನ್ನಡ ರಸಿಕರು ಕಾವ್ಯಾಂತರಾಳವನ್ನು ಅರ್ಥವಿಸಿಕೊಳ್ಳಲು (ಕಾಲೂರ. ೬ ಹರಕೆ). [ಕಾವ್ಯ + ಅಂತರಾಳ (= ಅಂತರಾಲ)]

**ಕಾವ್ಯಾನಂದ** (ನಾ). ಕಾವ್ಯದಿಂದ ದೊರೆಯುವ ಆನಂದ: ಕಾವ್ಯಾನಂದವು ಬರಿಯ ದೇವಸದೃಶ ವಿರಾಮ ಲೀಲೆಯಲ್ಲ (ನವ್ಯಕಾ. ೧೧೨). [ಕಾವ್ಯ + ಆನಂದ]

**ಕಾವ್ಯಾನುಭವ** (ನಾ). ಕಾವ್ಯದ ಅನುಭವ; ಕಾವ್ಯವನ್ನು ಓದಿಕೊಳ್ಳುವುದರಿಂದ ಪಡೆದುಕೊಳ್ಳುವ ರಸಾನುಭವ: ಇವು ಕಾವ್ಯದ ಅಷ್ಟಾಂಗಗಳು. ಇವುಗಳಲ್ಲಿ ಯಾವುದೊಂದನ್ನೇ ಎತ್ತಿ ಹಿಡಿಯಲು ಬರುವಂತಿದೆ. ಆದರೆ ಹಾಗೆ ಮಾಡಿದರೆ ಕಾವ್ಯಾನುಭವವನ್ನು ಪೂರ್ಣವಾಗಿ ಪಡೆದಂತಾಗಲಿಲ್ಲ (ನವ್ಯಕಾ. ೭೫). [ಕಾವ್ಯ + ಅನುಭವ]

**ಕಾವ್ಯಾಭಾಸ** (ನಾ). ಕಾವ್ಯದ ಅಣಕ; ಕಾವ್ಯವಾಗಿರದೆ ಕಾವ್ಯದ ವೇಷವನ್ನು ತೊಟ್ಟ ರಚನೆ: ಅನುಭಾವ ಆನಂದ ಸಮರಸಭಕ್ತಿಯಿಂದುಂಟಾದದ್ದೇ ಕಾವ್ಯ; ಉಳಿದದ್ದು ಕಾವ್ಯಾಭಾಸ (ಸಾಹಿವಿ. ೧೨). [ಕಾವ್ಯ + ಆಭಾಸ]

**ಕಾವ್ಯಾರ್ಥಾಪತ್ತಿ** (ನಾ). [ಕಾವ್ಯಮೀ] ಒಂದು ಅರ್ಥಾಲಂಕಾರ: ಒಂದು ಕಾರಣದಿಂ ಪಿರಿದಾದ ಕಜ್ಜಮಪ್ಪುದೆಂಬುದಂ ಪೇೞ್ದು ಕಿಱಿದಾದ ಕಜ್ಜಮಪ್ಪುದಂ ಪೇೞ್ವುದೇನೆಂಬ ಕೈಮುತಿಕನ್ಯಾಯದಿಂ ಪೇೞಿಯದು ಕಾವ್ಯಾರ್ಥಾಪತ್ತಿಯೆನಿಪುದು. ಎಂತೆನೆ – ಸೆಣಸಿ ಮಹಿಶೂರಭಟರೊಳ್ ಪೊಣರ್ದಱಿದರ್ ಪೊಲಬುಗೆಟ್ಟು ಮಾಯಿಪುರಾಟರ್ ಪಣೆದರ್ಪೊಗಲರುಮನೆಯಿಂ ಬಣಗುಗಳೀ ಕೆಳದಿ ಮಧುರೆದೊರೆಗಳ ಪಾಡೇಂ (ಅಪ್ರತಿ. ೧೦೩-೫೮). [ಕಾವ್ಯ + ಅರ್ಥಾಪತ್ತಿ]

**ಕಾವ್ಯಾಲಂಕೃತಿ** (ನಾ). ಕಾವ್ಯದಲ್ಲಿ ಬರುವ ಅಲಂಕಾರ: (*). [ಕಾವ್ಯ + ಅಲಂಕೃತಿ]

**ಕಾವ್ಯಾವಲೋಕ** (ನಾ). = ಕಾವ್ಯಾವಲೋಕನ ೨: ಕರ್ಣಾಟಕದಿಂ ಕಾವ್ಯಾವಲೋಕಮಂ ವಿರಚಿಸುವೆಂ (ಕಾವ್ಯಾವ. ೩). [ಕಾವ್ಯ + ಅವಲೋಕ]

**ಕಾವ್ಯಾವಲೋಕನ** (ನಾ). ೧. ಕಾವ್ಯದ ಪರಿಶೀಲನೆ, —ವಿಮರ್ಶೆ. ೨. ಕಾವ್ಯದ ಗುಣ, ರೀತಿ, ಅಲಂಕಾರ, ಕವಿಸಮಯಾದಿಗಳನ್ನು ಕುರಿತು ನಾಗವರ್ಮನು ಬರೆದ ಒಂದು ಗ್ರಂಥದ ಹೆಸರು: ಶ್ರೀನಾಗವರ್ಮ ಪ್ರಣೀತಮಪ್ಪ ಕಾವ್ಯಾವಲೋಕನದೊಳ್ (ಕಾವ್ಯಾವ. ೪೨೩ ವ). [ಕಾವ್ಯ + ಅವಲೋಕನ]

**ಕಾವ್ವರಿ** 'ಕವ್ವರಿ' ನೋ.

**ಕಾಶ** (ನಾ). ೧. ಕಾಂತಿ; ಪ್ರಕಾಶ. ೨. ಬಿಳಿ ಹೂ ಬಿಡುವ ಒಂದು ಬಗೆಯ ಹುಲ್ಲು; ಕಾಚಿಹುಲ್ಲು; ಜೊಂಡುಹುಲ್ಲು: "ಕಾಳುಗಬ್ಬೀಷೀಕೆ ಕಾಶಮಕ್ಕು" (ಮಂಗರಾ. ೩೪-೯); ಪದೆದೆಳಸಿತ್ತಾರಯ್ದು ನೋಡದಂತಸ್ಸಾರತೆಯಂ ಕಾಶ ಕಣಿಶಮುಂ ಶುಕಶಾಬಂ (ಪಂರಾಮಾ. ೭-೧೬೯); ಕಾಶಂಗಳೆಂಬ ತೃಣವಿಶೇಷಂಗಳಿಂ (ಸೌಗಂಧಿ. ೪೩೨-೨೧); "ಕಚ್ಛಲಂ – ಕಾಶ, ದರ್ಭೆ" (ಓಷಧಿ. ೨೧). ೩. ಕಾಚಿಹುಲ್ಲಿನ ಹೂವು. [ಸಂ.]

**ಕಾಶಕಬ್ಬು** 'ಕಾಶಗಬ್ಬು' ನೋ.

**ಕಾಶಗಬ್ಬು, ಕಾಶಕಬ್ಬು** (ನಾ). = ಕಾಶ ೨: "ಇಕ್ಷು, ಶರಾ – ಕಾಶಗಬ್ಬು, ಕುಸುಮ" (ಓಷಧಿ. ೧೩). **ಕಾಶಕಬ್ಬು**: "ಇಕ್ಷ್ವಾರಃ — ಕೊಳವಳಿಕೆ, ಕಾಶಕಬ್ಬು, ನಾಳಲು" (ಓಷಧಿ. ೧೩). [ಕಾಶ + ಕಬ್ಬು (< ಕರ್ವು)]

**ಕಾಶವರ್ಗ** (ನಾ). ಹುಲ್ಲುಗಾರರು: ಕರಿ ಹುಡುಗ ಕೊಡಮೊಗೆ ತಿಂಮದೊಡ ಚೆಂನ ಸಹಾ ಮೂವರಿಂದ ಸಲುವ ಕಾಶವರ್ಗದ ತೆರು ಯೀ ಆರು ಮಂದಿಗೂ ಹರುಗೋಲತ್ತೆರು ಸಹಾ ಬಿಟೆಧೆವೇ (ಎಕ. VII, ಶಿವಮೊ. ೩-೨೮; 1671). [ಕಾಶ + ವರ್ಗ]

**ಕಾಶಳ** (ನಾ). ಕಂಚಿನ ತಾಳ: ಚಂದ್ರಾದಿತ್ಯರಂ ಕಾಶಳಂ ಮಾಡುವರುಂ ನಕ್ಷತ್ರಮಾಲೆಯಂ ಸಾಲೆ ಮುಡಿವರುಂ ಸಿಡಿಲ ಪೊಡೆಸೆಂಡು ತೊಡೆವರುಂ (ಎಕ. X, ಬಾಗೆಪ. ೩೫-೩; 1250). [< ಸಂ. ಕಾಂಸ್ಯತಾಲ]

**ಕಾಶಾಂಬರ** (ನಾ). = ಕಾಶಾಕರ್ಪಟ: ಧುರದೊಳು ಬೊಂಮನ್ರಿಪಾಳಕಂ ಮುಳಿಸಿನಿಂ ಖಳ್ಗಕ್ಕೆ ಕೈ ನೀಡೆ ನಿರ್ಬರದಿಂ ಶಾತ್ರವಮಂಡಳೀಶನಿವಹಕ್ಕಾಭೀಳ ಕಾಳಾಲಯಂ ಶರಣಾಶಾಂಬರವಂಬರಂ ಜಳದಿ ಲಿಂಗಾಲಿಂಗನಂ ಸದ್ಗುಹಾಂತರವಾಸಂ ಜಡೆ ದಂಡುಮುಂಡಿತಶಿರಂ ಕಾಶಾಂಬರಂ ಖರ್ಪ್ಪರ (ಕಇ. IV, ೧-೪೦; 1204). [< ಸಂ. ಕಾಷಾಯಾಂಬರ]

**ಕಾಶಾಕರ್ಪಟ** (ನಾ). ಕಾವಿಬಟ್ಟೆ; ಕೌಪೀನಕ್ಕಾಗಿ ಬಳಸುವ ತುಂಡು ಬಟ್ಟೆ: ಕಾಶಾಕರ್ಪಟ, ಕಾಸಿಗಪ್ಪಡ, ಕಸೆಗಪ್ಪಡ (ಶಮದ ೨೯೩ ಪ್ರಯೋ). [< ಸಂ. ಕಾಷಾಯಕರ್ಪಟ]

**ಕಾಶಿ₁** (ಗು). ೧. ಹೊಳೆಯುವ; ಪ್ರಕಾಶಿಸುವ. ೨. ಕಾಣುವ; ತೋರುವ. [ಸಂ. ಕಾಶಿನ್]

**ಕಾಶಿ$_2$** (ನಾ). ಗಂಗಾತೀರದಲ್ಲಿರುವ ಒಂದು ಪ್ರಸಿದ್ಧ ತೀರ್ಥ; ವಾರಣಾಶಿ: ಶ್ರೀ ಮಹಾಕಾಶಿಯೊಳು ತತ್ಪುರಧಾಮ ವಿಶ್ವೇಶ್ವರಂ (ಬಸವು. ೫೩-೫೬); ಕಾಶಿಗೆ ಹೋದರೂ ಶನೀಶ್ವರ ಬಿಡದು (ಗಾದೆ). [ಸಂ.]

**ಕಾಶಿ$_3$** 'ಕಾಸೆ$_1$' ನೋ.

**ಕಾಶಿಕಾಗದ** (ನಾ). ಉತ್ತಮವಾದ ಒಂದು ಬಗೆಯ ಬಿಳಿ ಕಾಗದ : (ಕ). [ಕಾಶಿ$_1$ + ಕಾಗದ]

**ಕಾಶಿಕುಪ್ಪೆ** (ನಾ). ೧. ಕಾಶಿಯಿಂದ ಗಂಗಾಜಲವನ್ನು ತುಂಬಿ ತರುವುದಕ್ಕಾಗಿ ಬಳಸುವ ಪಾತ್ರೆ, —ಗಿಂಡಿ : (ಕ). [ಕಾಶಿ$_2$ + ಕುಪ್ಪೆ. / ತಮಿ. ಕಾಶಿಕ್ಕುಪ್ಪೆ]

**ಕಾಶಿಕೆ** (ನಾ). ಮೊಲ್ಲೆ ಹೂವಿನಲ್ಲಿ ಒಂದು ಬಗೆ: "ಕಾಶಿಕಾ, ಮಲ್ಲಿಕಾ – ಈ ೨ ಮಲ್ಲೆ" (ಹಲಾಯು. ೫೩-೧೬೧). [ಸಂ. ಕಾಶಿಕಾ]

**ಕಾಶಿತಾಲಿ$_1$** (ನಾ). ಕೊರಳ ಸರದಲ್ಲಿ ಪೋಣಿಸಿದ ಒಂದು ಬಗೆಯ ತಾಳಿ : (ಕ). [ಕಾಶಿ$_2$ + ತಾಲಿ$_1$]

**ಕಾಶಿತಾಲಿ$_2$** (ನಾ). = ಕಾಶಿಕುಪ್ಪೆ : (ಕ). [ಕಾಶಿ$_2$ + ತಾಲಿ$_3$]

**ಕಾಶಿತುಂಬೆ** (ನಾ). ಒಂದು ಬಗೆಯ ತುಂಬೆಯ ಹೂವು : ಗೋಕರ್ಣ ದೇವ ಕಣಿಗಲ ವಕ್ಕೆಹೂ ಕಾಶಿತುಂಬೆ (ಸಿದ್ಧಪು. ೧೮-೯೨). [ಕಾಶಿ$_2$ + ತುಂಬೆ]

**ಕಾಶಿದಾರ** (ನಾ). ಕಾಶಿ ಕ್ಷೇತ್ರದಲ್ಲಿ ದೊರಕುವ ಪವಿತ್ರದಾರ: ಅವರು ಕಾಶಿದಾರ ಕಟ್ಟಿಕೊಂಡಿದ್ದಾರೆ (ರೂಢಿ). [ಕಾಶಿ$_2$ + ದಾರ$_1$]

**ಕಾಶಿನಾಥ** (ನಾ). ಕಾಶಿಯ ಒಡೆಯ; ಶಿವ : (ಕ). [ಕಾಶಿ$_2$ + ನಾಥ]

**ಕಾಶಿಪಟ್ಟೆ** (ನಾ). ಕಾಶಿಯ ರೇಶ್ಮೆಬಟ್ಟೆ; ಉತ್ತಮವಾದ ರೇಶ್ಮೆ: (ಕ). [ಕಾಶಿ$_2$ + ಪಟ್ಟೆ]

**ಕಾಶಿಬಿಂದು** (ನಾ). ಕಣ್ಣುಗುಡ್ಡೆಯ ಹಿಂದಿರುವ ಕಂದು ಬಣ್ಣದ ಗುಂಡಾದ ತೆರೆ: ಈ ಕರಿಯ ಗುಡ್ಡನ್ನು ಪಾರದರ್ಶಕ ಪಟಲವೆಂದು ಕರೆಯುವರು. ಈ ಪಾರದರ್ಶಕ ಪಟಲದ ಹಿಂದೆ ಕಂದು ಬಣ್ಣದ ಗುಂಡಾದ ತೆರೆಯು ಇರುತ್ತದೆ. ಇದಕ್ಕೆ ಕಾಶಿಬಿಂದು ಎಂದು ಹೆಸರು (ನಿಮ್ಮದೃ. ೧೦೫). [< ಕಾಚ$_1$ + ಬಿಂದು]

**ಕಾಶೀಯಾತ್ರೆ** (ನಾ). ೧. ಕಾಶಿಕ್ಷೇತ್ರಕ್ಕಾಗಿ ಕೈಕೊಳ್ಳುವ ಯಾತ್ರೆ. ೨. ಮದುವೆಗೆ ಮುಂಚೆ ಅಳಿಯನಾಗುವ ವರನಿಂದ ಶಾಸ್ತ್ರಕ್ಕಾಗಿ ಮಾಡಿಸುವ ಹತ್ತಾರು ಹೆಜ್ಜೆಗಳ ನಡಗೆ : ಕಾಶೀಯಾತ್ರೆ, ಕೈಯಲ್ಲಿ ದೊಣ್ಣೆ, ಹತ್ ನಿಮ್ಮಪ್ಪನ ಸೊಂಟ ಮುರಿಯಾ (ಗಾದೆ).

ಕಾಶೀಯಾತ್ರೆಗೆಹೋಗು = ದೂರ ಹೊರಟು ಹೋಗು ; ಮಾಯವಾಗು: ಅವೆಲ್ಲಾ ಇದ್ರೇ ನಿನ್ನ ವ್ರತ, ಪೂಜೆ, ಪುನಸ್ಕಾರಗಳು. ಅವಿಲ್ಲದಿದ್ದರೆ ಇವೆಲ್ಲಾ ಎಂದೋ ಕಾಶೀಯಾತ್ರೆಗೆ ಹೋಗೋವು (ಹೇಮಕೂ. ೫). [ಕಾಶಿ$_2$ + ಯಾತ್ರೆ]

**ಕಾಶೆ$_1$** 'ಕಾಸೆ$_1$' ನೋ.

**ಕಾಶೆ$_2$** (ನಾ). = ಕಾಶ ೨: ಕುಶೆ ಕಾಶೆಯೆಂಬಿವಱೊಳ್ (ಲೋ ಕೋ ಪ. ೫-೨೮). [< ಸಂ. ಕಾಶ]

**ಕಾಶ್ಮರಿ** (ನಾ). ೧. ಒಂದು ಬಗೆಯ ಮರ; ಶೀವನ್ನಿ ಮರ; ಶೀವನೆಯ ಮರ. ೨. ಕುಂಬಳದ ಬಳ್ಳಿ: "ಕಾಶ್ಮರೀ, ಮಧುಪರ್ಣಿಕಾ . . . ೭ ಕುಂಬಳಗಿಡದ ಹೆಸರು" (ಸಿದ್ಧಾಂಶಿ. ೧೦೫). [ಸಂ. ಕಾಶ್ಮರೀ]

**ಕಾಶ್ಮರಿಯ** (ನಾ). = ಕಾಶ್ಮರಿ : "ಸೀವನ್ನಿ ಕಾಶ್ಮರಿಯಂ" (ವಸ್ತುಕೋ. ೩೩-೧). [< ಸಂ. ಕಾಶ್ಮರ್ಯ]

**ಕಾಶ್ಮರ್ಯ** (ನಾ). = ಕಾಶ್ಮರಿ: "ಸೀವನ್ನಿ ಕಾಶ್ಮರ್ಯಮಕ್ಕು" (ಮಂಗರಾ. ೩೭-೨೦). [ಸಂ.]

**ಕಾಶ್ಮೀರ** (ನಾ). ೧. ಒಂದು ದೇಶದ ಹೆಸರು : ಕಾಶ್ಮೀರ ಬಾಹ್ಲಿಕ . . . ಕೇರಳ ಮುಖಾಪಾರ ದೇಶಂಗಳೊಳೆಸೆವ ಜಂಗಮವು ಭಕ್ತಾಳಿ (ಬಸಪು. ೬-೧೯) ; ಕಾಶ್ಮೀರಪ್ರಭು ಕಪೋತಶ್ಯೇನ ಪರಾಕು (ಯಾದವ. ೩-೧ ವ). ೨. ನೆಲದಾವರೆ ಗೆಡ್ಡೆ. ೩. ಕೇಸರಿ; ಕುಂಕುಮಕೇಸರಿ; ಕುಂಕುಮದ ಹೂ : ಲಲನಾ ಮುಖೇಂದು ಲಾವಣ್ಯ ಲೀಲೆಯ ಪಡೆವ ಬಣ್ಣದಿಂ ಕಂಪಿಂದೇನಲೆದುದೊ ಬಯ್ಯುಗದಂತಿರೆ ತಲೆಗೇಱುವ ಕುಸುಮ ನಿಚಯಮಂ ಕಾಶ್ಮೀರಂ (ಆದಿಪು. ೧೧-೧೨೮) ; ಕ್ಷೀರದೊಳೆಸೆವಂತಿರೆ ಕಾಶ್ಮೀರಮನೊಡಗೂಡಿ ಪೆಪ್ಪನಿಟ್ಟಾ ಮೊಸರಂ ಸೀರೆಯೊಳಗಿಕ್ಕಿ (ಲೋಕೋಪ. ೮-೫೨). ೪. ಕುಂಕುಮ : ಮಲಯಜ ಕಾಶ್ಮೀರ ರಸದಿಂ ಜಿನೇಂದ್ರನನಾರಾಧಿಸಿದಂ (ಪಂರಾಮಾ. ೧೨-೫) ; ಜಯಲಕ್ಷ್ಮಿಗೆ ತದ್ಗಜ ವಕ್ತ್ರರಕ್ತ ಕಾಶ್ಮೀರ ವಿಲೇಪಮಂ ನೆಱಪಿ (ಎಕ. V, ಹಾಸನ. ೧೧೬-೧೩ ; 1122); ಸಾರಣೆಗೆಯ್ದು ಮೃಗೋದ್ಭವದಿಂದೆಯ್ದೆ ಕಾರಣೆದೆಗೆದ ಕಾಶ್ಮೀರದೆ . . . ಕೇರಿಕೇರಿಗಳು ಕಂಗೆಸೆದವು (ತ್ರಿಭುತಿ. ೫-೮) ; ಅಮಳ ಕಾಶ್ಮೀರದ ಕತ್ತುರಿಯ ನವ ಪಂಕದಿಂ ಭೂವರನಂ ಪದೆದಿಟ್ಟರು (ಹವ್ಮಾರ. ೪-೨೪). [ಸಂ.]

**ಕಾಶ್ಮೀರಜ** (ಗು). ೧. ಕಾಶ್ಮೀರದಲ್ಲಿ ಹುಟ್ಟಿದ. (ನಾ). ೨. ಕುಂಕುಮ ಕೇಸರಿ. ೩. ಕುಂಕುಮ : "ಕುಂಕುಮಂ . . . ಕಾಶ್ಮೀರಜಂ ಕಾಳೇಯಂ ಜಾಪಕಂ – ಈ ೭ ಕುಂಕುಮಂ" (ಹಲಾಯು. ೮೯-೩೮೯) ; "ಕಾಳೇಯ ಮೆನಲು ಕಾಶ್ಮೀರಜಂ" (ಮಂಗರಾ. ೯೯-೨೨). [ಸಂ.]

**ಕಾಶ್ಮೀರಜಳ** (ನಾ). ಕುಂಕುಮ ಬೆರಸಿದ ನೀರು ; ಕುಂಕುಮ ದ್ರವ : ಅರ್ಚಿಸಿದನೊ ಬಳರಿಪು ಕಾಶ್ಮೀರಜಳದಿನಂಗಜರಿಪುವಂ (ಮಲ್ಲಿಪು. ೧೨-೧೬೭). [ಕಾಶ್ಮೀರ + ಜಳ (= ಜಲ)]

**ಕಾಶ್ಮೀರಭೂಮಿ** (ನಾ). ಕುಂಕುಮ ಬಣ್ಣದ ಹೊಲ; ಕೆಮ್ಮಣ್ಣಿನ ಭೂಮಿ : ತಿಪ್ಪೆಸುಂಕಗಾಣದಲಿ ಕಾಶ್ಮೀರಭೂಮಿ ಮತ್ತ ಇದಿನಿಸುವಂ ನಿರ್ವಾಣಿದೇವರ್ಗ್ಗೆ ಧಾರಾಪೂರ್ವಕಂ ಮಾಡಿಕೊಟ್ಟ ಧರ್ಮ (ಸೌಇಇ. IX–i, ೨೩೫-೧೬ ; 1130). [ಕಾಶ್ಮೀರ + ಭೂಮಿ]

**ಕಾಶ್ಮೀರರಾಗ** (ನಾ). ಕುಂಕುಮದ ಬಣ್ಣ ; ಕುಂಕುಮದ ಲೇಪ: ಪೂಸಿದ ಕಾಶ್ಮೀರರಾಗಮುಂ ಉಟ್ಟ ಕೌಸುಂಭಾಂಬರರುಚಿಯುಂ ತೊಟ್ಟ ಪದ್ಮರಾಗಾಭರಣ ಕಿರಣಂಗಳುಂ ಸಂಕ್ರಮಿಸಿದಂತೆ (ಆದಿಪು. ೧೨-೧ ವ) ; ಶತಮುಖ ಶ್ರೀವಕ್ತ್ರ ಕಾಶ್ಮೀರರಾಗಮಿದೆಂಬೀಱ್ಕೆಯನಾಂತು ರಕ್ತರುಚಿಯಿಂ ಚೆಲ್ವಾಯ್ತು ಚಂದ್ರೋದಯಂ (ಪುಷ್ಪಪು. ೮-೧೦೪). [ಕಾಶ್ಮೀರ + ರಾಗ]

**ಕಾಶ್ಮೀರಶೈವ** (ನಾ). ಶೈವಮತದ ಎಂಟು ಪ್ರಭೇದಗಳಲ್ಲಿ ಒಂದು : ಶೈವಮತದಲ್ಲಿ ನಾವು ಎಂಟು ಪ್ರಭೇದಗಳನ್ನು ಕಾಣಬಹುದು. ೧) ದ್ವೈತ ಪಾಶುಪತ. ೨) ದ್ವೈತ ಶೈವಸಿದ್ಧಾಂತ. ೩) ದ್ವೈತಾ ದ್ವೈತ ಲಕುಲೀಶ ಪಾಶುಪತ . . . ೮) ಕಾಶ್ಮೀರಶೈವ (ಭಾರದ. ೨೧೦). [ಕಾಶ್ಮೀರ + ಶೈವ]

**ಕಾಶ್ಮೀರಿ** (ಗು). ೧. ಕಾಶ್ಮೀರದಲ್ಲಿ ಹುಟ್ಟಿದ, —ತಯಾರಾದ. 'ಕಾಶ್ಮೀರಿಶಾಲು' ಪರಾ. (ನಾ). ೨. ಕಾಶ್ಮೀರದ ಭಾಷೆ. [ಸಂ. ಕಾಶ್ಮೀರೀ]

**ಕಾಶ್ಮೀರಿಶಾಲು** (ನಾ). ಕಾಶ್ಮೀರದಲ್ಲಿ ತಯಾರಾದ ಶಾಲು : ನಿಮ್ಮ ಬದುಕು ಕಾಶ್ಮೀರಿಶಾಲು, ಅದು ಅಲ್ಲ ತೇಪೆ ಕವುದೆ (ಹೃದಸ. ೭೪-೧೦). [ಕಾಶ್ಮೀರಿ + ಶಾಲು]

**ಕಾಶ್ಯ$_1$** (ನಾ). ತೇಜ ; ಪ್ರಕಾಶ : ತೇಜೋವಾಚಕಮಪ್ಪ ಕಾಶ್ಯಮಂ [ಪಾಠಾಂ. ಕಾಶ್ಯಪನಂ, ಕಾಶ್ಯಪ ಪ್ರಕಾಶ್ಯಮಂ] ಪಾಲಿಸುವುದಱಿಂ ಕಾಶ್ಯಪನುಂ (ಆದಿಪು. ೮-೭೫ ವ). [< ಸಂ. ಕಾಶ]

**ಕಾಶ್ಯ₂** (ನಾ). ಹೆಂಡ; ಮದ್ಯ. [ಸಂ.]

**ಕಾಶ್ಯಪ** (ಗು). ೧. ಕಶ್ಯಪನಿಗೆ ಸಂಬಂಧಿಸಿದ. (ನಾ). ೨. ಕಶ್ಯಪ ಗೋತ್ರದಲ್ಲಿ ಹುಟ್ಟಿದ ಒಬ್ಬ ಋಷಿ: ಸುಮೇಘ ಪರ್ವತದಲ್ಲಿ ಅತ್ರಿ ಅಂಗಿರಸ . . . ಕಪಿಲ, ಕಾಶ್ಯಪ . . . ಉಪಮನ್ಯು ಮೊದಲಾದ ಅಷ್ಟಾಶೀತಿ ಸಹಸ್ರ ಋಷಿಗಳಿಗನಂತಾಶ್ರಯಂಗಳುಂ (ವಿವೇಕ. ೨೧೬). ೩. ಕಣಾದ ಮುನಿ. [ಸಂ.]

**ಕಾಶ್ಯಪಗೋತ್ರ** (ನಾ). ಕಶ್ಯಪಗೋತ್ರ: ಸ್ಮರರಿಪು ಪುಟ್ಟಿ ಧಾರಿಣಿಗೆ ಕಾಶ್ಯಪಗೋತ್ರವಿದೇಂ ಪವಿತ್ರಮೋ (ಪುಷ್ಪಪು. ೧೨-೧೫). [ಕಾಶ್ಯಪ + ಗೋತ್ರ]

**ಕಾಶ್ಯಪಿ₁** (ನಾ). ೧. ಕಶ್ಯಪನ ಮಗ. ೨. ಅರುಣ. ೩. ಗರುಡ. [ಸಂ.]

**ಕಾಶ್ಯಪಿ₂** (ನಾ). ಭೂಮಿ; ಪೃಥ್ವಿ: "ಪೃಥಿವಿ ಗಹ್ವರಿ ಯುಳಿಯು ಕಾಶ್ಯಪಿ ಮೇದಿನಿ . . . ಎನೆ ನೆಲಕೆ ನಾಮಮುಂ" (ಮಂಗರಾ. ೨೮-೧). [ಸಂ. ಕಾಶ್ಯಪೀ]

**ಕಾಷಾಯ** (ಗು). ೧. ಕಾವಿಬಣ್ಣದ; ಕೆಂಬಣ್ಣವನ್ನುಳ್ಳ: ಅರುಣ ಕಿರಣ ನಿಕಾಯ ಕಾಂತಿಯ ತರುಣತೆಯ ಕಾಷಾಯ ಕಾಂತಿಯ ಕರ ನಿಶಾಕರ ಪೂರ್ಣಬಿಂಬದ ಪರಿಯ ಮುಖಸಿರಿಯ (ಗಗತಾ. ೨-೭). (ನಾ). ೨. ಕಾವಿಬಟ್ಟೆ: ಕಾಷಾಯವೇಂ ತಪಸು? ಗೃಹಲೋಕ ನಿರ್ವಾಹ ವೇಷ ತಾಳದ ತಪಸು, ಕಠಿಣತರ ತಪಸು (ಮಂಕುಕ. ೬೧೨). ೩. [ಜೈನ] ಕಷಾಯಕ್ಕೆ ಸಂಬಂಧಪಟ್ಟುದು: ಶ್ರೀಯೋರ್ತ್ಥಿಗೆ ಕಾಷಾಯಂಗಳ ಹೇಯತ್ವಮುಂ ಸುಸ್ಪಷ್ಟಂ ಮಾಡಿದಪಂ (ಉಸಾರ. ೩೦೮). [ಸಂ.]

**ಕಾಷಾಯಧಾರಿ** (ನಾ). ಕಾವಿಬಟ್ಟೆಯನ್ನು ಧರಿಸಿದವನು: "ಕಾವಿ ವಸ್ತ್ರವನ್ನು ಹೊತ್ತವನು, ಸಂನ್ಯಾಸಿ" (ಗಂಗಾಮು. ೮೩). [ಸಂ. ಕಾಷಾಯಧಾರಿನ್]

**ಕಾಷಾಯವಸನ** (ನಾ). ಕಾವಿಬಟ್ಟೆ: (ಕ). [ಕಾಷಾಯ + ವಸನ]

**ಕಾಷಾಯವಸ್ತ್ರ** (ನಾ). ಕಾವಿಬಟ್ಟೆ: ಕಾಷಾಯವಸ್ತ್ರಧಾರಿಯಾಗಿ ತನ್ನ ಆಶ್ರಮಕ್ಕೆ ಉಚಿತ ನಿತ್ಯ ಸಾಧನ ಅನುಷ್ಠಾನದಲ್ಲಿ ನಿರತನಾಗಿ (ಕರ್ನಾಟ.೨೬೧). [ಕಾಷಾಯ + ವಸ್ತ್ರ]

**ಕಾಷ್ಟ** (ನಾ). = ಕಾಷ್ಠ₁: ಕಾಷ್ಟ ಬೆಂದು ಕರಿಯಾದ ತೆಱದಂತೆ (ಮೋಳಿಮಾ. ೬೮೫-೯೯೭); ಸ್ವಲ್ಪ ಕಾಷ್ಟವನಸ್ತಿ ಮೋಹಿಸೆ ಕುಪ್ಪೆಗೆಡೆವುದು ಭಸ್ಮ (ಗಗತಾ. ೧೬-೪೭). [< ಸಂ. ಕಾಷ್ಠ]

**ಕಾಷ್ಠ₁** 'ಕಾಷ್ಠೆ' ನೋ.

**ಕಾಷ್ಠ₂** (ನಾ). ೧. ಮರದ ತುಂಡು; ಕಟ್ಟಿಗೆ; ಸೌದೆ: "ಕಾಷ್ಠ ವಡುಗಬ್ಬಕ್ಕು" (ಮಂಗರಾ. ೧೫-೯); ಅಪ್ಪುವಿನ ಯೋಗದ ಕಾಷ್ಠ ಹೊತ್ತುವಲ್ಲಿ (ಮೋಳಿಮಾ. ೬-೨೪); ಕ್ಷಿಪ್ರದಲ್ಲಿ ಚಂದನಕಾಷ್ಠದ ಚಿತೆ . . . ಸಿದ್ಧವಾಯಿತು (ಶಾಂತಲಾ. ೧೮೦). ೨. ಚಿಲಕ; ಮೊಳೆ; ಕೀಲು. ೩. ದಡ್ಡ; ಮೂರ್ಖ. ೪. (ಆಲಂ) ತೆಳ್ಳಗಾಗಿರುವಿಕೆ; ತೆಳುವು; ಕೃಶತೆ: "ಅನುಕೂಲೋತ್ಕೃಷ್ಟ . . . ಮೂರ್ಖ ದಿಕ್ ಕೃಶಮಿವುಂ ಕಾಷ್ಠಾಭಿದಾನಂ" (ನಾನಾರ. ೩೪). [ಸಂ.]

**ಕಾಷ್ಠಕದಳಿ** (ನಾ). = ಕಾಷ್ಠಬಾಳೆ: "ಶುಕ್ಲಕದಳೀ – ಕಾಷ್ಠಕದಳಿ" (ಓಷಧಿ. ೧೯೯). [ಕಾಷ್ಠ₂ + ಕದಳಿ (=ಕದಲಿ)]

**ಕಾಷ್ಠಕುದ್ದಾಲ** (ನಾ). ಮರದ ಗುದ್ದಲಿ, —ಸಲಕೆ: "ಹಡಗಿನೊಳಗೆ ಸೇರಿದ ನೀರನ್ನೂ ಕಸವನ್ನೂ ಹೊರಕ್ಕೆ ತೆಗೆದುಹಾಕುವ ಒಂದು ಮರದ ಮೊರಗುದ್ದಲಿ, ಎಲೆಗುದ್ದಲಿ" (ಸಂಕನಿ. ೭೦೪). [ಕಾಷ್ಠ₂ + ಕುದ್ದಾಲ]

**ಕಾಷ್ಠಜ್ಯೋತಿ** (ನಾ). ಒಂದು ಬಗೆಯ ಸಸ್ಯ: "ಜ್ಯೋತಿರ್ದ್ರುಮಃ – ಕಾಷ್ಠಜ್ಯೋತಿ" (ಓಷಧಿ. ೬೩). [ಕಾಷ್ಠ₂ + ಜ್ಯೋತಿ]

**ಕಾಷ್ಠತಕ್ಷಕ** (ನಾ). ಬಡಗಿ; ಮರಗೆಲಸದವನು. [ಸಂ.]

**ಕಾಷ್ಠತರಂಗ** (ನಾ). ಮರದ ಪಟ್ಟಿಕೆಗಳಿಂದಲೆ ಸ್ವರಗಳನ್ನು ಹೊರಡಿಸುವ ಒಂದು ವಾದ್ಯ: ಪರದೇಶದವರ ಸಹವಾಸದಿಂದ ಎಷ್ಟೋ ವಾದ್ಯಗಳು ನಮ್ಮಲ್ಲಿ ಬಂದಿವೆ . . . ಪಿಯನೊ, ಕಾಷ್ಠತರಂಗ, ಮುಂತಾದುವು ಎಷ್ಟೋ ಬಂದಿವೆ (ಗಾನಕ. ೧೦೧). [ಕಾಷ್ಠ₂ + ತರಂಗ]

**ಕಾಷ್ಠಬಾಳೆ** (ನಾ). ಒಂದು ಬಗೆಯ ಬಾಳೆ; ಮರಬಾಳೆ: "ರಂಭಾ– ಬಾಳೆ, ಕಾಷ್ಠಬಾಳೆ" (ಓಷಧಿ. ೧೩೩). [ಕಾಷ್ಠ₂ + ಬಾಳೆ]

**ಕಾಷ್ಠಭಾರ** (ನಾ). ಸೌದೆಯ ಹೊರೆ; ಕಟ್ಟಿಗೆಯ ಹೊರೆ: ಆ ಪೊಟಲೊಳ್ ಕಾಷ್ಠಭಾರಂಗಳಂ ತಂದು ಮಾಱೆ (ಶಾಂತಿಪು. ೯-೪೭ ವ); ಈಗ ನೋಡಲಾಗಿ ಕಾಷ್ಠಭಾರವನ್ನು ಹೊರುವುದು ಅತಿ ಕಷ್ಟವಾಗಿ ಕಂಡಿತು (ಕಪಾಕುಂ. ೭). [ಕಾಷ್ಠ₂ + ಭಾರ]

**ಕಾಷ್ಠವ್ಯಸನ** (ನಾ). ೧. ಸೌದೆಯ ಚಿಂತೆ (?). ೨. ಹತ್ತು ವ್ಯಸನಗಳಲ್ಲಿ ಒಂದು: ತನುವ್ಯಸನ, ರಾಜ್ಯವ್ಯಸನ . . . ಕಾಷ್ಠವ್ಯಸನಗಳೆಂಬ ದಶವ್ಯಸನಗಳಿಂ ಹಸಗೆಟ್ಟು (ವಿವೇಕ. ೨೪೬). ೩. (ಆಲಂ) ನಿರರ್ಥಕವಾದ ಚಿಂತೆ; ಒಣತರಲೆ: ಯಾಕೆ ಸುಮ್ಮನೆ ಎಪ್ಪತ್ತೆಂಟು ಕಾಷ್ಠವ್ಯಸನ ಹಚ್ಚಿಕೊಳ್ಳುತ್ತಿ (ಮರಳಿ. ೩೭). [ಕಾಷ್ಠ₂ + ವ್ಯಸನ]

**ಕಾಷ್ಠಾಂಬರ** (ನಾ). ದಿಕ್ಕುಗಳೇ ಬಟ್ಟೆಯಾಗಿವುಳ್ಳವನು; ದಿಗಂಬರ: ಅಪ್ರಾಪ್ತರಂತಿರೆ ಕಾಷ್ಠಾಂಬರನಾಗಿ ಮುಟ್ಟುಗಿಡೆ ವಂಶಂಗೆಟ್ಟು ನಾಣ್ಗೆಟ್ಟು ದುಶ್ಚರಿತಂಗಾನತೆಯಾಗಿ ನಮ್ಮ ಕುಲಮಂ ನೀಂ ನೀರೊಳಿಂತದ್ದರ್ಪೋ (ಸುಕುಮಾ. ೬-೪೭). [ಸಂ. (ಕಾಷ್ಠ₁ + ಅಂಬರ)]

**ಕಾಷ್ಠಾಂಬುವಾಹಿನಿ** (ನಾ). ದೋಣಿ ಅಥವಾ ಹಡಗಿನಲ್ಲಿಯ ನೀರನ್ನು ಮೊಗೆದು ಹಾಕುವುದಕ್ಕಾಗಿ ಬಳಸುವ ಮರದ ಪಾತ್ರೆ: (ಕ). [ಸಂ. ಕಾಷ್ಠಾಂಬುವಾಹಿನೀ]

**ಕಾಷ್ಠಾಗುರು** (ನಾ). ಒಂದು ಬಗೆಯ ಅಗರು (?): "ಕ್ರಿಮಿಘ್ನಃ – ಕಾಷ್ಠಾಗುರುಃ" (ಓಷಧಿ. ೩೩). [ಕಾಷ್ಠ₂ + ಅಗುರು]

**ಕಾಷ್ಠಾಘಾತ** (ನಾ). ಕಟ್ಟಿಗೆಯ ಹೊಡೆತ, —ಏಟು: ಕಾಷ್ಠಾಘಾತದಿಂ ಪೊಂದುಗುಂ (ಜಾತತಿ. ೨೩-೧೦). [ಕಾಷ್ಠ₂ + ಆಘಾತ]

**ಕಾಷ್ಠಾವ್ಯಸನ** (ನಾ). ಉತ್ಕಟಾವಸ್ಥೆಯನ್ನು ಹೊಂದಿದ ವ್ಯಸನ, —ಸಂಕಟ: ಮುಕ್ತಿಯಲ್ಲಿ ಜೀವನು . . . ಹಾಯಾಗಿರದೆ ಪುನಃ ಈ ಕಾಷ್ಠಾವ್ಯಸನಗಳನ್ನು ಅನುಭವಿಸಲು ಅಲ್ಲಿಂದ ಹಿಂದಿರುಗಿ ಏಕೆ ಬರಬೇಕು (ಜೀವಾತ್ಮ. ೨೯೧); ಬದುಕಿದಷ್ಟು ದಿನ ಸುಖವಾಗಿರುವುದು ಬಿಟ್ಟು ಈ ಕಾಷ್ಠಾವ್ಯಸನವೇಕೆ (ಭಾರದ. ೪೬೪). [ಸಂ. (ಕಾಷ್ಠಾ + ವ್ಯಸನ)]

**ಕಾಷ್ಠಾಹರಣ** (ನಾ). ಸೌದೆಯನ್ನು ತರುವಿಕೆ: ಪರರ ಉಪವಾಸ ನಿವಾರಣಾರ್ಥವಾಗಿ ಕಾಷ್ಠಾಹರಣಕ್ಕೆ ಹೋಗಕೂಡದೆಂದು ಪ್ರತಿಜ್ಞೆಯನ್ನು ಮಾಡಿದರೆ ಅಂತಹವನು ಪಾಮರನಾಗುವನು (ಕಪಾಕುಂ. ೯). [ಕಾಷ್ಠ₂ + ಆಹರಣ]

**ಕಾಷ್ಠಿಕೆ** (ನಾ). ಮರದ ತುಂಡು; ಕಟ್ಟಿಗೆಯ ಚೂರು: (ಕ). [ಸಂ. ಕಾಷ್ಠಿಕಾ]

**ಕಾಷ್ಠೀಲೆ** (ನಾ). ೧. ಒಂದು ಜಾತಿಯ ಬಾಳೆಗಿಡ. ೨. ಎಕ್ಕದಗಿಡ. [ಸಂ. ಕಾಷ್ಠೀಲಾ]

**ಕಾಷ್ಠೆ**, ಕಾಷ್ಠ₁ (ನಾ). ೧. ಗುರಿ; ಧ್ಯೇಯ. ೨. ತುತ್ತತುದಿ; ಕೊನೆ; ಅತಿರೇಕ. 'ಪರಾಕಾಷ್ಠೆ' ಪರಾ. ೩. ದಿಕ್ಕು; ದಿಶೆ: "ಆಶೆದಿಕ್ಕಶುಭಕಾಷ್ಠೆ ಗೋದಿಶೆಯೆನಲು ದಿಕ್ಕಿಂಗೆ ನಾಮಮುಕ್ಕುಂ" (ಮಂಗರಾ. ೧೭-೧೮). ೪. ಎಲ್ಲೆ; ಮೇರೆ; ಗಡಿ; ಸರಹದ್ದು.

೫. ಹದಿನೆಂಟು ನಿಮಿಷಗಳಷ್ಟು ಕಾಲ; ಹದಿನೆಂಟು ಸಲ ರೆಪ್ಪೆಯಾಡಿಸುವಷ್ಟು ಕಾಲ. ℙ. ಹದಿನೈದು ನಿಮಿಷಗಳಷ್ಟು ಕಾಲವೆಂದೂ ಉಂಟು: "ನಿಮಿಷ ೧೮ ಆದೊಡೆ ಅದು ಒಂದು ಕಾಷ್ಠೆಯೆನಿಸುವುದು" (ವ್ಯವಹಾ. ಅನು. ೬–೨೯); "ಅಷ್ಟಾದಶಸ್ಥಿತಿಯ ಸಂಖ್ಯೆಯ ನಿಮೇಷಮದು ಕಾಷ್ಠೆಯಕ್ಕು" (ಮಂಗರಾ. ೧೯–೫); ನಿಮಿಷಗಳು ಹದಿನೈದಾದಡೆ ಒಂದು ಕಾಷ್ಠೆಯೆನಿಸಿಕೊಂಬುದು (ದಶಟೀ. ೭೨–೩); ಕಣ್ಣೆವೆಯ ನಿಕ್ಕುವನಿತಱ ನಾಲ್ಕು ಭಾಗದೊಳಗೊಂದು ಭಾಗವೇ ತೃಟಿ ...ಎರಡಾಗಲೊಂದು ಲವವೆನಿಸುವುದು. ಮತ್ತೆರಡಾಗಲೊಂದು ನಿಮೇಷವೆನಿಸುವುದು ಮತ್ತೆ ಹದಿನೈದಾಗಲೊಂದು ಕಾಷ್ಠೆಯೆನಿಸುವದು. (ವಿವೇಕ. ೩೨೦). ೬. ಉತ್ಕೃಷ್ಟತೆ. ೭. ಅನುಕೂಲವಾಗಿರುವಿಕೆ. ೮. ಸ್ಪಷ್ಟತೆ; ವ್ಯಕ್ತತೆ. ೯. (ಹೂವಿನಂತೆ) ಅರಳಿರುವುದು: "ವ್ಯಕ್ತಿಯೊಳು ಕಾಲದೊಳು ಭೇದದೊಳು ವಿಕಸಿತದೊಳು ಪ್ರೋಕ್ತದಿಂ ಕಾಷ್ಠೆಯೆಂಬುದು (ಮಂಗರಾ. ೧೪೪–೨೫); "ಅನುಕೂಲೋತ್ಕೃಷ್ಟ ಕಾಲಾಂತರಂ ವೇದೋನ್ಮೀಲಿತ ಮೂರ್ಖ ದಿಕ್ ಕೃಶಮಿವುಂ ಕಾಷ್ಠಾಭಿಧಾನಂ" (ನಾನಾರ. ೩೪). **ಕಾಷ್ಠ** : ೫. "ಪದಿನೆಂಟು ನಿಮಿಷ ಕಾಷ್ಠಂ" (ವ್ಯವಹಾ. ಅನು. ೬–೨೯). [ಸಂ. ಕಾಷ್ಠಾ]

**ಕಾಷ್ಣಿ** (ನಾ). ೧. ಕೃಷ್ಣನ ಮಗ; ಪ್ರದ್ಯುಮ್ನ: ಬಿಲ್ಮುರಿಯೆ ಕಾಷ್ಣಿ ಕಡುಗೋಪದಿಂದಾ ಕ್ಷಣಂ ಪಲ್ಮೊರೆಯುತ (ಜೈಮಿಭಾ. ೧೨–೩೩). ೨. ಅರ್ಜುನನ ಮಗ; ಬಭ್ರುವಾಹನ ೧, ೨: ಕಾಷ್ಣಿ ಕಾಷ್ಣಿಗಳ್ಕಡುಪಿಂದೆ ಕಾದಿದರ್ (ಜೈಮಿಭಾ. ೨೨–೩೦). [ಸಂ.]

**ಕಾರ್ಷ್ಣ್ಯ** (ನಾ). ಕಪ್ಪು; ಕರಿಯ ಬಣ್ಣ: ನೀಂ ಪರಪುಟ್ಟನಾದೆ ನೋಡೀಗಳಿದರ್ಕೆ ನಿನ್ನ ತನುಕಾರ್ಷ್ಣ್ಯಮೆ ಸೂಚಕಮಲ್ಲದೆ (ಜಗವಿ. ೧೭–೪೧). [ಸಂ.]

**ಕಾಸ$_1$** (ನಾ). ೧. ಅರಳುವಿಕೆ; ವಿಕಾಸ. ೨. ಕಾಂತಿ; ಪ್ರಕಾಶ. ೩. ಕಾಣುವಿಕೆ; ಪ್ರಕಟನ: (ಕ). [< ಸಂ. ಕಾಶ]

**ಕಾಸ$_2$** (ನಾ). ಕೆಮ್ಮು; ಉಬ್ಬಸ: "ಕ್ಷವಥುಃ, ಕಾಸಃ ಈ–೨ ಕೆಮ್ಮು" (ಹಲಾಯು. ೯೮–೪೪೭). ೨. ಉಬ್ಬಸ ರೋಗ; ದಮ್ಮುರೋಗ: "ಖಾಸ – ಕಾಸ, ಖುರ – ಕುರ" (ಶಮುದ. ೨೫೫ ಪ್ರಯೋ); ಅನಂದ ಭೈರವಿಯ ಮಾತ್ರೆ ... ಕಾಸ, ಶ್ವಾಸ, ತ್ರಿದೋಷಕ್ಕೆ ಅಲ್ಲದ ರಸದಲ್ಲಿ ಕೊಡುವುದು (ವಿವೈವಿ. ೧೩). [ಸಂ.]

**ಕಾಸ$_3$** 'ಖಾಸ$_1$' ನೋ.

**ಕಾಸಂಟಿ** 'ಕಾಸಟ' ನೋ.

**ಕಾಸಂಪಳ್ಳಿ** (ನಾ). ಒಂದು ಊರಿನ ಹೆಸರು: ಸಿಂಗಿತಲೆ ಪಣ್ಯಾರನ್ಗ ಕಾಸಂಪಳ್ಳಿಯಾ ಸಮಭಾಗಮಾನ್ ... ಗೋಪಾಲದೇವರ್ ಕೊಟ್ಟರ್ (ಎಇ. XXI, ೨೯–೮; 8ನೆಯ ಶತ). [ಕಾಸಂ ? + ಪಳ್ಳಿ]

**ಕಾಸಗಾರ** (ನಾ). = ಕಾಸದಾರ: (ಕ). [?]

**ಕಾಸಗಿ$_1$** 'ಖಾಸಗಿ' ನೋ.

**ಕಾಸಗಿ$_2$** (ನಾ). (ಕರಾ) ಜೋಳ, ಸಜ್ಜೆ, ಮೊದಲಾದುವುಗಳ ಕೂಳೆ; ಕೋಲಿ; ಕಸ: "ಕೋಲಿ, ಕಸ" (ಜಾನಕೋ. ೩೭); ಕಾಸಗಿ ಆರಿಸಲಿಕ್ಕೆ ನಾಲ್ಕು ಆಳು ಬಂದಿವೆ (ರೂಢಿ). [?]

**ಕಾಸಘ್ನಿ** (ನಾ). ಒಂದು ಬಗೆಯ ಸಸ್ಯ; ಕಂಟಕ ಶ್ರೇಣಿ; ಕಿರುದೇಗು: "ಭೃಗುಜೆ ಕಾಸಘ್ನಿ ಕಿಱುದೇಗೆನಿಕ್ಕು" (ಮಂಗರಾ. ೪೨–೩೮). [< ಸಂ. ಕಾಸಘ್ನೀ]

**ಕಾಸಜಿತ್ತು** (ಗು). ೧. ಕಾಸರೋಗವನ್ನು ಗುಣಪಡಿಸುವ. (ನಾ). ೨. ಒಂದು ಬಗೆಯ ಸಸ್ಯ; ಕಂಟಕಶ್ರೇಣಿ; ಕಾಸಘ್ನಿ; ಕಿರುದೇಗು: (ಕ). [< ಸಂ. ಕಾಸಜಿತ್]

**ಕಾಸಟಿ**, ಕಾಸಂಟಿ, ಖಾಸಟ (ನಾ). ಒಂದು ಬಗೆಯ ಬಟ್ಟೆ; ಹತ್ತಿಯ ಬಟ್ಟೆ (?); "ಕೀಳು ತರಗಳಿಯ ಬಟ್ಟೆ" (ಲೀಲಾವ. ಕೋಶ): ಸಾಸಿರ ಪೊಂಗೆಯ್ದುಂ ಚಿಃ ಕಾಸಟಮೆಂದೊಂದು ಲಕ್ಕಗೆಯ್ವುದಿದರ್ಕಂ ಮೂಸರವುಡಲೆಂದಧಿಕ ವಿಳಾಸದಿನುಡಲಿಕ್ಕಿ ನೆಱೆಯೆ ಬಿಯಮಂ ಮೆಱೆದಂ (ಪಂಪಭಾ. ೩–೪೪); ಬರದೆಯಿಂ ತೆಂಕ ಪೋಪ ಭಣ್ಡಕ್ಕೆ ಕಾಸಟದ ಮಳವೆ ಇಪ್ಪತ್ತೆಕ್ಕೊನ್ದು (ಎಇ. XIX, ೧೮೫–೧೬; 1076); ಪತ್ತಿಯ ಮಳವೆಗೆ ವಿ ೨ ಕಾಸಟಂ ಕೊಡಿಗೆಗೆ ವಿ ೫ ತವರದಡೆಗೆ ವಿ ೨ (ಕಇಅ. ೧೧೫–೧೯–೩೧; 1057); ಪಟ್ಟಾವಳಿಯುಟ್ಟುಡೆಯೊಳುಡುವುದೇ ಕಾಸಟಮಂ (ಲೀಲಾವ. ೧೪–೪೭). **ಕಾಸಂಟಿ**: ಪತ್ತಿಯ ಮಳವೆಗೆ ವಿ ೨ ಕಾಸಂಟ ಕೊಡಿಗೆಗೆ ವಿ ೫ (ಕಇಅ. ೧೦೪–೮–೩೦; 1078). **ಖಾಸಟಿ**: ಖಾಸಟದ ಮಳವೆ ಇಪ್ಪತ್ತೆಕ್ಕೊನ್ದು (ಎಇ. XIX, ೧೮೯–೨೯; 1079). [< ಸಂ. ಕಾರ್ಪಾಸಪಟ ?]

**ಕಾಸಡೆ** (ನಾ). (ಕರಾ) ಹೀನವಾದುದು; ತುಚ್ಛವಾದುದು; ಅಲ್ಪಬೆಲೆ: ಎಲ್ಲೀವ ಕಾಸಡೇವ ನಾಲ್ಕ ಪೇರೂಕಾಯಿ ಆದವು (ನಿಸರ್ಗ. ೧೦೨); ಈ ಕಾಸಡೆ ಜನ ನಿನಗೇನ ಸುಖ ಕೊಟ್ಟಾವ (ಮಾವಿತೋ. ೪೫). [← ಪ್ರಾ. ಕಸಟ್ಟ = ಕಸ, ತುಚ್ಛವಸ್ತು]

**ಕಾಸದಾರ**, ಕಾಸುದಾರ, ಕಾಸ್ತಾರ, ಕಾಸ್ದಾರ (ನಾ). ೧. ಕುದುರೆಯ ಸೇವಕ, —ಆಳು; ಕುದುರೆ ಲಾಯದವನು: ಮಲಗಿ ನಿದ್ರೆ ಮಾಡುತ್ತಾ ಇದ್ದ ಕಾಸದಾರನಿಗೆ ಎಚ್ಚರವಾಯಿತು (ಪಾಳೆಗಾ. ೫೯); ನನ್ನ ಕಾಸದಾರರೂ ಸಾರಥಿಗಳೂ ನಿನ್ನ ಕೈಕೆಳಗಿರಲಿ (ವಚಭಾ. ೧೮೮). **ಕಾಸುದಾರ**: ೧. ಕಾಸುದಾರರ ಎದೆ ಬಡಿದುಕೊಳ್ಳುತ್ತಿದೆ (ದೌಲತ್. ೧೨). **ಕಾಸ್ತಾರ**: ೧. ಸುಮಾರು ೨೦೦–೩೦೦ ಕುದುರೆಗಳು ಇರಬಹುದು. ಒಂದೊಂದರ ಬಳಿಯಲ್ಲೂ ಒಬ್ಬೊಬ್ಬನು ಕಾಸ್ತಾರನು ನಿಂತಿದ್ದಾನೆ (ಘಾಟೀಮು. ೫೪); ಕುದುರೆಗಳಿಗಾಗಿ ಕಾಸ್ತಾರರಿರುವರು (ಜನಜೀ. ೧೩೭). ೨. (ಆಲಂ) ಆಜ್ಞಾಧೀನನಾದವನು; ಗುಲಾಮ: ನಾನೇನು ಅವಳ ಕಾಸ್ತಾರ ಕೆಟ್ಟುಹೋದೆನೇ ಅವಳ ಸಮಯ ಕಾಯುವುದಕ್ಕೆ (ರೂಪಸ. ೧೩೩); ಸಾವಿರ ಕುದುರೇ ಸರದಾರ ಮನೇಹೆಂಡತಿ ಕಾಸ್ತಾರ (ಗಾದೆ). **ಕಾಸ್ದಾರ**: ೨. ಎರಡನೆಯ ಮದುವೆ ಮಾಡಿಕೊಂಡು ಹೆಂಡತಿಯ ಕಾಸ್ದಾರನಾಗಿ ಬಾಳುವುದಕ್ಕೆ ಆಚಾರ್ಯರು ಸುತರಾಂ ಒಪ್ಪಲಿಲ್ಲ (ನಟಸಾ. ೩). [← ಪಾರ. ಹಿಂ. ಖಾಸ್‌ದಾರ್; ಮರಾ. ಖಾಸದಾರ್, ಖಾಸ್ತಾರ್]

**ಕಾಸದೃಸೆ** (ನಾ). ಒಂದು ಆಯುಧ (?): ಬೇಱೆವೇಱೆ ತೆತ್ತಿಸಿದ ತೋಮರದ ತೋರದೊಂಗಲ ತೊಂಡಬಡಿಗೆಯ ಗಂಡರ ದಾವಣಿಯ ಕಾಸದೃಸೆಯ ಪಂಚಚಾರಿಯ ಕಾರಿಯ ತುಱುಪಿನ ... ಸುಭಟ ಪಿಟಕಂ ಸಿಡಿಲ ಧ್ವನಿಯಂತೆ (ಮಹಾನೇ. ೧೨–೨೦೪). [?]

**ಕಾಸದೆ** (ನಾ). = ಕಾಸದೃಸೆ: ಬಿರುದರ ಬೆನ್ನ ಚಮ್ಮಟಿಗೆ ಗಂಡರ ದಾವಣಿ ವೀರಘಂಟೆಯುಪ್ಪರ ಗುಡಿ ಬಿಲ್ಲ ಜೀವಣಿಕೆ ಕಣ್ಣಲಿ ಕಾಸದೆಯಂಬು ಡೊಂಬಿಸಾಳ್ ಧುರಧರೆಯೊಳ್ ಸಹಸ್ರಮಿದಿರಾದಡಂ (ಮಹಾನೇ. ೧೧–೧೩೭). [< ಕಾಸದೃಸೆ]

**ಕಾಸಮರ್ದ** (ನಾ). ಕೆಮ್ಮನ್ನು ನಿವಾರಿಸುವ ಒಂದು ಮೂಲಿಕೆ; ಎಲಹುರಿ: ಕಾಸಮರ್ದವು ಸಾರಕವಿದ್ದು ಕ್ರಿಮಿ ಕಾಸ ಕಫದ ಲೇಪಗಳನ್ನು ನಾಶಮಾಡುತ್ತದೆ (ಅಷ್ಟಾಂಗ. ೧೪೦–೯೮ ಟೀಕೆ). [ಸಂ.]

**ಕಾಸರ$_1$** 'ಕಾಸರು' ನೋ.

**ಕಾಸರ$_2$** (ನಾ). ಕೋಣ: "ಮಹಿಷಃ ... ಕಾಸರಃ, ಉಲಾಯಃ – ಈ ೫ ಕೋಣ" (ಹಲಾಯು. ೩೮–೭೪); "ಮಹಿಷಂ ಕಾಸರಂ ... ಕೋಣನಕ್ಕು" (ಮಂಗರಾ. ೪೮–೧೦). [ಸಂ.]

**ಕಾಸರ$_3$** (ನಾ). ಕಾಡು; ಅರಣ್ಯ: ಉರು ಕಾಸರಕೆ ತೆರಳಿದರಂದು ದೇಶವ ಬಿಟ್ಟು ಪಾಂಡವರೂ (ಜಿನಭಾ. ೩೯ ಸೂಚನೆ). 'ಕಾಸರದೇವಿ' ಪರಾ. [?]

**ಕಾಸರದೇವಿ** (ನಾ). ವನದೇವಿ: ಸಂತಸವನಾಂತು ಕಾಸರದೇವಿಯರು ಸಂಪ್ರೀತಿಯೊಳಗೈದಿದರು ನಿಜರೂಪಾಂತು ಧರ್ಮಜನೆಡೆಗೆ ಸಭೆಯೊಳ ಗಂದು (ಜಿನಭಾ. ೪೯–೪). [ಕಾಸರ$_3$ + ದೇವಿ]

**ಕಾಸರಿ** (ನಾ). ಒಂದು ಮರದ ಹೆಸರು; ದೊಡ್ಡ ಸಿವನ್ನಿಮರ: "ಕಾಶ್ಮರ್ಯಃ –ಕಾಸರಿ, ದೊಡ್ಡಸಿವನ್ನಿ" (ಓಷಧಿ. ೨೮). [< ಸಂ. ಕಾಶ್ಮರೀ]

**ಕಾಸರಿ$_2$** (ನಾ). ಎಮ್ಮೆ: "ಮಹಿಷಿ ಕಾಸರಿಯೆನಲ್ಕೆಮ್ಮೆಯಕ್ಕುಂ" (ಮಂಗರಾ. ೫೫–೭). [ಸಂ. ಕಾಸರೀ]

**ಕಾಸರಿಕೆ**, ಕಾಚರಿಕೆ, ಕಾಸಲಿಕೆ (ನಾ). ಒಂದು ಬಗೆಯ ಸಸ್ಯ; ಮೊಗಚಾಳ; ಮಂಗರವಳ್ಳಿ: "ಗಂಡೀರಃ, ಸಮಷ್ಠಿಲಾ – ಈ ೨ ಕಾಸರಿಕೆ" (ನಾಚಿರಾ. ೧೧೨); "ಪಿಶಾಚಿಕಾ–ಕಾಸರಿಕೆ, ನಸುಗನ್ನಿ, ಮರುಳಿ" (ಓಷಧಿ. ೯೮). **ಕಾಚರಿಕೆ**: ಕಾಚರಿಕೆ ಬೀಜ . . . ಮೊಸರಂ ದರೆದು ಕೊಡಲು ಕಲ್ಲೊಡೆದು ಬೀಳುವುದು (ಸಕವೈ. ೩೭೯). **ಕಾಸಲಿಕೆ**: ಅದರಿಸಿದರೆ ಕಲ್ಪತರು ಕಾಸಲಿಕೆಯಾದುದಲ (ನಿಭಾಗ. ೪–೧೭–೭). [?]

**ಕಾಸರಿಗೆ** 'ಕಾಸರ್ಕ' ನೋ.

**ಕಾಸರು**, ಕಾಸರ$_1$ (ನಾ). ಹೊರಗೆ ಗಟ್ಟಿಯಾದ ಹೊದಿಕೆಯುಳ್ಳ, ದುಂಡಗಿರುವ, ಅರಸಿನ ಬಣ್ಣದ ವಿಷಫಲಗಳನ್ನು ಬಿಡುವ ಮಧ್ಯಮ ಆಕಾರದ ಒಂದು ಜಾತಿಯ ಮರ, ವಿಷವೃಕ್ಷ; ಕಾರಸ್ಕರ: ಇಲ್ಲಣ, ಸುಣ್ಣ, ಅರಿದಳ ಕಾಸರ ಕೊನರು ಇವಂ ನಿಂಬೆ ಹುಳಿಯಲ್ಲಿ ಅರದು ಪೂಸಲು ಕೆಂಬಾವು ಮಾಣ್ಗುಂ (ವಿವೈವಿ. ೭೮). **ಕಾಸರ**: (ಕ). [ದೇ. ॥ ತಮಿ. ಕಾಂಜಿರೈ; ಕಾಂಜಿರ; ಮಲ. ಕಾಞ್ಞಿರ; ತುಳು. ಕಾಯರ್, ಕಾಯೆರ್]

**ಕಾಸರುಗುಪ್ಪೆ** (ನಾ). ಒಂದು ಊರಿನ ಹೆಸರು: ಕಾಸರುಗುಪ್ಪೆಯ ದಾಚಿಯಲಿ (ಎಕ. VIII, ಸೊರಬ. ೪೭೭–೭; 960). [ಕಾಸರು + ಕುಪ್ಪೆ]

**ಕಾಸರೂರ್** (ನಾ). ಒಂದು ಊರಿನ ಹೆಸರು: ಸ್ವಸ್ತಿಶ್ರೀ ಅಜ್ಜ ಅಮ್ಮ ಕಾಸರೂರಾಳಿಗೆಯೆ (ಎಕ. IX, ದೇವನ. ೭೪–೨; 780). [ಕಾಸರು ? + ಊರ್]

**ಕಾಸರ್ಕ**, ಕಾಸರಿಗ (ನಾ). = ಕಾಸರು: (ಕ). **ಕಾಸರಿಗೆ**: ಸುರತರುವಿನೊಳು ಬೀಜವೇ ಕಾಸರಿಗನಾಯ್ತು (ನಿಭಾಗ. ೭–೪–೧೨).

ಕಾಸರ್ಕನ ಬಂದನಿಗೆ = ಕಾಸರು ಮರದಲ್ಲಿ ಮೊಳೆಯುವ, ಪರೋಪಜೀವಿಯಾದ ಒಂದು ಬಗೆಯ ಹೊದರು ಗಿಡ: ಕಾಸರ್ಕನ ಬಂದನಿಗೆ ಕೆಲವು ಲೇಪಗಳಿಗೆ ಉಪಯೋಗವಾಗುತ್ತದೆ. (ರೂಢಿ). [< ಸಂ. ಕಾರಸ್ಕರ]

**ಕಾಸರ್ಕಣ** (ನಾ). = ಕಾಸರು: ಕಾಸರ್ಕಣ (ಕಾರೊ) ಮಧ್ಯಮ ಆಕಾರದ ಸಾಧಾರಣ ವೃಕ್ಷ. ಕಟ್ಟಿಗೆ – ಪೈ, ಬಿರುಸು (ಕಭಾಗೆ.೩೭). [< ಕಾಸರ್ಕ]

**ಕಾಸಲಿಕೆ** 'ಕಾಸರಿಕೆ' ನೋ.

**ಕಾಸವಿಸಿಬಡು** 'ಕಸವಿಸಿಬಡು' ನೋ.

**ಕಾಸಾ** 'ಖಾಸಾ' ನೋ.

**ಕಾಸಾದಂಡ** (ನಾ). ಚಾಟಿಯ ಕೋಲು: ಶತಪ್ರಭೆ ಕುಡಿವರಿವ ಸುಲಿ ಪಲ್ಲ ಕೆಯ್ಯೊಳು ಪಿಡಿದ ಕಾಸಾದಂಡದಧಿಕ ಗಜೇಶನಂ ಕಂಡ (ಶಂಕದಾ. ೧೧–೭೩). [< ಸಂ. ಕಶಾದಂಡ]

**ಕಾಸಾಯ** (ನಾ). ಕಾವಿಬಟ್ಟೆ; ಕೆಂಪುಬಟ್ಟೆ: "ಕಾಷಾಯ – ಕಾಸಾಯ" (ಶಮದ. ೨೫೩ ಪ್ರಯೋ). [< ಸಂ. ಕಾಷಾಯ]

**ಕಾಸಾರ$_1$** (ನಾ). ಕಂಚುಗಾರ; ಬೋಗಾರ; ತಾಮ್ರ, ಹಿತ್ತಾಳೆ ಮತ್ತು ಕಂಚಿನ ಪಾತ್ರೆಗಳನ್ನು ಮಾಡುವವನು: ಕಾಸಾರರು:– ತಾಮ್ರ, ಹಿತ್ತಾಳೆ ಪಾತ್ರೆಗಳನ್ನು ಮಾರುವ ಜೈನರಿಗೆ ಕಾಸಾರರೆಂತಲೂ, ಬೋಗಾರರೆಂತಲೂ, ತಾಂಬುಟಿಗಾರರೆಂತಲೂ ಹೆಸರು ಹೇಳುವರು (ಕಭಾಗೆ. ೧೫೫). [< ಸಂ. ಕಾಂಸ್ಯಕಾರ]

**ಕಾಸಾರ$_2$** (ನಾ). ಕೊಳ; ಸರೋವರ: ಮದವನ್ನಾತ್ಕಂಗಮಂ ಘೂರ್ಣಿಸುವ ಜಲಧಿಯಂ ಸಾರಕಾಸಾರಮಂ . . . ಸ್ವಪ್ನದೊಳ್ ಕಾಂತೆ ಕಂಡಳ್ (ಸುಕುಮಾ. ೯–೧೧೫); ಕಾಸಾರದ ಪರಿಕರದೊಳ್ ನಿದ್ರೆಗೆಯ್ವಂಚೆವಿಂಡಂ (ಜಗವಿ. ೧೬–೧೩೭); ಸುಲಿ ಸೀರೆಗಳನೆಂಬಗ್ಗಳಿಕೆ ಕಾಸಾರದಲಿ ಕರಗಿತೆ ಸುಯೋಧನ ಎಂದನಾ ಭೀಮ (ಕುವ್ಯಾಗ. ೮–೮); ನಿಸ್ತೋಯ ಕಾಸಾರದೊಳ್ ರಿಕ್ತಮಾನಸಂ (ಶ್ರೀರಾಮಾ. ೯೧–೩೫೨). [ಸಂ.]

**ಕಾಸಾರಗೊಳಿಸು** (ನಾ). ಸರೋವರವನ್ನು ಉಂಟುಮಾಡು: ನಳಚರಿತ್ರ ಕರುಣರಸವನ್ನು ಕಾಸಾರಗೊಳಿಸಿತು (ಹೇಮುಕೂ. ೧೦೭). [ಕಾಸಾರ$_2$ + ಕೊಳ್$_1$ + –ಇಸು$_3$]

**ಕಾಸಾರಜೀವಿಶಾಸ್ತ್ರ** (ನಾ). "ಕೊಳ ಕುಂಟೆ ಮೊದಲಾದವುಗಳಲ್ಲಿಯ ಜೀವಿಗಳನ್ನು ಕುರಿತ ಶಾಸ್ತ್ರ ಕಾಸಾರಜೀವಿಶಾಸ್ತ್ರ" (Limnology. ಇಂಕನಿ). [ಕಾಸಾರ$_2$ + ಜೀವಿ + ಶಾಸ್ತ್ರ]

**ಕಾಸಾವೀಶಿ** 'ಕಸವಿಸಿ' ನೋ.

**ಕಾಸಾವೀಸಿ** 'ಕಸವಿಸಿ' ನೋ.

**ಕಾಸಿ$_1$** 'ಕಾಸೆ$_1$' ನೋ.

**ಕಾಸಿ$_2$** 'ಕಾಸೆ$_2$' ನೋ.

**ಕಾಸಿ$_3$** (ನಾ). = ಕಾಸಿಗ: ಕುಲಜಾತರಹ ಕಾರುಕಂ ಬಡಗಿ ಕರೆಗೆರೆವ ಕಂಚುಗಾಜಂ ಕಾಸಿಯಕ್ಕಸಾಲೆಯರೆನಿಪಯಭಿಧಾನದೀ (ನವಮೋ. ೨–೩೨). 'ಕಾಸಿಗ' ಪರಾ. [?]

**ಕಾಸಿ$_4$** (ನಾ). ಕಾಶೀಕ್ಷೇತ್ರ, —ಪಟ್ಟಣ: ಅಸಿವರುಣೆಗಳಾ ಕಾಸಿಯ ಪುರವನು ಮುಸುಕಿ ಕಾದಿರುವಂದದಲಿ (ನವಮೋ. ೫–೪೩); ಕಾಸೀಗಿ ಹೋಗಲಕ ಏಸೊಂದು ದಿನಬೇಕ . . . ತವರೂರ ಮನಿಯಾಗ ಕಾಸಿ ಕುಂತಾಳ ಹಡೆದವ್ವ (ಗರತಿ. ೫೪). [< ಸಂ. ಕಾಶೀ]

**ಕಾಸಿ$_5$** (ನಾ). (?): ಜಲಗೈವ ಶರಭ ಶಾರ್ದೂಲ ಕಂಠೀರವ ನೆಲಜೇಷ್ಠ ಕಾಸಿಯ ಭೂತ ಕೆಲಮೃಗ ಪಕ್ಷಿಯಿಂದೆಸೆಯಿತು ರೈವತಾಚಲ ದ್ವಾರಕೆಯ ಬಾಹ್ಯದಲಿ (ಮೋಹತ. ೩–೪). [?]

**ಕಾಸಿಕಜ್ಜ** (ನಾ). ಒಬ್ಬಾತನ ಹೆಸರು: ಕಾಸಿಕಜ್ಜನ ಬೆಸದೊಸಿರಿ × ಜ್ಜೆಯ ಪಳ್ಳಿಯೊ (ಎಕ. XI, ಜಗಳೂ೯–೨; 907). [?]

**ಕಾಸಿಕಾಗಡಿ** 'ಕಾಸಿಕಾವಡಿ' ನೋ.

**ಕಾಸಿಕಾವಡಿ**, ಕಾಸಿಕಾಗಡಿ (ನಾ). ಕಾಶಿಯಿಂದ ನೀರನ್ನು ತರುವ ಕಾವಡಿ: (ಕ). **ಕಾಸಿಕಾಗಡಿ**: (ಕ). [ಕಾಸಿ$_4$ + ಕಾವಡಿ]

**ಕಾಸಿಗ** (ನಾ). ಕಮ್ಮಾರ; ಶಿಲ್ಪಿ: ಅಯ್ವತ್ತು ಮತ್ತರದಜೆಳಗೆ ಕಾಸಿಗಂಗೆ ಎರೆ ಆಜು ಮತ್ತರ್ ಕಿಸುಕಾಡು ಅಜುಮತ್ತರ್ (ಸೌಇ. XI–i, ೭೦–೧೧; 931); ಬೆಸಗೆಯ್ದೊಂ ಕೊಯತೂರ ಕಾಸಿಗಂ ವಿಕ್ರಮಾದಿತ್ಯಂ ಬಹುಗುಣತೇಜನ್ (ಎಕ. X, ಮುಳಬಾ. ೧೬೨–೭; 950); ಚಾಮುಂಡರಾಯಂ ಬರೆದಂ ಕಾಸಿಗ ಬಮ್ಮೋಜಂ ಕಂಡರಿಸಿದಂ (ಸೌಇ. IX–i, ೨೦೭–೫೮; 1124). [?]

**ಕಾಸಿಗಪ್ಪಡ** (ನಾ). ಕಾವಿಯ ಬಟ್ಟೆ; ಕಾಷಾಯ ವಸ್ತ್ರ: ಕಾಶಾ ಕರ್ಪಟ, ಕಾಸಿ [ಪಾಠಾಂ. ಕಸೆ] ಗಪ್ಪಡ (ಶಮದ. ೨೯೩ ಪ್ರಯೋ). [ಕಾಸಿ$_2$ (< ಕಾಸೆ) + ಕಪ್ಪಡ]

**ಕಾಸಿನಸರ** (ನಾ). ಒಂದು ಬಗೆಯ ಸಸ್ಯ : ಕಾಸಿನಸರ, ಸರದಾಳಿಗೆಡ್ಡೆ (ವೈಔಗಿ. ೬-೧೧೦). [?]

**ಕಾಸಿನಸೇವಂತಿಕೆ** (ನಾ). ಒಂದು ಬಗೆಯ ಸಸ್ಯ: "ಅಂಬಡಾ-ಅಂಬಟಿ, ಪುಳ್ಳಂಪುಣಸೆ, ಅಗುಳುಶುಂಠಿ, ಕಾಸಿನಸೇವಂತಿಗೆ" (ಒಷಧಿ. ೪). [?]

**ಕಾಸಿನಿಗಿಡ** (ನಾ). ಒಂದು ಬಗೆಯ ಗಿಡ : (ವೈಔಗಿ. ೨೧-೩೯೩). [?]

**ಕಾಸಿವಾಲ್?** (ನಾ). (?): ಭರದೊಳಿಕ್ಕುವ ಕಾಲ್ಗಳು ಪಲಕಾಲ್ಗಗಂತಿರೆ ಕಾಸಿವಾಲ್ಗಮದಾಗೆ ಸರಭದವೊಲು ನರಹರಿ ಘರ್ಜಿಸುತ ಕೇಸರಿಯ ನಡ್ಡೈಸಿದನಿಂತೂ (ವರ್ಧಸಾಂ. ೪-೪೪). [?]

**ಕಾಸಿಸು** (ಕ್ರಿ). ಕಾಯಿಸು ; ಕಾಸು : ಸೀರೆಯೊಳ್ ಮಾಸರಮಾಗೆ ಸೇವಗೆಯನೊತ್ತಿ ಸಿತೋದಕದಿಂದೆ ಮತ್ತದಂ ಕಾಸಿಸಿ ಮಾಟ್ಕೆ ಲಡ್ಡುಗೆಯನೀ ತೆಜದಿಂ (ಲೋಕೋಪ. ೮-೧೨) ; ಕಾಸಿಸಿದ ಕೆಂಬೊತ್ತ ಲೋಹದ ನಿಸಿತ ಶೂಲಾಗ್ರಂಗಳಲಿ ತೆಗೆಸು (ಬಸವು. ೫೦-೩೯).
[ಕಾಸು$_1$ + -ಇಸು$_3$]

**ಕಾಸಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಸಿಹುಲ್ಲು, ಕಾಮಾಂಚಹುಲ್ಲು, ಅಂಜಿಹುಲ್ಲು, ಖಾರದಹುಲ್ಲು (ವೈಔಗಿ. ೨೭-೫೧೨).
[ಕಾಸಿ$_0$ + ಹುಲ್ಲು (< ಪುಲ್)]

**ಕಾಸೀಸ** (ನಾ). ಕಬ್ಬಿಣ ಗಂಧಕಾಮ್ಲಗಳ ಸಂಯೋಗದಿಂದ ಉಂಟಾಗುವ ಒಂದು ಬಗೆಯ ಲವಣ; ಅನ್ನಭೇದಿ: "ತುಂಬುರಂ-ಕಾಸೀಸ" (ಒಷಧಿ. ೭೧) ; ಅರಿದಾಳಂ ಬೆಲ್ಲಂ ಸಜ್ಜರಸಂ ಕಾಸೀಸಮರಗು ಕೇರ್ ಮೆಳವನೊಂದಿರೆ ತಿಲತೈಲದೊಳಟ್ಟುತೊರಸುಗೆ ತುರಗಕ್ಕೆ ಪಿಂಗುಗುಂ ತಳ ರುಜೆಯುಂ (ಲೋಕೋಪ. ೯-೨೪೪) ; ಹಿಪ್ಪಲಿ, ಕಾಸೀಸ, ಏಲಾವಾಲುಕ - ಇವಿಷ್ಟನು ಪ್ರತ್ಯೇಕ ಎರಡು ವರಹತೂಕವ ಚೂರ್ಣಿಸಿ ಹಾಕಿ ಎಣ್ಣೆ ಉಳಿಯೆ ಕಾಸಿ ಮಂಡೆಗೆ ಲೇಪಿಸಲು ರೋಮ ನಾಶವಹುದು (ವೈದ್ಯಸಾ. II, ೧೪೫). [ಸಂ.]

**ಕಾಸು$_1$** (ಕ್ರಿ). ಬಿಸಿಮಾಡು ; ಬೇಯಿಸು ; ಕರಗಿಸು : "ಕಾಸು - ದಾಹೇ, ವಿವಧೇ ಚ (ತಾಮ್ರದ ನಾಣ್ಯ)" (ಶಮುಧಾ) ; ಆ ತಪಸ್ವಿಯೇಱಿರ್ದ ಶಿಲೆಯಂ ಕಾಸುವುದೆಂದೊಡೆ (ವಡ್ಡಾರಾ. ೧೫೧-೩೧) ; ಕರಂ ಕರವಾಳೊಡನಮರೆ ಕಾಸಿ ಬೆಚ್ಚಂತೆ ವಸುಂಧರೆಯೊಳ್ ಬಿಱ್ದಿರ್ದುದು (ಪಂಪಭಾ. ೧೧-೧೪೧) ; ನಾಯ ಬಾಲಮಂ ಕಾಸಿ ತಿರ್ದಿದೊಡಂ ಕೊಂಕು ಮಾಣದು (ಪಂಚತಂ. ೧೦೫-೨) ; ಒಮ್ಮೆ ಕಾಸಿ ಒಮ್ಮೆ ಕರಗಿಸಿ ಒಮ್ಮೆ ಬಣ್ಣವಿಟ್ಟು ಎನ್ನಮನದ ಮೋಹವ ಕಳೆದನಯ್ಯ (ಚೆನ್ನವ. ೧೮೧) ; ಕರಗಿ ಕಾಸಿದ ವಿದ್ಯೆಯನು ಬೇಱಿರಿಸಿ ಶುದ್ಧ ಬ್ರಹ್ಮವನು ಕಂಡಳಿಸಿದಂತಿರಲೆಸೆವ ಶಿವನನು ಕಂಡನು (ಕುವ್ಯಾಕ. ೬-೧೬) ; ತನಿಪಾಲ ಕಾಸಿದಂತಿಹುದಾತ್ಮರಸಿಕನ ಅನುಭವ ಕುಲಸತಿಯರೊಳು (ಭರಚ. ೫-೯೧).
[ಕಾಯ್$_2$ + -ಸು]

**ಕಾಸು$_2$, ಕಾಚು$_3$** (ನಾ). ೧. ತಾಮ್ರದ ಸಣ್ಣನಾಣ್ಯ : "ಕಾಸು - ದಾಹೇ, ವಿವಧೇ ಚ (ತಾಮ್ರದ ನಾಣ್ಯ)" (ಶಮುಧಾ) ; ಈಶ ಲಾಂಛನವ ಹೊತ್ತು ಕಾಸಿಗಾಗಿ ಕಾರ್ಪಣ್ಯವ ಬೇಡುವವನಲ್ಲ (ಮೋಳಮಾ. ೯೫-೩೭೮) ; ಅವರ್ಗಳಿತ್ತ ಕಾಸಿಂಗೀಗಳ್ ಗೋರಸಮಂ ದೊರಕಿಸಿ ಕೊಂಡೋರಂತಿರೆ ಬರ್ಪುದು (ದಶಕು. ೧೨-೧೨೪) ; ದಟ್ಟದರಿದ್ರನಂತೆ ಕಾಸಿಗೆ ಮನಮಿತ್ತನೆಂದು (ವೀರವಿ. ೨-೫೪) ; ಹುಟ್ಟುಕುರುಡ ಕಾಸ ನೀಡಿ (ಕವಿಸೋ. ೩೯). ೨. ದುಡ್ಡು ; ಹಣ : ನಾಲ್ಕು ಕಾಸು ತರದ ನಿಮ್ಮ ಸತ್ವವೆಂದರೇನು (ರಂಗರೋ. ೧೦೦) ; ಕಾಸಿದ್ದರೆ ಕೈಲಾಸ (ಗಾದೆ) ; ಕಾಸಿಗೆ ತಕ್ಕ ಕಜ್ಜಾಯ (ಗಾದೆ). **ಕಾಚು$_3$** : ೧. ನೀಚಾಧಮ ! ಕುಶಿಕ ಪುತ್ರಗೆ ಯಾಚಿಸಿ ಧನಕೊಡುವೆನೆಂದು ಬೊಗಳುತ ಬಂದು ಕಾಚೊಂದನು ಕೊಡದೆಯಿರುತಿಪ್ಪ (ಹಚಮ. ೯೧).

ಕಾಸಿನ ಸರ = ಒಂದು ಕೊರಳ ಆಭರಣ ; ಕಾಸಿನ ಆಕಾರದ ಬಿಲ್ಲೆಗಳನ್ನು ಪೋಣಿಸಿ ಮಾಡಿದ ಸರ.
[ದೇ. ‖ ತಮಿ. ಮಲ. ಕಾಚು ; ತೆಲು. ಕಾಸು]

**ಕಾಸು$_3$** (ನಾ). ನೆಲವು ; ಕಾವಡಿ ; ಕಾಚ : "ಭಾರಯಷ್ಟಿಃ, ವಿಹಂಗಿಕಾ-ಈ ೨ ಕಾ(ಚಿ)ಸಿನ ಕಂಬಿ" (ಹಲಾಯು. ೧೨೫-೭೩); ಕಾಸು ವಿಹಂಗಿಕೆಯದಡ್ಡವೊಱೆಯುಕ್ಕು" (ಮಂಗರಾ. ೬೩-೨೬) ; ಪಾಸದ ನೇಣ್ಗಳಂ ಪೊಸೆವ ಜಾಲಮನೊಪ್ಪಿರೆ ಮಾಟ್ಪ ಕಲ್ಲಿಯಂ ಕಾಸಿನ ಕಂಬಿಯಂ ಸಮೆವ ಮಾರ್ಗಣಮಂ ಗಱಿಗಟ್ಟುತಿರ್ಪ (ಜಗವಿ. ೧೬-೧೬) ; ಕಡವೆಳೆ ಬಳ್ಳು ಕೊಂಡುಗಱಿ ಕೂರಗೆಯೆಂಬಿವನ್ನೆದೆ ಕಾಸಿ[ಪಾಠಾಂ. ನಿ] ನೊಳ್ಗಡಣದೆ ಪೊತ್ತು ಬೇಡವಡೆ ಬಂದುದು ಕಾನನದೊಳ್ (ಸೂಕ್ತಿಸು. ೩-೧೬೮). [< ಸಂ. ಕಾಚ]

**ಕಾಸು$_4$** (ನಾ). ಒಂದು ಬಗೆಯ ಆಯುಧ ; ಭರ್ಜಿ ; ಭಲ್ಲೆ.
[ಸಂ. ಕಾಸೂ]

**ಕಾಸುದಾರ** 'ಕಾಸದಾರ' ನೋ.

**ಕಾಸುರಿ** (ಕ್ರಿ). ಎಳ್ಳಷ್ಟು ತಿಳಿ (?) ; "ಅರಿ" (ಪ್ರಭಣ್ಣ) : ವಾಸವ ಶಂಕರ ವಾರಿರುಹಾಸನರಂ ಮೋಸಗೆಯ್ದ ಮಾಧವನಿರವಂ ಕಾಸುರಿಯ ದೆಳೆಯ ಗೋವಳರೋಸರಿಸಲ್ ನುಡಿದರೊಲ್ಮೆ ಬಲ್ಮೆಗಳಿಂದಂ (ಗೀತಗೋ. ೮-೧೮). [?]

**ಕಾಸುವೀಸ** (ನಾ). ಒಂದು ಕಾಸು ಹಾಗು ಅದರ ಎಂಟನೆಯೊಂದು ಭಾಗ ; ತೀರ ಅಲ್ಪವಾದ ಹಣ : ಯಾವದೊಂದು ಕಾಸುವೀಸದ ತೆರ್ಗೆಯೂ ಇಲ್ಲ (ಎಕ. VI, ಕಡೂರು. ೬-೮ ; 1169) ; ಕಾಸುವೀಸಕ್ಕಾಗಿ ಹರಿಯ ದಾಸನೆಂದು ತಿರುಗಿ ತಿರುಗಿ (ಪುರಂದ. ೧-೧೮೦-೯) ; ಕಂದಾಯ ಮನಲ್ಲದೆ ಪೆಱತೊಂದು ಕಾಸುವೀಸಮನೊಲ್ಲಂ (ಅಪ್ರಶಿ. ೧೧೫-೩) ; ಕಾಸುವೀಸದ ಆಸೆಗೋಸುಗ ಘಾಸಿಮಾಡಿ ವಿಟರನು (ಶರಲೀ. ೩೬೪-೪).
[ಕಾಸು$_2$ + ವೀಸ]

**ಕಾಸುಳ** (ನಾ). ಕುದುರೆಯ ದೇಹದ ಒಂದು ಭಾಗ : ರೋಹಿಣೀ ಸಂಧಿಯ ಕೆಳಗಿರೆ ಕಾ(ಸೂ)ಸುಳ ಪೆಸರದಕೆ (ಅಶ್ವಶಾ. ೯-೫೨). [?]

**ಕಾಸುಳಿ, ಕಾಂಸುಳಿ** (ನಾ). ಒಂದು ಬಗೆಯ ಗಿಡ ; ತುರುವೆಗಿಡ : "ತುಱುವೆ ತೇಜಸ್ವಿ ಕಾಸು[ಪಾಠಾಂ. ಪು]ಳಿಯುಕ್ಕು" (ಮಂಗರಾ. ೩೯-೨೭).
**ಕಾಂಸುಳಿ** : (ಕ). [?]

**ಕಾಸೂರ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ನಾಣ್ಕೆಱೆಯರಾ ಎಮ್ಮೆರ್ಕೊಳ್ವಲ್ಲಿ ಸತ್ತೋನ್ ಕಾಸೂರನ್ (ಎಕ. X (s), ಚಿಂತಾಮ. ೩೪-೭ ; 8ನೆಯ ಶತ). [?]

**ಕಾಸೆ$_1$, ಕಾಶಿ$_3$, ಕಾಶೆ$_1$, ಕಾಸ್ಸಿ$_1$, ಗಾಸೆ$_3$** (ನಾ). ೧. ಕಚ್ಚೆಹಾಕಿ ಉಟ್ಟುಕೊಳ್ಳುವ ವಸ್ತ್ರ : ಕಾಸೆಯನುಟ್ಟು ಜನ್ನವಿರಮಂ ಪೆಗಲೊಳ್ ತೆಗದಿಕ್ಕಿ (ಕಾವ್ಯಸಾ. ೫೩೫ ಶೂದ್ರಕ) ; ಕಾಸೆಯನುಟ್ಟು ಬೊಟ್ಟನಸಿದಾಗಿರಲಿಟ್ಟು ಲಲಾಟಪಟ್ಟದೊಳ್ (ನೇಮಿಪು. ೧೦-೧೨೨) ; ಉಟ್ಟ ಪಟ್ಟೆಯ ಕಾಸೆ ತೋಱುವ ಕನಕದುಡಿನೇವಳ ವಿರಾಜಿಸುತ (ಪ್ರಭುಲೀ. ೫-೫) ; ನಿನ್ನ ವಿಲಾಸದ ನಡೆಗೆ ಧರಣಿಯು ಕಾಸೆ ಮೀಸೆಯುನುಳ್ಳ ಕಲಿಗಳು ಸೇರರು (ಕುರಾಸಾಂ. ೩೦-೨೪). ೨. ಸೊಂಟಕ್ಕೆ ಸುತ್ತಿದ ವಸ್ತ್ರ ; ಕಟಿವಸ್ತ್ರ : ತೊಡೆಚಲ್ಲಣವೆರಸಿ ಕಾಸೆಯ ಕಟ್ಟಿ ಭೂತಾಕೃತಿವೆತ್ತು ನಿಂದ (ಮೋಹತ. ೧೧-೬೩) ; ಪಚ್ಚೆಯ ಚಲ್ಲಣ ಪಂಚವರ್ಣದ ಕಾಸೆ ಬೆಚ್ಚಮುತ್ತಿನ ಮೊಲೆಗಟ್ಟು (ಭರಚ. ೧೨-೫೮) ; ಒಡಲ ಭಸಿತೋದ್ಧೂಳನದ ಕೆಂಜೆಡೆಯ ರುದ್ರಾಕ್ಷಾ ವಿಕಲ್ಪದ ಜಡಿವ ಮಣಿಕುಂಡಲದ ನಿಡುಗಡ್ಡದ ತಳಿರ್ಗಾಸೆ ಉಡಿಗೆ ಬಹಿರ್ವಾಸದ ಶತಪ್ರಭೆ ಕುಡಿವರಿವ ಸುಲಿಪಲ್ಲ ಕೆಯ್ಯೊಳು ಪಿಡಿದ ಕಾಸಾದಂಡದಧಿಕ ಗಣೇಶನಂ ಕಂಡ ಅರಸನು (ಶಂಕದಾ. ೧೦-೭೩).

**ಕಾಶಿ₃** : ೨. ಕಾದಿದರ್ ಕಟ್ಟಿದೆದೆಥಟ್ಟಿ ಬಿಗಿದಿಟ್ಟ ನೆರಿ ಕಾಶಿಯಿಂದ (ಜಿನವು. ೩-೪೧). **ಕಾಶೆ₁** : ೧. ಚಿತ್ರಮಯ ಪೊಂಬಟ್ಟೆಯಿಂ ಕೈಗೈದು ರಾಜಿತಮಾದ ಕಾಶೆಗಳನುಟ್ಟು (ಶಂಕದಾ. ೨-೪೭). ೨. ಪೆರ್ದುಱುಬು ಉಡಿಜಲ್ಲಿಯುಟ್ಟು ಕಾಶೆಯ ಸಬಳಿಗರು ಕೋಲಾಹಲಿಸುತ್ತಿದ್ದರು (ನಂಜುಂಡ. ೯೫). **ಕಾಸಿ₁** : ೧. ಚರ್ಮವ ಕಿತ್ತು ನಡುವಿಗೆ ಸುತ್ತಿ ಕರುಳ ಕಾಸಿಯಾಗುಟ್ಟು (ಭೈರಸೂ. ೧೧೨); ಭ್ರಮರ ವರ್ಣದ ಕಾಸಿ ಮೈದೊಡೆಯ ಕುಪ್ಪಸದಿ (ಪ್ರಭುಪು. ೪-೭೮); ಸೆಱಗ ಜೋಡಿಸಿಯಿಳುಹಿ ಕಾಸಿಯ ಬಿಗಿದುಟ್ಟು (ನವಮೋ. ೧೭-೯). **ಗಾಸೆ₃** : ೧. ಸುಂದರ ಹೊಸದುಪ್ಪುಟದ ಗಾಸೆಯ ಚದುರೆಯರು (ಕರ್ಣಾಜ. ೧೭೩). ೨. ಅಸಮ ಗಾಸೆಯ ಖಡ್ಗಪಾಣಿಯ ಗಳದ ರುದ್ರಾಕ್ಷಿ (ಮಡಿಥ. ೧೨).

[< ಕಾಚ₂]

**ಕಾಸೆ₂, ಕಾಸಿ₃ (ನಾ).** ೧. ಕಾವಿಯ ಬಟ್ಟೆ; ಕಾಷಾಯ ವಸ್ತ್ರ: ಮಹಾಪದ್ಮನಂ ಕಿಡಿಸಿದಲ್ಲದೆ ಕಾಸೆಗಳಂ ಕಳೆಯೆನೆಂದು ಜಾದಿನ ಸೇಲೆಗಳ ನುಟ್ಟು (ವಡ್ಡಾರಾ. ೧೮೭-೬); ತಲೆಗಿರಿದುಟ್ಟು ಕಾಸೆಯಂ (ಜೀವಸಂ. ೮೯-೩೨); ಕಾಸೆಯನಳಿದು ಸೀರೆಯನುಟ್ಟು ಗಂಡು ಹೆಣ್ಣಾಗಿ ನಿನಗೆ ವಧುವಾದೆನಯ್ಯ (ಘನವ. ೭೪-೬೨); ಜಡೆಗೊಂಡ ಪಿಣಿಲಂ ತಾನೆ ಬಿಡಿಸಿ ಕಾಸೆಯಂ ಕಳೆಯಿಸಿದಾಗಳ್ ಮಜ್ಜನಂಬುಗಿಸಿ ಕೈಗೆಯ್ದು (ಬಂಹರಿ. ೪-೪೨ವ). **ಕಾಸಿ₃** : ಕಾಸಿಯನುಟ್ಟು ತ್ರಿಪುಣ್ಡ್ರಮನಿಟ್ಟು (ಎಕ. X, ಚಿಂತಾಮ. ೩೪-೩; 955); ಕೋಟಿಗಣ್ಣುಂ ಬಿಟ್ಟ ಬಾಯುಂ ... ತೊಟ್ಟ ಕಾಸೆಯುಂ ಬೆರಸು [ಹಂಸೆಯೊಳಗೆ ಹೊರಸು ಬಂದಿರ್ಪಂತೆ ಬರ್ಪುದುಂ] (ಧರ್ಮಾಮೃ. ೭-೨೨೫). ೧. ಕಾಸಿ[ಪಾಠಾಂ. ಶಿ] ಕಂಚಡಿ ಯೇಕೆ ಅಸುರದ ಜಡೆಯೇಕೆ (ಸರ್ವಜ್ಞ. ೫೭೩). ೨. ಕಾಷಾಯ ಬಣ್ಣ; ಕೆಂಪು ಬಣ್ಣ: 'ಕಾಸೆಮೊಚ್ಚೆಯ' ಪರಾ.

[< ಸಂ. ಕಾಷಾಯ. / ತಮಿ. ಕಾಶ್ಯೆಯುಡ್ಯೆ = ಕಾವಿಬಟ್ಟೆ]

**ಕಾಸೆಗಟ್ಟು (ಕ್ರಿ).** ಕಚ್ಚೆಗಟ್ಟು: ಪಲವು ಬಟ್ಟೆಗಳನು ಮೆಟ್ಟಿನು ಅಲ್ಲಿ ಪರಿದಾಟಕೆ ಕಾಸೆಗಟ್ಟಿನು (ಗೀತಗೋ. ೪೯-೫).

[ಕಾಸೆ₁ + ಕಟ್ಟು₁]

**ಕಾಸೆಮೊಚ್ಚೆಯ (ನಾ).** ಕೆಂಬಣ್ಣದ ಮೊಚ್ಚೆ,—ಜೋಡು: ಕಟ್ಟಿದ ಜವದಾಡೆಯ ಮೆಟ್ಟಿದ ಕಾಸೆ ಮೊಚ್ಚೆಯದ ಬಿಟ್ಟ ಜೆಡೆಯ ಗೊಂಡೆಯದ ಖಾನ ಮಲುಕರಿಟ್ಟಣಿಸಿದರೋಲಗದೊಳು (ಕುರಾಸಾಂ. ೧೮-೨೬).

[ಕಾಸೆ₂ + ಮೊಚ್ಚೆಯ]

**ಕಾಸ್ತಾರ** 'ಕಾಸದಾರ' ನೋ.

**ಕಾಸ್ದಾರ** 'ಕಾಸದಾರ' ನೋ.

**ಕಾಸ್ಮೀರ ಭೂಮಿ (ನಾ).** ಕಾಶ್ಮೀರಭೂಮಿ: ಶ್ರೀ ಮಲ್ಲಿಕಾರ್ಜುನ ದೇವರಿಗೆ ಬಿಟ್ಟ ದತ್ತಿ ಕಾಸ್ಮೀರಭೂಮಿ ಮತ್ತ ೨ (ಸೌಇಇ. IX-i, ೨೨೫-೧೧; 1130).

[ಸಂ. ಕಾಶ್ಮೀರಭೂಮಿ]

**ಕಾಹ (ನಾ).** ಕಾಯುವಿಕೆ; ಕಾಪು; ಕಾವಲು: ಸುಡುಗಾಡ ಕಾಹವೆಂದೇನದಱ ಪಂಥಮಂ ನುಡಿದು ಪೇಳೆನೆ (ಹಚಕಾ. ೧೧-೩೭). 'ಕಾಹು' ಪರಾ.

[ಕಾ₁ + -ಹ₂]

**ಕಾಹಕ (ನಾ).** "ಸಂರಕ್ಷಕ; ಪಾಲಕ; ಮೇಲ್ವಿಚಾರಕ" (ಕಸ್ತೂಕೋ); ಉಳಿವ ಭಟ್ಟರ ನಿಲಿಸಿದನು ಸಮನೆಲನ ಹೊಗಳುವಕಾ [ಪಾಠಾಂ. ವಾ]ಹಕರ ಕಳಕಳವ ನಭಕೊತ್ತಿದನು ಕಹಳಾರವಕೆ ಕೋಪಿಸುತ ತಲೆ ಮುಸುಕಿನಲಿ ತಾರಿದೊಡಲಿನ ತಳಿತ ದುಗುಡದ ಮೋಱೆಯಲಿ ಕುರುಕುಲಭಯಂಕರನೈದಿದನು (ಕುವ್ಯಾಅ. ೨೧-೫೨).

[ಕಾಹ + -ಕ₃]

**ಕಾಹಲ, ಕಾಹಳ, ಕಾಹಳೆ₃ (ನಾ).** ಒಂದು ವಾದ್ಯ; ಕಹಳೆ; ಕಾಳೆ: ವಂಶ ಶಂಖ ಕಾಹಲಾದಿ ನಿಮಿತ್ತಂ ಸುಷಿರಮೆಂಬುದಕ್ಕುಂ (ತತ್ತ್ವಪ್ರ. ೨೪೩). **ಕಾಹಳೆ** : ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖವಂಶ ವೀಣಾ ಸ್ವರಂಗಳೆಸೆಯೆ (ವಡ್ಡಾರಾ. ೮೩-೨೮); ಕಾಹಳ ಬಹುವಿಧ ವಾದ್ಯಸ್ವನಂ (ಪಂರಾಮಾ. ೧೩-೨); ಅಹ ತನ್ನೊಡಲೊಡತಿ ಮಾಯಾ ದೇಹಿನಿಯೆ . . . ದೋಹಳವೆ ತನ್ನ ಕ್ರಿಯುಗಳದ ಕಾಹಳವೆ ಕಾಮಪ್ರತಾಪದ ಮೋಹಳವೆ ಮನಮಥನ ಶರಧಿಯೆ ಎನುತ ಸೈವಡೆದ (ನಿಭಾಗ. ೯-೧೭-೩೪). **ಕಾಹಳೆ₃** : ಮೊಳಗಲುದ್ದಾಮ ಜಯ ಕಾಹಳೀ ದುಂದುಭಿಗಳಬ್ಬರಂ (ಶೀಪರಾ. ೧೪-೬೨).

[ಸಂ.]

**ಕಾಹಲೆ, ಕಾಹಳೆ (ನಾ).** ೧. = ಕಾಹಲ: (ಕಿ). ೨. ದೊಡ್ಡಭೇರಿ, —ನಗಾರಿ. **ಕಾಹಳೆ** : ೧. ಕಣ್ಣಂಜಲ್ಗಿಂದ್ರಂ ಬಿಗಿದ ಪೊನ್ನಕಾಹಳೆ ಯೆಂಬಿನಮೆಸೆದಂ ಮೃಗಾಂಕನರ್ಥೋದಯದೊಳ್ (ಅನಂಪು. ೭-೮೦).

[ಸಂ. ಕಾಹಲಾ]

**ಕಾಹಳ** 'ಕಾಹಲ' ನೋ.

**ಕಾಹಳೆ₁ (ನಾ).** ಒಂದು ಬಗೆಯ ಸಸ್ಯ: "ಬಂಡೆಯೆನೆ ಚಂಡೆ ಕಾಹಳೆ ಯೆನಲ್ಕಳೈಮಕ್ಕುಂ [ಪಾಠಾಂ. ಬಂಡೆಕಾಕಳೆಯೆನೆ ಕಳವಲಕ್ಕುಂ]" (ಮಂಗರಾ. ೪೦-೩೨).

[?]

**ಕಾಹಳೆ₂ (ನಾ).** ಧರ್ಮದರ್ಶಿ (?): ಕುಡಿನುದೆಱೆಯ್ಯಂ ಅಯ್ದು ಬ್ರಹ್ಮಪುರಿಯ [ಬಾ]ದುವೆಯ ಕಾಹಳೆಗಳ ಕೈಯಲು ××× ಧಾರಾ ಪೂರ್ವಕನಾಗಿ ಬಿಟ್ಟರು (ಸೌಇಇ. XV, ೭೨-೫೭; 1186).

[?]

**ಕಾಹಳೆ₃** 'ಕಾಹಲ' ನೋ.

**ಕಾಹಳೆ** 'ಕಾಹಲೆ' ನೋ.

**ಕಾಹಿ, ಕಾಯಿ₃ (ನಾ).** ಕಾಯುವವನು; ಕಾವಲುಗಾರ; ರಕ್ಷಕ. 'ಕಱುಗಾಹಿ', 'ತುಱುಗಾಹಿ', 'ಮಸಣಗಾಹಿ' ಪರಾ. **ಕಾಯಿ₃** : 'ತುಱುಗಾಯಿ' ಪರಾ.

[ಕಾಹು₁ (< ಕಾಪು) + -ಇ₃]

**ಕಾಹಿಗ (ನಾ).** = ಕಾಹಿ: ಅಲ್ಲಿರ್ದ ಕಾಹಿಗರ ಗೆಲ್ದುರುಳಿಸುತ್ತ (ಬಾಲಭಾ. ೮-೯೯).

[ಕಾಹು₁ (< ಕಾಪು₁) + -ಇಗ]

**ಕಾಹಿನಾಡು (ನಾ).** ಒಂದು ನಾಡಿನ ಹೆಸರು (?): ಕಲಿಸಿಂದ ನೊಳಗಾಗಿ ಕಾಹಿನಾಡಯ್ವಗ್ಗೆ ಮತ್ತರ್ನಾಲ್ವತ್ತು (ಸೌಇಇ. IX-i, ೧೧೧-೫೪; 1045).

[ಕಾಹಿ ? + ನಾಡು]

**ಕಾಹಿಲೆ** 'ಕಾಯಿಲೆ' ನೋ.

**ಕಾಹು₁** 'ಕಾಪು₁' ನೋ.

**ಕಾಹು₂ (ನಾ).** ಕಾವಲಿನ ಸುಂಕ; ರಕ್ಷಾಶುಲ್ಕ (?): ಕಿಱುದೆಱೆ ಕುಱು ಕುಳಾಯ ಒಳಗಾಗಿ ಕಾಹಂ ಪಡೆದು (ಎಕ. VIII, ಸಾಗರ. ೮೦-೨೯; 1096). ರಾಹುತಗೌಡಂಗೆ ಬಿದಿರೂರಲು ಪಣವೊಂದರ ಕಾಹ ಕಾರುಣ್ಯಗೆಯ್ದು ಕೊಟ್ಟರ್ಸ್ಸ(ಮೈಆರಿ. ೧೯೩೨, ೩೧-೧೦; 1124); ಆ ಬಾಳಿಂಗೆ ಉಳ್ಳಂಥಾ ಕಾಹು ಮೊದಲು ಆ ಬಾಳ ಸ್ಥಾನಕ್ಕೆ ಉಳ್ಳಂಥಾ ಮಾ(ಂ)ನ್ಯ (ಸೌಇಇ. IX-ii, ೪೧೭-೧೧; 1377).

[< ಕಾಪು₁]

**ಕಾಹು₃** 'ಕಾಯ್ಪು₁' ನೋ.

**ಕಾಹುರ₁** 'ಕಾವರ₂' ನೋ.

**ಕಾಹುರ₂** 'ಕಾಪ್ಪುರ' ನೋ.

**ಕಾಹುರತೆ (ನಾ).** ಉದ್ವೇಗ; ರಭಸ; ಆಧಿಕ್ಯ: ಕದನಾಲಾಪಕರ ಕಾಹುರತೆ ಹೊಸತಾಯ್ತು (ಕುವ್ಯಾಉ. ೧೧-೪೦).

[ಕಾಹುರ₁ (< ಕಾವರ₂) + -ತೆ]

**ಕಾಹೇಱು, ಕಾವೇರು (ಕ್ರಿ).** ೧. ಕಾವು ಏರು; ಉಷ್ಣತೆ ಹೆಚ್ಚಾಗು: ಝಳ ತಾಗಿ ಕಳೆಕಾಮು . . . ಅಸ್ಥಿಗಳು ಕಾಹೇಱೆ (ಶಿವಗೀ. ೧೧೯); ನಲಿನಲಿದು ಕಾಸಿ ಪದಪಾಕಮಂ ನೋಡುತಂ ಕಾಹೇಱುತಿದು ಸೀದುವೆಂದು ಬೇಱೆರಿಸುತಂ ಅಹಾ ಇದೆನ್ನವಂಗೆ (ಕಣ್ಣರ. ೧೩೬-೧);

ಸಂದುಕಾಸಲು ಕರಗಿ ಕಬ್ಬುನಂ ಕಾಹೇಱುವಂದದಿಂ(ಸೋಮುಚ. ೩-೫೭); ರೋಷಜ್ವಾಲೆ ಹೊದಿಸಿತು ವದನವನು ಕಣ್ಣಾಲಿ ಕಾಹೇಱಿದವು ಪಾರ್ಥಂಗೊಂದು ನಿಮಿಷದಲಿ (ಕುವ್ಯಾಕ. ೧೭-೧). ೨. ಕೋಪಾವಿಷ್ಟನಾಗು; ಕೆರಳು; ಕ್ರುದ್ಧನಾಗು: ಒದೆದನಳಲನು ರೋಮ ಹರುಷವ ಹೊದೆದು ಹೊರೆ ಹೆಚ್ಚಿದನು ಕಾಹೇಱಿದನು (ಕುವ್ಯಾದ್ರೋ. ೧೯-೧೦); ಕೇಳಿ ಕಾಹೇಱಿದಂ ಮೀಱಿದಂ ಸಾರಿದಂ ಕಾಳಗಮನುಬ್ಬಿನಿಂ (ಚಬಪು. ೩೧-೪೦). **ಕಾವೇರು**: **೧.** ಯೌವನದ ರಕ್ತ ಕಾವೇರಿ ಕಾತ್ಯೂಷಾಳ ಸುಂದರ ವದನ ಕೆಂಪಾಯಿತು (ಪುನರು. ೭೦). **೩.** ಉದ್ವೇಗ ಉಂಟಾಗು; ಆವೇಶ ತುಂಬು: ದೇಶಕ್ಕೂ ಕಾವೇರಿದ ಕಾಲವದು (ಇಪ್ಪಕ. ೨೨೫). [ಕಾಹು$_3$ (< ಕಾಯ್ಪು$_1$) + ಏಱು$_1$(< ಏಱ್$_1$)]

**ಕಾಹೊನಲ್** 'ಕಾಟಿಕ್ರೊನಲ್' ನೋ.

**ಕಾಳ್** 'ಕಾಟ್$_1$' ನೋ.

**ಕಾಳ್$_2$** 'ಕಾಟ್$_3$' ನೋ.

**ಕಾಳ$_1$** (ನಾ). ಕೆಡುಕ; ಕೇಡಿ; ನೀಚ: ಖೂಳರು, ಮೂಳರು, ಕಾಳರು (ಸೂರ್ಯಪಾ. ೭-೧೯). [ಕಾಳು (< ಕಾಟ್$_1$) + -ಅ$_7$]

**ಕಾಳ$_2$** 'ಕಾಲ' ನೋ.

**ಕಾಳಂಕ$_1$** (ನಾ). ಕಳ್ಳದಾರಿ; ಕಾಡು ಪ್ರದೇಶ: ಸುಂಕವನು ತಪ್ಪಿಸಿ ಪೋಗುವೆನೆಂದು ಕಾಳಂಕದಲಿ ಪೋಗುತಿರೆ ಮಾರ್ಗತಪ್ಪಿ . . . ಭಾಸ್ಕರನುದಯಕಾಲಕ್ಕೆ ಸುಂಕದವರ ಕೈಯ ಸಿಕ್ಕಿದಂತೆ (ವಿಸಾಸು. ೩೮-೪). [ಕಾಳು$_1$ (< ಕಾಟ್$_1$) + ಅಂಕ$_2$]

**ಕಾಳಂಕ$_2$** (ನಾ). ೧. ಗುರುತು; ಚಿಹ್ನೆ. ೨. ಕೊಳೆ; ಮಾಲಿನ್ಯ. ೩. ಕಪ್ಪು. 'ಕಾಳಂಕಧರ' ಪರಾ. [ಸಂ. ಕಾಲಂಕ]

**ಕಾಳಂಕಧರ** (ನಾ). (ಕೊರಳಲ್ಲಿ) ಕಪ್ಪು ಉಳ್ಳವನು; ನೀಲಕಂಠ; ಶಿವ: ಶಿವತಂತ್ರ ಜಾಲಾನುಭವಿಗಳಂ ಕಾಳಂಕಧರ ಸಮಯ ನಿಷ್ಠಾತುರರ ನೋಡಿ ತಾಳಿದೆಂ ಸಂತಸವನು (ಏಕೋಪು. ೨-೬೯). [ಸಂ. ಕಾಲಂಕಧರ]

**ಕಾಳಂಗೆಯ್** 'ಕಾಲಂಗೆಯ್' ನೋ.

**ಕಾಳಂಜಿ** 'ಕಾಳಾಂಜಿ$_2$' ನೋ.

**ಕಾಳಂಜಿಯಗಿಡು** (ನಾ). ಒಂದು ಬಗೆಯ ಗಿಡ: "ರೇಚನೀ– ಕಾಳಂಜಿಯ ಗಿಡು" (ಒಷಧಿ. ೧೪೦). [?]

**ಕಾಳಂಜಿವಿಡಿ** 'ಕಾಳಾಂಜಿವಿಡಿ' ನೋ.

**ಕಾಳಕಂಠ** 'ಕಾಲಕಂಠ' ನೋ.

**ಕಾಳಕಂಧರ** 'ಕಾಲಕಂಧರ' ನೋ.

**ಕಾಳಕತ್ತಲೆ** 'ಕಾಲಗತ್ತಲೆ' ನೋ.

**ಕಾಳಕನ್ನ** (ನಾ). ಒಬ್ಬಾತನ ಹೆಸರು: ನಲ್ಲಿವರ ಕಾಳಕನ್ನ ಕಲಿಕಜ್ಜರಾನಿಱಿದೋಡಿಸಿ (ಎಕ. X. ಮಾಲೂರು. ೯೭-೧; 750). [?]

**ಕಾಳಕೂಟ** 'ಕಾಲಕೂಟ' ನೋ.

**ಕಾಳಕೂಟಪ್ರಭವ** (ನಾ). ಕಾಲಕೂಟ ವಿಷಕ್ಕೆ ಜನ್ಮಕೊಟ್ಟುದು, —ಉತ್ಪತ್ತಿಸ್ಥಾನ: ಆ ಮಹಾರ್ಣವಂ . . . ಕಾಳಕೂಟ ಪ್ರಭವಮಾಗಿಯುಂ ಅಮೃತೋದಯಕ್ಷೇತ್ರಮುಂ (ಜಗವಿ. ೧-೪೪ ವ). [ಕಾಳಕೂಟ (= ಕಾಲಕೂಟ) + ಪ್ರಭವ]

**ಕಾಳಕೃತಾಂತ** (ನಾ). ಕಾಲಯಮ; ಪ್ರಳಯ ರುದ್ರ: ಅಂತರಂ ಧುರಧರೆಯಲ್ಲಿ ಕೊಲ್ವೆಡೆಗೆ ಕಾಳ ಕೃತಾಂತನೆನುತ್ತ ಬಣ್ಣಿಕುಂ ವರ ವಿಬುಧವ್ರಜಂ (ಎಇ. IV, ೧-೬೮; 1204). [ಕಾಳ$_2$ (= ಕಾಲ) + ಕೃತಾಂತ]

**ಕಾಳಗ** 'ಕಾಳೆಗ' ನೋ.

**ಕಾಳಗತ್ತಲು** 'ಕಾಲಗತ್ತಲೆ' ನೋ.

**ಕಾಳಗತ್ತಲೆ** 'ಕಾಲಗತ್ತಲೆ' ನೋ.

**ಕಾಳಗದಾಯ** (ನಾ). ಯುದ್ಧದ ಖರ್ಚನ್ನು ನಿರ್ವಹಿಸಲು ಹಾಕುವ ತೆರಿಗೆ; ಯುದ್ಧದ ತೆರಿಗೆ: ಕಾಳಗದಾಯಮಂ ಪೊಂಗೆ ವೀಸ ೨ ವೊರೊಟಗೆ ಮಾಱಿದ ಭಂಡಕ್ಕೆ ಹೆಜ್ಜುಂಕ ಬಿಲುಕೊಡೆ ವಡ್ಡರಾವುಳ ಮೂಲೆಗೆ ಬಳ್ಳ ೧ (ಸೌಇಇ. XX, ೮೦-೪೯; 1120). [ಕಾಳಗ (< ಕಾಳೆಗ) + ದಾಯ$_1$]

**ಕಾಳಗವಲಗೆ** 'ಕಾಳೆಗವಲಗೆ' ನೋ.

**ಕಾಳಗವಾಡು** (ಕ್ರಿ). ಯುದ್ಧಮಾಡು: ಬೌದ್ಧರು ತಾವು ಇದಕ್ಕೆ ಮೊದಲು ಕಾಳಗಮಾಡಿ ಕಳೆದುಕೊಂಡಿದ್ದ ಸಿಂಹಳದ್ವೀಪವನ್ನು ಮತ್ತೆ ಗೆಲ್ಲಬೇಕೆಂದು ತಮ್ಮ ನೌಕಾಸೇನೆಯನ್ನು . . . ಕಳುಹಿಸುತ್ತಿದ್ದರು (ಕವಿಕ. ೩೩). [ಕಾಳಗ (< ಕಾಳೆಗ) + ಆಡು$_1$]

**ಕಾಳಗವೆಸಗು** (ಕ್ರಿ). ೧. ಯುದ್ಧಮಾಡು. ೨. ಯುದ್ಧವಾಗು; ಕದನವಾಗು: ಜಗತ್ಸಿಂಹ ಮಾನಸಿಂಹ ಇವರಿಬ್ಬರೊಳಗೆ ಕಾಳಗವೆಸಗಿ (ಕೃಷ್ಣಾಕು. ೧-೧೮). [ಕಾಳಗ (< ಕಾಳೆಗ) + ಎಸಗು]

**ಕಾಳಗಾವುಂಡ** (ನಾ). ಒಬ್ಬಾತನ ಹೆಸರು: ಕೆವೆಸೆಯ ಕಾಳಗಾವುಣ್ಡನ ಮಗ ಕಲ್ಲಣ (ಎಕ. VIII. ಸೊರಬ. ೪೪೫-೭; 975). [ಕಾಳ$_2$ (= ಕಾಲ) + ಗಾವುಂಡ (< ಗಾಮುಂಡ)]

**ಕಾಳಗಾಜಿ** (ನಾ). (?): ಅಲ್ಲಪ್ಪನಾಯಕನು ಮದಿಗೋವಿಂದನು ಕಾಳಗಾಜಿರು ತುಱುವ ಹಿಡಿದು ಕಾದಲ್ಲಿ (ಎಕ. IX, ಚನ್ನಪ. ೧೭೯-೮; 1295). [?]

**ಕಾಳಗೊಲ್ಲು** (ನಾ). ಒಂದು ಬಗೆಯ ತೆರಿಗೆ; ಕಾಳಿನ ಮೇಲೆ ಹಾಕುವ ತೆರಿಗೆ(?): ಅಲ್ಲಿ ಮನ್ನೆಯ ನಿಬನ್ದದ ಕಿಱುದೆಱೆಗಳಾವುವೆನ್ದಡೆ ಮನೆವಣಂ ಪಿರಿಯ ರವಣಂ ಧನಬಳಂ ಕಾಳಗೊಲ್ಲು ಮೇಂಟಿಗಣ್ಡುಗ (ಸೌಇಇ. XX, ೪೭-೩೬; 1074); ರುದ್ರಮಯ್ಯಂಗೆ ಶ್ರೀಸಾಸಿರ್ವ್ವರುಂ ಕಾಳಗೊಲ್ಲು ಮೇಂಟಿಯುಂ ಬಿಟ್ಟರು (ಕಇ. II, ೧೦-೨೩; 1080). [?]

**ಕಾಳಜಟ್ಟಿಗ** (ನಾ). ಕಾಲಯಮನ ಜಟ್ಟಿ: ಭೈರ ಬೊಮ್ಮ ರಕ್ಕಸ ಕಾಳಜಟ್ಟಿಗ ಬೀರ ಬೇತಾಳರಾರೊಳರು . . . ಅರಾದೊಡಮಡ್ಡಾ ಬರಲಿ (ಶ್ರೀಪಾಲ. ೮-೫೮). [ಕಾಳ$_2$ (= ಕಾಲ) + ಜಟ್ಟಿಗ]

**ಕಾಳಜಿ** (ನಾ). **೧.** (ಉಕ) ಗೊಡವೆ; ಚಿಂತೆ: ಮಾಡುವವ ನಾನು; ನಿಮಗ್ಯಾತರ ಕಾಳಜಿ (ಕಭವಿ. II, ೨೫); •ಗೋದಾವರಿಗೆ ಯಾವ ಕಾಳಜಿಯೂ ಇದ್ದಿಲ್ಲ (ಹಬ್ಬಬ. ೯೮); ಆದರ ಕಾಳಜಿ ನನಗಿರಲಿ (ಮನೋನಂ. ೪೭). **೨.** ಜ್ಯೋಪಾನ; ಜಾಗರೂಕತೆ; ಆಸ್ಥೆ; ಎಚ್ಚರ; ನಿಗ: ಅವಳ ಪೆಟ್ಟಿಗೆಯಲ್ಲಿ ಕಾಳಜಿಯಿಂದ ಕಾದಿಟ್ಟ ಕೆಲವು ನನ್ನ ಹಳೆಯ ಪತ್ರಗಳೂ . . . ಸಿಕ್ಕಿದವು (ಸಾಲಂಸಾ. ೧೧೫); ಒಳ್ಳೇ ಕಾಳಜಿಯಿಂದ ಎಲ್ಲವನ್ನೂ ಸಿದ್ಧಗೊಳಿಸಿದೆವು (ಮೇದಿಮ. ೨೦೪); ತುಂಬ ಕತ್ತಲೆಯಾಗಿ ಬಿಟ್ಟಿತಲ್ಲವೆ? . . . ತುಸು ಕಾಳಜಿಯಿಂದ ಕಾಲು ಹಾಕು (ಮೂರುದಾ. ೧೨೪). **೩.** ಆರೈಕೆ: ಎಲ್ಲಾ ನಾನೇ ನನ್ನ ಹೊಟ್ಟೆಯ ಕಾಳಜಿ ನೋಡಿಕೊಂಡೆ (ವೈನಿ. ೨೧೩).

**ಕಾಳಜಿ ತೆಗೆದುಕೊ** = **೧.** ಎಚ್ಚರವಹಿಸು; ಲಕ್ಷ್ಯಕೊಡು; ಜಾಗರೂಕವಾಗಿರು: ವೈದ್ಯರೇ ಮತ್ತೇನಾದರೂ ವಿಶೇಷ ಕಾಳಜಿ ತೆಗೆದುಕೊಳ್ಳಬೇಕೆ (ಇತಿಶ್ರೀ. ೨). **೨.** ಆರೈಕೆ ಮಾಡು: ಹಟ್ಟಿಗೆ ಹೋಗಿ ಅವುಗಳ ಕಾಳಜಿ ತೆಗೆದುಕೊಳ್ಳುತ್ತಿದ್ದಳು (ಜಮಿನ್ದಾ. ೩೨); ಶ್ರೀಕಾಂತ ಬೇಗ ಸುಧಾರಿಸಬಹುದು. ಅನಂತರ ನಾವು ಅವನ ಒಳ್ಳೆಯ ಕಾಳಜಿ ತೆಗೆದುಕೊಳ್ಳೋಣ (ಮುಕ್ತಿ. ೧೩೨).

**ಕಾಳಜಿಮಾಡು** = ೧. ಎಚ್ಚರವಹಿಸು : ಹೇಳಿದರು ತಮ್ಮ ಹುಡುಗರಿಗೆ ಕುರಿ ಹಿಂಡ ಕಾಳಜಿಯ ಮಾಡಿ ಕಾಯ್ರೆಂದು (ನಾಡಪ. ೬೦). ೨. ಚಿಂತೆ ಮಾಡು : ಕಾಳಜಿ ಮಾಡಬೇಡ. ದೇವರಿದ್ದಾನೆ (ಕನಸಿ. ೬೮); ಆ ಬಗ್ಗೆ ಗುಲ್ಲಪ್ಪಯ್ಯನು ಅಷ್ಟೊಂದು ಕಾಳಜಿ ಮಾಡಬೇಕಾಗಿರಲಿಲ್ಲ (ಕಂಬಹು. ೬೧). [← ಮರಾ. ಕಾಳಜೀ]

**ಕಾಳಜೀರಿಗೆ** 'ಕಾಳ್ಜೀರಿಗೆ' ನೋ.

**ಕಾಳತನ** 'ಕಾಳ್ತನ' ನೋ.

**ಕಾಳದಂಡ** 'ಕಾಲದಂಡ' ನೋ.

**ಕಾಳನಿದ್ರೆ** (ನಾ). ಚಿರಕಾಲದ ನಿದ್ದೆ ; ಸಾವು ; ಮರಣ : ವಿಷವು ಕೂಡ ...ನಾಲ್ಕನೆಯ ಸಲ ನಿರುಪಾಯವಾಗಿ ಆದು ಅವಳನ್ನು ಕಾಳನಿದ್ರೆಗೈಯುವಂತೆ ಮಾಡಿತು (ಕೃಷ್ಣಾಕು. ೨-೩). [ಕಾಳ್$_{2}$ (= ಕಾಲ) + ನಿದ್ರೆ]

**ಕಾಳಬಜ್ಜರಿ** (ನಾ). ಕಪ್ಪುಬಣ್ಣದ ಭರ್ಜಿ, —ಖಡ್ಗ (?) : ಪ್ರಸವಾಲಯದೊಳ್ ಜಗತೀ ಪ್ರಸವಾಭಾರಕ್ಕೆ ಕಿಚ್ಚು ಕೆಲದೊಳ್ಸಾರ್ಚಿರ್ದರ್ಸಿಲತೆಗೆ ಕಾಳ ಬಜ್ಜರಿವೆಸರಾಯ್ತುಂದಿಂಗೆ ಕೃಷ್ಣನಂಗಚ್ಛವಿಯಿಂ (ಅನಂಪು. ೧೨-೮೩). [ಕಾಳ್$_{1}$ (= ಕಾಲ) + ಬಜ್ಜರಿ]

**ಕಾಳಬುದ್ಧಿ** (ನಾ). ಕೆಟ್ಟಬುದ್ಧಿ; ದುಷ್ಟಬುದ್ಧಿ : ಸರ್ಕಸ್ ನೋಡ ಹೋಗುವ ಕಾಳಬುದ್ಧಿಯು ಏಕೆ ಬಂತೆಂದು ಹಲುಬಿದಳು (ಬೆಟ್ಟಹೊ. ೫೧). [ಕಾಳ್$_{1}$ + ಬುದ್ಧಿ]

**ಕಾಳಬ್ಬೆ** (ನಾ). ಒಬ್ಬಾಕೆಯ ಹೆಸರು : ವುರು ದಂಣ್ಣ[ಲ್ಲೊಲ್ಲೆ]ಯರ ಮಗಳ್ ಕಾಳಬ್ಬೆ (ಸೌಇಇ. XI–i, ೨೪–೧೩ ; 897). [ಕಾಳ್$_{2}$ (= ಕಾಲ) + ಅಬ್ಬೆ]

**ಕಾಳಭ** (ನಾ). ಆನೆಯಮರಿ ; ಮರಿಯಾನೆ: ಮೇದಿನಿಯೊಳ್ ಗಜೇಂದ್ರ ಪದದೊಳ್ ಪರಿವರ್ತಿಸುವಂತೆ ಕಾಳಭಂ (ಬಾಧಪು. ೧-೫೫). [ಸಂ. ಕಾಲಭ]

**ಕಾಳಮರ್ತ್ಯ** (ನಾ). ಕೆಟ್ಟಮನುಷ್ಯ ; ನೀಚಮಾನವ : ಮತ್ತೆ ಲಾಗಿನ ಅಣ್ಣಗಳು ಸಜ್ಜನಗಳ್ಳರು, ಮುಯ್ಯಬಂಧುಗಳು, ಕಾಳಮರ್ತ್ಯರು (ಮೋಳಿಮಾ. ೧೪೬ ಪ್ರಸ್ತಾವನೆ). [ಕಾಳ್$_{1}$ (< ಕಾಱ್$_{1}$) + ಮರ್ತ್ಯ]

**ಕಾಳಮಾಳೆ** 'ಕಳ್ಳಿಮಳ್ಳಿ' ನೋ.

**ಕಾಳಮೇಘ** (ನಾ). ಕಪ್ಪಾದ ಮೋಡ ; ಕರಿಮೋಡ : ಕಾಳಮೇಘ ಮಂದಿರದ ಜಾಳಂದರದ ಮನೆಯಲ್ಲಿ ಒಬ್ಬ ಸೂಳೆಯ ಬಾಗಿಲಲ್ಲಿ ಯೆಂಭತ್ತುನಾಲ್ಕು ಲಕ್ಷ ಮಿಂಡಗಾಱರು (ಕಲ್ಯಾಶಾಂ. ೧೦೮-೧೬). [ಕಾಳ್$_{2}$ (= ಕಾಲ) + ಮೇಘ]

**ಕಾಳಯಮ** 'ಕಾಲಯಮ' ನೋ.

**ಕಾಳಯುಕ್ತಿ** (ನಾ). ಅರವತ್ತು ಸಂವತ್ಸರಗಳಲ್ಲಿ ಐವತ್ತೆರಡನೆಯದು : ಮತ್ತಮಾ ವರುಷವೇ ಪ್ರಭವ ... ಕಾಳಯುಕ್ತಿ...ಅಕ್ಷಯವೆಂದರವತ್ತು ತೆರನಾಗಿಹುದು (ವಿವೇಕ. ೩೨೧). [ಸಂ. ಕಾಲಯುಕ್ತಿ]

**ಕಾಳರಕ್ಕಸ** (ನಾ). ಕಪ್ಪುಬಣ್ಣದ ರಾಕ್ಷಸ; ಕ್ರೂರ ರಾಕ್ಷಸ : ಮಸಿಯುಂ ಪುಂಜಿಸಿದಂತುಟಪ್ಪ ತನು ನೀಳಾಂಭೋಧರಂ ದಾಡೆಗಳ್ ಪೊಸಮಿಂಚುಗ್ರವಿಲೋಚನಂ ದಿವಿಜಗೋಪಂ ಕಾರೊ ಮೇಣ್ ಕಾಳರಕ್ಕಸನೋ ಪೇಱಿನೆ ಬಂದು ತಾಗೆ (ಪಂಪಭಾ. ೭-೨೭); ತುರಗಾಕಾರದೆ ಕಾಳರಕ್ಕಸನೆ ಮೂಱುಂ ಲೋಕಮಂ ನುಂಗಲೆಟ್ಟುರುತಿರ್ಪಂತೆ (ಜಗವಿ. ೫-೪೪). [ಕಾಳ್$_{2}$ (= ಕಾಲ) + ರಕ್ಕಸ]

**ಕಾಳರಕ್ಕಸಿ** (ನಾ). ಕಪ್ಪುಬಣ್ಣದ ರಾಕ್ಷಸಿ; ಕ್ರೂರಳಾದ ರಾಕ್ಷಸಿ : ಕಾಳರಕ್ಕಸಿಯ ಮಗುವ ಚಂದ್ರಸೂರ್ಯರ ಜೂಟಳದ ಹುರಿಯೊಳಗೆ ತಿರುಗಿತ್ತು (ಆದವ. ೩೨); ದೇವತೆ ನೀಂ ಬೆಸನಾಗ್ರ್ಗೆ ಮಾಣದೆ ಕರೆವೆಗೆ ಕಾಳರಕ್ಕಸಿ ನಾಂ (ಶ್ರಾವಕಾ. ೧೦೬-೧೯). [ಕಾಳ್$_{2}$ (= ಕಾಲ) + ರಕ್ಕಸಿ]

**ಕಾಳರಸು** (ನಾ). ೧. ಕೆಟ್ಟರಾಜ. ೨. ಕೆಟ್ಟ ಆಡಳಿತ. 'ಕಾಳರಸುಗೆಯ್' ಪರಾ. [ಕಾಳ್$_{1}$ (< ಕಾಱ್$_{1}$) + ಅರಸು$_{3}$]

**ಕಾಳರಸುಗೆಯ್** (ಕ್ರಿ). ಕೆಟ್ಟರೀತಿಯಿಂದ ಆಳು, —ಅರಸೊತ್ತಿಗೆ ನಡೆಯಿಸು : ಕೂಳು ಇಲ್ಲದ ಬಾಳು ವೇಳೆಗಿಲ್ಲದ ಆಳು ಕಾಳರಸುಗೆಯ್ವ ದೊರೆತನವು ಇವು ಮೂಱು ಹಾಳು (ಸರ್ವಜ್ಞ. ೧೪೮೮). [ಕಾಳರಸು + ಕೆಯ್$_{1}$]

**ಕಾಳರಾಜ** 'ಕಾಲರಾಜ' ನೋ.

**ಕಾಳರಾತ್ರಿ** 'ಕಾಲರಾತ್ರಿ' ನೋ.

**ಕಾಳವಟ್ಟೆ** (ನಾ). ೧. ಕರ್ಣನ ಬಿಲ್ಲಿನ ಹೆಸರು : ದಿನಕರ ತನೂಜಂ ... ಕಾ[ಪಾಠಾಂ. ತಾ]ಳವಟ್ಟದ ಬಿಲ್ಲಂ ಕೆಂದಳದೊಳಮರೆ ನೀವಿ ಜೇವೊಡೆದಾಗಳ್ (ಪಂಪಭಾ. ೧೨-೧೩೫ ವ); ನಡೆಕೋಲ್ವರಮುಂದಂಬುರದೆಡೆಯಂ ಪುಣ್ಯೋತ್ತರ್ಮ ಕಾಳವಟ್ಟದ ಕೊಪ್ಪಂ ಪಿಡಿದು ನೆಱಲ್ದರ್ಕಸುತಂ ಗಿಡಿಗಂ ಪೊಯೆ ನೊಂದ ಭುಜಗನಿರ್ಪಂತಿರ್ದಂ (ಕಾವ್ಯಾವ. ೩೦೮). ೨. ಖಡ್ಗಯುದ್ಧದಲ್ಲಿ ಒಂದು ವರಸೆ : ಚಂಡಶಾಸನಂ. ..ಮಗುಳ್ದಿಕ್ಕಿವಟ್ಟೆ ಸೈಪಾರಿಸೆ ಕಂಡ ಭೂರಣದ ರೂವಿಸಿದಂ ಪೊಯ್ಯೆ ಕಾಳವಟ್ಟದಿಂ ಪೋರಗದಿಂದೆ ಪೊಯ್ವಂ (ಅನಂಪು. ೧೧-೬೧); ಕಡಿತಲೆಗಾಱರಲಗಲಗಿನೊಳ್ ಪಳಂಚಿ ತಾಗಿ ನಿರ್ಘಾತವುಪ್ಪರಂ ಕಾ[ಪಾಠಾಂ. ತಾ]ಳವಟ ಮವಿತ ಮುಳಿತಮೆಂಬ ಪಲವುಂ ತೆಱದಿಱಿವ ಬಿನ್ನಣದೊಳ್ ನೆಱೆದು (ಪಂರಾಮಾ. ೧೩-೫೪ ವ). [← ಪ್ರಾ. ಕಾಲವಟ್ಟ. / ಸಂ. ಕಾಲಪೃಷ್ಠ]

**ಕಾಳಸ** 'ಕಾಳಸೆ' ನೋ.

**ಕಾಳಸಂಚು** (ನಾ). ಕೆಟ್ಟಸಂಚು: ಪ್ರಜಾರಾಜ್ಯವೆಂಬುದು ನಾಯಕ... ಕೃತ್ರಿಮಿಗಳ ಕಾಳಸಂಚು ಪಿತೂರಿಗಳಿಗೆಚಿನ್ನದ ಗವಸಣಿಗೆಯಾಗುತ್ತದೆ. (ರಾಜ್ಯಶಾ. ೩೧೯). [< ಕಾಳ್$_{1}$ (< ಕಾಱ್$_{1}$) + ಸಂಚು]

**ಕಾಳಸಂತೆ** (ನಾ). ಕಪ್ಪುಪೇಟೆ; ಕಳ್ಳತನದ ವ್ಯಾಪಾರ; ಅಕ್ರಮವಾಗಿ ನಡೆಯಿಸುವ ಕ್ರಯ ವಿಕ್ರಯ : ಇಮ್ಮಡಿ ಮುಮ್ಮಡಿ...ಬೆಲೆಕೊಟ್ಟು ಕಾಳಸಂತೆಯಿಂದ ಸಾಮಾನುಗಳನ್ನು ದೊರಕಿಸಿಕೊಳ್ಳಲು ಜನತೆ ಮುಂದಾಯಿತು (ಕುರುಕಾ. ೧೫೦); ತಿಂಗಳಿಗೆ ಹತ್ತು ಪೌಂಡಿನಂತೆ ಉಳಿಸಿ ಒಬ್ಬ ಕಾಳಸಂತೆಯ ಪಂಜಾಬಿಯೊಬ್ಬನನ್ನು ಹಿಡಿದು ಮನೆಗೆ ಇನ್ನೂರು ರೂಪಾಯಿಗಳಂತೆ ಕಳಿಸುತ್ತ ಬಂದೆ (ಹೊಸಕ್ಷಿ. ೨೩೪). [ಕಾಳ್$_{2}$ (= ಕಾಲ) + ಸಂತೆ]

**ಕಾಳಸಂಬಡೆ** (ಕ್ರಿ). ಬೆಸುಗೆಹೊಂದು ; ಸೇರುವೆಯಾಗು : ಆಮರ್ದಪ್ಪು ಕಾಳಸಂಬಡೆದಿರೆ ಕಾಸಿ ಬೆಚ್ಚು ತೋಳಿದಂತೆ ಬೆಮರ್ ತಿಳಿದೇಱೆ (ಅನಂಪು. ೮-೫೨). [ಕಾಳಸ (< ಕಾಳಸೆ) + ಪಡೆ$_{1}$]

**ಕಾಳಸರ್ಪ** 'ಕಾಲಸರ್ಪ' ನೋ.

**ಕಾಳಸೆ, ಕಳಾಸ, ಕಳಾಸು, ಕಾಳಸ, ಕಾಳಾಸ** (ನಾ). ೧. ಹತ್ತುಗೆ; ಅಂಟಿಕೊಳ್ಳುವಿಕೆ ; ಒಂದಾಗುವಿಕೆ ; ಬೆಸುಗೆ : ಒಡನೊಡನಪ್ಪಿದರ್ ಭರದ ಕಾಳಸೆಯಂತಿರೆ ತಮ್ಮೊಳಿರ್ವರುಂ (ಕಾವ್ಯಸಾ. ೬೫೭ ಶೂದ್ರಕ); ಮಿಱುಗುವ ತೋರಹಾರಮುಮನಪ್ಪಿನ ಕಾಳಸೆಗಡ್ಡಮೆಂಬ ಬೇಸಱಿನೊಳೆ ಕಟ್ಟಲೊಲ್ಲದೆ (ಪಂಪಭಾ. ೪-೧೨೫). ೨. ಗಾಢತ್ವ ; ನಿರ್ಭರತೆ : ಸೊಪ್ಪಡಗಿರ್ದ ಕಾದಲನ ತಳ್ಪಿನ ಕಾಳಸೆಗಾಱೆ ಪೊಕ್ಕ ಮೆಯ್ಯೊಪ್ಪಿರೆ (ಲೀಲಾವ. ೧೩-೧೭); ಪಡೆದಮರ್ದಪ್ಪಿದಪ್ಪುಗಳ ಕಾಳಸೆಗಳ್ ಸಮಸಂದು ವಜ್ರಲೇಪದೊಳೆಣೆಯಾಗಿ ಪತ್ತಿ (ಸೂಕ್ತಿಸು. ೧೪-೫). **ಕಳಾಸ :** ೧. ವಾಸಿ ಬೀತುದು ಛಲದನಿಲದ ಕಳಾಸ ಸೋತುದು ಕರ್ಣನಲಿ ಹಿರಿದಾಸೆಯಾಯಿತು ಕೃಷ್ಣ ಕರುಣಿಸು ಕರ್ಣನಾರೆಂದು (ಕುವ್ಯಾಕ. ೨೬-೨೫). ೩. ಕೀಲಣೆ ; ಜೋಡಣೆ : ಹಮ್ಮದಂಬೋಗಿ ಜೀವಂ ಸುಖದ ಜೀವ ಕಳೆಯ ಕಳಾಸದ ಕುಣಿಕೆ ಕಳಲ್ಚಿ (ಗಿರಿಕ. ೭-೧೧ ವ).

೪. [ಸಂಗೀತ] ಮೇಳವಾಗುವಿಕೆ: ಮದ್ದಳೆಯಿಂದ ಹಲವು ಕತ್ತರವ ಕಳಾಸವನಱಿದು ಮದ್ದಳೆಗ ಕೇಳಿಸಿ (ಭರಚ. ೧೨-೩೮) ; ಪದತಳದೊಳ್ ತಾಳಮಂ ಬೀಸರಂಬೊಗಲೀಯದೆ ಸೆಱೆವಿಡಿದು ರೂಪು ನೇರು . . . ಕೈಮುಱಿ ಕಳಾಸ ಕೂಟವಮಾನಂಗಳಂ ಸಂಗಳಿಸಿ (ರಾಜಶೇ. ೫-೧೯ ವ) ; ಜತಿಲಯ ತಾಳರೀತಿ ಗಮಕಂ ಯತತೋಪು ಕಳಾಸ ಧಾತು. . . ಸುತಾಳದ ಮಾರ್ಗಮೊಪ್ಪುವಂತತಿ ಚತುರತ್ವದಿಂದಭಿನಯಂಗಳನೂಹಿಸುತಾಡಿ ತೋಱಿದರ್ (ಚಿಕ್ಕದೇ. ೧೩೩). ೫. [ನಾಟ್ಯ] ನೃತ್ಯ ಗತಿಗಳಲ್ಲಿ ಒಂದು ಪ್ರಕಾರ: ಕಟಾಕ್ಷ ದೃಷ್ಟಿಗಳಿಂ ಕಳಾಸಮಂ ಸಸಿನೆ ತೋಱುತ್ತೆ (ಆರಾಚ. ೮-೩೭) ; ಚಿಂದು ಜಕ್ಕಡಿ ಕೋಲ ಚಾರಿಗಳ್ ಮೊನೆಗಾಲ್ ಕಳಾಸ ಕೈಮುರಿ ತಿವುಡೆ ಮಡುಹುಮುಳ್ಳನಿತು ಭೇದಂಗಳಿಂ ನರ್ತಿಸುವ ನೃತ್ಯದಬಲಾ ಜನಂ (ಚಬವು. ೨-೨೯); ಪಾದಚಾರಿಗಳ ಲಘುಚರಣ ವಿನ್ಯಾಸ ದಿಂದೆಸೆವ ಕೋಪು ಕಳಾಸ ತಿರುಪುಗಳ ಬೆಡಗು ಬಿನ್ನಣದೆ ನಗಜಾಧವಂ ತೋಱಿದಂ ತಾಂಡವವನು (ಚಬವು. ೫೦-೫೩). **ಕಳಾಸು** : ೩. ಕಟ್ಟಿಗೆಗಳನ್ನು ಜೋಡಿಸಿ ಕಡೆಯಲ್ಲಿ ಕಳಾಸು ಮಾಡಿ ಅವುಗಳಿಗೆ ಗುರುತದ ಅಂಕಿಗಳನ್ನು ಹಾಕಿಕೊಂಡು ಬಿಚ್ಚಿ (ಕೃಷಿಪ್ರ. ೧೧೦). **ಕಾಳಸ** : ೩. ರಸಮಂ ಭಾವಮುಮಂ ಕಾಳಸಮಂ ಕುಣಿಕೆಯುಮನಱಿದು ಕವಿಮಾರ್ಗದೊಳಂ ಪೊಸದೇಸೆಯ ನುಡಿಗಳೊಳಂ ಪೊಸಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ (ಗದಾಯು. ೧-೩೯) ; ಬೀಯಗದ ಕೊಂಡಿಯಂ ಕಳಚಿ ಸಲಗೆಯ ತೆಗೆದು ಕಾಳಸದ ತಂಡತಂಡದ ಹಲಗೆಯಂ ಕೆಲಕ್ಕಿರಿಸಿ (ಸಿದ್ಧರಾ. ೯-೧೪); ಕೀವಿನ ಕಲ್ಲಕರ ಚೆಲುವ ಕಾಳಸ[ಪಾಠಾಂ. ಕಳಸಂ]ಗಳಳವಡಲು ಮಾಡಿ ಬೇಗದೊಳೆನೆ (ಸಿದ್ಧರಾ. ೯-೫೫). **ಕಾಳಾಸ** : ೧. ಮಾಯಾವೈಸಿಕದ ಸಮ್ಮೋಹನದ ಕಾಳಾಸವನಱಿವರೆನ್ನನಱಿವರು (ಕುವ್ಯಾಭೀ. ೩-೫೮) ; ಶಿವಶಿವಾ ಕಾಳಾಸ ತಪ್ಪದ ಕಳವಿನೆಸುಗೆಯು ಚಿತ್ರ ಲೇಸೆಂದ (ತೊರರಾ. ೪-೪-೩೫). ೩. ಕಾಳೆಗಕಿದಿರಾಗಿ ನಿಲ್ಲಲಾಱದೆ ಚಿಣ್ಣ ಡಾಳಕತನದೊಳೋಡುವನು ಕಾಳಾಸವ ಮಾಡಿಸೆಂದು ಬಂಧಿಸಿದ ಮರಾಳಾಸನ ಕಪಟದಲಿ (ಮೋಹತ. ೧೨-೫೧). ೪. ಪ್ರವ್ಯಕ್ತಯತಿಪ್ರಯೋಗತ್ವಂ = ದಿಟಪುಟವಪ್ಪ (ವ್ಯಕ್ತವಹ ಕಾಳಾಸ ಮನುಳ್ಳುದು) (ನೀತಿವಾ. ೩೧-೧೦) ; ಸೊಂಪಿನೊಳೊಂದಿ ಕಾಳಾಸ ಕೈಗುಡಲು . . . ಬಾರಿಸುವ ಕೊಳಲದನಿಗೆ (ಅನಾರ. ೧೮೨-೮) ; ಬಾಗುಡೊಕ್ಕರ ವಿವರ ಕಾಳಾಸ ಕಮ್ಮವಣೆ ಲೋಲಂಗಿತ ನುತ ಶುದ್ಧ ಸಾಳಂಗ ಸಂಕೀರ್ಣಮಂ . . . ಹಾಡಿ (ಹಚಕಾ. ೭-೭). ೫. ಹಿಮ್ಮೆಟ್ಟುತೆ ಕಡುಸೊಗಸಂ ಕಾಳಾಸದಿನಿಡುತೆ (ಭೃಂಗೀರ. ೧೪-೨).

[← ಪ್ರಾ. ಕಲಸ, ಕಲಸಿಯಾ = ವಾದ್ಯವಿಶೇಷ]

**ಕಾಳಸೆಗೊಳ್** (ಕ್ರಿ). ೧. ಅಂಟಿಕೊಳ್ಳು ; ಸೇರಿಕೊಳ್ಳು ; ಹೊಂದಿಕೊಳ್ಳು ; ಬೆಸುಗೆಹೊಂದು : ರಸೆ ಪತ್ತಿತ್ತೆತ್ತ ಮಾಕಾಶದೊಳನಿಲಪಥಂ ಧಾರುಣೀಚಕ್ರದೊಳ್ ಕಾಳಸೆಗೊಂಡಿತ್ತೆಂಬಿನಂ ಮಂದಯಿಸಿ (ಆದಿಪು. ೧೪-೯೫); ವಜ್ರೆಯೆಂಬ ಪೃಥ್ವಿಯ ತಳದೊಳ್ ಕಾಳಸೆಗೊಂಡು. . . ಮೇಗೆ ನೀಳ್ದು . . . ಮನೋಹರಮಾಗಿರ್ಕುಂ ಗಜದಂತಾದ್ರಿಗಳುಂ (ಸುಕುಮಾ. ೧೧-೫೦ವ); ಕರ್ಪು ಕಾಳಸೆಗೊಂಡ ತಮಾಳವಮಾಳಿಗಳ(ಅನಂಪು ೧-೯೦ವ). ೨. ಕೀಲಿಸು ; ಜೋಡಣೆಯಾಗು : ನುಸುಳಲ್ ಬಾರದು ಸಪ್ತಸಪ್ತಿಯ ವರೂಥಕ್ಕೆಂದುಮೆಂಬಂತೆ ಕಾಳಸೆಗೊಂಡಾಗಸದೊಳ್ . . . ಕನಕಕೋಟಾಮಂಡಲಂ ರಂಜಿಕುಂ (ಜಗವಿ. ೯-೯೪). [ಕಾಳಸೆ + ಕೊಳ್$_1$]

**ಕಾಳಸ್ಕಂಧ** 'ಕಾಲಸ್ಕಂಧ' ನೋ.

**ಕಾಳಹಸ್ತ** (ನಾ). ಯಮನ ಕೈ ; ಮೃತ್ಯುವಿನ ಹಸ್ತ : ಕುರುಕುಲ ಜೀವಾಕರ್ಷಣ ಪರಿಣತಮಿದು ಕಾಳಹಸ್ತಮಲ್ಲದೆ. . . ಕೇಶಹಸ್ತ ಮಕ್ಕುಮೆ (ಗದಾಯು. ೧-೭೭); ಕಾಳಹಸ್ತದಿನವಳ ಕುಟಿಲತೆಯ ಕೇಶ ಹಸ್ತವನಿಳ್ದು ಕಲ್ಪೆಲಕೆ ಕುಕ್ಕಿದನ್ (ಶ್ರೀರಾಮಾ. ೧೧೨-೨೭). [ಕಾಳ್$_2$(= ಕಾಲ)+ಹಸ್ತ]

**ಕಾಳಹೊಗೆ** (ನಾ). ಒಂದು ಬಗೆಯ ಮೂಲಿಕೆ : "ಕನಕ – ಉನ್ಮತ್ತ, ಯಲಹುರಿ . . . ಕಾಳಹೊಗೆ" (ಓಷಧಿ. ೨೦). [?]

**ಕಾಳಾಂಚಿ** 'ಕಾಣಾಚಿ' ನೋ.

**ಕಾಳಾಂಜನ** 'ಕಾಲಾಂಜನ' ನೋ.

**ಕಾಳಾಂಜನಿ** (ನಾ). ಒಂದು ಮೂಲಿಕೆಯ ಹೆಸರು : "ನೀಲಾಂಜನೀ– ಕಾಳಾಂಜನಿ" (ಓಷಧಿ. ೮೮). [?]

**ಕಾಳಾಂಜಿ$_1$** 'ಕಾಣಾಚಿ' ನೋ.

**ಕಾಳಾಂಜಿ$_2$**, ಕಾಳಂಜಿ (ನಾ). ೧. ಪನ್ನೀರಿನ ಪಾತ್ರೆ ; ಸುಗಂಧದ ರಸಪಾತ್ರೆ : "ರಸಪಾತ್ರೆಯೆನೆ ಕಾಳಾಂಜಿಯಕ್ಕುಂ" (ಮಂಗರಾ ೬೯-೪) ; ರಂಜಿಪ ರನ್ನಗನ್ನಡಿ ರನ್ನವೆಸದ ಕಾಳಾಂಜಿ ಕರ್ಪೂರಕರಂಡ ಮಂಜುಳ ಗಂಧೋದಕವಿಡಿದವರ್ಗಳು . . . ಎಯ್ದಿದರು (ಮೋಹತ. ೨೪-೧೦); ಕರಗಕಾಳಾಂಜಿ ಕೈಪಿಡಿ ಬಾಸಣಿಗೆ ಬಂಧುರದಾಲವಟ್ಟ ಚಾಮರದ . . . ನಾರಿಯರ್ಕೈದಿದರು (ಕಂನವಿ. ೯-೭೮). ೨. ಉಗುಳುವ ಪಾತ್ರೆ ; ಪೀಕದಾನಿ : "ಡವಕೆ ಕಾಳಾಂಜಿ" (ಶಮದ. ಪರಿ. ೨) ; ಭಾಳಾಕ್ಷನವೈರಿಯ ಊಳಿಗದವರಿಂದ ಪಿಡಿದ ಕಾಳಾಂಜಿಯವೊಲುಬಾಣದ ಕುಸುಮಸಂಜಾಳಗಳಿರುತಿಹವಲ್ಲಿ(ಅಂಜಚ.೨-೯೫); ಚಾಮರದ ದರ್ಪಣದ ಕಾಳಾಂಜಿಯ ನೆರವಿಗಳ್ ಸಹಿತ ಪುಷ್ಪಕವೇಱಿ (ಲಶಿಚಂ. ೧೩-೭) ; ಕರಗ ಕಾಳಾಂಜಿ (ಬಸವು. ೧೨-೯) ; ಚಾಮರ ಸೀಗುರಿಯ ಕನ್ನಡಿಯ ಕಾಳಂಜಿಯ ಸುಗಂಧದ ಹಡಪದಬಲೆಯರು (ತೊರರಾ. ೧-೧೪-೨೧) ; ಅವರುಗುಳ್ವ ಕಾಳಾಂಜಿಗೆ ನಮಸ್ಕರಿಸುವೆಂ (ಏಕೋಪು. ೧-೧೬).

**ಕಾಳಂಜಿ** : ೧. ಪಂಚಾಮೃತವ ನೀಡುವುದಿಲ್ಲ ನಿನಗೆ ಕಂಚು. . . ಕಾಳಂಜಿ[ಪಾಠಾಂ. ದಿ]ಯ ಪಿಡಿದಿಹರಲ್ಲಿ (ಪುರಂದ. ೩-೧೩೬-೮). ೨. "ಕಾಳಂಜಿ ಪೀಕದಾನಿ" (ಕಶರ. ೨೨) ; ಕಾಳಂಜಿಯ ಪಿಡಿವೆ ಶ್ರೀನಿವಾಸಾ (ಪ್ರಸಕೀ. ೧೭-೨) ; ವೀಳ್ಯದ ಮಡುವು ಕಾಳಂಜಿಪಿಡಿದು (ನವಮೋ. ೧೦-೧೭).

[ದೇ. ‖ ತಮಿ. ಮಲ. ಕಾಳಾಞ್ಚಿ ; ತೆಲು. ಕಾಳಾಂಜಿ]

**ಕಾಳಾಂಜಿಗೆ** (ನಾ). = ಕಾಳಾಂಜಿ$_2$ ೧ : ಕುಡಿನೀರು ವೀಳ್ಯ ಕಾಳಾಂಜಿಗೆ ಚಮರ . . . ಬಿಜ್ಜಣವ ಪಿಡಿದೆಡಬಲದೆ ನಿಂದಿರೆ ಮಿಂಡಿವೆಂಗಳು (ಮೋಹತ. ೨೭-೯). [< ಕಾಳಾಂಜಿ]

**ಕಾಳಾಂಜಿವಿಡಿ**, ಕಾಳಂಜಿವಿಡಿ (ಕ್ರಿ). ಕಾಳಂಜಿಯನ್ನು ಹಿಡಿ : ನಿರುತಿ ಕಾಳಾಂಜಿವಿಡಿಯೆ ಸುರಪಂ ರನ್ನಗನ್ನಡಿಯನು ಪಿಡಿಯೆ (ಚಬವು. ೨-೩೧).

**ಕಾಳಂಜಿವಿಡಿ**: ಚಾಮರವನರ್ಕೇಂದು ಢಾಳಿಸಲ್ ಕರ್ಬುರಂ ಪ್ರೇಮದಿಂ ಕಾಳಂಜಿವಿಡಿದಿರಲ್ (ಸಿದ್ಧಕಾ. ೧-೩೦). [ಕಾಳಾಂಜಿ$_2$ + ಪಿಡಿ$_1$]

**ಕಾಳಾಂಜಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : "ಕೃಷ್ಣಾಜನಿ :–ಕಾಳಾಂಜಿಸೊಪ್ಪು" (ಓಷಧಿ. ೩೯). [ಕಾಳಾಂಜಿ$_1$ + ಸೊಪ್ಪು]

**ಕಾಳಾಂದರ** (ನಾ). (?) : ಬಾಲಕುಮಾರ ಪ್ರೌಢವಿಭಾಗದಲ್ಲಿ ಕಾಳಂ ಪೊಕ್ಕಿತ್ತು. ಕಾಳಾಂದರ [ಪಾಠಾಂ. ಕಾಳಂದರ, ಕಳಾಂದರ, ಕಾಳಿಂದರ] ದಿಂದತ್ತತ್ತಲಾರು ಬಲ್ಲರೊ (ಚನ್ನವ. ಕ. ೧೦೭೬). 'ಕಾಳಿಂದರ' ಪರಾ.

[< ಕಾಲಾಂತರ ?]

**ಕಾಳಾಂಧಕಾರ** (ನಾ). ಕಪ್ಪುಕತ್ತಲೆ ; ಕಗ್ಗತ್ತಲೆ : ಶೂನ್ಯವರ್ತಿ ಸುತ್ತಿದ್ದಿತ್ತೊಂದು ಕೆಲವು ಕಾಲ. ಅದು ತೊಡೆದು ಹೋಯಿತ್ತು. ಬಳಿಕ ಕಾಳಾಂಧಕಾರ [ಪಾಠಾಂ. ಧರ] ವರ್ತಿಸುತ್ತಿದ್ದಿತ್ತೊಂದು ಕೆಲವು ಕಾಲ . . . ಬಳಿಕ ಮಹಾಪ್ರಕಾಶದ ಬೆಳಗು (ಅವಚಂ. ೧೪೩-೬೫೪).

[ಕಾಳ್$_2$ (= ಕಾಲ) + ಅಂಧಕಾರ]

**ಕಾಳಾಂಬುವಾಹ** (ನಾ). ಕರಿಯ ಮೋಡ; ಕಪ್ಪು ಮೋಡ: ಅಬ್ಜವಿಕಾಸಪ್ರವಣಾತಪಮಂ ಕಾಳಾಂಬುವಾಹಮೊರ್ಮೊದಲೆ ಕಳೆವ ತೆಜದಿಂ (ಶಾಂತಿಪು. ೧೧-೨೨). [ಕಾಳ್$_2$ (= ಕಾಲ) + ಅಂಬುವಾಹ]

**ಕಾಳಾಕಳು** (ನಾ). ಕಪ್ಪುಬಣ್ಣದ ಹಸು : ಆಕಳುಗಳಲ್ಲಿ ಕಾಳಾಕಳು ಒಳ್ಳೆಯದು (ಹೊಸುಗ. ೧೫೫).
[ಕಾಳ$_2$ (= ಕಾಲ) + ಆಕಳು (< ಆಕಳ್)]

**ಕಾಳಾಗರು** 'ಕಾಲಾಗುರು' ನೋ.

**ಕಾಳಾಗಿಸು** (ಕ್ರಿ). ಕೆಡಿಸು; ಹಾಳುಮಾಡು : ಕೀಳಾಳ್ಗಳ ದುರಾಶೆ ದುರಾಲೋಚನೆ ದ್ರೋಹಗಳ ನಾರುವ ಕಸದಲ್ಲಿ ಕಾಳಾಗಿಸಿ (ಬೆಟ್ಟಅ. ೬೦–೨೧). [ಕಾಳಾಗು (< ಕಾೞಾಗು) + -ಇಸು$_3$]

**ಕಾಳಾಗು** 'ಕಾೞಾಗು' ನೋ.

**ಕಾಳಾಗುರು** 'ಕಾಲಾಗುರು' ನೋ.

**ಕಾಳಾಗ್ನಿ** 'ಕಾಲಾಗ್ನಿ' ನೋ.

**ಕಾಳಾಗ್ನಿರುದ್ರ** 'ಕಾಲಾಗ್ನಿರುದ್ರ' ನೋ.

**ಕಾಳಾಡು** (ನಾ). ಕಾಡಿನಲ್ಲಿರುವ ಆಡು; ಅಡವಿ ಮೇಕೆ: ಮೂರು ಸುರಿಯ ಕುಡಿದು ಆಡಗಿಸಿದವನೆನ್ನ ಗುರುವು ಕಾಳಾಡ ಕಣ್ಣು ಕಿತ್ತು ಯೆರಳೆಯ ತಿರುಳ ತಿಂದು ದಿನವ ಕಳೆದುಳಿದವನೆನ್ನ ಗುರುವು (ಮಧುವ. ೩೧–೨೦); ಕಾಳಾಡಿನ ಹಾಲ ಕಂಬಳಿಯ ಕುೞಿ ಕುಡಿಯಿತ್ತು (ಕಲ್ಯಾಶಾಂ. ೧೦೬–೧೩). [ಕಾಳು$_1$ (< ಕಾೞ್$_1$) + ಆಡು$_3$]

**ಕಾಳಾಪಾಣಿ** 'ಕಾಲಾಪಾನಿ' ನೋ.

**ಕಾಳಾಮುಖ** (ನಾ). ೧. ಶೈವಧರ್ಮದ ಒಂದು ಪಂಥ, —ಸಂಪ್ರದಾಯ : ಕಾಳಾಮುಖ ತಪೋಧನ ಸಕಲ ಕಳಾ ರಕ್ಷಾ ಪ್ರವೀಣರ್ (ಸೌಇಇ. VI, ೫೭೧–೨೨; 1070); ಕೆಲಬರಾ ಪಾಶುಪತರಾ ಕೆಲರು ಶೈವರಾ ಕೆಲಬರಾ ಕಾಳಾಮುಖದ ಮಹೇಶ್ವರರು (ವೀಶೈಪು. ೨–೮–೧೭); ಪಾಶುಪತ, ಕಾಳಾಮುಖ, ಲಕುಲೀಶ . . . ಇವೇ ಮೊದಲಾದವು ಶಿವಭಕ್ತಿಪಂಥದ ಮುಖ್ಯ ಪ್ರಭೇದಗಳು (ಭಾರದ. ೩೦೬). ೨. ಕಾಳಾಮುಖ ಪಂಥಕ್ಕೆ ಸೇರಿದವನು : ಭುಜಂಗವಳಿ ಕಾಳಾಮುಖಂ ನೈಷ್ಠಿಕ ತಪೋಧನನೆ ನಡೆಯಿಸುವ (ಕಇಅ. ೨೨–೭–೩೭; 1083); ಗವಱೇಶ್ವರದಲ್ಲಿ ಶಿವನೆ ಕಾಳಾಮುಖನಾಗವತರಿಸಿದನಿನ್ತೆಂಬಂತಿಹಲಿ (ಸೌಇಇ. XX, ೫೭–೧೯; 1084); ಶೈವ ನೈವೇಜಗಾದ ಪಾಶುಪತಿ ಪದವನಱಿಯ ಕಾಳಾಮುಖ ಕಂಗೆಟ್ಟ ಮಹಾವ್ರತಿ ಮದವೇಱಿದ (ಚೆನ್ನಸಾ. ೧೭೬); ಲಾಕುಳ ಅಥವಾ ಪಾಶುಪತರಿಗೆ ಕಾಳಾಮುಖರೆಂಬ ಹೆಸರೂ ಇದೆ (ಕಶಾಅ. ೧೨೮). [?]

**ಕಾಳಾಯುಸ** 'ಕಾಲಾಯುಸ' ನೋ.

**ಕಾಳಾಸ** 'ಕಾಳಸೆ' ನೋ.

**ಕಾಳಾಸಿಸು** (ಕ್ರಿ). ಹೊಂದಿಸು; ಸೇರಿಸು : ಆ ಸುಷುಮ್ನಾನಾಡಿಯಲಿ ಕಾಳಾಸಿ [ಪಾಠಾಂ. ಶಿ]ಸಿದ ಪವನನ ಸಮಾಧಿ ವಿಳಾಸನೆಸೆದನು (ಸುವ್ಯಾದ್ರೋ. ೧೮–೬೯). [ಕಾಳಾಸ (< ಕಾಳಸೆ) + -ಇಸು$_3$]

**ಕಾಳಾಹಿ** 'ಕಾಲಾಹಿ' ನೋ.

**ಕಾಳಾಹಿವೇಣಿ** (ನಾ). ೧. ಕರಿಯ ಹಾವಿನಂತಿರುವ ಜಡೆ; ಕರಿನಾಗನಂತಿರುವ ಹೆರಳು. ೨. ಕರಿಯ ನಾಗನಂತಿರುವ ಜಡೆಯುಳ್ಳವಳು : ವಾಣಿಯ ಪರಮ ಕಲ್ಯಾಣಿಯ ಕಾಳಾಹಿವೇಣಿಯ (ನಾಗಕು. ೧೭ ಪೀಠಿಕೆ); ಕಾಳಾಹಿವೇಣಿ ಪದ್ಮಾವತಿಯ ಸಂಗದೊಳು ಬಾಳುವಂತೊಂದುದಿನ ಮಾಡೆನಲ್ಕೆ (ಪ್ರೌಢರಾ. ೪–೧೮); ಕಲಕೀರವಾಣಿಯರ್ ಕಾಳಾಹಿವೇಣಿಯರ್ (ಜೈಮಿಭಾ. ೩೦–೩).
[ಕಾಳಾಹಿ (= ಕಾಲಾಹಿ) + ವೇಣಿ]

**ಕಾಳಿ$_1$** (ನಾ). ಆತುರ; ಕಾತರ : (ಶ). [?]

**ಕಾಳಿ$_2$** 'ಕಾಲಿ' ನೋ.

**ಕಾಳಿಂಗ** 'ಕಾಲಿಂಗ' ನೋ.

**ಕಾಳಿಂಗನಾಗರ** (ನಾ). ಕೃಷ್ಣಸರ್ಪ; ಕಪ್ಪುಬಣ್ಣದ ನಾಗರಹಾವು. 'ಕಾಳಿಂಗನಾಗರ ಸೋಲೆ' ಪರಾ.
[ಕಾಳಿಂಗ (= ಕಾಲಿಂಗ) + ನಾಗರ]

**ಕಾಳಿಂಗನಾಗರಸೋಲೆ** (ನಾ). ಕರಿಯ ನಾಗರಹಾವಿನ ಪೊರೆ: ರಸಾಂಜನ, ನೀಲಾಂಜನ, ಕೋಷ್ಠ, ಶ್ರೀಗಂಧ, ರಕ್ತಚಂದನ, ಪೀತರೋಹಿಣಿ, ಹಿಪ್ಪಲಿ, ಕಾಳಿಂಗನಾಗರಸೋಲೆ—ಈ ಎಂಟು ಪ್ರತ್ಯೇಕ ೨ ವರಹ ತೂಕ (ವೈದ್ಯಸಾ. II, ೮೩). [ಕಾಳಿಂಗನಾಗರ + ಸೋಲೆ]

**ಕಾಳಿಂದರ** (ನಾ). (?) : ಆ ಎಂದಾಲಿಸುತಿರ್ದ ಬಾಲಕುಮಾರ ಪ್ರಹುಥವಿಗಂಧದಲ್ಲಿ ಕಾಳಿಂದರ ಪೊಕ್ಕು ಆ ಕಾಳಿಂ [ಪಾಠಾಂ. ಳಾಂ]ದರದಿಂದತ್ತಲಾರು ಬಲ್ಲರೊ (ಚನ್ನವ. ೮೬–೭). 'ಕಾಲಾಂದರ' ಪರಾ. [?]

**ಕಾಳಿಂದಿ** 'ಕಾಲಿಂದಿ' ನೋ.

**ಕಾಳಿಂದಿವೈರಿ** 'ಕಾಲಿಂದಿವೈರಿ' ನೋ.

**ಕಾಳಿಂದಿಸಹಜಾತ** 'ಕಾಲಿಂದಿಸಹಜಾತ$_1$' ನೋ.

**ಕಾಳಿಂದೀಕರ್ಷಣ** 'ಕಾಲಿಂದೀಕರ್ಷಣ$_1$' ನೋ.

**ಕಾಳಿಂದೀಸೋದರ** 'ಕಾಲಿಂದೀಸೋದರ' ನೋ.

**ಕಾಳಿಕ** (ನಾ). = ಕಾಲಿಕೆ : ಚಂದ್ರನ ಕಳಂಕು ತನ್ನ ಪರಿಪೂರ್ಣ ಬೆಳಗಿನ ಕಳೆಯಿಂದ ತನ್ನಲ್ಲಿಯೇ ಕಾಳಿಕವ ಕಾಣಿಸಿಕೊಂಬಂತೆ (ಸರ್ವವ. ೧೨೮–೬೫೨). [< ಸಂ. ಕಾಲಿಕಾ]

**ಕಾಳಿಕೆ** 'ಕಾಲಿಕೆ' ನೋ.

**ಕಾಳಿಕೆಗಾಱು** (ಕ್ರಿ). ನೆತ್ತರನ್ನು ಕಕ್ಕು; ರಕ್ತಕಾರು : ರಾವುತರ್ ತರತರದ ಕೈಖಡ್ಗವೆರಸಿಬೀಳೆ ಮೇಗೆ ರಥಿಕಾಳಿ ಕಾಳಿಕೆಗಾ [ಪಾಠಾಂ. ಕಾ]ಱಿ ಜೀವನಂಬೋಗಿ (ಚೆಬಪು. ೩೨–೭).
[ಕಾಳಿಕೆ (= ಕಾಲಿಕೆ) + ಕಾಱು$_1$ (< ಕಾಱ್)]

**ಕಾಳಿಗ** (ನಾ). ಕರಿಯ ನಾಗ; ಕಾಳಿಂಗ ಸರ್ಪ : ಹಸಿದ ಹುಲಿಯ ಕಾಳ್ಗರಡಿಯ ವಿಸವನುಗುಳ್ವ ಕಾಳಿಗನ (ಶ್ರೀಪಾಲ. ೫–೯೧).
[< ಸಂ. ಕಾಲಿಂಗ]

**ಕಾಳಿಗನಾಗ** (ನಾ). = ಕಾಳಿಗ : ಕಾಳಿಗನಾಗನಂ ನಗುವ ಕೈಯಿಂ . . . ಹರ್ಷಜನಕಂ ತಾನಾಯ್ತೊ ವನ್ಯದ್ವಿಪಂ (ಪಂರಾಮಾ. ೪–೧೧೯); ಕಾಳಿಗನಾಗನಂತೆ ಮುಡಿ ಬಂದುದು ತುಂಗಕಟೀತಟಂಬರಂ (ಅರ್ಧನೇ. ೧–೯೮).
[ಕಾಳಿಗ + ನಾಗ]

**ಕಾಳಿಜ** 'ಕಲಿಜ' ನೋ.

**ಕಾಳಿಜಿ** 'ಕಲಿಜ' ನೋ.

**ಕಾಳಿಡಿ** (ಕ್ರಿ). ಕಾಳುತುಂಬು; ಕಾಳುಕೂಡು : ಗಾಳಿಯಿಂದ ತಲೆಯನ್ನಲ್ಲಾಡಿಸುವ ಕಾಳಿಡಿದ ಕಾಂಚನವರ್ಣದ ತೆನೆಗಳನ್ನು ಮೆಲ್ಲನೆ ಮುತ್ತಿಟ್ಟು . . . ವಿಕಾಸಗೊಳಿಸುವ ಕಿರಣಗಳೂ ನಿನ್ನವೇ ಅಲ್ಲವೆ (ಜ್ಯೋತಿರ್ವಿ. ೮೨). [ಕಾಳು$_3$ (< ಕಾೞ್$_3$) + ಇಡಿ$_1$]

**ಕಾಳಿನಾಥ** (ನಾ). ಕಾಳಿಯ ಪತಿ; ಶಿವ : ಲೋಲನಾಗಿ ಸುನಾದದಿಂ ಶ್ರೀಕಾಳಿನಾಥನು ಮೆಚ್ಚಿ . . . ಕನಕಾಸನವನತಿವಿಭವದಿಂ ಕೊಡಲು (ಬಸಪು. ೫೦–೧೫). [< ಸಂ. ಕಾಲೀನಾಥ]

**ಕಾಳಿಮ** 'ಕಾಲಿಮೆ' ನೋ.

**ಕಾಳಿಮೆ** 'ಕಾಲಿಮೆ' ನೋ.

**ಕಾಳಿಯ** (ನಾ). ಒಂದು ಸರ್ಪದ ಹೆಸರು. 'ಕಾಳಿಯಮಡು', 'ಕಾಳಿಯಮಥನ' ಪರಾ. [< ಸಂ. ಕಾಲಿಯ]

**ಕಾಳಿಯಣ್ಣ** (ನಾ). ಒಬ್ಬಾತನ ಹೆಸರು : ಗಾವುಣ್ಡ ಕಾಳಿಯಣ್ಣಙ್ಗೆ ಮೂಗಣ್ಡುಗಜ್ಗಟ್ಟಿ (ಎಕ. XII, ಸಿರಾ. ೩೬–೧೪; 948).
[ಕಾಳಿ ? + ಅಣ್ಣ$_1$]

**ಕಾಳಿಯಮಡು** (ನಾ). ಕಾಳಿಯಸರ್ಪ ವಾಸವಾಗಿದ್ದ ಯಮುನಾ ನದಿಯ ಮಡು : ಕಾಳಿಯಮಡುವ ಕಲಕಿದ ಕಾರಣ ಕಾಲು ನೊಂದಿತೆ ನಿನಗೆ ರಂಗಯ್ಯ (ಪುರಂದ. ೩-೪-೩). [ಕಾಳಿಯ + ಮಡು]

**ಕಾಳಿಯಮಥನ** (ನಾ). ಕಾಳಿಯ ಸರ್ಪವನ್ನು ಮರ್ದಿಸಿದವನು; ಕೃಷ್ಣ : ಕಮಲದಳನಯನ ಕಾಳಿಯಮಥನ . . . ಕಾವುದೆಂದು (ಜೈಮಿಭಾ. ೫-೮). [ಕಾಳಿಯ + ಮಥನ]

**ಕಾಳಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : "(ಮ)ಮೇಚಕ :- ಕಾಳಿಸೊಪ್ಪು" (ಒಷಧಿ. ೧೧೫). [ಕಾಳಿ$_2$ (= ಕಾಲಿ) + ಸೊಪ್ಪು]

**ಕಾಳು$_1$** 'ಕಾಟ್$_1$' ನೋ.

**ಕಾಳು$_2$** 'ಕಾಟ್$_2$' ನೋ.

**ಕಾಳು$_3$** 'ಕಾಟ್$_3$ ನೋ.

**ಕಾಳುಕ** (ನಾ). (?) : ಶಸ್ತ್ರಪಾಷಾಣಾಯುಧಾದಿ ವರ್ಷ ವಿಷಾಗ್ನಿ ಕಾಳುಕಾದಿ ಪರಘಾತಮುಂ (ಅಜಿಪು. ೫-೯೩ ವ). [< ಸಂ. ಕಾಲಕ ?]

**ಕಾಳುಕಡಿ** 'ಕಾಳುಕಡ್ಡಿ 'ನೋ.

**ಕಾಳುಕಡ್ಡಿ**, ಕಾಳುಕಡಿ (ನಾ). ಧಾನ್ಯ ಮತ್ತು ಹುಲ್ಲು: ಕಾಳುಕಡ್ಡಿಯ ತಿಂದ ದನಗಳ ಕೋಳಿಗೋಸುಗ ಮಾರಲೇನ್ (ಕಎವು. ೧೮) ; ಗೌಡನಿಂದ ಸ್ವಲ್ಪ ಕಾಳುಕಡ್ಡಿ ಸಿಗುತ್ತಿತ್ತು (ನಾಪೋಲೀ. ೨೦೮). **ಕಾಳುಕಡಿ** : ಬಿದ್ದಿರುವ ಕಾಳುಕಡಿಗಳನ್ನು ಆರಿಸಿಕೊಂಡು ತಿನ್ನುತ್ತದೆ (ಮುಂಬಯಿ. ೨-೧೨) ; ಮನೆಗಳಲಿ ಕೊಡಲು ಕಾಳುಕಡಿ ಕಡಿಮೆಯಾಯಿತು (ನವರಾ. II, ೨೬) ; ಉಳಿದ ಹಾಳುಬಾಯಿಗಳಿಗೆ ಕಾಳುಕಡಿಯು ಹುಟ್ಟಲಿಲ್ಲ (ನಾದಲೀ. ೩೨-೧೯). [ಕಾಳು$_2$ (< ಕಾಟ್$_2$) + ಕಡ್ಡಿ]

**ಕಾಳುಕಾಳು** 'ಕಾಳ್ಕಾಳ್' ನೋ.

**ಕಾಳುಕಿಚ್ಚು** 'ಕಾಟ್ಕಿರ್ಚು' ನೋ.

**ಕಾಳುಗ** (ನಾ). ಕೇಡಿಗ; ಕೆಟ್ಟವನು ; ನೀಚ : ಸುರಾಸುರ ಮಾನವ ಗಿದಜಿಂದವಾಳಿಸಿ ಕಾಳುಗರಾದರು ನಿನಗಿದ ಹೇಳಲದೆ (ಯೋಗಾಂವಿ. ೩-೪) ; ಹಾಳುಗನಾಂ ಕಾಳುಗನಾಂ ಕೀಳುಗನಾಂ ಏಳು ಬೇಲಿಯಂ ಕಳಿದವನಾಂ (ಶಂಕಕಂ. ೧೦೨). [ಕಾಳು$_1$ (< ಕಾಟ್$_1$) + -ಗ$_3$]

**ಕಾಳುಗಟ್ಟು** (ಕ್ರಿ). ಕಾಳಿನಂತೆ ಗಟ್ಟಿಯಾಗು; ಹಳುಕು ಆಗು : ಉಪ್ಪನ್ನು ಕಡಾಯಿಯಲ್ಲಿ ಸೇರಿಸಿ ಕಾವನ್ನು ಏರಿಸಿ ಕುದಿಸುತ್ತಾರೆ. ಆಗ ಸಾಬೂನು ಕಾಳುಗಟ್ಟುತ್ತ ಬರುವುದು (ಬಾಲಪ್ರ. III, ೧೪೯೧). [ಕಾಳು$_2$ (< ಕಾಟ್$_2$) + ಕಟ್ಟು$_1$]

**ಕಾಳುಗತ್ತಿ** (ನಾ). ಕ್ರೂರವಾದ ಖಡ್ಗ (?) : ಆಳ ಸಂಹರಿಸುತ್ತ ರಾಕ್ಷಸ ಕಾಳುಗತ್ತಿಯ ತಿರುಪಿಯಿಡಲು (ಸಂಭಪ. ೭-೪೨). [ಕಾಳು$_1$ (< ಕಾಟ್$_1$) + ಕತ್ತಿ]

**ಕಾಳುಗಿಚ್ಚು** 'ಕಾಟ್ಗಿಚ್ಚು' ನೋ.

**ಕಾಳುಗುಂಟಣಿ** (ನಾ). ದುಷ್ಟ ಕುಂಟಣಿ : ಬೊಮ್ಮನನಾದೊಡಂ ಮರುಳ್ಮಾಡುವ ಕಾಳುಗುಂಟಣಿಯರಾರುಮನೇಳಿಸಿ ಕಾಡದಿರ್ಪರೇ (ಸೂಕ್ತಿಸು ೮-೩೭೭). [ಕಾಳು$_1$ (< ಕಾಟ್$_1$) + ಕುಂಟಣಿ]

**ಕಾಳುಗುಜಿಕೆ** (ನಾ). ಕಾಡುಹಳ್ಳಿ ; ಕುಗ್ರಾಮ : ಕಲಿಯುಗದೊಳಗೆ ಉಪದೇಶವ ಮಾಡುವ ಕಾಳುಗುಜಿಕೆ ಮಕ್ಕಳನೇನೆಂಬೆ ಗುಹೇಶ್ವರ (ಅವಚಂ. ೭೨-೩೧೮). [ಕಾಳು$_1$ (< ಕಾಟ್$_1$) + ಕುಜಿಕೆ]

**ಕಾಳುಗೆಡು** (ಕ್ರಿ). ೧. ಕೆಟ್ಟುಹೋಗು ; ಹಾಳಾಗು ; ನಾಶವಾಗು : ಹಾಲುಂಬ ಹಂಸವನು ಹೋಲಬಲ್ಲನೆ ಯೋಗಿ ಮೇಲಣ ಪದವನಜಿಯದಿರೆ ಗಿಳಿಯೋದಿ ಕಾಳುಗೆಟ್ಟಂತೆ (ಸರ್ವಜ್ಞ. ೫೭೦). [ಕಾಳು$_1$ (< ಕಾಟ್$_1$) + ಕೆಡು$_1$]

**ಕಾಳುಗೆಡೆ** 'ಕಾಟ್ಗೆಡೆ' ನೋ.

**ಕಾಳುಗೆಲಸ** 'ಕಾಳ್ಗೆಲಸ' ನೋ.

**ಕಾಳುಗೊಡವಿ** (ನಾ). ಒಂದು ಬಗೆಯ ಸಸ್ಯ : (ಮೈಔಗಿ. ೨೫-೪೭೩). [ಕಾಳು$_1$ (< ಕಾಟ್$_1$) + ಗೊಡವಿ]

**ಕಾಳುಗೊಳ್** (ಕ್ರಿ). ಕಾಡುಪಾಲಾಗಿಸು ; ನಾಶಪಡಿಸು (?) : ಶೈಲಶಿಖರದೊಳುಳ್ಳ ದೊರೆಗಳ ಕಾಳುಗೊಳೆ ಬಳಿಕುತ್ತರದಿ [ಪಾಠಾಂ. ತಾಳು ಬಾಗಿಲ ಕುತ್ತದಲಿ] ಕಾಲಾಳು ಹೊಕ್ಕುದು (ಕುವ್ಯಾ ಸ. ೦೧೩. ೭-೩೮). [ಕಾಳು$_1$ (< ಕಾಟ್$_1$) + ಕೊಳ್$_1$]

**ಕಾಳುತನ** 'ಕಾಳ್ತನ' ನೋ.

**ಕಾಳುದೇಹ** (ನಾ). ಕೆಟ್ಟದೇಹ ; ಹೀ[illegible]ದ ಶರೀರ : ಕಾಳುದೇಹದೊಳಗೊಂದು ಕೀಳು ಜೀವ ಹುಟ್ಟ[illegible]ಗಿ ಅಪ್ಯಾಯನವಡಗದು, ಸಂದೇಹ ಹಿಂಗದು (ಶೂನ್ಯಸಂ. ೨೬೩-೧೭). [ಕಾಳು$_1$ (< ಕಾಟ್$_1$) + ದೇಹ]

**ಕಾಳುದೊತ್ತು** (ನಾ). ಕೆಟ್ಟದಾಸಿ ; ನೀಚ ತೊತ್ತು : ಕಷ್ಟವ ಬಗೆದ ಕೈಕೆಯ ಕಾಳುದೊತ್ತಿರ ಜಗಳದಲಿ ಹೊಯ್ಯುವೆನು ಬಾಯನು (ತೊರರಾ. ೨-೩-೯). [ಕಾಳು$_1$ (< ಕಾಟ್$_1$) + ತೊತ್ತು (< ತೊಟ್ಟು)]

**ಕಾಳುನುಡಿ$_1$** (ನಾ). ಕೆಟ್ಟಮಾತನಾಡು ; ಸುಳ್ಳಾಡು ; ಸುಳ್ಳು ಹೇಳು : ಕ್ಷೀರಮಂ ಸೇವಿಸುವನೇ ಮದನಾರಿಯೆಂದುಂ ಕಾಳು ನುಡಿದೆ ವಿಕಾರಿ ತರುವಲಿ ನೀನೆ ಕುಡಿದೆಯೊ ನಿನ್ನ ಸಂಗಡದ ವಾರಿಗೆಯ ಮಕ್ಕಳಿಗೆ ಕೊಟ್ಟೆಯೊ (ಬಸವು. ೧೪-೨೬). [ಕಾಳು$_1$ + (< ಕಾಟ್$_1$) + ನುಡಿ$_1$]

**ಕಾಳುನುಡಿ$_2$** 'ಕಾಳ್ನುಡಿ' ನೋ.

**ಕಾಳುಬೇಡ** (ನಾ). ಅಡವಿಯ ಬೇಡ; ಹೀನನಾದ ವ್ಯಾಧ: ಕಾಳುಬೇಡನೊಂದು ಕಪಿಯ ಕಾಯ್ದು ಕಾಯ್ದು ಕಣ್ಣುಗೆಟ್ಟು (ಅವಚಂ. ೨೯೮-೧೩೧೪). [ಕಾಳು$_1$ (< ಕಾಟ್$_1$) + ಬೇಡ$_1$]

**ಕಾಳುಮತಿ** (ನಾ). ೧. ಕೆಟ್ಟಬುದ್ಧಿ. ೨. ಕೆಟ್ಟ ಬುದ್ಧಿಯ ವ್ಯಕ್ತಿ ; ದುಷ್ಟಮನುಷ್ಯ : ಕಾಳುಮತಿಗಳಿಗಿನಿತು ಬುದ್ಧಿಯ ಹೇಳಿದರೆ ಫಲವೇನು (ಪ್ರಭುಲೀ. ೭-೭೩). [ಕಾಳು$_1$ (< ಕಾಟ್$_1$) + ಮತಿ]

**ಕಾಳುಮಾಡಿಸು** (ಕ್ರಿ). ಕೆಡಿಸು ; ಹಾಳುಮಾಡಿಸು ; ವ್ಯರ್ಥಗೊಳಿಸು : ಪೇಳಿದೆನೀ ಕೃತಿಯಂ ಬಲ್ಲಂದದಿಂ ಕೇಳುವ ರಸಿಕಕೋವಿದರು ಕಾಳುಮಾಡಿಸಲೀಯದೆ ತಪ್ಪ ತಿದ್ದಿಯೆ ಲಾಲಿಸುವುದು (ಅಂಜಚ. ೧-೧೦೩). [ಕಾಳುಮಾಡು + -ಇಸು$_3$]

**ಕಾಳುಮಾಡು** (ಕ್ರಿ). ಕೆಡಿಸು ; ಹಾಳುಮಾಡು : ಕಾಳುಮಾಡಿದನಕಟ ಕೌರವ ಬಾಳಲಜಿಯದೆ ಕೆಟ್ಟನು (ಕುವ್ಯಾಉ. ೧೦-೨೫) ; ಇಂದ್ರಾರಿ ಮೊದಲೇ ಕಾಳುಮಾಡಿದನಕಟ ಕೊಲ್ಲದೆ ಖೂಳನಾದನು (ಕೌಶಿರಾ. ೨೮-೧) ; ಸಿರಿಯಿಂದ ಫಲಮಿಲ್ಲ ಕಾಳು ಮಾಡುವುದಂತರಂಗವ ಹಾಳು ಮಾಳ್ಪುದು (ಶಂಕದಾ. ೮-೪೯) ; ಹೇಳದಿರು ಮುರಮಥನ ನೀ ಮಿಗೆ ಕಾಳುಮಾಡಿದೆ ಕದನವನು (ಕೋಗಯು. ೧೭-೭೫). [ಕಾಳು$_1$ (< ಕಾಟ್$_1$) + ಮಾಡು$_1$]

**ಕಾಳುಮಾತು** 'ಕಾಳ್ಮಾತು' ನೋ.

**ಕಾಳುಮಾರ್ಗ** (ನಾ). ೧. ಕೆಟ್ಟ ಹಾದಿ. ೨. ದುಷ್ಟ ವರ್ತನೆ : ಕಾಳುಮಾರ್ಗವನಿಲ್ಲಿ ಮಾಳ್ಪಾಭೀಳ ವಿಕ್ರಮುನಾದೊಡಾಗಲಿ ಬೀಳ ಹೊಡೆದುಜಿ ಕೆಡಹಿದಲ್ಲದೆ ಹೋಗೆ (ಬಸವು. ೧೮-೪೪). [ಕಾಳು$_1$ (< ಕಾಟ್$_1$) + ಮಾರ್ಗ]

**ಕಾಳುಮುಂಡೆ** (ನಾ). ನೀಚ ಸ್ತ್ರೀ ; ಕೆಟ್ಟ ಹೆಂಗಸು : ಹಾಲು ಹಸುಳೆಯನಿಂತು ಭಂಗಿಸಿ . . . ಅಡವಿಯನು ಹೊಗಿಸುವ ಕಾಳು ಮುಂಡೆಯನೇನನೆಂಬೆನು (ನಿಭಾಗ. ೪-೭-೩೯). [ಕಾಳು$_1$ (< ಕಾಟ್$_1$) + ಮುಂಡೆ]

**ಕಾಳುಮೂಳ** (ನಾ). ದುಷ್ಟ; ನೀಚ; ಕೀಳುಮನುಷ್ಯ: ಕಾಡುವ ಕಾಳುಮೂಳರ ವಿಧಿ ಎನಗಾಯ್ತು (ಮೋಳಿಮಾ. ೧೮-೬೯); ಕಾಳು ಮೂಳರ . . . ಖೂಳರಧಮರ ಕೀಳು ಮಾತಿಂಗೇಕೆ ಮರುಳಾದ್ಯೆ (ಬಸವು. ೨೧-೨೩); ಕಾಳುಮೂಳನಲಾ ಖಳಾಗ್ರಣಿ ಮೇಲುಗಾಣನಲಾ (ಕುವ್ಯಾವಿ. ೨-೨೫); ನಿಮ್ಮಡಿಯಂಘ್ರಿಬಲವಿರಲು . . . ಕಾಳುಮೂಳ [ಪಾಠಾಂ. ಳ]ನ ಖಂಡೆಯದ ಭಯವೇವುದು (ನಿಭಾಗ. ೩-೫-೪).

[ಕಾಳು$_1$ (< ಕಾೞ್$^{1}$) + ಮೂಳ]

**ಕಾಳುಯತ್ಲೆ** (ನಾ). ಒಂದು ಬಗೆಯ ಮರ: ಕಾಳುಯತ್ಲೆ (ಲೋಖಂಡಿ) – ಸಾಧಾರಣ ವೃಕ್ಷ; ಕಟ್ಟಿಗೆ ಬಿಳೇದು; ಇಮಾರತಿಗೆ ಬರುತ್ತದೆ (ಕಭಾಗ. ೩೮). [?]

**ಕಾಳುರಿ** (ನಾ). ಕಾಡುಗಿಚ್ಚು; ದಾವಾನಲ: ಆಕರುಷಿಸಿದನಂಗೈತಳಕೆ ಕುಡಿದನು ಕವಿವ ಕಾಳುರಿಯ (ನಿಭಾಗ. ೩-೨-೨೪).

[ಕಾಳು$_1$ (< ಕಾೞ್$^{1}$) + ಉರಿ$_2$]

**ಕಾಳುರಿಗೊಳ್** (ಕ್ರಿ). ಕಾಡುಗಿಚ್ಚು ಹತ್ತು: ಬಾಲೆ ಬಿದ್ದಳು ಬಾಳೆ ಕಾಳುರಿಗೊಂಡು ಕೆಡುವಂತೆ (ನಿಭಾಗ. ೪-೬-೧೪).

[ಕಾಳುರಿ + ಕೊಳ್$^{1}$]

**ಕಾಳುವಗದ್ದೆ** (ನಾ). ಒಂದು ಬಗೆಯ ಗದ್ದೆ: ಕೇಶವ ಭಟ್ಟೋಪಾಧ್ಯಾಯರಿಗೆ ಹೊಂನೆಯ ಮಾವು ಆರಟಿಕಂಡ ಎಕ್ಕಲಗದ್ದೆ ಬಟ್ಟಗದ್ದೆ ಕಾಳುವಗದ್ದೆ ಸಹಿತವಾಗಿ ಗದ್ದೆ ಮೂಡೆ ೧೨ (ಎಇ. XXVII, ೨೮-೪೧; 1256). [ಕಾಳುವ$_0$ + ಗದ್ದೆ (< ಗೞ್ದೆ)]

**ಕಾಳುವಿಡಿ** (ನಾ). ಕೊಸರಾಟ (?): ಅಗಮೇಶ್ವರಲಿಂಗವೆ ನನಗೂ ನಿನಗೂ ಕಾಳುವಿಡಿಯೇಕೆ? ಕೊಂಡು ಹೋಗು ಶಿವಶಿವ ಸಮರ್ಪಣ (ಮನುಗುಂ. ೯೪). [?]

**ಕಾಳುವಿಷಯ** (ನಾ). ತುಚ್ಛವಾದ ಇಂದ್ರಿಯ ಸುಖಾಸಕ್ತಿ, —ಭೋಗಾಸಕ್ತಿ: ಕಾಳುವಿಷಯದಲ್ಲಿ ಬಿದ್ದು ಸುಡಿವುತ್ತ . . . ಮಱಹಿನೊಳಗಿದ್ದು ಅಱುಹ ಕಂಡಿಹೆನೆಂಬ ಅಣ್ಣಗಳಿರಾ ನೀವು ಕೇಳಿರೊ (ಲಿಂಗವ. ೨೨-೮೭); ಕಾಳುವಿಷಯದ ವಿಧಿಯ ದಾಳಾದೂಳಿಯಲಿ ಹತವಾಗಿ ಕಾಲನ ಕಾಲಬಾಯಲಿ ಬೀಳಲೊಲ್ಲವೆನಿಪ್ಪ ಸುಕೃತಿಗಳು ಕೇಳುವುದು ಕಿವಿಗೊಟ್ಟು (ಪ್ರಭುಲೀ. ೧೧-೧).

[ಕಾಳು$_1$ (< ಕಾೞ್$^{1}$) + ವಿಷಯ]

**ಕಾಳುಶಾಪ** (ನಾ). ಕೆಟ್ಟಶಾಪ; ಕ್ರೂರವಾದ ಶಾಪ: ವಿಪ್ರನ ಕಾಳು ಶಾಪದ ಫಲವಲಾ ಸಂಪ್ರಾಪ್ತವಾಯ್ತೆಂದ (ಕುವ್ಯಾಕ. ೯-೧೨).

[ಕಾಳು$_1$ (< ಕಾೞ್$^{1}$) + ಶಾಪ]

**ಕಾಳೆ** 'ಕಹಳೆ' ನೋ.

**ಕಾಳೆಗ, ಕಾಳಗ** (ನಾ). ಕಾದಾಟ; ಯುದ್ಧ; ಕಲಹ: "ಸಮಿತಿ ಸಂಗ್ರಾಮಂ ರಣಂ . . . ಕಾಳೆಗಕೆ ನಾಮಮುಕ್ಕುಂ" (ಮಂಗರಾ. ೮೫-೨೮); ಆದಿತ್ಯಕುಮಾರನ್ ತಿರುವೂರ ಕಾಳೆಗದೊಳೆಱಿದು ಸುರಲೋಕಂ ಪೋದನ್ (ಎಕ. XII, ಮದ್ದಗಿ. ೧೦೧-೨; 750); ಕಾಳೆಗಕೆ ನಡವುತ್ತ (ಎಇ. XIV, ೧೮೭-೨; 875); ಮಹಾಘೋರತರಂ ಕಾಳೆಗಮಾಗಿ ಕರ್ಕ್ಕಮೆಂದು ಪೇೞ್ವೊಡೆ (ವದ್ದಾರಾ. ೧೪೯-೧೦); ನೀಮೆನ್ನ ಕಾಳೆಗಮಂ ಪೆಱಗಿರ್ದು ನೋಡಿಂ (ಪಂಪಭಾ. ೩-೬೯ ವ); ಕರ್ಣನ ಕಾಳೆಗಕೆ ನಾವ್ ಸಾರಥಿಗಳೇ (ಕುವ್ಯಾಕ. ೫-೨೧); ಧೀರೋದಾತ್ತ ಹರನೊಳು ಕಾಳೆಗ ಕಂದರ್ಪ ನಿಮಗೆ ಸಿದ್ಧಿಪುದೇ (ವೋಹತ. ೬-೭). **ಕಾಳಗ**: ಒಡನೆ ಕಾಳಗ ಬಯಸಿದ ಘೋಟಿಯಿಲಪ್ಪೆರ್ಱಿಪಿಂಗೆ ಮಾರ್ಬ್ಬಲಂ ಬಿಡೆ ಕಡಿಕೆಯ್ದಾ ನೂಂಕಿ ಕಿಡೆ (ಎಕ. II. ೧೩೮-೬; 940); ಓಲಗಂ ಲೇಸು ಕಾಳಗಮರಿದೆಂಬಂತೆ (ಧರ್ಮಾಮೃ. ೮-೮೦); ಹಲಸೂರ ಕಾಳಗದಲು ತನ್ನ ಧುರಮಂ ಸ್ವಾಮಿ ನೋಡುತ್ತಿರಲು (ಎಕ. VII, ಶಿವಮೊ. ೧೨-೬; 1120); ಪಾಂಚಾಲ ಕೋಪಿಸಿ ಬಂದ ಕಾಳಗಕೆ (ಕುವ್ಯಾಆ. ಒರಿಇ. ೧೮-೯೭); ತಗರು ಸಿಪಲೆ ಕೋಳಿ ಕಾಳಗಗಳು ನೆರೆಪಗಡೆ ಜೂಜುಗಳ ನೆವದಲಿ (ಕಂನವಿ. ೬-೧೯೭).

[ದೇ. ‖ ತಮಿ. ಕಾಳಪ, ಕಾಳೈಯ; ತುಳು. ಕಾಳಗ; ತೆಲು. ಗಾಳಕುಡು]

**ಕಾಳೆಗಂಗೆಯ್** (ಕ್ರಿ). ಯುದ್ಧ ಮಾಡು; ಹೋರಾಡು: ಎನ್ನೊಳ್ ಕಾಳೆಗಂಗೆಯ್ದನೀ ನರನೆಂದಾತನ ದೋಷಮಂ ನೆನೆಯದಾದಂ ಕೀರ್ತಿಸುತ್ತಿರ್ದನೀಶ್ವರಿಯೊಳ್ (ಶಬಶಂ. ೪-೭೦).

[ಕಾಳೆಗ + ಕೆಯ್$^{1}$]

**ಕಾಳೆಗಂಗೊಡು** (ಕ್ರಿ). ಕಾಳಗಕ್ಕೆ ನಿಲ್ಲು; ಯುದ್ಧ ಮಾಡು: ಬಭ್ರುವಾಹನನೊಡನೆ ಕಾಳೆಗಂಗೊ [ಪಾಠಾಂ. ಗು] ಡುವೆನಾಂ (ಜೈಮಿಭಾ. ೨೩-೯). [ಕಾಳೆಗ + ಕೊಡು]

**ಕಾಳೆಗವಲಗೆ, ಕಾಳಗವಲಗೆ** (ನಾ). ಗುರಾಣಿ: "ಅತ್ತಪರಂ = ಕಾಳೆಗವಲಗೆ" (ಶಮದ. ಪರಿ. ೨). **ಕಾಳಗವಲಗೆ**: "ಕಾಳಗವಲಗೆ ಯೆನೆ ಖೇಡ್ಯವು" (ಕಶರ ೨೩). [ಕಾಳೆಗ + ಪಲಗೆ]

**ಕಾಳೆಗವಱೆ** (ನಾ). ರಣಭೇರಿ: ಸೂಳೈಪ ಕಾಳೆಗವಱೆಗಳ್ ಮುಂತಿರೆ (ರಾಮಾಶ್ವ. ೨೮-೨೯). [ಕಾಳೆಗ + ಪಱೆ]

**ಕಾಳೆದೆ** (ನಾ). ಕಪ್ಪುಹೃದಯ; ಕ್ರೂರಮನಸ್ಸು: ಏನು ಚೋದ್ಯವಿದಯ್ಯ ತಾಮಸಿಯ ಕಾಳೆದೆಯೊಳನುರಾಗವುದಿಸಿದೊಲು ತಿಂಗಳಿನ ಬೆಳಕಿದಾಯ್ತು (ಗೋಕುನಿ. ೧-೧೮).

[ಕಾಳ್$_2$ (< ಕಾೞ್$_3$) + ಎದೆ (< ಎರ್ದೆ)]

**ಕಾಳೆಯಯುಗ** (ನಾ). ಕಲಿಯುಗ: ವ್ಯಾಪ್ತಿಯೊಳಿಳ್ದರುನ್ಧತಿ ಜಗತ್ಪ್ರತ್ಯಕ್ಷ ಧರ್ಮಾಧಿದೇವತೆ ಕಾಳೆಯಯುಗಾವತಾರಿಣಿ ಧರಿತ್ರೀಜಾತೆ ಭಾಸ್ವತ್ಪತಿವ್ರತೆ ತೇಜಳ್ಪನರುಕ್ತ ಗೌರಿ ಧರಿಣೀ ಸಾವಿತ್ರಿಯಂಬೀ ಮಹೋನ್ನತಿಯಂ ಸಂದಸಗರ್ಬ್ಬಿ ರೂಪಗುಣದಿಂ ಸ್ತ್ರೀರತ್ನಮಿ ಧಾತ್ರಿಯೊಳ್ (ಕಕುಲ. ೭-೧೬; 1019). [ಕಾಳೆಯ (= ಕಾಲೇಯ) + ಯುಗ]

**ಕಾಳೆಮ್ಮೆ** (ನಾ). ಕರಿಯ ಎಮ್ಮೆ; ಹೆಚ್ಚು ಹಾಲು ಕರೆಯುವ ಒಂದು ಬಗೆಯ ಎಮ್ಮೆ: ಕಾಳೆಮ್ಮೆಯ ಕಱೆಯಲಾಗಿ ಹಾಲು ರೋಹಿತವಾಗಿ ಬಿದ್ದಿತ್ತು . . . ಶ್ರೋಣಿತವಳಿದು ಹೋಗಲಾಗಿ ಹಾಲು ಹೆಪ್ಪಾಯಿತ್ತು (ಮೋಳಿಮಾ. ೨೨೩-೭೬); ಜೋಳದ ಬೋನಕ್ಕೆ ಬೇಳೆಯ ತೊಗೆಯಾಗಿ ಕಾಳೆಮ್ಮೆ ಕರೆದ ಹಯನಾಗಿ ಬೆಳವಲಮೇಳ ನೋಡೆಂದ (ಸರ್ವಜ್ಞ. ೧೬೧೭). [ಕಾಳ್$_2$ (< ಕಾೞ್$_3$) + ಎಮ್ಮೆ (< ಎರ್ಮೆ)]

**ಕಾಳೆವಾಳೆ** (ನಾ). ಕರಿಯ ಬಾಳೆ; ಕಾಲಕದಳಿ: ಕಾಳೆವಾಳೆ ಹೂವಿಗೆ ಕೆಮ್ಮಣ್ಣು ಮೆತ್ತಿ ಕೆಂಡದ ಮೇಲೆ ಬೇಯಿಸಿ ತೆಗೆದು ಹಿಂಡಿ ಕೊಂಡು (ವೈದ್ಯಸಾ. I, ೨೨೭).

[< ಕಾಳ (= ಕಾಲ) + ಬಾಳೆ (< ಬಾೞೆ)]

**ಕಾಳೆವಿಡಿಸು** (ಕ್ರಿ). ಕಹಳೆ ಊದಿಸು; ಉಗ್ಗಡಿಸು: ಆವಳೊ ರೂಪಿನಿಂ ಸೊಬಗಿನಿಂ ಗುಣದಿಂ ಪೊಣರ್ವನ್ನಳೀ ಮಹಾದೇವಿಯೊಳೆಂದು ಕಾಳೆವಿಡಿಸುತ್ತ (ಪುಷ್ಪಪು. ೯-೧೦೭). [ಕಾಳೆ (< ಕಹಳೆ) + ಪಿಡಿಸು]

**ಕಾಳೇಯ** 'ಕಾಲೇಯ' ನೋ.

**ಕಾಳೊಱೆ** (ನಾ). ಕಪ್ಪು ಬಣ್ಣದ ಒರೆ; ಕರಿಯ ಬಣ್ಣದ ಗವುಸು: ಒಱೆಯಿಂದುರ್ಚಿದ ಕೂರಲಗಿವೆನಿಸಿ ಕಣ್ಬೊಣರವು ಮೆಯ್ವೆರ್ಚಿದೊಡೆ ಮದನನಲ್ಲಿಯೆ ಸಾರ್ಚಿದ ಕಾಳೊಱೆಗಳಂತೆ ಪುರ್ಬುಗಳೆಸೆಗುಂ (ಕಾವ್ಯಸಾ. ೩೨೫). [ಕಾಳ್$_2$ (< ಕಾೞ್$_3$) + ಒಱೆ$_2$]

**ಕಾಳೋದಕವಾರ್ಧಿ** 'ಕಾಲೋದಕವಾರ್ಧಿ' ನೋ.

**ಕಾಳೋದಕಸಮುದ್ರ** (ನಾ). = ಕಾಲೋದಕವಾರ್ಧಿ: ಧಾತಕೀ ಷಂಡದ್ವೀಪಮದನೆಂಟು ಲಕ್ಷಯೋಜನದಗಲದಿಂ ಸುತ್ತಿರ್ದುದು ಕಾಳೋದಕಸಮುದ್ರಂ (ಸುಕುಮಾ. ೧೧-೫೦ ವ).
[ಕಾಳ್$_3$ (= ಕಾಲ) + ಉದಕ + ಸಮುದ್ರ]

**ಕಾಳೋರಗ** 'ಕಾಲೋರಗ' ನೋ.

**ಕಾಳ್ಕತ್ತಲೆ** (ನಾ). ಕಗ್ಗತ್ತಲೆ: ಓೞಕದ ಕಾಳ್ಕತ್ತಲೆಯಿಂದ ಅವಳಂಗದ ಹೇಮಕಾಂತಿ ಕಂದಿ ಕುಂದಿತು (ಎರಸ. ೩).
[ಕಾಳ್$_1$ (< ಕಾೞ್$_1$) + ಕತ್ತಲೆ (< ಕೞ್ತಲೆ)]

**ಕಾಳ್ಕರಡಿ** (ನಾ). ಕಾಡುಕರಡಿ; ಉಗ್ರವಾದ ಕರಡಿ: ಹಸಿದ ಹುಲಿಯ ಬೆಸಲಾದ ಕಾಳ್ಕರಡಿಯ ವಿಸವನುಗುಳ್ವ ಕಾಳಿಗನ (ಶ್ರೀಪಾಲ. ೫-೯೧). [ಕಾಳ್$_1$ (< ಕಾೞ್$_1$) + ಕರಡಿ]

**ಕಾಳ್ಕಾಳ್**, ಕಾಳುಕಾಳು (ಅ). ಒಂದು ಅನುಕರಣ ಧ್ವನಿ: ಇತ್ತ ಕಂಸನಾ ಕೂಸುಗಳ ಕಾಳ್ಕಾಳೆಂಬ ದನಿಗೇಳ್ದಲಿಯುಲಿವುಗೇಳ್ವ ಬೆಕ್ಕಿನಂತೆ ಬೊಕ್ಕನೆ ಪಾಱಿ ಪಾಯ್ದು (ಅರ್ಧನೇ. ೭-೨೯ ವ). **ಕಾಳುಕಾಳು**: ಕಾಳುಕಾಳೆನೆ ಅಳುವ ಶಿಶುಗಳ ದನಿಯ ಕೇಳುತ ಬಂದು (ಸಾಳ್ವಭಾ. ೧೧-೩). [?]

**ಕಾಳ್ಕಿಚ್ಚು** 'ಕಾೞ್ಗಿಚ್ಚು' ನೋ.

**ಕಾಳ್ಕುಱಿ** (ನಾ). ಕಾಡುಕುರಿ; ಅಡವಿಯ ಕುರಿ: ನರಿತೋಳ ಪಕ್ಕಿ ಕಾಳ್ಕುಱಿ ಮಱಿ ಮೊಲ ಮುಳ್ಪಂದಿ ಪುಲ್ಲೆ ಕರಡಿಗಳಂ . . . ಉಱೆ ಪಿಡಿದರ್ (ಹಮ್ಮೀರ. ೪-೫೯). [ಕಾಳ್$_1$ (< ಕಾೞ್$_1$) + ಕುಱಿ$_2$]

**ಕಾಳ್ಕೆಯ್** (ನಾ). ಕಾಡುಹೊಲ ಅಥವಾ ಕಾಡುಗದ್ದೆ: ಕರ್ಬಿನ ತೋಂಟ ಮತ್ತರಿಂಗೆ ಗದ್ಯಾಣ ಗಱ್ದೆ ಮತ್ತರ್ಗೆ ಧರಣಂ ಕಾಳ್ಕೆಯ್ಗೆ ಮತ್ತರಿಂಗೆ ಪಣಂ (ಸೌಇಇ. IX–i, ೭೭-೨೭ ; 997).
[ಕಾಳ್$_1$ (< ಕಾೞ್$_1$) + ಕೆಯ್$_4$]

**ಕಾಳ್ಕೋಣ** 'ಕಾೞ್ಕೋಣ' ನೋ.

**ಕಾಳ್ಕೋಳಿ** 'ಕಾೞ್ಕೋೞಿ' ನೋ.

**ಕಾಳ್ಗಡಲು** (ನಾ). ಕಪ್ಪಾದ ಸಮುದ್ರ (?) : ಮಾಯವೆಂಬ ಮೊಸಳೆ ಬಂದು ಬಾಯಬಿಡುತ್ತಿದ್ದಿತ್ತು. ಮೋಹವೆಂಬ ನೊರೆತೊರೆಗಳು ಹೆಚ್ಚಿ ಬರುತ್ತಿದ್ದಿತ್ತು. ಲೋಭಮೆಂಬ ಕಾಳ್ಗಡಲು ಎಳೆದೊಯ್ಯುತ್ತಿದ್ದಿತ್ತು (ಸರ್ವವ. ೧೫೨-೭೨೮). [ಕಾಳ್$_2$ (< ಕಾೞ್$_3$) + ಕಡಲು (< ಕಡಲ್)]

**ಕಾಳ್ಗಬ್ಬ** 'ಕಾೞ್ಗಬ್ಬ' ನೋ.

**ಕಾಳ್ಗಳಪ** (ನಾ). ಕಾಡುಹರಟೆ; ಕೆಲಸಕ್ಕೆ ಬಾರದ ಮಾತು: ಅಷ್ಟೆಲ್ಲಾ ಕೋಲಾಹಲ ಕಲಾಪವೆದ್ದುದು ಒಬ್ಬ ಹುಚ್ಚನ ಕಾಳ್ಗಳಪದ ಸಮಾಚಾರದಿಂದ (ಬೆಟ್ಟಅ. ೧೬೦-೨೧).
[ಕಾಳ್$_1$ (< ಕಾೞ್$_1$) + ಗಳಪ (< ಗೞಪ)]

**ಕಾಳ್ಗಿಚ್ಚು** 'ಕಾೞ್ಗಿಚ್ಚು' ನೋ.

**ಕಾಳ್ಗೆಡಹು$_1$** (ಕ್ರಿ). ಕಾಡುಹರಟೆ ಹರಟು; ವೃಥಾ ಮಾತಾಡು; ಕೆಟ್ಟಮಾತಾಡು; ಹೀಯಾಳಿಸು: ಆಕಾಶಗಂಗೆ ಮುನ್ನುಳ್ಳುದು ಮನಟಮಟಿಸಿ . . . ವಿಷ್ಣುಪದದಿಂದಾದಳೆಂಬುದನುವಱಿದಿರ್ದು ವಂಚಿಸಿ ಶಿವದ್ರೋಹಿ ಕಾಳ್ಗೆಡಹುತಿರಲಲ್ಲಿ (ಜೊಮ್ಮರ. ೧೧೧-೪).
[ಕಾಳ್$_1$ (< ಕಾೞ್$_1$) + ಕೆಡಹು (ಕೆಡಪು)]

**ಕಾಳ್ಗೆಡಹು$_2$** (ನಾ). ಕಾಡುಹರಟೆ; ಗೊಡ್ಡುಮಾತು; ಕೆಟ್ಟಮಾತು; ಅವಹೇಳನ: ಈವಗೆಯ ಕಾಳ್ಗೆಡಹಿನ ಸೊರಹುಗಳಿಗೆ ಕಿವಿಗುಡುತ್ತಿರುವುದೂ . . . ಮಹಾಪಾತಕವಾಗಿರುವುದು (ಮಂತ್ರಶ. ೭೬-೮). [< ಕಾಳ್ಗೆಡಹು$_1$]

**ಕಾಳ್ಗೆಡೆ** 'ಕಾೞ್ಗೆಡೆ' ನೋ.

**ಕಾಳ್ಗೆಯಜು** (?) : ಕೆಳೆಯಂಗಾಶ್ರಿತನಾವವಂಗೆರೆದವಂಗಿಷ್ಪರ್ಗಂಗೆ ಶಿಷ್ಟಂಗೆ ಮಾ(ಮೊ ?)ರ್ಕಳ ಮೆಂಬಂತಿರೆ ಬಟ್ಟೆಯೊಳ್ ಬೋಳೆದರ್ಕೆರ್ ಕಾಂತಾರದೊಳ್ ಪಣ್ತ ಭೂತಳಮಂ ಮೋದುವ ಮಾಮರಂ ತಳೆಯೆ ಕೂಳ್ವೇಶ್ಯೋಪಭೋಗಂ ನದೀಸಲಿಲಂ ಕಾಳ್ಗೆಯಜೆಂ ಸ್ವಕೀಯ ಧನಮೆಂ ಬೀರಂ ಮಹಾದಾಸಿಯೊ (ಕಳುಲ. ೭-೧೪ ; 1019). [?]

**ಕಾಳ್ಗೆಯ್ತ** 'ಕಾೞ್ಗೆಯ್ತ' ನೋ.

**ಕಾಳ್ಗೆಲಸ**, ಕಾಳುಗೆಲಸ (ನಾ). ಕೀಳುಕೆಲಸ; ಹೀನಕಾರ್ಯ: ದೂದಟ್ಟಿ ಸೌಂದರನಂಬಿ ಕಾಳ್ಗೆಲಸಮಂ ಬಿಡದೆ ಮಾಡಿಸಿದ (ಕುಮಾಷು. ೪-೧೦೩). **ಕಾಳುಗೆಲಸ**: ಜಾಳು ಮಾತೆಂದರೆ ನಲಿನಲಿದು ನುಡಿವರು. ಕಾಳುಗೆಲಸವೆಂದಡೆ ನಲಿನಲಿದು ಮಾಡುವರು, ಶ್ರೀಗುರುಸೇವೆಯೆಂದಡೆ ನಿತ್ಯ ಲಿಂಗಾರ್ಚನೆಯೆಂದಡೆ ಅಳಲುವರು, ಬಳಲುವರು (ಪದಗೋ. ೧೧೩-೨೩೦) ; ಕಾಳುಗೆಲಸಂಗಳಿಗೆ ಕಳುಪುತ . . . ಕೀಳಾಳಿನಂದದಿ ಮಾಡಿಸುತ್ತಿರಲು (ಬಸಪು. ೨೬-೫೮). [ಕಾಳ್$_1$ (< ಕಾೞ್$_1$) + ಕೆಲಸ]

**ಕಾಳ್ಗೈತ** 'ಕಾೞ್ಗೆಯ್ತ' ನೋ.

**ಕಾಳ್ತನ**, ಕಾಳತನ, ಕಾಳುತನ (ನಾ). ಕಾಡುತನ; ಹುಂಬತನ; ಒರಟು: ನಿನ್ನನು ತರಣಿಸುತ ಕೊಲಬಲ್ಲನೇ ಕಾಳ್ತನವಿದೇಕೆಂದ (ತೊರರಾ. ೪-೧೧-೧೧). **ಕಾಳತನ**: ಏಕೆ ಲಾಭದ ಲೋಭದರಗುಲಿ ಕಾಳತನಗಳು ಅಳಿಯವು (ದ್ರಾಕ್ಷಿದಾ. ೮೯). **ಕಾಳುತನ**: ಕಾಳುತನು [ನ] ವಳಿದು ಪೂಜಿಸಿ ಕೀರ್ತಿಸುತ . . . ತನ್ನಾಲಯಕೆ ಪೋದ ನೃಪನು (ಗುರುಚಾ. ೧೧-೪೪). [ಕಾಳ್$_1$ (< ಕಾೞ್$_1$) + –ತನ]

**ಕಾಳ್ತುಱು** 'ಕಾೞ್ತುಱು' ನೋ.

**ಕಾಳ್ತುಱುವಿಂಡು** (ನಾ). ಕಾಡುಹಸುಗಳ ಹಿಂಡು: ಚಂಡನ ದಂಡು ಪೋಡಿದುದು ಕಾಳ್ತುಱುವಿಂಡುಗಳೋಡುವಂತೆವೊಲ್ (ಹವ್ಮಿರ. ೩-೪೪). [ಕಾಳ್ತುಱು (< ಕಾೞ್ತುಱು) + ಪಿಂಡು$_2$]

**ಕಾಳ್ದಿವಿ** (ನಾ). ಕಾಡುದ್ವೀಪ (?) : ಕಾಳ್ದಿವಿಗಳೆರಡು ಬದಿ ಗಗನ ಭುವನವೆ ಗೃಹವು ಏಳೆಂಟಱಿಪ್ಪತ್ತೇಳು ಪಕ್ಕ ಆಳಲಿಕೆ ಮೂರ್ಬೀದಿ ಆಱು ಪ್ರಾಣದೊಳಿಹುದು ಏಳು ಮುಖದಿ ಸಂಬಾಳುತಿಹುದು (ಅವಚಂ. ೩೦೨-೧೩೧೯). [ಕಾಳ್$_1$ (< ಕಾೞ್$_1$) + ದಿವಿ]

**ಕಾಳ್ನಾಯಿ** (ನಾ). ಕಾಡುನಾಯಿ; ಅಡವಿನಾಯಿ: ಮೆಱೆವ ಖಡ್ಗಿಯ ಮೃಗಯೆಯ್ವಂದಿ ಕಾಳ್ನಾಯಿ ಮೊಱೆವ ಶರಭ ರಾಮ ಕಡವ (ಜ್ಞಾನಸಚ. ೧೦-೫೫) ; ಮಾರ್ಗದೊಳಗೊಂದು ಕರಿ ಕಾಳ್ನಾಯಿ ಮುಂದಕಂ ಪೋಗುತಿರಲು (ತುರಂಗ. ೯೭-೮).
[ಕಾಳ್$_1$ (< ಕಾೞ್$_1$) + ನಾಯಿ (< ನಾಯ್)]

**ಕಾಳ್ನುಡಿ**, ಕಾಳುನುಡಿ$_2$ (ನಾ). ಗೊಡ್ಡುಮಾತು; ವ್ಯರ್ಥವಾದ ಮಾತು: ಉಚ್ಚಾವಚಮಪ್ಪ ಕಾಳ್ನುಡಿಯದಂತಿರಲಂತಿರಲಿ (ಶತಕ. ೫೦-೭೦) ; ಅವನೊಳಾದೊಡಂ ಕುಮತಿ ಕಾಳ್ನುಡಿ ಕಿಳ್ನಡೆ ತೋಱುತಿರ್ದೊಡೆ (ಅಪಶ. ೬೦); ಒಚ್ಚತನ ಕೆಡೆದೊಗೆದು ಕಾಳ್ನುಡಿಯ ಬಳಿವಿಡಿದು (ಕಾಲೂರ. ೧೩೧-೨೮೦). **ಕಾಳುನುಡಿ$_2$**: ಕಾಳುನುಡಿಗಳ ನುಡಿದು [ಪಾಠಾಂ. ಕಾಳುಮಾಡಿದನೆನಗೆ] ಮುನಿಪತಿ ಕಾಳು [ಪಾಠಾಂ. ಕೌಳಿ, ಠೌಳಿ] ಕಾಜನಲಾ ಸುಡೀ ಗರ್ಭಾಳಿಗಳನೆಂದಬಲೆ ಹೊಸೆದಳು ಬಸುಱನೊಡೆ ಮುಱಿದು (ಸಂಭಪ. ೧೫-೪೫) ; ಕಾಳುನುಡಿಯ ಬಿಟ್ಟು ಜಿನಕಥೆಯನು (ರಾಮವಿ. ೧-೧೦೬). [ಕಾಳ್$_1$ (< ಕಾೞ್$_1$) + ನುಡಿ$_2$]

**ಕಾಳ್ಪಂದಿ** (ನಾ). ಅಡವಿಯ ಹಂದಿ; ಕಾಡುಮಿಕ: ಗಾಯವಡೆದ ಕಾಳ್ಪಂದಿಯಂತೆ (ಚೆಬಪು. ೩೧-೪೯) ; ಏರ್ದಳೆದು ನೊಂದ ಕಾೞ್ಪಂದಿಯಂತೆ (ಚೆಬಪು. ೪೯-೪೨); ಕಾಳ್ಪಂದಿಯಿರುಳು ಗೆಳಸನೆಲ್ಲವನಗೆದು ಮುಗಿಸೆ (ಕಾಲೂರ. ೫೩-೮೩). [ಕಾಳ್$_1$ (< ಕಾೞ್$_1$) + ಪಂದಿ]

**ಕಾಳ್ಪತ್ತಿ** 'ಕಾಟ್ಪಟ್ಟಿ' ನೋ.
**ಕಾಳ್ಪಲಸು** 'ಕಾಟ್ಪಲಸು' ನೋ.
**ಕಾಳ್ಪಸು** (ನಾ). ಕಾಡ ಹಸು; ಕಾಡಾಕಳು: ಬೇಳಡುತೆ ಬೀಳ್ವ ಕಾಳ್ಪಸುಗಳಿಂ (ಚಬಪು. ೪೬-೨೬). [ಕಾಳ್$_1$ (< ಕಾಟ್$_1$) + ಪಸು$_3$]
**ಕಾಳ್ಪುರ** 'ಕಾಟ್ಪುರ' ನೋ.
**ಕಾಳ್ಪುರವಿಡು** (ಕ್ರಿ). ಕಾಡಿನ ಪ್ರವಾಹದಂತೆ ತುಂಬಿ ಹರಿ, —ಸೂಸಿಹರಿ: ರಸದಾಳಿಗಬ್ಬುಗಳೆಲೆಯು . . . ನಾಂತು ಕಾಳ್ಪುರವಿಡುವ ತನಿರಸದಿಂದೆ (ಸಾಳ್ವಭಾ. ೧-೬೦). [ಕಾಳ್ಪುರ (< ಕಾಟ್ಪುರ) + ಇಡು$_1$]
**ಕಾಳ್ಪೂರ** 'ಕಾಟ್ಪುರ' ನೋ.
**ಕಾಳ್ಪೆಣ್** (ನಾ). ೧. ಕಾಡಿನ ಹೆಣ್ಣು; ಬೇಡಿತಿ. ೨. ಕೆಟ್ಟ ಹೆಣ್ಣು; ನೀಚ ಸ್ತ್ರೀ: ಬೋಳನಾಂಪೊ ರೆಯೂಳಿಗದೊಳಿರಲ್ ಕಾಳ್ಪೆಣ್ಗಳೆಯ್ದಿಮರವಳಿಯ ಸುಲಿದು (ಕಾಲೂರ. ೧೩೪-೨೮೭). [ಕಾಳ್$_1$ (< ಕಾಟ್$_1$) + ಪೆಣ್]
**ಕಾಳ್ಪೊನಲ್** 'ಕಾಟ್ಪೊನಲ್' ನೋ.
**ಕಾಳ್ಪಟ್ಟೆ** 'ಕಾಟ್ಪಟ್ಟೆ' ನೋ.
**ಕಾಳ್ಪಟ್ಟೆಗೊಳ್** (ಕ್ರಿ). ಕಾಡಿನ ಹಾದಿಯನ್ನು ಹಿಡಿ: ಸೌಮಿತ್ರಿ ವೈದೇಹಿಯಂ ಕೊಂಡು. . .ಪರಿಸಿದಂ ಕಾಳ್ಬಟ್ಟೆಗೊಂಡನಿಲವೇಗದಿಂದಾ ರಥವನು (ಜೈಮಿಭಾ. ೧೯-೧). [ಕಾಳ್ಬಟ್ಟೆ (< ಕಾಟ್ಬಟ್ಟೆ) + ಕೊಳ್$_1$]
**ಕಾಳ್ಬದುಕು** (ನಾ). ಕಾಡು ಜೀವನ; ವ್ಯರ್ಥವಾದ ಬದುಕು: ಕಾಳ್ಬದುಕು ಕಡುಪುಲಿಯ ಕರಡಿ ಬಾಳಿದ ಬದುಕು (ಕಾಲೂರ. ೧೨೮-೨೭೧). [ಕಾಳ್$_1$ (< ಕಾಟ್$_1$) + ಬದುಕು$_2$ (< ಬದುಂಕು$_2$)]
**ಕಾಳ್ಬಿಯದ** (ನಾ). ಕಾಡಿನ ಬೇಡ; ಒರಟನಾದ ವ್ಯಾಧ: ಎತ್ತಣ ಕಿಟಿಯೆತ್ತಣ ಕಾಳ್ಬಿಯದನಾಗಮಂ (ಶಬಶಂ. ೪-೯೬).
[ಕಾಳ್$_1$ (< ಕಾಟ್$_1$) + ಬಿಯದ]
**ಕಾಳ್ಬೆಕ್ಕು** 'ಕಾಟ್ಬೆಕ್ಕು' ನೋ.
**ಕಾಳ್ಬೇಗೆ** (ನಾ). ಕಾಡಿನಬೇಗೆ; ಕಾಡುಗಿಚ್ಚು, ದಾವಾನಲ: ಜಗದಲ್ಲಿ ಜಾತಿಯ ಕಾಳ್ಬೇಗೆ ಹೊತ್ತಿ ಉರಿಯುತ್ತಿದೆ (ಅಮುಗಾಂ. ೪೯).
[ಕಾಳ್$_1$ (< ಕಾಟ್$_1$) + ಬೇಗೆ]
**ಕಾಳ್ಬೇಡಿತಿ** (ನಾ). ಕಾಡಿನ ಬೇಡಿತಿ, —ಬೇಡರ ಹೆಂಗುಸು: ಕರ್ಬೊನ್ನ ಹೊಸ ಕರುವೊ ಕಾಡಿಗೆಯ ರೂಹೊ ಎನಲೆಸೆದರು ಕಾಳ್ಬೇಡಿತಿಯರು (ಶ್ರೀಪಾಲ. ೭-೩೨); ಇರುಳ ತಿರುಳ ಬಣ್ಣದ ತನುವಿನ ಕತ್ತುರಿಗಂಪಿನ ಕಾಳ್ಬೇಡಿತಿ ನಡೆತಂದರಸಿಯ ಸಭೆಯಂ ಹೊಕ್ಕಳು (ಜಯುಕಾ. ೨-೨೧). [ಕಾಳ್$_1$ (< ಕಾಟ್$_1$) + ಬೇಡಿತಿ]
**ಕಾಳ್ಬೊಜಂಗ** (ನಾ). ಕಾಡು ವಿಟ; ಒರಟುಸ್ವಭಾವದ ವಿಟ: ಮತ್ತಮೊರ್ವಳ್ ಕೈತವಂ ಕೈಮಿಕ್ಕ ಕಾಳ್ಬೊಜಂಗನ ಮಾತಾಗಿ ಕಡುಕನಲ್ದು (ರಾಜಶೇ. ೧೧-೧೬೪ ವ). [ಕಾಳ್$_1$ (< ಕಾಟ್$_1$) + ಬೊಜಂಗ]
**ಕಾಳ್ಮಂದಿ** (ನಾ). ಕಾಡುಮಂದಿ; ಒರಟುಜನ: ದೇವ ಚಿತ್ತೈಸು ನೆರೆದ ಕಾಳ್ಮಂದಿಯಿಂದಿಂತೆಂದುದೆಂದಾದ ವೃತ್ತಾಂತದಂದಮಂ ಪೇಳ್ದಡೆ (ಸಿದ್ಧರಾ. ೭-೫). [ಕಾಳ್$_1$ (< ಕಾಟ್$_1$) + ಮಂದಿ]
**ಕಾಳ್ಮರ, ಕಾಮರ** (ನಾ). ಕಾಡುಮರ: ಕಲ್ಪವೃಕ್ಷದ ಸಸಿ ಕಾಳ್ಮರನಪ್ಪುದೆ ಬಲ್ಪಿನೊಡೆಯ ನಿನ್ನ ಕುವರಾ ಅಲ್ಪಗುಣಗಳ ಕೈವಿಡಿವನೆ (ಭರಚ. ೨೫-೪೫). **ಕಾಮರ**: ಮಾಕಂದವನಪ್ಪಿ ಮಲ್ಲಿಗೆ ಕಡುಕೊಬ್ಬಿ ಕೆಲದ ಕಾಮರಕೆ ಕುಡಿ ನೀಡುವೊಲು (ನಾಗಕು. ೯-೬).
[ಕಾಳ್$_1$ (< ಕಾಟ್$_1$) + ಮರ]
**ಕಾಳ್ಮರೆ** (ನಾ). ಕಾಡುಜಿಂಕೆ: ಕರಿರಿಪು ಮತ್ಸರಂ ಮದಮ ದಂತಿ . . .ಅಸೆ ಕಾಳ್ಮರೆ ಘನದಂಭಮೇ ಕರಡಿ (ಶಬಶಂ. ೩-೨೮); ಮಡಿಪು ಕಾಳ್ಮರೆಯನೆಂಬ ಬ್ಬರಂ ಪರ್ಬಿದುದು (ಕುಮಾಪು. ೪-೨೦೬). [ಕಾಳ್$_1$ (< ಕಾಟ್$_1$) + ಮರೆ$_2$]

**ಕಾಳ್ಮಾತು, ಕಾಳುಮಾತು** (ನಾ). ಕೆಟ್ಟಮಾತು; ವ್ಯರ್ಥಮಾತು: ಅಷ್ಟಮೂರ್ತಿಗಳೆಲ್ಲಂ ಶಿವನಪ್ಪುವೆಂಬ 'ಕಾಳ್ಮಾತುಗಳುಮಂ . . . ಕೇಳ್ದವರ್ಗೆ ದುರ್ಗತಿಯಕ್ಕುಮೆಂದು ಭಾಸ್ಕರದೇವನುದ್ಘೋಷಿಸಿ (ವೃಷವಿ. ೩೭-೧೩೨ ವ). **ಕಾಳುಮಾತು**: ಲಿಂಗಭಕ್ತನಾದಲ್ಲಿ ಸಂಚಲನಿಂದು . . . ಅತ್ಮಂಗೆ ಮರ್ತ್ಯ ಕೈಲಾಸವೆಂಬ ಕಾಳುಮಾತಿಲ್ಲ (ಸರ್ವವ. ೬೭-೩೫೯); ಕಾಳುಮಾತುಗಳಿನ್ನವೇತಕೆ ನಿಮಗೆ ಹವಣಲ್ಲ (ಬಸಪು. ೩೯-೫೮). [ಕಾಳ್$_1$ (< ಕಾಟ್$_1$) + ಮಾತು$_1$]
**ಕಾಳ್ಮಾನಿಸ** (ನಾ). ಕೆಟ್ಟಮನುಷ್ಯ; ಕೀಳುಮನುಷ್ಯ: ಪಾಳ್ಮೊಗದ ಕಾಳ್ಮಾನಿಸರುಂ (ವೃಷವಿ. ೩೫-೫೫ ವ).
[ಕಾಳ್$_1$ (< ಕಾಟ್$_1$) + ಮಾನಿಸ]
**ಕಾಳ್ಮೃಗ** 'ಕಾಟ್ಮೃಗ' ನೋ.
**ಕಾಳ್ಮಿದುಳ್** (ನಾ). ಕರಿಯಮೆದುಳು (?): ನಿಜೋಗ್ರಖಡ್ಗಹತಿಯಿಂದ ಕಾಳ್ಮಿದುಳ್ ನೆತ್ತಿಯಿಂದೊಡೆದೆಂಟುಂ ದೆಸೆಗೆಯ್ದೆ ಸೂಸುವಿನೆಗಂ (ಮುಂಬರಾ. X, ೨೪೪-೩೫; 12ನೆ); ಪಿಂಡುಗೊಂಡು ಜೊಂಡೇಳ್ದ ಕಾಳ್ಮಿದುಳ ಕೋಳ್ಗೆ ಸಜಿಂದ (ರಾಜಶೇ. ೫-೧೭೦ ವ).
[ಕಾಳ್$_2$ (< ಕಾಟ್$_3$) + ಮಿದುಳ್]
**ಕಾಳ್ವಟ್ಟೆ** 'ಕಾಟ್ವಟ್ಟೆ' ನೋ.
**ಕಾಳ್ವೊನಲ್** 'ಕಾಟ್ವೊನಲ್' ನೋ.
**ಕಾಳ್ವೊನಲು** 'ಕಾಟ್ವೊನಲ್' ನೋ.
**ಕಾಳ್ಸತಿ** (ನಾ). ಕೆಟ್ಟ ಹೆಂಗಸು; ಕೀಳು ಹೆಂಗಸು: ಪರೀಕ್ಷಿಪೊಡೀಗಳೀಗಳಿನ ಕಾಳ್ಸತಿಯರ್ಕಳನೆಸ್ತು ಪೋಲಿಪೆಂ (ಎಕ. VII, ಶಿವಮೊ. ೫-೩೬; 1218). [ಕಾಳ್$_1$ (< ಕಾಟ್$_1$) + ಸತಿ]
**ಕಾಱ್, ಕಾರು$_1$, ಕಾಱು$_1$** (ಕ್ರಿ). ಕಾರ್ದು (ಭೂತನ್ಯೂ). ೧. ಕಕ್ಕು; ವಮನಮಾಡು; ವಾಂತಿಮಾಡು: ಇಂತಿದೇಕೆ ಮಧುವಂ ನೆಱೆ ಕಾಱಿದ ನೈದಿಲಂದದಿಂ ನೆರೆದುವು ನೀಳ್ದ ಕಣ್ಬೊಣರ್ಗಳ್ (ಅರ್ಧನೇ. ೧-೧೧೩); ಕಾರ್ದುವಕ್ಷಿಗಳ ಅರುಣತೆಯನುಗ್ರ ಕೋಪದಿಂ (ಜೈಮಿಭಾ. ೩೧-೩೦); ಪಾರಿದಂ . . . ಮಿಗೆ ನಡುಗುತ್ತೊಳ್ದು ತಾಮುಂಡುದಂ ದಲ್ತಡೆದೀಗಳ್ ಕಾರ್ದಪೊಲ್ ಪೆರ್ಮಳೆ ಬಿಡೆ ಸುರಿಗುಂ (ಚಂದ್ರಭ್ಯ. ೧೧-೮೨). **ಕಾರು$_1$**: ೧. ಜೀವಜೀವನದ ಹೊಟ್ಟೆ ಕಿಚ್ಚು ಕಾರಿತ್ತು ವಿಷಪ್ರಸಾದ (ಅರಳು. ೪೩೪); ಪ್ರಯಾಣಿಕರಾರೋ ಕಾರಿಕೊಂಡು ಹೊಲಸು ಮಾಡಿದ ಜಾಗ (ಮೂರುದಾ. ೧೭೫). **ಕಾಱು$_1$**: ಕಣ್ಣು ನೀರಿಱಿದುವು ಬಾಳೆಮಿರ್ ಜಲಮನಟ್ಟಿಸಲಾಱದೆ ಕಾಱುವಂತೆ ಪೋಲ್ (ಕಾವ್ಯಸಾ. ೬೧೧ ಶೂದ್ರಕ); ಜವನುಂಡು ಕಾಱಿದವೊಲಾಯ್ತು ತ್ತಂ ಕುರುಕ್ಷೇತ್ರದೊಳ್ (ಗದಾಯು. ೩-೭); ಎನಿತು ಪಸಿವಾದೊಡಂ ಮೇದಿನಿಯೊಳ್ ಕಾಱಿರ್ದ ಕೂಳನುಂಬರೆ ನರರ್ (ಧರ್ಮಾಮೃ. ೫-೧೨೦); ಕಣ್ಣಾಲಿ ಕಾಱಿದವರುಣವಾರಿಗಳ (ಕುವ್ಯಾವಿ. ೭-೬೪); ಪೂರ್ಣೇಂದುಮಂಡಲ ಗರಳಮಯ ಕೌಮುದಿಯ ಕಾಱುವಡೆ . . . ಬದುಕಬಹುದೇ (ತೊರರಾ. ೨-೨-೬).
[ದೇ. ‖ ತಮಿ. ಕಾಲೆ; ಮಲ. ಕಾಲು; ತುಳು. ಕಾರು; ತೆಲು. ಕ್ರಾಯು, ಗ್ರಾಯು]
**-ಕಾಱ, -ಕಾರ$_1$, -ಗಾರ$_1$, -ಗಾಱ** (ಪ್ರ). ಇದರಲ್ಲಿ ನಿರತನಾಗಿರುವವನು, ವ್ಯವಹರಿಸುವವನು ಎಂಬರ್ಥದಲ್ಲಿ ಬರುವ ತದ್ಧಿತ ಪ್ರತ್ಯಯ: "ಇವಱೊಳ್ ವ್ಯವಹರಿಪಂ ಮಾಡುವನಿವನೆಂಬಲ್ಲಿ ಕಾಱಗಾಱಂಗಳ್ ಸಂಭವಿಕುಂ" (ಶಮದ. ೧೯೯); ಪಗೆಕಾಱಂ, ಬಗೆ ಕಾಱಂ . . . ನಡೆವಳಿಕಾಱಂ (ಭಾಷಾಭೂ. ೧೭೧ ಉದಾ.); ಕಾಱ ಇದರಲ್ಲಿ ನಿರತನಾಗಿರುವ ಪಗೆಕಾಱ, ನುಡಿಕಾಱ (ಕೈಪಿಡಿ ೧೮).

**-ಕಾರ**$_1$ : ಓಲೆಯನ್ನು ತರುವ ವ್ಯಕ್ತಿಯವನು = ಓಲೆಕಾರ (ಓಲೆ + -ಕಾರ) (ಮಧ್ಯಮು. ೧೩೭). **-ಗಾರ**$_1$ : 'ಕಂಚುಗಾರ' ಪರಾ. **-ಗಾಱ** : ಮಾಲೆಗಾಱಂ, ಕಂಚಗಾಱಂ, ಬಳೆಗಾಱಂ, ಗೆಜ್ಜೆಗಾಱಂ (ಶಮದ. ೧೯೯ ಪ್ರಯೋ). [?]

**ಕಾಱಿಗೊಡೆಯ** (ನಾ). ಒಬ್ಬಾತನ ಹೆಸರು : ಇಲ್ಲಿಯ ಬೆಸಮಕ್ಕಳಾರೆಂದೊಡೆ ಕಾಱಿಗೊಡೆಯನುಂ ಕನಕಗಾವನುಂ ಬಿಳಿಯಾಚಾರಿಯು (ಎಕ. III, ನಂಜನ. ೧೩೯-೮ ; 915). [?]

**ಕಾಱೆ** (ನಾ). ಒಂದು ಜಾತಿಯ ಪಕ್ಷಿ: ಭೇರುಂಡಂ ಪೊಱಸು ಕಾಗೆಗಂ ಬೊಂದುರಿಗಂಕಾಱೆ ಕಿಱುವೀಳಿಕೊಯ್ಕಂ(ಕಾವ್ಯಸಾ. ೧೦೪೩ ಶೂದ್ರಕ).[?]

**ಕಾಱಿಸು**, ಕಾರಿಸು (ಕ್ರಿ). ಕಾರುವಂತೆ ಮಾಡು ; ಕಕ್ಕಿಸು : ಮುನ್ನಮಮರರುಂಡಮೃತಮನೇಂ ಕಾಱಿಸುವೆನೊ (ಗದಾಯು. ೬-೧೭); ಕಾಱಿಸುವೆನಿವನಸುವನಿವ ಮೈದೊಱೆ ನಿಂದರೆ (ಕುಮಾರ‍್ದ್ರೋ. ೧೬-೫೦); ಕಾಱಿಸುವೆನಮರರಂ ಜಯಿಸಿದುದನೆನುತೆ (ಚಬಪು. ೪೯-೫೧) ; ಅಂಬಿನ ತುದಿಗೇಱಿಸಿದ ಪೊಟ್ಟಣದುಪ್ಪೆಲಿಂಬಾದ ಕಿಚ್ಚ ಕಾಱಿಸುತ . . . ಎಚ್ಚ ಶರಗಳ ತುಂಬಿದರೂರೊಳಗಾಗ (ಕಂನವಿ. ೧೪-೧೪). **ಕಾರಿಸು** : ತಿಂದ ಅನ್ನವನ್ನು ಕಾರಿಸುತ್ತೇನೆ (ಮುಂಗಾಮು. ೮) [ಕಾಱ್ + -ಇಸು$_3$]

**ಕಾಱು**$_1$ 'ಕಾಱ್' ನೋ.

**ಕಾಱು**$_2$, ಕಾರು$_5$ (ನಾ). ಉಳುವ ನೇಗಿಲ ಬುಡಕ್ಕೆ ಹಾಕುವ ಕಬ್ಬಿಣದ ಪಟ್ಟಿ ; ಗುಳ. 'ಕಾಱುದೆಱೆ' ಪರಾ. **ಕಾರು**$_5$. 'ಆರುಕಾರು' ಪರಾ. [ದೇ. ‖ ತಮಿ. ಕಾಱು ; ತೆಲು. ಕಱು]

**ಕಾಱುಗಿಡಿ** (ನಾ). ಕಾರುವ ಕಿಡಿ ; ಸಿಡಿಯುತ್ತಿರುವ ಕಿಡಿ : ಏಱಿದವು ಪಡಿಮುಖದೊಳುಬ್ಬಿದ ಕಾಱುಗಿಡಿಗಳ ಖಂಡೆಯದ ಕೈದೊಱೆಕೆಯಲ ಗಲದಲಿ ನೆಲ ಕಡಿಖಂಡಮಯವಾಗೆ (ತೊರರಾ. ೬-೩೦-೧೩).

[ಕಾಱು$_1$ (< ಕಾಱ್) + ಕಿಡಿ]

**ಕಾಱುದೆಱೆ** (ನಾ). ಒಂದು ಬಗೆಯ ತೆರಿಗೆ; ನೇಗಿಲ ತೆರಿಗೆ: ಅಡ್ಡದೆಱೆ ಕಾಱುದೆಱೆ ನಾಬ[ದ್ಯಾ]ಣ (ಎಕ. IX, ಚನ್ನಪ. ೧೬೧-೭ ; 913).

[ಕಾಱು$_2$ + ತೆಱೆ]

**ಕಾಱುಮದ್ದು** (ನಾ). ವಾಂತಿಮಾಡಿಸುವ ಮದ್ದು : ಸೂಱೆಹೋದುದು ನಗರಿ ಖಳರಿಗೆ ಮಾಱಿದರು ಪಟ್ಟಣವನಕಟಾ ಕಾಱುಮದ್ದಿಗೆ ಹೋಹುದೇ ಕೈಮಸಕವವನಿಪನ (ಕುಮಾಕ. ೧-೮).

[ಕಾಱು$_1$ (< ಕಾಱ್) + ಮದ್ದು (< ಮರ್ದು)]

**ಕಾಱೆ** (ನಾ). ಕೊರಳಲ್ಲಿ ಧರಿಸುವ ಒಂದು ಆಭರಣ ; ಕೊರಳ ಬಂದಿ : ಅರಿಸಿನದಂತೆ ಮೆಯ್ವತ್ತಿ ಪಿಣಿವರ್, ಕಾಱೆಯಂತೆ ಕೊರಲಂ ಪತ್ತಿ ಕೊಯ್ವರ್ (ಧರ್ಮಾಮೃ. ೩-೭೩). ಕಾಱೆ ಕಂಕಣ ತೋಳಬಂದಿ ಸೂಡಗಗಳಿಂ ಹಾರ ಕರ್ಣಾಭರಣ ಮುಕ್ತಿನೇಕಾವಳಿಯ ನೇವುರಂ ಪಾಯವಟ್ಟ (ಲಶಿಚಂ. ೩೧-೬೩).

[ದೇ. ‖ ತಮಿ. ಕಾಱೈ ; ಮಲ. ಕಾಱ ; ತುಳು. ಕಾರೆ]

**ಕಾೞ್**$_1$, ಕಾಳ್$_1$, ಕಾಳು$_1$, ಕಾೞು$_1$ (ನಾ). ೧. ಸಮಾಸದಲ್ಲಿ ಕಾಡು ಎಂಬುದಕ್ಕೆ ಬರುವ ಆದೇಶ. 'ಕಾೞ್ಕಿಚ್ಚು', 'ಕಾೞ್ಪುರ' ಪರಾ. ೨. ಕೆಟ್ಟದ್ದು ; ಕೀಳಾದುದು ; ದುಷ್ಟವಾದುದು. 'ಕಾೞಾಗು' ಪರಾ. **ಕಾಳ್**$_1$. 'ಕಾಳ್ಕಱು', 'ಕಾಳ್ನಾಯಿ' ಪರಾ. **ಕಾಳು**$_1$ : ೨. ಕಾಳುದೇಹದೊಳಗೊಂದು ಕೀಳಜೀವ ಹುಟ್ಟಿತ್ತಾಗಿ ಅಪ್ಯಾಯನವಡಗದು (ವಚಸಂ. ೪೫-೬೩) ; ಕಾಳನಾಡದಿರವ್ವ ಸತ್ಯವ ಪಾಲಿಸದೆ (ಸಂಭಪ. ೫-೪೭) ; ಕಾಳನೆಣಿಸಿದೆ ಖೂಳಹೋಗು (ತೊರರಾ. ೩-೭-೩೬); ಸಿರಿಯಿಂದ ಫಲವಿಲ್ಲ ಕಾಳುಮಾಡುವು ದಂತರಂಗವ (ಶಂಕದಾ. ೮-೪೯). **ಕಾೞು**$_1$. 'ಕಾೞುಗಬ್ಬು' ಪರಾ. [< ಕಾಡು]

**ಕಾೞ್**$_2$, ಕಾಳು$_2$, ಕಾೞು$_2$ (ನಾ). ೧. ಬೀಜ ; ಧಾನ್ಯ. 'ಕಾೞಬಾೞ' ಪರಾ. **ಕಾಳು**$_2$ : ದೇಶದೊಳಗೆ ದುರ್ಭಿಕ್ಷವಿದ್ದು ಕಾಳು ಬಹಳ ತುಟ್ಟಿಯಾದವು (ಮುಂಬಯಿ. ೪-೭೫); ಉಳುವೆನಾ ಭೂಮಿಯನು ಹೊರುವೆನಾ ಹೇರನ್ನು ತುಳಿದು ಕಡ್ಡಿಯ ಕಾಳ ವಿಂಗಡಿಸುವೆ (ಕಪವು. ೪-೩೧) ; ಜಳ್ಳು ತೂರಿ ಕಾಳು ತುಂಬಿ (ರೂಢಿ). ೨. ಕಣ ; ಹಳುಕು. 'ಕಾಳುಗಟ್ಟು' ಪರಾ. **ಕಾೞು**$_2$ : ೧. ಕಾೞು, ಕುೞು, ತುೞು (ಶಬ್ದಾನು. ೧೪೦ ಪ್ರಯೋ). 'ಕಾೞುಗ' ಪರಾ.

[ದೇ. ‖ ತಮಿ. ಕಾೞ್ = ಗಟ್ಟಿ, ಗಟ್ಟಿತನ ; ತುಳು. ಕಾಳು ; ಕೊಡ. ಕಾಳ್]

**ಕಾೞ್**$_3$, ಕಾಳ್$_2$, ಕಾಳು$_3$ (ನಾ). ಕರಿಯಬಣ್ಣ ; ಕಪ್ಪು. 'ಕಾೞ್ಪೆಟ್ಟು', 'ಕಾೞ್ಪೊಡೆ' ಪರಾ. **ಕಾಳ್**$_2$ : "ಕರಿದು ಕಾಳ್ಕರಿಯೆನಲ್ಕೆ ತಿಳಿಯೆ ಕರ್ಪೆಂದು" (ಶಬ್ದಮಂ. ೭೦). **ಕಾಳು**$_3$ : ರಾತ್ರಿಯಾದುದರಿಂದ ಕತ್ತಲೆ - ಕಾಳು ಕವಿದಿತ್ತು (ಮೇದಿಮ. ೮೧).

[ದೇ. ‖ ತಮಿ. ಕಾೞ್ ; ಕೊಡ. ಕಾರ್ ./ ಸಂ. ಕಾಲ]

**ಕಾೞಬಾೞ** (ನಾ). ಹೊಲಗದ್ದೆಗಳಲ್ಲಿ ಧಾನ್ಯವನ್ನು ಕಾದು ಕೂಲಿಗಾಗಿ ಕಾಳು ಪಡೆಯುವವನು : (ಕ). [?]

**ಕಾೞಾಗು**, ಕಾಳಾಗು (ಕ್ರಿ). ೧. ಕೆಟ್ಟುಹೋಗು ; ಹಾಳಾಗು : ಇಂದಿನ ಬಂಡಾಕಾೞಾದ ವಾಱೆಗೊಂಡೊಡೆ ಪಾೞಾದುದು ಮನಮುಮೆರ್ದೆಯುಂ (ಪಂಪಭಾ. ೪-೬೧). ೨. ತೊಂದರೆಕೊಡು ; ವೈರಿಯಾಗು ; ದುಷ್ಟವಾಗು : ಎಳವೆಱೆಯಂತೆ ವಕ್ರನಾಗಿ ಸೂಳೆಯಂತೆ ಕಾೞಾಗಿ ಮುಳ್ಮೊನೆಯಂತೆ ಕ್ರೂರನಾಗಿ (ಧರ್ಮಾಮೃ. ೨-೧೦೫). **ಕಾಳಾಗು** : ೧. "ಕಾಳಾದುದೆನಲ್ಕೆ ಕೆಟ್ಟು ಪೋದುದುಮಕ್ಕುಂ" (ಭಾರನಿ. ೧೯) ; ಅಂಗ ಲಿಂಗವಾದರೆ ಮತ್ತೆ ಕಾಳಪ್ಪುದೆ (ಆದವ. ೯೨) ; ಏಳು ಕೌರವರಾಯ . . . ಜಲದೊಳಗಾಳುವರೆ ಕಾಳಾಯ್ತು ನಿನ್ನಲಿಗರುವ ಶಶಿವಂಶ (ಕುಮಾಗ. ೫-೧೪) ; ಬಿಲ್ಲಂಬು ಬೀಳಾಯ್ತು ತೇರ್ ಕುದುರೆ ಕಾಳಾಯ್ತು (ಪಾರಸಿ. ೧೨-೨೮೧). ೨. ವ್ಯರ್ಥವಾಗು : ಮೇಲುಗಾಳೆಗನಮ್ಮದೀಸಱ ಮೇಲೆ ತೆಗೆಸುವುದತಿ ಮಥನದಲಿ ಕಾಳಹುದು ಬಳಿಕ (ಕುಮಾರ‍್ದ್ರೋ. ೧೮-೧) ; ಪರಿಪರಿಯ ಶಸ್ತ್ರಾಸ್ತ್ರ ನಿಕರದಲರಿದರಾತನ ಕೊರಳ ನೊರೆ ನೆತ್ತರನ ಕಾಣವು ಕೈದು ಕಾಳಾದವು ಮಹಾದೇವ (ನಿಭಾಗ. ೪-೨-೨೯). [ಕಾೞ್$_1$ + ಆಗು$_1$]

**ಕಾೞು**$_1$ 'ಕಾೞ್$_1$' ನೋ.

**ಕಾೞು**$_2$ 'ಕಾೞ್$_2$' ನೋ.

**ಕಾೞುಗ** (ನಾ). ಕಾಳಿನ ವ್ಯಾಪಾರಿ: ಕಾೞುಗಂ, ನೇಣುಗಂ, ಹೆಣ್ಣುಗಂ, ಮಣ್ಣುಗಂ (ಶಮದ. ೨೦೪ ಪ್ರಯೋ). [ಕಾೞ್$_2$ + ಉಗ]

**ಕಾೞ್ಕದೇವಯ್ಯ** (ನಾ). ಒಬ್ಬಾತನ ಹೆಸರು : ಕಾೞ್ಕದೇವಯ್ಯ ರನ್ವಯದೊಳ್ ಕಲಿವಿಟ್ಟರಸಬ್ಬೆನವಾಸಿ ಪನ್ನಿಚ್ಚಾಸಿರಮುವಾಳುತ್ತಿರೆ (ಎಕ. VII, ಶಿಕಾರಿ. ೨೧೯-೭ ; 918). [ಕಾೞ್ಕ$_{೪೦}$ + ದೇವ + ಅಯ್ಯ$_1$]

**ಕಾೞ್ಕಬ್ಬ** 'ಕಾೞ್ಗಬ್ಬ' ನೋ.

**ಕಾೞ್ಕಿಚ್ಚು** 'ಕಾೞ್ಗಿಚ್ಚು' ನೋ.

**ಕಾೞ್ಕಿಚ್ಚು** 'ಕಾೞ್ಗಿಚ್ಚು' ನೋ.

**ಕಾೞ್ಕುರುಳ್**, ಕಾಕುಳ್ಳು (ನಾ). ಕಾಡಿನ ಬೆರಣಿ: ದಾವಣಿಗೂಂಟಮುಂ ಪೊಡೆವ ಕಾೞ್ಕುರುಳಂ ಪರಿದಾಯ್ವ ಪೇರ್ಗಳಂ ತಾವಱಿದೊಟ್ಟಿಲೊಟ್ಟುವ . . . ಡೋಲಿಗರಿಂದೆಸೆದಂ (ದಶಕು. ೪-೭೮). 'ಕಾಡುಕುರುಳು' ಪರಾ. **ಕಾಕುಳ್ಳು** : ಅಡವಿಗೆ ಹೋಗಿ ಕಲ್ಲು, ಕಟ್ಟಿಗೆ, ಹುಲ್ಲು, ಕಾಕುಳ್ಳು, ಮುಂತಾದವುಗಳನ್ನು ಆರಿಸಿ ತಂದು (ಮುಂಬಯಿ. ೫-೨೫೦). [ಕಾೞ್$_1$ + ಕುರುಳ್$_2$]

**ಕಾೞ್ಕೋಣ,** ಕಾಳ್ಕೋಣ (ನಾ). ಕಾಡು ಕೋಣ; ವನ ಮಹಿಷ: ಕಾೞ್ಕೋಣಂಗಳ್ ತರಳತರಪ್ಲುಸಿತವಿಲುಳಿತಘ್ರಾಣಂಗಳ್ (ಸೂಕ್ತಿಸು. ೩-೪೧). **ಕಾಳ್ಕೋಣ:** ಮಲ್ಲರೊಳ್ ಮಲೆದು ಪೊಱಮಟ್ಟ ಕಾಳರಕ್ಕಸ ರಂತಿರ್ಪ ಕಾಳ್ಕೋಣಂಗಳಿಂ (ಗಿರಿಜಾ. ೧-೧೨೮ ವ); ಕಾಳ್ಕೋಣನ ತಲೆ ಗಳನೋಸರಿಸದೆ ಹೊತ್ತುಕೊಂಡು ಬೇಸಱದೈತರ್ಪ ಬೇಡರಿರ್ದರು ಮಹಿಷಾಸುರ ಬಹುರೂಪಿನಂತೆ (ಮೋಹತ. ೧೯-೨೯); ಕಾಳ್ಕೋಣಗಳು ಮಸಗಿ ಸದೆದ ಕೋಡಿನ್ನಖಿಳ ನಾದದಿ ಬಿದಿರಡೆವ ಚೀತ್ಕಾರದಿಂ (ಸಾಳ್ವಭಾ. ೬-೬); ಕಾಳ್ಕೋಣನೆಸೆಕಮನೆ ಪೊಯ್ದಾಡುವರ್ (ಚಿಬಪು. ೪೮-೫೪). [ಕಾೞ್₁ + ಕೋಣ]

**ಕಾೞ್ಕೋೞಿ,** ಕಾಳ್ಕೋಳಿ (ನಾ). ಕಾಡುಕೋಳಿ; ಅಡವಿಯ ಕೋಳಿ: ಪುಲಿಯಿಲಿ ಕಾಡೆಮ್ಮೆ ಕಾೞ್ಕೋೞಿಯೆಂಬೀ ತಿರಿಕವ್ರಾತಂ ಗಳೊಳ್ ಸಂಭವಿಸಿ (ಧರ್ಮಾಮೃ. ೧೩-೧೫೭). **ಕಾಳ್ಕೋಳಿ:** ಕಂಕ ಕೊಕ್ಕರೆ ಶುಕಂ ಕಾಳ್ಕೋಳಿ (ಯಾದವಮ. ೪-೫೩). 'ಕಾಡುಕೋಳಿ' ಪರಾ. [ಕಾೞ್₁ + ಕೋೞಿ]

**ಕಾೞ್ಗಬ್ಬ,** ಕಾಳ್ಗಬ್ಬ, ಕಾೞ್ಕಬ್ಬ (ನಾ). ಕಾಡು ಕಾವ್ಯ; ಕೀಳು ತರಗತಿಯ ಕಾವ್ಯ; ಕೆಳಮಟ್ಟದ ಕಾವ್ಯ: ಕಾವ್ಯಜ್ಞರಿಂ ಕಲ್ಲದಚ್ಚಗದಿಂ ಕಟ್ಟದ ಕೆಟ್ಟ ಕನ್ನಡದ ಕಾೞ್ಗಬ್ಬಂಗಳಂ (ಅರ್ಧನೇ. ೧-೩೫). **ಕಾಳ್ಗಬ್ಬ:** ತಮ್ಮ ನೆಗಳ್ತೆಗನುಸಾರಿಯಾಗಿರೆ ಮಾಡಿಕೊಂಡ ಕಾಳ್ಗಬ್ಬಂಗಳೆಂದು ಬಗೆದು (ಶ್ರಾವಕಾ. ೪-೯). **ಕಾೞ್ಕಬ್ಬ:** ಕಾೞ್ಕಬ್ಬಮುಂ ಕಟ್ಟೆ ಕೋಟಲೆಗೊಂಡೂಟ್ಟನೊರ್ವಂ (ಲೀಲಾವ ೧-೪೦); ಬಾಯಿಗೆ ವಂದುದಂ ಪೇೞ್ವುದಱಿಂ ಕಾೞ್ಕಬ್ಬಮೆನಿಕುವೆಂತುಂ (ಸಮುಪ. ೧೧-೧೧). [ಕಾೞ್₁ + ಕಬ್ಬ]

**ಕಾೞ್ಗಬ್ಬು,** ಕಾೞುಗಬ್ಬು (ನಾ). ಕಾಡು ಕಬ್ಬು; ಕಾಗಬ್ಬು; ಇಷೀಕೆ: ಕಬ್ಬೆಂಬಭಿಧಾನಂ ಕಾೞ್ಗಬ್ಬಿಂಗಂ ನೆಗೞ್ದು ಮೆಲ್ಪ ಕಬ್ಬಿಂಗಂ ಕೇಳುರ್ಬರೆಯೊಳಕ್ಕುಂ (ಧರ್ಮಾಮೃ. ೧-೧೯೦). **ಕಾೞುಗಬ್ಬು:** "ಕಾೞುಗಬ್ಬೀಷೀಕೆ ಕಾಶಮಕ್ಕು" (ಮಂಗರಾ. ೩೪-೯). [ಕಾೞ್ + ಕಬ್ಬು (< ಕರ್ವು)]

**ಕಾೞ್ಗರಡ** (ನಾ). ಕಾಡಿನಲ್ಲಿ ಬೆಳೆಯುವ ಹುಲ್ಲು: ಮುಸಗಿರ್ದ ಲೋಹಿ ತಾಶ್ವ ಪ್ರಸರಂ ಕಾೞ್ಗರಡಮಲ್ಲಂ ಮೇಯೆ (ಜಗವಿ. ೧೭-೬೩). [ಕಾೞ್₁ + ಕರಡ]

**ಕಾೞ್ಗಿಚ್ಚು,** ಕಾೞುಕಿಚ್ಚು, ಕಾೞುಗಿಚ್ಚು, ಕಾಳ್ಕಿಚ್ಚು, ಕಾಳ್ಗಿಚ್ಚು, ಕಾೞ್ಕಿಚ್ಚು, ಕಾೞ್ಕಿರ್ಚು (ನಾ). ಕಾಡಿನ ಬೆಂಕಿ; ದಾವಾನಲ: ಎಳವರನಂ ಕಾೞ್ಗಿಚ್ಚಿರದಳುರಲ್ (ಕಾದಂಬ. ೭೭೧); ಕೋಪಿಯ ಹೃದಯದಂತುರಿವ ಕಾೞ್ಗಿಚ್ಚಿನಿಂ (ಧರ್ಮಾಮೃ. ೩-೫೩). 'ಕಾಡ್ಗಿಚ್ಚು' ಪರಾ. **ಕಾೞುಕಿಚ್ಚು:** ಕಾೞುಕಿಚ್ಚಿದ್ದಡವಿಯನು ಕುಡಿನಾಲಗೆ ಯೊಳಳವಡಿಸಿ ದಳ್ಳುರಿ ಜ್ವಾಲೆತಗ್ಗಿದವೋಲು (ಕುವ್ಯಾದ್ರೋ. ೬-೬೦). **ಕಾೞುಗಿಚ್ಚು:** ಕರಡದ ಬಣಬೆ ಸಿಕ್ಕಿತು ಕಾೞುಗಿಚ್ಚಿನಬಾಯ ಬಗರಗೆಗೆ (ಕುವ್ಯಾಕ. ೩-೮); ಕಾೞುಗಿಚ್ಚಿನ ವೇಡೆಯಲಿ ವನಜಾಲ ಬೇವುತ್ತಿರಲು (ನಿಭಾಗ. ೨-೩-೨೨). **ಕಾಳ್ಕಿಚ್ಚು:** ಕಾಳ್ಕಿಚ್ಚಿನಿಂ ಬೇವಂಗೆ ತಂಪಿನ ಸೋನೆಯ ಮಳೆಯಾಗುತ್ತೆ ಮಾಣ್ಬರೆ (ಬಸರ. ೪-೨೯); ಉಱಿವ ಕಾಳ್ಕಿಚ್ಚಿ ನೊಳು ಸಿಲ್ಕಿದ ಗಜಂ ನೆಱೆಯದಂಬೆವೊಲಾದರು (ಸಾನಂಚ ೭-೪೨; ತರು ಗಳನುರುಹಿ ಕಾಳ್ಕಿಚ್ಚು [ಪಾಠಾಂ. ಮೆಳೆಗಳನು] ಗದಗದಿಸೆ (ನಳಚ. ೬-೭). **ಕಾಳ್ಗಿಚ್ಚು:** ಗೋಳ್ಗುಟ್ಟಿಸುವ ಕಾಳ್ಗಿಚ್ಚು ತಗುಳ್ವಲ್ಲಿ ಸಂದು ಹಾಸಿದ ಕಾಸಿದಱಿಗಲ್ಗಳಲ್ಲಲ್ಲಿ (ಸಾನಂಚ. ೪-೧೫ ರ); ಹತ್ತಿಯ ಹೇಱುಗಳ ತಂದಡವಿಯೊಳಗಿಡಲೂಱಿ ಕಾಳ್ಗಿಚ್ಚದನು ನುಂಗಲು (ಸಾಳ್ವಭಾ. ೭-೪೧); ಸುದ್ದಿ ಕಾಳ್ಗಿಚ್ಚಿನಂತೆ ಊರಲ್ಲಿ ಹರಡಿಬಿಟ್ಟಿತು (ಹಬ್ಬಬ. ೪೧).

**ಕಾೞ್ಕಿಚ್ಚು:** "ವನವಹ್ನಿಃ, ದವಃ, ದಾವಃ– ಈ ಮೂಱು ಕಾೞ್ಕಿಚ್ಚು" (ಹಲಾಯು. ೧೩-೭೦); ಕಾೞ್ಕಿಚ್ಚಿನೊಳ್ ಉರಿಯುತ್ತಿರ್ದ ಕೊಳ್ಳಿಗಳ ನೊಂದೆಡೆಯೊಳೊಟ್ಟ (ಚಾವುಂಪು. II, ೫೫-೩೦); ಕಾೞ್ಕಿಚ್ಚು ತಗುಳೆ ತನ್ನೊಳ್ ಕೋೞ್ಟುಕೆಟ್ಟ ವನದ್ವಿಪೇಂದ್ರಜಯಮುಶಿಭಯದಿಂ . . . ನಾೞ್ಕಿಡೆ ಪೋಪಂತೆ (ಕಾವ್ಯಾವ. ೨೯೮); ಕಾೞ್ಕಿಚ್ಚಿಗಂಜಿದಾತಂ ಪೆರ್ಮಡುವಂ ಪೊಕ್ಕೊಡೆ ಬಾೞ್ಗುಮೆ (ಧರ್ಮಾಮೃ. ೧೧-೪೬); ಕಾಡು ಕಿಚ್ಚು – ಕಾೞ್ಕಿಚ್ಚು (ಶಮದ. ೧೯ ಪ್ರಯೋ). **ಕಾೞ್ಕಿರ್ಚು:** ಪೊಗೆ ಪೆರ್ಚೆ ನೆಗೆದಕಾೞ್ಕಿರ್ಚಮರಿ (ವಡ್ಡಾರಾ. ೮೫-೨೭); ವಿಳಯ ಕಾಲದ ಕಾೞ್ಕಿರ್ಚಿನ ಬೇಗೆ ಸಾರ್ವಂತೆ (ಪಂಪಭಾ. ೧೦-೬೬); ಕಾೞ್ಕಿರ್ಚ ನನ್ನನದು ಮುಚ್ಚದುದು ಕ್ರೂರಂ (ಅಶ್ವತ್ಥಾ. ೧೯೭). [ಕಾೞ್₁ + ಕಿಚ್ಚು]

**ಕಾೞ್ಗಿಡು** (ನಾ). ಕಾಡು ಗಿಡ. 'ಕಾೞ್ಗಿಡುವೇರ್' ನೋ.

**ಕಾೞ್ಗಿಡುವೇರ್** (ನಾ). ಕಾಡುಗಿಡದ ಬೇರು: ಸೀಮ್ಮುರ್ದುದಾಣಂ, ಕಾೞ್ಗಿಡುವೇರ್ (ಶಬ್ದಾನು. ೮೭ ವ್ಯಾಖ್ಯಾ). [ಕಾೞ್ಗಿಡು + ಬೇರ್]

**ಕಾೞ್ಗುದಿಗೊಳ್** (ಕ್ರಿ). ವೃಥಾ ತಳಮಳಗೊಳ್ಳು: ಅದಿರದದಿರ್ಚ ನಿನ್ದರಿ × × ನೆನೆಪಾಯಿಸಿ ತನ್ನ ಮಿಣ್ಡಮುಂ ಕುದುರೆಯುಯೆಂಬಿವುಂ ಬೆರಸಿ ಬೀೞ್ವುದು ಮೇಣದಿರೆ × ದೆದ್ದು ಕಾೞ್ಗುದಿಗೊಳೆ ತಾನೆ (ಎಕ. II, ೧೩೪-೧೨; 982). [ಕಾೞ್₁ + ಕುದಿಗೊಳ್]

**ಕಾೞ್ಗೆಡೆ,** ಕಾಳುಗೆಡೆ, ಕಾಳ್ಗೆಡೆ (ಕ್ರಿ). ಗೊಡ್ಡು ಮಾತಾಡು; ಕೆಟ್ಟ ಮಾತನ್ನಾಡು: ಉಳ್ಳಾತಂ ಕಾೞ್ಗೆಡೆದೊಡಮೊಳ್ಳಿತ್ತೆಂಬರೆಯ್ದೆ ಬಡವಂ ಪಿರಿದಂ ಒಳ್ಳಿತ್ತಂ ನುಡಿದೊಡದಂ ಪೊಲ್ಲೆಂಬರ್ (ಧರ್ಮಪು. ೫-೧೫); ಕುಟಿಳಾಳಾಪದೆ ಪಿಂದೆ ಕಾೞ್ಗೆಡೆದು ಮುಂದಾ ಸತ್ಯವೀಂದ್ರರ್ಕಳು ಬ್ಬಟೆಯಂ ಕಂಡು ಕನಲ್ದು (ಧರ್ಮನಾ. ೧-೫೩); ನಿನ್ನಂ ಗೆಲ್ದಲ್ಲದೆ ಕಾೞ್ಗೆಡೆದೆನಾದೊಡೀ ಬಿಲ್ ಊಱುಂಗೋಲಕ್ಕೆ (ರಾಮಾಶ್ವ. ೭೨-೧೯); ಕಡೆಗಣಿಪ ನಾರುಮಂ ಕಾೞ್ಗೆಡೆವಂ ಖಳನಿವನೋಳಾಂತು ಬರ್ದುಕುವು ದುಂಟೇ (ನೀತಿಮಂ. I, ೩೨೧). **ಕಾಳುಗೆಡೆ:** ಕಾಳುಗೆಡೆಯದೆ ಹೋಗಿ ನೀವೆಂದನು (ಹಚಕಾ. ೭-೨೦); ಸತ್ಯದ ಹುರುಳನಱಿಯದೆ ಕಾಳುಗೆಡೆದರೆ ಕಾರ್ಯರ್ವೆಂತಹುದು (ಕುವ್ಯಾಕ. ೧೭-೧೭); ಕಾಳುಗೆಡೆದಪಳೀನನಿವಳಿವ ಳೆಂದ ಮಾತುಗಳ ಕೇಳಿಯೆನೆ (ತೊರರಾ. ೨-೧-೨೭); ಕಾಳುಗೆಡೆಯದಿರೆ ಲವೊ ಹಲಬರ ಕೂಡೆ ಗೆಡೆವಂತೆ (ಜ್ಞಾನಚಂ. ೩-೬೮). **ಕಾಳ್ಗೆಡೆ:** ಕೋಡಗಗಳಂತೆ ಪಲುಗಿರಿದು ನರಿಗಳಂತೆ ಜಿನುಗಿ ಕಾಳ್ಗೆಡೆವ ಕರ್ಮಿಗಳ ಮಾತಿಂಗುಮ್ಮಳಿಸಿ (ಬಸರ. ೮-೧೦೨; ಎಲೆ ದೋಷಿ ನೀನಿಂತು ಕಾಳ್ಗೆಡೆದು ನರಕಕ್ಕಿಳಿವರೇ (ಪದ್ಮರಾ. ೧೦-೨೮೭); ಬಾಯ್ಬಡಿಕರ್ಬೆ ಕಾಳ್ಗೆಡೆದಡೇನಹು ದೆನುತ ಹೊಕ್ಕನು ಭೀಮನುರವಣಿಸಿ (ಕುವ್ಯಾದ್ರೋ. ೨-೬೭). [ಕಾೞ್₁ + ಕೆಡೆ]

**ಕಾೞ್ಗೆಯ್ತ,** ಕಾಳ್ಗೆಯ್ತ, ಕಾಳ್ಗೈತ (ನಾ). ಕೆಟ್ಟ ಕೆಲಸ; ದುಷ್ಕೃತ್ಯ: "ಕಾೞ್ಗೆಯ್ತಮೆಂದು ದುಷ್ಕೃತ್ಯಂ" (ಕಶಸಾ. ೩೦-೬೪೦); "ಕಾೞ್ಗೆಯ್ತಮೆನಲಕೃತ್ಯಂ" (ಕವಿಕಂ. ೨೮೧). **ಕಾಳ್ಗೆಯ್ತ:** ಕಯ್ಮಿಂಚಿ ಕೃತವಾಗಿ ಹೋದ ಕಾಳ್ಗೆಯ್ತದ ನಡೆವಳಿಕೆಯನ್ನು . . . ವರದಿಯೊಪ್ಪಿಸಿ (ಬೆಟ್ಟಅ. ೧೨೬-೧೭). **ಕಾಳ್ಗೈತ:** "ಕಾಳ್ಗೈತಮೆನೆ ದುಷ್ಕೃತ್ಯ" (ಕಬ್ಬಿಕೈ. ೬೩); ಕಣ್ಗೆಟ್ಟು ಕಾಲ್ಗಾಣದಾದನಾ ಕಾಳ್ಗೈತ ಕಳ್ಳುತೆ (ಭಾವಚಿಂ. ೩-೨೬). [ಕಾೞ್₁ + ಕೆಯ್ತ]

**ಕಾೞ್ಜೀರಗೆ,** ಕಾಳಜೀರಿಗೆ (ನಾ). ಕಾಡಿನಲ್ಲಿ ಬೆಳೆಯುವ ಜೀರಿಗೆ; ಕಹಿಜೀರಿಗೆ: ಜೀರಗೆ ಸಿದ್ಧಾರ್ಥಂ ಕಾೞ್ಜೀರಗೆ ಕರಿಯೆಳ್ಳೆಂಬಿವಂ ಪೂಸು ಗಜಕ್ಷೀರದೊಳರೆದಾನನ ಪಂಕೇರುಹಮಂ ಬಂಗುಪಿಂಗುಗುಂ (ಲೋಕೋಪ. ೯-೮೮). **ಕಾಳಜೀರಿಗೆ:** "ಉಪಕುಂಚಿಕೆ– ಕಾಳಜೀರಿಗೆ" (ಗಂಗಾಮ. ೪೩). 'ಕಾಡುಜೀರಿಗೆ' ಪರಾ. [ಕಾೞ್₁ + ಜೀರಗೆ]

**ಕಾಟ್ಟುಜು,** ಕಾಳ್ತುಜು (ನಾ). ಕಾಡು ಹಸು; ಕಾಡಾಕಳು: ಕಾಟ್ಟುಜು ಮಸಗಿದಂತೆ ಮಸಗಿದ ದುರ್ಧರ ಧನುರ್ಧರ ಬಲಮುಮಂ (ಪಂಪಭಾ. ೧೦-೫೨ ವ); ಕಾಟ್ಟುಜುಗಳಿಂ ಸಮುಜಿಡಿದವಿಯಡಿಯೆತ್ತಿ ದಂತೆಯುಂ (ಲೀಲಾವ. ೫-೧೦೦); ಕಾಟ್ಟುಜು ಮಸಗಿದವೋಲೊಡ್ಡಿದುದು ಕುರುಸೈನ್ಯಂ (ಶಮುದ. ೬೬ ಪ್ರಯೋ). **ಕಾಳ್ತುಜು.** 'ಕಾಳ್ತುಜು ವಿಂಡು' ಪರಾ. [ಕಾಟ್$_1$ + ತುಜು]

**ಕಾಟ್ತೊಂಡೆ** (ನಾ). ಕಹಿತೊಂಡೆ; ಕಾಗೆದೊಂಡೆ: ನೆಲವಾವುಂ ನೆಲದೊಟ್ಟ ತೊಟ್ಟ ಮಿಟಲಂ ಕಾಟ್ತೊಂಡೆಯುಂ ನಿಂಬಿ . . . ಇಂತಿವೆಲ್ಲಮು ಸಮಂ ಕೂಡಿಟ್ಟು (ಖಮುದ. ೧೬-೫೯). [ಕಾಟ್$_1$ + ತೊಂಡೆ]

**ಕಾಟ್ನುಗ್ಗಿ** (ನಾ). ನುಗ್ಗೆಯಲ್ಲಿ ಒಂದು ಬಗೆ; ಕಾಡುನುಗ್ಗೆ: ಮೂಡಲ ಕಾಟ್ನುಗ್ಗಿಯ ಪುತ್ತು ಬಡಗ ಪೋಗಿ ಬೆಳ್ಳೊಲೆಯ ಬಟ್ಟೆಯ ಪೇರಾಟ್ಟಿ ಪಳ್ಳಂಬಿಡಿದು ಪೋಗಿ ಪಿರಿಯ ಪಳ್ಳದೊಳ್ಕೂಡಿ (ಸೌಇಇ. IX-i, ೩೮-೧; 10ನೆಯ ಶತ); ಅವಿನ ಮೊಲೆವಾಲಿಂದಂ ಭಾವಿಸಿ ಕಾಟ್ನುಗ್ಗಿಯೆಸೆವ ರಸಮಂ ಕುಡಿಸಲ್ ಗೋವಿನ ವಿಷಮಂ ಕಳೆಗುಂ (ಖಮುದ. ೧೩-೬೬). [ಕಾಟ್$_1$ + ನುಗ್ಗಿ (< ನುಗ್ಗೆ)]

**ಕಾಟ್ಪತ್ತಿ$_1$** 'ಕಾಟ್ಪಟ್ಟಿ' ನೋ.

**ಕಾಟ್ಪತ್ತಿ$_2$** (ನಾ). ಕರಿಯ ಹತ್ತಿ: ನಯನದೊಳೆಚ್ಚುಗೆ ಕಾಟ್ಪತ್ತಿಯ ಬೇರುಮಂ (ಲೋಕೋಪ. ೯-೭೪). [ಕಾಟ್$_3$ + ಪತ್ತಿ (<ಪಟ್ಟಿ)]

**ಕಾಟ್ಪಟ್ಟಿ,** ಕಾಳ್ಪತ್ತಿ, ಕಾಟ್ಪತ್ತಿ$_1$ (ನಾ). ಅಡವಿಯ ಹತ್ತಿ; ಕಾಡಿನಲ್ಲಿ ಬೆಳೆವ ಹತ್ತಿ: ಕಾಟ್ಪಟ್ಟಿಯ ಬತ್ತಿಯೊಳಂ ಕೌಜೆಣ್ಣೆಯೊಳ್ ಪೊತ್ತಿಸಿದ ದೀಪಂಗಳುಂ (ಲೀಲಾವ. ೭-೬೮ ವ). **ಕಾಳ್ಪತ್ತಿ:** ಕಾಳೆಯ ನಾಯಕನು[ವೀ]ರದಾವಣ್ಣನಕಾಳ್ಪತ್ತಿಯ ಸ[ರ್ವ್ವ ಬಾ]ಧಾ ಪರಿಹಾರ ಮುಪ್ಪ ಕರಿಯರ ಕೆಜೆಯ ಹಡುವಣಪಾರಿಯಿಂ ಬಡಗಣ ಮತ್ತರ್ಕ್ಕಯ್ಯಂ ಕಾಲ್ಗರ್ಚಾಗಿಕೊಂಡು (ಸೌಇಇ. XV, ೫೦-೨; 1156). **ಕಾಟ್ಪತ್ತಿ$_1$:** ಕಾಡಾವುಮೂರಾವುಂ ಕಾಟ್ಪತ್ತಿಯುಂ ಪತ್ತಿಯುಂ . . . ಎಂತು ಲೋಕದೊಳೊಳವು . . . ಅಂತು ತಿರಿಕರುಂ ಸಿರಿವಂತರುಮೊಳರ್ (ಧರ್ಮಾಮೃ. ೯-೯೮). 'ಕಾಡುಹತ್ತಿ' ಪರಾ. [ಕಾಟ್$_1$ + ಪಟ್ಟಿ]

**ಕಾಟ್ಪಲಸು** (ನಾ). ಕಾಡು ಹಲಸು: ಕಾಡೆಮ್ಮೆಯುಮೂರೆಮ್ಮೆಯುಂ ಕಾಟ್ಪಲಸುಂ ಊರ ಪಲಸುಂ (ಧರ್ಮಾಮೃ. ೯-೭೮). [ಕಾಟ್$_1$ + ಪಲಸು]

**ಕಾಟ್ಪು** (ನಾ). ಕಾಯ್ಪು (?): ಕರಂ ಕಾಟ್ಪಿನಿಂ ಕೈಮಿಗುತುಂ ಬಂದತ್ತದೊಂದದ್ಭುತಮೊದವಿದಮೋಘಂ ವಿಮೇಘಂ ನಿದಾಘಂ (ಕುಸುಮಾ. ೮-೧೧೫). ℙ 'ಕಾಯ್ಪಿನಿಂ' ಎಂಬುದರ ಅಪಲಿಖಿತ ವಿರಬಹುದೇ. [< ಕಾಯ್ಪು ?]

**ಕಾಟ್ಪುರ,** ಕಾಹುರ$_2$, ಕಾಳ್ಪುರ, ಕಾಳ್ಪೂರ, ಕಾಟ್ಪೂರ (ನಾ). ಕಾಡಿನ ಪ್ರವಾಹ; ಕಾಡಿನ ತೊರೆ: "ಕಾಟ್ಪುರಮೆಂದು ಕಾಡ ಹೊನಲ್" (ಕಶಸಾ. ೮-೧೫೭); "ಕಾಟ್ಪುರಮೆ ಕಾಡ ಪೊನಲೆನಿಸಿರ್ಕುಂ" (ಕವಿಕಂ. ೯೪); ಉಗ್ರಮಹಾಗಜಂಗಳಂ ಚದುರ್ಗಿಡೆ ನುಂಗಿ ಬಿಕ್ಕಿ ಕುಡಿದರ್ ಬಿಸುನೆತ್ತರ ಕಾಟ್ಪುರಂಗಳಂ (ಪಂಪಭಾ. ೧೨-೮); ನಯನಂ ಕಾಟ್ಪುರಂ ಮಾಡೆ ಕಾರುಣ್ಯರಸಸ್ರೋತಂಗಳಿಂ (ಪಂರಾಮಾ. ೧-೧೭); ಕಾಟ್ಪುರಮಾದಂ ಕೊರ್ವ ಬಿರ್ದಂ ಕಜಿದುದು ಬಹಳಾ ಸಾರಮಂ ನೀರದೌಘಂ (ಚಂದ್ರಪ್ರ. ೪-೪೧); ಗಂಧ ಜಲವಾಹಿನಿ ಕಾಟ್ಪುರಮಾದ ಗಂಗೆಯುಂ ಜಗುನೆಯುಮೆಂಬಿನಂ ಮೆಜೆದುದು (ಅನಂಪು. ೫-೭೮). **ಕಾಹುರ$_2$:** ಕರದ ಕದಪಿನ ಕಂಬನಿಯ ಕಾಹುರದ ಕಂಪನದ ಕೊರಳ ಬಿಕ್ಕುಳಿನಕ್ಕೆಗಳಲಾಸರಮೆ (ತೊರರಾ. ೬-೧೨-೩೬). **ಕಾಳ್ಪುರ:** ಸನ್ಮಾನದ ವಿಶ್ರಮಂ ದಯೆಯ ಕಾಳ್ಪುರಮದು (ಎಕ. VII, ಶಿಕಾರಿ. ೩೪೨-೩೯, 1050); ಅರುಣಾಂಬುಧಾರೆ ಕಾಳ್ಪುರಮಾಗಲ್ (ಉದ್ಭಟ. ೪-೧೧೮); ತನಿ ಮೋಹರಸ ಮನದೊಳಗೆ ಕಾಳ್ಪುರವಾಗೆ ಸಾರ್ದಳು ರೋಹಿಣೀದೇವಿ (ಸಾಳ್ವಭಾ. ೮-೫೭); ಮದನಾಗ್ನಿಯಿಂ ಪೊಗೆವ ಪಸಿಯ ಬಿಸವಿಸರದ ಪಸರಿಸಿದ ಪೊಗೆ ಸುರಿವಂತೆ ಕಾಳ್ಪುರಮಾಗಿ ಕಣ್ಣನೀರ್ಕವಿತರೆ (ರಾಜಶೇ. ೭-೯೨ ವ). **ಕಾಳ್ಪೂರ:** ಕರ್ಪೂರ ತರುವನದೊಳು ಪನ್ನೀರ್ಗಳ ಕಾಳ್ಪೂರದೊಳು ಮಾಂಗೊನರ ಸೀರ್ಪನಿಯೊಳಗೆ (ನೇಮಿಸಂ. ೧೨-೫). **ಕಾಟ್ಪೂರ:** ವಾಹಿನೀತೀರಮಂ ಮೀಂಗಳಿದಿರೇಜಿದುವು ಪುಗುವ ಕಾಟ್ಪೂರಮಂತದು ದೀಪ್ತಿಯಂದದಿಂ (ಅನಂಪು. ೯-೧೬೬ ರ). [ಕಾಟ್$_1$+ ಪುರ$_1$]

**ಕಾಟ್ಪುರಂಗೊಳ್** (ಕ್ರಿ). ಉಕ್ಕಿ ಹರಿ; ಮಹಾಪ್ರವಾಹವಾಗು: ಬಾಷ್ಪಂ ಕಾಟ್ಪುರಂಗೊಂಡ ವಕ್ತ್ರಸರೋಜಂ (ಕುಸುಮಾ. ೧೩-೧೦೬). [ಕಾಟ್ಪುರ+ ಕೊಳ್$_1$]

**ಕಾಟ್ಪುರಂಬರಿ** (ಕ್ರಿ). ಕಾಡತೊರೆಯಂತೆ ಹರಿ; ಸೂಸಿ ಹರಿ: ತೆಕ್ಕನೆ ತೀವಿ ಕಾಟ್ಪುರಂಬರಿವ ಲಾವಣ್ಯರಸದ ಬರಿವೊನಲಂ ಕಟ್ಟೆಗಟ್ಟಿ ಕಡೆಗೋಡಿ ಬಿಟ್ಟಂತಿರೆ (ವರ್ಧಪು. ೭-೯ ವ). [ಕಾಟ್ಪುರ + ಪರಿ$_1$]

**ಕಾಟ್ಪುರಂಬರಿಯಿಸು** (ಕ್ರಿ). ಸೂಸಿ ಹರಿಯುವಂತೆ ಮಾಡು; ಉಕ್ಕಿ ಹರಿಸು: ಗೀತಾಮೃತಸಾರಪೂರಮಂ ಕಾಟ್ಪುರಂಬರಿಯಿಪ (ವರ್ಧಪು. ೧೪-೮೫ ವ). [ಕಾಟ್ಪುರಂಬರಿ + -ಇಸು$_3$]

**ಕಾಟ್ಪುರವೇಟ್** (ಕ್ರಿ). ಮಹಾಪ್ರವಾಹ ಉಂಟಾಗು; ಉಕ್ಕಿ ಹರಿ: ಕಾಟ್ಪುರವೇಟಿ ಪಾಲಮಯಮುಂ ಜಸಮುಂ ಜಿನಮಜ್ಜನಂಗಳಂ ಮಾಟ್ಪ . . . ಬಯಂಕೆಯಾಯ್ತು ಜಿನದತ್ತೆಗೆ (ಅರ್ಧನೇ. ೨-೨೫). [ಕಾಟ್ಪುರ + ಏಟ್$_1$]

**ಕಾಟ್ಪೂರ** 'ಕಾಟ್ಪುರ' ನೋ.

**ಕಾಟ್ಪೆಸಜ್** (ನಾ). ಕಾಡು ಹೆಸರು: ಬೆರಸಮುದ್ಗವಲ್ಲಿಯೊಳಗೀಶ್ವರಿಯಂ ಕಾಟ್ಪೆಸಜನೀ ಕಷಾಯಂ ಕೆಡಿಕುಂ ಜ್ವರಮಂ (ಕಲ್ಯಾಕಾ. ೩-೨೮). [ಕಾಟ್$_1$ + ಪೆಸಜ್]

**ಕಾಟ್ಪೊಚ್ಚ** (ನಾ). ಕಾಡಿನ ಪ್ರವಾಹ: ಕಜಂಗಿದ ತಮಾಲವೆಂಬ ಕಾಟ್ಪೊಚ್ಚಮಂ ಪಾಯ್ದುಂ (ರಾಮಾಶ್ವ. ೫೭-೨೯). [ಕಾಟ್ + ಪೊಚ್ಚ]

**ಕಾಟ್ಪೊಡೆ** (ನಾ). ಕರಿಯ ಹೊಟ್ಟೆ; ಕಪ್ಪುಒಡಲು: ಸೀಳ್ಪೊಟ್ಟೆ, ಕಾಟ್ಪೊಡೆ [ಪಾಠಾಂ. ಟ್ಟೆ] (ಶಬ್ದಾನು. ೯೧ ಪ್ರಯೋ). [ಕಾಟ್$_3$ + ಪೊಡೆ$_2$]

**ಕಾಟ್ಪೊನಲ್** 'ಕಾಟ್ಪೊನಲ್' ನೋ.

**ಕಾಟ್ಪೊಲ** (ನಾ). ಕಾಡಿನ ಹೊಲ; ಅರಣ್ಯ ಪ್ರದೇಶ: ಪದೆದು ಮೆಯ್ಮಜೆಯಲ್ಕರಿಕೆಟ್ಟ ಕಾಟ್ಪೊಲಂ ನನೆಕೊನೆವೋಗೆ ಭಿಲ್ಲತತಿ ಬಲ್ಪೆಜ ಗಾಗಿರೆ (ದಶಕು. ೫-೭೯); ಮರಾಟಸ್ತ್ರೀಜನಂ ನಿಂದು ಕಾಟ್ಪೊಲದೊಳ್ಪಟ್ಟು ಪೊರಳ್ಗುಂ (ಅಪ್ರತಿ. ೨೫-೩). [ಕಾಟ್$_1$ + ಪೊಲ]

**ಕಾಟ್ಬಟ್ಟೆ** 'ಕಾಟ್ವಟ್ಟೆ' ನೋ.

**ಕಾಟ್ಬಪ್ಪು** 'ಕಟ್ಬಪ್ಪು' ನೋ.

**ಕಾಟ್ಬೆಕ್ಕು,** ಕಾಳ್ಬೆಕ್ಕು (ನಾ). ಕಾಡಿನ ಬೆಕ್ಕು; ಕಾಡುಕೊತ್ತಿ: ಗೋನಿವಹದೊಳ್ ಕಾಟ್ಬೆಕ್ಕು ಕಂಠೀರವೋತ್ಕರದೊಳ್ ಕೋಡಗ . . . ನೆರೆದಿರ್ಪಂತೆ (ಧರ್ಮಾಮೃ. ೭-೨೨೧); ಕಾಟ್ಬೆಕ್ಕಿಗೂಡುವವೋಲ್ ತುಯ್ಯಲಂ (ಅನಂಪು. ೧-೬೦). **ಕಾಳ್ಬೆಕ್ಕು:** ಗಂಡೆರಲೆ ಕಡವೆ ಕಾಳ್ಬೆಕ್ಕು ತರವಂಗಿ ಸಾರಂಗ ಮೊಲ ಮುಚ್ಚು ಮುಸುಗಳನಿರದೆಕೊಂದವು ಜಾಯಿಲಗಳು (ಕುರಾಸಾಂ. ೨೭-೯೦). [ಕಾಟ್$_1$ + ಬೆಕ್ಕು]

**ಕಾಱ್ಪೆಱಣೆ** (ನಾ). = ಕಾಱ್ಕುರುಳ್ : ಕಟ್ಟಾಱಿದ ಪುಳ್ಳಿಗಳಂ ನೆಟ್ಟನೆ ಕೊದಳಿಗಳನೆಯ್ದೆ ಕಾಱ್ಪೆಱಣೆಗಳಂ ತೊಟ್ಟನೆ ಪಱಿಸೀರೆಗಳಂ ಬೆಟ್ಟಾಗಿರೆ ಗುಹೆಯ ಬಾಗಿಲೊಳ್ ತೀವಿಸಿದಂ (ಧರ್ಮಾಮೃ. ೯-೧೭೨).

[ಕಾಱ್$_1$ + ಬೆಱಣೆ]

**ಕಾಱ್ಪೆಸನ** (ನಾ). ಹಾಳು ಕೆಲಸ; ಕೆಟ್ಟಕೆಲಸ; ನೀಚ ಕೃತ್ಯ : ಠಕ್ಕು ಟೌಳಿಗಂ ಬಸಗಡಿದೀಱ್ವ ಕಾಱ್ಪೆಸನದಟ್ಟುಳಿಗಂ ಪುಗದಂತಿರೆಲ್ಲರಂ ಪೊಸಯಿಸಿ ಕಾರ್ತವೀರ್ಯನೆಸಕಂ ಬಡೆದಂ ದೊಡದೇವಭೂವರಂ (ಚಿಕವಿ. ೩-೧೫). [ಕಾಱ್$_1$ + ಬೆಸನ]

**ಕಾಱ್ಮನ** (ನಾ). ಕೆಟ್ಟಮನ; ಕೀಳುಮನಸ್ಸು : ಅಸತೀಪ್ರಿಯ ನೀನದೇಕೆ ಕೆಯ್ವಿಡಿದಯೊ ನಿನ್ನ ಕಾಱ್ಮನದ ಕೆಯ್ವಿಡಿದಾಕೆಯುಮೆಲ್ಲಿಮೆ [ಪಾಠಾಂ. ಗೆ]ಂದವಳ್ ನುಡಿವುದುಂ (ಲೀಲಾವ. ೧೪-೩೪).

[ಕಾಱ್$_1$ + ಮನ]

**ಕಾಱ್ಮಿಗ, ಕಾಳ್ಮಿಗ** (ನಾ). ೧. ಕಾಡಿನಲ್ಲಿರುವ ಮೃಗ: ಕುಡಿದಿಟ್ಟೆ ದೆಡೆಗೊಂಡು ಕಾಱ್ಮಿಗಗಳೆನಿತೆನಿತೊ . . . ಪಾವನಮಾದುವಾ ರಾಮನಿಂ (ಶ್ರೀರಾಮ. ೩-೫೪). **ಕಾಳ್ಮಿಗ** : ೨. ಕಾಡುಜಿಂಕೆ: ಇಂತಪ್ಪಶ್ವ ಮುಂಟಾಗಿರೆ . . . ಈಶಾತ್ಮಜಂ ಕೇಕಿರಥಂ ತಾನಪ್ಪನೇ ಕಾಳ್ಮಿಗದೆ ಗಮಿಪನೆ ಸಂತತಂ ಗಂಧವಾಹಂ (ರಾಜಶೇ. ೧೨-೧೦೬).

[ಕಾಱ್$_1$ + ಮಿಗ]

**ಕಾಱ್ಮೃಗ** (ನಾ). ಕಾಡಿನಲ್ಲಿ ವಾಸಿಸುವ ಮೃಗ: "ಪಶುಃ, ಶ್ವಾಪದಃ -ಈ ೨ (ಬೆಳ್ಮಿಗ) ಕಾ[ಪಾಠಾಂ. ಕೋ]ಱ್ಮೃಗಂಗಳ್" (ಹಲಾಯು. ೩೯-೮೦). [ಕಾಱ್$_1$ + ಮೃಗ]

**ಕಾಱ್ಮೆಣಸು** (ನಾ). ಒಂದು ಬಗೆಯ ಮೆಣಸು ; ಅಡವಿ ಮೆಣಸು : ಮುಳ್ಮುತ್ತವಂಕೊಲೆ ಕಾಱ್ಮೆಣಸಿಂಗಳಂ ಕೊಸಗು ಗೇರ್ ಕಕ್ಕೆ ಬಿದಿರ್ಕಮ್ಮರಂ (ಸೂಕ್ತಿಸು. ೩-೨೩).

[ಕಾಱ್ + ಮೆಣಸು (< ಮೆಱಸು)]

**ಕಾಱ್ಮೊಲ್ಲೆ** (ನಾ). ಕಾಡುಮೊಲ್ಲೆ : ಕಾಱ್ಮೊಲ್ಲೆಯ ಬೀಜರಾಜಿಗಳ ನುಂಗುವುದುಣ್ಬುದು ಮೇಗೆ (ಖಮುದ. ೧೪-೬೦).

[ಕಾಱ್$_1$ + ಮೊಲ್ಲೆ]

**ಕಾಱ್ವಟ್ಟೆ, ಕಾಳ್ಬಟ್ಟೆ, ಕಾಳ್ವಟ್ಟೆ, ಕಾಱ್ಬಟ್ಟೆ** (ನಾ). ಕಾಡುದಾರಿ ; ಅಡವಿಯ ಹಾದಿ : ಕಾಱ್ವಟ್ಟೆಯ ಬೆಂಚರವಟ್ಟೆಗೆ ತಲೆಯಿಟ್ಟು ಬರ್ಪ ಕಾಡೆಮ್ಮೆಯ (ಮಲ್ಲಿಪು. ೭-೪). **ಕಾಳ್ಬಟ್ಟೆ.** 'ಕಾಳ್ಬಟ್ಟೆಗೊಳ್' ಪರಾ. **ಕಾಳ್ವಟ್ಟೆ** : ಸೈನ್ಯಮನದಂ ಕಂಡುಟ್ಟುದಂ ಬಿಟ್ಟು ನಿರ್ವಿಜಯಂ ಕಾಮನೃಪಾಳ ನೋಡಿದನವಂ ಬೆಂಗೊಟ್ಟು ಕಾಳ್ವಟ್ಟೆಯಿಂ (ಎಇ. XX, ೧೨-೨೭ ; 1167). **ಕಾಱ್ಬಟ್ಟೆ** : ಕಾಱ್ಬಟ್ಟೆಯೊಳ್ ಸುಲಿದು ಪಾಂಥರ್ಕಳಂ (ದಿವ್ಯಸೂ. ೯-೪೦) ; ಎಱ್ಬಟ್ಟೆ ಕಾಱ್ಬಟ್ಟೆಯೊಳ್ ತಳರ್ದರ್ ಗಂಡರ ಗಂಡ ಪಾಂಡ್ಯಸತಿಯರ್ ನೀಂ ದಾಱಿ ಮಾಱ್ಪನ್ನೆಗಂ (ಅಪ್ರತಿ. ೪೬-೬). [ಕಾಱ್$_1$ + ಬಟ್ಟೆ$_1$]

**ಕಾಱ್ವೀರೆ** (ನಾ). ಕಾಡಹೀರೆ; ಕಹಿಹೀರೆ: ಘಟಯಿಸಿತಿದು ಕಾಱ್ವೀರೆಯ ಪಟು ವಿಷವೆಂದಂಜಬೇಡ (ಖಮುದ. ೨-೪೪). [ಕಾಱ್$_1$ + ಪೀರೆ]

**ಕಾಱ್ಪೊನಲ್, ಕಾಹೊನಲ್, ಕಾಳ್ಪೊನಲ್, ಕಾಳ್ವೊನಲ್, ಕಾಳ್ವೊನಲು** (ನಾ). = ಕಾಱ್ಪುರ: ಕೆನ್ನೀರ್ಗಳ ಕಾಱ್ಪೊನಲ್ ಮಸಗಿ ಕೂಡಿ (ಕಬ್ಬಕಾ. ೨೭೮). **ಕಾಹೊನಲ್** : ಕಂಬನಿಯ ಕಾಹೊನಲೊಳದ್ದುವ ಕುಮಾರನಂ (ಹಚಕಾ. ೧೧-೧೧); ಕತ್ತಲೆಯ ಕಾಹೊನಲ ನೀಸಾಡುವಂತೆ (ಸಿದ್ಧರಾ. ೨-೪೭); ಕಾಹೊನಲಿಂದಂ ಶೈಲಂಗಳು ಮುಳುಗುತ್ತಿರಲ್ (ಪುಣ್ಯಾಸ್ರ. ೧೦-೧೩). **ಕಾಳ್ಪೊನಲ್** : ಕಾಳ್ಪೊನಲೊಳೆಡೆಯುಂಡ ಬಗೆಯಿಂದ ನಿಲದೆ (ಕಾಲೂರ. ೧೨೮-೨೭೧). **ಕಾಳ್ವೊನಲ್** : ಬಿಱುಗಾಳಿಯ ಗಾಸಿಗಂ ಕಾಲ್ವೊ[ಳ್ವೊ]ನಲ ಕಡುಪಿಂಗಂ . . . ಕೋಡದೆ ಕೊಂಕದೆ (ಗಿರಿಕ. ೯-೫೮ವ). **ಕಾಳ್ವೊನಲು** : ಹಗಲು ಉರಿಬಿಸಿಲಿನಲ್ಲಿ ಬೆಂದು ಕಾಳ್ವೊನಲುಗಳ ನೀರನ್ನು ಕುಡಿದು (ಮಣಿಸ. ೭೪). [ಕಾಱ್$_1$ + ಪೊನಲ್]

*

**ಕಿಂಕರ$_1$** (ನಾ). ಚಿಂತೆ; ಅಸಮಾಧಾನ: ಮನಸಿಗೇನು ಕಿಂಕರ ಮಾಡಿಕೊಳ್ಳಬೇಡಮ್ಮಾ. ಮಹಿಮನನ್ನು ನಾನು ಚೆನ್ನಾಗಿ ಬಲ್ಲೆ (ಅರಗಿ. ೭೩). [< ಸಂ. ಕಿಂಕಾರ]

**ಕಿಂಕರ$_2$** (ನಾ). ಆಳು; ಸೇವಕ; ದಾಸ: ತಂದೆ ಚಿತ್ತೈಸುವುದು ಕಿಂಕರನ ಬಿನ್ನಪಂ (ನಂಬಿರ. ೧-೭೬); ನಮ್ಮೊಳೊಬ್ಬರು ನಿನಗೆ ಸೋತಡೆ ಮಿಕ್ಕ ನಾಲ್ವರು ನಿನಗೆ ಕಿಂಕರರು (ಕುವ್ಯಾಗ. ೫-೪೬); ಜಗತ್ತಿಗೆ ಕಿಂಕರರಾಗಿ ನಡೆಯುವವರಿಗೆ ಜಗತ್ತೆ ಕಿಂಕರವಾಗುವುದು (ಕುಟುಂಬ. ೨೯). [ಸಂ.]

**ಕಿಂಕರಣ** (ನಾ). = ಕಿಂಕರತೆ: ಎಱಗಿದ ಕೊಂಬೆಬಿಲ್ವಕಿವಿ . . . ಕುಂಭದೊಳ್ ನಿಱಿಸಿದ ಪುಷ್ಕರಂ ನೆಗಟ್ವ ಕಿಂಕರಣಂ ಬೆರಸಿಂದ್ರವಂದಿತಂಗೆಱಗಿದ ದಿವ್ಯದಂತಿ (ಅನಂಪು. ೫-೨೮). [ಸಂ.]

**ಕಿಂಕರತೆ** (ನಾ). **೧.** ಆಳಾಗಿರುವಿಕೆ; ದಾಸ್ಯಭಾವ: ಪದವಂ ಸುಖಾಶ್ರುವಿಂ ತೊಳೆದು . . . ಕಿಂಕರತೆಯಂ ತಳೆದು (ಶಿರುರ. ೧೧-೬); ಕರುಣಾಬ್ಧಿಯಪ್ಪ ಶಂಕರನಂ ಕಿಂಕರತೆಯಿಂ ಶರಣ್ಬೊಕ್ಕು (ಶಬಶಂ. ೪-೯೯ವ). ಮನಸಿಜನ ಕಿಂಕರತೆಯಂ ತಾಳ್ದು ಮಾನಿನೀಜನರನೊಲ್ಲದ ನಾವನು (ವೆಂಕಾರಾ. ೧-೬-೫೬). **೨.** (ಆಲಂ) ಕೊರತೆ; ದೈನ್ಯ: ವರಲತಾಂಗದೆ ವರ ಲತೆಗೆ ಕಿಂಕರತೆಯನು ಪುಟ್ಟಿಸುತ ಬಂದಳು ಕಾಂತನಿದ್ದೆಡೆಗೆ (ಕೋಗಯ. ೧೫-೭). [ಸಂ. ಕಿಂಕರತಾ]

**ಕಿಂಕರತ್ವ** (ನಾ). = ಕಿಂಕರತೆ [ಸಂ.]

**ಕಿಂಕರದೋಱು** (ಕ್ರಿ). ದಾಸ್ಯ ಉಂಟಾಗು; ದೈನ್ಯತೋರು: ಆಡುವ ಆಟ ತಪ್ಪಿ, ಅದು ಆಟದವನ ಕಿಂಕರದೋಱಿದ ಮತ್ತೆ ಕೊಡಬೇಕೆಂಬ ಮತ್ತೆ ಆಲಾಗು ಬಂದಿತ್ತೆಂಬ ದಿಮ್ಮು ಮನುಜರುಗಳಿಗೆ ಹೇಳುವುದುಂಟೇ (ಮೋಳಿಮಾ. ೮೮-೩೫೧). [ಕಿಂಕರ$_1$ + ತೋಱು (< ತೋಱ್)]

**ಕಿಂಕರಭಾವ** (ನಾ). ಸೇವಕನಂತೆ ಇರುವಿಕೆ; ದಾಸ್ಯಭಾವ; ದೈನ್ಯ: ಇಂತೀತನೊಳ್ ತೊಟ್ಟ ಕಿಂಕರಭಾವಂ ನಮಗಕ್ಕಿಗೊಟ್ಟು ಮಡಗೂಱುಙ್ಬಂದಮಂ ಪೋಲದೇ (ಆದಿಪು. ೧೪-೩೨). [ಕಿಂಕರ$_1$ + ಭಾವ]

**ಕಿಂಕರವಾಣ** (ನಾ). ನಮ್ರತೆ; ಸೇವಾಭಾವ: ಮನದಲ್ಲಿ ನಂಬಿಗೆ ಮಾತಿನಲ್ಲಿ ಕಿಂಕರವಾಣವ ಬಿಡದೆ ಲಿಂಗಜಂಗಮ ಒಂದೇ ಎಂದು ಭಾವಿಸಿ (ಅಖಂಡೇ. ೮೪-೮೦). [< ಸಂ. ಕಿಂಕುರ್ವಾಣ]

**ಕಿಂಕರವೃತ್ತಿ** (ನಾ). ಸೇವಕವೃತ್ತಿ; ದಾಸ್ಯ: ಬಸವನ ರೀತಿ ರೀತಿ ಬಸವಣ್ಣನ ಕಿಂಕರವೃತ್ತಿ ವೃತ್ತಿ (ಬಸರ. ೮-೨); ಕಿಂಕರವೃತ್ತಿಯಿಂದೆ ಬಿನ್ನೈಸಲು (ನವಮೋ. ೧೨-೬೦). [ಕಿಂಕರ$_2$ + ವೃತ್ತಿ]

**ಕಿಂಕರವೆಸ** (ನಾ). ಊಳಿಗದ ಬೆಸ; ಆಳಿನ ಕೆಲಸ. 'ಕಿಂಕರವೆಸಗೆಯ್' ಪರಾ. [ಕಿಂಕರ$_2$ + ಬೆಸ]

**ಕಿಂಕರವೆಸಗೆಯ್** (ಕ್ರಿ). ಊಳಿಗದ ಕೆಲಸಮಾಡು: ಆಳಾಗಿ ದುಡಿ: ಭುವನಪಾಲಕನುನ್ನತಮೂರ್ತಿ ಕೌಸ್ತುಭಾಭರಣನೆನಿಪ್ಪ ವಿಷ್ಣು ದನಗಾಯನೆ ನಂದನ ಕಂದನಾಗಿ ಕಿಂಕರವೆಸಗೆಯ್ಯನೆ ನರನ ಸಾರಥಿಯಾಗಿ ಪೃಥಾತನೂಭವರ್ನಿರವಿಸೆ ಕೌರವೇಂದ್ರನ ಸಮಿಪಕ್ಕೆ ಹಿರಿಗನಾಗಿ ಪೋಗನೇ (ಧರ್ಮಪ. ೨-೬೩). [ಕಿಂಕರವೆಸ + ಕೆಯ್$_1$]

**ಕಿಂಕರಿ** (ನಾ). ಸೇವಕನ ಹೆಂಡತಿ. [ಸಂ. ಕಿಂಕರೀ]

**ಕಿಂಕರೆ** (ನಾ). ಊಳಿಗದವಳು; ದಾಸಿ. [ಸಂ. ಕಿಂಕರಾ]

**ಕಿಂಕರ್ತವ್ಯತಾಮೂಢ** (ನಾ). ಏನುಮಾಡಬೇಕೆಂದು ತಿಳಿಯದವನು; ದಿಕ್ಕುತೋಚದಿರುವವನು: ದೈತ್ಯಸ್ಕಂಧದೊಳಿರ್ದ ಸಂಕರ್ಷಣಂ.ಕಿಂಕರ್ತವ್ಯತಾಮೂಢನಾಗಿ ಪೋಗುತ್ತುಮಿರೆ (ಜಗವಿ. ೪-೫೪ವ); ಭೀಮಸಿಂಹನು ಕಿಂಕರ್ತವ್ಯತಾಮೂಢನಾದನು (ಕೃಷ್ಣಾಕು. ೧-೧೭). [ಸಂ. (ಕಿಂಕರ್ತವ್ಯತಾ + ಮೂಢ)]

**ಕಿಂಕಲ** 'ಕಿಂಕಿಲ' ನೋ.

**ಕಿಂಕಾಪು**, ಕಿಂಕಾಬು, ಕಿಂಖಾಪು, ಕಿನ್‌ಕಾಪು, ಕಿನಕಾಪು, ಕಿನಕಾಬು, ಕಿನಖಾಪು, ಕಿನಕಾಫ, ಕೀನ್‌ಕಾಪು (ನಾ). ಚಿನ್ನ ಅಥವಾ ಬೆಳ್ಳಿಯ ಎಳೆಗಳನ್ನು ಸೇರಿಸಿ ನೆಯ್ದ ರೇಷ್ಮೆಬಟ್ಟೆ: ಆ ಆಸನಗಳ ಮೇಲೆ ಕಿಂಕಾಪಿನ ಮೆತ್ತೆಗಳು ಇದ್ದವು (ಶ್ರೀರಾಯ ೧೪೭); ಹೊನ್ನಪಂಜರ, ಅಲ್ಲಿ ಒಳ ಹೊರಗು ಕಿಂಕಾಪು (ನಡೆಬಂ. ೪೦). **ಕಿಂಕಾಬು**: ಮಹಮ್ಮದನು . . . ಅನರ್ಘ್ಯವಾದ ಕಿಂಕಾಬಿನ ಉಡಿಗೆಯನ್ನು ಅವನಿಗೆ ಬಹುಮಾನವಾಗಿ ಕೊಟ್ಟನು (ಪೈಗಂಬ. ೧೦೮). **ಕಿಂಖಾಪು**: **೧.** ಕಿಂಖಾಪಿನ ಛತ್ರಿ (ಎಕ. XIV, ನಂಜನ. ೨೮೯-೬; 1847); ಮೇಲು ಶಾಲ್ವಾಗು ಕಿಂಖಾಪುಗಳಲಂಕರಿಸಿ (ಕೃಷ್ಣವಿ. ೪-೩). **ಕಿನ್‌ಕಾಪು**: ಕಿನ್‌ಕಾಪಿನ ಮೇಲುದನ್ನು ಹೊದ್ದು (ಪಂಯಾತ್ರೆ. ೫೮); ಶಿರಸ್ತ್ರಾಣದಂತೆ ತೋರುತ್ತಿದ್ದ ಕಿನ್‌ಕಾಪಿನ ಟೊಪ್ಪಿಗೆ ತಲೆಗೆ (ಆಳಾಕ. ೬೮). **ಕಿನಕಾಪು**: (ಕ). **ಕಿನಕಾಬು**: ಮಹಾರಾಣಿ ಕಿನಕಾಬು ಮೆತ್ತೆಹಾಕಿದ ಪೀಠದ ಮೇಲೆ ಕುಳಿತು (ಹುಲಿಹಾ. ೧೦೨). **ಕಿನಕಾಫ**: ರೇಶಿಮೆ, ಊರ್ಣ, ಮಶ್ರು, ಕಿನಕಾಫ ಮೊದಲಾದ ಅಂಗಡಿಗಳು ಅಂದವಾಗಿ ಕಾಣುತ್ತವೆ (ಮಂಜುಕ. ೮). **ಕಿನಖಾಪು**: ಕಿನಖಾಪಿನ ಪರದೆಗಳನ್ನು ತೂಗಬಿಟ್ಟಿದ್ದಾರೆ (ಮಂಜುಕ. ೪). **ಕೀನ್‌ಕಾಪು**: ಕೀನ್‌ಕಾಪುಗಳನ್ನೂ ಥಳಥಳಿಸುವ ಕತ್ತಿಗಳನ್ನೂ ಧರಿಸಿ (ಗುಣಸಾ. ೬೮). [← ಪಾರ. ಕಿನ್‌ಖಾಬ್; ಮರಾ. ಕಿನಖಾಪ್]

**ಕಿಂಕಾಬು** 'ಕಿಂಕಾಪು' ನೋ.

**ಕಿಂಕಾರ** (ನಾ). ಗೆಜ್ಜೆಗಳ ನಾದ. [ಸಂ.]

**ಕಿಂಕಿಣಿ$_1$** (ನಾ). **೧.** ಕಿರುಗೆಜ್ಜೆ; ಕಿರುಗಂಟೆ; ಕಿಣಿಕಿಣಿ ಶಬ್ದ ಮಾಡುವ ಆಭರಣ: "ಕಿಂಕಿಣಿಯೆನಲ್ಕುಸಿರ್ವ ಕಿಱುಘಂಟೆ" (ಮಂಗರಾ. ೧೦೧-೩೦); ಸಂಪಗೆಯಲರ ಕಿಂಕಣಿಗಳೊಳಂ ಕೆಂದಾವರೆಯ ಗಂಟೆಗಳೊಳಂ (ಕಾದಂಉ. ೭೮೩); ಕಿಂಕಿಣಿಯ ಗೆಜ್ಜೆಯ ರವದ (ಹಚಕಾ. ೪-೧೨); ಹೊಂಗೆಜ್ಜೆ ಕಿಂಕಿಣಿ ಕುಣಿಯೆ ಪರಿವಂಬೆಗಾಲಿಂದೆ (ಶ್ರೀರಾಮಾ. ೧೯-೪೮೯). **೨.** ಕಿಣಿಕಿಣಿಯೆಂಬ ಶಬ್ದ, —ನಾದ: ಕಾಲ್ಗೆಜ್ಜೆ ನೇವುರ ಬಳೆಯಹೊಂದೊಡವುಗಳ ಕಿಂಕಿಣಿಗೆ (ಶ್ರೀರಾಮಾ. ೫೫-೪೩); ಗೆಜ್ಜೆಯ ಕುಚ್ಚಿನಿಂದ ಗಲಿರುಗಲಿರೆಂದು ಕಿಂಕಿಣಿನಾದ ಹೊಮ್ಮುತ್ತಿತ್ತು (ಮಲೆಮ. ೪೨೨). [ಸಂ. ಕಿಂಕಿಣೀ]

**ಕಿಂಕಿಣಿ$_2$** (ನಾ). (?) : ಪಿಡಿದಗ್ಗಿಗ ಕಿಂಕಿಣಿ ಬುಟ್ಟು ಕರ್ಣ (ಬೊಂಕಶಾ. ೧೯೩೩, ಹಾವೇರಿ. ೫೫-೨೭; 1104). [?]

**ಕಿಂಕಿಣೀಕ್ವಣಿತ** (ನಾ). ಕಿರುಗೆಜ್ಜೆಗಳ ನಾದ: ಸಿಂಜಾನಮಣಿಕಿಂಕಿಣೀಕ್ವಣಿತದೊಳ್ (ಶಾಂತಿಪು. ೧೦-೭೭ ವ). [ಸಂ. (ಕಿಂಕಿಣೀ + ಕ್ವಣಿತ)]

**ಕಿಂಕಿಣೀದಾಮ** (ನಾ). ಕಿರುಗೆಜ್ಜೆಗಳನ್ನುಳ್ಳ ದಾಮ; ಕಿರುಗಜ್ಜೆಗಳುಳ್ಳ ನಡುಕಟ್ಟು: ಕಟಿತಟದೊಳ್ ಮಾಣಿಕ್ಯಮಣಿ ಕಿಂಕಿಣೀದಾಮಮಂ ತಗುಳ್ಚಿ (ಆದಿಪು. ೭-೧೦೫ ವ). [ಸಂ. ಕಿಂಕಿಣೀದಾಮಾ]

**ಕಿಂಕಿಣೀರವ** (ನಾ). = ಕಿಂಕಿಣೀಕ್ವಣಿತ : ಮಣಿ ನೂಪುರಯುಗಮಣಿ ಕಿಂಕಿಣೀರವಂ ನೆಗೞೆ (ಅಜಿಪು. ೫-೭೩). [ಸಂ. (ಕಿಂಕಿಣೀ + ರವ$_1$)]

**ಕಿಂಕಿಣೀರುತಿ** (ನಾ). = ಕಿಂಕಿಣೀಕ್ವಣಿತ : ಮಂಜುಮಂಜೀರ ಕಂಕಣ ಕಿಂಕಿಣೀರುತಿ ಪೊಣ್ಮೆ . . . ಮುರಾರಿ ಕೈಪಜೞಿಗಾಡಿದಂ (ಜಗವಿ. ೩-೫೨). [ಸಂ. (ಕಿಂಕಿಣೀ + ರುತಿ)]

**ಕಿಂಕಿನಿ** 'ಕಿನಿಕಿನಿ' ನೋ.

**ಕಿಂಕಿನಿವೋಗು** 'ಕಿನಿಕಿನಿವೋಗು' ನೋ.

**ಕಿಂಕಿರ** (ನಾ). ೧. ಕುದುರೆ. ೨. ಕೋಗಿಲೆ. ೩. ದುಂಬಿ. ೪. ಕಾಮ; ಮನ್ಮಥ. [ಸಂ.]

**ಕಿಂಕಿರಾತ** (ನಾ). ೧. ಗಿಳಿ. ೨. ಕೋಗಿಲೆ. ೩. ಮನ್ಮಥ. ೪. ಅಶೋಕವೃಕ್ಷ: ಪುರಜನಮುೞ್ತಯಿಂ ಮುಡಿವ ಕೂಡೆ ತುಱುಂಬುವ ಕಿಂಕಿರಾತಶೇಖರರಜದಿಂದೆ . . . ಪಿಶಂಗಿತಾರುಣಿತ ದಿಙ್ಮುಖಮಾದುದು ತನ್ಮಹೋತ್ಸವಂ (ಆದಿಪು. ೭-೧೧೩); ಕಿಂಕಿರಾತಪ್ರಸೂನಪ್ರತಿಮಂ ಪೀತಾಂಬರಂ ರಂಜಿಸುವಿನಂ (ಜಗವಿ. ೨-೯೯). ೫. ಕೆಂಪು ಗೋರಂಟೆ: "ಕೆಂಪುಗೋರಟೆ ಕಿಂಕಿರಾತಂ" (ಮಂಗರಾ. ೩೭-೨೨); ಮಾತೇನೊ ಕಿಂಕಿರಾತಂ ಪೂತಂತೆ ಕಿರಾತಸೇನೆ ಪುಣ್ಬಡೆ ಶರಸಂಘಾತದ ಸವಿದೋರ್ಕುಂ (ಪಂರಾಮಾ. ೪-೪೯). [ಸಂ.]

**ಕಿಂಕಿರಿ** 'ಕಿನಿಕಿನಿ' ನೋ.

**ಕಿಂಕಿರಿಯೊಗೆ** (ಕ್ರಿ). ತಳ್ಳಂಕ ಪಡು; ಭಯಗೊಳ್ಳು: ಜಗುಳುವ ಲಜ್ಜೆ ಜಾಱುವ ಧೈರ್ಯ ಕಿಂಕಿರಿಯೊಗೆವ ವದನ ನಟ್ಟ ದಿಟ್ಟ ನೆಗೆವ ಪುಳಕವುಣ್ಮುವ ಸೇದೆ ಕರಗುವ ಬಗೆಯೊಪ್ಪಿತಾ ಪ್ರಿಯತಮೆಗೆ (ಶ್ರೀಪಾಲ. ೨-೫೪). [ಕಿಂಕಿರಿ (< ಕಿನಿಕಿನಿ) + ಒಗೆ$_1$]

**ಕಿಂಕಿರಿವೋಗು** 'ಕಿನಿಕಿನಿವೋಗು' ನೋ.

**ಕಿಂಕಿಲ, ಕಿಂಕಲ** (ನಾ). ೧. ದೈನ್ಯವುಳ್ಳವನು; ನಮ್ರತೆಯುಳ್ಳವನು; ಕಿಂಕರ ವೃತ್ತಿಯವನು: ಹಮ್ಮಿನ ಸೊಮ್ಮಿನ ಸಂಬಂಧ ಬಿಟ್ಟು ಕಿಂಕಿಲ [ಪಾಠಾಂ. ಕಿಂಕರ] ಕಿಂಕಿಲ ಕಿಂಕಿಲ [ಪಾಠಾಂ. ಕಿಂಕರ]ನಾಗಿರಬೇಕು (ಬಸವ. ೮೭೮); ಲಜ್ಜೆಗೆಟ್ಟು ನಾಣುಗೆಟ್ಟು ಕಿಂಕಲನಾಗಿರಬೇಕು (ಚೆನ್ನವ. ೧೮೭). ೨. ಸೇವಾವೃತ್ತಿ; ದೈನ್ಯ; ನಮ್ರತೆ: ಕೈಯಲ್ಲಿ ದೊಣ್ಣೆ ಮನದಲ್ಲಿ ಕ್ರೋಧ, ವಚನದಲ್ಲಿ ಕಿಂಕಿಲ, ಲಿಂಗದ ವಾರ್ತೆ ನಿನಗೇಕೆ ಹೇಳಾ (ಅವಚಂ. ೨೭೫-೧೨೬೩); ಕಿಂಕರರ ಮನೆಯಲ್ಲಿ ಕಿಂಕಿಲವನು ಅನು ಹಾರುತಿಪ್ಪೆನು (ಬಸವ. ೪೬೫); ಘನಮಹಿಮ ಕರುಣಿಸೆನುತ್ತ ಕಿಂಕಿಲ ಸಹಿತ ಬಿನ್ನಹ ಮಾಡುತಿರ್ದನು ರಾಮನಲ್ಲಮಗೆ (ಪ್ರಭುಲೀ. ೧೩-೪೬). ೩. ಬಿಳಿಮುಗ್ಗದವರಲ್ಲಿ ಒಂದು ಪಂಗಡ (ಎಸಮ್ಮೆ. VIII, ೯). **ಕಿಂಕಲ**: ೨. ಕಿಂಕಲದಿಂದಾ ನಿಮ್ಮ ಶರಣರ ಮನೆಯ ಹೊಕ್ಕುದ ನುಂಡಿಪ್ಪ ಕಿಂಕರ ನಾನು (ಪದಗೋ. ೧-೧೮೦); ನುಡಿವಲ್ಲಿ ಕಿಂಕಲವನೞಿದು ಕರವ ಬೀಸುವಲ್ಲಿ ತುಷಾರದ ಕೀಟವ ನಜಿದು (ಸರ್ವವ. ೫೪-೬); ಇದಿರೆದ್ದು ವಂದಿಸಿ ಕೈ ಮುಗಿದು ನಡನಡುಗಿ ಕಿಂಕಲನಾಗಿ . . . ಭಯಭೀತಿ ಭೃತ್ಯಾಚಾರವಾಗಿರಬಲ್ಲರೆ ಆದು ಭಕ್ತಿ (ಅವಚಂ. ೨೨೩-೧೦೧೦). [< ಸಂ. ಕಿಂಕರ]

**ಕಿಂಕಿಲಿಸು, ಕಿಂಖಲಿಸು** (ಕ್ರಿ). ಶಬ್ದಮಾಡು: ಚೊಕ್ಕ ಬೆಳ್ಳಿಯ ಕಂಕ ಕಿಂಕಿಲಿಸಿ ನುಡಿಸುತಿಬೆ (ಸಖೀಗೀ. ೫೧-೧೫). **ಕಿಂಖಲಿಸು**: ಕವಿಗಳೊ ಹಕ್ಕಿಗಳಿದ್ದಂತೆ . . . ಕೀರುವರು, ಗಳಪುವರು, ಕಿಂಬಲಿಸುವರು ಹಕ್ಕಿಗಳಂತೆ (ಸಾಹಿವಿ. ೬೭). [← ಮರಾ. ಕಿಂಕಳಣೇ]

**ಕಿಂಕುರ್ವಾಣ** (ನಾ). ೧. ಸೇವಾವೃತ್ತಿ; ಭೃತ್ಯಭಾವ: ಆಹುದಹುದು ಕಿಂಕುರ್ವಾಣ ! ಮುಝು ! ಭಾಪು ! ಬಲ್ಲವರು ಬಲ್ಲೆವೆಂದೆಂಬರೆ ಲಿಂಗವಂತರ ಮಹಿಮೆ ಈ ಹಿಂಗಿರಬೇಡಾ ? (ಅವಚಂ. ೨೪೭-೧೧೨೭). ೨. ದೈನ್ಯ; ನಮ್ರತೆ: ರಂಗಮಂಟಪದೊಳ್ ಪೊರಳ್ದು ಪೊಡಕರಿಸಲಾಜಿದೆ ಕಿಂಕುರ್ವಾಣಂ ಕೈಮಿಕ್ಕು ಮಱುಗಿ ಮಱುಗಿ ಮೊಱೆಯಿಟ್ಟು (ನಂಬಿರ. ೧೨-೮೩); ಭೀತಿಯಿಂದೆಱಗಿ ಕಿಂಕುರ್ವಾಣಮಂ ತೋಱೆ (ಸಿದ್ಧರಾ. ೪-೪೬). 'ಕಿಂಕುರ್ವಾಣಂಗೆಯ್' ಪರಾ. ೩. ಏನುಮಾಡಬೇಕೆಂದು ತೋಚದವನು. 'ಕಿಂಕುರ್ವಾಣತೆ' ಪರಾ. [ಸಂ. ಕಿಂಕುರ್ವಾಣ = ಕಿಂಕರ, ಸೇವಕ]

**ಕಿಂಕುರ್ವಾಣಂಗೆಯ್** (ಕ್ರಿ). ಸೇವೆಮಾಡು: ಪೃಥ್ವೀಶ್ವರಂ ಬಂದೆನ್ನುಮನರ್ಚಿಸಿ ಬಂದಿಸಿ ನೀಚ ವೃತ್ತಿಯಿಂ ಕಿಂಕುರ್ವಾಣಂಗೆಯ್ದಪ್ಪನಹೋ ಆಶ್ಚರ್ಯಂ (ವಡ್ಡಾರಾ. ೭೮-೩೨); ಚಕ್ರವರ್ತಿಯ ಮಗಳಾದೊಡಂ ಪೆಱರ್ಗೆ ಕಿಂಕುರ್ವಾಣಂಗೆಯ್ವುದುಂ (ಕಗವಿ ೪೨-೩೦ ಚಾವುಂಪು). [ಕಿಂಕುರ್ವಾಣ + ಕೆಯ್$_1$]

**ಕಿಂಕುರ್ವಾಣತೆ** (ನಾ). ಏನು ಮಾಡತಕ್ಕದ್ದೆಂದು ತನ್ನನ್ನು ತಾನೇ ಕೇಳಿಕೊಳ್ಳುವಂತಹ ಪರಿಸ್ಥಿತಿ; ಅಸಹಾಯ ಪರಿಸ್ಥಿತಿ; ದಿಙ್ಮೂಢತೆ; ದಿಗ್ಭ್ರಮೆ: ಟಂಕಾರಾಲ್ಪಧ್ವನಿಯಿಂ ಕಿಂಕುರ್ವಾಣತೆಯನೆಯ್ದುವರ್ ಮುನಿಗಳ್ (ಗಿರಿಕ. ೮-೩೬). [ಸಂ. ಕಿಂಕುರ್ವಾಣತಾ]

**ಕಿಂಕುರ್ವಾಣಪ್ರವಣ** (ನಾ). ಸೇವಾವೃತ್ತಿಯಲ್ಲಿ ತತ್ಪರನಾದವನು; ಕಿಂಕರಭಾವದಲ್ಲಿ ಆಸಕ್ತಿಯುಳ್ಳವನು: ಕಿಂಕುರ್ವಾಣಪ್ರವಣರೆಬರ್ ಬರ್ಪಿನಂ ಕಾದು . . . ಬಂದರ್ಘ್ಯಮಂ ಯಕ್ಷಂ ಕೊಟ್ಟಂ ರಾಘವನ ಚರಣಕ್ಕೆ (ಪಂರಾಮಾ. ೩-೧೩೧). [ಕಿಂಕುರ್ವಾಣ + ಪ್ರವಣ]

**ಕಿಂಕುರ್ವಾಣವಾಕ್ಯ** (ನಾ). ದೈನ್ಯಪೂರ್ಣವಾದ ಮಾತು; ನಮ್ರವಾದ ನುಡಿ: ಶರಣಸಂಕುಳಕ್ಕೆ ಸಾತ್ವಿಕ ಭಯಭಕ್ತಿಭರಿತ ಕಿಂಕುರ್ವಾಣವಾಕ್ಯಮಂಡಿತವದನಮಂಡಲನಾಗಿ . . . ಬಸವರಾಜಂ ಭಕ್ತರಂಕಂಡು (ಬಸರ. ೮-೧). [ಕಿಂಕುರ್ವಾಣ + ವಾಕ್ಯ]

**ಕಿಂಕೃತಿ** (ನಾ). ಅಳಲು; ಚಿಂತೆ; ಸಂಕಟ: ನೀವು ಕೊರಗಿ ಪಾಂಡವರ ಮೇಲೆ ಕಿಂಕೃತಿ ಇಟ್ಟುಕೊಳ್ಳಬೇಡಿ (ವಚಭಾ. ೩೧೧); ಆವಳು ತಂದೆಯ ಮನಸ್ಸಿಗೆ ಕಿಂಕೃತಿಯುಂಟಾಗದಂತೆ ಮಾತನಾಡದೆ ಇರುತ್ತಿರಲಿಲ್ಲ (ಕವಿಕ. ೨೪); ಮನಸ್ಸಿನೊಳಗೆ ಯಾವ ಕಿಂಕೃತಿಯನ್ನೂ ಅನುಭವ ಮಾಡದಿದ್ದರೆ ಆದರಿಂದ ಬಹು ಕಾರ್ಯವಾಗುತ್ತದೆ (ನಿಬಂಧ. II, ೩೧೧). 'ಕಿಂಕರ್ಯ$_2$' ಪರಾ.

ಕಿಂಕೃತಿಯಾಗು = ಸಂಕಟವಾಗು; ಚಿಂತೆಯಾಗು: ಮನಸ್ಸಿಗೇನಾದರೂ ಕಿಂಕೃತಿಯಾದರೆ ಗ್ಯಾಲನ್‌ಗಟ್ಟಲೆ ವಿಸ್ಕಿ ಹೀರಬೇಕೆ (ಯೋಧಪು. ೨೭). [ಸಂ. ಕಿಂಕೃತಿ = ಸೇವೆ]

**ಕಿಂಕೊಳೆ** 'ಕಿಂಕೊಟೞೆ' ನೋ.

**ಕಿಂಕೊಟೞೆ, ಕಿಂಕೊಳೆ** (ನಾ). ೧. ರಾಡಿ; ಕದಡು; ಕೆಸರು: ಕರಿಘಟೆಯ ನುಡಿಯೆ ಬಡಿಬಡಿದೆತ್ತಂ ಕಿಂಕೊಟೞೆಮಾಳ್ಪುದುಂ (ಪಂಪಭಾ. ೧೧-೧೦೨); ಕೆಡೆದ ರಥಂಗಳಿಟ್ಟೆಡೆಯೊಳ್ ಕಿಂಕೊಟೞೆಯಾಗಿ ಪೆತ್ತಕೆನ್ನೆತ್ತರೊಳ್ ಮೆತ್ತಿ ರೂಪಱಿಯಲಾಗದಂತಿರ್ದ ವೀರಭಟರಗುರ್ವಂ ಪಡೆಯೆ (ಪಂಪಭಾ. ೧೨-೬೦ ವ); "ಹಿಂಸೆ, ತೊಂದರೆ, ಸಂಕಟ" (ಪಂಪಭಾ. ಕೋಶ). **ಕಿಂಕೊಳೆ**: ೨. ಅಳಿವು; ನಾಶ; ಧ್ವಂಸ: ಪೊಣರ್ದರಿಬಲಮಂ ಕಿಂಕೊಳೆಮಾ[ಟ್ಪಿಡೆಗಣಮೆ] ನಿರಂಕುಶಮೆನಿಸಿದುದು ಮುನಿಸು ಭದ್ರಾಂಕುಶ[ನಾ] (ಪಂಪಭಾ. ೧-೩೨). ೩. ಹಿಂಸೆ; ತೊಂದರೆ; ಬಾಧೆ; ಕಷ್ಟಪರಿಸ್ಥಿತಿ: ಮೊಲೆಯ ಬಿಂಕಮೆ ಸೋಂಕಿ ಕಿಂಕೊಳೆಯಾಗಿ ನೋೞ್ಪರ ಚಿತ್ತದೊಳ್ ಮೊಳೆಯೆ (ಸೂಕ್ತಿಸು. ೧೩-೧೨). [ಕೀೞ್ + ಕೊೞೆ$_2$]

**ಕಿಂಖಲಿಸು** 'ಕಿಂಕಿಲಿಸು' ನೋ.

**ಕಿಂಖಾಪು** 'ಕಿಂಕಾಪು' ನೋ.

**ಕಿಂಗಹನ** (ನಾ). ೧. ಬಹಳ ಕಠಿಣವಾದುದು. ೨. ಕೊಂಚವೂ ಕಠಿಣವಲ್ಲುದುದು : ಕಿಂಗಹನವೀ ರಣವೆನುತ ಶಲ್ಯಾನುಜನು ಮಾರಾಂತ (ಕುವ್ಯಾಶ. ೩-೬೯). [ಸಂ. ಕಿಂಗಹನಂ]

**ಕಿಂಗಿಣಿ** (ನಾ). ವಾದ್ಯ ಧ್ವನಿಯ ಒಂದು ಅನುಕರಣ ಶಬ್ದ : ಕುಕ್ಕುರು ಡುಮುಡುಮು ಪಾವುಂಜೆಯ ಜೀನು ಡಕ್ಕೆ ನಾಡಾನಕ ಚಂಪೆ ಚಿಕ್ಕ ಕಿಂಗಿಣಿ ತಕ್ಕಿಟ ತೋಕಿಟ ದಿಕ್ಕಿಟ ತೋಂಗಿ ತೋಂಗಿ (ಜ್ಞಾನಚ. ೪೧-೧೦೩). [?]

**ಕಿಂಗುನಿ** (ನಾ). (?) : ಮೂಜನೆಯ ಪರಿಸಕೆ ಪ ೩ ಬಡಕಟೆ ನೂಜಿಕೆ ಪ ೨ ಕಿಂಗುನಿ ನೂಜಿಕೆ ಪ ೧ . . . ಯೆಂದೆಂದಿಗುಂ ನೂಜಿಕ್ಕೆ ಪಳಯಿಗುದಗೆ ಮರಿಯಾದೆಯಲಿ ವೃತ್ತಿ ಸಿದ್ಧಾಯವನು ಕಲಮೇಲೆ ಮಡಗುವರು (ಎಕ. XIV, ತಿರುಮ. ೭೨-೨೧ ; 1100). [?]

**ಕಿಂಚ** (ನಾ). ಕೀಳಾದ ಮನುಷ್ಯ ; ಅಲ್ಪ ; ನೀಚ : ವಂಚನೆ ಬೇಡವು ಯಂದೆವಾವಿಯತಪ್ಪದಿರೆಂದೆ ಕಿಂಚನು ಆಗದಿರೆಂದೆ ಕುಮಂತ್ರನೆನಿಸದಿರೆಂದೆ (ಚಿದಾಕೋ. ೨೭-೩). [< ಸಂ. ಕಿಂಚ]

**ಕಿಂಚನ** (ನಾ). ತೀರ ಸ್ವಲ್ಪ ; ಅಲ್ಪಸ್ವಲ್ಪ : ಪಂಚಶರಪಿತನಾದ ತನ್ನಲಿ ವಂಚನೆಯ ಬಿಟ್ಟಿರಿಸಿ ಚಿತ್ತವ ಕಿಂಚನವನೊಳಗಾಗಿ ಬಿಟ್ಟಿರ್ದು . . . ಐದುವರು ಮತ್ಸುಖವ (ನಿಭಾಗ. ೧೧-೨೧-೨೪). [ಸಂ.]

**ಕಿಂಚಿಜ್ಞ** (ನಾ). ಸ್ವಲ್ಪವನ್ನು ಮಾತ್ರ ತಿಳಿದವನು ; ಅಲ್ಪಜ್ಞ : ಪರಮೇಶ್ವರಾ ನಾವು ಕಿಂಚಿಜ್ಞರಯ್ಯ ನಿನ್ನುರುಮಹಿಮೆಯಂ ಬಲ್ಲೆವೇ (ವೀಶೈವು. ೩-೬-೩೭) ; ಸರ್ವಜ್ಞನಪ್ಪೆ ನೀಂ ಕಿಂಚಿಜ್ಞನಪ್ಪೆ ನಾಂ ಚಂದ್ರಮೌಳಿ (ಭಕ್ತಿಸ. III, ೨೦-೨). [< ಸಂ. ಕಿಂಚಿಜ್‌ಜ್ಞ]

**ಕಿಂಚಿಜ್ಞತ್ವ** (ನಾ). ಸ್ವಲ್ಪವನ್ನು ಮಾತ್ರ ತಿಳಿದಿರುವಿಕೆ; ಸ್ವಲ್ಪಜ್ಞಾನ: ಒಂದೇ ವಸ್ತು ಅವಸ್ಥಾತ್ರಯ, ಕಿಂಚಿಜ್ಞತ್ವ ಹೊಂದಿ ಜೀವನೆನಿಸಿತ್ತಯ್ಯ (ವಚರ. ೭೨). [< ಸಂ. ಕಿಂಚಿಜ್‌ಜ್ಞತ್ವ]

**ಕಿಂಚಿತ, ಕಿಂಚಿತು, ಕಿಂಚಿತ್ತ, ಕಿಂಚಿತ್ತು** (ನಾ). ೧. ಕೊಂಚ ; ಸ್ವಲ್ಪ : ಕಿಂಚಿತದಲ್ಲಿ ವಂಚನೆಯೇನು (ಗಾದೆ). **ಕಿಂಚಿತು** (ಗು). ೨. ಕೊಂಚವಾದ ; ಸ್ವಲ್ಪವಾದ : ಕಿಂಚಿತು ಗೀತವೊಂದನಂತ ಕೋಟಿ ಜಪ (ಬಸವ. ೨೭೫). **ಕಿಂಚಿತ್ತ** : ೧. ಪೇಳುವೆನು ಕಿಂಚಿತ್ತದಲಿ ಯಿದ ಲಾಲಿಪುದು (ಜಿನಭಾ. ೧೮-೧೦). **ಕಿಂಚಿತ್ತು** : ೧. ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ (ಪುರಂದ. ೨-೬೧-೧) ; ರಾಮನು ಕಿಂಚಿತ್ತೂ ಹೆದರಲಿಲ್ಲ (ಕುಮಾಸಾಂ. ೩೯). [< ಸಂ. ಕಿಂಚಿತ್]

**ಕಿಂಚಿತು** 'ಕಿಂಚಿತ' ನೋ.

**ಕಿಂಚಿತ್ಕಾರ** (ನಾ). ಅಲ್ಪಕಾರ್ಯಮಾಡುವವನು ; ನಿಷ್ಪ್ರಯೋಜಕ : ಸುಗ್ರೀವನುಮಣುವನುಂ ಕಿಂಚಿತ್ಕಾರರವರಂ ಪತ್ತುವಿಟ್ಟು ದೇವರೆಮ್ಮಂ ಕೈಕೊಂಡು ಚಿತ್ರಕೂಟದೊಳಿರ್ಪುದು (ಕಗವಿ. ೮೯-೧೮). [ಸಂ.]

**ಕಿಂಚಿತ್ತ** 'ಕಿಂಚಿತ' ನೋ.

**ಕಿಂಚಿತ್ತು** 'ಕಿಂಚಿತ' ನೋ.

**ಕಿಂಚಿದೂನ** (ಗು). ೧. ಸ್ವಲ್ಪ ಮಾತ್ರ ಕಡಮೆಯಾದ : ಓಂಕಾರದ ಶಂಖನಾದಕಿಂತ ಕಿಂಚಿದೂನಾ (ನಾದಲೀ. ೮೪-೬). (ನಾ). ೨. ಸ್ವಲ್ಪ ಕಡಮೆಯಾದವನು : ಮುಕ್ತಜೀವನಪ್ರೌಢೇಕ ಪ್ರಕಾರನುಮನಾಕಾರನು[ಮ]ಶರೀರಾಕಾರದಿಂ ಕಿಂಚಿದೂನನುಂ ಅನುಪಮಾನನುಂ . . . ಅಕ್ಷಯನುಮಕ್ಕುಂ (ಸುಕುಮಾ. ೮-೧೪ ವ).

[ಸಂ. (ಕಿಂಚಿತ್ + ಊನ)]

**ಕಿಂಚುಲಕ, ಕಿಂಚುಳಕ** (ನಾ). ೧. ಮಣ್ಣಿನಲ್ಲಿ ಅಥವಾ ಕೆಸರಿನಲ್ಲಿ ಇರುವ ಒಂದು ಹುಳು; ಎರೆಹುಳು: "ಕಿಂಚುಲ[ಪಾಠಾಂ. ಳ]ಕಮೆನಲು ಗಂಡೂಪದಾಖ್ಯಮೆನೆ ನಾಯೊಳಲೆಗಕ್ಕು ನಾಮಂ" (ಮಂಗರಾ.೧೨೨-೮) ; "ಮಹೀಲತಾ, ಗಂಡೂಪದಃ, ಕಿಂಚುಲಕಃ— ೩ ಎರುಬು ಹುಳುವಿನ ಹೆಸರುಗಳು. ಅಂದರೆ ಕೆಸರಲ್ಲಿಯೂ ತ್ಯಾವದ ನೆಲದಲ್ಲಿಯೂ ಇರುವ ಹಂಚೀಕಡ್ಡಿಯಂಥಾ ಕೆಂಪುಹುಳು (ಸಿದ್ಧಾಂತಿ. ೭೪). **ಕಿಂಚುಳಕ** : ೧. "ಗಂಡೂಪದ, ಕಿಂಚುಳಕಃ – ಈ ೨ ನಾಯೊಳಲೆ" (ಹಲಾಯು. ೧೦೯-೩೯). ೨. ನೀರಿನಲ್ಲಿಯ ಒಂದು ಬಗೆಯ ಪ್ರಾಣಿ; ಒಂದು ಜಲಚರ: ಮಕರ ಕರ್ಕಟ ಕಮಠ ಶಾಳೂರ ಕಿಂಚುಳಕನಿಕರದಿಂ . . . ಮುಖ್ಯ ಜಲಚರ ಪ್ರಕರದಿಂ (ಚಬಪು. ೨-೩). [ಸಂ.]

**ಕಿಂಚುಳಕ** 'ಕಿಂಚುಲಕ' ನೋ.

**ಕಿಂಜಲ್ಕ, ಕಿಂಜಳ್ಕ** (ನಾ). ಕಮಲ ಮೊದಲಾದ ಹೂವುಗಳ ಕೇಸರ; ಹೂವಿನ ಕುಸುರು : "ಕೇಸರಮದು ಕಿಂಜಲ್ಕಂ" (ವಸ್ತುಕೋ ೨೫-೨೧) ; "ಕಿಂಜಲ್ಕಃ, ಕೇಸರಃ – ೨ ತಾವರೆ ಹೂವಿನಲ್ಲಿಯೂ, ಅಥವಾ ಯಾವ ಹುವ್ವಿನಲ್ಲಿಯಾದರೂ ಇರುವ ಕುಸುರುಗಳ ಹೆಸರುಗಳು; ಹುವ್ವಿನ ತಿರುಳುಗಳು" (ಸಿದ್ಧಾಂತಿ. ೮೧) ; ಬಕ ಕುರರಪಕ್ಷವಿಕ್ಷಿಪ್ತಕಂಜ ಕಿಂಜಲ್ಕಪುಂಜಪಿಂಜರಿತಾಚ್ಛೋದಕ ಪರಿಪೂರ್ಣ ತಟಾಕ ಪ್ರಕರ ಸರೋನಿಕರ ರಂಜಿತಾಶಾವಳಯಂ (ಆದಿಪು. ೧-೫೮) ; ವಿಳಸತ್ಕಂಜಕಿಂಜಲ್ಕಪುಂಜಾವಿಳ ಕಾಳಿಂದೀ ನದೀತೀರಮಂ (ಪಂಚತಂ. ೫೮-೪) ; ಪರೆದು ಪುದಿಯೆ ಕಿಂಜಲ್ಕಂಗಳ್ ಜಲರುಹದಲರ್ಗಳದೇಂ ಜಲಜಲಿಸಿದುವೊ (ಲೀಲಾವ. ೫-೩೧). **ಕಿಂಜಳ್ಕ** : ಕೆದಱುವ ಕಿಂಜಳ್ಕದಿನಾದುದು ಸರೋವರಂ ಕಪಿಶಜಳಂ (ಕಾವ್ಯಾವ. ೪೧೬). [ಸಂ.]

**ಕಿಂಜಳಕ** (ನಾ). = ಕಿಂಚುಲಕ ೨ : ಜಲದಂತಿ ಮಕರ ಪಾಠೀನ ಕಿಂಜ [ಪಾಠಾಂ. ಚ] ಳಕ ಶಂಖ ಕಮಲಾವರ್ತಫೇನಂಗಳಾಕುಳಿತ ಕಲ್ಲೋಲಮಾಲಾಜಾಲವೆಲ್ಲಾ (ಗುಭಚ. ೧-೧೬). [< ಸಂ. ಕಿಂಚುಲಕ]

**ಕಿಂಜಳ್ಕ** 'ಕಿಂಜಲ್ಕ' ನೋ.

**ಕಿಂಡಿ, ಖಿಂಡಿ** (ನಾ). ತೂತು ; ರಂಧ್ರ ; ಕಂಡಿ : ಆ ಕಿಂಡಿಯೊಳಗಿನಿಂದ ವೇಗವಾಗಿ ಪ್ರವಹಿಸುತ್ತಿರುವ ಗಾಳಿಯು (ಅಂಬಿಕೆ. ೨೯) ; ಆಕಾಶಗಂಗೆಯ ಕಿಂಡಿಯೊಳಗಿಂದ ಕೆಳಗಿಣುಕಿ ನೋಡುತ್ತಿರುವವನಿಗೆ ಆಕಾಶವೆಂದರೆ ತಿರೆ ರವಿಗಳ ಮಧ್ಯದ ಅವಕಾಶವಲ್ಲ (ಪ್ರವಾತೋ. ೫೮) ; ಆ ಕಿಂಡಿಯಲ್ಲಿ ನುಸುಳುತ್ತ ತಲೆಯನ್ನು ಕೋಟೆಯೊಳಗೆ ಚಾಚಿದನು (ಕಪಪು. ೨-೭೫). **ಖಿಂಡಿ** : ಐರಣೀಗುಡ್ಡ . . . ಸುಮಾರು ಹತ್ತು ಮೈಲುದ್ದ ಇರುತ್ತದೆ. ಆದರೆ ನಡುವೆ ಕೆಲವು ಮೈಲುಗಳವರೆಗೆ ಖಿಂಡಿಯುಂಟು (ಕಭಾಗೆ. ೮) ; ಬಸವಂತಿ . . . ಈ ಗುಪಿತಕ್ಕೆ ಸಣ್ಣ ಖಿಂಡಿ ಕೆಡವಿದಳು (ದೀಪಹ. II, ೧೭೭). [< ಕಂಡಿ$_1$]

**ಕಿಂಡಿಹಲ್ಲು** (ನಾ). ನಡುವೆ ಸಂದು ಬಿಟ್ಟಿರುವ ಹಲ್ಲು ; ಒಂದಕ್ಕೊಂದು ಹೊಂದದಿರುವ ಹಲ್ಲು : (ಕಿ).

[ಕಿಂಡಿ + ಹಲ್ಲು (< ಪಲ್)]

**ಕಿಂತಾನ** (ನಾ). ಗೋಣಿಯಂತಿರುವ ಒರಟುಬಟ್ಟೆ : ೮, ಕಿಂತಾನ ; ೯. ಕಲಿಕಾ (ಮುಂಬವ್ಯಾ. ೧೪೧).

[← ಮರಾ. ಕಿಂತಾನ; ಅರ. ಕತಾನ, ಕಂತಾನ]

**ಕಿಂತು** (ನಾ). ೧. ದೋಷ : ಕಿಂತು ಇಲ್ಲದ ಸ್ವಾಮಿ ಶುದ್ಧಾತ್ಮ ಶ್ರೀಲಕುಮಿಕಾಂತ (ವಿಸ್ತೋಸು. ೩-೪). ೨. ಅನುಮಾನ ; ಸಂಶಯ ; ಸಂದೇಹ : ಸಂತೈಸಲಾರದೆ ಆ ಸತ್ಯಭಾಮೆಗೆ ಕಿಂತು ಮನದಿಂದಲಿ ಹೋಗಲಾಡಿ (ಶ್ರೀಕೃಪಾ. ೧೦೧) ; ನಿನ್ನ ಜಡೆಯೂ ಬೆನ್ನಲಿ ಪೊತ್ತು ಕಿನ್ನರಿವಿಡಿದು ಕಿಂತುವ ಬಿಟ್ಟು ಅಚ್ಛಿನ್ನ ಮನದಲಿ ನಿನ್ನ ಪೊಗಳುವೆ (ಶ್ರೀಕೃಪಾ. ೭೧). [ಸಂ. ಕಿಂತು = ಆದರೆ]

**ಕಿಂದರಿ** (ನಾ). ಒಂದು ಬಗೆಯ ವಾದ್ಯ : ವೀಣೆ ಕಿಂದರಿ ಒಂದೇ; ಖಂಜರಿ ಒಂದರಿ ಒಂದೆ – ಪಳಗಿದ ಕೈಗೆ (ಶಿಲಾಲ. ೨೬). [< ಕಿನ್ನರೀ ?]

**ಕಿಂಪಚ** (ನಾ). ತನ್ನ ಊಟಕ್ಕೆ ಸಾಲುವಷ್ಟು ಮಾತ್ರ ಅಡಿಗೆ ಮಾಡುವವನು; ಜಿಪುಣ; ಲೋಭಿ. [ಸಂ.]

**ಕಿಂಪಚಾನ** (ನಾ). ಕಿಂಪಚ: "ಕದರ್ಯಃ, ದಿ (ಹಿ)ೀನಃ, ಕೀನಾಶಃ, ಕಿಂಪಚಾನಃ, ಮಿತಂಪಚಃ – ಈ ೫ ಲೋಭಿ" (ಹಲಾಯು. ೫೭–೧೯೨). [ಸಂ.]

**ಕಿಂಪಾಕ** (ಗು). ೧. ಪಕ್ವವಲ್ಲದ; ಬಲಿಯದ. (ನಾ). ೨. ಕುತ್ಸಿತವಾದ ಅಡುಗೆ. ೩. ಒಂದು ಬಗೆಯ ವಿಷದ ಹಣ್ಣಿನ ಮರ; ಕಾಂಜೀರ; ಕಾರಸ್ಕರ ವೃಕ್ಷ; ಆ ಮರದ ಹಣ್ಣು: ದುರಿತಾನುಗತ ಮದನುಭಾಗಮೆನಿಪ್ಪದು ಶರ್ಕರಾದಿ ಕಿಂಪಾಕದುರ್ವಿಪಾಕ ಪ್ರಭಾವ ಶಕ್ತಿಪ್ರತಿಮಂ (ಸುಕುಮಾ. ೮–೩೦); ಆ ನುಡಿಯೊಳೊಗೆದ ಕರುಣಾರಸಮ ಕಲುಷ ಕಿಂಪಾಕ ಬೀಜಮನಂಕುರಿತಂ ಮಾಡೆ (ಪಂರಾಮಾ. ೯–೧೧ ವ). ೩. ಜೀರಿಗೆ: "ಕಿಂಪಾಕಮೆನೆ ತಾಂ ಜೀರಿಕೆಯದು" (ಮಂಗರಾ. ೩೮–೨೫). ೪. (ಅಲಂ) ಮೂಢ; ಮೂರ್ಖ; ಅಪ್ರಬುದ್ಧ. [ಸಂ.]

**ಕಿಂಪಾಕಪರಿಪಾಕ** (ನಾ). ಕಿಂಪಾಕ ಫಲದ ಪರಿಣಾಮ; ಮರಣರೂಪವಾದ ಕೆಟ್ಟ ಪರಿಣಾಮ: ಎನ್ನನುಡಿಯೆಂಬುದು ನಿನಗೆ ಪರಿಪಾಕಪಥ್ಯಮಿದನವಜ್ಞೆಗೆಯ್ವುದುಂ ನಿರಾಕರಿಸುವುದುಂ ಕಿಂಪಾಕ ಪರಿಪಾಕ ನೀಕಾಶಂ (ಶಾಂತಿಪು. ೪–೯೮ವ). [ಕಿಂಪಾಕ + ಪರಿಪಾಕ]

**ಕಿಂಪಾಕಫಲ, ಕಿಂಪಾಕಫಳ** (ನಾ). ಕಿಂಪಾಕ ವೃಕ್ಷದ ಹಣ್ಣು: ಕಿಂಪಾಕಫಲಂಗಳ ರಸದಿಂಪದು ತುದಿಯೊಳಟಿವನೆಂತುಂತರ್ಕುಂ (ಜೀವಸಂ. ೧೩೯–೨); ಸವಿ ಬಣ್ಣಂ ಕಂಪುಂ ತೀವಿದ ಕಿಂಪಾಕಫಲಂ ತಿಂದವನಂ ಕೊಲ್ವುದು (ಸೌನಂದ. ೯–೪೮). **ಕಿಂಪಾಕಫಳ**: ಪಾಕದೊಳತಿವಿಷಮಂ ಕಿಂಪಾಕಫಳಪ್ರತಿಮಮುಖಿಳವಿಷಯಸುಖಂ (ಆದಿಪು. ೪–೭೪). [ಕಿಂಪಾಕ + ಫಲ]

**ಕಿಂಪಾಕಫಳ** 'ಕಿಂಪಾಕಫಲ' ನೋ.

**ಕಿಂಪಾಕವಿಪಾಕ** (ನಾ). ೧. = ಕಿಂಪಾಕಪರಿಪಾಕ. ೨. ಕಿಂಪಾಕ ಫಲದಂತೆ ದುಷ್ಪರಿಣಾಮವನ್ನು ಉಂಟುಮಾಡುವುದು: ಇಂದ್ರಿಯ ಸುಖಂಗಳುಂ . . . ಕ್ರಿಯಾವಸಾನವಿರಸಂಗಳುಂ ಕಿಂಪಾಕವಿಪಾಕಂಗಳುಂ (ಅಜಿಪು. ೮–೨ ವ). [ಕಿಂಪಾಕ + ವಿಪಾಕ]

**ಕಿಂಪುರುಷ** (ನಾ). ಕುದುರೆಯ ತಲೆ, ಮನುಷ್ಯನ ಶರೀರ ಅಥವಾ ಮನುಷ್ಯಮುಖ ಕುದುರೆಯ ಶರೀರವನ್ನು ಉಳ್ಳ ಒಂದು ವಿಧದ ದೇವತೆ; ಕಿನ್ನರ: "ಕಿನ್ನರಃ, ಕಿಂಪುರುಷಃ, ಮಯುಃ, ಅಶ್ವಮುಖಃ – ಈ ೪ ಕಿನ್ನರರ ಪೆಸರ್" (ಹಲಾಯು. ೧೪–೮೨); "ಕಿನ್ನರರು ಕಿಂಪುರುಷರ ಶ್ವಾಸ್ಯರೆನೆಮಯೂರರ್ಗೆ ನಿಜನಾಮಮಕ್ಕುಂ" (ಮಂಗರಾ. ೧೭–೧೭); ಸುರರು ಖಚರರು ಕಿನ್ನರರು ಕಿಂಪುರುಷರು . . . ಎಸೆದರು ರೋಮ ರೋಮದ ಕುಳಿಯ ಚೌಕದಲಿ (ಕುವ್ಯಾಉ. ೯–೫೯); ಕಿನ್ನರ ವೀಣೆಯ ಕಿಂಪುರುಷರಿಂದಂ . . . ಒಪ್ಪಿದತ್ತಾ ಮಹಾಲಿಂಗದಾಸ್ಥಾನಂ (ಹಮ್ಮೀರ. ೮–೪೧ ವ). [ಸಂ.]

**ಕಿಂಪುರುಷಪರ್ವತ** (ನಾ). ಕಿಂಪುರುಷರು ವಾಸವಾಗಿರುವ ಬೆಟ್ಟ: ಇದು ತಪಸ್ಸಿದ್ಧಿಕರವಾದ ಹೇಮಕೂಟವೆಂಬ ಕಿಂಪುರುಷಪರ್ವತವಲ್ಲವೆ (ಶಾಕುಂತ. ೧೦೧). [ಕಿಂಪುರುಷ + ಪರ್ವತ]

**ಕಿಂಬಹುನಾ** (ಅ). ಬಹಳ ಹೇಳುವುದೇನು; ಹೆಚ್ಚು ಹೇಳುವುದೇಕೆ: ಕಿಂಬಹುನಾ ಬಣ್ಣಿಪ್ಪನಾವಂ ನಿರುಪಮ ನಿಜ ಸೌಂದರ್ಯಮಂ ಚಂದ್ರನಾಥಾ (ಧರ್ಮನಾ. ೫–೩೪); ಆ ಕೋಣೆಯಲ್ಲಿ ಕಿಂಬಹುನಾ ಈ ಮನೆಯಲ್ಲಿ ಆಡಿದ ಮಾತು ಶತ್ರುವಿನ ಕಿವಿಯಲ್ಲಿ (ಕರ್ಣಾಟಿ. ೧೨೫) [P ಸಂಸ್ಕೃತದಲ್ಲಿ 'ಕಿಂ', 'ಬಹುನಾ' ಇವು ಬಿನ್ನ ಪದಗಳು]

**ಕಿಂವದಂತಿ** (ನಾ). ಜನರಲ್ಲಿ ಹಬ್ಬಿರುವ ಮಾತು, —ಸುದ್ದಿ; ಗಾಳಿ ಮಾತು: "ಆ ಜನಶ್ರುತಿ ಕಿಂವದಂತಿಯೆನೆ ಪಲರ ನುಡಿಯಕ್ಕು" (ಮಂಗರಾ. ೨೭–೩); ಲೋಕದಲ್ಲಿ ಒಳಗೊಳಗೆ ಕಿಂವದಂತಿ ಹೀಗಿದ್ದರೂ ನಾನದನ್ನು ಇಷ್ಟರತನಕ ನಂಬಿರಲಿಲ್ಲ (ಕರುಕಾ. ೫೩); ಆಚಾರ್ಯರು ತಮ್ಮ ಗುರುಗಳಿಗೆ . . . ಸಹಾಯ ಮಾಡುತ್ತಿದ್ದರೆಂದೂ ಕಿಂವದಂತಿ ಉಂಟು (ಸಂಗೀಚಂ. ೨೭೮). [ಸಂ. ಕಿಂವದಂತೀ]

**ಕಿಂವಾರ್ತೆ** (ನಾ). ಯಾರ ಸಮಾಚಾರ: ಕಿಂವಾರ್ತೆಯೆಂದಾರವಾರ್ತೆಯೆಂಬರ್ಥಂ" (ಶಮದ. ೮೧ ಪ್ರಯೋ.). [ಸಂ. ಕಿಂವಾರ್ತಾ]

**ಕಿಂಶಾರ** (ನಾ). = ಕಿಂಶಾರು. "ಕಣಿಶಮೆನೆ ಬೆಳೆದ ತೆನೆ ಕಿಂಶಾರಮೆನೆ ಸುಂಕು" (ಮಂಗರಾ. ೧೦೯–೩). [< ಸಂ. ಕಿಂಶಾರು]

**ಕಿಂಶಾರು** (ನಾ). ತೆನೆಯ ಕಾಳಿನ ಮೇಲಿರುವ ಸುಂಕು, —ಮುಳ್ಳು; ಊಬು: "ಧಾನ್ಯಶೂಕಂ, ಕಿಂಶಾರು – ಈ ೨ × × × (ಹಲಾಯು. ೯೪–೪೨೫); "ಕಿಂಶಾರುಃ, ಸಸ್ಯಶೂಕಂ – ೨ ಧಾನ್ಯದ ಸುಂಕು, ಧಾನ್ಯದ ಮುಳ್ಳು, ಭತ್ತದ ಊಗು" (ಸಿದ್ಧಾಂತಿ. ೨೪೦). [ಸಂ.]

**ಕಿಂಶುಕ** (ನಾ). ಮುತ್ತುಗದ ಮರ: "ಬ್ರಹ್ಮವೃಕ್ಷಃ, ಪಲಾಶಃ, ಕಿಂಶುಕಃ, ತ್ರಿಪತ್ರಕಃ – ಈ ೪ ಮುಟ್ಟುಗದ ಪೆಸರ್" (ಹಲಾಯು. ೩೩–೪೪); ನವಪ್ರಸೂನಕಾಂತಾರಕ ಕಿಂಶುಕದ್ರುಮಯುಗಕ್ಕೆ . . . ಎಣೆಯೆಂಬಿನ ಮಣ್ಕೆ ಕಾದಿದರ್ (ಗದಾಯು. ೮–೧೭); ವಸಂತ ಸಮಯ ಕಿಂಶುಕೋಪಮನಖಮುಖದಿನತ್ಯಾಸುರಮಾಗಿರ್ದ ನಿಜ ಸ್ವಾಮಿಯಂ ಕಂಡು (ಪಂಚತಂ. ೧೩೭–೨೦); ಕಿಂಶುಕವಿಟಪಿಯನಳುರ್ವ ದಾವ ಪಾವಕನಂತೆ (ಪಂರಾಮಾ. ೧೩–೧೦೭). [ಸಂ.]

**ಕಿಂಸಾರು** (ನಾ). ಅನೇಕ ಎಳೆಗಳುಳ್ಳ ಸರ: "ಸರಗಳಾಗಿ ಕೋದಲ್ಲಿ ಕಿಂಸಾರುಮೆಂಬುದು" (ಮಂಗರಾ. ೧೩೮–೩). [?]

**ಕಿಂಸ್ತುಘ್ನ** (ನಾ). [ಜ್ಯೋತಿ] ನಾಲ್ಕು ಸ್ಥಿರಕರಣಗಳಲ್ಲಿ ಒಂದು: ಶಕುನಿ ಚತುಷ್ಪಾತ್ ನಾಗ ಕಿಂಸ್ತುಘ್ನವೆಂಬ ನಾಲ್ಕು ಸ್ಥಿರಕರಣಂಗಳುಂ (ವಿವೇಕ. ೩೨೦). [ಸಂ.]

**ಕಿಕಿಯ ಹುಲ್ಲು** (ನಾ). ಒಂದು ಬಗೆಯ ಹುಲ್ಲು: (ವೈಬಗಿ. ೬೦–೧೨೧೨). [?]

**ಕಿಕೀದಿವ** (ನಾ). = ಕಿಕೀದಿವಿ. [ಸಂ.]

**ಕಿಕೀದಿವಿ** (ನಾ). ಹಂಗನ ಹಕ್ಕಿ; ಹಾಲಕ್ಕಿ: "ಚಾಷಃ, ಕಿಕೀದಿವಿಃ – ಈ ೨ ಹಂಗನ ಹಕ್ಕೀ ಹೆಸರು; ಶಕುನದ ಹಕ್ಕಿ" (ಸಿದ್ಧಾಂತಿ. ೧೩೮); ಕಿಕೀದಿವಿ ಕುಕ್ಕುಭಾಳಿಯಿಂ . . . ಕುರರೀಪ್ಲವ ಪ್ರಕರದಿಂದೆ ವಿರಾಜಿಕು ಮುನ್ನತಂ ವನಂ (ಹಮ್ಮೀರ. ೪–೭೨). [ಸಂ.]

**ಕಿಕ್ಕಣ್** 'ಕಿಟ್ಗಣ್' ನೋ.

**ಕಿಕ್ಕಣ್ಣಿಡು** (ಕ್ರಿ). ಕೆಳಗಣ್ಣಿನಿಂದ ನೋಡು; ಓರೆಗಣ್ಣಿನಿಂದ ನೋಡು: ಹತ್ತಿರಕೆ ಬರೆ ಮೊಗಂದಿಜುಗಿ ಕಿಕ್ಕಣ್ಣಿಡುವ [ಪಾಠಾಂ. ಕೆಗ್ಗಣ್ಣಿಡುವ] (ಸಮ್ಯಕಾ. ೩–೧೧). [ಕಿಕ್ಕಣ್ (< ಕಿಟ್ಗಣ್) + ಇಡು₁]

**ಕಿಕ್ಕಣ್ಣು** 'ಕಿಟ್ಗಣ್' ನೋ.

**ಕಿಕ್ಕರ** (ನಾ). ಕುಟುಂಬದವನು; ಬಂಧು; ಅವಿಭಕ್ತಕುಟುಂಬದ ಸದಸ್ಯ: ಕೊರವುಕಾರರನ್ನು ಅನುಸರಿಸಿ ಕಿಕ್ಕರರೆಲ್ಲರೂ ಕಾರಣರಿಗೆ ಅಡ್ಡಬಿದ್ದರು (ಹುಲಿಹಾ. ೧೫೦). [?]

**ಕಿಕ್ಕರಿಸು** (ಕ್ರಿ). ೧. ಚಿಕ್ಕದು ಮಾಡು; ಸಂಕೋಚಗೊಳಿಸು; ಮೈಯನ್ನು ಮುದುಡಿಸಿಕೊಳ್ಳು: (ಕ). ೨. ಒತ್ತಾಗಿ ಸೇರು; ದಟ್ಟವಾಗು: (ಕ). ೩. ಹೆಚ್ಚಾಗು; ತುಂಬಿ ಸೂಸು: (ಕ). 'ಕಿಕ್ಕಿಱಿ' ಪರಾ. [?]

**ಕಿಕ್ಕಿಂದ** 'ಕಿಷ್ಕಿಂದ' ನೋ.
**ಕಿಕ್ಕಿಂದೆ** 'ಕಿಷ್ಕಿಂದ' ನೋ.
**ಕಿಕ್ಕಿರಿ$_1$** 'ಕಿಕ್ಕಿಱ್$_1$' ನೋ.
**ಕಿಕ್ಕಿರಿ$_2$** 'ಕಿಕ್ಕಿಱ್$_4$' ನೋ.
**ಕಿಕ್ಕಿರಿಗೊಳ್ಳು** (ಕ್ರಿ). ಉದ್ರೇಕಗೊಳ್ಳು; ರೇಗು; ಕೆರಳು (?): ಬಲೆ ಶಿಕ್ಕಿಗೆ ತೊಡರುತ ಸೊಕ್ಕುತ ರಕ್ತವ ಕಕ್ಕುತ ಮೃಗಗಳು ದಿಕ್ಕನು ನೋಡುತ ಝುಕ್ಕಿಸಿ ನಡೆಯುತ ಕಿಕ್ಕಿರಿಗೊಳ್ಳುತಲಿ ಬಿಕ್ಕಿಸಿ ಕೂಗುತ ಪಕ್ಕದೊಳುರುಳುತ (ಹಮಜ. ೧೮). [ಕಿಕ್ಕಿರಿ$_0$+ ಕೊಳ್ಳು(< ಕೊಳ್$_1$)]
**ಕಿಕ್ಕಿಲಿ** (ನಾ). ೧. ಗೇಲಿ; ತಮಾಷೆ; ಅಪಹಾಸ್ಯ: ತಾಡಪ್ಪನ ಅಹಂಕಾರವನ್ನು ಕಿಕ್ಕಿಲಿ ಮಾಡುತ್ತಿದ್ದರು ಸೆಟ್ಟರು (ದೇವಪು. ೯೨). ೨. (ಕರಾ) ಕಚಕುಳಿ: ಮಗುವನ್ನು ಕಿಕ್ಕಿಲಿ ಮಾಡಿ ನಗಿಸಿದ (ರೂಢಿ). [?]
**ಕಿಕ್ಕಿಱ್$_1$**, ಕಿಕ್ಕಿರಿ$_1$, ಕಿಳ್ಕಿರಿ (ಕ್ರಿ). ದಟ್ಟವಾಗು; ಒತ್ತಾಗಿರು; ಸಾಂದ್ರವಾಗಿರು: ಚಳಲ್ಲತಾಂಗಿಯರ ಕೊಂಕಿದ ತೋಳ ಮೊದಲ್ಗೆ ತೀವಿ ಕಿಕ್ಕಿಱಿದ ಕುಚಕ್ಕೆ ಕಣ್ಬರಿದು (ಅನಂಪು. ೧–೮೩); ಪೊಣ್ಮುವ ಮೊಲೆಯ ಕಿಕ್ಕಿಱಿದ ತೆಂಗಾಯ್ಮೊಲೆಯ (ಚಬಪು. ೩೭–೯೩); ಕಿಕ್ಕಿಱಿದ ಪೆರ್ಗೊನೆಗಳಿಂದೆ ಎಸೆವ ಚೆಂದೆಂಗಾಯ್ಗಳ್ (ಜೈಮಿಭಾ. ೩–೨೭); ಅರಸು ಮಕ್ಕಳ ಮೊತ್ತ ಕಿಕ್ಕಿಱಿದೆಸೆದುದು (ಕಂನವಿ. ೭–೧೨). **ಕಿಕ್ಕಿರಿ$_1$**: ಜನವು ಊರೇ ಹಿಸಿದು ಹೋಗುವಂತೆ ಕಿಕ್ಕಿರಿದು ಬಿಟ್ಟಿತ್ತು (ವಚಭಾ. ೬೭); ಅಂಗಳದಲ್ಲಿ ಅಂದಿನ ಸಂಜೆ ಊರಿನ ಶ್ರಾವಕರೆಲ್ಲ ಕಿಕ್ಕಿರಿದರು (ದಾನಚಿಂ. ೧೦). △ **ಕಿಳ್ಕಿರಿ**: ವರಮುನಿಗಳ್ ಶಾಂತರ್ ಕಿಳ್ಕಿರಿದಿರೆಯುಂ ಬರಿದದೆಂಬ ತೆರದಿಂದಿರ್ಕು೦ (ಸೌನಂದ. ೧–೧೦).
[ದೇ. ‖ ತಮಿ. ಚೆಱ್; ತೆಲು. ಕಿಕ್ಕಿಱ್, ಕಿಕ್ಕಿಱಿಂಚು]
**ಕಿಕ್ಕಿಱ್$_2$** (ಕ್ರಿ). ಕೂಗು; ಚೀರು; ಧ್ವನಿಮಾಡು: ಕಣ್ಬಟ್ಟು ನೋಡುತ್ತಾಲಿಸುತ ಕಿಕ್ಕಿಱಿವುತಂ ನಾಯಂ ಕರೆವುತ (ಬಸಪು. ೨೦–೧೩). [ಕಿಕ್ಕು + ಇಱ್$_1$]
**ಕಿಕ್ಕಿಱ್$_3$** (ಕ್ರಿ). ಕಿರಿಕಿರಿಪಟ್ಟುಕೊಳ್ಳು; ಅಸಮಾಧಾನಗೊಳ್ಳು: ಸುಭುಜಂ ಕಿಕ್ಕಿಱಿದೆಬ್ಬು... ಬಗೆ ಮನವಮುಳುಕದ ಗಂಡಗರ್ವದಿರ್ದೆಸೆ ಮೂಲೆಗಳೊಳಮುಯ್ಯಲಾಡೆ (ರಾಮಾಶ್ವ. ೯೩–೨೪). [< ಕಿಱಿಕಿಱ್]
**ಕಿಕ್ಕಿಱ್$_4$**, ಕಿಕ್ಕಿರಿ$_2$ (ನಾ). ದಟ್ಟಣೆ; ಸಂದಣಿ; ಸಾಂದ್ರತೆ: ಗಳೆದಾರವಂದ ಕಿಕ್ಕಿಱ್ ಪೂರ್ಣವೀ ನಾಲ್ಕು ಕಳೆಗಳ ಮಾಳ್ಪರು ಕೆಲರು (ಭರಜ. ೬೮–೮೮). **ಕಿಕ್ಕಿರಿ$_2$**: ಕಿಕ್ಕಿರಿ ತುಂಬಿದೆ ಭೂಮಿಯ ಕಣಜ ಕಕ್ಕಸಬಡುತಿದೆ ಬೊಕ್ಕಸದೊಡಲು (ಗರಿ. ೬೦–೧೧); ಜಾತ್ರೆಗೆ ಜನ ಕಿಕ್ಕಿರಿದಿದ್ದರು (ರೂಢಿ).
ಕಿಕ್ಕಿಱಿಗಿಱಿ (ದ್ವಿರುಕ್ತಿ): ಪಲವುಂ ತೆಜದ ವೃಕ್ಷಜಾತಿಗಳಿಂದಂ ಕಿಕ್ಕಿಱಿಗಿಱಿದಿರ್ದ ನಂದನವನದೊಳ್ (ವಡ್ಡಾರಾ. ೧೪೯–೫); ತಿಂತಿಣಿಯೊಳ್ ತಗುಳ್ದು ಕಿಕ್ಕಿಱಿಗಿಱಿದಿರ್ದ ಕೊಳ್ಗುಳದೊಳ್ (ಪಂಪಭಾ. ೧೩–೫೨); ಕಿಕ್ಕಿಱಿಗಿಱಿದ ಮುಗಿಲ್ಗಳಿಲ್ಲದಿರವು ನಿರಭ್ರಂ (ವಸ್ತುಕೋ. ೬೧–೬೨); ಕಿಕ್ಕಿಱಿಗಿಱಿದು ಮಣಿತೋರಣ ನಿತಾಂತಿಕದೊಳ್ (ಅನಂಪು. ೧೦–೨೭ ವ); ಬಳಲಿ ಕಿಕ್ಕಿಱಿಗಿಱಿದು[ದ]ವನದೊಳಗಾಗ ಲೋಡಿದನು (ಕುವ್ಯಾಅ. ಓರಿಇ. ೨೩–೭೭). [< ಕಿಕ್ಕಿಱ್$_1$]
**ಕಿಕ್ಕಿಱಿಗೊಳ್** (ಕ್ರಿ). ದಟ್ಟವಾಗು; ಒತ್ತಾಗು; ಸಾಂದ್ರವಾಗು: ನಿತಂಬಿನಿಯರ ಹಸ್ತಸ್ವಸ್ತಿಕದ ನಡುವೆ ಕಿಕ್ಕಿಱಿಗೊಂಡು ತುಂಬಿದ ಮೊಲೆಗಳ್ ಚದುರರ ಚಿತ್ತಕ್ಕಿಂಬಾದುವು (ಜಯಕಾ. ೧೧–೫೩); ಜೋದರರೋಳಿ ಕಿಕ್ಕಿಱಿಗೊಂಡೆಯ್ದಿದುದು (ಶ್ರೀಪಾಲ. ೧೩–೬೪).
[ಕಿಕ್ಕಿಱ್$_4$ + ಕೊಳ್$_1$]

**ಕಿಕ್ಕಿಱಿಸು** (ಕ್ರಿ). ಹತ್ತಿಕ್ಕಿ ಸೇರಿಸು; ಕೂಡಿಸು (?): ಆ ಸದ್ವಿವೇಕದಲ್ಲಿ ಸೋಹಮೆಂಬ ಷಡಕ್ಷರಿ ಮಂತ್ರವನೆ ಕಿಕ್ಕಿಱಿಸಲು ಆ ಮಂತ್ರವು ಸದ್ವಿವೇಕ ಜಲದಲ್ಲಿ ನಿಃಪತಿಯಾಗಿ . . . ಜಲವೆ ಉಳಿಯಿತು (ಗುಪ್ತಮಂ. ೧೮೪–೫); ಮುನ್ನುಸುರ್ದ ಭಕ್ತಮಾಹೇಶರೊಂದಂಗೊಳಿಸಿವುನ್ನತಂ ಶಿವಲಿಂಗದೋಳ್ ಕಿಕ್ಕಿಱಿಸುತೆಯದನ್ನು ಸ್ಥೂಲಾಂಗದಲಿ ನೆಲೆಗೊಳಿಸೆ (ಚೋರಬ. ೧೨–೩೪). [ಕಿಕ್ಕಿಱ್$_4$ + –ಇಸು$_3$]
**ಕಿಕ್ಕು** (ನಾ). ಗಟ್ಟಿಯಾದ ಕೂಗು; ಚೀರುದನಿ. 'ಕಿಕ್ಕಿಱ್$_2$' ಪರಾ. [?]
**ಕಿಗ್ಗ** (ಗು). ಕಿರಿದಾದ; ಚಿಕ್ಕದಾದ; ಮೋಟಾದ: ಮರುಳೆ ನೇಹದಗ್ನಿಯನ್ನು ಬಗಲೊಳಗೆ ಬೈಚಿಟ್ಟು ಕಿಗ್ಗ [ಪಾಠಾಂ. ಕಿಱಿಯ] ಮೆಳೆಯಂ ಸಾರ್ದೊಡೆ (ವೆಂಕಾರಾ. ೨–೪–೪೫). [< ಕಿಱು]
**ಕಿಗ್ಗಟ್ಟು** 'ಕಿಱ್ಕಟ್ಟು' ನೋ.
**ಕಿಗ್ಗಠಾರಿ** (ನಾ). ಚಿಕ್ಕ ಕಠಾರಿ: ಉಡಿಯಿಂದೀಳ್ದುಕೊಂಡ ಕಿಗ್ಗಠಾರಿಯನ್ನನುವಿಡಿದು (ಬಿಟ್ಟಅ. ೨೯–೯). [< ಕಿಱಿದು + ಕಠಾರಿ]
**ಕಿಗ್ಗಡಲಿಡು** (ಕ್ರಿ). ಸಣ್ಣ ಕಡಲನ್ನುಂಟುಮಾಡು; ಸಣ್ಣ ಸಮುದ್ರದಂತೆ ಆಗು: ಕಿಗ್ಗಡಲಿಟ್ಟು ಹರಿದುದು ಶೋಣಿತಾಂಬುನಿಧಿ (ಕುವ್ಯಾದ್ರೋ. ಓರಿಇ. ಪರಿ. ೨೯೪). [< ಕಿಱುಗಡಲ್ + ಇಡು$_1$]
**ಕಿಗ್ಗಡಲು** 'ಕಿಱುಗಡಲ್' ನೋ.
**ಕಿಗ್ಗಡೆ** (ನಾ). ಕೆಳಗಡೆ; ಕೆಳಭಾಗ: ಸೋಂಕಿ ತಜ್ಜಲವಱುದು ಸುಯ್ಯೆನಲು ಮುಂಕೊಂಡು ಪರಿದು ಕಿಗ್ಗಡೆಯ ಅಂಕುರವಡೆದ ಪೂಗಿಡು ವೃಕ್ಷಲತೆವೇರ್ಗೆ ಬೆಂಕಿಯ ಹರಹಿದಂತಾಯ್ತು (ಮೋಹತ. ೨೮–೨೦); ಮುಡಿಮೊಲೆಯ ಪೊಱೆವಾಱ ಬಿಣ್ಪನಿಂತು ವೆಗ್ಗಳಿಸಲೇಕೆಂದು ಬೊಮ್ಮನಂ ಜಱೆವುತ್ತೆ ಕಿಗ್ಗಡೆಯ ತೊಡೆಗಳಂ ನುಗ್ಗುಮಾಡುತ್ತೊರ್ವ ದಿಗ್ಗಜೋಪಮಯಾನೆ ಭರ್ಗನಂ ಕಾಣುತ್ತೆ ಬಗ್ಗಬರಿಯೆರ್ದೆಯಾದಳು (ಚಬಪು. ೧೯–೨೭). [< ಕಿೞ್$_2$ + ಕಡೆ$_3$]
**ಕಿಗ್ಗಣ್** 'ಕಿಱ್ಗಣ್' ನೋ.
**ಕಿಗ್ಗಣ್ಣಿಕ್ಕು** 'ಕಿರ್ಗಣ್ಣಿಕ್ಕು' ನೋ.
**ಕಿಗ್ಗಣ್ಣು** 'ಕಿಱ್ಗಣ್' ನೋ.
**ಕಿಗ್ಗಳ$_1$** 'ಕಿಗ್ಗುಳ' ನೋ.
**ಕಿಗ್ಗಳ$_2$** (ಗು). ಬಹಳ ಹಳೆಯ; ಓಬಿರಾಯನ ಕಾಲದ: "ಕಿಗ್ಗಳ – ಜರ್ಜರ, ಹಳೆಯ" (ಜಾನಕೋ. ೩೭); ಎಲ್ಲಿಯದೋ ಒಂದು ಕಿಗ್ಗಳ ನಾಮ ಸಂವತ್ಸರದ ಕಥೆ ತೆಗೆದ (ರೂಢಿ). [?]
**ಕಿಗ್ಗಳದೈವ** (ನಾ). ಕೀಳುದೈವ; ತುಚ್ಛವಾದ ದೇವತೆ: ಕಿಗ್ಗಳ ದೈವದ ಬಹುವೆಗ್ಗಳ ಮುರಿವಂತ ಅಗ್ಗಳೆಯನೆಂದು ನಂಬಿದೆ ಕಗ್ಗೊಡರಾಯ ಮಂಗಳ ಸೌಖ್ಯವನೀಯಯ್ಯ (ಆದಿಪ. ೨–೫).
[ಕಿಗ್ಗಳ$_1$ (< ಕಿಗ್ಗುಳ) + ದೈವ]
**ಕಿಗ್ಗಾಡು** (ನಾ). ಕುರುಚಲು ಗಿಡಗಳಿರುವ ಕಾಡು; ಸಣ್ಣಕಾಡು: ಕಿಗ್ಗಾಡು, ಕುರುಚಲುಕಾಡು (Spinney. ಇಂಕನಿ).
[< ಕಿಱಿದು + ಕಾಡು$_2$]
**ಕಿಗ್ಗಾಣಿ** (ನಾ). ೧. ಕೀಳು ಬೆಲೆಯ ಕಾಣಿ; ಒಂದು ಬಗೆಯ ನಾಣ್ಯ. ೨. (ಅಲಂ) ನಿಕೃಷ್ಟ ಬೆಲೆಯುಳ್ಳದ್ದು; ತುಚ್ಛವಾದುದು: ಈ ಕಂಗಾಲೂರ ಗೌಡನ ಕಿಗ್ಗಾಣಿ ಸಭಾಕ್ಕ ಒಬ್ಬರ ಹಾಯಬೇಕು (ನಾಥಾರಿ. ೬೭). [< ಕಿಱಿದು + ಕಾಣಿ]
**ಕಿಗ್ಗಾರಣೆ** (ನಾ). (ಗೋಡೆಯ) ಕೆಳಗಿನ ಭಾಗವನ್ನು ಬಣ್ಣದಿಂದ ಬಳಿಯುವುದು; ಕೆಳಭಾಗದ ಕಾರಣೆ: ಸುರಪರತ್ನದ ಭಿತ್ತಿಯೆಡೆಯಲ್ಲಿ ಮುತ್ತೊರ್ವ ತರಳೆ ಸಿಂಧೂರದಿಂ ಕಿ[ಪಾಠಾಂ. ರೆ]ಗ್ಗಾರಣೆಯ ಚೆಲುವ ವಿರಚಿಸಲ್ (ವೆಂಕಾರಾ. ೧–೨೧–೬). [< ಕಿೞ್$_2$ + ಕಾರಣೆ$_1$]

**ಕಿಗ್ಗಾಳಿ, ಕಿರ್ಗಾಳಿ, ಕೀಳುಗಾಳಿ** (ನಾ). ಕೆಳಗಿನಿಂದ ಬರುವ ಗಾಳಿ. ℙ ಬೇಟೆಗೆ ಗುರಿಯಾದ ಪ್ರಾಣಿಯಿಂದ ಬೇಟೆಯಾಡುವ ಮೃಗ ಅಥವಾ ಬೇಟೆಗಾರನ ಕಡೆಗೆ ಬೀಸುವ ಗಾಳಿ: ಮೇಗಾಳಿಯಿಂ ದೂರದಿಂ ತೋಱಿತ್ತನೊಡ್ಡಿ ಕಿಗ್ಗಾಳಿಯಿಂ ಬಂಡಿಯಿಂದಿಳುಹಿ ಹುಲಿಯ ಹಾರಯಿಸಿ (ಹಚಕಾ. ೫–೩೦) ; ಎಲ್ಲಿಗೆ ಹೋಗುವುದೆಂದಿಗೆ ಸೇರುವುದೇ ದಿಕ್ಕು ರೇವೆನ್ನುವರಿವು ತಮಗಿಲ್ಲದವರಿಗೆ ಮೇಗಾಳಿ ಕಿಗ್ಗಾಳಿ ಗೊಂದಲ ವೇತಕೆ (ಇಂಚಾಪ. ೧೧೨–೫೦) ; ಹುಲಿ ಕಿಗ್ಗಾಳಿಗೆ ಬಂತು (ಶಬ್ದವಿ. ೬) ; "ಬೇಟೆಯಾಡುವ ಮೃಗದ ಮೇಲಿಂದ ಬೇಟೆಗೆ ಗುರಿಯಾದ ಪ್ರಾಣಿಯ ಕಡೆಗೆ ಬೀಸುವ ಗಾಳಿಗೆ ಮೇಗಾಳಿಯೆಂದೂ, ಪ್ರಾಣಿಯ ಕಡೆಯಿಂದ ಆ ಮೃಗದ ಕಡೆ ಬೀಸುವ ಗಾಳಿಗೆ ಕಿಗ್ಗಾಳಿಯೆಂದೂ ಹೆಸರು" (ಸಂಭಾನಿ. ೨೧೫). 'ಮೇಗಾಳಿ' ಪರಾ. **ಕಿರ್ಗಾಳಿ:** ಪೊಸಗಂಪಾದೊಡಮುಕ್ಕುಮೆಂದೆ ಪೆಱರಿಂ ಕಿರ್ಗಾ[ಪಾಠಾಂ. ಗ್ಗಾ]ಳಿಯೊಳ್ ನಿಲ್ವಳ್ (ಲೀಲಾವ. ೨–೮೯). **ಕೀಳುಗಾಳಿ:** ಆ ಕೀಳುಗಾಳಿಯೊಳು ಮೇಲಣಯ್ಯನ ಮಹಾಶ್ರೀಕಳೇವರದೆಲರು ಶುದ್ಧನೆನಿಸಲು ನೃಪನನಾ ಕಂಬಿಕಾಱ ಹೊನ್ನಯ್ಯ ನಮ್ಮಯ್ಯನು (ವೀಶೈಪು. ೮–೧ ೩೭).

[< ಕಿೞ್$_2$ + ಗಾಳಿ$_1$]

**ಕಿಗ್ಗಿಱಿಯ** (ನಾ). ಬಹಳ ಚಿಕ್ಕವನು: ಈತರೆಲೆ ಕಿಗ್ಗಿಱಿಯರಶ್ವಿನಿ ದೇವರಿವರೆಂದು (ಸಂಭಪ. ೬–೪೪) ; ಆತನಿಂ ಕಿಗ್ಗಿಱಿಯರೇಳ್ವರು ತಾತ ಬರಲಿಕೆ ಜನನಗಂಡರು (ಸಂಭಪ. ೮–೨೬).

[< ಕಿೞ್$_2$ + ಕಿಱಿಯ]

**ಕಿಗ್ಗುಡ್ಡ** (ನಾ). ಚಿಕ್ಕ ಬೆಟ್ಟ ; ಕಿರಿಯ ಗುಡ್ಡ : ಹೆಬ್ಬೆಟ್ಟ ಕಿಬ್ಬೆಟ್ಟ ಹೆಗ್ಗುಡ್ಡ ಕಿಗ್ಗುಡ್ಡ ಹೆಬ್ಬಂಡೆ ಕಿಬ್ಬಂಡೆಗಳ ತಂಡದಾಯಮೋ(ಶ್ರೀರಾಮಾ. ೩೫೩–೩೫೪). [< ಕಿಱಿದು + ಗುಡ್ಡ$_2$]

**ಕಿಗ್ಗುಲಜ** (ನಾ). ಹೀನಕುಲದಲ್ಲಿ ಹುಟ್ಟಿದವನು; ಕೆಳಜಾತಿಯವನು: ಕಿಗ್ಗುಲಜರಾವ ದರುಶನದೊಳಿರಲುರುಳಿದರ್ಗೆ ತಗ್ಗಿಸಂಬೋಳಿ ನುಡಿಯಲಿಬೇಕು (ಚೋರಬ. ೧೦–೭). [< ಕಿೞ್$_2$ + ಕುಲಜ]

**ಕಿಗ್ಗುಳ, ಕಿಗ್ಗಳ$_1$** (ನಾ). **೧.** ಕೆಳಮಟ್ಟ ; ತಗ್ಗು ; ತಗ್ಗಾಗಿರುವುದು. **೨.** ತುಚ್ಛವಾಗಿರುವಿಕೆ ; ಹೀನತನ ; ನೀಚಸ್ವಭಾವ. **ಕಿಗ್ಗಳ$_1$ :** ೧. ಸರಸ ವೆಗ್ಗಳ ಹೊಲ್ಲ ಹೊರಸು ಕಿಗ್ಗಳ ಹೊಲ್ಲ (ಸರ್ವಜ್ಞ. ೧೨೦೬). ೨. ಹಿಗ್ಗು ಬಡವಗೆ ಹೊಲ್ಲ ಸಿಗ್ಗು ಸೂಳೆಗೆಹೊಲ್ಲ ನುಗ್ಗಿಯ ಹೂಗೆ ಮಳೆಹೊಲ್ಲ ದುರ್ಜನರ ಕಿಗ್ಗಳವೆ ಹೊಲ್ಲ (ಸರ್ವಜ್ಞ. ೮೨೮). (ಗು). **೩.** ತುಚ್ಛವಾಗಿರುವ; ಹೀನವಾದ: ಕಿಗ್ಗಳ ಕವಿತೆಯನ್ನು ಕೂಡ ಕೋಕಿಲಕಂಠ ಕಾವ್ಯಮಾಡಬಹುದಲ್ಲಾ (ಬಾಬಲ. ೫೦); ಏತಕ್ಕೂ ಬಾರದ ಕಿಗ್ಗಳ ಪದಾರ್ಥವಾಗಿ ಬಿಟ್ಟೆ (ಚೀನಬಾ. ೧೪೩). [< ಕಿೞ್$_2$ + ಕುಳ ?]

**ಕಿಚ, ಕಿಚಿ** (ನಾ). ಒಂದು ಅನುಕರಣವಾಚಕ ಧ್ವನಿ. 'ಕಿಚಗುಟ್ಟು' ಪರಾ. **ಕಿಚಿ.** 'ಕಿಚಿಗುಟ್ಟು' ಪರಾ.

ಕಿಚಿಕಿಚಿ (ದ್ವಿರುಕ್ತಿ) : ಮಳೆಯಾಗಿ ಬೀದಿಯೆಲ್ಲ ಕಿಚಿಕಿಚಿಯಾಗಿದೆ (ರೂಢಿ). [ದೇ. ‖ ತಮಿ. ಕಿಚಿಕಿಚಿ ; ಮಲ. ತೆಲು. ಕಿಚ್ಚುಕಿಚ್ಚು]

**ಕಿಚಕ್, ಕಿಚಿಕ** (ನಾ). ಒಂದು ಅನುಕರಣ ಧ್ವನಿ. **ಕಿಚಿಕ :** ಕಿಚಿಕ ಧ್ವಾನದಿಂ ದಿಕ್ತಟಮನೊಡೆಯುತೆ (ಸಂರಾಅಂ. ೧೬೪).

ಕಿಚಕೆನ್ನು = ಕಿಚಕ್ ಎಂದು ಸದ್ದುಮಾಡು : ಕೆಸರೊಳಗೆ ಕಿಚಕೆನ್ನುವಂತೆ ಕಾಲಿಟ್ಟು ಓಡಿದನು (ರೂಢಿ). [?]

**ಕಿಚಗುಟ್ಟು, ಕಿಚಿಗುಟ್ಟು, ಕಿಚುಗುಟ್ಟು** (ಕ್ರಿ). ಕಿಚಿ ಕಿಚಿ ಶಬ್ದ ಮಾಡು : (ಕಿ). **ಕಿಚಿಗುಟ್ಟು :** (ಕಿ). **ಕಿಚುಗುಟ್ಟು :** ಭೂತಪ್ರೇತ ಪಿಶಾಚಗಳೆಲ್ಲವೂ . . . ಮಾಂಸವನ್ನು ಕಿತ್ತು ತಿನ್ನುತ್ತ ಕಿಚು ಕಿಚು ಗುಟ್ಟುತ್ತ ಭಯಂಕರವಾಗಿದ್ದವು (ಕಲಾಧ. ೧೦೯). [ಕಿಚ + ಕುಟ್ಟು$_1$]

**ಕಿಚಡಿ** 'ಕಿಚ್ಚಡಿ' ನೋ.

**ಕಿಚಾಯಿಸು** (ಕ್ರಿ). ಕೀಟಲೆಮಾಡು ; ಚುಡಾಯಿಸು : ಶಾಸ್ತ್ರಿ ತನಗಿಂತ ಕಿರಿಯನಾದ ಸಾಣಿಯನ್ನು ಪ್ರಲೋಭಿಸುತ್ತಾನೆ, ಕಿಚಾಯಿಸುತ್ತಾನೆ (ಪ್ರಶ್ನೆ. VII, ಮುನ್ನುಡಿ); ಯಾಕೆ ನೀವು ಹೀಗೆಲ್ಲ ಎಂಥೆಂಥದೋ ಮಾತನಾಡುವುದು ? ಕಿಚಾಯಿಸಿದಳು (ಹೊಸಕ್ಷಿ. ೮೭).

[← ಮರಾ. ಕಿಚಾವಣೇಂ]

**ಕಿಚಿಕ** 'ಕಿಚಕ್' ನೋ.

**ಕಿಚಿ** 'ಕಿಚ' ನೋ.

**ಕಿಚಿಕಿಲ್** (ಕ್ರಿ). ಕೆನೆ; ಹೇಕರಿಸು; ಹೇಷಾ ಧ್ವನಿಮಾಡು: "ಕಿಚಿಕಿಲ್ – ಹೇಷಿತೇ" (ಶಮುಧಾ) ; ಹಯ ತಾಂ . . . ಸೊಮ್ಮುವೆರ್ಚಿದೊಮ್ಮುಳಿಸಿ ಕಿಚಿಕಿಲ್ದು ಬಿಮ್ಮನೆ ನಡೆದು (ರಾಮಾಶ್ವ. ೧೨೦–೨೩). [?]

**ಕಿಚಿಗುಟ್ಟು** 'ಕಿಚಗುಟ್ಟು' ನೋ.

**ಕಿಚುಕಿರಿ** (ಕ್ರಿ). ಕಿಚಕಿಚ ಶಬ್ದಮಾಡು (?) : ಪರಿಘದಿಂದಿಟ್ಟು ಕೆಡಪುತ ಕೆಲರ ಕರವಾಳದುರಗಲಿಂ ಕತ್ತರಿಸಿ . . . ಪುಟನೆಗೆದು ಭೂತಳಕೆ ಧುಮ್ಮಿಕ್ಕಿ ಕಿಚುಕಿರಿವುತಾ ನಿಂತು ನಿಟ್ಟಿಸದೆ ಕಂಗಳ ಮುಚ್ಚಿ (ವೆಂಕಾರಾ. ೬–೧೯–೧೮). [ಕಿಚಕ್ + ಇರಿ$_1$ (< ಇಱಿ$_1$)]

**ಕಿಚುಗುಟ್ಟು** 'ಕಿಚಗುಟ್ಟು' ನೋ.

**ಕಿಚ್ಚಕುರಿ** (ನಾ). (?) : ಕಿಚ್ಚಕುರಿಗಳ ಕೈಯ್ಯಮಾಂಸವು ಹೆಚ್ಚುವಂದದಿ ಸಕಲ ದಾನವರೊಚ್ಚೆ ಹೊತ್ತಿನೊಳೆಸೆವ ಬಲ ಮೋಹರಿಸಿ ಬರುತಿರಲು (ದೇವೀಮ. ೮–೧೪). [?]

**ಕಿಚ್ಚಚ್ಚಿಗ** (ನಾ). ಬೆಂಕಿಯ ಕಣ್ಣುಳ್ಳವನು ; ಅಗ್ನಿನೇತ್ರ ; ಶಿವ : ಅಡಿಗಣ್ಣ ಕಿಚ್ಚಚ್ಚಿಗನೆಯಲರುಣಿಸ ತೊಡವಿಡಿಗ ಮಿಗಗೈಯ್ಯ . . . ಪೊರೆಗೆಮ್ಮನು (ನವಮೋ. ೩೩–೧). [ಕಿಚ್ಚು + ಅಚ್ಚಿ$_5$ + –ಇಗ]

**ಕಿಚ್ಚಡಿ, ಕಿಚಡಿ, ಕಿಚ್ಚಿಡಿ$_2$, ಖಿಚಡಿ** (ನಾ). **೧.** ಅಕ್ಕಿ, ಬೇಳೆಗಳನ್ನು ಒಟ್ಟಿಗೆ ಕೂಡಿಸಿ ಮಾಡಿದ ಅನ್ನ: ಹಾಲನೇಮ, ಹಾಲಕೆನೆಯ ನೇಮ, ಕೆನೆತಪ್ಪಿದ ಬಳಿಕ ಕಿಚ್ಚಡಿಯ ನೇಮ (ಬಸವ. ೨೩೨); ಹೆಸರ ಕಿಚ್ಚಡಿ ಶಾಲ್ಯಾನ್ನ ಸದ್ಯೋಘೃತ ಹಸನಾದ ದೋಸೆಯುಂಡಲಿಗೆ (ಕಂನವಿ. ೨೨–೨೯) ; ಕಿಚಡಿ ಬೋನವು ಪಚ್ಚಡಿ ತಾಳಿಲು (ಶರಲೀ. ೮೭–೧೮) ; ಕಿವುಡ ಕಿಚ್ಚಡಿ ಬೇಡಿದರೆ ಗವುಡ ಹಚ್ಚಡ ಬೇಡಿದ (ಗಾದೆ). **೨.** ಅನ್ನಕ್ಕೆ ಕಲಸುವ ಒಂದು ಬಗೆಯ ಮೇಲೋಗರ ; ಗೊಜ್ಜು : ಹೆರಳೇಕಾಯಿ ರಸವಂ ಹಿಂಡಿಕೊಂಡು, ಉಪ್ಪು ಮೆಣಸು ಹಾಳಿತವಾಗಿ ಹಾಕಿ ಕುದಿಸಿ, ಇಂಗು ಜೀರಿಗೆ ಮೆಂತ್ಯ ಸಾಸುವೆ ಬೆಳ್ಳುಳ್ಳಿ ಸಹ ಹಾಕಿ, ತುಪ್ಪದಲ್ಲಿ ಒಗ್ಗರಿಸಿ, ಆ ಕಿಚ್ಚಡಿಯಂ ಅನ್ನಕ್ಕೆ ಹಾಕಿಕೊಂಡು (ಸಕವೈ. ೩೩೩). **ಕಿಚಡಿ :** ೧. ಅರಮನೆಯ ಆನೆಗಳಿಗೆ ಕಿಚಡಿಯನ್ನು ತಿನ್ನಿಸುತ್ತಾರೆ (ಪ್ರವಾಇ. II, ೧೫೮). **೩.** ಜೋಳ, ಗೋಧಿ ಮೊದಲಾದುವುಗಳ ನುಚ್ಚನ್ನಾಗಲಿ ಸಬ್ಬಕ್ಕಿಯನ್ನಾಗಲಿ ಬೇಯಿಸಿ ಮಾಡಿದ ಅನ್ನ: ಗೋವಿನ ಜೋಳದ ಕಿಚಡಿ, ಮಾಂಸ ತಂದುಕೊಟ್ಟರು (ಮೇದಿಮ. ೧೩೭) ; ಕಾರು ಹಾಯ್ದರೆ ಬಾಯ್ಗೆ ಸಿಡಿವುದು ಕೆಂಪು ಗೋಧಿಯ ಕಿಚಡಿಯು (ನೆಲಮು. ೧೨). **೪.** ಮುದ್ದೆ ಮುದ್ದೆಯಾದ ಅನ್ನ : ನೀರು ಹೆಚ್ಚಾಯಿತೋ ಏನೋ, ಅನ್ನ ಕಿಚಡಿಯಾಗಿದೆ (ರೂಢಿ). **ಕಿಚ್ಚಿಡಿ$_2$ :** ೧. ಹುಗ್ಗಿ ಕಿಚ್ಚಿಡಿಯೆಱೆಯಪ್ಪ ಸೇವಗೆ ಹಿಂಡಿ ಗುಗ್ಗರಿ ಸೂಸಲುಂಡಲಿಗೆ (ಭರಚ. ೨೦–೧೨೮). **ಖಿಚಡಿ :** ೫. (ಆಲಂ) ನಜ್ಜುಗುಜ್ಜು : ನಾ ಮ್ಯಾಲೆ ನೀ ಮ್ಯಾಲೆ ! ಎಲ್ಲಾ ಖಿಚಡಿ ಆಗೇದ ಖಿಚಡಿ (ಹುಚ್ಚಾಟ. ೧೧೦).

[ದೇ. ‖ ತಮಿ. ಕಚ್ಚಡಿ ; ತೆಲು. ಕಿಚ್ಚಿಡಿ. / ಹಿಂ. ಮರಾ. ಖಿಚಡೀ ; ಪ್ರಾ. ಖಿಚ್ಚ]

**ಕಿಚ್ಚಣಿ** (ನಾ). = ಕಿಚ್ಚಡಿ. 'ಕಿಚ್ಚಣಿಗೆಸಱ್' ಪರಾ. [< ಕಿಚ್ಚಡಿ]

**ಕಿಚ್ಚಣಿಗೆಸಱ್** (ನಾ). ಕಿಚ್ಚಡಿಯ ಗೊಜ್ಜು (?) : ಕಾಸಿದ ಕಿಚ್ಚಣಿಗೆಸಱೊಳು ಸಾಸುವೆ ಕಲ್ಲುಪ್ಪು (ಅಶ್ವವೈ. ೧೩-೧೩). [ಕಿಚ್ಚಣಿ + ಕೆಸಱ್]

**ಕಿಚ್ಚಳಿ** (ಕ್ರಿ). ಕಿಚ್ಚು ಅಳಿದು ಹೋಗು; ಬೆಂಕಿ ಆರು : ಕಾಲೂರ ಕಿಚ್ಚಳಿದ ಕಿಚ್ಚಿನಲ್ ಸಯ್ತು ಪುದಾಳ್ಕೆಯಂ ಕರೆಗುಂ (ಕಾಲೂರ. ೮೪-೧೬೯). [ಕಿಚ್ಚು + ಅಳಿ$_1$ (< ಅೞಿ$_1$)]

**ಕಿಚ್ಚಾಗು** (ಕ್ರಿ). ಬೆಂಕಿಯಾಗು : ನಡೆದುದಂ ಉಸುರಿದಳ್ ಬಾಳ್ಮರದ ಕಿಚ್ಚಾದುದಳಲು (ಕಾಲೂರ. ೧೩೨-೨೮೩). [ಕಿಚ್ಚು + ಅಗು$_1$]

**ಕಿಚ್ಚಿಕ್ಕಿಸು** (ಕ್ರಿ). ಬೆಂಕಿಯಿಡಿಸು; ಬೆಂಕಿ ಹಾಕಿಸು : ಹಿಂಗದಾ ಮನೆಗೆ ಕಿಚ್ಚಿಕ್ಕಿಸಲ್ ಧಗಧಗೆಂದುರಿಯಲ್ (ಚಬಪು. ೭-೧೯). [ಕಿಚ್ಚಿಕ್ಕು + -ಇಸು$_3$]

**ಕಿಚ್ಚಿಕ್ಕು** (ಕ್ರಿ). ಬೆಂಕಿಯಿಡು, —ಹಾಕು : ಕಡುನಡುವಿರುಳದೆ ಕಿಚ್ಚಿಕ್ಕಿ ಪೊಱವಂಟ (ಸಾಳ್ವಭಾ. ೨೩-೫); ಕಿಚ್ಚಿಕ್ಕಿದರು ತಲೆ ಕಾಲ್ಗಳೆಡೆಗೆ (ಕಾಲೂರ. ೧೮೪-೪೧೭). [ಕಿಚ್ಚು + ಇಕ್ಕು]

**ಕಿಚ್ಚಿಡಿ$_1$** (ಕ್ರಿ). ಕಿಚ್ಚಿನಿಂದ ತುಂಬಿರು; ಬೆಂಕಿಯಿಂದ ತುಂಬಿಹೋಗು : ಕಿಚ್ಚಿಡಿದ ಮನೆಯಾಯ್ತು ಮಸೆಯಳಲ್ ಬಗೆಗೆ (ಕಾಲೂರ. ೧೧೭-೨೧೯). [ಕಿಚ್ಚು + ಇಡಿ$_2$]

**ಕಿಚ್ಚಿಡಿ$_2$** 'ಕಿಚ್ಚಡಿ' ನೋ.

**ಕಿಚ್ಚಿಡು** (ಕ್ರಿ). = ಕಿಚ್ಚಿಕ್ಕು : ನುಣ್ಪೇಱುಗೆಯ್ತದಿಂ ಮಧುವಂ ಸುಡಲುಂ ತ್ರಿಪುರಮನುರಿಪಲುಂ, ಕೀಕೆಲೊಳ್ ಕಿಚ್ಚಿಡಲುಂ . . . ಬಲ್ಲವರಾಗಿ (ಶಾಂತಿಪು. ೮-೭೨ ವ); ಬಹೆನೆಂದೆಣಿಸೆ ಕಿಚ್ಚಿಟ್ಟೆಯಲ್ತೆ (ಕಾಲೂರ. ೧೭೮-೪೦೧); ನಾನಂತೂ . . . ಆ ಮನೆಗೆ ಕಿಚ್ಚಿಡಲಿಲ್ಲ (ಪುನರು. ೨೩೩). [ಕಿಚ್ಚು + ಇಡು$_1$]

**ಕಿಚ್ಚು, ಕಿರ್ಚು, ಕಿಟ್ಚು** (ನಾ). ೧. ಬೆಂಕಿ; ಅಗ್ನಿ : ಕಿಚ್ಚಂ ಪೊಕ್ಕುದನೀಜಗಮುಚ್ಚರಿವಟ್ಟುದನೆ ನುಡಿಯುತಿರ್ಪುದನಿಚ್ಚಂ (ಇಳ. XX, ೭೦-೧೪; 9ನೆಯ ಶತ); ಕೀಲೊಳೆ ಕಿಚ್ಚು ಪುಟ್ಟಿ ಭೋರ್ಗರೆದುರಿದಂತೆ (ಪಂಪಭಾ. ೭-೧೬); ಕಿಚ್ಚಿದ್ದೊಡೆ ಬಾವಿ ತೋಡುವವನ್ (ಸಮಪು. ೬-೪೦); ಅಡುವ ಕಿಚ್ಚಿನ್ನಬಹುದೆ ಮನೆಯ ಸುಡುವಾಗ (ವಚಸಂ. ೭೨-೬೯ ಅಂಬಿಐ); ಕಿಚ್ಚಿಲ್ಲದ ಬೇಗೆಯಲಿ ಬೆಂದೆನವ್ವಾ (ಮಹಾದೇ. ೧೫-೧); ಹರನ ನಯನದ ಕಿಚ್ಚು ಕಾಣದು ಪುರವನಾ ಖಾತಿಯಲಿ ಭೇದಿಸಿ (ಕುವ್ಯಾಕ. ೭-೪೨). ೨. ಸೆಕೆ; ತಾಪ; ದಗೆ : ವಿಯೋಗದಿನಾದದೊಂದು ಕಿಚ್ಚಂದಳುರಲ್ಕಗಲ್ದು ಪುರಥಾಂಗಯುಗಂಗಳ್ (ಕಾದಂಪೂ. ೮೧೦); ನಂದಿತು ಬೆಳದಿಂಗಳ ಕಿಚ್ಚು ಪಾಪಿಷ್ಠ ಚಂದ್ರಮನಸ್ತಮಿಸಿದನು (ಮೋಹತ. ೨೭-೬೪). ೩. (ಅಲಂ) ಎದೆಗುದಿ; ಸಂಕಟ : ಮಗಳ ಮನೆಯೆಂಬ ಕಿಚ್ಚಿಗಾದರೂ ತಮ್ಮಲ್ಲಿಗೆ ಅದು ಬರಬೇಕಾದದ್ದು ನ್ಯಾಯ (ಹೊಸಕ್ಷಿ. ೩೩). △ **ಕಿರ್ಚು** : ೧. "ಕಿರ್ಚಿಲರ್ಗೆಳೆಯಂ ಬಗೆವೊಡಮಿಂಗಳ... ಎನಲಗ್ನಿಯಭಿಧಾನಂಗಳ್" (ಕವಿಕಂ. ೩೪-೩೫); ಕೊಟ್ಟ ಕಿರ್ಚನುದಗ್ರಶೋಕಶಿಖಿಯಿಂ (ಪಂಪಭಾ. ೧೩-೬೧); ಕಿರ್ಚು ಮುಟ್ಟಿದ ತುಪ್ಪದಂತೆ ಬಲ್ಪುಗಿಡೆ (ಧರ್ಮಾಮೃ. ೨-೬೯); ಘೃತದಿಂ ಕಿರ್ಚಂ ನಂದಿಪ ತೆಱನಾಗಿ ತೋಱುತಿದೆ ನೋಡರಸಾ (೧೧ಕ. ೪-೧೧೫); ನೀರೊಳ್ ಕಿರ್ಚು ಚುರ್ಚುಗುಮೇ (ರಾಮಾಶ್ವ. ೩-೧). △ **ಕಿಟ್ಚು** : ೧. ಬಾಡುಮಕ್ಕಿಗಳುಂ ಬೇಯವೆ, ಪುಳ್ಳಿಯುಳ್ಳೊಡಂ ಕಿಟ್ಚುರಿಯವೆ (ಧರ್ಮಾಮೃ. ೯-೭೮).

ಕಿರ್ಚುಕಾಯಿಸು = ಬೆಂಕಿ ಕಾಯಿಸು : ನಾನ್ ಮೆಚ್ಚೆನ್ ಇಲ್ಲದಾಸೆಗೆ ಕಿರ್ಚುಕಾಯಿಸುವ ಮುಕ್ಕನನ್ (ಅಶ್ವತ್ಥಾ. ೨೦-೨೫).

[ದೇ. ‖ ತಮಿ. ತುಳು. ಕಿಚ್ಚು; ಕೊಡ. ತೀತ್; ತೆಲು. ಚಿಚ್ಚು; ಕೋತ. ತಿಚ್; ನಾಯ್ಕಿ. ಪರ್ಜಿ. ಕಿಚ್; ಕುರುಖ್. ಚಿಟ್ಚ್; ಮಲ್ತೊ. ಚಿಚು]

**ಕಿಚ್ಚುಗಟ್ಟು** (ಕ್ರಿ). ಬೆಂಕಿಯನ್ನು (ಕೆಂಡವನ್ನು) ಕಟ್ಟು : ಕಿಚ್ಚುಗಟ್ಟಿದಂತೆ ಕಾಲುಗಳೆರಡರಲ್ಲಿಯೂ ಉಷ್ಣ (ಸಕವೈ. ೧೬೫). [ಕಿಚ್ಚು + ಕಟ್ಟು$_1$]

**ಕಿಚ್ಚುಗಣ್, ಕಿಚ್ಚುಗಣ್ಣು** (ನಾ). ಬೆಂಕಿಯ ಕಣ್ಣು; ಕೆಂಗಣ್ಣು : ಶಿಲೆಯ ಮೇಲೊರಗಿ ಕಿಚ್ಚುಗಣ್ಣಿಂ ನಿಚ್ಚಮುಂ ಕಾಪಿರ್ದ ಕರ್ಪಳದಿಪಟ್ಟೆಯಾ ಹುಲಿಯೊಂದು . . . ಮಿಂಚುತೆ ಕಣ್ಗೆ ಮರೆಯಾಯ್ತು (ಶ್ರೀರಾಮಾ. ೩೮-೨೭೪). **ಕಿಚ್ಚುಗಣ್ಣು** : ಕಿಚ್ಚುಗಣ್ಣಿನ ರಾಣಿ ಕರುಣದೊಳೆಚ್ಚರಿಸಿದಳು ಲೋಕಕೆ (ಕರಿಕ. ೨೪-೫). [ಕಿಚ್ಚು + ಕಣ್]

**ಕಿಚ್ಚುಗಣ್ಣ, ಕಿರ್ಚುಗಣ್ಣ** (ನಾ). ಬೆಂಕಿಯ ಕಣ್ಣುಳ್ಳವನು; ಅಗ್ನಿನೇತ್ರ; ಶಿವ : ಕಿಚ್ಚುಗಣ್ಣನ ತಪವಳಿವುದು ಪೂಗೋಲೊಳೆಚ್ಚು ಮನ್ಮಥ ಪೀಡಿಸಲು (ಮೋಹತ. ೫-೧೮). ಕಿಚ್ಚು ಕಣ್ಣೊಳಾವಂಗೆ ಅತಂ, ಕಿಚ್ಚುಗಣ್ಣಂ (ಶಬ್ದಾನು. ೩೧೧ ಪ್ರಯೋ); ಸಮರವನು ನೋಡಲು ಕಿಚ್ಚುಗಣ್ಣನು ಸಹಿತ ಸುರಕುಲವಚ್ಚಕೊಂಡುದು (ಮೂಲರಾ. ೫-೩೭). **ಕಿರ್ಚುಗಣ್ಣ** : "ಗೊಂದೆವಳಯಿಗೆಯ ದೇಸಿಗನೆಂದುಂ ಪೆಣ್ದೊಡೆಯ ಕಿರ್ಚುಗಣ್ಣನೆನುತ್ತುಂ . . . ಮುಪ್ಪುರವಗೆಯಂ" (ಕವಿಕಂ. ೧೭). [ಕಿಚ್ಚುಗಣ್ + -ಅ$_7$]

**ಕಿಚ್ಚುಗಣ್ಣು** 'ಕಿಚ್ಚುಗಣ್' ಪರಾ.

**ಕಿಚ್ಚುಗಾರ** (ನಾ). ಬೆಂಕಿಯಿಡುವವನು; ಬೆಂಕಿಹಾಕುವವನು : ಮನೆಮಾರುಗಳಿಗೆ ಬೆಂಕಿಯಿಟ್ಟದ್ದ ಕಿಚ್ಚುಗಾರ (ಪುನರು. ೩೯೭). [ಕಿಚ್ಚು + -ಗಾರ (< -ಕಾಱ)]

**ಕಿಚ್ಚುಗಿಡಿ** (ನಾ). ಬೆಂಕಿಯ ಕಿಡಿ; ಅಗ್ನಿಕಣ. 'ಕಿಚ್ಚುಗಿಡಿಗೆದಱು' ಪರಾ. [ಕಿಚ್ಚು + ಕಿಡಿ$_1$]

**ಕಿಚ್ಚುಗಿಡಿಗೆದಱು** (ಕ್ರಿ). ಬೆಂಕಿಯ ಕಿಡಿಗಳನ್ನು ಕೆದರು, —ಚೆಲ್ಲು ಹರಡು : ಕಿಚ್ಚುಗಿಡಿಗೆದಱುವ ಸಿಳೀಮುಖ ಕೊಚ್ಚಲಿಭದವಯವವನು (ಕುವ್ಯಾದ್ರೋ. ೧೨-೨೧). [ಕಿಚ್ಚುಗಿಡಿ + ಕೆದಱು$_1$ (< ಕೆದಱ್)]

**ಕಿಚ್ಚುಗುತ್ತು** (ಕ್ರಿ). = ಕಿಚ್ಚಿಕ್ಕು : ಮಮಕಾರಂಗಳಂ ಮುಂದುಗೆಡಿಸಿ, ಲೋಕದ ನಚ್ಚು ಮುಚ್ಚಿಗೆ ಕಿಚ್ಚುಗುತ್ತಿ (ಘನವ. ೨೭-೨೨). [ಕಿಚ್ಚು + ಕುತ್ತು$_1$]

**ಕಿಚ್ಚುಗೊಲ್ಲಣ** (ನಾ). ನೆಲ್ಲಿಗಿಡ : ಕಿಚ್ಚುಗೊಲ್ಲಣಮುಂ ಭಲ್ಲಾತಕಂ ಚಿತ್ರಕ ನರುವಲು ಮಾಜಾರ ವೈಶ್ವಾನರಂ ಪೂರಣಮಿಂತುಂ ಪಾವಕಾಖ್ಯಂ" (ನಾನಾರ. ೧೨೩). [?]

**ಕಿಚ್ಚುಗೋಂಟೆ** (ನಾ). ಬೆಂಕಿಯ ಕೋಟೆ : ಕಿಚ್ಚುಗೋಂಟೆಯ ನಡುವೆ ಸಿಲ್ಕಿದೊಂದಾನೆ ಮುಪ್ಪಿನಿಂದೋಡಲಾರದೆ ಹಿಂಡುದಪ್ಪುತ್ತೆ (ಶ್ರೀರಾಮಾ. ೯೫-೪೫೭). [ಕಿಚ್ಚು + ಕೋಂಟೆ]

**ಕಿಚ್ಚುಗೋಲ್** (ನಾ). ಬೆಂಕಿಯನ್ನು ಉಗುಳುವ ಬಾಣ; ಆಗ್ನೇಯಾಸ್ತ್ರ : ಉತ್ತಮಾಚಾರದೊಳು . . . ಅಗ್ನಿಯೊಳು ಕಿಚ್ಚುಗೋಲೊಳುರಿವತ್ತಿಯೊಳು ಪಾಪಕಮೆನಿಕ್ಕು (ಮಂಗರಾ. ೧೫೩-೬೨). [ಕಿಚ್ಚು + ಕೋಲ್$_1$]

**ಕಿಚ್ಚುಪೊಗು** 'ಕಿಚ್ಚುವುಗು' ನೋ.

**ಕಿಚ್ಚುಮಿಂಚು** (ನಾ). ಕಿಚ್ಚಿನ ಬೆಳಕು; ಬೆಂಕಿಯ ಮಿನುಗು : ಒಡನೆ 'ಡಂ' ಎಂಬೊಳರ್ ಕಿಚ್ಚು ಮಿಂಚಿನ ಗುಂಡು (ಕಾಲೂರ. ೮೭-೧೭೭). [ಕಿಚ್ಚು + ಮಿಂಚು$_3$]

**ಕಿಚ್ಚುವುಗು, ಕಿಚ್ಚುಪೊಗು, ಕಿಚ್ಚುವೊಗು, ಕಿರ್ಚುವೊಗು** (ಕ್ರಿ). ಬೆಂಕಿಯೊಳಕ್ಕೆ ಹೋಗು; ಅಗ್ನಿ ಪ್ರವೇಶಮಾಡು : ದಿಕಾರಿ ಬೆ×× ಮುಣ್ಣ ಕಿಚ್ಚುವೊಕ್ಕಡೆ ನಿಱಿಸಿದ ಕಲ್ಲ (ಸೌಇಇ. IX-i, ೩೫-೯; 10ನೆಯ ಶತ).

**ಕಿಚ್ಚು ಪೊಗು:** ಕಿಚ್ಚುಪೊಕ್ಕು ಸುರಲೋಕಮೇಱಿದೊನ್ (ಸೌಇಇ. IX–i, ೯–೬; 9ನೆಯ ಶತ). **ಕಿಚ್ಚು ವೊಗು:** ತವೆ ಜವದಿಂದೆ ಕಿಚ್ಚುವೊಗಲಣ್ಮದೆ ನಂಜುದಿನಲ್ಕೊಡರ್ಚ್ಚದಿರ್ಕ್ಕವೆ ಪೆಜತೇನೊ (ಕಾದಂಉ. ೬೦). **ಕಿರ್ಚುವೊಗು:** ಪೆಂಡತಿಗೆ ಕೂರ್ಪಾತನತ್ತೆಯೊಡನೆ ಕಿರ್ಚುವೊಕ್ಕನೆಂಬ ನಾಣ್ಣುಡಿಯಂ ನನ್ನಿಮಾಡಿ (ಧರ್ಮಾಮೃ. ೧೧–೩೧).
[ಕಿಚ್ಚು + ಪುಗು (< ಪೊಗು)]

**ಕಿಚ್ಚು ವೊಗು** 'ಕಿಚ್ಚುವುಗು' ನೋ.

**ಕಿಚ್ಚುಳಿ** (ಕ್ರಿ). ಕಿಚ್ಚನ್ನು ಬಿಡು; ಬೆಂಕಿಯಾರು: ಪುಚ್ಚಳಿಯ ಕಿಚ್ಚುಳಿದ ಪೊಸಮ್ಮೆಯ ತೆರೆದಂ (ಕಾಲೂರ. ೧೧೬–೨೪೧).
[ಕಿಚ್ಚು + ಉಳಿ$_1$ (< ಉೞಿ$_1$)]

**ಕಿಚ್ಚೇೞ್**, ಕಿರ್ಚೇೞ್ (ಕ್ರಿ). ೧. ಬೆಂಕಿ ಹುಟ್ಟು; ಅಗ್ನಿಉಂಟಾಗು: ನೀರೊಳ್ ಕಿಚ್ಚೇೞ್ವೊಡೇತಱಿಂ ಬಾರಿಸುವರ್ (ಸಮುಪ. ೩–೩೫); ಶಿಥಿಲತ್ವಂಬಡೆದಿರ್ಪ ವಂಶ ವೊರೆಯಲ್ ಕಿಚ್ಚೇೞದೇ (ಸೋಮೇಶ. ೮೮). **ಕಿರ್ಚೇೞ್:** ೨. (ಆಲಂ) ಕೋಪದಿಂದ ಬೆಂಕಿಯಂತಾಗು, —ತಪ್ತವಾಗು: ಅವಂ ಕಂಡು ಕಿನಿಸಿ ಕಿರ್ಚೆೞ್ದಿವೆಲ್ಲವಂ ಪೊಱಗೆ ಬಿಸುಟು ಬನ್ನಿಮೆಂಬುದುಂ (ಪಂಪಭಾ. ೧–೧೩೦ ವ); ಅಳವಿಲ್ಲದೆ ಮುಳಿದು ಕೆಳರ್ದು ಕಿರ್ಚೆದಾರ್[ಱ್ದ]ಗಳ್ (ಗದಾಯು. ೮–೪೩).
[ಕಿಚ್ಚು + ಏೞ್$_1$]

**ಕಿಚ್ಚೊಟ್ಟು** (ಕ್ರಿ). ಬೆಂಕಿಹಾಕು, —ಹಚ್ಚು: ಕೆಲಸಮಂ ಬಿಟ್ಟನಿಸು ತರಗೆಲೆಗೆ ಕಿಚ್ಚೊಟ್ಟ (ಕಾಲೂರ. ೬೭–೧೪೩). [ಕಿಚ್ಚು + ಒಟ್ಟು$_1$]

**ಕಿಜಮತ್ತು** 'ಕಿದ್ಮತು' ನೋ.

**ಕಿಟಕ** (ನಾ). (?): ಕಿಟಕನ ಮುಟ್ಟು ಘಾತಕನ ಸ್ನೇಹ (ಅಂಬವ. ೬೯).
[< ಕೀಟಕ ?]

**ಕಿಟಕಿ** 'ಕಿಡಿಕೆ' ನೋ.

**ಕಿಟಕಿಬಾವಲಿ** 'ಕಿಡಕಿಬಾವಲಿ' ನೋ.

**ಕಿಟಲಿ**, ಕಿಟ್ಲಿ (ನಾ). ಚಹ ಅಥವಾ ಕಾಫಿಗಾಗಿ ಬಳಸುವ ಸೊಂಡಿಲಿರುವ ಪಾತ್ರೆ: ಚಹಕ್ಕೆ ಹಾಲು ಬೆರಸಿ . . . ಕಿಟಲಿಯಲ್ಲಿ ಸೋಸಿದಳು (ರಕ್ತಧ್ವ. ೨೩೭). **ಕಿಟ್ಲಿ:** ಚಹಾ ತುಂಬಿದ ಕಿಟ್ಲಿ, ಬಿಸ್ಕೀಟ ಬಂಡಲುಗಳು ಬಂದುವು (ಜೀದಾನ. ೧೭). [← ಇಂ. Kettle]

**ಕಿಟಿ$_1$** (ನಾ). ಒಂದು ಅನುಕರಣ ಶಬ್ದ.

ಕಿಟಕಿಟ, ಕಿಟಕೀಟ, ಕಿಟಪಿಟ, ಕಿಟಮಿಟ (ದ್ವಿರುಕ್ತಿ) = ೧. ಕಿರುಕುಳ; ಕರಕರೆ; ಉಪಟಳ: ನನಗೆ ಅತ್ತೆಗಿಂತ ಹೆಚ್ಚು ಕಿಟಕಿಟ ಮಾಡುತ್ತಾಳೆ (ಮೋಹಿನಿ. ೨೯); ಗೋಪಿಯ ಸಂಕಟವೊಂದು, ಮನೆಯಲ್ಲಿ ಸಂಸಾರದ ಕಿಟಕಿಟ ಇನ್ನೊಂದು (ಫಲಸಂ. ೫); ಕುಟ್ಟಿದರ ಕುಟ್ಟವ್ವ ಕಿಟಕೀಟ ಹಚಬ್ಯಾಡ (ಮಲ್ಲಿಗೆ. ೯೨); ಕೂಸಿಗೆ ಜ್ವರ, ಹೆಂಡತಿಯ ಕಿಟಪಿಟ ಸಾಕು ಸಾಕಾಗಿದೆ (ಕುರಿಹಿಂ. ೨). ೨. ಕಾರ್ಪಣ್ಯ; ಕಷ್ಟಸ್ಥಿತಿ: ಈ ಹಣದಿಂದ ಆವರ ಸಂಸಾರ ನಿರ್ವಹಣ ಕಿಟಮಿಟಯಿಂದ ಸಾಗುತ್ತಿತ್ತೇ ವಿನಃ ಒಂದುಕಾಸೂ ಉಳಿಯುತ್ತಿರಲಿಲ್ಲ (ಕವಲು. ೮). [?]

**ಕಿಟಿ$_2$** (ನಾ). ಕಾಡುಹಂದಿ; ಎಕ್ಕಲ; ಸೂಕರ: ನವಿಲ ಕಲಾಪಮುಂ ಕಿಟಿಯ ದಾಡೆಯುಂ (ಉದ್ಭಟ. ೨–೮೯); ಹರನಾಜ್ಞೆಯಿಂ ಮತ್ಸ್ಯಕೂರ್ಮ ಕಿಟಿ ಘೋರ ಕೇಸರಿ ಮುಖ್ಯ ರೂಪುಗಳನಾಂತು (ಚೆಬಪು. ೩೩–೧೭); ಪೊಡೆ ಕಿಟಿಯುಂ ಕಡಿ ಕರಿಯುಂ (ಹಮ್ಮೀರ. ೪–೪೩). [ಸಂ.]

**ಕಿಟಿ$_3$** (ನಾ). (ಕರಾ). ಬೆಲೆಯುಳ್ಳ ಹರಳು, —ರತ್ನ.
[← ತುಳು. ಕಿಟಿ]

**ಕಿಟಿಕಿ** 'ಕಿಡಿಕೆ' ನೋ.

**ಕಿಟಿಕಿಟಿ** 'ಕಟಕಟ' ನೋ.

**ಕಿಟುಕು** (ನಾ). (?): ಒತ್ತರಿಂಪುದು ದೋಷ ಕಾಣುವದೆಂಬಲ್ಲಿ ಬಿತ್ತರಿಸುವ ಕಿಟುಕೇನು (ಅರಸಾ. ೨೨೫–೫). [?]

**ಕಿಟ್ಟಿ$_1$** (ನಾ). ಗೋಲಿಯಾಡುವುದಕ್ಕೆ ಬಳಸುವ ಗಟ್ಟಿಯಾದ ಗಜ್ಜುಗ: ಕಿಟ್ಟದಿಂದ ಹೊಡೆದು ಲೊಟ್ಟೆ ಹಾಕಿದ (ಗಾದೆ). [?]

**ಕಿಟ್ಟ$_2$** (ನಾ). ೧. ಕಬ್ಬಿಣ ಮೊದಲಾದ ಲೋಹಗಳ ಜಂಗು; ತುಕ್ಕು; ಕಿಲುಬು: "ಪುಳಮುಖಮುಂ ಪೊದಱ್ದೊಗೆದ ಕಿಟ್ಟಮುಂ" (ವಸ್ತುಕೋ. ೧೨೮–೬೫); ಅಂತು ಕೊರ್ಬ್ಬಿರ್ದಂಬ ಕಿಟ್ಟಮುದುರೆ ಪಸುರ್ವಣ್ಣವೆಂಬ ಕಾಳಿಕೆ ಕಱಲೆ (ಲೀಲಾವ. ೧೦–೩೭ ವ); ಕಾಳಿಮ ಕಿಟ್ಟವ ಕಳೆದೊಡೆ ಕುಂದಣ ಕೀಳು ಚಿನ್ನದೊಳಾಗುವಂತೆ (ನಾಗಕು. ೧೧–೩); ಸುತ್ತಿಗೆಗಳ್ ಉತ್ತಮವದೆನಿಪುವು ಕಿಟ್ಟಗಳ ಕಳೆದು (ಮಂಕುಕ. ೬೧೦); ಕಬ್ಬಿಣದ ಕಿಟ್ಟದ ಚೂರ್ಣವ ಕಬ್ಬಿಣದ ಪಾತ್ರೆಯಲ್ಲಿ . . . ಹುರಿದು (ವೈದ್ಯಸಾ. ೩೩೭–೨೦ ಟೀಕೆ); ಆಪರಂಜಿ ಹೊನ್ನು ಎಲ್ಲವು; ಕಿಟ್ಟ ಇನಿಸಿಲ್ಲ (ನವರಾ. ೪–೨). ೨. ಮನುಷ್ಯನ ಅಥವಾ ಪ್ರಾಣಿಗಳ ಮಲ: "ವರ್ಚಃ . . . ಕಿಟ್ಟಂ, ವಿಟ್, ವಿಷ್ಠಾ, ಪುರೀಷಂ, ಶಮಲಂ, ಮಲಂ – ಈ ೧೩ವಿಷ್ಠೆ" (ಹಲಾಯು. ೧೦೫–೧೫). ೩. ತಗ್ಗಿನಲ್ಲಿ ಕೂಡಿಟ್ಟ ಸಗಣಿ. ೪. ಎಣ್ಣೆ, ತುಪ್ಪ ಮೊದಲಾದವುಗಳ ಗಸಿ, —ಮಷ್ಟು: ಲೋಷ್ಟದೊಳು ಹೂಟದೊಳುಯೇರಂಡ ಕಿಟ್ಟದೊಳು ಹೆಟ್ಟಂ (ಶಬ್ದಮಂ. ೯೦). ೫. "ಒಡಕು ಪಾತ್ರೆಗೆ ಹಾಕುವ ತೇಪೆ" (ಕಸ್ತೂರಿ. ೨೦೯).

ಕಿಟ್ಟದ ಬೊಂಬೆ = ಸಗಣಿಯಿಂದ ಮಾಡಿ, ಬಣ್ಣಬಳಿದ ಬೊಂಬೆ.
[ಸಂ.]

**ಕಿಟ್ಟ$_3$** (ನಾ). ಕೃಷ್ಣ. 'ಕಿಟ್ಟಯ್ಯ' ಪರಾ. [< ಸಂ. ಕೃಷ್ಣ]

**ಕಿಟ್ಟಕೀಳ** (ನಾ). (ಕಿಟ್ಟದಂತೆ) ತೀರ ಕೀಳಾದವನು; ಅತ್ಯಂತ ನಿಕೃಷ್ಟನಾದವನು: ಕಿಟ್ಟಕೀಳ ಸೈನಿಕನೇ ಅದರೂ ದ್ರೋಹದ ಬಗೆಯಿಂದ ಮುಟ್ಟಲೂ ಎದೆಗೊಳ್ಳಲಾರನು (ಬೆಟ್ಟಅ. ೬೯–೧೭).
[ಕಿಟ್ಟ$_2$ + ಕೀಳ (< ಕೀೞ)]

**ಕಿಟ್ಟಗಟ್ಟು** (ಕ್ರಿ). ತುಕ್ಕು ಹಿಡಿ; ಜಂಗು ತಿನ್ನು: ಕಿಟ್ಟಗಟ್ಟಿದ ಕಬ್ಬಿಣಕೆ ಪುಟವ ಹಾಕಿಸೊ (ಪುರಂದ. ೨–೨೩–೩); ಕಿಟ್ಟಗಟ್ಟಿದ ಲೋಹ ಪಾವಕ ಸುಟ್ಟು ವಿಂಗಡ ಮಾಡುವಂತೆ (ಜಗದಾ. ೩೬೭). [ಕಿಟ್ಟ$_2$ + ಕಟ್ಟು$_1$]

**ಕಿಟ್ಟಗುಳ**, ಕಿಟ್ಟುಗಳ (ನಾ). ಕಬ್ಬಿಣದ ದ್ರವ (?): ಬಿಡದೆ ದ್ವಾರ ಒಂಭತ್ತರೊಳು ಪೊಗಿಸಿ ಮತ್ತೆ . . . ಇರದೆ ಕುದಿವ ಕಿಟ್ಟಗುಳವ ಬಡಿದು [ಪಾಠಾಂ. ಕಿಟ್ಟುಗಳವನರೆದು]ಕುಡಿಸುತಿಪ್ಪರ್ (ಸಾನಂಚ. ೬–೧೦೩ ರ). **ಕಿಟ್ಟುಗಳ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [?]

**ಕಿಟ್ಟಗೂಡು** (ಕ್ರಿ). ಕಶ್ಮಲದಿಂದ ಕೂಡಿರು: ಕಾಳಿಕೆ ಕಿಟ್ಟಗೂಡಿದ ಚಿನ್ನ ಕೀಳಾಯ್ತು ಕಾಳಿಕೆ ಕಿಟ್ಟವಿಲ್ಲಾಗಿ ಮೇಲಾದುದು (ಭರಚ. ೬೮–೨೫).
[ಕಿಟ್ಟ$_2$ + ಕೂಡು$_1$]

**ಕಿಟ್ಟಪಳ್ಳಿ** (ನಾ). ಒಂದು ಸ್ಥಳದ ಹೆಸರು: ಕಿಟ್ಟಪಳ್ಳಿ . . . ತುಱುಗೊಳೊಳ ಚಿ[ಕ್ಕ]ಮಾರಯ್ಯ ಸತ್ತ (ಎಕ. IX, ಕಾನಕಾ. ೮೮–೩; 870).
[ಕಿಟ್ಟ$_0$ + ಪಳ್ಳಿ$_1$]

**ಕಿಟ್ಟಮೆ** (ನಾ). ಮುಟ್ಟು; ಮೈಲಿಗೆ: ಪುಸಿ ಕಿಟ್ಟಮೆಯುಂ ಮಾಱ್ಕುಂನಿಸದಂ ಕಿಟ್ಟಮೆಯನ್ನೆಯ್ದೆಲ ಕಸುಗುಮತ್ತಂತೆಸಗುಂ ತನ್ನಂ ತೆಳ್ಪಾವು ಸೋಂಕಿತೆಂದಱ್ತು ಜಾರೆ ತೆರಪಂ ಪಡೆಗುಂ (ಮದತಿ. ೮–೪೮). [ಕಿಟ್ಟ$_2$ + –ಅಮೆ]

**ಕಿಟ್ಟಯ್ಯ** (ನಾ). ಕೃಷ್ಣಯ್ಯ: ಗೋಪೇರು ಬಂದು ನಿನ್ನನ್ನು ದೂರುವರೋ ಕಿಟ್ಟಯ್ಯ (ವಾದಿಕೀ. ೨೩). [ಕಿಟ್ಟ$_3$ + ಅಯ್ಯ$_1$]

**ಕಿಟ್ಟಳ** (ನಾ). ಸೊಕ್ಕು; ಮದ: ಕಟ್ಟಾನೆಗೆ ಕಿಟ್ಟಳಮಾದುದೇ ಮಾನೆಯುಮಿದಿರ್ವಪ್ಪುದನಾರ್ಪಡೆವರೆನೆ (ಅರ್ಧನೇ. ೮–೮೪ ವ). [?]

**ಕಿಟ್ವಾಲಯ** (ನಾ). ಕೊಳೆಯನ್ನು ತೊಳೆದುಕೊಳ್ಳುವ ಸ್ಥಳ; ಬಚ್ಚಲು ಮನೆ: "ಕಿಟ್ವಾಲಯಂ ಪಚ್ಚಳದ ಮನೆಯೆನಿಕ್ಕುಂ" (ಪುಂಗರಾ. ೫೮-೯). [ಕಿಟ್ಟ$_2$ + ಆಲಯ]

**ಕಿಟ್ಟಿ** (ನಾ). ಕೈ, ಕಿವಿ ಅಥವಾ ಮೂಗುಗಳನ್ನು ಎರಡು ಕಟ್ಟಿಗೆಗಳ ಮಧ್ಯೆ ಹತ್ತಿಕ್ಕಿ ಹಿಡಿದು ಮಾಡುವ ಒಂದು ಬಗೆಯ ಹಿಂಸೆ: (ಕಿ).
[?. / ತಮಿ. ಮಲ. ಕಿಟ್ಟಿ]

**ಕಿಟ್ಟು$_1$, ಗಿಟ್ಟು, ಗೀಟು$_1$** (ಕ್ರಿ). ೧. ತಾಗು; ಸೋಂಕು; ಮುಟ್ಟು; ಘಟ್ಟಿಸು: "ಕಿಟ್ಟು – ಸ್ಪರ್ಶನೇ" (ಶಮದ); ಬಿಲ್ಬಿಲ್ಲೊಳ್ಳುದುರೆ ಕುದುರೆಯೊಳ್ ಕಿಟ್ಟಿ ಅತಿ ತುಮುಲ ಕಾಳೆಗ ಪೆಚ್ಚಿ (ಎಕ. VIII, ಸೊರಬ. ೧೦-೫; 800); ಎರಡು ದಣ್ಡು ಕಿಟ್ಟಿ ಎಱಿಯುತ್ತಿರೆ ನಾಗ ಗುಟ್ಟರಸವರ್ . . . ಪಲರನೆಱಿದು ಸತ್ತೊಡೆ (ಎಕ. X, ಕೋಲಾರ. ೨೦೦-೮; 890); ಮೂಲೋತ್ತರಪ್ರಕೃತಿಗಳೊಳ್ ಸರ್ವಜಘನ್ಯಸ್ಥಿತಿಯಂ ಮೊದಲ್ಕಟ್ಟಿ . . . ಸಮಯೋತ್ತರಾನುಕ್ರಮದಿನುತ್ಕೃಷ್ಟ ಸ್ಥಿತಿವರಂ ಪರಿವಡಿದಪ್ಪದೆ ಕಿಟ್ಟುವುದಂ ಭಾವಪರಿವರ್ತನಮೆಂಬುದು (ಸುಕುಮಾ. ೬-೬ ವ); ಕಿಚ್ಚನಱಿತೊಡಂ ಅಱಿಯದೊಡಂ ಕಿಟ್ಟಿ ಸುಡದೆ (ರಾಮಾಶ್ವ. ೧೪-೨೧). ೨. ಲೇಪಿಸು; ಬಳಿ: ಬತ್ತಲೆಯಂ ಬಟ್ಟೆಗಳಿಂ ಪುದಿಯದೊಡಂ ಮತ್ತಂ ಕಿಟ್ಟದೊಡಂ ಶೋಧಕ ಲೇಪಂಗಳ ನಾಗಳ್ ಸೊಬಗಂ ಪಟ್ಟೊಡಲೆಂತಹುದೈ ಪೇಳ್ ಸೊಬಗಾ (ಸೌನಂದ. ೯-೨೬). ೩. ಕೈಗೆ ಬರು; ದೊರಕು; ಪ್ರಾಪ್ತವಾಗು: ಪುಟ್ಟದಂಡದೆ ಬಂದು ಪೊಕ್ಕಳೆಂದಣುಗಿಯ ನೆಟ್ಟನೆ ನಿಂದಿಸದಂತೆ ಕಿಟ್ಟದ ಪಲಕೆಲವೊಡವೆಗಳನು ಕೈ ಬಿಟ್ಟು ಕೊಡುವುದು ಬೇಸರದೆ (ಹದಿಬ. ೫-೨೩). **ಗಿಟ್ಟು:** ೧. ಅವನ ಹಲ್ಲುಗಿಟ್ಟಿಕೊಂಡು ಅವೆ (ಕಿ). ೩. ಎಂದಿದ್ದರೂ ಮದುವೆಯ ರಿಸೆಪ್ಶನ್ ಇದೆ; ಕಾಯಿಬುರುಡೆ ಗಿಟ್ಟುತ್ತೆ (ನಿಂಡೆನೆ. ೫); ಹಿತ್ತಲು ಕಡೆಯ ಮಾರುಕಟ್ಟೆಯಲ್ಲಿಯೆ ಅವರಿಗೆ ಚೆನ್ನಾಗಿ ಗಿಟ್ಟುತ್ತಿದ್ದುದು (ಮಲೆಮ. ೪೩೭). ೪. ನಷ್ಟವಾಗದಿರು: ಊರಲ್ಲಿ ಅವನಿಗೆ ವ್ಯಾಪಾರ ಚೆನ್ನಾಗಿ ಗಿಟ್ಟುತ್ತಾ ಇದೆ (ರೂಢಿ). **ಗೀಟು$_1$:** ೩. ಅವರ ಮನೆಯಲ್ಲಿ ಏನು ಗೀಟಿತಯ್ಯ ನಿನಗೆ (ರೂಢಿ).

ಕಿಟ್ಟಿಕೊಳ್ಳು = ಕಚ್ಚಿಕೊಳ್ಳು; ಬಿಗಿದುಕೊಳ್ಳು: ಹಲ್ಲುಕಿಟ್ಟಿಕೊಂಡು ಹೋಗಿರುವ ಗುರುವಿನ ಬಾಯನ್ನು ಬೀಗದ ಕೈಹಾಕಿಯೆ ಮೀಟಿ ತೆರೆದು (ಕಥಾಮಂ. IV, ೫೧). **ಗಿಟ್ಟದವ** = ಕೆಲಸಕ್ಕೆ ಬಾರದವನು; ಕೈಲಾಗದವನು; ಅಪ್ರಯೋಜಕ: (ದಕ. ಕಿ).
[ದೇ. ‖ ತಮಿ. ಮಲ. ತುಳು. ಗಿಟ್ಟ; ತೆಲು. ಕಿಟ್ಟು]

**ಕಿಟ್ಟು$_2$** (ನಾ). = ಕಿಟ್ಟ$_3$: "ಕಿಟ್ಟು – ಕಿಟ್ಟ = ಲೋಹದ ಹೆಟ್ಟಿ" (ತದ್ಭಕೋ. ೭). 'ಕಿಟ್ಟುಗಬ್ಬನ' ಪರ್ಯಾ. [< ಕಿಟ್ಟ$_2$]

**ಕಿಟ್ಟುಗಬ್ಬುನ** (ನಾ). ತುಕ್ಕು ಹಿಡಿದ ಕಬ್ಬಿಣ: ಕಿಟ್ಟಕಿಜ ಕಿಟ್ಟುಗಬ್ಬುನಮೊಟ್ಟೈಸಿರೆ ಮುಟ್ಟಿ ತನ್ನ ಕರದಿಂ ಪೊನ್ನಂ ಪುಟ್ಟಿಸಿ ಪುಡಿಯಂ ಲೋಕಕ್ಕಿಟ್ಟುರುಹಿದೆನರರೆ ಕರಮೆ ಖರಕರಸಿದ್ಧಂ (ಚಂದ್ರಪ್ರಭ. ೧೧-೪೧).
[ಕಿಟ್ಟು$_2$ + ಕಬ್ಬುನ (< ಕರ್ಬೊನ್)]

**ಕಿಟ್ಟುಗಳ** 'ಕಿಟ್ಟಗುಳ' ನೋ.

**ಕಿಟ್ಲಿ** 'ಕಿಟಲಿ' ನೋ.

**ಕಿಡಕಿ** 'ಕಿಡಿಕಿ' ನೋ.

**ಕಿಡಕಿಪಡಕು** (ನಾ). ಕಿಟಕಿಗೆ ಇರುವ ಮುಡಿಸುವ ಬಾಗಿಲಿನ ಒಂದು ಭಾಗ, —ಒಂದು ಹಲಗೆ: (ಕಿ). [ಕಿಡಕಿ (< ಕಿಡಿಕೆ) + ಪಡಕು]

**ಕಿಡಕಿಬಾವಲಿ, ಕಿಟಕಿಬಾವಲಿ** (ನಾ). ಹೆಂಗಸರು ಕಿವಿಯಲ್ಲಿ ಧರಿಸುವ ಒಂದು ಆಭರಣ: (ಕಿ). **ಕಿಟಕಿಬಾವಲಿ:** (ಕಿ).
[← ಮರಾ. ಖಿಂಡಕಬಾಳೀ]

**ಕಿಡಬುಡಿಕೆ** (ನಾ). ಬುಡುಬುಡಿಕೆ; ಬುಡುಬುಡಿಕನ ಕೈಯಲ್ಲಿರುವ ಚಿಕ್ಕ ಚರ್ಮವಾದ್ಯ: ಹೃದಯ ಕಿಡಬುಡಿಕೆಯಾಗಿ ಬಾರಿಸುತ್ತಿದ್ದಿತು (ಜಯಂತ. ೧೭೪). [?]

**ಕಿಡಲೆ** (ನಾ). ಒಂದು ಸ್ಥಳದ ಹೆಸರು: ಸಕವರ್ಷ ಎಣ್ಟುನೂಱಅಯ್ದನೆಯ ವರ್ಷಂ ಪ್ರವರ್ತ್ತಿಸುತ್ತಿರೆ ಕಿಡಲೆಗಧಿಪಾಣ್ನನ್ ಎಱಿಯಮ್ಮಂ[ನಿ]ವುದಿ ತೊಱುಗೊಳೊಳ್ಕಾದಿ ಸತ್ತೋನ್ (ಸೌಇಇ. XI–i, ೧೯-೩; 883).
[?]

**ಕಿಡಿ** (ನಾ). ೧. ಬೆಂಕಿಯ ಚೂರು; ಅಗ್ನಿಯ ಕಣ; ಸ್ಫುಲಿಂಗ: "ಸ್ಫುಲಿಂಗಂ, ಕಣಃ – ಈ ೨ ಕಿಡಿ" (ಹಲಾಯು. ೧೨-೬೭); "ಕಿಡಿಯೊಳಗೆ ಕಣಂ ಸ್ಫುಲಿಂಗಮೆನಿಕ್ಕುಂ" (ಮಂಗರಾ. ೧೪-೮); "ಕಿಡಿ ಬೆಂಕಿ ಕಣದೊಳಂ" (ಕಶರ. ೨೪); ಅಳುರ್ವ ಕೋಪದಿಂ ಕಣ್ ಕಿಡಿಯಂ ಕೆಂಡವನುಗುೞೆ ಮುಳಿದಂ (ಆದಿಪು. ೧೨-೮೬); ಕಿಚ್ಚಿನ ಕಿಡಿಯುಂದದೆ . . . ಮಿಡುಕುವೆನ್ನಂ ಕಂಡೆಂ (ಕಾದಂಪೂ. ೯೨೨); ಕಿಚ್ಚುಂ ಕಿಡಿಯುಮಾಗಿ ಕಾದುತ್ತುಮಿರೆ (ಧರ್ಮಾಮೃ. ೧-೨೦೮,; ಅಱಿಯದವರೊಡನೆ ಸಂಗವ ಮಾಡಿದರೆ ಕಲ್ಲುಹೊಯ್ದು ಕಿಡಿಯ ಕೊಂಬಂತೆ (ಮಹಾದೇ. ೧೮-೭); ಕಿಡಿ ಕಿಱಿದಾದೊಡೆ ಸುಡದೆ ಕಾನನವನು (ಅಂಜಚ. ೭-೩೩); ಕಿಡಿಗಳನು ಕಂಗಳಲಿ ಕಾಱುತ (ಸಂಭಪ. ೭-೩೬); ತಣ್ಣನೆ ಕಲ್ಲಾದರೇನಂತೆ ಹೊಡೆದರೆ ಸಿಡಿಯದೆ ಕಿಡಿಯೊಡಲಿಂದೆ (ಇಂಚಾಪ. ೨೩೨-೫೦). ೨. (ಕರಾ) ಕೆಟ್ಟವಾಸನೆ; ದುರ್ವಾಸನೆ: ಚರಂಡಿ ಕಟ್ಟಿಕೊಂಡು ಕಿಡಿ ಬಹಳ ಬರುತ್ತಿದೆ (ರೂಢಿ).

ಕಿಡಿಕಿಡಿಕೆದಱು = ೧. ಬೆಂಕಿಯನ್ನು ಕಾರು. ೨. ಕೋಪಿಸು: ಕಿಡಿಕಿಡಿ ಕೆದಱಿದಡೆ ಎನಗೆ ಹಸಿವು ತೃಷೆ ಅಡಗಿತೆಂಬೆನು (ಮಹಾದೇ. ೨೪-೫). **ಕಿಡಿಕಿಡಿಯಾಗು** = ಅತಿಯಾಗಿ ಕೋಪಿಸು: ಕಿರಾತರಾಜಂ . . . ಮುನಿದು ಕಿಡಿಕಿಡಿಯಾಗಿ (ಧರ್ಮಾಮೃ. ೩-೯೮); ಜವನ ಗಂಟಲ ಮುನ್ನ ತಿರುಹುವೆನೆನುತ ಕಿಡಿಕಿಡಿಯಾಗಿ ಖಾತಿಯಲಿ (ಕುವ್ಯಾಅ. ಒರಿಇ. ೨೬-೨೭); ಫಲುಗುಣಂ ನೋಡಿ ಖತಿಯಿಂದೆ ಘುಡುಘುಡಿಸಿ ಕಿಡಿಕಿಡಿಯಾದನು (ಜೈಮಿಭಾ. ೨೨-೪೪). **ಕಿಡಿಕಿಡಿವೋಗು, ಕಿಡಿಕಿಡಿಯೋಗು, ಕಿಡಿಗಿಡಿವೋಗು** = ಕಿಡಿಕಿಡಿಯಾಗು: ಅಡಹಡಿಸಿ ಭೀಮಸೇನಂ ಕಿಡಿಕಿಡಿವೋಗಿ ಮೀಸೆಯಂ ಕಡಿದು (ಗದಾಯು. ೬-೧೬ ವ); ವಿಪ್ರಂ ನುಡಿದ ಶಿವನಿಂದೆಗೆ ಭವಾನಿ ಮುನಿದು ಕನಲ್ದು ಕನಿಸಿ ಕಿಡಿಕಿಡಿವೋಗಿ (ಗಿರಿಕ. ೯-೧೧೪ ವ); ಎನಲು ಕಿಡಿಕಿಡಿವೋಗಿ ಭೀಮಾರ್ಜುನರ ತೋಱಾದರೆ ಎನುತ (ಕುವ್ಯಾಕ. ೧೩-೪೫); ಅವರಂ ಭೋಂಕನೆ ಕಟ್ಟದಿರೊಳ್ ಕಂಡು ಕಿಡಿಕಿಡಿಯೋಗಿ ಕರ್ವುವಿಲ್ಲನಿಂತೆಂದಂ (ಕಬ್ಬಕಾ. ೨೨೮); ಭೋಗಿಭೂಷಣ ಕೋಪವ ತಾಳಿ ಕಿಡಿಕಿಡಿಯೋಗಿ ಕೆಂಗಿಡಿಗಣ್ಣ ತೆಱೆದ (ಚೋಹತ. ೬-೩೮): ಕೋಪದಿಂ ಕಿಡಿಗಿಡಿವೋಗುತ್ತುಮೋರೊರ್ವರ ನೊರ್ವರ್ ಪಿಡಿದು ಪಿಡಿಖಂಡಂಗೊಯ್ದು (ವರ್ಧಪು. ೧೧-೪೭ ವ).
[ದೇ. ‖ ತುಳು. ಕಿಡಿ]

**ಕಿಡಿಕಿ$_1$** (ನಾ). ಜಾರೆ; ಹಾದರಿಗಿತ್ತಿ: ಬಂಧುಳಃ, ಬಂಧಕೀಪುತ್ರಃ – ಈ ೨ ಕಿಡಿಕಿಯಮಗಂ (ಹಲಾಯು. ೮೨-೩೪೭); ಗೊರತಿಯ ಕಂತಿಯ ಕುಂಟಣಿಯರ ಮುಂಡೆಯ . . . ಕಿಡಿಕಿಯ ನಾದಿತಿಯರ ಮುಂದಂ ನುಡಿಯಲೀಯಲಾಗದು ವಧುವಂ (ಮದತಿ. ೮-೨೬). [?]

**ಕಿಡಿಕಿ$_2$** 'ಕಿಡಿಕೆ' ನೋ.

**ಕಿಡಿಕೆ, ಕಿಟಕಿ, ಕಿಡಕಿ, ಕಿಡಿಕಿ$_2$** (ನಾ). ಗವಾಕ್ಷ; ವಾತಾಯನ: ಅಡಿಕೆಯಿಲ್ಲದ ವೀಳೆ ಕಿಡಿಕೆಯಿಲ್ಲದ ಮನೆಯು (ಸರ್ವಜ್ಞ. ೧೭೨೦); ಆದಕ್ಕೆ ಬಾಗಿಲು ಬಂಕಗಳಿದ್ದಿಲ್ಲ; ಕಿಡಿಕೆ ಕೊನ್ನಾರಗಳಿದ್ದಿಲ್ಲ (ಕುಮುದಿ. ೧೪); ಅವರ ದೃಷ್ಟಿ ಅಕಸ್ಮಾತ್ ಕಿಡಿಕೆಯ ಹೊರಗೆಹೋಯಿತು (ಪರಿಣೀ. ೪).

**ಕಿಟಕಿ** : ಇರುಳಿನಲ್ಲಿಂದುವೀಯುಪ್ಪರಿಗೆ ಕಿಟಕಿಯೊಳಗಿರದೊಕ್ಕು ಪೋಪಾಗ (ಅರ್ಚಾವಿ. ೧–೩೭); ಅದು ನಮ್ಮೆಲ್ಲರ ಅಂತಃಪ್ರಪಂಚವನ್ನು ತೋರಿಸಿ ಕೊಡುವ ಕಿಟಕಿ (ಸಾಹಿಪ್ರ. ೧೧). **ಕಿಟಿಕಿ** : ಬೆಳಕಿಗೆಂದಿರುಳಲ್ಲಿ ತೆರೆಯೆ ಕಿಟಕಿ ಗಾಳಿಯನೀಸದೆ (ಗೀವಿಂ. ೬೮-೧೨೦); ಕಿಟಕಿಯುಲಿಣಕು ವನಗೆವೊಗದಂತೆ (ಹೃದಸ. ೧೩–೫); ಗುಹೆಯ ಹೊರಮುಖದಲ್ಲಿ ವರ್ತುಲಾಕಾರವಾದ ಕಿಟಕಿ ಇದೆ (ಮೈವಾಸ್ತು. ಪರಿ. ೧). **ಕಿಡಕಿ** : ಎರಡು ಘಳಿಗೆ ಕಿಡಕಿಯ ಬಳಿಯಲ್ಲಿ ಸುಳಿಗಾಳಿಗೆ ಕುಳಿತುಕೊಳ್ಳೋಣ (ಉರಾಚ. ೧೭); ಶ್ರೀಮಂತರು ಉಪ್ಪರಿಗೆಯ ಕಿಡಕಿಗಳ ಬಳಿಯಲ್ಲಿ ಆನಂದದಿಂದ ಕುಳಿತುಕೊಂಡಿದ್ದಾರೆ (ಕಗದ್ಯ. II, ४೯). **ಕಿಡಿಕಿ$_2$** : ಕೈಲಾಸದ ಬಾಗಿಲುಗಳೂ ಕಿಡಿಕಿಗಳೂ ಬಹು ರಮಣೀಯವಾಗಿರುತ್ತವೆ (ಮುಂಬಯಿ. ೬–೧೮೫).

[← ಪ್ರಾ. ಖಡಕ್ಕೀ, ಖಡಕ್ಕಿಆ ; ಮರಾ. ಹಿಂ. ಖಿಡಕಿ]

**ಕಿಡಿಗಂಡಿ** (ನಾ). ಕಿಡಿಹಾರಲು ಬಿಟ್ಟಿರುವ ಕಂಡಿ : ಕಿಡಿಗಂಡಿ ಎಂದರೆ ಮಧ್ಯೆ ಕಿಡಿಹಾರಲು ಸ್ಥಳಬಿಡುವಂತೆ ಇಟ್ಟಿರುವ ಎರಡು ಲೋಹದ ಗೋಳಗಳಿಂದ ಮಾಡಿದ ಉಪಕರಣ (ಭೌತವಿ. ೩४೦). [ಕಿಡಿ + ಕಂಡಿ$_1$]

**ಕಿಡಿಗಣ್**, ಕಿಡಿಗಣ್ಣು (ನಾ). ೧.(ಬೆಂಕಿಯನ್ನು ಹೊಂದಿರುವ) ಶಿವನ ಕಣ್ಣು. ೨. (ಕೋಪದಿಂದ) ಕಿಡಿಯನ್ನು ಸೂಸುವ ಕಣ್ಣು ; ಕೆಂಗಣ್ಣು : ಕೊಬ್ಬಿದ ಕೊರಳ . . . ಮಡಿಗಿವಿಯ ಕಿಡಿಗಣ್ಗಳ ಹೆಬ್ಬಲ್ಲ ಬಿಡುವಾಯ ಜೋಲ್ವ ಕೆನ್ನಾಲಗೆಯ ಗಬ್ಬಿನಾಯ್ಗಳ (ಜೈಮಿಭಾ. ೨೮–४೬). **ಕಿಡಿಗಣ್ಣು** : ೧. ಮೃಡನ ಕಿಡಿಗಣ್ಣಿನಿಂದೊಗೆದು ದಕ್ಷನ ತಲೆಯ ಹೊಡೆದು ಹೋಮದೊಳಿಟ್ಟು (ಚಬಪು. ೧–೧೬); ಕಿಡಿಗಣ್ಣ ತೆರೆಯದಂದಮೊಳುಱೆ ಮುದ್ರಿಸಿ (ಮೋಹತ.೨೧–೨೯). [ಕಿಡಿ + ಕಣ್]

**ಕಿಡಿಗಣ್ಣೆ** (ನಾ). ಕಿಡಿಗಣ್ಣು ಉಳ್ಳವಳು : ಕೆಣಕಿದರೆ ಅವಳೂ ಕಿಡಿಗಣ್ಣೆ ಹೊನ್ನಾಲೂ ಮರೆತಾರೆ ಮನೆಯ ಮುರಿದಾಳು (ಹುಟ್ಟಿಹ. ೯೬).

[ಕಿಡಿಗಣ್ + -ಇ$_2$]

**ಕಿಡಿಗಣ್ಣು** 'ಕಿಡಿಗಣ್' ನೋ.

**ಕಿಡಿಗರೆ** 'ಕಿಡಿಗಱೆ' ನೋ.

**ಕಿಡಿಗಱೆ**, ಕಿಡಿಗರೆ (ಕ್ರಿ). ಕಿಡಿಯನ್ನು ಕಾರು, —ಸೂಸು : ಮೇಲೆ ಮೇಲುಬ್ಬೇಳ್ವ ಕೋಪಜ್ವಾಲೆಗಳ ಕಿಡಿಗಱೆವ ಬಿಡುಗಣ್ಣಾಲಿಗಳ (ತೊರರಾ. ೬–೧४–೨೦); ಕಂಗಳೊಳು ಕಿಡಿಗಱೆದು ಬಿಸುಸುಯ್ದು (ವೆಂಕಾರಾ ೫ ೯–೨೦). **ಕಿಡಿಗರೆ** : ಅವು ಒಂದನ್ನೊಂದು ತಾಗಿ ಕಿಡಿಗರೆಯುತ್ತಿರಲು ಅಂಬರವನ್ನು ತುಂಬಿ ಹರಡಿದ ಬೆಂಕಿಯಲ್ಲಿ (ಭಾಮಣಿ. ೩೧). [ಕಿಡಿ + ಕಱೆ$_1$]

**ಕಿಡಿಗುಟ್ಟು** (ಕ್ರಿ). ಕಿಡಿ ಹಾರಿಸು ; ಬೆಂಕಿ ಹುಟ್ಟಿಸು : ಮಹಾವೈಷ್ಣವಾಸ್ತ್ರಮುಂ ಗಾಂಗೇಯಂ ತೊಟ್ಟಿಸುವುದುಮೆರಡುಂ ಕಿಡಿಗುಟ್ಟಿ ಸಿಡಿಲ್ ಸಿಡಿಯೆ ಪೋರ್ದುವು (ಪಂಪಭಾ. ೧೧–೨೨); ತಗರೆರಡುಂ ತಮ್ಮೊಳ್ ತಾಗಿ ಕಿಡಿಗುಟ್ಟಿದಂತಾಗೆ ಪೋರುತ್ತಿರೆ (ಪಂಚತಂ. ೭೨–೧೩); ಮೊನೆಯ ನಾಯಕರ್ ತಾಗಿ ಕಿಡಿಗುಟ್ಟಿ ಕಾದಲ್ (ನೇಮಿಪು. ೧೨–೯೬ ವ); ನಿಶಾಚರನ ಕೋಪೋಗ್ರಾನಳಂ ಪೊತ್ತು ತುಂಪೊಗೆಯುತ್ತುಂ ಕಿಡಿಗುಟ್ಟುತುಂ ಮಸೆಯುತುಂ (ಜಗವಿ. ೧೫–४೦). [ಕಿಡಿ + ಕುಟ್ಟು$_1$]

**ಕಿಡಿಗೆದಱು** (ಕ್ರಿ). ಕಿಡಿಗಳನ್ನು ಹರಡು ; ಬೆಂಕಿ ಸುರಿಸು : ಅಂಬಿನ ಧಾರೆ ದಳ್ಳಿಸಿ ಕಿಡಿಗೆದಱಿದವು (ಕುವ್ಯಾಶ. ೨-೫೭); ಅಲಿಯಲಿ ಕಿಡಿಗೆದಱಿ ಜನನಿಯ ಮೇಲೆ ಮುಳಿದಳಿವಿಂಗೆ ಝಡಿದನು ಬಾಳ (ತೊರರಾ. ೨–೬–೫); ಅಬ್ಧಿಪಂ ಕಣ್ಗಳೊಳ್ ಕಿಡಿಗೆದಱಿದಂ (ಚಬಪು. ४೨–४೧); ನಿಡುಗಣ್ಗಳ ಕಡೆಯೊಳ್ ಕಿಡಿಗೆದರ್ದುದು (ಶಬಶಂ. ४–೩೭).

[ಕಿಡಿ + ಕೆದಱು$_1$ (< ಕೆದಱ್)]

**ಕಿಡಿಗೇಡಿ** 'ಕಿಡುಗೇಡಿ' ನೋ.

**ಕಿಡಿಗೇಡಿತನ** (ನಾ). (ಉಕ) ೧. ಬಹಳ ಕೆಡುಕನ್ನುಂಟುಮಾಡುವ ಸ್ವಭಾವ ; ಅತಿಯಾಗಿ ಬಾಧೆ ಕೊಡುವಿಕೆ : ಕಾಮನ ಕಿಡಿಗೇಡಿತನವನ್ನು ತಡೆಯಬಲ್ಲೆಯಾ (ಅಶ್ವಮೇ. ೫೮ . ೨. ತುಂಟತನ ; ಉಲಕೋಚಿತನ ; ಕಿಲಾಡಿತನ : ಬಾಬೂ ಕಿಡಿಗೇಡಿತನದಿಂದ ಬೀದಿಯ ಕಡೆಗೆ ಕೈಮಾಡಿ ತೋರಿಸಿದನು (ರಕ್ತಧ್ವ. ೨೭೮); ನನ್ನ ಕಿಡಿಗೇಡಿತನಕ್ಕೆ ಉತ್ತರವಾಗಿ ಬಲಗಡೆ ತೋಳಿಗೆ ಸುಖವಾಗಿ ಚಿವುಟಿದಳು (ವೈನಿ. ೧೦).

[ಕಿಡಿಗೇಡಿ (< ಕಿಡುಗೇಡಿ) + -ತನ]

**ಕಿಡಿನುಡಿ** (ನಾ). ಕಿಡಿಯಂಥ ಮಾತು ; ಉಗ್ರವಾದ ನುಡಿ ; ಕಟೂಕ್ತಿ : ಆ ಸಿಡುಕುನೋಟ ಬೇಸರದ ಕಿಡಿನುಡಿ . . . ತಲೆದೋರುತ್ತಿದ್ದವು (ಕಣ್ಮಣಿ. ೭೩); ಕೆಲವು ಕಿಡಿನುಡಿಗಳಿಂದ ಆತನು ಆಕ್ಕನ ಜೀವನ ಪ್ರವಾಹವನ್ನೇ ಕೊಚ್ಚಿದ್ದಾನೆ (ಸಾಸಮಾ. ೧४೩). [ಕಿಡಿ + ನುಡಿ$_2$]

**ಕಿಡಿಬೆಂಕಿ** (ನಾ). ಕಿಡಿಗುಟ್ಟುವ ಬೆಂಕಿ : ಬಿಧಿಂಗೆ ಬಿದಿರ ತಿಕ್ಕಿ ಉದುರಿತ್ತು ಕಿಡಿಬೆಂಕಿ (ಸಿದ್ಧಪು. ೫–೫೯). [ಕಿಡಿ + ಬೆಂಕಿ]

**ಕಿಡಿಬೆಣೆ** (ನಾ). ಕಿಡಿಯನ್ನು ಹುಟ್ಟಿಸುವ ಬೆಣೆ, —ಗಿಡಿ : ಮೋಟಾರ್ ವಾಹನದಲ್ಲಿ ಕಿಡಿಗಂಡಿಯು ಮೇಲೆ ಹೇಳಿದ ರೀತಿಯಲ್ಲಿರದೆ ಕಿಡಿಬೆಣೆಯೆಂದು (Spark Plug) ಕರೆಯಲ್ಪಡುವ ಉಪಕರಣವನ್ನು ಹಾಕಿರುತ್ತಾರೆ (ಭೌತವಿ. ೩४೦). [ಕಿಡಿ + ಬೆಣೆ]

**ಕಿಡಿಯಾಡು** (ಕ್ರಿ). ಕಿಡಿಗುಟ್ಟು ; ಕಿಡಿಯಾಗಿರು : ಬಹುದಿನಗಳಿಂದಲೂ ಒಳಗಿಂದೊಳಗೇ ಕಿಡಿಯಾಡುತ್ತಿದ್ದ ಆತನ ರೋಷವು ಒಮ್ಮೆಗೇ ಹೊತ್ತಿಕೊಂಡು ಉರಿಯಲಾರಂಭಿಸಿತು (ಚತಸ. ೧೧೮). [ಕಿಡಿ + ಆಡು$_1$]

**ಕಿಡಿಯಿಡು** (ಕ್ರಿ). ಕಿಡಿಯನ್ನು ಕಾರು ; ಕಿಡಿ ಸೂಸು : ನಡುವಗಲ ಬಿಸಿಲಳುರೆ ಕಿಡಿಯಿಡುವ ಪುಡಿಯೊಳ್ ಪೊರಳುತ್ತಂ (ಕಾದಂಪೂ. ೨೬४); ಕೋಪ ಕಿಡಿಯಿಡಲಾಗ ರೌದ್ರಾಟೋಪದಲಿ (ಕುವ್ಯಾಸ. ಓರಿಇ. ೧೫. ೯४); ಚಿತ್ತದೊಳ್ಕಿಡಿಯಿಡುವ ಕಡುಗೋಪದುರಿ ಮೆಯ್ಯೊಳಿರದೆ ಪೊಱಮಡುವುದೋ ಕಂಗಳಿಂದೆನೆ ಕೆಂಪಡರ್ದಾಲಿಗಳ್ ಭಯಂಕರಮಾಗಲು (ಜೈಮಿಭಾ. ೭–೩೬). [ಕಿಡಿ + ಇಡು$_1$]

**ಕಿಡಿಯೊಡೆ** (ಕ್ರಿ). ಕಿಡಿ ಹುಟ್ಟು ; ಬೆಂಕಿ ಏಳು : ಭುಗುಭುಗಿಸಿ ಪೊಗೆವೆರಸಿ ಕಿಡಿಯೊಡೆದು ದಳ್ಳುರಿಯು ಮಿಗೆ ಪೆರ್ಚೆ ಪರ್ಬುತ್ತೆ (ನವಮೋ. ೩–೫೦).

[ಕಿಡಿ + ಒಡೆ$_1$]

**ಕಿಡಿವಣ್ಣ** (ನಾ). ಕಿಡಿಯ ಬಣ್ಣ ; ಕೆಂಬಣ್ಣ : ಕನಲ್ವ ಕಿಡಿವಣ್ಣದ ಕಣ್ (ಚಂದ್ರಪು. ೯–೯೩). [ಕಿಡಿ + ಬಣ್ಣ]

**ಕಿಡಿವಿಡು** (ಕ್ರಿ). ಕಿಡಿಗಳನ್ನು ಹೊರಸೂಸು, —ಚಿಮ್ಮು : ಕರದಸಿಗಳ್ ಪಳಂ[ಚಿ]ಕಿಡಿವಿಟ್ಟೊಗೆದೊಳ್ಗಡಿ ತಾರಕಾಳಿಯಂತಿರೆ (ಪಂಪಭಾ. ೧೨–೧೧೧); ಕಿಡಿವಿಡೆ ಪಳಂಚುವ ಕಯ್ದುಗಳ ಕರ್ಕಶ ಖಣತ್ಕೃತಂಗಳುಂ (ವರ್ಧಪು. ೧೧–४೬ ವ). [ಕಿಡಿ + ಬಿಡು$_1$]

**ಕಿಡಿವೀೞ್** (ಕ್ರಿ). ಕಿಡಿಬೀಳು ; ಬೆಂಕಿ ಬೀಳು.

ಕಿಡಿವೀೞ್ತರ್ = ಕಿಡಿಗಳು ಉದುರಿಬೀಳು : ಎರಬ್ಬೆಡೆಯಾನೆಗಳಾನೆಯೊಳ್ ಸಿಡಿಲ್ ಸಿಡಿಲೊಳೆ ತಾಗಿದಂತೆ ಕಿಡಿವೀೞ್ತರೆ [ಪಾಠಾಂ. ಬೀೞ್ತರೆ] ತಾಗೆ ರದಂ ರದಂಗಳೊಳ್ (ಪಂರಾಮಾ. ೧೩–೭೫). [ಕಿಡಿ + ಬೀೞ್$_1$]

**ಕಿಡಿವು** (ಕ್ರಿ). ಕೆಡಹು(?) : ಬೂವಣ ಹೆಗ್ಗಡೆ ಬೇಗೆಯ ಸಾಹಣಿಯ ಧಾಳಿಯ ಕುದುರೆಯ ಕಾಳೆಗ ಕಿಡಿವಿ ಸುರಲೋಕಪ್ರಾಪ್ತ (ಎಕ. IX, ಹಿರಿಯೂ. ೩೦–೬ ; ಸು. 1100). [< ಕೆಡಪು]

**ಕಿಡಿವೆಱು** (ಕ್ರಿ). ಕಿಡಿಗೊಳ್ಳು ; ಕಿಡಿಯನ್ನು ತಾಳು : ಅಖಿಲಾದ್ರಿಗಳ್ . . . ಕಾಯ್ದ ಕರ್ಬುನದವೋಲ್ ಕಿಡಿವೆತ್ತುವನೋಕಹವ್ರಜಂ ಮರುಟಿದುವು (ದಶಕು. ४–೨೨). [ಕಿಡಿ + ಪೆಱು$_1$]

**ಕಿಡಿಸು** ‘ಕೆಡಿಸು’ ನೋ.

**ಕಿಡಿಸುರಿ** (ಕ್ರಿ). ಕಿಡಿಗಳನ್ನು ಕಾರು; ಬೆಂಕಿಯನ್ನು ಸೂಸು: ನಿನ್ನಾಳ್ದನೆನ್ನಯ ತಪಗೆಡಿಸಿದ ಕಾರಣದಿಂದೆ ಕಿಡಿಸುರಿವಕ್ಷಿಯಿಂದುರುಹಿದೆ (ಮೋಹತ. ೮–೨೯). [ಕಿಡಿ + ಸುರಿ$_1$]

**ಕಿಡಿಸೂಸು** (ಕ್ರಿ). ಕಿಡಿಗಳನ್ನು ಚೆಲ್ಲು: ನಕುಳನೆಚ್ಚಂಬುಗಳು ಕಿಡಿ ಸೂಸಿದವು (ಕುವ್ಯಾಕ. ೨೦–೧೪); ಕಾಯ್ಪುವೆತ್ತು ಕಣ್‌ಗಡೆ ಕಿಡಿಸೂಸೆ ನೋಡಿದುದು (ಶಬಶಂ. ೪–೭). [ಕಿಡಿ + ಸೂಸು$_1$]

**ಕಿಡಿಹೊರಳಿ** (ನಾ). ಕಿಡಿಗಳ ಗುಂಪು; ಅಗ್ನಿಕಣಗಳ ಸಮೂಹ: ಕಠೋರದ ಮೊರಹುಗಳ ಬಾಯಧಾರೆಗಳ ಕಿಡಿಹೊರಳಿಗಳ ಹೊಗರಂಬು ಹೊಕ್ಕವು ಪಾಂಡುಸೈನ್ಯದಲಿ (ಕುವ್ಯಾದ್ರೋ. ೨–೫೫).
[ಕಿಡಿ + ಹೊರಳಿ]

**ಕಿಡು** ‘ಕೆಡು$_1$’ ನೋ.

**ಕಿಡುಕ** ‘ಕೆಡುಕ’ ನೋ.

**ಕಿಡುಕುಟ್ಟು** (ಕ್ರಿ). ಕೆಡುವಂತೆ ಕುಟ್ಟು; ಅಪ್ಪಳಿಸು; ಒಂದಕ್ಕೊಂದು ತಾಗು: “ಕಿಡುಕುಟ್ಟು (ಕಿಡು + ಕುಟ್ಟು) –ಸಂಘಟ್ಟನೇ” (ಶಮುಧಾ).
[ಕಿಡು (< ಕೆಡು) + ಕುಟ್ಟು$_1$]

**ಕಿಡುಗೇಡಿ, ಕಿಡಿಗೇಡಿ** (ನಾ). ೧. ತುಂಟ; ಉಲಕೋಚಿ; ಕಿಲಾಡಿ: ನಮಗೆ ಪ್ರಿಯವಾದವರನ್ನು ಕಾಡಿ ನಗಬೇಕೆಂದೂ ಕಿಡುಗೇಡಿ ಮನಸ್ಸು ಲವಲವಿಸುತ್ತದೆ (ಗಾಳಿಪ. ೪೬). **ಕಿಡಿಗೇಡಿ**: ೧. ಓಡಹೋದರೆ ಸಿಕ್ಕ ಕಿಡಿಗೇಡಿ ರಂಗನ ಬಿಡಬೇಡಿ (ಪುರಂದ. ೪–೮–೨); ಅದಕ್ಕೇ ಹಿರಿಯರೆಲ್ಲ ನನಗೆ ತುಂಟ, ಕಿಡಿಗೇಡಿ ಎಂದು ಕರೆಯುತ್ತಿದ್ದರು (ಮೋದಿಮು. ೨); ಮೂಲೆಯಲ್ಲಿ ಕುಳಿತ ಕಿಡಿಗೇಡಿ ಮೇರಿ ಡಿಸೋಝಾ ಎದ್ದು ನಿಂತು ಪ್ರಶ್ನೆಯನ್ನು ಕೇಳಿದಳು (ಹೊಸಬೆ. ೩). ೨. ಬಹಳ ಕೆಡುಕನ್ನು ಉಂಟುಮಾಡುವವನು, —ತೊಂದರೆ ಕೊಡುವವನು: ಕ್ರೂರವೆಂಬೊ ಕಳ್ಳಬಂಟ ಕಿಡಿಗೇಡಿ ನೋಡುತಿಹ ಬಾರಯ್ಯ ಈಗ ತೋರಯ್ಯ (ಪುರಂದ. ೩–೧೫–೭); ಅವನು ಕಿಡಿಗೇಡಿಯಂತೆ ಕಂಡರೂ ಅವನಲ್ಲಿ ಯಾವ ಅಲ್ಪಭಾವಗಳೂ ಸುಳಿಯುತ್ತಿರಲಿಲ್ಲ (ಹಬ್ಬಬ. ೩೨).
[ಕಿಡು (< ಕೆಡು$_1$) + ಕೇಡಿ]

**ಕಿಡುತರ್** (ಕ್ರಿ). ಕ್ರಮವಾಗಿ ಕಳೆದುಹೋಗು; ನಿವಾರಣೆಯಾಗು: ಕಿಡುತಂದುದು ಮನದಱಿಯಮೆ ನುಡಿಯ ತೊದಳ್ ಪಿಂಗಿಪೋಯ್ತು ... ಶೈಶವಾತಿಕ್ರಮದೊಳ್ (ಚಂದ್ರಪ್ರ. ೪–೨).
[ಕಿಡು (< ಕೆಡು) + ತರ್]

**ಕಿಡುದೆಸೆ** (ನಾ). ದುರವಸ್ಥೆ; ದುಸ್ಥಿತಿ: ಪೆಱವರ ಕಿಡುದೆಸೆಯೊಳ್ ಕಡುಸಂತಸಕ್ಕೆಡೆಗುಡದಿರ್ (ರಾಮಾಶ್ವ. ೧–೧೦); ಕಂಬನಿಗರೆಯುತ ಕಿಡುದೆಸೆಯೊದಗಿದುದೆನುತೆ (ಚಿತ್ರಸ್ಯ. ೫೩).
[ಕಿಡು (< ಕೆಡು) + ದೆಸೆ$_1$]

**ಕಿಡುನೋಟ** (ನಾ). ಕೆಟ್ಟ ನೋಟ; ಕೆಟ್ಟ ದೃಷ್ಟಿ: ಧರ್ಮವನ್ನು ಮಾರುವವರು ಸುಖವಾಗಿಯೇ ಇರುತ್ತಾರೆ. ಅವರ ಕಡೆ ಕಿಡುನೋಟದಿಂದ ಯಾರೂ ನೋಡುವುದಿಲ್ಲ (ಪ್ರೇಮಾಶ್ರ. ೮೧)
[ಕಿಡು (< ಕೆಡು) + ನೋಟ]

**ಕಿಡುವುಳ** (ನಾ). ಕ್ಷುದ್ರ ಕೀಟ: ವಾಮಪದದಿಂದ ಕಿಮುಳ್ದುಳಿವುತ್ತಾ ಸಸಿಯುಂ ಕಿಡುವುಳವಂ ಕೊಲ್ವಂತೆ ಕೊಂದನಾ ವೀರೇಶಂ (ವೀರವಿ. ೧೨–೫೭). [ಕಿಡು (< ಕೆಡು) + ಪುಳ$_1$ (< ಪುೞು)]

**ಕಿಡುವೋಗು** (ಕ್ರಿ). ಕೆಟ್ಟುಹೋಗು; ಹಾಳಾಗು: ಪೆರ್ಚಿದ ಸಂತೋಷದಿನಾಡಿ ಮಾಡಿ ಕಿಡುವೋದ್ವೈ ಖೂಳ (ಚಂದ್ರಭ್ಯು. ೧೬–೨೪).
[ಕಿಡು (< ಕೆಡು) + ಪೋಗು$_1$]

**ಕಿಣ** (ನಾ). ೧. ಚರ್ಮದ ಮೇಲೆ ಘರ್ಷಣೆಯಿಂದ ಉಂಟಾದ ಜಡ್ಡು; ದಡ್ಡು; ಗಾಯದ ಗುರುತು, —ಕಲೆ: ಮಣಿಭೂಷಣ ಭರದಿಂ ತನು ಕಿಣಮಪ್ಪುದದೇಕೆ ನಿನ್ನ ನಿರ್ಮಲ ಗುಣಭೂಷಣಮಂ ದಯೆಗೆಯ್ (ಪಂರಾಮಾ. ೭–೪೩); ಅವಜವಜ ಮೇಲೆ ಕಲೆಗಳ್ ಸಮನಿಸುಗುಂ ಕಿಣ (ಕಣೆ)ಮೆಂಬ ಪೆಸರುಂ (ಅಶ್ವಶಾ. ೯–೫೬); ಬಿಲ್ದಿರುವಿನ ಘಾತಜಾತಕಿಣ ಮೊತ್ತೆ (ಶಾಕುಂತ. ೩೭–೬೪). ೨. ಹುಣ್ಣಿನ ಒಣಗಿದ ಕಲೆ. [ಸಂ.]

**ಕಿಣಕರ** (ಗು). ಜಡ್ಡುಗಟ್ಟಿಸುವಂಥ; ಕಿಣವನ್ನು ಉಂಟುಮಾಡುವ: ಮಣಿಮಯಮುಂ ವಿಭೂಷಣ ಸಮುಚ್ಚಯಮುಂ ಸಹಜಾತಮುಂ ವಪುಃ ಕಿಣಕರಮುಂ ನಿರರ್ಥಮುಮರ್ತ್ಯತೆಯೊಳ್ ಸಲೆ ಪೊತ್ತನೆಂಬುದೊಂದೆಣಿಕೆ ಮನಕ್ಕೆವಂದುದೆನೆ (ಚಂದ್ರಪ್ರ. ೪–೮೨). [ಸಂ.]

**ಕಿಣಯಿಗೆ** (ನಾ). ಒಂದು ಊರಿನ ಹೆಸರು: ಕಿಣಯಿಗೆ ನಾಮಗ್ರಾಮೇ (ಇಆ. VII, ೨೧೩–೫೮; 10ನೆಯ ಶತ). [?]

**ಕಿಣಿ$_1$** (ನಾ). ಗೆಜ್ಜೆಯ ಶಬ್ದ.
ಕಿಣಿಕಿಣಿ ಎನ್ನು = ಗೆಜ್ಜೆಯಂತೆ ಶಬ್ದಮಾಡು: (ಕಿ). [?]

**ಕಿಣಿ$_2$** ‘ಕೀನಿ’ ನೋ.

**ಕಿಣಿ$_3$** (ನಾ). (ಕರಾ). ೧. ಬರೆಹಗಾರ: “ಕಿಣಿ–ಕರಣಿ (ಬರಹಗಾರ)” (ತುಳುನಾ. ೨೩೮). ೨. ಗೌಡ ಸಾರಸ್ವತದಲ್ಲಿ ಒಂದು ಪಂಗಡ: ಗೌಡ ಸಾರಸ್ವತರು–ಕಾಮತ, ನಾಯಕ, ಕಿಣಿ, ಪ್ರಭು (ತುಳುನಾ. ೧೮೪).
[< ಸಂ. ಕರಣಿನ್]

**ಕಿಣಿಗುಟ್ಟು** (ಕ್ರಿ). ಕಿಣಿಕಿಣಿ ಎಂದು ಸದ್ದುಮಾಡು: (ಕಿ).
[ಕಿಣಿ$_1$ + ಕುಟ್ಟು$_1$]

**ಕಿಣಿಮಿಣಿ** (ನಾ). ಗೆಜ್ಜೆಯ ಶಬ್ದ: ಕುಂದಣಗೆಜ್ಜೆ ನೇವಳ ಕಿಣಿಮಿಣಿಯೆನೆ ಬಂದರು ನಲಿದು ರಾಣಿಯರು (ಭರಚ. ೪೬–೭೬). [ಕಿಣಿ$_1$ + ಮಿಣಿ]

**ಕಿಣಿವಲ್** ‘ಕೀನಿವಲ್’ ನೋ.

**ಕಿಣಿಹಿ$_1$** (ನಾ). ಒಂದು ಊರಿನ ಹೆಸರು: ಪಶ್ಚಿಮತಃ ಕಿಣಿಹಿ(ಭಿ) ಗ್ರಾಮಃ (ಇಆ. XII, ೨೬೬–೫೫; 972). [?]

**ಕಿಣಿಹಿ$_2$** (ನಾ). ಒಂದು ಬಗೆಯ ಸಸ್ಯ: “ಉತ್ತರೇಣಿಗಿಡ” (ಅಮರ. ಟೀಕೆ). [?]

**ಕಿಣ್ಣ$_1$** (ನಾ). ಚಿಕ್ಕ ಪಾನಪಾತ್ರೆ, —ಬಟ್ಟಲು: ಏನ್ನೇರಿದನೊ ಕುಡಿಯಲೀಯದೊಂದೇ ಸಲಂ ನಿನ್ನ ಮಿರುಮದಿರೆಯಾ ಕಿಣ್ಣದಿನಿಸಾನುಂ (ಗಿಳಿವಿಂ. ೨೯–೫೦). [ದೇ. ‖ ತಮಿ. ಮಲ. ಕಿಣ್ಣ; ತುಳು. ಕಿಣ್ಣೊ]

**ಕಿಣ್ಣ$_2$** (ನಾ). ಚಿಣ್ಣ; ಹುಡುಗ: ಅವಳು ಅಂದೇ ಈ ಕಿಣ್ಣನಿಗೆ ಮನ ತೆತ್ತಿದ್ದಾಳೆ (ನಡೆದಾ. III, 1131); ನನ್ನ ಒಡೆಯ ನನಗೊಬ್ಬ ಕಿಣ್ಣನನ್ನು ಕೊಟ್ಟು ಹೋಗಿದ್ದಾನೆ (ಹುಲಿಹಾ. ೩). [← ಕೊಡ. ಕಿಣ್ಣ]

**ಕಿಣ್ವ** (ನಾ). ೧. ಹೆಂಡ ಮೊದಲಾದುವುಗಳ ತಯಾರಿಕೆಯಲ್ಲಿ ಹುಳಿ ಹಿಡಿಯುವುದಕ್ಕಾಗಿ ಬಳಸುವ ಒಂದು ಬಗೆಯ ಮಾದಕ ವಸ್ತು: (ಕಿ). ೨. ಮದ್ಯದ ಮಷ್ಟು. ೩. ಮದ್ಯ ತಯಾರಿಸುವ ಪಾತ್ರೆ, —ಮಡಕೆ: “ಕಿಣ್ವಂ, ನಗ್ನಹೂ – ೨ ಮದ್ಯದ ಹಿಪ್ಪಿಯಲ್ಲೂ ಮದ್ಯವ ಮಾಡುವ ದೋಣಿಯಲ್ಲೂ ವರ್ತಿಸುವುದು” (ಸಿದ್ಧಾಂತಿ. ೨೭೪).
[ಸಂ.]

**ಕಿತ** (ನಾ). ತಪ್ಪು; ಅಪರಾಧ; ದೋಷ: ಪ್ರಥಮದಲಾದ ಮೋಹ ಸಾತ್ವಿಕವಾದಡೆ ಕಿತವೇಕಯ್ಯ? ಹೆಜರನೊಲ್ಲದ ಬೇಟಕ್ಕೆ ಕಿತವೇಕಯ್ಯ? ಚನ್ನಮಲ್ಲಿಕಾರ್ಜುನ ದೇವರ ದೇವನನೆಂದಿಂಗೆ ಬಿಡದ ನೇಹಕ್ಕೆ ಕಿತವೇಕೆ? (ಮಹಾದೇ. ೧೦೯–೨೪೫). [?]

**ಕಿತಗೆಯ್** (ಕ್ರಿ). ಅಪರಾಧಮಾಡು: ಕಿತಗೆಯ್ವಂತೆ ಪಾವಂ ಕರದಿ ಪಿಡಿದು ಸಲೆ (ಲಿಂಗಪು. ೨೪–೧). [ಕಿತ + ಕೆಯ್$_1$]

**ಕಿತಬಿ** (ನಾ). ಇಲ್ಲದ ಕಾರಭಾರ; ಸಲ್ಲದ ಕಾರ್ಯ; ಕಿತಾಪತಿ: ಸಾಲಿ ಹುಡುಗ್ರು ಇಲ್ಲದ 'ಕಿತಬಿ' ಮಾಡಬಾರದು (ರಾಯಚಾ. ೧೮೫); ಈ ಊರ ಜನ ಭಾಳ ಕಿತಬಿಯವರು (ಗಂಗಾಸಾ. ೧೩೭); ಬಬ್ರು ಬಂದಿದ್ದಾನೆ ... ಏನೋ ಕಿತಬಿ ಎಬ್ಬಿಸಿದ್ದಾನೆ (ಇಕಿಶ್ರೀ. ೧೫೯). [?]

**ಕಿತಮ** (ಗು). ನಿಜವಲ್ಲದ; ಕೃತ್ರಿಮವಾದ: (ಕಿ). [< ಕೃತ್ರಿಮ ?]

**ಕಿತವ** (ನಾ). ೧. ಜೂಜುಗಾರ: "ಕಿತವಃ, ದ್ಯೂತಕಾರಃ – ಈ ೨ ಜೂದುಗಾಱಂ" (ಹಲಾಯು. ೬೪-೨೩೪); "ದ್ಯೂತಕರನೆನೆ ಕಿತವನೆನೆ ಜೂಜುಗಾಱಂ" (ಮಂಗರಾ. ೭೨-೨೪). ೨. ಸುಳ್ಳುಗಾರ; ಮೋಸಗಾರ; ವಂಚಕ: ಅಗ್ನಿಮುಖನೆಂಬ ಪರದಂಗಮಾತನ ಪರದಿತಿ ಶಕುನಿಗಂ ಮೃದುಮತಿವೆಸರ ಸುತನಾಗಿ ಕಿತವನಾಗೆ ಪೂಜಮಡಿಸಿ ಕಟ್ಟಿಱಯೆ (ಪಂರಾಮಾ. ೧೫-೪೩ ವ); ಬಂದಿಕಾಜನಧಮಂ ಕಿತವಂ ಮನೆಗಳ್ಳಂ (ದಶಕು. ೮-೧೯೯); ಯುವತಿಯರು ಗಾಯಕರು ಕಿತವರು [ಪಾಠಾಂ. ಕವಿಗಳು] ತವತವಗೆ ಕೈವಾರಿಸುವರು (ಕುವ್ಯಾಉ. ೪-೬೫); ಜನ್ನದಸುವಂ ಪಸುವಂ ಕವರ್ವ ಕಿತವರೆಂತಂತು ಬಲ್ಪಿಂ ಕೊಂಡುಯ್ದು (ರಾಮಾಶ್ವ. ೧೪೪-೭). ೩. ದತ್ತೂರ; "ಮದ್ದುಗುಣಿಕೆಯ ಗಿಡ" (ಗಂಗಾವು. ೪೫). [ಸಂ.]

**ಕಿತವಸೌಜನ್ಯ** (ನಾ). ಮೋಸಗಾರನ ಒಳ್ಳೆಯತನ; ಕೃತ್ರಿಮವಾದ ಸುಜನತೆ: ಸಾಲ್ಗುಮೀ ಕಿತವ ಸೌಜನ್ಯಮೆಲವೋ ವನಾಲಯಾ (ಶ್ರೀರಾಮಾ. ೪೨೮-೨೨೩). [ಕಿತವ + ಸೌಜನ್ಯ]

**ಕಿತವಿ** (ನಾ). ವಂಚಕಿ; ಮೋಸಗಾರ್ತಿ: ಕಿತವಿ[ಪಾಠಾಂ. ವ]ಯಿದೆಲ್ಲಿ ಗಂಗಡಿಗೆ ತಂಬುಲಮಂ ಪಿಡಿ ಕೆಮ್ಮಗೆಮ್ಮೊಳೀಂ ಸಿತಗೆಯಿದಾವ ಮಾತು (ಲೀಲಾವ. ೨-೧೧೨). [ಸಂ. ಕಿತವೀ]

**ಕಿತಾಪ್**, ಕಿತಾಬು (ನಾ). ೧. ಬಿರುದು; ಹೊಗಳಿಕೆ; ಸ್ತುತಿ: ಮೂರು ಲೋಕದ ಗಂಡನೆಂದು ಕಿತಾಪ್ ಮಾಡೋ ಸಾರಥಿ (ದುಶ್ಯಾಕ. ೭). ೨. ಪುಸ್ತಕ: (ಕಿ). **ಕಿತಾಬು**: ೧. ಆವನಿಗೆ ಬಾದಶಾಹನು ಅಸದಖಾನ (ಹುಲಿಯಂಥ ಮನುಷ್ಯ) ಎಂಬ ಕಿತಾಬು ಕೊಟ್ಟು (ಕಭಾಗ. ೩೫೩); 'ರಾಜಾ ಜಗದೇವ್' ಎಂಬುದಾಗಿ ಕಿತಾಬುಕೊಟ್ಟು (ಮಹಾವಂ. I, ೧೪೪); ಬಹದರನೆಂದು ಕಿತಾಬುಕೊಟ್ಟು (ಹೈದರ. ೬೯).
[← ಅರ. ಹಿಂ. ಮರಾ. ಕಿತಾಬ್]

**ಕಿತಾಪತಿ**, ಕಿತಾಪತ್ತು (ನಾ). ಸಲ್ಲದ ಕಾರಭಾರ; ಉಪದ್ವ್ಯಾಪ; ಕಿಡಿಗೇಡಿತನ: ಇಂತಹ ಕಿತಾಪತಿ ಕೆಲಸಕ್ಕೆ ಬ್ರಹ್ಮನು ಏಕೆ ಕೈ ಹಾಕಿದ (ಜೀವಾತ್ಮ. ೨೯೬); ಆ ನಾಗಕ್ಕಂದೇ ಎಲ್ಲ ಕಿತಾಪತಿ (ಮಲೆಮ. ೬೯೩); ನೀವು ಏನೋ ಕಿತಾಪತಿ ಹೂಡಿದಿರೆಂದು ಗೊತ್ತಾಗಿದೆ (ಕುರುಕಾ. ೧೪). **ಕಿತಾಪತ್ತು**: ಆ ಗುರುರಾಜರಾಯರೇನಾದರೂ ಕಿತಾಪತ್ತು ನಡೆಸಿದ್ದಾರೆಯೆ (ಮರಳಿ. ೧೨೫). [← ಹಿಂ. ಕಿತಾಬತ್; ಮರಾ. ಕಿತಾಬತೀ]

**ಕಿತಾಪತಿಗಾರ** (ನಾ). ಕಿತಾಪತಿ ಮಾಡುವವನು; ಕಿಡಿಗೇಡಿ: ಆ ಕಿತಾಪತಿಗಾರ ಮತ್ತೆಂತಹ ಸುದ್ದಿ ತರುತ್ತಾನೋ (ಮೂರುದಾ. ೧೭೧).
[ಕಿತಾಪತಿ + -ಗಾರ (< -ಕಾಱ)]

**ಕಿತಾಪತ್ತು** 'ಕಿತಾಪತಿ' ನೋ.

**ಕಿತಾಬು** 'ಕಿತಾಪ್' ನೋ.

**ಕಿತ್ತ**$_1$ (ನಾ). ಚಿಕ್ಕವನು; ಎಳೆಪ್ರಾಯದ ನಲ್ಲ: ಮನೋಭವನಿವಂ ಪೊಸಸುಗ್ಗಿಯೊಳಾದದೊಂದು ಕಿತ್ತನಿವಂ (ಪಂಪಭಾ. ೪-೯೭). [< ಕಿಱಿದು]

**ಕಿತ್ತ**$_2$ 'ಕೀೞ್$_1$' ಪರಾ.

**ಕಿತ್ತಂಗಾಡಿ** (ನಾ). ಒಂದು ಊರಿನ ಹೆಸರು: ಪೆರಪುರೇ ಕಿತ್ತಙ್ಗಾಡಿ ನಾಮ ತತ್ರ ಶಪ್ಪದ್ಯಪೆದ್ದಂದ ನಾಯ್ಗಗೃಹಮಧ್ಯೇ (ಮೈಆರಿ. ೧೯೧೪, ೧೦-೬; 729). [< ಕಿಱಿದು + ಅಂಗಾಡಿ]

**ಕಿತ್ತಂಬು** (ನಾ). ಕಿರಿದಾದ ಬಾಣ: ಮಹೀಭುಜರೆತ್ತಮೆಚ್ಚ ಕಿತ್ತಂಬುಗಳೆತ್ತಮವ್ವಳಿಸೆ (ಪಂಪಭಾ. ೧೧-೪೨); ಕಿತ್ತಂಬಿನ ಬಡಪಮಿದೆನಿಸಿ ಪಾಂಡ್ಯನಂಬಂ ಕಱಿದಂ (ಪಂಪಭಾ. ೧೨-೭೦).
[< ಕಿಱಿದು + ಅಂಬು$_2$]

**ಕಿತ್ತಟೆ** 'ಕಿತ್ತಡ' ನೋ.

**ಕಿತ್ತಟ್ಟು** (ನಾ). ಕೆಳಬದಿ; ಕೆಳಭಾಗ: ಬಡಗಿ ಕರಿಯನ ಸುನೆ ಕಿತ್ತಟ್ಟಿನ ಕೊಲ್ಲಿ ಬಳಿಯಲ್ಲಿ ಕಾಡವಳಗೆ ಉಳೀನಿಲ್ಲುವ ಪ್ರಕಾರ ಜಾಗಾ ಮಾಡಿ (ರಾಜೇಂದ್ರ. ೧೪೩). [< ಕೀೞ್ + ತಟ್ಟು$_4$]

**ಕಿತ್ತಡ**, ಕಿತ್ತಟ (ನಾ). ೧. ಅಸಹ್ಯಭಾವ; ಅಸಮಾಧಾನ: "ಕಿಸುರೆಂದೆನೆ ಕಿತ್ತಡಮಕ್ಕು" (ಕವಿಕಂ. ೨೪೬); ಚಿತ್ತದನುಮಾನ ಮೊಗದೊಳು ತೋಱುತಿದೆ ಮುಖಂ ಕಿತ್ತಡವನಾಲಿಂಗಿಸುತ್ತಿದೆ (ಸೋಮಚ. ೧-೩೮); ಬ್ರಹ್ಮನ ಕಿತ್ತಡದ ಕೋಪದಲಿ ಜನಿಸಿದ ರುದ್ರನಿಂ ಬಳಿಕ ಮೃತ್ಯುವೆಂದವಳಾದಳಾ ಸತಿ (ಕುವ್ಯಾದ್ರೋ. ೭-೩೪); ಮುನಿಪನ ಕಿತ್ತಡದ ಕೋಪಾಗ್ನಿಯಲಿಯಂದತ್ಯಧಿಕ ಭಯಭಗ್ನರಾದೆವಲಾ (ನಿಭಾಗ. ೧-೧೦-೪೦). ೨. ಮೋಸ; ವಂಚನೆ: ತಮ್ಮನ ಕೈಯ ರಾಜ್ಯಮಂ ಕೊಂಡೊಡೆನ್ನ ನುಡಿ ಕಿತ್ತಡ [ಪಾಠಾಂ. ಕೀಟ್ಟಡ]ಮಕ್ಕುಂ (ಪಂರಾಮಾ. ೭-೨೧ ವ); ಪೋದಿರುಳಿನ ಕಿತ್ತಡಮಂ ಮೂದಲೆಯಾಗಿಂತು ನುಡಿದೊಡೆ (ಯಶೋಚ. ೨-೭೦); ಕೌರವೇಂದ್ರನ ಕಿತ್ತಡವ ನೀವಱಿಯಿರೇ (ಕುವ್ಯಾಗ. ೮-೨೯). ೩. ತಪಸ್ಸು; ವ್ರತ: "ವ್ರತಂ ಕಿತ್ತಡಂ" (ಕರ್ಣಾನಿ. ೬೬). ೪. ಅಲರು; ಪುಷ್ಪ; "ಹೂ; ಕುಸುಮ" (ಪ್ರಭಣ್ಣ). **ಕಿತ್ತಟೆ**: ೨. ಕಿತ್ತಟ[ಪಾಠಾಂ. ಡ]ದಲಮರೇಂದ್ರನಿನವಂಶೋತ್ತಮನ ಸಹಭವನ ಗೆಲವಿನ ಹತ್ತುಗೆಯ ಹಮ್ಮೈಸುತಿದ್ದನು [ಪಾಠಾಂ. ಹಂಲಿಸುತಿರ್ದನು] ಹರಕೆಗಳ ಬಳಿಯ (ತೊರರಾ. ೬-೪೪-೨೦). [?]

**ಕಿತ್ತಡಿ** (ನಾ). ೧. ಚಿಕ್ಕ ಪಾದ; ಕಿರಿದಾದ ಅಡಿ: ವಡೆದುವೆ ನಮ್ಮನ್ನತಿಯಂ ಮಡದಿಯ ಪಾದಾಶ್ರಿತಂಗಳಾಗಿಯುಮಿಂತೀ ಮಡಮುಂ ಬೆರಲ್ಗಳುಂ ಕಿತ್ತಡಿಯುಮೆನುತ್ತುರ್ವಿದಂತೆ ಮೇಂಗಾಲೆಸೆಗುಂ (ಪುಷ್ಪಪು. ೩-೨೯); ಸುಂದರ ಜಪಾನಿಯ ಜವ್ವನೆಯಂತೆ ನನಗೂ ಕಿತ್ತಡಿಗಳನ್ನೇಕೆ ದಯಪಾಲಿಸಲಿಲ್ಲ (ಮುಂಗಾಪು. ೯). ೨. ಚಿಕ್ಕಸ್ವಾಮಿ; ಮರಿಸ್ವಾಮಿ. ೩. ಋಷಿ; ಮುನಿ; ವ್ರತಿ: "ಕಿತ್ತಡಿ, ಕಿತ್ತೀಳೆ" (ಭಾಷಾಭೂ. ೧೪೨ ಉದಾ); "ಕಿತ್ತಡಿ = ವ್ರತಿ" (ಶಮದ. ಪರಿ. ೨); "ಜೋಗಿ ಕಿತ್ತಡಿಯೆನುತುಂ ತಾಂ ತವಸಿ ರಿಸಿಯುಮೆನೆ ಋಷಿಯಕ್ಕುಂ" (ಕವಿಕಂ. ೧೮೭); ಮಡದೊಳೊಂದುವುದೆತ್ತ ಕಿತ್ತಡಿಗಳ್ಗೆನಿಪ್ಪ ತೊಳಪ್ಪುವಾ ಮಡದೊಳೊಂದಿಯೆ ನಿಂದ ಕಿತ್ತಡಿಗಳ್ಗೆ ನಿತ್ಯನಿಯಾಮದಿಂ ಪೊಡೆವಡಿಂ ಗಡಿಮೆಂದು ... ಸಾಱುವ ಮಾಟಕ್ಕೆಯಿಂ (ಕಾವ್ಯಾವ. ೨೨೬); ಕಿತ್ತಡಿಗಳ ರೂಪುಗೊಂಡವನ ಮುಂದೆ ಕುಳ್ಳಿರ್ದು (ಜೀವಸಂ. ೧೬೩-೨೯ ವ); ಜಸಂಬೆತ್ತ ಕಿತ್ತಡಿಯರ್ಗೆ ಕೆತ್ತಿಗನಪ್ಪಂ (ನಳವಿ. ೧೪೦). 'ಕಿತ್ತಯ್ಯ' ಪರಾ.
[< ಕಿಱಿದು + ಅಡಿ$_1$]

**ಕಿತ್ತಣ್ಣ** (ನಾ). ಒಬ್ಬಾತನ ಹೆಸರು: ಧಮ್ಮದ ಮೇಣ್ಟೆ ಮಗ ಆಮಟಿವರ್ ಕಿತ್ತಣ್ಣನ್ ಅವ[ನಾ] (ಸೌಇಎ. ೧೯೩೨, ಪುಂಗನೂ. ೧೯೭-೭; 9ನೆಯ ಶತ). [< ಕಿಱಿದು + ಅಣ್ಣ$_1$]

**ಕಿತ್ತನಾಸ** (ನಾ). ಕತ್ತರಿಸಿದ ಮೂಗು; ಕೊಯ್ದು ಹಾಕಿದ ಮೂಗು. 'ಕಿತ್ತನಾಸಿ' ಪರಾ. [< ಸಂ. ಕೃತ್ತನಾಸಾ]

**ಕಿತ್ತನಾಸಿ** (ನಾ). ಕತ್ತರಿಸಿದ ಮೂಗುಳ್ಳವನು; ಕೊಯ್ದ ಮೂಗಿನವನು: ಕಡುಗೆಲಸಿ, ನಿಡುಮೂಗಿ, ಚಲವಾದಿ, ಕಿ[ಪಾಠಾಂ. ಕೃ]ತ್ತನಾಸಿ, ಕಡುಚಾಗಿ (ಶಮದ. ೧೮೬ ಪ್ರಯೋ). [ಕಿತ್ತನಾಸ + -ಇ$_3$]

**ಕಿತ್ತಮ್ಮ** (ನಾ). ಕೃತ್ರಿಮ (?): ಕಾರಣಮಿಲ್ಲ ಜಗದ್ವ್ಯಾಪಾರಂ ಪರಮಂಗೆ ನಿಮ್ಮ ಕಿತ್ತತ್ತಮಿದೇಂ ದೂರಂ ಯುಕ್ತಾಯುಕ್ತವಿಚಾರಂ ವಿಷಯಾರ್ಥಿಗೆಂಬುದಂ ಮಾಡುವಿರೇ (ಆದಿಪು. ೮-೧೧೨); "ಉಪಸರ್ಗ" (ಆದಿಪು. ಕೋಶ). [< ಕೃತ್ರಿಮ ?]

**ಕಿತ್ತಯ್ಯ$_1$** (ನಾ). ೧. ಚಿಕ್ಕ ಸ್ವಾಮಿ; ಮರಿ ಸ್ವಾಮಿ: ಆನಲ್ತೆ ನಂದ ಮಿತ್ರನಪ್ಪ ಕಿತ್ತಯನೆನ್ (ವಡ್ಡಾರಾ. ೮೯-೧೭); ಕಿತ್ತಯ್ಯ ಪಂಚ ನಮಸ್ಕಾರಮಂ ಮಾಣದಿರುಳಂ ಪಗಲುಮೇದುತ್ತುಮಿರಿಂ (ವಡ್ಡಾರಾ. ೮೨-೨); ತಮ್ಮ ಮಗನಪ್ಪ ಕಿತ್ತಯಂಗಳ ಸಾರೆ (ಜೀವಸಂ. ೯೧-೩೫ ವ). ೨. ಒಬ್ಬಾತನ ಹೆಸರು: ಶ್ರೀ ನಾಗಣನ್ದಿ ಕಿತ್ತಯ್ಯ ದೇವರ ಬಳ್ವಿಸಿದರ್ (ಎಕ. II, ೫೫-೧; 900). [< ಕಿಱುದು + ಅಯ್ಯ$_1$]

**ಕಿತ್ತರಸ** (ನಾ). ಒಬ್ಬಾತನ ಹೆಸರು: ಕಂನ್ನ ಅರಸ × × ಸ್ನತುಮಂಗೆಳ ಕಳ್ಳಜಿವಲ್ಲಿ ಕಿತ್ತರಸಂ ವಱಿಗಟ್ಟನ ಮಗ ಪುಲಿಕಡ್ಡ ಅರಸರ್ (ಎಕ. XVI, ತುಮಕೂ. ೯೧-೭; 775). [< ಕಿಱಿದು + ಅರಸ$_1$]

**ಕಿತ್ತಲಾಟ** (ನಾ). ಕಿತ್ತಾಟ; ಜಗಳ: ನಿಮ್ಮ ನಿಮ್ಮಲ್ಲಿ ಕಿತ್ತಲಾಟ ಆರಂಭವಾಗುವದು ಒಳ್ಳೆಯದಲ್ಲ (ಶನಿಸ ೬. ೧೧೨); ತಾನು ಮಾಡಿದ ತಪ್ಪಿನ ಜೊತೆಗೆ ಅಲ್ಲದ ಸಲ್ಲದ ಕಿತ್ತಲಾಟಗಳನ್ನೆಲ್ಲಾ ಪ್ರಾರಂಭಿಸಿದ (ಚಂಗಾಳ್ವ. ೫೦೫). [ಕಿತ್ತಲ್ ? + ಆಟ]

**ಕಿತ್ತಲೆ$_1$** 'ಕಿಟ್ಟಾಲೆ' ನೋ.

**ಕಿತ್ತಲೆ$_2$** 'ಕಿತ್ತೀಳೆ' ನೋ.

**ಕಿತ್ತಲೆಕಿಡದಲೆ** 'ಕಿಟ್ಟಾಲೆ' ಪರಾ.

**ಕಿತ್ತಳಿ** 'ಕಿತ್ತೀಳೆ' ನೋ.

**ಕಿತ್ತಳಿಗಾವಿ** 'ಕಿತ್ತಳೆಗಾವಿ' ನೋ.

**ಕಿತ್ತಳೆ** 'ಕಿತ್ತೀಳೆ' ನೋ.

**ಕಿತ್ತಳೆಗಾವಿ, ಕಿತ್ತಳಿಗಾವಿ, ಕಿತ್ತುಳಿಗಾವಿ** (ನಾ). ಕಿತ್ತಳೆ ಬಣ್ಣ: ಕಿತ್ತಳೆಗಾವಿಯ ಸೀರೆಯ ಕೀಲಣೆಯುತ್ತರಿಕೆಯ ಕೆಂಬರಲ ಉತ್ತಮ ದೋಲೆಯ (ಕುಂಸಾಸಾಂ. ೩೪-೨೦). **ಕಿತ್ತಳಿಗಾವಿ**: ಗಾಡಿವಡೆದಾ ಕಿತ್ತಳಿಗಾವಿಯ ಸೀರೆಯನುಟ್ಟುನೃತ್ತಯೌವನೆಯರೆಯ್ದಿದರು (ರಾಮವಿ. ೭-೧೧೧). **ಕಿತ್ತುಳಿಗಾವಿ**: ಮುತ್ತಿನ ಮೈದೊಡವಿನ ಮೇಲು ಮುಸುಕಿನ ಕಿತ್ತುಳಿ [ಪಾಠಾಂ. ಕಿತ್ತಳೆ]ಗಾವಿಯಂಬರದಿಂದ ಒತ್ತುವ ತಾರೆ ಸಂಧ್ಯಾರುಣದೊಳು ನಿಂದ ಕತ್ತಲೆವೆಣ್ಣಂತಿರೆಸೆದಳು (ಸೌಬಸೋ. ೧೮-೪೧). [ಕಿತ್ತಳೆ (< ಕಿತ್ತೀಳೆ) + ಕಾವಿ]

**ಕಿತ್ತಳೆನಿಂಬೆ** (ನಾ). ನಿಂಬೆಯಲ್ಲಿ ಒಂದು ಬಗೆ: ನಿಂಬೆ ಗಜನಿಂಬೆ ಕಿರಿನಿಂಬೆ ಸಕ್ಕರೆನಿಂಬೆ ಕಿತ್ತಳೆನಿಂಬೆ ಬಿಲ್ಲನಿಂಬೆ . . . ಮಾಳವನಿಂಬೆ ಎಂದು ಇವೆ (ಕೃಸಿಪ್ರ. ೧೭೮). [ಕಿತ್ತಳೆ (< ಕಿತ್ತೀಳೆ) + ನಿಂಬೆ]

**ಕಿತ್ತಾಚ** (ನಾ). ಸಣ್ಣ ಆಚ ಮರ: ಕುತ್ತಸಳ್, ಕುತ್ತಳೆ, ಕಿತ್ತಡಿ, ಕಿತ್ತಾಚಂ (ಶಮದ. ನ. ೧೯೧ ಪ್ರಯೋ). [< ಕಿಱಿದು + ಆಚ$_1$]

**ಕಿತ್ತಾಟ** (ನಾ). ಜಗಳ; ಕಚ್ಚಾಟ. [< ಕಿತ್ತಾಡು]

**ಕಿತ್ತಾಡು** (ಕ್ರಿ). ಜಗಳವಾಡು; ಕಚ್ಚಾಡು: ಸಣ್ಣದೊಂದು ಮಾತಿಗೆ ಕಿತ್ತಾಡಿದ್ದು (ನಡೆದಾ. I, ೫೩೪); ಸಣ್ಣಪುಟ್ಟದಕೆಲ್ಲ ಕಿತ್ತಾಡಬಾರದು (ರೂಢಿ). [ಕಿತ್ತು$_1$ + ಆಡು$_1$]

**ಕಿತ್ತಾತ** (ನಾ). ಕಿರಿಯವನು; ಚಿಕ್ಕವನು: ಕಿಱಿಯ ಆತಂ, ಕಿತ್ತಾತಂ (ಭಾಷಾಭೂ. ೧೪೮ ಪ್ರಯೋ). [< ಕಿಱಿದು + ಆತ]

**ಕಿತ್ತಾನ್** (ನಾ). ಒಂದು ಬಗೆಯ ನಾರಿನ ಬಟ್ಟೆ: (ಕ). [← ಅರ. ಕತಾನ್, ಕತ್ತಾನ್; ಮರಾ. ಕಿತಾನ್]

**ಕಿತ್ತಾನಾರು** (ನಾ). ಸಣಬಿನ ನಾರು; ಪುಂಡಿಯ ನಾರು: "ಪುಂಡಿ ನಾರು, ಸಣಬು, ಕಿತ್ತಾನಾರು" (Hemp. ಇಂಕನಿ). [ಕಿತ್ತಾನ್ + ನಾರು$_2$]

**ಕಿತ್ತಾವಾರ** (ಅ). ಭಾಗಭಾಗವಾಗಿ; ತುಂಡುತುಂಡಾಗಿ: (ಕ). [← ಹಿಂ. ಕಿತ್ತಾವಾರ್]

**ಕಿತ್ತಿ** (ನಾ). ಕೀರ್ತಿ; ಸ್ಮಾರಕ (?): ತಾನು ತಂದೆಯ ಸಂಘಾತ ಸ್ವರ್ಗ್ಗಸ್ತನಾದಲ್ಲಿ ಆತನ ಕಿಱಿಯ ತಂದೆ ತಂಮನಾಯಕನೂ ಆತನ ತಂಮ ಬೊಂಮಂಣ ನಾಯಕನ ಕೂಡಿಕೊಂಡು ಆತನಱಿದ ಕಿತ್ತಿಯನು ಮಾಡಿ ಆತನ ವೀರಗಲ್ಲನೂ ಸ್ತಾಪಿಸಿದರೂ (ಕಇ. I, ೩೫-೧೨; 1398). [← ಪ್ರಾ. ಕಿತ್ತಿ < ಸಂ. ಕೀರ್ತಿ]

**ಕಿತ್ತಿಯಗವುಂಡ** (ನಾ). ಒಬ್ಬಾತನ ಹೆಸರು: ಮುತ್ತು ಕೂರು ಕಿತ್ತಿಯಗವುಂಡ[ನ]ಮಗಳ್ ನಡುಳಬ್ಬೆ ಸತ್ತಳ್ (ಸೌಇಇ. IX–i, ೩೦೧–೩; 11ನೆಯ ಶತ). [ಕಿತ್ತಿಯ$_0$ + ಗವುಂಡ (< ಗಾಮುಂಡ)]

**ಕಿತ್ತಿಲಿ** (ನಾ). ಚಿಕ್ಕ ಇಲಿ; ಸಣ್ಣ ಇಲಿ: ಬಯಲ್ಗೆಬಂದ ಕಿತ್ತಿಲಿಯ ನಱಿಯಟ್ಟುವ ದಿಟ್ಟದ ಗೊತ್ತಿನ ಕೊತ್ತಿಗೆ (ರಾಮಾಶ್ವ. ೯೭-೨೮). [< ಕಿಱಿದು + ಇಲಿ$_1$]

**ಕಿತ್ತಿಸು$_1$** (ಕ್ರಿ). ಕೀಳಿಸು; ಕಿತ್ತು ತೆಗೆಯಿಸು: ಬಿಜ್ಜಳನು ಬಸವನ ಇಬ್ಬರು ಜೀವದ ಗೆಳೆಯರ ಕಣ್ಣು ಕಿತ್ತಿದ್ದೇ ಕಾರಣವೆಂದು ಹೇಳುವರು (ಕಭಾಗ. ೯೨). [ಕಿತ್ತು$_1$ + -ಇಸು$_3$]

**ಕಿತ್ತಿಸು$_2$** (ಕ್ರಿ). (?): ಕಿಱಿಪ್ಪಂ ಬನ್ದನ ಬೈರನೆಯ್ದೆ ಜಯಮಂ ಸೇನಾಪತಿಂ ಗಾತಗಂ ಮಾಱ್ಪಂ ನಿಶ್ಚಯವೆನ್ದು ತಱಿಱಿದುಸುಂಗೊಳ್ವನ್ನೆಗಂ ಕಾದಿ ತಾಂ ಬೆಟ್ಟುಂ ಕಿತ್ತಿಸಿ ಸತ್ತುದಕ್ಕೆ ರಣದೊಳ್ಪಾಸಿರ್ವರು ಕೊಂಗ ನಾಡೆಟ್ಟುತ್ತುಂ ದಯುಗೆಯ್ದುನಟ್ಟಿಱಿದು ಕಲ್ನಾಟನ್ದು ಗೋವಿನ್ದರ (ಎಕ. XIV, ಯಡತೊ. ೩೧-೯; 900). [?]

**ಕಿತ್ತಿಳೆ** 'ಕಿತ್ತೀಳೆ' ನೋ.

**ಕಿತ್ತೀಳೆ, ಕಿತ್ತಲೆ$_2$, ಕಿತ್ತಳಿ, ಕಿತ್ತಳೆ, ಕಿತ್ತಿಳೆ** (ನಾ). ಈಳೆ ಜಾತಿಗೆ ಸೇರಿದ ಒಂದು ಹಣ್ಣು; ನಾರಂಗ ಫಲ: "ಕಿತ್ತಡಿ, ಕಿತ್ತೀಳೆ" (ಭಾಷಾಭೂ. ೧೪೨ ಉದಾ); ಸಂದ ಕಿತ್ತೀಳೆಯ ಪಣ್ಣದೊಂದು ರುಚಿ ಬೇವಿನ ಪಣ್ಣೊಳಗುಂಟೆ (ಧರ್ಮಾಮೃ. ೪-೧೨೭); ಬಾಱಿಯ ಖರ್ಜೂರದ ಕಿತ್ತೀಳೆಯ (ಕಾವ್ಯಾವ. ೨೩೦); ಸದ್ಯಃಕ್ಷಾರಂ ಕಿತ್ತೀಳೆಗೆ ತಾನೋರಂ ಕುಪವಿಷಮುದಾತ ವಕ್ತ್ರೀರಾಖ್ಯಂ (ಖಮದ. ೨-೮೯); ಮಂಜುಳ ಫಲೋಚ್ಚಂಡಮಾದ ಕಿತ್ತೀಳೆಯಿಂ (ಉದ್ಭಟ. ೩-೯೧); ಮಾದಲ ಕಿತ್ತೀಳೆಯಗಿಲ್ ನಾರಗ ಸಂಪಗೆ ರಸದಾಳಿ ಸಿರಿದಾಳಿಂಬದ ಸಾಲ್ಗಳ್ ಸಲೆ ಸೊಗಸಿದುವಲ್ಲಿ (ಜಯುಕಾ. ೧೫-೪೩); ತೆಂಗು ಕೌಂಗು ಹೇರೀಳೆ ಕಿತ್ತೀಳೆ (ಚಬವು. ೧೧-೨೧); ಕಿಱಿದು ಈಳೆ, ಕಿತ್ತೀಳೆ (ಶಬ್ದಾನು ೩೩೭ ಪ್ರಯೋ). **ಕಿತ್ತಲೆ**: ನಿಂಬೆ, ಕಿತ್ತಲೆ . . . ಇವೇ ಮುಂತಾದ ಹಲವು ಹಣ್ಣಿನ ಗಿಡಗಳನ್ನು (ವ್ಯವಮ. ೫೮). **ಕಿತ್ತಳಿ**: ಕಿತ್ತಳಿ ಕದಳಿ ನಾರಂಗ ಫಲಂ (ಎಕ. VIII, ಸಾಗರ. ೧೦೯-೪೭; 1042). **ಕಿತ್ತಳೆ**: ತೆಂಗಾಯಿ ಪಲಸು ಕಿತ್ತಳೆ ಮಾವು ಮಾದಲ ಭೃಂಗಾಯಿವಣ್ಗಳು (ಮೋಹತ. ೪-೭೨); ರಸಪೂರಿತಮಾದ ಕಿತ್ತಳೆ ವನವನು ಮುಸುಕಿಕೊಂಡಿಹುವು (ಕಂನವಿ. ೨-೪೩). **ಕಿತ್ತಿಳೆ**: ಜಂಬೀರ ಖರ್ಜೂರ ಕಿತ್ತಿಳೆ ಮಾತುಳಂಗ (ಜೈಮಿಭಾ. ೧೯-೬); ಕಿತ್ತಿಳೆಹಣ್ಣಿನ ಸವಿರಸದಂತಿರುವುತ್ತಮ ಜಲ ಪೂರ್ಣವಾಗಿ . . . ಕಿತ್ತಿಳೆಗೆಱೆ ರಾಜಿಸಿತು (ಕಂನವಿ. ೨-೫೨). [< ಕಿಱಿದು + ಈಳೆ]

**ಕಿತ್ತು$_1$** (ಕ್ರಿ). ಕೀಳು; ಮೀಟಿ ತೆಗೆ; ಉತ್ಪಾಟಿಸು: ಭರದಿಂದ ಕಿತ್ತಿ ಭವದ ತರುವಿನ ಪೆಸರನ್ನು ಇರಗೊಡದಂತೆ ಮಾಡಿ (ವಿಸಾಸು. ೨೨-೫); ಲೇಖನವೆಂದರೆ ಹುದುಗಿಕೊಂಡು ಕೂತಿದ್ದ ದೋಷವನ್ನು ಕಿತ್ತಿ ಮೇಲೆ ತರುವುದು (ಅಪ್ಪಾಂಗ. ೧೦೭ ಟೀಕೆ); ಸಾನುವೃಕ್ಷಗಳನ್ನು ಮಾರುತ ತಾನು ಧರೆಯಿಂ ಕಿತ್ತಿಯೊಗೆದರೆ (ರಘುವಂ. ೮೮).

ಕಿತ್ತಿಕೊಳ್ = ೧. ತೆಗೆದುಹಾಕು ; ಕೀಳು : ಅಸುರದ ಜಡೆಯೇಕೆ ಕೇಶವನು ಕಿತ್ತಿಕೊಳಲೇಕೆ ತ್ರ್ಯಂಬಕನ ಅಳಿ ಬಿಡದನಕ (ಸರ್ವಜ್ಞ. ೫೭೩). ೨. ಕಸಿದುಕೊ ; ಅಪಹರಿಸು : ತಾಯಿಯ ಕೈಯಿಂದ ಮೊರವನ್ನು ಕಿತ್ತುಕೊಂಡು ದೂರದಲ್ಲಿಟ್ಟು (ದೇವಿಚಾ. ೨). **ಕಿತ್ತಿಹಾಕು** = ತೆಗೆದು ಒಗೆ; (ದಾಖಲಿನಿಂದ) ವಜಾಮಾಡು : ನನ್ನ ಮಗನ ಹೆಸರು ಕಿತ್ತಿಹಾಕಲಿಕ್ಕೆ . . . ಅರ್ಜಿ ಕೊಡತೀನಿ (ಗಂಮಾಯಿ. ೬೪).

[< ಕೀಟು]

**ಕಿತ್ತು₃** 'ಕೀಟು₁' ಪರಾ.

**ಕಿತ್ತು₄** (ನಾ). [ಸಂಗೀತ] (?) : ರಸಮೊಸರ್ವರ್ನೆಗಂ ಮಿಱುಗು ಕಿತ್ತು ಪೊಗರ್ ಗಮಕಂ ಕೊಡಲ್ ಪೊದಟ್ಟಿಸೆವ ನಯಂ ಬೆಡಂಗು ಬಿಗಿ ಪೊಟ್ಟೆಜೆಕೊಂಕು ಪವಣ್ ಪ್ರಯೋಗಮೇನೆಸೆದುವೊ ಪೇಟಿಮೆಂಬಿನೆಗ ಮಿಂಗೊರಲೊಳ್ಕೊಳೆ ಪಾಡಿಯಾಡಿ ರಂಜಿಸಿತೊ ಸಭಾ ಜನಂಗಳ ಮನಂಗಳನಾ ದಿವಿಜಾಂಗನಾಜನಂ (ಅಜಿಪು. ೫–೪೦). [?]

**ಕಿತ್ತುಮಿಣಿ** (ನಾ). = ಕಿತಾಪತಿ : ಮಾಡೋ ಕಿತ್ತುಮಿಣಿಯೆಲ್ಲ ಮಾಡಿ ಬುಟ್ಟು ಮಳ್ಳಿಹಂಗೆ ನಿಂತು ಕೊಂಡವ್ರಲ್ಲಾ ನಿನ್ನ ಮಂಗಳಕ್ಕ (ಸರ್ವಮಂ. ೩೩೯). [?]

**ಕಿತ್ತುಸಿರ್** (ನಾ). ಸಣ್ಣ ಮೇಲುಸಿರು ; ಸ್ವಲ್ಪಸ್ವಲ್ಪವಾಗಿ ಬರುವ ಉಸಿರು : ಅಡಿಸುವ ತೋಳ್ಗೆರೆಯ್ವ ಬಾಯ್ ತಪ್ಪಿ ಬರ್ಪರೆವಾತುಣ್ಮುವ ಕಿತ್ತುಸಿರ್ (ವರ್ಧಪು. ೪–೭೧). [< ಕಿಱಿದು + ಉಸಿರ್₂]

**ಕಿತ್ತುಳಿಗಾವಿ** 'ಕಿತ್ತಿಳೆಗಾವಿ' ನೋ.

**ಕಿತ್ತೂರ್, ಕಿತ್ತೂರು** (ನಾ). ಒಂದು ಊರಿನ ಹೆಸರು : ಶ್ರೀ ಕಿತ್ತೂರಾ ವೆಳ್ಮಾದದಾ ಧರ್ಮಸೇನಗುರವಡಿಗಳಾ ಶಿಷ್ಯರ್ (ಎಕ. II, ೨೪–೧; 700); ಕಿತ್ತೂರವಯ್ಯರು ಕಾದನ್ದೆಯರ್ (ಇಆ. XIV, ೨೩೨–೫೮; 9ನೆಯ ಶತ); ಅಸಗಕಾಡಚನ ಮಗ ಕಾಡವಾಸ ಕಿತ್ತೂರ ತುಱುಗೊಳೊಳು ಕಾದಿ (ಎಕ. XI, ಜಗಳೂ ೧೩–೨ ; 1010). **ಕಿತ್ತೂರು** : ಪುಣ್ಯತಿಥಿಯೊಳು ಕಿತ್ತೂರು ಮೂವತ್ತಱ ಬಳಿಯ ಬಾಡ (ಇಆ. XI, ೨೭೪–೩೧ ; 1080).

[< ಕಿಱಿದು + ಊರ್]

**ಕಿತ್ತೂರು** 'ಕಿತ್ತೂರ್' ನೋ.

**ಕಿತ್ತೆ** (ನಾ). ಅನುಕರಣೆಗಾಗಿ ಸುಂದರವಾದ ಅಕ್ಷರಗಳಲ್ಲಿ ಬರೆದು ಕೊಟ್ಟ ಕಾಗದ ; ಮಾದರಿ ಲಿಪಿ ; ಮೇಲುಪಂಕ್ತಿ : ನಾನೂ ತಮ್ಮ ತಮ್ಮ ಕಿತ್ತೆಯನ್ನು ತೀಡಬೇಕೆಂಬುದೇ ಅವರ ಪ್ರಬಲವಾದ ಇಚ್ಛೆಯಾಗಿತ್ತು (ಕಾಲಚ. ೧೪) ; ಸತ್ಪುರುಷರು ಹಾಕಿಕೊಟ್ಟ ಕಿತ್ತೆಯನ್ನೇ ನನ್ನ ಮನವು ತೀಡಲಿ (ಬ್ರಹ್ಮಜೀ. ೧೦೮).

ಕಿತ್ತೇತೀಡು = ಅಕ್ಷರಶಃ ಅನುಕರಿಸು : ಆತ ಅಕ್ಷರಶಃ ಅವನಪ್ಪನ ಕಿತ್ತೇ ತೀಡತಾನೆ (ರೂಢಿ). [← ಅರ. ಕಿತ್‌ಆ ; ಮರಾ. ಕಿತ್ತಾ]

**ಕಿತ್ತೆಸಳ್** (ನಾ). ಚಿಕ್ಕ ಎಸಳು : ಕಿತ್ತಡಿ, ಕಿತ್ತೀಳೆ, ಕಿತ್ತೆಸಳ್ (ಶಮದ. ೧೮೧ ಪ್ರಯೋ). [< ಕಿಱಿದು + ಎಸಳ್ (< ಎಸಟು)]

**ಕಿತ್ತೆಱಿಲ** (ನಾ). ಒಂದು ಊರಿನ ಹೆಸರು : ಅನ್ತೆಬನ್ದು ಕಿತ್ತೆಱಿಲ ಪಡುಣ ಪೇರೊಟ್ಟಿಯಿಂ (ಎಕ. III, ನಂಜನ. ೧೯೫–೨೪ ; 915). [?]

**ಕಿದ್ದಂಡೆ** (ನಾ). ಕೆಳದಂಡೆ (?) : ಮುಡ್ಡಿಯಾ ಹಿಟ್ಟೀಗೆ ಮುದಿಗುರಿಯ ಬಾಡೀಗೆ ದಿಡ್ಡೀ ಪುರದೊಳ ಬಲುಮೇಗೆ ನನ ಸಿದ್ದ ಕಿದ್ದಂಡೇಲಿ ಬಾಯ ಬಿಟ್ಟಾನೊ (ಹಳ್ಳಿಪ. ೭೬). [< ಕಿಟು + ದಂಡೆ₃]

**ಕಿದ್ದಸೆ** 'ಕಿದ್ದೆಸೆ' ನೋ.

**ಕಿದ್ದಸೆಶೂಲೆ** (ನಾ). ಸಂಧಿವಾತ ರೋಗ; ವಾಯುರೋಗ : ಕಿದ್ದಸೆಯ ಶೂಲೆ, ಅಳ್ಳಿಶೂಲೆ (ವಿದ್ಯೈವಿ. ೫೮).

[ಕಿದ್ದಸೆ (< ಕಿದ್ದೆಸೆ) + ಶೂಲೆ]

**ಕಿದ್ದೆಸೆ, ಕಿದ್ದಸೆ, ಖಿದ್ದಿಸೆ** (ನಾ). ದೇಹದ ಕೀಲು ಹಿಡಿದುಕೊಳ್ಳುವ ರೋಗ; ಸಂಧಿವಾತ; ವಾಯುರೋಗ : ಪೊನ್ನಗನ್ನೆಯ ರಸಮಂ ಕೊಂಡಾಡ ಪಾಲೊಳುಱೆ ಮಱುಗಿಸಿ ಹಿಂಗು ಸಮೇತಂ ಕುಡಿಯಿಸೆ ಕಿದ್ದೆಸೆ ದೆಸೆಗೆಟ್ಟೋಡಿ ಪೋಗದೇಂ ನಿಂದಪುದೆ (ಲೋಕೋಪ. ೯–೧೩೩). **ಕಿದ್ದಸೆ** : ಹೊರನೆಲಾವರೆಯಂ ಸಿದ್ಧದಿನದಲ್ಲರೆದು . . . ತ್ರಿಕಟಕವಂ ನೀರಲ್ಲಿ ಕುಡಿಯೆ ಕಿದ್ದಸೆ ಕೆಡುಗುಂ (ವಿದ್ಯೈವಿ. ೯೮). **ಖಿದ್ದಿಸೆ** : ಖಿದ್ದಿಸೆ ನಷ್ಟೇಂದ್ರಿಯ ಮೊದಲಾದುವು ಹೊದ್ದಿ ನೋಯಿಸುವುವು ಕೂಹೆ (ಭರಜ. ೭–೨೩). [< ಸಂ. ಗೃಧ್ರಸೀ]

**ಕಿದ್ಮತ್ತು, ಕಿಜಮತ್ತು** (ನಾ). ಸೇವೆ ; ಚಾಕರಿ : ವರುಷವರುಷಕ್ಕೂ ಹಣ ಹೆಚ್ಚಾಗಿ ವಸೂಲುಮಾಡಿ . . . ಸರಕಾರದ ಕಿದ್ಮತ್ತು ಮಾಡಬೇಕು ಯೆಂಬುದಾಗಿ ನಂ ಮನಸಿನಲ್ಲು ಅಪೇಕ್ಷೆ ಇತ್ತು (ರಾಜೇಂದ್ರ. ೧೦೪) ; ನಂಮ ಇರಾದೆ ಸರಕಾರದ ಕಿದ್ಮತ್ತು ಮಾಡಬೇಕು ಯಂಬುದೇ ಹೊರ್ತು ಮತ್ತೊಂದಲ್ಲಾ (ರಾಜೇಂದ್ರ. ೧೦೫). **ಕಿಜಮತ್ತು** : ಆದು ಯಾವತ್ತು ಆ ಕಪಿತಾನ್ ಸಾಹೇಬರ ಕಾಗದಗಳಿಂದ ತಂಮ ಕಿಜಮತ್ತಿಗೆ ಜಾಹೀರಾಗಿ ಇದ್ದಿತು (ರಾಜೇಂದ್ರ. ೯೪).

[← ಅರ. ಪಾರ. ಹಿಂ. ಖಿದ್‌ಮತ್ ; ಮರಾ. ಖಿಜಮತ್]

**ಕಿನ್** (ಗು). ಕೆಳಗು ಎಂಬುದಕ್ಕೆ ಸಮಾಸದಲ್ಲಿ ಬರುವ ಆದೇಶ : ಒಲೆಗುಂ ಕೆಳಗಣ್ಗೆ ಕಿಟ್ ಕಿನೆಂಬಾದೇಶಂ (ಶಮದ. ೧೬೬). 'ಕಿನ್ನೀರ್', 'ಕಿನ್ನೆಲ' ಪರಾ. [< ಕೆಳಗು]

**ಕಿನ್‌ಕಾಪು** 'ಕಿಂಕಾಪು' ನೋ.

**ಕಿನ** (ನಾ). ಸಿಟ್ಟು ; ಕೋಪ : ತವ, ಕಿನ, ಹನ, ಬಿನ್ನವ, ಒಪ್ಪ (ಶಬ್ದಾನು. ೫೪೯ ಪ್ರಯೋ). [< ಕಿನಿ]

**ಕಿನಕಾಪು** 'ಕಿಂಕಾಪು' ನೋ.

**ಕಿನಕಾಬು** 'ಕಿಂಕಾಪು' ನೋ.

**ಕಿನಖಾಪು** 'ಕಿಂಕಾಪು' ನೋ.

**ಕಿನಖಾಫ** 'ಕಿಂಕಾಪು' ನೋ.

**ಕಿನರ** (ನಾ). ಬಾವಿ (?) : ಮೂಡ ಹೆಬ್ಬಿದಱು ಅಲ್ಲಿ ಮೂ × × × ಮೂಡಣ ಕಿನರಲು ಅಲ್ಲಿ (ಎಕ. VII, ಶಿವಮೊ. ೬೪–೧೦೦ ; 1112).

[?. / ತಮಿ. ಕಿನಱು ; ಮಲ. ಕಿಣಱು]

**ಕಿನಸಿಗೆ** 'ಕಿನಿಸಿಗೆ' ನೋ.

**ಕಿನಾರ, ಕಿನಾರಿ, ಕಿನಾರು, ಕಿನಾರೆ** (ನಾ). ದಂಡೆ ; ದಡ ; ಅಂಚು : "ಕಿನಾರ–ದಡಿ" (ಜಾನಕೋ. ೩೭). **ಕಿನಾರಿ** : ಭದ್ರಾ ಹೊಳೆಯ ಕಿನಾರಿಯ ತಮ್ಮ ಗದ್ದೆಯಲ್ಲಿ (ನಡದಾ. II, ೮೫೮). **ಕಿನಾರು** : ಇನ್ನೊಂದು ಕಿನಾರಿನಲ್ಲಿ ಬೇರೆ ನಾಲ್ಕು ಜನ ನಿಂತಿದ್ದರು (ಚಿಕರಾ. ೪೧೫). **ಕಿನಾರೆ** : ಕಡಲಕಿನಾರೆಯಿಂದಲೇ. . . ಗಾಳಿ ಬೀಸುವುದಕ್ಕೆ ಆರಂಭಿಸಿತ್ತು (ಪದ್ಮಸ. ೬೫) ; ಹೊಳೆ ಕಿನಾರೆಯಲ್ಲೇ . . . ವಾಸವಾಗಿರುವ ಗ್ರಾಮಗಳು (ಕೆಲನಿ. ೧೪೭). [← ಪಾರ. ಮರಾ. ಕಿನಾರ್]

**ಕಿನಾರಿ** 'ಕಿನಾರ' ನೋ.

**ಕಿನಾರು** 'ಕಿನಾರ' ನೋ.

**ಕಿನಾರೆ** 'ಕಿನಾರ' ನೋ.

**ಕಿನಾಸಿ** (ನಾ). ಜಿಪುಣ ; ಕೃಪಣ ; ಕಂಜೂಷಿ : ಲಕ್ಷ್ಮಿ ಏನೆಂತಾಳೆ ಗೊತ್ತೇ ? "ಕಿನಾಸಿ ಕಿಪ್ಪಲಲ್ಲಾದರೂ ಇದ್ದೇನು, ಧಾರಾಳಗಾರರ ಮನೇಲಿ ಇರಲಾರೆ" (ನನ್ನೂರು. ೨೪೪). [?]

**ಕಿನಿ** (ಕ್ರಿ). ಕೆರಳು ; ರೇಗು ; ಸಿಟ್ಟಾಗು ; ಕೋಪಿಸು : ಮುನಿವಂಗೆ ಮುನಿಯದಿರು ಕಿನಿವಂಗೆ ಕಿನಿಯದಿರು (ಸರ್ವಜ್ಞ. ೧೨೪೩).

[ದೇ. ॥ ತಮಿ. ಚಿನ ; ಮಲ. ಚಿನಿ ; ತೆಲು. ಕಿನಿ]

**ಕಿನಿಕಿನಿ$_1$**, ಕಿಂಕಿನಿ, ಕಿಂಕಿರಿ (ನಾ). ೧. ಅತ್ಯಂತ ಕೋಪ; ಕ್ರೋಧ. 'ಕಿನಿಕಿನಿವೋಗು' ಪರಾ. **ಕಿಂಕಿನಿ** : ೧. 'ಕಿಂಕಿನಿವೋಗು' ಪರಾ. **ಕಿಂಕಿರಿ** : ೧. 'ಕಿಂಕಿರಿವೋಗು' ಪರಾ. ೨. ತಳ್ಳಂಕ; ಭಯ : 'ಕಿಂಕಿರಿಯೊಗೆ' ಪರಾ. [< ಕಿನಿ]

**ಕಿನಿಕಿನಿ$_2$** (ಅ). ಕೆಂಪಾಗಿ; ಕೆಚ್ಚನೆ : ಕಾರ್ಬೊನ್ ಕಣವೇ ಕೆಂಬೊನ್ನಾಗಿ ಕಿನಿಕಿನಿ ಕದಿರುವುದು (ಅರಳು. ೨೬೩). [< ಕಿನಿಕಿನಿ$_1$]

**ಕಿನಿಕಿನಿವೋಗು**, ಕಿಂಕಿನಿವೋಗು, ಕಿಂಕಿರಿವೋಗು (ಕ್ರಿ). ಕುದಿಗೊಳ್ಳು; ಸಿಡಿಮಿಡಿಗೊಳ್ಳು; ಬಹಳ ಕೋಪಿಸು : ರೋಷದಿಂ ಕಿನಿಕಿನಿವೋಗಿ (ನೇಮಿಪು. ೧೨–೨೫). **ಕಿಂಕಿನಿವೋಗು** : ಮನದ ಮುನಿಸೂರ್ಮೆಯು ಮಡಂಗದೊಳಗೊಳಗೆ ಕಿನಿಸಿ ಕಿಂಕಿನಿವೋಗಿ (ಅರ್ಧನೇ. ೭–೨೬ ವ); ಕಣ್ಕೆಚ್ಚನಾಗೆ... ಕಡುಪಿಂ ಕುರುಪತಿ ಭೀಷ್ಮಂಗೆ ಕಿನಿಸಿ ಕಿಂಕಿನಿವೋದಂ (ಬಂಹರಿ. ೧೧–೩೭). **ಕಿಂಕಿರಿವೋಗು** : ಇರ್ವರ್ಮಕ್ಕಳಂ ಪೆತ್ತು ಕೊಂತಿ ಸಂತಸದಂತಮನೆಯ್ದಿರ್ಪುದುಮತ್ತ ... ಗಾಂಧಾರಿ ಕೇಳ್ದು ತನ್ನ ಗರ್ಭಂ ತಡೆದುದರ್ಕೆ ಕಿನಿಸಿ ಕಿಂಕಿರಿವೋಗಿ (ಪಂಪಭಾ. ೧–೧೨೮ ವ); ಸುಟಿಳಿನಿಗಳ ಬಳಗದ ದನಿಗೆ ಕಿನಿಸಿ ಕಿಂಕಿಱಿ[ರಿ] ವೋದಳು (ಪಂಪಭಾ. ೫–೪); ವಾಯುಭೂತಿ ಕಿನಿಸಿ ಕಿಂಕಿರಿವೋಗಿ (ಸುಕುಮಾ. ೨–೬೭ ವ). [ಕಿನಿಕಿನಿ + ಪೋಗು$_1$]

**ಕಿನಿಕೆ** 'ಕೀನಿಕೆ' ನೋ.

**ಕಿನಿವಲ್ಲು** 'ಕೀನಿವಲ್' ನೋ.

**ಕಿನಿಸಂಬಲಿ?** (ನಾ). ಒಂದು ದೇವತೆ (?) : ಬನದಬ್ಬೆ ಬಳರಿಬಾದುಮೆ ಕಿನಿಸಂಬಲಿ ಜಲದಜಕ್ಕಿ ಜಾತ್ರೆಯ ದೈವಂ ಮನೆದೈವಮೆಂದು ವಿನಿತುಂ ಜಿನಭಕ್ತಂಗೆಡದ[ಕಾಲ]ಕೆರ್ಪಿಂ ಕಷ್ಟಂ (ಶಾಸ್ತ್ರಟೀ. ೪೭–೧೦). [?]

**ಕಿನಿಸಾನು** (ಕ್ರಿ). = ಕಿನಿಸಾಳು : ಹುಲಿಯವನೊಂದು ಎತ್ತು ಹಿಡಿದುಂಡಿತ್ತು ಒಲ್ಲದಿಹ ಪಡ್ಡಾಯ್ಗೆ ಕಿನಿಸಾಂತುದೆನಲು (ಕಾಲೂರ. ೮೮–೧೪೯). [ಕಿನಿಸು$_2$ + ಅನು$_1$ (< ಅನ್$_1$)]

**ಕಿನಿಸಾಳು** (ಕ್ರಿ). ಕೋಪತಾಳು : ತಾಳಿಕೊಂಡಾ ಕೊಲೆಗೆ ಕಿನಿಸಾಳದಲೆ ... ಚಿಂತಿಸಿದ ಮರುತಭವನು (ವೆಂಕಾರಾ. ೫–೩–೧೫). [ಕಿನಿಸು$_2$ + ಆಳು$_1$ (< ಆಳ್$_1$)]

**ಕಿನಿಸಿಗೆ**, ಕಿನಸಿಗೆ (ನಾ). ಕೋಪ; ಕೆರಳಿಕೆ : ನಿಂತೂ ನಿಂತೂ ಬೇಜಾರಾಗಿ ಹಿಂಗಾಲುಗಳನ್ನು ಒಮ್ಮೆ ಬಲಕ್ಕೆ ಒಮ್ಮೆ ಎಡಕ್ಕೆ ಎತ್ತಿಎತ್ತಿ ಇಟ್ಟು ತನ್ನ ಕಿನಿಸಿಗೆಯನ್ನು ಪ್ರದರ್ಶಿಸುತ್ತಿತ್ತು (ಮಲೆಮ. ೪೨೧); ಕೀಟವೊಂದು ... ಬಿಡದೆ ಕೂಗಿಕೊಳ್ಳುತ್ತಿತ್ತು; ಅದು ಮೊದಲು ಕಿನಿಸಿಗೆಯನ್ನು ಉಂಟುಮಾಡಿದರೂ ಬರುಬರುತ್ತಾ ಒಂದು ತೆರನಾದ ಜೋಗುಳದುಲಿಯಂತಾಗಿ (ಮಲೆಮ. ೬೯೭). **ಕಿನಸಿಗೆ** : ಚಿನ್ನಮ್ಮನಿಗೆ ಏನೋ ಒಂದು ತರಹದ ಕಿನಸಿಗೆಯಾಗಿ ಒಂದೆರಡು ಸಾರಿ ಕಿರಿಗೆಯಿಂದ ಪರಿಕಾರಕ್ಕೆ ಪುನಃ ದಾಟಿದ್ದಳು (ಮಲೆಮ. ೯೩). [ಕಿನಿಸು$_1$ + –ಇಗೆ]

**ಕಿನಿಸು$_1$** (ಕ್ರಿ). ರೇಗು; ಕೆರಳು; ಕೋಪಿಸು : "ಕಿನಿಸು – ಕೋಪೇ" (ಶಮಧಾ); ಜಿನದತ್ತೆ ಕೇಳ್ದು ಕಿನಿಸಿ (ವಡ್ಡಾರಾ. ೧೧೧–೨೫); ಮನಮಱಿದಂಜಿ ಬೆರ್ಚಿ ಬೆಸಕೆಯ್‌ ನಿಜವಲ್ಲಭನೇನನೆಂದೊಡಂ ಕಿನಿಸದಿರ್ (ಆದಿಪು. ೪–೫೭); ನಿರ್ವಿನಿಸಿ ಕಿನಿಸಿದಳವಳ್ ದಿನಪನುದಯದೊಳ್ ಕಾಯ್ದುಳರ್ಕಮಣಿಪುತ್ರಿಕೆವೋಲ್ (ಲೀಲಾವ. ೧೪–೨೪); ಆಳಲ್ದುರಗನೋನೊಂದ ಪೆರ್ಬುಲಿಯೊ ಕಿನಿಸಿದೆಕ್ಕಲನೊ ಪಸಿದೈತಂದ ಪೆರ್ಮಾರಿಯೋ (ಜಿಬವು. ೩೯–೩೫). [ಕಿನಿ + –ಸು$_2$]

**ಕಿನಿಸು$_2$** (ನಾ). ಮುನಿಸು; ಕೋಪ; ರೇಗು : "ಕಿನಿಸು ಕ್ರೋಧದೊಳ್" (ಕರ್ಣಾನಿ. ४೧); "ಕಿನಿಸುಂ ಕಿಸುಗಣ್ಣು ಕಾಯ್ಪು ಸೆಣಸೆನೆ ಕೋಪಂ" (ಕವಿಕಂ. ೧೮೭); ಎನ್ನ ನೆತ್ತಿಯೊಳುರಿ ಮಸಗಿದಂತಾಗೆ ಕಿನಿಸು ಕಯ್ಗಣ್ಮೆ (ಕಾದಂಉ. ೫೭೨); ಯತಿಗಳಿಗೆ ಕಿನಿಸೇತಕವರೊಳು (ಶಂಕದಾ. ೧೨–೧೫); ಮುನಿಸು ಹರಿಸಕೆ ಕಲಹ ಸರಸದ ಕಿನಿಸುಗಳ ತುಂಗೋರು ಜಂಘೆಯ ವನಜಮುಖಿಯರು (ಕುವ್ಯಾಉ. ೦೦೪. ೮–೫೫); ಕಿನಿಸಿಂ ಕಿಚ್ಚಂ ತಳ್ಪೊಯ್ದುಂ (ರಾಮಾಶ್ವ. ೪೩–೩). [< ಕಿನಿಸು$_1$]

**ಕಿನಿಸುಮಾತು** (ನಾ). ಕೆರಳಿಸುವ ಮಾತು; ಕೋಪದ ನುಡಿ : ಆಕೆ ಎಂದೂ ಕಿನಿಸುಮಾತನ್ನು ನುಡಿದವಳಲ್ಲ (ಹಾಹುತ್ತ. ೬೪). [ಕಿನಿಸು$_1$ + ಮಾತು$_1$]

**ಕಿನಿಸುವೋದು** (ಕ್ರಿ). ಕೋಪವನ್ನು ಬೋಧಿಸು; ಕೆರಳುವುದಕ್ಕೆ ಉಪದೇಶಮಾಡು : ಎಮ್ಮನುಡಿ ಮುನಿಗೆ ಕಿನಿಸುವೋದರೆಂಬ ನುಡಿಯನೆ ಪೋಲ್ತುದಱಿಂದಮಿದಂ ದಿವ್ಯಚಿತ್ತದೊಳವಧರಿಸಿ ... ನೆಗಟ್ಟುದು (ಶಾಂತಿಪು. ೧೦–೧೧೨ ವ). [ಕಿನಿಸು$_2$ + ಓದು$_1$]

**ಕಿನಿಸೇಱು** (ಕ್ರಿ). ಸಿಟ್ಟೇಗೇಳು; ಕೋಪ ಹೆಚ್ಚಾಗು : ನೃಪತಿ ಕರವಾಳ ಜಡಿದು ಕಿನಿಸೇಱಿ (ಭೈರವೇ. ೧–೨೨೭). [ಕಿನಿಸು$_2$ + ಏಱು$_1$ (< ಏಱ್$_1$)]

**ಕಿನ್ನ** (ಗು). ೧. ದುಃಖಗೊಂಡ : ಪೆಱನಾಡೆಱೆಯಂ ನಿನ್ನ ಕೈಯೊಳ್ ಬನ್ನಂಬಡೆದು ಕಿನ್ನನಾಗೆ (ಕಬ್ಬಿಕಾ. ೮೯). (ನಾ). ೨. ವ್ಯಸನ; ದುಃಖ. ೩. ವ್ಯಸನಗೊಂಡವನು; ದುಃಖಿ : "ಕಿನ್ನ – ಖಿನ್ನ = ದುಃಖಿ" (ತದ್ಭಕೋ. ೭); ಫಣಾರತ್ನವೀಯೆನಲು ಕಿನ್ನವಿಲ್ಲದೆಯಿತ್ತನು (ಪ್ರಭುಪು. ೭–೧೧೨). [< ಸಂ. ಖಿನ್ನ]

**ಕಿನ್ನದನಿ** (ನಾ). ಖಿನ್ನವಾದ ಧ್ವನಿ; ದೀನವಾಣಿ : ನೆಗೆವ ರೋಮಾಂಚ ಮುಣ್ಮುವ ಬೆಮರ್ ನಡುಪ ಮೈಯೊಗುವ ಕಂಬನಿ ಕಿ[ಪಾಠಾಂ. ಬಿ, ಭಿ]ನ್ನದನಿ ವಿವರ್ಣಮನಾಂತ ಮೊಗಂ (ಚಿಬವು. ೧೯–೩೦). [ಕಿನ್ನ + ದನಿ$_2$]

**ಕಿನ್ನರ** (ನಾ). = ಕಿಂಪುರುಷ : "ಕಿನ್ನರಃ, ಕಿಂಪುರುಷಃ, ಮಯುಃ, ಅಶ್ವಮುಖಃ – ಈ ೪ ಕಿನ್ನರರ ಪೆಸರ್" (ಹಲಾಯು. ೧೪–೮೨); ಯಾರೈ ನೀನು ನಿನಗಾಗಸದಲಿರವೇನಸುರನೋ ಕಿನ್ನರನೊ ನಿರ್ಜರನೊ (ಕುವ್ಯಾಅ. ೨೩–೩೭); ನರರು ತಿಳಿಯಲ್ಕಳವೆ ಸುರಕಿನ್ನರರಱಿಯದವನಾ (ಗಗತಾ. ೧೬–೧). [ಸಂ.]

**ಕಿನ್ನರಕದಂಬಕ** (ನಾ). ಕಿನ್ನರರ ಸಮೂಹ : ಕತ್ತುರಿಯ ಮೃಗವಿವು ಚಮರಿಯಿವು ಕಿನ್ನರ ಕದಂಬಕವಿವು (ತೊರರಾ. ३–೧–३೧). [ಕಿನ್ನರ + ಕದಂಬಕ]

**ಕಿನ್ನರಗೇಯ** (ನಾ). ಕಿನ್ನರರ ಗಾಯನ : ಕಿನ್ನರಗೇಯ ನಿಸ್ವನಂ ಭಜಿಯಿಸೆ (ಜಗವಿ. ೧–೪೧). [ಕಿನ್ನರ + ಗೇಯ]

**ಕಿನ್ನರಪತಿ** (ನಾ). ಕಿನ್ನರರ ಒಡೆಯ; ಕುಬೇರ : "ಪೊನ್ನೆಱೆಯ ತಿಸುಳಿಗೆಳೆಯಂ ಕಿನ್ನರಪತಿ" (ಕರ್ಣಾನಿ. ೧). [ಕಿನ್ನರ + ಪತಿ$_2$]

**ಕಿನ್ನರಭಾವೆ** (ನಾ). ಕಿನ್ನರ ಸ್ತ್ರೀ : ದೇವಸತಿ ಗಡ ಈಕೆ ಕಿನ್ನರಭಾವೆ ಗಡ (ಬಿಜ್ಜಪು. ३೦–೧೨). [ಕಿನ್ನರ + ಭಾವೆ]

**ಕಿನ್ನರಮಿಥುನ** (ನಾ). ಕಿನ್ನರದ್ವಯ; ಕಿನ್ನರ ದಂಪತಿ : ಕಿನ್ನರಮಿಥುನಮನವನಿಪಾಲತನಯಂ ಕಂಡಂ (ಕಾದಂಪೂ. ೫೧೭); ತಳಿತ ಕಿನ್ನರಮಿಥುನಸುಖ ಪರಿಮಿಳಿತ ಗೀತ ಶ್ರವಣಸನ್ನುತಪುಳಿನಸುಪ್ತಮರಾಳ ವೆಸೆದುದು ಗಜಪುರೋದ್ಯಾನ (ಕುವ್ಯಾಉ. ೭–೨೭). [ಕಿನ್ನರ + ಮಿಥುನ]

**ಕಿನ್ನರವೀಣೆ** (ನಾ). ಒಂದು ಬಗೆಯ ವೀಣೆ : ಕಿನ್ನರವೀಣೆಯ ಕಿಂಪುರುಷರಿಂ (ಹಮ್ಮೀರ. ೮–೪೧ವ); ಸಖಿಯೊಬ್ಬಳು ಕಿನ್ನರವೀಣೆಯಿಂದ ಸಣ್ಣಸಣ್ಣ ಸುನಾದಗಳ ಹೊಸ್ ಸೆಳೆಗಳನ್ನು ಚಿಮ್ಮಿಸುತ್ತಿರಲು (ತುಂಗಭ. ೮೧). [ಕಿನ್ನರ + ವೀಣೆ]

**ಕಿನ್ನರಸ್ವರ** (ನಾ). ಕಿನ್ನರನ ಧ್ವನಿ; ಮಧುರವಾದ ಕಂಠಧ್ವನಿ : ಅಗುಳುಶುಂಠಿ ನುಗ್ಗೆಬೇರು ... ಆಡಿನ ಹಾಲು, ತುಪ್ಪದಲ್ಲಿಯೂ ಸಹ ಹಾಕಿ ತುಪ್ಪ ನಿಲಲಟ್ಟು ಸೇವಿಸೆ ಕಿನ್ನರಸ್ವರಮಕ್ಕು (ಸಕವೈ. ೨೩೧). [ಕಿನ್ನರ + ಸ್ವರ]

**ಕಿನ್ನರಿ** (ನಾ). ೧. ಕಿನ್ನರ ಸ್ತ್ರೀ: ಕಿನ್ನರಿಯಿಂಚರಂಬಿಡಿದು ಸುಣ್ಣರದಿಂ ಸವಿ ಸೂಸೆ ಪಾಡುವಾ ಕಿನ್ನರಿಯಂಕದೊಳ್ (ಶಬಶಂ. ೨-೪೦); ಪರಿಸರದೊಳ್ ಸಂಚುವೆತ್ತಿಂಚರದಿಂ ತನ್ನ ಚೆನ್ನ ಕಿನ್ನರಿಯೊಳ್ ಶ್ರುತಿಗೂಡಿ ಪಾಡುವ ಕಿನ್ನರಿಯ ಸರಸ ಸಂಗೀತಮಮಂ ಕೇಳ್ದು (ಶಬಶಂ. ೩-೩೫.ವ). ೨. ಒಂದು ತಂತ್ರೀವಾದ್ಯ: ವೀಣೆಯನುರ್ದುತುಂ ಮಿಜುಪ ಕಿನ್ನರಿಯಿಂಚರಮಂ ನೆಗಚ್ಚುತುಂ (ಉದ್ಭಟ. ೫-೭೪); ನುಡಿಸುವ ವೀಣೆ ಕಿನ್ನರಿ ಸ್ವರಮಂಡಲ ತಂಬೂರಿ ಕಾಮಾಕ್ಷಿಯ ನಾದ (ಅಖಂಡೇ. ೨೦೭-೪೭); ಕೋಣನಿದಿರಿಗೆ ಕಿನ್ನರೀ ಮಾಟಿದಂತೆ (ಪುರಂದ. ೧-೨೧೫-೧೫); ಕಿನ್ನರಿಯ ಬೊಮ್ಮಯ್ಯ ಕಿನ್ನರಿಯ ಬಾರಿಸಲು ಕುನ್ನಿ ಹಸು ಮರೆತು ಕಿವಿಗೊಟ್ಟು (ಕನ್ನಜಾ. ೨೩೪-೩೫). [ಸಂ. ಕಿನ್ನರೀ]

**ಕಿನ್ನರಿಕಾಯಿ** (ನಾ). ಕಿನ್ನರಿವಾದ್ಯದ ಬುರುಡೆ: (ಕಿ). [ಕಿನ್ನರಿ + ಕಾಯಿ$_4$ (< ಕಾಯ್$_4$)]

**ಕಿನ್ನರಿಕೆ** (ನಾ). [ಸಂಗೀತ] ಒಂದು ರಾಗದ ಹೆಸರು: ನೀಲೋತ್ಪಲಿನಿ ... ಕಿನ್ನರಿಕೆ ... ವಸಂತ ಬಂಗಾಳವೆಂಬಿಪ್ಪತ್ತೆರಡು ರಾಗಂಗಳುಂ ಕ್ರಿಯಾಂಗದಿಂದ ಪುಟ್ಟಿದವು (ವಿವೇಕ. ೨೩೪). [ಸಂ. ಕಿನ್ನರಿಕಾ]

**ಕಿನ್ನರಿಕ್ರಿಯೆ** (ನಾ). ಕಿನ್ನರಿಯನ್ನು ಬಾರಿಸುವಿಕೆ; ಕಿನ್ನರಿವಾದನ: "ಮೊರೆ (ಮುರೆ) – ಭ್ರಮರಾದಿ ನಿನದೇ, ಕಿನ್ನರಿಕ್ರಿಯಾಯಾಂ (ಶಮುಧಾ). [ಕಿನ್ನರಿ + ಕ್ರಿಯೆ]

**ಕಿನ್ನರಿಕ್ಷೇತ್ರ** (ನಾ). ಗಡಿಯಲ್ಲಿ ಕಿನ್ನರಿ ಕಲ್ಲುಗಳನ್ನು ನಟ್ಟಿರುವ ಪ್ರದೇಶ; ಒಂದು ಕ್ಷೇತ್ರದ ಹೆಸರು (?): ಪೂರ್ವತಃ ಕಿನ್ನರಿಕ್ಷೇತ್ರಂ (ಸೌಇಇ. XX, ೩-೯; ೭). 'ಕಿನ್ನರಿಗಲ್' ಪರಾ. [ಕಿನ್ನರಿ$_0$ + ಕ್ಷೇತ್ರ]

**ಕಿನ್ನರಿಗಲ್**, ಕಿನ್ನರಿಗಲ್ಲು (ನಾ). ಹೊಲದ ಸೀಮೆ ಗುರುತಿಸುವುದಕ್ಕಾಗಿ ನಿಲ್ಲಿಸಿದ ಗುರುತಿನ ಕಲ್ಲು; ಕಿನ್ನರಿ ಚಿತ್ರವನ್ನು ಕೆತ್ತಿದ ಕಲ್ಲು; ಗಡಿಗಲ್ಲು: ನಿಱಿಸಿದ ಕಿಂನರಿಗಲ್ಲ ಗುಡ್ಡೆ (ಸೌಇಇ. XI–ii, ೧೧೯-೫೧; 948); ಈಶಾನ್ಯದ ಸೀಮೆ ಇಟ್ಟಗೆಯ ಹಾಳ ಹೊಲದ ಬಡಗಣ ಹೊರೆಯ ಕಿನ್ನರಿಗಲ್ (ಎಇ. XVI, ೪೮-೫೯; 1149). **ಕಿನ್ನರಿಗಲ್ಲು**: ಮೇರೆಯಲ್ಲನಟ್ಟ ಕಿನ್ನರಿಗಲ್ಲು (ಸೌಇಇ. XX, ೫೫-೫೦; 1062); ಪಡುವಣ [ಬ]ದುವಿನ ಕೊತ್ತುರೊಳಗಣ ಉಳಿಮುಖದ ಕಿಂನ್ನರಿಗಲ್ಲು (ಸೌಇಇ. XX, ೭೪-೩೭; 1112). 'ಕಿನ್ನರಿಕ್ಷೇತ್ರ' ಪರಾ. [ಕಿನ್ನರಿ + ಕಲ್$_3$]

**ಕಿನ್ನರಿಗಲ್ಲು** 'ಕಿನ್ನರಿಗಲ್' ನೋ.

**ಕಿನ್ನರಿವೀಣೆ** (ನಾ). = ಕಿನ್ನರವೀಣೆ: ತುಂಬುರವೀಣೆ ಕಿನ್ನರಿವೀಣೆ (ಆದವ. ೩೮). [ಕಿನ್ನರಿ + ವೀಣೆ]

**ಕಿನ್ನಾಡು** (ನಾ). ಕೆಳಗಿನ ನಾಡು; ಪಾತಾಳಲೋಕ: ಎಲರುಣಿಗಳ್ ಕಿನ್ನಾಡ ಬಿಲಂಬೊಕ್ಕವು (ಜಯುಕಾ. ೭-೧೨). [< ಕೆಳಗು + ನಾಡು]

**ಕಿನ್ನಿಟ್ಟ** (ನಾ). ಇಟ್ಟಿಯ ಕೆಳಗು, —ಕೆಳಭಾಗ: "ಕೀೞೆರಿ, ಕೀೞ್ಪೊಟ್ಟು, ಕಿನ್ನೆಲಂ, ಕಿನ್ನಿಟ್ಟ (ಶಬ್ದಾನು. ೩೭೮ ಪ್ರಯೋ). [< ಕೆಳಗು + ಇಟ್ಟ$_2$]

**ಕಿನ್ನೀರ್** (ನಾ). ಕೆಳಗಿನ ನೀರು; ತಳದ ಜಲ: ಕಿನಾದೇಶಕ್ಕೆ – ಕಿನ್ನೀರ್, ಕಿನ್ನೆಲಂ (ಶಮದ. ೧೭೭ ಪ್ರಯೋ). [< ಕೆಳಗು + ನೀರ್$_1$]

**ಕಿನ್ನೀರ್ಗಾಣ್** (ಕ್ರಿ). ತಳದ ನೀರು ಕಾಣು; ಬತ್ತಿಹೋಗು: ಮುನ್ನೀರ್ ಕಿನ್ನೀರ್ಗಂಡತ್ತಿದೇನದ್ಭುತಮೊ ಶತಮುಖಂ ಮಾಡ್ಪ ಜನ್ಮಾಭಿಷೇಕಂ (ಮಲ್ಲಿಪು. ೧೨-೧೩೭). [ಕಿನ್ನೀರ್ + ಕಾಣ್]

**ಕಿನ್ನೂರಿ** (ನಾ). = ಕಿನ್ನರಿ ೨: ತಂದನ್ನ ತಾನ ಎಂದು ಕೈಯಲಿ ಕಿನ್ನೂರಿ ಧರಿಸಿ (ವಿಸ್ತೋಸು. ೭೯-೧); ತಾಯಿಮಕ್ಕಳ ನುಡಿಯು ತಾಳ ಬಾರಿಸಿದಾಂಗ ಜೋಡಿ ಕಿನ್ನೂರಿ ನುಡಿದಾಂಗ (ಗರತಿ. ೧೦-೫೨). [< ಸಂ. ಕಿನ್ನರೀ]

**ಕಿನ್ನೆಲ** 'ಕಿಬ್ಬೆಲ' ನೋ.

**ಕಿಪಣಾಸಿ** (ನಾ). ಊಟದಲ್ಲಿಯೂ ಕೃಪಣತೆಯುಳ್ಳವನು; ಪರಮ ಲೋಭಿ; ಜಿಪುಣ: ಆಯಮ್ಮ ಎಂಜಲ ಕೈಲಿ ಕಾಗೆ ಹೊಡೆಯುವುದಿಲ್ಲ ... ಭಾರಿ ಕಿಪಣಾಸಿ (ಅಭಿಮಾ. ೬೭). [< ಸಂ. ಕೃಪಣಾಶಿನ್ ?]

**ಕಿಪಾತು** (ನಾ). ಅಪಮಾನ; ಫಜೀತಿ: ಆ ಡ್ರೈವರ್ ರಾಜು ಕೈಗೆ ಸಿಕ್ಕಿ ಕೆಟ್ಟು ಕಿಪಾತೆದ್ದು ಹೋಗಿ ಲದ್ದಿಯಾಗಿದೆ (ಮರ್ಯಾದೆ. ೮೨). [← ಅರ. ಖಿಫ್ಫತ್; ಮರಾ. ಖಿಪತ]

**ಕಿಪ್ಪರಿ** (ಕ್ರಿ). ಕೆಳಗೆ ಓಡಾಡು; ಹರಿದಾಡು: ಕುಣಿ ಕುಣಿದು ಕೈಚಪ್ಪಳೆಯ ಕಟ್ಟಣಿಯರದಿ ಕಿಪ್ಪರಿವುತಾಡಿದ [ಪಾಠಾಂ. ಕಟ್ಟಣೆಯರಲಿ ಕುಬುಬಿಱಿದು ಕಾದಿದ] ಕಣುಗುಱುಹಿನಸುರರ ಘಚಾರಿಸುತ (ತೊರಬಾ. ೫-೮-೪೮). [< ಕೆೞ್ + ಪರಿ$_1$]

**ಕಿಪ್ಪಳಿಸು** (ಕ್ರಿ). (?): ಆಡುವಟ್ಟಿಗಳ ತಡಂಗಳ ನೆತ್ತರ ತೊಱೆಗಳುಂ ನೆಣದ ಕೆಱೆಗಳುಂ ಕಿಪ್ಪಳಿಸಿದ ಕುರುಳ್ಗಳುಂ ಕುಣಿದಾಡುವ ಮರುಳ್ಗಳುಂ (ಮಹಾನೇ. ೧೨-೫೯ ವ). [?]

**ಕಿಪ್ಪಾಳಿ** (ನಾ). (ಗದ್ದೆಯಲ್ಲಿಯ) ಕೆಳಗಿನ ಹಾಳಿ, —ಭಾಗ: ಕಿಪ್ಪಾಳಿಯ ಕಡೆಗೆ ಕೊಯ್ಯುತ್ತಿದ್ದ ಮಲ್ಲನು (ಕಸಾಪ. I, ೧೩೧; 1916). [< ಕೆಳಗು + ಪಾಳಿ$_1$]

**ಕಿಫಾಯತಿ**, ಕಿಫಾಯತು (ನಾ). ಲಾಭ; ಫಾಯದೆ: ದವುಡು ಮಾಡಿದರೆ ಬಹಳ ಕಿಫಾಯತಿ ... ಸಿಕ್ಕೀತು (ರಾಜೇಂದ್ರ. ೯೨); ದುಡ್ಡಿದ್ದವರಿಗೆ ಕುಳಿತಲ್ಲಿ ಕಿಫಾಯತಿಯ ದಾರಿ ಸಿಕ್ಕಿಯೇ ಸಿಕ್ಕುತ್ತದೆ (ಜಾರುದಾ. ೧೫೨). **ಕಿಫಾಯತು**: ಸರಕಾರಕ್ಕೆ ಕಿಫಾಯತು ಕೂಡಿ ಬರುವ ಹಾಗೆಯೂ (ಮಹಾವಂ. II, ೬೯). [← ಅರ. ಕಿಫಾಯತ್; ಹಿಂ. ಮರಾ. ಕಿಫಾಯತೀ].

**ಕಿಫಾಯತು** 'ಕಿಫಾಯತಿ' ನೋ.

**ಕಿಬಳಿ** (ನಾ). (ಕಡ್ಡಾ). ಮನೆಯ ಹೊರ ಅಂಚು; ಬದಿ: ರಾತ್ರಿ ವೇಳೆಯಲ್ಲಿ ಯಾರಾದರೂ ಕಿಬಳಿಗೆ ಬಂದು ನಿಂತರೆ ಕಳ್ಳನೆಂಬ ಸಂಶಯ ಬರುವುದು ಸಹಜ (ರೂಢಿ). [< ಕೆಳಗು + ಬಳಿ$_3$ (< ಬೞಿ)]

**ಕಿಬ್ಬಂಡೆ** (ನಾ). ಕಿರಿಯ ಬಂಡೆ: ಹೆಬ್ಬೆಟ್ಟ ಕಿಬ್ಬೆಟ್ಟ ಹೆಗ್ಗುಡ್ಡ ಹೆಬ್ಬಂಡೆ ಕಿಬ್ಬಂಡೆಗಳ ತಂಡದಾಯವನೋ (ಶ್ರೀರಾಮಾ. ೩೫೩-೩೫೪). [< ಕಿಱಿದು + ಬಂಡೆ]

**ಕಿಬ್ಬದಿ** 'ಕಿಬ್ಬರಿ' ನೋ.

**ಕಿಬ್ಬರಿ** 'ಕಿಬ್ಬರಿ' ನೋ.

**ಕಿಬ್ಬಸಿರು** 'ಕಿಬ್ಬಸಿಱ್' ನೋ.

**ಕಿಬ್ಬಸಿಱ್** 'ಕಿಬ್ಬಸಿಱ್' ನೋ.

**ಕಿಬ್ಬಸಿಱು** 'ಕಿಬ್ಬಸಿಱ್' ನೋ.

**ಕಿಬ್ಬಸುರ್** 'ಕಿಬ್ಬಸಿಱ್' ನೋ.

**ಕಿಬ್ಬಸುಱ್** 'ಕಿಬ್ಬಸಿಱ್' ನೋ.

**ಕಿಬ್ಬಸುಱು** 'ಕಿಬ್ಬಸಿಱ್' ನೋ.

**ಕಿಬ್ಬಾಗು** (ಕ್ರಿ). ಕೆಳಬಾಗು; ಕೆಳಕ್ಕೆ ಬಾಗು: ಒಬ್ಬರ ಬಳಿಗೆ ಮೇಲುಬ್ಬಸ ಬಡುತಲಿ ಕಿಬ್ಬಾ(ಬ್ಬಾ)ದಿಗೀರಿಕೊಂಡಬ್ಬಬ್ಬಾ ಎನುತಲಿ (ಮೋಕ್ಷದೀ. ೨೦೭). [< ಕೆಳಗು + ಬಾಗು$_1$]

**ಕಿಬ್ಬಿ**, ಕಿಬ್ಬೆ (ನಾ). ಇಳಿಜಾರು; ಬೆಟ್ಟದ ಪಕ್ಕ, —ತಟ: ಕೆಱೆಯ ಕಿಬ್ಬಿಯಲಿ ಶ್ರೀಕಲಿದೇವರಿಗೆ ... ಬಿಟ್ಟ ಗದ್ದೆ (ಎಕ. XX, ಚಳ್ಳಕೆ. ೨೧-೪೧; 1087); ಗ್ರಾಮಕ್ಕೆ ತೆಂಕಲಾಗಿ ಬೆಟ್ಟ ಕಿಬ್ಬಿಯಲ್ಲಿ ... ನೆಟ್ಟ ಕಲ್ಲು (ಎಕ. XIV, ನಂಜನ. ೨೯೫ ಪು ೧೫೦; 1761); ಅಟ್ಟ ಬೆಟ್ಟದ ಕಿಬ್ಬಿಯೊಳಗೆ (ಗೋಹಾಡು. ೯-೪೪); ಪಾತಾಳ ದಾಳಿಕೆ ಬಾಯ ತೆರೆದಂತಿರ್ದ ಕಿಬ್ಬಿದರಿ (ಶ್ರೀರಾಮಾ. ೧೧೪-೧೭೬).

ಕಿಬ್ಬೆ: ವಾಯುವ್ಯಭಾಗದ ಕಿಬ್ಬೆಯ ಕೆಂಬರೆ ಮುಡುಕಿನಲ್ಲಿ (ಎಕ. III, ತಿರುಮ. ೬೨–೧೯೫; 1677); ಕೊತ್ತಿಗನ ನೊರಟೆಯ ಪಡುವಚಾರಿ ಕಿಬ್ಬೆಯಲ್ಲಿ ದಕ್ಷಿಣ ಮುಖವಾಗಿ ನೆಟ್ಟ ಕಲ್ಲು (ಎಕ. III, ಶ್ರೀರಂಗ. ೧೪–೧೩೨; 1686). [?]

**ಕಿಬ್ಬಿವಾಯ್** (ನಾ). ಬೆಟ್ಟದ ಕಿಬ್ಬಿಯಂತಹ ಬಾಯಿ(?): ಆ ರಕ್ಕಸಿಯ ಕಿಬ್ಬಿವಾಯ್ ಬಳಿದತ್ತವನ ತನುಗೆ ತಕ್ಕಂತೆವೋಲ್ (ಶ್ರೀರಾಮಾ. ೪೧೪–೩೦೧). [ಕಿಬ್ಬಿ + ಬಾಯ್]

**ಕಿಬ್ಬೆ** 'ಕಿಬ್ಬಿ' ನೋ.

**ಕಿಬ್ಬೆಟ್ಟ** (ನಾ). ಕಿರಿಯ ಬೆಟ್ಟ; ಗುಡ್ಡ: ಹೆಬ್ಬೆಟ್ಟ ಕಿಬ್ಬೆಟ್ಟ . . . ಹೆಬ್ಬಂಡೆ, ಕಿಬ್ಬಂಡೆಗಳ ತಂಡದಾಯಮೊ (ಶ್ರೀರಾಮಾ. ೩೫೩–೩೫೪). [< ಕಿಱಿದು + ಬೆಟ್ಟ]

**ಕಿಬ್ಬೆಹೊಲ** (ನಾ). ಕೆಬ್ಬೆಹೊಲ (?): ಕೋಡಿಹಳ್ಳಿಗೆ ತೆಂಕಲು ಕಿಬ್ಬೆಹೊಲದಲು ಕಲ್ಲುವಂದೂ (ಎಕ. V, ಹಾಸನ. ೮೭–೬೨; 1396). [ಕಿಬ್ಬೆ$_0$ + ಹೊಲ (< ಪೊಲ)]

**ಕಿಬ್ಬೊಟ್ಟೆ** 'ಕಿಟಿಬ್ಬೊಟ್ಟೆ' ನೋ.

**ಕಿಬ್ಬೊಡೆ** 'ಕಿಳ್ಳೊಡೆ' ನೋ.

**ಕಿಬ್ಬೊನಲು** (ನಾ). ಚಿಕ್ಕ ಪ್ರವಾಹ; ಚಿಕ್ಕ ಹೊಳೆ, —ತೊರೆ: ಬಲಿದುಸುರ ಬಿಸುಸುಯಿಲ ಹಬ್ಬಿದ ಕಳಕಳದ ಕಂಬನಿಯ ಕಿಬ್ಬೊನಲೀವ ಕದಪಿನ ಹೊತ್ತ ದುಗುಡದ ಮುಖದೊಳ್ಳಿತಂದ (ಕುವ್ಯಾಭೀ. ೧೧–೧೫). [< ಕಿಱಿದು + ಪೊನಲು (< ಪೊನಲ್)]

**ಕಿಮುಟ** (ನಾ). ಕಿಟ್ಟ; ಆವರಣ; ಪದರ: ಕಾಲದ ಕಿಮುಟ (Crust) ಅವುಗಳಿಗೆ ಹಿಡಿದು ಅವುಗಳಿಗೆ ಪ್ರಾಚೀನತೆಯ ವಿಚಿತ್ರವೇ ಬಂದಂತೆ (ಕಶಾಅ. ೨೫). [?]

**ಕಿಮುಟ್ಟಕಾಲಿಯ**(ನಾ). ಒಂದು ಪ್ರದೇಶದ ಹೆಸರು: ಪೂರ್ವತೋಕೂಡ ಕುನಿಯ್ಯುರಿ ಕಿಮುಟ್ಟಕಾಲಿಯ ಸೀಮಾ(ಇಆ. XIV, ೫೪–೧೦೪; 944?). [?]

**ಕಿಮ್ಮಿ$_1$** 'ಕಿವಿ$_2$' ನೋ.

**ಕಿಮ್ಮಿ$_2$** 'ಕಿವಿ$_3$' ನೋ.

**ಕಿಮಿಗೆಡಿಸು** 'ಕಿವಿಕೆಡಿಸು' ನೋ.

**ಕಿಮಿಚು** 'ಕಿಮುಟ್ಟು' ನೋ.

**ಕಿಮುಕ್** (ನಾ). ಒಂದು ಅನುಕರಣವಾಚಕ ಶಬ್ದ.

ಕಿಮುಕ್ ಎನ್ನು = ಸದ್ದುಮಾಡು: ಅವನು ಕಿಮುಕ್ ಎನ್ನದೆ ತೆಪ್ಪಗೆ ಕುಳಿತಿದ್ದನು (ರೂಢಿ).

**ಕಿಮುಳ್** 'ಕಿಮುಟಱ್' ನೋ.

**ಕಿಮುಳ್ಳು** 'ಕಿಮುಟ್ಟು' ನೋ.

**ಕಿಮುಳ್ದುಳಿ** 'ಕಿಮುಟ್ದುಟಿ' ನೋ.

**ಕಿಮುಟಱ್**, ಕಿಮುಳ್ (ನಾ). ಹಿಸುಕಲ್ಪಟ್ಟುದು; ಕಿವುಚಿದುದು: 'ಕಿಮುಟ್ದುಟಿ' ಪರಾ. ಕಿಮುಳ್: "ಕರಂ ಕಿಮುಳೆ ಚಿಕ್ಕಣದೊಳ್" (ಕರ್ಣಾನಿ. ೯೩). [?]

**ಕಿಮುಟ್ಟು**, ಕಿಮುಚು, ಕಿಮುಳ್ಳು, ಕಿವಿಚು, ಕಿವುಚು, ಕಿವುಟ್ಟು ಗಿವುಚು (ಕ್ರಿ). ೧. ಹಿಸುಕು; ಹಿಂಡು: "ಕಿಮುಟ್ಟು – ಹಸ್ತಮರ್ದನೇ" (ಶಮಧಾ); "ನಯಮಾಗಿಯೆ ಮಾಡಿದನೊಳ್ ಕಿಮುಟ್ಟಿದಂ" (ಕರ್ಣಾನಿ. ೮೯); ಪಂಕಜಂಗಳನವಿಧೇಯ ವೀರಶಿರಮೆಂದು ಕಿಮುಟ್ಟಿ (ಪುಷ್ಪಪು. ೪–೫೯); ಕೀಡೆಯಂ ಕಿಮುಟ್ಟುವುದಕ್ಕೀ ಚಾಣೂರನೇಕೆ (ಅರ್ಧನೇ. ೮–೫೮); ಕಿಮುಟ್ಟಿದ ತಳಿರಂತೆ ನೊಂದು (ಶಬ್ದಾನು. ೧೪೦ ಪ್ರಯೋ). ೨. ನುಣುಪುಮಾಡು; ಪುಡಿಮಾಡು: "ಕಿಮುಟ್ಟಿದನೆಂದು ಚಿಕ್ಕಣಮಾಗಿ [ಚಿಕ್ಕಣೆಯಾಗಿ] ಮಾಡಿದಂ" (ಶಮದ. ೩. ೩೪).

ಕಿಮಚು: (೩). ಕಿಮುಳ್ಳು: ೧. ವಿರಹದಿಂದುರಿಗದಿರಿಂದ ಕಿಮುಳ್ಳಿದ ತಳಿರೆನೆ ಕೊರಗಿ (ಜಯುಕಾ. ೪–೪೫). ಕಿವಿಚು: ೧. ಬಿಸಿನೀರನೆಱೆದು ಕಿವಿಚಿದ ಪುಲ್ಲಸೊಜ್ಜಿಗೆಯ ರಸದೊಳಗೆ ಅರದಕ್ಕಿಯಂ ಸಮಂಗೂಡಿ ಸೋದಿಸಿಕೊಂಡು (ಸೂಪಶಾ. ೧–೩೭); ಬಾಳೆಯ ಹಣ್ಣನೂ ಹುಣಿಸೆಯ ಹಣ್ಣನೂ ಕಿವಿಚಿ ಶರ್ಕರವೆರಸಿ ಮೆಲ್ಲಲು ಮೂತ್ರ ಬಿಡುವುದು (ಸಕವೈ. ೩೭೩); ಹೆಂಡತಿಯ ಕುತ್ತಿಗೆ ಕಿವಿಚಿ ಪ್ರೀತಿಗೆ ಅಂತ ಗಂಧದ ಮರದಲ್ಲಿ ಸುಟ್ಟನಂತೆ (ನಡಿದಾ. II, ೫೨೦). ಕಿವುಚು: ೧. ಕಳಿದ ಹಲಸಿನ ಹಣ್ಣ ತೊಳೆಗಳಂ ಸಲೆಕಿವುಚಿ ಹಿಳಿದ ರಸದಲ್ಲಿ (ಸೂಪಶಾ. ೫–೫೭); ಸುಟ್ಟುಕೊಂಡು ಸಾಯುತಿರುವವರ ಕರುಳು ಕಿವುಚುವ ಚೀರಾಟಗಳನ್ನು ಕೇಳಿ (ಧರ್ಮರಿ. ೨೨); ದೇಸಾಯರು ಮುಖ ಕಿವುಚಿದ್ದನ್ನು ಲೆಕ್ಕಿಸದೆ ರಾಘಪ್ಪ ಮುಂದುವರಿದನು (ಗಂಮಾಯಿ. ೧೦೨). ಕಿವುಟ್ಟು: ೧. "ಉಪಮರ್ದಃ, ವಿಪ್ರಕಾರಃ – ೨ ಕಿವು(ಮು)ಟ್ಟುವುದು" (ಹಲಾಯು. ೧೨೭–೭೪); ಕಿವುಟ್ಟಿ ಪೀರ್ವಮೊಲೆ (ಸುಕುಮಾ. ೯–೯೯). ಗಿವುಚು: ೧. ಹುಣಸೆ ಹುಳಿಯನ್ನು ೧ ಕಪ್ಪು ನೀರಲ್ಲಿ ಗಿವುಚಿ ಸೋಸಬೇಕು. (ಅಡುಸೌ. ೧೮೯); ಈ ಕರುಳು ಅಲೆ ಅಲೆಯಾಗಿ ಆಹಾರವನ್ನು ತಳ್ಳುವುದಲ್ಲದೆ ಆಹಾರವನ್ನು ಗಿವುಚುವುದೂ ಉಂಟು. (ಬಾಲಪ್ರ. I, ೨೫೨). [ಕಿಮುಟಱ್ + –ಚು]

**ಕಿಮುಟ್ದುಟಿ**, ಕಿಮುಳ್ದುಳಿ (ಕ್ರಿ). ಪುಡಿಯಾಗುವಂತೆ ತುಳಿ; ಮುದ್ದೆಯಾಗುವಂತೆ ತುಳಿ: "ಕಿಮುಟ್ದುಟಿದನೆಂದು ಸಣ್ಣಮಾಗಿ ತುಟಿದಂ" (ಶಮದ. ಪರಿ. ೧); ಕೆಲವಣೆಯಂ ಕಿಮುಟ್ದುಟಿದುವೇಟ್ದು (ಅನಂಪು. ೧೪–೧೧). ಕಿಮುಳ್ದುಳಿ: ವಾಮಪಾದದಿಂದ ಕಿಮುಳ್ದುಳಿವುತ್ತ . . . ಕೊಂದನಾ ವೀರೇಶಂ (ವೀರವಿ. ೧೨–೫೭). [ಕಿಮುಟಱ್ + ತುಟಿ$_1$]

**ಕಿಮ್ಮತ್ತು** (ನಾ). ೧. ಬೆಲೆ; ಮೌಲ್ಯ; ಕ್ರಯ: ಅಮಲ್‌ದಾರುಗಳು ಜಪ್ತಿ ನೋಟಿಸಿನ ಕಿಮ್ಮತ್ತನ್ನು ಹರಾಜಿನ ಖರ್ಚನ್ನು ದಾಖಲ್ಮಾಡಿ (ಗ್ರಾಮಾಕ. ೭೩); ಹೆಚ್ಚೆಚ್ಚು ಕಿಮ್ಮತ್ತಿನ ಸೀರೆಗಳು (ಮೋಹಿನಿ. ೬೩). ೨. ಗೌರವ; ಮರ್ಯಾದೆ: ಆ ಕಿಮ್ಮತ್ತಿಲ್ಲದ ಕೆಲಸಕ್ಕೆ ಸೇರಿಕೊಂಡಿದ್ದೆ (ನಾಪೋಲಿ. ೩೩); ವ್ಯಕ್ತಿಗೆ ಕಿಮ್ಮತ್ತಿಲ್ಲ . . . ಈ ಜನ ಸಮುದ್ರದಲ್ಲಿ (ಮುಕ್ತಿ. ೬). [← ಅರ. ಕೀಮತ್; ಮರಾ. ಕಿಮ್ಮತ್]

**ಕಿಮ್ಮೀರ** (ನಾ). ೧. ಒಂದು ದೇಶ: ಕಿಮ್ಮೀರ ದ್ರಾವಿಡ ನೃಪರೆಲ್ಲರು (ಜಿನರಾ. ೮–೬೫). ೨. ಭೀಮಸೇನನಿಂದ ಹತನಾದ ಒಬ್ಬ ರಾಕ್ಷಸ: ತದ್ವನಾಧಿಪತಿಯಪ್ಪ ದೈತ್ಯಂ ಕಿಮ್ಮೀರಂ . . . ಅಡ್ಡಮಾಗಿರೆ (ಪಂಪಭಾ. ೭–೨೬ವ); ಇಟ್ಟೊರಸಿ ಹುಡಿಯಲಿ ಹೂಳಿದನು ಕಿಮ್ಮೀರದಾನವನ (ಕುವ್ಯಾಅ. ೧–೩೪). [< ಸಂ. ಕಿರ್ಮೀರ]

**ಕಿಮ್ಮೀರವೈರಿ** (ನಾ). ಕಿಮ್ಮೀರನೆಂಬ ರಾಕ್ಷಸನ ಶತ್ರು; ಭೀಮಸೇನ: ಕಿಮ್ಮೀರವೈರಿ ಮುಟ್ಟಿವಂದಾಗಳ್ . . . ರಾಜಾಧಿರಾಜನಂ ಪರಾಭವಂಬಡಿಸದಿರೆಂದು ಬಲದೇವಂ ಬಾರಿಸೆ ವಾರಿಸೆ (ಪಂಪಭಾ. ೧೩–೯೭ವ). [ಕಿಮ್ಮೀರ + ವೈರಿ]

**ಕಿಮ್ಮೆನ್ನು** (ಕ್ರಿ). ಇದಿರಾಡು; ಆಕ್ಷೇಪಿಸು: ನಿನ್ನ ಮೈದುನರೆಂದು ನುಡಿವಾಗ ನಮಗೆ ಕಿಮ್ಮೆನ್ನಬಾರದ ತೇಜವಿಹುದು (ಭರಜ. ೭೮–೭೨). [ಕಿಂ + ಎನ್ನು (< ಎನ್)]

**ಕಿಮ್ಸನ್** (ನಾ). ಒಂದು ಅನುಕರಣ ಶಬ್ದ: ಅಜಿಯದೆ ಬಂದೆವು ಕಿಮ್ಸನ್ ಪರಿಹರಿಸಯ್ಯ ಭಿಮ್ಸನ್ (ಪುರಂದ. ೨–೫೯–೧); ಮತ್ಸ್ಯಾವತಾರಗೆ ಕಿಮ್ಸನ್ ಕೂರ್ಮಾವತಾರಗೆ ಭಿಮ್ಸನ್ (ಪುರಂದ. ೨–೫೯–೩). [?]

**ಕಿರ್** (ನಾ). ಒಂದು ಅನುಕರಣ ಶಬ್ದ.

ಕಿರ್ ಎನ್ನು= ಕಿರ್ ಎಂದು ಶಬ್ದಮಾಡು ; ಚೀರು ; ಆನೆಯಂತೆ ಕಿಳಿರು. **ಕಿರ್‌ಕಿರ್, ಕಿರ್ಕಿರ್** = ೧. ಬಾಗಿಲು, ಮುಂತಾದುವು ಗಳನ್ನು ತೆರೆಯುವಾಗ ಇಲ್ಲವೇ ಮುಚ್ಚುವಾಗ ಉಂಟಾಗುವ ಶಬ್ದ. ೨. ಹಕ್ಕಿಗಳ ಧ್ವನಿ : ಕೆಂಬಿತ್ತನುಗಿಯುತುಂಡಾಡಿಂಬದ ಬೀಡೆಯೊಳ್ ಸಿಲ್ಕಿ ತುಂಡು ಕಿರ್ಕಿ [ಪಾಠಾಂ. ಕೀರ್ಕಿ] ರೆಂಬ ಮಱಿಗಿಳಿಗಳೊಳ್ (ವರ್ಧ ಪು. ೨-೪) ; ತೂಗುಂಡೆನೆಯಂ ತಟ್ಟಿಕ್ಕಿಸಿ ಕಿರ್ಕೀರೆನುತೆಡೆಗೆಸಱಿಯೊಳ್ ಬಿಟ್ಟು (ಸೂ ಕ್ತಿ ಸು. ೪-೬೭). [?]

**ಕಿರ** (ನಾ). ಕಾಡುಹಂದಿ ; ಮಿಕ : (ಕ). [ಸಂ.]

**ಕಿರಕ** (ನಾ). ಒಂದು ಬಗೆಯ ಭೂಮಿ : ತೋಟ ತುಡಿಕೆ ಹಕ್ಕಲ್ಲು ಕುಂಮರಿ ಕೊಹು ಸರಕಲ್ಲು ಕೊಡದಿ ಕಿರಕ ಕಾಡಾರಂಭ ಮುಂತಾಗಿ ಯೇನ್ನು ಉಂಟಾದನ್ನು ಅನುಭವಿಶಿಕೊಂಡು (ಎಕ. VI, ಕೊಪ್ಪ. ೪೯-೨೨ ; 1392). [?]

**ಕಿರಕು** (ನಾ). ಒಂದು ಬಗೆಯ ಚರ್ಮರೋಗ : ಕಿರಕುಂ ತುಱಿಯುಂ ತದ್ದುಂ ವಿಷಮುಂ ತೊನ್ನುಂ . . . ಕುತ್ತಂಗಳ್ (ಪಸಾರ. ೧೦೨-೧೫). [?. / ತಮಿ. ಚಿರಙ್ಗು. ಮಲ. ಶಿರಙ್ಙು]

**ಕಿರಕುಳ** 'ಕಿಱುಕುಲ' ನೋ.

**ಕಿರಗಣಿ, ಕಿರಗಣೆ, ಕಿರಗುಣಿ, ಕಿರುಗುಣಿ** (ನಾ). ಅಗಲ ಕಡಿಮೆ ಇರುವ ಸೀರೆ ; ಕಿರಿಗೆ ; ಪರಿಕಾರ : ತನ್ನ ಕಿರಗಣಿಯ ದಾರ ಬಿಚ್ಚಿ ನನ್ನ ಕೈಯನ್ನು ತನ್ನ ಹೊಟ್ಟೆಯ ಮೇಲಿಟ್ಟು ಕೇಳಿದಳು (ಆಬೋಲೀ. ೯). **ಕಿರುಗಣೆ** : ಆಗ ಇನ್ನೂ ಕಿರುಗಣೆ ಉಟ್ಟು ನಲಿದಾಡುತ್ತಿದ್ದ ಎಳೆಯ ಬಾಲೆ (ಮೂರುದಾ. ೧೧೨) ; ರಾಕ್ಷಸ ವೇಷಗಳು . . . ಕಥಕ್ಕಳಿ ವೇಷಗಳಂತೆಯೂ ಸ್ಥಳೀಯ ದೈವಗಳಂತೆಯೂ ಕಿರಗಣೆ ತೊಡುತ್ತಾರೆ (ಯಕ್ಷಬ. ೧೧೦). **ಕಿರಗುಣಿ** : ಹುಡುಗಿಗೆ ಒಂದು ಕಿರಗುಣಿ ತಂದಿದ್ದೇವೆ (ರೂಢಿ). **ಕಿರುಗುಣಿ** : ಚಿಕ್ಕಮಕ್ಕಳ ಕೂಡಿಯಾಡುತಿರೆ ಕಿರುಗುಣಿಯ ನಕ್ಕರಿಂ ಕಂಚುಕವ ತೊಡಿಸುಡಿಸಿ (ನವಮೋ. ೨೭-೩೨). [← ಮರಾ. ಕಿರಗುಣೀ]

**ಕಿರಗಣೆ** 'ಕಿರಗಣಿ' ನೋ.

**ಕಿರಗುಣಿ** 'ಕಿರಗಣಿ' ನೋ.

**ಕಿರಚು** 'ಕಿಱುಚು' ನೋ.

**ಕಿರಣ$_1$** (ನಾ). ಬೆಳಕಿನ ಕದಿರು ; ಕಾಂತಿ ; ಮರೀಚಿ ; ಮಯೂಖ : ಪಸರಿಪಿನಕಿರಣಂಗಳ್ (ಪಂಪಭಾ. ೧೨-೧೦೮) ; ಹರನಿಂದುರ್ವಿಗೆ ದೈವವೇ ? ಕಿರಣ ಕಿಂ ದುಂ ಬಿಟ್ಟು ಸೊಂಪುಂಟೆ ? (ಸೋಮೇಶ. ೬).

**ಕಿರಣ$_2$** (ನಾ). ೧. ಹರಡುವಿಕೆ ; ಎರಚುವಿಕೆ ; ಪ್ರಸರಣ. 'ಕಿರಣಿಸು' ಪರಾ. ೨. = ಕಿರಣಾಗಮ : ಕಾಮಿಕ, ಯೋಗಜ . . . ಕಿರಣ, ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಭಾರದ. ೬೨). [< ಸಂ. ಕೀರ್ಣ]

**ಕಿರಣ$_3$** (ನಾ). ಕುದುರೆಯ ಶರೀರದಲ್ಲಿ ಒಂದು ಅವಯವದ ಹೆಸರು : "ಬಾಹ್ಯದೊಳಗಣ ಕಲೆಗಳ್ಗೆ ಕಿರಣಮೆಂಬ ಪೆಸರಕ್ಕುಂ" (ಅಶ್ವ ಶಾ. ೯-೬೬ ವ). [?]

**ಕಿರಣಲಹರಿ** (ನಾ). ಬೆಳಕಿನ ಪ್ರವಾಹ ; ಕಿರಣಗಳ ಪ್ರಭೆ : ಧರೆಗೆ ಬಂದನು ಸೂರ್ಯನಾಥನ ಕಿರಣಲಹರಿಯ ಹೊಯ್ಲಿನಲಿ ಸರಸಿರುಹಮುಖಿ ಬೆಚ್ಚಿದಳು (ಕುಮಾ.ವ್ಯಾ. ೩-೧೮). [ಕಿರಣ$_1$ + ಲಹರಿ$_1$]

**ಕಿರಣಾಗಮ** (ನಾ). [ಶೈವ] ಶೈವಮತದ ಇಪ್ಪತ್ತೆಂಟು ದಿವ್ಯಾಗಮಗಳಲ್ಲಿ ಒಂದು : ಕಾಮಿಕಾಗಮ . . . ಕಿರಣಾಗಮ ವಾತುಲಾಗಮವೆಂಬ ಇಪ್ಪತ್ತೆಂಟು ದಿವ್ಯಾಗಮಗಳಕ್ಕುಂ (ವಿವೇಕ. ೬೮). [ಕಿರಣ$_1$ + ಆಗಮ]

**ಕಿರಣಾವಳಿ** (ನಾ). ಕಿರಣಗಳ ಪಂಕ್ತಿ, —ಸಾಲು ; ಕಾಂತಿಗಳ ಸಮೂಹ : ಇವರ ಹಾಸ್ಯವು ಆ ದೃಷ್ಟಿಯ ಕಿರಣಾವಳಿಯು (ವಿಚಾಮಂ. ೧೦೨). [ಕಿರಣ$_1$ + ಆವಳಿ]

**ಕಿರಣಾಳಿ** (ನಾ). = ಕಿರಣಾವಳಿ : ರವಿ ಕಿರಣಾಳಿಗಳ್ ಧ್ವಜಪಟಾಳಿಯ ತಿಂತಿಣಿಯಿಂದಮುರ್ಚಲಾಱವೆ (ಪಂಪಭಾ. ೧೦-೩೦). [ಕಿರಣ$_1$ + ಅಳಿ$_4$ (= ಆಲಿ$_4$)]

**ಕಿರಣಿಸು** (ಕ್ರಿ). ೧. ಹರಡು ; ಪಸರಿಸು : ಶರಣರ ದಾಸರ ಕರುಣೆ ಕಿರಣಿಸುವಂತೆ ಕೂಗುವೆಯಾ ಹೇಳು ಕೋಗಿಲೇ (ಗರಿ. ೨೮) ; ಒಂದೇ ಬಿಂದುವು ಸುತ್ತು ಕಡೆಗೂ ಒತ್ತಿ ಕಿರಣಿಸಿ ಮೊತ್ತವಾಗಿದೆ (ಜೀವಲ. ೧೬). ೨. (ಮನಸ್ಸಿಗೆ) ತೋರು ; ಹೊಳೆ ; ಸ್ಫುರಿಸು : ಶರಣ ಭಾವದಲಿ ಕಿರಣಿಸಿಹುದು ಪುಷ್ಪಾಂಜಲಿಯ ಸ್ಮರಣ (ನಿಲವು. ೩೬). [ಕಿರಣ$_2$ + -ಇಸು$_3$]

**ಕಿರಮಂಜಿ, ಕಿರುಮಿಂಜಿ, ಕಿರುಮಂಜಿ** (ನಾ). ಕಪ್ಪು ಮಿಶ್ರವಾದ ಕೆಂಪು ಬಣ್ಣ ; ಅರಗಿನ ಬಣ್ಣ : ಈ ವಾಯುವು ಕಿರಮಂಜಿ ಬಣ್ಣದ ಜ್ವಾಲೆಯಿಂದ ಉರಿಯುವುದು (ಮುಂಬಯಿ. ೬-೧೬) ; ಜೋತಾಡುವ ಇಸ್ತ್ರೀಯ ಅಸ್ತ್ರವಾಡದ ಸರ್ಬಗೋಲ ಅದ ಕಿರಮಂಜೀ ಬಂಣದ ಪಾಟಲೋಣ (ದೀಪಹ. I, ೨೪). **ಕಿರಮಿಂಜಿ** : ಆಸ್ಮಾನಿ ಬಣ್ಣ, ಕಿರಮಿಂಜಿ ಬಣ್ಣ, ಕುಸುಂಬಿ ಬಣ್ಣ (ಮುಂಬವ್ಯಾ. ೧೦೦). **ಕಿರುಮಂಜಿ** : ಮೆಕ್ಸಿಕೋ, ಮೊ. ದೇಶಗಳಲ್ಲಿ ಪಾಪಾಸುಕಳ್ಳಿಯ ಜಾತಿಯ ಗಿಡಗಳ ಮೇಲೆ ಬೆಳೆಯಿಸಿ, ಕೆಂಪು ಬಣ್ಣವನ್ನು ತಯಾರಿಸುವುದಕ್ಕಾಗಿ ಉಪಯೋಗಿಸುವ ಒಂದು ಹುಳುವಿನ ಒಡಲು ಕಿರುಮಂಜಿ (Cochineal. ಇಂಕನಿ). [← ಇಂ. Crimson]

**ಕಿರಮಿಂಜಿ** 'ಕಿರಮಂಜಿ' ನೋ.

**ಕಿರಯ** (ನಾ). ಕ್ರಯ ; ಬೆಲೆ : (ಕ). [< ಸಂ. ಕ್ರಯ]

**ಕಿರಲು$_1$** (ಕ್ರಿ). ಶಬ್ದಮಾಡು ; ಕೂಗು : ಮಂಚಗಳು ಕಿರಲುತ್ತವೆ (ಧ್ವನ್ಯಾಲೋ. ೨೦೧). [< ಕೀಱು ?]

**ಕಿರಲು$_2$** (ನಾ). ಚೀತ್ಕಾರ ; ಚೀರುವಿಕೆ : ಮೇಖಳೆಯ ಕಿರಲನ್ನು ಕೇಳಿ ಸದನದ ಕಾಪಿನಾಳು ಅರಸುತ್ತ ಈ ವೇಳೆಗೆ ಈ ಎಡೆಗೆ ಬಂದನು (ಅಳಿಕ. ೧೫೪). [< ಕಿರಲು$_1$]

**ಕಿರಸೆ** 'ಕಿರಿಸೆ' ನೋ.

**ಕಿರಸ್ತಾನ** 'ಕಿರಿಸ್ತಾನ' ನೋ.

**ಕಿರಾಣಿ** (ನಾ). ದಿನಸಿ ; ಧಾನ್ಯ : ಬಣಜಿಗನು ಕಿರಾಣಿಯ ಸರಕುಗಳನ್ನು ಹಲವು ತರದ ಬೀಜಗಳನ್ನೂ ಮಾರುತ್ತಿದ್ದನು (ಮುಂಬಯಿ. ೪-೬೨) ; ಜೋಳ, ಉದ್ದು, ಹೆಸರು, ಮುಂತಾದ ಕಿರಾಣಿ ಸಾಮಾನುಗಳು ಮನೆಗೆ ಬಂದವು (ಹುಟ್ಟಹ. ೬೧) ; ಅನೇಕ ಕಿರಾಣಿಗಳು ಬೆಳೆಯುತ್ತಿರುವ ಪ್ರದೇಶದಲ್ಲಿ (ಮಲೆನಾ. ೨೦).

ಕಿರಾಣಿ ಅಂಗಡಿ = ದಿನಸಿ ಅಂಗಡಿ : ಮನೆಯ ಮುಂದೆಯೆ ಒಂದು ಕಿರಾಣಿ ಅಂಗಡಿ ಇಟ್ಟಿದ್ದರಂತೆ (ಚಂದ್ರತಾ. ೨೧). [← ಮರಾ. ಕಿರಾಣಾ ; ಹಿಂ. ಕಿರಾನಾ]

**ಕಿರಾಣಿಜೀನಸು** (ನಾ). ಕಿರಾಣಿ ದಿನಸಿ : ಕಿರಾಣಿ ಜೀನಸು – ಅಂದರೆ ಮಣೇರಿ ಅಥವಾ ಸ್ಟೇಶನರಿ ಸಾಮಾನುಗಳೂ (ಮುಂಬವ್ಯಾ. ೭). [ಕಿರಾಣಿ + ಜೀನಸು]

**ಕಿರಾತ** (ನಾ). ೧. ಕಾಡುಮೇಡುಗಳಲ್ಲಿ ವಾಸಮಾಡುವ ಜನ ; ಬೇಡ ; ಶಬರ : ಅಸಂಖ್ಯಾತರ್ ಕಿರಾತರ್ ನೆರೆದು ನಿಖಿಲ ಭೂಚಕ್ರಮಂ ಸೂಱೆಗೊಂಡರ್ (ಪಂರಾಮಾ. ೪-೩೫). ೨. ಒಂದು ಮೂಲಿಕೆ ; ಚಿರಾಯಿತ. 'ಕಿರಾತಕಡ್ಡಿ' ಪರಾ. ೩. ಗಿಡ್ಡ ; ಕುಳ್ಳ.

೪. ಚಿಕ್ಕ ಮೈಯುವನು; ಬಡಕಲು ಶರೀರದ ಗಿಡ್ಡಾಳು: "ಕಿಱು ಯೊಡಲವನಂ ಪ್ರಶ್ನಿಯೆಂಬುದು, ಕಿರಾತನುಂ ಎಂಬುದು" (ಹಲಾಯು. ೧೦೦–೪೫೭); ಕುಬ್ಜ ವಾಮನ ಬಧಿರ ಮೂಕ ಕಿರಾತೋನ್ಮತ್ತ ಜಡ ಜನಂಗಳುಮಂ (ಆದಿಪು. ೪–೫೪೭). [ಸಂ.]

**ಕಿರಾತಕ** (ನಾ). = ಕಿರಾತ. [ಸಂ.]

**ಕಿರಾತಕಡ್ಡಿ** (ನಾ). ಒಂದು ಮೂಲಿಕೆ; ಚಿರಾಯಿತ ಕಡ್ಡಿ: ಅಮೃತ ಬಳ್ಳಿ, ಪಿತ್ತಪಾಪಟ ... ಇವನ್ನು ಮುಕ್ಕಾಲು ತೊಲೆಯಂತೆ ಜಜ್ಜಿಹಾಕಿ (ಮನೆಮ. ೨೫). [ಕಿರಾತ + ಕಡ್ಡಿ]

**ಕಿರಾತತಿಕ್ತ** (ನಾ). = ಕಿರಾತಕಡ್ಡಿ: (ಕ). [ಸಂ.]

**ಕಿರಾತವಡೆ** (ನಾ). ಬೇಡರ ಸೈನ್ಯ; ಕಿರಾತರ ಸಮೂಹ: ಗುರುವಂ ಭೃಗುಗೆಲೆ ನೃಪರಿಂ ಕಿರಾತವಡೆ ಕಿಡುಗುಂ (ಜಟ್ಟಮ. ೭–೬೫). [ಕಿರಾತ + ಪಡೆ$_2$]

**ಕಿರಾತಸತಿ** (ನಾ). ಬೇಡರ ಹೆಂಗಸು; ಬೇಡಿತಿ; ಶಬರಿ: ಪಾಡಿದರ್ ಮದವತಿಯರ್ ಕಿರಾತಸತಿಯರ್ (ಪುಷ್ಪಪು. ೫–೯೨). [ಕಿರಾತ + ಸತಿ$_1$]

**ಕಿರಾತಿ** (ನಾ). = ಕಿರಾತಸತಿ: (ಕ). [ಸಂ. ಕಿರಾತೀ]

**ಕಿರಾತೆ** (ನಾ). = ಕಿರಾತಸತಿ: ಎನಿತ್ತನಿತ್ತಂಬುಜ ಪತ್ರನೇತ್ರೆಯಾ ಘನ ಸ್ತನಂಗಳ್ ಬಳೆಗುಂ ಕಿರಾತೆಯಾ (ಕಾವ್ಯಾವ. ೩೫೫). [ಕಿರಾತ + –ಎ$_2$]

**ಕಿರಾಯ** (ನಾ). ಬಾಡಿಗೆ; ಕೂಲಿ: (ಕ). [← ಅರ. ಹಿಂ. ಮರಾ. ಕಿರಾಯಾ]

**ಕಿರಾಯತಿ** (ನಾ). ಸೀಮೆ; ಪ್ರದೇಶ (?): ಕೊದಾನುಪುರ ಸಿಗಹಳ್ಳಿ ನಂದಿಹಳ್ಳಿ ಸುತ್ತ ಕಿರಾಯತಿಗೆಲ್ಲ ಸುದ್ದಿ ಮುಟ್ಟಿ ಮಂದಿ ಬಂತಣ್ಣ ನಡು ಕಟ್ಟಿ (ಲೋಕಗೀ. ೨೨೩). [?]

**ಕಿರಾಲುಬೋಗಿ** (ನಾ). ಒಂದು ಬಗೆಯ ಮರ: ಎರಡು ಕಿರಾಲು ಬೋಗಿಯ ಸೋಟೆಯನ್ನು ಧ್ವಜಮರ ... ನಿಂತಿವೆ (ದೇವಹಂ. ೯೨). [?]

**ಕಿರಾಲೆ** (ನಾ). (?): ಭವಭೀತಿ ವೈರಾಗ್ಯವೆಂಬ ಕಂಭಂಗಳವಯವ ಮುಳ್ಳ ಕಿರಾಲೆಯಾದಿಯೊಳಿಹ ವಿವರದಲಿ ಸಂಕಲ್ಪವೆಂಬ ತೊಂಡೆಯ ಸೋಗ ಸಪರಿ (ಭಕ್ತಿ.ಸ. III, ೨೫). [?]

**ಕಿರಿ$_1$** (ಕ್ರಿ). ಬೋಳಿಸು; ಕೂದಲನ್ನು ತೆಗೆ; ಕ್ಷೌರಮಾಡು: "ಕಿರಿ – ವಪನೇ (ಬೋಳಿಸು), ತಂತುಗ್ರಂಥೌ ಚ(ದಾರದ ಗಂಟು)" (ಶಮುಧಾ); ತಡೆಯದೆ ಮುಂ ಕಿರಿದ ಶಿರಂ ಜಡೆಗಟ್ಟಲ್ಪಾರದೆಂದು ಬೋಳಿಸಿ ಬೋದಂ ಕುಡೆ ಕೊಂಡನವಂ ತಪಮಂ ಗೆಡೆಗೊಂಡಿರೆ ದಂಡು ಬೂದಿ ಸೂರೆ ರುದ್ರಾಕ್ಷಂ (ಶಬ್ದಾನು. ೧೨೧ ಪ್ರಯೋ). 'ತಲೆಗಿರಿ' ಪರಾ. [ದೇ. ‖ ತಮಿ. ಚಿರೈ; ಮಲ. ಚಿರೆ; ತುಳು. ಕಿರೆ]

**ಕಿರಿ$_2$** (ಕ್ರಿ). ಹಲ್ಲು ಕಿಸಿ, —ತೆರೆ: ಕಿಱ್ರಿಂದು ಮುನ್ನೇಱಿದ ಕೋಡಂ ನೋಡಿ ಪಲ್ಲಂ ಕಿಱಿ[ರಿ]ದಗಿದುರವಂ ಪಕ್ಕಿ (ಸೂಕ್ತಿಸು. ೩–೧೯೫); ಪುರ್ಬಿಕ್ಕಿ ಪಲ್ಗಳಂ ಕಿಱಿ[ರಿ]ದು (ದಶಕು. ೨–೮೭); ಬಿರುಬಿರನೆ ಕಂಗಳಂ ಬಿಟ್ಟು ಪಲ್ಲಂ ಕಿರಿದು ಪುರುಗಿಸುತೆ ಮೊಗಮಂ (ಜಬಪು. ೨–೨೭); ಬಲ್ಲಿದ ಖಾನರು ಚಿಗಿದು ಬಿಟ್ವಾಕ್ಷಣ ಹಲ್ಲ ಕಿರಿದರಗಳೊಳಗೆ (ಕಂಸವಿ. ೧೪–೭೯). 'ಪಲ್ಗಿರಿ' ಪರಾ. [ದೇ. ‖ ತಮಿ. ಮಲ. ಚಿರಿ]

**ಕಿರಿ$_3$** 'ಕಿಱಿ$_2$' ನೋ.

**ಕಿರಿ$_4$** (ನಾ). ದಾರದ ಗಂಟು: "ಕಿರಿ – ವಪನೇ (ಬೋಳಿಸು), ತಂತು ಗ್ರಂಥೌ ಚ (ದಾರದಗಂಟು)" (ಶಮುಧಾ). [?]

**ಕಿರಿ$_5$** (ನಾ). ಹಂದಿ; ವರಾಹ: "ಕಿರಿ – ವಪನೇ, ತಂತು ಗ್ರಂಥಿ ವರಾಹಯೋಃ [ಪಾಠಾಂ. ಗ್ರಂಥೌ ಚ] (ಶಮುಧಾ. ಸ); ಹರಿ ಕೀಲಾದ್ರಿ ಯೋಳಿರ್ದುರುಕಿರಿರೂಪಿನ ಮೂಕದಾನವ ಪಾಂಗಿನ ಸೂಕರಂ (ಹಮ್ಮೀರ. ೪–೪೬). [ಸಂ.]

**ಕಿರಿಂಚಿಲ್ಲು** (ನಾ). ಎಮ್ಮೆಯನ್ನು ಕಟ್ಟುವ ಹಟ್ಟಿ: "ಕರಿಂಚಿಲ್ಲು ಅಥವಾ ಕಿರಿಂಚಿಲ್ಲು ಎಮ್ಮೆಯನ್ನು ಕಟ್ಟುವ ಹಟ್ಟಿ. ಕಿರಿಂಚಿಲ್ಲು ಎಂಬುದೆ ಶುದ್ಧವೆಂದು ತೋರುತ್ತದೆ" (ನಾಡೋಜ. ೩೩ ಅಡಿಟ). [?]

**ಕಿರಿಏಲಾದಿಚೂರ್ಣ** (ನಾ). ಒಂದು ಬಗೆಯ ಚೂರ್ಣ (?): ಕಿರಿ ಏಲಾದಿಚೂರ್ಣ:– ಏಲಕ್ಕಿ, ಜೀರಿಗೆ, ಯಷ್ಟಿಮಧುಕ, ಕೊತ್ತಂಬರಿ ಶುಂಠಿ, ದ್ರಾಕ್ಷೆಹಣ್ಣು, ನೆಲ್ಲಿಚಟ್ಟು ಇವಂ ಸಮಾನಂಗೊಂಡು ಚೂರ್ಣವಂ ಅಕ್ಕಿಗಚ್ಚು ಸಕ್ಕರೆಯಿಂ ಕೊಳ್ಳಲು ವಾತಜ್ವರ ಮಾಣ್ಗುಂ (ವೈದ್ಯವಿ. ೧೫). [ಕಿರಿ$_3$ (< ಕಿಱಿ$_2$) + ಏಲಾದಿಚೂರ್ಣ]

**ಕಿರಿಕಿರಿ** 'ಕಿಱಿಕಿಱಿ' ನೋ.

**ಕಿರಿಕಿರಿಪಡು** (ಕ್ರಿ). ಅಸಮಾಧಾನ ಪಡು; ನೊಂದುಕೊಳ್ಳು: ಹಬ್ಬಕ್ಕಾದರೂ ಊರಿಗೆ ಹೋಗದಿದ್ದರೆ ಅವರ ತಂದೆತಾಯಿಗಳು ಕಿರಿಕಿರಿಪಟ್ಟುಕೊಳ್ಳುತ್ತಿದ್ದರು (ರೂಪಸ. ೨೪೧). [ಕಿರಿಕಿರಿ (< ಕಿಱಿಕಿಱಿ) + ಪಡು$_1$]

**ಕಿರಿಕುಂಬಳ** (ನಾ). ೧. ಚಿಕ್ಕ ಕುಂಬಳಕಾಯಿ. ೨. ಚಿಕ್ಕಕುಂಬಳ ಕಾಯಿಯನ್ನು ಬಿಡುವ ಬಳ್ಳಿ: (ಕ). [ಕಿರಿ$_3$(< ಕಿಱಿ$_2$)+ಕುಂಬಳ]

**ಕಿರಿಕೊಂಬು** 'ಕಿರಿಗೊಂಬು' ನೋ.

**ಕಿರಿಗಂಚಿ** (ನಾ). ಧಾರೆಯ ಮಾರನೆಯ ದಿನದ ಶಾಸ್ತ್ರ; ಮುಹೂರ್ತದ ಮರುದಿನದ ಶಾಸ್ತ್ರ: ಇಲ್ಲಿಗೆ ಧಾರೆಯ ದಿನದ ಮದುವೆ ಮುಗಿಯಿತು. ಮೂರನೆಯ ದಿನ ಕಿರಿಗಂಚಿ (ನನ್ನೂರು. ೧೦೧). 'ಮರಿಗಂಚಿ' ಪರಾ. [?]

**ಕಿರಿಗಂಟೆ** (ನಾ). ಸಣ್ಣ ಗಂಟೆ; ಕಿಂಕಿಣಿ; ಗೆಜ್ಜೆ: (ಕ). 'ಕಿಱು ಗಂಟೆ' ಪರಾ. [ಕಿರಿ$_3$ (< ಕಿಱಿ$_2$) + ಗಂಟೆ$_2$]

**ಕಿರಿಗಡಲೆ** (ನಾ). ಒಂದು ಜಾತಿಯ ಕಡಲೆ; ಸಣ್ಣ ಕಡಲೆ: (ಕ). [ಕಿರಿ$_3$ (< ಕಿಱಿ$_2$) + ಕಡಲೆ]

**ಕಿರಿಗಣ್ಣು** (ನಾ). ಚಿಕ್ಕ ಕಣ್ಣು; ಸಣ್ಣ ಕಣ್ಣು: ಕಣ್ಣುಗಳು ಕಿರಿಗಣ್ಣಾಗಿ ನೋಡಲು ವಿಕಾರವಾಗಿ ಕಾಣುವುದು (ನಿಮ್ಮದ್ಯ. ೧೧೨). [ಕಿರಿ$_3$ (< ಕಿಱಿ$_2$) + ಕಣ್ಣು (< ಕಣ್)]

**ಕಿರಿಗನ್ನಿಕೆ** (ನಾ). ೧. "ಚಿಕ್ಕ ಹೆಣ್ಣು" (ಗಂಗಾಮು. ೮೫). ೨. "ಒಂದು ಬಳ್ಳಿ" (ಗಂಗಾಮು. ೮೫). [ಕಿರಿ$_3$ (< ಕಿಱಿ$_2$) + ಕನ್ನಿಕೆ$_1$]

**ಕಿರಿಗರಕೆಲೆ** (ನಾ). ಒಂದು ಬಗೆಯ ಸಸ್ಯ: (ವೈಶಿಗಿ. ೪೦–೮೦೦). [?]

**ಕಿರಿಗೂದಲು** (ನಾ). ಸಣ್ಣ ಕೂದಲು; ಗಿಡ್ಡ ಕೂದಲು: ಸಿಂಹದ ... ಮೋರೆಯ ಮೇಲೆ ಕಿರಿಗೂದಲು ಇರುವುವು (ಮುಂಬಯಿ. ೪–೨೦೬). [ಕಿರಿ$_3$ (< ಕಿಱಿ$_2$) + ಕೂದಲು (< ಕೂಂದಲ್)]

**ಕಿರಿಗೆ** 'ಕಿಱುಗೆ' ನೋ.

**ಕಿರಿಗೆಜ್ಜೆ** 'ಕಿಱುಗೆಜ್ಜೆ' ನೋ.

**ಕಿರಿಗೊಂಬು, ಕಿರಿಕೊಂಬು, ಕಿರ್ಕೊಂಬು** (ನಾ). ೧. ಸಣ್ಣ ಕೋಡು, —ಶೃಂಗ: (ಕ). ೨. ಸಣ್ಣ ಕೊಂಬೆ, —ಗೆಲ್ಲು; ಟೊಂಗೆ: (ಕ). **ಕಿರಿಕೊಂಬು**: ೨. (ಕ). **ಕಿರ್ಕೊಂಬು**: ೨. "ಕಿರಿಕೊಂಬು, ಕಿರ್ಕೊಂಬು – ಸಣ್ಣ ಟೊಂಗೆ" (ಗಂಗಾಮು. ೮೫). [ಕಿರಿ$_3$ (< ಕಿಱಿ$_2$) + ಕೊಂಬು$_2$]

**ಕಿರಿಗೊಳಿಸು** (ಕ್ರಿ). ಚಿಕ್ಕದಾಗಿ ಮಾಡು; ಸಂಕೋಚಗೊಳಿಸು; ಸಂಕ್ಷೇಪಿಸು: ಜಗದಗಲವನ್ನು ಕಿರಿಗೊಳಿಸಿ ... ನಮ್ಮನ್ನು ವಿಶ್ವ ಕುಟುಂಬಿಗಳನ್ನಾಗಿ ಮಾಡುವ ರೈಲುಗಾಡಿ ನಿಜವಾಗಿ ಇಂದಿನ ಕಾಮ ಧೇನುವಲ್ಲವೆ? (ಮುಂಗಾಪು. ೩೧). [ಕಿರಿ$_3$ (< ಕಿಱಿ$_2$) + ಕೊಳ್$_1$ + –ಇಸು$_3$]

**ಕಿರಿಗೊರಳು** (ನಾ). ಕಿರು ಧ್ವನಿ; ಸಣ್ಣ ಧ್ವನಿ: (ಕ). [ಕಿರಿ$_3$ (< ಕಿಱಿ$_2$) + ಕೊರಳು (< ಕೊರಲ್)]

**ಕಿರಿಗೋಣಿ,** ಕಿರಿಗೋಳಿ (ನಾ). ಗೋಣಿಮರದಲ್ಲಿ ಒಂದು ಬಗೆ: (ವೈಔಗಿ. ೬೬–೧೩೬೬). **ಕಿರಿಗೋಳಿ :** ಪೀಲಾಲದ ಮರ, ಕಿರಿಗೋಳಿ, ಜೀವಿ, ಪಿನಪಾಲ (ವೈಔಗಿ. ೩೬–೭೨೪). [ಕಿರ್$_3$ (< ಕಿಱ್$_2$) + ಗೋಣಿ$_1$]

**ಕಿರಿಗೋಳಿ** 'ಕಿರಿಗೋಣಿ' ನೋ.

**ಕಿರಿಚರಿಪ್ಪೆ** (ನಾ). ಒಂದು ಬಗೆಯ ಸಸ್ಯ: ಹೀರೆ, ಕಿರಿಚರಿಪ್ಪೆ (ವೈಔಗಿ. ೪೨–೮೩೮). [ಕಿರ್$_3$ (< ಕಿಱ್$_2$) + ಚರಿಪ್ಪೆ?]

**ಕಿರಿಚಳ್ಳಿ** (ನಾ). ಒಂದು ಬಗೆಯ ಸಸ್ಯ : ಸೆರ್ವಾಳಿ, ಕಿರಿಚಳ್ಳಿ (ವೈಔಗಿ. ೨೪–೪೫೪). [ಕಿರ್$_3$ (< ಕಿಱ್$_2$) + ಚಳ್ಳಿ]

**ಕಿರಿಚಾಟ,** ಕಿರುಚಾಟ (ನಾ). ಕೂಗಾಟ; ಅರಚುವಿಕೆ: ಹಾಟೀಲು, ಹಾಡಿದ ಹಾಡು, ಬಾನುಲಿದ ಕಿರಿಚಾಟ (ಅರಳು. ೪೨೬). **ಕಿರುಚಾಟ :** ನಿನ್ನ ಕಿರುಚಾಟ ನಿಲ್ಲಿಸು (ಶಾಲೆಮ. ೬೮); ಅಗ ಅವನ ಕಿರುಚಾಟ ನೋಡಬೇಕಾಗಿತ್ತು (ದೀಪದ. ೬೦). [ಕಿರಿಚು (< ಕಿಱುಚು) + ಆಟ]

**ಕಿರಿಚು** 'ಕಿಱುಚು' ನೋ.

**ಕಿರಿಚುನಗೆ** (ನಾ). ಅರಚುವ ನಗೆ; ವಿಕಟಹಾಸ: ಅವಳ ತಾರಸ್ವರದ ನಗೆ ಇತರರ ವಿಕಾರವಾದ ಕಿರಿಚುನಗೆಯಲ್ಲಿ ಲೀನವಾಯಿತು (ಪುನರು. ೧೪೫). [ಕಿರಿಚು (< ಕಿಱುಚು) + ನಗೆ]

**ಕಿರಿಜಾಲಿ** (ನಾ). ಒಂದು ಬಗೆಯ ಜಾಲಿಗಿಡ : ಕಸ್ತೂರಿಜಾಲಿ, ಕಸ್ತೂರಿ ಗೊಬ್ಬಳಿ, ಕಿರಿಜಾಲಿ (ವೈಔಗಿ. ೧–೧೩). [ಕಿರ್$_3$ (< ಕಿಱ್$_2$) + ಜಾಲಿ$_1$]

**ಕಿರಿಜಿಡ್ಡಿ** (ನಾ). ಚಿಕ್ಕಬಾಗಿಲು; ದಿಡ್ಡಿಬಾಗಿಲು: ಕೊತ್ತಲ ಒಳ ಮನೆಯ ತೊಟ್ಟಿಲ್ ಕಟ್ಟ್ಯಾರ ಸುತ್ತ ಕಿರಿಜಿಡ್ಡಿ ಬಡಿದಾರ ತಾಯಿ (ಲೋಕಗೀ. ೧೬೮). [ಕಿರ್$_3$ (< ಕಿಱ್$_2$) + ಜಿಡ್ಡಿ]

**ಕಿರಿಟೆ** (ನಾ). 'ಕಿರ್' ಎಂದು ಸದ್ದು ಮಾಡುವ ಜೀರುಂಡೆ; ಚಿಮ್ಮುಂಡೆ: ಸೂರ್ಯನು ಮುಳುಗುವ ವೇಳೆ ಕಿರಿಟೆಗಳು ಕಿರಿಗುಟ್ಟುತ್ತಿದ್ದಾಗ ಜಿಂಕೆಯ ಸವಾರಿ ಬಂತು (ಮಣಿಸ. ೯೨). [← ಮರಾ. ಕಿರೀಟ = ಒಂದು ಬಗೆಯ ನೊಣ]

**ಕಿರಿತಗ್ಗಿಗಿಡ** (ನಾ). ಒಂದು ಬಗೆಯ ಗಿಡ: ಗಂಟುಭಾರಂಗಿ, ಭಾರಂಗಿ, ಕಿರಿತಗ್ಗಿಗಿಡ (ವೈಔಗಿ. ೨೩–೪೨೦). [ಕಿರ್$_3$ (< ಕಿಱ್$_2$) + ತಗ್ಗಿ + ಗಿಡ (< ಗಿಡು)]

**ಕಿರಿತನ** (ನಾ). ಚಿಕ್ಕತನ; ಸಣ್ಣತನ; ಅಲ್ಪತನ: ತನ್ನ ಕಿರಿತನದ ಕಲ್ಪನೆ ಆನಂದನಿಗೆ ಆಯಿತು (ಮುರುಕು. ೫೩). [ಕಿರ್$_3$ (< ಕಿಱ್$_2$) + –ತನ]

**ಕಿರಿತಮ್ಮ** (ನಾ). ಸಣ್ಣ ತಮ್ಮ; ಸಹೋದರರಲ್ಲಿ ಕೊನೆಯವನು : (ಈ). [ಕಿರ್$_3$ (< ಕಿಱ್$_2$) + ತಮ್ಮ]

**ಕಿರಿತುರಚಿ** (ನಾ). ಒಂದು ಬಗೆಯ ಸಸ್ಯ; ಸಣ್ಣ ತುರುಚಿ: ಸಣ್ಣ ತುರಚಿ, ಕಿರಿತುರಚಿ, ಕಿರಿಬೆರಳು (ವೈಔಗಿ. ೭೫–೧೫೩೧). [ಕಿರ್$_3$ (< ಕಿಱ್$_2$) + ತುರಚಿ (< ತುಱುಚೆ)]

**ಕಿರಿತೂತು** (ನಾ). ಚಾಡಿಮಾತು (?): ವಾಮನರಾಯರ ಕಿರಿತೂತಿನಿಂದ ನರಸಿಂಗಭಟ್ಟ ಹೆದರಿ ದೂರವಾದ (ಮರಳಿ. ೬೬). [?]

**ಕಿರಿದಾರಿ** (ನಾ). ಸಣ್ಣದಾರಿ; ಕಾಲುದಾರಿ; ಚಿಕ್ಕಹಾದಿ : (ಈ). [ಕಿರ್$_3$ (< ಕಿಱ್$_2$) + ದಾರಿ$_1$]

**ಕಿರಿದು** 'ಕಿಱುದು' ನೋ.

**ಕಿರಿನಳ್ಳು** (ನಾ). 'ಕಿರ್' ಎಂದು ನರಳುವಿಕೆ; ಸಣ್ಣ ನರಳಾಟ: ಸಾಯೋತನಕ ಕಿರಿನಳ್ಳು ನರಳಿಸಿ ಬಿಟ್ಟೇನು (ಬೆಳುವ. ೧೪೭). [ಕಿರ್$_3$ (< ಕಿಱ್$_2$) + ನಳ್ಳು$_0$ (< ನರಳು$_2$)]

**ಕಿರಿನಾಲಗೆ** (ನಾ). ೧. ಗಂಟಲೊಳಗೆ, ನಾಲಗೆಯ ಮೇಲ್ಗಡೆ ಜೋತಾಡುವ ಸಣ್ಣ ಮಾಂಸಖಂಡ; ಸಣ್ಣನಾಲಗೆ : (ಈ). [ಕಿರ್$_3$ (< ಕಿಱ್$_2$) + ನಾಲಗೆ]

**ಕಿರಿನುಡಿ$_1$** (ಕ್ರಿ). ಕೀಳು ಮಾತಾಡು; ತುಚ್ಛವಾದ ಮಾತನ್ನು ನುಡಿ : (ಈ). [ಕಿರ್$_3$ (< ಕಿಱ್$_2$) + ನುಡಿ$_1$]

**ಕಿರಿನುಡಿ$_2$** (ನಾ). ೧. ಚಿಕ್ಕ ಮಾತು; ದೀರ್ಘವಲ್ಲದ ಮಾತು: ದಾಸರ ಕಿರಿನುಡಿಗಳು ಕೆಲವು ಸಲ ಕಿಡಿಯಂತೆ ಸಿಡಿಯುತ್ತವೆ (ತವಸಿ. ೧೬೦). ೨. ಸಣ್ಣ ಧ್ವನಿಯ ಮಾತು : (ಈ). ೩. ಅಲ್ಪವಾದ ಮಾತು ; ಸಣ್ಣಮಾತು ; ಕೀಳುನುಡಿ. 'ಕಿರುನುಡಿ' ಪರಾ. [ಕಿರ್$_3$ (< ಕಿಱ್$_2$) + ನುಡಿ$_2$]

**ಕಿರಿನೋಟ** 'ಕಿಱುನೋಟ' ನೋ.

**ಕಿರಿಪಂಚೆ** (ನಾ). ಚಿಕ್ಕಪಂಚೆ; ಸಣ್ಣಪಂಚೆ : ಈತ ತಲೆಗೆ ಸುತ್ತಿದ ಕಿರಿಪಂಚೆಯ ಸಹಿತವಾಗಿ ನೀರಿಗೆ ಇಳಿಯುತ್ತಾನೆ (ಸ್ವಪ್ನಹೊ. ೧೩). [ಕಿರ್$_3$ (< ಕಿಱ್$_2$) + ಪಂಚೆ]

**ಕಿರಿಪಾರಿ** (ನಾ). ಸಣ್ಣಪಾರಿ : ಗಾಡಿಯ ಕಿರಿಪಾರಿ ಮುರಿದಿದೆ (ರೂಢಿ). [ಕಿರ್$_3$ (< ಕಿಱ್$_2$) + ಪಾರಿ$_1$]

**ಕಿರಿಪಿಲ್ಲಿ** 'ಕಿಱುಪಿಲ್ಲಿ' ನೋ.

**ಕಿರಿಪಿಲ್ಲೆ** 'ಕಿಱುಪಿಲ್ಲಿ' ನೋ.

**ಕಿರಿಪಂಚಮೂಲ** (ನಾ). ಒಂದು ಔಷಧಿ ದ್ರವ್ಯ: ಆಡುಸೋಗೆ ಬೇರು, ಕಹಿಪಡವಲ, ಭದ್ರಮುಸ್ತೆ, ಕಿರಿಪಂಚಮೂಲ, ಅಳಲೆಕಾಯಿ . . . ತೆಗೆದುಕೊಳ್ಳೆ ಹಳೆಯ ಜ್ವರ ಮಾಣ್ಗುಂ (ಸಕವೈ. ೧೨೬). [ಕಿರ್$_3$ (< ಕಿಱ್$_2$) + ಪಂಚಮೂಲ]

**ಕಿರಿಪಡಲ** (ನಾ). ಒಂದು ಬಗೆಯ ಸಸ್ಯ; ಚಿಕ್ಕಪಡಲ : ಕಾಕಮಂಚಿ, ಮೊಳಲುಬದನೆ, ಕಿರೀಪಡಲ, ಪಡಲ (ನಮ್ಮಸು. ೨೩೬). [ಕಿರ್$_3$ (< ಕಿಱ್$_2$) + ಪಡಲ$_1$]

**ಕಿರಿಬನ್ನಿ** (ನಾ). ಒಂದು ಬಗೆಯ ಬನ್ನಿಮರ: "ಶಮೀರಃ, ಅಲ್ಪಾ ಶಮೀ – ೨ ಕಿರಿಬನ್ನೀಮರದ ಹೆಸರು" (ಸಿದ್ಧಾಂತಿ. ೧೧೮). [ಕಿರ್$_3$ (< ಕಿಱ್$_2$) + ಬನ್ನಿ$_1$]

**ಕಿರಿಬಿದಿರು** (ನಾ). ಬಿದಿರಿನಲ್ಲಿ ಒಂದು ಬಗೆ : ಗಂಡುಬಿದಿರು, ಕಿರಿಬಿದಿರು (ವೈಔಗಿ. ೨೮–೫೬೬). 'ಹೆಬ್ಬಿದಿರು' ಪರಾ. [ಕಿರ್$_3$ (< ಕಿಱ್$_2$) + ಬಿದಿರು (< ಬಿದಿರ್$_2$)]

**ಕಿರಿಬೆಟ್ಟು** 'ಕಿರಿಬೊಟ್ಟು' ನೋ.

**ಕಿರಿಬೆರಳು$_1$** (ನಾ). ಸಣ್ಣ ಬೆರಳು ; ಕನಿಷ್ಠಿಕೆ : ಕಿರಿಬೆರಳ ಪಕ್ಕದ್ದೇ ಉಂಗುರ ಬೆರಳು (ರೂಢಿ). [ಕಿರ್$_3$ (< ಕಿಱ್$_2$) + ಬೆರಳು (< ಬೆರಲ್)]

**ಕಿರಿಬೆರಳು$_2$** (ನಾ). ಒಂದು ಬಗೆಯ ಸಸ್ಯ : ಸಣ್ಣತುರಚಿ, ಕಿರಿತುರಚಿ, ಕಿರಿಬೆರಳು (ವೈಔಗಿ. ೭೫–೧೫೩೧). [?]

**ಕಿರಿಬೊಟ್ಟು,** ಕಿರಿಬೆಟ್ಟು (ನಾ). ೧. = ಕಿರಿಬೆರಳು. ೨. ಹಣೆಯ ಮೇಲೆ ಧರಿಸುವ ಚಿಕ್ಕ ವರ್ತುಲಾಕಾರದ ಅಲಂಕಾರ ಬಟ್ಟು : (ಈ). **ಕಿರಿಬೆಟ್ಟು :** ೧. ಕಿರಿಬೆಟ್ಟಂ ಬಿಟ್ಟು ಮಿಗಿಲಾದ ನಾಲ್ಕು ಬೆಟ್ಟುಗಳ ಮುಡಿಶಿ (ಸೌಗಂಧಿ. ೨೬೬–೬). [ಕಿರ್$_3$ (< ಕಿಱ್$_2$) + ಬೊಟ್ಟು$_1$]

**ಕಿರಿಮೆ** (ನಾ). ಕಿರಿತನ ; ಸಣ್ಣತನ: ಕಲೆಯ ಹಿರಿಮೆ ಇಲ್ಲವೆ ಕಿರಿಮೆ ಅದು ಹೇಳುವ ವಿಷಯವನ್ನೂ ಆ ಹೇಳುವಿಕೆಯಲ್ಲಿ ಅದು ಸಾಧಿಸಿರುವ ಯಶಸ್ಸನ್ನೂ ಹೊಂದಿದೆ (ಜಾನಗೀ. ೨). [ಕಿರ್$_3$ (< ಕಿಱ್$_2$) + – ಮೆ$_1$]

**ಕಿರಿಯಗುರು** 'ಕಿಱಿಯಗುರು' ನೋ.

**ಕಿರಿಯನೆಲ್ಲಿ** (ನಾ). ಒಂದು ಬಗೆಯ ನೆಲ್ಲಿ ಗಿಡ; ಕಿರುನೆಲ್ಲಿ ಗಿಡ : (ಈ). [ಕಿರ್$_3$ (< ಕಿಱ್$_2$) + ನೆಲ್ಲಿ]

**ಕಿರಿಯಮ್ಮ** 'ಕಿಱಿಯಮ್ಮ' ನೋ.

**ಕಿರಿಯಯ್ಯ** 'ಕಿಱಿಯಯ್ಯ' ನೋ.

**ಕಿರಿಯಾತು**, ಚಿರಾಯತ, ಚಿರಾಯಿತ, ಚಿರ್ಯಾತ (ನಾ). ನೀಲಿ ಹೂ ಬಿಡುವ ಒಂದು ಮೂಲಿಕೆ; ಕಿರಾತಕಡ್ಡಿ: (ಕ). **ಚಿರಾಯತ**: ವನತಿಕ್ತಕಾ (ಚಿರಾಯತ) . . . ಪಿತ್ತನಾಶಕ (ಅಷ್ಟಾಂಗ. ೧೩೪-೨೬); "ಬೆಟ್ಟಗುಡ್ಡಗಳಲ್ಲಿ ಬೆಳೆಯುವ, ನೀಲಿ ಹೂವು ಬಿಡುವ, ಒಂದು ಸಸ್ಯ ಜಾತಿ; ಚಿರಾಯತ; ಕಿರಿಯಾತು ಗಿಡ" (Gentian. ಇಂಕನಿ). **ಚಿರಾಯಿತ**: ಚಿರಾಯಿತ, ನೆಲಬೇವು . . . ಮೊಲೆಹಾಲಿನಲ್ಲಿ ಪ್ರತ್ಯೇಕವಾಗಿ ತೇದು (ಸಕವ್ಯ. ೮೫); ಚಿರಾಯಿತದ ಪುಡಿ ೬ ತೊಲ (ಗ್ರಾಮೂಕ. ೧೪೨). **ಚಿರ್ಯಾತ**: (ಕ)

[← ಮರಾ. ಕಿರಾಈತ. < ಸಂ. ಕಿರಾತ]

**ಕಿರಿಯಿಸು**, ಕಿರಿಸು$_1$ (ಕ್ರಿ). ಕ್ಷೌರ ಮಾಡಿಸು; ಬೋಳಿಸು: ಅಲ್ಲಿ ಬಱಿಯಂ ತಲೆಯಂ ಕಿರಿಯಿಸಿ ದಿವಸಮನಲಸದೆ ಬೆಸಗೊಳ್ವನಂತು ಗಾವಿಲನಕ್ಕುಂ (ಕವಿರಾ. ೩-೧೪೪). **ಕಿರಿಸು$_1$**: ತಲೆಯಂ ಕಿರಿಸಿ ಕರಿಯ ಕೋವಣಮನುಡಿಸಿ (ವಡ್ಡಾರಾ. ೧೬೦-೧೧). [ಕಿರಿ$_1$ + -ಇಸು$_3$]

**ಕಿರಿವಕ್ತ್ರ** (ನಾ). ೧. ಹಂದಿಯ ಮುಖ; ವರಾಹಮುಖ. ೨. ವರಾಹಮುಖವುಳ್ಳವನು: ಕಿರಿವಕ್ತ್ರನುಗ್ರ ಶಿಖಿವಕ್ತ್ರಂ . . . ರುರುವಕ್ತ್ರನೆಂಬರೆಸೆದರ್ವಿಶ್ವೇಶ್ವರಾಸ್ಥಾನದೊಳ್ (ರಾಜಶೇ. ೧೪-೧೫೪).

[ಕಿರಿ$_5$ + ವಕ್ತ್ರ]

**ಕಿರಿವಾತು** 'ಕಿಱಿಮಾತು' ನೋ.

**ಕಿರಿವಿ** 'ಗಿರವಿ' ನೋ.

**ಕಿರಿಸೀಸ** (ನಾ). [ಛಂದ] ಸೀಸಪದ್ಯದಲ್ಲಿ ಒಂದು ಪ್ರಕಾರ. ☞ ಸೀಸಪದ್ಯವನ್ನು ಸರಿಯಾಗಿ ಎರಡು ಭಾಗಮಾಡಿ ಒಂದೊಂದು ಭಾಗವನ್ನು ಒಂದೊಂದು ನುಡಿಯನ್ನಾಗಿ ಮಾಡಿಕೊಂಡ ಪದ್ಯಪ್ರಕಾರ: ಕನ್ನಡಕ್ಕೆ ವಿಶಿಷ್ಟವಾದ ಕಿರಿಸೀಸದ ಎರಡು ಪದ್ಯಗಳಾಗಿ ಬಿಡಿಸಿ ಇಡಬಹುದು (ಛಂದೋವಿ. ೨೦೩).

[ಕಿರಿ$_3$ (< ಕಿಱಿ$_2$) + ಸೀಸ$_1$]

**ಕಿರಿಸು$_1$** 'ಕಿರಿಯಿಸು' ನೋ.

**ಕಿರಿಸು$_2$** 'ಕಿರಿಸೆ' ನೋ.

**ಕಿರಿಸೆ**, ಕಿರಸೆ, ಕಿರಿಸು$_2$ (ನಾ). ಒಂದು ಬಗೆಯ ಆಯುಧ; ಚಿಕ್ಕ ಕತ್ತಿ: ಬಿಲ್ಲಂಬು ಜವದಾಡೆ ಕಿರಿಸೆಗಳಾ ಗೃಹದಲ್ಲಿದ್ದವುರಿಮಾರಿಯಂತೆ (ಭರಚ. ೨೦-೧೩೨). ಖಂಡೆಯ ಕಿರಿಸೆ ಕಠಾರಿ (ಭರಚ. ೬೩-೧೦). **ಕಿರಸೆ**: ಕಿರಸೆ . . . ಜವದಾಡೆಗಳೆಂಬ ಬತ್ತೀಸಾಯುಧಂಗಳಿಂ (ವಿವೇಕ. ೨೬೨). **ಕಿರಿಸು$_2$**: ವಿರಾಜಿಪ ಕಿರಿಸನು ಪಿಡಿದ ಭೂಭುಜನು ಕಳಿಂಗ (ನಾಗಕು. ೧೨-೬೫). [← ಹಿಂ. ಕಿರಚ, ಕಿಚ್ರ್ < ಸಂ. ಕೃತಿ]

**ಕಿರಿಸ್ತಾನ**, ಕಿರಸ್ತಾನ (ನಾ). ೧. ಕ್ರೈಸ್ತ ಧರ್ಮಕ್ಕೆ ಸೇರಿದವನು; ಕ್ರಿಸ್ತ ಮತೀಯ: ಅಲ್ಲಿಗೆ ಹೋದರೆ ನಮ್ಮ ಮಕ್ಕಳೆಲ್ಲ ಕಿರಸ್ತಾನರಾಗೋದೇ ನಿಜ (ಮಾರ್ಗದ. ೨೫); ನೆರ್ಸಿ ಏನು ಕಿರಸ್ತಾನರವಳು ಕೆಟ್ಟು ಹೋದಳೆ (ಹೊಸಕ್ಷಿ. ೫೧). (ಗು). ೨. ಕ್ರೈಸ್ತ ಮತಕ್ಕೆ ಸೇರಿದ; ಕ್ರೈಸ್ತ ಜಾತಿಯ: ಕಿರಿಸ್ತಾನರ ಹುಡುಗಿಯ ಹಾಗಿದ್ದಾಳೆ (ಎಳಕ. ೧). **ಕಿರಸ್ತಾನ**: ೨. ನನಗೊಬ್ಬ ಕಿರಸ್ತಾನ ಗೆಳೆಯರಿದ್ದಾರೆ (ಮುಂಗಾಪು. ೭೨).

[← ಹಿಂ. ಕ್ರಿಸ್ತಾನ್; ಮರಾ. ಕಿರಿಸ್ತಾವ್ < ಇಂ. Christian]

**ಕಿರಿಹಾಲೆ** (ನಾ). ಹಾಲೆಯ ಗಿಡದಲ್ಲಿ ಒಂದು ಬಗೆ: "ಜೀವಂತೀ, ಜೀವಿನೀ, ಜೀವಾ, ಜೀವನೀಯಾ, ಮಧುಸ್ರವಾ - ೫ ಕಿರಿಹಾಲೆಸೊಪ್ಪು" (ಸಿದ್ಧಾಂತಿ. ೧೨೬). [ಕಿರಿ$_3$ (< ಕಿಱಿ$_2$) + ಹಾಲೆ (< ಪಾಲೆ$_2$)]

**ಕಿರಿಹುಲ್ಲು** (ನಾ). ಹುಲ್ಲಿನಲ್ಲಿ ಒಂದು ಬಗೆ; ಚಿಕ್ಕಹುಲ್ಲು: (ಕ).

[ಕಿರಿ$_3$ (< ಕಿಱಿ$_2$) + ಹುಲ್ಲು (< ಪುಲ್)]

**ಕಿರಿಹೊಟ್ಟೆ** (ನಾ). ಹೊಕ್ಕುಳ ಕೆಳಗಿನ ಹೊಟ್ಟೆ; ಕಿಬ್ಬೊಟ್ಟೆ: "ವಸ್ತಿಃ, ನಾಭೇರಧಃ - ಹೊಕ್ಕಳು ಕೆಳಗಣ ಕಿರಿಹೊಟ್ಟೆ; ಕಿಬ್ಬೊಟ್ಟೆ (ಸಿದ್ಧಾಂತಿ. ೧೬೫). [ಕಿರಿ$_3$ (< ಕಿಱಿ$_2$) + ಹೊಟ್ಟೆ$_1$ (< ಪೊಟ್ಟೆ)]

**ಕಿರಿಹೊನ್ನೆ** (ನಾ). ಒಂದು ಬಗೆಯ ಸಸ್ಯ: ಕಲ್‌ಹೊನ್ನೆ, ಕಿರಿಹೊನ್ನೆ, ಕಲ್‌ಪೊನ್ನೆ, ಹರಳುಹೊನ್ನೆ, ಬೊಬ್ಬಿ, ಇರ್ಕೆ (ವೈಔಗಿ. ೧೬-೨೮೬).

[ಕಿರಿ$_3$ (< ಕಿಱಿ$_2$) + ಹೊನ್ನೆ (< ಪೊನ್ನೆ)]

**ಕಿರೀಟ** (ನಾ). ೧. ತಲೆಯ ಮೇಲೆ ಧರಿಸುವ ರತ್ನಖಚಿತವಾದ ಟೊಪ್ಪಿಗೆ; ಮಕುಟ; ಮುಡಿ: "ಉಷ್ಣೀಷಂ ಕಿರೀಟಮಾ ಕೋಟೀರಮೆಂದೆನಲು ಮಕುಟಕ್ಕೆ ನಾಮಮಕ್ಕುಂ" (ಮಂಗರಾ. ೯೮-೧೯); ಅಮರಕಿರೀಟಮಂಡಿತಚರಣ ಚಾರುಚರಿತ್ರ ನಿರುಪಮಭಾಳಶಿಖಿನೇತ್ರ (ಕುವ್ಯಾಅ. ೧-೨). ೨. (ಆಲಂ) ದೊಡ್ಡಸ್ತಿಕೆ: ತನ್ನ ಗಂಡ ತುಂಬಾ ಓದಿದರೆ ಅವಳಿಗೆ ಹಳ್ಳಿಯಲ್ಲಿ ಕಿರೀಟ ಬಂದಂತೆ (ದೂರಸ. ೭೪). [ಸಂ.]

**ಕಿರೀಟಧಾರಣೆ** (ನಾ). ಕಿರೀಟವನ್ನು ಧರಿಸುವುದು; ಪಟ್ಟಾಭಿಷೇಕ: ಈ ದೇವಾಲಯದ ರಂಗಮಂಟಪವನ್ನು ಕೃಷ್ಣದೇವರಾಯನು ತನ್ನ ಕಿರೀಟಧಾರಣೆಯ ಮಹೋತ್ಸವದ ಜ್ಞಾಪಕಾರ್ಥವಾಗಿ . . . ಕಟ್ಟಿಸಿದನು (ಭಾರದ. ೫೦೭). [ಕಿರೀಟ + ಧಾರಣೆ]

**ಕಿರೀಟಯೋಗ** (ನಾ). ಅರಸನಾಗುವ ಯೋಗ: ನಮ್ಮ ಸಂತಾನಕ್ಕೆ ಇರ್ಪುದೆಂದರ್ ಕುಂತಳ ಕಿರೀಟಯೋಗಂ (ಚಂದ್ರಸ. ೧೩).

[ಕಿರೀಟ + ಯೋಗ]

**ಕಿರೀಟಿ** (ನಾ). ೧. ಕಿರೀಟವನ್ನು ಧರಿಸಿದವನು. ೨. ಇಂದ್ರ. ೩. ಅರ್ಜುನ: ನಿನ್ನಂ ಕೊಂದ ಕಿರೀಟಿಯುಮೆನ್ನನುಜನನಿಕ್ಕಿಕೊಂದ ಭೀಮನುಮೊಳಂ (ಗದಾಯು. ೫-೨೫); ಕಿರೀಟಿಯನಳವಿನಲಿ ಕಂಡಿದಿರು ಬಂದನು ನಗುತ ಶತಮನ್ಯು (ಕುವ್ಯಾಅ. ೭-೮೩). ೪. ಒಂದು ಬಗೆಯ ಪಕ್ಷಿ; ಹಂಗನಹಕ್ಕಿ: "ಮೌಕುಳಿ [ಪಾಠಾಂ. ವ್ಯಾಕುಳಿ] ಕಿರೀಟಿ ಚಾಷಂ ಕೊಟ್ಟುಮಕ್ಕು" (ಮಂಗರಾ, ೫೧-೪); "ಚಾಷಃ, ಕಿಕೀದಿವಿಃ - ೨ ಹಂಗನ ಹಕ್ಕೀ ಹೆಸರು; ಶಕುನದ ಹಕ್ಕಿ; ಆಂಧ್ರದಲ್ಲಿ ಪಾಲಪಕ್ಷಿ" (ಸಿದ್ಧಾಂತಿ. ೧೩೮). [< ಸಂ. ಕಿರೀಟಿನ್]

**ಕಿರೀದಡ** (ನಾ). (?) : ಆ ವೀರಾಗ್ರಗಣ್ಯನು ಮೇರುಪರ್ವತದ ಹಾಗೆ ನಿಶ್ಚಲನಾಗಿ ಕಿರೀಧಡದ ಹಾಗೆ ಮರ್ಯಾದೆಯಿಂದ ನಿಂತು (ಕೃವಾಭೀ. ೧೦೦); ಆಗ ಈ ಅರ್ಜುನನನ್ನು ಕಿರೀದಡದ ಹಾಗೆ ತಡೆಯುವುದಕ್ಕೋಸ್ಕರ ಸಮರ್ಥನಾದ ವೀರಶ್ರೇಷ್ಠನುಂಟೆ (ಕೃವಾಕ. ೧೫೭). [?]

**ಕಿರೀಹುಳಿಪ** (ನಾ). ಒಂದು ಬಗೆಯ ಸಸ್ಯ: ಕಿರೀಹುಳಿಪ, ಹುಳಿ, ಮುದ್ದಿನಕೋಡುಸೊಪ್ಪು, ಸಣ್ಣಗೂಗೆ (ವೈಔಗಿ. ೮-೧೨೬). [?]

**ಕಿರು** 'ಕಿಱು$_2$' ನೋ.

**ಕಿರುಂಡೆಗ** (ನಾ). ಗೋಪ್ಯವಾಗಿ ಹಡೆದ ಮಗ (?) : ಎಮ್ಮ ಸೆಟ್ಟಿತಿ ಜಯಾವತಿ ಬೆಸಲೆಯಾದಳ್ ಕಿರುಂಡೆಗನಂ ಪೆತ್ತಳಾರುಮನಱಿಯಲೀಯದೆ ನೆಲಮನೆಯೊಳಡಂಗಿರ್ಪೊಳ್ (ವಡ್ಡಾರಾ. ೪೪-೧೨). [?]

**ಕಿರುಕಣ್** 'ಕಿರುಗಣ್ಣು' ನೋ.

**ಕಿರುಕರಂಜಿ** (ನಾ). ಒಂದು ಬಗೆಯ ಸಸ್ಯದ ಹೆಸರು: ಬೆಳುಗಾರ ಕರ್ಪೂರ ಹಿಪ್ಪಲಿರಸ ಇವಂ ಸಮಾನಂಗೊಂಡು ಕಿರುಕರಂಜಿಯ ಹಾಲಲ್ಲಿ ಉಂಡೆಯ ಮಾಡಿ . . . ತೇದು ಲೇಪಂ ಮಾಡುವುದು (ವಿವೈವಿ. ೧೫೦).

[ಕಿರು (< ಕಿಱು$_2$) + ಕರಂಜಿ (< ಕರಂಜ$_1$)]

**ಕಿರುಕಸಾಲೆ** 'ಕಿಱುಕುಸಾಲೆ' ನೋ.

**ಕಿರುಕಿತ್ತಳೆ** (ನಾ). ಕಿತ್ತಳೆಯಲ್ಲಿ ಒಂದು ಬಗೆ: ಕಿತ್ತಳೆ, ಕಿರುಕಿತ್ತಳೆ . . . ಸಾರ್ವರ್ತುಕಮಾದ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೧೧). [ಕಿರು (< ಕಿಱು$_2$) + ಕಿತ್ತಳೆ (< ಕಿತ್ತೀಳೆ)]

**ಕಿರುಕುಣಿ** 'ಕಿಱುಗುಣಿ' ನೋ.

**ಕಿರುಕುಸಾಲೆ** 'ಕಿಱುಕುಸಾಲೆ' ನೋ.

**ಕಿರುಕುಳ**$_1$ 'ಕಿಱುಕುಳ$_1$' ನೋ.

**ಕಿರುಕುಳ**$_2$ 'ಕಿಱುಕುಳ$_2$' ನೋ.

**ಕಿರುಕುಳಗುಟ್ಟಿಸು** (ಕ್ರಿ). ತೊಂದರೆಪಡಿಸು; ಕಾಡು; ಪೀಡಿಸು: ಹುಟ್ಟಿದಂದಿನಿಂದ ನೀನು ಅವರನ್ನು ಕಿರುಕುಳಗುಟ್ಟಿಸುತ್ತಿದ್ದರೂ ಅವರು . . . ನಿನ್ನ ಮೇಲೆ ಕೋಪಗೊಳ್ಳುತ್ತಿಲ್ಲ (ವಚಭಾ. ೨೫೪); ತಾನು ಅವನನ್ನು ಅಷ್ಟು ಕಿರುಕುಳಗುಟ್ಟಿಸಿದ್ದಕ್ಕೆ ಕಾರಣವನ್ನೂ ತಿಳಿಸಿದಳು (ಬಂಕಿಮ. ೧೨೩). [ಕಿರುಕುಳಗುಟ್ಟು + -ಇಸು$_3$]

**ಕಿರುಕುಳಗುಟ್ಟು** (ಕ್ರಿ). ತೊಂದರೆಪಡು; ಕಷ್ಟಕ್ಕೆ ಒಳಗಾಗು. 'ಕಿರುಕುಳಗುಟ್ಟಿಸು' ಪರಾ.

[ಕಿರುಕುಳ$_2$ (< ಕಿಱುಕುಳ$_2$) + ಕುಟ್ಟು$_1$]

**ಕಿರುಕೊಳ** 'ಕಿಱುಕುಳ$_2$' ನೋ.

**ಕಿರುಕೋಣೆ** 'ಕಿರುಗೋಣೆ' ನೋ.

**ಕಿರುಗಡಸಿಗೆ** 'ಕಿಱುಗಡಸಿಗೆ' ನೋ.

**ಕಿರುಗತ್ತಲೆ** (ನಾ). ನಸುಗತ್ತಲೆ; ಸ್ವಲ್ಪ ಕತ್ತಲೆ: "ಅವತಮಸಂ – ೧ ಕ್ಷೀಣೇಧ್ವಾಂತೇ – ಕ್ಷೀಣವಾದ ಕತ್ತಲೆ ಹೆಸರು. ಅಂದರೆ – ಕಿರುಗತ್ತಲೆ" (ಸಿದ್ಧಾಂತಿ. ೬೪). [ಕಿರು (< ಕಿಱು$_2$) + ಕತ್ತಲೆ (< ಕಱ್ತಲೆ)]

**ಕಿರುಗತ್ತಿ** 'ಕಿಱುಗತ್ತಿ' ನೋ.

**ಕಿರುಗಬ್ಬ** (ನಾ). ಚಿಕ್ಕ ಕಾವ್ಯ: ಶ್ಲೋಕದೊಳಗಡಕವಾದ ಕಿರುಗಬ್ಬವು (ನಾಡೋಜ. ೩೪೨). [ಕಿರು (< ಕಿಱು$_2$) + ಕಬ್ಬ$_1$]

**ಕಿರುಗಳ್ಳಂಗಡಲೆ** 'ಕಿಱುಕಳ್ಳಂಗಡಲೆ' ನೋ.

**ಕಿರುಗಾಣಿಕೆ** (ನಾ). ಚಿಕ್ಕಕಾಣಿಕೆ: ಬಡವನ ಈ ಕಿರುಗಾಣಿಕೆಯನ್ನು ತಾವು ದಯವಿಟ್ಟು ಒಪ್ಪಿಸಿಕೊಳ್ಳಬೇಕು (ರೂಢಿ).

[ಕಿರು (< ಕಿಱು$_2$) + ಕಾಣಿಕೆ (< ಕಾಣ್ಕೆ)]

**ಕಿರುಗಾಳಿ** (ನಾ). ಸಣ್ಣಗಾಳಿ; ಮೆಲ್ಲಗೆ ಬೀಸುವಗಾಳಿ: ಮೆಯ್ಯಾಪ್ಯಾಯನಂಬಡಿಪ ಕಿರುಗಾಳಿ ಸುಳಿವುದುಂ (ಸಂಸಪ. ೨೮–೧೨೮).

[ಕಿರು (< ಕಿಱು$_2$) + ಗಾಳಿ$_1$]

**ಕಿರುಗಿಡ** (ನಾ). ಚಿಕ್ಕಗಿಡ; ಸಣ್ಣಗಿಡ: ಇನಿತು ಕಿರುಗಿಡದೊಳಿನಿತು ಹಿರಿಹೂವು (ಅನಿಕೇ. ೨೩–೧). [ಕಿರು (< ಕಿಱು$_2$) + ಗಿಡ (< ಗಿಡು)]

**ಕಿರುಗುಟ್ಟಾಟ** (ನಾ). ಕಿರುಚಾಟ: ನಮ್ಮ ಸುತ್ತಲಿರುವ ವಿಶ್ವದ ಕಿರುಗುಟ್ಟಾಟ ಗುಂಯಿಗುಟ್ಟಾಟಗಳನ್ನು ಕೇಳಬಹುದು (ಆಕಾಶ. ೮).

[ಕಿರುಗುಟ್ಟು + ಆಟ]

**ಕಿರುಗುಟ್ಟಿಸು** (ನಾ). ಕಿರಿಚುವಂತೆ ಮಾಡು; ಗೋಳಾಡಿಸು: ಸುಮ್ಮನೆ ಕಾಲತಳ್ಳಿ ಆ ರಾಮಣ್ಣನ ಕಿರುಗುಟ್ಟಿಸಬಹುದು (ರಿಂಟಿರ. ೧೮).

[ಕಿರುಗುಟ್ಟು + -ಇಸು$_3$]

**ಕಿರುಗುಟ್ಟು**, ಕಿರ್ಗುಟ್ಟು (ಕ್ರಿ). ೧. ಕಿರುಚು; ಚೀರು; ಗೋಳಾಡು: ಆ ನೋವು ತಡೆಯಲಾರದೇ ಕರಡಿ ಕಿರುಗುಟ್ಟಿ ಹೋಯಿತು (ಪಂಚಾಮ್ಮ. ೩); ಗುಲಾಮರು ಕಿರುಗುಟ್ಟಿಹೋದರು (ಪೈಗಂಬ. ೧೫೨). ೨. (ಬಾಗಿಲು ಮೊದಲಾದುವುಗಳಂತೆ) ಕಿರ್ ಎಂದು ಶಬ್ದಮಾಡು. **ಕಿರ್ಗುಟ್ಟು**: ೧. ಕಿರ್ಗುಟ್ಟುತೆ ಮುಂದಟ್ಟಿ ಪೆಡಂಮುಟ್ಟುತೆ ಸೂಕರನಡರ್ದು ಸಾರ್ದುದು ಮೆಳೆಯಂ (ಗಿರಿಕ. ೧–೧೨೨).

[ಕಿರು (< ಕಿಱು$_2$) + ಕುಟ್ಟು$_1$]

**ಕಿರುಗುಡಿ** (ನಾ). ಗೋಡೆಯ ಸಣ್ಣಗೂಡು, —ಮಾಡು: ಇಲ್ಲಿನ ಶೈಲಿಯ ಬೆಳವಣಿಗೆ ಎಂದರೆ. . . ಲಲಿತವಾದ ಕಿರುಗುಡಿ Niche)ಗಳಲ್ಲೂ ತುಂಬಿದೆ (ಬಾಲಪ್ರ. III, ೧೭೨೧). [ಕಿರು (< ಕಿಱು$_2$) + ಗುಡಿ$_1$]

**ಕಿರುಗುಡು** (ಕ್ರಿ). 'ಕಿರ್' ಎಂದು ಶಬ್ದಮಾಡು: ಗೊಬ್ಬರದ ಭಾರದಿಂದ ಅವರ ಚಕ್ರಗಳು ಕಿರುಗುಡುತ್ತಿದ್ದುವು (ಪುನರು. ೨೭೬).

[ಕಿರು (< ಕಿಱು$_3$) + ಕುಡು$_1$ (< ಕೊಡು)]

**ಕಿರುಗುಣಿ**$_1$ 'ಕಿರಗಣಿ' ನೋ.

**ಕಿರುಗುಣಿ**$_2$ 'ಕಿಱುಗುಣಿ' ನೋ.

**ಕಿರುಗುಡ್ಡ** (ನಾ). ಚಿಕ್ಕ ಗುಡ್ಡ: ಬೈಲನ್ನು ದಾಟಿ ಕಿರುಗುಡ್ಡವನ್ನೇರಿ ಆ ಬದಿಗೆ ಇಳಿದು ಹೋದುದನ್ನು ಕರಿಯನು ನೋಡುತ್ತಿದ್ದನು (ಮುಂಗಾಮು. ೧೨೧). [ಕಿರು (< ಕಿಱು$_2$) + ಗುಡ್ಡ$_2$]

**ಕಿರುಗುಪ್ಪಸ** (ನಾ). ಚಿಕ್ಕಕುಪ್ಪಸ; ಸಣ್ಣ ರವಿಕೆ: ಕಿರುಗುಪ್ಪಸದ ಕಂದುಗೂಡಲಿನ ನೀಲಿನೇತ್ರಗಳ ಏಳು ವರ್ಷದ ಅವಳ ಮಗಳು (ಪುನರು. ೧೯೩). [ಕಿರು (< ಕಿಱು$_2$) + ಕುಪ್ಪಸ]

**ಕಿರುಗುರುಟಿಗೆ**, ಕಿರುಗುರಟ್ಟಿಗೆ (ನಾ). ಒಂದು ಬಗೆಯ ಮೂಲಿಕೆ: ಕಿರುಗುರಟಿಗೆಯ ಬೇರು . . . ಕಾಳಾಡಿನ ಹಾಲಲ್ಲರೆದು ಮೂರು ದಿನಗಳು ಕುಡಿಯೆ ಪಕ್ಕೆಶೂಲೆ ಹರ (ವಿವೈವಿ. ೧೫೨). **ಕಿರುಗುರಟ್ಟಿಗೆ**: ಅಡುಸೋಗೆ ಸೊಪ್ಪು, ಗರುಗದ ಸೊಪ್ಪು, ಕಿರುಗುರಟ್ಟಿಗೆ ಸೊಪ್ಪು. . . ಚೂರ್ಣಂಗೆಯ್ದು (ಸಕವೈ. ೨೨೬). [ಕಿರು (< ಕಿಱು$_2$) + ಕುರುಟಿಗೆ]

**ಕಿರುಗುಳ್ಳ** 'ಕಿಱುಗುಳ್ಳ' ನೋ.

**ಕಿರುಗೆ** 'ಕಿಱುಗೆ$_1$' ನೋ.

**ಕಿರುಗೆಜ್ಜೆ** 'ಕಿಱುಗೆಜ್ಜೆ' ನೋ.

**ಕಿರುಗೆಯ್ಮೆ** 'ಕಿಱುಗೆಯ್ಮೆ' ನೋ.

**ಕಿರುಗೈ** 'ಕಿಱುಗೈ' ನೋ.

**ಕಿರುಗೋಣಿ** 'ಕಿಱುಗೋಣಿ' ನೋ.

**ಕಿರುಗೋಣೆ**, ಕಿರುಕೋಣೆ (ನಾ). ಚಿಕ್ಕಕೋಣೆ: ಪಿಸುನುಡಿಗಳ ಮಾರ್ದನಿಗಳ ಕಿರುಗೋಣೆಗಳಿಂದ (ದ್ರಾಕ್ಷದಾ. ೧–೧೧). **ಕಿರುಕೋಣೆ**: ಅವನು ಕಿರುಕೋಣೆಯಲ್ಲಿ ತನ್ನ ಮೇಲಂಗಿಯನ್ನು ತೆಗೆದಿರುತ್ತಿದ್ದಂತೆ (ಪುನರು. ೩೫೮). [ಕಿರು (< ಕಿಱು$_2$) + ಕೋಣೆ$_1$]

**ಕಿರುಗೋಳಿ** 'ಕಿಱುಗೋಣಿ' ನೋ.

**ಕಿರುಚಲು** 'ಕುರುಚಲು' ನೋ.

**ಕಿರುಚಾಟ** 'ಕಿರಿಚಾಟ' ನೋ.

**ಕಿರುಚಾಡು** (ಕ್ರಿ). ಅರಚು; ಕೂಗಾಡು: "ನಾಯಿ ತಪ್ಪುಮಾಡಿತು" ಎಂದೆಲ್ಲಾ ಕಿರುಚಾಡಿದರು (ಶಾಲಿನು. ೨೦೬); ಕಿರುಚಾಡುತ್ತ ಇವರನ್ನು ಮುತ್ತಿದರು (ನನ್ನಜೊ. ೫೮). [ಕಿರುಚು (< ಕಿಱಿಚು) + ಆಡು$_1$]

**ಕಿರುಚಿಸು** (ಕ್ರಿ). ಅರಚುವಂತೆ ಮಾಡು; ಕೂಗಿಸು: ಛಡಿ ಹಿಡಿದು ಮಕ್ಕಳನ್ನು ಕಿರುಚಿಸುವ ಬೋಧನ ಕ್ರಮ ತಪ್ಪಿ . . . ನೂತನಕ್ರಮ ಆಚರಣೆಗೆ ಬಂದಿದೆ (ಶಿಕ್ಷದ. ೨೫೬).

[ಕಿರುಚು (< ಕಿಱಿಚು) + -ಇಸು$_3$]

**ಕಿರುಚು** 'ಕಿಱಿಚು' ನೋ.

**ಕಿರುಜವ್ವನೆ** (ನಾ). ಚಿಕ್ಕ ಹರೆಯದವಳು; ನವತರುಣಿ: ಕಿರುಜವ್ವನೆಯರರಿಬರು ರಾಯಸೆಜ್ಜೆಗೆ ಅತ್ತಿತ್ತ ನಿಂತು (ಚಿಟ್ಟಳ. ೮೩–೭).

[ಕಿರು (< ಕಿಱು$_2$) + ಜವ್ವನೆ]

**ಕಿರುಟಿಗ**, ಕಿರುಟಿಗೆ (ನಾ). ಒಂದು ಬಗೆಯ ಪಕ್ಷಿ; ಕಲಿಂಗಪಕ್ಷಿ ಜಾತಿಯಲ್ಲಿ ಒಂದು ಬಗೆ: (ಕಿ). **ಕಿರುಟಿಗೆ**: (ಕಿ). [?]

**ಕಿರುಟಿಗೆ** 'ಕಿರುಟಿಗ' ನೋ.

**ಕಿರುಡಕ್ಕೆ** (ನಾ). ಕಿರಿಯ ಡಕ್ಕೆ; ಚಿಕ್ಕ ಡಕ್ಕೆ: ತನ್ನ ಕಿರುತ[ಡ]ಕ್ಕೆಯ ತಾಳಕ್ಕನುವಾಗಿ ಹಾಡುತ್ತಿದ್ದನು (ನಡೆದಾ. I, ೪೩೩).

[ಕಿರು (< ಕಿಱು$_2$) + ಡಕ್ಕೆ]

**ಕಿರುಡೊಳ್ಳು** 'ಕಿಱುಡೊಳ್ಳು' ನೋ.

**ಕಿರುತಮ್ಮ** (ನಾ). ಚಿಕ್ಕ ತಮ್ಮ; ಕಿರಿಯ ತಮ್ಮ: ಕಿರುತಮ್ಮಂಬೆರಸೀ ಚತುಃಶ್ರುತಿಗೆ ವೇದಾರ್ಥ ಪ್ರಕಾಶಂ . . . ಮೆರೆಸಲ್ (೧೪ವಿಂ. ೫೧-೪).

**ಕಿರುತಾರಗೆ** (ನಾ). ಚಿಕ್ಕ ನಕ್ಷತ್ರ: ಈ ಕಿರುತಾರಗೆಯೇ ಅರುಂಧತಿ (ಜ್ಯೋತಿರ್ವಿ. ೨೭). [ಕಿರು (< ಕಿಱು$_2$) + ತಾರಗೆ]

**ಕಿರುತಾಳಿ** 'ಕಿಱುದಾಱಿ' ನೋ.

**ಕಿರುತೊರೆ** (ನಾ). ಚಿಕ್ಕ ಹೊಳೆ; ಸಣ್ಣನದಿ: ಕಡಲು ಕಿರುತೊರೆಯ ಬಾಗಿಲಿಗೆ ಬಂದರೆ ಏನು ಸಿಕ್ಕೀತು? (ಬಿತಂಬಾ. ೫).
[ಕಿರು (< ಕಿಱು$_2$) + ತೊರೆ$_3$ (< ತೊಱೆ$_3$)]

**ಕಿರುತ್ತಿರುವಸೂರ್** (ನಾ). ಒಂದು ಊರಿನ ಹೆಸರು: ಕಿರುತ್ತಿರುವ ಸೂರಳಿವಿನೋಳ್ ಪಂಡಿ ಪೊದಱ ಎಮ್ಮೆ ತುಱುಗೊಳೆ (ಮೈಆರಿ. ೧೯೨೪, ೬೨-೪; ೨ನೆಯ ಶತ). [?]

**ಕಿರುದಂಗಿ** 'ಕಿಱುದಂಗೆ' ನೋ.

**ಕಿರುದನಿ** (ನಾ). ಸಣ್ಣದನಿ; ತಗ್ಗಿದ ದನಿ: "ಕಲಂ ಏಂಕಶೇ — ಕಿರು ದನಿಯುಂ ಮಾಡಿದವುದು" (ಕಾಶಕ್ಕ. ೯೦). [ಕಿರು (< ಕಿಱು$_2$)+ ದನಿ$_2$]

**ಕಿರುದಾರಿ** (ನಾ). ಸಣ್ಣದಾರಿ; ಕಾಲ್ದಾರಿ: ಕಾವೇರಿ ತೋಟದ ಕಿರು ದಾರಿಯಲ್ಲಿ ಬಂದಿದ್ದಳು (ಕಾವೇರಿ. ೨೦೮). [ಕಿರು (< ಕಿಱು$_2$) + ದಾರಿ$_1$]

**ಕಿರುದಿನ್ನೆ** (ನಾ). ಚಿಕ್ಕ ದಿಣ್ಣೆ; ದಿಬ್ಬ; ನೊರಡಿ: ಅದೊಂದು ಕಿರು ದಿನ್ನೆ; ಭರದಿಂದ ಏರುತಲಿದ್ದೆವು (ಚಂದುಟ. ೧೪).
[ಕಿರು (< ಕಿಱು) + ದಿನ್ನೆ]

**ಕಿರುದುರುಚಿ** (ನಾ). ತುರುಚೆಗಿಡದಲ್ಲಿ ಒಂದು ಜಾತಿ: (ಕಿ).
[ಕಿರು (< ಕಿಱು) + ತುರುಚಿ (< ತುಱುಚಿ)]

**ಕಿರುದೆಂಗು** 'ಕಿಱುದೆಂಗು' ನೋ.

**ಕಿರುದೆರೆ** 'ಕಿಱುದೆಱೆ' ನೋ.

**ಕಿರುದೆಱೆ** 'ಕಿಱುದೆಱೆ' ನೋ.

**ಕಿರುದೇಂಗು** 'ಕಿಱುದೇಗು' ನೋ.

**ಕಿರುದೇಗು** 'ಕಿಱುದೇಗು' ನೋ.

**ಕಿರುನಗೆ** 'ಕಿಱುನಗೆ' ನೋ.

**ಕಿರುನಡೆ** (ನಾ). ಚಿಕ್ಕ ನಡೆ; ಸಣ್ಣನಡಿಗೆ: "ಲಿಟ್ . . . ಲೇಶ್ಪವ್ಯಂ, ಈ ೭ ಕಿರುನಡೆ" (ಕಾಶಕ್ಕ. ೨೨೩). [ಕಿರು (< ಕಿಱು$_2$) + ನಡೆ$_2$]

**ಕಿರುನಡೆವಂತ** (ನಾ). ಚಿಕ್ಕ ನಡೆಯುಳ್ಳವನು; ಚಿಕ್ಕನಡಗೆ ಯವನು: "ಲೇಶನ್ . . . ಲಿಪ್ಪವಾನ್ ಈ ೫ ಕಿರುನಡೆವಂತಂ" (ಕಾಶಕ್ಕ. ೨೨೩). [ಕಿರುನಡೆ + -ವಂತ]

**ಕಿರುನಾಲಗೆ** 'ಕಿಱುನಾಲಗೆ' ನೋ.

**ಕಿರುನಿಮಿತ್ತ** (ನಾ). ಸಣ್ಣ ನಿಮಿತ್ತ: ಎಲ್ಲರ ಕೊರಗಿನಲ್ಲೂ ಕಿರುನಿಮಿತ್ತ ವಾಗಿ ಭಾಗವಹಿಸಿಕೊಳ್ಳುವ ಭಾಗ್ಯವನ್ನು ಆ ಹಿರಿಯ ನಿಮಿತ್ತ ಅನುಕಂಪ ದಿಂದ ಕರುಣಿಸಿದೆ (ಮನೋನಂ. ೧೧೭). [ಕಿರು (< ಕಿಱು$_2$) + ನಿಮಿತ್ತ]

**ಕಿರುನುಡಿ$_1$** (ಕ್ರಿ). ೧. ಕೀಳುಮಾತನಾಡು; ತುಚ್ಛವಾದ ಮಾತ ನಾಡು. ೨. ಸಣ್ಣ ಧ್ವನಿಯಲ್ಲಿ ಮಾತನಾಡು; ಮೆಲ್ಲಗೆ ನುಡಿ: ಮನಸ್ಸಾಕ್ಷಿಯಂತಿನಿದಾಗಿ ನೀನದನೆ ನುಡಿದೆಂದು ಯೇಸು ಕಿರುನುಡಿದಂ (ಗೊಲ್ಗೊಥಾ. ೫-೧೨೩). [ಕಿರು (< ಕಿಱು$_2$) + ನುಡಿ$_1$]

**ಕಿರುನುಡಿ$_2$** (ನಾ). ೧. ಚಿಕ್ಕಮಾತು; ದೀರ್ಘವಲ್ಲದ ಮಾತು: ಸರ್ವಜ್ಞನ ಕಿರುನುಡಿಗಳಲ್ಲಿ ಇದೇ ಅಭಿಪ್ರಾಯವು ಅವಿತುಕೊಂಡಿದೆ (ತವನಿ. ೨೭). ೨. ಸಣ್ಣದನಿಯಲ್ಲಿ ಆಡಿದ ಮಾತು: (ಕಿ). ೩. ತಿರಸ್ಕಾರದ ಮಾತು; ಅಗೌರವದ ನುಡಿ; ಸಣ್ಣಮಾತು: (ಕಿ). 'ಕಿರಿನುಡಿ$_2$' ಪರಾ. [ಕಿರು (< ಕಿಱು$_2$) + ನುಡಿ$_2$]

**ಕಿರುನೆಲ್ಲಿ** 'ಕಿಱುನೆಲ್ಲಿ' ನೋ.

**ಕಿರುಪಿಲ್ಲಿ** 'ಕಿಱುಪಿಲ್ಲಿ' ನೋ.

**ಕಿರುಪುಟ** (ನಾ). ಸಣ್ಣ ಪ್ರಮಾಣದ ಪುಟ; ಸ್ವಲ್ಪಹೊತ್ತಿನ ಪುಟಪಾಕ: ಖರ್ಪರಯಂತ್ರದಿಂದ ಕಿರುಪುಟವನ್ನು ಹಾಕಿ . . . ಸೂಕ್ಷ್ಮ ಚೂರ್ಣಮಾಡಲು ಶುದ್ಧ ಸಿಂಧೂರವಾಗುವುದು (ಸಕವೈ. ೯೫).
[ಕಿರು (< ಕಿಱು$_2$) + ಪುಟ$_2$]

**ಕಿರುಪೊರೆ** (ನಾ). ಸಣ್ಣ ಹೊರೆ; ಚಿಕ್ಕ ಕಟ್ಟು: ಪೊರೆಯಂ ಕೊಳಲ್ಬಂ ದರೆಲ್ಲಂ ಕೆಲದ ಕಿರುಪೊರೆಗಳಂ ಮಾರುಗೊಂಡು (ಕಗವಿ. ೯೧ ರಾಜಾವಳಿಕಥೆ). [ಕಿರು (< ಕಿಱು$_2$) + ಪೊರೆ$_1$ (< ಪೊಱೆ$_5$)]

**ಕಿರುಬ** 'ಕಿಱುಬ$_1$' ನೋ.

**ಕಿರುಬಂಡಿ** 'ಕಿಱುವಂಡಿ' ನೋ.

**ಕಿರುಬತ್ತ** (ನಾ). ಒಂದು ಜಾತಿಯ ಸಣ್ಣ ಭತ್ತ; ಜೀರಿಗೆ ಸಂಭಾರದ ಭತ್ತ: "ಅಣುಃ, ೧ ವ್ರೀಹಿಭೇದಃ, ಕಿರುಭತ್ತ, ಸಣ್ಣಭತ್ತ, ಜೀರಿಗೆ ಸಂಭಾರದ ಭತ್ತ" (ಸಿದ್ಧಾಂತಿ. ೨೪೦). [ಕಿರು (< ಕಿಱು$_2$) + ಬತ್ತ$_1$]

**ಕಿರುಬಯಕೆ** (ನಾ). ಸಣ್ಣಆಸೆ; ಅಲ್ಪಬಯಕೆ: ಮತ್ತೀಕೆ ಮನಸಿನ ಮೂಲೆಯಲ್ಲಿ ಅವನು ಬರಬಾರದು ಎನ್ನುವ ಕಿರುಬಯಕೆ (ಹೊಸಕ್ಷಿ. ೫೮). [ಕಿರು (< ಕಿಱು$_2$) + ಬಯಕೆ$_2$]

**ಕಿರುಬಲೆ** 'ಕಿಱುವಲೆ' ನೋ.

**ಕಿರುಬಾಗಿಲು** 'ಕಿಱುವಾಗಿಲು' ನೋ.

**ಕಿರುಬಾಲ** (ನಾ). ಚಿಕ್ಕಮಗು; ಸಣ್ಣಹುಡುಗ: ಕೊಲುವೆಯಾದರು ಒಮ್ಮೆ ಕಳುಹಿಕೊಡು; ಮರಳುವೆನು ಮೊಲೆಯುಣಿಸಿ, ಕಿರುಬಾಲನಾಣೆ ದಿಟವಮ್ಮಾ (ಕಎಪು. ೩೩). [ಕಿರು (< ಕಿಱು$_2$) + ಬಾಲ$_2$]

**ಕಿರುಬುಲಿ, ಕಿರುಹುಲಿ** (ನಾ). ಒಂದು ಬಗೆಯ ವನಸ್ಪತಿ: ಹೆಬ್ಬುಲಿ, ಕಿರುಬುಲಿ ಸುರಸುರಿಗೆ ಈ ಸೊಪ್ಪುಗಳ ರಸ ಒಂದು ಮಾನವಂ ಹಿಂಡಿ (ಸಕವೈ. ೭೦). **ಕಿರುಹುಲಿ**: ನೆಲಾವರೆ ಬೇರು . . . ಹೆಬ್ಬುಲಿ, ಕಿರು ಹುಲಿ ಬೇರು . . . ಇವಿಷ್ಟನ್ನೂ ಚೆನ್ನಾಗಿ ಜಜ್ಜಿ ಜೇನುತುಪ್ಪದಲ್ಲಡುವುದು (ವಿವೈವಿ. ೧೫೫). [ಕಿರು (< ಕಿಱು$_2$) + ಪುಲಿ (< ಪೂಲಿ?)]

**ಕಿರುಬೆಮರು** 'ಕಿಱುಬೆಮರ್' ನೋ.

**ಕಿರುಬೆವರು** 'ಕಿಱುಬೆಮರ್' ನೋ.

**ಕಿರುಬೇರು** (ನಾ). ೧. ಸಣ್ಣಬೇರು. ೨. (ಅಲಂ) ಅಲ್ಪಾಧಾರ: ನೆಚ್ಚಿಕೆಯ ಕಿರುಬೇರ ನಾವೊಂದು ಕಾಣುವೊಡೆ (ಮೂರುನಾ. ೧೦೧-೧೩೨).
[ಕಿರು (< ಕಿಱು$_2$) + ಬೇರು (< ಬೇರ್)]

**ಕಿರುಮಂಜಿ** 'ಕಿರಮಂಜಿ' ನೋ.

**ಕಿರುಮಂಜಿ ಅಜ್ವಾನ** (ನಾ). ಒಂದು ಬಗೆಯ ಸಸ್ಯ: ಕಿರುಮಂಜಿ ಅಜ್ವಾನ, ಕಾಡುಅಜ್ವಾನ (ಮೈಔಗಿ. ೬೯-೧೪೧). [?]

**ಕಿರುಮಂಜಿಹುಳು** (ನಾ). ಒಂದು ಬಗೆಯ ಹುಳು: (ದಕ್ಷಿಣ ಯುರೋಪಿನಲ್ಲೂ, ಉತ್ತರ ಆಫ್ರಿಕದಲ್ಲೂ ದೊರೆಯುವ) ಒಂದು ಜಾತಿಯ ಹುಳು; ಕರ್ಮಿಸ್‌ಹುಳು; ಕಿರುಮಂಜಿಹುಳು (Kermes. ಇಂಕನಿ). [ಕಿರುಮಂಜಿ (< ಕಿರಮಂಜಿ) + ಹುಳು (< ಪುೞು)]

**ಕಿರುಮಗು** 'ಕಿಱುವಗು' ನೋ.

**ಕಿರುಮನೆ** 'ಕಿಱುಮನೆ' ನೋ.

**ಕಿರುಮೆಣಸು** (ನಾ). ಸಣ್ಣ ಮೆಣಸಿನಕಾಯಿ; ಗಿಡ್ಡಮೆಣಸಿನ ಕಾಯಿ; ಗಾಂಧಾರಿಮೆಣಸು; ಲವಂಗ ಮೆಣಸಿನಕಾಯಿ: ಕಿರುಮೆಣಸಂತೆ ಬಲು ಕಾರವಿಹನೀತ (ಹೆಬ್ಬೆರ. ೭-೧೨).
[ಕಿರು (< ಕಿಱು$_2$) + ಮೆಣಸು (< ಮೆಣಸು)]

**ಕಿರುಮೊರಡಿ** 'ಕಿಱುಮೊರಡಿ' ನೋ.

**ಕಿರುವಡಿ** (ನಾ). ಚಿಕ್ಕಪಾದ; ಸಣ್ಣಹೆಜ್ಜೆ: ಕಾಂತನ ಕಳುಹಲು ಕಿರುವಡಿಗಳನಿಟ್ಟು ಮೆಲ್ಲಮೆಲ್ಲನೆ ಪೋಗುತ (ಕಂಕ. ೭೬-೭).
[ಕಿರು (< ಕಿಱು$_2$) + ಅಡಿ$_1$]

**ಕಿರುವಣೆ** (ನಾ). ಚಿಕ್ಕಮಣೆ; ಸಣ್ಣಮಣೆ: ಒಂದೊಂದು ಸಜ್ಜೆಯ ಸುಖಾಸನದ ಮುಮ್ಮೊಗದಲ್ಲಿಯೂ ಕಿರುವಣೆಯ ಮೇಲೆ ಹೊನ್ನ ಪಿಂಜರಿಯ ತಳಿಗೆ ತಾಂಬಣಗಳಲ್ಲಿ (ಬಿಟ್ಟಲ. ೮೩-೧).
[ಕಿರು (< ಕಿಱು$_2$) + ಮಣೆ]

**ಕಿರುವರದ** (ನಾ). ಸಣ್ಣಪರದ; ಚಿಲ್ಲರೆ ವ್ಯಾಪಾರಿ: ಅಲ್ಲಲ್ಲಿ ಕಂಬಳಿ, ಗೋಣಿಯ ತಟ್ಟು, ಸೀರೆ, ದುಪ್ಪಟಿ ಇವುಗಳಿಂದಾದ ಕಿರುವರದರ ಪಟಗೃಹಗಳು ಗಾಳಿಗೆ ತೂಗಾಡುತ್ತಿರುವುವು (ಬರುಗಂ. ೧೨-೭).
[ಕಿರು (< ಕಿಱು$_2$) + ಪರದ]

**ಕಿರುವರೆಯ** 'ಕಿಱುವರೆಯ' ನೋ.

**ಕಿರುವೊಸಗೆ** (ನಾ). ಚಿಕ್ಕ ಉತ್ಸವ: ನೆರಮನೆಯೊಳೆಂದು ಕಿರುವೊಸಗೆ ಬಾಗಿಲ ತೆಗೆದು ಕರೆವ ತಾರೆನಲೊಡನೆ ಬಿದ್ದಣಂ ಬಂತು (ಕಾಲೂರ. ೩೬-೪೨). [ಕಿರು (< ಕಿಱು$_2$) + ಒಸಗೆ]

**ಕಿರುಶಿವನಿ** (ನಾ). ಒಂದು ಬಗೆಯ ಮೂಲಿಕೆ: ನೈದಿಲಗೆಡ್ಡೆ, ಚಂಗನೀಲರ ಕೋಷ್ಠ, ಕಿರುಶಿವನೀಬೇರು ಈ ಮೂರನು ನೀರಲ್ಲಿ ಅರೆದು ಲೇಪಂಗೈಯಲು ಉಪದಂಶ ಶಮನವಹುದು (ವೈದ್ಯಸಾ. II, ೧೬೬).
[ಕಿರು (< ಕಿಱು$_2$) + ಶಿವನಿ (< ಸಿವನ್ನಿ)]

**ಕಿರುಸಾಲೆ** (ನಾ). ಒಂದು ಬಗೆಯ ಸಸ್ಯ: ಕಿರುಸಾಲೆ ಬೇರು, ಪರ್ಪಾಷ್ಟಕ . . . ಕಷಾಯಂ ಕಾಸಿ ಸೇವಿಸುವುದು (ಸಕವೈ. ೧೬೫). [?]

**ಕಿರುಸುತ್ತು** (ನಾ). ಚಿಕ್ಕದು; ಎಳೆಯದು: "ಚುಟ್ಟ – ಅಲ್ಪೀಭಾವೇ, ಕಿರುಸುತ್ತಿನೊಳ್" (ಕಾಶಕ್ಕ. ೧೯); ವರನಿಗೆ ಈ ಕನ್ನೆ ಕಿರಿಸುತ್ತಾಯಿತು (ರೂಢಿ). [ಕಿರು (< ಕಿಱು$_2$) + ಸುತ್ತು$_2$]

**ಕಿರುಸಜ್ಜೆ** (ನಾ). ಚಿಕ್ಕ ಮಂಚ, —ಪೀಠ: ವಿರೂಪಾಕ್ಷಯ್ಯ . . . ಮುಂತಾದವರು ಸುಖಾಸನಗಳಲ್ಲಿಯೂ ಕಿರುಸಜ್ಜೆಗಳಲ್ಲಿಯೂ ಇರುವರು (ಬಿಟ್ಟಲ. ೮೨-೪). [ಕಿರು (< ಕಿಱು$_2$) + ಸಜ್ಜೆ$_2$]

**ಕಿರುಸೊಡರ್** (ನಾ). ಚಿಕ್ಕದೀಪ; ಸಣ್ಣದೀಪ: ಅರಿಲರಲ ಕಿರುಸೊಡರ್ ಮೇಲೆಣಕೆ ನಡೆವಳಿಯ ನೆಲದೊಳೇಂ ಪಸೆಯೆ (ಕಾಲೂರ. ೬೬-೧೧೪). [ಕಿರು (< ಕಿಱು$_2$) + ಸೊಡರ್]

**ಕಿರುಹರೆಯ** 'ಕಿಱುವರೆಯ' ನೋ.

**ಕಿರುಹಾಲೆಗಿಡ** (ನಾ). ಹಾಲೆಗಿಡದಲ್ಲಿ ಒಂದು ಬಗೆ: (+).
[ಕಿರು (< ಕಿಱು$_2$) + ಹಾಲೆ$_2$ (< ಪಾಲೆ$_2$) + ಗಿಡ (< ಗಿಡು)]

**ಕಿರುಹುಲಿ** 'ಕಿರುಬುಲಿ' ನೋ.

**ಕಿರುಹೊತ್ತಗೆ, ಕಿರುಹೊತ್ತಿಗೆ** (ನಾ). ಚಿಕ್ಕ ಪುಸ್ತಕ; ಪುಸ್ತಿಕೆ: ಕಿರುಹೊತ್ತಗೆಗಳನ್ನು ಪ್ರಕಟಿಸಿ ಶಿಕ್ಷಕರಿಗೆ ದೊರಕಿಸಬೇಕು (ಶಿಕ್ಷದ. ೭೪೦); ಕಿರುಹೊತ್ತಗೆ ಬರೆಯಲು ಪ್ರೋತ್ಸಾಹವಿತ್ತ (ನಿಟ್ಟೂಶಾಂ. ೧). **ಕಿರುಹೊತ್ತಿಗೆ**: ಕಿರುಹೊತ್ತಿಗೆಗಳ ಸಂಖ್ಯೆ ಈಗಿರುವುದಕ್ಕಿಂತಲೂ ದ್ವಿಗುಣವೂ ಆಗಿರಬೇಕಾಗಿತ್ತೆಂದು (ಪರಜೀ. III, ಮುನ್ನುಡಿ).
[ಕಿರು (< ಕಿಱು$_2$) + ಹೊತ್ತಗೆ (< ಪೊತ್ತಗೆ)]

**ಕಿರುಹೊತ್ತಿಗೆ** 'ಕಿರುಹೊತ್ತಗೆ' ನೋ.

**ಕಿರುಳ** 'ಕಿಱುಳ' ನೋ.

**ಕಿರುಳಿ** (ನಾ). ಚಿಕ್ಕ ಉಳಿ; ಸಣ್ಣ ಉಳಿ: (+).
[ಕಿರು (< ಕಿಱು$_2$) + ಉಳಿ$_2$]

**ಕಿರುಳು** 'ಕಿಱುಳ' ನೋ.

**ಕಿರೆ$_1$** 'ಕೀರೆ' ನೋ.

**ಕಿರೆ$_2$** (ನಾ). ಆಣೆ; ಶಪಥ: ನೀನು ಕದ್ದಿಲ್ಲ ಅಂತ ಕಿರೆಮಾಡಿ ಹೇಳು ನೋಡೋಣ (ರೂಢಿ). [< ಸಂ. ಕ್ರಿಯಾ ?]

**ಕಿರ್ಕಿರ್ಜೋಡು** (ನಾ). ಕಿರ್‌ಕಿರ್ ಎಂದು ಶಬ್ದಮಾಡುವ ಜೋಡು; ಗಿರಕಿ ಜೋಡು: ಮೂರು ವರ್ಷದ ಮೇಲೆ ಮದುವೆ ಜೋಡು ಮುಟ್ಟಬಾರದು ಅಂತ ಮಾವಯ್ಯ ಹೊಸ 'ಕಿರ್ಕಿರ್'ಜೋಡು ಮಾಡಿಸಿದ (ನನ್ನೂರು. ೨೧೯). [ಕಿರ್ಕಿರ್$_0$ + ಜೋಡು]

**ಕಿರ್ಕಿರಿ** 'ಕಿಱುಕಿಱು' ನೋ.

**ಕಿರ್ಕೊಳ** (ನಾ). ತಗ್ಗಿನ ಕೊಳ; ಕೆಳಪ್ರದೇಶದಲ್ಲಿರುವ ಕೊಳ: ಪುಲಿಕಡ್ಡ ಅರಸರ್ ಸಿಯಗೆಲ್ಲರ್ಕಾಗಿ ಕೊಮಾರನ್ ಕಿರ್ಕ್ಕೊಳತ್ತು ಒಗಬಳ್ಳಿಯುಳಿಱಿದು ವಿಟ್ಟೊಂ (ಎಕ. XVI. ತುಮಕೂ. ೯೧-೧೧; 775).
[< ಕೆೞಗು + ಕೊಳ$_2$]

**ಕಿರ್ಗಟ್ಟು** 'ಕಿೞ್ಗಟ್ಟು' ನೋ.

**ಕಿರ್ಗಣ್** 'ಕಿೞ್ಗಣ್' ನೋ.

**ಕಿರ್ಗಣ್ಣಿಕ್ಕು, ಕಿಗ್ಗಣ್ಣಿಕ್ಕು** (ಕ್ರಿ). ಕೆಳಗಣ್ಣಿನಿಂದ ನೋಡು; ಓರೆಯಾಗಿ ನೋಡು: ಮಿಕ್ಕು ಪುಗಲಿತ್ತು ಕಿರ್ಗಣ್ಣಿಕ್ಕುತ್ತೊಳಪೊಕ್ಕ ಜಾಯಿಲನ ಬಡನಡುವಂ ಚಕ್ಕನೆ ತುಂಡಿಸಿ (ಗಿಂಕ. ೧-೧೦೫). **ಕಿಗ್ಗಣ್ಣಿಕ್ಕು**: ಕಂಡು ಕಿಗ್ಗಣ್ಣಿಕ್ಕಿ ನೋಡಿತ್ತು ನಾಲ್ದೆಸೆಯನು (ಹಚಕಾ. ೬-೫); ಪೌನವ ಹಿಡಿದಧೋಮುಖಿಯಾಗಿ ಕಿಗ್ಗಣ್ಣಿಕ್ಕಿ ಕೆಲಬಲನ ಬಿಡದೆ ನೋಡುತ (ಕುವ್ಯಾಲು. ೪-೮೧); ದಾಡೆಯಂ ಮಸೆದು ಕಿಗ್ಗಣ್ಣಿಕ್ಕಿ ನೋಡುತ್ತೆ (ರಾಜಶೇ. ೫-೮೯).
[ಕಿರ್ಗಣ್ (< ಕಿೞ್ಗಣ್) + ಇಕ್ಕು]

**ಕಿರ್ಗಯ್** 'ಕಿಱುಗೈ' ನೋ.

**ಕಿರ್ಗಯ್ಯಾಗು** (ಕ್ರಿ). ಕೈಗುಂದು; ಕೆಳಗೈಯಾಗು; ಕಡಿಮೆಯಾಗು: ಸಡಿದೆನುಡುಗಿದೆಂ ಮಾಸಿದೆಂ ಸೂಸಿದೆಂ ಕಿರ್ಗಯ್ಯಾದೆಂ ಕಂದಿದೆಂ (ರಕ್ಷಾಶ. ೨೫); "ಕೈಕಿರಿದು ಆಗು; ಕೈ (ಮುರಿದವನಂತೆ) ಆಗು" (ರಕ್ಷಾಶ. ಕೋಶ). [ಕಿರ್ಗಯ್ (< ಕಿಱುಗೈ) + ಆಗು$_1$]

**ಕಿರ್ಗಲ್** 'ಕಿಱುಗಲ್' ನೋ.

**ಕಿರ್ಗಾಳಿ** 'ಕಿಗ್ಗಾಳಿ' ನೋ.

**ಕಿರ್ಗಿ** (ನಾ). ೧. ಚೆಲುವು; ಒರಪು: "ಕಿರ್ಗಿಯೆಂದು ಒಱಪು" (ಶಮದ. ಪರಿ. ೨); "ಕಿರ್ಗಿಯೆಂದೊರವು" (ಕಬ್ಬಕ್ಕ. ೭೬). ೨. ಚಿಕ್ಕದಾಗಿರುವಿಕೆ: (+). [?]

**ಕಿರ್ಗು$_1$** 'ಕಿೞ್ಗು' ನೋ.

**ಕಿರ್ಗು$_2$** (ನಾ). ಕೆರೆಯ ಕೆಳಗಿನ ಜಮೀನು (?): ತಟಾಕತತಿಯ ಕಿರ್ಗಿನೊಳ್ ಬಳೆದ ಶಾಲಿಯ ಕೆಯ್ವೊಲನಂ (ಮಹಾಸೇ. ೧೦-೮೧).
[< ಕೆೞಗು]

**ಕಿರ್ಗೇರಿ** (ನಾ). ಕೆಳಗಿನ ಕೇರಿ: ಮಾರುಡಿಗೆಯೆಂಬಾ ಪುರದ ಕಿರ್ಗೇರಿಯೊಳು (ಸಾನಂಚ. ೯-೩೭). [< ಕೆೞಗು + ಕೇರಿ]

**ಕಿರ್ಗೊಂಬು** 'ಕಿಱುಗೊಂಬು' ನೋ.

**ಕಿರ್ಚು** 'ಕಿಚ್ಚು' ನೋ.

**ಕಿರ್ಚುಂಗೋಲ್** (ನಾ). ಬೆಂಕಿಯನ್ನು ಕಾರುವ ಬಾಣ; ಪಾವಕಾಸ್ತ್ರ; ಆಗ್ನೇಯಾಸ್ತ್ರ: ಮಿಕ್ಕುಂ ಮೀಱುಯುಂ ಪರಿತರ್ಪ ಕಿರ್ಚುಂಗೋಲಂ ಚಿಚ್ಚರದೊಳ್ ತನ್ನೊಂದು . . . ನೀರೊಡಲ ನಿಡುಗೋಲಿಂ ಕಾಲ್ವೊಳೆಯಿಸಿದಂ (ರಾಮಾಶ್ವ. ೯೨-೫).
[ಕಿರ್ಚು (< ಕಿಚ್ಚು) + ಕೋಲ್$_1$]

**ಕಿರ್ಚುಗಣ್ಣು** 'ಕಿಚ್ಚುಗಣ್ಣು' ನೋ.

**ಕಿರ್ಚುವೊಗು** 'ಕಿಚ್ಚುವುಗು' ನೋ.

**ಕಿರ್ಚೇಟ್** 'ಕಿಚ್ಚೇಟ್' ನೋ.

**ಕಿರ್ತುರ್** 'ಕೀಟ್$_1$' ಪರಾ.

**ಕಿರ್ದಿ**, ಖಿರದಿ$_1$, ಖಿರ್ದಿ (ನಾ). ೧. ದಿನವಹಿ ಲೆಕ್ಕಪತ್ರ. ೨. ಆಯ ವ್ಯಯಗಳನ್ನು ಬರೆದಿಡುವ ಪುಸ್ತಕ; ಜಮಾಖರ್ಚಿನ ಪುಸ್ತಕ: ಲೆಕ್ಕಮಾಡಿ ಕಿರ್ದಿ ಬರೆಯಿಸಿ ಬಂದಿದ್ದ (ಗಂಗಾಳ. ೭೭); ಆ ವರ್ಷದ ಖಾತೆ ಕಿರ್ದಿಗಳು ಪೂಜೆಗೊಳ್ಳುತ್ತಿವೆ (ಶರಚ. ೭೩೧); ಊಟಮಾಡಿ ದಿನದ ಕಿರ್ದಿಖಾತೆಗಳನ್ನು ಬರೆಯುವರು (ಗುರುಪ್ರ ೧). **ಖಿರದಿ$_1$**: ೨. ಆಫೀಸಿನ ವರ್ಗಖಿರದಿಗಳನ್ನವನು ತನಿಖೆ ಮಾಡಿದನು (ಪುನರು. ೨೭೪). **ಖಿರ್ದಿ$_2$**: ೨. ಶಾನುಭೋಗ ಕೃಷ್ಣಪ್ಪನವರು ಮನೆಯ ಜಗಲಿಯ ಮೇಲೆ ಕುಳಿತು ಖಾತೆಖಿರ್ದಿಗಳ ಲೆಕ್ಕವನ್ನು ನೋಡುತ್ತಿದ್ದರು (ದುಂಬಕ. ೯೯); ಆದರೆ ನಿಜವಾಗಿ ನೋಡಿದರೆ ಶಾನುಭೋಗರು ಉಳಿದದ್ದು ಖಿರ್ದಿ ಪುಸ್ತಕ ದಿಂದಲ್ಲ, ಹುಲಿಯ ಧರ್ಮಶ್ರದ್ಧೆಯಿಂದ (ಅಲೆಮ. ೬೪); ಅಂದರೆ ಖಾತೆಗೆ ಖಿರ್ದಿಗೆ ಜಮಾ ಬಂದಿಲ್ಲ (ಕಲಿಸ. ೧೬೪).

ಕಿರ್ದಿಮಾಡಿಕೊಳ್ಳು = ವ್ಯವಸಾಯಕ್ಕಾಗಿ ಹಸನುಮಾಡು: ಸಾಲ ವನ್ನಾದರೂ ಮಾಡಿ ಹೊಲವನ್ನು ಕಿರ್ದಿಮಾಡಿಕೊಳ್ಳಬೇಕು (ಕೃಷಿಪ್ರ. ೨೬). [← ಮರಾ. ಕಿರ್ದಿ; ಪಾರ. ಕರ್ದ್]

**ಕಿರ್ಬರಿ** 'ಕಿಬ್ಬರಿ' ನೋ.

**ಕಿರ್ಬಲ್ಲಿ** (ನಾ). ಒಂದು ಬಗೆಯ ಸಸ್ಯ: ಬಲ್ಲಗಿ, ಬಲಿಗಿ, ಕಿರ್ಬಲ್ಲಿ (ವೈಶಿಗಿ. ೬೩–೧೨೯). [?]

**ಕಿರ್ಬಸಿಐಟ್** 'ಕಿಬ್ಬಸಿರ್' ನೋ.

**ಕಿರ್ಮೀರ** (ಗು). ೧. ಮಿಶ್ರವರ್ಣವುಳ್ಳ; ಚುಕ್ಕೆಚುಕ್ಕೆಯಾದ; ಶಬಲ ವಾದ (ನಾ). ೨. ಮಿಶ್ರವರ್ಣ. 'ಕಿರ್ಮೀರತೆ' ಪರಾ. ೩. ಭೀಮ ನಿಂದ ಹತನಾದ ಒಬ್ಬ ರಾಕ್ಷಸ. 'ಕಿಮ್ಮೀರ' ಪರಾ. [ಸಂ.]

**ಕಿರ್ಮೀರತೆ** (ನಾ). ಅನೇಕ ವರ್ಣಗಳ ಮಿಶ್ರಣ; ಶಬಳತೆ: ಕಣ್ಣೆನಗೆ ತತ್ತರಿಸಿತಾ ಶತಶತಶತಂ ಸಹಸ್ರರೀತಿಯ ವರ್ಣಕಿರ್ಮೀರತೆಗೆ (ಶ್ರೀರಾಮಾ. ೮೭೩–೧೩೮). [ಸಂ. ಕಿರ್ಮೀರತಾ]

**ಕಿರ್ರನೆ** (ಅ). ಕಿರ್ ಎಂದು ಶಬ್ದವಾಗುವಂತೆ: ಕೂಗಿ ಕಿರ್ರನೆ ಕರಿಯು ಕರಮೇಲಾಗಿ ಬಂದಪ್ಪಳಿಸಿ ನುಲಿನುಲಿಯಾಗಿ ಸುಂಡಿಲ ಸುತ್ತಿ (ಜಿನಭಾ. ೭೨–೨೫). [ಕಿರ್ + –ಅನೆ$_1$]

**ಕಿರ್ಲುರ್** 'ಕಿಐುಳ' ನೋ.

**ಕಿರ್ಸಲ** (ನಾ). ಒಂದು ಜಾತಿಯ ಮರ: ಕಿರ್ಸಲ – ಇಮಾರತಿಗೆ ಬರುತ್ತದೆ (ಕಭಾಗ. ೩೭). [?]

**ಕಿಲ್$_1$** (ನಾ). ಒಂದು ಅನುಕರಣ ಶಬ್ದ: (ಅ).

**ಕಿಲ್$_2$** (ನಾ). = ಕಿಳ್: ಖಿ[ಪಾಠಾಂ. ಬಿ] ಳ್ವಂ ಕಿಲ್[ಪಾಠಾಂ. ಳ್] (ಶಮುದ. ೨೮೧ ಪ್ರಯೋ). [?]

**ಕಿಲ$_1$** (ನಾ). ಒಂದು ಅನುಕರಣ ಶಬ್ದ; ಸಂತೋಷದ ನಗುವಿನ ಅನುಕರಣ. 'ಕಿಲಕಿಲ' ಪರಾ.

**ಕಿಲ$_2$** (ಗು). ಕೆಟ್ಟುಹೋದ; ಹಾಳುಬಿದ್ದ; ಭಗ್ನವಾದ; ನಷ್ಟ ವಾದ; ಮುರಿದ; ನಿಂತುಹೋದ: ಶ್ರೀ ಭೈರವ ದೇವರ ಸಂನಧಿಯ ಸಂತೆ ಕಿಲವಾಗಿರಲಾಗಿ ಪ್ರತಿ ಹುಟ್ಟಿಸಿ ... ಕಟ್ಟಳೆಯನಿಕ್ಕಿ ದೇವದಾಯ ಹೊಣಗಾಗಿ ಸರ್ವ್ವಮಾನ್ಯವಾಗಿ ಬಿಟ್ಟ ದೇವದಾಯದ ಸಂತೆಯಾದಾಯಕ್ಕೆ (ಸೌಇಇ. IX–ii, ೫೩೨–೮; 1530). [< ಸಂ. ಖಿಲ]

**ಕಿಲ$_3$** (ನಾ). ಆಟ; ವಿಲಾಸ: "ಕುಣುಕು – ಮುಸಲ ಕ್ರಿಯಾಯಾಂ (ಕುಟ್ಟು), ಕಿಲೇ ಚ (ಆಡು), ಕೀಲೇ ಚ (ಆಗುಳಿ)" (ಶಮುಧಾ). [ಸಂ.]

**ಕಿಲಕ** (ನಾ). [ನಾಟ್ಯ] ಸಂಯುತ ಹಸ್ತ ಪ್ರಕಾರಗಳಲ್ಲಿ ಒಂದು: ೧, ಅಂಜಲಿ ... ೧೬. ಕಿಲಕ (ಅಭಾನ್ಯ. ೪೪). [ಸಂ.]

**ಕಿಲಕಿಂಚಿತ**, ಕಿಳಕಿಂಚಿತ (ನಾ). ಒಂದು ಬಗೆಯ ಶೃಂಗಾರ ಚೇಷ್ಟೆ; ಸಿಟ್ಟು, ಕಣ್ಣೀರು, ಸಂತೋಷ, ನಾಚಿಕೆ, ಒಣನಗು, ಭಯ ಮೊದಲಾದುವುಗಳ ಸಮ್ಮಿಶ್ರಣ: ಆತನಿನಾದ ಬೇಟಮಭಿಜಾತತೆಯಿಂ ನೆಗಟ್ಟೊಂದು ಧೈರ್ಯವಂತಾತನಿನಾದ ಭೀತಿ ನಿಜಬಾಲ್ಯದೊಳುಣ್ಮಿದ ಲಜ್ಜೆ ಹೃತ್ಸಮುದ್ಭೂತನಿನಾದ ಸೊರ್ಕು ಸುಚರಿತ್ರತೆಯಿಂ ಸಮಸಂದ ಸೌಖ್ಯವಂ ಚೇತದೊಳುಣ್ಮೆ ಕನ್ನೆ ತಳೆದಳ್ ಕಿಲ[ಪಾಠಾಂ. ಲಿ] ಕಿಂಚಿತ ಭಾವ ಚೇಷ್ಟೆಯಂ (ಚಂದ್ರಪ್ರ. ೫–೧೨೨). **ಕಿಳಕಿಂಚಿತ**: ಜಳಕೇಳಿಯೊಳಧಿಪ ನನೆರ್ದೆಗೊಳಿಸಿದುದಂತಃಪುರೀಜನಂಗಳ ಲೀಲಾ ಕಿಳಕಿಂಚಿತ ಲಲಿತವಿಹೃದ್ವಿ ಳಾಸ ವಿಚ್ಛಿತ್ತಿ ವಿಭ್ರಮಾದಿಗುಣಂಗಳ್ (ಆದಿಪು. ೧೧–೧೪೨). [ಸಂ.]

**ಕಿಲಕಿಂಚಿತೆ** (ನಾ). ಕಿಲಕಿಂಚಿತವನ್ನು ಮಾಡುವವಳು: ಇವಳುಂ ಕಿಲಕಿಂಚಿತೆಯಕ್ಕುಮೆಂದು ವಿಟಂ ನುಡಿಯುತ್ತಿರೆ (ರಾಜಶೇ. ೧೧–೧೨೮ ವ). [ಕಿಲಕಿಂಚಿತ + –ಎ$_2$]

**ಕಿಲಕಿಲ**, ಕಿಲಿಕಿಲಿ (ನಾ). ೧. ಸಂತೋಷ ಅಥವಾ ನಗೆಯನ್ನು ಸೂಚಿಸುವ ಅನುಕರಣ ಶಬ್ದ. 'ಕಿಲಕಿಲನೆ' ಪರಾ. ೨. ಹಕ್ಕಿಗಳ ಕೂಗಾಟ. ೩. ಕಳಕಳ; ಜನರ ಕೂಗಾಟ; ಗದ್ದಲ. **ಕಿಲಿಕಿಲಿ**: ೩. ಆ ಗದ್ದಲವೋ ಆ ಕಿಲಿಕಿಲಿಯೋ ಅದೊಂದು ಸಾಹಿತ್ಯಸಂಮೇಲನ (ಮುಂಗಾರು. ೫೨). [ಸಂ.]

**ಕಿಲಕಿಲಗುಟ್ಟು**, ಕಿಲಿಕಿಲಿಗುಟ್ಟು (ಕ್ರಿ). ೧. ಕಿಲಕಿಲನಗು: (ಅ). ೨. ಕಿಲಿಬಿಲಿ ಸದ್ದುಮಾಡು: (ಅ). **ಕಿಲಿಕಿಲಿಗುಟ್ಟು**: (ಅ). [ಕಿಲಕಿಲ + ಕುಟ್ಟು$_1$]

**ಕಿಲಕಿಲಾರವ** (ನಾ). ಕೋಲಾಹಲ ಧ್ವನಿ: ದಳದ ಬಂಭಾರವಂ ರಣ ಕಿಲಕಿಲಾರವಂ (ಜೈಮಿಭಾ. ೨೨–೪). [ಸಂ. (ಕಿಲಕಿಲಾ + ರವ)]

**ಕಿಲಕಿಲನೆ**, ಕಿಳಕಿಳನೆ, ಖಿಲಖಿಲನೆ (ಅ). ಕಿಲಕಿಲವೆಂದು ಸದ್ದು ಮಾಡಿ; ಕಳಕಳಿಸಿ; ಗಹಗಹಿಸಿ: "ಬಂಧುಗಳ ಮಾತಿರಲಿ! ಹಂದಿ ಕೋಳಿಗಳು ಬಳಿಸಂದು ಕಿಲಕಿಲನೆ ನಗರೇ× ನೊಂದನೆಂದು?(ಕಎಪು. ೫೨); ಲಲಿತ ಮಾತ್ರ ಕಿಲಕಿಲನೆ ನಗುತ್ತಾ ಒಳಗೆ ಓಡಿದಳು (ಅಲಹೂ. ೪೭); **ಕಿಳಕಿಳನೆ**: ಚಳಿಲನೆ, ಕಿಳಿಲನೆ, ಗಳಗಳನೆ, ಕಿಳಕಿಳನೆ (ಶಬ್ದಾನು. ೧೬೯ ಪ್ರಯೋ). **ಖಿಲಖಿಲನೆ**: ಈ ಸ್ನೇಹಮಯವಾದ ತಿರಸ್ಕಾರದಲ್ಲಿ ಅನ್ನಪೂರ್ಣೆಗೆ ಏನೋ ಕೌತುಕದ ಅನುಭವವಾಗಿ ಅವಳು ಖಿಲಖಿಲನೆ ನಗತೊಡಗಿದಳು (ಎರಸೆ. ೧೭); ಎಲ್ಲರೂ ಖಿಲಖಿಲನೆ ನಕ್ಕರು (ಝೂರಾಣಿ. ೩೬). [ಕಿಲಕಿಲ + –ಅನೆ$_1$]

**ಕಿಲಕೀರೆ** (ನಾ). ೧. ಒಂದು ಬಗೆಯ ಮೂಲಿಕೆ: ಕಿಲಕೀರೆ ಸಮೂಲದ ಕಷಾಯದಲ್ಲಿ ಇಂಗುವೆರಸಿ ಕೊಡಲು ಕಲ್ಲುಕಟ್ಟು ಪರಿಹಾರ (ಸಕವೈ. ೩೭೯). ೨. ಒಂದು ಬಗೆಯ ಸೊಪ್ಪು. [?]

**ಕಿಲಬಿಲ** 'ಕಿಲಿಬಿಲಿ' ನೋ.

**ಕಿಲಬು** 'ಕಿಲುಂಬು' ನೋ.

**ಕಿಲಾಟ** (ನಾ). ಹೆಪ್ಪುಗಟ್ಟಿದ ಹಾಲು; ಚೆನ್ನಾಗಿ ಕುದಿಯಿಸಿ ಗಟ್ಟಿಗೊಂಡ ಹಾಲು; ಹಾಲುಖೋವ. [ಸಂ.]

**ಕಿಲಾಡಿ**, ಖಿಲಾಡಿ (ನಾ). ತುಂಟ; ಕಿಡಿಗೇಡಿ; ಚೇಷ್ಟೆಗಾರ: ಬೊಗ್ರನೆಂಬವ ದೊಡ್ಡ ಕಿಲಾಡಿಯಂತೆ (ರಕ್ತರೂ. ೭೨); ನನಗೆ ಗೊತ್ತಾಗ ದಂತೆ ಕದ್ದುನೋಡುತ್ತಿದ್ದರು, ಆ ಕಿಲಾಡಿಗಳು (ನಾಪೋಲಿ. ೧೮೫). **ಖಿಲಾಡಿ**: ಪೋಲಿಯೋ, ಖಿಲಾಡಿಯೋ ... ಛೆ! ಛೆ! ಅಂಥವರ ಸಹವಾಸ ಶೀಲಾ ಮಾಡುತ್ತಾಳೆಯೆ? (ಅನ್ನಪೂ. ೫೭); ವಿದ್ಯಾಲಯದ ಖಿಲಾಡಿಗಳಿಗೆ ಇಂತಹ ಒಂದು ಬೇಟೆ ಸಿಕ್ಕಿಯೂ ಅದಕ್ಕೆ ಗುರಿಯಿಟ್ಟು ಹೊಡೆಯದಿರಲು ಮನಸ್ಸು ಬಂದೀತೇ? (ಕಲಿಕ. ೮೬). [← ಹಿಂ. ಮರಾ. ಖಿಲಾಡೀ]

**ಕಿಲಾಡಿತನ** (ನಾ). ೧. ಚೇಷ್ಟೆ; ತುಂಟಾಟ. ೨. ಚಾತುರ್ಯ: ಅವರು ಯಾವ ಉದ್ಯೋಗದಲ್ಲೂ ಮುಂದೆ ಬರಲಿಲ್ಲ. ಕಿಲಾಡಿತನವಿಲ್ಲದೇ ಬಡತನವನ್ನು ಅನುಭವಿಸಿದರು (ಅವಶಂ. ೩). [ಕಿಲಾಡಿ + -ತನ]

**ಕಿಲಾಪ**, ಕಿಲಾಫು (ನಾ). ವ್ಯಾಜ್ಯ; ಜಗಳ: ನೀ ಕೂತಿ, ಹೋಗಿ ಹೆಂಗಸರ ಡಬ್ಬಾಗ, ಊರಾಗಿನ ಕಿಲಾಪ ಮಾಡಿಕೋತ (ದೀಪಸ. ೧೩೪); ನಾಲಗೆ ... ಊರ ಕಿಲಾಪದ 'ರನಿಂಗ್ ಕಾಮೆಂಟರಿ' ನಡೆಸಿರುತ್ತದೆ (ದೀಪಹ. II, ೩). **ಕಿಲಾಫು**: ಅವನ ಹಾಗೂ ವಸೂ ಸಂಬಂಧಿ ಏನಾದರೂ ಜಮಾಸಿತೆ ಹೇಗೆ ಎಂಬುದರ ಕಿಲಾಫು ಮಾಡಿದ (ದೀಪಹ. II, ೨೧೪). [← ಅರ. ಖಿಲಾಫ್]

**ಕಿಲಾಫು** 'ಕಿಲಾಪ' ನೋ.

**ಕಿಲಾರ** 'ಕೀಲಾರ' ನೋ.

**ಕಿಲಾರಿ**, ಕಿಲ್ಲಾರಿ, ಖಿಲಾರಿ (ನಾ). ದನಗಳಲ್ಲಿ ಒಂದು ಜಾತಿ: ಕಿಲಾರಿ ಎತ್ತು ಅವನನ್ನು ಇರಿಯಿತು (ಬಾಬಲ. ೯). **ಕಿಲ್ಲಾರಿ**: ಸೋಮಪ್ಪದೇಸಾಯರು ಒಳ್ಳೆಯವೆರಡು ಕಿಲ್ಲಾರಿ ಎತ್ತುಗಳನ್ನು ಸಾಕಿರುವರು (ಜನಜೀ. ೧೩೭). **ಖಿಲಾರಿ**: ಎತ್ತುಗಳಲ್ಲಿ ಸೊರಟೀ ... ಧಣಗರೀ ಖಿಲಾರೀ ...ಎಂಬ ಎಂಟು ಜಾತಿಗಳುಂಟು (ಕಭಾಗ.೫೭). [← ಮರಾ. ಖಿಲಾರೀ]

**ಕಿಲಾಸ**, ಕಿಳಾಸೆ (ನಾ). ೧. ಚಿಬ್ಬು: "ಕಿಲಾಸಂ, ಸಿಧ್ಮ -೨ ಸಿಬ್ಬದ ಹೆಸರುಗಳು" (ಸಿದ್ಧಾಂತಿ. ೧೫೯). ೨. ತುರಿಗಜ್ಜಿ. ೩. ಕುಷ್ಠರೋಗ; ತೊನ್ನು. **ಕಿಳಾಸ**: ೧. "ಕಿಳಾಸಂ ಸಿಧ್ಮಂ" (ವಸ್ತುಕೋ. ೭೩-೭೫). [ಸಂ.]

**ಕಿಲಾಸಿ** (ನಾ). ೧. ಚಿಬ್ಬುಳ್ಳವನು: "ಕಿಲಾಸೀನ್, ಸಿಧ್ಮಲಃ-೨ ಸಿಬ್ಬವೆಂಬ ಚರ್ಮದೋಷವಾದ ಮಚ್ಚೆಗಳುಳ್ಳವನ ಹೆಸರುಗಳು" (ಸಿದ್ಧಾಂತಿ. ೧೬೨). ೨. ತುರಿಗಜ್ಜಿಯುಳ್ಳವನು. ೩. ಕುಷ್ಠರೋಗಿ; ತೊನ್ನುಬಡಿಕ. [< ಸಂ. ಕಿಲಾಸಿನ್]

**ಕಿಲಿಂಜ** (ನಾ). ೧. ಚಾಪೆ. ೨. ಮರದ ತೆಳುಹಲಗೆಯಿಂದ ಮಾಡಿದ ಅಡ್ಡತೆರೆ; ತಡಿಕೆ. [ಸಂ.]

**ಕಿಲಿಂಜಕ**, ಕಿಳಿಂಜಕ (ನಾ). = ಕಿಲಿಂಜ. **ಕಿಳಿಂಜಕ**: "ಕಟಂ ಕಿಳಿಂಜಕಮಕ್ಕುಂ" (ವಸ್ತುಕೋ. ೪೯-೨೭). [ಸಂ.]

**ಕಿಲಿಕಿಂಚಿತ**, ಕಿಳಿಕಿಂಚಿತ (ನಾ). = ಕಿಲಕಿಂಚಿತ: ಕರಂಜಾನಿಸಿ ಬಾಷ್ಪವಾರಿಗಜೆವಳ್ಕೊಗ ನೋಡಿದೊಡಂತೆ ನಾಣ್ಚುವಳ್ ಪೀನಕುಚಾಂಚಲಂ ದೆಗೆಯೆ ಕೋಪಿಪಳಪ್ಪೊಡೊಲ್ದು ನಕ್ಕಪಳ್ ತಾನದಱಿಂದೆ ಸಂದ ಕಿಲಿಕಿಂಚಿತಮುಂಚಿತಮೆನ್ನ ನಲ್ಲಳಾ (ರಾಜಶೇ. ೧೧-೧೨೭). **ಕಿಳಿಕಿಂಚಿತ**: ಸಂತೋಷ ರೋಷ ಭಯ ನಯ ಚಿಂತಾದಿಗಳಣಮೆ ನೆಱೆಯೆ ಕಿಳಿಕಿಂಚಿತಂ (ರಸರ. ೧-೨೮ ಸೂಚನೆ). [< ಸಂ. ಕಿಲಕಿಂಚಿತಕ್]

**ಕಿಲಿಕಿಲಾಯತ**, ಕಿಳಕಿಳಾಯತ (ಗು). ಕಿಲಕಿಲ ಶಬ್ದದಿಂದ ಕೂಡಿದ: ಕಲುಮರನ ಕೈದುಗಳ ಜಂಘಾಕಲಿತಗಾಢದ ಗತಿಯ ಗರ್ವದ ಕಿಲಕಿಲಾಯತ ರವದ ಭಟರುಬ್ಬಿಸಿದರಿನಸುತನ (ತೊರರಾ. ೪-೩-೧). **ಕಿಳಕಿಳಾಯತ**: ಕಪಿಗಳ ಕಿಳ[ಪಾಠಾಂ. ಳಿ]ಕಿಳಾಯತರವದಿ ಮೃಗಸಂಕುಳದ ಕಳಕಳದಿ (ಉವ್ಯಾಅ. ೨೦-೫೭). [ಸಂ. ಕಿಲಕಿಲಾಯಿತ]

**ಕಿಲಿಕಿಲಿ** 'ಕಿಲಕಿಲ' ನೋ.

**ಕಿಲಿಬಿಲಿ**, ಕಿಲಬಿಲ (ನಾ). ೧. ಹಕ್ಕಿಗಳ ಚಿಲಿಪಿಲಿ ಶಬ್ದ: ಹಕ್ಕಿಗಳು ಕಿಲಿಬಿಲಿ ಮಾಡುತ್ತವೆ (ಮುಂಬಯಿ ೫-೮೭); ಬಿರುಕು ಬಿರುಕಿಗೂ ಗುಬ್ಬಿಯ ಮನಿಹಾಳು, ಭಾವಿಯೊಳ್ಗು ಕಿಲಿಬಿಲಿ ಧನಿ (ಅರಳು. ೨೭೪). ೨. ಕಳಕಳ; ಗವುಜು; ಗದ್ದಲ: ಅಲ್ಲಿ ಬಹಳ ಜನ ನೆರೆದು ಕಿಲಿಬಿಲಿ ಮಾಡುತ್ತಿದ್ದರು (ಮುಗಿಪ. ೭೧); ಅವುಗಳ ಸಂಸ್ಕಾರ ಸಾಲದ ಮಾತು, ಕಾಡುಜನರ ಕಿಲಿಬಿಲಿ ಇದ್ದಂತೆ (ವಿಚಾಮಂ. ೧); ಹತ್ತುದಿಕ್ಕಿಗೆ ಹತ್ತುಮೋರೆಮಾಡಿ ನೀನು ಕಿಲಿಬಿಲಿ ಹಚ್ಚಿದೆಯೆಂದರೆ ನೋಡು (ಜನನಾ. ೭೩). **ಕಿಲಬಿಲ**: ೧. ಇನ್ನೆಲ್ಲಿಯೋ ಒಂದು ಹಾಲಕ್ಕಿಯ ಕಿಲಬಿಲವು ಕೇಳುತಿರುವುದು (ಕಗದ್ಯ. ೧೨೪). [< ಕಿಲ$_1$]

**ಕಿಲಿಬಿಲಿಸು** (ಕ್ರಿ). ಚಿಲಿಪಿಲಿ ಸದ್ದುಮಾಡು; ಚಿಲಿಪಿಲಿಗುಟ್ಟು: ಕುಲುಕುಲನೆ ನಗುತ ಕಿಲಿಬಿಲಿಸಿ ಉಲಿದು ಕಲರವವು ಮೂಡಿತಿಲ್ಲಿ (ಸೂರ್ಯಪಾ. ೩೪-೨). [ಕಿಲಿಬಿಲಿ + -ಇಸು$_3$]

**ಕಿಲುಂಬು**, ಕಿಲಬು, ಕಿಲುಬ್ಬು (ನಾ). ಕೊಳೆ; ಕಿಟ್ಟ; ಕಾಳಿಕೆ: "ಕಿಲುಂಬೆಂದು ಕಾಳಿಕೆ" (ಕಶಸಾ. ೨೩-೪೭೮); ಕುಲವಿಭ್ರಂಶೆಯರೊಳ್ಳನೋಜಸುಖಮಂ ಮಾಳ್ಪಂಗೆ ... ಪರತ್ರೆಯಟಿಗುಂ ಶೌಚಂ ಕಿಲುಂಬಕ್ಕುಂ (ಮದಕಿ ೯-೧); ಕಿಸುವಿಂ ಜಿನರೂಪಂ ಮಾಡಿಸಿ ಪೂಜಿಸೆಯುಂ ಕಿಲುಂಬು ಮಾಣದ ತೆಱದಿಂ (ಧರ್ಮಾಮೃ. ೫-೧೭೧); ಕಿಲುಂಬಕ್ಕುಂ ಜಸಂ (ಶ್ರಾವಕಾ. ೧೨-೨); ಕೀಸಿ ಕಿಲುಂಬಂ ಕಾಂತಿವಡೆದ ಕನ್ನಡಿಯಂತೆ (ಸಮ್ಯಕೌ. ೧೦-೨೧). **ಕಿಲಬು**: ಕಿಲಬಿನ ಬಟ್ಟಲಲ್ಲಿ ಹುಳೀ ಕಲಸಿ ಉಣ್ಣಬಹುದೇ (ಗಾದೆ). **ಕಿಲುಬ್ಬು**: "ಕಿಲುಬೆಂದೆನೆ ಕಾಳಿಕೆ" (ಕವಿಕಂ ೧೯೩); ಹದಿನೆಂಟು ಜಾತಿ ನೂರಾ ಒಂದು ಕುಲದ ಕೈಯಲ್ಲಿ ಕಿಲುಬು ಹೋಯಿತ್ತು (ಚನ್ನವ. ೩೧-೨); ಅನ್ಯ ಮುಟ್ಟಲು ಕಿಲುಬಳಿದು ಹೊಳೆವ ಹೊಸ ತಾಮ್ರವರ್ಣ ದೊಳೆಸೆವ (ಭರತ. ೨೨-೪೯); ಪಾತ್ರಂಗಳನು ಕಿಲುಬಿನ ಕಱೆತೊಱದಂತಾದರದಿಂದಲಸದೆ ತೊಳೆವುದೆಂದೆಂದು (ಹದಿಬ. ೮-೨೪); ನಾಡ ಕಿಲುಬಾವುದೂ ಕಲೆಗಂಟದು (ನಡೆದಾ. I, 457).

ಕಿಲುಂಬುನಾಱು = ಹೊಲಸುವಾಸನೆ ಹೊರಡು; ದುರ್ಗಂಧ ಹೊಡೆ: ಪೂಜಿಸೆಯುಂ ಕಿಲುಂಬುನಾರ್ವುದನೆಂತುಂ ಬಿಸುಡದು (ಸೂಕ್ತಿಸು. ೧೭-೫೭); ಮಣಿಕಿನ ರಾಸಿ ಮೆಯ್ಯ ಮಲದೊಟ್ಟಿಲು ನೋಡೆ ಕಿಲುಂಬುನಾರ್ಪ ಬಾದಣದನಿಗೊತ್ತು ಬತ್ತಲೆಯುಪ್ಪುತೆನಿಪ್ಪರಿಗೆಗ್ಗು ಗೊಂಡು ಪಟ್ಟಣಿಗರಿದೇಕೆ ಪೋದಪರೊ ಪೇಳ್ (ಪುಣ್ಯಾಸ್ರ. ೬-೫೪). [ದೇ. || ತಮಿ. ಕಳಿಮ್ಬು, ಚಳಿಮ್ಬು; ಮಲ. ಕಿಳರ್ಪು, ಕಿಳಾವು, ಕಳಿಮ್ಬು; ಕೋಲಾ. ಕಿಲ್ಮೆ; ತುಳು. ಕಿಲಿಂಬು, ಕಿಲುಂಬು, ಕಿಲ್ಪು, ಕಿಲೆಂಬು; ತೆಲು. ಚಿಲುಮು, ಕಿಲುಮು]

**ಕಿಲುಂಬುಗಟ್ಟು**, ಕಿಲುಬುಗಟ್ಟು (ಕ್ರಿ). ಕಿಲುಬು ಹಿಡಿ; ಕೊಳೆಯಾಗು; ಕಲಂಕಿತವಾಗು: ವಿರೋಧಿ ಭೂಪರ ಯಶೋನಿವಹಂ ಪಿರಿದುಂ ಕಿಲುಂಬುಗಟ್ಟಿದುದು (ಎಕ. XI, ಮೊಳಕಾ. ೨೦-೯; 1278). **ಕಿಲುಬುಗಟ್ಟು**: ಹಳಸದು ಕೊಳೆಯದು ಹುಳಿಗಟ್ಟಿ ಕೊಳ್ಳದು ಕಿಲುಬುಗಟ್ಟದು ರುಚಿಗೆಡದು ... ಅಮಳ ಸುಭಾಷಿತ ರಸವು (ಇಂಚಾಪ. ೨೨೨-೧೦೦). [ಕಿಲುಂಬು + ಕಟ್ಟು$_1$]

**ಕಿಲುಂಬುಗೊಳ್** (ಕ್ರಿ). = ಕಿಲುಂಬುಗಟ್ಟು: ಕರಂಗಳಡಂಗಿ ಕಿಲುಂಬುಗೊಂಡ ಕನ್ನಡಿಗೆಣೆಯಾಯ್ತು ಭಾನುವಳಯಂ (ಪಂಪಭಾ. ೬-೩೭); ಜಲಮಿರ್ಪ ದೆಸೆಯೊಳಿರ್ದಾ ಕಿಲುಂಬುಗೊಂಡಿರ್ದ ದೆಸೆಯೊಳಿರ್ದುದೆ ಪೇಳ್ಪುಂ (ಗದಾಯು. ೯-೮೦); ವಿಧು ವಿಖ್ಯಾತಿ ಕಿಲುಂಬುಗೊಳ್ಗುಮಪವಾದಾತೋದ್ಯನಾದಂ ದಿಶಾವಧಿಯಂ ದಾಂಟುಗುಂ (ಪಂಚಾಮಾ. ೧೨-೫೯); ಪೊಲೆಯಂ ಪಡೆದ ಸುವರ್ಣ ಕಿಲುಂಬುಗೊಂಡಿರ್ದ ತಾಮ್ರಮಕ್ಕುಮೆ (ಸಮುಪ. ೧೫-೧೦). [ಕಿಲುಂಬು + ಕೊಳ್$_1$]

**ಕಿಲುಂಬೇಱು** (ಕ್ರಿ). = ಕಿಲುಂಬುಗಟ್ಟು: ಎಡೆವಱಿಯದೆ ಕರ್ಪುನಿಪನಿತೆಡೆಗಳ್ ಪಸುರೇಱಿ ನಸು ಕಿಲುಂಬೇಱಿದ ಕನ್ನಡಿಯ ವಿಲಾಸಮನೇಂ ಕನ್ನಡಿಸಿದುವೊ ಕಪೋಳಯುಗಳಮಾ ಕೋಮಳೆಯಾ (ಮಲ್ಲಿಪು. ೪-೧೪); ಕಿಲುಂಬೇಱದ ವಕ್ತ್ರದರ್ಪಣಂ (ಪಾರ್ಶ್ವಪು. ೧೩-೮೩). [ಕಿಲುಂಬು$_1$ + ಏಱು$_1$ (< ಏಱ್$_1$)]

**ಕಿಲುಬ** (ನಾ). ಕಳಂಕಿತ; ದೋಷಿ: ಅಂಥ ಮುತ್ತಿನಂಥ ಹುಡುಗ ಆ ಕಿಲುಬನ ಹೊಟ್ಟೇಲಿ ಯಾಕೆ ಹುಟ್ಟಿದನೊ (ಬೆಳುವು. ೨೬೩).
[ಕಿಲುಬು$_2$ (< ಕಿಲುಂಬು) + –ಅ$_7$]

**ಕಿಲುಬಿಡಿ** (ಕ್ರಿ). ಕಿಲುಬು ಹತ್ತು, —ಹಿಡಿ: ಸಂಚಿಯಿಲ್ಲದ ವೀಳೆ ಮಂಚವಿಲ್ಲದ ನಿದ್ರೆ ವಂಚನೆಯಲಿಹಳ ಮನೆವಾರ್ತೆ ಕಿಲುಬಿಡಿದ ಕಂಚಿನಂತಕ್ಕು (ಸರ್ವಜ್ಞ. ೧೬೩೩). [ಕಿಲುಬು$_2$ (< ಕಿಲುಂಬು) + ಇಡಿ$_2$]

**ಕಿಲುಬಿಸು** (ಕ್ರಿ). ಕೆಡಿಸು; ಕಳಂಕಿಸು; ಹಾಳುಮಾಡು: ಅವನ ಆಶೆ-ಆಕಾಂಕ್ಷೆಗಳು ರಾಗದ್ವೇಷಗಳು ಅವನ ಜೀವನವನ್ನು ಕಿಲುಬಿಸುತ್ತವೆ (ಧೂಮವು. ೧೩). [ಕಿಲುಬು$_1$ + –ಇಸು$_3$]

**ಕಿಲುಬು$_1$** (ಕ್ರಿ). ಕಿಟ್ಟಗಟ್ಟು; ಕೊಳೆಯಾಗು; ಕಳಂಕಿತವಾಗು: ಅಚ್ಚತಾಮ್ರದ ಪಾತ್ರೆಯಲ್ಲಿ ನೀರಾಗಲಿ ಹುಳಿಪದಾರ್ಥವಾಗಲಿ ಬಹಳ ಹೊತ್ತು . . . ಇಟ್ಟರೆ ಅದು ಕಿಲುಬಿ ವಿಷವಾಗುವುದು (ಮುಂಬಯಿ. ೪–೧೩೬); ಹಿತ್ತಾಳೆ, ತಾಮ್ರದ ಪಾತ್ರೆಗಳಂತೆ ಅದರಲ್ಲಿ ಕಿಲುಬುವುದಿಲ್ಲ (ಅಡುಸೌ. ೪೨). [< ಕಿಲುಂಬು]

**ಕಿಲುಬು$_2$** 'ಕಿಲುಂಬು' ನೋ.

**ಕಿಲುಬುಗಟ್ಟು** 'ಕಿಲುಂಬುಗಟ್ಟು' ನೋ.

**ಕಿಲುಬುಗುಂದು** (ಕ್ರಿ). ಕಿಲುಬು ಇಲ್ಲವಾಗು; ಕೊಳೆ ಇಲ್ಲದಾಗು: ರನ್ನಗನ್ನಡಿಯನು ಬೆಳಗೆ ಕಿಲುಬುಗುಂದಿ ಚೆನ್ನಾಗಿ ತೋಱುವಂತಿಹುದು (ಜ್ಞಾನಚ. ೧–೪೬). [ಕಿಲುಬು$_2$ (< ಕಿಲುಂಬು) + ಕುಂದು$_1$]

**ಕಿಲುಬುದೋಱು** (ಕ್ರಿ). ಕಿಲುಬು ಕಾಣಿಸು; ಕಳಂಕವುಂಟಾಗು: ಉಜ್ವಲ ನಿಮಾಶ್ವರವಂಶಮುಕುರಕೆ ಕಿಲುಬುದೋಱದಲೇ [ಪಾಠಾಂ. ಱಿದುದೇ, ಱಿತಲೇ] (ತೊರರಾ. ೧–೧೫–೧೩).
[ಕಿಲುಬು$_2$ (< ಕಿಲುಂಬು) + ತೋಱು$_1$ (< ತೋಱ್)]

**ಕಿಲುಬುಹಿಡಿ** (ಕ್ರಿ). = ಕಿಲುಬಿಡಿ: ನಮ್ಮ ಪಟುಭಟರ ಕೂರಸಿಗಳಿಗೆ ಕಿಲುಬು ಹಿಡಿದಿಲ್ಲ (ಚಂದ್ರಸ. ೪೭).
[ಕಿಲುಬು$_2$ (< ಕಿಲುಂಬು) + ಹಿಡಿ$_1$ (< ಪಿಡಿ$_1$)]

**ಕಿಲೆದಾರ** 'ಕಿಲ್ಲೆದಾರ' ನೋ.

**ಕಿಲೊಗ್ರಾಂ** (ನಾ). ಒಂದು ತೂಕದ ಮಾನ; ಒಂದು ಸಾವಿರ ಗ್ರಾಂ: ತೊಲ, ಸೇರುಗಳು ಹೋಗಿ ಈಗ ಕಿಲೊಗ್ರಾಂ ಬಂದಿದೆ (ರೂಢಿ).
[← ಇಂ. Kilogramme]

**ಕಿಲೊಮೀಟರು** (ನಾ). ಉದ್ದಳತೆಯ ಒಂದು ಮಾನ; ಒಂದು ಸಾವಿರ ಮೀಟರು: ಸುಮಾರು ಐದು ಕಿಲೋಮೀಟರು ಒಂದು ಮೈಲಿ (ರೂಢಿ). [← ಇಂ. Kilometer]

**ಕಿಲೊಲೀಟರ್** (ನಾ). ದ್ರವಪದಾರ್ಥಗಳನ್ನು ಅಳೆಯುವ ಒಂದು ಮಾನ; ಒಂದು ಸಾವಿರ ಲೀಟರು: ಸಾವಿರ ಲೀಟರು ಅಳತೆ, ಕಿಲೊಲೀಟರ್ (Kilolitre. ಇಂಕನಿ). [← ಇಂ. Kilolitre]

**ಕಿಲೊವ್ಯಾಟು** (ನಾ). ವಿದ್ಯುತ್ತಿನ ಶಕ್ತಿಯನ್ನು ಅಳೆಯುವ ಒಂದು ಮಾನ; ಒಂದು ಸಾವಿರ ವ್ಯಾಟು. [← ಇಂ. Kilowatt]

**ಕಿಲೊಸೈಕಲ್** (ನಾ). ಧ್ವನಿತರಂಗಗಳ ಕಂಪನ ಸಂಖ್ಯೆಯನ್ನು ಅಳೆಯುವ ಒಂದು ಮಾನ (ಒಂದು ಸೆಕೆಂಡಿಗೆ ಒಂದು ಸಾವಿರ ಕಂಪನ). [← ಇಂ. Kilocycle]

**ಕಿಲ್ಬಿಷ** (ನಾ). ೧. ಕೊಳೆ; ಕಳಂಕ; ಪಾಪ: ಪೆಱದೆಂಟುಂ ಕಿಲ್ಬಿಷಗಳ್ಕಿಡೆ ಕಿಡದ ಗುಣಂ ಪೊರ್ದೆ (ಆದಿಪು. ೧–೨); ಪರದ್ರವ್ಯಮಂ ಕಿಲ್ಬಿಷಮೆಂದು ಮುಟ್ಟೆ (ಬಸರ. ೮–೪೭); ನಿನ್ನ ಸಂಗತಿಯೊಳೆ ಕಿಲ್ಬಿಷಂ ಕಿಡುವುದೇ (ಜಗವಿ. ೬೪–೬೪); ಶಸ್ತ್ರಧಾರಾಪರಮತೀರ್ಥಸ್ನಾನ ತೊಳೆವುದು ಭವದ ಕಿಲ್ಬಿಷವ (ಕುವ್ಯಾದ್ರೋ. ೧೫–೨೧). ೨. ರೋಗ: (ಕ). ೩. ತಪ್ಪು; ಅಪರಾಧ: (ಕ). ೪. (ಆಲಂ) ಮೋಸ; ಕಪಟ: ಧಾರ್ತರಾಷ್ಟ್ರರ ಕಿಲ್ಬಿಷಗಳೆಲ್ಲವನ್ನೂ ಮರೆತು, ಪಾಂಡವರು ಸಂಧಿಯನ್ನಪೇಕ್ಷಿಸುವರು (ಭೀಷ್ಮಚ. ೧೨೬); ಚತುರ್ನಿಕಾಯಾಮರೇಂದ್ರ ಸಮುದಯಂ . . . ಪಾರಿಷದಾತ್ಮರಕ್ಷಲೋಕಪಾಳಾಭಿಯೋಗ್ಯ ಕಿಲ್ಬಿಷರೊಡನೆ ಬಂದು ಮುಂದೆ ನಿಲ್ವುದುಂ (ಆದಿಪು. ೭–೪೧ ವ). 'ಕಿಲ್ಬಿಷಿಕ' ಪರಾ. [ಸಂ.]

**ಕಿಲ್ಬಿಷಿಕ** (ನಾ). [ಜೈನ] ದೇವತೆಗಳಲ್ಲಿ ಒಂದು ವರ್ಗ: ಎರಡುಂ ಕೆಲದೊಳಂ ವಾಹನಾಭಿಯೋಗ್ಯ ಕಿಲ್ಬಿಷಿಕಾಪ್ಸರೋರಗ ಗಂಧರ್ವರ್ (ಶಾಂತಿಪು. ೭–೧೬ ವ); ಅಭಿಯೋಗ್ಯ ಕಿಲ್ಬಿಷಿಕ ಪ್ರಮುಖ ಸಪ್ತಸೇನೆ ಸಂದಣಿಸೆ (ಮಲ್ಲಿಪು. ೧೨–೧೯); ಎಱಗಿದುದನಿತುಂ ಕಿಲ್ಬಿಷಿಕ ಪ್ರಕರಂ ಜೀಯೆನುತುಂ (ಚಂದ್ರಪು. ೪–೬೩ ರ). [ಸಂ.]

**ಕಿಲ್ಮಿಷ, ಕಿಲ್ವಿಷ** (ನಾ). = ಕಿಲ್ಬಿಷ ೧: ಕಿಲ್ಮಿಷವ ಕಳೆದು ರಾಜಸವ ತೊಳೆದು ಸಂತಸದ ಸೆಲೆಯ ತಾರ (ಮಾನಸ. ೨೫–೧೦); ದುಷ್ಟಬುದ್ಧಿ ತನ್ನ ಮಗನೊಡನೆ ಬಂದು ಕೃಷ್ಣನನ್ನು ಕಂಡು ತನ್ನ ಕಿಲ್ಮಿಷವನ್ನೆಲ್ಲ ಕಳೆದುಕೊಂಡ (ಬಿದುರಿ. ೧೮೮). **ಕಿಲ್ವಿಷ**: (ಕ). [< ಸಂ. ಕಿಲ್ಬಿಷ]

**ಕಿಲ್ಮಿಷಿಕ, ಕಿಲ್ವಿಷಿಕ** (ನಾ). = ಕಿಲ್ಬಿಷ ೧: ಆತ್ಮರಕ್ಷಾಭಿಯೋಗ್ಯ ಕಿಲ್ಮಿಷಿಕಾದಿ ಪರಿವಾರ ಪರೀತರಾಗಿ (ಶಾಂತಿಪು. ೧೦–೩ ವ). **ಕಿಲ್ವಿಷಿಕ**: ಕಿಲ್ವಿಷಿಕಾಶ್ಚ ಅಂತ್ಯವಾಸಸ್ಥಾನೀಯ ಕಿಲ್ವಿಷಿಕರುಮೆಂದು (ತತ್ತ್ವಪ್ರ. ೧೮೦). [< ಸಂ. ಕಿಲ್ಬಿಷಿಕ]

**ಕಿಲ್ಲಂಗಿ** (ನಾ). ಒಂದು ಬಗೆಯ ಸಸ್ಯ: ತೊರತ್ತಿ, ಸುರಟೆ, ಕಿಲ್ಲಂಗಿ, ಚೌಲ್‌ಮೂಗ್ರ ಎಣ್ಣೆಮರ (ವೈಔಗಿ. ೪೫–೮೮೨). [?]

**ಕಿಲ್ಲತ್ತು, ಖಿಲ್ಲತ್ತು** (ನಾ). ಸನ್ಮಾನಾರ್ಥವಾಗಿ ಕೊಡುವ ಪೋಷಾಕು; ಉಡುಗೊರೆ: ವೀಳಪ್ರಸ್ತಕ್ಕೆ ಬೇಕಾದ ಸಾಮಾನು ಕಿಲ್ಲತ್ತು ಮುಂತಾಗಿ ಕಳುಹಿಸಿಕೊಟ್ಟು (ರಾಜೇಂದ್ರ. ೧೧೩). **ಖಿಲ್ಲತ್ತು**: ಸಂಗೀತ ಕಲಿತು ಮಹಾರಾಜರಲ್ಲಿ ಖಿಲ್ಲತ್ತು ಪಡೆಯಬೇಕೆಂದು ಸುಬ್ಬಣ್ಣನಿಗೆ ಅಂದಿನಿಂದ ಒಂದು ಗೀಳು ಹಿಡಿಯಿತು (ಸುಬ್ಬಣ್ಣ. ೫); ಇಂದು ನಮ್ಮ ಶ್ರೀಮನ್ಮಹಾರಾಜರವರು ತಮ್ಮ ವಿಶ್ವಾಸ ಕಟಾಕ್ಷವನ್ನು ನನ್ನ ಮೇಲೆ ಪ್ರಸರಿಸಿ ಖಿಲ್ಲತ್ತುಗಳೊಡನೆ ಕೂಡಿದ ಹಂಸಪದಕ ಸಹಿತವಾದ ಬಿರುದನ್ನು ದಯಪಾಲಿಸಿದರು (ಇಬದು. ೭೧); ಎಷ್ಟೋ ವಿದ್ವಾಂಸರು ಆತನ ಕೈಚಮತ್ಕೃತಿಯನ್ನು ನೋಡಿ ಬೆರಗಾಗಿ ಚಿನ್ನದ ಖಿಲ್ಲತ್ತುಗಳನ್ನು ದಯಪಾಲಿಸಿದ್ದರಂತೆ (ರಾಯಕ. ೫೫).
[← ಮರಾ. ಖಿಲ್ಲತ್; ಅರ. ಖಿಲಅತ್]

**ಕಿಲ್ಲಾರಿ** 'ಕಿಲಾರಿ' ನೋ.

**ಕಿಲ್ಲು** (ನಾ). ಬೆಂಕಿ (?): ಕಲ್ಲೊಳಗಿಪ್ಪ ಕಿಲ್ಲಿನಂತೆ ಇನ್ನಾರಿಗೆ ಹೇಳುವೆ (ಮೋಳಿಮಾ. ೭೯–೨೨೪). [?]

**ಕಿಲ್ಲೆ, ಖಿಲ್ಲೆ** (ನಾ). ಕೋಟೆ; ದುರ್ಗ: ಮನೆಯ ಒಳಗೆ ಏಳು ಕುದುರೆಯ ಕಂಡೆ ಕಿಲ್ಲೆಯೊಳಗೆ ಏಳು ಚರಣವ ಕಂಡೆ (ಪುರಂದ. ೨–೧೨–೪); ಆಯಾ ಕಿಲ್ಲೆಗಳಲ್ಲಿ ಕೆಲಸವಿಲ್ಲದಿದ್ದಾಗ (ಮಹಾವಂ. II, ೧೭); ಎರಡು ಕಿಲ್ಲೆಗಳಿದ್ದು ಒಂದು ಅರಮನೆಯ ಸುತ್ತಲೂ ಮತ್ತೊಂದು ಶಹರದ ಸುತ್ತಲೂ ಇವೆ (ವಿವರ್ಣ. ೨). **ಖಿಲ್ಲೆ**: ಪಿರಿಯಾಪಟ್ಟಣದ ಖಿಲ್ಲೆಗೆ ಸೇರಿದ ದೇವನೂರ ಗ್ರಾಮದ (ಚೆಂಗಾಳ್ವ. ೩೦೩).
[← ಹಿಂ. ಅರ. ಕಿಲಾ; ಮರಾ. ಕಿಲ್ಲಾ. / ತುಳು. ಕಿಲ್ಲೆ; ತೆಲು. ಖಿಲ್ಲಾ]

**ಕಿಲ್ಲೆಕಛೇರಿ** (ನಾ). ಆಡಳಿತದ ಹದಿನೆಂಟು ಕಚೇರಿಗಳಲ್ಲಿ ಒಂದು; ಕೋಟೆಯ ಆಡಳಿತವನ್ನು ನೋಡಿಕೊಳ್ಳುವ ಕಚೇರಿ: ದಿವಾನ್‌ಕಛೇರಿ, ಕಿಲ್ಲೆಕಛೇರಿ, ಕಟ್ಟೇಕಛೇರಿ (ಮಹಾವಂ. II, ೩೮).
[ಕಿಲ್ಲೆ + ಕಛೇರಿ (< ಕಚೇರಿ)]

**ಕಿಲ್ಲೆದಾರ**, ಕಿಲೆದಾರ, ಕಿಲ್ಲೇದಾರ, ಖಿಲ್ಲೇದಾರ (ನಾ). ೧. ಕೋಟೆಯ ಸೇನಾಪತಿ; ದುರ್ಗಾಧಿಪತಿ : ಕಿಲ್ಲೆದಾರರುಂ ಕೊತ್ವಾಲರುಂ ನಾಳೆ ಬರುವ ಬಳ್ಳಾರಿಲಷ್ಕರ ಸರಬರಾಯಿಯಂ ತುಸ ಪುಕಾರಿಲ್ಲದಂತೆಸಗ ಪೇಳು (ಅರ್ಜಾವಿ. ೩೧–೩೯); ಬಾದಷಾಹಿ ಸಂನದಿನ ಕಿಲ್ಲೆದಾರನ ಬಳಿಯಲ್ಲಿ ನೌಕರಿ ನಿಂತರು (ಹೈದರ. ೨೯). **ಕಿಲೆದಾರ**: ೧. ಕಿಲೆದಾರಾನೆ ದೇವಸ್ಥಾನ ಪಾರುಪತ್ಯಗಾರನೆ (ಮೈಆರಿ. ೧೯೩೪, ೧೯–೩; 1811). **ಕಿಲ್ಲೇದಾರ**: ೨. ಪೋಲೀಸರ ಮೇಲಧಿಕಾರಿ; ಫೌಜದಾರ: ಜಯರಾಯರು ತಮ್ಮ ಮಕ್ಕಳ ಕಡೆ ಮತ್ತು ಕಿಲ್ಲೇದಾರರ (Police Inspetcor) ಕಡೆ ತಿರುಗಿ (ಸಕತೆ. ೮೨); ಅರಸ್ನೋರು ಹೊಸದಾಗಿ ಕಿಲ್ಲೇದಾರರಾಗಿ ಪಿರಿಯಾಪಟ್ಟಣಕ್ಕೆ ಬರ್ತಾರಂತೆ (ಚಂಗಾಳ್ವ. ೧೧೦). **ಖಿಲ್ಲೇದಾರ**: ೧. ಬಾಗೂರ ಖಿಲ್ಲೇದಾರನು (ಪಾಳಗಾ. ೪೩).
[ಕಿಲ್ಲೆ + –ದಾರ್$_3$. / ಅರ. ಕಿಲ್ಲಾದಾರ್]

**ಕಿಲ್ಲೆದಾರಿ** (ನಾ). = ಕಿಲ್ಲೇದಾರಿಕೆ : ನವಾಬರ ಅಧೀನವಾಗಿ ಬೆಂಗಳೂರು ಕಿಲ್ಲೆದಾರಿ ಮಾಡುತ್ತಿದ್ದ (ಹೈದರ. ೧೦೪). [←ಹಿಂ. ಕಿಲ್ಲೇದಾರೀ]

**ಕಿಲ್ಲೇದಾರ** 'ಕಿಲ್ಲೆದಾರ' ನೋ.

**ಕಿಲ್ಲೇದಾರಿಕೆ** (ನಾ). ದುರ್ಗಾಧಿಪತಿಯ ಅಧಿಕಾರ: ಆ ಲಕ್ಕಡಿ ಕೋಟೆ ಕಿಲ್ಲೇದಾರಿಕೆಯಂನು ಯಡೆನಾಲ್ಕು ನಾಡ ಮಂಜುರ ಅಪ್ಪಯ್ಯಗೆ ನೇಮಿಸಿ (ರಾಜೇಂದ್ರ. ೧೫). [ಕಿಲ್ಲೇದಾರ (< ಕಿಲ್ಲೆದಾರ) + –ಇಕೆ]

**ಕಿಲ್ವರಾಯ** (ನಾ). ಒಬ್ಬಾತನ ಹೆಸರು (?) : ಕಿಲ್ವರಾಯ ಮನ್ನಣುನ (ಇಆ. VIII, ೯೫–೨; 444 ಕೃಶಾ). [?]

**ಕಿಲ್ಮಿಷ** 'ಕಿಲ್ಮಿಷ' ನೋ.

**ಕಿಲ್ಮಿಷಿಕ** 'ಕಿಲ್ಮಿಷಿಕ' ನೋ.

**ಕಿವರಕ** (ನಾ). ಒಂದು ಅಲಂಕಾರ ವಸ್ತು: ಚಳಿಯಿಸುವ ಚಾಮರಂಗಳ ಕರಮೆಸೆವ ಕರ್ನಚಾಮರಂಗಳಯೆಬಲಿಕ್ಕಿದ ದೂವೆಯದ ನೆವಳಂಗಳ ಗಿಜ್ಜಳಂಗಳ ಪೊನ್ನ ಕಿವರಕಂಗಳ ಜಾಯಿಲಮೆನಿಪ ಜಾತ್ಯಶ್ವಂಗಳನೇಜು (ಮಹಾನೇ. ೧೨–೩೩ ವ). [?]

**ಕಿವರಿತನ** (ನಾ). ಜಿಪುಣತನ; ಕೃಪಣತನ (?) : ಅವಳೀ ಕಿವರಿತನಕ್ಕಂ ನಗುತ್ತುಂ ಪೋಗಿಪೋಗೆ (ಕುಸುಮಾ. ೧೧–೧೫೪ ವ). 'ಕಿವಿಲುತನ' ಪರಾ. [ಕಿವರಿ ? + –ತನ]

**ಕಿವಿ$_1$**, **ಕಿಮಿ$_1$** (ಕ್ರಿ). ೧. ಕೇಳು; ಅವಧರಿಸು : ನಕುಲನು ಆದಾವುದನ್ನು ಕಿವಿಯದೆ ನೇರವಾಗಿ ನೀರು ಮೊಗೆಯ ಹೋದನು (ಯಕ್ಷಪ್ರ. ೨). **ಕಿಮಿ$_1$**: ೨. ಕೇಳಿಸು: ಈ ವೃತ್ತಾಂತಮೆಲ್ಲಂ ಪಾತುಶಾಹಂಗೆ ಕಿಮಿದಾಗಳ್ (ಕೆಳನೃ. ೯–೪೨). [< ಕಿವಿ$_3$]

**ಕಿವಿ$_2$** 'ಕೀ$_1$' ನೋ.

**ಕಿವಿ$_3$**, **ಕಿಮಿ$_2$** (ನಾ). ೧. ಶಬ್ದವನ್ನು ಗ್ರಹಿಸುವ ಇಂದ್ರಿಯ; ಶ್ರವಣೇಂದ್ರಿಯ; ಕರ್ಣ : "ಕರ್ಣಂ ಶ್ರೋತ್ರಂ ಕಿವಿ" (ವಸ್ತುಕೋ. ೭೦–೧೮); ಕಿವಿಗಂ ಮನಕ್ಕಂ ಸೊಗಯಿಸುವಂತಪ್ಪ ಗೀತಮುಮಂ ಕೇಳ್ದು (ವಡ್ಡಾರಾ. ೫೦–೨); ಕಿವಿಗಿನಿದುಂ ನೃಪಂಗೆ ಹಿತಮುಂ ನುಡಿಯೆಲ್ಲಿಯುಮಿಲ್ಲ (ಪಂಪಭಾ. ೭–೪೦); ಮುನ್ನಂ ಬಂದ ಕಿವಿಯಿಂದಂ ಬಟಿಕಂ ಬಂದ ಕೋಡು ಕೂರಿತ್ತು (ಧರ್ಮಾಮೃ. ೨–೧೦೮); ಲಗ್ಗೆಗರಿ ನಾಯಕರ ಕಿವಿಗಳು ನೆಗ್ಗಿದವು (ಕುಮ್ಮಾಕ. ೨೦–೭); ಕಿವಿಕಿತ್ತ ಮೂಳಿ ಬೇಲಿ ನುಗ್ಗ ಹೆದರುವಳೇ? (ಗಾದೆ); ಕಿವಿಕೇಳದಿದ್ದರೆ ಕೈಮುಗುಚದೇ? (ಗಾದೆ). ೨. ತುಬಾಕಿಯ ಮದ್ದುತುಂಬುವ ಗುಣಿ; ತೋಪಿನ ಗುಳಿ. ೩. ದಾರದ ಕುಕ್ಕಡಿಯ ಹಿಡಿಕೆ. ೪. ಬಾಣಲೆ ಮೊದಲಾದುವುಗಳ ಹಿಡಿ. ೫. ಎರಡು ಎಂಬ ಸಂಖ್ಯೆಯ ಸಂಕೇತ: ಕಿವಿಗಳೆರಡಜ ನಾಮಮಂ (ವ್ಯವಹಾ. ೯–೨). **ಕಿಮಿ$_2$**. 'ಕಿಮಿಗೆಡಿಸು' ಪರಾ.

ಕಿವಿಗೆಯ್ದಿಸು = ಕಿವಿಗೆ ಬೀಳುವಂತೆ ಮಾಡು : ನಾಳೆ ದೇವಕಿಯಕ್ಕೆಯನಪ್ಪುಡದೊಳ್ ದೇವರ ಕಿವಿಗೆಯ್ದಿಸುವೆಂ (ಅರ್ಧನೇ. ೮–೬೧ ವ). ಕಿವಿಗೆಯ್ದು = ಕಿವಿಗೆ ಬೀಳು : ಜಗಳಮದಿನಿಸಾನುಂ ತ್ರಿಪುರಹರನ ಕಿವಿಗೆಯ್ದುವುದುಂ (ಪಂಪಭಾ. ೧೨–೧೫೨); ಉಲಿವ ವಿಮಾನಕಿಂಕಿಣಿಯ ಮೆಲ್ಲುಲಿಗಳ್ ಕಿವಿಗೆಯ್ದಿ (ಶಾಂತಿಪು. ೪–೭೮). ಕಿವಿಗೆ ಬೀಳು = ಕೇಳಿಸು; ಕೇಳ ಬರು : ಒಂದು ಮಧುರಗಾನವು ಕಿವಿಗೆ ಬಿತ್ತು (ಆರ್ಯಕ. ೭೫); ಈ ಮಾತು ಹಿಡಿಂಬನ ಕಿವಿಗೆ ಬಿತ್ತು (ವಚಭಾ. ೩೮). ಕಿವಿಗೆ ಮುಟ್ಟು = ಕಿವಿಗೆ ಬೀಳು: ಈ ಸುದ್ದಿ ಹಿರಿಯರ ಕಿವಿಗೆ ಮುಟ್ಟಿತು (ರೂಢಿ). ಕಿವಿಗೆವರ್ = ಕಿವಿಗೆ ಬೀಳು : ನೂಪುರಾರಾವ ವೆತ್ತಂ ಕಿವಿಗೆವರೆ (ಪಂಪಭಾ. ೧೪–೧೭). ಕಿವಿಗೆ ಹಾಕು = (ಸಮಾಚಾರವನ್ನು) ಅರುಹು; ನಿವೇದಿಸು : ಈ ವಿಚಾರವನ್ನು ಅವರ ಕಿವಿಗೆ ಹಾಕು (ರೂಢಿ). ಕಿವಿ ನಿಗುರು, ಕಿವಿ ನಿಮಿರು = ೧. ಕಿವಿನೆಟ್ಟಗಾಗು. ೨. ಕೇಳುವುದಕ್ಕೆ ಆತುರವಾಗು : ವೆಂಕಟರಮಣನ ಕಿವಿ ನಿಗುರಿದವು (ಮೂರುದಾ. ೧೩೯); ಆ ಮಾತು ಕೇಳಲು ನನ್ನ ಕಿವಿ ನಿಮಿರಿತು (ರೂಢಿ). ಕಿವಿ ನೆಟ್ಟಗಾಗು = ಕಿವಿನಿಮಿರು : ಆ ಸುದ್ದಿ ಹೇಳುತ್ತಲೇ ಅವನ ಕಿವಿ ನೆಟ್ಟಗಾದವು (ರೂಢಿ). ಕಿವಿಯ ಮೇಲಿಡು, ಕಿವಿಯ ಮೇಲೆ ಹಾಕು = ಕಿವಿಗೆ ಹಾಕು : ಒಡೆಯನ ಕಿವಿಯ ಮೇಲಿಡದೆ ಅವನು ಯಾವ ಕೆಲಸವನ್ನೂ ಮಾಡುವುದಿಲ್ಲ (ರೂಢಿ); ಪರಿಸ್ಥಿತಿಯ ಅರಿವಾಗಲೆಂದು ಆ ವಿಚಾರವನ್ನು ಅವನ ಕಿವಿಯ ಮೇಲೆ ಹಾಕಿದರು (ರೂಢಿ). ಕಿವಿಯ ಮೇಲೆ ಹಾಕಿಕೊಳ್ಳು = ಕೇಳು; ಗಮನಿಸು : ಅಯ್ಯೋ! ಈಗಿನ ಕಾಲದ ಹುಡುಗರು ನಮ್ಮ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳುತ್ತಾರೆಯೇ? (ರೂಢಿ). ಕಿವಿಯ ಮೊದಲ್ = ಕಿವಿಯ ಬುಡ: "ಕರ್ಣಮೂಲಂ, ಚೂಳಿಕಾ – ಈ ೨ ಕಿವಿಯ ಮೊದಲ್" (ಹಲಾಯು. ೩೬–೬೪). ಕಿವಿಯಲ್ಲಿ ಹಾಕು = ಕಿವಿಗೆ ಹಾಕು: (ಕಿ). ಕಿವಿಯುಳ್ಳಾಕೆ = ಗಮನವಿಟ್ಟು ಕೇಳುವವಳು : "ಶ್ರೋತ್ರಿ = ಕಿವಿಯುಳ್ಳಾಕೆ" (ಗಂಗಾಮು. ೩೧೨). ಕಿವಿವರಂ, ಕಿವಿವರೆ = ಕಿವಿಯವರೆಗೆ, —ತನಕ; ಆಕರ್ಣಾಂತವಾಗಿ : ಮದನನಕಟಾದೇವವಧುಗಳಂ ಕಿವಿವರಂ ತೆಗೆದು ಸಂಮೋಹದಿಂದೆಸುವ ರಸದಾಳಿ ವಿಲ್ಲೋ ಎನಲ್ಕೆ (ಪದ್ಮರಾ. ೮–೭೩); ಬೇಡ ಕಾಣುತ್ತೆ ಪೆರ್ಗಣೆದೊಟ್ಟು ಕಿವಿವರಂ ತೆಗೆದು ನಡುನೆತ್ತಿಯೊಡೆಯೆಚ್ಚನು (ರಾಘಚಾ. ೧೭–೬೯); ಸಾಯಕದ ಕಿವಿವರೆಯ [ಪಾಠಾಂ. ಗಡಿಯ] ತೆಗಹಿನ ಘಾಯ (ಕುಮ್ಮಾಕ. ೧೦–೨); ಉಗಿದು ಕಿವಿವರೆಗಾಗಿ ಬಾಣವನಗಲಿಸುತ ಬೊಬ್ಬಿಟಿಯೆ (ತೊರರಾ. ೩–೩–೨೨); ಕಿವಿವರೆಗೆ ಕರಾಂಗುಲಿಗೂಡಿ ಬಾಣವ ತೂಗಿ ಬಿಡುತ (ಕಂನವಿ. ೨೯–೭೫). ಕಿವಿಸೋಲು = ಹೇಳಿಕೆ ಮಾತು ಕೇಳು; ಬೇರೆಯವರ ಮಾತಿಗೆ ಮರುಳಾಗು : ಹೆಂಡತಿಯ ಮಾತಿಗೆ ಕಿವಿ ಸೋತು ಅವನು ಅಣ್ಣ ತಮ್ಮಂದಿರಿಂದ ಬೇರೆಯಾದನು (ರೂಢಿ).
[ದೇ. ‖ ತಮಿ. ಮಲ. ಚೆವಿ; ಕೊಡ. ಕೆವಿ; ತುಳು. ಕೆಬಿ; ತೆಲು. ಚೆವಿ; ಕೋಲಾ. ಕೆವಿ; ನಾಯ್ಕಿ. ಕೆವ್; ಕುರ್ಖ್. ಖೆಬ್ದಾ]

**ಕಿವಿಕಚ್ಚು** 'ಕಿವಿಗಚ್ಚು$_1$' ನೋ.

**ಕಿವಿಕುಣಿ** (ನಾ). ಕಿವಿಯ ಕುಣಿ, —ಒಳಭಾಗ; ಕರ್ಣ ರಂಧ್ರ : ಕಾಡಗಿಚ್ಚಿನೊಳು ಮುಣುಗಿವ[ಪೊ]ರಲುವ ಮೃಗಗಳೆನೆ ಸಂದಣಿತ ವಾಹಿನಿಯಬಲ್ಸರವು ಕಿವಿಕುಣಿಗಳಾವರಿಸಿ (ಜಿರಾಮಾ. ೨೫೩–೨೦).
[ಕಿವಿ$_3$ + ಕುಣಿ$_2$ (< ಕುಟಿ$_2$)]

**ಕಿವಿಕೆಡಿಸು**, ಕಿಮಿಗೆಡಿಸು (ಕ್ರಿ). ೧. ಕಿವಿ ಗಡಚಿಕ್ಕುವಂತೆ ಮಾಡು. 'ಕಿವಿಗೆಡು' ಪರಾ. ೨. (ಆಲಂ) ಕಿವಿಯನ್ನು ಕೆಡಿಸು; ಗುಪ್ತವಾಗಿ ಏನನ್ನೋ ಹೇಳಿ ತಪ್ಪು ಅಭಿಪ್ರಾಯವನ್ನುಂಟುಮಾಡು: ಕಿವಿಕೆಡಿಸು ಅಂದರೆ ತಪ್ಪುಕಲ್ಪನೆ ಮಾಡಿಕೊಡು ಎಂದರ್ಥ (ಗೋಯಾತ್ರ. ೫೩).

**ಕಿವಿಗೆಡಿಸು :** ೨. ಕುಮಂತ್ರವಂ ಬೋಧಿಸಿ ಕಿವಿಗೆಡಿಸಿ ದೂರುತ್ತು ಮಿಂತೆಂದರ್ (ಕಳನ್ನ. ೬-೨೪). [ಕಿವಿ$_3$ + ಕೆಡಿಸು]

**ಕಿವಿಕೊಡು** 'ಕಿವಿಗೊಡು' ನೋ.

**ಕಿವಿಗಚ್ಚು$_1$**, ಕಿವಿಕಚ್ಚು (ಕ್ರಿ). ೧. ಕಿವಿಯಲ್ಲಿ ಗುಟ್ಟಾಗಿ ಹೇಳು ; ಪಿಸುಮಾತನ್ನಾಡು : ಪಂಡಿತೆಯೊಡನೊರ್ವ ಗಾಯಕಿ ಕಿವಿಗಚ್ಚಿಕೊಂಡು ನುಡಿದಳೊಂದು ಮಾತ (ಭರಜ. ೬-೨). **ಕಿವಿಕಚ್ಚು :** ೧. ಕಾವೇರಿಯೂ ತನ್ನ ತಾಯಿಯ ಕಿವಿಕಚ್ಚುತ್ತಿದ್ದುದನ್ನು ರಾಜೀವಿ ಕೆಲವೊಮ್ಮೆ ಕಂಡಿದ್ದಳು (ಒಡ್ಡಿಉ. ೧೦೨) ; ಇಂಥ ಮಿಥ್ಯಾಜ್ಞಾನವು ಭೂ ಮಂತ್ರಗಾಳಿಯಿಂದಾಗಲಿ ಕಿವಿಕಚ್ಚುವ ಉಪದೇಶದಿಂದಾಗಲಿ ಹೋಗತಕ್ಕದ್ದಲ್ಲ (ಜೀವಾತ್ಮ. ೨೭೪). ೨. ಚಾಡಿಹೇಳು : ಬಿರುಸುನಗೆಯು ಧೂರ್ತರ ಕೈದು, ಕುಹಕಿಗಳ ಕೊಂಡೆ, ಕಿವಿಕಚ್ಚುವವರ ಅನ್ನ (ಹುಚ್ಚಾಟ. ೪-೯).

ಕಿವಿಕಚ್ಚಾಡು = ಚಾಡಿಹೇಳು : ಕಾರಖೂನ ಬಂದು ನಮ್ಮವರೊಡನೆ ಗುಪ್ತವಾಗಿ . . . ಕಿವಿಕಚ್ಚಾಡಿ ಹೋದದ್ದುಂಟು (ಇಪ್ಪಕ- ೨೧೦). [ಕಿವಿ$_3$ + ಕಚ್ಚು$_1$ (< ಕರ್ಚು$_1$)]

**ಕಿವಿಗಚ್ಚು$_2$** (ನಾ). ಕಿವಿಯಲ್ಲಿ ಪಿಸುಮಾತನ್ನಾಡುವಿಕೆ; ಗುಟ್ಟಾಗಿ ಕಿವಿಯಲ್ಲಿ ಹೇಳುವಿಕೆ : ಇದೇನಿಷ್ಟು ಬೇಗನೆಯೇ ಅಣ್ಣತಮ್ಮಂದಿರು ಕಿವಿಗಚ್ಚಿನವಸರದ ಗುಟ್ಟಿನ ಮನ್ತ್ರಣಕ್ಕೆ ಒಳಸೇರಿಕೊಂಡಿರಿ (ಬೆಟ್ಟಅ. ೨೮-೨). [< ಕಿವಿಗಚ್ಚು$_1$]

**ಕಿವಿಗಟ್ಟು** (ನಾ). ಕಿವಿಯ ರಕ್ಷಣೆಗಾಗಿ ಕಟ್ಟಿಕೊಂಡ ಮರೆ : ಚಳಿಯನ್ನು ತಡೆಯಲು ಮೈಯನ್ನು ಕೈಗವಸು, ಚರ್ಮದ ಹೆಜ್ಜೆ ತೊಡಿಗೆ ಕಾಲುಚೀಲ ಮತ್ತು ಕಿವಿಗಟ್ಟುಗಳಿಂದ ಮುಚ್ಚಲೇಬೇಕು (ಏಳಜೀ. ೮೮). [ಕಿವಿ$_3$ + ಕಟ್ಟು$_2$]

**ಕಿವಿಗಡಿ** (ನಾ). ಕಿವಿಯ ಕೊನೆ; ಕಿವಿದುದಿ: ಕೋಲತೆಗಹಿನ ಕಿವಿಗಡಿಯ ಕಣ್ಣಾಲಿಗಳ ಕೆಂಪುಗಳ ಹೊಗರು ಭಡಾಳಿಸಲು (ಕುವ್ಯಾಭೀ. ೮-೪೦); ಪೂರಾಯ ಚಾಪದ ಬೆರಳ ಕಿವಿಗಡಿಯ ಬಲುಸರಳ ಸರಿವಳೆಯ ಸಾಹಸಿಗಳು (ಕುವ್ಯಾದ್ರೋ. ೧೩-೨೮). 'ಕಿವಿಗಡೆ' ಪರಾ. [ಕಿವಿ$_3$ + ಗಡಿ$_1$]

**ಕಿವಿಗಡಿಗೋಲು** (ನಾ). (ಬಿಲ್ಲಿಗೆ ಹೂಡಿ) ಕಿವಿಯ ಕೊನೆತನಕ ಎಳೆದ ಬಾಣ; ಆಕರ್ಣಾಂತವಾಗಿ ಸೆಳೆದ ಬಾಣ : ಕಿವಿಗಡಿಗೋಲ ತೆಗಹಿನೊಳೊದಗಿದರು ದುಶ್ಯಾಸನಾದಿಗಳು (ಕುವ್ಯಾದ್ರೋ. ೨-೭೪). [ಕಿವಿಗಡಿ$_2$ + ಕೋಲು$_1$ (< ಕೋಲ್$_1$)]

**ಕಿವಿಗಡಿಯಂಬು** (ನಾ). = ಕಿವಿಗಡಿಗೋಲು : ಬಿಗಿದ ಬಿಲುಗಳ ತಿರುವೆರಳ ಬೊಬ್ಬೆಗಳ ಕಿವಗಡಿಯಂಬುಗಳಿನಾಳುಗಳ ದೇವನ ತಱಿಬಿದರು ಕೌರವ ಸಹೋದರರು (ಕುವ್ಯಾದ್ರೋ. ೧೧-೧೬). [ಕಿವಿಗಡಿ$_2$ + ಅಂಬು$_2$]

**ಕಿವಿಗಡೆ** (ನಾ). = ಕಿವಿಗಡಿ : ಕಿವಿಗಡೆಗೆ ತೆಗೆದೆಚ್ಚನೈದಂಬುಗಳನಿದಿರಾಗಿ ಭೂಮಿಜೆಯ ಸುತನ ಮೇಲೆ (ಜೈಮಿಭಾ. ೨೦-೫೩). [ಕಿವಿ$_3$ + ಕಡೆ$_2$]

**ಕಿವಿಗಡ್ಡೆ** (ನಾ). (ಉಕ) ಕಿವಿಯ ಗಡ್ಡೆ, —ಬುಡ; ಕರ್ಣಮೂಲ : (ಕಿ). [ಕಿವಿ$_3$ + ಗಡ್ಡೆ$_1$]

**ಕಿವಿಗೆಡು** (ಕ್ರಿ). ಕಿವಿ ಹಾಳಾಗು ; ಕಿವುಡು ಬೀಳು ; ಕಿವಿ ಗಡಚಿಕ್ಕು : ಜಡಿವ ನಿಸ್ಸಾಳದಲಿ ಜಗ ಕಿವಿಗೆಡೆ (ಕುವ್ಯಾಶ. ೨-೨೩). [ಕಿವಿ$_3$ + ಕೆಡು$_1$]

**ಕಿವಿಗೇಳಿಸು** (ಕ್ರಿ). ೧. ಕಿವಿಗೆ ಬೀಳು ; ಕೇಳಿ ಬರು ; ಶ್ರವಣೇಂದ್ರಿಯಕ್ಕೆ ಗೋಚರವಾಗು : ಬಲವೃಂದದದ್ಭುತ ನಿನದ ಕಿವಿಗೇಳಿಸಿತು ರಘುಪತಿಯ (ತೊರರಾ. ೨-೬-೧೮). ೨. ಕಿವಿಗೆ ಕೇಳುವಂತೆ ಮಾಡು ; ಹೇಳು ; ತಿಳಿಸು : ನಾಳಿಗಿನನುದಯದಲಿ ವಿಮಲ ವಿಶಾಲನೇತ್ರೆಯ ಸುದ್ದಿಯನು ಕಿವಿಗೇಳಿಸದಿರಾನೇಕೆನುತ ಕಾರ್ಮುಕವನೊದಱಿಸಿದ (ತೊರರಾ. ೩-೧೧-೫೪) ; ಲಿಂಗರಾಜನಿಗೆ ಗುಟ್ಟಿನ ವರದಿಯನ್ನು ಕಿವಿಗೇಳಿಸ ತೊಡಗುವನು (ಮಂತ್ರಶ. ೧೨೦-೧೪). [ಕಿವಿ$_3$ + ಕೇಳಿಸು]

**ಕಿವಿಗೊಡು**, ಕಿವಿಕೊಡು, ಕಿವಿಗುಡು (ಕ್ರಿ). ಮನಸ್ಸುಕೊಟ್ಟುಕೇಳು, —ಆಲಿಸು; ಹೇಳಿದುದನ್ನು ಗಮನಿಸು, —ಲಕ್ಷಿಸು: ಶಿವನಿಂದೆಯಂ ಕಿವಿಗೊಟ್ಟು ಕೇಳಿದೆನೆ (ಬಸವು. ೪೫-೨೦); ಮೊಮ್ಮಂದಿರುಗಳಳಲಿನ ಘನತೆಯನು ಕಿವಿಗೊಟ್ಟು ಕೇಳಿದು ನನೆದುದಂತಃಕರಣ (ಕುವ್ಯಾಭೀ. ೭-೨೪) ; ಸವಿನಯ ಪ್ರಾರ್ಥನೆಗೆ ಯಾವನು ತಾನೆ ಕಿವಿಗೊಡದೆ ಇದ್ದಾನು? (ಜ್ಯೋತಿರ್ವಿ. ೩). **ಕಿವಿಕೊಡು :** ನೀನು ನನ್ನ ವಿವೇಕದ ಮಾತುಗಳಿಗೆ ಕಿವಿಕೊಡದೆ ಹೋದೆ (ಹೊಸಕ್ಷಿ. ೧೦). **ಕಿವಿಗುಡು :** ಮಂದಮತಿಗಳ ನುಡಿಗೆ ಕಿವಿಗುಡುವರೇ (ಪದ್ಮರಾ. ೪-೪೮); ನಿನ್ನ ಮೆಲ್ನುಡಿಗಳ್ಗೆ ಕಿವಿಗುಡದವರಾರು ಮನ್ನಾಥ ಪೇಳು ಮೇಲ್ಗತಿಯ (ಮೋಹತ. ೬-೧) ; ಇದಕ್ಕೆ ಕಿವಿಗುಡುವರೆಂತೀಗಳೆನ್ನೊಡಹುಟ್ಟಿದರು (ಜೈಮಿಭಾ. ೧೮-೫೬) ; ಪೊಲನುಡಿಗೆ ಕಿವಿಗುಡದೆ ಸಜ್ಜನರೊಲಿದು ಚಿತ್ತೈಸುವುದು (ಸಾಳ್ವಭಾ. ೧-೪೬). [ಕಿವಿ$_3$ + ಕೊಡು$_1$]

**ಕಿವಿಗೊಪ್ಪು** (ನಾ). ಕಿವಿಯಲ್ಲಿ ಧರಿಸುವ ಕೊಪ್ಪು, —ಒಂದು ಆಭರಣ : ಮುಗಿಲಲ್ಲಾಡುವ ಬಾವಿಲಿ ಮಲ್ಲಿಗೆ ಕಿವಿಗೊಪ್ಪು ಓಲೆಕೊಪ್ಪು ಚಳತುಂಬು (ಗರಿ. ೧೦೬-೯). [ಕಿವಿ$_3$ + ಕೊಪ್ಪು$_2$]

**ಕಿವಿಗೊಯ್ಕ** (ನಾ). ಕಿವಿ ಕತ್ತರಿಸಿ ಹೋದವಳು : ಇದ್ದರಲ್ಲಿ ಸಹಸ್ರ ಸಂಖ್ಯೆಯ ಮದ್ದುಕುಟಿಲದ ಮಾಯಕಾತಿಯರಿದ್ದೆಸೆಯ ಕಿವಿಗೊಯ್ಕಯರು ಮೂಳಿಯರು ಮುಕ್ಕಿಯರು (ತೊರರಾ. ೫-೨-೩೪). [ಕಿವಿ$_3$ + ಕೊಯ್ಕ]

**ಕಿವಿಗೊಳ್** (ಕ್ರಿ). ಕೇಳು ; ಆಲಿಸು : ಪೇಳ್ವುದು ಮದನ ಪರಾಜಯ ಸೊಗಸಾಗಿ ಕೇಳ್ವುದು ಭವ್ಯ ಸಂಕುಲರು ತೂಳ್ವುದು ಕರ್ಮದರಿವುಗನೆನೆ ಕಿವಿಗೊಳ್ವುದೇನಿದಚ್ಚರಿಯೆ (ವರ್ಧಜ. ೧೩೯) ; ನಿನ್ನೀನುಡಿಗಳೆಮಗೆ ಕಿವಿಗೊಳವೇಟ್ಕುಂ (ಚಿಕವಂ. ೧೦). [ಕಿವಿ$_3$ + ಕೊಳ್$_1$]

**ಕಿವಿಗೊಳಿಸು** (ಕ್ರಿ). ೧. ಕೇಳುವಂತೆ ಮಾಡು ; ಕೇಳಿಸು ; ಶ್ರುತಪಡಿಸು : ಪಿರಿಯರು ಪೇಳಿದುದನೆ ಕೃತಿಗೈದಾನು ಕಿವಿಗೊಳಿಸಿದೆನು (ಹದಿಬ. ೧-೫೧). ೨. ಕೇಳು ; ಆಲಿಸು ; ಚಿತ್ತವಿಸು : ನಾರದಾದಿಗಳೊಗ್ಗೊರಲೊಳು ನಲಿನಲಿದು ಪಾಡುವ ಗಾನವ ಕಿವಿಗೊಳಿಸೊಮ್ಮೆ (ಗೀತಗೋ. ೪-೨) ; ಧರ್ಮಪುತ್ರನುಮಾವಾರ್ತೆಯಂ ಕಿವಿಗೊಳಿಸಿ ಮನದೊಳ್ಕಡುನೊಂದು (ಭಾರಶಾಂ. ೧-೨). [ಕಿವಿಗೊಳ್ + -ಇಸು$_3$]

**ಕಿವಿಚಟ್ಟೆ** (ನಾ). ಕಿವಿಯ ಮೇಲ್ಭಾಗ; ಮೇಲ್ಗಿವಿ : ಹುಲಿಯು ಹಂದಿಯ ಕಿವಿಚಟ್ಟೆಯನ್ನು ಕಚ್ಚಿಹಿಡಿದು ಅದರ ಓಟವನ್ನು ನಿಲ್ಲಿಸಿತ್ತು (ಮಲೆಮ. ೧೨೨). [ಕಿವಿ$_3$ + ಚಟ್ಟೆ$_2$]

**ಕಿವಿಚಾಚು** (ಕ್ರಿ). = ಕಿವಿಗೊಡು : ಚಾಡಿಯ ಮಾತಿಗೆ ಅವಳು ಯಾವಾಗಲು ಕಿವಿಚಾಚುವವಳೆ (ರೂಢಿ). [ಕಿವಿ$_3$ + ಚಾಚು$_1$]

**ಕಿವಿಚಾಟು** (ನಾ). ಹಲವು ಬಾರಿ ಕೇಳಿ ರೂಢಿಯಾಗಿರುವುದು : ನಿಮ್ಮ ಮಾತೆಲ್ಲ ನನಗೆ ಕಿವಿಚಾಟಾಗಿದೆ (ರೂಢಿ). [ಕಿವಿ$_3$ + ಚಾಟು ?]

**ಕಿವಿಚು** 'ಕಿಮುಚ್ಚು' ನೋ.

**ಕಿವಿಚುಚ್ಚು** (ಕ್ರಿ). ೧. (ಒಡವೆ ತೊಡಿಸಲು) ಕಿವಿಯ ಅಂಚಿಗೆ ರಂಧ್ರಮಾಡು, —ತೂತುಮಾಡು : ನಮ್ಮ ಮಗುವಿಗೆ ಕಿವಿಚುಚ್ಚಿ ಮುರುವು ತೊಡಿಸಿದೆವು (ರೂಢಿ). ೨. = ಕಿವಿಗಚ್ಚು$_1$ ೧ : ಇನ್ನೂ ಹಾಸಿಗೆಯಲ್ಲಿರುವಾಗಲೇ ಗಂಡನ ಕಿವಿಚುಚ್ಚಿದಳೆಂದು ತೋರುತ್ತದೆ (ಮೂರುದಾ. ೧೭೩). [ಕಿವಿ$_3$ + ಚುಚ್ಚು$_1$]

**ಕಿವಿದಾಗಿಸು** (ಕ್ರಿ). ಕಿವಿಗೆ ಮುಟ್ಟಿಸು; ಕೇಳಿಸು : ಬಾಗಿಲೊಳ್ ಬ್ರಹ್ಮಾದಿ ಸುರಮನುಮುನಿಗಳು ಯೋಗಿಗಳ್ ಪುಗಬಾರದಲ್ಲಿ ಪೋಗಿ ನೈಶಾಚರಿ ಪೊಕ್ಕಭಾಗವ ಕಿವಿದಾಗಿಸು ಮತ್ಪ್ರಾಣನಾಥ (ಮೋಹತ. ೨೯-೩೯). [ಕಿವಿದಾಗು + -ಇಸು$_3$]

**ಕಿವಿದಾಗು** (ಕ್ರಿ). ಕಿವಿಯನ್ನು ಸೋಕು; ಕಿವಿಗೆ ಬೀಳು: ಎಂದುವುಂ ಕೇಳದಕ್ಕರ ತನ್ನ ಕಿವಿದಾಗೆ [ಪಾಠಾಂ. ಅಂದೆಂದ ಮಾತಾಗ ತನ್ನ ಕಿವಿಯಂತಾಗಿ] (ಶಿರುರ. ೮-೫). [ಕಿವಿ$_3$ + ತಾಗು$_1$ (< ತಾಂಗು$_1$)]

**ಕಿವಿದಾರೆ** (ನಾ). ಕಿವಿಯ ಅಂಚು; ಕರ್ಣಧಾರೆ: ಅಚ್ಚಸಾದಿನಲಿ ಬಟ್ಟಿಟ್ಟು ಕಿವಿದಾರೆ[ಪಾಠಾಂ. ರಿ] ಮುಸುರಿದ ಮೃಗಮದದ ಸೊಬಗನಡಿಯಿಟ್ಟನಪ್ರತಿಮನಾದಯ್ಯನು (ಸೋಮುಚ. ೨-೧೬). [ಕಿವಿ$_3$ + ದಾರೆ$_3$]

**ಕಿವಿದುಡಿಗೆ, ಕಿವಿದೊಡಿಗೆ** (ನಾ). ಕಿವಿಯ ಆಭರಣ: "ಪವಿತ್ರವನೆ ಕಿವಿದುಡಿಗೆ" (ಕಬ್ಬಕ್ಕ. ೮೪). **ಕಿವಿದೊಡಿಗೆ**: "ಕಿವಿದೊಡಿಗೆ ಮುಂಡಂ ಕಡುಕು" (ಶಬ್ದಮಂ. ೮೧). [ಕಿವಿ$_3$ + ತುಡಿಗೆ (< ತುಡುಗೆ)]

**ಕಿವಿದೆರೆ$_1$** 'ಕಿವಿದೆಱೆ$_1$' ನೋ.

**ಕಿವಿದೆರೆ$_2$** 'ಕಿವಿದೆಱೆ$_2$' ನೋ.

**ಕಿವಿದೆಱಪು** (ನಾ). ಕಿವಿ ತೆರೆಯುವಿಕೆ; ಆಲಿಸುವಿಕೆ: ಕೊಳವಲಾವಗೆ ಗೆಡೆವಕ್ಕಿಯರೊಳಾಹಳರವನನು ಕೊರಲಿಂದಾ ಬಳಯಿಸಿ ಬಾಲೆ ಕಾಂತನ ಕಿವಿದೆಱಪಿಗೆ ಪುಳಕಕೆ ತೂಳವೆತ್ತಿದಳು (ವರ್ಧಚ. ೫-೪೯). [ಕಿವಿ$_3$ + ತೆಱಪು]

**ಕಿವಿದೆಱೆ$_1$, ಕಿವಿದೆರೆ$_1$** (ಕ್ರಿ). ಕಿವಿಗಳನ್ನು ತೆರೆ; ಕಿವಿಗೊಟ್ಟು ಕೇಳು: ಕೇಣವಂ ತೊಱೆದು ಪುರುಡಿಸುವವರಂ ಜಱೆದು ಕಿವಿದೆಱೆದು ಕೇಳ್ವುದು ಸುಜನರು (ಜೈಮಿಭಾ. ೧-೮). **ಕಿವಿದೆರೆ$_1$**: ಆ ಮಾತುಗಳನ್ನು ಅವರೆಲ್ಲ ಕಿವಿದೆರೆದು ಕೇಳತೊಡಗಿದರು (ಹಬ್ಬಿಬ. ೬೯); ನೆರೆಹೊರೆಯವರೆನುವಾಕೆಯ ವಿಷಯಕೆ ಕಿವಿದೆರೆದಾಲಿಸು ಮೊದಲು (ಇಂಚಾಪ. ೧೯೩-೫೧). [ಕಿವಿ$_3$ + ತೆಱೆ$_1$]

**ಕಿವಿದೆಱೆ$_2$, ಕಿವಿದೆರೆ$_2$** (ನಾ). ಕಿವಿಯ ತೆರೆ; ಕರ್ಣಪಟಲ: ಲಕ್ಷ್ಮಣನ ಮಾತು ಕಿವಿದೆಱೆಗೆ ಬೀಳದ ಮುನ್ನ ಹಮ್ಮೈಸಿ ಬಿದ್ದಳಂಗನೆ ಧರೆಗೆ (ಜೈಮಿಭಾ. ೧೯-೧೬). **ಕಿವಿದೆರೆ$_2$**: ಎದೆಯನೊಮ್ಮೆ ಮೆಟ್ಟಿನಲಿದು ಕಿವಿದೆರೆಯನು ಒಡೆಯುತ (ಪಾಂಚಜ. ೧೦); ಕಿವಿದೆರೆಗೆ ಬಡಿವಾಗ ಅದರಲ್ಲೊಂದು . . . ರಸಸಾಮ್ಯತೆಯು ಕಂಡು ಬರತೊಡಗಿತು (ಹಬ್ಬಿಬ. ೭೨). [ಕಿವಿ$_3$ + ತೆಱೆ$_2$]

**ಕಿವಿದೊಡವು** (ನಾ). = ಕಿವಿದುಡಿಗೆ: ಮಾಣಿಕ್ಯದ ಕಿವಿದೊಡವಂ ಸೀಸಕಂದಾಳ್ದು ಕಾಳಾಳ್ಗಡಣಂ ಕೈಕೊಂಡು ನಾನಾಯುಧಮನಮಮು ಬಂದತ್ತು (ರಾಜಶೇ. ೧೩-೭೦). [ಕಿವಿ$_3$ + ತೊಡವು]

**ಕಿವಿದೊಡಿಗೆ** 'ಕಿವಿದುಡಿಗೆ' ನೋ.

**ಕಿವಿನುಡಿ** (ನಾ). ಕಿವಿಮಾತು; ರಹಸ್ಯ: ಬಿದ್ದ ಕಿವಿನುಡಿ ಬಾಯ್ಗಳಿಂ ಬೆಳೆದು (ಕಾಲೂರ. ೧೦೬-೨೧೫). [ಕಿವಿ$_3$ + ನುಡಿ$_3$]

**ಕಿವಿಬಿರಿ** (ಕ್ರಿ). ಕಿವಿಯ ತೆರೆ ಒಡೆದುಹೋಗು, —ಸೀಳು: ಚೀರಾಟಗಳು ಕೂಗಾಟಗಳು ಕಿವಿಬಿರಿಯುವಂತಿದ್ದುವು (ಪುನರು. ೧೮೮). [ಕಿವಿ$_3$ + ಬಿರಿ$_1$]

**ಕಿವಿಬೇನೆ** (ನಾ). ಕಿವಿಯ ನೋವು; ಕರ್ಣಶೂಲೆ: ಕಿವಿಬೇನೆಗೆ–ಅಂಬಿಲ, ಸೈಂಧವ ಲವಣ, ಎಣ್ಣೆಯಲ್ಲಿ ಬಿಸಿಮಾಡಿ ಕಿವಿಗೆ ಹಾಕೆ ಕಿವಿಬೇನೆ ಮಾಣ್ಗುಂ (ವಿವೈವಿ. ೧೩೭). [ಕಿವಿ$_3$ + ಬೇನೆ]

**ಕಿವಿಮಾತು** (ನಾ). ಕಿವಿಯಲ್ಲಿ ಗುಟ್ಟಾಗಿ ಹೇಳುವ ಮಾತು; ಪಿಸುಮಾತು: ಎಲಗೆ ಬಾ ಕಿವಿಮಾತನಾಡುವೆನೆನುತಲಿ ಬಲು ಮುದ್ದುಗಳ ಗಲ್ಲಕ್ಕೆ ಇಕ್ಕುತ (ಪುರಂದ. ೩-೧೯೩-೫); ಹಡದವ್ವ ಕಿವಿಮಾತ ನೆನಪಾಗಿ (ಜನಗೀ. ೭೩-೨೧). [ಕಿವಿ$_3$ + ಮಾತು$_1$]

**ಕಿವಿಮುಚ್ಚು** (ಕ್ರಿ). ಕೇಳದಂತೆ ಕಿವಿಗಳನ್ನು ಮುಚ್ಚು: ರಜಕನುದ್ದಂಡದೊಳ್ನುಡಿಯೆ ಕಿವಿಮುಚ್ಚಿಕೊಳುತೆಯ್ದಿದೆನು (ಜೈಮಿಭಾ. ೧೮-೪೬). [ಕಿವಿ$_3$ + ಮುಚ್ಚು$_1$]

**ಕಿವಿಮೂಳ** (ನಾ). ಕತ್ತರಿಸಲ್ಪಟ್ಟ ಕಿವಿಯುವನು; ಕಿವಿಹರಕ: ಪಲ್ಲಿಂದಾ ದನುಜರ ಕುಡಿಮೂಗನುರೆ ಕಚ್ಚಿ ಕಿವಿಗಳಂ ಕಿಳ್ತು ಕೈಯೊಡನೆ ಕಿವಿಮೂಳ ಮೂಕೊಱೆಯರಂ ಮಾಡಿ (ಚಬಪು. ೩೨-೩೭). [ಕಿವಿ$_3$ + ಮೂಳ (< ಮೂಱ)]

**ಕಿವಿಮೂಳಿ** (ನಾ). ೧. ಹರಕು ಕಿವಿಯುಳ್ಳವಳು; ಕಿವಿಹರಕಿ: ಕಡುಕಿವಿಮೂಳಿಯರ [ಪಾಠಾಂ. ಮೂಳೆಯರ, ಮೂಳುಗಳ] ಮೂಕೊಱತಿಯರ ಸಮ್ಮೇಳದಿಂದಿರ್ದಳು (ತೊರರಾ. ೫-೨-೩೧). ೨. ಕಿವಿಯಲ್ಲಿ ಏನೂ ಆಭರಣವಿಲ್ಲದವಳು; ಬೋಳುಕಿವಿಯವಳು: (ಶ). [ಕಿವಿ$_3$ + ಮೂಳಿ (< ಮೂಱಿ)]

**ಕಿವಿಮೂಳೆ** (ನಾ). = ಕಿವಿಮೂಳಿ ೧: ಕಡುಕಿವಿಮೂಳೆಯರ[ಪಾಠಾಂ. ಮೂಳಿಯರ, ಮೂಳುಗಳ] ಮೂಕೊಱತಿಯರ ಸಮ್ಮೇಳದಿಂದಿರ್ದಳು (ತೊರರಾ. ೫-೨-೩೧). [ಕಿವಿ + ಮೂಳೆ (< ಮೂಱಿ)]

**ಕಿವಿಯಳತೆ** (ನಾ). ಕಿವಿ ಕೇಳಿಸುವಷ್ಟುದೂರ, —ಅಂತರ: ಅವರ ಮಾತಾಟವಂ ಕಿವಿಯಳತೆಯೊಳಿ ಕೇಳ್ವೆ (ಹಬ್ಬರ. ೨೧-೧೧೩). 'ಕಣ್ಣಳತೆ' ಪರಾ. [ಕಿವಿ$_3$ + ಅಳತೆ]

**ಕಿವಿಯಾರ್** (ಕ್ರಿ). ಕಿವಿಗೆ ತೃಪ್ತಿಯಾಗು; ಕಿವಿ ತಣಿ; ಕಿವಿ ತುಂಬು. ಕಿವಿಯಾರೆ = ೧. ಕಿವಿಗೆ ತೃಪ್ತಿಯಾಗುವಂತೆ; ಕಿವಿ ತುಂಬುವಂತೆ; ಕಿವಿ ತಣಿಯುವಂತೆ: ಗಂಡರೊಳ್ ನೀಜನೆಂಬರ ಮಾತಂ ಕಿವಿಯಾರೆ ಕೇಳ್ದು ಕಿವಿವೇಟಂಗೊಂಡು (ಪಂಪಾಭಾ. ೮-೧೨); ಹೇಳು ಹೇಳಿನ್ನೊಮ್ಮೆ ನುಡಿ ನುಡಿ ಕೇಳುವೆನು ಕಿವಿಯಾರೆ ಕರ್ಣನ ಕಾಳಗಕೆ ನಾವ್ ಸಾರಥಿಗಳೇ (ಕುವ್ಯಾಕ. ೫-೨೧). ೨. ಸ್ವತಃ ತನ್ನ ಕಿವಿಯಿಂದಲೇ: ಶಿವಶರಣರೊಳಗೊಳಗೆ ಬಿಸುಸುಯ್ವುದಂ ಕಿವಿಯಾರೆ ಕೇಳ್ದೆ (ಚಬಪು. ೩-೧೪); ನಾನೇ ಕಿವಿಯಾರೆ ಕೇಳಿದ್ದೇನೆ (ದಾಲತ್. ೬೩); ಕಿವಿಯಾರೆ ಕೇಳುವ ವರೆಗೆ ಯಾರನ್ನೂ ತಪ್ಪುಗಾರರೆಂದು ಎಣಿಸುವವನಲ್ಲ (ಬಿಟ್ಟಹೊ. ೬೫). [ಕಿವಿ$_3$ + ಆರ್$_2$]

**ಕಿವಿಯಿೞ** (ಕ್ರಿ). = ಕಿವಿಗೊಡು: ಭಾವಿಸಿ ವಂದಿಜನಂ ಪ್ರಸ್ತಾವದೊಳುಪಹಾಸ ಲವಮನೊಡರಿಸೆ ಕಿವಿಯಿತ್ತಾ ವಚನಕ್ಕೆ (ಶಾಂತಿಪು. ೩-೫೦); ಒಂದೊಂದನವುಂಕಿ ನೊಂಕಿ ಪಕ್ಕಿ ಕಿವಿಯಿತ್ತೊಱಲ್ದು ಕೇಳ್ಗೆ . . . ಕ್ರೂರ ಮೃಗ ನಿವಹಮುಮಂ ಕಂಡು (ಪಂಚತಂ. ೧೨೦-೧). [ಕಿವಿ$_3$ + ಈ$_2$]

**ಕಿವಿಯೂದು** (ಕ್ರಿ). ೧. ಕಿವಿಯಲ್ಲಿ ಗುಟ್ಟಾಗಿ ಹೇಳು; ಬೋಧಿಸು: ಗುರಿಯಿಟ್ಟ ಕಣ್ಣುಗಳ ಕಿವಿಯೂದಿ ಹೊರಳಿಸುತ ತಾನೆ ತನ್ನಷ್ಟಕ್ಕೆ ಹಾಡಿವಾಕೆ (ಉಯ್ಯಾಲೆ. ೪೦-೩). ೨. ಚುಚ್ಚಿಕೊಡು; ಚಾಡಿಹೇಳು; ಚಿತಾವಣೆಮಾಡು: ಕಿಟ್ಟಯ ಕಿವಿಯೂದಿ ತನ್ನ ಮಗಳನ್ನೇ ವರಿಸುವಂತೆ ಮಾಡಿದರೆ ಹೇಗೆ (ಗಂವಾಯಿ. ೩೩); ಆಗ ಮುದುಕಿ ಟಳಕರ ಕಿವಿಯೂದಿ ನಮ್ಮಿಬ್ಬರಲ್ಲಿ ವಿತುಷ್ಟಿ ಹುಟ್ಟುವಂತೆ ಯತ್ನ ನಡೆಸಿದಳು (ಸ್ಮೃತಿಚಿ. ೧೩೮). [ಕಿವಿ$_3$ + ಊದು$_1$]

**ಕಿವಿಯೇಱು** (ನಾ). ಕಿವಿಯ ಗಾಯ; ಕರ್ಣಶೂಲೆ: ಎಂದುವುಂ ಕೇಳದಕ್ಕರ ತನ್ನ ಕಿವಿವಾಗೆ ನೊಂದು ಹವ್ವನೆ ಹಾಱಿ ಪುಱುಗಿ ಕಿವಿಯೇಱಾಗೆ [ಪಾಠಾಂ. ಕಿವಿಗೆ ತಾನೇಱಾಗೆ] (ಶಿರುರ. ೮-೬). [ಕಿವಿ$_3$ + ಏಱು$_2$ (< ಏಱ್$_2$)]

**ಕಿವಿಯೊಂಟಿ** (ನಾ). ಕಿವಿಯಲ್ಲಿ ಧರಿಸುವ ಒಂಟಿ: ಮುಟ್ಟುವುದೆಮಿಂಚಿ ಕಿವಿಯೊಂಟಿಯೊಳ್ಪಾಗೆ (ಕಾಲೂರ. ೧೮೮-೩೨೨). [ಕಿವಿ$_3$ + ಒಂಟಿ$_2$]

**ಕಿವಿಯೊಗು** 'ಕಿವಿವೊಗು' ನೋ.

**ಕಿವಿಯೊಡ್ಡು** (ಕ್ರಿ). = ಕಿವಿಚಾಚು: ಪ್ರಸಾದಲಿಂಗ ಮೋಹಿಯಾದೊಡೆ ಶಬ್ದಜಾಲಂಗಳಿಗೆ ಕಿವಿಯೊಡ್ಡದಿರಬೇಕು (ಆದವ. ೧೨). [ಕಿವಿ$_3$ + ಒಡ್ಡು$_1$]

**ಕಿವಿಯೋಲೆ** (ನಾ). ಕಿವಿಯಲ್ಲಿಟ್ಟುಕೊಳ್ಳುವ ಓಲೆ, —ಆಭರಣ ; ಕರ್ಣಪತ್ರ: "ತಾಳಕಃ, ತಾಳಪತ್ರಂ(ಕರ್ಣಪತ್ರಂ)– ಈ ೨ ಕಿವಿಯೋಲೆ" (ಹಲಾಯು. ೯೧–೪೦೨); ಕನಸಿನೊಳಾವನಾಂ ಮಱದು ನಿದ್ರೆಗೆ ಯುತ್ತಿರೆ ಬಂದುವಂದು ಕೆಮ್ಮನೆ ಕಿವಿಯೋಲೆಯಲ್ಲಿ ಕುಱುಪಂ ಬರೆವಂ (ಕಾದಂಉ. ೩೦೪) ; ಕವಿಗಳ ಲೀಲೆ ಗಂಗೆಗಿವಿಯೋಲೆ ವನೇಭದ ಶಾಲೆ . . . ಮಣಿಗಳಾಗರ ಮುಂದೆಸೆದತ್ತು ಸಾಗರಂ (ಸೂಕ್ತಿಸು. ೨–೩೬) ; ತಳಿರುಡಿಗೆ ಹೊಮ್ಮಿಗದ ಸಂಮರ್ದೊಳು ರವಿಕೆ ಮಂಜುಳ ಕೇತಕೀದಳದ ಕಿವಿಯೋಲೆ (ನಂದಿಮಾ. ೧೩–೨೬). [ಕಿವಿ$_3$ + ಓಲೆ]

**ಕಿವಿರು**(ನಾ). ಮೀನು ಮೊದಲಾದ ಜಲಚರ ಪ್ರಾಣಿಗಳ ಶ್ವಾಸಾಂಗ: ಜಲಚರ ಕೀಟಗಳಲ್ಲಿ ಗಾಳಿ ಕಿವಿರುಗಳ (gills) ಮೂಲಕ ನಾಳಗಳಿಗೆ ಸೇರುತ್ತದೆ (ಕೀಟಬಿ. ೩೬). [?]

**ಕಿವಿರಿಯಯ್ಯ** (ನಾ). ಒಬ್ಬಾತನ ಹೆಸರು : ಮದುವಂಗನಾಡದೊರೆ ಕಿವಿರಿಯಯ್ಯಂಗಳ್ ಚಾಂಗಳದ ಬಸದಿಯೊಳ್ ಪನ್ನೆರಡಂ ನೋಂತು ಮುಡಿಪಿದನ್ (ಎಕ. IX, ಕೊಡಗು. ೩೦–೬; 1050). [ಕಿವಿರಿ$_0$ + ಅಯ್ಯ$_1$]

**ಕಿವಿಲುತನ** (ನಾ). ಕೀಳ್ತನ; ಅಲ್ಪತೆ; ಕ್ಷುದ್ರತೆ: ಆ ಕೂಂಟಣಿಯ ಕಿವಿಲುತನಮಂ ಕಂಡು ಕಂಟಣಿಸಿ (ಶಾಂತೀಶ್ವ. ೧೧–೬೯ ವ). 'ಕಿವರಿತನ' ಪರಾ. [?]

**ಕಿವಿವಚ್ಚ** (ನಾ). ಕಿವಿಯ ಆಭರಣ, —ಒಡವೆ : ಕಥೆಯೆಂತೆನಲ್ ಸದ್ಭಕ್ತಸಂತತಿಯ ಕಿವಿವಚ್ಚಮುಪ್ಪಂತವೋಲೇವೇಳ್ವೆನತಿಹರ್ಷದೆಸಕದಿಂದೆ (ಆರಾಚ. ೧–೬೪). [ಕಿವಿ$_3$ + ಪಚ್ಚ$_3$]

**ಕಿವಿವರೆದೆಗೆ** (ಕ್ರಿ). ಕಿವಿಯವರೆಗೆ ಎಳೆ ; ಕರ್ಣಾಂತವಾಗಿ ಸೆಳೆ: ಗೆಲವಾಂತು ಕಿವಿವರೆದೆಗೆದೆಚ್ಚ ನೀಲೋತ್ಪಲ ಬಾಣದಿಂದಲೀಶ್ವರನ (ಮೋಹತ. ೬–೩೬) ; ಕಿವಿವರೆದೆಗೆದಿಕ್ಕಿ ತಾಗಿದನವ ಪುಷ್ಪಶರನ (ಮೋಹತ. ೩೫–೧೯). [ಕಿವಿವರೆ + ತೆಗೆ$_1$]

**ಕಿವಿವರ್ಚು** (ಕ್ರಿ). ಕಿವಿಯಲ್ಲಿ ಪಿಸುಮಾತಾಡು: ಅವಸರವಾಗೆ ಪಾರ್ದು ಕಿವಿವರ್ಚುವ ಸಂಗರವಾಗೆ ನೋಡಿ ಬೆರ್ಚುವೆ ಪತಿಯರ್ಥಮಂ ಕಳೆಲೊಡರ್ಚುವ ಮತ್ತಿಗೆ ದಂಡನಾಯಕರ್ (ಎಕ. VII, ಶಿಕಾರಿ. ೧೩೬–೨೫ ; 1114). [ಕಿವಿ$_3$ + ಪರ್ಚು$_1$]

**ಕಿವಿವಳಿ**(ನಾ). ಕಿವಿಯ ಸಮೀಪ, —ಪ್ರದೇಶ: ಕಿವಿವಳಿಯಮೋಱಗಳ ಮುಷ್ಟಿಯ ಬವರಿಗಳ ಕಡೆಗಣ್ಣ ಸನ್ನೆಯ ಸವಡಿಗೈಗಳ . . . ರಣದವ ಕದಲಿ ಕಳವಳಿಸುತಿರ್ದುದು ಕೂಡೆ ನೃಪ ಕಟಕ (ಕುವ್ಯಾಸ. ೧೦–೨).

[ಕಿವಿ$_3$ + ಬಳಿ$_3$ (< ಬೞ$_3$)]

**ಕಿವಿವಾಲೆ** (ನಾ). ಕಿವಿಯ ಕೆಳಭಾಗ; ಹಾಲೆ : ಓಲೆ ಮನ್ಮಥನ ಮನೋರಥಕಿಕ್ಕಿದ ಗಾಲಿಯಂತಾಗಲಂತದಱ ಮೇಲಿಟ್ಟ ಮಿಸುನಿವತ್ತಿಗೆಯೆಂದೆನೆ ಕಿವಿವಾಲೆಯೊಪ್ಪಿದುವಾ ಸತಿಗೆ (ಶ್ರೀಪಾಲ. ೩–೬೧). [ಕಿವಿ$_3$ + ಪಾಲೆ$_3$]

**ಕಿವಿವುಗು** 'ಕಿವಿವೊಗು' ನೋ.

**ಕಿವಿವೆಱು** (ಕ್ರಿ). ಕಿವಿಗಳನ್ನು ಹೊಂದು ; ಕೇಳುವ ಶಕ್ತಿಯನ್ನು ಪಡೆ : ಕಿವಿವೆತ್ತಂದದಿಂದಮೆಮ್ಮೊಳ್ ತೊಡರ್ದಿಱದಪೆಮೆಂಬನ್ನರಂ ಕೇಳ್ದಿನಿಲ್ಲಿಂದುವರಂಬೊಲ್ ಚೋದ್ಯಮೇ (ಅನಂಪು. ೧೩–೬೮). [ಕಿವಿ$_3$ + ಪೆಱು$_1$]

**ಕಿವಿವೇಟ** (ನಾ). ಕೇಳುವುದರಿಂದಲೇ ಉಂಟಾಗುವ ಮೋಹ; ಕೇಳುವ ಆಸಕ್ತಿ : ಅವಲೋಕನದಿಂದಾಗರ್ಂ ಕಿವಿವೇಟಮನುಂಟುಮಾಡುವಚ್ಚರಿಗೆಡೆಯಾದವಳಸಿಯ ಕರ್ಣಯುಗಳಕ್ಕವತಂಸೋತ್ಪಲಮೆನಿಪ್ಪವೆಲ್ಲರ ಕಣ್ಗಳ್ (ಮಲ್ಲಿಪು. ೩–೮೧); ಕಿವಿವೇಟದಿಂ ಭಾಳಾಕ್ಷನಿಮಗೊಲಿದೆ (ದೀಕ್ಷಾಬೋ. ೮೪–೨) ; ಕಣ್ಬೇಟದಿಂ ಕಿವಿವೇಟವೆಗ್ಗಳಸೆ (ಬಸಪು. ೪೫–೨) ; ಉಕ್ಕಿದಾ ಕಿವಿವೇಟ ಕಣ್ಬೇಟಕ್ಕೆ ತಂದುದು (ಕುವ್ಯಾಅ. ೧೩–೫೮). 'ಕಣ್ಬೇಟ' ಪರಾ. [ಕಿವಿ$_3$ + ಬೇಟ$_2$]

**ಕಿವಿವೇಟಂಗೊಳ್, ಕಿವಿವೇಟಗೊಳ್** (ಕ್ರಿ). ಕೇಳುವುದರಿಂದಲೇ ವ್ಯಾಮೋಹ ಹೊಂದು : ಗಂಡರೊಳ್ ನೀಜನೆಂಬರ ಮಾತಂ ಕಿವಿಯಾರೆ ಕೇಳ್ದು ಕಿವಿವೇಟಂಗೊಂಡು ಕರ್ಣಾರ್ಣವಿನಂ ಹರಿಯಂ ನೋಡಿದಳಾಕೆ (ರಸರ. ೧–೨೯). **ಕಿವಿವೇಟಗೊಳ್** : ಪಾಂಡುಕುಮಾರನಾ ಕೊಂತಿಯ ಮೆಱೆವ ವಿಲಾಸವಿಭ್ರಮುವ ನೆರೆ ಕೇಳಿ ಕಿವಿವೇಟಗೊಂಡು (ನೇಮಿಸಂ. ೫–೮೫). [ಕಿವಿವೇಟ + ಕೊಳ್$_1$]

**ಕಿವಿವೇಟಗೊಳ್** 'ಕಿವಿವೇಟಂಗೊಳ್' ನೋ.

**ಕಿವಿವೊಗು**, ಕಿವಿಯೊಗು, ಕಿವಿವುಗು (ಕ್ರಿ). ಕಿವಿಯನ್ನು ಪ್ರವೇಶಿಸು ; ಕಿವಿಯನ್ನು ಸೇರು: ಇಂಪನಾಳ್ದ ಗೇಯಂ ಕಿವಿವೊಕ್ಕೊಡಂ (ಪಂಪಭಾ. ೪–೩೦); ಅನುನಯದೆ ಪೇೞ್ದನದನಿನಿತುಂ ಕಿವಿವೊಕ್ಕುದಿಲ್ಲ ತನ್ಮನಿವರನಾ (ಕಾದಂಪೂ. ೮೫೪) ; ಏಕಾಂತದೊಳ್ ನಾರದಂ ಬಳಕ್ಕೃಷ್ಣಗರ್ವತಂಸದಂತೆ ಕಿವಿವೊಕ್ಕೇನಾನುಮಂ ಪರ್ಚಿದಂ (ಅನಂಪು. ೧೩–೩೯). **ಕಿವಿಯೊಗು** : ಕಳಧ್ವನಿಯೊಳ್ ಮಂದ್ರತೆಯಂ ತಗುಳ್ಚಿ ಕಿವಿಯೊಕ್ಕು (ಅನಂಪು. ೮–೬೯). **ಕಿವಿವುಗು** : ಅವಿನಾಣಮೆನಿತುಮೆರ್ದವುಗೆ ಕಿವಿವುಗೆ ಪಂಡಿತೆಗೆ ನುಡಿದ ನಲ್ಲನ ನುಡಿ (ಆದಿಪು. ೪–೨೩) ; ಕಿವಿವುಗದೆದಲಾತ್ಮಪ್ರಶಂಸೆ ವಜ್ರಾಯುಧನಾ (ಶಾಂತಿಪು. ೮–೬೬) ; ಕಿಳಿರ್ವ ಗೋಳಿಗೆಯ ದನಿ ಕಿವಿವುಗದ ಮುನ್ನಂ (ರಾಜಶೇ. ೬–೧೧ ವ). [ಕಿವಿ$_3$ + ಪೊಗು$_1$]

**ಕಿವಿಶೂಲೆ** (ನಾ). ಕಿವಿ ಬೇನೆ, —ನೋವು : ಹೊಟ್ಟೆನೋವಿನಿಂದಲೋ ಕಿವಿಶೂಲೆಯಿಂದಲೋ ಕಿರಿಚಿಕೊಳ್ಳುವ ಮೂರುತಿಂಗಳ ಮಗು (ಹುಚ್ಚುಹು. ೧೪). [ಕಿವಿ$_3$ + ಶೂಲೆ]

**ಕಿವಿಸವಿ** (ನಾ). ಕಿವಿಗೆ ಹಿತವಾದದ್ದು, —ಪ್ರಿಯವಾದದ್ದು : ಕಿವಿಸವಿದನಿ ಕಣ್ಸವಿ ರೂಪವಧರಿಸಲೆ ಗಜವೆಡಂಗ ನಿನ್ನುೞದೊಡೆ ಸಾವವಳ್ (ಯಶೋಚ. ೨–೫೨). [ಕಿವಿ$_3$ + ಸವಿ$_2$]

**ಕಿವಿಹರಕ** (ನಾ). ಕಿವಿ ಹರಿದು ಹೋಗಿರುವವನು ; ಹರಿದುಹೋದ ಕಿವಿಯುಳ್ಳವನು : ಅಂದಿನಿಂದ ಏಳುಮುದ್ದೆಗೆ ಕಿವಿಹರಕ ಎಂಬ ಅಡ್ಡ ಹೆಸರನ್ನು ನನ್ನೂರಿನವರು ಕಟ್ಟಿದರು (ನನ್ನೂರು. ೩೧೧).

[ಕಿವಿ$_3$ + ಹರಕ$_2$ (< ಹರಿಕ)]

**ಕಿವಿಹರಕಿ** (ನಾ). ಹರಕುಕಿವಿಯುವಳು : (ಕ). [ಕಿವಿಹರಕ + –ಇ$_3$]

**ಕಿವಿಹಿಂಡು** (ಕ್ರಿ). ೧. ಕಿವಿಯನ್ನು ನುಲಿಚು : ಗುರುಗಳು ಹುಡುಗನನ್ನು ಕಿವಿಹಿಂಡಿ ಕಳಿಸಿದರು (ರೂಢಿ). ೨. (ಆಲಂ) ಪಿಸುಮಾತು ಹೇಳಿ ಮನಸ್ಸು ತಿರುಗಿಸು : ಇದು ನಿನ್ನ ಮಾತಲ್ಲ . . . ಯಜಮಾನಿ ಚೆನ್ನಾಗಿ ಕಿವಿಹಿಂಡಿದಂತೆ ತೋರುತ್ತದೆ (ಮಣಿಮ. ೩೮) ; ಮುಂದೆ ಯಾರೇನು ಕಿವಿ ಹಿಂಡಿದರೋ . . . ಅಂತೂ ಈ ಭಟ್ಟನಿಯ ತಳ್ಳಿಬಿಟ್ಟುಬಿಟ್ಟ (ಮೂರುದಾ. ೧೫೨). [ಕಿವಿ$_3$ + ಹಿಂಡು$_1$ (< ಪಿಂಡು$_1$)]

**ಕಿವಿಹಿಡಿ** (ಕ್ರಿ). ೧. ಕಿವಿಯನ್ನು ಹಿಡಿ. ೨. (ಆಲಂ) ಒತ್ತಾಯಪಡಿಸು ; ಅಧಿಕಾರದಿಂದ ಬಲಾತ್ಕರಿಸು : ಕಿವಿಹಿಡಿಯೆಂದರೆ ತಿದ್ದು ಅಥವಾ ಒತ್ತಾಯಪಡಿಸು (ಗೋಯಾತ್ರ. ೫೩).

[ಕಿವಿ$_3$ + ಹಿಡಿ$_1$ (< ಪಿಡಿ$_1$)]

**ಕಿವುಂಡ**, ಕಿವುಡ (ನಾ). ಕಿವಿ ಕೇಳಿಸದವನು ; ಕೆಪ್ಪ ; ಬಧಿರ : ಕೂನದೇಹನಾಗದೆ ವಿಕಟಾಂಗನಾಗದೆ ಕಿವುಂಡನೆಯಾಗದೆ (ಪಂಪಾಶ. ೬೫). **ಕಿವುಡ** : "ಏಡಃ, ಬಧಿರಃ – ಈ ೨ ಕಿವುಡಂ" (ಹಲಾಯು. ೧೦೦–೪೫೫); ಕಿವುಡಂ ಪಂಗು ಮೂಕಂ (ವಡ್ಡಾರಾ. ೯–೨); ಕಿವುಡಂಗೇಕಾಂತವಂ ಹೇೞುಹವುಂ (ಪಂಚತಂ. ೧೩೬–೯ ಟೀಕೆ); ಕಿವಿ ಬಲಿಯದಿರೆ ಕಿವುಡನಾಗಿಯೆಬರ್ಪ (ಪಿಂಡರ. ೧೫–೩೬) ; ಕಿವುಡರಂ ಕರೆವಂದದಿಂದಾಂ ಕರೆಯಲು (ಬಸಪು. ೧೮–೧೮) ; ಕಿವುಡ ಯಜಮಾನಗೆ ಮೂಗ ಬಂಟ (ಗಾದೆ) ; ಕಿವುಡನಮುಂದೆ ಕಿನ್ನರಿ ಬಾರಿಸಿದ ಹಾಗೆ (ಗಾದೆ). [ಕಿವುಂಡು + –ಅ$_7$]

**ಕಿವುಂಡು**, ಕಿವುಡು (ನಾ). ೧. ಕಿವಿ ಕೇಳಿಸದಿರುವಿಕೆ ; ಬಧಿರತೆ: ಪಸಿವ ಸಂಕಟದಿಂ ಕಿವುಂಡು ಕಣ್ಗಳ್ತಲೆಗಳೊತ್ತಿ (ಸಂಸಪ. ೨೧-೪). 'ಕಿವುಂಡುಗೇಳ್' ಪರಾ. **ಕಿವುಡು** : ೧. ಕಿವುಡು, ಕೆಂಚು, ಗುಜ್ಜು (ಶಮದ. ೨೧೧ ಪ್ರಯೋ). ೨. ಕಿವುಡ; ಬಧಿರ: ಅವನೊಂದು ಕಿವುಡು (ರೂಢಿ). 'ಕಿವುಡುಕಿನ್ನರಿ' ಪರಾ.

ಕಿವುಡಾಗು = ಕಿವಿ ಕೇಳದಂತಾಗು, —ಗಡಚಿಕ್ಕು: ದಿಗು ಮಂಡಲಂ ಕಿವುಡಾಗೆ ಬಹುವಾದ್ಯ ಧ್ವನಿಗಳಿಂದ (ಬಸಪು. ೫-೧೪) ; ಚಾಪ ಟಂಕಾರಂ ಜಗತ್ತ್ರಯದೊಳೆಲ್ಲಿಯುಂ ವ್ಯಾಪಿಸಲ್ ಕಿವುಡಾದು ವಷ್ಟದಿಗ್ದಂತಿಗಳ್ (ಜೈವಿಭಾ. ೨೧-೧೩).

[ದೇ. ‖ ತಮಿ. ಮಲ. ಚೆವಿಡು ; ಕೋಲಾ. ಕೆವ್ರ; ತೊದ. ಕ್ಯುಡ್ ; ತೆಲು. ಚೆವುಡು]

**ಕಿವುಂಡುಗೇಳ್** 'ಕಿವುಟ್ಕೇಳ್' ನೋ.

**ಕಿವುಂಡುವಡಿಸು**, ಕಿವುಡುವಡಿಸು (ಕ್ರಿ). ಕಿವುಡಾಗುವಂತೆ ಮಾಡು ; ಕಿವುಡುಗೊಳಿಸು : ಬಲ್ಲುಲಿಯ ಸಡಗರಮೆಲ್ಲಾ ದೆಸೆಗಳಂ ಕಿವುಂಡುವಡಿಸೆ (ಕಬ್ಬಕಾ. ೨೫೧). **ಕಿವುಡುವಡಿಸು** : ಪರುಷತರ ಶರಭ ಕೇಸರಿವಿರಾವದಿಂ ಕಿವುಡುವಡಿಸುತ್ತಂ ದೆಸೆಗಳಂ (ಚಂದ್ರಪು. ೫-೪೬) ; ಫಣಾಮಂಡಳಮಂ ಪಸರಿಸಿ ಮಸಗಿ ಮೊರೆದು ದೆಸೆಗಳಂ ಕಿವುಡುವಡಿಸುತ್ತುಂ (ವರ್ಧಪು. ೧೪-೬೮ ವ). [ಕಿವುಂಡುವಡು + -ಇಸು$_3$]

**ಕಿವುಂಡುವಡು**, ಕಿವುಡುವಡು (ಕ್ರಿ). = ಕಿವುಡುಗೊಳ್. 'ಕಿವುಂಡುವಡಿಸು' ಪರಾ. **ಕಿವುಡುವಡು** : ಬೀಸುವ ಜಂಝಾ ಮಾರುತ ರುತಿಯಿಂ ಭುವನಮಧೋರಂತಿರೆ ಕಿವುಡುವಟ್ಟುವಾ ಸರಿವಱಯೊಳ್ (ಕುಸುಮಾ. ೬-೨೯). [ಕಿವುಂಡು + ಪಡು$_1$]

**ಕಿವುಚು** 'ಕಿಮುಚ್ಚು' ನೋ.

**ಕಿವುಚುರೊಟ್ಟಿ** (ನಾ). ಒಂದು ಬಗೆಯ ರೊಟ್ಟಿ: ತನಿವಾಲಿನೊಳಗೆ ಭಾವನೆಗೆಯ್ದು ಸೊಜ್ಜಿಗೆಯನಿನಿಸು ಕೆನೆವೆರಸಿ ಬೆಣ್ಣೆಯನಿಕ್ಕಿ ಮತ್ತೆ ಕಿವುಚನು ಗೆಯ್ದು ಹಂಚಿನೊಳು ನಸು ತುಪ್ಪವೆಱದು ಬೇಯಿಸಲದುವೆ ಕಿವುಚುರೊಟ್ಟಿ (ಸೂಪಶಾ. ೧-೧೮).

[ಕಿವುಚು (< ಕಿಮುಚ್ಚು) + ರೊಟ್ಟಿ]

**ಕಿವುಡ** 'ಕಿವುಂಡ' ನೋ.

**ಕಿವುಡಿ** (ನಾ). ಕಿವಿ ಕೇಳಿಸದವಳು ; ಬಧಿರೆ : ಒಳಗಣ ಕಿವುಡಿಯರ್ ಪಿಡಿದುಕೊಂಡವಳಂ ಪೆಱಗಣ್ಗೆ ನೂಂಕಿದರ್ (ಧರ್ಮಾಮೃ. ೨-೫೨) ; ನಿನ್ನ ತಂಗೆವಿರ್ ಕುಂಟಿಯುಂ ಕುರುಡಿಯುಂ ಕಿವುಡಿಯುಂ ಕುಬ್ಜೆಯುಂ (ಶಾಂತೀಶ್ವ. ೮-೧೩೧ ವ).

[ಕಿವುಡು (< ಕಿವುಂಡು) + -ಇ$_2$. / ತಮಿ. ಚೆವಿಡಿ]

**ಕಿವುಡಿಕೆ** (ನಾ). = ಕಿವುಡುತನ : ಹೇಳಿದನು ಬಳಿಕವಗೆ ತಾ ತಂದೂಳಿಗದ ಪೂರ್ವಾಪರವನದ ಕೇಳಿದನು ಕಿವುಡಿಕೆಯ ಕೊಸರಿನ ಕೊನರ್ವ ಕೋಪದಲಿ (ತೊರರಾ. ೩-೭-೩೦). [ಕಿವುಡು (< ಕಿವುಂಡು) + -ಇಕೆ]

**ಕಿವುಡು** 'ಕಿವುಂಡು' ನೋ.

**ಕಿವುಡುಕಿನ್ನರಿ** (ನಾ). ೧. ಕಿವುಡನ ಮುಂದೆ ನುಡಿಸಿದ ಕಿನ್ನರಿ. ೨. (ಅಲಂ) ವ್ಯರ್ಥ ಶ್ರಮ : ಸತ್ತ್ವಮತಿ ಆ ಪೂಜ್ಯನೆನ್ನ ನಿರ್ವ್ಯಾತನಕೆ ಪೇಳ್ದಿಲ್ಲಮುಂ ನೀತಿಯುಂ ಕಿವುಡುಕಿನ್ನರಿಯಾಯ್ತು . . . ರಾವಣಗೆ (ಶ್ರೀರಾಮಾ. ೫೧೬-೪೨೮). [ಕಿವುಡು (< ಕಿವುಂಡು) + ಕಿನ್ನರಿ]

**ಕಿವುಡುಕೇಳ್** 'ಕಿವುಟ್ಕೇಳ್' ನೋ.

**ಕಿವುಡುಗ** (ನಾ). ಕಿವುಡ; ಬಧಿರ: ಸುಲಲಿತಸ್ವರದ ಸಂಗೀತಕ್ಕೆ ಮಣಿದಲೆಯನೊಲೆವ ಫಣಿರಾಜನಂದದಿ ಕಿವುಡುಗರ ತಲೆಯಲುಗುವುದೆ (ಸಮ್ಯಕೌ. ೬-೫೯). [ಕಿವುಡು (< ಕಿವುಂಡು) + -ಗ$_3$]

**ಕಿವುಡುಗಾಯಿ** (ನಾ). ನೀರು ಇಮರಿದ ತೆಂಗಿನಕಾಯಿ ; ಅಲುಗಾಡಿಸಿದರೆ ಸದ್ದು ಮಾಡದ ಕಾಯಿ : ಕಿವುಡುಗಾಯನ್ನು ದೇವರಿಗೆ ಒಡೆಯುವುದಿಲ್ಲ (ರೂಢಿ). [ಕಿವುಡು (< ಕಿವುಂಡು) + ಕಾಯಿ$_4$ (< ಕಾಯ್$_4$)]

**ಕಿವುಡುಗಿವಿ** (ನಾ). ಕೇಳದ ಕಿವಿ ; ಕಿವುಡಾದ ಕಿವಿ : ಉರುಳುರುಳು ಹಗಲಿರುಳು ಎಲೆ ಧರಣಿ, ನಿಷ್ಕರುಣಿ . . . ಕಿವುಡುಗಿವಿಯನು ಬಿಚ್ಚಿ ಎಲ್ಲರೆದೆಗಳ ಚುಚ್ಚಿ (ಪಾಂಚಜ. ೨೬). [ಕಿವುಡು (< ಕಿವುಂಡು) + ಕಿವಿ$_3$]

**ಕಿವುಡುಗೇಳು** 'ಕಿವುಟ್ಕೇಳ್' ನೋ.

**ಕಿವುಡುಗೊಳ್** (ಕ್ರಿ). ಕಿವಿ ಕೇಳದಾಗು ; ಕಿವುಡಾಗು : ದೆಸೆ ಕಿವುಡುಗೊಳೆ ಮೊಳಗೆ ವಾದ್ಯ ಪ್ರಸರವು (ಸಾಳ್ವಭಾ. ೩-೨೮).

[ಕಿವುಡು (< ಕಿವುಂಡು) + ಕೊಳ್$_1$]

**ಕಿವುಡುಗೊಳಿಸು** (ಕ್ರಿ). ಕಿವುಡಾಗುವಂತೆ ಮಾಡು ; ಕಿವುಡಾಗಿಸು : ಕಿವಿ ಕಿವುಡುಗೊಳಿಸುತಿಹ ಆ ರಾವಗಳನೆಲ್ಲ ನಿನ್ನ ಮೆಲ್ಲುಸಿರಿಂದ ಮುಳುಗಿಸಿಡುವೆ (ದ್ರಾಕ್ಷಿದಾ. ೧೦-೧೩). [ಕಿವುಡುಗೊಳ್ + -ಇಸು$_3$]

**ಕಿವುಡುತನ** (ನಾ). ಕಿವಿ ಕೇಳಿಸದಿರುವಿಕೆ ; ಬಧಿರತೆ.

[ಕಿವುಡು (< ಕಿವುಂಡು) + -ತನ]

**ಕಿವುಡುವಡಿಸು** 'ಕಿವುಂಡುವಡಿಸು' ನೋ.

**ಕಿವುಡುವಡು** 'ಕಿವುಂಡುವಡು' ನೋ.

**ಕಿವುಡುವೀೞ್** (ಕ್ರಿ). = ಕಿವುಡುಗೊಳ್ : ಕಿವುಡುವೀೞ್ವನಂ ದಿಕ್ಕರಿಗಳ್ ಪಱೆ ಮೊಳಗಿದವು (ಪಂರಾಮಾ. ೭-೮೨) ; ತೂರ್ಯಾಶ್ಚರ್ಯನಾದೋತ್ಕಟದೆ ಕಿವುಡುವೀೞಲ್ ದಿಶಾಚಕ್ರವಾಳಂ (ಕುಸುಮಾ. ೧೫-೮೪).

[ಕಿವುಡು (< ಕಿವುಂಡು) + ಬೀೞ್$_1$]

**ಕಿವುಡುವೋಗು** (ಕ್ರಿ). = ಕಿವುಡುಗೊಳ್ : ಕೆಲರ್ ಕಣ್ ಕಾಣದಾದರ್ ಕೆಲರ್ ಕಿವುಡುವೋದರ್ (ಶ್ರೀರಾಮಾ. ೭೯೨-೩೦೮).

[ಕಿವುಡು (< ಕಿವುಂಡು) + ಪೋಗು$_1$]

**ಕಿವುಡೆಬ್ಬಿಸು** (ಕ್ರಿ). = ಕಿವುಡುಗೊಳಿಸು : ಕೈಗೆ ಸಿಕ್ಕಿದ ತಟ್ಟೆಗಳನ್ನೂ ಪಾತ್ರೆಗಳನ್ನೂ, ಇನ್ನೂ ಇತರ ಉಪಕರಣಗಳನ್ನೂ ಕಿವುಡೆಬ್ಬಿಸುವಂತೆ ಬಡಿಯುತ್ತಲೂ . . . ಘೋರವಾಗಿ ಅರಚುತ್ತಲೂ (ಜ್ಯೋತಿರ್ವಿ. ೨೩೯).

[ಕಿವುಡು (< ಕಿವುಂಡು) + ಎಬ್ಬಿಸು (< ಎೞ್ಬಿಸು)]

**ಕಿವುಡೆಸೆ** (ಕ್ರಿ). = ಕಿವುಡುಗೊಳ್ : ಧಂಧಣಂ ಧಳಧಳಧಳಂ ಧಳಧ್ವನಿಗೆ ಫಣಿಪ ದಿಕ್ಕರಿಗಳ ಶಿರಂ ಧಿಮ್ಮೆನುತ್ತೆ ಕಿವುಡೆಸೆಯಲು (ಚಬಪು. ೪೭-೩೧).

[ಕಿವುಡು (< ಕಿವುಂಡು) + ಎಸೆ$_1$]

**ಕಿವುಡೇಳು** (ಕ್ರಿ). = ಕಿವುಡುಗೊಳ್ : ರೋದನವ ಕೇಳಿ ಕೇಳಿ ನಮ್ಮ ಕಿವಿ ಕಿವುಡೆದ್ದು ಹೋಗಿದೆ (ಚಂದ್ರಸ. ೧೫).

[ಕಿವುಡು (< ಕಿವುಂಡು] + ಏಳು$_1$ (< ಏೞ್$_1$]

**ಕಿವುಡೋದು** (ನಾ). (ಕಿವುಡನಂತೆ) ಸದ್ದನ್ನು ಗಮನಿಸದೆ ಸಾಗುವ ಓದು : "ಕುರುಡೋದು" ಎಂಬ ನಾಣ್ನುಡಿಯಿದೆ. ಆದರೆ ಕಿವುಡೋದು ಎಂಬ ಮಾತು ರೂಢಿಯಾಗುವುದಗತ್ಯ (ಸಾಹಿಸಂ. ೭೩).

[ಕಿವುಡು (< ಕಿವುಂಡು) + ಓದು$_2$]

**ಕಿವುಟ್** (ನಾ). ಕಿವುಡು ಎಂಬುದಕ್ಕೆ ಸಮಾಸದಲ್ಲಿ ಬರುವ ಆದೇಶ ರೂಪ. 'ಕಿವುಟ್ಕೇಳ್' ಪರಾ. [< ಕಿವುಡು]

**ಕಿವುಱ್** (ಅ). ಕಿವುಚುವಂತೆ : ಸಂಸಪ್ತಕ ಬಲಮನೆಲ್ಲಮನಳಱ ಪೆಳಱ ಕಿವುಱದುಱದು (ಪಂಪಭಾ. ೧೧-೧೦ ವ). [< ಕಿಮುೞ್]

**ಕಿವುಟ್ಕೇಳ್**, ಕಿವುಂಡುಗೇಳ್, ಕಿವುಡುಕೇಳ್, ಕಿವುಡುಗೇಳು, ಕಿವುಟ್ಗೇಳ್ (ಕ್ರಿ). ಕೇಳಿದರೂ ಕೇಳಿಸದಂತಿರು ; ಗಮನಿಸದಿರು ; ಮಾತನ್ನು ಅಲಕ್ಷಿಸು : ಕಡುಕೆಯ್ದು ದಿವ್ಯದ ನುಡಿಗೆ ಕಿವುಟ್ಕೇಳ್ದು ಕುಡಿದು ನೀರಂ ಭೀಮಂ . . . ಕೆಡೆದಂ (ಪಂಪಭಾ. ೮-೪೨).

**ಕಿವುಂಡುಗೇಳ್**: ನೆಱಿಗಿವುಡರಂತೆ ಕಿವುಂಡುಗೇಳ್ದುಂ (ಪಂಚತಂ. ೧೯–೨). **ಕಿವುಡುಕೇಳ್** : ಕಿವುಡು ಕೇಳ್ದವನೊಡನೆ ಮಗನ ಹಿಂದೆಯೊನಡೆದ (ಹಬ್ಬೆರ. ೨೨–೧೨೪). **ಕಿವುಡುಗೇಳು** : ಕಿಱುನಗೆವೆರಸಿ ಕರ್ಣಾದಿಗಳ ವದನವ ತಿರುಗಿ ನೋಡುತ ಹರಿಯ ನುಡಿಗಳಕಿವುಡು ಗೇಳುತ್ತ (ಕುವ್ಯಾಉ. ೯–೧೫). **ಕಿವುಟ್ಗೇಳ್** : ಕಿವುಡು ಕೇಳ್ವನೆಂಬಲ್ಲಿ ಕಿವುಟ್ಗೇಳ್ವಂ (ಶಮದ. ೧೯ ಪ್ರಯೋ). [ಕಿವುಱ್ + ಕೇಳ್]

**ಕಿವುಟ್ಗೇಳ್** 'ಕಿವುಟ್ಕೇಳ್' ನೋ.

**ಕಿವುಳ್ಚು** 'ಕಿಮುಳ್ಚು' ನೋ.

**ಕಿಶೆ** 'ಕಿಸೆ' ನೋ.

**ಕಿಶೋರ** (ಗು). ೧. ಚಿಕ್ಕ ಪ್ರಾಯದ; ಎಳೆ ಹರೆಯದ; ಶೈಶವದ; ಮರಿಯಾದ: ತಮ್ಮೊಡನೆ ನಲಿದಾಡುವ ಕಿಶೋರಕೇಸರಿಗಳಂ ಪಿಡಿದು ತೆಗೆವ ಕಳಭಂಗಳುಮಂ (ಪಂಪಭಾ. ೧–೧೧೫ ವ). (ನಾ). ೨. (ಸಿಂಹ, ಹುಲಿ, ಜಿಂಕೆ ಮೊದಲಾದ ಮೃಗಗಳ) ಮರಿ; ಪೋತಕ: ಪಂಜರಗತ ಕುಂಜರಾರಾತಿ ಕಿಶೋರಕೇಸರಿಗಳನೆ ತರಿಸಿ ನೋಡುತ್ತಿರಲುಂ (ಆದಿಪು. ೮–೩೭). ೩. ಕುದುರೆ ಮರಿ: "ಮಱಿಗುದುರೆ ಪೋತಂ ಕಿಶೋರ ಮೆನಿಸಿಕ್ಕು" (ಮಂಗರಾ. ೮೧–೨). ೪. ಹದಿನೈದು ವರ್ಷದೊಳಗಿನ ಪ್ರಾಯದ ಹುಡುಗ: ಬಂದಳ್ ಮುದುಕಿಯೋರ್ವಳಾ ತಾಣಕ್ಕೆ ಕಿಶೋರ ಭರತನನಾಂತು ಕೌಂಕುಳಲಿ (ಶ್ರೀರಾಮಾ. ೨೦–೫೪೦) [ಸಂ.]

**ಕಿಶೋರಕ** (ನಾ). ೧. = ಕಿಶೋರ ೨: ಪಂಜರಸ್ಥಿತ ಮದಕೇಸರಿ ಕಿಶೋರಕದಂತೆ ಗೆಯ್ದಖಿಳವಿದ್ಯಾಭ್ಯಾಸಂಗೆಯ್ಯುತ್ತಮಿರೆ (ಕಾದಂಪೂ. ೪೩೩). ೨. = ಕಿಶೋರ ೩: "ಪೋತಃ, ಕಿಶೋರಕಃ – ಈ ೨ ಮಱಿಗುದುರೆ" (ಹಲಾಯು. ೭೨–೨೮೬); ಸೇರಿದುವು ದಂತ ಪಂಙ್ತಿ . . . ಆದಱ ಸಂದಂಶಂಗಳ್ ಕ್ಷೀರರುಚಿಯಾದೊಡದನವಧರಿಸುಗೆ ಕಿಶೋರಕಂಗೆ ಸಪ್ತಮಮಾಸಂ (ಅಶ್ವಶಾ. ೩೬–೮). [ಸಂ.]

**ಕಿಶೋರಶಶಿ** (ನಾ). ಎಳೆಯ ಚಂದ್ರ; ಬಾಲಚಂದ್ರ: ಕ್ಷೀರಸಾಗರದಿಂ ಕಿಶೋರಶಶಿ ಬರುವಂತೆ (ಶ್ರೀರಾಮಾ. ೧೬–೪೧೪). [ಕಿಶೋರ + ಶಶಿ]

**ಕಿಶೋರಾವಸ್ಥೆ** (ನಾ). ಎಳೆತನ; ಬಾಲ್ಯ: ಶೈಶವ ಅಥವಾ ಕಿಶೋರಾವಸ್ಥೆಯಲ್ಲಿರುವವರ ಸ್ಥಿತಿಯ ದುರುಪಯೋಗವು ನಡೆಯದಂತೆ . . . ಅವರಿಗೆ ಸಂರಕ್ಷಣೆಯು ದೊರೆಯುವುದು (ಭಾಧಾನ. IV, ೨೩). [ಕಿಶೋರ + ಅವಸ್ಥೆ]

**ಕಿಶೋರಿ** (ನಾ). ೧. ಎಳೆಯ ವಯಸ್ಸಿನವಳು; ಕುಮಾರಿ: ಬಾಲಿಕೆ ಕಿಶೋರಿಯಾಗಿ ಮುಂದೆ ತರುಣಿಯೂ ಆದಳು (ಅಲ್ಪವಿ. ೭೪); ಸರಸಿಯು ಇನ್ನೂ ಕಿಶೋರಿ (ತುಂಬಿಕೊ. ೩೭). ೨. ಯಾವುದಾದರೂ ಪ್ರಾಣಿಯ ಹೆಣ್ಣು ಮರಿ. [ಸಂ. ಕಿಶೋರೀ]

**ಕಿಷ್ಕಿಂದ, ಕಿಕ್ಕಿಂದ, ಕಿಕ್ಕಿಂದೆ** (ನಾ). ೧. ಒಂದು ಪ್ರದೇಶದ ಹೆಸರು; ಕಿಷ್ಕಿಂಧ. ೨. (ಆಲಂ) ಒತ್ತಾದದ್ದು; ಇಕ್ಕಟ್ಟು; ಕಿಕ್ಕಿರಿದು: ತೆರಳಿತು ದಂಡು ನಿಸ್ಸಾಳ ಸೂಳೈಸಲಂಬರಭೂಮಿ ಕಿಷ್ಕಿಂದವಾಗಿ (ಭರಚ. ೪೬–೨). **ಕಿಕ್ಕಿಂದ**: ೩. ಗುಂಪು; ಸಂದಣಿ; ಸಮೂಹ: "ಕಿಕ್ಕಿಂದಂ . . . ಸ್ತೋಮಾಭಿಧಾನಮಕ್ಕುಂ" (ಕವಿಕಾ. ೧೦೬); "ಕಿಕ್ಕಿಂದಮೆನೆ ಸಮೂಹಂ" (ಕಶರ ೨೪); ನೋಡಲ್ಕೆ ಭೀಮರೂಪಾಕಾರಮಾಗಿ ಗಿರಿತರುಗುಲ್ಮ ಕಿಕ್ಕಿಂದದಿಂ ರಾಜಿಸಿ (ಲಕ್ಷ್ಮಭಾ. ೨–೫). **ಕಿಕ್ಕಿಂದೆ**: ೧. "ಕಿಷ್ಕಿಂಧ – ಕಿಕ್ಕಿಂದೆ" (ತದ್ಭಕೋ. ೭). [< ಸಂ. ಕಿಷ್ಕಿಂಧ]

**ಕಿಷ್ಕಿಂಧ** (ನಾ). ೧. ಒಂದು ಊರಿನ ಹೆಸರು. ೨. ವಾಲಿ, ಸುಗ್ರೀವರ ರಾಜಧಾನಿ. ೩. ಒಂದು ಆನೆಯ ಹೆಸರು: ದಿಕ್ಕರಿಯನಧಃಕರಿಸುವ ತಕ್ಕಿನ ಕಿಷ್ಕಿಂಧಮೆಂಬ ನಿಜವಾರಣಮಂ (ಪಂರಾಮಾ. ೧೪–೯೫). ೪. (ಆಲಂ) ಒತ್ತಾದದ್ದು; ಇಕ್ಕಟ್ಟು: ಗಗನಚುಂಬಿಗಳಾದ ವೃಕ್ಷಗಳು ಕಿಷ್ಕಿಂಧವಾಗಿ ಬೆಳೆದಿದ್ದವೆಂತಲೂ (ಮುಂಬಯಿ. ೫–೧); ಇನ್ನೊಬ್ಬ ತನ್ನ ಮುಪ್ಪಿನ ತಾಯಿಗೆ ಸ್ಥಳ ಮಾಡಿಕೊಟ್ಟು ತಾನು ಕಿಷ್ಕಿಂಧದಲ್ಲಿ ನಿಂತಿದ್ದ (ರಾಮಾಸೆ. ೧೧೧). [ಸಂ.]

**ಕಿಷ್ಕಿಂಧೆ** (ನಾ). = ಕಿಷ್ಕಿಂಧ: ಮನೆ ಅಷ್ಟು ಕಿಷ್ಕಿಂಧೆಯಾಗಿದ್ದರೂ ಸ್ವಚ್ಛವಾಗಿ ಓರಣವಾಗಿತ್ತು (ದೂರಸ. ೧೦೧). [ಸಂ. ಕಿಷ್ಕಿಂಧಾ]

**ಕಿಷ್ಕು** (ಗು). ೧. ಕೀಳ; ನೀಚ; ದುಷ್ಟ. (ನಾ). ೨. ಮುಂದೋಳು: ಚತುರ ಕಳೆಯುಳ್ಳಾತ ಚತುರರೇಖನೊ ಸಾಧು ಚತುರ ಕಿಷ್ಕು[ಪಾಠಾಂ. ಕಿಷ್ಕಿ]ಚತುಃಸಮಂ ಚತುರ್ದಂಷ್ಟ್ರ. . .ರಘುನಾಥ (ವೆಂಕರಾ. ೫–೧೧–೪೩). ೩. ಇಪ್ಪತ್ನಾಲ್ಕು ಅಂಗುಲದ ಅಳತೆ: ಅಂಗುಳಿ "ಇಪ್ಪತ್ನಾಲ್ಕಾದರೊಂದು ಕಿಷ್ಕುವೆನಿಸುವುದು" (ವಿವೇಕ. ೩೦೦). ೪. [ಜೈನ] ಎರಡು ಮೊಳಗಳ ಅಳತೆ: "ಎರಡು ಮೊಳಗಳಿಂದ ಕಿಷ್ಕು, ಎರಡು ಕಿಷ್ಕುಗಳಿಂದ ದಂಡ" (ಜೈನಪ. ೩೦೮). ೫. ಒಂದು ಗೇಣು. [ಸಂ.]

**ಕಿಸ** 'ಕಿಸಿ' ನೋ.

**ಕಿಸಂಗಿ** (ನಾ). ಒಂದು ಜಾತಿಯ ಸಸ್ಯ: ಶ್ರೀಮುದ್ರೆಗಿಡ, ತುತ್ತಿ, ಕಿಸಂಗಿ, ತುರುಬೀಗಿಡ, ಗಿಡುತಿಂಗಿ (ವೈಔಗಿ. ೧–೬). [?]

**ಕಿಸಕದ** (ನಾ). ತೆರೆದ ಬಾಗಿಲು: ಕಳ್ಳಂಗಡಿಯ ಕಿಸಕದದಿ ಕೊಂಚ ಮುನ್ನಂ ಮಬ್ಬಿನಲಿ ಮರಸಿ ಯಕ್ಷನೊಲೊಬ್ಬ ಚೆನ್ನಂ ಹೆಗಲಲ್ಲಿ ಕೊಡವೆತ್ತಿ ಬಂದನ್ (ಗಿಳಿವಿಂ. ೧೨೧–೩೧). [< ಕಿಸಿ$_1$ + ಕದ]

**ಕಿಸಕಾಯ್** (ನಾ). ಕಸುರುಗಾಯಿ; ಹೀಚು (?): ಮೊದಲಚ್ಚಿಗವನ ದೇವೊಳ್ಪುದೊಗದು ಕಿಸಕಾಯನೊಳಗು ಪೊಜಗಾಗಿ ಮುಗುಳ್ಚಿದ ತೆರದಿ ನಿರ್ದದು ಸ್ಪರ್ಶದ ಯೋನಿಗಳೊಳಗೆ ನೆಲಸುವುವು ಜೀವಂಗಳು (ಶ್ರಾವಕಾ. ೨೦–೩). [< ಕಸುಗಾಯ್ ?]

**ಕಿಸಕ್ಕನೆ** (ಅ). ಒಮ್ಮಿಂದೊಮ್ಮೆಗೆ; ಅನಿರೀಕ್ಷಿತವಾಗಿ: ಆಕೆ ಇದ್ದಕ್ಕಿದಂತೆ ಕಿಸಕ್ಕನೆ ನಕ್ಕಳು (ರೂಢಿ); ಹಿರಿಯರು ಮಾತನಾಡುತ್ತಿರುವಾಗ ಕಿಸಕ್ಕನೆ ಏನಾದರೂ ಅಂದುಬಿಡಬೇಡ (ರೂಢಿ). [ಕಿಸಕ್$_0$ + –ಅನೆ$_1$]

**ಕಿಸಗಾಲು** 'ಕಿಸಿಗಾಲು' ನೋ.

**ಕಿಸಣಿ** (ನಾ). ಒಂದು ಬಗೆಯ ಕಬ್ಬಿಣದ ಆಯುಧ; ತೋಪಡ; ಉಜ್ಜುಗೊರಡು; ಹತ್ತಾರಿ: ಕಬ್ಬಿಣದ ತರತರದ ಜೀನಸಗಳು. . . ೧೩ ಉಳಿಗಳು. ೧೪ ಕಿಸಣಿಗಳು. ೧೫ ಗುದ್ದಲಿಗಳು (ಮುಂಬವ್ಯಾ. ೧೦೧). [← ಮರಾ. ಕಿಸಣೀ]

**ಕಿಸಮು** (ನಾ). ಬಗೆ; ಪ್ರಕಾರ; ಬೇಧ. 'ಕಿಸಮುವಾರು' ಪರಾ. [← ಅರ. ಕಿಸ್ಮ್]

**ಕಿಸಮುವಾರು** (ಗು). ಪ್ರಕಾರಗಳನ್ನು ಅನುಸರಿಸಿ ಮಾಡಿದ, —ಹೊಂದಿಸಿದ: ಸಸ್ಯಗಳ ಹೆಸರುಗಳನ್ನು ಕಿಸಮುವಾರು ಕೋಶದಲ್ಲಿ ನಮೂದಿಸಲಾಗಿದೆ (ರೂಢಿ). 'ಕೋಮುವಾರು' ಪರಾ. [← ಅರ. ಕಿಸ್ಮ್‌ವಾರ್]

**ಕಿಸಯ** (ನಾ). (?) : ಸಕ್ಕರೆಯ ಬಾಸಿಗೆ ಕಿಸಯ[ಪಾಠಾಂ. ಕೇಸಿಯ] ಕೆಲನುಂಟೇ? ನಿಶ್ಚಯದ ಲಿಂಗಾಂಗಿಗೆ ಉಭಯದ ತಟ್ಟುಮುಟ್ಟೆಂಬೀ ಗುಟ್ಟಿನ ಕುಲವಿಲ್ಲ (ಮದೇಮ್ಮ. ೨೭೬–೨೭). [?]

**ಕಿಸರು$_1$** 'ಕಿಸುರ್$_2$' ನೋ.

**ಕಿಸರು$_2$** 'ಕಿಸುರ್$_2$' ನೋ.

**ಕಿಸರೆ** (ನಾ). ಕೆಂಪು; ಕೆಂಬಣ್ಣ (?): ಕದಪಿನೊಳುಣ್ಮೆ ಬೆಮರು ಕಣ್ಮಲರ್ಗಳೊಳುದಯಿಸೆ ಕಿಸರೆ ಕೇತು ಲಲಾಟದೊಳೊದವೆ ತನೂರುಹಮುಣ್ಮೆ ಭಯಂಕರತಳನಾಗೆ ಭ್ರುಕುಟ (ಕುಮುರಾ. ೧೭–೧೭). [< ಕಿಸುರ್$_3$ ?]

**ಕಿಸಲಯ** (ನಾ). ಚಿಗುರು; ಪಲ್ಲವ: "ಪೊಸದಳಿರೆನೆ ಪಲ್ಲವಮೆನೆ ಕಿಸಲಯಮೆನೆ . . . ಸದೃಶಾರ್ಥಂ" (ವಸ್ತುಕೋ. ೩೧-೯); ಕುಸುಮಂ ಸ್ಮಿತಮಳಿನಯನಂ ಕಿಸಲಯಮಧುರಂ (ಕವಿರಾ. ೩-೧೪). ತನ್ನ ತನುಲತೆಗಳಂ ಕಿಸಲಯಾಭರಣಂಗಳಿನಲಂಕರಿಪಲಂಪನಾಂತು (ಚಂದ್ರಪ್ರ. ೭-೧೧೩ ವ). [ಸಂ.]

**ಕಿಸಲಾಟ** (ನಾ). ಕಿಸಿದು ಬೀಳುವಿಕೆ: ಸಾರಂಗನಾಟ ನವುಲಾಟ ಡೊಂಬರ ಚೆನ್ನಿ ಲಾಗ ತಪ್ಪಿದರೆ ಕಿಸಲಾಟೋ (ಕಜಾಗೀ. ೬೩). [< ಕಿಸಿ$_1$ + ಆಟ]

**ಕಿಸವಾಯ್** 'ಕಿಸಿವಾಯ್' ನೋ.

**ಕಿಸವಾಯ** 'ಕಿಸಿವಾಯ' ನೋ.

**ಕಿಸಾಕೊಳ್ಳಿ** (ನಾ). ಅಸಹ್ಯಕರವಾದದ್ದು; ಜುಗುಪ್ಸೆ ತರುವಂಥದ್ದು (?): ಆದೇ ಈಗೊಂದು ದೊಡ್ಡ ಕಿಸಾಕೊಳ್ಳಿ ಆಗ್‌ಕೊಂಡು ಕೂತದಂತೆ (ಕಾನೂರು. ೫೭೫); ಏನಾದರೂ ಒಂದಾದರೆ ಕಿಸಾಕೊಳ್ಳಿ ಆವಾಗ ಗೊತ್ತಾಗುತ್ತದೆ ಅಂತಕ್ಕಗೆ (ಮಲೆಮ. ೭೯೭). 'ಕಿಸುಗುಳಿ' ಪರಾ. [?]

**ಕಿಸಾನ** (ನಾ). ರೈತ; ಬೇಸಾಯಗಾರ; ಕೃಷಿಕ: ಕಿಸಾನರು ತೆರಿಗೆ ಗೇಣಿಗಳನ್ನು ಕೊಡದಿಹುದನ್ನು ಕಂಡು ಅಡಳಿತಗಾರರೂ, ಜಮೀನ್ದಾರರೂ ಸುಮ್ಮನಿರಲಿಲ್ಲ (ಕೊದಿನ. ೬೯). [← ಹಿಂ. ಪಾರ. ಕಿಸಾನ್; ಮರಾ. ಕಿಸಾಣ. / ಪ್ರಾ. ಕಿಸಿವಣ್ಣಾ; ಸಂ. ಕೃಷಾಣ]

**ಕಿಸಾಮತಿ** (ನಾ). ದೊಡ್ಡ ಕೆಲಸ; ಮಹತ್ಕಾರ್ಯ: ಏನ್ರೆಪ್ಪಾ, ನೀವು ಮಾಡಿದ್ದು ಕಿಸಾಮತಿ (ಮಿಂಚಹು. ೭). 'ಕರಾಮತಿ' ಪರಾ. [?]

**ಕಿಸಿ$_1$**, ಕಿಸು$_1$ (ಕ್ರಿ). ಅಗಲವಾಗಿಸು; ಹಿಗ್ಗಿಸು; ತೆರೆ: "ಕಿಸಿ - ವಿಕಸನೇ" (ಶಮುಧಾ); ಕಿಸಿದ ಪಲ್ಲಳದರಳ್ದ [ಪಾಠಾಂ. ಕುಸಿದ ಪಚ್ಚಳ ದರಳ್ದ]ನಾಸಾಪುಟದ ನಲಿದುಪ್ಪರಿಸಿದಾನನದ (ತೊರರಾ. ೬-೪೯-೮); ಗಾಯವಡೆದಂಗಜನ ಬಾಣಕೆ ಬಾಯ ಕಿಸಿದಾಯಾಸಗೊಂಬುದೆ ಮಾಯೆ ಕೇಳೆಂದ (ಅಮೃತ. ೨-೭೮); ಎಂದು ಬಾಯಂ ಕಿಸಿದಳ್ (ರಾಮಾಶ್ವ. ೮೭-೨೮); ತಂಗೊಳ ತಳ ಬರಿದು ಬರದ ಗದ್ದೆಯಂತೆ ಕಿಸಿಯುತ್ತಿದೆ ಬಾಯ್ಬಿಟ್ಟಿದೆ ನೋಡಕೆ (ಚಂಡಿಮ. ೫೪-೨೧). **ಕಿಸು$_1$**: ವಸುಧೆಯವರೆಲ್ಲರು ಬಾಯ ಕಿಸುವುತ್ತಿದ್ದರು (ಮನುಗುಂ. ೫೧). [?. / ತುಳು. ಕಿಸು, ಕಿಸಿ]

**ಕಿಸಿ$_2$** (ಕ್ರಿ). ೧. ಸಾಧ್ಯವಾಗು; ಕೈಲಾಗು; ಮಾಡುವುದಕ್ಕೆ ಸಮರ್ಥವಾಗು: ಅಸಲೆ ಸುಳ್ಳೆನೆ ಬಡ್ಡಿಯ ಪೆಸರ್ಗೊಳ್ಳದ ಪರಿ ಮನವೇ ಪುಸಿಯನೆ ತದ್ವಾಸನೆಯೇಂ ಕಿಸಿಯುವುದು (ಕೈಕವ. ೧-೬೫-೩); ಇದು ನನಗೆ ಕಿಸಿಯದ ಕೆಲಸ (ಬಾಳಹೊ. ೫೦). ೨. ಸಾಧಿಸು: ಅವನೇನು ಮಹಾ ಕಿಸಿದದ್ದು (ರೂಢಿ). [?]

**ಕಿಸಿಕಿಲ್** 'ಕಸಕಿಲ್' ನೋ.

**ಕಿಸಿಗಾಲು**, ಕಿಸಗಾಲು, ಕಿಸುಗಾಲು (ನಾ). ಅಗಲವಾಗಿ ಹಿಗ್ಗಲಿಸಿದ ಕಾಲು: ಅವನು ಕಿಸಿಗಾಲು ಮಾಡಿ ನಡೆಯುತ್ತಾನೆ (ರೂಢಿ). **ಕಿಸಗಾಲು**: (ಕಿ). **ಕಿಸುಗಾಲು**: "ಪ್ರಜ್ಞುಃ, ಪ್ರಗತಜಾನುಕಃ- ಒಂದ ಕ್ಕೊಂದು ದೂರವಾಗಿ ಅಗಲವಾದ ಮೊಳಕಾಲುಳ್ಳವನ ಹೆಸರು. ಕಿಸುಗಾಲವನು" (ಸಿದ್ಧಾಂತಿ. ೧೫೮). [ಕಿಸಿ$_1$ + ಕಾಲು$_1$ (< ಕಾಲ್$_1$)]

**ಕಿಸಿಬಾಯಿ** 'ಕಿಸಿವಾಯ್' ನೋ.

**ಕಿಸಿವಾಯ್**, ಕಿಸವಾಯ್, ಕಿಸಿಬಾಯಿ, ಕಿಸುಬಾಯಿ, ಕಿಸುವಾಯ್$_2$ (ನಾ). ಕಿಸಿದ ಬಾಯಿ; ತೆರೆದ ಬಾಯಿ; ಹಲ್ಲು ಕಿರಿದಬಾಯಿ. 'ಕಿಸಿವಾಯ' ಪರಾ. **ಕಿಸಿವಾಯ್**: ಹೇಳಿದ್ದೇ ಹೇಳೋ ಕಿಸವಾಯ ದಾಸಯ್ಯ (ಗಾದೆ). **ಕಿಸಿಬಾಯಿ**: (ಕಿ). **ಕಿಸುಬಾಯಿ**: ಕಿಸುಬಾಯಿಮಾಡಿಕೊಂಡು ನೋಡುತ್ತದೆ (ಸರಸ. ೪೮). **ಕಿಸುವಾಯ್$_2$**. 'ಕಿಸುವಾಯ್ಯ$_1$' ಪರಾ. [ಕಿಸಿ$_1$ + ಬಾಯ್]

**ಕಿಸಿವಾಯ**, ಕಿಸವಾಯ, ಕಿಸುವಾಯ್ಯ$_1$ (ನಾ). (ಮೂರ್ಖತನದ ಸೂಚನೆಯಾಗಿ) ಕಿಸಿದ ಬಾಯಿಯುಳ್ಳವನು; ಹಲ್ಲುಕಿರಿದ ಬಾಯಿಯವನು; ದಡ್ಡ; ಮೂರ್ಖ: ಭಕ್ತಿಯನರಿಯದ ಕಿಸಿ[ಪಾಠಾಂ. ಸು]ವಾಯರಿಗೇಕೆ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ (ಶೂನ್ಯಸಂ. ೨೬೪-೧೦). **ಕಿಸವಾಯ**: ಕಿಸವಾಯನ ಕಂಡರೆ ಬಿಡದೇ ಬೇಹಾರ (ಗಾದೆ). **ಕಿಸುವಾಯ್ಯ$_1$**. ಮೇಲಿನ ಶೂನ್ಯಸಂ ಪ್ರಯೋಗದ ಪಾಠಾಂತರವನ್ನು ನೋಡಿ. [ಕಿಸಿವಾಯ್ + -ಅ$_7$]

**ಕಿಸು$_1$** 'ಕಿಸಿ$_1$' ನೋ.

**ಕಿಸು$_2$** 'ಕೇಸು$_1$' ನೋ.

**ಕಿಸು$_3$** (ನಾ). ೧. ಕೆಂಪು; ಕೆಂಪುಬಣ್ಣ; ಅರುಣತೆ: "ಕಿಸುವೆನೆ ಕೆಂಪುಂ ತಾಮ್ರಮುಂ" (ಚತುನಿ. II, ४೧); "ಕೇಸಂ ಕಿಸು . . . ಕೆಂಕಮೆನ್ನಲಾರುಣ್ಯಂ" (ಕವಿಕಂ. ೧೦೩). ೨. ಕೆಂಪುಬಣ್ಣದ ಲೋಹ; ತಾಮ್ರ: "ತಾಮ್ರಂ, ಶುಲ್ಬಂ, ಉದುಂಬರಂ - ಈ ೩ ಕಿಸು" (ಹಲಾಯು. ೨೮-೧೬); ದೇವನಾ ಪೀಠಮಾನ್ ಕಿಸುವಿನ ಕಟಿ ಬೆಳ್ಳಿಯಾ ಕೊಡೆಯಾನೇಱಿಸಿ(ಯೆ) (ಇಆ. X, ೧೦೩-೭; 8ನೆಯ ಶತ); ಕಿಸುವೆರಸಿದ ಪೊನ್ನುಂ ಗಸಿವೆರಸಿದೆಣ್ಣೆಯುಂ (ಧರ್ಮಾಮೃ. ೧೪-೧೩೪); ಕಿಸುವುಂ ಸೀಸಮುಮಪ್ಪವಲೋಹ ಬೆರಸಿ ನಿಜ ನಿರ್ಮಳಿಕೆಯಂ ಕೆಡಿಸಿ ಮಳಿನಂ ಮಾಳ್ಪಂತೆ (ಪಸಾರ. ೬೨೧-೧೫). 'ಕಿಸುಗಟ್ಟು' ಪರಾ. ೩. ಕೆಂಪು ಭೂಮಿ; ಕೆಬ್ಬೆ; ಮಸಾರಿ: ಒಂದು ಮತ್ತರ್ಕಿಸುವುಂ ನಡೆವುದು (ಎಇ. XV, ೩೩೨-೨೮; 1028); ತೋಂಟದ ಭೂಮಿಯೆಳ್ಪತ್ತಱ ಕೋಲಲು ಮತ್ತರು ೪೪ ಕಿಸುವಿನ ಭೂಮಿಮತ್ತರು ೬೪ (ಸೌಇಇ. XI-i, ೮೮-೯; 1053); ಹಿಟ್ಟನ ಹಳ್ಳಿಯಲು ಬಿಟ್ಟ ಕಿಸುವಿನ ಮತ್ತರೆರಡು (ಸೌಇಇ. IX-i, ೧೯೮-೨೭; 1119). ೪. ಕೆಂಪುರತ್ನ; ಪದ್ಮರಾಗ: ಚರಣಕಮಲಕೆ ಮಿಸುಪ ಕಿಸುಗಳ ಸುರಿದು ಭಯ ಭಕ್ತಿಯಲಿ (ಮದೇಪು. ೨-೬೯). ೫. (ಆಲಂ) ಸಿಟ್ಟು; ಕೋಪ. 'ಕಿಸುದೋಱು' ಪರಾ. [?]

**ಕಿಸುಕಟ್ಟು** 'ಕಿಸುಗಟ್ಟು' ನೋ.

**ಕಿಸುಕಣ್ಣು** 'ಕಿಸುಗಣ್ಣು$_1$' ನೋ.

**ಕಿಸುಕಾಡು** 'ಕಿಸುಗಾಡು' ನೋ.

**ಕಿಸುಕಾಯಿ** (ನಾ). = ಕಿಸುಗಾಡು ೧: ಕರಿಯ ನೆಲಂ ಮತ್ತರ್ ೪೦ ಕಿಸುಕಾಯಿ ಮತ್ತರ್ ೧೩ (ಕಇಆ. ೪೮-೫-೩೪; 973). [< ಕಿಸುಕೆಯ್?]

**ಕಿಸುಕಾರೆ** (ನಾ). ಒಂದು ಬಗೆಯ ಸಸ್ಯ: ಆಡಯಾಲ, ಕೇಪಲ, ಕಿಸುಕಾರೆ (ವೈಔಗಿ. ४६-೯೨೪). [?]

**ಕಿಸುಕು** (ನಾ). ಕೊಳೆ; ಕೀಚು: ಕಿವಿಯೊಳಗಣ ಗುಗ್ಗೆ . . . ಹಲ್ಲಿ ನೊಳಗಣ ಕಿಸುಕು (ಬಾಹಟೀ. ೨-೩-೫೩ ವ). [?]

**ಕಿಸುಕುರಿ** (ನಾ). ಒಂದು ಬಗೆಯ ಹುಲ್ಲು: ಕುಱಿಕೆ ಮರಗಱಿಕೆ ಕವಲುಂ . . . ಕಿಱುಮಾಲೆ ನೂಲೆ ಕಿಸುಕುರಿ [ಪಾಠಾಂ. ಕೀಸುರಿ] ನೆಱಿದೀ ಚಿಕ್ಕಣಿಕೆ ಮಾಣಿಸಿ ಕಸಕೆ ಕಲ್ಬುಲ್ (ಸೂಕ್ತಿಸು. ೩-೨೯). [?]

**ಕಿಸುಕುಳ** 'ಕಿಸುಗುಳ' ನೋ.

**ಕಿಸುಕುಳಗಂಟು** (ನಾ). ಕೊಳೆಗಂಟು (?): ಹತ್ತಿರಕೆ ಬರಕೂಡ ದಂದದಿ ಕೆತ್ತ ಕಿಸುಕುಳಗಂಟಿಸಿವ ವಿಧಕಿತ್ತಲತ್ತಳಿರುವ ಮಹಾಸ್ಥಾವರ ಶರೀರಗಳು (ವಿವೇಭ. ೯-೫೧). [ಕಿಸುಕುಳ (< ಕಿಸುಗುಳ) + ಗಂಟು]

**ಕಿಸುಕುಳತ್ವ** (ನಾ). ಸಣ್ಣತನ; ಕೀಳುತನ; ನೀಚತನ: ಸಸಿನೆ ಅವನ ಕೆಣಕಿ ನೋಡಿ ಕಿಸುಕುಳತ್ವ ತೋರುತಿಹುದು ಒಸೆದು ಅವರುತಿಳಿಯೆ ಸ್ವಸ್ಥ ಶರಣರಪ್ಪರೇ (ಸುಸಾರ. ೭೪-೪). [ಕಿಸುಕುಳ (< ಕಿಸುಗುಳ) + -ತ್ವ]

**ಕಿಸುಕುಳಿ** 'ಕಿಸುಗುಳಿ' ನೋ.

**ಕಿಸುಕುಳಿಗ** 'ಕಿಸುಗುಳಿಗ' ನೋ.

**ಕಿಸುಕೆಯ್** (ನಾ). ಕೆಂಪು ಮಣ್ಣಿನ ಹೊಲ; ಕೆಬ್ಬೆ ಹೊಲ; ಮಸಾರಿ ಭೂಮಿ: ಹನ್ನಿರ್ಮತ್ತರ್ ಕಿಸುಕೆಯ್ಯಂ (ಸೌಇಇ. XI–ii, ೧೬೮-೨೭; 1120). [ಕಿಸು$_3$ + ಕೆಯ್$_2$]

**ಕಿಸುಗಟ್ಟು**, ಕಿಸುಕಟ್ಟು (ನಾ). ೧. ಕೆಂಪಾದ ಕಟ್ಟು: ಕಿಸುಗಣಿಗಿಲೆ, ಕಿಸುಗಲ್, ಕಿಸುಗಟ್ಟು (ಶಮುದ. ೧೮೨ ಪ್ರಯೋ). ೨. ತಾಮ್ರ ಬೆರಕೆಯಾದುದು: ಪರದರೆಂತು ಕಿಸುಗಟ್ಟುಮಂ ಕಳ್ಳಚ್ಚು [ಪಾಠಾಂ. ಕಂಚು]ಮಂ ಮಾಣ್ದೊರೆಗಂ ತೂಕಕ್ಕಂ ಬರ್ಪ ಪೊನ್ನಂ ಕೊಳ್ವರಂತೆ ಸುಖಹೇತುವಪ್ಪ ಸನ್ಮಾರ್ಗದೊಳ್ನಿಗಟ್ಟುದು (ಧರ್ಮಾಮೃ. ೪-೨೭). **ಕಿಸುಕಟ್ಟು**: ೨. ಎಸೆವ ಜಿನಮುದ್ರೆ ಸಮುತಾರಸದಿಂ ಸಲೆ ತೊಯ್ದ ಜಾತರೂಪವಿದೆನೆ ರಂಜಿಸಿ ಬಟಿಕವಾದ ಮುಳಿಸಿಂ ಕಿಸುಕಟ್ಟಂ ಪೋಲ್ತುದಾ ತಪೋಧನನ ಮನಂ (ವರ್ಧಪು. ೩-೨೦). [ಕಿಸು$_3$ + ಕಟ್ಟು$_2$]

**ಕಿಸುಗಣ್**, ಕಿಸುಗಣ್ಣು (ನಾ). ೧. ಕೆಂಪಾದ ಕಣ್ಣು; ಕೆಂಗಣ್ಣು: ಗುಣಾರ್ಣವನೊಳುಂತೆ ಸೆಣಸಲ್ಕೆಂದಿರ್ಪ ಸುಯೋಧನಂಗೆ ಕಿಸುಗಣ್ಪಸರಿಸಿದಾ [ಪಾಠಾಂ. ಮುಳಿಸಿಂ ಕಿಸುಗಣ್ಚಿದ] ತೆಜದಿನಮೃತಕರನುದಯಿಸಿದಂ (ಪಂಪಭಾ. ೨-೮೮); ಕುಡುದಾಡೆ ಮಿಂಚು ಕಿಸುಗಣ್ ಸಿಡಿಲೆನೆ (ಜಗವಿ. ೪-೫೪); ಕಾಮನ ಕಿಸುಗಣ್ಮಲರ್ವೀಡು ವಿಯೋಗಿಗೆ ಸಂಕಲೆವೀಡು ವಸಂತದಂತಿಗುಪವನಗರವನಂ (ಚಂದ್ರಪು. ೧-೧೧೩); ಕಿಸುಗಣ್ಣಿಂದ ನೋಡುತ್ತಿರಲದನಱಿದು (ನೇಮಿಸಂ. ೨೩-೩೦); ಕೆದಱುದಲೆ ಕೆಮ್ಮೀಸೆ ಕಿಸುಗಣ್ ಬೆದಱುನೋಟವು ಕಾರೊಡಲು (ಸಾಳ್ವಭಾ. ೫-೬). **ಕಿಸುಗಣ್ಣು**: ೧. ಭೀತಾಳೋದಯವೆಂದು ಕೆಲವರು ಕಿಸುಗಣ್ಣಾಗ ಬಹುದು (ನಾಡೋಜ. ೩೬೩). ೨. (ಆಲಂ) ಕೋಪ; ಕ್ರೋಧ: "ಕಿಸುಗಣ್ಣು ಕಿನಿಸೆನಲ್ ಕೋಪಮೆಂದೊಪ್ಪುಗು" (ಕಶರ. ೨೪). [ಕಿಸು$_3$ + ಕಣ್]

**ಕಿಸುಗಣಿಗಿಲೆ** (ನಾ). ಕೆಂಪು ಕಣಗಿಲೆ: ಕಿಸುಸಂಜೆ, ಕಿಸುಗಣಿಗಿಲೆ (ಭಾಷಾಭೂ. ೧೫೪ ಉದಾ); ಕಿಸುಗಣಿಗಿಲೆ, ಕಿಸುಗಲ್, ಕಿಸುಗಟ್ಟು, ಕಿಸುವೊನಲ್, ಕಿಸುವೊನ್, ಕಿಸುಸಂಜೆ (ಶಮುದ. ೧೮೨ ಪ್ರಯೋ). [ಕಿಸು$_3$ + ಕಣಿಗಿಲೆ]

**ಕಿಸುಗಣ್ಚು**$_1$, ಕಿಸುಕಣ್ಚು (ಕ್ರಿ). ಕಣ್ಣು ಕೆಂಪಗೆ ಮಾಡು; ರೇಗು; ಕೋಪಿಸು: "ಕಿಸುಗಣ್ಚಿದನೆಂದು ಕೋಪಿಸಿದಂ" (ಶಮುದ. ಪರಿ. ೨); "ಕಿಸುಗಣ್ಚಿದನೆಂದೆನೆ ಕೋಪಿಸಿ ನೋಡಿದನೆಂಬ ಪಾಂಗು (ಚತುನಿ. II, ೧೦೭); ಪರವನಿತೆಯರ ದೆಸೆಗೆ ಕಿಸುಗಣ್ಚಿದಂತೆ ಕಿಸುಸೆರೆವರಿದು ಸೊಗಯಿಸುವ ಶೌಚಾಂಜನೇಯನ ಕಣ್ಗಳೆಂಬಲರಂಬುಗಳ್ (ಪಂಪಭಾ. ೨-೩೯ವ); ಚಾಮರಮಿಕ್ಕುವ ದೇವಕಾಮಿನೀಜನ ಮಣಿಕಂಕಣಧ್ವನಿ ಗೊನಲ್ದವರಂ ಕಿಸುಗಣ್ಚಿ ನೋಡುವಂ (ಪಂರಾಮಾ. ೩-೧೫); ಕೆರಳಿ ಮದಗಜವೆಯ್ದೆ ಸೆಣಸಲ್ಕೆ ಸಿಂಗವಂ ಕರೆವಂತೆ ಕಿಸುಗಣ್ಚಿ (ಸಾಳ್ವಭಾ. ೧೫-೨೫); ಕಿಸುಗಣ್ಚಿ ನೋಡಿದನೆ ಮಾಮುಸಕಂ ಮುಸಗಿದನೆ (ವೃಷವಿ. ೨೬-೩೪). **ಕಿಸುಕಣ್ಚು**: ಮತ್ತಂ ಕಿಸುಕಣ್ಚಿ ನೋಟ್ಪನೆಂದೆಂದಸುವೋದಪುವಲ್ತೆ ನೆತ್ತಿಯಿಂ ಮಲೆಯವರ (ಎಕ. VIII, ಸಾಗರ. ೧೧೯-೩೪; 1402); ಮುನಿಯಿಂ ಕಿಸುಕಣ್ಚುವರೊಸೆದು ನಗುವರಿನ್ನಿನಿತೆ ಪೆಱರ ಮುನಿಸುಂ ಮೆಚ್ಚುಂ ಮುನಿಯಿಸೆ ಮುನಿದ ಜವಂ ಹರ್ಷನಾಗೆ ಹರ್ಷಂಗ ವೃಷಭಲಕ್ಷ್ಮಂ ಲಕ್ಷ್ಮಂ (ಎಕ. VII, ಶಿಕಾರಿ. ೧೩೬-೩೩; 1068). [ಕಿಸುಗಣ್ + -ಚು]

**ಕಿಸುಗಣ್ಚು**$_2$ (ನಾ). ಮುನಿಸು; ಕೋಪ; ಕ್ರೋಧ: "ಕಿಸುಗಣ್ಚು ಕಾಯ್ಪು ಸೆಣಸೆನೆ ಕೋಪಂ" (ಕವಿಕಂ. ೧೮೭); "ಮುನಿಸು ಸೆಣಸೊರ ಸೊರಸು ಕಾಯ್ಪು ಕೋಪಂ ಮುಳಿಸು ಕಿನಿಸು ಕಿಸುಗಣ್ಚೆನೆ ಕನಲ್ಕೆ ಪೆಸರಕ್ಕು" (ಕಬ್ಬಿಕೈ. ೪೨); ಕಿಸುಗಣ್ಚು ಕೈಗಣ್ಮಲು (ಶೇಷರಾ. ೪೫-೩೭). [< ಕಿಸುಗಣ್ಚು$_1$]

**ಕಿಸುಗಣ್ಣ** (ನಾ). ೧. ಕೆಂಪಾದ ಕಣ್ಣುಳ್ಳವನು: ಕಾಮನಿಭಂ ಕಿಸುಗಣ್ಣಂ ಭೀಮಬಳಂ ಕಾಡಮರಸನುಚಿತೋದಾರಂ (ಅಜ್ಞಮು. ೧-೯). ೨. ಕೋಗಿಲೆ: "ಕೋಗಿಲೆ ತಾಂ ಕಿಸುಗಣ್ಣನೆಂದೆನಲ್" (ಕರ್ಣಾನಿ. ೬೭); ಪುಗಿಲ್ಪುಗಿಲೆಂದು ಬಿಡೆ ಬಗ್ಗಿಸುವ ಕಿಸುಗಣ್ಣನ ಜಡಿಪಕ್ಕಗಿದು (ಲೀಲಾವ. ೧೪-೭೫ವ). 'ಕೆಂಗಣ್ಣ' ಪರಾ. [ಕಿಸುಗಣ್ + -ಅ$_7$]

**ಕಿಸುಗಣ್ಣಿ** (ನಾ). ಕೆಂಪು ಕಣ್ಣುಳ್ಳವನು (?): ಅಸುಗೊಳ್ವೆಂದು ಬೆಸಸೆ ಬೇತಾಳನು ಕಿಸುಗಣ್ಣಿ ಪೋದನಾಯೆಡೆಗೆ (ತರ್ಕಕಾ. ೧೦-೪೨). [ಕಿಸುಗಣ್ + -ಇ$_3$]

**ಕಿಸುಗಣ್ಣು** 'ಕಿಸುಗಣ್' ನೋ.

**ಕಿಸುಗಣ್ಬಿಡು** (ಕ್ರಿ). ಕೆಂಗಣ್ಣಿನಿಂದ ನೋಡು; ಕೋಪದ ದೃಷ್ಟಿಯನ್ನು ಬೀರು: ಉತ್ಕೋಪ ಹೂಂಕೃತಿಯಂ ಮಾಡುತುವರೌಂಡುಗಚ್ಚಿ ಕಿಸುಗಣ್ಬಿಟ್ಟಚ್ಯುತಂ ರಂಜಿಕುಂ (ಜಗವಿ. ೩-೬೦). [ಕಿಸುಗಣ್ + ಬಿಡು$_1$]

**ಕಿಸುಗಣ್ಬೀಡು** (ನಾ). ಕೆಂಗಣ್ಣನ್ನು ಬಿಡುವಿಕೆ; ಕೆರಳಿದ ಕಣ್ಣನ್ನು ತೆರೆಯುವುದು: ಸಿಡಿಲ್ಗಳೆಂಬ ಕಿಸುಗಣ್ಬೀಡುಂ ಮರುಚ್ಚಾಪಮೆಂಬ ವಿಚಿತ್ರಾಂಬರದೊಂದು ಚೆನ್ನಋಳಿಯುಂ ಮಿಂಚೆಂಬ ಕೊಂಬುಂ ಕರಾಳವೆನಲ್ ಗರ್ಜಿಸಿದತ್ತಗಲ್ದಿನಿಯರಂ ಕಾರೆಂಬ ಮಾರದ್ವಿಪಂ (ಜಗವಿ. ೪-೨೨). [ಕಿಸುಗಣ್ + ಬೀಡು$_2$]

**ಕಿಸುಗದಿರ್** (ನಾ). ಕೆಂಪಾದ ಕಿರಣ; ಕೆಂಪು ಕಾಂತಿ: ಪಸಿದು ಕನಲ್ದ ರಾಹುವಿನ ದಾಡೆಯ ಕಾರ್ಮೊನೆ ಸೋಂಕದೊರ್ಮೆಯುಂ ಕಿಸುಗದಿರೊಂದಿ ಕಂದಿ ಕಡಲೊಳ್ಬಿಟ್ಟುದ್ದ ದ್ವಿಜರಾಜ ತೇಜಮಂ ಪಸಗೆಡಿಸಲ್ಕೆ (ಚಿಕವಿ. ೧-೬). [ಕಿಸು$_3$ + ಕದಿರ್$_2$]

**ಕಿಸುಗಲ್**, ಕಿಸುಗಲ್ಲು (ನಾ). ಕೆಂಪು ಬಣ್ಣದ ಕಲ್ಲು; ಕೆಂಪು ರತ್ನ; ಪದ್ಮರಾಗ; ಮಾಣಿಕ್ಯ: "ಅರುಣಾಶ್ಮಂ ಕಿಸುಗಲ್ ಪದ್ಮರಾಗ ಮಣಿ" (ವಸ್ತುಕೋ. ೨೯-೧೦); "ಕುರುವಿಂದಮುಕ್ಕು ಕಿಸುಗಲ್ ಕೆಂಬರಲ್ ರನ್ನವರಲೆನಲ್" (ಕಬ್ಬಿಕೈ. ೪೩); ಬಸರಸದ ಬಾವಿ ಮನೆಮನೆಗೆ ಬೇಱೆ ಕಿಸುಗಲ್ಗಳ ರಜದ ಕಣವೆರಸು ತೋಱೆ (ಪಂಪಭಾ. ೪-೧೦); ಎಸೆವ ಕಿಸುಗಲ್ಲ ತೇಜಃಪ್ರಸರಂ ದಾವಾಗ್ನಿ ಶಂಕೆಯಂ ಮನದೊಳ್ ಪುಟ್ಟಿಸೆ (ಶಾಂತಿಪು. ೨-೯೩); ಕಲ್ಲೆಲ್ಲಂ ಕಿಸುಗಲ್ ಮರನೆಲ್ಲಮುವಿಮ್ಮಾವು (ಕಾವ್ಯಾವ. ೮೧); ಚಂದ್ರಮಂಡಲಮುಸೆದುದು ಕಿಸುಗಲ್ಲ ಬಟ್ಟಸಾಣೆಯ ಪಾಂಗಿಂ (ದಮುಸ್ಸ. ೩-೩೯). **ಕಿಸುಗಲ್ಲು**: "ಒಪ್ಪುವುದು ಕಿಸುಗಲ್ಲು ಪದ್ಮರಾಗಕ್ಕೆ" (ಕಶರ. ೨೪). [ಕಿಸು$_3$ + ಕಲ್$_3$]

**ಕಿಸುಗಲ್ಲು** 'ಕಿಸುಗಲ್' ನೋ.

**ಕಿಸುಗಾಡು**, ಕಿಸುಕಾಡು, ಕಿಸ್ಕಾಡು (ನಾ). ೧. ಕೆಂಪಾದ ಕಾಡು; ಕೆಬ್ಬೆ ಭೂಮಿ; ಕೆಂಪು ಮಣ್ಣಿನ ಭೂಮಿ: ಕಿಸುಗಾಡ ನೆಲಂಗಳೆಳದಳಿರ ಬಣ್ಣಮಂ ಕೆಯ್ಕೊಂಡು ವಿರಹಿಗಳ ಮನಮನೊಲಿಸುವಂತೆ ಜಲಜಲನೆ ಪರಿವ[ಜ]ರಿ ವೊನಲ್ಗಳುಮಂ (ಪಂಪಭಾ. ೭-೨೫ವ); ಕಿಸುಗಾಡುಮಂ ನೆಗ್ಗಿಲ್ಗಾಡುಮಂ ನಿಡುವುಲ್ಲಮಂ ಮಣಲುಮಂ (ಲೀಲಾವ. ೬-೨೦). **ಕಿಸುಕಾಡು**: ಮೂಱು ನಿಱುಗಲ್ಲನ್ನಿಱಿಸಿ ಕಲ್ಲೊಬ್ಬೊಯ ನ್ನಾಗೆ ಕಿಸುಕಾಡನೆತಂ ಕೊಟ್ಟತ್ತು (ಎಕ. XII, ನಂಜನ. ೨೪೯-೯೪; 904); ಎರೆಯ ಕೆಯ್ಯ ಇರ್ಪ್ಪತ್ತಯ್ದು ಕಿಸುಕಾಡು ಇರ್ಪ್ಪತ್ತೈದು ಅನ್ನು ರಾಜಮಾನ ಅಯ್ಸುತ್ತು ಮತ್ತರಾ (ಸೌಇಇ. IX–i, ೬೦-೧೦; 931);

ಮುಂಕಯ್ಯಗೇರಿಯ ಶತದ ಕಿಸುಕಾಡು ತೋಂಟಂ ಮತ್ತಂ (ಕಇ. II, ೯–೨೦ ; 1075) ; ಚಕ್ರದಱಿಯಿಂ ಮೂಡ ಕಿಸುಕಾಡ ಕೆಯಿ ಮತ್ತರು ಇಪ್ಪತ್ತು (ಕಇಅ. ೭೦–೧೩–೩೧ ; 1088). **೨.** (ಕಿಸುಕಾಡೆಪ್ಪತ್ತು ಎಂಬ) ಒಂದು ಪ್ರದೇಶದ ಹೆಸರು: ಕರ್ನಾಟಕ ಧಾತ್ರೀತಿಲಕಮಖಿಲ ಜನವಿಖ್ಯಾತಂ ಕಿಸುಕಾಡ ನಾಡು ಸೊಗಯಿಸಿ ತೋರ್ಕುಂ (ಪಂಚತಂ. ೮–೧೪). 'ಕೆಂಗಾಡು' ಪರಾ. **ಕಿಸ್ಕಾಡು.** 'ಕಿಸ್ಕಾಡೆಳ್ಪತ್ತು' ಪರಾ.

**ಕಿಸುಕಾಡೆಪ್ಪಿತ್ತು, ಕಿಸುಕಾಡೆಪ್ಪತ್ತು, ಕಿಸುಕಾಡೆಪರ್ತ್ತು, ಕಿಸ್ಕಾಡೆಳ್ಪತ್ತು** = ಒಂದು ಪ್ರದೇಶದ ಹೆಸರು: ಕಿಸುಕಾಡೆಪ್ಪಿತ್ತುವಂ ಬಾಗಿನಾಡೆಪ್ಪಿತ್ತುವಂ (ಎಕ. III, ಮಂಡ್ಯ. ೪೧–೨೧ ; 950) ; ಕಿಸುಕಾಡೆಪ್ಪಿತ್ತಱ ಬಳಿಯ ಬಾದುಬ್ಬೆಯ ಪಾಳನವರ (ಸೌಇಇ. XI–i, ೧೧೭–೨೩ ; 1075) ; ಶ್ರೀಮದಕ್ಕಾದೇವಿಯರ್ ಕಿಸುಕಾಡೆಪ್ಪಿತ್ತುಮಂ ಆಳ್ದು ರಾಜ್ಯಂಗೆಯ್ಯುತ್ತಮಿರೆ (ಎಇ. IV, ೭೭–೧೧ ; 1101) ; ಕಿಸುಕಾಡೆಪ್ಪತ್ತುಂ (ಸೌಇಇ. XI–ii, ೧೧೮–೩೮ ; 948). ಶ್ರೀಮದಕ್ಕಾದೇವಿಯರ್ ಕಿಸುಕಾಡೆಪರ್ತ್ತುಂ . . . ಆಳುತ್ತಮಿರೆ (ಇಆ. XVIII, ೨೭೪–೧೮೨ ; 994) ; ಸಿಂಗಣದೇವರ್ ಕಿಸುಕಾಡುನಾಡೆರ್ಪತ್ತುಮಂ ಕಿಸುವೊಳಲಾಱುಂ ಬಾಡಮುಮಂ . . . ಆಳುತ್ತಮಿರೆ (ಸೌಇಇ. XI–i, ೧೧೦–೭ ; 1070) ; ಕಿಸ್ಕಾಡೆಳ್ಪತ್ತಱ ಬಾಗಡಗೆಯೆಳ್ಪತ್ತಱ ಪಟ್ಟಣದ ಪ್ರಭುಗಳು (ಸೌಇಇ. XV, ೧೦೩–೧೦ ; 1166).
[ಕಿಸು$_3$ + ಕಾಡು$_2$]

**ಕಿಸುಗಾಲು** 'ಕಿಸಿಗಾಲು' ನೋ.

**ಕಿಸುಗುಂಡಿ** (ನಾ). ಒಂದು ಊರಿನ ಹೆಸರು: ಅಗ್ರಹಾರಂ ಕಿಸುಗುಣ್ಡಿಯ ಮನ್ನೆಯ ಸಾಮ್ಯಮಂ . . . ಆಳುತ್ತುಮಿಬ್ದು (ಸೌಇಇ. XI–i, ೯೨–೨೯ ; 1054). [ಕಿಸು$_3$ + ಗುಂಡಿ ?]

**ಕಿಸುಗುಟ್ಟು** (ಕ್ರಿ). ಪಿಸುಮಾತಾಡು ; ಪಿಸುಗುಟ್ಟು : (ಕ).
[ಕಿಸು$_0$ + ಕುಟ್ಟು$_1$]

**ಕಿಸುಗುಳ, ಕಿಸುಕುಳ** (ನಾ). ಕೊಳೆ ; ಹೊಲಸು ; ಹೇಸಿಗೆ ; ಮಲ : "ಆನಿರ್ಮಲಂ ಕಿಸುಗುಳಂ" (ಕರ್ಣಾನಿ. ೬೨) ; ಪಶುವಿನ ತೊಗಲೊಳ್ ತೀವಿದ ಕಿಸುಗುಳಮೆನಿಸಿರ್ದ ತುಪ್ಪಮಂ ನೀರಂ ಸಂಕಿಸದುಂಡು (ಸಮುಪ. ೧೪–೭); ಉಗ್ರವ್ಯಾಧಿ ದುರ್ಗಂಧಮುರ್ವಿಸುಗುಂ ಪೇಸು ಪತಂ [ಸನದೇಂ] ಕರಂ ಕಿಸುಗುಳಂ ಕಾಯಂ (ಪುಷ್ಪಪು. ೧೩–೪೯) ; ಕೆಲದೊಳಿರ್ದ ಕಿಸುಗುಳಮಂ ಕಂಡೇವೈಸುವ ಜೀವಂ ಪರಿಭಾವಿಸನೇಕೊಡಲನಕಟ ಶುದ್ಧದ ಮಡಲಂ (ಧರ್ಮನಾ. ೫–೯೮) ; ವಿಣ್ಮೂತ್ರಾಸುರದ ಕಿಸುಗುಳದ ಮಳೆಗಱೆಯಿತ್ತು ಸತ್ರದಲಿ (ನಿಭಾಗ. ೧೦–೯೪–೩೧). **೨.** ಹೇಯವಾದುದು ; ತುಚ್ಛವಸ್ತು ; ಕ್ಷುದ್ರ : ನವವಿವರಾವೃತ ಪೂತ ದ್ರವತ್ವಗಾವೃತ ವಿಮಿಶ್ರಮಾಂಸೋಪಜಿತಮಧ್ರುವಂ . . . ಮೆಯ್ ಬಗೆವೊಡಿಂತು ಕಿಸುಗುಳಮಾದಂ (ಕವಿರಾ. ೩–೧೯೬) ; ಪೆಣ್ ತಪ್ಪಿ ನಡೆಯೆ ಛೀ ಕಿಸುಗುಳಮೆಂದುಱಿವುದೆ ಗೆಲ್ಲಂ (ಯಶೋಚ. ೨–೫೬) ; ಬೆಲೆವೆಂಡತಿ ಬಗೆವೊಡಿಂತು ಕಿಸುಗುಳಮಲ್ತೆ (ಶ್ರಾವಕಾ. ೧೨೨–೧). **೩.** ಹೇಸಿ ಮನುಷ್ಯ ; ಹೊಲಸಾದ ವ್ಯಕ್ತಿ ; ನೀಚ : ಎನಿತೊಳವು ಕೊಳೆವ ಪಡುಕೆಗಳನಿತಱ ದುರ್ಗಂಧಮವರ ಮೆಯ್ಯ ನಿಸರ್ಗಾತ್ಮನುಪಮಘಾತಿಯ ಪೞುಗೞಿದ ನಾತಮಂ ಪೋಲವವರದೇಂ ಕಿಸುಗುಳರೋ (ಶಾಂತಿಪು. ೭–೧೦೦) ; ಪೞಿಯಂ ಸ್ವೈರಿಪಂಗೆ . . . ಕಿಸುಗುಳ[ಪಾಠಾಂ. ಳ್ಳ]ನಪ್ಪಂಗಂ ಸೂಳೆಸುಖಂ ಸಲ್ವು[ಪಾಠಾಂ. ಲ್ಲು]ದಲ್ತೆ (ಮದತಿ. ೧೦–೭೭) ; ಪುಸಿನುಡಿವನ ಪಿಸುಣನ ಕಿಸುಗುಳನ ಬಸನಿಗ ಬದೆಗನೆನಿಪನಾ ಒಸೆದು ಕೂಡಲಾಗದು ತಂಗಿ (ಅಂಜನ. ೩–೧೪೮).

**ಕಿಸುಕುಳ** : **೧.** ಮೂಱು ಕಿಸುಕುಳಕಾಗಿ ಘಟವ ಹೊರೆದಡೆ . . . ರಾಮೇಶ್ವರಲಿಂಗಕ್ಕೆ ದೂರ (ಏಲೇಶ್ವ. ೬೪) ; ಕರ್ತೆ ಭಕ್ತನಾದರೆ ಕಿಸುಕುಳವ ತಿಂಬುದ ಮಾಣ್ಬುದೆ (ಬಸಹೆ. ೮೬) ; ಒಂದು ಲಡ್ಡುಗೆ ಕೈಯಿಂ ಜಗುಬ್ದು ಕಿಸುಕುಳದ ಮೇಲೆ ಬಿಱ್ದೊಡೆ (ಜೀವಸಂ. ೧೭೧–೧೪ ವ) ; ಮಾತೃತನುಮಲದ ಕಿಸುಕುಳದ ಹುಳುವಾಗಿ (ನಿಭಾಗ. ೩–೧೪–೨೮). **೨.** ಕಿಸುಕುಳದ ಬಹಿರಂಗದಿಚ್ಛೆಯ ಬೆಸನದಲಿ ಬೇಯಿಸದೆ (ಪ್ರಭುಲೀ. ೧೩–೫೮). **೩.** ಹುಸಿಕರ ಭಕ್ತಿ ಕಿಸುಕುಳರ ವಿರಕ್ತಿ ಇವು ಹುಸಿ ಎಂದೆ (ಮೋಳಿಮಾ. ೫೭–೨೩೮); ಈ ಮಾನಿಸರಂ ಕಿಸುಕುಳರನೆಯ್ದೆ ಪೊಗಳ್ವುದು ಪೊಸವಣಿಯಂ ಕಳೆದು ಗಾಜ ನುತಿಪವೊಲಕ್ಕುಂ (ಚಂದ್ರಹಾ. ೧–೩೪). **೪.** ಪಾಪ : ಹಿಸುಣತೆಗೆ ಹಿಗ್ಗಿ ಮಿಗೆ ಕಿಸುಕುಳದೊಳೊಗ್ಗಿ ಸಂತಸವಟ್ಟು (ಮನೋವಿ. ೧–೧೭). **೫.** ನಿಂದಕ ; ಅಪಾದಿಸುವವನು : "ಕಿಸುಕುಳ –೧. ನಿಂದಿಸುವವ. ೨. ತಪ್ಪು ಹೊರಿಸುವವ" (ಗಂಗಾಮ. ೮೬). [?]

**ಕಿಸುಗುಳಂಗಲಸು** (ಕ್ರಿ). ಹೇಸಿಗೆ ಮಾಡು; ಹೊಲೆಗಲಸು; ಕೊಳಕು ಮಾಡು : ನೀ ಹಸುಳೆ ಮುಂದಱಿಯೆ ಮೇಲೆ ಕಿಸುಗಳಂಗಲಸದಿರು ಈ ಸಭೆಯೊಳೆಲ್ಲೆಮ್ಮನಸಬಳರ ಮಾಡಿ ಮಾನಾಭಿಮಾನಂಗೊಂಡು ನುಸುಳ ಬಂದೆಯ ಸಾಕು (ಸಿಂಗಿರಾ. ೭–೧೫). [ಕಿಸುಗುಳ + ಕಲಸು$_2$]

**ಕಿಸುಗುಳತನ** (ನಾ). ಕೀಳುತನ; ಹೀನತೆ; ಕ್ಷುದ್ರತೆ: ತೆಱಪಂಕಿಸುಗುಳತನಮಂ ಪೆಱನಿರ್ಮದನೆಗ್ಗತನಮಂ... ಅಱಿವುಳ್ಳಂ ಕಾಣಲೀಯಲಾಗದು ವಧುವಂ (ಮದತಿ. ೧೦–೪೯) ; ಬರಿದೆ ಸದ್ಭ್ರಾಂತಿಯಿಂದೆ ಕಿಸುಗುಳತನಂ ಬೇಡ ಪೋಗೆಂದೊಡೆ (ಅರಾಚ. ೧೩–೧೯). [ಕಿಸುಗುಳ + –ತನ]

**ಕಿಸುಗುಳಿ, ಕಿಸುಕುಳಿ** (ನಾ). ಹೊಲಸು ವ್ಯಕ್ತಿ ; ಕೊಳಕ ; ದುರ್ವಾಸನೆಯುಳ್ಳ ವ್ಯಕ್ತಿ: ಪೊಸ ಘೃತದೊಳಿರಿಸಿ ಜಾತಿ ಪ್ರಸೂನಮಂ ಪಂಚಪಲ್ಲವಂ ಮಧುಕಮುಮಂ ಬಿಸುನೀರಿಂ ಪೂಸುಗೆ ತಾಂ ಕಿಸುಗುಳಿಯಪ್ಪವಳ ಭಗದ ಗಂಧಂ ಕಿಡುಗುಂ (ಲೋಕೋಪ. ೯–೧೭೨) ; ಕಿಸುಗುಳಿ ಬೇಡ ನೀನೆಸೆವೊಡಂಬೆರಡಂ ತೊಡುವಾ ಪತಾಕೆಯೆಮ್ಮಸುವೆರಡೊಂದೆ ಜೀವಮೆಸು (ಸೂಕ್ತಿಸು. ೩–೨೨೯). **ಕಿಸುಕುಳಿ** : ಅಶನವ್ಯಸನಗಳೊಂದು ಹಸಿವು ನಿದ್ರೆಗಳೊಂದು ಕಿಸುಕುಳಿಗಳಿನ್ನೆಲ್ಲಿಯದು ನಿನಗೆ ಕುಲವೆಂದು (ದೀಕ್ಷಾಬೋ. ೧೦೨–೧೧) ; ಕಡುನಿದ್ರೆಗಣ್ಣಯೇಂ ಕಿಸುಕುಳಿ ಕುಂಭಕರ್ಣನೊಡವುಟ್ಟಿದಳೋ ಹಡೆದುಂಬ ಸೂಳೆಯೋ (ಸೂಕ್ತಿಸು. ೮–೪೫೦).
[ಕಿಸುಗುಳ + –ಇ$_2$]

**ಕಿಸುಗುಳಿಗ, ಕಿಸುಕುಳಿಗ** (ನಾ). **೧.** = ಕಿಸುಗುಳಿ : ಭೀತಂ ಲೋಚಂ ಶಠಂ ನಿರ್ಗುಣಿ ಕಿಸುಗುಳಿಗಂ ನಿರ್ಲಜ್ಜಂ ಪಾಪಿ ಕಳ್ಳಂ (ಮದತಿ. ೬–೧೪); ಕುಲಹೀನಂ ತೊನ್ನಂ ಕಿಸುಗುಳಿಗಂ ಪರದೇಶಿ ವಿತ್ತಹೀನಂ ಕುತ್ತಂಗುಳಿಯಕ್ಕೆ ಜೈನನೆ ಜಿನನಿಳಯಕ್ಕೊಯ್ದೋವಿ ಲೇಸುಮಾಳ್ಪನೆ (ಸಮುಪ. ೪–೩೧); ಅಕ್ಕನೆ ಬೇಡ ಕರ್ಕಶಂ ಕಿಸುಗುಳಿಗಂ ವಿಕಾರಿ ಜಡ ನಾಣಿಲಿ ಜಬ್ಬುರಿ (ಲೀಲಾವ. ೨–೬೮) ; ಕುಬ್ಜಂ ಕಿಸುಗುಳಿಗಂ (ಖಮುದ. ೩–೫೯). **ಕಿಸುಕುಳಿಗ** : **೨.** ಆಚಾರಹೀನ ; ಪಾಪಿಷ್ಠ ; ಕ್ಷುದ್ರ : ಚೊಕ್ಕ ಮಣ್ಣಿನೊಳಲ್ಲದೆ . . . ಬೆರೆಯಲಪ್ಪುದೆ ಮುಕ್ತಿಯುಂ ಕಿಸುಕುಳಿಗನಂ ಬೆರೆಯನೆಮ್ಮ ಕುಂಭೇಶ್ವರನ ಬೆಸನಿಂತುಟು (ಮದೇಪು. ೨೮–೩೧). [ಕಿಸುಗುಳ + –ಇಗ]

**ಕಿಸುಗುಳೆ** (ನಾ). ಹೇಸಿಯಾದ ಹೆಂಗಸು ; ಕೊಳಕಿ ; ಕ್ಷುದ್ರೆ : ಕಿಸುಗುಳೆ ಕಳ್ಳೆ ಮೂರ್ಖೆ ಶಠೆ ಪಾಪಿ ಕುರೂಪಿಯಸತ್ಯವಾದಿ . . . ದುರಾತ್ಮೆಯಪ್ಪ ವಧು ಸಜ್ಜನಮೇ (ಮದತಿ. ೮–೭) ; ಮಿಾಂಬೊಲಸು ನಾರ್ಪಮೆಯ್ಗಂ . . . ಸುರಿವರುಣಜಳಕ್ಕಂ ಬಿಡದೆ ಕಾಗೆಯುಂ ಪರ್ದುಂ ಬಳಸುವವೆಂದೊಡಿಂತು ಕಿಸುಗುಳೆಯೊಳರೇ (ಸುಕುಮಾ. ೪–೫೯) ; ಗಂಡನಿದಿರೊಳೆದ್ದಾಡುವ . . . ಕಿಸುಗುಳೆಯರನಱಿವೊಡೆ ಪೋಲಿಪುದೆ ಧರ್ಮರತ್ನಾಕರೆಯಂ (ಧರ್ಮಾಮೃ. ೧೦–೩೪). [ಕಿಸುಗುಳ + –ಎ$_4$]

**ಕಿಸುಜಡೆ** (ನಾ). ಕೆಂಪುಬಣ್ಣದ ಜಡೆ; ಕೆಂಜಡೆ: ಪಿಸುಣಂ ಪೇಟಿದೊಡೇವುದೊ ಕಿ[ಪಾಠಾಂ. ಬಿ, ಬ]ಸುಜಡೆಯುಂ ಬೂದಿ ಕಚ್ಚ[ಪಾಠಾಂ. ಚ್ಚು]ಟಂ ಬೊಕ್ಕಣಮುಂ (ಜಗವಿ. ೫-೫೩). [ಕಿಸು$_3$ + ಜಡೆ$_2$]

**ಕಿಸುದಳಿರ್** (ನಾ). ಕೆಂಪು ಚಿಗುರು; ಕೆಂದಳಿರು: ಕಿಸುಸಂಜೆ, ಕಿಸುದಳಿರ್ (ಶಬ್ದಾನು. ೩೪೩ ಪ್ರಯೋ) [ಕಿಸು$_3$ + ತಳಿರ್$_2$]

**ಕಿಸುದೋಱು** (ಕ್ರಿ). ಮುನಿಸುದೋರು; ಕೋಪವನ್ನು ಪ್ರಕಟಿಸು: ಹಸಿವಾಮಿಷಂ ಮಿಥ್ಯೆ ತೃಷೆ ನಿದ್ರೆಯಾಲಸ್ಯ ವ್ಯಸನವರಿಷಡ್ವರ್ಗವಿಂದ್ರಿಯತತಿ ನುಸುಳು ತಾಪತ್ರಯಂ ಕಿಸುದೋರ್ಪ ಮತ್ಸರಂ ಧೆಸೆಹತ್ತಜಿಕೊಳು ಸುಳಿಯಲಮ್ಮವವನಂ (ಸಾನಂಚ. ೧-೫೮).
[ಕಿಸು$_3$ + ತೋಱು$_1$ (< ತೋಱ್)]

**ಕಿಸುಪು** (ನಾ). ಕೆಂಪುಬಣ್ಣ; ಕೆಂಬಣ್ಣ: ಬೆಳರಂ ಪೊಸ ಕಿಸುಪಂ ಕರ್ಪಂ ಪೊನ್ಬೊಳಪಂ ಪಳುಕಂ ಪಾಳಿಪ ನಿಮ್ಮಳ ತನು ಮಿನುಗಿಂದ (ಉದ್ಭದೇ. ೭-೩). [ಕಿಸು$_3$ + -ಪು$_2$]

**ಕಿಸುಪೇಱು** (ಕ್ರಿ). ಕೆಂಪೇರು; ಕೆಂಪುಬಣ್ಣವನ್ನು ಹೊಂದು; ಕೆಂಚಗಾಗು: ನೀಳ್ದು ಕಿಸುಪೇಱಿದ ಕೇಳರಕಾಮಪಾಶದಿಂ ಕೊಲ್ವವೊಲಗ್ಗದಾನೆಗೊಲೆಯಂ . . . ಕಾಡಿ ಕೊಲಲಕ್ಕುಮೆ ನಿನ್ನ ಪದಾಬ್ಜದಾಸನಂ (ಲೀಲಾವ. ೧೪-೬೭). [ಕಿಸುಪು + ಏಱು$_1$ (< ಏಱ್$_1$)]

**ಕಿಸುಬಾಯಿ** ‘ಕಿಸಿವಾಯ್’ ನೋ.

**ಕಿಸುಬಾಸುಳ್**(ನಾ). ಕೆಂಪಾಗಿರುವ ಬಾಸುಂಡೆ; ಕೆಂಪು ಬಾಸಾಳ: ಪ್ರಾಚೀ ನಿತಂಬವತಿಗೆ . . . ಆದ ಕರರುಹಕ್ಷತದ ಕಿಸುಬಾಸುಳ್ಗಳೆನೆ ಸವಿಸ್ತರದ ಸಂಧ್ಯಾರಾಗಮ್ಮೆದೆ ರಂಜಿಸುತಿರ್ದುದು (ಜೈಮಿಭಾ. ೧೭-೪೧).
[ಕಿಸು$_3$ + ಬಾಸುಳ್ (< ಬಾಸುೞ್)]

**ಕಿಸುಬಿಸುಮೆಯ್ಯ** (ನಾ). ಕೆಂಪುಬಣ್ಣದ ಅಗ್ನಿ: ಪೊಸಕಿಸುಬಿಸುಮಯ್ಯಂ ಕಣ್ಣಾದನಮುದರ್ಗಣಿಸರೆಜಿಯಿಯಂ (ಉದ್ಭದೇ. ೧-೨).
[ಕಿಸು$_3$ + ಬಿಸುಮೆಯ್ಯ]

**ಕಿಸುಭಾಗ್ಯ** (ನಾ). “ಮಹಾಭಾಗ್ಯ” (ಬಾಳಗಿ. ಕೋಶ): ಆ ಕಸಿಗಿಡಗಳಿಗಾದರೂ ನೀರೆರೆಯುವುದರಲ್ಲಿ ಅರ್ಥವಿದೆ . . . ಇವುಗಳೆಲ್ಲ ಯಾವ ಕಿಸುಭಾಗ್ಯಕ್ಕೆ (ಬಾಳಿಗಿ. ೮೮). [ಕಿಸು ? + ಭಾಗ್ಯ]

**ಕಿಸುಮಬೆ** (ನಾ). ಒಬ್ಬಾಕೆಯ ಹೆಸರು: ದೇವಬೆಯುಮ್ ಕಿಸುಮಬೆಯುಮ್ ಜನಕೆಬಲ (ಮೈಆರಿ. ೧೯೨೩, ೮೭-೭ ; ?).
[ಕಿಸು$_0$ + ಅಬೆ (< ಅಬ್ಬೆ)]

**ಕಿಸುಮೊಗೆ** (ನಾ). ಕೆಂಪು ಹಳದಿ ಮಿಶ್ರಭೂಮಿ: ಅಂತು ಕಿಸುಮೊಗೆ ಸಮ್ಮಿಶ್ರ ಮತ್ತರು ೭೫ (ಸೌಇಇ. IX-i, ೨೮೯-೪ ; 1200).
[ಕಿಸು$_3$ + ಮೊಗೆ$_3$]

**ಕಿಸುರ್**$_1$ (ಕ್ರಿ). ೧. ಅಸಹ್ಯವಾಗಿರು; ಅಪ್ರಿಯವಾಗಿರು: “ಕಿಸುರ್ -ಅಸಹ್ಯಭಾವೇ” (ಶಮಧಾ). ೨. ಅಸಹ್ಯಪಡು; ಹೇಸು: ಕಿಸುರ್ವರ್ಯಮ್, ಕಿಸುರ್ವ್ವರ್ಯಮ್ (ಶಬ್ದಾನು. ೭೪ ಪ್ರಯೋ). [?]

**ಕಿಸುರ್**$_2$, ಕಿಸರು$_2$, ಕಿಸುರು$_2$ (ನಾ). ೧. ಹೇಸಿಗೆ; ಅಸಹ್ಯತೆ; ಜುಗುಪ್ಸೆ: “ಕಿಸುರೆಂದೆನೆ ಕಿತ್ತಡಮಕ್ಕು” (ಕವಿಕಂ. ೨೪೬). ೨. ದ್ವೇಷ; ಮತ್ಸರ; ಅಪ್ರಿಯತೆ: ಎಮ್ಮ ಕಿಸುರ್ ಪಿಂಗುಗಗಲ್ವೆಡೆಯೊಳ್ ಕೆಳೆ ಸಂಗಳಿಸುಗೆ ನಿಮಗಮೆಮಗಮಿಂ ಲತೆಗಳಿರಾ (ಆದಿಪು. ೧೧-೧೩೩); ಎನ್ನೊಳಾದ ಕಿಸುರೆನ್ನೊಡವೋಪುದಿದೊಳ್ಳಿತು (ಪಂಪಭಾ. ೧೩-೧೮); ಜಯಾಸಿಪೊಗರಿಱಿಸೆ ಕಿಸುರಮಸಿಯಕ್ಕರಮಂ (ಪಂರಾಮಾ. ೯-೨೧). ೧, ೨: ಕಿಸುರ ಕಸಗಳೆದುಮೊತ್ತಿಸಿ ಪೊಸಬಗೆ [ಪಾಠಾಂ. ಬಸೆ]ಯಂ ಪೂಸಿ ರಾಗರಸದಿಂ ಪೊಕ್ಕಂ ಪುಸಿದಱಿವೆಂಡಿರ ಬೇಟಂ ಬಿಸುಟಿರ್ದಯಂ ಸ್ಮರನೆ ಪುಗುವವೊಲ್ ಪೊಸಮನೆಯಂ (ಅರ್ಧನೇ. ೪-೧೪೯). ೩. ವಿರೋಧ; ವಿಘ್ನ: ಕಿಸುರಂ ಮಾಱಿಪ್ಪೊಡೆಬರ್ಕೆ ಕಾಪಿನವರೆಂದಬ್ಜಾಕ್ಷನಂತಂತೆ ನಾಲ್ದೆಸೆಯಂ ನೋಟ್ಪುದುಂ (ಜಗವಿ. ೬-೩೩). ೪. ಎಂಜಲು; ದೋಷ. ‘ಕಣ್ಕಿಸುರ್’ ಪರಾ. ೫. ಜಗಳ; ಕಲಹ. ‘ಕಿಸುರಳಿಪ’ ಪರಾ. ಕಿಸರು$_2$: ೪. ಕಸುವಿನ ಕಂಸನ ಕೊಂದ ಕಾರಣ ಕಿಸರು ತಾಗಿತೆ ನಿನಗೆ ರಂಗಯ್ಯ (ಪುರಂದ. ೩-೧೦-೮). **ಕಿಸುರು**$_2$: ವಸುಧಾಗ್ರಗಣ್ಯಗುತ್ತಮದ ನಾರಿಯ ನಾವು ಬೆಸುಗೆ ಮಾಳ್ಪಾಗ ನೀನೊಂದು ಕಿಸುರ ಹಣ್ಣದಿರ್ (ಭರಚ. ೫೫-೧೧೬). ೨. ಗಸಣಿ ದುರ್ಜನಮವಿಶ್ವಾಸಂ ಪರಾಭವಂ ಕಿಸುರು ಗಾವಳಿ ಬಂದಿ . . . ಉಸಿರಲೇನಾ ಚೆನ್ನಬಸವನಿಹ ರಾಜ್ಯದೊಳ್ ಮಿಸುಕವು (ಚಬಪು. ೬-೪೦); ಇವರ ಕಿಸುರಿಗೆ ನೀವ್ಯಾಕೆ ಹೋಗಿ ಸಿಕ್ಕುಹಾಕಿಕೊಳ್ತೀರಿ (ಮಲೆಮ. ೪೦೩). [< ಕಿಸುರ್$_1$]

**ಕಿಸುರ್**$_3$, ಕಿಸುರು$_3$ (ನಾ). ೧. ಕೆಂಪುಬಣ್ಣ. ೨. ತಾಮ್ರ: ಪಲ್ಲವಾಧರೆಯ ಕೆಂದುಟಿಯ ರಂಗಿನಂತು ಕಿಸುರಿಂ ರಂಜಿಸಿಯುಂ . . . ಲೋಹಕಾರರ ಮನೆಯಿಂ (ರಾಮಾಶ್ವ. ೧೦೩-೧೨). **ಕಿಸುರು**$_3$ : ೧. ಸೂರ್ಯನು ಅತ್ತ ಕಿಸುರುರದ ಕರ್ಬಸಿರ ಮರೆಯೊಳಿಹನತ್ತ (ವಿಸೀಗೀ. ೩೭-೧೦). [?]

**ಕಿಸುರಂಬಲಿ** (ನಾ). ಕೊಳೆಯಾದ ಅಂಬಲಿ: ಮುಂದೆಸೆವಮೃತಮಂ ಕುಸಿದು ಕಿಸುಱ[ರ]ಂಬಲಿಗೆ ಬಾಯ ಬಿಡುವಂತೆ ಕೆಲಗವಿಗಳುಸಿರ್ದರ್ (ಲಕ್ಷ್ಮಭಾ. ೩೭-೫). [ಕಿಸುರ್$_1$ + ಅಂಬಲಿ$_1$]

**ಕಿಸುರವಗು** (ನಾ). ಕಿರುಚಿ ಕೀಸರಿಡುವ ಮಗು; ರಗಳೆ ಮಗು: ಪೀಲಿಯುಟ್ಟೆಗೆಗ್ಗೆವ ತಳಿರುಯ್ಯಾಲೆಯಾಡುವ ಕಿಸುರವಕ್ಕಳ ನೇಲುಗೊಂಬೆಯ ತೊಟ್ಟಲೋಳ್ಪಟ್ಟಿರಿಸಿ ಜೋಗುಳಿಪ . . . ಲೀಲೆಗಾತಿಯರೆಸೆದಿಹರ್ (ಮದೇಪು. ೫-೬). [< ಕೀಸರ + ಮಗು (< ಮಗ ?)]

**ಕಿಸುರಳಿಪ** (ನಾ). ಕಲಹವನ್ನು ಬಯಸುವವನು; ಕಲಹಪ್ರಿಯ: ದಂಡಪಾಣಿ ಪೊಕ್ಕಂ ಕಿಸುರಳಿಪಂ ಪಿಸುಣ ಪಸರಿಗಂ ನೃಪಸಭೆಯಂ (ಪಂರಾಮಾ. ೩-೧೯). [ಕಿಸುರ್$_2$ + ಅಳಿಪ$_1$]

**ಕಿಸುರಾನ್** (ಕ್ರಿ). ಹೊಟ್ಟೆಕಿಚ್ಚುತಾಳು; ಕರುಬು; ಮತ್ಸರಿಸು: ಸಂತ ಸುಖಿಮಿರ್ಪವರು ಕಾದಬೇಕೆಂದು ಕಿಸುರಾಂತುಗುರ ಮಸೆವ . . . ಹಲರಂ ತಱಿವ ಸಮರಮಂ ನೋಡಲೆಳಸುವ ಕಣ್ಣು ಸಿಂಗರಂ ನಾರದಂಗೆ (ಸೋಮಚ. ೧-೨೯). [ಕಿಸುರ್$_1$ + ಆನ್$_1$]

**ಕಿಸುರು**$_1$, ಕಿಸರು$_1$ (ನಾ). ಕಣ್ಣಿನ ಗೀಜು; ಪಿಚ್ಚು; ಪಿಸುರು; ಕೊಳೆ: ಕಿವಿಯೊಳಗಣ ಗುಗ್ಗೆ ಕಣ್ಣಿನೊಳಗಣ ಕಿಸುರು (ಬಾಹಟೀ. ೨-೩-೫೩ ವ). **ಕಿಸರು**$_1$ : ಕಿಸರು ತುಂಬಿದ ಕಣ್ಣಿಗೆ ನುಸಿ ಮುತ್ತುತ್ತವೆ (ರೂಢಿ). [< ಕಿಸುರ್$_2$ ?]

**ಕಿಸುರು**$_2$ ‘ಕಿಸುರ್$_2$’ ನೋ.

**ಕಿಸುರು**$_3$ ‘ಕಿಸುರ್$_3$’ ನೋ.

**ಕಿಸುರು**$_4$ (ನಾ). (?) : ಬಂದುದೆನ್ನಯ ವಾಸಿ ಕಿಸುಱ[ರ]ಸು ಕೆಂದಳದಿ ಮೇಯ್ದೀವೆನೇ ತೆಗೆಯೆಂದು ಸಕಲೋತ್ಸವದಿ ಕಂದರ್ಪನ ಕರದು ತಂದು ಮಿಂದಳಾ ಪೊಲೆನೀರನತ್ಯಾನಂದದಲಿ (ಸಾಳ್ವಭಾ. ೧೮-೮೧). [?]

**ಕಿಸುರುಗಣ್ಣು** (ನಾ). ಪಿಚ್ಚುಗಟ್ಟುವ ಕಣ್ಣು; ಪಿಸುರುಗಣ್ಣು: ನೀರುಗಣ್ಣು ಜಾರುಗಣ್ಣು ಹುಳುಗಣ್ಣು ಕಿಸುರುಗಣ್ಣು ಮಂಜುಗಣ್ಣು (ಶುಕಸ. ೩೨೮). [ಕಿಸುರು$_1$ + ಕಣ್ಣು (< ಕಣ್)]

**ಕಿಸುರುಗಾತಿ** (ನಾ). ಜಗಳಗಂಟಿ; ಕಲಹಪ್ರಿಯೆ: ಉತ್ತರಾಷಾಢದೊಳು ಸುಖಿಯಾಗಿಯೂರನಾಳುತಿರ್ಪಳಾ ಶ್ರವಣದಲ್ಲಿ ಧರ್ಮಿಷ್ಠೆಯ್ಯೆ ತತ್ತರುಣಿಗರಿಗಳುಂಟಾ ಧನಿಷ್ಠೆಯೊಳು ಪತಿಭಕ್ತೆಯಾ ಶತಭಿಷಾಖ್ಯತತ್ತಿಥಿಯೊಳಪಕೀರ್ತಿಯುತೆ ಕಿಸುರುಗಾರ್ತಿಯ್ಯೆ (ವೀಶೈಪು. ೪-೨೧-೧೯).
[ಕಿಸುರು$_2$ (< ಕಿಸುರ್$_2$) + ಕಾತಿ]

**ಕಿಸುರುಗುಟ್ಟು** (ಕ್ರಿ). ಕಿರುಚಿ ಕೀಸರಿಡು : ಐದು ತಿಂಗಳ ಕೂಸಂ ಗೋರ್ಕಣಿಯೆಂಬ ದೇವತೆ ಪಿಡಿದೊಡಾ ಕೂಸು ಮೆಯ್ಯೊಣಗುಗುಂ, ವೈಬಣ್ಣವಕ್ಕು. ಕಿಸುಱು[ರು]ಗುಟ್ಟುಗುಂ ಆಗುಳಿಸುಗುಂ ಕಣ್ಣನೀರ ಸುರಿಸುಗುಂ (ಬಾಲಚಿ. ೧೨೮-೧೯). [< ಕೀಸರ + ಕುಟ್ಟು$_1$]

**ಕಿಸುರುಗೊಳ್** (ಕ್ರಿ). ಅಸಹ್ಯಪಡು ; ಕೋಪಗೊಳ್ಳು : ಹಸಿದ ಹಾರುವನಾಗಿ ಭಾಮೆಯೊಳಸನಮಂ ಪಡೆದುಣುತ ಮದುವೆಗೆ ಸಸಿಮುಖಿಯರಟ್ಟನಿತನೆಲ್ಲವ ತಿನಲು ಭೂತವೆನೆ ಕಿಸುಱು[ರು]ಗೊಂಡಿರಿ ನೀವು (ಸಾಳ್ವಭಾ. ೧೮-೩೮). [ಕಿಸುರು$_2$ (< ಕಿಸುರ್$_2$) + ಕೊಳ್$_1$]

**ಕಿಸುರುಮಂತ್ರ** (ನಾ). ದೃಷ್ಟಿದೋಷವನ್ನು ನಿವಾರಿಸುವ ಮಂತ್ರ: ಕೂಸಿಗೆ ದೃಷ್ಟಿಯಾಗಿದೆಯೋ ಏನೋ ಸ್ವಲ್ಪ ಕಿಸುರುಮಂತ್ರ ಹಾಕಿಸಿ ಕೊಂಡು ಬನ್ನಿ (ರೂಢಿ). [ಕಿಸುರು$_2$ (< ಕಿಸುರ್$_2$) + ಮಂತ್ರ]

**ಕಿಸುರೇರು$_1$** (ಕ್ರಿ). ರೇಗು ; ಕೋಪವೇರು ; ಸಿಟ್ಟು ಹೆಚ್ಚಾಗು : ದುರ್ಯೋಧನನು ಕರ್ಣನಿಗೆ ಸಾರಥ್ಯವನ್ನೆಸಗಿ . . . ಎಂದು ಶಲ್ಯನೊಡನೆ ಪ್ರಾರ್ಥಿಸುತ್ತಾನೆ. ಅದನ್ನಾಲಿಸಿದ ಶಲ್ಯನಿಗೆ ಸೈರಿಸಲಾರದ ಕಿಸುರೇರುತ್ತದೆ (ನಾಡೋಜ. ೧೮೮). [ಕಿಸುರ್$_2$ + ಏರು$_1$ (< ಏಱು$_1$)]

**ಕಿಸುರೇರು$_2$** (ಕ್ರಿ). ಕೆಂಪೇರು ; ಕೆಂಪಾಗು : ಆ ಸಂದರ್ಭದಲ್ಲಿಯೂ ಗೊಜ್ಜಿಗನ ಕಣ್ಣು ಒಂದಿಷ್ಟು ಕಿಸುರೇರಿರಬೇಕು (ನಾಡೋಜ. ೩೩೧). [ಕಿಸುರ್$_3$ + ಏರು$_1$ (< ಏಱು$_1$)]

**ಕಿಸುರೊಡಲ್** (ನಾ). ಅಸೂಯೆಯ ದೇಹ; ಮತ್ಸರ ತುಂಬಿದ ಮೈ: ಕಿಸುರೊಡಲ್ ಬಾಳ್ವೆಯಂ ಬೆಳಗದಿಲ್ಲಿರ್ದ್ದಂ (ಕಾಲೂರ. ೧೧೭-೨೧೭). [ಕಿಸುರ್$_3$ + ಒಡಲ್]

**ಕಿಸುರ್ವಡು** (ಕ್ರಿ). =ಕಿಸುರುಗೊಳ್: ಜಗದೊಡನಳ್ಳು ನಕ್ಕು ವಿಕೃತಕ್ಕೆ ಕಿಸುರ್ವಡದುಗ್ರ ವೀರಕೆಂದಗಿಯದಣಕ್ಕೆ ಕಯ್ಮರಿಯದಿಂಕ್ಪಪೆಯಿಂ ಶುಚಿಯಾಗಿ ಬಾಳ್ದು (ಸಂಸಪ. ೧೧-೧೧). [ಕಿಸುರ್$_2$ + ಪಡು$_1$]

**ಕಿಸುರ್ವೇರ್**, ಕಿಸುರ್ವೇರು (ನಾ). ೧. ಮರವೆಯನ್ನು ಉಂಟು ಮಾಡುವ ಒಂದು ಮೂಲಿಕೆ ; ಮಬ್ಬು ಕವಿಸುವ ಒಂದು ಮದ್ದು: "ಕಿಸುರ್ವೇರೆನೆ ಮರುಹೆಯೌಷಧಂ" (ಚತುಃ. ೧೧೮) ; ಇದುತ್ಪಲ ಲಕ್ಷ್ಮಿಯ ಮುಂಡನಕ್ಕೆ ಸುತ್ತಿದ ನವ ನೀಲಕಾಂಡಪಟುಮಿಂತಿದು ಚಕ್ರ ಯುಗಕ್ಕಗಲ್ಚಲಿಕ್ಕಿದ ಕಿಸುರ್ವೇರ[ಪಾಠಾಂ. ರ್ವಕ್ಕೆ]ಕರ್ಬೊಗೆಯೆನಿಪ್ಪನ ಮಾಯ್ದು ಮಹತ್ತಮಂ ತಮಂ (ಚಂದ್ರಪ್ರ. ೮-೧೯) ; ಹೊತ್ತಿಸಿದ ಕಿಸುರ್ವೇರ ಕಾರ್ಬೊಗೆ ಚಿತ್ತದಲಿ ಸುಳಿಗೊಂಡುದು (ಉತ್ತರಾ. ೧೩-೯). **ಕಿಸುರ್ವೇರು** : ಅವರ ಅಪ್ತರು ಮಿತ್ರರು ಬಾಂಧವರು ಕಿಸುರ್ವೇರಿನ ನಿನ್ನನ್ನು ಸುಮ್ಮನೆ ಬಿಡುವರೇನು (ವಿಗಡ. ೧೯). [ಕಿಸುರ್$_1$ + ಬೇರ್]

**ಕಿಸುವಂಚೆ** (ನಾ). ಕೆಂಪುವಸ್ತ್ರ, —ಬಟ್ಟೆ : ಕಿಸುವೊನ್, ಕಿಸುಸಂಜೆ (ಶಮದ. ೧೮೨ ಪ್ರಯೋ). [ಕಿಸು$_3$ + ಅಂಚೆ$_4$]

**ಕಿಸುವಣ್**, ಕಿಸುವಣ್ಣು (ನಾ). ಕೆಂಪಾದ ಹಣ್ಣು : ಕಿಸುವಣ್ಮೃಸು ಕಿರ್ದ ನಾಗರಂಗಂ ತನಿವಣ್ ಪೊದೆಟ್ಟಿಸೆವ ಮಾವು (ಜಗವಿ. ೨-೧೫) ; ಕಿಸುವಣ್ಮಸುಕಿ ತೋರ್ಪ ಸಾರಂಗ ಜಂಬೀರಮಿನಿತುಂ ನಾಡೆ ಸಾರ್ವ ಕಾಲಂ ಕುಂದವು (ಚಿಬಪು. ೧೧-೨೨). **ಕಿಸುವಣ್ಣು** : ಕಲ್ಮುಳ್ಳುಗಳ ದಾರಿ ಮೆಲ್ಪ ಕಾಯ್ ಕಿಸುವಣ್ಣು (ಕಾಲೂರ. ೩೧-೨೫). [ಕಿಸು$_3$ + ಪಣ್$_2$]

**ಕಿಸುವಣ್ಣ** (ನಾ). ಕೆಂಪುಬಣ್ಣ ; ಕೆಂಬಣ್ಣ : "ಕಿಸುವಣ್ಣಮೆನಲು ಕೆಂಬಣ್ಣವದು" (ಶಬ್ದಮಂ. ೭೦) ; ಪಾದಸಮುದ್ಗತ ಧೂಳಿಯಿಂದ ಮಾಗಸ ಕಿಸುವಣ್ಣವಾಗೆ (ಹಮ್ಮೀರ. ೩-೫೦). [ಕಿಸು$_3$ + ಬಣ್ಣ]

**ಕಿಸುವಣ್ಣು** 'ಕಿಸುವಣ್' ನೋ.

**ಕಿಸುವಲಗೆ** (ನಾ). ತಾಮ್ರದ ಹಲಗೆ; ತಾಮ್ರಪಟ : ಕಿಸುವಲಗೆ ಗಳಿಂ ಬರೆದೆತ್ತಿದ ಶಾಸನಕೇ ದೊರೆಯಾದುವೊ . . . ಎಳೆದಳಿರ್ಗಳ್ (ಮಲ್ಲಿಪು. ೬-೩೦). [ಕಿಸು$_3$ + ಪಲಗೆ]

**ಕಿಸುವಾಯ್$_1$** (ನಾ). ಕೆಂಪಾದ ಬಾಯಿ ; ಕೆಂಬಣ್ಣವುಳ್ಳ ಬಾಯಿ: ಸಸಿಮೊಗದ ಕಿಸುವಾಯ ಪುಸಿನಡುವಿನರಸಿ (ರಾಮಾಶ್ವ. ೮೬-೨೩). [ಕಿಸು$_3$ + ಬಾಯ್]

**ಕಿಸುವಾಯ್$_2$** 'ಕಿಸಿವಾಯ್' ನೋ.

**ಕಿಸುವಾಯ$_1$** 'ಕಿಸಿವಾಯ' ನೋ.

**ಕಿಸುವಾಯ$_2$** (ನಾ). ಒಂದು ಮನೆತನ ; ಒಬ್ಬಾತನ ಹೆಸರು (?) : ಶ್ರೀ ಕಿಸುವಾಯರ ರವಿ ಕಿಮಯ್ಯನಾಯಕಂ ಮಾಡಿಸಿದ ಶ್ರೀ ನಾರಾಯಣದೇವರ್ಗೆ (ಎಇ. XVIII, ೧೭೯-೭ ; 1082) ; ಭೂದೇವ ಲಲಾಮಂ ಕಿಸುವಾಯರ ಕುಳತಿಳಕಂ ರೂಪರ್ಷಪಪತಾಕಂ (ಕಇ. V, ೨೬-೮೧ ; 1147). [?]

**ಕಿಸುವಾಳಿ** (ನಾ). ಒಂದು ಪ್ರದೇಶದ ಹೆಸರು (?) : ಈಶಾನ್ಯದ ಕಿಸುವಾಳಿಯಿನ್ದೆ ನಿನ್ದಕಲ್ಲಿನ್ದೆ ಒಟ್ಟಿಯಿನ್ದೆ ಆಗ್ನೇಯದ ಎಲಂಟ ಕೂಣ್ಚಿಯಿನ್ದೆ (ಎಕ. X (S), ಚಿಕ್ಕಬ. ೧೧೬-೭೦ ; 850). [?]

**ಕಿಸುವುಡಿ** (ನಾ). ಕೆಂಪು ಹುಡಿ ; ಕೆಂಬಣ್ಣದ ಪುಡಿ : ಕೇದಗೆಯ ಕುತ್ತುಂಗಱೆಗಳಂ ಕುತ್ತಿ ಕೇಶದ ಕೊನೆಯೊಳ್ ಕೇಸರದ ಕಿಸುವುಡಿಯಂ ಕೆದಱೆ (ಅರ್ಧನೇ. ೫-೫೫ ವ). [ಕಿಸು$_3$ + ಪುಡಿ]

**ಕಿಸುವೊನ್** (ನಾ). ಕೆಂಪು ಲೋಹ; ತಾಮ್ರ : ಕುರುಬಲಕ್ಕೆ ಮಿಟ್ಟು ಪಲ್ಮೊರೆವಂತೆ ಮೊರೆದು ಪರಿವ ತನ್ನ ಕಿಸುವೊನ್ನ ರಥಮುಂ ಭಯಂಕರಾ ಕಾರಮಾಗೆ (ಪಂಪಭಾ. ೧೧-೯೭ ವ) ; ಸಾರಮೆನಿಪ್ಪುತ್ತರಣೆಯ ಬೇರಂ ಸೈಂಧವ ಸಮನ್ವಿತಂ ಪಟಿನೀರಿಂದೋರಂತಿರೆ ಕಿಸುವೊನ್ನೊಳ್ ಜಾರಿಸಿ ಕೊಂಡೆಚ್ಚೆ ನೇತ್ರರೋಗಂ ಕಿಡುಗುಂ (ಲೋಕೋಪ. ೯-೬೮) ; ಪೊನ್ನೆಂಬ ಪೆಸರೊಳಾ ಕರ್ಬೊನ್ನುಂ ಕಿಸುವೊನ್ನುಮೆಯ್ದಲಾರ್ಕುಮೆ (ಸಮಯ. ೧-೭೬) ; ಕಿಸುವೊನ್ನ ಹೆಗ್ಗೊಡನೊ ಮಲ್ಲಿಕಾರ್ಜುನನ ಬಾಣಸಕೊಂದು ಚರುವಿಗೆಯೊ (ಸಿದ್ಧರಾ. ೯-೩). [ಕಿಸು$_3$ + ಪೊನ್]

**ಕಿಸುವೊನಲ್** (ನಾ). ಕೆಂಪುಹೊಳೆ ; ಕೆಂಬಣ್ಣದ ಪ್ರವಾಹ : ಕಿಸುವೊನಲ್, ಕಿಸುವೊನ್, ಕಿಸುಸಂಜೆ (ಶಮದ. ೧೮೨ ಪ್ರಯೋ). [ಕಿಸು$_3$ + ಪೊನಲ್]

**ಕಿಸುವೊನ್ನ** (ನಾ). ತಾಮ್ರವನ್ನು ಉಳ್ಳವನು : ಕಿಸುವೊನ್ನಂ, ಚೆಂಬೊನ್ನಂ, ಕೆಚ್ಚನೆ + ಪೊನ್ ಅವಂಗೆ (ಶಬ್ದಾನು. ೫೩ ವ್ಯಾಖ್ಯಾ). [ಕಿಸುವೊನ್ + -ಅ$_7$]

**ಕಿಸುವೊಳಲ್** 'ಕಿಸುವೊಲಲ್' ನೋ.

**ಕಿಸುವೊಲಲ್**, ಕಿಸುವೊಳಲ್ (ನಾ). ಒಂದು ಊರಿನ ಹೆಸರು. ℙ ಈಗಿನ ಪಟ್ಟದ ಕಲ್ಲು : ಕಿಸುವೊಲಲ್ ಮಹಾನಗ(ರೀ) ವಿಖ್ಯಾತ (ತೇ) ಸ್ಥಿತ್ವಾ (ಇಆ. VII, ೨೨೦-೨೧; 659); ಅದಱೊಳಗಂ ಕಿಸುವೊಲಲಾ ವಿದಿತಮಹಾಕೊಪಣನಗರದಾ ಪುಲಿಗೆಱೆಯಾ ಸದಭಿಸ್ತುತಮಪ್ಪೊಂ ಕುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೧-೩೭). **ಕಿಸುವೊಳಲ್** : ಸಿಂಗಣದೇವಕ್ಕಿಸುಕಾಡುನಾಡೆರ್ಪತ್ತುಮಂ ಕಿಸುವೊಳಲಾಱುಂ ಬಾಡಮುಮಂ . . . ಆಳುತ್ತುಮಿರೆ (ಸೌಇಇ. XI-i, ೧೧೦-೮ ; 1070) ; ಪಟ್ಟದಕಲ್ಲಿಗೆ ಕಿಸುವೊಳಲ್ ಎಂಬುದು ಪೂರ್ವದ ಹೆಸರು (ವ್ಯವಾಸ್ತು. ೭೦). [ಕಿಸು$_3$ + ಪೊಲಲ್]

**ಕಿಸುಸಂಜೆ** (ನಾ). ಕೆಂಪಾದ ಸಾಯಂಕಾಲ ; ಕೆಂಬೆಳಗಿನ ಸಂಧ್ಯಾ ಕಾಲ : ಕಿಸುಸಂಜೆವೆರಸು ಕಟ್ಟಲೆ ಪಸರಿಪುದೆನಿಸಿ ಕಣ್ಣ ಕೆಂಪುಂ ಭ್ರುಕುಟಿ ಪ್ರಸರಾಂಧಕಾರಮುಂ ದೆಸೆದೆಸೆಗೆಸೆದುವು (ಆದಿಪು. ೧೯-೮೩) ;

ಕಿಸುಸಂಜೆಯ ನವರಾಗದ ರುಚಿ ಮಸುಳೆ ಮಸುಳನಾಗಿ ತಮಂ ಮೇಲಾಗೆ (ಶಾಂತಿಪು. ೮-೬೩); ಕಿರೀಟರತ್ನನಿಚಯಂ ಕಿಸುಸಂಜೆಯದಾಗೆ (ಉದ್ಭಟ. ೨-೧೯); ಕಣ್ಣಕೆಂಪು ಕಿಸುಸಂಜೆಯಂ ಪಸರಿಸೆ (ಕಬ್ಬಿಗಕಾ. ೧೯೩); ತೊಂಡೆವಾಯ್ದೆಱೆ ಕಿಸುಸಂಜೆವೀಱೆ (ಸೂಕ್ತಿಸು. ೩-೨೧೩); ಕೋಪದಿಂ ಕಣ್ಣುರಿಯನುಗುಳುವ ತೆಜಿದಿ ಕಿಸುಸಂಜೆಯನು ನಿಂದಿಸಲು (ಸಾಳ್ವಭಾ. ೯-೫೧). [ಕಿಸು$_3$ + ಸಂಜೆ]

**ಕಿಸುಸಂಜೆವೊರೆ** (ಕ್ರಿ). ಸಾಯಂಕಾಲದ ಕೆಂಬಣ್ಣ ಕೂಡಿರು, —ಬೆರೆತಿರು: ಕಿಸುಸಂಜೆವೊರೆದ ಚಂದ್ರಿಕೆ ಪಸರಿಸಿದಪುದೆನಿಸಿ ರಾಮಚಂದ್ರಂ . . . ಪಸರಿಸಿ ನಯನಪ್ರಭೆ ರಂಜಿಸೆ (ಪಂರಾಮಾ. ೧೦-೬೪). [ಕಿಸುಸಂಜೆ + ಪೊರ್ದು$_2$]

**ಕಿಸುಸೆರೆ** (ನಾ). ಕೆಂಪಾದ ನರ, —ರಕ್ತನಾಳ: ಕಿಸುಸೆರೆ ಪರಿದಿರೆ ಕಣ್ಬೊಳ್ (ಪಂರಾಮಾ. ೧೧-೧೩೫); ಕಿಸುಸೆರೆ ಪುಟ್ಟೆ ಬಿಟ್ಟೆ ನಿಡುಗಣ್ ನಸು ಕೆತ್ತುವ ಮೀಸೆ . . . ಭ್ರುಕುಟಿಯುಗ್ಮಮದುರ್ವಿಸೆ ಕೋಪಮುಣ್ಮಿ ಕಂಪಿಸುತಿರಲ್ (ಶಾಂತೀಶ್ವ. ೫-೧೯೯); ಕಿಸುಸೆರೆಯ ಕಣ್ಣು ತೋರಭುಜ ಸೂತ್ರಿಸಿದವೊಲು ಚೆಲುವಾದ ಅವಯವ (ಸಾಳ್ವಭಾ. ೯-೩). [ಕಿಸು$_3$ + ಸೆರೆ$_2$]

**ಕಿಸುಸೆರೆವರಿ** (ಕ್ರಿ). ಕೆಂಪು ನರ ಹರಡು; ನರದಲ್ಲಿ ಕೆಂಪು ಪ್ರಸರಿಸು: ನೀಳ್ಪಂ ಬೆಳ್ಪುಮನೊಳಕೊಂಡು ಕಿಸುಸೆರೆವರಿದ ಕಣ್ಗಳುಂ (ಆದಿಪು. ೩-೯ ವ); ಹರಿವಂಶಕೇತು ಕಣ್ ಕಿಸುಸೆರೆವರಿಯೆ . . . ಮುಳಿದಿಂತೆಂದಂ (ಪಂರಾಮಾ. ೪-೩೯); ಕಿಸುಸೆರೆವರಿದಿದರ್ಕ್ಷಿಯುಗ್ಮಂ ಪಯೋಜಪ್ರಾಯಂ ತಾಮ್ರಾಧರೋಷ್ಠಂ (ಅರ್ಧನೇ. ೬-೧೭). [ಕಿಸುಸೆರೆ + ಪರಿ$_1$]

**ಕಿಸುಸೇಲೆ** (ನಾ). ಕೆಂಪು ಬಟ್ಟೆ, —ಸೀರೆ: ಅವನ ಬಟ್ಟೆ ಸೆಳೆತೆಗೆದು, ಕಿಸುಸೇಲೆಯಂ ಹೊದಿಸಿ, ಮುಳ್ಳಿಂದ ಮಾಡಿದ ಮಕುಟವಂ ಮುಡಿಸಿ (ಗೊಲ್ಗೊಥಾ. ೯-೨೪೪). [ಕಿಸು$_3$ + ಸೇಲೆ$_1$]

**ಕಿಸೆ, ಕಿಶೆ, ಖಿಸೆ** (ನಾ). (ಉಕ) ಅಂಗಿ ಮೊದಲಾದವುಗಳಲ್ಲಿ ಚಿಕ್ಕ ಚೀಲದಂತೆ ಹೊಲಿದು ಮಾಡಿದ ಜೇಬು; ಬೊಕ್ಕಣ: ಕಿಸೆಯಿಂದ ಪತ್ರವನ್ನು ತೆಗೆದು ಒಪ್ಪಿಸಿದನು (ದೌಲತ್. ೬೪); ಅವರ ಕಿಸೆ ಬರಿದಾದಾಗ ಯಾರೂ ಕರೆದು ಮಾತನಾಡಿಸುವವರಿಲ್ಲ (ಕಾವೇರಿ. ೪೩). **ಕಿಶೆ:** ರಾಚಪ್ಪ ಕಿಶೆಯಿಂದ ಕಾಕಾ ಅವರ ಕಾಗದ ತೆಗೆದು (ದೀಪಹ. I, ೧೦೨). **ಖಿಸೆ:** ಸಂಸ್ಥಾನೀಕರೆಲ್ಲ ನನ್ನ ಖಿಸೇದಾಗ ಬಿದ್ದರು (ಸಮಜೀ. ೫೨೬).

ಕಿಸೆಗೆಹಾಕು, ಕಿಸೆಗೆಹಾಕಿಕೊಳ್ಳು = ಅಧೀನ ಪಡಿಸಿಕೊ; ವಶವರ್ತಿಯಾಗಿ ಮಾಡಿಕೊ: ಎಂಥೆಂಥವರನ್ನೋ ಕಿಸೆಗೆ ಹಾಕಿದ್ದಾರೆ, ಇವರು ಯಾವ ಗಿಡದ ತೊಪ್ಪಲು? (ರೂಢಿ); ಕೋರ್ಟಿನಿಂದ ಜಫ್ತಿ ವಾರಂಟು ಹೊರಟೊಡನೆ ವಾರಂಟನ್ನು ಜಾರಿಮಾಡುವ ಅಮೀನರನ್ನು ಗೌಡರು ತಮ್ಮ ಕಿಸೆಗೆಹಾಕಿಕೊಳ್ಳುತ್ತಿದ್ದರು (ಪಂಜಪಂ. ೪೭). [← ಪಾರ. ಕೀಸಾ; ಮರಾ. ಹಿಂ. ಖಿಸಾ]

**ಕಿಸೆಗಡಿಯಾರ** (ನಾ). ಜೇಬಿನಲ್ಲಿ ಇಟ್ಟುಕೊಳ್ಳುವ ಚಿಕ್ಕಗಡಿಯಾರ: ಕೈಗಡಿಯಾರಕ್ಕಿಂತ ಕಿಸೆಗಡಿಯಾರ ದೊಡ್ಡದು (ರೂಢಿ). [ಕಿಸೆ + ಗಡಿಯಾರ]

**ಕಿಸೆಗಳ್ಳ** (ನಾ). ಜೇಬು ಕತ್ತರಿಸಿ ಕಳವು ಮಾಡುವವನು; ಜೇಬುಗಳ್ಳ: ದಾರಿಯುದ್ದಕ್ಕೂ ಕಿಸೆಗಳ್ಳರ ಹಾವಳಿಯಿದೆ (ಆಳಸಿ. ೨); ತಾನೂ ಕಿಸೆಗಳ್ಳನಾದರೆ ಕ್ಷಣದಲ್ಲಿ ಹಣಸಂಪಾದನೆಯಾದೀತು (ಸ್ವಪ್ನಹೊ. ೨೧೭). [ಕಿಸೆ + ಕಳ್ಳ$_1$]

**ಕಿಸ್ಕಾಡು** 'ಕಿಸುಗಾಡು' ನೋ.

**ಕಿಸ್ಕಾರ** 'ಕಿಸ್ಗಾರ' ನೋ.

**ಕಿಸ್ಗಾರ, ಕಿಸ್ಕಾರ** (ನಾ). ಕಡುಗೆಂಪು ಬಣ್ಣದ ಹೂ ಬಿಡುವ ಒಂದು ಗಿಡ; ಕೇಪಲ ಗಿಡ; ಕೇಪುಳ: ಕಿಸ್ಗಾರ, ದಾಸವಾಳದ ಹೂಗಳನ್ನು ಒಟ್ಟುಮಾಡಿದ್ದರು (ಕುಡಿಕೂ. ೬೫); ನೀರಿನಲ್ಲಿ ಕಿಸ್ಗಾರ ಹೂವೊಂದು ತೇಲುತ್ತ ಬರುತ್ತಿತ್ತು (ಮೈಲಿಮಾ. ೮೫). **ಕಿಸ್ಕಾರ:** ಕಾರಿಹಣ್ಣು . . . ಕಿಸ್ಕಾರದ ಹಣ್ಣು, ನೇರಳೆ ಹಣ್ಣುಗಳಿವೆ (ಸ್ವಪ್ನಹೊ. ೧೩). [?]

**ಕಿಸ್ತು, ಖಿಸ್ತು** (ನಾ). ೧. ಕಂತಿನ ಮೂಲಕ ಪಾವತಿ ಮಾಡುವಿಕೆ; ಕಂತು. ೨. ಕಂದಾಯದ ಹಣ. 'ಕಿಸ್ತುಬಂದಿ' ಪರಾ. **ಖಿಸ್ತು:** ೨. ತಲಪಿದ ತಾರ್‍ರೀಖಿನಾರಭ್ಯಾಸಾಲ್ಲಿಯಾನಯೆರಡು ಖಿಸ್ತಿನ ಮೇರ್‍ರಿಗೆ (ಮೈಅರಿ. ೧೯೩೪. ೨೬-೧೨; 1830); ಆದರೆ ಸರ್ಕಾರದವರು ಕೇಳಿದಾಗ ಖಿಸ್ತಿಗೆ ಸರಿಯಾಗಿ ಹಣವನ್ನು ಪಾವತಿ ಮಾಡುತ್ತಾ (ಗ್ರಾಮಾಕ. ೬೯). [← ಅರ. ಕಿಸ್ತ್; ಮರಾ. ಖಿಸ್ತ್]

**ಕಿಸ್ತುಬಂದಿ, ಖಿಸ್ತುಬಂದಿ** (ನಾ). ೧. ಕಂದಾಯದ ಹಣವನ್ನು ಕಂತಿಗೆ ಸರಿಯಾಗಿ ಪಾವತಿಮಾಡುವ ಕ್ರಮ. ೨. ಹಾಗೆ ನಮೂದಿಸಿದ ಕರಾರು ಪತ್ರ: (ರೈಸ್‍ಗ. ೫೫೩); ಆಯಾ ವರುಷದ ತೆರಿಗೆಯನ್ನು ಕಿಸ್ತುಬಂದಿ ಪ್ರಕಾರ ವಸೂಲಾಗುವಂತೆ ಅಪ್ಪಣೆ ದಯಪಾಲಿಸಬೇಕು (ಕಥಾಮಂ. IV, ೬೨). **ಖಿಸ್ತುಬಂದಿ:** ಖಿಸ್ತುಬಂದೀ ಪ್ರಕಾರ ವಸೂಲು ಮಾಡಿಕೊಂಡು (ಮಹಾವಂ. II, ೬೩). [← ಮರಾ. ಖಿಸ್ತುಬಂದೀ]

**ಕಿಸ್ತುಬಾಕಿ** (ನಾ). ಕಂದಾಯ ಹಣದ ಬಾಕಿ; ಕಂತುಗಳ ಬಾಕಿ: ಕಿಸ್ತುಬಾಕಿ ಉಳಿದರೆ ಸುಸ್ತಿ ಬಡ್ಡಿ ಕೊಡಬೇಕಾದೀತು (ರೂಢಿ). [ಕಿಸ್ತು + ಬಾಕಿ$_2$]

**ಕಿಸ್ತುವಸೂಲಿ** (ನಾ). ಕಂದಾಯ ಹಣದ ಕಂತಿನ ವಸೂಲಿ: ಮಾಹೆವಾರಿ ಜಮಾಖರ್ಚು ಲೆಕ್ಕದ ತಯಾರಿ ಮತ್ತು ಕಿಸ್ತುವಸೂಲಿ (ಮಹಾವಂ. II, ೫೮). [ಕಿಸ್ತು + ವಸೂಲಿ]

**ಕಿಸ್ಸರ** (ನಾ). ಒಂದು ಜಾತಿಯ ಸಸ್ಯ: (ಮೈಔಗಿ. ೪೭-೯೨). [?]

**ಕಿಳ್** (ನಾ). ಹಾಳು ನೆಲ: ಖಿಳ್ವಂ [ಪಾಠಾಂ. ಖಿಲ್ವ, ಬಿಳ್ವ] – ಕಿಳ್ [ಪಾಠಾಂ. ಕಿಲ್, ಬಿಳ್] (ಶಮದ. ೨೮೧ ಪ್ರಯೋ); "ಕಿಳ್ (ಬಿಳ್) – ಖಿಲ್ವ = ಹಾಳ್ನೆಲ" (ತದ್ಭಕೋ. ೭). [?]

**ಕಿಳಕ** (ನಾ). ಸುಳ್ಳುಗಾರ; ವಚನ ಭ್ರಷ್ಟ (?): ಇಳೆಯ ಪಾಲನ ನಾನು ಕಾಡೊಳು ಬಳಲಿಸಿದೆ ವಿಧವಿಧ ಶ್ರಮೆಯ ಅಳಕದಿವನು ಸತ್ಯವಾದಿಯು ಕಿಳಕನಾದಗಲೆ (ಹಮಚ. ೧೪೧). [?]

**ಕಿಳಕಿಂಚಿತ** 'ಕಿಲಕಿಂಚಿತ' ನೋ.

**ಕಿಳಕಿಳ$_1$** (ನಾ). ೧. ಒಂದು ಅನುಕರಣ ಶಬ್ದ; ಕಳವಳ: ಕಪಿಗಳ ಕಿಳಕಿಳಾಯತ ರವದಿ ಮೃಗಸಂಕುಳದ ಕಳಕಳದಿ . . . ಅದ್ಭುತವಾಯ್ತು ವನದಹನ (ಕುಮ್ವಾಭಾ. ೨೦-೫೭). [< ಸಂ. ಕಿಲಕಿಲಾ]

**ಕಿಳಕಿಳ$_2$** 'ಕಿಳಿಗಿಳಿ' ನೋ.

**ಕಿಳನಿಲ** (ನಾ). ಕಾಲ ಕೆಳಗಿನ ನೆಲ: ಚರಣಾಂಗುಷ್ಠಾಗ್ರದಿಂದಂ ಕಿಳನಿಲಮ [ಪಾಠಾಂ. ಕೆಳನೆಲನ] ನಹೀಂದ್ರಾಲಯಕ್ಕೊತ್ತೆ (ಜಗವಿ. ೮-೪೭). [< ಕಿೞ್ನೆಲ]

**ಕಿಳಾಸ** 'ಕಿಲಾಸ' ನೋ.

**ಕಿಳಿಂಜಕ** 'ಕಿಲಿಂಜಕ' ನೋ.

**ಕಿಳಿಕಿಂಚಿತ** 'ಕಿಲಿಕಿಂಚಿತ' ನೋ.

**ಕಿಳಿಗಿಳಿ, ಕಿಳಕಿಳ$_2$** (ನಾ). ಒಂದು ದುರ್ಗದ ಹೆಸರು: ವಂದನಮುಂ ಕಿಳಿಗಿಳಮುಂ ಚಂದನ ಚಾಣಕ್ಕ ಚಾಕ ಪನ್ನವಳಗೆಯಿ ಸನ್ದಣಿಗೆಡಗನಿಕರಮುನೊನ್ದರೆ ನಿಮಿಷದೆ ಕೊಣ್ಡ ವೀರಪಾಣ್ಡ್ಯ (ಸೌಇಇ. IX-i, ೧೧೯-೬೩; 1107). **ಕಿಳಕಿಳ$_2$:** ಕಿಳಕಿಳಪ್ರಖ್ಯಾತ ದುರ್ಗಾಧಿಪಂ (ನೇಮಿಪು. ೧-೨೪); ವಿದ್ಯುತ್ಪ್ರಭ ಕಿಳಕಿಳವ್ವ ಜನನುತ ಚೂಡಾಮಣಿ ಶಶಿಪ್ರಭಮೇದಿನಿಗತಿಶಯ ವಂಶಾಲ (ಶಾಂತೀಶ. ೨-೮೨). [?]

**ಕೀಳಿತ್ರಮು** (ನಾ). [ಸಂಗೀತ] (?) : ಲಾಲಿತ ಗಮಕ ಭಜಾವಣೆಮಾಗಿಪ್ಪ ವಿಯೊ ಕೀಳಿತ್ರಮುಮೆಸದಿರೆ ಪಾಡುತ್ತಿರೆ ಕೇಲಿಸಿದಂತಿರೆ ಕೇಳುತ್ತಿದಂ ರಾಮ ಚಂದ್ರನ ಗೀತವನು (ಕುಮುರಾ. ೧೧-೧೨). [?]

**ಕೀಳಿರ್$_1$** 'ಕೀಳಿಱು$_1$' ನೋ.

**ಕೀಳಿರ್$_2$** (ಕ್ರಿ). ನಿಮಿರು: ಎಳೆಯಳ ಸೆಳೆವೊಳ್ನಡುವುಂ ಸೆಳೆಮಂಚಮು ಮೊಡನೆ ಸೆಳೆಯೆ ಪುರ್ವುಂ ಕುರುಳುಂ ಕೀಳಿರೆ ನಿತಂಬದ್ರವಮುಂ ಗಳರವಮುಂ ಪೊಣ್ಮೆ (ಸೂಕ್ತಿಸು. ೧೪-೨೭).

[ದೇ. ‖ ತಮಿ. ಕಿಳರ್; ಮಲ. ಕಿಳರ]

**ಕೀಳಿರ್$_3$** (ಕ್ರಿ). ಕೆರಳು; ಸಿಟ್ಟಾಗು : "ಕಿನಿಸು" (ಚತುರ್. ಕ. ೩೬).

[< ಕೆಳರ್$_2$ ?]

**ಕೀಳಿರು$_1$** 'ಕೀಳಿಱು$_1$' ನೋ.

**ಕೀಳಿರು$_2$** 'ಕೀಳಿಱು$_2$' ನೋ.

**ಕೀಳಿಲ್** 'ಕೀಱಿಲ್' ನೋ.

**ಕೀಳಿಲನೆ** (ಅ). ಒಂದು ಅನುಕರಣ ಶಬ್ದ : ಚಳಿಲನೆ, ಕೀಳಿಲನೆ, ಗಳ ಗಳನೆ (ಶಬ್ದಾನು. ೧೪೯ ಪ್ರಯೋ). [?]

**ಕೀಳಿಱು$_1$**, **ಕೀಳಿರ್$_1$**, **ಕೀಳಿರು$_1$** (ಕ್ರಿ). ಕೆನೆ; ಹೇಷಾರವ ಮಾಡು: "ಕೀಳಿಱು – ಹಯಘೋಷೇ" (ಶಮಧಾ); ತೊಳಗೆ ಪೊನ್ನರಥಂ ರಥ ವಾಜಿಗಳ್ ಕೀಳಿಱೆ (ಕಾವ್ಯಾವ. ೪೯೯); ಕೀಳಿಱೆ ಹಯಂಗಳ್ ಗರ್ಜಿಸೆ ಜಳದನಿಭಂಗಳ್ ಗಜಂಗಳ್ (ಶಮದ. ೫ ಪ್ರಯೋ); ಬೆಳಗಪ್ಪ ಜಾವದೊಳ್ . . . ಕೀಳಿಱೆ ಹಯಂ ಪತಿಗೆ ವಿಜಯಮಂ ಸೂಚಿಸುಗುಂ (ಅಶ್ವಶಾ. ೪-೪೫); ಕೀಳಿರ್ದು ನೆಗೆವ ಕುದುರೆಗಳುಂ (ಪಾರಸಿ. ೨-೨೩). **ಕೀಳಿರ್$_1$**: "ಕೀಳಿರ್ – ಹಯಧ್ವನೌ" (ಶಮಧಾ); ಕೀಳಿರ್ವಶ್ವಂಗಳ ನಿನದಂ (ರಾಜಶೇ. ೨-೧೧೫); ಕೀಳಿರ್ವಂತೆ ಹೊಯ್ದಟ್ಟಿ ಬೆಗಡುಗೊಂಡಾ ಕುದುರೆ ಶಿಬಿರದತ್ತೋಡಿದತ್ತು (ಶೀಷರಾ. ೯೫-೮೧). **ಕೀಳಿರು$_1$** : ಸಾನು ರಾಗದೊಳು ಕೀಳಿರಲು ದೈತ್ಯರೆಡಹುವರು . . . ಇಂತು ಕಾಳಗದೊಳ ಸುರರಂ ಪಾಳ್ಕೈವುಪಾ ತುರಗವು (ಪ್ರಭುಪು. ೫-೮೦). [?]

**ಕೀಳಿಱು$_2$**, **ಕೀಳಿರು$_2$** (ನಾ). ಕುದುರೆಯ ಕೆನೆತ; ಹೇಷಾರವ: ಕೀಳಿರ [ಱ]ಬ್ಬರದಿಂ [ಪಾಠಾಂ. ಕಿಳ್ವಬ್ಬರದಿಂ] ತೀವಿದುದಾಶಾಂತರಮುಂ ಜವ ದಿಂದೆ ಗರುಡನಂ ತರ್ಜಿಪವೋಲ್ (ಕಾದಂಪೂ. ೪೫೨). **ಕೀಳಿರು$_2$** : ನಂಬಿದರೂಳಿಗಿ ಎಂದು ಸಾರೆ, ಬಿಳಿಕುದುರೆಯ ಕೀಳಿರಿನ ಡಂಗುರವೆ? (ಗಿರಿವಿಂ. ೪೧-೮). [< ಕೀಳಿಱು$_1$]

**ಕೀಳುವದುವ** 'ಕೀೞ್ವದುವ' ನೋ.

**ಕೀಳುವಳಿ** (ನಾ). (ಒಂದು ಹಳ್ಳಿಗೆ ಸಂಬಂಧಪಟ್ಟ) ಸಣ್ಣ ಹಳ್ಳಿ; ಉಪ ಗ್ರಾಮ: ಆ ಗ್ರಾಮಕೆ ಸಲುವ ಕೀಳುವಳಿಗಳು ಮುಂತಾದ ಚತುಸೀಮೆಗೆ (ಎಕ. XVI, ಚಿಕ್ಕನಾ. ೮೩-೧೦ ; 1528). [?]

**ಕೀಳುಹೊಲ** (ನಾ). ಕೆಳಗಿನ ಹೊಲ: ಅಱುವತೊಕ್ಕಲ್ ಕೀಳುಹೊಲ ಆದಿಯಾಗಿ ಇಕ್ಕುದು (ಕಇ. IV, ೧೬-೩; ?). [< ಕೀೞ್$_2$ + ಪೊಲ]

**ಕೀಳ್ಕಬ್ಬಿಗ** (ನಾ). ಕೀಳು ಕವಿ; ಹೀನನಾದ ಕವಿ: ಉದಗ್ರಸ್ಫುರತ್ಕವಿ ಕಾವ್ಯಪ್ರಕಟಪ್ರಭಾವಮನದಂ ಕಿ[ಪಾಠಾಂ. ಕೀ]ಳ್ಕಬ್ಬಿಗಂ ಗುಪ್ತಿಗೈದವ ರಾತ್ಮೀಯಕೃತಿಪ್ರಭಾವತೆಯನಾದಂ ತೋರ್ಪವೋಲ್ (ರಾಜಶೇ. ೮-೯೯).

[< ಕೀೞ್$_2$ + ಕಬ್ಬಿಗ]

**ಕೀಳ್ಕಯ್ದು** 'ಕೀೞ್ಕೈದು' ನೋ.

**ಕೀಳ್ಕುಳಿ** (ನಾ). ಕೆಳಗಿನ ಕುಳಿ, —ಗುಣಿ: ಈ ಮಾನವ ಸ್ವಭಾವವು ಮಹಾನರಕದ ಕೀಳ್ಕುಳಿಯ ತಳಕ್ಕೆ ತಲೆಕೆಳಕಾಗಿ ಬೀಳುವ ವಿಪರ್ಯಯಕ್ಕೂ ಸಮರ್ಥವಹುದು (ಬೆಟ್ಟಅ. ೧೮೪-೨೪).

[< ಕೀೞ್$_2$ + ಕುಳಿ$_2$ (< ಕುೞಿ)]

**ಕೀಳ್ಗಿಳೆ** (ನಾ). ಒಂದು ದುರ್ಗದ ಹೆಸರು : ಸನ್ದ ಕೀಳ್ಗಿಳೆಯಮಂ ದೋರ್ವಳ ದಿಂದೆ ಪತ್ತಿ (ಸೌಇಇ. XX. ೭೭-೪೩ ; ?). [< ಕೆಳಗಿಳ]

**ಕೀಳ್ಜಂತೆ** (ನಾ). ಕೆಳಗಿನ ಜಂತೆ: ಕೇತಕಿಯ ದಳದ ಕೀಳ್ಜಂತೆಯಿಂ (ರಾಜಶೇ. ೨-೨೧). [< ಕೀೞ್$_2$ + ಜಂತೆ]

**ಕೀಳ್ತು** 'ಕೀೞ್$_1$' ಪರಾ.

**ಕೀಳ್ದನಿ** (ನಾ). ಕೆಳದನಿ; ಕುಗ್ಗಿದ ದನಿ: ಆರತ ಗಂಟಲ ಕೀಳ್ದನಿಯಿಂದ (ಬೆಟ್ಟಅ. ೧೦೩-೪). [< ಕೀೞ್$_2$ + ದನಿ$_2$]

**ಕೀಳ್ದಾಳಿಗೆ** (ನಾ). ತಾಳಿಗೆಯ ಕೆಳಭಾಗ; ಅಂಗುಳಿನ ಕೆಳಭಾಗ: ಒರಸಿದೊಡೆ ಬರಿಯಂ ಕೊಱೆವ ಉಗುಳ್ದೊಡೆ ಕಿ[ಪಾಠಾಂ. ಕೀ]ಳ್ದಾಳಿ ಗೆಯೊಳ್ನಾಂಟುವ ಪಲವುಂ ಬಗೆಯ ಗಾಣಂಗಳಂ (ರಾಜಶೇ. ೫-೧೧೪ ವ).

[< ಕೀೞ್$_2$ + ತಾಳಿಗೆ]

**ಕೀಳ್ನಡೆ** (ನಾ). ಕೀಳುನಡೆ; ಕೆಟ್ಟನಡತೆ: ಅವನೊಳಾದೊಡಂ ಕುಮತಿ ಕಾಳ್ಪುಡಿ ಕೀಳ್ನಡೆ ತೋಱುತಿರ್ದೊಡೆ (ಅಪಶ. ೬೦).

[< ಕೀೞ್$_2$ + ನಡೆ$_2$]

**ಕೀಳ್ನೆಲ** 'ಕೀೞ್ನೆಲ' ನೋ.

**ಕೀಳ್ಪಡಿಸು** 'ಕೀೞ್ಪಡಿಸು' ನೋ.

**ಕೀಳ್ಪರಜು** (ನಾ). ಕತ್ತಿಯ ಕೆಳಗಿನ ಅಂಚು; ಕೆಳಗಿನ ಖಡ್ಗಧಾರೆ: ಸುಲಿಪಲ್ ಘುಲಿಲ್ಲೆನುಗೆ ಬಾಳಿನ ಕೀಳ್ಪರಜಿಂದೆ ಮೋದದಿರ್ಪನೆ (ಎಕ. XI, ದಾವಣ. ೪೨-೩೭ ; 1162). [< ಕೀೞ್$_2$ + ಪರಜು]

**ಕೀಳ್ಪೊಟ್ಟೆ** 'ಕೀೞ್ಪೊಟ್ಟೆ' ನೋ.

**ಕೀಳ್ಪೊಡೆ** 'ಕೀೞ್ಪೊಡೆ' ನೋ.

**ಕೀಳ್ಪೋಗು** (ನಾ). ಒಂದು ಬಗೆಯ ದಾನ (?) : ಶ್ರೀಮನ್ಮಾಳ್ಪ್ರಭು ಮಡಲೂರ ಪೊಲ್ಲಗಾವುಂಡಂಗೆ ಹಿರಿಯರಸರ ಬೊಮ್ಮಿದೇವರಸರು ಕಿ[ಳ್ಪೋ]ಗು ನಡಸಿದ ಮರ್ಯಾದೆ (ಕಇ. IV, ೪೮-೪೩ ; 1247). [?]

**ಕೀಳ್ಬರಿ** 'ಕೀೞ್ಬರಿ' ನೋ.

**ಕೀಳ್ಮೂಲೆ** (ನಾ). ಕೆಳಗಿನ ಮೂಲೆ, —ಕೊನೆ: ಆ ವೇದಿಯ ಮೇಗಣ ಕೆಂಗವಸಣಿಗೆಯ ಕೀಳ್ಮೂಲೆಯನ್ನು ಹಿಡಿದೆತ್ತಿ (ಬೆಟ್ಟಅ. ೧೧೭-೨೩).

[< ಕೀೞ್$_2$ + ಮೂಲೆ]

**ಕೀಳ್ಮೊಗ** 'ಕೀೞ್ಮೊಗ' ನೋ.

**ಕೀಳ್ಮೊಳೆ**, **ಕೀೞ್ಮೊಳೆ** (ನಾ). ಕೆಳಗಿನ ಮೊಳೆ, —ಗೂಟ: ನೆಗಪಿ ನೆಟ್ಟ ಘನ ತ್ರಿಶೂಲದ ಕೆಲದೊಳೆಳಿಪಿದಂಬಿನ ಪೊದೆಯ ಸಾರ್ಚಿ ನಿಲಿಸಿದ ಶರಾಸನದ ಕೀಳ್ಮೊಳೆ [ಪಾಠಾಂ. ಕೀೞ್ಮೊಳೆ]ಯೊಳೆಳಿಪಿದ ಪಾಱುಂಬಳೆಯ (ರಾಜಶೇ. ೬-೧೧ ವ). **ಕೀೞ್ಮೊಳೆ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[< ಕೀೞ್$_2$ + ಮೊಳೆ$_2$]

**ಕೀಳ್ಸರ** (ನಾ). = ಕೀಳ್ದನಿ: (ಕೀಳ್ಸರದಿಂದ,) ಅಪ್ಪಣೆ. (ಹೋಗುವನು.) (ಬೆಟ್ಟಅ. ೧೬೭-೨೧). [< ಕೀೞ್$_2$ + ಸರ$_3$]

**ಕೀಳ್ಸೆರಗು** 'ಕೀೞ್ಸೆಱಂಗು' ನೋ.

**ಕೀಳ್ಸೆರೆ** (ನಾ). ಕೆಳಗಿನ ನರ, —ರಕ್ತನಾಳ: ಅಂದಾಳ ಪಾಟಲಂ ಕೀಳ್ಸೆರೆ ರಕ್ತಂ ಮಂಜುಮೊಳೆ . . . ಮಧುವಿಲೋಚನಂಗಳ್ ಶುಭದಂ (ಅಶ್ವಶಾ. ೧-೨೩). [< ಕೀೞ್$_2$ + ಸೆರೆ$_2$]

**ಕೀಳ್ಳ** (ನಾ). ಒಬ್ಬಾತನ ಹೆಸರು : ಶ್ರೀಮತ್ ಚಿತ್ರವಾಹನ ಪೊನ್ನುಚ್ಚಾಳೆ ಕೀಳ್ಳಂ ನಾಗಣ್ಣನಧಿಕಾರಿಗಳಾಗೆ (ಎಕ. VI, ಕೊಪ್ಪ. ೩೭-೨; 675). [?]

**ಕೀಳ್ವಮ್ಮ** (ನಾ). ಒಬ್ಬಾತನ ಹೆಸರು: ಸಿಮ್ಮನೂರ ಕೀಳ್ವಮ್ಮನ ಅಣ್ಣುಗಿಯ ರಟ್ಟಗನ ಬೆದೆ ಮೆಟ್ಟಿಯಾಲಮ್ಮಾನ್ (ಎಕ. VIII, ಸೊರಬ. ೧೦-೧೩ ; 800). [ಕೀಳ್ವ + ಅಮ್ಮ$_1$]

**ಕಿಳ್ಳಯ್ಯ** (ನಾ). ಒಬ್ಬಾತನ ಹೆಸರು : ಬೋಳಚಂ ಬಿಟ್ಟ ಸ್ತ್ರೀಯೆನ್ನೆನ್ದಡೆ ಕಿಳ್ಳಯ್ಯವುವರೊರುಮಿಬ್ಬುಕೊಟ್ಟ (ಎಕ. X, ಕೋಲಾರ. ೨೩–೩ ; 900). [ಕಿಳ್ಳ + ಅಯ್ಯ$_1$]

**ಕಿಳ್ಳಾಣೆ** (ನಾ). ಕೀಳು ನಾಣ್ಯ : ಕೇಣಿಯನಿತ್ತು ತನ್ನೊಡಲನೊಪ್ಪಿಸಿ ನಾಡ ವಿಟರ್ಗೆವೊಂದ ದುಗ್ಗಾಣಿಗೆ ಲಕ್ಕ ಜೀವದಭಿಮಾನವನಂಗಡಿಯಲ್ಲಿ ಕಳ್ಳ ಕಿಳ್ಳಾಣೆಯ ಮುದ್ರೆಯಂತಿಹಪರಕ್ಕುರೆ ಸಲ್ಲದ ವೇಸಿಗರ್ಥಮಂ ಪ್ರಾಣಮನಿಕ್ಕಿಯಕ್ಕಟ ವೃಥಾ ಕೆಡುವಂ ಕೆಡುಕಂ ಧರಿತ್ರಿಯೊಳ್ (ನೀತಿಸಾ. ೭೪). [< ಕೀಳಾಣೆ]

**ಕಿಳ್ಳಿ** (ನಾ). (ಉಕ) ಚೇಷ್ಟೆ ; ಕಿಲಾಡಿತನ ; ಕಿಡಿಗೇಡಿತನ : ಇದೆಲ್ಲ ಕಿಳ್ಳಿ ಬಂದಿರೋದು ಅವರಪ್ಪ ಆ ಸುಬ್ಬಣ್ಣಾಚಾರಿಯಿಂದ (ಹಸ್ನೊಂದ. ೧೧೦) ; ಜನರು ಇಂಥ ಕಿಳ್ಳೀ ಮಾಡುವದು ಸರಿಯಾದ್ದಲ್ಲ (ಮೋಹನೀ. ೮) ; ನಮಗೂ ಕಿಳ್ಳಿ ಮಾಡಬೇಕೆನ್ನಿಸಿತು (ಚಂದುಟ. ೪೨). [< ಕಿಳ್ಳು ?]

**ಕಿಳ್ಳಿಕೇತ**, ಕಿಳ್ಳೀಕೇತ, ಕಿಳ್ಳೆಕೇತ (ನಾ). ೧. ಒಂದು ಬಗೆಯ ಸೂತ್ರದ ಬೊಂಬೆ : ಕೆಲಸವಿಲ್ಲದ ಬಡವ ಕೈಗೊಂಬೆಯಾಗುವನು, ಕಿಳ್ಳಿಕೇತನ ಹಿಂದೆ ಸೂತ್ರಧಾರ (ಅರಳು. ೪೭೧) ; ಕಿಳ್ಳಿಕೇತರಾಟದ ಹಿಂದಿರುವ ಸೂತ್ರಧಾರಕ ಶಕ್ತಿ (ಜೀನಭಾ. ೭೪). ೨. ಇಂತಹ ಬೊಂಬೆಗಳನ್ನು ಆಡಿಸುವವನು, —ಕುಣಿಸುವವನು : ಕಿಳ್ಳಿಕೇತನು ಗೊಂಬೆ ಕುಣಿಸುವೊಲು ಕುಣಿಸುವಳು (ಉಯ್ಯಾಲೆ. ೧೩–೫) ; ದಾಸರ ಆಟ, ಕಿಳ್ಳಿಕೇತರ ಆಟ . . . ಮನೋರಂಜಕ ಸಾಧನಗಳಾಗಿದ್ದುವು (ಜನಜೀ. ೩೦). ೩. "ಕಿಡಿಗೇಡಿ" (ಜಾನಕೋ. ೩೮) ; ಪಂಗಡಗಳನ್ನು ವಿಂಗಡಿಸಿ ನಮ್ಮ ವಿರುದ್ಧ ಬಂಡೆಬ್ಬಿಸಲು ಹೂಡಿದ ಕಿಳ್ಳಿಕೇತರಾಟವಿದು (ಜನನಾ. ೧೨). **ಕಿಳ್ಳೀಕೇತ** : ೨. ಇವರಲ್ಲಿ ಕೆಲವರು . . . ಕಿಳ್ಳೀಕೇತನ ಆಟವಾಡಿ ಜೀವಿಸುತ್ತಾರೆ (ಕಭಾಗೆ. ೧೨೫). **ಕಿಳ್ಳೆಕೇತ** : ೧. ಇದೆಂತ ಕಿಳ್ಳೇಕೇತರ ಮದುವೆ? (ಬೆಳುಮ. ೨೦೬). [ಕಿಳ್ಳಿ + ಕೇತ]

**ಕಿಳ್ಳಿಕೇತತನ** (ನಾ). ಹುಡುಗಾಟ ; ಕಿಡಿಗೇಡಿತನ : ಇವು ಪರಟೆ ಕುದುರೆಗಳನ್ನು ಮೆಟ್ಟಿ ಕಿಳ್ಳಿಕೇತತನಕ್ಕೆ ಹೊರಟ ಹರಟೆಗಳಲ್ಲ (ಗಾಳಿಪ. X, ಮೆಚ್ಚಿಗೆಮಾತು). [ಕಿಳ್ಳಿಕೇತ + -ತನ]

**ಕಿಳ್ಳಿಕೇತಾಟ** (ನಾ). ಕಿಡಿಗೇಡಿತನ : ಪಿಳ್ಳೆಗಳು ಮನೆಮನೆಗೆ ಅಲೆದಾಡಿ ಕುಳ್ಳು–ಸೊದೆಗಳ ತಂದು ಕಿಳ್ಳಿಕೇತಾಟದಲಿ ಕಲೆಹಾಕಿ ಕೊಳ್ಳಿಯನು ಇಕ್ಕಿ (ಬಾಸಿಗ. ೨೬–೬). [ಕಿಳ್ಳಿಕೇತ + ಆಟ$_1$]

**ಕಿಳ್ಳೀಕೇತ** 'ಕಿಳ್ಳಿಕೇತ' ನೋ.

**ಕಿಳ್ಳು$_1$** (ಕ್ರಿ). ಚಿವುಟು ; ಗಿಲ್ಲು. 'ಕಿಳ್ಳಿ' ಪರಾ.
[ದೇ. ॥ ತಮಿ. ಮಲ. ಕಿಳ್ಳು ; ತೆಲು. ಗಿಲ್ಲು ; ತುಳು. ಕಿಣ್ಕ್]

**ಕಿಳ್ಳು$_2$** (ನಾ). ಕಣ್ಣೊಳಗಿನ ಪಿಚ್ಚು ; ಸಿಳ್ಳು ; ಕೆಸರು : ಕಿಳ್ಳ ಮಡು ಕಣ್ ಕಿವಿ ಕೊಗ್ಗಿಯ ಪುತ್ತು (ಧರ್ಮಾಮೃ. ೫–೨೮) ; ಮಲಮೂತ್ರ ರಕ್ತ ಸಿಬಳು ಕಿಳ್ಳುಗಳಿಂದ ಹಲವು ಲಾಲಸ ಗುಗ್ಗೆಗಳಿಂ (ಜ್ಞಾನಚ. ೧೬–೩೦). 'ಸಿಳ್ಳು' ಪರಾ. [?]

**ಕಿಳ್ಳೇಕೇತ** 'ಕಿಳ್ಳಿಕೇತ' ನೋ.

**ಕಿಱಟೆ** (ನಾ). ಒಂದು ಅನುಕರಣ ಶಬ್ದ (?) : ತಾಗಿದ ಗಜಾಸುರನಂ ಪಿಡಿದೆತ್ತಿ ಚಮ್ಮಮಂ ಸಱಸಱಕೆ ಸಱನೆ ಸೀಳ್ದು ಬಿದಿರ್ಚಿಯಾಡುತ ಫುಟುಟಹ ಕುಟಹ ಕುನಟ ಕಿಱಟಕಿಱಟವೆಂಬ ವಾದ್ಯದಿಂ ನಟಯ್ಸಿ ನಾಟ್ಯವಾಡಿದ ಮಹೇಶ್ವರನ್ (ಎಕ. XVI, ಚಿಕ್ಕನಾ. ೭೦–೨೩ ; 1235). [?]

**ಕಿಱಿ$_1$** (ಕ್ರಿ). ೧. ತುಂಬು ; ಗಿಡಿ ; ದಟ್ಟೈಸು : ಬಿಜ್ಜೋದರಿಯರ ತೊಂಡಿಲುರವಕೆಯ ಪಜ್ಜಳದೊಡಿಗೆಯೊಳ್ಕಿಱಿದಾ ಸಜ್ಜವನೆಯ ಪಟ್ಟಶಾಲೆಯೊಳ್ ಸೆಳೆಕೊಂಡರುಜ್ಜುಗವೆಂಗಳರ್ತಿಯಿಂದೊಳು (ಧರಚ. ೧೩–೧೦೦). ೨. ಅಡಗಿಹೋಗು ; ಕುಸಿ : ಬಱಿದಾದುದು ಜಲಧಿಜಲಂ ಕಿಱಿದಿರ್ದುದು ಮೇರು ನಿನ್ನ ಭರದಿಂ (ಅಜಿಪು. ೮–೬). 'ಕಿಕ್ಕಿಱಿ' ಪರಾ. [ದೇ. ॥ ತಮಿ. ಮಲ. ಚೆಱಿ]

**ಕಿಱಿ$_2$**, ಕಿರಿ$_3$ (ಗು). 'ಕಿಱಿದು' ಎಂಬುದಕ್ಕೆ ಸಮಾಸದಲ್ಲಿ ಬರುವ ಆದೇಶ ರೂಪ. 'ಕಿಱಿಯೆಸಳು' ಪರಾ. **ಕಿರಿ$_3$**. 'ಕಿರಿಬೆಟ್ಟು', 'ಕಿರಿಮೆ' ಪರಾ. [< ಕಿಱಿದು]

**ಕಿಱಿಕಿಱಿ**, ಕಿರಿಕಿರಿ, ಕಿರ್ಕಿರಿ (ನಾ). ೧. ಕಿರಿಕಿರಿ ಎಂಬ ಶಬ್ದ. 'ಕಿಱಿಕಿಱಿಗುಟ್ಟು' ಪರಾ. **ಕಿರಿಕಿರಿ** : ೨. ಕಿರುಕುಳ ; ಕಾಟ ; ಕಿಟಿಕಿಟಿ : ಹೊಸ ಹೆಂಡತಿಯ ಕಿರಿಕಿರಿಯೂ ಉಪದ್ರವವೂ ಹೆಚ್ಚಾಗುತ್ತ ನಡೆದಿರುತ್ತವೆ (ಮೋಹನಿ. ೧೪) ; ಅವಳು ಇಲ್ಲಿಗೆ ಬಂದರೆ ನನ್ನ ಮನಸ್ಸಿಗೆ ತುಂಬಾ ಕಿರಿಕಿರಿ (ನಡೆದಾ. II, ೧೨೦೦). ೩. ಅಸ್ವಸ್ಥರಾಗಿದ್ದಾಗ ಮಾಡುವ ನರಳಾಟ : (ಕ). **ಕಿರ್ಕಿರಿ** : (ಕ).
ಕಿರಿಕಿರಿಮಾಡು = ಪೀಡಿಸು ; ತೊಂದರೆಕೊಡು : ಕೂಸು ಅತ್ತು ಕಿರಿಕಿರಿ ಮಾಡತೊಡಗಿದರೆ ಭಟ್ಟರ ರಾಮರಕ್ಷಾ ಅಂಗಾರವು ಅದನ್ನು ಶಾಂತ ಮಾಡುತ್ತಿತ್ತು (ಹಬ್ಬಬ. ೨೫) ; ಮುರಲೀಧರನು ಕಿರಿಕಿರಿಮಾಡಹತ್ತಿದ್ದರಿಂದ ಮನೆಗೆ ತಿರುಗಿ ಬರುವಾಗ (ಜೀವಪ್ರ. ೨).
[?./ ತುಳು. ಕಿರಿಕಿರಿ]

**ಕಿಱಿಕಿಱಿಗುಟ್ಟು** (ಕ್ರಿ). ಕಿರಿಕಿರಿ ಶಬ್ದಮಾಡು ; ಕಿರುಗುಟ್ಟು : ಚೀಱಿ ಕಿಱಿಕಿಱಿಗುಟ್ಟುತಟ್ಟಳವಾಱಿ ಬಿದ್ದನು ಹಲುಗಿರಿದು (ತೊರರಾ. ೫–೭–೪೫) ; ಎಸುವ ಜೋದರ ನಾಳಿಯಂಬಿಗೆ ಕುಸಿದು ಕಿಱಿಕಿಱಿ [ಪಾಠಾಂ. ಕುಸಿಕಿಱಿದು ಗಿರಿ]ಗುಟ್ಟಿ ಹಲುಗಳ ಹಸರಿಸಿದವಲ್ಲಲ್ಲಿ ಬಲ್ಲಿದ ಭಲ್ಲುಕವ್ರಾತ (ತೊರರಾ. ೬–೩೨–೮). [ಕಿಱಿಕಿಱಿ + ಕುಟ್ಟು$_1$]

**ಕಿಱಿಗುಳ್ಳ** 'ಕಿಱಿಯಗುಳ್ಳ' ನೋ.

**ಕಿಱಿಗೂಸು** (ನಾ). ೧. ಸಣ್ಣಮಗು ; ಚಿಕ್ಕಮಗು ; ಹಸುಗೂಸು : ಕಿಱಿ [ಪಾಠಾಂ. ಋ]ಗೂಸಾದೊಡೆ ಬಲ್ಲಾಳದೇವನ ಮುಱಿಯಲಿಱಿವನೆ (ಕುರಾಸಾಂ. ೧೬–೭೩). ೨. ಚಿಕ್ಕಹುಡುಗಿ ; ಬಾಲಿಕೆ : ಕಿಱಿಗೂಸ ಹೋಗುವುದು ಕಿಱಿಮಾತನಾಡುವುದು ಕಱು ಸತ್ತ ಆವ ಕಱೆವುದು ತನ್ನ ತಾನಿಱಿದು ಕೊಂಡಂತೆ (ಸರ್ವಜ್ಞ. ೧೮೧೪). [< ಕಿಱಿದು + ಕೂಸು]

**ಕಿಱಿಗೆ$_1$**, ಕಿರಿಗೆ, ಕಿರುಗೆ, ಕಿಱುಗೆ (ನಾ). ಚಿಕ್ಕ ಸೀರೆ ; ಬಾಲಕಿಯರು ಉಡುವ ಸೀರೆ : ನಿಗಳವುಂಗುರ ಗೆಜ್ಜೆ ಪೊನ್ನಂದುಗೆ ಪವಳಮುಂ ಮುತ್ತು ಪೊಚ್ಚ ಕಿಱಿಗೆ ಜವಿಕೆಯುಂ [ಪಾಠಾಂ. ಪೊಸ ಜವಕಿಗೆ ಕಿಱುಗೆಯುಂ] (ಬಸವು. ೧೪–೧೫). **ಕಿರಿಗೆ** : ಎರಡು ಕಿರಿಗೆ ತೊಗೋ ಅಂತ ಕೈಯೆತ್ತಿಕೊಟ್ಟಾಗ (ಗಂಮಾಯಿ. ೧೬) ; ಅವಳು . . . ಬೂದು ಬಣ್ಣದ ಕಿರಿಗೆಯೊಂದನ್ನು ಹೊದೆದಿದ್ದಳು (ಪುನರು. ೪). **ಕಿರುಗೆ** : ಕಿನ್ನುಡೀ ಕಿರುಗೆಜ್ಜೀ ಕಿರುಗೆ ನಾಗರಸುತ್ತು (ನಾಪದ. ೨೦). **ಕಿಱುಗೆ** : ಉಟ್ಟುದಂತುದಯರಾಗದ ಕಿಱುಗೆಯಂತೆಡದ ಬಟ್ಟೆದೊಡೆಯೊಳು ರುಧಿರವಿಳಿಯಿತ್ತು (ವೀಶೈಪು. ೪–೨೧–೧೧). [?]

**ಕಿಱಿಗೆ$_2$** (ನಾ). = ಕಿಗಿF : "ಕಿಱಿಗೆ = ಒಱಪು" (ಶಮದ. ಪರಿ. ೨). [?]

**ಕಿಱಿಗೆಜ್ಜೆ**, ಕಿರಿಗೆಜ್ಜೆ (ನಾ). ಸಣ್ಣ ಗೆಜ್ಜೆ ; ಕಿಂಕಿಣಿ : ಕಾಲಲಿ ಕಿಱಿ ಗೆಜ್ಜೆ ನೀಲದ ಬಾವುಲಿ (ಪುರಂದ. ೧–೧೪೧–೧೧). **ಕಿರಿಗೆಜ್ಜೆ** : (ಕ). 'ಕಿಱುಗೆಜ್ಜೆ' ಪರಾ. [< ಕಿಱಿದು + ಗೆಜ್ಜೆ]

**ಕಿಱಿಗೆಯ್** (ಕ್ರಿ). ಸಣ್ಣದು ಮಾಡು ; ತೆಗಳು ; ನಿಂದಿಸು : ನಿಮಗೆಮ್ಮ ಮಾಡಿದಪಕಾರಮಾವುದಕ್ರಮದಿನೆಮ್ಮ ಮೇಲೆ ಬರಲ್ಕಕ್ಕುಮೆ ಪೇಱಿಮೆಂದ ಲಕ್ಷ್ಮಣನ ಮಾತು ಕಿಱಿಗೆಯ್ಯೆ [ಪಾಠಾಂ. ಕಿವಿಗೆಯ್ದೆ] ಚಿತ್ತವಿತ್ತಿಂತೆಂದರ್ (ಪಂರಾಮಾ. ೧೪–೯೪). [< ಕಿಱಿದು + ಕೆಯ್$_1$]

**ಕಿಱುಗೆಯೊಲ** (ನಾ). ಚಿಕ್ಕಗದ್ದೆ; ಸಣ್ಣಗದ್ದೆ(?) : ನಾಯಕರ ಕಿಱುಗೆ ಹೊಲನ ಕಡನ ಮುದಿಹೊಲಕೆ (ಎಕ. XV, ಹೊಳನ. ೮೦–೧; 1417).
[ಕಿಱುಗೆ ? + ಹೊಲ (< ಪೊಲ)]

**ಕಿಱುಗೊಳ್** (ಕ್ರಿ). ಚಿಕ್ಕದಾಗು (?): ಬಲಹರನ ಚರಣದಂಡದ ತಲೆಯೊಳ್ ಕಿಱು [ಪಾಠಾಂ. ನೆಱೆ]ಗೊಂಡೆಬಲ್ವ ಬಾಂದೊಱೆಯೆಲರಿಂ ದೊಲೆದುದು ವಿಷ್ಣುಕುಮಾರನ ಗೆಲವಂ ಕಂಡಮರರೊಸೆದು ಕಟ್ಟಿದ ಗುಡಿವೊಲ್ (ಅರ್ಧನೇ. ೬–೩೪). [< ಕಿಱಿದು + ಕೊಳ್$_1$]

**ಕಿಱುಚು**, ಕಿರಚು, ಕಿರಿಚು, ಕಿರುಚು (ಕ್ರಿ). ಕೂಗು; ಚೀರು; ಅರಚು: ನಗದಿರ್ ಬಾಯ್ಕಡಿಗೊಳ್ಳದಿರ್ ಕಿಱುಚದಿರ್ (ಶಬ್ದಸಾ. ೧೬೬). **ಕಿರಚು**: ಆ ಪ್ರಾಣಿಯು ಅಂಬಾ ಎಂದು ಕಿರಚ ಹತ್ತಿತ್ತು (ಬಂಗಾಹ. ೪೧); ಕಿರಚಬೇಡ . . . ನಾನೇ ದೊರೆ, ಬಾಗಿಲನ್ನು ತೆಗೆ (ಪಾಶ್ಚಾ ಪು. ೧೨೯). **ಕಿರಿಚು**: ಹುಡುಗರು ಎದ್ದು ನಿಂತುಕೊಂಡು 'ನಮಸ್ಕಾರ ಸಾರ್' ಎಂದು ಕಿರಿಚಿದರು (ರಂಗಕ. ೩೧). **ಕಿರುಚು**: ಆ ಬೆಕ್ಕು ಬಹುಹೊತ್ತು ಕಿರುಚಿ ಒರಟೊರಟಾಗಿ ಸುತ್ತಾಡಿ, ಪರಚಿ, ಆಕಸ್ಮಿಕವಾಗಿ ಅಗುಳಿ ತೆಗೆದುಕೊಂಡಿತು (ಶಿಕ್ಷದ. ೪೨೫).
[ದೇ. ‖ ತಮಿ. ಕಿಱಾವು]

**ಕಿಱಿದು**, ಕಿರಿದು (ನಾ). ೧. ಚಿಕ್ಕದು; ಸ್ವಲ್ಪವಾದದ್ದು; ಸಂಕ್ಷೇಪವಾದುದು: ಕಿಱಿದಱೊಳ್ ಪಿರಿದುಮರ್ಥಮನಱಿಪಲ್ ನೆಱೆವಾತನಾತನಿಂದಂ ನಿಪುಣಂ (ಕವಿರಾ. ೧–೧೫); ನಿಮುಗನಿಬರ್ಗಂ ಕಿಱಿದೆಯಾಯುಷ್ಯಮೆಂದು ಪೇೞ್ದೊಡೆ (ವಡ್ಡಾರಾ. ೧೦೦–೨೪); ಕಿಱಿದನಱಿವುದಂ ನುಡಿವೆಂ (ಶಾಂತಿಪು. ೨–೩೭); ಬಗೆ ಕಿಱಿದು ಮಾತು ಪಿರಿದೆನೆ (ಮಲ್ಲಿಪು. ೧–೩೧); ಹೂತು ಹಿಗ್ಗುವ ಪುಳಕರಾಜಿಗೆ ದೇಹ ಕಿಱಿದೆನುತ (ಕುವ್ಯಾದ್ರೋ. ೧೫–೨). (ಗು). ೨. ಚಿಕ್ಕದಾದ; ಸಣ್ಣ: ನಾಣುಮಂ ಕಿಱಿದು ಜಾಣುಮನಟ್ಟುಜನೀವ ಚುಂಬನಂ ಕಳೆದುವು (ಪಂಪಭಾ. ೫–೨೭); ಪ್ರತಿಭೆ ನಿಸರ್ಗಮುಂಟು ಕಿಱಿದೋದುಗಳೊಳ್ ಕಿಱಿದುಂಟು ಬಲ್ಮೆ (ಗದಾಯು. ೧–೫೦); ಕಿಱಿದಾಲೋಕನ ಚಂದ್ರಿಕಾಪ್ರಸರದಿಂ. . .ಕಿಱಿದಾಂದೋಳಿತ ಮೌಳಿಯಂ (ಅನಂಪು. ೬–೫೭); ಪಾಂಡವರು ಕುರುಭೂಮೀನಿವಾಸಕೆ ಬಂದು ಬಿಟ್ಟರು ಕಿಱಿದು ದಳಸಹಿತ (ಕುವ್ಯಾಭೀ. ೧–೧೮). **ಕಿರಿದು**: "ಪುಟ್ಟ, ಚುಟ್ಟ – ಅಲ್ಪೀಭಾವೇ, ಕಿರಿದರೊಳ್" (ಕಾಶಕೃ. ೨೫೭); ಅಲ್ಪವೊ ಭೂಮವೊ ಹಿರಿದೋ ಕಿರಿದೋ (ಅನಿಕೇ. ೩೧–೧); ಆ ದೊಡ್ಡ ಸಂಸಾರಕ್ಕೆ ಮನೆ ತುಂಬ ಕಿರಿದು (ರೂಢಿ).

ಕಿಱುಕಿಱಿದು (ದ್ವಿರುಕ್ತಿ): ಬಾಯ್ವೆಣ್ಣೆಯೊಡನೆ ಕಿಱುಕಿಱಿದೆ ನಂಜನೂಡಿ (ವಡ್ಡಾರಾ. ೧೮೬–೨೪); ಪೊನ್ನ ಬೆಳ್ಳಿಯ ಸಿಪ್ಪುಗಳೊಳ್ ಕಿಱುಕಿಱಿದನೆಱೆದು (ಪಂಪಭಾ. ೪–೮೭ ವ); ಕಿಱುಕಿಱಿದೆ ಮೆಟ್ಟಿ ಮುಂದಂ ಕಿಱುಕಿಱಿದನೆ ಸಾರ್ಚಿ ತಮ್ಮ ಗದೆಗಳನಾಗಳ್ ಕಿಱುಕಿಱಿದೆ ತಿರುಪಿ (ಗದಾಯು. ೮–೭); ಕಡಿದು ಕಿಱುಕಿಱಿದನೆಲುವಂ ಪುಡಿಗುಟ್ಟಿಸಿ(ಯಶೋಚ. ೪–೧೯); ಗುಹೇಶ್ವರನ ಲಿಂಗವ ಕಿಱುಕಿಱಿದಾಗೆ ನೆನೆದರೆ ಹಿರಿಹಿರಿಯಾಗಿ ಕಾಡುವುದು ನೋಡಾ ಮಱಹು (ಅವಚಂ. ೨೨೯–೧೦೩೬). **ಕಿಱುಕಿಱಿದಾಗು** = ಚಿಕ್ಕಚಿಕ್ಕದಾಗು: ಕಿಱುಕಿಱಿದಾಗಿರೆ ಮೆಯ್ಯಂ ಕೊಱೆ ಕೊಱೆದುಂ (ಧರ್ಮಾಮೃ. ೩–೬೯); ಪದಂಗಳ್ ಕಿಱುಕಿಱಿದಾಗಿಯಂದಮಾಗಿರೆ (ಅಪ್ರತಿ. ೧೦–೧). **ಕಿಱುಕಿಱಿಯ** = ಚಿಕ್ಕ ಚಿಕ್ಕ; ಸಣ್ಣ ಸಣ್ಣ: ಕಿಱುಕಿಱಿಯವಾಗಿ ನಿನ್ನಂ ತಱಿತಱಿದಡಗಿಂಡೆಯಂ ತಗುಳ್ದಾಡುವೆನೊ (ಬಂಹರಿ. ೮–೧೨); ಕಿಱುಕಿಱಿಯ ಸಮಯಗಳನೆಬ್ಬಟ್ಟಿ (ಬಸಪು. ೫೨–೩೦). **ಕಿಱಿದಂತರ** = ಸ್ವಲ್ಪದೂರ: ಸತಿಯ ಪೆಱಗೆ ಕಿಱಿದಂತರದೊಳ್ ಕೈಲಾಸನೆಂಬ ಕಂಚುಕಿ ಬಂದಂ (ಕಾದಂಪೂ. ೫೧೯); ಕಿಱಿದಂತರಮಂ ಬಂದ ಬಂಧು ಜನರುಮಂ . . . ಮಗುಟಲ್ ಪೇೞ್ದು (ಧರ್ಮಾಮೃ. ೧–೧೦೨).

**ಕಿಱಿದಂತರಂ** = ಸ್ವಲ್ಪ ದೂರದವರೆಗೆ: ಎಮ್ಮಂ ಕಿಱಿದಂತರಂ ಕಳಿಪಿ ಮಗುೞ್ಚಿ ಬಾ (ಪಂಪಭಾ. ೯–೬೩); ಕಿಂಕರತ್ರಯಂ ಕಿಱಿದಂತರಂ ಪೋಗಿ (ಪಂಚತಂ. ೧೪೨–೩); ಪೂರ್ವದಿಶಾಮುಖನಾಗಿ ಕಿಱಿದಂತರಂ ನಡೆದು ಬಂದು (ಬಸರ. ೨–೪೭). **ಕಿಱಿದ ಆಡು** = ಸಣ್ಣದಾಗಿ ಮಾಡಿ ಹೇಳು; ತೆಗಳು; ನಿಂದಿಸು: ಉಪಕಾರವಂ ಕಿಱಿದ ಆಡಿದವನೋ (ಬಸಪು. ೪೦–೪೨). **ಕಿಱಿದಾಗಿ** = ಸ್ವಲ್ಪಮಾತ್ರ: ಸಾಯುಬಯಸಿದೆ ಮಗನೆ ವಿಧಿ ನನಗಾಯುಷವ ಕಿಱಿದಾಗಿ ಕೊಟ್ಟನು (ಕುವ್ಯಾದ್ರೋ. ಓರಿಇ. ಪರಿ. ೨೭೯). **ಕಿಱಿದಾಗಿಸು** = ಚಿಕ್ಕದಾಗಿ ಮಾಡು: ಪಿರಿದಾದ ತಳಿ ಮೇರುವೆಗಳನಡಸಿಯೆ ಕಿಱಿದಾಗಿಸಿದ ದುರ್ಗವನು (ಕಂಸವಿ. ೧೬–೩೪). **ಕಿಱಿದಾನುಂ** = ಕೊಂಚ; ಸ್ವಲ್ಪ: ಸಮನಿಸಿರೆ ಕೆಂಪು ಕಿಱಿದಾನು ಮಱುಗೆ ಸೌಗಂಧಿಕಾಖ್ಯಮದೆ ಕಲ್ಹಾರಂ (ವಸ್ತುಕೋ. ೨೫–೨೩); ಕಿಱಿದಾನುಂ ಪೊೞ್ತುಮಲ್ಲಶ್ರಮದೆ ಪೊಣರ್ದು (ಜಗವಿ. ೪–೩೮). **ಕಿಱಿದಾನುಂಬೇಗಂ** = ಸ್ವಲ್ಪಕಾಲ; ಸ್ವಲ್ಪಹೊತ್ತು: ಎಂದು ಕಿಱಿದಾನುಂ ಬೇಗಮಱು ಮರುಳಾದಂತೆ (ಪಂಪಭಾ. ೫–೧೨ ವ). **ಕಿರಿದಾನುಂಬೇಗದಿಂ** = ಸ್ವಲ್ಪಹೊತ್ತಿನಲ್ಲಿಯೇ: ದುರ್ಯೋಧನನು ಮಾಗಳೆ ಬಂದು ಬಲಿಬಂಧನನ ತಲೆದೆಸೆಯೊಳ್ ಕುಳ್ಳಿರೆ ಕಿಱಿದಾನುಂ ಬೇಗದಿಂ (ಪಂಪಭಾ. ೯–೧೦ ವ). **ಕಿಱಿದುಕಾಲ, ಕಿರಿದುಗಾಲ** = ಸ್ವಲ್ಪ ಸಮಯ; ಕೊಂಚ ಹೊತ್ತು: ಇಳೆಯೊಳಿನ್ನುಂ ಕಿಱಿದು ಕಾಲವ ಬಳಸಬೇಹುದು (ಬಸಪು. ೨೦–೮); ತನ್ನ ನಿಜಗಾಣುತಿಹ ಮೂರ್ತಿಯಂ ಕಿರಿದುಗಾಲಮ್ಮಿಲ್ಲಿಯಿರಿಸಿ ಕೊಳಲಿಚ್ಛೈಸಿದಂ (ತುರಂಗ. ೮೯–೩೫). **ಕಿಱಿದುಗೊಳ್** = ಕೊಂಚ ತೆಗೆದುಕೊ; ಸ್ವಲ್ಪವಾಗಿ ತೆಗೆದುಕೊ: ತುಱುವೆಯ ಕಾಯ್ಗಳುಮಂ . . . ಶರ್ಕರೆಯಿಂ ನೆಱೆ ತಿಂದು ಬಿಸಿಯನೀರಂ ಕಿಱಿದುಗೊಳಲ್ಕಱಿಯದುಱುಗುಮೇ ಕೆಯ್ಮುಸಕಂ (ಖಮುದ. ೧೪–೪೨). **ಕಿಱಿದುದಿನ** = ಕೆಲವುದಿನ: ಒಂದಿನಿತು ತಳುವಿಲ್ಲ ಹೇಳಲು ಕಿಱಿದುದಿನವೆನಲು (ಬಸಪು. ೪೪–೬೯). **ಕಿಱಿದು ಪೊೞ್ತು** = ಕೊಂಚಕಾಲದವರೆಗೆ; ಕೆಲಹೊತ್ತು: ಅಂಕೆಗೊಂಡು ಕಿಱಿದು ಪೊೞ್ತು ಕಾದೆ (ಪಂಪಭಾ. ೧೦–೭೦ ವ); ಅಸ್ಪಂದನೇತ್ರದಿಂ ಕಿಱಿದು ಪೊೞ್ತು ನೋಡುತ್ತುಮಿರ್ದು (ವರ್ಧಪು. ೨–೫೫ ವ). **ಕಿಱಿದುಬೇಗಂ** = ಕಿಱಿದುಪೊೞ್ತು: ಕಿಱಿದು ಬೇಗಮಿರ್ದಾರಾಧನೆಯಂ ವಕ್ಖಾಣಿಸುವುದಂ ಕೇಳ್ದು (ವಡ್ಡಾರಾ. ೮೩–೭); ಜಗುಲಿಯ ಮೇಗಣ ಕುಸುಮದೆಸಳ ಮಿಸುಗುವ ಪೊಸದಳಿಂಬದ ಮೇಗೆ ಕಿಱಿದು ಬೇಗಂ ವಿಶ್ರಮಿಸಿ (ಆದಿಪು. ೧೧–೭೧ವ); ದವನಕನೇಕಾಗ್ರಮನನಾಗಿ ಕಿಱಿದು ಬೇಗಮದನಾಲಿಸಿ ಕೇಳ್ದು (ಪಂಚತಂ. ೩೭–೧೪). **ಕಿಱಿದೆಡೆ** = ಸ್ವಲ್ಪ ಸ್ಥಳ; ಕೆಲವು ಭಾಗ; ಕೆಲವು ಅಂತರ: ಸುದರ್ಶನವೆಂಬ ಸಿವಿಗೆಯನೇಱು ಮಹೀಪಾಲರೇಱ ಡಿಯಂ ವಿಯಚ್ಚರರೇಱಡಿಯನುಯ್ದುಂ ಬೞಿಯಂ ಸುರಾಸುರರ್ ಕಿಱಿದೆಡೆಯನುಯ್ಯೆ (ಚಾವುಂಪು. ೫೩–೧೬); ಕಿಱಿದೆಡೆಯ ದುಂಡರತ್ನದಿಂ ತೊಡೆಯಿಸಿ ಕಳೆದು (ಅಜಿಪು. ೯–೩೪ ವ); ಕಿಱಿದೆಡೆಯಂ ಪೋಗೆವೋಗೆ (ಶಬ್ದಸಾ. ೧೧೧); ಬಂದು ಕಿಱಿದೆಡೆಯ ನಡೆ ವಿಜಯನಾಗೆಂದು ತನುವನು ತಡವಿದರು (ಕುವ್ಯಾದ್ರೋ. ೪–೫೩). **ಕಿಱಿಯ** = ೧. ಚಿಕ್ಕವನು; ಸಣ್ಣವನು; ಕಡಮೆ ವಯಸ್ಸಿನವನು: ಕಿಱಿಯಂ ಮುತ್ತಂ ಧನದಂ ಬಡಿಯಂ ತೊಱೆದಂ ಗೃಹಸ್ಥನೆನ್ನದೆ ಮುಂಬಿಟ್ಟಱಸಿ ಕೊಲುತಿರ್ಪ್ಪ ಜವನ (ಆದಿಪು. ೪–೭೭); ಅವರಿನ್ನಂ ಕಿಱಿಯಲ್ಲಾ್ಕಳದ ಸಿದ್ಧಾಂತ ನಯವೇದಿಗಳ್ (ಸೌಇಇ. XI–i, ೪೫–೮೦; 980); ನಿಮ್ಮ ಕಿಱಿಯಗುಡ್ಡಂ ವಾಯುಭೂತಿಯಾಯಿರ್ದನೆ (ಸುಕುಮಾ. ೪–೨೩ ವ); ಹಿರಿಯನಲಿ ಜನಕಂಗೆ ಮೋಹವು ಕಿಱಿಯನಲಿ ಕಡುಮೋಹ ಜನನಿಗೆ ನಿರುತ ಮರುಜಲು ಮಗನು (ಕುವ್ಯಾಅ. ಓರಿಇ. ಪರಿ. ೩೧೧).

೨. ಕೆಳಮಟ್ಟದವನು; ಹೀನ; ಕೀಳ; ಅಲ್ಪ: ಪೆಱರಂ ಪೊಗೞ್ದುಪೆಯೆಮ್ಮಂ ಕಿಱಿಯರ್ ಮಾಡಿದಪೆಯೆಲವೊ ಸಂಜಯ (ಗದಾಯು. ೩-೫೬); ಎನ್ನಿಂದ ಕಿಱಿಯರಿಲ್ಲ, ಶಿವಭಕ್ತರಿಂದ ಹಿರಿಯರಿಲ್ಲ (ಬಸವ. ೩೩೪); ವರಧರ್ಮವನುತ್ಸವದಿಂ ಸ್ಥಿರಮನದಿಂ ಕೇಳಲೊಲ್ಲ ದಾತನೆ ಕಿಱಿಯಂ (ಧರ್ಮಾಮೃ. ೨-೧೬೫). ಕಿಱಿಯಂದು = ಚಿಕ್ಕಂದು; ಬಾಲ್ಯಕಾಲ: ಕಿಱಿಯಂದಿಂದಿತ್ತ ನಡಪಿದೋದಿಸಿದ ದಾದಿಯೆನಿಪ್ಪುದಱಿಂ (ಆದಿಪು. ೪-೨೧ ವ); ತೊಲಗದೆ ಗೋವುಗಾದ ಕಿಱಿಯಂದಿನ ಗೋವಿಕೆ ನಿನ್ನ ಚಿತ್ತದೊಳ್ ನೆಲಸಿದುದಕ್ಕುಂ (ಪಂಪಭಾ. ೯-೪೪); ಕಿಱಿಯಂದು ತಂದೆ ಬಗ್ಗಿಸಲಱಿಯನೆ ತಾಯ್ ಜಡಿದು ತಿಳಿಪಲಱಿಯಳೆ (ಸುಕುಮಾ. ೨-೬೨); ಮಗನಂ ಕಿಱಿಯಂದಿಂ ತೊಡಗಿ ಶಿಕ್ಷಿಸದಿರ್ದಱಿ ನಿಂತಾಯ್ತು (ಧರ್ಮಾಮೃ. ೨-೮೩); ಕಿಱಿಯಂದೆನಗೆ ಪತಿಯಳಿದು ಪೊರೆವರಿಲ್ಲದೆ (ಪದ್ಮರಾ. ೧೩-೪); ಕಿಱುಯಕೋಲು = ಭೂಮಿಯನ್ನು ಅಳೆಯುವ ಒಂದು ಪ್ರಮಾಣದ ಕೋಲು: ಮಕಿಱಿಯಣ್ಣೆಯ ಸಿಂಗನ ಕಟ್ಟಿಯ ಲು ಕಿಱಿಯ ಕೋಲಲು ಮೂಱು ಮತ್ತರ್ ಗಟ್ಟಿದ್ದಿಯುಮಂ ಬಿಟ್ಟರ್ (ಎಇ. II, ೬೫-೨೨; 12ನೆಯ ಶತ). ಕಿರಿಯವಂ, ಕಿಱುಯವನು = ಚಿಕ್ಕವನು: ಈ ಕಿಱಿಯವನಱಿಯದೆ ಕೆಡೆನುಡಿದ ನಪ್ಪೊಡಂ ನೆಱೆ ಸಲಿಸುವುದು (ಪಂಪಭಾ. ೬-೬೧). ಕಿಱುಯವಳ್, ಕಿಱುಯಳ್, ಕಿಱುಯಳು = ಚಿಕ್ಕವಳು; ಕಿರಿವಯಸ್ಸಿನವಳು: ಈಗಳೀ ಕಿಱಿಯವಳ್ ನಮಗೊಂದುಮನಿಂತುಟೆನ್ನಳ್ (ಆದಿಪು. ೩-೨೬); ಕಿಱುಯವಳ್ . . . ಮೆಱೆವಳಿಂದುಮುಖಿ ಚಂದನೆಯೆಂಬಳ್ (ವರ್ಧಪು. ೧೫-೪೫); ಅನಿಬರಿಂ ಕಿಱಿಯಳ್ ಬ್ರಹ್ಮಿಯೆಂಬ ಮಗಳಂ ಪಡೆದು (ಆದಿಪು. ೮-೪೪ ವ), ದುರ್ಯೋಧನನಿಂ ಕಿಱಿಯಳ್ ದುಶ್ಶಳೆಯೆಂಬಂತೆ (ಶಮುದ. ೧೩೧ ಪ್ರಯೋ); ಕಿಱಿಯಳೆವಳೆಂದೆನ್ನುವಂ ನೀಂ ಬಱಿದೆ ಕಾಡದಿರು (ಬಸಪು. ೧೪-೨೨). ಕಿಱುಯಾತ = ಚಿಕ್ಕವನು: ಕಿಱಿಯಾತನೆ ಪರಿವಾರಕ್ಕಮರಸಂಗಮಱುಗನಾಗಿ ಬಳೆಯೆ (ಚಾವುಂಪು. ೨೩-೪); ಕಿಱಿಯಾತಂ ನಿಸರ್ಗದಿಂ ವಕ್ರಗತಿಪರಿಣಾಮದಿಂ . . . ಉನ್ಮತ್ತನಾದಂ (ಸುಕುಮಾ. ೨-೫೭ ವ). ಕಿಱುವಿರಿಯರ್ = ಕಿರಿಯರು ಮತ್ತು ಹಿರಿಯರು; ಚಿಕ್ಕವರು ಮತ್ತು ದೊಡ್ಡವರು: ತುಱುಲ ಪರಕೆಯ ಸಮಾನಪ್ರತಿಪತ್ತಿಯಿಂ ಕಿಱುವಿರಿಯರಱಿದು ಪೊಡವಟ್ಟು ಪರಸಿ (ಪಂಪಭಾ. ೬-೩೩ ವ).

[ದೇ. ‖ ತಮಿ. ಚಿಱಿದು; ಮಲ. ಚಿಱು, ಚೆಱು, ಚೆಱು; ತುಳು. ಕಿರಿ, ಕಿರು; ಕೊಡ. ಕಿರ್ಕ; ತೆಲು. ಚಿಱು; ಕೋಲಾ. ಕಿರ್]

**ಕಿಱುದೇಗು** (ನಾ). ಒಂದು ಮರದ ಹೆಸರು; ಭಾರಂಗಿ: ಸುರದುಂಬೆ ಸಿಂಧುವಾರ ಮರಿಚಂ ಕಿಱುದೇಗು ಗರ್ದುಗಿನೆಲೆಯೆಂಬಿವುಮಂ ಬೆರಸಿ (ಖಮುದ. ೭-೩೨). 'ಕಿಱುದೇಗು' ಪರಾ. [< ಕಿಱಿದು + ತೇಗು₂]

**ಕಿಱುದೊಟ್ಟಿಲು** (ನಾ). ಸಣ್ಣ ತೊಟ್ಟಿಲು: ಸಿಂಗಾರದುಱುಬಿನ ಕೆಳದಿಯರ ಕೈನೇಣ ಕಿಱುದೊಟ್ಟಿಲಿನ ಬೊಂಬೆಗಳ (ಕುವ್ಯಾಭೀ. ೫-೩೪).
[< ಕಿಱಿದು + ತೊಟ್ಟಿಲು (< ತೊಟ್ಟಿಲ್)]

**ಕಿಱುನೇಱಲು** (ನಾ). ನೇರಿಲದಲ್ಲಿ ಒಂದು ಜಾತಿ; ಸಣ್ಣ ನೇರಳೆ: "ಕಾಕವಲ್ಲಭಾ – ಕಿಱುನೇಱಲು" (ಒಷಧಿ. ೩೨).
[< ಕಿಱಿದು + ನೇಱಲು (< ನೇಱಲ್)]

**ಕಿಱುನೋಟ** (ನಾ). ಸ್ವಲ್ಪ ಮಾತ್ರ ನೋಡುವುದು; ಓರೆನೋಟ; ಕುಡಿನೋಟ: ಕಿಱುನೋಟ ವಿಟನಿಂಗೆ ಅರೆನೋಟ ವಿದುಷಕಗೆ (ಸರ್ವಜ್ಞ. ೧೬೩೨). 'ಕಿಱುನೋಟ' ಪರಾ. [< ಕಿಱಿದು + ನೋಟ]

**ಕಿಱುಪಿಲ್ಲಿ, ಕಿರಿಪಿಲ್ಲಿ** (ನಾ). ಚಿಕ್ಕಪಿಲ್ಲಿ; ಸಣ್ಣ ಕಾಲುಂಗುರ: ಕಿಱುಪಿಲ್ಲಿಯನು ಇಟ್ಟು ವಾಣಿಪತಿಪಿತನೆಂಬೊ ಮೆಂಟಿಕೆಯಾ (ವಿಸಾಸು. ೫೪-೬). **ಕಿರಿಪಿಲ್ಲಿ**: ಚಂದದಲಿ ಮಿಂಟು ಕಿರಿಪಿಲ್ಲಿ ಎಲ್ಲವೂ ಮುಂದಗಮನೆಗೆ ಒಪ್ಪಿದವು (ಚಂದ್ರಹಾ. ೪-೧೬); ಇಚ್ಚರದ ಕಿರಿಪಿಲ್ಲಿಯಾದ್ಯಲ್ಲಿ ಶೃಂಗರಿಸಿ (ಜನಮು. ೪೩-೨೬). [< ಕಿಱಿದು + ಪಿಲ್ಲಿ]

**ಕಿಱುಪು₁, ಕಿಱುಹು, ಕಿಱುವು₁** (ಕ್ರಿ). ತುರುಕು; ಒಳಸೇರಿಸು: ಎಱಗದರಾತಿ ರಾಯ ×× ಯೊಱಿಯೊಳ್ ಪರಱೋಂಕೆಯಪ್ಪಿನಂ ಕಿಱುಪಿಭುಜಾಸಿಯಂ ಜಸಮನೆಣ್ದೆಸೆಯಾನೆಯ ಕೋ× ಗೊಂಬಿನೊಳ್ಕಿರಿಸಿ (ಎಕ. XII, ತುಮಕೂ. ೩೮-೧೩; 1160); ಅಸುಹ್ರಿತು ಪಾಂಡ್ಯ ನೃಪಾಳರಕ್ತಜಳದಿಂ ನೀರೂಡಿ ಸುಱ್ಕಿಂಬಿನಂ ಮಸೆದಂ ಬಿಲ್ಲಮುಸ್ತಶಾಣ ತಳದೊಳು ಘೋರೆಂಬಿನಂ ಜೈತುಗೀಪ್ರಸ್ಫುತಾಸ್ಯಾಂಬುಜಕೋಪದೊಳ್ಕಿಱುಪುವಂ ಘುಣ್ಕೆಂಬಿನಂ ಕೂರ್ಪು ದಳ್ಪಿಸೆ ಬಲ್ಲಾಳನೃಪಾಳಕಂ ನಿಜಭುಜ ಪ್ರೌಢಪ್ರತಾಪಾಸಿಯಂ (ಎಕ. V, ಬೇಲೂರು. ೭೭-೧೪; 1198); ಕಿಱುಪುವ ಗೇಣ ಕೇಣಮಿವರಿಂ ನವಯೌವನಯೋಗ್ಯಮಾಯ್ತು (ಪುಷ್ಪಪು. ೨-೬೧).
**ಕಿಱುಹು**: ೧. ಹಱಗಂಡಿಂದಾತನೇವನೆಂದುಲಿವನ ಬಾಯೊಱಿಯಾಗ ಲ್ಕೂರಲಗಂ ಕಿಱುಹದೆ ಮಾಣ್ದಪನೆ ಹಬ್ಬಣಂ (ಕಇ. I, ೨೫-೪೬; 1186). ೨. ತಿವಿ; ಕುಟ್ಟು; ಚುಚ್ಚು: ಕಠಾರಿಯ ಕೋಲಿಂ ಮುಂದಣ ರತ್ನಸ್ತಂಭಮಂ ಕಿಱುಹಿ [ಪಾಠಾಂ. ಕಿಱುಮಿ, ತಿಱುಹಿ] ಸೋಂಕುತುಂ (ನಂಬಿರ. ೪-೯೬). ೩. ನಿಗುರು; ನಿಮಿರು: ಕುಸಿದ ಪಿಂದೊಗೆದೊಡ್ಡಿದ ಕಂದವೇಱ ಕಟ್ಟಿದ ಬಸಿಱತ್ತಿದೇಕ ಚರಣಂ . . . ಒಪ್ಪೆ ಕಿವಿಗಳ್ ಕಿಱುಪುತ್ತಿರೆ ಪಾಯ್ದು ದೇವಕೂಟದ ಕಱುವಿಟ್ಟ ಕೇಸರಿವೊಲಿರ್ದುದು ಕೇಸರಿ ಕುಂಭಿಕುಂಭದೊಳ್ (ಲೀಲಾವ. ೮-೨೧); "ಸಣ್ಣದಾಗು" (ಲೀಲಾವ. ಕೋಶ). **ಕಿಱುಪು₁**: ೧. ಅರಿಬಿದುದರ ಬಾಯೊಳೆ ಸುರಿಗೆಯಂ ಕಿಱುವುವಂ (ಪೈಅರಿ. ೧೯೩೪, ೩೭-೨೯; 1098). ೨. ಕಿಱುವುವ ಕಿವಿ ಕಡುವೊಗರಂ ಪೆಱುವ ಮೊಗಂ ಸುರ್ಬಿದರ್ದ ವಾಳಾಗ್ರಂ ಮುಂದುಱು ವಾಯ್ದು ತವಕವೊಪ್ಪುವ ಕುದುರೆಗಳನಾರ್ದುಬಿಟ್ಟರ್ ಸುಭಟರ್ (ದಶಕು. ೨-೧೮). ೩. ವಕ್ರವಾಗು; ಗಂಟಿಕ್ಕು: ಅಱಿಪಿದುದು ರೌದ್ರರಸಮಂ ಕಿಱುಪಿದ ಕುಡುವ್ಪುರ್ವು ಕರ್ಚಿದೌಡುರ್ಚಿದ ಬಾಳ್ (ಕಾವ್ಯಾವ. ೬೨೦); ಕೊರಲಸೆರೆ ಬೀಗಿ ಬೆಮರುತ್ತಿರೆ ಕಣ್ಕೆಚ್ಚನಾಗೆ . . . ಪುರ್ವು ಕಿಱುಪೆ ಕಡುಪಿಂ ಕುರುಪತಿ ಭೀಷ್ಮಂಗೆ ಕಿನಿಸಿ ಕಿಂಕಿನಿವೋದಂ (ಬಂಹರಿ. ೧೧-೬೨); ನಿಗುಂಬಿಸೆ ಮನೋಮುದಂ ಕಿಱುಪಿ ಬೊಬ್ಬೆಗೊಂಡಿ ರ್ವರುಂ ತಗುಳ್ದೊದಱಿ ಸಾರ್ದು (ಅನಂಪು. ೫-೧೪). [ಕಿಱ₁ + -ಪು]

**ಕಿಱುಪು₂, ಕಿಱುವು₂** (ನಾ). ಕತ್ತಿವರಸೆಯಲ್ಲಿ ಒಂದು ಬಗೆ; ಕತ್ತಿಯಿಂದ ತಿವಿಯುವ ಒಂದು ರೀತಿ (?): ದೊಱೆಯಿಲ್ಲದ ಬಿಲ್ಲಾಳ್ ಬಿನ್ನಣಮಿಲ್ಲದ ಕಿಱ[ಪಾಠಾಂ. ಱು]ಪು ಮಂತ್ರಿಯಿಲ್ಲದರಸು ಮನ್ನಣೆಯಿಲ್ಲದ ನೃಪನೋಲಗಮೆಱೆಯಿಲ್ಲದ ಜಕ್ಕವಕ್ಕಿ ಸೊಗಯಿಸಿದಪುದೇ (ಅಜಿಪು. ೬-೯೭). **ಕಿಱುವು₂**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [< ಕಿಱುಪು₁]

**ಕಿಱುಬಾಲ** (ನಾ). ಚಿಕ್ಕಬಾಲ; ಸಣ್ಣ ಬಾಲ: ಹತ್ತುಸಾಸಿರ ಕಣ್ಣು ಕತ್ತಿನಲಿ ಕಿಱುಬಾಲ ತುತ್ತನೆ ಹಿಡಿದು ತರುತಿಹುದು ಕವಿಗಳಿದರರ್ಥವನು ಪೇಳಿ (ಸರ್ವಜ್ಞ. ೨೦೬೭). [< ಕಿಱಿದು + ಬಾಲ₁]

**ಕಿಱುಮಾತು, ಕಿರಿಮಾತು** (ನಾ). ೧. ಸಣ್ಣಮಾತು; ಅಡಕವಾದ ಮಾತು. ೨. ಕೀಳುಮಾತು: ಕಿಱುಗೂಸ ಹೋಗುವುದು ಕಿಱುಮಾತನಾಡುವುದು ಕಱು ಸತ್ತ ಆವ ಕಱೆವುದು ತನ್ನ ತಾನಿಱಿದು ಕೊಂಡಂತೆ (ಸರ್ವಜ್ಞ. ೧೮೧೪). **ಕಿರಿಮಾತು**: ೧. ಕಿರಿಮಾತಿನಲ್ಲಿ ಹಿರಿ ಅರ್ಥ (ಸಾಹಿವಿ. ೭೫); ತಿವಿದು ಆಡಿದ ಕಿರಿಮಾತು ಅತ್ಯಂತ ಪರಿಣಾಮಕಾರಕವಾಗಿದ್ದು ನಾಟಕಕಾರನ ಕುಶಲಕಲೆ ಅದರಲ್ಲಿ ವ್ಯಕ್ತವಾಗಿದೆ (ಕವನಿ. ೧೧೯). [< ಕಿಱಿದು + ಮಾತು]

**ಕಿಱುಮೀನ್** (ನಾ). ಒಂದು ಜಾತಿಯ ಸಣ್ಣಮೀನು: ಗುಂಡಿ ನೀರೊಳಗೆ ಕಿಱುಮೀನ ಹೆಜ್ಜೆಯನು ಕಂಡಾತನಾರು (ಸರ್ವಜ್ಞ. ೧೭೫೮). [< ಕಿಱಿದು + ಮೀನ್$_3$]

**ಕಿಱಿಯ ಏಲಕ್ಕಿ** 'ಕಿಱಿಯೇಲಕ್ಕಿ' ನೋ.

**ಕಿಱಿಯಕ್ಕ** (ನಾ). ಅಕ್ಕಂದಿರಲ್ಲಿ ಕಿರಿಯವಳು: ಅಕ್ಕತಂಗಿಯರ್ಯ್ವರು ಒಬ್ಬನ ಅರಸಿಯರು ಕಿಱಿಯಕ್ಕನ [ಪಾಠಾಂ. ಯಾಕೆಯ] ಕೂಡುವರೆ ಹಿರಿಯರಸಿ ಕುಂಟಣಿ, ಹಿರಿಯರಸಿಯ ಕೂಡುವರೆ ಕಿಱಿಯರಸಿ ಕುಂಟಣಿ (ಶೂನ್ಯಸಂ. ೨೨೨–೧೩). [< ಕಿಱಿದು + ಅಕ್ಕ$_1$]

**ಕಿಱಿಯಕ್ಕರ** (ನಾ). [ಛಂದ] ಅಕ್ಕರ ವೃತ್ತದ ಐದು ಪ್ರಕಾರಗಳಲ್ಲಿ ಒಂದು; ಪ್ರತಿಯೊಂದು ಚರಣದಲ್ಲಿ ಮೊದಲೆರಡು ವಿಷ್ಣುಗಣಗಳು ಕೊನೆಗೊಂದು ರುದ್ರಗಣವೂ ಇರುವ ನಾಲ್ಕು ಸಮಪಾದಗಳುಳ್ಳ ವೃತ್ತ: ಪೊಡೆಯಲರವರಿರ್ವರ್ ಮೊದಲೊಳಿರ್ಕೆ ಜಡೆಯ ಶಂಕರ ನೊರ್ವಂ ತುದಿಯೊಳಿರ್ಕೆ ಮಡದಿ ಕೇಳ್ ಮೂಱು ಗಣಮೆಸೆದಿರ್ಕೆ ಗಡ ಕಿಱಿಯಕ್ಕರಕ್ಕಿದೆ ಲಕ್ಷಣಂ (ಛಂದೋಂಬು. ೫–೮). [< ಕಿಱಿದು + ಅಕ್ಕರ$_2$]

**ಕಿಱಿಯಗರು, ಕಿರಿಯಗುರು** (ನಾ). ಅಗುರಿನಲ್ಲಿ ಒಂದು ಪ್ರಕಾರ: "ಶಿಂಶಫೆ" (ನಾಚಿರಾ. ೬). **ಕಿರಿಯಗುರು**: ಪರಿಮಳದೆಣ್ಣೆಯಿಂ ತೀವ ಕಿರಿಯಗುರ ಗಂಧವಂ ಧರಿಸಿದರೆ . . . ಚರ್ಮದೋಷಂಗಳಂ ಹೋಗಲಾಡಿಸುವುದು (ಸಕವೈ. ೪೨). [< ಕಿಱಿದು + ಅಗರು]

**ಕಿಱಿಯಗುಳ್ಳ, ಕಿಱಿಗುಳ್ಳ** (ನಾ). = ಕಿಱುಗುಳ್ಳ: "ಕುಂಭಿ – ದಂತಿ, ಕರಿಯ ಸಿವನ್ನಿ, ಕಿಱಿಯ ಗುಳ್ಳ" (ಔಷಧಿ. ೩೪). **ಕಿಱಿಗುಳ್ಳ**: (೬). [< ಕಿಱಿದು + ಗುಳ್ಳ]

**ಕಿಱಿಯಗೋರಂಟೆ, ಕಿಱಿಯಗೋರಟೆ** (ನಾ). ಗೋರಂಟೆಯಲ್ಲಿ ಒಂದು ಜಾತಿ; ಚಿಕ್ಕಗೋರಂಟೆ: "ಸಹೆ, ಕುಮಾರಿ" (ನಾಚಿರಾ. ೬) **ಕಿಱಿಯಗೋರಟೆ**: "ಕುರಂಟಾ, ಕುರಂಡಾ – ಕಿಱಿಯಗೋರಟೆ" (ಔಷಧಿ. ೩೪). [< ಕಿಱಿದು + ಗೋರಂಟೆ]

**ಕಿಱಿಯತುಂಬುರು, ಕಿಱಿಯತೂಬರ, ಕಿಱಿಯತೂಬರು** (ನಾ). ಒಂದು ಬಗೆಯ ಸಸ್ಯ: "ಕಾಕತಿಂದುಕ – ಕಿಱಿಯತುಂಬುರು" (ಔಷಧಿ. ೩೦). **ಕಿಱಿಯತೂಬರ**: "ಕಾಕತಿಂದುಃ, ಕಾಕಸ್ಫೂರ್ಜಃ– ಈ ಯೆರಡು ಕಿಱಿಯತೂಬರ" (ಔಷಧಿ. ೩೨). **ಕಿಱಿಯತೂಬರು**: "ಕಾಕತುಂಡಕಾ – ಕಿಱಿಯತೂಬರು" (ಔಷಧಿ. ೩೨). [< ಕಿಱಿದು + ತುಂಬುರು$_1$]

**ಕಿಱಿಯತೂಬರ** 'ಕಿಱಿಯತುಂಬುರು' ನೋ.

**ಕಿಱಿಯತೂಬರು** 'ಕಿಱಿಯತುಂಬುರು' ನೋ.

**ಕಿಱಿಯದ್ರಾಕ್ಷಿ** (ನಾ). ದ್ರಾಕ್ಷೆಯಲ್ಲಿ ಒಂದು ಜಾತಿ: "ಕಪಿಲಾ – ಕಿಱಿಯದ್ರಾಕ್ಷಿ (ಔಷಧಿ. ೨೧). [< ಕಿಱಿದು + ದ್ರಾಕ್ಷಿ (< ದ್ರಾಕ್ಷೆ)]

**ಕಿಱಿಯನೆಲಗುಳ್ಳ** (ನಾ). ಒಂದು ಜಾತಿಯ ಗುಳ್ಳ; ನೆಲಬದನೆ: "ವಿದಾರಿ, ಕ್ಷೀರಶುಕ್ಲೆ, ಇಕ್ಷುಗಂಧೆ, ಕ್ರೋಷ್ಟಿ" (ನಾಚಿರಾ. ೬). [< ಕಿಱಿದು + ನೆಲಗುಳ್ಳ]

**ಕಿಱಿಯಬನ್ನಿ** (ನಾ). ಒಂದು ಬಗೆಯ ಬನ್ನಿಮರ: "ಅಲ್ಪಶಮೀ, ಶಮೀರ – ಕಿಱಿಯಬನ್ನಿ" (ನಾಚಿರಾ. ೬). [< ಕಿಱಿದು + ಬನ್ನಿ$_1$]

**ಕಿಱಿಯಬ್ಬೆ** (ನಾ). ಚಿಕ್ಕತಾಯಿ; ಚಿಕ್ಕಮ್ಮ: ಈತಂ ಮನೆಯ ಕಿಱುಕುಳವೆಸನಂ ಮಾಡದಿರೆ ತನ್ನ ಕಿಱಿಯಬ್ಬೆ ಜಡಿದೊಡೆ ಮುಳಿದು ಬಂದೊಂ (ಚಾವುಂಪು. ೬೯–೭); ಕಿಱಿಯಯ್ಯಂ ಸೂರ್ಯಪುತ್ರಂ ಪಗಲ್ ಮೃಗಲಕ್ಷ್ಮಂ ಕಿಱಿಯಬ್ಬೆ (ಜಾತತಿ. ೩–೬); ನಿನಗಾಂ ಕಿಱಿಯಬ್ಬೆಯೊಂದು ಪೇಟ್ದು (ನಳಚಂ. ೫೭೩). [< ಕಿಱಿದು + ಅಬ್ಬೆ$_1$]

**ಕಿಱಿಯಮಾವುಡಿ** (ನಾ). ಒಂದು ಊರಿನ ಹೆಸರು: ಪೂಸೆಯ ವೆಬ್ಬತ್ತಱ ಬಱಿಯ ಪಿರಿಯ ಮಾವುಡಿಗೆಯೊನ್ದು ಕಿಱಿಯಮಾವುಡಿಯೊನ್ದನ್ತು ಬಾಡವೆರಡು (ಕಇಳ. ೭೯–೨–೫೬; 1056). [< ಕಿಱಿದು + ಮಾವುಡಿ]

**ಕಿಱಿಯಮುಗುಳಿ** (ನಾ). ಒಂದು ಊರಿನ ಹೆಸರು. P ಈಗಿನ ಚಿಕ್ಕಮಗಳೂರು: ಕಿಱಿಯಮುಗುಳಿಯ ಪೆಮ್ಮಾಡಿಗೊಣ್ಡಜ್ಜಿಗೆ ಕೊಟ್ಟ ನೀಱ್ಪಣ್ಣ ಇನ್ನೂಱು (ಎಕ. VI, ಚಿಕ್ಕಮ. ೩–೮; 899 ?). [< ಕಿಱಿದು + ಮುಗುಳಿ]

**ಕಿಱಿಯಮ್ಮ, ಕಿರಿಯಮ್ಮ** (ನಾ). ಚಿಕ್ಕಪ್ಪ: ಅಖಿಳ ರಾಜ್ಯಶ್ರೀಯೊಳ್ ದಂತಿಗನ ಪುತ್ರಕಂ ರಾಜ್ಯಾನ್ತರಮಾದನ್ದು ಕನ್ನರಂ ಕಿಱಿಯಮ್ಮಂ ಸನ್ತಾನದೊಳಿಟ್ಟ ಬಱಿಕ್ಕ (ಎಕ. XI, ಚಿತ್ರದು. ೪೯–೪೩; 947); ಆತನ ಕಿಱಿಯಮ್ಮಂ ವಿಶಾಖಭೂತಿಯುಮಲ್ಲಿಯೆ ಪುಟ್ಟಿದನ್ (ಚಾವುಂಪು. ೨೭–೧೬). **ಕಿರಿಯಮ್ಮ**: ಬಾಣರಾಜರಾ ಕಿರಿಯಮ್ಮಂಗಳಯಿರಡಿ ಅಳ್ವ ವಿಕ್ರಮಾದಿತ್ಯರ್ಕೊಟ್ಟೊದು (ಸೌಇಇ. IX–i, ೪೭–೫, 9ನೆಯ ಶತ). [< ಕಿಱಿದು + ಅಮ್ಮ$_1$]

**ಕಿಱಿಯಯ್ಯ, ಕಿರಿಯಯ್ಯ** (ನಾ). = ಕಿಱಿಯಮ್ಮ: ಪಗಲೊಳ್ ತಂದೆ ದಿವಾಕರಂ ಜನನಿ ಶುಕ್ರಂ . . . ಕಿಱಿಯಯ್ಯ ಸೂರ್ಯಪುತ್ರಂ (ಜಾತತಿ. ೩–೬). **ಕಿರಿಯಯ್ಯ**: ಭೀಮಂ ನಿನಗೆ ಪಿರಿಯಯ್ಯನಹನೆ ಸಹದೇವ ನಕುಲರ್ . . . ಕಿರಿಯಯ್ಯಗಳೆ (ಅರುಣ. ೧೯–೧೮). [< ಕಿಱಿದು + ಅಯ್ಯ$_1$]

**ಕಿಱಿಯಯಾಲಕ್ಕಿ** 'ಕಿಱಿಯೇಲಕ್ಕಿ' ನೋ.

**ಕಿಱಿಯರಸಿ, ಕಿರಿಯರಸಿ** (ನಾ). ಚಿಕ್ಕರಾಣಿ; ಕಿರಿಯರಾಣಿ: ಕಿಱಿಯಕ್ಕನ ಕೂಡುವರೆ ಹಿರಿಯರಸಿ ಕುಂಟಣಿ, ಹಿರಿಯರಸಿಯ ಕೂಡುವರೆ ಕಿಱಿಯರಸಿ ಕುಂಟಣಿ (ಶೂನ್ಯಸಂ. ೨೨೨–೧೩); ಸೇರಿದವು ಪೂರ್ಣಾಂಶ ಭಾಗಗಳು ಹಿರಿಯರಸಿ ಕಿಱಿಯರಸಿಯವರಿಬ್ಬರಿಗೆ (ತೊರರಾ. ೧–೭–೫೮); **ಕಿರಿಯರಸಿ**: ಒಂದು ನಾರಿಯರಿದ್ದಡೇನ್ ಕಿರಿಯರಸಿಯಲ್ಲಿಹುದಾಪ್ತ ಮೋಹೋತ್ಕರುಷಂ (ಅನಂರಾ. ೨–೧–೨೭). [< ಕಿಱಿದು + ಅರಸಿ]

**ಕಿಱಿಯಸಣಬು** (ನಾ). ಒಂದು ಬಗೆಯ ಸಸ್ಯ: "ಮೂಲ್ಯ ಪುಷ್ಪಾ – ಕಿಱಿಯ ಸಣಬು" (ಔಷಧಿ. ೧೨೪). [< ಕಿಱಿದು + ಸಣಬು]

**ಕಿಱಿಯಸಿವನ್ನಿ** (ನಾ). ಒಂದು ಬಗೆಯ ಸಸ್ಯ: "ಮಹಾನಿಂಬಿ – ಕಿಱಿಯಸಿವನ್ನಿ" (ಔಷಧಿ. ೧೧೬). [< ಕಿಱಿದು + ಸಿವನ್ನಿ]

**ಕಿಱಿಯಹಾದರಿ** (ನಾ). ಪಾದರಿಗಿಡದಲ್ಲಿ ಒಂದು ಬಗೆ: "ಮಧುಸ್ರವಾ – ಕಿಱಿಯ ಹಾದರಿ" (ಔಷಧಿ. ೧೨೦). [< ಕಿಱಿದು + ಹಾದರಿ (< ಪಾದರಿ$_2$)]

**ಕಿಱಿಯಹಾಲೆ** (ನಾ). ಹಾಲೆ ಮರದಲ್ಲಿ ಒಂದು ಜಾತಿ: "ಜೀವಂತಿ, ಜೀವನಿ, ಜೀವೆ, ಜೀವನೀಯೆ, ಮಧುಸ್ರುವೆ – ಈ ೫ ಕಿಱಿಯಹಾಲೆ" (ನಾಚಿರಾ. ೧೧೧). [< ಕಿಱಿದು + ಹಾಲೆ$_1$ (< ಪಾಲೆ$_2$)]

**ಕಿಱಿಯಹಿಟ್ಟಳಿಕ** 'ಕಿಱಿಯ ಹಿಟ್ಟಳಿಕೆ' ನೋ.

**ಕಿಱಿಯಹಿಟ್ಟಳಿಕೆ, ಕಿಱಿಯಹಿಟ್ಟಳಿಕ** (ನಾ). ಒಂದು ಬಗೆಯ ಸಸ್ಯ: "ಕಂದರೋದ್ಭವಾ – ಕಿಱಿಯ ಹಿಟ್ಟಳಿಕೆ" (ಔಷಧಿ. ೨೫). **ಕಿಱಿಯಹಿಟ್ಟಳಿಕ**: "ಚತುಷ್ಪತ್ರೀ – ಕಿಱಿಯ ಹಿಟ್ಟಳಿಕ" (ಔಷಧಿ. ೫೪). [< ಕಿಱಿದು + ಹಿಟ್ಟಳಿಕೆ]

**ಕಿಱಿಯೀಚಲು** 'ಕಿಱೀಚಲ್' ನೋ.

**ಕಿಱಿಯೆಲಚಿ** (ನಾ). ಒಂದು ಬಗೆಯ ಸಸ್ಯ: "ಭೂಬದರೀ – ಕಿಱಿಯೆಲಚಿ" (ಔಷಧಿ. ೧೧೩). [< ಕಿಱಿದು + ಎಲಚಿ]

**ಕಿಱಿಯೆಲವ** (ನಾ). ಒಂದು ಬಗೆಯ ಮರ: "ರೋಚನ" (ನಾಚಿರಾ. ೩). [< ಕಿಱಿದು + ಎಲವ]

**ಕಿಱಿಯೆಸಳು** (ನಾ). ಚಿಕ್ಕ ಎಸಳು; ಸಣ್ಣದಳ: ಹಾದರಿಯ ಹರ್ಷ ನಿಧಿಯಂ ಮಾಧವಿಯ ಮಹಾ ವಿದಗ್ಧ ಗುರುಶಂಕರನಂ ಕೇದಗೆಯ ಕಿಱಿಯೆಸಳ ಪುಣ್ಯಾಧಿಕನಂ ಕಂಡೆನೆನ್ನ ಕರಸರಸಿಜದೊಳ್ (ಕವಿಚ. III, ೩೯೭ ಶಿವದರ್ಶನಾಷ್ಟಕ).
[< ಕಿಱಿದು + ಎಸಳು (< ಎಸೞ್$_1$)]

**ಕಿಱಿಯೇಲಕ್ಕಿ**, ಕಿಱಿಯಏಲಕ್ಕಿ, ಕಿಱಿಯಯಾಲಕ್ಕಿ (ನಾ). ಏಲಕ್ಕಿಯಲ್ಲಿ ಒಂದು ಪ್ರಕಾರ: "ಉಪಕುಂಚಿತಾ, ತುತ್ಥಾ, ಕೋರಂಗಾ, ತ್ರಿಪುಟಾ, ತ್ರುಟಿಃ – ಈ ೬ ಕಿಱಿಯೇಲಕ್ಕಿಯೆಂಬರು" (ನಾಚಿರಾ. ೧೧೦); "ಏರವಕುಲಿ – ಕಿಱಿಯೇಲಕ್ಕಿ" (ಓಷಧಿ. ೧೮). **ಕಿಱಿಯಏಲಕ್ಕಿ**: "ಕೋಲಾಂಗಿ – ಕಿಱಿಯ ಏಲಕ್ಕಿ" (ಓಷಧಿ ೪೧). **ಕಿಱಿಯಯಾಲಕ್ಕಿ**: "ಉಪಕುಂಚಿ – ಕಿಱಿಯಯಾಲಕ್ಕಿ" (ಓಷಧಿ. ೧೬). [< ಕಿಱಿದು + ಏಲಕ್ಕಿ]

**ಕಿಱಿಯೊಡಲ್** (ನಾ). ಸಣ್ಣ ಶರೀರ; ಕೃಶವಾಗಿಯೂ, ಗಿಡ್ಡಾಗಿಯೂ ಇರುವ ಶರೀರ: "ಕಿಱಿಯೊಡಲವನಂ ಪೃಶ್ನಿಯೆಂಬುದು, ಕಿರಾತನುಮೆಂಬುದು" (ಹಲಾಯು. ೧೦೦–೪೫೭).
[< ಕಿಱಿದು + ಒಡಲ್]

**ಕಿಱಿವಂಚ** (ನಾ). ಸಣ್ಣಮಂಚ: ಪರಿಪರಿಯ ತೊಡವುಗಳು ಥೇನು ಸಂಕುಲ ದಿವ್ಯಮರಕತದ ಗಾಡಿಗಳೊಳೆಳೆವ ಕಿಱಿವಂಚಗಳು ಬರುತಿದ್ದುವು (ಪರಶು. ೩–೫೬). [< ಕಿಱಿದು + ಮಂಚ]

**ಕಿಱಿವೀೞು** (ಕ್ರಿ). ೧. ಸ್ವಲ್ಪಜಾರು, ತಪ್ಪಿಸಿಕೊಳ್ಳು; ಪಾರಾಗು: ಸಂಸಪ್ತಕ ನಿಕುರುಂಬದೊಳಗೊರ್ವರುಮಂ ಕಿಱಿವೀೞಲೀಯದೆ ರಸಮಂ ಕೊಲ್ವಂತೆಂತಾನುಂ ಕೊಂದು (ಪಂಪಭಾ. ೧೨–೧೨೦ ವ); "ಕಡಮೆಯಾಗು" (ಪಂಪಭಾ. ಕೋಶ). ೨. ಕಡಮೆಬೀಳು; ಕಡಮೆಯಾಗು; ಕೊರತೆಯಾಗು. [< ಕಿಱಿದು + ಬೀೞು$_1$ (< ಬೀೞ್$_1$)]

**ಕಿಱಿವೆಂಚೆ** (ನಾ). ಚಿಕ್ಕ ಸರೋವರ: ಅಪಾರದುಗ್ಧ ಸಾಗರದೆ ವಿಹಾರಿ ಪಂಚೆ ಕಿಱಿ[ಪಾಠಾಂ. ಱು]ವೆಂಚೆಯ ವಾರಿಗೆ ಚಿತ್ರಮಾವುದೇ (ವೃಷವಿ. ೮–೧೦). [< ಕಿಱಿದು + ಬೆಂಚೆ]

**ಕಿಱಿವೆಳಗು** (ನಾ). ನಸುಬೆಳಕು; ಮಂದಪ್ರಕಾಶ: ಮೊದಲು ಕಿಱಿವೆಳಗು ನಸುರೇಖೆ ಸುಮನಸಾನಂದಕರಬಿಂಬ ಕಂಗೊಳಿಸಿದುದು ಮತ್ತಾಸುಧಾಸೂತಿಯ (ವೆಂಕರಾ. ೫–೬–೨). 'ಕಿಱುವೆಳಗು' ಪರಾ.
[< ಕಿಱಿದು + ಬೆಳಗು$_2$]

**ಕಿಱಿಹು** 'ಕಿಱಿಪು$_1$' ನೋ.

**ಕಿಱೀಚಲ್**, ಕಿರೀಚಲು, ಕಿಱಿಯೀಚಲು (ನಾ). ಒಂದು ಬಗೆಯ ಕಾಡು ಈಚಲು: (೩). **ಕಿರೀಚಲು**: (ವೈಔಗಿ. ೬೧–೧೨೩೧). **ಕಿಱಿಯೀಚಲು**: "ಪರಾಪರಂ – ಕಿಱಿಯೀಚಲು" (ಓಷಧಿ. ೯೨).
[< ಕಿಱಿದು + ಈಚಲ್$_1$ (< ಈಂಚಿಲ್)]

**ಕಿಱು**$_1$ (ಕ್ರಿ). ಕೆತ್ತ (ಭೂತಕೃ), ಕೆತ್ತು$_5$ (ಭೂತನ್ಯೂ). ೧. ಮುಚ್ಚು; ಕದವಿಕ್ಕು: ತೆಱಿಯದೆ ಮುನ್ನ ಕೆತ್ತ ಪಡಿಗಳ್ ನವಸೌರಭಮುಣ್ಮೆ ಪೊಕ್ಕಳಂ ತೆಱೆದುವು ರತ್ನತೋರಣಗಣಂಗಳುದಗ್ರ ವಿಮಾನರಾಜಿಯೊಳ್ (ಆದಿಪು. ೨–೬೩); ಅವನೆರ್ದೆ ಪಡಿದೆಱೆವಿನಮೋವರಿಯ ಪಡಿಯನಾಸತಿ ಕೆತ್ತಳ್ (ಪಂಠಾಮಾ. ೧೧೦–೮); ಬಾಗಿಲಂ ಕಿಱು ತೆಱೆಯೆಂಬುದಿಲ್ಲ (ಎಕ. II, ೩೫೧–೧೮; 1119); ಮನೆಮನೆದಪ್ಪದೋಡಿ ಪಡಿಯಂ ಕಿಱುತಿರ್ಪ ... ತತ್ಪುರೀಜನದ (ವರ್ಧಪು. ೩–೫); ಇತ್ತ ಲೋಕದ ಕಂಗಳೆವೆಗಳು ಕೆತ್ತವು (ಕುವ್ಯಾದ್ರೋ. ೧೯–೩೨). ೨. ಆವರಿಸು; ತುಂಬು; ಮುಸುರು; ಮುಸುಕು: ಮಾರ್ಗಣೌಘದಿಂ ಮೇಘಮಾರ್ಗಮುಂ ಕೆತ್ತು ಪುಗಲೀಯದೆ (ಜಗವಿ. ೧೫–೫ ವ); ಬೀದಿಯ ತೆಱಹು ಕೆತ್ತವು ಹೊತ್ತ ಸರಕಿನ ಬಹಳ ಬಂಡಿಗಳ (ಕುವ್ಯಾಗ. ೪–೧೬); ಆಗಸದ ಬಟ್ಟೆಯಂ ಕೆತ್ತುವು ದಿಗಂತಮಂ ತುಂಬಿದವು ಬಾಣಂಗಳು (ಜೈಮಿಭಾ. ೨೩–೩೫). ೩. (ಅಲಂ) ಮೌನವಾಗು; ಬಾಯಿಬಿಗಿದುಕೊಂಡಿರು: ಹೊತ್ತ ಮೋನದ ವಿವಿಧ ವಾದ್ಯದ ಕೆತ್ತ ಬಾಯ್ಗಳ ಪಾಠಕರ (ಕುವ್ಯಾದ್ರೋ. ೧–೧೧); ಕಾಳ್ವಿಡಿದಿರ್ಪ ತನಯನಂ ಮೊಗನೋಡಿ ಮಾತಾಡಿಸದೆ ಬೆಱಗುವಡೆದಂತೆ ಕೆತ್ತುಕೊಂಡಿಹ ವಿಜಯನ ಬಗೆಯ ನೀಕ್ಷಿಸಿ (ಜೈಮಿಭಾ. ೧೭–೫೦). ೪. ನಡುವೆಯೊಡ್ಡು, —ತಡೆ: "ಕಿಱು – ವ್ಯವಧಾನೇ (ನಡುವೆ ಬರು)" (ಶಮಧಾ). ೫. (?): ಒದವಿದಕೆ[ಪಾಠಾಂ. ೩]ತ್ತ ಕಂಕಣದ [ಪಾಠಾಂ. ಗೊಂಕಣಯ] ಪುರ್ವಿನಜರ್ವು ಲಯಕ್ಕೆ ಲಕ್ಕಲೆಕ್ಕದ ಗತಿ ನಾಟಕಾಭಿನಯಮಾಯ್ತೆನೆ (ಪಂಪಭಾ. ೭–೯೦).

ಕೆತ್ತುಕೊಳ್ = ೧. ಆವರಿಸಿಕೊಂಡಿರು; ಕವಿದುಕೊಂಡಿರು: ಕೆತ್ತುಕೊಂಡಿರೆ ಬಿಡಿಸುವೆನು ... ಅಹಿತಮೋಹರವ (ಕುವ್ಯಾದ್ರೋ. ೪–೪೫). ೨. ಬಾಯಿ ಬಿಗಿದುಕೊಂಡಿರು; ಮೌನವಾಗಿರು: ಕೆತ್ತುಕೊಂಡಿರೆ ನುಡಿಸಿದನು ಕಲಿಕರ್ಣನವನಿಪನ (ಕುವ್ಯಾದ್ರೋ. ೧–೧೫); ಬೆರಗುವಡೆದವನಂತೆ ಕೆತ್ತುಕೊಂಡು ನಿಂತುಬಿಟ್ಟ (ಬಿಮುರಿ. ೮೬).
[ದೇ. ‖ ತಮಿ. ಮಲ. ಚೆಱು]

**ಕಿಱು**$_2$, ಕಿರು (ನಾ). 'ಕಿಱಿದು' ಎಂಬುದಕ್ಕೆ ಸಮಾಸದಲ್ಲಿ ಬರುವ ಸಂಕ್ಷಿಪ್ತರೂಪ. 'ಕಿಱುಗಂಟೆ', 'ಕಿಱುನಗೆ' ಪರಾ. **ಕಿರು**: 'ಕಿರುಗಬ್ಬ' ಪರಾ. [< ಕಿಱಿದು]

**ಕಿಱುಕಬೆ** (ನಾ). ಒಬ್ಬಾಕೆಯ ಹೆಸರು: ಕಿಱುಕಬೆ ಸರ್ಗ್ಗತನ ಬಾಣಸಿಗೆಯಾಕೆಯ ... ಪಱಿಯಕ್ಕಂ (ಎಕ. VIII, ನಗರ. ೪೫–೫; 950).
[ಕಿಱುಕ$_0$ + ಅಬೆ (< ಅಬ್ಬೆ$_1$)]

**ಕಿಱುಕಸಲೆ** 'ಕಿಱುಕುಸಾಲೆ' ನೋ.

**ಕಿಱುಕಳ್ಳಂಗಡಲೆ**, ಕಿರುಗಳ್ಳಂಗಡಲೆ (ನಾ). ಒಂದು ಮೂಲಿಕೆ: "ಅಂತಸ್ಸಂಸ್ಥಿತಾ – ಕಿಱುಕಳ್ಳಂಗಡಲೆ" (ಓಷಧಿ. ೭). **ಕಿಱುಗಳ್ಳಂಗಡಲೆ**: ಕಿರುಗಳ್ಳಂಗಡಲೆ ಬೇರು ... ಆಡಿನ ಹಾಲಿನಿಂದ ಅರೆದು ಕುಡಿಯಲು (ವೈದ್ಯಸಾ. II, ೪೧). [ಕಿಱು$_2$ + ಕಳ್ಳಂಗಡಲೆ]

**ಕಿಱುಕಾಗಾಮಾಸಿ** (ನಾ). ಒಂದು ಗ್ರಾಮದ ಹೆಸರು: ವನವಾಸಿ ಮಣ್ಣಲೇ ಎಡೆವೊಬಲಭಾಗೇ ಕಿಱುಕಾಗಾಮಾಸಿನಾಮ ಗ್ರಾಮಸ್ಯ ಭೋಗ ... ದತ್ತಃ (ಎಕ. XI, ದಾವಣ. ೬೬–೨೮; 694). [?]

**ಕಿಱುಕಾಂತ** (ನಾ). ಎಳೆಯ ವಯಸ್ಸಿನ ಕಾಂತ, —ಗಂಡ: ಪಱುಕನಧಟ ಸಾಸಿರಬಾಹು ಪಿತನೆನ್ನ ಕಿಱುಕಾಂತನೊಳು ಕಾದುತಿಹನು (ಮೋಹತ. ೩೫–೩೮). [ಕಿಱು$_2$ + ಕಾಂತ$_2$]

**ಕಿಱುಕು**$_1$ (ಕ್ರಿ). ದಟ್ಟವಾಗು; ಪುಷ್ಟವಾಗು: ಕಿಱುಗೊಂಬು ನಳಿದ ಬೆನ್ನುಂ ಕಿಱುಕಿದ ತೊಡೆಗೆಚ್ಚಲಲೆವ ಬಾಲಂ ತೆಳುಮೈ ಮೆಱೆಯೆ ... ಕಱಿವೆಮ್ಮೆಯ ಪಿಂಡು ಪಳ್ಳಿಪಳ್ಳಿಯೊಳೆಸೆಗುಂ (ಸೂಕ್ತಿಸು. ೪–೬೧).
[ದೇ. ‖ ತಮಿ. ಮಲ. ಚೆಱಿ]

**ಕಿಱುಕು**$_2$ (ಕ್ರಿ). ೧. ಗೀಚು; ಗೀರು. ೨. (ಬರೆದುದನ್ನು) ತೊಡೆದುಹಾಕು; ಹೊಡೆದುಹಾಕು: (೩).
[ದೇ. ‖ ತಮಿ. ಕಿಱುಕ್ಕು; ಮಲ. ಕಿಱುಕ್ಕ; ತೆಲು. ಗಿಱುಕು]

**ಕಿಱುಕುಂದ** (ನಾ). ಒಂದು ಊರಿನ ಹೆಸರು: ನಾಗಸೇನ ಗೊರವ ಕಿಱುಕುನ್ದದುಳ್ಸನ್ಯಸನಂ ನೋನ್ತು ಮುಡಿಪ್ಪಿದಾರ್ (ಎಕ. IX, ಚನ್ನಪ. ೭೦–೩; 906). [ಕಿಱು$_2$ + ಕುಂದ$_2$]

**ಕಿಱುಕುಡ** (ನಾ). = ಕಿಱುಕುಳ$_{2}$ : ಕಾಣಿಕೆಯುಗ್ರಾಣ ಪರಿಧಾನ . . . ದಂಡಾಯ ತವುಡೆಯೊಳಗಾದ ಸಮಸ್ತ ಕಿಱುಕುಡವೆಲ್ಲವಂ ಬಲ್ಲಾಳದೇವಂ ಬಿಟ್ಟಂ (ಎಕ. V, ಬೇಲೂರು. ೫೯–೮೮ ; 1117). [< ಕಿಱುಕುಳ$_{2}$]

**ಕಿಱುಕುಣಿ** 'ಕಿಱುಗುಣಿ' ನೋ.

**ಕಿಱುಕುಣಿಕೆ** 'ಕಿಱುಗುಣಿಕೆ' ನೋ.

**ಕಿಱುಕುಣಿಕ್ಕೆ** 'ಕಿಱುಗುಣಿಕೆ' ನೋ.

**ಕಿಱುಕುಪ್ಪಟೂರ್** (ನಾ). ಒಂದು ಊರಿನ ಹೆಸರು: ಕಿಱುಕುಪ್ಪಟೂರ ಗ್ರಾಮು(ವ್) (ಕಇ. II, ೧–೧೦ ; 600). [ಕಿಱು$_{2}$ + ಕುಪ್ಪಟೂರ್]

**ಕಿಱುಕುಲ, ಕಿರಕುಳ, ಕಿರುಕುಳ$_{1}$, ಕಿಱುಕುಳ$_{1}$** (ನಾ). **೧.** ಹೀನಕುಲದವನು; ಕ್ಷುದ್ರ; ಅಲ್ಪ: "ಕೂಟನೆಂದುಂ ಕಿಱುಕುಲ[ಪಾಠಾಂ. ೪]ನೆಂದುಂ ಅಲ್ಪಂ" (ಕಶಸಾ. ೧೮–೩೬೪). **ಕಿರಕುಳ:** "ಕಿರುಕುಳ – ಕಡಿಮೆ, ಹೀನ, ಚಿಲ್ಲರೆ" (ಜಾನಕೋ. ೩೭). **ಕಿರುಕುಳ$_{1}$ : ೧.** ಈ ನಿನ್ನ ನಾಲ್ವರು ತಮ್ಮಂದಿರು, ಇವರೇನು ಕಿರುಕುಳರೆ (ಬಿದುರಿ. ೫). (ಗು). **೨.** ಕ್ಷುಲ್ಲಕವಾದ; ಅಲ್ಪವಾದ: ಕಿರುಕುಳ ದೈವಗಳನ್ನು ಪೂಜಿಸಬಾರದು (ವಚಶಾ. II, ೩೭೨); ಎಂತಹ ಕಿರುಕುಳ ಮನೆತನದಲ್ಲಿ ಹುಟ್ಟಿದರೂ . . . ವ್ಯಕ್ತಿಯ ಸಂಸ್ಕೃತಿಗೆ ಪ್ರಥಮ ಸ್ಥಾನವಿರಬೇಕು (ಯಕ್ಷಪ್ರ. ೧೬೫). **ಕಿಱುಕುಳ$_{1}$: ೧.** "ಕಿಱುಕುಳರೆನೆ ಸಾಮಾನ್ಯರ್" (ಭಾರನಿ. ೪೩); ಕೋಟಿ ಪೊಂಗೆ ಘಂಟಿಯುಲುಗುವ ಕಿಱುಕುಳ ಬೊಜಂಗರುಮಂ (ಪಂಪಭಾ. ೪–೮೭ ವ); ಕಿಱುಕುಳನೊಳ್ ಪಡೆದ ಗೆಲ್ಲದಿಂದಂ ಪಿರಿಯನೊಳ್ ಪಡೆವ ಸೋಲಮುತ್ತಮಂ (ಶಾಂತಿಪು. ೮–೧೫೦ ವ); ಈ ವೃದ್ಧಂ ಕಿಱುಕುಳನಲ್ಲ, ಕಾರಣಿಕನಾಗಲೆವೇಳ್ಕುಂ (ನಂಬಿರ. ೬–೬೦); ಕಿಱುಕುಳರು ನೀವಲ್ಲ, ನಿಮ್ಮಲ್ಲಿ ಕೊರತೆಯಿಲ್ಲದು (ಕುವ್ಯಾದ್ರೋ. ೧೫–೧೩) ; ನಿನ್ನನುಜರೇಂ ಕಿಱುಕುಳರೆ (ಜೈಮಿಭಾ. ೨–೩೫). **೩.** ಕ್ಷುಲ್ಲಕವಾದುದು; ಹೀನವಾದುದು; ಅಲ್ಪವಾದುದ್ದು: ಧನವ ಬೇಡದೆ ಬರಿ ಕಿಱುಕುಳದವನಿಯನು ಬೇಡಿದ (ಸಂಭಪ. ೧೦–೨೧) ; ನಮಗೀ ಸಕಲ ಧರಣೀ ಕ್ಷತ್ರವರ್ಗದ ವಿಜಯ ಕಿಱುಕುಳವೆ (ಕುವ್ಯಾಸ. ೩–೭); ಎಮ್ಮ ಸಾಲೆಯೊಳ್ ಕಿಱುಕುಳದ ಬಡವು ಕುದುರೆಗಳ ಸಾಲೊಳ್ ಕಟ್ಟುವೆನ್ (ರಾಮಾಶ್ವ. ೧೨೫-೭).

ಕಿರುಕುಳ ನೌಕರ = ಕೆಳದರ್ಜೆಯ ಸೇವಕ: ಗೌಡಕುಲಕರ್ಣಿಯವರ ಕೈಕೆಳಗೆ ತಳವಾರ, ಹಳಬ ಮುಂತಾದ ಕಿರುಕುಳ ನೌಕರರು ಇರುತ್ತಾರೆ (ಬಿಳವ. ೬೨). ಕಿಱುಕುಳ ದೈವ = ಕ್ಷುದ್ರ ದೇವತೆ: ಕಿಱುಕುಳದೈವಕ್ಕೆ ಕುಱಿಯನಿಕ್ಕಹೆವೆಂದು ನಲಿನಲಿವಾಡುವರು (ಬಸವ. ೫೬೧). ಕಿಱುಕುಳವೆಸ = ಚಿಲ್ಲರೆ ಕೆಲಸ; ಪೋಲ್ಗೆಲಸ: ಈತಂ ಮನೆಯ ಕಿಱುಕುಳವೆಸನಂ ಮಾಡದಿರೆ ತನ್ನ ಕಿಱಿಯಬ್ಬೆ ಜಡಿದೊಡೆ (ಚಾವುಂಪು. ೮೯–೬). [ಕಿಱು$_{2}$ + ಕುಲ]

**ಕಿಱುಕುಸಲೆ** 'ಕಿಱುಕುಸಾಲೆ' ನೋ.

**ಕಿಱುಕುಸಾಲೆ, ಕಿರುಕಸಾಲೆ, ಕಿರುಕುಸಾಲೆ, ಕಿಱುಕುಸಲೆ, ಕೀರಕಸಾಲೆ** (ನಾ). ಒಂದು ಬಗೆಯ ಸೊಪ್ಪು: "ತುಂಡುಲೀಯಃ, ಅಲ್ಪಮಾರಿಷಃ – ಈ ೨ ಕಿಱುಕುಸಾಲೆ" (ನಾಚಿರಾ. ೧೧೧) ; "ಕಿಱುಕುಸಾಲೆಯುಮದಕ್ಕುಂ ನಿರುತಂ ತಾಂ ಮೇಘನಾದಿ ಸಿರಿಸ ಶಿರೀಷಂ" (ಕವಿಕಂ. ೭೧); "ನೀರದರವಂ ತಂಡುಲೀಯಕಂ ಮುದಿಷ್ಪಮೆನೆ ಕಿಱುಕುಸಾಲೆಯಕ್ಕುಂ" (ಮಂಗರಾ. ೪೨–೪೦) ; ಕಿಱುಕುಸಾಲೆಯುಮನಾಗಳೆ ಕಳ್ಳೊಳೆ ಕುಡುಗೆ ಮಧುವಿಮಿಶ್ರಿತದಿಂದಂ (ಅಶ್ವಶಾ. ೧೨೩–೪). **ಕಿರುಕಸಾಲೆ:** "ಮು(ನಿ)ಹರಿ – ಕಿರುಕಸಾಲೆ" (ಒಷಧಿ. ೧೨೬); ಲವಂಗಾದಿಯುಂ ಲೋಲತರ ಕಿರುಕಸಾಲೆಯ ಪುಂಡಿ ತುಂಬ ಬಸಳೆಯ ಭಂಗಿ ಸೊಪ್ಪುಗಳನೂ (ಮಹಾವಿ. ೧೧–೩೫) ; ಕಿರುಕಸಾಲೆಯ ರಸವಂ ಸಕ್ಕರೆಯಿಂ ಕೂಡಿ ನಸ್ಯಂ ಮಾಡುವುದು (ಸಕವೈ. ೧೯೧). **ಕಿರುಕುಸಾಲೆ:** "ಮೇಘನಾದಃ – ಕಿರುಕುಸಾಲೆ" (ಒಷಧಿ. ೧೨೯) ; ಕಿರುಕುಸಾಲೆ ಬೇವಿನೆಲೆ ಪಡಲಂ ಶರ್ಕರೆ . . . ಕಷಾಯಂ ರಕ್ತಪಿತ್ತಮಂ ತಕ್ಷಣದಿಂ (ಕಲ್ಯಾಕಾ. ೫–೮) ; ಬಾಳೆಯಗೆಡ್ಡೆಯ ರಸ ಕಿರುಕುಸಾಲೆ ಬೇರಿನ ರಸ ಸಹ ಕೂಡಿ ಶರ್ಕರೆವೆರಸಿ ಕುಡಿಯೆ ಮೂತ್ರಕಟ್ಟು ಪರಿಹಾರಮಕ್ಕುಂ (ಸಕವೈ. ೩೭೨) ; ಕಿರುಕುಸಾಲೆಯ ಬೀಜವಂ ನೀರಲ್ಲರೆದು ಕಿಬ್ಬೊಟ್ಟೆಗೆ ಪೂಸೆ ಮೂತ್ರ ಬಿಡುವುದು (ವಿವೈವಿ. ೬೪). **ಕಿಱುಕುಸಲೆ:** ನೆಱೆ ಪೊರಸುಗೆ ಕಾವಲಿಯುಂ ಕಿಱುಕುಸಲೆಯ ಬೇರೊಳ್ (ಲೋಕೋಪ. ೮–೯). **ಕೀರಕಸಾಲೆ:** ಸೊಪ್ಪುಗಳು: ಪೊನ್ನಗಂಟಿ, ಕೀರಕಸಾಲೆ, ಬಿಳಿದಂಟು (ನಮ್ಮನು. ೨೩೭). [< ಕಿಱಿದು + ಕುಸಾಲೆ]

**ಕಿಱುಕುಳ$_{1}$** 'ಕಿಱುಕುಲ' ನೋ.

**ಕಿಱುಕುಳ$_{2}$, ಕಿರಕೋಳ, ಕಿರುಕುಳ$_{2}$, ಕಿರುಕೊಳ, ಕುರುಕುಳ$_{1}$** (ನಾ). **೧.** ಚಿಲ್ಲರ ತೆರಿಗೆ: ಕಿಱುದೆಱೆ ಕಿಱುಕುಳ ದಾಯದ್ರಮ್ಮ (ಎಇ. XIII. ೧೭೧–೩೫; 1055); ಮಗ್ಗದೆಱೆ ಗಾಣದೆಱೆ ಸಮಸ್ತ ಕಿಱುಕುಳ ತೆಱೆಯಾರಾಟ . . . ಕೊಟರು (ಸೌಇಇ. IX–i, ೩೨೪–೬ ; 1197) ; ಮಗ್ಗದೆಱೆ ಅಡುದೆಱೆ . . . ಮುಖ್ಯವಾದ ಎಲ್ಲಾ ಕಿಱುಕುಳಂಗಳು (ಮೈಆರಿ. ೧೯೪೨, ೨೬–೩ ; 1270); ಸಿದ್ಧಾಯ, ಹೊದಕೆ . . . ಮುಂತಾದ ಕಿಱುಕುಳವನು ಬಿಟ್ಟು (ಮೈಆರಿ. ೧೯೩೭, ೫೨–೭ ; 1337). **೨.** ಹಲವು ಬಗೆಯ ಚಿಕ್ಕಪುಟ್ಟ ವಸ್ತು, —ಚಿಲ್ಲರೆ ಸಾಮಗ್ರಿ: ಅಲ್ಲ ಬೆಲ್ಲ ಅರಿಸಿನ ಮೊದಲಾಗಿ ಕಿಱುಕುಳವೆಲ್ಲವಂ ಪಸಾರಕ್ಕೊಂದೊಂದ ಕೊಟ್ಟರ್ (ಮುಂಬರಾ. X, ೨೬೯–೭೩ ; 1229). **ಕಿರಕೋಳ: ೨.** ಊರಲ್ಲಿ ಒಂದು ಕಿರಕೋಳ ಅಂಗಡಿ ಇದೆ (ರೂಢಿ). **೩.** ಚಿಲ್ಲರೆ ವ್ಯಾಪಾರ: ಕಿರಕೋಳ ಹಾಗೂ ಠೋಕ ವ್ಯಾಪಾರ (ರೂಢಿ). **ಕಿರುಕುಳ$_{2}$: ೧.** ಕಿರುಕುಳ ಬಾಧೆಯೊನ್ದುಮಿಲ್ಲದನ್ತಾಗಿ (ಸೌಇಇ. XI–i, ೭೮–೫೬ ; 1045). **೨.** ಪತ್ರಾವಳಿಯ ಎಲೆ, ಅರಟಾಳದ ಕಾಯಿ, ಕವಳೀಹಣ್ಣು – ಇಂಥ ಕಿರುಕುಳ ಪದಾರ್ಥಗಳನ್ನು (ಕಭಾಗ. ೫೪). **೪.** ತೊಂದರೆ; ಕಾಟ; ಪೀಡೆ: ಇಲ್ಲದ ಕಿರುಕುಳ ಕೊಡೋದರಲ್ಲಿ ಖೈದಿಗಳು ನಿಸ್ಸೀಮರು (ವೀರಯೋ. ೩೫); ಒತ್ತಾಯಮಾಡುವುದರಿಂದ ಬರೀ ಕಿರುಕುಳ ಮಾತ್ರವಾಗುತ್ತದೆ (ಶಿಕ್ಷದ. ೩೮೪) ; ತಮ್ಮಾಜಿಯ ಕಿರುಕುಳಕ್ಕೆ ರಮಾಕಕ್ಕಿ ಬಹಳ ಬೇಸತ್ತಿದ್ದರು (ದೀಪಹ. II, ೪೬). **೫.** ಕಸಕಡ್ಡಿ ; ಗಿಡುಗಂಟೆ (?): ಬಲವಾದ ಮರಗಳಂ ಬಿತ್ತಿ ಮೇಲೆಸೆವ ಕಿರುಕುಳಂಗಳಂ ಸವರಿ (ಭಕ್ತಿಸ. III, ೮). **ಕಿರುಕೊಳ: ೧.** ಅರಮನೆ ತೆಱುಮಾರುಗಳನೂ ಉಂಡಿಗೆಯ ಕಿರುಕೊಳ ಸಲ್ಲ (ಸೌಇಇ. IX–ii, ೪೩೩–೫೬ ; 1408). **ಕುರುಕುಳ$_{1}$ : ೧.** ಶ್ರೀವಯಿಷ್ಣವರು ಕೂಡಿ ಅಳ್ವಾರ ದೇವರ ಕಯ್ಯಂಕರ್ಯಕ್ಕೆಂದು ಕುರುಕುಳವಂ ಪಡಿಯಉಂ ಅಳ್ವಾರಸೇವೆಯ ಮಾಡಿ (ಎಕ. XIV, ಶ್ರೀರಂಗ. ೮೬–೨೦ ; 1471).

ಕಿರುಕುಳಮಾರಾಟ = ಚಿಲ್ಲರೆ ವ್ಯಾಪಾರ: ಈ ಐದು ಗ್ರಾಮಗಳಲ್ಲಿ ಠೋಕ ಮಾರಾಟ, ಕಿರುಕುಳ ಮಾರಾಟ, ಈ ಎರಡು ಪ್ರಕಾರದ ಮಾರಾಟವೂ ನಡೆಯುತ್ತದೆ (ಕಭಾಗ. ೩೦೪). ಕಿರುಕುಳ ರಜೆ = ಸಾಂದರ್ಭಿಕ ರಜೆ; ಚಿಲ್ಲರೆ ರಜೆ: ಕಿರುಕುಳ ರಜೆಯನ್ನಾಗಲೀ ಹಕ್ಕಿನ ರಜೆಯನ್ನಾಗಲೀ ಅವರು ಎಂದೂ ತೆಗೆದುಕೊಂಡಿರಲಿಲ್ಲ (ರಂಗರೋ.೧೬೫).

[ಕಿಱು$_{2}$ + ಕುಳ$_{2}$]

**ಕಿಱುಕುಳಾಯ** (ನಾ). ಕಿರುಕುಳ ತೆರಿಗೆಗಳಿಂದ ಬರುವ ವರಮಾನ: ಕಿಱುದೆಱೆ ಕಿಱುಕುಳಾಯಂ ಪಾಯದ್ರಮ್ಮಂ (ಬೊಂಕಶಾ. ೧೯೩೪, ಬಂಕಾಪುರ. ೩–೧೯ ; 1062) ; ಕಾಣಿಕೆ ಕಿಱುಕುಳಾಯದಾಯ ಸಹಿತಂ (ಬೊಂಕಶಾ. ೧೯೩೭, ಸಿಂಧಗಿ.೩೪–೨೭ ; 1108) ; ಕಿಱುಕುಳಾಯದಾಯ ಸಹಿತಂ (ಇಆ. V, ೪೭–೪೨ ; 1187). [ಕಿಱುಕುಳ$_{2}$ + ಆಯ$_{7}$]

**ಕಿಱುಕೊಡಲೂರು** (ನಾ). ಒಂದು ಊರಿನ ಹೆಸರು: ಕಿಱುಕೊಡಲೂರನ್ನಾಮಧೇಯಮಪಲ್ಲೀ (ಮೈಆರಿ. ೧೯೪೪, ೧೧-೧೦ ; ೨ನೆಯ ಶತ). [ಕಿಱು$_2$ + ಕೊಡಲೂರು]

**ಕಿಱುಕೆ** (ನಾ). ಮುಚ್ಚುವಿಕೆ; ಆವರಿಸುವಿಕೆ: ಉಚ್ಚೆ, ಪಚ್ಚೆ, ಕಿಱುಕೆ [ಪಾಠಾಂ. ಗಿಱಿಕೆ], ತಿಱುಕೆ, ಪೊಱುಕೆ (ಶಬ್ದಾನು. ೫೫೭ ಪ್ರಯೋ). [ಕಿಱು$_1$ + -ಕೆ]

**ಕಿಱುಕೆಱೆ** 'ಕಿಱುಗೆಱೆ' ನೋ.

**ಕಿಱುಕೊಣ್ಣಂದ** (ನಾ). ಒಂದು ಕೆರೆಯ ಹೆಸರು: ಕಿಱಿನಾ ಸಂಗತ ಮಹಾಪಥನಿಂಬ ಪ್ರದೇಶಾತುದವಕ್ಕೊಲ್ ಕಿಱುಕೊಣ್ಣನ್ದ ತಟಾಕ . . . ಪೂರ್ವ್ವಭಾಗ ಇರ್ಗರೆ ನದೀ ಗತ್ವಾಸೇವನಟ್ಯೇವದಕ್ಷಿಣಸೀಮಾ (ಎಕ.III, ಮಂಡ್ಯ. ೧೧೩-೫೭ ; 715 ?). [?]

**ಕಿಱುಗಂಟೆ, ಕಿಱುಘಂಟೆ** (ನಾ). ಸಣ್ಣ ಗಂಟೆ; ಚಿಕ್ಕಗಂಟೆ; ಕಿಂಕಿಣಿ: ಪುಂಡರೀಕದ ಕಿಱುಗಂಟೆಯಿಂದೆ ಸಹಕಾರದ ಕೆಂದಳಿರಿಂದೆ ಚೆಲ್ವುವೆತ್ತುದು . . . ವಂದನಮಾಲಕಾವೃತಂ (ಕಾದಂಉ. ೨೧೩); ಉಲಿಯಲು ಕಾಂಚೀದಾಮದಾ ಕಿಱುಗಂಟೆ ಲಲನೆ ನಡೆದಳು (ಜೀವಂಸಾಂ. ೧೧-೩೧); ಅಂದುಗೆಗಳ ಝಣತ್ಕೃತಿ . . . ಮೇಖಳೆಯ ಚೆಂದದ ಕಿಱುಗಂಟೆಯ ದನಿ (ಕಂಸವಿ. ೨೪-೪೭). **ಕಿಱುಘಂಟೆ**: "ಕಿಂಕಿಣಿಯೆಂಬುದು ಕಿಱುಘಂಟೆ" (ಹಲಾಯು. ೯೨-೪೦೭); ಕುಱುಹಿನ ಪಟ ಕಿಱುಘಂಟೆ ಪುಲಿಯ ಬಾಲ ಮೆಱೆಯೆ ಗಡೆಯರೆ [ಪಾಠಾಂ. ಯೊಳೆ]ಯ್ತಂದು (ಕುರಾಸಾಂ. ೧೨-೬೫). [ಕಿಱು$_1$ + ಗಂಟೆ$_2$]

**ಕಿಱುಗಂದ** (ನಾ). ಎಳೆಯಮಗು; ಹಸುಗೂಸು: ಕಂದಂಗಳ್ ಮಱುಕದ ಕಿಱುಗಂದಂಗಳ ಮುದ್ದು ನುಡಿಗಳಂ ಮೊದಲಿಕುಂ (ಜಗವಿ. ೧-೫೪). [ಕಿಱು$_2$ + ಕಂದ$_1$]

**ಕಿಱುಗಂಬ** (ನಾ). ಚಿಕ್ಕಕಂಬ: ಪೊಂಬಾಳೆಯ ಪೊಸಗಂಬಂಗಳಿಂದಂ ಕೆಂಬೂರದ ಕಿಱುಗಂಬಗಳಿಂದಂ (ಉದ್ಭಟ. ೫-೧೯). [ಕಿಱು$_2$ + ಕಂಬ]

**ಕಿಱುಗಟ್ಟಿಗೆ** (ನಾ). ಚಿಕ್ಕಕಟ್ಟಿಗೆ, —ಕೋಲು. 'ಇಡಿಗಿಱು ಗಟ್ಟಿಗೆ' ಪರಾ. [ಕಿಱು$_2$ + ಕಟ್ಟಿಗೆ$_1$]

**ಕಿಱುಗಟ್ಟು** (ನಾ). ತಿಳಿಯಾದ ಕಟ್ಟು, —ಸಾರು: ಸರಿನೀರು ಸರಿಮೊಸರು ಶುಂಠಿ ನೀರುಳ್ಳಿಗಳ ತುರುವಲೇಲಕ್ಕಿ ತದುಕಿನ ಚಿಗುರ ಕಿಱುಗಟ್ಟು ವೆರಸಿ ನೀರೋಗರವ ಹಾಕಲದು ತ್ರೈಲೋಕ್ಯ ಪೂಜ್ಯ ತಕ್ರೋದನ ಕಣಾ (ಸೂಪಶಾ. ೩-೨೭). [ಕಿಱು$_2$ + ಕಟ್ಟು$_3$]

**ಕಿಱುಗಡಲ್, ಕಿಗ್ಗಡಲು** (ನಾ). ಚಿಕ್ಕ ಸಮುದ್ರ: ಬಂದವುದು ಮುನಿಪನೊಡನೆಯದೊಂದು ವಿಯನ್ನದಿಯ ಕಿಱುಗಡಲ್ ಕೌತುಕಮಂ ಬಂದದೆ ದುಗುಲದ ಕೌಪೀನಂ ದಂಡಾಗ್ರದೊಳದೊಂದು ಯತಿಪತಿಗೆಸೆಗುಂ (ಜಗವಿ. ೧೦-೯). **ಕಿಗ್ಗಡಲು**: ಕಿಗ್ಗಡಲ ರಕ್ತದ ಹೊನಲಲಿ (ಬಸವ. ೭೦೫); ತೇಜಿಯ ಕಡಿಕುಗಳು ಕುಣಿದಾಡಿದವು ಕಿಗ್ಗಡಲ ರಕುತದಲಿ (ಕುವ್ಯಾದ್ರೋ. ೫-೧೧). [ಕಿಱು$_2$ + ಕಡಲ್$_2$]

**ಕಿಱುಗಡಸಿಗ** 'ಕಿಱುಗಡಸಿಗೆ' ನೋ.

**ಕಿಱುಗಡಸಿಗೆ, ಕಿರುಗಡಸಿಗೆ, ಕಿಱುಗಡಸಿಗ** (ನಾ). ಒಂದು ಮೂಲಿಕೆಯ ಹೆಸರು: "ತಿಕ್ತ – ದರಸಿ, ಕಟುಕರೋಹಿಣಿ, ಕಿಱುಗಡಸಿಗೆ, ಹೆಗ್ಗುರುಟಗೆ" (ಒಷಧಿ. ೬೮). **ಕಿರುಗಡಸಿಗೆ**: ಶುಂಠಿ ವಾದಕ್ಕೆ ಕಿರುಗಡಸಿಗೆ ಅಗುಳು ಶುಂಠಿ . . . ಇದರ ಕಷಾಯದಿಂದ (ವೈದ್ಯಸಾ. I, ೧೨೩); ಕಿರುಗಡಸಿಗೆ, ಜೀರಿಗೆ . . . ಇವಿಷ್ಟನ್ನೂ ಸಮ ಭಾಗವಾಗಿ ಬಿಸಿನೀರಿನಿಂದರೆದು ಕೊಡಲು ಶೀತಜ್ವರ ಪರಿಹಾರಮಕ್ಕುಂ (ಸಕವೈ. ೬೩). **ಕಿಱುಗಡಸಿಗ**: "ಕಟ-ಕಟುಕರೋಹಿಣಿ, ಕಿಱುಗಡಸಿಗ, ಬಿಳಿಯ ಸಾಸುವೆ" (ಒಷಧಿ. ೧೯). [ಕಿಱು$_2$ + ಕಡಸಿಗೆ]

**ಕಿಱುಗಣ್, ಕಿರುಕಣ್, ಕಿರುಗಣ್ಣು$_1$** (ನಾ). ಸಣ್ಣ ಕಣ್ಣು: ಹೊಗೆ ಮೊಗದ ಕಿಱು[ಪಾಠಾಂ. ಡಿ]ಗಣ್ಣ ಕೆಮ್ಮೀಸೆಗಳ . . . ವಿಗಡನೆದ್ದನು (ಕುವ್ಯಾಸ.೧೪-೧೦೧). **ಕಿರುಕಣ್**: ಈ ಹಿರಿಕಿವಿಯನು ನಾನೇ ಬಯಸಿದೆ ಈ ಕಿರುಕಂಗಳ ನಾನೇ ಬಗೆದೆ (ಗಣೇಶ. ೫-೧೨೯). **ಕಿರುಗಣ್ಣು$_1$**: ನಸುನಗುತ ಕಿರುಗಣ್ಣಿನಿಂದ ನೋಡುತ್ತಾ (ಕರಿಕ. ೧೧೭-೪); ಕಿರುಗಣ್ಣು ಕಪ್ಪಾಗಿದ್ದವು (ಪುನರು. ೧೪೦). [ಕಿಱು$_2$ + ಕಣ್]

**ಕಿಱುಗಣೆ$_1$** (ನಾ). ಒಂದು ಬಗೆಯ ಬಾಣ: ಕಣೆ ಕಣೆಯ ಹಳಚಿದವು ಮಾರ್ಗಣೆ ಕಣೆಯ ಕಡಿದವು ಕವಿಯ ಛಣೆ ಕಿಱುಗಣೆಯ ಮುಕ್ಕುಳಿಸಿದವು (ಕುವ್ಯಾಭೀ. ೪-೧೪). [ಕಿಱು$_2$ + ಕಣೆ$_1$]

**ಕಿಱುಗಣೆ$_2$** (ನಾ). ಸೀರೆ; ಸೀರೆಯ ನಿರಿ (?): ಆ ಯುವತಿ ತನ್ನಯ ಗೆಳೆಯರಿಂಗರುಹಿಸದೆ ಕಿಱುಗಣೆ ಸೀಳಿ ಶಿವಗೀಯೆ (ಸಂಭಪ. ೩೩-೧೪). [ಕಿಱು$_2$ + ಕಣೆ$_3$ (< ಕಣಯ$_1$)]

**ಕಿಱುಗಣ್ಣು** (ಕ್ರಿ). ಕಿರಿದಾಗಿ ಕಾಣು; ಕಡೆಗಣಿಸು: ನೀಂ ಪುಗಲ್ ಪುಗಲವಮೆಂದು ಮೂದಲಿಸಿ ಲೋಧ್ರಿಗೆ ಮೊಲ್ಲೆಗೆ ಸಿಂಧುವಾರ ಮಲ್ಲಿಗೆ ಕಿಱುಗಣ್ಚಿ ಮೆಟ್ಟಿ ಜಡಿದೂಳ್ದುವು ಕೋಗಿಲೆ ತಲ್ಲತಾಗ್ರಮಂ (ಅನಂಪು. ೬-೮೩). 'ಕಡೆಗಣ್ಚು' ಪರಾ. [ಕಿಱುಗಣ್ + -ಚು]

**ಕಿಱುಗತ್ತಿ, ಕಿರುಗತ್ತಿ** (ನಾ). ಚಿಕ್ಕ ಕತ್ತಿ; ಚೂರಿ: ಕಿಱುಗತ್ತಿಗಳ ಸರಪಣಿಯ ಕಶಾದಂಡಂಗಳಾ ಜ್ವಾಲೆಯಿಂ ಕಾಸಿ ಹೊಡೆಯಲು (ವೀಶೈಪು. ೪-೧೯-೩೦); ಪಲತೆಱದ ಬಿರುದುಗಳ್ ಕಿಱುಗತ್ತಿ [ಪಾಠಾಂ. ಗೊಂಡೆ]ಗಳ್ ನೆಲಕ್ಕಲೆವ ಝಲ್ಲಿಗಳ್ (ಚಿಬಪು. ೪೮-೫೦). **ಕಿರುಗತ್ತಿ**: ಅವನ ಕೈಯಲ್ಲಿದ್ದುದು ಒಂದೇ ಒಂದು ಕಿರುಗತ್ತಿ (ಆರ್ಯಕ. ೫೩); ಕಿರುಗತ್ತಿಯಮೇಲೆ ಮಧುಕರನ ಕೈ ಹೆಬ್ಬೆರಳಿನ ಗುರುತು ಇದೆಯಲ್ಲವೆ? (ಕೃತಜ್ಞ. ೧೬೮). [ಕಿಱು$_2$ + ಕತ್ತಿ]

**ಕಿಱುಗನ್ನೆ** (ನಾ). ಎಳೆಯ ವಯಸ್ಸಿನ ಕನ್ಯೆ; ಬಾಲಿಕೆ: ಕಿಱುಗನ್ನೆಯನು ಕೂಡಿದವನಾತಗೆ ಮುನ್ನ ಗುಣದೋಷಗಳ ಭೇದಗಳಿಲ್ಲ (ನಿಭಾಗ. ೧೧-೧೭-೧೨). [ಕಿಱು$_2$ + ಕನ್ನೆ$_1$]

**ಕಿಱುಗಪ್ಪೆ** (ನಾ). ಸಣ್ಣ ಕಪ್ಪೆ; ಚಿಕ್ಕ ಕಪ್ಪೆ: ನಿನ್ನ ಪುಸಿವು ಕೆಟ್ಟು ಬಲಮುಪ್ಪನ್ನೆವರಂ ಕಿಱುಗಪ್ಪೆಗಳಂ ತಿನುತಿರೆನೆ (ಪಂಚತಂ. ೨೭೪-೧೦). [ಕಿಱು$_2$ + ಕಪ್ಪೆ$_1$]

**ಕಿಱುಗಲ್, ಕಿರ್ಗಲ್, ಕಿಱುಗಲ್ಲು** (ನಾ). ಚಿಕ್ಕಕಲ್ಲು; ಸಣ್ಣಕಲ್ಲು: ಪೆಟ್ಟಿಗಳುಂ ಕಿಱುಗಲ್ಗಳುಮೊತ್ತೆ ನಿದ್ರೆಗೆಯ್ವೆಯಾದರ್ (ವಡ್ಡಾರಾ. ೧೪೦-೨); ಒಣಬಟ್ಟೆಯ ಕಿಱುಗಲ್ಲ ಬಡಿಯ ಕೋಲಿಂದಂ ಕಾಲ್ ಕೆಟ್ಟುವು (ಧರ್ಮಾಮೃ. ೭-೪೯); ಕಿಱುಗಲ್ಲೊಳ್ ಕೆಸಱೊಳ್ ಮೊಳೆ ಕೊರಡುಗಳೊಳ್ ಮುಳ್ಳೊಳಿಡುಕುಱಿಗಳೊಳಂ ಪಾಯ್ವುದು (ಅಶ್ವಶಾ. ೧೫-೧). **ಕಿರ್ಗಲ್**: ಪೆಣ್ಗಳಟ್ಟ ಕಿರ್ಗಲ್ಗಳನೊಂದಿನಿತೊತ್ತಲೆದು ತಪ್ಪುತೆ ಕಾಡಿದುದೊಂದು ಕೋಡಗಂ (ಕವಿಚ. II, ೨೭೪, ರಾಮನಾಥ ವಿಲಾಸ). **ಕಿಱುಗಲ್ಲು**: ಎಲವವೇ ಸುರಭೂಜ ಗೊಡ್ಡಾಕಳೆ ಸುಪರ್ವ ಸುಧೇನು. . . ಕಿಱುಗಲ್ಲೇ ಮಹಾಮೇರು (ತೊರರಾ. ೩-೭-೩೩). [ಕಿಱು$_2$ + ಕಲ್$_3$]

**ಕಿಱುಗಲ್ಲು** 'ಕಿಱುಗಲ್' ನೋ.

**ಕಿಱುಗಳಮೆ** (ನಾ). ಸಣ್ಣ ಬತ್ತ; ಸಣ್ಣ ನೆಲ್ಲು: ಪೊಸ ಮಾವಿನ ತೋಂಟಂ ಕಿಱುಗಳಮೆಯ ರಸದಾಳಿಯ ಬೆಳೆವೊಲನೊಪ್ಪಿದುದು (ಜಯಕಾ. ೧-೩೯). [ಕಿಱು$_2$ + ಕಳಮೆ (< ಕಲಮ)]

**ಕಿಱುಗಳವಿ** (ನಾ). ಒಂದು ಬಗೆಯ ಮೂಲಿಕೆ: "ವಂದಃ — ಕಿಱುಗಳವಿ" (ಒಷಧಿ. ೧೪೫). [?]

**ಕಿಱುಗಾಣ** (ನಾ). ಸಣ್ಣಗಾಣ; ಚಿಕ್ಕ ಗಾಣ: ಕಿಱುದುಗಾಣ, ಕಿಱುಗಾಣ (ಭಾಷಾಭೂ. ೧೫೦ ಪ್ರಯೋ). [ಕಿಱು$_2$ + ಗಾಣ$_3$]

**ಕಿಱುಗಾಯ್** (ನಾ). ಎಳೆಯ ಕಾಯಿ; ಸಣ್ಣ ಕಾಯಿ: ಕಿಱುಗಾಯ್ಗಳಿಂ ತೊರೆದ ದೋರೆಗಳಿಂ . . . ಅಮ್ರಮೊಪ್ಪುಗುಂ (ಗಿರಿಕ. ೨-೨೩). [ಕಿಱು$_3$ + ಕಾಯ್$_4$]

**ಕಿಱುಗಾಲ** (ನಾ). ಚಿಕ್ಕಂದು; ಬಾಲ್ಯ: ಶೈಶವ ವಿನೋದದ ಹರಯದೊಳು ಲಿಂಗಾರ್ಚನೆಯನಾಚರಿಸುವಂ ಬುದ್ಧಿಯನಱಿವ ಕಿಱುಗಾಲವಾಗಿಂತು ಪರಮ ಮಹೇಶ್ವರರನೊಲವಿಂ ಪರಮನೆಂದೇ ಕಾಣ್ಬಂ (ಬಸವು. ೩-೪೧). [ಕಿಱು$_2$ + ಕಾಲ]

**ಕಿಱುಗಾಳೆ** (ನಾ). ಒಂದು ಬಗೆಯ ಕಹಳೆ: ನಡವ ವಾದ್ಯ ಜೀಗಟೆ ಕಿಱುಗಾಳೆ ೨ (ಸೌಇಇ. IX-ii, ೪೭೦-೫೮; 1482). 'ಕಿಗ್ಗಾಳೆ' ಪರಾ. [ಕಿಱು$_2$ + ಕಾಳೆ (< ಕಹಳೆ)]

**ಕಿಱುಗಿಡಿ** (ನಾ). ಚಿಕ್ಕ ಕಿಡಿ; ಅಗ್ನಿಕಣ: ಸೋನೆಗಳಾಗಿ ಸುರಿವ ಕಿಱುಗಿಡಿಗಳ ತುಷಾರದಿಂದೆ ಧಗಧಗನೆ ಪೊತ್ತುವ ಜ್ವಾಲೆಗಳ ಮಾಲೆ . . . ಡಾವರಿಸೆ (ಜೈಮಿಭಾ. ೮-೩೦). [ಕಿಱು$_2$ + ಕಿಡಿ$_1$]

**ಕಿಱುಗಿರಿ** (ನಾ). ಚಿಕ್ಕಬೆಟ್ಟ; ಪರ್ವತದ ಬುಡದಲ್ಲಿರುವ ಗುಡ್ಡ: "ತಟಂ ನಿತಂಬಂ ಗಿರಿಯ ಹೊರೆಯುಳ್ಕುಂ ಕಿಱುಗಿರಿ ಪಾದಮಕ್ಕು" (ಮಂಗರಾ. ೩೦-೨). [ಕಿಱು$_2$ + ಗಿರಿ$_1$]

**ಕಿಱುಗುಂಡು** (ನಾ). ಚಿಕ್ಕ ಗುಂಡು; ಸಣ್ಣ ಗುಂಡನೆಯ ಕಲ್ಲು: ನೀಂ ಕಿಱುಗುಂಡನೆತ್ತುವಂತೆತ್ತಿದ ಬನ್ನಮಂ ಬಗೆಗೆ ತಂದು ಕುಬೇರಗಿರೀಂದ್ರಮೀಶರ್ಗೆ ಮಯ್ಯೊತ್ತಿರೆ ನಿರ್ಝರಚ್ಛಲದಿನೋಕುಳಿಯಾಡುವಿನಂ (ಪಂರಾಮಾ. ೧೪-೨೦೦). [ಕಿಱು$_2$ + ಗುಂಡು$_1$]

**ಕಿಱುಗುಂಬ** (ನಾ). ಸಣ್ಣಮಡಕೆ, —ಗಡಿಗೆ: ತೋಟಿಗೆಯ್ಮೆಯೊಳೆಱೆವ ಕಿಱುಗುಂಬದ ನೀರಿಂ ತುಂಬದಿರೆ . . . ಸೊಂಡಿಲೊಳ್ ಮೊಗೆಮೊಗೆದು ಸುಱಿವ ಸೊರ್ಕಾನೆಗಳಂ (ಚಿಕವಂ. ೧೦೪-೯). [ಕಿಱು$_2$ + ಕುಂಬ$_1$]

**ಕಿಱುಗುಣಿ**, ಕಿರುಕುಣಿ, ಕಿರುಗುಣ್ಣಿ, ಕಿಱುಕುಣಿ (ನಾ). ೧. ಸಣ್ಣ ಕುಣಿ, —ತಗ್ಗು; ಚಿಕ್ಕ ಗುಣಿ. ೨. ಒಳ ಅಂಗಿ: "ಶಾಟಕ, ಶಾಟ" (ನಾಚಿರಾ. ೬). **ಕಿರುಕುಣಿ**: ೧. ಆವಳ ಪಾಲಿಗೆ ತೊರೆಯ ಅಲ್ಲಲ್ಲಿನ ಶಾಂತವಾದ ಕಿರುಕುಣಿಗಳು ನೀಲ ಕನ್ನಡಿಗಳು (ಕುಡಿಕೂ. ೧೭೨). **ಕಿರುಗುಣ್ಣಿ$_2$**: ೩. ಸಮಾಧಿಯ ಅಥವಾ ಗೋರಿಯ ಒಳ ಬದಿಯಲ್ಲಿ ಶವವನ್ನಿಡಲು ಮಾಡಿದ ಕುಣಿ: (೬). **ಕಿಱುಕುಣಿ**: ೧. ಚೋಳಂಗೆ ಮಣ್ಣಂ ಪೊತ್ತು ಪೊತ್ತೊತ್ತಿದ ತಲೆಯ ಕಿಱುಕುಣಿಗಳಂದದಲಿ (ಬಸವು. ೩೮-೫೭). [ಕಿಱು$_2$ + ಕುಣಿ$_2$ (< ಕುೞಿ$_2$)]

**ಕಿಱುಗುಣಿಕೆ**, ಕಿಱುಕುಣಿಕೆ, ಕಿಱುಕುಣಿಕ್ಕೆ (ನಾ). ಕಿರುಬೆರಳು; ಸಣ್ಣ ಬೆರಳು: ಮುನಿಯರ್ ತಮ್ಮ ದಕ್ಷಿಣ ಹಸ್ತದೈದು ಬೆರಲುಮನೆಡದ ಕಿಱುಗುಣಿಕೆಯುಮಂ ತೋಱಿ ಪರಸಿ ಪೋಗೆ (ಚಾವುಂಪು. ೮೭-೧೨); ಇಂತೀ ಜನ ಮೆಚ್ಚಿ ನಡೆದವರ ಎಡದ ಪಾದದ ಕಿಱುಗುಣಿ[ಣಿಕೆ]ಯಲ್ಲಿ ಮನೆಮಾಡು (ವಚಶಾ. I, ೩೧೦); ಹುಸಿದೊಡೆ ಕಿಱುಗು[ಪಾಠಾಂ. ಕು]ಣಿಕೆ ಸುಡುಗು (ಸಿದ್ಧರಾ. ೭-೧೩); ಅಂಗಜನದೊಂದೆ ಕಿಱುಗುಣಿಕೆಯಿಂದೆ ಗೆಲ್ಲನೆ ಪತಿಯಂ (ಪುಷ್ಪಪು. ೩-೪೧). **ಕಿಱುಕುಣಿಕೆ**: ಮಣಿಬಂಧನದಿಂದಂ ಕಿಱುಕುಣಿಕೆವರಂ ಕರಭಮೆಂಬುದಕ್ಕುಂ (ವಸ್ತುಕೋ. ೩೮-೯); ಅಂತೊರ್ವರೊರ್ವರ ಕಿಱುಕುಣಿಕೆಗಳಂ ಪಿಡಿದು (ಪಂಪಭಾ. ೩-೭೫ ವ); ನಾಗೇಂದ್ರ ಘನವೆಂಬೆನೆ? ಪಾರ್ವತಿಯ ಕಿಱುಕುಣಿಕೆಯ ಮುದ್ರಿಕೆಯಾಯಿತ್ತು (ಬಸವ. ೮೭೬); ಕಿಱುಕುಣಿಕೆ ನೆಲ ಮುಟ್ಟಿದಾ ಮಹಿಳೆ ವಿಧವೆ (ವೀಶೈಪು. ೪-೨೭-೩೩). **ಕಿಱುಕುಣಿಕ್ಕೆ**: ಎನ್ನೆಡಗಯ್ಯ ಕಿಱುಕುಣಿಕ್ಕೆಯ ಮುಡಿಯೊತ್ತಿರೆ ನೋಳ್ಪಮೆಂದು (ಬಂಹರಿ. ೧೩-೧೯). [ಕಿಱು$_2$ + ಕುಣಿಕ್ಕೆ$_3$]

**ಕಿಱುಗುಳ್ಳೆ**, ಕಿರುಗುಳ್ಳ (ನಾ). ಗುಳ್ಳದಲ್ಲಿ ಒಂದು ಬಗೆ; ಸಣ್ಣ ಗುಳ್ಳ: "ಕಾಲಕಂಡಂ – ಕಿಱುಗುಳ್ಳ" (ಓಪಧಿ. ೩೧); ಕಿಱುಗುಳ್ಳದೊಳುಳ್ಳ ಬೀಜಮಂ ಸಮಂತರ್ಕ ಸುಭೂಜದುಗ್ಧದೊಳೆ ಭಾವಿಸಿ (ಖಮುದ. ೭-೨೩); "ಬೃಹತೀದ್ವಯಂ – ಹೆಗ್ಗುಳ್ಳ, ಕಿಱುಗುಳ್ಳ" (ಬಾಹಟೀ. ೨-೨-೬೦ವ). **ಕಿರುಗುಳ್ಳ**: ಕಿರುಗುಳ್ಳದ ಬೇರು . . . ಕಷಾಯವಿಟ್ಟು ಅಷ್ಟಾವಶೇಷವಾಗಿ ಕಾಯಿಸಿ (ಸಕವೈ. ೬೪). [< ಕಿಱಿದು + ಗುಳ್ಳ]

**ಕಿಱುಗೂಡಲ್** (ನಾ). ಒಂದು ಸ್ಥಳದ ಹೆಸರು (?): ಪೂರ ವಿಕ್ರಮ ಚೋಳಗಾವುಣ್ಡನುಂ ಕಿಱುಕೂಡಲ್ ಚಾಳುಕ್ಯಾಭರಣ ಗಾವುಣ್ಡನುಂ . . . ಮುಮ್ಮಡಿ ಚೋಳಗಾವುಣ್ಡನುಂ ಸಾಕ್ಷಿ (ಎಕ. IX, ನೆಲಮಂ. ೧-೧೫; 1029). [?]

**ಕಿಱುಗೂಸು** (ನಾ). ೧. ಸಣ್ಣ ಮಗು; ಚಿಕ್ಕ ಮಗು; ಹಸುಗೂಸು: ಒಂದು ಕಿಱುಗೂಸು ಕೋಲಂ ಪಿಡಿದು ನಿಮ್ಮಂ ಬಡಿಯಲ್ಕೆಂದು ಬಂದೊಡೆ (ವಡ್ಡಾರಾ. ೧೦೦-೮); ಕಿಱುಗೂಸುಗಳಂ ನುಡಿಗಲಿಸಿದಂ (ಪಂರಾಮಾ. ೧-೭೯). ಕಿಱುಗೂಸೆಣಿಪಂತೆ ತೊಳಪ ತಾರಾಗಣಮಂ (ಕುಸುಮಾ. ೧-೯); ತನ್ನ ವಂಶಮುರ್ವಿಗೆ ನಿಲಲೆಂದು ತಂದು ಕಿಱುಗೂಸುಗಳಂ . . . ಕೈಯೆಡೆಯೊಳೀವವೊಲ್ (ಉದ್ಭಟ. ೮-೩೦). ೨. ಚಿಕ್ಕಹುಡುಗಿ, —ಬಾಲಿಕೆ: ಭೋಗತೃಷ್ಣೆಯನುಳಿದ ಕಿಱುಗೂಸುಗಳುಂ (ಪಸಾರ. ೪೩೧-೧೨). [ಕಿಱು$_2$ + ಕೂಸು]

**ಕಿಱುಗೂಸುತನ** (ನಾ). ೧. ಚಿಕ್ಕಂದು; ಬಾಲ್ಯ: (೬). ೨. ಮಕ್ಕಳಾಟಿಕೆ; ಹುಡುಗತನ: ಕಿಱುಗೂಸುತನದೊಳಾಜಿಯನಱಿಯಮೆಯುಂದಾನೊಡರ್ಚಿದಂ ಕ್ಷಮಿಯಿಪುದೆಂದಜಗಿದನಣುವಂ (ಪಂರಾಮಾ. ೧೧-೫೪). [ಕಿಱುಗೂಸು + -ತನ]

**ಕಿಱುಗೂಳಿ** (ನಾ). ಮೀನು ಹಿಡಿಯುವ ಸಣ್ಣ ಬುಟ್ಟಿ: ಕೆಯ್ಪೊಡೆ ಗಾಳಂ ಕಿಱುಗೂಳಿ ಬೀಸುವಲೆ ಬೆಳ್ಪಾರಂ (ಶಬಶಂ. ೩-೨೩). [ಕಿಱು$_2$ + ಕೂಳಿ]

**ಕಿಱುಗೆ** 'ಕಿಱಿಗೆ$_1$' ನೋ.

**ಕಿಱುಗೆಜ್ಜೆ**, ಕಿರುಗೆಜ್ಜೆ (ನಾ). ಸಣ್ಣ ಗೆಜ್ಜೆ; ಕಿಂಕಿಣಿ: "ಕಿಂಕಿಣೀ, ಕ್ಷುದ್ರಘಂಟಿಕಾ –ಈ ೨ ಕಿಱುಗೆಜ್ಜೆ" (ನಾಚಿರಾ. ೧೨೩); ಅಡ್ಡಣದೊಳೆಡ್ಡಮಾಗೆ ಕೀಲಿಸಿದ ಕಿಱುಗೆಜ್ಜೆಯ ದನಿಗಳೊಳಂ (ಕಬ್ಬಿಕಾ. ೪೪); ಜಡಿವ ಕಿಱುಗೆಜ್ಜೆಗಳ ಬಿಗುಹಿನಲುಡೆಯ ಬದ್ದುಗೆದಾರ (ಕುವ್ಯಾಕ. ೭-೧೨); ಪಜ್ಜಳಿಸುವ ಮೇಖಲೆಯಂದುಗೆ ಕಿಱುಗೆಜ್ಜೆಯ . . . ಸಿಂಗರ ಮೊಪ್ಪಿದುವಾ ಬಾಲಕಿಗೆ (ಜಯಕಾ. ೫-೨೧). **ಕಿರುಗೆಜ್ಜೆ**: "ಕ್ಷುದ್ರಘಂಟಿಕಾ – ಕಿಱುಗೆಜ್ಜೆ" (ಕಾಶಕ್ಯ. ೨೮೦); ಕೋಳಿಯ ಕಾಲಿಗೆ ಕಿರುಗೆಜ್ಜೆ ಯೇಕೆ (ಇಂಚಾಪ. ೯೫-೬). 'ಕಿಱಿಗೆಜ್ಜೆ' ಪರಾ. [ಕಿಱು$_2$ + ಗೆಜ್ಜೆ$_1$]

**ಕಿಱುಗೆಮ್ಮು** (ನಾ). ಸಣ್ಣ ಕೆಮ್ಮು; ಒಣಗೆಮ್ಮು; ಹುಡಿಗೆಮ್ಮು: ಕಿಱುಗೆಮ್ಮು ಪುಟ್ಟುವಡೆ ಪುಟ್ಟುಗುದಾತ್ತಬಲಕ್ಷಯಂ ಕ್ಷಯಂ (ಕಲ್ಯಾಕಾ. ೬-೧). [ಕಿಱು$_2$ + ಕೆಮ್ಮು$_2$]

**ಕಿಱುಗೆಯ್ಮೆ**, ಕಿರುಗೆಯ್ಮೆ (ನಾ). ೧. ಸಣ್ಣ ಕೆಲಸ. ೨. ಕೀಳುಕೆಲಸ: ಜಾಣರ್ಕೆ ಜನದೊಳೆಲ್ಲಂ ಕೇಣಂ ಕೆಲಸಕ್ಕೆ ಮಿಕ್ಕ ಕಿಱುಗೆಯ್ಮೆಗಳೊಳ್ ನಾಣಕ್ಕೆ ಕಳರ ಮೊಗಮಂ ಕಾಣದೆ ಜಗಮನಿತುಮಿರ್ಕೆ ಕಡುಸಂತಸದೊಳ್ (ಚಿಕವಿ. ೧-೯೭). **ಕಿರುಗೆಯ್ಮೆ**: ೧. ಸೇನೆಯನೆನಗೆತೋರ್ದು . . . ಬರಿದೆ ದಣಿಯದಿರ್ ಮೀಸಲಾಗಿರ್ಪುದಾ ಕಿರುಗೆಯ್ಮೆ ನನ್ನಿಂದ ಮೆನ್ನ ಕಿಂಕರರಿಗೆ (ಶ್ರೀರಾಮಾ. ೬೦೭-೧೭೮). [ಕಿಱು$_2$ + ಕೆಯ್ಮೆ]

**ಕಿಱುಗೆಱೆ**, ಕಿಱುಕೆಱೆ (ನಾ). ಸಣ್ಣ ಕೆರೆ; ಚಿಕ್ಕಕೆರೆ: ಸುರಗಿಯ ಮಹತ್ವವನೊಣಮೊರಡಿ ಸಮುದ್ರದ ಭಾಸುರತೆಯುನಡವಿಯ ಕಿಱುಗೆಱೆ . . . ಭರದಿಂ ಪಡೆಯಲ್ಪಯಸುವವೋಲ್ (ವೀರೇಚ. ೧-೩೪).

**ಕಿಱುಕೆಱೆ**: ಅನ್ತೆ ಬಳಿ ಪುಣುಶೆಯ ಅಳರಿಯ ಕಿಱುಕೆಱೆಯೆ ಅನ್ತೆ ಪೋಗಿ (ಎಕ. XVI, ಶಿಪಟೂ. ೧೪೭–೬೯ ; 900) ; ಹಿರಿಯ ಪಿರಿಯ ಕಱೆಗಂ ತತ್ಸೀಮಾನ್ತರದೊಳುಳ್ಳ ಕಿಱುಕೆಱೆಗಳ್ಗಂ (ಎಕ. IX, ಚನ್ನಪ. ೪೮–೧೦ ; 907) ; ಮಳೆಹಳ್ಳಿಯ ಮುಂದಣ ಕಿಱುಕೆಱೆಯುಂ (ಮೈಆರಿ. ೧೯೪೦, ೩೩–೩೧ ; 1100). [ಕಿಱು$_2$ + ಕೆಱೆ]

**ಕಿಱುಗೇಕು** (ನಾ). ಒಂದು ಬಗೆಯ ಹುಲ್ಲು ; ಸಣ್ಣ ಗೇಕಿನಗೆಡ್ಡೆಯ ಹುಲ್ಲು : "ವ್ಯಕಾಲೇಷ್ವಃ – ಕಿಱುಗೇಕು (ರು)" (ಓಷಧಿ. ೧೨೮). [ಕಿಱು$_2$ + ಗೇಕು]

**ಕಿಱುಗೇಣ್** (ನಾ). ಚಿಕ್ಕಕತ್ತಿ ; ಕಿರುಗತ್ತಿ : ಮದನನ ಕಟ್ಟಿದ ಕಿಱುಗೇಣಿದು (ಪುಷ್ಪಪು. ೩–೩೬) ; ಸಚ್ಚರಿತಮ ಬೋಳೆಯಂಬು ಕಿಱುಗೇಣ್ ಶ್ರವಣಂ ಮನನಂ ಕರಾಸಿ (ಶಬಶಂ. ೩–೨೬). [ಕಿಱು$_2$ + ಗೇಣ್$_2$]

**ಕಿಱುಗೈ**, ಕಿರುಗೈ, ಕಿರ್ಗಯ್ (ನಾ). ಪುಟ್ಟಕೈ ; ಸಣ್ಣಕೈ : ಪಾವಸೆಯಂ ಪೆಱನೂಂಕುವ ಪೊಸಕೆಂದಾವರೆಯೆನೆ ಕಿಱುಗೈಯಿಂ ಮೇಲುದನೋವದೆ ನೂಂಕಿ (ಜಯಕಾ. ೨–೩೭). **ಕಿರುಗೈ**: ತನ್ನ ಬಿಳಿಯ ಕಿರುಗೈಗಳನ್ನು ಮಡಿಸಿಕೊಂಡು (ಪುನರು. ೪೧). **ಕಿರ್ಗಯ್**. 'ಕಿರ್ಗಯ್ಯಾಗು' ಪರಾ. [ಕಿಱು$_2$ + ಕೈ$_2$ (< ಕೆಯ್$_2$)]

**ಕಿಱುಗೊಂಕು** (ನಾ). ನಸು ಕೊಂಕು ; ಸಣ್ಣಡೊಂಕು : ತಳ್ತ ಕಾರ್ಮುಗಿಲ್ಗಳ ಕಿಱುಗೊಂಕುಗೊಂಕಿದ ಪೊನಲ್ಗಳ (ಪಂಪಭಾ. ೭–೨೫); ಸರೋಜವನದಿಂ ಶಾಳಿವನಕ್ಕೆ ಪರಿವ ಪರಿಕಾಲ್ಗಳಂ ನೆರೆದು ಮುರಿದು ಕಿಱುಗೊಂಕು ಕೊಂಕಿ ಪೊನಲ್ಪೊನಲನಟ್ಟಿ ಪರಿವ ಬಳ್ಳಿವೊನಲ್ಗಳ್ (ಸುಕುಮಾ. ೧೦–೫೭ ವ). [ಕಿಱು$_2$ + ಕೊಂಕು$_1$]

**ಕಿಱುಗೊಂಬು**, ಕಿರ್ಗೊಂಬು (ನಾ). ಸಣ್ಣರೆಂಬೆ ; ಚಿಕ್ಕ ಕೊಂಬೆ : ಅರ್ಚಿಸಿದ ಭೂತಲದೊಳ್ ಪಾಲ್ಮರದ ಕಿಱುಗೊಂಬುಗಳನಿಕ್ಕಿ (ಚಾವುಂಪು. ೯೦) ; ಪೆರ್ಗೊಂಬುಗಳಿಂದಂ ಕಿಱುಗೊಂಬುಗಳಿಂದಂ ಆಲದ ಮರನೆಂತೊಪ್ಪುಗುಂ (ಧರ್ಮಾಮೃ. ೧೩–೫) ; ಮಿನುಗುವ ಕೊಂಬಿನಚ್ಚು ಕಿಱುಗೊಂಬಿನ ತಳ್ತರಗೀಲ್ . . . ಕಣ್ಗೆ ಚೆಲ್ವೆನೆ ನಡೆತಂದು ವಂದಸುಗೆ ಯೆಂಬ ನೆಗಟ್ಟೆಯ ತೇರ್ಗಳೆತ್ತಲುಂ (ಕಬ್ಬಿಕಾ. ೨೧೩). **ಕಿರ್ಗೊಂಬು** : ಕಿರ್ಗೊಂಬು ಕೊರ್ದಾಡೆ ಷಟ್ಪದಝುಂಕಾರಮುದಗ್ರ ಡಿಂಡಿಮ ರವಂ ತಾನಾಗೆ (ಕುಸುಮಾ. ೨–೬೨). [ಕಿಱು$_2$ + ಕೊಂಬು$_2$]

**ಕಿಱುಗೊನರ್** (ನಾ). ಚಿಕ್ಕ ಚಿಗುರು ; ಸಣ್ಣ ಕೊನರು : ಸುಕ್ಕೊನರ್ ಕಿಱುಗೊನರ್ ನಸುಬಲ್ಗೊನರೆಂಬಿವೇೞ್ಗೆವೆತ್ತು (ಜಗವಿ. ೧೪–೨೬). [ಕಿಱು$_2$ + ಕೊನರ್$_2$]

**ಕಿಱುಗೊಲ್ಲಿ** (ನಾ). ಒಂದು ಪ್ರದೇಶದ ಹೆಸರು (?) : ತೆಙ್ಕ ಮೈಯುರಸಿ ಕಿಱುಗೊಲ್ಲಿಯುಳ್ ಪೊಕ್ಕು (ಮೈಆರಿ. ೧೯೨೧, ೧೦–೧೮೨ ; 967). [ಕಿಱು$_2$ + ಕೊಲ್ಲಿ]

**ಕಿಱುಗೊಳಗು** (ನಾ). ಚಿಕ್ಕ ಕೊಳಗು ; ಸಣ್ಣಗೊರಸು : ಹೊಳೆ ಹೊಳೆವ ಕಿಱುಗೊಳಗುಗಳ ಥಳಥಳಿಪ ವದನದ ತರಳ ನಯನದ . . . ಹೊಸಜವ್ವನದ ಹೊಮ್ಮಱಿ ಹೊಳಕಿತಿದಿರಿನಲಿ (ತೊರರಾ. ೩–೮–೧೫). [ಕಿಱು$_2$ + ಕೊಳಗು]

**ಕಿಱುಗೋಣಿ**, ಕಿರಿಗೋಳಿ, ಕಿರುಗೋಣಿ, ಕಿರುಗೋಳಿ (ನಾ). ಗೋಣಿಮರದಲ್ಲಿ ಒಂದು ಬಗೆ : "ತುಷಪರ್ಣಿ ಕಿಱುಗೋಣಿ" (ಮಂಗರಾ. ೪೫–೪೭) ; ಕುಡು ಚೊಕ್ಕಣಿಕೆಯ ಕೂಡಮೃತಲತೆಯನಲ್ಲ ದೊಡಂತಾಕ್ಷಣದೊಳ್ ಕಿಱುಗೋ(ಳಿ)ಣಿಯುಮಂ ಪ್ರಣುತಯಶಂ ಕೊಡುವುದುಪವಿಷಂ (ಖಮದ. ೨–೪೯). **ಕಿರಿಗೋಳಿ** : ಪೀಲಾಲದ ಮರ, ಕಿರಿಗೋಳಿ, ಜೀವಿ, ಪಿನಪಾಲ (ವೈಔನಿ. ೩೬–೬೨೪).

**ಕಿರುಗೋಣಿ**: ಕಿರುಗೋಣಿಸೊಪ್ಪಿನ ರಸದಲ್ಲಿ ಕಡಲೆಯ ನೆನೆಯಿಕ್ಕಿ ಅರೆದು ಗುಳಿಗೆಮಾಡಿ (ಸಕವೈ. ೨೬೦). **ಕಿರುಗೋಳಿ** : ಮೈ ಬಾತರೆ ಕಿರುಗೋಳಿಯ ಸೊಪ್ಪಂ ಬಿಸಿಮಾಡಿ ಕಟ್ಟುವುದು (ವಿವೈವಿ. ೧೨೮). [ಕಿಱು$_2$ + ಗೋಳಿ$_2$]

**ಕಿಱುಚೇಣ** (ನಾ). ಚಿಕ್ಕ ಚಾಣ ; ಸಣ್ಣ ಉಳಿ : ಕಿಱುಕಿಱಿದಾಗಿ ಖಂಡಿಸಿ ಕರ್ಮ ಕೆಡೆ ಮನೆ ತೆಱಪಹುದಾತ್ಮಗಾತ್ಮನೊಳು ಕಿಱುಚೇಣ ದಿಂದೊಬ್ಬ ಮೆಲ್ಲಮೆಲ್ಲನೆ ಕಲ್ಲ ತಱಿದಲ್ಲಿ ಮನೆಮಾಡುವಂತೆ (ಭರಚ. ೧೮–೪೭). [ಕಿಱು$_2$ + ಚೇಣ]

**ಕಿಱುಜಡೆ** (ನಾ). ಚಿಕ್ಕ ಜಡೆ ; ಸಣ್ಣ ಜಡೆ : ಸಂಗಡಿಸಿದ ಕಿಱುಜಡೆಗಳ ತೊಂಗಲ್ಗಳಿನೊಪ್ಪೆ ಜಾನುಚಂಕ್ರಮಣಂ ಹರ್ಮ್ಯಾಂಗಣದೊಳೆಂದು ಸಳೆಗುಮೊ . . . ಕುಮಾರಂ (ಕಾದಂಪೂ. ೩೫೭) ; ಕಿಱುಜಡೆಯ ಮಡ ವಿಡಿದ ತುಱುಬಿನೊಳ್ತಳ್ತ ಬಾಂದೊಱೆಯನಳವಡಿಸಿ (ನಂದಿಮಾ. ೨೧–೫೭); ಅಲೋಲಮಾದ ಕಿಱುಜಡೆಗಳಿಂ . . . ಬಾಲಕಂ ನೋಳ್ಪ ಸಭೆಯಂ ವಿಸ್ಮಯಾರ್ಣವದೊಳದ್ದಿದಂ (ಚಬಪು. ೪–೨೮). [ಕಿಱು$_2$ + ಜಡೆ]

**ಕಿಱುಜವೆ** (ನಾ). ಸಣ್ಣ ಜವೆಗೋಧಿ : "ಯುವ್ಯ, ಷ್ವಕ್ಯ – ಜವೆ, ಕಿಱುಜವೆ ಅಱುವತ್ತು ದಿನಕ್ಕೆ ಬೆಳೆದು ಬಹ . . . ಭೂಮಿ" (ನಾಚಿರಾ. ೬). [ಕಿಱು$_2$ + ಜವೆ$_2$]

**ಕಿಱುಜವ್ವನ** (ನಾ). ಎಳೆಯ ಪ್ರಾಯ ; ಚಿಕ್ಕಹರಯ. 'ಕಿಱುಜವ್ವನಿಗ' ಪರಾ. [ಕಿಱು$_2$ + ಜವ್ವನ]

**ಕಿಱುಜವ್ವನಿಗ** (ನಾ). ಎಳೆಯ ಪ್ರಾಯದವನು ; ಚಿಕ್ಕ ಹರಯ ದವನು : ನೋಟ್ಟುದು ಬಟ್ಟೆವಿಡಿದಯ್ತಪಾರ್ ಕಿಱುಜವ್ವನಿಗರಂ (ಅದ್ಭುತ. ೩೫–೧೫). [ಕಿಱುಜವ್ವನ + –ಇಗ]

**ಕಿಱುಜೋಡೆ** (ನಾ). ಎಳೆಯ ಪ್ರಾಯದ ಜಾರೆ, —ಮಿಂಡೆ : ನಸುನಾಂಟಿದ ತನ್ನಖಾಂಕಮಂ ತನುರುಹದೇೞ್ಗೆಯಿಂದೆಳಸಿ ನೋಡುತದೇಂ ಕಿಱುಜೋಡೆ ಪೋದಳೋ (ಲೀಲಾವ. ೩–೧೬). [ಕಿಱು$_2$ + ಜೋಡೆ]

**ಕಿಱುಡೊಳ್ಳು**, ಕಿರುಡೊಳ್ಳು (ನಾ). ೧. ಸಣ್ಣಹೊಟ್ಟೆ ; ಕಿರು ಹೊಟ್ಟೆ : ಛಂದವೆನಿಪ ತ್ರಿವಳಿಗಳ ಕಿಱುಡೋಳು[ಡೊಳ್ಳು] ಚೆಲುವಿಕೆಯ . . . ದೇವಕೀಸುತ ಸೆಳೆದ ಕಣ್ಮನವ (ನಿಭಾಗ. ೧೧–೧೧–೮). **ಕಿರುಡೊಳ್ಳು** : ೨. ಹೊಟ್ಟೆಯ ಕೆಳಭಾಗ ; ಅಡಿಹೊಟ್ಟೆ : ಕಿರುಡೊಳ್ಳಿಗೆ ಉರಗನ ಸುತ್ತಿದಾತನೆ ಮೆರೆವ ಪಾಶಾಂಕುಶಧರನೆ (ಕರ್ಣಾಕ. ೨೭೬). [ಕಿಱು$_2$ + ಡೊಳ್ಳು]

**ಕಿಱುತೆರೆ** 'ಕಿಱುದೆರೆ' ನೋ.

**ಕಿಱುತೇಗು** 'ಕಿಱುದೇಗು' ನೋ.

**ಕಿಱುದಂಗಿ** 'ಕಿಱುದಂಗೆ' ನೋ.

**ಕಿಱುದಂಗೆ**, ಕಿಱುದಂಗಿ (ನಾ). ಚಿಕ್ಕ ತಂಗಿ ; ತಂಗಿಯರಲ್ಲಿ ಕೊನೆ ಯವಳು : "ಕಿಱುದಂಗೆಯೆಂದು ಒಡಹುಟ್ಟಿದಳ್" (ಕಶಸಾ. ೧೯–೩೮೩) ; ಕಾಯ್ಪಿನೊಳೆಕ್ಕೆಗುಟ್ಟುವಕ್ಕನ ಪಡಪೆತ್ತಿ ಬಯ್ವ ಕಿಱು ದಂಗೆಯ ಕಣ್ಬೊಳೆ ಕೀಱಿ ಕಲ್ಪಿಪಣ್ಣನ ಬಿಯಕಿಲ್ಲದವ್ವಳಿಪ ತಮ್ಮನ (ಶಾಂತಿಪು. ೮–೧೦೫). **ಕಿಱುದಂಗಿ** : "ಕಿಱುದಂಗಿಯೆಂದು ತಾನೊಡ ಹುಟ್ಟಿದಳ್ಗೆ ನಾಮಂ" (ಕಬ್ಬಿಕೈ. ೭೦). [ಕಿಱು$_2$ + ತಂಗೆ]

**ಕಿಱುದಳಿರ್** (ನಾ). = ಕಿಱುಗೊನರ್ : ಕಿಱುದಳಿರಂ ಗೆಲ್ವಧರದ ಚಿಕ್ಕೆರಲೆಯ ಸೋಲಿಪ ನಗೆಗಣ್ಣ (ಜಯಕಾ. ೩–೨೨) ; ಪಚ್ಚೆಗುಪ್ಪಸಂ ಕಿಱುದಳಿರಾಂತ ಚಲ್ಲಣಮದೇಂ ಬಗೆಗೊಂಡುದೊ ತತ್ಕಿರಾತರಾ (ಶಬಶಂ. ೩–೨೭). [ಕಿಱು$_2$ + ತಳಿರ್$_2$]

**ಕಿಱುದಾಡೆ** (ನಾ). ಸಣ್ಣ ಕೋರೆಹಲ್ಲು; ಚಿಕ್ಕದಾಡೆ: ಹೊಳೆಹೊಳೆವ ಕಿಱುವಾಡೆಗಳ ಥಳಥಳಿಪ ಕದಪಿನ . . . ದಾನವಸತಿಯರಿರ್ದ್ದರದೊಂದು ತಾಣದಲಿ (ತೊರರಾ. ೫-೨-೬೯). [ಕಿಱು$_{2}$ + ದಾಡೆ (< ದವಡೆ)]

**ಕಿಱುದಾರ** (ನಾ). ಚಿಕ್ಕದಾರ; ಸಣ್ಣಎಳೆ: ಇರುಹುಱಿಯ ಕಿಱುದಾರವಂ ಬಿಗಿದರಳ ಸರವಂ ಕಟ್ಟುವಂ (ಬಸಪು. ೪೭-೩೦). [ಕಿಱು$_{2}$ + ದಾರ$_{1}$]

**ಕಿಱುದಾಲಿ** (ನಾ). ಚಿಕ್ಕತಾಲಿ, —ಪದಕ: ಕದಂಪುಗಳೊಳಿಟ್ಟ ಕಾಡಿಗೆಯ ಬಟ್ಟಂ ಕೊರಲೊಳ್ ಕಟ್ಟಿದ . . . ಕಿಱುದಾಲಿಯುಂ (ಚಿಕವಂ. ೧೫೩-೨೧). [ಕಿಱು$_{2}$ + ತಾಲಿ$_{1}$]

**ಕಿಱುದಾೞ್**, ಕಿರುತಾಳೆ (ನಾ). ಒಂದು ಬಗೆಯ ತಾಳೆಮರ: "ತಾಲಿ" (ನಾಚಿರಾ. ೯). **ಕಿರುತಾಳೆ**: "ಹಿಂತಾಲಸಹಿತಾಃ – ಕಿರು ತಾಳೆಗಿಡದೊಂದಿಗೆ ಸೇರಿದ" (ಸಿದ್ಧಾಂತಿ. ೧೩೩). [ಕಿಱು$_{2}$ + ತಾೞ್$_{3}$]

**ಕಿಱುದಿನ** (ನಾ). ಕೆಲವು ದಿನ; ಕೆಲಕಾಲ: ಇಂತು ಕಿಱುದಿನವು ಸವೆಯೆ (ಬಸಪು. ೨೭-೨೧). [ಕಿಱು$_{2}$ + ದಿನ]

**ಕಿಱುದಿವಸ** (ನಾ). = ಕಿಱುದಿನ: ಕಿಱುದಿವಸದೊಳು ಒಡಲೊಳ್ ಶಿಶುವುದಯಿಸಿ ಬಳೆಯುತ್ತಿರಲ್ (ಜಯುಕಾ. ೨-೩೦). [ಕಿಱು$_{2}$ + ದಿವಸ]

**ಕಿಱುದುಂಬಿ** (ನಾ). ಚಿಕ್ಕದುಂಬಿ; ಮರಿದುಂಬಿ: ಮನಸಿಜ ನೆಂಬಂಕದ ಬಿಲ್ಗಾಱಂ . . . ತನ್ನಿನಿವಿಲ್ಲಂ ಕಿಱುದುಂಬಿಯ ತಿರುವಂ ಚೆಂದಳಿರ್ಗೈಪೊಡೆಯುಂ ನನೆಯ ಶರಂಗಳನಿರಿಸಿದ ಕಾಂಚನವನರುಹ ವಿಷ್ಟರಮೆನೆ (ಜಯುಕಾ. ೩-೪೦). [ಕಿಱು$_{2}$ + ತುಂಬಿ$_{1}$]

**ಕಿಱುದುಪ್ಪುಳು** 'ಕಿಱುದುಪ್ಪುೞ್' ನೋ.

**ಕಿಱುದುಪ್ಪುಳುವಾಸು** (ನಾ). ಮೃದುವಾದ ತುಪ್ಪುಳಿಂದ ಮಾಡಿದ ಹಾಸುಗೆ: ಅರಸಂಚೆಯ ಕಿಱುದುಪ್ಪುಳುವಾಸಂ ಹರಿಸದಿನೇಱಿದಳ್ (ಜಯುಕಾ. ೨-೫೨). [ಕಿಱುದುಪ್ಪುಳು (< ಕಿಱುದುಪ್ಪುೞ್) + ಪಾಸು$_{2}$]

**ಕಿಱುದುಪ್ಪುೞ್**, ಕಿಱುದುಪ್ಪುಳು (ನಾ). ಚಿಕ್ಕತುಪ್ಪುಳು; ಮೃದುವಾದ ತುಪ್ಪಟ: ಕಂಠೋಪಕಂಠದೊಳ್ಳಿಂದ ಮಱಿಯ ಕೊರಲ ಕಿಱುದುಪ್ಪುೞಿಂ ಚಂಚುಮುಖದಿನಣ್ಕೆಗೆಯ್ದು (ಮಲ್ಲಿಪು. ೩-೧೦೫ ವ). **ಕಿಱುದುಪ್ಪುಳು**. 'ಕಿಱುದುಪ್ಪುಳುವಾಸು' ಪರಾ. [ಕಿಱು$_{2}$ + ತುಪ್ಪುೞ್]

**ಕಿಱುದುಱುಚಿ** (ನಾ). ತುರುಚಿ ಗಿಡದಲ್ಲಿ ಒಂದು ಜಾತಿ: (೯). [ಕಿಱು$_{2}$ + ತುಱುಚಿ (< ತುಱುಚೆ)]

**ಕಿಱುದೂಳು** (ನಾ). ಸಣ್ಣದೂಳು; ಕಣಕಣವಾದ ದೂಳು: ಸರಿಯೆಂಬ ಬಿಸುಪೆಂಬ ಗುಣಗಳೆರಡಾ ಕಿಱುದೂಳಿಗುಂಟಾದ ದೂಳು (ಭರಚ. ೭೮-೫೨). [ಕಿಱು$_{2}$ + ದೂಳು]

**ಕಿಱುದೆಂಗು**, ಕಿರುದೆಂಗು (ನಾ). ಒಂದು ಬಗೆಯ ಮೂಲಿಕೆ (?): "ಪರ್ಣಃ – ಮುತ್ತುಗ, ಕಿಱುದೆಂಗು" (ಓಷಧಿ. ೯೦); ವರ ಮಂಜಿಷ್ಟಿಗೆ . . . ವ್ಯೋಷವಿಳಂಗ ಹಿಂಗು ಕಿಱುದೆಂಗೆ [ಪಾಠಾಂ. ದೇನೆ]ಂಬಂತಿವಂ ಕೂಡಿ ಸರಿಗೊಂಡಾಜ್ಯದೊಳೀಯೆ (ಖವುದ. ೯-೬). **ಕಿರುದೆಂಗು**: ಕಿರುದೆಂಗು, ನೆಲಬೇವು, ಬೇವು, ಭದ್ರಮುಸ್ತೆ . . . ಖಚೋರ ಇವಂ ಸಮಾನಂಗೊಂಡು (ಸಕವೈ. ೧೭೬). [< ಕಿಱುದೇಗು]

**ಕಿಱುದೆರೆ**, ಕಿರುದೆರೆ, ಕಿಱುತೆರೆ (ನಾ). ಸಣ್ಣ ಅಲೆ; ಚಿಕ್ಕ ತರಂಗ: ಕಾಳಿಂದಿಯಕಿಱುದೆರೆಯೋಳಿಯೊಳೆಡೆವರಿವಮೀನ್ಗಳೆನೆ (ಉದ್ಭಟ ೨-೧೮); ಹೊಗರ ಹೊರಳಿಯ ಕಿಱುದೆರೆಯ ನೂಕುಗಳ ತಳಿತ ತುಷಾರಭಾರದ ಸೊಗಸ ಸೇರಿಸಿ ಮಂದಮಾರುತನಪ್ಪಿದನು ಮಗನ (ಕುವ್ಯಾಅ. ೧೦-೪೪); ತಿವಳಿಗಳ ಕಿಱುದೆರೆಯ ಕಂಧರದ ಕಂಬುವಿನ . . . ಬಗೆಯಭೇದಮಂ ಕುಱುಪಿಡುವೊಡರಿದೆನಲ್ (ಜೈಮಿಭಾ. ೩೦-೬); ಮಂದವಾಯುವಿನಲೆಗೇಳುವ ಕಿಱುದೆರೆಯಿಂದೊಪ್ಪಿದುವು ಸರಸಿಗಳು (ಕಂನವಿ. ೫-೧೦೧). **ಕಿರುದೆರೆ**: ಎಲೆ ಮೇಲುರುಳುತ ಮುತ್ತಿನ ಕಂಠಿಯ ಕಮಲಕೆ ಕಿರುದೆರೆ ಹಾಕಿತ್ತು (ಭಾವಗೀ. ೩೪). **ಕಿಱುತೆರೆ**: ಅಲಗ ಝಳಪಿಪಂತೆ ಸೂರ್ಯನ ಕಿರಣವು ಸಲೆ ಕಿಱುತೆರೆಯ ಮಧ್ಯದಲಿ ಹೊಳೆದಾಡುತಿಹುದು (ಕಂನವಿ. ೫-೪೮). [ಕಿಱು$_{2}$ + ತೆರೆ$_{2}$]

**ಕಿಱುದೆಱೆ**, ಕಿರುದೆಱೆ (ನಾ). ಸಣ್ಣತೆರಿಗೆ; ಚಿಲ್ಲರೆ ತೆರಿಗೆ: ಪನ್ನೆರಾಟ್ಟು ಕಿಱುದೆಱೆಯುಮೈದು ಪಳ್ಳಾಳ್ಗಾಪನ್ಧರು × × (ಎಕ. XII, ಸಿರಾ. ೧೨೩-೯; 788); ಸ್ಥಾನದ ಪನ್ನೆರಡು ಕಿಱುದೆಱೆಯಂ ಬಿಟ್ಟರ್ (ಎಕ. X, ಮುಳಬಾ. ೫೧-೧; 950); ತೆಱೆಯುಂ ಕಿಱುದೆಱೆಯುಂ ಪೊಲೆತೆಱೆಯುಂ ಮಾನ್ಯಕ್ಕೆ ಬಂದ ತೆಱೆಯುಂ ದೇವರ್ತೆಱವೇಳ್ಕುಂ (ಕೊಲ್ಹಾಶಾ. ೩-೪೬; 1079). **ಕಿರುದೆಱೆ**: ಸಿದ್ಧಾಯಂ ಕಿರುದೆಱೆಕ್ಕಿಱುಕುಳಂ ದಾಯ ದ್ರಮ್ಮ ಮನೆವಣ ದಣ್ಡಾಯಂ (ಕಇ. I, ೧೭-೩೪; 1055). [ಕಿಱು$_{2}$ + ತೆಱೆ$_{2}$]

**ಕಿಱುದೇಗ** 'ಕಿಱುದೇಗು' ನೋ.

**ಕಿಱುದೇಗು**, ಕಿರುದೇಂಗು, ಕಿರುದೇಗು, ಕಿಱುತೇಗು, ಕಿಱುದೇಗ (ನಾ). ಒಂದು ಬಗೆಯಮರ; ಭಾರಂಗಿ: "ಸ್ವಸು ಬ್ಯಗುಜೀ ಕಾಸಪ್ನಿ ಕಿಱುದೇ [ಪಾಠಾಂ. ದೇಂ]ಗೆನಿಕ್ಕುಂ" (ಮಂಗರಾ. ೪೨-೩೮); "ಭಾರಜ್ಗೀ –ಕಿಱುದೇಗು" (ಓಷಧಿ. ೧೧೧); ಶುಂಠಿ ಕಿಱುದೇಗುಮೆಂಬಂತಿವಂ ಪ್ರಯೋಗಿಸುಗೆ (ಲೋಕೋಪ. ೯-೨೨೬). **ಕಿರುದೇಂಗು**: ಮೇಲಿನ ಮಂಗರಾ. ಪ್ರಯೋಗದ ಪಾಠಾಂತರವನ್ನು ನೋಡಿ. **ಕಿರುದೇಗು**: "ಹಂಜಿಕಾ . . . ಭಾರಂಗೀ ಹೆಸರುಗಳು. ಗಂಟು ಭಾರಂಗೀ ಎಂಬುವ ಗಂಧಿಕದ್ರವ್ಯವು ಪ್ರಸಿದ್ಧವಾದದ್ದು. ಕಿರುದೇಗು ಗಿಡವೆಂದು ಕೆಲವರು" (ಸಿದ್ಧಾಂತಿ. ೧೧೧). **ಕಿಱುತೇಗು**: "ಹಂಚಿಕಾ, ಬ್ರಾಹ್ಮಣೀ, ಪದ್ಮಾ, ಭಾರ್ಗೀ, ಬ್ರಾಹ್ಮಣಯಷ್ಟಿಕಾ, ಅಂಗಾರವಲ್ಲೀ, ಬಾಲೇಯ ಶಾಕಃ, ಬರ್ಬರಃ, ವಂದಕಃ ಈ ೯ ಕಿಱುತೇಗು" (ನಾಚಿರಾ. ೧೦೯). **ಕಿಱುದೇಗ**: "ಮಹಾಬರ್ಬರಃ – ಕಿಱುದೇಗ" (ಓಷಧಿ. ೧೨೨). [ಕಿಱು$_{2}$ + ತೇಗು$_{2}$]

**ಕಿಱುದೊಡೆ** (ನಾ). ೧. ಕಾಲಿನ ಹರಡಿನಿಂದ ಮೊಳಕಾಲವರೆಗಿನ ಭಾಗ; ಜಂಘೆ: "ಪ್ರಸೃತಾ, ಜಂಘಾ – ಈ ೨ ಕಿಱುದೊಡೆ" (ಹಲಾಯು. ೮೫-೩೭೧); ಅಡಿಯುಂ ಕಿಱುದೊಡೆಯುಂ ಪೆರ್ದೊಡೆಯುಂ ಪೊಱವಾಱನುಡಿಯನುರಮಂ ಮುಯ್ವುಂ (ಗದಾಯು. ೮-೧೫); ವಿನುತ ಜಘನಾಶ್ರಯಂ ಜೋಲ್ದು ನಿಲೆ ಕಿಱುದೊಡೆಗೆ ನಿಗಳಮಿಕ್ಕಿದ ಗಜಮೆಂಬಿನೆಗಂ ಗಜಗಾಮಿನಿ ಬಂದು ನೋಡಿದಳ್ (ಸುಕುಮಾ. ೧೧-೧೬); ಹಿಮ್ಮೆಟ್ಟಿದನು ಕಡೆಯುವ ತಿರುಹಿ ಕಿಱುದೊಡೆಗೆ (ಕುವ್ಯಾಅ. ೧೪-೧೨). ೨. ಮೊಳಕಾಲ ಮೇಲಿನ ಭಾಗ; ತೊಡೆಯ ಕೆಳಭಾಗ: ಇಂಬುವಡೆದೊಳ್ದೊಡೆ ನಕ್ಕರವದ್ದಿ (?) ತಾನೆ ಪೋ ಕಿಱುದೊಡೆಯೆಂದು ಧಾತ್ರಿ ಪೊಗೞ್ಗುಂ (ಪಂಪಭಾ. ೧-೧೦೮); ಕಿಱುದೊಡೆಯ ಕಡುನುಣ್ಪು ಕಣ್ಗಳೊಳ್ ನೆಱೆಪೊಳೆಯೆ (ಅಜಿಪು. ೪-೭); ಧರಿತ್ರಿಯ ಭಾಗವನು ಬೇಡಿದಡೆ ನೀ ಮುಱಿದಾಗಳನುವಾದುದು ಕಣಾ ಗದೆ ನಿನ್ನ ಕಿಱುದೊಡೆಗೆ [ಪಾಠಾಂ. ತೊಡೆಗಳಿಗೆ] (ಕುವ್ಯಾಗ. ೭-೧೫). [ಕಿಱು$_{2}$ + ತೊಡೆ$_{2}$]

**ಕಿಱುದೊಱೆ** (ನಾ). ೧. ಚಿಕ್ಕಹೊಳೆ; ಸಣ್ಣನದಿ. ೨. ತುಂಗಭದ್ರಾನದಿ: ಶ್ರೀವೈದುಮ್ಬ ಮಹಾರಾಜಾಕ್ಕಿಱುದೊಱೆ ಮಯ್ರ್ಯಾದೆ ಆಗೆ ಪ್ರಿಥಿವೀ ರಾಜ್ಯಂಗೆಯ್ಯೆ (ಎಕ. X, ಬಾಗೆಪ. ೬೨-೩; 900); ಮಧುರಾನ್ತಕ ಚೋಳನ ಸೈನ್ಯಮೆಲ್ಲಮಂ ಕಿಱುದೊಱೆ ಕಟ್ಟೆಗಟ್ಟುವಿನಮುಳ್ಕುಱೆ ಕೂರಸಿಯಿಂದಡುತ್ತು ತತ್ತಱಿತಱಿದೊಟ್ಟೆ (ಮೈಆರಿ. ೧೯೨೯, ೬೫-೧೦; 1025); ಎಸೆವ ಕಿಱುದೊಱೆದಡಿಯೊಳ್ ಮುಕ್ಕುನ್ದ್ಡೆಯೆಂಬ ವಿಪ್ರ ಗ್ರಾಮಂ (ಎಇ. XII, ೨೭೯-೧೩೦; 1077). 'ಪೆರ್ದೊಱೆ' ಪರಾ. [ಕಿಱು$_{2}$ + ತೊಱೆ$_{2}$]

**ಕಿಱುದೋಟ** (ನಾ). ಸಣ್ಣತೋಟ; ಚಿಕ್ಕತೋಟ: ಕಿಱುದೋಟಂ ಕಡೆವಳ್ಳಿ ಬೀಳುಮನೆ . . . ದುರ್ಮಾರ್ಗರೊಳ್ ಸ್ನೇಹಮುಂ ಬಱಿಗೈಯುಂ ಸುಱಿದಂತೆಲ್ಲೈ (ಸೋಮೇಶ. ೧೬).

[ಕಿಱು$_2$ + ತೋಟ (< ತೋಂಟ)]

**ಕಿಱುನಂದಿ** (ನಾ). ಒಂದು ಸ್ಥಳದ ಹೆಸರು: ತೆಱ್ಕ್ಯಪೆರ್ಮ್ಮಿರ್ದ್ದಿಲ್ ಪೆಬ್ಬನನ್ದಿಯ ಕಿಱುನನ್ದಿಯ ಸೊಡಲಯಬಾ ಮೂಱುಂ ಕುಡಿದಾ ಒಱ್ವೆ (ಎಕ. X (S), ಚಿಕ್ಕಬ. ೬೬–೧೬; 850). [?]

**ಕಿಱುನಗೆ, ಕಿರುನಗೆ** (ನಾ). ಸಣ್ಣನಗೆ; ನಸುನಗೆ; ಮುಗುಳ್ನಗೆ: ಅಲರ್ದ ಮೊಗದ ಕಿಱುನಗೆ (ಆದಿಪು. ೮–೩೯); ಕಿಱುನಗೆ ಲೋಳೆವಾಯಿ ತೊದಳೊಂದಿದ ನಾಳ್ನಗೆ (ಸುಕುಮಾ. ೯–೯೯); ಹಿಂದಣೆನಿಱಿದ ಕರ್ಣನ ನೋಡಿ ಮುಖದಲಿ ಕಿಱುನಗೆಯ ಕೇವಣಿಸಿ ನುಡಿದನು ಬೆರಳನೊಲೆದೊಲೆದು (ಕುವ್ಯಾದ್ರೋ. ೬–೩೩); ತಲೆವಾಗಿ ಕಿಱುನಗೆ ನಗುತ್ತಿದ್ದಳೊಡನೆ (ಭರಚ. ೯–೭೭). **ಕಿರುನಗೆ**: 'ಹಂಚಿಕೆ ಹೇಗಿದೆ' ಕಿರುನಗೆಯಿಂದ ಎಂದ ಕೊತವಾಲ (ಕೊತಕಾ. ೨). [ಕಿಱು$_2$ + ನಗೆ]

**ಕಿಱುನಗೆವೆರಸು** (ಕ್ರಿ). ನಸುನಗೆಯಿಂದ ಕೂಡು; ಮಂದಸ್ಮಿತದೊಂದಿಗೆ ಕೂಡು: ಪರೆದಡರ್ದ ಧೂಳಿ ಕಿಱುನಗೆವೆರಸಿದ ತೊದಳೊದವೆ ನುಡಿವ ನುಡಿ (ಪಂಪಭಾ. ೨–೮); ಕಿಱುನಗೆವೆರಸಿ ಕೊಟ್ಟಳು ಮತ್ತೆ ಮನುವಂಶಂಗೆ ವಲ್ಕಲವ (ತೊರರಾ. ೨–೩–೩೨). [ಕಿಱುನಗೆ + ಬೆರಸು$_1$]

**ಕಿಱುನಡು** (ನಾ). ಚಿಕ್ಕಸೊಂಟ; ತೆಳ್ಳನೆಯ ನಡು; ಅಸಿನಡು: ಗಜದ ಕುಂಭದ ಮೇಲೆ ಮಱಿಸಿಂಹ ನಿಂದ ರೀತಿಯೊಳು ಪೊಱವಾಱಗಳು ಕಿಱುನಡುವೆಮ್ಮ ಭೂಪಗೆ ಮೆಱೆವುವು (ಭರಚ. ೩–೬೬).

[ಕಿಱು$_2$ + ನಡು$_2$]

**ಕಿಱುನನೆ** (ನಾ). ಸಣ್ಣ ಮೊಗ್ಗು: ಎಡ್ಡಮಾದ ಪಡ್ಡಳಿಯ ಕಿಱುನನೆಯ ಕೊನೆ ತರಂಬಿಡಿದು ತೋಱಿ (ಜಗವಿ. ೬–೧೬೪). [ಕಿಱು$_2$ + ನನೆ$_3$]

**ಕಿಱುನವಣೆ** (ನಾ). ನವಣೆಯಲ್ಲಿ ಒಂದು ಜಾತಿ: "ಅಣು" (ನಾಚಿರಾ. ೬.). [ಕಿಱು$_2$ + ನವಣೆ]

**ಕಿಱುನಾಯ್** (ನಾ). ಸಣ್ಣ ನಾಯಿ; ನಾಯಿಮರಿ: ಬಳಿಸಂದುವಾಶಬರನಾಯಕನಂ ಕಿಱುನಾಯ ಕುನ್ನಿಗಳ್ (ಕಾದಂಪೂ. ೧೬೭); ಕಿಱುನೆಲ್ಲಿ, ಕಿಱುವಿದಿರ್, ಕಿಱುವಲೆ, ಕಿಱುನಾಯ್ (ಶಮುದ. ೧೮೧. ಪ್ರಯೋ).

[ಕಿಱು$_2$ + ನಾಯ್]

**ಕಿಱುನಾಲಿಗೆ, ಕಿರುನಾಲಗೆ** (ನಾ). ೧. ಗಂಟಲೊಳಗೆ ನಾಲಗೆಯ ಮೇಲ್ಗಡೆ ಜೋತಾಡುವ ಒಂದು ಮಾಂಸ ಪಿಂಡ. ೨. ಗಂಟಲು ಉಬ್ಬಿ ಉಂಟಾಗುವ ತೊಂದರೆ: ಬಂದೆಱಗಲವನನಳಲಿಸುವ ಕಿಱುನಾಲಿಗೆಯನೂ ನೆರೆ ಮಾಣಿಸುತ್ತೆ ಪೊರೆದು (ಕೊಟ್ಟೂಬ. ೧೧–೩೬). **ಕಿರುನಾಲಗೆ**: ೨. ಹೆಚ್ಚು ಶೀತವಾದರೆ ಕಿರುನಾಲಗೆ ಉಂಟಾಗುತ್ತದೆ (ರೂಢಿ).

ಕಿರುನಾಲಗೆ ಬೀಳು = ಕಿರುನಾಲಿಗೆ ಉಬ್ಬಿ ತೊಂದರೆಯಾಗು: ಆತನಿಗೆ ಕಿರುನಾಲಗೆ ಬಿದ್ದು ಕೆಮ್ಮು ಜಾಸ್ತಿಯಾಗಿದೆ (ರೂಢಿ).

[ಕಿಱು$_2$ + ನಾಲಿಗೆ]

**ಕಿಱುನಿಱಿ** (ನಾ). ಚಿಕ್ಕ ಗೊಂಚಲು; ಸಣ್ಣಗುಚ್ಛ: ಕಿಱುನಿಱಿಯೊಳೆ ಕಿಱಿದೆಲೆಗಳ ತುಱುಗಿದ ಚೆಲ್ವೆಳಸಿ ಬಳಸಿ ವನವನಿತೆಯ ಕಣ್ಣುಱಿಯೆನೆ ನಿಱಿಗೊಂಡಿರೆ ನಿಱಿ ನಿಱಿಗನ ನಿಱಿದಳಿರ ನಿಱಿಯನಱಿಯೆಂ ಪೊಗೞಲ್ (ಆದಿಪು. ೬–೯೮). [ಕಿಱು$_2$ + ನಿಱಿ$_2$]

**ಕಿಱುನೀರಿಲ್ಲಿ** (ನಾ). ಒಂದು ಸ್ಥಳದ ಹೆಸರು: ಕಿಱುನೀರಿಲ್ಲಿ ಗ್ರಾಮಮಮ್ (ಎಕ. IV, ಹುಣಸೂ. ೧೮–೧೩; 450).

[ಕಿಱು$_2$ + ನೀರಿಲ್ಲಿ?]

**ಕಿಱುನೆಕ್ಕು** (ನಾ). ಸ್ವಲ್ಪನೂಕಲು; ಚಿಕ್ಕ ತಿವಿತ: ಒದೆದುಗಿದಲ್ಲದೇಂ ಪಿಡಿವಳೇ ಸೆಱಗಂ . . . ಬೀದಿಯೊಳ್ ಬಗಿದು ಮುಂದಲೆಯೊಳ್ ಕಿಱುನೆಕ್ಕನಿಕ್ಕಿದಲ್ಲದೆ ಮಱಿದಾಕೆ ನಕ್ಕಱಿವಳೇ ಸುಡುವಳ್ ಗಳ ಗಾಳುಗಂಡನಂ (ಲೀಲಾವ. ೨–೧೦೦). [ಕಿಱು$_2$ + ನೆಕ್ಕು$_2$]

**ಕಿಱುನೆರವು** (ನಾ). ಸ್ವಲ್ಪ ನೆರವು; ಅಲ್ಪ ಸಹಾಯ: ಕೆಂಗೆಯ ಹನುಮಂ ಕಿಱುನೆರವಿಂಗೆಳಸದೆ ವಿಜಯಪುರದ ಶಾಹನ ದಱಮಂ ಬೆಂಗೊಂಡು . . . ಇಂಗಿಸಿದಂ ಗಡಿಗಳವರ ಸಂಗರರಸಮಂ (ಚಿಕವಿ. ೨–೯೨). [ಕಿಱು$_2$ + ನೆರವು]

**ಕಿಱುನೆಲ್** (ನಾ). ಬತ್ತದಲ್ಲಿ ಒಂದು ಜಾತಿ; ಕಿರುಬತ್ತ: ದೊರೆಕೊಳೆ ಶ್ರವಣದೆ ಕಿಱುನೆಲ್ [ಪಾಠಾಂ. ನಿಲು] ಪಿರಿದಾಗಿರೆ ಬೆಳೆಗುಂ (ಜಟ್ಟಮ. ೯–೪೫). [ಕಿಱು$_2$ + ನೆಲ್]

**ಕಿಱುನೆಲ** (ನಾ). ಒಂದು ಸ್ಥಳದ ಹೆಸರು: ಅನ್ತೆ ಬನ್ದು ಆಱೆಲೆಗಾಲ ಪಡುವಣ ಪೇರೊಟ್ಟೆಯಿಂ ಅನ್ತೆ ಬನ್ದು ಕಿಱುನೆಲದ ಪಡುವಣ ಒಱ್ಬೆಯಿಂ (ಎಕ. III, ನಂಜನ. ೧೩೯–೨೬; 915). [?]

**ಕಿಱುನೆಲೆ** (ನಾ). ಚಿಕ್ಕ ನಿಲವು; ಕಡಮೆ ಎತ್ತರ: ಕಿಱುನೆಲೆಯ ಲತಾಲಲಿತೆಗೆ ತಿಱಿದುಕೊಳಲ್ಕಪ್ಪಸಾರ್ಕೆಯೊಳ್ಗೊಂಬುಗಳೊಳ್ ತುಱುಗಿದ ತಳಿರಿಂ ನನೆಯಿಂ ಕಿಱುಮಿಡಿಯಿಂದೆಸೆದು ದಸದಳಂ ಮಾಕಂದಂ (ಕಾವ್ಯಾವ. ೨೩೨); ಆ ಕುಮಾರಿಯೇದೊರೆಯುಳೆನೆ ಕಿಱುನೆಲೆನಿಱಿದಲೆ ಬೆಳರ್ವಾಯಿ ತುಱುಗೆಮೊಗಪ್ಪೆಳೆವ ಕುಚಯುಗಂ ತನ್ಮಧ್ಯಂ ನಱುಗಂಪುವೊರೆದ ತಾವರೆಯಱಿಕೆಯ ತನಿಗಂಪೆ ಸುಯ್ಯೆ ಕಂಪಾಸತಿಯಂ (ಕಇ. I, ೨೫–೫೦; 1186); ಕಿಱುವಲೆ, ಕಿಱುನಾಯ್, ಕಿಱುನೆಲೆ (ಶಮುದ. ಮ. ೧೮೧ ಪ್ರಯೋ). [ಕಿಱು$_2$ + ನೆಲೆ]

**ಕಿಱುನೆಲ್ಲಿ, ಕಿರುನೆಲ್ಲಿ** (ನಾ). ನೆಲ್ಲಿಯಲ್ಲಿ ಒಂದು ಜಾತಿ; ಸಣ್ಣ ನೆಲ್ಲಿ: "ಭೂಮ್ಯಾಮಲಕ–ಕಿಱುನೆಲ್ಲಿ" (ಒಷಧಿ. ೧೧೩); ಕಿಱುಗೂಸು, ಕಿಱುನೆಲ್ಲಿ (ಶಮುದ. ೧೮೧ ಪ್ರಯೋ). **ಕಿರುನೆಲ್ಲಿ**: ಕಿರುನೆಲ್ಲಿಯಂ ಸಮೂಲವಂ ತುಪ್ಪದಲ್ಲಿ ಅರೆದು ಮಂಡೆಗೆ ಒತ್ತಲು ಕಣ್ಣುರಿ ಮಾಣ್ಗುಂ (ವಿವೈವಿ. ೪). [ಕಿಱು$_2$ + ನೆಲ್ಲಿ]

**ಕಿಱುನೇಸಱು** (ನಾ). ಆದೇ ಉದಯಿಸುತ್ತಿರುವ ಸೂರ್ಯ; ಎಳನೇಸರು; ಬಾಲಸೂರ್ಯ (ದಾಸಪ. ೬. ೧೩೨–೩).

[ಕಿಱು$_2$ + ನೇಸಱು (< ನೇಸಱ್)]

**ಕಿಱುನೇಱಿಲ್** (ನಾ). ನೇರಿಳೆಯಲ್ಲಿ ಒಂದು ಜಾತಿ; ಸಣ್ಣ ನೇರಿಳೆ (?): "ಧನಪ್ರಿಯಂ – ಕಿಱುನೇಱಿಲ್" (ಒಷಧಿ. ೮೦).

[ಕಿಱು$_2$ + ನೇಱಿಲ್]

**ಕಿಱುನೊಳ** (ನಾ). ೧. ಸಣ್ಣನೊಣ. ೨. ಕಿರುಜೇನಿನ ನೊಣ: ಒತ್ತುಗಟ್ಟಿದ ಕಿಱುನೊಱ[ಳ]ನ ಸವಿಜೇನ ಸಜ್ಜನಿಂಬನಿಯನೆಱೆದು (ರಾಮಾಶ್ವ. ೧೦೦–೨೯). [ಕಿಱು$_2$ + ನೊಳ]

**ಕಿಱುನೋಟ** (ನಾ). ನಸುನೋಟ; ಓರೆನೋಟ: ನಸುನಗೆಯ ಕಿಱುನೋಟಲಲ್ಲೆ ವಿಭ್ರಮದೋಱೆ ಪುಸಿ ಮುಳಿಸು ಮೂದಲಿಕೆ ಮುದ್ದುಕೊಸರುವ ಮೋಡಿ (ವೆಂಕಾರಾ. ೫–೬–೪೩). [ಕಿಱು$_2$ + ನೋಟ]

**ಕಿಱುಪಕ್ಷಿ** (ನಾ). ಬಹಳ ಸಣ್ಣ ದೇಹದ ಒಂದು ಜಾತಿಯ ಹಕ್ಕಿ: "ಹ್ರಸ್ವಿ ಕಿಱುಪಕ್ಷಿಯಕ್ಕುಂ" (ಮಂಗರಾ. ೫೨–೯).

[ಕಿಱು$_2$ + ಪಕ್ಷಿ]

**ಕಿಱುಪನ್ನೆ** (ನಾ). ಹಣೆಯ ಮೇಲ್ಭಾಗದವರೆಗೆ ಅಚ್ಚುಕಟ್ಟಾಗಿ ಸಣ್ಣಗೆ ಕತ್ತರಿಸಿದ ಕೂದಲು: ಕತ್ತುರಿಗೆರೆ ಮೀಸೆ ಕಿಱುಪ[ಪಾಠಾಂ. ಸ]ನ್ನೆಯಿಂದೊಪ್ಪುವೆತ್ತ ಮೊಗವ ನೋಡಿ ನೋಡಿ (ಭರಚ. ೪೧–೭೭).

[ಕಿಱು$_2$ + ಪನ್ನೆ$_2$]

**ಕಿಱುಪರವಿ** (ನಾ). ಒಂದು ಊರಿನ ಹೆಸರು: ಕಿಱುಪರವಿಯೊಡಯ ಪೆರ್ಗ್ಗಜ್ಞಾರನಾಳೆ ಇಬ್ಬರ ಸನಿಧಿ ಮಲ್ಲಪರಿಯೊಡನೆ ತಾಗಿ ಕಾದಿ ಸಗ್ಗಿಯಾದನು (ಎಕ. X, ಶ್ರೀನಿವಾ. ೧೯–೨; 800). [ಕಿಱು₂ + ಪರವಿ]

**ಕಿಱುಪಾಸಾಣಿ** (ನಾ). ಒಂದು ಊರಿನ ಹೆಸರು: ಮೊಗಲೂರ್ವ್ವಿಷಯೇ ಕಿಱುಪಾಸಾಣಿ ನಾಮಧೇಯ ಗ್ರಾಮಸ್ಯ (ಎಇ. VIII, ೧೪೮–೬; 6ನೆಯ ಶತ?). [ಕಿಱು₂ + ಪಾಸಾಣಿ?]

**ಕಿಱುಪಿಲ್ಲಿ, ಕಿರುಪಿಲ್ಲಿ** (ನಾ). ಚಿಕ್ಕ ಪಿಲ್ಲಿ; ಕಾಲ್ಬೆರಳಿಗಿಡುವ ಒಂದು ಆಭರಣ: ನಗುತ ಪಾದಾಂಗುಲಿಗಳಿಗಾಗ ಕಿಱುಪಿಲ್ಲಿಯನಿಕ್ಕಿದರು (ಕಂನವಿ. ೨೪–೨೫). **ಕಿರುಪಿಲ್ಲಿ:** ಮುತ್ತಿನ ಗೆಜ್ಜೆಗಳಿಂ ಕೂಡಿದ ವೀರ ಮುದ್ರಿಕೆ ಕಿರುಪಿಲ್ಲಿ ಬೊಬ್ಬುಲಿಗಳನಿಟ್ಟು (ಸೌಗಂಧಿ. ೨೧೨–೩); ಅಗಿನ ಕಾಲದ ಅಭರಣಗಳೆಂದರೆ . . . ಪಿಲ್ಲಿ, ಮೆಂಟಿಕೆ, ಕಿರುಪಿಲ್ಲಿ (ಕರ್ಣಾಜ. ೧೬೨). 'ಕಿಱುಪಿಲ್ಲಿ' ಪರಾ. [ಕಿಱು₂ + ಪಿಲ್ಲಿ₁]

**ಕಿಱುಪು₁** 'ಕಿಱುಪು₁' ನೋ.

**ಕಿಱುಪು₂** 'ಕಿಱುಪು₂' ನೋ.

**ಕಿಱುಪುತ್ತಳಿ** (ನಾ). ಚಿಕ್ಕಬೊಂಬೆ, —ಮೂರ್ತಿ: ಎತ್ತಿ ಸದ್ಗುಣ ಶತವನಾಯ್ದು ಕೊಂಡೊಂದು ಕಿಱುಪುತ್ತಳಿಯ ಮಾಡಿ . . . ತಂದಿರಿಸಿದಂ ಸುಗ್ಗವ್ವೆಯುದರದೊಳು (ಸಿದ್ಧರಾ. ೧–೪೬).

[ಕಿಱು₂ + ಪುತ್ತಳಿ (< ಪುತ್ತಱಿ)]

**ಕಿಱುಬ₁, ಕಿರುಬ** (ನಾ). ಹುಲಿಯ ಜಾತಿಗೆ ಸೇರಿದ ಒಂದು ಕಾಡು ಮೃಗ; ನಾಯಿ ಹುಲಿ: "ಚಿತ್ರವ್ಯಾಘ್ರಃ, ಚಿತ್ರಕಾಯಃ–ಈಯೆರಡುಂ ಕಿಱುಬ" (ಓಸಧಿ. ೫೭); ಕುಱುಬನೋ ಇವ ಮನುಜ ರೂಪಮಂ ಮಱಿಗೊಂಡ ಕಿಱುಬನೋ (ಸೌಂದಪು. ४–೬೩). **ಕಿರುಬ:** ನಮ್ಮ ಊರ ಸುತ್ತ ಕಿರುಬನ ಕಾಟ ಜಾಸ್ತಿ (ಚೆಂಗೂಲಿ. ೧೯); ಕಿರುಬ ತೋಳ ಮೊದಲಾದ ಕಾಡುಮೃಗಗಳು (ಕಳಹು. ४); ಕೃತ್ತಿಕೆ ಮಳೆ ಕಿರುಬ ಹಿಡಿದಂತೆ (ಗಾದೆ). [ದೇ. ‖ ಕೊಡ. ಕೀರ್ಮೆನ್; ಕೋಲಾ. ಕಿರ್ಬನ್]

**ಕಿಱುಬ₂** (ನಾ). ೧. ಕಿರಿಯ; ಚಿಕ್ಕವನು: ಅದಱಿಗೊಳ್ಪಟ್ಟದ ಗಂಡರೆಲ್ಲಮತಿವೀರರ್ ಪೆಂಡಿರೆಲ್ಲಂ ವಿಳಾಸದ ಸೌಭಾಗ್ಯದ ಸೀಮೆಗಳ್ ಕಿಱುಬರೆಲ್ಲಂ ಪಂಡಿತರ್ (ಅನಂಪು. ೧೧–೧೨). ೨. (ಆಲಂ) ಅಲ್ಪ; ಕ್ಷುದ್ರ: ಕಿಱುಬನೊಡನೇನೆಂದು ಕೈದೆಗೆದು ಕಾದಿದೊಡೆ ಬೆಱಿಬೆಲಾ ಬಹಳ ಗರ್ವದೆ (ಜಿಬಪು. ४೦–೧೨). [ದೇ. ‖ ತಮಿ. ಚಿಱುಪ್ಪ; ಮಲ. ಚೆಱುಪ್ಪ]

**ಕಿಱುಬಟ್ಟೆ** 'ಕಿಱುವಟ್ಟೆ' ನೋ.

**ಕಿಱುಬನ್ನಿ** (ನಾ). ಬನ್ನಿಮರದಲ್ಲಿ ಒಂದು ಜಾತಿ: "ಶುಭ್ರಾ–ರೋಚನ, ಕಿಱುಬನ್ನಿ" (ಓಸಧಿ. ೧೬೮). [ಕಿಱು₂ + ಬನ್ನಿ₁]

**ಕಿಱುಬಲ** (ನಾ). ಚಿಕ್ಕಸೈನ್ಯ; ಸಣ್ಣಪಡೆ: ಹೆಬ್ಬಲದೊಡನಿಂತು ಕಿಱುಬಲ ಬವರಕಾನುವುದೆ (ಕಂನವಿ. ೧೭–೨೭). [ಕಿಱು₂ + ಬಲ]

**ಕಿಱುಬಾವಲು** (ನಾ). ಜಿರಳೆ; ಜೊಂಡಿಗ: "ಪರೋಷ್ಣೀ, ತೈಲಪಾಯಿಕಾ – ಈ ೨ ಕಿಱುಬಾವಲು" (ನಾಚಿರಾ. ೧೧೫).

[ಕಿಱು₂ + ಬಾವಲು]

**ಕಿಱುಬಿದಿರು** 'ಕಿಱುವಿದಿರ್' ನೋ.

**ಕಿಱುಬಿಯದಿ** (ನಾ). ಎಳೆಯ ವಯಸ್ಸಿನ ಬೇಡಿತಿ; ಬೇಡರ ತರುಣಿ: ಕಿಱುಬಿಯದಿ ಪತಿಯನೇಂ ನಗಿಸಿದಳೊ (ಉದ್ಭಟ. ೨–೯೧).

[ಕಿಱು₂ + ಬಿಯದಿ]

**ಕಿಱುಬುಱುಸೆ** 'ಕಿಱುವುಱಿಸೆ' ನೋ.

**ಕಿಱುಬುದ್ಧಿ** (ನಾ). ಅಲ್ಪಬುದ್ಧಿ; ಕ್ಷುದ್ರಬುದ್ಧಿ: ಆತನ ಸತಿಯು ಕಿಱುಬುದ್ಧಿಗಳ ಕಲಿತು ತವರೂರೊಳೊಬ್ಬನೊಳು . . . ಸುರತವನೆಸಗೆ (ಪ್ರೌಢರಾ. ೨–೬). [ಕಿಱು₂ + ಬುದ್ಧಿ]

**ಕಿಱುಬುಲಿ** 'ಕಿಱುವುಲಿ' ನೋ.

**ಕಿಱುಬೆಟ್ಟು** 'ಕಿಱುವೆಟ್ಟು' ನೋ.

**ಕಿಱುಬೆಮರ್, ಕಿರುಬೆಮರು, ಕಿರುಬೆವರು** (ನಾ). ಸ್ವಲ್ಪ ಬೆವರು; ನಸು ಬೆವರು: ಮೊಗದೊಳ್ ತುಱುಗಿದ ಕಿಱುಬೆಮರದೆಂ ಮನಂಗೊಳಿಸಿದುದೋ (ಶಾಂತಿಪು. ೮–೨४); ಕಿಱುಬೆಮರುಗುಪಾಸ್ಯಂ (ಉದ್ಭಟ. ೫–೮೫); ಓಸರಿಸಿ ಕಿಱುಬೆಮರುಂಡಲು ನಿಲಿಸುತ ವಾರುವವ ನಿಳಿದು (ನಳಚ. ೭–೭); ತೀವ್ರ ಗಮನಕೆ ಕಿಱುಬೆಮರಿಡುತ ಪಂಕರುಹ ಮುಖಿಯರೈದಿದರು (ಕಂನವಿ. ೨೧–೨೦). **ಕಿರುಬೆಮರು:** ಕಿರುಬೆಮರ ತಡೆಯುಸಿರ ಕರುಣಾಸ್ಪದೆಯಾಗಿ (ಮಂತ್ರಶ. ೫೮–೧೫). **ಕಿರುಬೆವರು:** ಬೆಟ್ಟವನು ಹತ್ತುತ್ತ ಕಿರುಬೆವರು ಬೆವರುತ್ತ ನಡೆನಡೆಗೆ ಶಂಖ ನುಡಿಸುತ್ತ (ಹಳ್ಳಿಜಾ. ೧೩). [ಕಿಱು₂ + ಬೆಮರ್₂]

**ಕಿಱುಬೆಳ್ಪು** (ನಾ). ನಸುಬಿಳುಪು; ಸ್ವಲ್ಪಬಿಳುಪು: ತುರಗವರ್ಣಂ . . . ಕಿಱುಬೆಳ್ಪು [ಪಾಠಾಂ. ಕಿಱಿವಿಳುಪು] ದೋಱಿ ನೀಲಂ (ಮಂಗರಾ. ೮೧–೧४). [ಕಿಱು₂ + ಬೆಳ್ಪು]

**ಕಿಱುಬೋರಿ** (ನಾ). ಚಿಕ್ಕಹೋರಿ; ಹೋರಿಕರು: "ವತ್ಸಮೆನೆ ಕಿಱುಬೋರಿ" (ಮಂಗರಾ. ೫೩–೧). [ಕಿಱು₂ + ಪೋರಿ₁]

**ಕಿಱುಮಗ** (ನಾ). ಚಿಕ್ಕಮಗ; ಎಳೆಯ ಶಿಶು: ಕಿಱುಮಗನೆಂದಱು . . . ಮೊಲೆಯುಂಡಪನೋ (ಅರ್ಧನೇ. ೧–೧೦೧). [ಕಿಱು₂ + ಮಗ]

**ಕಿಱುಮಗಳು** (ನಾ). ಚಿಕ್ಕ ಮಗಳು; ಕಿರಿಯ ಮಗಳು: ಬೆಱಗು ವಟ್ಟಳು ನೀನಿದಾರೆಲೆ ಕಿಱುಮಗಳೆಯೆನೆ (ಸಾಳ್ವಭಾ. ೧೯–೩४).

[ಕಿಱು₂ + ಮಗಳು (< ಮಗಳ್)]

**ಕಿಱುಮನೆ, ಕಿರುಮನೆ** (ನಾ). ೧. ಚಿಕ್ಕಮನೆ; ಸಣ್ಣಮನೆ: ಕಿಱುಮನೆ ಪೆರ್ಮನೆಯೆನ್ನದುಱಲ್ ತಕ್ಕ ಮನೆಗಳಂ ಯಥಾಕ್ರಮದಿಂ ಪುಗುತ್ತುಂ (ವಡ್ಡಾರಾ. ४೬–೨). ೨. ಕೋಣೆ; ಕೊಠಡಿ: ಕರುಱಿಸಿ ಕಿಱುಮನೆಯೊಳಗೊಯ್ದು ರಿಸಿರುತಿರೆ ಕೆಲವು ದಿವಸದಿಂ ಬಱಿಕ್ಕ ಶ್ರೀಧರ ಶೆಟ್ಟಿ . . . ಪೋಪುದುಂ (ಧರ್ಮಪ. ೧೦–೭೫). **ಕಿರುಮನೆ:** ೨. ಕಿರುಮನೆಯಲ್ಲಿದ್ದ ನಸುಬೆಳಕಿನಲ್ಲಿ ಶಿವನನ್ನು ನೋಡಿದೆ (ರಾಮಾನೆ. ೧೧೭); ಕಿರುಮನೆಯ ಗೂಡಿನಲ್ಲಿಟ್ಟಿದ್ದೆ (ಚೆಂಗಾಳ್ವ. ೧೯).

[ಕಿಱು₂ + ಮನೆ]

**ಕಿಱುಮರ್ಕಟ** (ನಾ). ಸಣ್ಣಮಂಗ; ಕ್ಷುದ್ರವಾದ ಕಪಿ: ಲಂಕೆ ಸುರಾಸುರರಿಂಗಸಾಧ್ಯ ಮತ್ತಾರಿಗೆ ಪೋಗದಿರ್ದ ಕಿಱುಮರ್ಕಟ ಸುಟ್ಟು ದೆನಿಪ್ಪ ಕುಂದು ತಾಂ ಬಾರದೆ (ಕಱಿಕಂ. ४೮).

[ಕಿಱು₂ + ಮರ್ಕಟ]

**ಕಿಱುಮಾಡ** (ನಾ). ಚಿಕ್ಕಮಹಡಿ, —ಉಪ್ಪರಿಗೆ: ಪೊಱವಂದು ನಿಂದು ಕೆಳೆಯರ್ಕಳೊಂದಿ ತಾಂ ಕಿಱುಮಾಡವೇಱಿ ನೆಲೆಯೊಂದಱಲ್ಲಿ (ಚಿಕವಿ. ೬–೧೯೫). [ಕಿಱು₂ + ಮಾಡ₁]

**ಕಿಱುಮಾನಿಸ** (ನಾ). ಸಣ್ಣಮನುಷ್ಯ; ಕ್ಷುದ್ರ ಮನುಷ್ಯ: ಪುರದ ಸಂವರಣೆಯ ನೋಡಲಮ್ಮದೆಯಂಜಿ ಸುರನಾಥ ಸ್ವರ್ಗಕೈದಿದನು ಉರಗೇಂದ್ರ ಪಾತಾಳದೆ ಮಱಸಿದ ಮಿಕ್ಕ ಕಿಱುಮಾನಿಸರ ಪಾಡೇನು (ಕಂನವಿ. ೬–೨೩). [ಕಿಱು₂ + ಮಾನಿಸ]

**ಕಿಱುಮಾಮಿ** (ನಾ). ಒಂದು ಹಳ್ಳದ ಹೆಸರು: ತೆನಸ್ತಾಕ ಕೆಱಿಎ ಪೆಂರ್ಮುಗಗೆಱಿಎ ವಡಗಾಯ್ ಸನ್ದು ಕಿಱುಮಾಮಿ ಪಂಳಮವೆದಿರ ಕೆಱಿಎ (ಎಕ. IV, ಎಡತೊ. ೭೦–೭४; 890). [ಕಿಱು₂ + ಮಾಮಿ₀]

**ಕಿಱುಮಿಂಚು** (ನಾ). ಸಣ್ಣಮಿಂಚು; ಎಳೆಯ ಮಿಂಚು: ಕಾರ್ಗಾಲದ ಕರಿಯ ಮುಗಿಲ ಹೊರೆಯೊಳು ಹರಿದಾಡುವ ಕಿಱುಮಿಂಚಿನ ತೆಱದಿ (ಜಯಕಾ. ೫–೨). [ಕಿಱು₂ + ಮಿಂಚು₂]

**ಕಿಱುಮಿಂಡ** (ನಾ). ಎಳೆಯ ಪ್ರಾಯದ ವಿಟ; ತರುಣ ವಿಟ: ಪಾದರಿಯ ಪೂದುಱುಂಬಿನ ಪೊಸಬನೊಪ್ಪಿದಂ ಕೇದಗೆಯ ಮಿಸುಪೆಸಳ ಕಿಱುಮಿಂಡನೊಪ್ಪಿದಂ (ಪ್ರಭುರ. ೫-೪). [ಕಿಱು$_2$ + ಮಿಂಡ$_2$]

**ಕಿಱುಮಿಡಿ** (ನಾ). ಸಣ್ಣಮಿಡಿ; ಹೀಚು: ನನೆಯ ಕೊನೆಯತಳಿರ ನಿಱಿದಳಿರ ಮುಗುಳ ಬಿರಿಮುಗುಳ ಮಿಡಿಯ ಕಿಱುಮಿಡಿಯ (ಪಂಪಭಾ. ೫-೫ ವ); ತುಱುಗಿದ ತಳಿರಿಂ ನನೆಯಿಂ ಕಿಱುಮಿಡಿಯಿಂದೆ ಸೆದುದಸದಳಂ ಮಾಕಂದಂ (ಕಾವ್ಯಾವ. ೨೩೨). [ಕಿಱು$_2$ + ಮಿಡಿ$_2$]

**ಕಿಱುಮೀನ್, ಕಿಱುಮೀನು** (ನಾ). ೧. ಸಣ್ಣ ಮೀನು; ಚಿಕ್ಕಮೀನು. ೨. ಒಂದು ಜಾತಿಯ ಮೀನು: "ನಳಮೀನಃ, ಚಿಳಿಚಿಮಿಃ—ಈ ೨ ಕಿಱುಮೀನು" (ಹಲಾಯು. ೧೧೮-೩೬); "ಚಿಳಿಚಿಮವೆನಲು ನಳಮೀನವೆನೆ ಕಿಱುಮೀನ ಪೆಸರೆನಿಕ್ಕುಂ" (ಮಂಗರಾ. ೧೨೧-೬); ಎರಗೆಱಗುವ ಕಿಱುಮೀನನಂತಿರೆ ಕನ್ಯಾಮಿಷಕೆ ರಾಜನಿಕುರುಂಬಂ ಬಂದಿರೆ ಬಯಸಿ (ಶಾಂತಿಪು. ೫-೭೬); ಕಿಱುಮೀಂಗಳೆಲ್ಲಮಂ ನೆಱೆಯೆ ತಿಂದು (ಪಂಚತಂ. ೮೩-೮). **ಕಿಱುಮೀನು**: "ಘಂಟಜಿಹ್ವಾ-ಕಿಱುಮೀನು" (ಒಷಧಿ. ೫೨). [ಕಿಱು$_2$ + ಮೀನ್$_3$]

**ಕಿಱುಮೀನು** 'ಕಿಱುಮೀನ್' ನೋ.

**ಕಿಱುಮುಗಿಲ್** (ನಾ). ಚಿಕ್ಕ ಮೋಡ; ಸಣ್ಣ ಮೋಡ: ಶಶಿಕಳೆಯ ಮುಱಿಗಳಂ ಮುಕ್ಕುಳಿಸಿದೆಳಗಾರ ಕಿಱುಮುಗಿಲ ಜವಳಿಗಳೆವೆನಿಸಿ (ವರ್ಧಪು. ೫-೬೩ ವ); ಪೆರ್ಬಿದಿರ ತುದಿ ತಾಗಿ ಪಱಿದ ಕಿಱುಮುಗಿಲ್ಗಳಿಂ (ಗಿರಿಕ. ೧-೧೨೮ ವ); ಗಱಿಮೂಡಿದಂತೆ ಕೆಲದೊಳ್ ಕಿಱುಮುಗಿಲಿರೆ ಜಲದ ನೀಲಗಿರಿ ನೆಗೆಯೆ (ರಾಜಶೇ. ೮-೧೧೫). [ಕಿಱು$_2$ + ಮುಗಿಲ್]

**ಕಿಱುಮುಗುಳ್** (ನಾ). ಸಣ್ಣಮೊಗ್ಗು: ಮುಡಿಯೊಳ್ ಜೋಲಿ ದರ್ಪದಂ ಮಲ್ಲಿಗೆಯ ಕಿಱುಮುಗುಳ್ಮಾಲೆಯಂ (ಜಗವಿ. ೧೪-೧೧೯); ಕಿಱುಮುಗುಳ್ಗಳಂಜಿಯಂ ತಳೆದು ಪೂವಿನ ಬಿಲ್ ನನೆಯಂಬು ಕೆಯ್ಯೊಳೆಚ್ಚರಿಡಿರೆ . . . ಗಾಳುವೆಣ್ಗಳೀಂ ಮೆಱೆದರೊ (ಅನಂಪು. ೭-೧೭); ಕಿಱುಮುಗುಳ ಗೆಜ್ಜೆಯಿಂದಂ ಮಿಱುಗುವ ಕೆಂದಳಿರ ಹರಿಗೆ (ಕಬ್ಬಿಕಾ. ೨೧೪). [ಕಿಱು$_2$ + ಮುಗುಳ್$_2$]

**ಕಿಱುಮುಷ್ಟಿ** (ನಾ). ಒಂದು ಬಗೆಯ ಸಸ್ಯ: "ಶಶಕಾರೀ–ಕಿಱುಮುಷ್ಟಿ" (ಒಷಧಿ. ೧೬೧). [ಕಿಱು$_2$ + ಮುಷ್ಟಿ]

**ಕಿಱುಮುಳ್** (ನಾ). ಚಿಕ್ಕಮುಳ್ಳು; ಸಣ್ಣಮುಳ್ಳು: ಪೂವಲಿಗೆದಱಿದ ಪೊಂಗೇದಗೆಯ ಗಱಿಯ ಕಿಱುಮುಳ್ಗಿ ಬಱಿದೆ ಬೈಗುಳಂ ಮಾಡಿಯುಂ (ಕಾದಂಉ. ೩೭). [ಕಿಱು$_2$ + ಮುಳ್$_2$]

**ಕಿಱುಮುಱುಕ** (ನಾ). ಸ್ವಲ್ಪ ಅಂದ; ಅಲ್ಪ ಸೊಗಸು (?): ಕಿಱುಮುಱುಕನಾಗಿ ಸಿರಿ ಕಣ್ಣೆಱಿದಂತಿರೆ ಬಾಗಣಬ್ಬೆ ಗ್ರಾಮೇಶ್ವರಮಂ ನೆರೆಮಾಡಿಸಿದಳು ಗಿರಿಸುತೆಯೆಱೆಯಂಗಂ ಚೆಲ್ವನಪ್ಪ ಕಲ್ವೆಸದಿಂದಂ (ಕಇ. I, ೨೪-೪೭; 1198); ಕಿಸುಗಲ್ಲೊಳ್ ಮಾಡಿದುದಾಗಿಯುಂ ಕಮಲದಲಚ್ಛಾಯೆಯಿಂ ಮರಕತರುಚಿಯಿಂ ರಚನೆಗೆಯ್ದು ಬಳಿದಂತೆ ಕಿಱುಮುಱುಕನಾಗಿಯುಂ (ಲೀಲಾವ. ೭-೧೧೧ ವ). [?]

**ಕಿಱುಮೃಗ** (ನಾ). ಚಿಕ್ಕ ಮೃಗ; ಮೃಗದ ಮರಿ: ಮಾರ್ಮಲೆವ ಮೃಗಗಳ ನಾಯಿಗಳು ತುಡುಕಿದವು ಸೆಳೆದವು ಕಿಱುಮೃಗಾವಳಿಯ (ತೊರರಾ. ೩-೩-೧೫). [ಕಿಱು$_2$ + ಮೃಗ]

**ಕಿಱುಮೆಕ್ಕೆ** (ನಾ). ಮೆಕ್ಕೆ ಗಿಡದಲ್ಲಿ ಒಂದು ಜಾತಿ: ಲವಣಂ ನಱುವಲ ಬೇರ್ . . . ಲೊಕ್ಕಿ ಕಿಱುಮೆಕ್ಕೆಗಳಿಂಬಿವನರೆದು ತಕ್ರದೊಳ್ ಪೂಸುವುದು (ಲೋಕೋಪ. ೯-೧೯೭). [ಕಿಱು$_2$ + ಮೆಕ್ಕೆ]

**ಕಿಱುಮೆಯ್** (ನಾ). ಚಿಕ್ಕದೇಹ; ಕುಳ್ಳಶರೀರ. 'ಕಿಱುಮೆಯ್ಯ' ಪರಾ. [ಕಿಱು$_2$ + ಮೆಯ್]

**ಕಿಱುಮೆಯ್ಯ** (ನಾ). ಚಿಕ್ಕದೇಹವುಳ್ಳವನು; ಕುಳ್ಳ; ವಾಮನ: ದಿವಿಜರ್ ಪ್ರಾರ್ಥಿಸೆ ಕಿಱುಮೆಯ್ಯನಾದೆ (ವಸ್ತವಂ. ೪-೨೮). [ಕಿಱುಮೆಯ್ + –ಅ$_7$]

**ಕಿಱುಮೆಳೆ** (ನಾ). ಚಿಕ್ಕಮೆಳೆ, —ಪೊದೆ: ಕಿಱುಮೆಳೆಯ ತಾ ಮೇದ ಗೋವಿನ ಪರಿಯು ತಾನಾಗಿ ಇರವಿನಂತಿಹುದು (ಸಂಭಪ. ಪರಿ. ೨-೬೨). [ಕಿಱು$_2$ + ಮೆಳೆ (< ಮೆಟೆ)]

**ಕಿಱುಮೊಗ** (ನಾ). ಚಿಕ್ಕದಾದ ಮುಖ; ವ್ಯಸನದಿಂದ ಬಾಡಿದ ಮುಖ. 'ಕಿಱುಮೊಗಂಗೊಳ್' ಪರಾ. [ಕಿಱು$_2$ + ಮೊಗ$_1$]

**ಕಿಱುಮೊಗಂಗೊಳ್** (ಕ್ರಿ). ಮುಖವನ್ನು ಚಿಕ್ಕದು ಮಾಡು: ಮುಖ ಬಾಡು: ಅನ್ನೆಗಂ ವಸಂತಕಂ ಕಿಱುಮೊಗಂಗೊಂಡು ನಿಡುಸುಯ್ಯುತೆ (ಚಿಕವಿ. ೬-೧೩೮ ವ). [ಕಿಱುಮೊಗ + ಕೊಳ್$_1$]

**ಕಿಱುಮೊನೆ** (ನಾ). ಚಿಕ್ಕತುದಿ; ಹರಿತವಾದ ತುದಿ: ಅಗೆ ಮೂಡುವಂದದಿಂ ತೆರ್ಕೆಗೊಂಡು ಕಿಱುಮೊನೆಯ ಸೆಲೆಗಳಿಡಿಕಿಱಿದಿರೆ (ವರ್ಧಪು. ೧೧-೩); ಕಿಱುಮೊನೆಯ ಮುಗುಳಂಬುಗಳ ಸೈಗಱೆದನು (ಕುವ್ಯಾದ್ರೋ. ೫-೫೪). [ಕಿಱು$_2$ + ಮೊನೆ$_1$]

**ಕಿಱುಮೊರಡಿ, ಕಿರುಮೊರಡಿ** (ನಾ). ಚಿಕ್ಕ ಗುಡ್ಡ; ಸಣ್ಣದಿಬ್ಬ, —ದಿಣ್ಣೆ: ಸೋನೆಯ ಕೋಲ್ಗಳ ಪುದುವಿನ ಕಿಱುಮೊರಡಿಯನ್ನನಾದೊಂಖಚರಂ (ಶಾಂತಿಪು. ೫-೫೯); ವನಭೂರುಹದ ನೆಳಲೆಮಗೆ ಸತ್ತಿಗೆ ಪಲ್ಲವವ್ರಾತ ಚಾರುಚಾಮರ ಕಿಱುಮೊರಡಿ ವಿಸ್ತಾರಪೀಠವು (ಕುವ್ಯಾಅ. ೨೧-೮). **ಕಿರುಮೊರಡಿ**: ಉದಿಸಿದ ಸಮೀರಣುತ್ಕಟದಿ ಕಿರುಮರುಡಿ[ಮೊರಡಿ] ಚಯ ನೆಲವೆಣ್ಣು ಅಣ್ಣೆಕಲ್ಲಾ ಮುದದಿಯಾಡುವಳೊಯೆಂಬಂತೆ ಕೀಳ್ವೆಲ್ಲಿದವು ಕೆದರಿ (ನವಮೋ. ೨೯-೬೨). [ಕಿಱು$_2$ + ಮೊರಡಿ$_2$]

**ಕಿಱುಮೊಲೆ** (ನಾ). ಚಿಕ್ಕಮೊಲೆ; ಸಣ್ಣಮೊಲೆ: ಕಿಱುಮೊಲೆಯ ಚೆಲ್ವು ಪೊಂಗೊಡದ ಚೆಲ್ವಂ ತಳೆಯೆ (ಅಜಿಪು. ೪-೭); ಬಾಲೆಯರುರದೊಳ್ ಕಿಱುಮೊಲೆ ಮೇಲುದು ನಸುದೊಲಗೆ ತೋರ್ಪ ತೆಱದಿಂ (ಜಗವಿ. ೪-೬೩). [ಕಿಱು$_2$ + ಮೊಲೆ$_1$]

**ಕಿಱುಮೋಹ** (ನಾ). ಸ್ವಲ್ಪ ಮೋಹ; ಅಲ್ಪ ಪ್ರೀತಿ: ಕಿಱುಮೋಹವ ಮಾಡಿದಂಗನೆಯರ ಹದಿನಾಱು ಸಾವಿರವನುಳ್ಳವನು ದೂಱಿಗೆಣಿಸದಾಡಿದನು ಹಾದರವನು (ಕುರಾಸಾಂ. ೨೫-೯೭). [ಕಿಱು$_2$ + ಮೋಹ]

**ಕಿಱುರ್** (ನಾ). ಒಂದು ಊರಿನ ಹೆಸರು: ಉರಮರಿಸಾಡ ಮೇಗೆ ವನ್ದೊಡೆ ಕಿಱುರ ವಿಯಮ್ಮನ್‌ಗಜ್ಜರನಾನ್ತು ಬರೆ (ಮೈಆರ್. ೧೯೨೭, ೬೩-೨; 9ನೆಯ ಶತ). [ಕಿಱು$_2$ + ಊರ್]

**ಕಿಱುವಂಗರ್ಕ್ಕೆಱೆ** (ನಾ). ಒಂದು ಕೆರೆಯ ಹೆಸರು (?): ದೇಗುಲಕ್ಕೆ ಕೊಟ್ಟೊದೂರ ಪೊಲ ಮೆರೆ ಮೂಡ್ಯೆದೆಸೆ ಎಲವೆ ಕಿಱುವಙ್ಗರ್ಕ್ಕೆಱೆಎ ತೆಂಕಾ ಅವರುಳ್ಳಡುಗಲ್ಲೆ ಮುಚ್ಚನ್ದಿನ್ನದುಗಲ್ಲೆ (ಎಕ. X (s), ಚಿಕ್ಕಬ. ೧೦೭-೬೩; 850). [ಕಿಱುವಂಗರ್$_0$ + ಕೆಱೆ]

**ಕಿಱುವಂಡಿ, ಕಿರುಬಂಡಿ** (ನಾ). ಚಿಕ್ಕಬಂಡಿ; ಸಣ್ಣಬಂಡಿ: ಕಿಱುವಂಡಿಯೊಳಿರ್ದ ನಂಬಿಯಣ್ಣನಲ್ಲಿಗೆ ಸೊಕ್ಕಿದಾನೆ . . . ಬಂದು (ನಂಬಿರ. ೨-೨೭). **ಕಿರುಬಂಡಿ**: ಅವಳು . . . ಕಿರುಬಂಡಿಯನ್ನು ಮೆಲ್ಲನೇರಿದಳು (ಪುನರು. ೩೩೮). [ಕಿಱು$_2$ + ಬಂಡಿ]

**ಕಿಱುವಕ್ಕಿ** (ನಾ). ಸಣ್ಣ ಹಕ್ಕಿ; ಚಿಕ್ಕ ಪಕ್ಷಿ: ಬಿಟ್ಟರೆಯ್ದೆ ಪರ್ದಱಗೆ ಸುರುಳ್ದು ಬೀೞ್ವ ಕಿಱುವಕ್ಕಿವೊಲುಗ್ರವಿರೋಧಿನಾಯಕರ್ (ಪಂಪಭಾ. ೧೨-೧೧೨). [ಕಿಱು$_2$ + ಪಕ್ಕಿ$_1$]

**ಕಿಱುವಕ್ಕಿವಿಂಡು** (ನಾ). ಸಣ್ಣಪಕ್ಷಿಗಳ ಹಿಂಡು: ಸುಱಿಗಾಳಿಗೆ ಸುಱಿಯೆ ನೆಗೆದು ಪಾಱುವ ತಱಗೆಲೆಯ ತುಱುಗಲಂ ಕಿಱುವಕ್ಕಿವಿಂಡೆಂದು (ಕಬ್ಬಿಕಾ. ೨೩೪). [ಕಿಱುವಕ್ಕಿ + ಪಿಂಡು$_2$]

**ಕಿಱುವಕ್ಕೆ** (ನಾ). ಬಕ್ಕೆಯಲ್ಲಿ ಒಂದು ಬಗೆ; ಚಿಕ್ಕ ಬಕ್ಕೆಹಲಸು: ಪರೀಕ್ಷಿತಂಗೆ ಮುಂದಡಸಿದುದೊಂದು ಸರ್ಪ ಕಿಱುವಕ್ಕೆಯ ಪಣ್ಣಿನೊಳಿರ್ದು ವಾತನಂ ಮಡುಹದೆ? (ಕಜೆಕಂ. ೨೭). [ಕಿಱು$_2$ + ಬಕ್ಕೆ]

**ಕಿಱುವಗು, ಕಿರುಮಗು** (ನಾ). ಚಿಕ್ಕಮಗು; ಬಾಲಕ. **ಕಿರುಮಗು:** ಅಡಿಗೆಮನೆ ಕಾಯುತಿದೆ ಕಿರುಮಕ್ಕಳಳುತಿಹರ್ (ಕಾಲೂರ. ೧೭೭–೩೯೮). **ಕಿರುವಕ್ಕಳ್**(ಬಹುವ): ಕಿಱುವಕ್ಕಳುಮಾ ಮೂಗರುಮಱುಪಲ್ಕಱಿ ವರ್ ವಿವೇಕಮಂ ಮಾತುಗಳಂ (ಕವಿರಾ. ೧–೩೯). [ಕಿಱು$_2$ + ಮಗು]

**ಕಿಱುವಜ್ಜೆ** (ನಾ). ಚಿಕ್ಕಹೆಜ್ಜೆ; ಸಣ್ಣಹೆಜ್ಜೆ: ಮೆಲ್ಲಮೆಲ್ಲನಡಿಯಿಡುವ ಕಿಱುವಜ್ಜೆ (ಸೌಂದಪು. ೩–೧೦). [ಕಿಱು$_2$ + ಪಜ್ಜೆ]

**ಕಿಱುವಟ** (ನಾ). ಚಿಕ್ಕ ಆಲದಮರ: ಆ ಪಳ್ಳದಿಂ ಮೂಡಣ ಕಿಱುವಟ ತೆಂಕ ಬಣ್ಣಲ್ವಱಲ ಸೊಣೆ ಅನ್ತೆತೆಂಕ ಅತ್ತಿಯೋಡು ಪಳ್ಳಂ (ಎಇ. X, ೬೭–೯೨; 872). [ಕಿಱು$_2$ + ವಟ?]

**ಕಿಱುವಟ್ಟೆ, ಕಿಱುಬಟ್ಟೆ** (ನಾ). ೧. ಸಣ್ಣದಾರಿ; ಚಿಕ್ಕಹಾದಿ. 'ಕಿಱುವಟ್ಟೆಗೊಳ್' ಪರಾ. **ಕಿಱುಬಟ್ಟೆ:** ೨. ಅಡ್ಡದಾರಿ; ಅಪಮಾರ್ಗ: ಅಜ್ಞಾನಿಗಳು ಕಿಱುಬಟ್ಟೆಯಲ್ಲಿ ಹರಿದು ಕಂಗೆಟ್ಟು, ಕಾಡು ಹೊಕ್ಕು, ಕಮರಿಯ ಬಿದ್ದು ಬಳಲುತ್ತಿಪ್ಪರಯ್ಯ (ಘನವ. ೪೦). [ಕಿಱು$_2$ + ಬಟ್ಟೆ$_1$]

**ಕಿಱುವಟ್ಟೆಗೊಳ್** (ಕ್ರಿ). ಸಣ್ಣದಾರಿಯನ್ನು ಹಿಡಿ: ಚಂಡವಿಕ್ರಮನಾ ಗಹನದ ಕಿಱುವಟ್ಟೆಗೊಂಡೆಯ್ದಿದನಾ ಕ್ಷಣಕೊಳು (ಶ್ರೀಪಾಲ. ೭–೯). [ಕಿಱುವಟ್ಟೆ + ಕೊಳ್$_1$]

**ಕಿಱುವಡಿ** (ನಾ). ಬಾಲ್ಯ; ಚಿಕ್ಕಪ್ರಾಯ. 'ಕಿಱುವಡಿಗಾಲ' ಪರಾ. [?. / ತಮಿ. ಚಿಱುವಟ್ಟ, ಚಿಱುವಡ]

**ಕಿಱುವಡಿಗಾಲ** (ನಾ). ಚಿಕ್ಕಂದಿನ ಕಾಲ; ಬಾಲ್ಯ: ಒಡನಾಗಳೆನಿಬರ್ ಕಿಱುವಡಿಗಾಲದ ಕೆಳೆಯರೆನಿಬರೆಡವರೆಯದ ತನ್ನೆಡೆಗಳೆನಿಬರ್ ಪಸಾಯಂಬಡೆವರ್ (ಶಾಂತಿಪು. ೮–೧೧); ಕಿಱುವಡಿ [ಪಾಠಾಂ. ರೆ] ಗಾಲದಂದುಱಿದೆನೋಪಳನಾನವಳಂದೆ ಗಂಡರಂ ಪಱಿವೊಱನಾ[ಪಾಠಾಂ. ಸಾ]ಗೆ ಮಾಡುವಳ್ (ಜಗವಿ. ೧೬–೧೩೪). [ಕಿಱುವಡಿ + ಕಾಲ$_1$]

**ಕಿಱುವದ** (ನಾ). ಕೊಂಚ ಹದವಾದುದು; ನಸು ಮಾಗಿದುದು; ಸ್ವಲ್ಪ ಪಕ್ವವಾದುದು; ಕಿಱುವದದ ಕಟಮೆಯೊಳ್ ಪೂತೊಱಗಿದ ಚೆನ್ನೆಯ್ದಿಲಲರರಜಮುಮರ್ದಿರೆ ಪಣ್ತುಱುವ ತೆನೆದುಱುಗಲೆಂದಗಿದೆಱಗುವ ಗಿಳಿವಿಂಡು ಬಂಜೆವಡಿಪುದು ಬಗೆಯಂ (ಧರ್ಮನಾ. ೨–೨೪). [ಕಿಱು$_2$ + ಪದ$_1$]

**ಕಿಱುವದಿಕ್ಕಾಲ್** (ನಾ). ಒಂದು ಕಾಲುವೆಯ ಹೆಸರು: ಆಲಕ್ಕಾಲ್ ತೆನ್ನೊಟಿಪ್ಪಿಎ ಕಿಱುವದಿಕ್ಕಾಲ್ ತೆನ್ನೊಟಿಪ್ಪಿಎ ಕಱಿದಕ್ಕಾಲ್ ತೆನ್ನೊಟಿಪ್ಪಿಎ (ಇಆ. XVIII, ೩೬೮–೨೫; 3ನೆಯ ಶತ. ಕೃಶಾ). [ಕಿಱುವದಿ + ಕಾಲ್$_2$]

**ಕಿಱುವನಿ** (ನಾ). ಸಣ್ಣಹನಿ; ತುಂತುರು: "ಪೃಷಿತಂ ಪೃಷತಮೆನೆ ಕೆದರ್ದ ಕಿಱುವನಿಗಳಕ್ಕು" (ಮಂಗರಾ. ೧೨೪–೧೫); ನೀಟ್ಟ ತೆಳ್ನಾಲಗೆಯಿಂ ಸಾಲಿಕ್ಕುತುಂ ಲೋಳೆಯ ಕಿಱುವನಿಯಂ ಯಾನದಿಂ ಕಾರ್ಶ್ಯಮಧ್ಯಂ ಮಿಗೆ ಬೀೞಲ್ (ಕುಸುಮಾ. ೧೪–೩೪); ಬಲುವಿಷದ ಕಿಱುವನಿಯ ಹಾವಿನ ಮಳೆಗೆ ಗರುಡಾಸ್ತ್ರದಲಿ ತನ್ನಯ ದಳಕೆ ಹಿಡಿದನು ಕೊಡೆಯನು (ಕುವ್ಯಾಕ. ೨೩–೪೦). [ಕಿಱು$_2$ + ಪನಿ$_2$]

**ಕಿಱುವರಣೆ** (ನಾ). (?): ಕಡೆದ ಚುಂಬಿತಗಳಪ್ಪ ಕಿಱುವರಣೆಗಳ ಮಧ್ಯದೊಳ್ತುಂಬಿ ಜಂಬೂದ್ವೀಪವ (ಏಕೋಪು. ೩–೧೮). [?]

**ಕಿಱುವರಲ್** (ನಾ). ಸಣ್ಣಹರಳು; ಚಿಕ್ಕಕಲ್ಲು: ತಲೆದುಡುಗೆಯ ಮಾಣಿಕದ ಕಿಱುವರಲ್ಗಳಂತಿರ್ದ ಸಹಕಾರಕೋರಕಂಗಳೊಳಂ (ಮಲ್ಲಿಪು. ೨–೩೩). [ಕಿಱು$_2$ + ಪರಲ್]

**ಕಿಱುವರೆಯ, ಕಿರುವರೆಯ, ಕಿರುಹರೆಯ** (ನಾ). ೧. ಎಳೆಯ ವಯಸ್ಸು; ಸಣ್ಣಪ್ರಾಯ: ಕಿಱುವರೆಯದ ಶುಭಲಕ್ಷಣದಱಕೆಯ ಸತ್ಕುಲದ ಮರ್ತ್ಯಯುಗಲಮಂ ತಾಸಱಸಲ್ . . . ಪೊಱಮಟ್ಟಂ (ಯಶೋಚ. ೧–೪೩); ಕಲಿಸಿದವನೋ ಕಾಮತಂತ್ರವನೊಲಿಸಿದವನೋ ಕಿಱುವರೆಯದಲಿ ಸಲಿಸಿದವನೋ ಮುನ್ನ ನೀನೆನ್ನವರ ಸಲಿಗೆಗಳ (ಬಸಪು. ೪೦–೪೦). **ಕಿರುವರೆಯ:** ೨. ಎಳೆಯ ಪ್ರಾಯದವನು: ಪರಿಕಿಸಲು ರೂಪುರೇಖೆಯೊಳೊಂದು ಕುಂದಿಲ್ಲ ಕಿರುವರೆಯನಾತ ಸಮಪ್ರಾಯಸ್ತನೀತ (ನವಮೋ. ೨೭–೩೭). **ಕಿರುಹರೆಯ:** ೧. ಯಜಮಾನನ ಬಳಿ ಕುಳಿತಿದ್ದ ಕಿರುಹರೆಯದ ಗಡ್ಡವಿಲ್ಲದ ಒಕ್ಕಣ್ಣಿನ ಮನುಷ್ಯನಿಗೆ . . . ಹೆಚ್ಚು ಅರ್ಥವಾಗುತ್ತಿತ್ತು (ಪುನರು. ೩೦೧). [ಕಿಱು$_2$ + ಪರೆಯ]

**ಕಿಱುವಲೆ, ಕಿರುಬಲೆ** (ನಾ). ಒಂದು ಬಗೆಯ ಬಲೆ; ಚಿಕ್ಕ ಬಲೆ: ಕಿಱುವಲೆ, ಕಿಱುನಾಯ್ (ಶಮದ. ೧೮೧ ಪ್ರಯೋ); ಇಡುವಲೆ ಸಿಡಿವಲೆ ಕಿಱುವಲೆ ನಡೆವಲೆ ಪೆರ್ವಲೆ . . . ಎನಿಪ್ಪುವೆಸೆದುದಾ ಬೇಂಟೆಗರೊಳ್ (ಶಬಶಂ. ೩–೨೪). **ಕಿರುಬಲೆ:** ಕಿರುಬಲೆ ಹೆಬ್ಬಲೆ ಮಿಣೆಯು ಹುಲಿಯ ಬೋನು . . . ಮುಂತಾದ ಸಾಧನದಿಂದ ತೆರಳಿದರಾ ಬೇಟೆಯವರು (ಸೌಗಂಪ. ೨–೩೦). [ಕಿಱು$_2$ + ಬಲೆ$_1$]

**ಕಿಱುವಳೆ** (ನಾ). ಚಿಕ್ಕ ಮಳೆ; ತುಂತುರು ಮಳೆ: ಎಸೆವ ಲಿಂಗಾಂಗಣಕೆ ಸಮ್ಮಾರ್ಜಿಸುವ ಕಿಱುವಳೆ . . . ರಂಗವಾಲಿಯನಿಕ್ಕಿ ನಡೆತಪ್ಪ ಹೊಸಪರಿಯ ಸಸ್ಯಂಗಳುಂ (ಬಸಪು. ೧೯–೬೯). [ಕಿಱು$_2$ + ಮಳೆ (< ಮೞೆ)]

**ಕಿಱುವಳ್ಳ** (ನಾ). ಚಿಕ್ಕಹಳ್ಳ; ಸಣ್ಣಕುಂಟೆ; ಪಲ್ವಲ: ಕೊಳಕ್ಕಲ್ಲದೆ ಕಿಱುವಳ್ಳಕ್ಕೆಳಸುವುದೆ ಹಂಸೆ (ಮಹಾದೇ. ೧೯–೬). ಕಿಱುವಳ್ಳಂ [ಪಾಠಾಂ. ಕೀಱುವಳಂ] ಕ್ಷೀರನೀರಾರಮಂ . . . ಮೆಚ್ಚದಂತೆ (ಪುಣ್ಯಾಸ್ರ. ೧–೨೪). [ಕಿಱು$_2$ + ಪಳ್ಳ]

**ಕಿಱುವಳ್ಳಿ$_1$** (ನಾ). ೧. ಚಿಕ್ಕಹಳ್ಳಿ; ಸಣ್ಣಹಳ್ಳಿ: ನಾವಱಿಯೆ ಸೊನ್ನಲಿಗೆಯೆಂಬ ಕಿಱುವಳ್ಳಿಯಿದು (ಸಿದ್ಧರಾ. ೭–೩); ವರ ಕಾಸಿ ಕೇತಾರ ಹಂಪೆ ಪರ್ವತ ಮುಖ್ಯ ಸುಕ್ಷೇತ್ರಕಣೆಯಲ್ಲಿದು ಧರೆಯಱಿಯೆ ಕಿಱುವಳ್ಳಿಯಿಂದೆನಲ್ಕೆ (ರಾಘಚ. ೧೫–೫೦). ೨. ಒಂದು ಊರಿನ ಹೆಸರು: ಅಱದೊಱೆನದೀ ದಕ್ಷಿಣತಟೇ ತಾಮರಮುಗೆ ಪಾನುಂಗಲ ಕಿಱುವಳ್ಳಿ ಬಾಳವೂರು ಇತ್ಯೇತೇಷಾಂ ಗ್ರಾಮಾಣಾಂ ಮಧ್ಯೇ (ಎಇ. V, ೨೦೪–೬೮; 757). [ಕಿಱು$_2$ + ಪಳ್ಳಿ]

**ಕಿಱುವಳ್ಳಿ$_2$** (ನಾ). ಸಣ್ಣ ಬಳ್ಳಿ; ಚಿಕ್ಕ ಲತೆ: ಕಿಱುವೊಱೆಯನಾನಲಱಯದ ಕಿಱುವಳ್ಳಿಗೆ ತನ್ನ ಕಾಯ್ತು ಬಲ್ಗಾಯ್ ಪೊಱೆಯೇ (ಚಿಕವಿ. ೪–೬). [ಕಿಱು$_2$ + ಬಳ್ಳಿ]

**ಕಿಱುವಱಿ** (ನಾ). ಚಿಕ್ಕ ಮರಿ; ಎಳೆಯ ಮರಿ: ಗಱಿ ನೆಱೆಯದ ಕಿಱುವಱಿಗಳನಿಱುಂಕಿ ಪಕ್ಷದೊಳೆ ಪಾಱಲಾಱದೆ ಪಿರಿದುಂ ಮಱುಗುವ ಮರಾಳಿಗಳ (ರಾಜಶೇ. ೮–೯೮). [ಕಿಱು$_2$ + ಮಱಿ]

**ಕಿಱುವಱುಗುಲ್** (ನಾ). ಚಿಕ್ಕ ಹರುಗೋಲು; ಸಣ್ಣ ದ್ರೋಣಿ: ಪೊಸಪೂರದೊತ್ತಿನೊಳ್ ಸುೞಿವ ಕಿಱುವಱುಗುಲೆನಿಸಿ ತುಱುಗೆಮೆಯ ತೆರ್ಕೆಯೊಳ್ ಕೊಳಂಗೊಳ್ವ ಕಣ್ಣೀರೊಡನೆ ಘೂರ್ಣಿಸುವ ತರಳ ತಾರಕಂಗಳುಂ (ವರ್ಧಪು. ೭–೪೧ ವ). [ಕಿಱು$_2$ + ಪಱುಗುಲ್ (< ಪಱಿಗೋಲ್)]

**ಕಿಱುವಾಗಿಲು, ಕಿರುಬಾಗಿಲು** (ನಾ). ಚಿಕ್ಕ ಬಾಗಿಲು; ಸಣ್ಣ ಬಾಗಿಲು: ವೈಡೂರ್ಯವೆಸಕಮಾಂತಿರುವ ಕಿಱುವಾಗಿಲುಗಳಡಿಗಡಿಗೆ (ವೆಂಕಾರಾ. ೫–೨–೪). **ಕಿರುಬಾಗಿಲು:** ಬಿಗಿದರು ಬೀಗವ ಕಿರುಬಾಗಿಲಿಗೆ (ಕವಿಸೋ. ೧೫–೧೭). [ಕಿಱು$_2$ + ಬಾಗಿಲು (< ಬಾಗಿಲ್)]

**ಕಿಱುವಾನಿಸಿಕ** (ನಾ). ಸಣ್ಣ ಮನುಷ್ಯ; ಅಲ್ಪ ಮನುಷ್ಯ : ಪಸರಿಸಿ ಮಿಥ್ಯಾಸಂಕಲ್ಪಸಹಸ್ರದಿನಾಸೆವಡಿಸುತಿರ್ಪುದು ಕಿಱುವಾನಿಸಿಕರ್ಕಳಲ್ಲಿ ಸಾಜದೊಳೆ ಸುಲಭಮೆನಿಸಿರ್ದ ಮದನಲಾಘವಮೀಗಳ್ (ಕಾದಂಬ.೯೨). [ಕಿಱು₂ + ಮಾನಿಸಿಕ]

**ಕಿಱುವಾಯ್** (ನಾ). ಸಣ್ಣಬಾಯಿ : ಕೆಯ್ದಿರಿಪಿ ಕಿಱುವಾಯ್ಗೆಯ್ದು ಜೋಲ್ವಾಲಗೆದೋರ್ದು ಪಾಡುವುದುಮೊಳ್ಳಿತ್ತಲ್ತು (ಅದ್ಭುತ. ೨೪-೨೮). [ಕಿಱು₂ + ಬಾಯ್]

**ಕಿಱುವಿಟ್ಟು** (ನಾ). ಒಂದು ಕುಲ ಅಥವಾ ಪಂಗಡದ ಹೆಸರು (?) : ಮತ್ತಮಲ್ಲಿಯೆ[ಂ]ಣ್ಬಗ್ಗಾವುಣ್ಡುಗಳುಂ ಹನ್ನಸು ಕಿಱುವಿಟ್ಟು ಅಱುವತ್ತೊಕ್ಕಲು ಎಸ್ಟಿವರೆಲ್ಲರುಂ ನೆರೆದು (ಸೌಇಇ. XI-ii, ೧೬೩-೪೦ ; 1113). [ಕಿಱು ? + ಪಿಟ್ಟು]

**ಕಿಱುವಿಡು** (ಕ್ರಿ). (ಸಂತೋಷದಿಂದ) ಧ್ವನಿಮಾಡು (?) : ಸುರತದೆಡೆಯೊಳ್ಬೆಮರುಣ್ಮದನ್ನೆಗಂ ಮೆಯ್ಯನಿರ್ ಸ್ಯಕನಿರದನ್ನೆಗಂ ಸರಸಿಜಾನನೆ ಕಿಱುವಿಡಿ[ಡ]ದನ್ನೆಗ[ಪಾಠಾಂ. ಕಿಱುವಿಡಿದಳ್ಳೇಗ]ಂ . . . ಪುರುಷನಾಥನುಂ ಪೇೞೆಂತು ನಂಬುವಂ ಕೂರ್ತಳೆಂದು ನೀರೇರುಹದಳನೇತ್ರೆ (ಮದಕಿ. ೧೧-೫೫). [?]

**ಕಿಱುವಿದಿರ್, ಕಿಱುಬಿದಿರು** (ನಾ). ಸಣ್ಣಬಿದಿರು; ಚಿಕ್ಕ ಬಿದಿರು : ಕಿಱುವಿದಿರ್, ಕಿಱುವಲೆ (ಶಮದ. ೧೮೧ ಪ್ರಯೋ). **ಕಿಱುಬಿದಿರು** : ಕಿಱುಬಿದಿರುಗಳ ಕಂಟಕಿಗಳು ನೆಯ್ದುಕೊಂಡಿಱುಹಗೆ ದಾರಿಯ ಕೊಡದೆ ಮುಸುಕಿಹುವು (ಕಂಸವಿ. ೧೮-೪೫). [ಕಿಱು₂ + ಬಿದಿರ್₂]

**ಕಿಱುವೀಲಿ** (ನಾ). ಸಣ್ಣ ಪೀಲಿ; ಚಿಕ್ಕ ನವಿಲುಗರಿ : ಕಿಱುವೀಲಿ ಕಣ್ದೆಱೆಯೆ ಸೋಗೆಗೆ (ಪಂರಾಮಾ. ೭-೧೪೯); ನಿಂಬವಾಲೆಯ ಕಿಱುವೀಲಿಯ ಪೊಂಜೆಯದ ಕೇಶಬಂಧದೊಳಂ (ಜಗವಿ. ೪-೮೦ ವ); ನೆಱೆದಂಗಂ ನೀಲುವ ಬಣ್ಣದುಡೆ ಕಿಱುವೀಲಿಯ ದಂಡೆ ಪಣೆಯೊಳ ಮರ್ದಿರೆ (ಬಂಹರಿ. ೯-೧೪). [ಕಿಱು₂ + ಪೀಲಿ]

**ಕಿಱುವೀಳೆ** (ನಾ). ಒಂದು ಬಗೆಯ ಪಕ್ಷಿ : ಭೇರುಂಡಂ ಪೊಱಸು ಕಾಗೆಗಂಬೊಂದುರಿಗಂ ಕಾಱು ಕಿಱುವೀಳೆ ಕೊಯ್ಕುಂ ಕೀರಂಜಂ ಹರಡೆ (ಕಾವ್ಯಸಾ. ೧೦೪೩ ಶೂದ್ರಕ). [?]

**ಕಿಱುವು** (ನಾ). ಕಿರಿದಾಗಿರುವಿಕೆ; ಸಣ್ಣದಾಗಿರುವಿಕೆ (?) : ನಿಲವ ನೋಡಲು ಲಕ್ಷಯೋಜನದಳತೆಯಲ್ಲಿಹ ಮೇರುಗಿರಿ ನಿಚ್ಚಳದಲಿಳೆ ಹದಿನಾಲ್ಕ ಧರಿಸಿಹುದರಿದೆ ಕಿಱುವಿನೊಳು ಸುಲಲಿತದ ಸಾಸಿರದ ಸಂಖ್ಯೆಯನೊಲಿದು ಧರಿಸಿಹೆವೆನುತಲಲ್ಲಿಯ ವಿಲಸದುಪವನ ಕಂಟಕಿಗಳೊಪ್ಪಿಹವು ಫಲಭರದಿ (ಕೋಗಯ. ೪-೫೦). [ಕಿಱು₂ + -ವು]

**ಕಿಱುವುಣುಸೆ, ಕಿಱುಬುಣುಸೆ** (ನಾ). ಒಂದು ಊರಿನ ಹೆಸರು : ಕಿಱುವುಣುಸೆಯ ಬಯುಳಮ್ಮ (ಎಕ. VIII, ಸೊರಬ. ೫೦೦-೫ ; 958). **ಕಿಱುಬುಣುಸೆ** : ಮೇಲಣ ಕಿಱುಬುಣುಸೆ ಗ್ರಾಮದಿಂದ (ಎಕ. VIII, ತೀರ್ಥಹ. ೬೫-೨೨ ; 1667). [ಕಿಱು₂ + ಪುಣುಸೆ]

**ಕಿಱುವುಲಿ, ಕಿಱುಬುಲಿ** (ನಾ). ಚಿಕ್ಕಹುಲಿ; ಚಿರತೆ; ಕಿರುಬ : ಅವಱ ಹಿಂದೆ ಹಿಂದೆ ನೆಲನಂ ಹತ್ತಿ ಹಣುಗಿ ಜುಣುಗಿ ಜೂಜಾಡುವ ಕಿಱುವುಲಿ [ಪಾಠಾಂ. ಜುಣುಂಗಿ ಜಾಡುವ ಕಿಱುಉಲ್ಲೆ]ಗಳುಮಂ (ನಂಬಿರ. ೧೭-೯); ಕಿಱುವುಲಿಯ ಜೋಡಂ ತೊಟ್ಟಂತಿರಿಟ್ಟೆಳಮಾಗೆಯುಂ (ಅನಂಪು. ೨-೨೯ ವ). **ಕಿಱುಬುಲಿ** : "ತರಕ್ಷು, ಮೃಗಾದನ" (ನಾಚಿರಾ. ೬); ಕಿಱುಬುಲಿ ಜೋಡನಿಕ್ಕಿದವೋಲು ಮುಗದೊಳು ತುಱುಗಿದ ಬಿಂದು ಸಂದಣಿಸಿ ನೆಱೆ ಮಾವುತರೇಱೆ ಬಂದರಂದಾನೆಯ ತಱುಬಿ ನಿಂದಾಸ್ಥಾನಕಾಗಿ (ಅನಂಚ. ೨-೩೪). [ಕಿಱು₂ + ಪುಲಿ]

**ಕಿಱುವುಸವೂರು, ಕಿಱುವುಸೂರ್** (ನಾ). ಒಂದು ಊರಿನ ಹೆಸರು : ನಾಡ ನಾಲ್ವಾಗಮುಣ್ಡುಂ ಕಿಱುವುಸವೂರುಮಂ ಕಲ್ನಾಡುಗೊಟ್ಟರ್ (ಎಕ. IV, ಹೆಗ್ಗಡ. ೧೦೩-೧೨ ; 910). **ಕಿಱುವುಸೂರ್** : ಕಿಱುವುಸೂರ್ ಪೆರ್ಗ್ಗಲಿಯದ ಬಜಯಿತ ಗಾವುಣ್ಡನ (ಮೈಆರಿ. ೧೯೩೧, ೪೩-೪ ; 993). [? + ಊರು₃ (< ಊರ್)]

**ಕಿಱುವೆಂಚೆ** (ನಾ). = ಕಿಱುವಳ್ಳ : ಅಪಾರ ದುಗ್ಧಸಾಗರದೆ ವಿಹಾರಿ ಪಂಚೆ ಕಿಱು[ಪಾಠಾಂ. ಱು]ವೆಂಚೆಯು ವಾರಿಗೆ ಚಿತ್ರಮೀವುದೇ (ವೃಷವಿ. ೮-೧೦). [ಕಿಱು₂ + ಬೆಂಚೆ]

**ಕಿಱುವೆಟ್ಟು, ಕಿಱುಬೆಟ್ಟ, ಕಿಱುಬೆಟ್ಟು** (ನಾ). ಚಿಕ್ಕಬೆಟ್ಟ ; ಗುಡ್ಡ : ಕಿಱುವಟ್ಟನೂಳ್ ಪುಟ್ಟಿದ ಬೇವು ಬೊಬ್ಬುಲಿಗಳಂ (ಕಬ್ಬಿಕಾ. ೫೪). **ಕಿಱುಬೆಟ್ಟ** : ಲಗ್ಗೆಯ ರಥ ಹರಿವಾಗ . . . ಕಿಱುಬೆಟ್ಟ ಬಡಬೆಟ್ಟ ನುಗ್ಗಾಗಿ ನೆಲಸಮವಾಯ್ತು (ಭರಚ. ೨೩-೫೨). **ಕಿಱುಬೆಟ್ಟು** : "ಪಾದಾಃ, ಪ್ರತ್ಯಂತಪರ್ವತಾಃ – ಈ ೨ ಕೆಲದ ಕಿಱುಬೆಟ್ಟುಗಳ್" (ಹಲಾಯು. ೨೮-೧೩). [ಕಿಱು₂ + ಬೆಟ್ಟು₃]

**ಕಿಱುವೆಣ್** (ನಾ). ಎಳೆಯ ವಯಸ್ಸಿನ ಹೆಣ್ಣು ; ತರುಣಿ : ಮಿಱುಗುವ ಮಿಸುನಿಯೆಂದೆನೆ ರಂಜಿಸಿತಾ ಕಿಱುವೆಣ್ಣ ರಮ್ಯ ನಾಸಿಕವು (ಶ್ರೀಪಾಲ. ೩-೬೭).

ಕಿಱುವೆಂಡಿರ್ (ಬಹುವ) : ಕಿಱುವೆಂಡಿರ ಕೇಳಿಗೆ ಸಮೆದ ಮಣಿರಾಟಳದಿಂದಿಂಬುವೆತ್ತು ವಸಂತರಾಜನ ವಿಳಾಸಮಂಟಪದಂತೆ (ರಾಜಶೇ. ೮-೫ ವ). [ಕಿಱು₂ + ಪೆಣ್]

**ಕಿಱುವೆರಲ್, ಕಿರುಬೆರಳು, ಕಿಱುವೆರಲು, ಕಿಱುವೆರಳ್, ಕಿಱುವೆರಳು.** (ನಾ). ಸಣ್ಣಬೆರಳು ; ಕಿಬ್ಬೆರಳು : ಕಿಱುವೆರಲುಗುರಿಂದೆ ಬೈತಲೆ ದೆಗೆದಾಗ ಮಱೆದುಂಬಿಗುರುಳ ಮಾನಿನಿಗೆ ತುಱುಬನಿಕ್ಕಿದರು (ಮೋಹತ. ೨೩-೨೯) ; ಎಳದುಪ್ಪುಳಮಂ ಸೋದಿಸಲೆನುತೊರ್ವಳ್ ಕಿಱುವೆರಲುಗುರ್ಗೊನೆಯಿಂ ಕರ್ದುಕುತ್ತಿರೆ (ಜಯುಕಾ. ೧-೬೧) ; ಕಿಱುವೆರಲಿಂ ಗೋವರ್ಧನಗಿರಿಯಂ ಧರಿಯಿಸಿದ ಪೆರ್ಮೆಯಿಕೆರ್ಮ (ವಸ್ತುವಂ. ೧೫-೧೧೭). **ಕಿರುಬೆರಳು** : ಅವಳು . . . ಕಿರುಬೆರಳಿನ ಉಗುರಿನ ಕೊನೆಯಿಂದ ಬರಹವನ್ನು ತಿದ್ದಿದಳು (ಬದುಕಿ. ೧೭೦). **ಕಿಱುವೆರಲು** : ಅದು ಶಿವೆಯ ಕಿಱುವೆರಲಿಗುಂಗುರವಾಗಲು (ಚಿಬವು. ೭-೧). **ಕಿಱುವೆರಳ್** : ಅಳಿವಲ್ಲಿ ಕಿಱುವೆರಳ ಮೊಳನರತ್ನಿಯೆನಿಕ್ಕು (ಮಂಗರಾ. ೯೫-೯) ; ಮಾಮರದೊಳಿಪ್ಪ ನಿರ್ಯಾಸಮಂ ತೆಗೆದು ಕಿಱುವೆರಳುಗುರ್ಗೊನೆಯಿಂದೆ ತಿದ್ದಿ ಬರೆದು (ಜೈಮಿಭಾ. ೩೦-೨೯). **ಕಿಱುವೆರಳು** : ಕೋ ಮುದ್ರಿಕೆಯ ನೀನೆಂದು . . . ನಿಜನಂದನನ ಕಿಱುವೆರಳಿಗಿಟ್ಟು (ತೊರರಾ. ೨-೪-೫) ; ಮೇಳೈಸಿದ ವೀಣೆಯನಱಸಿ ತೆಗೆದುಕೊಂಡಾ ಶ್ರುತಿಯ ಕಿಱುವೆರಳಿನಲ್ಲಿ ಮಿಡಿದು (ಸಾಳ್ವಭಾ. ೮-೭). [ಕಿಱು₂ + ಬೆರಲ್]

**ಕಿಱುವೆರಲು** 'ಕಿಱುವೆರಲ್' ನೋ.

**ಕಿಱುವೆರಳ್** 'ಕಿಱುವೆರಲ್' ನೋ.

**ಕಿಱುವೆರಳು** 'ಕಿಱುವೆರಲ್' ನೋ.

**ಕಿಱುವೆಲರ್** (ನಾ). ನಸುಗಾಳಿ ; ಮೆಲುಗಾಳಿ ; ಮಂದಮಾರುತ : ಕಮ್ಮಲರ್ಗಳಂ ಸೂಱೆವಿಡುತೆ ಕಿಱುವೆಲರೊಳೆತ್ತಲುಂ ಸಾರಿಸುತೆ (ಜೈಮಿಭಾ. ೮-೩) ; ತಮ್ಮೆತ್ತಣಿಂ ಕಿಱುವೆಲರ್ ಸೋಕೆ (ಅದ್ಭುತ. ೧-೫). [ಕಿಱು₂ + ಎಲರ್]

**ಕಿಱುವೆಸ** (ನಾ). ಸಣ್ಣ ಕೆಲಸ; ಸುಲಭ ಕಾರ್ಯ(?) : ಎನ್ನ ಪುಣ್ಯೋದಯದಿಂದೆಬವೆಸನಾಗಿಯುಮಿಂತಿದು ಕಿಱುವೆಸನೆನಗೆಂದು ನಿಶ್ಚಯಂ ಬಿನ್ನವಿಸಿಂ (ಶಾಂತಿಪು. ೩-೫೯). [ಕಿಱು₂ + ಬೆಸ₁]

**ಕಿಱುವೆಸಳ್** (ನಾ). ಚಿಕ್ಕ ಎಸಳು ; (ಹೂವಿನ) ಸಣ್ಣ ದಳ: ಬೆಳುಪು ನೆಱೆಯದ ಕಿಱುವೆಸಳ ನೆಯ್ದಿಲುಗಳೀ ಮಡದಿಯ ಕುಡಿತೆಗಂಗಳಿಗೆ ಪಡಿಯಲ್ಲ (ಬಸಪು. ೪-೨೫). [ಕಿಱು$_2$ + ಎಸಳ್ (< ಎಸೞ್)]

**ಕಿಱುವೆಳಗು** (ನಾ). ನಸುಬೆಳಕು; ಸ್ವಲ್ಪಹೊಳಪು: ಕಾಲುಗುರ್ಗಳ ಕಿಱುವೆಳಗು ಕೆದಱಿ ಕರಮೆಸೆದಿರ್ಕುಂ [ಪಾಠಾಂ. ಕಣ್ಗೆಸೆದಿರ್ಕುಂ] (ಲೀಲಾವ. ೩-೨೯). [ಕಿಱು$_2$ + ಬೆಳಗು$_2$]

**ಕಿಱುವೆಳ್ಗುಂದೂರ್** (ನಾ). ಒಂದು ಊರಿನ ಹೆಸರು: ಬೆಳ್ಗುನ್ದೂರುಂ ಕಿಱುವೆಳ್ಗುಂದೂರುಂ ಸತ್ತಿಯೂರುಂ (ಎಕ. III, ನಂಜನ. ೧೫೫-೬ ; 970). [ಕಿಱು$_2$ + ಬೆಳ್ಗುಂದೂರ್]

**ಕಿಱುವೆಳ್ದಿಂಗಳ್** (ನಾ). ಸ್ವಲ್ಪವಾದ ಬೆಳುದಿಂಗಳು; ನಸು ಬೆಳುದಿಂಗಳು: ಮಿಱುಪ ಸುಲಿಪಲ್ಲ ನುಣ್ಬೆಳಗು ಕಿಱುವೆಳ್ದಿಂಗಳಂ ಕಱೆಯೆ (ರಾಜಶೇ. ೪-೧೪ ವ). [ಕಿಱು$_2$ + ಬೆಳ್ದಿಂಗಳ್]

**ಕಿಱುವೆಳ್ಮುಗಿಲ್** (ನಾ). ಸಣ್ಣ ಬಿಳಿಯ ಮೋಡ: ಭಗಣಂ ಬಳಸಿರೆ ಕಿಱುವೆಳ್ಮುಗಿಲೊಪ್ಪುವ ತೆಱದೆ (ರಾಜಶೇ. ೮-೯). [ಕಿಱು$_2$ + ಬೆಳ್ಮುಗಿಲ್]

**ಕಿಱುವೆಱೆ** (ನಾ). ಎಳೆಯ ಚಂದ್ರ; ಬಾಲಚಂದ್ರ: ನಗೆಗಣ್ಣೆಯ್ದಿಲನಮರ್ದಪ್ಪಿದ ಕಿಱುವೆಱೆಯೋ . . . ಎನೆ ಕಣ್ಬಗೆಗೊಪ್ಪಂಬಡೆದುದು ನೊಸಲ್ (ಜಯಕಾ. ೩-೪೯); ಮಿಱುಪ ಕಿಱುವೆಱೆಯ ಬಾಂದೊಱೆಯ (ರೀವಣ. ೧೦೩-೧); ನೆಱೆವೆಱೆಮೊಗದೊಳ್ ಪೊಣ್ಮಿಸೆ ಕಿಱುವೆಱೆ ಸಿರಿವೆಣ್ಣನೊಲ್ದು ಚಿಕದೇವೇಂದ್ರಂ (ಅಪ್ರತಿ. ೩೫-೯). [ಕಿಱು$_2$ + ಪೆಱೆ]

**ಕಿಱುವೆಟ್ಟನಗರ** (ನಾ). ಒಂದು ಊರಿನ ಹೆಸರು: ಕಿಱುವೆಟ್ಟನಗರಾ ಪನ್ನಿರ್ವರ್ಗ್ಗಂ (ಎಕ. XIV, ತಿರುಮ. ೨೫೩-೩ ; 800). [?]

**ಕಿಱುವೇಂಟೆ** (ನಾ). ಒಂದು ಬಗೆಯ ಬೇಟೆ; ಸಣ್ಣಪ್ರಾಣಿಗಳ ಬೇಟೆ (?): ಬಲ್ಮೆಗಂ ಬಸನಕ್ಕಂ ಸವಿಯಪ್ಪ ಕಿಱುವೇಂಟೆಯುಂ ಪೆರ್ವೇಂಟೆಯುಮಲ್ಲದುೞಿದ ಬೇಂಟೆಯುಂ ಬೇಂಟೆಯೆನ್ನೆಂ (ಪಂಪಭಾ. ೫-೪೬ ವ); ಕಿಱುವೇಂಟೆಯ ನಾಯ್ಗಳಿಂದಮಟ್ಟೆ ಪಟ್ಟೆ ಪೆರ್ಮೊಲನಂತೆ ಭಯಮನೆಡಗವಿಸಿ ಬೆಳ್ಪೋಟವೋಡಿ (ಶಾಂತಿಪು. ೬-೯೨ ವ); ಪೆರ್ವೇಂಟೆ ಕಿಱುವೇಂಟೆಯಾವರವೇಂಟೆಯೆನಲ್ ಮೂಱುವೇಂಟೆ ಪೆಸರ್ವಡೆದಿರ್ಕುಂ (ಸೂಕ್ತಿಸು. ೩-೯೫). [ಕಿಱು$_2$ + ಬೇಂಟೆ]

**ಕಿಱುವೊಱೆ** (ನಾ). ಚಿಕ್ಕಹೊರೆ; ಅಲ್ಪಭಾರ: ಕಿಱುವೊಱೆಯನಾನಲಱಿಯದ ಕಿಱುವಳ್ಳಿಗೆ ತನ್ನ ಕಾಯ್ತ ಬಲ್ಗಾಯ್ ಪೊಱೆಯೋ (ಚಿಕವಿ. ೪-೬). (ಕಿಱು$_2$ + ಪೊಱೆ]

**ಕಿಱುಸುಂಕ** (ನಾ). ಒಂದು ಬಗೆಯ ಸುಂಕ: ಪರಿಕಿಸದೀ ಧರ್ಮ್ಮದೊಳರಸರ ಕಾಣಿಕೆ ಕೊಳ್ಳಿಯರುವಣಂ ಕಿಱುಸುಂಕಂ ಪುರಧರ್ಮ್ಮಂ ಬಣ್ಣಿಗೆಯೆಂದರೆವೀಸಮನಳಿಪಿಕೊಣ್ಡವಂ ಚಣ್ಡಾಳ (ಎಇ. XXVII, ೧೫-೨೯ ; 1114); ಕಾಣಿಕೆ ಕೊಳ್ಳಿಯರುವಣ ಕಿಱುಸುಂಕ ಗರಡಮುಂ ಬಣ್ಣಿಗೆಯುಂ (ಬೊಂಕಶಾ. ೧೯೩೮, ಇಂಡಿ. ೩೫-೩೬ ; ?). [ಕಿಱು$_2$ + ಸುಂಕ]

**ಕಿಱುಸುರಿಗೆ** (ನಾ). ಸಣ್ಣಕತ್ತಿ; ಚಿಕ್ಕಕತ್ತಿ: ಪುಗುವಾಗಳ್ ಜವನಂತುಟು ಕಿಱುಸುರಿಗೆಯೊಂದನಾರ್ಪಿಂ ಬಲಗೈಯ್ಯಿಂ ತಳೆದು ಪೊಕ್ಕು (ದಶಕು. ೮-೩೨೬). [ಕಿಱು$_2$ + ಸುರಿಗೆ]

**ಕಿಱುಸೂಜಿ** (ನಾ). ಸಣ್ಣಸೂಜಿ; ಚಿಕ್ಕಸೂಜಿ: ಕಾಮಂ ಕಿಱುಸೂಜಿಗೆ ಸೇರಿಸಿದ ಪೊಸಮುತ್ತುಗಳೋ (ಜಯಕಾ. ೪-೧೬). [ಕಿಱು$_2$ + ಸೂಜಿ]

**ಕಿಱುಸೋದರ** (ನಾ). ಕಿರಿಯ ಸಹೋದರ; ತಮ್ಮ: ಕಿಱುಸೋದರಂ ಕೂಡಿ (ಮೈಅರಿ. ೧೯೪೪, ೧೩-೬ ; 1036). [ಕಿಱು$_2$ + ಸೋದರ]

**ಕಿಱುಳ**, ಕಿರುಳ, ಕಿರುಳು, ಕಿರ್ಲು, ಕಿಱುಳು (ನಾ). ೧. ಚಿಕ್ಕದು; ಮರಿ: ಗಜವೊಯ್ಯದ ಕಣ್ದೆಱೆಯದ ಕಿಱುಳಂ ತನ್ನೊಡೆದ ತತ್ತಿಯೊಳ್ ಭೇರುಂಡಂ ಪೊಱಮಡಲದೊಂದು ಶರಭಂ ಬಿಱುತೋಡಿತು ಸತ್ತ್ವನಿಧಿಯ ಶೈಶವಮಿಳಿದೇ (ಜಗವಿ. ೧೬-೧೩). ೨. ಕಿರಿಯ; ಮಗು: ಚಿತ್ರದ ಲಂಪಿನಿಂ ಕಿಱುಳನಂತಿರಲಿನ್ನಯ ಮಾಯ್ದ ಕಾಲ್ಗಳಂ ನೆತ್ತಿಯೊಳಿಟ್ಟು ಕೊಂಡಱುತಮರ್ದನ್ (ಕಾದಂಉ. ೬೧೮); ಅದಱೊಳ್ ಪುಟ್ಟಿದ ಗಂಡರೆಲ್ಲಮತಿವೀರರ್ . . . ಕಿಱುಳ[ಪಾಠಾಂ. ಬ]ರೆಲ್ಲಂ ಪಂಡಿತರ್ (ಅನಂಪು. ೧೧-೧೨). **ಕಿರುಳ**: ೨. ಕಿರುಳರಂ ಪಡೆಯೆ ಭೂವರನುಮಮನರಸಿಯುಂ ಪರಮೇಷ್ಠಿಯುಂ ಪೂಜೆಗೆಯ್ದು (ದಿಲೀಚ. ೧-೨೫); ನೀಂಗೈದ ಕಜ್ಜಮಂ ಕಿರುಳರೆಸಗುವರ್ (ಶ್ರೀರಾಮಾ. ೨೯೯-೩೮೦). **ಕಿರುಳು**: ೩. ಮೊಳಕೆ; ಮೊಳೆ; ಅಂಕುರ: ಕೂಳೆಗೆ ಕಿರುಳು ಒಡೆದಿದೆ (ರೂಢಿ). **ಕಿರ್ಲು**: ಕರು, ಕುನ್ನಿ, ಮರಿ . . . ಕಿರ್ಲು, ಪಡ್ಡೆ, ಮಗು, ಹುಡುಗ (ಕಂನುಹು. ೮೧). **ಕಿಱುಳು**: ಪೂತನಿಯಂತೆ . . . ಮಾಕಾಳಿ ನೆಱೆದ ಕಾಕಾಕಾರದಿಂ ಬಂದೆಱಗೆ ಹೊಱಜಗಲಿಯಲಿ ಮಲಗಿದ ಕಿಱುಳೆ ಹೊಡೆದೊತ್ತಿದನು ನಖ ಮುಖ ಪಕ್ಕವೆದೆ ಮುಱಿಯೆ (ಸಾಳ್ವಭಾ. ೧೧-೪೨). [?. / ತಮಿ. ಚಿಱುವಲ್]

**ಕಿಱುಳೆ** (ನಾ). ಚಿಕ್ಕವಳು; ಹುಡುಗಿ: ಕಿಱುಳೆಯತಿಮುಗ್ಧಮತಿ ಮುಂದಱಿಯದವಳ್ ಸೂಡೆ ಮಾಲೆಯಂ (ಮಹಾನೀ. ೫-೩೮). [ಕಿಱುಳ + -ಎ$_2$]

**ಕಿೞ್$_1$** 'ಕೀೞ್$_1$' ನೋ.

**ಕಿೞ್$_2$** (ನಾ). ಸಮಾಸದಲ್ಲಿ 'ಕೆೞಗು' ಎಂಬುದಕ್ಕೆ ಬರುವ ಆದೇಶ. 'ಕಿೞ್ಕಿಟ್ಟು' ಪರಾ. [< ಕೆೞಗು]

**ಕಿೞಿಂಗು** (ನಾ). ಗೆಣಸು: "ಕಿೞಂಗೆನೆ ಗೆೞಸುಂ" (ರನ್ನಕಂ. ೨). [ದೇ. ‖ ತಮಿ. ಮಲ. ಕಿೞಙ್ಙು; ತುಳು. ಕಿರೆಂಗ್, ಕೆರೆಂಗ್]

**ಕಿೞಿಗೆ** (ನಾ). ಕೆಳಗೆ (?): ಉಜ್ಜುತ್ತರ್ಮ್ಮಕೆಱೆಯಾ ಕಿೞಿಗೆ ಮತ್ತರ್ಕ್ಕೆಯ್ಯುಂ ಇರ್ಮತ್ತತೊರ್ಣ್ಣಮುಂ (ಸೌಇಇ. IX-i, ೪೬-೯ ; 9ನೆಯ ಶತ). [< ಕೆೞಗೆ ?]

**ಕಿೞಲಸುಂಗ** (ನಾ). ಒಂದು ಊರಿನ ಹೆಸರು (?): ಕುಮ್ಬಸೆಯಂ ಕಟ್ಟೆಱಿಗ್ಗನ್ದರನುಮ್ಮಾರಮಯ್ಯನುಕಿೞಲಸುಱಿಗ್ಗೊದೊಳ್ರಾಜಮಾರಮಯ್ಯತ್ತಲ್ಕೆಯ್ಯಂ ಕೊಟ್ಟರ್ (ಎಕ. VIII, ಸೊರಬ. ೮೫-೬ ; 876). [?]

**ಕಿೞಲೆನಾಡು** (ನಾ). ಒಂದು ಪ್ರದೇಶದ ಹೆಸರು : ಶಿವಮಾರ ಮಣಲಿ ಆರಸ ಕೊಮ್ಮಡಿ ಕಿೞಲೆನಾಡಾಳೆ (ಎಕ. XIV, ೨೫೨-೩ ; 750). [ಕಿೞಲ್$_0$ + ನಾಡು]

**ಕಿೞವ**, ಕಳವ, ಕೆೞವ (ನಾ). ವಯಸ್ಸಾದವನು; ಮುದುಕ: "ಕಿೞವನೆನೆ ಮುದುಪಂ" (ಸಂಜೀವ. ೪). **ಕಳವ**: ಕಳವರ್ಕಳನಂಟರ್ದರ್ಂ ನಡೆಯುಂ ಕೆಟ್ಟದಾರಿಯೊಳ್ (ಸೌನಂದ. ೨-೨೬). **ಕೆೞವ**: "ಕೆೞವನೆಂದು ಮುದುಕಂ" (ಶಮುದ. ಪರಿ. ೧); ಓ ಕೆೞವ, ತೆಯ್‌ರೆಸಿಯ! ಸುದ್ದಿಯೇನೀಗಳ್ (ಅಂತಿಗೂ. ೯೧೫). [ದೇ. ‖ ತಮಿ. ಮಲ. ಕಿೞವ]

**ಕಿೞವಿ**, ಕೆೞವಿ (ನಾ). ವಯಸ್ಸಾದವಳು; ಮುದುಕಿ: ಇವಳ್ ಕಿೞವಿಯನಳವಿಗೆಳಸದೆ ತನ್ನಱಿವಿಂಗಂಗವಿಸಿದಪಳಿದಂ ತವಿಪೆನೆಂದು ಪೊಣ್ದು (ಚಿಕವಿ. ೬-೧೪೭ ವ). **ಕೆೞವಿ**: ನಮ್ಮ ಕೆೞವಿ ಭಾಗ್ಯಹೀನೆ ಭಾರ್ಗವಿ (ಅಶ್ವತ್ಥಾ. ೬೯೮). [ಕಿೞವ + -ಇ$_2$]

**ಕಿೞಾರ** (ನಾ). ಒಂದು ಪ್ರದೇಶದ ಹೆಸರು (?): ಊರಮ್ಮೊಡಣ ಕಿೞಾರ ಕೆಯ್ಯೊಳ್ಪಿರಿಯ ಪಾನೆಯೊಳಱುಗಣ್ಡುಗಂ ಮಣ್ಣುಮ (ಎಕ. VIII, ತೀರ್ಥಹ. ೨೭-೧೩ ; 929). [?]

**ಕೆೞಾಳ್** 'ಕೀೞಾಳ್' ನೋ.

**ಕೆೞನೇ** (ನಾ). ಒಂದು ಹೊಳೆಯ ಹೆಸರು: ಕೆಱೆಗೋಡು ವಿಷಯೇ ಕೆಱೆಗೋಡುತ್ತರ ಪಾರ್ಶ್ವ ಕೆೞನೇನದೀಸೇತುಂ ಬನ್ಧಯಿತ್ವಾ (ಎಕ. III, ಮಂಡ್ಯ. ೧೧೩-೩೭; 713). [?]

**ಕೆೞಿಪು** (ಕ್ರಿ). = ಕೆೞಿಸು: ನೃಪತಿ ತಱಿಸಂದಪವರ್ಗಮಾರ್ಗದೊಳ್ ಸಮನಿಸಿದಂದದಿಂ ಕೆೞಿಪಿದಂ ಕುಟಿಲಾಳಕಜಾಳಕಂಗಳಂ (ಅನಂಪು. ೯-೭೨). [ಕೆೞ್$_1$ (< ಕೀೞ್$_1$) + -ಪು$_2$]

**ಕೆೞಿಸು** (ಕ್ರಿ). ಕೀೞಿಸು; ಕೀಳುವಂತೆ ಮಾಡು: ನಟ್ಟಿರ್ದಂಬಂ ಮುನೀಶನಿಳೇಶನಿಂ ಕೆೞಿಸೆ ಸರಲಿಂ ಮುನ್ನ ತದ್ದ್ವಾರದಿಂದಸು ಪೋಪುದುಂ (ಕಾವ್ಯಾವ. ೮೧೫). [ಕೆೞ್$_1$ (< ಕೀೞ್$_1$) + -ಇಸು$_3$]

**ಕೆೞು** (ನಾ). ನೆಲದ ತುಂಡು (?): ಸರ್ವಮಾನ್ಯವಾಗಿ ಕೊಟ್ಟ ಕೊಡಗಿಯ ಕೆೞು ಮಂಗಳಮಹಾಶ್ರೀ (ಎಕ. X, ಗೋರಿಬಿ. ೩೩-೪; ?). [ದೇ. ‖ ತಮಿ. ಮಲ. ಕೆೞ್ = ತುಂಡು, ಚೂರು]

**ಕೆೞೆ** (ಅ). ಕೆಳಗೆ: ಮೇಲೂರಾ ಕೆೞೆ ಪಡಿಕಣ್ಣುಗಂ ವ್ರೀಹಿ ಭೂಮಿಂ ದತ್ತವ್ಯ [ವಾನ್] (ಎಕ. IX, ದೊಡ್ಡಬ. ೬೭-೧೪; 459). [< ಕೀೞ್$_2$]

**ಕೆೞ್ಗಟ್ಟು, ಕೆಗ್ಗಟ್ಟು, ಕೆರ್ಗಟ್ಟು, ಕೀೞ್ಗಟ್ಟು** (ನಾ). ಕೆಳಭಾಗದ ಕಟ್ಟು; ಕೆಳಗೆ ಕಟ್ಟಿದ ಪಟ್ಟಿ: ಕೆೞಾದೇಶಕ್ಕೆ- . . . ಕೆೞ್ಗಣೆ, ಕೆೞ್ಗಟ್ಟು, ಕೆೞ್ಗಡಲ್ (ಶಮದ. ೧೭೬ ಪ್ರಯೋ). **ಕೆಗ್ಗಟ್ಟು:** ಕೇತಕೀದಳದ ಕುರುಳಗಂ ಕೆಗ್ಗಟ್ಟಿನೊಳಳವಡಿಸಿ (೧೧ಶ. ೭-೭೨ ವ); ಶೂಲಂ ಡಮರುಮುಸಿಫಳಕ ಕೆಗ್ಗಟ್ಟಿನೆಸೆವ ಬಾವುಲಿ (ಸಿದ್ಧರಾ. ೪-೬); ಕೆಗ್ಗಟ್ಟಿನ ಕಠಾರಿಯ ಹೆಗಲಡಾಯುಧದ (ಕುವ್ಯಾಅ. ೪-೪೩); ಮಿಸುಪ ಕೇದಗಿಯೆಸಳ ಕೆಗ್ಗಟ್ಟ ಕಟ್ಟ ರಂಜಿಸುವ ಪೂದೇರನು (ಚಬಪು. ೩೫-೬). **ಕೆರ್ಗಟ್ಟು:** ಕೆರ್ಗಟ್ಟಿನ ಸುರಗಿಯು ಕಟ್ಟಿದ ಚೆಂದರಿಯ (೧೧ಶ. ೬-೫೫ ವ). **ಕೀೞ್ಗಟ್ಟು:** ಕೀೞ್ಗಟ್ಟಿನ ಫೇಣಂ [ಪಾಠಾಂ. ಕೆರ್ಗಟ್ಟಿನ ನೇಣಂ] ಕಿತ್ತು ತೊಡೆಯಂ ಕುಯ್ದು ಕೊಡಲ್ (ಪುಣ್ಯಾಸ್ರ. ೪-೨೫ ವ). [ಕೆೞ್$_2$ + ಕಟ್ಟು$_2$]

**ಕೆೞ್ಗಡಲ್** (ನಾ). ಪೂರ್ವದಿಕ್ಕಿನ ಸಮುದ್ರ: ಕೆೞಾದೇಶಕ್ಕೆ- . . . ಕೆೞ್ಗಣೆ, ಕೆೞ್ಗಟ್ಟು, ಕೆೞ್ಗಡಲ್ (ಶಮದ. ೧೭೬ ಪ್ರಯೋ). [ಕೆೞ್$_2$ + ಕಡಲ್$_1$]

**ಕೆೞ್ಗಣೆ** (ನಾ). ಕೆಳಗಿನ ಗಣೆ, —ಕೋಲು (?): ಕೆೞಾದೇಶಕ್ಕೆ- . . . ಕೆೞ್ಗಣೆ, ಕೆೞ್ಗಟ್ಟು (ಶಮದ. ೧೭೬ ಪ್ರಯೋ). [ಕೆೞ್$_2$ + ಕಣೆ$_2$ (< ಗಣೆ)]

**ಕೆೞ್ಗನಾಡು** (ನಾ). ಒಂದು ನಾಡಿನ ಹೆಸರು; ಬೀರ ನೊೞಂಬ ಮೆಚ್ಚಿ ಕೆೞ್ಗನಾಡ ಪಿರಿಯ ಬದಿರೂರ ಕಲ್ನಡುಗೊಟ್ಟಂ (ಎಕ. X, ಗೋರಿಬಿ. ೪-೨೧, 930). [ಕೆೞ್ಗ$_0$ + ನಾಡು]

**ಕೆೞ್ಗವಲ್** (ನಾ). ಕೆಳಗಿನ ಕವಲು,—ರೆಂಬೆ: ಕೆೞಾದೇಶಕ್ಕೆ- . . . ಕೆೞ್ಗವಲ್, ಕೆೞ್ಗಣೆ, (ಶಮದ. ೧೭೬ ಪ್ರಯೋ). [ಕೆೞ್$_2$ + ಕವಲ್$_2$]

**ಕೆೞ್ಗವಳಿಗೆ** (ನಾ). (ನಮ್ರವಾಗಿ) ಕೆಳಗೆ ಹಿಡಿದ ಕರಂಡಕ: ಕವಿತೆಗೆ ವಾಗ್ದೇವತೆ ಕೆೞ್ಗವಳಿಗೆವಿಡುವಂತೆ ತಂಬುಲಂದೀವಿದ ಪೊಂಗವಳಿಗೆಯುಂ ಪಿಡಿದಂಬಿಕೆಗವಟಯ್ಸಿದಳೊರ್ವಳಿಂದ್ರವಧು ತಂಬುಲಮಂ (ಶಾಂತಿಪು. ೯-೧೮೦). [ಕೆೞ್$_2$ + ಕವಳಿಗೆ$_2$]

**ಕೆೞ್ಗುಂದ** (ನಾ). ಒಂದು ನಾಡಿನ ಹೆಸರು: ಕೆೞ್ಗುಂದ ಮಣ್ಡಲಕ ತನಯಯಾ (ಮೈಆರಿ. ೧೯೧೮, ೮; 700). [ಕೆೞ್$_2$ + ಕುಂದ$_3$]

**ಕೆೞ್ಗೆಱೆ, ಕೀೞ್ಗೆಱೆ** (ನಾ). ಕೆರೆಯ ಕೆಳಗು; ಕೆರೆಯ ಕೆಳಭಾಗದಲ್ಲಿರುವುದು: ಕೆೞ್ಗೆಱೆಗುಡಗ ತಾಣಮ್ ನೊಕ್ಕಿಗೋಡುಮಣ ಲಕ್ಕಿಯಸ್ಕ (ಮೈಆರಿ. ೧೯೧೮, ೧೦; 700); ಕೆಟ್ಟಗ್ಗೆಱೆಯ ಕೆೞ್ಗೆಱೆ ಪೋಗಿ ಅಕ್ಷರಕಲ್ಲ ಮೇಗೆ (ಎಕ. II, ೩೩-೫; 800); ನಿಪ್ಪಳ್ಳಿ ಕೆೞ್ಗೆಱೆ ಮೂನೂಱುಗಣ್ಡುಗಂ ರಾಜಮಾನವಙ್ಕೊಟ್ಟಂ (ಎಕ. XII, ಶಿರಾ. ೨೮-೪೩; 943); ಸಂತಂ ಕೆೞ್ಗೆಱೆಗಳೊಳೋರಂತಿರೆ ಕೆಯ್ಯಾವವಳ್ದಿರಂ ನೋೞ್ಪವರಂ (ಕಾವ್ಯಾವ. ೨೧೩). **ಕೀೞ್ಗೆಱೆ:** ಒಳಗೆಱೆ ಕೀೞ್ಗೆಱೆಯ ಕಳನಿ×ಳ್ ಮೂಗಣ್ಡುಗಂ (ಸೌಇಇ. IX-i; ೨೪-೪೩; 936). [ಕೆೞ್$_2$ + ಕೆಱೆ]

**ಕೆೞ್ಗೊಂಬು** (ನಾ). ಕೆಳಗಿನ ಕೊಂಬೆ; ತಳದ ಕೊಂಬೆ: ಕೆೞಾದೇಶಕ್ಕೆ—ಕೆೞ್ಗೊಂಬು, ಕೆೞ್ಗವಲ್, ಕೆೞ್ಗಣೆ (ಶಮದ. ೧೭೬ ಪ್ರಯೋ). [ಕೆೞ್$_2$ + ಕೊಂಬು$_1$]

**ಕೆೞ್ಗ** (ನಾ). ಒಂದು ಊರಿನ ಹೆಸರು. ☞ ಈಗಿನ 'ಕೆಗ್ಗ' ಎಂಬ ಗ್ರಾಮ: ಸ್ವಸ್ತಿಶ್ರೀ ಶಾನ್ತರಸ [ಪೃ]ಥುವೀ ರಾಜ್ಯದುಳ್ ಕೆೞ್ಗ ಬಟರಿಙ್ಗೆ ಬೆಸಗೆಯ್ವಲ್ಲಿ (ಎಕ. VI, ಕೊಪ್ಪ. ೪೦-೨; 700). [?]

**ಕೆೞ್ಗಣ್, ಕಿಕ್ಕಣ್, ಕಿಕ್ಕಣ್ಣು, ಕೆಗ್ಗಣ್, ಕೆಗ್ಗಣ್ಣು, ಕೆರ್ಗಣ್, ಕೀೞ್ಗಣ್ಣು** (ನಾ). ಕೆಳಮೊಗವಾಗಿ ನೋಡುವ ಕಣ್ಣು; ಕೆಳಗಣ್ಣು: ಮನಂಗೊಂಡು ನಿನ್ನನೆ ಕೆೞ್ಗಣ್ಣೊಳೆ ನೋಡುತಿರ್ಪನವಂ ಚೇರಮ್ಮಂ (ಪಂಪಭಾ. ೩-೫೪); ಮುಂದೆ ಬಂದವ್ವಳಿಸುತ್ತುಂ ಕುಕ್ಕುರಂಗಳ್ ತೆಗೆಯೆ ಮಿಗೆ ಬಳಲ್ದೊಯ್ಯನಂತಂತೆ ಕೆೞ್ಗ [ಪಾಠಾಂ. ಗ್ಗ] ಣ್ಣೊಳೆ ನೋಡುತ್ತ (ಸೂಕ್ತಿಸು. ೩-೧೩೮). **ಕಿಕ್ಕಣ್:** ಕೆಲದಿನಿಯನನೋವದೆ ಕಿಕ್ಕಣ್ಣಿಂದೊಲವಿನೊಡನೆ ಬೆರೆವಾ ನಸುನಾಣಂ ಲಲಿತಲತಾಂಗಿ ನಿರೀಕ್ಷಿಪ ಬೆಡಗನದೇನಂ ಬಣ್ಣಿಪೆನು (ಜಯಕಾ. ೮-೪೩); ಅರಸನಾರೋಗಿಸುತಿದ್ದು ಕಿಕ್ಕಣ್ಣಿಂದ ಅರಸಿಯರುಗಳ ನೋಡಿದನು (ಭರತ. ೪-೧೦೨). **ಕಿಕ್ಕಣ್ಣು:** ಪಾಲ್ಗಡಲನೊಳಗವಗಾಹವಾಗಿ ಮಿಗೆ ಕಿಕ್ಕಣ್ಣಿನಿಂದ ಕಂಬನಿದುಂಬಿ ದೇವೇಂದ್ರ ಬಂದ ಪಸುರ್ಮೆಯ್ಯನಡೆಗೆ (ಏಕೋಪು. ೧೧-೭೬). **ಕೆಗ್ಗಣ್:** ಮಳೆಯಿಂದ ಪೊಱಮಟ್ಟು ಮೈಮುಱಿದು ಕೆಗ್ಗಣ್ಣಿಂದೆ ಕಂಡಾಳ್ಗಳಂ (ಕಾವ್ಯಸಾ. ೧೧೧೬); ಮದಗಜದ ಪೊರಜು ಪೊಯ್ದೇೞ್ವ ದೊಡ್ಡಮಾರ್ಗದ ಕೆಣಂಗಳಂ ಕೆಗ್ಗಣ್ಣೊಳ್ ಪದನತ ನೃಪರೀಕ್ಷಿಸೆ (ಅನಂಪು. ೨-೯). **ಕೆಗ್ಗಣ್ಣು:** ಕಱುವಳಿದ ತಾಣಕ್ಕೆ ಧೇನು ಮೆಲ್ಲನೆ ಬಂದು . . . ಕೆಗ್ಗಣ್ಣಿನಿಂ ಕಱುವ ನೋಡಿ (ಮುಸುರ. ೨೧೯-೩); ತಾಯಾನನವ ಕೆಗ್ಗಣ್ಣಿಂದ ನೋಡುತ (ಸಾಳ್ವಭಾ. ೧೭-೩೭); ಅರಸ ಕೆಗ್ಗಣ್ಣಿನಿಂದ ನೋಡಿಯೂ ನೋಡದವನಂತೆ ಆಕೆಯ ಸರಸಲೀಲೆಯನ್ನು ಕಂಡು ಆನಂದಿಸಿದ (ಮಾಮಲ್ಲಿ. ೩೧). **ಕೆರ್ಗಣ್.** 'ಕೆರ್ಗಣ್ಣಿಕ್ಕು' ಪರಾ. **ಕೀೞ್ಗಣ್ಣು:** ೨. ಕೀಳಾಗಿ ನೋಡುವುದು; ತಿರಸ್ಕಾರ ದೃಷ್ಟಿ: ಅವನ ಪೂರ್ವ ಸಮಾಜದವರಿಗೆ ಕೀೞ್ಗಣ್ಣಿದ್ದಿರಬಹುದೇ (ನಾಡೋಜ. ೯೯). [ಕೆೞ್$_2$ + ಕಣ್]

**ಕೆೞ್ಗನದೇವ** (ನಾ). ಕೆೞ್ಗ ಎಂಬ ಊರಿನ ದೇವತೆ (?): ಕೆೞ್ಗನದೇವಕೆ ಎಲ್ಲಮೂನ್ ಸರ್ವ ಪರಿಹಾರಂ ಬಿಟ್ಟ (ಎಕ. VI, ಕೊಪ್ಪ. ೩೮-೫; 675). [ಕೆೞ್ಗ + ದೇವ]

**ಕೆೞ್ಗನೇಶ್ವರ** (ನಾ). = ಕೆೞ್ಗನದೇವ: ಕೆೞ್ಗನೇಶ್ವರದಾ ದೇವರ ಪರಿವರಿಯ ಭಂತಮುಂ ಕವಿಲೆಯ ಪಾಲುಮೆಟ್ಟುಂ (ಎಕ. VI, ಕೊಪ್ಪ. ೩೭-೨; 675). [ಕೆೞ್ಗ + ಈಶ್ವರ]

**ಕೆೞ್ಗು, ಕೆರ್ಗು$_1$** (ಕ್ರಿ). ಕೆಳಮಟ್ಟದಲ್ಲಿರು; ತಗ್ಗಿನಲ್ಲಿರು; ಕುಳ್ಳಾಗು; ಕುಗ್ಗು: "ಕೆೞ್ಗಿದನೆಂದು ಗುಜ್ಜಂ" (ಶಮದ. ಪರಿ. ೧). **ಕೆರ್ಗು$_1$:** ಸಿಂಹಾಸನದಿಕ್ಕೆಲದೊಳಂ ಕೆರ್ಗಿದುವಾಗಿರ್ದ ಮಣಿಮಯ ಭದ್ರಾಸನದೊಳ್ (ಶಾಂತಿಪು. ೧೦-೨೯ ವ); ಭದ್ರಾಸನಯುಗಂಗಳಿನಿತಾನುಂ ಕೆರ್ಗಿದವಾಗಿ ಸಮೆದು ಶೋಭಾಸ್ಪದಮಾದವು (ಮಹಾಪೇ. ೮-೧೦೬); ಸುರ್ಗಿದುದೆನೆ ತರ್ಗಿದುದೆನೆ ಕೆರ್ಗಿದುದೆನೆ ಜರ್ಗುವಿಟ್ಟುದೆನೆ ಪೆರ್ಗತ್ತಾವೊರ್ಗದ ಪೆರ್ಗರ್ಗಳವೆನೆ . . . ಸರೇಫ ಪದಂಗಳ್ (ಶಮದ. ೩೮). [?]

**ಕೆಟ್ಟುಗಂಡೆ, ಕೀೞ್ಗಂಟಿ, ಕೀೞ್ಗಂಟೆ, ಕೀೞ್ಗೊಂಟೆ** (ನಾ). ೧. ಕೆಳಗಿನ ಕುಳಿ, —ಕುಣಿ. ೨. ಒಂದು ಬಗೆಯ ವೀರ ಆತ್ಮಹತ್ಯೆ, —ಬಲಿದಾನ. ☞ ಒಡೆಯನು ತೀರಿಕೊಂಡಾಗ ಆತನ ಆಶ್ರಿತನು ತನ್ನ ಯಜಮಾನನ ಹೆಣದ ಕೆಳಗೆ ತನ್ನನ್ನು ಹೂಳಿಸಿಕೊಳ್ಳುವಿಕೆ: ಪೆರ್ಮಾನಡಿಗಳ್ ಮನೆಮಗತ್ತಿನ ಅಗರಯ್ಯಂ ನೀತಿಮಾರ್ಗ್ಗಪೆರ್ಮ್ಮಾನಡಿಗೆ ಕೆಟ್ಟುಗೞ್ಚೆಯಾದಂ (ಎಕ. III, ತಿರುಮ. ೯೧–೫ ; 921) ; ಆತನ ಬೆಳವಡಿಚ ಅಲ್ಲಗಂ ಕಿಟ್ಟುಗೞ್ಚೆಯಾಗಿ (ಎಕ. XI, ದಾವಣ. ೧೧೯–೬ ; 930). **ಕೀೞ್ಗಂಟೆ :** ಈ ಪದ್ಧತಿಗೆ 'ಕೀೞ್ಗಂಟೆ' ಎಂಬ ಹೆಸರು ಇತ್ತು. ಇದು ಒಂದು ವಿಶಿಷ್ಟವಾದ ವೀರ ಆತ್ಮಹತ್ಯಪದ್ಧತಿ (ಪ್ರವಾಇ. I, ೩೧೨) ; ಸಾವಿರಾರು ಮಾಸ್ತಿಗಲ್ಲುಗಳೂ, ಕೀೞ್ಗಂಟೆ, ಗರುಡ ಎಂಬ ವೀರ ಪದ್ಧತಿಗಳೂ . . . ಸಾಕ್ಷಿಗಳಾಗಿವೆ. (ನಂಜುಂಡ, ೧೪೮). **ಕೀೞ್ಗಂಟೆ :** ಅರಸನಂ ಜಾಮಿಸಿ ನುರಿವೃತ್ತಿಟ್ಟುದಂ ಕಣ್ಡು ಕೀೞ್ಗೞ್ಚೆಯಾಗಲ್ (ಸೌಇಇ. XI–i,೧೧–೧೯ ; 998). **ಕೀೞ್ಗೊಂಟೆ :** ಮಯ್ದುಮ್ಮ ಕೀೞ್ಗೊೞ್ಚೆಯಾಗಿ ಸತ್ತೊಡೆ . . . ಕೊಟ್ಟುದು ಕಲ್ನಾಡು (ಸೌಇಇ. IX–i, ೪೦–೯ ; 998). [ಕೀೞ್$_2$ + ಕುಂಡೆ (< ಕುಂಟೆ$_2$)]

**ಕೆಟ್ಕೈವೆಸ** (ನಾ). ಕೈಕೆಳಗಿನವರು ಮಾಡುವ ಕೆಲಸ ; ಊಳಿಗದ ಕೆಲಸ : ಪೂಸುವ ಬೀಸುವ ಮಡಿಯುಂ ಪಾಸುವ ನೀರ್ಗುಡಿಯುಲೆಱೆವ ಕಿಟ್ಕೈವೆಸದೊಳ್ ಪಾಸಂತಂ ವಿಟಗ್ರಾಮದುದು . . . ಅಬಲೆಯರೊಳ್ (ಸೂಕ್ತಿಸು. ೧೦–೧೪೦). [ಕೀೞ್$_2$ + ಕೈ$_2$ (< ಕೆಯ್$_2$) + ಬೆಸ$_1$]

**ಕಿಟ್ಟು** 'ಕಿಚ್ಚು' ನೋ.

**ಕಿಟ್ಟು** 'ಕೀೞ್$_1$' ಪರಾ.

**ಕಿಟ್ಟುಬಾಳೆಱೆತ್ತಿ** (ನಾ). ಒಂದು ದೇವತೆಯ ಹೆಸರು(?) : ಚತುಸ್ಸೀಮೆಯಾನೊಳಗಾಗೆ ಒಡೆಯ ದೊಡ್ಡವಾಡಿಯ ಕಿಟ್ಟುಬಾಳೆಱೆತ್ತಿ ಭಟಾರಿಗೆ ಬಲ್ಯುಪಹಾರಕ್ಕೆ ದೇವಭೋಗಮಾಗೆ ಕೊಟ್ಟದು (ಎಕ. IX (S), ಬಂಗಳೂ. ೧೫೨–೫೧ ; 828). [?]

**ಕಿಟ್ಟುಲೆ, ಕಿತ್ತಲೆ$_2$, ಕೀೞುದಲೆ, ಕೆಳಂದಲೆ**(ನಾ). ಕೆಳಕ್ಕೆ ಬಾಗಿದತಲೆ; ಕುಗ್ಗಿದ ತಲೆ ; ಸೋಲು : ತುಱುಪಟ್ಟಯೆಲ್ಲಂ ಕಿಟ್ಟುಲೆಯುಂ ಕಿಱಿಂದಲೆಯುಂ ಕಲ್ಲಿಯುಂ ಕವಿಯುಮಾದವುದಿದೇನೆಂದು ಸಂಭ್ರಮಿಸಿ (ಲೀಲಾವ. ೫–೧೩೪). **ಕಿತ್ತಲೆ$_2$ :** ಕತ್ತಲೆ ಕಿತ್ತಲೆಯಾಗೆ ಚಂದ್ರಮಂ ಕಂಡೆ ಉಳೂಕ ಸೇನೆ ನೆಱೆ ಕಣ್ಣಿಡಲೆೞ್ದ ಪೂರ್ವಶೈಲಮಂ ಬಂದರವಿಂದ ಬಂಧು (ಪುಣ್ಯಾಸ್ರ. ೯–೧೫). **ಕೀೞುದಲೆ.** 'ಕೀೞುದಲೆಗೊಳ್' ಪರಾ. **ಕೆಳಂದಲೆ :** ಕೆಳಂದಲೆಯಾಗಿರೆ ಪೊರ್ದುವಾನೆಗಳ್ (ವರ್ಧಪು. ೮–೫೨).

ಕಿತ್ತಲೆಕೆಡದಲೆ = ಅಸ್ತವ್ಯಸ್ತ ; ಎಕ್ಕಸಕ್ಕ ; ಚೆಲ್ಲಾಪಿಲ್ಲಿ : ಮಹಾರಾಜಂ ಕಂಡು ಚೋದ್ಯಂಬಟ್ಟು ಕಿತ್ತಲೆಕೆಡದಲೆಯಂ ಮಾಡಿಯುಗಳ ಲ್ವೇಳ್ದು ನಿರೂಪಿಸಲ್ (ಪುಣ್ಯಾಸ್ರ. ೨–೬೪ ವ). ಕಿಟ್ಟಲೆಕಿಟಂದಲೆಯಾಗು, ಕಿಟ್ಟಲೆಕೀಟಂದಲೆಯಾಗು = ಅಸ್ತವ್ಯಸ್ತವಾಗು ; ಚೆಲ್ಲಾಪಿಲ್ಲಿಯಾಗು: ಪುರಮಂ ನೆರೆ ಮುತ್ತಿ ಮಹೇಂದ್ರನಿರ್ದೊಡಂತೋಡಲೊಡರ್ಚೆ ಕಿಟ್ಟಲೆಕಿಟಂದಲೆಯಾದಪುದೀ ಜಗಜ್ಜನಂ (ಚಂದ್ರಪು. ೫–೧೦೩) ; ಇರದೋಡಿ ಬರುತ್ತಮಿರ್ದುದಾಕುಳ ಭಯದಿಂದೆ ಕಿಟ್ಟಲೆಕಿಟಂದಲೆಯಾಗಿ ತದೀಯ ಭೂಜನಂ (ಕುಸುಮಾ. ೧೧–೨) ; ಪುಯ್ಯಲಗಾವಳಿ ಕೆಯ್ಯಿನಿಟ್ಟುದೀ ತೊಱಿಸಿದ ಪಾಂಗೆ ಕಿಟ್ಟಲೆಕಿಟಂದಲೆಯಾದುದು ಕೂಡೆಪಟ್ಟಣಂ (ಅನಂಪು.೧೧–೬೩); ಬೆಟ್ಟುಗಳ ಮೂಲಶಿಲಾತಳ ಸಂಧಿಬಿಟ್ಟುವಾಕುಳತೆಯ ನಾಳ್ದು ಕಿಟ್ಟಲೆಕಿಟಂದಲೆಯಾದುದು ತರ್ಗಿದಿಗ್ಗಜಂ (ಪುಷ್ಪಪು. ೫–೬೬) ; ಅಂತು ಘಾತಿಚತುಷ್ಟಯಮೆಂಬ ಕಟ್ಟಲೆಕಿಟ್ಟಲೆ ಕೀಟಂದಲೆಯಾಗಿ ನಿರವಶೇಷಂ ಪಡೆಯಲೊಡಂ (ಅನಂಪು. ೯–೧೧೯ ವ). [ಕೀೞ್$_2$ + ತಲೆ$_1$]

**ಕಿಟ್ಟುಊರ್** (ನಾ). ಒಂದು ಊರಿನ ಹೆಸರು : ಕಿಟ್ಟುಊರಲ್ ವಿಣ್ಣುರ್ಗ್ಗೆ ಕೊಟ್ಟೊ ಪೆರಿಯಡಿಗಳ್ ಕಿಱುಕುಡಲೂರವ್ ಕೆಱೆಯ ಕೆಱಿಗು (ಪ್ಯೆಆರಿ. ೧೯೧೮, ೧೧–೧೯ ; 5ನೆಯ ಶತ). [ಕಿಟ್ಟು + ಊರ್]

**ಕಿಟ್ನುಡಿ, ಕೀೞುನುಡಿ** (ನಾ). ಕೀಳುಮಾತು ; ಕ್ಷುದ್ರವಾದ ಮಾತು ; ಹೀನವಾದ ನುಡಿ: ಏಱು ಭವದ ಕೇಡಡಸುವ ಕಿಟ್ನುಡಿಯುಂ ನುಡಿದಳ್ (ಯಶೋಚ. ೩–೧೨). **ಕೀೞುನುಡಿ :** ಪೌರಜನ ಜಾಳಿಸುವ ಕಂಬನಿಗಳಲಿ ಬಿಱುನಾಲಿಗೆಯ ಬೈಗುಳಲಿ ಮುನಿಯನು ಕೀಳು ನುಡಿಯಲಿ ಜಱೆವುತಿರ್ದುದು (ತೊರರಾ. ೧–೯–೪೩). [ಕೀೞ್$_2$ + ನುಡಿ$_2$]

**ಕಿಟ್ನೆಲ, ಕಿನ್ನೆಲ, ಕಿಳ್ನೆಲ** (ನಾ). ೧. ತಗ್ಗಾದ ನೆಲ: ನೀರೆಡೆ ತೋರ್ದೆಡೆಯೊಳುಂಟು ಪಾಟ್ನೆಲಂ ಕಿಟ್ನೆಲಂ ಲೋಗರೆಂತುಂ ಬನವುಂ ಕಂಡರಲ್ತು (ಅದ್ಭುತ. ೪೦–೨೨). ೨. ಕೆಳಗಿನ ಲೋಕ ; ಅಧೋಲೋಕ ; ಪಾತಾಳ : ಮೃತ್ಯುವುಂ ಆ ಕಾಳರಾತ್ರಿಯುಂ ಪಿಡಿಗೆ ಕಿಟ್ನೆಲದೊಳ್ ಎಂದುಂ (ಅಶ್ವತ್ಥಾ. ೫೨೫) ; ಅಣ್ಣನನ್ ಮರ್ಮ್ಮಾಡಿ ಕಿಟ್ನೆಲದೆ ಕಱಿದರೊಳ್ ಪುಗಿಸಿ ಮನ್ನಿಸಿದನೆಂಬರ್ (ಅಂತಿಗೊ. ೨೦). ಕಿಟ್ನೆಲಕೆ ನೂಂಕಲಿರ್ದ ಬಿಱುಪೊಯ್ಲಿನಿಂದಾಳ್ ಕುಡಿಯನಱಿಸಿದೆನ್ (ಬದ್ದಪ್ರ. ೧೪–೨೬೮). **ಕಿನ್ನೆಲ :** ೧. ಕಿನ್ನೀರ್, ಕಿನ್ನೆಲಂ (ಶಮದ. ೧೭೬ ಪ್ರಯೋ.) ; ಎಲರೆತ್ತಿ ಸುರಿದು ನೀರ್ಕಿನ್ನೆಲದಂತಿರೆ ಪರೆದು ಪುದಿಯೆ (ಲೀಲಾವ. ೫–೩೧) ; ಅರುಣೋದಯಕಮವಿರಳಮಾಗಿ ಕರಂ ಪರಕಲಿಸಿದ ಕಿನ್ನೆಲದೊಳಗೇಱಿಂದುರುಳ್ದ ಸಮಸ್ತಮಹಾರಥ ತುರಗ ಪದಾತಿ ಮತಂಗಮುದ (ಜಯಕಾ. ೭–೨೧). ೨. ಕಿನ್ನೆಲದ ನಾಗರೇಂ ಕೊಂಡೊಯ್ದು ಕಟ್ಟಿದರೋ (ರಾಮಾಶ್ವ. ೧೨೧–೯) ; ಜನ್ನಗುದುರೆಯ ನಂದು ಕಿನ್ನೆಲಕೆ ಕಪಿಲನುಯ್ಯಲದನರಸುತ (ಶ್ರೀರಾಪ. ೪–೩). **ಕಿಳ್ನೆಲ :** ೧. "ಕಿನ್ನಲ್ ಕಿಳ್ನೆಲದಲಿ" (ಕರ್ನಾನಿ. ೬). ೨. ತನಿಯ ನೆರೆ ಕಿಳ್ನೆಲದ ಬೀಡಿಂಗೆ ಸೀನು (ಪಾರಸಿ. ೨೩–೫೩೧).

[ಕೀೞ್$_2$ + ನೆಲ]

**ಕಿಟ್ನೆಲೆ, ಕೀಟ್ನೆಲೆ** (ನಾ). ೧. ಕೆಳಗಿನ ಪ್ರದೇಶ : ಆ ವಿಮಳಾಪುರೀ ವಿಪುಳಗೋಪುರರಾಜಿಯ [ರತ್ನರಾಜಿ] ಶೋಭಾವಹ ಭೂಮಿಕಾವ್ರಜದ ಕಿಟ್ನೆಲೆಯೊಪ್ಪುವ ಮತ್ತವಾರಣವ್ಯಾವೃತ ಘಂಟಿಕಾವಳಿಯ ನಾದಮನು ದ್ಭವಿಸುತ್ತೆ (ಕುಸುಮಾ. ೨–೮೩). ೨. ಕೆಳಮಟ್ಟ ; ಅಡಿಮಟ್ಟ : ನೆಲಮಾಡದ ಪೊಸದೇಸಿಯ ನೆಲೆಮಾಡದ ಸುರವಿಮಾನಮೆಯ್ದುಲಣಂ ಕಿಟ್ನೆಲೆ[ಪಾಠಾಂ. ಕೀಳ್ನೆಲ] ಯಾದುವಿವಱ ತೆಱದಿಂ ನೆಲೆಯಾದುವೆ ಸಕಲಜನದ ಕಣ್ಣಂ ಮನಕಂ (ಮಲ್ಲಿಪು. ೨–೭೮). **ಕೀಟ್ನೆಲೆ :** ತೊಳಗುವ ತೋರ ಕಣ್ಮಲರ್ಗಳ್ . . . ಲಸತ್ಕಟೀತಟಂ ತಿಳಿವೊಡಿದಲ್ತೆ ಸತ್ಪುರುಷ ಲಕ್ಷಣಮೆಂಬ ಕವಿಪ್ರಸಿದ್ಧಿ ಕೀಟ್ನೆಲೆಯೆನಿಸಿತ್ತೆನುತ್ತಬಲೆ ಚುಂಬಿಸಿದಳ್ ನಿಜಮೂರ್ತಿಚಿತ್ರಮಂ (ದಶಕು. ೧೦–೫೩).

[ಕೀೞ್$_2$ + ನೆಲೆ]

**ಕಿಟ್ಪಡಿಯಱ** (ನಾ). ದ್ವಾರಪಾಲಕರಲ್ಲಿ ಕನಿಷ್ಠನಾದವನು ; ಕೆಳದರ್ಜೆಯ ಪ್ರತೀಹಾರಿ : ಅಱಿಪೆ ಮೊದಲವರ್ಗೆ ಕಿಟ್ಪಡಿಯಱರವರಧಿಪಂಗೆ ಬಿನ್ನಪಂಗೆಯ್ವುದುಂ (ಶಾಂತಿಪು. ೧೦–೧೭೮).

[ಕೀೞ್$_2$ + ಪಡಿಯಱ]

**ಕಿಟ್ಪಡಿಸು, ಕಿಳ್ಪಡಿಸು, ಕೀಳ್ಪಡಿಸು, ಕೀೞ್ಪಡಿಸು, ಕೀಟ್ಪಡಿಸು, ಕೀಟ್ಪಡಿಸು** (ಕ್ರಿ). ಕೀಳೆನಿಸು ; ತುಚ್ಛಗೊಳಿಸು ; ಸೋಲಿಸು ; ಮೀರು : ಯುಗಾವಸಾನ ಮಹಾಂಬೋಧಿವೇಲಾ ಕಲ್ಲೋಲವಿಲಾಸ ಸಮುಲ್ಲಾಸಪ್ರತಿಭಾಸಮುಮಂ ಕಿಟ್ಪಡಿಸಿದ ವಿದ್ಯಾಧರರಾಜನ ಸಭಾ ಮಂಡಳಂ (ಶಾಂತಿಪು. ೩–೬೬ವ). **ಕಿಳ್ಪಡಿಸು :** ಸಂದಣಿಸಿದ ವೃಕ್ಷ ಮೆಯ್ಗಂಪಿನಿಂದ ಶ್ರೀಗಂಧವ ಕಿಳ್ಪಡಿಸಿದುವು (ನೋಹತ. ೪–೫೭).

**ಕೀಳ್ಪಡಿಸು :** ಬೇಟದಲಿ ಬೀಳ್ಕಾಡಿ ಕಲೆಗಳ ಕೂಟದಲಿ ಕೀಳ್ಪಡಿಸಿ ಸರ್ವಸ್ವವನು ನೆಱೆ ಕವರಿ (ತೊರರಾ. ೧-೫-೪೨); ಆಯತದೋಳಿಂದ್ರಾರ್ಕ ಹರಸಖಾಶ್ವಂಗಳಂ ಕೀಳ್ಪಡಿಸುತ . . . ಬಂದತ್ತು ತುರಗಬಲಂ (ಚಬಪು. ೪೭-೩೫). **ಕೀಳ್ವಡಿಸು :** ಬಂದತ್ತು ನಳಿನಸಖ ಸುರಪರ ರಥಗಳಂ ಕೀಳ್ವಡಿಸಿ ರಥಸೈನ್ಯಂ (ಚಬಪು. ೪೭-೩೭). **ಕೀೞ್ಪಡಿಸು :** ಪಾರಸಿಕನಂ ಪಱಿದು ಪಾರಿಯಾತ್ರನನುಱಿದು ಹೂಣನಂ ಕೀೞ್ಪಡಿಸಿ (ಜಗವಿ. ೧೭-೧೧೪); ಶ್ರೀಯಂ ಮದೀಯಂ ಪ್ರಿಯಾಬ್ಜನಿಯ ತೊೞ್ತುಱಿ ಮಾಡಿ ಕೀೞ್ಪಡಿಸಿದಂ ತಾನೆಂದು ಕಾಯ್ದಂತೆ (ಅನಂಪು. ೭-೫೩); ಮಡದಿಯ ಸೆಳೆನಡು ತನ್ನಯ ಬಡತನದಿಂ ಹರಿಯ ಮಧ್ಯಮಂ ನಯದಿಂ ಕೀೞ್ಪಡಿಸುತ್ತಿರ್ಪುದು (ದಶಕು. ೬-೩೭); ಸೂರ್ಕಾರ್ಗಳ್ಗಳ ಬಂಬಲ್ಪೊಟ್ಪೆಯಂ ಕೀೞ್ಪಡಿಸಿ ಥಮುಥಮುಥ್ಮಾನಂ (ಚಿಕವಿ. ೬-೨೬೨). **ಕೀೞ್ವಡಿಸು:** ಚಿಕದೇವರಾಯನಡಿಯಂ ಸಾರ್ದ ದೊರೆಗಳ್ಕೆಂತಾಂತಮ್ಮ ಪಗೆಗಳಂ ಕೀೞ್ವಡಿಸಿರ್ದಂತೆ (ಅಪ್ರತಿ. ೧೨೦-೩). [ಕೀೞ್ಪಡು + -ಇಸು$_3$]

**ಕೀೞ್ಪಡು, ಕೀಳ್ಪಡು, ಕೀೞ್ವಡು, ಕೀೞ್ವಡು** (ಕ್ರಿ). ಕೆಳಗಾಗು; ಹೀನವಾಗು; ತಿರಸ್ಕೃತವಾಗು; ಸೋಲು; ನೈಚ್ಯಭಾವವನ್ನು ತಳೆ: ಈ ಭೂಮಿಗೆ ಮಿಗಿಲಾದೆನ್ನೀ ಭೋಗಮೆ ಭೋಗಮೆಳೆಗೆ ಕೀೞ್ಪಟ್ಟ ಫಣೀಂದ್ರಾಭೋಗಂ ಭೋಗಮೆ (ಶಾಂತಿಪು. ೨-೧೨); ವರನಾಗಕನ್ನೆಯರ್ . . . ಕೀೞ್ಪಟ್ಟು ಪೋಗಿ ಪೊಕ್ಕರ್ ನೆಲನಂ (ನೇಮಿಪು. ೩-೧೭೭). **ಕೀಳ್ಪಡು :** ಸಿಂಹದ ಮುಪ್ಪು ಈ ಗಾಂಗೇಯರ ಮುಪ್ಪು ಸಾಮಾನ್ಯವೆ? ವನಮಾತಂಗಗಳಿಂದಲೂ ವೈರಿಚತುರಂಗಬಲಗಳಿಂದಲೂ ಕೀಳ್ಪಡುವುದೆ? (ಭಾಮುಣಿ. ೧೭). **ಕೀೞ್ಪಡು :** ಮಾರ್ಕೊಂಡು ನೀವಿನ್ನು ಕೀೞ್ಪಟ್ಟು ನುಡಿಯೆ ಕಾದಂಬರೀದೇವಿ ಬೇಡಿಸುವಳ್ (ಕಾದಂಉ. ೧೫೭); ಒಂದುಱಿದುದಿಲ್ಲೆನೆ ಕೊಟ್ಟನಿಳಾಧಿನಾಥಂ . . . ಸಲೆ ಕೀೞ್ಪಡೆ ಕಲ್ಪಭೂರುಹಂ (ಚಂದ್ರಪು. ೩-೧೦೩). **ಕೀೞ್ವಡು :** ಇವನಂಶುಮಾಲೆ ಕೀೞ್ವಡೆ ಬಲುಗ್ಗೆಯ ಬಾಳ ಪೊಳೆಪಿಂ (ಪಂರಾಮಾ. ೯-೭೪). [ಕೀೞ್$_2$ + ಪಡು$_1$]

**ಕೀೞ್ಪರೆ** (ನಾ). ಕೆಳಗಿನ ಪದರ; ಕೆಳಗಿನ ಪೊರೆ: ಕೀೞ್ಪ [ಪಾಠಾಂ. ಕೀೞ್ವರಿ]ರೆ ಬಿಂಬಿಸಲ್ (ಶಮದ. ೧೬೫ ಪ್ರಯೋ).

[ಕೀೞ್$_2$ + ಪರೆ$_4$ (< ಪೊರೆ$_2$)]

**ಕೆೞ್ಪೊಟ್ಟೆ, ಕಿಬ್ಬೊಟ್ಟೆ, ಕಿಳ್ಪೊಟ್ಟೆ, ಕೀೞ್ಪೊಟ್ಟೆ** (ನಾ). = ಕೆೞ್ಪೊಡೆ: (ಕ). **ಕಿಬ್ಬೊಟ್ಟೆ :** ಇಲಿಹಿಕ್ಕೆಯನ್ನು ನೀರೊಳಗರೆದು ಕಿಬ್ಬೊಟ್ಟೆಗೆ ಪೂಸೆ ಮೂತ್ರ ಬಿಡುವುದು (ವಿವೈವಿ. ೭೫). **ಕಿಳ್ಪೊಟ್ಟೆ :** ಮುಱಿಯುಮರ್ದಿರೆ ಕಿಳ್ಪೊ[ಪಾಠಾಂ. ಳ್ಪೊ]ಟ್ಟೆಯೊಳ್. . . ಸಾಳೀಜಂಘಂ ಕರಂ ಪಲ್ದೆಱೆದು ನಡುಗಿ ಹಜ್ಜೆಯಿಂದು ಪುರ್ಬಿಕ್ಕಿತಾಗಳ್ (ರಾಜಶೇ. ೯-೨೯). **ಕೀೞ್ಪೊಟ್ಟೆ :** "ಕೀೞ್ಪೊಡೆಯೆನೆ ಕೀೞ್ಪೊಟ್ಟೆಗೆ . . . ಪೆಸರ್" (ಚತುನಿ. II, ೫೭); ಬಿರ್ಕೆಯರ್, ಇಪ್ಪಾರ್ಗನಿ, ಕೀೞ್ಪೊಟ್ಟೆ (ಶಬ್ದಾನು. ೯೦ ಪ್ರಯೋ). [ಕೀೞ್$_2$ + ಪೊಟ್ಟೆ$_1$]

**ಕೆೞ್ಪೊಡೆ, ಕಿಳ್ಪೊಡೆ, ಕೀಳ್ಪೊಡೆ, ಕೀೞ್ಪೊಡೆ** (ನಾ). ಕೆಳಹೊಟ್ಟೆ; ಹೊಕ್ಕುಳ ಕೆಳಭಾಗ; ವಸ್ತಿ: ಕೆೞ್ಪೊಡೆ ಮೇಗಾಲ್ ಪೆರಲುಂಗುಟಂ ಬೆರಿ . . . ಕೆಕ್ಕೆ ಕಾಲಡಿಯೆಂದಿಂತುವನುರ್ಚಿ ಪೋದುವಿಸೆ ತತ್ಪ್ರಾಜನ್ಯಕಂಪಾಂಕುರಂ (ಶಾಂತಿಪು. ೪-೧೭); ಕೆೞ್ಕೆಱೆ, ಕೆೞ್ಪೊಡೆ, ಮೇಂಗೆಯರ್ (ಭಾಷಾಭೂ. ೧೨೯ ಉದಾ); ಪದಿನಾಲ್ಕುಂ ಲೋಕಮುಂ ಕೆೞ್ಪೊಡೆಯೊಳ್ ತಳೆದಾ ವಿಷ್ಣು (ಜಗವಿ. ೧-೪೫); ಕೆೞ್ಪೊಡೆ ರಸಭಾವಮಿರ್ಪೆಡೆ ಮುಖಂ ಸುರತೋತ್ಸವ ಗೋಮಿನೀ ಮುಖಂ (ಶಮದ. ೭೭ ಪ್ರಯೋ). **ಕಿಳ್ಪೊಡೆ :** ನಡು ಹೊಂಗಿ ಕಿಳ್ಪೊಡೆಯದೊಪ್ಪದಿಂ ಹಿಗ್ಗುತಿರೆ (ಬಸವ. ೧-೧೯); ಕಿಳ್ಪೊಡೆ ತ್ರಿವಳಿಗಳಂ ಬೀಳ್ಕೊಡೆ (ಬಸವ. ೧೦-೯೭)

**ಕೀಳ್ಪೊಡೆ :** ಪದಿನಾಲ್ಕು ಲೋಕಮುಂ ಕೀಳ್ಪೊಡೆಯೊಳಾಂತ ಕೋವಿದೆ (ಸೌಂದಪು. ೧೪-೩೫); ತನ್ನ ಕೀಳ್ಪೊಡೆಯಲ್ಲಿ ಬೈತಿಟ್ಟು . . . ಮರೆಯಿಸುತ್ತಲಿರುವುದು (ಜ್ಯೋತಿರ್ವಿ. ೭೯). **ಕೀೞ್ಪೊಡೆ :** "ಕೀೞ್ಪೊಡೆಯೆನೆ ಕೀೞ್ಪೊಟ್ಟೆಗೆ. . . ಪೆಸರ್" (ಚತುನಿ. II, ೨೫೭). [ಕೀೞ್$_2$ + ಪೊಡ್ಡೆ$_2$]

**ಕಿಬ್ಬಗೆ** (ನಾ). ಕೀಳು ಬಗೆ; ಕೆಟ್ಟಮನಸ್ಸು; ಹೀನವಾದ ಮನ: ಇಂತು ಕೆಯ್ಯೋಡಿಸುತ ಬಲ್ಬಗೆಯಿಂ ಬೇಡಿಕೊಳ್ವ ಮುನಿಯ ಕಿಬ್ಬಗೆಗೆ ನಕ್ಕು (ಅದ್ಭುತ. ೧೦-೧). [ಕೀೞ್$_2$ + ಬಗ್ಗೆ$_2$]

**ಕಿಬ್ಬಯಲ್, ಕಿಬ್ಬಯಲ್, ಕೀಳ್ಬಯಲು** (ನಾ). ಕೆಳಗಿನ ಬಯಲು; ಕೆಳಗಿನ ಗದ್ದೆ ಬಯಲು: ದಾಸನೂರ ಕೆಱೆಯ ಕಿಬ್ಬಯಲ ಸ್ವಲ್ಪನ್ನದೀ ಜಲಾಶಯಃ (ಮೈಆರಿ. ೧೯೨೫, ೧೧೫-೪೯; 634). **ಕಿಬ್ಬಯಲ್ :** ಹೊನ್ನುಡಿಕೆ ದೇವಿಗೆ ಗದ್ದೆ ಕಿಬ್ಬಯಲ ಮರುವಿನ ಇಂನೆಸಱ ನಟ್ಟಕಲ್ಲಿಂದ (ಎಕ. XII, ತಿಪಟೂ. ೬೨-೪೧; 1229). **ಕೀಳ್ಬಯಲು :** ಬಿಂಬಸೆಟ್ಟಿಯ ಕೆಱೆಯ ಕೋಡಿಯ ಕೀಳ್ಬಯಲು (ಎಕ. II, ೩೪೫-೭೧;1159). [ಕೀೞ್$_2$+ ಬಯಲ್]

**ಕಿಬ್ಬರಿ, ಕಿಬ್ಬದಿ, ಕಿಬ್ಬರಿ, ಕಿರ್ಬರಿ, ಕಿಳ್ಬರಿ** (ನಾ). ೧. ದೇಹದ ಪಕ್ಕೆ; ಅಳ್ಳೆ. ೨. ಬೆಟ್ಟದ ಪಕ್ಕ: ಕಿಬ್ಬರಿಗಳೊಳ್ ಬೆಳೆದಸುಗೆಯ ಬನಮುನಿರ್ಕೆಮಾಡಿ (ಕಬ್ಬಕಾ. ೫೪); ಅಂಜನಗಿರಿಯೆಡೆಯ ಕಿಬ್ಬರಿಯ ಪಱುವೊಳ್ ಸರವಿಪೋಪುದುಂ (ರಾಮಾಶ್ವ. ೭೭-೨೩). **ಕಿಬ್ಬದಿ :** ೧. ಕಿಬ್ಬದಿಯ ಕೀಲಿಸಿದ ಕಾಮುನನಿಬ್ಬರದ ಕೂರಂಬಿನಲಿ ತನುವಿಬ್ಬರಿವ ವೊಲು (ಪ್ರಭುಲೀ. ೫-೨೧); ಒದೆವುತ್ತಡಸಿ ಕಿಬ್ಬದಿಗಳನು ತಿವಿವುತ ಹಿಡಿದು . . . ತಂದರು ರಾಯನೋಲಗಕೆ (ಕೌಶಿರಾ. ೧೫-೬); ಸಾಲಿಗನು ಬಂದು ಎಳೆವಾಗ ಕಿಬ್ಬದಿಯ ಕೀಲು ಮುಱಿದಂತೆ (ಸರ್ವಜ್ಞ. ೧೩೯೧). ೨. ಪರ್ವತದ ಕಿಬ್ಬದಿಯಲ್ಲಿ ವಾಸಮಾಡುವವರ ಮೇಲೆ ಶಿಖರವು ಜರಿದು ಬಿದ್ದರೆ (ಕಪಾಕುಂ. ೧೧). **ಕಿಬ್ಬರಿ :** ೧. ತೊಡೆ ಕಡಿವೋಗೆ . . . ಕಿಬ್ಬರಿಯಿಬ್ಬಗಿಯಾಗೆ (ಎಕ, XV, ಬೇಲೂರು. ೩೭೧-೨; 1200); ಜಾಯಿಲನ ಕಿಬ್ಬರಿಗೊಱೆವ ಹಂದಿ (ಸೋಮಚ. ೩-೭); ರಿಪುಭಟನುರವನುದರವನೆಡಬಲದ ಕಿಬ್ಬರಿಯನೆಚ್ಚನು (ಕುವ್ಯಾದ್ರೋ. ೬-೫೩); ಕೊರಳು ಕತ್ತರಿಸಿ ಕಿಬ್ಬರಿ ಪಱಿದು ಕರುಳುರ್ಚಿ (ಸಾಳ್ವಭಾ. ೧೭-೨೮). **ಕಿರ್ಬರಿ :** ೧. ಪೊಡೆವೆರ್ದೆ ಪೊಯ್ಯು ಕಿರ್ಬರಿ ಸಿಡುಂಬಿನ ಮುಳ್ಗಳ ಗಾಯಮುಂಗದೊಳ್ (ರಾಜಶೇ. ೫-೧೧೪). **ಕಿಳ್ಬರಿ :** ೧. ಶಿಸುಬಿಂಬಂ ತನ್ನಯ ಕಱೆಯಂ ಉರದಿಂ ಕಿಳ್ಬರಿಗೊತ್ತರಿಸಲ್ಕದು ಕರೆಮೊಪ್ಪುವ ವೊಲ್ (ಜಯಕಾ. ೫-೧೦). [ಕೀೞ್$_2$ + ಬರಿ$_3$]

**ಕಿಬ್ಬಸಿಱ್, ಕಿಬ್ಬಸಿರು, ಕಿಬ್ಬಸಿಱ್, ಕಿಬ್ಬಸಿಱು, ಕಿಬ್ಬಸುರ್, ಕಿಬ್ಬಸುಱ್, ಕಿಬ್ಬಸುಱು, ಕಿರ್ಬಸಿಱ್** (ನಾ). ಕೆಳಹೊಟ್ಟೆ: ಗಂಟಲನೊತ್ತಿ ಕಿಬ್ಬ [ಪಾಠಾಂ. ಬ್ರ]ಸಿತಿರ್ದಿಯವೊಲಾಗೆ . . . ಜವಂಗೆ ಬಿರ್ದನಿಕ್ಕಿದಂ (ಮಲ್ಲಿಪು. ೧೦-೭೩). **ಕಿಬ್ಬಸಿರು :** ಸೆರಗಿಲ್ಲದ ತೋಳು ಮುಸುಕಿಲ್ಲದ ಎದೆ ಮರೆಯಿಲ್ಲದ ಕಿಬ್ಬಸಿರು . . . ಕಂಡು ಜಿಗುಪ್ಸೆಗೊಂಡ (ನಿರಾಭ. ೨೦ ಮುನ್ನುಡಿ). **ಕಿಬ್ಬಸಿಱ್ :** ಕರಂ ಬಱಲ್ದು ಕಂಪನಮೆಡೆಗೊಂಡು ಕಿಬ್ಬಸಿಱ ನೀಳ್ದ ನವಿರ್ಗೊನೆಯಿಂದೆ. . . ಮೃಗಪ್ರಕರಮಿರ್ದುದು (ಕುಸುಮಾ. ೬-೩೮). **ಕಿಬ್ಬಸಿಱು :** "ಕಿಬ್ಬಸಿಱು ವಸ್ತಿ" (ವಸ್ತುಕೋ. ೭೮-೧೭); ಆ ನಗರದ ಕಿಬ್ಬಸಿಱಿನ ಕದದ ನೆಗಹೆಂಟು ಗಾವುದ (ಭರಚ. ೨೯-೫೭). **ಕಿಬ್ಬಸುರ್ :** ಈ ಬೇರಂ ಅಕ್ಕಿಗಚ್ಚಿನಲ್ಲಿ ತೇದು ಕಿಬ್ಬಸುರಂ ಪೂಸಲು ಮೂತ್ರ ಸುಲಭವಾಗಿ ಬಿಡುವುದು (ವಿವೈವಿ. ೩). **ಕಿಬ್ಬಸುಱ್ :** ಕೋಡಗಂಗಳು . . . ಕಿಬ್ಬಸುಱ ಬದಿಗಳ ತೀಡುತಲೆ (ಕೌಶಿರಾ. ೯-೪). **ಕಿಬ್ಬಸುಱು :** "ನಾಭೇರಧಃ, ವಸ್ತಿಃ – ನಾಭೀ ಕೆಳಗಣ ಕಿಬ್ಬಸುಱು, ವಸ್ತಿ ಎನಿಸುಗು" (ನಾಚಿರಾ. ೧೨೧);

ಮಸೆಯ ಮೈಗಳೊಳೊರೆವುತಿರ್ದುವು ಬಿಸಿರಕುತ ಮೊನೆಗುತ್ತುಗಳ್ ಕಿಬ್ಬಸುಱಿನಲೆ ಜೋಲಿದವು ಕರುಳುಗಳು (ಕುಮಾರವ್ಯಾ.ದ್ರೋ. ೧೪-೯); ತೋಳ ಮೊದಲು ಕೊರಳು ಕಿಬ್ಬಸುಱು ಪೊಕ್ಕುಳು (ಚಂಪ್ರಸಾಂ. ೯-೧೧). **ಕಿರ್ಬಸಿಱ್**: ಕಿರ್ಬ[ಪಾಠಾಂ. ಬ್ಬಿ]ಸಿರ್ತಿದಿಯವೊಲಾಗೆ (ಮಲ್ಲಿಪು. ೧೦-೭೩). [ಕಿಱ್$_2$ + ಬಸಿಱ್]

**ಕೆಟ್ಮಣಿ** (ಕ್ರಿ). ಕೆಳಕ್ಕೆ ಬಾಗು; ಕೆಳಮಟ್ಟದ್ದಾಗು; ಹೀನವಾಗು: ಮಣಿಕುಟ್ಟಿಮ ಭೂಮಿಗೆ ಕೆಟ್ಮಣಿಯದಿದೆನೆ ಪೋಲೆ ನಿಮಿಱಿ ಪಾಸಿದ ಕಾರೋಹಣದಿಂ ನೃಪೇಂದ್ರಭವನಾಂಗಣಮೊಪ್ಪಿರ್ದುದು (ಶಾಂತಿಪು. ೧೦-೭೧). [ಕಿಱ್$_2$ + ಮಣಿ$_1$]

**ಕೆಟ್ಮದ, ಕೀಳ್ಮದ, ಕೀಟ್ಮದ** (ನಾ). ಕೆಳಗೆ ಸುರಿಯುವ ಮದೋದಕ: ಕವಿವ ಕಿಟ್ಮದದೊಳ್ಪೊನಲೊಳ್ ಸುಯ್ಯಾಱದ ಪೆರ್ನೊರೆಯಿಂ ... ಅೞಿದಂ ಕಾಡಾನೆಗಳಾಡೆ ಪೋದುದಂ (ಕಾವ್ಯಾವ. ೬೨೬). **ಕೀಳ್ಮದ**: ಹೊಳೆಯೆನಲೊಗೆದಕೀಳ್ಮದಮೇಲುಮದಗಳನೊಗೆದ ಪಿಂಗಳನೇತ್ರಯುಗ ನಡು ಬಂದುದೊಂದೆಡೆಗೆ (ಸಾಳ್ವಭಾ. ೬-೧೧). **ಕೀಟ್ಮದ**: ಭೋಂಕೆಂದು ಸುರಿವ ಕೀಟ್ಮದದ ಪೂರದಿಂ (ಅನಂಪು. ೨-೨೯ವ). [ಕಿಱ್$_2$ + ಮದ$_1$]

**ಕಿಱ್ಮಾಡು, ಕೀಳುಮಾಡು, ಕೀಳ್ಮಾಡು, ಕೀಟ್ಮಾಡು** (ಕ್ರಿ). ೧. ಕೀಳಾಗುವಂತೆ ಮಾಡು; ಕೀಳೆನಿಸುವಂತೆ ಮಾಡು; ಹೀನಗೊಳಿಸು: "ಕಿ[ಪಾಠಾಂ. ಕೀ]ಱ್ಮಾಡಿದುದೆನೆ ಪೞಿದುದು" (ಚತುನಿ. II, ೨೨). **ಕೀಳುಮಾಡು**: ೧. ಕಾಲವಾವನನಾವ ಪರಿಯಲಿ ಕೀಳುಮಾಡದು (ಕುಮಾರವ್ಯಾವಿ. ೧-೨೦); ಕಾಲವಾತನ ಕೀಳುಮಾಡಿತು (ನಳಚ. ೬-೧). **ಕೀಳ್ಮಾಡು**: ೧. ತದಪತ್ಯಂ ದೊರೆವೆತ್ತನಾ[ಥ್ಯ]ನ್ನಿಪರಂ ಕೀಳ್ಮಾಡಿ (ಕಇ. II, ೨೩-೬; ?); ದೇವ, ನಿಮ್ಮನಾರಾಧಿಸಿದ ಮನುಜನ ಕೈ ಅರಕೈಯಂ ಕೀಳ್ಮಾಡದು (ಬಸರ ೬-೧೦೫). **ಕೀಟ್ಮಾಡು**: ೧. ಸುಯೋಧನನೊಡ್ಡೋಲಗಮಿಂದ್ರನೋಲಗಮುಮಂ ಕೀಟ್ಮಾಡಿ ಕಣ್ಗೊಪ್ಪುಗುಂ (ಪಂಪಭಾ. ೯-೨೯); ತನ್ನ ಪಾಡುವಿಂಚರದಿಂದೆಮ್ಮ ಪಾಟಮಂ ಕೀಟ್ಮಾಡಿದಳಿವಳೆಂಬ ಮುಳಿಸಿಂ (ಕಾದಂಉ. ೩೩೪). ೨. ಕೆಳಗೆ ಮಾಡು; ಕೆಳಗೆ ತೋರಿಸು: ಸರ್ವಪುರುಷಾರ್ಥಕ್ಕಂ ನಿಧಿಸ್ಥಾನಮೀ ಪದಮೆಂಬಂತಿರೆ ಚೆಂಬೆರಲ್ಗುಡಿಗಳಂ ಕೀಟ್ಮಾಡಿ ... ಪದಾಬ್ಜಮಂ ತೋಱುವೈ (ವಸ್ತುವಂ. ೧೨-೮೮) [ಕಿಱ್$_2$ + ಮಾಡು$_1$]

**ಕಿಱ್ಮೊಗ, ಕಿಳ್ಮೊಗ** (ನಾ). ೧. ಮುಖದ ಕೆಳಭಾಗ. ೨. ಕೆಳಕ್ಕೆ ಬಾಗಿದ ಮುಖ. ೩. ಮುಖವನ್ನು ಕೆಳಗೆ ಬಾಗಿಸಿದವನು: ಇಂತಾಡಿದ ಜಾನಕಿಯ ಮಾತಂ ಕೇಳ್ದು ಲಕ್ಷ್ಮಣನುಂ ಮಱುಗುತೆ ಕಿಱ್ಮೊಗನಾಗಿ ನಿಂದಿರ್ಪುದುಂ (ರಾಮಾಶ್ವ. ೩೭-೨೨). **ಕಿಳ್ಮೊಗ**: ೩. ರಂಗನಾಥ (ಕಿಳ್ಮೊಗನಾಗಿ ಎದ್ದುನಿಲ್ಲುವವನು) (ಬಿಟ್ಟಅ. ೩೫-೨೫). [ಕಿಱ್$_2$ + ಮೊಗ$_2$]

**ಕಿಱ್ವಾಳ್** 'ಕೀಟ್ವಾಳ್' ನೋ.

**ಕಿಬ್ಬಲಿ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಕಿಬ್ಬಲಿಯ ಮಮ್ಮ ಅಣುಜ್ಜರಸರ ಮಗ ಕಲಿಗಜ್ಜಂ (ಎಕ.VI, ಕಡೂರು. ೧೪೦-೧; 919). [?]

**ಕಿಬ್ಬರಿ** (ನಾ). ಕೆಳಕ್ಕೆ ಸುರಿವ ಮಳೆ (?): ಅಗೆವೊಯ್ದ ಚಂದ್ರ ಮಂಡಲದಗೆಗಳವೊಲ್ ಕಾರಮುಗಿಲ ಕಿಬ್ಬರಿಗಳವೊಲ್ ಸೊಗಯಿಸಿದುವು ಬೆಳ್ಗೊಡೆಗೊಂಬುಗೊಂಬಿನೊಳ್ ಕಂಬಕಂಬದೊಳ್ ಪೆರ್ವಿಡಿಗಳ್ (ಅನಂಪು. ೭-೬). [ಕಿಱ್$_2$ + ಸರಿ$_6$]

**ಕಿಬ್ಬೆಱಂಗು, ಕಿಳ್ಸೆರಗು** (ನಾ). ಕೆಳಸೆರಗು; ಸೆರಗಿನ ಕೆಳತುದಿ: ಬಾಷ್ಪವಾರಿಯಂ ತನ್ನುತ್ತರಿಗೆಯ ಕಿಬ್ಬೆಱಂಗಿನಿಂ ತೊಡೆದುಂ (ರಾಮಾಶ್ವ. ೨೦-೧೫). **ಕಿಳ್ಸೆರಗು**: ಕಿಳ್ಸೆರಗನ್ನೆತ್ತಿ ಬಾಯ್ಗೆ ತುರುಕಿಕೊಂಡು ಓಡಿ ಹೋಗುವಳು (ಬಿಟ್ಟಅ. ೧೬೬-೪). [ಕಿಱ್$_2$ + ಸೆಱಂಗು]

**ಕಿಟ್ಸೆಱೆ** (ನಾ). ಕೀಳಾದ ಸೆರೆ: ಕಿಟ್ಸೆಱೆಯ ಪೆಣಗು ಪೋರಾಟದೊಳ್ ಕುತ್ತಿಱಿವ ಕಾಟದೊಳ್ ಇಲ್ಲಿ ಈ ಅಱೆಯ ಮೇಲೆ ನಿನ್ನೊಡಲ್ ಸುರುಳ್ವುದನ್ ಕಾಣ್ಬೆನಯ್ (ಬದ್ಧಪ್ರ. ೯-೧೮೪). [ಕಿಱ್$_2$ + ಸೆಱೆ$_2$]

**ಕೀ$_1$, ಕಿವಿ$_2$** (ಕ್ರಿ). ಕೀತ (ಭೂತಕೃ), ಕೀತು$_2$ (ಭೂತನ್ಯೂ). ಕೀವು ಆಗು; ಕೀವು ತುಂಬು: "ಕೀ-ರಕ್ತಪಕ್ವೇ (ಕೀವು ತುಂಬು)" (ಶಮಧಾ); ಬಾಯದ ಕೀಯದ ಪೆಣನಲ್ತೆ ಕುಡದ ಕೊಳ್ಳದ ಕೃಪಣಂ (ಲೀಲಾವ. ೧-೫೦); ಗಱಿ ಕಿಬ್ಬಿ ಕೀತ ಬಾವಲಿ ತೆಱದಿಂ ಬೀಭತ್ಸಮಪ್ಪೊಡಲ್ಗೇ ಕೆಲರ್ ಬೇಸಱುತುಂ (ವರ್ಧಪು. ೧೧-೩೮); ತದ್ವಿಷಂ ನೆಲಸಿರಲ್ ವ್ರಣ್ಣಾಗಿ ಕೀತಿರ್ದೊಡಂ ಬಾತುಂ ಬಾಧಿಸುತಿರ್ದೊಡಂ (ಖಮದ. ೧೬-೧೦೧); ಆ ಗಾಯದೆಡೆ ಕೀತ ಹುಣ್ಣಲ್ಲಿ ಹುಳು ಮುಸುಱಿ ತಿನಲು (ವೀಶೈಪು. ೪-೧೯-೪೧); ಶೀತದಲಿ ಹಿಮ ಹೊಲ್ಲ ಕೀತಿರುವ ವ್ರಣ ಹೊಲ್ಲ (ಸರ್ವಜ್ಞ. ೧೩೭೧). **ಕಿವಿ$_2$**: ಇಂತಪ್ಪ ತುರಿಯ ಹುಗುಳು ಗಳೊಡೆಯೆ ಕಿವಿತು ಹೊರಟು (ವೀಶೈಪು. ೪-೨೫-೬).
[ದೇ. ‖ ತಮಿ. ಚೀ; ಮಲ. ಚೀಳ, ಚೀನ್ನು; ಕೊಡ. ಕೀಯ್; ತುಳು. ಕೀವು; ತೆಲು. ಚೀಕು, ಚಿವುಕು, ಚಿಮುಕು; ಕೋಲಾ. ಸಿವ್ಕ; ಬ್ರಾಹೂಈ. ಕೀಷ್]

**ಕೀ$_2$** (ನಾ). ಒಂದು ಅನುಕರಣ ಶಬ್ದ; (ಕೆಲವು) ಹಕ್ಕಿಗಳ ಹಾಗೂ ಪ್ರಾಣಿಗಳ ಕೂಗು.
ಕೀಕೀ ಎನ್ನು = ಕೀಕೀ ಎಂದು ಶಬ್ದಮಾಡು: ರಾತ್ರಿಯೆಲ್ಲಾ ಇಲಿಗಳು ಕೀಕೀ ಎಂದು ಶಬ್ದಮಾಡಿ ನಿದ್ದೆ ಕೆಡಿಸಿದವು (ರೂಢಿ).
[ದೇ. ‖ ತಮಿ. ಕೀಕೀ; ತೆಲು. ಗೀಗೀ]

**ಕೀಕ** (ಗು). ಕಠಿನವಾದ; ದಟ್ಟವಾದ. 'ಕೀಕಾರಣ್ಯ' ಪರಾ. [<ಕೀಕಸ]

**ಕೀಕಸ** (ಗು). ೧. ಗಟ್ಟಿಯಾದ; ಕಠಿಣವಾದ; ಒತ್ತಾದ. (ನಾ). ೨. ಮೂಳೆ; ಎಲುವು: ಮಜ್ಜೆನೆಣವೀಡೇರ್ದ ಕೀಕಸಂ ಕರುಳು ಪಲಲಂ ತೊವಲು ನಾಡಿಗಳು ತೀವಿ ... ರಣರಂಗವತಿ ಭಯಂಕರ ಮಾದುದು (ಮಲ್ಲಚ. ೯-೫೦). [ಸಂ.]

**ಕೀಕಸು** (ನಾ). = ಕೀಕಸ: "ಕೀಕಸು ವಸ್ಥಿಯೆನಲೆಲುವಕ್ಕು" (ಮಂಗರಾ. ೧೧೭-೪). [< ಸಂ. ಕೀಕಸ]

**ಕೀಕಾಟವಿ** (ನಾ). ಕೆಟ್ಟ ಅಡವಿ; ದಟ್ಟವಾದ ಕಾಡು: ಕುವರ ಕೇಳ್ ತನುವೆಂಬ ಕೀಕಾಟವಿಯಲೆಡೆಯಾಡುತೆಚ್ಚರು ಜವಗೆಡದಹಂಕಾರ ಮೆಂಬಾ ಗಿರಿಯನೇರಿರದೆ ಭವದ ಲಜ್ಜೆಯ ಗುಳಿಗೆ ಕೆಡೆಯದೆ (ಗಗತಾ. ೧೬-೧೬). [ಕೀಕ + ಅಟವಿ$_2$]

**ಕೀಕಾರಣ್ಯ** (ನಾ). = ಕೀಕಾಟವಿ: ಅಮಿತಾಹ್ಲಾದಕರನಾದ ಮಗನ ಕೀಕಾರಣ್ಯ [ಪಾಠಾಂ. ಮಗನನಾರಣ್ಯ]ಕೆಂತು ಕಳುಪುವೆ (ವೆಂಕಾರಾ. ೨-೭-೨). [ಕೀಕ + ಅರಣ್ಯ]

**ಕೀಕು** (ನಾ). ಒಂದು ಅಳತೆ: "ಗೇಣೆರಡಱಂ ಮೊಳ ಮೊಳನೆರಡಱಿ[೦]ಕೀಕು" (ಪಸಾರ. ೧೨೩-೮). [< ಸಂ. ಕಿಷ್ಕು]

**ಕೀಕೆಲ್** (ನಾ). (?): ಕರಂ ಚೆನ್ನೆಯರಾಗಿಯುಂ ಖಿನ್ನೆಯರಲ್ಲದೆ ನುಣ್ಬೋಱುಗೆಯ್ತುದಿಂ ಮಧುವಂ ಸುಡಲುಂ ತ್ರಿಪುರಮನುರಿಪಲುಂ, ಕೀಕೆಲೊಳ್ ಕಿಚ್ಚಿಡಲುಂ ಕಣ್ಣಪಾಪೆಗಳೆಣ್ಣೆಮಾಱಿ ಪೂಮಾಱಲುಂ ಬಲ್ಲವರಾಗಿ ಮದನನ ಪರಿಚಾರಿಕೆಯರಂಬೆತ್ತುವಂತೆ ಪೂವನೆತ್ತುವ ಪುಷ್ಪಲಾವಿಕಾ ಚತುಷ್ಪಥದೊಳ್ (ಶಾಂತಿಪು. ೮-೭೨ವ). [?]

**ಕೀಚಕ** (ನಾ). ೧. ಗಾಳಿಗೆ ಧ್ವನಿಮಾಡುವ ಬಿದಿರು: "ಗಾಳಿಯ ಪುದುವಿಂ ಧ್ವನಿಯಿಸುವ ವೇಣು ಕೀಚಕಮಕ್ಕುಂ" (ವಸ್ತುಕೋ. ೩೬-೧೮); ಮೊಟಗೆ ಚಿರೀ ಭೇರಿಗಳ್ ಬಯ್ದು ಪಾಡಿಸುವಂ ಕೀಚಕ ಗಾಯಕಪ್ರಕರದಿಂ ಚಂದ್ರಾರ್ಕತೇಜಂಗಳಂ (ಮಲ್ಲಿಪು. ೧೦-೫೬);

ಶುಳಿಂದಿ ಪಾಡುವ ಸಂಗೀತದಿಂಚರಕ್ಕೆ ಶ್ರುತಿಗೂಡುವಂತೆಸೆವ ಪವನ ಪೂರಿತ ಕೀಚಕರಂಧ್ರ ನಿನದಕ್ಕೆ ಪೆಡೆಯೆತ್ತಿ ನಿಲುಂಬಿ ನಲಿವ ಫಣಗಳಿಂ (ರಾಜಶೇ. ೫-೫೫ ವ). ೨. ಒಂದು ಜಾತಿಯ ಮರ; ಮಾರ್ಗಣ ವೃಕ್ಷ: "ನಾರಾಚದೊಳು ಕೀಚಕದೊಳಂ ಮಾರ್ಗಣಮೆನಿಕ್ಕುಂ" (ಮಂಗರಾ. ೧೫೧-೫೪); "ರಕ್ತಪುಷ್ಪ - ಕೀಚಕ" (ಓಷಧಿ. ೧೩೫); ಸೊಡಲಿ ಬೆಂಡುಗ ಸೀಗೆ ಗದುಗು ಕೀಚಕದೊಟ್ಟು ಗೊಡಕಿಲು ಕಾರೆ ಕೆಂಜಿಗೆಯ ಗಿಡುಮುಳ್ಳುವೆಳೆಗಣ ಗಡಣದಿಂದಾ ಕಾಡು . . . ರಾಜಿಪುದು (ರಾಮವಿ. ೧೫-೬೦). ೩. ವಿರಾಟರಾಜನ ಸೇನಾಪತಿಯಾಗಿದ್ದು ಭೀಮಸೇನನಿಂದ ಕೊಲ್ಲಲ್ಪಟ್ಟ ಒಬ್ಬಾತನ ಹೆಸರು : ಕಾಮಾಂಧಂ ಕೀಚಕನಾಟಿಸಿ ಗಂಧರ್ವರಿನಟಿದಂ (ಪಂಪಭಾ. ೮-೭೯). ೪. ಒಬ್ಬ ರಾಕ್ಷಸ: (ಕ). [ಸಂ.]

**ಕೀಚಕವೈರಿ** (ನಾ). ಕೀಚಕನ ಶತ್ರು; ಭೀಮಸೇನ : ನೀ ಬರಹೇಳು ಕೀಚಕವೈರಿಯನು ಪಡಿಷಣವ ನೋಡಲಿ ಭೂರಿಬಾಣದ ಸವಿಯನೆಂದನು ಕೌರವರ ರಾಯ (ಕುವ್ಯಾದ್ರೋ. ೧೦-೫೨). [ಕೀಚಕ + ವೈರಿ]

**ಕೀಚಕಾಂತಕ** (ನಾ). = ಕೀಚಕ ವೈರಿ : ಅವಂ ಬೇಡಿಕೊಳಲೊಪ್ಪಿದಂ ಕೀಚಕಾಂತಕಂ ಸಂತಸದೊಳು (ಜೈಮಿಭಾ. ೪-೬೫).
[ಕೀಚಕ + ಅಂತಕ]

**ಕೀಚಕ್ಕಿ** (ನಾ). ಒಂದು ಬಗೆಯ ಪಕ್ಷಿ; ನೀರು ಕೋಳಿ : "ಕ್ರುಙ್, ಕ್ರೌಂಚಃ - ೨ ಕೀಚ[ಪಾಠಾಂ.ಲ]ಕ್ಕಿ" (ಸಿದ್ಧಾಂತಿ. ೧೪೦).
[< ಕೀಚಲು ? + ಪಕ್ಕಿ$_1$]

**ಕೀಚಲು** (ನಾ). ಕೀಚುವ ಧ್ವನಿ; ಚೀರುದನಿ; ಕೀರಲುದನಿ. 'ಕೀಚಲುಗುಟ್ಟು' ಪರಾ. [ಕೀಚು$_1$ + -ಅಲು (< -ಅಲ್$_2$)]

**ಕೀಚಲುಗುಟ್ಟು** (ಕ್ರಿ). ಕಿಚಕಿಚ ಧ್ವನಿಮಾಡು ; ಕೂಗು : ಕೆಲತೆರದ ಇರುಳುಹಕ್ಕಿಗಳು ಈ ವೈಹಾಳಿಗರನ್ನು ಕಂಡೋ ಏನೋ ಕಿರಿಚು-ಕೀಚಲುಗುಟ್ಟುತಿದ್ದವು (ವೀರಬಂ. ೨೧). [ಕೀಚಲು + ಕುಟ್ಟು$_1$]

**ಕೀಚಿಗೆ** (ನಾ). ಒಂದು ಬಗೆಯ ಸಸ್ಯ : (ವೈದ್ಯನಿ. ೩೫-೬೮೦). [?]

**ಕೀಚು$_1$** (ನಾ). ಒಂದು ಅನುಕರಣ ಧ್ವನಿ; ಪಕ್ಷಿಗಳು ಕೂಗುವ ಧ್ವನಿ; ಚೀರುದನಿ: ಜಾವಲಿಯ ಕೀಚು ನಿರ್ಮಾಲ್ಯ ದುರ್ಗಂಧಕ್ಕೆ ನಾಲಗೆಯನಿತ್ತು ಪಡಿನುಡಿಗೊಟ್ಟಿತು (ನಡೆಬಂ. ೧೦೦).

ಕೀಚುಪಾಚು = ಕಿರಿಚಾಟ; ಕೂಗಾಟ: ಹುಲು ನರಾಧಮ ನಗ್ಗಳಿಕೆಯನು ಹಲುಗಿರಿದು ಬೆರೆಪಾಡುತಿರ್ಪುದು ನಿಲಲಿ ಸಾಕೀ ಕೀಚು ಪಾಚು ಅದಕಿಲ್ಲಿ ಠಾವಹುದೆ (ರಾಮಾಸಂ. ೬-೨-೭೦).
[ದೇ. ‖ ತಮಿ. ಮಲ. ಕೀಚ್ಚು; ತೆಲು. ಕೀಚು]

**ಕೀಚು$_2$, ಖೀಜು** (ನಾ). ಹಲ್ಲುಗಳ ಮೇಲಿನ ಕೊಳೆ, —ಕಿಟ್ಟ : ಹಲ್ಲುಗಳ ಮೇಲೆ ಕೀಚು ಕೂರುವುದಲ್ಲದೆ ಬಾಯಿ ತುಂಬಾ ವಾಸನೆ ಬರುತ್ತದೆ (ಕೆಲರೋ. ೭೫). ಖೀಜು : ಕಚ್ಚೆಯಿದುಚ್ಚೆಯ ಗಡಿಗೆ . . . ಕಿವಿಯು ಕಣ್ಣೋಳೆಯು ಖೀಜನ ಕೂಡಿಗೆಯ ಹೊಲನಹುದು (ಕೈಕವ. ೨-೬-೨). [? . / ತಮಿ. ಚಿಕ್ಕು, ಚೀಕ್ಕೈ]

**ಕೀಚು$_3$** (ನಾ). ಕಳಪೆ; ಕೆಲಸಕ್ಕೆ ಬಾರದ್ದು (?): ಅದರೊಳಿಡುವಡೆ ಮೊದಲು ತಾವನು ಚದರಿಸುವದ್ಯಾಕಿನ್ನು ಜಾಳ್ಕಿಗೆ ಸದನವಿರದಲೆ ಕೀಚು ಮಧ್ಯಸ್ಥಗಳ ಮಾಡಿದರೇ ವದಗುವದೆ ತಮಗೀಗ ರಾಜ್ಯದ ಪದವಿ (ಜಿನಭಾ. ೬೩-೫೧). [?]

**ಕೀಚು$_4$** (ನಾ). ಕೃಶ; ಒಣಕಲು. 'ಕೀಚುಗಾಯಿ' ಪರಾ. [?]

**ಕೀಚುಗಾಯಿ** (ನಾ). ಕೃಶವಾದದ್ದು; ಒಣಕಲಾದದ್ದು; ಬಡಕಲು : ಒಣಗಿ ಮುರುಟದ ಭಾಗೀರಥಿಯ ಕೀಚುಗಾಯಿ ದೇಹಕ್ಕೆ ಸ್ನಾನಮಾಡಿಸಿ, ಮಡಿಯುಡಿಸಿ (ಸಂಸ್ಕಾರ. ೩). [ಕೀಚು$_4$ + ಕಾಯಿ$_0$]

**ಕೀಚುಬಾಲ** (ನಾ). ಕೃಶವಾದ ಬಾಲವುಳ್ಳ ಒಂದು ಜಾತಿಯ ಹಕ್ಕಿ; ಕೋಯಿಷ್ಟಿಕ : ಈಗ ನೀವು ಕೀಚುಬಾಲದೋಪಾದಿಯಲ್ಲಿ ನೇತಾಡುವುದಂ ಕಂಡು (ಕೃವಾಅ. ೭೦).

ಕೀಚುಬಾಲದಹಕ್ಕಿ = ಒಂದು ಬಗೆಯ ಪಕ್ಷಿ: "ಕೋಯಷ್ಟಿಕ - ಕೀಚುಬಾಲದ ಹಕ್ಕಿ" (ಸಿದ್ಧಾಂತಿ. ೧೪೩). [?]

**ಕೀಚುಸಿಳ್ಳು** (ನಾ). ಕೀಚಲು ಧ್ವನಿಯ ಸಿಳ್ಳು: ನಾಟಕ ಶಾಲೆ, ಮೊದಲಾದವುಗಳಲ್ಲಿ ಅಸಮಾಧಾನ ಸೂಚಕವಾಗಿ ಮಾಡುವ ಕೀಚುಸಿಳ್ಳು (Catcall. ಇಂಕನ). [ಕೀಚು$_1$ + ಸಿಳ್ಳು$_1$]

**ಕೀಜೆಗ** 'ಗೀಜಗ' ನೋ.

**ಕೀಟ$_1$** (ನಾ). ಕೊಳೆ; ಕಿಟ್ಟ : (ಕ). [< ಸಂ. ಕಿಟ್ಟ]

**ಕೀಟ$_2$** (ನಾ). ೧. ಹುಳು; ಕೀಡೆ; ಕ್ರಿಮಿ : "ಕ್ರಿಮಿಃ, ಕೀಟಃ, ನೀಲಂಗುಃ, ಪುಲ್ಲಕಃ - ಈ ೪ ವು (ಹು) ಳು" (ಹಲಾಯು. ೧೦೫-೧೪); ಇಂದ್ರನುಪಾಯದೊಳಟ್ಟಿದ ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮಂ . . . ಅತ್ತಮಿತ್ತಮುರ್ಚಿ ಪೋಗೆ (ಪಂಪಭಾ. ೧-೧೦೪ ವ); ನೆಗೆದಡ್ಡಂಬಾಜುವ ಕೀಟಗಣಕ್ಕಳಿವಪ್ಪುದೆಂದು ಬೀಸದೆ ತೋಳಂ (ವೃಷವಿ. ೨೬-೭); ಸಲಗನ ಸೊಂಡಿಲ ತುದಿಯನ್ನು ಕಚ್ಚಿ ಕೆಣಕಿದ ಕೀಟವೇ (ಸುಗುಗಂ. ೬-೬); ಕೀಟ ಸಣ್ಣದಾದರೂ ಕಾಟ ಬಹಳ (ಗಾದೆ). ೨. (ಆಲಂ) ಕ್ಷುದ್ರ ಜೀವಿ; ಅಲ್ಪವ್ಯಕ್ತಿ : ನರಕೀಟದ್ವಯಸಂಗರಕ್ಕೆ ಖಚರೇಂದ್ರಾಧೀಶನಿಂತೇಕೆ ಕಾತರನಪ್ಪೊಂ ಗಡಂ (ಶಾಂತಿಪು. ೩-೯೮).
[ಸಂ.]

**ಕೀಟಕ$_1$** (ನಾ). ಕೀಟಲೆ ಮಾಡುವವನು; ಕೀಟಲೆಗಾರ; ಕೆಡುಕ : ಕೀಟಕಜನರ ಮಾತುಕೇಳಿ ನಮ್ಮ ಮೇಲೆ ಸೊಂಟಕಟ್ಟ ಮಾಡತಕ್ಕದ್ದೇನು (ವಾಗ್ದೇವಿ. ೧೬೮); ಆದರೂ ಕೆಲವರು ಕೀಟಕರು ಇವನನ್ನು ಕಂಡಾಗಲೆಲ್ಲ . . . ಕಟೆಯುವುದನ್ನು ಬಿಡಲಿಲ್ಲ (ಬೆಳುಮ. ೪೦). [?]

**ಕೀಟಕ$_2$** (ನಾ). ೧. = ಕೀಟ$_2$ ೧ : ಕ್ರಿಮಿಯ ಸಮೂಹ, ಕೀಟಕದ ಕೋಟಾರ (ಆದವ. ೩೪); ಅನುಭಾವಿಗಳ ಸಂಗ ಕೀಟಕಭ್ರಮರವಾದಂತೆ (ಅಖಂಡೇ. ೨೯೧-೫೭); ದೋಷಕೀಟಕ ಕೊರೆದು ಒಣಗಿದುವು ಹಲಕೆಲವು (ಮಾನಸ. ೭-೧೧). ೨. (ಆಲಂ) ಅಲ್ಪ; ಕ್ಷುದ್ರ; ಕನಿಷ್ಠ : ಮಹಾರಾಜನಿಗೆ ನೀನೊಬ್ಬ ಕೀಳೂಳಿಗದ ಕೀಟಕವು ಮಾತ್ರ (ಮಂತ್ರಶ. ೧೧-೨೧). [ಸಂ.]

**ಕೀಟಕತನ** (ನಾ). ೧. ಹಿಂಸೆಮಾಡುವಿಕೆ. ೨. ಕೀಟಲೆ ಮಾಡುವ ಸ್ವಭಾವ; "ಕಿಡಿಗೇಡಿತನ" (ಗಂಗಾಮ. ೮೬). [ಕೀಟಕ$_1$ + -ತನ]

**ಕೀಟಕಸನ್ನಿಪಾತ** (ನಾ). ಸನ್ನಿಪಾತದಲ್ಲಿ ಒಂದು ಬಗೆ: ಸಮಸ್ತ ಕೀಟಕವೆಂಬುದು ತಲೆಯ ಮೆದುಳೊಳು ಹುಟ್ಟಿ ತಲೆಕೆಡುವುದುಂ ತಲೆ ಬಾತು ಮೆದುಳಿಂದ ಕಣ್ಣಲ್ಲಿ ತಿಂತ್ರಿಣಿ ತೊಡೆದು ಸುರಿವುದು ಕೀಟಕ ಸನ್ನಿಪಾತರೋಗ (ವಿವೈವಿ. ೧೯೦). [ಕೀಟಕ$_0$ + ಸನ್ನಿಪಾತ]

**ಕೀಟಲೆ** (ನಾ). ಕುಚೇಷ್ಟೆ; ಕಿಡಿಗೇಡಿತನ; ಉಪದ್ರವ : ರಾಜಣ್ಣ ಕೀಟಲೆ ನಡೆಸಿದ್ದ (ಮರಳಿ. ೯೭); ಗಿರಿಜಳ ಪ್ರವೇಶ ಏನೋ ಕೀಟಲೆ ಮಾಡಿರಬೇಕು (ಪದ್ಮಸ. ೮೩); ಗುರುವನ್ನು ಕೀಟಲೆಮಾಡಿ ಅಳಿಸುತ್ತಿದ್ದಳು (ಕೀಲುಗೊಂ. ೭೨). [?]

**ಕೀಟಲೆಮಾತು** (ನಾ). ಚೇಷ್ಟೆಯ ಮಾತು; ಕಿಡಿಗೇಡಿತನದ ಮಾತು : ಮಾತೂ ಆಡಿಸಿದ್ದೆ ಕೀಟಲೆ ಮಾತುಗಳನ್ನು (ಚೆಂಗೂಲಿ. ೨೧).
[ಕೀಟಲೆ + ಮಾತು$_1$]

**ಕೀಟಾಣು** (ನಾ). ಅತಿಸೂಕ್ಷ್ಮವಾದ ಜೀವಿ; ಅಣುಜೀವಿ : ಕೀಟಾಣುಗಳಿಂದ ವಸ್ತುಗಳಲ್ಲಿ ಉದ್ರೇಕ ಮತ್ತು ಕೊಳೆಯುವಿಕೆಯುಂಟಾಗುತ್ತದೆ (ಜೀವಾತ್ಮ. ೧೨೩). [ಕೀಟ$_2$ + ಅಣು]

**ಕೀಟಾಹಾರಿ** (ಗು). ಕೀಟಗಳನ್ನು ಆಹಾರವಾಗಿ ಬಳಸಿಕೊಳ್ಳುವ; ಕೀಟಭಕ್ಷಕ: ಕೆಲವು ಜಾತಿಯ ಸಸ್ಯಗಳು ಸಣ್ಣ ಸಣ್ಣ ಕ್ರಿಮಿಕೀಟಾದಿಗಳನ್ನು . . . ಆಹಾರವಾಗಿ ಉಪಯೋಗಿಸುತ್ತವೆ. ಇಂತಹ ಸಸ್ಯಗಳಿಗೆ ಕೀಟಾಹಾರಿ ಅಥವಾ ಮಾಂಸಾಹಾರಿ ಸಸ್ಯಗಳೆಂದು ಹೆಸರು (ಸಸ್ಯಶಾ. ೪೪). [ಸಂ. ಕೀಟಾಹಾರಿನ್]

**ಕೀಟು₁** (ನಾ). ಅನಾದರ; ತಿರಸ್ಕಾರ; ಜುಗುಪ್ಸೆ: (ಕ). [← ತೆಲು. ಕೀಟು]

**ಕೀಟು₂** (ಗು). ಚೀಟು; ಕೊಂಚ; ನಸು; ಸ್ವಲ್ಪ; ತುಸು. [?]

**ಕೀಡಿ** 'ಕೀಡೆ' ನೋ.

**ಕೀಡಿಗ** 'ಕೇಡಿಗ' ನೋ.

**ಕೀಡು** (ನಾ). ಹಾಳು; ನಾಶ: ಕೀಡಾದರುರಗ ಸುತನಿಘುಘಾಯ ಕಂಗಮುಂ ಚಾಟಿ ಸೌಗಂಧಿಯರು (ಜಿನಮು. ೪-೪೯). [< ಕೇಡು ?]

**ಕೀಡೆ, ಕೀಡಿ** (ನಾ). ಹುಳು; ಕೀಟ: ಕುಂಡಲಿಗನೊಂದು ಕೀಡೆಯ ತಂದು ತನ್ನಂತೆ ಮಾಡಿತಲ್ಲ (ಬಸಷ. ೧೮೯); ಮಿಡುಕಿ ಕಿಚ್ಚಿನ ಕೀಡೆವೊಲಾದರ್ (ದಶಕು. ೪-೨೨); ಕೀಡೆಯೂ ಸೂಳೆಯೂ ನೋಡಲಿ ರಡೊಂದಯ್ಯ (ಸರ್ವಜ್ಞ. ೧೮೪೦). **ಕೀಡಿ:** ಕೀಡಿ ಕುಂಡಲಿಗನಾಗದೆ ಅಯ್ಯಾ (ಬಸವ. ೧೪೨); ಕಾಡಪತ್ರೆಯನಾ ಕೀಡಿ ತಿಂದಿರವೆ? (ಸಮಾವ. ೨೦); ಅದವಬಲ ಪೆರ್ಚಿನಿಂ ಕಿಚ್ಚಿನೊಳ್ ಬಿಟ್ಟ ಕೀ [ಪಾಠಾಂ. ಕಿ]ಡಿಯಂ ನೆನೆಯಿಸುವಳ್ (ವರ್ಧಪು. ೪-೫೭ ವ); ಕೀಡಿ ತುಂಬಿಯ ಬಿಡದೆ ನೆನೆದೊಡೆ ನೋಡಲಾಕ್ಷಣ ತುಂಬಿಯಾಗದೆ (ಪ್ರಭುಲೀ. ೧೯-೫೯); ಕೀಡಿಯನು ಕೊಂದ ಮಾಂಡವ್ಯನೆದೆಯಲ್ಲಿ ಮೂಡಿತ್ತು ಶೂಲ (ಸರ್ವಜ್ಞ. ೮೬೫). [< ಸಂ. ಕೀಟ]

**ಕೀಣ₁** 'ಕೇಣ₁' ನೋ.

**ಕೀಣ₂** (ನಾ). "ತೋಳಿನೊಣಗಣ ತಲೆಯ ನಳಿಗೆ ಕೀಣವೆಂದು ಹೆಸರು" (ಅಶ್ವಟೀ. ೬೦-೫). [?]

**ಕೀಣಿ** 'ಕೀನಿ' ನೋ.

**ಕೀಣಿವಲ್ಲು** 'ಕೀನಿವಲ್' ನೋ.

**ಕೀಣೆ** 'ಕೀನಿ' ನೋ.

**ಕೀಣ್ಬರಿ** (ನಾ). ಕೆಳಮಟ್ಟದ ಇಚ್ಛೆ; ಕೀಳಾದ ಅಪೇಕ್ಷೆ: ದೇವ ಪಾಪಕ್ಕೆ ಕೀಣ್ಬರಿಯಂ ಮಾಡುವರಲ್ಲ ನಿನ್ನನುಚರರ್ ನಿರ್ವಾಣ ಲಕ್ಷ್ಮೀಪತೀ (ನಿರ್ವಾಮಾ. ೧೫). [< ಕೀಟ್₂ + ಪರಿ₃]

**ಕೀತ** 'ಕೀ₁' ಪರಾ.

**ಕೀತು₁** (ನಾ). ತುಂಡು; ಸೀಳು; ಚೂರು: ಒಂದು ಸಣ್ಣ ಬಾಳೆಯ ಕೀತಿನಲ್ಲಿ . . . ಬೆಲ್ಲವನ್ನು ತಂದು ದೂರ ನಿಂತನು (ಕಾನೂರು. ೯೬); ಒಂದು ಬಾಳೆ ಎಲೆಯ ಕೀತಿನಲ್ಲಿ (ಮರಮ ೭೧); ಅಂಗಿ ಅರಿವೆಗಳೆಲ್ಲ ಹರಿದು ಕೀತಾಗಿದ್ದವು (ಮುಗಿಯು. ೬೧). [ದೇ. ‖ ತಮಿ. ಮಲ. ಕೀಱು; ಕೊಡ. ಕಿಟ; ತುಳು. ಕೀತು]

**ಕೀತು₂** 'ಕೀ₁' ಪರಾ.

**ಕೀತ್ಕೃತಿ** (ನಾ). ಕಿರಿಚಾಟ; ಕೀಚಲು: ಶಾಖಾಚರ ಕೀತ್ಕೃತಿ ವಿಹಗ ಸಮುತ್ಕರ ಚೀತ್ಕೃತಿ ತೀವಿ ವಿಪಿನದೊಳ್ ಬಿಡದೆಸೆಗುಂ (ರಾಜಶೇ. ೫-೬೨). [ಸಂ.]

**ಕೀನ್‌ಕಾಪು** 'ಕಿಂಕಾಪು' ನೋ.

**ಕೀನ** (ಗು). ೧. ಕ್ಷೀಣವಾದ; ಕುಗ್ಗಿದ: ಚಾತಕೆಕ್ಕೆಯ ಬಲು ಮುಕ್ಕರಿ ಹೊಟ್ಟೆಯ ಓತಿದಲೆಯ ಕೀನ ದನಿಯ . . . ಭೂತವೆ ನಡೆತಪ್ಪಂತೆ (ನೇಮಿಸಂ. ೭-೧೧೫). ೨. ಕಿರಿಯ; ಚಿಕ್ಕ: "ಕಿಱಿದು" (ಚತುನಿ. ಕ. I, ೩೦). [< ಸಂ. ಕ್ಷೀಣ]

**ಕೀನಾಶ** (ಗು). ೧. ಕಿರಿಯ; ಚಿಕ್ಕ. (ನಾ). ೨. ದರಿದ್ರ; ಬಡವ. ೩. ಯಮ: "ಕೀನಾಶಂ ಕೃತಾಂತನಕ್ಕುಂ" (ಮಂಗರಾ. ೧೫-೧೦); ಕ್ಷಣಮಾತ್ರದಿಂದೆ ಪುಗುಗುಂ ಕೀನಾಶನಾವಾಸಮಂ (ಜಾತತಿ. ೬-೪೦); ಕಱಿದಂ ನಂಜಿನ ಮಱಿಯುಂ ಕಱಿವಂದದೆ ವಿಳಯಸಮಯದೊಳ್ ಕೀನಾಶಂ(ಚಂದ್ರಪು. ೫-೧೧೮). ೪. ಬೇಸಾಯ: (ಕ). ೫. ಬೇಸಾಯಗಾರ. ೬. ಜಿಪುಣ; ಕೃಪಣ; ಲೋಭಿ: "ಕದರ್ಯಃ, ದಿ(ಹಿ)ಲನಃ, ಕೀನಾಶಃ . . . ಈ ೫ ಲೋಭಿ" (ಹಲಾಯು. ೫೭-೧೯೨). ೭. ಮಾಂಸಾಹಾರಿ; ಮಾಂಸಜೀವಿ. ೮. ಕಿಂಕರ; ಸೇವಕ. ೯. ರೋಗಿ; ಅತಿ ರೋಗವುಳ್ಳವನು: "ಆತರೋಗಿ ಭೃತ್ಯ ಲುಬ್ಧಂ ಕತಮಾಂಸಾಹಾರಿ ನಾಲ್ಕು ಕೀನಾಶಾಖ್ಯಂ" (ನಾನಾಕಂ. ೧೧೯); "ಯಮಂ ಸರುಜಂ ಕಿಂಕರ ಮಾಂಸಜೀವಿ ಕೃಪಣಂ ಕೀನಾಶ ಶಬ್ದಂ" (ನಾನಾರ. ೯೩). [ಸಂ.]

**ಕೀನಾಶನಗರಿ** (ನಾ). ಯಮನ ಪಟ್ಟಣ: ಖರದೂಷಣ ತ್ರಿಶಿರಾದಿಗಳ ಕೀನಾಶನಗರಿಗೆ ಕಳುಹಿದನು ಕಡುಗಲಿ ರಘುಪ್ರವರ (ತೊರರಾ. ೩-೬ ಸೂಚನೆ). [ಕೀನಾಶ + ನಗರಿ]

**ಕೀನಾಶನಾಶ** (ನಾ). ಯಮನನ್ನು ನಾಶಗೊಳಿಸಿದವನು; ಶಿವ: ಕೀನಾಶ ದಂಡೋದ್ದಂಡಹತಿಗೆ ವಿನಾಶವೆಯ್ದುವವರ್ ಪ್ರತಿಯೆ ಕೀನಾಶನಾಶಂಗೆ (ಬಸಪು. ೫೪-೨೨). [ಕೀನಾಶ + ನಾಶ]

**ಕೀನಾಶಪಾಶ** (ನಾ). ಯಮಪಾಶ: ನಿನ್ನೀ ಕೇಶಪಾಶಂ ಕುರುಕುಲ ಪತಿಗಾಯ್ತುತ್ತೆ ಕೀನಾಶಪಾಶಂ (ಗದಾಯು. ೮-೪೯). [ಕೀನಾಶ + ಪಾಶ]

**ಕೀನಾಶ ಲುಲಾಯ** (ನಾ). ಯಮನ ಕೋಣ: ಕೀನಾಶಲುಲಾಯ ಶ್ರೇಷ್ಮನೊಳ್ ತಾಗಿದ ರಣಗಣನಾರೇಖೆಯೆಂಬಂತು ರೇಖಾವಲಿ ಪೀನ ಸ್ಕಂಧದೊಳ್ ತಳ್ತಿರೆಯಿರೆ (ಜಗವಿ. ೫-೩೫). [ಕೀನಾಶ + ಲುಲಾಯ]

**ಕೀನಾಸ** (ನಾ). ದರಿದ್ರ; ಕ್ಷುದ್ರ. 'ಕೀನಾಸಿ' ಪರಾ. [< ಸಂ. ಕೀನಾಶ]

**ಕೀನಾಸಿ** (ನಾ). ದರಿದ್ರೆ; ಅಯೋಗ್ಯೆ; ಕ್ಷುದ್ರೆ: ಹೀನರೊಡನೆ ಮೇಳಂ ತನಗಲ್ಲದೆಯಾನಂದಿಪರೊಡನಾಡಲ್ ಬಲ್ಲಳೆ ಕೀನಾಸಿಗೆ ತನಗೇಕೋರಗೆಯೆಂಬ ಬಲುಮೆವಾತು (ಜಯಕಾ. ೧೪-೪೫). [ಕೀನಾಸ + -ಇ₂]

**ಕೀನಿ, ಕಿಣ್ಣೆ, ಕೀಣಿ, ಕೀಣೆ** (ನಾ). ಹಲ್ಲುಗಳಲ್ಲಿರುವ ಕೊಳೆ; ಕಿಟ್ಟ; ಹೊಲಸು: "ನೆರೆ ಕೀನಿ ದಂತಮಲಮೆಂದು" (ಕವಿಕಂ. ೨೦೫); ಪಲ್ಗಳೊಳಿರ್ದಾ ಕೀನಿಯುಮಂ ಪೂಸಲೊಡಂ . . . ಸರ್ಪಕುಳದ ವಿಷಮಿರದಱಿಗುಂ (ಖಮುದ. ೮-೪೩). **ಕಿಣ್ಣೆ:** "ಕಿಣೆಯೆಂದು ದಂತಮಲಂ" (ಕಶಸಾ. ೨೪-೫೦೭); ಹಲ್ಲಲ್ಲಿ ಕಿಣೆ ಸುಳಿದರೆ (ಮಂತ್ರಶ. ೭೯-೧೭). **ಕೀಣಿ:** ಬಸಿ ಶುಕ್ಲಂ ಕ್ರಿಮಿ ಕೀವು ಕೀಣಿ ಕೊಳೆ ಸಿಂಬುಳ್ ಸಿಳ್ಳುಗಳ್ (ಪುಷ್ಪಪು. ೧೩-೪೯); ಹಾವು ಕಚ್ಚಿದ ಠಾವನ್ನು ಮನುಷ್ಯರ ಹಲ್ಲ ಕೀಣಿಯಂ ಪೂಸೆ ನಿರ್ವಿಷ (ವಿಸ್ಮವಿ. ೯೩). **ಕೀಣೆ:** ಕಟ್ಟಿದ ಪಲ್ಗಳಿಟ್ಟೆಡೆಯ ಕೀಣೆಗಳಿಂ ಕೊಱೆನಾರ್ವ ಬಾಯ್ (ಸೂಕ್ತಸು. ೮-೩೮೪). [?]

**ಕೀನಿಕೆ, ಕಿನಿಕೆ** (ನಾ). ಹಲ್ಲಿನ ಕೊಳೆ; ಕೀಚು; ಕಿಟ್ಟ: ನೊರೆ ಸುರಿವ ಬಾಯ್ಕೀನಿಕೆಯ [ಪಾಠಾಂ. ಬಾಯಕಿಪಿವಲ್ಲು] ಹಡಿಕೆಗಳೋ (ಬಸಪು. ೫೧-೫೩). **ಕಿನಿಕೆ:** ಹಲ್ಲಿನಿಂದ ಕಿನಿಕೆ, ಉರದಲ್ಲಿ ಮಾಂಸದ ಗ್ರಂಥಿ, ಒಳಗೆ ಕರುಳಿನ ಜಾಳಿಗೆ (ಸಿದ್ಧೇವ. ೧೪೨); ಕಿಱಿದು ಕಿನಿಕೆ ಹತ್ತಿದ ಹಲ್ಗಳು (ನೇಮಿಸಂ. ೭-೧೧೩); ಇರದೆ ಕಿನಿಕೆ ಹಲ್ಲ ದಾಳಿಂಬ ಬೀಜವೆಂದರರೆ ಸಿಂಬುಳಮೂಗ ಸಂಪಗೆಯರಳೆಂದು (ಷಶಿಲ. ೨-೫೪). [ಕೀನಿ + -ಇಕೆ]

**ಕೀನಿವಲ್**, ಕಿಣಿವಲ್, ಕಿನಿವಲ್ಲು, ಕೀಣಿವಲ್ಲು, ಕೀನಿವಲ್ಲು (ನಾ). ಕಿಟ್ಟಗಟ್ಟಿದ ಹಲ್ಲು; ಕೀಚು ಹಲ್ಲು: ಪೊಕ್ಕ ಕದಂಪು ಪತ್ತಿಪಡೆಗೊಂಡ ಕೊರಲ್ ಪುಣಿಚಿರ್ದ ಕೀನಿವಲ್ ಪೊಕ್ಕಡಗಿರ್ದ ಕಣ್ (ಲೀಲಾವ. ೬-೬೮). **ಕಿಣಿವಲ್** : ಕಱುಕು ಪತ್ತಿದ ಪುರ್ಬಿಂ ಬಾಯ್ಗಡಸಿದ ಕಿಣಿವಲ್ಲಿಂ (ದಶಕು. ೫-೨೬); ಪುಳಿಚಿದ್ದ ಕಿಣಿವಲ್ಲ ಪುರುಷಾಧಮರುಂ (ವೃಷವಿ. ೩೫-೫೫); ವಂಚಕರು . . . ಕಿಣಿವಲ್ಲಂ ಚಂಡಿಗಳ್ ಬತ್ತಲೆಯ ಭಂಡರ್ (ಮದೇಪು. ೨೪-೨೬). **ಕಿನಿವಲ್ಲು** : ಗುಂಡಗುಂಡಿಗೆಯ ಕಿನಿ[ಪಾಠಾಂ. ಸಿ]ವಲ್ಲು ಬಾಗಿದ ಬೆನ್ನಿನಿಂ ಚರಿಗೆಗೊಂಡು (ಸೋಮಚ. ೪-೪೧). **ಕೀಣಿವಲ್ಲು** : ಹಸಿದೊಡಲು ತರೆದ ತಲೆ ಕೀಣಿವಲ್ಲುಂ ಹಡಿಕೆಯೆಸೆವ ಬಾಯ್ (ರಾಘಚ. ೧೩-೪೬). **ಕೀನಿವಲ್ಲು** : ಹಱಿಕುಗಡ್ಡದ ಕೆದಱುಮೀಸೆಯ ಕೀನಿವಲ್ಲುಗಳ . . . ಕಿಱುಕುಲರು ಬಂದರು (ಬಸಪು. ೫೮-೪೯). [ಕೀನಿ + ಪಲ್]

**ಕೀನಿವಲ್ಲು** 'ಕೀನಿವಲ್' ನೋ.

**ಕೀಮು** 'ಕೀವು' ನೋ.

**ಕೀಯಾವಾಡಿ** (ನಾ). ಒತ್ತಕ್ಷರಗಳಲ್ಲಿ 'ಯ' ಒತ್ತನ್ನು ಸೂಚಿಸುವ (್ಯ) ಗುರುತು; ಯಕಾರದ ಒತ್ತು: ಯಕಾರದ ನಡುವಿನ ಭಾಗವೇ 'ಯ'ವೊತ್ತು ಎನ್ನಬಹುದು . . . ಈ ಒತ್ತಿಗೆ "ಕೀಯಾವಾಡಿ" ಎಂತಲೂ ಹೆಸರಿದೆ (ಸಂಶೋಧ. ೩೧). [← ತೆಲು. ಕಿಯ್ಯವಡಿ]

**ಕೀರ್** (ನಾ). ಗಿಳಿ: ಕೀಲ, ಕೀಲ್; ಮೀನ, ಮೀರ್; ಕೀರ, ಕೀರ್; ನೀರ, ನೀರ್ (ಶಬ್ದಾನು. ೧೪೮ ಪ್ರಯೋ). [< ಸಂ. ಕೀರ]

**ಕೀರ**$_1$ (ನಾ). ಮುಂಗುಸಿ; ಮುಂಗುಲಿ: ಮುಂಗಲಿ, ಮುಂಗಸಿ, ಕೀರ (ನಮ್ಮನು. ೨೩೯).

[ದೇ. ‖ ತಮಿ. ಮಲ. ಕೀರಿ; ಕೊಡ. ಕಿರಿ; ಕುಇ. ಕಿರ್ಪನಿ; ಕುವಿ. ಕ್ರಾಂಡು]

**ಕೀರ**$_2$, ಕೀಲ$_1$ (ನಾ). ಹಾಲು; ಕ್ಷೀರ: "ಕೀರಂ ಕ್ಷೀರಮುಕ್ಕುಂ" (ಕವಿಕಂ. ೮೬); "ಕ್ಷೀರದೊಳೆ ಕೀರಂ" (ಕರ್ಣಾನಿ. ೩೬). **ಕೀಲ**$_1$ : ಕೀಲಾದ ಎಮ್ಮೆ ಕರುವುಂಡೊ, ಕೀಲಾದ ಎಮ್ಮೆಗೆ ಕಾಲಲ್ಲಿ ಸರಪಾಣಿ ದಾವಣಿ ಮೆಟ್ಟಲಾ ಹಾಲ ಕರೆಯೋಳೆ (ಹುಟ್ಟಹ. ೮೨). [< ಸಂ. ಕ್ಷೀರ]

**ಕೀರ**$_3$ (ನಾ). ೧. ಗಿಳಿ; ಗಿಣಿ; ಶುಕ: ವಸಂತದೊಳ್ಮದನಕೇಳೀಸೂತ್ರಮಂ ಪಾರದೋದಿದ ಕೀರಂ (ಮಲ್ಲಿಪು. ೨-೩೭); ಪಾಱುವ ಕೀರಮಾಲೆ . . . ಪಚ್ಚೆಯ ತೋರಣದಂತೆ ರಂಜಿಕುಂ (ಜಗವಿ. ೪-೬೬). ೨. ಮಾಂಸ: (ಕ). [ಸಂ.]

**ಕೀರಂಜ** (ನಾ). ಒಂದು ಬಗೆಯ ಹಕ್ಕಿ: ಬೇರುಂಡಂ ಪೊಱಸು ಕಾಗೆ . . . ಕಿಱುವೀಳೆ ಕೊಯ್ಕಂ ಕೀರಂಜಂ ಹರಡೆ ಸುರಗಿ ಗಿಡಿ ಪರ್ಗಿಡುಗಂ (ಕಾವ್ಯಸಾ. ೧೦೪೩ ಶೂದ್ರಕ). [?]

**ಕೀರಕಸಾಲೆ** 'ಕಿಱುಕುಸಾಲೆ' ನೋ.

**ಕೀರಣ** 'ಕೀಲಣ' ನೋ.

**ಕೀರಣಿ** 'ಕೀಲಣ' ನೋ.

**ಕೀರಣಿಗೆಲಸ** 'ಕೀಲಣಿಗೆಲಸ' ನೋ.

**ಕೀರಣೆ** 'ಕೀಲಣ' ನೋ.

**ಕೀರತಿ** 'ಕೀರುತಿ' ನೋ.

**ಕೀರತಿವಡೆ** (ಕ್ರಿ). ಹೆಸರುವಾಸಿಯಾಗು; ಖ್ಯಾತಿಯನ್ನು ಪಡೆ: ರೂಪಯೌವನದಿ ಕೀರತಿಪಡೆದಿರ್ದ ರತಿ ಜಗನ್ಮೋಹನ ಮೂರುತಿ ಕಂಗೊಳಿಸಿದಳು (ಮೋಹತ. ೧೬-೨೨). [ಕೀರತಿ (< ಕೀರುತಿ) + ಪಡೆ$_1$]

**ಕೀರಬೆಕ್ಕು** (ನಾ). ಒಂದು ಬಗೆಯ ಬೆಕ್ಕು: ಪುನಗಿನ ಬೆಕ್ಕು, ಜವಾಜಿ ಬೆಕ್ಕು, ಕೀರಬೆಕ್ಕು, ಕಬ್ಬುಬೆಕ್ಕು (ನಮ್ಮನು. ೨೩೯). [ಕೀರ$_1$ + ಬೆಕ್ಕು]

**ಕೀರರವ** (ನಾ). ಗಿಳಿಯ ಧ್ವನಿ; ಶುಕವಾಣಿ: ನಂದನವನಲಕ್ಷ್ಮಿ ಕೀರರವದಿಂ ಪೊಗಟ್ದು (ಚಂದ್ರಪು. ೭-೪೧). [ಕೀರ$_3$ + ರವ$_1$]

**ಕೀರಲು**, ಕೀರ್ಲು (ನಾ). ೧. ಕಿರಿಚುವಿಕೆಯುಳ್ಳದ್ದು; ಕರ್ಕಶವಾದುದು (?): ಅವನ ಧ್ವನಿ ಕೀರಲಾಗಿ ಕಿವಿ ಕೊರೆಯುತ್ತಿತ್ತು (ಮಲೆನಾ. ೩೭). ೨. (ಗು). ಕರ್ಕಶವಾದ: ಕೀರಲುದನಿಯಲ್ಲಿ ಕೂಗುತ್ತಾಳೆ (ರೂಢಿ). **ಕೀರ್ಲು** : ಕೀರ್ಲುವಾಣಿರಾಗದಲ್ಲಿ ಹಾಡಿದಾಗ (ನಡೆದಾ. II, ೮೬೩). [ಕೀರು$_1$ (< ಕೀಱು$_1$) + -ಅಲು (< -ಅಲ್$_2$)]

**ಕೀರಲುಧ್ವನಿ** (ನಾ). ಕಿರಿಚುವ ಧ್ವನಿ: ಮೋಹನಾಬಾಯಿಯವರು . . . ತಮ್ಮದೇ ಆದ ಕೀರಲುಧ್ವನಿಯಲ್ಲಿ ಶ್ಲೋಕವೊಂದನ್ನು ಹೇಳಲು ಆರಂಭಿಸಿದರು (ನ್ಯಾಯಕ. ೫೭). [ಕೀರಲು + ಧ್ವನಿ]

**ಕೀರವಱಿ** (ನಾ). ಗಿಳಿಯ ಮರಿ: ಪಾರಿವಗಳ ದಸಿ ಕೊಳರ್ವಕ್ಕಿಯಲ್ಲೆ ಕೀರವಱಿಗಳ ಬೈದಾಟ (ಕಂನವಿ. ೧೦-೪೩). [ಕೀರ$_3$ + ಮಱಿ]

**ಕೀರವಾಣಿ** (ನಾ). ೧. ಗಿಳಿಯ ಧ್ವನಿ, —ಮಾತು. ೨. ಗಿಳಿಯಂತೆ (ಮಧುರವಾದ) ಧ್ವನಿಯುಳ್ಳವಳು: ಕಲಕೀರವಾಣಿಯರ್ ಕಾಳಾಹಿವೇಣಿಯರ್ ಕಲಭಮದದಾನೆಯರ್ (ಜೈಮಿಭಾ. ೩೦-೩). ೩. [ಸಂಗೀತ] ಕರ್ಣಾಟಕ ಸಂಗೀತದಲ್ಲಿ ಒಂದು ರಾಗದ ಹೆಸರು: ಭೈರವಿ, ಕೀರವಾಣಿ, ಪೂರ್ಣಷಡ್ಜಂ . . . ಷಣ್ಮುಖಪ್ರಿಯ ರಾಗಗಳಲ್ಲಿ ರಚಿಸಿರುವ ಕೃತಿಗಳು (ಸಂಗೀತ. ೪೮); ಕೀರವಾಣಿಯ ಆಲಾಪನೆಯ ಲಹರಿಯೊಂದು ಕೇಳಿ ಬರುತ್ತದೆ (ಹಂಸದ. ೯). [ಕೀರ$_3$ + ವಾಣಿ$_1$]

**ಕೀರವೃಂದ** (ನಾ). ಗಿಳಿಗಳ ಹಿಂಡು: ಕೀರವೃಂದಂ ಕಳಕೂಜಿತಾನುಮಿತಮಾದುದು ಶಾಡ್ವಲಗಂಧಶಾಲಿಯೊಳ್ (ಜಗವಿ ೨-೭). [ಕೀರ$_3$ + ವೃಂದ]

**ಕೀರಾರ** 'ಕೀಲಾರ' ನೋ.

**ಕೀರಾಲಾಪೆ** (ನಾ). ಗಿಳಿಯಂತೆ (ಮಧುರವಾಗಿ) ಮಾತನಾಡುವವಳು: ಕೀರಾಲಾಪೆ . . . ನೀಂ ಪಾಲಿಸಾ (ಹಮ್ಮೀರ. ೨-೭೬).

[ಸಂ. ಕೀರಾಲಾಪಾ (ಕೀರ + ಆಲಾಪ + -)]

**ಕೀರಾವಳಿ** (ನಾ). ಗಿಳಿಗಳ ಹಿಂಡು: ಶಾಳೀವನಕ್ಕಾಗಿ ಪಾಱುವ ಕೀರಾವಳಿ (ಸುಕುಮಾ. ೪-೪೩). [ಕೀರ$_3$ + ಆವಳಿ$_1$]

**ಕೀರಾಳಿ** (ನಾ). = ಕೀರಾವಳಿ: ಪೋಗವುರುವತ್ಕೀರಾಳಿ ಕೇದಾರದಿಂ (ಜಗವಿ. ೨-೬); ತನ್ನನಿಯುಳ್ಗಂ ಕರೆದಿತ್ತದಂ ತಣಿಪುಗುಂ ಕೀರಾಳಿ ಮಾಕಂದದೊಳ್ (ಶಬಶಂ. ೨-೪೯). [ಕೀರ$_3$ + ಆಳಿ$_4$ (< ಅಲಿ$_4$)]

**ಕೀರಿತಿ** 'ಕೀರುತಿ' ನೋ.

**ಕೀರು**$_1$ 'ಕೀಱು$_1$' ನೋ.

**ಕೀರು**$_2$ 'ಕೀಱು$_2$' ನೋ.

**ಕೀರು**$_3$ 'ಕೀಱು$_3$' ನೋ.

**ಕೀರು**$_4$, ಖೀರು (ನಾ). ಹಾಲಿನಲ್ಲಿ ಸೇವಗೆ, ರವೆ, ಸಕ್ಕರೆ, ಬಾದಾಮಿ, ದ್ರಾಕ್ಷಿಮೊದಲಾದುವನ್ನು ಸೇರಿಸಿ, ಬೇಯಿಸಿಮಾಡಿದ ಪಾಯಸ: ಕೀರಿನಲ್ಲಿ ಸಿಕ್ಕುವ ಬಾದಾಮಿ ದ್ರಾಕ್ಷಿಗಳಂತೆ (ನಮ್ಮೂರ. ೫); ಜಿಲೇಬಿ, ಜಾಂಗೀರ್ . . . ಕೀರು, ಖಾರದ ಎರಡು ತಿಂಡಿ (ರೂಪಸಂ. ೧೬). **ಖೀರು** : ಸೈತಾನನಡುಗೆಗೆ ಚೀರೋಟಿ ಖೀರು (ನಡಬಂ. ೧೦೪); ಖೀರು ಪೂರಿ ಆಂದಿನ ಮುಖ್ಯ ಭೋಜನ (ಸ್ವಪ್ನದ. ೧೩೩); ಖೀರು ಸುರಿಯುತ್ತ ಮೂರ್ತಿಯು ಆಡಿದನು (ಕನಕೆ. ೮೦). [← ಪ್ರಾ. ಖೀರ < ಸಂ. ಕ್ಷೀರ]

**ಕೀರುತಿ**, ಕೀರತಿ, ಕೀರಿತಿ (ನಾ). ಹೊಗಳಿಕೆ; ಖ್ಯಾತಿ; ಯಶ: ಆರತಿ ಹೊರಟಾವು ಕೀರುತಿ ಉಳ್ಳೋಳ್ಗೆ (ಹುಟ್ಟಹ. ೫೬); ನಾಡಿನ ಕೀರುತಿಯಂತೆ ಶುಭ್ರವಾಗಿ . . . ಮಲ್ಲಿಗೆಯ ಮೊಗ್ಗುಗಳಂತಹ ದಂತಗಳು (ಚಂದುಟ. ೩೬). **ಕೀರತಿ**. 'ಕೀರತಿವಡೆ' ಪರಾ. **ಕೀರಿತಿ** : "ಕೀರಿತಿ (ಕೀರುತಿ) – ಕೀರ್ತಿ = ಯಶಸ್ಸು" (ತದ್ಭಕೋ. ೩). [< ಸಂ. ಕೀರ್ತಿ]

**ಕೀರೆ**, ಕಿರೆ (ನಾ). ಒಂದು ಬಗೆಯ ತರಕಾರಿ ಸೊಪ್ಪು: ಕೀರೆಯೊಳಗೆ ಮೇಲೋಗರಮುಮಂ ಮಾಡಿ (ಇಳಿರ. ೩೩-೪); ನೀವಿಕ್ಕುವ ಕೀರೆಗಂ [ಪಾಠಾಂ. ಕಿರಿಗಂ, ಸೀರೆಗಂ] ಬರಗಿನೋಗರಕ್ಕಂ ಪುಟ್ಟಿದವನಲ್ಲ (ನಂಬಿರ. ೨-೬೨); ಕೀರೆ ನರುವಲ ಚಕ್ಕವತ್ತಸೋಲೆ ಸಬ್ಬಸೀಗೆ ಮೊದಲಾದ ಸೊಪ್ಪುಗಳ ಬೇಱಬೇಱ ಉತ್ತರಿಸಿ (ಸೂಪಶಾ. ೪-೧೬); ಕೀರುಳ್ಳಿ ತಿಂದು ಇರಗೊಡದು, ಕೀರೇ ತೋಟಕ್ಕೆ ನೀರುಹೊಯ್ಯಗೊಡದು (ಗಾದೆ). **ಕೆರೆ**: (೬).

ಕೀರೆಸೊಪ್ಪು=ಕೀರೆಯಸೊಪ್ಪು: "ತುಂಡಲೀಯ, ಅಲ್ಪಮಾರಿಷಃ – ಕೀರೇಸೊಪ್ಪು" (ಸಿದ್ಧಾಂತಿ. ೧೨೬); ಚಕ್ಕೋತ, ಕೀರೆಸೊಪ್ಪು ಇವು ಜ್ವರಬಂದವರಿಗೆ ಪಥ್ಯ (ವೈದ್ಯಸಾ. I, ೮೭ ಟೀಕೆ).

[ದೇ. ‖ ತಮಿ. ಕೀರ್ರೈ; ಮಲ. ಚೀರ; ತೆಲು. ಕೀರ, ಕೀರೆ]

**ಕೀರೋತ್ಕಾರ** (ನಾ). ಗಿಳಿಗಳ ಚಪ್ಪರಣೆ, —ಧ್ವನಿ: ಕೀರೋತ್ಕಾರದಿಂ ಚಕ್ರಮಂಜುಳಚೀತ್ಕಾರದಿನುತ್ಕಹಂಸಮಿಥುನ ವ್ಯಾಹಾರದಿಂ... ಉಂಟುಮಾಳ್ಪುದು ಬನಂ ಕರ್ಣಾಮೃತಾಸಾರಮಂ (ಮಲ್ಲಿಪು. ೧೪-೧೫೨).

[ಕೀರ₃ + ಉತ್ಕಾರ]

**ಕೀರ್ಣ** (ಗು). ೧. ಕೆದರಿದ; ಚೆಲ್ಲಿದ; ಅಸ್ತವ್ಯಸ್ತವಾದ: ಮಹಾಕೂರ್ಮ ಕೀರ್ಣೋರ್ಮಿಮಾಲಾ... ಸಮುದ್ರಂ (ರಾಜಶೇ. ೧-೯೦). ೨. ತುಂಬಿದ; ಮುಸುಕಿದ; ಆವರಿಸಲ್ಪಟ್ಟ: ಅಂಚಿತಚಾರುಕೀರ್ಣಪರ್ಣಾಯುಧ ಪಾಳಿ ತೋರಣ ವಿರಾಜಿತಮಂ... ರಾಜಮಾರ್ಗಮಂ... (ಶಾಂತಿಪು. ೬-೪); ಇದು ಮದಭೃಂಗ ಕೀರ್ಣ ಕುಸುಮೋತ್ಕರ ರಮ್ಯಲತಾವಿತಾನಂ (ಕಾದಂಪೂ. ೬೨೨). ೩. ಮರೆಯಾದ; ಮುಚ್ಚಲ್ಪಟ್ಟ; ಗುಟ್ಟಾದ; ಗೌಪ್ಯವಾದ. (ನಾ). ೪. ಸಂದಣಿ: "ಆಚಿತಂ, ನಿಚಿತಂ... ಕೀರ್ಣಂ ಸಂಕುಳಂ... ಪೂರ್ಣಂ – ಈ ೯ ಸಂದಣಿ" (ಹಲಾಯು. ೧೧೬-೧೭). [ಸಂ.]

**ಕೀರ್ತಣ್ಣ** (ನಾ). ೧. ಒಬ್ಬಾತನ ಹೆಸರು: ಕೀರ್ತಣ್ಣನ್ ಗಜ್ಜಪುರದುಳ್ ದುಗ್ಗಮಾರರ್ಪ್ಪಡೆಯು... ಎಱದುಱಿದ್ದೋರ್ (ಎಕ. IX, ದೇವನ. ೭೪-೩; 780). [ಕೀರ್ತಿ + ಅಣ್ಣ₁]

**ಕೀರ್ತನ** (ನಾ). ೧. ಹೇಳುವಿಕೆ; ಹೇಳಿಕೆ; ಉಲ್ಲೇಖ. 'ಸದಕೀರ್ತನ' ಪರಾ. ೨. ಹೊಗಳಿಕೆ; ಸ್ತುತಿ; ಶ್ಲಾಘನೆ; ಗುಣಗಾನ: "ಸ್ತುತಿ ಕೀರ್ತನಂ ಸ್ತವಂ ಸ್ತೋತ್ರಮೀಡಾ ಶ್ಲಾಘೆಯೆನಲು ಕೊಂಡಾಡೆ ನಾಮಂ" (ಮಂಗರಾ. ೨೬-೩). ೩. ಹಾಡುಗಳನ್ನುಳ್ಳ ಪುರಾಣಪ್ರಸಂಗ, —ಹರಿಕಥೆ: ಹಾರ್ಮೋನಿಯಂ ಆದೇ ಆಗಷ್ಟೇ ಕೀರ್ತನಗಳಿಗೆ ಬಳಸತೊಡಗಿದ್ದರು (ಸ್ಮೃತಿಚಿ. ೭೮). ೪. ದೇವಾಲಯ ಮುಂತಾದ ಕಟ್ಟಡ; ಕಲಾತ್ಮಕ ಕೃತಿ: ಕೊಣ್ಣೆಶುಲರ ಕುಪ್ಪ ಕೀರ್ತ್ತಿನಮ್ಮಗೋಸಾಸಿಯ ನಿಱಿಸಿದಾ ಕೀರ್ತ್ತನ (ಎಇ. XXI, ೨೦೬-೧೩; 751). [ಸಂ.]

**ಕೀರ್ತನಂಗೆಯ್**, ಕೀರ್ತನಗೆಯ್ (ಕ್ರಿ). ಹೊಗಳು; ಸ್ತೋತ್ರ ಮಾಡು: ಅಂಘ್ರಿಗೆ ಮಣಿದೊಲವಿಂ ಕೀರ್ತನಂಗೆಯ್ಯುತಿರ್ದರ್ (ಶಬಶಂ. ೧-೮೪). **ಕೀರ್ತನಗೆಯ್**: ಧಾತ್ರೀತಳಂ ಕೂರ್ತು ಕೀರ್ತನೆಗೆಯ್ಯುಂ ಜಯದುತ್ತರಂಗನಂ (ಎಕ. VII, ಶಿವಮೊ. ೯೭-೭; 1113).

[ಕೀರ್ತನ + ಕೆಯ್₁]

**ಕೀರ್ತನಕಾರ** 'ಕೀರ್ತನಗಾರ' ನೋ.

**ಕೀರ್ತನಗಾರ**, ಕೀರ್ತನಕಾರ (ನಾ). ಹರಿಕಥೆ ಮಾಡುವವನು; ಕೀರ್ತನೆ ಮಾಡುವವನು: ಹಟದಿ ಕೀರ್ತನಗಾರ ಬೆವರನೊರಿಸಲು ಹಿಂದೆ ಸರಿದ ವಿಶ್ರಾಂತಿಗಾಗಿ (ಸಖೀಗೀ. ೭೩-೭). **ಕೀರ್ತನಕಾರ**: ಆ ಕೀರ್ತನಕಾರನದು ಒಳ್ಳೆಯ ಕಂಠ, ಅವನು ಹೇಳುವ ಹಾಡುಗಳೂ ಮಧುರ (ಸ್ಮೃತಿಚಿ. ೭೮). [ಕೀರ್ತನ + – ಕಾರ₁ (< –ಕಾಱ)]

**ಕೀರ್ತನಗೆಯ್** 'ಕೀರ್ತನಂಗೆಯ್' ನೋ.

**ಕೀರ್ತನೀಯ** (ಗು). ಹೊಗಳುವುದಕ್ಕೆ ಯೋಗ್ಯವಾದ; ಉಲ್ಲೇಖನೀಯ; ಶ್ಲಾಘ್ಯ: ಊರ್ಜಿತವಲ್ಲದುದು ಕೀರ್ತನೀಯವೆ? (ಸಾಹಿವಿ. ೧೪). [ಸಂ.]

**ಕೀರ್ತನೆ** (ನಾ). ೧. = ಕೀರ್ತನ ೨: ಕೀರ್ತನೆಗೆ ಸಂದ ನಂದ್ಯಾವರ್ತದ ಪೆರ್ಚಿಂದೆ ಪೆರ್ಚುಗುಂ ವೈಡೂರ್ಯಂ (ಜಟ್ಟಮ. ೪-೧೩); ಆತನ ಸರಸ ಕೀರ್ತನೆಗೊಲಿದು ಚಿತ್ತದೊಳು (ಬಸವಪು. ೩೦-೮); ನಾಲಗೆಗೆ ಭವದಡಿಯ ಕೀರ್ತನೆ ಕೀಲಿಸಲಿ (ಗಗಶಾ. ೧೭-೬೩); ಪ್ರಾರ್ಥನೆ ಮಾಡಿದರೆ ಸಿಕ್ಕದ್ದು ಕೀರ್ತನೆ ಮಾಡಿದರೆ ಸಿಕ್ಕೀತೇ (ಗಾದೆ). ೨. ದೇವರ ಸ್ತುತಿರೂಪವಾದ ಹಾಡು; ದೇವರನಾಮ: ಇವನು ದೇವಾಲಯದ ಹಿಂಭಾಗದಲ್ಲೇ ನಿಂತು... ಕೀರ್ತನೆಗೆ ತೊಡಗಿದ (ಭಾರದ. ೨೯೨); ಪೂಜೆಮಾಡಿ ಕೀರ್ತನೆ ಹಾಡಿದ ಮೇಲೆ (ಚಂದ್ರಸ. ೪). ೩. ಕೀರ್ತಿ. [ಸಂ. ಕೀರ್ತನಾ]

**ಕೀರ್ತಿ** (ನಾ). ೧. ಹೇಳಿಕೆ; ವರದಿ; ಪ್ರಸ್ತಾಪ. ೨. ಯಶಸ್ಸು; ಖ್ಯಾತಿ; ಪ್ರಸಿದ್ಧಿ: "ಒಸಗೆ ಜಸ ಕೀರ್ತಿಯಕ್ಕುಂ" (ಕವಿಕಂ. ೨೫೬); ಅಕ್ಷಯ ಕೀರ್ತಿ ಕುನ್ತಕದ ವಾರ್ಧಿಯ ಮೇಲದು ನೋಸ್ತು ಭಕ್ತಿಯುವರ್ (ಎಕ. II, ೨೧-೩; 700); ಕೀರ್ತಿಗೆ ತಾವೆ ಪಾತ್ರರಾಗಿರುತಿರಲು (ತಿರುರ. ೯-೧೫); ಕಾಯವಿದಳಿವುದಗ್ಗದ ಕೀರ್ತಿಯುಳಿವುದು (ಕುವ್ಯಾಉ. ೯-೭೩). ೩. ಮನೆ; ಕಟ್ಟಡ; ಸೌಧ. 'ಕೀರ್ತ್ಯುನ್ನತ' ಪರಾ. ೪. [ಜೈನ] ಪಾರಿವ್ರಾಜ್ಯಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಗಳಲ್ಲಿ ಒಂದು: ಕೀರ್ತಿಯೆಂಬುದು ಪರಮಕೀರ್ತಿಯಪ್ಪರ್ಹದ್ದೇವನ ತತ್ವಮಂ ಭಾವಿಸಿ... ತಪದೊಳೆಸಗಿದೊಡೆ ದಿವ್ಯ ವಿಜಯ ಪರಮಾನು ಪರಮಕೀರ್ತಿಯಂ ತನಗೆ ಮಾಳ್ಕುಂ (ಚಾವುಂಪು. ೨೫೦). [ಸಂ.]

**ಕೀರ್ತಿಕಾಮ** (ನಾ). ಕೀರ್ತಿಯ ಬಯಕೆಯುಳ್ಳವನು; ಕೀರ್ತಿಯನ್ನು ಅಪೇಕ್ಷಿಸುವವನು: ರಾಗದ್ವೇಷಮಿಲ್ಲದೆಯುಂ ಕೀರ್ತಿಕಾಮನಲ್ಲದೆಯುಂ ಚತುರ್ವಿಧಾಹಾರ ನಿವೃತ್ತಿಗೆಯ್ದು (ಮಲ್ಲಿಪು. ೧೧-೨೧); ಗಣಪತಿ ಕೀರ್ತಿಕಾಮನಾಗಿ ಬಂದವನಲ್ಲ ಎಂದು ಅವರು ಅರಿತಿಲ್ಲವೆ (ಹೊಸಕ್ಷಿ. ೩೮). [ಕೀರ್ತಿ + ಕಾಮ]

**ಕೀರ್ತಿಗ** (ನಾ). ಒಬ್ಬಾತನ ಹೆಸರು: ನಿನಗೀಗೆ ಕೀರ್ತಿಗನೇಳ್ಗೆಗಳ್ಕೆ ಸುಗಿಗುಂ ವಿದ್ವಿಷ್ಟಭೂಮಂಡಲಂ (ಎಇ. XVI, ೩೫೮-೪೦, 11ನೆಯ ಶತ).

[ಕೀರ್ತಿ + –ಗ₃]

**ಕೀರ್ತಿಗಾವುಂಡ** (ನಾ). ಒಬ್ಬಾತನ ಹೆಸರು: ಚಿತ್ರವಳ್ಳಿಯ ಕೀರ್ತಿಗಾವುಣ್ಡನ ಮಗಂ ಮಿಂಣ್ಡಗಾವುಣ್ಡ (ಎಕ. VIII, ಸೊರಬ. ೭೨-೩; 1084).

[ಕೀರ್ತಿ + ಗಾವುಂಡ (< ಗಾಮುಂಡ)]

**ಕೀರ್ತಿದೇಹಿ** (ನಾ). ಕೀರ್ತಿಯನ್ನೇ ದೇಹವಾಗಿ ಉಳ್ಳವನು; ಮರಣಹೊಂದಿದವನು: ಕೀರ್ತಿದೇಹಿಗೆಲ್ಲಿಯದು ಮರಣ? (ಸೂರ್ಯಪಾ. ೧೫-೫). 'ಕೀರ್ತಿಶೇಷ' ಪರಾ. [ಸಂ. ಕೀರ್ತಿದೇಹಿನ್]

**ಕೀರ್ತಿಪರ** (ನಾ). ಕೀರ್ತಿಯಲ್ಲಿ ಆಸಕ್ತಿಯುಳ್ಳವನು; ಯಶಸ್ಸನ್ನೇ ಗುರಿಯಾಗಿ ಇಟ್ಟುಕೊಂಡವನು: ಕೀರ್ತಿಪರರಾಗಿ ಬಾಳ್ದರ ವಾರ್ತೆಯ ನಂತಿಂತುವೆಂದು ಪೇಳಲ್ಬಹುಳಂ (ಹಮ್ಮಿರ. ೫-೬೪). [ಕೀರ್ತಿ + ಪರ₁]

**ಕೀರ್ತಿಮುಖ** (ನಾ). ೧. ಬಳೆಯಾಕಾರದ ಒಂದು ಆಭರಣ: ಕನಕಾಂಬುಜನಾಳಂ ಸುತ್ತನಂಬುಜಂ ಕೀರ್ತಿಮುಖಮನನುಕರಿಸೆ ನಿತಂಬಿನಿ ಕೇಯೂರಂ ತನಗೊಪ್ಪೆ ನಾಡೆ ಸೊಗಯಿಸಿದಳ್ (ಶಾಂತಿಪು. ೮-೧೯); ತನ್ನ ಕೀರ್ತಿ ದಿಗ್ಗಜರದನಕ್ಕೆ ಕೀರ್ತಿಮುಖಮಾಗೆ (ಪಂರಾಮಾ. ೧-೧೪೧); ಕೀರ್ತಿಮುಖವ ತೋಳೊಳು ತೊಡಿಸಿ (ಸಿದ್ಧರಾ. ೮-೮೦); ಕತೆಯ ಸಣ್ಣ ಮೂರ್ತಿಗೆ ಕಾವ್ಯದ ಕೀರ್ತಿಮುಖವನ್ನು ಕಟ್ಟಿದಂತಾಗಿ (ಸಾಹಿವಿ. ೧೦೮).

೨. ಕೀರ್ತಿಯ ಮುಖ, —ಮುಂಭಾಗ, —ಕುಡಿ. ೧, ೨: ನಿನ್ನ ಕೀರ್ತಿಮುಖಂ ಕೀರ್ತಿಮುಖಂಬೊಲೇನೆಸೆದುದೋ ದಿಗ್ದಂತಿದಂತಂಗಳೊಳ್ (ಪಂಪಭಾ. ೬-೬೬). ೩. ದೇವಾಲಯಗಳಲ್ಲಿ ಸಿಂಹಾಕೃತಿಯ ಒಂದು ಶಿಲ್ಪ; ಸಿಂಹಲಲಾಟ: ಚೈತ್ಯಾಲಯದ ರೇಖೆಯ ಭವನಿಕೆಯ ಮುಂದಣ ಕೀರ್ತಿಮುಖದ ಸಿಂಹಾ (ಪ್ರತಿಷ್ಠಾ. ೩-೨೪). ೪. ಒಬ್ಬಾತನ ಹೆಸರು: ಮುನ್ನಧರೆಯೊಳು ಸಂದ ರವಿಸುತ ಕೀರ್ತಿಮುಖ ಸಿಬಿ ಕಂದವಾಹನರು (ಬಸವು. ೧೮-೧೯).

ಕೀರ್ತಿ + ಮುಖ]

**ಕೀರ್ತಿಯಯ್ಯ, ಕೀರ್ತ್ಯಯ್ಯ** (ನಾ). ಒಬ್ಬಾತನ ಹೆಸರು: ಕೀರ್ತಿಯಯ್ಯಂ ಮಣ್ಣಳೇಸ್ವರಂ (ಸೌ ಇ ಇ. XX, ೭೧-೪೨; 1109); **ಕೀರ್ತ್ಯಯ್ಯ**: ಬಸದಿಯ ರಾವಚನ್ದ್ರ ಕೀರ್ತ್ಯಯ್ಯ (ಎಕ. XI, ಚಿತ್ರದು. ೫೦-೨೪; 968). [ಕೀರ್ತಿ + ಅಯ್ಯ$_1$]

**ಕೀರ್ತಿಲಾಲಸೆ** (ನಾ). ಹೊಗಳಿಕೆಯ ಹಂಬಲು; ಕೀರ್ತಿಯ ಗಳಿಕೆಯಲ್ಲಿರುವ ಉತ್ಸುಕತೆ, —ಅತಿಶಯ ಆಸಕ್ತಿ: ಧನದಾಶೆಯೋ ಕೀರ್ತಿಲಾಲಸೆಯೋ ... ನಮ್ಮ ಕರ್ಮಗಳ ಗುರಿಯಾಗಿರುತ್ತದೆ (ಧರ್ಮಸಾ. ೧೧೫). [ಕೀರ್ತಿ + ಲಾಲಸೆ]

**ಕೀರ್ತಿವಂತ** (ನಾ). ಪ್ರಸಿದ್ಧನಾದವನು; ಯಶಸ್ವಿಯಾದವನು: (*). [ಕೀರ್ತಿ + -ವಂತ]

**ಕೀರ್ತಿವಡೆ** (ಕ್ರಿ). ಕೀರ್ತಿಯನ್ನು ಗಳಿಸು; ಹೆಸರುವಾಸಿಯಾಗು; ಯಶಸ್ಸು ಪಡೆ: ದೀನಾರ್ತ್ಥಿಗಂ ಬಡವರ್ಗ್ಗೆಱೆದರ್ಗಿತ್ತು ಕೀರ್ತ್ತಿವಡೆದ (ಸೌಇಇ. XX, ೭೦-೨೬; 1108); ದಿಕ್ಕುದಿಕ್ಕಲಿ ಕೀರ್ತಿವಡೆದ ಕಂಠೀರವ ಸಕ್ಕರೆವಿಲ್ಲನರೂಪ (ಕಂನವಿ. ೨೬-೩೯). [ಕೀರ್ತಿ + ಪಡೆ$_1$]

**ಕೀರ್ತಿವರ್ಮ** (ಸಾ). ಒಬ್ಬಾತನ ಹೆಸರು: ಇದಱ ಮುನ್ದೆ ಕೊಣ್ಡ ಶುಲರ ಕುಪ್ಪ ಕೀರ್ತಿವರ್ಮ ಗೋಸಾಸಿಯ ನಿಱಿಸಿದಾ ಕೀರ್ತನ (ಎಇ. XXI, ೩೪-೧೧; 731). [ಸಂ. ಕೀರ್ತಿವರ್ಮನ್]

**ಕೀರ್ತಿವಲ್ಲಭ** (ನಾ). ಪ್ರಶಂಸೆಗೆ ಒಡೆಯ; ಯಶೋವಂತ: ಧನಿಕನು ರಾಜಪೂಜ್ಯನು ಕೀರ್ತಿವಲ್ಲಭನು (ಕುವ್ಯಾಉ. ೩-೧೧೫). [ಕೀರ್ತಿ + ವಲ್ಲಭ]

**ಕೀರ್ತಿವಿಖ್ಯಾತ** (ನಾ). ಬಹಳ ಯಶಸ್ಸನ್ನು ಪಡೆದವನು: ಸಂಗ್ರಾಮ ಗರುಡಂ ಮನುಜಮಾನ್ಧಾತಂ ಕೀರ್ತಿವಿಖ್ಯಾತಂ (ಸೌಇಇ. XX, ೪೭-೮; 1074). [ಕೀರ್ತಿ + ವಿಖ್ಯಾತ]

**ಕೀರ್ತಿವಿಶಾಲ** (ಗು). ಬಹಳ ಹೆಸರುವಾಸಿಯಾದ; ವಿಪುಲ ಯಶವುಳ್ಳ: ಸಮರ ಕರಾಳ ದೃಷ್ಟದ್ಯುಮ್ನಕೀರ್ತಿವಿಶಾಲ ಧೀರ ಶಿಖಂಡಿ ಸಹಿತಾ ದ್ರುಪದನೈತಂದ (ಕುವ್ಯಾವಿ. ೧೦-೪೫). [ಕೀರ್ತಿ + ವಿಶಾಲ]

**ಕೀರ್ತಿವಿಹಾರ** (ನಾ). ಯಶಸ್ಸಿನಲ್ಲಿ ವಿಹರಿಸುವವನು; ಕೀರ್ತಿಶಾಲಿಯಾದವನು: ತಾರಾಪತಿವತ್ ಕೀರ್ತಿವಿಹಾರಾ ... ದೂರೀಕೃತ ಬಲವಿಸ್ತಾರಾ (ಕವಿರಾ. ೩-೨೩೫). [ಕೀರ್ತಿ + ವಿಹಾರ]

**ಕೀರ್ತಿವೀರ** (ನಾ). ಒಂದು ಬಗೆಯ ಆಭರಣ: ಮುನ್ನಿಸಿ ತರಹೇಳಿ ಕೀರ್ತಿ ವೀರವ ಚಕ್ರಿ ಕನ್ನೆಯ ಬಳಿಗಟ್ಟಿದಂತೆ ಚಿನ್ನದ ಬಹಳ ಮುತ್ತಿನ ಸೆರಗಿನ ಸೀರೆ ಚೆನ್ನೆಯರರಸಿಗೊಪ್ಪಿದುದು (ಭರಚ. ೩೮-೮೪). *[?]

**ಕೀರ್ತಿವೆಱು** (ನಾ). ಯಶಸ್ಸನ್ನು ಪಡೆ; ಹೊಗಳಿಕೆಯನ್ನು ಗಳಿಸು: ಪುಣ್ಯವಹುದು ಪವಿತ್ರ ಭಕ್ತಿ ಸುಶೀಲರಪ್ಪರು ಕೀರ್ತಿವೆತ್ತಿಹರು (ಬಸವು. ೫೪-೮೫). [ಕೀರ್ತಿ + ಪೆಱು$_1$]

**ಕೀರ್ತಿಶಾಲಿ** (ಗು). ಖ್ಯಾತ; ಪ್ರಸಿದ್ಧ; ಕೀರ್ತಿವಂತ: ಪಂಚನಾದ ಅಯ್ಯನವರಿಗೆ ... ಇಬ್ಬರು ಕೀರ್ತಿಶಾಲಿ ಗಂಡು ಮಕ್ಕಳಾಗುವರೆಂದು ಹರಸಿದರು (ಸಂಗೀತ. ೩). [ಸಂ. ಕೀರ್ತಿಶಾಲಿನ್]

**ಕೀರ್ತಿಶೇಷ** (ಗು). ಯಶಸ್ಸಿನಲ್ಲಿ ಉಳಿದ; ಯಶಸ್ಸನ್ನು ಮಾತ್ರ ಉಳಿಸಿಹೋದ; ಸತ್ತ: ಮಾದ್ರಿಯು ... ಪತಿಯೊಡನೆ ಸಹಗಮನ ಮಾಡಿ ಕೀರ್ತಿಶೇಷಳಾದಳು (ವಚಭಾ. ೧೫). [ಸಂ.]

**ಕೀರ್ತಿಸು** (ಕ್ರಿ). ಕೊಂಡಾಡು; ಹೊಗಳು; ಸ್ತುತಿಸು: "ಕೀರ್ತಿಸು- ವರ್ಣನೇ" (ಶಮುಧಾ); ಅರಸುಗಳೆಲ್ಲಂ ಬಾಯ್ಕೇಳ್ದರೆಂದು ... ಧರಣಿತಳಂ ಕೀರ್ತಿಸೆ (ಆದಿಪು. ೧೪-೪೯); ಕೂರ್ತು ಕೀರ್ತಿಸುವುದುರ್ವೀಮಂಡಲಂ ದುರ್ಗನಾ (ಪಂಚತಂ. ೧೧-೮); ರುಕ್ಮಿಣಿಯರಸನನು ಕೀರ್ತಿಸುತ (ಕುವ್ಯಾಸ. ೭-೪೪ ಒ೦ಇ.); ತಮ್ಮಂ ಕೀರ್ತಿಸೆ ನಲ್ಮೆಯೊಲ್ಮೆ ಕಡುಚಾಗಂ ಕೂಡೆ ಸಂಭಾಷಣಂ ನಿಮ್ಮಂ ಕೀರ್ತಿಸಲಡ್ಡಮೋಱೆ ಬಡಚಾಗಂ ಮೌನಮೀ ಭೂಮಿಪರ್ (ರತ್ನಾಶ. ೭೭). [ಕೀರ್ತನ + -ಇಸು$_3$]

**ಕೀರ್ತಿಸ್ತಂಭ** (ನಾ). ಯಶಸ್ಸಿನ ಗುರುತಿಗಾಗಿ ನಿಲ್ಲಿಸುವ ಕಂಬ; ಗೆಲ್ಲಗಂಬ: ಈ ಸಿಂಧುವ ತೀರದೊಳ್ ನಿಱಿಸಿ ಕೀರ್ತಿಸ್ತಂಭಮಂ (ಪುಷ್ಪಪು. ೬-೧೬). [ಕೀರ್ತಿ + ಸ್ತಂಭ]

**ಕೀರ್ತ್ಯಯ್ಯ** 'ಕೀರ್ತಿಯಯ್ಯ' ನೋ.

**ಕೀರ್ತ್ಯರ್ಥಿ** (ನಾ). ಹೊಗಳಿಕೆಯ ಅಪೇಕ್ಷೆಯುಳ್ಳವನು: ವಿದ್ಯಾರ್ಥಿಯಾಗಿ ಅಥವಾ ಕೀರ್ತ್ಯರ್ಥಿಯಾಗಿ ಹೋಗಿದ್ದರೆ ಆರು ವರ್ಷಗಳೂ...ಪ್ರತ್ಯಾಗಮನವನ್ನು ನಿರೀಕ್ಷಿಸಬೇಕು (ಆರ್ಯಧ. ೧೫೯). [ಸಂ. ಕೀರ್ತ್ಯರ್ಥಿನ್]

**ಕೀರ್ತ್ಯನ್ವಿತ** (ನಾ). ಯಶಸ್ಸಿನಿಂದ ಕೂಡಿದವನು: ತನ್ನಂ ಸತತಂ ಕೂರ್ತಿತ್ತುಕೊಂಡಂ ಗುಣನಿಧಿ ಗುಣವರ್ಮಂಗೆ ಕೀರ್ತ್ಯನ್ವಿತಂ ಸತ್ಕೃತಿ ಲಕ್ಷ್ಮೀಕಾಂತೆಯಂ ... ಶಾಂತಿವರ್ಮಂ (ಪುಷ್ಪಪು. ೧-೭೨). [ಕೀರ್ತಿ + ಅನ್ವಿತ]

**ಕೀರ್ತ್ಯುನ್ನತ** (ನಾ). ೧. ಯಶಸ್ಸಿನಿಂದ ಶ್ರೇಷ್ಠವಾದುದು. ೨. ಮಹಡಿಯಿಂದ ಎತ್ತರವಾದುದು ೧, ೨: ಇದು ಪದ್ಮಾವಸಥಂ ದಿವಾಕರನವೊಲ್ ಕೀರ್ತ್ಯುನ್ನತಂ ಪಾತ್ರದಾನದವೊಲ್ ... ತಾನೆನಿಪನ್ನೆಗಂ ಹರಿಹರಶ್ರೀಗೇಹಮಂ ಮಾಡಿದಂ ಭೂಪಾಳನ ದಂಡನಾಥತಿಳಕಂ ಪೋಲಾಳ್ವದಂಡಾಧಿಪಂ (ಎಕ. XI, ದಾವಣ. ೨೫-೭೫; 1224). [ಕೀರ್ತಿ + ಉನ್ನತ]

**ಕೀಲುರ್** 'ಕೀರಲು' ನೋ.

**ಕೀಲ್, ಕೀಲಿ$_1$, ಕೀಲು** (ನಾ). ೧. ಅಗುಳಿ; ಬೆಣೆ: ಕೀಲೊಳೆ ಕಿಚ್ಚುಪುಟ್ಟಿ ಭೋರ್ಗರೆದುರಿದಂತೆ (ಪಂಪಭಾ. ೭-೧೬); ನಮ್ಮ ಬಲಂ ಕೀಲ್ಕಳೆದ ಜಂತ್ರದಂತೆ ಕಟಿಕುಟಿಮಾಗಿರ್ದಪುದು (ಪಂಚತಂ. ೨೦೬-೨೦); ಧುರದೊಳಸಿಲತೆಯನುಚ್ಚಿದೊಡರಿನೃಪಯುವತಿಯರ ಮುಗುಳಕಂಕಣದಾ ಕೀಲ್ತುರತರದಿನುಚ್ಚಿದವು ನಿಜಕರ ಖಳ್ಗಮುವರ್ಕ್ಕೆ ಕೀಲೆ ಶಾನ್ತರನೃಪತೀ (ಎಕ. VIII, ನಗರ. ೩೫-೨೦; 1077); ಬಿಲ್ ಕೆಟ್ಟವರ್ ಕೀಲಂ ತಡವರಿಸಿದರೆಂಬಂತೆ (ಧರ್ಮಾಮೃ. ೧೨-೬೫); ಅಚ್ಚುಡಿದು ಕೀಲ್ ಮುಱಿದು (ಇಹರ. ೪೩-೧); ಕೀಲ ತೆಗೆಯುಚ್ಚುಗಳ ಹೆರೆ ಬಲು ಗಾಲಿಗಳ ಜೋಡಿಸು (ಕುವ್ಯಾಕ. ೮-೧೨); ಹಡಗಿಗಹ ಹೆಮ್ಮರವ ಕೀಲಿಗೇಂ ಕಡಿದಪರೆ (ಹೆಬ್ಬರ. ೧೮-೧೮). ೨. (ಬಾಗಿಲು, ಪೆಟ್ಟಿಗೆ ಮುಂತಾದುವುಗಳಿಗೆ ಭದ್ರಪಡಿಸಲು ಹಾಕುವ) ಬೀಗ. 'ಕೀಲ್ಗಳೆ' ಪರಾ. ಕೀಲಿ$_1$: ೧. ಕೀಲಿ ಸಡಲಿ ಪುರ ಬೇವುದ ಕಂಡೆ (ಶಿವಗೀ. ೭೮೯). ೨. ಪೆಟ್ಟಿಗೆಯಲ್ಲಿಟ್ಟು ಕೀಲಿಹಾಕಿರಿ (ಬೆಟ್ಟಹೊ. ೬೧); ಮುಂದಿನ ಕೋಣೆಯ ಕೀಲಿ ಮುರಿದಿತ್ತು (ಕೊತಕಾ. ೩೩). ೩. ಗಡಿಯಾರ, ಯಂತ್ರ ಮೊದಲಾದುವನ್ನು ನಡೆಯಿಸುವುದಕ್ಕಾಗಿ ತಿರುಗಿಸುವ ಕೀಲು, —ಸುರುಳಿ: ಕೀಲಿ ಮಿಡಿಯೆ ಮಂಚದೊತ್ತಿಗೆ ಬಂದು ಪಾಂಚಾಳಿಕೆಗಳು ನಿಂದುತವಗೆ ವೀಳೆಯಗೊಡುತಾಲವಟ್ಟವಿಕ್ಕಲು (ಭರಚ. ೧೧-೪೭); **ಗೋಡೆ ಗಡಿಯಾರಕ್ಕೆ ವಾರಕ್ಕೊಮ್ಮೆ ಕೀಲಿ ಕೊಡಬೇಕು** (ರೂಢಿ).

**ಕೀಲು :** ೧. ಮೊಗಲರ ಸಾಮ್ರಾಜ್ಯದ ಕೀಲು ಸಡಿಲಿತು (ಛತ್ರಶಿ. ೨). ೩. ರಹಸ್ಯ; ಮರ್ಮ; ಗುಟ್ಟು: ಕಾಮನ ಸುಟ್ಟು ಹೋಮವನುರುಹಿ ತ್ರಿಪುರಸಂಹಾರ ಕೀಲನಱಿಯ ಬಲ್ಲೊಡೆ ಯೋಗಿಯಾದಡೇನು ಭೋಗಿಯಾದಡೇನು (ಅವಚಂ. ೭೫-೩೩೪); ತೊಡಕಿನ ಕೀಲನಱಿದೊಡನೆ ಮಾಡುವಲಾಲನೆಯಱಿವವನೆ ವೈದ್ಯಂ (ಅಶ್ವಶಾ. ೯೧-೯); ಕಾಲವ ಕಾಲವೆನಬೇಡ ಧರ್ಮದ ಕೀಲು ಬೇಱಿಂದ (ಸರ್ವಜ್ಞ. ೬೨೫); ನಮ್ಮೆಲ್ಲರ ಉದ್ಧಾರದ ಕೀಲು ಇಲ್ಲಿಯೇ ಇದೆ (ಬಿಟ್ಟ ಹೊ. ೯೭). ೪. ಬೆಂಕಿ: ಆವನೊರ್ವಂ ಪ್ರಾಣವಸ್ತುವೆಂಬಿನಜಲೋಭದಿಂ ಕೀರ್ತಿಯಂ ಕಿಡಿಸಿಕೊಂಡಿಹನೊ ಆ ಪಾಪಿಷ್ಟಂ ಕೀಲಿಂಗೆ ದೇವಾಲಯಮಂ ಸುಡುವನೋಪಾದಿ (ಪಂಚತಂ. ೨೦೯-೬); ಕೀಲಿಂಗೆ ದೇಗುಲವನಳಿವ ದರ್ಪದಂತೆ (ಹಚಕಾ. ೩-೧೦). [< ಸಂ. ಕೀಲ]

**ಕೀಲ$_1$** 'ಕೀರ$_2$' ನೋ.

**ಕೀಲ$_2$** (ನಾ). ೧. ಗೂಟ; ಅಗುಳಿ; ಬೆಣೆ; ಮೊಳೆ; ಕಡಾಣಿ. ೨. ಕಂಬ; ಸ್ತಂಭ. ೩. ಈಟಿ; ಭರ್ಜಿ. 'ಕೀಲಾಯುಧ' ಪರಾ. ೪. ಕೀಲಕವೆಂಬ ಪರ್ವತ. ೫. ಅರಗು. ೬. ಬೆಂಕಿ. ೭. ಬೆಂಕಿಯ ಜ್ವಾಲೆ: ಜ್ವಾಲಾಸುರಂ ಸೊಕ್ಕಿ ಕೀಲಪ್ರಪುಂಜಗಳ ಸಾಲಿಡುತ (ಗುರುಚಾ. ೧೦-೨೨). ೮. ಹದ; ಗುಟ್ಟು; ರಹಸ್ಯ: ಅನುಭಾವದ ಕೀಲವನಾರು ಅಱಿಯರಲ್ಲ (ಅಖಂಡೇ. ೧೯೧-೧೦); ನಾಲಗೆಯ ಕೀಲವನು ಶೀಲದಲಿ ತಾನಱಿದು ಶೂಲವದು ರುಚಿಯು ಎಂದಿಹನು ಮುದಿಯಲಿ ಬಾಲನಂತಿಹನು (ಸರ್ವಜ್ಞ. ೨೦೧೬). ೯. ಹಿಡಿತ; ಅಂಕೆ: ಅವರು ಬಿಟ್ಟ ಎಂಜಲನ್ನುಣ್ಣುವೆ . . . ಅವರ ಕೀಲದಲ್ಲಿರುವೆ (ಪರಮು. ೧೬೪). [ಸಂ.]

**ಕೀಲಂಗಿ** (ನಾ). ಕೊಂಡಿಗಳುಳ್ಳ ಅಂಗಿ (?): ಅಚ್ಚಮುದ್ದಂಗಿ ವಜ್ರದ ಕೀಲಂಗಿ ಮಾರಿವೋ ನಿನ್ನ ಮೈಯಂಗಿ ಕಂದಯ್ಯ ಮದ್ದೂರ ಸಂತೆ ಮಳಿಗೇಲಿ (ಹಳ್ಳಿಯ. ೮೯).

[ಕೀಲು (< ಕೀಲ್) + ಅಂಗಿ$_2$]

**ಕೀಲಕ, ಕೀಳಕ** (ನಾ). ೧. ಅಗುಳಿ; ಗೂಟ; ಮೊಳೆ: "ಸ್ಥಾಣು ರುದ್ರನುಂ ಕೀಲಕಮುಂ" (ವಸ್ತುಕೋ. ೧೧೮-೫). ೨. ಕೊಡತಿ; ಸುತ್ತಿಗೆ: ಕೊಡತಿ ಕೀಲಕಮೆನಿಕ್ಕು" (ಮಂಗರಾ. ೧೧೩-೮). ೩. ಹಸುಗಳನ್ನು ಕಟ್ಟುವ ಕಂಬ: (ಕ). ೪. ಒಂದು ಪರ್ವತ: ಡಮರು ಧ್ವಾನದಿಂದೊಡೆದಜಾಂಡಮಂ ಕೀಲಕಾದಿಗಳ ಪದಹತಿಯಿಂದೆ ನುರ್ಗೆ (ಭಾವಚಿಂ. ೩-೫). ೫. ಅರುವತ್ತು ಸಂವತ್ಸರಗಳಲ್ಲಿ ನಲವತ್ತೆರಡನೆಯದು: ಪ್ರಭವ ವಿಭವ . . . ಕೀಲಕ, ಸೌಮ್ಯ . . . ಕ್ಷಯವೆಂದಱುವತ್ತು ತೆಱನ್ (ವಿವೇಕ. ೨೬೩). ೬. ಬೆಂಕಿಯ ದೊಡ್ಡ ಜ್ವಾಲೆ: "ಉರಿಯ ಪೆರ್ಜ್ವಾಲೆ ಕೀಲಕಮೆನಲ್" (ಮಂಗರಾ. ೧೪-೮). ೭. ನಲವತ್ತೈದು ಮಂತ್ರಸಾಧನಗಳಲ್ಲಿ ಒಂದು: ಕೀಲಕ . . . ಪಂಚಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (ವಿವೇಕ. ೮೦). ೮. ರಹಸ್ಯ; ಗುಟ್ಟು: ಕೇಳಿ ತಿಳಿದಾ ರಾಜಯೋಗದ ಕೀಲಕವನೆಲ್ಲವನು (ಗಗತಾ. ೨೦-೧೦೧). ೩. ಅರಗು; ಲಾಕ್ಷೆ: "ಲಾಕ್ಷೆ ಕೃಶಾನು ಧಾತ್ರಿಧರ ಕಾಷ್ಠಗಳೆಂಬಿವು ಕೀಲಕಾಹ್ವಯಂ" (ನಾನಾರ. ೧೦೨); "ಅರಗಗ್ನಿ ಕೀಲು ಗಿರಿ ವತ್ಸರವೈದುಂ ಕೀಲಕಾಖ್ಯಂ" (ನಾನಾಕಂ. ೧೨೫). **ಕೀಳಕ :** ೧. "ಧ್ರುವಕಃ . . . ಕೀಳಕಃ – ಈ ೬ ಗುಡಿಯಗೂಂಟಂ" (ಹಲಾಯು. ೭೪-೨೯೭). [ಸಂ.]

**ಕೀಲಕಡಗ** (ನಾ). ಬಿಚ್ಚಲು ಬರುವ ಕಡಗ: ಕೀಲಕಡಗ ಹಸ್ತಕಡಗ ಹೀರಾವಳಿ ಡಾಳಿಸುತಿಹ ಸಿಂಹಕಡಗ (ಕಂನವಿ. ೨೪-೩೯).

[ಕೀಲ$_2$ + ಕಡಗ]

**ಕೀಲಕಡ್ಡಿ** (ನಾ). ಕೀಲಿನ ಕಡ್ಡಿ, —ಕೊಂಡಿ: ಕುಂದಣದ ಕೀಲಕಡ್ಡಿಯ ಮಣಿಯಂ ಕೈಯಿಂದ ಪಿಡಿದು (ಸೌಗಂಧಿ. ೨೦೯-೧೨).

[ಕೀಲ$_2$ + ಕಡ್ಡಿ]

**ಕೀಲಗುಳಿ** (ನಾ). ಕೀಲಿನ ಅಗುಳಿ; ಬಾಗಿಲಿಗೆ ಕೂಡಿಸಿದ ತಾಪಾಳ: ಕೀಲಗುಳಿಯ ಸದ್ದು ಅವನಿಗೆ ಕೇಳಿಸಿತು (ಪುನರು. ೭೯).

[ಕೀಲ್ + ಅಗುಳಿ (< ಅಗ್ಗಳಿ$_1$)]

**ಕೀಲಚ್ಚು** (ನಾ). ಕೀಲು ಅಳವಡಿಸಿದ ಅಚ್ಚು; ರಥದ ಇರಚು: ವಾರಣಂಗಳ ಗುಳವ ಜೋಡಿಸಿ ತೇರುಗಳ ಕೀಲಚ್ಚು ಕೂಬರಯುಗವನಾರೈದು (ಕುವ್ಯಾಗ. ೧-೨೫); ಮಿಣಿ ನೊಗನು ಕೀಲಚ್ಚು ಕೂಬರ ಬಳಿಮೊಳೆಯನಾರೈದು ಹರೆಯನು ಬಳಿದು (ತೊರರಾ. ೫-೭-೫); ವಾರುವಂಗಳ ಪೂಡಿ ಕೀಲಚ್ಚು ಬಳಿ ಮೊಳೆಯನಾರೈದು ಸಿಂಧಮಂ ನೆಗಪಿ (ಚಬಪು. ೪೮-೫೩). [ಕೀಲ್ + ಅಚ್ಚು$_1$]

**ಕೀಲಜ್ಞಾನ** (ನಾ). ರಹಸ್ಯದ ತಿಳಿವಳಿಕೆ; ಮರ್ಮಜ್ಞಾನ: ಹೊನ್ನು ಹೆಣ್ಣುಮಣ್ಣೆಂಬ ಮೂಱು ಸಂಕಲೆಯ ಕೀಲಜ್ಞಾನ ಚೀರಣದಿಂದ ತಡೆಗಡಿದು ವಿರಕ್ತನಾಗಿ (ಘನವ. ೭೩-೬೨). [ಕೀಲ$_2$ + ಜ್ಞಾನ]

**ಕೀಲಣ, ಕೀರಣ, ಕೀರಣಿ, ಕೀರಣೆ, ಕೀಲಣಿ, ಕೀಲಣೆ** (ನಾ). ೧. ಕೀಲಿಸುವಿಕೆ; ಜೋಡಣೆ; ಕೂಡಿಸಿಕಟ್ಟುವಿಕೆ; ಬಂಧ: ಬಂದಿ ಕೀಲಣದ ಹೊಂಬಳೆ ಕಡಗ . . . ಕಂಕಣದವೋಲೆ (ಹಚಕಾ. ೪-೧೨); ಒದೆದು ಮಕುಟವ ಕಳಚಿದನು ಕೀಲಣದ ಮಣಿಗಳು ಕೆದಱಿ ದೆಸೆದೆಸೆಗೆ (ಕುವ್ಯಾಗ. ೮-೧೩); ಹೊನ್ನರನ್ನದ ಕೀಲಣದ ಹಲ್ಲಣದ ಹಯ ಹದಿನೇಳು ಕೋಟಿಯ (ತೊರರಾ. ೬-೨೦-೭); ಹೊಳೆವ ಮಕುಟದ ಕೀಲಣದ ಮಣಿಗಣದ (ನಿಭಾಗ. ೪-೪-೧೭); ಮಣಿ ಪೂರಣೋರಣದ ಕೀಲ[ಪಾಠಾಂ. ರ]ಣದ ಮಕುಟದಿಂ (ಚಬಪು. ೪೭-೧೫). ೨. ಗುಟ್ಟು; ಮರ್ಮ; ರಹಸ್ಯ: ಕಾಳೋರಗನ ನಿದ್ರೆಯನು ಕೆಡಿಸಿ ಬದುಕುವ ಕೀಲಣದ ಗಾರುಡಿಗರಾರುಂಟು (ಪ್ರಭುಲೀ. ೮-೧೩). **ಕೀರಣ:** ೧. ಕೀರಣದ ಪೊಸ ಪೊನ್ನ ಮಣಿಗೆಲಸದಿಂ (ಭಾವಚಿಂ. ೫-೨೬); ವಜ್ರಮೌಕ್ತಿಕ ರತ್ನ ಕೀರಣದ ಮಕುಟದಿಂ (ವೀಶೈಪು. ೩-೧೬-೭); ಮಣಿ ಪೂರಣೋರಣದ ಕೀರ [ಪಾಠಾಂ. ಲ]ಣದ ಮಕುಟದಿಂ (ಚಬಪು. ೪೭-೧೫). **ಕೀರಣಿ.** 'ಕೀರಣಿಗೆಲಸ' ಪರಾ **ಕೀರಣೆ:** ೧. ಕೀರಣೆಯ ಕೆಲಸಗತಿಯಂತೆ ಕಾಣಿಸಿ (ವೀಶೈಪು. ೮-೨೦-೨೬). **ಕೀಲಣಿ:** ೧. ಇಟ್ಟಣಿಸಿ ಬಿಗಿದ ಮಾಣಿಕ್ಯಲಹರಿಯ ಮುಕ್ತಿನೊಟ್ಟಜೆಯ ಕೀಲಣಿಯ ಗಾಡಿಯಿಂದ (ಚಬಪು. ೩೭-೩೩). **ಕೀಲಣೆ :** ೧. ಮಿಸುನಿಯ ಕಂಬದಿಂದಖಿಳ ರತ್ನದ ಕೀಲಣೆಯಿಂ ಪ್ರವಾಳಮೆಣ್ದೆಸೆಗಳ ಕೂಟದಿಂ (ಧರ್ಮಪ. ೨-೧೫); ನೀಲದ ಪೊಳೆವ ಪರಲ್ಗಳ ಕೀಲಣೆಯಿಂ (ಅರ್ಧನೇ. ೫-೧೦೭); ತರತರದ ಕೀಲಣೆಯ ಹೊಂಗೆಲಸದ ಸುರೇಖೆಗಳ ಕೊರಳ ಹೀರಾವಳಿಯ (ಕುವ್ಯಾಭೀ. ೮-೧೦); ಎಲೆ ಮುನಿಪ ದಯೆಯಿಂ ಬಿಡಿಸು ಮಕ್ಕಳ ಕೀಲಣೆಯನೆನಲು (ಸಾಳ್ವಭಾ. ೧೭-೩೨). ೨. ಇಷ್ಟಲಿಂಗದ ಕೀಲಣೆಯನಱಿದಲ್ಲದಾಗದು ಹೇಳುವೊಡೆ ಶಿವಭಕ್ತಿ (ಪ್ರಭುಲೀ. ೧೬-೫೩); ಜಗವನಱಿವ ಚಮತ್ಕೃತಿಯ ಕೀಲಣೆಯ ಬಲ್ಲವನೆ (ಸ್ವರೂಪಾ. ೨-೧).

ಕೀಲಣೆಯುಡಿದಾರ = ಕುಂದಣದ ಕೆಲಸಮಾಡಿದ ಉಡಿದಾರ: ಹಾರಪದಕ ಹತ್ತಕಟ್ಟು ಕೀಲಣೆಯುಡಿದಾರ ಮುತ್ತಿನ ಸರ (ಕುರಾಸಾಂ. ೨೭-೩೯). ಕೀಲಣೆಯುತ್ತರಿಕೆ: ಕುಸುರಿಗೆಲಸದ ಮೇಲುಹೊದಿಕೆ, —ಉತ್ತರೀಯ: ಕಿತ್ತಳೆಗಾಪಿಯ ಹೀರೆಯ ಕೀಲಣೆಯುತ್ತರಿಕೆಯ . . . ಉನ್ಮತ್ತಯುವ್ವನೆಯರೆಯ್ದಿದರು (ಕುರಾಸಾಂ. ೩೪-೨೦).

[< ಸಂ. ಕೀಲನ]

**ಕೀಲಣಿ** 'ಕೀಲಣ' ನೋ.

**ಕೀಲಣಿಕೆ**, ಕೀಲಣಿಗೆ (ನಾ). ಆಯಕಟ್ಟು; ರಚನೆ; ಬಂಧ: ಶುಕ್ರನು ಸರ್ವಜ್ಞನಂ ಜಾಣ್ನುಡಿಯ ಕೀಲ[ಪಾಠಾಂ. ಲಿ]ಣಿಕೆಯಿಂ ಗೆಲಿದನು (ಚಿಬಪು. ೨೧-೧೯). **ಕೀಲಣಿಗೆ**: ಪೇಳಿದ ತತ್ತ್ವಾನುಭವ ರಹಸ್ಯದ ಕೀಲಣಿಗೆ ಬಗೆ ಸುಲಲಿತದಿಂ ನಿನ್ನ ಮನಂಬುಗದಿರಲೂ (ಕಲ್ಯಾಣೇ. ೮೫); ಜನಕನೃಪಾಲಜೆಯ ಹದನೇನು ಹವಣಿನ ಕೀಲಣಿಗೆ ತಾನೇನು ನುಡಿ ನೀನಂಜಬೇಡ (ತೊರರಾ. ೩-೧೧-೫); ಭಾಗವತಧರ್ಮದ ಕೀಲಣಿಗೆ ಗಾಧಾರಭೂತನು ಹೊಕ್ಕ ನರಮನೆಯ (ನಿಭಾಗ. ೩-೧೦-೩೦). [ಕೀಲಣ + -ಇಕೆ]

**ಕೀಲಣಿಗೆ** 'ಕೀಲಣಿಕೆ' ನೋ.

**ಕೀಲಣೆ** 'ಕೀಲಣ' ನೋ.

**ಕೀಲಣೆಗೆಯ್**, ಕೀಲಣೆಗೈ (ಕ್ರಿ). ಕುಂದಣಿಸು; ಕೆತ್ತು; ಜೋಡಿಸು: ಪೆರ್ಗಾಲ ಹೊಂದೊಂಬನು ನೆಗಹೆ ಕೀಲಣೆಗೆಯ್ದು ಸುವರ್ಣವೇತಂಡ ಶುಂಡಾಲದೆ ಸುರಿದುದು ಸಲಿಲ (ನೋಹತ. ೧೪-೩೫). **ಕೀಲಣೆಗೈ**: ಕೀಲಣೆಗೈದ ಬಜ್ಜರದ ನಡುವೊಪ್ಪುವಿಂದ್ರನೀಲದ (ಜೀರಮು. ೫-೩೭). [ಕೀಲಣೆ + ಕೆಯ್$_1$]

**ಕೀಲಣೆಗೆಲಸ**, ಕೀರಣೆಗೆಲಸ (ನಾ). ಹೊಂದಿಸಿ ಕಟ್ಟುವ ಕೆಲಸ; ಕುಂದಣದ ಕೆಲಸ; ಕುಸುರಿಗೆಲಸ: ಕಾಲಕುಪ್ಪಸ ಕಸೆ ಮೊಲೆಗಟ್ಟು ಜಡೆ ರತ್ನಕೀಲಣೆಗೆಲಸದೊಡ್ಯಾಣ (ಭರಚ. ೫೦-೮೧). **ಕೀರಣೆಗೆಲಸ**: ಕೀರಣೆಗೆಲಸದ ಹದಿನಾಱು ಕಂಭಗಳ ಚೀರಡಿ ಮದನ ಕೈಯಿಂದ . . . ಒಪ್ಪಿದುವು (ನಾಗಕು. ೨೭-೧೬). [ಕೀಲಣೆ(< ಕೀಲಣ) + ಕೆಲಸ)]

**ಕೀಲಣೆಗೈ** 'ಕೀಲಣೆಗೆಯ್' ನೋ.

**ಕೀಲಣೆಗೊಳ್** (ಕ್ರಿ). ಕುಂದಣಿಸಲ್ಪಡು; ಹೊಂದಿಸಲ್ಪಡು. 'ಕೀಲಣಿಗೊಳಿಸು' ಪರಾ. [ಕೀಲಣೆ (< ಕೀಲಣ) + ಕೊಳ್$_1$]

**ಕೀಲಣೆಗೊಳಿಸು** (ಕ್ರಿ). ಕುಂದಣಿಸು; ಹೊಂದಿಸು: ಪೊಳೆವ ಕೀಲಣೆ ಗೊಳಿಸದುಱುಮಾಣಿಕಂ ವಿಂಡಗಳೆಯದೊಳುಮುತ್ತು (ಸಾಳ್ವಭಾ. ೧೪-೧೯). [ಕೀಲಣೆಗೊಳ್ + -ಇಸು$_3$]

**ಕೀಲಣೆವಡೆ** (ಕ್ರಿ). = ಕೀಲಣೆಗೊಳ್: ಕಡೆದೊಡ್ಡಿದಂತೆ ಪಚ್ಚೆಳ ಮೇಲೆ ಕಿ[ೕ]ಲಣೆವಡೆದಂತೆ ನಡುತೆಜಪಾಗಿ ಪೊಡನೆ ನೇವರಿಸಿದಂತೆರ್ದೆ ಸುಚಿತ್ರಿಸಿದಂತೆ (ವರ್ಧಸಾಂ. ೮-೪೭). [ಕೀಲಣೆ (< ಕೀಲಣ) + ಪಡೆ$_1$]

**ಕೀಲಣೆವೆಱು** (ಕ್ರಿ). ಕಟ್ಟಿಗೆ ಒಳಗಾಗು; ಬಂಧನಕ್ಕೆ ಸಿಕ್ಕು: ಪಗೆವರಿಂದೆ ಕೀಲಣೆವೆತ್ತು ಸಾಯುತಿರ್ದಮ್ಮಂ (ನೇಮಿಪು. ೪-೧೧೦ ವ); ಬಿಟ್ಟರನೆತ್ತಿ ಕೀಲಣೆವೆತ್ತರಂ ಕಟಲ್ಚಿ (ನೇಮಿಪು. ೭-೨೦೪ ವ). [ಕೀಲಣೆ (< ಕೀಲಣ) + ಪೆಱು$_1$]

**ಕೀಲನ** (ನಾ). ಕಟ್ಟುವಿಕೆ; ಕಟ್ಟು; ಬಂಧನ: ಕೀಲನ ನಿರ್ಮೂಲನ ಮಾರಣ . . . ದುರ್ಭೋಗ್ಯ ನಾನಾವಿಧಾನ ಸಂಖ್ಯಾತ ತೀವ್ರ ವೇದನಾ ರೂಪಂಗಳಾಗಿ (ವಿವೇಕ. ೧೯೧). [ಸಂ.]

**ಕೀಲಬೊಂಬೆ** 'ಕೀಲ್ಬೊಂಬೆ' ನೋ.

**ಕೀಲಸ** (ನಾ). ಹಾಲು ಮತ್ತು ತುಪ್ಪ ಎರಡರಲ್ಲಿಯೂ ತಾಳಿಸಿದ ಕಾಯಿ ಮೊದಲಾದವು: "ತುಪ್ಪ ಹಾಲೆರಡರಲಿ ತಾಳಿಸಿದ ಹೊಯ್ಗುಲವು ಕ್ಷೀರಸಂ ಕೀಲಸಾ[ಪಾಠಾಂ. ಕಾ, ನಾ]ಖ್ಯಂ" (ಮಂಗರಾ. ೭೪-೩). [< ಸಂ. ಕ್ಷೀರರಸ]

**ಕೀಲಸಾಗರ** (ನಾ). ಒಂದು ಬಗೆಯ ರೊಟ್ಟಿ: ಕೀಲಸಾಗರ ಸಂಜೀವಿನಿ ಮೊದಲಾದ ಸಾಲ ಸವಿಯ ರೊಟ್ಟಿಗಳ ನೀಲಕುಂತಳೆಯರು ನಗುತಾಗ ನರಸಭೂಪಾಲನಿಗೆಡೆ ಮಾಡಿದರು (ಕಂಸವಿ. ೮-೮೮). [ಕೀಲ್$_1$ (< ಕೀರ್ಷ) + ಸಾಗರ$_3$]

**ಕೀಲಾಕ್ಷಿ** (ನಾ). ಬೆಂಕಿಯ ಜ್ವಾಲೆಯಿರುವ ಕಣ್ಣು; ಅಗ್ನಿನೇತ್ರ: ಅದ್ಭುತ ನಟ ನಿಟಿಲಾಲೋಲ ಕೀಲಾಕ್ಷಿವೋಲ್ ದಳ್ಳಿಸೆ ಕೋಪಾರಕ್ತನೇತ್ರಂ (ಗದಾಯು. ೭-೩೦). [ಕೀಲ್$_2$ + ಅಕ್ಷಿ]

**ಕೀಲಾಟ** (ನಾ). ಹಾಲಿನಲ್ಲಿ ಮಾಡಿದ ಒಂದು ತಿಂಡಿ: "ಕೀಲಾಟಃ, ಕೂರ್ಚಿಕಾ – ಈ ೨ ಕ್ಷೀರಸಂ" (ಹಲಾಯು. ೫೪-೧೬೯). 'ಕೀಲಸ' ಪರಾ. [?]

**ಕೀಲಾದ್ರಿ** (ನಾ). ಕೀಲ ಪರ್ವತ; ಎಂಟು ದಿಕ್ಕುಗಳಲ್ಲಿಯೂ ಭೂಮಿಗೆ ಆಧಾರವಾಗಿ ಇರುವವೆಂದು ಭಾವಿಸಲಾದ ಪರ್ವತಗಳು: ಇಳಾತಳ . . . ಕಾಲವಶದೊಳು ತಳಮಳಗೊಂಬುದೆಂದಿಶ್ವ ಕರ್ಮಪ್ಪಕಿ[ೕ]ಲಾದ್ರಿಗಳನು ಜಡಿದು (ನವಮೋ. ೨-೧೪). [ಕೀಲ್$_2$ + ಅದ್ರಿ]

**ಕೀಲಾಯುಧ** (ನಾ). ಈಟಿ; ಭಲ್ಲೆ; ಭರ್ಜಿ: ಎಸೆವ ಕೀಲಾಯುಧ ಬಲಿದ ಅಡ್ಡದೊಲೆ ಕಣ್ಗೆಸೆದುವು ತೆನೆಯ ಸಂದಿಯಲಿ (ಕಂಸವಿ. ೬-೨೨). [ಕೀಲ್$_2$ + ಆಯುಧ]

**ಕೀಲಾರ**, ಕಿಲಾರ, ಕೀರಾರ (ನಾ). ಹಾಲಿನ ಮನೆ; ಹೈನುಶಾಲೆ; ಗೋಶಾಲೆ: ಚಂದ್ರಮತೀ ಮಹಾದೇವಿಯ ಕೀಲಾರದ ಧೇನುಗಳಂ . . . ಕೊಂಡು ಪೋದಡೆ (ಸುಕುಮಾ. ೭-೩೫ ವ); ಕೀಲಾರಮುಂ ನ್ಯಾಯದಿಂ ಸುಂಕಂಗೊಂಡು ನಡಯಿಸುವುದುಂ (ನೀತಿವಾ. ೧೮-೨೨); ಕಳ್ಳರ್ ಒಂದು ಕೀಲಾರಮಂ ಕೊಂಡು ಹೋದರಿಂದಲೆದೇವ (ಬಸರ. ೯-೧೦೭); ಗೋವಿಂದನ ಹಿಡಿಯಾಳ ಹಿಡಿದು ತಂದೆಂದಿನಂದದಿ ನಿನ್ನ ಕೀಲಾರದ ಗೊಂದೆಗಳನು ಕಾಯಿಸುವೆವು (ನೇಮಿಸಂ. ೨೬-೯೦); ಊಟಕೆ ಕೀಲಾರ ನೃಪಗೇಹದೊಳು ಮೂಱು ಕೋಟಿ ಗೋವುಗಳು ಕಱೆವುವು (ಭರಚ. ೧೬-೯೯); ಗೋಮಹಿಷಿ ಕುಲದ ಕೀಲಾರ ಬಿಡದೆಯ್ದಿತೊಡನೆ (ಜೈಮಿಭಾ. ೭-೫). **ಕಿಲಾರ**: ಕೊಟ್ಟಿಗೆ ಕಿಲಾರಗಳ ಕರುವಟ್ಟಿಗಳಲ್ಲು . . . ತಕ್ಕವರನ್ನಿರಿಸಿ ವಿಚಾರಿಸಿಕೊಳ್ಳುವೆಯೋ (ಕೃವಾಸ. ೧೦). **ಕೀರಾರ**: "ಕ್ಷೀರಾಗಾರ – ಕೀರಾರ, ಕೀಲಾರ" (ಶಮದ. ೨೯೫ ಪ್ರಯೋ); ಕೀಲಾರಂ ಕೀರಾರಂ (ಶಬ್ದಾನು. ೩೭೮ ಪ್ರಯೋ). [< ಸಂ. ಕ್ಷೀರಾಗಾರ]

**ಕೀಲಾರಿ** (ನಾ). ೧. ದನಕರುಗಳನ್ನು ಸಾಕುವವನು; ಗೋವಳ; ತುರುಗಾಹಿ: "ಕೀಲಾರಿಯುಂ ಗೋವಿಂದನೆಂಬುದು" (ಹಲಾಯು. ೪೪-೧೦೭); "ಕೀಲಾರಿ ಗೋವಿಂದನಕ್ಕು" (ಮಂಗರಾ. ೫೬-೧೦); ಕರೆಸಿದನು ಕೀಲಾರಿಗಳನಾದರಿಸಿ ಹಟ್ಟಿಯ ತುಱುಗಳೆಲ್ಲವ ತರಿಸಿ ನೋಡಿದನು (ಕುವ್ಯಾಅ. ೧೭-೩೫). ೨. ಹಾಲು ಮಾರುವವನು: "ಕೀಲಾರಿ – ಕ್ಷೀರಾಗಾರಿ = ಹಾಲು ವ್ಯಾಪಾರಿ" (ತಪ್ಪಕೋ. ೭). [ಕೀಲಾರ + -ಇ$_3$]

**ಕೀಲಾರಿಗ** (ನಾ). = ಕೀಲಾರಿ: ಈ ಕೊಲೆ ಪಡೆವಾತಂ ಚಂದ್ರವಾಹನನ ಕೀಲಾರಿಗಂ ವೀರಪೂರ್ಣನೆಂಬೊನ್ (ಸುಕುಮಾ. ೭-೩೫ ವ). [ಕೀಲಾರ + -ಇಗ$_3$]

**ಕೀಲಾಲ** (ನಾ). ೧. ನೆತ್ತರು; ರಕ್ತ: "ರಕ್ತದೊಳು ಕೀಲಾಲವೆಂದೆನಿಕ್ಕು" (ಮಂಗರಾ. ೧೪೩-೨೧); ಅನವರತ ನಿಹತ ನರಕರಿ ತುರಗ ನಿಕುರಂಬ ಕೀಲಾಲ ಕಲ್ಲೋಲ ಪ್ರವರ್ತನಾನೇಕ ನದನದೀಪ್ರವಾಹ ಬಾಹುಳ್ಯ ದುಸ್ತರಾವತರಣ ಮಾರ್ಗಮುಂ (ಪಂಪಭಾ. ೧೩-೫೧ ವ). ೨. ನೀರು; ಜಲ: "ನೆತ್ತರದಲ್ಲಿಯುಂ ನೀರಲ್ಲಿಯುಂ ಕೀಲಾಲ ಮೆಂಬುದು" (ಹಲಾಯು. ೧೩೮-೪೧); ವೃಷ್ಟಿಯೊಳೊಗೆದ ಕೀಲಾಲವು ಸಮುದ್ರ ಹೊಗುವ ನದಿ ನಾನಾ ಪ್ರಕಾರದ ರೂಪುಗಳೆಸೆವ ಒಗುಮಿಗೆಯ (ಕುವ್ಯಾಉ. ೪-೧೧೪); ಭೂಮಿ ಕೀಲಾಲಾಗ್ನಿ ಪವನಂ ವ್ಯೋಮ ಅದಿತ್ಯೇಂದು (ಶಂಕದಾ. ೧-೧). ೩. ಸಿಹಿಯಾದ ಪಾನೀಯ; ಅಮೃತ. 'ಕೀಲಾಲಪ' ಪರಾ. ೪. ಜೇನುತುಪ್ಪ.

೫. ಕೆಂಪು ಬಣ್ಣ. ೬. ಕುದುರೆಯು ಮಾಡುವ ಶಬ್ದ, —ಕೆನೆತ; ವಾಜಿಧ್ವನಿ: "ಜಲ ವಾಜಿಧ್ವನಿ ರಕ್ತ ಲೋಹಿತವು ಕೀಲಾಲಾಖ್ಯೆ" (ನಾನಾರ. ೫೫). [ಸಂ.]

**ಕೀಲಾಲಜ** (ನಾ). ೧. ರಕ್ತದಿಂದ ಹುಟ್ಟಿದುದು; ಮಾಂಸ. ೨. ನೀರಿನಲ್ಲಿ ಹುಟ್ಟಿದುದು; ಕಮಲ. 'ಕೀಲಾಲಜಾರಿ' ಪರಾ. ೩. ನೀರಿನಿಂದ ಹುಟ್ಟಿದುದು; ಬೆಂಕಿ. 'ಕೀಲಾಲಜ ಲೋಚನ' ಪರಾ. [ಸಂ.]

**ಕೀಲಾಲಜಲ** (ನಾ). ನೆತ್ತರು; ರಕ್ತಜಲ: ಮೃಗಯಾಪತಿಯಂತೆ ಕೀಲಾಲಜಲದೊಳೋಲಾಡುವ ಲಲಾಮೆಯರಿಂ (?) (ಕಾವ್ಯಸಾ. ೫೨೯ ಶೂದ್ರಕ). [ಕೀಲಾಲ + ಜಲ$_{1}$]

**ಕೀಲಾಲಜಲೋಚನ** (ನಾ). ಬೆಂಕಿಯನ್ನು ಕಣ್ಣಲ್ಲಿ ಉಳ್ಳವನು; ಶಿವ: ಕಾಂಚೀಪುರಿಯೊಳ್ ಕೀಲಾಲಜಲೋಚನ ಮತಲೋಲಂ ರಾಜೇಂದ್ರಚೋಳನಿರ್ದ (ಹಮ್ಮಿರ. ೩-೨). [ಕೀಲಾಲಜ + ಲೋಚನ]

**ಕೀಲಾಲಜಾರಿ** (ನಾ). ಕಮಲದ ವೈರಿ; ಚಂದ್ರ: ಕೀಲಾಲಜಾರಿ ಪ್ರಕಾಶ ಮುಂಬರಿದು ತುಂಬಿತು ನಭೋಮಂಡಲವನು (ಏಕೋಪು. ೫-೮). [ಕೀಲಾಲಜ + ಅರಿ$_{6}$]

**ಕೀಲಾಲಜೋದ್ಭವ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಕೀಲಾಲಜೋದ್ಭವ ನೀಂ ದೇವ ಮಾನುಷ್ಯ ಜಾಲ ರಾಕ್ಷಸ ಸರ್ವರಂ ಸೃಜಿಸಿ (ವೀಶೈಪು. ೩-೧೬-೪೪): [ಕೀಲಾಲಜ + ಉದ್ಭವ]

**ಕೀಲಾಲಪ** (ನಾ). ೧. ಅಮೃತಪಾನ ಮಾಡುವವನು; ದೇವತೆ. ೨. ರಕ್ತವನ್ನು ಕುಡಿಯುವವನು, —ಪಿಶಾಚಿ; ರಾಕ್ಷಸ. ೧, ೨: ಕೀಲಾಲಪ ವಕ್ಷಸ್ಥಲ ಕೀಲಾಲಪನಪ್ಪೆನಗೆ ಕಾಕಪಕ್ಷಧಾರಿಯೊಳ್ ಸಾಮುವಪ್ಪುದಕಾರ್ಯಮುಂ (ಜಗವಿ. ೫-೬೧ ವ). [ಸಂ.]

**ಕೀಲಾವಳಿ** (ನಾ). ಜ್ವಾಲೆಗಳ ಸಮೂಹ; ಬೆಂಕಿಯ ನಾಲಗೆಗಳ ಸಾಲು: ಚಳತಟನ್ಮಾಳಿಕಾಲೋಲ ಕೀಲಾವಳಿ ಸಂಜಾತೇಂದ್ರ ಗೋಪ ಪ್ರಸರವಿಸರದರ್ಚಿಃಕಣಂ ಪಶ್ಚಿಮಾಶಾನಿಳ ಪಾತೋಜ್ಜೃಂಭಿತಂ ಬಂದುದು ವಿರಹಿ ತರುವ್ರಾತಮಂ ಪರ್ವುಗ್ರಾನಳನೆಂಬಂತಬ್ದಕಾಲಂ (ಚಂದ್ರಪು. ೪-೨೯). [ಕೀಲ$_{2}$ + ಆವಳಿ$_{1}$ (= ಆವಲಿ)]

**ಕೀಲಿ$_{1}$** 'ಕೀಲ್' ನೋ.

**ಕೀಲಿ$_{2}$** (ನಾ). ಕೀಳ; ಕ್ಷುದ್ರನಾದವನು (?): ಕರಿಣೀವೃಂದ ದೊಳಾಡು ಕರ್ಪುರತರುವ್ರಾತಂಗಳೊಳ್ಮತ್ತಿ ಪಂಕರುಹಾನೀಕದೊಳಿಕ್ಕೆ ಗೋನಿವಹದೊಳ್ಕಾಟ್ಟಿಕ್ಕು ಕಂಠೀರವೋತ್ಕರದೊಳ್ ಕೋಡಗ ಮಾಧವೀ ಲತೆಯೊಳಂ ಕರ್ಬಳ್ಳಿ ಚೆಂಬೊಂಗಳೊಳ್ನೆರೆದಿರ್ಪಂತಿರೆ ಕರ್ಬುನಂ ಸಕಲ ಭೂವಾರೀಶರೊಳ್ಕೀಲಿಗಳ್ (ಧರ್ಮಾಮೃ. ೬-೨೨೨). [?]

**ಕೀಲಿಕೆ** (ನಾ). ರಥ ಮೊದಲಾದುವುಗಳ ಅಚ್ಚಿಗೆ ಹಾಕುವ ಮೊಳೆ: (ಶ). [< ಸಂ. ಕೀಲಿಕಾ]

**ಕೀಲಿಕೆಯ್**, ಕೀಲಿಕೈ (ನಾ). ಬೀಗವನ್ನು ತೆರೆಯುವ ಸಾಧನ; ಬೀಗದಕೈ: (ಶ). **ಕೀಲಿಕೈ**: ಹರಿಕರುಣವೆಂಬಂಥ ಕೀಲಿಕೈ ದೊರಕಿತು (ಜಗದಾ. ೩೩); ಕೀಲಿಕೈ ನನ್ನ ಹತ್ತಿರವೇ ಇತ್ತು (ತುಂಗಭ. ೩೦); ಸ್ವರ್ಗವು ಇಲ್ಲೇ ಈ ಪಕ್ಕದ ಕೋಣೆಯ ಬಾಗಿಲ ಹಿಂದೇ ಇದೆ. ಆದರೆ ನಾನದರ ಕೀಲಿಕೈ ಕಳೆದುಕೊಂಡಿರುವೆ (ಪ್ರವಾತೋ. ೬೦). [ಕೀಲಿ$_{1}$ (< ಕೀಲ್) + ಕೆಯ್$_{2}$]

**ಕೀಲಿಕೈ** 'ಕೀಲಿಕೆಯ್' ನೋ.

**ಕೀಲಿಕೊಡು**, ಕೀಲುಕೊಡು$_{2}$ (ಕ್ರಿ). ೧. ಯಂತ್ರನಡೆಯುವಂತೆಮಾಡು ವುದಕ್ಕಾಗಿ ಅದರ ಕೀಲನ್ನು ಬಿಗಿಮಾಡು, —ಸುತ್ತು: ಯಂತ್ರಕ್ಕೆ ಒಮ್ಮೆ ಕೀಲಿಕೊಟ್ಟ ಬಳಿಕ ಅದು ನಿಲ್ಲುವ ಸಂಭವವಿಲ್ಲ (ಮೋಹಿನೀ. ೨೯). ೨. (ಅಲಂ) ಪ್ರೇರಿಸು: ಇಲ್ಲಿಯವರೆಗೆ ಸುಮ್ಮನಿದ್ದವರಿಗೆ ಮಾತ ನಾಡಲು ಕೀಲಿ ಕೊಟ್ಟಂತಾಯಿತು (ಅಪನಾ. ೯೧); ನಾವು ಕೀಲಿಕೊಟ್ಟಂತೆ ನಡೆಯುವ ಕಾಲವಿದಲ್ಲ (ಹೊಸಕ್ಷಿ. ೨೯೦). **ಕೀಲುಕೊಡು$_{2}$**: ೧. ಬಡಿ ಸುವ ಯಂತ್ರಕ್ಕೆ ತುಂಬ ಜೋರಾಗಿ ಕೀಲು (Winding) ಕೊಟ್ಟಿದೆ (ನಿಬಂಧ. II, ೨೧೦). [ಕೀಲಿ$_{1}$ (< ಕೀಲ್) + ಕೊಡು$_{1}$]

**ಕೀಲಿಕ್ಕು** (ಕ್ರಿ). (ಯಂತ್ರ, ಮೊದಲಾದವಕ್ಕೆ) ಕೀಲು ಜೋಡಿಸು: ಬಡಿಗ ಬೊಂಬೆಯ ಮಾಡಿ ಬೆಡಗಿನ ಕೀಲಿಕ್ಕಿ ಮಿಡಿಯೆ ಸೂತ್ರವನು ನರ್ತಿಸುವ ಬೊಂಬೆಯೊಳು ಬಡಿಗ ತಾನಿಹನೆ (ಸರ್ವಜ್ಞ. ೩೩೪). [ಕೀಲ್ + ಇಕ್ಕು]

**ಕೀಲಿಗ** (ನಾ). ಬೆಸ್ತರವನು; ಮಿಾನುಗಾರ: "ಈರ್ಮಗಾರಂ ಕೀಲಿಗನೆನಿಕ್ಕು" (ಮಂಗರಾ. ೧೧೨-೬); ಪೇಸಿಕೆಯಿಲ್ಲದಾ ಪೊಲೆಯ ಮಾದೆಗ ಕೀಲಿಗ ಡೊಂಬ (ಕಾವ್ಯಸಾ. ೧೦೦೨); ಮಜ್ಜಿಯ ರಸನೆಸರಾಗೆ ಕೀಲಿಗನ ಹೆಂಡತಿ ತಾಂ . . . ಎಡಗಾಲ ಕೆಪ್ಪಿನಿಂ ದೆಸೆಮುಸಿಯಾಗಿ ಮುಚ್ಚಿದಳ್ (ಧರ್ಮಾಮೃ. ೧೧-೧೦೨ ಅಡಿಟ); ಕೆಲರ್ ನೀಚಕುಲ ದೊಳ್ಪುಟ್ಟಿ . . . ಪೊಲೆಯರುಂ ಮಾದಿಗರುಂ ಕೀಲಿಗರುಮೆನಿಸಿ (ಶ್ರಾವಕಾ. ೩೪-೨). [ಕೀಲ್ + -ಇಗ]

**ಕೀಲಿತ** (ಗು). ೧. ಜೋಡಿಸಿದ; ಸೇರಿಸಿದ; ಹೊಂದಿಸಿದ: ಆ ನಿಖಿಲ ರಾಜ ಕಿರೀಟಕೀಲಿತ ಹರಿನೀಲ ಮದಾಳಿಮಾಲಾಪರಿಚುಂಬಿತ ಚರಣಾರ ವಿಂದಂ (ಪಂರಾಮಾ. ೩-೧೬ ವ); ಕಪೋಲ ಮೂಲ ಕೀಲಿತ ವಾಮಕರ ಶತಪತ್ರೆಯುಂ (ಚಂದ್ರಪು. ೩-೫೦ ವ); ಆ ಸೆಟ್ಟಿ ಮಸ್ತಕ ಕೀಲಿತಾಮಳ ಹಸ್ತನಾಗಿ . . . ಎಜಗಿ (ಬಸಪು. ೨೪-೪). ೨. ನಾಟಿದ; ಚುಚ್ಚಿದ: ಆತನ ವಿಷಮ ಶರಶಲಾಕೆಗಳಿಂ ಕೀಲಿತಮಾದಂತವಯವಂಗಳ್ ನಟ್ಟು ನಿಂದುವು (ಕಾದಂಉ. ೭೭೦). ೩. ಕಟ್ಟಲ್ಪಟ್ಟ; ಬಂಧನದಲ್ಲಿ ಇಟ್ಟ. (ನಾ). ೪. [ಜೈನ] ಆರು ಬಗೆಯ ಸಂಹನನ ನಾಮ ಕರ್ಮಗಳಲ್ಲಿ ಒಂದು: ಅರ್ಧನಾರಾಚ ಕೀಲಿತಮೆಂಬೀ ನಾಲ್ಕು ಸಂಹನನಮುಂ (ಶಾಸ್ತ್ರಟೀ. ೧೩೭-೮); ಕೀಲಿತ ಸಂಹನನ:—ಈ ಕರ್ಮೋದಯದಿಂದ ಎಲುವುಗಳನ್ನು ಪರಸ್ಪರ ಜೋಡಿಸುವ ಕೀಲುಗಳು ನಿರ್ಮಾಣವಾಗುವುವು (ಜೈನಪ. ೩೭೪). [ಸಂ.]

**ಕೀಲಿಸು**, ಕೀಲ್ಸೈಸು (ಕ್ರಿ). ೧. ಜೋಡಿಸು; ಸೇರಿಸು; ಅಳವಡಿಸು: ಉಂಗುಟಂಗಳೊಳ್ ಮಿಂಚಂ ಕೀಲಿಸಿದಂತೆ ತೊಳಗಿ ಪೊಳೆವ . . . ಪಾದನಖಂಗಳ್ (ಪಂಪಭಾ. ೨-೩೯ ವ); ಮೇಲ್ಗಟ್ಟಿನೊಳ್ ಕೀಲಿಸಿದ ಚಂದನದ ಪೊಟ್ಟಣಗಳಿಂ (ಮೋಳಿಮಾ. ೨೩೭-೭೮೯); ಸ್ಮರನೆಂಬ ಸೊನ್ನಾರಂ ಕೀಲಿಸಲಿರದೊಪ್ಪುವ ಪೊಸ ಚಿನ್ನದ ತಗಡೆನೆ (ಜಯಕಾ. ೩-೫೩). ೨. ನಡು; ನಾಟು; ಚುಚ್ಚು: ಸ್ತನಯುಗ್ಮಂ ತಲ್ಪದೊಳ್ ಕೀಲಿಸೆ (ಕಾವ್ಯಸಾ. ೬೭೪ ಶೂದ್ರಕ); ಅಲ್ಲಿಯೆ ಕರ್ಣಪಳಂಚಿ ಮನ ಮಲ್ಲಿಯೆ ಕೀಲಿಸೆ (ಆದಿಪು. ೨-೪೨); ಕಿಬ್ಬದಿಯ ಕೀಲಿಸಿದ ಕಾಮನ ನಿಬ್ಬರದ ಕೂರಂಬಿನಲಿ (ಪ್ರಭುಲೀ. ೫-೨೧); ಅಳಿದವೈ ನೂಱಾನೆ ಮಗ್ಗುಲ ಕೆಲಕೆ ಕೀಲಿಸಿ (ಕುವ್ಯಾದ್ರೋ. ೧೮-೬); ಭಟರ ದೇಹವ ಕೀಲಿಸಿದ ಹೊಸ ಮಸೆಯ ಸರಳಿಂದಸುರ ಕಡುಮುಳಿದು (ಕೌಶಿರಾ. ೧೯-೧೬). ೩. ಬಿಗಿದುಕಟ್ಟು; ಬಂಧಿಸು; ಕಟ್ಟಿ ನಿಲ್ಲಿಸು; ತಡೆ: ಈ ವಿಯಚ್ಚರನ ಕೂರದರಿಲ್ಲ ಕಱುತ್ತು ಕೀಲಿಸಲ್ಮಚ್ಚರದಿಂದಂ (ನೇಮಿಪು. ೪-೩೦); ಎನ್ನ ವಿಮಾನಮೀ ಪುರದ ಮೇಲೆ ಪೋಗದೆ ಕೀಲಿಸಿ ನಿಲ್ವುದುಂ (ಧರ್ಮಾಮೃ. ೪-೨೪೪); ಉಸುರು ಪ್ರಾಣಾ ವಾಯುವಂ ಕೀಲಿಸುವವರು ಸುಜ್ಞಾನಯೋಗ್ಯರು (ಪ್ರಭುಲಿ. ೧೧-೩); ಹಡಗನ್ನು ಕೀಲಿಸಿ, ತುಮುರನು ತೇಲಿಸಿ (ಕಎಪು. ೨೭); ಕದಗಳಿಗೆ ಕಂದರನು ಮೊಳೆಯಿಟ್ಟು ಕೀಲಿಸುವರು (ದ್ರಾಕ್ಷಿದಾ. ೧೪).

೪. ಒತ್ತಾಗಿ ಸೇರು; ದಟ್ಟೈಸು; ಇಟ್ಟಣಿಸು: ಕದವು ಕೈಯಲಿ ಕೀಲಿಸಿತು (ಕುವ್ಯಾಕ. ೧-೨); ಸುತ್ತಿಮುತ್ತಿ ಗವಾಕ್ಷರಂಧ್ರದ ಭಿತ್ತಿಯಲಿ ನೆಜಕೆ ಕೀಲಿಸಿರ್ದರು . . . ಕೂಡೆ ನೋಟಕರು (ಪ್ರಭುಲೀ. ೪-೬೦).

**ಕೀಲೈಸು**: ೨. ಸ್ತ್ರೀಯರುಗಳಲ್ಲಿ ನಯನವು ಕಾಮವಿಕಾರದ ಬಯಕೆಯಿಂದ ಕೀಲೈಸಿ (ವಚಶಾ. I, ೧೪೮). [ಕೀಲ್ + -ಇಸು$_3$]

**ಕೀಲು** 'ಕೀಲ್' ನೋ.

**ಕೀಲುಕ** (ನಾ). ಹಡಗಿನ ಬೆಣೆ, —ಗೂಟ: "ಗುಡಿದಮನೆ ಕೀಲುಕ" (ಮಂಗರಾ. ೧೨೧-೫). [< ಸಂ. ಕೀಲಕ]

**ಕೀಲುಕಾಲು** (ನಾ). ಕೀಲಿರುವ ಕಾಲು; ತಿರುಗಿಸಲು ಅನುಕೂಲ ವಾಗಿರುವ ಕಾಲು (?): ಕೆಳಗಡೆ ಕೀಲುಕಾಲುಗಳು, ಮೇಲ್ಗಡೆ ರೆಕ್ಕೆಗಳೂ ಇರುತ್ತವೆ (ಕೀಟಬೆ. ೧೨). [ಕೀಲು (< ಕೀಲ್) + ಕಾಲು$_1$ (< ಕಾಲ್$_1$)]

**ಕೀಲುಕುಳಿ** (ನಾ). ಎಲುವುಗಳ ಸೇರುವೆಯಲ್ಲಿ ಒಂದು ಮೂಳೆಯ ತುದಿಯನ್ನು ಒಳಕೊಳ್ಳುವ ಇನ್ನೊಂದರ ಕುಳಿ: "(ಭುಜದ ಚಪ್ಪಟೆಯ ಎಲುಬಿನಲ್ಲೂ, ಕಪಾಳದ ಎಲುಬಿನಲ್ಲೂ) ಕೀಲು ಏರ್ಪಡುವುದಕ್ಕಾಗಿ ಮತ್ತೊಂದು ಮೂಳೆಯ ತುದಿಯನ್ನು ಒಳಕೊಳ್ಳುವ ಆಳವಿಲ್ಲದ ಕುಳಿ; ಕೀಲುಕುಳಿ" (Glenoid. ಇಂಕನ). [ಕೀಲು (< ಕೀಲ್) + ಕುಳಿ$_3$ (< ಕುೞಿ$_3$)]

**ಕೀಲುಕೂಟ** (ನಾ). ಒಂದು ಬಗೆಯ ತಿರುಗಣೆ, —ಕೀಲು: (ಕ). [ಕೀಲು (< ಕೀಲ್) + ಕೂಟ$_1$]

**ಕೀಲುಕೊಡು$_1$** (ಕ್ರಿ). ಜೋಡಿಸು; ಸೇರಿಸು; ಹೊಂದಿಸು: ಜಾಲದುರ್ಗದ ಬೆಟ್ಟವು ಭೂಮಿಗೂ ಆಕಾಶಕ್ಕೂ ಕೀಲುಕೊಟ್ಟಂತೆ ನಿಂತಿರುವ ರಾಕ್ಷಸನಂತೆ ಕಾಣಿಸಿತು (ರಾಜಮಾ. ೬೨). [ಕೀಲು (< ಕೀಲ್) + ಕೊಡು$_1$]

**ಕೀಲುಕೊಡು$_2$** 'ಕೀಲಿಕೊಡು' ನೋ.

**ಕೀಲುಗಲ್ಲು** (ನಾ). ೧. ನೆತ್ತಿಗಲ್ಲು; ಕಮಾನಿಗೆ ಆಧಾರವಾದ ಕಲ್ಲು. ೨. (ಆಲಂ) ಆಧಾರ ಸ್ವರೂಪವಾದದ್ದು: ಶಾಪವೃತ್ತಾಂತವೇ ಎರಡರಲ್ಲೂ ಕಥೆಯ ಕೀಲುಗಲ್ಲು (ಕಾವ್ಯಸ. ೩೮). [ಕೀಲು (< ಕೀಲ್) + ಕಲ್ಲು (< ಕಲ್$_3$)]

**ಕೀಲುಗೊಂಬೆ** 'ಕೀಲ್ಗೊಂಬೆ' ನೋ.

**ಕೀಲುಬೊಂಬೆ** 'ಕೀಲ್ಬೊಂಬೆ' ನೋ.

**ಕೀಲುಸೇತುವೆ** (ನಾ). ಯಾಂತ್ರಿಕ ಜೋಡಣೆಯಿಂದ ತೆಗೆಯಲೂ, ಹಾಕಲೂ ಬರುವ ಸೇತುವೆ: "(ಒಂದು ಕೊನೆಯನ್ನು ಮೇಲಕ್ಕೆತ್ತಿ ಅಥವಾ ಸೆಳೆದು ಒಳಗೆ ಹೋಗಲು ತಡೆ ಮಾಡಬಹುದಾದ ಅಥವಾ ನಾಲೆಯ ನದಿಯ ಹಾದಿಯಲ್ಲಿ ದೋಣಿ, ಮೊದಲಾದವು ಹೋಗಲು ತೆರಪುಕೊಡುವ) ಕೀಲುಸೇತುವೆ; ಎತ್ತು ಸೇತುವೆ; ಎಳೆಸೇತುವೆ (Draw-bridge. ಇಂಕನ). [ಕೀಲು (< ಕೀಲ್) + ಸೇತುವೆ]

**ಕೀಲುಹೊಂಬಾಳೆ** (ನಾ). ಒಂದು ಜಾತಿಯ ಹೊಂಬಾಳೆ (?): ದೂರ ಹೋಗ್ಯವನೆ ನಿನಗಂಡ ಕಂದಮ್ಮ ಕೀಲುಹೊಂಬಾಳೆ ತರುವೋಕೆ (ಹಳ್ಳಿಯ. ೫೨). [ಕೀಲು ? + ಹೊಂಬಾಳೆ]

**ಕೀಲುಳಿ** (ನಾ). ಒಂದು ಬಗೆಯ ಉಳಿ; ಚಮ್ಮಾರನ ಉಳಿ (?): ಹೊನ್ನ ಜೊತ್ತಗೆ ಹೊರಜೆಯ ತೆಕ್ಕೆ ಪೆಗಲೊಳು ರನ್ನವಾವುಗೆ ಕಂಕುಳೆಡೆಯ ಕೆನ್ನೆಯ ಕೀಲುಳಿ ಕಣ್ಗೆಸೆಯಲು ಕಡುಚೆನ್ನಿಗನಾ ಚಿತ್ರಭವನು (ನೇಮಿಸಂ. ೨೧-೩೦). [ಕೀಲ್$_0$ + ಉಳಿ$_2$]

**ಕೀಲೆ$_1$** (ಅ). ಕೆಳಗೆ; ಕೆಳಗಡೆಗೆ (?): ಪೊಲಪುಣಸಿ ಎವ ಕೀಲೆ ಅನ್ತಪೊಯಿ ಏ (ಇಅ. XII, ೧೬-೪; 735). [< ಕೀೞ್$_2$ ?]

**ಕೀಲೆ$_2$** (ನಾ). ೧. ಬೆಂಕಿ: ಹಾಲಿನೊಳಿಲ್ಲವಾ ಮೇಲೆ ಬೆಣ್ಣೆಯೊಳಿಲ್ಲವದನು ಕೀಲೆಯಿಂ ಕಾಸಿ ತುಪ್ಪವ ಮಾಡಲದರಲ್ಲಿ ಕೀಲಿಸುವುದು ಪ್ರತಿಬಿಂಬ (ಅರಸಾ. ೨೨೫-೫). ೨. ಬೆಂಕಿಯ ಜ್ವಾಲೆ; ಬೆಂಕಿಯ ನಾಲಗೆ: ಹಸ್ತದಿ ಮಣಿಯದ ಕಾಲಾನಲ ಕೀಲೆಯ ರೋಚಿಶ್ಚಯವೊ . . . ಎನೆ ಕಡುಗೆಂಪಿನ ಗುಣನಿಧಿಯಾದ (ಭಕ್ತಿಸ. II, ೪). [< ಸಂ. ಕೀಲ]

**ಕೀಲೆಣಿಕೆ** (ನಾ). ೧. ಕೊಂಡಿಕೊಂಡಿಯಾಗಿ ಹೆಣೆದುಕೊಂಡು ಎಣಿಸಲು ಕಷ್ಟವಾದ ಜೋಡಿಗೆ. ೨. ಒಗಟು; ಸಮಸ್ಯೆ: ಈ ಯಿಶ್ವರಂಗೆ ಲೀಲಾಸಂಬಂಧಮಂ ಕೀಲೆಣಿಕೆಯಿಂ ಪೇಳುತ್ತಿದ್ದಾನೆ. ಉದಾ: ತಂಗದಿರನ್ನೆಯ್ಯನೆ ತಾಯೋರಗಿತ್ತಿಯ ಸೊಸೆಯ ತಂಗಿಯ ನಡುವಣ ಮಾವನ ತಮ್ಮನ ಪತಿಯ ಬೀಗನೆ (ಭಕ್ತಿಸ. II, ೧೫). [ಕೀಲ್ + ಎಣಿಕೆ]

**ಕೀಲೆಣ್ಣೆ** (ನಾ). ೧. ಯಂತ್ರದ ಕೀಲುಗಳು ಸರಾಗವಾಗಿ ತಿರುಗುವುದಕ್ಕಾಗಿ ಹಾಕುವ ಎಣ್ಣೆ: ಎಂಜಿನು ಸರಾಗವಾಗಿ ನಡೆಯುವಂತೆ ಅದರ ವಿವಿಧ ಭಾಗಗಳಿಗೆ ಕೀಲೆಣ್ಣೆಯನ್ನು ಸುರಿಯಲಿಕ್ಕು . . . ಏರ್ಪಾಡುಗಳು ಇವೆ (ವಿಜ್ಞಾವಿ. ೫೮). ೨. "ಮರ, ಕಬ್ಬಿಣ ಮೊ.ನ್ನು ಕೆಡದಂತೆ ಇಡಲು ಉಪಯೋಗಿಸುವ, ಕಪ್ಪು ಬಣ್ಣದ ಅಂಟುದ್ರವ. ಡಾಂಬರೆಣ್ಣೆ, ಕೀಲೆಣ್ಣೆ, ಟಾರೆಣ್ಣೆ, ಟಾರು" (Tar. ಇಂಕನ). [ಕೀಲ್ + ಎಣ್ಣೆ]

**ಕೀಲೈಸು** 'ಕೀಲಿಸು' ನೋ.

**ಕೀಲೊಂಟಿ** (ನಾ). ಕೀಲು ಇರುವ ಒಂಟಿ; ಕಿವಿಯ ಒಂದು ಆಭರಣ: ನಡುವಿಗೆ ಬೆಳ್ಳಿಯ ಉಡಿದಾರ, ಕಿವಿಗೆ ಕೀಲೊಂಟಿ, ಮುರುಗಳ ಅಲಂಕಾರವುಳ್ಳ ಹಲವರು (ಜಾರುದಾ. ೩೩). [ಕೀಲ್ + ಒಂಟಿ$_2$]

**ಕೀಲ್ಕಂಬ** (ನಾ). ಆಧಾರಸ್ತಂಭ; ಮೂಲಸ್ತಂಭ: ಅಖಿಳ ಬ್ರಹ್ಮಾಂಡಕೊಂದೆ ಕೀಲ್ಕಂಬ ತಾನಾಗಿ ರಾಜಿಸುತಿರ್ಪುದು (ಪ್ರೌಢರಾ. ೧-೨೮). [ಕೀಲ್ + ಕಂಬ$_1$]

**ಕೀಲ್ಕುಂಚಿಕೆ** (ನಾ). = ಕೀಲಿಕೆಯ್: ಕದಕಗಳೆಯನು ಬಿಗಿದು ಬೊಮ್ಮಗುಡಿಯೊಳಗಿರಲಿ ಅದರ ಕೀಲ್ಕುಂಚಿಕೆಯ ಹೊರಕೆಸೆಯೆ ಸಾಕು (ಮಂಕುಕ. ೪೧). [ಕೀಲ್ + ಕುಂಚಿಕೆ$_2$]

**ಕೀಲ್ಗಟ್ಟು** (ನಾ). ಕೀಲುಗಳ ಜೋಡಣೆ, —ಕಟ್ಟು: ನಾರಾಚ ವಿದ್ಧಮುಮಪ್ಪೆಲ್ಗಟ್ಟಳ್ ತೃತೀಯ ನಾರಾಚ ಸಂಹನನಮುಮಂ . . . ಕೀಲ್ಗಟ್ಟನುಳ್ಳ ಪಂಚಮಸಂಹನನಮುಮಂ (ತತ್ವಪ್ರ. ೨೯೬). [ಕೀಲ್ + ಕಟ್ಟು$_2$]

**ಕೀಲ್ಗದ** (ನಾ). ಅಗುಳಿಯಿರುವ ಬಾಗಿಲು; ಕೀಲು ಜೋಡಿಸಿದ ಬಾಗಿಲು: ಕೀಲ್ಗದವನೊಯ್ಯನೆ ಕೆಲಸರಿಯಿಸಿ (ಬಟ್ಟಅ. ೮೩-೨೨). [ಕೀಲ್ + ಕದ (< ಕದವು)]

**ಕೀಲ್ಗಳೆ** (ಕ್ರಿ). ೧. ಕೀಲು ಕಳಚಿಹೋಗು: ಮಂತ್ರಿಯಿಲ್ಲದನ ಸಾಮ್ರಾಜ್ಯ ಕೀಲ್ಗಳೆದ ಜಂತ್ರದಂತಕ್ಕು (ಸರ್ವಜ್ಞ. ೭೦೬). ೨. ಬೀಗವನ್ನು ತೆಗೆ: ತತ್ಕೊಳದಿ ಮೈದೊಳೆದು . . . ಪೆಟ್ಟಿಗೆಗಳ ಕೀಲ್ಗಳೆವುತೆ (ನವಮೋ. ೧೧-೬೫). [ಕೀಲ್ + ಕಳೆ$_1$]

**ಕೀಲ್ಗುಡು** (ಕ್ರಿ). ಆಧಾರಕೊಡು; ಬಿಗಿದು ಕೂಡಿಸು; ಮೊಳೆ ನಾಟಿಸು: ಪತ್ತಿದ ಪ್ಯೈಗೆ ಸಡಿಲ್ಗುಮೆಂದು ಕೀಲ್ಗುಡುವವೊಲಾಗೆ ತೋಳ ಬಿಗಿಪು (ಕಾವ್ಯಸಾ. ೬೫೭ ಶೂದ್ರಕ); ನಿಲ್ಲದೆಲ್ವಂ ನಟ್ಟು ಕೀಲ್ಗೊಟ್ಟಂತಿರ್ದ ವಜ್ರ ಕಂಟಕಂಗಳ್ವೆರಸು (ಶಾಂತಿಪು. ೭-೯೧೪); ಕೀಲ್ಗೊಟ್ಟು ಬೆಡಂಗನೀಯೆ ಪುಳಕಂ ತೋಳ್ ತಳ್ತು ಗಂಟಿಕ್ಕಿದಂತಿರೆ (ಜಗವಿ. ೧೧-೬೦). [ಕೀಲ್ + ಕುಡು$_1$ (< ಕೊಡು$_1$)]

**ಕೀಲ್ಗೊಂಬೆ, ಕೀಲುಗೊಂಬೆ**(ನಾ). ೧. ಕೀಲಿ ಕೊಟ್ಟು ನಡೆಯಿಸುವ ಬೊಂಬೆ; ಯಂತ್ರದ ಬೊಂಬೆ: ಕೀಲ್ಗೊಂಬೆಯೋಲಿರ್ದುದಾನೆ ಒಂದೆರಳ್ಗೊರ್ ಚಣಂ (ಶ್ರೀರಾಮಾ. ೪೫೮-೩೫೪). **ಕೀಲುಗೊಂಬೆ:** ೧. ಹೆಂಗಸಿನ ಕೈಯಲ್ಲಿಯ ಕೀಲುಗೊಂಬೆಯಂತೆ ವರ್ತಿಸುವ ನ್ಯಾಯಾಧಿಕಾರಿಯಿಂದ ಪ್ರಜೆಗಳಿಗೆಷ್ಟು ಲಾಭವಿರುತ್ತದೆಯೋ ಯೋಚಿಸಿ (ಲಕ್ಷ್ಮೀಪ್ರ. ೬೨); ವಾಸಂತಿ ಕೀಲುಗೊಂಬೆಯಂತೆ ಅವಳನ್ನು ಅನುಸರಿಸುತ್ತಿದ್ದಾಳೆ (ತೀನೋಡ. ೯೦). ೨. "ವ್ಯಕ್ತಿತ್ವವಿಲ್ಲದ ಮನುಷ್ಯಯಂತ್ರ" (Robot. ಇಂಕನಿ). 'ಕೀಲ್ಬೊಂಬೆ' ಪರಾ. [ಕೀಲ್ + ಗೊಂಬೆ]

**ಕೀಲ್ಗೊಳಿಸು** (ಕ್ರಿ). ಜೋಡಿಸು; ಸೇರಿಸು; ಅಳವಡಿಸು: ಕಳಚಿದಾಯುಧದಾಯತದ ಕೀಲ್ಗೊಳಿಸಿದರು ಖಡ್ಗಕ್ಕೆ ಕುಂತವ ಕಳೆದು ಕಾವನು ಕೊಡಿಸುತಿರ್ದುದು ಸೇನೆಯೆರಡಱಲಿ (ಕುವ್ಯಾಭೀ. ೫-೩೬); ಸಾಲ್ಗೊಳಿಸಿದ ಮಾಣಿಕದಿಂಡೆಗಳ ಕೀಲ್ಗೊಳಿಸಿ ನಿಮಿರ್ಚಿದ ಪಚ್ಚೆಯ ಕುಚ್ಚುಗಳ (ರಾಜಶೇ. ೮-೫೭). [ಕೀಲ್ + ಕೊಳ್$_1$ + -ಇಸು$_3$]

**ಕೀಲ್ದೆಗೆ**(ಕ್ರಿ). ಕೀಲನ್ನು ಕಳಚು; ಕಡಾಣಿಯನ್ನು ತೆಗೆ: ರಥಾಂಗಂ ಕೀಲ್ದೆಗೆದವೊಲಗಲೆ ಸಾರ್ದು ಕೊರಗಿದುವಾಗಳ್ (ಗಿರಿಕ. ೪-೬೮). [ಕೀಲ್ + ತೆಗೆ$_1$]

**ಕೀಲ್ಬೊಂಬೆ, ಕೀಲಬೊಂಬೆ, ಕೀಲುಬೊಂಬೆ** (ನಾ). = ಕೀಲ್ಗೊಂಬೆ: ಕೀಲ್ಬೊಂಬೆಯಾಟದಂತಾಸತ್ತು ಸುರವಿರಂಚಿಯರ ಸಂಘಂ(ಭರಥ.೧-೨೯). **ಕೀಲಬೊಂಬೆ:** ಬಾಲೆಯರು ಹಿಡಿದಾಡುವೊಳ್ಪಿಹ ಕೀಲಬೊಂಬೆಯ ನದಱುಡಿಗೆಯಂ ಬಾಲೆ ತಂದಪೆವು (ಬಸವು. ೧೪-೪). **ಕೀಲುಬೊಂಬೆ:** ಹೆಂಡತಿಯೆಂದರೆ . . . ಒಂದು ಕೀಲುಬೊಂಬೆ. ಮಾತ್ರವಾಗಿದ್ದಳು (ಕೀಲುಗೊಂ. ೮೧). [ಕೀಲ್ + ಬೊಂಬೆ]

**ಕೀಲ್ವರಿಸು** (ಕ್ರಿ). ಕೆಳಗೆ ಹರಿಸು, —ಸುರಿಸು (?): ಓರೋರ್ವರಂ ಗೆಲ್ವಮುಂಗೆಲ್ವದಾಸುರದ ನಿಶಿತಾಸ್ತ್ರ ಮೇಲ್ವರಿಸಿ ಕೀಲ್ವರಿಸಿ ಸೂಸಿದರ್ ಬೀಸಿದರ್ ಗೋಸಿದರ್ ಸುತ್ತಲಿಹ ದಳವ ಧಾಳಾಧೂಳಿಯಲಿ (ಜಿನಮು. ೧೭-೨೮). [< ಕೀೞ್ವರಿಸು ?]

**ಕೀವಡಿಗೆ** (ನಾ). ಕೀವು ತುಂಬಿ ನಾರುವಿಕೆ; ಕೀವಿನ ದುರ್ನಾತ: ಆನೆಗಳ ಬಲ್ಪೆಣನಂ ಬಗುಳುತ್ತೆ ಮುತ್ತಿ ಕೀವಡಿಗೆ [ಪಾಠಾಂ. ಕೀವಡುತೆ] ತಗುಳ್ವನಂ ತೆಗೆವ ನಾಯ್ಗುಗುರ್ವಿಸುತಿರ್ಪ . . . ಬೇಡವಳ್ಳಿಗಳಂ (ಲೀಲಾವ. ೬-೪೧). [ಕೀವು + ಪಡಿಗೆ]

**ಕೀವಿಲ, ಕೀವಿಲಿ** (ಗು). ೧. ಕೀಳಾದ; ಹೇಸಿಕೆಯಾದ; ಕೊಳಕಾದ (?): ನೀವೇನೆಂದೀತಸ್ಕರ ಕೀವಿಲ ಚರಣದ್ವಯಂಗಳಂ ಮೆಲ್ಲನೆ ಸದ್ಭಾವದಿನೊತ್ತುತ್ತಿರ್ದಿರೊ ನೀವಱಿಯಿರೆ ಚಪಳನಾಡಿದಾಟಮನಿನ್ನುಂ (ಧರ್ಮಾಮೃ. ೬-೧೧೧). (ನಾ). ೨. ಹೇಸಿಯಾದವನು; ಕೀಳ; ಕೊಳಕ: ಈ ವಿಧದಿಂದಮೇಧ್ಯಮುಂ ಮೂತ್ರಮುಮಂ ಸೇವಿಸಿ ಮೆಯ್ಯಂ ಪೂಸುವ ಕೀವಿಲನಾಶ್ರೈಸಿ ಪೇಳ್ದು ಗೆಯ್ವರ್ ಮೂಢರ್ (ಸಮುಪ. ೧೨-೨೧). **ಕೀವಿಲಿ:** ಅಂ ಶ್ರಾವಕನಪ್ಪುದಱಿಂ ಕೀವಿಲಿ ನಿನಗೊಂದು ಕಂಟಕಂ ಪೋಯ್ತೀಗಳ್ (ಧರ್ಮಾಮೃ. ೬-೧೨೯). [?]

**ಕೀವಿಲಿ** 'ಕೀವಿಲ' ನೋ.

**ಕೀವು, ಕೀಮು** (ನಾ). ಹುಣ್ಣಿನೊಳಗೆ ಉಂಟಾಗುವ ರಸಿಕೆ; ಕೆಟ್ಟು ಹಳದಿದ್ರವವಾದ ರಕ್ತ: ಸಿಂಬುಳು ಕೀವು ಕೆರಂಕಸೃಗಂಬು (ಅಜಿಪು. ೬-೫೪); ಎಲುವಿನ ತಡಿಕೆ ಕೀವಿನ ಹಡಿಕೆ ಸುಡಲೀ ದೇಹವ (ಮಹಾದೇ. ೪-೧೨); ಬಸಿದಪುದು ಮೆಯ್ಯ ಕೀವುಂ ರಸಿಗೆಯುಂ (ಯಶೋಧ. ೮-೭೨); ಭಾವಜನಯ್ಯನ ದಿನದಿ ಉಂಡವರಿಗೆ ಕೀವಿನೊಳಗೆ ಹಾಕಿ ಕುದಿಸುವ ಯಮನು (ಪುರಂದ. ೧-೧೩೪-೪). **ಕೀಮು:** (ಕಿ). [ಕೀ$_1$ + -ವು]

**ಕೀವುಗಟ್ಟು** (ಕ್ರಿ). ಕೀವು ತುಂಬು; ಕೀವಾಗು; ಕೀತುಕೊಳ್ಳು: ಒಂದು ಪ್ರಾಣಿಯ ಕಾಲಿನಲ್ಲಿ . . . ಗಾಯವಾಗಿ ಕೀವುಗಟ್ಟುತ್ತದೆ (ಜೀವಾತ್ಮ. ೧೨೪). [ಕೀವು + ಕಟ್ಟು$_1$]

**ಕೀವುಗಿವಿ** (ನಾ). ಕೀವುತುಂಬಿದ ಕಿವಿ; ಕೀತುಕೊಂಡ ಕಿವಿ: ಮುದುಕರಂತೆ ಲೋಳೆಸುರಿವ ಬಾಯುಂ ಕೀವುಗಿವಿಯವರಂತೆ ಕೀವು ಸುರಿವ ಕಿವಿಯುಂ (ಧರ್ಮಾಮೃ. ೪-೭೫). [ಕೀವು + ಕಿವಿ$_2$]

**ಕೀಶ** (ನಾ). ೧. ಕೋತಿ; ಮಂಗ; ಕಪಿ: "ಹರಿ ಕೀಶಮಾ ಕೋಡಗಕ್ಕೆ ಪೆಸರಕ್ಕು" (ಮಂಗರಾ. ೪೮-೯); ಕೀಶಬಲ ದೋರ್ವಲ ಶಿಲಾಪರಿಶಾಸನವೊ ರಘುಪತಿಯ ಕೀರ್ತಿಶ್ರೀಸತಿಯ ಸೀಮಂತವೋ . . . ಎನಲಾ ಸುರಾಳಿಗೆ ಬೆಱಗ ಬೀರಿದುದಾ ಮಹಾಸೇತು (ತೊರರಾ. ೬-೬-೫); ಆಶಿಸುವದಿದ ಬಳಸಲೆಂದರೆ ಕೀಶದಂದದಿ ವಿಷಯಭೂಜ ನಿವೇಷದಲ್ಲೀ ವಾಸನಾಶಾಖೆಯಲಿ ತಿರುಗುವುದು (ವಿವೇಭ. ೧೧-೯); ಶೂನ್ಯಮಂ ನೋಳ್ಪಂತೆ ಕಣ್ದೆರೆದನಾ ಕೀಶವೀರಂ (ಶ್ರೀರಾಮಾ. ೩೧೫-೩೮೯). [ಸಂ.]

**ಕೀಶೇಶ** (ನಾ). ೧. ಕಪಿಗಳ ಒಡೆಯ. ೨. ಸುಗ್ರೀವ. ೩. ಶ್ರೀರಾಮ: ಕಾಮಿತಪ್ರದ ಪರಮ ವರಚನ್ನವೀರ ಸುಪ್ರೇಮದಿಂ ಪಾಲಿಪುದು ರವಿ ಕೋಟಿ ಸಂಕಾಶ ಕೀಶೇಶ ವರದಾಯಕ (ದುರವು. ೧೫-೧). [ಕೀಶ + ಈಶ]

**ಕೀಶಪರ್ಣಿ** (ನಾ). ಉತ್ತರಣೆ; ಉತ್ತರಾಣಿ: (ಕಿ). [ಸಂ. ಕೀಶಪರ್ಣಿನ್]

**ಕೀಸರ, ಕೀಸರು$_1$** (ನಾ). ಬೇಸರ ತರುವ ಗಟ್ಟಿಯಾದ ಶಬ್ದ; ಒಂದೇ ರೀತಿಯಾಗಿ ನಡೆದಿರುವ ಅಪ್ರಿಯ ಶಬ್ದ; ಗಲಾಟೆ; ಚೀರಾಟ: ನಿಮ್ಮದಂತೂ ಕೀಸರವಾಯಿತು (ವೈದ್ಯರಾ. ೧೦). **ಕೀಸರು$_1$:** ಏನಾಗಿದ್ದಿತು – ಕೀಸರೆಬ್ಬಿಸಲಿಕ್ಕೆ ಈ ಪೋರನಿಗೆ ಶ್ಯಾಮತಾ. ೨೭).

**ಕೀಸರಬಾಸರ, ಕೀಸರುಬಾಸರು** (ದ್ವಿರುಕ್ತಿ): ತಂಬೂರಿ ತುಂಬೆಲ್ಲ ಕೀಸರಬಾಸರ ಬೇಸರ ಬಂದೈತಿ (ಸಖಿಗೀ. ೪೨-೫); ಅವುಗಳ ಕೀಸರುಬಾಸರು ಹಿಡಿಸುವ ಭಯದ ಅರಚುವಿಕೆ ಆ ಇಡಿಯ ಗುಡ್ಡವನ್ನೇ ನಡುಗಿಸಿತ್ತು (ಬನಸಿ. ೩೧). [?]

**ಕೀಸರಿಡು** (ಕ್ರಿ). ಬೇಸರ ತರುವಂತೆ ಗಟ್ಟಿಯಾದ ಶಬ್ದಮಾಡು; ಕಿರಿಚಾಡು; ಗಲಾಟೆಮಾಡು: ನಿನ್ನ ಬಾರಿಸುವಿಕೆ ಕೀಸರಿಟ್ಟಿತು (ಕುರಿಹಿಂ. ೪); ಅಕ್ಕ ಸತ್ತುದಕ್ಕಾಗಿ ಬೀದಿಯೇ ಕೀಸರಿಟ್ಟಂತೆ ಅತ್ತನು (ಜಯಂತ. ೨೭೩); ಅರ್ಧಕ್ಕೆ ಬಿಡಿಸಿದುದರಿಂದ ಮಗು ಹೆಚ್ಚಾಗಿ ಕೀಸರಿಟ್ಟಿತು (ಕಾಗೆಕ. ೭೨); ತಾರತಮ್ಯ ವಿನಯವಾಗಿ ಕೀಸರಿಡುವ ಸೀಮೆಯಲ್ಲಿ ಉಸಿರುಕಟ್ಟಿ ಗೆಲುವ ಕಳೆದುಕೊಂಡೆಯೆಂದರು (ಚಿಂತನ. ೩೫). [ಕೀಸರ + ಇಡು$_1$]

**ಕೀಸರು$_1$** 'ಕೀಸರ' ನೋ.

**ಕೀಸರು$_2$** (ನಾ). ಕಸಕಡ್ಡಿ; (ತರಕಾರಿಗಳನ್ನು ಹೆಚ್ಚಿ ಉಳಿದ) ಕಸ: ಹಸುರು ತರಕಾರಿ, ಹುಲ್ಲು ಮೊದಲಾದುವಿಲ್ಲದೆ ಯಾವ ಕೋಳಿಯೂ ಆರೋಗ್ಯವನ್ನು ಪಡೆಯಲಾರದು. ಇದಕ್ಕಾಗಿ ಮನೆಯಲ್ಲಿ ತರಕಾರಿಗಳನ್ನು ಹೆಚ್ಚಿ ಉಳಿದ ಕಸಕೀಸರುಗಳನ್ನು ಸುಮ್ಮನೆ ಎಸೆಯದೆ ಅವುಗಳ ಆಹಾರದೊಂದಿಗೆ ಸೇರಿಸಬಹುದು (ಬಾಲಪ್ರ. III, ೧೭೭೭). [< ಕಸರು ?]

**ಕೀಸರುಹಿಡಿ** (ಕ್ರಿ). ಬೇಸರು ಹಿಡಿ; ಬೇಜಾರಾಗು (?): ನೆತ್ತಿಗೇರಿದ ಜೋಶಿಯವರ ಸಿಟ್ಟು . . . ಇಳಿದಿತ್ತಾದರೂ ಜೀವಕ್ಕೇನೋ ಕೀಸರು ಹಿಡಿದಂತಾಗಿತ್ತು (ಮೂರುದಾ. ೮೧). [ಕೀಸರು$_1$ (< ಕೀಸರ) + ಹಿಡಿ$_1$ (< ಪಿಡಿ$_1$)]

**ಕೀಸಲು** (ನಾ). ಪದರ: ಈ ಬಟ್ಟೆಗಳನ್ನು ಯಂತ್ರಗಳಲ್ಲಿ ಕೊಟ್ಟು ತೆಳ್ಳಗಿನ ಕೀಸಲುಹಾಳೆಗಳಾಗಿ ಕತ್ತರಿಸುತ್ತಾರೆ (ಬಾಲಪ್ರ. III, ೧೪೯೬). [ಕೀಸು$_1$ + –ಅಲು (< –ಅಲ್$_2$)]

**ಕೀಸು$_1$, ಕಿಸು$_2$** (ಕ್ರಿ). ೧. ತೆಳುವುಗೊಳಿಸು : ಕೃಶಗೊಳಿಸು ; ಹೆರೆ: "ಕೀಸು – ಕೃಶಿಕರಣೇ, ಕರ್ಣಪತ್ರೇ ಚ" (ಶಮಧಾ) ; ವನದೊಳ್ ವನೇಚರಂ ತನತ್ತು ಬಿಲ್ಲಾನದನಂತು ಕೀಸುಗುಂ [ಪಾಠಾಂ. ವಂ] (ಕಾವ್ಯಾವ. ೩೫೯) ; ಬಿಲ್ಗೀಸುವ ಬಾಣಮುಂ ತಿರುಪಿ ತಿರ್ದುವ (ಜಗವಿ. ೧೬–೧೬) ; ಬಿಲ್ಲಂ ಕೀಸಿದಂ ಬಡಗಿ (ಶಬ್ದಾನು. ೨೦೪ ಪ್ರಯೋ) ; ಮುಗಿಲಲಿ ರವಿ ಶಶಿಯ ಕೀಸೆ ಸಿಡಿವ ಕಿಡಿಯೋ (೧೪ವಿಂ. ೧೦೭–೨೬) ; ಕೀಸಿ ನುಣ್ಣಗೆ ಮಾಡಿದ ಎರಡು ಗಂಡು ಗರಟಗಳನ್ನೂ ತಂದು ಮುಂದಿಟ್ಟು (ಮಲೆಮ. ೧೩). ೨. ಕೊರೆ; ಕೆತ್ತು ; ಕೆರೆ: ಮಲ್ಲರಂತೆ ಪೋರುವರ್ ಲೇಖಕನಂತೆ ಕೀಸುವರ್ (ಧರ್ಮಾಮೃ. ೩–೭೩) ; ಗಾಳದೊಳಿಟ್ಟು ಪಿಡಿವ ಕೀಸಿ ಸಾಸಿವೆಯುಂ ಬಡಿವ (ವರ್ಧಪು. ೧೧–೪೬ ವ); ಬೆಂದ ಹುಣ್ಣು ಕಂಬಿಯಲಿ ಕೀಸುವರೆ (ಬಸವ. ೩೧೬); ಹೊಡೆದುನೋಡಿದ ಳೊತ್ತಿ ಕೀಸಿ ನೋಡಿದಳಡಸಿ ಕೊಡಹಿದು ನೋಡಿದಳು (ಸಿದ್ಧರಾ. ೬–೪) ; ಕೀಸಿ ಸೀಳಿದ ನವಿಲ ಲಾವುಗೆಯ (ಕುವ್ಯಾವಿ. ೩–೩೭) ; ಕಾಸಿದೆಣ್ಣೆಯ ಪೊಯಿಲ್ಗೆ ಪಟುಭಟರ ಮೈದೊಗಲ್ ಕೀಸಿದುದು (ಚಿಬಪು. ೪೨–೩೪). ೩. ಉಜ್ಜು ; ತಿಕ್ಕು; ಒರೆ: ಕೀಸೆ ಕಿಲುಬಂ ಕಾಂತಿವಡೆದ ಕನ್ನಡಿಯಂತೆ ಮಾಸಲಂ ತೊಳೆಯೆ ಮಡಿಯಾದ ದುವ್ವಟದಂತೆ (ಸಮ್ಯಕೌ. ೧೦–೨೧) ; ಚಿನ್ನ ಕೀಸದೆ ಬಣ್ಣಲೆಕ್ಕವನು ಲೇಸಾಗಿ ತಿಳಿಯೆಪೇಳುವ ಚಿನ್ನವರದರು ಕೌಶಲತೆಯೊಳೊಪ್ಪಿಹರು (ಕವಿಚ. II, ೩೫೮ ಭುಜಬಲಿಚರಿತೆ); ರವಿಯನಂದಾ ವಿಶ್ವಕರ್ಮನು . . . ಸಾಣೆವಾಯೊಳು ಸವೆಯೆ ಕೀಸುವ ಪದದೊಳುದಯಂ ಬಡೆದ ಪಾಂಗಿನ (ಅಂಜಚ. ೧–೭೪). ೪. ಹೊರಕ್ಕೆ ಎಳೆದು ತೆಗೆ; ಎಳೆದುಬಿಡು ; ಬಾಣಬಿಡು : ದನುಜ ಕೀಸಿದ ಕೋಲ ಕಡಿತದೊಳೊಬ್ಬನುಳಿದನೆ (ವೈರಾಕಾ. ೩–೧೧) ; ಮಾಯೆ ದಾನವೇಶ್ವರ ನೊರ್ವ ಕೀಸಿದ ಕೋಲಿನಂತುಳಿದ (ನಾಗಕು. ೨೪–೯೪). ೫. ಕೆರೆ; ಬೋಳಿಸು. 'ಕೀಸುಮಂಡೆ' ಪರಾ. ಕಿಸು : ೧. ನಾರಿಯಂ ಕಿಸು [ಪಾಠಾಂ. ಕೀಸಿ] ನರಗಳಂ ಸೀಳೆ ಹೆಡೆಗಟ್ಟು (ಸಮ್ಯಕೌ. ೧೦–೩೩).

**ಕೀಸಿಕೊಳ್** = ಕೆತ್ತಿಸಿಕೊಳ್ಳು ; ಕೊರಯಿಸಿಕೊಳ್ಳು: ಸೂರ್ಯಂ ಸರಣ್ಯೆಯುಂ ಕೂರ್ತವಳ ಕಾದಲ್ಮೆಗಾ ತನ್ನಮೆಯ್ಯನೇ ಕೀಸಿಕೊಂಡಂ (ಸೌನಂದ. ೭–೨೬). **ಕೀಸಿವೋಗು** = ತೆಳ್ಳಗಾಗು ; ನವೆ ; ಕೃಶವಾಗು ; ಬಡವಾಗು : ನಲ್ಲೆಯಂ ನೆನೆಯುತ್ತ ಬಿಕ್ಕಿದಂ ಬಿಲ್ಲಂತೆ ಕೀಸಿವೋದಂ (ಸೌನಂದ. ೭–೩).

[ದೇ. ‖ ತಮಿ. ಚೀಯ್, ಚೀವು ; ಮಲ. ಚೀವು ; ತೊದ. ಕಿಚ್]

**ಕೀಸು$_2$** (ನಾ). ೧. ಕಿವಿಯಲ್ಲಿಟ್ಟುಕೊಳ್ಳುವ ತಾಳೆಗರಿಯ ಸೀಳು, —ಸುರುಳಿ ; ಸುತ್ತೋಲೆ; ಕರ್ಣಪತ್ರ : "ಕೀಸು – ಕೃಶೀಕರಣೇ, ಕರ್ಣಪತ್ರೇ ಚ" (ಶಮಧಾ). 'ಕೀಸೋಲೆ' ಪರಾ. ೨. ಕೆತ್ತಿದ, ತೆಗೆದ ಭಾಗ; ಸಿಗುರು ; ಚೆಕ್ಕೆ : ಲುಂಗೀಸಾಬು . . . ಬಿದ್ದಿದ್ದ ಬಿದರಿನ ಕೀಸುಗಳನ್ನು ಕೆಲಕ್ಕೆ ಸರಿಸಿಕೊಂಡ (ಮಲೆಮ. ೨೮೪). [< ಕೀಸು$_1$]

**ಕೀಸುಗಳೆ** (ಕ್ರಿ). ಕರ್ಣಪತ್ರವನ್ನು ತೆಗೆದುಹಾಕು : ಬೇಸಱಿಸುವಂಗಜಾಗ್ನಿಯ ಕೇಸುರಿ ಕೊಳೆ ಕಱಿದ ಪತಿಯ ವಿರಹದಿನಾಗಳ್ ಕೀಸುಗಳೆದಂತೆ (ಕಾವ್ಯಾವ. ೨೩೮). [ಕೀಸು$_2$ ? + ಕಳೆ$_1$]

**ಕೀಸುಮಂಡೆ** (ನಾ). ಬೋಳಿಸಿದ ತಲೆ; ಬೋಳುಮಂಡೆ: ಪಾರಿಶಿಖಿ ತುಱುಬು ಮುಂಜುಟ್ಟು ನಡುವಣ ಶಿಖಿಯು ಚಾರುಮಕುಟಂ ಕೀಸುಮಂಡೆ ಕುಸುಮಾಕಲಿತ ಮೂಜುಬೆರಳಿಂ ತಿದ್ದಿ ರಾಜಿಸುವ ಸಿತಭಸಿತ ತಿಲಕ (ಗುರುಚಾ. ೩–೪೯). [ಕೀಸು$_1$ + ಮಂಡೆ]

**ಕೀಸುವಣೆ** (ನಾ). ಬಂಡಿಯ ಈಸು ; ಕೂಬರ : "ಕೂಬರಮೆನಲ್ ಕೀಸುವಣೆ" (ಮಂಗರಾ. ೮೪–೨೫). [ಕೀಸು$_1$ + ಮಣೆ]

**ಕೀಸುವಲೆ** (ನಾ). ಒಂದು ಬಗೆಯ ಬಲೆ; ಎಳೆಯುವ ಬಲೆ (?) : ಕೀಸುವಲೆ ಕೊಂಬುವಲೆ ಹಿಡಿಗಣ್ಣವಲೆ (ರುಕ್ಮಾಂಗ. ೧೦–೧೯). [ಕೀಸು$_1$ + ಬಲೆ]

**ಕೀಸುವಲ್ಲು** (ನಾ). ವಕ್ರವಾದ ಹಲ್ಲು ; ಬಾಯಿಂದ ಹೊರಚಾಚಿದ ಹಲ್ಲು (?) : ಒಲೆದ ನಡು ಮೊಜಗಾಲು ಮುದುಡುಗಿವಿ ಬೀಟಗೈ ಸಲೆ ಕೀಸುವಲ್ಲು (ವೀಶೈವು. ೩–೯–೧೬). [ಕೀಸು$_0$ + ಪಲ್ಲು (< ಪಲ್)]

**ಕೀಸುಳಿ** (ನಾ). ೧. (ಸೂಕ್ಷ್ಮವಾದ) ಕೆತ್ತನೆಗಾಗಿ ಬಳಸುವ ಸಣ್ಣ ಉಳಿ. ೨. ಹತ್ತಾರಿ; ತೋಪಡ; ಉಜ್ಜುಗೊರಡು : ಸಮಸ್ತ ಭಾರತದಲ್ಲಿ ಕೀಸುಳಿಗೆ ತಗಲುವ ಸಿಗುರೂ ಇಲ್ಲವೆನ್ನಬಹುದು (ನಾಡೋಜ. ೩೫೧). [ಕೀಸು$_1$ + ಉಳಿ$_5$]

**ಕೀಸುಳಿವಡೆ** (ಕ್ರಿ). ಕೀಸುಳಿಯಿಂದ ಕೆತ್ತನೆಯನ್ನು ಪಡೆ, —ನುಣುಪಾಗು, —ನಯವಾಗು : ಬಾಹ್ಯಾಂಗವೂ ಕೂಡ ಕೀಸುಳಿವಡೆದು ದೋಷದ ಸೆಕ್ಕೆ ಉಗುರಿಗೂ ಸಿಲುಕದಂತಾಗಿದೆ (ನಾಡೋಜ. ೩೬೩). [ಕೀಸುಳಿ + ಪಡೆ$_1$]

**ಕೀಸೋಲೆ** (ನಾ). = ಕೀಸು ೨ : ಕೀಸೋಲೆಯ ಕಾಚಿನುಂಗುರದ ಚುಂಚಿಯ ಬಂದಿಯರೆಮ್ಮ ನಲ್ಲೆಯರ್ (ಸೂಕ್ತಿಸು. ೮–೪೦೦). [ಕೀಸು$_2$ + ಓಲೆ]

**ಕೀಳ್$_1$** 'ಕೀೞ್$_1$' ನೋ.

**ಕೀಳ್$_2$** 'ಕೀೞ್$_2$' ನೋ.

**ಕೀಳ್$_3$, ಕೀಳು$_3$** (ನಾ). ಹಸುವಿನ ಕರು : "ಕೀಳೆಂದು ಕಂದೆಂದು ಗೋವತ್ಸಂ" (ಕಶಸಾ. ೭–೧೩೦). **ಕೀಳು$_3$** : "ಕೀಳುಂ ಕುಂದುಂ ನಿರುತಂ ಗೋವತ್ಸಂ ತಾಂ" (ಕವಿಕಂ. ೮೬) ; ಕೀಳಿಂಗಲ್ಲದೆ ಹಯನ ಕಱಿಯದು ಕಾಣಾ ರಾಮನಾಥ (ದೇದಾಪ್ರ. ೯–೨) ; ಕೀಳಿಂಗಲ್ಲದೆ ಹಯನ ಕಱಿವುದೆ (ಬಸವ. ೩೫೯). [?]

**ಕೀಳ್$_4$, ಕೀಳ$_1$** (ನಾ). ಅಂಗಳ; ಕೊಟ್ಟಿಗೆ: (ಕ). **ಕೀಳ** : ಹೇಳಿದರೆ ಕೇಳುವನ ಕೀಳವದು ಕರಲೇಸು ಹೇಳಿದರೆ ಕೇಳದಿರುವವನ ಮಾಳಿಗೆಯು ಕೀಳಗು ಕಷ್ಟ (ಸರ್ವಜ್ಞ. ೧೨೫೬). "ಗುಡಿಸಲು ಚಪ್ಪರ" (ಸರ್ವಜ್ಞ. ಕೋಶ). [< ಕೀಱಿಲ್ ?]

**ಕೀಳ$_1$** 'ಕೀಳ್$_4$' ನೋ.

**ಕೀಳ$_2$** 'ಕೀಟ' ನೋ.

**ಕೀಳಕ** 'ಕೀಲಕ' ನೋ.

**ಕೀಳಕುಲ** (ನಾ). ಕೆಳಜಾತಿ ; ಹೀನವಂಶ : ಅಳಿವೆಣ್ಣು – ಕೀಳಕುಲದವಳು (ಗಂಗಾಮ. ೨೧). [ಕೀಳ$_2$ (< ಕೀಟ) + ಕುಲ]

**ಕೀಳಜನ** (ನಾ). ಕೆಳಮಟ್ಟದ ಜನ; ನೀಚಜನ : "ಪ್ರಾಕೃತ – ಕೀಳಜನ" (ಗಂಗಾಮ. ೨೨೪). [ಕೀಳ$_2$ (< ಕೀಟ) + ಜನ]

**ಕೀಳರಿಮೆ** (ನಾ). ತಾನು ಕಡಿಮೆಯುವನೆಂದು ತಿಳಿದುಕೊಳ್ಳುವಿಕೆ : ಆ ಆಸೆ ಅವನ ಕೀಳರಿಮೆಯನ್ನೂ ಮೆಚ್ಚಿ ಕುಣಿಯಹತ್ತಿತು (ಗ್ರಾಮಾಯ. ೪೯೬) ; ತಿಮ್ಮನ ಮುಂದೆ ಕೃಷ್ಣನಿಗೆ ಕೀಳರಿಮೆ ಬಂದರೆ ಏನಾಶ್ಚರ್ಯ (ಹುಚ್ಚುಹು. ೩೯). [ಕೀಳ್$_2$ (< ಕೀೞ್$_2$) + ಅರಿಮೆ$_0$]

**ಕೀಳಾಗು** (ಕ್ರಿ). ಕೆಟ್ಟದಾಗು ; ಕಳಪೆಯಾಗು ; ಹಾಳಾಗು : ಕಾಳಗದ ನಲ್ಮೆಯಿಂದೀಳಿಗೆಯ ಕಯ್ತಪ್ಪಿ ಕೀಳಾಯ್ತು ನಾಡು (ಕಾಲೂರ. ೩೯–೪೬). [ಕೀಳ್$_2$ (< ಕೀೞ್$_2$) + ಆಗು$_1$]

**ಕೀಳಾಣಿ** (ನಾ). ಕಳಪೆಯ ಚಿನ್ನ; ಮಿಶ್ರಲೋಹ: ಅಣೆಗಪಱಯ ವಿಲ್ಲಲೇ ಕೀಳಾಣಿ ಟಂಕದೊಳಿಲ್ಲಲೇ (ಕುವ್ಯಾಸ. ೧-೪೪).
[ಕೀಳ್$_2$(< ಕೀೞ್$_2$) + ಅಣಿ$_1$ ?]

**ಕೀಳಾದಿಗೆ** (ನಾ). ಅಂಗಳದಲ್ಲಿಯ ಕಟ್ಟೆ; ಗುಡಿಸಲಿನ ಮುಂಭಾಗ (?) : ಶಿವಭಕ್ತರಂ ಕಾಣದೆ ಮುಂದುಗೆಟ್ಟು ಬಂದೊಬ್ಬ ಜೈನನ ಕೀಳಾದಿಗೆಯೊಳಿರ್ದು ನಿತ್ಯನೇಮವಂ ಮಾಡುತ್ತಮಿರ್ಪಲ್ಲಿ (ನಾಚಿರಾ. ೧೭೮-೧೩) [ಕೀಳ್$_4$ + ಆದಿಗೆ$_0$]

**ಕೀಳಾರಂಭ** (ನಾ). ಕುತ್ಸಿತ ವೃತ್ತಿ; ಕೀಳು ವ್ಯವಸಾಯ: ತಾಳಾಂಕನೆ ಹಲಹಿಡಿದು ಭೂಮಿಯ ಮೇಲೆ ಸೀಳಬಲ್ಲವ ಕೇಳ್ದು ನಿನಗೆ ಕೀಳಾರಂಭ ಬೇಡೆಂದು ವಿಘ್ನೇಶ ಹೇರಾಳಂಬ ಕರೆದು ಬೊಬ್ಬಿಱಿದ (ಮೋಹತ. ೩೮-೪೮). [ಕೀಳ್$_2$ (< ಕೀೞ್$_2$) + ಆರಂಭ]

**ಕೀಳಾಳ್** 'ಕೀೞಾಳ್' ನೋ.

**ಕೀಳಾಳು** 'ಕೀೞಾಳ್' ನೋ.

**ಕೀಳಿಡಿಸು** (ಕ್ರಿ). ಕಿರಿಚುವಂತೆ ಮಾಡು; ಕಿರುಗುಟ್ಟಿಸು: ದಿಗಿಭಮ ನೊತ್ತಿ ಕೀಳಿಡಿಪನಗ್ಗದ ಕೇಸರೀವೋಲೆಪಾಯ್ದು (ಎಕ. VII, ಶಿವಮೊ. ೪-೪೫; 1122); ಉಡಿವಂ ಚಕ್ರವನಳ್ಕಿಪಂ ಜವನನಾದಿದ್ದ(ಗ್ದ)ಂತಿಯಂ ಕೂಡೆ ಕೀಳಿಡಿಪಂ (ಕಇ. IV, ೧-೬೫; 1704). [ಕೀಳಿಡು$_1$ + – ಇಸು$_3$]

**ಕೀಳಿಡು$_1$** (ಕ್ರಿ). ಅರಚು; ಕೂಗು; ಕಿರಿಚು: ಕೀಳಿಡೆಯಿಡೆ ಗಂಟಲಂ ಮುಱಿದನೊರ್ಮೆಯೆ ನಿರ್ಘೃಣನೆನ್ನ ತಂದೆಯಂ (ಕಾದಂಪೂ. ೧೮೪); ಶರಭಮಂ ನೂಱನಿನ್ನೂಱನತ್ಯುತ್ಸವದಿಂ ಕೀಳಿಟ್ಟು ಪೇಱೇಱುವೆನೊ ಧರಣಿಯಂ ಪೊಯ್ವೆನೋ ತೂಂತುವೋಗಲ್ (ಧರ್ಮಾಮೃ. ೯-೧೮೩); ಕೋಡೊಳೆತ್ತಿ ಕಟ್ಟಿದ ಮದದಂತಿಯಂ ಬಿಡದೆ ಕೀಳಿಡೆ ಕೀಳಿಡೆ [ಪಾಠಾಂ. ಗೀಱಿಡೆ ಗೀಱಿಡೆ]ಕೊಂಡುದಾ ಗಜಂ (ಪಾರ್ಶ್ವಪು. ೪-೧೩೬); ಕೆಸಱೊಳಿರ್ದ ಪಸುವಿನಂತಿರೆ ದಶಮುಖಂ ಕೀಳಿಟ್ಟೊರಲೆ (ಪುಣ್ಯಾಸ್ರ. ೫-೫೫ ವ); ಹಸಿದ ಹೊಟ್ಟೆ ತಳಮಳಗೊಂಡು . . . ಕೀಳಿಟ್ಟು ಕರೆದ ಮೇಲೆ (ಜಯಂತ. ೨೭೯). [?]

**ಕೀಳಿಡು$_2$** 'ಕೀೞಿಡು' ನೋ.

**ಕೀಳಿಲ್** 'ಕೀೞಿಲ್' ನೋ.

**ಕೀಳಿಲು** 'ಕೀೞಿಲ್' ನೋ.

**ಕೀಳಿಸು** (ಕ್ರಿ). ೧. ಕೀಳುವಂತೆ ಮಾಡು; ಕಿತ್ತು ತೆಗೆಸು: ಕೀಳಿಸಿದ ನರಮನೆಯ ಹೇಮದ ತಾಳಮರ ಹದಿನಾಲ್ಕನಧ್ವರ ಶಾಲೆಯಿದಿರಲಿ ತೋರಣಸ್ತಂಭಂಗಳಹವೆಂದು (ಕುವ್ಯಾಸ. ೪-೪೮); ಕಳೆ ಕೀಳಿಸಿ ಆಯಿತೆ (ಚಂಗಾಳ್ವ. ೨೩೫). ೨. ಅಗೆಸು; ತೋಡಿಸು: ಒಂದು ಬಾವಿ ಕೀಳಿಸಿದರು (ಚಂಗೂಲಿ. ೧೦). ೩. (ಆಲಂ) ಕಿವಿಯನ್ನು ಕೊರೆ; ಕಿವುಡುಗೊಳಿಸು: ಬಯಲಾಟದ ಚಂಡೆಮದ್ದಳೆ ಸಿನಿಮಾದ ಹಾಡುಗಳೂ ಕಿವಿ ಕೀಳಿಸುತ್ತಿದ್ದುವು (ಭ್ರಾಮಾನ. ೨೪೮). [ಕೀಳ್$_1$ (< ಕೀೞ್$_1$) + -ಇಸು$_3$]

**ಕೀಳು$_1$** 'ಕೀೞ್$_1$' ನೋ.

**ಕೀಳು$_2$** 'ಕೀೞ್$_2$' ನೋ.

**ಕೀಳು$_3$** (ನಾ). (ಕಣ್ಣಿನ) ಮಲ; ಪಿಸುರು (?) : ನಳಿಯದ ಕುಷ್ಮಿಕೆ ದೊಡ್ಡಿದ ಮೊಳಕಾಲ್ ಸನಾಕ್ಷಿ ರೂಢಿದುರ್ಗಂಧಂಗಳ್ ಕೊಳೆನಾರ್ಪೊಡೆ ಕೀಳುಂ ಕಾಲ್ಕೊಳೆಯದ ಮಱೆಯರಿದು ಮೂಱು ಸಂವತ್ಸರಮಂ (ಅಶ್ವಶಾ. XIV ೫೦); ಕಣ್ಣುಗಳಲ್ಲಿ ಕೀಳು ಕಟ್ಟಿದಲ್ಲಿ ಕುದುರೆಯ ಮರಿಗೆ ಮೂರುವರುಷಕ್ಕೆ ಅಳಿವು ತಪ್ಪದು (ಅಶ್ವಟೀ. ೩೩-೧೦). [?]

**ಕೀಳುಕರ್ಮ** (ನಾ). ಕೆಟ್ಟಕೆಲಸ; ನೀಚಕರ್ಮ: ಭಗವಂತನು ಭಕ್ತರು ಮಾಡಿದ ಅಲ್ಪ ಕೀಳುಕರ್ಮಗಳನ್ನು ಕೂಡ ಸ್ವೀಕರಿಸಿ (ಜಗದಾ. ೨೧೩). [ಕೀಳು$_2$ (< ಕೀೞ್$_2$) + ಕರ್ಮ]

**ಕೀಳುಕಳೆ** (ನಾ). ಕೀಳಾದ ಕಳೆ; ಕಳಪೆ ಕಸ: ಕೀಳುಕಳೆಯ ಕಿತ್ತುಬಿಸುಟು (ವಿಸೀಗೀ. ೮೧-೧೫).
[ಕೀಳು$_2$ (< ಕೀೞ್$_2$) + ಕಳೆ$_2$]

**ಕೀಳುಕೋಟೆ** (ನಾ). ಕೆಳಗಿನ ಕೋಟೆ; ಕೋಟೆಯ ಕೆಳಭಾಗ: ಕೀಳುಕೋಟೆಯೊಳೊಬ್ಬ ಅಗಸಾಲ ಸತ್ತರೆ ಮೇಲುಕೋಟೆಯೊಳೊಬ್ಬ ಅಗಸತಿ ಅಳುವಳು (ಪುರಂದ. ೨-೧೨-೩).
[ಕೀಳು$_2$ (< ಕೀೞ್$_2$) + ಕೋಟೆ (< ಕೋಂಟೆ)]

**ಕೀಳುಗ** (ನಾ). ಕೀಳಾದವನು; ಅಧಮ; ನೀಚ: ಹಾಳುಗನಾಂ ಕಾಳುಗನಾಂ ಕೀಳುಗನಾಂ ಏಳು ಬೇಲಿಯಂ ಕಳಿದವನಾಂ (ಶಂಕಕಂ. ೧೦೨). [ಕೀಳು$_2$ (< ಕೀೞ್$_2$) + –ಗ$_3$]

**ಕೀಳುಗಣ್ಣು** (ನಾ). ೧. ಕಡೆಗಣಿಸುವ ನೋಟ; ತಿರಸ್ಕಾರ ದೃಷ್ಟಿ: ಈ ಮನೇಲಿ ನಿನ್ನನ್ನ ಕೀಳುಗಣ್ಣಿಂದ ನೋಡೋಕೆ ಯಾರಿಗೂ ಸಾಧ್ಯ ವಿಲ್ಲ (ವಂಶವೃ. ೧೭೬). ೨. ಕಣ್ಣಿನ ಒಂದು ರೋಗ: ಈ ರಸದಲ್ಲಿ ಗುಳಿಗೆಯಂ ಮಾಡಿ . . . ಹಚ್ಚೆ ಕೀಳುಗಣ್ಣು ತೀರ್ಗುಂ (ವಿವೈವಿ. ೮೩).
[ಕೀಳು$_2$ (< ಕೀೞ್$_2$) + ಕಣ್ಣು (< ಕಣ್)]

**ಕೀಳುಗಯ್ಯು** 'ಕೀಳ್ಗಯ್' ನೋ.

**ಕೀಳುಗಾಲುವೆ** (ನಾ). ಕೆಳಗಾಲುವೆ; ತಳಗಾಲುವೆ: ಚತುಸೀಮೆ ಕಾಲುವಳಿ ಕೀಳುಗಾಲುವೆ . . . ಅಷ್ಟಭೋಗ ತೇಜದ ಸ್ವಾಮ್ಯವನು (ಎಕ. XII, ಮದ್ದಗಿ. ೩೭-೧೪; 1577).
[ಕೀಳು$_2$ (< ಕೀೞ್$_2$) + ಕಾಲುವೆ (< ಕಾಲ್ವಾಯ್)]

**ಕೀಳುಗಾಳಿ** 'ಕಿಗ್ಗಾಳಿ' ನೋ.

**ಕೀಳುಗೊರವ** (ನಾ). ಕೀಳುತರಗತಿಯ ಗೊರವ; ಅಲ್ಪನಾದ ಶೈವ ಸಂನ್ಯಾಸಿ: ಕೀಳು ಕಿಲ್ಬಿಷವಿವು ನಮಗೆ ಭೂಪಾಲ ಮುಟ್ಟಲು ಬಾರದೆನಲಾ ಕೀಳುಗೊರವಂ ಮೆಲುತ ಕೊಟ್ಟಂಜಲ ಕಡಲೆಯಿಂದ (ಬಸಪು. ೩೭-೬೭). [ಕೀಳು$_2$ (< ಕೀೞ್$_2$) + ಗೊರವ]

**ಕೀಳುಗೊಳಿಸು** (ನಾ). ಕೀಳಾಗಿ ಮಾಡು; ಅವಮಾನಿಸು: ನಾವು ಈ ಶಕ್ತಿಯನ್ನು ಬೀಳುಗೊಳಿಸಿರುವೆವು, ಕೀಳುಗೊಳಿಸಿರುವೆವು (ವಿಚಾಮಂ. ೬೩). [ಕೀಳು$_2$ (< ಕೀೞ್$_2$) + ಕೊಳ್$_1$ + –ಇಸು$_3$]

**ಕೀಳುಜಾತಿ** 'ಕೀೞ್ಜಾತಿ' ನೋ.

**ಕೀಳುದನಿ** (ನಾ). ಕೆಳಗಿನ ದನಿ; ತಗ್ಗಿದ ದನಿ: ಹೇಳಿದನು ಬಳಿಕವನು ನಡೆದು ಹೋದುದನಾಹಾ ಕೀಳುದನಿಯಲಿ (ಇಂಗೀಕೆ. ೪೫-೧೦).
[ಕೀಳು$_2$ (< ಕೀೞ್$_2$) + ದನಿ]

**ಕೀಳುದರ್ಜೆ** (ನಾ). ಹೀನತರಗತಿ; ಕೆಳಗಿನ ಮಟ್ಟ: ಹರಿದಾಸರ ಅನುಭವದ ನುಡಿಗಳಾದ ಪದಗಳೆಂದರೆ ಕೀಳುದರ್ಜೆಯ ಪ್ರಾಕೃತಪದ ವೆಂಬ ಭಾವನೆ ಆಚಾರ್ಯರಿಗೆ . . . ಬೆಳೆಯಿತು (ಜಗದಾ. ೧೪೭); ನಗರದ ಕೀಳುದರ್ಜೆಯ ವಿಟ – ವಿದೂಷಕ – ಲಂಪಟರಿಗೆ ಅದು ವಿಹಾರ ಸ್ಥಾನ (ಬಾಣಅ. ೧೫೨).
[ಕೀಳು$_2$ (< ಕೀೞ್$_2$) + ದರ್ಜೆ]

**ಕೀಳುದಲೆ** 'ಕಿಬ್ಬಲೆ' ನೋ.

**ಕೀಳುದಲೆಗೊಳ್** (ಕ್ರಿ). (ನಾಚಿಕೆಯಿಂದ) ತಲೆತಗ್ಗಿಸು; ಕೆಳಮೊಗವಾಗು: ಪರಮಾತ್ಮನುನ್ನತ ಲೀಲೆಯನು ಹೇಳುವಡೆ ನಿಗಮಾನಂತ ಕೋಟಿಗಳು ಕೀಳುದಲೆಗೊಂಡವು (ನಿಭಾಗ. ೨-೪-೧೦).
[ಕೀಳುದಲೆ (< ಕಿಬ್ಬಲೆ) + ಕೊಳ್$_1$]

**ಕೀಳುದಸೆ** (ನಾ). ಕೀಳುಮಟ್ಟ; ದೀನಾವಸ್ಥೆ: ಕೀಳುದಸೆಯವರ ನುದ್ಧರಿಸದವ ಹೊಲೆಯ (೧೪ವಿಂ. ೧೬-೭).
[ಕೀಳು$_2$ (< ಕೀೞ್$_2$) + ದಸೆ]

**ಕೀಳುದಾನ** (ನಾ). ೧. ಅಪಾತ್ರದಾನ. ೨. ಕೆಳಗೆ ಸುರಿಯುವ ಮದೋದಕ : ಓಲಗಕೆ ಬರುತಿಪ್ಪ ಕರಿಗಳ ಕೀಳುದಾನದಿನೆಸೆವ ತುಂಬಿಯು ಲೋಲಭೂಪರ ರತ್ನ ಭೂಷಣವ್ವೆಸೆ ರಜದಿಂದ ಮೇಲೆ ಹುಡಿಯಿಡೆ (ಸಂಭಪ. ೨೪–೬). [ಕೀಳು$_2$ (< ಕೀೞ್$_2$) + ದಾನ]

**ಕೀಳುದೆಸೆ** (ನಾ). ೧. ಕೆಳಗಿನ ಸ್ಥಳ; ಕೆಳಭಾಗ : ಕಟಿ ಮೊದಲಾದ ಕೀಳುದೆಸೆಯಲ್ಲಿ ಸಂದಿನ ಭೇದ (ಸರ್ವವ. ೨೧–೧೦೧). ೨. ಹೀನಾವಸ್ಥೆ; ದುರವಸ್ಥೆ . [ಕೀಳು$_2$ (< ಕೀೞ್$_2$) + ದೆಸೆ$_2$]

**ಕೀಳುನಾಡು** (ನಾ). ಕೆಳಗಿನ ನಾಡು ; ಅಧೋಲೋಕ ; ಪಾತಾಳ : ನಡುನಾಡು ಮೇಲ್ನಾಡು ಕೀಳುನಾಡೆಂಬ ಮುಪ್ಪೊಡವಿಯೊಡೆಯುನ ಹೆಮ್ಮೆಗಗೆ ತಡೆಯುಂಟೆ ನಿನಗೆ (ಭರಚ. ೪೪–೬೬). [ಕೀಳು$_2$ (< ಕೀೞ್$_2$) + ನಾಡು]

**ಕೀಳುನಿಲ್** (ಕ್ರಿ). ಆಶ್ರಯಿಸಿ ಬದುಕು; ಊಳಿಗದಲ್ಲಿ ನಿಲ್ಲು: ಅ ಸೆಟ್ಟಿಕಾಱ ಮಾದಂಣಸೆಟ್ಟಿ ಉಡುವರ ಬಳಿಯ ತಂನ ಕುಟುಂಬ ಕೀಳು ನಿಂದು ಬಾಳುವ ತಂನ ಕುಟುಂಬ ವಿಟ್ಟಲ ಮೊದಲಾದ ಆಳಿಯಂದಿರು ಸಹಿತವಾಗಿ . . . ಧಾರೆಯನೆರೆದು ಕೊಟ್ಟರು (ಸೌಇಇ. IX–ii, ೪೨೩–೨೦ ; 1400). [ಕೀಳು$_2$ (< ಕೀೞ್$_2$) + ನಿಲ್]

**ಕೀಳುನುಡಿ** 'ಕಿಱ್ನುಡಿ' ನೋ.

**ಕೀಳುಪಚ್ಚೆ** (ನಾ). ಚಿಕ್ಕಪುಟ್ಟ ಬೆಳೆ; ಚಿಲ್ಲರೆ ಬೆಳೆ (?) : ಬಾಳೆ ಬದನೆ ಮುಂತಾದ ಏನುಳ್ಳ ಕೀಳುಪಚ್ಚೆ ತೃಣ ಕಾಷ್ಠ ಮುಂತಾದ (ಎಕ. VII, ಶಿವಮೊ. ೬೧–೨೮ ; 1431). [ಕೀಳು$_2$ (< ಕೀೞ್$_2$) + ಪಚ್ಚೆ]

**ಕೀಳುಪಾಯ** (ನಾ). ಕೆಳ ಪಾಯ ; ತಳಭಾಗದಲ್ಲಿರುವುದು (?) : ಈ ಕಸಬೇಕೆರೆ ಹಿಂದೆ ಕೀಳುಪಾಯ ಹಂತದಲ್ಲಿರುವ ದೈವದಗದ್ದೆ ಅಯಾಚಿತರ ಗದ್ದೆಯಂಬದಾಗಿಯಿರುವ ದೇವರಾಯ (ಎಕ. V, ಅರಸೀ. ೨೧೪–೨ ; 1817). [ಕೀಳು$_2$ (< ಕೀೞ್$_2$) + ಪಾಯ$_1$]

**ಕೀಳುಪೈರು** (ನಾ). = ಕೀಳುಪಚ್ಚೆ : ಈ ಸಲ ಕೀಳುಪೈರನ್ನು ಹಾಕೋಣೋ ಮೇಲುಪೈರನ್ನು ಹಾಕೋಣೋ ಎಂದು ಕೇಳಿದರು (ಹುಟ್ಟಿಹ. ೧೩೫). [ಕೀಳು$_2$ (< ಕೀೞ್$_2$) + ಪೈರು (< ಪಯಿರ್)]

**ಕೀಳುಫಲ** (ನಾ). ನಿಕೃಷ್ಟವಾದ ಫಲ; ಅನಿಷ್ಟವಾದ ಫಲ: ಕಾಲದಲಿ ಮಾಡಿದರೆ ಕರ್ಮವದೇಳಿಗೆಯ ಸತ್ಕರ್ಮ ಸಿದ್ಧಿಯು ಮೇಲೆ ಕರ್ಮವ ತಾನಕಾಲದ ತಲಹಿನಲಿ ಮಾಡೆ ಕೀಳುಫಲವಹುದು (ಸಂಭಪ. ೮–೫೬). [ಕೀಳು$_2$ (< ಕೀೞ್$_2$) + ಫಲ]

**ಕೀಳುಬಗೆ** (ಕ್ರಿ). ಕೆಟ್ಟದ್ದನ್ನು ಯೋಚಿಸು; ಕೆಡುಕು ಬಗೆ: ಇದರಿಂದ ಗುರುಗಳಲ್ಲಿ ಕೀಳುಬಗೆಯಬೇಡ (ಜಯಂತ. ೨೦). [ಕೀಳು$_2$ (< ಕೀೞ್$_2$) + ಬಗೆ]

**ಕೀಳುಮಂದಿ** (ನಾ). = ಕೀಳುಜನ: ಬೀದಿಯ ಕೀಳುಮಂದಿಯ ನಡುವೆ . . . ಅರಸಿಯರು ಅಳುತ್ತ ಹೊರಹೊರಡಬೇಕಾಯಿತು (ಭಾಮಣಿ. ೧೪೬). [ಕೀಳು$_2$ (< ಕೀೞ್$_2$) + ಮಂದಿ]

**ಕೀಳುಮಟ್ಟ** 'ಕೀಳ್ಮಟ್ಟ' ನೋ.

**ಕೀಳುಮನ್ನೆಯ** (ನಾ). ತುಚ್ಛನಾದ ಮನ್ನೆಯ ; ಕ್ಷುದ್ರಮಾನ್ಯದವನು : ಕೈಲಾಸದಂತಹ ಮೇಲುದುರ್ಗಮದೆಮಗಿರಲ್ಕೀ ಕೀಳು ಮನ್ನೆಯರಂತೆ ವನದುರ್ಗದೊಳಗಿರಲೇಕೆ (ಬಸವು. ೧೬–೨೯). [ಕೀಳು$_2$ (< ಕೀೞ್$_2$) + ಮನ್ನೆಯ]

**ಕೀಳುಮಾಡು** 'ಕಿಱ್ಮಾಡು' ನೋ.

**ಕೀಳುಮಾತು** (ನಾ). ಕೆಟ್ಟಮಾತು : ನೀಚತನದ ಮಾತು; ಕ್ಷುದ್ರವಾದ ಮಾತು : ಖೂಳರಧಮರ ಕೀಳುಮಾತಿಂಗೇಕೆ ಮರುಳಾದೈ (ಬಸವು. ೨೧–೨೩). [ಕೀಳು$_2$ (< ಕೀೞ್$_2$) + ಮಾತು$_1$]

**ಕೀಳುಮೇಲು** 'ಕೀೞ್ಮೇಲ್' ನೋ.

**ಕೀಳುಲೋಕ** (ನಾ). ಕೆಳಗಿನ ಲೋಕ ; ಅಧೋಲೋಕ: ಮಂಗಳವನು ಕಳುಹಲಿ ಬರುವಮಂಗಳವನು ಮೆಟ್ಟಿ ಕೀಳುಲೋಕಕಿಳುಹಲಿ (ಪಾರಸಿ. ೧೦–೨೩೬). [ಕೀಳು$_2$ (< ಕೀೞ್$_2$) + ಲೋಕ]

**ಕೀಳುವಳಿ** (ನಾ). ಉಪಗ್ರಾಮ; ಕಿರುವಳ್ಳಿ (?): ಶ್ರೀ ಚಂನಕೇಶವ ಪೂರಮೆಂಬ ಸರ್ವಮಾನ್ಯದ ಗ್ರಾಮವನೂ ಅದಕೆ ಸಲುವ ಕೀಳುವಳಿ ಆ ಚತುಸ್ಸೀಮೆಯೊಳಗಣ ಹಳಿಪಳಿ ಮುಂನಾದ ಅಷ್ಟಭೋಗ ತೇಜಸ್ವಮ್ಯ ಸಯಿತವಾಗಿ (ಸೌಇಇ. IX–ii, ೬೦೫–೭ ; 1543). [ಕೀಳು$_2$ (< ಕೀೞ್$_2$) + ವಳಿ (< ಪಳ್ಳಿ)]

**ಕೀಳುವಾಸಿ** (ನಾ). ತಗ್ಗುವಿಕೆ; ಇಳಿವರಿ: ಅದರ ಮೇಲಿಂದ ದೇಶ ವಿದೇಶಗಳು ತಮ್ಮ ವ್ಯಾಪಾರಗಳ ಮೇಲುವಾಸಿಯನ್ನು ಪಡೆಯುವುದೋ, ಕೀಳುವಾಸಿಯನ್ನು ಕೊಡುವುದೋ ಸಾಧ್ಯವಾಗುತ್ತದೆ (ಬಾಲಪ್ರ. III, 1555). [ಕೀಳು$_2$ (< ಕೀೞ್$_2$) + ವಾಸಿ]

**ಕೀಳುಹಜಿವೆ** (ನಾ). ಒಂದು ಬಗೆಯ ಸಸ್ಯ : (ಕಿ). [ಕೀಳು$_2$ (< ಕೀೞ್$_2$) + ಹಜಿವೆ]

**ಕೀಳೂರು** (ನಾ). ಒಂದು ಊರಿನ ಹೆಸರು : ಕೀಳೂರು ಅಜಿಯೂರು ಹಜಿಗೆ . . . ಗಾವುಣ್ಡವೃತ್ತಿಯುಮುಂ (ಎಕ. VII, ಶಿವಮೊ. ೧೦–೫೧ ; 1085). ಮೂಡಲು ಕೀಳೂರ ಹಳ್ಳವನ್ನು ಬರಲು (ಎಕ. VII, ಶಿವಮೊ. ೪–೭೯ ; 1177). [ಕೀಳ್$_2$ (< ಕೀೞ್$_2$) + ಊರು$_3$ (< ಊರ್)]

**ಕೀಳೂಳಿಗ** (ನಾ). ಕೆಳಮಟ್ಟದ ಚಾಕರಿ : ಮಹಾರಾಜನಿಗೆ ನೀನೊಬ್ಬ ಕೀಳೂಳಿಗದ ಕೀಟಕವು ಮಾತ್ರ (ಮಂತ್ರಶ. ೧೧–೨೧). [ಕೀಳು$_2$ (< ಕೀೞ್$_2$) + ಊಳಿಗ (< ಊಱಿಗ$_2$)]

**ಕೀಳೆಲೆ** 'ಕೀೞೆಲೆ' ನೋ.

**ಕೀಳೆಳೆ** (ನಾ). ಕೆಳಗಿನ ಭೂಮಿ; ಅಧೋಲೋಕ; ಪಾತಾಳ : ಪ್ರಾರ್ಥನೆಯನ್ ಕೂಗಿ ಪೇಳುವುದು ಕೇಳುವುದೇ ಕೀಳೆಳೆಯೊಳ್ ನಿನ್ನ ಕಿವಿ ತಾಗಿ (ಪಾರಸಿ. ೨೪–೫೪೪). [ಕೀಳ್$_2$ (< ಕೀೞ್$_2$) + ಎಳೆ$_3$]

**ಕೀಳೇರಿ** 'ಕೀೞೇರಿ' ನೋ.

**ಕೀಳೊಕ್ಕಲು** 'ಕೀೞೊಕ್ಕಲ್' ನೋ.

**ಕೀಳೊಡಲು** (ನಾ). ಹೊಟ್ಟೆಯ ಕೆಳಭಾಗ; ಕೆಳಹೊಟ್ಟೆ; ಕಿಬ್ಬೊಟ್ಟೆ : ಕಡುಗವನುಗಿದು ತನ್ನಯ ಕೀಳೊಡಲಾ ಬಗಿದ ಕರುಳ ನೀವೆನೆನುತಾಗಳೆನೊಳು ಬಗೆದನು (ಶ್ರೀಪಾಲ. ೮–೬೧). [ಕೀಳು$_2$ (< ಕೀೞ್$_2$) + ಒಡಲ್]

**ಕೀಳೊರೆ$_1$** (ನಾ). ಕೀಳಾದ ಹೇಳಿಕೆ, —ಮಾತು ; ಕೆಟ್ಟನುಡಿ : ಕೀಳೊರೆಯ ನುಡಿಯ ಬಳಿಯಟ್ಟಿದಂ (ಕಾಲೂರ. ೧೨೮ ೨೭). [ಕೀಳ್$_2$ (< ಕೀೞ್$_2$) + ಒರೆ$_4$]

**ಕೀಳೊರೆ$_2$** (ನಾ). ಕೀಳಾದ ಒರೆ, —ಕತ್ತಿಯ ಕೋಶ : ಬಾಳೊಂದು ಕೀಳೊರೆಯೊಳ್ ದೊರ್ಡಂ ಪೊಳಕೆಸೆಯದಿಹುದೇ (ಕಾಲೂರ. ೧೨೮–೨೭೧). [ಕೀಳ್$_2$ (< ಕೀೞ್) + ಒರೆ$_6$ (< ಒಱೆ$_2$)]

**ಕೀಳ್ಕಂಬಿ** (ನಾ). ಕಡಿವಾಣದ ಕಂಬಿ : ಬಜಿಗಡಗ ಕೀಳ್ಕಂಬಿ ದುಕ್ಕುಡಿಯುಜುಗು ಗಡಿಯಣ ಮೊಗವಡಂಗಳು ತುರಗವದನದ ಲೊಪ್ಪಿರಲು (ಕುವ್ಯಾಭೀ. ೪–೪೮). [ಕೀಳ್$_2$ (< ಕೀೞ್$_2$) + ಕಂಬಿ]

**ಕೀಳ್ಕೆ** (ನಾ). ಕೀಳುವಿಕೆ; ಉತ್ಪಾಟನ : "ಲುಂಚ – ಅಪನಯನೇ, ಕೀಳ್ಕೆಯೊಳ್" (ಕಾಶಕ್ಯ. ೧೧). [ಕೀಳ್$_1$ (< ಕೀೞ್$_1$) + –ಕೆ]

**ಕೀಳ್ಕೆಳಗು** (ನಾ). ತೀರ ಕೆಳಗಿನ ಭಾಗ : ಅದರ ಕೀಳ್ಕೆಳಗಣ ಕಲ್ಲೋವರಿಯಲ್ಲಿ (ಮಂತ್ರಶ. ೮೨–೧೨). [ಕೀಳ್$_2$ (< ಕೀೞ್$_2$) + ಕೆಳಗು]

**ಕೀಳ್ಕೞಿ** 'ಕಿಱ್ಕೞಿ' ನೋ.

**ಕೀಳ್ಗಟ್ಟೆ** (ನಾ). (?) : ಕತ್ತಲೆ ಕಿಱ್ತಲೆ ಕಿಱಿಂದಲೆಯಾಗೆ ಪೊಱಗು ಮೊಳಗುಂ ಕೀಳ್ಗಟ್ಟೆಯಂತೆಸೆವ ಬೆಟ್ಟಂಗೆ ಬಳೆಗವನಿಕ್ಕಿದ ಬೀಱ್ವ ಕಂಡಿಗಳಂ ಪೆಣದ ಪೇರಟ್ಟೆಯೊಟ್ಟಲಿಂ ಮುಚ್ಚಿ (ಅನಂಪು. ೧೧-೮೪ ವ). [?]

**ಕೀಳ್ಗಟ್ಟು** 'ಕಿಱ್ಕಟ್ಟು' ನೋ.

**ಕೀಳ್ಗಡೆ** (ನಾ). ಕೆಳಗಡೆ; ಕೆಳಭಾಗ: "ಅಧಃ = ಕೀಳ್ಗಡೆಯಲ್ಲಿ" (ಬಾಹಟೀ. ೨-೧-೮೧ ವ); ಒಡನೆ ಕೀಳ್ಗಡೆ ತಂತಿಯೊಳು ಬಲಗೈವೆರಳೊಡರಿಸೆ ಪಾಡಿದಳೊಲಿದು (ಭರಚ. ೧೧-೩).

[ಕೀಳ್$_2$ (< ಕೀೞ್$_2$) + ಕಡೆ$_2$]

**ಕೀಳ್ಗಣ್ಚು** (ಕ್ರಿ). ಕೀಳಾಗಿ ಕಾಣು; ಕಡೆಗಣಿಸು : ನುಸಿಗಳಿಗೆ ಕೀಳ್ಗಣ್ಚೆ ಸುಗ್ರೀವ ಜಾಂಬವ ಪ್ರತಿಭಟನೆಯಂ (ಶ್ರೀರಾಮಾ. ೬೯೩-೪೨೨).

[ಕೀಳ್$_2$ (< ಕೀೞ್$_2$) + ಕಣ್ + -ಚು]

**ಕೀಳ್ಗಣ್ಣು** 'ಕಿಱ್ಗಣ್' ನೋ.

**ಕೀಳ್ಗುಂಟೆ** 'ಕಿಱ್ಗುಂಠೆ' ನೋ.

**ಕೀಳ್ಗುದಿ** (ಕ್ರಿ). ಹೀನಸ್ಥಿತಿಯಲ್ಲಿ ನರಳು : ದಯೆಯಿಂದೆತ್ತಿಕೊಂಡುಂ ಕೀಳ್ಗುದಿವರನಾ ಕೀಳಿಲಿಂ ಬಳಿಕೆ ರೂಢಿಸುತೆ ಪಾಸಟಿಕೆಯಂ ಪುದುವಿನಾ ನಣ್ಪನೆಲ್ಲರುಮಂ ಕವಿ ಸತ್ಯಲೋಕದೊಳಾಳ್ವಂ (ಸಂಸಪ. ೧೨-೩೦).

[ಕೀಳ್$_2$ (< ಕೀೞ್$_2$) + ಕುದಿ$_1$]

**ಕೀಳ್ಗೆಯ್**, ಕೀಳುಗಯ್ಯು (ಕ್ರಿ). ಕೀಳುಮಾಡು; ಕಡೆಗಣಿಸು; ಅವಮಾನಿಸು : ನನ್ನನ್ನು ಕೀಳಿದವರು ಯಾರೂ ಇಲ್ಲ; ಕೀಳ್ಗೆಯ್ದವರೂ ಯಾರೂ ಇಲ್ಲ (ಮಂಗಾಪು. ೪೨). **ಕೀಳುಗಯ್ಯು** : ಇದು ಅವನ ಪ್ರತಿಭೆಯನ್ನೇನು ಕೀಳುಗಯ್ಯುವುದಿಲ್ಲ (ಬಂಕಿಮ. ೧೫೦).

[ಕೀಳ್$_2$ (< ಕೀೞ್$_2$) + ಕೆಯ್$_1$]

**ಕೀಳ್ಚೆಲ್ಲು** (ಕ್ರಿ). ಕೆಳಗೆ ಚೆಲ್ಲು : ಸಮೀರದುತ್ಕಟದಿ ಕಿರುಮರುಡಿಚಯ ನೆಲವೆಣ್ಣು ಅಜ್ಜೆಕಲ್ಲಾ ಮುದದಿಯಾಡುವಳೊಯಂಬಂತೆ ಕೀಳ್ಚೆಲ್ಲಿದವು (ನವಮೋ. ೨೯-೬೨).

[ಕೀಳ್$_2$ (< ಕೀೞ್$_2$) + ಚೆಲ್ಲು (< ಚೆಲ್)]

**ಕೀಳ್ತರಿ** (ಕ್ರಿ). ಸಣ್ಣದಾಗಿ ಕತ್ತರಿಸು : ಮಹಾಪಾತಕಿಗಳಾದವರಂ ಬನ್ನಂಬಡಿಸಿ, ಕಣ್ಮೂಗು ತುಟಿ ಕಿವಿ ಕೈಕಾಲ್ಮುಂತಾದುವಂ ಕೀಳ್ತರಿದು ಕೊಯ್ದು ಕೋಟಲೆಗೊಳಿಸಬೇಕು (ಭಾರಶಾಂ. ೧೪-೮೫).

[ಕೀಳ್$_2$ (< ಕೀೞ್$_2$) + ತರಿ$_1$ (< ತಱಿ$_1$)]

**ಕೀಳ್ತು** 'ಕೀೞ್$_1$' ಪರಾ.

**ಕೀಳ್ದಾರಿ** (ನಾ). ಕೆಟ್ಟದಾರಿ; ಹೀನಮಾರ್ಗ : ಕೀಳ್ದಾರಿಗೆ ಹೋಗುವ ಅಪೇಕ್ಷೆ ಯಾರಿಗೆ ತಾನೆ ಇದ್ದೀತು (ಯಕ್ಷಪ್ರ. ೧೬೭).

[ಕೀಳ್$_2$ (< ಕೀೞ್$_2$) + ದಾರಿ$_1$]

**ಕೀಳ್ನಾಯ್** (ನಾ). ಕೆಟ್ಟ ನಾಯಿ; ಹೀನವಾದ ನಾಯಿ : ಕೀಳ್ನಾಯ್ಗಳಂ ನಿರುತಂ ಭೋಜ್ಯವಿಶೇಷಮಿತ್ತು ಪೊರೆವರ್ (ಸೋಮೇಶ. ೭೫). [ಕೀಳ್$_2$ (< ಕೀೞ್$_2$) + ನಾಯ್]

**ಕೀಳ್ನುಡಿ** (ಕ್ರಿ). ಕೀಳೆಣಿಸಿ ಮಾತನಾಡು; ಹೀಯಾಳಿಸು : ಕುಲಜರೂ . . . ಹಿತರೂ ಆದವರನ್ನು ಈ ಸಭಾಮಧ್ಯದಲ್ಲಿ ಮದಿಸಿ ಕೀಳ್ನುಡಿದೆಯಲ್ಲ (ಭಾಮಣಿ. ೧೬).

[ಕೀಳ್$_2$ (< ಕೀೞ್$_2$) + ನುಡಿ$_1$]

**ಕೀಳ್ನೆಲ** (ನಾ). = ಕೀಳೆಳೆ: ಬಾಳ್ನೊಲದೆ ಮೇಲ್ನೆಲದ ಪುರುಳನೆಣಿಸಿದ ದೊಡ್ಡನಾಳ್ದ ಕೀಳ್ನೆಲದ ಕಿಚ್ಚನೊಳೀನ ಮಾಳ್ಪಂ (ಕಾಲೂರ. ೧೫೫-೩೪೧). 'ಮೇಲ್ನೆಲ' ಪರಾ.

[ಕೀಳ್$_2$ (< ಕೀೞ್$_2$) + ನೆಲ]

**ಕೀಳ್ನೋಟ** (ನಾ). ಕೆಳಗಿರಿಸಿದ ದೃಷ್ಟಿ; ಕೆಳನೋಟ; ಅಧೋದೃಷ್ಟಿ: ಆಲಿಗಳ ಕೀಳ್ನೋಟದೊಲಹಿನ ಮೌಳಿಯುಬ್ಬೆಯ ಸೂಲದುಗುಡದ ಜಾಳಿಗೆಯ ಜಡಮನದಲಿದ್ದನು ಕೌರವರರಾಯ (ಕುವ್ಯಾಅ. ೧೯-೧). [ಕೀಳ್$_2$ (< ಕೀೞ್$_2$) + ನೋಟ]

**ಕೀಳ್ಪಡಿ** (ನಾ). ಕೀಳಾದ ಹೋಲಿಕೆ; ಹೀನೋಪಮೆ : ಮೊಗಕ್ಕೆ ಚಂದ್ರನೊಳ್ನುಡಿಗೆ ಮನೋಜ್ಞ ಕೀರಶಿಶು ಕರ್ಪುರ ಕುರುಳ್ಗಳದುಂಬಿವಿಂಡು ಕೀಳ್ಪಡಿಯೆನಲೆಂತು ಬಣ್ಣಿಸುವೆನಾ ಸುಕುಮಾರಿಯಂ (ಉದ್ಭಟ. ೬-೮೫).

[ಕೀಳ್$_2$ (< ಕೀೞ್$_2$) + ಪಡಿ$_7$]

**ಕೀಳ್ಪಡಿಸು** 'ಕಿಱ್ಪಡಿಸು' ನೋ.

**ಕೀಳ್ಪಡು** 'ಕಿಱ್ಪಡು' ನೋ.

**ಕೀಳ್ಪುಟ್ಟಿ** (ನಾ). ಕೀಳುಕುಲದಲ್ಲಿ ಹುಟ್ಟಿದ ವ್ಯಕ್ತಿ; ಹೀನಜನ್ಮಿ: ಕೀಳ್ಪುಟ್ಟಿ ನೀನೆಂದು ತೋರಿ ಬರೆ ಎಂದುಂ (ಮೂರುನಾ. ೧೩೩-೧೧೧೬).

[ಕೀಳ್ಪುಟ್ಟು + -ಇ$_2$]

**ಕೀಳ್ಪುಟ್ಟು** (ನಾ). ಕೀಳುಕುಲದಲ್ಲಿ ಹುಟ್ಟುವಿಕೆ; ನೀಚಜನನ: ತಾನಾಕೆ ಹೆಣ್ಣು ಬಲು ಹೆಮ್ಮೆಯಲಿ ನಾಚಿಯಾಳಿನ್ನ ಕೀಳ್ಪುಟ್ಟಂಗೆ (ಮೂರುನಾ. ೧೩೪-೧೧೩೪).

[ಕೀಳ್$_2$ (< ಕೀೞ್$_2$) + ಪುಟ್ಟು$_2$]

**ಕೀಳ್ಪೆಣ್**, ಕೀಳ್ಪೆಣ್ಣು (ನಾ). ಕೀಳಾದ ಹೆಣ್ಣು; ನೀಚ ಹೆಂಗಸು : ಕೀಳ್ಪೆಣ್ಣೊಳೊಂದಿರೆ ಕಾಮವಶತೆಯಲಿ ಕಳೆದವೆಂಭತ್ತೆಂಟು ವರ್ಷಂಗಳು ತದೀಯ ನಿವಾಸದಲಿ (ನಿಭಾಗ. ೬-೧-೧೫). **ಕೀಳ್ಪೆಣ್ಣು** : ಪೊಡವಿ ಹೊರುವುದೆ ಶಿವಶಿವಾ ಕಳುಗುಡಿವ ಕೀಳ್ಪೆಣ್ಣಿನಲಿ ಮಕ್ಕಳ ಪಡೆದ ದೋಷಿಯನೆನ್ನನೆಂದನು ಮಱುಗಿ ಬಿಸುಸುಯ್ದು (ನಿಭಾಗ. ೬-೨-೩೦); ಏಕಿಂತು ಮೈಮೇಲೆ ನುಗ್ಗುವೆ? ಅಸೆಬುರುಕಿ, ಕೀಳ್ಪೆಣ್ಣು (ಚಂದ್ರಸ. ೩೧).

[ಕೀಳ್$_2$ (< ಕೀೞ್$_2$) + ಪೆಣ್]

**ಕೀಳ್ಪೆಣ್ಣು** 'ಕೀಳ್ಪೆಣ್' ನೋ.

**ಕೀಳ್ಪೊಡೆ** 'ಕಿಱ್ಪೊಡೆ' ನೋ.

**ಕೀಳ್ಬಯಕೆ** (ನಾ). ಕೀಳಾದ ಬಯಕೆ: ಅಭ್ಯಾಸಬಲದಿಂದ ಕೀಳ್ಬಯಕೆಗಳೂ ಕೆರಳುವಂತೆ ಕಾಣುತ್ತದೆ (ಪುನರು. ೨೪೭).

[ಕೀಳ್$_2$ (< ಕೀೞ್$_2$) + ಬಯಕೆ]

**ಕೀಳ್ಬಯಲು** 'ಕಿಱ್ಬಯಲ್' ನೋ.

**ಕೀಳ್ಮಟ್ಟ**, ಕೀಳುಮಟ್ಟ (ನಾ). ಕೆಳಮಟ್ಟ; ಹೀನದರ್ಜೆ ; ಕೆಳದರ್ಜೆ : ವೃತ್ತಿಕೌಶಲ್ಯ ಸಾಂಸ್ಕೃತಿಕ ಕೌಶಲ್ಯಕ್ಕಿಂತ ಕೀಳ್ಮಟ್ಟದ್ದಲ್ಲ (ಶಿಕ್ಷದ. ೧೭೬). **ಕೀಳುಮಟ್ಟ**: ನಮ್ಮ ಪತ್ರಿಕೆಗಳು ಕೇವಲ ಕೀಳುಮಟ್ಟದ ಜನರಂಜನೆಗೆ ಇಳಿಯಬೇಕಾಗಿಲ್ಲ (ಪತ್ರಿಕಾ. ೫೪).

[ಕೀಳ್$_2$ (< ಕೀೞ್$_2$) + ಮಟ್ಟ]

**ಕೀಳ್ಮದ** 'ಕಿಱ್ಮದ' ನೋ.

**ಕೀಳ್ಮನ** 'ಕೀಱ್ಮನ' ನೋ.

**ಕೀಳ್ಮಲೆ** (ನಾ). ಚಿಕ್ಕಗುಡ್ಡ; ಕ್ಷುದ್ರವಾದ ಬೆಟ್ಟ: ಮಲೆಯಂ ಕೀಳ್ಮಲೆಮಾಡಿ ಸಾಂತಳಿಗೆಯಂ ನಿಶ್ಚಿಂತದಿಂದಾಳ್ವಂ (ಸೌಇಇ. IX-i, ೨೫೧-೧೮ ; 1149). [ಕೀಳ್$_2$ (< ಕೀೞ್$_2$) + ಮಲೆ$_2$]

**ಕೀಳ್ಮಾಡು** 'ಕಿೞ್ಮಾಡು' ನೋ.

**ಕೀಳ್ಮಾನಿಸ** 'ಕೀಳ್ಮಾನಿಸ' ನೋ.

**ಕೀಳ್ಮೆ** 'ಕೀೞ್ಮೆ' ನೋ.

**ಕೀಳ್ಮೇಲು** 'ಕೀೞ್ಮೇಲ್' ನೋ.

**ಕೀಳ್ಮೊಳೆ** 'ಕಿಳ್ಮೊಳೆ' ನೋ.

**ಕೀಳ್ವಟ್ಟೆಲ್** 'ಕೀಱ್ವಟ್ಟೆಲ್' ನೋ.

**ಕೀಳ್ವಟ್ಟೆ** (ನಾ). ೧. ಕೆಳಗಿನ ದಾರಿ: ವಡ್ಡರಾವುಳ[ದ] ಕೀಳ್ವಟ್ಟೆಯ ಸುಂಕಮನ್ (ಎಇ. XIX, ೧೮೮-೧೨; 1079); ನಡೆಗೊಂಡನಡವಿ ಕೀಳ್ವಟ್ಟೆಯೊಳ್ (ಶ್ರೀರಾಮಾ. ೧೨೭-೫೩). ೨. ಕೆಟ್ಟದಾರಿ; ನೀಚ ಮಾರ್ಗ; ಹೀನವಾದ ನಡತೆ: ಎನ್ನಸವತಿಯುಂ ಕುಟಿಲಮಾರ್ಗದಳ ಕೀಳ್ವಟ್ಟೆಯುಂಗನೆಯ ತಲೆಯೇಱಿಸಿದೆ (ವೀಶೈಪು. ೫-೨೦-೧).

[ಕೀಳ್$_2$ (< ಕೀೞ್$_2$) + ಬಟ್ಟೆ$_1$]

**ಕೀಳ್ವಡಿಸು** 'ಕಿಬ್ಬಡಿಸು' ನೋ.

**ಕೀಳ್ವಣ್ಣ** (ನಾ). ಕೀಳಾದ ವರ್ಣ; ಹೀನಕುಲ: ಕೀಳ್ವಣ್ಣದ ಹೆಣ್ಣು (ವಿಗಡ. ೧೨-೫); ಅಂತಹ ಕೀಳ್ವಣ್ಣದ ಹೆಣ್ಣಲ್ಲ, ಅವರು ತುಂಬ ದೊಡ್ಡವರು (ಸವತಿ. ೨೬).

[ಕೀಳ್$_2$ (< ಕೀೞ್$_2$) + ಬಣ್ಣ]

**ಕೀಳ್ವರಿಜು** (ನಾ). ಹೀನವಾದ ರೂಪ: ಕಾವ್ಯಕರುಣಾರಸದ ಲಹರಿಯು ಹರಿಯ ಸಿರಿಯ ಕರಪದ್ಮ ಚುಂಬನಕೆ ನಿನ್ನ ಕೀಳ್ವರಿಜಳಿದು ಮತ್ತೆ ಹೃದಯದ ಲಸದ್ರೂಪಂ ಮೆರೆಯುದಿಹುದೆ (ಶ್ರೀರಾಮಾ.೧೧೫-೮೯).

[ಕೀಳ್$_2$ (< ಕೀೞ್$_2$) + ಪರಿಜು]

**ಕೀಳ್ವಳಿ** (ನಾ). ಕೆಟ್ಟವಂಶ; ಹೀನವಾದ ಕುಲ: ನಾನು ಅಂತಹ ಕೀಳ್ವಳಿಯ ಮಲಿನಾಂಗನೆ (ಮಂತ್ರಶ. ೯೫-೧೬).

[ಕೀಳ್$_2$ (< ಕೀೞ್$_2$) + ಬಳಿ$_3$ (< ಬೞಿ$_3$)]

**ಕೀಳ್ಮಾನಿಸ, ಕೀಳ್ಮಾನಿಸ** (ನಾ). ಕೀಳುಮನುಷ್ಯ; ಕ್ಷುದ್ರ ಮನುಷ್ಯ; ನೀಚ: ಕೀಳ್ಮಾನಿಸರಶ್ರಾಂತಮುಗುಳ್ವ ಶರಾವಂಬೊಲ ಮರ್ದ ವೇಶ್ಯಾಧರಮಂ ತಳ್ವದೆ ಚುಂಬಿಸಿ (ಉದ್ಭಟ. ೧೦-೮೦); ಕೀಳ್ಮಾನಿಸಂಬೊಲೊಡನೀತನೀ ತೊರವೆಲ್ಲಿ? (ಸೌನಂದ. ೬-೧೯). **ಕೀಳ್ಮಾನಿಸ**: ಕರುಬುವರ್ ಕೀಳ್ಮಾನಿಸರ್ (ಶ್ರೀರಾಮಾ. ೫೬೨-೨೯೩).

[ಕೀಳ್$_2$ (< ಕೀೞ್$_2$) + ಮಾನಿಸ]

**ಕೀಳ್ಬೆಳಗು** (ನಾ). ಕಡಿಮೆ ಬೆಳಕು; ಮಂದಕಾಂತಿ: ಮಹಾಮಾನರನ ಮೆಯ್ನೆಳಲ್ ಕೀಳ್ ಸ್ವಲ್ಪ ಮಾತ್ರಂ ಕರ್ಪುಗೆಟ್ಟು ನಸು ಬಿಳ್ಚಿದುದು ಕಾಂತಿಯೊಂದಕೆ ಪುಟ್ಟಿದಾ ಛಾಯೆಯಿನ್ನೊಂದು ಕೀಳ್ಬೆಳಗಿಗಿನಿತೆ ಬೆಳ್ಪೇರ್ವವೋಲ್ (ಶ್ರೀರಾಮಾ. ೪೩೨-೩೨೯).

[ಕೀಳ್$_2$ (< ಕೀೞ್$_2$)+ ಬೆಳಗು$_2$]

**ಕೀಱಿಡು**$_1$ (ಕ್ರಿ). ೧. ಕಿರಿಚು; ಕೂಗು: ಏಱಿ ನೆಲಪಂ ಮನಂ ಬಿಡೆ ತೋಱುವ ನೂಱೆಂಟು ತೆಱದ ನೆಲಪಿನ ಕಾಲಂ ಕೀಱಿಡದೆ ಶಂಕೆಯಿಂದಂ[ಪಾಠಾಂ. ಯಿಲ್ಲದೆ] ಬೇಱೊಂದಂ ನೆನೆಯದೆ (ಧರ್ಮಾಮೃ. ೨-೧೩೯). ೨. ಮೊಳಗು; ಮೊರೆ; ಧ್ವನಿಮಾಡು: ನಲವಿಂ ಚೀಱುವ ಕಹಳೆಗಳುಲಿಯಿನೆ ಕೀಱಿಡುತೆ ಮೆಱೆದವೆಳೆಗೋಗಿಲೆಗಳ್ (ಉದ್ಭಟ. ೯-೨೮). [ಕೀಱು$_1$ + ಇಡು$_1$]

**ಕೀಱಿಡು**$_2$ (ಕ್ರಿ). ಗೀರು; ಗೆರೆಯಿಡು; ರೇಖಿಸು: ಉಗುರಿಂ ಕೀಱಿಟ್ಟ ಗಂಧಂ (ದಶಕು. ೬-೧೦೯). [ಕೀಱು$_2$ + ಇಡು$_1$]

**ಕೀಱಿದು** (ಅ). ವ್ಯಾಪಕವಾಗಿ; ಆಕೀರ್ಣವಾಗಿ; ಹರಡಿಕೊಂಡು: ಸೊಲ್ಲೊಳ್ ಕ್ರಿಯಾತ್ಮಕಾವ್ಯಯಮಿಲ್ಲೆಂಬುದು ಕೀಱಿದೆಂಬುದಾ ಕೀರ್ಣಾರ್ಥದಿಂ (ಶಮದ. ೩೦೧). [?]

**ಕೀಱು**$_1$, ಕೀರು$_1$, ಚೀರು, ಚೀಱ್, ಚೀಱು (ಕ್ರಿ). ಕೂಗು; ಅರಚು; ಅಬ್ಬರಿಸು: ತಂಡದೆ ಕೀಱಿ ಸಾಱುವ ಪಲರ್ ಪಡೆವಳ್ಳರ ಮಾತುಗಳ್ ಮನಂಗೊಂಡಿರೆ (ಪಂಪಭಾ. ೧೦-೪೯); ಶುನಕಂಗಳ್...ಉದ್ವಮಪ್ಪುದನಡರ್ದೇಱಿ ಕೀಱಿ ಕರೆಯುತ್ತಿರೆ ಪೆರ್ಮೞೆಯಕ್ಕುಂ (ಲೋಕೋಪ. ೧೨-೩೦); ಅಱುದಿಂಗಳ ಮೇಲಾಱುದಿನಮಾಗೆಯುಂ ಮೞೆ ಕೀಱಿ ಜಗಕ್ಕೆಯ್ದೆ ಕಱೆಗುಂ (ಜಟ್ಟಮ. ೮-೭೧); ಕಪಿ ಕೀಱಿದವು (ತೊರರಾ. ೫-೪-೧೬).

**ಕೀರು**$_1$: ಆ ಮಿಗಂ ... ಉದ್ದಾಮಗರದಿಂ ನೊಂದು ಕೀರಿದುದಡವಿ ತಲ್ಲಣಿಸೆ (ಸಂರಾಣಂ. ೬೮). **ಚೀರು**: ಮೇಲ್ಮಾಳಿಗೆಯ ರಂಧ್ರದಿಂದ ಕೆಳಗಿನ ದೃಶ್ಯವನ್ನು ನೋಡಿ ಅವಳು ಚಟ್ಟನೆ ಚೀರಿದಳು (ಭಾರತಿ. ೨೧); ಆಶ್ಚರ್ಯಭಯಗಳಿಂದ ನಾನು ಚೀರಿದೆ (ಬಾಣಆ. ೩೮೮); ಆ ಮಗು ಇಲಿಯನ್ನು ಕಂಡೊಡನೆಯೇ ಹೆದರಿ ಚೀರಲಾರಂಭಿಸಿತು (ಶಿಕ್ಷದ. ೮೦). **ಚೀಱ್**: ನೆವವಿಲ್ಲದೆ ನಗುವ ಬಾಯ್ಗೆ ಬೆಟ್ಟಕ್ಕಿ ಪೀರ್ವ ಪಸಿದೊಡೆ ಚೀರ್ವ (ಜೈಮಿಭಾ. ೧೯-೫೦); ಬಂದು ಕಾಲ್ಗೆಱಗಿದೊಡೆ ಚೀರ್ದುಸುತನಂ ಬೈದು (ಜೈಮಿಭಾ. ೩೧-೩೦). **ಚೀಱು**: "ಚೀ[ಪಾಠಾಂ. ಕೀ]ಱು = ಭಯಧ್ವನೌ" (ಶಮಧಾ. ಮು); ಮಂದಿ ಬಾಯಾಱುತ್ತ ಚೀಱುತ್ತ ಗೋಳಿಡುತ್ತಳುತೆದ್ದು ನಡೆದುದೇವಣ್ಣಿಸುವೆನು (ಹಚಕಾ. ೯-೧೯); ಮೇಘರವ ಘೂರ್ಮಿಸುವವೋಲ್ ಚೀಱಿದನು ಗಿರಿಗಳ ಬೆಸುಗೆ ಬಿಡೆ (ಕುಮ್ಯಾಸ. ೨-೪೫); ಕೆಲ ಕಡೆಗೆ ಹರಿಯಂತೆ ಚೀಱುವರ್ ಜಾಱುವರ್ (ಚೆಬಪು. ೧೬-೩೪).

[ದೇ. ‖ ತಮಿ. ಚೀಱು; ತುಳು. ಕೀರು; ಕೋಟ. ಕಿರಿ; ತೊದ. ಕಿಚ್ರ್; ತೆಲು. ಚೀಱು]

**ಕೀಱು**$_2$, ಕೀರು$_2$ (ಕ್ರಿ). ರೇಗು; ಸಿಟ್ಟಾಗು; ಸಿಡಿಮಿಡಿಗೊಳ್ಳು: "ಕೀಱು – ಆಗ್ರಹ,ಭಯಧ್ವನಿ, ಪ್ರಮಾರ್ಜನೇಷು (ಅಳಿಸಿ ಬಿಡು)" (ಶಮಧಾ). **ಕೀರು**$_2$: "ಮುನಿ; ಮುಳಿ; ರೇಗು; ಸಿಟ್ಟಾಗು" (ಕಂನುಹು. ೯೦).

[ದೇ. ‖ ತಮಿ. ಚೀಱು, ಚಿಱುಕ್ಕು; ಕೋಟ. ಚಿರ್ವ; ತೊದ. ಕಿರ್ಕ; ತೆಲು. ಚಿಱು]

**ಕೀಱು**$_3$, ಕೀಳು$_3$, ಗೀರು$_1$, ಗೀಱು$_1$ (ಕ್ರಿ). ೧. ಉಜ್ಜು; ಒರಸು; ತಿಕ್ಕು: "ಕೀಱು–ಆಗ್ರಹ, ಭಯಧ್ವನಿ, ಪ್ರಮಾರ್ಜನೇಷು"(ಅಳಿಸಿಬಿಡು) (ಶಮಧಾ); ಸೆಳ್ಳುಗುರ್ಗಳನೂಱಿ ಮೆಲ್ಲಮೆಲ್ಲನೆ ಕೀಱಿ (ಜೈಮಿಭಾ. ೧೫-೪೩). ೨. ಚುಚ್ಚು; ತಿವಿ; ಕೊರೆ: ಪಾಱುವ ವಿಮಾನದಣಿವಿಣಿಗಾಱದೆ ಮೇಘಾಳಿದೇವರದನಂಬರದೊಳ್ ಕೀಱಿ ನಿಱಿಸಿದವೊಲ್ (ಶಾಂತಿಪು. ೪-೬೧); ಮೂಱು ಬಾಣದಲರಿಯ ದೇಹವ ಕೀಱಿದನು (ಕುಮ್ಯಾಕ. ೨೬-೮); ಎಱಗಿ ಕವಿದಿಡಿದೊತ್ತಿ ಕದುಕಿ ಕೀಲಿಸಿ ಕೀಱಿ ತುಱುಗಿ ತುಂಡಿಸಿ (ಜೈಮಿಭಾ. ೪-೪೪). ೩. ಗುರುತುಮಾಡು; ಗೆರೆ ಎಳೆ; ಗೀಚು: ಚೌಕಮಂ ಕೀಱುತುಂ ತೆಗೆದಾಚ್ಛಾದಿಸೆ ಕೇಳ ನೀಳ ಪಟಮುಕ್ಕುಂ (ಗಿರಿಕ. ೪-೭೬); ಮಿಸುಪೊಂದೆರಳ್ಗೆಱೆಯನೊಯ್ಯನೆ ಕೀಱಿದ ರೇಖೆಯೆಂಬಿನಂ ಬಗೆಗೊಳಿಸಿತ್ತು (ಉದ್ಭಟ. ೬-೯೫). ೪. ಒರೆದು ನೋಡು; ಪರೀಕ್ಷಿಸು; ಆಯ್ದುಕೊಳ್ಳು: ಕೀಱಿಕೊಂಡು ಗುಣಮುಂ ಕಳೆಗಲ್ಲಿಯ ದೋಷಮುಂ (ಕವಿರಾ. ೧-೧೩೧); ಆತ್ಮತತ್ತ್ವವಿದ ಮುಕ್ತಿಮಾರ್ಗಮನೆ ಕೀಱಿ ಕಂಡೈ (ಆದಿಪು. ೧೩-೮೫); ಗುಹೆಗಳನು ಹೊಕ್ಕು ಕೀಱಿ ರನ್ನಂಗಳನು ಪಡೆದು ಬರೆ (ಸಾಳ್ವಭಾ. ೭-೪೧); ಬೇಱುಡುಗೊಱೆಯ ತಮ್ಮತ್ಯಾಜಿಯರಿಗೆಂದು ಕೀಱಿ ಕೊಟ್ಟನು ಹರಿಸದೊಳು (ಭರಚ. ೩೩-೬೨). ೫. ಒತ್ತಾಯಮಾಡು; ಬಲವಂತ ಮಾಡು: ಎನಿತು ಕೀಱಿ ನುಡಿದೊಡಂ ಚರಿಗೆ ಮಾಡಲೊಲ್ಲರ್ (ವಡ್ಡಾರಾ. ೮೨-೬); ಆದೇನೆಂದು ಕೀಱಿ ಬೆಸಗೊಳಲಿಂತೆಂದಳ್ (ನೇಮಿಪು. ೪-೧ವ); ಇದೇತರ್ಕೆಱ್ಪೆಯೆಂದು ಕೀಱಿ ಬೆಸಗೊಳೆ (ಜೀವಸಂ. ೨೦೨-೪೨ವ); ಅಕ್ಕಱಿನೊಳವಳನು ಕೀಱಿ ಕೇಳ್ದಡೆ ಪೇಳ್ದಳಿಂತೆಂದು (ಸಾಳ್ವಭಾ. ೧೯-೩೪); ನೆವನಾವುದು ಈ ಚಿಂತೆಗೆ ಎಂದಾಗ ಯುವತಿಯ ಕೀಱಿ ಕೇಳಿದನು (ಜ್ಞಾನಚ. ೨-೬೯). ೬. ಸೂಚಿಸು; ಸುಳುವುಗೊಡು; ತೋರಿಸು: ಒರ್ವ ಪುಳಿಂದಂ ತನ್ನ ನಚ್ಚಿನ ನಾಯಂ ಮೊಲನ ಸರುವಂ ತೋಱಿ ಕೀಱಿ ಬಿಟ್ಟಾಗಳ್ (ಗಿರಿಕ. ೧-೮೪ವ);

ಈತಾ ವರುಣದಿಕ್ಕಿನ ಜಲಧಿಯ ಪ್ರಭಾಸೇಂದ್ರನಾದರಿಸೆಂದು ಕೀಱಿ ತೋಱಿದರು (ಭರಜ. ೩೮-೨೪). ೭. ಪ್ರತಿಭಟಿಸು; ವಿರೋಧಿಸು: ಇತ್ತಂ ತೆತ್ತಂ ಬಾಬ್ಬ ಮಂಡಲಮಲ್ಲದೆ ಕೀಱಿಯುಂ ಮೀಱಿಯುಂ ನೆಗಬ್ಬ ಮಂಡಲಮಿಲ್ಲ (ಪಂಪಭಾ. ೬-೬೭ ವ); ಮಲಯದೆ ಮೀಱಿ ಕೀಱಿ ತಲೆದೋಱದೆ ಕಪ್ಪಮನಿತ್ತು ಬಂದು (ಸೌಇಇ. IX-i, ೯೫-೧೭; 1041); ಮಂದರ ಕಂದರಮೆಂಬೀ ಸಂದೆಗದಿಂ ಮೀಱಿ ಸೂತನಂ ಕೀಱಿ ನಿಜಸ್ಯಂದನವುಂ ಕೋಂಟಿಗೆ ಭರದಿಂದೆಱಿಗುಂ (ಪಂರಾಮಾ. ೧-೧೧೫). **ಕೀರು$_3$**: **೧.** ಹೀಗೆ ಎಷ್ಟೋ ಕಾಗದದ ಚೂರುಗಳಲ್ಲಿ ಕೀರಿಯಾಯಿತು (ಅಂಬುಜಾ. ೬೯); ತಿರೆಯನೆ ಕೀರು ತುಂಗುಟದಿ ಲಜ್ಜೆ ಮಿಗುವರಿಯುತಿರೆ (ಕವಿಕಾ. ೫೮-೨೨). **ಗೀರು$_1$**: **೧.** ಕಡ್ಡಿಗೀರಿದ ಶಬ್ದ (ಮುನಿಮಾ. ೧). **೨.** ಷಷ್ಟಿಯಲ್ಲಿ ಕಂಠವಂ ನಖದಿಂ ಗೀರುವದು (ಸೌಗಂಧಿ. ೪೯೨-೧೮); ಅವನ ಮೊಳಕಾಲುಗಳಲ್ಲಿ ಗೀರಿದ ಗಾಯಗಳಿದ್ದುವು (ಮಣಿಸ. ೧೫); ಕೈಯಲ್ಲಿದ್ದ ಕತ್ತಿ ಗೋಡೆಯನ್ನು ಗೀರಿಕೊಂಡಿತ್ತು (ಕಾಬರ್ಘೂ. ೧೧). **೩.** ಕಮಲಭವನೇ ಗೀರಿಹನು ವೈಧವ್ಯರೇಖೆಯ ಪಣೆಯ ಮಧ್ಯದೊಳು (ರಾಮಾಸಂ. ೪-೧-೧೦೪). **ಗೀಱು$_1$**: **೧.** ನಖದೊಳು ರೇಖೆ ಗೀಱಿದೆಲ್ಲವು ಕುಲ್ಯವಹವ್ಯಸೆ (ಜಿನಮು. ೫-೧). **೨.** ಮೂಱು ಕಾಲಲಿ ನಿಂತು ಗೀಱಿ ತಿಂಬುದು ಮರನ(ಸರ್ವಜ್ಞ. ೨೦೫೭).
[ದೇ. ‖ ತಮಿ. ಮಲ. ಕೀಱು; ಕೊಡ. ಗಿಜ್; ತುಳು. ಕಿರು, ಗಿರು; ತೆಲು. ಗೀಱು]

**ಕೀಱು$_4$** (ಕ್ರಿ). ಮುಚ್ಚು; ಕದವಿಕ್ಕು: ನೇಸಱ್ ಪಡುವುದುಂ ಪುರದ ಬಾಗಿಲ ಪಡಿ ಕೀಱುವುದುಂ (ಧರ್ಮಾಮೃ. ೨-೧೭೨); ಬಡಗವಾಗಿಲ ಕೀಱಿದಗಳಿನ ಪಡಿಮೊಗವ ದಾಟಿದನು (ಕುವ್ಯಾಸ. ೫-೨೫). [< ಕಿಱು$_1$]

**ಕೀಱು$_5$** (ನಾ). (?): ಗಗಿಕೆನೆಲ್ಲು ಸ ೩ ಲೆಕ್ಕಗ ೪೬ ಪ ೫ ಅನ್ತೂ ಗ ೧೦೪ ಪ ೩ ಕಂ ಕೀಱುಂ ಕೊಳದಿಂ ಮಾಡಿ ಕೊಂಬ ಗ ೪ ಪ ೩ (ಎಕ. XV, ಬೇಲೂರು. ೨೫೨-೧೬: 1298). [?]

**ಕೀಱುಗಂಧ**, ಗೀರುಗಂಧ (ನಾ). ಗೆರೆಯಾಕಾರದ ಗಂಧ: ತೊಟ್ಟ ಪೊಸಗುಪ್ಪಸದ ಚೆಲ್ವಿನ ಇಟ್ಟ ಕೀಱುಗಂಧದ ರಯ್ಯದ (ರಾಮಾಶ್ವ. ೪೮-೧೮). **ಗೀರುಗಂಧ**: ಕತ್ತುರಿಯ ತಿಲಕವಿಟ್ಟು ಪೂಸರ ಮುಡಿದು ಗೀರುಗಂಧವನು ಧರಿಸಿ (ನವಮೋ. ೧೨-೩೨). [ಕೀಱು$_3$ + ಗಂಧ]

**ಕೀೞ್$_1$**, ಕಿೞ್$_1$, ಕೀಳ್$_1$, ಕೀಳು$_1$ (ಕ್ರಿ). ಕಿತ್ತು$_2$, ಕೀರ್ತ, ಕಿೞ್ತು, ಕೀೞ್ತು (ಭೂತಕೃ); ಕಿತ್ತು$_3$, ಕಿತ್ತು, ಕಿಳ್ತು, ಕಿೞ್ತು, ಕೀೞ್ತು (ಭೂತನ್ಯೂ). ತೆಗೆದು ಹಾಕು; ಮೀಟಿ ಎಬ್ಬಿಸು; ನಿರ್ಮೂಲಿಸು; ಮೂಲೋತ್ಪಾಟನ ಮಾಡು: "ಕೀೞ್ – ಉತ್ಪಾಟನೇ" (ಶಮಧಾ); "ಕಿೞ್ತುದೆನೆ ನಿರ್ಮೂಲಿಸಿದುದು" (ಸಂಜೀವ. ೭); ಶ್ರೀದುರಿತಾಭೂದ್ವೃಷವಾನ್ ಕೀೞ್ತುಲಱಿ ಪೊದೆದ ಜ್ಞಾನ ಶೈಲೇನ್ದ್ರ ಮಾನ್ (ಎಕ. II, ೧೨-೧; 700); ಬಾಳಂ ಕಿೞ್ತು ನಡದು (ಎಕ. X, ಕೋಲಾರ. ೨೦೦-೧೧; 890); ಮಹಾಶಿಲೆಯಂ ಕಿೞ್ತಿತ್ತಿಕೊಂಡು (ವಡ್ಡಾರಾ. ೫೬-೨೩); ನೆಲನಂ ನುಂಗುವ ಮೇರುವಂ ಪಿಡಿದು ಕೀೞ್ವಾಶಾಗಜೇಂದ್ರಂಗಳಂ ಚಲದಿಂ ಕಟ್ಟುವ (ಪಂಪಭಾ. ೯-೨೦); ಅಲುಗಾಡುವ ಹಲ್ಲಂ ದುಷ್ಟನಪ್ಪ ಮಂತ್ರಿಯಂ ಬೇರ್ವೆರಸಿ ಕೀೞ್ವುದೇ ಸುಖಂ (ಪಂಚತಂ. ೯೯-೨೨); ಕಸಮಂ ಕಿೞ್ತಲ್ಲದೆ ಪೊಸ ಸಸಿಗಳ್ ಕೈಕೊಳ್ಳವು (ಸೂಕ್ತಿಸು. ೧-೫೭). **ಕಿೞ್$_1$**: ನಾಲಗೆಯನ್ ಕಿೞ್ಪೊನ್ (ಎಇ. IX, ೧೯-೮; 800); ಅರ್ಜುನನಾಗಳ್ ಬೇರ್ವೆರಸು ಕಿೞಲ್ಕೆ ಬಗೆಯೆ (ಪಂಪಭಾ. ೧೧-೨೩); ತ್ರಿದಶೇಂದ್ರಾರ್ಜಿತಶೌರ್ಯಮೊರ್ಮೆ ಕಿೞೆ ಪೋಯ್ತಾಭೀಳ ದಿಕ್ಪಾಲರೊಡ್ಡಿದ ಸೈನ್ಯೋದ್ಧತಿ ಮತ್ತಮೊರ್ಮೆ ಕಿೞೆ ಕೇಳ್ ನಿರ್ಮೂಲಮಾಯ್ತು (ಕಾವ್ಯಾವ. ೮೧೭); ಕೋೞ್ಬಳಂ ಚಿಕ್ಕನೆ ಕಿೞೆ (ಜಗವಿ. ೬-೫೫). **ಕೀಳ್$_1$**: ದುರಾಚಾರ ದುರ್ಬುದ್ಧಿಯಂ ಕೀಳ್ವುದು ನಿತ್ಯಂ (ರಕ್ಷಾಶ. ೫೭); ಅಬುಜದ ನಾಳವ ನಾನೆ ಕೀಳ್ವಂತೆ (ಕುವ್ಯಾಸ. ೧೪-೪೧); ಯಮನ ದಾಡೆಯ ಕೀಳ್ವ ದಡಿಗದೈತ್ಯರ ಕಾಹು (ಮೋಹತ. ೩೩-೧೭). **ಕೀಳು$_1$**: ಕಾಳಿಗದೊಳಿದಿರಾಗೆ ಕೀಳುವರು ಜವನ ಕೋಣನ ಕೋಡನು (ಸಿದ್ಧರಾ. ೧-೨೦); ಮಂದರಾಭಿಧಗಿರಿಯ ಕೀಳಲು ದೇವದಾನವರೆರಡು ಬಲ (ಸಂಭಪ. ೫-೯೫); ಕಿಡಿ ಮುಸಗೆ ಕಿತ್ತೆತ್ತಿದನು ಮೃತ್ಯುಂಜಯನ ಗಿರಿಯ (ತೊರರಾ. ೧-೮-೩೨); ಚಾಡಿಗಳ ಹೇಳುವುದಿಲ್ಲಿ ನುಡಿದಾಡುವ ನಾಲಿಗೆ ಕೀಳುವರಲ್ಲಿ (ಪುರಂದ. ೨-೩೯-೭). [ದೇ. ‖ ತಮಿ. ಕೀೞ್, ಕೀಳ್; ಮಲ. ಕಿಳ]

**ಕೀೞ್$_2$**, ಕೀಳ್$_2$, ಕೀಳು$_3$, ಗೀಳು$_2$ (ನಾ). **೧.** ಕೆಳಗು; ಕೆಳಗಾಗಿರುವ ಸ್ಥಿತಿ; ಕೆಳಮಟ್ಟ; ಹೀನಸ್ಥಿತಿ; ಅವನತಿ; ಹೀನತೆ: "ಕೀೞೆನಿಪ್ಪಲ್ಲಿಯೆ ಅಧರಮಧಮಧಸ್ತಂಗಳೆಂದೆಂಬುವಕ್ಕುಂ" (ಮಂಗರಾ. ೧೫೫-೭೧); ಅನಿತಱೊಳೆ ಸಮಾನರೆ ಮನಜರಣ್ಣ ಕೀೞ್ಮೇಲಿಲ್ಲಾ (ಧರ್ಮಾಮೃ. ೪-೨೭). **೨.** ಸೇವೆ; ಊಳಿಗ. **೩.** ಕೆಳಜಾತಿ; ಹೀನಕುಲ; ಅಧಮವರ್ಗ. **೪.** ಒರೆಗೆಟ್ಟ ಚಿನ್ನ; ಕಳಪೆ ಭಂಗಾರ: "ಕೀೞೆಂದು ದೊರೆಯಿಲ್ಲದ ಭಂಗಾರಮುಂ . . . ಕೆಳಗು ಮಕ್ಕುಂ" (ಶಮದ. ಪರಿ. ೨). **೫.** ಕುದುರೆಯ ಬಾಯೊಳಗೆ ಇಡುವ ಕಬ್ಬಿಣದ ಕಂಬಿ; ಕಡಿವಾಣ: "ಕೀೞೆಂದು . . . ತುರಗಮುಖದ ಲೋಹಮುಂ . . . ಆಕ್ಕುಂ" (ಶಮದ. ಪರಿ. ೧); ಕುದುರೆಯಿಂದಿಳಿದು ಪಲ್ಲಣಮಂ . . . ಕೀೞುಮಂ ಕೞೆದು (ವಡ್ಡಾರಾ. ೧೬೨-೨೦); ಕೀೞಿಂ ಕರ್ಚಿ ಪುಡಿಯೊಳ್ ಪೊರಳ್ದುವು ನಚ್ಚಿನ ಕಾಂಭೋಜವಾಜಿಗಳ್ (ಪಂಪಭಾ. ೮-೯೪); ಕಾಂಚನಕಟಕ ಖಲೀನಾಗ್ರ ಸಂಲಗ್ನರಿರ್ವರ್ ಭರದಿಂದಂ ಕೀೞ ನೇಣಂ ತೆಗೆದು ಬರೆ (ಕಾದಂಪೂ. ೪೫೧); ಆಃ ಕೀೞುಂ ಪಲ್ಲಣಮುಮೇನಾಯ್ತು (ರಾಮಾಶ್ವ. ೮೪-೨೭). **೩, ೫**: ಕವಿ ಪೊಱಗಿರೆ ಕೀೞೊಳಗಿರೆಯುವಿರಳವಾ ತುರಗ ಮುಖಮೊ ನೃಪಮಂದಿರಮೊ (ಶಮದ. ೧೯೯ ಪ್ರಯೋ); "ಕೀೞೆಂದು ದೊರೆಯಿಲ್ಲದ ಭಂಗಾರಮುಂ, ತುರಗಮುಖದ ಲೋಹಮುಂ, ಕ್ಷೀಣಕುಲನುಂ ಕೆಳಗುಮಕ್ಕುಂ" (ಶಮದ. ಪರಿ. ೧); "ತುರಗದಾಸ್ಯದ ಲೋಹದೊಳು ಕೆಳಗೆ ದುಷ್ಕುಲದೊಳೊರೆಗೆಟ್ಟ ಭಂಗಾರದಲ್ಲಿ ಕೀೞೆನಿಸುಗುಂ" (ಸಂಜೀವ. ೧೮). **ಕೀಳ್$_2$**: **೧.** "ಕುಪ್ರಿಯಮೆನೆ ಜಘನ್ಯಮೆನಲತಿಕೀಳದಕ್ಕು" (ಮಂಗರಾ. ೧೩೪-೩೧); ಅವಿಲಣಮಾಳಭೇದಮಧಮಂ ನೆರೆ ಕೀಳ್ವುದು ಕೀಲೆ[ಳೆ] ನಿಕ್ಕು" (ನಾನಾರ. ೧೫೦); ಪರಾನ್ನದೆ ಕೀಳಹುದು ರಾಜಾನ್ನವಿದು (ಕುವ್ಯಾಅ. ಓರಿಇ. ೩-೨೪). **೫.** ಮರುಳು ಕುದುರೆಯ ಬಾಯ ಕೀಳ್ಕಡಿದು ಬಿಟ್ಟಂತೆ (ಕಾಲೂರ. ೭೭). **೬.** ತಗ್ಗು; ತಗ್ಗಾದ ಪ್ರದೇಶ: ದುಮುಕಿದನ್ ಕುಟ್ಟಮದಿನಾಳೆತ್ತರದ ಕೀಳ್ಗೆ (ಶ್ರೀರಾಮಾ. ೧೦೦-೨೧). **ಕೀಳು$_2$**: **೧.** "ಕೆಳಗಿನೋಳ್ಕದುರೆವಾಯೊಳಗಿರ್ಪ ಕಬ್ಬುನಗಳೂ ಮೇಲಲ್ಲದವನೊಳುತ್ಪಾಟನದೊಳಂ ಕೀಳು" (ಶಬ್ದಮಂ. ೧೧೫); ಕೀಳ ಮೇಲನಱಿಸುವುದಕ್ಕೆ ಕೊಳ್ಕಿಯ ಕಾಳಿಗವೆ (ಮೋಳಮಾ. ೧೦-೩೫); ಸವತಿಯ ಕೀಳ ತೊತ್ತಹೆನು (ಸಂಭಪ. ೫-೪೭); ಕೀಳು ಮೇಲು ಮೇಲು ಕೀಳಾಗಿ ನಡೆವುದು ಕಾಲ ವೆಗ್ಗಳವಾಯಿತು (ಪುರಂದ. ೧-೧೬೧-೯); ಕಾಳೆಮ್ಮೆ ಹಸುರ ತೊಱೆದು ತಾ ಕೀಳಿನ ಕೊಳ ಮೆದ್ದಂತೆ (ಸರ್ವಜ್ಞ. ೧೮೦೨). **೨.** ಈ ನಾಯಕನ ಕೀಳಿನಲ್ಲಿ ಕದನಕ್ಕೆ ತೆರಳುವುದೆಂದರೆ ಅವರು ಅತ್ಯಂತ ಅಭಿಮಾನ ತಾಳುತ್ತಿದ್ದರು (ಅಮಾನಂ. ೩೫); ಅವನ ಕೀಳಿನಲ್ಲಿ ನಾನು ಇರಲಾರೆ (ರೂಢಿ). **೩.** ಖೂಳರಧಮರ ಕೀಳುಮಾತಿಂಗೇಕೆ ಮರುಳಾದ್ಯೆ (ಬಸಪು. ೨೧-೨೩); ಪೊಲೆಯರಿಗೆ ಕೀಳಾದ ಪೊಲೆಯರಿಗೆ ಶಿವಭಕ್ತಿ ಮಹಿಮೆಯುದಳವಿಯೇ ತಿಳಿಯಲಿಕೆ (ಬಸಪು. ೫೬-೪೯);

ಕೀಳುಗಂಟೆ ಚವುಡಿಗಳ ಸಂತೆಯು (ಉಯ್ಯಾಲೆ. ೬೮-೧೨) ; ವಾನರರ್ ಕೀನಾಡುವನಿತು ಕೀಳುಗಳಲ್ತು (ಶ್ರೀರಾಮಾ. ೩೦೨-೨೫) ; ಕೀಳ ಕೆಣಕ ಬೇಡ ಮೇಗಾಲು ತುರಿಸಬೇಡ (ಗಾದೆ). ೪. ಸಿದ್ಧರಂತೆ ಲಯಮನಱಿಯದೆ ಓರೆಯಂ ಕೀಳನೊಳಕೊಳ್ಳದೆ (ಪುಣ್ಯಾಸ್ರ. ೬-೫೪ ವ) ; ಕೀಳು ಬೆರಸೆ ಸುವರ್ಣ ರಾಜಮುಕುಟವಹಂತೆ (ಹಬ್ಬಿರ. ೨೪-೪). ೫. ಜೋಡು ಹಕ್ಕರಿಕೆಹಲ್ಲಣಮುರ ತಾಪಣೆಗೂಡಿದ ಕವಿಯ ಕೀಳುಗಳ ಜೋಡಿಸಿ ತುರಗವನೇಱಿ (ಅಂಜಚ. ೬-೮೦) ; ಕೀಳ ಬಗೆಯದೆ ಕೆರಳಿ ಹೊಯ್ದವು ಕಾಲಲಿಳೆಯನು ಕುದುರೆ (ಕುವ್ಯಾದ್ರೋ. ೧೨-೬). ಗೀಳ್ಳು₂ : ೧. ಚಾರಿತ್ರ್ಯವಿಲ್ಲದ ವಚನ ಕೀರ್ತನೆಗಳು ಮರನಂ ಗಾಳಿಯ ದೂಳಿಯಂ . . . ಬಣ್ಣಿಸುವ ಸಾಹಿತ್ಯಕ್ಕಿಂತಲೂ ಗೀಳು (ಸಾಹಿವಿ. ೩೩) ; ಕಡ್ಡಿಗಿಂತಲೂ ಗೀಳಾಗಿ ಕಾಣುವಂತೆ (ಗಂಗಾಸಾ. ೧೦೬).

ಗೀಳುಮಾಡು = "ತಿರಸ್ಕರಿಸು; ಕಡಿಮೆಮಾಡು": (ಜಾನಕೋ. ೪೮).

[ದೇ. ‖ ತಮಿ. ಮಲ. ಕೀೞ್; ತುಳು. ಕೀಳು; ತೆಲು. ಕ್ರಿ]

**ಕೀೞ**, ಕೀಳ₂ (ನಾ). ಹೀನವಾದುದು; ಕೀಳಾದುದು; ಅಲ್ಪ; ನೀಚ (ಮನುಷ್ಯ) : ಎಡೆಬಿಡದೆ ದುಃಖಗಳೊತ್ತುತಿರೆ ಬಾೞ ನೀಳ್ಪನ್ ಬಯಸಿ ತಾಳ್ವನ್ ಅಂಜುಕುಳಿ, ಕೀೞನ್ (ಅಶ್ವತ್ಥಾ. ೨೭-೩೯೯). ಕೀಳ್ಳ₂ : ಉರೆ ಲಜ್ಜೆಗೆಡಿಪ ಕೀಳವ ದೈವವೆಂದು ಭಜಿಸದೆ (ಅಕ್ಷಸಾಂ. ೭೪-೬೬). [ಕೀೞ್₂ + -ಅ₇]

**ಕೀೞರಸು** (ನಾ). ಚಿಕ್ಕಪುಟ್ಟ ಅರಸು; ನಾಡಾಡಿ ದೊರೆ; ಕ್ಷುದ್ರ ರಾಜ : ಏಂ ದೆಸೆದೆಸೆಯ ಬಾಟ್ಕಿಗಿಟ್ಟ ಕೀೞರಸುಗಳ್ ಪೋಡಿಗಳಾಗರೆ (ರಾಮಾಶ್ವ. ೧೨೫-೧). [ಕೀೞ್₂ + ಅರಸು₂]

**ಕೀೞಾಗಿಸು** (ನಾ). ಹೀನಗೊಳಿಸು; ತುಚ್ಛಗೊಳಿಸು: ಕೀೞಾಗಿಱಿಸಿದಳೊರ್ವಳ್ ವಿಧುಮಂಡಳಮಂ ತಳ್ತಿಱಿದು ಚಪಲ ಚಪಲಾಲತಿಯಿಂ (ಅನಂಪು. ೧೪-೬೧). [ಕೀೞಾಗು + -ಇಸು₃]

**ಕೀೞಾಗು** (ಕ್ರಿ). ಕಡಮೆಯಾಗು; ಹೀನವಾಗು; ನಿಕೃಷ್ಟವೆನಿಸು : ಒಂದಱಿಂದೊಳಂ ಕೀೞಾದೊಡೆ ತನಗೆ ಪರದ ಸುಖಮದು ಕಿಡುಗುಂ (ಧರ್ಮಾಮೃ. ೫-೮೭) ; ನಿಜ ಪ್ರಿಯೆಯಂ ಪುಲ್ಲಿಂದಂ ಕೀೞಾಗಿ ಬಗೆದು (ಪಾರ್ಶ್ವಪು. ೪-೮). [ಕೀೞ್₂ + ಆಗು₁]

**ಕೀೞಾಳ್**, ಕೀೞಾಳ್, ಕೀಳಾಳ್, ಕೀಳಾಳು, ಕೀೞಾಳು (ನಾ). ಕೆಳದರ್ಜೆಯ ಸೇವಕ; ಊಳಿಗದ ಆಳು; ಅಡಿಯಾಳು : "ಕೀೞಾಳೆ ಬದಗನಕ್ಕುಂ" (ಕವಿಕಂ. ೧೬೨); "ಕೀೞಾಳೆ ತಾಂ ಬದಿಗನಕ್ಕುಂ" (ಕಬ್ಬಿಕ್ಕೈ. ೩೬) ; ನಕುಳಮುಂ ಅಂಕವಣೆಯುಂ ಬಾಳುಂ ಬಾರುಂ . . . ಒರ್ವ ಕೀೞಾಳಿಂ ಪಿಡಿಯಿಸಿಕೊಂಡು ಬಂದು (ಪಂಪಭಾ. ೮-೫೪ವ) ; ಸಿರಿಯೊಡೆಯಂ ಕೀೞಾಳಾಗಿರಲಱಿವನೆ ಪರಿಸುತಂ ಕಿರೀಟಿಯ ರಥಮಂ (ಸಮಪ. ೮-೧೩೯). ಕೀೞಾಳ್ : ದುದ್ದ ಅ ಅರಸರಾಳ್ವಬನ್ನಾನ್ವಾರ್ಯ ಕಗ್ಗೆರ ಸೊಲ್ಲಗೆ ಕೀೞಾಳ್ಗೆ ಕೂಟುವೃಣ × × × × ಯ ಕುಡುವೂರ್ (ಎಕ. XVI, ತುಮಕೂ. ೮೧-೧೦ ; 903). ಕೀಳಾಳ್ : ಮದ್ವಲ್ಲಭರ್ ನಿನ್ನ ಕೀಳಾಳೋಳಿಂಗೆಡೆಯಲ್ಲರೇಕೆ ಮುನಿವೈ ನೀಂ (ಎಕ. XII, ಚಿಕ್ಕನಾ. ೨೧-೩೭ ; 1160) ; ಆಳುವ ಗಂಡ ಹೆಂಡತಿಗೆ ಕೀಳಾಳಾದ (ನಗಮಾ. ೪೫); ಕೀಳಾಳ್ಗಳೆಯ್ದಿ ಸುವೀರರ ನಿಲ್ಲಿಸಿ ಬಾಳೆತ್ತಿ ಕೈಯೊಳು ಕೊಟ್ಟು (ಅನಂಚ. ೧೭-೮೫) ; ಊಳಿಗದವರ ಕೀಳಾಳ್ಗಳ ದುರಾಶೆ, ದುರಾಲೋಚನೆ (ಬೆಟ್ಟಅ. ೬೦-೧೯). ಕೀಳಾಳು : ಇಂತು ಆಳಿನಾಳಿನ ಕೀಳಾಳಿನ ಅಂತಃಸ್ಥವನಾರಿಗೂ ಅಱಿಯಬಾರದು (ಸಿದ್ಧವ.ಕ. ೫೫-೧೭೮) ; ಕಾಳುಗೆಲಸಂಗಳಿಗೆ ಕಳುಹುತ ಸೂಳೆಯೆಡೆಗೆಡೆ ಯಾಡಿಸುತ ಕೀಳಾಳಿನಂದದಿ ಮಾಡಿಸುತ್ತಿರಲಿಂತು (ಬಸಪು. ೨೬ ೫೭).

**ಕೀೞಾಳು**: ಕೀೞಾಳಿನ ಕೈಯೊಳಿರ್ದ ಬಾಳಂ ಕೊಂಡೆತ್ತಿ ಪೊಯ್ವುದುಂ (ಪಂಚತಂ. ೧೯೫-೯); ಕೈದುವಂ ಕೀೞಾಳಿನ ಕೈಯೊಳ್ ಕೊಟ್ಟು (ದಶಕು. ೫-೪೭ ವ).

ಕೀೞಾಳವಂ = ಕೀೞಾಳ್ : ಬಾಲಚೂತಂ ನೆನೆಯಿಸಿದುದು ಚಿತ್ತಭವನ ಕೀೞಾಳವನಂ (ಚಂದ್ರಪ್ರಪು. ೬-೪೪). [ಕೀೞ್₂ + ಆಳ್₂]

**ಕೀೞಾಳು** 'ಕೀೞಾಳ್' ನೋ.

**ಕೀೞಿಡು**, ಕೀಳಿಡು₂ (ಕ್ರಿ). ಕಡಿವಾಣವನ್ನು ತೊಡಿಸು : ಕೀೞಿಟ್ಟು ಕುದುರೆಯಂತೆ ಬಾಯಂ ಪೊಳಕಿಸುತ್ತುಂ (ಧರ್ಮಾಮೃ. ೫-೧೩೬). ಕೀಳಿಡು₂ : ಪಿರಿಯವಪ್ಪೇಳು ಪಿರಿಯಾಡ ಪೋರಿಗಳಂ ಕೊಂಡು ಕೀಳಿಟ್ಟ ಲೆದು ಪಲ್ಲಣಂಗಟ್ಟಿ ನಡೆಯಿಸಿ (ಬಂಹರಿ. ೪-೩೩ವ). [ಕೀೞ್₂ + ಇಡು₁]

**ಕೀೞಿಲ್**, ಕಿೞಿಲು, ಕೀಳಿಲ್, ಕೀಳಿಲು (ನಾ). ೧. ಕೀಳು ಮನೆ; ಸೇವಕರು ವಾಸಮಾಡುವ ಕೀಳಾದ ಮನೆ : ಪೆಱನಿಕ್ಕುಂ ಗೂೞಿನೊಳಂ ಕೀೞಿಲೊಳಳವಿಗೆಟ್ಟಿರ್ಪ ನಿಮ್ಮಿರ್ಪುದರ್ಕಂ ಮಱುಗುತ್ತಿರ್ಪಳ್ಗೆ ನೋಡಾದುದಲಂ (ಪಂಪಭಾ. ೮-೬೧). ೨. ಮನೆಯ ಅಂಗಳ; ಮೊಗಸಾಲೆ; ಪಡಸಾಲೆ : ಮನೆಕವರ್ತವೋಗೆ ಪೆಱರ ಕೀೞಿಲೊಳ್ ಸಾರ್ದಮ್ಮಬ್ಬೆಯುಂ ಮುತ್ತಬ್ಬೆಯುಂ ಬದಗುಗೆಯ್ದುಣುತಿರ್ಪಿನಂ (ಚಾವುಂಪು. ೨೬-೫) ; ಪಡುವಳ್ ಕೀೞಿಲೊಳಿಮ್ಮ ತೊಟ್ಟು (ಕಾವ್ಯಾವ. ೬೦೬). ೩. ಕೆಳಮುಖ; ಜೋತು ಬೀಳುವುದು : ಸೋಂಟವ ಜೊಲ್ಲೊಸರರ್ಬಿಯ ಮೊದಲಾಗೆ, ಜಕೊಬ್ಬೆಯ ನೀಟದ ತಳರ್ನಾಲಗೆ ಕೀೞಿಲಾಗೆ, ಕೆಸುವೆಟ್ಟನ ಗವಿಯನನುಕರಿಪ ಬಾಯಂ ತೆಱೆದು (ರಾಮಾಶ್ವ. ೧೧೧-೨೯). ಕಿೞಿಲು : ನಿನ್ನವರ ಕಿೞಿಲು [ಪಾಠಾಂ. ಕೀಳಿಲ] ಕಾಯ್ದಿರ್ಪ ಸುಕೃತವನು ತಪ್ಪದೆ ಕೊಡು (ಸಿದ್ಧವ. ೧೦೯). ಕೀಳಿಲ್ : ೨. ಎಳಸಿ ಕೀಳಿಲೊಳು ಹಿತ್ತಿಲೊಳು ಕೊಟ್ಟಿಗೆಯೊತ್ತುಗಳೊಳು (ಹಚಕಾ. ೪-೩೧) ; ಎಂಜಲ್ಗಳಂ ತಿಂದು ಕೀಳಿಲೊಳ್ಪಟ್ಟುಂ ಕಣ್ಬಟ್ಟುಂ ನಾಣ್ಗೆಟ್ಟುಂ (ಬಂಹರಿ. ೭೩-೧೬) ; ಕೀಳಿಲಲಿ ಬಾಯ್ಬಿಟ್ಟು ಮಾಯೆಯ ವೇಳೆಯನು ಕಾಯ್ದಿರ್ದು (ಪ್ರಭುಲೀ. ೬-೫೧) ; ಮಗಳ ಮಾಳಿಗೆಗಿಂತ ಮಗನ ಕೀಳಿಲೆ ಲೇಸು (ಗಾದೆ). ೨. ಇವರನಂಗಡಿಯ ತಡಿಕೆಯ ಕೀಳಿಲ ಕೆಳಗಿಱಿದೊಡೆ ದಣ್ಡಮುಂ ದೋಷಮುಮಿಲ್ಲ (ಎಕ. XV, ೭೯-೨೬ ; 1050). ಕೀಳಿಲು : ೨. ವಿಪ್ರಂಗೆ ತೊತ್ತಾಗಿ ತಂದೆಯಂತವರ ಕೀಳಿಲಿನೊಳ್ ಸ್ಥಿತಾಗಿ ಮಱೆ ಮಾಡಿಪಟ್ಟಿರಿಸಿ (ನಿಂಬರ. ೧೨೫-೧೫) ; ಮುಂದಿರದ ಮುಂದೆಸೆಯ ಕೀಳಿಲೊಳೊಂದಿಯಾಕೆಯ ದನಿಯನಾಲಿಸುತಿಪ್ಪ (ಬಸಪು. ೪೨-೨೯) ; ಕಳ ಬಂದರು ಕಳ್ಳರು ಕೀಳಿಲ ಮಱೆಯಲಿರ್ದು ಬೆಳಗಾಗಲು ಬಿಟ್ಟೋಡಿದರು (ಶಿವಗೀ. ೬೯೦). [ಕೀೞ್₂ + ಇಲ್₁]

**ಕೀೞಿಳೆ** (ನಾ). = ಕೀಳೆಳೆ : ಮೇಘೋರ್ಮಿ ಕೀೞಿಳೆಗೆ ದಾೞಿಯಿಡುತೆ ಪಾಯ್ವುದು (ಅದ್ಭುತ. ೨೯-೨೧). [ಕೀೞ್₂ + ಇಳೆ]

**ಕೀೞೆ** (ಅ). ಕೆಳಗೆ; ಕೆಳಭಾಗದಲ್ಲಿ : ಮೇಲೂರ ಕೆಱೆ ಕೀೞೆ ಪಥಿ ಕಣ್ಡುಗಂ ವ್ರೀಹಿ ಭೂಮಿದತ್ತನ್ವ ಅಷ್ಟಾದಶ ಜಾತಿಭಿಸ್ಸರ್ವ ಪರಿಹಾರ್ಯ (ಇಆ. V, ೧೩೬-೪ ; 454). [< ಕೀೞ್₂]

**ಕೀೞೆಲೆ**, ಕೀಳೆಲೆ (ನಾ). ೧. ಕೆಳಗಿನ ಎಲೆ : ಧರೆ ಪೊಗೆಯಿಡುವೊಡೆ ಪುಲ್ ಸುರ್ಬುರುಗೊಂಡೆಳದಳಸಿ ಮೇಣ್ ತಳರ್ತೆಸೆದಿರೆ ಮೇಣ್ ತರದಿಂ ಕೀೞೆಲೆ ಕೊಳೆಯುತ್ತಿರೆ ಮೇಣ್ ಕೆಳಗೆರಡು ಪುರುಷದೊಳ್ ನೀರಕ್ಕುಂ (ಲೋಕೋಪ. ೫-೧೨); ಅಲರ್ದಲರಿಂದುಗುತುಂ ಕೀೞೆಲೆಯೊಳ್ ಮಧು ಮಿಶ್ರಿತದ್ರುಜಂ ರಂಜಿಸುಗುಂ (ರಾಜಶೇ. ೨-೬೦). ೨. ಕೆಳಗಿನ ಎಸಳು : (ಕ). ಕೀಳೆಲೆ: ೧. ಎಲರಲಪಿಂ ತೆಜಂಬೊಳೆವ ಕೀಳೆಲೆ ಸೋಂಕೆ ಸಿತೇಕ್ಷು ದಂಡದಿಂದ ಸುಲಲಿತ ಚೂತಪಕ್ವ ಫಳದಿಂದುಗುತಿರ್ಪ ರಸಪ್ರವಾಹಮಂ (ಸೌಇಇ. IX-i, ೧೧೮-೨೬ ; 1057). [ಕೀೞ್₂ + ಎಲೆ₁]

**ಕೀೞಿಸೞ್** (ನಾ). ಕೆಳಗಿನದಳ, —ಪಕಳೆ: ಕುವಳಯಂಗಳ್ ಕೀೞಿ ಸೞ್ಗಳೊಳ್ (ಕುಸುಮಾ. ೪-೨೯ವ). [ಕೀೞ್$_2$ + ಎಸೞ್ (<ಎಸೞ್)]

**ಕೀೞಿಸೞ್ಬೞಿ** (ನಾ). ಕೆಳಗಿನ ದಳದ ಅಂಚು: ಕೇಸರದೊಳ್ ನಲವಿಂ ಪೊರಳ್ದು ನೀಳ್ದೆೞಗಿದ ಕೀೞಿಸೞ್ಬೞಿಯನೊಯ್ಯನೆ ಜಾಜಿ ಪರಾಗ ಪುಂಜದೊಳ್ ಪರಿವಡಿಸಿತ್ತು ಭೃಂಗಶಿಶು (ಚಂದ್ರಪ್ರ. ೭-೬೦). [ಕೀೞಿಸೞ್ + ಬೞಿ$_2$]

**ಕೀೞೇರಿ, ಕೀಳೇರಿ** (ನಾ). ೧. ಏರಿಯ ಕೆಳಭಾಗ; ಏರಿಯ ಕೆಳಗಿರುವ ಜಮೀನು: ಬಳಿಕೆಱೆಯ ಕೀೞೇರಿಯ ಬೇರುಂಗಾಲಂ (ಎಕ. III, ನಂಜನ, ೧೮೩-೧೦; 977); ಕೀೞೇರಿ, ಕೀೞ್ಪೊಟ್ಟೆ (ಶಬ್ದಾನು. ೩೬೪ ಪ್ರಯೋ). **ಕೀಳೇರಿ**: ೧. ಪೊಸಗೆಱೆಯ ಕೀಳೇರಿಯ ಪೂವಿನ ತೋಂಟವೊಂದು (ಎಕ. VIII, ನಗರ. ೩೫-೮೪; 1077); ಕೆಱೆಯ ಕೀಳೇರಿಯದಲ್ಲಿ ಕಮ್ಮ ಹತ್ತು (ಎಕ. VIII, ಸೊರಬ, ೭೪-೬; 1139); ಕೆಱೆಯ ಕೀಳೇರಿಯ ಗದ್ದೆಯಣಿತುಮಂ (ಎಕ. XII, ತುಮಕೂ. ೩೮-೫೨; 1160); ಗಂಗ ಸಮುದ್ರದ ಕೀಳೇರಿಯ ತೋಟ (ಎಕ. II, ೩೨೭-೮೦; 1181); ಕೆಱೆಯ ಕೆಳಗಣ ಹಿರಿಯ ಹಳ್ಳದಲು ಕೀಳೇರಿಗೆ ಬಿಟ್ಟ ಸ್ಥಳ (ಸೌಇಇ. IX-ii, ೪೪೦-೩೩; 1419). ೨. ಕೆಳಗಿನ ಏರಿ: ಕೆಱೆಯನು ಕಟ್ಟಿ ತೂಬನೂ ಯಿಕ್ಕಿ ಕೀಳೇರಿಯಲ್ಲಿ ಅಚುಕಟ್ಟನೂ ಕಟ್ಟಿ ತಿದ್ದಿದ ಗದ್ದೆ (ಎಕ. X (s), ಕೋಲಾರ. ೩೧೧-೮; 17ನೆಯ ಶತ). [ಕೀೞ್$_2$ + ಏರಿ$_1$]

**ಕೀೞೊಕ್ಕಲ್, ಕೀಳೊಕ್ಕಲು** (ನಾ). ಕೈ ಕೆಳಗಿನ ಆಳು; ಜೀತದ ಆಳು; ಆಳುಮಗ: ಬಳಿಕೆ ಕಾಡಾಯಮುಂ ನೋಡಿಯುಂ ಕೀೞೊಕ್ಕಲ್ ಪಸುಗೆಗೆ ಮೂವತ್ತು ಮತ್ತರುವೊಂದು ತೋಂಟಮುಮಾಗೆ (ಸೌಇಇ. IX-i, ೭೭-೨೩; 992); ಅವರ ಕೀೞೊಕ್ಕಲುೞ್ದು ಬರಿಸಂ ಪೆಟ್ಟ ಮರ್ಯ್ಯಾದೆ ಎರಡನೆಯು ಶ್ರಾಹೆಗೆ ಪದಿನಯ್ದರವೆ (ಸೌಇಇ. IX-i, ೭೭-೨೯; 992). **ಕೀಳೊಕ್ಕಲು**: ಗ ೧೬೦ ಕೀಳೊಕ್ಕಲಿಂ ಗ ೩೦ ವುಭಯಂ ಗ ೨೦೦ ತೆಱುವರು (ಸೌಇಇ. IX-ii, ೪೧೮-೧೦; 1379). [ಕೀೞ್$_2$ + ಒಕ್ಕಲ್$_2$]

**ಕೀೞ್ಕೈದು, ಕಿಳ್ಕಯ್ದು** (ನಾ). ಸೆಳೆದ ಆಯುಧ; ಬಿಚ್ಚುಗತ್ತಿ. 'ಕೀೞ್ಕೈದುಗೊಳ್' ಪರಾ. **ಕಿಳ್ಕೆಯ್ದು**: ಕಿಳ್ಳಯ್ದುವಿಡಿದು ಕಾವಲಿರುವವನು (ಬಿಟ್ಟಲ. ೧೪೧-೧೬). [ಕೀೞ್$_1$+ ಕೈದು (< ಕೆಯ್ದು)]

**ಕೀೞ್ಕೈದುಗೊಳ್** (ಕ್ರಿ). ಬಿಚ್ಚುಗತ್ತಿ ತೆಗೆದುಕೊ: ಕಱೆ ತೀರೆ ಕಟ್ಟಿದಲಗಿಂ ಮಣಿಯದೆ ಕೀೞ್ಕೈದುಗೊಂಡು[ಪಾಠಾಂ. ಕಿಳ್ಕೈದಿಮಿಂದು, ಕೀೞ್ಕೈದೆವಂದು] ಕಡುಮುಳಿಸಿಂ ಬಿಲ್ಲಣೆ ತಳ್ತೞಿಯುತ್ತಿರ್ದುದು (ಕಬ್ಬಿಕಾ. ೨೬೦). [ಕೀೞ್ಕೈದು + ಕೊಳ್$_1$]

**ಕೀೞ್ಗಂಟೆ** 'ಕಿೞ್ಗಂಠೆ' ನೋ.

**ಕೀೞ್ಗೈಮೆ** (ನಾ). ೧. ಕೀಳಾದ ಕೆಲಸ. ೨. ಕುದುರೆಯ ಕಡಿವಾಣವನ್ನು ಮಾಡುವ ಕೆಲಸ. ೧, ೨: ಇೞಿನೇಹಂ ತಾಣ ದೀವಿಗೆಯೊಳ್ ಕೀೞ್ಗೈಮೆ ಕರ್ಮ್ಮಿಜರೊಳ್ (ರಾಮಾಶ್ವ. ೭-೨೫). [ಕೀೞ್$_2$ + ಗೈಮೆ (< ಗೆಯ್ಮೆ)]

**ಕೀೞ್ಜಾತಿ, ಕೀಳುಜಾತಿ** (ನಾ). ೧. ಹೀನಕುಲ; ಕೆಳಜಾತಿ. ೨. ಹೀನಕುಲದ ವ್ಯಕ್ತಿ: ಮನ್ನಣೆವಡೆದ ಕೀೞ್ಜಾತಿಯಂತೆ ಪೂಜೆವಡೆದ ವ್ಯಂತರಿಯಂತೆ (ಧರ್ಮಾಮೃ. ೫-೧೨೫). **ಕೀಳುಜಾತಿ**: ೧. ಕೀಳುಜಾತಿಯ ಮನೆಯಲುಂಬುದು ಮೇಲೆ ತಂದೆಯ ತಲೆಯನರಿವುದು ಚಾಳಿಯೋ ಭಕ್ತರಿಗೆ (ಬಸವ. ೨೮-೩೨); ಸಸ್ಯಗಳಲ್ಲಿ . . . ಅನೇಕ ಕೀಳುಜಾತಿಯ ಸಸ್ಯಗಳೂ ಸಮಾವೇಶವಾಗುತ್ತವೆ (ಸಸ್ಯಶಾ. ೩). [ಕೀೞ್$_2$ + ಜಾತಿ]

**ಕೀೞ್ತನ** (ನಾ). ಅಲ್ಪತನ; ಹೀನತೆ; ನೀಚತನ: ಇನ್ತೋಱಿಪ್ಪೆ ನಿನ್ನ ಪೆರ್ಮನೆಯ ಪುಟ್ಟನ್; ಇಲ್ಲ ಪೆರ್ಕುಡಿಗೊಗೆದ ನಿನ್ನ ಕೀೞ್ತನಮುನ್ (ಅಂತಿಗೊ. ೨-೨೯). [ಕೀೞ್$_2$ + -ತನ]

**ಕೀೞ್ತೆರವಟ್ಟೆ** (ನಾ). ಅಡಿಪಾಯ (?): ಅದಱ ವಿಳಾಸ ಭಾಸುರ ಸಭಾಭವನಕ್ಕೆ ವಿತಾನಮಾಯ್ತು ಸಗ್ಗದ ಸುಖದೊಳ್ಪೊದಟ್ಟೆ ನೆಲಗಟ್ಟಿನ ಕೀೞ್ತೆರವಟ್ಟಮಾದುದಗ್ಗದ ಭವನಾಮರಾಲಯದ ಮೆಯ್ಸಿರಿ (ಅನಂಪು. ೧೧-೫). [?]

**ಕೀೞ್ನಿಲೆ** 'ಕಿೞ್ನಿಲೆ' ನೋ.

**ಕೀೞ್ಪಡಿಸು** 'ಕಿೞ್ಪಡಿಸು' ನೋ.

**ಕೀೞ್ಪಡು** 'ಕಿೞ್ಪಡು' ನೋ.

**ಕೀೞ್ಪೊಕ್ಕು** (ನಾ). = ಕೀೞ್ಪೋಗು (?): ಧರಣೀ ಚಕ್ರಮನೊಪ್ಪಿಗೊಳ್ ಬಗೆಯುದಿರ್ವಿದ್ವೇಷಮಂ ನಮ್ಮನೈವರ ನಿನ್ನಾಳ್ಪೆ ಸಕೆಯ್ಸಿ ಕೊಳ್ಳಿನೆಯದಿಕ್ಕೆ [ಪಾಠಾಂ. ಕಿ]ೞ್ಪೊಕ್ಕಿನೊಳ್ಪೊಟ್ಟೆ ಕೊಂಡಿರದೆಮ್ಮೊಂದುದನಿಂಬುಕೆಯ್ (ಗದಾಯು. ೭-೪೪). [ಕೀೞ್ + ಪೊಕ್ಕು$_1$]

**ಕೀೞ್ಪೊಟ್ಟೆ** 'ಕಿೞ್ಪೊಟ್ಟೆ' ನೋ.

**ಕೀೞ್ಪೊಡೆ** 'ಕಿೞ್ಪೊಡೆ' ನೋ.

**ಕೀೞ್ಪೋಗು** (ನಾ). ಹೀನವಾದ ನಡವಳಿ; ನೀಚವಾದ ಆಚರಣೆ: ಕೀೞ್ಪೋಗಿನ ನೃಪರಂದದೆ ಮೆಚ್ಚಿಪ್ಪೋಡದಿರವೇೞು ನೀಂ ಧುರಧರೆಯೊಳ್ (ನೇಮಿಪು. ೫-೮೩). [ಕೀೞ್$_2$ + ಪೋಗು$_2$]

**ಕೀೞ್ಬಗೆ** (ನಾ). ಹೀನವಾದ ರೀತಿ: ಇಂತೀ ಕೀೞ್ಬಗೆ ಕಟ್ಟುಗಳನ್ ತಾನ್ ಸಗ್ಗದ ಪೊಸದೊರೆ ಪುಡುಕಿರ್ಪನ್ ತಾನ್ (ಬದ್ಧಪ್ರ. ೭-೧೨೨). [ಕೀೞ್$_2$ + ಬಗೆ$_2$]

**ಕೀೞ್ಮಣಿ** (ಕ್ರಿ). ಕೆಳಕ್ಕೆ ಬಾಗು; ಶರಣಾಗು: ಬಳಾಕಾವರ್ತರಳ್ಕುತ್ತೆ ಕೀೞ್ಮಣಿದಿನ್ನೆಂದುದನೆಂಬೆವೆಂದೆೞಗಿದರ್ ಚಕ್ರೇಶ ಪಾದಾಬ್ಜದೊಳೆ (ಆದಿಪು. ೧೩-೬೭); ಮಣಿಕುಟ್ಟಿಮ ಭೂಮಿಗೆ ಕಿ[ಕೀ]ೞ್ಮಣಿಯದಿದೆನೆ ಪೋಲೆ ನಿಮಿರೆ ಪಾಸಿದ ಕಾರೋಹಣದಿಂ ನೃಪೇಂದ್ರಭವನಾಂಗಣ ಮೊಪ್ಪಿದುದು (ಶಾಂತಿಪು. ೧೦-೬೧); ಬಗೆವಿರೇ ನೀಂ, ಈ ಪೊಸದೇವರ್ಕಳಿದಿರಲ್ಲಿ ಅಳ್ಕಿ ನಾನ್ ಕೀೞ್ಮಣಿದಪೆನ್ ಎಂದು? (ಬದ್ಧಪ್ರ. ೫೦-೧೧೦೭). [ಕೀೞ್$_2$ + ಮಣಿ$_1$]

**ಕೀೞ್ಮದ** 'ಕಿೞ್ಮದ' ನೋ.

**ಕೀೞ್ಮನ, ಕೀಳ್ಮನ** (ನಾ). ೧. ಕೀಳುಭಾವನೆ; ಹೀನವಾದ ಮನಸ್ಸು: ವಾಸವವೈರಿ ಮತ್ತೆ ಮಗುೞ್ದಿನ್ನೊಳೆ ಕೀೞ್ಮನದೞ್ತಿ [ಪಾಠಾಂ. ಕೇಳ್ಮನದರ್ಥಿ] ಪುಟ್ಟೆಯಭ್ಯಾಸ ನಿಮಿತ್ತದಿಂದಿರದೆ ಬರ್ಕುಮೆನುತ್ತಮೆ ತಕ್ಕೆವಂದು ಕೈಲಾಸಮನಂತಮಾಯ್ತೆನೆ (ಕುಸುಮಾ. ೧೧-೧೩೯). **ಕೀಳ್ಮನ**: ೨. ಕೀಳುಮನಸ್ಸಿನವನು; ನೀಚ: ನೀನಿಂತು ಕೀಳ್ಮನನ್ ಎಂದರಿದೆನಿಲ್ಲಿನ್ನೆಗಂ (ಶ್ರೀರಾಮಾ. ೫೮೨-೨೦೮). [ಕೀೞ್$_2$ + ಮನ]

**ಕೀೞ್ಮರ** (ನಾ). ಹೀನ ವರ್ಗದ ಮರ; ಕೀಳುಜಾತಿಯ ಮರ: ಮೇಲ್ಮರಗಳಲ್ಲದೆ ಕೀೞ್ಮರನಿಲ್ಲ (ಅರ್ಥನೀ. ೧-೫೩). [ಕೀೞ್$_2$ + ಮರ]

**ಕೀೞ್ಮಸೆಯಿಡು** (ಕ್ರಿ). ತುದಿಯನ್ನು ತಿಕ್ಕು; ಅಲಗನ್ನು ಮಸೆ (?): ಕುಸುಮಕೋದಂಡನ ವಶೀಕರಣಕಾಂಡಂ ಕೀೞ್ಮಸೆಯಿಟ್ಟು ಗಱಿಗಟ್ಟಿತಿರ್ದ ಕಣ್ಣತವಕಮಂ ಕಡೆಗೋಡಿವರಿಯಿಸುವ ರೂಪಿಂಗೆ (ಅನಂಪು. ೧೧-೨೭ವ). [ಕೀೞ್$_2$ + ಮಸೆಯಿಡು]

**ಕೀೞ್ಮಾಡು** 'ಕಿೞ್ಮಾಡು' ನೋ.

**ಕೀೞ್ಮೆ**, ಕೀೞ್ಮೆ (ನಾ). ಕೀಳುತನ; ಹೀನತನ; ಕೆಳಮಟ್ಟ : ಸಕಲ ಹೇಯಾಸ್ಪದಮಪ್ಪನ್ನ ಕೀೞ್ಮೆಯುಮನೆಣಿಸಿ (ಚಕಬ. ೨೭). **ಕೀೞ್ಮೆ** : ಜನ್ಮದಿಂದ ಯಾರಿಗೂ ಹಿರಿಮೆ ಅಥವಾ ಕೀೞ್ಮೆಯು ಅಂಟಕೊಳ್ಳತಕ್ಕದ್ದಲ್ಲ (ಯಕ್ಷಪ್ರ. ೧೪೦). [ಕೀೞ್$_2$ + -ಮೆ$_1$]

**ಕೀೞ್ಮೇಲ್**, ಕೀೞ್ಮೇಲು, ಕೀಳುಮೇಲು (ನಾ). ಕೆಳಗಿನದು, ಮೇಲಿನದು; ಹೀನತೆ ಮತ್ತು ಉತ್ತಮತೆ : ಅನಿತಱೊಳೆ ಸಮಾನರೆ ಮನುಜರಣ್ಣ ಕೀೞ್ಮೇಲಿಲ್ಲಾ (ಧರ್ಮಾಮೃ. ೪-೨೭). **ಕೀೞ್ಮೇಲು** : ತಪ್ಪೊಪ್ಪುಗಳ ನೆಲದ ಕೀೞ್ಮೇಲನೆಣಿಸಿ (ಕಾಲೂರ. ೯೪-೧೮೭). **ಕೀಳುಮೇಲು** : ಕಾಯಕದಲ್ಲಿ ಕೀಳುಮೇಲೆಂಬುದಿಲ್ಲ (ರೂಢಿ). 'ಮೇಲುಕೀಳು' ಪರಾ. [ಕೀೞ್$_2$ + ಮೇಲ್]

**ಕೀೞ್ಮೊನೆ** (ನಾ). ಕೆಳಗಿನ ಮೊನೆ; ಕೆಳತುದಿ : ಎಱಗಿದರಂ ತಳ್ತು ಬಾಳ ಕೀೞ್ಮೊನೆಯಿಂ ತಳ್ತಱದಱಿದುಬ್ಬರಮೆಂಬಿವನಱಿದಿಱಿದರ್ (ಪಂಪಭಾ. ೧೦-೮೨). [ಕೀೞ್$_2$ + ಮೊನೆ$_1$]

**ಕೀೞ್ವಟ್ಟೆ** (ನಾ). ಒಂದು ರಾಜ ಚಿಹ್ನೆ (?) : ಪೆಸರಂ ದಯೆಗೆಯ್ದು ಪಟ್ಟಂಗಟ್ಟಿ ಏಱ ಕುದುರೆ ಕೊಡೆ ಆಳ ಪಣ್ಣುವಕೆ ಕುಞ್ಚನ್ತಳಿಗೆ ಕೀೞ್ವಟ್ಟೆ ಅಡ್ಡಣಿಗೆ ಗದ್ದಿಗೆ ರಾಜಚಿನ್ನವ ಕೊಟ್ಟು (ಸೌಇಇ. IX-i, ೪೧-೧೪; 11ನೆಯ ಶತ). [< ಕೀೞ್ವಟ್ಟೆಲ್ ?]

**ಕೀೞ್ವಟ್ಟೆಲ್**, ಕೀೞ್ವಟ್ಟೆಲ್ (ನಾ). = ಕೀೞ್ವಟ್ಟೆ : ತಳಗೆ ಕೀೞ್ವಟ್ಟೆಲಡ್ಡಣಿಗೆ (ಮೈಎಠಿ. ೧೯೩೨, ೪೮-೧೫; 960). **ಕೀೞ್ವಟ್ಟೆಲ್** : ಕುಂಚಂ ತಿಳಿಗ ಕೀೞ್ವಟ್ಟೆಲ್ (ಸೌಇಎ. ೧೯೩೨, ಪುಂಗನೂ. ೨೦೮-೧೫; ?). [?]

**ಕೀೞ್ವಡಿಸು** 'ಕಿೞ್ವಡಿಸು' ನೋ.

**ಕೀೞ್ವಡು** 'ಕಿೞ್ವಡು' ನೋ.

**ಕೀೞ್ವದುವ**, ಕಿಳುವದುವ (ನಾ). ತಗ್ಗಾಗಿರುವ ಬದುವು, -ಕಟ್ಟೆ; ಕೆಳಗಿನ ಬದುವು (?) : ಕೇತಕಿಯ ಕಂಟವಲಗೆ[ಪಾಠಾಂ. ಕಂಠದಲಗೆ] ಗಳಿಂ ಕುರವಕದ ಕೀೞ್ವದುವಂಗಳಿಂ ಮಂದಾರದ ಮೊಳೆಸಾಲ್ಗಳಿಂ . . . ತಣ್ಪಿನತಾಣಮೆನಿಸಿರ್ಪಲತಾಮಂಟಮಂ ಪೊಕ್ಕು (ಕುಸುಮಾ. ೧೨-೧೫೭ ವ). **ಕಿಳುವದುವ** : ಕೇತಕಿಯ ಕಂಠವಲಗೆಗಳಿಂ ಕುರುವಕದ ಕಿಳುವದುವಂಗಳಿಂ ಮಂದಾರದ ಮೊಳೆಸಾಲ್ಗಳಿಂ (ಶಾಂತೀಶ್ವ. ೧೦-೧೧೭ ವ). [ಕೀೞ್$_2$ + ಬದುವ (< ಬದುವು)]

**ಕೀೞ್ವೞಿ** (ನಾ). ಕೀಳುಹಾದಿ; ನೀಚಮಾರ್ಗ : ಪಿರಿಯ ಪಾಲ್ ಆಳ್ಗಳ್ ಕೀೞ್ವೞಿಯ ಕೊಳ್ಗೆಯಿನ್ ತಾಮೆಂದುಮುಱಿಯರ್ (ಅಂತಿಗೊ. ೧೫-೨೯೧). [ಕೀೞ್$_2$ + ಬೞಿ$_2$]

**ಕೀೞ್ವಾಳ್**, ಕಿೞ್ವಾಳ್ (ನಾ). (ಒರೆಯಿಂದ) ಕಿತ್ತ ಕತ್ತಿ; ಹಿರಿದ ಕತ್ತಿ; ಬಿಚ್ಚುಗತ್ತಿ. 'ಕೀೞ್ವಾಳ' ಪರಾ. **ಕಿೞ್ವಾಳ್** : ಕಿೞ್ವಾಳವಳ್ ಮೆಲ್ಲನೆ ಕರತಳಪದ್ಮಂಗಳಿಂ ಪಾದಪದ್ಮಂಗಳನಂದೊತ್ತುತಿರಲ್ (ಕಾದಂಪೂ. ೮೦). [ಕೀೞ್$_1$ + ಬಾಳ್$_3$]

**ಕೀೞ್ವಾಳ** (ನಾ). ಬಿಚ್ಚುಗತ್ತಿಯವನು; ಅಂಗರಕ್ಷಕ : ಕೆಯ್ಯೊಳಿರ್ದಲಗಿನ ಕೋಲುಮಂ ಕಟ್ಟದಲಗುಮಂ ದೂರಾಂತರದೊಳ್ ಕೀೞ್ವಾಳನ ಕೆಯ್ಗೆ ನೀಡುತ್ತುಂ (ಅನಂಪು. ೧೧-೩೭ ವ); ಪಕ್ಕದ ಕೀೞ್ವಾಳನ ಕೆಯ್ಯೊಳಿರ್ದ ಬಾಳಂ ಕೊಂಡು (ಜಗವಿ. ೨-೪೮). [ಕೀೞ್ವಾಳ್ + -ಅ$_7$]

**ಕೀೞ್ಸರಿ** (ನಾ). ಕಡಮೆಯೋಗ್ಯತೆ; ಹಿಮ್ಮೆಟ್ಟುವಿಕೆ (?) : ಕಣ್ ಸೋಲಮನಱಿಯಂ ಪರವೆಣ್ ಸುರವಧುಗೆಣೆಗೆವರ್ಪೊಡಂ ತೊಡರ್ದಾತಂ ಮೇಣ್ ಸುರನಕ್ಕೆಮ ಚಲದ ಪವಣ್ ಸರಿ ಕೀೞ್ಸರಿಗೆ ವಾರನಹಿತಕೃತಾಂತಂ (ಕಾವ್ಯಾವ. ೭೫); ಲಯುಕಾರ ವರ್ಜಿತ ವ್ಯಞ್ಜನಾತ್ ಪರತಸ್ಸಕಾರಸ್ಯ ಚಕಾರಾದೇಶೋ ಭವತಿ . . . ಕೀಳ್‌ಸರಿ - ಕೀೞ್ಸರಿ (ಭಾಷಾಭೂ. ೩೨). "ನಿಕೃಷ್ಟಕ್ಕೂ ಸಮ, ಅಲ್ಪಕ್ಕೂ ಸಮ" (ಪ್ರಭಣ್ಣ. ೫೦೩). [ಕೀೞ್$_2$ + ಸರಿ$_5$]

**ಕೀೞ್ಸೊಲ್ಲು** (ನಾ). ಕೆಟ್ಟಸೊಲ್ಲು; ಕೀಳುಮಾತು; ಕೀಳುನುಡಿ : ಸಶ್ಚೋಽಬಹುಳಮಲಯುಃ . . . ಕಣ್ಣೋಲಂ, ಮುಳ್ಸಿಱಂಗು, ಕಳ್ಸವಿಗೆ, ಕೀೞ್ಸೊಲ್ಲಿಗೆ (ಶಬ್ದಾನು. ೯೩ ಪ್ರಯೋ). [ಕೀೞ್$_2$ + ಸೊಲ್ಲು (< ಸೊಲ್)]

❋

# ಕು



**ಕು** (ನಾ). ಭೂಮಿ; ಪೃಥ್ವಿ. 'ಕುಜನ್ಮಕ' ಪರಾ. [ಸಂ.]

**ಕುಂಕ** (ನಾ). (?) : ಬಿಂಕಬೀರುವ ಮನೆಯ ಕಂಕಾಳೆಯರಾಡು ಅರಮನೆಯ ಕೋಽಚಣದಾಗ ಕುಂಕಗಳ ಬಿಗಿದು ಕಟ್ಯಾರವ್ವ (ಕನ್ನಜಾ. ೩೩೨). [?]

**ಕುಂಕಣ** (ನಾ). ಸ್ತನ (?) : ಬಿಳುಪೇಱಿತು ಮೊಗ ತಿಳುಪೇಱಿತು ಕೆನ್ನೆ ಹೊಳಪೇಱಿತು ಕುಡಿನೋಟ ಕಳೆಯೇಱಿತು ಕೋಮಲಕಾಯ ಕುಂಕಣ ಬೆಳೆಯೇಱಿತು ನೀಱೆಯೊಳು (ಜೀವಂಸಾಂ. ೪-೭೧). [?]

**ಕುಂಕರ** (ನಾ). (?) : ಮಂಕುಮಾಡುತಿಪ್ಪ ಮಾಯೆ ಹತ್ತು ಶಂಕೆಯ ಶಂಕೆಕಾಱ ಶತ್ರು ಮಿತ್ರರಿಬ್ಬರಿಗಾಧಾರವೆಂದು ಕುಂಕರದಿಪ್ಪತ್ತೊಂದು ಕೋಟಿ ಪಾಶವು ಓಂಕಾರದೊಳಗೆ ಪುಟ್ಟಿ ಓಂಕಾರದೊಳಗೆ ಬೆಳೆದು ಓಂಕಾರದೀ ಜಗವ ಎತ್ತಿ ಮೆಱೆವುದೋ ಎಂದು (ಕನಕ. ೨೧೫-೫). [?]

**ಕುಂಕಿ** 'ಕುಮಕಿ$_2$' ನೋ.

**ಕುಂಕಿಆನೆ** 'ಕುಮಕಿಆನೆ' ನೋ.

**ಕುಂಕಿ ಜಮಿಾನು** 'ಕುಮಕಿಜಮೀನು' ನೋ.

**ಕುಂಕು$_1$** 'ಕೊಂಕು' ನೋ.

**ಕುಂಕು$_2$** 'ಕೂಂಕು$_2$' ನೋ.

**ಕುಂಕುಮ** (ನಾ). ೧. ಒಂದು ಜಾತಿಯ ಗಿಡ ಮತ್ತು ಅದರ ಹೂ. ೨. ಕುಂಕುಮ ಕೇಸರಿ : "ಕುಂಕುಮಂ, ಘುಸೃಣ. . .ಜಾಪಕಂ - ಈ ೭ ಕುಂಕುಮಂ" (ಹಲಾಯು. ೮೯-೩೮೯); "ಜಾಪಕಮದಾಲೋಹಿತಂ ಘುಸಣಮೆನೆ ಕುಂಕುಮಂ" (ಮಂಗರಾ. ೯೯-೨೨); ಕುಂಕುಮಂ (ಸಿಂಧೂರ); ಸಣ್ಣಗಿಡ . . . ಕಾಯಿಯಲ್ಲಿ ಕೆಂಪು ಬಣ್ಣ ಹೊರಡುತ್ತದೆ (ಕಭಾಗೆ. ೩೮).

೨. ಹೆಂಗಸರು ಹಣೆಗೆ ಇಟ್ಟುಕೊಳ್ಳುವ ಕೆಂಬಣ್ಣದಪುಡಿ: ಬೆಳಗುವ ಚಂದನದಣ್ಪಂ ತೊಳಗುವ ಕುಂಕುಮದ ತಳ್ಕಿನಿಂ ಕರಮೆಸೆದಂ (ಕಾದಂಪೂ. ೨೯); ಕುಂಕುಮದ ಕದಡು ನೀರ್ದಳಿಪದಿಂ (ಪುಷ್ಪಪು. ೪-೩೩); ಹಣೆ ತುಂಬ ಚಂದ್ರನಂತಹ ಕುಂಕುಮದ ಬೊಟ್ಟು (ಆಬೋಲೀ. ೭೭). ೪. ಗೋಧಿಯ ತೆನೆಯ ಕಾಳೆಲ್ಲ ಕೆಂಪು ಹುಡಿಯಾಗುವಂತೆ ಮಾಡುವ ಒಂದು ರೋಗ: ತ್ಯಾಬಿ ಕುಂಕುಮ ಇಟ್ಟಂಗಿ ಮೊದಲಾದ ರೋಗಗಳು ಹಾಯದೆ ಧಾನ್ಯಗಳು... ಬರುವುವು (ಕೃಷಿಪ್ರ. ೫೩). ೫. (ಆಲಂ) ಮುತ್ತೈದೆತನ; ಸೌಮಂಗಲ್ಯ: ನಿನ್ನ ಕುಂಕುಮಕ್ಕೆ ಆಯುಷ್ಯ ಕೇಳು (ಬೆಟ್ಟಹೂ. ೫೪). 'ಕುಂಕುಮಬಲ' ಪರಾ. ೬. (ಆಲಂ) ತಿಲಕಪ್ರಾಯ; ಶ್ರೇಷ್ಠ: ದೇಶಪಾಂಡೆ ವಾಮನ ರಾಯರೆಂದರೆ ಆ ಹಳ್ಳಿಯ ಕುಂಕುಮವಾಗಿದ್ದರು (ಮಣ್ಣುಮ. ೯).

**ಕುಂಕುಮ ಹಚ್ಚು** = ೧. ಹಣೆಗೆ ಕುಂಕುಮ ಇಡು. ೨. ಮದುವೆಯ ಕನ್ಯೆಯನ್ನು ನಿಶ್ಚಯಮಾಡು: ನೀಲವ್ವನಿಗೆ ಕಲ್ಬುರ್ಗಿಯವರು ಈಗಾಗಲೆ ಬಂದು ಕುಂಕುಮ ಹಚ್ಚಿದ್ದಾರೆ (ರೂಢಿ). [ಸಂ.]

**ಕುಂಕುಮಕೇಸರಿ** (ನಾ). ಕುಂಕುಮದ ಹೂ; ಕೇಸರ. (ವೈಶಿಗಿ. ೨೫-೪೭೦). [< ಸಂ. ಕುಂಕುಮಕೇಸರ]

**ಕುಂಕುಮಗಾರಣೆ** (ನಾ). ಕುಂಕುಮದಿಂದ ಗೋಡೆಯ ಕೆಳಭಾಗಕ್ಕೆ ಬಳಿದ ಕಾರಣೆ, —ಪಟ್ಟಿ: ಚೆನ್ನಾದ ಕುಂಕುಮಗಾರಣೆಯಿಂದ ಸಂಪನ್ನತೆವಿಡಿದುದಾಸ್ಥಾನ (ಕಂಸವಿ. ೮-೧೧). [ಕುಂಕುಮ + ಕಾರಣೆ$_1$]

**ಕುಂಕುಮಗಾಸೆ** (ನಾ). ಕುಂಕುಮ ಬಣ್ಣದ ಕಾಸೆ: ಬಿಡದುಟ್ಟ ಪಟ್ಟೆಯ ದಟ್ಟಿ ಕುಂಕುಮಗಾಸೆ ತೊಡರಿದ ದಿವ್ಯಭೂಷಣವ (ಕಂಸವಿ. ೨೩-೮೭). [ಕುಂಕುಮ + ಕಾಸೆ$_1$]

**ಕುಂಕುಮಪಂಕ** (ನಾ). ಕುಂಕುಮದ ಕದಡು, —ನೀರು: ಮೆಯ್ದೊಡೆದ ಹರಿದ್ರಾದ್ರವಮುಂ, ಕುಂಕುಮಪಂಕಮುಂ, ಬಿಂಕಂಬಡೆಯೆ (ಜಗವಿ. ೪-೮೦ ವ). [ಕುಂಕುಮ + ಪಂಕ]

**ಕುಂಕುಮಬಲ** (ನಾ). ಕುಂಕುಮ ಇಟ್ಟುಕೊಳ್ಳುವ ಸೌಭಾಗ್ಯ; ಮುತ್ತೈದೆತನ: ಆಕೆಗಾದರೋ ತನ್ನ ಕುಂಕುಮಬಲಕ್ಕೆ ಆಧಾರವಾದವನನ್ನು ಕಾಣುವ ಹಂಬಲ (ಕುಂಕುಮ. ೯೯). [ಕುಂಕುಮ + ಬಲ]

**ಕುಂಕುಮರಸ** (ನಾ). = ಕುಂಕುಮಪಂಕ: ತನ್ನಧರದ ರಾಗದೊಳ್ ಪೊರೆದುದಂ ಮಧುವಂ ಬೆಡಗಾಗೆ ನೋಡುತುಂ ಮಧುರಸಮಲ್ತು ಕುಂಕುಮರಸಂ ದಿಟಮೆಂದು ಬಟಿಕ್ಕೆ ತನ್ನಿ ತನ್ಮಧುರ ಸುಗಂಧದಿಂ ತಿಳಿದು ಸೇವಿಸಿದಳ್ ಮಧುವಂ (ಕಾವ್ಯಸಾ. ೯೭೩ ಶೂದ್ರಕ). [ಕುಂಕುಮ + ರಸ]

**ಕುಂಕುಮರಾಗ** (ನಾ). ಕುಂಕುಮ ಬಣ್ಣ; ಕೆಂಪುಬಣ್ಣ: ಪ್ರತೀಚೀಸಮಾಗಮ ಸಂತುಷ್ಟನೆನಪ್ಪೆನೆಂದು ದಿನಪಂ ರಕ್ತತ್ವದಿಂ ಪೋಗೆ ರಾಗಮೆ ತತ್ಕುಂಕುಮರಾಗಮಾದುದಪರಾಲಂಕಾರವಿಸ್ತಾರದೊಳ್ (ಶಾಂತಿಪು. ೮-೬೦). [ಕುಂಕುಮ + ರಾಗ]

**ಕುಂಕುಮವಿಳಾಸ** (ನಾ). ಕುಂಕುಮದ ಶೋಭೆ, —ಅಲಂಕಾರ: ಭಯವಶವಿಮುಕ್ತ ಭೂಷಣಚಯ ಕೇರಳಕಾಮಿನೀಮುಖಶ್ರೀ ನೃಪಸೇನೆಯ ಪಾದರಜದಿನಂದೇನಯತ್ನ ಕುಂಕುಮವಿಳಾಸಮಂ ತಾಳ್ದಿದುದೋ (ಶಾಂತಿಪು. ೧೧-೧೫). [ಕುಂಕುಮ + ವಿಳಾಸ (= ವಿಲಾಸ)]

**ಕುಂಕುಮಶೈಲ** (ನಾ). ಹದಿನಾಲ್ಕು ಕುಲಪರ್ವತಗಳಲ್ಲಿ ಒಂದು: ಮತ್ತಂ ಸುಗಂಧಶಿಖಿ . . . ಕುಂಕುಮಶೈಲ . . . ಪಾರಿಜಾತವೆಂಬ ಪದಿನಾಲ್ಕು ಕುಲಾಚಲಂಗಳೇ ಪೂರ್ವೋಕ್ತ ವಿಪುಳವೆಂಬ ಕೀಲಕಪರ್ವತಕ್ಕೆ ಪಶ್ಚಿಮ ದಿಕ್ಕಿನಲ್ಲಿಹವು (ವಿವೇಕ. ೨೧೫). [ಕುಂಕುಮ + ಶೈಲ]

**ಕುಂಕುಮಾಂಕ** (ನಾ). ೧. ಕುಂಕುಮದ ಗುರುತು; ಲೇಪ. ೨. ಕುಂಕುಮದ ಗುರುತನ್ನು ಹೊಂದಿದವನು: ಶ್ರೀವೃತ್ತ ಕುಚ ಕುಂಕುಮಾಂಕನಂ ಕಂಡಪೆನಲಾ (ಜೈಮಿಭಾ. ೪-೬೩). [ಕುಂಕುಮ + ಅಂಕ$_3$]

**ಕುಂಕುಮೋದಕ** (ನಾ). ಕುಂಕುಮ ಕದಡಿದ ನೀರು: ದೆಸೆವೆಣ್ಣಳ ರತ್ನವಿಭೂಷಣಾಂಶುವುತ್ಪಳಿನಿಯ ಕುಂಕುಮೋದಕದ ಸಿಂಪಿಣಿ ಸಂಜೆಯ ಕೆಂಪು (ಚಂದ್ರಪು. ೮-೪). [ಕುಂಕುಮ + ಉದಕ$_2$]

**ಕುಂಕುವ** (ನಾ). = ಕುಂಕುಮ: "ಕುಂಕುಮ – ಕುಂಕುವ" (ಶಮದ. ೨೬೩ ಪ್ರಯೋ); ಎಳವೆಂಡಿರ ಮೆಯ್ಯ ಕುಂಕುವದಿಂದೊಂದಿದ ಕೆಂದಾವರೆ ಹೂಗಳಂ ತಳೆದು (ಕಬ್ಬಿಕಾ. ೩೦); ಪುಡಿಯ ಕಸ್ತುರಿ ಕುಂಕುವ ಕಪ್ಪುರವುಡಿ ಬಿಡುಮುತ್ತು ಮಾಣಿಕದೊಡನೆ ಹಿಡಿಹೊನ್ನ ಸೂಜಿಕೆಯ ಬಿಟ್ಟರಿಕ್ಕೆಲದಂಗಡಿಗರತೀವ ಮೋದದಲಿ (ಮೋಹತ. ೪೨-೨೮). [< ಸಂ. ಕುಂಕುಮ]

**ಕುಂಕುವ ಬೇರ** (ನಾ). ಕೆಂಪು ಬಣ್ಣದ ಕುದುರೆ: ನವಪಾಟಳ ಸದೃಶಂ ಕುಂಕುವಬೇರಂ (ಅಶ್ವಶಾ. ೮-೧೩). [< ಸಂ. ಕುಂಕುಮಬೇರ]

**ಕುಂಕೆ** 'ಗೊಂಕೆ' ನೋ.

**ಕುಂಗ** (ನಾ). ಮೀನುಗಾರ: "ಕುಂಗರ್ – ಬೆಸದವರ್" ಪಡೆವುದೇನು? (ಶಮದ. ಪರಿ. ೨); ದಿನವು ನೀರನು ಧುಮುಕುವಂಥ ಕುಂಗನು . . . ಕೂಳ ತುತ್ತು; ಮನ ಮರೆಯೆ ಕುಡಿಯಲು ಗುಟುಕು (ಉಯ್ಯಾಲೆ. ೬-೩). [?]

**ಕುಂಗು**$_1$ (ಕ್ರಿ). ೧. ಮುಳುಗು; ಅದ್ದು: ಇನಿಯಂ ಬಾರದೆ ಮಾಣ್ದನಿನ್ನೆವರೆನಿನ್ನೀಂ ಕಾರಿರುಳ್ ಪೋಗಿ ಕಾಮನ ಸಾಮ್ರಾಜ್ಯವನಟ್ಟದಪ್ಪ ಮಗಳೇ ಕಾಟ್ಪೂರದೊಳ್ ಕುಂಗೆ ಮಿಂಚಿನ ಕಣ್ಣೇಜಣಿದಾಗ ದೊರ್ಮಿಡಿಯೆ ಭಿನ್ನಂ (ಸೂಕ್ತಿಸು. ೧೦-೨೧೫). ೨. ಬಾಗು; ಬಗ್ಗು; ಕುಸಿ: ಬೆಚ್ಚುತಾಡುತ ಬೆರತು ಬಾಯ್ದೆರೆದು ಕುಂಗಿ ಕುಣಿವುತಲಾಡುತ (ಮುರುಚಾ. ೨-೧೧); ಕುಂಗಿದ್ದವನನ್ನು ನುಂಗ ನೋಡುವರು (ಗಾದೆ). [ದೇ. ‖ ತಮಿ. ಮಲ. ಕುಙ್ಙು; ತೆಲು. ಕ್ರುಂಗು, ಕುರಿಚು, ಗುಂಕು, ಗೂಕು]

**ಕುಂಗು**$_2$ (ನಾ). ಸದ್ದಿಲ್ಲದಿರುವುದು; ನೀರವತೆ; ಮೌನ: (ಚತುನಿ. ಕೆ. I, ೩೫). [< ಕುಂಗು$_1$]

**ಕುಂಗೆ** (ನಾ). ಮೊಲೆ; ಸ್ತನ: ಕುರುಳಮುಡಿಯಂ ದಂತಮನುರೆಮಂ ಕು[೦]ಗೆಯನೂರುವಂ ಬೆರಳಂ ದೇಮರಸಂಗೆ ಕೊಟ್ಟು ಸತಿಯರ್ವ್ವರೆ ಕೆಪ್ಪಂ ಕಚ್ಚಿ ಚಕ್ರವರ್ತ್ತಿಯ ಸಭೆಯೊಳು (ಸೌಇಇ. IX-i, ೧೧೮-೪೨; 1057). [ದೇ. ‖ ತಮಿ. ಕೊಙ್ಙೈ; ಮಲ. ಕೊಙ್ಙ; ಕುಇ. ಕಂಗುರಿ]

**ಕುಂಚ** (ನಾ). ೧. ಗೊಂಚಲು; ಗುಚ್ಛ; ಮಂಜರಿ: ಅಚ್ಚರಿಯಾಗಿ ಹಬ್ಬಿದ ಬಳ್ಳಿಗಳ್ ಅಮಿತ ಕುಂಚಂಗಳು ಭೂರಿ ಪುಷ್ಪಿತಮಾಗೆ (ಸೌಗಂಧಿ. ೩-೪೪). ೨. ನವಿಲುಗರಿಯಿಂದ ಮಾಡಿದ ಕೂರ್ಚಿಕೆ, —ಕುಂಚಿಗೆ: "ಕುಂಚಮೆನಲ್ ಕುಂಚಿಗೆ" (ರನ್ನಕಂ. ೫); ಕುಂಚಮುಂ ಗುಂಡಿಗೆಯುಮಂ ಪಿಡಿದು ಬರ್ಪೊನಂ (ವಡ್ಡಾರಾ. ೧೧೮-೧೮); ಕುಂಚಮುಂ ದೋಷಮೆಂಬೊಡೆ ಕುಂಚಮುಪ್ಪುದು ಪೀಲಿ (ಧರ್ಮಾಮೃ. ೯-೮೯); ಕುಂಚದ ಕನಿಷ್ಠರುಂ ತರಟನ ವಿಡಂಗರುಂ (ವಾಗೀರ. ೨೫೪-೨೧). ೩. ಒಂದು ಬಗೆಯ ಚವರಿ; ಚಾಮರ: "ಕುಂಚಮೆನೆ ಚಾಮರಂ" (ಕಶಕ. ೨೬); ಸಿವಿಗೆ ತಟೆದುಜುಗಲೊಡ ನಿಕ್ಕುವ ಕುಂಚಂ ಲೀಲೆವಡೆಯೆ (ಆದಿಪು. ೧೧-೩೯); ತತ್ತ್ವಪ್ರಮೂಢಂಗೆ ಬೀಸಿದ ಕಷಾಯದ ಕುಂಚದಂತಿರೆನಗಾದತ್ತಾಗಳ್ (ಕಾದಂಪೂ. ೮೦೩);

ಕಡುಮಳಿದು ಕೈಯ ಕುಂಚಮಂ ಬೇಗಬೇಗಂ ಬೀಸಲೊಡನೆ (ಕಬ್ಬಿಗಕಾ. ೨೬೪); ಮಂಗಳ ಕುಂಚ ಕಾಳಾಂಜಿ ಬೀಸಣಿಗೆಯ ಪೆಂಗಳೀಱಿ ದರಿಕ್ಕೆಲದಿ (ನೋಂಹತ. ೩೬-೩೯). ೪. ಚಿತ್ರ ಬರೆಯುವುದಕ್ಕೂ ಬಣ್ಣ ತುಂಬುವುದಕ್ಕೂ ಉಪಯೋಗಿಸುವ ಕೂದಲಿನ ಕುಚ್ಚು: ಕುಂಚವನ್ನಾಡಿಸುವುದರಲ್ಲಿ ಅಜಂತಾ ಕಲಾಕಾರರ . . . ನಿರ್ಮಾಣ ತಂತ್ರ ವಿಶ್ವದ ಎಲ್ಲಾ ಕಲಾವಿಮರ್ಶಕರನ್ನೂ ದಿಗ್ಭ್ರಮೆಗೊಳಿಸಿದೆ (ಭಾರದ. ೫೨೫); ಕುಂಚದ ನಾಲ್ಕೇ ಎಳೆತಗಳಿಂದ ಚಿತ್ರಶಿಲ್ಪಿ . . . ಚಿತ್ರವನ್ನು ಬರೆಯುವಂತೆ (ಛಂದೋವಿ. ೧೦೩). ೫. ಉಜ್ಜಿ ತೊಳೆಯುವುದಕ್ಕಾಗಿ ಬಳಸುವ ಸಾಧನ: ಸಾಬೂನಿನ ನೀರು ಹಾಕಿ ಕುಂಚದಿಂದ ಚೊಕ್ಕಟ ಮಾಡುವುದು ಒಳ್ಳೆಯದು (ಅಡುಸಾ. ೪೪); ಪಡಿಯಚ್ಚುಗಳ ಮುಖಭಾಗವನ್ನು ಕುಂಚದಿಂದ ಚೊಕ್ಕಟಗೊಳಿಸಬೇಕು (ಮುದ್ರಕ. ೫೬). ೬. ಅಣಸು; ಗೊಣಸು: ಕೋಡಿಗೂ ಥಳಾ ಥಳಾ ಹೊಳೆಯೋ ಹಿತ್ತಾಳೆ ಕುಂಚ ಹಾಕಿ, ಬಣ್ಣದ ಕುಚ್ಚು ನೇತು ಬಿಟ್ಟಿರ್ತಾರೊ (ಮಲೆಮ. ೧೬೬).

[ದೇ. ‖ ತಮಿ. ಮಲ. ಕುಞ್ಚ; ತುಳು. ಕುಂಚ; ತೆಲು. ಕುಚ್ಚು. / ಸಂ. ಕೂರ್ಚ]

**ಕುಂಚಂಬಿಡಿ** (ಕ್ರಿ). ಕುಂಚವನ್ನು ಹಿಡಿ; ಚಾಮರವನ್ನು ಹಿಡಿದುಕೊ: ಕುಂಚಂಬಿಡಿದಿರ್ಪ ಕೆಲದೊಳಡಪಂಬಿಡಿದಿರ್ಪ ಸುರೇಂದ್ರ ನಾಯಕರ್ ಸೊಗಯಿಸಿದರ್ (ಅಜಿಪು. ೪-೭೪). [ಕುಂಚ + ಪಿಡಿ$_1$]

**ಕುಂಚಕ** (ಗು). ಬಾಗಿದ; ವಕ್ರವಾದ; ಮುರುಟಿದ: (ಕ). [ಸಂ.]

**ಕುಂಚಟಿಗ,** ಕುಂಚಡಿಗ, ಕುಂಚಿಟಿಗ (ನಾ). ೧. ಒಂದು ಜಾತಿಯ ಹೆಸರು: ನೂಱೊಂದು ಮನೆಯ ಕುಂಚಟಿಗ ನಾಯಕರು ಸಕಲ ನಾಯಕರಂ ಕರೆಸಿ (ಮೈಆರ್. ೧೯೩೧, ೧-೧೯; 1310); ಕುಂಬಾರರು, ಕುಂಚಟಿಗರು, ಉಪ್ಪಾರರು . . . ಮೊದಲಾದವರಿಗೆಲ್ಲ ಬೇರೆಬೇರೆ ಅಂಕಣಗಳನ್ನು ಏರ್ಪಡಿಸಿ (ರಂಗಕ. ೮೭). ೨. ತೊಗರಿಬೇಳೆ ಮಾಡಿ ಮಾರುವವನು: (ಕ). **ಕುಂಚಡಿಗ:** ೧. “ನೆಱೆ ಪಂಚಮಂ ಪದ್ಮನಕ್ಕು ಸಾದಂ ವೃಷಲನಱೆ ಕುಂಚಡಿ[ಪಾಠಾಂ. ಟಿ]ಗನವದ್ಯಂ” (ಮಂಗರಾ. ೧೧೦-೬). **ಕುಂಚಿಟಿಗ:** ೧. ಹಳೆಯ ಹಳೆಯ ಕುಂಚಿಟಿಗರ ಪಾರಿಕಲ್ಲ ದಾಸನ ಮಗ (ಮೈಆರ್. ೧೯೨೫, ೭-೧೨; 1673). [? + -ಇಗ]

**ಕುಂಚಡಿಗ** ‘ಕುಂಚಟಿಗ’ ನೋ.

**ಕುಂಚಣಿಗೆ** (ನಾ). [ಜೈನ] ಮುನಿಗಳ ಕೈಯಲ್ಲಿರುವ ನವಿಲುಗರಿಯ ದೊಂದೆ, —ಕೂರ್ಚ: ತಂಡತಂಡದಿಂ ಮುನಿಗಳ ಕೆಯ್ಯ ಕುಂಚಣಿಗೆ ಚಾಂದ್ರಮಸೀದಳ ಕುಂಡಿತಾಳಿ ತಜ್ಜನಭವನಕ್ಕೆ ದುಗ್ಧನಿಧಿ ಕಟ್ಟಿದ ಪೊಟ್ಟಣವಾರಿ ಕಟ್ಟಿದತ್ತೆನಿಸಿದುದು (ಅನಂಪು. ೩-೩೧).

[< ಸಂ. ಕೂರ್ಚಿಕಾ ?]

**ಕುಂಚನ** (ನಾ). ತಿರುವು; ಬಾಗು: ಮಂದ, ಮಧ್ಯ, ವೇಗ, ಕುಂಚನ, ಉಚ್ಛೂನನ, ಸ್ತಂಭನ, ದೀರ್ಘಭೇದಂಗಳಿಂ ರವವಿಕಲ್ಪಂಗಳಂ ತೋಱೆ (ವಿವೇಕ. ೨೩೬). [ಸಂ.]

**ಕುಂಚನ್ಮಧ್ಯ** (ನಾ). ೧. ನಡುವೆ ಬಾಗಿದುದು; ಬಾಗಿದ ನಡುವುಳ್ಳದು. ೨. [ನಾಟ್ಯ] ಆರು ಬಗೆಯ ಪದತಲಭೇದಗಳಲ್ಲಿ ಒಂದು: ಪತಿತಾಗ್ರಂ . . . ಕುಂಚನ್ಮಧ್ಯಂ ಸತಿಯೆ ತಿರಶ್ಚೀನಮಾಱು ಪದತಳಭೇದಂ (ಲಾಸ್ಯರಂ. ೩-೧೨೦). [ಸಂ. (ಕುಂಚತ್ + ಮಧ್ಯ)]

**ಕುಂಚನ್ಮೂಲ** (ನಾ). [ನಾಟ್ಯ] ಹಸ್ತಾಂಗುಲಿಯ ಏಳು ಪ್ರಕಾರಗಳಲ್ಲಿ ಒಂದು: ಸಂಯುತ . . . ಕುಂಚನ್ಮೂಲ, ಪ್ರಸೃತ ಈ ಏಳು ಹಸ್ತಾಂಗುಲಿಯ ಭೇದಂಗಳ್ (ಲಾಸ್ಯರಂ. ೩-೧೧೩ ವ).

[ಸಂ. (ಕುಂಚತ್ + ಮೂಲ)]

**ಕುಂಚವಡಿಗ,** ಕುಂಚವಡುಗ (ನಾ). ಕುಂಚವನ್ನು ಹಿಡಿಯುವವನು; ಚಾಮರ ಬೀಸುವ ಆಳು: ಕುಂಚವಡಿಗಂ ಪುಲ್ಲವಡಿಗಂ (ಶಮಂದ. ೧೯೮ ಪ್ರಯೋ). **ಕುಂಚವಡುಗ:** ಕುಂಚವಡುಗ ದಾಸಯ್ಯನುಂ ಪೆರ್ಗ್ಗಡೆ ಬಿಬ್ಬಯ್ಯನುಂ ರನ್ನಿಯಬ್ಬೆಯುಂ (ಎಇ. XV, ೩೩೪-೧೨; 1040); ಸಿರಿವುರದ ಸಿರಿವಾಗಿಲಂ ಕುಂಚವಡುಗ ದಾಸಯ್ಯಂ ಮಾಡಿಸಿದುದಕೆ (ಸೌಇಇ. XI-i, ೭೫-೧೫; 1042).

[ಕುಂಚ + -ವಡಿಗ]

**ಕುಂಚವಡುಗ** ‘ಕುಂಚವಡಿಗ’ ನೋ.

**ಕುಂಚಿ**$_1$ (ನಾ). = ಕುಂಚಿಗೆ$_1$: (ಎಸಮ್ಮೈ. XV, ೪೪).

[← ಹಿಂ. ಮರಾ. ಕುಂಚೀ]

**ಕುಂಚಿ**$_2$, ಕುಂಜಿ$_1$ (ನಾ). ಕುಚ್ಚು; ಗೊಂಚಲು: ಆಗಳೆ ಕರಂಗಿಸಿದ ಮಸಿಯ ಕುಂಚಿಗಳೆನಿಸಿ ನೊಸಲಂ ಮುಸುಂಕಿದಳಕವಲ್ಲರಿಗಳೊಳಂ (ವರ್ಧಪು. ೯-೬೩ ವ). ೨. = ಕುಂಚ ೨: ಎಂತು ನುಡಿವೆನಿವರ ಚೆಲುವ? ಕಂತು ತನ್ನ ತೋಷಕಿರವ್ರಗೊಡಲು ತಾನೆ ಕುಂಚಿ ಹಿಡಿದನೆನಲೆ (ವಾಂದಳಿ. ೫೧); ತಿಮ್ಮನನ್ನೇ ಚಿತ್ರಿಸಿದ ಸಿಂಹನ ಕುಂಚಿಗೆ ಬೊಮ್ಮನ ಭಯವೂ ಇಲ್ಲ (ತಿಂಮುತ. ೭). **ಕುಂಜಿ$_1$:** ೨. ಬರಿಸಿ ಕೈಯೊಳು ಕುಂಜಿ ಹಿಡಿದುಕೊಂಡೆ (ವಿಸೀಗೀ. ೯೩-೧೭). [< ಕುಂಚ]

**ಕುಂಚಿಕೆ**$_1$, ಕುಂಚಿಗೆ$_2$ (ನಾ). ೧. = ಕುಂಚ ೪: ಈ ಲೇಖನಿಗಳಲ್ಲದೆ ಕುಂಚಿಕೆಗಳೂ ಉಪಯೋಗದಲ್ಲಿದ್ದುವು (ಕನ್ನಸಂ. ೪೪). **ಕುಂಚಿಗೆ$_2$:** ೧. “ಕುಂಚಮೆನಲ್ ಕುಂಚಿಗೆ” (ರನ್ನಕಂ. ೫); “ಕುಂಚಿಗೆ-ಕೂರ್ಚಿಕಾ = ಸಣ್ಣಕುಂಚ” (ತದ್ಭಕೋ. ೮); ರುಚಿರೋಜ್ವಲಾಂಗವಂ ಬಿಡದಮೃತಾಂಶು ರಶ್ಮಿಗಳ ಕುಂಚಿಗೆಯಿಂದಮೆ ಕರ್ಚಿ ಪಾಱದಂ ದೊಡೆದರೊ (ಕಾದಂಪೂ. ೬೬೭); ಬಸವನ ಚರ್ಮವಂ ತಟ್ಟಾಗಿ ಹೊದ್ದು ಆ ಬಸವನ ಬಾಲಮಂ ಯಂತ್ರಮುಟ್ಟಿ ಕುಂಚಿಗೆಯಾಗಿ ಪಿಡಿದು ಆ ಬಸವನ ಹೆಸರ ಬಸದಿಯಂ ಕಟ್ಟಿಸಿ (ಅವಚಂ. ೧೫೮-೭೨೧); ಕುಂಚಿಗೆಯನವಂ ಬೀಸಲೊಡಂ ಸೊಗಯಿಸಿದುದು ಭೋಂಕೆನಮರಪತಿ ಸಭೆ ನಭದೊಳ್ (ಲೀಲಾವ. ೪-೯೬). ೨. ನೇಕಾರರು ನೇಯ್ಗೆಯ ಎಳೆಗಳನ್ನು ಹಸನುಗೊಳಿಸಲು ಉಪಯೋಗಿಸುವ ಒಂದು ಬಗೆಯ ಸಾಧನ, —ಕುಂಚ: (ಕ). [< ಸಂ. ಕೂರ್ಚಿಕಾ]

**ಕುಂಚಿಕೆ**$_2$ (ನಾ). ಬೀಗದಕೈ; ಕೀಲಿಕೈ: ಈ ತೆರದ ವಿಚಾರ ಕುಂಚಿಕೆಯು ಹೃದಯ ಕವಾಟವನ್ನು ತೆರೆದು (ಜೀವಸೌ. ೨೭-೧೭).

[ಸಂ. ಕುಂಚಿಕಾ]

**ಕುಂಚಿಗ** (ನಾ). ಒಕ್ಕಲಿಗರಲ್ಲಿ ಒಂದು ಒಳಪಂಗಡ, —ಜಾತಿ: (ಎಸಮ್ಮೈ. XXXI, ೧); ವಕ್ಕಲತನದವರ್ರು ಕುಂಚಿಗರ್ರು ಕಡಮೆ ಜನ ಸಹ (ಎಕ. VI, ಚಿಕ್ಕಮ. ೧೯೯-೨೫; 1717). [?]

**ಕುಂಚಿಗೆ**$_1$ (ನಾ). (ಕೂಸಿನ) ತಲೆ ಮತ್ತು ಬೆನ್ನನ್ನು ಪೂರ್ತಿಯಾಗಿ ಮುಚ್ಚುವ ಕಸೆಗಳುಳ್ಳ ಕುಲಾಯಿ; ಕೊಪ್ಪೆ; ಗೊಪ್ಪೆ; ಗೊಂಗಡಿ: ಮತ್ತೆ ಕರೆಯಲು ಒಂದು ಕುಂಚಿಗೆಯಂ ಪತಿಯ ಕೈಯಲ್ಲಿ ಕೊಟ್ಟು ಪೋಗಲು (ಬೈರಸೂ. ೩೪೮); ಕುಂಚಿಗೆಯು ಚಂದ ಶಿಸುವಿಂಗೆ (ಸರ್ವಜ್ಞ. ೧೯೯೨); ಪಾಲ್ಗುಡಿಸಿ ಕುಂಚಿಗೆಯಂಗಿ ನೆತ್ತಿಯ ಕುಲಾಯಮಂ ತೊಡಿಸಿ (ನವಮೋ. ೧೫-೫೬); ಕೂಸು ಕುಂಚಿಗೆ ತಿಂತು ಹಾಸಿಗಿ ನೆಲ ತಿಂತು (ಕರ್ನಾಕ. ೩೭೪); ಕೂಸಿಗೆ ಬಂಗಾರದ ಬಿಂದಲಿ ಜರದ ಕುಂಚಿಗೆ ಎಲ್ಲಾ ತಂದಿದ್ದರು (ವೈನಿ. ೨೦೦).

[← ಪ್ರಾ. ಕುಂಚಿಯಾ]

**ಕುಂಚಿಗೆ**$_2$ ‘ಕುಂಚಿಕೆ$_1$’ ನೋ.

**ಕುಂಚಿಟಿಗ** ‘ಕುಂಚಟಿಗ’ ನೋ.

**ಕುಂಚಿತ$_1$** (ನಾ). ಕೀಳ್ಮಟ್ಟದವನು; ತುಚ್ಛನಾದವನು : ಕುಟಿಲ ಕುಹಕದ ಕುಂಚಿತರ . . . ಹಿಂಡು ನೆರೆದಾಗ (ಬಸವು. ೫೧-೫೪); ಕುಂಚಿತನು ನಾನು ನಿನ್ನೊಡನೆಯಜ್ಞಾನದಿಂದ ಚಮತ್ಕೃತಿಯಿಂದ ಕಾದಿ ಮಿಗಿಲಪ್ಪ ವರವಂ ಚಾಗುರೇ ಪಡೆದೆ (ವೀಶೈವು. ೩-೧೮-೪೦).
[< ಸಂ. ಕುತ್ಸಿತ ?]

**ಕುಂಚಿತ$_2$** (ಗು). ೧. ಬಾಗಿದ; ವಕ್ರವಾದ; ಮುದುಡಿದ; ಕುಗ್ಗಿದ; ಸಂಕೋಚವಾದ: ಕುಂಚಿತ ಪೂರ್ವಕಾಯನುಪಜಾತ ಜರಾಧವಳೋತ್ತಮಾಂಗನಂಗಾಚಿತ ಕಂಚುಕಂ (ಕಾದಂಪೂ. ೮೩); ಕಣ್ಣಮ್ಮನ ಹುಬ್ಬುಗಳು ಏಕಾಗ್ರತೆಯಿಂದ ಕ್ಷಣಕಾಲ ಕುಂಚಿತವಾದವು (ರೂಲೀಪಾ. ೫೫). (ನಾ). ೨. [ನಾಟ್ಯ] ನೃತ್ಯದಲ್ಲಿ ಕೈ, ಕಾಲು, ಕೊರಳು, ಕಣ್ಣು, ಪಾದ ಮೊದಲಾದವುಗಳ ವಿನ್ಯಾಸಗಳಲ್ಲಿ ಒಂದು: ಸಮ, ನಿವೃತ್ತ . . . ಕುಂಚಿತ . . . ಈ ಒಂಬತ್ತುಂ ಕೊರಲಭೇದಂಗಳ್ (ಲಾಸ್ಯರಂ. ೨-೧೧೪ ವ); ಸಮುಮೆನಿಸಿ ನಿಮಿರ್ವ ಕುಂಚಿತಮುಮುರ್ವ ಪಳಂಚುವ ಸಮುಂಚಿತಭ್ರೂಲತೆ ತಳ್ತಿಮೆದುಱುಗಲ ನೆಳಲೊಳ್ ಮುಖಕಮಳ ಮಯೂಖಾಂಬುವೀಚಿ ಚಲಿಪವೊಲೆಸೆಗುಂ (ರಾಜಶೇ. ೧೨-೭೭).
[ಸಂ.]

**ಕುಂಚಿತಕರಣ** (ನಾ). [ನಾಟ್ಯ] ನೃತ್ಯದಲ್ಲಿಯ ನೂರೆಂಟು ಕರಣಗಳಲ್ಲೊಂದು : ಬಲಗೈ ಮೇಲ್ಮೊಗವಾಗುತ್ತಲಸದೆಯಲಪದ್ಮಮಾಗಿ ಯೆಡಬರಿಯೊಳ್ಪೆಡಗೆಲಗಾಲದಗ್ರತಳದಿಂ ಚಲಿಸಲ್ಕದು ಕುಂಚಿತಾಖ್ಯಕರಣಮೆನಿಕ್ಕುಂ (ಲಾಸ್ಯರಂ. ೪-೧೧೫). [ಕುಂಚಿತ$_2$ + ಕರಣ]

**ಕುಂಚಿತಕೇಶ** (ನಾ). ಸುಳಿಗುರುಳು; ಉಂಗುರುಗೂದಲು. 'ಕುಂಚಿತಕೇಶಪಾಶ' ಪರಾ. [ಕುಂಚಿತ$_2$ + ಕೇಶ]

**ಕುಂಚಿತಕೇಶಪಾಶ** (ನಾ). ಉಂಗುರುಗೂದಲಿನ ಜಡೆ,—ಸಮೂಹ: ಪಾಂಚಾಲೀಕುಂಚಿತಕೇಶ ಪಾಶಾಕೃಷ್ಟಿ ಪಾತಕ ಪ್ರಧಾನ ನಿಹಿತ ಹಿತನೆನಿಸಿದ (ಗದಾಯು. ೭-೬೨); ಕುಂಚಿತಕೇಶಪಾಶಂ . . . ಸಿಂಹದಂತಿಮದ್ರೇಕ್ಕಾಣಂ (ಜಾತತಿ. ೧೯-೧೫). [ಕುಂಚಿತಕೇಶ + ಪಾಶ]

**ಕುಂಚಿತಾಂಗುಲಿ** (ನಾ). ಬಾಗಿದ ಬೆರಳು; ಕೊಂಕಿಸಿದ ಬೆರಳು: (ಕ). [ಕುಂಚಿತ + ಅಂಗುಲಿ]

**ಕುಂಚಿಸು** (ಕ್ರಿ). (ಕುಂಚದಿಂದ) ಬರೆ, —ರೇಖಿಸು; ಚಿತ್ರಿಸು: ಹರಿಹರದೇವಿಯ ಮಾತೃವಾತ್ಸಲ್ಯವನ್ನೂ . . . ಕುಂಚಿಸಿದ ಲೇಖನಿಯೇ ರತ್ನಾಜಿಯ ಚಿತ್ತವಿಕಾರವನ್ನು ಚಿತ್ರಿಸಿದೆ (ನಂಜುಂಡ. ೧೬೮).
[ಕುಂಚ + -ಇಸು$_3$]

**ಕುಂಚು** (ಕ್ರಿ). ಕುಗ್ಗು; ಬಾಗು.
ಕುಂಚದವ = ಯಾರಿಗೂ ಕುಗ್ಗದವನು, —ಬಾಗದವನು: "ಆದಟ" (ಚತುನಿ. ಕಿ. I, ೬೦). [< ಕುನಿ$_1$ + -ಚು]

**ಕುಂಜ** (ನಾ). ೧. ಬಳ್ಳಿಗಳು ಕವಿದ ಸ್ಥಳ; ಬಳ್ಳಿಮಾಡ; ಲತಾಗೃಹ: ಲತಿಕಾಕುಂಜಂಗಳೊಳ್ ಭೂವಿವರ ಕುಹರದೊಳ್ . . . ಕೂಡೆ ತೊಟಲ್ದರ್ (ಪಂರಾಮಾ. ೯-೧೩೭); ಮಲ್ಲೀವಲ್ಲೀ ಕುಂಜ ಪುಂಜ ರಂಜಿತಮಾದೊಂದು ಮುನಿಗಳಾಶ್ರಮದ ಪೊಜವಳಯದ ತೋಂಟದೊಳ್ (ರಾಮಾಶ್ವ. ೧೪೮-೮). ೨. ಆನೆಯ ಕೆಳದವಡೆ, —ಕೋರೆ; ಹಸ್ತಿದಂತ. ೪. ಗವಿ; ಗುಹೆ. 'ಕುಂಜೋಪಾಂತ' ಪರಾ. [ಸಂ.]

**ಕುಂಜನ** (ನಾ). ಹೊದರು; ಪೊದರು : "ಕುಂಜಃ, ಕುಂಜುಃ, ಕುಂಜನಂ– ಈ ೩ ಹೊದರ್" (ಕಾಶಕ್ಯ. ೬೫). [?]

**ಕುಂಜರ** (ನಾ). ೧. ಆನೆ; ಗಜ : "ಕರಿ ವಾರಣಂ ಕುಂಭಿ ಕುಂಜರಂ. . . ನಾಗಮಾನೆಯಕ್ಕುಂ" (ಮಂಗರಾ. ೪೭-೪); ದಿವಿಜಂ ಕುಂಜರ ಗಿರಿ ಸಾನುವನ ನಿಕುಂಜಕ್ಕೆ ಬಂದು ಕುಂಜರನಾದಂ (ಪಂರಾಮಾ. ೧೫-೫೧); ಕಂಜನಾಭಿಯಲ್ಲಿ ಕುಂಜರ ಬಂದು ಮುಂದಿರದವರನೆಲ್ಲ ಕೊಂದಿತ್ತು (ಮುಧುವ. ೨೨-೩೨); ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವನಯ್ಯ (ಮಹಾದೇ. ೧೩೮-೩೧೩); ಪವಮಾನಜನು ತಿರುಗಿಟ್ಟಣಿಸಿ ಸೇನಾಂಬುಜಕೆ ಕುಂಜರನಾದನ್ನೈ (ಕುವ್ಯಾಭೀ. ೫-೭). ೨. ಒಬ್ಬ ರಾಕ್ಷಸ; ಗಜಾಸುರ.'ಕುಂಜರಾರಿ' ಪರಾ. ೩. (ಅಲಂ) ಶ್ರೇಷ್ಠ; ಉತ್ತಮ : ಜಿನರಾಜಕುಂಜರಂಗೆ ನೀರಾಜನ ವಿಧಿಯಂ ಮಾಡಿ (ಅಜಿಪು. ೪-೬೮ ವ). [ಸಂ.]

**ಕುಂಜರಕರ** (ನಾ). ಆನೆಯ ಸೊಂಡಿಲು : "ಕುಂಜರಕರೇಪಿ ಶುಂಡಾ" (ಹಲಾಯು. ೧೩೪-೨೦). [ಕುಂಜರ + ಕರ$_3$]

**ಕುಂಜರಕುಳ** (ನಾ). ಆನೆಗಳ ಹಿಂಡು, —ಸಮೂಹ : ಕುಂಜರಕುಳ ಮಿತ್ರಲಿತ್ತ (ಕಾದಂಪೂ. ೧೫೫). [ಕುಂಜರ + ಕುಳ (= ಕುಲ)]

**ಕುಂಜರಗಮನೆ** (ನಾ). ಆನೆಯಂತೆ ಮಂದವಾದ ಗತಿಯುಳ್ಳವಳು; ಗಜಗಮನೆ: ಕುಂಜರಗಮನೆಯೆ ಗುಣಯುತಮಂಜರ ಮದಕುಂಜರಂಗ ಳೊಡನತಿಹಿತಮಂ ಅಂಜದೆ ಮಾಡಿರು (ಹವ್ಮಾರ ೨-೮೦).
[ಸಂ. ಕುಂಜರಗಮನಾ (ಕುಂಜರ + ಗಮನ + -)]

**ಕುಂಜರಗಾಮಿನಿ** (ನಾ). = ಕುಂಜರಗಮನೆ: ಮದವತ್ಕುಂಜರಗಾಮಿನಿ . . . ಕೊಯ್ದಲೊಸೆದು ಪೊಸಮಲ್ಲಿಗೆಯಂ (ಪುಷ್ಪಪು. ೮-೮೩).
[ಸಂ. ಕುಂಜರಗಾಮಿನೀ]

**ಕುಂಜರಘಟಾವಳಿ** (ನಾ). ಆನೆಯ ಸಮೂಹ; ಗಜಸೈನ್ಯದ ಸಾಲು: ಕೆಲಬಲದಲ್ಲಿ ಕುಂಜರಘಟಾವಳಿಯಶ್ವಬಲಂ . . . ಬರುತ್ತಮಿರೆ (ನಂಬಿರ. ೧೫-೧).
[ಸಂ. ಕುಂಜರಘಟಾವಲಿ (ಕುಂಜರ + ಘಟಾ + ಅವಲಿ)]

**ಕುಂಜರಾರಾತಿ** (ನಾ). = ಕುಂಜರಾರಿ : ಪಂಜರವಿಮುಕ್ತಕುಂಜರಾರಾತಿಯಂತೆ (ಪುಷ್ಪಪು. ೪-೭೦ ವ). [ಕುಂಜರ + ಆರಾತಿ]

**ಕುಂಜರಾರಿ** (ನಾ). ೧. ಆನೆಯ ಶತ್ರು; ಸಿಂಹ: ಸಂಜೀವಕ ನೀನೆನಿತನಿತಂಜಿದೊಡಂ ಕುಂಜರಾರಿ ಕೊಲ್ಲದೆ ಮಾಣಂ (ಪಂಚತಂ. ೧೬೬-೪). ೨. ಗಜಾಸುರನ ವೈರಿ; ಶಿವ : ಕುಂಜರಾರಿಗಣ ಪ್ರಸಾದವ ನೆಂಜಲೆಂಜಲಿದೆಂದು ಪಾಪಕ್ಕಂಜದೆಂಬಿರಿ (ಬಸವು. ೫೬-೨೨). ೩. ಶರಭ.
[ಕುಂಜರ + ಅರಿ$_6$]

**ಕುಂಜರಾಶನ** (ನಾ). ಅರಳಿಮರ; ಅಶ್ವತ್ಥವೃಕ್ಷ: (ಕ). [ಸಂ.]

**ಕುಂಜರಾಸನ** (ನಾ). [ಯೋಗ] ಎಂಭತ್ನಾಲ್ಕು ಯೋಗಾಸನಗಳಲ್ಲಿ ಒಂದು : ಯೋಗ ಯೋಗ್ಯಾಸನಗಳಲ್ಲಿ . . . ಕುಂಜರಾಸನ . . . ಅರ್ಧಾಸನಾದಿಯೆಂಭತ್ನಾಲ್ಕಾಸನಭೇದಗಳೆಂದು (ವಿವೇಕ. ೧೪೯).
[ಕುಂಜರ + ಆಸನ]

**ಕುಂಜಲ** (ನಾ). ಹುಳಿಗಂಜಿ; ಅಂಬಲಿ : (ಕ). [ಸಂ.]

**ಕುಂಜವನ** (ನಾ). ಬಳ್ಳಿ ಮಂಟಪಗಳ ತೋಟ : ಉದ್ಯಾನದ ಮಧ್ಯೆ ಕುಂಜವನವಿತ್ತು. ಅಲ್ಲಿಯೇ . . . ಚಿಕ್ಕದೊಂದು ಕೊಳವಿತ್ತು (ಅಶ್ರಮ. ೬೩). [ಕುಂಜ + ವನ]

**ಕುಂಜಿ$_1$** 'ಕುಂಚಿ$_2$' ನೋ.

**ಕುಂಜಿ$_2$** (ನಾ). ಒಂದು ಮೂಲಿಕೆ: "ನಿಕುಂಜಿಕಾ– ಕುಂಜಿ" (ಓಷಧಿ. ೮೭). [?]

**ಕುಂಜಿ$_3$** (ನಾ). ಮಗು; ಶಿಶು: ಅಸುರ ತನ್ನ ಸುತನ ಕೊಲ್ಲಿಸ ಬೇಕೆಂದಾಗ ಅಟ್ಟಿ ಅಡವಿಯೊಳ್ ವಿಷವನಿಟ್ಟು ಭೋಜನಂಗಳ್ ಮಾಡಿ ಹರಿಯ ಸ್ಮರಣೆ ಮಾಡುತಲೇ ಕುಂಜಿ ತಿಳಿದ ಜಟ್ಟಿ ಹಾಂಗೆ (ಪುರಂದ. ೪-೭-೨).
[ದೇ. ‖ ತಮಿ. ಕುಞ್ಚು; ಮಲ. ಕುನ್ನು; ತುಳು. ಕಿಞ್ಞಿ; ಕುಞ್ಞಿ]

**ಕುಂಜಿಗೆ** (ನಾ). ಒಂದು ಮೂಲಿಕೆ: "ಆಮೂಖ್ಯ - ಕುಂಜಿಗೆ" (ಓಷಧಿ. ೧೧). [?]

**ಕುಂಜು** (ಕ್ರಿ). ನೆಗೆ; ಜಿಗಿ; ಹಾರು; ಕುಣಿ: (ಜತುನಿ. ೬. I, ೭೬); ಎಜಗದರಾತಿ ಭೂಭುಜರ್ಗೆ ವಿಷ್ಣು ನೃಪಾಳನ ಸೂನು ಮೇಘದಿಂ ಪೊಜ ಮುಡದಟ್ಟಿ ಪೊಯ್ವ ಸಿಡಿಲ್ ... ಉರ್ವಿದ ಕೋಪದಿ ಕುಂಜಿ ಕಂಬದಿಂ ಪೊಜಮುಡದಾ ನೃಸಿಂಹನೆನಿಪಂ ನರಸಿಂಹನೃಪಂ ಪ್ರತಾಪದಿಂ (ಸೌಇಇ. XV, ೨೧೬-೩೩; 1202). [? . / ತಮಿ. ಕುಂಜಿ]

**ಕುಂಜೋಪಾಂತ** (ನಾ). ಹೊದರಿನ ಅಂಚು, —ದಂಡೆ, —ಸಮೀಪ: ಧನದ ನಗಂ ತನಗಟ್ಟಿದೊಡೆ ರಾಯಭಾರಿತನಂ ಬಂದಂತಿ ರ್ಪವಿದಜ ಕುಂಜೋಪಾಂತಂ ಥಳಥಳಿಸಿ ಬೆಳಗೆ ಕುಳಿಶಾಶ್ಮಂಗಳ್ (ಶಾಂತಿಪು. ೨-೧೧೫). [ಕುಂಜ + ಉಪಾಂತ]

**ಕುಂಟ**$_1$ (ನಾ). ಕಾಲು ಊನವಾದವನು; ಒಂದೇ ಕಾಲುಳ್ಳವನು: "ಏಕಾಂಘ್ರಿಯೆನೆ ಕುಂಟನಕ್ಕು" (ಮಂಗರಾ. ೧೧೫-೬); ಕುರುಡರುಮಂ ಕುಂಟರುಮಂ ತಿರಿಕರುಮಂ ಕಂಡೊಡೆ (ಧರ್ಮಾಮೃ. ೯-೫೫); ಕಾಲಿ ರ್ದೊಡೆ ಕುಂಟರಪ್ಪರೆ (ಸೋಮೇಶ. ೫೩); ಪವಣ್ಗೆ ನಿಮಿರ್ದರ್ ಗುಜ್ಜರ್ಕರಂ ಕುಂಟರಪ್ಪವರ್ಗಂ ಕೆಟ್ಟುವು ಕುಂಟು (ಬಂಹರಿ. ೯-೨೫); ಕಾಲಿಂ ಕುಂಟಂ, ಕಯ್ಯಿಂ ಮೋಟಂ (ಶಬ್ದಾನು. ೨೧೦ ಪ್ರಯೋ); ಕುಂಟನಿಗೆ ಎಂಟು ಚೇಷ್ಟೆ ಕುರುಡನಿಗೆ ನಾನಾ ಚೇಷ್ಟೆ (ಗಾದೆ). [ಕುಂಟು$_2$ (< ಕೂಂಟು$_2$) + -ಅ$_7$]

**ಕುಂಟ**$_2$ (ಗು). ೧. ದಡ್ಡ; ಮಂದ. ೨. ಅಶಕ್ತ: "ಕುಂಠ - ಕುಂಟ" (ಶಬ್ದಾನು. ೧೪೨ ಪ್ರಯೋ). 'ಕುಂಟದೇವತೆ' ಪರಾ. ೩. ಸರಿಯಾಗಿ ನಡೆಯದ; ಅಸಮರ್ಪಕ. 'ಕುಂಟಚಾಕರಿ' ಪರಾ. [< ಸಂ. ಕುಂಠ]

**ಕುಂಟಂಪಿಲ್ಲಿ** 'ಕೂಂಟು$_1$' ಪರಾ.

**ಕುಂಟಗ** 'ಕುಂಟಿಗ' ನೋ.

**ಕುಂಟಗೆಣಸು** (ನಾ). ಒಂದು ಜಾತಿಯ ಗೆಣಸು: ಕುಂಟಗೆಣಸು, ಹೆಗ್ಗೆಣಸು (ಮೈಔಗಿ. ೩೧-೫೯೪). [< ಕುಂಟು$_3$ + ಗೆಣಸು (< ಗೆಟಿಸು)]

**ಕುಂಟಚಾಕರಿ** (ನಾ). ಸರಿಯಾಗಿ ನಡೆಯದ ಕೆಲಸ; ನಡು ನಡುವೆ ನಿಂತು ಹೋಗುವ ಚಾಕರಿ: ಅವಳೂ ಈ ಕುಂಟ ಚಾಕರಿಯಲ್ಲಿ ಕೊಳೆ ಬೀಳುವುದಕ್ಕಿಂತ ಬಂದ ಸಂಧಿಯನ್ನು ಬಿಡಬಾರದೆಂದೇ ನಿರ್ಧರಿಸಿದಳು (ದಾಸಹು. ೩೨). [ಕುಂಟ$_2$ + ಚಾಕರಿ]

**ಕುಂಟಜವಾಬು** (ನಾ). ೧. ಸುಳ್ಳು ಉತ್ತರ; ಸಮರ್ಪಕವಲ್ಲದ ಜವಾಬು, —ವಿವರಣೆ: ಆತನು ನಿನ್ನೆ ಕೆಲಸಕ್ಕೆ ಬಾರದುದಕ್ಕೆ ಏನೋ ಒಂದು ಕುಂಟಜವಾಬು ಹೇಳಿದ (ರೂಢಿ). 'ಕುಂಟುನೆಪ' ಪರಾ. ೨. ಮೊಟಕಾದ ಉತ್ತರ: ಹೆಚ್ಚು ಮಾತಾಡಿದರೆ ಸಿಕ್ಕಿ ಬೀಳಬಹುದೆಂದು ಕುಂಟ ಜವಾಬು ಕೊಟ್ಟ (ರೂಢಿ). [ಕುಂಟ$_2$ + ಜವಾಬು]

**ಕುಂಟಣಗಿತ್ತಿ** 'ಕುಂಟಣಿಗಿತ್ತಿ' ನೋ.

**ಕುಂಟಣಿ**, ಕುಂಟಲಿ, ಕುಂಟಿಣಿ, ಕುಂಠಣಿ, ಕೂಂಟಣಿ, ಕೂಟಣಿ (ನಾ). ೧. (ವ್ಯಭಿಚಾರಕ್ಕಾಗಿ) ಗಂಡು ಹೆಣ್ಣುಗಳನ್ನು ಹೊಂದಿಸುವ ದಾಸಿ; ತಲೆಹಿಡುಕಿ: "ಶಂಭಳಿ ಕುಟ್ಟನಿಯೆನಲ್ಕೆ ಕುಂಟಣಿಗೆ ನಾಮ ಮಕ್ಕುಂ" (ಮಂಗರಾ. ೯೦-೪); "ನಿರುತಂ ದೂದವಿ ಕುಂಟಣಿಕರ ಮಕ್ಕಭಿಸಾರಿಕಾಭಿದಾನದಿನೆಂದುಂ" (ಕವಿಕಂ. ೧೬೭); ಓರ್ವಳ್ ಕುಂಟಣಿಯುಪರೋಧಕ್ಕೆ ಪಿರಿದೀವ ಮುದುಪನನುಱಿಯಲಂಜಿ ತನ್ನ ಬೇಸಱಂ ತನ್ನ ಸಬ್ಬವದಾಕೆಗಿಂತೆಂದಳ್ (ಪಂಪಭಾ. ೪-೯೯ ವ); ಮಾತನಜಿಯದ ಸೂಳೆ ಕುಂಟಣಿಯಂ ಬೈದಳೆಂಬನಾಣ್ಣುಡಿಯಂತೆ (ಧರ್ಮಾಮೃ. ೯-೧೩೨); ಕರೆಯದೆ ಕಾಡಿ ಕುಂಟಣಿಸುವ ಕುಂಟಣಿಯಂ ನೊಣ ಗಚ್ಚಿತಿಂಗೆ (ಲೀಲಾವ. ೨-೧೦೬); ಜಗವು ಕುಂಟಣಿಯಿಂದ ಕೆಡುಗು (ಸರ್ವಜ್ಞ. ೧೪೫೬). ೨. ಕುಂಟಣಿಯ ಕೆಲಸ ಮಾಡುವವನು; ತಲೆಹಿಡುಕ: ಧವಳಾರದೊಳಗೊಬ್ಬ ಸೂಳೆ ನೋಡಯ್ಯ ... ಕರುಳಿಲ್ಲದಾತ ಕುಂಟಣಿಯಾದ ನೋಡಯ್ಯ (ಅಪಚಂ. ೯೯-೪೫); ಹರಿಗೆ ಕೆಂಪಿನ ಝುಗೆ ಸುರಾಂಗನೆಯರಿಗೆ ಸುಭಟವ್ರಜಕೆ ಕುಂಟಣಿ (ಕುವ್ಯಾಭೀ. ೪-೭). ೩. ಕುಂಟಣಿಯ ಕೆಲಸ; ತಲೆಹಿಡುಕತನ: ಶಿವಲಿಂಗಂ ಜಂಗಮ ರೂಪಂ ಕೈಕೊಂಡು ನಂಬಿಯಣ್ಣಂಗೆ ಕುಂಟ[ಪಾಠಾಂ. ಠ]ಣಿಯಂ ನಡೆಯಲೆಂದು (ನಂಬಿರ. ೧೨-೯೫); ನಂಬಿ ಕೆಳೆ ಬಲ್ಲಳನೆ ಕುಂಟ[ಪಾಠಾಂ. ಠ]ಣಿ ಸಾಂಬ ನಿಮ್ಮಂ ನಗಿಸುವಂ ಕಲಿಯೆಂಬನು (ಬಸಪು. ೯-೪೧); ಬಳೆದೊಡಿಪ ಕುಂಟಣಿಯ ನಡೆಯಿಸುವ ಮುದಿವೆಣ್ಣಳು (ಚಬಪು. ೪೭-೪೨). **ಕುಂಟಲಿ**: ೧. ಅವಳು ಕುಂಟಲಿಯ ಕಾರ್ಯವನ್ನು ಚೆನ್ನಾಗಿ ನೆರವೇರಿಸುತ್ತ ಹೋದಂತೆ ವೇತನವು ಹೆಚ್ಚಾಗುತ್ತಿತ್ತು (ಸ್ಕೂಲವಿ. ೩೭); ಕುಂಟಸವತಿಯ ಸೊಂಟ ಮುರಿಹೊಡೆದ ... ಕುಂಟಲಿಯರ ಹಾದಿಯ ಸು ಕಡಿದ (ಶರೀಫ. ೫೦-೫೦). **ಕುಂಟಿಣಿ**: ೧. ಗೊರತಿಯು ಕಂತಿಯ ಕುಂಟಿಣಿಯರ ... ಮುಂದಂ ನುಡಿಯಲೀಯಲಾಗದು ವಧುವಂ (ಮುದತಿ. ೮-೨೬); ತನುವ ನೋಯ್ವೊಡದಿ ರೆನುತಾಗ ಮುದಿ ಕುಂಟಿಣಿಯು ಬೋಧಿಸಿದಳಾತ್ಮಭವೆಗೆ (ವೆಂಕಾರಾ. ೫-೬-೫೦). ೨. ಬಾಣನ ಬಾಗಿಲ ಕಾಯ್ದುವನ ನಂಬಿಗೆ ಕುಂಟಿಣಿಯಾದವನ (ಬಸವ. ೫೦೩); ಶಿವನ ಕುಂಟಿಣಿಯ ಬಾಚರಸ ಬಾರೆಂದು (ರಾಘಚ. ೧೫-೯೨). **ಕುಂಠಣಿ**: ೧. "ಕುಂಠಣಿ, ಶಂಭಲಿ ಈ ೨ ಕುಂಠಣಿ" (ನಾಚಿರಾ. ೧೧೭); ತನ್ನ ಅಭಿಮಾನಕ್ಕೆ ತಾನೇ ಕುಂಠಣಿಯಹ ಬಿನ್ನಣವ ಕೇಳಿ (ಗುರುಬೋ. ೧೧೬). ೨. ಸಂಕಲೆ ಪರವೆಯರಿಗೆ ಕುಂಠಣಿಯಾದ ಹರನೆ (ಲಶಿಚಂ. ೩೫-೨೩). **ಕೂಂಟಣಿ**: ೧. "ಕುಟ್ಟನೀ, ಶಂಭಳೀ, ಚುಂಡೀ—ಈ ೩ ಕೂಂಟಣಿ" (ಹಲಾಯು. ೮೧-೩೩೮). **ಕೂಟಣಿ**: (೬).

**ಕುಂಟಣಿಮಾಡು** = ಕುಂಟಣಿಯಾಗಿ ನಿಯಮಿಸು: ದೇವನಂ ತನಗೆ ಕುಂಟಣಿಮಾಡಿ. . .ತೋಱುವಂತೆ (ನಂಬಿರ. ೨-೭). [< ಸಂ. ಕುಟ್ಟನೀ]

**ಕುಂಟಣಿಕೆ** (ನಾ). ಕುಂಟುವಿಕೆ; ನೆಗೆಯುವಿಕೆ; ಕುಪ್ಪಳಿಸುವಿಕೆ.

**ಕುಂಟಣಿಕೆಯಾಟ** = ಕುಂಟಿ, ಕುಪ್ಪಳಿಸಿ ಆಡುವ ಒಂದು ಆಟ; ಕುಂಟಾಟ: (೬). [ಕುಂಟು$_1$ + ?]

**ಕುಂಟಣಿಗ**, ಕುಂಟಲಿಗ (ನಾ). = ಕುಂಟಣಿ ೨: ಕುಂಟಣಿಗನೊಡನಂಡಲೆದು ಬೇಡಿನಲು (ಬಸಪು. ४೦-೨೫); ಕುಪಿತ ಮಾನಸನ ಖೂಳನ ಕುಂಟಣಿಗನ ಮಹ ಕಪಟಜೀವಿಯ ... ಸತತ ಕೃಪೆಮಾಡಿ ಸಲಹೆನ್ನನು (ಪ್ರಭುಪು. ೯-೧೧೩). **ಕುಂಟಲಿಗ**: ನಮಗೆ ಲೋಕವೆಲ್ಲವು ಮುನಿಯದೆ ಬಿಡದು ಎಂದು ಆ ಕುಂಟಲಿಗರು ಚಿಂತಿಪರು (ಬಜ್ಜರಾ. ೬-೪); ಶಾಸ್ತ್ರಿಯೂ ... ಲೀಲಾವತಿಯೂ ಈ ವಿಷಯದಲ್ಲಿ ಕುಂಟಲಿಗರಾಗಿ ಕೆಲಸಮಾಡಿದರು (ಮೋಹಬ. ४೭೨). [ಕುಂಟಣಿ + -ಇಗ]

**ಕುಂಟಣಿಗಾತಿ** (ನಾ). = ಕುಂಟಣಿ ೧: ಕುಂಟಣಿಗಾತಿಯರು ಪೇಳಿರುವ ಸಂಕೇತಮಂಟಪಂಗಳಿಗೆ ವಂಟಿವಂಟಿಯಾಗಿ ಬಂದು (ಸೌಗಂಧಿ. ೧೮೬-೧೫). [ಕುಂಟಣಿ + -ಗಾರ (< -ಕಾಱ) + -ತಿ$_2$ (< -ಇತ್ತಿ)]

**ಕುಂಟಣಿಗಿತ್ತಿ**, ಕುಂಟಣಗಿತ್ತಿ, ಕುಂಟಲಗಿತ್ತಿ, ಕುಂಟೆಣಿಗಿತ್ತಿ (ನಾ). = ಕುಂಟಣಿ ೧: (೬). **ಕುಂಟಣಗಿತ್ತಿ**: "ಕುಟ್ಟನಿ-ಕುಂಟಣಗಿತ್ತಿ" (ಗಂಗಾಮು. ೮೯); ವೈಕುಂಠಕ್ಕೆ ಹೋದರೂ ಕುಂಟಣಗಿತ್ತಿಯ ಉಪದ್ರ ತಪ್ಪಲಿಲ್ಲ (ಗಾದೆ). **ಕುಂಟಲಗಿತ್ತಿ**: ಒಬ್ಬ ಕುಂಟಲಗಿತ್ತಿಯ ಮುಖಾಂತರ ತಿಳಿದುಕೊಂಡು (ಮೇದಿಮು. ४೬); ನೀನು ಕುಂಟಲಗಿತ್ತಿಯೆಂಬುದು ಮಾತ್ರ ಗೊತ್ತಿರಲಿಲ್ಲ (ಎಡಹ. ೬೬). **ಕುಂಟೆಣಿಗಿತ್ತಿ**: ಪುರಾಣವ ಹೇಳುವರೆಲ್ಲ ಕುಂಟಣಿಗಿತ್ತಿಯ ಮಕ್ಕಳು (ವಚಶಾ. I, ೩೬೦). [ಕುಂಟಣಿಗ + -ಇತ್ತಿ]

**ಕುಂಟಣಿಗೆಯ್** (ಕ್ರಿ). ಕುಂಟಣಿಯ ಕೆಲಸಮಾಡು; ಗಂಡು ಹೆಣ್ಣುಗಳನ್ನು ಹೊಂದಿಸುವುದಕ್ಕಾಗಿ ದೌತ್ಯ ನಡೆಸು: ಆಯ್ಯಗಳಾಟವೆ ಕುಂಟಣಿಗೆಯ್ವುದಿದಯ್ಯಗಳಿರವೇ ಬಾಗಿಲ್ಗಾಯ್ವುದು (ಉದ್ಭದೇ. ೫-೩೨). [ಕುಂಟಣಿ + ಕೆಯ್₁]

**ಕುಂಟಣಿತನ, ಕುಂಠಣಿತನ** (ನಾ). = ಕುಂಟಣಿ ೩: ತರಳನಿನಗೆ ಚೆಲ್ವಪರವೆಯ ತಂದೀವ ಪಿರಿದು ಕುಂಟಣಿತನವನು ಮಾಳ್ಪ ಇರವೆಮಗಲ್ಲದಿನ್ನಾರಿಗೆ ಸಲ್ಲದು (ಶ್ರೀಭುತಿ. ೧೨-೧೪); ರತ್ನಾಜಿಯ ಮನೋರಥದ ಸಫಲತೆಗೆ ಕುಂಟಣಿತನದ ವಿದ್ಯಾಪರಿಣತೆ ಸಂಗಿಯ ಸಹಾಯವೂ ಕುಟಿಲ ದೇವತೆಗಳ ಕುತಂತ್ರವೂ ಆವಶ್ಯವಾಗುತ್ತದೆ (ನಂಜುಂಡ. ೫೯). **ಕುಂಠಣಿತನ**: ಹಡಪವ ಹಿಡಿದು ಕುಂಠಣಿತನವ ನಡಸಿ (ಗುರುಬೋ. ೭೪). [ಕುಂಟಣಿ + -ತನ]

**ಕುಂಟಣಿದೊೞ್ತು, ಕೂಂಟಣಿದೊೞ್ತು** (ನಾ). = ಕುಂಟಣಿ ೧: ಪೂತಿಗಂಧಿಯೆಂಬ ಕಿಸುಕುಳಂ ನಾರ್ಪ ಕುಂಟಣಿದೊೞ್ತಾಗಿ ಪುಟ್ಟಿದಳ್ [ಪಾಠಾಂ. ಕಿಸುಗುಳಿಮಂ ನಾರ್ಪ ಕೂಂಟಣಿದೊೞ್ತಾದಳ್] (ಜೀವಸಂ. ೮-೨೭ ವ). **ಕೂಂಟಣಿದೊೞ್ತು**: ಕೂಂಟಣಿದೊೞ್ತಿ ಕೂರಿಸಿದ ಕಾದಲನಂ ಬಿಸುಡೆಂದು ಕೀೞು ಬಾಯುಂಟಿನಗೆಂದು ಬಗ್ಗಿಸುವೆ (ಮಲ್ಲಿಪು. ೭-೬೪). [ಕುಂಟಣಿ + ತೊೞ್ತು]

**ಕುಂಟಣಿನಡೆ** (ಕ್ರಿ). ಕುಂಟಣಿಯ ಕೆಲಸಮಾಡು; ತಲೆಹಿಡುಕನಾಗು: ಮನಮೊಸೆದು ಕುಂಟಣಿನಡೆದನಿಂದುಧರನೆಂಬ ನುಡಿಯೊಡನೆ (ಕಲಿಕಾ. ೩೦೦-೧೨). [ಕುಂಟಣಿ + ನಡೆ₁]

**ಕುಂಟಣಿಮನೆ** 'ಕುಂಟಣಿವನೆ' ನೋ.

**ಕುಂಟಣಿಮಾತು** 'ಕುಂಟಣಿವಾತು' ನೋ.

**ಕುಂಟಣಿವದಿರ್** (ನಾ). ಕುಂಟಣಿಯ ಮಾತಿನಲ್ಲಿರುವ ದ್ವಂದ್ವಾರ್ಥ, —ಶ್ಲೇಷೆ: ಬಡತನವೆಂಬುದು ಸತಿಯರ ನಡುವಿನೊಳ್ . . . ಕೋಳ್ನುಡಿ ಕುಂಟಣಿವದಿರೊ[ಪಾಠಾಂ. ಲೊ]ಳಲ್ಲದಿಲ್ಲಾನಾಡೊಳ್ (ಧರ್ಮಪ. ೧-೩೭). [ಕುಂಟಣಿ + ಪದಿರ್]

**ಕುಂಟಣಿವನೆ, ಕುಂಟಣಿಮನೆ** (ನಾ). ಕುಂಟಲಗಿತ್ತಿಯ ಮನೆ: "ತಾಹೆಯೆಂದುಂ ತಾಪೆಯೆಂದುಂ ಕುಂಟಣಿವನೆ" (ಕಶಸಾ. ೨೫-೫೧೭). **ಕುಂಟಣಿಮನೆ**: (ಕ). [ಕುಂಟಣಿ + ಮನೆ]

**ಕುಂಟಣಿವಾತು, ಕುಂಟಣಿಮಾತು** (ನಾ). ಕುಂಟಣಿಯ ಮಾತು; ತಲೆಹಿಡುಕತನದ ಮಾತು: ಕಡೆಗಣ್ ಕುಂಟಣಿವಾತು ದೂದವಿ ಮನಂ ತಾಯ್ತಂದೆ ಬಲ್ಗೆಯ್ತುಮೊಳ್ದೊಡವಂದಂ (ಲೀಲಾವ. ೨-೯೭). **ಕುಂಟಣಿಮಾತು**: ಕಲವಿಂಕನ ಕುಂಟಣಿಮಾತುಗಳಿಗೆ ಕೋಪಗೊಂಡಂತೆ (ಸೌಗಂಧಿ. ೧೯೧-೫). [ಕುಂಟಣಿ + ಮಾತು₁]

**ಕುಂಟಣಿವಿದ್ಯೆ** (ನಾ). ಕುಂಟಲಗಿತ್ತಿಯ ವಿದ್ಯೆ; ತಲೆಹಿಡುಕ ವಿದ್ಯೆ: ಕುಂಟಣಿವಿದ್ಯೆಯಲ್ಲಿ ಪಾರಂಗತಳಾದ ಆ ಹೆಣ್ಣು (ನಂಜುಂಡ. ೭೫). [ಕುಂಟಣಿ + ವಿದ್ಯೆ]

**ಕುಂಟಣಿವೋಗು** (ಕ್ರಿ). = ಕುಂಟಣಿ ನಡೆ: ನಂಬಿಗೆ ಕುಂಟಣಿವೋದ [ಪಾಠಾಂ. ಯಾದ] ಪರಿಗಳಂ ನಂಬಿಗೆ ಸೂಱೆಯನಿತ್ತ ಪರಿಗಳಂ (ಭೃಂಗೀಶ. ೧೪-೧೪). [ಕುಂಟಣಿ + ಪೋಗು₁]

**ಕುಂಟದೇವತೆ** (ನಾ). ದುರ್ಬಲವಾದದೇವತೆ; ಕ್ಷುದ್ರದೇವತೆ: ಕುಂಟದೇವತೆ ಸೇರಿ ಮನೆಯವರ್ಗಾಪನೆನ್ನದೆ ಸೂನು ತೀರಿದೆಡೆ (ಬಸಪು. ೪೮-೧೮). [ಕುಂಟ₂ + ದೇವತೆ]

**ಕುಂಟನಹುಣ್ಣು** (ನಾ). ಒಂದು ಬಗೆಯ ಹುಣ್ಣು, —ವ್ರಣ: ಅವನ ಮೊಣಕಾಲಿನ ರೋಮಮಯವಾದ ಮಾಂಸಖಂಡದಲ್ಲಿ ಒಂದು ಕುಂಟನ ಹುಣ್ಣು ಇದ್ದು, ಅದಕ್ಕೆ ಇದ್ದಲನ್ನು ತೇದು ತಯಾರುಮಾಡಿದ ಕರಿಯ ಸುದ್ದು ಬಳಿದಿತ್ತು (ಕಾನೂರು. ೫೦೩). [ಕುಂಟ₂ + ಹುಣ್ಣು (< ಪುಣ್)]

**ಕುಂಟನೇರಳೆ, ಕುಂಟುನೇರಳೆ** (ನಾ). ನೇರಳೆಯಲ್ಲಿ ಒಂದು ಜಾತಿ: (ಕ). **ಕುಂಟುನೇರಳೆ**: ಕುಂಟುನೇರಳೆ, ಗುಡ್ಡನೇರಳೆ (ವೃಣಿಔ. ೩೩-೬೩೫). [< ಕುಂಟು₃ + ನೇರಳೆ (< ನೇಱಲೆ)]

**ಕುಂಟಮುರುವ** (ನಾ). ಕುಂಟ; ಅಂಗಹೀನ: ಕಾಲಿದ್ದವರು ಕಾಶಿಗೆ ಹೋದರೆ ನೀನೆಲ್ಲಿ ಹೋದೀ ಕುಂಟಮುರುವ? (ಗಾದೆ). [ಕುಂಟ₁ + ಮುರುವ (< ಮುಱುವ)]

**ಕುಂಟಲ** (ಗು). ಕುಂಟುವ; ಕುಂಟಾದ: ಕುಂಟಲ ಎತ್ತೊಂದು ಓಡಿ ಹೋಗಿ ಗಿಯಾಸ, ಬೇಗಂಗಿಯಾಸರ ಪ್ರಾಣರಕ್ಷಣೆ ಮಾಡಿತು (ಸೂರಜ. ೫). [ಕುಂಟ₁ + ಅಲ್₀ (< -ಅಲ್ಲು₂)]

**ಕುಂಟಲಗಿತ್ತಿ** 'ಕುಂಟಣಿಗಿತ್ತಿ' ನೋ.

**ಕುಂಟಲತನ** (ನಾ). ಕುಂಟಣಿಯ ಕೆಲಸ: (ಕ). [ಕುಂಟಲ್₀ (< ಕುಂಟಣಿ) + -ತನ]

**ಕುಂಟಲಪಿ** 'ಕುಂಟಹಲಪಿ' ನೋ.

**ಕುಂಟಲಿ** 'ಕುಂಟಣಿ' ನೋ.

**ಕುಂಟಲಿಗ** 'ಕುಂಟಣಿಗ' ನೋ.

**ಕುಂಟವೆರಲ್** (ನಾ). ಮೊಂಡಾದ ಬೆರಳು; ಮುರುಟಿದ ಬೆರಲು: ಮತ್ತೊರ್ವಂ ಕುಂಟವೆರಲಾತಂ ತನ್ನ ಬೆರಲುಂ ಸಯ್ತಾದೊಡೆ ಕೃತಾಂಜಲಿಯಾದಂ (ಚಾವುಂಪು. ೧೦೮-೧೦). [ಕುಂಟ₁ + ಬೆರಲ್]

**ಕುಂಟಸುದ್ದಿ** (ನಾ). ಸುಳ್ಳು ಸಮಾಚಾರ; ಜೊಳ್ಳುಸುದ್ದಿ: ನೆಂಟರಿಷ್ಟರು ಬಂದು ಮನೆಮುಂದೆ ಕುಳಿತಿರಲು ಕುಂಟಸುದ್ದ ನೀನಾಡಿದ್ಯಲ್ಲೋ ಪ್ರಾಣಿ (ಪುರಂದ. ೧-೮೭-೩). [ಕುಂಟ₂ + ಸುದ್ದಿ]

**ಕುಂಟಹಲಪಿ, ಕುಂಟಲಪಿ** (ನಾ). ಕುಂಟುತ್ತ ಕಲ್ಲಿನ ಬಿಲ್ಲೆಯನ್ನು ಕಾಲಿಂದ ಚಿಮ್ಮಿಕೊಂಡು ಹೋಗುವ ಒಂದು ಆಟ; ಕುಂಟೆಬಿಲ್ಲೆ; ಕುಂಟಂಪಿಲ್ಲಿ: (ಕ). **ಕುಂಟಲಪಿ**: ಆ ಕುಂಟಲಪಿಯಾಟದ ಕುಣಿತ ಎಂಥದು! (ಕನಕ. ೯೫); ತಾನು ಹುಡುಗಿಯಾಗಿದ್ದಾಗ ಬಿಸಿಲುನೆಳಲಾಟ, ಕುಂಟಲಪಿ, ಕಣ್ಣುಮುಚ್ಚಾಲೆಯಾಟಗಳನ್ನು ಆಡಿದ್ದಳು (ಬರಹಾ. ೧೨೩); ಲಲಿತ ಗೌರಿ ಕುಂಟಲಪಿ ಆಡಿದರು (ಕಪಪು. ೧-೨೫). [ಕುಂಟ₁ + ಹಲಪಿ (< ಹಲಿಪೆ)]

**ಕುಂಟಳೆ** (ನಾ). ಒಂದು ಬಗೆಯ ಮೂಲಿಕೆ: ಬಸಲೆಸೊಪ್ಪು, ತೊಂಡೆಸೊಪ್ಪು, ಕುಂಟಳದ ಸೊಪ್ಪು (ವಿವೈವಿ. ೧೪೫). [?]

**ಕುಂಟಾಟ** (ನಾ). ೧. ಕುಂಟುತ್ತ ಮುಟ್ಟುವ ಆಟ; ಕುಂಟುಮುಟ್ಟಾಟ: ಹುಡುಗರು ಸಂಜೆಯಹೊತ್ತು ಕುಂಟಾಟವಾಡುತ್ತಾರೆ (ರೂಢಿ). ೨. (ಆಲಂ) ಶಿಥಿಲತೆ; ಆಲಸ್ಯ; ದುರ್ಬಲತೆ: ಮನಸ್ಸಿನ ಹರಿದಾಟ, ಪ್ರಾಣದ ಎಳೆದಾಟ, ಶರೀರದ ಕುಂಟಾಟ ಇವುಗಳನ್ನು ಸೂಕ್ಷ್ಮವಾಗಿ . . . ನೋಡುತ್ತಿರಬೇಕು (ಬಾಳಬ. ೨೧). [ಕುಂಟು₁ (< ಕೂಂಟು₁) + ಆಟ]

**ಕುಂಟಿ₁, ಕೂಂಟಿ** (ನಾ). ಕಾಲು ಊನವಾದವಳು; ಹೆಳವಿ: ನಿನ್ನ ತಂಗೆವಿರ್ ಕುಂಟಿಯುಂ ಕುರುಡಿಯುಂ ಕಿವುಡಿಯುಂ (ಶಾಂತೀಶ್ವ. ೮-೧೩೧ ವ); ಕುರುಡಿ ಕುಂಟಿ ಕುಣಿ ಕೂನೆ ಕುಭಾಷಿಣಿಯಾಗಿ ಪುಟ್ಟುಗುಂ (ಪಸಾರ. ೬೦೪-೧೯). **ಕೂಂಟಿ**: ತನ್ನಿಮಿತ್ತನಕ್ಕೆ ಪುಟ್ಟಿದರೊರ್ಕಣ್ಣುರುಡಿಯುಂ ಪೊರಂಡಿಯುಂ ಕೂಂಟಿಯುಂ ಪೆಱವೆಯುಂ ಕುಷ್ಠಿನಿಯುಂ ಕುಬ್ಜೆಯುಮಪ್ಪ ಮಗಳ್ದಿರಜುವರ್ (ಶಾಂತಿಪು. ೪-೬೬ ವ). [ಕುಂಟ₁ + -ಇ₂]

**ಕುಂಟಿ₂** 'ಕುಂಟೆ₂' ನೋ.

**ಕುಂಟಿ₃** (ನಾ). ಜುಟ್ಟು; ಶಿಖೆ (?): ಭುತನಹಳ್ಳಿಯಿಂದ ಹಜಾಮರು ವಾಲಗಕ್ಕೆ ಮಲ್ಲಿಗೆ ಹೂವು ಮುಡಿಸಿ ಮತ್ತು ತಂಮ ಕುಂಟಿಗೆ ಸುತ್ತಿಕೊಂಡು . . . ವಾಲಗಾ ಮಾಡುತ್ತಿರಲು (ಎಕ. IX, ಕಾನಕಾ. ೯೦-೪; 1700). [?]

**ಕುಂಟೆ$_4$** (ನಾ). ಒಂದು ಊರಿನ ಹೆಸರು : ಕುಣ್ಟೆಯೊಳ್ ಕುಣಿವಂ[ಜೆ] ಗಳದ್ಭುತ (ಸೌಇಇ. XI-i, ೫೧-೩ ; 1006). [?]

**ಕುಂಟೆಗ,** ಕುಂಟಗ (ನಾ). ಒಂದು ಜಾತಿಯ ಸಸ್ಯ ; ಕುಷಿಗ : (ಕಿ). **ಕುಂಟಗ** : ಜುಟ್ಟುವೆಬಳ್ಳಿ . . . ಕುಂಟಗ (ವೈಶಿಗಿ. ೬೦-೧೨೫). [?]

**ಕುಂಟೆಗೆ** (ನಾ). "ಹಳ್ಳದಲ್ಲಿ ಹುಟ್ಟಿದ್ದು ; ಸುಣ್ಣದ ಹರಳು" (ಸರ್ವಜ್ಞ-ಕೋಶ) : ಅಟ್ಟರಾವಾಡಿಗನ ಸುಟ್ಟಿಹರು ಕುಂಟೆಗೆಯ ಹುಟ್ಟಿಯ ಮೂಗ ಹರಿದರೀ ಮೂರು ಭವಗೆಟ್ಟು ಕೊಡಿದರು (ಸರ್ವಜ್ಞ. ೨೧೬೨). [ಕುಂಟೆ$_2$ + -ಇಗೆ ?]

**ಕುಂಟೆಣಿ** 'ಕುಂಟಣಿ' ನೋ.

**ಕುಂಟೆಣಿಗಿತ್ತಿ** 'ಕುಂಟಣಿಗಿತ್ತಿ' ನೋ.

**ಕುಂಟಿತ** (ಗು). = ಕುಂಠಿತ : ಅಜ್ಞಾನ ದಾರಿದ್ರ್ಯ ಅನಾರೋಗ್ಯ ಗಳಿಂದ ಅದರ ಓಜಸ್ಸು ಕುಂಟಿತವಾಗುತ್ತದೆ (ಶಿಕ್ಷದ. ೧೮೫). [< ಸಂ. ಕುಂಠಿತ]

**ಕುಂಟಿಸು$_1$** (ಕ್ರಿ). ೧. ಕುಂಟುವಂತೆ ಮಾಡು ; ನೆಗೆಯುವಂತೆ ಮಾಡು : ಅವನನ್ನು ಆಟದಲ್ಲಿ ಸೋಲಿಸಿ ಚೆನ್ನಾಗಿ ಕುಂಟಿಸಿದರು (ರೂಢಿ). ೨. ಕುಗ್ಗಿಸು ; ಮುರಿ ; ಭಂಗಮಾಡು (?) : ನಿನ್ನಪ್ಪ ಮುಂದೆಂದ ಭಾಷೆಯಂ ಕುಂಟಿಸಿದನು (ತುರಂಗ. ೬೪-೨೭). [ಕುಂಟು$_1$ (< ಕೂಂಟು$_1$) + -ಇಸು$_3$]

**ಕುಂಟು$_1$** 'ಕೂಂಟು$_1$' ನೋ.

**ಕುಂಟು$_2$** 'ಕೂಂಟು$_2$' ನೋ.

**ಕುಂಟು$_3$** (ನಾ). (ಕರಾ). ಗಿಡ್ಡ ; ಮೋಟ : ಎಕ್ಕೆಗಿಡ ಬಿಲ್ವಮರಕ್ಕಿಂತ ಕುಂಟು (ರೂಢಿ). [< ಕುಜು$_1$]

**ಕುಂಟುಕಾಲು** 'ಕುಂಟುಗಾಲ್' ನೋ.

**ಕುಂಟುಗಾಲ್,** ಕುಂಟುಕಾಲು, ಕುಂಟುಗಾಲು (ನಾ). ಕುಂಟುವ ಕಾಲು ; ಊನವಾದ ಕಾಲು : ಕುಂಟುಗಾಲೊಡೆದೋರಂತಿರೆ ಸೋರ್ವ ರಕ್ತಂ (ಧರ್ಮಾಮೃ. ೪-೭೪). **ಕುಂಟುಕಾಲು** : "ಶ್ರೋಣಃ - ಪಂಗುಃ . . . ಕಾಲಿಲ್ಲದ ಕುಂಟನ ಹೆಸರುಗಳು ; ಕುಂಟುಕಾಲುಳ್ಳವನು" (ಸಿದ್ಧಾಂತಿ. ೧೫೮). **ಕುಂಟುಗಾಲು** : (ಕಿ). [ಕುಂಟು$_2$ < ಕೂಂಟು$_2$) + ಕಾಲ್$_1$]

**ಕುಂಟುಗಾಲ** (ನಾ). ಕಾಲು ಕುಂಟಾದವನು : "ಖೋಡಃ ಖಂಜಃ ಈ ೨ ಕುಂಟುಗಾಲವನು" (ನಾಚಿರಾ. ೧೯೯) ; ಕುರಿಕಾಯೋನು ಕುಂಟುಗಾಲ (ಗಾದೆ) ; ಕುಂಟುಗಾಲನನ್ನು ನಂಬಿ ಪಯಣ ಮಾಡಿದ ಹಾಗೆ (ಗಾದೆ). [ಕುಂಟುಗಾಲ್ + -ಅ$_7$]

**ಕುಂಟುಗಾಲು** 'ಕುಂಟುಗಾಲ್' ನೋ.

**ಕುಂಟುತನ** (ನಾ). ಕುಂಟಾಗಿರುವಿಕೆ ; ಕುಂಟು : ಅನಿಸಿದಷ್ಟು ಮಾತು ಎಣಿಸಿ ಹೇಳಲು ಬರದು ಬುದ್ಧಿಗಿದು ಎಂದಿಗೂ ಕುಂಟು ತನವು (ನನಲ್ಲ. ೧೬-೬೫). [ಕುಂಟು$_2$ (< ಕೂಂಟು$_2$) + -ತನ]

**ಕುಂಟುದನಿ** (ನಾ). ತಡವರಿಸುವ ಧ್ವನಿ ; ತೊದಲು : ಪಂಜರಬದ್ಧ ವಾದ ಪ್ರಾಣಿಯಂತೆಬೆಪ್ಪು ಬೆಪ್ಪಾಗಿ ಸುತ್ತಲೂ ನೋಡುತ್ತ, ಕುಂಟುದನಿ ಯಲ್ಲಿ ನಡೆದುದನ್ನೆಲ್ಲ ವಿವರಿಸಿದನು (ಪುನರು ೧೫೮). [ಕುಂಟು$_1$ (< ಕೂಂಟು$_1$) + ದನಿ]

**ಕುಂಟುದಿಟ್ಟಿ** (ನಾ). ತಡವರಿಸುವ ದೃಷ್ಟಿ ; ಊನದೃಷ್ಟಿ : ಕಾಣಿಸಿತು ಕುಂಟುದಿಟ್ಟಿಯ ಗೂನುಗಣ್ಣಿಗದೊ ಗೆಂಟರೊಳ್ ಜ್ಯೋತಿ (ಶ್ರೀರಾಮಾ. ೧೨೩-೩೧೧). [ಕುಂಟು$_1$ (< ಕೂಂಟು$_1$) + ದಿಟ್ಟಿ]

**ಕುಂಟುನೆಪ,** ಕುಂಟುನೆವ (ನಾ). ತೋರಿಕೆಯ ನೆಪ ; ಸಮರ್ಪಕ ವಲ್ಲದ ಕಾರಣ : ಒಂದು ಕುಂಟುನೆಪ ಸಿಕ್ಕರೆ ಮತ್ತೆ ಬರಬಹುದು (ಮಹಾಗ. ೪೩) ; ಕೇವಲ 'ಜ್ಞಾಪಕವಿಲ್ಲ'ವೆಂಬ ಒಂದು ಕುಂಟುನೆಪ ವನ್ನು ಮಾತ್ರ ತಂದೊಡ್ಡಬಾರದು (ಜೀವಾತ್ಮ. ೧೮೮) ; ಬಡಿದಾಟಕ್ಕೊಂದು ಕುಂಟುನೆಪ ಬೇಕಲ್ಲ? (ವಿದ್ಯಾರಿ. ೧೬೮). **ಕುಂಟುನೆವ** : ಹಲವೆಂಟು ಕುಂಟುನೆವಗಳನ್ನು ಮುಂದೊಡ್ಡಿ ಅವನ ಸಹವಾಸ ತಪ್ಪಿಸಿಕೊಳ್ಳಲು ಯತ್ನಿಸುತ್ತಾನೆ (ನಿರೀಕ್ಷೆ. ೧೦೮). [ಕುಂಟು$_2$ (< ಕೂಂಟು$_2$) + ನೆಪ]

**ಕುಂಟುನೆವ** 'ಕುಂಟುನೆಪ' ನೋ.

**ಕುಂಟುನೇರಳೆ** 'ಕುಂಟನೇರಳೆ' ನೋ.

**ಕುಂಟುಪಂಕ್ತಿ,** ಕುಂಟಹಂತಿ (ನಾ). ೧. (ದಸ್ತೈವಜು ಮೊದ ಲಾದುವುಗಳಲ್ಲಿ ಪಂಕ್ತಿಗಳ ನಡುವೆ) ಸೇರಿಸಿದ ಮಾತು ; ನಡು ನಡುವೆಸೇರಿಸಿದ ಸಾಲು: "ಕುಂಟುಪಂಕ್ತಿ ಬರೆ" (Interline. ಇಂಕನಿ). ೨. (ಕರಾ) ಷರತ್ತು : ಆ ಪತ್ರದ ಕುಂಟುಪಂಕ್ತಿಯಿಂದಾಗಿ ವ್ಯಾಜ್ಯಕ್ಕೆ ಕಾರಣವಾಯಿತು (ರೂಢಿ). **ಕುಂಟುಹಂತಿ** : ೩. ಮೋಟಕು ಸಾಲು ; ಸಣ್ಣಪಂಕ್ತಿ : ಇದರೊಳಗೆ ಹನ್ನೆರಡು ಮಾತ್ರೆಯ ಕುಂಟುಹಂತಿ ಯೊಂದಿದೆ (ಸಾಡೋಜ. ೨೭೪). [ಕುಂಟು$_2$ (< ಕೂಂಟು$_2$) + ಪಂಕ್ತಿ]

**ಕುಂಟುಮದ್ದು** (ನಾ). ನೆಪಕ್ಕೆ ಮಾತ್ರ ಕೊಡುವ ಔಷಧಿ ; ನಿಷ್ಪ್ರಯೋಜಕ ಮದ್ದು : ಕುಂಟುಮದ್ದು ಕೊಡುವ ಬೂಟಾಟದವರಿಗೆಲ್ಲ ಔತಣ ಕೊಟ್ಟು ಬಂದಿರುವಿ (ಹುಚ್ಚಾಟ. ೯). [ಕುಂಟು$_2$ (< ಕೂಂಟು$_2$) + ಮದ್ದು]

**ಕುಂಟುಹಂತಿ** 'ಕುಂಟುಪಂಕ್ತಿ' ನೋ.

**ಕುಂಟೆ$_1$** (ನಾ). ವ್ಯವಸಾಯದ ಒಂದು ಉಪಕರಣ : ಭೂಮಿಯ ಬೆದೆಯನಱಿದು ಎತ್ತು ಕುಂಟೆ ಕೂರಿಗೆ ನೊಗ . . . ಹೂಡಿ ಹೊಡೆದು ಹರಗಿ (ವಚಶಾ. II, ೭೬) ; ನೊಗವು ನೇಗಿಲು ಕುಂಟೆ ಕೂರಿಗೆ ಶಕಟ ಜೊತ್ತಿಗೆ ಘಂಟೆ ಬಾಸಿಗ (ಸಂಭಪ. ೩೨-೩೩) ; ಕೋಲು ಕುಂಟೆಯ ಪೊತ್ತಡಿಲ್ಲಂ ಮೇಲೆ ಸಮಿಧೆಯ ತಂದಡಿಲ್ಲಂ (ಮದೇಪು. ೪-೨೮) ; ದೊಡ್ಡ ಕುಂಟೆಯಿಂದ ಚನ್ನಾಗಿ ಹರಗಿ (ಕೃಷಿಪ್ರ. ೧೫೫) ; ರೆಂಟೆ, ಕುಂಟೆ, ಮೊದಲಾದ ಸಾಮಗ್ರಿಗಳನ್ನು ತೊಳೆದು ಪೂಜೆ ಮಾಡುತ್ತಾರೆ (ಕನ್ನಜಾ. ೧೭೮). 'ಎಡೆಕುಂಟೆ', 'ಹೆಗ್ಗುಂಟೆ' ಪರಾ. [ದೇ. ‖ ತಮಿ. ಕುಣ್ಟೆ ; ತೆಲು. ಗುಂಟ]

**ಕುಂಟೆ$_2$,** ಕುಂಟೆ$_2$, ಕೂಂಟೆ$_1$ (ನಾ). ನೀರು ನಿಲ್ಲುವ ಕುಳಿ, —ಗುಣಿ ; ಕಟ್ಟೆ : "ಕುಂಟೆಯಲ್ಪಸರಸಿ" (ಕಶರ. ೨೫) ; ಮೂಱು ಪುಣುಸೆಯ ಕುಣ್ಟೆ (ಸೌಇಇ. IX-i, ೪೧-೨೦ ; 11ನೆಯ ಶತ) ; ಮನೆಭಾವಿ ಕುಂಟೆ ಬೆಟ್ಟುಯಿಂತೀ ಸರ್ವಸ್ವವ . . . ಕೊಟ್ಟರು (ಸೌಇಇ. IX-ii, ೪೭೪-೧೦ ; 1049) ; ಕೆಱೆ ಕುಂಟೆ ಕೊಣನು ಅಬೆ ಅಚುಕಟು (ಎಕ. X (S), ಕೊಲಾರ, ೩೦೪-೧೪ ; 17ನೆಯ ಶತ) ; ನಿರ್ಮಲವಾಗಿ ತೋರುವ ಕುಂಟೆಯ ಜಲವನ್ನು ಕದಡಿದಾಗ ಅಡಿಯ ಕಶ್ಮಲ ಮೇಲೆ ಬರುವಂತೆ (ನನ್ನರ. ೬೬). ೨. ಬಿಳೀ ಮಗ್ಗದವರಲ್ಲಿ ಒಂದು ಪಂಗಡ (ಎಸಮೈ. VIII, ೯). **ಕುಂಟೆ$_2$** : ೧. ಎಂಟಾರು ಲೋಕ ಲೋಕಗಳು ಕುಂಟಿಗೆ ಸರಿಯಲ್ಲ ವೆನುತ ಕೊಟ್ಟೆಯ ಹಾಕಿ ದಾಂಟಿ ಪ್ರಮಾಣ ಮಾಡಿದನು (ಅಮುಸಾಂ. ೫-೧೦೨). **ಕೂಂಟೆ$_1$** : ೧. ಪೊಲಮೇರೆ ವಾಯುವ್ಯದ ಮಿದಿಯ ಮೇಗಣ ಚಾಲದಿನ್ದೆ ಬೆಳೆದನ್ತೆ ಪುಣುಸೆಯಿನ್ದೆ ನಕ್ಕಿ ಕೂಣ್ಟೆಯಿಂದೆ (ಎಕ. X (S), ಚಿಕ್ಕಬ. ೧೦೬-೬೯ ; 850) ; ಕಡವಿನ ಕೂಂಟೆಯಿಂ ಪಡುವ ಮುಂದಾಗಿ ಬನ್ದು ಇಲಿಯಿನ್ದೆಯ ಮರನುಂ ಪುತ್ತುಂ ಮೇರೆ (ಸೌಇಇ. IX-i, ೧೯೯-೪೭ ; 1057) ; ಹೊಲೆಯರ ಕೂಂಟೆವೊಳಗಾಗಿ (ಬೊಂಕಶಾ. ೧೯೩೭, ಸಿಂಧಗಿ. ೩೯-೭ ; ?). [< ಕೊಂಡ]

**ಕುಂಟೆ$_3$, ಕೊಂಟೆ$_2$** (ನಾ). ಕೆಲವು ಊರುಗಳ ಕೊನೆಯಲ್ಲಿ ಸೇರುವ ಪದ: ತುಮ್ಬುಕುಣ್ಟೆ ರೇವುಕುಣ್ಟೆ (ಎಕ. XII, ಶಿರಾ. ೩೮–೩೫ ; 875) ; ಪಾಣಕುಂಟ್ಬೆಯ ಕಣುವೆ ಆದಜತದನಾನ್ತರ ಸೂರಕುಂಟೆ (ಸೌಇಇ. IX–i, ೪೧–೨೯ ; 11ನೆಯ ಶತ) ; ಒಡಗುಂಟೆ ಸವತರಗುಂಟೆ ಹುಲಿಯ ಕುಂಟೆ (ಎಕ. XII, ಶಿರಾ. ೧೦–೩೧; 1341). **ಕೊಂಟೆ$_2$**. 'ಎಲಂಚೆಕೊಂಟೆ' ಪರಾ. [< ಕುಂಟೆ$_2$ ?]

**ಕುಂಟೆ$_4$, ಕೊಂಟು** (ನಾ). ಕೊರಡು ; ಮರದ ತುಂಡು ; ಗುದ್ದೆ : ಆವ ಬಳಿಯೊಳೆನ್ನದೆ ಕೊಂಡದ ಕುಂಟಿಯಾ ಉರಿಯಂತಕನೆಂಬ ದೇವಗೆ ಮಿಳ್ತು ಕಾರ್ತಿಕದೊಳಗೆತ್ತಿದ ದೀವಳಿಗೆಯ ತೆಜನಾಯ್ತು (ನೇಮಿಸಂ. ೮–೮೮) ; ಒಂದು ಮರದಡಿಯಲ್ಲಿ ಬಿದ್ದಿದ್ದ ಮರದ ಕುಂಟೆ ಯೊಂದರ ಮೇಲೆ ಯಾರೋ ಒಬ್ಬನು ಕೂತು (ಗೌರಕ. ೪) ; ಒಲೆಗೆ ಕಚ್ಚಿದ್ದ ಭಾರಿ ಕುಂಟೆಗಳನ್ನು ಆದಷ್ಟು ಮುಂದೆ ನೂಕಿ, ಬೆಂಕಿ ಬೆಳಗುವ ವರೆಗೂ ಉಜ್ವಲಿಸುವಂತೆ ಮಾಡಿ (ಮಲೆಮ. ೫೮೧) ; ಮನೆಗೆ ಒಂದು ಮುದುಕಿ, ಒಲೆಗೆ ಒಂದು ಕುಂಟೆ (ಗಾದೆ). **ಕೊಂಟು** : ಮೆಲ್ಲಮೆಲ್ಲನೆ ಶಿವಾಲಯದೊಳಗಮೆಯ್ತಂದು ಅಲ್ಲಿ ಸಂಭ್ರಮಿಪ ಶರಣರನೀಕ್ಷಿಸುತ್ತಂದು ಕೊಂಟನೊಳು [ಪಾಠಾಂ. ಗೊಂಟನೊಳ್]ಕುಳ್ಳಿರ್ದು ನೋಡಿ ಮಿಗೆ ಮೆಚ್ಚುತಂ (ಅನೀರ. ೭೫–೧೬). [?]

**ಕುಂಟೆಕೋಣ** (ನಾ). ೧. ನೀರಿನಲ್ಲಿ ಮಲಗಿದ ಕೋಣ. ೨. (ಆಲಂ) ಜಡಸ್ವಭಾವದವನು ; ಸೋಮಾರಿ : ಒಳ್ಳೆ ಕುಂಟೆಕೋಣನ ಹಾಗೆ ಇದ್ದಾನೆಂದು ಯಮುನಕ್ಕ ಅವನನ್ನು ಬಯ್ಯುತ್ತಿದ್ದರು (ಪ್ರಶ್ನೆ. ೧೫೩). [ಕುಂಟೆ$_2$ + ಕೋಣ]

**ಕುಂಟೆಣಿಕೆ** (ನಾ). ಕುಂಟುನೆಪ; ದುರುದ್ದೇಶ (?) : ನಂಟುತನದ ಸಲುಗೆಯ ತೋಱಿ ತಾವೊಂದು ಕುಂಟೆಣಿಕೆಯೊಳು ಕಾರ್ಯವನು ಗಂಟಿಕ್ಕಿಕೊಂಡಿರಲಂಜಿಸಿ ನುಡಿದೆವು (ಭರಚ. ೩೩–೬೮). [ಕುಂಟ$_2$+ ಎಣಿಕೆ]

**ಕುಂಟೆತ್ತು** (ನಾ). ಕಾಲು ಊನವಾದ ಎತ್ತು ; ಕುಂಟುವ ಎತ್ತು : ಕುಂಟೆತ್ತಿಗೆ ಕೊಳಕುನೀರೇ ಪಂಚಾಮೃತ (ಗಾದೆ); ನೆಂಟ ನೆಂಟಗೆ ಮಾರಿ, ಕುಂಟೆತ್ತು ಹೊಲಕ್ಕೆ ಮಾರಿ (ಗಾದೆ). [ಕುಂಟು+ ಎತ್ತು$_2$ (< ಎಱು$_1$)]

**ಕುಂಠ** (ನಾ). ೧. ಮಂದ; ಆಲಸಿ; ಸೋಮಾರಿ : "ಕುಂಠಃ, ಮಂದಃ –ಈ ೨ ಮೆಲ್ಲಗೆ ಗೆಯ್ವಂ (ಹಲಾಯು. ೬೩–೨೨೭). (ಗು). ೨. ಮಂದ ವಾದ ; ಮೊಂಡಾದ : ಕಳಿಕೆಗರ್ಚಿದ ಕಷಾಯಕಂಠಮಾದ ಕಳಕಂಠದ ಕುಂಠಕಂಠಮುಮಂ ಶ್ರುತಿಪಥಕ್ಕತಿಥಿಮಾಡಿ (ಮಲ್ಲಿಪು. ೬–೨೪). [ಸಂ.]

**ಕುಂಠಣಿ** 'ಕುಂಟಣಿ' ನೋ.

**ಕುಂಠಣಿತನ** 'ಕುಂಟಣಿತನ' ನೋ.

**ಕುಂಠಭಾವ** (ನಾ). ಮಂದತನ; ಮಾಂದ್ಯ; ಆಲಸ್ಯ : ಪ್ರೇಮದ ವೈಕುಂಠ ಲೋಕದಲ್ಲಿ ಇಷ್ಟು ದೊಡ್ಡ ಕುಂಠಭಾವದಿಂದ ಕುಂಟುತ್ತ ಕುಂಟುತ್ತ ಆವನು ಹೇಗೆ ಪ್ರವೇಶಿಸಬೇಕು ? (ಇಪ್ಪಕ. ೪೦೭). [ಕುಂಠ + ಭಾವ]

**ಕುಂಠಿತ** (ಗು). ೧. ಕುಗ್ಗಿದ ; ಮೊಟಕಾದ : ಕುಂಠಿತಮಾಗಿಯುಂ ಗೂಢಮಾಗಿಯುಂ ಪಾಡುವುದಾಗದು (ಅದ್ಭುತ. ೨೪–೨೩). ೨. ನಿಂತು ಹೋದ; ತಡೆಯಲ್ಪಟ್ಟ : ನಮ್ಮ ನಾಡಿನ ಔದ್ಯೋಗಿಕ ಪ್ರಗತಿ ಬಹುವಾಗಿ ಕುಂಠಿತವಾಗಿದೆ (ಶಿಕ್ಷದ. ೧೯೬) ; ಮಕ್ಕಳಲ್ಲಿ 'ಎ' ಜೀವಾತು ಕಡಿಮೆಯಾದರೆ ಆವರ ಬೆಳವಣಿಗೆ ಕುಂಠಿತವಾಗುವುದು (ಅಡುಸೌ. ೬೧). ೩. ಮಂದವಾದ ; ಬುದ್ಧಿಹೀನವಾದ : (ಕಿ). ೪. ಮುಸುಕಿದ ; ಮುಚ್ಚಿದ : "ರೂಷಿತಂ, ಕುಂಠಿತಂ – ಈ ೨ ಮುಸುಕಿದುದು " (ಹಲಾಯು. ೧೨೬–೮೩). ೫. ಮಂಕು ಹಿಡಿದ ; ದಿಗ್ಭ್ರಾಂತವಾದ ; ಭ್ರಾಂತಿಗೊಂಡ : (ಕಿ). [ಸಂ.]

**ಕುಂಠಿತಗೊಳಿಸು** (ಕ್ರಿ). ಕುಗ್ಗಿಸು ; ಮೊಟಕುಮಾಡು : ಸಂಸತ್ತಿಗೆ ಇರುವ ಅಧಿಕಾರವನ್ನು ಈ ಅನುಚ್ಛೇದದಲ್ಲಿರತಕ್ಕ ಯಾವುದಾಗಲಿ ಕುಂಠಿತ ಗೊಳಿಸುವುದಿಲ್ಲ (ಭಾಧಾನ. ೧೩೭). [ಕುಂಠಿತ + ಕೊಳ್$_1$ + –ಇಸು$_3$]

**ಕುಂಠಿತತನ** (ನಾ). ಕುಗ್ಗುವಿಕೆ; ಮೊಟಕು : ಮಿಶನರಿಗಳಿಂದ ಅವರಿಗೆ ಉಂಟಾದ ಕುಂಠಿತತನವನ್ನು ಕಂಡು ಆವರು ಬಹಳ ಚಿರಡಿಗೇಳುವರು (ಸ್ಮೃತಿಚಿ. ೪೨೯). [ಕುಂಠಿತ + –ತನ]

**ಕುಂಠಿಸು** (ಕ್ರಿ). ಭಂಗಪಡಿಸು ; ಕುಂಠಿತಗೊಳಿಸು : ಕಂಟಕ ಯಮ ನವರು ಕುಂಠಿಸುತ್ತೆಳೆವಾಗ ನೆಂಟ ಪುರಂದರ ವಿಠಲನ್ನು ಪ್ರಾಣಿ (ಪುರಂದ. ೧–೪೭–೩). [< ಕುಂಠಿತ + –ಇಸು$_3$]

**ಕುಂಠೀಕರಣ** (ನಾ). ಕುಂಠಿತಗೊಳಿಸುವಿಕೆ ; ನಿಶ್ಚೇಷ್ಟಿತಗೊಳಿಸು ವಿಕೆ ; ಕುಗ್ಗಿಸುವಿಕೆ ; ಮೊಂಡುಮಾಡುವಿಕೆ : "ಟಿಬ್ಬರಿಸು–ಕುಂಠೀ ಕರಣೇ (ಮೊಂಡುಮಾಡು) " (ಶಮುಧಾ). [ಸಂ.]

**ಕುಂಡ$_1$** (ನಾ). ೧. ಹೋಮ ಕಾರ್ಯಕ್ಕಾಗಿ ನೆಲದಲ್ಲಿ ಮಾಡಿದ ಕುಣಿ, —ಗುಣಿ : ಘನ ಕುಂಡವ ಡಮರುಗ ವೇದಿಕೆಯಂ (ವೀರೇಚ. ೧–೬೮) ; ಹೋಮದ ಕುಂಡ ಲಂಕಾನಗರಿ ದನುಜರ ತಲೆಗಳಾಹುತಿಯು (ಕೌಶಿರಾ. ೩೨–೧೧). ೨. ಮಡಕೆ; ಮಣ್ಣಿನ ಪಾತ್ರೆ : "ಉಖಾ, ಸ್ಥಾಳೀ, ಚರುಃ . . . ಕುಂಡಂ – ಈ ೬ ಮಡಕೆ " (ಹಲಾಯು ೫೨–೧೫೯); ಆಳು ಲಿಂಗಗಿಡಕ್ಕೆ ಕುಂಡದಲ್ಲಿ ನೀರುಹುಯ್ಯುತ್ತಿದ್ದುದು ಕಾಣುತ್ತಿತ್ತು (ಹೊಸಕ್ಷಿ. ೧೧೧). ೩. ಮಣ್ಣುತುಂಬಿ ಸಣ್ಣ ಸಸಿಗಳನ್ನು ಬೆಳಸುವ ಪಾತ್ರೆ. ೪. ಕುಂಟೆ ; ಕೊಳ ; ಜಲಾಶಯ : "ಕುಂಟೆಯೆನೆ ಕಟ್ಟೆಯೆನೆ ಕುಂಡಮಕ್ಕುಂ " (ಶಬ್ದಮಂ. ೩೭) ; ಉರು ಕುಂಡದೊಳ್ ಮಿಂದು ತಾಂ ಶುಚಿಯಾಗಿ (ಉದ್ಭಟ. ೧೧–೭೫) ; ಕುಂಡದ ನೀರನು ಬಳಸುವಡರಿದೆಂದು ಕೊಂಡಾಡಿ ಸಖಿಯರು ನಡೆಯೆ (ಕಾಮಕ. ೪–೬೩) ; ಜನಗಳು ಗಂಗಾನದಿ, ಸಿಂಧೂನದಿ ಕುಂಡಗಳಿಂದಲೂ (ಪುರುಚ. ೮೨) ; ಪರ್ವತದ ಮೇಲೆ ಸ್ವಚ್ಛಜಲದ ಕುಂಡವಿತ್ತು (ಬಾಣಆ. ೩೮೬). ೫. ಹೊಟ್ಟೆ ; ಉದರ : "ಕುಕ್ಷಿ ಕುಂಡಂ ಗರ್ಭಮಾಜಠರ ಮುದರಮೆನೆ ಹೊಟ್ಟೆ " (ಮಂಗರಾ. ೯೬–೧೩). ೬. ಹಾದರಕ್ಕೆ ಹುಟ್ಟಿದವುಗ: ಗಂಡ ನಿರಲು ಪಾಣ್ಬೆಗೆ ಪುಟ್ಟಿದವನವ ಕುಂಡನಲ್ಲೊಳ್ಗುಣವಿರಲು . . . ಕುಂಡ ಕುಲೋತ್ತಂಸನಮ್ಮ (ಕುರುಸಾಂ. ೩೨–೧೩೫); ಪುರುಷ ನುಳ್ಳವಳೂ ಜಾರತೆ ಯಿಂದ ಪಡದ ಸುತನೇ ಕುಂಡನು (ವೀಶೈಪು. ೭–೨೦); "ಕುಂಡಃ–ಗಂಡನಿರು ವಾಗ ಪರಪುರುಷನಿಗೆ ಪುಟ್ಟಿದಾತಂ" (ಹಲಾಯು. ೬೪–೨೩೧ ಅಡಿಟ). [ಸಂ.]

**ಕುಂಡ$_2$** (ನಾ). (?) : ಹೊದಕೆ ಗ ೨೦ ತೂಕದ ಕುಂಡ ಮೊಟವಣ ಗ ೩ ನೆಲೆಯ ಕಾಣಿಕೆ (ಎಕ. XV, ಬೇಲೂರು. ೨೯೮–೬೦ ; 1778). [?]

**ಕುಂಡಕ್ರಿಯೆ** (ನಾ). [ಸಂಗೀತ] ಒಂದು ಬಗೆಯ ರಾಗ : ಮೆಲ್ಲಿದೆ ಯವರಿಗೆ ಬಾಹುಬಲಿಯ ಕೃತಿ ಚೆಲ್ಲೆಗಾತಿಯು ಲಲ್ಲೆವಾತು ಕಲ್ಲೆರ್ದೆ ಯವರಿಗೆ ಕುಂಡಕ್ರಿಯೆ ಧರೆಯೆಲ್ಲಕೆ ಪೊಸಜೇನಸೋನೆ (ನಾಗಕು. ೧–೭೬). [< ಗುಂಡ + ಕ್ರಿಯೆ]

**ಕುಂಡಗುಡಿ** (ನಾ). ಒಂದು ಊರಿನ ಹೆಸರು : ಕುಣ್ಡಗುಡಿ ಅಸಗ ಗೊಸಸಿ ಸುರರೊಳೆ ಕೂಡೆ (ಮೈಆರಿ. ೧೯೨೭, ೧೪೪–೫ ; ?). [?]

**ಕುಂಡಗೋಲಕ, ಕುಂಡಗೋಳಕ** (ನಾ). ೧. ಹುಳಿಗಂಜಿ ; ಅಂಬಲಿ. ೨. ಕುಂಡ ಮತ್ತು ಗೋಲಕ. **ಕುಂಡಗೋಳಕ** : ೨. ರಂಡೆಯ ಮಕ್ಕಳು ಕುಂಡಗೋಳಕರು ರಾಯರು ನಿನ್ನಿಂದ್ಯೆ (ಪುರಂದ. ೧–೧೬೫–೧) ; ಕುಂಡಗೋಳಕರಿಂಗೆ . . . ಹೇಳದಿರು ಮಱೆದೀ ಅನುಭವಾಮೃತವ (ಅಮೃತ. ೨–೨) ; ವಿಷವನ್ನು ಕೊಟ್ಟವನೂ, ಕುಂಡ ಗೋಳಕರಲ್ಲಿ ಅನ್ನವನ್ನು ಭಕ್ಷಿಸುವವನೂ . . . ಬ್ರಹ್ಮಹತ್ಯ ಮಾಡಿದವನಿಗೆ ಸಮಾನರಾಗುವರು (ಕೃವಾಉ. ೫೫). [ಸಂ.]

**ಕುಂಡಗೋಳಕ** 'ಕುಂಡಗೋಲಕ' ನೋ.

**ಕುಂಡಣಿ** (ನಾ). ಹಾವು; ಸರ್ಪ: "ಕುಂಡಣಿ (೪) – ಕುಂಡಲಿನ್ –ಸರ್ಪ" (ತದ್ಭಕೋ. ೮). [< ಸಂ. ಕುಂಡಲಿನ್]

**ಕುಂಡರಿಸು** (ಕ್ರಿ). ಕುಳ್ಳಿರಿಸು; ಕುಳಿತುಕೊಳ್ಳುವಂತೆ ಮಾಡು: ಕುಂಡರಿಸು ಅವಳ್ನ (ಸರ್ವಮಂ. ೪೩). [< ಕುಳ್ಳಿರಿಸು]

**ಕುಂಡರು** (ಕ್ರಿ). ಕುಳ್ಳಿರು: ಅಂವಾ ಅಲ್ಲೆ ತಂಬಾಕ ಶೇದಿಕೊಂತ ಕುಂಡರಾವ (ನಡೆದಾ. I, ೨೬೨). [< ಕುಳ್ಳಿರ್]

**ಕುಂಡಲ, ಕುಂಡಳ** (ನಾ). ೧. ಕಿವಿಗೆ ಇಟ್ಟುಕೊಳ್ಳುವ ಆಭರಣ: "ಕುಂಡಲಂ ಕಡುಕುಗಂಟಿಗಳು ಕರ್ಣವೇಷ್ಟನಮೆನಿಕ್ಕುಂ" (ಮಂಗರಾ. ೯೯-೨೩); ಕದಪಂ ಮೋದುವ ಕುಂಡಲದ್ವಿತಯಮಂ ಚೆಲ್ವಾಗೆ (ಜಗವಿ. ೩-೧೬); ತರಣಿಯಂತಿಹ ಕುಂಡಲಂಗಳ ಮರೆಯದೆಲ್ಲಾ ಕಿವಿಯೊಳಿಟ್ಟನು (ಕೌಶಿರಾ. ೨೧-೯). ೨. ಕುಣಿಕೆ; ಹಗ್ಗದ ಮಲಕು. ೩. ಬರಹದಲ್ಲಿ ಬಳಸುವ ಆವರಣ ಚಿಹ್ನೆ; ಕಂಸ: (ಕಿ). ೪. ವರ್ತುಳ; ಸುತ್ತು. 'ಕುಂಡಲಾಕೃತಿ' ಪರಾ. **ಕುಂಡಳ**: ೧. "ಕುಂಡಳಂ, ಕರ್ಣವೇಷ್ಟನಂ –೨. ಕುಂಡಲಂ" (ಹಲಾಯು. ೯೧-೪೦೨); ಬೇಡಿದನಾ ಸಹಜಕವಚಮಂ ಕುಂಡಳಮಂ (ಪಂಪಭಾ. ೧-೧೦೦). [ಸಂ.]

**ಕುಂಡಲದೀಕ್ಷಿತ** (ನಾ). ಯಾಗವನ್ನು ಮುಗಿಸಿದ ಗುರುತಾಗಿ ಕಿವಿಯಲ್ಲಿ ಚಿನ್ನದ ಕುಂಡಲಗಳನ್ನು ಧರಿಸಿದವನು: (ಕಿ).
[ಕುಂಡಲ + ದೀಕ್ಷಿತ]

**ಕುಂಡಲಪಂಡಿತ** (ನಾ). ೧. ತನಗೆ ದೊರೆತ ಪ್ರಶಸ್ತಿಯ ಗುರುತಾಗಿ ಕಿವಿಯಲ್ಲಿ ಚಿನ್ನದ ಕುಂಡಲಗಳನ್ನು ಧರಿಸಿದ ಪಂಡಿತ. ೨. (ಅಲಂ) ಕೇವಲ ತೋರಿಕೆಗೆ ಕುಂಡಲ ಧರಿಸಿದವನು; ಪಾಂಡಿತ್ಯವಿಲ್ಲದವನು; ಆಡಂಬರದ ಪಂಡಿತ: (ಕಿ).
[ಕುಂಡಲ + ಪಂಡಿತ]

**ಕುಂಡಲಯುಗ** (ನಾ). ಕುಂಡಲಗಳ ಜೊತೆ: ಗಂಡಮನೋರಂತಿರೆ ಪೊಯ್ಯೆ ಕುಂಡಲಯುಗಂ (ಕಾವ್ಯಸಾ. ೬೫೬ ಶೂದ್ರಕ); ಪುಲಿಯುಗುರ್ ಮಣಿಕಿಂಕಿಣಿ ಗೆಜ್ಜೆ ರಕ್ಕೆ ಕುಂಡಲಯುಗ (ಅಜಿಪು. ೪-೬೨).
[ಕುಂಡಲ + ಯುಗ]

**ಕುಂಡಲವಾಡಿ** (ನಾ). ಎತ್ತುಗಳಲ್ಲಿ ಒಂದು ಜಾತಿ: ಯೆತ್ತುಗಳಲ್ಲಿ ಸೊರಟೆ, ಮೂಡಲು, ಕುಂಡಲುವಾಡಿ, ಜವಾರಿ . . . ೮ ಜಾತಿಗಳುಂಟು (ಕಭಾಗ. ೫೫). [?]

**ಕುಂಡಲಾಕೃತಿ** (ನಾ). ವರ್ತುಲಾಕಾರ; ಸುರುಳಿ: ನೇತ್ರ ಶ್ರವಣನು ಕುಂಡಲಾಕೃತಿಯಗೊಂಡಂತೆ ಪಳುಕಿನ ಸುಕೋಂಟೆಯಸೆಗು (ನವಮೋ. ೨-೨೪); ಕುಂಡಲಾಕೃತಿಯಾದ ಖೇಚರಿಚಂಡ ಮುದ್ರಾ ಲಕ್ಷ್ಯವನ್ನು . . . ಅರಿದ್ಯೆ (ಗಗತಾ. ೧೨-೬೨). [ಕುಂಡಲ + ಆಕೃತಿ]

**ಕುಂಡಲಿ$_1$, ಕುಂಡಳಿ** (ಗು). ೧. ಕುಂಡಲಗಳಿಂದ ಅಲಂಕೃತವಾದ: ೨. ವರ್ತುಳಾಕಾರವಾದ: (ಕಿ). ೩. ಸುರುಳಿ ಸುತ್ತಿಕೊಂಡ ಹಾವು: "ಕುಂಡಲೀ, ಜಿಹ್ಮಗಃ – ಈ ೨ ತೆಕ್ಕೆಗಟ್ಟಿದ ಹಾವು" (ಹಲಾಯು. ೧೦೫-೧೯); ಕುಂಡಲಿಯ ಹಾವೆದ್ದು ಕೋಡಗವ ಒಂದೆ ಬಾರಿ ನುಂಗಿತ್ತು (ಅಜಿಮಾ. ೧೧೨); ಕುಂಡಲಿಯನು ತಡಿಗೆಳತಂದು ಫಣದೊಳು ತಾಂಡವಗೈದನರ್ತಿಯಲಿ (ಕೃಷ್ಣಗೋ. ೨-೧೦೪). ೪. ಒಂದು ಮೂಲಿಕೆ: ವಿಷಮುಧಾರಿ, ಕುಂಡಲಿ, ನಾಯಿತೆಕ್ಕಿಲೆ (ಮೈ ೮ ಗ. ೨೨-೪೧೬); ಕಂಡಕಂಡುದನೆಲ್ಲ ಹಿಂಡಿ ಭಂಡಾಗದಲೆ ಕುಂಡಲಿಯು ಇಪ್ಪಗಿಡವೊಂದವಂಗಕ್ಕೆ ಹಿಂಡಿ ನೋಡೆಂದ (ಸರ್ವಜ್ಞ. ೧೯೬೫); ಅಳಲೆಕಾಯಿ ನೆಲ್ಲಿಚೆಟ್ಟು. . .ಕುಂಡಲಿ ಇವುಗಳನ್ನು ಸಮವಾಗಿ ಕಷಾಯ ಹಾಕಿಕೊಡಲು (ಸಕವೈ. ೧೧೦). ೫. ಭ್ರಮರ; ದುಂಬಿ: ಕೀಡಿ ಕುಂಡಲಿಯಂತೆ ಮಾಡಿತ್ತೆನ್ನ ಶ್ರೀಗುರುವಿನುಪದೇಶ (ಅಖಂಡೇ. ೨೦-೧೦); ಕುಂಡಲಿ ಕೀಟಕನ ತಂದು ಮೃತ್ತಿಕೆಯ ಮಂದಿರದಲ್ಲಿ ಇರಿಸಿ ಕೀಟಕನಂಗವಳಿದು ಕುಂಡಲಿಯಾದ ತೆಜದಂತೆ (ದಾಸೋಸಂ. ೪). **ಕುಂಡಳಿ**: (ಕಿ). [< ಸಂ. ಕುಂಡಲಿನ್]

**ಕುಂಡಲಿ$_2$** (ನಾ). ೧. = ಕುಂಡಲನಿ: ಕುಂಡಲಿಯ ಭೇದದ ಕಂದನಾಡಿಯ ನಡುವೆ ಮಂಡಿಸುತಿರ್ಪ ಹಂಸನ ಹತ್ತಿರವೆ ಕಂಡಿಹುದು ಸುಳುವು (ಸರ್ವಜ್ಞ. ೪೬೪); ಭಾಸುರದ ನಾಭಿಕಂದದಲಧೋಮುಖದ ಕುಂಡಲಿಯನೂರ್ಧ್ವಕ್ಕೆ ನೆಗಹಿ (ನವಮೋ. ೬-೨೬). ೨. [ಜ್ಯೋತಿ] ನಿಶ್ಚಿತ ಕಾಲದಲ್ಲಿ ಗ್ರಹಗಳ ಗತಿಯನ್ನು ಗುರುತಿಸುವ ಹನ್ನೆರಡು ಮನೆಗಳ ರೇಖಾಕೃತಿ; ಜಾತಕ: ಊರಿನಲ್ಲಿ ಹುಟ್ಟಿದ ಮಕ್ಕಳಿಗೆಲ್ಲ ಕುಂಡಲಿ ಹಾಕಿಕೊಡೋದು (ಹೊಸಕ್ಷಿ. ೨೪೮); ಶಾಸ್ತ್ರಿಗಳು . . . ಕುಂಡಲಿಗಳನ್ನು ಮತ್ತೆ ನೋಡುವುದಕ್ಕೆ ಕುಳಿತುಕೊಂಡರು (ಗಾಳಿಗು. ೧೧).
[ಸಂ. ಕುಂಡಲೀ]

**ಕುಂಡಲಿಗ** (ನಾ). ದುಂಬಿ; ಭ್ರಮರ: ಕುಂಡಲಿಗನ ಕೀಟಕನಂತೆ ಮೈಮಣ್ಣಾಗದಂತೆ ಇದ್ದೆಯಲ್ಲ ಬಸವಣ್ಣ (ಅವಚಂ. ೧೯೮-೯೬); ಕುಂಡಲಿಗನೊಂದು ಕೀಡೆಯ ತಂದು ತನ್ನಂತೆ ಮಾಡಿತಲ್ಲ (ಬಸಹೆ. ೧೧೯).
[ಕುಂಡಲಿ + –ಗ$_2$]

**ಕುಂಡಲಿತ** (ಗು). ಗುಂಡಗೆ ಮಾಡಿದ; ವರ್ತುಳಾಕಾರವಾಗಿಸಿದ: ಅಂತು ಪೊಜಮಟ್ಟು ಪರಿವೇಷಂಗೊಂಡ ಚಂಡಕಿರಣನಂತೆ ಕುಂಡಲಿತ ಕೋದಂಡನಾಗಿ (ಪಂರಾಮಾ. ೯-೬೨ವ). [ಸಂ.]

**ಕುಂಡಲಿನಿ** (ನಾ). ೧. ಯೋಗಶಾಸ್ತ್ರದಲ್ಲಿ ಸರ್ಪರೂಪವಾಗಿ ರೂಪಿಸಲ್ಪಟ್ಟಿರುವ ಪ್ರಕೃತಿ ಶಕ್ತಿ; ದುರ್ಗೆಯ ಒಂದು ರೂಪ: ನಾಡೀಕಂದದಿಂ ತಾನುಳಿದಧೋ ಭಾಗದಲಿಯುಗಳಾಂಗುಲ ಪ್ರಮಾಣದೊಳಲ್ಲಿಹದು ಕುಂಡಲಿನಿ ವಾಸವದೂ (ಗಗತಾ. ೯-೧೩); ನಿನ್ನ ಗುರು ಪ್ರಸನ್ನರಾಗಿದ್ದಾರೆ. ನಿನ್ನ ಕುಂಡಲಿನಿ ಜಾಗ್ರತವಾಗಿದೆ (ಬಾಣಅ. ೧೧೫). ೨. [ಯೋಗ] ಷಟ್ಪದಾರ್ಥಗಳಲ್ಲಿ ಒಂದು: ಸಕಲಾಗಮಂಗಳಲ್ಲಿಯೂ . . . ಪತಿ, ಕುಂಡಲಿನಿ, ಮಾಯೆ, ಪಶು, ಪಾಶ, ಕಾಂಕ್ಷೆಯೆಂಬ ಷಟ್ಪದಾರ್ಥಂಗಳುಂ (ವಿವೇಕ. ೬೨). [ಸಂ. ಕುಂಡಲಿನೀ]

**ಕುಂಡಲಿನಿ ಶಕ್ತಿ** (ನಾ). = ಕುಂಡಲಿನಿ: ಶಾಕ್ತಯೋಗದಿಂದ ಸರ್ಪರೂಪಿಣಿಯಾದ ಕುಂಡಲಿನಿ ಶಕ್ತಿಯನ್ನು ಎಬ್ಬಿಸಿ ಎಲ್ಲಕ್ಕೂ ಮೇಲಿನ ಚಕ್ರದವರೆಗೆ ಒಯ್ದರೆ ಮುಕ್ತಿ ಲಭಿಸುವುದೆಂದೂ ಶಕ್ತಿಪಂಥ ಪತಿಪಾದಿಸುತ್ತದೆ (ಭಾರದ. ೩೦೬). [ಕುಂಡಲಿನಿ + ಶಕ್ತಿ]

**ಕುಂಡಲಿನೀಚಾಲನ** (ನಾ). ಕುಂಡಲಿ ಚಕ್ರದ ಶಕ್ತಿಯನ್ನು ಮೇಲಕ್ಕೆ ಏರಿಸುವ ಕ್ರಿಯೆ, —ಸಾಧನ: ಕುಂಡಲಿನೀಚಾಲನ ಮೊದಲಾದ ಉತ್ಕೃಷ್ಟಸಿದ್ಧಿಗಳು ಈ ಮುದ್ರೆಗಳ ಅಭ್ಯಾಸದಿಂದ ಉಂಟಾಗುತ್ತದೆ (ಭಾರದ. ೧೫೮). [ಸಂ. (ಕುಂಡಲಿನೀ + ಚಾಲನ)]

**ಕುಂಡಲಿಶಕ್ತಿ** (ನಾ). = ಕುಂಡಲಿನಿ: ಪಿಂಡವೇ ಕುಂಡಲಿ ಶಕ್ತಿ (ಅವಚಂ. ೬೯-೩೦೨); ಲಲನೆ ಕುಂಡಲಿಶಕ್ತಿಯೆಳನು ಭೇದನಮಾಡಿ ಮಲಿನ ಗ್ರಂಥಿಗಳು ಮೂರನು ಗೆಲ್ದು (ವೇದಾಂಪ. ೩-೧೨-೬). [ಕುಂಡಲಿ + ಶಕ್ತಿ]

**ಕುಂಡಲೀಕರಣ** (ನಾ). ಗುಂಡಾಗಿ ಮಾಡುವುದು; ವರ್ತುಲವಾಗಿರುವುದು; ವೃತ್ತವನ್ನು ರಚಿಸುವುದು; ಸುತ್ತುಗಟ್ಟುವಿಕೆ: "ಗುಡಿಕಟ್ಟು – ವರ್ಣಪೂರರೇಖಾಯಾಂ (ಕುಂಡಲೀಕರಣಂ)" (ಶಮಧಾ). [ಸಂ.]

**ಕುಂಡಲೀನೃತ್ಯ** (ನಾ). [ನಾಟ್ಯ] ಒಂದು ಬಗೆಯ ನೃತ್ಯ: ನಾಟ್ಯಶಾಸ್ತ್ರವೂ ಈ ಮಣಿಪುರಿ ಶಾಖೆಯನ್ನು "ಕುಂಡಲೀನೃತ್ಯ"ವೆಂದು ಸೂಚಿಸಿದೆ (ಆಭಾನೃ. ೯೫). [ಸಂ.]

**ಕುಂಡಲೀಶ** (ನಾ). ಹಾವುಗಳ ಒಡೆಯ ; ಆದಿಶೇಷ. 'ಕುಂಡಲೀಶ ಶಯನ' ಪರಾ. [ಕುಂಡಲಿ + ಈಶ]

**ಕುಂಡಲೀಶಶಯನ** (ನಾ). ಶೇಷನ ಮೇಲೆ ಮಲಗಿದವನು; ವಿಷ್ಣು : (ಕ). [ಕುಂಡಲೀಶ + ಶಯನ]

**ಕುಂಡಲೀಶ್ವರ** (ನಾ). = ಕುಂಡಲೀಶ. 'ಕುಂಡಲೀಶ್ವರಕುಂಡಲ' ಪರಾ. [ಸಂ. (ಕುಂಡಲಿನ್ + ಈಶ್ವರ)]

**ಕುಂಡಲೀಶ್ವರಕುಂಡಲ** (ನಾ). ಸರ್ಪರಾಜನನ್ನೇ ಕಿವಿಯ ಆಭರಣ ಮಾಡಿಕೊಂಡವನು ; ಶಿವ: ಕುಂಡಲೀಶ್ವರಕುಂಡಲಾರ್ಚಕ ಮಂಡನಂ ಮತ್ತಂಯು ಮುಸುಟಿ ಚಾವುಂಡರಾಯನೆನಲು (ಬಸವು. ೩೨-೧). [ಸಂ. (ಕುಂಡಲೀಶ್ವರ + ಕುಂಡಲ)]

**ಕುಂಡಲು** (ನಾ). = ಕುಂಡಲ : "ಕುಂಡಲು (ಕೊಂಡಲು) – ಕುಂಡಲ" (ತದ್ಭಕೋ. ೮). [< ಕುಂಡಲ]

**ಕುಂಡಲೇಷ್ಟಿ** (ನಾ). ಒಂದು ಬಗೆಯ ಯಜ್ಞ: ಕುಂಡಲೇಷ್ಟಿ ಪುತ್ರಕಾಮೇಷ್ಟಿ ನಕ್ಷತ್ರೇಷ್ಟ್ಯಾದಿಗಳಂ ಯಥಾಲಾಭವಾಗಿ ಮಾಳ್ಪಲ್ಲಿ (ವಿವೇಕ. ೧೩೪). [ಕುಂಡಲ + ಇಷ್ಟಿ]

**ಕುಂಡಳ** 'ಕುಂಡಲ' ನೋ.

**ಕುಂಡಳಿ** 'ಕುಂಡಲಿ' ನೋ.

**ಕುಂಡಿ**$_1$ 'ಕುಂಡೆ$_1$' ನೋ.

**ಕುಂಡಿ**$_2$ (ನಾ). ತೆಂಗಿನ ಬುರುಡೆಯಿಂದ ಮಾಡಿದ ಜಲಪಾತ್ರೆ; ಕಮಂಡಲು : (ಕ). [< ಸಂ. ಕುಂಡಿಕಾ]

**ಕುಂಡಿ**$_3$ (ನಾ). ಗಂಗಾನದಿಯ ಕುಂಡವನ್ನು ತಲೆಯಲ್ಲಿ ಧರಿಸಿದವನು ; ಶಿವ. 'ಕುಂಡಿಶರ್ಮ' ಪರಾ. [< ಸಂ. ಕುಂಡಿನ್]

**ಕುಂಡಿಕೆ**$_1$, ಕುಂಡಿಗೆ (ನಾ). (ಕರಾ) ಬಾಳೆಗೊನೆಯ ತುದಿಯ ಗೊಂಡೆ ; ಮೋತೆ. **ಕುಂಡಿಗೆ** : ಬಾಳೆಗೊನೆಯ ಕುಂಡಿಗೆಗೆ ನಮ್ಮಲ್ಲಿ "ಪೊಂಬೆ" ಎಂಬ ಹೆಸರು (ಪಾರ್ತಿಸು. ೪೫). [← ತುಳು. ಕುಂಡಿಗೆ]

**ಕುಂಡಿಕೆ**$_2$ (ನಾ). = ಕುಂಡಿ$_2$: "ಕುಂಡಿಕಾ, ಕಮಂಡುಳುಃ – ಈ ೨ ಗುಂಡಿಗೆ" (ಹಲಾಯು. ೬೮-೨೫೬) ; ರಂಭಾನಾರಿ ಕುಂಡಿಕೆ ದಂಡ ಪರ್ಣಚ್ಛತ್ರಗಳ ಧರಿಸಿ ನಾರಸೀರೆಯನುಟ್ಟು (ಕೌಶಿರಾ. ೧-೪೫). [ಸಂ. ಕುಂಡಿಕಾ]

**ಕುಂಡಿಗೆ** 'ಕುಂಡಿಕೆ$_1$' ನೋ.

**ಕುಂಡಿನ** (ನಾ). ೧. ಒಂದು ಊರಿನ ಹೆಸರು : ಪಶ್ಚಿಮಸ್ಯಾನ್ದಿಸಿ ಸುಣ್ಣಕ್ಕೊಲ್ಲಿ × × × ದಿ ಬನ್ದು ಕುಣ್ಡಿನದೊಳ್ ಕು(ಕೂ)ಡಿ (ಇಆ. XVIII, ೩೬೮-೨೭ ; 8ನೆಯ ಶತ). ೨. ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬ. ೩. ವಿದರ್ಭ ದೇಶದ ರಾಜಧಾನಿ : (ಕ). [ಸಂ.]

**ಕುಂಡಿನಿ** (ನಾ). ಒಂದು ಬಗೆಯ ಸಸ್ಯ : "ಕೌಂಡೆ ಕುಂಡಿನಿಯಕ್ಕು" (ಮಂಗರಾ. ೪೧-೧೧). [< ಸಂ. ಕುಂಡಿನೀ ?]

**ಕುಂಡಿವಾಟಕ** (ನಾ). ಒಂದು ಹಳ್ಳಿಯ ಹೆಸರು : ಉದಕಪೂರ್ವ್ವಂ ಕುಣ್ಡಿವಾಟಕ ಗ್ರಾಮೋದತ್ತಃ (ಇಆ. VII, ೧೬೨-೧೮ ; 578). [?]

**ಕುಂಡಿಶರ್ಮ** (ನಾ). ಒಬ್ಬಾತನ ಹೆಸರು : ಗೌತಮಗೋತ್ರ ಕುಣ್ಡಿ ಶರ್ಮ್ಮಣ ಎಕ್ಕಂಶಃ (ಇಆ. VII, ೧೮೭-೪೭ ; 668). [ಕುಂಡಿ$_3$ + ಶರ್ಮ]

**ಕುಂಡು** (ನಾ). ಒಂದು ಪ್ರದೇಶದ ಹೆಸರು: ಮೂಡಾಯ್ನೋಡಿನೀರಿಟುವ ತಾಜಿಎ ತೆತಾವಿನ್ನೊಲ್ಲಿಎ ಪೋಗಿ ಕುಣ್ಡು ಸೋಮೆಎ ಕಗ್ಗಲ್ಲಾಜಿದೆ ಆನೆಗಲ್ಲೆ . . . ಕೊಡಿತ್ತುಸೀಮೆ (ಎಕ. XVI, ಗುಬ್ಬಿ. ೭೫-೫೩ ; 733). [?]

**ಕುಂಡೆ**$_1$, ಕುಂಡಿ$_1$ (ನಾ). ೧. ನಿತಂಬ ; ತಿಕ ; ಪಿರ್ರೆ ; ಅಂಡು : "ಕಟಸಾನು ಪ್ರೋಥಂ [ಪಾಠಾಂ. ತಂ] ಯುಗಂ ಕುಂಡೆಯಕ್ಕುಂ" (ಮಂಗರಾ. ೬೮-೧೭) ; ಅಡಿನ ಅಂಡದಲ್ಲಿ ಕೋಡಗ ಹುಟ್ಟಿತ್ತು ಕೋಡಗದ ಕುಂಡೆಯಲ್ಲಿ ಸಿರಿಯಕ್ಕ ಹುಟ್ಟಿದಳು (ಸುಂಕಬಂ. ೭೪) ; ಕುಂಡೆಗಳನಲ್ಲಾಡಿಸುತ್ತಂ ಮುಂಡುಗಾಜನು ದೆಸರಿದೇವನ ಬಳಿವಿಡಿದು ಸಾರ್ದು (ಬಸವು. ೩೮-೧೮) ; ಕುರುವು ಕುಂಡೆಗೆ ಹೊಲ್ಲ ಕುರುಡನ ಕೋಲು ಕಳಹೊಲ್ಲ (ಸರ್ವಜ್ಞ. ೭೨೪) ; ಕೆಲಸವಿಲ್ಲದ ಬಡಗಿ ಮಕ್ಕಳ ಕುಂಡೆ ಕೆತ್ತಿದ (ಗಾದೆ) ; ಕುಂಡೇಮೇಲೆ ಹೊಡೆದರೆ ದವಡೇಹಲ್ಲು ಉದುರಿತು (ಗಾದೆ). ೨. ಪಾತ್ರೆ ಮೊದಲಾದುವುಗಳ ತಳ : ಕುಂಡೆಯಿಲ್ಲದ ವಂಗಿ (ರೂಢಿ). **ಕುಂಡಿ**$_1$ : ಉಂಡಮೇಲೆ ಬಾಯಿ ತೊಳೆಯೋದಿಲ್ಲವೋ ನೀವು ಕುಂಡಿಗೆ ನೀರೆರೆಯೋದಿಲ್ಲ (ಬಜ್ಜರಾ. ೭-೧೧೪) ; ಮಸ್ಸಿ ಮತ್ತು ಓಸ್ತಿನ್ . . . ಕುಂಡಿ ಊರುವ ವೇಳೆಗೆ, ದ್ವಾರಪ್ರದೇಶದಲ್ಲಿ ಪೂರ್ವಪರಿಚಯದಾಕೆ ಕಾಣಿಸಿಕೊಂಡಳು (ಪುನರು. ೪೫೮).

ಕುಂಡೆಯಕುಟಿ = ಜಘನ ಕೂಪ : "ಕುಕಂಧರಃ, ಜಘನಕೂಪಃ – – ಈ ೨ ಕುಂಡೆಯ ಕುಟಿ" (ಹಲಾಯು. ೮೫-೩೪೫). ಕುಂಡೆಯೂರು = ಕುಳಿತುಕೊ : ಇನ್ನೊಬ್ಬ ಮುದುಕ ಬಂದು . . . ತಾನೂ ಕುಂಡೆಯೂರಿದ (ಮೂರುದಾ. ೧೬೬). ಕುಂಡಿಸೀಳು = (ಉಕ) (ಅಕ್ಷರದ) ಹೊಕ್ಕಳ ಸೀಳು: 'ದ' ಕುಂಡಿ ಸೀಳಿದರೆ 'ಧ' ಮಹಾಪ್ರಾಣವಾಗುತ್ತದೆ (ರೂಢಿ).

[ದೇ. ‖ ತಮಿ. ಮಲ. ಕುಣ್ಡಿ ; ತುಳು. ಕುಲ್ಲಿಗೆ ; ತೆಲು. ಕುಟ್ಟಿ]

**ಕುಂಡೆ**$_2$ (ನಾ). = ಕುಂಡ$_1$ : ನಾಯಿ ಮತ್ತು ಮನುಷ್ಯರು ಒಂದೇ ಹೊಲಸು ತುಂಬಿದ ಕುಂಡೆಯಲ್ಲಿ ಅನ್ನವನ್ನು ಅರಸುತ್ತಿದ್ದರು (ಅನ್ನದಾ. ೫೦). [< ಸಂ. ಕುಂಡ]

**ಕುಂಡೆಚಣ್ಣ** (ನಾ). ಕುಂಡೆಯನ್ನು ಮುಚ್ಚುವಷ್ಟು ಮಾತ್ರ ಇರುವ ಬಿಗಿಯಾದ ಗಿಡ್ಡ ಚಣ್ಣ : (ಕ). [ಕುಂಡೆ$_1$ + ಚಣ್ಣ (< ಚಲ್ಲಣ)]

**ಕುಂಡೆಹಡಕ** (ನಾ). ಸಜಾತಿ ಮೈಥುನದವನು : (ಕ). [ಕುಂಡೆ$_1$ + ಹಡಕ]

**ಕುಂಡೋದರ** (ನಾ). ಒಂದು ದೊಡ್ಡ ಭೂತದ ಹೆಸರು : (ಕ). [ಕುಂಡ ? + ಉದರ]

**ಕುಂತ** (ನಾ). ೧. ಒಂದು ಬಗೆಯ ಆಯುಧ; ಈಟಿ ; ಭರ್ಜಿ : "ಕುಂತಮೆನಲು ಸಬಳಂ" (ಮಂಗರಾ. ೮೮-೩೬) ; ನಕುಲ ಕುಂತ ಕಬಳಿತ ಶರೀರನಾಗಿರ್ದ ದಂದಶೂಕನೆನಿಸಿದ ಶತಬಿಂದುವಿನ ಸುತ ಪಂಚಕ ಮುಮಂ (ಗದಾಯು. ೪-೬೩ವ) ; ಕುಂತದೆ ಕುತ್ತಿಡಾಡಿ ನಭೋಂತ ಕ್ಕೊಗೆದಿರ್ದ ಸುಭಟತತಿ ಖಚರಬಲಭ್ರಾಂತಿಯನಿನಿಸಂ ಜನಿಯಿಸೆ (ಜಗವ. ೬-೫೬) ; ಸಬಳದ ಸೆಲ್ಲಹದ ಕುಂತದ ಹಥಳದ ಕುದುರೆಗಾಳೆಗದ ಬಿಂನಣದೊಳು(ಂ)ನ್ನತಿಕೆವಡೆದ (ಸೌಇಇ. IX–i ; ೩೪೩-೨೦ ; 1276) ; ಖಡುಗ ತೋಮರ ಪರಶುಗಳ ಕಕ್ಕಡೆಯ ಕುಂತದ ಪಿಂಡಿವಾಳದ ಕಡುಗಲಿಗಳುಜಿ ಮಗ್ಗಿದರು (ಕುವ್ಯಾಭೀ. ೪-೩೮) ; ಹರಿಗೆ ತೋಮರ ಕುಂತ ಖಡ್ಗಾದಿ ಕೈದುಗಳ (ನವಮೋ. ೧೨-೪೦). ೨. ಚಿಕ್ಕಪ್ರಾಣಿ ; ಕೀಟ: (ಕ). [ಸಂ.]

**ಕುಂತಗಾಜ** (ನಾ). ಕುಂತವೆಂಬ ಆಯುಧವನ್ನು ಹಿಡಿದವನು : "ಪ್ರಾಸಿಕಃ, ಕೌಂಲತಿಕಃ – ಈ ೨ ಕುಂತಗಾಜ" (ನಾಚಿರಾ. ೧೩೪). [ಕುಂತ + -ಕಾಜ]

**ಕುಂತಣ** (ನಾ). ೧. ಕೂದಲು ; ಕೇಶ : ಆ ನಾಡ ನಡುವೆ ಭೂಸತಿಯ ಕುಂತಣದಂತೆ ತಾನುಜಿ ಕಣ್ಗೊಪ್ಪುತಿಹುದು ಮಾನಿತ ಕುಂತಣ ಜನಪದ (ಕುರಾಸಾಂ. ೨-೬೬) ; ಕಡುಗರ್ಪುದಳೆದು ಕವಲಿದ ಕುಂತಣಂ (ಏಕೋಪು. ೬-೩೯). ೨. ಕುಂತಳದೇಶ : ಇನ್ನೀ ಏಕುಂತಣದೇಶಕ್ಕುನ್ನತ ನಾಚಾರ್ಯವರ್ಯ ರಾಯಾಚಾರ್ಯಂ (ಮುಂಬರಾ. ೧೧೧೫, ೩೩೬-೧ ; 17ನೆಯಶತ) ; ಎನೆ ನಸುನಗುತ ಕುಂತಣದೇಶಾಧಿಪನನುನಯದಿಂ ಕರೆದು (ಕುರಾಸಾಂ. ೧೭-೧೯). [< ಸಂ. ಕುಂತಲ]

**ಕುಂತಣಲಲಾಮ** (ನಾ). ಕುಂತಳದೇಶಕ್ಕೆ ಭೂಷಣವಾದವನು; —ಭೂಷಣನಾದವನು: ಸಾಕ್ಷಾತ್ ಪ್ರಣವ ಮೂರುತಿ ನಿತ್ಯಮಾ ಕುಂತಣಲಲಾಮಂ ಶ್ರೀಕರಂ ನಮಗೀಗೆ ಸಂತಸವ (ಶಂಕದಾ. ೧೦–೧). [ಕುಂತಣ + ಲಲಾಮ]

**ಕುಂತಲ**, ಕುಂತಳ$_1$ (ನಾ). ೧. ಕೂದಲು; ತಲೆಗೂದಲು: ಸೋಗೆ ನವಿಲ್ ಬಟಲ್ಮುಡಿಗೆ ಭೃಂಗಂ ಕುಂತಲಕ್ಕೆ . . . ಎಳಸೆ (ಮಲ್ಲಿಪು. ೨–೨೦). ೨. ಮುಡಿಯನ್ನು ಕಟ್ಟಿಕೊಳ್ಳುವ ಒಂದು ಬಗೆ; ಒಂದು ಬಗೆಯ ಕೇಶಬಂಧ: "ವೇಣೀ, ಧಮ್ಮಿಲ್ಲಃ, ಕುಂತಳಃ, ಕಬರೀ –ಈ ಳ ಮುಡಿ" (ಹಲಾಯು. ೮೬–೩೬೬); "ಆ ಕಬರಿ ಕುಂತಳಂ ವೇಣಿ ಧಮ್ಮಿಲ್ಲಮೆನಲಾ ಕಟ್ಟು" (ಮಂಗರಾ. ೯೪–೬). ೩. ಒಂದು ದೇಶ; ಕರ್ನಾಟಕದ ಉತ್ತರಪ್ರದೇಶ: ಪ್ರಾಚೀನ ಕರ್ನಾಟಕದ ಉತ್ತರ ಪ್ರದೇಶಕ್ಕೆ "ಕುಂತಲ"ವೆಂದು ಹೇಳುತ್ತಿದ್ದರು (ವೈವಾಸ್ತು. ೨). **ಕುಂತಳ$_1$**: ೧. ನಂದನಾವಳಿಗಳಂ ಬಳಸಿರ್ದ ಮದಾಳಿಸಂಕುಲಂಗಳೆ ವಿಷಯಾಂಗನಾ ಲುಳಿತ ಕುಂತಳದಂತೆವೊಲೊಪ್ಪಿ ತೋಱುಗುಂ (ಪಂಪಭಾ. ೧–೫೩); ಅಳಿಕುಲ ನೀಲ ಕುಟಿಲಕುಂತಳನುಂ (ಕಾದಂಪೂ. ೯೮೭); ಏಱುದಿನಂ ರಸಾಂಜನಂ ಬೆರಸದಱಿಂ ತಲೆವೂಸೆ ಕುಟಿಳ ಕುಂತಳಮಕ್ಕುಂ (ಲೋಕೋಪ. ೯–೫೧); ಕುಂತಳಂ ಕೊರ್ಬಿ ಕವಲ್ತು ಕುಡಿ ನಿಮಿರುತಿರೆ (ಬಸರ. ೧–೧೧೫). ೩. ಕರ್ನಾಟ ಕೋಶಲಮಂದಭದ್ರ ಕುಂತಳ ಮಹಾಚೀನಕ ವಿದೇಹ (ಚಿಬಪು. ೬–೫೦); ಧರಣೀಕಾಂತೆಗೆ ಕುಂತಳಂ ಬೊಲೆಸೆಗುಂ ತಾಂ ಕುಂತಳಂ (ಸಕವೈ. ೧–೪). [ಸಂ.]

**ಕುಂತಲಮೇಘ** (ನಾ). ಕೂದಲಂತೆ ಕಾಣುವ ಮೋಡ: "ಕೂದಲಿನಂತೆ ಅಥವಾ ಉಣ್ಣೆಯ ಎಳೆಗಳಂತೆ, ಕೆದರಿಕೊಂಡಿರುವ ತಂತುಗಳುಳ್ಳ ಮೇಘದ ರೂಪು: ಕುಂತಲಮೇಘ" (Cirrus. ಇಂಕನಿ). [ಕುಂತಲ + ಮೇಘ]

**ಕುಂತಲಹಸ್ತ** (ನಾ). ಉದ್ದವಾಗಿ ಹೆಣೆದ ಜಡೆ; ಹೆಳಲು: "ಕುಂತಲ ಹಸ್ತ – ಹೆರಳು" (ಗಂಗಾಮು. ೮೭). [ಕುಂತಲ + ಹಸ್ತ]

**ಕುಂತಲು** (ನಾ). = ಕುಂತ: ಮುಂದೆ ಫಿರ್ಯಾದಿ ಪರದ ದೊಂಬೀ ಗುಂಪಿನ ಮೇಲೆ ಪ್ರಯೋಗಿಸುವುದಕ್ಕಾಗಿ ಭಾರಿಯಾದ ಕುಂತಲನ್ನು ನಾವು ಇರಿಸಿಕೊಂಡು (ಮುಸುಗ. ೧೩೪). [< ಕುಂತ]

**ಕುಂತಹಸ್ತ** (ನಾ). ಕುಂತವನ್ನು ಕೈಯಲ್ಲಿ ಹಿಡಿದವನು: ಅನೇಕ ನೇತ್ರಪಟ್ಟಿಕಾ ಸಟಾಲ ಸರಲ ಕುಂತಹಸ್ತಮಹಾಹಯಾರೋಹಂ . . . ಇದು ಲಾಟಬಲಂ (ಆದಿಪು. ೧೩–೪೫ ವ). [ಕುಂತ$_2$ + ಹಸ್ತ]

**ಕುಂತಳ$_1$** 'ಕುಂತಲ' ನೋ.

**ಕುಂತಳ$_2$** (ನಾ). ಒಂದು ಗಿಡಮೂಲಿಕೆ (?): ಅಡ್ಡಣ, ಕೆಂಪುಕಲ್ಲು, ಕುಂತಳ (ವೈಔಗಿ. ೫೯–೧೧೬೬). [?]

**ಕುಂತಳದೇಶ** (ನಾ). ೧. ಮುಂಗುರುಳಿನ ಸ್ಥಳ; ಮುಂದಲೆ: ಜಳಧಿ ವ್ಯಾವೇಷ್ಟಿತೋರ್ವೀಮಹಿಳೆಗೆ ವಿಳಸಲ್ಲೋಳ ಭಾಳಸ್ಥಳೀ ಕುಂತಳದೇಶಂ ತಾನೆನಿಪ್ಪಂತಿರಲೆಸೆವ ಲಸತ್ಕುಂತಳಕ್ಷೋಣಿಗೆ (ಎಇ. XIV, ೨೬೦; 1116). ೨. ಕುಂತಲವೆಂಬ ನಾಡು: ಭರತಮಹೀಕಾಂತೆಯ ಕುಂತಳ ದಂತೆಸೆವುತಿರ್ದ್ದ ಕುಂತಳದೇಶದ ತುಂಗಭದ್ರಾನದಿಯಿಂ ತೆಂಕಲ್ (ಸೌಇಇ. IX–i, ೨೯೬–೯; 1176); ದೇಶಂಗಳೊಳಗೆ ಕುಂತಳದೇಶಮೆ ಮಿಗಿಲ್ (ಶಾಸಪ. ೮೬–೧೧; 1179). [ಕುಂತಳ$_1$ (= ಕುಂತಲ) + ದೇಶ]

**ಕುಂತಳಭರ** (ನಾ). = ಕುಂತಲಹಸ್ತ: ಮಲ್ಲಿಕಾ ಕುಸುಮಮನಾಂತ ಕುಂತಳಭರಂ (ಜಗವಿ. ೨–೬೧). [ಕುಂತಳ$_1$ (= ಕುಂತಲ) + ಭರ]

**ಕುಂತಳವಿಷಯ** (ನಾ). = ಕುಂತಳದೇಶ: ಅನುಪಮರವನಿಪರನ್ನಾ ವನಿಪ ಶ್ರೀಕುಂತ[ಳ][ಕ್ಕೆ]ಕೈನಿದಿ ನಿಜಾವನಿಗೆ ತೆಗೆಯಲ್ಕತದೀಯಾವನಿ ಕುಂತಳ ವಿಷಯವೆನಿಸಿ ಪೆಸರ್ವೆತ್ತೆಸೆಗುಂ (ಕಇಅ. ೨–೨–೨೨; 1058). [ಕುಂತಳ$_1$ (= ಕುಂತಲ) + ವಿಷಯ]

**ಕುಂತಳಿಕೆ** (ನಾ). "ಒಂದು ಜಾತಿಯ ಹಕ್ಕಿ" (ಪಂಪಭಾ. ಕೋಶ); ಪೊನ್ನ ಬೆಳ್ಳಿಯ ಪದ್ಮರಾಗದಪಚ್ಚೆಯ ಗಿಳಿಯ ಕೋಗಿಲೆಯ ಕೊಂಚೆಯಂಚೆಯ ಕುಂತಳಿಕೆಯ ಮಾಟ್ಕೆಯ ಸಿಪ್ಪುಗಳೊಳ್ ತೀವಿ (ಪಂಪಭಾ. ೪–೮೬ ವ). [← ಪ್ರಾ. ಕುಂತ = ಗಿಳಿ]

**ಕುಂತಾಕುಂತಿ** (ನಾ). ಕುಂತಗಳಿಂದ ಮಾಡುವ ಯುದ್ಧ: ಕುಂತಾಕುಂತಿಯುಂ ಶಸ್ತ್ರಾಶಸ್ತ್ರಿಯುಂ ಖಟ್ವಾಖಟ್ವಿಯುಮಾದ ಕಾಳೆಗದ (ಅನಂಪು. ೧೪–೨ ವ). [ಕುಂತ + ಕುಂತ]

**ಕುಂತಾಗ್ರ** (ನಾ). ಈಟಿಯ ತುದಿ; ಕುಂತಾಯುಧದ ಮೊನೆ: ಕುಣಿವ ಕುಂತಾಗ್ರದಲಿ ಜೋಲುವ ಹಿಣಿಲುಗರುಳೊಪ್ಪಿದವು (ಕುವ್ಯಾಭೀ. ೪–೪೪). [ಕುಂತ + ಅಗ್ರ]

**ಕುಂತಾಚಾರ್ಯ** (ನಾ). ಒಬ್ಬಾತನ ಹೆಸರು: ಕುನ್ತಾಚಾರ್ಯ ಲಿಖಿತಂ (ಎಕ. IV, ಹೆಗ್ಗಡ. ೪–೩೫; 750). [ಕುಂತ$_0$ + ಆಚಾರ್ಯ]

**ಕುಂತಾಹತಿ** (ನಾ). ಈಟಿಯ ಹೊಡೆತ, —ಪೆಟ್ಟು: ನೆರೆದ ತಿಮಿರಂ ನಿಶಾಕರ ಕರ ಕುಂತಾಹುತಿಗೆ ಬೆರ್ಚಿ (ಚಂದ್ರಪು. ೮–೨೯). [ಕುಂತ + ಆಹತಿ]

**ಕುಂತಿರ್** 'ಕುಳ್$_1$' ಪರಾ.

**ಕುಂತಿರು** 'ಕುಳ್$_1$' ಪರಾ.

**ಕುಂತಿಹುಲ್ಲು** (ನಾ). ಒಂದು ಜಾತಿಯ ಹುಲ್ಲು: ಕಾಸಿಹುಲ್ಲು, ಕುಂತಿ ಹುಲ್ಲು . . . ಬಿಳೀ ದೊಡ್ಡಕಾಚಿಹುಲ್ಲು (ವೈಔಗಿ. ೨೬–೫೦೬). [ಕುಂತಿ$_0$ + ಹುಲ್ಲು (< ಪುಲ್)]

**ಕುಂತು$_1$** 'ಕುಳ್$_1$' ಪರಾ.

**ಕುಂತು$_2$** 'ಕುಂದು$_3$' ನೋ.

**ಕುಂಥು** (ನಾ). ೧. ಒಂದು ಬಗೆಯ ಕೀಟ: ಕುಂಥು ಘುಣ ಮತ್ಕುಣ ದಂಶಮಶಕಲಿಕ್ಷಾಯೂಕ ಪಿಪೀಲಿಕಾದೇಹಿಕಂ . . . ಸಪಾದ ಕೀಟಕಾದಿ ತ್ರೀಂದ್ರಿಯಂಗಳ್ (ತತ್ತ್ವಪ್ರ. ೯೮). ೨. ಇಪ್ಪತ್ತು ನಾಲ್ಕು ತೀರ್ಥಂಕರರಲ್ಲಿ ಹದಿನೇಳನೆಯವನು: ಕುಂಥು. . . ವರ್ಧಮಾನರೆಂಬಿರ್ಪತ್ತುನಾಲ್ಕು ತೀರ್ಥಂಕರರ್ (ಚಾವುಂಪು. ೪೨೦–೧೪). [ಸಂ.]

**ಕುಂದ$_1$** 'ಕೊಲ್' ಪರಾ.

**ಕುಂದ$_2$** 'ಕುಂದು$_3$' ನೋ.

**ಕುಂದ$_3$**, ಕುಂದಿ$_2$, ಗುಂದ, ಗುಂದೆ (ನಾ). ಬೆಟ್ಟ; ಗುಡ್ಡ: ಗುಣವಪ್ಪ ಕುಂದೇಱಿ ನಿಂದವರ ಕೋಪಂ ಕ್ಷಣಮಪ್ಪೊಡಂ ತಾಳಲರಿದು (ಕುಜಳ್. ೧–೩–೯). **ಕುಂದಿ$_2$**. 'ಆನೆಗುಂದಿ' ಪರಾ. **ಗುಂದ**: ೧. (ಕರಾ) ಹೊಯಿಗೆ ಗುಂದದ ಮೇಲೆ ಗೇರುಗಿಡ ಚೆನ್ನಾಗಿ ಬೆಳೆಯುತ್ತದೆ (ರೂಢಿ). 'ಕೊಂಡ' ಪರಾ. ೨. ಮರಳುದಿನ್ನೆ: ಗುಂದದ ಮೇಲೆ ಮನೆ ಕಟ್ಟಿದರೆ ಎಷ್ಟು ದಿವಸ ಉಳಿದೀತು (ರೂಢಿ). **ಗುಂದೆ**: ನಿರ್ಜನವಾದ ಆ ಗುಂದೆಯ ತುದಿಯಲ್ಲಿ ಮೊಳಿತ ಆ ನಗುವಿನಿಂದ ನಿರ್ಮಲೆಗೆ ಆಶ್ಚರ್ಯವಾಯಿತು (ಮೂರುದಾ. ೨೨೬); ಗುಂದೆಗಳಲ್ಲೆಲ್ಲ ಅಲೆದು ಸುರಗೀಕಾಯಿಗಳನ್ನು ಹೆಕ್ಕಿ, ಬುಟ್ಟಿಯಲ್ಲಿ ತುಂಬಿ ದೇವ ಸ್ಥಾನಕ್ಕೆ ಬಂದಾಗ . . . ಎನಿಸಿರಬೇಕು (ಆಬೋಲೀ. ೧೫).

[ದೇ. ॥ ತಮಿ. ಕುನ್ಱು; ಮಲ. ಕುನ್ನು, ಕುಱು; ಕೊಡ. ಕುಂದೀ; ತುಳು. ಗುಡ್ಡೆ; ತೆಲು. ಕೊಂಡ; ಪರ್ಜಿ. ಕೊಂಡಿ]

**ಕುಂದ₄** (ನಾ). ಒಂದು ಜಾತಿಯ ಮಲ್ಲಿಗೆ; ಮೊಲ್ಲೆ; ಕೋಲು ಮಲ್ಲಿಗೆ: "ಕುಂದಮನೆ ಮೊಲ್ಲೆ" (ಮಂಗರಾ. ೩೮–೨೩); ವಿದಳತ್ಕುಂದ ಶಶಾಂಕ ಶಂಖಧವಳಂ (ಪಂಪಭಾ. ೭–೭೨); ಆ ಕುಂದದಳ ಧವಳ ಲೋಚನೆಯ ಲಾವಣ್ಯಸುಧಾಸೇವೆ ಸಮನಿಸದಿರೆ ಸಾವು ಸಮನಿಸುಗುಂ (ಪಂಪರಾಮಾ. ೯–೧೬೦ ವ); ವಿರಹಿಯನಳಱಿಸಿದುದು ಮುದಿತ ಮಧುಪ ವೃಂದಂ ಕುಂದಂ (ಪುಷ್ಪವೃ. ६–೪೨); ಕುಂದಪುಷ್ಪ ಅಥವಾ ಮೊಲ್ಲೆ ಹೂವನ್ನು ಧರಿಸುವುದರಿಂದ (ಸಕವ್ಯೆ. ೪೩). ೨. ಒಂದು ಬಗೆಯ ಸುಗಂಧದ ಸಸ್ಯ. ೩. ಕುಬೇರನ ನವನಿಧಿಗಳಲ್ಲಿ ಒಂದು: ಮಹಾಪದ್ಮ, ಪದ್ಮ, ಶಂಕ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ವರವೆಂಬ ನವನಿಧಿಗಳಿಗಧಿಕಾರಮುಂಟಾಗಿ (ವಿವೇಕ. ೨೦೭). [ಸಂ.]

**ಕುಂದಕ**, ಕುಂದುಕ (ನಾ). ೧. ಕೊರತೆ; ಕುಂದು; ದೋಷ; ಕಲಂಕ: ಕುಟಿಲ ಕುಂದಕವ ಕಳೆದಿಱಿದ ಶಿವಯೋಗಿ ನಿಟಿಲಾಕ್ಷನಕ್ಕು (ಸರ್ವಜ್ಞ. ೫೪೪); ಗೌರವಕ್ಕೆ ಸ್ವಲ್ಪ ಕುಂದಕವಲ್ಲವೆ? (ದೌಲತ್. ೪೪). ೨. ಅಡ್ಡಿ; ಆತಂಕ: ಇದು ನಮ್ಮ ನಿಯಮಗಳಿಗೆ ವಿರೋಧವಾದುದು ಮತ್ತು ಇತರ ಮಕ್ಕಳ ವಿದ್ಯಾಭಿವೃದ್ಧಿಗೆ ಕುಂದಕ ತರುವಂಥದು (ರಂಗಕ. ೯೫). **ಕುಂದುಕ**: ೨. ಮಂದಮತಿಯು ತೊಡಗಿಬಂದು ಹೊಂದ್ಯುಗದಿಂ ಇಂದು ಈ ವನದೊಳು ಕುಂದುಕವದಾಯ್ತು (ಹನುಚ. ೨೬). [ಕುಂದು₁ + -ಕ₂./ ತಮಿ. ಕುನ್ದಗ; ತೆಲು. ಕುಂದಕ]

**ಕುಂದಕುಟ್ಮಲ**, ಕುಂದಕುಟ್ಮಳ (ನಾ). ಮೊಲ್ಲೆಯ ಮೊಗ್ಗು: ಕುಂದ ಕುಟ್ಮಲದಂತಿರ್ಪ ಪಲ್ಗಳ್ (ಅದ್ಭುತ. ೧೧–೨೪). **ಕುಂದಕುಟ್ಮಳ**: ವನಲಕ್ಷ್ಮೀಕಾಂತೆಯ ಕಾಂತಧವಳದಂತಾಳಿಯವೊಲ್ ಸೊಗಯಿಸಿತು ಕುಂದಕುಟ್ಮಳ [ಪಾಠಾಂ. ಲ] ನಿಕರಂ (ಚಂದ್ರಪ್ರ. ೨–೬೫); ಕುಂದ ಕುಟ್ಮಳ ಪೋಲ್ವ ದಂತಪಂಕ್ತಿಗಳಲ್ಲಿ (ನವಮೋ. ೭–೧೨).
[ಕುಂದ₄ + ಕುಟ್ಮಲ]

**ಕುಂದಕುಟ್ಮಳ** 'ಕುಂದಕುಟ್ಮಲ' ನೋ.

**ಕುಂದಗಂಧಿ** (ನಾ). ಮೊಲ್ಲೆಯ ಹೂವಿನಂತೆ ಸುಗಂಧವನ್ನುಳ್ಳವಳು: ಕುಂದಗಂಧಿಯ ವದನರುಚಿಗೊರೆವಂದು ಛಂದವೆನಿಪ್ಪುದೆಳೆವೆಱೆಯಿಂ ದವತಿ ಕಾಂತಿಯೊಳೆಸೆವುದಬಳೆಯ ಮಿಸುಪ ನೊಸಲು (ಬಸವು. ೪–೨೮).
[ಸಂ. (ಕುಂದ + ಗಂಧ + -)]

**ಕುಂದಗಾಮುಂಡ**, ಕುಂದಗಾವುಂಡ (ನಾ). ಒಬ್ಬಾತನ ಹೆಸರು: ಪೆರ್ಬಾಟ ಉತ್ತಮಗಾಮುಣ್ದರುಂ ಕುಂದಗಾಮುಣ್ದರುಂ (ಎಕ. IV, ಶ್ರೀರಂಗ. ೧೬೦–೨೧; 800). **ಕುಂದಗಾವುಂಡ**: ಕುನ್ದಗಾವುಣ್ಡನ ಮುನ್ದೆ ನಿನ್ದು (ಎಕ. VII, ಹೊನ್ನಾಳಿ. ೨೩–೪; 934).
[ಕುಂದ₀ + ಗಾಮುಂಡ]

**ಕುಂದಗಾಲು** (ನಾ). ಕುಂಟುಗಾಲು; ಊನವಾದ ಕಾಲು: (+).
[ಕುಂದ₂ (< ಕುಂದು₃) + ಕಾಲು₁ (< ಕಾಲ್₁)]

**ಕುಂದಗಾವುಂಡ** 'ಕುಂದಗಾಮುಂಡ' ನೋ.

**ಕುಂದಗೆಸೇವೆ** (ನಾ). ಒಂದು ಊರಿನ ಹೆಸರು: ಕುನ್ದಗೆಸೇವೆಯ ಕಲಿಯಮ್ಮ (ಎಕ. VIII, ಸೊರಬ. ೧೧–೧೨; 800). [?]

**ಕುಂದಚ್ಛಾಯೆ** (ನಾ). ಮೊಲ್ಲೆ ಹೂವಿನ ಕಾಂತಿ: ಅತ್ರೇಯದ್ಯುತಿಯುಂ ಪಳಂಚಲೆದು ಕುಂದಚ್ಛಾಯೆಯುಂ ಮಿಕ್ಕು (ಚಂದ್ರಪ್ರ. ೧–೩೩).
[ಕುಂದ₄ + ಛಾಯೆ]

**ಕುಂದಟ್ಟೆ** (ನಾ). ಒಬ್ಬಾತನ ಹೆಸರು: ಬಂಕೆಯನ ಮಗಂ ಕುನ್ದಟ್ಟೆ ನಿಡುಗುನ್ದಗೆ ಪಂನೆರಡುಮಾಂನಾಳುತ್ತಿಟ್ಟು ಬಂಕೆಯಂಗೆ ಧರ್ಮ ಮಕ್ಕನ್ದು ಕುನ್ದಟ್ಟೆಯುಂ ರಾಪಸುಂಮಿಟ್ಟು . . . ಅಯ್ಮತ್ತಕ್ಕೆಯ್ಯ ಗೊಟ್ಟವರ್ (ಕಇ. I, ೧೫–೯; 9ನೆಯ ಶತ). [?]

**ಕುಂದಣ**, ಕುಂದನ, ಕುಂದಳ, ಕುಂದಾಣ₁ (ನಾ). ಚಿನ್ನದಲ್ಲಿ ಹರಳನ್ನು ಕೂಡಿಸುವ ಕೆಲಸ, —ಕೆಚ್ಚುವ ಕೆಲಸ: ಕುಂದಣದ ಗೊಂಡೆಯೆನೆ ತಾವರೆಯ ಕೋಶದಂತಿರೆಸೆವ ಜೋಳದ ಪಾಟಿಯುಂ (ರಾಮಾಶ್ವ. ೧೧೧–೨೭). ೨. ಚೊಕ್ಕ ಚಿನ್ನ; ಅಪರಂಜಿ: ಕುಂದಣಂ ದೊರಕೊಳ್ಳದೀ ಪುರುಷ ರತ್ನಕ್ಕೆ (ಸೌಂದಪು. ೧೨–೩೭); ಚಿನ್ನದ ಕಳಶ ಕುಂದಣದ ಬೊಗರಿ ಹೊಸಹೊನ್ನದಾಮರೆಗಳ ಮುಗುಳು (ಶ್ರೀಪಾಲ. ೩–೫೩); ಕುಂದಣದುಪ್ಪರಿಗೆಯ ಮೇಲೆ ನವರತ್ನದಿಂದಾದ ಮಂಟಪದಲ್ಲಿ (ಭರತ. ೫–೩); ಪೀತಾಂಬರವನ್ನು ಧರಿಸಿದ್ದ ಕೃಷ್ಣನು ಕುಂದಣದಲ್ಲಿ ಕೂರಿಸಿದ್ದ ರತ್ನದಂತೆ ಶೋಭಿಸುತ್ತಿದ್ದನು (ವಚಭಾ. ೨೫೨). **ಕುಂದನ**: ೨. ಕೀಳು ಚಿನ್ನವ ಬೆರದ ಕುಂದನವನು . . . ತೆಗೆದುಕೊಡುವುದೆನಲು (ಭಕ್ತಿಸ. III, ೨೭). **ಕುಂದಳ**: ೨. ಕುಂದಳದಲ್ಲಿ ಬಣ್ಣಂ (ಉಮಾಶ. ೮). **ಕುಂದಾಣ₁**: ೨. ಕುಂದಾಣ ಬಹಂತೆ ಭೂಷಣಕೆ ಕ್ಷೀಣ ಕರ್ಮಗಳ ಕೈಮಾಟಕೆ ಬಂದು ನಿತ್ರಾಣಿಯಾಗಿರುತಿಹನಾತ್ಮ (ಭರತ. ೬೮–೧೧೧).
[ದೇ. ‖ ತಮಿ. ಕುನ್ದನ; ತುಳು. ತೆಲು. ಕುಂದನ]

**ಕುಂದಣಗಟ್ಟು** (ನಾ). ಚೊಕ್ಕ ಚಿನ್ನದಲ್ಲಿ ಕೆಚ್ಚಿದುದು, —ಕೂಡಿಸಿದುದು: ಈ ತೀವ್ರ ಚುಂಬಕದ ಸೂಜಿಗಲ್ಲನ್ನು . . . ಕುಂದಣಗಟ್ಟಿನ ವಜ್ರಕ್ಕೆ ಒಡ್ಡಿ ಪ್ರಯೋಗಿಸಿ (ಬಿಟ್ಟಅ. ೧೮೮–೨೩).
[ಕುಂದಣ + ಕಟ್ಟು₂]

**ಕುಂದಣಗಾರ** (ನಾ). ಕುಂದಣಕೆಲಸದವನು; ಅಕ್ಕಸಾಲೆ: ಕುಂದಣಗಾರನ ಕೆಲಸ (ರೂಢಿ). [ಕುಂದಣ + -ಗಾರ (< -ಕಾಱ)]

**ಕುಂದಣಗುಸುರಿ** (ನಾ). ಚಿನ್ನದಲ್ಲಿ ಮಾಡಿದ ಕೆತ್ತನೆಯ ಕೆಲಸ: ಕುಂದಣಗುಸುರಿಯ ನವರತ್ನ ಖಚಿತವಾದ ಚಿತ್ರವಿಚಿತ್ರಾದ್ಭುತ ಕೃತಿಗಳನ್ನೂ (ಬಿಟ್ಟಅ. ೧೦೮–೧೦); ಕುಂದಣಗುಸುರಿಯ ನವರತ್ನ ಖಚಿತವಾದ ಸೆಜ್ಜೆಯನ್ನು ಅಳವಡಿಸಿದರು (ಸವತಿ. ೯೭).
[ಕುಂದಣ + ಕುಸುರಿ]

**ಕುಂದಣಗೆಲಸ** (ನಾ). = ಕುಂದಣಗುಸುರಿ: ತನ್ನ ಮನೋರಾಜ್ಯದ ಕುಸುರಿಗೆಲಸವನ್ನೋ ಕುಂದಣಗೆಲಸವನ್ನೊ . . . ಅಲ್ಲಿ ಬಿಡಿಸಿ ಮೂಡಿಸಬೇಕು (ಸವತಿ. III ಪ್ರಸ್ತಾವನೆ). [ಕುಂದಣ + ಕೆಲಸ]

**ಕುಂದಣವಾಳೆ** (ನಾ). ಒಂದು ಬಗೆಯ ಬಾಳೆ; ಚಿನ್ನದ ಬಾಳೆ. ಕುಂದಣವಾಳೆದೊಡೆ = ಕುಂದಣವಾಳೆಯಂತಿರುವ ತೊಡೆ: ಕುಂದಣವಾಳೆದೊಡೆಯಯಿಂದುಮುಖಿಯು (ಶ್ರೀಪಾಲ. ೪–೮೮).
[ಕುಂದಣ + ಬಾಳೆ₁ (< ಬಾೞೆ)]

**ಕುಂದಣವಿಡು** (ಕ್ರಿ). ಒಪ್ಪವಿಡು; ಶೋಭೆಯನ್ನುಂಟುಮಾಡು; ಕಾಂತಿಕೊಡು: ಹರವಾದ ಎದೆ, ಬೆಳ್ಳಿಯಂಥ ದಂತಪಂಕ್ತಿ ... ಶರೀರಕ್ಕೆ ಕುಂದಣವಿಟ್ಟಿದ್ದವು (ಹಳ್ಳಿಹಾ. ೭೫); ಭಾವಭಾಷೆಗಳ ಜೋಡಣೆಯು ಬಂಗಾರಕ್ಕೆ ಕುಂದಣವಿಟ್ಟಂತೆ (ಕನ್ನಜಾ. ೧೮೭). [ಕುಂದಣ + ಇಡು₁]

**ಕುಂದಣಿ**, ಕುಂದಳಿ, ಕುಂದಾಣ₂, ಕುಂದಾಣಿ (ನಾ). ೧. ಒರಳುಕಲ್ಲಿನಲ್ಲಿ ಧಾನ್ಯಗಳನ್ನು ತಳಿಸುವಾಗ ಹೊರಗೆ ಕಾಳು ಸಿಡಿದು ಹೋಗದಂತೆ ಇಡುವ ಸಾಧನ; ಬಾವಾಡು; ಕುದುರು; ಬಾಯೋಡು: ಪಿಡಿದಿಹ ಡಮರುಗವನೇ ಪಿರಿಯಕುಂದಣಿ ಮಾಡಿ. . .ಮುರನ ತಱಿದೊನಕೆಗಳ ಮಾಡಿಹರುಷದಿಂಬತ್ತವ ಮಿದಿದರು (ಶಂಕದಾ. ೯–೪೭). ೨. ಒಂದು ಊರಿನ ಹೆಸರು: ಶ್ರೀ ವೀರ ರಾಮನಾಥ ದೇವರಸರು ಕುಂದಣಿಯ ಬೀಡಿನಲು ಸುಖರಾಜ್ಯಂಗೆಯುತ್ತಿರೆ (ಎಕ. XII, ತುಮಕೂ. ೨೭–೭; 1787). **ಕುಂದಳಿ**: "ಕುಂದಳಿಯೆನಲ್ಕಾವೊತ್ತುಗುಂದಣಿ" (ಮಂಗರಾ. ३೧–೨೦). **ಕುಂದಾಣ₂**: ೧. (ಎಸಮ್ಯ. XV, ೧೫).

**ಕುಂದಾಣಿ:** ೩. ಮರದ ಒರಳು: "ಕುಂದಳಿಗೆ, ಕುಂದಾಣಿ= ಕಟ್ಟಿಗೆಯ ಒಳ್ಳು" (ಗಂಗಾಮ. ೮೬).

[ದೇ. ‖ ತಮಿ. ಮಲ. ಕುನ್ದಾಣಿ; ತೆಲು. ಕುಂದಿ, ಕುಂದೆನ]

**ಕುಂದಣಿಕೆ,** ಕುಂದಣಿಗೆ, ಕುಂದಳಿಗೆ (ನಾ). = ಕುಂದಣಿ೧: ಚಂದ್ರಕಾಂತ ಕುಂದಣಿಕೆಗಳನಿಟ್ಟು ಥಳಥಳಿಪ ಬಜ್ಜರದೊನಕೆಗಳ ಪಿಡಿದು (ವೆಂಕಾರಾ. ೫-೬-೪೨). **ಕುಂದಣಿಗೆ:** ಚಂದ್ರ ಮಾರ್ತಾಂಡರನು ಸಂದಿಸಿಯೇ ಪರಿವೇಷ ಕುಂದದೆ ನಿಚ್ಚಬರುತಿರಲು ಜಗವೆಲ್ಲ ಕುಂದಣಿಗೆಯಕ್ಕು (ಸರ್ವಜ್ಞ. ೧೫೭೪); ಚಂದ್ರಕಾಂತದ ಸಣ್ಣಗೆಯೊರಲ್ಗೆ ಹಿಮಾಂಶು ಮಂಡಳವನ್ನು ಕುಂದಣಿಗೆ ಮಾಡಿ (ಮಂತ್ರಶ. ೬೧-೧೪). **ಕುಂದಳಿಗೆ:** "ಕುಂದಳಿಗೆ, ಕುಂದಾಣಿ = ಕಟ್ಟಿಗೆಯ ಒಳ್ಳು" (ಗಂಗಾಮ. ೮೬).

[ಕುಂದಣಿ + -ಕೆ]

**ಕುಂದಣಿಗೆ** 'ಕುಂದಣಿಕೆ' ನೋ.

**ಕುಂದತೂರ್** (ನಾ). ಒಂದು ಊರಿನ ಹೆಸರು: ಕುನ್ದತೂರ ತುಱುಗೊಳೊಳಾನ್ತಿಱಿದು (ಎಕ. X, ಮುಳಬಾ.೨೪೪-೩; 890). [? + ಊರ್]

**ಕುಂದನ** 'ಕುಂದಣ' ನೋ.

**ಕುಂದನರೆ** (ನಾ). ಒಂದು ಪ್ರದೇಶದ ಹೆಸರು (?): ಅಲ್ಲಿಂದಂ ತೆಂಕಲಾಗಿ ನಡದು ಕುಂದನರೆಯಿಂ ಮೂಡಲು ಚೌಮೂಲೆ ಬಳಿಯ ನೆಟ್ಟಕಲು (ಎಕ. XIV, ಗುಂಡ್ಲುಪೇ. ೧೨೬-೧೦; ?). [?]

**ಕುಂದನಾಡು,** ಕುಂದುನಾಡು (ನಾ). ಒಂದು ಪ್ರಾಂತದ ಹೆಸರು: ಕುನ್ದನಾಡ ಮೂವತ್ತಱ ಮೊರಲ ಮಾರಹೂರ ಎಡಿನಾಡೆಪ್ಪತ್ತರ ಬಳಿಯ (ಎಕ. VIII, ಸಾಗರ. ೬-೧೦; 1075). **ಕುಂದುನಾಡು:** ಗಂಗವಾಡಿಚ್ಛಾನ್ನವತಿ ಸಹಸ್ರ ಮಧ್ಯ ಖಿಮ್ಪನ ಕುನ್ದುನಾಡು ಎಪ್ಪತ್ತರ ತತುಮಧ್ಯೆ (ಇಆ. VIII, ೯೫; 555); ಬಾಚಾಡಿಯ ಮಗ ಎಗರಜಾದಂ ಕುಂದುನಾಡ ಸರ್ವಹರಿನಲಿ ತುಱು ಪಾರಿವಿನಲಿ ಬಿದ (ಎಕ. III, ಮಳವ. ೪೬-೪; 1187). [ಕುಂದ$_{0}$ + ನಾಡು]

**ಕುಂದಮ** 'ಕುಂದಮ್ಮ' ನೋ.

**ಕುಂದಮರಸ** (ನಾ). ಒಬ್ಬಾತನ ಹೆಸರು: ಕುಂದಮರಸರ್ ಬನವಾಸೆ ಪಂನಿಚ್ಛಾರ್ಸಿರಮುಮಂ ಸಾನ್ತಳಿಸಾಸಿರಮುಮಂ (ಇಆ. V, ೧೬-೨೩; 1019); ಶ್ರೀಮದಿಱಿವ ಬೆಡಂಗದೇವರ ಮಗಂ ಶ್ರೀಮತ್ ಕುಂದಮರಸರ ಪಾದಪಂಕಜಭ್ರಮರ (ಎಕ. VII, ಶಿಕಾರಿ. ೮೧-೫; 1030).

[ಕುಂದಮ (< ಕುಂದಮ್ಮ) + ಅರಸ$_{1}$]

**ಕುಂದಮ್ಮ,** ಕುಂದಮ (ನಾ). ಒಬ್ಬಾತನ ಹೆಸರು: ಶ್ರೀ ಕುಂದಮ್ಮ ಶರಾಭಿನಂ ಪೂಲಿಯೂ ಕೊಱಗ್ಗಿಯೂ ಕಾಲಿಯುಮ್ಮನೂ ಇಱ್ದು ಕೊಟ್ಟರ್ (ಎಕ. VIII, ಸೊರಬ. ೨೨-೧೧; 800). **ಕುಂದಮ:** ಮಂಣ್ಣಳಿಕಂ ಕುಂದಮಂಗೆ ಕುಪ್ಪಗುಡ್ಡೆಯ ಬಯಲಂ ಕಳಂ ಬಂದು (ಎಕ. VIII, ಸೊರಬ. ೧೮೪-೬; 1033). [ಕುಂದ$_{0}$ + ಅಮ್ಮ$_{1}$]

**ಕುಂದಯ್ಯ** (ನಾ). ಒಬ್ಬಾತನ ಹೆಸರು: ಕುನ್ದಯ್ಯಂ ನೆಕ್ಕುನ್ದಿ ನಾಡಾಳೆ (ಎಕ. X, ಚಿಂತಾಮ. ೩೬-೨; 885); ಕುನ್ದಯ್ಯ ಬನವಾಸೆ ಪನ್ನಿಚ್ಛಾರ್ಸಿರಮನಾಳುತ್ತಿರೆ (ಎಕ. VIII, ಸೊರಬ. ೨೮೩-೪; 1073).

[ಕುಂದ$_{0}$ + ಅಯ್ಯ$_{1}$]

**ಕುಂದರಕಡ್ಡಿಹುಲ್ಲು** (ನಾ). ಒಂದು ಬಗೆಯಸಸ್ಯ: (ವೈ ಔ ಗಿ. ೪೬-೯೧೯). [ಕುಂದರ + ಕಡ್ಡಿ + ಹುಲ್ಲು (< ಪುಲ್)]

**ಕುಂದರಗೆ,** ಕುಂದುರಗೆ (ನಾ). ಒಂದು ಪ್ರದೇಶದ ಹೆಸರು: ಬೆಳ್ಗಲಿ ಮೂನೂಱುಮಾಂಕುನ್ದರಗೆ ಎಪ್ಪತ್ತುಮಾಂ ಕುನ್ದೂರಯ್ನೂಱುಮಾಂ (ಕಇ. I, ೧೫-೬; ಸು. 866). **ಕುಂದುರಗೆ:** ಕುಂದುರಗೆಯ ಜಿನಮಂದಿರಮುಮಂ (ಸೌಇಇ. XI-i, ೧೦೩-೩೪; 1070). [?]

**ಕುಂದರದನೆ** (ನಾ). ಮೊಲ್ಲೆಯ ಮೊಗ್ಗುಗಳಂತೆ ಹಲ್ಲುಗಳನ್ನುಳ್ಳವಳು: ಕುಂದರದನೆಯರು ಬಯಸುತ ಬರೆ (ವೆಂಕಾರಾ. ೩-೬-೧೮).

[ಸಂ. ಕುಂದರದನಾ (ಕುಂದ + ರದನ + -)]

**ಕುಂದರಮಾವು** (ನಾ). ಒಂದು ಜಾತಿಯ ಮಾವು; ಸುಗಂಧ ಮಾವು: ಬಾಳೆ ಹೊಂಬಾಳೆ ಕುಂದರಮಾವುಯಿಮ್ಮಾವು ತಾಳೆ ಹೊಂದಾಳೆ ಕಜೂರ್ರ ಘನಸಾರ (ಗುಭಜ. ೮-೨೩).

[ಕುಂದರ$_{0}$ + ಮಾವು]

**ಕುಂದರ್ಕುಱುಕಿ,** ಕುಂದಲಗುಱುಕಿ (ನಾ). ಒಂದು ಊರಿನ ಹೆಸರು: ಕರಡಿಕುಱುಕಿ ಮೇಲ ಕಾರಱಿ ಎ ವಿಗ್ಗನಲೆ ಕುನ್ದರ್ಕ್ಕುಱುಕಿಯೆ ಮೂಡ್ಡೆ ಒಟಿಪ್ಪಿಎ (ಎಕ. X (S), ಚಿಕ್ಕಬ. ೬೬-೨೧; 850). **ಕುಂದಲಗುಱುಕಿ:** ಮಳಲೂರ ಸ್ಥಳದ ಕುಂದಲುಗುಱುಕಿಯ ಗ್ರಾಮಂಗಳಿಗೆ (ಎಕ. X, ಶಿಡ್ಲಘ. ೭೯-೩; 1573).

[ಕುಂದರ ? + ಕುಱುಕಿ]

**ಕುಂದಲಗುಱುಕಿ** 'ಕುಂದರ್ಕುಱುಕಿ' ನೋ.

**ಕುಂದವಾಸಿ** (ನಾ). ಒಬ್ಬಾತನ ಹೆಸರು: ಮಲಗಾಜರ ಕುನ್ದವಾಸಿಯ ಮಗಂ ಮರಮ್ಮವರೆದ ಲಿಕಿತನ್ (ಎಕ. VIII, ಸೊರಬ. ೨೨-೧೦; 800). [?]

**ಕುಂದವಿಗೆ** (ನಾ). ಒಂದು ಊರಿನ ಹೆಸರು: ಮುಗುನ್ದ ಪನ್ನೆರಡರ ಬಿಳಿಯ ಬಾಡ ಕುನ್ದವಿಕೆ (ಇಆ. IV, ೨೦೯-೩೪; 1075). [?]

**ಕುಂದಳ** 'ಕುಂದಣ' ನೋ.

**ಕುಂದಳಿಗೆ** 'ಕುಂದಣಿಕೆ' ನೋ.

**ಕುಂದಶಕ್ತಿ** (ನಾ). ಒಬ್ಬಾತನ ಹೆಸರು: ಕುನ್ದಶಕ್ತಿನ್ನಾರ್ಮ ರಾಜಾಭೂತ್ (ಸೌಇಇ. XX, ೩-೬; 8ನೆಯ ಶತ). [?]

**ಕುಂದಾಡಿ** (ನಾ). ಒಂದು ಊರಿನ ಹೆಸರು (?): ಮರೂಱು ಕುನ್ದಾಡಿಯ ನೆಬಿಲಗುಡಿಸಿದ ತ್ರೈಲೋಕ್ಯವೀರಕೆ ಕೊಟ್ಟಮಣ್ಣು ಇರ್ಪಣ್ಣುಗ (ಎಕ. IX, ಬೆಂಗಳೂ. ೪೦-೮; 870). [?]

**ಕುಂದಾಣ$_{1}$** 'ಕುಂದಣ' ನೋ.

**ಕುಂದಾಣ$_{2}$** 'ಕುಂದಣಿ' ನೋ.

**ಕುಂದಾಣಿ** 'ಕುಂದಣಿ' ನೋ.

**ಕುಂದಿ$_{1}$** (ನಾ). (?): ಆತನ ಮಗನಪ್ಪ ಮುಕುಂದಿಯ ಕೊಂದ ಕುಂದಿಯ ಭೀಮನಿಂ ಆತನ ಮಗನಪ್ಪ ವಿಕ್ರಮಾದಿತ್ಯದೇವನಿಂ (ಗದಾಯು. ೨-೭ ವ). [?]

**ಕುಂದಿ$_{2}$** 'ಕುಂದ$_{3}$' ನೋ.

**ಕುಂದಿಗ** (ನಾ). ಒಬ್ಬಾತನ ಹೆಸರು: ಮೊನೆಯೊಳ್ ಕುನ್ದಿಗ ನಿನ್ನನೆನ್ದು ಪೆಱರಿನ್ನೇವಣ್ಣಿಪರ್ (ಎಇ. XV, ೩೩೧-೭; 1078); ಪಡೆದಂ ಕುನ್ದಿಗನೊಳ್ಪಡೆದಂ ನಡು[ನಾ][ಡ] ತೀರ್ತ್ಥವೀ ಮಹಿಮೆಗಳಂ (ಸೌಇಇ. XX, ೨೪-೧೪; 1034). [?]

**ಕುಂದಿಡು** (ಕ್ರಿ). ತಪ್ಪುಹೊರಿಸು; ದೋಷಾರೋಪಮಾಡು; ನಿಂದಿಸು: ನೋಡದೆ ವಿನೂತನ ಕವಿತೆಯೆಂದು ಕುಂದಿಟ್ಟು ಜಱಿದೊಡೆ ಪೇಳ್ದವನೊಳಾವದೂಣೆಯಂ (ಜೈಮಿಭಾ. ೧-೭).

[ಕುಂದು$_{3}$ + ಇಡು$_{1}$]

**ಕುಂದಿಸು** (ಕ್ರಿ). ೧. ಕುಗ್ಗಿಸು; ತಗ್ಗಿಸು; ಕೊರಗಿಸು; ಕಡಮೆ ಮಾಡು; ಕ್ಷೀಣಗೊಳಿಸು: ತೇಜಮಂ ಕುಂದಿಸಿ ತಾನೆಯುಗ್ಗಳವಾಗೆ (ವಡ್ಡಾರಾ. ೩೬-೫); ಮುಂ ತೊಟ್ಟಂಬನದನುಗಿದು ಕುಂದಿಸಿದಂ ಭಯದಿಂ ಕರ್ಣನೆಂದು ಲೋಕಂ ನಗದೇ (ಪಂಪಭಾ. ೧೨-೧೯೯); ವಿರೋಧಿಭವನೋಪಗತ ಗ್ರಹಮಾ ತೃತೀಯ ಭಾಗಮನದು ತನ್ನನೊಂದು ಕುಡುವಾಯುವಿನೊಳ್ ಕ್ಷಣದಿಂದ ಕುಂದಿಕುಂ (ಜಾತಕ. ೮-೪);

ತನುವಂ ತಪದೊಳ್ಕುಂದಿಸಿ ವನಿತೆಯರಂ ತೊಱೆದು (ಧರ್ಮಾಮೃ. ೫-೧೮೪) ; ಒಂದು ಕಲಶದೊಳಿರಡು ರಸವನು ಕುಂದಿಸದೆ ತಾ ಬೆರಸಿಸುಧೆ ಸುರವೃಂದಕೆಱೆದನು ಸುರೆಯ ದೈತ್ಯರಿಗೆ (ಸಂಭಪ. ೬-೧೫). ೨. ನಾಶ ವಾಗು : ಮುಗುಧ ಭಟಜೀವವು ಕುಂದಿಸಿದುದಾ ಭ್ರಮರ ಪರಿಮಳ ಚಂಪಕೋರ್ವಿಯಲಿ (ಸಂಭಪ. ೨೬-೮೫). [ಕುಂದು$_1$ + -ಇಸು$_3$]

**ಕುಂದು$_1$** (ಕ್ರಿ). ೧. ಕುಗ್ಗು ; ತಗ್ಗು ; ಕೊರಗು; ಸೊರಗು ; ಬಡ ವಾಗು ; ಕ್ಷಯಿಸು : ಕುಂದು-ಕ್ಷಯೇ, ಪಶುರೋಗೇ ಚ" (ಶಮಧಾ) ; ಅಲ್ಲಿಯ ಖಚರರ್ . . . ದೇಹ ಪ್ರಮಾಣದೊಳ್ ಕುಂದುವರುಂ ಪೆರ್ಚು ವರುಮಲ್ಲ (ಆದಿಪು. ೯-೧೨೧ ವ) ; ದಿವದಿವಸಂಗಳಿಂ ಕುಂದುವುವಲ್ಲದೆ ಬಳೆಯವಾಯುವುಂ ವಪುವುಂ (ಅಜಿಪು. ೨-೬೯) ; ಕಲಿಕಾಳೋದ್ರೇಕ ಮನುಜರಜೀವು ಪೋಯ್ತಾಪುರ್ಚು ಕುಂದಿತ್ತು ಶೌಚಂ ತೊಲಗಿತ್ತು (ಸೌಇಇ. IX-i, ೧೧೭-೭ ; 1055) ; ಶಿಶುವಿನ ಸಹಸ ಕುಂದದದೆನುತ್ತ ಖತಿಯಲಿ ಮಿಹಿರಸುತನಡಹಾಯ್ದು ತಡೆದನು ಮತ್ತೆ ಬಾಲಕನ (ಕುವ್ಯಾದ್ರೋ. ೫-೫೧) ; ಧಾತು ಕುಂದಿದರೂ ಮಾತು ಕುಂದಲಿಲ್ಲ (ಗಾದೆ). ೨. ಬಾಡು ; ಒಣಗು ; ಬತ್ತು : ಕಂದಿಕುಂದಿದುದೇಕೀ ಲಲಿತಾಂಗಂ (ಆದಿಪು. ೩-೨೫) ; ಮಾಗಿಯ ತೊಱೆಯಂತೆ ಕುಂದಿ (ಧರ್ಮಾಮೃ. ೧೪-೪೨) ; ರಾಯ ಮನವೊಲಿದೇಱಿಸಿದರೇಱುವುದು ದೊರೆ ಮನಮುಱಿಯೆ ಕುಂದುವುದು (ಕುವ್ಯಾಕ. ೧-೨೪) ; ಚಂದಿರನೊಳಗೆ ಕಪ್ಪುಂಟು ಬೆಳ್ದಿಂಗಳು ಕಂದಿ ಕುಂದಿ[ಪಾಠಾಂ. ಕೊಂಡಿ]ಹುದೋ ನಿರ್ಮಲವೋ (ಭರಚ. ೧-೧೦). ೩. ತಪ್ಪು : ನೀಮುಂ ತಾಮುಮೊಂದೆಡೆ ಯೊಳಿರೆ ಕಿಸುಱುಂ ಕಲಹಮುಮೆಂದುಂ ಕುಂದದು (ಪಂಪಭಾ. ೪-೮ ವ) ; ಮೊದಲೊಳಜಗಣಂ ಕುಂದದೆ ಬರ್ಕೆ (ಛಂದೋಂಬು. ೫-೨೪೨) ; ದೇವರ್ಗ್ಗೆ ಒಸ್ದು ನನ್ದಾದೀವಿಗೆ ಚನ್ದ್ರ ಸೂರ್ಯ್ಯ ಕೃತಂ ಕುನ್ದದೆ ನಡೆವನ್ತಾಗೆ (ಎಕ. XIV, ಮಳವ. ೧೨೪-೧ ; 1024) ; ಕುಂದದಿವರ್ ಪೇಟ್ದೋದಿಂಗೊಂದುಮೊಗಂ ನೆಱೆಯದೆಂದು ಬಹುಮುಖನಾದಂ ಸಂದ ಪಿತಾಮಹನೆನೆ (ಅರ್ಧನೇ. ೧-೧೭) ; ಗೋವಿಂದ ತನ್ನಯ ಪೀತಾಂಬರವ ಕುಂದದೆ ಭೂಮಿಗೆ ಪೊದಿಸಿದೊಲಿರುವುದು ಗಂಧಶಾಲಿಯ ವನ ಕಳಿತು (ಮೋಹತ. ೨-೫೨).

[ದೇ. ॥ ತಮಿ. ಕುನ್ಱು ; ಮಲ. ಕುಱು ; ತುಳು. ಕುಂದು ; ಕೊಡ. ಕೊರು]

**ಕುಂದು$_2$** (ಕ್ರಿ). ನಿಲ್ಲಿಸು ; ಸ್ಥಾಪಿಸು ; ಇಡು : ಅನ್ತಿಗೆಯ್ವೆನೆನ್ದು ಆಣೆ ಪತ್ರಮುಂ ಕೊಟ್ಟು ತ್ರಿಪುರಾಂತಕದೇವರ ಬಳಿ ನೀರಂ ಕುಡಿದೀ ಪಡಿ ಯಲ್ ಶಾಸನಮಂ ಕುಂದುವನ್ತಾಗಿಯೊಡಂಬಟ್ಟು ಬಂದನಾಕ್ರಮದಲಿ ಮಲೆಯಾಟ ಪಂಡಿತದೇವರುಂ ತಾನು ವಿಟ್ದು . . . ಹೊಜಲಲುಂ ಶಾಸನಮಂ ನಿಲಿಸಿದಂ (ಸೌಇಇ. IX-i, ೧೬೯-೨೭ ; 1104). [?]

**ಕುಂದು$_3$**, ಕುಂತು$_2$, ಕುಂದ$_2$ (ನಾ). ೧. ಕೊರತೆ ; ನ್ಯೂನತೆ ; ದೋಷ ; ಕಲಂಕ : ಕುಂದುಂ ಕಳಂಕಮುಮಂ ಹರಿಣಾಂಕನೊಳ್ (ಎಇ. XIII, ೩೩೨-೪೩ ; 929) ; ಬಲಿಯಂ ವಾಮನ ರೂಪದಿಂದಮ ವಲಂ ಮುಂ ಬೇಡಿದೆಂ ಭೂರಿ ಭೂತಲಮಂ ಕುಂದೆನಗಾಯ್ತು (ಪಂಪಭಾ. ೯-೨೦) ; ಅಱಿಯದು ಕಪ್ಪೆ ಸಾಗರಮನಂಬುಧಿಗಂತದು ಕುಂದೆ (ಧರ್ಮಾಮೃ. ೧-೧೧೭) ; ರನ್ನದ ಕನ್ನಡಿಯುಂ ನಲವಿಂ ನೋಡಿ ದವಂಗೆ ಕುಂದದೇನಾದಪುದೇ (ಕಬ್ಬಿಕಾ. ೭) ; ಅವ ಶರದಲಿ ಕೊಱತೆ ನಿನ್ನವ ರಾವ ಬಲದಲಿ ಕುಂದು (ಕುವ್ಯಾದ್ರೋ. ೯-೫೬) ; ಕಂದು ಕುಂದಿಲ್ಲದ ಸುವೃತ್ತದಿಂದೆಸೆವ ತನಗೆ (ಜೈಮಿಭಾ. ೧೩-೪೯) ; ಇದು ಅವರ ಪ್ರತಿಷ್ಠೆಗೆ ಕುಂದು (ಯಕ್ಷಪ್ರ. ೧೦೬). ೨. ಕೀಳಾದುದು ; ಹೀನವಾದುದು : ಮೆಣಸು ಹುಳಿತಡೆ ಜೋಳದಿಂ ಕುಂದೆ (ಹಚಕಾ. ೧೧-೧೯). ೩. ದನಕರುಗಳಿಗೆ ಬರುವ ಒಂದು ರೋಗ ; ನೆಲೆ : "ಕುಂದು ಕ್ಷಯೇ, ಪಶುರೋಗೇ ಚ" (ಶಮಧಾ) ; ಕುಂದಾಪಾವಿನಂತೆ ಕಾಲಂ ಬಡಿವ ಪುರಜನವುಮಂ (ಧರ್ಮಾಮೃ. ೩-೨೦೬). **ಕುಂತು$_2$** : ೧. ಆ ದ್ವಿಜ ವಂಶಕೆ ಕುಂತಾಯಿತೆಂದು ಕೋಪದೊಳು (ನೇಮಿಸಂ. ೬-೨೭) ; ಸಕಲ ಮಾಹೇಶ್ವರರ ಸೇವೆಯಂ ಕುಂತಾಗದಂತೆ ಮಾಡಲು (ಚೀರಮ. ೬-೩೪) ; ಕುಂತು ನನ್ನದು ತೇಜ ನಿನಗೆಂದ ಮೇಲೆ ಕೋಪಾಂತರವೇನಣ್ಣ (ಭರಚ. ೫೧-೧೦೧) ; ಕುಂತಿಲ್ಲದಲೆ ಪ್ರಸನ್ನತೆವೆತ್ತು ದಾನವನ ತಾಂ ತಲೆಯ ತಱಿದು (ವೆಂಕಾರಾ. ೨-೧೪-೪೦) ; ಈ ಕಾಂತೆಯಂ ಸಲಹಿ ದೊಡೆ ಕುಂತಹುದೆ ಮಾಯಾಂತಕನೆ (ಪ್ರಭುಪು. ೫-೧೫೭). **ಕುಂದ$_2$**. ೧. 'ಕುಂದಗಾಲು' ಪರಾ.

ಕುಂದುಕೊರತೆ = ಅರೆಕೊರೆ : ತಮ್ಮ ಕಾರ್ಯಕ್ಷೇತ್ರದ ಕುಂದು ಕೊರತೆಗಳನ್ನು ಕಂಡುಕೊಂಡು (ಶಿಕ್ಷದ. ೩೨೮). ಕುಂದುತರು = ಕಲಂಕ ವನ್ನುಂಟುಮಾಡು ; ದೋಷತರು : ಆ ಶಾಸ್ತ್ರಿ ಸಿಕ್ಕಾಪಟ್ಟೆ ಭವಿಷ್ಯ ಹೇಳಿ ಜ್ಯೋತಿಷಶಾಸ್ತ್ರಕ್ಕೆ ಕುಂದುತಂದನು (ರೂಢಿ). ಕುಂದುನಿಂದೆ = ಕೊರತೆ ಹಾಗೂ ದೂಷಣೆ ; ಅಪಖ್ಯಾತಿ : ಅಂದುವಿಂದಾವಾವ ಕಾಲ ದೊಳೆಂದುವುಂ ತಾಂ ಕುಂದುನಿಂದೆಗಳೊಂದುವಿಲ್ಲದ ಮಂದಮಹಿಮಾನಂದ ದಿಂದಿರ್ಪ (ಬಸವು. ೧೯-೩೧). ಕುಂದುಪೆರ್ಚು, ಕುಂದುಹೆಚ್ಚು = ಕಡಮೆ ಹಾಗೂ ಹೆಚ್ಚು ; ನ್ಯೂನಾಧಿಕ್ಯ : ಕುಂದು ಪೆರ್ಚುಗಳಿಗೆ ಕೊಸರದೆ ಕರ್ಣನುಮಂದವನೊಳ್ ಕಾದಿದನು (ಕರ್ಣವ್ಯ. ೬-೨) ; ಶಿಷ್ಯನ ಕುಂದು ಹೆಚ್ಚುಗಳಾರದೆಂಬುದ ಪೇಳು ನೀನೆಂದ (ಕುವ್ಯಾದ್ರೋ. ೧೪-೧೯) ; ಕುಂದುಹೆಚ್ಚಿನ ಪಾಡುಪಂಥದ ಕಂದು ಕಸರಿನ ಕಲಿಮನದ ಕಡುಹಿಂದ ಕಯ್ದುಡುಕಿದರು (ತೊರರಾ. ೪-೩-೬) ; ಕುಂದುಹೆಚ್ಚಿಲ್ಲದ ಕಂದಿನೊ ಳಂದದ . . . ಶಾಂತ ಮೂರ್ತಿ ಪ್ರಭೀಂದು ಮುನಿಪಗೆಱಗುವೆನು (ಅಂಜಚ. ೧-೫೫). [< ಕುಂದು$_1$]

**ಕುಂದು$_4$** (ನಾ). ಒಂದು ತೊರೆಯ ಹೆಸರು : ಪೂರ್ವಸ್ಥಿತಿ ಕುನ್ದಿಮ್ಬ ತೊಱೆ ಮೇರೆ (ಇಆ. XI ; ೧೨೭-೧೨ ; 803). [?]

**ಕುಂದು$_5$** (ನಾ). ಒಂದು ಬಗೆಯ ಸುಗಂಧ ದ್ರವ್ಯ ; ಕುಂದುರುಕ : (ಶ). [ಸಂ.]

**ಕುಂದುಂಗೋಳ** (ನಾ). ಒಂದು ಊರಿನ ಹೆಸರು : ಕುಂದುಂಗೋಳಂ ಕಾಡಲೂರಿಟ್ಟಗೆ (ಎಇ. XIII, ೪೭-೬೭ ; 1112). [?]

**ಕುಂದುಕ** 'ಕುಂದಕ' ನೋ.

**ಕುಂದುಕೇರು** (ಕ್ರಿ). ದನಗಳಿಗೆ ಕುಂದುರೋಗ ನಿವಾರಣೆಗಾಗಿ ಮೊರದಲ್ಲಿ ಬೂದಿ ಹಾಕಿಕೊಂಡು ಕೇರು, —ತೂರು : (ಎಸಮ್ಮ. XV, ೪೧). [ಕುಂದು$_3$ + ಕೇರು$_1$ (< ಕೇಱು)]

**ಕುಂದುಗಳೆ** (ಕ್ರಿ). ಕಲಂಕವನ್ನು ನಿವಾರಿಸು ; ದೋಷ ಪರಿಹಾರ ಮಾಡು : ವಾರಿನಿಧಿ ಮುನಿ ಕುಡಿದ ಕಪಿ ಕಯ್ಯಾರೆ ಕಟ್ಟಿದ ಕುಂದುಗಳೆ ವೊಡೆ ಸೇರಿತೀ ಪುರ ಸಿರಿಯನೆನೆ (ಸಾಳ್ವಭಾ. ೨-೬). [ಕುಂದು$_3$ + ಕಳೆ$_1$]

**ಕುಂದುಗಾಣ್** (ಕ್ರಿ). ೧. ದೋಷಕಂಡು ಬರು ; ಕೊರತೆ ತೋರಿ ಬರು : ಕುಂತೀದೇವಿ ನೋನುವುದೆಂಬ ವಿವರವನು ಅಂದದಲಿ ವಿರ ಚಿಪುದು ಲೋಕವು ಕುಂದುಗಾಣದ ತೆಱದಲಿ (ಸಂಭಪ. ೨೦-೧೨೩). ೨. ಕೀಳಾಗಿ ಕಾಣು ; ಕಲಂಕ ಹೊರಿಸು (?) : ಕಿರೀಟ ಭೀಮರ ಕುಂದುಗಾಬುದು ಲೋಕ ನಮ್ಮನು ತೆಗೆದು ಹಿಂಗಿದರೆ (ಕುವ್ಯಾದ್ರೋ. ೧೫-೨೪). [ಕುಂದು$_3$ + ಕಾಣ್]

**ಕುಂದುಗುಲ** (ನಾ). ಕೀಳುಜಾತಿ ; ಹೀನಕುಲ : ಹಂದೆ ಭಟರೊಳು ಹೊಲ್ಲ ನಿಂದೆಯ ನುಡಿ ಹೊಲ್ಲ ಕುಂದುಗುಲದವಳ ತರ ಹೊಲ್ಲ (ಸರ್ವಜ್ಞ. ೧೧೫೬). [ಕುಂದು$_3$ + ಕುಲ]

**ಕುಂದುಗೆ** (ನಾ). ಕೊರತೆ; ನ್ಯೂನತೆ: ಷಡಾವಶ್ಯಕ ಕ್ರಿಯೆಗಳೊಳ್ ಕುಂದುಗೆಯಿಲ್ಲದುದುಂ (ತತ್ತ್ವಪ್ರ. ೨೬೫). [ಕುಂದು$_1$ + -ಗೆ]

**ಕುಂದುಗೊಳ್** (ಕ್ರಿ). ಬಡವಾಗು; ಸೊರಗು; ಕುಂದು: ಇನ ಮಂಡಲಮಂ ಸ್ವರ್ಭಾನು ನುಂಗೆ ಕಡುಗಂದಿ ಕುಂದುಗೊಂಡಿರ್ಪುದುಂ (ಪಂರಾಮಾ. ೨-೩೦). [ಕುಂದು$_3$ + ಕೊಳ್$_1$]

**ಕುಂದುನಾಡು** 'ಕುಂದನಾಡು' ನೋ.

**ಕುಂದುರಗೆ** 'ಕುಂದರಗೆ' ನೋ.

**ಕುಂದುರು$_1$** 'ಕುಂದೂರು' ನೋ.

**ಕುಂದುರು$_2$** (ನಾ). = ಕುಂದುರುಕ: ಕರಜಂ ಕುಂದುರು ಜಟಿಮಾಂಸಿ ರುಜೆಯಿವಂ ಸವನೆಗೊಂಡು ದೇಹಮನಿಂಬಾಗಿರೆ ಧೂಪಿಸಿದಂದು ಮನೋಹರ ಗಂಧಂ ತಾನದಕ್ಕುಂ (ಲೋಕೋಪ. ೭-೨೯); ಮಳಯರುಹಂ ಕುಂದುರು ಕಪಿಜಳದ ನಖಂ . . . ಜಳಮನರೆ ದೂಡಿ ಮಾಡುಗೆ ವಿಳಾಸದಿಂ ಧೂಪವರ್ತಿಯಂ (ಲೋಕೋಪ. ೭-೩೨); "ಕಣ್ಣಿಗೆ [ಪಾಠಾಂ. ಕಣಲಿಗೆ]ಯ ಹುಲ್ಲಬೇರ್" (ಲೋಕೋಪ. ಟೀಕು). [ಸಂ.]

**ಕುಂದುರುಕ** (ನಾ). ಒಂದು ಬಗೆಯ ಸುಗಂಧದ ಬೇರು, —ಗೆಡ್ಡೆ: "ವಹಗಂಧಃ – ಕುಂದುರುಕ" (ಒಷಧಿ. ೧೪೮). [ಸಂ.]

**ಕುಂದುರುಕಿ** (ನಾ). ಆನೆಬೇಲ; ಸಲ್ಲಕಿ: "ತದುಕಿನ ಗಿಡ, ಆನೆಬೇಲ" ಅಮರ. ಟೀಕೆ). [ಸಂ. ಕುಂದುರುಕೀ]

**ಕುಂದುರುಜ** (ನಾ). ಒಂದು ಬಗೆಯ ಚೇಳು: ಕುಂದುರುಜ [ಪಾಠಾಂ. ಗುರುಜ] ರಕ್ತಪುಚ್ಛ, ಎಮ್ಮೆಚೇಳು, ಶುಕ್ಲಕೀಟ ಎಂದು ಚೇಳುಗಳು ನಾಲ್ಕುತೆಱ (ವೈದ್ಯಸಾ. II, ೧೯೦). [?]

**ಕುಂದುರುಷ್ಕ** (ನಾ). = ಕುಂದುರುಕ: "ಹೇಲಾಖ್ಯಂ, ಮುಕುಂದಃ, ಕುಂದಃ, ಕುಂದುರುಃ – ಈ ೪ ಕುಂದುರುಷ್ಕ" (ನಾಚಿರಾ. ೧೧೦); "ಮುಕುಂದಃ – ಕುಂದುರುಷ್ಕ" (ಒಷಧಿ. ೧೨೬). ಕಾಳಾಗರು ಕರ್ಕೋಳ . . . ಚಂದನ ಲವಂಗ ಕುಂದುರುಷ್ಕಾದಿ ಸುಗಂಧದ್ರವ್ಯ ಸಹಿತನಾಗಿ (ಅಜಿಪು. ೪-೭೦ ವ). [ಸಂ.]

**ಕುಂದುವಡೆ** (ಕ್ರಿ). ಕುಗ್ಗು; ಕಡಮೆಯಾಗು; ಕ್ಷೀಣಿಸು: ತನು ಭೋಗಾಯುಷ್ಯಂಗಳ್ ಮನುಷ್ಯರೊಳ್ ಕುಂದುವಡೆಗುಮವಸರ್ಪಣದೊಳ್ (ಪಂರಾಮಾ. ೧-೫೮). [ಕುಂದು$_3$ + ಪಡೆ$_1$]

**ಕುಂದುಹ** (ನಾ). ಕುಂದುವಿಕೆ: "ನಷ್ಟಚೇಷ್ಟತೆ – ಚೇಷ್ಟೆಗುಂದುಹ" (ನಾಚಿರಾ. ೬). [ಕುಂದು$_1$ + -ಹ$_2$]

**ಕುಂದೂರು**, ಕುಂದುರು$_1$, (ನಾ). ಒಂದು **ಊರಿನ** ಹೆಸರು: ನನ್ನಿಯ ಗಂಗನ ಪರಿ ಬನ್ದು ಬೆಳ್ಗೆಱೆಯುಂ ಕುನ್ದೂರು ಮುನಿಱಿದು ಹೋಗೆ (ಎಕ. XII, ತಿಪಟೂ. ೫೫-೨; 880); ಕರಡಿಹಾಟಿ ಅಟಿರಿಗುಪ್ಪೆ ಕುಂದೂರು ಬಾಳ ಸಮುದ್ರ (ಎಕ. XII, ತಿಪಟೂ. ೧೦೪-೨೬; 1130). **ಕುಂದುರು$_1$**: ಬೆಳ್ವೊಲ ಮೂನೂಱುಮಂ ಪುರಿಗೆಱೆ ಮೂನೂಱುಮಂ ಕುಂ(ನ್ದು)ರಯ್ನೂಱುಮಂ . . . ಆಳುತ್ತುಮಿರೆ (ಸೌಇಇ. XI-i, ೪೮-೬; 1007). [ಕುಂದ$_3$? + ಊರು$_3$ (< ಊರ್)]

**ಕುಂದೆ** (ನಾ). ಒಂದು ಗಿಡಮೂಲಿಕೆ: (ವೈಔಗಿ. ೫೦-೧೦೦೯). [?]

**ಕುಂದೇಲು** (ನಾ). (ಕರಾ) (ಅಳತೆ ಮೊದಲಾದುವುಗಳಲ್ಲಿ) ಕಡಮೆಯಾಗುವುದು; ಕೊರೆ. [← ತುಳು. ಕುಂದೆಲು]

**ಕುಂದೊಂದು** (ಕ್ರಿ). ದೋಷ ಸೇರು; ಕಳಂಕಹತ್ತು; "ನಿಕೃಷ್ಟವಾಗು" (ಪ್ರಭಣ್ಣ). [ಕುಂದು$_3$ + ಒಂದು$_1$]

**ಕುಂದ್ರಿ** (ನಾ). (ಕರಾ) ಒಂದು ಜಾತಿಯ ಸಣ್ಣ ತೆಂಗಿನಕಾಯಿ: ಕುಂದ್ರಿಕಾಯಿ ಹಿಂಡಿಗೆಗೆ ನೂರರವರೆಗೆ ಬರುತ್ತದೆ (ರೂಢಿ). [← ತುಳು. ಕುಂದ್ರಿ]

**ಕುಂಪಟಿ**, ಕುಪ್ಪಟಿ, ಕುಪ್ಪಡಿ, ಕುಮಟಿ, ಕುಮುಟಿ, ಕುಮ್ಮಟಿ, ಕುಮ್ಮಟಿ$_1$ (ನಾ). ೧. ಅಗ್ಗಿಷ್ಟಿಗೆ: ವರ್ತುಳ ವಾಯುವಿನಲ್ಲಿ ಎದ್ದ ತೃಣಪರ್ಣ ಕುಂಪಟಿ ಮುಂತಾದವನೆಲ್ಲವನೂ (ತುಱುಗಾ. ೯-೩೮); ಅನಿಲ ಮುಟ್ಟದ ಕುಂಪಟಿಯಂತೆ ಗುಣದೋಷಂಗಳ ವಿಚಾರಿಸದಿಪ್ಪುದು ಸದ್ಭಕ್ತ ನಿರವು (ಡಬೊಮ್ಮ. ೪೭); ತಂಪಾದ ನೆರಳಿನಲ್ಲಿ ಸುಖಿಸುವ ಮನುಜ ಕುಂಪಟಿ ಮೈಗೆ ಹಚ್ಚಿಕೊಂಬನೇನೋ (ವಿಸಾಸು. ೪೭-೧). **ಕುಪ್ಪಟಿ**: ೧. ಕುಪ್ಪಟಿಯೊಳಗೆ ತಾವರೆಗೆಡ್ಡೆ ಹುಟ್ಟುವುದೇ (ಬಸಪು. ೩೦-೨೮); ದಪ್ಪನಣುಗನ ಬಲದ ಮಸ್ತಕದ ಮೇಲಪ್ಪಳಿಸಿದ ಬಿಸಿಲ್ಗಡಿಗೆ ಕುಪ್ಪಟಿಯಾದುದುರುವೀರುಹ ಕಳಿತಿರ್ದ ತಪ್ಪಲ ತಱಗೆಲೆಯಾಯ್ತು (ಮೋಹತ. ೧೯-೪೪); **ಕುಪ್ಪಡಿ**: ೧. 'ಕುಪ್ಪಡಿಗೆ' ಪರಾ. **ಕುಮಟಿ**: ೧. ಕುಮಟಿಯ ಮುಂದೆ ಹಸಿಯ ದಾರದ ಚೂರೇನಾದರೂ ಬಿದ್ದಿದೆಯೋ ಏನೋ (ನಡೆದಾ. I, ೫೧೨). **ಕುಮುಟಿ**: ೨. (ಕರಾ) ಕಬ್ಬಿಣದ ಒಲೆ; ಕರಿಒಲೆ. **ಕುಮ್ಮಟಿ$_2$**: (೬). **ಕುಮ್ಮಟಿ$_1$**: (೬).
[ದೇ. ‖ ತಮಿ. ಕುಮ್ಮಟ್ಟಿ; ಮಲ. ಕುಮ್ಪುಲ್, ಕುಮ್ಮಲ್; ತೆಲು. ಕುಂಪಟ]

**ಕುಂಪಣಿ** 'ಕಂಪನಿ' ನೋ.

**ಕುಂಪಣಿರೂಪಾಯಿ**, ಕುಂಫಣಿರೂಪಾಯಿ (ನಾ). ಕಂಪನಿ ಸರಕಾರದವರು ಬಳಕೆಗೆ ತಂದ ರೂಪಾಯಿ ನಾಣ್ಯ: ವೈಶಾಖ ಶುದ್ಧ ೫ ಯಲ್ಲಿ ೧೮,೫೦೦ ಕುಂಪಣಿ ರೂಪಾಯಿಗಳು . . . ಪುಷ್ಯ ಬಹುಳ ೨ ಸ್ಥಿರವಾರದಲ್ಲಿ ೭,೦೪೪ ರಾಜಾರೂಪಾಯಿಗಳು (ಮಹಾವಂ. II, ೧೬೯). **ಕುಂಫಣಿರೂಪಾಯಿ**: ಶಾಂಭಟರ ಕಡೆಯಿಂದಾ ಕುಂಫಣಿರೂಪಾಯಿ ೪೦೦ ನಾನೂರು ರೂಪಾಯಿಗೆ ಶುದ್ಧ ಕ್ರಯಕ್ಕೆ ನಾನು ತೆಗೆದುಕೊಂಡು ಯಿರುವ ಭಟಮಾನ್ಯ (ಎಕ. IX, ಬೆಂಗಳೂ. ೩-೧೦; 1885). [ಕುಂಪಣಿ (< ಕಂಪನಿ) + ರೂಪಾಯಿ]

**ಕುಂಪಣಿಸರಕಾರ**, ಕುಂಪೆನಿಸರ್ಕಾರ (ನಾ). ಇಂಗ್ಲೆಂಡಿನ ಈಸ್ಟ್ ಇಂಡಿಯಾ ಕಂಪನಿಯ ಆಡಳಿತ: ಕುಂಪಣಿ ಸರಕಾರ ಭಾರತದಲ್ಲಿ ನೆಲೆಯೂರಿದ ಮೇಲೆ ಜನರಿಗೆ . . . ಕ್ಷೇಮ ಲಭಿಸಿತಂತೆ (ಕುರುಕಾ. ೧೧೭); 'ಕುಂಪಣಿ' ಸರಕಾರವು ವ್ಯಾಪಾರದೊಡನೆ . . . ರಾಜಕಾರ್ಯದಲ್ಲಿ ಕೈಹಾಕಿ ದೇಶವನ್ನು ಗೆದ್ದಿತು (ಕನ್ನಜಾ. ೮೭). **ಕುಂಪೆನಿಸರ್ಕಾರ**: ಕುಂಪೆನಿ ಸರ್ಕಾರದವರಿಗಾಗಲಿ ಎರಡೆಣಿಸದೆ ಕೇವಲ ಭಕ್ತಿಯಿಂದಲೂ ನಂಬಿಕೆಯಿಂದಲೂ ನಡೆದುಕೊಳ್ಳುತ್ತಿದ್ದರು (ಮಾಮರಾ. ೪೬). [ಕುಂಪಣಿ (< ಕಂಪನಿ) + ಸರಕಾರ]

**ಕುಂಪನಿ** 'ಕಂಪನಿ' ನೋ.

**ಕುಂಪೆ** 'ಕುಪ್ಪೆ$_1$' ನೋ.

**ಕುಂಪೆನಿ** 'ಕಂಪನಿ' ನೋ.

**ಕುಂಪೆನಿಸರ್ಕಾರ** 'ಕುಂಪಣಿ ಸರಕಾರ' ನೋ.

**ಕುಂಪೊಳೆ** (ನಾ). ಒಂದು ಜಾತಿಯ ವೃಕ್ಷ: ಕುಂಪೊಳೆ – ಎತ್ತರವಾಗಿ ಬೆಳೆಯುತ್ತದೆ. ಕಾಯಿಗಳಿಂದ ಉಪ್ಪಿನಕಾಯಿ ಹಾಕುವರು (ಕಭಾಗ. ೩೮). [< ಕುಂಪೋಲಿ ?]

**ಕುಂಪೋಲಿ** (ನಾ). ಒಂದು ಜಾತಿಯ ಗಿಡ: ಕುಂಪೋಲಿ . . . ಕಬ್ಬಿಣದ ಮರ (ವೈಔಗಿ. ೭೦-೧೩೩೫). [?]

**ಕುಂಪ್ಪಹತ್ತಿ** (ನಾ). ಒಂದು ಜಾತಿಯ ಗಿಡ: ಹತ್ತಿ, ಅಂಜಿ, ಕುಂಪ್ಪಹತ್ತಿ (ವೈಔಗಿ. ೪೦-೭೯೧). [?]

**ಕುಂಫಣಿರೂಪಾಯಿ** 'ಕುಂಪಣಿರೂಪಾಯಿ' ನೋ.

**ಕುಂಬ$_1$** (ನಾ). ಹಡಗನ್ನು ಕಟ್ಟುವಮರ; ಕೂವೆಮರ: (೬). [ದೇ. ‖ ತಮಿ. ಮಲ. ಕೂಮ್ಪು]

**ಕುಂಬ$_2$** (ನಾ). ೧. ಗಡಿಗೆ; ಕಲಶ; ಕುಂಭ: "ಕುಂಭ - ಕುಂಬ" (ಶಮುದ. ೨೫೫ ಪ್ರಯೋ); ಕುಂಬಮಂ ಮಾಡುವಂ ಕುಂಬಜಂ (ಶಬ್ದಾನು. ೪೧೨ ಪ್ರಯೋ); ಉರಿನೀರು ಕುಂಬದಂತೆ ಅಗಬಲ್ಲಡೆ ಕಾಯ ಲಿಂಗ ಸಂಬಂಧಿ ತರು ಧರಿಸಿದ ನೀರು ಉರಿಯಂತಾಗಬಲ್ಲಡೆ ಭಾವಲಿಂಗ ಸಂಬಂಧಿ (ಮೋಳಿಮಾ. ೧೧೪-೪೪೬). ೨. ಉತ್ಸವದಲ್ಲಿ ದೇವತೆಗೆ ಗಡಿಗೆಯಲ್ಲಿ ಎಡೆಮಾಡುವ ಅನ್ನ: ಚಿಗುರಿಕ್ಕಿ ಚಟ್ಟಿರಿದು ಕುಂಬಮ ನಿಂಚಿ ಬುತ್ತಿಗೊಟ್ಟು ಪೂಜಿಸಿ (ಶ್ರಾವಕಾ. ೧೦೫-೨೦). ೩. ಕಾಳುಗಳನ್ನು ಅಳೆಯುವ ಒಂದು ಅಳತೆ; ಇಪ್ಪತ್ತು ದ್ರೋಣಗಳ ಅಳತೆ: ಬಿತ್ತುವ ಮ ೩ ನೆ ಕುಂಬ ಕತ್ತಿವರು ಬಿತ್ತುವ ಮೂ ೧ (ಸೌಇಎ. ಮಂಗಳೂರು. ೮೬೫-೧೩; 1312); ೨೦ ಖಂಡುಗಕ್ಕೆ ಒಂದು ಕುಂಬ (ಕಭಾಗ. ೨೯೦). 'ಗುಂಬ' ಪರಾ. [< ಸಂ. ಕುಂಭ]

**ಕುಂಬ$_3$** (ನಾ). "ಯಾಗಶಾಲೆಯ ಸುತ್ತಲೂ ಕಟ್ಟಿದ ಬೇಲಿ". (ಅಮರ. ಟೀಕ). [< ಸಂ. ಕುಂಬಾ]

**ಕುಂಬ$_4$** (ನಾ). ದಡ್ಡ; ಶುಂಭ (?): ಪೊಂಗೆಳ್ಗಂಡುಗಮುಂಗೆಮುಗೆ ಹಣ ವಡ್ಡುವೀಸ ಕಾಣಿಗೆನ ಕುಂಬಂಗೆ ತಿಳಿವಂತು ಪೇಳಿಂ (ಭಾಸ್ಕರ. ೨೦-೧). [?]

**ಕುಂಬಕ** (ನಾ). = ಕುಂಭಕ. 'ಕುಂಬಕಂಬಾಯ್' ಪರಾ. [< ಸಂ. ಕುಂಭಕ]

**ಕುಂಬಕಂಬಾಯ್** (ಕ್ರಿ). ಉಸಿರು ಕಟ್ಟಿಕೊಂಡು ಹಾಯು, —ಮೇಲೆ ಬೀಳು: ಅಂತು ಪೊರುವಾಯ್ದುಂ ಕುಂಬಕಂಬಾಯ್ದು ಮೇಡಿಸಿಯುಂ ಜಿಕೋಡಿಸಿಯುಂ ಏಟಿಸಿಯುಂ ಬಂಪಾಡಿಯುಂ ಮಿಡುಕಾಡಿಯುಂ ಪಾಱುಗೆಡೆವ ಕಾಳ ಮಹಾಕಾಳರ ಗೆಡೆವೊಕ್ಕಿರೆ (ಶಾಂತಿಪು. ೯-೮೦ ವ). [ಕುಂಬಕ + ಪಾಯ್]

**ಕುಂಬಗಾಱ** (ನಾ). ಕುಂಬಾರ: ಬಳೆಗಾಱಂ, ಕುಂಬಗಾಱಂ, ಸುಣ್ಣಗಾಱಂ (ಭಾಷಾಭೂ. ೮೯೧ ಪ್ರಯೋ). [ಕುಂಬ$_1$ + -ಕಾಱ]

**ಕುಂಬಗಾಱಸಾಲೆ** (ನಾ). = ಕುಂಬಾಱಸಾಲೆ: ಅಸಮಾನಂ ಕುಂಬಗಾಱಸಾಲೆಯೊಳಿರ್ದನಂ (ನೇಮಿಪು. ೩-೧೬೮). [ಕುಂಬಗಾಱ + ಸಾಲೆ]

**ಕುಂಬತಳ**, ಕುಂಬದಳ, ಕುಂಭತಳ (ನಾ). ಆನೆಯ ನೆತ್ತಿ, —ಕುಂಭಸ್ಥಳ: "ಕರಿಕುಂಭಸ್ಥಳಮೆ ಕುಂಬತಳಮೆಂದಕ್ಕುಂ" (ಕವಿಕಂ. ೫೯); ಮಾಱಾನೆಯ ಕುಂಬತಳಕೆ ಪಾಯ್ದು (ಕಬ್ಬಿಕಾ. ೨೮೩); ಪೇರಾನೆಯ ಕುಂಬತಳಮಂ ತನ್ನೊಂದೆ ಕೈಯ ಪೊಯ್ಲಿಂ ಸೀಳ್ವ (ರಾಮಾಶ್ವ. ೧೧೧-೧೪). **ಕುಂಬದಳ**: "ಕುಂಬದಳಂ ಗಜಮಸ್ತಕಾಪ್ತಯಂ" (ಕರ್ಣಾನಿ. ೧೯). **ಕುಂಭತಳ**: "ಕುಂಭತಳಮೆಂದು ಕುಂಭಸ್ಥಳಂ" (ಕಶಸಾ. ೬-೯೦). [< ಸಂ. ಕುಂಭಸ್ಥಲ]

**ಕುಂಬದಳ** 'ಕುಂಬತಳ' ನೋ.

**ಕುಂಬಯಿಜ** (ನಾ). ಒಂದು ಊರಿನ ಹೆಸರು: ಅಲಕ್ತಕ ನಗರ ಕುಮ್ಬಯಿಜನಾಮ ಗ್ರಾಮ ಮಾರ್ಗ್ಗ ಮಧ್ಯೆ (ಇಅ. VII, ೨೧೩-೭೮; 5ನೆಯ ಶತ). [?]

**ಕುಂಬರ** 'ಕುಂಬಱ' ನೋ.

**ಕುಂಬರವೆಸ**, ಕುಂಬಾರವೆಸ (ನಾ). ಕುಂಬಾರನ ಕೆಲಸ, —ಕಾರ್ಯ: ಆ ಧಾರಾಗೃಹದಲ್ಲಿ ಪನ್ನಿನೀರ ತುಂಬಿದ ಕುಂಬರವೆಸದ ಕಡಾಯಿಯೊಳಗೆ (ಮಂತ್ರಶ. ೬೧-೨೦). **ಕುಂಬಾರವೆಸ**: ಮಾರ್ತ್ತಾಂಡ ದೇವರ ದೇಗುಲದ ಕುಂಬಾರವೆಸನ ಹಿಡಿಸಲಿಸುವ ಕಂಚಿಕಂಗೆ (ಎಕ. VIII, ಸಾಗರ. ೧೧೯-೬೫; 1042). [ಕುಂಬರ (< ಕುಂಬಱ) + ಬೆಸ$_1$]

**ಕುಂಬಶಿಕೆ** (ನಾ). ಒಂದು ಊರಿನ ಹೆಸರು. ℙ ಈಗಿನ ದಕ್ಷಿಣ ಕನ್ನಡ ಜಿಲ್ಲೆಯ ಕುಂಭಕಾಶಿ (ಕುಂಭಾಶಿ): ಸೊಂಪುವೆತ್ತ ಪೊಳಲೊಳು ಕುಂಬಶಿಕೆಯೊಳು ಮಾಡಿದಂ ಜಿನಗೇಹಂಗಳ (ಎಕ. VII, ಶಿವಮೊ. ೧೧೪-೬; 950). [?]

**ಕುಂಬಸಾಕ** (ನಾ). ಕುದಿನೀರಿನ ಕುಂಭದ ಮೇಲೆ ಮೈ ತುಂಬ ಹೊದೆದುಕೊಂಡು ಕುಳಿತು ಉಗಿಸ್ನಾನ ಮಾಡುವಿಕೆ: (ಕ). [< ಕುಂಭಶಾಖ]

**ಕುಂಬಳ** (ನಾ). ೧. ತರಕಾರಿಯಾಗಿ ಬಳಸುವ ಮತ್ತು ಔಷಧಿಗೆ ಉಪಯೋಗಿಸುವ ಒಂದು ಬಗೆಯ ಕಾಯಿ; ಕೂಷ್ಮಾಂಡ: "ಕರ್ಕಾರು, ಕೂಷ್ಮಾಂಡಃ - ಈ ೨ ಕುಂಬಳಂ" (ಹಲಾಯು. ೩೫-೫೬); ಸೂಜಿಯ ಕೂರ್ಪು ಕುಂಬಳದೊಳಡಂಗುವಂತೆ (ಪಂಪಭಾ. ೧೩-೬೫ ವ); ಅಳಿಯೊಳರೆದು . . . ಜಳಜದ ಕುಂಬಳದ ಸವುಂತೆಯನಿತಱ ಬೀಜಂ ಗಳೊಳೊಂದಱ ಬಿತ್ತಂ ಕುಡಿಗಳುಂಬಮಾಗಿರ್ದ ಮೂತ್ರಕೃಚ್ಛ್ರಂ ಕಿಡುಗುಂ (ಲೋಕೋಪ. ೯-೧೩೪); ಪಱಿಗಬ್ಬಮೆಲ್ಲಮಂ ತಕ್ಕಿಸಿ ತಿಂದು [ಪಾಠಾಂ.ರಕ್ಕಸಿತಿಂದ]ಕುಂಬಳದ ಮಾಱ್ಕೆಯ ಮಾಡುವೆನೆಂಬ ಸಾಸಿಗಂಗೆ (ಸೂಕ್ತಿಸು. ೧-೩೬); ಅಡಿಯಿಡಲು ಮದವಾರಣದ ಕಾಲಡಿಯ ಕುಂಬಳದಂತೆ ರಕ್ಕಸ ಗಡಣವಜಿಗಿಜಿಯಾಗದಿರದು (ತೊರರಾ. ೪-೧೨-೩೧); ಕೂಷ್ಮಾಂಡ - ಕುಂಬಳ (ಶಬ್ದಾನು. ೧೬೦ ಪ್ರಯೋ); "ಕೂಷ್ಮಾಂಡಕ್ಕೆ ಕುಂಬಳಂ ಗುಡಕೆ ಗುಳುಂ" (ಸಂಜೀವ.೩೦). ೨. ಇಸ್ಪೇಟಿನ ಎಲೆಗಳಲ್ಲಿ ಒಂದು; ಬದಾಮ್: ಕುಂಬಳ ರಾಜನಿಗೆ ಕಾಳಾವರ ರಾಣಿ ಹೇಗೆ ಜೊತೆ? ವಾಪಸು ತೆಗೆದುಕೊ (ಗಾಳಿಪ. ೨೫). [< ಪ್ರಾ. ಕುಂಭಂಡ; ಸಂ. ಕೂಷ್ಮಾಂಡ. / ತುಳು. ಕುಂಬ್ಡೊ; ತೆಲು. ಗುಮ್ಮಡಿ]

**ಕುಂಬಳಕಾಯ್**, ಕುಂಬಳಕಾಯಿ (ನಾ). ೧. = ಕುಂಬಳ೧: ಎಣ್ಣೆ ಮುಟ್ಟಿದ ಕುಂಬಳಕಾಯಂತೆ ಒಳಗೊಳಗೆ ಕೊಟಿತು (ಧರ್ಮಾಮೃ. ೩-೩೫). **ಕುಂಬಳಕಾಯಿ**: ಕುಂಬಳಕಾಯಿಗೆ ಕಬ್ಬುನದ ಕಟ್ಟುಕೊಟ್ಟರೆ ಕೊಳೆವುದಲ್ಲದೆ ಬಲುಹಾಗ ಬಲ್ಲುದೆ (ಬಸವ. ೯೨); ಕುಂಬಳಕಾಯಿಗಳಲ್ಲಿ ಸಿಹಿಗುಂಬಳ ಮತ್ತು ಬೂದುಗುಂಬಳವೆಂಬ ಮುಖ್ಯವಾದ ಎರಡು ವಿಧಗಳಿವೆ (ತರಬಿ. ೨೪); ಕುಂಬಳಕಾಯಿ ಕಳ್ಳ ಎಂದರೆ ಹೆಗಲುಮುಟ್ಟಿನೋಡಿಕೊಂಡನಂತೆ (ಗಾದೆ). ೨. (ಅಲಂ) ದೊಡ್ಡದು; ದೊಡ್ಡವರು: ಅವನೇನು ಮಹಾಕುಂಬಳಕಾಯಿ (ರೂಢಿ). ೩. (ಅಲಂ) ಸೊನ್ನೆ: ಅವನಿಗೆ ಗಣಿತದಲ್ಲಿ ಕುಂಬಳಕಾಯಿ (ರೂಢಿ). [ಕುಂಬಳ + ಕಾಯ್$_4$]

**ಕುಂಬಳಕಾಯಿ** 'ಕುಂಬಳಕಾಯ್' ನೋ.

**ಕುಂಬಳಗಿಡ** (ನಾ). = ಕುಂಬಳಬಳ್ಳಿ: "ಕೂಷ್ಮಾಂಡಕಃ, ಕರ್ಕಾರುಃ -ಈ ೨ ಕುಂಬಳಗಿಡದ ಹೆಸರು" (ಸಿದ್ಧಾಂತಿ. ೧೨೯). [ಕುಂಬಳ + ಗಿಡ (< ಗಿಡು)]

**ಕುಂಬಳಮರ** (ನಾ). ಒಂದು ಜಾತಿಯ ಮರ: (ಮೈಔಗಿ. ೩೯-೭೭೬). [ಕುಂಬಳ$_0$ + ಮರ]

**ಕುಂಬಳಸಂಡಿಗೆ** (ನಾ). ಕುಂಬಳಕಾಯನ್ನು ಹಾಕಿ ಮಾಡಿದ ಸಂಡಿಗೆ: ಕುಂಬಳಸಂಡಿಗೆಯ ತುಪ್ಪದಲ್ಲಿ ಹುರಿದು (ಭೀಮಸೂ. ೨೬). [ಕುಂಬಳ + ಸಂಡಿಗೆ (< ಸಂಡಗೆ)]

**ಕುಂಬಳಸೊಟ್ಟೆ** (ನಾ). ಕುಂಬಳದ ಬುರುಡೆಯಿಂದ ಮಾಡಿದ ಜಲ ಪಾತ್ರೆ; ಕಮಂಡಲು: ಕುಂಬಳಸೊಟ್ಟೆಯ ಋಷಿಗಳು ಶಾಸ್ತ್ರಗಳನ್ನು ಬರೆದ ಮಾತ್ರಕ್ಕೆ ಯಾರು ಕೇಳುತ್ತಿದ್ದರು? (ನಲದ. ೫೬). [ಕುಂಬಳ + ಸೊಟ್ಟೆ]

**ಕುಂಬಳಿ** (ನಾ). ಕೂಲಿ; ದಿನಗೂಲಿ: ಕೂಲಿ ಕುಂಬಳಿಯವರ ಪಾಲಿನ ಮೈದೊಗಲ ಧೂಳಿಯ ಭಂಡಾರ ಹಣೆಯೊಳಗಿತ್ತೋ ಕಂಬನಿ ಕುಡಿಯುವ ಹುಂಬ ಬಾಯಿಲೆ ಮೈದುಂಬಿದಂತುಧೊ ಉಧೊ ಎನ್ನುತಲಿತ್ತೋ (ನಾದಲೀ. ೩೮-೧೭). [< ಕಂಬಳ ?]

**ಕುಂಬಳಿ** (ನಾ). ಒಂದು ಬಗೆಯ ಮೂಲಿಕೆ: "ತತ್ಕಾಲೀ – ನರುವಲು, ಭಂಜಿ, ಕುಂಬಳಿ" (ಓಷಧಿ. ೬೫). [?]

**ಕುಂಬಱ**, ಕುಂಬರ, ಕುಂಬಾರ, ಕುಂಬಾಱ, ಕುಂಭಾರ, ಕುಬಾರ, ಕುಮ್ಮರ, ಕುಮ್ಮಾರ (ನಾ). ಮಡಕೆ, ಗಡಿಗೆ ಮೊದಲಾದ ಮಣ್ಣಿನ ಪಾತ್ರೆಗಳನ್ನು ಮಾಡುವವನು; ಕುಂಭಕಾರ; ಕುಲಾಲ: "ಬಾಂಬರ್ಕಳಾ ಕುಂಬಱರ್" (ಕರ್ಣಾನಿ. ೬೩); "ಕೊವರಂ ಬಾಂಬಂ ಕುಂಬಱಂ" (ಚತುಸಿ. ೧೦೪); ಕುಂಬಱನಂ ಕೂಡಿರ್ಪನೀಸನೆಂದಿಂತಾಡು ವರಜಾವಿಲ್ಲದವರ್ಗಳ್ (ಸಮುಪ. ೯–೩೦); ಕಮ್ಮಱಂ ಕುಂಬಱಂ (ಶಮದ. ೧೯೯ ಪ್ರಯೋ); ಲೋಕದೊಳಗೆ ಕುಂಬಱನ ಚಕ್ರಂ ಕೂರ್ತು ಕೋಲಿಂ ಕುಲಾಲನೇ ತಿರುಗಿಸಲ್ ತಿರುಗುವುದೂ ತನ್ನ ತಾಂ ತಿರುಗುತಿಹುದೋ (ವೀಶೈವ. ೪–೫–೫೦); ಕುಂಬಱನ ಚಕ್ರಂಬೋಲ್ ಭರಂಗೆಯ್ದು ಕಣ್ ತಿರುಗುತ್ತ (ರಸರ. ೪–೧೯೦); ಕುಂಬಮಂ ಮಾಡುವಂ ಕುಂಬಱಂ (ಶಬ್ದಾನು. ೪೧೨ ಪ್ರಯೋ). **ಕುಂಬರ**: ಕುಂಬವನ್ನು ಮಾಡುವವನು ಕುಂಬರನು, ಕುಂಬಾರನು; ಆದೊಂದು ಜಾತಿಗೆ ಹೆಸರು (ಹೊನುಗ. ೮೭). 'ಕುಂಬರವೆಸ' ಪರಾ. **ಕುಂಬಾರ**: ಹಾಲೆ ಬೇಲೂರು ಕುಂಬಾರರ ಹುಂಡಿಗೆ ದಕ್ಷಿಣ (ಮೈಆರಿ. ೧೯೪೩, ೪೮–೧೭; 1666); ಕಾಲಕೆಳಗಿನ ನೆಲ ಕುಂಬಾರನ ಚಕ್ರದಂತೆ ತಿರುಗತೊಡಗಿತು (ಬಾಣಅ. ೯೯); ಕುಂಬಾರನಿಗೆ ವರ್ಷ ದೊಣ್ಣೆಗೆ ನಿಮಿಷ (ಗಾದೆ). **ಕುಂಬಾಱ**: ಕುಂಬಾಱಗ್ಗೆ ಗಟ್ಟಿ ಗುಣಿಗನ ಮತ್ತರೊಂದು (ಎಕ. VII, ಶಿವಮೊ. ೧೦–೫೭; 1085); ಕುಂಬಾಱನ ಮಣ್ಣಿನಂತೆ ಮಿದಿಹಕ್ಕೆವಂದು (ಧರ್ಮಾಮೃ. ೩–೭೭); ಕುಂಬಾಱಂ, ಕುಂಬಱಂ (ಭಾಷಾಭೂ. ೧೮೭ ಉದಾ); ಬೆನ ಊರ ಕುಂಬಾಱ ಮಹಬಳದೇವನ ಮಗ(ಎಕ. VIII, ಸೊರಬ. ೪೬೧–೧೭; 1473). **ಕುಂಭಾರ**. 'ಕುಂಭಾರಗೊಡಿಗಿ' ಪರಾ. **ಕುಬಾರ**: ಕುಬಾರನಾಲಯದಲ್ಲಿ ಶಿವಗೆಂದು ವಿತತ ಸದ್ಭಕ್ತಿಯಿಂ ಶೃಂಗರಿಸಿ ಭಜಿಪ ಮಂಚದ ಮೇಲೆ ನಿಜದೋಱುತ (ಗುರುಚಾ. ೧೪–೪೨). **ಕುಮ್ಮರ**: ಆ ದೇವರಿಗೆ ಸಲುವ ಹಳಿಗಳ ಅಡೆದೆರೆ ಮಗ್ಗದೆರೆ ಕುಂಮ್ಮರ ಗಾಣಿಗರ ನಾಯಿಂದರ ದೆರೆ (ಎಕ. XV, ಅರಕ. ೧೧೨–೧೮; 1383). **ಕುಮ್ಮಾರ**: ಮಡಕೆ ತಯಾರಿಸುವವರು– ಕುಂಬಾರ (ಕುಮ್ಮಾರ), ಕೊಸವನ್ (ತುಳುನಾ. ೧೭೩). [< ಸಂ. ಕುಂಭಕಾರ]

**ಕುಂಬಱಗೋಲ್** (ನಾ). ಕುಂಬಾರನು ತಿಗುರಿಯನ್ನು ತಿರುಗಿಸುವ ಕೋಲು: ಭರದಿಂ ತೆಱಂದಿರಿವಾ ತಿಹುರಿಯ ಮೇಲಿರದಿಟ್ಟು ಕುಂಬಱಗೋಲಾ ಪರಿಯೆಸೆ ಗಜವಡೆಯಾದಶ್ವನ ಮೇಲೆ ಪಿರಿದೊಪ್ಪದನು ವಾಹಕನು (ಶ್ರೀಪಾಲ. ೪–೧೨). [ಕುಂಬಱ + ಕೋಲ್$_1$]

**ಕುಂಬಱಿತಿ**, ಕುಂಬಾರತಿ (ನಾ). ಕುಂಬಾರ ಹೆಂಗಸು: ಕುಂಬಱಿತಿ ಕಮ್ಮಱಿತಿ (ಶಬ್ದಾನು. ೧೯೮ ಪ್ರಯೋ). **ಕುಂಬಾರತಿ**: (೬). [ಕುಂಬಱ + –ಇತಿ$_1$ (< –ಇತ್ತಿ)]

**ಕುಂಬಾಗು** (ಕ್ರಿ). ೧. ಕುಟ್ಟೆಹಿಡಿ; ಹುಳುಹತ್ತು: ಮರ ಕುಂಬಾಯಿತು (ರೂಢಿ). ೨. ನಿಸ್ಸಾರವಾಗು; ಕೆಡು: ನನ್ನ ತಲೆ ಕುಂಬಾದಂತೆ ನಿನ್ನದೂ ಆಗಬೇಕೇನು? (ಔದಾಉ. ೨೧೯); ಹಾಗೆಲ್ಲ ಓದಿದರೆ ಬುರುಡೆ ಕುಂಬಾದೀತು (ನೊಪಮ. ೨೪). [ಕುಂಬು$_4$ + ಆಗು$_1$]

**ಕುಂಬಾರ** 'ಕುಂಬಱ' ನೋ.

**ಕುಂಬಾರಕ್ರಿಯೆ** (ನಾ). ಶೂದ್ರನಿಗೆ ಕುಂಬಾರನ ಮೂಲಕ ನಡೆಸುವ ಉತ್ತರಕ್ರಿಯೆ: ಮರಣಕಾಲದಲ್ಲಿ "ಕುಂಬಾರಕ್ರಿಯೆ" ಎಂಬ ಧರ್ಮಕೃತ್ಯವನ್ನು ಮಾಡುವ ನಡಾವಳಿ ಕೆಲವು ಜಾತಿಗಳಲ್ಲಿರುತ್ತದೆ (ಕಭಾಗ. ೧೪೯). [ಕುಂಬಾರ (< ಕುಂಬಱ) + ಕ್ರಿಯೆ]

**ಕುಂಬಾರಗತ್ತಿ** (ನಾ). ಖಡ್ಗ ಯುದ್ಧದಲ್ಲಿ ಒಂದು ವರಿಸೆ: ವಂದು ಪಾದವನ್ನು ಮಡುಕೊಂಡು ಮತ್ತೊಂದು ಪಾದದಿಂದ ನಿಂತು ಹಿಂದಕ್ಕೆ ಮುಂದಕ್ಕೆ ತೂಗುವುದು, ಅದು ಕುಂಬಾರಗಿತ್ತಿಯೆಂದೂ ಸಂಮತವೂ (ಖಡ್ಗಟೀ. ೪–೪೪). [ಕುಂಬಾರ$_1$ + ಕತ್ತಿ]

**ಕುಂಬಾರಗಿತ್ತಿ** (ನಾ). = ಕುಂಬಱಿತಿ: (೬). [ಕುಂಬಾರ (< ಕುಂಬಱ) + –ಗಿತ್ತಿ]

**ಕುಂಬಾರಗೇಣಿ** (ನಾ). ಕುಂಬಾರರಿಗೆ ಕೊಡುವ ಆಯ: ಕುಂಬಾರಗೇಣಿ ಎಂಬ ಬಾಬು ಕೆಲವು ಕಡೆಯಲ್ಲಿ ಕುಂಬಾರರಿಗೆ ಈಗ್ಯೂ ನಡೆಯುತ್ತದೆ (ಕಭಾಗ. ೧೪೯). [ಕುಂಬಾರ (< ಕುಂಬಱ) + ಗೇಣಿ (< ಕೇಣಿ)]

**ಕುಂಬಾರಜಬ್ಬು** (ನಾ). (ಕರಾ) ಒಂದು ಜಾತಿಯ ಮೀನು. [?]

**ಕುಂಬಾರತನ** (ನಾ). ಕುಂಬಾರನ ಉದ್ಯೋಗ, —ವೃತ್ತಿ: (೬). [ಕುಂಬಾರ (< ಕುಂಬಱ) + –ತನ]

**ಕುಂಬಾರತಿ** 'ಕುಂಬಱಿತಿ' ನೋ.

**ಕುಂಬಾರಮಾಳಿ** (ನಾ). = ಕುಂಬಾಱಿತಿ: (೬). [ಕುಂಬಾರ (< ಕುಂಬಱ) + ಮಾಳಿ]

**ಕುಂಬಾರವೆಸ** 'ಕುಂಬರವೆಸ' ನೋ.

**ಕುಂಬಾರಸ್ವರೂಪು** (ನಾ). ಕುಂಬಾರನ ಗಡಿಗೆ, ಮಡಕೆ ಮೊದಲಾದುವು; ಕಳಲೆಲಕ್ಷ್ಮೀಕಾಂತಸ್ವಾಮಿಯವರ ರಥೋತ್ಸವಕ್ಕೆ ನಿಂನ ಹೋಬಳಿಗಡಿಗಳಿಂದ ಚಪ್ಪರ ಮೇಲುಕಟ್ಟು ಅಡಿಗಬ್ಬು ಕುಂಬಾರಸ್ವರೂಪುಯಲೆ ಕಾಯಿ ಮೇಲೊಗರ ಹುಳು ಗಂಧ ಮೊದಲಾದ ಹಣ ಮುಟ್ಟದ ಸೋಪಸ್ಕರವಂನು ತರಿಸಿ ಕೊಟ್ಟು (ಮೈಆರಿ. ೧೯೨೮, ೪೭–೫; 1711). [ಕುಂಬಾರ (< ಕುಂಬಱ) + ಸ್ವರೂಪು]

**ಕುಂಬಾರಹುಳೆ** 'ಕುಂಬಾರಹುಳು' ನೋ.

**ಕುಂಬಾರಹುಳು**, ಕುಂಬಾರಹುಳ (ನಾ). ಕೆಸರಲ್ಲಿ ಇರುವ ಒಂದು ಜಾತಿಯ ಮಣ್ಣುಹುಳು: ಕೆಸರಿನೊಳಗಾಡುತಿಹ ಕುಂಬಾರಹುಳುವಿನಂತೆಸೆದು ಲೌಕಿಕವ ಸೋಂಕಿಯು ಸೋಂಕದಂತಿರುವ (ಕೈಕವ. ೫–೬೯–೧); ಕೆಸರೊಳಗೆ ಕುಂಬಾರಹುಳುಯಿಹುದೆಸೆವುದದು ತಾ ಸ್ವಸ್ಥ [ಪಾಠಾಂ. ಸ್ವಚ್ಛ] ವಾಗಿಯೆ ಬಸಿವ ಬುರುದೆಯು ಅಂಟದಲೆ ಇದ್ದಂತೆ (ಜ್ಞಾನಸಿಂ. ೨೨–೫೩). **ಕುಂಬಾರಹುಳ**: (೬). [ಕುಂಬಾರ (< ಕುಂಬಱ) + ಹುಳು (< ಪುೞು)]

**ಕುಂಬಾರಿಕೆ** (ನಾ). ಕುಂಬಾರನ ವೃತ್ತಿ, —ಉದ್ಯೋಗ: (೬). [ಕುಂಬಾರ (< ಕುಂಬಱ) + –ಇಕೆ]

**ಕುಂಬಾರು** (ಕ್ರಿ). ನಡುಗು; ಕಂಪಿಸು: ನಿಮ್ಮ ಮಗ ಜೇರ್ಮಿ ಗಡಗಡ ಕುಂಬಾರುತ್ತಿದ್ದಾನೆ (ಪರಾವ. ೫೭). [?]

**ಕುಂಬಾಱ** 'ಕುಂಬಱ' ನೋ.

**ಕುಂಬಾಱಸಾಲೆ** (ನಾ). ಕುಂಬಾರನ ಕೆಲಸದ ಮನೆ: ಇರ್ವರ್ಕೂಡಿ ಬಟ್ಟೆವೋಗುತ್ತೊಂದೂರ ಕುಂಬಾಱಸಾಲೆಯೊಳ್ ನಿದ್ದೆಗೆಯ್ದು (ಪುಣ್ಯಾಸ್ರ. ೩–೪೨ ವ). [ಕುಂಬಾಱ (< ಕುಂಬಱ) + ಸಾಲೆ]

**ಕುಂಬಾಱುದೆಱೆ** (ನಾ). ಕುಂಬಾರ ವೃತ್ತಿಯ ಮೇಲಿನ ತೆರಿಗೆ: ಚರದಾಯ ಅಡಕೆದೆಱೆ ಕುಂಬಾಱುದೆಱೆ ಬಿನುಗು ಬೆಸ ಒಕ್ಕಲು (ಮೈಆರಿ. ೧೯೪೭, ೧೮–೨೦; 1488). [ಕುಂಬಾಱು$_0$ + ತೆಱೆ]

**ಕುಂಬಿ$_1$** 'ಕುಂಬೆ$^1$' ನೋ.

**ಕುಂಬಿ₂** 'ಕುಂಬು₃' ನೋ.

**ಕುಂಬಿ₃** 'ಕುಣಬಿ' ನೋ.

**ಕುಂಬಿಕ್ಕಿಸು** (ಕ್ರಿ). ಕುಗ್ಗಿಸು ; ಕುಸಿಯುವಂತೆ ಮಾಡು : ಕಪಿಗಳಬ್ಬರ ದುಬ್ಬರಣೆ ಕಾಶ್ಯಪಿಯ ಕುಂಬಿಕ್ಕಿಸಿದವು (ತೊರರಾ. ೬-೩೬-೭೫). [ಕುಂಬಿಕ್ಕು + -ಇಸು₃]

**ಕುಂಬಿಕ್ಕು** (ಕ್ರಿ). ೧. ನಮಸ್ಕರಿಸು ; ಬಾಗು ; ಬಗ್ಗು ; ಶರಣಾಗು : ಜ್ವರಮಾದರಂತೆ ಕುಂಬಿಕ್ಕುವರಸನುಮಂ ಮುಗುವಿನಂತೆ ಪೊರಳ್ವರಸಿಯರುಮಂ (ಧರ್ಮಾಮೃ. ೬-೨೦೬) ; ಬೀರರ್ಬಿರುದನುಳಿದು ಕುಂಬಿಕ್ಕೆ ವಿದ್ವಿಷ್ಟ ಭೂಪರ್ಮದವಂ ಬಿಟ್ಟಕ್ಕೆ (ಎಕ. VIII, ಸೊರಬ. ೩೪೫-೮ ; 1171); ಕಣ್ಬೋಜಿಜ ಮೊಗಮಂ ಸುತ್ತಿ ಕುಂಬಿಕ್ಕುತ್ತುಂ ಪರಿವ ಕಡುಗಂದಿಗಲಿಗಳುಮಂ (ಲೀಲಾವ. ೫-೧೩೪) ; ಕುಂಬಿಕ್ಕಿ ಕುಣಿಕುಣಿದು ನಡೆಗೆಟ್ಟು ಕುಳ್ಳಿರ್ದ (ತಿರುರ. ೫-೧೩) ; ಕುಣಿದು ಕುಕಿಲಿಱಿದು ಕುಂಬಿಕ್ಕಿ ಚರಣದಲಿ ಬಿದ್ದಬಾಲಕನ (ಸಿದ್ಧರಾ. ೨-೭೧). ೨. ಕುಸಿ ; ಕೆಳಕ್ಕೆ ಸರಿ. 'ಕುಂಬಿಕ್ಕಿಸು' ಪರಾ. [ಕುಂಬು₁ + ಇಕ್ಕು₁]

**ಕುಂಬಿಗ** (ನಾ). ಮಡಕೆ, ಗಡಿಗೆ ಮೊದಲಾದುವನ್ನು ಮಾಡುವವನು : "ಕಮ್ಮಿಗಂ ಕರ್ಮಕರ್ತಾರ ಕುಂಬಿಗಂ ಕುಂಭಕರ್ತಾ ನಾತ್ರಜಾತಿಃ" (ಶಬ್ದಾನು. ೪೧೨ ವ್ಯಾಖ್ಯಾ). [ಕುಂಬ₁ + -ಇಗ]

**ಕುಂಬಿಟ್ಟಗೆ** (ನಾ). ಒಂದು ಊರಿನ ಹೆಸರು : ಕುಂಬಿಟ್ಟಗೆ ಚಂ[ಡೇ]ಸ್ವರಕ್ಕೆ . . . ಬಿಟ್ಟ ಕೆಯಿ (ಸೌಇಇ. XX, ೫೧-೧೮ ; 1077). [?]

**ಕುಂಬಿಡು₁** (ಕ್ರಿ). ಮಣಿ ; ಬಾಗು ; ನಮಸ್ಕಾರಮಾಡು : ಲಾಕುಳ ಹೊಗೆಯೆ ಕಾಲ್ ಕುಂಬಿಡೆ (ಹಚಕಾ. ೨-೩೩) ; ಗುರು ನಿರಂಜನ ಗಾನಳುಂಬದಿಂ ಕುಂಬಿಡುವೆನು (ಪಾಸೋಪು. ೮-೧) ; ಋತ್ವಿಜರಂ ತುಱುಲ್ಗೆಯ್ದುಂ ಸಭ್ಯರಂ ಕುಂಬಿಟ್ಟುಂ ಕುಂಬಿಡುವುದು ಜಗವು (ರಾಮಾಶ್ವ. ೪೮-೬) ; ಹಣದ ಗಂಟಿದ್ದರೆ ಕುಣಿದು ಕುಂಬಿಡುವುದು (ಇಂಚಾಪ. ೧೯೬-೬೮). [ಕುಂಬು₁ + ಇಡು₁]

**ಕುಂಬಿಡು₂** (ಕ್ರಿ). ಮೊರೆ ; ಧ್ವನಿಮಾಡು (?) : ವೀರ ಬೊಂಬುಳಿಯ ಬೊಗ್ಗಿನೊಗ್ಗುಗಳ ನೆಱೆ ಕುಂಬಿಡುವ ಕೊಂಬುಗಳ ರಣದಿತ್ತಿರಿಯ ವರೌರಿ ಹಲಹಲವು ರೀತಿರೀತಿಯ . . . ರಭಸವಡಸಿ ಬೆಳೆದಂಬರವನಿಂಬುಗೊಳುತಿರಲು (ಸೋಮಚ. ೫-೩೨). [← ತಮಿ. ಕೂಪ್ಪಿಡು]

**ಕುಂಬಿನಿ** (ನಾ). ನೆಲ ; ಭೂಮಿ : ಕಿಚ್ಚ ಕಾಱುಸುತ ಕುಂಬಿನಿ ನಡುಗೆ ಬೊಬ್ಬಿಱಿದೆಚ್ಚು ಶರಗಳ ತುಂಬಿದರೂರೊಳಗಾಗ (ಕಂಸವಿ. ೧೪-೧೪) ; ಕುಂಬಿನಿಯೊಳೆಮ್ಮ ಕುಲದೆ ತಿಲಾಂಬುವ ಮುಂದಕಟ ಕುಡುವನಾವನೆನುತ್ತುಂ (ಶಾಕುಂತ. ೯೪-೧೫೭). [< ಸಂ. ಕುಂಭಿನೀ]

**ಕುಂಬಿಯ** (ನಾ). ಒಂದು ಜಾತಿಯ ಮರ : ಕವಳ (ಕುಂಬಿಯ) ಬೈಲಿನಲ್ಲಿ ಕಿರಿದಾಗಿ ಬೆಳೆಯುವುದು. ಕಾಯಿಯನ್ನು ದನಗಳು ತಿನ್ನುತ್ತವೆ (ಕಭಾಗೆ. ೩೭). [← ಮರಾ. ಕುಂಬಯಾ (< ಸಂ. ಕುಂಭೀ)]

**ಕುಂಬಿಸು** (ಕ್ರಿ). ಚಪ್ಪಾಳೆ ತಟ್ಟಿ (ತಾಳಹಾಕಿಕೊಂಡು) ಕುಣಿ (?) : ಆಡುವ ಡಕ್ಕೆ ವಾಜಿಸುವ ನೋಡುವ ಸಂಗಡಮೊಪ್ಪೆ ರಾಗಮಂ ಪಾಡುವ ತಳ್ತು ಕುಂಬಿಸುವ ಬೀಣೆಯ ತಂತಿಯ ನಂಟು ನೋಟ್ಪ ಮಾತಾಡುವ . . . ಭಾವದಿಂ ಗಾಡಿಯನಾಂತ ಪುತ್ತಳಿಗಳಾ ಕರುಮಾಡದೊಳೊಪ್ಪಿ ತೋಱುಗುಂ (ಸೂಕ್ತಿಸು. ೪-೧೪೯). [ಕುಂಬು₁ + -ಇಸು₁]

**ಕುಂಬಿಸೆ** (ನಾ). ಒಂದು ಊರಿನ ಹೆಸರು. ℙ ಈಗಿನ ಶಿವಮೊಗ್ಗ ಜಿಲ್ಲೆಯ ಕುಂಸಿ: ಕುಮ್ಬಿಸೆಯಂ ಕಟ್ಟಜಕ್ಕಿನ್ದರನುಂ (ಎಕ. VIII, ಸೊರಬ. ೮೫-೫ ; 876) ; ಕುಂಬಿಸೆಯಂ ಸಾಸಿರ್ವರ ಮಾಡಿಸಿದ ಸ್ಥಿತಿಯೆನ್ತೆನೆ (ಎಕ. VIII, ಸೊರಬ. ೮೩-೧೦ ; 941) ; ಮಾಯನಾಯ್ಕನು . . . ಕುಂಬಿಸೆಯ ಬೀರರ್ಸನ ಮೇಲೆ (ಸೌಇಇ. XV, ೨೩೧-೩ ; 1183). [?]

**ಕುಂಬು₁** (ಕ್ರಿ). ೧. ಜೋಲು ; ಒಲೆದಾಡು : ಕೆರೆಯಿಂ ಕುಂಬುವ ಛೈತ್ರಮಂ ಧರದೆ ಬಿಣ್ಣುಣ್ಣಿಕ್ಕಿ ಬಲ್ಪೀದೆ ಸಂಪರಿಪಂತೆ (ಹೈಆಸಿ. ೧೧-೭೬ ; ೧೦೫೮) ; ಅವನಿ ನಡುಗೆ ದಿಕ್ಕುಂಭಿಗಳ್ ಕುಂಬುತುಂ ಘೀಳಿಡೆ (ಶಾಂತೀಶ್ವ. ೫-೮೩). ೨. ಬಾಗು ; ನಮಸ್ಕರಿಸು : ವಿಕ್ರಮಕ್ಕೆ ರಿಪುಖಗಪತಿಗಳ್ ಕೂಗಡಗಿ ಬೀತ ಮಾವಿನ ಕೋಗಿಲೆಯೊಲ್ ಕೊಂಬುಗೊಂಡು ಕುಂಬುತ್ತಿರ್ಪರ್ (ಅರ್ಧನೇ. ೨-೮೫). [ದೇ. ‖ ತಮಿ. ಮಲ. ಕುವ್]

**ಕುಂಬು₂** (ಕ್ರಿ). ಚಪ್ಪಾಳೆ ತಟ್ಟಿಕೊಂಡು ಕುಣಿ : ಆದ ಪರಮಾನಂದದಿಂ ಕುಂಬಿ ಕುಣಿವುತ್ತ (ವಾಗೀರ. ೨೭೪). [ದೇ. ‖ ತಮಿ. ಕುಮ್ಮಿ , ಕೊಮ್ಮಿ ; ಮಲ. ಕುಮ್ಮಿ]

**ಕುಂಬು₃, ಕುಂಬಿ₂** (ನಾ). ಬಾಗುವಿಕೆ ; ನಮಸ್ಕಾರ : "ತುಱುಲೆಂದು ಮೊಟ್ಗೆಂದು ಕುಂಬೆಂದು ಯೆಱಗೆಂದು ಬಳಿಕ ಮಣಿಯೆನೆ ನಮಸ್ಕಾರಕ್ಕೆ ಪೆಸರಕ್ಕು" (ಕಬ್ಬಿಕೈ. ೩೩). **ಕುಂಬಿ₂**: "ಕುಂಬಿಯೆ ನಮಸ್ಕಾರ ಕೊದಗುಗುಂ" (ಕಶರ. ೨೫). [< ಕುಂಬು₁]

**ಕುಂಬು₄** (ನಾ). ೧. ಹಾಳಾಗುವಿಕೆ ; ಕ್ಷಯಿಸುವಿಕೆ ; ಹುಳುಕು ; ಕುಟ್ಟೆ : ಮರಕ್ಕೆ ಕುಂಬು ಹಿಡಿಯಿತು (ರೂಢಿ). ೨. ಗಟ್ಟಿಯಿಲ್ಲದುದು ; ದುರ್ಬಲ ; ತೇಗಿಗಿಂತ ಗಟ್ಟಿಯಿಲ್ಲ, ಜೋಗಿಗಿಂತ ಕುಂಬು ಇಲ್ಲ (ಗಾದೆ). 'ಕುಂಬಾಗು' ಪರಾ. [ದೇ. ‖ ಕೊಡ. ಕುಂಬೀ ; ತುಳು. ಕುಂಬು]

**ಕುಂಬು₅** 'ಕೊಂಬು₂' ನೋ.

**ಕುಂಬೆ₁, ಕುಂಬಿ₁** (ನಾ). ಗೋಡೆಯ ಮೇಲ್ಭಾಗದಲ್ಲಿ ಮಾಳಗೆಯ ಸುತ್ತಲೂ ಕಟ್ಟಿದ ದಿಂಡು ; ಗೋಡೆಯ ತಲೆಕಟ್ಟಡ ; ಬಡು : ಯಾಗಶಾಲೆಯಂ ನೇರ್ಪಡಿಸಿ ಕುಂಬೆಯಂ ಬಲಿದು ಹಂದರಂಕಟ್ಟಿ (ರಾಮಾಶ್ವ. ೧೬-೪). **ಕುಂಬಿ₁** : ನಮ್ಮ ಮನೆಯ ಮಾಳಿಗೆಯ ಕುಂಬೀ ಮೇಲೆ ಗೂಡು ಕಟ್ಟಿಕೊಂಡು ಇರುತ್ತದೆ (ಮುಂಬಯಿ. ೨-೧೨) ; ಎಲ್ಲರೂ ಮಿಟ್ಟು ಮಿಸುಕದೆ ಕುಂಬಿಗಳ ಮರೆಗೆ ಸಾಲುಸಾಲಾಗಿ ಅಡಗಿ ಕುಳಿತದ್ದನ್ನು . . . ನೋಡಿದೆ (ನೋದಿಮ. ೧೬) ; ಕುಂಬೀಯ ಮ್ಯಾಲೀನ ದುಂಡ ಶಾವಂತಿಗ್ಹೂವ ಹೂ ಬಾಡಿದಾಗೊಮ್ಮೆ ನೆನೆಯುವ್ವ (ಮಲ್ಲಿಗೆ. ४६). [ದೇ ‖ ತಮಿ. ಕೊಮ್ಮೈ ; ತುಳು. ಕುಬಳ್ ; ತೆಲು. ಕೊಮ್ಮು]

**ಕುಂಬೆ₂** (ನಾ). ಒಂದು ಜಾತಿಯ ಗಿಡ : "ಕುಂಬೆ, ಕಲ್ಲರಿಗೆ" (ವೈಔಗಿ. ೩೯-೭೬೩). [?]

**ಕುಂಬ್ರಿಹುಳು** (ನಾ). ಒಂದು ಬಗೆಯ ಹುಳು : ಐವಾರೇಳು ಕುಂಬ್ರಿಹುಳುಗಳೂ ಕೊಡ್ಲಿಹುಳುಗಳೂ ಗಡಿಗೆಯಿಂದ ನೆಗೆದು ನೆಲದ ಮೇಲೆಯೂ ಅವಳಮೈಮೇಲೆಯೂ ಹರಿದಾಡತೊಡಗಿದುವು (ಮಲೆಮ. ೫೮೯). [ಕುಂಬ್ರಿ₀ + ಹುಳು (< ಪುೞು)]

**ಕುಂಭ** (ನಾ). ೧. ಕೊಡ ; ಕಲಶ : "ಕಳಶಃ, ಕುಟಃ, ಕುಂಭಃ, ನಿಘಃ –ಈ ೪ ಕೊಡಂ" (ಹಲಾಯು. ೫೩-೧೬೧) ; ಒಂದು ಚಕ್ರದಲ್ಲಿ ಜನಿಸಿದ ನಾನಾ ವರ್ಣದ ಕುಂಭಗಳಿಗೆಸ್ಥೂಲ ಸೂಕ್ಷ್ಮದ ಅನ್ಯವ ಕಲ್ಪಿಸಲುಂಟೆ (ಮೋಳಿಮಾ. ೬-೧೯) ; ಮೇಘ ಕುಂಭಗಳಿಂದಭಿಷೇಕಮಂಗೈದರ್ (ಶ್ರೀರಾಮಾ. ೨೫೭-೭೯೨). ೨. ಒಂದು ಅಳತೆ ; ಇಪ್ಪತ್ತು ದ್ರೋಣಗಳ ಅಳತೆ. ೩. ಆನೆಯ ಕುಂಭಸ್ಥಳ : "ಮೂರ್ಧಪಿಂಡಃ, ಕುಂಭಃ –ಈ ೨ ಆನೆಯ ಕುಂಭಸ್ಥಳಂ" (ಹಲಾಯು ೩೬-೬೩) ; ಕುಂಭಿಕುಂಭದ ಸಮುಕ್ತಾ ಫಲಂಗಳ್ (ಜೈಮಿಭಾ. ೨೨-೩೯). ೪. ಒಂದು ಬಗೆಯ ಸುಗಂಧ ಸಸ್ಯ ; ಗುಗ್ಗುಳ ; ಧೂಪದ ಗಿಡ. ೫. ಒಬ್ಬ ರಾಕ್ಷಸನ ಹೆಸರು : ಬರಹೇಳ್ ನಿಶುಂಭನಂ ಕುಂಭನಂ ಲಂಭನಂ (ಜೆಬಪು. ೪೭-೨೧).

೬. [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಒಂದು ; ಕುಂಭರಾಶಿ : ಹಿಮಾಂಶುಗೃಹದೊಳ್ ಸುರೇಜ್ಯನಿರೆ ಪುತ್ರವಿತ್ತಾಂಗನಾ ಸಮುತ್ಥ ವಿಭವಂ ಸುಬುದ್ಧಿ ಸುಖಿ ಕುಂಭದೊಳ್ ಕೂಡೆ ತತ್ಸಮಾನ ಫಲಭಾಗಿ (ಜಾತತಿ. ೧೭-೨೮). 'ಕುಂಭಯೋಗ', 'ಕುಂಭಿಸು' ಪರಾ. [ಸಂ.]

**ಕುಂಭಕ** (ನಾ). [ಯೋಗ] ಪ್ರಾಣಾಯಾಮದಲ್ಲಿ ಒಳಗೆಳೆದು ಕೊಂಡ ಉಸಿರನ್ನು ಬಿಗಿಹಿಡಿಯುವಿಕೆ; ಬಾಯನ್ನೂ ಮೂಗಿನ ಹೊರಳೆಗಳನ್ನೂ ಬಲಗೈ ಬೆರಳುಗಳಿಂದ ಮುಚ್ಚಿ ಉಸಿರನ್ನು ತಡೆಹಿಡಿಯುವಿಕೆ: "ನಾಸಿಕದಿಂ ನಿಂದಾನಿಲಂ ಕುಂಭಕಮೆನಿಕ್ಕು" (ಮಂಗರಾ. ೧೬-೧೪). ಕುಂಭಕ ಸಂರೇಚಕ ಪೂರಕಂ (ಶಾಂತಿಪು. ೬-೯೩); ವನರುಹವಿಷ್ಟರಂ ರುಚಿರ ರೇಚಕಪೂರಕ ಕುಂಭಕ ಕ್ರಿಯಾಮನಮಿರೆ (ಗದಾಯು. ೬-೧೫); ಪ್ರಾಣವಾಯುವ ಪ್ರಾಣಾಯಾಮದಿಂದ ಕುಂಭಕ ದಲ್ಲಿ ನಿಲ್ಲಿಸಿ (ಮನುಗುಂ. ೧೪-೯೨) ; ರೇಚಕಂ ಪೂರಕಂ ಕುಂಭಕ ವಿಧಾನದಿಂ ಪ್ರಾಣಂಗಳಂ ಸ್ತಂಭಿಸುತೆ (ಶ್ರೀರಾಮಾ. ೭೧೬-೧೯೫). [ಸಂ.]

**ಕುಂಭಕರ್ಣ** (ನಾ). ೧. ಒಬ್ಬ ರಾಕ್ಷಸ; ರಾವಣನ ತಮ್ಮ: ಅಗುರ್ವಿನಕುಂಭಕರ್ಣಂ ಈ ಧರಣಿಗೆ ದಂತವಕ್ರನೆನಿಸಿರ್ದುದನಾನಱಿವೆಂ (ಜಗವಿ. ೧-೭೦) ; ಎಬ್ಬಿಸಿದನಾ ಸುರಗಣಭಯಂಕರ ಕುಂಭಕರ್ಣನನಾ ದಶಗ್ರೀವ (ತೊರರಾ. ೬-೨೬ ಸೂಚನೆ). ೨. (ಅಲಂ) ನಿದ್ದೆಬಡಕ; ಮಿತಿಮೀರಿ ನಿದ್ದೆಮಾಡುವ ವ್ಯಕ್ತಿ: ಕುಂಭಕರ್ಣನ ಯೋಗ್ಯತೆ ನನಗಿಲ್ಲ ನಿಜ. ಆದರೆ ಸ್ಪರ್ಧೆಗೆ ನಿಂತು ಸೂರ್ಯನನ್ನು ಸೋಲಿಸುವ ಹವ್ಯಾಸವೂ ನನಗಿಲ್ಲ (ಗಾಳಿಪ. ೧೫೮). [ಸಂ.]

**ಕುಂಭಕಾಮಿಲೆ** (ನಾ). (ಉಲ್ಬಣಾವಸ್ಥೆಯ) ಕಾಮಾಲೆ ರೋಗ: ಕಾಮಾಲೆಯ ಚಿಕಿತ್ಸೆ ಮಾಡದೆ ಉಪೇಕ್ಷೆಯ ಮಾಡಿದರ ಶೋಫೆಯುಂಟಾಗಿ ಕುಂಭಕಾಮಿಲೆಯಹುದು (ವೈದ್ಯಸಾ. I, ೩೪೬). [< ಸಂ. ಕುಂಭಕಾಮಲಾ]

**ಕುಂಭಕಾರ** (ನಾ). = ಕುಂಬಾರ: ಕಾಣ್ಕೆ, ಪೂಣ್ಕೆ, ಕುಂಭಕಾರ, (ಶಬ್ದಾನು. ೮ ಪ್ರಯೋ). [ಸಂ.]

**ಕುಂಭಕಾರಿ** (ನಾ). ಒಂದು ಜಾತಿಯ ವೃಕ್ಷ: ಕುಂಭಕಾರಿ, ಪ್ರಿಯಂಗು ... ಮೊದಲಾದ ವೃಕ್ಷಜಾತಿಗಳು ಬೀಜಗಳಂ ಬಿತ್ತಲು ಹುಟ್ಟುವವು (ಸೌಗಂಧಿ. ೪೨೫-೮). [?]

**ಕುಂಭಕೂಟ** (ನಾ). ಆನೆಯ ಕುಂಭದ ತುದಿ: ಕನಲ್ವ ಕಿಡಿವಣ್ಣದ ಕಣ್ ಬೆಳರ್ಗೆಂಪನಾವಗಂ ಬೀಱುವ ಕರ್ಣಮೊಡ್ಡಿ ಕಡೆದಂದದೊಳೊಂದಿದ ಕುಂಭ ಕೂಟದುತ್ತಾಱಿಲನೇಕಮುನ್ನತಿಯಿದಾನಱಿವಾನೆ ಯೊಳಿಲ್ಲಮಲ್ಲಿಯುಂ (ಚಂದ್ರಪು. ೯-೯೩). [ಕುಂಭ + ಕೂಟ]

**ಕುಂಭಕೊಳು** (ನಾ). ಮಾರಿದೇವತೆಗೆ ಬಲಿಕೊಡುವ ಮುನ್ನ ಹಳ್ಳಿಯ ಎಲ್ಲರ ಮನೆಯಿಂದಲೂ ತಂದು ರಾಶಿಹಾಕಿದ ಮೊಸರನ್ನ. ಹೀಗೆ ರಾಶಿಹಾಕಿದ ಅನ್ನಕ್ಕೆ ಅರಿಸಿನ ಕುಂಕುಮದ ಪೂಜೆಮಾಡಿ ಬೇವಿನ ಕೊಂಬೆಯನ್ನು ನಡುವೆ ಊರಲಾಗುತ್ತದೆ; ಕಾಯಿ ಕರ್ಪೂರಾದಿಗಳಾದ ಮೇಲೆ ಪ್ರಾಣಿಗಳ ಬಲಿಕೊಡಲಾಗುತ್ತದೆ (ಎಸವ್ಯೈ. XVII, ೨೫). [ಕುಂಭ + ಕೊಳು (< ಕೊೞ್)]

**ಕುಂಭಕೋಣ** (ನಾ). ೧. (ತಮಿಳುನಾಡಿನಲ್ಲಿಯ) ಒಂದು ಊರು. ೨. (ಅಲಂ) ಮೋಸ; ವಂಚನೆ: ಅವನು ಕುಂಭಕೋಣ ಮಾಡಿ ನನ್ನ ಹಣವನ್ನು ಮುಳುಗಿಸಿದ (ರೂಢಿ). [ಸಂ.]

**ಕುಂಭಗಾಱ** (ನಾ). ಕುಂಭಗಳನ್ನು ಮಾಡುವವನು; ಕುಂಬಾರ: ಕುಂಭಗಾಱಂ, ಮಣಿಗಾಱಂ (ಶಬ್ದಾನು. ೩೪೪ ಪ್ರಯೋ). [ಕುಂಭ + -ಗಾಱ (< -ಕಾಱ)]

**ಕುಂಭಜ** (ನಾ). ೧. ಕುಂಭದಲ್ಲಿ ಹುಟ್ಟಿದವನು. ೨. ಅಗಸ್ತ್ಯ: ಆದೇಂ ಪಳಂಚಲೆದುದೊ ರಾಜರಾಜಸಭೆ ಕುಂಭಜನೀಂಟಿದ ತೋಯರಾಶಿಯಂ (ಪಂರಾಮಾ. ೬-೭೪) ; ಕಡಲ ಕಡೆದರು ಸುರಾಸುರರು ... ಕುಡಿದನದನು ತಪಸಿನಿಂದ ಕುಂಭಜನು (ಮಂಕುಕ.೨೫೯). ೩. ದ್ರೋಣಾಚಾರ್ಯ: "ಕೊಡದಲ್ಲಿ ಹುಟ್ಟಿದವ, ಅಗಸ್ತ್ಯಋಷಿ, ದ್ರೋಣ" (ಗಂಗಾಮು. ೮೮). [ಸಂ.]

**ಕುಂಭತಟ** (ನಾ). ಆನೆಯ ಕುಂಭಸ್ಥಳ; ಆನೆಯ ತಲೆಯ ಪ್ರದೇಶ: ಕುಂಭತಟಂ ಕುಳಭೂಧರಂಗಳಂತಳವಡೆ (ರಾಜಶೇ. ೧೩-೬೬). [ಕುಂಭ + ತಟ]

**ಕುಂಭತಳೆ** 'ಕುಂಬತಳ' ನೋ.

**ಕುಂಭದಳನ** (ನಾ). (ಆನೆಯ) ಕುಂಭಸ್ಥಳವನ್ನು ಸೀಳುವುದು: ಸಮಸ್ತರಿಪುನೃಪ ಕುಂಭಿ ಕುಂಭದಳನ ಪಂಚಾಸ್ಯ (ಎಕ. III, ಮಂಡ್ಯ. ೭೮-೧. 1022). [ಕುಂಭ + ದಳನ (= ದಲನ)]

**ಕುಂಭದಾಸಿ** (ನಾ). ೧. ನೀರು ಹೊರುವವಳು; ಘಟಚೇಟಿ. ೨. ವ್ಯಭಿಚಾರಿಣಿ; ಜಾರೆ; ಸೂಳೆ: ನಾನೇನೂ ಯಾವುದೋ ಸ್ನಾನ ಘಟ್ಟದಿಂದ ನಿಮ್ಮ ಮನೆಗೆ ತರಲ್ಪಟ್ಟ ಕುಂಭದಾಸಿಯಲ್ಲ (ಹತ್ತುಮು. ೩೭). [ಸಂ. ಕುಂಭದಾಸೀ]

**ಕುಂಭದ್ರೋಣ** (ನಾ). ಕೊಡವನ್ನೆತ್ತಿ ಸುರಿದಂತೆ ಸುರಿಯುವ ಮಳೆ; ಒಂದೇ ಸಮನೆ ಸುರಿಯುವುದು ; ಧಾರಾಕಾರವಾದುದು : ಜಲ ಕುಂಭಮುಮನಾಂತು ಮೇರು ಶಿಖರಕ್ಕೆ ಕುಂಭದ್ರೋಣದಂತೆ ಮಳೆಗರೆವೊಲು (ನವಮೋ. ೨೨-೨೫); ಬಿರುಗಾಳಿಯೆದ್ದು ಕುಂಭದ್ರೋಣ ದಂತೆ ಮಳೆ ಸುರಿಯಲಾರಂಭಿಸಿತು (ಗುಣಸಾ. ೬೩). [ಕುಂಭ + ದ್ರೋಣ]

**ಕುಂಭಧ್ವಜ** (ನಾ). ೧. ಕುಂಭ ಲಾಂಛನವನ್ನುಳ್ಳ ಧ್ವಜ; ದ್ರೋಣಾಚಾರ್ಯರ ಧ್ವಜ: ಶೋಣಾಶ್ವಂಗಳ್ ರಜತರಥಮಂ ಪೂಡೆ ಕುಂಭಧ್ವಜಂ ಗೀರ್ವಾಣಾವಾಸಂಬರಮಡರೆ ... ಬಿಲ್ಗೆ ಜಾಣಂ ದ್ರೋಣಂ ನಿಂದಂ ಮಸಗಿ ತಿರುಪುತ್ತೊಂದು ಕೂರಂಬನಾಗಳ್ (ಪಂಪಭಾ. ೧೧-೫೬). ೨. ಕುಂಭಲಾಂಛನದ ಧ್ವಜವುಳ್ಳವನು; ದ್ರೋಣಾಚಾರ್ಯ. [ಕುಂಭ + ಧ್ವಜ]

**ಕುಂಭಭವ** (ನಾ). = ಕುಂಭಜ ೨: ಮಿಗೆ ಯೋಜಿಪುದಕ ಪ್ರಮಾಣದ ಕುಂಭಭವನಾಗಿ ಶರಧಿ ಪಾನವನೆಸಗಿದಾ ಅಜಿತಿಯವೊಲು (ವೀಶೈಪು. ೭-೯-೨). [ಸಂ.]

**ಕುಂಭಭೇದನ** (ನಾ). ಆನೆಯ ಕುಂಭಸ್ಥಳವನ್ನು ಸೀಳುವುದು: ಸಮದೇಭ ಕುಂಭಭೇದನ ಸಮಯೋಗ್ರನಖಂಗೆ ಹರಿಗೆ ಮೃಗರಿಪುವೆಸರುತ್ತಮಿಕೆಯೆ (ಗದಾಯು. ೨-೨). [ಕುಂಭ + ಭೇದನ]

**ಕುಂಭಮೇಳ** (ನಾ). ಗುರು ಕುಂಭರಾಶಿಗೆ ಬಂದಾಗ ಹರಿದ್ವಾರ ಪ್ರಯಾಗಗಳಲ್ಲಿ ನಡೆಯುವ ದೊಡ್ಡ ಜಾತ್ರೆ: ಭೂಗೋಳಕ್ಕೆ ಬೆನ್ನು ಹತ್ತಿಹುದು ಬೇತಾಳ, ಆದರೂ ತಪ್ಪುವಂತಿಲ್ಲ ಕುರುಕ್ಷೇತ್ರದಲಿ ಕುಂಭ ಮೇಳ (ನೆಲಮು. ೧೫). [ಕುಂಭ + ಮೇಳ (= ಮೇಲ)]

**ಕುಂಭಯೋಗ** (ನಾ). ಕುಂಭಕದ ಯೋಗ, —ಕ್ರಿಯೆ: ಉಳಿದ ಸ್ಥಾಪನ ಸನ್ನಿಧಿಕರೂ ಅರ್ಚನಮೆಂಬ ಮೂಱು ಉಪಚಾರಕ್ರಿಯೆಗಳು ಯೋಜಿಸಲ್ಪಡುವುದು ಕುಂಭಯೋಗದಿಂದಂ ಪ್ರಯತ್ನದಿಂದಂ (ಪ್ರತಿಷ್ಠಾ. ೯-೨೩). [ಕುಂಭ + ಯೋಗ]

**ಕುಂಭರಾಶಿ** (ನಾ). [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಹನ್ನೊಂದನೆಯದು: ಈ ನಕ್ಷತ್ರಗಳು ಕುಂಭರಾಶಿಗೆ ಸೇರಿದವು (ನಕ್ಷತ್ರ. ೨೬). [ಕುಂಭ + ರಾಶಿ]

**ಕುಂಭವಾದ್ಯ** (ನಾ). ಹೊಟ್ಟೆಯ ಮೇಲೆ ಇಟ್ಟುಕೊಂಡು ವಾದ್ಯದಂತೆ ಬಾರಿಸುವ ಮಣ್ಣಿನ ಕೊಡ; ಘಟವಾದ್ಯ: (ಕಿ); "ಗುಮಟೀ ವಾದ್ಯ" (ಗಂಗಾಮು. ೩). [ಕುಂಭ + ವಾದ್ಯ]

**ಕುಂಭಶಾಖ** (ನಾ). ಮಡಕೆಯಿಂದ ಶಾಖಕೊಡುವಿಕೆ: ವಾತರೋಗಗಳಲ್ಲಿ ತೈಲ ಮುಂತಾದವುಗಳಿಂದ ಲೇಪನಂ, ಪಾನ ಮುಂತಾದ ಸ್ನೇಹವಿಧಿಗಳನ್ನೂ ಕುಂಭಶಾಖ ಮುಂತಾದುದರಿಂದ ಸ್ವೇದನವಿಧಿಯನ್ನೂ ಪ್ರಯೋಗಿಸುವುದು (ಸಕವೈ. ೨೪). [ಕುಂಭ + ಶಾಖ]

**ಕುಂಭಶಿರ** (ನಾ). ಕುಂಬದಂತಹ ತಲೆಯುಳ್ಳವನು; ಗಜಾನನ: ಲಂಬೋದರಗೇತಕೆ ತರಳೋದರೆ ಕುಂಭಶಿರಂಗೇತಕೆ ಬಿಂಬಾಧರೆ (ಗಣೇಶ. ೫-೧೨೨). [ಕುಂಭ + ಶಿರ]

**ಕುಂಭಶ್ರವಣ** (ನಾ). = ಕುಂಭಕರ್ಣ: ೧. ಅವರೊಳತಿ ಬಲಯುತನು ಕುಂಭಶ್ರವಣನೂ (ಉತ್ತರಾ. ೨-೧೨). [ಕುಂಭ + ಶ್ರವಣ]

**ಕುಂಭಸಂಭವ** (ನಾ). ೧. ಅಗಸ್ತ್ಯ: ಭಂಗಂ ನಿಮಿರ್ವುದು ಕಡಲೊಳ್ ಸಂಗತಮೆನೆ ಕುಂಭಸಂಭವ ವ್ಯತಿಕರದಿಂ (ಪುಷ್ಪವು. ೧೧-೧೪). ೨. ದ್ರೋಣಾಚಾರ್ಯ: ಕುಂಭಸಂಭವನಿವನಶ್ವತ್ಥಾಮನೆಂದು ಪೆಸರಿಡೆ (ಪಂಪಭಾ. ೨-೪೪). [ಕುಂಭ + ಸಂಭವ]

**ಕುಂಭಸ್ಥಲ**, ಕುಂಭಸ್ಥಳ (ನಾ). ಆನೆಯ ತಲೆಯ ಮೇಲೆ ಗುಂಡಾಗಿ ಉಬ್ಬಿರುವ ಭಾಗ. **ಕುಂಭಸ್ಥಳ**: "ಮೂರ್ಧಪಿಂಡಃ, ಕುಂಭಃ – ಈ ೨ ಆನೆಯ ಕುಂಭಸ್ಥಳಂ. ಎರಡು ಕುಂಭಸ್ಥಳದ ನಡು ಬಿದುಮೆಂಬುದು" (ಹಲಾಯು. ೩೬-೬೩); ವೈರಿ ಭೀಮದ್ವಿರದ ಕುಂಭಸ್ಥಳಕೆ ಪಂಚಮುಖ (ಕುವ್ಯಾಕ. ೧೯-೮). [ಕುಂಭ + ಸ್ಥಲ]

**ಕುಂಭಸ್ಥಳ** 'ಕುಂಭಸ್ಥಲ' ನೋ.

**ಕುಂಭಾಂಬು** (ನಾ). ಕೊಡದಲ್ಲಿಯ ನೀರು: ಕುಂಭಾಂಬುವಿಂದಂಬುಧಿಜಳಂ ... ಪಿರಿದು (ಜಗವಿ. ೧-೧೯). [ಕುಂಭ + ಅಂಬು₃]

**ಕುಂಭಾಭಿಷೇಕ** (ನಾ). ವಿಧಿಪೂರ್ವಕವಾಗಿ ಪೂರ್ಣಕುಂಭಗಳಿಂದ ಮಾಡುವ ಅಭಿಷೇಕ: ಚಿದಂಬರದಲ್ಲಿ ಕುಂಭಾಭಿಷೇಕ ಆಯಿತು (ಸಂಗೀತ. ೭). [ಕುಂಭ + ಅಭಿಷೇಕ]

**ಕುಂಭಾರ** 'ಕುಂಬಾರ' ನೋ.

**ಕುಂಭಾರಗೊಡಿಗಿ** (ನಾ). ಕುಂಬಾರರಿಗೆ ಕೊಟ್ಟ ಕೊಡಗೆ: ಧಾರೆಯನೆರದು ಕೊಟ್ಟ ಕುಂಭಾರಗೊಡಿಗಿಯ ಹತ್ತು ಖಂಡುಗ ಭೂಮಿಯ (ಎಕ. VIII, ತೀರ್ಥಹ. ೧೬೨-೯; 1407). [ಕುಂಭಾರ (< ಕುಂಬಾರ) + ಕೊಡಿಗಿ (< ಕೊಡಂಗೆಯ್₃)]

**ಕುಂಭಿ₁** (ನಾ). ೧. ಆನೆ: "ಕರಿ ವಾರಣಂ ಕುಂಭಿ ಕುಂಜರಂ ಸಿಂಧುರಂ ... ಆನೆಯಕ್ಕು" (ಮಂಗರಾ. ೪೬-೧); ಅಹಿತಕುಂಭಿ ಕುಂಭಸ್ಥಳ ನಿರ್ದಾರಣಪಟುಭುಜದಂಡಂ ... ಪ್ರತಾಪಿ ಸಾಹಸಭೀಮಂ (ಗದಾಯು. ೭-೧); ಕುಂಭಿಗಳು ತಲೆಯನೂಜುತೆ ಕೆಡೆದುವು (ಕೌಶಿರಾ. ೨೦-೩೨). ೨. ಒಂದು ನರಕದ ಹೆಸರು: ಉಗ್ರ, ವೃಕಾಸ್ಯ, ಗ್ರಾಹ, ಕುಂಭಿ, ನಕ್ರವೆಂಬೈದು ಮಂತ್ರಿನರಕಂಗಳಿಂದೊಡಗೂಡಿ (ವಿವೇಕ. ೧೪೦). [< ಸಂ. ಕುಂಭಿನ್]

**ಕುಂಭಿ₂** (ನಾ). ೧. ಕಟ್ಫಲವೆಂಬ ಸಸ್ಯ; ಕಿರಿಯ ಶಿವನಿ ಮರ. ೨. ಮಡಕೆ; ಪಾತ್ರೆ: "ಉಖಾ, ಸ್ಥಾಳೀ, ಚರುಃ, ಕುಂಭೀ, ಪಿಠರಂ, ಕುಂಡಂ – ಈ ೬ ಮಡಕೆ" (ಹಲಾಯು. ೫೨-೧೯೯) ೩. ಕಾಳು ತುಂಬಿಡುವ ಪಾತ್ರೆ: (ಕಿ). [ಸಂ. ಕುಂಭೀ]

**ಕುಂಭಿಕೆ** (ನಾ). ಒಂದು ಜಾತಿಯ ಜಲಸಸ್ಯ; ಅಂತರಗಂಗೆ: "ವಾರಿಪರ್ಣಿ, ಕುಂಭಿಕೆ, ಅಂತರವಳ್ಳಿ" (ನಾಚಿರಾ. ಕಿ). [ಸಂ. ಕುಂಭಿಕಾ]

**ಕುಂಭಿನಿ** (ನಾ). ೧. ನೆಲ; ಭೂಮಿ; ಪೃಥ್ವಿ: ಕ್ಷಮೆಯೊಳ್ ಕುಂಭಿನಿಯಂ ಗಭೀರತೆಯೊಳಂಭೋರಾಸಿಯಂ ... ಈತಂ ನೆಱೆ ಪೋಲ್ವಂ (ಸೌಇಇ. XI-ii, ೧೨೦-೪೧; 1044); ಕುಂಭಿನಿಯ ತಿರುಗಿ ಕೋಟಿ ತೀರ್ಥವ ಮಿಂದಡೇನು (ಬೇದಾವ. ೪೭-೯೪). ೨. ಹೆಣ್ಣಾನೆ. ೧, ೨: ಸರಳಕರಪಾತಮಂ ಬಿತ್ತರಿಸಿಯುಮಾಟವಿಕ ಜನಿತ ಬಾಧೆಗಳಂ ಸಂಹರಿಸಿಯುಮನುವಶೆಯಂ ಮಾಡಿರಿಸಿದನಾ ರಾಜಕುಂಜರಂ ಕುಂಭಿನಿಯ (ಚಂದ್ರವು. ೧೧-೮೨). [ಸಂ. ಕುಂಭಿನೀ]

**ಕುಂಭಿನಿಧರ** (ನಾ). = ಕುಂಭಿನೀಧರ. 'ಕುಂಭಿನಿಧರಾತ್ಮಜೆ' ಪರಾ. [< ಸಂ. ಕುಂಭಿನೀಧರ]

**ಕುಂಭಿನಿಧರಾತ್ಮಜೆ** (ನಾ). ಪರ್ವತರಾಜನ ಮಗಳು; ಪಾರ್ವತಿ: ಶಂಭು ಕುಂಭಿನಿಧರಾತ್ಮಜೆಗುಸುರಲು (ನವಮೋ. ೨೫-೮೬). [ಕುಂಭಿನಿಧರ + ಆತ್ಮಜೆ]

**ಕುಂಭಿನೀಧರ** (ನಾ). ಭೂಮಿಯನ್ನು ಧರಿಸಿದುದು; ಪರ್ವತ: ಕುಂಭಿನೀಧರವರತನೂಭವಾನನಪದ್ಮಷಟ್ಚರಣ ... ಸಂಗಮೇಶ್ವರ ಪ್ರಸನ್ನ (ಪ್ರಾಥರಾ. ೧೫-೧). [ಸಂ.]

**ಕುಂಭಿನೊಸಲು** (ನಾ). ೧. ಆನೆಯ ಹಣೆ. ೨. ಪ್ರಶಸ್ತವಾದ ಹಣೆ; ವಿಸ್ತಾರವಾದ ಹಣೆ: ಅಳಕ ನಿಚಯದ ಕುಂಭಿನೊಸಲಿನ ... ಮುನ್ನಿನ ರೂಪ ತೋಱಿಂದ (ಕುವ್ಯಾಭೀ. ೩-೭೭). [ಕುಂಭಿ₁ + ನೊಸಲು (< ನೊಸಲ್)]

**ಕುಂಭಿಪಾಕ** (ನಾ). = ಕುಂಭೀಪಾಕ: ಅಮಂಗಳೆಯಾದ ವಿಧವೆಯು ಪರಪುರುಷರ ಸಂಗಗಳಾದರೆ ಅವಳು ... ಕುಂಭಿಪಾಕವೆಂಬ ನರಕದೊಳು ಯಾತನೆಯನನುಭವಿಸುವಳು (ಕಕುಮಾ. ೧೦೪-೭). [< ಸಂ. ಕುಂಭೀಪಾಕ]

**ಕುಂಭಿಪಾತಕ** (ನಾ). = ಕುಂಭಿಪಾಕ: ಆಚಾರವಿದು, ಪ್ರಸಾದವೆಂದಱಿಯದಿದ್ದರೆ ಕುಂಭಿಪಾತಕ ನಾಯಕನರಕ (ಬಸವ. ೭೬೭). [ಕುಂಭಿ₁ + ಪಾತಕ]

**ಕುಂಭಿಸು** (ಕ್ರಿ). ಕುಂಭಕ ಕ್ರಿಯೆಯಿಂದ ಪ್ರಾಣಾನಿಲವನ್ನು ನಿರೋಧಿಸು; ಒಳಗೆಳೆದುಕೊಂಡ ಉಸಿರನ್ನು ತಡೆಹಿಡಿ: ಶರಣ ಕುಂಭಿಸುವಲ್ಲಿಯೇ ಓಂಕಾರ ಒಡಗೂಡುವುದಯ್ಯಾ (ಘನವ.೬೩-೫೨); ರೇಚಿಸುತ ಪೂರಿಸುತ ಕುಂಭಿಸುತಾಚರಣರೂಪನ ಪಥವ (ನಿಭಾಗ. ೧೧-೨೧-೩೦); ಪ್ರಾಣವಾಯುವ ನಾಸಾಪುಟದೊಳು ತಡೆದು ಕುಂಭಿಸಿ (ಕೈಕವ. ೪-೧). [ಕುಂಭ + -ಇಸು₃]

**ಕುಂಭೀಧಾನ್ಯ** (ನಾ). ೧. ಕುಂಭಗಳಲ್ಲಿ ಶೇಖರಿಸಿದ (ಆರು ದಿನಗಳಿಗೆ ಸಾಲುವಷ್ಟು) ಧಾನ್ಯ. ೨. ಒಂದು ವರ್ಷಕ್ಕಾಗುವಷ್ಟು ಧಾನ್ಯವನ್ನು ಓಡೆಗಳಲ್ಲಿ ಸಂಗ್ರಹಿಸಿ ಇಟ್ಟವನು: ಸಂಗ್ರಹಕಾರರನ್ನು ಕುಶುಲಧಾನ್ಯರೆಂದೂ, ಕುಂಭೀಧಾನ್ಯರೆಂದೂ, ತ್ರ್ಯಾಹಿಕರೆಂದೂ, ಅಶ್ವಸ್ತನರೆಂದೂ ... ಒಂದು ವರ್ಷಕ್ಕಾಗುವಷ್ಟನ್ನು ಶೇಖರಿಸಿದವನು ಕುಂಭೀಧಾನ್ಯನು (ಕುಂಭೀಧಾನ್ಯಕನು) (ಆರ್ಯಧ. ೮೩). [ಸಂ.]

**ಕುಂಭೀನ** (ನಾ). ದೊಡ್ಡ ಆನೆ; ಮಹಾಗಜ: ಅಂಭಃ ಕುಂಭೀನ ಕುಂಭೀನಸ ಮಕರ ಮಹಾಕೂರ್ಮ ಕೀರ್ಣೋರ್ಮಿಮಾಲಾಜ್ಯಂಭತ್ (ರಾಜಶೇ. ೧-೯೦). [ಸಂ.]

**ಕುಂಭೀನಸ** (ನಾ). ಹಾವು; ಸರ್ಪ: "ಉರಗಂ ಸರೀಸೃಪಂ ಕುಂಭೀನಸಂ ಭೋಗಿ ಮರುತಾಶನಂ ... ಎನಲು ಸರ್ಪಂಗೆ ನಾಮಂ" (ಮಂಗರಾ. ೧೧೮-೧); ಆ ಕುಂಭೀನಸನ ಸಂರಂಭಮಂ ಕಂಡು ಮಿಳ್ಕೆಲನಂ ನೋಡೆ (ಜಗವಿ. ೩-೮೩ ವ). [ಸಂ.]

**ಕುಂಭೀಪಾಕ** (ನಾ). ಆವಗೆಯೊಳಗಿನ ಮಡಕೆಗಳಂತೆ ಪಾಪಿಗಳನ್ನು ಬೇಯಿಸುವ ಒಂದು ನರಕ: ಅಪತ್ತುವೆರಸು ಮೃಗಯಾವ್ಯಾಪಾರದೆ ಮಱುಗುವವನಿಪತಿಯರ್ ಕುಂಭೀಪಾಕಕ್ಕೆ ಕೃಷ್ಣಪಾಕವ್ಯಾಪನ್ನರ್ ಮಱುಗುವರ್ ನಿರಂತರಮವರೊಳ್ (ಶಾಂತಿಪು. ೭–೧೦೨); ಅಣ್ಣನಾಜ್ಞೆಯಂ ಮೀಱಿ ನಡೆಯೆ ಕುಂಭೀಪಾಕಂ (ರಾಮಾಶ್ವ. ೨೬–೧೧). [ಸಂ.]

**ಕುಂಭೀರ** (ನಾ). ಮೊಸಳೆ: "ಕುಂಭೀರಃ, ನಕ್ರಃ – ಈ ೨ ಮೊಸಳೆ" (ಹಲಾಯು. ೧೦೮–೩೪); ಮತ್ತಕುಂಜರ ಕುಂಭೀರಕುಲಂ (ಆದಿಪು. ೧೪–೯೨); ಕಾದುವು ಬಿಸಿಲಂ . . . ಕುಂಭೀರಕಮಠ ಕರ್ಕಟಂಗಳ್ (ಜಗವಿ. ೧೪–೧೨). [ಸಂ.]

**ಕುಂಭೋದಯ** (ನಾ). ೧. = ಕುಂಭಜ. ೨. [ಜ್ಯೋತಿ] ಕುಂಭ ರಾಶಿ: ಒಂದಿರೆ ಕುಂಭೋದಯದೊಳ್ ತೊಱಲ್ವನ ಧನಂ ದುಃಖಾರ್ತನುಗ್ರಂ ಶಠಂ (ಜಾತತಿ. ೧೭–೨೦). [ಕುಂಭ + ಉದಯ]

**ಕುಂಭೋದ್ಭವ** (ನಾ). ೧. ಅಗಸ್ತ್ಯ: ಕುಂಭೋದ್ಭವಂ ಶ್ರೀರಾಮ ನೋಲಗಕೆ ಬರುತುಮಿರ್ದಂ (ರಾಮಾಶ್ವ. ೧೦–೧೨). ೨. ದ್ರೋಣ: ಚಾಪವಿದ್ಯಾಬಲದೊಳ್ ಕುಂಭೋದ್ಭವಂ (ಪಂಪಭಾ. ೧೪–೬೪). [ಕುಂಭ + ಉದ್ಭವ]

**ಕುಂಯ್**, ಕುಂಯಿ, ಕುಯ್ಯಿ$_2$, ಕೊಂಯಿ (ನಾ). ನೋವಿನಿಂದ ನಾಯಿಗಳು ಮಾಡುವ ಶಬ್ದ. 'ಕುಂಯ್‌ಗುಟ್ಟು' ಪರಾ. **ಕುಂಯಿ.** 'ಕುಂಯಿಗುಡು' ಪರಾ. **ಕುಯ್ಯಿ$_2$**: (೬). **ಕೊಂಯಿ**: (೬). [?]

**ಕುಂಯ್‌ಗುಟ್ಟು**, ಕುಂಯಿಗುಟ್ಟು (ಕ್ರಿ). ೧. ಕುಂಯ್ ಕುಂಯ್ ಎಂದು ಶಬ್ದಮಾಡು. ೨. (ಆಲಂ) ಹೆದರಿಕೆಯಿಂದ ತೀರ ಮೆಲ್ಲಗಿನ ಧ್ವನಿಯಲ್ಲಿ ಮಾತನಾಡು: ಸುಬ್ಬನ ಮಾತಿನಲ್ಲಿಯ ಸಿಟ್ಟನ್ನು ಕಂಡು ಹೆದರಿ "ಇಲ್ಲ, ಇಲ್ಲ ನಾನದಕ್ಕೆ ಬಂದದ್ದೇ ಅಲ್ಲ" ಎಂದು ಕುಂಯ್‌ಗುಟ್ಟಿದ (ಮೂರುದಾ. ೧೮೦). **ಕುಂಯಿಗುಟ್ಟು**: (೬). [ಕುಂಯ್ + ಕುಟ್ಟು$_1$]

**ಕುಂಯಿ** 'ಕುಂಯ್' ನೋ.

**ಕುಂಯಿಗುಟ್ಟು** 'ಕುಂಯ್‌ಗುಟ್ಟು' ನೋ.

**ಕುಂಯಿಗುಡು** (ಕ್ರಿ). = ಕುಂಯ್‌ಗುಟ್ಟು: ಕರಿಮುರಿನಾಯಿ ಕುಂಯಿಗುಡುತ್ತಿತ್ತು ಭಟ್ಟರಬಾಯಿ ಒಟಗುಡುತ್ತಿತ್ತು (ಗರಿ. ೪೪–೧). [ಕುಂಯಿ (< ಕುಂಯ್) + ಕುಡು$_1$ (< ಕೊಡು$_1$)]

**ಕುಈ**, ಕುಯಿ (ನಾ). ಮಧ್ಯಪ್ರದೇಶದಲ್ಲಿ ಬಳಕೆಯಲ್ಲಿರುವ ಒಂದು ದ್ರಾವಿಡಭಾಷೆ: ಕುಈ ಭಾಷೆಯನ್ನು ಆಡುವವರನ್ನು ಕುಈಂಗ ರೆಂದು ಎಲ್ಲರೂ ಕರೆಯುವುದಿಲ್ಲ (ದ್ರಾವಿವಿ. ೧೬೭). **ಕುಯಿ**: ಕುಯಿಂಗರು ಆಡುವ ಕುಯಿ ಭಾಷೆಯನ್ನು ಗೊಂಡಿ, ತುಳು ಒರಾಬನ್ ಭಾಷೆಗಳ ಗುಂಪಿನಲ್ಲಿ ಸೇರಿಸಬಹುದು (ದ್ರಾವಿವಿ. ೧೬೪). [?]

**ಕುಕಂದುರು** (ನಾ). ಒಂದು ಊರಿನ ಹೆಸರು: ಸಮಾರಾಧನೆಗೆ ಕುಕಂದುರು ಕಿಱುನಗರದ ಗವುಡುಗಳ ಕೈಯ (ಎಕ. XIV, ತಿರುಮ. ೧೮೭–೯; ?). [?]

**ಕುಕಂಬಿಗಾರ** (ನಾ). ಹಡಗು ನಡೆಸುವವನು; ಕರ್ಣಧಾರ: ಹಡಗುಗಳನ್ನು ಬಂದರದಲ್ಲಿ ನಡಸಿಕೊಂಡು ಬರುವ ಕುಕಂಬಿಗಾರರನ್ನು ಪರೀಕ್ಷಿಸಿ ನೇಮಿಸುವದೂ . . . ಮುಂತಾದ ಕೆಲಸಗಳನ್ನು ಮಾಡುವರು (ಇಂಗ್ಲಂಡ. ೧೦೦). [< ಕೊಕಂಬಿ + –ಗಾರ (< –ಕಾಱ)]

**ಕುಕರ** (ನಾ). ೧. ಮೊಂಡುಗೈ. ೨. ಮೊಂಡುಗೈಯುಳ್ಳವನು: ೩. ಕೆಟ್ಟಕೆಲಸಮಾಡುವವನು. [ಸಂ.]

**ಕುಕವಾಡಿ** (ನಾ). ಒಂದು ಊರಿನ ಹೆಸರು: ತಯೋರೇಕೋ ಗ್ರಾಮಃ ಕುಕವಾಡಿ ತ್ರಿಶತಾಭ್ಯಂತರೇ ಕೊಡಂಗವಳ್ಳಿ (ಮೈಆರಿ. ೧೯೩೫, ೪೦–೫೬; 951). [?]

**ಕುಕವಿ** (ನಾ). ಕ್ಷುದ್ರ ಕವಿ; ಅಧಮಕವಿ: ದುಷ್ಕವಿ: ಮಾತ್ಸರ್ಯ ಮಹಾವಿಷಮ ಮತಿಯಿಂದೆ ದೋಷಾಮಿಷಮನೆ ಪೊರ್ದಿಪುವಲ್ತೆ ಕುಕವಿ ಬಕಂಗಳ್ (ಆದಿಪು. ೧–೨೨); ತಾಮೇಂ ಗಣನೀಯರೆ ಕುಕವಿಗಳ್ (ಪುಷ್ಪಪು. ೧–೪೫). [ಸಂ.]

**ಕುಕಾಲ** (ನಾ). ಕೆಟ್ಟಕಾಲ; ಶುಭವಲ್ಲದ ಸಮಯ. [ಸಂ.]

**ಕುಕಾವ್ಯ** (ನಾ). ಕೀಳು ತರಗತಿಯಕಾವ್ಯ; ಅಧಮಕಾವ್ಯ; ಕೆಟ್ಟ ಕಾವ್ಯ: ಅದು ಕಾವ್ಯದಲ್ಲಿ ಅಕಾವ್ಯದಲ್ಲಿ, ಕುಕಾವ್ಯದಲ್ಲಿ, ಎಲ್ಲಿಯೂ ಯಾವ ಕೆಲಸಕ್ಕೂ ಬರುವುದಿಲ್ಲ (ನಿಬಂಧ. II, ೨೪೯). [ಸಂ.]

**ಕುಕಿಲ್$_1$**, ಕುಕಿಲು$_1$ (ಕ್ರಿ). ೧. ಕೋಗಿಲೆಯಂತೆ ಕೂಗು; ಬಗ್ಗಿಸು: "ಕುಕಿಲ್ – ಕೋಕಿಲಸ್ವನೇ, ಪಕ್ಷಿಭೇದೇ ಚ" (ಶಮಧಾ); "ಕುಕಿಲ್ತು ದೆಂದುಂ ಪುಗಿಲ್ ಪುಗಿಲೆಂದುಂ ಕೋಕಿಲಾಲಾಪಂ" (ಕಶಸಾ. ೧೦–೨೦೮); ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ (ಪಂಪಭಾ. ೪–೨೮); ಕಳರವದಿಂ ಕುಕಿಲ್ವ ಮಱಿಕೋಗಿಲೆ (ದಶಕು. ೧–೨೬); ಮೊಱೆವ ಕುಕಿಲ್ವ ಪಾಡುವ ಬಾಸೆವಕ್ಕಿಗಳ ಗಜಬಜದಿಂ (ರಾಮಾಶ್ವ. ೬೪–೬). ೨. ಕಿರಿಚು; ದೊಡ್ಡ ಧ್ವನಿಯಿಂದ ಕೂಗು: ಕೂಡೆ ಕೂಕಿಡುವ ಕುಕಿಲ್ವ ಬಿಕ್ಕುಳಿಪ ತೇಗುವ (ಪಂಪಭಾ. ೪–೯೦); ವೈಡೂರ್ಯರತ್ನಮಂ ತರ್ಪನನೆಟ್ಟಿಟ್ಟ ಖಳನೆಂದು ಕಲ್ಲಿಂದಿಟ್ಟು ಕುಕಿಲ್ದಾರ್ದು ಬಱಿದೆ ನೋಡ ತಳಾಱಂ (ಧರ್ಮಾಮೃ. ೬–೧೨೫); ಕೂಡೆ ಕುಕಿಲ್ದುಪ್ಪರಿಸಿ ರವಿರಥದ ವಾಜಿಗಳರುಣನನೋರೊರ್ಮೆ ಗಸಣಿಗೊಳ್ಳುವು ನಭದೊಳ್ (ಸೂಕ್ತಿಸು. ೩–೨೧೯) ' ಕಿಲು$_1$: ೧. ಕುಕಿಲುವಾ ಚೈತ್ರದೂತನ ದುಃಸ್ಥಿತಿಯ ಕಂಡು ೧ಲೆ. ೩–೭೩).

[ದೇ. ‖ ತಮಿ. ಮಲ. ಕುಯಿಲ್; ಕುಟುಲ್; ತೆಲು. ಕುಕ್ಕಿಲ್]

**ಕುಕಿಲ್$_2$**, ಕುಕಿಲ, ಕುಕಿಲು$_2$, ಕುಕ್ಕಿಲ್ (ನಾ). ೧. ಕೋಗಿಲೆ: "ಕುಕಿಲ್ – ಕೋಕಿಲಸ್ವನೇ, ಪಕ್ಷಿಭೇದೇ ಚ" (ಶಮಧಾ). ೨. ಕೋಗಿಲೆಯ ಧ್ವನಿ: ಕೋರಕಕ್ಕೆ ಕುಕಿಲೆನ್ನವು ಕೋಗಿಲೆ (ಅನಂಪು. ೯–೯೭). **ಕುಕಿಲ**: ೧. ಲಾವುಗೆ ಹರಡೆ ಗೌಜು ಟಿಟ್ಟಿಭ ಕುಕಿಲ [ಪಾಠಾಂ. ಹೊಚ್ಚ] ತುಱುವೆಗಣ್ಣಂ ಹಂಸೆ ರಾಗಧರನೆಂಬ ಪಕ್ಷಿಗಳ ದನಿಯಿಂ ಕರೆಯಲು (ಹಚಕಾ. ೫–೪೨); ಕುಕಿಲ ಸಾರಸ ಕಾಕರಿಪು ಚಾತಕ ಭರದ್ವಾಜಾದಿ ಪಕ್ಷಿಪ್ರಕರ ಬಿದ್ದುದು (ಕುವ್ಯಾಅ. ೨೦–೫೨). **ಕುಕಿಲು$_2$**: ೨. "ಕುಕಿಲೆ ನಲ್ಕಿದುವೆ ಕೋಗಿಲೆಯ ದನಿ" (ಕಶರ. ೨೫); ಕುಕಿಲು ಕರಗುವುದೇಕೆ ವಿರಹ ವಿಸ್ಮೃತಿಗೆ (೧೪ವಿಂ. ೨೧–೧೫); ಕೋಕಿಲಕೆ ಕುಕಿಲು ನವಿಲಿಗೆ ಕೇಕೆ, ಭೃಂಗಕ್ಕೆ ಗುಂಗು ಗುಂಗುಂಗಾನ – ಏಕತಾನ (ಅರಳು. ೧೪೩–೧). **ಕುಕ್ಕಿಲ್.** 'ಕುಕ್ಕಿಲಿಡು' ಪರಾ. [< ಕುಕಿಲ್$_1$]

**ಕುಕಿಲ** 'ಕುಕಿಲ್$_2$' ನೋ.

**ಕುಕಿಲಿಡು**, ಕುಕ್ಕಿಲಿಡು (ಕ್ರಿ). = ಕುಕಿಲ್$_1$: ೧. ಟುವ್ವಿಡುವ ಕುಕಿಲಿಡುವ ಗಾನದೊನಪು (ನೆಲಮು. ೩). **ಕುಕ್ಕಿಲಿಡು**: ೨. ಸವಿಸವಿದು ಕುಕ್ಕಿಲಿಡುವರಾನಂದದಿಂ (ಲಕ್ಷ್ಮಭಾ. ೨–೨೦). [ಕುಕಿಲ್$_2$ + ಇಡು$_1$]

**ಕುಕಿಲಿಱಿ**, ಕುಕ್ಕಿಲಿಱಿ (ಕ್ರಿ). ಗಟ್ಟಿಯಾಗಿ ಕೂಗು, ಶಬ್ದಮಾಡು: ಕುಣಿವುತಂ ಕುಕಿಲಿಱಿವುತಂ ಪರ್ಬಿಕೊರ್ವುತಂ (ಬಸರ. ೧–೩೭); ಘಡ ನೋಡಾಡೊಡೆ ನೋಡೆಂದತಿಭರದಿಂ ತಿರುಪಿ ಕರಂ ಕುಕಿಲಿಱಿದು (ವೀರೇಚ. ೨–೩೭); ಜೆಟ್ಟಿ ಹೆಕ್ಕಳಗೊಂಡು ಕುಕಿಲಿಱಿದು ನಿಲ್ಲವಾರುತ್ತೆ (ಸಿದ್ಧೇಪು. ೧೫–೬೨). **ಕುಕ್ಕಿಲಿಱಿ**: ಮಧುರವಣ್ಗಳ ಸವಿದು ಕುಕ್ಕಿಲಿಱಿದರಿದು ತನುಮುದವೇಱಿ ದನಿಗೈವ ಮುದ್ದು ನುಡಿಗಳ್ (ರುಕ್ಮಾಂಗ. ೨–೨೯). [ಕುಕಿಲ್$_1$ + ಇಱಿ$_1$]

**ಕುಕಿಲು$_1$** 'ಕುಕಿಲ್$_1$' ನೋ.

**ಕುಕಿಲು$_2$** 'ಕುಕಿಲ್$_2$' ನೋ.

**ಕುಕುಂದರ** (ನಾ). ಸ್ತ್ರೀಯರ ಕಟಿ ಪ್ರದೇಶದಲ್ಲಿ ಪಿರ್ರೆಯ ಮೇಲ್ಭಾಗದಲ್ಲಿರುವ ಕುಳಿ: "ಹೆಂಗಸರ ಪಿರ್ರೆಗಳ ಮೇಲಿರುವ ಗುಳಿಗಳು" (ಅಮರ. ಟೀಕೆ). [ಸಂ.]

**ಕುಕುಮಾಲಂಗಿ** (ನಾ). ಒಂದು ಬಗೆಯ ಅಂಗಿ: ಹುಡುಗರು ಹಾಕು ಹೂವಿನ್ನಂಗಿ ವೀರರ್ಣಾಕು ಚಿಲಿಕತ್ತಿನಂಗಿ ಕೊಮರಾಮ್ಣಾಕು ಕುಕುಮಾಲಂಗಿ (ಲೋಕಗೀ. ೧೭೫–೬). [? + ಅಂಗಿ₂]

**ಕುಕುರ** (ನಾ). ೧. ಒಂದು ದೇಶದ ಹೆಸರು; ದಶಾರ್ಹವೆಂಬ ದೇಶ: ನೇಪಾಳ ಕುಂತಳ ಕುಕುರ ಬರ್ಬರ ಚೋಳ ಪಾಂಡ್ಯ . . . ಕರ್ಣಾಟ (ಬಸವು. ೬–೧೮); ಲಾಟ ಪಾಂಚಾಳ ವೈದರ್ಭ ಕುರು ಕುಕುರ ಕರಹಾಟ . . . ಕರ್ಣಾಟ (ಚಬವು. ೬–೬೦). ೨. ಯಾದವರಲ್ಲಿ ಒಂದು ಪಂಗಡದ ಹೆಸರು: "ಕುಕುರ" ಹೆಸರು ಅಂಧಕ ವೃಷ್ಣಿಕುಲ ಮೊಡನೆ ಹೊಸೆದುಕೊಂಡಿದೆ. ಈ ಜನ ವಿಂಧ್ಯೆಯಿಂದ ಗುಜರಾಥದವರೆಗೆ ಇದ್ದರು (ಕರ್ಣಾಟ. ೭೧). [ಸಂ.]

**ಕುಕುರಾದ್ರ** (ನಾ). ಒಂದು ಜಾತಿಯಸಸ್ಯ: (ವೈಜಿ.೧೩–೨೨೭). [?]

**ಕುಕೂಣ** (ನಾ). ಕಡ್ಡಿ ತಾಗುವುದರಿಂದ ಉಂಟಾಗುವ ನೋವು: "ಕುಕೂಣವೆಂದರೆ ಕಡ್ಡಿ ತಾಗಿದ್ದರಿಂದ ಉಂಟಾದ ನೋವು" (ವೈದ್ಯಸಾ. I, ೩೪). [ಸಂ.]

**ಕುಕೂಲ**, ಕುಕೂಳ (ನಾ). ೧. ಹೊಟ್ಟು, ಉಮ್ಮಿ ಮೊದಲಾದುವುಗಳಿಂದ ಹೊತ್ತಿಸಿದ ಬೆಂಕಿ; ತುಷಾಗ್ನಿ. ೨. ದಕ್ಕು ದಸಿಗಳನ್ನು ತುಂಬಿದ ಕುಣಿ: "ವರ್ಕು ಬೆರಸಿದ ಕುಟಿಯಲ್ಲಿಯುಂ [ಉ]ಮಿ ವೆರಸಿದ ಕಿಚ್ಚಿನಲ್ಲಿಯುಂ ಕುಕೂಲಮೆಂಬುದು" (ಹಲಾಯು. ೧೩೮–೪೧); "ಅತ್ಯುತ್ಕೃಷ್ಟ ದಕ್ಕುಳ್ಳ ಕುಟಿಯುಮಿವೆರಸು ಕಿಚ್ಚಿನೊಳು ಸಲೆ ಕುಕೂಲಮದೆಂಬುದು" (ಮಂಗರಾ. ೧೪೨–೧೮). ೩. ಬೆಟ್ಟದ ತಪ್ಪಲು; ಸಾನು. **ಕುಕೂಳ**: ೧. "ತುಷವಹ್ನಿಯುಂ ಕುಕೂಳಮೆನಿಕ್ಕುಂ" (ವಸ್ತುಕೋ. ೧೨೭–೫೪). [ಸಂ.]

**ಕುಕೂಳ** 'ಕುಕೂಲ' ನೋ.

**ಕುಕೃತ** (ನಾ). ಕೆಟ್ಟಕೆಲಸ; ಪಾಪಕರ್ಮ: ರಾಮಸೇವೆಯೊಳಿರ್ದು ನೀಂಗೈದ ಕುಕೃತಮಂ ತವಿಸುವೆನು (ಶ್ರೀರಾಮಾ. ೧೧೦–೨೭೫). [ಸಂ.]

**ಕುಕ್ಕ**₁ (ನಾ). ಒಂದು ಬಗೆಯ ಬಳ್ಳಿ. 'ಕಳ್ಳಕುಕ್ಕನ ಬಳ್ಳಿ' ಪರಾ. [?]

**ಕುಕ್ಕ**₂ (ನಾ). ೧. ನಾಯಿ. ೨. (ಅಲಂ) ಕೀಳುಮನುಷ್ಯ; ಕ್ಷುದ್ರ ವ್ಯಕ್ತಿ; ನೀಚ: ಅಕ್ಕ ಅಪ್ಪಾ ಮಗಳೆ ಚಿಕ್ಕವ್ವ ಎಂದೆನುತ ಅಕ್ಕಟಾಂ ಕರೆದು ಮಿಗೆ ಭೋಗಿಸುತ್ತಲಿಹ ಕುಕ್ಕ ನಿನಗೇಕೆ ಶಿವಪೂಜೆ (ಗುರುಬೋ. ೧೩೪–೧೩).

[ದೇ. ‖ ತಮಿ. ಕುಕ್ಕಲ್, ಕುಕ್ಕ; ತೆಲು. ಕುಕ್ಕ. / ಸಂ. ಕುಕ್ಕುರ]

**ಕುಕ್ಕಟ** (ನಾ). ಕಲಿಂಗ ಪಕ್ಷಿ: "ಕಳಿಂಗಃ, ಭಂಗಃ, ಧೂಮ್ಯಾಟಃ – ೩ ಕುಕ್ಕಟ ಎಂಬ ಹಕ್ಕಿಯ ಹೆಸರುಗಳು" (ಸಿದ್ಧಾಂತಿ. ೧೩೭).

[← ತೆಲು. ಕೂಕಟಮೂಗ]

**ಕುಕ್ಕಟಿಗ** (ನಾ). ಒಂದು ಬಗೆಯ ಹಕ್ಕಿ: ಗೌಜು ಕರ್ಕಟ ಕಪ್ಪುರ ಸೆಟ್ಟಿ ಚೆಲುವ ಬೆಳವ ಕುಕ್ಕಟಿಗ ಕಲುಕುಟಕಾದಿ ತೋಟದ ಪಕ್ಕಿಗಳ ಕೊರಲುಲುಹಾದುದಾ ತಪೋವನದಿ (ಮೋಹತ. ೬–೧೭). [?]

**ಕುಕ್ಕಡಿ**, ಕುಕ್ಕುಡಿ (ನಾ). ರಾಟೆಯಲ್ಲಿ ನೂತು ಕದಿರಿಗೆ ಸುತ್ತಿದ ಎಳೆಯ ಉಂಡೆ; ಮಧ್ಯದಲ್ಲಿ ದಪ್ಪವಾಗಿಯೂ ಎರಡೂ ತುದಿಗಳಲ್ಲಿ ತೆಳುವಾಗಿಯೂ ಇರುವ ದಾರದ ಸುತ್ತು: ಇವನ ವಿಮಾನವು . . . ಕುಕ್ಕಡಿಯಂತೆ ಎರಡೂ ತುದಿಗಳಲ್ಲಿ ಸಣ್ಣಾಗಿಯೂ ಮಧ್ಯದಲ್ಲಿ ದಪ್ಪಾಗಿಯೂ ಇರುವದು (ಮುಂಬಯಿ. ೫–೬೫); ಅವನ ಗಿಡ್ಡ ದೇಹ, ಕುಕ್ಕಡಿಯಂತೆ ಏಳುವ ಕೈಕಾಲುಗಳ ಸ್ನಾಯುಗಳು (ಮೇದಿಮು.೩೯–೯೫). ೨. ಒಮ್ಮಿಂದೊಮ್ಮೆಲೆ ಏಟು ಬಿದ್ದಾಗ ರಟ್ಟೆಯ ಸ್ನಾಯುವಿನಲ್ಲಿ ಗುಂಡಗೆ ಏಳುವ ಬಾವು, —ಊತ: "ಬಡಿದ ಬಾವು" (ಜಾನಕೋ. ೩೪). **ಕುಕ್ಕುಡಿ**: ೧. ಸಣ್ಣನ್ನ ಕುಕ್ಕುಡಿ ಕನ್ನೇರ ಹಿಡಕೊಂಡು ಸಣ್ಣ ಕಂಕಣ ತಿರುವೂತ ಸುತ್ತಾರ್‍ಯ್ಕರ ಪನ್ನಂಗಧರನ ಸುರಗೀಯ (ಲೋಕಗೀ. ೩೧–೧೫).

ಕುಕ್ಕುಡಿ ಏಳು = ತೋಳಿನ ಸ್ನಾಯುವಿನಲ್ಲಿ ಪೆಟ್ಟಿನಿಂದ ಬಾವು ಬರು: (೬). [?]

**ಕುಕ್ಕಣಿ** 'ಕೂಕಣಿ' ನೋ.

**ಕುಕ್ಕನಾಯ್** (ನಾ). = ಕುಕ್ಕ₂: ಜೀವದ ಹೆಣನ ಮನೆಮುಚಿಯಲಿರಿಸಿಕೊಂಡು ಮತ್ತೊಂದು ಬಂದು ಕಚ್ಚೀತೆಂದು ಕುಕ್ಕನಾಯಂತೆ ಕಾಯ್ದುಕೊಂಡಿಪ್ಪವಂಗೆ (ಸಿದ್ದೇವ. ೧೧೬). [ಕುಕ್ಕ₂ + ನಾಯ್]

**ಕುಕ್ಕನೂರ್**, ಕುಕ್ಕನೂರು (ನಾ). ಒಂದು ಊರಿನ ಹೆಸರು: ನಿಜಾಧಿಕಾರದ ಮಹಾಗ್ರಹಾರಂ ಕುಕ್ಕನೂರ್ಗೆ ಬಿಜಯಂಗೆಯ್ದು (ಕಇಅ. ೭೫–೧೨–೪೪; 1170). **ಕುಕ್ಕನೂರು**: ತ್ರೈತ್ರೀಯ ಶಾಖಾಯ ಕುಕ್ಕನೂರುನಾಮ ಗ್ರಾಮವಾಸ್ತವ್ಯಾಯ (ಮೈಅಂ. ೧೯೩೫, ೪೦–೫೩; 951); ಪುರಿಗೆಜಿ ಮೂನೂಱುಮುಂ . . . ಕುಕ್ಕನೂರು ಮೂವತ್ತುಮಂ (ಸೌಇಇ. XI–i, ೪೮–೬; 1007). [ಕುಕ್ಕನ + ಊರ್]

**ಕುಕ್ಕನೂರು** 'ಕುಕ್ಕನೂರ್' ನೋ.

**ಕುಕ್ಕನೂರ್ನಾಡು** (ನಾ). ಕುಕ್ಕನೂರು ಮುಖ್ಯವಾಗಿದ್ದ ಒಂದು ನಾಡಿನ ಹೆಸರು: ವಿಕ್ರಮ ಚೋಳ ಮಣ್ಡಲದ ಕುಕ್ಕನೂರ್ನಾಡುನಾಟ್ಟಾವುಣ್ಡಂ (ಎಕ. IX, ನೆಲಮಂ. ೧೯–೯; 1079). [ಕುಕ್ಕನೂರ್ + ನಾಡ]

**ಕುಕ್ಕರ್** (ನಾ). ಆವಿಯಿಂದ ಆಹಾರ ಪದಾರ್ಥಗಳು ಬೇಗನೆ ಬೇಯುವಂತೆ ಅಳವಡಿಸಿದ ಅಡುಗೆಪಾತ್ರೆ: ಕುಕ್ಕರ್ ಮಾದರಿ ಪಾತ್ರೆಗಳಲ್ಲಿ ಮೂರು ನಾಲ್ಕು ವಿಧದ ಆಹಾರಗಳನ್ನು ಒಂದೇ ಸಲ ಆವಿಯ ಶಾಖದಿಂದ ಬೇಯಿಸಬಹುದು (ಗೃಹವಿ. ೫೩); ವೆಂಕಟರಾಯ ಕುಕ್ಕರ್ ಮೇಲೆ ಅಡಿಗೆಗಿಟ್ಟು ತನ್ನ 'ಕ್ಲಬ್'ಗೆ ಹೋಗುವ ವಾಡಿಕೆ (ತಾಯಿಕ. ೧೪). [← ಇಂ. Cooker]

**ಕುಕ್ಕರ**₁ (ನಾ). ಒಬ್ಬಾತನ ಹೆಸರು: ಕರಿಕನಾಡ ಬಿದಿರ್ಕಲ್ಲಾಳ್ದ ಕುಕ್ಕರ ಪಾಟಿಕ್ಕಾಜಿ ನಾಡಿಯರ್ ತುರಿದು(ಎಕ. IX, ಬೆಂಗಳೂ.೩೬–೩; 750). [?]

**ಕುಕ್ಕರ**₂, ಕೊಕ್ಕರ₂ (ನಾ). ೧. ತುದಿಗಾಲ ಮೇಲೆ ಕುಳಿತುಕೊಳ್ಳುವಿಕೆ; ಗಕ್ಕನೆ ಕುಳಿತುಕೊಳ್ಳುವಿಕೆ. ೨. ಒಮ್ಮೆಲೆ ಕೆಳಕ್ಕೆ ಕುಸಿದು ಬೀಳುವಿಕೆ. 'ಕುಕ್ಕರಿಸು' ಪರಾ. **ಕೊಕ್ಕರ**₂: ೧. ಗೌಡರು ಕೊಕ್ಕರ ಕುಳಿತು ಗೋಳೋ ಎಂದು ಅತ್ತರು (ಚಿಗುಬ. ೫).

[?./ ತಮಿ. ಕುಕ್ಕು]

**ಕುಕ್ಕರ**₃, ಕುಕ್ಕಲ (ನಾ). ೧. ನಾಯಿ. ೨. (ಅಲಂ) ಕೀಳು ಮನುಷ್ಯ; ಹೀನವ್ಯಕ್ತಿ: ಹೊರಗಣ ಮಲತ್ರಯಕ್ಕೆ ಒಳಗಣ ಅಜೀವ ನೀಡಾಡಲೇಕೆ ಅಲ್ಪಸುಖಕ್ಕೆಮಚ್ಚಿ ಕುಕ್ಕರ [ಪಾಠಾಂ. ಕುಕ್ಕುರ]ನಂತೆ ಸಿಕ್ಕಿ ಸಾಯಲೇಕೆ (ವಚಸಂ. ೭೫–೮೪). **ಕುಕ್ಕಲ**. 'ಕುಕ್ಕಲಗೆಂಬಲು' ಪರಾ. [< ಸಂ. ಕುಕ್ಕುರ]

**ಕುಕ್ಕರಗಾಲು**, ಕುಕ್ಕುರುಕಾಲು, ಕುಕ್ಕುರುಗಾಲು (ನಾ). ಕಾಲುಗಳನ್ನು ಮಡಿಚಿಕೊಂಡು ತುದಿಗಾಲ ಮೇಲೆ ಕುಳಿತುಕೊಳ್ಳುವುದು: ಕುಕ್ಕರಗಾಲಿನಲ್ಲಿ ಕುಳಿತುಕೊಂಡು ಸಣ್ಣ ಹುಕ್ಕದ ಕೊಳವೆಯನ್ನು ಸೇದುತ್ತಾ ಉಗಿಯುತ್ತಿದ್ದನು (ಮಲೆನಾ. ೧೧೫); ಒಬ್ಬನು ಕೆಳಗಡೆ ಕುಕ್ಕರಗಾಲಿನಲ್ಲಿ ಕುಳಿತು ಹಿಂದಿನ ಪುಟವನ್ನು ನೋಡುತ್ತಿರುತ್ತಾನೆ (ನಾಡಿಗೇ. ೬೪). **ಕುಕ್ಕುರುಕಾಲು**: ಹಾಕಿದ ಮಣೆಯ ಮೇಲೆ ಕುಕ್ಕುರುಕಾಲಿನಲ್ಲಿ ಕೂತು ಯೋಚಿಸಿದ (ಸಂಸ್ಕಾರ. ೫೯).

**ಕುಕ್ಕುರುಗಾಲು**: ಆನೆ ಅದನ್ನು ತಡೆದುಕೊಳ್ಳಲಾರದೆ . . . ಕುಕ್ಕುರುಗಾಲಲ್ಲಿ ಕುಸಿದುಬಿದ್ದಿತು (ಹತ್ತುಮ. ೯೬).
[ಕುಕ್ಕುರ್$_3$ + ಕಾಲು$_1$ (< ಕಾಲ್$_1$)]

**ಕುಕ್ಕರಬಡಿ** (ಕ್ರಿ). ೧. ಒತ್ತಾಯದಿಂದ ಕುಕ್ಕಿ ಕುಳ್ಳಿರಿಸು; ಎತ್ತಿ ಅಪ್ಪಳಿಸು: ಜಾರಿದ ಕಾಲು ನಿಲ್ಲದೆ ದೇಹವನ್ನು ನೆಲಕ್ಕೆ ಕುಕ್ಕರಬಡಿಯಿತು (ರಕ್ತಧ್ವ. ೨೫೦); ನನ್ನನ್ನು ಒತ್ತಾಯದಿಂದ ಕಾಟಿನಮೇಲೆ ಕುಕ್ಕರ ಬಡಿದು ಕೂಡಿಸಿದ (ದೀಪಹ. II, ೩೬೦); ದರದರನೆ ಅವಳ ಕೊದಲನ್ನು ಹಿಡಿದೆಳೆದು ಮನೆಯ ಹೊಸ್ತಿಲಕ್ಕೆ ಕುಕ್ಕರಬಡಿದರೂ ಆಕೆ ಚೇತರಿಸಿಕೊಂಡು (ಕಾಗಳ. ೫೫). ೨. (ತಿರಸ್ಕಾರದಿಂದ) ಕುಳಿತುಕೊಳ್ಳು; ಸದ್ದಿಲ್ಲದೆ ಕೂತಿರು: ನಾವು ಕುಕ್ಕರಬಡಿಯೋದು, ಇಸ್ಪೀಟು ಆಡೋದು, ಬಿದ್ದುಕೊಳ್ಳೋದು ಎಲ್ಲಾ (ಚಂಗೂಲಿ. ೭೬). [ಕುಕ್ಕರ್$_3$ + ಬಡಿ$_1$]

**ಕುಕ್ಕರಹಾಕು** (ಕ್ರಿ). = ಕುಕ್ಕರಬಡಿ ೧: ಸೊಕ್ಕಿದ ದೈತ್ಯರನು ತಿವಿದು ಮೇಲಕ್ಕೆ ಹಾರಿಸಿ ಅವರ ಕುಕ್ಕರಹಾಕಿ ನರಕಕ್ಕೆ ಸಾಗೀಸಿ (ತೀರ್ಥಮ. ೨೭೨). [ಕುಕ್ಕರ್$_3$ + ಹಾಕು (< ಪಾಯ್ಕು$_1$)]

**ಕುಕ್ಕರಿ** (ನಾ). ೧. ಹೆಣ್ಣುನಾಯಿ. ೨. ಕೀಳು ಹೆಂಗಸು: ಆಗೀ ಕದಿಯೋ ತಕ್ಕನಿಗೆ ಬೆಳೀ ಕದಿಯೊ ಕುಕ್ಕರಿ (ಚಕರಾ. ೭೦೧).
[ಸಂ. ಕುಕ್ಕುರೀ]

**ಕುಕ್ಕರಿಸು** 'ಕುಕ್ಕುಱಿಸು' ನೋ.

**ಕುಕ್ಕರು** (ನಾ). ಕುಳಿತಿರುವುದು (?): ಮಕ್ಕಳ ಶಿರೋಮಣಿಯ ನುಡಿಯೇಕೆ ಮೌನದೋಳ್ಕುಕ್ಕರುಂ ತನ್ನೊಡಲ ಲಾಲಿಸುವ ಪಾಲಿಸುವ ತಕ್ಕುದನು ವಂಚಿಸದೆ ಪೇಳೆನೆಲ್ಕುಸುರಿದನು ಚಿತ್ತದೊಳ್ಳೆಲೆಗೊಂಡುದಂ (ತುರಂಗ. ೨೩–೧೪). [?]

**ಕುಕ್ಕಲ** 'ಕುಕ್ಕರ್$_3$' ನೋ.

**ಕುಕ್ಕಲಗೆಂಬಲು** (ನಾ). ನಾಯಿಕೆಮ್ಮು; ಕೋಡಗ ಕೆಮ್ಮು (ಉಕ): ಪ್ಲೀಗನೆ ಪೋಗಿಸು ಮಾರಿಯೇ ತಾ ಗ ದ ಪೊಲ್ಸಿ ಡು ಬ ಂ ಹೊಡೆ ನೀಗುತೆ ಯಿಂಪುಲ್ಲಯಂಜವಂ ತೊಡೆ ನೀಗಿಸು ಕುಕ್ಕಲಗೆಂಬಲಂ (ಮೈಸೂಮ. ೨–೯೩).
[ಕುಕ್ಕಲ (< ಕುಕ್ಕರ್$_3$) + ಕೆಂಬಲು (< ಕೆಮ್ಮಲು)]

**ಕುಕ್ಕಲಿ** (ನಾ). ಒಂದು ಜಾತಿಯ ಪಕ್ಷಿ; ಕೆಂಬೂತ: ಹಕ್ಕಿಗಳು: ಕೋಳಿ, ಕಾಗೆ, ಗುಬ್ಬಿ, ಕುಕ್ಕಲಿ, ಮೈನ (ನಮ್ಮನು. ೨೪೦). 'ಕುಕ್ಕು$_6$' ಪರಾ. [?. / ತಮಿ. ಕುಕ್ಕಿಲ್]

**ಕುಕ್ಕಲು$_1$** (ನಾ). ಕುಕ್ಕುವುದು; ಕುಕ್ಕಿದ ನೋವು: ಓಡೋಡಿ ರೂಢಿ ಅವನಿಗೆ. ನನಗೆ ಹೊಟ್ಟೆ ಕುಕ್ಕಲು ಹಿಡಿಯಿತು (ಚಿಂದುಟ. ೫೧).
[ಕುಕ್ಕು$_2$ + – ಅಲು (< – ಅಲ್$_2$)]

**ಕುಕ್ಕಲು$_2$** 'ಕುಕ್ಕುಲು' ನೋ.

**ಕುಕ್ಕಸನಾಡು** (ನಾ). ಒಂದು ನಾಡಿನ ಹೆಸರು: ಕುಕ್ಕಸನಾಡ ಕಿಱಿಯ ಸಾಲೆಯೂರಂ ಬಸದಿಗಿತ್ತಂ (ಎಕ್.VIII, ನಗರ. ೪೫–೧೦; 950).
[ಕುಕ್ಕಸ$_0$ + ನಾಡು]

**ಕುಕ್ಕಿ** 'ಕುಕ್ಕೈ' ನೋ.

**ಕುಕ್ಕಿಬಳ್ಳಿ** (ನಾ). ಒಂದು ಜಾತಿಯ ಬಳ್ಳಿ: (ಮೈಔಗಿ. ೬೦–೧೨೦೧).
[ಕುಕ್ಕಿ ? + ಬಳ್ಳಿ]

**ಕುಕ್ಕಿರಿ** (ಕ್ರಿ). ಕುಕ್ಕಿ ತಿವಿ; ಹೊಡೆ; ಬಡಿ: ಇಳಿಯಾ ಬಗದು ರಸಾತಳಕೆ ನಿಲ್ಲದೆ ಪೋಗಿ ಖಳನ ಕುಕ್ಕಿರಿದು ಕೋಲಾಹಲವೆಬ್ಬಿಸಿ ನೆಲಕೆ ಅಪ್ಪಳಿಸಿ (ವಿಸ್ತೋಸು. ೧–೫); ಮತ್ತ ಮಾತಂಗ ಸೊಕ್ಕೊಕ್ಕಿ ಕುಕ್ಕಿರಿದೆಲ್ಲವ ಬೀಗಿಸುತ (ಜಿನಮು. ೯–೨೪). [ಕುಕ್ಕು$_1$ + ಇರಿ$_2$ (< ಇಱಿ$_1$)]

**ಕುಕ್ಕಿಲ್** 'ಕುಕಿಲ್$_2$' ನೋ.

**ಕುಕ್ಕಿಲಿಡು** 'ಕುಕಿಲಿಡು' ನೋ.

**ಕುಕ್ಕಿಲಿಱು** 'ಕುಕಿಲಿಱು' ನೋ.

**ಕುಕ್ಕಿಲಿಲೆ** (ನಾ). ಒಂದು ಅನುಕರಣ ಶಬ್ದ: ಕಳಕಳಿಸಿ ನಗುತೆ ಕುಕ್ಕಿಲಿಲೆಯೆಂದು ಯಿರದೆ ಕೂಗುತ್ತ (ನವಮೋ. ೧೦–೬೨). [< ಕುಕಿಲ್$_2$]

**ಕುಕ್ಕಿಸು** (ಕ್ರಿ). ೧. (ಪ್ರಖರವಾದ ಬೆಳಕಿನಿಂದ ಕಣ್ಣು) ಕೋರೈಸು; ಕುಕ್ಕುವಂತೆ ಮಾಡು: ಹಿರಿಯಾಸೆಗಳ ಸೆಳಕು ಕಣ್ಣು ಕುಕ್ಕಿಸಲಿಲ್ಲ (ಪಿಪಾಸೆ. ೪೮). ೨. ಚುಚ್ಚಿಸು: ಹಚ್ಚೆ ಕುಕ್ಕಿಸಿಕೊಳ್ಳುವುದು ಹಳ್ಳಿಯ ಹೆಂಗಸರಿಗೆ ಬಹು ರೂಢಿ. ಗಂಡಸರೂ ಒಬ್ಬೊಬ್ಬರು ಕುಕ್ಕಿಸಿಕೊಳ್ಳುವುದುಂಟು (ನಾಪದ. ೧೩೧). [ಕುಕ್ಕು$_1$ + –ಇಸು$_3$]

**ಕುಕ್ಕಿಱು** 'ಕೂಕಿಱು' ನೋ.

**ಕುಕ್ಕು$_1$** (ಕ್ರಿ). ೧. ಚುಚ್ಚು; ಕುಟ್ಟು; ತಿವಿ: ಕುಕ್ಕಿದನುರುಶರಾಗ್ರದಲಿ (ತೊರರಾ. ೩–೮–೫೦); ಸಿಕ್ಕಲು ಸೆಳೆವರು ಸೆಳೆದೊಳಹುಗುವರು ಕುಕ್ಕಲು ಕುಕ್ಕಿ ಕಡಿವರು (ಮೋಹತ. ೩೮–೨೯). ೨. ಕೊಕ್ಕಿನಿಂದ ಕುಟುಕು: ಕಾಗೆ ಕುಕ್ಕಿ ಕೊಕ್ಕಿಂ (ರಾಜಶೇ. ೯–೨೬). ೩. ಹೇನು, ಕೂರೆ ಮೊದಲಾದುವನ್ನು (ಉಗುರಿಂದ) ಒರೆ; ಹಿಸುಕಿ ಕೊಲ್ಲು: "ಚಂಚುಘಾತದೊಳು ಯೂಕಂಗಳಂ ಮಿಗೆ ಸಂಹರಿಸುವಲ್ಲಿ ಕುಕ್ಕು" (ಶಬ್ದಮಂ. ೮೦). ೪. (ಪ್ರಖರವಾದ ಬೆಳಕಿನಿಂದ) ಕಣ್ಣು ಕೋರೈಸು: ನನ್ನ ಕಣ್ಣು ಕುಕ್ಕಿದ್ದು ಮನಸ್ಸನ್ನು ಸೆಳೆದಿದ್ದು ಅಲ್ಲಿದ್ದ ರಂಗುರಂಗಿನ ಸುಂದರ ಸಂಪುಟ (ಸುವಸಂ. ೪); ಮಿಂಚಿನ ಕಡೆಗೆ ನೋಡಿದರೆ ಕಣ್ಣು ಕುಕ್ಕುತ್ತದೆ (ಮುಂಬಯಿ. ೧–೧೨).
[ದೇ. ॥ ತುಳು. ತೆಲು. ಕುಕ್ಕು]

**ಕುಕ್ಕು$_2$** (ಕ್ರಿ). ಬಟ್ಟೆಯನ್ನು ಮೆತ್ತಗೆ ಕುಸುಕು: "ಕುಕ್ಕು – ವಸ್ತ್ರ ಸ್ವಲ್ಪಘಾತನೇ, ಪಕ್ಷಿಭೇದೇ ಚ" (ಶಮಥಾ); "ವಸ್ತ್ರವ ಜಲದೊಳು ಒಗೆವಲ್ಲಿ ಚಂಚುಘಾತದೊಳು ಯೂಕಂಗಳಂ ಮಿಗೆ ಸಂಹರಿಸುವಲ್ಲಿ ಕುಕ್ಕು" (ಶಬ್ದಮಂ. ೮೦). [< ಕುಸುಕು ?]

**ಕುಕ್ಕು$_3$** 'ಕುಲುಕ್ಕು$_1$' ನೋ.

**ಕುಕ್ಕು$_4$** 'ಕುಬ್ಜ' ನೋ.

**ಕುಕ್ಕು$_5$** (ಕ್ರಿ). ರಾಶಿಯಾಗಿ ಬರು; ಗುಂಪಾಗಿ ಬರು: "ಕುಕ್ಕನೆ ದಿಂಡಿವಿಡಿದು ಬಪ್ಪುದುಮಕ್ಕು" (ರನ್ನಕಂ. ೩). [?]

**ಕುಕ್ಕು$_6$** 'ಕೊಕ್ಕು$_3$' ನೋ.

**ಕುಕ್ಕುಂಬಾಳು** (ನಾ). ಒಂದು ಊರಿನ ಹೆಸರು: ಆ ಭೂಮಿಯ . . . ಕುಕ್ಕುಂಬಾ[ಳ] ಪೊಲದ ಸಂದಿನಲೀಶಾನ್ಯದ ಗುಡ್ಡೆ (ಸೌಇಇ. XX,೧೮–೪೨; 980); ಪಶ್ಚಿಮದಿಗ್ವಳಯೇ ಕುಕ್ಕುಂಬಾಳು ಗ್ರಾಮಸ್ಯ ಸೀಮಾ (ಮುಂಬರಾ. X, ೧೯೬–೧೯; 1097). [?]

**ಕುಕ್ಕುಟ$_1$** (ನಾ). ೧. ಹುಂಜ; ಕೋಳಿ: "ಕೃಕವಾಕುಃ, ತಾಮ್ರಚೂಡಃ, ಕುಕ್ಕುಟಃ, ಚರಣಾಯುಧಃ – ಈ ೪ ಕೋಟೀ" (ಹಲಾಯು. ೪೧–೧೪); ಆ ಶುಂಡಾಲಂ ಸತ್ತು ಕಾಗೆಯಾಗಿ ತನ್ನಂತಿನೆ ಸತ್ತೆಸಡಿ ಕುಕ್ಕುಟನಾಯ್ತು (ಪಂರಾಮಾ. ೧೫–೩೬ ವ); ಕಡಂಗಿ ಕೂಗಿದುದುವಾಗಳು ಕುಕ್ಕುಟನೊಂದು ನಿಚ್ಚಟಂ (ಸೂಕ್ತಿಸು. ೯–೨೭). ೨. ಒಂದು ಜಾತಿಯ ಕುದುರೆ: ಕರ್ಪು ಬೆಳ್ಪಿನ ಮೆಯ್ಯೊಳ್ ಪರಿದಿರೆ ಮುಪ್ಪಾಪಾನಮುಮರುಣಚ್ಛವಿಯಾಗೆ ಕುಕ್ಕುಟಾಖ್ಯಂ ತುರಗಂ (ಅಶ್ವಶಾ. ೨–೭). ೩. ಒಂದು ಜಾತಿಯ ಸಸ್ಯ: ತಂಬಿಟ್ಟು, ಕುಕ್ಕುಟ, ಉಪ್ಪಾಲ (ಮೈಔಗಿ. ೫೨–೧೦೩೪). ೪. ಮೋಸ; ಕಪಟ: ನಾಡಾಡಿಯನಾಡುವರೊಳ್ ಕೂಡುವೊಡದು ದೋಷಮಲ್ಲಮದು ಕುಕ್ಕುಟಮಂ ಮಾಡುವರೊಳ್ ನಂಬುಗೆಯಿಂ ಕೂಡಿದೊಡೇನಾನುಮೊಂದು ದೋಷಂ ಸಾರ್ಗುಂ (ಧರ್ಮಾಮೃ. ೬–೯೫). [ಸಂ.]

**ಕುಕ್ಕುಟಜ್ಞಾನ** (ನಾ). ಕೋಳಿಯ ಜ್ಞಾನ, —ಬೆಳಕು ಹರಿಯುವುದನ್ನು ತಿಳಿಯುವ ಜ್ಞಾನ(?) : ಶ್ವಾನಜ್ಞಾನ ಗಜಜ್ಞಾನ ಕುಕ್ಕುಟಜ್ಞಾನವೆಂಬ ಜ್ಞಾನತ್ರಯಂಗಳೇನಾದವೊ ಕೂಡಲಸಂಗಮ ದೇವಾ ನಿಮ್ಮನಱಿಯದ ಜ್ಞಾನವೆಲ್ಲಾ ಅಜ್ಞಾನ (ಬಸವ. ೬೯೮). [ಕುಕ್ಕುಟ + ಜ್ಞಾನ]

**ಕುಕ್ಕುಟಪುಟ** (ನಾ). ಔಷಧಿ ದ್ರವ್ಯಗಳನ್ನು ಮಡಕೆಯಲ್ಲಿ ಹಾಕಿ ಮಣ್ಣಿನಿಂದ ಮುಚ್ಚಿ ಔಷಧಿ ಒಳಗೇ ಬೆಂದು ಹದವಾಗುವಂತೆ ಮಾಡುವುದು (?) : ಬಿಲ್ಲೆಮಾಡಿ, ಹೊಸ ಮುಚ್ಚಳದಲ್ಲಿರಿಸಿ ಮೇಲೊಂದು ಮುಚ್ಚಳವಂ ಮುಚ್ಚಿ, ಅದರ ಸಂದಿಗೆ ಸೀರೆಮಣ್ಣಂ ಕೊಟ್ಟು ಕುಕ್ಕುಟಪುಟ ಹಾಕುವುದು (ಸಕವೈ. ೬೩). [ಕುಕ್ಕುಟ + ಪುಟ$_2$]

**ಕುಕ್ಕುಟಸರ್ಪ** (ನಾ). ಸರ್ಪದಂತೆ ತಲೆ, ಕೋಳಿಯಂತೆ ಮೈ ಇರುವ ಒಂದು ಪ್ರಾಣಿ: ಕುಕ್ಕುಟಸರ್ಪಸಂಕುಳಮಸಂಖ್ಯಂ ಪುಟ್ಟಿ (ಎಕ. II, ೨೩೪-೮; 1180). [ಕುಕ್ಕುಟ$_1$ + ಸರ್ಪ]

**ಕುಕ್ಕುಟಾಂಡ** (ನಾ). ಕೋಳಿಯ ಮೊಟ್ಟೆ: (ಕ). [ಕುಕ್ಕುಟ + ಅಂಡ$_2$]

**ಕುಕ್ಕುಟಾಸನ** (ನಾ). ೧. ಕೋಳಿಯಂತೆ ಕುಳಿತುಕೊಳ್ಳುವಿಕೆ. ೨. [ಯೋಗ] ಆಸನಗಳಲ್ಲಿ ಒಂದು : ಕುಕ್ಕುಟಾಸನ ಮಲಧಾರಿ ದೇವರ ಶಿಷ್ಯರೆನಿಪ ಪೆಂಪಿಂಗೆ (ಎಕ. II, ೬೩-೩೧; 1118) ; ತಾಯಿಯ ಗರ್ಭದಲ್ಲಿ ಶಿಶುವು ಇಕ್ಕಿದ ಕುಕ್ಕುಟಾಸನವ ತೆಗೆಯದು ಶೀತ – ಉಷ್ಣ ವೆಂದೆನ್ನದು . . . ಉಗ್ರತಪಸ್ಸಿನಲ್ಲಿ ಪ್ಪುದು (ಘನವ. ೨೩-೧೯) ; ಕುಕ್ಕುಟಾಸನದಿಂದ ಮೂಲರೋಗಗಳುಂಟಾಗಿ, ವಾತಕರವಾಗಿ ಅಗ್ನಿ ಮಾಂದ್ಯ ಉಂಟಾಗುವುದು (ಸಕವೈ. ೫೯). [ಕುಕ್ಕುಟ + ಆಸನ]

**ಕುಕ್ಕುಟಾಹವ** (ನಾ). ಕೋಳಿಯ ಕಾಲುಗಳಿಗೆ ಚೂರಿಗಳನ್ನು ಕಟ್ಟಿ ಕಾದಾಡಿಸುವುದು ; ಕೋಳಿಕಾಳಗ : ಸಲ್ಲೀಲೆಯಿಂ ಕುಕ್ಕುಟಾಹವವ ನೋಡುತುಂ (ನಂಬಿರ. ೩-೫೩). [ಕುಕ್ಕುಟ + ಆಹವ]

**ಕುಕ್ಕುಟ** (ನಾ). ೧. ಮೋಸ; ವಂಚನೆ; ಮಾಯೆ : "ಈರ್ಷ್ಯಾ, ಕುಹನಾ, ದಂಭಃ, ಮಿಥ್ಯಾಚಾರ್ಯ, ಕರ್ಕುರ[ಕುಕ್ಕು]ಟಃ . . . ಶಠಕಲ್ಪನಾ – ಈ ೧೦ ಮಾಯೆ" (ಹಲಾಯು. ೧೨೨-೫೩). ೨. ಕೋಳಿ : (ಕ). ೩. ಕಳಿಂಗ ಎಂಬ ಹಕ್ಕಿ : "ಹೊಳೆಯೊಳಗಾಡುವ ಕುಕ್ಕುಟ ಯೆಂಬ ಹಕ್ಕಿ" (ಅಮರ. ಟೀಕೆ). [ಸಂ. ಕುಕ್ಕುಟ, ಕುಕ್ಕುಟೀ]

**ಕುಕ್ಕುಟೇಶ್ವರ** (ನಾ). ಗೊಮ್ಮಟೇಶ್ವರ : ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತಿ ಪೋಗಿ ಕಾಣ್ಬನ್ನೆಗಂ (ಸೌಇಇ. XI–i, ೫೨-೧೮; 1008). [ಕುಕ್ಕುಟ$_0$ + ಈಶ್ವರ]

**ಕುಕ್ಕುಡಿ** 'ಕುಕ್ಕಡಿ' ನೋ.

**ಕುಕ್ಕುಭ** (ನಾ). ಕಾಡುಕೋಳಿ : ಕೃಕರ ಕರೇಟು ಕುಕ್ಕುಟ ಕಪೋತ ಕಿಕೀದಿವಿ ಕುಕ್ಕುಭಾಳಿಯಿಂ . . . ವಿರಾಜಿಕುಮುನ್ನತಂ ವನಂ (ಹಮ್ಮಿರ. ೪-೭೨). [ಸಂ.]

**ಕುಕ್ಕುಮಾಯಿ** (ನಾ). ಒಂದು ಬಗೆಯ ಪಕ್ಷಿ : ಲೊಕ್ಕಿಗನು ಹುಡಿಕೀಲುಗನು ಹಾಲ್ವಕ್ಕಿ ಕೋಗಿಲೆ ತೋಟದೇವನ ಕುಕ್ಕುಮಾಯಿಯ ಕೆಂಡವಕ್ಕಿಗಳವಱೊಳೊಪ್ಪಿದುದು (ಸಾಳ್ವಭಾ. ೫-೨೨). [?]

**ಕುಕ್ಕುರ** (ನಾ). ೧. ನಾಯಿ ; ಶ್ವಾನ : "ಕುಕ್ಕುರನೆನಲ್ ಶುನಕನೊಳ್" (ಕಶಬ್ದ. ೨೬) ; [ಕುಕ್ಕುರ] [ಪಾಠಾಂ. ಶರಭಂ]ವರಾಹ ಭಯದಾಯಿ . . . ವೃಶ್ಚಿಕಾಂತಿಮದ್ರೇಕ್ಕಾಣಂ (ಜಾತತಿ. ೧೯-೨೪) ; ಕುಕ್ಕುರ ಕೊಬ್ಬೆ ಹುಲಿಯಹುದೆ (ಕೌಶಿರಾ. ೨೨-೪೧) ; ಬಾಯಿ ಬಿಗಿದ ಕುಕ್ಕುರನಂತೆ (ಹಬ್ಬಿರ. ೧೪-೩). ೨. ಒಂದು ಬಗೆಯ ಸುಗಂಧದಗಿಡ; ಮಾಚಿಪತ್ರೆ. ೩. ಒಂದು ದೇಶದ ಹೆಸರು : ಅಜಾನ, ಕಾಂಭೋಜ . . . ಕುಕ್ಕುರ . . . ಮಾಗಧ (ಅಶ್ವತ್ಥಾ. XII, ಮುನ್ನುಡಿ). [ಸಂ.]

**ಕುಕ್ಕುರಿ** (ನಾ). ಹೆಣ್ಣುನಾಯಿ : ಕರಹಟದೊಳ್ ಬೇಂಟೆಯ ಕುಕ್ಕುರಿಯಾದಳ್ ಸತ್ತು ಚಂದ್ರಮತಿಯುಂ (ಯಶೋಚ. ೩-೩೮). [ಸಂ. ಕುಕ್ಕುರೀ]

**ಕುಕ್ಕುರಿಸು** 'ಕುಕ್ಕುಱಿಸು' ನೋ.

**ಕುಕ್ಕುರು$_1$** (ನಾ). ಒಂದು ಬಗೆಯ ವಾದ್ಯ : ಢಕ್ಕೆ ನಾಟ್ಯಾನಕ ಚಂಪೆ ಕಿಂಕಿಣಿ ಡೌಡೆ ಕುಕ್ಕುರು ತುಡುಮು ರಿಂಜೆಯವಾ . . . ಕೇಳಿಸಿದರು (ಭರಚ. ೧೨-೪೦). [?]

**ಕುಕ್ಕುರು$_2$** (ನಾ). (?) : ಮಕ್ಕಳು ಮನೆಗಿಲ್ಲವೆಂಬ ಯನಗೆ ತಕ್ಕ ಹೆಂಡತಿ ಅಲ್ಲವೆಂಬ ರೊಕ್ಕವ ದಿನ ನೋಡಿಕೊಂಬಾ ಯಮ ಕುಕ್ಕುರಲಿರು ಶೀಳುಯಂಬಾ (ಚಿದಾವ. ೩೨-೪). [?]

**ಕುಕ್ಕುರುಕಾಲು** 'ಕುಕ್ಕರಗಾಲು' ನೋ.

**ಕುಕ್ಕುರುಗಾಲು** 'ಕುಕ್ಕರಗಾಲು' ನೋ.

**ಕುಕ್ಕುಲು, ಕುಕ್ಕುಲು$_2$** (ನಾ). ಕುಪ್ಪಳಿಸುವಿಕೆ ; ನೆಗೆಯುವಿಕೆ. 'ಕುಕ್ಕುಲೋಟ' ಪರಾ. **ಕುಕ್ಕುಲು$_2$** : ಕುಕ್ಕಲು ಓಟ ಬಿಟ್ಟುಕೊಂಡು ಹೋಗುವರು (ಕೆಲನಿ. ೨೬೯). [< ಕುಲುಕು$_3$]

**ಕುಕ್ಕುಲೋಟ** (ನಾ). ಕುಪ್ಪಳಿಸಿ ಓಡುವಿಕೆ: ಕಪ್ಪು ಕುದುರೆಗಳು ಕುಕ್ಕುಲೋಟದಿಂದ ಮುಂದೆ ಸಾಗಿದುವು (ಘನಸು. ೪೪೦). [ಕುಕ್ಕುಲು + ಓಟ]

**ಕುಕ್ಕುಳ** 'ಕುಕ್ಕುಟ' ನೋ.

**ಕುಕ್ಕುಳಂಗುದಿಸು** 'ಕುಕ್ಕುಱಂಗುದಿಯಿಸು' ನೋ.

**ಕುಕ್ಕುಳಗುದಿ** 'ಕುಕ್ಕುಱಂಗುದಿ' ನೋ.

**ಕುಕ್ಕುಳಗುದಿಹ** (ನಾ). ೧. ತೀವ್ರವಾಗಿ ಕುದಿಯುವಿಕೆ. ೨. (ಅಲಂ) ಸಂಕಟ; ತಳಮಳ : (ಚತುಸಿ. ಕ. I, ೨೪). [ಕುಕ್ಕುಳಗುದಿ (< ಕುಕ್ಕುಱಂಗುದಿ) + -ಹ$_2$]

**ಕುಕ್ಕುಳಿಸು** (ಕ್ರಿ). ಕುಗ್ಗು ; ಕುಸಿದುಬೀಳು (?) : ಸುಳಿವ ಹುಲ್ಲೆಯ ಸೋಹಿನಲಿ ಕುಕ್ಕುಳಿಸಿದರೆ ಕುಕ್ಕುರನ ಕೈಯಲಿ ತಳುವಹುದೆ (ಕುವ್ಯಾಸ. ೧೫-೨೨) ; ಕಂಡೆನಿವರವರೆರಡು ಥಟ್ಟಿನಲಿ ತುದಿವೆರಳ ಕಂಬನಿಯ ಬಳಸಿದ ಬೆದಱುಗಳ ಕುಕ್ಕುಳಿಸಿದುತ್ಸಾಹದ ವಿಘಾತಿಯ ನಟ್ಟ ಚಿಂತೆಯನು (ಕುವ್ಯಾಕ. ೨೬-೩೯). [ಕುಕ್ಕುಱಿಸು ?]

**ಕುಕ್ಕುಳ್ಕುದಿ** 'ಕುಕ್ಕುಱಂಗುದಿ' ನೋ.

**ಕುಕ್ಕುಱ** (ನಾ). ಒಂದು ಬಿರುದು (?) : ನಿರವದ್ಯವೆನಿಸಿದ ವಿಜಯಾದಿತ್ಯಂ ಕುಕ್ಕುಱ ವಿಕ್ರಮಾದಿತ್ಯ ಮದಜ್ಞತ್ಯೆಯರ ಭೀಮ ಪರಾಕ್ರಮ ನೆರಡನೆಯ ಕೀರ್ತಿವರ್ಮ (ಸೌಇಇ. XX, ೧೯-೧೪; 1015). [?]

**ಕುಕ್ಕುಱಿಸು, ಕುಕ್ಕರಿಸು** (ಕ್ರಿ). ೧. ಕುಸಿದು ಬೀಳು; ಒಮ್ಮೆಲೆ ಕೆಳಗೆ ಕುಳಿತುಕೊಳ್ಳು : ಆ ಬ್ರಾಹ್ಮಣಂ ಬಂದು ಮುಂದೆ ಕುಕ್ಕುಱಿಸಿ ಕುಳ್ಳಿರ್ದು (ಲೀಲಾವ. ೬-೬೯) ; ಬೇಗೆಗ ಡೆದೆತ್ತಂ ಬೆಟ್ಟುಗಳ್ ಕುಕ್ಕುಱಿಸೆ (ಕುಸುಮಾ. ೬-೩೫) ; ತಲೆವಾಗದ ಚಾಗಿಗಳಿಲ್ಲ ತಳ್ತು ಕುಕ್ಕುಱಿಸದ ವೀರರಿಲ್ಲ (ಗಿಂಕ. ೩-೧೦೪) ; ಬೇನೆಯಿಂ ಘೂಳಿಡುತುಂ ಶೈಲಾಗ್ರದೊಳ್ ಕುಕ್ಕುಱಿಸಿ ಮಱುಕದಿಂದಿರ್ದಿಂಬ ಸಿಂಹಿ (ಅನಂಪು. ೧೨-೬೨) ; ಬಾಲಮುಂ ಪಿಡಿದು ಸೆಳೆಯೆ ತಕ್ಕುಗೆಟ್ಟು ಕುಕ್ಕಱಿಸಿದಾನೆಯಂ (ಪುಣ್ಯಾಸ್ರ. ೮-೩೫ವ) ; ತಱಿಮಿಂಡಿಯರು ನಡೆತಂದರು ತವಕ ಕುಕ್ಕುಱಿಸುತ ನೃಪನ ಸನ್ನಿಧಿಗೆ (ಭರಚ. ೧೨-೧೭೯). ೨. ಬಲಾತ್ಕಾರವಾಗಿ ಕೂರಿಸು ; ಕುಸಿದು ಬೀಳುವಂತೆ ಮಾಡು : ಶುನಕಂಗಳಂ ಮೈದಡವಿ ಕುಕ್ಕುಱಿಸಿ[ಪಾಠಾಂ. ಳಿಸಿ] (ಲಶಿಚಂ. ೨೩-೧೫) ; ತೋಳ್ಗಳಂ ಪಿಡಿದು ಕುಕ್ಕುಱಿಸಲೊಡನೆ ಡೊಳ್ಳು ಹೊಟ್ಟೆ ಇಬ್ಬಗಿಯಾಗಿ (ವೀಕೈಪು. ೩-೪-೨೬). ೩. (ಅಲಂ) ನಾಶಮಾಡು ; ಒಡೆದು ಹಾಕು : ಇಱಿದು ಮೇಣ್ ರಿಪುರಾಯರನು ಕುಕ್ಕುಱಿಸುವರೆ ರಾಧೇಯನಂತಿರಲುಱುವನೊಬ್ಬನೆ ಬೇಹುದಲ್ಲದಡಿಲ್ಲ ಜಯವೆಂದ (ಕುವ್ಯಾಕ. ೧೬-೩೩).

**ಕುಕ್ಕರಿಸು :** ೧. ಕುಣಿವ ಕುದುರೆಗಳುರಕೆ ಕಬ್ಬಿಯ ಕುಸಿದು ಕುಕ್ಕರಿಸಿದವು ಭೀತಿಯಲಿ (ತೊರರಾ. ೧-೧೭-೪) ; ಮುಗ್ಗರಿಸಿ ಬೀಳುವ ಆನೆಗಳೂ, ಕುಕ್ಕರಿಸಿ ಬೀಳುವ ಕುದುರೆಗಳೂ (ಕೃವಾಕ. ೧೭೬) ; ಅವನು ಜ್ಞಾನಶೂನ್ಯವಾಗಿ ಭೂಮಿಯ ಮೇಲೆ ಕುಕ್ಕರಿಸಿಬಿಟ್ಟನು (ಶ್ರೀರಾಯ. ೧೯೫). ೨. ಹೊಕ್ಕು ಹೊಡಕರಿಸುತ್ತ ಕರಿಗಳ ಕುಕ್ಕರಿಸಿ ಕೋಡುಗಳ ಕೀಳುತ (ಶರಲೀ. ಜರ್ಜ-೨೪) ; ಮಕ್ಕಳ ಹಿಂಸೆಯನ್ನು ತಡೆಯಲಾರದೆ ಮನೆಯವರು ಮ ಠ ದ ಲ್ಲಾ ದ ರೂ ಕುಕ್ಕರಿಸಿ ಬಂದರೆ ಇವರ ಕಾಟ ತಪ್ಪುತ್ತದೆ ಎಂದು ಸ್ಕೂಲಲ್ಲಿ ಕೂರಿಸಿ ಬರುತ್ತಿದ್ದರು (ಹುಟ್ಟಿಹ. ೯). ೪. ಕುಳ್ಳಿರು ; ಕೂ ತು ಕೊ : ಸುಮ್ಮನೆ ಕುಕ್ಕರಿಸು, ಕಂಡಿದ್ದೇನೆ (ರೂಢಿ). ೫. (ಕೊಡ ಮೊದಲಾದುವನ್ನು) ಅಕ್ಕಸದಿಂದ ಕೆಳಗೆ ಕುಕ್ಕಿ ಇಡು ; ಕುಕ್ಕು : " ಇಕ್ಕರಿಸು " (ಜಾನಕೋ. ೩೮).

[? + -ಇಸು$_3$]

**ಕುಕ್ಕುಟಿ,** ಕುಕ್ಕುಳ (ನಾ). ಕುದಿಯುವುದನ್ನು ಸೂಚಿಸುವ ಅನುಕರಣಶಬ್ದ. 'ಕುಕ್ಕುಟಿಂಗುದಿ' ಪರಾ. **ಕುಕ್ಕುಳೆ.** 'ಕುಕ್ಕುಳಂಗುದಿ' ಪರಾ. [?]

**ಕುಕ್ಕುಟಿಂಗುದಿ,** ಕುಕ್ಕುಳಂಗುದಿ, ಕುಕ್ಕುಳಗುದಿ, ಕುಕ್ಕುಳ್ಕುದಿ, ಕುಕ್ಕುಟಿಗುದಿ, ಕೊಕ್ಕುಟಿಗುದಿ, ಕೊಕ್ಕುಳಂಗುದಿ (ಕ್ರಿ). ೧. ತಕತಕ ಕುದಿ ; ತೀವ್ರವಾಗಿ ಕುದಿ. ೨. (ಆಲಂ) ತಳಮಳಿಸು ; ಸಂಕಟಪಡು : ಕುರು ಮಾಗಧರ ಬಲಂ ಕೂಡೆ ಕುಕ್ಕುಟಿಂಗುದಿವಿನೆಗಂ (ಮಹಾನೇ. ೧೨-೧೫೫). **ಕುಕ್ಕುಳಂಗುದಿ :** ೨. ಭವದ ಬೇಗೆ ಬೆಂಬತ್ತಿ ಕರಣಂ ಕಾಹೇರಿ ಹರಣಂ ಕುಕ್ಕುಳಂಗುದಿದು (ಬಸರ. ೨-೫೭). **ಕುಕ್ಕುಳಗುದಿ :** ೧. ಪೊಯ್ಮಲದುಬುತದೆ ಸುಣ್ಣವದು ಕುಕ್ಕುಳಗುದಿಯುತಿರಲು (ಸಿದ್ಧೇಪು. ೭-೩೯). ೨. ಮುಚ್ಚಿದಲ್ಲಿ ಅಜಿದು ತೆಜೆದಲ್ಲಿ ಮಜೆದು ಇಂತೀ ಉಭಯದಲ್ಲಿ ಕುಕ್ಕುಳಗುದಿವರಿಗುಂಟೇ (ಮೋಳಿಮಾ. ೧೦೯-೪೩೩) ; ತಥ್ಯಮಿಥ್ಯದಲ್ಲಿ ಕುಕ್ಕುಳಗುದಿವುತ್ತ (ಸರ್ವವ. ೧೨೦-೬೨೦). **ಕುಕ್ಕುಳ್ಕುದಿ :** ೧. ಕುಲನಗಂಗಳ್ಕುಸಿಯೆ...ಜಲಧಿ ಕುಕ್ಕುಳ್ಕುದಿಯೆ (ವೀರರ. ೬೦-೩೩೬). **ಕುಕ್ಕುಟಿಗುದಿ :** ೧. ಲವಣಾಂಬುರಾಶಿ ಕುಕ್ಕುಟಿಗುದಿವಲ್ಲಿ ಕೂಟ್ಟುದಿಯೆ ಮೇಗೆ ಸಿಡಿಲ್ದುಗುಳಂತೆ (ಪಂಪಭಾ. ೧೧-೧೫೩) ; ಕುಕ್ಕುಟಿಗುದಿವ ವಜ್ರದ ಮೂಸೆಯೊಳಿಕ್ಕಿ ಕರಗಿಸುವುದುಂ (ಕು ಸು ಮಾ. ೧೧-೪೭ ವ). ೨. ಎನಿತಂ ಕುಕ್ಕುಟಿಗುದಿದಪೆ (ಅಜಪು. ೨-೭೧) ; ಕಂತು ಸಂತಾಪಕ್ಕೆ ಪಕ್ಕಾಗಿ ಕುಕ್ಕುಟಿಗುದಿದುರ್ಕದೊಳಗೊಳಗೆ ಬೇವ ಹೃ ದ ಯ ಮು ಂ ಪದವಡಿಸಲಾಜದೆ (ಅ ನ ಂ ಪು . ೧೧-೨೯ ವ). **ಕೊಕ್ಕುಟಿಗುದಿ :** ೨. ಸುದಂತಿಯ ನೇಗೆಯ್ದುಂ ಬಿಡಲಾಜದೆ ನೀಂ ಬೆಳಬೆಂಜನನಾಗಿ ಭೋಗಿಸುವೆನೆಂದು ಕೊಕ್ಕುಟಿಗುದಿವ್ವೆ (ಧ ರ್ಮಾ ಮೃ . ೭-೨೨೯). **ಕೊಕ್ಕುಳಂಗುದಿ:** ಅಲ್ಲಿಯುಂ ಪಡೆಯಲಜಿಯದೆ ಕೊಕ್ಕುಳಂಗುದಿದು ಬಲ್ಲಂತೆ ತಿರುಗಿ ನೋಡುವೆನೆಂದು ಬಸವಳಿದು (ಪಿಂಡೋರ. ೨-೭).

[ಕುಕ್ಕುಟ + ಕುದಿ$_1$]

**ಕುಕ್ಕುಟಿಂಗುದಿಯಿಸು,** ಕುಕ್ಕುಳಂಗುದಿಸು (ಕ್ರಿ). ೧. ತೀವ್ರವಾಗಿ ಕುದಿಯುವಂತೆ ಮಾಡು. ೨. (ಆಲಂ) ತಳಮಳವನ್ನುಂಟು ಮಾಡು ; ಸಂಕಟಪಡಿಸು : ಸಂ ಸೃ ತಿ ಯ ದುಃಖದೊಳಾತ್ಮನನಕ್ಕಿ ಕುಕ್ಕುಟಿಂಗುದಿಯಿಕುಮೆಂದು ಭಾವಿಸಿದಂ (ಮ ಹಾ ನೇ . ೧೪-೧೩೦). **ಕುಕ್ಕುಳಂಗುದಿಸು :** ೨. ಇಂತು ಜಗತ್ರಯಮುಂ ನಿಜಪ್ರತಾಪದಿಂ ಕುಕ್ಕುಳಂಗುದಿಸುವ ವಿಕ್ರಮಶೀಲನಪ್ಪ ತಾರಕಾಸುರನುರವಣೆಯಂ ಸೈರಿಸಲಾಜದೆ ನಾಗರ್ಕಳುಂ ನರರುಂ ನಿರ್ಜರರುಂ ಕಿನ್ನರಸ್ತೋಮಮುಂ ಕಿಂಪುರುಷ ವ್ರಜಮುಂ ನೆರೆದು (೧ರಿಕ. ೭-೫ ವ).

[ಕುಕ್ಕುಟ + ಕುದಿಸು]

**ಕುಕ್ಕುಟಿಗುದಿ** 'ಕುಕ್ಕುಟಿಂಗುದಿ' ನೋ.

**ಕುಕ್ಕೂಕೂ** (ನಾ). ಕೋಳಿಯ ಕೂಗಿನ ಅನುಕರಣಶಬ್ದ : ಕುಕ್ಕೂಕೂ ಎಂದು ಕೋಟಿ ಕೂಗಿದುವಾಗಳ್ (ಕಾ ವ್ಯಾ ವ. ೧೧) ; ಕುಕ್ಕೂಕೂ ಎಂಬ ನಾದಂ ನೆಗಟಿ . . . ಕೂಗಿತಾ ತಾ ಮ್ರ ಚೂ ಡ ಂ (ಸೂಕ್ತಿಸು. ೯-೩೦). [?]

**ಕುಕ್ಕೊಬಾಳ** (ನಾ). ಎಳೆಯ ಮಗು ; ಹಸುಗೂಸು : "ಅರೀದ ಹುಡುಗಿ ಅಂದರೇನು ಕುಕ್ಕೂಬಾಳ ಏನು " ಎಂದು ನುಡಿದು ಗಟ್ಟಿಯಾಗಿ ನಕ್ಕಳು (ಪಾತರ. ೮೭) ; ನನಗೆಲ್ಲ ಗೊತ್ತಿದೆಯಮ್ಮಾ, ನಾನು, ನೀವು ತಿಳಕೊಂಡಂತೆ ಇನ್ನೂ ಕುಕ್ಕೂಬಾಳನಲ್ಲ (ಮೂರುದಾ. ೬೧).

[<- ಮರಾ. ಕುಕುಬಾಳ]

**ಕುಕ್ಕೆ$_1$** (ನಾ). ಬಿದಿರಿನಿಂದ ಹೆಣ್ಣೆದ ಬುಟ್ಟಿ ; ಮಂಕರಿ ; ಹೆಡಿಗೆ : ಹೂವ ಕೊಯಿದ ಕುಕ್ಕೆ ಹಜಿದು (ಅಂಬಿವ. ೧೯) ; ಫಲವಸ್ತು ನಿಚಯದಿಂ ಮೆಟ್ಟಕ್ಕಿ ಕುಕ್ಕೆ ಸೋಪಸ್ಕರದಾ (ಪರಶು. ೮-೧೩) ; ಅವರೇಕಾಯನ್ನು ಕೊಯ್ಯುತ್ತ ಕುಕ್ಕೆಗೆ ತುಂಬುತ್ತಿದ್ದಳು (ಮು ನಿ ಮಾ . ೧೪) ; ನನಗೂ ನಿನಗೂ ವಿಶ್ವಾಸ, ಮಾನ ಕುಕ್ಕೇಲಿ ಕೈಹಾಕಬೇಡ (ಗಾದೆ).

[ದೇ. ॥ ಕೊಡ. ಕಿಕ್ ; ತುಳು. ಕುಕ್ಕೆ]

**ಕುಕ್ಕೆ$_2$,** ಕುಕ್ಕಿ (ನಾ). ಹೊಟ್ಟೆ ; ಉದರ ; ಕುಕ್ಷಿ : "ಕುಕ್ಕೆ ಕುಕ್ಷಿಯೆ " (ಕರ್ಣಾನಿ. ೬೨) ; "ಇತ್ವಕ್ಕೆತ್ವಂ - ಅತಸಿ - ಅಗಸೆ, ಅಷ್ಟಮಿ - ಅಟ್ಟಮೆ ; ಕುಕ್ಷಿ - ಕುಕ್ಕೆ ; " (ಶಮದ. ೨೭೯ ಪ್ರಯೋ). **ಕುಕ್ಕಿ :** "ಕುಕ್ಕಿಯೆಂದು ಕುಕ್ಷಿ " (ಕಶಸಾ. ೨೪-೯೫) ; ಲೆಕ್ಕಕೆ ನಿಲುಕದ ಲಕ್ಕುಮಿಯರಸನು ಕುಕ್ಕಿಯೊಳಾಳುವ ಭುವನಗಳ (ಪ್ರಸಭಾ. ೧೮-೯). [< ಸಂ. ಕುಕ್ಷಿ]

**ಕುಕ್ಕೆಕೊರಮ** (ನಾ). ಕೊರಮರಲ್ಲಿ ಒಂದು ಬಗೆ ; ಬುಟ್ಟಿ ಹೆಣೆಯುವ ಕೊರಮ : (೬). [ಕುಕ್ಕೆ$_1$ + ಕೊರಮ (< ಕೊಜಮ)]

**ಕುಕ್ಕೊಂಬು** (ನಾ). ಕೂವೆಯ ಕಂಬ : ಹಿರಿದಹ ಅಂಬುಧಿಯಲ್ಲಿ ಹಡಗು ಬರುತಿರಲಾಗಿ ಹಡಗಿನ ಕುಕ್ಕೊಂಬಿನ ಮೇಲೆ ಒಂದು ಕರಡಿ ಬಂದಿತ್ತು (ಸುಂಕಬಂ. ೧೭). [< ಕೂವೆಕಂಬ]

**ಕುಕ್ಕೋಟ** (ನಾ). ಕುಪ್ಪಳಿಸುತ್ತ ಓಡುವಿಕೆ ; ಕುಲುಕುತ್ತ ಓಡುವಿಕೆ : ಒಮ್ಮೊಮ್ಮೆ ಹಿಂಗಾಲೊಂದನ್ನು ತುಸು ಎತ್ತಿ ಕುಕ್ಕೋಟ ಓಡುತ್ತಾ (ಮ ಲೆ ಮ . ೧೭೩) ; ತಟ್ಟೂ ಕುದುರೆಯು ಕುಕ್ಕೋಟದ ನಡಿಗೆಯನ್ನು ಬಿಟ್ಟನು (ಧರ್ಮಸಿ. ೩೨).

[ಕುಕ್ಕು$_3$ (< ಕುಲುಕು$_1$) + ಓಟ]

**ಕುಕ್ರಿ** (ನಾ). ೧. ಕತ್ತಿ ; ಖಡ್ಗ : ಸಾಧನೆಯಾದನಂತರ ನರ್ತಕರು ನಿಜವಾದ ಕುಕ್ರಿ (ಕತ್ತಿ) ಉಪಯೋಗಿಸುತ್ತಾರೆ (ಅಭಾನೃ. ೧೩೦). ೨. ಒಂದು ಬಗೆಯ ನೃತ್ಯ : ಅಸ್ಸಾಮಿನ "ಕುಕ್ರಿ" ನೃತ್ಯಗಳಿಗೆ ತುಂಬಾ ಸಾಧನೆಯೂ ಕುಶಲತೆಯೂ ಬೇಕಾಗುತ್ತದೆ (ಅಭಾನೃ. ೧೩೦).

[<- ಮರಾ. ಕುಕುರಿ ; ಹಿಂ. ಕುಕಡೀ]

**ಕುಕ್ಷಣ** (ನಾ). ಕೆಟ್ಟ ಸಮಯ ; ಅಶುಭವಾದ ಕ್ಷಣ : ಯಾವ ಕುಕ್ಷಣದಲ್ಲಿ ಈ ಲೇಖನಗಳನ್ನೆಲ್ಲ ಆಕೆ ಬರೆಯಲು ಪ್ರಾರಂಭಿಸಿದ್ದಳೋ (ಇಪ್ಪಕ. ೨೫೭). [ಸಂ.]

**ಕುಕ್ಷಿ** (ನಾ). ಒಡಲು ; ಹೊಟ್ಟೆ ; ಜಠರ : " ಜಠರಃ, ಉದರಃ, ತುಂ(ದ)ಡಃ, ಕುಕ್ಷಿಃ, ಗರ್ಭಃ - ಈ ೫ ಹೊಟ್ಟೆ " (ಹಲಾಯು. ೮೫-೩೭೧) ; ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ ಅಕ್ಷಯನಗಣಿತನು (ಬಸವ. ೫೩೭) ; ಕುಕ್ಷಿ ಇಲ್ಲದಿರೆ ಬಾಯಿ ಉಣ್ಣಬಲ್ಲುದೇ (ಮೋ ಳಿ ಮಾ. ೯೮-೩೯೦). ೨. ಒಳಭಾಗ ; ಗುಹೆ : ಹಿಮಗಿರಿಯ ಕುಕ್ಷಿಯಲಿ ಪುದಿದ ನಾನಾ ದ್ರೋಣಿಗಳ ಮಧ್ಯದ ಕಿರಾತಪುಳಿಂದ ನಿಚಯವ ಸದೆದು (ಕುವ್ಯಾಸ. ೩-೨೯). ೩. ಪೊಳ್ಳಾದ ಭಾಗ ; ಟೊಳ್ಳು. [ಸಂ.]

**ಕುಕ್ಷಿಂಭರಿ** (ನಾ). ತನ್ನ ಹೊಟ್ಟೆಯನ್ನು ಹೊರೆದುಕೊಳ್ಳುವುದರಲ್ಲಿಯೆ ಆಸಕ್ತನಾದವನು; ಉದರಂಭರಿ; ಹೊಟ್ಟೆಹೊರೆಕ; ಲೋಭಿ; ಸ್ವಾರ್ಥಿ: ಕುಕ್ಷಿಂಭರಿಗಳಿಂದೊಗೆದ ನುತಿಯ ವಿಷಮಂ ಪೀರ್ದು ಹುಚ್ಚಿನ ಗತಿಯೊಳಗೆ ತಿರುಗುವ ಮದವನೀ ಕ್ಷಿತಿಯೊಳಗೆ ನಿಲಿಸುವುದು (ವಿವೇಭ. ೬-೭೨೮). [ಸಂ.]

**ಕುಕ್ಷಿಕ** (ನಾ). ಒಂದು ಬಗೆಯ ಪಕ್ಷಿ: "ಕುಕ್ಷಿಕಂ ಚಿನುಕುರುಳಿ [ಪಾಠಾಂ. ಕುಕ್ಷಿ ಚಿನುಕಲ್ಲಿ]" (ಮಂಗರಾ. ೫೨-೯). [?]

**ಕುಕ್ಷಿನಿವಾಸ** (ನಾ). ಗುಹೆಯಲ್ಲಿಯ ವಾಸಸ್ಥಳ: ಇಪ್ಪತ್ತೆಣ್ಛಾಸಿರ ದುರ್ಗಭೂಮಿಗಳಿಂದಂ ನೂಱು ಕುಕ್ಷಿನಿವಾಸಂಗಳಿಂದಂ (ಶಾಂತಿಪು. ೧೧-೮೪ ವ); ಎಪ್ಪತ್ತೆಂಟು ಸಾಸಿರಂ ಏೞ್ನೂಱು ಕುಕ್ಷಿನಿವಾಸಂಗಳ್ ನೆಪ್ಪತ್ತೆಣ್ಛಾಸಿರ ದುರ್ಗಾದಿಗಳಿಂ (ಅಜಿಪು. ೧೦-೧ ವ).
[ಕುಕ್ಷಿ + ನಿವಾಸ]

**ಕುಕ್ಷಿನಿವಾಸಿ** (ನಾ). ಗುಹಾಸ್ಥಾನಗಳಲ್ಲಿ ವಾಸಿಸುವವನು: ಪ್ರತ್ಯಂತ ನಿವಾಸಿಗಳಪ್ಪೇೞ್ನೂಱು ಕುಕ್ಷಿನಿವಾಸಿಗಳುಮೆಪ್ಪತ್ತಿರ್ಚ್ಛಾಸಿರ ದುರ್ಗ್ಗಾಟವಿಗಳುಂ (ಆದಿಪು. ೧೫-೩ವ). [ಕುಕ್ಷಿ + ನಿವಾಸಿ]

**ಕುಕ್ಷಿರೋಗ** (ನಾ). ಹೊಟ್ಟೆ ರೋಗ; ಉದರಶೂಲೆ (?): ವಿಷೂಚಿಯ ನಾಡಿಯೂ ಕುಕ್ಷಿರೋಗದ ನಾಡಿಯೂ ವಿಚಿತ್ರವಾಗಿ ಹೊತ್ತಿಗೊಂದು ಬಗೆಯಾಗಿ ನಡೆವುದು (ಸಕವೈ. ೧೨).
[ಕುಕ್ಷಿ + ರೋಗ]

**ಕುಕ್ಷಿವಿಕಾರ** (ನಾ). ಹೊಟ್ಟೆ ನೋವು, —ಕೆಡುವುದು: ಆ ಆಯುಷ್ಮಂತನಿಗೆ ಕುಕ್ಷಿವಿಕಾರದ ಕಾಯಿಲೆ (ಬುದ್ಧಪ. ೧೪೮).
[ಕುಕ್ಷಿ + ವಿಕಾರ]

**ಕುಗುರು** (ಕ್ರಿ). ತೂಕಡಿಸು; ನಿದ್ದೆಮಾಡು: ಒಮ್ಮೊಮ್ಮೆ ಆ ಯಾಂತ್ರಿಕ ಕರ್ಮವೂ ನಿಂತು ಅವಳು ಕುಗುರುವಂತೆಯೂ ತೋರುತ್ತಿತ್ತು (ಮಲೆಮ. ೬೭೫); ಕಿರಿಗೊಂಡ ಗಾತ್ರದಿಂ ಮುದುರಿದೊದ್ದೆಯ ಮುದ್ದೆಯಾಗಿ ಕುಗುರಿತು ಹಕ್ಕಿ ಹೆಗ್ಗೊಂಬನೇರಿ (ಶ್ರೀರಾಮಾ. ೩೪೨-೫೬); ಗದ್ಗದಿಸಿತು ಸ್ವರವು ಕುಗುರಿತು ಚಕ್ಷುವು (ಚಂದ್ರವೀ. ೧೭೨-೮೫); ಕೆಳಗೆ ಕೆರೆಯ ಅಂಚಿನಲ್ಲಿ ಬಕ ಕುಗುರುತ್ತಿದೆ (ಸಂಸ್ಕಾರ. ೧೪೨).

ಕುಗುರುಹತ್ತು = ಜೊಂಪು ಹತ್ತು; ತೂಕಡಿಕೆ ಬರು: ತಿಮ್ಮಿಗೆ ಕಣ್ಣು ಕುಗುರಹತ್ತಿತ್ತು (ಮಲೆಮ. ೨೫೩). [?]

**ಕುಗುರುಗಣ್ಣು** (ನಾ). ತೂಕಡಿಸುವ ಕಣ್ಣು; ನಿದ್ದೆಗಣ್ಣು: ಸಾಕಿಷ್ಟು ಸುಲಿದುದು ಬಿಡು ಮೆಟ್ಟುಗತ್ತಿಯ ಸಣ್ಣನೆ ಕುಗುರುಗಣ್ಣವಳೆ (ಚಂದ್ರವೀ. ೧೨೬-೪). [ಕುಗುರು + ಕಣ್ಣು (< ಕಣ್)]

**ಕುಗ್ಗಟೆ** 'ಕೂಗಟೆ$_1$' ನೋ.

**ಕುಗ್ಗಿ** 'ಕೊಗ್ಗಿ$_2$' ನೋ.

**ಕುಗ್ಗಿಸು** 'ಕುಟ್ಗಿಸು' ನೋ.

**ಕುಗ್ಗು$_1$** 'ಕುಟ್ಗು' ನೋ.

**ಕುಗ್ಗು$_2$** (ನಾ). ಕುಸಿತ; ಕೊರತೆ; ಅವನತಿ: ಬಾಳಿನ ಕುಗ್ಗನು ಹೆಚ್ಚಿಸುತಿಹುದೀ ನಲ್ಮೆಯ ಸಂದೇಶ (ಭಾವಗೀ. ೩೫).
[< ಕುಟ್ಗು]

**ಕುಗ್ಗು$_3$** 'ಕೊಗ್ಗಿ$_2$' ನೋ.

**ಕುಗ್ಗುಬಡಿ** (ಕ್ರಿ). ಕುಸಿದು ಹೋಗುವಂತೆ ಬಡಿ; ಸದೆಬಡಿ: ನಿಮ್ಮೆಲ್ಲರ ಸಹಾಯದಿಂದ ನಮ್ಮ ಶತ್ರುವಾದ ಚಂಪತರಾಯನನ್ನು ಸಹಜವಾಗಿ ಕುಗ್ಗು ಬಡಿಯಬಹುದು (ಧಾರ್ಮಿತೀ. ೯೧).
[ಕುಗ್ಗು$_1$ (< ಕುಟ್ಗು) + ಬಡಿ$_1$]

**ಕುಗ್ಗೆ** 'ಕೊಗ್ಗಿ$_2$' ನೋ.

**ಕುಗ್ರಹ** (ನಾ). ಕೆಟ್ಟಗ್ರಹ; ದುಷ್ಟ ಗ್ರಹ: ಕುಗ್ರಹಾದಿ ಭಯಗ್ರಹಾರಿ ಶುಭಗ್ರಹಣ ಬುಧವಾಗ್ರುಚಿರ ಸಮುಗ್ರಚನ ನಿರತೋಗ್ರಭಕ್ತಿ ಸಮುಗ್ರ ಬಸವೇಶ (ಬಸವು. ೫೪-೮೭). [ಸಂ.]

**ಕುಗ್ರಾಮ** (ನಾ). ೧. ಬೇಕಾದ ವಸ್ತುಗಳು ದೊರಕದಿರುವ ಹಳ್ಳಿ; ತೀರ ಚಿಕ್ಕಹಳ್ಳಿ; ಕಾಲೂರು: ಆತನು ತನ್ನ ಪ್ರಾಣವುಳಿಸಿಕೊಳ್ಳುವುದಕ್ಕಾಗಿ ಅವ್ವದೋ ಒಂದು ಕುಗ್ರಾಮದಲ್ಲಿ . . . ಬಡವನಂತೆ ವಾಸ ಮಾಡಿಕೊಂಡಿರಬೇಕು (ಪಿಶಾಪ. ೧೩). ೨. (ಅನ್ನಕ್ಕೆ) ಗತಿಯಿಲ್ಲದಿರುವಿಕೆ; ದುರ್ಭಿಕ್ಷ: ಗುರುತ್ವಗೆಡುವರ್ ಗ್ರಾಸಕ್ಕೆ ಕುಗ್ರಾಮವಾಗೆ (ಸೋಮೇಶ. ೪೮). [ಸಂ.]

**ಕುಗ್ರಾಮವಾಸಿ** (ನಾ). ತೀರ ಚಿಕ್ಕಹಳ್ಳಿಯಲ್ಲಿ ವಾಸಮಾಡುವವನು; ಗ್ರಾಮೀಣ; ಹಳ್ಳಿಯ ಗಮಾರ: ಮೂರ್ಖ ಕುಗ್ರಾಮವಾಸಿ! ಹಿಂದುಸ್ತಾನದಲ್ಲಿಯೇ ಕೊಳೆತು ಕೆಟ್ಟ (ಗಾಳಿಪ. ೧೮).
[< ಸಂ. ಕುಗ್ರಾಮವಾಸಿನ್]

**ಕುಗ್ರಾಸ** (ನಾ). ಕೆಟ್ಟ ಆಹಾರ; ಕೀಳು ಅನ್ನ; ಕದನ್ನ. 'ಕುಗ್ರಾಸವಡಿಸು' ಪರಾ. [ಸಂ.]

**ಕುಗ್ರಾಸವಡಿಸು** (ಕ್ರಿ). ೧. ಆಹಾರದಲ್ಲಿ ಕೊರತೆಯನ್ನುಂಟುಮಾಡು. ೨. ನಿಕೃಷ್ಟವಾದ ಅನ್ನವನ್ನು ಬಡಿಸು: ಅಗ್ರಹಾರದ ದೇವಸ್ಥಾನ ಮಾನ್ಯಂಗಳ ಕುಗ್ರಾಸವಡಿಸಬೇಡೆಂದ (ಮೋಹತ. ೧೩-೧೧).
[ಕುಗ್ರಾಸ + ಪಡಿಸು]

**ಕುಘುಲ್‌ಗಡ** (ನಾ). ಭದ್ರವಾದ ಕೋಟೆ (?): ಚಿತ್ರದುರ್ಗದ ರಾಜ ಬಲವಂತ, ಖಿಲ್ಲೆಯು ಬಹಳ ಕುಘುಲ್‌ಗಡವಾಗಿದೆ (ಚಿತ್ರಪಾ. ೭೭). [?]

**ಕುಚ** (ನಾ). ೧. ಮೊಲೆ; ಸ್ತನ: "ಉರಸಿಜಃ, ಕುಚಃ, ವಕ್ಷೋರುಹಃ, ಪಯೋಧರಃ, ಸ್ತನಃ – ಈ ೫ ಮೊಲೆ" (ಹಲಾಯು. ೮೭-೩೭೨); ದ್ರೌಪದೀ ಕುಚಕುಂಭಾರ್ಪಿತ ಕುಂಕುಮದ್ರವ ವಿಲಿಪ್ತೋರಸ್ಥಳಂ (ಪಂಪಭಾ. ೩-೮೫); ಕಚಕುಚಭರಮುಸಿಯ ನಡುಗೆ (ಅಜಿಪು. ೨-೪೩); ಸುರಭಿಯ ತೊರೆದ ಕುಚಂಗಳ ಬೆರಗಂ ಬೆರಲಿಳಿಸೆ (ಪುಷ್ಪಪು. ೩-೧೦೯). ೨. ಯೌವನ; ಹರೆಯ: "ನೆಱೆ ಜವ್ವನ ಕುಚಮಕ್ಕುಂ" (ಕವಿಕಂ. ೧೪೦); "ಜವ್ವನಮೆನಲ್ಕೆ ಕುಚಮಕ್ಕು" (ಕಬ್ಬಿಕೈ. ೩೧). [ಸಂ.]

**ಕುಚಂದನ** (ನಾ). ೧. ಕೆಂಪುಚಂದನ. ೨. ಕುಂಕುಮ ಕೇಸರಿ. [ಸಂ.]

**ಕುಚಕ್ರಿ** (ನಾ). ಕುತಂತ್ರಿ; ಮೋಸಗಾರ (?): ಹರಿಹರಸಿಂಹನನ್ನು ಕಂಡ ಕುಚಕ್ರಿಗಳು ತಮ್ಮ ಚಕ್ರವನ್ನು ತಿರುಗಿಸಲು ಹೈಗೈ ಮಾಡಿಲ್ಲವೆಂದು ಅನುಭವವಾಯಿತು (ಜವಿಸಾಸ್ವಾ. ೧೪೮). [ಸಂ. ಕುಚಕ್ರಿನ್]

**ಕುಚಚೂಚುಕ** (ನಾ). ಮೊಲೆಯ ತೊಟ್ಟು: ನಸು ಸುರ್ಕಿದ ಕುಚ ಚೂಚುಕಂ ಬೆಳರ್ತಧರಂ (ಆದಿಪು. ೧೧-೧೪೯); ತ್ರಿವಳಿಗಳೊಳ್ಪುಮಂ ಕುಚಚೂಚುಕಂಗಳ ಬಣ್ಣಮುಮಂ (ಶಾಂತಿಪು. ೯-೨೧೩).
[ಕುಚ + ಚೂಚುಕ]

**ಕುಚಮುಖ** (ನಾ). = ಕುಚಚೂಚುಕ: "ಕುಚಮುಖಂ, ಚೂಚುಕಂ, ವೃತಂ, ಶಿಖಾ – ಈ ೪ ಮೊಲೆಯ ತೊಟ್ಟು" (ಹಲಾಯು. ೮೭-೩೭೨).
[ಕುಚ + ಮುಖ]

**ಕುಚರ** (ಗು). ೧. ನೆಲದಮೇಲೆ ಓಡಾಡುವ. 'ಖಚರ' ಪರಾ. ೨. ಮೆಲ್ಲಗೆ ಸಾಗುವ; ಮಂದಗತಿಯುಳ್ಳ. ೩. ಕೆಟ್ಟ ನಡತೆಯ; ದುಷ್ಟಬುದ್ಧಿಯುಳ್ಳ. ೪. ದೋಷಗಳನ್ನು ಹುಡುಕುವ; ದೋಷೈಕದೃಷ್ಟಿಯಾದ; ರಂಧ್ರಾನ್ವೇಷಿಯಾದ. (ನಾ). ೫. ಕೆಟ್ಟ ಬುದ್ಧಿಯವನು; ವಕ್ರಬುದ್ಧಿಯುಳ್ಳವನು: "ಕುಚರಃ, ಕುಟಿಲಾಶಯಃ – ಈ ೨ ವಕ್ರಬುದ್ಧಿ" (ಹಲಾಯು. ೬೪-೨೩೫); "ಕುಚರಂ ನಿಯತಹಾರಿಕಂ ವಿಳಾಸಿಯೆನೆ ವಕ್ರಿಯೆನಿಸಿಕ್ಕುಂ" (ಮಂಗರಾ. ೭೨-೨೩). [ಸಂ.]

**ಕುಚರಬುದ್ಧಿ** (ನಾ). ದುಷ್ಟ ಬುದ್ಧಿ; ಕೆಟ್ಟ ವಿಚಾರ: ಕುಬ್ಜೆ ಮಂಥರೆ ಬರಿಯ ಹುಲುನೆವಂ ಮೂಡುವುದೆ ಲೋಕ ಲಾವಣ್ಯ ನಿಧಿ ಮಾತೆ ಕೈಕೆಯ ಮನದಿ ಕುಚರಬುದ್ಧಿಯ ಕುರೂಪಂ (ಶ್ರೀರಾಮಾ. ೧೬೧–೫೨೧). [ಕುಚರ + ಬುದ್ಧಿ]

**ಕುಚಲೆ** (ನಾ). ಕೆಟ್ಟ ನಡತೆಯವಳು: ಪ್ರತಿದಿನವು ಕುಚಲೆಯಾಗಿರೆ ಕ್ಷಿತಿಯೊಳಗೆ ಅವಳಿರುತಿಹಳು ಬಂಜಾ ಪತಿಯ ಮೇಲೆಯು ಬೀಳಲೊಲ್ಲಳು ಯೇನ ಮಾಡಿದರೆ (ಕಕ್ಕೋಕ. ೬–೬೪). [ಸಂ. ಕುಚಲಾ]

**ಕುಚಾಂತರ** (ನಾ). ಮೊಲೆಗಳ ನಡುವಿನ ಅಂತರ,—ಸ್ಥಳ: ಕುಚಾಂತರದೊಳ್ ಕೊಳಗೊಂಡು ಮೋಹವಲ್ಲಿಗೆ ಬಿದಿ ತಿರ್ದಿ ಸುತ್ತಿಸಿದ ನೀರ್ಗೆಣೆಯಾದುದು ಬಾಷ್ಪಮೋಪಳಾ (ಶಾಂತಿಪು. ೮–೯೨). [ಕುಚ + ಅಂತರ]

**ಕುಚಾಗ್ರ** (ನಾ). = ಕುಚಚೂಚುಕ: ಕರ್ಪುರ ಕುಚಾಗ್ರದೊಳ್ ಮನಂಗೊಳಿಸದೆ (ಅಜಿಪು. ೩–೧೭). [ಕುಚ + ಅಗ್ರ]

**ಕುಚಾನನ** (ನಾ). = ಕುಚಚೂಚುಕ: ಪೀನ ಕುಚಾನನದೊಳ್ ಕರ್ಪುರ ಆನನದೊಳ್ ಬೆಳ್ಪು ತೋಱಿತೆ (ಪಂಪರಾಮಾ. ೨–೩೩). [ಕುಚ + ಆನನ]

**ಕುಚಾಯಿ**$_1$ 'ಕುಜಾಯ' ನೋ.

**ಕುಚಾಯಿ**$_2$ (ನಾ). ತುರಾಯಿ: ನಂಜನಗೂಡ ನಂಜಯ್ಯನಿಗೀಗ ಮಗ್ಗಿನ ಕುಚಾಯಿ ಕಟ್ಟಿತೀನಿ ತಯ್ಯ (ಹಳ್ಳಿಯ. ೧೬೫). [?]

**ಕುಚಾಳಿ** (ನಾ). ೧. ಕೆಟ್ಟ ನಡತೆ; ಕೆಟ್ಟಚಾಳಿ; ಹೀನಾಚಾರ: ಖುದ್ರಗೇಡಿಯೇ ನನ್ನೊಡನೆ ಇಂಥ ಕುಚಾಳಿಯನ್ನು ಮಾಡಿದಿಯಾ? (ಪವಶೀ. ೧೩೭). ೨. ಕೆಟ್ಟಸ್ವಭಾವದ ವ್ಯಕ್ತಿ: (ಶಿ). ೩. ನಿಂದೆ; ಕುಚೇಷ್ಟೆ: (ಶಿ). [← ಮರಾ. ಕುಚಾಳೀ]

**ಕುಚಿತ** (ಗು). ೧. ಸಂಕುಚಿತವಾದ. ೨. ಅಲ್ಪ; ಕ್ಷುದ್ರ: ನೆಗಟ್ದ ನಮ್ಮಾಯೆಡವಂದೇವಂಗೆ ಕುಚಿತ ಮನ್ನೆಯರ್ ದೊರೆಯೆ (ಎಕ. VII, ಚಿನ್ನಗಿ. ೩೮–೧೭: 1149 ?); ಮಾದೇವ ಸ್ವರೂಪಂಗೆ ಕುಚಿತಕೊಱತೆಯ ಕುಂದು ನಿಂದೆವೊಱಿಸಲ್ಕೆ ಜನನವೈಕಾರವಂ ತೊಡರ್ಚದ ತೊಡಕಿದೇನೆಂಬ (ಸಿಂಗಿರಾ. ೪–೪೯); ಕುಚಿತ ಖಚರನ ನೆವದಿ ಯಾದವನಿಚಯ ದೊಡನೈತಂದು (ಕೋಗಯ. ೧೬–೨೮). (ನಾ). ೩. ಅಲ್ಪನಾದವನು; ಅಧಮ: ಎಣಿಕೆಯ ತನುಗುಣವಿಡಿವಾಡುವವನಲ್ಲ ಕ್ಷಣಿಕರ ಕುಚಿತರ ನೆರವಿಗೆ ನಾಚುವ (ಶಿವಗೀ. ೬೩೬); ಪಾಪಕೆಡೆಯಾಡದಿರು ಕುಚಿತ [ಪಾಠಾಂ. ಜನ]ರೊಡನಾಡದಿರು (ಗುರುಚಾ. ೧೬–೪೮); ಧರ್ಮದ್ವೇಷಿಗಳು ಘಾತಕರು ಕುಚಿತರು (ಅನಂರಾ. ೧–೫–೯). [?]

**ಕುಚಿತಬುದ್ಧಿ** (ನಾ). ಕೆಟ್ಟ ಯೋಚನೆ; ಕೀಳು ಮನಸ್ಸು: ಕುಂದಿನೀಶನೆ ಕೇಳು ಕುಚಿತಬುದ್ಧಿಯ ಬಿಟ್ಟು (ಪ್ರೌಢರಾ. ೧೮–೧೭); ಕುಚಿತಬುದ್ಧಿಯ ತನ್ನ ಮನದೊಳು ಮುಡಗದೆ ವಟಿಸಿದೆ ಖಳರಾಯ ನೊಡನೆ (ಮೋಹತ. ೩೩–೧೩). [ಕುಚಿತ + ಬುದ್ಧಿ]

**ಕುಚಿತಮಾರ್ಗ** (ನಾ). ಕೆಟ್ಟ ಹಾದಿ; ಹೀನಮಾರ್ಗ: ಹಲವು ದೈವಂಗಳ ಹಲುಬಿ ಹಂಬಲಿಸುತ್ತ ಕುಲಗೆಟ್ಟು ಕುಚಿತ ಮಾರ್ಗದೊಳ್ ತಲೆಬಾಲಗೆಟ್ಟು ತಲ್ಲಣಿಸಿ (ಶತಸಾಂ. ೧೧–೬೦). [ಕುಚಿತ + ಮಾರ್ಗ]

**ಕುಚಿತ್ತ** (ನಾ). ೧. ಕೆಟ್ಟ ಯೋಚನೆ; ದುಷ್ಟ ಮನಸ್ಸು. ೨. ಕೆಟ್ಟ ಯೋಚನೆಗಳುಳ್ಳವನು; ದುಷ್ಟಮನುಷ್ಯ: ನೀವೊಡೆಯು ನಾನಾಳು ಶುಚಿದನುಭಾವಿ ನೀವು ಕುಚಿತ್ತನಾಂ (ಬಸವ. ೨೨–೬೧). ೩. ಬುದ್ಧಿಗೇಡಿ; ಮಂದಮತಿ: ಜಗದಲ್ಲಿ ಕನಸಿನಲ್ಲಿ ತಾ ಸತ್ತೆನೆಂದು ಎಚ್ಚತ್ತು ಅಳುವ ಕುಚಿತ್ತನಂತೆ (ಮೋಕ್ಷಮಾ. ೨೫–೫೦). [ಸಂ.]

**ಕುಚಿತ್ತಾಚಾರ** (ನಾ). ಕೆಟ್ಟ ನಡವಳಿಕೆ; ಅನಾಚಾರ: ಲಿಂಗ ಮುಟ್ಟದ ಬಳಿಕ ಕುಚಿತ್ತಾಚಾರವಾಗದು ಕೂಡಲಸಂಗನ ಶರಣರು ಅನ್ಯವನಱಿಯರಾಗಿ (ಬಸವ. ೧೩೭). [ಕುಚಿತ್ತ + ಆಚಾರ]

**ಕುಚುಕುಚು, ಕುಜುಬುಜು, ಕುಸಕುಸ, ಕುಸುಕುಸು** (ನಾ). ೧. ಇನ್ನೊಬ್ಬರಿಗೆ ಕೇಳದಂತೆ ತಮ್ಮತಮ್ಮಲ್ಲಿ ಮಾತಾಡುವುದರ ಅನುಕರಣ ಶಬ್ದ; ಅಸ್ಪಷ್ಟವಾದ ಮಾತು; ಪಿಸುದನಿ: ಜನರು ಅಲ್ಲಲ್ಲಿ ನಿಂತುಕೊಂಡು ಕುಚುಕುಚು ಮಾತಾಡುತ್ತಿದ್ದರು (ರೂಢಿ). **ಕುಜುಬುಜು**: ೧. ಆಕೆಯ ಸುತ್ತು ಹೆಣ್ಣುಮಕ್ಕಳು ಕುಜುಬುಜು ಮಾಡುತ್ತ ನಿಂತುಕೊಂಡರು (ಗಂಮಾಯಿ. ೧೩೬). ೨. (ಆಲಂ) ಆರೋಪಣೆ; ಅಪವಾದ: ನಿನ್ನ ಬಗ್ಗೆ ಓಣಿಯ ಮಂದಿ ಕುಜುಬುಜು ಮಾಡುತಾರೆ ಗಿರಿಜಕ್ಕಾ (ಪಾತರ. ೧೬೩). **ಕುಸಕುಸ**. ೧: (ಶಿ). **ಕುಸುಕುಸು**. ೧: (ಶಿ).

**ಕುಚುಕುಚುಮಾಡು** = ಬಾಯಲ್ಲಿ ನೀರು ಮೊದಲಾದುವನ್ನು ಇಟ್ಟುಕೊಂಡು ಶಬ್ದಮಾಡು: ಹಿತ್ತಾಳೆಯ ತಂಬಿಗೆಯಿಂದ ಬಾಯಲ್ಲಿ ನೀರು ತೆಗೆದುಕೊಂಡು ಕುಚುಕುಚುಮಾಡಿ ಮುಕ್ಕಳಿಸಿ . . . ಹೊರಗೆ ತೂರಿದ (ಮೂರುದಾ. ೧೯೦). 'ಗುಜುಗುಜು' ಪರಾ. [ದೇ॥ ತಮಿ. ಮಲ. ತುಳು. ಕುಜುಕುಜು]

**ಕುಚೇಲ** (ನಾ). ೧. ಹರಿದು ಚಿಂದಿಯಾದ ಬಟ್ಟೆ. ೨. ಚಿಂದಿಬಟ್ಟೆಯನ್ನು ಧರಿಸಿದವನು. ೩. ಕೃಷ್ಣನ ಬಾಲ್ಯಮಿತ್ರನಾಗಿದ್ದ ಒಬ್ಬ ಬ್ರಾಹ್ಮಣನ ಹೆಸರು: ಹಿರಿದು ಕುಚೇಲನ ತೆಱನಂತೆ ಅವಲಕ್ಕಿ ಕೊಡಲಿಲ್ಲ (ಪುರಂದ. ೧–೪೧–೬). [ಸಂ.]

**ಕುಚೇಷ್ಟಕ** (ನಾ). ಕೆಟ್ಟಕೆಲಸ ಮಾಡುವವನು; ದುಷ್ಟಕಾರ್ಯ ಮಾಡುವವನು: ಬಾಯ್ಬಡಿಕನ ಕುಚೇಷ್ಟಕನ ಕಾಮುಕನ ಹಿಂಸಕನ ಡಾಂಭಿಕನ (ಜೈಮಿಭಾ. ೫–೬೯). [ಸಂ.]

**ಕುಚೇಷ್ಟೆ** (ನಾ). ೧. ಕುತಂತ್ರ; ದುಷ್ಟಯೋಜನೆ: ಕುಚೇಷ್ಟೆಯಿಲ್ಲದೆ ಪ್ರತಿಷ್ಠೆ ಬಾರದು (ಗಾದೆ). ೨. ಕುಚೋದ್ಯ; ಅಪಹಾಸ್ಯ; ಕಿಡುಗೇಡಿತನ: ದುರ್ಮತಿಗಳಿವರಿರ ಕುಚೇಷ್ಟೆಯನೆಮ್ಮನೀಕ್ಷಿಸಿ ಮಱೆದು ಕಳೆ (ಕುವ್ಯಾಸ. ೧೫–೪೮); ಪದುಮಾವತಿ ಮಾಳ್ಪ ಕುಚೇಷ್ಟೆಗಂಗಮುಂ ತೆತ್ತು (ಕಱಿಕಂ. ೬೨); ಇದನ್ನು ಕುಚೇಷ್ಟೆ ಮಾಡಲು ಬರೆದಿದ್ದಾನೆ (ರಂಗರೋ. ೧೭೬). [ಸಂ. ಕುಚೇಷ್ಟಾ]

**ಕುಚೋದ್ಯ** (ನಾ). ೧. ಕುಚೇಷ್ಟೆ; ಅಪಹಾಸ್ಯ; ಗೇಲಿ: ಸಿಪಾಯಿಗಳು ಕಾಸರ್ ಸ್ತ್ರೀಯರನ್ನು ಕುಚೋದ್ಯಮಾಡಿ ಹಾಸ್ಯ ಮಾಡುತ್ತಿದ್ದರು (ಮಲೆನಾ. ೫೪); ಪೂಜಾರಿ ಈಗ ಬಂದಿದ್ದರೆ . . . ಕುಚೋದ್ಯ ಮಾಡಬಹುದಾಗಿತ್ತು (ಬಾಣಅ. ೯೨); ಕಣ್ಣಲ್ಲಿ ಕುಚೋದ್ಯ ತೇಲಿ ಬಿಟ್ಟಳು (ಹೊಸಕ್ಷಿ. ೫೫). ೨. ಕಿಡುಗೇಡಿತನ; ಕಿಲಾಡಿತನ: ಕುಚೋದ್ಯದ ಅರಸನಿಗೆ ಕುಲಗೇಡಿ ಪ್ರಧಾನಿ (ಗಾದೆ). ೩. ಚಾಡಿ ಹೇಳುವಿಕೆ. ೪. ದೂಷಿಸುವಿಕೆ. ೫. ಕೆಟ್ಟ ಯೋಚನೆ. ೬. ಅಸಂಗತವಾದ ಹೇಳಿಕೆ. [ಸಂ.]

**ಕುಚೋದ್ಯಗಾರ** (ನಾ). ಕುಚೋದ್ಯ ಮಾಡುವವನು; ಕಿಲಾಡಿ: ನಾಟಕಮಂಡಳಿಯೆಂದರೆ ಕುಚೋದ್ಯಗಾರರ ಗುಂಪೆಂದು ಎಲ್ಲ ಕಡೆಗೂ ಪ್ರಚಾರವಾಗಿದೆ (ಬೆಟ್ಟಹೊ. ೩೦); ಆ ಊರಿನ ಜನಗಳಲ್ಲಿ ಒಬ್ಬ ಕುಚೋದ್ಯಗಾರನು ಉಪದೇಶಿಯ ಬಳಿಗೆ ಬಂದು (ಕಥಾಮಂ. IV, ೫). [ಕುಚೋದ್ಯ + –ಗಾರ$_1$ (< –ಕಾಱ)]

**ಕುಚ್ಚ**$_1$ (ನಾ). ಪೂರ್ತಿ ಕುರುಡ; ಅಂಧಕ: "ಕಡು ಗುರುಡ" (ಚತುನಿ. ಕಿ. I, ೮೪). [?]

**ಕುಚ್ಚ**$_2$ 'ಕುಚ್ಚು$_3$' ನೋ.

**ಕುಚ್ಚಕ್ಕಿ** (ನಾ). = ಕುದುಪಲಕ್ಕಿ: ದಿನ್ಕೆ ಐದ್ಪಕ್ಕಾ ಸೇರು ಕುಚ್ಚಕ್ಕಿ ಬೇಕು ನಿದುಡಿಬ್ಯಾಡ್ದು, ನಿನ್ಹಿಡ್ತಿ ದುಡಿಬ್ಯಾಡ್ದು, ಇನ್ಯಾರು ದುಡಿಯೋರು (ಪಂಜಪು. ೧೨). [ಕುಚ್ಚು$_1$ (< ಕುದಿಯಿಸು) + ಅಕ್ಕಿ$_1$]

**ಕುಚ್ಛಣಿಕೆ** (ನಾ). (ಕರಾ). ಅಣಕ; ನಿಂದೆ; ದೂಷಣೆ; ಹೀಯಾಳಿಕೆ; ತಿರಸ್ಕಾರ: ಹಿರಿಯಡ್ಕಕ್ಕೆ ಹೋದರೆ ಆ ಕಾವೇರಿ ಪುನಃ ಶೀಂತ್ರಿ ಕುಚ್ಛಣಿಕೆ ತೆಗೆದ್ದಾಳು (ಹೊಸಕ್ಷ. ೫೯).
[ಕುಚ್ಛಣೆ + –ಇಕೆ. / ತುಳು. ಕುಚ್ಛಣಿಗೆ]

**ಕುಚ್ಛಣಿಸು** (ಕ್ರಿ). (ಕರಾ) ತಿರಸ್ಕರಿಸು; ನಿಂದಿಸು: ತಂದೆಯನ್ನು ಆತನಲ್ಲಿರುವ ಮತ್ಸರದಿಂದ ಕುಚ್ಛಣಿಸುತ್ತಿದ್ದನು (ಯಮುದೂ. ೮೩).
[ಕುಚ್ಛಣೆ + –ಇಸು$_3$]

**ಕುಚ್ಛಣೆ** (ನಾ). (ಕರಾ) ತಿರಸ್ಕಾರ; ನಿಂದೆ: ಜೈಲನ್ನು ಸೇರಿ ವಾಸಿಸುವುದು ಅತ್ತೇಮನೆಯ ಕುಚ್ಛಣೆ ಕೇಳಿ ಬದುಕುವುದೂ ಒಂದೇ ಎನ್ನುತ್ತಾರಷ್ಟೆ (ಯಮುದೂ. ೨೮). [< ಸಂ. ಕುತ್ಸನ]

**ಕುಚ್ಚಿ** (ನಾ). (ಕರಾ) ಗಿಡ್ಡ; ಮೋಟ. [← ತುಳು. ಕುಚ್ಚಿ]

**ಕುಚ್ಛಿತ,** ಕುಚ್ಛಿತ (ಗು). ೧. ಕುತ್ಸಿತ; ಕೀಳಾದ; ಕೆಟ್ಟ: ಕುಚ್ಛಿತ ಮನದಾಮಿಷಮಂ ಬೆಚ್ಚಿಸುವೊಡೆ (ಷಡಕಂ. ೨೪). 'ಕುಚ್ಛಿತದೈವ' ಪರಾ. (ನಾ). ೨. ಹೀನವಾದುದು; ಕೀಳಾದುದು: ಮಚ್ಚರಂಗಳು ಕುಚ್ಛಿತಂಗಳು ಮುಚ್ಚುಮರೆಗಳ ಕೆಚ್ಚುಗಳು (ಬಸವು. ೪೦–೬೧); ಕುಟಿಲ ಕುಚ್ಛಿತ ಧೂರ್ತ ದುರ್ಜನವಟಮಟಗತನ ಕಪಟ ಕಳವಳ (ಪ್ರಭುಲೀ. ೭–೫೪); ಕುಚ್ಛಿತದೆ ಗರುಡ ಮಧುಕೈಟಭಾದ್ಯರ ಗೆಲ್ದ ತೆಜನಲ್ಲಂ (ಚೆಬಪು. ೨೫–೩೬); ಕುಚ್ಛಿತದ ವ್ಯಾಧಿಯೊಳ್ ಸತ್ತ ಕಜುವಂ ಕಂಡು (ಪ್ರಭುಪು. ೭–೬೨); ಕುಚ್ಛಿತ ಪ್ರವರ್ತಿಸೆ ಕೆಚ್ಚೆದೆ ಯಮಭಟರು ಚೆಚ್ಚಿ ಬಟ್ಟೆಯಮಾಡಿ ಬಿಚ್ಚಿ ಭಂಗಬಡಿಪರು (ವಿಸಾಸು. ೨೧–೧). ೩. ಅಲ್ಪನಾದವನು; ಅಧಮ; ನೀಚ; ದುಷ್ಟ: ಕ್ರೂರರು ಕುಟಿಲಕುಚ್ಛಿತ[ಪಾಠಾಂ. ಚಿತ್ತ]ರು (ಭೈರವೇ. ೧–೬೧); ಪಚ್ಚೆಯ ವರ್ಣನೆ ಕುಚ್ಛಿತ ನಾಶನೆ ಸಚ್ಚಿದಾನಂದ ಸ್ವರೂಪ (ಜಿನರಾ. ೧೦–೬೭); ಕುಚ್ಛಿತರೊಡನಾಡಿ ಗುಣವನರಸಿದರುಂಟೇ (ನೀತಿಸಾ. ೫೩೦). **ಕುಚ್ಛಿತ:** ೧. ಕುಚ್ಛಿತ ಗುಣವನೆಲ್ಲವ ಜಜೆಯಬೇಕು (ಶಿವಗೀ. ೯೨೫). ೩. ಇಚ್ಛೆಯ ನುಡಿದು ಕುಚ್ಛಿತನಾಗಿ ಬರಿ ವಿರಕ್ತನಂತೆ ಹೊಟ್ಟೆಯ ಹೊರೆದು . . . ಕಾಳು ಮೂಳರಿಂಗೆಲ್ಲಿಯದೋ ವಿರಕ್ತಿ (ಘನವ. ೭೨–೬೧); ಕುಚ್ಛಿತನ ಸೊಲ್ಲು ಕರ್ಣಕೆ ಬೀಳವಾಯಿತೆ (ವಿದಾಕ್ಯ. ೯೨–೮).
[< ಸಂ. ಕುತ್ಸಿತ]

**ಕುಚ್ಛಿತದೈವ** (ನಾ). ಹೀನದೈವ; ಕ್ಷುದ್ರದೇವತೆ: ಕರ್ತಾರನ ಪೂಜಿಸಿ ಕು[ಚ್ಛಿ]ತ [ಪಾಠಾಂ. ಚಿತ, ಚಿತ್ತ] ದೈವಕ್ಕೆಜಗುವರು (ಬಸವ. ೩೧೬). [ಕುಚ್ಛಿತ + ದೈವ]

**ಕುಚ್ಛಿತಬುದ್ಧಿ** (ನಾ). ಕೆಟ್ಟ ಬುದ್ಧಿ; ದುಷ್ಟಯೋಚನೆ; ಕೀಳುಮನಸ್ಸು: ಅವನೊಳಂತಪ್ಪ ಕುಚ್ಛಿತಬುದ್ಧಿಯೆದೆಯೊಳೆಳ್ಳಿನಿತಿಲ್ಲವು (ಕುರಾಸಾಂ. ೪೦–೫೫). [ಕುಚ್ಛಿತ + ಬುದ್ಧಿ]

**ಕುಚ್ಚು$_1$** 'ಕುದಿಯಿಸು' ನೋ.

**ಕುಚ್ಚು$_2$** (ಕ್ರಿ). ಕುಕ್ಕು; ಚುಚ್ಚು; ಹೊಯ್ಯು: ಮುಂಗೈಮೇಲೆ ಹಚ್ಚೆಕುಚ್ಚಿದ್ದ ಜೋಗಿಜಡೆಯ ಕರ್ರೀಲಿಬಣ್ಣವು . . . ಅವಳ ಮೈಬಣ್ಣವನ್ನು ಮನೋಹರವಾಗಿ ಎತ್ತಿ ತೋರಿಸುತ್ತಿತ್ತು (ಮಲೆಮ. ೮೧೮). [?]

**ಕುಚ್ಚು$_3$,** ಕುಚ್ಚೆ$_2$ (ನಾ). ಒಂದು ಜಾತಿಯ ಮೀನು: ಕೊಜೆವ ಸೀಗುಡಿ ಗೆಂಡೆ ಕುಚ್ಚು ಹಣ್ಣಾಲು ಬಸಿಗ ಗಿಜಿಲು ಬಂಗಡೆ . . . ಅನೆ ಮೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದರು (ಹಚಕಾ. ೫–೪೫). **ಕುಚ್ಚೆ$_2$:** ಗಜೆಮೀನ್ ಸೀಗುಡಿ ಗೆಂಡೆಮೀನ್ ಪವಳವಾಯಂ ಬಾಳೆ ಮೀನ್ ಪಾವುಮೀನ್ ಕಿಜುಮೀನ್ ಕೆಂಗಜೆಯಬ್ಬಿ ಕುಚ್ಚೆ ಲತಿಗಂ (ರಾಜಶೇ. ४–೧೧೫); ವರಹಸ್ತದೊಳು ಕುಚ್ಚೆಮಂ ಪಿಡಿದು ನಡಿಯೆ (ನವಮೋ. ೧೬–೫೬). [? . / ತುಳು. ಕುಚ್ಚೆ]

**ಕುಚ್ಚು$_4$** (ನಾ). ೧. ಗೊಂಚಲು, ಗುಚ್ಛ; ಗೊಂಡೆ: ಪೊಸಮುತ್ತು ವಣಿಗಳ ಕುಚ್ಚುಗಳಿಂದ (ಉದ್ಭಟ. ೮–೫); ಹತ್ತಿದರೊರ್ವರೊಂದೊಂದು ಪಲ್ಲಕಿಯ ಮುತ್ತಿನ ಕುಚ್ಚುಗಳ್ ಮೆಜೆಯೆ (ಮೋಹತ. ೨೪.೫); ನೀಲದ ಸರ ಮಾಣಿಕದ ಕುಚ್ಚು (ಕಂನವಿ. ೬–೭೮); ಎಷ್ಟು ಕುಚ್ಚು ಹೂವು ಕೊಡಲಿ ತಾಯಿ (ನಡೆದಾ. II, ೯೩೨). ೨. ಜಡೆಯ ಕೊನೆಯಲ್ಲಿ ಕಟ್ಟುವ ಒಂದು ಆಭರಣ; ಗೊಂಡೆ: ಅವಳು ತನ್ನ ಜಡೆಗೆ ಬಿಲ್ಲೆ ಹಾಗು ಕುಚ್ಚು ಹಾಕಿ ಸಿಂಗರಿಸಿಕೊಂಡಿದ್ದಳು (ರೂಢಿ).
[ದೇ. ॥ ತಮಿ. ಮಲ. ಕುಚ್ಚು; ತೆಲು. ಕುಚ್ಚು. / ಸಂ. ಗುಚ್ಛ]

**ಕುಚ್ಚುಗಟ್ಟು** (ಕ್ರಿ). ಗುಚ್ಛವಾಗಿ ಕಟ್ಟು; ಗೊಂಚಲುಮಾಡು: ಈ ಕೋಟಲೆಗಳನ್ನೆಲ್ಲ ಒಟ್ಟಿಗೆ ಪೋಣಿಸಿ ವಿಧಾಯಕನೆಂಬ ಹೆಮ್ಮೆಯ ಹೆಸರನ್ನು ಅದಕ್ಕೆ ಕುಚ್ಚುಗಟ್ಟಿ, ಈ ಮುಳ್ಳಿನ ಮಾಲೆಯನ್ನು ಒಬ್ಬಾತನ ಕೊರಳಿಗೆ ಹಾಕಿಬಿಟ್ಟರು (ಕನ್ನನು. I, ೩೦೩). [ಕುಚ್ಚು$_4$ + ಕಟ್ಟು$_1$]

**ಕುಚ್ಚುಮಟ್ಟೆ** (ನಾ). ೧. ಸುಣ್ಣ, ಬಣ್ಣ ಬಳಿಯುವುದಕ್ಕೆ ಉಪಯೋಗಿಸುವ ಒರಟಾದ ಕುಂಚ: ಗಾರೆಯವನು ಕುಚ್ಚುಮಟ್ಟೆಯನ್ನೇ ಮರೆತು ಬಂದಿದ್ದನು (ರೂಢಿ). ೨. ಬಿರುಸಾದ ಕೂದಲುಗಳಿಂದ ಮಾಡಿದ ಕುಂಚ: ಕ್ಷೌರ ಮಾಡಿಕೊಳ್ಳುವುದಕ್ಕೆ ಉಪಯೋಗಿಸುತ್ತಿದ್ದ ಕುದುರೆಯ ಜವಿಯ ಕುಚ್ಚುಮಟ್ಟೆ (ವಿಜ್ಞಾನ. I, ೨೨೩).
[ಕುಚ್ಚು$_4$ + ಮಟ್ಟೆ ?]

**ಕುಚ್ಛಿತ** 'ಕುಚ್ಛಿತ' ನೋ.

**ಕುಜ** (ಗು). ೧. ಭೂಮಿಯಲ್ಲಿ ಹುಟ್ಟಿದ. (ನಾ). ೨. ಗಿಡು; ಮರ: "ಕುಟಮೆನಲು ಕುಜಮೆನಲು ವೃಕ್ಷಕ್ಕೆನಾಮಂ" (ಮಂಗರಾ. ೩೧–೧); ಕುಜಂಗಳಂ ಪಡಲ್ವಡಿಸಿ ಭಯಂಬೆರಸೊಳಜೆ ನೆಗೆದುದಾ ವನಕರಿ ಶರಭ ಕಿಶೋರ ಕಂಠಗರ್ಜನೆ ಬನದೊಳ್ (ಪಂಪಭಾ. ೫–೯೧); ಬಾಳ ಚಂದನ ಕುಜದಂತೆ ಕೃಷ್ಣನೆಸೆದಿರ್ದೋಡಂ (ಜಗವಿ. ೩–೯೧). ೩. ಮಂಗಳಗ್ರಹ; ಅಂಗಾರಕ: ವರ ವೃಷಭನಂತೆ ಶೃಂಗಾಂಕಿತಂ ಪರಮ ಮಂಗಳನಂತೆ ಕುಜನಾಮದಿಂ . . . ಒಪ್ಪುವೆತ್ತೊಂದು ವಟವೃಕ್ಷವು (ನವಮೋ. ೮–೩೮); ಕುಜಗ್ರಹ ಕೆಂಪಾಗಿರುವ ನಕ್ಷತ್ರದಂತೆ ಕಾಣುತ್ತದೆ (ಆಕಾಶ. ೧೯). ೪. ಕೀಳುಜಾತಿಯಲ್ಲಿ ಹುಟ್ಟಿದವನು; ಬೇಡ; ಕಿರಾತ. ೫. ನಿಷ್ಠುರದ ಮಾತು; ಒರಟುಮಾತು; ಕೆಟ್ಟ ಮನಸ್ಸು: (+); "ಗಾಢೋಕ್ತಿ ಕುಜಾತ ಮಂಗಳ ಪುಳಿಂದರುಮಿಂತು ಕುಜಾಖ್ಯೆ" (ನಾನಾರ. ೨೧); "ನಿಷ್ಠುರ ತರು ಕುಜ ಶಬರಾರ್ಥಾಸ್ಪಮಿ ಕುಜ ಶಬ್ದಂ" (ನಾನಾಕಂ. ೫೬). [ಸಂ.]

**ಕುಜನ** (ನಾ). ಕೆಟ್ಟಮನುಷ್ಯ; ದುಷ್ಟ: ಅಂತಃಕರಣದಲ್ಲಿ ಕತ್ತರಿಸಿಕೊಂಡಿಹ ಕುಜನರಂದದಲಿ (ಕುವ್ಯಾಅ. ೨೩–೧೫); ನಲಿಯರು ಕುಜನರು ರಸಿಕರು ನಲಿವಂತೆ ಕವಿಯ ಸುಭಾಷಿತ ಕೇಳಿ (ಇಂಚಾಪ. ೬೬–೧೬).
[ಸಂ.]

**ಕುಜನತೆ** (ನಾ). ಕೆಟ್ಟತನ; ದುಷ್ಟತನ: ಅಜನಜಡನೆಂದು ನುಡಿವುದು ಕುಜನತೆ ಜಡಜಾತಜಾತನೆಂತಜಡನವಂ . . . ಫಲನಂ ಖಲನಂ (ಶಬಶಂ. ೧–೧೬). [ಸಂ. ಕುಜನತಾ]

**ಕುಜನಾರಿಷ್ಟ** (ನಾ). ದುಷ್ಟರಿಗೆ ಕೇಡನ್ನುಂಟುಮಾಡುವವನು: ದಿನನಾಥಂ ಸುರಪನ ದೆಸೆಯಲ್ಲೆಸೆದಂ ವರ ತಿಮಿರಾಳಿಯನೋಡಿಪ ಕುಜನಾರಿಷ್ಟಂ (ಹಮ್ಮಿರ. ೩–೨೫). [ಕುಜನ + ಅರಿಷ್ಟ]

**ಕುಜನೋಪದ್ರ** (ನಾ). ೧. ಭೂಮಿಯ ಜನರಿಗೆ ಶುಭವನ್ನುಂಟುಮಾಡುವವನು: ಜನಿಸಿದನು ವೈರಿಗಿರಿವಜ್ರದಂಡನು . . . ಕುಜನೋಪದ್ರನು (ನವಮೋ. ೩–೧೧). ೨. ದುಷ್ಟರಿಗೆ ತೊಂದರೆ ಕೊಡುವವನು.
[ಕುಜನ + ಉಪದ್ರ]

**ಕುಜನ್ಮಕ** (ಗು). ೧. ಭೂಮಿಯಲ್ಲಿ ಹುಟ್ಟಿದ. ೨. ಹೀನಕುಲದಲ್ಲಿ ಹುಟ್ಟಿದ. ೧, ೨ : ವಿಪರೀತನಲ್ಲದ ಕುಜನ್ಮಕನಲ್ಲದ ಕಲ್ಪವೃಕ್ಷನೆಂಬುದು . . . ಧರೆ ದುಮ್ಮನ ನಾಗದೇವನಂ (ಎಕ. V, ಅರಸೀ. ೩೮-೩೦ ; 1171). [ಸಂ.]

**ಕುಜರಾಜಿ** (ನಾ). ಮರಗಳ ಗುಂಪು : ಜಾನಕಿಯಿರ್ದಶೋಕೆಯ ಸಮೀಪದೊಳಿರ್ದ . . . ಕುಜರಾಜಿಯನೋವದೆ ಕಿಚ್ಚನಿಲ್ಲ (ಪಂರಾಮಾ. ೧೧-೧೨೮). [ಕುಜ + ರಾಜಿ]

**ಕುಜವಾರ** (ನಾ). ಮಂಗಳವಾರ. [ಕುಜ + ವಾರ$_3$]

**ಕುಜಾಗ್ರ** (ನಾ). ಮರದ ತುದಿ : ದ್ವಿಜನಂದು ಮುನಿದೀಕ್ಷಿಸಿದೊಡಾ ಸತಿಯೆಂದಳೆಲೆ ಮರುಳೆ ಕುಜಾಗ್ರದ ವಿಹಗನಲ್ಲೆಂದು (ಕುವ್ಯಾಅ. ೧೫-೪). [ಕುಜ + ಅಗ್ರ]

**ಕುಜಾತ** (ನಾ). ೧. ಭೂಮಿಯಿಂದ ಹುಟ್ಟಿದುದು : ಕುಜಾತಂ ಧೂಳಿಜಾಳಂ ದಿಗಂಬರ ಸಾಂಗತ್ಯಮನುಪ್ಪುಕೆಯ್ದು ಬಟಿಕಂ ಸದ್ವರ್ತ ನಂಬೆತ್ತುದು (ಪುಷ್ಪಪು. ೫-೪೨). ೨. ಮರ ; ವೃಕ್ಷ : ವಸಂತಮನಾಂತ ಕುಜಾತಪಲ್ಲವ ಪ್ರಸರದಿಂ (ಕಾದಂಪೂ. ೭೧೯) ; ವಿನಮಿತ ಚೂತ ಕುಜಾತಸಮಾಜಂ (ಸುಕುಮಾ. ೧೦-೫೫ ರ). ೩. ಅಂಗಾರಕ ; ಮಂಗಳಗ್ರಹ. ೪. ಒಂದು ಜಾತಿಯ ಮರ ; ಸ್ಯಂದನ ವೃಕ್ಷ : (ಶ). [ಸಂ.]

**ಕುಜಾತಜಟೆ** (ನಾ). ಮರದ ಬೀಳಿಲು : "ಕುಭೃತ್ ಕುಜಾತಜಟೆ ಮೂಲಂ ಚೇಲಪೂಗಾಂಬಕಂ ಖ್ಯಾಂ ಸದ್ಗುಣನೇತ್ರಮುಕ್ಕು" (ನಾನಾರ. ೬೭). [ಕುಜಾತ + ಜಟೆ]

**ಕುಜಾತವಿವರ** (ನಾ). ೧. ಮರದ ಪೊಟರೆ. ೨. ಭೂಮಿಯಲ್ಲಿ ವಿಶಾಲವಾದ ವ್ಯಾಪಕವುಳ್ಳದ್ದು ; ಆಲದಮರ : "ಮದನೋಚ್ಛಿಷ್ಟ ಮದಂ ಕುಜಾತವಿವರಂ ನಾದಂ ವಟಾಖ್ಯಾನಮುಂ" (ನಾನಾರ. ೯೭). [ಕುಜಾತ + ವಿವರ]

**ಕುಜಾತಿ** (ನಾ). ಕೀಳುಕುಲ ; ಹೀನಕುಲ. 'ಕುಜಾತಿಸಮೃದ್ಧ' ಪರಾ. [ಸಂ.]

**ಕುಜಾತಿಸಮೃದ್ಧ** (ಗು). ೧. ಮರಗಳಿಂದ ಹೆಚ್ಚಾಗಿ ತುಂಬಿದ. ೨. ಹೀನಕುಲದವರಿಂದ ತುಂಬಿದ. ೧, ೨ : ಅವನಂ . . . ಕುಜಾತಿ ಸಮೃದ್ಧಮಾಗಿಯುಂ ದ್ವಿಜಾತಿಮನೋಜ್ಞಮುಂ ಪರಿಗತ ಶಬರೋಪ ಯುಕ್ತಮಾಗಿಯುಮವಿಗ್ರಹಸಮಗ್ರಸ್ಥಳಮುಂ (ರಾಜಶೇ. ೫-೭೪ ವ). [ಕುಜಾತಿ + ಸಮೃದ್ಧ]

**ಕುಜಾತೆ** (ನಾ). ಭೂಮಿಯಲ್ಲಿ ಹುಟ್ಟಿದವಳು ; ಸೀತೆ : ರತಿಗನು ಸಾರಿ ಪಾರ್ವತಿಗೆ ತೋಱು ಕುಜಾತೆಗೆ ಪಾಟಿ ನೋಡರುಂಧತಿಗೆ ವಾಸ ವಾಂಗನೆಗೆ ಪಾಸಟಿ ಚಾಗಲದೇವಿ ಧಾತ್ರಿಯೊಳ್ (ಎಕ. VIII, ನಗರ. ೪೭-೧೧೩ ; 1063). [ಸಂ. ಕುಜಾತಾ]

**ಕುಜಾಯ**, ಕುಚಾಯಿ$_1$, ಕುಜಾಯಿ (ನಾ). ಕೂಜ ; ಹೂಜೆ ; ಕಳಸ : ಹಡಪ ಕನ್ನಡಿಯು ಮುಖಪಾವಡ ಕುಜಾಯಮುಂ ಪಿಡಿದು (ನವನೋ. ೫-೪೩) ; ಮಿರುಗುವ ಹೊನ್ನ ಕುಜಾಯದೊಳಗೆ ತುಂಬಿ (ಜ್ಞಾನಜ. ೩೯-೮೮). **ಕುಚಾಯಿ$_1$** : ಪಾತ್ರಾದೀನಾಂ – ಕುಚಾಯಿ ಕೊಳಗಪಾತ್ರೆಗಳ (ಬಾಹಟೀ. ೨-೬-೨೭ ವ) ; ಪನ್ನೀರಿನ ಕುಚಾಯಿಗಳು (ಸೌಗಂಧಿ. ೧೯೦-೮). **ಕುಜಾಯಿ** : ಸವನಿಸಿಹ ಗುಂಡು ಚಂಬುಗಳು ಬಿಂದಿಗೆ ತಟ್ಟೆ ಬಟ್ಟಲು ಕುಜಾಯಿಗಳನು (ಕೃಷ್ಣವಿ. ೨-೪೩). 'ಕೂಜ' ಪರಾ. [← ಮರಾ. ಕುಜಾ, ಕುಜ್ಯಾ ; ಪಾರ. ಕುಜಾಹಾ]

**ಕುಜಾಯಿ** 'ಕುಜಾಯ' ನೋ.

**ಕುಜುಬುಜು** 'ಕುಚುಕುಚು' ನೋ.

**ಕುಜೆ** (ನಾ). ೧. ಭೂದೇವಿಯ ಮಗಳು ; ಸೀತೆ. ೨. ಕುತ್ಸಿತವಾದ ಜನ್ಮವುಳ್ಳವಳು ; ಕೀಳು ಹೆಂಗಸು ; ಹೀನೆ : ಚಪಲೆ ಚಂಚಲೆ ಚೌಟುವತಿ ಚಂಡಿ ಛಲವಾದಿ ಕುಪಿತೆ ಕುತ್ಸಿತೆ ಕುಹಕೆ ಕುಜೆ ವಡ್ಡೆ ಕುಲ ಗೇಡಿ (ಜೈಮಿಭಾ. ೫-೬೧). [ಸಂ. ಕುಜಾ]

**ಕುಜೋತ್ಪತ್ತಿ** (ನಾ). ಮರಗಳ ಹುಟ್ಟು, —ಬೆಳೆ : ನವರತ್ನೋತ್ಪ ತ್ತಿಯಿಂ ಬೆಟ್ಟುಗಳಖಿಳ ಕುಜೋತ್ಪತ್ತಿಯಿಂ ಕಾಡುಗಳ್ . . . ಸುಖೋ ತ್ಪತ್ತಿಯಂ ಬೀಱುತಿರ್ಕುಂ (ಪುಷ್ಪಪು. ೯-೧೨). [ಕುಜ + ಉತ್ಪತ್ತಿ]

**ಕುಜ್ಜ**, ಗುಜ್ಜ$_1$ (ಗು). ೧. ಬಾಗಿದ ; ಕೆಳಗಿಳಿದ. 'ಕುಜ್ಜಮುಖ' ಪರಾ. (ನಾ). ೨. ಕುಳ್ಳ ; ಗಿಡ್ಡ ; ವಾಮನ : ಕಡುಗುಜ್ಜಂ . . . ನೋಟಕ್ಕೊಡೆ ವಿಕಟಾಂಗಂ ನಿಕೃಷ್ಟನಕ್ಕುಂ ಮನುಜಂ (ಲೋಕೋಪ. ೧೧-೨೮). **ಗುಜ್ಜ$_1$** : "ಗಡುಳಃ, ಕುಬ್ಜಃ – ಈ ೨ ಗುಜ್ಜಂ" (ಹಲಾಯು. ೧೯೦-೪೫೭) ; "ಕಿಟ್ಟಿದಂ = ಗುಜ್ಜಂ" (ಶಮುದ. ಪರಿ. ೧) ; ಪಡಿಯರರಂತಜ್ಜರ ಗುಜ್ಜರಂತೆ ಮನದಣುಗರಂತೆ ಮೇಳದವರಂತೆ ನೆರೆ ದೋಲಗಿಕುಂ (ಶಾಂತಿಪು. ೬-೧೧೯) ; ಅಂತದಱ ಕಾಲೆಡೆಗಳೊಳ್ ನುಗುಳ್ವ ಗುಜ್ಜರಿಂ (ಅಜಿಪು. ೪-೭) ; ಮೊಸಳೆ ಪಾಯ್ದು ನರಪತಿಯ ವಿನೋದದ ಗುಜ್ಜ ಸಿಕ್ಕೆ ಪಿಡಿದತ್ತು (ಯಕೋಜ. ೩-೪೮). [←ಪ್ರಾ. ಕುಜ್ಜ, ಖುಜ್ಜ. < ಸಂ. ಕುಬ್ಜ]

**ಕುಜ್ಜಮುಖ** (ನಾ). ಮುಖವನ್ನು ಬಾಗಿಸಿದವನು ; ಕೆಳಮೊಗ ವಾದವನು : ಕುಜ್ಜಮುಖನಾಗಿ ಪಾರಿಶಶೆಟ್ಟಿ . . . ಅದಯ್ಯನಂ ಕರೆಸುತುಂ (ಪ್ರಭುಪು. ೮-೩೪). [ಕುಜ್ಜ + ಮುಖ]

**ಕುಜ್ಜೆ$_1$** (ನಾ). "ಪಕ್ವವಾಗದ ಹಲಸಿನಕಾಯಿ, ಕಡಿಗೆ" (ಕಸ್ತೂಕೋ. ೨೧೪). 'ಗುಜ್ಜೆ' ಪರಾ. [← ತುಳು. ಕುಜ್ಜೆ]

**ಕುಜ್ಜೆ$_2$** (ನಾ). ಕುಳ್ಳಾಗಿರುವವಳು ; ಗಿಡ್ಡಿ ; ಕುಬ್ಜೆ : ಕಡುಕೆಚ್ಚನೆ ಕಡುಗರಿಯಳ್ ಕಡುನಿಡಿಯಳ್ ಕರಮೆ ಕುಜ್ಜೆ ಮೇಣ್ ಕರಮುಸಿಯಳ್ . . . ಕಪ್ಪೆಯುವಳ್ (ಲೋಕೋಪ. ೧೧-೭೦). [ಕುಜ್ಜ + –ಎ$_2$]

**ಕುಟ$_1$**, ಕೂಟ$_2$ (ನಾ). ಕುಟ್ಟುವುದು ; ಕುಕ್ಕುವುದು. 'ಮರಕುಟ', 'ಸರಕುಟ' ಪರಾ. **ಕೂಟ$_2$**. 'ಮರಕೂಟ', 'ಸರಕೂಟ' ಪರಾ. [< ಕುಟ್ಟು$_1$]

**ಕುಟ$_2$** (ನಾ). ೧. ಕೊಡ ; ಕಲಶ : "ಕಳಶಃ, ಕುಟಃ, ಕುಂಭಃ, ನಿಘಃ —ಈ ೪ ಕೊಡಂ" (ಹಲಾಯು. ೫೩-೧೬೦). ೨. ಮನೆ : "ಆವಾಸಃ . . . ಗೇಹಂ, ಕುಟಃ . . . ಆಲಯಃ – ಈ ೩೧ ಮನೆ" (ಹಲಾಯು. ೪೯-೩೦೭). ೩. ಮರ ; ವೃಕ್ಷ : "ವೃಕ್ಷಃ . . . ಕುಟಃ, ಅದ್ರಿಃ, ಕುಜಃ . . . ಪಾದಪಃ—ಈ ೧೯ ಮರಂ" (ಹಲಾಯು. ೨೯-೨೩). ೪. ಕಲ್ಲು ಒಡೆಯುವಸುತ್ತಿಗೆ : (ಶ). [ಸಂ.]

**ಕುಟಂಕ** (ನಾ). ೧. ಮೇಲ್ಛಾವಣಿ ; ಚಪ್ಪರ. ೨. ಕೊಟ್ಟಿಗೆ : (ಶ). [ಸಂ.]

**ಕುಟಕ$_1$** 'ಕುಟಿಕ$_1$' ನೋ.

**ಕುಟಕ$_2$** 'ಕುಟಿಕ$_2$' ನೋ.

**ಕುಟಕ$_3$** (ನಾ). ಕುಡಿಯುವವನು ; ಗುಟಕರಿಸುವವನು. 'ಮಳೆ ಗುಟಕ' ಪರಾ. [ಕುಟುಕು$_2$ + –ಅ$_7$]

**ಕುಟಕ$_4$** (ನಾ). ೧. ಕಡೆಗೋಲನ್ನು ಕಟ್ಟುವ ಕಂಬ ; ಕಡೆಯುವ ಕಂಬ. ೨. ಗಳೆಯಿಲ್ಲದ ನೇಗಿಲು : "ನೇಗಿಲಿನ ಕುಡ" (ಗಂಗಾಮ. ೮೮). ೩. ಒಂದು ದೇಶ : ವೃಷಭದೇವನು . . . ಸಂಚರಿಸುತ್ತ ಕೊಂಕ, ವೆಂಕ, ಕುಟಕ . . . ದೇಶಗಳಲ್ಲಿ ತನ್ನ ಇಚ್ಛೆಯಿಂದ ಬಂದನು (ಭಾರದ. ೧೬೮). [ಸಂ.]

**ಕುಟಕು** (ಕ್ರಿ). ಒತ್ತಿತುಂಬು ; ಹತ್ತಿಕ್ಕಿ ತುರುಕು ; ಗಿಡಿ : "ಕುಟಕು–ಗಾಢಪೂರಣೇ (ಹೆಚ್ಚಾಗಿ ತುಂಬು)" (ಶಮುಧಾ). [?]

**ಕುಟಜ** (ನಾ). ಬೆಟ್ಟಮಲ್ಲಿಗೆ; ಕೊಡಸಿಗೆ: "ಕುಟಜಃ, ಗಿರಿಮಲ್ಲಿಕಾ —ಈ ೨ ಕೊಡಸು (ಬೆಟ್ಟಮಲ್ಲಿಗೆ)" (ಹಲಾಯು. ೩೨-೪೦); "ಗಿರಿಮಲ್ಲಿಕಾ ಕುಟಜಮೆನಲು ಕೊಡಸಿಗೆಯಕ್ಕು" (ಮಂಗರಾ. ೩೪-೧೧); ಅಲರ್ದುವು ಕುಟಜಂಗಳ್ ಪೂತುವಿಂಬಪ್ಪಿನಂ ಕಂದಲಿ (ಕಾವ್ಯಾವ. ೬೫೫); ಮುತ್ತಿನ ಬಣ್ಣದ ಕುಟ್ಮಳಾಢ್ಯವಾದುದು ಕುಟಜಂಗಳೊಳ್ (ಜಗವಿ. ೪-೬). [ಸಂ.]

**ಕುಟಜಕ** (ನಾ). = ಕುಟಜ: "ಕುಟಜಕ – ಕೊಡಸಿಗೆ" (ಶಮದ. ೩೮೨ ಪ್ರಯೋ). [ಸಂ.]

**ಕುಟಜಾದಿಲೇಹ್ಯ** (ನಾ). ಕೊಡಸಿಗೆ ಚಕ್ಕೆಯಿಂದ ತಯಾರಿಸಿದ ಲೇಹ್ಯ: ಕುಟಜಾದಿಲೇಹ್ಯ – ಕೊಡಸಿಗೆ ಚಕ್ಕೆ ೧೦೦ ಹಲ ಇವನ್ನೆಲ್ಲ ಚೂರ್ಣಿಸಿ . . . ಧಾನ್ಯಪುಟದಲ್ಲಿ ಒಂದು ಪಕ್ಷವಿರಿಸಿ (ಸಕವೈ. ೨೯೬). [ಕುಟಜ + ಆದಿ + ಲೇಹ್ಯ]

**ಕುಟನ್ನಟ** (ನಾ). ೧. ಒಂದು ಜಾತಿಯ ಮರ; ತಿಗಡೆ ಮರ: "ಕುಟನ್ನಟಂ ಪಳವಕ ತಾಂ" (ವಸ್ತುಕೋ. ೩೯-೩೬); "ಕುಟನ್ನಟಮೆನಲ್ ಸೀರಸನಿ" (ಮಂಗರಾ. ೪೨-೪೦). ೨. ಒಂದು ಜಾತಿಯ ಸುವಾಸನೆಯ ಹುಲ್ಲು; ತುಂಗಮುಸ್ತೆ; ಗೇಕು; ಗಿಕ್ಕು. ೩. ಲವಂಗ. [ಸಂ.]

**ಕುಟರ** 'ಕುಟಾರೆ' ನೋ.

**ಕುಟರಿ** 'ಕುಟ್ಟರಿ' ನೋ.

**ಕುಟರು** (ನಾ). ೧. ಕೋಳಿ. ೨. ಗುಡಾರ; ಡೇರೆ. [ಸಂ.]

**ಕುಟಹಾರಿ** (ನಾ). ನೀರು ತರುವ ದಾಸಿ; ತೊತ್ತು: ಕುಟಹಾರಿ ಚೈಟಂ ಚೇಟಿ ದಾಸಿಯೆನೆ ತೊತ್ತಕ್ಕು" (ಮಂಗರಾ. ೯೦-೪). [ಸಂ. ಕುಟಹಾರೀ]

**ಕುಟಹಾರಿಕೆ** (ನಾ). = ಕುಟಹಾರಿ: "ಪ್ರೋಟಾ, ಚೇಟಾ, ಚೇಟೀ, ದಾಸೀ, ಕುಟಹಾರಿಕಾ – ಈ ೫ ತೊಬ್ತು" (ಹಲಾಯು. ೮೧-೩೩೮). [ಸಂ. ಕುಟಹಾರಿಕಾ]

**ಕುಟಾಯಿಸು** 'ಕೊಟಾಯಿಸು' ನೋ.

**ಕುಟಾರೆ**, ಕುಟರ (ನಾ). ೧. ಗುದ್ದಲಿ; ಸನಿಕೆ: ಈಗಿನ ಕಾಲದಲ್ಲಿ ಕುಟಾರೆ ಮಣ್ಣು ಕಡಿಯದ ರೈತರಿದ್ದಾರೆ (ರೂಢಿ). **ಕುಟರ**: ೨. ಮರವನ್ನು ಕಡಿಯುವ ಸಾಧನ; ಕೊಡಲಿ: ವಟವೃಕ್ಷವನೂಂಕೆ ಪತಿತವಾಗುವುದೇನೋ ಕುಟರದಿಂ ಕಡಿಯಲುಬೇಕು (ಬಿಜ್ಜರಾ. ೩-೨೩). [< ಸಂ. ಕುಠಾರ]

**ಕುಟಿ₁** (ನಾ). ಕಣ್ಣಿನಲ್ಲಿ ಏಳುವ ಬೊಕ್ಕೆ; ಕಣ್ಣುಕುಟಿಕೆ: ವ್ಯೈಲಿಗೆ ಗಣ್ಣೊ ವಾತದಿಂ ಬಲಿದ ಕಣ್ಣೊ ಕುಟಿಯುಗಣ್ಣೊ . . . ಕಣ್ಣೆಡಕೆ ನಾಂ ತಿಳಿಯೆನೇನಂ ಮರ್ದನೆನುತ (ಮಹಾವಿ. ೭-೫೧). 'ಕುಟಿಕೆ' ಪರಾ. [< ಕುಟಿಕೆ ?]

**ಕುಟಿ₂** (ನಾ). ೧. ಬಾಗಿದುದು; ತಿರುವು. ೨. ಗುಡಿಸಿಲು; ಮನೆ; ನಿವಾಸ: "ಗೃಹಂ ಭವನಂ ನಿಕೇತನಂ ಕುಟಿ ಕುಲಂ ಶಾಲೆ . . . ಮನೆಗೆ ಪೆಸರಕ್ಕು" (ಮಂಗರಾ. ೫೮-೭); ರತಿಕಾಂತನೇಳ್ಗೆಯ ವರಕುಟಿ (ಉದ್ಭದೇ. ೨-೨೮); ಕುಟಿಯ ಮುಂದೆ ಕಿರುದಾರಿಯಲ್ಲಿ ನಾನೊಂಟಿ ಅಲೆಯುತಿದ್ದೆ (ಪಲಾಸ. ೭೩). ೩. ಹೊಗೆ ಹಾಕುವುದಕ್ಕಾಗಿ ಬಳಸುವ ಪಾತ್ರೆ. ೪. ಹೂವಿನ ತುರಾಯಿ. [ಸಂ. ಕುಟಿ, ಕುಟೀ]

**ಕುಟಿಕ₁**, ಕುಟಕ₁, ಕುಟುಕ₁ (ನಾ). ಕುಟ್ಟುವವನು; ಕುಕ್ಕುವವನು. 'ಕಲ್ಕುಟಿಕ', 'ನೀರ್ಕುಟಿಕ₁' ಪರಾ. **ಕುಟಕ₁**. 'ಕಲ್ಲುಕುಟಕ' ಪರಾ. **ಕುಟುಕ₁**. 'ಕಲ್ಲುಕುಟುಕ' ಪರಾ. [< ಕುಟ್ಟು₁ + -ಇಕ]

**ಕುಟಿಕ₂**, ಕುಟಕ₂ (ನಾ). ಕೊಡುವವನು; ಎರೆಯುವವನು. 'ನೀರ್ಕುಟಿಕ₂' ಪರಾ. **ಕುಟಕ₂**. 'ಕೆಯ್ಯುಗುಟಕ' ಪರಾ. [?]

**ಕುಟಿಕೆ**, ಕುಟಿಗೆ (ನಾ). ಗುಳ್ಳೆ. 'ಕಣ್ಕುಟಿಕೆ' ಪರಾ. **ಕುಟಿಗೆ**: ಸ್ತನಗಳು ಕುಟಿಗೆ ಪ್ರಕಾರವಾಗಿಯಿರಲು ದೂರಯಿರಲು ಅತ್ಯಂತ ತೋರವಾಗಿಯಿರಲು ಬಿದ್ದುಯಿರಲು ಶುಭವಲ್ಲ (ಸಾಮುಲ. ೧೨೬-೧೮). [< ಸಂ. ಗುಟಿಕಾ]

**ಕುಟಿಕರಿಸು** (ಕ್ರಿ). ಕುಕ್ಕು; ಚುಚ್ಚು; ಕುಟುಕು (?): ಕುಟಕರಿಸುವ ಮಾತು ಕಟಕಿಯಾಗಿಹುದು (ಕರಿಕ. ೪೩-೭). [?]

**-ಕುಟಿಗ₁** (ಪ್ರ). ಇದರಲ್ಲಿ ವಿಶೇಷವಾಗಿ ವರ್ತಿಸುವವನು ಎಂಬರ್ಥದಲ್ಲಿ ಬರುವ ತದ್ಧಿತಪ್ರತ್ಯಯ: ಘನವಾಗಿ ವರ್ತಿಸುವನೀತನಿವಱೊಳೆಂಬಲ್ಲಿ ಕುಟಿಗ ಪ್ರತ್ಯಯಂ (ಶಮದ. ೨೦೧); ಕುಟಿಗ ಪ್ರತ್ಯಯಕ್ಕೆ – ಕಲ್ಕುಟಿಗಂ, ನೀರ್ಕುಟಿಗಂ, ಮರಕುಟಿಗಂ, ಕಱುಕುಟಿಗಂ, ಕಟ್ಟಿಕುಟಿಗಂ (ಶಮದ. ೨೦೧ ಪ್ರಯೋ). [< ಕುಟ್ಟು₁ + -ಇಗ]

**ಕುಟಿಗ₂** (ನಾ). = ಕುಟಿಕ₂. 'ನೀರ್ಕುಟಿಗ' ಪರಾ. [?]

**ಕುಟಿಗೆ** 'ಕುಟಿಕೆ' ನೋ.

**ಕುಟಿಲ**, ಕುಟಿಳ (ಗು). ೧. ಕೊಂಕಿದ; ಬಾಗಿದ; ನೇರವಲ್ಲದ: "ಭಂಗುರ ಮರಾಳಂ ಭುಗ್ನಮಾವಿದ್ಧಮೂರ್ಮಿಮತ್ ಕುಂಚಿತಂ ಕುಟಿಲಂ ನತಂ . . . ಎನಲು ಪೊರೆದ ಕೊಂಕಕ್ಕು" (ಮಂಗರಾ. ೧೨೭-೭). ೨. ಉಂಗುರುಂಗುರಾದ; ಗುಂಗುರಾದ. 'ಕುಟಿಲಕುಂತಲ' ಪರಾ. ೩. ಮೋಸಗಾರಿಕೆಯ; ವಂಚನೆಯನ್ನುಳ್ಳ. (ನಾ). ೪. ಮೋಸ; ವಂಚನೆ; ಕುಯುಕ್ತಿ; ಕುತಂತ್ರ: ಕುಟಿಲದ ವಸ್ತು ಕೈಯಲ್ಲಿದ್ದಡೇನು ಅದನೆಸೆದು ಪ್ರಾಣವ ಬೆರಸದನ್ನಕ್ಕ (ಮೋಳಿಮಾ. ೧೧೭-೪೬೦); ಕುಟಿಲ ಕುಹಕ ಕ್ರೋಧ ಕ್ಷುದ್ರ ಮಿಥ್ಯೆ – ಇವನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯಾ (ಬಸವ. ೪೬); ತರತರದ ಭಾವಜಟಿಲತೆಯ ಜಾಲ ಜೇಡನ ಕುಟಿಲದೊಳ್ ಜೀವವುಳು ಸಿಲ್ಕಿದೋಲ್ (ಶ್ರೀರಾಮಾ. ೨೩೩-೧೪೩). ೫. ಮೋಸಗಾರ; ವಂಚಕ; ಕಪಟಿ: ಅಟಮುಟಿಗಂ ಗಾಳುವಿವಂ ಕುಟಿಲಂ ಲಂಪಟನೆನಿಪ್ಪವಂ ಮಾನಿಸನೇ (ಕಾವ್ಯಾವ. ೩೬); ಕುಟಿಲನುಂ ಶಠನುಮವಂ (ಜಾತಕಿ. ೨೦-೯); ಕುಟಿಲನ ಭಕ್ತಿ ಕಿಸುಕುಳನ ವಿರಕ್ತಿ (ಸರ್ವಜ. ೧೯೯-೬೧೫). ೬. ಒಂದು ಬಗೆಯ ತಾಳ: ಚಂಚತ್ಪುಟ . . . ಕುಟಿಲ . . . ಜಯಾಳಮೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮). **ಕುಟಿಳ**: ಕುಟಿಳ ಮೃದು ಘನಸ್ನಿಗ್ಧಕೇಶಂ (ಲೋಕೋಪ. ೧೧-೨೬). [ಸಂ.]

**ಕುಟಿಲಕುಂತಲ**, ಕುಟಿಲಕುಂತಳ, ಕುಟಿಳಕುಂತಳ (ನಾ). ಗುಂಗುರುಗೂದಲು; ಕೊಂಕಿದ ಕುರುಳು; ಸುರುಳಿ ಕೂದಲು: ಚೆಂದುಟಿ ಹವಳವು ಸುಲಿಪಲ್ಲು ಧವಳವು ನೀಲವು ಕುಟಿಲಕುಂತಲವು (ಇಂಚಾಪ. ೧೭೯-೮೫). **ಕುಟಿಲಕುಂತಳ**: ನೀಲವು ಕುಟಿಲಕುಂತಳವು (ಇಂಚಾಪ. ೮೮-೨೭). **ಕುಟಿಳಕುಂತಳ**: ಆಡ ಪಾಲೊಳಿಂಬಾಗಿರಲೇ ಱುದಿನಂ ರಸಾಂಜನಂ ಬೆರಸದಱಿಂ ತಲೆವೂಸೆ ಕುಟಿಳಕುಂತಳಮಕ್ಕುಂ (ಲೋಕೋಪ. ೯-೫೧). [ಕುಟಿಲ + ಕುಂತಲ]

**ಕುಟಿಲಕುಂತಲೆ** (ನಾ). ಗುಂಗುರುಕೂದಲುಳ್ಳವಳು: ಕುಮುದದಳಾಕ್ಷಿಯುಂ ಕುಟಿಲಕುಂತಲೆಯುಂ (ದಮುಸ್ವ. ೩-೧೨೮). [ಸಂ. ಕುಟಿಲಕುಂತಲಾ (ಕುಟಿಲ + ಕುಂತಲ + -ಎ₂)]

**ಕುಟಿಲಕೋವಿದ** (ನಾ). ಮೋಸಗಾರಿಕೆಯಲ್ಲಿ ಪ್ರವೀಣ; ವಂಚನೆಯಲ್ಲಿ ನಿಪುಣ: ಸೆಱೆಯ ಕಳವಿನ ಕಾಲು ಕೀಲ್ಗಳನಾರುಬಲ್ಲರು ಕುಟಿಲಕೋವಿದರ (ಕುವ್ಯಾಸ. ೧೪-೨೧). [ಕುಟಿಲ + ಕೋವಿದ]

**ಕುಟಿಲಗರ್ಭ** (ಗು). ಒಳಗೆ ಮೋಸವನ್ನುಳ್ಳ; ಕಪಟವನ್ನು ಒಳಗೊಂಡ: ವನಿತೆ ನಿಮ್ಮೊಡನೆಂತು ತೊಳಲುವಳನವರತ ಗಿರಿಗುಹೆಯ ಘಟ್ಟವನೆನುತ ನುಡಿದಳು ಕುಟಿಲಗರ್ಭದ ಗುಣದ ಬೆಳವಿಗೆಯ (ಕುವ್ಯಾಸ. ೧೬-೬೨). [ಕುಟಿಲ + ಗರ್ಭ]

**ಕುಟಿಲಗಾಮಿ** (ನಾ). ೧. ವಕ್ರವಾಗಿ ಹೋಗುವುದು; ಹಾವು. ೨. ಕೆಟ್ಟ ಹಾದಿಯಲ್ಲಿ ಹೋಗುವವನು; ದುರ್ಮಾರ್ಗಿ. ೧, ೨: ನಾಡಿಗರೊಳೆಲ್ಲರುಂ ಭೋಗಿಗಳ್ ಕುಟಿಲಗಾಮಿಗಳಲ್ತು ಜೈವಾತೃಕರ್ ದೋಷಾಕರರಲ್ತು (ರಾಮಾಶ್ವ. ೭-೨೨). [ಸಂ. ಕುಟಿಲಗಾಮಿನ್]

**ಕುಟಿಲಗಾರ್ತಿ** (ನಾ). ಮೋಸಗಾರ್ತಿ; ವಂಚಕಿ. [ಕುಟಿಲ + -ಕಾಱ + -ತಿ (< -ಇತ್ತಿ)]

**ಕುಟಿಲತನ** (ನಾ). ಮೋಸಗಾರಿಕೆ; ಕುಯುಕ್ತಿ; ಕುತಂತ್ರ: ನೀನವಿವೇಕಿತನದಲಿ ಮಗನ ಹೆಚ್ಚಿಸಿ ಸಾಕಿ ಕಲಿಸಿದೆ ಕುಟಿಲತನವನು ಕುಹಕವಿದ್ಯೆಗಳ (ಕುವ್ಯಾದ್ರೋ. ೧-೫). [ಕುಟಿಲ + -ತನ]

**ಕುಟಿಲತೆ** (ನಾ). = ಕುಟಿಲತನ: (ಕಿ). [ಸಂ. ಕುಟಿಲತಾ]

**ಕುಟಿಲತ್ವ** (ನಾ). = ಕುಟಿಲತನ: (ಕಿ). [ಸಂ.]

**ಕುಟಿಲಭಾವ** (ನಾ). ೧. ವಕ್ರವಾಗಿರುವಿಕೆ; ಕೊಂಕು: "ಕೊಂಕು ಬಿಂಕು" (ಚತುನಿ. ಕಿ. I, ೮). ೨. ವಂಚನೆ; ಮೋಸ. [ಕುಟಿಲ + ಭಾವ₂]

**ಕುಟಿಲವಿದ್ಯ** (ನಾ). ಮೋಸ; ವಂಚನೆ: ಆ ಯುವತಿಯರು ... ಕುಟಿಲವಿದ್ಯ[ಪಾಠಾಂ. ತನ]ದಿ ಮಾಯೆಗಳ ಹಣ್ಣುವರು (ನಳಚ. ೩-೨೩). [ಕುಟಿಲ + ವಿದ್ಯ]

**ಕುಟಿಲಾಂಗ** (ನಾ). ಮೋಸವನ್ನು ಒಳಗೊಂಡ ರೀತಿ; ವಂಚನೆಯನ್ನುಂಟು ಮಾಡುವ ಉಪಾಯ: ಬರಿಯ ಬೇಟದತಿ ಕುಟಿಲಾಂಗದೊಲವುಗಳ ವಾರನಾರೀಜನಂ (ಜೈಮಿಭಾ. ೭-೬). [ಕುಟಿಲ + ಅಂಗ₁]

**ಕುಟಿಲಾಲಕ**, ಕುಟಿಳಾಳಕ (ನಾ). = ಕುಟಿಲಕುಂತಲ: ರೋದನ ಮುಣ್ಮಿ ಪೊಣ್ಮೆ ಕುಟಿಲಾಲಕಮಂ ಪಿಡಿದೀಱ್ದು ತಂದು ಮಂಡೋದರಿಯಂ (ಪಂರಾಮಾ. ೧೪-೧೦೩). **ಕುಟಿಳಾಳಕ**: ಸಾಂದ್ರಾಜಿಸಲ್ಕೆ ಪರಪಿದ ಕುಟಿಳಾಳಕದೊಳ್ ತಗುಳ್ದ ಶೀತೋದಕಮೆನೆ ಕರ್ಬುರಿತವಾಗಿ (ಶಾಂತಿಪು. ೧೦-೫೩). [ಕುಟಿಲ + ಅಲಕ]

**ಕುಟಿಲಾಶಯ, ಕುಟಿಳಾಶಯ** (ನಾ). ೧. ಕೆಟ್ಟಮನಸ್ಸು; ವಕ್ರವಾದ ಬುದ್ಧಿ: (ಕಿ). **ಕುಟಿಳಾಶಯ**: ೨. ವಕ್ರಬುದ್ಧಿಯುಳ್ಳವನು: "ಕುಚರಃ, ಕುಟಿಳಾಶಯಃ – ಈ ೨ ವಕ್ರಬುದ್ಧಿ" (ಹಲಾಯು. ೬೪-೨೩೫). [ಕುಟಿಲ + ಆಶಯ]

**ಕುಟಿಲಾಳಕಿ, ಕುಟಿಳಾಳಕಿ** (ನಾ). ಗುಂಗುರುಕೂದಲನ್ನುಳ್ಳವಳು: ಕುಟಿಲಾಳಕಿಯ ಚಂದ್ರಮುಖಿಯ ವರವಟಫಲಾಧರೆಯ (ಉದ್ಭದೇ. ೩-೬). **ಕುಟಿಳಾಳಕಿ**: ಅರೆಬರ್ ಕುಟಿಳಾಳಕಿಗೊಲ್ದು ಕಂಕಣಂಗಳ ನಿಟ್ಟರ್ (ಪುಷ್ಪಪು. ೮-೫೬). [< ಸಂ. ಕುಟಿಲಾಲಕಾ]

**ಕುಟಿಲೆ** (ನಾ). ೧. ಮೋಸಗಾರ್ತಿ; ಕಪಟಸ್ವಭಾವದವಳು: ದಿಟ್ಟೆಯರು ಕುಟಿಲೆಯರು ಕುಹಕದ ಘಟ್ಟಿಯರು (ಬಸಪು. ೪೦-೫೬). ೨. ಒಂದು ಜಾತಿಯ ಗಿಡ: "ಕುಟಿಲೆ ಕಂಟಕಿಯೆನಿಕ್ಕುಂ" (ಮಂಗರಾ. ೪೪-೪೫). [ಸಂ. ಕುಟಿಲಾ]

**ಕುಟಿಲೋದ್ಧಾರ** (ನಾ). ಕುಟಿಲತೆಯನ್ನು ಎತ್ತಿಹಿಡಿಯುವವನು; ಅತಿವಂಚಕ: ಕ್ರೂರರವಗುಣದ ಕುಟಿಲೋದ್ಧಾರರ್ ಪರಮಾರ್ಥ ಮಾರ್ಗ ಕಂಟಕರೂಪರ್. . . ಷಡ್ವಿಧ ಚೋರರ್ ನಡೆತಂದರಿರದೆ ಬೇಹಿಗೆ ಬೇಗಂ (ಹಮ್ಮಾರ. ೨-೧೧೦). [ಕುಟಿಲ + ಉದ್ಧಾರ]

**ಕುಟಿಳ** 'ಕುಟಿಲ' ನೋ.

**ಕುಟಿಳಕುಂತಳ** 'ಕುಟಿಲಕುಂತಲ' ನೋ.

**ಕುಟಿಳಾಶಯ** 'ಕುಟಿಲಾಶಯ' ನೋ.

**ಕುಟಿಳಾಳಕ** 'ಕುಟಿಲಾಲಕ' ನೋ.

**ಕುಟಿಳಾಳಕಿ** 'ಕುಟಿಲಾಳಕಿ' ನೋ.

**ಕುಟೀಚಕ** (ನಾ). ೧. ಸಂನ್ಯಾಸಿಗಳ ನಾಲ್ಕು ಪ್ರಕಾರಗಳಲ್ಲಿ ಒಂದು; ಸಂನ್ಯಾಸ ತೆಗೆದುಕೊಂಡು ತನ್ನ ಮಗನ ಮನೆಯಲ್ಲಿಯೇ ಇದ್ದು ಜೀವನ ಸಾಗಿಸುವವನು: "ಆ ಯತಿಗಳೊಳು ಶಿಖಾಯಜ್ಞೋಪವೀತಿಯಾಗಿ ತ್ರಿದಂಡ ಕಮಂಡಲು ಭಿಕ್ಷಾಪಾತ್ರ ಕಾಷಾಯಾಂಬರ ಪಾದುಕೆಗಳುಳ್ಳಾತನಾಗಿ ... ಸ್ವಜಾತಿಯಲ್ಲಾಗಲಿ ಪುತ್ರ ಬಂಧ್ವಾದಿಗಳಲ್ಲಿಯಾಗಲಿ ಭಿಕ್ಷಾನ್ನಮಂ ಪಡೆದು ಭುಂಜಿಸಿ ಶಿವಯೋಗಿಯಾಗಿರ್ಪಾತನೇ ಕುಟೀಚಕ ಸಂನ್ಯಾಸಿಯಕ್ಕುಂ" (ವಿವೇಕ. ೧೪೫). ೨. ಊರೂರು ಸುತ್ತಿ ಕೊನೆಗೆ ಒಂದು ಕಡೆ ನಿಲ್ಲುವವನು. [ಸಂ.]

**ಕುಟೀರ** (ನಾ). ಗುಡಿಸಿಲು; ಜೋಪಡಿ; ಸಣ್ಣಮನೆ: ನಾಳೆ ಸಾಯಂಕಾಲ ನನ್ನ ಕುಟೀರಕ್ಕೆ ಬರಬಲ್ಲೆಯಾ ತಂಗಿ (ಬಾಣಅ. ೪೦೪); ಎಡಬದಿಗೆ ಇಟ್ಟಿಗೆಯ ಕುಟೀರವೊಂದಿದೆ (ಪುನರು. ೨೭೫). [ಸಂ.]

**ಕುಟೀರಕ** (ನಾ). = ಕುಟೀರ: ಎಱಗಿರ್ದುವು ಷಟ್ಪದಂಗಳುತ್ಕೇಸರ ಕೋಟಿ ಸಂಕಟ ಕುಶೇಶಯ [ಕೋ]ಶ ಕುಟೀರಕಂಗಳೊಳ್ (ಪಂಪಭಾ. ೪-೪೭). [ಸಂ.]

**ಕುಟು** (ನಾ). ಒಂದು ಅನುಕರಣ ಶಬ್ದ; ಹಲ್ಲುಗಳಿಂದ ಕಡಲೆ ಮೊದಲಾದ ಬಿರುಸಾದ ಕಾಳುಗಳನ್ನು ಕಡಿಯುವ ಶಬ್ದ: (ಕಿ).

**ಕುಟುಂಗಕ** (ನಾ). ೧. ಬಳ್ಳಿಮಾಡ; ಲತಾಮಂಟಪ. ೨. ಚಪ್ಪರ; ಹಂದರ. ೩. ಗುಡಿಸಲು. ೪. ಕಣಜ. [ಸಂ.]

**ಕುಟುಂಬ** (ನಾ). ೧. ಮನೆತನ; ವಂಶ. ೨. ಮನೆಯೊಳಗಿರುವ ತಂದೆ, ತಾಯಿ, ಮಕ್ಕಳು ಮೊದಲಾದ ಎಲ್ಲ ಸಂಬಂಧಿಕರು; ಸಂಸಾರ: ಸಿಲ್ಕದ ವಿರೋಧಿ ಕುಟುಂಬಮಿಱುಂಬುಗೊಂಡಡಂಗದ ಖಳರನ್ಯಮಂಡಳದೊಳಿಲ್ಲ (ಪುಷ್ಪಪು. ೫-೫೫); ಇವಂ ತನ್ನಯ ಕುಟುಂಬಮಂ ಸಲಹಲಾಱದೆ ಬಿಟ್ಟು ಪೋದಂ (ಚೆಬಪು. ೫೬-೩೮); ಮಕ್ಕಳಿಗೆ ಕುಟುಂಬವೇ ಮೊದಲ ಶಾಲೆ (ಶಿಕ್ಷದ. ೧೮೩). ೩. ಮನೆಯ ಯಜಮಾನಿ; ಹೆಂಡತಿ: ತಮ್ಮ 'ಕುಟುಂಬ' ನಿನ್ನೆ ರಾತ್ರಿಯೇ ಹುಡುಗಿಯೊಂದಿಗೆ ಊರಿಗೆ ಬಂದು ತಲುಪಿದ್ದಾರೆ (ಇಪ್ಪಕ. ೪೬೫); ತನ್ನ ಕುಟುಂಬ ಚಂದಾಯಮ್ಮಣ್ಣಿಯು ಜೀವನಕ್ಕೆ ಮಾತ್ರ ಸ್ವಲ್ಪ ಉಳಿಸಿಕೊಂಡು (ಒಡೆಕ. ೬೧). [ಸಂ.]

**ಕುಟುಂಬಭರಣ** (ನಾ). ಕುಟುಂಬದ ಪೋಷಣೆ: ಅವರು ಇಂಗ್ಲೀಷು ಕಲಿತಿದ್ದು ಕೇವಲ ಕುಟುಂಬಭರಣಕ್ಕೆಂದು (ರಾಮಾನೆ. ೮೩). [ಕುಟುಂಬ + ಭರಣ]

**ಕುಟುಂಬಲಾಂಛನ** (ನಾ). ಮನೆತನದ ವಿಶಿಷ್ಟ ಗುರುತು: ಅವನು ತಕ್ಷಣವೆ ಕುಟುಂಬಲಾಂಛನ ತುತ್ತತುದಿಯಲ್ಲಿ ಕಾಣುವಂತೆ ... ಜೋಡಿಸಿದನು (ಪುನರು. ೧೧೭). [ಕುಟುಂಬ + ಲಾಂಛನ]

**ಕುಟುಂಬವತ್ಸಲ** (ನಾ). ಹೆಂಡತಿ, ಮಕ್ಕಳ ಮೇಲೆ ಪ್ರೀತಿಯುಳ್ಳವನು: ಅಲ್ಲಿದ್ದ ವಿದ್ಯಾರ್ಥಿಗಳೆಂದರೆ ದೊಡ್ಡದೊಡ್ಡ ಕುಟುಂಬವತ್ಸಲರು (ಸ್ಮೃತಿಚಿ. ೨೯೨). [ಕುಟುಂಬ + ವತ್ಸಲ]

**ಕುಟುಂಬವ್ಯಸನ** (ನಾ). ಕುಟುಂಬದ ವ್ಯಸನ: ಹುಸಿಯದಾಪ್ತನ ಬಹುಕುಟುಂಬವ್ಯಸನವುಳ್ಳನ ಮಾಳ್ಪುದೈ ಭಂಡಾರರಕ್ಷಕನ (ಕುವ್ಯಾಉ. ೩-೯೦). [ಕುಟುಂಬ + ವ್ಯಸನ]

**ಕುಟುಂಬವ್ಯಾಪೃತ** (ನಾ). ತನ್ನ ಮನೆತನವನ್ನು ನೋಡಿಕೊಳ್ಳುವವನು; ಯಜಮಾನ: "ಅಭ್ಯಾಗಾರಿಕಃ, ಕುಟುಂಬವ್ಯಾಪೃತಃ- ಈ ೨ ಮನೆವಾರ್ತೆಯೊಳಿರ್ಪವಂ" (ಹಲಾಯು. ೫೯-೨೦೨). [ಕುಟುಂಬ + ವ್ಯಾಪೃತ]

**ಕುಟುಂಬಸ್ಥ** (ನಾ). ಗೃಹಸ್ಥ; ಹೆಂಡತಿ ಮಕ್ಕಳನ್ನುಳ್ಳವನು; ಕುಟುಂಬವುಳ್ಳವನು. [ಸಂ.]

**ಕುಟುಂಬಿ** (ನಾ). ೧. ಕುಟುಂಬವನ್ನುಳ್ಳವನು; ಮನೆಯ ಯಜಮಾನ; ಗೃಹಸ್ಥ: ಕುಟುಂಬಿಗಳು ತಮ್ಮ ತಮ್ಮ ಸಂಸಾರವನ್ನು ಈ ದೃಷ್ಟಿಯಿಂದ ನೋಡಬಲ್ಲರು (ರಾಮಾನೆ. ೧೧೩). ೨. ಸಂಸಾರವನ್ನು ಚೆನ್ನಾಗಿ ನೋಡಿಕೊಂಡು ಪೋಷಿಸುವವನು: "ವ್ಯಾಪೃತಂ ಕುಟುಂಬಿಯೆನಲ್ಕೆ ಮನೆವಾರ್ತೆಯುಳ್ಳನಕ್ಕುಂ" (ಮಂಗರಾ. ೬೯-೧೨). ೩. ಕೃಷಿಕ; ಭೂಮಿ ಸಾಗುಮಾಡುವ ಒಕ್ಕಲಿಗ: "ಕ್ಷೇತ್ರಾಜೀವಃ . . . ಕುಟುಂಬೀ- ಈ ೫ ಗೆಯ್ವೊಕ್ಕಲಿಗಂ" (ಹಲಾಯು. ೯೪-೪೨೦); "ಕೃಷಿಕಂ ಕುಟುಂಬಿ ಕ್ಷೇತ್ರಾಜೀವಿ ಕರ್ಷಕಂ ಕೃಷಿಯಮಾಳ್ವೊಕ್ಕಲಿಗನಕ್ಕು" (ಮಂಗರಾ. ೧೦೯-೧); ಕ್ರೋಶದ್ವಿಕ್ರೋಶ ಸೀಮಾಭಾಗಯೋಜನ ಪಂಚಶತ ಕುಟುಂಬಿ ಕುಲಾವಿರ್ಭಾವಿತಾಧಮೋತ್ತಮ ಭೇದಂಗಳುಮಂ (ಆದಿಪು. ೮-೬೩ ವ). [ಸಂ. ಕುಟುಂಬಿನ್]

**ಕುಟುಂಬಿಕ** (ನಾ).= ಕುಟುಂಬಿ ೩: ಆ ಹಳ್ಳಿಯ ಒಬ್ಬ ಕುಟುಂಬಿಕನು ಆವನಿಗೆ ಬಳಿಯಲ್ಲಿಯೆ . . . ಒಂದು ಪರ್ಣಶಾಲೆಯನ್ನು ಕಟ್ಟಿಸಿಕೊಟ್ಟಿದ್ದನು (ಬುದ್ಧಜಾ. ೯೬). [ಸಂ.]

**ಕುಟುಂಬಿಗ** (ನಾ). ೧. = ಕುಟುಂಬಿ ೧: ತುಂಬಿದ ಮನೆಯು ಕಿಚ್ಚಿಂಪಾವರಿಸಿಯುಂಗೊಳಲೊಳಗಿಪ್ಪ ಕುಟುಂಬಿಗನು ಮಡದಿಮಕ್ಕಳು ಮೊದಲಾದುವಂ ಬಿಟ್ಟು ತಾನುಳಿದೋಡುವಂತೆ (ವಿವೇಕ. ೧೫). ೨. = ಕುಟುಂಬಿ ೩: ಮಳೆಯು ಬರವನಾರಯ್ವ ಕುಟುಂಬಿಗನಂತೆ (ಪಸಾರ. ೬೩೭-೧೪); ಕುಟುಂಬಿಗನಿಂತೆಂದನೆಮ್ಮಯ್ಯನಯ್ಯನಾದಿಯಾಗಿ ಯಿಾಕೆಯ್ಯನುಳುವೆವು (ಪುಣ್ಯಾಸ್ರ. ೧೨-೧೬ ವ). [< ಸಂ. ಕುಟುಂಬಿಕ]

**ಕುಟುಂಬಿನಿ** (ನಾ). ಮನೆಯ ಒಡತಿ; ಯಜಮಾನಿ; ಹೆಂಡತಿ: ದೇವಿಲನೆಂಬ ಗ್ರಾಮಕೂಟಂಗಂ ಆತನ ಕುಟುಂಬಿನಿ ವಸುಮತಿಗಂ ಧನಶ್ರೀಯೆಂಬ ಮಗಳಾಗಿ ಪುಟ್ಟಿ (ಆದಿಪು. ೩-೩೮ ವ); ನೀಂ ಬೇಪಾದೊಡೆ ನಿನ್ನ ಕುಟುಂಬಿನಿಯುಂ ಕಯ್ಪಿ ಸೊರೆಯ ಕುಡಿಯೇಂ ಮಿಡಿಯೇನೆಂಬಂತೆ ದರಸಿಯಾದಳ್ (ಸುಕುಮಾ. ೪-೨೮). [ಸಂ. ಕುಟುಂಬಿನೀ]

**ಕುಟುಕ**₁ 'ಕುಟಿಕ₁' ನೋ.

**ಕುಟುಕ**₂ (ನಾ). ಒಂದು ಬಗೆಯ ಹಾವು (?): ತೊಡಚಿಯುಟ್ಟುದುದನು ನೀರೊಳು ಕೆಡೆದುದದುಯೆಂಬಾಗ ಕುಟುಕನು ಹಿಡಿದು ಕೊಂಬುದದೊರ್ಮೆ ಮತ್ತಾ ಖಗನು ಬಂದೆಚಿಗೆ ಬಿಡುವುದೆ ಕುಟುಕನು (ಸಾಳ್ವಭಾ. ૨-೮೪). [< ಕುಟುಕು ?]

**ಕುಟುಕಿಸು, ಗುಟುಕಿಸು** (ಕ್ರಿ). ನುಂಗು; ಕುಡಿ: (ಆ). **ಗುಟುಕಿಸು:** "ಥಲತೀತಿ ಗುಟುಕಿಸಿದಪುದೆಂಬುದು" (ಕಾಶಕ್ಯ. ೫೦); ನುಂಗುವಾಗ ಒಂದು ಗುಟುಕಿಸುವಾಗ ಎರಡು (ವಚಶಾ. II, ೨೪೭); ಪುಟದ ಸಕ್ಕರೆಯನು ತನಿವಾಲಿನೊಳು ಸೂಸಿ ಗುಟುಕಿಸುವಂತೆ ಸಂಗೀತಾ (ಭರಚ. ೨೫-೧೨). [ಕುಟುಕು₂ + -ಇಸು₃]

**ಕುಟುಕು**₁, **ಕಟುಕು**₁, **ಕುಡುಕು**₁ (ಕ್ರಿ). ಕುಕ್ಕು; ತಿವಿ; ಚುಚ್ಚು: ಪಿಕಾಳಿ ಕುಟುಕಲ್ ಸೊನೆ ಬಿಂದುಗಳೊಪ್ಪುವಾಪ್ರ ಧಾತ್ರೀಜದಿಂ (ದಶಕು. ೬-೮); ನೇಲ್ವ ನೆಲವಿನೊಳ್ ಮೊಸಗರ್ಗಂದಲಂ ಕಂಡು ಕಡೆಗೋಲಂ ನೆಗಪಿ ಕುಟುಕುವಿನಂ (ಚಕವಂ. ೬೯-೧೦); ತಮಟೆಯನ್ನು ಕಾಯಿಸಿ ನಾಲ್ಕಾರೇಟನು ಕುಟುಕಿ ಆಮೇಲೆ ನಿಲ್ಲಿಸಿ (ಹುಟ್ಟಿಹ. ೧೯). **ಕಟುಕು**₁: ಮುದಿಸೂಳೆಗೊಬ್ಬ ಎಳೆಸೂಳೆ ಕಟುಕಿದಳು (ಜೀವಲ. ೪೪); ಇಷ್ಟೆಲ್ಲ ಹಗರಣ ಮಾಡಿ ಕೊನೆಗೂ ನಾನು ಸಾಧಿಸಿದ್ದು ಇಷ್ಟೇನೆ? ಎಂಬ ಅಸಮಾಧಾನ ಅವಳ ಅಂತರಂಗವನ್ನೇನೂ ಕಟುಕದಿಲ್ಲ (ಹೊಸಕ್ಷಿ. ೪೪). **ಕುಡುಕು**₁: "ಕುಡುಕು – ಚಂಚುಘಾತನೇ (ಕೊಕ್ಕಿನಿಂದ ಕುಕ್ಕು)" ಧಾನ್ಯಾದಿ ದ್ರವ್ಯೇ ಚ (ಗುಟುಕು)" (ಶಮುಧಾ); ಆ ತರುವಿನಲ್ಲಿ ಬೆಂಕಿಯ ಹಣ್ಣುಹುಟ್ಟಿ ಅಪ್ಪುವಿನ ಪಕ್ಷಿ ಬಂದು ಮೆಟ್ಟಿ ಕುಡುಕಲಾಗಿ (ವಚಸಂ. ೫೫೮-೧೪); ಕುಡು[ಪಾಠಾಂ. ಡಿ]ಕಿ ಸವಿದುಟಿಯಂ (ಜಯಕಾ. ೮-೪೫).
[ದೇ. ॥ ತಮಿ. ಕೊಡುಕ್ಕು; ಮಲ. ಕೊಟ್ಟುಕ, ಕೊಡುಕ್ಕ; ತುಳು. ಕೊಪುನಿ; ಕೊಡ. ಕೊಟ್ಟ್; ನಾಯ್ಕಿ. ಕೊರ್ಕ್; ಪರ್ಜಿ. ಕೊಡ್ಕ್]

**ಕುಟುಕು**₂, **ಕುಟುಕ್ಕು**, **ಕುಡುಕು**₃, **ಗುಟಕು**, **ಗುಟುಕು** (ನಾ). ೧. ತುತ್ತು; ಒಂದು ಸಲ ಬಾಯಿತುಂಬ ಹಾಕಿಕೊಳ್ಳುವಷ್ಟು ಆಹಾರ; ಪಕ್ಷಿಗಳು ಮರಿಗಳಿಗೆ ತಮ್ಮ ಚಂಚುವಿನಿಂದ ನೀಡುವ ತುತ್ತು: ಅಂತಾತನೆನಗೆ ಕುಟುಕನಿಕ್ಕಿ ಮಿಕ್ಕುದಂ ತನಗಶನಮಂ ಮಾಡಿ ಜೀವಿಸುತ್ತಮಿರೆಯಿರೆ (ಕಾದಂಪೂ. ೧೩೬); ತಾಯಿಯಿತ್ತ ಕುಟುಕಕೊಂಡು (ಅವರೇ. ೩೦); ಹಂಸೆಗೆ ಪಾಲ್ಗುಡಿಸೆಂಬ ಕೀರಂಗೆ ಕುಟುಕನಿಕ್ಕೆಂಬ (ನಂಬಿರ. ೧೪-೩೬). ೨. ಒಂದುಸಲ ಕುಡಿಯುವಷ್ಟು: ಆ ಮನೆಯಲ್ಲಿ ಒಂದು ಕುಟುಕು ನೀರೂ ಸಿಕ್ಕುವುದಿಲ್ಲ (ರೂಢಿ). **ಕುಟುಕ್ಕು:** ೧. ಸವಳದೆ ಕುಟುಕ್ಕಿನೊಳಗಿಂದ್ರವಾರುಣಿಯ ಬೇರಂ (ಲೋಕೋಪ. ೧೦-೫೩). **ಕುಡುಕು**₃: ೧. ಮಱುದಿವಸಂ ತತ್ತಿಗಳಂಪೆತ್ತು ಬಟಿಕ್ಕೆ ನಿಜಪ್ರಾಣೇಶ್ವರನುಂ ತಾನುಂ ಕುಡುಕಂ ಕೊಳಲಡವಿಗೆ ಪೋಪುದುಂ (ಪಂಚತಂ. ೧೬೦-೪); ತಾಯ ಬಾಯ ಕುಡುಕಂ ಕೊಂಡು (ಅರ್ಧನೇ. ೧-೯೨ ವ); ಉಕ್ಕೆವದಿಂ ಕುಡುಕೆಂದು ತಂದು ಚಂಚೂವಿವರಕ್ಕೆ ಮಾಣಿಕದ ಮುದ್ರಿಕೆಯಂ (ಧರ್ಮನಾ. ೧-೭೩). **ಗುಟಕು:** ೨. ಆ ಬಾವಿಯಲ್ಲಿ ಒಂದು ಗುಟಕು ನೀರೂ ಇರಲಿಲ್ಲ (ರೂಢಿ). **ಗುಟುಕು:** ೧. ಆಶೆಯೆಂಬ ಗು[ಪಾಠಾಂ. ಕು]ಟುಕನಿಕ್ಕಿ ಹೇಸದೆಕೊಂದೆಯಲ್ಲಾ (ಅವಚಂ. ೬-೨೧); ಜಕ್ಕವಕ್ಕಿಗಳು ತಾವರೆಯ ಬೀಜವ ಗುಟುಕಿಕ್ಕಿಕೊಂಬಂತೆ (ಭರಚ. ೧೧-೭೬); ಪ್ರೀತಿಯಿಂ ಗುಟುಕ ಸೆಳೆವಗಿಳಿವಱಿಗಳ ರೀತಿಯ ಕಂಡಳಾ ಕಾಂತೆ (ಕಂನವಿ. ೪-೪೭).
[ದೇ. ॥ ತುಳು. ಗುಟುಕ, ಗುಟುಕು; ತೆಲು. ಗುಟಕ, ಗುಟುಕು, ಗುಡುಕ್ಕು. / ಮರಾ. ಗುಟಕಾ]

**ಕುಟುಕುಗೊಳ್, ಕುಡುಕುಗೊಳ್, ಕುಡುಕುಗೊಳು** (ಕ್ರಿ). ೧. ಕೊಕ್ಕಿನಿಂದ ಕುಟುಕು; ಕುಕ್ಕಿ ತಿನ್ನು; ತುತ್ತುಗೊಳ್ಳು; ಆಹಾರವನ್ನು ಸೇವಿಸು: ನೇಸರ್ಮೂಡಲೊಡನೆ ಗೂಡುಗಳಿಂಗಿಳಿಗಳೆಲ್ಲಂ ಕುಟುಕುಗೊಳಲೆಂದು ಪೋಗೆ (ಕಾದಂಪೂ. ೧೫೦). ೨. ನುಂಗು: ಸಾರ್ತಂದಗಲ್ಚುಚಿರ್ದ ಕಟ್ಟಲೆಯಂ ಕುಟುಕುಗೊಳ್ವ ಕೋಕದ್ವಯಮಂ (ಲೀಲಾವ. ೧೩-೧೩೪); ಮನುಜರಂ ತಡೆಗಡಿದು ಕುಟುಕುಗೊಂಬೆನು ನಿಮಿಷಮಾತ್ರದೊಳು (ಘೋರಾಸು. ೩-೮). **ಕುಡುಕುಗೊಳ್:** ೧. ಕುಡುಕುಗೊಳವೋಪ ಶಕುನಿಗಳೊಡವೋಗಲ್ ಜನಕನಾಜದಿರ್ದೊಡಂ (ಕಾದಂಪೂ. ೧೫೧). **ಕುಡುಕುಗೊಳು:** ೧. ಕುಡುಕು ಗೊಳುತಿರ್ಪ ಪಕ್ಕಿವಿಂಡಂ (ನಳಚಂ. ೫೨೬); ಸಿಡಿದ ಕಣ್ಣಾಲಿಗಳನಾಯಿದು ಕುಡುಕುಗೊಂಡವು ಕಾಗೆಗಳು (ಕುವ್ಯಾಭೀ. ೫-೩೩). [ಕುಟುಕು₂ + ಕೊಳ್₁]

**ಕುಟುಕುಜೀವ** (ನಾ). ಈಗಲೋ ಆಗಲೋ ಹಾರಿಹೋಗಲಿರುವ ಜೀವ; ಕುಟುಕುಟು ಎನ್ನುತ್ತಿರುವ ಜೀವ: ದುರ್ಯೋಧನನಿಗೆ ಇನ್ನೂ ಕುಟುಕುಜೀವ ಅಂಟಿಕೊಂಡಿತ್ತು; ಉಸಿರಾಡುವುದೇ ಕಷ್ಟವಾಗಿ ಸಂಕಟಪಡುತ್ತಿದ್ದನು (ವಚಭಾ. ೩೧೭); ಸಮಸ್ತ ಪಂಡಿತರೂ . . . ಎಲ್ಲಿಯೋ ಮರೆಯಲ್ಲಿ ಕುಟುಕುಜೀವವನ್ನು ಹಿಡಿದಿದ್ದರು (ಭಜ್ಯೋತಿ. ೭೧). [ಕುಟುಕು₂ + ಜೀವ]

**ಕುಟುಕುದಂಬುಲ**, ಕುಡುಕುದಂಬುಲ, ಗುಟುಕುತಂಬುಲ (ನಾ). ಬಾಯಲ್ಲಿ ಬಾಯಿಟ್ಟು ಕೊಡುವ ತಾಂಬೂಲ; ಕುಟುಕು ಕೊಟ್ಟಂತೆ ಕೊಡುವ ತಾಂಬೂಲ: ಲಲನೆ ಬಂದವುರ್ದಪ್ಪಿ ಕುಟುಕು ದಂಬುಲವಿತ್ತು ಕುಸ್ತರಿಸಿದಳು (ಮೋಹತ. ೧೨-೭೦); ಲವಲವಿಕೆಯೊಳೀವ ಕುಟುಕುದಂಬುಲಮೆಂಬುದವರೊಳೊಪ್ಪಿರ್ದುದು (ನಾಗಕು.೫-೨೧); ನೆರವ ನೇಹಂಗೈವ ಕುಟುಕುದಂಬುಲಕೆ ಬಾಯ್ದೆರೆವ (ನಂದಿಮಾ. ೨೩-೨೩). **ಕುಡುಕುದಂಬುಲ**: ನುಣ್ಣಲ್ಲವ ಪಿಡಿದು ಬಾಯೊಳು ಬಾಯನಿಟ್ಟು ಕುಡುಕುದಂಬುಲಮಮಂ ಸವಿಯಂ ತಟ್ಟುವ ತನಿಗಲೆಯುಪಚರದಿಂ (ಜಯಕಾ. ೨-೫೩); ನುಣ್ಣಲ್ಲವ ಪಿಡಿದು ಬಾಯೊಳು ಬಾಯನಿಟ್ಟು ಕುಡುಕುದಂಬುಲವಿಕ್ಕಿ (ಕುರಾಸಾಂ. ೩೪-೪೭). **ಗುಟುಕುತಂಬುಲ**: ರಂಜಿಪ ರತಿಯೊಳು ಗುಟುಕುತಂಬುಲ ರುಚಿ ಸಂಜೀವನವೆಂದು ತಿಳಿದು (ಮೋಹತ. ೪-೧೦); ಬಿಗಿದಪ್ಪಿ ಮುಡಿವಿಡಿದು ಗುಟುಕುತಂಬುಲವಿಕ್ಕಿ ಜಿಹ್ವೆಯಿಂ ದಣಿಸಬಲ್ಲೆಸು (ಗುಭಚ. ೯-೨೮). [ಕುಟುಕು₂ + ತಂಬುಲ]

**ಕುಟುಕುಮಾತು** (ನಾ). ಚುಚ್ಚುಮಾತು; ಕಟಕಿ: ತನ್ನ ಕುಟುಕು ಮಾತು ಹಿಂಬದಿಯ ಟೀಕೆ ಸಾಗಿಸಿದ್ದ ನಂಜುಂಡ (ಬಣ್ಣಮಾ. ೧೫೫). [ಕುಟುಕು₁ + ಮಾತು₁]

**ಕುಟುಕುಮುಳ್ಳು** (ನಾ). ೧. ಚುಚ್ಚುವ ಮುಳ್ಳು. ೨. (ಅಲಂ) ತೊಂದರೆ; ಕಿರಿಕಿರಿ: "ನನ್ನ ಸ್ವಾತಂತ್ರ್ಯ ನಿಮಗೆ ಕುಟುಕುಮುಳ್ಳಾಗಿದೆಯೇನಪ್ಪಾ?" ಎಂದು ಆಚಾರ್ಯರು ಕೇಳಿದರು (ರಾಗಿಣಿ. ೫). [ಕುಟುಕು₁ + ಮುಳ್ಳು (< ಮುಳ್)]

**ಕುಟುಕ್ಕು** 'ಕುಟುಕು₂' ನೋ.

**ಕುಟುಪು** (ನಾ). (?): ಸಿಡಿಲ ಪೊಡಪು ಘುಡುಘುಡಿಸುತ ಮಿಂಚಿನ ಕುಟುಪು ಮೋಡದಿ ಹೊಳೆ ಹೊಳೆದು ಬಿಡದೆ ಸುರಿವ ಮಳೆಯಲಿ ತರುಮೂಲದಿ ತಡೆದಿರ್ದನಾ ಮುನಿರಾಜ (ಅನಂಚ. ೪-೫೧). [?]

**ಕುಟುರವಕ್ಕಿ** (ನಾ). 'ಕುಟುರ್' ಎಂದು ಧ್ವನಿಮಾಡುವ ಹಕ್ಕಿ; ಪಾರಿವಾಳ (?): ಸಳನಂ ಕುಟುರವಕ್ಕಿಯಂ ಬಿಡದಿರದೆ ಬೆಂಬತ್ತು ತೆಳ್ಪಟ್ಟುತೊಡೆವಂತೆ (ಶ್ರೀರಾಮಾ. ೨೪೯-೫೬೪). [<ಕುಟುರು₂+ ಪಕ್ಕಿ₁]

**ಕುಟುರು₁** (ಕ್ರಿ). ಪಾರಿವಾಳದ ಹಾಗೆ ಧ್ವನಿಮಾಡು: ನಾರಾಯಣ ಆಕೆಯ ಕಿವಿಯೊಳಕ್ಕೇ ಕುಟುರುತ್ತಿದ್ದ (ರಂಗವ. ೨೩). [?]

**ಕುಟುರು₂**, ಗುಟರು, ಗುಟುರು₂, ಗುಟ್ರು (ನಾ). ೧. ಪಾರಿವಾಳ ಮೊದಲಾದ ಪಕ್ಷಿಗಳ ಕೂಗು: ಮಾಡಿನ ಸೂರಿನ ಮೇಲಿದ್ದ ಕಾಗೆ ಕುಟುರು ಹಾಕಿದಾಗಲೇ "ಏಕೋ ಅಪಶಕುನದ ಸೂಚನೆ ಕಾಣುತ್ತಿದೆ" ಎಂಬ ಭಯ ಅವನನ್ನು ಆವರಿಸಿತು (ಪದ್ಮಸ. ೧೬೭). ೨. ಎತ್ತು ಅಥವಾ ಹೋರಿಯ ಡುರುಕು. **ಗುಟರು**: ೨. ಬಸವಣ್ಣನ ಮುಂದೆ ಹುಲ್ಲು ಹಾಕಿಸಲು ಅದು ಅದನ್ನು ತಿಂದು ತೇಗಿ ಗುಟರು ಹಾಕಿತೆಂದು ಹೇಳುತ್ತಾರೆ (ಭಜ್ಯೋತಿ. ೧೫೩). **ಗುಟುರು₂**: ೨. ಗುಟುರು ಹಾಕುವಂತೆ ಹೂಂಕಾರ ಮಾಡಿದನು (ಎಳೆಕ. ೨೫); ಮೃಗಶಿರ ಮಳೆ ಬಿದ್ದರೆ ಮುದಿಯೆತ್ತು ಗುಟುರು ಹಾಕುತ್ತದೆ (ಗಾದೆ). **ಗುಟ್ರು**. 'ಗುಟ್ರರಿಕೆ' ಪರಾ. [?. / ತುಳು. ಕುಟ್ರು]

**ಕುಟುರು₃**(ನಾ). ಉಬ್ಬಿದ ಕೆನ್ನೆ; ಕೆನ್ನೆಯ ಮೇಲ್ಭಾಗ ಉಬ್ಬಿರುವಿಕೆ: ಅವಳ ಮುಖದಲ್ಲಿ ಕುಟುರು ಎದ್ದು ಕಾಣುತ್ತಿತ್ತು (ರೂಢಿ). [?]

**ಕುಟ್ಟಕ** (ನಾ). ೧. ಗುಣಿಸುವ ಸಂಖ್ಯೆ. ೨. ಒಂದು ಬಗೆಯ ಗಣಿತ: ಈಗ ನಾವು ಬೀಜಗಣಿತವೆಂದು ಕರೆಯುವುದನ್ನು ಬ್ರಹ್ಮಗುಪ್ತನು ಕುಟ್ಟಕವೆಂದು ಕರೆದಿದ್ದಾನೆ (ಗಣಿಚ. ೨೪೧). ೩. ಪುಡಿಮಾಡುವುದು: ಕುಟ್ಟಕ ಎಂದರೆ ಪುಡಿಮಾಡುವುದು (ಗಣಿಚ. ೨೪೧). ೪. ಪುಡಿಮಾಡುವವನು. [ಸಂ.]

**ಕುಟ್ಟಕ್ಕಿ** (ನಾ). ೧. ಕುಟ್ಟಿದ ಅಕ್ಕಿ: ಎಲೆಗಳಿಂದೆಯುಂ ಕುಟ್ಟಕ್ಕಿಗಳಿಂದೆಯುಂ ಪಲ್ಲಳಿಂದಂ ಸುಲಿದ ಧಾನ್ಯಂಗಳಿಂದೆಯುಂ. . .ದೇಹಧಾರಣೆಯ ನೆಸಗುತ್ತಂ(ಭಾರಶಾಂ.೧೭-೧೧೫); ಪಟ್ಟಣದಹಾದೀಲಿಕುಟ್ಟಕ್ಕಿತೊಳ್ಳೋಳೆ (ಹುಟ್ಟಹ. ೫೭). ೨. ಒಂದು ಬಗೆಯ ಗಿಡ: "ದುಗ್ಧಬೀಜ – ಹಾಲು ಗುಂಬಳ, ಕುಟ್ಟಕ್ಕಿ" (ಓಷಧಿ. ೭೮). [ಕುಟ್ಟು₁ + ಅಕ್ಕಿ₁]

**ಕುಟ್ಟಣ**, ಕುಟ್ಟಣಿ₁, ಕುಟ್ಟಾಣಿ (ನಾ). (ಎಲೆ ಅಡಕೆಯನ್ನು) ಕುಟ್ಟುವ (ಹಿತ್ತಾಳೆ ಅಥವಾ ಕಬ್ಬಿಣದ) ಸಾಧನ. **ಕುಟ್ಟಣಿ₁**: "ಕುಟ್ಟಣಿ, ಒರಳಿನಲ್ಲಿ ಅಥವಾ ಕಲಬತ್ತಿನಲ್ಲಿ ಕುಟ್ಟುವುದಕ್ಕೆ ಬಳಸುವ ಮೋಟು ಹಾರೆಯಂತಹ ಒಂದು ಸಲಕರಣೆ" (Pestle. ಇಂಕನಿ). **ಕುಟ್ಟಾಣಿ**: ಎಲೆ ಅಡಿಕೆಯ ಕುಟ್ಟಾಣಿಯನ್ನು ಅಲ್ಲಿಯೇ ಬಿಟ್ಟು ಅವಳು ಒಳಗೋಡಿದ್ದಳು (ಅಲ್ಪವಿ. ೧೬೨). [< ಸಂ. ಕುಟ್ಟನ]

**ಕುಟ್ಟಣಿ₁** 'ಕುಟ್ಟಣ' ನೋ.

**ಕುಟ್ಟಣಿ₂** (ನಾ). = ಕುಂಟಣಿ. [< ಸಂ. ಕುಟ್ಟನೀ, ಕುಟ್ಟಿನೀ]

**ಕುಟ್ಟಣಿಗೆ** (ನಾ). = ಕುಟ್ಟಣ: ಮುದುಕನು ಕುಟ್ಟಣಿಗೆಯಿಂದ ಎಲೆ ಅಡಕೆ ಕುಟ್ಟಿಕೊಳ್ಳುತ್ತ ಕುಳಿತಿದ್ದನು (ರೂಢಿ). [ಕುಟ್ಟಣಿ₁ + -ಗೆ]

**ಕುಟ್ಟನ** (ನಾ). ೧. ಕುಟ್ಟುವಿಕೆ. ೨. ಕತ್ತರಿಸುವಿಕೆ: ಕುಟ್ಟನ . . . ದುರ್ಭೋಗ್ಯ ನಾನಾ ವಿಧಾ ಸಂಖ್ಯಾತತೀವ್ರ ವೇದನಾರೂಪಂಗಳಾಗಿ (ವಿವೇಕ. ೧೪೧); ನಿಲಿಸೀ ರಂಗದ್ವಾರಕೆ ಬಲಕೃಷ್ಣರ್ ಬರ್ಪುಮವರನೀ ಯಾನೆಯ ಕೈಗೊಲೆ ಕೋಟ್ಟಳಿಜಿತದಿಂ ಪದತಲ ಕುಟ್ಟನದಿಂದಮಟಿವ ನೆಯ್ದಿಸು (ವಿಷ್ಣುಪು. ೫-೫-೨೦). [ಸಂ.]

**ಕುಟ್ಟಮಿತ** (ನಾ). [ಕಾವ್ಯಮೀ] ನಾಯಿಕೆಯ ಹತ್ತು ಬಗೆಯ ಶೃಂಗಾರ ಭಾವಗಳಲ್ಲಿ ಒಂದು; ತನ್ನ ಪ್ರಿಯಕರನ ಚೇಷ್ಟೆಗಳಿಗೆ ಒಳಗೊಳಗೆ ಸಂತೋಷ ಪಡುತ್ತಿದ್ದರೂ ವಿರೋಧವನ್ನು ವ್ಯಕ್ತಪಡಿಸುವಿಕೆ: ಅದಯಾಲಿಂಗನ ದಂತಚ್ಛದ ಕೇಶಗ್ರಹಣಮತನುಕೇಳೀ ವಿಭವಂ ಮೃದು ಕಠಿನಾತ್ಮಕಮಂತದು ಸುದತಿಗೆ ಕುಟ್ಟಮಿತಮೆಂಬ ಪೆಸರಂ ಪಡೆಗುಂ (ಶೃಂಗಾರ. ೨-೭೨). [ಸಂ.]

**ಕುಟ್ಟರಿ**, ಕುಟರಿ (ನಾ). ಕುಪ್ಪೆ; ರಾಶಿ; ಗುಪ್ಪೆ: ಹೊಲದ ಮಧ್ಯದಲ್ಲಿ ಕಲ್ಲು ಕುಟ್ಟರಿಗಳನ್ನು ಹಾಕಬಾರದು (ಕೃಷಿಪ್ರ. ೪೧); ಹೊಟ್ಟಿನ ಕುಟ್ಟರಿಯ ಎಡಭಾಗದಲ್ಲಿಟ್ಟು ಪೂಜೆಮಾಡಿ (ಕನ್ನಜಾ. ೧೬೨). **ಕುಟರಿ**: ಹೊಲದ ಮಧ್ಯದಲ್ಲಿ ಕಲ್ಲು ಕುಟರಿ . . . ಮುಳ್ಳಗಲಕಂಟಿ ಮುಂತಾದ ಗಡಿಗಳಿದ್ದರೆ (ಕೃಷಿಪ್ರ. ೨೫). [< ಕುತ್ತಜೀ ?]

**ಕುಟ್ಟವಳಿ** (ನಾ). ಹುಟ್ಟುವಳಿ (?): ಈ ಗ್ರಾಮುಗಳು ರೇಖಿಪ್ರಮಾಣಿಗೆ ನಷ್ಟವಾದ ಸಂಬಂಧ ರೂಪುವಮಾಡಿ ಕುಟ್ಟವಳಿಯಮಾಡಿಕೊಂಡ ಈ ಇಂನೂರ ಇಪ್ಪತ್ತೆರಡು ವರಹನನೂ ಪೂರೈಸಿಕೊಂಡು (ಎಕ. VII, ಶಿವಮೊ. ೨-೧೨೩; 1641). [?]

**ಕುಟ್ಟಹಾರಿಕೆ**(ನಾ). = ಕುಟಹಾರಿಕೆ: (೬). [< ಸಂ. ಕುಟಹಾರಿಕಾ]

**ಕುಟ್ಟಾಣಿ** 'ಕುಟ್ಟಣ' ನೋ.

**ಕುಟ್ಟಿ₁** (ನಾ). ಮಗು; ಹುಡುಗ: ಸ್ವಸ್ತಿಶ್ರೀ ಸಿಯುಗೆಲ್ಲ ಉರಾಳ್ಪಿಕೆಜೂಗ್ರೋಳೆ ಅ××× ಕುಟ್ಟಿ ಬಾಗೆ ಊರೇಱುಸುಳ್ಳೆಱಿದು ವಿಜ್ಜಾರ್ (ಎಕ. XVI, ತುಮುಕೂ. ೯೯-೪; 780); ಏನು ಮಾಡಿದರೂ ಈ ಭಿಲ್ಲರ ಕುಟ್ಟಿಗಳ ಹೆಮ್ಮೆ ಹಾರಾಟಗಳನ್ನು ನಿಲ್ಲಿಸುವುದಕ್ಕೆ ಆಗುವುದಿಲ್ಲವಲ್ಲ (ಕೋಟಿಚ. ೩೨). [ದೇ. || ತಮಿ. ಮಲ. ತುಳು. ಕೊಡ. ಕುಟ್ಟಿ]

**ಕುಟ್ಟಿ₂** (ನಾ). (ಕರಾ) ಚಿಕ್ಕಗೂಟ; ಬೆಣೆ; ಚಿಣ್ಣಿ: ಆ ತೂತುಗಳೊಳಗೆ ಅಡ್ಡ ಸೇರುವಂತೆ ನಾಲ್ಕೈದು ಗಟ್ಟಿಯಾದ ಕೋಲುಗಳು. ಅವುಗಳನ್ನು ಬಿಗಿಯಲು ಬೇರೆ ಸಣ್ಣ ಸಣ್ಣ 'ಕುಟ್ಟಿ'ಗಳು (ರಕ್ತರೂ. ೨). 'ಕುಟ್ಟಿದೊಣ್ಣೆ' ಪರಾ. [← ತುಳು. ಕುಟ್ಟಿ]

**-ಕುಟ್ಟಿ$_3$** (ನಾ). = -ಕುಟಿಗ$_1$. 'ಮರಕುಟ್ಟಿ' ಪರಾ. [ಕುಟ್ಟು$_1$ + -ಇ$_2$]

**ಕುಟ್ಟಿಕೆ$_1$** (ನಾ). ಕುಟ್ಟುವಿಕೆ : (ಕಿ). [ಕುಟ್ಟು$_1$ + -ಇಕೆ]

**ಕುಟ್ಟಿಕೆ$_2$**, ಕುಟ್ಟಿಗೆ (ನಾ). ಕುದುರೆಯ ದೇಹದ ಒಂದು ಭಾಗ : ನವಮಾಸದೊಳಗೆ ಮಧ್ಯಂ ಧವಳಚ್ಛವಿಯಾಗೆ ಮಧ್ಯಮೋತ್ತಮವೆರಡುಂ ಧವಳಂಗಳಾಗೆ ಕುಟ್ಟಿಕೆಲವು, ನಿಡಿಯುವು (ಅಶ್ವವೈ. ೫-೧೦) ; ತಳದೊಳು ಕುಟ್ಟಿಕೆಯೊಳು ಬಾಯಲ್ಲಿ ಕಂಕುಳಲ್ಲಿ ಕಣ್ಣನೀರು ಬಿಡುವ ಠಾವಿನಲ್ಲಿ (ಅಶ್ವವೈ. ೧೩-೨೧ ಟೀಕು). **ಕುಟ್ಟಿಗೆ** : ಬಿದಿರದು ಮೈಯನಣಂ ತಾಂ . . . ಕುಟ್ಟಿಗೆಯುಂ ತಾಂ ಬಲಿವುತಿರ್ದಡಂತದು ಮರಣಂ (ಅಶ್ವವೈ. ೭-೬೫). [?]

**ಕುಟ್ಟಿಗ** (ನಾ). ಒಂದು ಬಗೆಯ ಆಟ; ಲಾಗ ಹಾಕುವುದು : ಗುಡುಗು ಗುತ್ತಿನ ಚಂಡು . . . ನಿಡುಗವಣೆ ಕೆಡಹು ಕುಟ್ಟಿಗನಾದಿಯಾದವ ಗಡ ವಿನೋದದಲಾಡಿದರು (ಕುವ್ಯಾಅ. ೬-೨). [?]

**ಕುಟ್ಟಿಗೆ** 'ಕುಟ್ಟಿಕೆ$_2$' ನೋ.

**ಕುಟ್ಟಿಚಾತ** (ನಾ). ಒಂದು ಬಗೆಯ ಕ್ಷುದ್ರ ದೇವತೆ; ಜಕ್ಕಿಣಿ. 'ಕುಟ್ಟಿಚಾತ ವಿದ್ಯೆ' ಪರಾ.
[ದೇ. ‖ ತಮಿ. ಮಲ. ಕುಟ್ಟಿಚ್ಚಾತ್ತ]

**ಕುಟ್ಟಿಚಾತವಿದ್ಯೆ** (ನಾ). ಮಾಯಾವಿದ್ಯೆ; ಇಂದ್ರಜಾಲ; ಕಣ್ಕಟ್ಟು : (ಕಿ). [ಕುಟ್ಟಿಚಾತ + ವಿದ್ಯೆ]

**ಕುಟ್ಟಿತ** (ಗು). ೧. ಕುಟ್ಟಿ ಪುಡಿಮಾಡಿದ; ಚೂರುಮಾಡಿದ. ೨. ಚಪ್ಪಟೆಗೊಳಿಸಿದ : (ಕಿ). [ಸಂ.]

**ಕುಟ್ಟಿತತೋರಣ** (ನಾ). ಚಪ್ಪಟೆಯಾಗಿರುವ ತೋರಣ; ಹಲಗೆ ತೋರಣ : ಇದರ ಕುಟ್ಟಿತತೋರಣದಲ್ಲಿ ದಶಾವತಾರಗಳಿವೆ (ಹೊಯ್ಸವಾ. ೪೭). [ಕುಟ್ಟಿತ + ತೋರಣ]

**ಕುಟ್ಟಿದಾಣೆ** 'ಕುಟ್ಟಿದೊಣ್ಣೆ' ನೋ.

**ಕುಟ್ಟಿದೊಣ್ಣೆ**, ಕುಟ್ಟಿದಾಣೆ (ನಾ). (ಕರಾ) ಚಿಣ್ಣಿಕೋಲು : ಅವರ ಪ್ರೀತಿಯ ಆಟ 'ಕುಟ್ಟಿದೊಣ್ಣೆ' ಆಡುವರು (ಹೋರಾಟ. ೨). **ಕುಟ್ಟಿದಾಣೆ** : ಈ ಕುಟ್ಟಿದಾಣೆಯು ಬಡಿದಾಟವು ಕ್ರಿಕೇಟಂತೆ. ಹಳ್ಳಿಯ ಗೋಪಾಲಕರು ಈ ಆಟವನ್ನು ಆಡಿದರೆ ಕುಟ್ಟಿದಾಣೆಯಂತೆ (ಕುಟ್ಟಿದೊ. ೩೪). [ಕುಟ್ಟಿ$_2$ + ದೊಣ್ಣೆ]

**ಕುಟ್ಟಿನಿ** (ನಾ). = ಕುಂಟಣಿ : ಕುಟ್ಟನಿ ಕೆಯ್ಗಳಂ ಮುಜಿದು ಬಯ್ದಳ ನಂಗನಂ (ಅರ್ಧನೇ. ೪-೧೫೦) ; ಕೆಳೆಯಿಂ ಮನೆವಾೞ್ತಿಗೆಯ್ಗೆ ಮೇಣೀವನುಮಕ್ಕೆ ಪೞಿಯೊಳೆ ಪಟ್ಟರೆ ಕುಟ್ಟನಿಯುಟ್ಟದಿಕುರ್ಮೆ (ಚಕವಿ. ೬-೯೭). [ಸಂ. ಕುಟ್ಟಿನೀ]

**ಕುಟ್ಟಿಮ** (ನಾ). ಸಮಮಾಡಿದ ನೆಲ; ನೆಲಗಟ್ಟು ; ಬಗೆಬಗೆಯ ಕಲ್ಲುಗಳನ್ನು ಹೊಂದಿಸಿದ ನೆಲಗಟ್ಟು : "ಕುಟ್ಟಿಮಂ, ಬದ್ಧ ಭೂಮಿಕಂ -ಈ ೨ ನೆಲಗಟ್ಟು" (ಹಲಾಯು. ೪೯-೧೩೯) ; ಇಂದ್ರನೀಲಮಣಿ ಕುಟ್ಟಿಮ ಸಂಕ್ರಾಂತ ಮೌಕ್ತಿಕಧಾಮಾಭಿರಾಮದೊಳ್ (ಆದಿಪು. ೮-೬೭ವ) ; ಹರಿನೀಳರತ್ನ ಕುಟ್ಟಿಮದೊಳ್ ದಟ್ಟಡಿಯಿಡುವ ತನೂಭವಂ (ಮಲ್ಲಿಪು. ೩-೧೧೮); ಮರಕತಮಣಿ ಕುಟ್ಟಿಮದೊಳ್ (ನೇಮಿಪು. ೮-೯೬). [ಸಂ.]

**ಕುಟ್ಟಿಮಂಬೊರೆ** (ಕ್ರಿ). ನೆಲಗಟ್ಟನ್ನು ರಚಿಸು : ದೇವಕಾರುಕಂ ಪರುಷದಱಿಯಿಂ ಕುಟ್ಟಿಮಂಬೊರೆದು ತಾರಾಳಿಯಿಂ ಮಿಱುಪ ಕುಡ್ಯಮನೊಡರ್ಚೆ (ಮದೇಪು. ೧-೩೦). [ಕುಟ್ಟಿಮ + ಪೊರ್ೆ$_2$]

**ಕುಟ್ಟಿಮತಂತ್ರ** (ನಾ). ಬಿಂಬಾಗಮದ ಹದಿನೈದು ಭೇದಗಳಲ್ಲಿ ಒಂದು : ಚತುರ್ಮುಖತಂತ್ರ . . . ತುಲಾಯೋಗ ಕುಟ್ಟಿಮತಂತ್ರ ಸರ್ವಶೇಖರಮಹಾವಿದ್ಯೆ ಮಹಾಸಾರವೆಂದು ಬಿಂಬಾಗಮದ ಹದಿನೈದು ಭೇದಂಗಳು (ವಿವೇಕ. ೭೧). [ಕುಟ್ಟಿಮ + ತಂತ್ರ]

**ಕುಟ್ಟಿಸು** (ಕ್ರಿ). ಕುಟ್ಟುವಂತೆ ಮಾಡು ; ಹೊಡೆಯಿಸು : ಕುಟ್ಟಿಸಿದಂ ವೆಂಟಿಸಿದಂ (ಶಮದ. ಮ. ೨೩೧ ಪ್ರಯೋ) ; ಘೋರ ಮೃತ್ಯುವಿನ ಕೈಭತ್ತ ಕುಟ್ಟಿಸುವರು (ಪುರಂದ. ೧-೧೪೫-೩) ; ಕುಟ್ಟಿಸಿದನಾನಂದ ಭೇರಿಯಂ ರಾಮಚಂದ್ರಮನು (ಜಿರಾಮಾ. ೩೨೯-೬).
[ಕುಟ್ಟು$_1$ + -ಇಸು$_3$]

**ಕುಟ್ಟು$_1$** (ಕ್ರಿ). ೧. ಹೊಡೆ; ಬಡಿ; ಗುದ್ದು ; ಚಚ್ಚು ; ಬಾರಿಸು : "ಕುಟ್ಟು - ತಾಡನೇ" (ಶಮುಧಾ) ; ಸುಭಟರಟ್ಟಿಗಳನೆಬ್ಬಟ್ಟಿ ಕುಟ್ಟುವ ತೊಂಡು ಮರುಳ್ಗಳುಂ (ಪಂಪಭಾ. ೧೦-೧೧೬ ವ) ; ಕಟ್ಟು ಕುಟ್ಟು ಕಡಿ ಸೀಳ್ ಕೊಲ್ (ಪುಷ್ಪಪು. ೧೩-೩೯); ನಿಶ್ಶಂಕನೆಂತಹ ಬಲ್ಲಿದರನಱಿಯಟ್ಟಿ ಕುಟ್ಟುವನು (ಬಸವು. ೨೧-೧೫) ; ಮಸ್ತಕದಲಿ ಕುಟ್ಟಿದ ಗದೆಯ ಗಾಯದಲಿ (ಮೋಹತ. ೧೨-೭೩) ; ತುರುಕರ ಮಾರ್ಬಲವ ಕುಟ್ಟಿ ಕೋಳಾಹಳಿಸುವೆನು (ಕಂನವಿ. ೧೨-೮೪). ೨. ಹೇಳು ; ಗಟ್ಟಿಯಾಗಿ ಉಚ್ಚರಿಸು : ಕಟ್ಟಿಗೆಕಾಜರು ದೊರೆಗಳ ನಾಮವ ಕುಟ್ಟಿ ಕಾಣಿಸಿದರೇನೆಂಬೆ (ಭರಚ. ೩೯-೨೦). 'ಗೊಣಗುಟ್ಟು', 'ಬುಸುಗುಟ್ಟು', 'ಮಾತುಗುಟ್ಟು', 'ವಟಗುಟ್ಟು' ಪರಾ. ೩. ಏತ, ಒನಕೆ ಮೊದಲಾದುವುಗಳಿಂದ ಏಟುಹಾಕಿ; ಬತ್ತದ ಹೊಟ್ಟು ತೆಗೆ : ಬಿಡದುಯ್ಯಂ ಕುಟ್ಟಿ ಪಡೆದಕ್ಕಿಯುನಱಿಸುವ ಬೆಳ್ಪನುವಂ (ಧರ್ಮಾಮೃ. ೬-೧೬೮) ; ವೇದಶಾಸ್ತ್ರ ಪುರಾಣಾಗಮಂಗಳೆಲ್ಲ ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿ ಭೋ ಇವ ಕುಟ್ಟಲೇಕೆ (ಮಹಾದೇ. ೧೯-೩) ; ಒಣಗಿಸಿ ಕುಟ್ಟಲ್ ನುಚ್ಚಾಗದಂತೆ (ದಶಕು. ೧೨-೧೧೯) ; ಬಿದಿರಕ್ಕಿಯನು ತಂದು ಕುಟ್ಟಿಯೋಗರವಟ್ಟು (ನೇಮಿಸಂ. ೨-೯೭) ; ಪಟ್ಟಣಕ್ಕೆ ಹೋದರೂ ಕುಟ್ಟೋದು ತಪ್ಪದು (ಗಾದೆ).
[ದೇ. ‖ ತಮಿ. ಮಲ. ತುಳು. ತೆಲು. ಕುಟ್ಟು]

**ಕುಟ್ಟು$_2$** (ನಾ). ೧. ಹೊಡೆತ; ಪೆಟ್ಟು : ಎಲ್ಲಿ ನೋಡಿದರಲ್ಲಿ ಕೊಲೆ ಕುಟ್ಟು ಕಳವುಗಳ್ (ತುರಂಗ. ೯೧-೭). ೨. ಅಜೀರ್ಣ ಮೊದಲಾದುವುಗಳಿಂದ ಕರುಳಿನಲ್ಲಾಗುವ ನೋವು; ಕಚ್ಚು ಹಿಡಿದು ಕೊಳ್ಳುವುದು. 'ಕುಟ್ಟುಹಿಡಿ' ಪರಾ. ೩. ಪುಡಿ ; ಚೂರ್ಣ. [< ಕುಟ್ಟು$_1$]

**ಕುಟ್ಟುವನಿ** (ನಾ). ಕುಟ್ಟುವ ಹನಿ; ಜಡಿಮಳೆ : ಮರಕತದ ಮಳೆಗಱೆಯೆ ಮಾಣಿಕದ ಹನಿ ಹನಿಯೆ . . . ಗೋಮೇಧಿಕದ ಕುಟ್ಟುವನಿ ಬೀಳೆ ಹರಿನೀಲರತ್ನಂಗಳಾ ಸರಿ ಕುಟ್ಟಿ ವೈಡೂರ್ಯ ಮಣಿಯ ಬೆಳ್ಸರಿ ಹುಯ್ಯೆ (ಸಮ್ಯಕೌ. ೭-೩೪). [ಕುಟ್ಟು$_1$ + ಪನಿ$_2$]

**ಕುಟ್ಟುಹ** (ನಾ). ಕುಟ್ಟುವಿಕೆ. 'ಪಲ್ಗುಟ್ಟುಹ', 'ಪೊಪ್ಪುಗುಟ್ಟುಹ' ಪರಾ. [ಕುಟ್ಟು$_2$ + -ಹ$_2$]

**ಕುಟ್ಟುಹಿಡಿ** (ಕ್ರಿ). ಕರುಳು ಹಿಸುಕಿದಂತಾಗಿ ನೋವಾಗು : ನಕ್ಕು ನಕ್ಕು ಹೊಟ್ಟೆ ಕುಟ್ಟುಹಿಡಿಯಿತು (ಎರಸೆ. ೬೪) ; ಸ್ಟೇಶನ್ನು ಹತ್ತಿರ ಬಂದಂತೆ ನನ್ನ ಮತ್ತು ದತ್ತೂನ ಹೊಟ್ಟೆ ಕುಟ್ಟುಹಿಡಿದಂತಾಯಿತು (ಸ್ಮೃತಿಚಿ. ೨೫೦). [ಕುಟ್ಟು$_2$ + ಹಿಡಿ$_1$ (< ಪಿಡಿ$_1$)]

**ಕುಟ್ಟೆ**, ಕಟ್ಟೆ$_3$ (ನಾ). ೧. ಮರವನ್ನು ಕೊರೆದು ಹುಡಿಮಾಡುವ ಹುಳು : ವಿಷಯಪ್ರವೃತ್ತಿಯುಂಟಾದರೆ ಕುಟ್ಟೆಹಿಡಿದಹಾಗೆ; ಅರ್ಥ ಪದಾರ್ಥವನ್ನು ಎಲ್ಲಿ ಎಸೆದರೂ ಅದನ್ನು ಒಳಗಿಂದ ಕುಟ್ಟೆ ತಿಂದು ಲೊಡ್ಡು ಮಾಡುತ್ತಲೇ ಇರುತ್ತದೆ (ಬಂಕಿಮ. ೩೨೫) ; ಕೂತದ್ದು ಕುಟ್ಟೆ ಗೇದದ್ದು ಚೀಗು (ಗಾದೆ). ೨. (ಆಲಂ) ಹಾಳಾಗುವಿಕೆ ; ನಾಶವಾಗುವಿಕೆ : ರಾಜಶಕ್ತಿಯ ಮೂಲಕ್ಕೇ ಕುಟ್ಟೆ ಹಿಡಿದಿದೆ (ಬಾಣಅ. ೩೪೫). **ಕಟ್ಟೆ$_3$** : ೧. ಬಿದಿರಿಗೆ ಕಟ್ಟೆ ಹಿಡಿಯಿತು (ರೂಢಿ).
ಕುಟ್ಟೆಹುಡಿ = ಕುಟ್ಟೆಹುಳು ಹಿಡಿದು ಉದುರುವ ಪುಡಿ.
[← ತುಳು. ಕುಟ್ಟೆ]

**ಕುಟ್ವೆಗೊಳ್** (ಕ್ರಿ). ಹುಳುಹಿಡಿದು ಟೊಳ್ಳಾಗು; ಲೊಡ್ಡಾಗು: ಬಲ್ಲವಗೀ ತನು ಸ್ಥಿರವಲ್ಲ ಕುಟ್ವೆಗೊಂಡಲ್ಲವ್ವೆಯೆಂದನಾ ಚಕ್ರಿ (ಭರಚ. ೭೬–೩೪). [ಕುಟ್ವೆ + ಕೊಳ್$_1$]

**ಕುಟ್ವೆಗೋಲ್** (ನಾ). ಚರ್ಮದ ಪಟ್ಟೆ (?): "ಕು [ಪಾಠಾಂ. ಅ] ಟ್ವೆಗೋಲ್ ಬಾರಡಮದಕ್ಕು" (ಮಂಗರಾ. ೧೧೨–೩). [ಕುಟ್ವೆ ? + ಕೋಲ್$_1$]

**ಕುಟ್ವೆಫೈಸಲು** (ನಾ). ಪೂರ್ತಿ ತೀರುವಿಕೆ; ಸಂಪೂರ್ಣ ನಾಶ: ಹೀಗಿಯೆ ಆದಲ್ಲಿ ಮುಂದರಿದಲ್ಲಿ ನಾವು ಸಂಪೂರ್ಣ ಕುಟ್ವೆಫೈಸಲು (ವಣ್ಣನಂ. ೫೮). [ಕುಟ್ವೆ ? + ಫೈಸಲ್]

**ಕುಟ್ವೆವುಳು**, ಕುಟ್ವೆಹುಳು (ನಾ). = ಕುಟ್ವೆ$_1$: ಕುಟ್ವೆವುಳು ಕೊಜಿಕೆ ದೊಡೊಂದಕ್ಕರವಾಗಿ ತೋರ್ಪಂತೆ ಏನಾನುಮೊಂದ ಜವೊಲೊಂದಪ್ಪುದು (ಮಿತ್ರಗೋ. ೩೫); ನಿನ್ನಟ್ಟೆಯಲ್ಲು ಕುಟ್ವೆವುಳುಗಳ್ಗಿ . . . ಹೋಟಿಗೆಯಕ್ಕುಂ (ರಾಮಾಶ್ವ. ೮೬–೨೧). **ಕುಟ್ವೆಹುಳು**: ಚಿಂತೆ ಅವನನ್ನು ಕುಟ್ವೆಹುಳುವಿನಂತೆ ಕೊರೆಯುತ್ತಿತ್ತು (ಮುಗವಾಂ. ೯೭). [ಕುಟ್ವೆ + ಪುಳು]

**ಕುಟ್ವೆಹುಳು** 'ಕುಟ್ವೆವುಳು' ನೋ.

**ಕುಟ್ವೊರಳು** (ನಾ). ಕುಟ್ಟುವ ಒರಳು; ಕಲಬತ್ತು; ಕುಟ್ಟಣಿ: ಕುಟ್ವೊರಳಿನಲ್ಲಿ ಅಜ್ಜಿಗಾಗಿ ಎಲೆ ಅಡಕೆ ಹೊಗೆಸೊಪ್ಪು ಸುಣ್ಣ ಎಲ್ಲ ಹಾಕಿ ಕುಟ್ಟುತ್ತಿದ್ದಳು (ಮಲೆಮ. ೭೫೧). [ಕುಟ್ಟು$_1$ + ಒರಳು$_2$ (< ಒರಲ್$_1$)]

**ಕುಟ್ಮಲ**, ಕುಟ್ಮಳ (ನಾ). ೧. ಅರಳುಮೊಗ್ಗು; ನನೆ; ಮುಗುಳು: ಕುಂಕುಮದ ಕುಟ್ಮಲದ ಪದಕದಿಂ (ಕಾದಂಬ. ೭೮೬); ಆದೆ ಮಲ್ಲಿಕಾ ಕುಟ್ಮಲಂ ಸಂಗಗೆಂದೆನುತೆ (ಬಸರ. ೩–೨೫). ೨. [ಛಂದ] ಹದಿನಾಲ್ಕು ಅಕ್ಷರಗಳಿಂದಾಗುವ ಒಂದು ಅಕ್ಷರವೃತ್ತದ ಹೆಸರು: ಕುಟ್ಮಲಮೆಂಬ ವನಮಯೂರಂ–ಭಜಸನಗಗಂ ಯತಿ ಪಂಚಮದೊಳ್ ಅಥವಾ ವಾರುಧಿಯೊಳ್ (ಛಂದೋಂಬು. ೬. ೨–೧೭೫). **ಕುಟ್ಮಳ**: ೧. "ಸಜ್ಜಕಮುಂ ಮುಗುಳು ಮೊಗ್ಗೆ ಕುಟ್ಮಳಮದು ತಾಂ" (ಕವಿಕಂ. ೭೪); ಕುಟ್ಮಳೌಘವಾದುದು ಕುಟಜಂಗಳೊಳ್ (ಜಗವಿ. ೪–೬); ದಿವಿಜನದಿಯ ಕೈರವಂಗಳ ಕುಟ್ಮಳಾವಳಿಗಳೋ (ಹಜಕಾ. ೩–೭೯). [ಸಂ.]

**ಕುಟ್ಮಲಮಯೂರ** (ನಾ). = ಕುಟ್ಮಲ ೨: ಅಂಬುಜರಿಪುದ್ಯುಮಣಿಮಾರುತಬಲಾರಿ ತ್ರ್ಯಂಬಕ ಯುಗಂ ವಿರತಿ ಪಂಚಮದೊಳ್ದಂಡಂಬುರುಹ ಲೋಲನಯನೇ . . . ಕುಟ್ಮಲಮಯೂರಂ (ಛಂದೋಂಬು. ೨–೧೧೨). [ಕುಟ್ಮಲ + ಮಯೂರ]

**ಕುಟ್ಮಲ್ಮ** (ನಾ). = ಕುಟ್ಮಲ: ಕೊಲೆದಿವ್ಯಂ . . . ಅಬ್ಜಕರ್ಣಿಕೆ ಗೃಹಂ ಕುಟ್ಮಲ್ಮ ಕೋಶಾಹ್ವಯಂ (ನಾನಾರ. ೫೩). [?]

**ಕುಟ್ಮಳ** 'ಕುಟ್ಮಲ' ನೋ.

**ಕುಟ್ಮಳಿತ** (ಗು). ಮೊಗ್ಗಾದ; ಮುಕುಳಿತ; ಮೊಗ್ಗಿನಿಂದ ಅರಳಿದ: ಲೋಲಲೋಚನದಬಲಾ ತಿಳಕಾಲೋಕನದಿಂ ಕುಟ್ಮಳಿತಂ ಮಾಡುವುದು ತಿಳಕಮಂ ನೃಪತಿಳಕಾ (ಮಲ್ಲಿಪು. ೫–೫೩); ಕುಟ್ಮಳಿತ ಕೇತಕಿ ತೀಕ್ಷ್ಣಗಡ (ಕುವ್ಯಾಕ. ೧೯–೩೧). [< ಸಂ. ಕುಟ್ಮಲಿತ]

**ಕುಟ್ಮಳೀಕೃತ** (ಗು). = ಕುಟ್ಮಳಿತ: ಪ್ರಿಯೆಯ ಮುಖಚಂದ್ರಬಿಂಬಂ . . . ತತ್ಪ್ರಿಯಾನನ ಪಯೋಜಮುಂ ಕುಟ್ಮಳೀಕೃತಂ ಮಾಡಿದುದೇ (ಸುಕುಮಾ. ೯–೯೨). [< ಸಂ. ಕುಟ್ಮಲೀಕೃತ]

**ಕುಠ** (ನಾ). ಮರ; ವೃಕ್ಷ. [ಸಂ.]

**ಕುಠರ** (ನಾ). ಮೊಸರು ಕಡೆಯುವ ಕಂಬ; ಕುಣಿಕೆಯ ಹಗ್ಗವನ್ನುಳ್ಳ ಕಡೆಗೋಲ ಕಂಬ. [ಸಂ.]

**ಕುಠಾಕು** (ನಾ). ಮರಕುಟುಕ ಹಕ್ಕಿ. [ಸಂ.]

**ಕುಠಾರ** (ನಾ). ೧. ಕೊಡಲಿ: "ಪರಶ್ವಧಃ, ಕುಠಾರಃ, ಪರಶುಃ, ಸ್ವಧಿತಿಃ – ಈ ೪ ಕೊಡಲಿ" (ಹಲಾಯು. ೭೮–೩೨೦). ೨. ಗುದ್ದಲಿ; ಸಲಿಕೆ: ಮಾರಿಯಾದರೆ ಗಿರಿಕುಲಕ್ಕೆ ಕುಠಾರರಾದರೊ ವಿಧಿಯಿದಿರ್ಗೊಳೆ ಬೇರು ಸಹ ತರುತಿರ್ದರಧಟರು (ಕೌಶಿರಾ. ೧೭–೪). ೩. ಒಂದು ಬಗೆಯ ಆಯುಧ: ವಜ್ರಸದೋರ್ದಂಡಂಗಳಂ ಕುಠಾರಾಯುಧದಿಂ . . . ತಜಿಿದಂ (ಪಂರಾಮಾ. ೧೩–೧೦೪); ಬಿಲ್ಲುತೀರು . . . ಕುಠಾರ . . . ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿ ಸಾಧನ ವಿಶೇಷಗಳಿಂದಲುಂ (ವಿವೇಕ. ೨೬೨). ೪. (ಅಲಂ) ಒರಟ; ಕ್ರೂರ: ಚಿತ್ತದ ಸಮತೆಯನು ಬೀಳ್ಕೊಡು ಕುಠಾರನ ಯಮುನ ಕಾಣಿಸಿ ಕರುಣಿಸೆಂದಳು ಕಾಂತೆ ಕೈಮುಗಿದು (ಕುವ್ಯಾವಿ. ೩–೪೪); ಈ ಕುಠಾರಂಗೇಕೆ ಸಿಲುಕಿದೆನೇಕೆ ವಿಧಿಯೇ ಕೊಲ್ಲದುಳುಹಿದೆ (ಕೌಶಿರಾ. ೬–೩೪). [ಸಂ.]

**ಕುಠಾರಕ** (ನಾ). ಕೊಡಲಿ; ಪರಶು: ಮುನಿ ಮುನಿದು ಪೀರ್ದುದಂ ರಾಜವಂಶಕುಠಾರಕನ ಕನಲ್ಕೆಗೆ ನೆಲಂ ಬಿಟ್ಟುದಂ . . . ನೆನೆನೆನೆದು ನಿಟ್ಟುಸಿರ್ವಿಟ್ಟು ಸುಯ್ಯುಂತುದಧಿ ತೆರೆ ಪೆರ್ಚುಗೆಯೊಳಿರ್ದುದು (ಜೈಮಿಭಾ. ೬–೨). [ಸಂ.]

**ಕುಠಾರಧರ** (ನಾ). ೧. ಕೊಡಲಿಯನ್ನು ಹಿಡಿದವನು; ಪರಶುಧರ. ೨. ವಿನಾಯಕ; ಗಣೇಶ: "ಹೇರಂಬನೇಕದಂತಂ ಗಣಾಧೀಶಂ ಕುಠಾರಧರನಾಖುರಥನೆನಲು ಲಂಬೋದರನೆನಿಕ್ಕು" (ಮಂಗರಾ. ೫–೧೭). ೩. ಪರಶುರಾಮ. [ಸಂ.]

**ಕುಠಾರಿ**$_1$ (ನಾ). ಕೊಡಲಿ: ಕೈಯಲ್ಲಿ ಹಿಡಿದ ಕುಠಾರಿಯ ಕಾವಿನ ಮೇಲೆ ತಮ್ಮ ಸೊಂಟವನ್ನು ಆನಿಸಿ (ಮೂರುದಾ. ೩೦). [< ಸಂ. ಕುಠಾರ]

**ಕುಠಾರಿ**$_2$ (ನಾ). ಕೊಡಲಿ ಹಿಡಿದುಕೊಂಡಿರುವವನು; ದ್ವಾರಪಾಲಕರ ಮುಖ್ಯಸ್ಥ: (೬). [ಸಂ. ಕುಠಾರಿನ್]

**ಕುಠೇರಕ** (ನಾ). ಒಂದು ಜಾತಿಯ ಗಿಡ; ಕಾಮಕಸ್ತೂರಿಗಿಡ. [ಸಂ.]

**ಕುಡ**$_1$ 'ಕುಟು' ನೋ.

**ಕುಡ**$_2$ (ನಾ). ಒಂದುಬಗೆಯ ಸಸ್ಯ: "ಬೆಪ್ಪಾಲೆ, ಕುಡ, ಕೊಡ್ಸೀಗೆ, ಪಾಲೆ, ಕೊಡಮುರ್ಕ" (ವೈಶಿಗಿ. ೭೮–೧೬೧೩). [?]

**ಕುಡಗ**$_1$ (ನಾ) ಕೊಡಗು ನಾಡಿನ ನಿವಾಸಿ; ಕೊಡಗ: ಕುಡಗರು ತುಳುವರು ತೊಡವರು ಬಡಗರು ತೆಂಕಣ ಕೊಂಕಣ ಕಡಲವರು (ಅರಳು. ೩೦೪–೭). [< ಕೊಡಗ]

**ಕುಡಗ**$_2$ (ನಾ). ಕೊಡಲಿ (?): ತೂಳ್ದಿದಂ ತೊಟ್ಟನೆ ತೊಟ್ಟೆವೊಂದೆಂ [ಕೋರಿ] ಪರ × × × ಪಾಲಕಂ ಕಟ್ಟಿದ ಕುಡಗದಿನ್ದಂ ರಾಮನೆನ್ದಾ ಜಳನಿಧಿಯ ಗಭೀರತ್ವ × × × ವಂಶೋತ್ತಮನೆನಿಪ ಮಹಾದೇವ ದಣ್ಡಾಧಿನಾಥ (ಸೌಇಇ. XX, ೧೦೭–೨೮; 1138). [?]

**ಕುಡಗಲೆ** (ನಾ). ಒಂದು ಜಾತಿಯ ಕಾರೇಗಿಡ; ಕಗ್ಗಲಿ: (೬). [?]

**ಕುಡಗೂಸು** 'ಕೊಡಗೂಸು' ನೋ.

**ಕುಡತರ್ಗನಬಳ್ಳಿ** (ನಾ). ಒಂದು ಜಾತಿಯ ಮಲ್ಲಿಗೆ; ಕದರು ಮಲ್ಲಿಗೆ: (೬). [?]

**ಕುಡತಾ** 'ಕುಡತಿ' ನೋ.

**ಕುಡತಿ**, ಕುಡತಾ, ಕುಡುತ, ಕುಡುತ್ಯೆ, ಕುಡ್ತ, ಕುಡ್ತಾ, ಕುರ್ತಾ (ನಾ). ಸೊಂಟದವರೆಗೆ ಮಾತ್ರ ಇರುವ (ಅಂಗಿಯ ಮೇಲೆ ತೊಡುವ) ತೋಳಿಲ್ಲದ ಗಿಡ್ಡಂಗಿ; ಜಾಕೆಟ್ಟು; ವಾಸ್ಕೋಟು: ಯಾವಾಗಲೂ ಒಂದು ಕುಡತಿಯನ್ನು ತೊಟ್ಟಿರುತ್ತಿದ್ದನು (ಮುಳ್ಳಬೇ. ೨); ನಿಲುವಂಗಿಯ ಗುಂಡಿಗಳು ತೆರೆದಿದ್ದುದರಿಂದ . . . ಒಳಗಿನ ಕುಡತಿಯೂ ಪೈರಣೂ ಕಾಣಿಸುತ್ತಿದ್ದವು (ಸ್ಮಶಾನ್ಮ. ೨).

**ಕುಡತಾ**: ನೋಡು ಬೀಗರಾಯಾ, ನಿನ್ನ ಆ ಕುಡತಾ, ಪಂಚೆ ಇಲ್ಲಿ ನಡೆಯುವುದಿಲ್ಲ (ಸಾಹೇಬ್. ೭೨). **ಕುಡುತ**: ನಂಜನು ತಲೆಗೆ ಕೆಂಪು ವಸ್ತ್ರ ಸುತ್ತಿ ಕಪ್ಪು ಕುಡುತ ಧರಿಸಿ (ಮಾಂಗಲ್ಯ. ೧). **ಕುಡುತ್ತೆ**: ವಿವಿಧ ಪ್ರಕಾರಗಳ ಕುಡುತೆಗಳಿಂದ ರಂಜಿಸುತ್ತಿರುವ ಸೇವಾಜನರ ಒಡ್ಡಣೆ (ಬೆಟ್ಟಅ. ೩೦-೧೧). **ಕುಡ್ತ**: ಹಾರಾಡುವ ಕುಡ್ತಗಳನ್ನು ಧರಿಸಿ (ಆಭಾಸ್ಯ. ೧೧೯). **ಕುಡ್ತಾ**: ಕಂಚುಕಃ, ವಾರವಾಣಃ . . . ವಜ್ರಕವಚ, ತೊಗಲು ಕುಡ್ತಾ (ಸಿದ್ಧಾಂಶಿ. ೨೧೯). **ಕುತರ್ಾ**: ಉದ್ದಕ್ಕೆ ನೆರಿಗೆಗಳಿರುವ ಒಂದು ಕುತರ್ಾ, ಒಂದು ಸುರವಾಲ್ (ಆಭಾಸ್ಯ. ೮೯).

[← ಪಾರ. ಕುತರ್ಾ; ಮರಾ. ಕುಡತೀ; ಹಿಂ. ಕುಡತಾ]

**ಕುಡಬ** (ನಾ). ಧಾನ್ಯಗಳನ್ನು ಅಳೆಯುವ ಒಂದು ಪ್ರಮಾಣ: "ಒಂದು ಸೊಲಿಗೆಯೇ ನಿಕುಂಜ, ಅದು ನಾಲ್ಕಾಗಲೊಂದು ಕುಡಬ" (ವಿವೇಕ. ೭); ಶಾಲ್ಯಾದಿ ವಪನಯೋಗ್ಯಂ ಭೂಮಿ ತ್ರಿ ಕುಡಬ ಸಮ್ಮಿತಾ ವಪನಮಾತ್ರ ಗೃಹಸ್ಥಾನಾಂ ತ್ರಿಂಶ ಕುಡಬ ಸಮ್ಮಿತಂ . . . ದತ್ತಂ (ಎಕ. X, ಗೋರಿಬಿ. ೪೭-೪೭; 762). [< ಸಂ. ಕುಡವ]

**ಕುಡಲು** 'ಕುಡುಗೋಲ್' ನೋ.

**ಕುಡಲುರ್** 'ಕುಡಲೂರ್' ನೋ.

**ಕುಡಲೂರ್**, ಕುಡಲುರ್ (ನಾ). ಒಂದು ಊರಿನ ಹೆಸರು: ಅರಟ್ಟಿ ×× ರಮ್ಮಗನ್ನಿರ್ ಸಿಜ್ಗಂ ದೀಕ್ಷೆ ಬೀಳಾದು ಅರಟ್ಟಿತೀರರ್ ಕುಡಲೂರದ ಗೊಟ್ಟಿಮಡಿ ಒಡೆಯಂ (ಎಕ. III, ಮೈಸೂರು ೨೫-೪; 750). **ಕುಡಲುರ್**: ಸ್ವಸ್ತಿ ಶ್ರೀ ನೊಲೆನಾಡ ಕುಡಲುರ ನಿಗಳಜ್ಕಮಲ್ಲ ಚಂಗಾಳ್ವಪರಿವು ಪಯ್ದನ್ದು (ಎಕ. IV, ಹೆಗ್ಗಡ. ೧೦೪-೫; 1037). [< ಕೂಡಲ್ ? + ಊರ್]

**ಕುಡವ**$_1$ (ನಾ). ಕೊಡಗು ನಾಡಿನವನು; ಕೊಡವ; ಕೊಡಗ: ಶಾಸನಗಳಲ್ಲಿ ಇದನ್ನು ಕುಡುಮಲೆ ನಾಡು ಎಂದು ಕರೆದಿದ್ದಾರೆ. ಇಲ್ಲಿ ವಾಸಮಾಡುವ ಜನರನ್ನು ಕುಡವರು, ಕೊಡಗರು ಎಂದು ಕರೆಯುವ ವಾಡಿಕೆ (ಮೈವಾಸ್ತು. ೧೭೬). [< ಕೊಡವ]

**ಕುಡವ**$_2$ (ನಾ). = ಕುಡಬ: "೪ ಪಲ = ೧ ಕುಡವ (ಅರ್ಧಸೇರು)" (ಸಕವೈ. XIII, ಪ್ರಸ್ತಾವನೆ); "೩೨ ತೊಲಿಗೆ ೧ ಅಡವಾ, ೩ ಅಡವಕ್ಕೆ ೧ ಕುಡವ, ೨೦ ಕುಡವಕ್ಕೆ ೧ ಖಂಡಗ (ಕಭಾಗ ೨೯೦). [ಸಂ.]

**ಕುಡವಲೆ** (ನಾ). ಒಂದು ಜಾತಿಯ ಮರ: ಕುಡವಲೆ, ಹೆತ್ತರಿಮುಳ್ಳು, ಮುಳ್ಳುತಾರೆ, ಗಜಬೀಜ (ಮೈಔಗಿ. ೩೭-೭೩೯). [?]

**ಕುಡಿ**$_1$ (ಕ್ರಿ). ಪಾನಮಾಡು; ಸೇವಿಸು: "ಕುಡಿ-ಪಾನೇ, ವಲ್ಲ್ಯಗ್ರೇ ಚ (ಬಳ್ಳಿಯ ಕುಡಿ)" (ಶಮುಧಾ); ಉಣ್ಬುದಿಲ್ಲ ಕುಡಿವುದಿಲ್ಲುಪವಾಸಂಗೆಯ್ದಿರ್ (ವಡ್ಡಾರಾ. ೭೬-೬); ಕುಡಿವೆಂ ದುಶ್ಶಾಸನೋರಸ್ಥಳಮನಗಲೆ ಪೋಟ್ದಾರ್ದು ಕೆನ್ನೆತ್ತರಂ (ಪಂಪಭಾ. ೭-೧೩); ಘೋರ ವಿಷಮಂ ಕುಡಿದು ಬದುಕುವರಾರ್ (ಬಸವು. ೫೮-೫೭); ಕುಡಿವೆಳಗ ಕುಡಿಕುಡಿದಡರುತಿರ್ದುದು ತಿಮಿರಲತೆ ಜಗವ (ಕುವ್ಯಾದ್ರೋ. ೧೫-೨೬); ಕುಡಿಯುವ ಪಾನಕದಲ್ಲಿ ಕಡ್ಡಿ ಸಿಕ್ಕಿದ ಹಾಗೆ (ಗಾದೆ).

[ದೇ. ‖ ತಮಿ. ಮಲ. ತುಳು. ಕುಡಿ; ತೆಲು. ಕುಡು]

**ಕುಡಿ**$_2$, ಕೊಡಿ$_1$ (ನಾ). ೧. ತುದಿ; ಮೊನೆ: ಅಂಜನಾದೇವಿ ತಡೆಯದೆ ನೆಲನನುಂಗುಟದ ಕುಡಿಯೊಳು ಬರೆದು (ಅಂಜಚ. ೭-೮೩); ಅಂಬಿನಕುಡಿಗೆ ನೆಣಿಯದ ರಕ್ತಜಲ (ಕುವ್ಯಾಭೀ. ೧೦-೮); ಸಿಡಿಲಂತೆ ಗರ್ಜಿಸುತ ಕುಡಿಯನಾಲಗೆ ಚಾಚಿ (ಪುರಂದ. ೧-೮೮-೬). ೨. ಬಳ್ಳಿಯ ತುದಿ; ಚಿಗುರು: "ಕುಡಿ-ಪಾನೇ, ವಲ್ಲ್ಯಗ್ರೇ ಚ (ಬಳ್ಳಿಯ ಕುಡಿ)" (ಶಮುಧಾ); ನಿಮಿರ್ದ ಕುಡಿಯೊಳ್ ಗಿಳಿ ಪಾಯ್ದುತ್ತೆನಿಸಿ ಸತಿಗೆ ತಂಬುಲಮಿತ್ತಳ್ (ಆದಿಪು. ೭-೧೨); ಜಡೆಗಳೊ ಹೊಸ ಹೊಸ ಹವಳದ ಕುಡಿಗಳೊ (ಗಿರಿಕ. ೧೦-೪೬); ಬಳ್ಳಿಯೊಂದರ ಗಂಟು ಗಂಟಿಗೆ ಕುಡಿಯೊಡೆದು (ಭರಜ. ೪೯-೧೧೦). ೩. ವಂಶ; ಮನೆತನ; ಮಕ್ಕಳು: ಪೆರ್ಕುಡಿಯ ಮಕ್ಕಳಿರ್ ನೀಮೆ ಇಂತಾಡುವೊಡೆ ಕೀೞ್ಗಳೇನಪ್ಪರ್ (ಅಶ್ವತ್ಥಾ. ೪೨-೮೩೧). ಕೊಡಿ$_1$: ೨. 'ಕೊಡಿಯೆಲೆ' ಪರಾ. ೩. ಕೊಡಿಗೆ ಪಕ್ಕಳು ಪಡೆಯದೊಡೇಂ ಬಂಜೆಯುಂ ನ್ರಿಪರ್ದಂಡಿಪರೆ (ಕೊಲ್ಹಾಶಾ. ೧೫-೫೮; 1186).

[ದೇ. ‖ ತಮಿ. ಮಲ. ತುಳು. ಕೊಡ; ತೆಲು. ಕೊಡ]

**ಕುಡಿ**$_3$ (ನಾ). ಒಕ್ಕಲು: ಒಕ್ಕಲುತನದ ಆರಂಭವನ್ನು ವ್ಯಕ್ತಪಡಿಸುವ ಅರ್ಥವು ಕುಡಿ ಅಥವಾ ಕುಡು ಎಂಬ ಪದದಲ್ಲಿ ಅಡಕವಾಗಿದೆ. (ತುಳುನಾ. ೪೩). 'ಕುಡಿಯ' ಪರಾ. [ದೇ. ‖ ತಮಿ. ಮಲ. ಕುಡಿ]

**ಕುಡಿಂಗೆರಿ**, ಕುಡಿಗೆರಿ (ನಾ). ಒಂದು ಊರಿನ ಹೆಸರು: ಮೂಡ ಕುಡಿಂಗೆರಿಯ ಸೀಮೆಯ ಮೇರೆ (ಎಕ. VII, ಶಿಕಾರಿ. ೩೦-೨೮; 1031). **ಕುಡಿಗೆರಿ**: ಸಾಂತಳಿಗೆ ಸಾಸಿರದ ಬಳಿಯ ಕೊಡನಾಡು ಮೂವತ್ತಱೊಳಗಣ ಕುಡಿಗೆರಿಯ ಮನ್ನೆಯವೊಳಗಾಗಿ (ಎಕ. VII, ಶಿಕಾರಿ. ೫೩-೨೭; 1027). [?]

**ಕುಡಿಕ**, ಕುಡುಕ (ನಾ). ಕುಡಿಯುವವನು; ಮದ್ಯಪಾನ ಮಾಡುವವನು: ಈ ಕಾವಲುದಂಡಿನ ಕೆಡುಕ ಕುಡಿಕರ ಜತೆ ಸೇರಿಕೊಂಡು (ಬೆಟ್ಟಅ. ೧೦೫-೮). **ಕುಡುಕ**: ಕುಡುಕರಿಗೆ ತ್ಯಾಗಬುದ್ಧಿ ಎಲ್ಲಿ ಬರುತ್ತದೆ (ಕೊನೆಭೇ. ೨೨); ಕುಡಿಯದೆ ಹೋದರು ಕುಡುಕ ನೀನೆಂದರೆ ಕುಡುಕನಾಗುವುದೊಳ್ಳಿತ್ತೆಸೆ (ಇಂಚಾಪ. ೧೯೦-೩೭); ಅಲ್ಲಿ ಕುಡುಕರು, ಜೂಜುಗಾರರು, ಕಳ್ಳರು ಎಲ್ಲರೂ ಇದ್ದರು (ಬಾಣಅ. ೧೫೨).

[ಕುಡಿ$_1$ + -ಕ$_2$]

**ಕುಡಿಕತನ** (ನಾ). (ಹೆಂಡ) ಕುಡಿಯುವ ಚಟ; ಕುಡಿತದ ಅಭ್ಯಾಸ: ಒಡಕು ಹಣೆಯಿದು ಕೆಡುಕು ಗ್ರಹವಿದು ಕುಡಿಕತನದಾ ಫಲವಿದು (ಕಎಪು. ೧೮). [ಕುಡಿಕ + -ತನ]

**ಕುಡಿಕೆ**$_1$, ಕುಡುಕೆ (ನಾ). ಮಣ್ಣಿನಿಂದ ಅಥವಾ ಲೋಹದಿಂದ ಮಾಡಿದ ಚಿಕ್ಕ ಪಾತ್ರೆ; ಗಿಂಡಿ; ಗಿಣ್ಣಿಲು: ಗಡಿಗೆಗುಡುವನ ನುಂಗಿತ್ತು ಅಡಿಯಲಿರ್ದ ಕುಡಿಕೆ ಆ ಉಭಯವ ನುಂಗಿತ್ತು (ಗುಪ್ತಮಂ. ೮-೧೮೫); ಭರಣಿ ಸುಣ್ಣದ ಕುಡಿಕೆ ಮಣಿವುಪಕರಣ ತತಿ ಬಟ್ಟಲು ಪಡಿಗ (ಬಸವು. ೧೨-೧೨); ತಿಳಿದುಪ್ಪದೊಳಗೆಯೇಲಕ್ಕಿಯನರೆದು ಕುಡಿಕೆಯೊಳಗೆ ತೊಡೆದಿರಿಸಿ (ಸೂಪಶಾ. ೨-೨೦); ಕುಡಿಕೆ ನೀರನು ನಂಬಿ ತುಂಬಿದ ಕೊಡವನೊಡೆಹೊಯ್ದಂತೆ (ಕೋಗಯ. ೧೫-೨೦); ಕೂತು ಉಂಬುವವನಿಗೆ ಕುಡಿಕೆ ಹಣ ಸಾಲದು (ಗಾದೆ). **ಕುಡುಕೆ**: ಮಾತಿನಲ್ಲಿ ಆಗಮ ಮನದಲ್ಲಿ ತೂತಿನ ಕುಡುಕೆಯ ಆಸೆ. ಇದು ನೀತಿಯಲ್ಲ (ನಗೆಮಾ. ೩೨).

[ದೇ. ‖ ತಮಿ. ಕುಡುಕ್ಕೈ; ಮಲ. ಕುಡುಕ, ಕುಡುವ; ತುಳು. ಕುಡ್ಕಿ, ಕುಡ್ಕೆ, ಗುಡ್ಕೆ; ಕೊಡ. ಕುಡಿಕೆ; ತೆಲು. ಕುಡಕ, ಕುಡುಕ]

**ಕುಡಿಕೆ**$_2$ (ನಾ). ಕುಣಿಕೆ; ತೊಡಕು (?): ನಪಾತಂಗೆ ಮಾತ ಕೊಟ್ಟು ನೀತಿ ನಿರ್ಣಯವಱಿಯದೆ ಜ್ಞಾತೃ, ಜ್ಞಾನ, ಜ್ಞೇಯವೆಂಬ ಭ್ರಾಂತಿನ ಕುಡಿಕೆಯಲ್ಲಿ ಸಿಕ್ಕಿ ತೂಗಾಡುತಿಪ್ಪರ ಕಂಡು ಆದೇತಕ್ಕೆ ಬಾತೆ ಎಂದೆ (ಮೋಳಿಮಾ. ೪೮-೧೪೯). [< ಕುಣಿಕೆ ?]

**ಕುಡಿಕೆಬಿರುಸು** (ನಾ). ಒಂದು ಬಗೆಯ ಮದ್ದಿನ ಬಾಣಬಿರುಸು: (ಃ).

[ಕುಡಿಕೆ$_1$ + ಬಿರುಸು (< ಬಿಱುಸು)]

**ಕುಡಿಗಟ್ಟು** (ಕ್ರಿ). ೧. ಬತ್ತಿಯ ತುದಿ ಸುಟ್ಟು ಕರಿಕಾಗು, —ಗಂಟು ಕಟ್ಟು, —ಕರಿಕುಗಟ್ಟು: ದೀಪ ಇಷ್ಟೇಕೆ ಮುಸುಕಾಯಿತು? ಬತ್ತಿ ಕುಡಿಗಟ್ಟಿದೆಯೇನೋ ನೋಡು (ರೂಢಿ). ೨. (ಕರಾ) ಕೆಲವು ಗಿಡಮೂಲಿಕೆಗಳನ್ನು ಮಂತ್ರಿಸಿ ಮಾಸಲುಗಟ್ಟು: ಯಾರೂ ಕದಿಯಬಾರದೆಂದು ಹಣ್ಣಿನ ಮರಕ್ಕೆ ಕುಡಿಗಟ್ಟಿದ್ದಾರೆ (ರೂಢಿ). [ಕುಡಿ$_2$ + ಕಟ್ಟು$_1$]

**ಕುಡಿಗಣ್**, ಕುಡಿಗಣ್ಣು (ನಾ). ಕಣ್ಣಿನ ಕೊನೆ; ಕಡೆಗಣ್ಣು; ಕಟಾಕ್ಷ: ಕುಡಿಗಂಗಳಿಂದವನ ಮೊಗದಿಂಗಿತವನಾರೈವ (ಜೈ ಮಿ ಭಾ. ೧೧-೧೬). **ಕುಡಿಗಣ್ಣು**: ಮೈ ಮಣ್ಣಿಗೆ ಕುಡಿಗಣ್ಣಿಗೆ ಈ ಹಣ್ಣಿಗೆ ರಸಗೂಡಿಸು ಬಂದು (ಹೃದಸ. ೨೧-೧೫). [ಕುಡಿ$_2$ + ಕಣ್]

**ಕುಡಿಗಣ್ಣು** 'ಕುಡಿಗಣ್' ನೋ.

**ಕುಡಿಗಪ್ಪು** 'ಕುಡಿಗರ್ಪು' ನೋ.

**ಕುಡಿಗರಿಕೆ** (ನಾ). ಒಂದು ಬಗೆಯ ಹುಲ್ಲು: ಮೇಲ್ಗರಿಕೆ ಹುಲ್ಲು, ಗಂಟೆಹುಲ್ಲು, ಕಾಡುಗರಿಕೆ, ಕುಡಿಗರಿಕೆ (ವೈಔಗಿ. ೨೬-೫೨೧). [ಕುಡಿ$_2$ + ಕರಿಕೆ (< ಕಱುಂಕೆ)]

**ಕುಡಿಗರ್ಪು**, ಕುಡಿಗಪ್ಪು (ನಾ). ೧. ತುದಿಯ ಕಪ್ಪುಬಣ್ಣ: ಕುಚವಾಂತುವು ಕುಡಿ [ಪಾಠಾಂ. ತುದಿ] ಗರ್ಪಂ (ಗಿರಿಕ. ೩-೩೭). **ಕುಡಿಗಪ್ಪು**: ೨. (ದೀಪದ) ಕುಡಿಯ ಕಪ್ಪು: ಮಂಗಳಾರತಿಯ ಕುಡಿಗಪ್ಪಿನ ಕಾಂತಿಯಿಂದಂಜನಮನೆಚ್ಚಿ (ಬಸರ. ೧೦-೧೯). [ಕುಡಿ$_2$ + ಕರ್ಪು]

**ಕುಡಿಗು** 'ಕುಡಿನು' ನೋ.

**ಕುಡಿಗೆಡು** (ಕ್ರಿ). ವಂಶಕೆಡು; ಭವನಾಶವಾಗು. [ಕುಡಿ$_2$ + ಕೆಡು]

**ಕುಡಿಗೆರಿ** 'ಕುಡಿಂಗೆರಿ' ನೋ.

**ಕುಡಿಗೈ** (ನಾ). ೧. ಕೈಯ ತುದಿ. ೨. ಸೊಂಡಿಲಿನ ತುದಿ: ಜಲಗಳಂ ಕುಡಿಗೈಗಳಿನೊಯ್ದು ತಂದು ಮುಂಗುಡುವುವು ಹಸ್ತಿ (ಸೂಕ್ತಿಸು. ೩-೧೭೩). [ಕುಡಿ$_2$ + ಕೈ$_2$ (< ಕೆಯ್$_2$)]

**ಕುಡಿಗೊನರ್** (ನಾ). ಚಿಗುರಿನ ತುದಿ; ಪಲ್ಲವಾಗ್ರ: ಸುಳಿಗಾಳಿಗೆ ಬಿಡದೆ ನರ್ತಿಪ ಲತೆಗಳ ಕುಡಿಗೊನರ ನುಣ್ಬೊಗರನೇ ಮಿಂಚೆಂದು (ಜೈಮಿಭಾ. ೩-೨೫). [ಕುಡಿ$_2$ + ಕೊನರ್$_2$]

**ಕುಡಿಗೊಳ್** (ಕ್ರಿ). ಚಿಗುರು; ಕುಡಿಯೊಡೆ; ಬೆಳೆ: ಮೆಲ್ಪುಗೊಂಡುದು ಸರಂ ಕುಡಿಗೊಂಡುದು ಕುಂತಳೋತ್ಕರಂ (ಸೂಕ್ತಿಸು. ೭-೫೪); ಸುಮಂತ್ರಮುಖದಲಿ ಫಲಿಸುವುದೆ ಸುತಲಾಭವನ್ವಯ ಲಲಿತ ಲತೆ ಕುಡಿಗೊಂಬುದೇ (ತೊರರಾ. ೧-೫-೫); ತೊಳಗಿ ನುಣ್ಪಚೆಯೊಳ್ ಕುಡಿಗೊಂಡು ಪುರ್ಬಿನೊಳ್ (ಚಿಕವಿ. ೧-೧೩); ಹಿಮಶಿಖರದಲ್ಲಿ ಕುಡಿಗೊಂಡ ಶಾಂತ ತಂಗದಿರ ಕಿರಣದಂತೆ (ಅರಳು. ೫-೧೪). [ಕುಡಿ$_2$ + ಕೊಳ್$_1$]

**ಕುಡಿಚಮ್ಮಟಿಗೆ** (ನಾ). ಚಮ್ಮಟಿಗೆಯ ಕೊನೆ, —ತುದಿ: ಬೆರಳ ಕುಡಿಚಮ್ಮಟಿಗೆಯಲಿ ಸೂಚಿಸಿದನರ್ಜುನಗೆ (ಕುವ್ಯಾಕ. ೧೪-೮). [ಕುಡಿ$_2$ + ಚಮ್ಮಟಿಗೆ]

**ಕುಡಿಚಾಟ** (ನಾ). ಚಾಟಿಯ ತುದಿ: ಬಾರು ಕೋಲಿನ ಕುಡಿಚಾಟ ಏಟು ತಿಂದ ಗಂಗ ಬಂಡಿಯಲ್ಲಿ ಮುಖ ಸಣ್ಣದು ಮಾಡಿಕೊಂಡು ಕುಳಿತಿದ್ದ (ನದೀಪ. ೨೪). [ಕುಡಿ$_2$ + ಚಾಟ]

**ಕುಡಿಚಿ** (ನಾ). ಕುಡಿಯುವ ಚಟವುಳ್ಳವಳು; ಕುಡಿತದ ವ್ಯಸನವುಳ್ಳವಳು: ಇಲ್ಲಿ ಮೇಗೆ ಬಿದ್ದುದು ಕಪ್ಪೆಯೆಂದು ನಾಯ್ಗೊರಗಿ ಪೋ ಜೋಗಮ್ಮ ಬಾಳು ಬಾಳಿನುತದೊರ್ವಳ್ ಕುಡಿಚಿ ಸೂಳೆಯಾಡುತ್ತಿದ್ದಳು (ಚಿಬಪು.೧೦-೭೪). [ಕುಡಿ$_1$ + -ಚಿ]

**ಕುಡಿತ** (ನಾ). (ಹೆಂಡ) ಕುಡಿಯುವಿಕೆ; ಕುಡಿಯುವುದು: ಕುಡಿತ ಅನಾರೋಗ್ಯಕರವಾದ ಒಂದು ದುರಭ್ಯಾಸ (ರೂಢಿ). [ಕುಡಿ$_1$ + -ತ$_2$]

**ಕುಡಿತೆ**, ಕುಡುತೆ$_1$ (ನಾ). ಅಂಗೈಯಲ್ಲಿ ಹಿಡಿಯುವಷ್ಟು; ಬೊಗಸೆ; ಸೇರೆ: "ಪ್ರಸೃತಿಃ–ಅದು ಕುಡಿತೆ(ಬೊಗಸೆ)" (ನಾಚಿರಾ.೧೨೨); "ಅಂಗುಳಿ ಮಡಿದ ಕುಡಿತೆಯ ಪ್ರಸ್ರುತಿಯೆಂಬುದು" (ಹಲಾಯು. ೮೮-೩೬೩); ಮೇರು ಪೊಸಂತಿಲ್ ಕುಡಿತೆಯ ನೀರಂಬುಧಿ (ಕಾವ್ಯಸಾ. ೨೪೬ ಶೂದ್ರಕ); ಕುಡಿತೆಯ ನೀರಂತುಗಲುಂ ಕುಡಿಯಲ್ಕುಂಟೆನಗೆ ಲವಣ ವಾರ್ಧಿಯ ನೀರಂ (ಆದಿಪು. ೧೨-೮೭); ಆರೈದು ಒಂದು ಕುಡಿತೆ ಉದಕವನೆಱೆವ (ಅವಚಂ. ೧೨೩-೫೫೮); ಕುಡಿತೆಯೆರಡಜಸೊಳರ್ಘ್ಯಜಲವನು ಹಿಡಿದು ಹಾಯ್ಕುವ ಸಮಯದಲಿ (ಕುವ್ಯಾದ್ರೋ. ೧೪-೪೩); ಮುಕುಂದನ ಚರಿತ ಪೀಯೂಷವನು ಕಿವಿಗಳ ಕುಡಿತೆಯಲಿ ತುಂಬಿ (ನಿಭಾಗ. ೨-೧-೫೪). ೨. ಕುಡಿಯುವಿಕೆ; ಗುಟುಕು; ಪಾನ: "ಪಾನಂ, ಪಾನಕಂ –ಈ ೨ ಕುಡಿತೆ" (ಶಾಕಕ್ಕ. ೧೧೮); ನಡತೆಯಿಂ ಗಿರಿದುರ್ಗ ಕುಡಿತೆಯಿಂ ಜಲದುರ್ಗ ಕಡುಗಲಿಗಳ ಕೋಪಗಳ ಕಿಡಿಯೊಳು ವನ ದುರ್ಗವಡಗಿತು (ಕಂನವಿ. ೧೧-೨೨). ೩. ಒಂದು ಅಳತೆ; ಸೇರಿನ ಅರನೆಯ ಒಂದು ಅಂಶ: ಪದಿನಾಱು ಕುಡಿತೆಯ ಕೊಳಗದೊಳವಱ ನಾಲ್ಕುಂ ಕೊಳಗಮೆಂಬುದೊಂದು ದ್ರೋಣ ಸಂಖ್ಯೆಯಕ್ಕುಂ (ಜಟ್ಟಿಮ. ೬-೯ ವ); ಎಲ್ಲಾ ಒಟ್ಟು ಸೇರಿಸಿ ಕರೆದರೂ ಎರಡು ಕುಡಿತೆ ಹಾಲು ಬೇಡವೆ (ಮುಗಿಯು. ೨೨). ೪. ಮುಸುರೆ ನೀರು ಹಾಕುವ ಬಾನಿ; ಕಲಗಚ್ಚಿನ ಪಾತ್ರೆ: ಕುಡಿತೆಯಲ್ಲಿ ಮುಸುರೆ ನೀರು ಹಾಕು, ಎಮ್ಮೆ ಕುಡಿಯಲಿ (ರೂಢಿ). **ಕುಡುತೆ$_1$**: ೧. ಕುಡುತೆಗೆ ವಂದ ಜಂಹ್ನು ಸುತೆಯಲ್ಲದ (ಸೌಇಎ. ೧೯೩೩, ಹಾವೇರಿ. ೫೬-೩೮; 1136); ಕುಡುತೆಯೊಳೊಮ್ಮೆ ಗುಜ್ಜುಗೊರವಂ ಕುಡಿಯಲ್ ಕುಡಿಪಾರಿತು . . . ಎನುತಂದು ವಾರ್ಧಿಯಂ ಜಡಿವವೊಲ್ (ಧರ್ಮಪ. ೧-೪೮); ಸಂಸಾರ ಮಹಾಂಬುಧಿಯಂ ನೀಂ ಶರಣೆಂಬವನೊಳೊಂದು ಕುಡುತೆಯ ಕೊನೆಗಂ ಸಂಶಯಮೇಂ ನೆಟೆಯದ ತೆಱದಿಂ ಸಂತೋಷಿಸುಗುಮಲ್ತೆ (ವರ್ಧಪು. ೧೬-೪೧); ಕುಡುತೆಯ ನೀರು ಸೋರುವ ತೆಱದಿಂ (ಚಂಪ್ರಸಾಂ. ೫-೩೮). ೩. ಅಮ್ರಿತಪಡಿಗೆ ಅಕ್ಕಿ ಕುಡುತೆ ೧ (ಎಕ. VI, ಮೂಡುಗೆ. ೬೯-೫; 1285); ಛತ್ರಕ್ಕೆ ತುಪ್ಪ ಕುಡುತೆ ೨ಕ್ಕೆ ತಾರ ೫ (ಸೌಇಎ. ೧೯೨೯, ಮಂಗಳೂರು. ೪೭೫-೩೩; 1312); ಅಕ್ಕಿ ಹಾನೆ ೨ ಕುಡುತೆ ೨ ಆ ಲೆಕ್ಕದಲ್ಲಿ (ಎಇ. VIII, ೧೩೨-೩೦; 1586); ಒಂದು ತೊಲೆ ತುಲಸಿ ಎಲೆಯನ್ನು ೨ ಕುಡುತೆ ನೀರಲ್ಲಿ ಹಾಕಿ ಕುದಿಸಿ ಅರ್ಧ ಕುಡುತೆಗೆ ಬತ್ತಿಸಿ (ಮನೆಮ. ೨೫); ವಿದುರನ ಒಂದು ಕುಡುತೆ ಹಾಲು ಕಾಲುವೆಯಾಗಿ ಹರಿಯಿತು (ಕಭವಿ. I, ೨೭೩). [ಕುಡಿ$_1$ + -ತೆ]

**ಕುಡಿತೆಗಣ್**, ಕುಡಿತೆಗಣ್ಣು, ಕುಡುತೆಗಣ್ (ನಾ). ಬೊಗಸೆಯಂತೆ ಅಗಲವಾದ ಕಣ್ಣು (?): ಕಿಱುವೆಸಳ ನೆಯ್ದಿಲುಗಳೀ ಮಡದಿಯ ಕುಡಿತೆಗಂಗಳಿಗೆ ಪಡಿಯಲ್ಲ (ಬಸಪು. ೪-೨೫); ಕುಡಿತೆಗಂಗಳ ಚಪಲೆಯುಂ ಗುರವಿಡಿಯ ನಡುವಿನ ನೀಱೆ (ಕುವ್ಯಾವಿ. ೩-೯). **ಕುಡಿತೆಗಣ್ಣು**: ಕುಡಿತೆಗಣ್ಣಲಿ ಮೊಗೆದು ಸೂಸಿದಳಖಿಳ ಭೂಮಿಪರ (ಜೀವಂಚ. ೮-೭೭); ಅವಳ ಸುಂದರವಾದ ಕುಡಿತೆಗಣ್ಣುಗಳ ದೃಷ್ಟಿ ದೂರಗತವಾಗಿದ್ದಂತೆ ಕಾಣುತ್ತಿತ್ತು (ಪುನರು. ೫೪೦). **ಕುಡುತೆಗಣ್**: ಕುಡುತೆಗಂಗಳೆ ತಂಗಿ ಕುದುರೆ ಗದ್ದುಗೆ ಮೇಲೆ ಸಡಗರದಿ ನುಡಿಯಲ್ಕೆ ಸತ್ಯಭಾಮಾ (ಶ್ರೀಕೃಪಾ. ೧೧೯). [ಕುಡಿತೆ + ಕಣ್]

**ಕುಡಿತೆಗಣ್ಣು** 'ಕುಡಿತೆಗಣ್' ನೋ.

**ಕುಡಿತೆಗಣ್ನೋಟ** (ನಾ). ಅಗಲವಾದ ಕಣ್ಣಿನ ನೋಟ: ಕುಡಿತೆಗಣ್ನೋಟದಿಂ ಪುಳಕಾಂಕುರಂಗಳಂ ಪೊಣ್ಮಿಸುತ್ತ (ಸೌಂದಪು. ೧೩-೫೦). [ಕುಡಿತೆಗಣ್ + ನೋಟ]

**ಕುಡಿತೆಗಣ್ಬೆಳಗು** (ನಾ). ಅಗಲವಾದ ಕಣ್ಣಿನ ಕಾಂತಿ: ಕುಡಿತೆಗಣ್ಬೆಳಗುಗಂಡಿದೆ ಜೊನ್ನಮೆಂದು ಬಾಯ್ಬಿಡುವ ಕಣ್ಣದಿರ್ವಕ್ಕಿಗಳನೀಕ್ಷಿಸುತ (ಪದ್ಮರಾ. ೮-೪೫). [ಕುಡಿತೆಗಣ್ + ಬೆಳಗು$_1$]

**ಕುಡಿತೆಗೊಳ್** (ಕ್ರಿ). ಬೊಗಸೆಯಲ್ಲಿ ತೆಗೆದುಕೊ: ಮುಱಿದೊಗೊಂಡು ಕುಡಿದನಾದಡೆ ಮುಕ್ತಿ (ಸಿದ್ಧರಾ. ೪-೨೫). [ಕುಡಿತೆ +

**ಕುಡಿತೆಪೊನ್** (ನಾ). ಸೇರೆ (ತುಂಬ) ಚಿನ್ನ; ಒಂದು ಬೊಗಸೆ ಹೊನ್ನು: ಮುದ್ರೆಗಳನೊಡೆದು ಕುಡಿತೆಪೊಂಗಳಂ ನೃಥಭಕ್ತರ ಮೆಲ್ಲಡಿಗಳೊಳು ಸುರಿದು (ಬಸರ. ೮–೨೨). [ಕುಡಿತೆ + ಪೊನ್]

**ಕುಡಿಥಿಯಂ** (ನಾ). ಒಂದು ಊರಿನ ಹೆಸರು: ಪೇರೂರ ವಿಷಯೇ ಕುಡಿಥಿಯನ್ನಾಮಃ ಗ್ರಾಮಃ (ಮೈಆರಿ. ೧೯೩೨, ೧–೧೮; 401). [?]

**ಕುಡಿದಳಿರ್** (ನಾ). ಬಳ್ಳಿಯ (ಕುಡಿಯ) ಕೊನೆಗಿರುವ ಚಿಗುರು: ಎಳೆವಿಸಿಲಂ ಪವಳದ ಕುಡಿದಳಿರಿಂ ಮಾಣಿಕದ ಬೆಳಗಿನಿಂ ನಿರ್ಮಿಸಿದಂ ನಳಿನಭವನೆನೆ (ಕಾದಂಪೂ. ೪೧೫). [ಕುಡಿ$_2$ + ತಳಿರ್$_2$]

**ಕುಡಿದೋಱು** (ಕ್ರಿ). ಚಿಗುರು; ಹಬ್ಬು; ಕುಡಿಯಿಡು: ಕರುಣಲತೆ ಕುಡಿದೋಱಿ ಮೆಲ್ಲನೆ (ತೊರರಾ. ೪–೨–೨೪). [ಕುಡಿ$_2$ + ತೋಱು$_1$ (< ತೋಱ್)]

**ಕುಡಿನ** 'ಕುಡಿನು' ನೋ.

**ಕುಡಿನಗು** (ನಾ). ಮುಗುಳ್ನಗು; ಮಂದಹಾಸ: ಅವರು ಕುಡಿನಗುವನ್ನು ನಗುತ ಒಂದು ಕ್ಷಣ ಜಗನ್ನಾಥರ ಮುಖವನ್ನೇ ನೋಡಿದರು (ಒಂಟಿದ. ೨೨೩). [ಕುಡಿ$_2$ + ನಗ್ಗು$_2$]

**ಕುಡಿನಾಲಗೆ, ಕುಡಿನಾಲಿಗೆ** (ನಾ). ನಾಲಗೆಯ ತುದಿ; ತುದಿನಾಲಗೆ: ಕುಡಿನಾಲಗೆ ಮೂಗಿನ ತುದಿ ಕುಡಿವುರ್ವೆಂಬಿವನೆ ಕಾದಿರ್ದಡೆ . . . ಇನಿತುವರಿಷ್ಟಂ (ಕಲ್ಯಾಕಾ. ೨–೩೩); ಕಾಳೋರಗನ ಕುಡಿನಾಲಗೆಯುವೋಲೆಸೆದುದಂಕುಶ ಭಟನ ಮುಷ್ಟಿಯಲಿ (ಕುವ್ಯಾದ್ರೋ. ೬–೫೬). **ಕುಡಿನಾಲಿಗೆ**: ಬಾಲಕನಂಘ್ರಿಪಲ್ಲವದ ರುಧಿರಮಂ ಕುಡಿನಾಲಿ [ಪಾಠಾಂ. ಲ] ಗೆಗಳಿಂದೆ ಸೊಗಸೆ ಲೇಹಂಗೈದುವು (ಜೈಮಿಭಾ. ೨೮–೩೭); ತನಿರಸಮಂ ಶಾರಿಕೆಗಳೊಡನೆ ಕೂಡಿ ಕುಡಿನಾಲಿಗೆಯಿಂ ಸವಿದು (ಹಾಲಾಸ್ಯ. ೨–೭೪ ವ). [ಕುಡಿ$_2$ + ನಾಲಗೆ]

**ಕುಡಿನಾಲಿಗೆ** 'ಕುಡಿನಾಲಗೆ' ನೋ.

**ಕುಡಿನಿಂಕಾ** (ನಾ). ಒಕ್ಕಲ ಹಕ್ಕು ಕಳೆದುಕೊಳ್ಳದವರು: ಆ ಕೇಶವ ದೇವರ ದೇವದಾನದವೂರು ಮರಕಾಡನನು ಕುಡಿನಿಂಕಾ ದೇವದಾನವಾಗಿ ಮಕ್ಕಳು ಮಕ್ಕಳು ತಪ್ಪದೆ . . . ಸಂತಾನಗಾಮಿಯಾಗಿ ಭೋಗಿಸುವರು (ಎಕ. III, ಮಂಡ್ಯ. ೭೦–೧೨; 1276). [← ತಮಿ. ಕುಡಿನಿಙ್ಗಾ]

**ಕುಡಿನಿಮಿರ್, ಕುಡಿನಿಮಿರು** (ಕ್ರಿ). ಕುಡಿಯಿಡು; ಚಿಗುರು; ಬೆಳೆ; ಹಬ್ಬು: ಸೆಜ್ಜೆವನೆಯ ಸಿರಿಮುಂಚದೊಳ್ ಕುಳ್ಳಿರ್ದು ಬಳ್ಳಿವರಿವ ನೇಹಂ ಕುಡಿನಿಮಿರೆ (ಗಿರಿಕ. ೨–೧೦೫ ವ). **ಕುಡಿನಿಮಿರು**: ಹಿಮದ ಗಿರಿಯಲಿ ಸುಳಿದೆನು ಕುಡಿನಿಮಿರಿ ತೆರೆಗಳ ತುಳಿದೆನು (ಹೊಂಗಳು. ೨–೧೭). [ಕುಡಿ$_2$ + ನಿಮಿರ್]

**ಕುಡಿನಿಮಿರು** 'ಕುಡಿನಿಮಿರ್' ನೋ.

**ಕುಡಿನೀರ್, ಕುಡಿನೀರು** (ನಾ). ಕುಡಿಯುವ ನೀರು: ಕುಡಿನೀರೆತ್ತುವವೊಲ್ ಪ್ರಪಾಪ್ರಮದೆಯರ್ (ಅನಂಪು. ೧–೮೪); ಅಜವಟ್ಟಿಗೆಯೊಳ್ ಕುಡಿನೀರೆಱೆವ ಬೆಡಂಗಿಯರ ಭಾವಮಂ . . . ನೋಡಿ (ಸೂಕ್ತಿಸು. ೪–೮೪); ಕುಡಿನೀರ್ಗುತ್ತಿಗೆಯನಾಂತವಂ ಯಾದಃಪತಿ (ವೀರವಿ. ೧–೪೭). **ಕುಡಿನೀರು**: ಪಡೆಗಡಲು ಕುಡಿನೀರು ನೆಱೆ ನೀರಡಸಿದುದು ಪಾರ್ಥನ ಶರಾವಳಿ (ಕುವ್ಯಾದ್ರೋ. ೯–೩೩); ದಾರುಣ ನಿದಾಘದುಬ್ಬೆಯನು ಭಂಜಿಸುವ ಕುಡಿನೀರು ಮೊದ: ಪುಣಾ ನಾನಾ ಪಾನಭೇದವಮಂ . . . ಉಸುರುವೆನು (ಸೂಪಶಾ. ೨ ಬಂತೈ . . . ಜಡಿಮಳೆ ಸುರಿವೋಲ್ ಬಿರುಮಳೆ ಬರುತ್ತಿರೆ ರಿಡೆವಿಡೆ ಶ್ರೀ ಗನು ಒಣಗಿದ ನೆಲಕೆರೆವೊಲ್ ಜಪಿಸು (ಕಎಪು. ೨೮–೨) [? ಡಿ$_1$ + ನೀರ್$_1$]

**ಕುಡಿನೀರು** 'ಕುಡಿನೀರ್' ನೋ.

**ಕುಡಿನು, ಕುಡಿಗು, ಕುಡಿನ, ಕೂಡಿನ** (ನಾ). ನೇಗಿಲಿನ ಪಾಳ; ಕುಡಿನೇಗಿಲು (?): "ಕುಶಿರಮನೆ ಪಾಳಮನೆ ಕುಳು ಕರ್ಣಿಯನೆ ಕುಡಿನು [ಪಾಠಾಂ. ಗು]" (ಮಂಗರಾ. ೧೯೮–೧). **ಕುಡಿಗು**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಕುಡಿನ**: "ಕೂಟಕ, ನಿರೀಷ, ಹಲ, ಕು [ಪಾಠಾಂ. ಕೂ] ಡಿನ" (ನಾಚಿರಾ. ೩). **ಕೂಡಿನ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [?]

**ಕುಡಿನೇಣ್** (ನಾ). ಹಗ್ಗದ ತುದಿ, —ಕೊನೆ: ಸಾರಥಿ ಕಡಿಯಣದ ಕುಡಿನೇಣ ಕೊಂಡನು ತಿರುಹಿದನು ರಥವ (ಕುವ್ಯಾಶ. ೧–೮). [ಕುಡಿ$_2$ + ನೇಣ್]

**ಕುಡಿನೊರೆ** (ನಾ). ತುದಿಗೆ ಬಂದ ನೊರೆ; ಅಂಚಿನಲ್ಲಿ ಕಟ್ಟಿದ ನೊರೆ: ಕುಡಿನೊರೆಯ ಕಟವಾಯ ಲೋಳೆಯನು (ಕುವ್ಯಾವಿ. ೬–೫೨). [ಕುಡಿ$_2$ + ನೊರೆ]

**ಕುಡಿನೋಟ** (ನಾ). ಕಣ್ಣಿನ ಕೊನೆಯ ನೋಟ; ಕಟಾಕ್ಷ; ಅಪಾಂಗ ದೃಷ್ಟಿ: ಬಗಸೆಗಣ್ ಕುಡಿನೋಟವಮನು ಪೊಸಗಾಡಿಯಂ ತೆಗೆಯೆ (ಪದ್ಮರಾ. ೩–೩೧); ದೈವವದೆತ್ತಲೋಲೆದಿಹುದತ್ತ ವಿಜಯಶ್ರೀಯ ಕುಡಿನೋಟ (ಕುವ್ಯಾದ್ರೋ. ೪–೨); ಎಸೆವ ಸಸಿವದನದೊಳ್ಕುಡಿನೋಟದೊಳೆ . . . ಒಪ್ಪಿರ್ದರೆಳವೆಣ್ಣಳು (ಜೈಮಿಭಾ. ೬–೨೭); ಕುಡಿನೋಟ ಬೀರುತ ಮೊಳೆನಗೆ ತೋರುತ ಬಳಿ ನಿಂದು ಮನ ಸೆಳೆದಪಳು (ಇಂಚಾಪ. ೧೬೮–೨೭). [ಕುಡಿ$_2$ + ನೋಟ]

**ಕುಡಿಪಟಿಯ** (ನಾ). ವಂಶದ ಮೊದಲಿಗ; ಪೂರ್ವಜ; ಹಳೆಯ ತಲೆಮಾರಿನವನು: ಕುಲಮೊಸೆದ ಕುಡಿಪಟಿಯರೋ ದೇವತೆಗಳ್ (ಅಂತಿಗೂ. ೪೨–೬೭). [ಕುಡಿ$_2$ + ಪಟಿಯ]

**ಕುಡಿಪು, ಕುಡಿಹು** (ನಾ). ಕುಡಿತ; ಪಾನ (?): ಕುಡುತೆಯೊಳೊಮ್ಮೆ ಗುಜ್ಜುಗೊರವಂ ಕುಡಿಯಲ್ ಕು [ಪಾಠಾಂ. ಪು] ಡಿಪಾಱಿತು (ಧರ್ಮಪ. ೧–೪೮). **ಕುಡಿಹು**. 'ಕಳ್ಳುಡಿಹುತನ' ಪರಾ. [ಕುಡಿ$_1$ + -ಪು]

**ಕುಡಿಬತ್ತಿ** (ನಾ). (ದೀಪದ) ಬತ್ತಿಯ ತುದಿ: ಶರಣಬಸವ ಬಂದುವರಗ ಅರಿಸಿಣ ಹಚ್ಚಿ ಕಲ್ಯಾಣ ಕುಡಿಬತ್ತಿ ಬೆಳಗಿದನ (ಲೋಕಗೀ. ೮೪). [ಕುಡಿ$_2$ + ಬತ್ತಿ]

**ಕುಡಿಬಾಳೆ** (ನಾ). ಅಗ್ರಬಾಳೆಯೆಲೆ; ಸುಳಿಬಾಳೆ: ಕುಡಿಬಾಳೆಯು ಕಡುಬಿಸಿಲಿಗೆ ಬಾಡಿ, ನೀರುಂಡ ಮೇಲೆ ಬೆಳಗಾಗಲು ಕುಡಿಬಾಳೆ ಗೊನೆ ಬಿಡುವಂತೆ (ಕನ್ನಜಾ. ೭೧). [ಕುಡಿ$_2$ + ಬಾಳೆ (< ಬಾೞೆ)]

**ಕುಡಿಬಿದಿರ್** (ನಾ). ಬಿದಿರಿನ ಕುಡಿ, —ತುದಿ; ಕಳಿಲೆ: ಪೊನ್ನ ಬೆಳ್ಳಿಯ ಸಿಪ್ಪುಗಳೊಳ್ ಕಿಱುಕಿಱಿದನೆಱೆದು ಕುಡಿಬಿದಿರ ಕುಡಿಯ ಮಾವಿನ ಮಿಡಿಯಮೂರುದಿನ ಮೆಣಸುಗಡಲೆಯ ಪುಡಿಯೊಳಡಸಿದಲ್ಲವಲ್ಲಣೆಗೆಯ ಚಿಕ್ಕಣಂಗಳಂ ಸವಿಸವಿದು (ಪಂಪಭಾ. ೪–೮೭ ವ). [ಕುಡಿ$_2$ + ಬಿದಿರ್$_2$]

**ಕುಡಿಮಗ** (ನಾ). ಒಕ್ಕಲು ಮಗ: ಎಸೆದಿರ್ಪನೊರ್ವ ಭಕ್ತಂ ಶಿವನ ಕುಡಿಮಗಂ [ಪಾಠಾಂ. ಒಕ್ಕೆಗಂ] ವಸುಧೆಗೊಪ್ಪುವ ಮಹಾದೇವನೊಕ್ಕಲ ಮಗಂ (ಇಳಿರ. ೯೦–೫); 'ಉತ್ತಮ ವ್ಯವಸಾಯ, ಮಧ್ಯಮ ವ್ಯಾಪಾರ, ಕನಿಷ್ಠ ನೌಕರಿ' ಎಂದೂ ರೈತನೇ ಶಿವನ ಕುಡಿಮಗ ಅವನೇ ನಾಡಿನ ಬಾಳು (ಬೆಳುಮು. ೧೯೦). [ಕುಡಿ$_2$ + ಮಗ]

**ಕುಡಿಮಗುಂಚು** (ಕ್ರಿ). ತುದಿಯನ್ನು ಮಡಿಚು, —ಮಣಿಸು: ಕಡುಗಾಸಿ ಚಿಮ್ಮಾಡಿ ಕುಡಿಮಗುಂಚಿ ಕತ್ತರಿಸಿ ಪೊಡೆವಡೆಗಳೊಳಗೆ ಸಿಡಿಸಿದನು (ಸರ್ವಜ್ಞ. ೧೪೧೨). [ಕುಡಿ$_2$ + ಮಗುಂಚು (< ಮಗುಱ್ಚು)]

**ಕುಡಿಮಿಂಚು** (ನಾ). (ಬಳ್ಳಿಯ) ಕುಡಿಯಂತಿರುವ ಮಿಂಚು; ಕುಡಿಯೊಡೆವ ಮಿಂಚು : ದಂತಾಂಶುಜಾಲಂ ಕುಡಿಮಿಂಚಂ ಬೀಱೆ (ಪಂರಾಮಾ. ೨-೭೫); ನೆನೆಯಿಸಿದನೆಸೆದು ಬಾಲಕನೆನಸುಂ ಕುಡಿಮಿಂಚು ನಿಮಿರ್ದ ಕೆಮ್ಮುಗಿಲಿರವಂ (ಕುಸುಮಾ. ೬-೯೬); ಕುಡಿಮಿಂಚಿನಂತೆ ಹೊಳೆದು ಹೋಹ ಯತಿಗಳ ಬೆಡಗ ಕಣ್ಣಿಟ್ಟು ನೋಡಿದನು (ಭರಚ. ೩-೧೨೯). [ಕುಡಿ$_2$ + ಮಿಂಚು$_2$]

**ಕುಡಿಮಿನುಗು** (ನಾ). ತುದಿಯ ಮಿಂಚು, —ಹೊಳಪು : ಘನ ಶರೀರದ ಕಾಳಿಕೆಯ ಕುಡಿಮಿನುಗುಗಳ ದಾಡೆಗಳ (ತೊರರಾ. ೬-೫೩-೪೩). [ಕುಡಿ$_2$ + ಮಿನುಗು$_2$]

**ಕುಡಿಮೀಸೆ** (ನಾ). ಮೀಸೆಯ ತುದಿ, —ಕೊನೆ : ಕುಡಿಮೀಸೆ ಕುಣಿದವು ಸುಯ್ಲ ಹೊಗೆ ಮಸಗೆ (ಕುವ್ಯಾಕ. ೧೨-೧೦); ಕುಡಿಮೀಸೆ ಕುಣಿದು ನಾಸಿಕದಲ್ಲಿ ಹೊಗೆ ಸುತ್ತಿ ಕಿಡಿಗಳನಕ್ಕಿ ಮುಕ್ಕುಳಿಸೆ (ಮೋಹತ. ೩೩-೨೨); ಚಾಟಿಯಂತೆ ಹುರಿಗೈದ ಕುಡಿಮೀಸೆಯ ತೇಜಃಪುಂಜ ಮುಖದ ಅಧಿಕಾರಿ (ಪುನರು. ೩೧೦). [ಕುಡಿ$_2$ + ಮೀಸೆ]

**ಕುಡಿಮುಂಜೆಱಂಗು** (ನಾ). ಮುಂಜೆರಗಿನ ತುದಿ, —ಕೊನೆ : ಚೆನ್ನಪೊಂಗರ ಕುಡಿಮುಂಜೆಱಂಗು ನಿಡುಬಯ್ತಲೆ ಬಾರ್ತೆಯಿ (ಅನಂಪು. ೮-೪೯). [ಕುಡಿ$_2$ + ಮುಂಜೆಱಂಗು]

**ಕುಡಿಮುದ್ದ** (ನಾ). ಒಬ್ಬಾತನ ಹೆಸರು : ವೀರಪೂರಮಾಳ್ಪೊ ಪೊಟ್ಟಿಯರಾ ಕುಡಿಮುದ್ದನ್ ಮೇರೆಯುಳ್ಳಿಱಿದು ವಿಟ್ಟನ್ (ಎಕ. V, ಚನ್ನರಾ. ೨೦೮-೫; 770). [?]

**ಕುಡಿಮುಸುಗು** (ನಾ). ಮುಸುಕಿನ ತುದಿ; ಹೆಂಗಸರು ತಲೆಯ ಮೇಲೆ ಹೊದೆಯುವ ಸೆರಗು; ತಲೆ ಮುಸುಗು : (ಕ). [ಕುಡಿ$_2$ + ಮುಸುಗು$_2$]

**ಕುಡಿಮೊನೆ** (ನಾ). ಮೊನಚಾದ ತುದಿ; ತುತ್ತತುದಿ : ಕುಡಿಮೊನೆಯೊಳಹಿಪತಿಯ ನಾಲಗೆ ಗಡಣವುದಿಸಿದವೆನೆ ಕೃಪಾಣದ ಕಡುಹು ಕೌತುಕವಾಯ್ತು ಬಂಡೆಯಕಾಱ ಮೋಹರದ (ಕುವ್ಯಾಭೀ. ೪-೨೭); ಕುಡಿಮೊನೆಯ ಪಡಿಮುಖದಲೊದಱುವ ಕಿಡಿಯ . . . ಶಕ್ತಿಯಲಿಟ್ಟ ನವನೀಶ (ಕುವ್ಯಾಶ. ೩-೬೬). [ಕುಡಿ$_2$ + ಮೊನೆ]

**ಕುಡಿಯ, ಕುಡೆಯ** (ನಾ). ಒಕ್ಕಲಿಗ; ಒಕ್ಕಲುಮಗ : ಪರದಾರ್ಗಾ ಪಾರ್ವರ್ಗಾಯರಸರ್ಗಾ ಕುಡಿಯರಪ್ಪನಾಲ್ವರ್ಗಾಗಳ್ (ಕವಿರಾ.೧-೬೫); ಘುದುದರ ದೇವಯ್ಯನ ಮಗಂ ಮಾಳಯ್ಯ ಕುಡಿಯರಯರ್ಜುನ ಕಾಯ್ವ ರಬ್ಬರಿದಿ ಪರದಾಸಿ (ಸೌಇಇ. IX-i, ೫೭-೮; 922); ಕುಡಿಯರಾಭರಣಂ ನುಗುನಾಡ ರಾಮನೆಂದೊಡೆ (ಎಇ. VI, ೨೧೫-೬; 1057); ಕುಡಿಯರುಳುವುಳ್ಕಿಗಳಿಂ ಕೆಂಪಾದ ಪೊಲಗಳಿಂದ (ಜಯುಕಾ. ೧-೩೭); ಕುಡಿಯರಂದದಿ ಹೆಣ್ಣು ಕೊಂಡೆಯ್ದು ಕೊಡುವುದು ನಡೆಯಿ ರಾಜಂಗೆ (ಭರಚ. ೩೭-೩೩). **ಕುಡೆಯ** : ಹಲರು ಸೆಟ್ಟಿಕಾಜರು ಅನ್ನಂಟರ ಬಳಿಯ ಸಂಕರಸೆಟ್ಟಿಯ ಮಗ ಕುಡೆಯರ ಬಳಿಯ ನಾರಣಸೆಟ್ಟಿಗೆ ಕೊಟ್ಟ ಮೂಲ ಶಾಸನದ ಕ್ರಮ (ಸೌಇಇ. IX-ii, ೪೪೯-೮; 1444).
[ದೇ. ‖ ತಮಿ. ಮಲ. ಕುಡಿಯಾನ್; ಕೊಡ. ಕುಡಿ = ಈಡಿಗರವನು; ಹೆಂಡ ಇಳಿಸುವವನು]

**ಕುಡಿಯಳ್ಳಿ** (ನಾ). ಪಕ್ಕೆಯ ತುದಿ; ಅಳ್ಳಿಯ ತುದಿ : ತೊಡೆ ಸಂಕಲೆಯಿಕ್ಕಿದವೋಲ್ ಕುಡಿಯಳ್ಳಿಗಳಿಂದೆ ಸುರಿದುವಿರ್ಕೆಲಕೆ ಕರುಳ್ (ಶಮದ. ೧೦೭ ಪ್ರಯೋ). ‘ಅಳ್ಳಿಕುಡಿ’ ಪರಾ. [ಕುಡಿ$_2$ + ಅಳ್ಳಿ$_1$]

**ಕುಡಿಯಾರವಿ** (ನಾ). ಒಂದು ಊರಿನ ಹೆಸರು : ಕಣಿಯಕಲ್ನೂ ನೂಱುಂ ಕುಡಿಯಾರವಿಯೆಬ್ಬತ್ತುಂ ಕರಿವಿಡಿ ಮೂವತ್ತುಂ (ಎಕ. XI, ದಾವಣ. ೨೦-೫; 1045). [?]

**ಕುಡಿಯಿಕ್ಕು** (ಕ್ರಿ). ಚಿಗುರಿಡು; ಬೆಳೆ; ಹಬ್ಬು : ಮುದಂ ಕುಡಿಯಿಕ್ಕೆ ಭಕ್ತಿಭಾವನೆ ತಲೆದೋಱೆ (ದಶಕು. ೫-೭೬). [ಕುಡಿ$_2$ + ಇಕ್ಕು]

**ಕುಡಿಯಿಡು** (ಕ್ರಿ). = ಕುಡಿಯಿಕ್ಕು : ಕುಡಿಯಿಟ್ಟುದು ಧೀಂಕಿಟ್ಟತ್ತಡಿಯಿಟ್ಟತ್ತಾಹ ಕೀರ್ತಿಲತೆ (ಗಿರಿಕ. ೩-೬೪); ಶಶಿಯ ತಣ್ಗದಿರ್ಗಳ್ ಕುಡಿಯಿಟ್ಟುವೆಂಬಿನಂ ಪಸರಿಸಿ ದಂತಕಾಂತಿ ಸಭೆಯಂ ಬೆಳಗುತ್ತಿರಲ್ (ಕುಸುಮಾ. ೨-೨೮); ಸರಳು ತೀರಲು ತೀರದಸುರನ ಕೆರಳಿದುರಿ ಕುಡಿಯಿಟ್ಟುದಿವನಬ್ಬರಣೆ (ಕುವ್ಯಾದ್ರೋ. ೧೬-೩೯). [ಕುಡಿ$_2$ + ಇಡು$_1$]

**ಕುಡಿಯಿಱು** (ಕ್ರಿ). ತುದಿಯನ್ನು ಚಾಚು; ಕುಡಿಚಾಚು; ಬೆಳೆ : ಬಳಿಕವ ಗೋರಿದನು ಕುಡಿಯಿಱಿದ [ಪಾಠಾಂ. ಗುಡಿಯಿಱಿದು] ಬಾಲದ ಗೋರೆಯಲಿ ತಳಮಗುಚಿದನು ತೋರಣದ ಸಾಲುಗಳ (ತೊರರಾ. ೫-೭-೧೬). [ಕುಡಿ$_2$ + ಇಱಿ$_1$]

**ಕುಡಿಯಿಲ್ಲಣ** (ನಾ). (ದೀಪದ) ಕುಡಿಗೆ ಕಟ್ಟಿಕೊಂಡ ಕರಿಕು, —ಕಿಟ್ಟ : ಕುಡಿಯಿಲ್ಲಣವನೊರಸಿ ಸೊಡರನುಜ್ಜ್ವಳಿಸಿದಳ್ (ಶ್ರೀರಾಮಾ. ೪೫೦-೧೪೦). [ಕುಡಿ$_2$ + ಇಲ್ಲಣ]

**ಕುಡಿಯಿಸು, ಕುಡಿಸು$_1$** (ಕ್ರಿ). ಕುಡಿಯುವಂತೆ ಮಾಡು; ಪಾನ ಮಾಡಿಸು : ಕುಡಿ ಕಳ್ಳನೆಂದು ಕರಗಿಸಿ ಕುಡಿಯಿಸುವರ್ ಲೋಹರಸಮನೆರ್ದೆಗರಗುವಿನಂ (ಆದಿಪು. ೫-೮೬); ಕುಡಿತೆಯೊಳೆ ತಂದು ನೀರಂ . . . ಚಂಚುಪುಟದಿಂ ಕುಡಿಯಿಸುತ (ಕಾದಂಪೂ. ೨೧೨); ಅಳಿಪಿಂದಮಳೆಯ ಬರ್ದೆಗೆಯುಳೆಯಂ ಕುಡಿಯಿಸಿದರೆಂಬ ಕೆಜದಿಂ (ಧರ್ಮಾಮೃ. ೧-೧೭೭). **ಕುಡಿಸು$_1$** : ಕುದುರೆಯಂ ನೀರಂ ಕುಡಿಸಿ (ಪಂಚತಂ. ೧೨೦-೯); ಅಸಮ ವಿಷಮುಂ ಕುಡಿಸಿ ಕೊಂದಹೆನೆಂದು (ಬಸಪು. ೫೮-೪೨); ಹೊಡೆದು ತಲೆಯನು ನಿನ್ನ ರಕುತವ ಕುಡಿಸುವೆನು ಕೂರಸಿಗೆ (ಕುವ್ಯಾಕ. ೯-೩೮). [ಕುಡಿ$_1$ + -ಇಸು$_3$]

**ಕುಡಿಯೊಕ್ಕಲ್** (ನಾ). = ಕುಡಿಯ : ಧನದ ಧಾನ್ಯದ ಸೊಮ್ಮಿನ ಸೊಕ್ಕಿನಿನ್ದ ಮಾರ್ಗಳದೊಮ್ಮ ನಮ್ಮೊಳೆಂಬ ಕುಡಿಯೊಕ್ಕಲ ಮಕ್ಕಳ್ ನೂರ್ಗ್ಗಳೊಪ್ಪುಗು (ಸೌಇಇ. IX-i, ೨೯೭-೧೨; 1177). [ಕುಡಿಯ + ಒಕ್ಕಲ್$_1$]

**ಕುಡಿಯೊಕ್ಕಲಿಗ** (ನಾ). ಒಕ್ಕಲಿಗರಲ್ಲಿ ಒಂದು ಪಂಗಡ : “ಆಭೀರಃ, ಮಹಾಶೂದ್ರಃ – ಈ ೨ ಕುಡಿಯೊಕ್ಕಲಿಗಂ” (ಹಲಾಯು. ೯೬-೪೩೩); ಸೊನ್ನಲಿಗೆಯೊಳಗೊಪ್ಪುತಿರ್ಪ ಕುಡಿಯೊಕ್ಕಲಿಗರ ರಂಜಿಸುವ ಗರ್ಭಂಗಳಿಂದುದಿಸಿ (ಚಬಪು. ೫೯-೧೧). [ಕುಡಿಯ + ಒಕ್ಕಲಿಗ]

**ಕುಡಿಯೊಡೆ** (ಕ್ರಿ). = ಕುಡಿಯಿಕ್ಕು : ಸಳರು ನೆಟ್ಟ ಬಳ್ಳಿಯೇ ಕುಡಿಯೊಡೆದು ಹೊರವಾಗಿ ಹುವ್ವು ಹಣ್ಣುಗಳನ್ನು ಜನತೆಗೆ ಕೊಡಬೇಕು (ಸವತಿ. ೨೫). [ಕುಡಿ$_2$ + ಒಡೆ$_1$]

**ಕುಡಿಯೊಣಗು** (ಕ್ರಿ). ೧. (ಬಳ್ಳಿಯ) ಕುಡಿ ಬತ್ತಿಹೋಗು, —ಬಾಡು : ಕೀರ್ತಿಲತೆ ಕುಡಿಯೊಣಗಿತ್ತೆ (ಕುವ್ಯಾವಿ. ೨-೪೩). ೨. ವಂಶ ನಿಂತುಹೋಗು, —ನಾಶವಾಗು : ಇದ್ದ ಒಬ್ಬ ಮಗ ಸತ್ತು ಅವರ ವಂಶದ ಕುಡಿಯೊಣಗಿದೆ (ರೂಢಿ). [ಕುಡಿ$_2$ + ಒಣಗು$_1$]

**ಕುಡಿಯ್ಯ** (ನಾ). ಒಬ್ಬಾತನ ಹೆಸರು (?) : ಅರಿಉರ್ಪನ್ನಿವ್ವರು ತೊಱೆಕ್ಕಾರಾಟ್ಟೆಉವೆಕ್ಕವಿಯಮುವಲ್ಪೊಗೆಯು ಕೂಡಲೂರು ಇನೆತ್ತು ಮೂರ್ ನೆರಸಾಸನಮಾಗೆ ಕುಡಿಯ್ಯಕೊ × × × ಲು × × ದನ್ ಇಟ್ಟು (ಎಕ. IV, ಗುಂಡ್ಲುಪೇ. ೮೮-೬; 750 [?]

**ಕುಡಿರು** (ಕ್ರಿ). (?) : ನಡೆದು [illegible] ನು ಮಹಾನದಿ ತಡಿಯ ಅರಳಿಯ ಮರನಡಿಯ ಕು[illegible] ಕುಡಿ[illegible]ದು ಸಾಂಗಿಕವಾಗಿ ಭಕ್ತಿಯಲಿ (ಗಗಶಾ. ೪-೭೨). [ಕು]

**ಕುಡಿಲು** (ನಾ). ಕುಡಿ; ಸುಳಿ: "ಪಲ್ಲವಃ, ಕಿಸಲಯಂ-೨ ತಳಿರ ಹೆಸರುಗಳು. ಎಳತಾದ ಎಲೆ, ಚಿಗುರು ಚಿಗುರೆಲೆಗಳಿಂ ಕೂಡಿರುವ ಕುಡಿಲು, ಮರದ ಸುಳಿ" (ಸಿದ್ಧಾಂತಿ. ೧೦). [ಕುಡಿ₂ + -ಲು ?]

**ಕುಡಿಲೂರ್** (ನಾ). ಒಂದು ಊರಿನ ಹೆಸರು: ಸಿನ್ಧಾಳ ಕುಡಿಲೂರೊಳಿಗೆ ಸ್ವರ್ಗಸ್ಥರಾದ (ಎಕ. III, ತಿರುಮ. ೯೩-೩ ; 896). [?]

**ಕುಡಿವಡೆ** (ಕ್ರಿ). ೧. ಚಿಗುರನ್ನು ತಾಳು. ೨. ಬೆಳೆ; ವರ್ಧಿಸು: ಹೀಗೆ ನಷ್ಟವಾಗಿದ್ದ ಶಂತನುವಿನ ವಂಶವು ಕುಡಿವಡೆದು ಮುಂದಕ್ಕೆ ಬಂತು (ವಚಭಾ. ೯). [ಕುಡಿ₂ + ಪಡೆ₁]

**ಕುಡಿವರಿ** (ಕ್ರಿ). ೧. = ಕುಡಿಯಿಕ್ಕು: "ಪರ್ವಿದುದೆನೆ ಕುಡಿವರಿದುದು" (ಚತುಸಿ. ೪೦); ಹೃದಯದೊಳಂಕುರಿಸಿ ಮುಖಾಗ್ರದಿಂದೆ ಕುಡಿವರಿವ ಕೋಪ ವಿಷಲತೆಯೆ ತಳಿರ್ತುದು ಪೂತುದೆನಲ್ (ಜಗವಿ. ೧೧-೮೪); ಮಿಸುಪ ಗಾಡಿಯ ಲತೆಗಳ್ಪೆಡೆ ಕುಡಿವರಿವಂತೆ (ಉದ್ಭಟ. ೯-೪೫); ಸತ್ಕೀರ್ತಿಲತೆ ಕುಡಿವರಿದು ಬೆಳೆದುದು (ಕುವ್ಯಾಅ. ೬೦೫. ೯-೪೫). ೨. ಉಕ್ಕಿ ಹರಿ: ಆನಂದಾಶ್ರು ಕುಡಿವರಿವುತೆಲ್ಲಲ್ಲೈತರೆ (ವೆಂಕಾರಾ. ೨-೧೧-೧೫); ಜಾಗರದಿ ರಸದತ್ತ ಕುಡಿವರಿವ ಭವನೊಳಗೆ ಹಿಂಜರಿದು ಖತ ಸತ್ಯಕೆಡೆಗೊಡುವುದು (ಮಲೆದೇ. ೪೬). [ಕುಡಿ₂ + ಪರಿ₁]

**ಕುಡಿವಲೆ** (ನಾ). ಒಂದು ಬಗೆಯ ಬಲೆ: ಒಡ್ಡಿದರು ದಡಿವಲೆಯ ಸಿಡಿವಲೆ ಕಡ್ಡಿವಲೆ ಕುಡಿ[ಪಾಠಾಂ. ಣಿ]ವಲೆಯನಗಲಕೆ ಚಡ್ಡಣಿಸಿದರು ಬೀಸುವಲೆ ಬೆಳ್ಳಾರ (ತೊರರಾ. ೩-೩-೧೨). [ಕುಡಿ₁ + ಬಲೆ]

**ಕುಡಿವಾಲ್**₁, ಕುಡಿವಾಲು (ನಾ). ಕುಡಿಯುವ ಹಾಲು: ಇಡೆ ತೊಟ್ಟಿಲಿಲ್ಲಾಡಿಸುವರಿಲ್ಲ ನಿನಗೆ . . . ಬಿಡದೆಜಿವ ನೀರ್ ಕುಡಿವಾಲ್ಗಳೆಣ್ಣೆ ಬೆಣ್ಣೆಗಳಿಲ್ಲ (ಜೈಮಿಭಾ. ೨೮-೧೭). **ಕುಡಿವಾಲು**: ಆಡಿಯ ಉಂಗುಟದಿಂದ ಮುಡಿಯ ಬಾಗಿಲು ತೆರೆದು ಕುಡಿವಾಲಿನಂಬದಿ ರಾಮರಾಮಾ ಮಿಾಸಲ ತೊರೆಯಾಗಿ ಈ ಸಲ ಬಂದಿದೆ ಸೂಸಲ ನೆರೆಯಲ್ಲಿ ರಾಮರಾಮಾ (ಸೂರ್ಯಪಾ. ೮೫-೪). [ಕುಡಿ₁ + ಪಾಲ್₁]

**ಕುಡಿವಾಲ** (ನಾ). ೧. ಬಾಲದ ತುದಿ, —ಕೊನೆ: ಇಱುಂಕಿದ ಕೆಚ್ಚಲೆತ್ತಮೆತ್ತಿದ ಕುಡಿವಾಲಮಂದೆಸೆಯೆ (ಪಂಪಭಾ. ೮-೧೦೩); ಕರಂ ಕುಡಿವಾಲಮೆತ್ತಿ ಪಾಲ್ ಮೊಲೆಗಳಿನೆಚ್ಚು ಗಲ್ಗಲನುಗಲ್ ಪರಿತಂದುವು (ನೇಮಿಪು. ೧೦-೧೫೩); ಕುಡಿವಾಲಂ ನೆಲನಂ ಪಳಂಚಲೆಯೆ ಕೋಪೋದ್ರೇಕದಿಂ ದಿಟ್ಟಿಗಳ್ ಕಿಡಿಯಂ ಸಾಲಿಡೆ (ಎಕ. XI, ದಾವಣ. ೨೫-೧೮ ; 1224); ಕುಡಿವಾಲಮುಪ್ಪಳಿಸಲೊಗೆದ ತುಂತುಱ್ ಜಗಕ್ಕೆ ಕಡೆಗಾಲಮಂ ಮಾಡಲು (ಚಿಬಪು. ೨೧-೫). ೨. ಚೂಪಾದ ಬಾಲವುಳ್ಳ ಒಂದು ಜಾತಿಯ ನಾಯಿ: ಕುಡಿವಾಲನ ಕೊಳ್ಳಿವಾಲನ ಬೆಳ್ಳನ ನಿಡುಗಾಲ ಬಲು ಕುಕ್ಕುರನಾ ಮೆಡಿಗಿವಿಯಳಗನ ಬಿಡು ತಡೆ ಹಿಡಿಯೆಂದು ನುಡಿವರು ಬಿಯದರು (ರಾಮವಿ. ೧೫-೬೮). [ಕುಡಿ₂ + ಬಾಲ₁]

**ಕುಡಿವಾಲು** 'ಕುಡಿವಾಲ್' ನೋ.

**ಕುಡಿವಾಳ್** (ಕ್ರಿ). ಒಕ್ಕಲಾಗಿ ಬಾಳು; ದಾಸನಾಗು: ಗುಡಿಗೆಟ್ಟಿಂ ಗುಡಿಗೆಟ್ಟಿಂ ಶಿವನೇ ಕುಡಿವಾಳ್ದಿಂ ಕುಡಿವಾಳ್ದಿಂ ಹರನೇ (ತಿರುನಾ. ೨೨೦-೧೮). [ಕುಡಿ₂ + ಬಾಳ್₁ (< ಬಾೞ್)]

**ಕುಡಿವಿಡು** (ಕ್ರಿ). = ಕುಡಿಯಿಕ್ಕು: ಪವಳದ ಬಳ್ಳಿಯ ತುಱುಗಲ್ಪವಣಿಲ್ಲದೆ ತಳ್ತು ಬೆಳೆದು ಕುಡಿಯಿಟ್ಟಪರಾರ್ಣವತಟದೊಳ್ ಪರಿದಪುದೆಂಬವೊಲ್ ಎಸೆದತ್ತು ಸಂಧ್ಯಾರಾಗಂ (ಕಾದಂಪೂ. ೨೭೭). [ಕುಡಿ₂ + ಬಿಡು₁]

**ಕುಡಿವುರ್ವು**, ಕುಡಿಹುಬ್ಬು (ನಾ). ೧. ಹುಬ್ಬಿನ ಕೊನೆ. ೨. ಎಸಳಾದ ಹುಬ್ಬು: ಸುಳಿಗುರುಳ ಕುಡಿವುರ್ವಿನ ಕರ್ಪುಗಳೆ (ಕಾವ್ಯಸಾ. ೩೪೯); ಕುಡುನೋಟದ ಕುಡಿವುರ್ವಿನೂರ್ವಶಿ (ರಾಮಾಶ್ವ. ೬೧-೨೫). **ಕುಡಿಹುಬ್ಬು**: ಕೆದಱುಂದಲೆಗಳ ತೋರಭಾರದ ಮದದ ಕುಡಿಹು[ಪಾಠಾಂ. ಮ್ಮೆಯು]ಬ್ಬುಗಳ ಭಯರಸದುಭುತದ ಖಳರಿದ್ದರಿದಿರಿನಲಿ (ತೊರರಾ. ೩-೩-೮); ಕಣ್ಕೆಂಡದಂತಾಗೆ ಕುಡಿಹುಬ್ಬು ಧೂಮಲತೆಯೆಂಬೊಲಿರೆ (ಜೈಮಿಭಾ. ೧೩-೩೬); ಅಳುವಕಂದನ ತುಟಿಯು ಹವಳದ ಕುಡಿಯಂಗ ಕುಡಿಹುಬ್ಬು ಬೇವಿನೆಸಳಂಗ (ಗರತಿ. ೮೫). [ಕುಡಿ₂ + ಪುರ್ವು]

**ಕುಡಿವಳ್ದ** (ನಾ). ಒಬ್ಬಾತನ ಹೆಸರು: ಜಕ್ಕಿಯೊಬ್ಬೆ ನಾಬ್ಗೂವುಣ್ಡಗೆಯ್ಯುತ್ತಿರೆ ಸಣ್ಡುವರ ಕಲಿಗಂ ಪೆರ್ಗ್ಗಡೆತನಂ ಗೆಯ್ಯೆ ಸನ್ದಿಗರ ಕುಡಿ ಕುಡಿವುಳ್ದಂ ಕೊಡಂಗೆಯೂರ್ಗ್ಗೆ ಪೆರ್ಗ್ಗಡೆತನಂಗೆಯ್ಯುತ್ತಿರೆ (ಎಕ. VII, ಶಿಕಾರಿ. ೨೧೯-೧೩ ; 913). [?]

**ಕುಡಿವೆರಲ್** (ನಾ). ಬೆರಳಿನ ತುದಿ ; ತುದಿಬೆರಳು : ನಂದನನುತ್ಸಂಗದೊಳಿರ್ದೊಂದ್ಪೆದೆರಡೊಂಬತೆಂದು ತೊದಟಿಸೆವಿನಮೋರೊಂದನೆ ಕುಡಿ[ಪಾಠಾಂ. ಡು]ವೆರಲಿಂದಮುದೆಂದೆಣಿಸುಗುಮೆನ್ನ ಕೊರಲ ಹಾರದ ಮುತ್ತಂ (ಚಂದ್ರಪ್ರ. ೩-೫೦); ಸುರಿದಶ್ರುಗಳಂ ಕುಡ[ಡಿ]ವೆರಲಿಂ ತಾನೆನಸುಂ ಮಿಡಿಯುತ್ತುಂ (ಕುಸುಮಾ. ೧೦-೫೨). [ಕುಡಿ₂ + ಬೆರಲ್]

**ಕುಡಿವೆರಸು** (ಅ). ತುದಿ ಸಹಿತವಾಗಿ ; ಕುಡಿಯನ್ನು ಒಳಗೆ : ಪೂದಳೆದುದೆನಿಪ ಪುರ್ವಿನ ಕುಡಿವೆರಸು ತೂಕಡಸೊಳಕೊಂಡ ಚಾಡ್ಯ ಸೊಕ್ಕುಮುಕ್ಕುಳಿಸಿದಂತಿರ್ದಿರವುಂ (ಕಾದಂಪೂ. ೭೫೯). [ಕುಡಿ₂ + ಬೆರಸು₂]

**ಕುಡಿವೆಳಗು** (ನಾ). ತುದಿಯಲ್ಲಿ ಬೆಳಗುವ ಬೆಳಕು; ಬೆಳಕಿನ ಕುಡಿ; ಕಿರಣ: ಐಕ್ಯನ ಐಕ್ಯನ ಮಹಾದೈಕ್ಯನ ಭಾವ ಮಿಂಚಿನ ಕುಡಿವೆಳಗಿನ ಸಂಚದ ಸಂಚಲದ ಸಂಚಾರ ಸಂಚರಿಸುವ ಸರದಂತೆ (ಮೋ೯ಮಾ. ೧೪೩-೫೪೭); ನಂದುವ ಸೊಡರ ಕುಡಿವೆಳಗಿನಂತೆ (ವರ್ಧಪು. ೧೦-೫೦ ವ); ದಿಗುವಳಯದಲಿ ಕುಡಿವೆಳಗ ಕುಡಿಕುಡಿ ದಡರುತಿರ್ದುದು ತಿಮಿರಲತೆ ಜಗವ (ಕುವ್ಯಾದ್ರೋ. ೧೫-೨೬). [ಕುಡಿ₂ + ಬೆಳಗು₂]

**ಕುಡಿಸು**₁ 'ಕುಡಿಯಿಸು' ನೋ.

**ಕುಡಿಸು**₂ 'ಕೊಡಿಸು' ನೋ.

**ಕುಡಿಸು**₃ (ಕ್ರಿ). ಕೊಂಕಿರು; ವಕ್ರವಾಗಿರು; ಹೊರಳು. 'ಒಗ್ಗುಡಿಸು' ಪರಾ. [ಕುಡು₃ + -ಇಸು₃]

**ಕುಡಿಹ** (ನಾ). ಕುಡಿಯುವಿಕೆ; ಕುಡಿಯುವುದು; ಕುಡಿತ. 'ಕುಡಿಹಿ' ಪರಾ. [ಕುಡಿ₁ + -ಹ₂]

**ಕುಡಿಹಿ**, ಕುಡುಹಿ (ನಾ). ೧. ಕುಡಿಯುವವನು; ಕುಡುಕ: ಇಂತೀ ತ್ರಿವಿಧ ಕುಡಿಹಿಯ ಭಕ್ತಿ ಅಸಗನೀರಡಿಸಿ ಸತ್ತಂತಾಯಿತು (ಏಲೇಶ್ವ. ೧೩೯). **ಕುಡುಹಿ**: ತನ್ನ ಬಿಡುಗಡೆಯ ಸ್ತ್ರೀಯರ ಕೈಯಿಂದ ಒಡೆಯರ ಪಾದವಂ ತೊಳೆಯಿಸಿ ಆ ತೊಳೆನೀರ ತರಿಸಿ ತನ್ನ ಲಿಂಗಕ್ಕೆ ಮಜ್ಜನಕ್ಕೆಱೆದು ತೀರ್ಥವೆಂದು ಕೊಂಬ ಕುಡುಹಿಯ ನೋಡಾ (ಗಣಭಾ. ೩.೨೫-೨); ಶೋಣಿತಗುಡುಹಿಗಳ ಕೈ ಬೆಳೆದುದು (ತೊರರಾ. ೬-೩೫-೨೧). ೨. ದಡ್ಡ; ಅವಿವೇಕಿ: ಬಾರೆಲೆ ಕುಡುಹಿ ಬಾಯಿಗೆ ಬಂದ ಪರಿಯಲಿ ಕೆಡೆದಡೇನಹುದಿತ್ತಲಿದೆ ಕೊಳ್ಳೆನುತ ದೋಷದಲಿ ಒಡಲ ನಿಟ್ಟನು ಭಾರಿಗದೆಯಲಿ (ನಿಭಾಗ. ೬-೧೦-೨೯). [ಕುಡಿಹ + -ಇ₂]

**ಕುಡಿಹುಬ್ಬು** 'ಕುಡಿವುರ್ವು' ನೋ.

**ಕುಡಿಹೊಳೆಹು** (ನಾ). = ಕುಡಿವೆಳಗು: ಕಂಗಳಲಿ ಕುಡಿಹೊಳೆಹು ಹುಬ್ಬಿನ ಹೊಂಗಿನಲಿ ಭಂಜವಣೆ (ಸಂಭಪು. ೨೯-೨೫). [ಕುಡಿ₂ + ಹೊಳೆಹು (< ಪೊಳೆಪು)]

**ಕುಡು**₁ 'ಕೊಡು₁' ನೋ.

**ಕುಡು**$_2$ (ಕ್ರಿ). ಏಟುಕೊಡು ; ಹೊಡೆ ; ಬಾರಿಸು : ಕಸೆಯ ನಿನಿಸಜುಪಿ ಕುತೆ ಲಂಘಿಸಿದುದು ಪನ್ನೆರಡುಯೋಜನಂಬರಮಿನ್ನೇವೆಸಗೊಳ್ವುದೊಕಡು ವೇಗದಿನಸಕಳಿದುದು ಮನಮುಮಂ ತುರಂಗಮು ರತ್ನಂ(ಆದಿಪು.೧೩–೩೯).
[ದೇ. ‖ ತಮಿ. ಮಲ. ಕೊಟ್ಟು ; ತುಳು. ಕೊರು ; ತೆಲು. ಕೊಟ್ಟು]

**ಕುಡು**$_3$ (ನಾ). ವಕ್ರವಾಗಿರುವಿಕೆ; ಬಾಗಿರುವಿಕೆ; ಕೊಂಕು; ವಕ್ರತೆ; ಡೊಂಕು: "ಕುಡು–ಪ್ರದಾನೇ ವಕ್ರೇ ಚ (ಡೊಂಕಾದ)" (ಶಮಧಾ); "ಕುಡು ಕೊಂಕದಕ್ಕುಂ" (ಶಬ್ದಮಂ. ೬೪); ಕುಡು + ಇಲ್ಲ= ಕುಡುವಿಲ್ಲ (ಶಮದ. ೫೨ ಪ್ರಯೋ). 'ಕುಡುದಾಡೆ' ಪರಾ.
[ದೇ. ‖ ತಮಿ. ಕೊಡ ; ಮಲ. ಕೋಡ್ಡ ; ತೆಲು. ಕೊವಲಿ]

**ಕುಡುಂಗಕ** (ನಾ). ೧. ಒಂದು ಬಗೆಯ ಹುಲ್ಲು: "ತಜುಬುಲ್ಲು" (ನಾ ಚಿ ರಾ. ೭). ೨. = ಕುಟುಂಗಕ: "ಕುಡುಂಗಕ – ಕುಟುಂಗಕ= ಹುಲ್ಲುಹೊದಕೆ" (ತದ್ಭಕೋ. ೬). [< ಸಂ. ಕುಟುಂಗಕ]

**ಕುಡುಕ** 'ಕುಡಿಕ' ನೋ.

**ಕುಡುಕಿಕ್ಕು** (ಕ್ರಿ). ಕುಟುಕು ಇಡು; ಗುಟುಕು ಕೊಡು : ಅಂಗ ಕಾಂತಿಯಂ ತಾಂ ಕುಡುಕಿಕ್ಕುವಂ ಯುವತಿನೇತ್ರಚಕೋರಚಯಕ್ಕೆ (ಅಭಿನೇ. ೪–೧೩೬); ತಂಬುಲವ ಕುಡುಕಿಕ್ಕೆನುತ ಕಾತರದಿಂದವಳು (ಬರಾಸಾಂ. ೨೬–೪೯). [ಕುಡುಕು$_3$ (< ಕುಟುಕು$_3$) + ಇಕ್ಕು]

**ಕುಡಕು**$_1$ 'ಕುಟುಕು$_1$' ನೋ.

**ಕುಡುಕು**$_2$ (ಕ್ರಿ). ಕುಟುಕು ಕೊಡು; ಗುಟುಕು ನೀಡು: "ಕು[ಪಾಠಾಂ. ತು]ಡುಕು – ಈಷತ್‌ಪ್ರದಾನೇ [ಪಾಠಾಂ. ಪ್ರಧಾವನೆ]" (ಶಮಧಾ. ನ). [< ಕುಟುಕು$_1$]

**ಕುಡುಕು**$_3$ 'ಕುಟುಕು$_3$' ನೋ.

**ಕುಡುಕು**$_4$ (ಗು). ಕುಡಿಯುವ ಸ್ವಭಾವದ; ಕುಡುಕತನವುಳ್ಳ: ಕುಡುಕುಮನವಿತ್ತೀಚೆ ಅಡಿಗಡಿಗೆ ಎಡವುತಿದೆ ಪತನವ ನಿವಾರಿಸವ್ವ (ಅರಳು. ೩೫೯–೭). [ಕುಡಿ$_1$ + –ಕು]

**ಕುಡುಕುಂದಱಿ** 'ಕಡುಕುಂದಱಿ' ನೋ.

**ಕುಡುಕುಗೊಡು** (ಕ್ರಿ). = ಕುಡುಕಿಕ್ಕು: ನೇಱಿಲ ಪೊಸದೋರೆಯನಿ ಮ್ಮಾವಿನ ಪಣ್ಣಂ ತರಿಸಿ ಕುಡುಕುಗೊಡಲು ಹಸಿದಿರ್ದುಂ ತಿನಲೊಲ್ಲದೆ (ಜಯಕಾ. ೨–೨೩); ಶರಭಂಗಳ ಹಸುಳೆಗಳ್ಗೆ ತತ್ಸಿಂಗದೊಡಲ ಖಂಡವ ತೆಗೆದು ಕುಡುಕುಗೊಡುವ (ಸಮ್ಯಕೌ. ೧೦–೨೭).
[ಕುಡುಕು$_3$ (< ಕುಟುಕು$_2$) + ಕೊಡು]

**ಕುಡುಕುಗೊಳ್** 'ಕುಟುಕುಗೊಳ್' ನೋ.

**ಕುಡುಕುದಂಬುಲ** 'ಕುಟುಕುದಂಬುಲ' ನೋ.

**ಕುಡುಕೂರ್** (ನಾ). ಒಂದು ಊರಿನ ಹೆಸರು: ಕುಡುಕೂರ ಭಚಲದೋರಯ್ಯನ ಮಗಂ ಮಾರಯ್ಯಂ (ಎಕ. IV, ಹುಣಸೂ. ೫೦–೪; 987); ಮುದ್ದೆ ದಂಣಾಯಕರು ಕುಡುಕೂರ ಕೋಟೀಶ್ವರ ದೇವರಲ್ಲಿ . . . ಮಾಡಿದ ಧರ್ಮಕೆ (ಸೌಇಇ. IX–ii, ೪೧೭–೪; 1376).
[ಕುಡುಕು$_0$ + ಊರ್]

**ಕುಡುಕೆ** 'ಕುಡಿಕೆ' ನೋ.

**ಕುಡುಗತ್ತಿ** (ನಾ). ಒಂದು ಬಗೆಯ ಕತ್ತಿ; ಬಾಗಿರುವ ಕತ್ತಿ: "(ಕೊನೆಯಲ್ಲಿ ಅಗಲ ಹೆಚ್ಚುತ್ತ ಹೋಗುವ) ಬಾಗುಕತ್ತಿ ಕುಡಗತ್ತಿ." (Scimitar. ಇಂಕನಿ). [ಕುಡು$_3$ + ಕತ್ತಿ]

**ಕುಡುಗರ್ಬು** (ನಾ). ಕೊಂಕಿದ ಕಬ್ಬು; ನೇರವಾಗಿಲ್ಲದ ಕಬ್ಬಿನ ಜಲ್ಲೆ : ಬಡವನಿತ್ತ ಜ್ಯೋತಿಯ ಕಾಂತಿ ದೀಪಿಸದೆ ಕರಿದಹುದೆ ಸೈತವಹ ಕರ್ಬು ಯಿನಿದಾಗಿ ಕುಡುಗರ್ಬು ಮತ್ತೆ ತಾ ಪಿರಿಯ ಕಹಿಯಹುದೆ (ಪತಿಲ. ೧–೧೯). [ಕುಡು$_3$ + ಕರ್ಬು (< ಕರ್ವು)]

**ಕುಡುಗಲ್** 'ಕುಡುಗೋಲ್' ನೋ.

**ಕುಡುಗಲು** 'ಕುಡುಗೋಲ್' ನೋ.

**ಕುಡುಗು** (ಕ್ರಿ). ಕೊಡಹು; ಒದರು: ನಾವು ಆರು ಜನ ಇದ್ದೆವಲ್ಲ ಆದರೂ ನೋಡು ನಮ್ಮಿಂದ ಒಬ್ಬರಿಂದಲೂ ಸಾಗಲಿಲ್ಲ. ಒಂದೇಸಲ ಕೈಕಾಲು ಕುಡುಗಿದುದು, ನಾನೆಲ್ಲೋ ಅವರೆಲ್ಲೋ (ಮುಂಗಾಮು. ೮೬). [?]

**ಕುಡುಗುರುಳ್** (ನಾ). ಕೊಂಕಿದ ಕೂದಲು ; ಉಂಗುರುಗೂದಲು ; ಕುಟಿಲಕುಂತಲ : ಕುಡುಗುರುಳೆಂಬ ತಂಬೆಲರ ಬೆಂಬಿಡಿದಿಂ ಪೊಸ ವೇಟಮೆಂಬ ಚೆಲ್ವಿಡಿದೆಳಮಾಮರಂ (ಆದಿಪು. ೧೨–೨೯).
[ಕುಡು$_3$ + ಕುರುಳ್]

**ಕುಡುಗೂಸು** 'ಕೊಡಗೂಸು' ನೋ.

**ಕುಡುಗೆಯ್** (ನಾ). ಕೊಂಕಿದ ಕೈ; ಡೊಂಕುಗೈ: ಅಚ್ಚರಿ ಯೆಟ್ಟುಜಾಗೆ ಕೆಲರ್ಗೆ ಪೆಟಿಗಾಲ್ ಕೆಲರ್ಗೆ ಕುಡುಗೆಯ್ (ಅದ್ಭುತ. ೨೫–೨೫). [ಕುಡು$_3$ + ಕೆಯ್$_2$]

**ಕುಡುಗೆಯ್ತ** (ನಾ). ಕೊಡುವ ಕ್ರಿಯೆ; ದಾನಮಾಡುವಿಕೆ: ಪಗೆಗಳ್ ಕಾಡಿನೊಳ್ ಕಾದೆ ನೇಹಿಗರ್ ಬಂದು ಸೇರೆಯುಂ ಮೊಗಮುಂ ತಿರುಪಿರ್ದಿಲ್ಲಂ ಅಥಟಂ ಕುಡುಗೆಯ್ತದಿಂ (ಸೌನಂದ. ೨–೫).
[ಕುಡು$_1$ + ಗೆಯ್ತ$_1$ (< ಕೆಯ್ತ)]

**ಕುಡುಗೊರಳು** (ನಾ). ಕೊಂಕಿದ ಕೊರಳು; ಬಾಗಿದ ಕತ್ತು: ಕಿವಿವರೆಗೆಳೆದೆಚ್ಚ ಕಣೆಯೊಳ್ ಕಡುನೊಂದು ಕೆಡೆದೊಂದು ಬನದ ಕುರಂಗಿ ಪ್ರಿಯನ ದರ್ಶನ ತನಗಿನ್ನು ದುರ್ಲಭವೆಂದು ನೋಡಿತು ಕುಡುಗೊರಳಾಗಿ (ಗಾಥಾಸ. ೬–೯೪).
[ಕುಡು$_3$ + ಕೊರಳು (< ಕೊರಲ್)]

**ಕುಡುಗೋಲ್**, ಕುಡಲು, ಕುಡುಗಲ್, ಕುಡುಗಲು, ಕುಡುಗೋಲು (ನಾ). ಕೊಂಕಿದ ಧಾರೆಯುಳ್ಳ ಒಂದು ಕೊಯ್ಯುವ ಸಾಧನ: "ಲವಿತ್ರಂ, ದಾತ್ರಂ – ಈ ೨ ಕುಡುಗೋಲ್" (ಹಲಾಯು. ೯೪–೪೨೩); ಸೊಗಯಿಸುಗುಮೆ ಪಲ್ಲಿಲಿವಾಯಗಿಲಿಗಿಲಿಗಂಧಂ ಸಮಂತು ಕೂರಿಲಿ ಕುಡುಗೋಲ್ (ಕಾವ್ಯಾವ. ೨೫೭); ಸಂಸ್ಕೃತಿಯ ಬೇಗೆಗೆ ಕುಡು ಗೋಲ್ಗೊಂಬ ಮಾಳ್ಕೆಯಿಂ (ಅರಿಕ. ೧೭೭–೧೧); ಎನ್ನಯ ಬೇರೊಳೀಕೆ ಕುಡುಗೋಲಿಡುವೈ (ಜೀವಸಂ. ೧೮೦–೩೭). **ಕುಡಲು**: ಕೃಷಿಕನ ಕಳೆಕೊಯ್ಯುವ ಕುಡಲು ಬೀಳುವ ವೇಳೆಯಲ್ಲಿ ಆಗುವುದೆಲ್ಲ ಪ್ರಕೃತಿಯ ಅಯ್ಕೆಯ ನಿಯಮವನ್ನು ಅನುಸರಿಸುವುದು (ನಿಬಂಧ. I, ೨೩೧). **ಕುಡುಗಲ್**: ಈ ಚಕ್ರಲೋಹ ಖಂಡಕ್ಕಂ ಕುಡುಗಲ್ಲಮೆಜಗಿಮೆಂಬೊಡೆ (ಶಾಂತಿಪು. ೧೦–೧೨೧ ವ). **ಕುಡುಗಲು** : ಒನಿಕೆ ಕಂಬಳಿ ಕುಡುಗಲು (ವೀಕ್ಷೈಪು. ೮–೫–೫೬). **ಕುಡುಗೋಲು** : ಕೊಡಲಿ ಕತ್ತಿ ಕುಡುಗೋಲು ಸುತ್ತಿಗೆ . . . ಮೊದಲಾದಾಯುಧಂಗಳ್ (ಶ್ರಾವಕಾ. ೧೩೦–೧೧); ಕುಡುಗೋಲ ಸುಳಿಯದೇ ಮಸೆಯಿಸುವ (ಸಮ್ಯಕೌ. ೧–೨೪); ಪಿಡಿದ ಕರದ ಕುಡುಗೋಲು (ಕಂಸವಿ. ೧೧–೪೦); ಬೆಟ್ಟಕ್ಕೆ ಹೋಗುವವನ ಸೊಂಟದಲ್ಲಿ ಕುಡುಗೋಲು ಸಿಕ್ಕಿದಹಾಗೆ (ಗಾದೆ). [ಕುಡು$_3$+ ಕೋಲ್$_1$]

**ಕುಡುಗೋಲು** 'ಕುಡುಗೋಲ್' ನೋ.

**ಕುಡುಗೋವು** (ನಾ). ಒಂದು ಬಗೆಯ ಜಮೀನು (?): ಬೆಟ್ಟ ಅಯ್ಯನವರಿಗೆ ವ್ರಿತ್ತಿ ೨೧ ಕ್ಕಂ ಕಾರತುಂಡಿನ ಕುಡುಗೋವಿನಲ್ಲಿ ಮೂನೂರ ಅಡಕೆಯ ಮರ (ಎಕ. VIII, ತೀರ್ಥಹ. ೧೩೫–೩೩; ?). [?]

**ಕುಡುತ** 'ಕುಡತಿ' ನೋ.

**ಕುಡುತಲೆ** (ನಾ). ಖಾತೆ ; ಪಟ್ಟಿ : ಪ್ರತಿವರುಷದಲೂ ನಡವ ಬತ್ತದ ಕುಡುತಲೆ ಭೂಮಿಯ ವಿವರ (ಸೌಇಇ. ೧೯೩೦, ಮಂಗಳೂ. ೫೨೭–೧೪ ; 1375). [← ತುಳು. ಕುಡ್ತಲೆ]

**ಕುಡುತೆ₁** 'ಕುಡಿತೆ' ನೋ.

**ಕುಡುತೆ₂** (ನಾ). ವಕ್ರತೆ; ಕೊಂಕು : ಬಿಡುದಲೆಯ ಬಿಂಡೆದ್ದ ಕಂಗಳ ಜಡಿವ ನಿಡಿವಾಡೆಗಳ ಹುಬ್ಬಿನ ಕುಡುತೆ[ಪಾಠಾಂ. ಕೆ]ಗಳ ಕಡುಗಟ್ಟಿದೌಡಿನ ಜಡಿವ ತೋಳುಗಳ (ನಿಭಾಗ. ೧೦–೧೧–೩೧). [ಕುಡು₃ + -ತೆ]

**ಕುಡುತೆ₃** 'ಕುಡತಿ' ನೋ.

**ಕುಡುತೆಗಣ್** 'ಕುಡಿತೆಗಣ್' ನೋ.

**ಕುಡುದಡಿ** (ನಾ). ಕೊಂಕಿದ ಕೋಲು; ಬಾಗಿದ ದೊಣ್ಣೆ; ಗಿಡ್ಡ ದೊಣ್ಣೆ: ಕುಬು, ಬಿಬು, ಕುಡು ಎಂಬವರ್ಕೆ – ಕುಬುಗಿಡಂ, ಕುಬುದಡ್ಡಿ . . . ಕುಡುವೆಟು, ಕುಡುದಾಡೆ, ಕುಡುಮಿಂಚು ಕುಡು[ಪಾಠಾಂ. ಜ]ದಡಿ (ಶಮದ. ೬. ೧೮೪ ಪ್ರಯೋ). [ಕುಡು₃ + ದಡಿ]

**ಕುಡುದಾಡೆ** (ನಾ). ಕೊಂಕಿದ ಕೋರೆಹಲ್ಲು : ಪೊಳೆದುಳ್ಕುವ ಕುಡುದಾಡೆಯ ಪೊಳಪು (ಪಂಪಭಾ. ೬–೫೯); ಕುಡುದಾಡೆಗಳ್ ಸೊಗಯಿಪೆಕ್ಕಲ ವಂದಿಪೊಲೊಕ್ಕಲಿಕ್ಕಿದಂ (ನೇಮಿಪು. ೧೧–೧೫೭); ಕುಡುದಾಡೆಮಿಂಚು ಕಿಸುಗಣ್ ಸಿಡಿಲೆನೆ (ಜಗವಿ. ೪–೫೪); ಕುಳಿಕನ ಕುಡುದಾಡೆಗೆ ಮಾರಿವಿಟ್ಟ ಮಾರಿಗೆ ಮಾಜುಂಪ . . . ಕಡುಗಲಿ (ಕಇ. I, ೨೫–೪೫; 1186); ಕುಡುದಾಡೆಯಿಂ ಬೇಡವಡೆಯೊಡಲನೀಡಿಱಿವುತ (ಹಜಕಾ. ೬–೮).
[ಕುಡು₃ + ದಾಡೆ]

**ಕುಡುನೋಟ** (ನಾ). ಕೊಂಕುನೋಟ; ಓರೆನೋಟ : ಕಡೆಗಣ್ಪೊಗರ ಕುಡುನೋಟದಿಂ ನೋಡಿ ಪೆಱನೊಗದ ನಗೆಜೊನ್ನಮಂ ಕೂಡಿ (ರಾಮಾಶ್ವ. ೯–೧೫). [ಕುಡು₃ + ನೋಟ]

**ಕುಡುಪು**, ಕುಡುವು, ಕುಡುಹು (ನಾ). ೧. ಡೊಂಕು; ಬಾಗಿರುವಿಕೆ; ವಕ್ರತೆ. 'ಕುಡುಪುವಾಲ' ಪರಾ. ೨. ವಾದ್ಯವನ್ನು ಬಾರಿಸುವ ಕೋಲು; ಪಿಟೀಲು ಮೊದಲಾದ ತಂತಿವಾದ್ಯಗಳನ್ನು ನುಡಿಸುವ ಬಿಲ್ಲು, —ಕಮಾನು; ವಾದನದಂಡ : ಕುಡುಪುಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪುರ್ವಿಂ ಜತಿಯಂ ತೊಡರದೆ ನಡೆಯಿಸಿ ಪುರ್ವದೆ ಕುಡುಪೆನೆ ನರ್ತಕಿಯೆ ಸಭೆಗೆ ವಾದಕಿಯಾದಳ್ (ಆದಿಪು. ೯–೩೨); ಕರಂ ಯತಿಧಾತುಮೂರ್ಛನಾಬ್ಯಾಜದೊಳಾಡೆ ಕೂಡೆಕುಡುಪುಂ ಬೆರಲುಂ ಕೃತಕಾದ್ರಿಕೂಟದೊಳ್ ಬಾಜಿಸುವಂ ಜಸಂಬಡೆಯೆ ಕಿನ್ನರನಂತೆ ನರೇಂದ್ರನಂದನಂ (ಅರ್ಧನೇ. ೪–೧೪೦); ಚಂದ್ರಕಾಂತದ ಕುಡುಪಿಂ . . . ಢಕ್ಕೆಯಂ ಬಾಜಿಸಿದಳ್ (ಬಾಧಪು. ೬–೮೯); ಕೇಳಬಲ್ಲುದೆ ಕುಡುಪಣಂ ಕ್ವಣಿತಮನ್ನ? (ಗಿರಿವಿಂ. ೫೭–೮). ೩. ಕಣ್ಣಿಗೆ ಅಂಜನವನ್ನು ಲೇಪಿಸುವ ಕಡ್ಡಿ; ಕಾಡಿಗೆಕಡ್ಡಿ; ಅಂಜನಶಲಾಕೆ : ಎಡಗಣ್ಣೊಳಿಟ್ಟಿದಂ ಜನಮೊಡಂಬಡೆನೆ ಬಲದ ಕಣ್ಣೊಳಿಚ್ಛದೆ ಕುಡುಪಂ ಪಿಡಿದು ಗವಾಕ್ಷಕ್ಕೊರ್ವಳ್ ನಡೆದಳ್ ನೋಡಲ್ಕೆ ವಿನಯಕಲ್ಪಾಂಘ್ರಿಪನಂ (ಶಾಂತಿಪು. ೬–೮).
**ಕುಡುವು** : ೨. ಕೋಣಃ – ಎರ್ವೆಯ ಹೋಕಂ, ವಾದ್ಯದ ಕುಡುವುಂ (ಶಾಶಕ್ಯ. ೩೪). **ಕುಡುಹು** : ೨. ಶರೀರಮೆವಾದ್ಯಂ ನಾಲಗೆ ಬಾಜಿಸುವ ಕುಡುಹು ವಾದಕನಾತ್ಮಂ (ಶಮದ. ೩೪ ವೃತ್ತಿ); ಸಿಡಿಲ ಕುಡುಹುಗಳಿಂದ ಕಮಲಜ ಹೊಡೆಯಲಬುಜಭವಾಂಡ ಭೇರಿಯ (ಕುಮ್ಯಾದ್ರೋ. ೧–೪೭). ೩. ಅಂಜನ :– ಮೆಣಸು, ಬೆಳ್ಳುಳ್ಳಿ, ಹಿಪ್ಪಲಿ, ಅಳಲೆಕಾಯಿ ಬೀಜ ಇವಂ ಸಮನಾಗಿ ಗೋಮೂತ್ರದಿಂದರೆದು ಕುಡುಹ ಮಾಡಿ ನೆಳಲಲ್ಲಿ ಒಣಗಿಸಿ ಕಣ್ಣಿಗೆ ತೇದು ಹಚ್ಚಲು ರಕ್ತಪಿತ್ತ . . . ರಕ್ತದೋಷ ಸಹ ಮಾಣ್ಗುಂ (ಸಕವೈ. ೧೮೩); ಆಡಿನಮೂತ್ರದಿಂದಾ ಸಣ್ಣನಾಗಿ ಅರದು ಅಂಜನ ಕುಡುಹುಗಳಂ ಮಾಡಿ (ವಿಷಚಿ. ೧೨–೧). ೪. ಬರೆ ಹಾಕುವ ಕುಡ : ಕಾಯ್ದ ಕರ್ಬುನದ ಕುಡುಹುಗಳಿಂ ಕಿವಿಮೂಗಿನೊಳ್ ಹರಿಯಿಸುವುದುಂ (ಶಾಂತೀಶ್ವ. ೯–೧೧೦ ವ); ವೈದ್ಯದಲ್ಲಿ ಹೇಳಿದ ಕಟ್ಟಳೆಯಿಂದ ಕುಡುಹ ಕಾಸಿ ಬರೆವುದಕ್ಕೆ ರಕ್ಷೆಯ ಹಾಕುವುದಕ್ಕೆ (ಅಶ್ವಟೀ. ೫೮–೨). ೫. ಹತ್ತಿಯನ್ನು ಎಕ್ಕುವ ಕೋಲು; ಬಿಲ್ಲಿನ ಹುರಿಯನ್ನು ಬಡಿಯುವ ಕೋಲು : "ದೆಸೆಯೆನಲು ಬಿಲ್ಲು ಪಿಡುಸೋದ[ಶೋಧ] ಮನೆ ಕುಡುಹು" (ಮಂಗರಾ. ೬೧–೧೯). [ಕುಡು₃ + -ಪು]

**ಕುಡುಪುವಾಲ** (ನಾ). ಡೊಂಕುಬಾಲ; ವಕ್ರವಾದ ಬಾಲ : ನಡುನೀಳ್ದ ಜಂಘೆ ಕುಡುಪುವಾಲ ಮೆಱೆಯಲಂದೊಡನೆಸೆದವು ಜಾಯಿಲಗಳು (ಕುರಾಸಾಂ. ೨೭–೪೦). [ಕುಡುಪು + ಬಾಲ]

**ಕುಡುಬ** (ನಾ). ಒಂದು ಅಳತೆ; ಪ್ರಸ್ಥದ ನಾಲ್ಕನೆಯ ಒಂದು ಭಾಗದಷ್ಟು: "ಕುಡುಬ – ಕುಡುವ (ಪ)" (ತದ್ಭಕೋ. ೮); ಷೋಡಶಿಕೆ ಕುಡುಬ ಪ್ರಸ್ಥ ಆಢಕ ದ್ರೋಣ ಮಾನಿ ಖಾರಿಗಳಿವು ಚತುರ್ಗುಣಿತಂಗಳಿವು ಮೊದಲಾದುವು ಮಾನಪ್ರಮಾಣಮುಕ್ಕುಂ (ಪಸಾರ. ೧೮೯–೧೧); ಪ್ರಸ್ಥದಲಿ ನಾಲ್ಕಱಲಿ ವಂದು ಭಾಗ ಕುಡುಬವೆನ್ನಿಸಿಕೊಂಬುದು ಇದು ಮಗಧ ದೇಶದ ಕೊಳಗದ ಪ್ರಮಾಣ (ಭಾಸ್ಕರ. ೭೪–೫); ಮೂರ್ಸಾವಿರದ ಆರ್ನೂಱುಕುಡುಬವೆನಿಸೂದು (ವೀಶೈವ. ೬–೧೦–೬೧). [< ಸಂ. ಕುಡುವ]

**ಕುಡುಬಿ** (ನಾ). ೧. ತುಳುನಾಡಿನ ಒಂದು ಜಾತಿ: ಇತರ ನಾಮಧೇಯಗಳು – ಇನ್ನಿತರರಲ್ಲಿ ಓಡಾರಿ . . . ಕೊಡಿಯ, ಕುಡುಬಿ, ಕೊಟ್ಟಾರಿ ಇತ್ಯಾದಿ ಕೌಟುಂಬಿಕ ಹೆಸರುಗಳಿವೆ (ತುಳುನಾ. ೧೮೪); ಮೊಲದ ಶಿಕಾರಿಗೆ ಹೊರಟ ಹಳ್ಳಿಯ ಕುಡುಬಿಯೊಬ್ಬನ ಬೇಟೆಯಾಯಿತು ಅವನಿಗೆ (ಔದಾಉ. ೨೫). ೨. ಮಲೆನಾಡಿನ ಮೂಲನಿವಾಸಿಗಳಲ್ಲಿ ಒಂದು ಪಂಗಡ; ಆ ಪಂಗಡದವನು : ಕಾಡು ಮತ್ತು ಗಿರಿಜನರು – . . . ಭಿಲ್ಲರು. . . ಕುಡಿಯ, ಕುಡುಬಿ, ಮವಿಲನ್ (ತುಳುನಾ. ೧೭೨). [?]

**ಕುಡುಬಿಲ್ಲು** 'ಕುಡುವಿಲ್' ನೋ.

**ಕುಡುಮಿಂಚು** (ನಾ). ಕೊಂಕಾದ ಮಿಂಚು; ಬಳ್ಳಿಮಿಂಚು : ಕುಡುಮಿಂಚಂ ಮಸೆದನ್ನರಪ್ಪ ಪಲರೊಳ್ವೆಂಡಿರ್ ಮನಂಗೊಂಡು ಬಂದೊಡಂ (ಆದಿಪು. ೩–೧೨); ನಭೋಂಗಣಕ್ಕೊಗೆದಳೆಂದು ಲಕ್ಷ್ಮಿ ಕುಡುಮಿಂಚಿದೊಂದೆಂಬಿನಂ (ಕಾದಂಉ. ೭೭೮); ಕುಡಿಮಿಂಚುಂ ಸುರಧನುವುಂ ಗೆಡೆಗೊಂಡು (ನೇಮಿಪು. ೮–೧೨೨); ಪೊಳೆವ ನೇತ್ರಾಂಚಲಂ ಕುಡುಮಿಂಚಿನಂತಾಗೆ (ಪದ್ಮರಾ. ೮–೫೧). [ಕುಡು₃ + ಮಿಂಚು₂]

**ಕುಡುಮೆ** (ನಾ). ಕೊಡುವಿಕೆ; ದಾನ : ಪಾತ್ರಕ್ಕಿತ್ತಂ ಕುಡುಮೆಯಂ ಮಾಡಂ ತಾನಘಮೇನನುಂ (ಸೌನಂದ. ೨–೧೨).
[ಕುಡು₁ (< ಕೊಡು) + -ಮೆ]

**ಕುಡುಮೆಟ್ಟು** (ನಾ). (?) : ವಜ್ರಕ್ಕೆ ಮಂಜಾಡಿ ಕರ್ಪುರ ಕುರುಜು ಕಸುರಿವೇಣಿ ಚಿನ್ನಬೆಳ್ಳಿ ತೂಕ ಕಂಚು ತಾಮ್ರ ಹಲ ಇವು ತೂಗಿ ಮಾರುವಂತ ವಿವರಗಳು : ಆನೆಗೆ ಗಜಕಡ್ಡಿ, ಕುದುರೆಗೆ ಕುಡುಮೆಟ್ಟು (ಭಾಸ್ಕರ. ೭೮–೩). [?]

**ಕುಡುವ** (ನಾ). ೧. ಒಕ್ಕಲಮಗ; ವ್ಯವಸಾಯಗಾರ; ರೈತ : "ಒಕ್ಕಲಿಗ, ಕುಡುವ, ಆರಂಭಗಾರ, ರೈತ" (ಕಂನುಹು. ೮೦). ೨. ಗೌಡ ಸಾರಸ್ವತ ಬ್ರಾಹ್ಮಣರ ಉಪನಾಮಗಳಲ್ಲೊಂದು : ಕಾಮತ, ನಾಯಕ, ಕಿಣಿ . . . ಕುಡುವ, ಶ್ಯಾನುಭಾಗ (ತುಳುನಾ. ೧೮೪). 'ಕುಡಿಯ' ಪರಾ. [ಕುಡು₀ + -ವ]

**ಕುಡುವಾವುಜ** (ನಾ). ಕುಡುಹಿನಿಂದ ಬಾರಿಸುವ ಚರ್ಮವಾದ್ಯ : ಕಂದಾವುಜ, ಪಟಾವುಜ, ಕುಡುವಾವುಜ [ಪಾಠಾಂ. ಕುಡುಬಾಹುಜ] ಅಡಾವುಜವೆಂಬ ನಾಲ್ಕು ತೆಱದ ಅವುಜಮಂ (ವಿವೇಕ. ೧೯೧).
[ಕುಡುವು (< ಕುಡುಪು) + ಅವುಜ]

**ಕುಡುವಾಳ್** (ನಾ). ಕೊಂಕಾದ ಕತ್ತಿ; ಕುಡುಗೋಲು : ಪರ್ಸದ ಪೂಜ್ಯತೆ ಬಯಲಾಯ್ತೋ ಕುಡುವಾಳಿನ್ ಬಿದಿ ಕೊಯ್ದತ್ತೇ (ಪಾರಸಿ. ೩೫–೧). [ಕುಡು₃ + ಬಾಳ್₃]

**ಕುಡುವಿಲ್,** ಕುಡುಬಿಲ್ಲು (ನಾ). ಕೊಂಕಾದ ಬಿಲ್ಲು ; ವಕ್ರಚಾಪ : ಆತನ ಕುಡುವಿಲ್ಲ ಜೀವಡೆಗೆ ಬಿಗುತ್ತಿರ್ಪಂತೆ ಕಣ್ಮುಕುಳಿಸಿದುವು (ಕಾದಂಊ. ೭೭೦) ; ಏಱಿ ಗುಣಿವೆಸದ ಸಿವಿಗೆಯನೇಱಿಸಿ ಕುಡುವಿಲ್ಲನೊಡನೆ ಬರೆ ಕಂದರ್ಪಂ ನೀಱಿ ಮುಗಿಲ್ವೊರೆಯೊಳ್ ಮೆಯ್ವೋಱುವ ಶಶಿಕಳೆಯ ಗಾಡಿಯಂ ಗೆಲೆವಂದರ್ (ಪಂರಾಮಾ. ೩-೪೦). **ಕುಡುಬಿಲ್ಲು :** ಕುಡುಬಿಲ್ಲು ಬಾಗಿದ ಮೆಯ್ಯ . . . ಸ್ಥವಿರೆಯಂ ಕಂಡೊಡನೆ ಕೈಕೆ ನಡೆದಳ್ ಬಳಿಗೆ (ಶ್ರೀರಾಮಾ. ೨೧-೫೪೩).
[ಕುಡು$_3$ + ಬಿಲ್$_2$]

**ಕುಡುವಿಲ್ಲ** (ನಾ). (ಯಾವಾಗಲೂ) ಕೊಂಕಿದ ಬಿಲ್ಲನ್ನುಳ್ಳವನು ; ಮನ್ಮಥ ; ಕಾಮ : "ಇಂಗೋಲ್ವಿಲ್ಲಂ . . . ಕುಡುವಿಲ್ಲಂ, ಐಸರಲಂ, ಗಿಳಿದೇರಂ – ಇವು ೧೩ ಕಾಮದೇವಂಗೆ ಪೆಸರ್" (ಕಶಸಾ. ೨-೧೩) ; "ಪೆಱಗೊಡೆಯಂ ಪೆಣ್ಪಡೆಯಂ ನೆಱೆ ಬಂಡುಣಿವೆರ್ದೆಯ ಸುಗ್ಗಿಗೆಳೆಯಂ ತಾನೈಸರಲ ಕುಡುವಿಲ್ಲ ಜತಿವಗೆ ಪಿರಿವಿಂಗೋಲ್ವಿಲ್ಲ ಕಾವ ಮಿಾಂಬಬಿವಿಗೆಯಂ" (ಕವಿಕಂ. ೨೭) ; ಕುಡುವಿಲ್ಲನೆಚ್ಚ ಸರಲುಂ ನಡದು ದಲಂ ದೊರ್ವನೆರ್ದೆಯಂ (ಕಾವ್ಯಾವ. ೨೦೯) ; ಕುಡುವಿಲ್ಲಗೆಣೆಯ ಕುಂಭಿನಿಯರಸನ ಬಿಟ್ಟು ಮಡದಿಯನ್ನರ್ಗೆಳಸುವರೆ (ಪ್ರಭಂಜ. ೨-೪೦) ; ಕೊಂಕಿಮುದು ಬಿಲ್ ಆವಂಗೆ ಆತಂ ಕುಡುವಿಲ್ಲಂ (ಶಬ್ದಾನು. ೩೧೦ ಪ್ರಯೋ) ; ಕುಡುವಿಲ್ಲಂ ಮಸೆದಿರಿಸಿದ ಕಡುಕೂರ್ಸರಲ್ (ವಿಷ್ಣುಪು. ೫-೭-೪೧).
[ಕುಡುವಿಲ್ + –ಅ$_7$]

**ಕುಡುವು** 'ಕುಡುಪು' ನೋ.

**ಕುಡುವುಗುರ್** (ನಾ). ಕೊಂಕಿದ ಉಗುರು ; ವಕ್ರನಖ : ಕುಡುವುಗುರಿಂದೆಬಿಲ್ಮುಡಿಯ ಗಂಟು ಸಡಿಲಿಸಿ ಗಂಧತೈಲಮಂ ಕುಡಿತೆಯೊಳಾಂತು (ಕಾವ್ಯಸಾ. ೬೩೧).
[ಕುಡು$_3$ + ಉಗುರ್]

**ಕುಡುವುರ್ಬು,** ಕುಡುಹುಬ್ಬು (ನಾ). ಕೊಂಕಿದ ಹುಬ್ಬು ; ಡೊಂಕು ಹುಬ್ಬು : ಅಱಿಪಿದುದು ರೌದ್ರರಸಮಂ ನಿಱಿಸಿದ ಕುಡುವುರ್ಬು ಕರ್ಚಿರ್ದೌಡುಚಿರ್ದ ಬಾಳ್ (ಗದಾಯು. ೪-೨೭) ; ಪಿಱುಗುವ ಕುಡುವುರ್ಬಿಂಗೆ ತಾನಿಕ್ಷುಚಾಪಂ ದೊರೆಯಲ್ಲಂ (ಗಿರಿಕ. ೪-೧೫೩) ; ಕೊಂಕಿಗೆ ಕುಡು ಎಂಬಾದೇಶಂ ಕುಡುವುರ್ಬು, ಕುಡುಗೋಲ್, ಕುಡುವೆಱೆ (ಶಮುದ. ೧೮೪ ಪ್ರಯೋ) ; ಕುಡುವುರ್ಬು ಕರ್ಬಿನ ಬಿಲ್ಲ ಬಿಂಕಮಂ ಕೊಂಕುಗೆಯ್ಯೆ (ಪದ್ಮರಾ. ೩-೩೦). **ಕುಡುಹುಬ್ಬು :** ಕಬ್ಬುವಿಲ್ಲುಗಳ ಕೊಂಕನೇಳಿಸುವಾ ಕುಡುಹುಬ್ಬುಗಳಿಂಪುವಡೆದಾ (ಪ್ರಭಂಜ. ೪-೯೭).
[ಕುಡು$_3$ + ಪುರ್ಬು]

**ಕುಡುವೆಱೆ** (ನಾ). ಕೊಂಕಿದ ಚಂದ್ರ; ಖಂಡಚಂದ್ರ; ಬಾಲಚಂದ್ರ: ಕುಡುವೆಱೆ ತೋರ್ಪ ಕುಡುದಾಡೆ (ಶಮುದ. ೧೮೪ ಪ್ರಯೋ).
[ಕುಡು$_3$ + ಪೆಱೆ]

**ಕುಡುವೆಱೆದಲೆಯ** (ನಾ). ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಶಿವ : ಕಡುಪಿಂದವೆ ಮೂವಳಸಂ ಮುತ್ತಿದ ಕುಡುವೆಱೆ ದಲೆಯನ ಭಾಳಾಂಬಕದುರಿ ಸುಡುವಂದದಿನಳುರ್ದುದು ವಿರಹಜ್ವರಂ (ಜಯನಕಾ. ೪-೩೧).
[ಕುಡುವೆಱೆ + ತಲೆ$_1$ + –ಅ$_7$]

**ಕುಡುಹಿ** 'ಕುಡಿಹಿ' ನೋ.

**ಕುಡುಹಿವೆಣ್** (ನಾ). ಕುಡಿಯುವ ಹೆಂಗಸು ; ಮದ್ಯಪಾನ ಮಾಡುವವಳು : ನಡೆ ದಡದಡಿಸುತ ನುಡಿ ತಡಬಡಿಸುತ ಬಿಡದೆ ಬೈವುತ ಬೀಡಿನವರ ಕೆಡವುತ ಕೈಯಡಕೆಲೆಯ ನಡೆದುದಲ್ಲಿ ಕುಡಿಹಿವೆಣ್ಣಾ ದಂಡಿನೊಳಗೆ (ಕುಂರಾಸಾಂ. ೪೧-೬೧).
[ಕುಡುಹಿ (< ಕುಡಿಹಿ) + ಪೆಣ್]

**ಕುಡುಹು** 'ಕುಡುಪು' ನೋ.

**ಕುಡುಹುಬ್ಬು** 'ಕುಡುವುರ್ಬು' ನೋ.

**ಕುಡೆಯ** 'ಕುಡಿಯ' ನೋ.

**ಕುಡ್ಡ** (ನಾ). "ಕುಡುಂಬಳ ಹಕ್ಕಿ ; ಬೆಳ್ಳಕ್ಕಿಯ ಜಾತಿಯ ಒಂದು ಹಕ್ಕಿ ; ಕೌಜಲು" (ಸಿರಿಕೋ. ೧೨೦). [?]

**ಕುಡ್ಡಗುರಿಯೆಳ್ಳು** (ನಾ). ಒಂದು ಜಾತಿಯ ಎಳ್ಳು ; ಕಾಡುಗುರಿಯೆಳ್ಳು : (ಕ).
[ಕುಡ್ಡ + ಗುರಿ + ಎಳ್ಳು (< ಎಳ್)]

**ಕುಡ್ಡಬುರ್ಲಿ** (ನಾ). ಒಂದು ಜಾತಿಯ ಕಾಡುಹಕ್ಕಿ : (ಕ).
[ಕುಡ್ಡ + ಬುರ್ಲಿ]

**ಕುಡ್ಡಬೆಳ್ಳಕ್ಕಿ** (ನಾ). ಒಂದು ಜಾತಿಯ ಕಂದುಬಣ್ಣದ ನೀರುಹಕ್ಕಿ; ಒಂದು ಬಗೆಯ ಕ್ರೌಂಚಪಕ್ಷಿ; ಕೊಕ್ಕರೆಯಲ್ಲಿ ಒಂದು ಜಾತಿ : (ಕ).
[ಕುಡ್ಡ + ಬೆಳ್ಳಕ್ಕಿ]

**ಕುಡ್ಡೆ** (ನಾ). ಗೋಡೆ : ನೀಲರತ್ನದೊಳೆ ಪಚ್ಚೆ ಘನಜಂತೆ ಮೇಲ್ವಾರೆ ಭರ್ಮ್ಮರ್ಗಂ ಕುಡ್ಡೆ ಹೀರ ಪವಳದ ಲೋವೆ ಝುಗಝುಗಿಸಲು (ಪ್ರಭುಪು. ೩-೩೪).
[< ಸಂ. ಕುಡ್ಯ]

**ಕುಡ್ತಲೆ** (ನಾ). ೧. (ಕರಾ) ಜಮಿಾನಿನ ಸ್ವಾಮ್ಯವನ್ನು ಒಬ್ಬನ ಹೆಸರಿನಲ್ಲಿ ಮಾಡಿದ ದಾಖಲೆ, —ರಿಕಾರ್ಡು ; ಖಾತೆಪಟ್ಟಿ. ೨. ಭೂಮಿಯ ಸ್ವಾಮ್ಯವನ್ನು ರಿಕಾರ್ಡು ಮಾಡಿದ ಹಕ್ಕು. 'ಕುಡ್ತಲೆತಬ್ದಿಲು' ಪರಾ.
[← ತುಳು. ಕುಡ್ತಲೆ]

**ಕುಡ್ತಲೆತಬ್ದಿಲು** (ನಾ). (ಕರಾ) ಕುಡ್ತಲೆಯನ್ನು ಇನ್ನೊಬ್ಬನ ಹೆಸರಿಗೆ ಬದಲಾವಣೆ ಮಾಡುವುದು : ಶ್ಯಾಮನ ವ್ಯವಹರಣೆಯಲ್ಲಿ ಪಟ್ಟಾನಂಬ್ರ ಹುಡುಕುವುದಕ್ಕೆ, ಗಡಿಹಾಕಿಸುವುದಕ್ಕೆ, ಕುಡ್ತಲೆತಬ್ದಿಲು ಮಾಡುವುದಕ್ಕೆ ಗೇಣಿ ಚೀಟು ಬರೆಯಿಸುವುದಕ್ಕೆ ಇಂಥ ಒಂದಲ್ಲ ನೂರು ಕೆಲಸಗಳಿಗೆ ಅವರ ಸಹಾಯ ಅವಶ್ಯವಾಯಿತು (ಕರುಕ. ೧೧೨).
[ಕುಡ್ತಲೆ + ತಬ್ದಿಲು]

**ಕುಡ್ಮಲ** (ನಾ). = ಕುಟ್ಮಲ. [ಸಂ.]

**ಕುಡ್ಯ** (ನಾ). ಗೋಡೆ : ಇಳಾಸುತಂ ಸುತದೊಳ್ ತೀಕ್ಷ್ಣಗು ಲಗ್ನದೊಳಿರೆ ಮರಣಂ ನಗಾಗ್ರ ಕುಡ್ಯಾಶನಿ ಪ್ರಪಾತದಿನಕ್ಕು (ಜಾತತಿ.೨೩-೧೯). [ಸಂ.]

**ಕುಡ್ವಾಲು** (ನಾ). ಒಂದು ಔಷಧಿ ; ರಕ್ತಾತಿಸಾರವನ್ನು ತಡೆಗಟ್ಟುವ ಒಂದು ಔಷಧಿಯ ಮೂಲಿಕೆ : ಕೊಡಚಗ, ಕೊರಸಿನಗಿಡ, ಕೊಡಮುರುಕ, ಕುಡ್ವಾಲು, ಕೊರ್ಜು, ಕಹಿಕೊಡ್ಸೀಗೆ ಗಿಡ ; ಕುರ್ಚಿ (ವೈಔಗಿ. ೪೪-೮೭೭). [?]

**ಕುಣ** (ನಾ). ಹೂಬಿಡುವಿಕೆ ; ಫಲಬಿಡುವ ವೇಳೆ (?) : ನವಕುಣಂಗಳ ಪಾಂಡು ಕುವಲಯಮನಿಟ್ಟಿಸುತಲವಿರಳದ ಚೌದಳಂ ಷಡ್ದಳಂ ದಶದಳಂ (ಲಿಂಗಪು. ೯-೧೫). [?]

**ಕುಣಂಬ** (ನಾ). ಒಂದು ಜಾತಿಯ ಸೊಪ್ಪು : (ಕ). [?]

**ಕುಣಪ** (ನಾ). ೧. ಹೆಣ ; ಶವ : ಕೊತ್ತಳದೊಳೊತ್ತಿನ ತೆನೆಯ ಸಂದಿಗಳೊಳ್ ಸಂದಣಿಸಿ ನೇಲ್ವ ವೀರಭಟ ಕುಣಪಂಗಳಿಂ (ಅನಂಪು.೧೧-೮೪೭) ; ಪೊಳಲ ಪೆರ್ಬಾಗಿಲ್ಗೆ ಕುಣಪಮಂ ತಂದಿರಿಸಲುಳಿಯದೆಡೆಯಾಡು ತಿರ್ದುದು ಜನಂ (ಜೈಮಿಭಾ. ೫-೩೧) ; ಚೌದೆಸೆಗೆ ಕುಣಪಗಳೀಡಾಡಿ (ಕಂಸವಿ. ೧೮-೧೧೪). ೨. ದುರ್ಗಂಧ ; ಕೆಟ್ಟ ವಾಸನೆ. [ಸಂ.]

**ಕುಣಪಭೂಮಿ** (ನಾ). ಮಸಣ ; ಸುಡುಗಾಡು ; ಶ್ಮಶಾನ : ಕುಣಪಭೂಮಿಯ ವಾಸಿಯಾದರು ಪತಿಯ ಮೂಜಗಕೆ (ಪಾರ್ವಪ. ೨೧).
[ಕುಣಪ + ಭೂಮಿ]

**ಕುಣಪಾಣಿ** (ನಾ). ಒಂದು ಆಯುಧ (?) : ಇತ್ತರದ ಬೆನ್ಮಿಳಿ ಕಾಲ ಸಂಕಲೆಯ ಬಿತ್ತರದಿ ಬಿಗಿದವಳತೆಗೆ ಬಜ್ಜರಾಂಬಳಿಯ ಜೊತ್ತಗೆಯ ಕೈವತ್ತಿಗೆಯ ಮುಂಡಿಗೆಯ ಲೌಡಿಯ ಲಾಗು ಕುಣಪಾಣಿ ಕಣೆಯ ಉತ್ತುಂಗ ಪಟ್ಟಿಯದ ಬಿರಿದು ಪೇರಂಕುಶದ (ಲಕ್ಷ್ಮಭಾ. ೭-೩-೭). [?]

**ಕುಣಬಿ**, ಕುಂಬ್ಬಿ$_3$ (ನಾ). ಒಕ್ಕಲುತನ ಮಾಡುವವರಲ್ಲಿ ಒಂದು ಜಾತಿ, —ಪಂಗಡ: ಒಕ್ಕಲತನದ ಜಾತಿಗಳು: ಇವರಲ್ಲಿ ಮರಾಠೀ, ಕುಳವಾಡಿ, ಕೊಂಕಣೀ ಕುಣಬೀಯೆಂಬಯೆರಡುವೊಳಭೇದಗಳಿರುತ್ತವೆ. (ಕಭಾಗ. ೧೨೭). **ಕುಂಬ್ಬಿ$_3$**: ಬಿನಿಯ, ಭಟ್ಟಿಯರು, ಕುಂಬಿಯರು ಸುತರರು(ಬೇಸಾಯುಗಾರರು)... ಈ ಮತದ ಅನುಯಾಯಿಗಳಾಗಿದ್ದರು (ಭಾರದ. ೨೮೮). [← ಮರಾ. ಕುಣಬೀ]

**ಕುಣಬಿಮಣಿ** (ನಾ). (?): ಪ್ರೇಮಜಲದಿ ಕುಣಬಿಮಣಿಯು (ಕೋಹಿನೂ. ೫೪). [?]

**ಕುಣಿಸಿಡು** (ಕ್ರಿ). (ಮನಸ್ಸಿನಲ್ಲಿ) ಸೇಡಿನ ಮನೋಭಾವ ತಾಳು: ಕುಣಕಾಲಿ ರತ್ನಾಳಿ ಕುಣಸಿಟ್ಟು ಮನಗ್ಯಾಕೊ ಎಣಿಸುವರ್‍ಯಾರು (ಜನಗೀ. ೬೯). [ಕುಣಸು (< ಕುನಸು) + ಇಡು$_1$]

**ಕುಣಸು** 'ಕುನಸು' ನೋ.

**ಕುಣಿ$_1$** (ಕ್ರಿ). ೧. ನೆಗೆದಾಡು; ಹಾರಾಡು; ಜಿಗಿದಾಡು; ನಲಿದಾಡು; ತೊನೆ: ಮನದುತ್ಸವದಿಂ ಕುಣಿವಂತನಿಲಾಹತ ಕೇತನಾಳಿ ಸೊಗಯಿಸುತಿರ್ಕುಂ (ಆದಿಪು. ೧೧-೪೧); ಇರದನುರಾಗದಿಂ ಕುಣಿಯುತಿರ್ಪವೊಲಿರ್ದುದು ವೀಚಿಬಾಹುಗಳ್ (ಅಜಿಪು. ೬-೧೨೮); ಇಂದುವಾಳಿಯ ಕೃಪೆಗೆ ಮತ್ತೊಮ್ಮೆ ಮೈಯಿಕ್ಕಿ ಕುಣಿವುತಂ (ಬಸರ. ೧-೩೭); ಪೊಸಜಡೆ ಮಿಂಚುವೋಲ್ ಕುಣಿವ ಕುಂಡಲಂ (ದಶಕು ೨-೩); ಕುಡಿಮೀಸೆ ಕುಣಿದವು (ಮೋಹತ. ೧೨-೧೦). ೨. ನರ್ತಿಸು: "ಕುಣ – ನರ್ತನೇ" (ಶಮಧಾ); ಬಚ್ಚಿದೆ ಕುಣಿವಂಗೆ ಮತ್ತಂ ಪಚ್ಚಿಯವನುಂ ಕೊಡಿದಂತೆ (ಧರ್ಮಾಮೃ. ೨-೧೪೮); ಗತಿಗೆ ಕುಣಿದವು ಹಂಸ (ತೊರರಾ. ೧-೫-೪೪); ಕುಣಿಯಲಾರದ ಸೂಳೆ ನೆಲ ಡೊಂಕೆಂದಳು (ಗಾದೆ).

**ಕುಣಿಕುಣಿ** (ದ್ವಿರುಕ್ತಿ): ದೂರದೊಳು ಪೂದೋಟವಂ ಕಂಡು ಪೊಡಮಟ್ಟು ಕುಣಿಕುಣಿದು ಸಂತಸಮನೆಡೆಗೊಂಡು (ಬಸರ. ೩-೧೪); ಬಾಲಕನು ಬಳಲಿದನು ಸಮರದ ಲೀಲೆಯಲಿ ಕುಣಿಕುಣಿದು (ಕುವ್ಯಾದ್ರೋ. ೬-೬೧). **ಕುಣಿದಾಡಿಸು** = ಕುಣಿದಾಡುವಂತೆ ಮಾಡು; ನೆಗೆದಾಡಿಸು: ನೆರೆನೆರೆದು ಕುಣಿದಾಡಿಸುತ ನಿಜಪುರದ ಕಡೆಗೋಟೆಯ ಕವಾಟದ ಹೊಜಗೆ ತಂದಲ್ಲಿಂದೆ ಬೊಬ್ಬಿರಿದೆಬ್ಬಿದರು ಕಪಿಯ (ತೊರರಾ. ೫-೮-೩೧). **ಕುಣಿದಾಡು** = ನೆಗೆದಾಡು; ನರ್ತಿಸು: ನಾರದನೆಯ್ದೆ ನೋಡಿ ಬಾನೊಳ್ಕುಣಿದಾಡೆ ದೇವತತಿ ನೋಡೆ (ಶಾಂತಿಪು. ೩-೬೯); ಎನ್ನ ಮನದೊಳಗೆ ಕುಣಿದಾಡು ಕೂಡಲಸಂಗ (ಬಸರ. ೩-೯೮); ಸರಸ್ವತೀದೇವಿ ಕುಣಿದಾಡೆ ಎನ್ನ ನಾಲಿಗೆ ಮೇಲೆ (ಪುರಂದ. ೧-೧೯೨-೧).
[ದೇ. ‖ ತಮಿ. ಕುಣಿ; ಮಲ. ಕುನಿ; ತೆಲು. ಗುನಿಯು, ಗುನುಚು]

**ಕುಣಿ$_2$** 'ಕುಟಿ$_2$' ನೋ.

**ಕುಣಿ$_3$** (ನಾ). ೧. ಡೊಂಕಾದ ಕೈಯನ್ನುಳ್ಳವನು; ಮೊಂಡು ಕೈಯುಳ್ಳವನು: "ಕುಕುರಃ, ಕುಣಿಃ – ಈ ೨ ಕೈಯಿಲ್ಲದ ಹೆಳವನ ಹೆಸರುಗಳು; ಚೊಟ್ಟಕೈಯುಳ್ಳವನು" (ಸಿದ್ಧಾಂತಿ. ೧೫೮). ೨. ಒಂದು ವನಸ್ಪತಿ; ನಂದಿಮರ: "ತುನ್ನಃ, ಕುಬೇರಃ, ಕುಣಿಃ, ಕಚ್ಛಃ, ಕಾಂತಲಕಃ, ನಂದಿವೃಕ್ಷಃ – ಈ ೬ ನಂದಿಯೆಂಬುವ ಮರದ ಹೆಸರು" (ಸಿದ್ಧಾಂತಿ. ೧೨೪). [ಸಂ.]

**ಕುಣಿಕ** (ನಾ). ಮೋಟಾದ ಕೈಯನ್ನು ಅಥವಾ ಕಾಲನ್ನುಳ್ಳವನು; ಕುಂಟ; ಹೆಳವ; ಮೋಟ: "ಕೈಕಾಲು ಮೋಟನಾದಂ ಕುಣಿಕನೆನಿಸಿಕ್ಕು" (ಮಂಗರಾ. ೧೧೪-೬). [ಸಂ.]

**ಕುಣಿಕಾಲು** (ನಾ). ಒಂದು ಆಭರಣ (?): ಬೆನಕ ನಿಮ್ಮಪ್ಪಾಗೆ ಬೆಳ್ಳಿಯ ಶಿವದಾರ ಕುಣಿಕಾಲು ಚವಲೀ ಕೊನೆ ಮುಡಿಯೊ (ಹುಟ್ಟಿಹ. ೩೧). [ಕುಣಿ$_1$ + ಕಾಲು$_1$ (< ಕಾಲ್$_1$)]

**ಕುಣಿಕಿಲ್** 'ಕುನಿಕಿಲ್' ನೋ.

**ಕುಣಿಕೆ$_1$**, ಕುಳಿಕೆ$_2$ (ನಾ). ಗುಣಿ; ತಗ್ಗು; ಗುಳಿ: "ಕುಕುಂದರ = ಹೊಜವಾಜಲಿ ಇದ್ದ ಕುಣಿಕೆಗಳೆರಡು." (ನಾಚಿರಾ. ೩). **ಕುಳಿಕೆ$_2$**. 'ಕಣ್ಗುಳಿಕೆ' ಪರಾ. [ಕುಣಿ$_2$ (< ಕುಟಿ$_2$) + -ಕೆ]

**ಕುಣಿಕೆ$_2$** 'ಕುಳಿಕೆ$_1$' ನೋ.

**ಕುಣಿಕೆ$_3$** (ನಾ). ಬೆರಳು. 'ಕಿರುಕುಣಿಕೆ' ಪರಾ. [?]

**ಕುಣಿಕೆ$_4$** (ನಾ). ಕೊನೆ; ತುದಿ: ಸುರಿವ ಕಣ್ಣಿನ ಕುಣಿಕೆಗಳನಾ ಕರತಳದಿ ನೆಜೆ ಮುಚ್ಚಲ್ (ಬಸಪು. ೧೮-೬೨); ಫಣಿತಲ್ಪ ಸೂರ್ಯಸಿದ್ಧಾಂತ ನಿನ್ನಯ ಕಣ್ಣ ಕುಣಿಕೆಯೊಳಿಹುದು (ಮೋಹತ. ೧೩-೫೨). 'ಕುಣಿಕೆನೋಟ' ಪರಾ. [?]

**ಕುಣಿಕೆ$_5$** (ನಾ). ಗೋಲಿ; ಗುಂಡು; ಗುಳಿಗೆ; ಗುಡ್ಡೆ: (೩). [< ಸಂ. ಗುಣಿಕಾ]

**ಕುಣಿಕೆ$_6$** (ನಾ). ಒಂದು ಔಷಧಿ ಗಿಡ: "ಖುಲಾಬಂ – ಕುಣಿಕೆ" (ಔಷಧಿ. ೧೮). [?]

**ಕುಣಿಕೆಗಾಜಿ** (ನಾ). ಕುಣಿಕೆಯನ್ನು ಆಡಿಸುವವನು; ಸೂತ್ರಧಾರ: ಹೂಹೆಗಳು ಹೊಯ್ದಾಡವೇ ನಿರ್ವಾಹಸೂತ್ರದ ಕುಣಿಕೆಗಾಜನ ಗಾಹಿನಲಿ (ಕುವ್ಯಾಸ. ೯-೯). [ಕುಣಿಕೆ$_3$ (< ಕುಳಿಕೆ$_1$) + -ಕಾಜ]

**ಕುಣಿಕೆಗೊಳಿಸು** (ಕ್ರಿ). ಕುಣಿಕೆಹಾಕು; ಉರುಳುಹಾಕಿ ಸೇರಿಸು, —ಕೂಡಿಸು: ಈಯನರ್ಥವ ಕುಣಿಕೆಗೊಳಿಸಿದ ನೀ ಸಹಿತ ನಿನ್ನೆಡೆಗಳಹ ಸೈಂಧವನನೀ ರಾಧೇಯ ಶಕುನಿಗಳ ರಣದೊಳಗೆ ಭೀಮಾರ್ಜುನರ ಮಾರ್ಗಣದ ಧಾರೆಗೆ ವೀರನಾರಾಯಣನೆ ಸೇರಿಸಿಕೊಡುವನು (ಕುವ್ಯಾಸ. ೧೩-೭೮). [ಕುಣಿಕೆ$_3$ (< ಕುಳಿಕೆ$_1$) + ಕೊಳ್$_1$ + -ಇಸು$_3$]

**ಕುಣಿಕೆನೋಟ** (ನಾ). ಕಡೆಗಣ್ಣಿನ ನೋಟ; ಅಪಾಂಗದೃಷ್ಟಿ; ಕುಡಿನೋಟ: ನನ್ನನ್ನು ಕುಡಿನೋಟದಿಂದ ಕುಣಿಕೆನೋಟದಿಂದ ಕದ್ದು ಕದ್ದು ನೋಡುತ್ತಿದ್ದುದನ್ನು ಈಗ ನೆನಸಿಕೊಂಡರೆ ಹೇಗಾಗುತ್ತದೆ ಅಂತೀರಿ (ಸುವಸಂ. ೩೧); ಆವನನ್ನು ಕುಣಿಕೆನೋಟದಿಂದಲೇ ಕೊಲ್ಲುತ್ತಿದ್ದಳು (ಬೆಳುಮ. ೨೭೫). [ಕುಣಿಕೆ$_4$ + ನೋಟ]

**ಕುಣಿಕೆಹುರಿ** (ನಾ). ಕುಣಿಕೆಯನ್ನುಳ್ಳ ಹುರಿ: ಮಗ್ಗದಲ್ಲಿ ಹಾಸು ನೂಲುಗಳು ಒಂದನ್ನೊಂದು ಅಡ್ಡಹಾಯುವುದು; ಹಾಸು ನೂಲೆಳೆಗಳ ನೈತ್ತುವ ಕುಣಿಕೆಹುರಿ (Lease. ಇಂಕನಿ). [ಕುಣಿಕೆ$_3$ (< ಕುಳಿಕೆ$_1$) + ಹುರಿ$_3$ (< ಪುರಿ$_3$)]

**ಕುಣಿಕೋಲ್**, ಕುಣಿಕೋಲು (ನಾ). ೧. ಕುಣಿಯುವಾಗ ಹಿಡಿದುಕೊಳ್ಳುವ ಕೋಲು; ಕೋಲಾಟದ ಕೋಲು: ಮುಂದೊಂದೂರ ಸಮಾಪದೊಳಾಡುವ ಮಕ್ಕಳು ಕುಣಿಕೋಲಂ ಪೊಯ್ಯಲ್ (ಪುಣ್ಯಾಸ್ರ. ೫-೬೬ ವ). **ಕುಣಿಕೋಲು**: ೨. ಕುಣಿಸುವ ಕೋಲು; ಕೋತಿ, ಕರಡಿ ಮೊದಲಾದುವುಗಳನ್ನು ಕುಣಿಸುವವನು ಕೈಯಲ್ಲಿ ಹಿಡಿದುಕೊಳ್ಳುವ ಕೋಲು: ಕಬ್ಬಿಣ ಕೈಕಡಗ ಕುಣಿಕೋಲು ಕೂದಲು ಕಂಬಳಿ ಹೊದ್ದಾಂವ ಬಂದಾನ... ಕರಡಿಯನಾಡಿಸುತ ನಿಂದಾನ (ಸೂರ್ಯಪಾ. ೫೪-೨). [ಕುಣಿ$_1$ + ಕೋಲ್$_1$]

**ಕುಣಿಕೋಲು** 'ಕುಣಿಕೋಲ್' ನೋ.

**ಕುಣಿಗಣ್ಣು** 'ಕುಟಿಕಣ್' ನೋ.

**ಕುಣಿಗಲ್ಲ** (ನಾ). ಗುಳಿಬಿದ್ದ ಗಲ್ಲ; ಪಚ್ಚುಬಿದ್ದ ಕೆನ್ನೆ: ಕಂಭ ಬಾಲೆಯೆಂದ ಕೊರಡುದೊಡೆಗಳಿಗೆಯೆಂಬ ಕನ್ನಡಿಯೆಂದು ಕುಣಿಗಲ್ಲಕೆ (ಚಿದಾವ. ೩೮-೬). [ಕುಣಿ$_2$ (< ಕುಟಿ$_2$) + ಗಲ್ಲ]

**ಕುಣಿಗಾಳು** (ನಾ). ಕುಣಿಯಲ್ಲಿ ಹಾಕಿ ಜೋಪಾನ ಮಾಡಿದ ಕಾಳು; ಹಗೇವಿನ ಧಾನ್ಯ: (೬).
[ಕುಣಿ$_2$ (< ಕುೞಿ$_2$) + ಕಾಳು$_2$ (< ಕಾೞ್)]

**ಕುಣಿಚು** (ಕ್ರಿ). ಕೆದಕು; ತಪಶೀಲು ವಿಚಾರಿಸು: ಕುಣಿಚಿ ಕೇಳ ಹೋದರೆ, ಕೇಳಿದವರೂ ಅದಕ್ಕೆ ಸೇರಿದಾರೆಂದು ಅಪ್ರಮೇಯನನ್ನು ಹಿಡಿದುಕೊಂಡರೆ ಏನು ಗತಿ (ಮುಸುಗ. ೧೨೧). [?]

**ಕುಣಿತ** (ನಾ). ೧. ಕುಣಿಯುವಿಕೆ; ನರ್ತನ: ಮಾಂಗಲ್ಯವಾದ್ಯದ ಕುಣಿತ [ಪಾಠಾಂ. ಹ]ದಲಿ ನೆಲ ಕುಸಿಯೆ ಹೊಕ್ಕರು ಜನಕನರಮನೆಯ (ತೊರರಾ. ೧-೧೬-೪೩); ಕುರುಳ್ಗಳ ಕುಣಿತಕ್ಕಂಗೋದ್ಭವನು ಮಾಡಿದ ನವರಂಗಸ್ಥಲವೋ ಎನೆ (ಜಯುಕಾ. ೩-೪೯); ಕುಣಿತಂ - ಕುಣಿವುದು (ಶಬ್ದಾನು ೫೭೯ ಪ್ರಯೋ); ಮೇಳಕ್ಕೆ ತಗುವಂಥ ಕುಣಿತವಕಲಿಸಿ (ಇಂಚಾಪ. ೧೧-೪೫). ೨. ಒಬ್ಬಾತನ ಹೆಸರು: ಕೆಱೆಯ ಬಯಲಗದ್ದೆ ಕುಣಿತನ ಗದ್ದೆ (ಸೌಇಎ. ೧೯೩೦, ೫೩೬-೩೦; 137 ?). [ಕುಣಿ$_1$ + -ತ$_2$]

**ಕುಣಿತರ್** (ಕ್ರಿ). ನರ್ತನಮಾಡು: ಕೋಪುಗೊಂಡು ಕುಣಿತರ್ಪೀ ಕೋರೆ ನೋಟಂಗಳಂ ಬಸಗೆಯ್ದೊಲ್ವೆನೊ (ಚಿಕವಿ. ೬-೨೪೬).
[ಕುಣಿ$_1$ + ತರ್]

**ಕುಣಿನರಿ** (ನಾ). ಬಿಲದಲ್ಲಿ ವಾಸಮಾಡುವ ನರಿ; ಗುಳ್ಳೆನರಿ; ಜಂಬುಕ: (೬).
[ಕುಣಿ$_2$ (< ಕುೞಿ$_2$) + ನರಿ. / ತಮಿ. ಮಲ. ಕುೞಿನರಿ]

**ಕುಣಿನೀರು** (ನಾ). ಗುಳಿಯಲ್ಲಿರುವ ನೀರು: ಕೂಪ ದೂರೆಂದು ಹಳುಗನ ಬಚ್ಚಲ ಕುಣಿನೀರ ತಂದೆ (ಬಜ್ಜರಾ. ೭-೨೦).
[ಕುಣಿ$_2$ (< ಕುೞಿ$_2$) + ನೀರು (< ನೀರ್$_1$)]

**ಕುಣಿಪ**, ಕುಣಪ (ನಾ). = ಕುಣಪ: ನಿಶಿತಶರಮೊಂದರಿಂದೆ ಕೊಣಪನ ಮಸ್ತಕವನರಿಯಲಂತವನಸುವು ಕ್ಷೋಣಿಪನ ಯಮನಗರಮಂ ಸಾರ್ದ ವಿತ್ತಲೀ ಹೂಣಿ ಸವರುತಿರ್ದ ಕುಣಿಪ ತಾಂ ಕೆಡೆದತ್ತು ಯನಿತರಿಂ ಮೇಲೆ ಕೇಳಾ (ಘೋರಾಸು. ೩೮-೩೧). **ಕುಣಪ**: ಬೆರಳ್ಗಳಂ ಕರ್ಚಿ ಫುತ್ಕ್ರೀರ್ವವಲ್ಕಾರ್ವವಲ್ಕರುಣ ಕುಣಪನದಿ[ಪಾಠಾಂ. ಗಳ]ಳಗೆವಿನಿನ್ನೆರ ವಿನಂ (ನಂದಿಮಾ. ೧೪-೬೦). [< ಸಂ. ಕುಣಪ]

**ಕುಣಿಯಿಸು** 'ಕುಣಿಸು' ನೋ.

**ಕುಣಿಲು** (ನಾ). ನಾಳಿಕೆ; ನಾಳ; ಕೊಳವೆ: ಮಳೆನೀರು ಒಂದು ಕುಣಿಲಿನ (Funnel) ಮೂಲಕ ಒಂದು ಪಾತ್ರೆಯಲ್ಲಿ ಕಲೆಯುವಂತೆ ಮಾಡುವರು (ಬಾಲಪ್ರ. II, ೧೦೩೭). [?]

**ಕುಣಿಲ್ವಾಱು** (ಕ್ರಿ). (?) : "ಕುಣಿದು ಹಾರು" (ಪಂರಾಮಾ. ಕೋಶ); ಇರ್ವಲದ ಕಡಿತಲೆಕಾಱರಲಗಲಗಿನೊಳ್ ಪಳಂಚಿ ತಾಗಿ ನಿರ್ಘಾತವುಪ್ಪರಂ ಸಾಳವಟ್ಟಮವಿತಮುೞಿತಮೆಂಬ ಪಲವುಂ ತೆಱದಿಱಿವ ಬಿನ್ನಣದೊಳ್ ನೆಱೆದು ತಾಳುಂ ತಟ್ಟುಂ ಪೊಯ್ಕೆ ಕಡಿಖಂಡವಾದ ಮೆಯ್ಯುಂ ಕುಣಿಲ್ವಾಱುವ ಮುಂಡಮುಂ ಮುಂಡುವೋದ ಕಯ್ಯುಂ . . . ಅಗುರ್ವು ವಡೆಯೆ (ಪಂರಾಮಾ. ೧೩-೫೪ ವ). [?]

**ಕುಣಿವೇರು** (ನಾ). ಗುಳಿಯಲ್ಲಿರುವ ಬೇರು; ಆಳವಾಗಿ ಹೋದ ಬೇರು; ತಾಯಿಬೇರು: ಪಾದಪದ ಕುಣಿವೇರು ಮೃದುತಮ ಮೇದಿನಿಯ ತಳಭಾಗವನ್ನುರೆ ಭೇದಿಸುವ ತೆರದಿಂದ (ರಘುವಂ. ೮೮).
[ಕುಣಿ$_2$ (< ಕುೞಿ$_2$) + ಬೇರು (< ಬೇರ್)]

**ಕುಣಿಸ** (ನಾ). (?): ಅಕ್ಷಿಕೂಟದ ಮೇಲಣ ಹುಬ್ಬು ಭ್ರೂ ಎರಡು ಹುಬ್ಬುಗಳ ನಡುವೆ ಭ್ರೂಪಟ ಕಿವಿಯ ಮೊದಲಲ್ಲಿ ಕೆಂಪು ಕಾಣಿಸಲು ಕುಣಿಸ ಕುಣಿಸದ ಶುಕ್ಲ ಭಾಗದ ನಡುವಣ ರೇಖೆ ಕಾಶಯ (ಅಶ್ವಟೀ. ೫೯-೯). [?]

**ಕುಣಿಸು**, ಕುಣಿಯಿಸು (ಕ್ರಿ). ೧. ಕುಣಿಯುವಂತೆ ಮಾಡು; ನರ್ತಿಸುವಂತೆ ಮಾಡು: ಶಿವನಿಳಯದೊಳಗೆ ಲೀಲೆಯಿಂ ಕುಣಿಸಿ ಕುಣಿವಂ (ಸಿದ್ಧರಾ. ೨-೧೨). ೨. ಬೊಂಬೆಯಂತೆ ಆಡಿಸು; ತನ್ನ ಇಚ್ಛೆಯಂತೆ ನಡೆಯಿಸು: ಕುಣಿಸಿ ನಗನೇ ಕವಿ ಕುಮಾರವ್ಯಾಸ ನುಳಿದವರ (ಕುವ್ಯಾಅ. ೧-೧೭); ಓರಂತೆ ಜಗದ ಜೀವರ ಕುಣಿಸುವ ಸೂತ್ರಧಾರಿ (ಮೋಹತ. ೪೧-೪೮); ಕಪೀ ಕುಣಿಸಿ ಕಲ್ಲು ಕರಗಿಸಿದ ಹಾಗೆ (ಗಾದೆ). ೩. ಅಲುಗಾಡಿಸು; ಅಲ್ಲಾಡಿಸು: ಬಡನಡು ಕಡುನಿತಂಬಗಳ ಬಿಡದೆ ಬಳುಕೆ ಕುಣಿಸುವ ಚೆಲ್ವಿನ ಮುದ್ದು ಮಡದಿ ರನ್ನೆಯರೈದಿದರು (ಕಂನವಿ. ೨೧-೭೫). **ಕುಣಿಯಿಸು**: ೧. ಕಪಟ ನರ್ತಕಿಯರಿರ್ವರುಂ ನಾಟಕಶಾಲೆಯೊಳ್ ಕನಕಶ್ರೀಯಂ ಕುಣಿಯಿಸಲ್ ತಗುಳ್ದು (ಚಾವುಂಪು. ೬೪-೧೩). ೩. ಅಂಕುಶಗಳ ಕುಣಿಯಿಸುತ ಬಿಡದೆ ಜೋದರಂಕವಾನೆಯ ಮಸ್ತಕದೊಳು (ಕುರಾಸಾಂ. ೧೭-೪೮). [ಕುಣಿ$_1$ + -ಇಸು$_3$]

**ಕುಣಿಹ** (ನಾ). = ಕುಣಿತ: "ರಿಂಗಣಮೆನ್ನಲ್ ನಿರುತ ಕುಣಿಹ ಮುದಕ್ಕುಂ" (ಕವಿಕಂ. ೨೦೯); "ಕುಣಿಹಕ್ಕೆ ರಿಂಗಣಂ ನಚ್ಚಣಂ" (ಕಬ್ಬಿಕೈ. ೫೯); ಆತನ ಕುಣಿಹವನು ಕುಂದಿಸುವೆನಿಂದಿನ ರಣದೊಳಗೆ ಸಾಕೆನಿಸುವೆನು ಸಂಸಾರತರ ಸುಖವ (ತೊರರಾ. ೪-೩-೪); ಈ ಕುಣಿಹದೆ ಕೋಪಂ ಸಾರಿಪೆನೆಂದು ಪಾಡುವುದಂತವಿದರೊಡನೀ ಸೂೞ್ಗೆ ನೀರಂ ಪಾಡಿಮೆಂಬುದುಂ (ಚಿಕವಿ. ೬-೧೫೪ ವ). [ಕುಣಿ$_1$ + -ಹ$_2$]

**ಕುಣುಂಗಿಲ್** (ನಾ). ಒಂದು ಊರಿನ ಹೆಸರು. ℙ ಈಗಿನ ಕುಣಿಗಲ್ಲು: ರಾಚಮಲ್ಲ ಗಾಮುಂಡನುಂ . . . ಬಿಳ್ಗೆಱೆಯೊಡೆಯರುಂ ಮೊದಲಾಗೆ ಎಪ್ಪದಿಮ್ಬರು[ಂ]ಕುಣಂಗಿಲಯ್ನೂರ್ಬರ್ರುಂ (ಎಕ. XII, ಗುಬ್ಬಿ. ೬೧-೬೮; 812); ಗಂಗವಾಸನ ಮಗಂ ಗೋವಿನ್ದರಂ ಸಟ್ಸಿಮೂನೂಱುಂ ಕುಣುಂಗಿಲಯ್ನೂಱುವಮಂ ಪ್ರತಿಪಾಲಿಸುತ್ತಿರೆ (ಎಕ. IX, ದೇವನ. ४೨-४; 900 ?). [?]

**ಕುಣುಕು**$_1$ (ಕ್ರಿ). ಕುಟ್ಟು; ಪುಡಿಮಾಡು; ತಳಿಸು: "ಕುಣುಕು - ಮುಸಲಕ್ರಿಯಾಯಾಂ (ಕುಟ್ಟು), ಕೀಲೇ ಚ (ಅಗುಳಿ)" (ಶಮುಧಾ); ಒನಕೆವಾಡಿನ ತಾಳಕ್ಕೆ ಕುಣುಕಿದ ಪುಡಿಗಪ್ಪುರದ ಕೈರದಂಬುಲವನ್ನು (ಮಂತ್ರಶ. ೬೧-೧೬); ಆ ಮೂರು ದಿನದ ದಂಡನಾಯಕತ್ವದ ಅಧಿಕಾರ ನಿರ್ವಹಣೆಯ ಭಾರವು ನಿನ್ನನ್ನೊತ್ತಿ ಕುಣುಕಿ ನಿನ್ನ ಪ್ರಾಣ ರಕ್ತವಾಗಿದ್ದ ಹಾಸ್ಯರಸವನ್ನೆಲ್ಲಾ ಹಿಂಡಿ (ಬಿಟ್ಟಅ. ೧೩೮-೧೬).
[ದೇ. ‖ ತಮಿ. ಕುಣುಕ್ಕು]

**ಕುಣುಕು**$_2$ (ನಾ). ೧. ಕೀಲು; ಅಗುಳಿ: "ಕುಣುಕು - ಮುಸಲಕ್ರಿಯಾಯಾಂ (ಕುಟ್ಟು), ಕೀಲೇ ಚ (ಅಗುಳಿ)" (ಶಮುಧಾ). ೨. ಗುಳಿಗೆ (?): ಕೋಣಿಯೊಳು ಕನಕದಾಸನ ನೆರಳು ಅನಕ ಏನು ಬಲಿಸಿದೆಯೊ ಔಷಧಿಯ ಕುಣುಕ ನೀನಿದ್ದರೆ ಕನಕ ಪ್ರಾಣ ತೆರಳುವ ತನಕ ಶ್ರೀನಿಧೇ ಆದಿಕೇಶವ ಎನ್ನ ಜನಕ (ಕನಕ. ೮-೩). [?]

**ಕುಣ್ಣೆ** (ನಾ). ಪುರುಷರ ಜನನೇಂದ್ರಿಯ; ತುಣ್ಣೆ: ಸೋಮ ರಾಜಭ × ರವೆಲ್ಲಕೆನಲ್ವೆರಲು ಪ್ರಮಾಣದಿಂದ ಕುಂಣೆಕಟ್ಟಿಂದು ನುಡಿದ ರಪ್ಪಡೆ ಸ್ಥಾನಗೊರ್ವ್ವಂ (ಎಕ. XI, ದಾವಣ. ೯೫-೭; ?).
[← ತುಳು. ಕುಣ್ಣೆ]

**ಕುಣ್ಮು** (ಕ್ರಿ). ಬಾಗು; ಕುಸಿ: (ಚತುನಿ. ೬. I, ೭೭).
[?. / ತಮಿ. ಕುಣುಕ್ಕು]

**ಕುತಂಜಿ** (ನಾ). ಒಂದು ಬಗೆಯ ರಾಜಚಿಹ್ನೆ: ರಣಗಟ್ಟಿಗೆ ಉಳ್ಳ ದಂಡಿಗೆ ಸತ್ತಿಗೆ ಕುಂಚ ಕು[ತ]ಂಜಿ ಮಲಗಾ ಮೂಡೆ ಜಂಬುವಿನಂ ಅಂಕ ಎಂಕನಾಂ ಮುಂತಾದ ಸರ್ವಮಾನ್ಯ (ಕಇ. I, ೩೪-೨೬; 1484).
[?. / ತಮಿ. ಕುಞ್ಚಿ = ರಾಜಚಿಹ್ನೆ, ಚವರಿ]

**ಕುತಂತ್ರ** (ನಾ). ಕೆಟ್ಟ ಹಂಚಿಕೆ; ಕೆಟ್ಟತಂತ್ರ; ಕುಟಿಲೋಪಾಯ; ಮೋಸದ ಹೂಟ; ಸಂಚು: ಇಂತೆಂದು ಮರುಮರುಗಿ ಬೊಂಕು ತಲೆ; ಪರತಂತ್ರ ತಾಂ ತೋರೆದಿರೆ, —ಕುತಂತ್ರಕೆ ಶರಣು ಬಂದು (ಕಎಪು. ೪೨-೪); ಪಶುಪತಿಯು ರಾಜ್ಯವನ್ನು ತುರುಕರಿಗೆ ವಶಪಡಿಸಲು ಬೇಕಾದ ಕುತಂತ್ರವನ್ನೆಲ್ಲಾ ಮಾಡಿದ್ದನು (ಬಂಕಿಮ. ೧೮೨). [ಸಂ.]

**ಕುತಂತ್ರಗಾರ** (ನಾ). ಕೆಟ್ಟ ಆಲೋಚನೆ ಮಾಡುವವನು; ಕುಟಿಲೋಪಾಯ ಮಾಡುವವನು; ಕೆಟ್ಟ ಹಂಚಿಕೆಗಳನ್ನು ಮಾಡುವವನು: ತಂತ್ರಗಾರನನ್ನು ಕುತಂತ್ರಗಾರ ಜಯಿಸಿದ (ಗಾದೆ). [ಕುತಂತ್ರ + -ಗಾರ$_1$ (< -ಕಾಜ)]

**ಕುತಂತ್ರಗಾರಿಕೆ** (ನಾ). ಕೆಟ್ಟ ಆಲೋಚನೆ ಮಾಡುವುದು; ಕುಟಿಲೋಪಾಯ ಮಾಡುವಿಕೆ; ಕೆಟ್ಟಸಂಚನ್ನು ಹೂಡುವಿಕೆ: ತನ್ನ ಗನ್ನಗತಕದ ಕುತಂತ್ರಗಾರಿಕೆಗೆ ನಮ್ಮನ್ನೂ ಹೂಡಿಕೊಳ್ಳಲು ಸಾಹಸ ಪಡುತ್ತಿದ್ದಾನೆ (ಮಂತ್ರಶ. ೭೪-೯). [ಕುತಂತ್ರಗಾರ + -ಇಕೆ]

**ಕುತಕುತ, ಕೊತಕೊತ** (ನಾ). ಒಂದು ಅನುಕರಣ ಶಬ್ದ; ನೀರು ಮೊದಲಾದ ದ್ರವಪದಾರ್ಥ ಕುದಿಯುವಾಗ ಉಂಟಾಗುವ ಶಬ್ದ: ನೀರು ಕುತಕುತ ಕುದಿಯುತ್ತಿದೆ. (ರೂಢಿ). **ಕೊತಕೊತ:** ಗಂಜಿ ಒಲೆಯ ಮೇಲೆ ಕೊತಕೊತ ಕುದಿಯುತ್ತಿದೆ (ರೂಢಿ). [?]

**ಕುತಣಿ** 'ಕುತನಿ' ನೋ.

**ಕುತನಿ, ಕುತಣಿ, ಕುತ್ತಣಿ, ಕುತ್ತನಿ, ಕುತ್ನಿ, ಕುತ್ನಿ, ಕುದುನಿ** (ನಾ). ಅರ್ಧ ಹತ್ತಿ ಮತ್ತು ಅರ್ಧ ರೇಶ್ಮೆಯಿಂದ ತಯಾರಿಸಿದ ಬಟ್ಟೆ; ಸಾಟೀನು ಬಟ್ಟೆ: ಕುತನಿ ಕುಪ್ಪಸ ತೊಟ್ಟು ಹಣೆಮ್ಯಾಗ ಕುಂಕುಮವಿಟ್ಟು ವಾಲಿಕೊಪ್ಪ ಕಿವಿಯಾಗಿಟ್ಟು ಒನಪದಿಂದ ಕರಿಯ ಬಂದೆ (ಲೋಕಗೀ. ೧೩೯); ಕುಬಸದ ಬಣ್ಣ ಕುತನಿಯ ಹೆಡೆದಂಥ ನಾರಿ ನಿನ್ನ ಬಣ್ಣ ರವಿಚಿನ್ನ (ಹಳ್ಳಿಯ. ೧೧೨); ರತನ ಕಮಳದ್ಹೂವ ಕುತನಿಯ ಕುಬ್ಬಸ ಜತನ ಮಾಡಿಟ್ಟು ತೊಟ್ವಾರ (ಸಿದ್ಧಪು. ೧೭-೭೮); ಬೆಟ್ಟ ತೊಟ್ವಾವ ಕುತನಿಯ ಅಂಗಿ ಹಸಿರು ನೋಡು ತಂಗಿ (ಹಾಡುಪಾ. ೧೧-೫). **ಕುತಣಿ:** (ಕಿ). **ಕುತ್ತಣಿ:** (ಕಿ). **ಕುತ್ತನಿ:** ಕರಿಯ ಕುತ್ತನಿಯ ಕಂಚುಕದೊಟ್ಟ ತೋಳಿನಿಂದರವಿಂದಾಕ್ಷನು ತುಡುಕುತಿರೆ ಕರಿಯ ಮರಿಯನು ಮುದ್ದಿಪ ಕರೇಣುವಿನಂತೆ ಕರವ ನೀಡಿದಳು ಯಶೋದೆ (ಕೃಷ್ಣಗೋ. ೧-೧೧೨). **ಕುತ್ತಿನಿ:** ಕುತ್ತಿನಿ ಚಲ್ಲಣದಟ್ಟಿಯ ಬಿಗಿದು (ಕರಿಕ. ೧೬-೮); ಪಲ್ಲಕ್ಕಿಯ ಮೇಲೆಲ್ಲಾ ಕುತ್ತಿನಿಯ ಪರದೆಯನ್ನು ದಟ್ಟವಾಗಿ ಹೊದಿಸಿದರು (ಭಾರವೀ. ೭). **ಕುತ್ನಿ.** 'ಕುತ್ನಿದಿಂಬು' ಪರಾ. **ಕುದುನಿ:** ಪಟ್ಟೆಸೀರೇನುಟ್ಟು ಕುದುನೀ ಉಪ್ಪುಸ ತೊಟ್ಟು ಪಟ್ಟೊರಾಮರಾ ಮಡದೀ ಸೀತಮ್ಮ ತಾಯಿಗೇ (ಹುಟ್ಟಿಹ. ೧೫೩).
[← ಅರ. ಖುತ್ನೀ; ಪಾರ. ಕುತ್ತಾನ್; ಮರಾ. ಕುತನೀ, ಖುತನೀ]

**ಕುತನಿತಡಿ** (ನಾ). ಕುತನಿಯಿಂದ ಮಾಡಿದ ತಡಿ, —ಜೀನು: ಹಸುರು ಹಳದಿ ಬಣ್ಣದ ಚಾವುಡಿ ಕುದುರಿಗೆ ಬಿಗಿ ಅಂದಾಲೊ ಕುತನಿತಡಿ ಪಲ್ಲಕ್ಕಿ ಮೇಲಾಡು ಬೆಳ್ಳಿಗಾವ ಕೊಡಿ ಬಿರಸು ಬಾಣ ಹಾರತಾವ ಕಿಡಿಕಿಡಿ (ಲೋಕಗೀ. ೨೨೭). [ಕುತನಿ + ತಡಿ$_4$]

**ಕುತನೀಗಾದಿ** (ನಾ). ಕುತನಿ ಬಟ್ಟೆ ಹೊದಿಸಿ ಮಾಡಿದ ಗಾದಿ, —ಹಾಸಿಗೆ: ನಮ್ಮ ಮನಿ ಹಿತ್ತಲದೊಳಗ ನಾಯಿಕುನ್ನಿ ಹುಟ್ಟೇದ ಅಂತ ಅದಕ್ಕ ಈ ಕುತನೀಗಾದೀಮ್ಯಾಲೆ ಕೊಡಿಸೂದೇ? (ಕಾಗೆಕ. ೮೦). [ಕುತನಿ + ಗಾದಿ]

**ಕುತಪ** (ಗು). ೧. ಸ್ವಲ್ಪ ಬಿಸಿಯಾದ. (ನಾ). ೨. ಪಿತೃಗಳಿಗೋಸ್ಕರ ಆಚರಿಸುವ ಶ್ರಾದ್ಧಾಂಗವಾದ ಹೋಮಾದಿಗಳಿಗೆ ಯೋಗ್ಯವಾದ ಕಾಲ; ಹಗಲಿನ (೧೫ ಭಾಗಗಳಲ್ಲಿ) ಎಂಟನೆಯ ಭಾಗ. ೩. ಅಪರಾಹ್ಣ; ಸಂಜೆ. ೪. ಬೊಗಸೆ; ಅಂಜಲಿ. ೫. ವ್ರತ ಭ್ರಷ್ಟವಾದುದು; ಕೆಟ್ಟುಹೋದ ತಪಸ್ಸು. ೬. ದರ್ಭೆ: "ಅಪರಾಹ್ಣ ದರ್ಭೆಯಂಜಳಿ ವ್ರತಹೀನಮುಂ ಕುತಪಮೆಂದೆನಿಕುಂ" (ನಾನಾರ. ೧೦೮). ೭. [ಸಂಗೀತ] ಒಂದು ಬಗೆಯ ವಾದ್ಯ. 'ಕುತಪಿ' ಪರಾ. ೮. [ನಾಟ್ಯ] ಗಾಯಕ, ವಾದಕ ಮತ್ತು ನರ್ತಕ. 'ಕುತಪಪ್ರತತಿ' ಪರಾ. [ಸಂ.]

**ಕುತಪಕಾಲ** (ನಾ). ಶ್ರಾದ್ಧಕಾಲ: ದಿವಸಕ್ಕೆ ಎಂಟನೇ ಭಾಗವೆನ್ನಿಸಿಕೊಂಡು ಸೂರ್ಯನು ಮಂದಗತಿಯಾಗಿ ಕಾಣಿಸುವಂತಹ ಸಮಯವು ಕುತಪಕಾಲವೆನ್ನಿಸಿಕೊಳ್ಳುವುದು (ಕೃವಾಆ. ೧೫೭). [ಕುತಪ + ಕಾಲ]

**ಕುತಪಪ್ರತತಿ** (ನಾ). ಗಾಯಕ, ವಾದಕ ಮತ್ತು ನರ್ತಕರ ಸಮೂಹ: ವೈಣಿಕ ಪಾಣವಿಕ ವಾಂಶಿಕ ಮಾರ್ದಂಗಿಕ ಗಾಯಕ ನರ್ತಕಾದಿ ಕುತಪಪ್ರತತಿಯುಮಂ (ಚಂಪ್ರಶು. ೬-೭೫ ವ). [ಕುತಪ + ಪ್ರತತಿ]

**ಕುತಪಿ** (ನಾ). ವಾದ್ಯವನ್ನು ಬಾಜಿಸುವವನು; ವಾದ್ಯಗಾರ: ಪರಿಪೂರ್ಣಭಾವರಸಮಂ ಸಂಗೀತಮಂ ತೋಱಿ ಮೆಚ್ಚಿಸಲೋರಂತೆ ಸಮಸ್ತದೇವ ಕುತಪಿ [ಪಾಠಾಂ. ಕುಪಿತ] ವ್ಯೂಹಂ ತೆರಳ್ದಿರ್ದುದು (ಆದಿಪು. ೯-೧೨). [ಸಂ. ಕುತಪಿನ್]

**ಕುತರ್ಕ** (ನಾ). ತಪ್ಪಾದ ವಾದ; ನ್ಯಾಯವಲ್ಲದ ತರ್ಕ, —ಚರ್ಚೆ: ಪರಸಮಯಿಗಳ ದರ್ಪಮಂ ಸಂಹರಿಪ ಭಾಷೆ ಕುತರ್ಕದಿಂ ಮತ್ಸರಿಪ ಪರವಾದಿಗಳನೊಮ್ಮೆಯು ಸೋಲಿಸುವ ಭಾಷೆ (ಬಸವು. ೬-೪); ಶಾಸ್ತ್ರಕ್ಕೆ ಪ್ರತಿಕೂಲವಾಗಿರುವ ತರ್ಕ, ದುಸ್ತರ್ಕ, ಕುತರ್ಕವೆಂದೂ ವ್ಯವಹಾರವುಂಟು (ಹಿಂದಸಾ. ೧೧೫). [ಸಂ.]

**ಕುತಾಪ** (ನಾ). ಭೂಮಿಯ ತಾಪ; ಜನರ ಸಂತಾಪ, —ಬಳಲಿಕೆ. 'ಕುತಾಪವಿದಾರಿ' ಪರಾ. [ಸಂ.]

**ಕುತಾಪವಿದಾರಿ** (ಗು). ಭೂಮಿಯ ತಾಪವನ್ನು ನಾಶಮಾಡುವ; ಜನರ ಬಳಲಿಕೆಯನ್ನು ಹೋಗಲಾಡಿಸುವ: ಜನ ಸುಖಕಾರಿ ಭಾಸುರ ವಿಚಾರಿ ಕುತಾಪವಿದಾರಿ... ಕೃಷ್ಣವೇಣಿ (ಹವಿಮ್ಮಾರ. ೧-೫೫). [ಸಂ. ಕುತಾಪವಿದಾರಿನ್]

**ಕುತಾಪಿ** (ಗು). ೧. ಲೋಕಕ್ಕೆ ಸಂತಾಪವನ್ನುಂಟುಮಾಡುವ. (ನಾ). ೨. ಲೋಕಕ್ಕೆ ಸಂತಾಪವನ್ನುಂಟುಮಾಡುವವನು; ಲೋಕಪೀಡಕ; ಲೋಕಕಂಟಕ: ಹೋಹ ಬಟ್ಟೆಯಲೊಂದು ಮಾಯೆಯಿದ್ದುದ ಕಂಡೆ. ಕಾಣಾಂತರ ಹೇಳಿತ್ತು ಅಲ್ಲಲ್ಲಿಗೆ ಗುಹೇಶ್ವರನ ಕರಣಂಗಳು ಕುತಾಪಿಗಳಲ್ಲಲ್ಲಿಗೆ (ಅವಚಂ. ೫೬-೩೯); ಅಪರಾಧತತಿಗಳು ಸುಕೃತ ಧರ್ಮವಿರೋಧಿಗಳು ಕುಪಥಾಲಪಾಲಂಗಳು ಕುತಾಪಿಗಳು (ಬಸವು. ೪೦-೬೫); ನೆರೆಯಸ್ತ್ರಮಯದೊಳು ಕುತಾಪಿ ಸಂಜನಿಸುವನು (ನವಮೋ. ೧೪-೪೭). [ಸಂ. ಕುತಾಪಿನ್]

**ಕುತಾರ್ಕಿಕ** (ನಾ). ದುಷ್ಟ ತರ್ಕವನ್ನು ಹೂಡುವವನು; ತಪ್ಪು ವಾದವನ್ನು ಮಾಡುವವನು: ಈ ರಾಯಭಾರದೊಡನೆ ಇಂಡಿಯಾ ದೇಶದ ಕುತಾರ್ಕಿಕನೊಬ್ಬ ಬಂದಿದ್ದ (ಪ್ರವಾಇ. I, ೫೫). [ಸಂ.]

**ಕುತೀರ್ಥ** (ನಾ). ೧. ಕೆಟ್ಟಗುರು; ದುಷ್ಟ ಶಿಕ್ಷಕ. ೨. ದುಷ್ಟ ಮತ; ಹೀನವಾದ ಮತ: ಪಸರಿಸಿದ ಕುತೀರ್ಥಧ್ವಾಂತಮಂ ತೂಳ್ದಿ (ಅಜಿಪು. ೧-೧೬). [ಸಂ.]

**ಕುತು** (ನಾ). ಚರ್ಮದಿಂದ ಮಾಡಿದ ಎಣ್ಣೆಯ ಪಾತ್ರೆ. [< ಸಂ. ಕುತೂ]

**ಕುತುಕ** (ನಾ). ೧. ಆಶ್ಚರ್ಯ; ಬೆರಗು; ವಿಸ್ಮಯ: ಭುವನ ರಚನೆಯೆನಿತು ಕುತುಕಮೆನುತ ಜನಕೆ ಸಾರುತುಂ (ನಿವೇದ. ೩೦-೭); ಅಂತೆಅಂತೆ ಅಲ್ಲಲ್ಲೆ ಅಗಲೇ ಕೆರಳುತಿತ್ತು ಕುತುಕ (ಭಾರಂಗ. ೫೭-೧೬).

೨. ಕುತೂಹಲ; ಆತುರ; **ಉತ್ಸಾಹ**: ಓಸರಿಸದೆ ಕುತುಕಭಾವ ದಿಂದೀಕ್ಷಿಸಿದಂ (ಉದ್ಭಟ. ೬-೭೨); ಕುತುಕದೇೞ್ಗೆಯಂ ಕೊನರಿಸಿದಳ್ (ಚಿಕವಿ. ೫-೧೬೨); ರಾಜ್ಯಲಾಭದ ಪಿರಿಯ ಸುದ್ದಿಯನಾಕೆಗರುಹುವ ಕುತುಕದಿಂ ಬಂದು (ರಾಮಾಸಂ. ೭-೧-೭೭). [ಸಂ.]

**ಕುತುಕು** (ನಾ). = ಕುಟುಕು: ಖಾತಿಯ ತಾಳಿ ಶೂಲದಿಂದ ಕುತಕ ಲಾಕ್ಷಣ (ದೇವೀಪ್ರ. ೬೭). [< ಕುಟುಕು$_1$]

**ಕುತುಪ** (ನಾ). ೧. ಚರ್ಮದಿಂದ ಮಾಡಿದ ಸಣ್ಣ ಎಣ್ಣೆಚೀಲ. ೨. ಪಿತೃಗಳಿಗೆ ತರ್ಪಣಕೊಡಲು ಯೋಗ್ಯವಾದ ಕಾಲ. 'ಕುತುಪ ಕಾಲ' ಪರಾ. ೩. [ನಾಟ್ಯ] ಗಾಯಕ ಅಥವಾ ವಾದಕರ ಸಮೂಹ: ಆದರೆ ಇವನು ಹೇಳಿದ ಕೆಲವು ಕ್ರಮ ಮತ್ತು ವಾದ್ಯ ಕುತುಪ ಅಥವಾ ಗೋಷ್ಠಿಗಳನ್ನು ಜಾವಾ ಬಲಿದ್ವೀಪಗಳ ನಾಟ್ಯಶಾಲೆ ಗಳಲ್ಲಿ ಇಂದೂ ನೋಡಬಹುದು (ಭಾರದ. ೫೩೮). [ಸಂ.]

**ಕುತುಪಕಾಲ** (ನಾ). = ಕುತಪಕಾಲ: ಮುನಿಯ ಕರೆಯೆಹಾ ಕುತುಪ ಕಾಲದ ನೆನಹ ನೋಡಲು ಕಾಲ ತಪ್ಪಿದೊಡೆ ಅದುವೆ ಫಲವಹುದೆ (ಕುವ್ಯಾಅ. ಓರಿಇ. ೩-೩೮); ಆದೊಡೆ ಕುತುಪಕಾಲಮಂ ಬಿಡುವೆನು (ಜೈಮಿಭಾ. ೧೦-೨೮). [ಕುತುಪ + ಕಾಲ]

**ಕುತುಪಿ** (ನಾ). ಜಗಳ; ಕಲಹ; ವ್ಯಾಜ್ಯ: ಈ ದಿವಸ ನಿಮ್ಮ ಕುತುಪಿ ತೀರಿತು ಇನ್ನುಮುಂ ನಮಗೆ ನಿಮಗೆ ಅನ್ಯೋನ್ಯವೇ ಸರಿ (ರಾಜೇಂದ್ರ. ೧೯). [?]

**ಕುತುಬಿ** (ನಾ). (ಮುಸಲ್ಮಾನರು, ಮುಖ್ಯವಾಗಿ ಶುಕ್ರವಾರದ ದಿನ ಮಾಡುವ) ಸ್ತೋತ್ರ, —ಪ್ರಾರ್ಥನೆ, —ಪ್ರವಚನ. [← ಹಿಂ. ಮರಾ. ಖುತ್ಬಾ; ಅರ. ಕುತ್ಬಾಹ್; ಪಾರ. ಕತೀಬೀ]

**ಕುತುಮೂರ್** (ನಾ). ಒಂದು ಊರಿನ ಹೆಸರು: ಕುತುಮೂರ್ ಬೋಯಸ್ಯ ಭಾರಧ್ವಾಜಗೋತ್ರ (ಇಆ. VII, ೧೮೮-೪೪; 668). [?]

**ಕುತೂಲ** (ನಾ). ಕೆಟ್ಟಹತ್ತಿ; ಚಿಂದಿಹತ್ತಿ; ಚಿಂದಿಬಟ್ಟೆ (?): ನಿಜಕುತೂಲರೋಮಚ್ಛೇದದಾದ್ವೀಪ ಸಮುದ್ರಂಗಳ್ ಎಣಿಸೆ ಪಡುವುದಱಿಂ ದ್ವಿತೀಯಮುದ್ಧಾರಪಲ್ಯಂ (ತತ್ತ್ವಪ್ರ. ೧೭೫). [ಸಂ.]

**ಕುತೂಹಲ**, ಕುತೂಹಳ (ನಾ). ೧. ಅಚ್ಚರಿ; ವಿಸ್ಮಯ; ಆಶ್ಚರ್ಯ. ೨. ಆತುರ; ಹಂಬಲ; ತವಕ: ಅವರ ತಾಳ್ಮೆ ದೊಡ್ಡದು, ನನ್ನ ಆತುರ ಕುತೂಹಲ ಚಿಕ್ಕದು (ದ್ರಾವಿವಿ. XI, ಮೊದಲಮಾತು); ಏಕೆ ಅತ್ತದ್ದು ಎಂದು ಕೇಳಲೂ ಇಲ್ಲ. ತಿಳಿಯುದ ಕುತೂಹಲವನ್ನೂ ತೋರಿರಲಿಲ್ಲ (ತೇಮೋಡ. ೧೧೮). ೩. ಅಸಮಾಧಾನ; ತಳಮಳ; ವಿಕ್ಷೇಪ: ಸತ್ಯಭಾಮೆ ಪತಿಯಂ ದೈತ್ಯಾರಿಯಂ ತಂದು ದೇವಿ ನಿಜೋದ್ಯಾನದ ಪಾರಿಜಾತ ತರುವಂ ಕೈಕೊಂಡಳುತ್ಸಾಹದಿಂ ಎಂದು ಬಿನ್ನವಿಸಲತಿ ಕುತೂಹಲಾಕುಲಿತೆಯಾಗಿ (ಜಗವಿ. ೧೩-೫೦ ವ). ೪. ಆಟ; ವಿನೋದ; ತಮಾಷೆ: (+). ೫. ಸಂತೋಷ; ಹರ್ಷ. ೬. [ಸಂಗೀತ] ಒಂದು ರಾಗದ ಹೆಸರು: ತಮ್ಮ ಗುರುಗಳು ಕುತೂಹಲರಾಗದಲ್ಲಿ ರಚಿಸಿದ 'ಅವರ ಕೂಡ' ಎಂಬ ಹಾಡಿನಿಂದ (ಸಂಗೀತ. ೨೯). **ಕುತೂಹಳ**. 'ಕುತೂಹಳಿಸು' ಪರಾ.

ಕುತೂಹಲನಾಗು = ಆಸಕ್ತಿಯುಳ್ಳವನಾಗು: ಓದುಗನ ಪ್ರತಿ ಕ್ರಿಯೆಯು ಬಗೆಗೆ ಅವನು ಕುತೂಹಲನಾಗದಿದ್ದರೆ ಬಲುಬೇಗನೆ ಬೇರು ಸತ್ತ ಮರವಾಗುತ್ತಾನೆ (ಜೀವನ. ೨ ಮುನ್ನುಡಿ). [ಸಂ.]

**ಕುತೂಹಲಕಾರಿ** (ಗು). ಕುತೂಹಲವನ್ನುಂಟುಮಾಡುವ; ತಿಳಿದು ಕೊಳ್ಳಬೇಕೆಂಬ ಇಚ್ಛೆಯನ್ನು ಹುಟ್ಟಿಸುವ: ಆದರೆ ಚಿಕ್ಕ ಎಂಬ ಕನ್ನಡ ಪದ ಮಾತ್ರ ಬಹಳ ಕುತೂಹಲಕಾರಿಯಾಗಿದೆ (ದ್ರಾವಿವಿ. ೩೬೯). [ಸಂ. ಕುತೂಹಲಕಾರಿನ್]

**ಕುತೂಹಲಿ** (ನಾ). ಕುತೂಹಲವುಳ್ಳವನು; ಆಸಕ್ತಿಯುಳ್ಳವನು; ತಿಳಿದುಕೊಳ್ಳಬೇಕೆಂಬ ಹಂಬಲವುಳ್ಳವನು: ಯಾವ ವಿಷಯ ದಲ್ಲಿಯೂ ಹೆಚ್ಚಗೆ ಕುತೂಹಲಿಯಾಗಿರಲಿಲ್ಲ (ಹೇಮಂತ. ೨೫೫). [ಸಂ. ಕುತೂಹಲಿನ್]

**ಕುತೂಹಳ** 'ಕುತೂಹಲ' ನೋ.

**ಕುತೂಹಳಿಸು** (ಕ್ರಿ). ಅಚ್ಚರಿಯನ್ನುಂಟುಮಾಡು; ಆಶ್ಚರ್ಯ ಹುಟ್ಟಿಸು; ಆಸಕ್ತಿಯನ್ನು ಕೆರಳಿಸು: ರತಿಯೊ ಮೇಣಿಂತೀಕೆ ಶಕ್ರನ ಸತಿಯೊ... ಎಂದತಿ ಕುತೂಹಳಿಸುತ್ತ ಬಂದಳು ಕೈಕೆಯಾಸಭೆಗೆ (ಕುಮುರಾ. ೨-೫೯). [ಕುತೂಹಳ (= ಕುತೂಹಲ) + -ಇಸು$_3$]

**ಕುತ್ಕೀಲ**, ಕುತ್ಕೀಳ (ನಾ). ಭೂಮಿಗೆ ಕೀಲಿನಂತಿರುವುದು; ಬೆಟ್ಟ; ಪರ್ವತ: ಪ್ರಿಯಹಂಸೀಯುತ ಹಂಸನಾದೆಯ ಮಹಾಕುತ್ಕೀಲ ಕೂಟ ಪ್ರಭೇದೆಯ (ಆದಿಪು. ೧-೫೪). **ಕುತ್ಕೀಳ**: ಪೊಯ್ದೊಡೆ ಭೀಮಂ ಕೆಡೆದಂ ಧರೆ ನಡುಗೆ ನೀಳಕುತ್ಕೀಳಂಬೋಲ್ (ಪಂಪಭಾ. ೧೩-೯೫). [< ಸಂ. ಕೂತ್ಕೀಲ]

**ಕುತ್ಕೀಳ** 'ಕುತ್ಕೀಲ' ನೋ.

**ಕುತ್ತ**, ಕುತ್ತು$_3$ (ನಾ). ೧. ನ್ಯೂನತೆ; ಕೊರತೆ; ತಪ್ಪು; ದೋಷ: ಕುತ್ತವೆಣಿಸಿ ಕೋಪಗೊಳದೆ ಕೂರ್ತವರೆಮ್ಮ ತೆತ್ತಿಗರೆಂದೆರ್ದೆಗೊಳಿಸಿ (ಹದಿಬ. ೪-೨೧); ಆ ಹೃದಯ ತಾನು ಮಾತ್ರ ನಿರಾಶೆಯ ಕುತ್ತಕ್ಕೆ ಒಳಗಾಗುವುದಿಲ್ಲ (ಭಾವಗೀ. ೩೭೯). ೨. ಬೇನೆ; ರೋಗ; ವ್ಯಾಧಿ: "ರುಜಾ, ಉಪತಾಪಃ, ತಾಪಃ, ವ್ಯಾಧಿಃ, ರೋಗಃ, ಗದಃ, ಆಮಯಃ - ಈ ೭ ಕುತ್ತದ ಪೆಸರು" (ನಾಚಿರಾ. ೧೧೯); ನಮ್ಮ ದಂಡಕ ರಿಸಿಯ ಕುತ್ತಮನೆಂತು ಬಲ್ಲೆಯಂತೆ ತೀರ್ಚೆಂದುಂ ಪೇೞ್ದೊಡೆ (ವಡ್ಡಾರಾ. ೧೭೧-೨೩); ಎಡೆವೆತ್ತೂರ್ಮೆಯಿಮುಪ್ಪು ಕುತ್ತದೊಳೊಡಂಬಟ್ಟೊತ್ತೆ (ಆದಿಪು. ೭-೩೮); ಮಗಂ ಮುಪ್ಪಿನೊಳ್ ಪೆಂಡತಿ ಕುತ್ತದೊಳ್ ಫಲಮಂ ತೋರ್ಪಂತೆ (ಧರ್ಮಾಮೃ. ೧೨-೩೮); ನಾಡ ಮದ್ದಂ ತಿಂದು ಕುತ್ತ ಕೆಡದಿರಬಹುದೆ (ಹಚಕಾ. ೧೧-೨೪); ನಿಮ್ಮ ಚಿತ್ತದೊಳೊತ್ತರಿಸಿದ ಚಿತ್ತಭವನ ಕುತ್ತಮಿದು ಸತ್ತೊಡಲ್ಲದೆ ಸವೆಯದು (ಶಾಂತೀಶ್ವ. ೧೧-೮೪ ವ); ಅರಿಸಿನ ಕುತ್ತದವನಿಗೆ ಲೋಕವೇ ಹಳದಿ (ಗಾದೆ). ೩. ತೊಂದರೆ; ಕಷ್ಟ; ಅಪಾಯ; ಕೇಡು; ವಿಪತ್ತು; ಗಂಡಾಂತರ: ಸಂಸಾರದೊಳಾದ ಬಡತನದ ಕುತ್ತದ ತಿರಿಗುತ್ತದ ರಾಜಬಾಧೆಯ (ಧರ್ಮಾಮೃ. ೬-೧೭೫); ಏಕೆ ನವಗೀಕೆಯ ಕುತ್ತಮೆನುತ್ತೆ ಚಿತ್ತದೊಳ್ . . . ಚಿಂತಿಸಿ ಕಂಡಳದೊಂದುಪಾಯಮಂ (ವರ್ಧಪು. ೧೫-೫೪); ಅರೆಚಣದೊಳು ನಾನು ಮಿತ್ತುವಿನಿಂದಿತ್ತ ಹಾರಿದೆ ತಪ್ಪಿತು ಕುತ್ತ (ಇಂಚಾಪ. ೪೦-೮೭). **ಕುತ್ತು$_3$**: ೩. ಕೆಡಿಪುವೊನು ಕೊಳ್ವೊನು ಪಜ್ಜಮಹಾಪತಕನಕ್ಕೆ ಒಕ್ಕಲುಳಿದುಣ್ಬ ಕಾದುವೊಂಗಿದು ಕಣ್ಗೆಟ್ಟು ತೊಬ್ಕುತ್ತುವ[ಕ್ಕೆ] (ಮೈಆರಿ. ೧೯೩೦, ೩೬-೧೦; 800); ಆ ಮನೆಗೆ ಎಷ್ಟೋ ಬಾರಿ ಕುತ್ತು ಬಂದಿತ್ತು (ದಕ್ಷಿನ. ೧೧೦); ಸ್ವಧರ್ಮದ ಪವಿತ್ರ ಸಂಕಲ್ಪದ ಆಚರಣೆಯು ಅಲ್ಪವಿದ್ದರೂ ದೊಡ್ಡ ದೊಡ್ಡ ಕುತ್ತುಗಳಿಂದ ನಿಮ್ಮನ್ನು ತಪ್ಪದೆ ಪಾರುಗಾಣಿಸಿ ಕಾಪಾಡುವುದು (ಬ್ರಹ್ಮಜೀ. ೮೬).

ಕುತ್ತದ ಕೊಮ್ಮೆ = ರೋಗದ ಕೊಮ್ಮೆ, —ಓಡೆ: ನಿನ್ನಱಿತು ಆಱಿದೆನೆಂದಡೆ ನಾ ಕುತ್ತದಕೊಮ್ಮೆ ನೀ ಮದ್ದಿನ ಗುಳಿಗೆ (ಮೋಳಿಮಾ. ೧೦೦-೩೯೮). [ದೇ. ‖ ತಮಿ. ಮಲ. ಕುಜ್ಜು; ತುಳು. ಕುತ್ತ]

**ಕುತ್ತಂಗುಳಿ**, ಕುತ್ತಗುಳಿ, ಕುತ್ತುಂಗುಳಿ$_2$ (ನಾ). ಯಾವಾಗಲೂ ಕುತ್ತವನ್ನು ಉಳ್ಳವನು; ರೋಗಿ: ಬಟ್ಟವೋಪ ಕುತ್ತಂಗುಳಿ ಯಂತೆ ಸೇದೆಗೆಟ್ಟು (ಧರ್ಮಾಮೃ. ೧೩-೬೯); ಗುಳಿಪ್ರತ್ಯಯಕ್ಕೆ-ಆಟಂಗುಳಿ, ಸಾಲಂಗುಳಿ, ಲಂಚಂಗುಳಿ, ಕುತ್ತಂಗುಳಿ (ಶಮದ. ೨೦೨ ಪ್ರಯೋ).

**ಕುತ್ತಗುಳಿ**: "ವ್ಯಾಧಿತ – ಕುತ್ತಗುಳಿಗಳುಂ" (ನೀತಿವಾ. ೭-೧೦); ಕುತ್ತಗುಳಿಗಳಪ್ಪ ಗ್ಲಾನಗರ್ಗ ಮಾಳ್ಪ ವೈಯಾವೃತ್ತಮುಂ (ಪಸಾರ. ೭೬೮-೧೧). **ಕುತ್ತುಂಗುಳ್ಳಿ$_2$**: ಕುತ್ತುಂಗುಳಿಗಂ ಗರ್ಭಮದೊತ್ತಂಬ ದಿನಕ್ಕುಮಲ್ಲಿ ನೆಲೆಸಲ್ ಜೀವಂ ಮತ್ತೆ ಪಟುಮರ್ದನುಂಡುಂ ಪೆತ್ತಪಳೇ ಜೀವನಲ್ಲಿ ನೆಲಸದೊಡೆಂತು (ಸಮುಪ. ೧೨-೩೮). [ಕುತ್ತ + –ಕುಳ್ಳಿ$_3$]

**ಕುತ್ತಂಗೊಳ್**, ಕುತ್ತಗೊಳ್ (ಕ್ರಿ). ೧. ರೋಗ ಪೀಡಿತನಾಗು; ವ್ಯಾಧಿಗ್ರಸ್ತನಾಗು: ಗಂಡುಡೆಯುಡಿಪರ್ ಪೆಣ್ಣಂ ಗಂಡುಮನೋರಂದ ದಿಂದೆ ಪೆಣ್ಣುಡೆಯುಡಿಪರ್ ತಂಡದೆ ತಿರಿವರ್ ಕುತ್ತಂಗೊಂಡುಬರ್ದುಂಕಿ ದೊಡೆ ದೇವಿ ಕಾದಳೆನುತ್ತಂ (ಸಮುಪ. ೯-೧೨೦). **ಕುತ್ತಗೊಳ್**: ಕು [ಪಾಠಾಂ. ತ್ತು]ತ್ತಂಗೊಂಡವ ಕಳವಳಿಸಿ ತನ್ನೊತ್ತಿಲಿದ್ದರ ಹಳಿವ ಪೋಲ್ (ನಿಭಾಗ. ೧೧-೯-೯). ೨. ತೊಂದರೆಗೀಡಾಗು. 'ಕುತ್ತಗೊಳಿಸು' ಪರಾ. [ಕುತ್ತ + ಕೊಳ್$_1$]

**ಕುತ್ತಂಬಡು** (ಕ್ರಿ). ಬೇನೆ ಬೀಳು; ರೋಗಪೀಡಿತನಾಗು: ಮಠದೊಳ್ ಪೊನ್ನಂ ಪೂಳ್ದು ಪಲವುಕಾಲಮಿರ್ದು ಕುತ್ತಂಬಟ್ಟಾರ್ತಧ್ಯಾನದಿಂ ಸತ್ತು (ಪಂಚತಂ. ೩೦೨-೨೨). [ಕುತ್ತ + ಪಡು$_1$]

**ಕುತ್ತಗುಳಿ** 'ಕುತ್ತಂಗುಳಿ' ನೋ.

**ಕುತ್ತಗೊಳ್** 'ಕುತ್ತಂಗೊಳ್' ನೋ.

**ಕುತ್ತಗೊಳಿಸು** (ಕ್ರಿ). ಬಾಧೆಗೊಳಿಸು; ತೊಂದರೆಪಡಿಸು; ನೋಯಿಸು: ಗುರುವು ಅಳಿವನೂ ಅಲ್ಲ, ಉಳಿವನೂ ಅಲ್ಲ ನಿಮ್ಮ ಭ್ರಾಂತಿಯೇ ಅಳಿದನು ಉಳಿದನು ಎಂದು ಕುತ್ತಗೊಳಿಸುತಿದೆಯಲ್ಲಾ (ಸಿದ್ಧೇವ. ೧೭೧). [ಕುತ್ತಗೊಳ್ + – ಇಸು$_3$]

**ಕುತ್ತಟ್ಟೆ** (ನಾ). ಅಡುಗೆ ಮನೆಯ ಮೇಲಿನ ಸಣ್ಣ ಅಟ್ಟ; ಹೊಗೆಯಟ್ಟ: ತನ್ನ ಬಾಯಿಯನ್ನೇ ತೆರೆದು ಕುತ್ತಟ್ಟವನ್ನು ನೋಡುತ್ತಾನೆ (ಮೊಮಗು. ೫೦). [< ಕುಱು$_2$ + ಅಟ್ಟ$_1$]

**ಕುತ್ತಟ್ಟುಗಾಮುಂಡ** (ನಾ). ಒಬ್ಬಾತನ ಹೆಸರು: ಕಿಱುದೆಱೆಯು ಮ್ಮದು ಪಳ್ಳಾಳ್ಗಾಪನ್ದರು ಎಚ್ಚು ಬಿದ್ದ ಕುತ್ತಟ್ಟುಗಾಮುಣ್ಡರುಮ್ (ಎಕ. XVI, ಸಿರಾ. ೧೨೩-೧೧; 788). [ಕುತ್ತಟ್ಟು$_0$ + ಗಾಮುಂಡ]

**ಕುತ್ತಡಿ** (ನಾ). ಚಿಕ್ಕಹೆಜ್ಜೆ; ಸಣ್ಣಪಾದ: ಒರ್ಮೊದಲ್, ಇರ್ಮೆಯರ್, ಕುತ್ತಡಿ (ಶಮದ. ೧೬೩ ಪ್ರಯೋ). [< ಕುಱು$_2$ + ಅಡಿ$_1$]

**ಕುತ್ತಡಿಯಿಡು** (ಕ್ರಿ). (ನೋವಿನಿಂದ) ಚಿಕ್ಕ ಹೆಜ್ಜೆ ಇಡು; ಪುಟ್ಟ ಹೆಜ್ಜೆ ಹಾಕು: ಕಿಱುಗಲ್ಲೊಳ್ ಕೆಸಱೊಳ್ ಮೊಳೆಕೊರಡುಗಳೊಳ್ ಮುಳ್ಳೊಳಿಡುಕುಱೆಡೆಗಳೊಳಂ ಪಾಯ್ದುಱದೆ ಕೊಳಗುಗಳಾ ಸಲೆ ಕುತ್ತಿಱೆದೊಡೆ ಕುತ್ತಡಿಯನಿಡುವೊಡದು ತಳರೋಗಂ (ಅಶ್ವಶಾ. ೧೫-೧). [ಕುತ್ತಡಿ + ಇಡು$_1$]

**ಕುತ್ತಣಿ** 'ಕುತನಿ' ನೋ.

**ಕುತ್ತನಿ** 'ಕುತನಿ' ನೋ.

**ಕುತ್ತರಿ** 'ಕುತ್ತಱಿ' ನೋ.

**ಕುತ್ತರಿಸು** 'ಕುಸ್ತರಿಸು' ನೋ.

**ಕುತ್ತರಿಹೋಗು** (ಕ್ರಿ). ಅಡ್ಡಾದಿಡ್ಡಿಯಾಗಿ ಹೋಗು; ಸುಸ್ತು ಬೀಳು (?): ಕುದುರೆಯು ವಿಜಯಪಾಲನ ಕುದುರೆಯನ್ನು ಮುಂದೆ ಬಿಡದೆ ಸ್ವಲ್ಪವೂ ಕುತ್ತರಿಹೋಗದೆ . . . ವೇಗವಾಗಿ ಹೋಗುತ್ತಿದ್ದಿತು (ಕೋಹಿನೂ. ೪೬). [ಕುತ್ತರಿ ? + ಹೋಗು$_1$ (< ಪೋಗು$_1$)]

**ಕುತ್ತರೆ** 'ಕುತ್ತಱಿ' ನೋ.

**ಕುತ್ತವಳ**, ಕುತ್ತಾಳ (ನಾ). ೧. ದೋಷಿ; ಅಪಾದಿತ: ಮದ್ಯಪಾನ ರತಂ ಕುತ್ತವಳಂ ವಿಕಾರಿ ಬಧಿರಂ ನಿರ್ಲಕ್ಷಣಂ ನಿರ್ವಿಚಾರರತಂಗೀವುದ ಯುಕ್ತಮಲ್ತೆ ಹಯಶಾಸ್ತ್ರಾರ್ಥೋಕ್ತಿಯಂ (ಅಶ್ವಶಾ. ೧೦-೨). ೨. ವ್ಯಾಧಿಗ್ರಸ್ತ; ರೋಗಿ. **ಕುತ್ತಾಳ**: ೨. ಮುದುಕನಂ ಕುತ್ತಾಳನಂ ಪೊತ್ತ ಪೆಣನುಮಂ ಪದೆದು ನೋಡಿದುದರಿಂದಮೆ ತಿಳಿಯದಿರವಿನ ಜಗದ ಬಗೆಯ ನಿರದೆ ತಿಳಿತಿಳಿಯುತ್ತೆ ಮತ್ತಮಂ ಬಗೆಯಲ್ಲಿ ಮಿದಿಗುದಿಯುತೆ (ಸೌನಂದ. ೨-೬೪). [ಕುತ್ತ + –ವಳ]

**ಕುತ್ತವೆಳಗು** (ನಾ). ಕಂಬದೀಪ; ದೀಪದ ಕಂಭ: ಶುಚಿರ್ಭೂತರಾಗಿ ಚಕ್ಕುಲಿಯಂತೆ ಪಿಟ್ಟನಿಂ ಬಟ್ಟಿತುವಾಗಿ ಬರೆದವಱ ಮೇಲೆ ಸರುಗದ ಮುದ್ದೆಗಳನಿಟ್ಟು ದೇವರ ಮೊಗವರವನೆಲ್ಲರುಮುಣಲವೇಳ್ಕೆಂದೆಲ್ಲರುಂ ಉಂಡು ಕುತ್ತವ[ವೆ]ಳಗಮಿಕ್ಕಲುವೇಳ್ಕುಂ (ಪಸಾರ. ೯೩೪-೩). [← ತಮಿ. ಕುತ್ತವೆಳಕ್ಕು]

**ಕುತ್ತಳಿ** (ನಾ). ಸಣ್ಣ ಅಳತೆ (?): ದ್ವಿತ್ವಕ್ಕೆ . . . ಕಿತ್ತೀಳಿ, ಕುತ್ತಳಿ, ಕುತ್ತಿಸಳ್ (ಶಮದ. ೧೮೦ ಪ್ರಯೋ). [ಕುತ್ತು$_4$ + ಅಳಿ$_1$]

**ಕುತ್ತಱಿ**, ಕುತ್ತರಿ, ಕುತ್ತರೆ, ಕುತ್ತುರೆ (ನಾ). (ಹುಲ್ಲಿನ) ಮೆದೆ, —ರಾಶಿ, ಬಣಬೆ: ಅಳಸುಗಳ ಕುತ್ತಱಿಗಳಲ್ಲಲ್ಲಿ ಹೂರಿಗೆಯ ಲಡ್ಡಿಗೆಯ ಬೆಟ್ಟಂಗಳಲ್ಲಲ್ಲಿ (ಬಸರ. ೭-೯). **ಕುತ್ತರಿ**: ಹುಲ್ಲು ಕುತ್ತರಿಯನ್ನು ನೋಡುವಾಗಲೆ ಮುನ್ನೂರು ಸೂಡಿಯಾದರೂ ಹೆಚ್ಚಿದ್ದೀತು ಎಂದು ತಿಳಿದಿತ್ತು (ಮರಮು. ೪೨). **ಕುತ್ತರೆ**: ನಿನ್ನ ಅಪ್ಪಗೆ ಕೊಟ್ಟ ಸಾಲಾನೇ ಕುತ್ತರೆ ಬೆಳೆದ್ಹಾಗೆ ಬೆಳೆದು ನಿಂತದೆ (ಮಲೆಮ. ೩೮೩); ಹುಲ್ಲ ಕುತ್ತರೆಗೆ ರಾತ್ರಿ ಬೆಂಕಿ ಬಿತ್ತು (ಪದ್ಮಸ. ೩೧). **ಕುತ್ತುರೆ**: ಮಾರಿ ಮಳೆಯಲ್ಲಿ ತೇಲಿಬಂದು ಕುತ್ತುರೆಯಾಗಿದ್ದ ಹಲಸಿನ ತರಗು (ಮಲೆಮ. ೫೬).

ಕುತ್ತರೆಹಾಕು = ಮೆದೆ ಮಾಡು; ಓರಣವಾಗಿ ಬಣಬೆ ಒಟ್ಟು: ಕುತ್ತರೆ ಹಾಕುತ್ತಿದ್ದ ದೂರದ ನೆರೆಯುವಕನೊಬ್ಬ ಹೊರೆ ಹೊತ್ತು ಬರುತ್ತಿದ್ದ ಸುಬ್ಬಮ್ಮನನ್ನು ಗುರುತಿಸಿದನು (ಕಾನೂರು. ೫೬೫). [?]

**ಕುತ್ತಱಿಸು** (ಕ್ರಿ). ಹೊಡೆದು ಹಾಳುಮಾಡು; ಧ್ವಂಸಮಾಡು (?): ಕತ್ತುರಿಮಿಗಮಂ ಪಂದಿಯ ಮುತ್ತಂ ಪೊಂಬುಲಿಯ ತೊವಲನಾನೆಯ ಕೊಂಬಂ ಕುತ್ತಱಿಸದಡಸಿ ಪಿಡಿದುಗಿದೆತ್ತಿದುವಂ ಪತಿಗೆ ಕಾಣ್ಕೆಗೊಟ್ಟಂ ತೆಂದಂ (ಅನಂಪು. ೧೧-೩೮). [ಕುತ್ತಱಿ ? + –ಇಸು$_3$]

**ಕುತ್ತಾರ** (ನಾ). ಸಣ್ಣಹಾರ: ಸುತ್ತುಗೆಯೊತ್ತಂ ಬಡಿಯುತ್ತಿರ್ದ ಗಣಂಗಳ ಮೊತ್ತದ ಮಕುಟಂಗಳ ಕುತ್ತಾರಕ್ಕೆತ್ತಂ ಹೊತ್ತು ತಳರ್ತ ಸಿಲತೆಗಳ ಕವಿದೆಡೆಗಿಡಿದಡಸಿದ ದೀಪಾವಳಿಯೆಸೆವಾ . . . ಬೆಳತಿಗೆವೆಳಗಿನೊಳತಿ ಮಂಗಳಮಯವೆತ್ತಿರ್ದಂ (ವೀರೇಚ. ೧-೧೬). [ಕುತ್ತು$_4$ + ಆರ$_2$]

**ಕುತ್ತಾಳ** 'ಕುತ್ತವಳ' ನೋ.

**ಕುತ್ತಿ$_1$** (ನಾ). (ಕರಾ) ಮರ ಕಡಿದ ಮೇಲೆ ಉಳಿದುಕೊಂಡ ಬುಡದ ತುಂಡು: ಮೊದಲು ನಮ್ಮ ಮನೆಯ ಹಿಂದಿನ ಗುಡ್ಡವನ್ನು ಹತ್ತಿ ಇಳಿಯುವ; ಆದರೆ 'ಮುಳ್ಳು ಚುಚ್ಚಿತು, ಕುತ್ತಿ ಕಂತಿತು – ಎಂದು ದೂರಬೇಡಿ' ಎಂದು ನುಡಿದರು (ಬೆಟ್ಟಜೀ. ೨೯). 'ಮೊಳಿಗುತ್ತಿ' ಪರಾ. ೨. ಮಗು; ಕೂಸು. 'ಎಳಗುತ್ತಿ' 'ಕುತ್ತಿಮರಿ' ಪರಾ. [ದೇ. ‖ ತಮಿ. ಕುಱ್ಟಿ, ಕುತ್ತಿ; ತುಳು. ಕುತ್ತಿ]

**ಕುತ್ತಿ$_2$** (ನಾ). (ಕರಾ). ದ್ರವವಸ್ತುವಿನ ಒಂದು ಅಳತೆ; ಎಂಟು ಕುಡುತೆಗಳ ಪ್ರಮಾಣವನ್ನುಳ್ಳ ಅಳತೆ: ಇದು ಹೊತ್ತಿಗೆ ಒಂದು ಕುತ್ತಿ ಹಾಲು ಕೊಟ್ಟೀತು (ಈಕಥೆ. ೨೪). [ದೇ. ‖ ತಮಿ. ಕುತ್ತಿ = ಸೀಸೆ, ಭರಣಿ; ತುಳು. ಕುತ್ತಿ]

**ಕುತ್ತಿಕಾಣಿಕೆ** (ನಾ). (ಕರಾ). ಸರ್ಕಾರದ ಭೂಮಿಯಲ್ಲಿರುವ ಮರವನ್ನು ಕಡಿಯಲು ಅನುಮತಿ ಪಡೆಯುವುದಕ್ಕಾಗಿ ಸರ್ಕಾರಕ್ಕೆ ಸಲ್ಲಿಸುವ ಕಾಣಿಕೆ, —ರುಸುಮು: ಕುತ್ತಿ ಕಾಣಿಕೆಯನ್ನು ಕಟ್ಟದೆ ಸರ್ಕಾರದ ಮರ ಕಡಿದರೆ ಪಟೇಲರು ಸುಮ್ಮನೆ ಬಿಟ್ಟಾರೆ? (ರೂಢಿ). [ಕುತ್ತಿ$_1$ + ಕಾಣಿಕೆ . / ತುಳು. ಕುತ್ತಿಗಾಣಿಕೆ]

**ಕುತ್ತಿಕೋಲು** (ನಾ). (ಕರಾ) ಕಟ್ಟಡ ಬೀಳದಂತೆ ಕೊಡುವ ಆನಿಕೆ. [← ತುಳು. ಕುತ್ತಿಗೋಲು, ಕುತ್ಕೋಲು]

**ಕುತ್ತಿಗೆ** (ನಾ). ಕತ್ತು; ಕೊರಳು; ಕಂಠ: ಕುತ್ತಿಗೆ ಕೊಯ್ವಗೆ ಕರುಣವೇ ಇಲ್ಲ (ಪುರಂದ. ೨-೫೬-೩); ವರದಕ್ಷಿಣೆಯೆಂಬುದು ಹೆಣ್ಣು ಮಕ್ಕಳ ಕುತ್ತಿಗೆಗೆ ಬಿದ್ದ ಹಗ್ಗವೇ ಸರಿ (ಶ್ಯಾಮುತಾ. ೨೨); ಕುತ್ತಿಗೆ ಕೊಯ್ಯುವ ಊರಲ್ಲಿ ಸುಲಿದು ಬಿಟ್ಟಿದ್ದೇ ಗುಣ (ಗಾದೆ); ಚಿನ್ನದ ಚೂರಿ ಎಂದು ಕುತ್ತಿಗೆ ಕೊಯಿಸಿಕೊಳ್ಳಬಹುದೇ (ಗಾದೆ).

**ಕುತ್ತಿಗೆ ಗುಂಡುಕಲ್ಲು** = (ಕುತ್ತಿಗೆಗೆ ಕಟ್ಟಿದ ಗುಂಡು ಕಲ್ಲಿನಂತೆ) ಬಹಳ ತೊಂದರೆಯಾದ ವಸ್ತು; ಹೊರೆಯಾದ ವಸ್ತು: ಹೆಂಡತಿಯು ಬಳಿಕೆನ್ನ ಕುತ್ತಿಗೆಗುಂಡಕಲ್ಲಂತಾದಳು (ಕಏಪು. ೧೯-೨೫). **ಕುತ್ತಿಗೆಗೆ ಬರು** = ಕುತ್ತಿಗೆಯ ಮಟ್ಟಕ್ಕೆ ಬರು; ಗಂಡಾಂತರದ ಸ್ಥಿತಿಗೆ ಬರು: ನಮ್ಮ ಕಷ್ಟ ಈಗ ಕುತ್ತಿಗೆಗೆ ಬಂದಿದೆ (ರೂಢಿ). **ಕುತ್ತಿಗೆಕೊಯ್** = ಮೋಸಮಾಡು: ಅವನು ನಂಬಿಸಿ ಕುತ್ತಿಗೆಕೊಯ್ದ (ರೂಢಿ). **ಕುತ್ತಿಗೆ ಹಿಚುಕು** = ಕೊರಳು ಹಿಸುಕು; ಕತ್ತು ಹಿಸುಕು; ಪ್ರಾಣತೆಗೆ: ಅವನು ಕುತ್ತಿಗೆ ಹಿಚುಕುವುದಕ್ಕೂ ಹೇಸುವುದಿಲ್ಲ (ರೂಢಿ). [ದೇ. ‖ ತುಳು. ಕೆಕ್ಕಿಲ್; ತೆಲು. ಕುತಿಕ, ಕುತಿಕೆ, ಕುತ್ತಿಕ, ಕುತ್ತು, ಕುತ್ತುಕ, ಗೊಂತು, ಗೊಂತುಕ; ನಾಯ್ಕಿ. ಕುತ್ಕ]

**ಕುತ್ತಿಗೆಕೊಯ್ಕ** 'ಕುತ್ತಿಗೆಗೊಯ್ಕ' ನೋ.

**ಕುತ್ತಿಗೆಗೊಯ್ಕ**, ಕುತ್ತಿಗೆಕೊಯ್ಕ (ನಾ). ೧. ಕುತ್ತಿಗೆಯನ್ನು ಕೊಯ್ಯುವವನು. ೨. (ಆಲಂ) ಮೋಸಗಾರ; ದ್ರೋಹಿ: 'ರಾಮಾಚಾರಿ'ಯಂಥ ಕುತ್ತಿಗೆಗೊಯ್ಕರ . . . ಆಸೆಗೆ ಅಂತ್ಯವಿದ್ದರೆ ಅಲ್ಲವೇ? (ತಿಡುಗು. ೪ ಪೀಠಿಕೆ). **ಕುತ್ತಿಗೆಕೊಯ್ಕ**: ೨. ಕುತ್ತಿಗೆ ಕೊಯ್ಕರು ಇವರಲ್ಲ (ಪ್ರೇಮಾಶ್ರ. ೧೯೩). [ಕುತ್ತಿಗೆ + ಕೊಯ್ಕ]

**ಕುತ್ತಿಡು** (ಕ್ರಿ). ಚೆನ್ನಾಗಿ ಚುಚ್ಚು; ನಾಟುವಂತೆ ಹೊಡೆ: ಗೋತ್ರಭೇದಿ ಸುತನ ಹೆಂಡಿರ ಮಗನ ಮಾತುಳನಾದವನ ಕತ್ತಲೆಯಲಿ ಪೋಗಿ ಕುತ್ತಿಟ್ಟವನ ಮೈಯ ಸುತ್ತಿ ಬಾಧಿಸುತಿಪ್ಪನ . . . ಕರೆದು ತಾರೆ ಸಖೀ (ಕನಕ. ೭೪-೨). [ಕುತ್ತು$_1$ + ಇಡು$_1$]

**ಕುತ್ತಿನಿ** 'ಕುತನಿ' ನೋ.

**ಕುತ್ತಿಮರಿ** (ನಾ). ೧. ಚಿಕ್ಕ ಮಗು; ಕೂಸು. ೨. ಚಿಕ್ಕಮಕ್ಕಳನ್ನು ಬೆನ್ನಮೇಲೆ ಕೂರಿಸಿಕೊಂಡು ಆಡಿಸುವುದು: "ಚಿಕ್ಕ ಮಗು, ಮಕ್ಕಳಾಡಿಸುವುದು" (ಜಾನಕೋ. ೩೮). 'ಕೂಸುಮರಿ' ಪರಾ. [ಕುತ್ತಿ$_1$ + ಮರಿ (< ಮಱಿ)]

**ಕುತ್ತಿರ್** (ಕ್ರಿ). ಘಾತಿಸಲ್ಪಟ್ಟಿರು; ಭೇದಿಸಲ್ಪಟ್ಟಿರು; ಕೊರೆಯಲ್ಪಟ್ಟಿರು (?): ನೂಂಕಿಬರೆ ನುಣ್ಮಲರ್ವೆಳಗಿಂ ಕುತ್ತಿರೆ ತಡಿ ಸಡಿಲ್ದು ತಮುಮುಭೃತಟಾಕಂ ಕಣ್ಗೆ ಬಳಸಲಾಯ್ತು (ಅನಂಪು. ೭-೭೫). [ಕುತ್ತು$_1$ + ಇರ್]

**ಕುತ್ತಿರಿ** 'ಕುತ್ತಿಱಿ' ನೋ.

**ಕುತ್ತಿಸಿಱು** (ನಾ). ಕುತ್ತುವ ಕೋಡು; ಚುಚ್ಚುವ ಆನೆಯ ಅಥವಾ ಹಂದಿಯ ಕೋಡು, —ಕೋರೆ: ಕೊಂತಂಗಳಿಂದಮಿಟ್ಟಿಗಳಿಂದಂ ಕುತ್ತಿಸಿಱಿಂದಂ ಕರುಳ್ ಮಾಲೆಗಳ ನೆಲದೊಳ್ ಸುರಿಯೆ ಕುತ್ತುವುದುಂ (ವಡ್ಡಾರಾ. ೧೨೭-೧೩). [ಕುತ್ತು$_1$ + ?]

**ಕುತ್ತಿಸು** (ಕ್ರಿ). ಚುಚ್ಚಿಸು; ತಿವಿಯಿಸು.

**ಕುತ್ತಿಸಿಕೊಳ್** = ಚುಚ್ಚಿಸಿಕೊ; ಇರಿಯಿಸಿಕೊ; ತಿವಿಯಿಸಿಕೊ: ಒತ್ತೆಗೆ ನಿಲ್ವುದೆಂದುಱಿಯವೇಡ್ದಿಪಳೋ . . . ಕುತ್ತದೊಳಾದ ಚುಚ್ಚುಗಲೆಯೇ ಎದೆಗಗ್ಗಳ ಕಪ್ಪು ಕಾಡಿ ಮೇಣ್ ಕುತ್ತಿಸಿಕೊಂಡುವೇ ನುಡಿವ ಕುಂಟಣಿಯಂ ಜವನೊಯ್ಯದಾದನೇ (ಸೂಕ್ತಿಸು. ೮-೪೧೯); ಬಯಿಚಿಯ ನಾಯ್ಕ ಸೋಯಿದೇವನ ಕುತ್ತಿ ಕುತ್ತಿಸಿಕೊಂಡು ಸುರಲೋಕಪ್ರಾಪ್ತನಾದ (ಎಕ. VIII, ಸೊರಬ. ೨೧೮-೮; 1282). [ಕುತ್ತು$_1$ + –ಇಸು$_3$]

**ಕುತ್ತಿಱಿ**, ಕುತ್ತಿರಿ (ಕ್ರಿ). ೧. ಕುತ್ತುವಂತೆ ಇರಿ; ಚೆನ್ನಾಗಿ ತಿವಿ; ಚುಚ್ಚು: ತಣ್ಣೆಲರ್ಗೇಟ್ವತರಂಗ ಶ್ರೀಕರಾಸಾರದ ಮಂಜು ಸುತ್ತಿಱಿದು ಕುತ್ತಿಱಿಯುತ್ತಿರೆ (ಅನಂಪು. ೪-೨೦); ಕಿಟಸಿಱಿಯ ಪೆಣಗು ಪೋರಾಟದೊಳ್ ಕುತ್ತಿಱಿವ ಕಾಟದೊಳ್. . .ನಿನ್ನೊಡಲ್ ಸುರುಳ್ವುದನ್ ಕಾಣ್ಪೆನಯ್ (ಬದ್ದಪ್ರ. ೯-೧೮೪). ೨. ಚುಚ್ಚಿ ಗಾಯವಾಗು; ತಿವಿತದಿಂದ ನೋಯು: ಕೊಳಗುಗಳ್ ಸಲೆ ಕುತ್ತಿಱಿದೊಡೆ ಕುತ್ತಡಿಯನಿಱುವೊಡದು ತಳರೋಗಂ (ಅಶ್ವಶಾ. ೧೫-೧). **ಕುತ್ತಿರಿ**: ೧. ರಥಿಕರ ಕುತ್ತಿರಿದು ರಾಜರ ಬಲತ್ವಮುರಿದು (ಜಿನಮು. ೭-೧೮). [ಕುತ್ತು$_1$+ಇಱಿ$_1$]

**ಕುತ್ತು$_1$** (ಕ್ರಿ). ೧. (ಚೂಪಾದ ಸಾಧನದಿಂದ) ಚುಚ್ಚು; ಇರಿ; ತಿವಿ: ಕೊಂತಗಳಿಂದಮಿಟ್ಟಿಗಳಿಂದಂ ಕರುಳ್ಗಳಂ ಸೋರೆ ಕುತ್ತುವುದುಂ (ವಡ್ಡಾರಾ. ೬-೨೮); ವಿಸ್ಫುರಿತ ಸಿವಾಗಮಂ ಸುರಿಗೆಯಾಗಿರೆ ಪಾಪವನೊತ್ತಿ ಕುತ್ತಿ ನಿಪಿರಮಿಱಿದು (ಎಕ. XII, ಶಿರಾ. ೨೮-೭೧; 943); ಮೇದಿನಿಯನೆತ್ತಿದಾದಿವರಾಹನಂತೆ ದರಿಗಳಂ ಕೋಡೊಳ್ ಕುತ್ತಿಯೆತ್ತಿ (ಪಂಚತಂ. ೪೬-೧); ಮುಳ್ಳುಗುತ್ತುವಡೆ [ಪಾಠಾಂ. ಮುಗುಳು ತಾವರೆ] ತೇಜಹಿಲ್ಲದ ಪರಿಪೂರ್ಣ ಘನವು (ಚನ್ನವ. ಕ. ೨೧-೪೭); ಲೋಗರಿಂದವೆ ಕೊಲಿಸದಿರು ನೀ ಕುತ್ತಿ ಕೆಡಹು ಕಠಾರಿಯಿದೆಯೆಂದ (ಕುವ್ಯಾವಿ. ೬-೧೮). ೨. ಹೊಡೆ; ಬಡಿ; ಚಚ್ಚು: "ಕುತ್ತು – ಘಾತನೇ (ಹೊಡೆ)" (ಶಮುಧಾ); ಭುಜಾದಂಡದಿಂ ಕೆಲರಂ ಕುತ್ತಿಯುಮೆತ್ತಿಯುಂ ಪೊಣಱಿಯುಂ ಪೊಯ್ದುಂ (ಗದಾಯು. ೩-೧೨); ಎಲ್ವೆಲ್ಲಂ ನುರ್ಗಾಗಿ ಚಿಟಲ್ಚಿಟಲೆನೆ ಕುರ್ಗುರ್ತ್ತುಂ ನೆಲದೊಳೊರಸಿ ಮೇಲ್ಕುಕ್ಕುತ್ತುತ್ತುಂ (ಧರ್ಮಾಮೃ. ೬-೧೯೦); ವೈರಿ ಸೇನೆಯ ಕುತ್ತಿ (ಕುವ್ಯಾಕ. ೧೨-೨೦). ೩. ತುರುಕು; ಸೆಕ್ಕು; ಸಿಕ್ಕಿಸು; ಸೇರಿಸು: ಮಡಗಿಡಲೆಂದು ಪುತ್ತಿನೊಳಗೊಯ್ಯನೆ ಕುತ್ತಿದ ಕಯ್ಯನಾಗಳ್ (ಆದಿಪು. ೨-೪೦); ಮುಡಿಯೊಳಾಗಡೆ ಕುತ್ತಿದ ಕೇತಕೀದಳಂ . . . ಅದೇನೆಸೆದತ್ತೊ ಪೆಂಡಿರಾ (ಲೀಲಾವ. ೧೨-೧೯). ೪. ಕುಕ್ಕು; ಕೋರೈಸು: ಕಣ್ಣಂ ಕುತ್ತುವ ಚೆಲ್ಲಮನಾಡಿ [ಧೂರ್ತನೆನ್ನ ಕೈಯಂ ಕೊಂಡೆನ್ನ ಕಣ್ಣಂ ಕುತ್ತುವಂತೆ ಸೊಕ್ಕಿ . . .] (ಧರ್ಮಾಮೃ. ೯-೨೧೧); ಬಣ್ಣವಣ್ಣಿಗೆಯ ನುಡಿಯಿದೆಲ್ಲಂ ಮಿಥ್ಯೆಯೆಂದಿವರ ಕಣ್ಣಕುತ್ತಿ [ಪಾಠಾಂ. ಕ್ಕಿ]ದ ತೇಜದಿ ನುಡಿದ ಲಂಡೆಯನು ಹಿಡಿತರಿಸಿ (ಸಮ್ಯಕೌ. ೬-೫೮); ಎತ್ತಿದ ಚಳಯ ವೃತ್ತತೆಯ ನೋಳ್ಪೊಡೆ ಕಣ್ಣ ಕುತ್ತಿದುವೇನ ಬಣ್ಣಿಸುವೆ (ಮೋಹತ. ೧೧-೬೭). ೫. ಊರು; ನೆಡು; ನಾಟು: ಪಶ್ಚಿಮಾಭಿಮುಖನಾಗಿ ಬರೆವರೆ ಮುಂದೆ ಕುತ್ತಿದ ಕೋಲು ಸಲ್ಲದು (ಸಂಬಿರ. ೧೮-೪); ಷಷ್ಠಿ ಉತ್ಸವದ ವೇಳೆ ಅನ್ನದ ಪಲ್ಲಕ್ಕೆ ನಾಲ್ಕು ಸಮುಸ್ತರ ಮುಂದೆ ಪ್ರಾರ್ಥನೆಮಾಡಿ ಚಿನ್ನದ ಹಿಡೆಯುಳ್ಳ ಅಕ್ಷಯ ಸಟ್ಟುಗ ಕುತ್ತುವುದು (ತುಳುನಾ. ೧೧೯); ಮುರಿದು ಹೋದ ಬೇಲಿಯನ್ನು ಕುತ್ತಿ ಸರಿಮಾಡುತ್ತಿದ್ದಳು (ಮುಗಿಯು. ೨೪೫). ೬. ಬಾಗು; ಕುಸಿ: ತಲೆಯಂ ಕುತ್ತಿ ವಿಶಾಳಂಬರಿವ ಕರಡಿಗಳುಮಂ (ಪಂಪಭಾ. ೫-೪೮ ವ); ತಲೆಯ ಕುತ್ತಿ ನೆಲನ ಬರೆಯುತ್ತಿದ್ದಿರ ದೇವಯ್ಯಾ (ಬಸವ. ೭೪೪); ಒಯ್ಯನೆ ಲಜ್ಜಾಭಾರದಿಂ ಕುತ್ತಿದ ತಲೆಯ ನಣಂ ಕುತ್ತುವಂತೆತ್ತಲಾಱಂ (ಅರ್ಧನೇ. ೨-೭೭); ಎಱಗಿ ತಲೆಯಂ ಕುತ್ತಿ ಬಱುಗೈಗಳಿಂದಂದು ಗರಗರನೆ ತುಱುಸುತಂ ಸ್ಕಂಧಾದಿಯ (ಸಾನಂಚ. ೨-೭೭); ಜೀಮೂತವಾಹನ ಫಣಿಶಂಖಚೂಡಂಗೆ ಕುತ್ತಿ ತನ್ನೊಡಲ ಬಾಡಗರುತ್ಮನಿಗಿತ್ತು (ಮೋಹತ. ೫-೫೩); ಬತ್ತಿದುದು ಸಾಗರವ್ರಾತ ಮಹಿಪನ ಕೊರಲ್ ಕುತ್ತಿದುದು (ಚಿಬಪು. ೨೩-೩೦).

**೭.** ತೊಡು ; ಧರಿಸು : ಹರದನ ಬಡ್ಡಿಗೊಟ್ಟೊಡವೆ ರಾಜಕುಮಾರನ ತೇಜದೇಟಿಗ್ಗೆ ನಾಣ್ಚಿರುದಿನ ಚಿತ್ರವಿದ್ದ ಕವಿಪಂಡಿತರೋದುವ ಕೊಂಕು . . . ತೋರ್ಪರಂತವಂ ಕರಹದ ಸೂಳೆ ಸುತ್ತುವಳೊ ಕುತ್ತುವಳೋ ಮನೆವಾರ್ತೆಗೀವಳೋ (ಅನಂಪು. ೮-೫೯). **೮.** ಕೊಯ್ಯು ; ಬಿಡಿಸು : "ತಿಱಿದನೆಂದು ಕುತ್ತಿದನಕ್ಕುಂ" (ಕರ್ಣಾನಿ. ೬೯).

**ಕುತ್ತಿಕುತ್ತಿಕೇಳು** = ಕೆದಕಿ ಕೆದಕಿ ಕೇಳು ; ತಿರುಗಿ ತಿರುಗಿ ಕೇಳು : ದೊರೆ ಮೇಲಿಂದ ಮೇಲೆ ಕುತ್ತಿಕುತ್ತಿ ಕೇಳೆ, ರಾಣಿ ಸಂಕೋಚದಿಂದ ತನ್ನ ಬಯಕೆಯನ್ನು ಬಾಯಿಬಿಟ್ಟು ಹೇಳಿಕೊಂಡಳು (ಹತ್ತು ಮ. ೭೩). **ಕುತ್ತಿಕೊಳು, ಕುತ್ತಿಕೊಳ್ಳು** = **೧.** ತಿವಿದುಕೊಳ್ಳು; ಇರಿದುಕೊಳ್ಳು : ಕೆತ್ತುಕೊಂಡಾ ನಾಚಿಕೆಗೆ ನೆಱೆ ಕುತ್ತಿಕೊಳಬೇಕೆಂಬ ಗಾಡೆಯನಿತ್ತ ಹೊದ್ದಿಸಬೇಡ ನಾವಂಜುವೆವು ಶಾಳಗಕೆ (ಕುವ್ಯಾವಿ. ೬-೨೫) ; ಅತ್ತೆ ಕೈಕೆಯ ಬಯಕೆ ಸೇರಿತೆ ಕುತ್ತಿಕೊಂಬರೆ ಕಾಣೆನಲಗನು (ಕೌಶಿರಾ. ೧೭-೫೪). **೨.** ಸೆಕ್ಕಿಕೊಳ್ಳು ; ತುರುಕಿಕೊಳ್ಳು : ರಾಮಪ್ಪ ಅದನ್ನು ತನ್ನ ಸೊಂಟದಲ್ಲಿ ಕುತ್ತಿಕೊಂಡು ಧೈರ್ಯವಾಂತ (ಒಡ್ಡಿ ಉ. ೨೫).

[ದೇ. ‖ ತಮಿ. ಕುಜ್ಜು ; ಮಲ. ಕುತ್ತು ; ಕೊಡ. ಕುತ್ತ್]

**ಕುತ್ತು₂** (ನಾ). ಬಡಿತ ; ಹೊಡೆತ ; ಏಟು ; ಪೆಟ್ಟು : ಒಡಲೊಳ್ ಚಮ್ಮಟಿಗೆಗುತ್ತುಗಳುಮಂ ಎಂತು ಸೈರಿಸಿದೆ (ಕಾದಂಉ. ೭೩೧). 'ಅಳ್ಳೆ ಗುತ್ತು,' 'ಮೊನೆಗುತ್ತು' ಪರಾ. [< ಕುತ್ತು₁]

**ಕುತ್ತು₃** 'ಕುತ್ತ' ನೋ.

**ಕುತ್ತು₄** (ನಾ). ಕುಜು ಎಂಬುದಕ್ಕೆ ಸಮಾಸದಲ್ಲಿ ಬರುವ ಆದೇಶ ರೂಪ. 'ಕುತ್ತೆಸಟಿ' ಪರಾ. [< ಕುಜು₂]

**ಕುತ್ತುಂಗಱಿ** (ನಾ). **೧.** ಬಡಿಯುವ ಗರಿ; ಬೀಸುವ ರೆಕ್ಕೆ : (ಕ). **೨.** ಚುಚ್ಚುವ ಗರಿ, —ರೇಕು, —ದಳ : ವಿದ್ಯಾಧರ ವಧೂಜನದ ಸೋರ್ಮುಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಱಿಯ ತುಱುಂಗಲುಮಂ (ಪಂಪಾಭಾ. ೨-೧೩ ವ) ; ಕೇದಗೆಯ ಕುತ್ತುಂಗಱಿಗಳಂ ಕುತ್ತಿ ಕೇಶದ ಕೊನೆಯೊಳ್ ಕೇಸರದ ಕಿಸುವುಡಿಯಂ ಕೆದಱಿ (ಅರ್ಧನೇ. ೫-೫೫ ವ) ; ತನ್ನ ಬೆಳ್ಳೆಳಗನುಗುಳ್ವ ಸೆಳ್ಳುಗುರೆಂಬ ಪೊಂಗೇದಗೆಯ ಕುತ್ತುಂಗಱಿಗಳ್ ಪತ್ತೆಸಾರ್ಚಿ ಪಂತಿಗೊಳಿಸುವಿನೆಗಂ (ಅನಂಪು. ೬-೬೯ ವ) ; ಎತ್ತುಂಗೋಲ್, ಕುತ್ತುಂಗಱಿ, ಪೊತ್ತುಂಗೊರಡು, ಪುಟ್ಟುಂಗುರುಡಂ (ಶಮದ. ೧೭೦ ಪ್ರಯೋ) ; "ಗಱಿಗಟ್ಟಿದ ಈಟಿ" (ಶಮದ. ನ. ೧೬೧ ಅಡಿಟಿ). **೩.** ಕೇದಗೆಯ ಎಸಳಿನ ಆಕಾರದ ಒಂದು ಆಭರಣ : ಹಂಸತಿಳಕದ ಪೆಱೆಯ ಕುತ್ತುಂಗಱಿಯ ಮತ್ತಂ ಪಲತೆಱದ ಪೆಸರ ಪಚ್ಚಮಂ ಸಮೆದು (ಮಲ್ಲಿಪು. ೬-೮೦) ; ತಿಳಕದ ಹಂಸತಿಳಕಮುಮಂ ಕುರವಕದ ಕುತ್ತುಂಗಱಿಯುಮಂ ಮಾಂದಳಿರ ಪೊಂದಳಿರುಮಂ (ಚಂದ್ರಪು. ೭-೧೧೪ ವ). [ಕುತ್ತು₁ + ಗಱಿ]

**ಕುತ್ತುಂಗುಳಿ₁** (ನಾ). ಹೊಡೆಯುವುದೇ ಶೀಲವಾಗಿ ಉಳ್ಳವನು; ಬಡಿಯುವವನು ; ಹಿಂಸಕ : ಗುಳಿಪ್ರತ್ಯಯಕ್ಕೆ ಆಟಂಗುಳಿ . . . ಕುತ್ತುಂ [ಪಾಠಾಂ. ತ್ತಂ]ಗುಳಿ (ಶಮದ. ೨೦೨ ಪ್ರಯೋ).

[ಕುತ್ತು₁ + -ಕುಳಿ₃]

**ಕುತ್ತುಂಗುಳಿ₂** 'ಕುತ್ತಂಗುಳಿ' ನೋ.

**ಕುತ್ತುಂಬಿತ್ತಿ,** ಕುತ್ತುವಿತ್ತಿ (ನಾ). ಒಂದು ಬಗೆಯ ವೃತ್ತಿ (?) : ಜೀಮರಸಂ . . . ಪಲವು ಬಾಡಂಗಳಂ ಕುತ್ತುಂಬಿತ್ತಿಯನನುಗುಜೀವಿತ ದಿನಾಳುತ್ತವಿರೆ (ಎಇ. XVI, ೮೩-೬ ; 1067) ; ಕುತ್ತುಂಬಿತ್ತಿ ಭತ್ತಗಾವೆಯೊಳಗಾಗಿ ಬೆಟ್ಟಿಲವೆರಡಱನೂಱುಮಂ . . . ಆಳುತ್ತಮಿರ್ದು (ಎಇ. XVIII, ೧೯೧-೫ ; 1104).

**ಕುತ್ತುವಿತ್ತಿ :** ಸರ್ವಾಯ ಶುದ್ಧಿಯಾಗಿ ಆ ನಾಡುವಟ್ಟದೊಳಗಲ್ಲದೆ ಕುತ್ತುವಿತ್ತಿಯಾಗಿ ಸರ್ವಬಾಧಾ ಪರಿಹಾರವಾಗಿ ಕಟ್ಟುಗುತ್ತಿಗೆ ಪಿಂಡದಾನವಾಗಿ (ಎಕ. XII, ಚಿಕ್ಕನಾ. ೨-೧೩ ; 1261) ; ಅಂತು ನಾಡುವಡವಲ್ಲದೇ ಕುತ್ತುವಿತ್ತಿಯಾಗಿ ಕಟ್ಟುಗುತ್ತಗೆ ಪಿಂಡಾದಾನ ಸರ್ವಬಾಧಾಪರಿಹಾರವಾಗಿ (ಎಕ. XV, ಬೇಲೂರು. ೨೪೮-೬೭ ; 1278). [?]

**ಕುತ್ತುಕೋವಿ** (ನಾ). ಮದ್ದನ್ನು ಕುತ್ತಿ ಹೊಡೆಯುವ ಕೋವಿ ; ಗುಂಡನ್ನು ಹಾರಿಸುವ ಬಂದೂಕು ; ತೋಪು ; ತುಬಾಕಿ : "ಹಾರಿಸುವ ತುಬಾಕಿ" (ಗಂಗಾಮು. ೪೯). [ಕುತ್ತು₁ + ಕೋವಿ₁]

**ಕುತ್ತುಗೆ** (ನಾ). **೧.** ಹೊಡೆತ; ಬಡಿತ. **೨.** ಪೆಟ್ಟು ತಿಂದ ಸ್ಥಿತಿ: (ಕ). **೩.** ತಗ್ಗಿಸುವಿಕೆ ; ಬಾಗುವಿಕೆ. 'ತಲೆಗುತ್ತುಗೆ' ಪರಾ.

[ಕುತ್ತು₁ + -ಗೆ]

**ಕುತ್ತುಗೋಲು** (ನಾ). ಕಮ್ಮಾರರು ಉಪಯೋಗಿಸುವ ಕಬ್ಬಿಣದ ಕೋಲು ; ಬೆಸೆಗೋಲು ; ತೋರುಗೋಲು : ಕಮ್ಮಾರನು ಕುತ್ತುಗೋಲಿನಿಂದ ಕುತ್ತಿ ಬಡಿಯಬೇಕಾದ ಸ್ಥಳವನ್ನು ತೋರಿಸುತ್ತಾನೆ (ರೂಢಿ). [ಕುತ್ತು₂ + ಕೋಲು₁ (< ಕೋಲ್₁)]

**ಕುತ್ತುದಲೆ** (ನಾ). ಬಾಗಿದ ತಲೆ ; ಕೆಳಮುಖವಾದ ತಲೆ ; ಕುಸಿದ ತಲೆ: ಬಲಿದ ಭೀತಿಯ ಕುತ್ತುದಲೆಗಳಲಿಳೆಯಪತಿಗಳು ಸತಿಯ ಬಯ್ಯುತ ಮುಳಿಯುತಿರ್ದರು (ಜೀವಂಷ. ೯-೧೮) ; ಅಧರ್ಮದ ಕುತ್ತುದಲೆ ನೆಗಹಿದುದು ಸತ್ಯದ ಬಿತ್ತು ಹುರಿದುದು (ಕುವ್ಯಾಅ. ೨೧-೬೯).

[ಕುತ್ತು₁ + ತಲೆ₁]

**ಕುತ್ತುನವಿರ್** (ನಾ). ನಿಮಿರಿದ ನವಿರು ; ಪುಳಕಗೊಂಡ ರೋಮ : ವ್ಯಾಲಂಬದಿಂ ಮೆಲ್ಲನೊಲ್ದೊತ್ತುತ್ತುಂ ಪರೆದಿರ್ದ ಕುತ್ತುನವಿರಂ ದಿಗ್ಭಿತ್ತಿಯಂ ಬೆರ್ಚೆ ನೋಡುತ್ತುತ್ತುಂಗ ನಿತಂಬೆ ಬಂದಳಿರುಳೊಳ್ ಜಾರೋಪಭೋಗಾಂತದೊಳ್ (ಸೂಕ್ತಿಸು. ೮-೧೬೪). [ಕುತ್ತು₁ + ನವಿರ್]

**ಕುತ್ತುಪೆನ** (ನಾ). ಜಗಳ; ಹೋರಾಟ ; ಕದನ (?): "ಕು[ಪಾಠಾಂ. ಕ]ತ್ತುಪೆನಂ = ಬೆಗಳಂ (ಜಗಳಂ)" (ಶಮದ. ಪರಿ. ೨). [?]

**ಕುತ್ತುಮೇಳಿ** (ನಾ). (ಕರಾ) ಗುಳವನ್ನೂ ಈಸನ್ನೂ ಜೋಡಿಸುವ ಚಿಕ್ಕ ಅಡ್ಡಕೋಲು; ಕುಳಮೇಣಿ. [ಕುತ್ತು? + ಮೇಳಿ (< ಮೇಣಿ)]

**ಕುತ್ತುರಿಸು** (ಕ್ರಿ). (?) : ಪರಿ ಮುರಿದಿಟ್ಟು ಕಟ್ಟು ಸರಿಯಂ ಹೊದಱಂ ಪುಗಿಸೆರ್ಬಾನಟ್ಟು ನಿಲ್ ಸರಳಿಸಲಿತ್ತು ಕುತ್ತುರಿಸುಗಂ ಕುಳನುರ್ಕುಳಿ ದಂದವುಂಕಿ ಪೆರ್ದೆಱೆಯೊಳಡಂಗಿ ಸಂದಣಿಸೆ ಸಾ × × ಸು ಸಾರೆನುತಿರ್ಪ ಬೇಡರುಬ್ಬರ ಕಿರದೊಂದನೊಂದೆಡವುತಾಕುಳವಾಯ್ತು ಮೃಗೀ ಮೃಗವ್ರಜಂ (ಮಹಾನೇ. ೨-೧೩). [? + -ಇಸು₃]

**ಕುತ್ತುರು** 'ಕುತ್ತುಱು' ನೋ.

**ಕುತ್ತುರೆ** 'ಕುತ್ತಱಿ' ನೋ.

**ಕುತ್ತುವಡೆ** (ಕ್ರಿ). ಪೆಟ್ಟು ಪಡೆ ; ಏಟು ತಿನ್ನು : ನನೆಯಂಬಂ ಪಿಡಿಗಿತ್ತು ಕುತ್ತುವಡೆದಾ ಕಾಮಾರ್ತನಂ ತನ್ನ ನಚ್ಚಿನ ಬಾಳಿಂ ಮುಳಿದಟ್ಟಿ (ಅಜಪು. ೬-೨೮) ; ಕುತ್ತುವಡೆದಂತೆ ನೊಂದು (ಅರ್ಧನೇ. ೫-೭ ವ).

[ಕುತ್ತು₂ + ಪಡೆ₁]

**ಕುತ್ತುವಾರೆ** (ನಾ). ತಿವಿಯುವ ಹಾರೆ ; ಕುತ್ತುವ ಅಂಕುಶ : ಕುತ್ತುವಾರೆಯ ಬಗೆಯದಾನೆಗಳೆತ್ತ ಮುರಿದವು ಸಿಂಹನಾದಕೆ ಮತ್ತಗಜ ಮೊಗದಿರುಹಿದವು (ಕುವ್ಯಾಗ. ೨-೩೮). [ಕುತ್ತು₁ + ಆರೆ₃]

**ಕುತ್ತುವಿತ್ತಿ** 'ಕುತ್ತುಂಬಿತ್ತಿ' ನೋ.

**ಕುತ್ತುಸಿರು,** ಕುತ್ತುಸುರು (ನಾ). ಮೇಲುಸಿರು ; ಏದುಸಿರು : ಕುತ್ತಿಗೆಯ ಮೇಲೆ ಅತ್ತ ಇತ್ತ ಎರಡು ಮೃತಪಶುಗಳು ಬಿದ್ದಿದ್ದು ನಡುವೆ ಅರ್ಕ ಸಿಕ್ಕು ಕುತ್ತುಸಿರು ಬಿಡುತ್ತಿದ್ದಿತು (ಬಂಗಾಹೆ. ೭೧) ;

ಸೂರ್ಯನನ್ನು ನೋಡುತ್ತ ಕುತ್ತುಸಿರು ಬಿಡುತ್ತಿದ್ದಾಳೆ (ಬನಸಿ. ೧೭೮); ಕಟ್ಟಳಲಿನ ಕುತ್ತುಸಿರು (ಬೆಳುಮ. ೨೪೮). **ಕುತ್ತುಸುರು :** ನಮ್ಮ ನೆತ್ತಿಗಳನ್ನೊತ್ತಿ ಹಿಚುಕುತ್ತಿರಲು ಮಾಕಾಲ ಬಂದು ಕುತ್ತುಸುರನಾಡಿ ಸುವೆವಜ್ಞರೇಕೆಂದು (ಅರಳು. ೩೬೦-೧೨); ಇಷ್ಟು ಕುತ್ತುಸುರು ಬಿಟಕೋತ ಯಾಕ ಮಾತಾಡ್ತೀರಿ (ಹುಚ್ಚಾಟ. ೧೨೭).

[ಕುತ್ತು$_4$ + ಉಸಿರು$_2$ (< ಉಸಿರ್$_2$)]

**ಕುತ್ತುಸುರು** 'ಕುತ್ತುಸಿರು' ನೋ.

**ಕುತ್ತುಱ್,** ಕುತ್ತುರು, ಕುತ್ತುಱು (ನಾ). ಪೊದರು; ಪೊದೆ; ಕಂಟಿ : "ಕುತ್ತುಱಿಂದು ಪೊದಱ್" (ಕಶಸಾ. ೫-೮೦); "ಕುತ್ತುಱಿಂದೆನೆ ಪೊದಱುಂ" (ಕವಿಕಂ. ೫೬); ಕುಱಿಯುಂ ಕುತ್ತುಱುಂ ಬೆಟ್ಟಮುಂ ಘಟ್ಟಮುಂ (ಪಂರಾಮಾ. ೧-೮೧ ವ); ದಿಂಟಿಯ ದರಿಯ ಕುಱಿಯ ಕುತ್ತುಱ ಕುಱುವಳ್ಳಮಂ ಕಂಡದಱ ಬಱಿವಿಡಿದು (ಲೀಲಾವ. ೬-೪೦); ಕುತ್ತುಱೊಳ್ ಪುದುಗಿರ್ದ ಪುಲಿ ಪೊಱಮಡಲ್ ಕಂಡು (ಜೈಮಿಭಾ. ೨೮-೪೮); ಬಲೆಗಳನೊಡ್ಡಿಯುಂ ಕುತ್ತುಱಂ ಸೋವಿಯುಂ (ರಾಮಾಶ್ವ. ೮೪-೪). **ಕುತ್ತುರು :** ಆಗ ಕುತ್ತುರೊಳಗೆ ಹುದುಗಿದ್ದ ಹುಲಿಯೊಂದು ಹೊರಮುಟ್ಟಿತು (ಬದುರಿ. ೧೫೮). **ಕುತ್ತುಱು :** ಕುತ್ತುಱಾಗಿರ್ದ ಹೆಮ್ಮೆಳೆಗಳಂ ಸುಡುತ (ಹಚಕಾ. ೧೦-೫); ಈಳೆಯಿಟ್ಟೆಡೆಯುಂ ತಿಲಕದ ತೆರಳ್ಕೆಯುಂ ಅಸುಗೆಯ ಕುತ್ತುಱುಂ (ಶಾಂತೀಶ್ವ. ೧೦-೭೮ ವ); ಕೊಳ್ಳ ಕುತ್ತುಱು ಹೆಮ್ಮರಂಗಳು ಪಲ್ಲವಿಸಿ (ಪ್ರಭುಲೀ. ೭-೪೩); ಬಿಡದೆ ಕುತ್ತುಱುಗಳಂ ಸೋವಿದರ್ತೀವಿದರ್ ಗಿಡಗಳ ಪೊದರ್ಗಳಿಂದೆಬ್ಬಿಸಿರುಬ್ಬಿಸಿದರ್ (ಜೈಮಿಭಾ ೨೮-೪೭). [?]

**ಕುತ್ತುಱು** 'ಕುತ್ತುಱ್' ನೋ.

**ಕುತ್ತುಱುಗುಱಿ** (ನಾ). ಪೊದರು ಬೆಳೆದ ಗುಣಿ; ಪೊದೆ ಬೆಳೆದ ಹಳ್ಳ : ಮೊಲೆ ಪೊಣರ್ವೆಟ್ಟು ರೋಮಲತೆ ಬಟ್ಟೆ ನಿತಂಬಮಿಱುಂಬು ನಾಭಿ ಕುತ್ತುಱುಗುಱಿ (ಕಾವ್ಯಸಾ. ೬೧೨ ಶೂದ್ರಕ).

[ಕುತ್ತುಱು (< ಕುತ್ತುಱ್) + ಕುಱಿ$_3$]

**ಕುತ್ತುಱುಗೊಳ್** (ಕ್ರಿ). ಗುಂಪಾಗಿ ಬೆಳೆ; ಪೊದರಾಗು : ಕುತ್ತುಱುಗೊಂಡ ಗುಲ್ಮಂಗಳ ನಡುವಿನೊಳ್ ಕಣ್ಬರಿಗಳ ಸಾಲ್ ಸಿಲ್ಕುತ್ತಿರೆ (ಕುಸುಮಾ. ೧೪-೨೯ ವ). [ಕುತ್ತುಱು (< ಕುತ್ತುಱ್) + ಕೊಳ್$_1$]

**ಕುತ್ತುಱುವೆಳೆ** (ನಾ). ಪೊದರಾಗಿ ಬೆಳೆದ ಮೆಳೆ; ಕಂಟಿ ಮೆಳೆ : ಬೆತ್ತ ಬಿದಿರು ಮುಳ್ಳುತ್ತಕ ಕಗ್ಗಲಿ ಕತ್ತಲಿ ಕಳ್ಳಿ ಕಾಱಿಗಳ ಕುತ್ತುಱುವೆಳೆಗಳಿಂದಿರದಾ ಕಾನನವಿತ್ತುದರ್ಗುವನಾ ಬಲಕೆ (ಕುರಾಸಾಂ. ೨೭-೫೭).

[ಕುತ್ತುಱು (< ಕುತ್ತುಱ್) + ಮೆಳೆ]

**ಕುತ್ತೆ** (ನಾ). ರೋಗವುಳ್ಳವಳು; ಕಾಯಿಲೆ ಇರುವವಳು. 'ಬಟ್ಟೆಗುತ್ತೆ' ಪರಾ. [ಕುತ್ತ$_2$ + -ಎ$_2$]

**ಕುತ್ತೆರ್ದೆ** (ನಾ). ಕಿರಿದಾದ ಎದೆ; ಚಿಕ್ಕ ಎದೆ: ಎನ್ನ ಕುತ್ತೆರ್ದೆಗೊಳಗಕ್ಕೆಮು ಖರ್ವತನುವ ಕರುಣಾ ಹಸ್ತಂ (ವಸ್ತುವಂ. ೪-೩೧).

[ಕುತ್ತು$_4$ + ಎರ್ದೆ]

**ಕುತ್ತೆಸರ್,** ಕುತ್ತೆಸರು (ನಾ). ೧. ಕುದಿಯುವ ನೀರು; ಮರಳುವ ನೀರು : ನೀರಜಲಿಂ ಸರಿತ್ತಟಾಕದ ಶಫರಾಳಿ ಕುತ್ತೆಸರ ಮೀನವೊಲಿ ರ್ದುದು (ಕಾವ್ಯಾಸಾ. ೭೪೭). **ಕುತ್ತೆಸರು:** ೨. (ಅಲಂ) ಒಳಗುದಿ; ಸಂಕಟ; ಸಂತಾಪ: ನಿರಾಶೆಯ ಕಾವಳ ಬಂದು ಮುತ್ತಿ ಕುತ್ತೆಸರು ಪಡುವಂತಾಯಿತು (ವೈನಿ. ೧೭೦). [< ಕುದಿ$_1$ + ಎಸರ್]

**ಕುತ್ತೆಸರು** 'ಕುತ್ತೆಸರ್' ನೋ.

**ಕುತ್ತೆಸಳ್** 'ಕುತ್ತೆಸಱ್' ನೋ.

**ಕುತ್ತೆಸಳು** 'ಕುತ್ತೆಸಱ್' ನೋ.

**ಕುತ್ತೆಸಱ್,** ಕುತ್ತೆಸಳ್, ಕುತ್ತೆಸಳು (ನಾ). ಸಣ್ಣ ಎಸಳು; ಚಿಕ್ಕ ದಳ, —ರೇಕು : ಕಿಱುಮುಡುಗೊಂಡ ಬಂಡಿನೊಳಗೀಸಿ ಪೊದಱ್ದಿಡಸಿರ್ದ ಕುತ್ತೆಸಱುವ ದೊಳೆಯ್ದೆ ಮೆಯ್ಗರೆದು (ಚಂದ್ರಪ್ರ. ೭-೬೦); ಓದುವುದಲರಾದ ಕೇದಗೆಯ ಕುತ್ತೆಸಱೋಲೆಯನೆತ್ತಿ ನಿಟ್ಟೆಸಱ್ವಳಿಗೆಯಾಗೆ ಭೃಂಗ ವಿಟರಾಜಿ ಮನೋಜನ ವೀರವೃತ್ತಿಯಂ (ಅನಂಪು. ೧-೯೧); ಕುತ್ತೆಸಱಿಂ ತೀವಿದ ಪೊಂಗೇದಗೆಯಿಂ (ರಾಮಾಶ್ವ. ೫೩-೨೧).
**ಕುತ್ತೆಸಳ್ :** ಕಿತ್ತೀಳೆ, ಕುತ್ತಳೆ, ಕುತ್ತೆಸಳ್ (ಶಮದ. ೧೮೦ ಪ್ರಯೋ).
**ಕುತ್ತೆಸಳು :** ದಳಪತಿ ಕೆಂಪಿನಡಣದೆಲೆಯ ಕುತ್ತೆಸಳೂಆಡ್ಡಾಯುಧವಾಗೆ (ವರ್ಧಚ. ೬-೭೯). 'ನಿಟ್ಟೆಸಱ್' ಪರಾ. [ಕುತ್ತು$_4$ + ಎಸಱ್]

**ಕುತ್ತೆಸಱೋಲೆ** (ನಾ). ಸಣ್ಣ ಎಸಳುಗಳ ಓಳಿ, —ಸಾಲು : ನೀಳ್ದ ಸೆಳ್ಳುಗುರ್ಗಳ ಬೆಳ್ಪು ಕೇದಗೆಯ ಕುತ್ತೆಸಱೋಳಿಯನೆತ್ತೆ (ಕಬ್ಬಿಕಾ. ೪೦).

[ಕುತ್ತೆಸಱ್ + ಓಳಿ]

**ಕುತ್ತೋಟಿ** (ನಾ). (ಕರಾ) ರೋಗಿ. [← ತುಳು. ಕುತ್ತಟ, ಕುತ್ತೊಟ]

**ಕುತ್ತೋಲೆ** (ನಾ). ಸಣ್ಣ ಓಲೆಗರಿಯ ಚೂರು, —ತುಂಡು (?) : ಇದಕ್ಕೆ ತಗುಲಿಸಿರುವ ಕುತ್ತೋಲೆಮುರಿಯೂ ಧೂಳಿಯಿಡಿದ ಹಳೆಯವು (ಮಂತ್ರಶ. ೧೫-೧೮). [ಕುತ್ತು$_4$ + ಓಲೆ]

**ಕುತ್ನಿದಿಂಬು** (ನಾ). ಕುತನಿಯಿಂದ ಮಾಡಿದ ದಿಂಬು; ಸಾಟೀನು ದಿಂಬು : ಸ್ವಲ್ಪಲಿಂಗಕೆ ಕುತ್ನಿದಿಂಬಿನ ತಲ್ಪ (ಬಿಜ್ಜಪು. ೫೪-೨೦).

[ಕುತ್ನಿ (< ಕುತನಿ) + ದಿಂಬು]

**ಕುತ್ರಾಸು** (ನಾ). ಲಗಾಮು; ಕಡಿವಾಣ (?) : ಆಭರಣದ ಲೆಖ್ಖಾ -೬ ಪಟ್ಟಾದ ಮೂಲೆ ಹೂವು ೧ ಕೊಂಡಿಮಳೆ. ೨. ಕುತ್ರಾಸು ಹಗ್ಗ ೧ ಇದಕ್ಕೆ ಘಂಟೆ ೧ ನಾಲಗೆ (ಎಕ. XIV, ನಂಜನ. ೨೯೩; 1847). [?]

**ಕುತ್ಸನ** (ನಾ). ಜರೆಯುವಿಕೆ; ನಿಂದಿಸುವಿಕೆ; ದೂಷಣೆ: "ಕುತ್ಸನವೆಂದರೆ ಜರೆಯುವಿಕೆ" (ಹೊನುಗ. ೧೪೧). [ಸಂ.]

**ಕುತ್ಸಿತ** (ಗು). ೧. ದೂಷಿತವಾದ; ನಿಂದಿಸಲ್ಪಟ್ಟ; ತೆಗಳಿಕೆಗೆ ಗುರಿಯಾದ: ಕುತ್ಸಿತಮಿದೆಂಬಿನಂ ಪ್ರತಿವತ್ಸರಮಿಾ ಕ್ರಮದೆ ಶಿಶುಗಳಾಱುಮನಟ್ಟಿದಂ (ಜಗವಿ. ೨-೫೫). (ನಾ). ೨. ದೂಷಣೆ; ನಿಂದೆ; ಚಾಡಿ : "ಪಿಸುಣೆಂದೆನೆ ಕುತ್ಸಿತಂ" (ಕವಿಕಂ. ೨೫೫); ಬಿಸುಟು . . . ಕುಮಾರ್ಗ ಕುತ್ಸಿತ ಕುಭಾಷ್ಯಾದಿ ದೋಷಂಗಳಂ (ಸುಕುಮಾ. ೧-೪೬). ೩. ನಿಂದ್ಯವಾದ ವಸ್ತು; ಕೆಟ್ಟ ಪದಾರ್ಥ : ಕಾಕೋಳೂಕ ಸೃಗಾಲ . . . ಖರಮುಖಿಂಗಳನನುಕರಿಸುವ ಮಹಾಭೀಭತ್ಸು ಕುತ್ಸಿತೋತ್ಪತ್ತಿಸ್ಥಾನಂಗಳೊಳ್ (ಸುಕುಮಾ. ೧೧-೪೧ ವ). ೪. ದುಷ್ಟ; ನೀಚ; ಕೆಡುಕ; ಹೀನ : "ಕುತ್ಸಿತನೆನಲ್ ಕೆಡುಕನಕ್ಕು" (ಮಂಗರಾ. ೭೧-೧೭); ಸಮಸ್ತ ಮುನಿಜನದ ನಡುವಿತ್ತಿಳೆಯನಿಲ್ಲೆಂದು ನುಡಿದು ಹುಸಿವಂತಾಗಿ ಕುತ್ಸಿತನೆ ನೀನೆಂದನು (ಹಚಕಾ. ೮-೩೪). [ಸಂ.]

**ಕುತ್ಸಿತದೃಷ್ಟಿ** (ನಾ). ಕೀಳು ನೋಟ; ದೋಷಯುಕ್ತವಾದ ದೃಷ್ಟಿ; ಕೆಟ್ಟಭಾವನೆ : ಕೆಲರು ಕುನಸಿನಿಂದ ಕುತ್ಸಿತದೃಷ್ಟಿಯವರು ಆಗಿದ್ದರೂ (ಕರ್ಣಾಟ. ೩೨೬). [ಕುತ್ಸಿತ + ದೃಷ್ಟಿ]

**ಕುತ್ಸಿತಧರ್ಮ** (ನಾ). ಕೀಳಾದ ಧರ್ಮ; ಹೀನವಾದ ಆಚಾರ; ನಿಂದಾಸ್ಪದವಾದ ನಡವಳಿ: ಧರ್ಮಕ್ಕೆ ಅಡ್ಡಿಬರುವುದು ಕುತ್ಸಿತಧರ್ಮ (ವಚಭಾ. ೧೪೯). [ಕುತ್ಸಿತ + ಧರ್ಮ]

**ಕುತ್ಸಿತಯೋನಿ** (ನಾ). ಹೀನಯೋನಿ; ನೀಚಜನ್ಮ; ಪಶು, ಪಕ್ಷಿ, ಕ್ರಿಮಿ ಮೊದಲಾದ ತಿರ್ಯಗ್ಜಂತುಗಳ ಗರ್ಭ : ಮತ್ಸರಮಂ ಜಿನಮತದೊಳ್ ವತ್ಸಲತೆಯನುಂಟುಮಾಡಿ ಕುಮತದೊಳಮವರ್ ಕುತ್ಸಿತಯೋನಿಗಳೊಳ್ . . . ತಿರಿತರುತಿರ್ದರ್ (ಪಂರಾಮಾ. ೧೫-೪೧).

[ಕುತ್ಸಿತ + ಯೋನಿ]

**ಕುತ್ಸಿತತ್ವ** (ನಾ). ಕೀಳುತನ ; ನೀಚತೆ : ಕ್ಷುಧ್ರಾದಿ ಬಹುದುಃಖೋದ್ರೇಕಮುಂ ಕುತ್ಸಿತತ್ವಮುಂ (ಸುಕುಮಾ. ೫-೩೫). [ಸಂ.]

**ಕುತ್ಸಿತವೃತ್ತಿ** (ನಾ). ಕೀಳಾದ ವೃತ್ತಿ ; ಹೀನಕಾರ್ಯ : ಎನ್ನನಿವಂ ಕುತ್ಸಿತವೃತ್ತಿ ಕಷ್ಟಮಿದು ಬೇಡೆಂದೆಂಗುಮೋ (ಕಾದಂಪೂ. ೮೬೨). [ಕುತ್ಸಿತ + ವೃತ್ತಿ]

**ಕುತ್ಸಿತಾಚಾರ** (ನಾ). ೧. ಕೆಟ್ಟ ಆಚಾರ ; ಹೀನವಾದ ನಡತೆ. ೨. ಕೆಟ್ಟ ನಡತೆಯುಳ್ಳವನು ; ದುರಾಚಾರಿ : ಕುಶೀಲ ಕುತ್ಸಿತಾಚಾರ ಕುವೇಷ ಕುದೃಷ್ಟಿಗಳುಂ (ಆದಿಪು. ೬-೯೧ ವ). [ಕುತ್ಸಿತ + ಆಚಾರ]

**ಕುತ್ಸಿತಾಹಾರ** (ನಾ). ಕೆಟ್ಟ ಆಹಾರ ; ಹೀನವಾದ ಆಹಾರ : ಅಲ್ಪಾಹಾರದಿಂದಲೂ ಕುತ್ಸಿತಾಹಾರದಿಂದಲೂ ರೋಗವು ತಲೆದೋರಿ ಕೆಲಸ ಮಾಡುವುದಕ್ಕೂ ಶಕ್ತಿಯಿಲ್ಲದೆ (ಚೆನ್ನಜೀ. ೬೮). [ಕುತ್ಸಿತ + ಆಹಾರ]

**ಕುತ್ಸಿತೆ** (ನಾ). ಕೆಟ್ಟವಳು ; ದುಷ್ಟೆ ; ನೀಚೆ : ಕುಟಿಳೆ ಕುಮಾರ್ಗ್ಗೆ ಕುತ್ಸಿತೆ . . . ಕಷ್ಟೆಯುಂಬಟಮುಟಕಾತ್ರ್ತಿಯಸ್ವರ್ತಿಯರೆ (ಸೌಇಇ. XX. ೨೪೮-೫೧ ; 1228) ; ಕುಪಿತೆ ಕುತ್ಸಿತೆ ಕುಹಕೆ ಕುಜೆ ಕಡ್ಡೆ ಕುಲಗೇಡಿ . . . ತಾಮಸಿಯೆನಿಪ ವನಿತೆಯರ (ಜೈಮಿಭಾ. ೫-೬೧). [< ಸಂ. ಕುತ್ಸಿತಾ]

**ಕುತ್ಸೆ** (ನಾ). ನಿಂದೆ ; ದೂಷಣೆ ; ತೆಗಳಿಕೆ. [ಸಂ. ಕುತ್ಸಾ]

**ಕುಥ** (ನಾ). ೧. ಆನೆಯ ಬೆನ್ನಮೇಲೆ ಅಲಂಕಾರಕ್ಕಾಗಿ ಹೊದಿಸುವ ಬಣ್ಣದ ಬಟ್ಟೆ ; ಚಿತ್ರದ ಕಂಬಳಿ ; ಜೂಲು : "ಕುಥಮಾಸ್ತ್ತಾರಣಂ" (ವಸ್ತುಕೋ. ೮೮-೩೬) ; "ಮಕ್ಕುದಂ ಕುಥಂ ವರ್ಣನಿವರ್ತಮೆನೆ ಮಗ್ಗುಲೆನಿಸಿಕ್ಕು" (ಮಂಗರಾ. ೬೧-೧೬). ೨. ಬಣ್ಣದಬಟ್ಟೆ ; ಬಣ್ಣದ ಕಂಬಳಿ : ಮಡಿಸಿಟ್ಟಾಂತ ಕುಥಂಗಳಂ ನೃಪವರಂಗಿತ್ತುಂ ಭಟಂ ಕಾಣ್ಕೆಯಂ (ಮೈಸೂಮ. ೬-೩೮). ೩. ಒಂದು ಜಾತಿಯ ಹುಲ್ಲು ; ಕುಶ ; ದರ್ಭೆ : "ಬರ್ಹಿಃ, ದರ್ಭಃ, ಕುಥಃ, ಕುಶಃ – ಈ ೪ ಕುಶೆ" (ಹಲಾಯು. ೩೨-೩೬) ; "ಬರ್ಹಿಃ ಕುಶಂ ಕುಥಮೆನಲು ದರ್ಭೆಯದು" (ಮಂಗರಾ. ೩೪-೯). [ಸಂ.]

**ಕುಥೆ** (ನಾ). = ಕುಥ : "ವರ್ಣಃ, ಪರಿಸ್ತೋಮಃ, ಕುಥಃ, ಕುಥಾ, ವಮತಂ –ಈ ೫ ಪರಿಸ್ತೋಮಮಂ" (ಹಲಾಯು. ೫೧-೧೫೩). [ಸಂ. ಕುಥಾ]

**ಕುದನಗರ** (ನಾ). ಒಂದು ಊರಿನ ಹೆಸರು : ಮಾರೆತ್ತಿಗಳ ಮಗನ್ ಘೊಲ ಆವನ್ ವಿಜಸಿತ್ರ್ತಿರಾ ಕಾಳೆಗದುಳ್ ಕುದನಗರುಳ್ ಎಱಿದು ಸರ್ಗ್ಗಪುಕ್ಕುದುನ್ (ಎಕ. X (s), ಚಿಂತಾಮ. ೧೬೬-೭; 8ನೆಯ ಶತ). [?]

**ಕುದರತ್ತು** (ನಾ). ೧. ದೈವಿಕ ಶಕ್ತಿ ; ಈಶ್ವರೀ ಶಕ್ತಿ. ೨. ಅದ್ಭುತ ಶಕ್ತಿ, —ಸಾಮರ್ಥ್ಯ : ಟೀಪುಸುಲ್ತಾನರು ಹಗೆತನದಲ್ಲಿ ಶಕ್ತಿಯಲ್ಲಿ ಕುದರತ್ತಿನಲ್ಲಿ ಸಹ ಯೇನಾದರೂ ಕಡಿಮೆ ಆಗಿ ಇರಲ್ಲಾ (ರಾಜೇಂದ್ರ. ೧೩೬). [← ಹಿಂ. ಮರಾ. ಕುದರತ್ ; ಅರ. ಕುದೂರತ್]

**ಕುದರಾಳೆ** (ನಾ). (ಕರಾ) ಉರಿಮಂಡಲ ಹಾವು ; ಕನ್ನಡಿ ಹಾವು. [?]

**ಕುದರ್ಶನ** (ನಾ). ೧. ಕೆಟ್ಟದೃಷ್ಟಿ, —ನೋಟ. ೨. ಕೆಟ್ಟ ಸಿದ್ಧಾಂತ ; ಅಪಸಿದ್ಧಾಂತವನ್ನೊಳಗೊಂಡ ಮತ, —ಶಾಸ್ತ್ರ : ಮರ್ದಿತಮದ ಕುದರ್ಶನ [ಪಾಠಾಂ. ಕುದರುಶನ] ವಾಚ (ಬಸವು. ೩೬-೯೧). [ಸಂ.]

**ಕುದಿ**$_1$ (ಕ್ರಿ). ೧. ಬೇಯು ; ಮರಳು ; ಶಾಖದಿಂದ ಉಕ್ಕು : "ಮನಸ್ತಾಪ ಪಚನಗಳೊಳೆಸೆಗು ಕುದಿ" (ಶಬ್ದಮಂ. ೯೯); ಲಲಾಟಂ ತಪತಪನಾಂಶುವಿಂ ಸರೋವರ ಜಲಮೋರಂತಿರೆ ಕಾಯ್ದೊಂಡದನೀರಂತಿರೆ ಕುದಿದತ್ತು ಪೊಳೆಯೆ ಜಲಚರನಿಕರಂ (ಆದಿಪು. ೧೧-೪೮) ; ಕಾಯ್ದ ಸರದೊಳ್ ಕೊಬ್ಬುದಿವಂತೆ ಕುದಿದುವನಿಮಿಷತತಿಗಳ್ (ಗದಾಯು. ೭-೨೧) ; ಅಶ್ರುಧಾರಾಳಿ ಕಪೋಲದೊಳ್ ಕುದಿದು ಬತ್ತಿದುದು (ಕಾವ್ಯಸಾ. ೫೪೯); ಉಕ್ಕಿದುದು ತನಿವೀರರಸ ಕುದಿದುಕ್ಕಿ ಹರಿದುದು ರೌದ್ರರಸ (ಕುವ್ಯಾಕ.೧೬-೨೭). ೨. (ಆಲಂ) ಮನಸ್ಸಿನಲ್ಲಿ ನೋಯು ; ಸಂಕಟಪಡು ; ದುಃಖದಿಂದ ತಳಮಳಗೊಳ್ಳು : "ಕುದಿ – ಸಂತಾಪೇ" (ಶಮಧಾ) ; ಇನ್ನೆಂತಕ್ಕುಮೊ ಪೇೞ್ ಬಿದಿಯೆಂದಂತರದೊಳ್ ಮಱುಗಿ ಕುದಿದು ಬೆದೆಬೆದೆ ಬೆಂದಂ (ಧರ್ಮಾಮೃ. ೧೧-೧೨೦) ; ನರಪರ ಸೇವೆಯೊಳ್ ಕುದಿಯದಿಂತು ಬರ್ದುಂಕಿದೆನ್ನೆ (ಪಂಪಾಶ ೨೩) ; ಹೆದಱಿ ಸಿರಿಯಾಳಂ ಹೃದಯದಲಿ ಬೆದಬೆದನೆ ಕುದಿವುತ್ತ (ಬಸವು. ೨೪-೯೬) ; ಅತ್ತಿಮಬ್ಬೆಯ ತಾಯ್ಗುರುಳು ಕುದಿಯಿತು (ದಾನಚಿಂ. ೧೫೬). ೩. (ಆಲಂ) ರೋಷದಿಂದ ಜ್ವಲಿಸು ; ಕೋಪದಿಂದ ಕೆರಳು : ರಥಮಂ ಪುದಿದು ಕುದಿದು ಬರೆ ಕೆಲರೆ ಭಟರ್ (ಶಾಂತಿಪು. ೯-೩೮) ; ಒಡನೆಯು ನಾಯಕಕರ್ಕ್ಕುದಿದು ತಾಗುಮೆ × × × ಮಬ್ಬುವಕ್ಕದೊಡ್ಡು ಪುಣ್ಬಡುವಿನವಿಟ್ಟುಸನ್ದುಸವ ಕಟ್ಟೞಿಂದಲ್ಲಿಗೆ ನೂಂಕಿ (ಎಕ. II, ೧೩೪-೪೮ ; 982). ೪. (ಆಲಂ) ತವಕಿಸು ; ಹಂಬಲಿಸು ; ತಾಪಪಡು : ಸರಸತಿಯನಬಲೆಯಂ ಗೋಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನಕ್ಕರಿಗನೆ (ಅಜಿಪು. ೧-೯೦) ; ಇನ್ನೆಲ್ಲಿಯದು ನೆಲ ನೆಱಿ ಕುದಿವ ಕುರುಡನ ಮಕ್ಕಳೀ ಕೊಳಲಿ (ಕುವ್ಯಾಕ. ೧೪-೫). ೫. ಬಹಳ ಗರ್ವಪಡು ; ಸೊಕ್ಕು ; ದುರಹಂಕಾರ ತಾಳು : ಕುದಿದುರ್ಕಲ್ವೇಡ ಮುನ್ನೆಮ್ಮನು ವಱಿಯದುದಾಸೀನದಿಂ ಕಾದಿಯಾಂ ಸೋಲ್ತುದ ಮೋಘಂ ಪೋಗು ಪೋಗು (ದಶಕು. ೨-೨೬). ೬. ಔಚಿತ್ಯವಿಲ್ಲದೆ ಮಾತನಾಡು ; ಗಳಹು ; ಹರಟು ; ಚಡಪಡಿಸು : ಮೋಱಿಯಿಲ್ಲ ಘುವಿಲ್ಲೊಳ್ಪಿಲ್ಲಜನಿಲ್ಲ ಪರತ್ರೆಯಿಲ್ಲ ಜೀವನುಮಿಲ್ಲೆಂದಱಿಯದೆ ಕೆಮ್ಮನೆ ಕುದಿವರ್ ತೆಜ[ತಱು] ವಲಿತನದಿಂದೆ ಬಾಯ್ಗೆವಂದಂತೆ ಕೆಲರ್ (ಧರ್ಮಾಮೃ. ೯-೪೬). ೫. ಅಸೂಯೆಪಡು ; ಹೊಟ್ಟೆಕಿಚ್ಚು ತಾಳು ; ಕರುಬು : ಭೀಮಸೇನನು ಮಹಾಬಲಿಷ್ಠನೆನಿಸಿಕೊಂಡದ್ದನ್ನು ನೋಡಿ ದುರ್ಯೋಧನನು ಹೊಟ್ಟೆಯಲ್ಲೇ ಕುದಿದುಕೊಳ್ಳುತ್ತಿದ್ದನು (ವಚಭಾ. ೨೭). [ದೇ. ‖ ತಮಿ. ಮಲ. ತುಳು. ಕೊದಿ ; ತೆಲು. ಕೊತ್ತು]

**ಕುದಿ**$_2$, **ಗುದಿ**$_1$ (ಕ್ರಿ). ೧. ನೆಗೆ ; ಹಾರು. 'ಕುದಿತ$_2$' ಪರಾ. **ಗುದಿ**$_1$: ೨. ಕಾಲಿನಿಂದ ಮೆಟ್ಟು, —ತುಳಿ : (ಕ).

ಕುದಿಕುದಿ (ದ್ವಿರುಕ್ತಿ): ಕುದಿಕುದಿದತ್ತಣಂ ಕುದುರೆ ನೂಜಜಿಳಾ ಬಲದಾನೆ ಪತ್ತು ತಾಗಿದುವೆನೆ ದೋಷಮಾ ಪಿರಿದು ಸಂಖ್ಯೆಯೊಳೇಕ ಬಹುತ್ವ ಸಂಗದಿಂ (ಕವಿರಾ. ೧-೧೨೦). [ದೇ. ‖ ತಮಿ. ಮಲ. ಕುದಿ]

**ಕುದಿ**$_3$ (ನಾ). ಮರಳುವಿಕೆ ; ತಳಪಳನೆ ಕಾಯುವಿಕೆ ; ಕುದಿತ : ಕೊಬ್ಬುದಿಯೆ ಮೇಗೆ ಸಿಡಿಲ್ದಗುಳಂತೆ ಕೂಡೆ ತತ್ತಱಗುದಿಯುತ್ತುಮಿರ್ಪ ಕುದಿಯೊಳ್ ಸಿಡಿದಲ್ಲಿಯ ಮುತ್ತುಗಳ್ (ಪಂಪಭಾ. ೧೧-೧೫೩) ; ಕುದಿ ಬರಲೊಯ್ಯನೆ ಮೇಲುರ್ಚಿದ ನೊರೆಯಂ ತೆಗೆದು ಬಿಸುಟು (ದಶಕು. ೧೨-೧೨೨) ; ಕುದಿಬಂದಾಗ ಕಮ್ಮನ ಹಾಲಹುಯಿದು (ಸೂಪಶಾ. ೧-೪೦); ಹಸಿವು ಏಸರೇರಿ ಕುದಿಬಂದು ಉಕ್ಕಿಹೋಗಲಿ (ಉಯ್ಯಾಲೆ. ೭೯-೫). ೨. (ಆಲಂ) ಸಂಕಟ ; ಸಂತಾಪ ; ವ್ಯಥೆ : "ಮನಸ್ತಾಪ ಪಚನಗಳೊಳೆಸೆಗು ಕುದಿ" (ಶಬ್ದಮಂ. ೯೯). ೩. ಹಂಬಲ ; ತವಕ. 'ಎದೆಗುದಿ$_2$' ಪರಾ. ೪. ಹೊಟ್ಟೆಕಿಚ್ಚು ; ಅಸೂಯೆ ; ಮತ್ಸರ. 'ಕುದಿಕತನ' ಪರಾ. ೫. ರೇಗುವಿಕೆ ; ರೋಷ ; ಆಕ್ರೋಶ. 'ಕುದಿತ' ಪರಾ. [< ಕುದಿ$_1$]

**ಕುದಿ**$_4$ (ನಾ). ೬. ಅವಧಿ ; ವಾಯಿದೆ. 'ಕುದಿಜ್ವರ' ಪರಾ. [← ತುಳು. ಕುದಿ]

**ಕುದಿಕ** (ನಾ). ಹೊಟ್ಟೆಕಿಚ್ಚಿನವನು ; ಅಸೂಯೆಪಡುವವನು. 'ಕುದಿಕತನ' ಪರಾ. [ಕುದಿ$_3$ + -ಕ$_2$]

**ಕುದಿಕತನ** (ನಾ). ೧. ಕುದಿಯುವ ಸ್ವಭಾವ; ಹೊಟ್ಟೆಕಿಚ್ಚು; ಮತ್ಸರ; ಅಸೂಯೆ: ಕಾಮ ಮೊದಲಿನಿಂದಂ ತನ್ನೊಳುದಯವೆಂಬುದ ನಱಿದು ಬಲ್ಲ ಭವನು ಕುದಿಕತನದಿಂ ಕೊಂದನದಕಾತನವರೊಳಾಂ ಕದನಮಂ ಕೈಗೆಯ್ಯದೇಗೆಯ್ವೆನು (ಮನೋವಿ. ೧-೧೧). ೨. ಅತ್ಯಾಶೆ; ದುರಾಶೆ: ದೇಶದೇಶಂಗಳೆಲ್ಲವ ತಿರುಗಿ . . . ಕುದಿಕತನದೆ ಆಸೆಗೆಯ್ದುದರಮಂ ಪೊರೆದು ಚರಿಪರ ಕಂಡು ಹೇಸಿ ನಸುನಗುತ (ಸಿದ್ಧೇಪು. ೨೨-೧೭೪). [ಕುದಿಕ + -ತನ]

**ಕುದಿಗಣ್ಣು** (ನಾ). ಕುದಿಯುತ್ತಿರುವ ಕಣ್ಣು; ಉರಿಗಣ್ಣು: ಕುದಿಗಣ್ಣೊಳಿನ್ನಾಳ್ದನ ಸುಟ್ಟು ನನಗೊಂದು ಬದುಕಿನ ತೆಜನ ಪೇಳ್ದಪಿರೇ (ಮೋಹತ. ೮-೩೫). [ಕುದಿ$_1$ + ಕಣ್ಣು (< ಕಣ್)]

**ಕುದಿಗಾಸು** (ಕ್ರಿ). ೧. ಕುದಿಯುವಂತೆ ಕಾಯಿಸು; ಮರಳಿಸು. ೨. ಕೆಂಪಗೆ ಕಾಯಿಸು: ಹದಿನಾಱು ಬಣ್ಣದ ಸೊನ್ನೆಯ ಸರಳ್ಗಳ ಕುದಿಗಾಸಿ ನೀರೊಳಿಟ್ಟಂತೆ ಉದಿಸಿತು ಘುಳುಘುಳು ಘುಳುಘುಳು ಧ್ವನಿ ತಂಗೊಳದೊಳು ತನುತಾಪದಿಂದೆ (ಮೋಹತ. ೯-೪೨).
[ಕುದಿ$_1$ + ಕಾಸು$_1$ (< ಕಾಯಿಸು$_1$)]

**ಕುದಿಗುಟ್ಟು** (ಕ್ರಿ). (ಆಲಂ) ಮಿತಿಮೀರಿದ ಸಂಕಟವನ್ನನುಭವಿಸು; ಬಹಳ ವ್ಯಸನಪಡು; ಬೇಯು: ವೈರ ನಟ್ಟುವದನು ತಿಳಿದು ವಿದುರಾದಿಗಳ್ ಕುದಿಗುಟ್ಟಿದರು ಹೃದಯದೊಳ್ (ತುರಂಗ. ೧೧-೧೦).
[ಕುದಿ$_2$ + ಕುಟ್ಟು$_1$]

**ಕುದಿಗುಣಿ** (ನಾ). ಸುಣ್ಣದ ಕಲ್ಲುಗಳನ್ನು ನೀರಿನಲ್ಲಿ ಕುದಿಸಲು ಮಾಡಿದ ಕುಣಿ, —ಗುಳಿ, —ಹೊಂಡ: ಸುಣ್ಣ ಕುದಿಗುಣಿಯೊಳಗೆ ಹಣ್ಣಾಗಿ ಬೆಂದಂತೆ (ಶರಚ. ೩೦೩).
[ಕುದಿ$_1$ + ಕುಣಿ$_2$ (< ಕುೞಿ$_2$)]

**ಕುದಿಗೂಳು** (ನಾ). ಕುದಿಯುವ ಕೂಳು; ಬೆಂದ ಅನ್ನ: ಎಸರಿನಲ್ಲಿ ತಳಪಳನೆ ಮರಳುತ್ತಿರುವ ಅನ್ನದ ಅಗುಳು ಸಿಡಿಮಿಡಿಗೊಂಡು ಕುದಿಗೂಳಿನಂತೆಸೆವ ಶುಕಿಗಾಶುಕಂ ಮಗುಳ್ದಿಂತೆಂದುದು (ಚಿಬಪು. ೪೬-೧೧).
[ಕುದಿ$_1$ + ಕೂಳು (< ಕೂೞ್$_1$)]

**ಕುದಿಗೆ** (ನಾ). = ಕುದಿ$_2$: (೬). [ಕುದಿ$_1$ + -ಇಗೆ]

**ಕುದಿಗೊಳ್**, ಕುದಿಗೊಳು, ಕುದಿಗೊಳ್ಳು (ಕ್ರಿ). ೧. ಚೆನ್ನಾಗಿ ಕಾಯು; ಮರಳು; ತಳಪಳನೆ ಕಾಯು: ವಿದಿತಂ ಲೋಕಕ್ಕೆ ಮುನ್ನಂ ರಘುಕುಳದಹನೋಗ್ರೇಷುವಿಂ ಕಾಯ್ದು ತಿಣ್ಣಂ ಕುದಿಗೊಣ್ಡಟ್ಟುತ್ತು . . . ಲವಣಾಮ್ಬೋಧಿಯಂ ಪೋಲಿಸಲ್ವೇಡ (ಎಕ. X, ಮುಳಬಾ. ೩೮-೧೩; ಸು. 890); ನೀರುರಿಯೆ ಪೊಗೆಯೆ ಕುದಿಗೊಳೆ (ಲೋಕೋಪ. ೪-೫೦); ಪೊಕ್ಕ ಪೂಗೊಳಂ ಪಾಡಱಿದ್ವೆದೆ ಕಾಯ್ದು ಕುದಿಗೊಂಡುಹು . . . ನೀಱೆಯ ಮೆಯ್ಯಬೆಂಕೆಯಿಂ (ಕಬ್ಬಿಕಾ. ೩೧೪); ಓಗರದೆಸರಂತೆ ಕುದಿಗೊಂಡುವು ಸಪ್ತಸಾಗರ (ಮೋಹತ. ೩೫-೪೫). **ಕುದಿಗೊಳು**: ೨. ಸಂಕಟಪಡು; ವ್ಯಥೆಪಡು; ನೋಯು; ಸಂತಪಿಸು: ಕುದಿಗೊಳಬೇಡ ದುಃಖವ ಬಿಸುಡೆಂದು ಪ್ರೇಮದಿ ಪೇಳ್ದ ವಾಮಲೋಚನೆಗೆ (ಮೋಹತ. ೪-೮೬). **ಕುದಿಗೊಳ್ಳು**: ೨. ಲಲನೆ ಕುದಿಗೊಳ್ಳದಿರು (ನವಮೋ. ೨೭-೩೫). [ಕುದಿ$_1$ + ಕೊಳ್$_1$]

**ಕುದಿಗೊಳಿಸು** (ಕ್ರಿ). ೧. ಕುದಿಯುವಂತೆ ಮಾಡು; ಮರಳಿಸು; ಚೆನ್ನಾಗಿ ಕಾಯಿಸು: ಕಡು ಹಸನಾಗಿ ಬೆಂದ ಕುಂಬಳಕಾಯ . . . ಹಾಕಿ ಪೊಂದೆರಡು ಕುದಿಗೊಳಿಸಿ ಬೇಯಿಸಿಕೊಂಬುದು (ಸೂಪಶಾ. ೫-೯). ೨. ಕಷ್ಟಪಡಿಸು; ಸಂಕಟಕ್ಕೆ ಗುರಿಮಾಡು; ನೋಯಿಸು: ಮೂಲೋಕದವರುಗಳ ಕಟ್ಟಿ ಮೋಹಪಾಶದಲಿ ಕೆಡಹಿ ಕುದಿಗೊಳಿಪ ದಿಟ್ಟತನಮೇನಾದುದು (ನವಮೋ. ೭-೧೯). [ಕುದಿಗೊಳ್ + -ಇಸು$_3$]

**ಕುದಿಗೊಳು** 'ಕುದಿಗೊಳ್' ನೋ.

**ಕುದಿಗೊಳ್ಳು** 'ಕುದಿಗೊಳ್' ನೋ.

**ಕುದಿಜ್ವರ** (ನಾ). ಅವಧಿ ಜ್ವರ; ವಾಯಿದೆ ಜ್ವರ. [ಕುದಿ$_4$ + ಜ್ವರ]

**ಕುದಿತ$_1$** (ನಾ). ೧. ಕುದಿಯುವಿಕೆ. ೨. ಆತುರ; ತವಕ; ಹಂಬಲ: ಅರಸ ನಿನ್ನಯ ಕೊರಳ ಕಡಿತಕೆ ಸರಳು ಕುದಿತದಲೆನಗೆ ತನಗೆಂದೊಱಲುತಿದೆ (ಕುವ್ಯಾದ್ರೋ. ೧೦-೫೩). ೩. ಸಂತಾಪ; ವ್ಯಥೆ; ನೋವು: ಎದೆಯೊಡೆವ ಅಳು; ಕುದಿತ, ಮಿಡಿತ; ನರಳಿಕೆ; ಬೇನೆ (ನವ್ಯಧ್ವ. ೩). ೪. ಕ್ರೋಧ; ರೋಷ: ಅವರ ಮನಸ್ಸಿನ ಕುದಿತವನ್ನು ಎತ್ತಿ ತೋರಿಸುವಂತೆ ಮುಖ ಕೆಂಪೇರಿತು (ರಾಗಿಣಿ. ೧೪೯). [ಕುದಿ$_1$ + -ತ$_2$]

**ಕುದಿತ$_2$** (ನಾ). ನೆಗೆಯುವಿಕೆ; ಹಾರುವಿಕೆ; ಕುಣಿಯುವಿಕೆ. 'ಕುದಿತಮೆಟ್ಟು' ಪರಾ. [ಕುದಿ$_2$ + -ತ$_2$]

**ಕುದಿತಮೆಟ್ಟು** (ನಾ). [ನಾಟ್ಯ] ಭರತನಾಟ್ಯದ ವಿಶಿಷ್ಟ ಚಲನೆಗಳಾದ ಅಡವುಗಳ ಹತ್ತು ಭೇದಗಳಲ್ಲಿ ಒಂದು: ನಾಟ್ಯಾಚಾರ್ಯರು ಈ ಅಡವುಗಳನ್ನು ಹತ್ತು ವಿಧವಾಗಿ ವಿಂಗಡಿಸಿದ್ದಾರೆ ೧. ತಟ್ಟು ೨. ಮೆಟ್ಟು . . . ೫. ಕುದಿತಮೆಟ್ಟು . . . ೧೦. ನಡೈ (ಅಭಾನ್ಯ. ೩೨). [ಕುದಿತ$_2$ + ಮೆಟ್ಟು$_1$]

**ಕುದಿನೀರು** (ನಾ). ಕುದಿಯುತ್ತಿರುವ ನೀರು; ಮರಳುವ ನೀರು: ದಾರಿಯಲ್ಲಿ ಕುದಿನೀರಿನ ಹೊಳೆಯನ್ನೂ ಕತ್ತಿಯೆಲೆಯ ಕಾಡನ್ನೂ ಕಂಡನು (ವಚಭಾ. ೩೮೯); 'ಟೀ' ತಯಾರಿಕೆಗೆಂದು ಕುದಿನೀರು ತರಲು ಹೋದರು (ಪುನರು. ೨೦೭). [ಕುದಿ$_1$ + ನೀರು (< ನೀರ್$_1$)]

**ಕುದಿಪ**, ಕುದಿಹ (ನಾ). ೧. ಕುದಿಯುವಿಕೆ; ಮರಳುವಿಕೆ; ಬಹಳ ಬಿಸಿಯಾಗುವಿಕೆ. ೨. (ಆಲಂ) ಅಂತಸ್ತಾಪ; ಮನಸ್ತಾಪ; ವ್ಯಥೆ; ಬೇಗುದಿ: ಮನದ ಮಱುಕಮುಮನೆರ್ದೆಯ ಕು[ದಿ]ಪಮುಮಂ (ಪಂಪಭಾ. ೪-೬೩ ವ); ಈಗಳಿಂತಿನಿತೊಂದಾದ ವಿಷಾದಮುಂ ಕುದಿ[ಪ]ಮುಂ ಮಾತೇಂ ಪೊದಳ್ದೆನ್ನ ಮುನ್ನಿನ ಕರ್ಮೋದಯಮೆಂದು ಬಾಯಱಿದು ಚಿಂತಾಕ್ರಾಂತೆಯಾಗಿರ್ಪುದುಂ (ಸುಕುಮಾ. ೨-೩೨); ಕುದಿಪಂ, ಕುದಿಪಂಗಳ್ (ಶಬ್ದಾನು. ೫೬೨ ಪ್ರಯೋ). ೩. ತೀವ್ರವಾದ ಬಯಕೆ; ಉತ್ಕಟವಾದ ಇಚ್ಛೆ; ಭಾವಾವೇಶ; ತಳಮಳ: ಚಿತ್ತದೊಳ್ ಕುದಿಪಮುಡಂಗದೆಬ್ದು ಸರಿದರ್ ತ್ವರಿತಂ ಸಲೆ ಸಂದ ಜಾರೆಯರ್ (ಸೂಕ್ತಿಸು. ೮-೧೬೦). **ಕುದಿಹ**: ೩. ಮುದುಕಿ ಮಿಂಡನ ಮೆಚ್ಚಿ ಕುದಿಹಕ್ಕೆ ಒಳಗಾಗಿ ಹದದ ತೆಂಗಾಯ ನರಿ ತಿಂದು ಓಗಡಿನ ಬೆದಱು ಪಿಡಿದಂತೆ (ಸರ್ವಜ್ಞ. ೧೮೬೩). ೪. (ಆಲಂ) ತೊಂದರೆ; ಜಂಜಾಟ: ಹೆದಱಿದೆಯ ಬೇಡನಂ ಬೋಳೈಸಿ . . . ನುಡಿಸಿ ಕೇಳಲು ಪೇಳ್ವ ಕುದಿಹವೇಕದಿದೆನ್ನದೆಲ್ಲಾ ಕಿರಾತಸಂಕುಲದ ಗುಜು ನೆರೆದುದಿಂದು (ಹಚಕಾ. ೬-೧೯). [ಕುದಿ$_1$ + -ಪ$_2$]

**ಕುದಿಪಲ್**, ಕುದುಪಲ್ (ನಾ). ಕುದಿಯುವಿಕೆ; ಬೇಯುವಿಕೆ; ಮರಳುವಿಕೆ: "ಕ್ವಥೆ – ಪಾಕೇ, ಕುದಿಪು[ಪ]ಲೊಳ್ ಕ್ವಥಂ, ಕ್ವಥಿ . . . ಕ್ವಥಿತವ್ಯಂ, ಈ ೧೦ ಕುದಿಪು[ಪ]ಲ್" (ಕಾಶಕೃ. ೧೪೮).
**ಕುದುಪಲ್**. 'ಕುದುಪಲಕ್ಕಿ' ಪರಾ. [ಕುದಿಪ + -ಅಲ್$_2$]

**ಕುದಿಪಾತ್ರೆ** (ನಾ). ನೀರು ಮೊದಲಾದುವನ್ನು ಮರಳಿಸಲು ಬಳಸುವ ಪಾತ್ರೆ: "ಕುದಿಸುವ ಪಾತ್ರೆ; ಕುದಿಪಾತ್ರೆ" (Boiler. ಇಂಕಣಿ).
[ಕುದಿ$_1$ + ಪಾತ್ರೆ]

**ಕುದಿಪು** (ನಾ). ೧. ಕುದಿಯುವಿಕೆ; ಮರಳುವಿಕೆ; ಕುದಿತ. ೨. (ಆಲಂ) ಉತ್ಕಟತೆ; ತೀವ್ರತೆ; ದಾರುಣತೆ: ನಿಂದುಣಿಸಿ ನಿಂದೊಡಲದೊಂದು ತಿನಿಸಿಂ ತೃಷೆಯದೊಂದು ಕುದಿಪಿಂ . . . ದುಃಖದೊಳಿ ಬೆಂದು (ಧರ್ಮಾಮೃ. ೧-೧೬೭). [ಕುದಿ$_1$ + -ಪು]

**ಕುದಿಬೇನೆ** (ನಾ). ದಾರುಣವಾದ ರೋಗ; ತೀವ್ರವಾದ ವಿಪತ್ತು, —ಯಾತನೆ: ವಿಶ್ವದ ಎರಡನೆ ಸಮರದ ಕುದಿಬೇನೆ ಅದೆ ತಾನೆ ಹಬ್ಬಿತ್ತು ಸುತ್ತ (ಇಂಚಾಪ. ೩೩-೫೫). [ಕುದಿ$_1$ + ಬೇನೆ]

**ಕುದಿಯಹರವಿ** (ನಾ). ಒಂದು ನಾಡಿನ ಹೆಸರು: ನನ್ನಿನೊಳಂಬ ಪಲ್ಲವ ಪೆರ್ಮಾನಡಿಗಳ್ ಬಲ್ಲಕುಂದೆ ಮೂನೂಱುಮಂ ಕೋಗಳಿಯ ಯ್ಯೂಱುವಂ ಕದಂಬಳಿಗೆ ಸಾಯಿರಮುಮಂ ಕುದಿಯಹರವಿಯೆಚ್ಚು ತ್ತುಮಂ . . . ಆಳುತ್ತಿರೆ (ಸೌಇಇ. IX–i, ೧೦೧-೧೧; 1045). [?]

**ಕುದಿಯಿಸು,** ಕುಚ್ಚು$_1$, ಕುದಿಸು (ಕ್ರಿ). ಕುದಿಯುವಂತೆ ಮಾಡು; ಮರಳಿಸು; ಚೆನ್ನಾಗಿ ಕಾಯಿಸು; ಬೇಯಿಸು: ಅಂತು ಪಿಟಿಯೆ ಕಕ್ಕಳಗಬಲ್ದು ಸೊಪ್ಪು ಸೊಪ್ಪೆಲ್ವಂ ಕುದಿಯಿಸೆ ತತ್ತಳಗುದಿದು ಕೋಟ್ಟುದಿಗೊಳ್ವ (ಶಾಂತಿಪು. ೭-೯೫ವ); ಬಾಚಿಯ ದಿಂಡಿನ ತಿರುಕೊಳ್ ಮತ್ಸ್ಯಾಕ್ಷಿ ಮೂಲಮಂ ಸುಣ್ಣಮುಮಂ ಬೆರಸಿ ಹದನಱಿದು ಕುದಿಯಿಸೆ (ಲೋಕೋಪ. ೮-೧೯); ಒಲೆಯ ಮೇಲಿತ್ತಿ ಕಾಸಿ ಕುದಿಯಿಸಿದ ಬಳಿಕ (ಸೂಪಶಾ. ೪-೫). **ಕುಚ್ಚು$_1$:** ಕುಚ್ಚುವ ಪಾಕದಲಿಬೇಯಲಿಟ್ಟರೆ ಒಳಿತೆ (ಮೋಕ್ಷದೀ. ೨೩೬-೩); ಮುದುಕಿ ಕುಚ್ಚಿಕೊಟ್ಟ ಒಂದು ಮೊಟ್ಟೆಯನ್ನು ತಿನ್ನಬೇಕಾಯಿತು (ಮಲೆಮ. ೬೩೩); ಹಸಿಬಿಸಿ ವೇದಾಂತವನ್ನು ಕುಚ್ಚಿ ಹಸಿದವರಿಗೆಲ್ಲ ನೀಡುವವನು (ವಿಚಾಮಂ. ೩೩). **ಕುದಿಸು:** ಕುದಿಸಿವುದಕದೊಳಲೆದು ಬೀಸುತೊಗೆದು (ಬಸವು. ೩೬-೪೬); ಭೀಮ ಫಲುಗುಣರು ಮನದೊಳಗೆ ಕೌರವನ ಕರುಳನು ತನ್ನಿರಕುತದಲಿ ಕುದಿಸಿದರು (ಕುವ್ಯಾಸ. ೧೪-೭೫); ಹುಳಿಹೋಹಂತೆ ಕುದಿಸಿ [ಪಾಠಾಂ. ಯಿಸಿ]ಕೊಂಡು (ಸೂಪಶಾ. ೩-೯). [ಕುದಿ$_1$ + -ಇಸು$_3$]

**ಕುದಿರ್$_1$,** ಕುದಿರು$_1$, ಕುದುರ್$_1$, ಕುದುರು$_3$ (ನಾ). ೧. ಬಿದಿರಿನ ದಬ್ಬೆಗಳಿಂದ ಅಥವಾ ಮಣ್ಣಿನಿಂದ ಮಾಡಿದ ಕಣಜ; ಕುತ್ತರಿ; ಗಳಗೆ: "ಕುಶೂಲಂ ಕುದಿರಜಿಗೆ" (ವಸ್ತುಕೋ. ೪೯-೨೭); ಕುದಿರ ರೂಪಿನ ದೈವದೊಳಂ ಕೇರೋವಯೊಳ್ಳೆಲೆ ಮಾಡದೊಳ್ . . . ವಂಚಿಸಿ ಪಾಣ್ಬನೊಳಾಡುವರ್ (ಮದಕ. ೮-೨೩); ಕುದಿ[ಪಾಠಾಂ. ದು]ರನೆನಿತೆನಿತು ಕಚುರ್ವಡಮನಿತನಿತೆ ಕೆಸರ್ನೆಗೆವಂತೆ (ಜೀವಸಂ. ೪೯-೧೮೪); ಕುದಿರೊಳ್ ಕಳ್ಳವನಿಕ್ಕಿಸಿ (ಯಶೋಚ. ೪-೨೦); ರೇಫಾಂತಕ್ಕೆ – ಕನರ್ಗಳ್ . . . ಕದಿರ್ಗಳ್, ಕುದಿರ್ಗಳ್ (ಶಮದ. ೪೨ ಪ್ರಯೋ). **ಕುದಿರು$_1$:** ೧. "ಕುಶೂಲಂ, ಧಾನ್ಯ, ಕೋಷ್ಠಕಂ– ಈ ೩ ಕುದಿಱು [ರು]" (ಹಲಾಯು. ೫೨-೧೫೨); ಕುದಿರುಗಳಲ್ಲಿ ೪,೦೦೦ ಕೊಂಡುಗಗಳಷ್ಟು ಆಹಾರ ಸಾಮಗ್ರಿಗಳೂ (ಸುಗುಗಂ. ೮೮-೨). **ಕುದುರ್$_1$:** ೧. "ಪಾತಿಃ = ಕುದುರ್" (ಕಾಶಕ್ಯ. ೧೬೬). **ಕುದುರು$_3$:** ೨. ದವಸ ಧಾನ್ಯಗಳನ್ನು ಕುಟ್ಟುವಾಗ ಒರಳುಕಲ್ಲಿನಿಂದ ಅವು ಪಕ್ಕಕ್ಕೆ ಸಿಡಿದುಹೋಗದಂತೆ ಇರಿಸುವ ಒಂದು ಬಿದಿರಿನ ಅಥವಾ ಮರದ ಕಟಕಟೆ; ಬಿದಿರಸುತ್ತು; ಕುಂದಣಿಗೆ: (ಕ). ೩. ಬಿಂದಿಗೆ ಅಥವಾ ಕೊಡಬದಿಗೆ ಹೊರಳಿ ಬೀಳದಂತೆ ತಡೆಗಟ್ಟುವ ಹುರಿಹಗ್ಗದಂತಹ ವಸ್ತುವಿನಿಂದ ಮಾಡಿದ ಬಳೆ; ಸಿಂಬೆ: (ಕ). [< ಸಂ. ಕ್ಟದರ]

**ಕುದಿರ್$_2$,** ಕುದಿರು$_2$, ಕುದುರು$_4$ (ನಾ). ೧. ತಗ್ಗಾದ ಭೂಮಿ; ಹಳ್ಳ: (ಕ). ೨. ನದಿಯ ಪಾತ್ರ: (ಕ). ೩. ಹೊಳೆ; ತೊರೆ: (ಕ). **ಕುದಿರು:** (ಕ). **ಕುದುರು$_4$:** ೧. ಕೋಟೆ ಕಣ್ಬುಗಳೊಡ್ಡಿದೊಂದು ಕುದುರಿಗೆ ಕೆಡೆದು ಸಿಡಿದಳ್ ತಿರಸ್ಕೃತಿಗೆ (ಶ್ರೀರಾಮಾ. ೮೪೧-೩೯೬). 'ಕಣ್ಣುಕುದುರು' ಪರಾ. ೪. ನದಿಯಲ್ಲಿರುವ ನಡುಗಡ್ಡೆ, —ಸಣ್ಣ ದ್ವೀಪ; ನದೀಮುಖಜಭೂಮಿ: ಹೆಂಮಾಡಿಯ ಗಡಿಂ ಪಡುವಲು ಹೊಳೆಯಿಂ ತೆಂಕಲು ಕುದುರು ಸಹವಾಗಿ ಮೂಡಬೆಲಕೂರ ಚತುಸೀಮೆಯ ವಿವರ (ಸೌಇಇ. IX–ii, ೪೬೯-೧೦; 1510); ಎತ್ತು . . . ನದಿಯ ಮಧ್ಯೆ ಇದ್ದ ಕುದುರಿನಲ್ಲಿ ಹುಲ್ಲು ಮೇಯಲು ಹೋಯಿತು (ಪ್ರವಾಇ. II, ೪೬೩); ಇಲ್ಲಿ ಹೊಳೆಯ ಮಧ್ಯದಲ್ಲಿ ಕುದುರು ಇದೆ (ಬಾಳಿಗ. ೪೮).

[? / ತುಳು. ಕುದುರು = ಸಣ್ಣದ್ವೀಪ, ಮರಳದಿಣ್ಣೆ]

**ಕುದಿರು$_1$** 'ಕುದಿರ್$_1$' ನೋ.

**ಕುದಿರು$_2$** 'ಕುದಿರ್$_2$' ನೋ.

**ಕುದಿರು$_3$** (ನಾ). ಒಂದು ತೂಕದ ಅಳತೆ; ೩೫ ಕಳಂಜುಗಳ ಅಳತೆ: ಅಂಗವಸ್ತ್ರ ೫ ಕುಲಾಯ ೬ ಶ್ರೀಗಂಧದ[ಚ]ಕ್ಕೆ ೧೬ ಕರ್ಪೂರದ ಕುದಿರು ೬ ಕಸ್ತೂರಿ ಕಳಂಜು ೧೧ ಕುಂಕುಮದ ಹೂ ಕಳಂಜು ೧೬೦ (ಸೌಇಇ. IX–ii, ೫೫೦-೪; 1537). [← ತಮಿ. ಕುದಿರು]

**ಕುದಿರೆ** 'ಕುದುರೆ' ನೋ.

**ಕುದಿಲ** (ನಾ). (ಕರಾ) ಅನ್ನಕ್ಕೆ ಬಡಿಸಿಕೊಳ್ಳುವ ಸಾರಿನಂಥ ಒಂದು ಪದಾರ್ಥ; ಹುಳಗ: ಬಸಳೆಸೊಪ್ಪಿನ ಕುದಿಲ ತುಂಬಾ ರುಚಿ (ರೂಢಿ). [< ಕುದಿ$_1$. / ತುಳು. ಕೊಡ್ದೆಲ್, ಕೊಡೈಲ್]

**ಕುದಿಸಾಧನ** (ನಾ). (ನೀರು ಮೊದಲಾದ ದ್ರವವಸ್ತುಗಳನ್ನು) ಕುದಿಸಲು ಉಪಯೋಗಿಸುವ ಸಾಧನ, —ಉಪಕರಣ; ಪಾತ್ರೆ: "ಬಾಯ್ಲರ್" ಕುದಿಸಾಧನಗಳು (ಭಾಧಾನ. ೨೯೭). [ಕುದಿ$_1$ + ಸಾಧನ]

**ಕುದಿಸು** 'ಕುದಿಯಿಸು' ನೋ.

**ಕುದಿಸುಣ್ಣ** (ನಾ). ಕುದಿಸಿದ ಸುಣ್ಣ: ಕುದಿಸುಣ್ಣವಿದ್ದರೆ ಕೊಡು (ರೂಢಿ). 'ಕೆನೆಸುಣ್ಣ', 'ಪುಡಿಸುಣ್ಣ' ಪರಾ. [ಕುದಿ$_1$ + ಸುಣ್ಣ]

**ಕುದಿಹ** 'ಕುದಿಪ' ನೋ.

**ಕುದಿಹಿಟ್ಟು** (ನಾ). ಕುದಿಸಿದ ಹಿಟ್ಟು; ಚೆನ್ನಾಗಿ ಬೇಯಿಸಿದ ಹಿಟ್ಟು: ಅವನು ಕುದಿಹಿಟ್ಟನ್ನು ಕುರುವಿನ ಮೇಲೆ ಅರಗಳಿಗೆಯಿಟ್ಟನು (ಮಣಿಸ. ೧೯). [ಕುದಿ$_1$ + ಹಿಟ್ಟು (< ಪಿಟ್ಟು)]

**ಕುದುಂಬಳು** (ನಾ). ಕವುಜುಗ ಹಕ್ಕಿಯ ಜಾತಿಗೆ ಸೇರಿದ ಒಂದು ಹಕ್ಕಿ; ಲಾವಕ್ಕಿ; ಪುರಲಿಹಕ್ಕಿ: ಇಲ್ಲಿ ಕುದುಂಬಳು, ಕೌಜಲು, ನೀರ್ಕೋಳಿ, ಕಾಡುಕೋಳಿಗಳು ನೆಲದಮೇಲೆ ಓಡಾಡುತ್ತಿದ್ದರೆ (ಸ್ವಪ್ನಹೂ. ೧೨). [← ತುಳು. ಕುದುಂಬುಲು]

**ಕುದುಕಲ್,** ಕುದುಕಲು (ನಾ). ಕುದಿಯುವಿಕೆ; ಕುದಿಸುವಿಕೆ; ಬೇಯಿಸುವಿಕೆ. 'ಕುದುಕಲಕ್ಕಿ' ಪರಾ. **ಕುದುಕಲು:** "ಕುಚಲು" (ಕಸ್ತೂಕೋ. ೨೨೧). [< ಕುದಿ$_1$ + -ಕಲ್$_3$]

**ಕುದುಕಲಕ್ಕಿ** (ನಾ). ನೆಲ್ಲನ್ನು ಸ್ವಲ್ಪ ಬೇಯಿಸಿ ಕುಟ್ಟಿಮಾಡಿದ ಅಕ್ಕಿ; ಕುದುಪಲಕ್ಕಿ; ಕುಸುಬಲಕ್ಕಿ; ಕುಚ್ಚಿಗೆ ಅಕ್ಕಿ: ಇಡ್ಲಿ ಮಾಡಲು ಕುದುಕಲಕ್ಕಿ ಚೆನ್ನಾಗಿರುತ್ತದೆ (ರೂಢಿ).

[ಕುದುಕಲ್ + ಅಕ್ಕಿ$_1$]

**ಕುದುಕಲು** 'ಕುದುಕಲ್' ನೋ.

**ಕುದುಕು$_1$** (ಕ್ರಿ). ೧. (ಮನುಷ್ಯ, ಕುದುರೆ ಮೊದಲಾದುವು) ಜೋರಾಗಿ ನಡೆ; ಕುಕ್ಕೋಟ ಓಡು. ೨. ಕುಕ್ಕುಲೋಟದಲ್ಲಿ ಓಡಿಸು; ಜೋರಾಗಿ ನಡೆಯಿಸು: ಬಡಗೊರಳ ಹೇಮಾದ್ರಿ ಕುಸುಮುವ ಮುಡಿಯತಾಪನೆ ಕರವ ಮೋಟನೆ ಕುದುಕುವನೆ ಮದಗಜವನೆಂದನು ವ್ಯಾನದತ್ತನೃಪಾ (ಕಕ್ಕೋಕ. ೯-೫). 'ಕುದುಕುವರಿ' ಪರಾ. ೩. ಕುಲುಕು; ಅಲುಗಾಡಿಸು; ಒದರು; ಜಾಡಿಸು; ಕೊಡವು: ಮಿಶ್ರಣದ ಔಷಧಿಯನ್ನು ಕುಡಿಯುವ ಮೊದಲು ಔಷಧಿಯ ಸೀಸೆಯನ್ನು ಕುದುಕಿಕೊಳ್ಳಬೇಕು (ರೂಢಿ); ಕುದುರೆ ಮಲಗಿದಲ್ಲಿಂದ ಎದ್ದು ಮೈಯನ್ನು ಕುದುಕಿತು (ರೂಢಿ).

[ದೇ. ‖ ತಮಿ. ಕುದಕ್ಕು = ನೆಗೆಯುವುದಕ್ಕೆ ಒಂದು ಝುಮ್ಮು ಕಡೆ]

**ಕುದುಕು$_2$** (ನಾ). ಕುಕ್ಕುಲೋಟ; ಕುಕ್ಕೋಟ; ವೇಗವಾದ ನಡೆ: ಹದಿಬದೆಯು ಸಾತವ್ವ ಕದಲಿಸದೆ ಆಣತಿಯ ಕುದುಕಿನಲಿ ಹೋಗಿ ಪೇಟಿಯೊಳು ಮೊರ ಮಾರಿ ಒದಗಿಸಿದಳೂಟ ಜಂಗಮಕೆ (ಕನ್ನಜಾ. ೨೬೭-೬೪). [< ಕುದುಕು$_1$]

**ಕುದುಕುವರಿ** (ನಾ). ಕುಕ್ಕೋಟದಿಂದ ಮುಂದೆ ಸಾಗುವಿಕೆ; ಕುಲುಕಾಟದೊಡನೆ ಮುಂಬರಿಯುವಿಕೆ: ಕುದುಕುವರಿಯಲಿ ಪರಿದು ಪೇರೋಟದಲಿ ಪರಿದೋಡುತ್ತಲಾಯಾಸದಿ ಬಳಲುತೊಯ್ಯನೆ ನಡೆದು (ಬಸಪು. ೨೬-೩೬). [ಕುದುಕು$_2$ + ಪರಿ$_2$]

**ಕುದುಕುಳಿ**, ಕುದುಗುಳಿ (ನಾ). ೧. ವ್ಯಾಕುಲಮನಸ್ಸಿನವನು; ಚಿತ್ತಸ್ವಾಸ್ಥ್ಯವಿಲ್ಲದವನು : ಕುದುಕುಳಿ ಭೀತ (ಚಿತ್ತ) ನಾರ್ತವಚನಂ ಗಳಿತಾಶ್ರುವಿಷಣ್ಣಂ (ಲೋಕೋಪ. ೧೦-೫). ೨. ಹೊಟ್ಟೆಕಿಚ್ಚಿನ ಸ್ವಭಾವದವನು; ಮತ್ಸರಿಸುವವನು; ಅಸೂಯಾಪರನು; ದ್ರೋಹಬುದ್ಧಿಯವನು: ಕುದುಕುಳಿ ದಾನವಂ ನಿಜವಿಮೋಹನ ವಿದ್ಯೆದ ಭೇದ್ಯ ಶಕ್ತಿಯಿಂದೊದವಿಸೆ ಮೋಹಮುಂ ಹೃದಯದೊಳ್ (ಚಂದ್ರಪು. ೫-೫); ಮೊದಲಲೇ ನಿಮ್ಮವರು ನಿಮ್ಮಭ್ಯುದಯವನು ಸೇರುವರೆ ಕೌರವ ರದರೊಳಗ್ಗದ ಕರ್ಣಶಕುನಿ ಜಯದ್ರಥಾದಿಗಳು ಕುದುಕುಳಿಗಳು (ಕುವ್ಯಾಸ. ೨-೧೬). ೩. ಆವೇಶವುಳ್ಳವನು; ರಭಸವೇರಿದವನು : ಸದರವೀ ಹೊತ್ತೆನುತ ಗೆಲವಿನ ಕುದುಕುಳಿಗಳುರವಣಿಸೆ (ಕುವ್ಯಾದ್ರೋ. ೧೦-೩೦). (ಗು). ೪. ದ್ವೇಷಿಸುವ; ವೈರವನ್ನು ತಾಳುವ; ರೋಷ ಹೊಂದುವ; ಸಿಟ್ಟುಗೊಳ್ಳುವ : ಪದವಡಸ್ತಿರ ನಸುಚಿಗೆದಮುನಿತ್ತುದ ನುಸುರ್ವ ಕುದುಕುಳಿ ವಿಕಾರಿ ಪದವನಜಿಯದಬಲೆಯರೊಳೊದಗುವತಿ ನೀಚನಾಡಿದುದನಾಡುತ್ತಿಹರ ಕುಲಗುರುವವಂ (ಜನವ. ೬-೩). **ಕುದುಗುಳಿ**: ೫. ಅತ್ಯಾಶೆಯ; ದುರಾಶೆಯ; ತಿಂಡಿಪೋತತನದ; ತೀವ್ರಾಭಿಲಾಷೆಯುಳ್ಳ : ಕೆಲರ್ ಕುದುಗುಳಿ ರಕ್ಕಸರ್ ಬಿಸುಗೆಗಳ್ವೆರ ಸುಗ್ರ ಮಹಾಗಜಂಗಳಂ ಚದುರ್ಗಿಡೆ ನುಂಗಿ ಬಿಕ್ಕಿ ಕುಡಿದರ್ ಬಿಸು ನೆತ್ತರ ಕಾಟ್ಪುರಂಗಳಂ (ಪಂಪಭಾ. ೧೨-೮). [< ಕುದಿ$_1$ + -ಕುಳಿ]

**ಕುದುಕುಳಿಗ** (ನಾ). (ಮನಸ್ಸಿನಲ್ಲಿ) ಕುದಿಯುವ ಸ್ವಭಾವದವನು; ದ್ವೇಷ ಬುದ್ಧಿಯವನು: ಬಲದಲಾಳುವ ಕುದುಕುಳಿಗ ಕಪಿಭಟ ಸಮೂಹವ ಕದಳಿದಜಿದನು (ತೊರರಾ. ೬-೩೦-೩೬). [ಕುದುಕುಳಿ + -ಗ$_2$]

**ಕುದುಕುಳಿಗೊಳು** (ಕ್ರಿ). ಪರಿತಪಿಸು; ಬೇಯು; ಮತ್ಸರಗೊಳ್ಳು: ಕುಟಿಲಾತ್ಮರಾಲಿಸುತೆ ಕುದುಕುಳಿಗೊಳುತ್ತೆ (ಕೊಟ್ಟೂಬ. ೧-೩೭). [ಕುದುಕುಳಿ + ಕೊಳು (< ಕೊಳ್$_1$)]

**ಕುದುಕುಳಿತನ**, ಕುದುಗುಳಿತನ (ನಾ). ತವಕ; ತೀವ್ರವಾದ ಬಯಕೆ; ಹಂಬಲ: ಸದಮಲಮಣಿ ಭೂಷಿತೆ ನೀನೀ ನಟ್ಟನಡುವಿರುಳ್ ಕುದುಕು [ಪಾಠಾಂ. ಗು]ಳಿತನದಿನೀಯೆಡೆಗೆ ಪೊಲ್ಲದುವಂದೆ ಎಂಬುದುಂ (ಸುಕುಮಾ. ೭-೨೨). **ಕುದುಗುಳಿತನ**: ಮೃದು ಮಧುರಾನ್ವಿತ ಚಿತ್ತವದಿಠದಿಂ ಕುದುಗುಳಿತನವನು ಬಿಟ್ಟು ನಿರಂತರ ಪುದಿದು (ಯೋಗಾಂವಿ. ೪-೧೭). [ಕುದುಕುಳಿ + -ತನ]

**ಕುದುಗು$_1$** (ಕ್ರಿ). ಅಡಗಿಕೊಳ್ಳು; ಒಳಗೆ ಸೇರಿಹೋಗು; ಹುದುಗು: ಉದುಗಿದಗ್ನೀಯೊಳ್ ನೀನು ಕುದುಗಿಪೋಗಾಲಃಯೆನಗೆ ವದಗೂದಾದೈಯ್ಯೊ ದುಃಖ ಮಧನಮೋಹನೆ (ಹಮಚ. ೬೭); ಅದರಿಂದ ನಾನೀಗ ಹೃದಯಾತಾಪದಿ ಶೋಕ ಕುದುಗೀ ಮಾಡಿದೆನಮ್ಮ ಮದಗಜಯಾನೆ (ಹಮಚ. ೧೫೧). [ಹುದುಗು ?]

**ಕುದುಗು$_2$** (ಕ್ರಿ). ಸಂಕಟಪಡು: ಸಂತಪಿಸು; ಬಹಳವಾಗಿ ಶೋಕಿಸು : ವದಗಿತಲ್ಲೆಲೆ ಕಾಂತೆ ಮದನಪಿತದಯ ತಪ್ಪಿ ಚದುರೆ ಕೇಳೆನುತಾಗ ಕುದುಗಿ ರಾಜೇಂದ್ರ (ಹಮಚ. ೨೦೩). [< ಕುದಿ$_1$]

**ಕುದುಗುಳಿ** 'ಕುದುಕುಳಿ' ನೋ.

**ಕುದುಗುಳಿತನ** 'ಕುದುಕುಳಿತನ' ನೋ.

**ಕುದುಗೂರ್** (ನಾ). ಒಂದು ನಾಡಿನ ಹೆಸರು : ಪುನ್ನಾಡು ವಿಷಯುವೇ ಕುದುಗೂರ್ನಾಡೊಳ್ (ಇಆ. XVIII, ೧೮೪-೧೩; 8ನೆಯ ಶತ). [ಕುದುಗು ? + ಊರ್]

**ಕುದುನಿ** 'ಕುತನಿ' ನೋ.

**ಕುದುಪಲ್** 'ಕುದಿಪಲ್' ನೋ.

**ಕುದುಪಲಕ್ಕಿ** (ನಾ). ಬತ್ತವನ್ನು ಸ್ವಲ್ಪ ಬೇಯಿಸಿ ಕುಟ್ಟಿ ಮಾಡಿದ ಅಕ್ಕಿ; ಕುಸುಬಲಕ್ಕಿ; ಕುಚ್ಚಿಗೆ ಅಕ್ಕಿ: ಉದ್ದಿನ ಬಿಳಿಯ ಬೇಳೆಯ ಕಲ್ಲೊಳರೆದು ಮತ್ತದಜ ಸರಿ ಬೀಸಿದಕ್ಕಿಯ ಹಿಟ್ಟು ಸರಿಗುದುಪಲಕ್ಕಿಯ ಹಿಟ್ಟನ್ನು ಬೆರಸಿಕೊಂಡಾ ಕುದುಪಲಕ್ಕಿವಿಟ್ಟನೊಳು (ಸೂಪಶಾ. ೧-೭೧); ಮುದುಕನಾಡುವ ಸರಸ ಕುದುಪಲಕ್ಕಿಯ ಅನ್ನ (ಗೌಮಲ್ಲಿ. ೧೩); ನಾಯಿಬೇಲದ ಸೊಪ್ಪು ಒಂದು ಒಳಹಿಡಿಯನ್ನು ಕುದುಪಲಕ್ಕಿ ಒಂದು ಹಿಡಿ ಸಹ ಅರೆದು (ಸಕವೈ. ೨೦೮). [ಕುದುಪಲ್ (< ಕುದಿಪಲ್) + ಅಕ್ಕಿ$_1$]

**ಕುದುರ್$_1$** 'ಕುದಿರ್$_1$' ನೋ.

**ಕುದುರ್$_2$**, ಕುದುರು$_5$ (ನಾ). ಗೋಡೆ: "ಕೇರು ಕುದುರೆನೆ ಗೋಡೆ" (ಶಬ್ದಮಂ. ೫೮); ಕುದುರನೇಸು ತೊಳೆದರೆಯೂ ಕೆಸಱು ಮಾಣ್ಪುದೆ (ಬಸವ. ೨೬೦). **ಕುದುರು$_5$** : "ಮೆತ್ತಿಗೆ ಗೋಡೆ" (ಕಸ್ತೂಕೋ. ೨೨೨). [?]

**ಕುದುರಾಜಿ** (ನಾ). ಸ್ವಂತ ಒಪ್ಪಿಗೆ; ಸಂಪೂರ್ಣವಾದ ಸಮ್ಮತಿ, —ಒಡಂಬಡಿಕೆ: ನಾವಾಗಿ ನಂಮ ಕುದುರಾಜಿಯಿಂದ ಬರದುಕೊಟ ತಾಂಬ್ರದ ಜಯರೇಕೆ (ಮೈಆರಿ. ೧೯೩೦, ೧೯-೨೮ ; 1704). [< ಖುದ್ದು ರಾಜಿ]

**ಕುದುರಿಸು** (ಕ್ರಿ). ೧. ಹೊಂದಿಸು; ಏರ್ಪಡಿಸು; ವ್ಯವಸ್ಥೆಗೊಳಿಸು; ಗೊತ್ತುಪಡಿಸು : ಆಸಕ್ತಿ ವಹಿಸಿ ಲಗ್ನ ಕುದುರಿಸಿದಳು (ಕಾಮಿಕಾಂ. ೬). ೨. ಒದಗಿಸು; ದೊರಕಿಸು : ಸಾಧುತತಿ ನಸುನಗೆಯ ನೋಟದೊಳೆ ಕುದುರಿಸುತ ನಿರ್ಭಯವನೊಳಗೆ (ಮಲೆದೇ. ೪೭-೧೦); ನಿಮ್ಮ ಅಲ್ಪ ಸೌಖ್ಯಕ್ಕಾದರೂ ಕಸುಬು ಕುದುರಿಸಿಕೊಳ್ಳಬೇಕಾಗುತ್ತೆ (ಮರಳಿ. ೬೩). ೩. ಬೆಳೆಸು; ಹೆಚ್ಚಿಸು; ಅಭಿವೃದ್ಧಿಗೊಳಿಸು; ಏಳ್ಗೆಹೊಂದಿಸು : ಸ್ವಂತ ಬಲದಿಂದ ರಾಜ್ಯವನ್ನು ಕಟ್ಟಿದರು; ಕುದುರಿಸಿದರು (ವಚಭಾ. ೨೩೧); ವಿದ್ಯಾರ್ಥಿಗಳ ಆಸಕ್ತಿಯನ್ನು ಕುದುರಿಸುವುದು ಪ್ರಥಮ ಕರ್ತವ್ಯ (ಕ್ರಿಯಾಶಿ. ೫೪); ಅಭ್ಯಾಸದ ದೃಷ್ಟಿಯನ್ನು ಕುದುರಿಸುವಲ್ಲಿ ಈ ಪುಸ್ತಕವು ಪ್ರಯೋಜನಕಾರಿಯಾದೀತು (ಸಾಸಮಾ. IV, ಅರಿಕೆ). [ಕುದುರು$_1$ + -ಇಸು$_3$]

**ಕುದುರು$_1$** (ಕ್ರಿ). ೧. ವ್ಯವಸ್ಥೆಗೆ ಬರು; ಸ್ತಿಮಿತಕ್ಕೆ ಬರು; ನೆಟ್ಟಗಾಗು; ಸರಿಹೊಂದು; ಹೊಂದಿಕೆಯಾಗು : ಕುದುರುವುದದೆಂತು ಈಯುವ್ಯವಸ್ಥೆಯ ಪಾಡು (ಮಂಕುಕ. ೧೮); ಪರಿಚಯ ಕುದುರಿದ ಮೇಲೆ . . . ತಾನೊಬ್ಬನೇ ಸಾಲೆಗೆ ಹೋಗುತ್ತೇನೆಂದ (ಕಂಬಹು. ೬೩); ಸರದಾರರ ಜಾತಕಗಳನ್ನು ತಂದು ಹೋಲಿಸಿ ನೋಡಿದರೂ ಯಾವುದೂಸರಿಯಾಗಿ ಕುದುರಲಿಲ್ಲ (ಝಾರಾಣಿ. ೩೦). ೨. ಒದಗು; ಏರ್ಪಡು : ನಿಮ್ಮನೋಡುತಿರೆ ಕುದುರುವುದರಿವು (ಗಣೇಶ. ೪-೮೧); ಅವರಲ್ಲಿ ಸೌಹಾರ್ದ ಸ್ವಲ್ಪ ಮಟ್ಟಿಗೆ ಕುದುರಿತು (ಯೋಧಪು. ೫೨). ೩. ಬೆಳೆ; ವೃದ್ಧಿಯಾಗು; ಏಳಿಗೆ ಹೊಂದು : ವರದಪ್ಪನಾಯಕನ ರತ್ನ ವ್ಯಾಪಾರ ಕುದುರಿ ಕೋಟಿ ಹೊನ್ನು ವರಮಾನ ಬಂದಿತ್ತು (ಹೇಮುಕೂ. ೮); ಕನ್ನಡಭಾಷೆ ಆ ವೇಳೆಗಾಗಲೇ ಚೆನ್ನಾಗಿ ಕುದುರಿತ್ತೆಂಬುದನ್ನು ತಿಳಿಸುತ್ತದೆ. (ದ್ರಾವಿವಿ. ೭೪).

**ಕುಲೆಸೊಪ್ಪು** (ನಾ). ಒಂದು ಬಗೆಯ ಸೊಪ್ಪು: ಅದೊಂದು ಕುಲೆ ಸೊಪ್ಪಿನ ಕಾಟವಂತೆ. ಆ ಸೊಪ್ಪು ಕಾಡುದಾರಿಯಲ್ಲಿ ನಮಗೆ ತಾಗಿದರೆ ನಮ್ಮ ದಾರಿ ಖಂಡಿತಕ್ಕೂ ತಪ್ಪಿ ಗೋಳಾಗುವುದು (ಕಂಬಹು. ೭೪). [? + ಸೊಪ್ಪು]

**ಕುಲೇಂದ್ರ** (ನಾ). ಕುಲಕ್ಕೆ ಒಡೆಯ; ಮನೆತನದ ಮುಖಂಡ: ಹಿಮಕರ ಕುಲೇಂದ್ರ ಕೇಳ್ (ಜೈಮಿಭಾ. ೨೦–೧). [ಕುಲ + ಇಂದ್ರ]

**ಕುಲೋದ್ದಾಮ** (ನಾ). ಕುಲದಲ್ಲಿ ಶ್ರೇಷ್ಠನಾದವನು: ನೃಪಕುಲೋದ್ದಾಮ ಜನಮೇಜಯ (ಜೈಮಿಭಾ. ೧೭–೬೦). [ಕುಲ + ಉದ್ದಾಮ]

**ಕುಲೋದ್ಧಾರಕ** (ನಾ). ಕುಲ ಅಥವಾ ವಂಶಕ್ಕೆ ಏಳ್ಗೆಯನ್ನುಂಟು ಮಾಡುವವನು: (ಕ). [ಕುಲ + ಉದ್ಧಾರಕ]

**ಕುಲೋದ್ಭವ** (ನಾ). ೧. ವಂಶದಲ್ಲಿ ಹುಟ್ಟಿದವನು: ಶಶಿಕುಲೋದ್ಭವ ಯುಧಿಷ್ಠಿರ ನೃಪನ ಕುದುರೆ ಗಡ (ಜೈಮಿಭಾ. ೧೬–೨). ೨. ಕುಲೀನ; ಕುಲಜ. [ಕುಲ + ಉದ್ಭವ]

**ಕುಲೋದ್ಭೂತ** (ನಾ). ಕುಲೀನ; ಸತ್ಕುಲದಲ್ಲಿ ಹುಟ್ಟಿದವನು: ಕುಲೋದ್ಭೂತರುಂ ತತ್ತ್ವವೇದಿಗಳುಂ ಮನೆವಾಬಿನಾಸೆವಡಲಾಗದು (ಶಾಂತಿಪು. ४–೮೨ ವ). [ಕುಲ + ಉದ್ಭೂತ]

**ಕುಲೋನ್ನತಿ** (ನಾ). ಕುಲದ ಅಭ್ಯುದಯ,— ಏಳಿಗೆ: ಕನಕ ಶಾಂತಿ ಕುಲೋನ್ನತಿ ಪುಟ್ಟೆ ಪುಟ್ಟಿದಂ (ಶಾಂತಿಪು. ೮–೧೧೬). [ಕುಲ + ಉನ್ನತಿ]

**ಕುಲೋರ್ವೀಧರ** (ನಾ). = ಕುಲಗಿರಿ: ಕುಲೋರ್ವೀಧರಮೇಱುಂ ದ್ವೀಪವೇಱುಂ ಬೆರಸು (ಜಗವಿ. ೩–೬೩). [ಕುಲ + ಉರ್ವೀಧರ]

**ಕುಲ್ಮಾಷ** (ನಾ). ೧. ಹುಳಿಗಂಜಿ. ೨. ಅರ್ಧ ಬೆಂದ ಧಾನ್ಯ. ೩. ಅಲಸಂದಿ; ಕಾಡುದ್ದು: "ಯಾವಕಃ, ಕುಲ್ಮಾಷಃ – ಕಾಡುದ್ದು ಎಂಬರು" (ನಾಚಿರಾ. ಕ); "ಯಾವಕಃ, ಕುಲ್ಮಾಷಃ ೨ ಅಲಸಂದಿಗೆ ಕಾಳು, ಕಾಡುವುದ್ದಿಗೂ ಹೆಸರು" (ಸಿದ್ಧಾಂತಿ. ೨೩೯). [ಸಂ.]

**ಕುಲ್ಯ**$_1$ (ನಾ). ಹಳ್ಳ; ಕಾಲುವೆ: ಕೆರೆತೊರೆ ಬೆಂಚೆ ಕುಲ್ಯಂಗಳಿಂ (ಕುಮಾಪು. ೨–೪); ನದನದಿ ಕುಲ್ಯ ಜಲಪೂರದಿಂ (ಜ್ಞಾನಚಂ. ೧–೬). ೨. ಕಂದಕ, ಅಗಳು. ೩. ಒಂದು ಅಳತೆ; ಎಂಟು ದ್ರೋಣ. [< ಸಂ. ಕುಲ್ಯಾ]

**ಕುಲ್ಯ**$_2$ (ಗು). ೧. ವಂಶದಲ್ಲಿ ಹುಟ್ಟಿದ; ಕುಲಕ್ಕೆ ಸಂಬಂಧಿಸಿದ. (ನಾ). ೨. ಕುಲಜ; ಕುಲೀನನಾದ ವ್ಯಕ್ತಿ: ದಿವಸದಾಯವ್ಯಯ ಸಂಭಾಷಣಂಗಳಿಂ ಕುಲ್ಯರಂ ಸೌಶೀಲ್ಯವೃತ್ತಿಗೆ ಸಲಿಸಿಯುಂ (ಚಂದ್ರಪ್ರ. ೨–೬೦ ವ). ೩. ಕುಟುಂಬದ ಯೋಗಕ್ಷೇಮವನ್ನು ವಿಚಾರಿಸುವುದು. ೪. ಮೂಳೆ; ಎಲುವು: "ಅಸ್ಥಿ, ಧಾತು, ಕೀಕಸಂ, ಕುಲ್ಯಂ—ಈ ೪ ಎಲ್ಲು" (ಹಲಾಯು. ೧೦೪–೧೦). [ಸಂ.]

**ಕುಲ್ಯ**$_3$ (ನಾ). ಒಂದು ಜಾತಿಯ ಕಾಡು ಜನಾಂಗ: ಕತ್ತಿಗರು ಕುಲ್ಯರು ಬಿಲ್ಲರು ಎಂಬ ಕಾಡು ಜನರು ಗುಜರಾತ್ ದೇಶದ ಕಾಡುಗಳಲ್ಲಿ ವಾಸವಾಗಿದ್ದಾರೆ (ಭೂಗೋಳ. ೭೭). [?]

**ಕುಲ್ಯೆ** (ನಾ). ೧. ಕುಲೀನಳಾದ ಹೆಂಗಸು; ಉತ್ತಮಕುಲದಲ್ಲಿ ಹುಟ್ಟಿದವಳು: "ಉನ್ನತ ಕುಲದ ಕಾಂತೆಯುಂ ಕುಲ್ಯೆಯೆಂಬುದು" (ಮಂಗರಾ. ೧೩೯–೬). ೨. ತೊರೆ; ಹಳ್ಳ; ಕಾಲುವೆ; ಸಣ್ಣಹಳ್ಳ: "ಸಿಂಧುಃ . . . ಕುಲ್ಯಾ; ದ್ವೀಪವತೀ, ಸರಿತ್, ರೋಧೋವಕ್ರಾ—ಈ ೨೧ ತೊಱೆ" (ಹಲಾಯು. ೧೧೦–೪೪). ೩. ಕಂದಕ; ಅಗಳು. ೪. ಬದನಿಕೆಗಿಡ; ಗುಳ್ಳ. ೫. ಲಕ್ಷ್ಮಿ: "ಕುಲವಧು ನದಿಮೋಹಂ ರವಿಮಾರಣ್ಯ ಕುಲ್ಯಾಭಿಧಾನಂ" (ನಾನಾರ. ४೩). [ಸಂ. ಕುಲ್ಯಾ]

**ಕುಲ್ಲ** (ನಾ). ೧. ದುಷ್ಟನಾದವನು; ಅಲ್ಪ; ನೀಚ: ಕುಲ್ಲರೆಡೆಯಲ್ಲೋದಿ ಕೊಂಕರಿದರ್ದುರ್ವೆನೆಂದು (ಲಿಂಗಪು. ೧–೨೨). ೨. ಚಿಕ್ಕವನು; ಕಿರಿಯವನು: ಕಿಱಿದವರ್ ಕಿಱುಪಬೇಹುದು ಕುಲ್ಲರಾದರಿಗೆ (ವಿವೇಛ. ೮–೫೩). (ಗು). ೩. ಚಿಕ್ಕದಾದ; ಸಣ್ಣದಾದ. ೪. ಕಿರಿಯ; ಕನಿಷ್ಠ. ೫. ನೀಚ; ಅಧಮ. [< ಸಂ. ಖುಲ್ಲ]

**ಕುಲ್ಲತನ**, ಖುಲ್ಲತನ (ನಾ). ೧. ಸಣ್ಣತನ; ಅಲ್ಪತೆ; ಕ್ಷುದ್ರತೆ: ಸೊಲ್ಲು ಬಳ್ಳಿತ್ತಲ್ಲಾ ಎಂದು ಎಲ್ಲರೊಳಗೆ ಹೇಳುವ ಕುಲ್ಲತನ ಬಲ್ಲತನವ ಸೊಲ್ಲ ಅರ್ಕೇಶ್ವರ ಲಿಂಗ (ಮಧುವ. ೫೫). ೨. ಸಂಕೋಚ: ಕುಲ್ಲತನವೇಕುಳಿದ ಪಣ್ಣುಮನದಣಿಯುಂಡು . . . ಸುಖಿಸುವುದೆನಲು (ಪ್ರೌಢರಾ. ೫–೨೮). **ಖುಲ್ಲತನ**: ೧. ಎನ್ನಲ್ಲಿ ನಿಮಗೆ ಖುಲ್ಲತನ ಬೇಡ (ಸರ್ವವ. ೫೫–೨೯೧); ಖುಲ್ಲತನದಲಿ ವಿಕೃತ ವೇಷದಲಲ್ಲಮನೆ ತಾ ಬಂದನೈಸಲೆ (ಪ್ರಭುಲೀ. ೭–೧೮); ಬೆನ್ನಿತ್ತು ಓಡಿ ಬದುಕಿಕೊಳ್ಳುವ ಖುಲ್ಲತನಕ್ಕಿಳಿದು (ಸುಗುಗಂ. ೧೧೫–೧೬). [ಕುಲ್ಲ + -ತನ]

**ಕುಲ್ಲಾ**, ಖುಲ್ಲ, ಖುಲ್ಲಾ (ಗು). ೧. ತೆರೆದ; ತೆರವಾದ; ಸ್ಪಷ್ಟವಾದ; ಪ್ರಕಟವಾದ; ವಿಸ್ತರಿಸಿದ: (ಕ). **ಖುಲ್ಲ**: ಮೊಹರು ಮಾಡಿ ಶಿರೂವ ಪ್ರಕಾರ ಖುಲ್ಲ ತಸದೀಕು (ಎಕ. III, ತಿರುಮ. ೫೭–೩೨; 1655). **ಖುಲ್ಲಾ**: ಪೋಲೀಸ್ ಚೌಕಿಗೆ ಹೋದಮೇಲೆ ಕೀಲಿ ಖುಲ್ಲಾ ಆಗಲಿ (ಹೊಸಂಸಾ. ೧೧೫). ೨. ಬರಿದಾದ; ಶೂನ್ಯವಾದ: ಧುಂಡೋಜಿಗೆ ಏನೇನೊ ಬಾರದು, ತಲೆಯಂತೂ ಖುಲ್ಲಾ (ಅರರೋ. ೨೫). [← ಹಿಂ. ಮರಾ. ಖುಲಾ]

**ಕುಲ್ಲಿ** (ನಾ). ನೀಚ ಹೆಂಗಸು: ಅಲ್ಲದೊಸ್ತವ ಬಯಸಿ ಕುಲ್ಲಿ ತಾ ಪೋದಂತೆ . . . ಎಲ್ಲಾ ಕಾಲದಲಿ ನಾನಪರಾಧಿಯು (ಮೋಕ್ಷದೀ. ೧೦೦–೩). [ಕುಲ್ಲ + -ಇ$_2$]

**ಕುಲ್ಲು**$_1$ 'ಕೊಲ್$_1$' ನೋ.

**ಕುಲ್ಲು**$_2$ (ನಾ). ಕ್ಷುದ್ರವಾದುದು; ದುಷ್ಟವಾದುದು: ಕುಲ್ಲು ಅದು ನಿನ್ನ ಸೊಲ್ಲು (ಸುನೀತ. ೫೦); ಯಾರಾದರೂ . . . ಕುಲ್ಲು ನುಡಿದಾರು ಎಂದು ಅವನಂತಹಬಗೆಯವರು ಯೋಚಿಸುವರು ಸ್ವಾಭಾವಿಕ (ಸವತಿ. ೯೦). [< ಕುಲ್ಲ]

**ಕುಲ್ಲು**$_3$ (ಗು). ಒಟ್ಟು; ಎಲ್ಲ; ಸಮಗ್ರ. [← ಹಿಂ. ಕುಲ್]

**ಕುಲ್ಲೆ** (ನಾ). ಹೊಳೆ; ನದಿ; ಹಳ್ಳ; ಕಾಲುವೆ: ಸೆಳೆನೀರಿನ ಕುಲ್ಲೆಯೊಳೊಂದೇ ಛಲ್ಲೆಯೊಳೆಳೆ ಸಸಿಲೆಯನಿಕ್ಕಡಿಗೆಯ್ವ (ಹಬ್ಬಿರ. ೧–೧೪೫). [< ಸಂ. ಕುಲ್ಯಾ]

**ಕುವಂಶ** (ನಾ). ಹೀನ ವಂಶ; ಕೀಳು ಕುಲ: ಅರಿಗಾವುದು ದೇಶವಾ ಸಂಸ್ಕಾರವವರಿಗೆ ಬಿಡದು ಬುದ್ಧಿಗೆ ಬೇರುಗೊಲೆಯಲ್ಲಾ ಕುದೇಶ ಕುವಂಶ ಸಂಭೂತಿ (ಕುವ್ಯಾಕ. ೯–೧೯). [ಸಂ.]

**ಕುವಕ** 'ಕುಯಕ' ನೋ.

**ಕುವತ್ತು**, ಕುವ್ವತ್ತು, ಕೂವತ್ತು, ಕೋತ್ತ, ಕೋತ್ತು, ಖುವತ್ತು (ನಾ). ೧. ತಾಕತ್ತು; ಶಕ್ತಿ; ಸಾಮರ್ಥ್ಯ; ತ್ರಾಣ: ತಮ್ಮ ಬೆವರ ಹನಿಯಿಂದ ಗಳಿಸೋ ಕುವತ್ತು ತಮಗೆ ಇಲ್ಲ (ನಡುಮ ೧೦೫); ತಿಕೀಟ ಕೊಳ್ಳೋ ಕುವತ್ತಿದ್ದಿದ್ದರೆ (ದರ್ಶನ. ೧೯). **ಕುವ್ವತ್ತು**: ನನ್ನ ತಡವೋ ಕುವ್ವತ್ತು ಯಾವನಿಗೂ ಇಲ್ಲ (ಪಂಲಿ. ೧೩). **ಕೂವತ್ತು**: ಅವರ ಕೂವತ್ತು ಹೆಚ್ಚು; ಧೈರ್ಯವು ಬಹಳ (ಧಾರ್ಮಿತೀ. ೨೩೨); ನೀವು ಬೇಡೋ ಅಷ್ಟು ವರದಕ್ಷಿಣೆ ಕೊಡೋ ಕೂವತ್ತು ನಮ್ಮದಲ್ಲ (ಸಮಜೀ. ೨೦೧). **ಕೋತ್ತ**: ಕೋತ ಇದ್ದರ ನಿಮ್ಮ ಓಣಿಯವರು (ಮನೆಬೆ. ೧೯). **ಕೋತ್ತು**: "ಶಕ್ತಿ, ತ್ರಾಣ" (ಜಾನಕೋ. ४३). **ಖುವತ್ತು**: ೨. ಶಕ್ತಿಯುಳ್ಳುದು; ಬಲಶಾಲಿ: ತಿಂದು 'ಖುವತ್ತಾಗಿ' ಇದ್ದವು (ಸರ್ವಮಂ. ೧೯४). [← ಅರ. ಕುವ್ವತ್]

**ಕುದುರೆಕಿವಿಮರ** (ನಾ). = ಕುದುರೆಕಿವಿಗನ ಮರ : (೩).
[ಕುದುರೆ + ಕಿವಿ$_2$ + ಮರ]

**ಕುದುರೆಗಂಡಿ** (ನಾ). (ಕೋಟೆಯ ಗೋಡೆಯಲ್ಲಿ) ಕುದುರೆ ನುಗ್ಗು ವಷ್ಟು ಅವಕಾಶವುಳ್ಳ ಕಂಡಿ, —ರಂಧ್ರ: ಭೂಮಾನಮುಮಂ ಪುಗುವ ಪೊಜಮಡುವ ನೀರಕಂಡಿಯ ಕುದುರೆಗಂಡಿಯ ತೆಜಪುಗಳುಮಂ ವಸುಷೇಣಂ ಬಳಸಿ ನೋಡುತ್ತುಂ (ಅನಂಪು. ೧೧–೮೨ ವ).
[ಕುದುರೆ + ಕಂಡಿ$_1$]

**ಕುದುರೆಗಲ್ಲು** (ನಾ). ಕುದುರೆ ಬರದಂತೆ ನಟ್ಟಕಲ್ಲು (?): ಗುಗ್ಗುರಿಗಲ್ಗುಂಡುಗಲ್ಲು ಮೊರಡಿ ಬೆಟ್ಟ ನುಗ್ಗುಗಲ್ಲುದುರೆಗಲ್ಲುಗಳ ಮೊಗ್ಗರ ದೊಳ್ಕಾಲಾಡ ಬಾರದು ಬಲದುರ್ಗವದಿಳಿಗೆ (ಕುರಾಸಾಂ. ೨೦–೯೬).
[ಕುದುರೆ + ಕಲ್ಲು (< ಕಲ್$_3$)]

**ಕುದುರೆಗಳ್ಳ** (ನಾ). ಕುದುರೆಯನ್ನು ಕದಿಯುವವನು; ಅಶ್ವಚೋರ: ಆ ಕುದುರೆಗಳ್ಳನಂ ತೋಱು ತೋಱೆನುತ ನಡೆತಂದು (ಜೈಮಿಭಾ. ೪–೨೧).
[ಕುದುರೆ + ಕಳ್ಳ$_1$]

**ಕುದುರೆಗಾಡಿ** (ನಾ). ಕುದುರೆಯನ್ನು ಹೂಡಿದ ಗಾಡಿ, —ಬಂಡಿ: ಹವಾಸೇವನೆಗೆಂದು ಕುದುರೆಗಾಡಿಯಲ್ಲಿಯೇ ಹೋಗಲಾರಂಭಿಸಿದಳು (ನಾಡಿಗೇ. ೫೧). [ಕುದುರೆ + ಗಾಡಿ$_1$]

**ಕುದುರೆಗಾಪು,** ಕುದುರೆಗಾಹು (ನಾ). ಕುದುರೆಯ ರಕ್ಷಣೆ, —ಕಾವಲು: ಕುದುರೆಗಾಪಿನ ಭಟರ ಕಣ್ಗೆ ಬಲ್ಗತ್ತಲೆಗಳಂ ದೂಳ್ಗಳಂ ಕವಿಸಿ (ಜೈಮಿಭಾ. ೪–೧೨). **ಕುದುರೆಗಾಹು**: ಕುದುರೆಗಾಹಿನ ಚತುರ್ಬಲಂ ಕಂಡು ಬೊಬ್ಬಿಱಿದು (ಜೈಮಿಭಾ. ೪–೧೩). [ಕುದುರೆ + ಕಾಪು]

**ಕುದುರೆಗಾಲ್,** ಕುದುರೆಕಾಲ್, ಕುದುರೆಗಾಲು (ನಾ). ೧. ಕುದುರೆಯ ಕಾಲು. ೨. ಕುದುರೆಯಂತೆ ಇಡುವ ಹೆಜ್ಜೆ; ತುದಿಗಾಲು (?). 'ಕುದುರೆಗಾಲಿಕ್ಕು' ಪರಾ. **ಕುದುರೆಕಾಲ್**: ೨. ಕಡುಭರದಿ ಹತ್ತಿ ಕೋಂಟೆಯ ಮೇಲೆ ಕುದುರೆ ಕಾಲಿಡುವುದಂ ಕಂಡೆಕ್ಕಟಿಗಳೊಳಗಣಿಂ ಬಂದು ಕೆಡೆವಂತೆ ಹುಯ್ದು ಬೀಳ್ವಾಗಳಾ ಕಾಲ್ಗಳಂ ತೆನೆಗಳೊಳ್ಕಟ್ಟಿ ಬಿಗಿಯೆ ಬಿಡದೆ ತಲೆಕೆಳಗಾಗಿ ಜೋಲುತ್ತಮಿರ್ದು (ಸಮ್ಯಕೌ. ೮–೩೩). **ಕುದುರೆಗಾಲು**: ೨. ಹುರುಪಿನಿಂದ ಕೋಟೆಯ ಮೇಲೆ ಹತ್ತಿದ ವೀರರು 'ಕುದುರೆಗಾಲನ್ನು' ಇಡುವುದೇ ತಡ, ಅಡಗಿಕೊಂಡು ಕುಳಿತಿದ್ದ ಕಾಪಿನವರು ಕಂಡು ಒಳಗಿನಿಂದ ಬಂದು ಅವರನ್ನು . . . ನೂಕಿಬಿಡುವರು (ಕರ್ಣಾಜ. ೩೮). ೩. ಕತ್ತಿವರಸೆಯ ಒಂದು ಬಗೆ: ಎಡಬಲದಲ್ಲಿ ತಿರುಗುವುದೂ ಭ್ರಮಣದಲ್ಲಿ ಅಶ್ವಲೀಲೆಯಿಂದ ಯಾವ ಸಾಧನೆಯು ಮಾಡಲ್ಪಡುವುದೋ ಅದು ಕುದುರೆಗಾಲು ಎಂದು ನುಡಿಯಲ್ಪಡುವುದು (ಖಡ್ಗಟೀ. ೪–೨೮). [ಕುದುರೆ + ಕಾಲ್$_1$]

**ಕುದುರೆಗಾಲಿಕ್ಕು** (ಕ್ರಿ). ಕುದುರೆಗಾಲನ್ನಿಡು; ಕುದುರೆಯಂತೆ ಕಾಲನ್ನು ಎತ್ತಿ ಇಡು: ಕುದುರೆಗಾಲಿಕ್ಕುತ್ತುಂ ಲತೆಯಂತೆ ಬಳ್ಕುತ್ತುಂ . . . ಪರವಶಮಾದಂತೆ ಜಡನಾಗುತ್ತುಮಿರಲಾಗದೆಂಬೀ ಮೂವತ್ತೆರಡು ದೋಷಂಗಳಿಂ ಪಿಂಗಿ (ಧರ್ಮಾಮೃ. ೫–೧೩೬). [ಕುದುರೆಗಾಲ್ + ಇಕ್ಕು]

**ಕುದುರೆಗಾಲು** 'ಕುದುರೆಗಾಲ್' ನೋ.

**ಕುದುರೆಗಾವಲ್,** ಕುದುರೆಗಾವಲು (ನಾ). ೧. = ಕುದುರೆಗಾಪು: ಕುದುರೆಗಾವಲ ಸುಭಟರಸತರೊಳೊದಗಿ ಬಂದು ಕದಳೀದ್ರುಮಕ್ಕೆ ಕಟ್ಟಿದ ತುರಗಮಂ ಕಂಡು (ಜೈಮಿಭಾ. ೨೦–೯); ಕುದುರೆಗಾವಲೊಳಿರ್ದ ವೀರತಾಮ್ರಧ್ವಜನ ಮಂತ್ರಿ ನಕುಲಧ್ವಜಂ (ಜೈಮಿಭಾ. ೨೫–೯). **ಕುದುರೆಗಾವಲು**: ೨. "ಕುದುರೆಯ ತಳಿ ಎಬ್ಬಿಸುವ ಸ್ಥಳ, ಅಶ್ವವರ್ಧನಶಾಲೆ, ಕುದುರೆಗಾವಲು" (Stud-farm. ಇಂಕಶ).
[ಕುದುರೆ + ಕಾವಲ್$_1$]

**ಕುದುರೆಗಾವಲು** 'ಕುದುರೆಗಾವಲ್' ನೋ.

**ಕುದುರೆಗಾಹು** 'ಕುದುರೆಗಾಪು' ನೋ.

**ಕುದುರೆಗಾಳಿಗ** (ನಾ). ಕುದುರೆಯ ಮೇಲೆ ಕುಳಿತು ಮಾಡುವ ಯುದ್ಧ: ಸಬಳದ ಸಲ್ಲೆಹದ ಕುಂತದ ಹಳಳದ ಕುದುರೆಗಾಳಿಗದ ಬಿಂನಣದೊಳುನ್ನತಿಕೆವಡೆದ... ಸಬಳತ್ರಿನೇತ್ರ (ಸೌಇಇ. IX–i, ೩೪೩–೨೦; 1226).
[ಕುದುರೆ + ಕಾಳಿಗ]

**ಕುದುರೆಗಾಱ** 'ಕುದುರೆಕಾಱ' ನೋ.

**ಕುದುರೆಗೊಳಗನ ಗಿಡು** (ನಾ). ಒಂದು ಜಾತಿಯ ಗಿಡ: "ಕಾಳದೀರ್ಘಿಕಾ – ಕುದುರೆಗೊಳಗನ ಗಿಡು" (ಓಷಧಿ. ೩೧).
[ಕುದುರೆ + ಕೊಳಗ + ಗಿಡು]

**ಕುದುರೆಜವಮ** 'ಕುದುರೆಜವಿ' ನೋ.

**ಕುದುರೆಜವಿ,** ಕುದುರೆಜವೆ, ಕುದುರೆಜವೆ (ನಾ). ಕುದುರೆಯ ಬಾಲದ ಕೂದಲು: ಆಕೆಯ ಕೂದಲು ಕುದುರೆಜವಿಯಾಗಿದೆ (ರೂಢಿ). **ಕುದುರೆಜವೆ**: (೩). **ಕುದುರೆಜವೆ**: (೩). [ಕುದುರೆ + ಜವಿ]

**ಕುದುರೆಜವೆ** 'ಕುದುರೆಜವಿ' ನೋ.

**ಕುದುರೆಜೂಜು** (ನಾ). ಕುದುರೆಗಳ ಜೂಜು, —ಪಂದ್ಯ, —ಓಟದ ಸ್ಪರ್ಧೆ: ಆ ಜನರು ಜೀವನರಸಿಕರಾಗಿದ್ದರು; ಕುದುರೆ ಜೂಜನ್ನಾಡುತ್ತಿದ್ದರು (ಭಾರದ. ೫೬೭). [ಕುದುರೆ + ಜೂಜು]

**ಕುದುರೆನಗೆ** (ನಾ). (ತಿರಸ್ಕಾರ ಸೂಚಕವಾಗಿ) ಕುದುರೆಯ ಕೆನೆತದಂತೆ ನಗುವುದು: ಕುದುರೆನಗೆ ನಕ್ಕನಸುರಂ ತಿರಸ್ಕರಿಸುವೋಲ್ (ಶ್ರೀರಾಮಾ. ೪೯೦–೨೨). [ಕುದುರೆ + ನಗೆ]

**ಕುದುರೆಬಚ್ಚ** (ನಾ). ಒಂದು ಬಗೆಯ ಆಟ; ಚಪ್ಪಟೆಕಲ್ಲು ಮೊದಲಾದುವುಗಳೊಡನೆ ಆಡುವ ಒಂದು ಆಟ: (೩).
[ಕುದುರೆ + ಬಚ್ಚ]

**ಕುದುರೆಬಾಲದ ಗಿಡ** (ನಾ). ಒಂದು ಔಷಧಿ ಗಿಡ; ಹಸುರು ರಿಬ್ಬನ್ ಗಿಡ; ಕುದುರೆ ಬಾಲಪಗಿಡ: (ಮೈಔಗಿ. ೭೬–೧೫೭೨).
[ಕುದುರೆ + ಬಾಲ + ಗಿಡ (< ಗಿಡು)]

**ಕುದುರೆಬೆಡಗ** (ನಾ). ಕುದುರೆಯನ್ನು ನಡಸುವುದರಲ್ಲಿ ನೈಪುಣ್ಯವನ್ನು ಪಡೆದವನು; ಕುದುರೆ ಸವಾರಿಯಲ್ಲಿ ಜಾಣ್ಮೆಯುಳ್ಳವನು: ಕುದುರೆಬೆಡಗನ್ ಅರ್ಕ್ಕಂಬರೀಸ್ ಬಿಲ್ಲಜಾಣನ್ ಈ ಮಿನಾಯಸ್ (ಪಾರಸಿ. ೩–೧೨). [ಕುದುರೆ + ಬೆಡಗ (< ಬೆಡಂಗ)]

**ಕುದುರೆಮಸಾಲೆ,** ಕುದುರೇಮಸಾಲೆ (ನಾ). ಕುದುರೆಗೆ ತಿನ್ನಿಸುವ ಒಂದು ಸೊಪ್ಪಿನ ಗಿಡ; ಒಂದು ಔಷಧಿ ಗಿಡ: ಕುದುರೆ ಮಸಾಲೆ, ಲೂಸರ್ನ್ ಸೊಪ್ಪು (ಮೈಔಗಿ. ೫೩–೧೦೫೫). **ಕುದುರೇಮಸಾಲೆ**: (೩).
[ಕುದುರೆ + ಮಸಾಲೆ]

**ಕುದುರೆಮಾಡು** (ಕ್ರಿ). ಕುದುರೆಯನ್ನಾಗಿ ಮಾಡು; (ಬೆನ್ನಮೇಲೆ ಕುಳಿತು) ಸವಾರಿಮಾಡು: ಮೇಯುವೆತ್ತಿನ ಬೆನ್ನ ಕುದುರೆ ಮಾಳ್ಪುದು ಕೋ (ಕಾಲೂರ. ೫೩–೮೨). [ಕುದುರೆ + ಮಾಡು$_1$]

**ಕುದುರೆಮುಖ** (ನಾ). ೧. ಕುದುರೆಯ ಮುಖ. ೨. ಕುದುರೆಯ ಮುಖದ ಆಕಾರದಲ್ಲಿರುವ ಒಂದು ಬೆಟ್ಟದ ಹೆಸರು; ಪಶ್ಚಿಮ ಘಟ್ಟದ ಒಂದು ಭಾಗ: ಕುದುರೆಮುಖದ ಗಣಿ ಪ್ರಸಿದ್ಧವಾದುದು (ರೂಢಿ). [ಕುದುರೆ + ಮುಖ]

**ಕುದುರೆಮೊಗ** (ನಾ). ಕುದುರೆಯ ಮುಖ.
**ಕುದುರೆಮೊಗದವ** = ಕುದುರೆಯ ಮುಖವುಳ್ಳವನು: ಕತ್ತೆಮೊಗ ಕುದುರೆಮೊಗದವರ ದೇಶಂಗಳಂ ಕಂಡನಾ ಕಲಿಪಾರ್ಥಸು (ಜೈಮಿಭಾ. ೧೩–೨೦). [ಕುದುರೆ + ಮೊಗ]

**ಕುದುರೆಯಾಟ** (ನಾ). ಕೋಲು ಅಥವಾ ಮನುಷ್ಯನ ಮೇಲೆ (ಕುದುರೆಯ ಮೇಲೆ ಕುಳಿತಂತೆ) ಕುಳಿತು ಆಡುವ ಮಕ್ಕಳ ಒಂದು ಆಟ: ಮಕ್ಕಳು ಕುದುರೆಯಾಟ ಆಡುತ್ತಿವೆ (ರೂಢಿ) [ಕುದುರೆ + ಆಟ]

**ಕುದುರೆಯಾಡು** (ಕ್ರಿ). ಕುದುರೆಯ ಆಟವನ್ನು ಆಡು: ಮರಗುದುರೆ ಯಲಿ ಮರವ ಮರೆತು ಮಕ್ಕಳು ಕುದುರೆಯಾಡುವೊಲು ಕೆಲಸವಲ್ಲದೆ ನುಡಿಯನರಿಯಂ (ಹೆಬ್ಬರ. ೬-೧೧೧). [ಕುದುರೆ + ಆಡು$_1$]

**ಕುದುರೆರಾಹುತ** (ನಾ). ಕುದುರೆಯ ಸವಾರ, —ರಾವುತ; ಅಶ್ವದಳ ದವನು: (ಕ). [ಕುದುರೆ + ರಾಹುತ]

**ಕುದುರೆವರದ** (ನಾ). ಕುದುರೆವ್ಯಾಪಾರಿ: ನಲಿದರು ರಾಯಭಾರಿಗಳು ಸಹಣಿಗಳಂದುಲಿದರಾ ಕುದುರೆವರದರು (ಕುರಾಸಾಂ. ೯-೭೬). [ಕುದುರೆ + ವರದ]

**ಕುದುರೆವಳಿಯ** (ನಾ). ಕುದುರೆಯ ತುಂಟತನವನ್ನು ತಡೆಹಿಡಿಯು ವುದಕ್ಕಾಗಿ ಕಟ್ಟುವ ಸೊಂಟಪಟ್ಟಿ; ತಂಗುಪಟ್ಟಿ: "ವಳಿಯೆ ನಲ್ಕುದುರೆವಳಿಯಂ" (ಶಬ್ದಮಂ. ೪೨). [ಕುದುರೆ + ವಳಿಯ]

**ಕುದುರೆವಾಹನ** (ನಾ). ೧. ದೇವಾಲಯದ ಉತ್ಸವಮೂರ್ತಿಯ ನ್ನೇರಿಸಿ ಮೆರವಣಿಗೆ ಮಾಡಲು ಉಪಯೋಗಿಸುವ ಮರದ ಅಥವಾ ಲೋಹದ ಕುದುರೆ. ೨. ಇಂತಹ ವಾಹನದ ಮೇಲೆ ಮೂರ್ತಿಯನ್ನಿರಿಸಿ ಮಾಡುವ ಉತ್ಸವ: ಇಂದು ದೇವಾಲಯದಲ್ಲಿ ಕುದುರೆವಾಹನ (ರೂಢಿ). 'ಗರುಡವಾಹನ' ಪರಾ. [ಕುದುರೆ + ವಾಹನ]

**ಕುದುರೇಬಳ್ಳಿ** (ನಾ). ಒಂದು ಜಾತಿಯ ಬಳ್ಳಿ: (ಕ). [ಕುದುರೆ + ಬಳ್ಳಿ]

**ಕುದುರೇಮಸಾಲೆ** 'ಕುದುರೆಮಸಾಲೆ' ನೋ.

**ಕುದುವು$_1$** (ನಾ). ಮನಸ್ಸಿನ ಕುದಿತ; ಅತಿಯಾದ ಬಯಕೆ; ಆಸೆ – ಆಕಾಂಕ್ಷೆ: ನಾಡುನಾಡಿನ ಜೀತ ಜೀವಿಕೆ ಇವರ ಕುದುವಿಗೆ ಸೆರೆಗಳು ಇವರ ಹೆಜ್ಜೆಯ ನೊಗದ ಭಾರಕೆ ಬೆವರುತಾತ್ಮವು ಕುಸಿವುವು (ದ್ರಾಕ್ಷಿದಾ. ೪೪). [< ಕುದಿ$_1$ + -ವು]

**ಕುದುವು$_2$** (ನಾ). ಪಡೆದುಕೊಂಡ ಸಾಲಕ್ಕೆ ಆಧಾರವಾಗಿ ಇಡುವ ವಸ್ತು; ಒತ್ತೆ; ಈಡು; ಅಡವು; ಅಡಮಾನ: (ರೀವ್). [ದೇ. ‖ ತಮಿ. ಕುದುವೈ; ತೆಲು. ಕುದವ, ಕುದುವ]

**ಕುದೃಷ್ಟಾಂತ** (ನಾ). ಕೆಟ್ಟದೃಷ್ಟಾಂತ; ದೋಷಯುಕ್ತವಾದ ಉದಾಹರಣೆ: ಕದುಪನ್ಯಸ್ತಕುಹೇತು ಕುದೃಷ್ಟಾಂತಾನರ್ಥಕ ವಚನ ರಚನಾಪ್ರಳಾಪಮಂ (ಆದಿಪು. ೨-೯ ವ). [ಸಂ.]

**ಕುದೃಷ್ಟಿ** (ನಾ). ೧. ದುರ್ಬಲವಾದ ನೋಟ: (ಕ). ೨. (ನೋಟ ದಿಂದ ಇತರರಿಗೆ) ಕೇಡನ್ನುಂಟುಮಾಡುವ ಕಣ್ಣು; ಕೆಟ್ಟಕಣ್ಣು: (ಕ). ೩. ಕೆಟ್ಟಜ್ಞಾನ; ಮಿಥ್ಯಾಜ್ಞಾನ: ಜನಿತ ಕುದೃಷ್ಟಿ ಭ್ರಮ ಮತಿಘನಮೋಹ ತಮಃಪಟಾವೃತಂ ಜಗಂ (ಚಂದ್ರಪು. ೯-೩೦). ೪. ದೋಷಯುಕ್ತವಾದ ವಿಚಾರವುಳ್ಳವನು; ದುಷ್ಟವಾದ ಮತ ಸಿದ್ಧಾಂತವನ್ನವಲಂಬಿಸಿದವನು: ಕುಶೀಲ ಕುತ್ಸಿತಾಚಾರ ಕುವೇಷ ಕುದೃಷ್ಟಿಗಳುಂ (ಆದಿಪು. ೫-೪೧ ವ). [ಸಂ.]

**ಕುದೆ** (ನಾ). ಸಂಕೋಲೆ; ಕಟ್ಟು; ಬಂಧನ: (ಕ). [ದೇ. ‖ ತಮಿ. ಕುದ್ಯೈ, ಕುದೆ; ಮಲ. ಕುದೆ]

**ಕುದ್ದರ** 'ಕುದ್ರ' ನೋ.

**ಕುದ್ದರಗೇಡಿ** 'ಕುದ್ರಗೇಡಿ' ನೋ.

**ಕುದ್ದಲ** 'ಕುದ್ರ' ನೋ.

**ಕುದ್ದಲಗೇಡಿ** 'ಕುದ್ರಗೇಡಿ' ನೋ.

**ಕುದ್ದಲಗೇಡಿತನ** 'ಕುದ್ರಗೇಡಿತನ' ನೋ.

**ಕುದ್ದಾಲ, ಕುದ್ದಾಳ** (ನಾ). ೧. ನೆಲವನ್ನು ಅಗೆಯುವ ಒಂದು ಸಾಧನ; ಗುದ್ದಲಿ: "ಗೋದಾರಣಂ, ಕೂ[ಕು]ದ್ದಾಲಂ – ಈ ೨ ಗುದ್ದಲಿ" (ಹಲಾಯು. ೯೪-೪೨೩); ಧರೆ ಕುದ್ದಾಲಹತಕ್ಕೆ ಸೈರಿಸಿ ಕರಂತಾಂ ಪೆತ್ತೞಿಂಕೆನ್ನಂ (ಕುಸುಮಾ. ೯-೩೧); ಕುದ್ದಾಲದಿಂದ ಗರ್ತಂ ಗೈಯಲ್ (ವೆಂಕಾರಾ. ೩-೧-೪೧); ಕಾಡಿನೊಳ್ ಕಂದಮೂಲವ ನಗೆಯೆ ಕುದ್ದಾಲವೊಂದಿರಲಿ (ಶ್ರೀರಾಮಾ. ೩೯-೩೭೪). ೨. ಒಂದು ಜಾತಿಯ ಗಿಡ; ಕೆಂಗಾಂಚಾಳ: "ಕೋವಿದಾರಃ, ಚಮರಿಕಃ, ಕುದ್ದಾಲಃ, ಯುಗಪತ್ರಕಃ – ಈ ೪ ಕೆಂಪು ಕಾಂಚಿವಾಳದ ಗಿಡ, ಕೆಂಗಾಂಚಾಳ ಹೂವ್ವಿನ ಗಿಡ" (ಸಿದ್ಧಾಂಶಿ. ೧೦೨); ಉನ್ನತದ ಕುದ್ದಾಲ ಕರ್ಪೂರ ಚೆನ್ನ ಮುತ್ತುಗವಗಿಲು ನಾನಾವರ್ಣದುತ್ತಮ ತರುಗಳಿಂ ದೆಸೆದುದು ಮಹೋದ್ಯಾನ (ಪ್ರಹ್ಲಾಜ. ೧೩-೪); ಮಿನುಗುವ ಕುದ್ದಾಲ ಮಾಧವಿ ಕಲ್ಹಾರ ಅನುಪಮ ಸಪ್ತಪರ್ಣಗಳ (ಜ್ಞಾನಚ. ೨೫-೬೦). **ಕುದ್ದಾಳ**: ೧. "ಗೋದಾರಣಂ ಕುದ್ದಾಳಮೆನಲು ಗುದ್ದಲಿ ಹಾರೆ ಭೇದಿಯಕ್ಕುಂ" (ಮಂಗರಾ. ೧೧೯-೨); ಕಾಡವರಾಯ ಕುಜ ಕುದ್ದಾಳ ಜಗದ ಗೋಪಾಳ ಪಟ್ಟ (ಎಕ. IX, ಚನ್ನಪ. ೫೧-೪; 1324); ಭವದ ಜಾಳಮೂಲಕ್ಕೆ ಕುದ್ದಾಳನಾಗುತ್ತೆ (ಸಿದ್ಧೇಪು. ೧-೧೪). ೨. ಆಲವಂಬಟ್ಟೆ ತಗ್ಗಿ ನೆಗ್ಗಿಲು ಬೇಲಿಬೊಬ್ಬುಲಿ ಬಕುಳ ಶಮಿ ಕುದ್ದಾಳ ಗುಗ್ಗುಳ ಹೊನ್ನೆ (ಕೊರರಾ. ೩-೧-೨೮). [ಸಂ.]

**ಕುದ್ದಾಳ** 'ಕುದ್ದಾಲ' ನೋ.

**ಕುದ್ದಾಳಿ** (ನಾ). ಗುದ್ದಲಿ: ಭೌಮನೆನಲಿಳಿಮಣ್ಣು ನೀನು ಸುಭೌಮ ನಂಮ್ರುತ ಕುರಿತು ಅಗಿವಂತಾ ಮಹಾಕುದ್ದಾಳಿಯಂಗಾಂಗವನು ಕೊಟ್ಟಿಡುವ (ಪಕುಥಾ. ೨೩-೪೦). [< ಸಂ. ಕುದ್ದಾಲ]

**ಕುದ್ರ, ಕುದ್ದರ, ಕುದ್ದಲ, ಖುದ್ದರ, ಖುದ್ರ** (ಗು). (ಉಕ) ೧. ಕೀಳಾದ; ತುಚ್ಛವಾದ; ಹೀನವಾದ; ದುಷ್ಟ. (ನಾ). ೨. ಕ್ಷುದ್ರನಾದವನು; ಅಲ್ಪ; ಕೀಳ. 'ಕುದ್ರಗೇಡಿ' ಪರಾ. **ಕುದ್ದರ**. ೨. 'ಕುದ್ದರಗೇಡಿ' ಪರಾ. **ಕುದ್ದಲ**: ೩. ಕರುಬು; ಅಸೂಯೆ: ಕುದ್ದಲವು ಕಡೆಗೆಟ್ಟು ಗದ್ದ ಗದ್ದಲ ಮುಣಗಿ ಸದ್ದು ಸದ್ದಾತು ಶಿವನಾಮ (ಕನ್ನಜಾ. ೨೩೨). **ಖುದ್ದರ**. 'ಖುದ್ದರಗೇಡಿ' ಪರಾ. **ಖುದ್ರ**. 'ಖುದ್ರಗೇಡಿ' ಪರಾ. [< ಸಂ. ಕ್ಷುದ್ರ]

**ಕುದ್ರಕ** (ನಾ). [ನಾಟ್ಯ] ಒಂದು ನೃತ್ಯಭಂಗಿ: ಸ್ವರತತಿ ವಾದ್ಯದೊಳ್ ನೆಗಟೆ . . . ಸರಿಪಮತಂದಿತಂತತಿ ವಿಕುದ್ರಕ ಕುದ್ರಕಮೆಂಬ ಭೇದ ದೊಳ್ ಪರಿಣತಿ ರಂಜಿಸುತ್ತುಮಿರೆ ನರ್ತಿಸಿದರ್ ಪೊಸ ದೇಸಿಕಾರ್ತಿಯರ್ (ಅಜಿಪು. ೫-೩೧). [?]

**ಕುದ್ರಗೇಡಿ, ಕುದ್ದರಗೇಡಿ, ಕುದ್ದಲಗೇಡಿ, ಖುದ್ದರಗೇಡಿ, ಖುದ್ರ ಗೇಡಿ** (ನಾ). (ಉಕ) ೧. ಬಹಳ ಕೆಟ್ಟವನು; ಅತಿದುಷ್ಟ; ಧೂರ್ತ; ಬೇರೆಯವರ ಏಳಿಗೆಯನ್ನು ನೋಡಿ ಕರುಬುವವನು: ಅವನಂಥ ಕುದ್ರಗೇಡಿ ಮೂರುಲೋಕದಲ್ಲಿ ಹುಡುಕಿದರೂ ಸಿಗನು (ರೂಢಿ). ೨. ತುಂಟ; ಕೆಡುಗೇಡಿ: ಇದಕ್ಕೆ 'ಕೋತಿಪಟ'ವೆಂದು ಹೆಸರಿಟ್ಟವನು ಯಾವನೊ ರಸಿಕ ಅನುಭವಿಕನೆ ಇರಬೇಕು. ಏಕೆಂದರೆ ಇದು ಒಮ್ಮೊಮ್ಮೆ ಬಲು ಕುದ್ರಗೇಡಿಯಾಗುತ್ತದೆ (ಗಾಳಿಪ. ೬). **ಕುದ್ದರಗೇಡಿ**: ೧. ಕುದ್ದರಗೇಡಿಗಳು ಸಜ್ಜನರ ಮೇಲೆ ಇಲ್ಲದ ದೋಷವನ್ನು ಆರೋಪಿಸುತ್ತಾರೆ (ರೂಢಿ). **ಕುದ್ದಲಗೇಡಿ**: ೧. "ಕುದ್ದಲಗೇಡಿ – ಅಸೂಯೆಪಡುವವ" (ಜಾನಕೋ. ೪೮). 'ಕುದ್ದಲ ಗೇಡಿತನ' ಪರಾ. **ಖುದ್ದರಗೇಡಿ**: ೨. ಭಂಗಾರದಂಥಾ ಸಂಸಾರ ಆಗೂದನ್ನ ನೋಡದ ಖುದ್ದರಗೇಡಿ ಅದು (ದೀಪಪಿ. ೧೫೩); ಮಹಾ ಖುದ್ದರಗೇಡಿ ಅಂವಾ! . . . ಅವಗ ನನಗ ಆಗಕದ (ಅಮುಶಿ. ೫೫).

**ಖುದ್ರಗೇಡಿ**: ೧. ಅಡ್ಡಿಮಾಡಿದ ಭಾವ ನಾನುಟ್ಟು ಬರುವಾಗ ಖುದ್ರಗೇಡಿ ನೆಗ್ಗೆಣ್ಣೆ ಕುದಿವೋಳಲ್ಲ (ಕರ್ಣಾಕ. ೭೯೮); ಖುದ್ರಗೇಡಿಯೇ ನನ್ನೊಡನೆ ಇಂಥ ಕುಚಾಳಿಯನ್ನು ಮಾಡಿದಿಯಾ? (ಪವಶೀ. ೧೩೬).
[ಕುದ್ರ + ಕೇಡಿ$_1$]

**ಕುದ್ರಗೇಡಿತನ, ಕುದ್ದಲಗೇಡಿತನ** (ನಾ). ಅಸೂಯೆ ಪಡುವಿಕೆ; ಕರುಬುವಿಕೆ: "ಹೊಟ್ಟೆಕಿಚ್ಚು ಮಾಡುವಿಕೆ" (ಜಾನಕೋ. ೩೮). **ಕುದ್ದಲಗೇಡಿತನ**: ಹೀಗಿದ್ದರೂ ಇಂಥ ಒಣ ಕುದ್ದಲಗೇಡಿತನ ಒಣ ದಿಮಾಕ ಇಲ್ಲಾ ನೋಡಿರಿ (ಶಿವಭಾ. ೧೧೪). [ಕುದ್ರಗೇಡಿ + -ತನ]

**ಕುದ್ರಾಳ** (ನಾ). (ಕರಾ) ಒಂದು ಬಗೆಯ ವಿಷದ ಹಾವು: ಅದು ಕುದ್ರಾಳ. ಕುದ್ರಾಳ ಅಂದರೆ ಬಹಳ ವಿಷದ ಹಾವೆನ್ನುತ್ತಾರೆ; ಕಚ್ಚಿದಲ್ಲಿ ಕೊಳೆಯುತ್ತದೆ ಎನ್ನುತಿದ್ದ ಅಪ್ಪ (ಸ್ವಪ್ನಹೊ. ೧೫). [?]

**ಕುಧರ** (ನಾ). ೧. ಬೆಟ್ಟ; ಪರ್ವತ: "ಧರಮದ್ರಿ ಕುಧರಂ . . . ಗೋತ್ರಮೆನಲು ಬೆಟ್ಟಕ್ಕೆ ನಾಮಂ" (ಮಂಗರಾ. ೨೯-೧); ಅನೋಕಹ ನಿಕುರುಂಬಮಂ . . . ಕುಧರದ ಸುತ್ತಲೊಟ್ಟೆ ಸುಡುವುದುಂ (ಜಗವಿ. ೮-೩೪); ವಿಜಯಾರ್ಧಕುಧರದಂತೆ ಅಶೇಷ ವಿದ್ಯಾಧರ ನಿವಾಸಮುಂ (ಪುಷ್ಪಪು. ೯-೩೦ ವ). ೨. ಕುತ್ಸಿತವಾದ ವೇಷವನ್ನು ಧರಿಸಿದವನು; ಕೆಟ್ಟವೇಷವನ್ನು ಹಾಕಿರುವವನು. ೧, ೨: ಹರನಂತೆ ಕಾನನಾಂತ ಕರದ್ರಿಯಂತೆ ಕುಧರರು ದಿವಿಜರಂದದಿ ವಿಶೇಷಭುಕ್ತರು ಶೀತಕರನಂತೆ ದೋಷಿಗಳು (ಹಚಕಾ. ೫-೪). [ಸಂ.]

**ಕುಧರಜಾರ್ಧಾಂಗ** (ನಾ). ಪಾರ್ವತಿಯೇ ಅರ್ಧಶರೀರವಾಗಿ ಉಳ್ಳವನು; ಅರ್ಧನಾರೀಶ್ವರ; ಶಿವ: ನಗರದ ಮಧ್ಯ . . . ಕುಧರಜಾರ್ಧಾಂಗ ಪರಮೇಶ್ವರನ ಭವನಮಿದೆ (ನವಮೋ. ೨-೬೨).
[ಸಂ. (ಕುಧರಜಾ + ಅರ್ಧಾಂಗ)]

**ಕುಧರಜೆ** (ನಾ). ಪರ್ವತರಾಜನ ಮಗಳು; ಹಿಮವಂತನ ಮಗಳು; ಪಾರ್ವತಿ; ಗಿರಿಜೆ. 'ಕುಧರಜಾರ್ಧಾಂಗ' ಪರಾ.
[< ಸಂ. ಕುಧರಜಾ]

**ಕುಧರಸ್ಥ** (ನಾ). ೧. ಬೆಟ್ಟದಲ್ಲಿ ವಾಸಿಸುವವನು; ಗಿರಿವಾಸ: ಮಧುಸೂದನ ಮಾರಮಣ ಮನೋಹರ ವಿಧಿಶಿವವಂದ್ಯ ವಿಶ್ವೇಶ. . .ಕುಧರಸ್ಥ ಕುಶಲವಿಡೆನ್ನ (ಅಕ್ಷಸಾಂ. ೬೨-೭). ೨. ಬೆಳ್ಳಿಬೆಟ್ಟದಲ್ಲಿರುವವನು; ಶಿವ. [ಸಂ.]

**ಕುಧರಾಗ್ರವಾಸಿ** (ನಾ). ೧. ಬೆಟ್ಟದ ತುದಿಯಲ್ಲಿ ವಾಸಮಾಡುತ್ತಿರುವವನು. ೨. ಶ್ರೀನಿವಾಸ. ೩. ಶಿವ: ಕುಂಜರಭಂಜನ ಶೌರ್ಯ ಸಮಂಜಸ ಕುಧರಾಗ್ರವಾಸಿ ಪಂಚಾಸ್ಯಂ (ರಾಜಶೇ. ೧೪-೧೩೨).
[ಸಂ. ಕುಧರಾಗ್ರವಾಸಿನ್]

**ಕುಧರಾರಿ** (ನಾ). ಪರ್ವತಗಳ ಶತ್ರು; ಇಂದ್ರ: ಕುಧರಾರಿಸುತ ವೈರಿಪಿತನಸ್ತಮಿಸಲವರು ಶಯನಕ್ಕೆ ಠಾವ ಕೇಳೆ (ಪ್ರೌಢರಾ. ೮-೬೮).
[ಕುಧರ + ಅರಿ$_6$]

**ಕುಧವ** (ನಾ). ಭೂಪತಿ; ರಾಜ: ಕುಧವ ಬಿಜ್ಜಳ ಕೇಳು (ಪ್ರೌಢರಾ. ೧೦-೪೧). [ಕು$_2$ + ಧವ]

**ಕುಧ್ರ** (ನಾ). = ಕುಧರ: "ಅಚಳಃ, ಶಿಲೋಚ್ಚಯಃ . . . ಧರಃ, ಅದ್ರಿಃ, ಕುಧ್ರಃ - ಈ ೧೪ ಬೆಟ್ಟ" (ಹಲಾಯು. ೨೭-೧೧); "ಕುಧ್ರ, ಕುಧರಂ" (ಶಬ್ದಾನು. ೧೪೭ ವ್ಯಾಖ್ಯಾ). [ಸಂ.]

**ಕುನಖ** (ನಾ). ೧. ಉಗುರು ಒಣಗಿ, ಕಪ್ಪಾಗಿ ಒರಟಾಗುವ ಒಂದು ರೋಗ. ೨. ವಕ್ರವಾದ ಹಾಗು ಒರಟಾದ ಉಗುರುಗಳುಳ್ಳವನು: ಬಸೆಮೂಗಂ ಪಿತ್ತವಿತ್ತಭೋಗಿ ಕುನಖಂ ಮೆಲ್ಪಿಂದೆ ಬಲ್ಪಿಂದೆ ಸಾಧಿಸೆ ಸಾಧ್ಯಂ . . . ಧನುರ್ಗೇಹಜಂ (ಜಾತತಿ. ೧೭-೯). [ಸಂ.]

**ಕುನಖಿ** (ನಾ). ಕುನಖವೆಂಬ ರೋಗವುಳ್ಳವನು: ಕುನಖಿ [ಶಕ್ತ್ಯಂಕಂ] ಶಿರೋಭಾಗದೊಳ್ ಕಲೆಯುಳ್ಳಂ . . . ಮೇಷಜಂ (ಜಾತತಿ. ೧೭-೧); ಕುನಖಿ ಕುಷ್ಠ ಕುಶೀಲಕನು ಕುಬ್ಜನನು . . . ಉಪ್ಪವಡಿಸುವ ಸಮಯದೊಳಿನಿಬರನು ಕಾಣ್ಬುದು ಮಹೀಶರಿಗಂಗವಲ್ಲೆಂದ (ಕುವ್ಯಾಉ. ೩-೧೦೭). [ಸಂ. ಕುನಖಿನ್]

**ಕುನಟಿ** (ನಾ). ೧. ಕೆಂಪು ಪಾಷಾಣ; ಕೆಂಪು ಹರಿದಳ; ಮಣಿಶಿಲೆ (ಶ). ೨. ಕೀಳು ಮಟ್ಟದ ನಟಿ. [< ಸಂ. ಕುನಟೀ]

**ಕುನಯ** (ನಾ). ೧. ಕೆಟ್ಟನಡತೆ; ವಂಚನೆ; ಮೋಸ: ಮುನಿನಾಥ ನನಗೆ ಪೇಳಿದನು ಕುನಯವಲ್ಲವು ವಚನವ ನೀ ನಂಬು ಜಿನನ ನಿರೂಪದೆ ಎಂದು (ಜ್ಞಾನಚ. ೭-೪೪). ೨. ಕೆಟ್ಟ ನೀತಿ; ಅಪಸಿದ್ಧಾಂತ; ದುರ್ನೀತಿ: ಕುನಯಕಾನನದವಶಿಖಿ ಎನುತ ನಿಶ್ಚಯ ನಯದಿಂದ (ಅನುಪ್ರೇ. ೫೫). [ಸಂ.]

**ಕುನಯಕರ್ಮ** (ನಾ). ದುರ್ನೀತಿಯ ಕರ್ಮ; ಕೆಟ್ಟಕೆಲಸ: ಜನಜನಿತ ಜನ್ಮ ಜನ್ಮಾತೆನಗೆ ಪ್ರಾಪ್ತಿಸಿದ ಕುನಯಕರ್ಮಪಕೀರ್ತಿಗಳಿಗೆ ಮನೆಯೆ ನಾನಾಗಿಹೆನು ಮಂತ್ರಿಯೆ (ಬಿಜ್ಜಪು. ೧೧೦-೮೭).
[ಕುನಯ + ಕರ್ಮ]

**ಕುನಯೋಪಪತ್ತಿ** (ನಾ). ಕೆಟ್ಟತತ್ತ್ವದ ಉಪಪತ್ತಿ; ಅಪಸಿದ್ಧಾಂತಕ್ಕೆ ಸಂಬಂಧಿಸಿದ ಯುಕ್ತಿ; ದುಷ್ಟಮತದ ಯುಕ್ತಿ: ಪೂರ್ವಪಕ್ಷಸ್ವರೂಪ ನಿರೂಪಣಾ ಪ್ರತಿಜ್ಞಾನಂತರಮನೇಕ ಕುನಯೋಪಪತ್ತಿಗಳಿಂ ಪಕ್ಷಪ್ರತಿಷ್ಠಾಪನೆಗೆಯ್ದು (ಶಾಂತಿಪು. ೮-೧೩೪ ವ).
[ಕುನಯ + ಉಪಪತ್ತಿ]

**ಕುನರ** (ನಾ). ಕೆಟ್ಟಮನುಷ್ಯ; ತುಚ್ಛನಾದ ಮನುಷ್ಯ. 'ಕುನರರೂಪು' ಪರಾ. [ಸಂ.]

**ಕುನರರೂಪು** (ನಾ). ಹೇಯವಾದ ಮನುಷ್ಯರೂಪ; ತುಚ್ಛವಾದ ಮಾನವ ದೇಹ: ವಿಪ್ರದುರುಳರುಂ ವಂಚಿಸಿದ ಕುನರರೂಪಿಂಗೆ ಪುರಹರದೀಕ್ಷೆಯಂ ಮಾಡಿದನು (ಏಕೋಪು. ೯-೫೪). [ಕುನರ + ರೂಪು]

**ಕುನಸು, ಕುನಿಸ್ಸು, ಕುಣಸು, ಕುನುಸು** (ನಾ). ಬದ್ಧದ್ವೇಷ; ಮತ್ಸರ; ಸೇಡು: ಬಹು ಕುನಸಿನಿಂ ಮಾತ್ಸರ್ಯ ತಾಳಿರ್ದಂತೆ ದಶರಥನು . . . ಭೀಕರ ರವದೆ ಕೆಣಕಿದನು (ರಘುವಂ. ೯೭-೬೪); ಆದರೆ ಈ ಗೌರವವನ್ನು ಕುನಸಿನ ಸ್ವಭಾವದ ಯವನರ ಮುಂದೆ ಕಾಯ್ದುಕೊಳ್ಳುವುದು ಕಠಿಣವಾಗಿರುವುದು (ಮಾಧವ. ೪); ಈ ದೇವಿಯು ನಮ್ಮಂತೆ . . . ಮುನಿಸಿಗೂ ಕುನಸಿಗೂ ಹೊರತಾಗಿಲ್ಲ (ಸಮಜೀ. ೩೭೦). **ಕುನಿಸ್ಸು$_2$**: ಅದು ಬಹಳ ಕುನಿಸಿನ ಹುಳ . . . ಮುಂದಿನ ಸಲ ಅದು ನಿಮ್ಮನ್ನು ಹತ್ತಿರ ಹಾಯಗೊಡುವುದಿಲ್ಲ (ಗಾಳಿಪ. ೬೦). **ಕುಣಸು.** 'ಕುಣಸಿಡು' ಪರಾ. **ಕುನುಸು**: ಕರಗಿ ಹೋಯಿತು ಹೆಮ್ಮೆ ಮರೆತು ಹೋಯಿತು ಕುನುಸು (ಕನ್ನಜಾ. ೨೯೨).
[← ಹಿಂ. ಖುನುಸ್; ಮರಾ. ಖುನ್ನಸ್, ಖುನಸ್]

**ಕುನಾಶಕ** (ನಾ). ಒಂದು ಜಾತಿಯ ಬಳ್ಳಿ, —ಪೊದೆ; ನಸುಗುನ್ನಿ: "ಯಾಸಃ, ಯವಾಸಃ, ದುಸ್ಪರ್ಶ, ಧನ್ವಯಾಸಃ, ಕುನಾಶಕಃ . . . ದುರಾಲಭಾ - ೧೦ ತೀಟೆಕಸಂಧಿ ಹೆಸರುಗಳು" (ಸಿದ್ಧಾಂತಿ. ೧೧೬).
[ಸಂ.]

**ಕುನಿ$_1$** (ಕ್ರಿ). ೧. ಕುಗ್ಗು; ತಗ್ಗು; ಸುಕ್ಕು; ಮುದುರು; ಸುರುಟು; ಅಡಗು: "ಕುನಿ - ಆಕುಂಚನೇ, ವಕ್ರಭೂವಾ ಚ" (ಶಮಧಾ); ಮನಮಿರೆ ಪುರ್ಬಿನ ಕೊನೆಯೊಳ್ ಮನದೊಳಗಿರೆ ವಾಯು ಕರಣತತಿ ವಾಯುವಿನೊಳ್ ಕುನಿದಿರೆ [ಪಾಠಾಂ. ಮುನಿದಿರೆ] ಪದ್ಮಾಸನದೊಳ್ ತನುವಿರೆ ಯೋಗೀಂದ್ರನಾತ್ಮಚಿಂತೆಯೊಳಿರ್ದಂ (ಯಶೋಚ. ೪-೧೩);

ಎಸೆವೊಕ್ಕಲಿಗನ ಮನೆ ಬಾಗಿಲಂ ದಳ್ಳಿಸುವ ಕುನಿವ ಕಿಚ್ಚಿನೆ ಚೆಲ್ವನುಂಗಿ ಪೊಂಗಿಹುದು (ಕಾಲೂರ. ೧೧೦–೨೨೬). ೨. ಬಾಗು; ಮಣಿ; ತಲೆವಾಗು: ನಲಿದು ಕೊರಲೆತ್ತಿ ಕುನಿದು ಕುಕಿಲಿಱಿದು ಸುಳಿದೆಳಸಿ ಬಳಸಂದು (ಗಿರಿಕ. ೨–೫೨); ಕಂಡು ನೀಡಡಿಯಿಟ್ಟು ಕುನಿದು ಕುಬುಜಿಸಿ ಕುಗ್ಗಿ (ಕಣ್ಣರ. ದೇ. ೧೨೭–೨೬); ಸರಸಿಜದೆಲೆಗೊಡೆಯಂ ಪಿಡಿದರಸನ ನೀರ್ವೊಯಿಸೆ ನಿಂದು ಕುನಿದಾಂತೊರ್ವಳ್ (ಅನಂಪು. ೬–೪೩); ಹತ್ತುಮಾರು ಹಿಂದೆ ಸರಿದು ಕುನಿದು ಕುಳಿತರು (ಹುಲಿಹಾ. ೧೧೯). ೩. ಹಿಂಜರಿ; ಹಿಮ್ಮೆಟ್ಟು; ಅಳುಕು: ಕುನಿದಿಂದುತನಕ ನಮ್ಮಪ್ಪಾಜಿಗೆಜಗಿ ಮೇದಿನಿ ವಡೆದಿರ್ದರಿಂದೆಮ್ಮ ಜನಕನ ತವಗೆಜಗಿಸಿಕೊಂಡರವರಹೊ ಜಿನದೀಕ್ಷೆ ಸದರವೆಯೆಂದ (ಭರಜ. ೬೫–೧೪). [ದೇ. ‖ ತಮಿ. ಮಲ. ಕುನಿ]

**ಕುನ್ನಿ₂** (ನಾ). ೧. ಗುಣಿಬಿದ್ದ ನೆಲ; ತಗ್ಗು; ಡೊಂಕುನೆಲ; ಕುಳಿಬಿದ್ದನೆಲ: "ಕುನಿ–ಆಕುಂಚನೇ, ವಕ್ರಭೂವೌ ಚ" (ಶಮಧಾ). ೨. "ಸಣ್ಣ ಕೈದೋಟ" (ಕಸ್ತೂಕೋ. ೨೨೨). ೩. "ಮೂಲೆ" (ಕಸ್ತೂಕೋ. ೨೨೨). [< ಕುನಿ₁]

**ಕುನ್ನಿ₃, ಗುನ್ನಿ₁** (ನಾ). ೧. ಜೋಳ, ರಾಗಿ, ಮೊದಲಾದ ಕಾಳಿನ ಮೇಲಿನ ಸೆರಗು, —ಮುಸುಕು: ರಾಗಿಯನ್ನು ಬಡಿದು ಕಾಳು ಬಿಡಿಸುವುದು ಕಷ್ಟ. ಕೊನೆಗೂ ಬಿಡದ ಕುನಿಯಿಂದ ಕೂಡಿದ ರಾಗಿ ಉಳಿಯುತ್ತದೆ (ನನ್ನೂರು. ೩೩೫ ಟಿಪ್ಪಣಿ). ೨. ಒಕ್ಕಿದ ಮೇಲೆ ಉಳಿಯುವ ಊಬು ಸಹಿತವಾದ ಧಾನ್ಯ: ಕುನಿ ತುಳಿಸಬೇಕು (ರೂಢಿ). 'ಬಡಗುನಿ' ಪರಾ. **ಗುನ್ನಿ₁**: ೧. 'ಗುನಿದೊಣ್ಣೆ' ಪರಾ. ೩. ಗುಂಗು; ಬತ್ತದ ಹೊಟ್ಟು: (ಕ). [?]

**ಕುನಿಕಿಲ್, ಕುಣಿಕಿಲ್, ಕುನಿಕಿಲು** (ನಾ). ಚೀಲ; ಸಂಚಿ; ತಿತ್ತಿ: ಮುಱಿಯೆ ಕುನಿಕಿಲನದಱ ಮೇಲಣ ನಿಱಿಯನೊಡನೊಡಸೀಳ್ದು (ಬಸಪು. ೫೫–೨೯); ತೊಗಲ ಕುನಿಕಿಲ ಬಂಡಿಗಳಲಾರ್ದಗಿದು ಹೊಕ್ಕರು ರಕ್ಕಸರು (ಕುವ್ಯಾಭೀ. ೫–೩೦). **ಕುಣಿಕಿಲ್**: ಕುಣಿಕಿಲ್ಗಾಲಿ ನೊಗಂ ಪಲ್ಗಣಿಯಚ್ಚನಿಸೊಂದನೊಂದು ತೆಱೆಯದ ತೆಱದಿಂ ಗಣಕೆಯ ಬಂಡಿಯನೊದೆವವೊಲ್ (ಅರ್ಧನೇ. ೭–೭೭); ವಿವಿಧ ಶಾಖಾವಳಿಯ ಬೋನದ ಬಿಗಿದ ಕುಣಿ [ಪಾಠಾಂ. ನಿ] ಕಿಲ ಕಳವೆಯಕ್ಕಿಯ ಕೂಳ ರಾಶಿಯ (ಕುವ್ಯಾಅ. ೧೦–೨೫). **ಕುನಿಕಿಲು**: ಕಲಹದಲೆ ಮೂವತ್ತು ಕುನಿಕಿಲು ತಲೆಗಳನು ತಱಿದೊಟ್ಟಿ ತರುತಿರೆ ತಲೆಯದೊಂದತಿರಕ್ತ ಪಂಕದಿ ತೊಯ್ದು ಬಿಗಿದಿರಲು (ಬಸಪು. ೨೭–೩೭); ಕಡಿಕಡಿದು ಕುನಿಕಿಲ ಲೊಟ್ಟಿತಿರ್ದವು ರಣಪಿಶಾಚಿಗಳು (ತೊರರಾ. ೬–೩೬–೪೬). [?]

**ಕುನಿಕಿಲು** 'ಕುನಿಕಿಲ್' ನೋ.

**ಕುನಿಯ** (?) (ನಾ). ಒಂದು ಬಗೆಯ ಜಂತು (?): ಕುನಿಯನ ಪೆಣನಂ ವಾಲ್ಮೀಕಮನಗುಟ್ಟದನಡಸಿ ಕಡಿದು ಮಣ್ಣಂ ಸು (ಸ)ಣ್ಣಂ ಸಮನಿರಿಸಿ ಶಲ್ಯಮಂ ಮಣ್ಣನೆ ಪೆತ್ತಂತರಿಸಿ ಬಯ್ತು ತನ್ನೃತ್ತಿಕೆಯಿಂ (ಅಶ್ವಶಾ. ೧೪–೨೮). [?]

**ಕುನಿಸು₁** (ಕ್ರಿ). ೧. ತಗ್ಗು; ಬಾಗು; ವಿನಮಿತವಾಗು; ನಮಸ್ಕರಿಸು; ವಿಧೇಯನಾಗು: ಮುನಿಸಿನಿತೆನ್ನೊಳು ಬೇಕೇನೆನಸದಿರಂಬುಜವದನೇ ಕುನಿಸಿದೆನಾ ಗುಣಸದನೇ (ಕುಮಾವಿ. ೩೬); ಜನಗಳ್ಮಿಂದೊಡಮಲ್ಲಿಯಿಾಂಟ ಜಲಮಂ ನೋಡಲ್ಕಮಟ್ಟಿರ್ಮಿಗಿಲ್ ಕುನಿಸುತ್ತಂ ಸುಕೃತೌಘಮಿತ್ತು ಮುಕುತರ್ಸಂದೊಪ್ಪುವಾನಂದಮಂ (ವೈಸೂಮ. ೬–೪೯). ೨. ಬಾಗುವಂತೆಮಾಡು; ನಮಸ್ಕರಿಸುವಂತೆ ಮಾಡು; ವಿಧೇಯನಾಗಿಸು. ೩. (ಆಲಂ) ಖಿನ್ನವಾಗಿಸು; ವ್ಯಸನದಿಂದ ಕುಗ್ಗಿಸು: ತನ್ನ ಅವಿಚಾರಿತ ಕಾರ್ಯವಿದು ಈ ದುರವಸ್ಥೆಗಿಳಿಯಿಸಿತಲ್ಲಾ ಎಂಬೆಣಿಕೆ ಅವರೆಗೆ ಅವನನ್ನು ಕುನಿಸುತ್ತಲೇಇತ್ತು (ಪಾರ್ಶಸು. ೬೮). [ಕುನಿ₁ + –ಇಸು₃]

**ಕುನಿಸು₂** 'ಕುನಸು' ನೋ.

**ಕುನೀಲ** (ನಾ). ನಸುನೀಲ ಬಣ್ಣವನ್ನುಳ್ಳ ರತ್ನ; ಇಂದ್ರನೀಲ ಮಣಿ: ಇದುವೆ ತೇಜೋಲೋಕಮಿದುವೆ ತಾರಾಪಥಂಯಿದು ಕುನೀಲದ ನಾಡು ಕುಶಲಂಗಳಿಗೆ ಬೀಡು (ವೆಂಕಾರಾ. ೬–೯–೩). [ಸಂ.]

**ಕುನುಂಗಿಲ್** (ನಾ). ಒಂದು ದೇಶದ ಹೆಸರು. ℙ ಈಗಿನ ಕುಣಿಗಲು: ಕುನಂಗಿಲಯ್ನೂರ್ಬರುಂ ಸಾಕ್ಷಿಯಾಗೆ (ಇಅ. XII, ೧೬–೪ (ಬ); 765); ಕುನುಂಗಿಲ್ ನಾಮದೇಶಂ (ಎಕ. XII, ಗುಬ್ಬಿ. ೬೧–೭೫; 812). 'ಕುಣುಂಗಿಲ್' ಪರಾ. [?]

**ಕುನುಂಗು**, ಕುನುಗು, ಕುಲಿಗು, ಕುಲುಂಗು (ಕ್ರಿ). ೧. ಕುಗ್ಗು; ಸಂಕೋಚಗೊಳ್ಳು; ಸುರುಟು; ಸುಕ್ಕು; ಮುದುರಿಕೊಳ್ಳು: "ಕುನುಂಗು – ಸಂಕೋಚನೇ (ಕುಗ್ಗು)" (ಶಮಧಾ); ಮಿಾಱುವವೆಂಬ ಮೂಂಡಳಿಕರೀಯದ[ರೆ]ಂಬದಟರ್ ವಯಲ್ಗೆ ಮೆಯ್ದೋಱುವವೆಂಬ ಪೂಣಿಗರಡಂಗಿ[ಕು]ನುಂಗಿ ಸಿಡಿಲ್ದು ಜೋಲ್ದು (ಪಂಪಭಾ. ೧–೧೦೯); ಬೆಕ್ಕಂ ಕಂಡಿಲಿಯಂತಿರುಸಿರ್ಕುಸಿದು ಕುನುಂಗಿ ತತ್ಸಭಾಭ್ಯಂತರದೊಳ್ ಮಾರ್ಕೊಳ್ಳದೆ ಮಾರ್ನುಡಿಯದೆ ಮಿಡುಕದಿರ್ದರ್ (ಸುಕುಮಾ. ೨–೨೦); ಕುನುಂಗಿ ಪಿಂಗದೆ ಪರಮಂಡಲಂ ನಡುಗಿ ಕಪ್ಪಮನೀಯದ ವೈರಿ ರಾಯರಾರ್ (ಎಇ. V, ೧೬–೧೧; 1161); ಕೀಳವದೊಳ್ಕುನುಂಗಿ ನಿರಯದೊಳುರೆ ಕುನುಂಗುವಧಮರ್ನೀವಲಾ (ಕೊಟ್ಟೂಬ. ೩–೪). ೨. ಬಾಗು; ಬಗ್ಗು; ಕುಸಿ: ಪೊಣರ್ದುದ್ದಂ ನೆಗೆದು ಕುನುಂಗಿ ಭರದಿಂ ತಲೆಯೆತ್ತಿಯುರ್ಬಿ (ಪಂಚತಂ. ೪೬–೫); ದಿಕ್ಕರಿಗಳ್ ಕುರ್ಗಿ ಕುನುಂಗೆ (ಶಾಂತೀಶ್ವ. ೧೪–೧೭೪); ತಡಿಯೊಳ್ ಮಿಗೆ ನಿಂದು ಕುನುಂಗಿ ಕೂಪವಾರಿಯ ಮಿಗೆ ನೋಡಿ (ದಶಕು. ೧೪–೧೫); ಅಂತು ಕುನುಂಗಿ ಕುಂಟುತ್ತಂ ಬರುತ್ತಮಿರ್ಪನ್ನೆಗಂ (ವೃಷವಿ. ೨೯–೧೨೦ ವ). ೩. ಡೊಂಕಾಗು; ವಕ್ರವಾಗು; ಕೊಂಕಾಗು: ಕುನುಂಗಿತು ಕುರುಳೋಳಿ ನುಣ್ಮಡಿಬಿಣ್ಪಾದುದು (ಜಯಕಾ. ೩–೨೫). **ಕುನುಗು**: ೧. ದಿನದ ತಂದೆಬಿನದವಿರದೆ ಕುನುಗಿ ಅಡಗಿ ಇರುವ ಕಾರೊಳ್ (ಬಾಸಿಗ. ೨೪); ಸುಬ್ಬಣ್ಣ ಹೆಗ್ಗಡೆಯವರ ಸಾನ್ನಿಧ್ಯದಲ್ಲಿ ಕುಗ್ಗಿ ಕುನುಗಿ ಜುಣುಗುವಂತೆ ಹೆದಹೆದರಿ ನಡೆದುಕೊಳ್ಳುತ್ತಿದ್ದನು (ಮಲೆಮ. ೩೬೨). 'ಕುಂಗು' ಪರಾ. **ಕುಲಿಗು**: ೪. ರೂಪುಗೆಡು: ರಕ್ತಕ್ಷಯಾತ್ = ನೆತ್ತರು ಬಸಿದ ದೆಸೆಯಿಂದ. ಪಾಂಡು = ಬೆಳ್ಪಾಗುವನು. ಹೀನರೂಪ = ಕುಲಿಗಿ ಹೋಗುವನು (ಬಾಹಟೀ. ೨–೪–೨೪ ವ). **ಕುಲುಂಗು**: ೫. ಕುಗ್ಗಿಸು: "ಕುಲುಂಗು – ಕಡಿಮೆಮಾಡು" (ಗಂಗಾಮ. ೯೧). [< ಕುನಿ₁]

**ಕುನುಗಿಸು** (ಕ್ರಿ). ಬಗ್ಗಿಸು: ಮೈಯನ್ನೆಲ್ಲ ಮೊಣಕಾಲಿಗೆ ಕುನುಗಿಸಿ ಕೈಮುಗಿದು (ಮಲೆಮ. ೭೧೭). [ಕುನುಗು (< ಕುನುಂಗು) + –ಇಸು₃]

**ಕುನುಗು** 'ಕುನುಂಗು' ನೋ.

**ಕುನುಸು** 'ಕುನಸು' ನೋ.

**ಕುನ್ನ₁** (ನಾ). ಸಣ್ಣಹೇನು; ಮರಿಹೇನು: (ಕ). [?]

**ಕುನ್ನ₂** (ಗು). ಕತ್ತರಿಸಿದ; ಮುರಿದ. 'ಕುನ್ನಗೆಯ್' ಪರಾ. [< ಸಂ. ಕ್ಷುಣ್ಣ]

**ಕುನ್ನಗೆಯ್** (ನಾ). ಕತ್ತರಿಸಿದ ಕೈ; ಮುರಿದ ಕೈ: ಕರಮೆರಡುಂ ಪಱಿವುದುಮಾ ಕರದಿಂದಂ ತನ್ನ ಕುನ್ನಗೆಯ್ಯೊಳಿ ಕೊಂಡುದ್ಧುರ ರಥಚಕ್ರದಿನಿಟ್ಟಂ ತಿರಿಪಿ ನರಪ್ರಿಯತನೂಜನಕ್ಷೋಹಿಣಿಯಂ (ಪಂಪಭಾ. ೧೧–೧೦೩). [ಕುನ್ನ₂ + ಕೆಯ್₂]

**ಕುನ್ನಿ₁** (ನಾ). ೧. ನಾಯಿ ಮರಿ; ನಾಯಿ: ಬಱಿಸಂದುವಾ ಶಬರನಾಯಕನಂ ಕಿಱುವಾಯ ಕುನ್ನಿಗಳ್ (ಕಾದಂಪೂ. ೧೬೩); ಆ ಕುನ್ನಿಗಳಂ ತಮ್ಮ ಶ್ರೋತ್ರನಾಳದೊಳ್ ತೊಡರ್ಚಿಕೊಂಬುದಂ (ಪಂಚತಂ. ೨೦–೪);

ನೀಂ ಕೊಟ್ಟ ಕುನ್ನಿ ಬೆಳೆವೆಳೆಯೆ ನಾಯೂಯ್ತು (ಧರ್ಮಾಮೃ. ೫-೪೨); ತನ್ನ ತಾನಱಿಯದಿರುವವನು ಹಾಳೂರ ಕುನ್ನಿಯಂತಕ್ಕು (ಸರ್ವಜ್ಞ. ೪೧೧); ಕುನ್ನಿ ಹೊಡೆವುದಕ್ಕೆ ಬಣ್ಣದ ಕೋಲೇಕೆ (ಶ್ರೀಕೃಪಾ. ೨೦). ೨. ಯಾವುದಾದರೂ ಪ್ರಾಣಿಯ ಮರಿ: ಸಿಂದಲ್ಲಿಯೆ ಅನುಭಾವ ಬಂದ ಬಂದಲ್ಲಿ ಪ್ರಸಂಗವ ಮಾಡುವ ಹಂದಿಕುನ್ನಿಗಳನೇನೆಂಬೆನಯ್ಯ (ಚನ್ನವ. ಕ. ೮೪೧). ೩. ಗಂಡುಕೂಸು; ಮಗ; ಚಿಕ್ಕಹುಡುಗ: ನಮ್ಮ ಕುನ್ನಿಗೆ ಕೂಸ ಕೊಡಬೇಡ (ಬಸವ. ೭೫೨). ೪. (ಆಲಂ) ಅಲ್ಪ; ಕೀಳ; ಹೀನ; ನಿಕೃಷ್ಟ; ಮೂರ್ಖ: ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ (ದೇದಾವ. ೧೧೫-೭೩); ಅನ್ಯಲಿಂಗವ ಮುಟ್ಟಿ ದರ್ಶನ ಮಾಡುವ ಕುನ್ನಿಗಳನೇನೆಂಬೆನಯ್ಯಾ (ಚನ್ನವ. ೨೫೧); ಕೆಡೆಬೀಳ ಹೊಯ್ ಹೊಯ್ ಕುನ್ನಿಗಳ (ಕುಮ್ಯಾದ್ರೌ. ೧೯-೩೦); ಕುನ್ನಿ ಬರಿದೇ ಬಯಸಿ ಬಯಲಿಗೆ . . . ಬನ್ನಬಡುವನು (ಅಮೃತ. ೨-೯). (ಗು). ೫. ಅಲ್ಪವಾದ; ಕ್ಷುದ್ರವಾದ. 'ಕುನ್ನಿಮಾನವ' ಪರಾ. [ದೇ. ‖ ತಮಿ. ಕುಞ್ಞು; ಮಲ. ಕುಞ್ಞಿ; ಕೊಡ. ಕುಞ್ಞಿ; ತೆಲು. ಗುನ್ನ, ಕೂನ; ಕೋಲಾ. ಕುನ]

**ಕುನ್ನಿ₂**, ಕುನ್ನೆ (ನಾ). ಕೆಂಪು ಗುಲಗಂಜಿ ಗಿಡ; ರಕ್ತಗುಂಜೆ. 'ನಸುಗುನ್ನಿ' ಪರಾ. **ಕುನ್ನೆ**. 'ನಸುಗುನ್ನೆ' ಪರಾ.
[ದೇ. ‖ ತಮಿ. ಕುನ್ನಿ; ಮಲ. ಕುನ್ನಿ; ತೆಲು. ಗುರಿಜ. / ಸಂ. ಗುಂಜಾ]

**ಕುನ್ನಿಜನ** (ನಾ). ನಾಯಿಯಂತಹ ಜನ; ಕೀಳುಜನ; ಅಧಮ ಮನುಷ್ಯ: ತನ್ನ ದಾನವನಪಹರಿಸಿ ಕೊಂಡನ್ಯರಿತ್ತುದಕಡ್ಡಬೀಳುವ ಕುನ್ನಿಜನರ [ಪಾಠಾಂ. ಧನ್ಯರುಗಳ]ಱುವತ್ತು ಸಾವಿರ ವರುಷ ಪರಿಯಂತ ಖಿನ್ನವಹ ವಿಷ್ಠೆಯೊಳು ಕ್ರಿಮಿಗಳ ಜನ್ಮದಲ್ಲಿಹರು (ಕುವ್ಯಾಉ. ೪-೯೩).
[ಕುನ್ನಿ₁ + ಜನ]

**ಕುನ್ನಿನರಿ** (ನಾ). ಒಂದು ಜಾತಿಯ ನರಿ; "ಕಪ್ಪಲ್ನರಿ": (ಙ).
[ಕುನ್ನಿ₁ + ನರಿ]

**ಕುನ್ನಿಮಾನವ** (ನಾ). ನಾಯಿಯಂತಹ ಮನುಷ್ಯ; ಅಲ್ಪನಾದವನು: ಅನ್ನಕ್ಕೆ ಸೇರಿದ ಕುನ್ನಿಮಾನವರಂತೆ ಇನ್ನಿವರ ಕಾರ್ಯವು (ಪುರಂದ. ೧-೧೧೬-೯); ಉನ್ನತ ನಿಮ್ಮ ಮಹಿಮೆ ಈ ಜಗದ ಕುನ್ನಿಮಾನವರೇನು ಅರಿವರು (ಸಿದ್ಧಪು. ೨-೯೨). [ಕುನ್ನಿ₁ + ಮಾನವ]

**ಕುನ್ನಿಮೂಳ** (ನಾ). ಕ್ಷುದ್ರನಾದ ತಿಳಿಗೇಡಿ; ಅಲ್ಪಬುದ್ಧಿಯವನು: ರಾವಣನಂ . . . ಈ ಕುಱಿವಾನಸರೀ ಮುದುಮುಂಕಡರೀ ಬಾನಬನ್ನದ ಕುನ್ನಿಮೂಳರ್ ಬೋಟರ್ ಅಃ ಚೀ ಕೊಂದರೆ (ರಾಮಾಶ್ವ. ೧೧೩-೪).
[ಕುನ್ನಿ₁ + ಮೂಳ]

**ಕುನ್ನೀರು** (ನಾ). ಕುಡಿಯುವ ನೀರು: ಸಾಲಿಗ್ರಾಮಕ್ಕೆ ಕುನ್ನೀರು ಕಟ್ಟಿ ಬೇಕೆ ಬೇಡವೇ? (ಕಲಸಿ. ೧೫೦); ಹೌದ್ಹಾದು, ಕುನ್ನೀರು ಸಿಕ್ಕಿದರೆ ಸಾಕು (ಪುನರು. ೪೫೫). [< ಕುಡಿನೀರ್]

**ಕುನ್ನೀರುಕೊಳ** (ನಾ). ಕುಡಿಯುವ ನೀರಿನ ಕೊಳ: ದೊಡ್ಡದೊಂದು ಕುನ್ನೀರುಕೊಳ ಕಟ್ಟಿ ಅದಕ್ಕೆ ಹೊಳೆಯ ನಾಲೆಯಿಂದ ನೀರು ಬಿಟ್ಟು ಕೊಳ್ಳಬೇಕೆಂಬುದು ಯೋಚನೆ (ಕಲಸಿ. ೧೫೦).
[ಕುನ್ನೀರು + ಕೊಳ]

**ಕುನ್ನೆ** 'ಕುನ್ನಿ₂' ನೋ.

**ಕುನ್ನೇರಿಳೆ** (ನಾ). ನಾಯಿನೇರಿಳೆ ಮರ; ಸಣ್ಣ ನೇರಿಲೆಹಣ್ಣಿನ ಮರ: ಕಾಲುದಾರಿಯ ಪಕ್ಕದಲ್ಲಿದ್ದ ಒಂದು ಕುನ್ನೇರಿಳೆಯ ಮಟ್ಟಿಗೆ ಕಟ್ಟುಕೊಂಡು ನಿಂತಿತ್ತು . . . ಒಂದು ಕುದುರೆ (ಮಲೆಮ. ೪೨೦). 'ನಾಯಿನೇರಿಳೆ' ಪರಾ. [ಕುನ್ನಿ₁ + ನೇರಿಳೆ (< ನೇಱಿಲ್)]

**ಕುಪಂಡ** (ನಾ). ಒಂದು ಔಷಧ ವಸ್ತು: ತ್ರಿಫಲೆ ಬಜೆ ಬೆಲ್ಲ ಸುಣ್ಣ ಕುಪಂಡ ಸದೆಗುಪ್ಪೆ ಜಟಾಮಾಂಸಿ ಹಿಂಗು ಇವೆಲ್ಲವಂ ಸರಿಗೂಡಿ (ಅಶ್ವವೈ. ೧೩-೬). [?]

**ಕುಪಣಪುರ** 'ಕೊಪಣಪುರ' ನೋ.

**ಕುಪತಿ** (ನಾ). ಭೂಮಿಯನ್ನು ಆಳುವವನು; ಭೂಪಾಲಕ; ರಾಜ: "ನೃಪತಿ ರಾಟ್ ರಾಜಂ ನರಾಮರಂ ಪಾರ್ಥಿವಂ ಕುಪತಿ . . . ಪ್ರಜಾಧಿಪನೆನಲ್ಕರಸಕ್ಕು" (ಮಂಗರಾ. ೭೮-೧); ಕುಪತಿಯ ತಪವಂ ನೋಡುವೊಡಪರಿಮಿತಂ ಪರಮನಿರದೆ ಪವ್ವನೆ ಬಂದಂ (ಹರಿಶ್ಚಂ. ೨-೯).
[ಕು₂ + ಪತಿ]

**ಕುಪಥ** (ನಾ). ೧. ಕೆಟ್ಟದಾರಿ; ದುರ್ಮಾರ್ಗ. ೨. ಸಂಪ್ರದಾಯ ವಿರುದ್ಧವಾದ ಮತ; ಪಾಷಂಡ ಮತ: ಕುಪಥ ಮಲವಿಲಯನಂ ಪಂಚಪರಮ ಗುರುಭಕ್ತಿನಿರತನಾಗ್ರಹಚಂದ್ರಂ (ಶಾಂತಿಪು. ೧-೩೪); ಸುಕೃತ ಧರ್ಮ ವಿರೋಧಿಗಳು ಕುಪಥಾಲವಾಲಂಗಳು ಕುತಾಪಿಗಳು (ಬಸಪು. ೪೦-೭೬). [ಸಂ.]

**ಕುಪಥ್ಯ** (ನಾ). (ರೋಗಿಗೆ) ಹಿತಕರವಲ್ಲದ ಆಹಾರ; ಅಪಥ್ಯವಾದ ತಿನಿಸು: ವ್ಯಾಧಿಗ್ರಸ್ತರೋಗಿಯು ಕುಪಥ್ಯವನ್ನು ಕೇಳಿದರೂ ವೈದ್ಯರು ಕೊಡುವುದಿಲ್ಲೆಂಬುದು ನೆನಪಿನಲ್ಲಿರಲಿ (ತುಳಸಿ. ೪೦). [ಸಂ.]

**ಕುಪರಿ** (ನಾ). ಕೆಟ್ಟರೀತಿ, —ನಡತೆ; ದುರ್ವ್ಯಾಪಾರ; ದುರ್ವರ್ತನೆ: ನಾ ಮತ್ತೆ ಕುಪರಿಯನಱಿಯೆನು (ಬಸಪು. ೨೮-೧೬); ಅವಗಂ ಕುಪರಿಗಳನಾಡುತ ತೀವಿ ದುರ್ಜನರಲ್ಲಿಗಲ್ಲಿಗೆ ನಗುತ ಬರುತಿರಲು (ಬಸಪು. ೩೨-೫೫). [ಕು₀ + ಪರಿ₀]

**ಕುಪಾಕ** (ನಾ). ಸರಿಯಾಗಿ ಬೇಯದಿರುವುದು; ಅರೆ ಬೆಂದಿರುವುದು; ಕೆಟ್ಟ ಅಡಿಗೆ: ಆಕಾಶದುರಿ ನೆಲದ ಮಡಕೆಯಲ್ಲಿ ಬಯಲ ನೀರ ತುಂಬಿಯಿಲ್ಲದ ಅಕ್ಕಿಯ ಹಾಕಿ ಮೂಜುನೆಲೆಯಲ್ಲಿ ಕುದಿವುತ್ತಿದ್ದೀತು. ಕುಪಾಕವನಱಿದು ನೀರಹೊಯ್ದು ಗಂಜಿ ಅಲ್ಲಿಯೆ ಹಿಂಗಿತ್ತು (ಬಬ್ಬಬಾ. ೧೦-೪೧). [ಸಂ.]

**ಕುಪಿತ** (ಗು). ೧. ರೇಗಿದ; ಕೋಪಗೊಂಡ; ಸಿಟ್ಟಿಗೆದ್ದ. 'ಕುಪಿತ ಫಣಿ' ಪರಾ. (ನಾ). ೨. ಕೋಪ; ರೋಷ; ಸಿಟ್ಟು: ಮಿಂಡು ಮಿಂಡನೆ ಮಿಂಡುಕುತ ಕುಪಿತದಿಂ ಘುಡಿಘುಡಿಸಿ ಮೆಚಿಮಿಂಡನೆಂದನು. (ಬಸಪು. ೨೬-೧೫); ಕುಪಿತದಿ ಕೊಡೆನೆಂದರೇನ ಮಾಡುವೆಯೆಂದು ಚಪಳೆ ನುಡಿದಳೆದೆದಟ್ಟ (ಭರಚ. ೪೩-೧೫). [ಸಂ.]

**ಕುಪಿತಫಣಿ** (ನಾ). ಕೆರಳಿದ ಹಾವು: ಗರಳವಿಲ್ಲದ ಕುಪಿತಫಣಿ ಹಲು ಮೊರೆದು ಮಾಡುವುದೇನು (ಕುವ್ಯಾದ್ರೌ. ೧೬-೫೫). [ಕುಪಿತ + ಫಣಿ]

**ಕುಪಿತಮತಿ** (ಗು). ೧. ಸಿಡುಕಿನ ಸ್ವಭಾವವುಳ್ಳ; ಸಿಟ್ಟುಗೊಂಡ: ಕುಪಿತಮತಿ ಸಂಜಿಯುಂ ಸರಿಸೃಪಮುಂ ವಿಹಗಮುಮಹೀಂದ್ರಮುಂ ದ್ವಿಪರಿಪುವುಂ (ಶಾಂತಿಪು. ೭-೧೧೧). (ನಾ). ೨. ಸಿಡುಕಿನ ವ್ಯಕ್ತಿ: ಕೋಪಗೊಂಡ ವ್ಯಕ್ತಿ: ಕೃಪಣೆಯರು ಚೋರಕರತಾಯ್ಗಳು ಕುಪಿತಮತಿಗಳು ಖೂಳೆಯರು (ಬಸಪು. ೪೦-೫೪). [ಕುಪಿತ + ಮತಿ]

**ಕುಪಿತಾಕೃತಿ** (ನಾ). ಕೋಪಗೊಂಡವನ ಆಕೃತಿ, —ರೂಪ: ವಿಪರೀತಂ ತರುತತಿಯುವೊಲಪರಾಗಂ ಶುದ್ಧಭೂಮಿವೊಲ್ಪದ್ಮಿನಿಪೋಲಂಪಗತವಿಭ್ರಮರಹಿತಂ ಕುಪಿತಾಕೃತಿಯೆಂಬುದುಪಮೆ ಸಂಧಾನಾಂಕಂ (ಕವಿರಾ. ೩-೮೩). [ಕುಪಿತ + ಆಕೃತಿ]

**ಕುಪಿತೆ** (ನಾ). ಕೋಪಗೊಂಡವಳು; ಸಿಡುಕಿ; ಕೋಪಿಷ್ಟೆ: ಚಪಲೆ ಚಂಚಲೆ ಚಾಟುವತಿ ಚಂಡಿ ಛಲವಾದಿ ಕುಪಿತೆ ಕುತ್ಸಿತೆ (ಜೈಮಿಭಾ. ೫-೬೧).
[ಸಂ. ಕುಪಿತಾ]

**ಕುಪುಸ** 'ಕುಪ್ಪಸ' ನೋ.

**ಕುಪ್ಪೂಯ** (ಗು). ನೀಚವಾದ; ನಿಕೃಷ್ಟ; ತುಚ್ಛ: "ಕುತ್ಸಿತಂ ಕುಪ್ಪೂಯಂ ಯಾಪ್ಯಂ" (ವಸ್ತುಕೋ. ೧೦೮–೫೯). [ಸಂ.]

**ಕುಪ್ಪ**$_1$ 'ಕೊಪ್ಪ' ನೋ.

**ಕುಪ್ಪ**$_2$ (ನಾ). ಒಬ್ಬಾತನ ಹೆಸರು: ಶ್ರೀಕುಪ್ಪವರ್ಮದರಂಗೆ ಕೊಟ್ಟ ಕೆಯುಂ (ಎಇ. XIV, ೧೯೧–೪೬; 725); ಸಾವಿರ ಬಳ್ಳಿಯ ತೋಣ್ಣದ ಸಾವ್ಯಮುಮುಗಿನ ಕಾಡಮ್ಮನುಂ ಎಱೆಗ ನಾಗನುಂ ಕುಪ್ಪನುಂ ಮಾದನುಂ ಒಕ್ಕಲ್ತನಂಗೆಯ್ಯೆ (ಎಇ. XXVI, ೪–೧೬; 908); ಕುಪ್ಪನ ನಂಬಿ ಕೊಳಕೇ ಬಿತ್ತಿದೆ. ಕುಪ್ಪ ಓಡಿಹೋದ; ಕೊಳಕೆ ಹೊತ್ತಿ ಹೋಯ್ತು (ಗಾದೆ). [ದೇ. ॥ ತಮಿ. ಕುಪ್ಪನ್]

**ಕುಪ್ಪ**$_3$ (ನಾ). (?): ತಮಾಳದ ಪರಿವೆತ್ತ ಜೋಳಪರಿತಳ್ತದಿವರ್ಮುತ್ತಿಯ ಕುಪ್ಪಮೊಪ್ಪಿತೋಱುದುವು ಮನೋಜರಾಜ ಶಿಬಿರಂಗಳವೆಂಬಿನೆಗಂ ವನಾಳಿಗಳ್ (ಚಂದ್ರಪ್ರ. ೬–೬೨). [?]

**ಕುಪ್ಪಂಮಣಲಿ** (ನಾ). ಒಂದು ಸ್ಥಳದ ಹೆಸರು: ಅಣ್ಣನ ದಣ್ಣ ಕೆಳಗೆಯ್ದ ಕುಪ್ಪಂಮಣಲಿಯುಳ್ ಅಯ್ಯಗಳ ಬೆದೆಮಣ್ಣು (ಮೈಆರ್. ೧೯೫೬, ೧೫–೨೧; 897). [ಕುಪ್ಪ$_3$ + ಮಣಲಿ ?]

**ಕುಪ್ಪಕುಱಿ** (ನಾ). ಮಕ್ಕಳು ಆಡುವ ಒಂದು ಬಗೆಯ ಆಟ: ಸಗರಣಮಣ್ಮು ಮೆಚ್ಚು ಪನಿಪ್ಪೆಸ್ಸಿಯೆ ಬೂದಿಯಿ(ಂ) ಬೊಟ್ಟು ಗಣ್ಣವಾತುಗಿಬಗಿ ಕೀರ್ತಿ ಕುಪ್ಪಕುಱಿ ಮುತ್ತರ ಮೂದಲೆ ಪೆಂಪು ವಿಕ್ರಮುಂ ಭಗವತಿಯೇಱು ಶೌಚ ಗುಣ ಮತ್ತಿಯ ಪಣ್ಣೆನಿಪೇಳ ಪುಣ್ಣರಂ ತೆಗಳ್ವುದುವಾರ ಚಾರುಚರಿತ್ರಪ್ರಭೆಯಿಂ ಪಡೆವಳ ತೈಲನ (ಸೌಇಇ. XI–i, ೫೨–೩೩; 1008); ಜಿನಭಕ್ತಂ ಹರಿಕಾಂತನಂತೆ ಮುಯ್ಯಂ ನೋಡದೆ ಕುಪ್ಪಕುಱಿ [ಪಾಠಾಂ. ರಿ]ಯಾಡುವ ಮಕ್ಕಳಂತೆ ತನ್ನಂ ಪೊಗೞ್ದುಕೊಳ್ಳದೆ (ಧರ್ಮಾಮೃ. ೧೩–೭೭). [?]

**ಕುಪ್ಪಗಡೆ** 'ಕುಪ್ಪಗಡ್ಡೆ' ನೋ.

**ಕುಪ್ಪಗಡ್ಡಿ** 'ಕುಪ್ಪಗಡ್ಡೆ' ನೋ.

**ಕುಪ್ಪಗಡ್ಡೆ**, ಕುಪ್ಪಗಡೆ, ಕುಪ್ಪಗಡ್ಡಿ, ಕುಪ್ಪಗೆಡೆ (ನಾ). ಒಂದು ಸ್ಥಳದ ಹೆಸರು: ಮಂಣ್ಣಳಿಕಂ ಕುಂದಮಂಗೆ ಕುಪ್ಪಗಡ್ಡೆಯ ಬಯಲಂ ಕಳಂಬಂದು (ಎಕ. VIII, ಸೊರಬ. ೧೮೪–೭; 1033). **ಕುಪ್ಪಗಡೆ**: ಸಿಟ್ಟಗೆ ಸಲೆ ನೆಗಟ್ದ ಕುಪ್ಪಗಡೆಯಂ ಬಮ್ಮಗಂ (ಸೌಇಇ. XX, ೨೪–೧೨; 1034). **ಕುಪ್ಪಗಡ್ಡಿ**: ಪಯಿನಾಸರದ ವಿಕ್ಕಪ್ಪ ಕುಪ್ಪಗಡ್ಡಿಯ ಬೀಡು ಕಣಿಯ ನಾಗಂಣ (ಎಕ. VII, ಶಿಕಾರಿ. ೨೮೨–೬೫; 1368). **ಕುಪ್ಪಗೆಡೆ**: ಸ್ವಸ್ತಿಶ್ರೀಮನ್ಮಹಾಪ್ರಭು ಬಮ್ಮಗಾವುಂಡನುಂ ಬಿಲಗಾವುಂಡನುಂ . . . ಪಾಂಡಿಯೂರ್ಗಂ ಕುಪ್ಪಗೆಡೆಗಂ . . . ಗಾವುಣ್ಡುಗೆಯ್ಯುತ್ತಮಿರ್ದ್ದು (ಕಇ. IV, ೧೧–೬೦; 1121). [ಕುಪ್ಪ$_1$ + ಗಡ್ಡೆ]

**ಕುಪ್ಪಗೆಡೆ** 'ಕುಪ್ಪಗಡ್ಡೆ' ನೋ.

**ಕುಪ್ಪಟ** (ನಾ). ಹಾರಾಟ; ನೆಗೆತ; ಎಗರುವಿಕೆ: ಕುದುರೆಯ ಕುಪ್ಪಟ ಘನವಾಯಿತು ಆನೆಯ ಹರಿದಾಟ ನಿಲಬಾರದು (ವಚಸಂ. ೫೧೨–೭೯). [ಕುಪ್ಪು$_2$ + ಆಟ ?]

**ಕುಪ್ಪಟಿ** 'ಕುಂಪಟಿ' ನೋ.

**ಕುಪ್ಪಡಿ** 'ಕುಂಪಟಿ' ನೋ.

**ಕುಪ್ಪಡಿಗೆ** (ನಾ). ಅಗ್ಗಿಷ್ಟಿಕೆ: "ಅಂಗಾರಧಾನಿಕೆ – ಅಗ್ಗಿಷ್ಟಿಗೆ, ಕುಪ್ಪಡಿಗೆ" (ಗಂಗಾಮು. ೧). [ಕುಪ್ಪಡಿ (< ಕುಂಪಟಿ) + –ಗೆ]

**ಕುಪ್ಪಣ** 'ಕುಪ್ಪಣ್ಣ' ನೋ.

**ಕುಪ್ಪಣ್ಣ**, ಕುಪ್ಪಣ (ನಾ). ಒಬ್ಬಾತನ ಹೆಸರು: ಕುಪ್ಪಣ್ಣನ ದೇಗುಲದ ಮಹಾದೇವರ್ಗೆ (ಎಇ. VII, ೨೧೩–೧೨; 874). **ಕುಪ್ಪಣ**: ಕುಪ್ಪಣಕಾದಿ ಸತ್ತುಸಗ್ಗಿಯಾದ (ಎಕ. X, ಬೌರಿಂಗ. ೪೬–೫; ಸು. 970). [ಕುಪ್ಪ$_2$ + ಅಣ್ಣ$_1$]

**ಕುಪ್ಪಯ್ಯ**, ಕುಪ್ಪೆಯ (ನಾ). ಒಬ್ಬಾತನ ಹೆಸರು: ಕುಪ್ಪಯ್ಯನುಂ ಚನ್ದನುಂ ಬಿಕ್ಕಿಯುಂ ತಮುತ್ತಮೂವರುಂ ಕಲ್ಲನಿಱಿಸಿದರ್ (ಎಕ. VIII, ಸೊರಬ. ೪೫೪–೭; 973). **ಕುಪ್ಪೆಯ**: ಪುರಿಗೆಱೆನಾಡ ಕುಪ್ಪೆಯನಾಳೆ (ಕಇ. I, ೧೩–೫; 865). [ಕುಪ್ಪ$_2$ + ಅಯ್ಯ$_1$]

**ಕುಪ್ಪರಿಸು**, ಕೊಪ್ಪರಿಸು$_2$, ಖೊಪ್ಪರಿಸು$_2$ (ಕ್ರಿ). ೧. (ಎರಡು ಪಾದಗಳನ್ನೂ ಜೋಡಿಸಿಟ್ಟು) ನೆಗೆ; ಜಿಗಿ; ಕುಣಿ; ಥಟ್ಟನೆ ಮೇಲಕ್ಕೇಳು; ಪುಟನೆಗೆ: ಅರುಣಜಲಧಿಯ ನೋಡಿಯೆನೆ ಕರುಳು ಕುಪ್ಪರಿಸಿದವು (ಕುಮ್ಯಾಭೀ. ಒ೨ಇ. ಪರಿ. ೧೫೧); ದುಃಖ ಶರಧಿ ಗಸಂಖ್ಯಾತ ಯೋಜನದಿಂದವುಕ್ಕಿನ ಶಸ್ತ್ರದ ಮೇಲೆ ಗುಳ್ಕುಗುಳ್ಕೆಂಬ ಶಬ್ದದಿ ಮರಮರಳಿಯು ಕುಪ್ಪರಿಸಲು ರಕ್ತಮಯವು (ಪೂಜ್ಯಚ. ೨–೩೦); ಮದಕರಿಗಳಂತೆ ತೋರಿಸುತ ಹೊಳೆಯುತ್ತ ಕುಪ್ಪರಿಸಿ ಕುಣಿದು (ಕರಿಕ. ೬೪–೨). ೨. ಆವರಿಸು; ಕವಿ; ಮುತ್ತು: ಬಾರಿಸಿತು ಬಲು ತಿಮಿರ ಘೋರಾಕಾರದಲಿ ಶತಕೋಟಿ ರಾಹು ಶರೀರದುರು ಕಾಳಿಕೆಯ ವೊಲು ಕುಪ್ಪರಿ [ಪಾಠಾಂ. ಳಿ] ಸಿತುರ್ವರೆಯ (ತೊರರಾ. ೬–೩೫–೩೭). ೩. ಮೇಲಕ್ಕೆತ್ತಿ ನೆಲದ ಮೇಲೆ ಎಸೆ; ಮೇಲೆತ್ತಿ ಕುಕ್ಕು; ಕುಕ್ಕರಿಸು: (ಅ). ೪. ಕುಸಿ; ಜರಿದು ಬೀಳು: ಲಾಸ್ಯದ ಕರತಳದ ಕಂತುಕವೊಯೆನಲುಪ್ಪರಿಸಿ ಕುಪ್ಪರಿಸುತ್ತಲಿರ್ದುದು ಗಿರಿ ಸಮುದ್ರದಲಿ (ತೊರರಾ. ೬–೫–೧೮); ಈ ಆಕಸ್ಮಿಕವಾದ ಆಪತ್ತಿನಿಂದ ನನ್ನ ಕಾರ್ಯ ಮಂದಿರವೇ ಕುಪ್ಪರಿಸಿ ಬಿದ್ದಂತಾಗಿದೆ (ಮಣಿಮು. ೩೩೯); ನನ್ನ ಧೈರ್ಯದ ಕಳಸವು ಕುಪ್ಪರಿಸುವುದೆಂದು ಹೀಗೆ ಕೇಳುವೆಯಾ? (ಮುತ್ತೈದೆ. ೧೪೯); ಕಣ್ಣುಕಟ್ಟಿ, ಗಿಮಿಗಿಮಿ ಗಾಣವಾಡಿಸಿತು ಗಾಳಿ ನೆನೆನೆನೆದು ಸ್ಲೇಟ್ಟೆ ಕುಪ್ಪರಿಸಿತ್ತು (ನೆಲಮು. ೧೪). **ಕೊಪ್ಪರಿಸು**$_2$: ೧. ನಿಲುವ ತಾಗುವ ಜಿಗಿದು ಕೊಪ್ಪರಿಸಿ ಭೀಮನಂ ತಲೆಬಿರಿಯೆ ಪೊಯ್ದು ಕೆಡೆ ಚಿಮ್ಮಿದಂ (ತುರಂಗ. ೭೫–೪೬). ೪. ಖೋಡಿ ಕೊಪ್ಪರಿಸಿದುದು ಧೈರ್ಯವನೀಡಿ ಱಿದುದಪಡೆಸೆ (ಕುಮ್ಯಾಅ. ೧೯–೩೭); ಕಾಮನ ಬಿಲ್ಲು ಹಿಡಿಯಲು ಹೋಗಿ ದೊಪ್ಪನೆ ಕೊಪ್ಪರಿಸಿ ಬಿದ್ದರು (ಮುಂಗಾಪು. ೭೦). **ಖೊಪ್ಪರಿಸು**$_2$: ೧. ಕಂಡವರಾರು ಸೇನಾನಿವಹದ ಪಾಡೆ ಕರ್ಣನ ಖಾತಿ ಖೊಪ್ಪರಿಸೆ (ಕುಮ್ಯಾಕ. ೧೧–೧೧); ತೇಜಿಯ ಚಳಚಮತ್ಕೃತ ಖುರದ ಹೊಯ್ಲುಗಳೊಳಗೆ ಕಿಡಿ ಖೊಪ್ಪರಿಸಿದವು (ತೊರರಾ. ೬–೫೧–೩); ದುರುಳ ಕುಂಭಾನುಜಕಬಂಧವು . . . ಗಿರಿಯವೊಲು ಖೊಪ್ಪರಿಸಿ ಕೆಡೆ ದುದು (ಅಂಬಿಕಾ. ೩೩–೬೨). [ಕುಪ್ಪರು + –ಇಸು$_3$]

**ಕುಪ್ಪರು** (ಕ್ರಿ). ನೆಗೆ; ಹಾರು. 'ಕುಪ್ಪರಿಸು' ಪರಾ. [ದೇ. ॥ ತಮಿ. ಕುಪ್ಪುಱು]

**ಕುಪ್ಪರೆ** (ನಾ). ಒಂದು ಸರಕು; ಅದರ ಮೇಲಿನ ತೆರಿಗೆ(?): ನಾಲ್ಕುನಾಡ ಸುಂಕಮಂ ಪೂರ್ವ್ವ ಮರ್ಯ್ಯಾದೆಯಂ ಪ್ರತಿಪಾಲಿಸಿ ಕೊಟ್ಟ ಸಾಸನಮೆಂತಂಡೊಡೆ ಅಡಕೆಲಕ್ಕಕ್ಕೆ ವೀಸ ೧೦ ಉಂಬಳಂ ಕೊಡಿಗೆ ಪಣ ೨ ವಿಜ ಕುಪ್ಪರೆಗೆ ಪಣ ೧ ವಿಜ (ಕಇಅ. ೧೧೫–೧೯–೨೮; ?). [?]

**ಕುಪ್ಪಲು** (ನಾ). ಗೊಬ್ಬರ. 'ಕುಪ್ಪಲು ಮಣ್ಣು' ಪರಾ. [ದೇ. ॥ ತಮಿ. ಕುಪ್ಪಲ್ = (ಗೊಬ್ಬರದ) ರಾಶಿ, ಕುಪ್ಪೆ]

**ಕುಪ್ಪಲುಮಣ್ಣು** (ನಾ). ಗೊಬ್ಬರದ ಮಣ್ಣು: ನಿಸ್ಸಾರವಾದ ಮಣ್ಣು ಅಸನದ್ವಾರದ ಮೂಲಕ ಕುಪ್ಪಲುಮಣ್ಣಾಗಿ ಹೊರಬೀಳುತ್ತದೆ (ಪ್ರಾಣಿಶಾ. ೧೯೧). [ಕುಪ್ಪಲು + ಮಣ್ಣು (< ಮಣ್)]

**ಕುಪ್ಪಶಿ** (ನಾ). (?): ಪೂರ್ವ್ವ ಮರ್ಯಾದೆಯ ಪ್ರತಿಪಾಲಿಸಿ ಕೊಟ್ಟ ಸಾಸನಮೆಂತೆಂದೊಡೆ . . . ಕುಪ್ಪಶಿಗೆ ಪಣ ೧ ವಿಜ ಕಪ್ಪುರ ಬಿಸಿಗೆಗೆ ಪಣ ೨ ವಿಜ ಪಟ್ಟೆ ಸೂತ್ರ ಬಿಸಿಗೆ ವಿ೬ (ಕಇಅ. ೧೧೬–೨೦–೩೨; ?). [?]

**ಕುಪ್ಪಸ**, ಕುಪುಸ, ಕುಪ್ಪುಸ, ಕುಬಸ, ಕುಬುಸ (ನಾ). ೧. ರವಕೆ; ಕಂಚುಕ : "ಕಂಚುಕಃ, ವಾರವಾಣಃ, ಕೂರ್ಪಾಸಃ, ನಿಚೋಳಕಃ – ಈ ೪ ಕುಪ್ಪಸಂ" (ಹಲಾಯು. ೯೧-೩೯೮); "ಕಂಚುಕಂ ಚೋಳಕಂ ಕುಪ್ಪುಸ ಬಾಚಿಯಕ್ಕುಂ" (ಮಂಗರಾ. ೧೦೧-೨೯); ಚಿನ್ನದ ಸವಂಗಮಪೂರ್ವದ ಮೊಚ್ಚೆಯಂ ಪವಣ್ಪಡೆದ ಸುವರ್ಣಪಾರಿವದ ಕುಪ್ಪಸಮೊಪ್ಪೆ ಬೆಡಂಗನಾಳ್ದು ... ವಿಳಾಸದ ಸೂಳೆಯರೊಪ್ಪಿ ತೋಱಿದರ್ (ಪಂಪಭಾ. ೯-೧೦೩); ಒಱೆವೆರಸಿದೇಱುಂ ಕುಪ್ಪಸವೆರಸಿದ ಮಾಹಮುಂ ... ಎಂತುಂ ಲೇಸಲ್ಲದಂತೆ (ಧರ್ಮಾಮೃ. ೧೪-೧೩೪); ಸೀರೆ ಕುಪ್ಪಸ ಬೇಡ ಹಾರ ಓಲೆಯು ಬೇಡ (ಕಏಪು. ೩೩-೫); ನೀಲಿಯ ಕುಪ್ಪಸ ತೊಟ್ಟ ದೇವಿಯೂ ಅನುಚರರೂ ಬರುವರು (ಆರ್ಯಕ. ೨). ೨. ಕವಚ; ಕಂಚುಕ : ತೊಟ್ಟ ಪೊಚ್ಚಪೊಸ ಕುಪ್ಪಸಮೊಪ್ಪಮನಾನೆ ... ವೇತ್ರಧರಂ ಜನತಾ ಮನೋಹರಂ (ದಶಕು. ೬-೧೧೧); ಬಡಿಕೋಲುಗಳನೆಕ್ಕಡವ ನುರು ಪಾರಿಯದ ಕುಪ್ಪಸವ ಮೇಳವಿಸಿ ಹೊಜವಂಟನವನೀಪಾಲ ಬೇಂಟೆಗೆ (ಕುವ್ಯಾಅ. ೨೩-೮); ಮೊದಲಿರ್ದ ಮುದ್ರೆಯಂ ಸಂಘಟಿಸಿ ಕುಪ್ಪಸದ ಸೆಜಗಿನೊಳ್ಕಟ್ಟಿ (ಜೈಮಿಭಾ. ೩೦-೨೯). **ಕುಪುಸ** : ೧. ಹರಡೇ ಕಂಕಣ ಕಮಲಾದೇವೀ ಒಂಕೀ ಬಾಪೂರೀನಿಟ್ಟನೊಳಗೇ ಕುಪುಸಾವೂ (ಹುಟ್ಟಿಹ. ೧೫೩). **ಕುಪ್ಪುಸ** : ೧. ಕುಪ್ಪುಸದೊಳರುವೆಯ ಚೆಂಡ ನೊತ್ತಿ ಬಿಗಿದುಂ (ಚಬಪು. ೧೦-೬೫). ೨. ತೊಡೆವರಂ ನೀಳ್ದಿರ್ದ ಕುಪ್ಪುಸವೆಸೆಯಲೆಯ್ತಂದು . . . ಬಿನ್ನವಿಸೆ ಪಡಿ[ಯ]ರನು (ಕುಮುರಾ. ೨-೧೦೩); ಕರಿಯ ಕಂಬಳಿಯ ಕುಪ್ಪುಸ ಕುಲ್ಲಾಯಿಕ್ಕಿ ... ಕೊಡಗರ ಪರಿವಾರ ಬಂದುದು (ಕಂನವಿ. ೨೦-೬೪); ಕುಪ್ಪುಸ ಪೂರ್ವದಲ್ಲಿ ಗಂಡಸರ ಮೇಲ್ಮೆಯ್ಯ ಕವಚವಾಗಿದ್ದು ಈಚೆಗೆ ಹೆಂಗಸರು ತೊಡುವ ವಸನಕ್ಕೆ ಮಾತ್ರ ಅನ್ವಯಿಸುವಂತೆ (ನಮ್ಮನು. ೧೯೪). **ಕುಬಸ** : ೧. ಅಕ್ಕ ತಂಗಿರ ಬಣ್ಣ ಅವರೆ ಹೂವಿನ ಬಣ್ಣ ಕುಬಸದ ಬಣ್ಣ ಕುತನೀಯ (ಹಳ್ಳಿಯ. ೧೧೨). **ಕುಬುಸ** : ೧. ಪೊಡವಿಯೊಳು ಪರಹಿತದ ಪಟ್ಟಾವಳಿಯನುಟ್ಟು ಕೊಡುವ ದಾನಗಳೆಂಬೊ ಕುಬುಸ ತೊಟ್ಟು (ಪುರಂದ. ೧-೩೪-೩); ರೇಶಿಮೆ ಜರತಾರಿಯ ಸೀರೆ ಕುಬುಸಗಳು (ಆಶ್ರಮ. ೧೦೯). ೩. ಹಾವಿನ ಪೊರೆ : "ನಿರ್ಮುಕ್ತಃ, ಮುಕ್ತಕಂಚುಕಃ – ೨ ಪೊರೆ ಬಿಟ್ಟ ಹಾವಿನ ಹೆಸರು ... ಕುಬುಸವಂ ತೊರೆದ ಹೊಸ ಹಾವು" (ಸಿದ್ಧಾಂತಿ. ೬೫).

**ಕುಪ್ಪುಸಮಾಡು, ಕುಬಸಮಾಡು, ಕುಬುಸಮಾಡು**= ಮೊದಲಸಲ ಗರ್ಭಿಣಿಯಾದವಳಿಗೆ ಐದು ಅಥವಾ ಆರನೆಯ ತಿಂಗಳಲ್ಲಿ ಔತಣವಿಕ್ಕಿ, ಹೂಮುಡಿಸಿ, ಹೊಸಕುಪ್ಪಸವನ್ನು ತೊಡಿಸುವ ಸಮಾರಂಭವನ್ನು ಮಾಡು, —ಉತ್ಸವವನ್ನು ಆಚರಿಸು : ಅಂದು ಅಕ್ಕನಿಗೆ ಕುಪ್ಪಸಮಾಡಿ ಆರತಿಮಾಡಿದಳು (ವೈನ. ೧೮೯); ಇಂದಿರಕ್ಕನಿಗೆ 'ಕುಬಸ' ಮಾಡುವ ಬಗ್ಗೆ ಅನೇಕರಿಂದ ಬಂದ ಆಮಂತ್ರಣ ಸ್ವೀಕರಿಸಲಾಗಿದೆ (ಮನೆಬಿ. ೪೫). [← ಪ್ರಾ. ಕುಪ್ಪಾಸ (< ಸಂ. ಕೂರ್ಪಾಸ)]

**ಕುಪ್ಪಸಕಾಕಿಬಳ್ಳಿ** (ನಾ). ಒಂದು ಜಾತಿಯ ಬಳ್ಳಿ; ಕುಕ್ಕಿಬಳ್ಳಿ : (ಕ). [ಕುಪ್ಪಸ ? + ಕಾಕಿ$_0$ + ಬಳ್ಳಿ]

**ಕುಪ್ಪಸಗಣಕೆ** 'ಕುಪ್ಪಸಗಣಿಕೆ' ನೋ.

**ಕುಪ್ಪಸಗಣಿಕೆ**, ಕುಪ್ಪಸಗಣಕೆ (ನಾ). ಒಂದು ಜಾತಿಯ ಗಿಡ : "ಕರುಭಿಃ – ಕುಪ್ಪಸಗಣಿಕೆ" (ಓಷಧಿ. ೨೦). **ಕುಪ್ಪಸಗಣಕೆ** : "ಟೊಬ್ಬಾಲ – ಕುಪ್ಪಸಗಣಿಕೆ" (ಓಷಧಿ. ೭೪). [ಕುಪ್ಪಸ ? + ಗಣಿಕೆ$_2$]

**ಕುಪ್ಪಸಿಗ** (ನಾ). ಕುಪ್ಪಸವನ್ನು ತೊಟ್ಟುಕೊಂಡವನು; ಕಂಚುಕಧಾರಿ : "ಬಳಸಿಗಂ – ಕುಪ್ಪಸಿಗಂ" (ಶಮದ. ನ. ೩೭ ಅಡಿಟ). 'ಬಳಸಿಗ' ಪರಾ. [ಕುಪ್ಪಸ + –ಇಗ ?]

**ಕುಪ್ಪಸೋಗೆ** (ನಾ). ಒಂದು ಊರಿನ ಹೆಸರು : ಕುಪ್ಪಸೋಗೆಯ ಕೊಙ್ಗಣ ಕೂಲೇಯೋದೆಯಮಾ × ಗೆ ಕೊಟ್ಟದು (ಎಕ. III, ಸಂಜನ. ೬೮-೪; 870). [ಕುಪ್ಪ$_1$ + ಸೋಗೆ$_2$]

**ಕುಪ್ಪಳ** (ನಾ). ಬೊಕ್ಕೆ; ಬೊಬ್ಬೆ; ಗುಳ್ಳೆ. 'ಕುಪ್ಪಳಿಸು$_4$' ಪರಾ. [ದೇ. ‖ ತಮಿ. ಕೊಪ್ಪಳ]

**ಕುಪ್ಪಳಿ** (ನಾ). ರಾಶಿ; ಗುಂಪು; ಗುಡ್ಡೆ; ಸಮೂಹ : ಎರಡುಂ ಕಿರಾತಬಳಮಾಗಳ್ ಕಾದಿದುದಸ್ರವಾರಿ ಧಾರಾವಳಿ ಕಂಠದೊಳ್ ಪರಿಯೆ ಮುಂಡದ ಕುಪ್ಪಳಿ ಶೈಲಮಪ್ಪಿನಂ (ಕುಸುಮಾ. ೧೪-೯೪); ಬಲ್ಗರುಳ ಬಣಂಬೆ ಕಾಳಿಜದ ಕುಪ್ಪಳಿ (ಶಾಂತೀಶ್ವ. ೬-೧೨); ಕರುಳ ಕುಪ್ಪಳಿ ಕಾಳಿಜದ ಹೆಮ್ಮರಡಿ ಕೆನ್ನೆತ್ತರಿನ ಮಡು (ತೊರರಾ. ೬-೪೫-೬೧). 'ಕುಪ್ಪೆ$_1$' ಪರಾ. [ದೇ. ‖ ತಮಿ. ಕುಪ್ಪಲ್]

**ಕುಪ್ಪಳಿಕೆ** (ನಾ). ಹಾರುವಿಕೆ; ನೆಗೆಯುವಿಕೆ; ಜಿಗಿಯುವಿಕೆ : "ರಂಘಃ, ರಂಘಣಂ, ರಂಘಣೀಯಂ, ರಂಘ್ಯಂ – ಈ ೫ ಕುಪ್ಪಳಿಕೆ" (ರಾಶಕ್ಯ. ೯೧); ಆ ಕುಪ್ಪಳಿಕೆಗೆ ಗಿಡ ಗೆಂಡೆಗಳ ಕಾವು ಮುರಿದು ಚಟ ಚಟ ಶಬ್ದ ಕೇಳಿಸುತ್ತಿತ್ತು (ಪುನರು. ೨೯೬). [? + –ಇಕೆ]

**ಕುಪ್ಪಳಿಸು$_1$** (ಕ್ರಿ). ೧. ರಾಶಿಯಾಗು; ಗುಂಪಾಗು; ಒಟ್ಟಾಗು : ಕರುಳೊಕ್ಕೊಕ್ಕವಿರ್ಯೊಳ್ ಕುಪ್ಪಳಿಸೆ ನೆಣದಳಿಱ್ ಸೂಸೆ (ಜಗವಿ. ೭-೫೭); ಉಡಿದು ಕುಪ್ಪಳಿಸಿದವು ರಥ (ಕುವ್ಯಾದ್ರೋ. ೧೦-೧೦); ಕಪ್ಪಿನ ದೇಹಗಳ್ಸೀದು ಮುನ್ನೂಱಾನೆ ಕುಪ್ಪಳಿಸಿದುವು ಭೂಮಿಯಲಿ (ಕಂನವಿ. ೧೪-೭೭); ನೆತ್ತರ ಪೆರ್ಪೊನಲಿಂ ಕುಪ್ಪಳಿಸಿ ಗುಪ್ಪೆಗೊಂಡ ದೊಂಡೆಗರುಳ್ಗಳಿಂ (ರಾಜಶೇ. ೫-೧೨೦ ವ). ೨. ರಾಶಿಹಾಕು; ಗುಡ್ಡೆಹಾಕು; ಒಟ್ಟುಗೂಡಿಸು : "ಕುಪ್ಪಳಿಸು – ರಾಶೌ (ಗುಡ್ಡೆಮಾಡು)" (ಶಮುಧಾ); ಸಿಡಿಲ ಕಿಡಿಗಳಂತಪ್ಪ ಕೆಂಡಂಗಳಂ ಕುಪ್ಪಳಿಸಿ ಗುಗ್ಗುಳವಂ ಮೇಲೆ ಸುರಿಯೆ (ಒಹರ. ೧೫೩-೧೯).
[ಕುಪ್ಪಳಿ + –ಇಸು$_3$]

**ಕುಪ್ಪಳಿಸು$_2$**, ಕುಪ್ಪುಳಿಸು (ಕ್ರಿ) ೧. ಹಾರು; ನೆಗೆದು ದಾಟು; ಜಿಗಿ : "ಕುಪ್ಪಳಿಸಿತೆನಲ್ಕೆ ನೆಗೆದು ದಾಂಟಿದುದಕ್ಕುಂ" (ಭಾರನಿ. ೯); "ಕುಪ್ಪಳಿಪುದೆನೆ ಹಾರುವುದು" (ಕಶರ. ೨೫); ಕುರುಳ್ಚಿ ಕುಪ್ಪಳಿಸಿ ಮುಂತುಂ ಪಿಂತುಮಂ ನೋಡಿ ಭೋಂಕನೆ ಸಿಂಹಧ್ವನಿಯಂದೆ ಗರ್ಜಿಪ (ಎಕ. XI, ಚಿತ್ರದು. ೩೪-೧೯; 1124); ತೆಮಳ್ದು ಕುಪ್ಪಳಿಸುವಂದುಗೆಯ ತೊಡರ ಬಲ್ಲಿಗೆ ಬಲ್ಲುಲಿಗಂ ಸುಟ್ಟುರೆ ಮುಸಗಿ ಸುಱಿದು ನೆಗೆದು ಕವ್ವರಿಸಿ ಕವಿವ ಸೊರ್ಕಿನ ಸೊವಡಿಂಗಂ (ಅನಂಪು. ೨-೨೯ ವ); ಕಳಚಿ ಹಾಸವನಬ್ಬರಿಸಿ ಕುಪ್ಪಳಿಸಿ [ಪಾಠಾಂ. ನುಬ್ಬರಿಸಲವ್ವಳಿಸಿ] ಕಂಠೀರವನ ಮೋಱೆಗೆ ನಿಲುಕಿದವು ... ಕುನ್ನಿಗಳು (ಕುವ್ಯಾಅ. ೧೩-೨೭); ಹುಲ್ಲುಗಾವಲಿನಲ್ಲಿ ಕುದುರೆಮರಿ ಕೆನೆದು ಕುಪ್ಪಳಿಸುತ್ತಿತ್ತು (ಪುನರು. ೨೯೬). ೨. ಆವರಿಸು; ಕವಿ; ಮುತ್ತು : ಚಂದ್ರಕಾಂತದೊಡ್ಡುಂಗಲ್ಗಳ ಕಾಂತಿಯೆ ಕುಪ್ಪಳಿಸಿದಂತವಿರಳಮಾಗಿ ಪೂತ ಚೂತಲತೆಯ ಬಾಳ್ಪೊಂಪದೊಳ್ (ಜಗವಿ. ೧೬-೩೪ ವ); ಆಗಸಕೆ ಶಾರದ ನೀರದಮಷ್ಟದಿಗ್ವಧೂಕುಳ ಕುಚಮಂಡಲಕ್ಕಮರ್ದ ನೂತ್ನದುಕೂಲದ ಮೇಲುದಾಗಿ ಕುಪ್ಪಳಿಸಿದುದಗ್ರ ಮಂಜು ... ಮಾಘಮಾಸದೊಳ್ (ಉದ್ಭಟ. ೪-೩೫); ಯಾರೋ ಬಂದ್ರು ಎಂದು ಸುದ್ದಿ ವಠಾರ ತುಂಬ ಕುಪ್ಪಳಿಸಿತು (ರಂಗವ. ೨೩೯). ೩. ಕುಸಿ; ಕುಸಿದು ಬೀಳು; ಜರಿದುಬೀಳು : ಹಲಗೆ ಗದೆಯನು ಮೇಲೆವಾಯ್ದುಪ್ಪಳಿಸಿದರೆ ಕುಪ್ಪಳಿಸಿತರಿಬಲ ಘಾಯ ಘಾಯದಲಿ (ಕುವ್ಯಾಕ. ೧೫-೨೭); ದಿಗ್ಗಜಂ ಡೆಂಡಣಿಸೆ ಕೂರ್ಮ ಕುಪ್ಪಳಿಸಿದಂ ದಳ ನಡೆಯಲು (ತುರಂಗ. ೪೨-೨೭); ನಿಲ್ಲಲೂ ಸಹ ಶಕ್ತಿ ಸಾಲದೆ ಹತ್ತಿರದಲ್ಲಿದ್ದ ಕುರ್ಚಿಯ ಮೇಲೆ ಕುಪ್ಪಳಿಸಿದಳು (ನವನೀ. ೭).

೪. ಜಾರಿಬೀಳು; ಸೂಸು: ನರಹಜಿಅದರೆ ಕರುಳು ಕುಪ್ಪಳಿಸಿದರೆ ನಾ ಧೃತಿಗೆಡೆನಯ್ಯಾ (ಬಸವ. ೬೯೧); ಮಣಿಹಾರಂ ಘಳಿಲೆನೆ ತಾಗಿ ಮಣಿಕುಟ್ಟಿಮದೊಳ್ ಕುಪ್ಪಳಿಸೆ (ಲೀಲಾವ. ೪-೭೪); ಶತಖಂಡಮಾಗೆ ನಿಜಶರಹತಿಯಿಂ ಜಾಂಬವ ಶರಂಗಳಂ ಕಡಿದನನಾದೃತನದಟ ಪಿಳ್ಕು ಮಲಗುಂ ಕ್ಷಿತಿಯೊಳ್ ಕೊಱೆವೋಗಿ ಕೂಡೆ ಕುಪ್ಪಳಿಸುವಿನಂ(ಮಹಾನೇ. ೭-೩೮); ಒಡ್ಡೊಡ್ಡೊಡ್ಡೆನುತೊಡ್ಡಿ ಮೇಳದವಳ್ ಕುಂಕುಮವಾರಿ ಕುಪ್ಪಳಿಸೆ ಪೊಯ್ದಳ್ (ಶಮುದ. ೧೯೫ ಪ್ರಯೋ). ೫. ಡವಡವ ಬಡಿದುಕೊಳ್ಳು; ಸ್ಪಂದಿಸು; ಮಿಡುಕು; ತುಡಿ: ಖಳನಸು ಕುಪ್ಪಳಿಸಿದುದು ಕಳವಳದಲಿ (ತೊರರಾ. ೬-೪-೨೬); ತಪ್ಪುವುದೊ ತಾಗುವುದೊ ಎಂದೆದೆ ಕುಪ್ಪಳಿಪ ದೇವಕಿಯ ಚರಣಕೆ ದೊಪ್ಪನೆಱಗೆಂದೊಯಿದು ಸಂತಸವೆಱಗಿಸಿದನೊಲಿದು (ಸಾಳ್ವಭಾ. ೧೨-೭೬). ೬. ಕೆಡವು; ಬೀಳಿಸು: ಕಡುಪಿಂದಾ ಶಾಕನಂ ಕುಪ್ಪಳಿಸಿದೆಡೆಯಿಂದಾ ಪೂತನೀರಕ್ತಮಂ ಪೀರ್ದೆಡೆ (ಅರ್ಧನೇ. ೮-೨೩). ಕುಪ್ಪುಳಿಸು: ೧. ಕೆಳದ್ದ್ವ ಕಿಶೋರ ಕೇಸರಿಗೆ ಕೋಳ್ಮಸಗಿರ್ದ್ದ ವಿಶೋರಗಂಗೆ ಕುಪ್ಪುಳಿಸಿ ಕುನುಂಗಿ ಪಾಯ್ವ × × ಗರ್ಜ್ಜಿಸುತಿಪ್ಪ ಜವಂಗೋಪ್ಪಡಗ್ಗಳಮೆನೆ ಕೊಂದು ಕೂಗುವನರಾತಿಬಳಂ ತಲೆದೋಱೆ ಬಮ್ಮಿಗಂ (ಸೌಇಇ. XX, ೭೬-೩೨; 1118). 'ಕ್ರುಪ್ಪರಿಸು' ಪರಾ.

[ ? + -ಇಸು$_3$]

**ಕುಪ್ಪಳಿಸು$_3$** (ಕ್ರಿ). ೧. ಬಿಸಿಯಾದ ದ್ರವದಿಂದ (ಚರ್ಮವೊದಲಾದುವನ್ನು) ಸುಡು; ಬೊಬ್ಬೆಯೆಬ್ಬಿಸು. ೨. ಬೊಬ್ಬೆಯೇಳು; ಗುಳ್ಳೆಯೇಳು: (ಕ). ೩. ಅತಿಯಾಗಿ ಮಾಗು; ಕಳಿತು ಹೋಗು: ಬಿಸಿಲಿನ ಜಳಕ್ಕೆ ಬಾಳೇಹಣ್ಣು ಕುಪ್ಪಳಿಸಿ ಹೋಗಿದೆ (ರೂಢಿ).

[ಕುಪ್ಪಳ + -ಇಸು$_3$]

**ಕುಪ್ಪಳೂರು** (ನಾ). ಒಂದು ಊರಿನ ಹೆಸರು: ಮಗಂ ಬಿದಿಯಮ್ಮಂ ಕುಪ್ಪಳೂರ ಮಹಾಜನಕ್ಕೆ ಗೋಸಹಸ್ರಕೆ ಪೊನ್ನ ಕೊಟ್ಟು (ಎಕ. VIII, ಸೊರಬ. ೨೪೮-೧; 950). [ಕುಪ್ಪಳ ? + ಊರು$_3$ (< ಊರ್)]

**ಕುಪ್ಪಾಲ್** (ನಾ). ಒಂದು ಸ್ಥಳದ ಹೆಸರು: ಬೆಳ್ಮಾಣಿಯ ಶ್ರೀಗಾವುಣ್ಡರುಂ ಕುಪ್ಪಾಲ್ಮಾದವರುಂ(ಎಕ. III, ಶ್ರಿರಂಗ. ೧೬೦-೨೦; 800).

[< ಕೊಪ್ಪಲ್ ?]

**ಕುಪ್ಪಿ$_1$** ಕುಪ್ಪೆ$_3$ (ನಾ). ೧. ಬಾಣ ವೊದಲಾದುವನ್ನಿಟ್ಟುಕೊಳ್ಳುವ ಚರ್ಮದ ಕೋಶ; ಬತ್ತಳಿಕೆ: ಹೊಸ ಹೊದೆಗಟ್ಟುವಂಬುಗಳ ಕುಪ್ಪಿಯನಾವರಿಪಾದ್ರ್ರಜಾಳಮಂ ಪಸರಿಪ . . . ಪುಳಿಂದ ಸಂಕುಳದ ಪೆರ್ಗಣದಿಂದೆಸೆದತ್ತು ಪಕ್ಕಣಂ (ಚಂದ್ರಪ. ೫-೫೪). ೨. ಗಾಜು, ಪಿಂಗಾಣಿ, ಲೋಹ ಮುಂತಾದವುಗಳಿಂದ ಮಾಡಿದ ಪಾತ್ರೆ; ಜಾಡಿ; ಹೂಜಿ; ಸೀಸೆ: "ಕುಪ್ಪಿ (ಕುಪ್ಪಿಗೆ) – ಕೂಪೀ – ಬಾಟ್ಲ್" (ತದ್ಭಕೋ. ೮); ರೂಪ್ಯದ ಕುಪ್ಪಿಗಳೊಳಂ, ಪಳಿಕಿನ ಪುಡಿಕೆಗಳೊಳಂ . . . ತೀವಿದೆನಿತಾನುಂ ತೆಱದ ಬಂಧುರ ಸುಗಂಧವಸ್ತುಸಂದೋಹಮಂ ಪಿಡಿದು (ಜಗವಿ. ೬-೧೮ ವ); ಗುಳಿಗೆಯಂ ಮಾಡಿ ಗಾಜಿನ ಕುಪ್ಪಿಯಲ್ಲಿ ಇಟ್ಟು (ವಿವೈವಿ. ೪೫); ಒಂದು ಕುಪ್ಪಿ ಸಾರಾಯಿ ತರಿಸಲು ಮನೆಯೊಡೆಯನು ಮರೆತಿರಲಿಲ್ಲ (ಧೂಮುಮ. ೪೨). **ಕುಪ್ಪೆ$_3$**. 'ಕಳ್ಳಗುಪ್ಪೆ' ಪರಾ. [< ಸಂ. ಕೂಪೀ]

**ಕುಪ್ಪಿ$_2$** 'ಕುಪ್ಪೆ$_1$' ನೋ.

**ಕುಪ್ಪಿ$_3$**, ಕುಪ್ಪೆ$_4$ (ನಾ). ಒಂದು ಬಗೆಯ ಗಿಡ: ಬಿಳಿಕೊಮ್ಮೆ, ಬಿಳಿ ಉಪ್ಪಿ ಎಲೆ, ಆಡುಸೋಗೆ, ಹಾಲುಕೊರಟಗೆ, ಕುಪ್ಪಿ ಎಲೆ. . . . ಇವುಗಳ ಪ್ರತ್ಯೇಕ ರಸ ಸೇ ೧ ರಂತೆ (ಸಕವೈ. ೪೪೫ ಪಂ). **ಕುಪ್ಪೆ$_4$**. 'ಕುಪ್ಪೆ ಸೊಪ್ಪು' ಪರಾ. [ದೇ. ‖ ತಮಿ. ಕುಪ್ಪೆ]

**ಕುಪ್ಪಿಕಟ್ಟುಮಾತ್ರೆ** (ನಾ). = ಕುಪ್ಪಿಮಾತ್ರೆ: (ಕ).

[ಕುಪ್ಪಿ$_1$ + ಕಟ್ಟು$_2$ + ಮಾತ್ರೆ]

**ಕುಪ್ಪಿಕ್ಕು** (ಕ್ರಿ). ನೆಗೆ; ಹಾರು; ಲಂಘಿಸು; ನಲಿದು ಮುದುವಿಕ್ಕಿ ಗುಮ್ಮಡಿಗೆಲವಂ ಪೆರ್ಗರಡಿಯಂತೆ ಕುಪ್ಪಿಕ್ಕಿ ಕರಂ ಕೆಲೆವಂ ಕಣ್ಣಪ್ಪಂ (ಶ್ರಿಪುವಿ. ೭-೧೩೭). [ಕುಪ್ಪು$_3$ + ಇಕ್ಕು]

**ಕುಪ್ಪಿಗಿಡ** (ನಾ). ಒಂದು ಔಷಧಿಗಿಡ: ತುಪ್ಪಕೀರೆ, ಕುಪ್ಪಿಗಿಡ (ವ್ಯೆಔಗಿ. ೨-೨೨). [ಕುಪ್ಪಿ$_3$ + ಗಿಡ (< ಗಿಡು)]

**ಕುಪ್ಪಿಗೆ** (ನಾ). ೧. = ಕುಪ್ಪಿ$_1$: ಕಾಜಿನ ಕುಪ್ಪಿಗೆಯಲಿಪ್ಪ ನೀರೆಣ್ಣೆಯಂತೆ (ಮೋಳಿಮಾ. ೧೬೧-೬೦೧); ರಸಾಯನದ ಕುಪ್ಪಿಗೆಯಂತೆ ತೋರ್ಪ ತನಿವಣ್ಣಂ ತಿಱಿಯಲ್ (ಅರ್ಧನೇ. ೩-೮೦); ಚತುರ್ವಲ ತುಮುಲೋಚ್ಚಾವಚನಾದದಿನಾದಂ ತೀವಿದ ಕುಪ್ಪಿಗೆವೊಲಾದುದಬ್ಜಭವಾಂಡಂ (ಜಗವಿ. ೧೨-೯); ಪನಿನೀರ ಕುಪ್ಪಿಗೆಯಾಂತು (ಕುರಾಸಾಂ. ೨೧-೪೯). ೨. ಕೊಳವೆ: ಕದಳೀಗರ್ಭದೆ ವಿರಚಿಸಿ ಮದನಂ ಕುಪ್ಪಿಗೆಯನಲ್ಲಿ ಕುಳಿರ್ವ ಮರ್ದಂ ತೀವಿದನಡಕಲಿಟ್ಟನವನೆನಿಸಿದುವೆಸೆವ ಸಿತೇಕ್ಷುಧಂಡಮಂಡಲಿ ಬನದೊಳ್ (ಮಲ್ಲಿಪು. ೨-೪೩). ೩. ಬಾಣದ ತುದಿಯಲ್ಲಿ ಜೋಡಿಸುವ ಚೂಪಾದ ವೊನೆಯನ್ನುಳ್ಳ ಲೋಹದ ಹೊದಿಕೆ, —ವೊನೆಯಾದ ಅಲಗು: ಬಿಸಿಬಿಸಿಯ ಬೋಳೆಗಳ ತಳಪದ ರಸುಮೆಗಳ ಕವಲಂಬುಗಳ ಡಾಳಿಸುವ ಕಣಲಿಗೆಯಲಗುಗಳ ಕುಪ್ಪಿಗೆಯ ಕೋಲುಗಳ (ತೊರರಾ. ೬-೪೪-೯). ೪. ಮುತ್ತು, ರುದ್ರಾಕ್ಷಿ ವೊದಲಾದುವುಗಳಿಗೆ ಅಳವಡಿಸುವ ಅರ್ಧಗೋಲಾಕಾರದ ಚಿನ್ನದ ಮುಚ್ಚಳ, —ಹೊದಿಕೆ, —ಸಂಪುಟ: ಸೂಕ್ಷ್ಮಾನೆದಲೆಯ ಮಣಿಯಂ ತಂದು ಕುಪ್ಪಿಗೆಯನಿಕ್ಕಿ ವೆಜ್ಜಂ ಮಾಡಿ ನರದ ನೇಣಿಂದೆ ಹಸಮಾಡಿದ ಏಕಾವಳಿಗಳಂ (ಸಮ್ಯಕಾ. ೧೦-೩೪); ಕೊರಳಿಗೆ ಮೂವತ್ತೆರಡು ರುದ್ರಾಕ್ಷಿಗಳ ಕುಪ್ಪಿಗೆ ಹಾಕಿಸಿ, ಜೊತೆಗೆ ಗೌರಿಶಂಕರವನ್ನು ಸೇರಿಸಿ ಮಾಡಿಸಿದ ಹಾರ . . . ಅರ್ಪಿಸಿದರು (ಶರಚ. ೮೧೪). ೫. ಹೆಂಗಸರು ಕಿವಿಯಲ್ಲಿ ಧರಿಸುವ, ಅರ್ಧಗೋಳಾಕಾರದ ಚಿನ್ನದ ಒಡವೆ, —ಕರ್ಣಾಭರಣ: ಚಿನ್ನದ ಒಡವೆಗಳೆಂದರೆ ಕುಪ್ಪಿಗೆ, ಬುಗುಡಿಕಾಯಿ, ಜಡೆಹೂವು (ನನ್ನೂರು. ೭೨). ೬. ದೇಹದ ಒಂದು ಅವಯವ; ಮೊಣಕಾಲಿನ ಮೇಲಿನಚಿಪ್ಪು; ಮಂಡಿಚಿಪ್ಪು (?): ಸಂಚಿತವಾಗಿ ಕುಪ್ಪಿಗೆಯುಂ ಕೂರ್ಚೆಯುಮೂರ್ಧ್ವಜಾನುಮಂಜರಿಯೊಳು (ಅಶ್ವವೈ. ೧-೨೮). ೭. ಪಾತ್ರೆಗಳ ಬಾಯಿಗೆ ಹಾಕುವ ಮುಚ್ಚಳ, —ಬಿರಡೆ: ಮಿಸುನಿಕರುಶ[ಕ]ಲಶಂಗಳೊಳು ಸರಸರಸದುಂಬಿ ಸಸಿನೆ ನೀಲದ ಕುಪ್ಪೆಯಂ ಮುಚ್ಚಿ (ನವಮೋ. ೨೪-೨೪).

[< ಸಂ. ಕೂಪಿಕಾ]

**ಕುಪ್ಪಿಗೆ ಮಾತ್ರೆ** (ನಾ). = ಕುಪ್ಪಿಮಾತ್ರೆ: (ಕ).

[ಕುಪ್ಪಿಗೆ + ಮಾತ್ರೆ]

**ಕುಪ್ಪಿಮಾತ್ರೆ** (ನಾ). ಭರಣಿ, ಹೂಜಿ ಅಥವಾ ಸೀಸೆಯಲ್ಲಿ ಸಿದ್ಧಪಡಿಸಿ ಇಟ್ಟ ಔಷಧದ ಮಾತ್ರೆ, —ಗುಳಿಗೆ: (ಕ).

[ಕುಪ್ಪಿ$_3$ + ಮಾತ್ರೆ]

**ಕುಪ್ಪಿಸು$_1$** (ಕ್ರಿ). ರಾಶಿಯಾಗು; ಒಟ್ಟುಗೂಡು: ಗಂಟಲೊಳ್ ದೊಡ್ಡವೆಣನಡ್ಡಂ ಸಿಲ್ಕೆ ಮೆಲ್ಕಂ ಮುಗುಚ್ಚುವುದುಂ ನೆತ್ತರುಂ ನೆಣನುಂ ಕರುಳುಂ ಕಬ್ಬಸಮುಮೆಲ್ವುಮಡಗುಮೊಡಗಲಸಿ ಸುರಿದು ಮುಂದೆ ಕುಪ್ಪಿಸಿ ಕುಪ್ಪೆಯಾಗಿ ಮಾನಸರಂ ತೆಗಿಸಿ [ಪಾಠಾಂ. ತೆಗಪಿ] (ಲೀಲಾವ. ೬-೧೭). [ಕುಪ್ಪು$_1$ + -ಇಸು$_3$]

**ಕುಪ್ಪಿಸು$_2$** (ಕ್ರಿ). ಕುಪ್ಪಳಿಸುವಂತೆ ಮಾಡು: (ಕ).

[ಕುಪ್ಪು$_2$ + -ಇಸು$_3$]

**ಕುಪ್ಪು**1, ಗುಪ್ಪು1 (ಕ್ರಿ). ೧. ರಾಶಿಮಾಡು; ಗುಪ್ಪೆಹಾಕು; ಗುಡ್ಡೆಕೂಡು; ಒಟ್ಟಾಗಿಸು: "ಕುಪ್ಪು – ಪುಂಜೀಕರಣೇ (ರಾಶಿಮಾಡು), ರೋಗಭೇದೇ ಚ" (ಶಮುಧಾ). **ಗುಪ್ಪು**1: ೨. "ಮರೆಯಾಗಿರು, ಮುಚ್ಚಿರು, ಮುಸುಕಿನಲ್ಲಿರು" (ಕಸ್ತೂ.ಕೋ. ೩೦೪).

[ದೇ. ‖ ತಮಿ. ಕುಪ್ಪೈ; ಮಲ. ತೆಲು. ಕುಪ್ಪ]

**ಕುಪ್ಪು**2, ಗುಪ್ಪು2 (ಕ್ರಿ). ೧. ಹಾರು; ನೆಗೆ; ಕುಣಿ: ತಿಂದು ತೇಗಿ ತೇಗಿ ತೂಗಿ ಕೆಲೆಗಲೆದು ಕುಪ್ಪಿ ಕುಪ್ಪಿಯುರ್ದಿ ಕೊರ್ದಿ ನಲಿದಾಡುವ ಭಲ್ಲೂಕನಿಕಾಯದಿಂ (ಗಿರಿಕ. ೧–೧೨೮ ವ); ಕುಪ್ಪುವ ಪುಲ್ಲೆಗಳ್ಗುರುಳ ನೊಯ್ಯನೆ ಸೇರಿಸು (ಉದ್ಭಟ. ೨–೫೧). ೨. ಕದಕ್ಕದಿಸು; ಅದಿರು; ಕಂಪಿಸು: ಕುಣಿವುತ್ತಿದ್ದುವು ಮೊಲೆ ಕುಪ್ಪುತಿದ್ದುವು ತುಟಿ ಪೆಣೆವುತಿದ್ದುವು ದುಂಡುದೋಳು (ಭರಚ. ೪೧–೭೭). **ಗುಪ್ಪು**2: "ಕುಪ್ಪಳಿಸು" (ಕಸ್ತೂ.ಕೋ. ೩೦೪).

[ದೇ. ‖ ತಮಿ. ಕುಪ್ಪುಜು; ತುಳು. ಗುಪ್ಪು = ಜಿಲ್ಲು]

**ಕುಪ್ಪು**3 (ನಾ). ಹಾರುವಿಕೆ; ನೆಗೆಯುವಿಕೆ; ಕುಣಿತ. 'ಕುಪ್ಪಿಕ್ಕು' ಪರಾ. [< ಕುಪ್ಪು2]

**ಕುಪ್ಪು**4, ಗುಪ್ಪು3 (ನಾ). ೧. ಉಬ್ಬಾದ ವಸ್ತು; ಡುಬ್ಬ. ೨. ಮಣ್ಣಿನ ಮುದ್ದೆ, —ಉಂಡೆ. 'ಒಲೆಗುಪ್ಪು' ಪರಾ. ೩. ಒಂದು ಬಗೆಯ ರೋಗ; ದೇಹದ ಮೇಲೆ ಗುಂಡಗೆ ವಿಕಾರವಾಗಿ ಮತ್ತು ದೊಡ್ಡದಾಗಿ ಏಳುವ ದುರ್ಮಾಂಸದ ಗಡ್ಡೆ: "ಕುಪ್ಪು–ಪುಂಜೀಕರಣೇ (ರಾಶಿಮಾಡು), ರೋಗಭೇದೇ ಚ" (ಶಮುಧಾ); "ಪುಂಜೀಕರಣ ಲಂಘನಾಮಯಭೇದಗಳೊಳು ಕುಪ್ಪು" (ಶಬ್ದಮಂ.೧೧೧). **ಗುಪ್ಪು**3: ೨. ಒಲೆಯ ಗುಪ್ಪುಗಳಂತೆ ಮೂರು ದಿಣ್ಣೆಗಳಿವೆ. (ಅಲೆಮಾ. ೪); ಆರು ಒಲೆಗಳಿಗೆ ಇಡಲೆಂದು ಹದಿನೆಂಟು ಗುಪ್ಪುಗಳನ್ನು ಅಂದರೆ ಪಾತ್ರೆ ಇರಿಸಲು ಚೌಕವಾಗಿ ತಯಾರುಮಾಡಿದ ಮಣ್ಣಿನ ಗಟ್ಟಿಗಳನ್ನು ತಯಾರು ಮಾಡಿದರು (ಮೂಲಾನ. ೧೧೯). [?]

**ಕುಪ್ಪುಟೂರು** (ನಾ). ಒಂದು ಊರಿನ ಹೆಸರು: ಪೊಜಲಸಾಸಿರ್ವರ್ಗ್ಗಿರ್ಗಂ ಸಾಲೆ ಆಚನ್ದ್ರತಾರಕಂ ಕುಪ್ಪುಟೂರಾ ಸಾಸಿರ್ವರ್ಗ್ಗಿರ್ಗಂ ಸಾಲೆ ಅಚನ್ದ್ರತಾರಕಂ (ಎಕ. VII, ಶಿಕಾರಿ. ೪೫–೯; 890 ?); ಶ್ರೀಮತು ಕುಪ್ಪುಟೂರಟ್ಟಾಣಾಸ್ತರಕ್ಕಂ (ಸೌಇಇ. XX, ೪೨–೨; ?). [? + ಊರು3 (< ಊರ್)]

**ಕುಪ್ಪುಸ** 'ಕುಪ್ಪಸ' ನೋ.

**ಕುಪ್ಪುಳ** (ನಾ). (ಕರಾ) ಸಗಣಿಯ ಮೇಲಿನ ಮಣ್ಣು ಗುಡ್ಡೆ; ತಿಪ್ಪೆಮಣ್ಣು: ಕುಪ್ಪುಳದ ಮೇಲೆ ನಾಯಿಕೊಡೆ ಹುಟ್ಟುತ್ತದೆ (ರೂಢಿ). [< ಕುಪ್ಪೆ1]

**ಕುಪ್ಪುಳಿಸು** 'ಕುಪ್ಪಳಿಸು1' ನೋ.

**ಕುಪ್ಪುಳು** (ನಾ). (ಕರಾ) ಸದಾ ಕುಪ್ಪಳಿಸುತ್ತಿರುವ ಒಂದು ಜಾತಿಯ ಹಕ್ಕಿ; ಸಂಬಾರಕಾಗೆ; ಭರದ್ವಾಜಪಕ್ಷಿ: ಈ ದಿನ ಅನಂತ ಒಂದು ಕುಪ್ಪುಳುವನ್ನು ಹೊಡೆದ (ರೂಢಿ).

[← ತುಳು. ಕುಪುಳು, ಕುಪ್ಪು]

**ಕುಪ್ಪೆ**1, ಕುಂಪೆ, ಕುಪ್ಪಿ2, ಗುಂಪೆ, ಗುಪ್ಪೆ1, ಗೊಪ್ಪೆ1 (ನಾ). ೧. ರಾಶಿ; ಗುಡ್ಡೆ; ಒಟ್ಟಿಲು; ಸಮೂಹ: ಅನ್ನೆ ಬನ್ದು ತೊಲ್ಪೊಜಿಡಿಎ ಕಲ್ಕುಪ್ಪೆಏ ಅನ್ನೆ ಬನ್ದು ಕೊನ್ದೆವಡಿಎ (ಮೈಆರಿ. ೧೯೩೭, ೫೩–೨೮; 550); ಕಸಕುಪ್ಪೆಯೊಳ್ ತಾಮರೆ ಮೂಡಿದುದಂ (ವಡ್ಡಾರಾ. ೮೫–೨೦); ಧಾನ್ಯದ ಕುಪ್ಪೆ ಮೇಲಿಟ್ಟ ವರಜಲಪಾತ್ರೆ ಸೊಗಸಲು (ವರ್ಧಚ. ೫–೪೭); ಚಪಲ ಸೆಟ್ಟಿಗಳು ಒಪ್ಪವಡೆದು ಕುಳಿತಿರ್ದರು ಹಣ ಹೊನ್ನ ಕುಪ್ಪೆಯ ಮುಂದಿಟ್ಟುಕೊಂಡು (ಮೋಹತ. ೩–೨೭). ೨. ಹೊಲಸು; ಕೊಳಕು; ಕಸಕಡ್ಡಿಗಳ ಒಟ್ಟಿಲು; ತಿಪ್ಪೆ: "ಗೊಬ್ಬರದ ರಾಶಿ" (ಸಂಕೋ. ೧೨೧); ಖಳ ನೊಳವಿಂಗೆ ಕುಪ್ಪೆ [ಪಾಠಾಂ. ತಪ್ಪೆ, ಮುಪ್ಪೆ, ಕೆನ್ನೆ] ವರಮೆಂಬವೊಲಾಂಬರಮುಂಟೆ ನಿನ್ನದೊಂದಳವು (ಪಂಪಭಾ. ೨–೬೦); ಪುಟುವಿಂಗೆ ಕುಪ್ಪೆವರಂ (ಅನಂಪು. ೧೩–೮೪). 'ಕುಪ್ಪೆತೊಟ್ಟಿ' ಪರಾ. ೩. ದಿಣ್ಣೆ; ತೆವರು. 'ಜಾರುಗುಪ್ಪೆ' ಪರಾ. **ಕುಂಪೆ**: ೧. ಕಾಗೆಯ ಬಳಗದಂತೆಯುಂ ಕಪ್ಪೆಯ ಕುಂಪೆಯಂತೆಯುಂ (ಚಕವಂ. ೨೩–೧೩೨). **ಕುಪ್ಪಿ**2: ೧. ಬೆಟ್ಟದ ಬೂದನನಂ ಧರೆಯಕಲ್ಲ ಕುಪ್ಪಿ (ಎಇ. XV, ೯೮–೨೫; 1074). **ಗುಂಪೆ**: ಆದರಿಂದ ದೊಡ್ಡದೊಂದು ಉಸುಬಿನ ಗುಂಪೆ ಉಂಟಾಗುವದು (ಮುಂಬಯಿ. ೫–೮); ಕಲ್ಲುಗುಂಪೆಗಳಿಂದ ಕೂಡಿದ್ದ ಓಣಿ (ರಕ್ತರೂ. ೩). **ಗುಪ್ಪೆ**1: ಅಡಕೆಯ ಗುಪ್ಪೆಯಷ್ಟಾಭರಣಗಳುಂಟು (ಭರಚ. ೮೦–೧೩); ಯಾರ್‍ರೇ ಇಲ್ಲಿ ಕಸದ ಗುಪ್ಪೆ ಹಾಕಿರೋರು (ರಂಗವ. ೩೧); ನೆಲಕ್ಕೆ ಕುಸಿದ ಮಣ್ಣಿನ ಗುಪ್ಪೆ (ನವ್ಯಧ್ವ. ೫); ಈ ಬಿಳಿಯ ಮೋಡಗಳು ಮರಳಿನ ಗುಪ್ಪೆಗಳ ಹಾಗೆ ಅಲ್ಲಲ್ಲಿ ಹರಡಿಕೊಂಡಿವೆ (ರಾಕ್ಷಮು. ೪೩). **ಗೊಪ್ಪೆ**1: ೨. ಸ್ನೇಹಿತನಿದ್ದ ಗೊಪ್ಪೆಯನುಪಪತಿ ಬಂದು ನೇಹದಿ ನೋಡಲೆಂದಗೆಯೆ (ಶ್ರೀಪಾಲ. ೮–೨೭).

[ದೇ. ‖ ತಮಿ. ಕುಪ್ಪ, ಕುಪ್ಪೈ; ಮಲ. ಕುಪ್ಪ; ತುಳು. ಕುಪ್ಪೆ, ಗುಪ್ಪೆ; ಕೊಡ. ಕಪ್ಪಿ; ತೆಲು. ಕುಪ್ಪ; ಪರ್ಜಿ. ಗೊಂಡಿ. ಕುಪ್ಪ; ಕುಇ. ಕುಪ; ಕುವಿ. ಕೂಪ; ಮಲ್ಟೊ. ಕೊಪ]

**ಕುಪ್ಪೆ**2 'ಕೊಪ್ಪೆ' ನೋ.

**ಕುಪ್ಪೆ**3 'ಕುಪ್ಪಿ1' ನೋ.

**ಕುಪ್ಪೆ**4 'ಕುಪ್ಪಿ3' ನೋ.

**ಕುಪ್ಪೆಗೂಡಿಸು** (ಕ್ರಿ). ರಾಶಿಹಾಕು; ಗುಡ್ಡೆಮಾಡು: ಮರದ ಕೆಳಗೆ ಬಿದ್ದಿರುವ ತರಗೆಲೆಗಳನ್ನು ಗುಡಿಸಿ ಕುಪ್ಪೆಗೂಡಿಸು (ರೂಢಿ).

[ಕುಪ್ಪೆ1 + ಕೂಡಿಸು1]

**ಕುಪ್ಪೆಗೆಡೆ** (ಕ್ರಿ). ಕುಪ್ಪೆಯಾಗಿ ಬೀಳು; ರಾಶಿಬೀಳು: ಸ್ವಲ್ಪ ಕಾಷ್ಠವನಗ್ನಿ ಮೋಹಿಸೆ ಕುಪ್ಪೆಗೆಡೆವುದು ಭಸ್ಮ (ಗಗತಾ. ೧೬–೪೭).

[ಕುಪ್ಪೆ1 + ಕೆಡೆ1]

**ಕುಪ್ಪೆಗೆಯ್** (ಕ್ರಿ). ರಾಶಿಮಾಡು; ಗುಡ್ಡೆಹಾಕು: ಅವಳ್ ಕದುಬಿಂ ಕರುಮಾಡಮನೇಱಿಯಿಮ್ಮುಂಗಳದೊಳ್ ಪೊಮ್ಮಟಿಗೞಿದಪ್ಪುದು ಗುಡಿಸಿ ಕುಪ್ಪೆಗೆಯ್ವಂ ಬರ್ಪುದೆಂಬುದುಂ (ಚಕವಿ. ೬–೨೩೭ ವ).

[ಕುಪ್ಪೆ1 + ಕೆಯ್1]

**ಕುಪ್ಪೆಗೊಳ್**, ಗುಪ್ಪೆಗೊಳ್ (ಕ್ರಿ). ರಾಶಿಯಾಗು; ಗುಂಪಾಗು: ಕೆಲದೊಳ್ಕುಪ್ಪೆಗೊಂಡ ಮಾಣಿಕಂಗಳ ಬೆಳಗಿನೊಡನೆ ಬಾಳಕನ ಮೆಯ್ವೆಗಳು ದಳವೇಱಿ (ಅರ್ಧನೇ. ೪–೯೫ ವ). **ಗುಪ್ಪೆಗೊಳ್**: ಮಡುಗಟ್ಟಿದ ನೆತ್ತರ ಪೆರ್ಪೊನಲಿಂ ಕುಪ್ಪಳಿಸಿ ಗುಪ್ಪೆಗೊಂಡ ದೊಂಡೆಗರುಳ್ಗಳಿಂ (ರಾಜಶೇ. ೫–೧೨೦ ವ). [ಕುಪ್ಪೆ1 + ಕೊಳ್1]

**ಕುಪ್ಪೆತೊಟ್ಟಿ** (ನಾ). ಕಸಹಾಕಲು ಮಾಡಿರುವ ಬಾನಿ; ಕಸದ ತೊಟ್ಟಿ: ತನ್ನ ದೇಹವನ್ನು ಕುಪ್ಪೆತೊಟ್ಟಿಯ ಮರೆಯಿಂದೆತ್ತಿಕೊಂಡು ಈಚೆಗೆ ಬಂದನು (ಕಾಬಝೂ. ೩೧); ಮನೆಯ ಕಸಮುಸುರೆಗಳನ್ನು ಕುಪ್ಪೆತೊಟ್ಟಿಯಲ್ಲಿಯೇ ಹಾಕಬೇಕು (ರೂಢಿ).

[ಕುಪ್ಪೆ1 + ತೊಟ್ಟಿ2]

**ಕುಪ್ಪೆನಾಡು** (ನಾ). ಒಂದು ದೇಶದ ಹೆಸರು: ಶ್ರೀಮತ್ಪೆರ್ಮ್ಮಾಡಿಗಳ್ . . . ಮಯ್ದುನ ಗೊಮ್ಮಯ್ಯಗೆ ಕುಪ್ಪೆನಾಡ × ಪ್ಪನಾಡ ಮಣಲೂರೆಂಬಗ್ರಹಾರದ (ಎಕ. IV, ಹುಣಸೂ. ೬೪–೬; 976).

[ಕುಪ್ಪೆ0 + ನಾಡು]

**ಕುಪ್ಪೆಮಣಿ** (ನಾ). ಕುಪ್ಪಿಗೆಯುಳ್ಳ ಮಣಿ: ಪವಿತ್ರಭಾಗಮಂಗೈದು ಬೆಳ್ಮುತ್ತುಗಳ ಪವಣಿಸುತ ಪೊಂಗೇದಿಗೆಯುಮ ತರತರಕಿಟ್ಟು ಸವಿನಯದಿ ಪೆಣೆದುಮುದರಾಗ್ರಮಸು ಕುಪ್ಪೆ ಮ ಣಿ ಗ ಣ ದ ಕುಚ್ಚುಂಗಳಮರ್ಚಿ (ನವಮೋ. ೧೩-೪೫). [< ಕುಪ್ಪಿಗೆ + ಮಣಿ$_3$]

**ಕುಪ್ಪೆಯ** 'ಕುಪ್ಪಯ್ಯ' ನೋ.

**ಕುಪ್ಪೆಯರಸ** (ನಾ). ಒಬ್ಬಾತನ ಹೆಸರು: ಧವಳ ಷಡ್ಗುಣಾಳಂಕಾರ ಅಹವಾದಿತ್ಯ ಶ್ರೀಮತ್ಕುಪ್ಪೆಯರಸಪ್ಪೂರ್ವಿಗೆಜಿ ನಾಡನಾಳುತ್ತಿರೆ (ಸೌಇಇ. IX-i, ೧೨-೧೧; 867). [ಕುಪ್ಪೆಯ (< ಕುಪ್ಪಯ್ಯ) + ಅರಸ$_1$]

**ಕುಪ್ಪೆಯೆಳ್ಳು** (ನಾ). ಒಂದು ಬಗೆಯ ಎಳ್ಳು (?): "ಪವಿತ್ರಾ – ಕುಪ್ಪೆಯೆಳ್ಳು, ಪುತ್ರಜೀವಿ" (ಓಷಧಿ. ೯೧).

[ಕುಪ್ಪೆ$_0$ + ಎಳ್ಳು (< ಎಳ್)]

**ಕುಪ್ಪೆವಾಯ್** (ಕ್ರಿ). (ಪ್ರಾಣಿಗಳ ವಿಷಯದಲ್ಲಿ) ನೆಗೆ; ಜಿಗಿ: ವಿರಹಿಗೆ ಬೇಗೆಯಂ ಪ್ರಿಯರ್ಗೆ ರಾಗಮನಾಗಿಸುಗುಂ ಬನಂಗಳೊಳ್ ಮೊರೆವ ಮದಾಳಿ . . . ಕುಪ್ಪೆವಾಯ್ವ ಕಪಿ ಮೂಡಿ ಮುಟುಂಗುವ ಜಕ್ಕವಕ್ಕಿ (ಸೂಕ್ತಿಸು. ೪-೪೧). [< ಕುಪ್ಪು$_2$ + ಪಾಯ್$_1$]

**ಕುಪ್ಪೆಸೊಪ್ಪು** (ನಾ). ಕುಪ್ಪೆಗಿಡದ ಸೊಪ್ಪು, —ಎಲೆ: ವಾಂತಿ ವಿರೇಚನಕ್ಕೆ ಕುಪ್ಪೆಸೊಪ್ಪಿನ ರಸ ಮೂರುದುಡ್ಡು ತೂಕವನ್ನು ಸೇವಿಸೆ ಛರ್ದಿಯಾಗುವುದು, ಪ್ರವೃತ್ತಿಯಾಗುವುದು (ಸಕವೈ. ೧೯೯).

[ಕುಪ್ಪೆ$_4$ (< ಕುಪ್ಪಿ$_3$) + ಸೊಪ್ಪು$_3$]

**ಕುಪ್ಪೇವುತಾಯಿತ**, ಕುಬೇತಾಯಿತ (ನಾ). ಒಂದು ಬಗೆಯ ಯಂತ್ರ; ಕುಪ್ಪೆಯ ತಾಯಿತ: ಚೆಲುವಾದ ಚಂದ್ರಹಾರಂ ಶಿವದಾರ ಕುಪ್ಪೇವುತಾಯಿತವನು (ಸಿದ್ಧಕಾ. ೧೧-೧೨). **ಕುಬೇತಾಯಿತ**: ಶಿವದಾರಕ್ಕೆ ಪೋಣಿಸಿದ ಬಂಗಾರದ ಕುಬೇತಾಯಿತಗಳು ಕತ್ತಿನ ಮೇಲೆ ಕಂಗೊಳಿಸುತ್ತವೆ (ಬೆಟ್ಟಹೂ. ೧೩). [ಕುಪ್ಪೇವು ? + ತಾಯಿತ]

**ಕುಪ್ಯ** (ನಾ). ೧. ಕ್ಷುದ್ರಲೋಹ; ತಾಮ್ರ, ಕಂಚು, ಹಿತ್ತಾಳೆ ಮೊದಲಾದ ಲೋಹ: "ಕುಪ್ಯಂ – ಆ ಬೆಳ್ಳಿ ಬಂಗಾರಗಳಿಗಿಂತಲೂ ಬೇರೆಯದು. ತಾಮ್ರ, ಹಿತ್ತಾಳೆ, ಕಂಚು ಮುಂತಾದುವುಗಳ ಪೆಸರು" (ಸಿದ್ಧಾಂತಿ. ೨೭೦). ೨. ಚಿನ್ನ ಮತ್ತು ಬೆಳ್ಳಿಗಳ ಹೊರತು ಇತರ ಲೋಹದಿಂದ ಮಾಡಿದ ನಾಣ್ಯ, ಪಾತ್ರೆ ಮೊದಲಾದ ವಸ್ತು: "ಅಕುಪ್ಯಮೆಂಬುದು ಹೊನ್ನು ಬೆಳ್ಳಿಯಂ; ಉಳಿದೊಡಮೆ ಕುಪ್ಯಮೆಂಬುದು" (ಹಲಾಯು. ೧೪-೮೧); "ವಸುರಜತಮಾಗಿರ್ಪ ಧನಮದಕುಪ್ಯ ಕದನ್ಯಂ ಕುಪ್ಯಮಕ್ಕು" (ಮಂಗರಾ. ೧೭-೧೬); ಅತಿಥಯಮಂ ತಮಗೆ ಚಮೂಪತಿ ಮಾಡಿದೊಡಳ್ಳಿ ಕುಪ್ಯಸಾರಾದಿ ಧನತತಿಯನಿತ್ತು (ಆದಿಪು. ೧೨-೬೬); ಇರೆ ಕುಪ್ಯ ನಿವೇಶನ ಧನವರ ಧಾನ್ಯ ಕ್ಷೇತ್ರ ಮುಖ್ಯಮೆಂಬಿವು . . . ಪರಿಮಾಣ ಪರಿಗ್ರಹವ್ರತಕ್ಕತಿಚಾರಂ (ಸುಕುಮಾ. ೬-೧೭). ೩. ಚಿನ್ನ ಅಥವಾ ಬೆಳ್ಳಿಯ ಆಭರಣಗಳ ಹೊರತು ಇತರ ಎಲ್ಲ ಅಲಂಕಾರ ಸಾಮಗ್ರಿ; ಪಟ್ಟೆವಸ್ತ್ರ, ಧಾವಳಿ, ಗಂಧ, ಕುಂಕುಮ ಮೊದಲಾದುದು: "ಕುಪ್ಯ – ಕ್ಷೌಮ ಕಾರ್ಪಾಸ ಕೌಶೇಯ ಚಂದನ ಕುಂಕುಮಾದಿ ಕುಪ್ಯಮುಂ" (ತತ್ವಪ್ರ. ೨೮೨). 'ಅಕುಪ್ಯ' ಪರಾ. [ಸಂ.]

**ಕುಪ್ರತರ್ಕ** (ನಾ). ಕೆಟ್ಟ ವಾದ ; ಹುರುಳಿಲ್ಲದ ಚರ್ಚೆ; ಕುತರ್ಕ. 'ಕುಪ್ರತರ್ಕಿಗ' ಪರಾ. [ಸಂ.]

**ಕುಪ್ರತರ್ಕಿಗ** (ನಾ). ಕೆಟ್ಟ ರೀತಿಯಲ್ಲಿ ವಾದಿಸುವವನು; ಕುತರ್ಕ ಮಾಡುವವನು; ದುಷ್ಟತಾರ್ಕಿಕ: ಕುಪ್ರತರ್ಕಿಗನಾವನಾದೊಡೆ ಭೂಪ್ರಚರನಾಗೈದೆ ತಿರಿತಿಂಬ ಪ್ರಸಿದ್ಧನಶುದ್ಧನಲ್ಲದೆ ಭಕ್ತನೆಂತಹನು (ಬಸವು. ೪೩-೬೨). [< ಸಂ. ಕುಪ್ರತಾರ್ಕಿಕ]

**ಕುಪ್ರಬೋಧೆ** (ನಾ). ಸದೋಷವಾದ ಜ್ಞಾನ; ಅನ್ಯಥಾ ಜ್ಞಾನ; ತಪ್ಪು ತಿಳುವಳಿಕೆ; ತಪ್ಪುಭಾವನೆ. 'ಕುಪ್ರಬೋಧಾತ್ಮ' ಪರಾ.

[< ಸಂ. ಕುಪ್ರಬೋಧ]

**ಕುಪ್ರಬೋಧಾತ್ಮ** (ನಾ). ಅನ್ಯಥಾ ಜ್ಞಾನದಿಂದ ಕೂಡಿದ ಮನಸ್ಸನ್ನುಳ್ಳವನು; ತಪ್ಪುತಿಳುವಳಿಕೆಯನ್ನುಳ್ಳವನು: ಅಪ್ರತಿಮನಹ ಶಿವಮಹಿಮೆಯಂ ಕುಪ್ರಬೋಧಾತ್ಮರಿರ ಕೇಳಲ್ಪಾಪ್ತಿಯೇ ನಿಮಗೆ (ಬಸವು. ೫೧-೫೧). [ಸಂ. ಕುಪ್ರಬೋಧಾತ್ಮನ್]

**ಕುಪ್ರಸಿದ್ಧ** (ಗು). ಕೆಟ್ಟಹೆಸರು ಬಂದ; ಅಪಖ್ಯಾತಿಗೆ ಗುರಿಯಾದ; ಅಪಕೀರ್ತಿಗೊಳಗಾದ: ನಗರದ ಒಂದು ಕುಪ್ರಸಿದ್ಧ ಹೋಟಲಿನಲ್ಲಿ ಅನೀತಿಯ ಕಾರ್ಯದಲ್ಲಿ ತೊಡಗಿದ್ದರೆಂದು ಪೋಲೀಸರು ಅನೇಕ ಜನರನ್ನು ಹಿಡಿದಿದ್ದರು (ದೂರಸ. ೧೧). 'ಸುಪ್ರಸಿದ್ಧ' ಪರಾ. [ಸಂ.]

**ಕುಪ್ರಸಿದ್ಧಿ** (ನಾ). ಕೆಟ್ಟಹೆಸರು; ಅಪಕೀರ್ತಿ; ಅಪಯಶಸ್ಸು: ಮುದುಕ ಕಾದಿರನು – ಸಹಿಷ್ಣುತೆಗಾಗಿ ಕುಪ್ರಸಿದ್ಧಿ ಗಳಿಸಿದವನು ಕೂಡ ಧೀರತೆಯಿಂದ ನಿರ್ವಹಿಸಲು ಅಸಮರ್ಥನಾದ (ಪ್ರೇಮಾಶ್ರ. ೧೦೧). [ಸಂ.]

**ಕುಪ್ರಿಯ** (ಗು). ಪ್ರಿಯವಲ್ಲದ; ಅಹಿತವಾದ: (ಕ). [ಸಂ.]

**ಕುಬಕು**, ಕುಬುಕು (ಕ್ರಿ). (ಕುಡುಗೋಲಿನಿಂದ ನೆಲವನ್ನು ಸ್ವಲ್ಪ ಸ್ವಲ್ಪವಾಗಿ) ಕೆತ್ತು, —ಕುಕ್ಕು: (ಕ). **ಕುಬುಕು**: (ಕ). [?]

**ಕುಬಟ್ಟೆ** (ನಾ). ೧. ಕೆಟ್ಟದಾರಿ; ಕಲ್ಲುಮುಳ್ಳುಗಳನ್ನುಳ್ಳ ಮಾರ್ಗ; ಕಾಡುದಾರಿ. ೨. ಕೆಟ್ಟನಡತೆ; ದುರ್ಮಾರ್ಗ. ೧,೨: ಆರು ಬಲ್ಲರು ಶಿವಯೋಗದ ನೆಲೆಯ . . . ಅಷ್ಟ ಕುಬಟ್ಟೆಯ ಮೆಟ್ಟಿಯಾರಣ್ಯದ ದುಷ್ಟ ಮೃಗಂಗಳೆಚ್ಚೆಚ್ಚು ಕೊಂದು ಅಷ್ಟ ಮದಕರಿಯನಟ್ಟಿಟ್ಟು ಭಕ್ಷಿಸಿ ನಷ್ಟವಾಗಿ ಹೋದ ಹೊಲೆಯಂಗಲ್ಲದೆ (ಶಿವಗೀ. ೯೪೧). [ಕು$_0$ ? + ಬಟ್ಟೆ$_1$]

**ಕುಬಸ** 'ಕುಪ್ಪಸ' ನೋ.

**ಕುಬಾಚಾರಿ** (ನಾ). ಒಬ್ಬಾತನ ಹೆಸರು: ಇಲ್ಲಿಯ ಬೆಸಮ್ಗಳಾರೆನ್ದೊಡೆ ಕಾಜಗೊಡೆಯನುಂ . . . ಕುಬಾಚಾರಿಯು (ಎಕ. III, ನಂಜನ. ೧೩೯-೯; 915 ?). [ಕುಬ$_0$ + ಆಚಾರಿ]

**ಕುಬಾಯಿ** (ನಾ). ಗಾಜು, ಪಿಂಗಾಣಿ ಅಥವಾ ಲೋಹಗಳಿಂದ ಮಾಡಿದ ಪಾತ್ರೆ; ಜಾಡಿ; ಹೂಜಿ: ರತ್ನಮಯವಾದ ಕುಬಾಯಿಗಳಲ್ಲಿ ಪನ್ನೀರುಗಳಂ ತುಂಬಿ (ಸೌಗಂಧಿ. ೪೦೭-೩೨).

[< ಸಂ. ಕೂಪಿಕಾ ?]

**ಕುಬಾಳು** (ನಾ). ಚಾವಣಿಯ ತುದಿ, —ಶಿಖರ: ಮನೆಯ ಕುಬಾಳಿನಲ್ಲಿ ಸಿಡಿಲಮಣಿಯನ್ನು ಜೋಡಿಸಲಾಗಿದೆ (ಕಂಬಹು. ೬೦).

[← ತುಳು. ಕುಬಳ್]

**ಕುಬಿಬಿಱು** 'ಕುಬುಬ್ಬಿಱು' ನೋ.

**ಕುಬುಕು** 'ಕುಬಕು' ನೋ

**ಕುಬುಜ** (ನಾ). ಕುಬ್ಜ; ಕುಳ್ಳ; ಗಿಡ್ಡ: ಕುಬುಜವಾಮನ ವಿಕೃತಿ ವಿಗ್ರಹದ ಶೂಲಹಸ್ತದ ಬಹುವಿಧಾಯುಧ ಜಾಲದೃಷ್ಟಿಯ ಭೂತ ಭೇತಾಳಾಳಿ (ನಿಭಾಗ. ೪-೨-೧೬). [< ಸಂ. ಕುಬ್ಜ]

**ಕುಬುಜಿಸು** (ಕ್ರಿ). ದೇಹವನ್ನು ಸಂಕೋಚಗೊಳಿಸಿ ಕುಳ್ಳುಮಾಡು; ಬಾಗು: ಕಾರಣಿಕ ಮೃಗವಮುನೆಲ್ಲ ಕಂಡು ನೀಡಡಿಯಿಟ್ಟು ಕುನಿದು ಕುಬುಜಿಸಿ ಕುಗ್ಗಿ [ಪಾಠಾಂ. ಕುಸಿದು ಕುಬುಜಿನೆ ಕೂಗಿ] ದಂಡೆನೋಟಂ ಶರಂ ಸಂಧಾನದೊಳು ಮಗ್ಗಿ (ಕಣ್ಣರ. ದೇ. ೧೨೭-೨೩).

[ಕುಬುಜ + –ಇಸು$_3$]

**ಕುಬುಜೆ** (ನಾ). ಕುಬ್ಜೆ; ಕುಳ್ಳಿ: ನಿಗುಚಿದನು ಕುಬುಜೆಯ ಕಳೇಬರವ (ನಿಭಾಗ. ೩-೨-೨೬); ಅಂದಿಗೆ ಕುಬುಜೆಯನಾದರಿಸಿದ ಚೆಂದ (ಚಿಕವಿ. ೬-೪೦). [< ಸಂ. ಕುಬ್ಜಾ]

**ಕುಬುದ್ಧಿ** (ನಾ). ೧. ಕೆಟ್ಟಬುದ್ಧಿ ; ದುರ್ಮತಿ : ಕಡೆಯ ಪಾಳ್ದೇಗುಲ ದೊಳದನೊಂದೆಡೆಯೊಳಿರಿಸಿ ಕುಬುದ್ಧಿಯಲಿ ಸಂಗಡಿಸಿ (ಬಸಪು. ೩೨-೫೨). ೨. ಕೆಟ್ಟಬುದ್ಧಿಯನ್ನುಳ್ಳವನು ; ದುಷ್ಟಬುದ್ಧಿ : ಕುಜುವಾನಿಸನಾನೆ ಕುಬುದ್ಧಿಯಾಣೆ ಕಟ್ಟುಜುಕೆಯ ದುಷ್ಟನಾನೆ (ಶಬಶಂ. ೫-೧೯). [ಸಂ.]

**ಕುಬುಬಿಱು, ಕುಬಿಬಿಱು, ಕುಬ್ಬಿಱು** (ಕ್ರಿ). ಕುಬುಬು ಎಂದು ಶಬ್ದಮಾಡುತ್ತ ಗಟ್ಟಿಯಾಗಿ ಕೂಗು, —ಬೊಬ್ಬಿಡು : ಅಟ್ಟಿ ಕುಣಿ ಯಲು ಕುಬುಬಿಱಿದು ತಲೆಯೊಟ್ಟಲನು ತೂಱಿದನು (ತೊರರಾ. ೩-೬-೪೨); ಪುಷ್ಪಚಾಪನಧಿಕ ವಿರಹಿಗಳ ಕೋಪದೆ ಕುಬುಬಿಱಿದೆಸೆ ಯುತ ಮನಕತಿ ತಾಪವನಿತ್ತನೇವೇಳ್ವೆ (ಕಂನವಿ. ೯-೧೪); ಕುಬುಬಿಱಿದು ಪೋಯೆಂದಾದರ್ ಖತಿ ಮಸಗುತೆ (ಘೋರಾಸು. ೧೦-೬). **ಕುಬಿಬಿಱಿ** : ಕುಲಿಲಿಯೆಂದಾಲುತ ಕುಬಿಬಿಱಿಯುತ ನಿನ್ನ ತಲೆಯನು ತಱಿದು ಬಿಸುಡಲಿ (ಕರ್ಣವ್ಯ. ೩-೨೯); ಉಭಯ ಬಲದಲಿ ಚೂಣಿಯ ಪಟುಭಟರಾಗ ಕುಬಿಬಿಱಿದಬ್ಬರಗೈದು . . . ಇಱಿದಾಡಿದರು (ಕಂನವಿ. ೧೯-೬೧). **ಕುಬ್ಬಿಱಿ** : ವಾರಿಜಾಕ್ಷಾಜಕರ್ಣಳಾರ್ಭಡಿಸಿ ಕುಬ್ಬಿಱಿದು ಪುಟನೆಗೆದು ಕುಕಿಲಿಱಿದರು (ವೀಶೈಪು. ೩-೧೭-೧೦).

ಕುಬುಬಿಱುದಾಡು = ಬೊಬ್ಬಿಡು ; ಗಟ್ಟಿಯಾಗಿ ಕೂಗಾಡು : ಬಳಿಕಿತ್ತಲಿಕ್ಕಿತು ಕುಣಿದು ಕುಬುಬಿಱಿವಾಡಿ ಭೈರವಗಣ ದಿನೇಂದ್ರ ಕುಮಾರಬಲವ (ತೊರರಾ. ೬-೧೮-೯). [ಕುಬುಬು + ಇಱು$_1$]

**ಕುಬುಬು, ಕುಬುಬೂ** (ನಾ). ಒಂದು ಅನುಕರಣ ಶಬ್ದ : ಕುಬು ಬೆನುತ ಬೊಬ್ಬಿಱಿದನುಗ್ರ ಪ್ರಬಲ ವಾನರರಾಜನಿದಿರಿನಲಿ (ಕುವ್ಯಾಕ. ೨೩-೧೩); ಇರ್ವರುಂ ಮತ್ತೆ ಮೈವಱಿದೊಱಗಿದಂತಿರ್ದು ಕುಬುಬೆಂದು ಕೂಡಿ ಘೂರ್ಮಿಸುತಿದ್ದರೇವೊಗಳುವೆಂ (ವೀಶೈಪು. ೩-೮-೪೧); **ಕುಬುಬೂ** : ಮರುಳುಗಳೊಬ್ಬುಳಿಗೊಂಡು ವರ್ತಿಸುವ ಕೊಬ್ಬಿ ಕೊಲ್ಲಣಿಗೆವರಿದು ಕುಬುಬೂಯೆಂದು ಬೊಬ್ಬಿಡುತಿಹವದಱೊಳಗೆ (ಅಂಜಚ. ೬-೧೫೩).

ಕುಬುಕುಬುಬು (ದ್ವಿರುಕ್ತಿ) : ವೃಷಭೇಶ ಘರ್ಜಿಸುತೊವ್ವೆ ಹೂಂಕಾರಗೊಡಲಿಕಾಕಾಶವೊಡೆದಂತೆ ಘುಡುಘುಡಿಸಲಮುಮುಮುಮು ಕುಬುಕುಬುಬೆಂದು ಬೊಬ್ಬಿಱಿದುದು (ಸಿಂಗಿರಾ. ೩-೧೫).

**ಕುಬುಬೂ** 'ಕುಬುಬು' ನೋ.

**ಕುಬುಸ** 'ಕುಪ್ಪಸ' ನೋ.

**ಕುಬೇತಾಯಿತ** 'ಕುಪ್ಪೇವುತಾಯಿತ' ನೋ.

**ಕುಬೇರ** (ನಾ). ೧. ಅಷ್ಟದಿಕ್ಪಾಲಕರಲ್ಲಿ ಒಬ್ಬ ; ಉತ್ತರದಿಕ್ಕಿನ ಅಧಿಪತಿ ; ಧನಪತಿ : "ಧನಪತಿಯಕ್ಷಂ ಶ್ರೀದಂ . . . ಧನದಂ ಕುಬೇರ ನಳಕಾಧಿನಾಯಕಂ" (ವಸ್ತುಕೋ. ೮-೪೬); "ಸುರರಾಜನಗ್ನಿಕಾಲಂ ನಿರುತಿ ವರುಣ ನಾ ಮರುತಂ ಕುಬೇರನೀಶಂ ದಿಶಾಧಿಪರು" (ಮಂಗರಾ. ೧೭-೧೮); "ಆ ಕುಬೇ [ಪಾಠಾಂ. ವೇ]ರಂ ಪೊನ್ನೊಡೆಯ" (ಕಬ್ಬಿಕೈ. ೧೫). ೨. ದುಷ್ಟರ ಶರೀರದಲ್ಲಿಯೂ ವಾಸ ಮಾಡು ವವನು ; ವಿಷ್ಣು : ಕ್ರೂರದೈತ್ಯರೊಳಿದ್ದು ತಾನೆ ಪ್ರೇರಿಸುವ ಕಾರಣದಿ ಹರಿಗೆ ಕುಬೇರನೆಂಬೊರು (ಹಸಾರ. ೧೮-೩೮). ೩. ಒಂದು ಬಗೆಯ ಧೂಪ : ಕವಿವ ಕುಬೇರಧೂಪದ ಕವಿಲ್ಪೊಗೆಯಂ ನವಮೇಘಮಾಲಿಕಾ ನಿವಹವೆಂಗೆತ್ತು (ಕಾವ್ಯಾವ. ೭೧೧). ೪. (ಆಲಂ) ಧನಿಕ ; ಶ್ರೀಮಂತ : ನಿನ್ನ ಚೆಲುವಿನಿಂದ ಎಷ್ಟು ಕುಬೇರರ ಮಾನಭಂಗವಾಗಿದೆಯೋ (ರಕ್ತಧ್ವ. ೨೭).

ಕುಬೇರನ ಸಂಪತ್ತು = ಬಹಳ ಸಂಪತ್ತು ; ಅತುಳೈಶ್ವರ್ಯ : ಅವಳೊಡನೆ ಕುಬೇರನ ಸಂಪತ್ತೇ ಬರುವುದೆಂದೂ ಉಬ್ಬಿಸಿದನು (ಕಾಲೂರ. ೪ ಕಥಾಸಾರ). [ಸಂ.]

**ಕುಬೇರಕಾಂತ** (ನಾ). [ಜೈನ] (ಚಕ್ರವರ್ತಿಯ ಬಳಿ ಬಂದು ಸೇರುವ) ಒಂದು ಅಕ್ಷಯ ಭಂಡಾರ, —ಕೋಶ : ಕುಬೇರಕಾಂತ ಮೆಂಬ ತವದ ಭಂಡಾರಮುಂ (ಆದಿಪು. ೧೫-೩ ವ).
[ಕುಬೇರ + ಕಾಂತ]

**ಕುಬೇರದಳ** (ನಾ). ಕುಬೇರನ ಸೈನ್ಯ : ಇಂದ್ರದಳ ಅಗ್ನಿದಳ ಯಮ ದಳ ಕುಬೇರದಳ ಈಶಾನ್ಯದಳ . . . ಕುಬೇರದಳವೇಜಲು ಧರ್ಮಬುದ್ಧಿ ಯಾಗಿಹ (ಪದಗೋ. ೨-೨೦೭). [ಕುಬೇರ + ದಳ (= ದಲ)]

**ಕುಬೇರಪಟ್ಟಣ** (ನಾ). ಕುಬೇರನ ರಾಜಧಾನಿ: ಅಲಕಾಪುರಿ : "ಅಲಕಾ – ಕುಬೇರಪಟ್ಟಣಂ" (ಕಾಶಕ್ಯ. ೧೫೭). [ಕುಬೇರ + ಪಟ್ಟಣ]

**ಕುಬೇರಪುತ್ರ** (ನಾ). ೧. ಕುಬೇರನ ಮಗ; ನಳಕೂಬರ. ೨. (ಆಲಂ) ಸಿರಿವಂತ; ಐಶ್ವರ್ಯವಂತ: ಅಲ್ಲ ರಾಯ್ರೇ, ಬ್ಲೇಕ್ ಮಾರ್ಕೆಟ್ ಇರೋವಾಗ ತಮ್ಮಂಥ ಕುಬೇರಪುತ್ರರಿಗೇನು ಕೊರತೇ ಅಂದೆ (ಕಂಕಕೂ. ೭). [ಕುಬೇರ + ಪುತ್ರ]

**ಕುಬೇರಾದ್ರೀಂದ್ರ** (ನಾ). ಕುಬೇರನ ಆಧಿಪತ್ಯದ ಬೆಟ್ಟ; ಕೈಲಾಸಪರ್ವತ: ಕೇವಲಿ ಕುಬೇರಾದ್ರೀಂದ್ರಮುಂ ಮುಟ್ಟದಂ (ಪಂರಾಮಾ. ೧೬-೭೮). [ಕುಬೇರ + ಅದ್ರಿ + ಇಂದ್ರ]

**ಕುಬೇರೇಶತಂತ್ರ** (ನಾ). [ತಂತ್ರಶಾ] ವಿಜಯಾಗಮದ ಎಂಟು ತಂತ್ರಗಳಲ್ಲಿ ಒಂದು : ವಿಜಯತಂತ್ರ . . . ಕುಬೇರೇಶ ತಂತ್ರ, ವಿಮಲತಂತ್ರ, ಮಹಾಘೋರತಂತ್ರವೆಂದು ವಿಜಯಾಗಮದೆಂಟು ಭೇದಂಗಳು (ವಿವೇಕ. ೭೦). [ಕುಬೇರ + ಈಶ + ತಂತ್ರ]

**ಕುಬೋಧಕ** (ನಾ). ಕೆಟ್ಟದ್ದನ್ನು ಬೋಧಿಸುವವನು; ದುಷ್ಟ ಬೋಧಕ : (+). [ಸಂ.]

**ಕುಬೋಧನೆ** (ನಾ). ಕೆಟ್ಟ ಉಪದೇಶ; ದುಷ್ಟ ಬೋಧನೆ: (+).
[ಸಂ. ಕುಬೋಧನ]

**ಕುಬ್ಜ** (ಗು). ೧. ಕುಳ್ಳಾದ; ಗಿಡ್ಡಾದ; ಮೋಟಾದ; ಎತ್ತರ ವಲ್ಲದ: "ಖರ್ವಂ ಕುಬ್ಜಮಾನತಂ ತಾನದೆಂಬುದಕ್ಕುಂ ಹ್ರಸ್ವಂ" (ವಸ್ತುಕೋ. ೧೦೪-೩೭). ೨. ಗೂನಾದ; ಗೂನುಬೆನ್ನಿನ. 'ಕುಬ್ಜ ದೇಹ' ಪರಾ. (ನಾ). ೩. ಗೂನುಬೆನ್ನಿನವನು; ಕೂನ: "ಗಡುಳಃ, ಕುಬ್ಜಃ – ಈ ೨ ಗುಜ್ಜಂ" (ಹಲಾಯು. ೧೦೦-೪೫೭); ಕುಬ್ಜ ವಾಮನ ಬಧಿರ ಮೂಕ ಕಿರಾತೋನ್ಮತ್ತ ಜಡಜನಂಗಳುಮಂ (ಆದಿಪು. ೪-೫೪ ವ); ಕುನಖಿ ಕುಷ್ಠ ಕುಶೀಲಕನು ಕುಬ್ಜನನು . . . ಉಪ್ಪವಡಿಸುವ ಸಮಯದೊಳಿನಿಬರನು ಕಾಣ್ಬುದು ಮಹೀಶರಿಗಂಗ ವಲ್ಲೆಂದ (ಕುವ್ಯಾಉ. ೩-೧೦೭). ೪. ಕುಳ್ಳ; ಗಿಡ್ಡ; ವಾಮನ: "ಕುಬ್ಜಂ ಗುಡ್ಡನೆಂದೆನಿಕ್ಕುಂ" (ಮಂಗರಾ. ೧೧೪-೬); ಅತಿ ಹರ್ಷದಿಂ ಸೊಗಯಿಸುವತುನ್ನತರುಮಾಗಿ ಕುಬ್ಜರುಮಾಗಿ ಲೀಲೆಯಿಂದೆಸೆದಿರ್ಪರು (ಅರಾಚ. ೧೭-೧೪). ೫. ಕೊಂಕು; ವಕ್ರತೆ: "ಭು[ಪಾಠಾಂ. ಭ] ಗ್ನಮುಂ ವಾಮನದ್ವಿತಯಂ ಕುಬ್ಜಮೆನಿಕ್ಕು" (ನಾನಾರ. ೧೩೩). [ಸಂ.]

**ಕುಬ್ಜಕ** (ನಾ). ಕುಳ್ಳ; ಗಿಡ್ಡ; ವಾಮನ. 'ಕುಬ್ಜಕ ಸಂಸ್ಥಾನ' ಪರಾ. [ಸಂ.]

**ಕುಬ್ಜಕಸಂಸ್ಥಾನ** (ನಾ). [ಜೈನ] ತೊಂಬತ್ಮೂರು ನಾಮಕರ್ಮ ಪ್ರಕೃತಿಗಳಲ್ಲಿ ಒಂದು : ಕುಬ್ಜಕ ಸಂಸ್ಥಾನ: ಈ ಕರ್ಮದ ಉದಯ ದಿಂದ ಕುಬ್ಜದೇಹ ನಿರ್ಮಾಣವಾಗುವುದು (ಜೈನಪ. ೩೭೩).
[ಕುಬ್ಜಕ + ಸಂಸ್ಥಾನ]

**ಕುಬ್ಜಕಿ** (ನಾ). ತಂತೀವಾದ್ಯಗಳಲ್ಲಿ ಒಂದು : ತಂತ್ರೀವಾದ್ಯಂಗಳು ಬಳಿಕ ವಿಪಂಚಿಕೆ . . . ಕುಬ್ಜಕಿ . . . ಕಾಲಕಿಯೆಂಬ ಮೂವತ್ತು ಮೂರು ತಂತ್ರೀವಾದ್ಯಂಗಳಲ್ಲಿ (ವಿವೇಕ. ೨೩೬). [ಸಂ. ಕುಬ್ಜಕೀ]

**ಕುಬ್ಜಕೆ** (ನಾ). ಒಂದು ಜಾತಿಯ ಹಂಬು, —ಗಿಡ ಅಥವಾ ಬಳ್ಳಿ (?) : "ಕಂಟಕಾಢ್ಯಃ – ಕುಬ್ಜಕಾ" (ಓಷಧಿ. ೨೩). [ಸಂ. ಕುಬ್ಜಕಾ]

**ಕುಬ್ಜತನು** (ನಾ). ಕುಳ್ಳು ದೇಹದವನು; ಗಿಡ್ಡ; ವಾಮನ : ಪ್ರಿಯವಾದಿ ಕುಬ್ಜತನು ರಾಜದ್ವಾರಯೋಗ್ಯಂ . . . ನೃಯುಗ್ಮೋದ್ಭವಂ (ಜಾತಕ. ೧೭–೩). [ಕುಬ್ಜ + ತನು]

**ಕುಬ್ಜತೆ** (ನಾ). ೧. ಬಾಗಿರುವಿಕೆ; ಗೂನು; ವಕ್ರತೆ. ೨. ಗಿಡ್ಡಾಗಿರುವಿಕೆ; ಕುಳ್ಳಾಗಿರುವಿಕೆ : ತೊನ್ನ ಬೆಳ್ಗಲೆವಿಡಿದ ಕೆಶ್ರನೆಯ ಕುಬ್ಜತೆಯ ಗೂಳಿಹಿಡಿಲಿನವೋಲು ಗೂನುವುಬ್ಬಿದ ಬೆನ್ನ (ಶ್ರೀರಾಮಾ. ೨೧–೫೪೪). [ಸಂ. ಕುಬ್ಜತಾ]

**ಕುಬ್ಜಿಕೆ** (ನಾ). ೧. = ಕುಬ್ಜೆ : ಕುಬ್ಜಿಕೆಯ ಕಟಕಿಯ ಕಶಾಘಾತ ಕಟುಕತೆಗಾ ದಶರಥ ಪ್ರಾಣಪಶು ತೇಂಕಿರ್ದುದಂ ಕಂಡು (ಶ್ರೀರಾಮಾ. ೭೬–೫೯೭). ೨. ಒಂದು ಊರಿನ ಹೆಸರು : ಸುಕುಮಾರನೆಂಬನೊರ್ವಂ ವಿಪ್ರಸೂನು ಕುಬ್ಜಿ [ಪಾಠಾಂ. ಬ್ಜ] ಕೆಯೊಳಿರ್ದು (ಪದ್ಮರಾ. ೧೧–೧೫೨). [ಸಂ. ಕುಬ್ಜಿಕಾ]

**ಕುಬ್ಜೆ** (ನಾ). ೧. ಬೆನ್ನು ಬಾಗಿದವಳು; ಗೂನಿ: (*). ೨. ಒಬ್ಬಾಕೆಯ ಹೆಸರು : ಮಧುರಾಪುರಾಧೀಶ್ವರನಲ್ಲಿಗೆ ಪೋಪ ಬಗೆಯಿಂ ಕುಬ್ಜೆಯೆಂಬ ಸ್ಯೆರಂಧ್ರಿ ನಡೆತರೆ (ಜಗವಿ. ೬–೧೪ ವ); ತರುಣಿ ನಿಲು ನೀನದಾರ್ಗೀ ಪರಿಮಳವು ನೀಂ ಹೇಳೆನಲು ಮುರಹರ ನಿಮಗೆ ಚಿತ್ತೈಸಿಯೆಂದಳು ಕುಬ್ಜೆ ನಸುನಗುತೆ (ಅಕ್ರೂಚ. ೬–೫೦). [ಸಂ. ಕುಬ್ಜಾ]

**ಕುಬ್ಬ** (ನಾ). ಅರ್ಧಗೋಲಾಕಾರದ ಗೋಪುರದಂತಹ ರಚನೆ; ಗುಮ್ಮಟ : ದೊರೆಗಳ ಮತ್ತು ಇತರ ಪ್ರಸಿದ್ಧ ಪುರುಷರ ಸಮಾಧಿಗಳ ಮೇಲೆಯೂ 'ಕುಬ್ಬ' (ಗುಮ್ಮಟ) ಗಳನ್ನು ಕಟ್ಟುತ್ತಿದ್ದರು (ಇಸ್ಲಾಂಸಂ. ೧೪೨). [← ಹಿಂ. ಕುಬ್ಬಾ]

**ಕುಬ್ಬಾಟ** (ನಾ). ಅಹಂಭಾವದ ವರ್ತನೆ; ಗತ್ತಿನ ನಡವಳಿ : ಇಬ್ಬಾಯಿ ಇದ್ದವನ ಕುಬ್ಬಾಟ ಬಹಳ (ಗಾದೆ). [ಕುಬ್ಬು₀ + ಆಟ]

**ಕುಬ್ಬಿಬಿಜಿ** 'ಕುಬುಬಿಜಿ' ನೋ.

**ಕುಭಾಗ್ಯೆ** (ನಾ). ಭಾಗ್ಯವಿಲ್ಲದವಳು; ಅದೃಷ್ಟಹೀನೆ : ಕುರೂಪಿ ಕುಭಾಗ್ಯೆ ಕುಶೀಳೆ . . . ಎಂಬಟವುಟಕಾತ್ರಿಯಸ್ತ್ರೀಯರೆ (ಸೌಇಇ. XX, ೨೪೮–೪೧; 1228). [ಸಂ. ಕುಭಾಗ್ಯಾ]

**ಕುಭಾಷಿ** (ನಾ). ಕೆಟ್ಟಮಾತುಗಳನ್ನು ಆಡುವವನು : ಇತರೇತರ ಕುಭಾಷಿಯ ಕೂಡೆ ಮತ್ಪ್ರಿಯ ಶರಣನಂ ನಂಮಾಡಬಹುದೇ (ಬಸವು. ೫೩–೪೭). [ಸಂ. ಕುಭಾಷಿನ್]

**ಕುಭಾಷೆ** (ನಾ). ೧. ಕೆಟ್ಟಮಾತು; ನಿಂದೆಯ ನುಡಿ; ಬೈಗಳು : ಕ್ರೂರ ಕುಭಾಷೆ ಕುಹಕ ಬಿಡದನ್ನಕ್ಕ ನೀನೆತ್ತಲು ಶಿವನೆತ್ತಲು ಹೋಗತ್ತ ಮರುಳೆ (ಬಸವ. ೧೩೧); ಸ್ವಾಮಿಕಾರ್ಯದಲಿ ತಲೆಯ ತೆಱುವವನಹೆ ಕುಭಾಷೆಗೆ ಮುಳಿವವರು ನಾವಲ್ಲ ಸೈರಿಸು (ಕುವ್ಯಾವಿ. ೮–೨೪). ೨. ಕೆಟ್ಟಭಾಷೆ; ಕೆಟ್ಟಆಣೆ. ೩. ಅಲ್ಪವಾದ ಭಾಷೆ; ಅನಾಗರಿಕ ಭಾಷೆ. [ಸಂ. ಕುಭಾಷಾ]

**ಕುಭಾಷ್ಯ** (ನಾ). ಕೆಟ್ಟವ್ಯಾಖ್ಯಾನ; ದೋಷಯುಕ್ತವಾದ ವಿವರಣೆ : ಬಿಸುಟು ಮಿಥ್ಯಾಮಾರ್ಗಮಂ . . . ಕುತ್ಸಿತ ಕುಭಾಷ್ಯಾದಿ ದೋಷಂಗಳಂ (ಸುಕುಮಾ. ೧–೪೬). [ಸಂ.]

**ಕುಭೃಚ್ಚಕ್ರ** (ನಾ). ರಾಜರ ಮಂಡಲ, —ಸಮೂಹ : ತ್ಯಕ್ತಯುಕ್ತಕ್ರಮಕಳಿತ ಕುಭೃಚ್ಚಕ್ರ ಭೇದ ಪ್ರಮೋದಂ ಶ್ರೀವಿಷ್ಣು ಭೂಪಂ ಬೆಳಗುಗೆ (ಎಕ. IV, ನಾಗಮಂ. ೭೬–೮; 1145). [ಸಂ. (ಕುಭೃತ್ + ಚಕ್ರ)]

**ಕುಭೃತ್ಕುಳ** (ನಾ). ರಾಜರ ಕುಲ, —ವಂಶ : ಎಸೆದಂ ತತ್ಕುಳದೊಳ್ ವಿಜಿತಾರಿ ಕುಭೃತ್ಕುಳನಾದಿತ್ಯಮೂರ್ತಿ ವಿನಯಾದಿತ್ಯಂ (ಎಕ. V, ಬೇಲೂರು. ೧೨೪–೧೪; 1133). [< ಸಂ. ಕುಭೃತ್ಕುಲ]

**ಕುಭೃತ್ಕೂಟ** (ನಾ). ೧. ಪರ್ವತದ ಶಿಖರ; ಬೆಟ್ಟದ ಕೋಡು : ಇವನಿಂದಂ ಕಂಡೆನೇೞುಂ ಕಡಲಕಡೆಯನೇೞುಂ ಕುಭೃತ್ಕೂಟಮಂ . . . ಎನುತ್ತುಂ ಯಶೋಲಕ್ಷ್ಮಿ ಮೆಯ್ವೆರ್ಚುವಿನಂ (ಎಕ. VIII, ಶಿವಮೊ. ೬೪–೩; 1172). ೨. ಪರ್ವತಗಳ ಸಮೂಹ; ಸಪ್ತಪರ್ವತಗಳು. [ಸಂ. (ಕುಭೃತ್ + ಕೂಟ)]

**ಕುಭೃಜ್ಜಾತೆ** (ನಾ). ಪರ್ವತರಾಜನ ಮಗಳು; ಪಾರ್ವತಿ : ಪತಿಭಕ್ತಿಯೊಳಾಸೀತೆಗರುಂಧತಿಗೆ ಕುಭೃಜ್ಜಾತೆಗೆ ದೊರೆ ರೇವಕಬ್ಬೆಯೆಂಬಳ್ ಪೆಸರಿಂ (ಪಂಚತಂ. ೧೦–೨); ಕುಭೃಜ್ಜಾತೆಗರುನ್ಧತಿಗೆ ರತಿಗೆ ಪತಿಭಕ್ತಿಯೊಳೇಮಾತೊ ಮಿಗಿಲೆನಿಸಿ ನೆಗರ್ದ್ದ ವಿಭೂತಿಯ ಚಾವುಣ್ಡಕಬ್ಬೆ ಗಜ್ಜದೊರೆಯೇ (ಸೌಇಇ. XI–ii, ೧೩೪–೧೪; 1087). [ಸಂ. ಕುಭೃಜ್ಜಾತಾ (ಕುಭೃತ್ + ಜಾತಾ)]

**ಕುಭೃತ್ತು** (ನಾ). ೧. ಭೂಧರ; ಪರ್ವತ; ಬೆಟ್ಟ : ಬಲವನ್ಮದಗಜಾಸುರ ಕುಭೃನ್ಮಹಾಶನಿ ಸಮುದ್ಯನ್ಮುಕ್ತಿದಾಯಕ (ಪದ್ಮರಾ. ೬–೧). ೨. ಭೂಮಿಯನ್ನು ಆಳುವವನು; ರಾಜ : ಕಲಿಮಲಿನ ಕುಭೃತ್ಸಂಗದ ಕಳಂಕಮಂ ಕರ್ಚಿ ಕಳೆಯಲೆಂದಾ ಭೂಮಂಡಳಪತಿಯ ಖಡ್ಗಧಾರಾಜಲದೊಳ್ ಸಾಮ್ರಾಜ್ಯಲಕ್ಷ್ಮಿ ಸಲೆ ನೆಲಸಿರ್ಪಳ್ (ಕಾದಂಪೂ. ೧೧). [< ಸಂ. ಕುಭೃತ್]

**ಕುಭೃತ್ಪಕ್ಷ** (ನಾ). ೧. ಪರ್ವತದ ರೆಕ್ಕೆ. ೨. ರಾಜರ ಪಂಗಡ. ೧, ೨ : ಈ ಮಹಾಪುರುಷಂ ಕುಭೃತ್ಪಕ್ಷ ವಿಚ್ಛೇದನನಾಗಿಯುಂ ವಜ್ರಧರನಲ್ಲು (ಜಗವಿ. ೮–೧೦ ವ). [ಸಂ. (ಕುಭೃತ್ + ಪಕ್ಷ)]

**ಕುಭೃತ್ಸಂಗ** (ನಾ). ರಾಜರ ಸಂಗ, —ಸಹವಾಸ : ಕಲಿಮಲಿನ ಕುಭೃತ್ಸಂಗದ ಕಳಂಕಮಂ ಕರ್ಚಿ ಕಳೆಯಲೆಂದಾ ಭೂಮಂಡಲಪತಿಯ ಖಡ್ಗಧಾರಾಜಳದೊಳ್ ಸಾಮ್ರಾಜ್ಯಲಕ್ಷ್ಮಿ ಸಲೆ ನೆಲಸಿರ್ಪಳ್ (ಕಾದಂಪೂ. ೧೧). [ಸಂ. (ಕುಭೃತ್ + ಸಂಗ)]

**ಕುಭೃತ್ಸುತೆ** (ನಾ). = ಕುಭೃಜ್ಜಾತೆ : ಸತಿಯರೊಳಗಗ್ಗಳದವನೀಸುತೆ . . . ಕುಭೃತ್ಸುತೆ ಗಂಗೆ ದಕ್ಷಸುತೆ ಭವಸತಿಯರ್ ಸಮನಪ್ಪಡಕ್ಕೆ ಮಲ್ಲಪಸುತೆಯೊಳ್ (ಅಜಿಪು. ೧–೬೧). [ಸಂ. ಕುಭೃತ್ಸುತಾ (ಕುಭೃತ್ + ಸುತಾ)]

**ಕುಭೃದ್ವಲ್ಲಭ** (ನಾ). ಅರಸನ ಪ್ರೀತಿಗೆ ಪಾತ್ರನಾದವನು; ರಾಜಪ್ರಿಯ : ಬುಧಂ ಚಾಪದೊಳಿರ್ದೊಡಾಪ್ತವಚನಗ್ರಾಹಂ ಕುಭೃ[ಪಾಠಾಂ. ಸುಹೃ]ದ್ವಲ್ಲಭಂ (ಜಾತಕ. ೧೭–೨೪). [ಸಂ. (ಕುಭೃತ್ + ವಲ್ಲಭ)]

**ಕುಭೃನ್ಮಾತ್ರ** (ನಾ). ೧. ಸಣ್ಣ ಬೆಟ್ಟ; ಗುಡ್ಡ. ೨. ಹೆಸರಿಗೆ ಮಾತ್ರ ರಾಜನಾದವನು; ಸಣ್ಣರಾಜ. ೧, ೨ : ನೀಂ ಕಂಪದಿಂದಿರ್ದ್ದ ನಿಂನ ಮಹಾಬಾಹುವ ತೀನನೇಂ ಕಳೆಗುವೇ ಪಾಂಡ್ಯಂ ಕುಭೃನ್ಮಾತ್ರನಕ್ಕುರ್ ಮೆಲೇ ಹೊಯ್ಸಳ ಮೇರುವಲ್ಲಿ ಭುಜಮಂ ಮಾಱುದರ್ ದಿಗ್ದಂತಿದಂತಮಂ (ಎಕ. V, ಬೇಲೂರು. ೧೭೧–೨೨; 1160). [ಸಂ.]

**ಕುಭೃನ್ನಿಕಾಯ** (ನಾ). ಪರ್ವತಗಳ ಸಮೂಹ, —ಗುಂಪು : ಶರಣಾಯಾತ ಕುಭೃಂನಿಕಾಯವೊಳಗಿಕ್ಕುಂ ತನ್ನ ಹೃದ್ದೇಶದೊಳ್ ಹರಿಯಿಕ್ಕುರ್ಂ ಸಿರಿಗೆಯ್ದೆ ತಾಯಿವನೆಯಿನಿಕ್ಕುಂ . . . ಅಂಭೋಧಿ ಸಾಮಾನ್ಯನೇ (ಕಇ. IV, ೧–೧೦; 1204). [ಸಂ. (ಕುಭೃತ್ + ನಿಕಾಯ)]

**ಕುಮಂಜನ** (ನಾ). ಒಂದು ಜಾತಿಯ ಔಷಧಿ ಗಿಡ; ಕುಟಜ; ಕೊಡಸಿಗೆ : "ಕುಂಟಜಂ ಕುಮಂಜನಮಕ್ಕು" (ಮಂಗರಾ. ೯೯–೨೨). [ದೇ. ‖ ತಮಿ. ಕುಮಜ್ಜುವಮ್, ಕುಮಞ್ಞಾನ್]

**ಕುಮಂತ್ರ** (ನಾ). ೧. ಕೆಟ್ಟ ಆಲೋಚನೆ; ದುರ್ಬೋಧನೆ: ದನುಜವೈರಿ ಕುಮಂತ್ರದಲಿ ಬೊಪ್ಪನೊಳು ಖಾತಿಯನಿಕ್ಕಿದನು (ಕುವ್ಯಾಉ. ೯-೪೦); ಎನ್ನಂತರಂಗದಲ್ಲಿ ಕುಮಂತ್ರ ಕುಡಿವರಿದ ಭೇದವ ನಿನ್ನೊಡನೆ ಮಱೆಯಿಲ್ಲದೆ ಆಡುತಿಪ್ಪೆನಯ್ಯ (ಘನವ. ೨೮). ೨. ಕೆಟ್ಟ ಮಂತ್ರ; ಇತರರಿಗೆ ಪೀಡೆಯನ್ನುಂಟುಮಾಡುವ ಮಂತ್ರ: ಘುಡುಘುಡಿಸಿ ಬೊಮ್ಮಯ್ಯನೀಗಳೆ ಪಡೆವೆನೆನುತಂ ಮಂತ್ರತಂತ್ರ ಕುಮಂತ್ರ [ಪಾಠಾಂ. ಯಂತ್ರ] ಮಾಯಾರಿ (ಬಸಪು. ೫೦-೬೮). ೩. ಕುತಂತ್ರ; ಕಪಟ: ಕೊಡಸ ಮಗನ ಕುಮಂತ್ರದೊಡ್ಡಿನ ಕಡಿತಕಾನಂಜುವೆನೆ (ಕುವ್ಯಾದ್ರೋ. ೪-೩೮); ಎನ್ನಂತರಂಗದಲ್ಲಿ ಕುಮಂತ್ರ [ಪಾಠಾಂ. ಮಂತ್ರ] ಕುಡಿವರಿದ ಭೇದವ ನಿನ್ನೊಡನೆ ಮರೆಯಿಲ್ಲದೆ ಆಡುತಿಪ್ಪೆನಯ್ಯ (ಘನವ. ೩೫); ಕುಮಂತ್ರ ಪಾಪದೊಳಳಿದನೀ ಮಂತ್ರಿ (ಜೈಮಿಭಾ. ೩೧-೬೮). [ಸಂ.]

**ಕುಮಂತ್ರಿ** (ನಾ). ೧. ಕೆಟ್ಟಮಂತ್ರಿ; ದುಷ್ಟ ಸಚಿವ. ೨. ಕುತಂತ್ರಿ; ಕಪಟಿ: ದುರುಳರೀ ಕೌರವರು ನೀವತಿ ಗರುವರವದಿರು ಪಾಪಕರ್ಮರು ಪರಮ ಪುಣ್ಯರು ನೀವು ತನ್ನವದಿರು ಕುಮಂತ್ರಿಗಳು (ಕುವ್ಯಾಅ. ೮-೬೨). [ಸಂ. ಕುಮಂತ್ರಿನ್]

**ಕುಮಂದಾನ** (ನಾ). ದುರ್ಗಾಧಿಪತಿ; ಕಿಲ್ಲೆದಾರ: ಕಿಲ್ಲೆ ಕಚೇರಿ ಕುಮಂದಾನ ನಿಟ್ರೆ ಪುಟ್ಟ ಬಸವೈಯನು ಹಿತ್ತಾಳೆ ಚವಕಟ್ಟು ಗುಬ್ಬಿ ಕದ ಸಹ ಮಾಡಿಶಿ ಒಪ್ಪಿಶಿದ ನಿಲುವಿನ ಸೇವಾರ್ಥ (ಎಕ. XIV, ನಂಜನ. ೨೬೫-೧ ; 7). [← ಇಂ. Commandant]

**ಕುಮಕಿ₁** 'ಕುಮಕು' ನೋ.

**ಕುಮಕಿ₂, ಕುಂಕಿ, ಕುಮುಕಿ, ಕುಮ್ಕಿ** (ನಾ). ೧. ವ್ಯವಸಾಯಗಾರನ ನೆರವಿಗಾಗಿ ಸರ್ಕಾರವು ಮಾನ್ಯಮಾಡಿದ ಸಹಾಯಕ ಭೂಮಿ: "ಕಂದಾಯ ಕೊಡುವ ಜಮೀನಿಗೆ ಸಮೀಪದ ಸರಕಾರಿ ಭೂಮಿ" (ಸಿರಿಕೋ. ೧೨೧).'ಕುಮಕಿಹಕ್ಕು' ಪರಾ. (ಗು). ೨. ಸಹಾಯದ; ನೆರವಿನ. 'ಕುಮಕಿಆನೆ' ಪರಾ. **ಕುಂಕಿ:** ೨. 'ಕುಂಕಿಆನೆ' ಪರಾ. **ಕುಮುಕಿ:** ೧. ಈ ಸಾಮ್ರಾಜ್ಯದ ವಿಚಾರದಲ್ಲಿ – ಕಾನ, ಬಾಣೆ, ಕುಮುಕಿ, ದರ್ಕಾಸ್ತು, ತೋಡು, ಕೆರೆ ಇವುಗಳ ವಿಸ್ತೀರ್ಣಗಳೆಲ್ಲ ಬಾಯಿಪಾಠ (ಕರುಕ. ೬). **ಕುಮ್ಕಿ:** ೧. ಸೆಟ್ಟರು ತಮ್ಮ ಜಾಗದ ಕುಮ್ಕಿ ಎಂದು ಸುತ್ತಲೂ ಐದಾರು ಮೈಲುಗಳಷ್ಟು ಸ್ಥಳಗಳನ್ನು ತಡೆದು ಸ್ವಾಧೀನದಲ್ಲಿರಿಸಿಕೊಂಡಿದ್ದರು (ಮಣ್ಣಿನಂ. ೧೫).

**ಕುಮುಕಿಯ ಹಕ್ಕು** = ಕುಮಕಿ ಹಕ್ಕು: ಸಮೀಪದ ರೈತರಿಗೆ ಆದರಲ್ಲಿ ಕುಮುಕಿಯ ಹಕ್ಕು ಸೇರಿರಲೂಬಹುದು (ಚಿಗುಕ. ೨೨೯). [← ಹಿಂ. ಕುಮಕೀ]

**ಕುಮಕಿ₃** (ನಾ). ಅಂಗೈಯಿಂದ ಹೊಡೆಯುವ ಏಟು; ಚಪ್ಪಾಳೆ ಏಟು: ಎರಡೂ ಎತ್ತಿನ ಡುಬ್ಬಗಳ ಮೇಲೆ ಎರಡೂ ಕೈಗಳಿಂದ ಏಕಕಾಲಕ್ಕೆ ಚೆನ್ನಾಗಿ ಕುಮಕಿ ಹೊಡೆದರು (ಬೆಳಛಾ. ೧೪೫); ಈಜುಗಾರರು ಉಲ್ಲಾಸದಿಂದ ನೀರನ್ನು ಕುಮಕಿ ಹೊಡೆದು ಶಬ್ದ ಮಾಡುತ್ತಾರೆ (ರೂಢಿ). [← ಮರಾ. ಕುಮಕಾ]

**ಕುಮಕಿಆನೆ, ಕುಂಕಿಆನೆ** (ನಾ). ಮಿಕ್ಕ ಆನೆಗಳನ್ನು ಹಿಡಿಯಲು ಸಹಾಯಮಾಡುವ ಪಳಗಿಸಿರುವ ಆನೆ; ಒತ್ತಾನೆ; ಸಹಾಯಕ ಆನೆ: ಕಾಡಾನೆಗಳನ್ನು ಕುಮಕಿಆನೆಯ ಸಹಾಯದಿಂದ ಹಿಡಿದು ಪಳಗಿಸುತ್ತಾರೆ (ರೂಢಿ). **ಕುಂಕಿಆನೆ:** ಎಂಟು ಹತ್ತು ದಿನ ಅವು . . . ಸೊರಗಿ ಹೆದರಿ ನಿಸ್ತೇಜವಾದಮೇಲೆ ಕುಂಕಿಆನೆಗಳನ್ನು ತೆಗೆದುಕೊಂಡು ಹೋಗಿ ಒಂದೊಂದನ್ನೂ ಬೇರೆ ಮಾಡಿ ಅವುಗಳಿಗೆ ಹಗ್ಗ ಕಟ್ಟುತ್ತಾರೆ (ಮಲ್ಲಿ. ೩೫). [ಕುಮಕಿ₂ + ಆನೆ₁]

**ಕುಮಕಿಜಮೀನು** (ನಾ). ಕುಮಕಿ ನೆಲ; ಹಿಡುವಳಿ ಭೂಮಿಗೆ ನೂರು ಗಜಗಳ ಅಕ್ಕಪಕ್ಕದ ಸರ್ಕಾರಿ ಭೂಮಿ: ಆರಂಭಗಾರನ ಕುಮಕಿಜಮೀನು (ರೂಢಿ). [ಕುಮಕಿ₂ + ಜಮೀನು]

**ಕುಮಕಿಹಕ್ಕು** (ನಾ). ಕುಮಕಿ ಜಮೀನಿನ ಮೇಲಿರುವ ಹಕ್ಕು, —ಒಡೆತನ: ಎರಡು ಬೆಟ್ಟಗಳ ಸಾಲುಗಳೂ ರಾಯರ ಕುಮಕಿ ಹಕ್ಕಿನವು (ಕರುಕ. ೧). [ಕುಮಕಿ₂ + ಹಕ್ಕು₂]

**ಕುಮಕು, ಕುಮಕಿ₁, ಕುಮಕ್ಕು, ಕುಮುಕು, ಕುಮ್ಮಕ್,** ಕುಮ್ಮಕು, ಕುಮ್ಮಕ್ಕು, ಖುಮ್ಮಕ್ಕು (ನಾ). ಸಹಾಯ; ನೆರವು; ಒತ್ತಾಸೆ: ಕಿಲ್ಲೇದಾರರು ಸಲಾಂ ಹೊಡೆದು ತಳವಾರರನ್ನೂ ಅಠಾವಣೆಯವರನ್ನೂ ಕುಮಕಿಗೆ ತೆಗೆದುಕೊಂಡು ಹುಕುಂ ಜಾರಿಮಾಡಲು ಸಿದ್ಧರಾದರು (ಸಕತೆ. ೮೪); ಇದೂ ಅಲ್ಲದೆ ಶ್ರೀಮಂತರ ಕಡೆ ಪರಶುರಾಂ ಭಾವುಯವರ ಕುಮಕು ಪೂರಾ ಇದೆ (ಚಿತ್ರಪಾ. ೬೬). **ಕುಮಕಿ:** ಮಹಾಬಲೇಶ್ವರನು ಸೇನೆ ಕಟ್ಟಿಕೊಂಡು ಅಂಮನವರ್‍ಗೆ ಕುಮಕಿ ಹೊರಟ ಸ್ಥಳ (ಎಕ. XIV, ತಿರುಮ. ೨೪೨-೩ ; ಸು. 1842). **ಕುಮಕ್ಕು:** ಯಾವಾಗಲೂ ಕುಮಕ್ಕು ಮಾಡುವುದು ಗ್ರಾಮಾಧಿಪತಿಯ ಕೆಲಸವಾಗಿರುವುದು (ಗ್ರಾಮಕ. ೫೨). **ಕುಮುಕು:** ನಾನು ಕೆಲವು ಕೊಡಗರಂನು ನಿಂಮ ಕುಮುಕಿಗೆ ಸಾಕಾರಮಾಡಿ ಕೊಡುತ್ತೇನೆ (ರಾಜೇಂದ್ರ. ೪). **ಕುಮ್ಮಕ್:** ಗ್ರಾಮದ ಬೇಲಿಯನ್ನಾದರೂ ಊರು ಬಾಗಿಲನ್ನಾದರೂ ದುರಸ್ತು ಮಾಡುವುದರಲ್ಲಿ ಕುಮ್ಮಕ್ ಮಾಡುವುದಕ್ಕಾಗಲಿ ಪಟೇಲನು ನಿರಾಕರಿಸಿದರೆ (ಗ್ರಾಮಾಕ. ೪ ಪೀಠಿಕೆ). **ಕುಮ್ಮಕು:** ಇಂಗ್ರೇಜ ಕುಂಪನಿ ಸಂಗಡ ಲಡಾಯಿ ಮಾಡುವುದಕ್ಕೆ ಸಲುವಾಗಿ ಈ ಪ್ರಕಾರ ಕುಮ್ಮಕು ಮಾಡಿಸಿಕೊಂಡು ಫೌಜಿನಲ್ಲಿ ಅಧಿಕವಾಗಿ ಇರುವ ಪಾಲು ಈಗ ತಮ್ಮ ಚಾಕರಿಯಲ್ಲಿ ಇಟ್ಟು ಇದ್ದೀರಿ (ಕಗವಿ. ೧೧೯). **ಕುಮ್ಮಕ್ಕು:** ಸೈನ್ಯಕ್ಕೆ ಜನರನ್ನು ಕುಮ್ಮಕ್ಕು ಕೊಡುವ ಹಕ್ಕನ್ನು (ಮಹಾವಂ. II, ೩೧); ಅಮಲ್ದಾರರೇ ಕುಮ್ಮಕ್ಕಾಗಿ ಬಂದಿದ್ದಾರೆಂಬ ಹಿಗ್ಗಿಕೆ (ಕಲನೆ. ೨೧೩); ಅವನು ಇವರಿಗೆಲ್ಲಾ ಕುಮ್ಮಕ್ಕು (ಕೂಲಿ. ೧೩). **ಖುಮ್ಮಕ್ಕು:** ಊರಿನ ಸಿಪಾಸಾರದೋರೆಲ್ಲಾ ಖುಮ್ಮಕ್ಕು ಅವನ್ಗೆ (ದೆಯ್ಯಮ. ೨೨). [← ಹಿಂ. ಮರಾ. ತುರ್ಕಿ. ಕುಮಕ್]

**ಕುಮಕ್ಕು** 'ಕುಮಕು' ನೋ.

**ಕುಮಚಟು** 'ಕುಮ್ಮಚಟ್ಟು' ನೋ.

**ಕುಮಟಿ** 'ಕುಂಪಟಿ' ನೋ.

**ಕುಮತ** (ನಾ). ೧. ಕೆಟ್ಟಮತ; ದುಷ್ಟಮತ: ನೀಡುತ್ತುಂ ಕುಮತಕ್ಕೆ ತೇಜದಱಿವಂ (ಪಂರಾಮಾ. ೧೬-೬೮). ೨. ಕೆಟ್ಟ ಅಭಿಪ್ರಾಯ. [ಸಂ.]

**ಕುಮತನಿರತೆ** (ನಾ). ಕೆಟ್ಟಮತದಲ್ಲಿ ಆಸಕ್ತಿಯುಳ್ಳವಳು; ದುಷ್ಟ ಪಂಥದಲ್ಲಿ ಅನುರಕ್ತೆಯಾದವಳು: ಪ್ರಮದೋತ್ತಮೆಗೆ . . . ಗಂಡನ ಧರ್ಮವೆ ಧರ್ಮಂ ಭರ್ತೃವ ತತ್ತ್ವಮೆ ತತ್ತ್ವಂ ಕುಮತನಿರತೆಯೇಂ ಕುಲವಧುವೇ (ಶಾಂತಿಪು. ೯-೧೯). [ಸಂ. ಕುಮತನಿರತಾ]

**ಕುಮತಿ** (ನಾ). ೧. ಕೆಟ್ಟ ಭಾವನೆ; ದುಷ್ಟಬುದ್ಧಿ. ೨. ದುಷ್ಟಬುದ್ಧಿಯನ್ನುಳ್ಳವನು; ದುರ್ಮತಿ: ಆ ವರ್ಣಚತುಷ್ಕಮಂ ಕುಮತಿಗಳ್ ತತ್‌ಸ್ಥಾನದೊಳ್ ಮುನ್ನ ಪುಟ್ಟಿದುವೆಂಬರ್ (ಆದಿಪು. ೮-೬೩); ಕ್ಷಮೆಗೆ ಸೇರುವರಲ್ಲ ಮೂರ್ಖರು ಕುಮತಿಗಳು (ಕುವ್ಯಾಉ. ೬-೨). ೩. [ಜೈನ] ಅಷ್ಟವಿಧ ಜ್ಞಾನಗಳಲ್ಲೊಂದು; ದೋಷಯುಕ್ತವಾದ ಜ್ಞಾನ, —ಅರಿವು: ಕುಮತಿ ಕುಶ್ರುತ ವಿಭಂಗಮತಿಶ್ರುತ ಅವಧಿ ಮನಃಪರ್ಯಯ ಕೇವಲಜ್ಞಾನ ವಿಕಲ್ಪದಿಂ ಜ್ಞಾನಮಷ್ಟವಿಧಂ (ತತ್ತ್ವಪ್ರ. ೧೬). ೪. ಒಂದು ಔಷಧಿಗಿಡದ ಹೆಸರು: ಕೂಲಿ, ಕುಮತಿ, ಹುಚ್ಚುನರವೆ (ವೈಔಗಿ. ೪೦-೬೮೨). [ಸಂ.]

**ಕುಮತಿತನ** (ನಾ). ಕೆಟ್ಟ ಮನೋಭಾವದಿಂದ ಕೂಡಿರುವಿಕೆ; ಕುಬುದ್ಧಿತನ: ಕುಮತಿತನದಲಿ ಮಾಡಿ ಸದ್ಗತಿಕ್ರಮುವ ಕೆಡದವರಾರು (ತಿಭಾಗ. ೫-೬-೩೬). [ಕುಮತಿ + -ತನ]

**ಕುಮರ್$_1$** 'ಕುವರ್$_2$' ನೋ.

**ಕುಮರ್$_2$** 'ಕುಮ್ಮರಿ' ನೋ.

**ಕುಮರಂಕಭೀಮ** (ನಾ). ರಾಜಕುಮಾರರ ದ್ವಂದ್ವಯುದ್ಧದಲ್ಲಿ ಭೀಮನಂತಿರುವವನು; ಒಂದು ಬಿರುದು: ರಿಪುರಾಯ ಕುವರ ಬಂಗಾಜಂ ಬಪ್ಪನಂಕಕಾಜಂ ಕುಮರಂಕಭೀಮಂ ನಯನಾಭಿರಾಮಂ ಕುವರ ವೇಶ್ಯಾಭುಜಂಗಂ ಸಾಹಸಮಲ್ಲಂ ಶ್ರೀಮತ್ರಿಭುವನಮಲ್ಲದೇವರ (ಸೌಇಇ. XX, ೬೧-೯; 1109).

[ಕುಮ$_1$ರ (< ಕುವರ್$_2$) + ಅಂಕ$_2$ + ಭೀಮ]

**ಕುಮರಿ$_1$** 'ಕುಮ್ಮರಿ' ನೋ.

**ಕುಮರಿ$_2$** 'ಕುವರಿ' ನೋ.

**ಕುಮರಿಪೈರು** (ನಾ). ಕಾಡನ್ನು ಸುಟ್ಟು ಕೃಷಿ ಮಾಡಿದ ಪೈರು: ಈ ಸಲದ ಮಳೆಗಾಲದಲ್ಲಿ ಕುಮರಿಪೈರಿನ ರಾಗಿ ಬೆಳೆ ಬಹಳ ಚೆನ್ನಾಗಿ ಬಂತು (ರೂಢಿ). [ಕುಮರಿ$_1$ (< ಕುಮ್ಮರಿ) + ಪೈರು (< ಪಯಿರ್)]

**ಕುಮರಿವ್ರಾತ** (ನಾ). ಬಾಲಕಿಯರ ತಂಡ; ಕುವರಿಯರ ಸಮೂಹ: ನೆರೆ ಬೀದಿಲಾಡೂ ಕುಮರಿವ್ರಾತಕ್ಕದೇಂ ಬಂದುದೋ (ಹಸ್ತಿಮಾಂ. ೧-೧೩). [ಕುಮರಿ$_2$ (< ಕುವರಿ) + ವ್ರಾತ]

**ಕುಮುಲು** (ನಾ). ಒಳಗೊಳಗೆ ಉರಿಯುವುದು; ಒಳಗುದಿ: ಹಸಿದ ಹೆಬ್ಬುಲಿಗೆ ವಶಮಾಡಿದರೊಳಿತೆ ... ಬಿಸಿಯ ಕುಮಲೊಳಿರಿಸಿ ನೋಡಿದ ರೊಳಿತೆ ಹಸಿವೆ ತೃಷೆಗಳೇಕ ಸಮಮಾಡಿದರೊಳಿತೆ ವೃಷಭಾಕ್ಷನಾಮ ವಿಜಯೂವಿಠ್ಠಲ ಎನ್ನ ಅಸುವೆ ನಿನ್ನಯ ಪಾದಬಿಸಜಕ್ಕೆ ಅರ್ಪಿಸುವೆ (ಮೋಕ್ಷದೀ. ೨೩೫-೨೨). [< ಕುಮುಲು]

**ಕುಮಾನುಷತ್ವ** (ನಾ). ಕೆಟ್ಟ ಮನುಷ್ಯ ಜನ್ಮ; ಕ್ಷುದ್ರ ಮನುಷ್ಯನಾಗಿ ಹುಟ್ಟುವಿಕೆ: ಅಪಾತ್ರದಾನಂ ... ಅಂತರ್ದ್ವೀಪಂಗಳೊಳ್ ಕುಮಾನುಷತ್ವಮುಮಂ ಮಾಡುಗುಂ (ಆದಿಪು. ೧೦-೧೦ವ). [ಸಂ.]

**ಕುಮಾನುಷ್ಯ** (ನಾ). ೧. = ಕುಮಾನುಷತ್ವ. ೨. ದುಷ್ಟ ಮನುಷ್ಯ; ಕೆಟ್ಟವನು: ನೀಚರು ಕುಲಹೀನರು ಕುಮಾನುಷ್ಯರೆ ರಾಜ್ಯಾಧಿಪರಪ್ಪರು (ಕಗವಿ. ೨೬). [< ಸಂ. ಕುಮನುಷ್ಯ]

**ಕುಮಾಯೆ** (ನಾ). ಕೆಟ್ಟ ಮಾಯೆ; ಮೋಸ; ಕಪಟ: ಇರುಳು ಹಗಲುಂ ಬಿಡದೆ ಕಾಮಿನಿಯರ ಕುಮಾಯೆಗಳಿಗೆ ತೊಡಕಿ ಕಡು ಮರುಳುಗೊಂಡು (ಬಸವು. ೪೧-೬). [ಸಂ. ಕುಮಾಯಾ]

**ಕುಮಾರ** (ನಾ). ೧. ಐದುವರ್ಷದೊಳಗಿನ ವಯಸ್ಸಿನ ಹುಡುಗ; ಬಾಲಕ. ೨. ಹದಿನಾರು ವರ್ಷದ ಒಳಗಿನ ಪ್ರಾಯದವನು; ಯುವಕ; ತರುಣ. 'ಕೌಮಾರ' ಪರಾ. ೩. ಮಗ; ಪುತ್ರ. 'ಅರಸುಕುಮಾರ' ಪರಾ. ೪. (ನಾಟಕದಲ್ಲಿ) ಯುವರಾಜ; ರಾಜ್ಯದ ಉತ್ತರಾಧಿಕಾರಿ: "ಕುಮಾರಃ, ಭರ್ತೃದಾರಕಃ -೨ ಯುವರಾಜ, ಯುವರಾಜನೆಂಬ ಸರ್ವಾಧಿಕಾರಿಯ ಹೆಸರು" (ಸಿದ್ಧಾಂತಿ. ೫೬). ೫. ಷಣ್ಮುಖ; ಸುಬ್ರಹ್ಮಣ್ಯ: "ಗೌರೀಪುತ್ರಃ, ಷಣ್ಮುಖಃ ... ಕುಮಾರಃ, ಸೇನಾನೀ ... ಶರಜನ್ಮಾ -ಈ ೨೦ ಕಾರ್ತಿಕೇಯನ ಪೆಸರ್" (ಹಲಾಯು. ೫-೨೦); ಮತ್ತಮಲ್ಲಿ ಕುಮಾರನ ಮಯೂರಮುಂ ಕೂಂಸದ ಸೋಗೆವೆಣ್ಣಲ್ಲ (ಪುಷ್ಪಪು. ೯-೨೧ವ); ಈ ಕುಮಾರಂ ಕುಮಾರನಂತೆ ಚತುರ್ದಶ ವಿದ್ಯೆಯೊಳುಂ ಚತುಷ್ಷಷ್ಟಿ ಕಲೆಗಳೊಳುಂ ಪ್ರವೀಣನಾಗಲ್ (ಅದ್ಭುತ. ೫-೧೬). ೬. ಒಂದು ಔಷಧಿ ಗಿಡ; ವರುಣವೃಕ್ಷ: ಕುರಮಾವು, ಕುಮಾಠ. (ವೈಔಗಿ. ೬೧-೨೨೮). [ಸಂ.]

**ಕುಮಾರಕ** (ನಾ). ೧. = ಕುಮಾರ: ಕ್ರೂರಗ್ರಹವರ್ಗದೊಳ್ ಸುಧಾಕರನಿರೆ ಮತ್ತಾರಾಶ್ಯಧಿಪಂ ನೋಡೆ ಕುಮಾರಕನಾರಿಷ್ಟ ವಿಜಯಿ (ಜಾತತಿ. ೬-೮); ಗೋಪ ಕುಮಾರಕರೊಡನೆ ಆಡಿ (ಜಗವಿ. ೪-೫೨ವ). ೨. ರಾಜಕುಮಾರ; ಯುವರಾಜ: ಸುಕುಮಾರಕಂ ಕುಮಾರಕನೆಂದಾ ಜಯವಧುಗನಂತವೀರ್ಯಂ ಪ್ರಿಯನಾದೊಂ (ಶಾಂತಿಪು. ೪-೪೬). ೩. ಒಂದು ಜಾತಿಯ ಗಿಡ: "ವರುಣಃ, ವರಣಃ, ಸೇತುಃ, ತಿಕ್ತಶಾಕಃ, ಕುಮಾರಕಃ-೫ ವಸಲೇಗಿಡ, ಮದವಸಲೇಗಿಡ, ಉಲಿಮಿರಿಬಸಲೆ" (ಸಿದ್ಧಾಂತಿ. ೧೦೩). [ಸಂ.]

**ಕುಮಾರಕಾಲ** (ನಾ). ಹದಿನಾರು ವರ್ಷದ ಒಳಗಿನ ಪ್ರಾಯ; ಎಳೆಯ ವಯಸ್ಸು: ರಾಮಂಗೆಯ್ವತ್ತು ವರ್ಷಂ ಕುಮಾರಕಾಲಂ ಪೋಗೆ ಸುಖಮಿರ್ದರ್ (ಕಗವಿ. ೩೬; ಚಾವುಂಪು); ಆ ಚಂದ್ರವಾಹನ ಚರಸಾಮಾನಿಕಂ ಜ್ಯೇಷ್ಠನಂದನನಾಗಿ ಪುಟ್ಟಿ ಕುಮಾರಕಾಲದೊಳ್ ತಪಃಶ್ರೀಯಂ ಕೈಕೊಂಡು (ಸುಕುಮಾ. ೧೨-೫೩ವ); ಸಗರಚಕ್ರವರ್ತಿ ... ಪದಿನೆಂಟು ಲಕ್ಷ ಪೂರ್ವ ಕುಮಾರಕಾಲಂ ಪೋಗೆ ಮಹಾಮಾಂಡಳಿಕನಾಗಿ (ಜೀವಸಂ. ೧೬-೩೨ವ).

[ಕುಮಾರ + ಕಾಲ]

**ಕುಮಾರಗದ್ಯಾಣ, ಕೊಮರಗದ್ಯಾಣ** (ನಾ). ೧. ಒಂದು ನಾಣ್ಯ; ಷಣ್ಮುಖನ ಗುರುತುಳ್ಳ ಗದ್ಯಾಣ (?). ೨. ಒಂದು ಬಗೆಯ ತೆರಿಗೆ; ಯುವರಾಜರಿಗಾಗಿ ಕೊಡುವ ಕಾಣಿಕೆ (?): ದೇವಿದೆಜಿ ಅಡೆಗಚ್ಚು ಕಾಣಿಕೆ ಸೇಸೆ ಬಿದ್ದು ಬೀಯ ಮೊದಲಾಗೆ ಕುಮಾರ ಗದ್ಯಾಣಂ ಕಿಱುದೆಱೆ ಕಿಱುಕುಳಾಯಂ ಸಾಮ್ಯಂ ಸಲ್ಗೆ (ಎಕ. VIII, ನಗರ. ೩೬-೧೫೬; 1077). 'ಕುಮಾರಗಾಣಿಕೆ' ಪರಾ. **ಕೊಮರಗದ್ಯಾಣ:** ೨. ಶ್ರೀಮತ್ ಕನ್ನಯ್ಯ ಅಡನೂರನಭ್ಯನ್ತರ ಸಿದ್ಧಿಯಾಗೆ ಏಳಂಗೌಡಳಂ ಸಾಯಿರದ ಕೊಮರಗದ್ಯಾಣಮುಮನಱುಂಗಿ ನೊಳಾಳುತ್ತಿರೆ (ಎಕ. XI, ಹೊಳಲ್ಕೆ. ೩೦-೫; 964).

[ಕುಮಾರ + ಗದ್ಯಾಣ]

**ಕುಮಾರಗಾಣಿಕೆ** (ನಾ). ಒಂದು ಬಗೆಯ ತೆರಿಗೆ: ಕುದುರೆಯ ಸೇಸೆ ಕುಮಾರಗಾಣಿಕೆ ವಿಜಯ ಬೀರವಣ (ಮೈಆರಿ. ೧೯೪೦, ೩-೨೫; 1206); ಕುದುರೆಯು ಸೇಸೆ ಗ ೫ ಪ ೯ ಹಾ ೩ ಕುಮಾರಗಾಣಿಕೆ ಪ ೨ ಹಾ ೨ (ಎಕ. V, ಹಾಸನ. ೮೪-೬೫; 1230).

[ಕುಮಾರ + ಕಾಣಿಕೆ (< ಕಾಣ್ಕೆ)]

**ಕುಮಾರಗುರು** (ನಾ). ಕುಮಾರಸ್ವಾಮಿಯ ತಂದೆ; ಶಿವ: (ಕ).

[ಕುಮಾರ + ಗುರು$_3$]

**ಕುಮಾರತಿ** 'ಕುಮಾರಿತಿ' ನೋ.

**ಕುಮಾರತೆ** 'ಕುಮಾರ್ತೆ' ನೋ.

**ಕುಮಾರದಿಕ್ಕುಂಜರ** (ನಾ). ರಾಜಕುಮಾರರಲ್ಲಿ ದಿಗ್ಗಜದಂತಿರುವವನು; ಒಂದು ಬಿರುದು: ಅಯ್ಯನಸಿಂಗಂ ಸರಣಾಗತವಜ್ರಪಂಜರಂ ಕುಮಾರದಿಕ್ಕುಂಜರಂಪರವಿದ್ಯಾಧಿಕಂ (ಸೌಇಇ. XX, ೬೧-೧೧; 1109).

[ಕುಮಾರ + ದಿಕ್ಕುಂಜರ]

**ಕುಮಾರವಾಸ** (ನಾ). [ಸಂಗೀತ] ಒಂದು ಬಗೆಯ ಕೊಳಲು; ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು (?): ಗಾಯಕಿಯರು - ಬಳಿಕ ಹದಿನೆಂಟಂಗುಳ ಮೊದಲಾಗಿ ಒಂದಂಗುಳ ಪರ್ಯಂತ ಮಾದ ಪರಿಮಾಣ ಕ್ರಮವಿಡಿದು ಜಾತಿವಾಸ ... ಕುಮಾರವಾಸ ... ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವಱಿತು (ವಿವೇಕ. ೨೩೬). [ಕುಮಾರ + ವಾಸ$_1$]

**ಕುಮಾರವೃತ್ತಿ** (ನಾ). ರಾಜಕುಮಾರನ ವೃತ್ತಿ; ಯುವರಾಜನ ಅಧಿಕಾರ: ನೊಳಂಬವಾಡಿ ಮೂವತ್ತಿರ್ಛ್ಛಾಸಿರಮುಮಂ ಕುಮಾರವೃತ್ತಿಯಿಂ ಸುಕಸಂಕಥಾ ವಿನೋದದಿಂ ರಾಜ್ಯಂಗೆಯುತ್ತಮಿರೆ (ಸೌಇಇ. IX–i, ೧೧೮–೨೨; 1057); ಶ್ರೀಮನ್ಮಹಾಸಾಮನ್ತಂ ಜೋೞಿಯರಸಂ ಕುಮಾರವೃತ್ತಿಯಿಂ ಪೊಟ್ಟೆಯೂರನಾಳುತ್ತಮಿರೆ (ಎಇ. XVI, ೮೩–೮; 1067); ನೊಳಂಬವಾಡಿ ಮೂವತ್ತಿರ್ಛ್ಛಾಸಿರಂ ಮೊದಲಾಗಿ ಪಲವುಂ ದೇಶಂಗಳ ಕುಮಾರವೃತ್ತಿಯಿಂದಾಳ್ದು (ಎಕ. XI, ದಾವಣ. ೪೧–೬೪; 1148). [ಕುಮಾರ + ವೃತ್ತಿ]

**ಕುಮಾರಶ್ರವಣ** (ನಾ). ಬೌದ್ಧ ಅಥವಾ ಜೈನ ಬಾಲಯತಿ: ಗೂಢಬ್ರಹ್ಮಚಾರಿಯೆಂಬೊಂ ಕುಮಾರಶ್ರವಣನಾಗಿ ಸಮಸ್ತಾಗಮಾಭ್ಯಾಸಂಗೆಯ್ದು (ಚಾವುಂಪು. ೨೪೭). [ಕುಮಾರ + ಶ್ರವಣ$_1$]

**ಕುಮಾರಸ್ವಾಮಿ** (ನಾ). ಸ್ಕಂದ; ಷಣ್ಮುಖ; ಸುಬ್ರಹ್ಮಣ್ಯ: (+). [ಕುಮಾರ + ಸ್ವಾಮಿ]

**ಕುಮಾರಾಭ್ಯುದಯ** (ನಾ). ರಾಜಕುಮಾರನ ಏಳಿಗೆ; ಯುವರಾಜನ ಅಭಿವೃದ್ಧಿ: ಅವರು ರಾಜ್ಯವನೊಡ್ಡಿ ಸೋತವೊಲಿವಗೆ ಪಣಬೇಱಿಲ್ಲ ಹರ್ಷೋತ್ಸವ ಕುಮಾರಾಭ್ಯುದಯ ವಿಜಯ ಶ್ರವಣ ಸುಖ ಮಿಗಲು ಎವಗೆ ಮನವಾಯ್ತೊಡ್ಡು (ಕುವ್ಯಾವಿ. ೯–೧೨). [ಕುಮಾರ + ಅಭ್ಯುದಯ]

**ಕುಮಾರಿ** (ನಾ). ೧. ಹತ್ತರಿಂದ ಹನ್ನೆರಡು ವರ್ಷಗಳ ಒಳಗಿನ ವಯಸ್ಸಿನ ಹುಡುಗಿ; ಕನ್ಯೆ. ೨. ಮದುವೆಯಾಗದಿರುವ ಹೆಂಗಸು, —ಯುವತಿ: ನೋಡೆ ಕುಮಾರಿಯ ಬಳ್ಕುವ ಮಧ್ಯಂ ನಾಡೆ ಮನೋಜ್ಞಂ ಪೊಗೞಲಸಾಧ್ಯಂ (ಸುಕುಮಾ. ೫–೫೧). ೩. ಮಗಳು. 'ಅರಸುಕುಮಾರಿ' ಪರಾ. ೪. ಸಣ್ಣ ಗೋರಂಟಿಗಿಡ: "ಸಹಾ, ಕುಮಾರೀ, ತರಣಿ–೩ ಸಣ್ಣ ಗೋರಂಟಿ ಪೆಸರುಗಳು" (ಸಿದ್ಧಾಂತಿ. ೧೧೩). ೫. ಒಂದು ಬಗೆಯ ಹೂವು; ಹೆಜ್ಜಾಜಿ: ಮರುಗ ಮಲ್ಲಿಗೆ ಜಾಜಿ ಸುರಹೊನ್ನೆಯತಿಮುಕ್ತ ಇರುವಂತಿ ಮೊಲ್ಲೆ ಕುಮಾರಿ ಸುರಗಿ ಸಂಪಿಗೆ ಮೊದಲಾದ ಪುಷ್ಪಗಳನು (ಜ್ಞಾನಚ. ೨೫–೭೮). ೬. ಒಂದು ಬಗೆಯ ಸಸ್ಯ; ಲೋಳೆಸರ: "ಲೋೞೆಯಿಸರಮದು ಕುಮಾರಿಯಕ್ಕು" (ಮಂಗರಾ. ೩೯–೨೯); ತ್ರಿದಿನಂ ಕುಮಾರಿಯಂ ಕಟ್ಟಿದೊಡಂ ಮೇಣ್ ಶಂಖಚೂರ್ಣಮಂ ಸದ್ಯಃಕ್ಷಾರದ ನೀರೊಳ್ ಭಾವಿಸಿ ಪೂಸಿದೊಡಂ ಪುದಿದೊಡನೆ ತೋರ್ಪ ನರವುಲಿ ಕಿಡುಗುಂ (ಲೋಕೋಪ. ೯–೧೩೧). ೭. ದುರ್ಗೆಯ ಹೆಸರುಗಳಲ್ಲೊಂದು: (+).

ಕುಮಾರಿಯಬೇರ್, ಕುಮಾರಿಯಬೇರು = ಲೋಳೆಸರದ ಬೇರು: ಸುಟ್ಟು ಕುಮಾರಿಯ ಬೇರಂ ಘಟ್ಟಿಸಿ ಪಿೞಿದದಱ ರಸಮನೊಬ್ಬಳದನಿತಂ ಕೊಟ್ಟು ಸಿತಹಸಿತಲವದೆ(ಲೆ) ಕಟ್ಟುಗೆ ಕೊರಲೊಳಗೆ ತುರಗದ ಜ್ವರ ಹರಣಂ (ಅಶ್ವಶಾ. ೧೩–೭); ಉರಿಥಗೆ ತಾಪಕ್ಕೆ–ಕುಮಾರಿಯ ಬೇರನ್ನು ಪುಟವನಿಕ್ಕಿ ರಸವ ಹಿಂಡಿಕೊಂಡು . . . ಪಾನವ ಮಾಡುವುದು (ವಿವೈವಿ. ೧೦೦). [ಸಂ. ಕುಮಾರೀ]

**ಕುಮಾರಿಕೆ** (ನಾ). ೧. = ಕುಮಾರಿ ೧: "ಕನ್ನೆಕುಮಾರಿಕೆ ಕನ್ನಿಕೆ . . . ಅಕ್ಕುಮವಳ್ ಸಂಪನ್ನ ಋತುವಾಗದನ್ನಂ" (ವಸ್ತುಕೋ. ೫೩–೧೦). ೨. = ಕುಮಾರಿ ೨: ಆ ಸಮರಾತ್ರಿಯಲ್ಲಿ ಒಬ್ಬ ಹದಿನೈದು – ಹದಿನಾರು ವರ್ಷ ವಯಸ್ಸಿನ ಕುಮಾರಿಕೆಯು . . . ಓಡುತ್ತೋಡುತ್ತ ಸಾಗಿದ್ದಳು (ಅಂಬಿಕೆ. ೩). ೩. ಭಾರತವರ್ಷದ ಒಂಬತ್ತು ಖಂಡಗಳಲ್ಲೊಂದು; ಜಂಬೂದ್ವೀಪ. ೪. = ಕುಮಾರಿ ೬: ಕುಮಾರಿಗೆ[ಕೆ]ಯ ಕಳ್ಳಿಯ ಬೂದಿಯು(ಯೆ)ಕೆಗೆಳ್ಳೆರಡೆಳಗ್ಗಾಯ್ಗೆ ಪಥ್ಯಲವಣಕ್ಕೆ ತೊಳಂಚಿ ವಿಷಾಪಹಾರಕಂ (ಲೋಕೋಪ. ೮–೨೭). [ಸಂ. ಕುಮಾರಿಕಾ]

**ಕುಮಾರಿತಿ**, ಕುಮಾರತಿ, ಕುಮಾರ್ತಿ, ಕೊಮಾರತಿ, ಕೊಮಾರತ್ತಿ (ನಾ). ೧. ಮದುವೆಯಾಗದ ಹುಡುಗಿ; ಕುಮಾರಿ: ಹಾಳು ಮೊಱಡಿಗಳಲ್ಲಿ . . . ಬಸುಱ ಬಾಣಂತಿ ಕುಮಾರಿತಿ [ಪಾಠಾಂ. ಕುಮಾರಿ] ಕೊಡಗೂಸೆಂಬವರ ಹಿಡಿದು ತಿಂಬ ತಿರಿದುಂಬ ಮಾರಯ್ಯ ಬೀರಯ್ಯ ಕೇಚರಗಾವಿಲ ಅಂತರಬೆಂತರ . . . ಕೇತಯ್ಯಗಳೆಂಬ ನೂಱುಮಡಕೆಗೆ ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದು ದಡಿ ಸಾಲದೆ (ಬಸವ. ೫೫೭). ೨. ಮಗಳು; ಪುತ್ರಿ: ರಂಗಪನಾಯಕಯ್ಯನವರು ಕುಮಾರಿತಿ ಕೊಂಡಂಮನವರು (ಎಕ. XV, ಅರಕ. ೧೦೩–೧೧೧; 1665). ೩. ಅರಸನ ಮಗಳು; ರಾಜಕುಮಾರಿ: ಮನಗೊಂಬ ವಸ್ತ್ರಭೂಷಣ ಮಾಲ್ಯಾನುಲೇಪನವ ತಂದರು ಕುಮಾರಿತಿಗೆ (ಮೋಹತ. ೨೩–೧೧). **ಕುಮಾರತಿ**: ೨. ಯಮುನ ದಾಡೆಯ ಕೀಳ್ವ ದಡಿಗ ದೈತ್ಯರ ಕಾಹು ಮವ ಕುಮಾರತಿಯು ಗೋಪುರಕೆ (ಮೋಹತ. ೩೩–೧೭); ಕುಲಗೇಡಿಯಂಹ ಕುಮಾರತಿಯುದಿಪಳು (ಚಿಬಪು. ೫೮–೯). **ಕುಮಾರ್ತಿ**: ೨. ಅಪ್ಸರಲ್ಲಿ ನೀನು ಕುಮಾರ್ತಿಯನ್ನು ಒಂದು ಸಾರಿ ನೋಡಿ ಬಂದು ಬಿಡಬಹುದಲ್ಲಾ? (ಸವತಿ. ೧೯೩). **ಕೊಮಾರತಿ**: ಚಿಕ್ಕದೇವರಾಜವಡೆಯ್ಯೆಯಿನವರ ಕೊಮಾರತಿ ಕೆಂಪದೇವಾಜಿ ಅಮ್ಮಂಣಿಯವರು (ಎಕ. III, ತಿರುಮ. ೧೮–೪; 1719); ತಮ್ಮ (ಎಳಂದೂರ ಹಿರಿರಾವು ರಾಜ ಒಡೆಯನ) ಕೊಮಾರತಿ ದೇವೀರಮ್ಮಣ್ಣಿ (ಸಕವೈ. VI, ಪ್ರಸ್ತಾವನೆ). **ಕೊಮಾರತ್ತಿ**: ವಿರುಪಂಣನಾಯಕರ ಕೊಮಾರತ್ತಿಯು ಯಾಕೇರಿಯ ಛತ್ರದ ಪೇಟೆಯಲ್ಲಿ ಕಟ್ಟಿಸಿದ (ಎಕ. III, ತೀರ್ಥಹ. ೯೭–೧೦; 1615). [ಕುಮಾರ + –ಇತಿ$_1$ (< –ಇತ್ತಿ)]

**ಕುಮಾರೀಭೂಶಿರ** (ನಾ). ಕನ್ಯಾಕುಮಾರಿ ಭೂಶಿರ: (ಮುಂಬಯಿ. ೬. ೪–೧೧೫). [ಸಂ. ಕುಮಾರೀಭೂಶಿರಸ್ (ಕುಮಾರೀ + ಭೂಶಿರಸ್)]

**ಕುಮಾರ್ಗ** (ನಾ). ೧. ಕೆಟ್ಟದಾರಿ, —ಮಾರ್ಗ. ೨. ಕೆಟ್ಟನಡತೆ; ದುಷ್ಟವರ್ತನೆ: ಉತ್ತಮ ಮಾರ್ಗವಿರೆ ಹೀನನುಸರಿಸಿದೆ ಕುಮಾರ್ಗವಂ (ಬಸಪು. ೬೦–೩೯). ೩. [ಕಾವ್ಯಮೀ] ಕೆಟ್ಟ ಕಾವ್ಯಶೈಲಿ; ದೋಷಯುಕ್ತವಾದ ಕಾವ್ಯರೀತಿ: ಸುಕಥಾಳಾಪಮನೋತು ಪೇೞ್ವುದು . . . ಬಿಸುಟು ಮಿಥ್ಯಾಮಾರ್ಗಮಂ . . . ಕುಮಾರ್ಗ ಕುತ್ಸಿತ ಕುಭಾಷ್ಯಾದಿ ದೋಷಂಗಳಂ (ಸುಕುಮಾ. ೧–೪೭). [ಸಂ.]

**ಕುಮಾರ್ಗೆ** (ನಾ). ಕೆಟ್ಟನಡತೆಯವಳು; ದುರ್ಮಾರ್ಗವನ್ನು ಅನುಸರಿಸುವವಳು: ಕುಟಿಳೆ ಕುಮಾರ್ಗ್ಗೆ ಕುತ್ಸಿತೆ . . . ಎಂಬಟಮುಟಕಾತ್ರಿಯಸ್ಸ್ವರ್ತಿಯರೆ (ಸೌಇಇ. XX, ೨೪೮–೪೧; 1128). [ಸಂ. ಕುಮಾರ್ಗಾ]

**ಕುಮಾರ್ತಿ** 'ಕುಮಾರಿತಿ' ನೋ.

**ಕುಮಾರ್ತೆ**, ಕುಮಾರತೆ (ನಾ). ೧. ಮದುವೆಯಾಗದ ಹುಡುಗಿ; ಕುಮಾರಿತಿ. ೨. ಮಗಳು. **ಕುಮಾರತೆ**: (+). [< ಕುಮಾರ್ತಿ]

**ಕುಮುಂಜಾನ** (ನಾ). ಒಂದು ಧೂಪದ್ರವ್ಯ; ಧೂಪದಾನಿ; ಧೂಪಾರತಿ(?): ಕಸ್ತೂರಿ ಕಣಂಜು ೧ ಕಟ್ಟು ಪುನುಗು ಕಣಂಜು ೧ ಪಂನೀರು ಚೆಂಬು ಹಲ ೧ ತಿರುಮಲೆ ಜೋಡು ೪ ಧೂಪಕೆ ಕುಮುಂಜಾನ (ಸೌಇಇ. IX–ii, ೪೮೯–೩೯; 1513). [?]

**ಕುಮುಕಿ** 'ಕುಮುಕ್ಕಿ$_2$' ನೋ.

**ಕುಮುಕು** 'ಕುಮುಕು' ನೋ.

**ಕುಮುಟಿ** 'ಕುಂಪಟಿ' ನೋ.

**ಕುಮುಟು₁** (ಕ್ರಿ). ೧. (ನಿದ್ದೆಯಲ್ಲಿ) ಬೆಚ್ಚಿಬೀಳು; ಹೆದರಿಕೆಯಿಂದ ನಡುಗು: ಕುಮುಟ ಕಣ್ದೆರೆಯ ಕಂಡೆ ನಿನ್ನಂ ಧ್ಯಾನಮಗ್ನೆಯಂ (ಶ್ರೀರಾಮಾ. ೯೯೭-೩೦೨); ನಿದ್ದೆಯೊಳೇತಕೊ ಮಗು ಕುಮುಟುತ್ತಿದೆ ದುಃಸ್ವಪ್ನಕೆ ಹುಬ್ಬನು ಸಡೆಯುತ್ತಿದೆ (ಕೋಗಿಲೆ. ೫೮). ೨. "ಜಿಗಿ, ನೆಗೆ" (ರಮಾಕಾಂ. ೧೬೨). ೩. ಬಸವಳಿ; ವಶತಪ್ಪು; ಶಕ್ತಿಗುಂದು.

ಕುಮುಟಬೀಳು = ೧. ಬೆಚ್ಚಿಬೀಳು; ಹೆದರು: ಪಾಪಕೃತ್ಯದ ಸುದ್ದಿಕೇಳಿ ಮೈಲಿಗೆಗೊಂಡವನಂತೆ ಕುಮುಟಬಿದ್ದು ಹೇಳಿದ (ಮರಳಿ. ೭೪); ಒಮ್ಮೆಗೆ ಕುಮುಟಬಿದ್ದರು ವಾಮನರಾಯರು (ಮರಳಿ. ೧೨೭); ಗಡಗಡನೆ ನಡುಗುತ್ತ, ಮೈ ಬೆವರಿ, ಕುಮುಟ ಬಿದ್ದು, ಚಿನ್ನಮ್ಮ ತಟಕ್ಕನೆ ಕಣ್ಣು ತೆರೆಯುವುದಕ್ಕೂ (ಮಲೆಮ. ೯೮). ೨. ಕಸುವುಗುಂದು; ಕೆಳಗೆ ಬೀಳು; ಕುಸಿದು ಬೀಳು; ವಶ ತಪ್ಪಿ ಕೆಳಗೆ ಬೀಳು: ಅವರು ಬೆನ್ನಿಗೊಂದು ಇಳಿಸಿಯೇ ಬಿಟ್ಟರು, ಹೂವಯ್ಯನು ಅಯ್ಯೋ ಎಂದು ಕುಮುಟ ಬಿದ್ದನು (ಕಾನೂರು. ೧೨೭).

[ದೇ. ‖ ತಮಿ. ಕುಮ್ಮಟ್ಟ = ನೆಗೆಯುವುದು]

**ಕುಮುಟ್ಟು** 'ಕಮುಟು' ನೋ.

**ಕುಮುದ₁** (ನಾ). ೧. ಜನರ ಸಂತೋಷ; ಪ್ರಜಾಹರ್ಷ: ಉತ್ತಮ ಜೀವನಕ್ಕೆ ಕುಮುದಕ್ಕೆ ಗಭೀರಗುಣಕ್ಕೆ ಸತ್ವವೃತ್ತಿಗತಿ ××× ನ್ನತೆಗೆ ತಂನವೊಲಾಶ್ರಯಮಾಗಿ ಪೆರ್ಮೆಯಂ ಪೆತ್ತುದೆನಿಪ್ಪುದೊಂದು ಕೆಱೆಯಂ ನೆಱೆಕಟ್ಟಿಸಿ (ಎಕ. V, ಬೇಲೂರು. ೧೭೧-೯೦; 1160); ಕಮಲಾಕರನೆಯ್ದೆಲೊಡಂಕಮಲಾಕರನೆಯ್ದಲಾಗಿ ಕುಮುದಂ ಕುಮುದಂ (ಹವ್ಯಾಂ. ೩-೧೮). ೨. ಸಂತೋಷವಿಲ್ಲದಿರುವುದು; ಅಸಂತೋಷ: ಕುಮುದದಿಂ ಪ್ರತಿಕೂಲದಿಂ ವಿಜಾತಿಗಳ ಸಂಗಮದಿಂದ ಜಡಜೀವನೋಪಾಯದಿಂ ಭಂಗಸಮಿತಿಯಿಂದಿರ್ಪ ತಾವರೆಗೊಳಂ ಪತಿಯಹರ್ಷಾನುಕೂಲೆಯ ಸತ್ಕುಲರಮೆಯ . . . ನಾಭಿಸರಸಿಯೊಂದಮಲತ್ವಕೆಣೆಯಲ್ಲವೆಂದೆಸೆದಳಾ ಚೆಲ್ವ ಪೆಣ್ಣು ಭೂಭುಜನ ಕಣ್ಣು (ಭಾವಚಿಂ. ೩-೪೫).

[< ಸಂ. ಕುಮುದ್, ಕುಮುಧಾ]

**ಕುಮುದ₂** (ನಾ). ೧. ಬಿಳಿಯ ನೈದಿಲೆ: "ಕೈರವಂ, ಕುಮುದಂ – ಈ ೨ ಬಿಳಿಯ ನೆಯ್ದಿಲ್" (ಹಲಾಯು. ೧೧೨-೪೯); ತಳಿರಂ ಪೂರ್ಣ ತಟಾಕಮಂ ಕುಮುದಮಂ ದೇವರ್ಕಳಂ ತುಂಬಿಯಂ ತಿಳಿಯಲ್ ಸ್ವಪ್ನದಿ ಲೀಸಲೈ (ಸೋಮೇಶ. ೭೯). ೨. ಕೆಂಪು ನೈದಿಲೆ; ನೀಲೋತ್ಪಲ: "ಕೈರವಂ ಕುಮುದಮೆನೆ ಬಿಳಿಯ ನೈದಿಲದು ಕಲ್ಹಾರಂ ಸುಗಂಧಿಕಂ ಕನ್ನೈದಿಲೆನಿಸಿಕ್ಕು ಕಪ್ಪೇರಿರ್ದ ನೈದಿಲೆಗೆ ನೀಲೋತ್ಪಲಂ ಕುಮುದ ಮೆಂಬಾಭಿಧಾನಮಕ್ಕುಂ" (ಮಂಗರಾ. ೧೨೪-೧೭). ೩. ಕೆಂಪುತಾವರೆ; ಕೆಂದಾವರೆ. ೪. ಕರ್ಪೂರ. ೫. ಕಪಿಲವರ್ಣ; ಕಂದುಬಣ್ಣ. ೬. ಸೂರ್ಯ; ನೇಸರು. ೭. ನೀರು; ಜಲ. ೮. ಸಿಂಹ; ಕೇಸರಿ. ೯. ಕಣ್ಣು; ನಯನ. ೧೦. ಕೊಳ; ಸರಸ್ಸು. ೧೧. ಧನ; ಹಣ. ೧೨. ಕಠಿನತೆ; ನಿಷ್ಠುರತೆ; ಕ್ರೌರ್ಯ; ಕಠೋರ: ಕುಮುದಸಖವರ ಕಲಾಭರಣ ಪಾವನಚರಣ ಕುಮುದ ಖಳವನಮಹಾದಾವ ದೇವರದೇವ (ಚೆಬಪು. ೪-೧). ೧೩. ದಿಗ್ಗಜಗಳಲ್ಲಿ ಒಂದು: "ಐರಾವತಃ, ಪುಂಡರೀಕಃ, ಕುಮುದಃ, ವಾಮನಃ, ಪುಷ್ಪದಂತಃ, ಸಾರ್ವಭೌಮಃ, ಸುಪ್ರತೀಕಃ – ಈ ೮ ಮೂಡಣಿಂ ಕ್ರಮದಿನಿರ್ದ ದೆಸೆಯಾನೆಗಳ್" (ಹಲಾಯು. ೧೮-೧೦೪); ಬೆದಱಿದುದಭ್ರಮೂರಮಣನೊಟ್ಟಜಿಗೆಟ್ಟುದು ಪುಂಡರೀಕಮುಬ್ಬುದು ಕುಮುದಂ ತಡಂಗೆಡೆದುದಂಜನಂ . . . ಇರದಾಲಿಸಿ ತತ್ಪಟಹ ಪ್ರಾಣಾ ಧಮಂ (ಪುಷ್ಪಪು. ೫-೮). ೧೪. ತಿಂಗಳು; ಚಂದ್ರ: ಕುಮುದಾರ್ಕವಹ್ನಿ ತ್ರಿನೇತ್ರ ಸನ್ನುತ ಗಾತ್ರ ಸುಪವಿತ್ರ ಸಚ್ಚರಿತ್ರ (ಚೆಬಪು. ೪-೧). ೧೫. ದೇವಸ್ಥಾನದ ಜಗತಿಯ ಮೇಲಿನ ಕುಮುದಾಕೃತಿಯ ರಚನೆ, —ಶಿಲ್ಪ. ೧, ೧೫: ಇದು ಪದ್ಮಾವಸಥಂ ದಿವಾಕರನವೋಲ್ . . . ಸತ್ಕುಮುದಂ ಸರೋವರದವೋಲ್ ಘಂಟಾನ್ವಿತಂ ದಿಗ್ಗಜೇಂದ್ರದವೋಲ್ ತಾನೆನಿಪನ್ನೆಗಂ ಹರಿಹರ ಶ್ರೀಗೇಹಮಂ ಮಾಡಿದಂ (ಎಕ. XI, ದಾವಣ. ೨೫-೭೫; 1224); "ಕಟ್ಟಡದ ಭಾಗ" (ಶಾಪಮಂ. ಟಿಪ್ಪಣಿ). ೧೬. ಒಂದು ಜಾತಿಯ ಮರ: "ಅನುಷ್ಪ – ಕುಮುದ" (ಒಷಧಿ. ४). ೧೭. ಸುಗ್ರೀವನ ಕಪಿಸೈನ್ಯದಲ್ಲಿದ್ದ ಒಬ್ಬ ವಾನರ: ನಳ ನೀಲ ಕುಮುದ ಶತಬಲಿಗವಯರೆಂಬ ಕಪಿಗಳ ಪಡೆಯನೆಲ್ಲಮಂ (ಜೈಮಿಭಾ. ೨೧-೯). ೧೮. ಒಂದು ಅಕ್ಷರವೃತ್ತದ ಹೆಸರು: ಅನಿಲದ್ವಿತಯಂ ಘನಮೆಲ್ಲಿಯುಮೆಂಬಿನವೊಂದಿರೆ ಕೇಳ್ ವನಿತೇ ಕುಮುದಂ (ಛಂದೋಂಬು. ೨-೨೯); ನಯುಗಂ ಕುಮುದಂ ಚಪಲಾಂಬಕಿಯಿಂತಪರಾಧಮನಾಗಿಪನಲ್ಲನ ಮೊಟ್ಟಿಪದಂ ನುಡಿದಳ್ (ಕೈಪಿಡಿ. ೭೯). ೧೯. ಹದಿನಾಲ್ಕು ಕುಲಾಚಲಗಳಲ್ಲೊಂದು: ಸುಗಂಧಶಿಖಿ . . . ಕುಮುದ . . . ಪಾರಿಜಾತವೆಂಬ ಹದಿನಾಲ್ಕು ಕುಲಾ ಚಲಂಗಳೇ ಪೂರ್ವೋಕ್ತ ವಿಪುಳ ಕೀಲಕ ಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿಹವು (ವಿವೇಕ. ೨೧೫). ೨೦. [ಜೈನ] ಜಿನನಿಗೆ ಆವಾಸವಾದ ರುಚಕವೆಂಬ ಪರ್ವತದ ಪಶ್ಚಿಮ ಭಾಗದ ಎಂಟು ಶಿಖರಗಳಲ್ಲೊಂದು: ತನ್ಮಹೀಧರ ವರುಣಾಶಾ ವಿಶೇಷಕಮಾಗಿರ್ದ ಲೋಹಿತಾಕ್ಷ . . . ಕುಮುದ . . . ಸರ್ವತೋಭದ್ರಂಗಳೆಂಬ ದ್ವಿಗುಣ ಚತುಃಕೂಟಂಗಳೊಳಂ (ಆದಿಪು. ೭-೩ ವ). ೨೧. [ಜೈನ] ಕಾಲಪ್ರಮಾಣದ ಒಂದು ಗಣನೆ, —ಲೆಕ್ಕ: ಹದಿನೈದು ದಿನಗಳಿಂದ ಒಂದು ಪಕ್ಷವು ಎರಡು ಪಕ್ಷಗಳಿಂದ ಒಂದು ಮಾಸವು . . . ಇದೇ ರೀತಿ ಎಂಬತ್ತುನಾಲ್ಕು ಮತ್ತು ಎಂಬತ್ತುನಾಲ್ಕು ಲಕ್ಷ ಗುಣಿತ ಕ್ರಮದಿಂದ ಕುಮುದಾಂಗ ಮತ್ತು ಕುಮುದ, ಪದ್ಮಾಂಗ ಮತ್ತು ಪದ್ಮ. . .ಎಂಬಿವು ಕ್ರಮದಿಂದ ಆಗುತ್ತವೆ (ಜೈನಪ. ೩೦೭); "ಶಶಿಯೊಳಾಶಾಗಜದೊಳು ಭೂಮಿರುಹದೊಳು ಕಪಿಲದೊಳು, . . ಕುಮುದ ನಾಮಮಕ್ಕು" (ಮಂಗರಾ. ೧೪೮-೪೨). [ಸಂ.]

**ಕುಮುದಕರ** (ನಾ). ೧. ನೈದಿಲೆಗಳನ್ನು ಅರಳಿಸತಕ್ಕವನು; ಚಂದ್ರ. ೨. ಲೋಕಕ್ಕೆ ಸಂತೋಷವನ್ನುಂಟುಮಾಡುವವನು; ರಾಜ. ೧,೨: ಉದಯಾರೂಢಂ ಕಾಂತ್ಯಾಸ್ಪದನನುರಕ್ತಾತ್ಮಮಂಡಲಂಕುಮುದ ಕರಂ ಮೃದುತರ ಕರಂಗಳಿಂದತಿಮುದಮಂ ಲೋಕಕ್ಕೆ ಪಡೆಗುಮಿಂತೀ ರಾಜಂ (ಕವಿರಾ. ೩-೧೧೯). [ಸಂ. (ಕುಮುದ+ಕರ; ಕು+ ಮುದಕರ?)]

**ಕುಮುದಗಡ್ಡೆ**, ಕುಮುದಗೆಡ್ಡೆ (ನಾ). ಒಂದು ಜಾತಿಯ ಸುಗಂಧ ಸಸ್ಯ; ಭೂಚಂಪಕ: (+). **ಕುಮುದಗೆಡ್ಡೆ**: (ವೈಔಗಿ. ४८-೯೬३).

[ಕುಮುದ₂ + ಗಡ್ಡೆ]

**ಕುಮುದಗೆಡ್ಡೆ** 'ಕುಮುದಗಡ್ಡೆ' ನೋ.

**ಕುಮುದನಾಥ** (ನಾ). ಬಿಳಿಯ ನೈದಿಲೆಗಳ ಒಡೆಯ, —ಚಂದ್ರ: ಕುಮುದನಾಥನು ಬಂದ ನೇತ್ರಾನಂದನು ಬಂದ ಚಾರುಸುಧಾಕರ ಬಂದ (ಇಂಚಾಪ. ೧೧೪-೫೮). [ಕುಮುದ₂ + ನಾಥ]

**ಕುಮುದಪತ್ರಾಭ** (ಗು). ಬಿಳಿಯ ನೈದಿಲೆ ಹೂವಿನ ದಳಕ್ಕೆ ಸದೃಶವಾದ: (+). [ಸಂ.]

**ಕುಮುದಪ್ರಿಯ** (ನಾ). ಕುಮುದಗಳಿಗೆ ಪ್ರಿಯನಾದವನು; ಚಂದ್ರ: "ಸುಧಾಸೂತಿಃ, ಕೌಮುದೀ ಕುಮುದಪ್ರಿಯಃ" (ಧನಂನಿ. ೧-೪೭).

[ಕುಮುದ₂ + ಪ್ರಿಯ]

**ಕುಮುದಪ್ರಿಯಾತಪ** (ನಾ). ಚಂದ್ರನ ಪ್ರಕಾಶ; ಬೆಳದಿಂಗಳು; ಕುಮುದಪ್ರಿಯಾತಪಂ ನಾವ್ಯಮಂಜಳಿಗ್ರಾಹ್ಯಮೆನೆಯುಮಿಷ್ಟಮಿವಕ್ಕುಂ (ಕಾವ್ಯಾವ. ८೫३). [ಕುಮುದಪ್ರಿಯ + ಆತಪ]

**ಕುಮುದಬಂಧು** (ನಾ). ಕುಮುದಗಳ ಬಂಧು ; ಚಂದ್ರ : "ಇಂದು ಜೈವಾತೃಕಂ . . . ಕುಮುದಬಂಧು . . . ದ್ವಿಜರಾಜನೆನೆ ಸುಧಾಂಶು ವೆಸಿಕ್ಕು" (ಮಂಗರಾ. ೧೧-೪). [ಕುಮುದ₂ + ಬಂಧು]

**ಕುಮುದಬಾಂಧವ** (ನಾ). = ಕುಮುದಬಂಧು : "ಹಿಮಾಂಶುಃ, ಚಂದ್ರಮಾಃ, ಇಂದುಃ, ಕುಮುದಬಾಂಧವಃ . . . ಕ್ಷಪಾಕರಃ – ೨೦ ಚಂದ್ರನ ಹೆಸರುಗಳು" (ಸಿದ್ಧಾಂತಿ. ೨೯). [ಕುಮುದ₂ + ಬಾಂಧವ]

**ಕುಮುದವಟ್ಟಿಗೆ** (ನಾ). ನೈದಿಲೆಯ ಆಕಾರದಲ್ಲಿ ರಚಿಸಿದ ಒಂದು ಬಗೆಯ ಶಿಲ್ಪ, —ಕೆತ್ತನೆಯ ಕೆಲಸ (?) : ಮಾಣಿಕ ಮಣಿಗಂಭ ಕುಲಿಶದ ಕುಮುದವಟ್ಟಿಗೆ ಪಸುರ್ಗಲ್ಲ ಮೇಲ್ವೆಲೆಯ ಮುಚ್ಚುಳ (ಶ್ರೀಪಾಲ. ೬-೫೧). [ಕುಮುದ₂ + ಪಟ್ಟಿಗೆ ?]

**ಕುಮುದವನ** (ನಾ). ನೈದಿಲೆಗಳ ಗುಂಪು, —ಸಮೂಹ : ವಿನಿಮೀಳಿತ ಕುಮುದವನಂ ಜನಿತೋನ್ಮೀಲಾರವಿಂದವನಂ ಲಕ್ಷ್ಮೀಶಂ ದಿನಕರನುದಯಂಗೆಯ್ದಂ (ಕವಿರಾ. ೨-೬೨). [ಕುಮುದ₂ + ವನ]

**ಕುಮುದವ್ರಾತ** (ನಾ). ೧. ನೈದಿಲೆಗಳ ಸಮೂಹ. ೨. ಭೂಮಿಯ (ಜನರ) ಸಂತೋಷದ ಆಧಿಕ್ಯ. ೧, ೨ : ರಿಪು ಭೂಪಾಳತಮೌಘ ಮೋಡೆ ಕುಮುದವ್ರಾತಂ ಕರಂ ಪೆರ್ಚೆ ತದ್ರಿಪುಕಾಂತಾ ಮುಖಪಂಕಜಂ ಕೊರಗೆ . . . ನೃಪನೇ ಸೋಮನೆನಲ್ಕೆ ಬಿಜ್ಜಳವಮಹೀಪಾಲಾಬ್ಧಿಯೊಳ್ ಪುಟ್ಟಿದಂ (ಎಕ. VII, ಶಿಕಾರಿ. ೯೨-೧೩ ; 1168). [ಸಂ. (ಕುಮುದ + ವ್ರಾತ ; ಕು + ಮುದವ್ರಾತ)]

**ಕುಮುದವೈರಿ** (ನಾ). ನೈದಿಲೆಯ ಶತ್ರು ; ಸೂರ್ಯ : (ಕ). [ಕುಮುದ₂ + ವೈರಿ]

**ಕುಮುದಶೋಭಿ** (ಗು). ೧. ನೈದಿಲೆಯ ಹೂಗಳಿಂದ ಶೋಭಿತವಾದ. ೨. ಕುಮುದವೆಂಬ ದಿಗ್ಗಜದಿಂದ ಅಲಂಕೃತವಾದ. ೩. ಕುಮುದನೆಂಬ ಕಪಿ ಮುಖ್ಯನಿಂದ ಶೋಭಿಸುವ. ೧, ೨, ೩ : ನಿರುತಂ ಕುಮುದ ಶೋಭಿ ಸೈಪುತ್ಕಟದಂತೆ ವಾನರಸೈನ್ಯದಂತೆ . . . ತತ್ಸರಂ ಕಂಗೊಳಿಸಿತು (ಜೈಮಿಭಾ. ೧೫-೧೧). [< ಸಂ. ಕುಮುದಶೋಭಿನ್]

**ಕುಮುದಸಖ** (ನಾ). ನೈದಿಲೆಯ ಸ್ನೇಹಿತ; ಚಂದ್ರ: ಸೋಮಶೇಖರ ಭಸ್ಮಾಭರಣ . . . ಕುಮುದಸಖ ಗೋಪಥೂಮ ಧ್ವಜಾಕ್ಷ ದುರಿತವ ಪಱಿದು ಪಾಲಿಪುದು (ಪ್ರೌಢರಾ. ೧-೧). [ಕುಮುದ₂ + ಸಖ]

**ಕುಮುದಾಂಗ** (ನಾ). [ಜೈನ] ಒಂದು ಕಾಲಗಣನೆ : ಎರಡು ದಶಕಗಳಿಂದ ಒಂದು ಮಾಸವು . . . ಇದೇ ರೀತಿ ಎಂಬತ್ತುನಾಲ್ಕು ಮತ್ತು ಲಕ್ಷ ಗುಣಿತ ಕ್ರಮದಿಂದ ಕುಮುದಾಂಗ ಮತ್ತು ಕುಮುದ, ಪದ್ಮಾಂಗ ಮತ್ತು ಪದ್ಮ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಪ. ೩೦೬). [ಕುಮುದ₂ + ಅಂಗ₂]

**ಕುಮುದಾಕರ** (ನಾ). ೧. ನೈದಿಲೆಗಳ ಸಮೂಹ : ದಿವಸಕರ [ಸಂತಾಪಕ್ಲಾಂತಮಪ್ಪ] ಕುಮುದಾಕರಕುನ್ಮುಖತೆಯಿಂ ದೊರೆಕೊಳ್ಗುಂ (ಕಾದಂಉ. ೩೬೧) ; ಸಲ್ಲಲಿತ ಮೃದುಮೃಣಾಳದಂಡಂಗಳೆನಿಪ ಕಮಲಷಂಡಂಗಳುಂ ವಿರಹಿಜನ ಭೀಕರಂಗಳೆನಿಸುವ ಕುಮುದಾಕರಂಗಳುಂ (ಪುಷ್ಪಪು. ೯-೨೨ ವ). ೨. ನೈದಿಲೆಗಳ ಅಥವಾ ಕಮಲಗಳ ಉತ್ಪತ್ತಿಸ್ಥಾನ. ೩. ಕುಮುದಗಳು ತುಂಬಿರುವ ಸರೋವರ, —ಕೊಳ. [ಕುಮುದ₂ + ಆಕರ]

**ಕುಮುದಾಕ್ಷ** (ನಾ). ನೈದಿಲೆಯಂತೆ ಕಣ್ಣುಳ್ಳವನು ; ವಿಷ್ಣು : ಮೋಕ್ಷದಾಯಕ ಕುಟಿಲದಾನವಶಿಕ್ಷ ಕುಮುದಾಕ್ಷ ಪಕ್ಷಿವಾಹನ . . . ರಕ್ಷಿಸು ನಮ್ಮನನವರತ (ಹರಿಸಾ. ೮). [ಕುಮುದ + ಅಕ್ಷ]

**ಕುಮುದಾಕ್ಷಿ** (ನಾ). ನೈದಿಲೆಯಂತೆ ಕಣ್ಣುಳ್ಳವಳು ; ಕಮಲಾಕ್ಷಿ : ಕೈರವದ ಸಬಳಮನೊಪ್ಪವಿಡಿದ ಕುಮುದಾಕ್ಷಿಯರಿಂ (ಗಿರಿಕ. ೬-೧೧ ವ). [ಸಂ. ಕುಮುದಾಕ್ಷೀ (ಕುಮುದ + ಅಕ್ಷಿ + -)]

**ಕುಮುದಾನಂದನ** (ನಾ). ನೈದಿಲೆಗಳಿಗೆ ಆನಂದವನ್ನುಂಟುಮಾಡುವವನು ; ಚಂದ್ರ : ಕುಮುದದಳಚ್ಛವಿ ಕುಮುದಾನಂದನನ ಪರಾಜಿತಂ ಪ್ರಸನ್ನಂ ಶಿಶುರಾಜಂ ದಲೆನೆ ಸಂದುಪರಿಪೂರ್ಣೇಂದು ವಿಲಾಸದಿನದೇಂ ಪೊದಳ್ದೊದವಿದನೋ (ಶಾಂತಿಪು. ೨-೨). [ಕುಮುದ₂ + ಆನಂದನ]

**ಕುಮುದಾಪ್ತ** (ನಾ). = ಕುಮುದ ಬಂಧು : ಎನ್ನಂ ಪಡೆದಂಬುಜಮಂ ಮುನ್ನಂ ಮುಗಿಯಿಪ ಮೃಗಾಂಕನಂ ಜಯಿಸೆಂದಾ ಕನ್ನೆಯ ಮೊಗಕ್ಕೆ ಕಡು ಚೆಲ್ವಂ ನಳಿನಜನೀಯೆ ಕುಂದುಗುಂ ಕುಮುದಾಪ್ತಂ (ರಾಜಶೇ. ೬-೪೮). [ಕುಮುದ₂ + ಆಪ್ತ]

**ಕುಮುದಾಭೋಗ** (ನಾ). ನೈದಿಲೆಗಳ ವಿಸ್ತಾರ, —ಅರಳುವಿಕೆ : ಜನಚಿತ್ತಾಹ್ಲಾದಪಾದಂ ಸಕಳಧರಣಿಭೃನ್ಮಸ್ತಕನ್ಯಸ್ತಮಾಗಿರ್ಪಿನ ಮುಚ್ಚಂಡ ಪ್ರತಾಪೋದಯ ಮರಿ ಕುಮುದಾಭೋಗ ವಿಧ್ವಂಸಿಯಾಗಿರ್ಪಿನಮುದ್ಯನ್ಮಂಡಲಾಗ್ರಂ . . . ಬೆಳಗುಗೆ ಜಗಮಂ ಗೋಪಮಾರ್ತಂಡದೇವಂ (ಜಗವಿ. ೧-೪). [ಕುಮುದ₂ + ಆಭೋಗ]

**ಕುಮುದಾರಿ** (ನಾ). ೧. ನೈದಿಲೆಯ ಶತ್ರು; ಸೂರ್ಯ : (ಕ). ೨. [ಛಂದ] ಮಧ್ಯ ಗುರುವುಳ್ಳ ಅಕ್ಷರಗಣದ ಹೆಸರು; ರವಿಗಣ; ಜಗಣ (⏑–⏑) : ಪಾವಕಾಮರಗಣಾನಲಂ ಲಗಂ ದಿವಿಜ ಚಂದ್ರ ಕುಮುದಾರಿಪಾವಕಂ ಭಾವಿಸುತ್ತು ಮಿರೆ ಕೋಮಲಾಂಗಿ ಕೇಳ್ ದಿವಿಜ ಕಲ್ಪಲತೆಯಾಯ್ತು ನಾಮದಿಂ (ಛಂದೋಂಬು. ೩-೭). [ಕುಮುದ₂ + ಅರಿ₆]

**ಕುಮುದಿಕೆ** (ನಾ). ೧. ಒಂದು ಜಾತಿಯ ಗಿಡ ; ಕಿರಿಯ ಶಿವನಿಮರ. ೨. ಸುವಾಸನೆಯ ಬೀಜಗಳಿಂದ ಕೂಡಿದ ಒಂದು ಜಾತಿಯ ಸಣ್ಣಗಿಡ : (ಕ). [ಸಂ. ಕುಮುದಿಕಾ]

**ಕುಮುದಿನಿ** (ನಾ). ೧. ಹೂಗಳಿಂದ ತುಂಬಿದ ನೈದಿಲೆಬಳ್ಳಿ ; ನೈದಿಲೆಯ ಬಳ್ಳಿ : "ಕಮಳಿನಿ ಬಿಸಜನಿ ಕುಮುದಿನಿ ಕುಮು(ದ್ವತಿಯುಮಂ)" (ವಸ್ತುಕೋ. ೨೫-೨೩) ; ತಾರಾವಳಿಯಲರ್ಚಲಾರ್ಕುಮೆ ಭಾವಿಸೆ ಹಿಮಕಿರಣನಂತೆವೊಲ್ ಕುಮುದಿನಿಯುಂ (ಪುಷ್ಪಪು. ೩-೭೪). ೨. ಕುಮುದಗಳ ಸಮೂಹ ; ನೈದಿಲೆಹೂಗಳ ರಾಶಿ. ೩. ಕುಮುದಗಳಿಂದ ತುಂಬಿದ ಪ್ರದೇಶ : (ಕ). [ಸಂ. ಕುಮುದಿನೀ]

**ಕುಮುದಿನೀಕಾಂತ** (ನಾ). = ಕುಮುದ ಬಂಧು. [ಸಂ. (ಕುಮುದಿನೀ + ಕಾಂತ)]

**ಕುಮುದಿನೀಪತಿ** (ನಾ). = ಕುಮುದ ಬಂಧು : ಪರಿಮಳದ ಪಾವುಡ ದಿನಳಿಗಳ ಕರೆಸಿದವು ತಾವರೆಗಳೆನೆ ಕಾತರಲತಾಂಗಿಯ ಸುಯ್ಲು ತಾಗಿತು ಕುಮುದಿನೀಪತಿಗೆ (ಕುವ್ಯಾವಿ. ೨-೫೬). [ಸಂ. (ಕುಮುದಿನೀ + ಪತಿ)]

**ಕುಮುದಿನೀಬಾಂಧವ** (ನಾ). = ಕುಮುದ ಬಂಧು : ನಿಖಿಲಲೋಕ ನಿದ್ರಾಮಂಗಲ ಕಲಶದಂತೆ ಕುಮುದಿನೀಬಾಂಧವಂ ಗಗನಾಂಗಣ ದೊಳೆಸೆಯೆ (ಕಾದಂಪೂ. ೯೪೪). [ಸಂ. (ಕುಮುದಿನೀ + ಬಾಂಧವ)]

**ಕುಮುದಿನೀಶ್ವರ** (ನಾ). ಕುಮುದಿನಿಗೆ ಒಡೆಯನಾದವನು, —ಚಂದ್ರ : ಕಮಲಿನಿಗೆ ಕಮಲಬಂಧುಗೆ ಕುಮುದಿನಿಗಾ ಕುಮುದಿನೀಶ್ವರಂಗೆ (ಕಾದಂಉ. ೧೬೫). [ಸಂ. (ಕುಮುದಿನೀ + ಈಶ್ವರ)]

**ಕುಮುದ್ವತಿ** (ನಾ). ೧. ಕುಮುದಗಳಿಂದ ಕೂಡಿದಸ್ಥಳ; ಸರೋವರ. 'ಕುಮುದ್ವತೀಕುಳ' ಪರಾ. ೨. ನೈದಿಲೆಹೂಗಳ ಸಮೂಹ, —ರಾಶಿ: (ಕ). ೩. ಮಯೂರಧ್ವಜನೆಂಬ ರಾಜನ ಹೆಂಡತಿ: ಶಿಖಿಧ್ವಜನ ಸತಿ ಕುಮುದ್ವತಿ ನುಡಿದಳತಿವಿನಯದಿಂದೆ ಪತಿಗೆ(ಜೈಮಿಭಾ. ೨೬-೫೫). ೪. ರಾಮನ ಮಗನಾದ ಕುಶನ ಹೆಂಡತಿ. ೫. ಕಕುದ್ಗಿರಿ ಪರ್ವತದ ತಪ್ಪಲು ಭೂಮಿ, —ಕಿಬ್ಬಿ: ಕುಮುದ್ವತಿ, ಗಂಧವತಿ, ಭೋಗವತಿ, ಅಭಯವತಿ ಎಂಬ ಹೆಸರುಳ್ಳ ತಪ್ಪಲುಗಳು ನಾಲ್ಕು ದಿಕ್ಕುಗಳಲ್ಲಿಯೂ ದೇವಋಷಿಗಳಿಂದ ಸೇವಿತವಾಗಿರುವುವು (ಕಕುಮಾ. ೨೪೪-೬). ೬. ಒಂದು ನದಿಯ ಹೆಸರು: (ಕ). [ಸಂ. ಕುಮುದ್ವತೀ]

**ಕುಮುದ್ವತೀಕುಳ** (ನಾ). ನೈದಿಲೆಗಳು ತುಂಬಿದ ಕೊಳಗಳ ಸಮೂಹ: ಬಳಸಿದ ನನ್ದನಾವಳಿಗಳಿಂ . . . ಕಮಳಾಕರದಿಂ ಕುಮುದ್ವತೀಕುಳದಿನದೇಂ ಮನಂಗೊಳಿಪುದೊ ಸತತಂ ಬನವಾಸಿಮಂಡಳಂ (ಎಕ. VIII, ಸೊರಬ. ೩೪೫-೫; 1150). [ಸಂ. ಕುಮುದ್ವತೀಕುಲ]

**ಕುಮುಲಿಕೆ** (ನಾ). ಜ್ವಾಲೆಯಿಲ್ಲದೆ ಒಳಗೊಳಗೆ ಅಡಗಿಕೊಂಡು ಉರಿಯುವಿಕೆ; ಕನಲುವಿಕೆ; "ಕನಲುರಿ; ಕುಮುಲಿಕೆ" (Smoulder. ಇಂಕನಿ). [ಕುಮುಲು + -ಇಕೆ]

**ಕುಮುಲು** (ಕ್ರಿ). ೧. ಒಳಗೊಳಗೆ ಉರಿ: ನಾನೆ ಕ್ಷತ್ರಿಯರಡಗಿಸುವ ಸಂಧಾನದೊಳಗಿರ್ದನಗೆ ಬರ್ಬರ ಹೀನಗೈದೊಳ ಕುಮುಲ್ವೀ ಅಗ್ನಿಯನುರುಹಿದಂತಾಗಿ (ಪಶುಭಾ. ೧೫-೩೫). ೨. (ಆಲಂ) ಸಿಟ್ಟು ಮೊದಲಾದ ಭಾವ ಮನಸ್ಸಿನೊಳಗೇ ಹೊಗೆಯಾಡುತ್ತಿರು; ಕುದಿ: ಅಂತರಂಗದ ಗವಾಕ್ಷಗಳ ತೆರೆದಿಡಲಲ್ಲಿ ಚಿಂತೆ ಕುಮುಲದು, ಹೊಗೆಗಳೊತ್ತವಾತ್ಮವನು (ಮಂಕುಕ. ೫೫೭). [← ತೆಲು. ಕುಮುಲು]

**ಕುಮೆರಿಬೆತ್ತ** (ನಾ). ಒಂದು ಬಗೆಯ ಬೆತ್ತ: ಜೆಡ್ಡುಬೆತ್ತ, ಕುಮೆರಿ ಬೆತ್ತ (ಮೈಔಗಿ. ೧೫-೨೮೦). [ಕುಮೆರಿ$_{0}$ + ಬೆತ್ತ]

**ಕುಮ್ಕಿ** 'ಕುಮುಕಿ$_{2}$' ನೋ.

**ಕುಮ್ಚಿಟ್** 'ಕುಮ್ಮಚಟ್ಟು' ನೋ.

**ಕುಮ್ಮಕ್** 'ಕುಮುಕು' ನೋ.

**ಕುಮ್ಮಕು** 'ಕುಮುಕು' ನೋ.

**ಕುಮ್ಮಕ್ಕು** 'ಕುಮುಕು' ನೋ.

**ಕುಮ್ಮಗಿದಱು** (ಕ್ರಿ). (?): ಬಮ್ಮನಿಱಿದಡೆ ಕುಮ್ಮಗಿದಱಿದಂದವಾಯ್ತು (ಬೊಂಕಶಾ. ೧೯೩೬. ಹಾನಗಲ್. ೯೦-೧೭; ?). ℙ 'ಕುಮ್ಮರಿದಱು' ಎಂಬುದರ ಅಪಲಿಖಿತವಿರಬಹುದೆ ?

**ಕುಮ್ಮಚಟ್ಟು**, ಕಮುಚಟು, ಕುಮ್ಚಿಟ್ (ನಾ). ನಿಂತಲ್ಲಿಯೇ ನೆಗೆದು ಹಿಮ್ಮಡಿ ಕುಂಡೆಗೆ ತಗಲುವಂತೆ ಒದೆದುಕೊಂಡು ನೆಟ್ಟಗೆ ನಿಲ್ಲುವುದು: ಕುಮ್ಮಚಟ್ಟು ಹಾಕಿ ತನಗೆ ಮಂಡಿಯ ಮೇಲೆ ಸುತ್ತುವುದಕ್ಕೆ ಬರುತ್ತದೊ ನೋಡುವ ಎಂದು ಪ್ರಯತ್ನಿಸಿ ಮುಂಡಿಗೆ ಪಟ್ಟಾಗಿ ಎದ್ದು ನಿಲ್ಲುತ್ತಾನೆ (ಸಂಸ್ಕಾರ. ೪೦). **ಕುಮುಚಟು**: "ಕುಮ್ಮುವುದು, ನೆಗೆಯುವ ಒಂದು ರೀತಿ" (ಜಿಂಕೋ. ೧೨೧). **ಕುಮ್ಚಿಟ್**: ಮುಕುಂದಯ್ಯನಿಗೆ ವಿನೋದ ವಿಷಯವನ್ನು ಹೇಳುವಂತೆ ಹೇಳಿ, ಹೊಟ್ಟೆ ಹಿಡಿದುಕೊಂಡು ಕುವರ್‌ಚಿಟ್ ಹೊಡೆದು ನಕ್ಕಿದ್ದನು (ಮಲೆಮ. ೧೬೭). [ಕುಮ್ಮಿ + ಚಟ್ಟು$_{0}$]

**ಕುಮ್ಮಟ** 'ಕುಂಪಟೆ' ನೋ.

**ಕುಮ್ಮಟೆ$_{1}$** 'ಕುಂಪಟೆ' ನೋ.

**ಕುಮ್ಮಟೆ$_{2}$** (ನಾ). ಒಂದು ಜಾತಿಯ ಮರ: ಅರಿಯಿರೇ ನೆಲಕುಳ್ಳ ಕುಮ್ಮಟಿ ಮರದ ಮೇಲಿಂದುರುಳ್ದುದೀಗೀ ಧುರದೊಳೆದುರಾಗುವರೆ ಕುಂಡರೆ ನೃಪಗೆ ಕಣ್ಣೀರ ತರಿಸಿದರೆ (ಜಿನಭಾ. ೬೯-೪೭). [?]

**ಕುಮ್ಮಟೆಗರೆ** (ಕ್ರಿ). ೧. ಕುಮ್ಮಟೆ ಮರದ ಕಾಯನ್ನು ಸುರಿಸು, —ಉದುರಿಸು. ೨. (ಆಲಂ) ಕುಮ್ಮಟೆ ಕಾಯಿಗಳನ್ನು ಉದುರಿಸುವಂತೆ (ಮರವೇರಿದವರನ್ನು) ಕೆಳಗೆ ಬೀಳಿಸು: ಮುಂದ ಸಾಹಸ ಕುಳ್ಳ ಕುಮ್ಮಟೆಗರೆವ ಕಾಲದಿ ಕಂಡಿತೀಗಿದನೊರೆದು ಫಲವೇನಕಟ ರಾಕ್ಷಸರ ಕೊಂದು ಕೀರ್ತಿಯ ಲೀ ಮೆರೆವುತಿಹನವನೀಗ ನಿನ್ನನು ತರಿಯದಿರುವನೆ ಧರ್ಮನಾಗ್ನೆಯೊಳಿರುವ ಕೇಳವನೀಶ ಮಹಿಯನು ಕೊಟ್ಟು ಬಾಳು (ಜಿನಭಾ. ೬೩-೪೬). [ಕುಮ್ಮಟೆ$_{2}$ + ಕರೆ$_{2}$ (< ಕಱೆ$_{1}$)]

**ಕುಮ್ಮಣ್ಣಿ** (ನಾ). ಪುರುಷರ ಜನನಾಂಗ; ಶಿಶ್ನ: (ಕ). 'ಅಮ್ಮಣ್ಣಿ$_{1}$' ಪರಾ.

**ಕುಮ್ಮರ** 'ಕುಂಬಱ' ನೋ.

**ಕುಮ್ಮರಿ**, ಕುಮರ್$_{2}$, ಕುಮರಿ$_{1}$, ಕುಮ್ಮಱಿ (ನಾ). ೧. ಅಡವಿಯ ಗಿಡ, ಮರಗಳನ್ನು ಕಡಿದು, ಸುಟ್ಟು ಸಾಗುವಳಿಗೆ ಸಿದ್ಧಪಡಿಸಿದ ಭೂಮಿ; ಕಾಡನ್ನು ಕಡಿದು ಸಾಗುಮಾಡಿದ ಪ್ರದೇಶ: ಕುಮ್ಮರಿಯಂ ಸುಡಲೆಂದು ಕಡಿದೊಟ್ಟಿದ ಮರಂಗಳ ಮೇಗೆ (ವಡ್ಡಾರಾ. ೧೪೭-೨೦); ತೆಂಕಲು ಕಡಿದ ಕುಂಮರಿ ಹೊಱಗಾಗಿ (ಎಕ. II, ೭೩-೪೩; 1118); ದರಿಯುಮಂ ಕುಮ್ಮರಿಯುಮಂ ಮೊರಡುಮಂ ಕೊರಡುಮಂ (ಲೀಲಾವ. ೬-೨೦); ಮಾರಬೋವನ ಕುಂಮರಿಯಾದಿಯಾಗಿ (ಎಕ. VI, ಕಡೂರು. ೩೮-೭೧; 1191); ತಱಿದ ಹೊಸ ಕುಮ್ಮರಿಯೊಳಗೆ ರಥ ಹರಿಯಬಲ್ಲುದೆ (ಕುವ್ಯಾಕ. ೧೧-೨೩). **ಕುಮರ್$_{2}$**: ೧. ಕುದುರ ಪಡುವ ಕುಮರವೊಳಗೆ ಅಂಚ ಉಡುಪರ ಕಯಲಿ (ಸೌಇಇ. IX-ii, ೬೨೦-೪೭; 1546). **ಕುಮರಿ$_{1}$**: ೧. ತೋಟ ತುಡಿಕೆ ಕುಮರಿ ಕೋಹು ಹಲಸು (ಎಕ. VIII, ತೀರ್ಥಹ. ೧೦೪-೩೬; 1404); ಕಡಿವಲ್ಲಿ ಕುಮರಿಯ ಜಾಣ ನೀನಹುದಯ್ಯ ನುಡಿದೀಗ ಜಾತಿ ಒಕ್ಕಣೆಯ (ಜ್ಞಾನಚ. ೧೩-೧೫); ನಿಮಿಷದಲಿ ಸಮರದ ದಾನವನು ಮುಕ್ಕುಱಿಕಿದನು ಕುಮರಿಗೆ ಕಿಚ್ಚು ಹೊಗುವಂತೆ (ಮೂಲರಾ. ೩-೩೬); ಕುಮರಿ ಬೆಳೆಯುವವರು ಕುಡಿಯರು (ಕುಡಿಕೂ. ೩೪). ೨. "ಹಾರಕ, ಸಾವೆ ಮೊದಲಾದ ನಿಕೃಷ್ಟತರವಾದ ಬೆಳೆಯೂ ಕೂಡ ವೊಂದೊಂದು ವರುಷ ಮಾತ್ರ ಆಗಿ ನಾಲ್ಕು ಮೂರು ವರ್ಷಗಳವರೆಗೆ ಬೀಡು ನಿಲ್ಲಿಸಲ್ಪಡಬೇಕಾಗುವ ಭೂಮಿ ಯಾವುದೊ ಅಂತಪ್ಪ ಭೂಮಿಗೆ ಕುಮರಿಯೆಂದು ಕರೆಯುವುದು" (ಭೂಮಿಅ. ೩೩). **ಕುಮ್ಮಱಿ**: ೧. ಗುಡಸೀಮೆವೊಳಗಣ ಕುಂಮಱವೊಳಗಣ ಕರಿದಲ ಬೀಜವರಿ (ಸೌಇಇ. IV, ೨೭೨-೫; 1564).

ಕುಮರಿಯ ಕೃಷಿ = ಕುಮ್ಮರಿ ನೆಲದಲ್ಲಿ ಮಾಡುವ ಕೃಷಿ, —ಸಾಗುವಳಿ: ಕುಮರಿಯಕೃಷಿ ಮಾಡಿದರು (ಒಡ್ಡಉ. ೩೧). ಕುಮ್ಮರಿಯಗಡಿತ = ಕುಮ್ಮರಿಯ ಮರಗಳನ್ನು ಕಡಿವಂತೆ ಪೂರ್ತಿಯಾಗಿ ಕಡಿದು ನಾಶಗೊಳಿಸುವಿಕೆ: ಬತ್ತೀಸಾಯುಧಂಗಳಿವೆ ಲೆಕ್ಕವೆನಲು ಕುಮ್ಮರಿಯ ಗಡಿತಮಂ ಮಾಡುವೆನು (ತುರಂಗ. ೬೫-೩೩). [ದೇ. ‖ ತಮಿ. ಕುಮರಿ; ತುಳು. ಕುಮೆರ್, ಕುಮೇರ್]

**ಕುಮ್ಮರಿಗಡಿ** (ಕ್ರಿ). ಕಾಡಿನ ಮರಗಿಡಗಳನ್ನು ಕಡಿದಂತೆ ಕಡಿ, —ಸವರು; ಪೂರ್ತಿಯಾಗಿ ಕತ್ತರಿಸಿ ಕೆಡವು; ನಾಶಮಾಡು: ಪರಶು ಶರನಿಕರದಿಂ ಕುಮ್ಮರಿಗಡಿದವೊಲೊಡನೆ ಕಡಿಯೆ ರಥಿಗಳ್ ರಥದಿಂ ಧರೆಗಿೞಿದು ವಿರಥರತಿರಥರರೆಬರ್ ಮೇಲ್ವಾಯ್ದು ರಥಿಗಳಂ ಸುರಿಗಿಱಿದರ್ (ಪಂಪಭಾ. ೧೦-೮೮); ಸಮಂತು ಕುಮ್ಮರಿಗಡಿದಂದ ಮಾಯ್ತು (ನೇಮಿಪು. ೧೨-೨೨೦); ಕಳೆದುರುಳಿದ ಗಜದಂತೆ ಕೈಕಾಲ್ಬಾಲಗಳಿನಾ ನೆಲನೊಪ್ಪಿದುದು ಕಳಿಲೆ ಕದಳಿ ಮೊಗವಾಳೆ ಬಲ್ಗಿಸಿಕಿಲ ಹಳುವ ಕುಮ್ಮರಿಗಡಿದಂತೆ (ನೇಮಿಸಂ. ೨೭-೬೧). [ಕುಮ್ಮರಿ + ಕಡಿ$_{1}$]

**ಕುಮ್ಮರಿಗಡಿತ** (ನಾ). ೧. ಕುಮ್ಮರಿಯ ಮರಗಳನ್ನು ಕಡಿಯುವುದು, — ಸವರುವುದು. ೨. (ಆಲಂ) ಪೂರ್ತಿಯಾಗಿ ಕತ್ತರಿಸಿ ಕೆಡಹುವಿಕೆ, —ನಾಶಪಡಿಸುವಿಕೆ: ಜಗವ ಹೂಡುವ ಹೊರೆವ ಬಲುಗೈಯಗಧರಂಗೀ ನೃಪರ ಕುಜಿ ವಿಂಡುಗಳ ಕುಮ್ಮರಿಗಡಿತಕಾವುದು ಬೇಕು ಭಜಸತ್ತ್ವ (ಕುವ್ಯಾಸ. ೧೦–೧೦). [ಕುಮ್ಮರಿ + ಕಡಿತ]

**ಕುಮ್ಮರಿದಱಿತ** (ನಾ). = ಕುಮ್ಮರಿಗಡಿತ: ಬಱಿಯ ಬಿಂಕದ ಮಾತೆ ಕಾರ್ಯದ ಹೊಱಗೆ ತಾನಂತಹುದೆ ಕುಮ್ಮರಿದಱಿತವೆನೆ ಕಡಿವಡೆದರ ಮರರು ಕೋಟಿಸಂಖ್ಯೆಯಲಿ (ಉತ್ತರಾ. ೩–೪೯). [ಕುಮ್ಮರಿ + ತಱಿತ]

**ಕುಮ್ಮರಿಸು** (ಕ್ರಿ). ೧. ಕೆಳಕ್ಕೆ ಸುರಿ; ಬಗ್ಗಿಸು: ಸುಮನಸರ್ . . . ಬೆಳ್ದಿಂಗಳ್ ಓರಂತೆ ಧರೆಗೆ ಕುಮ್ಮರಿಸಿರ್ಪ ಭಾಂಡಮೋ . . . ಮಿಾಱಿ ತಿಂದ್ರನ ದಿಶಾವನಿತೆ ಧರಿಸಿರ್ಪ ಸಿಂದೂರ ಬೊಟ್ಟೆನೆ ಶಶಾಂಕ (ಕವಿಚ. III, ೨೧ ರುಕ್ಮಾಂಗ); ಕರಿಶಿರದ ಹರಿವಣಗಳಲಿ ಕುಮ್ಮರಿಸಿ ಭೋಜನಗೈದು (ಅನಂರಾ. ೬–೨೨–೧೪). ೨. ತುಂಬು; ಗಿಡಿ; ತುರುಕು: ಎಲೆ ತುಂಬಾ ಬಡಿಸಿಕೊಂಡು ವಾಕವಾಗಿ ಒಂದಗುಳನ್ನೂ ಬಿಡದೆ ಚೆನ್ನಾಗಿ ಕುಮ್ಮರಿಸುತ್ತಾಳೆ ಹೊಟ್ಟೆಯೊಳಕ್ಕೆ (ಮಾಮರಾ. ೧೧೭).

[?. / ತೆಲು. ಕುಮ್ಮರಿಂಚು, ಕ್ರುಮ್ಮರಿಂಚು]

**ಕುಮ್ಮಱಿ** 'ಕುಮ್ಮರಿ' ನೋ.

**ಕುಮ್ಮಾರ** 'ಕುಂಬಱ' ನೋ.

**ಕುಮ್ಮಿ** (ನಾ). ಹೆಣ್ಣುಮಕ್ಕಳು ಕೈಚಪ್ಪಾಳೆಯೊಡನೆ ಹಾಡುತ್ತ ಕುಣಿಯುವ ಒಂದು ಬಗೆಯ ನೃತ್ಯ, —ಕುಣಿತ: ನಮ್ಮ ದೇಶದಲ್ಲಿ ಋತುಸಂಬಂಧವಾದ . . . ಹಲವು ನಾಟ್ಯ ಪದ್ಧತಿಗಳಿವೆ. ಉದಾಹರಣೆಗೆ – ರಾಸ . . . ಕುಮ್ಮಿ, ಕೋಲಾಟಂ, ಸುಗ್ಗಿಯ ಕುಣಿತ – ಮುಂತಾದವು ದಕ್ಷಿಣ ಭಾರತದವು (ಭಾರದ. ೫೬೬); ಕುಮ್ಮಿಯು ಇನ್ನೊಂದು ಜನಪ್ರಿಯ ಜಾನಪದದ ನೃತ್ಯವಾಗಿದ್ದು, ತಮಿಳುನಾಡು ಮತ್ತು ಕೇರಳಗಳಲ್ಲಿ ಇದು ಪ್ರಚಾರದಲ್ಲಿದೆ (ಭಾರಜಾ. ೧೨೭).

[ದೇ. ‖ ತಮಿ. ಮಲ. ಕುಮ್ಮಿ]

**ಕುಮ್ಮಿಯಾಟ** (ನಾ). = ಕುಮ್ಮಿ: ಆಂಧ್ರ ದೇಶದಲ್ಲೂ ತಮಿಳುನಾಡಿನಲ್ಲೂ . . . ಕೇರಳದಲ್ಲಿರುವಂತಹ ಕುಮ್ಮಿಯಾಟ ಕೋಲಾಟಗಳೂ ರೂಢಿಯಲ್ಲಿವೆ (ಆಭಾನ್ಯ. ೧೧೩). [ಕುಮ್ಮಿ + ಆಟ]

**ಕುಮ್ಮಿಸು** (ಕ್ರಿ). ಕುಟ್ಟಿಹಾಕು; ಪುಡಿಮಾಡಿಸು; ನಾಶಪಡಿಸು: ಅಲ್ಲಿ ಬಲರಾಮನು 'ಪೊಚ್ಚಱ ಸಾಮಂತರ' ನ್ನಟ್ಟಿದುದು 'ಅರಿಗ'ನ ಹೆಮ್ಮೆಯನ್ನು ಕುಮ್ಮಿಸಲೆಂದು (ನಾಡೋಜ. ೧೬೪).

[ಕುಮ್ಮು$_1$ + – ಇಸು$_3$]

**ಕುಮ್ಮು$_1$**, ಗುಮ್ಮು$_1$ (ಕ್ರಿ). ೧. (ಒನಕೆಯಿಂದ) ಕುಟ್ಟು; ತೊಳಸು; ತಳಿಸು: "ಕುಮ್ಮು – ಮುಸಲ ಕ್ರಿಯಾಯಾಂ" (ಶಮುಧಾ); ಗಟ್ಟಿಗೋದುವೆಯ ನಾಲ್ ಬಳ್ಳಮಂ ನೆನಹಿ ಕುಮ್ಮಿ ಹೊಟ್ಟು ಹಾರುವ ತೆಜದಿ (ಸೂಪಶಾ. ೧–೯); ಸುಣ್ಣವನು ಕುಮ್ಮಿ (ಮರುಚಾ. ೩–೮೭); ಕುಮ್ಮಿದಂ ಕುಮ್ಮಿದಪಂ (ಶಬ್ದಾನು. ೪೮೨ ಪ್ರಯೋ). ೨. (ನಿಶ್ಶಕ್ತಿಯಿಂದ) ಕೆಳಗೆ ಬೀಳು; ಕುಕ್ಕರಿಸಿ ಬೀಳು; ಕುಸಿ: ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವವಿಯೋಗಮಪ್ಪುದೆಂದಿರದೆರ್ದೆಗಪ್ಪುದತ್ತಳಗಂ (ಪಂಪಭಾ. ೪–೧೦೦); ಕೆಮ್ಮಿ ಗೂಹೆಗುಟ್ಟಿ ಘಲ್ಲಿಸಿ ಕುಸುಬಿ ಕುಕ್ಕುಱಿಸಿ ಕುಮ್ಮಿ ಕುಕ್ಕೆಯೊಳದ್ದು ನೆಱೆ ಮುಂದುಡಿ (ಪಿಂಡೋರ. ೨–೧೨). ೩. ಇರಿ; ತಿವಿ; ಹಾಯು: ತಿವಿದು ಕಡುಪಿಂ ಕೆಡಪಿ ಕೊಪ್ಪರದೊಳ್ ಕುಮ್ಮಿ (ಗಿರಿಕ. ೨–೧೦೫ ವ); ಗದೆಯೊಳೆಱಗುವನೊಮ್ಮೆ ಪಟುಶೂಲದಲಿ ಕುಮ್ಮುವನೊಮ್ಮೆ (ಅನಂರಾ. ೧–೫–೬೭). ೪. ಜಜ್ಜು; ಪುಡಿಪುಡಿಮಾಡು; ಧ್ವಂಸಮಾಡು: ಹಮ್ಮುಗಾಱಿಕೆಯಿಂದ ಲಾಲಿ ಬೊಬ್ಬಿಱಿವುತ ಕುಮ್ಮುತಲವನ ಗರ್ವವನು (ಜ್ಞಾನಚ. ೫–೪೭).

**ಗುಮ್ಮು$_1$**: ೩. ಬೊಮ್ಮವಱಿದಿಹೆನೆಂದು ಕರ್ಮವನು ಬಿಟ್ಟಿಹರೆ ಹೆಮ್ಮೆಯಲಿ ಹೆರನ ಹೊಡೆಯಲ್ಕೆ ಹಿಡಿದವನು ಗುಮ್ಮಿಕೊಂಡಂತೆ (ಸರ್ವಜ್ಞ. ೪೩೫); ಪವನಜನ ಗುಮ್ಮಿದಂ ಗದೆಯಗ್ರದೊಳ್ ಕುರುನೃಪಂ (ತುರಂಗ. ೭೪–೪೫); ಆನೆಯನ್ನು ಮಿಾರಿಸಿದ್ದಾನೆ ಗುಮ್ಮುವ ಶಕ್ತಿಯಲ್ಲಿ (ಮನೋನಂ. ೧೮೪). ೫. ಹರಡು; ವ್ಯಾಪಿಸು: ಸುರಸಂದೋಹತವಕಿಸಿ ತೊಡನೊಡನೆ ಗುಮ್ಮಿದುದು ಗಾವಳಿ ಗಗನವಳಯದಲಿ (ತೊರರಾ. ೧–೧೧–೮); ಕಲ್ಪಾವಲನ ನಾಲಗೆಯುಱುಬುಗಳ ಗುಮ್ಮುವ ಕಣಂಗಳ ಗುಜುಬಿನಲಿ ಘೋರ್ಗರೆವ ಶೂಲ ಮಹೋಗ್ರ ತೇಜದಲಿ (ತೊರರಾ. ೬–೪೯–೩೫). ೬. ಒತ್ತರಿಸು; ನುಗ್ಗಿ ಬರು: ಪೆತ್ತಮ್ಮ ಕಣ್ಣೀರೊಳಗದ್ದಿ ಗುಮ್ಮುತಿದ್ದಿರಿ (ಭರಚ. ೪೫–೧೧೩); ಗುಮ್ಮಿತು ಕಂಬನಿ ನೃಪಗೆ (ಭರಚ. ೬೧–೮೯). ೭. ಸಂಭೋಗಿಸು: ಬಾಯಲ್ಲಿ ಬ್ರಹ್ಮಜ್ಞಾನ ಮನಸ್ಸಿನಲ್ಲಿ ಗುಮ್ಮುವ ಜ್ಞಾನ (ಗಾದೆ). [ದೇ. ‖ ತಮಿ. ಮಲ. ತೆಲು. ಕುಮ್ಮು]

**ಕುಮ್ಮು$_2$** (ನಾ). (ಒನಕೆಯಿಂದ) ಕುಟ್ಟುವುದು; ಒನಕೆಯ ಪೆಟ್ಟು: (೬). [< ಕುಮ್ಮು$_1$]

**ಕುಯ್** 'ಕೊಯ್$_1$' ನೋ.

**ಕುಯಂತ್ರ** (ನಾ). ೧. ಕೆಟ್ಟ ಉಪಕರಣ; ದೋಷದಿಂದ ಕೂಡಿದ ಸಾಧನ: (೬). ೨. ಕುತ್ಸಿತವಾದ ತಾಯಿತ, —ಕಾಪು, —ರಕ್ಷೆ: ನಿಮ್ಮ ಶಾಸ್ತ್ರಮತಂಗಳತಿಪಾಪ . . . ಅಧವನು ನಿಮ್ಮ ದೈವವಶುದ್ಧ ಮಂತ್ರಕುಯಂತ್ರ ಕುಟಿಲಾರಾಧನೆಗಳು (ಬಸವು. ೫೧–೫೫). [ಸಂ.]

**ಕುಯಂತ್ರಕ** (ನಾ). ೧. ಕೆಟ್ಟಯಂತ್ರ ಶಿಲ್ಪಿ: (೬). ೨. ಕೆಟ್ಟ ಯಂತ್ರಚಾಲಕ: (೬). ೩. ಕುಟಿಲೋಪಾಯವನ್ನು ಹೂಡುವವನು; ಒಳಸಂಚುಗಾರ: ಶಿವತತ್ವಾನುಭವ ಪಾರೀಣ ಖಂಡಿತರಿಪು ಕುಯಂತ್ರಕ . . . ಜಯ ಬಸವ (ಬಸವು. ೨೭–೮೦). [ಸಂ.]

**ಕುಯಕ**, ಕುವಕ, ಕೂಕ$_1$, ಕೊಯಕ, ಕೊಯ್ಕು$_3$ (ನಾ). ೧. ಕಪಟ; ವಂಚನೆ; ಮೋಸ: "ಕುಯಕಂ ಕುಹಕಂ" (ಶಮುದ. ಪರಿ. ೨); ಕಂಸನೆಸ[ಪಾಠಾಂ. ನುಂ]ಗುವ ಕುಯಕಂ ಕೊಳ್ಗುಮೆ ಪರಾಕ್ರಮೋನ್ನತನಿನ್ನಂ (ಅರ್ಧನೇ. ೮–೫೧); ಕುಯಕದಿನಾ ವಿದರ್ಭಪತಿಯಾಜ್ಞೆಯ ನಾಂತುಱಿ ಬಂದ ಭೂಸುರದ್ವಯಮದು (ಉಮಾಶ. ೯೫); ಕುಯಕ ಕುತ್ಸಿತವಾಸೆ ರೋಷ ಶೋಕಂ ಮೋಹಭಯಗಳಂ ತಾಳಲಾರ್ಪನೆ ಮಹಾದೇವ (ಪಾಸೋಪು. ೧–೫೯). ೨. ಅಪಹಾಸ್ಯ; ಗೇಲಿ; ಕುಚೋದ್ಯ; ಕುಚೇಷ್ಟೆ. **ಕುವಕ**: ೧. (೬). **ಕೂಕ$_1$**: ೩. ಕುಹಕ; ಕಪಟ; ಮೋಸಗಾರ: ನಿರ್ಲಕ್ಷಕನ ಬೆಸನಿಂದ ಪೇಳ್ದ ಕಬ್ಬಮನು ಸಲ್ಲಕ್ಷಣಮದೆಂದೆ ಭಾವಿಪರು ಸತ್ಪುರುಷರಂ ಕೂಕರಿದ ಜರಿದಡೇನೂ (ಜೋರಬ. ೧–೧೩); ಕೂಕ ನಾರದನಿಲ್ಲಿಗೆ ಬಂದು ಕುಸುಮವ ತಂದು ಹಾಕಿದ ಮೋಡಿಯಿಂದು (ಶ್ರೀಕೃಪಾ. ೮೩). **ಕೊಯಕ**: ೧. "ಕೊಯಕಮೆನೆ ಕುಹಕಂ" (ಕಬ್ಬಿಕೈ. ೮೭); "ಕುಹಕಕ್ಕೆ – ಕುಚೇಷ್ಟೆಗೆ, ಕೊಯಕ – ಕೊಯಕವೆಂಥಾಗುವುದು" (ಶಬ್ದಮಂ. ೬೦ ಟೀಕು). ೪. ಅಪಹಾಸ್ಯಕ್ಕೆ ಪಾತ್ರವಾದುದು; ಹಾಸ್ಯಾಸ್ಪದವಾದುದು: ಕೊಯಕವೆಂದೆನಿಪ ಕೂರ್ಮವರಾಹ ವೇಷಗಳ ಲಯವನೆಯ್ದಿಸಿದಂ ಷಡಾನನಂ (ಸಿದ್ಧೇಪು. ೬–೩೩). **ಕೊಯ್ಕು$_3$**: ೩. ಕೊಯ್ಕರಲಿ ಹೆಂಗಳ್ಪರಲಿ . . . ನಿನ್ನ ಮಹಿಮೆಯ ನಾಕುಮಡಿಯಲಿ ಬಗುಳುವುದು (ತೊರರಾ. ೬–೪೭–೨೨); ಕಳ್ಳ ಹಾದರಿಗ ಕೊಯ್ಕು ದವಡ ಬಾಜಾರಸುಲ್ಲರನೆಲ್ಲ (ಬಜ್ಜರಾ. ೮–೪೨).

ಕುಯಕಮಾಡು = ಗೇಲಿಮಾಡು; ಕುಚೇಷ್ಟೆ ಮಾಡು; ಹಾಸ್ಯಮಾಡು: ಅಂತತಿಕ್ರೋಧಮಂ ಮುನಿವರ್ಯನೆಲೆ ಧರಾಕಾಂತ ನೀನೆಮ್ಮ ನುಡಿಯಂ ಕುಯಕ ಮಾಡಿದುದರಿಂ ತತ್ತ್ವಮೂಢನಾಗುದರೆಮಂ ಪೊರೆಯುತ್ತಿರೆಂದು ಶಾಪವನಿತ್ತನು (ಶೇಷರಾ. ೧೨–೨೨). [< ಸಂ. ಕುಹಕ]

**ಕುಯಲು** 'ಕೊಯ್ಲು' ನೋ.

**ಕುಯಲುಗಾರ,** ಕುಯ್ಲುಗಾರ (ನಾ). ೧. ಕತ್ತರಿಸುವವನು. ೨. ಬೆಳೆ ಕತ್ತರಿಸುವವನು; ಕಟಾವು ಮಾಡುವವನು: ಬೆಳೆಯೇನೋ ಬೇಕಾದ ಹಾಗಿದೆ, ಕುಯಲುಗಾರರು ಕಡಿಮೆ. (ಕಜಸಾ. ೫೦). **ಕುಯ್ಲುಗಾರ**: ಗದ್ದೆ ಕುಯ್ಲುಗಾರರಿಗೆ ಕೂಲಿ ಕೊಡಬೇಕು (ರೂಢಿ).
[ಕುಯಲು (ಕೊಯ್ಲು) + -ಕಾರ$_1$ (< -ಕಾಱ)]

**ಕುಯಿ$_1$** 'ಕೊಯ್' ನೋ.

**ಕುಯಿ$_2$** 'ಕುಂಯ್' ನೋ.

**ಕುಯಿಕೀರೆ** 'ಕೊಯಿಕೀರೆ' ನೋ.

**ಕುಯಿಲಾಳು** 'ಕೊಯಿಲಾಳು' ನೋ.

**ಕುಯಿಲು** 'ಕೊಯ್ಲು' ನೋ.

**ಕುಯಿಸು** 'ಕೊಯ್ಸು' ನೋ.

**ಕುಯಿಾ** 'ಕುಈ' ನೋ.

**ಕುಯುಕ್ತಿ** (ನಾ). ಕೆಟ್ಟಯುಕ್ತಿ, ಕುತಂತ್ರ; ಒಳಸಂಚು: ಕುಯುಕ್ತಿಗಳುಳಿದು ನೀತಿಯನುಳುಹಿಕೊಳ್ವ (ಬಸಪು. ೪೦-೩೬); ಕೇಡಿಂಗೆ ಮನದಂದು ಕುಯುಕ್ತಿಯಿಂದ ಸಮುಭಟರಜುವರಂ ಬೇಹಿಗೆ ಕಳಿಸಿದೊಡೆ (ಹವ್ಮಾರ. ೨-೯೯); ಅರೆಮುಚ್ಚಿದ ಕಣ್ಣುಗಳಲ್ಲಿ ಕುಯುಕ್ತಿಯ ಹುಸಿನಗೆಯನ್ನು ಪ್ರಕಟಿಸುತ್ತ ನುಡಿದನು (ಪುನರು. ೪೯). [ಸಂ.]

**ಕುಯುಕ್ತಿವಂತ** (ನಾ). ಕುಯುಕ್ತಿಯನ್ನುಳ್ಳವನು; ಕುಟಿಲೋಪಾಯ ಮಾಡುವವನು; ಕುತಂತ್ರಿ: ಅವರೆಂಥ ಪೆದ್ದರಂತೀರಿ ಜೊತೆಗೆ ಗುಳ್ಳೆನರಿಯಂಥ ಕುಯುಕ್ತಿವಂತರು (ಪುನರು. ೨೪೫).
[ಕುಯುಕ್ತಿ + -ವಂತ]

**ಕುಯೋನಿ** (ನಾ). ೧. ಪಶು, ಪಕ್ಷಿ ಮೊದಲಾದ ಪ್ರಾಣಿಗಳ ಯೋನಿ. ೨. ಕೆಟ್ಟ ಹುಟ್ಟು; ಕೀಳು ಜನ್ಮ: ನೀನತಿಲೋಭದೊಳಿಲ್ಲಿ ಕುಯೋನಿಯೊಳಜಗರನಾದೆ (ಆದಿಪು. ೨-೧೬); ಕುಯೋನಿಯೊಳ್ತಿರಿದು ಪೋದುವು ಕಾಲಮನಂತಂ (ಸುಕುಮಾ. ೧೧-೮೨); ಅತಿ ಕುಯೋನಿಗಳೊಳ್ ಜೀವಂ ತಿಱ್ಱನೆ ತಿಱಿವುದು (ಚಂದ್ರಪು. ೭-೨೦). [ಸಂ.]

**ಕುಯ್ಗುರಿ** 'ಕೊಯ್ಗುಱಿ' ನೋ.

**ಕುಯ್ಗುಱಿ** 'ಕೊಯ್ಗುಱಿ' ನೋ.

**ಕುಯ್ಕಲ್** 'ಕೊಯ್ಲು' ನೋ.

**ಕುಯ್ಕವಳ** (ನಾ). ಒಂದು ಪ್ರದೇಶದ ಹೆಸರು: ತಿಪ್ಪೇಶ್ವರ ದೇವರ ಕೆಯ್ಯಿಕುಯ್ಕವಳದಿಂ ಪಡುವ ಚಿಗುರವಳದಿಂ ಮೂಡ (ಸೌಇಇ. XI-ii, ೧೧೯-೫೩; 948). [?]

**ಕುಯ್ಕಿಸು** 'ಕೊಯ್ಸು' ನೋ.

**ಕುಯ್ಯೋ** (ಅ). ದುಃಖವನ್ನು ಸೂಚಿಸುವ ಅನುಕರಣ ಶಬ್ದ: (ಕ). ಕುಯ್ಯೋಮರ್ರೋ, ಕೊಯ್ಯೋಮೊರ್ರೋ = ದುಃಖಾತಿಶಯವನ್ನೂ ಶರಣಾಗತಿಯನ್ನೂ ಸೂಚಿಸುವ ಒಂದು ಅನುಕರಣ ಶಬ್ದ: ನಾಗಮಯ್ಯನ ಮೊಮ್ಮಕ್ಕಳು ಎಂಟು ಮಂದಿಯೂ ಬಂದು ಅಜ್ಜನೆದುರು ಕುಯ್ಯೋಮರ್ರೋ ಎಂದರು (ದಾನಚಿಂ. ೨೪); ಕಛೇರಿಗೆ ಬಂದು ಕುಯ್ಯೋಮರ್ರೋ ಎಂದು ಗೋಳಾಡುವುದು ಅವರ ಸ್ವಭಾವ (ಸಾಹೇಬ್. ೩೯೬). [ದೇ. ॥ ತೆಲು. ಕುಯ್ಯೋಮರ್ರೋ]

**ಕುಯ್ಲು** 'ಕೊಯ್ಲು' ನೋ.

**ಕುಯ್ಲುಗಾರ** 'ಕುಯಲುಗಾರ' ನೋ.

**ಕುಯ್ಲುಗಾಲ** (ನಾ). ಬೆಳೆಯನ್ನು ಕಟಾವು ಮಾಡುವ ಕಾಲ; ಸುಗ್ಗಿಕಾಲ: ಕುಯ್ಲುಗಾಲ, ಮ್ಯಾನಕ್ಕೆ ಆಳುಗಳು ಸಿಕ್ಕೋದು ಸ್ವಲ್ಪ ಕಷ್ಟ (ಚಿಂಗಾಳ್ಪ. ೨೧೯). [ಕುಯ್ಲು (< ಕೊಯ್ಲು) + ಕಾಲ]

**ಕುರ$_1$** 'ಕುರು$_1$' ನೋ.

**ಕುರ$_2$** (ನಾ). ಗೊರಸು; ಕೊಳಗು: "ಖುರ – ಕುರ" (ಶಮುದ. ೨೫೫ ಪ್ರಯೋ). 'ಕುರಪುಟ' ಪರಾ. [< ಸಂ. ಖುರ]

**ಕುರಊರ್** (ನಾ). ಒಂದು ಊರಿನ ಹೆಸರು: ಪುರವಿಷಯೇ ಪೆರಟಭೋಗೇ ಕುರಊರ ಗ್ರಾಮೋದತ್ತ (ಮೈಆರಿ. ೧೯೧೫, ೪೦-೧೬; ?).
[ಕುರ ? + ಊರು$_3$ (< ಊರ್)]

**ಕುರಂಗ$_1$** 'ಕುರುಂದ' ನೋ.

**ಕುರಂಗ$_2$** (ನಾ). ೧. ಜಿಂಕೆ; ಚಿಗರೆ; ಹುಲ್ಲೆ: "ಏಣಃ, ಕುರಂಗಃ, ಹರಿಣಃ, ಮೃಗಃ, ಈ ೪ ಹುಲ್ಲೆ" (ಹಲಾಯು. ೩೯-೭೬); ಸಂಗಳಿಸಲ್ವೇೞ್ಕುಮೆ ಮಾತಂಗವಿರೋಧಿಗೆ ಕುರಂಗ ಸಂಗರಧರೆಯೊಳ್ (ಪಂಪಭಾ. ೩-೧೭); ಕುರಂಗದವೋಲ್ ತೂರ್ಣಗತಿಪ್ರಯುಕ್ತಂ . . . ಎನಿಸಿತ್ತು ರಾಜವಾಜಿದ್ವಯಂ (ರಾಜಶೇ. ೧೨-೧೦೨); ಹರಿ ಮಾರ್ಜಾರ ಕುರಂಗ ಗಂಡಕ (ಯಾದವ. ೪೫೪); ತುರಂಗಕ್ಕೂ ಕುರಂಗಕ್ಕೂ ಸಮವೋ ? (ಗಾದೆ). ೨. ಒಂದು ದೇಶದ ಹೆಸರು: ಪಾಂಚಾಳ ಮತ್ಸ್ಯ ಕುರಂಗವಂಗ ಕಳಿಂಗ ಬಂಗಾಳ (ಬಸಪು. ೬-೧೮). ೩. ಚಂದ್ರಬಿಂಬದಲ್ಲಿರುವ ಜಿಂಕೆಯ ಚಿಹ್ನೆ. 'ಕುರಂಗಧರ' ಪರಾ. [ಸಂ.]

**ಕುರಂಗಕ** (ನಾ). = ಕುರಂಗ$_2$: (ಕ). [ಸಂ.]

**ಕುರಂಗತನು** (ಗು). ಜಿಂಕೆಯ ಶರೀರವನ್ನು ತಾಳಿದ; ಜಿಂಕೆಯಂತೆ ವೇಷವನ್ನು ಹೊಂದಿದ: ಕುರಂಗತನು ಮಾರೀಚನಭಿನಯಿಸಿದನು ತನ್ನ ಪಾತ್ರಮಂ (ಶ್ರೀರಾಮಾ. ೨೩೧-೯೮). [ಕುರಂಗ$_2$ + ತನು$_2$]

**ಕುರಂಗಧರ** (ನಾ). ಜಿಂಕೆಯ ಆಕಾರದ ಚಿಹ್ನೆಯನ್ನು ಧರಿಸಿದವನು; ಚಂದ್ರ: ತುಂಗ ತರಂಗ ಗಾಂಗ ಜಲಸಂಗ ಕುರಂಗಧರೋತ್ತಮಾಂಗ (ಶಬಶಂ. ೫-೨೬). [ಸಂ.]

**ಕುರಂಗನಾಭಿ** (ನಾ). ಮೃಗನಾಭಿ; ಕಸ್ತೂರಿ: ಕುರಂಗನಾಭಿಯನು ರೋಜಕೆ ಲೇಪಿಸಿ (ರಾಜಶೇ. ೫-೧೦೭). [ಕುರಂಗ$_2$ + ನಾಭಿ]

**ಕುರಂಗನೇತ್ರೆ** (ನಾ). ಜಿಂಕೆಯ ಕಣ್ಣುಗಳಂತೆ ಚಂಚಲವಾದ ಕಣ್ಣುಗಳನ್ನುಳ್ಳವಳು: ಬಾಳಮೃಣಾಳ ಸೂತ್ರಮಂ ಕಳಶ ಕುಚಾಂತರ ಸ್ಥಳದೊಳಾಗಿಸಲಿಲ್ಲ ಕುರಂಗನೇತ್ರೆಯಾ (ಶಾಕುಂತ. ೯೦-೧೪೯).
[ಸಂ. ಕುರಂಗನೇತ್ರಾ (ಕುರಂಗ + ನೇತ್ರ + -)]

**ಕುರಂಗಮುದ್ರೆ** (ನಾ). ಪೂಜೆಯ ಕಾಲದಲ್ಲಿ ಉಪಯೋಗಿಸುವ ತಂತ್ರಶಾಸ್ತ್ರೋಕ್ತವಾದ ಒಂದು ಬಗೆಯ ಹಸ್ತಮುದ್ರೆ: ಅರ್ಘ್ಯಮುಮನಿತ್ತು ಮಂತ್ರೋಕ್ತದಿಂ . . . ಕ್ಷಾರದ ಸುಘಟಿಕೆಯ ಕುರಂಗಮುದ್ರೆಯಲೆತ್ತಿ ವಾಮಕರದೊಳಿರಿಸಿ (ನವಮೋ. ೨೨-೨೨).
[ಕುರಂಗ$_2$ + ಮುದ್ರೆ]

**ಕುರಂಗರಿಪು** (ನಾ). ಜಿಂಕೆಯ ಶತ್ರು; ಹುಲಿ: "ಸುರುಚಿರಾಂಗಂ ದ್ವೀಪ ಪುಂಡರೀಕಂ ಕುರಂಗರಿಪು ಶಾರ್ದೂಲಂ ಚಮೂರವೆನೆ ಹುಲಿ" (ಮಂಗರಾ. ೪೭-೭); [ಉರಗಿಯನೆಯ್] ಪಿಡಿದೊಡದಂ ಕುರಂಗರಿಪು ಬೆಕ್ಕು ಕೊಕ್ಕನಂ ತವೆ ಪಿಡಿವಂತಿರೆ ಪಿಡಿದುದು (ಯಶೋಚ. ೩-೪೬).
[ಕುರಂಗ$_2$ + ರಿಪು]

**ಕುರಂಗಾಂಬಕಿ** (ನಾ). = ಕುರಂಗನೇತ್ರೆ: ಉಂಗುರವಿದ ನೀನಂಗುಲಿಗಿಡುತಲಿ ಸಿಂಗರಿಸುವುದು ಕುರಂಗಾಂಬಕಿ (ಶಾಕುಂತ. ೧೧. ಅಡಿಟ).
[ಸಂ. ಕುರಂಗಾಂಬಕೀ (ಕುರಂಗ + ಅಂಬಕ + -)]

**ಕುರಂಗು,** ಕೊರಂಗಿ (ನಾ). ಕೋತಿ; ಕೋಡಗ; ಕಪಿ. 'ಕುರಂಗು ಕಟ್ಟು' ಪರಾ. **ಕೊರಂಗಿ**: "ಕಪಿಃ . . . ವನೌಕಃ -೯ ಕೋತೀ ಹೆಸರುಗಳು, ಕಪಿ, ಕೊರಂಗಿ" (ಸಿದ್ಧಾಂತಿ. ೧೩೪).
[ದೇ. ॥ ತಮಿ. ಮಲ. ಕುರಙ್ಙು]

**ಕುರಂಗುಕಟ್ಟು** (ನಾ). (ಆಲಂ) ಬಿಗಿಯಾದ ಕಟ್ಟು; ಕೋಡಗಗಟ್ಟು: ಕಯ್ಯಾಲುಗಳನ್ನು ಹೀಗೆ ಕುರಂಗುಕಟ್ಟಿನಿಂದ ಬಿಗಿದು, ಹೊತ್ತುಕೊಂಡು ಬಂದೆವು (ಮಂತ್ರಶ. ೧೧೦-೯). [ಕುರಂಗು + ಕಟ್ಟು$_2$]

**ಕುರಂಜಿ**$_1$ 'ಕುರುಂದ' ನೋ.

**ಕುರಂಜಿ**$_2$ (ನಾ). [ಸಂಗೀತ] ಒಂದು ರಾಗದ ಹೆಸರು: ಕೌಶಿಕಿ, ವೇಳಾವಳಿ, ಶುದ್ಧಾವಳಿ . . . ಕುರಂಜಿ . . . ಸಯಸೋಧರೆಯೆಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದುವು (ವಿವೇಕ. ೨೩೪); ಪರಮಲಲಿತ ಕುರಂಜಿ ಲಲಿತಕುರಂಜಿ ಮಂಗಳ ಸರಸತರ ಮೋಹನದ ರಾಗಂಗಳಲಿ ಪಾಡಿದರು (ಯಾದವ. ೧೧-೪೪). [ಸಂ. ಕುರಂಜೀ]

**ಕುರಂಜೆ** (ನಾ). = ಕುರಂಜಿ$_2$: ಬಳಿಕ ಸಮಸ್ತರಾಗಂಗಳೊಳಗೆ ರಾಮಕ್ರಿಯೆ . . . ಕುರಂಜೆ, ಆಹರಿ . . . ಮಧ್ಯಮಾವತಿಯೆಂಬ ಮೂವತ್ತಾಱು ರಾಗಂಗಳೇ ಮುಖ್ಯಮಾಗಿ ಬಳಿ[ಳ]ಕೆಯಿಂದಧುನಾತನರಲ್ಲಿ ಪ್ರಸಿದ್ಧಗೊಂಡಿರ್ದುವು (ವಿವೇಕ. ೨೩೪). [< ಕುರಂಜಿ$_2$]

**ಕುರಂಟಿ** (ನಾ). = ಕುರಂಟಕ: (ಶ). [ಸಂ.]

**ಕುರಂಟಕ** (ನಾ). ೧. ಹಳದಿ ಹೂವಿನ ಗೋರಂಟಿಗಿಡ: "ಕಿಂಕಿರಾತಂ ಕುರಂಟಕಂ –ಈ ೨ ಗೋರಂಟಿ" (ಹಲಾಯು. ೩೫-೫೪); ಪಲಾಶ ಚಂಪಕ ಕುರಂಟಕ (ಯಾದವ. ೧-೩೫); ಪ್ರಿಯಾಳು ಕುರಂಟಕ ಕೋವಿದಾರ . . . ವೃಕ್ಷಂಗಳು ಸುಮನಸಭರಿತಂಗಳಾಗಿ ಶೋಭಿಸುತಲಿತ್ತು (ಪುರಾವಿ. ೯೭). ೨. ಬಿಳಿಯ ಗೋರಟೆ ಹೂವಿನ ಗಿಡ: "ಪೀತಮಾ ಸಹಚರಿಯು ಕೆಂಪುಗೋರಟೆ ಕಿಂಕಿರಾತಂ ಕುರಂಟಕಂ ಬಿಳಿಯ ಗೋರಟೆಯದು" (ಮಂಗರಾ. ೩೭-೧೨೪). [ಸಂ.]

**ಕುರಂಟಿಕೆ** (ನಾ). = ಕುರಂಟಕ: ಚಾರುಲತಾ ತಕ್ಕೋಲ . . . ಕುರಂಟಿಕಾ ಕುಜಕವಿದ್ಧ ಸಿಂಧುವಾರಾಶೋಕ (ಸೌಗಂಧಿ. ೪೪-೭); ಕುರಂಟಿಕೆ, ಮುಳ್ಳುಗೋರಂಟಿ, ಮುಳ್ಳುಮದರಂಗಿ (ವೈಔಗಿ. ೧೧-೧೯೯). [ಸಂ. ಕುರಂಟಿಕಾ]

**ಕುರಂಟಿಗೆ**, ಕುರಟಿಕೆ, ಕುರಟಿಗೆ, ಕುರುಟಿಕೆ, ಕುರುಟಿಗೆ, ಕುರುಡಿಗೆ$_2$, ಕೊರಟಿಗೆ (ನಾ). ಒಂದು ಬಗೆಯ ಔಷಧಿ ಗಿಡ; ಅಜಶೃಂಗಿ; ವಿಷಾಣಿ: ಕು(ಕೊ)ಗ್ಗಿಲ ವರ ಛತ್ರಕಂಗಳನೆ ಮತ್ತೆ ಕುಱಂ[ರಂ]ಟಗೆಯೊಳ್ಪಿದಪ್ಪ ಸದ್ದಲರಸದಿಂದೆ ಮರ್ದಿಸಿರಲ್ (ಖಮುದ. ೮-೫೫). **ಕುರಟಿಕೆ**: (ಶ). **ಕುರಟಿಗೆ**: (ಶ). **ಕುರುಟಿಕೆ**: 'ಹೆಗ್ಗುರುಟಿಕೆ' ಪರಾ. **ಕುರುಟಿಗೆ**: "ಅಜಶೃಂಗಿ, ವಿಷಾಣಿ –ಈ ೨ ಕುರುಟಿಗೆ" (ನಾಚಿರಾ. ೧೧೦); ಕುರುಟಗೆಯಿಂಗುಳಂ ತವಸಿಯೆರ್ಕೆಯ ಪಾಲ್ . . . ಅಮರೇಂದ್ರವಾಣಿಯೆನಿಪ್ಪವನೆಣ್ಣೆಯೊಳಿಟ್ಟು ಬಿಟ್ಟೊಡಂ (ಲೋಕೋಪ. ೯-೨೧೪); ಎರಡೆ ಹಣ್ಣು ಕುರುಟಿಗೆ ಹಣ್ಣು ಹೂವಿನ ಬಾಡು . . . ಅಗಮುದೊಳ್ನಿಸದಮಪ್ಪೆಲ್ಲಾ ಕಂದಮೂಲ ಕದಿರ ಶಾಕಪುಷ್ಪಫಲಾದಿಗಳಂ (ಶಾಸ್ತ್ರಟೀ. ೫೫-೩); ಕುರುಟಗೆ ಕುಮಾರಿ ಯೀಶ್ವರಿವೆರಸಿ (ಖಮುದ. ೫-೭೦). **ಕುರುಡಿಗೆ**: ಕರಿಲೊಕ್ಕಿರಸ, ಕುರುಡಿಗೆರಸ . . . ಇವುಗಳ ಮೂರು ಮಾನಕ್ಕೆ ಬೆಲ್ಲ ೧ ಮಾನ (ವಿವೈವಿ. ೬೨). **ಕೊರಟಿಗೆ**: ಕೊರಟಿಗೆ ಸೊಪ್ಪು ಮುರುಗದ ಚಕ್ಕೆ ಚಿತ್ರಮೂಲದ ಬೇರು (ವಾತಾಚಿ. ೨೨-೨); ಅಲ, ಎಕ್ಕ, ಹೊಂಗೆ, ಮಾವು, ಕೊರಟಿಗೆ, ಉತ್ತರಣೆ . . . ಇವೇ ಮೊದಲಾದ ಕಾಷ್ಠಗಳಲ್ಲಿ ದಂತಧಾವನ ಮಾಡಿಕೊಂಡು (ಸಕವೈ. ೨೯); ಗುಲಾಬಿ, ಕೊರಟಗೆ ಮೊದಲಾದ ಹೂವಿನ ಗಿಡಗಳು (ಶ್ಯಾಮತಾ. ೨೯). [?]

**ಕುರಂದ** 'ಕುರುಂದ' ನೋ.

**ಕುರಂಭೆ** (ನಾ). (?) : ಕುರಂಭದ ಸಂಚಾರ ರಂಭದ ಕೇಡು (ನಗಮಾ. ೨೦). [?]

**ಕುರಕಪಕ್ಷಿ** (ನಾ). ಒಂದು ಜಾತಿಯ ಹಕ್ಕಿ: ಇಲ್ಲಿ ಕೆಲವೆಡೆ ಮದಮತ್ತ ಕುರಕಪಕ್ಷಿ ತನ್ನ ಕೊಕ್ಕುಗಳಿಂದ ಮರೀಚ ಪಲ್ಲವಗಳನ್ನು ಕುರುಕುತ್ತಿರುವುದನ್ನು ಕಾಣಬಹುದು (ಬಾಣಅ. ೧೬೪). [ಕುರಕ$_6$ + ಪಕ್ಷಿ]

**ಕುರಕಿಸು**, ಕುರಿಕಿಸು (ಕ್ರಿ). ನೋಯಿಸು; ವ್ಯಥೆಪಡಿಸು; ಹಿಂಸೆಪಡಿಸು: ಹರಕು ಬಟ್ಟೆಯನುಟ್ಟು ಇರುವೆವು ನೀನೋಡು ಕರುಣದಿಂದೀಗ ಕುರಕಿಸದಿರುಯೆಮ್ಮ (ಹಮುಚ. ೪೮). **ಕುರಿಕಿಸು**: ಕುರಿಕಿಸಿ ನಡೆಯುತ ಪರಿಕಿಸಿ ನೋಡುತ (ಹಮುಚ. ೨೨). [ಕುರಕು + –ಇಸು$_3$]

**ಕುರಕು** (ಕ್ರಿ). ನೋಯು; ವ್ಯಥೆಪಡು. 'ಕುರಕಿಸು' ಪರಾ. [?]

**ಕುರಕುರಿ**, ಕುರುಕುರಿ, ಕುರುಕುರು$_1$ (ನಾ). ೧. ತಕರಾರು; ಕಿರಿಕಿರಿ; ತಂಟೆ. **ಕುರುಕುರಿ**: ೧. ಈ ಸಲ ಇರುವುದಕ್ಕೆ ಸ್ವಲ್ಪ ಕುರುಕುರಿ ಮಾಡುತ್ತಿದ್ದಳು (ವೈನಿ. ೧೧೨). **ಕುರುಕುರು**$_1$: ೧. ತಿರುಗಿ ಮನಸ್ಸಿನಲ್ಲಿ ಕುರುಕುರು ಅನಿಸಲಿಕ್ಕೆ ಹತ್ತಿದೆಯೆಂದು ತೋರುತ್ತದೆ (ಮೂರುದಾ. ೮೭). ೨. ಸೊಕ್ಕು; ಗರ್ವ: ಅವನ ಕುರುಕುರು ಹೆಚ್ಚಾಗಿದೆ (ರೂಢಿ).

ಕುರಕುರಿಮಾಡು = ತಕರಾರು ಮಾಡು; ಅಸಮ್ಮತಿ ತೋರಿಸು: ಪರಕೀಯರಿಗೆ ವಿಧೇಯರಾಗಿ, ಅವರಿಂದ ಹೇಳಿಸಿಕೊಳ್ಳಲು, ಅನಿಸಿಕೊಳ್ಳಲು ನಮ್ಮ ಜನರಿಗೆ ಏನೂ ಎನಿಸುವುದಿಲ್ಲ. ಆದರೆ ಅದೇ ತಮ್ಮವರ ಕೈಯಲ್ಲಿ ಕೆಳಗಿನವರಾಗಿ ದುಡಿಯಲು ಕುರಕುರಿ ಮಾಡುವರು (ಯಕ್ಷಪ್ರ. ೫೩). [← ಮರಾ. ಕುರಕುರ]

**ಕುರಗ** (ನಾ). ಅಕ್ಕಸಾಲಿಗರು ಮತ್ತು ಕಮ್ಮಾರರು ಉಪಯೋಗಿಸುವ ಅಡಿಗಲ್ಲು; ಅದ್ದಗಣೆ: (ಶ). [?]

**ಕುರಚಿ** 'ಕುಱುಚು' ನೋ.

**ಕುರಚಿಕಾಡು** (ನಾ). ಸಣ್ಣ ಮರಗಳ ಕಾಡು; ಪೊದರಕಾಡು: (ಶ). [ಕುರಚಿ (< ಕುಱುಚು) + ಕಾಡು$_3$]

**ಕುರಚಿಗಿಡ** (ನಾ). ಸಣ್ಣ ಗಿಡ; ಪೊದರು: (ಶ). [ಕುರಚಿ (< ಕುಱುಚು) + ಗಿಡ (< ಗಿಡು)]

**ಕುರಜು** 'ಕುರುಜು' ನೋ.

**ಕುರಟಿಕೆ** 'ಕುರಂಟಿಗೆ' ನೋ.

**ಕುರಟಿಗೆ** 'ಕುರಂಟಿಗೆ' ನೋ.

**ಕುರಡಿ**$_1$ (ನಾ). ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ತಿಂಡಿ; ಶಾವಿಗೆ ಸಂಡಿಗೆ: ಶಾವೀಗಿ ಸೈದಾನ ಮಾವಿನುಪ್ಪಿನಕಾಯಿ ಮ್ಯಾಲ ಕುರಡೀಯು ಇಡವೂದ (ಮಲ್ಲಿಗೆ. ೬೩). [← ಮರಾ. ಕುರವಡ್ಯಾ, ಕುರೋಡ್ಯಾ]

**ಕುರಡಿ**$_2$ (ನಾ). (ಕರಾ) ಒಂದು ಜಾತಿಯ ಮೀನು. [?]

**ಕುರಡೀಕುಠಾರ** 'ಕುರುಡೀಕುಠಾರ' ನೋ.

**ಕುರಣಿ**, ಕುರುಣಿ$_1$ (ನಾ). ಉಣ್ಣೆಯ ಹುರಿ: ಕಂಬಳಿಯ ಕುರಣಿಗಳು ಅವನ ಮೈಗೆ ಮುಳ್ಳುಗಳಂತೆ ನಟ್ಟವು (ಬಾಬಲ. ೩೭); ತುರುಬಿನಾಗೆರಡು ಕುರಣೀಯ ಕಟಿಗೊಂಡು (ಕನ್ನಜಾ. ೬೨). **ಕುರುಣಿ**$_1$: "ಕೂದಲು ಕಟ್ಟುವ ಮೂರು ಕಾಲ ಉಣ್ಣೆಯ ಎಳೆ" (ಜಾನಕೋ. ೩೯). [?]

**ಕುರತಿರುಗಿ** (ನಾ). ಒಂದು ಬಗೆಯ ಗಿಡ; ಚಂದ್ರಶೂರ: ಕುರ್ತಿಗೆ ಕುರತಿರುಗಿ (ವೈಔಗಿ. ೫೦-೯೯೨). [?]

**ಕುರಪುಟ** (ನಾ). ಗೊರಸು; ಖುರಪುಟ: ಕುದುರೆಯ ಕುರಪುಟ ಗಾತದಿ ಇರ್ದುದು (ಎಕ. VIII, ಸೊರಬ. ೨೯೦-೫; 1157). [< ಸಂ. ಖುರಪುಟ]

**ಕುರಮಾವು** (ನಾ). ಒಂದು ಔಷಧಿಗಿಡ: ಕುರಮಾವು, ಕುಮಾರ (ವೈಔಗಿ. ೬೧-೧೨೨೪). [?]

**ಕುರರ** (ನಾ). ಒಂದು ಜಲಚರ ಪಕ್ಷಿ; ಮರಕೂಟವಕ್ಕಿ: "ಉತ್ಕ್ರೋಶಃ, ಕುರರಃ –ಈ ೨ ಮರಕೂಟವಕ್ಕಿ" (ಹಲಾಯು. ೪೨-೯೬); ಬಕ ಕುರರ ಪಕ್ಷ ವಿಕ್ಷಿಪ್ತ ಕಂಜಕಿಂಜಲ್ಕ ಪುಂಜಪಿಂಜರಿತಾಚ್ಛೋದಕ ಪರಿಪೂರ್ಣತಟಾಕ ಪ್ರಕಟ (ಆದಿಪು. ೧-೫೭); ಮರಿಚ ವ್ಯಾಕೀರ್ಣಪರ್ಣಂ ಕುರರತನುವಂ . . . ಕೊರ್ವಿಸೆ (ಪುಷ್ಪವೃ. ೫-೬೯). [ಸಂ.]

**ಕುರರಿ** (ನಾ). ೧. ಹೆಣ್ಣು ಕುರರ, —ಕುರವಹಕ್ಕಿ: ಮೊರೆಯಿಡುತಿರ್ದುದವನ ರಾಷ್ಟ್ರದ ಜನಂ ಬೆದಱಿ ಕುರರೀಗಣಂಗಳ ತೆಱದೊಳು (ಜೈಮಿಭಾ. ೨೬-೫೨); ಕಂಕವರ್ತಕ ಕುರರೀಪ್ಲವ ಪ್ರಕರದಿಂದೆ ವಿರಾಜಿಕುಮುನ್ನತಂ ವನಂ (ಹಮ್ಮೀರ. ೫-೭೨); ಕರೆಯ ಮೇಲ್ಗಡೆ ನಭದಿ ಹಾರಿಯುಂ ಮಿಾನಿಗೆರಗುವ ಮುನ್ನ ನಿಲ್ಲುವ ಕುರರಿಯಂತೆ (ಶ್ರೀರಾಮಾ. ೨೩೦-೬೮). ೨. ಹೆಣ್ಣು ಕುರಿ: "ಏಡಕೆ, ಮೇಷಿ, ಕುಱಿ" (ನಾಚಿರಾ. ೬). [ಸಂ. ಕುರರೀ]

**ಕುರವ** (ನಾ). ೧. ಕೆಟ್ಟ ಶಬ್ದ; ಕಿರಿಚಲು ಶಬ್ದ: ಕಾಯ್ದಿರ್ಕುಟಿಲಂದಿರ್ಕುಟಿಸೆ ಕುರವದಿಂ ಕೂಡೆ ನೆತ್ತರ್ ತೆರಳ್ದಣ್ಮುವಿನಂ ಮೈಯೆಲ್ಲಮಂ ಜರ್ಜರಿಸಿ (ಸುಕುಮಾ. ೭-೩೫). ೨. ಒಂದು ದೇಶದ ಹೆಸರು: ಇರ್ವರುಂ ತೆಂಕಣಕುರವದೊಳ್ ಮೂಱು ಪಳಿತೋಪಮಾಯುಷ್ಯರಾಗಿ ಪುಟ್ಟಿದರ್ (ಪಂರಾಮಾ. ೧೬-೭೧ ವ); ಮಂದರದಿಶಾನನದುತ್ತರ ಕುರವದೊಳು (ಶಾಸ್ತ್ರಟೀ. ೨೯-೩). ೩. ಒಂದು ಜಾತಿಯ ಜಲಚರ ಪಕ್ಷಿ: "ಚಕೋರಹಾರೀತ ಕುರವ ಕಾರಂಡವ ಲಾವಕ ಜೀವಂಜೀವಕ ಶಾರಿಕಾದಿಗಳ್ ವಿಹಗಜಾತಿಯಕ್ಕುಂ" (ವಸ್ತುಕೋ. ೪೩-೨೧). ೪. = ಕುರವಕ. [ಸಂ.]

**ಕುರವಂಜಿ** 'ಕೊಱವಂಜಿ' ನೋ.

**ಕುರವಂಜಿ ನೃತ್ಯ** (ನಾ). [ನಾಟ್ಯ] ಒಂದು ಬಗೆಯ ನೃತ್ಯ: ಕುರವಂಜಿ ನೃತ್ಯವು ಸಂಪದ್ಭರಿತ ಕಲಾತ್ಮಕ ನೃತ್ಯ ಮಾರ್ಗ (ಭಾರಜಾ. ೧೨೪). [ಕುರವಂಜಿ (< ಕೊಱವಂಜಿ) + ನೃತ್ಯ]

**ಕುರವಕ** (ನಾ). ೧. ಕೆಂಪು ಹೂವಿನ ದೊಡ್ಡ ಗೋರಂಟೆ; ಮದರಂಗಿ ಗಿಡ: "ರಕ್ತಂ ಕುರವಕಂ" (ವಸ್ತುಕೋ. ೩೮-೩೪); ಉನ್ನತ ಕುಚತಟಘಾತದೊಳೆ ಕುರವಕಂಗಳಂ ಪುಷ್ಪಿತಂಗಳಂ ಮಾಡಿಯುಂ (ಆದಿಪು. ೧೧-೧೩೦ ವ); ಮರುಗದ ಮುಡಿಯೊಳ್ ಕತ್ತುರಿಯಂ ಚೆಲ್ಲಿಂಬ ಕುರವಕವನಪ್ಪಿ ಅಂಕುರಿಸೆಂಬ (ನಂಬಿರ. ೧೪-೩೮); ಸುರಗಿ ಶ್ಯಾವಂತಿ ಸುರಹೊನ್ನೆ ಕುರವಕ ವಕುಳ (ರುಕ್ಮಾಂಗ. ೧೨-೨೩). ೨. ಒಂದು ಜಾತಿಯ ಹಕ್ಕಿ: ಪಿಕ ಚಕ್ರವಾಕ ಚಕೋರ ಸಾರಸ ಹಂಸ ಬಕ ಕುರವಕ ಕಾರಂಡ ಶುಕ ನೀಲಕಂಠ . . . ನಿಕರದಿಂದದು ಸೊಗಯಿಪುದು (ಕುರಾಸಾಂ. ೪-೫೧). [ಸಂ.]

**ಕುರವಿ₁** (ನಾ). ಗುಬ್ಬಚ್ಚಿ; ಗುಬ್ಬಿ: ಆ ಕೋಡಗಿ ಕಾಡಕೂಡಿ ಕುರವಿಯಾಗಿರ್ದುದು (ಪುಣ್ಯಾಸ್ರ. ೪-೫೩ ವ). [ದೇ. ‖ ತಮಿ. ತುಳು. ಕುರವಿ]

**ಕುರವಿ₂** (ನಾ). ಒಂದು ಗಿಡದ ಹೆಸರು: "ಕಾರಿ [ಪಾಠಾಂ. ಕಿ] ಕವುರಿ ಕುರವಿಯಕ್ಕುಂ" (ಮಂಗರಾ. ೩೫-೧೪). [?]

**ಕುರಳಿಗದ್ದಿಗೆ** (ನಾ). ಮಣ್ಣನ್ನು ಅಗೆಯುವ ಒಂದು ಸಾಧನ; ಗುದ್ದಲಿ (?): ಮುಟ್ಟಿ ಆಗಿವಂಥ ಮರನು, ಇದಕೆ ಕುರಳಿಗದ್ದಿಗೆಯೆಂಬ ಹೆಸರು (ಖಡ್ಗಟೀ. ೨-೩೧). [ಕುರಳಿ₀ + ಗದ್ದಿಗೆ₃]

**ಕುರಳು** 'ಕುರುಳ್ಳ್' ನೋ.

**ಕುರಾಡ** (ನಾ). ಗೋಡೆಯಲ್ಲಿ ನೆಡುವ ದಸಿ; ಗೂಟ: ನವರತ್ನದ ಗೋಡೆ ರದದ ಕುರಾಡಗಳ ವಿರಳ ಫಲವಸ್ತುಗಳ ಧವಳೀಕೃಪ್ಪದಂಡ ರಂಭಾಸ್ತಂಭವಾ ದಿವ್ಯಭವನಗಂಭಗಳೊಳೊಪ್ಪಿದುವು (ಕಂಸವ. ೨೨-೭೩). [<— ಮರಾ. ಖುರಾಟ]

**ಕುರಾನ್** 'ಕುರಾನು' ನೋ.

**ಕುರಾನು, ಕುರಾನ್, ಖುರಾನ್, ಖುರಾಣ** (ನಾ). ಮುಹಮ್ಮದೀಯರ ಧರ್ಮಗ್ರಂಥ: ಸಕಲವೇದಶಾಸ್ತ್ರಗಳನ್ನು . . . ಬೈಬಲನ್ನು, ಕುರಾನನ್ನು, ಜೈನಬೌದ್ಧರ . . . ಗ್ರಂಥಗಳನ್ನು ಸೀಖರ ಗ್ರಂಥಸಾಹೇಬವನ್ನು ಸೂಕ್ಷ್ಮವಾಗಿ ಅವಲೋಕಿಸಿ (ಧರ್ಮಸಾ. ೩). **ಕುರಾನ್**: ಮೌಲ್ವಿ ಸಾಕ್ಷಿಗಳ ಮುಂದೆ ಕುರಾನಿಗೆ ಅನುಸಾರವಾಗಿ ಮದುವೆಯಾಗಿ (ಬಂಕಿಮ. ೨೨೪); ಈ ಎರಡನೆಯ ಸೂಕ್ತಿಯಲ್ಲಿ ಸಂಪೂರ್ಣ ಕುರಾನ್ (ನಗಹೊ. ೬೭). **ಖುರಾನ್**: ಖುರಾನ್ ಎಂಬ ಗ್ರಂಥವನ್ನು ಅವರು ಓದಿ ಕೃತಾರ್ಥರಾಗಬೇಕೆಂದು . . . ಉಪದೇಶ ಮಾಡಿದನು (ಪೈಮುಹ. ೨೩). **ಖುರಾಣ**: (೬). [<— ಅರ. ಹಿಂ. ಕುರಾನ್]

**ಕುರಿ₁** 'ಕುಱು₁' ನೋ.

**ಕುರಿ₂** (ಕ್ರಿ). ಬಾಗು; ಬಗ್ಗು; ಡೊಂಕಾಗು: ಜೋಲ್ದ ಪುರ್ಬು ಕುಳಿದಕ್ಷಿಯುಗಂ ತುಟಿಯಾದ್ರ್ರ ಬೋಡ ಬಾಯ್ತೆರೆ . . . ಸೆರೆಮುಸಗಿರ್ದಕಾಲ್ ಕು[ಪಾಠಾಂ. ಮು]ರಿದ ಬೆನ್ನು (ಧರ್ಮಪ. ೩-೨೬). [?]

**ಕುರಿ₃** 'ಕುಱು₃' ನೋ.

**ಕುರಿಕಾರ** (ನಾ). ಗುರಿಕಾರ (?): ಇದೆ ಬಾಳುವವನು ಕೂಡಂಬೆಲಾ ಭಯಿರಣ ಕುರಿಕಾರ ಶಾಂತುಮೆ ಲಂಟರು (ಸೌಇಎ. ೧೯೨೯, ಕಾರ್ಕಲ್. ೫೨೪-೨೪, ೨೫; 1456). [?]

**ಕುರಿಕಿಸು** 'ಕುರಕಿಸು' ನೋ.

**ಕುರಿಕು** 'ಕುಱುಂಕು' ನೋ.

**ಕುರಿಕುರಿ** (ನಾ). ೧. ಕಿರಿಕಿರಿ; ಬೇಸರ; ವ್ಯಥೆ; ಅಸಮಾಧಾನ: ಏನ ಕಷ್ಟಿದ್ದರೂ ಈಗ ಕುರಿಕುರಿ ಯಾಕ (ಬಾಂಡಾಯ. ೧೭). ೨. ಕುತೂಹಲ; ಔತ್ಸುಕ್ಯ; ಉತ್ಕಂಠೆ: ಪಟದ ವಿಷಯದಲ್ಲಿ ಶೋಧಮಾಡುವ ಕುರಿಕುರಿಯಿದ್ದರೆ ಅವರಿಗೆ ಈ ಕೆಲವು ಸಮಸ್ಯೆಗಳನ್ನು ಸೂಚಿಸಬಯಸುತ್ತೇನೆ (ಗಾಳಪ. ೫). [ಪ್ರಾ. ಕುರುಕುರಿಅ; ಮರಾ. ಖುರಖುರೀ]

**ಕುರಿಕೆ₁** 'ಗುಱುಕು' ನೋ.

**ಕುರಿಕೆ₂** 'ಕುಱುಕಿ' ನೋ.

**ಕುರಿಗಳ್ಳ** 'ಕುಱಿಗಳ್ಳ' ನೋ.

**ಕುರಿಗಾಯಿ** (ನಾ). ಕುರಿಗಳನ್ನು ಕಾಯುವವನು; ಕುರುಬ: ಕುರಿಗಾಯಿ ಬರುವುದನೆ ಕಾದು ಕುಳಿತಿರುವಷ್ಟೆ (ಮೂರುನಾ. ೧೨೬-೯೦೦). [ಕುರಿ₃ (< ಕುಱು₃) + ಕಾಯ್₃ (< ಕಾಹಿ)]

**ಕುರಿಗಿಡ** (ನಾ). ಒಂದು ಬಗೆಯ ಔಷಧಿಗಿಡ: (ವೈಔಗಿ. ೯-೧೫೨). [?]

**ಕುರಿಗೆಲೆ** (ನಾ). ಒಂದು ಬಗೆಯ ಔಷಧಿಗಿಡ: (ವೈಔಗಿ. ೨೯-೫೬೦). [?]

**ಕುರಿಗೊಲೆ** (ನಾ). ೧. ಕುರಿಯ ಕೊಲೆ: ಸಂತೆಮಾಳದಲ್ಲಿರುವ ಮಾಂಸದಂಗಡಿಯಲ್ಲಿ ಪ್ರತಿದಿನ ಕುರಿಗೊಲೆಗಳಾಗುತ್ತಿವೆ (ರೂಢಿ). ೨. (ಅಲಂ) ಅಸಹಾಯಸ್ಥಿತಿಯಲ್ಲಿರುವವರ ಕೊಲೆ; ಭೀಕರವಾದ ಕೊಲೆ; ಕಗ್ಗೊಲೆ: ಮತ್ತೇತಕಿತರರಂ ನೂಂಕುತಿರ್ಪರು ಬರಿದೆ ಕುರಿಗೊಲೆಗೆ (ಶ್ರೀರಾಮಾ. ೭೮೮-೧೯೫). [ಕುರಿ₃ (< ಕುಱು₃) + ಕೊಲೆ]

**ಕುರಿಜು** 'ಕುರುಜು' ನೋ.

**ಕುರಿತನ** 'ಕುಱಿತನ' ನೋ.

**ಕುರಿತೆರಿಗೆ** (ನಾ). ಕುರಿಯಮೇಲೆ ಹಾಕುವ ತೆರಿಗೆ: ಕಂಮಾಱ ತೆಱಗೆ ಕುರಿತೆರಿಗೆ ಮಾದಾರಿಗೆ ಉಪಿನಕಾವಲಿ ಸುಂಕ (ಎಕ. XIV, ಗುಂಡ್ಲುಪೇ. ೧೯೯-೮೪; 1521). [ಕುರಿ$_3$ (< ಕುಱಿ$_3$) + ತೆರಿಗೆ (< ತೆಱಗೆ)]

**ಕುರಿದರಿ** 'ಕುಱಿದಱಿ$_1$' ನೋ.

**ಕುರಿಪಾಣಿ** (ನಾ). (?): ದಿವ್ಯಮೂಲ್ಯ ಸುವಸನಗಳು ಸಹ ನವ್ಯಭೂಷಣವಿರಲಿ ಸಜ್ಜನ ಸೇವ್ಯರಹ ಮುನಿವರರು ಕುರಿಪಾಣಿಗಳು ಬಂದಿರಲಿ (ಅರಾಮಾ. ೨-೨-೭). [?]

**ಕುರಿಬಳ್ಳಿ** (ನಾ). ಒಂದು ಜಾತಿಯ ಬಳ್ಳಿ, —ಹಂಬು: (ವೈಶಿಗಿ. ೭೫-೧೫೨). [ಕುರಿ ? + ಬಳ್ಳಿ]

**ಕುರಿಬುದ್ಧಿ** (ನಾ). ೧. ಕುರಿಯ ಬುದ್ಧಿ. ೨. (ಅಲಂ) ಮಂದ ಬುದ್ಧಿ; ಸ್ವಂತ ವಿವೇಚನೆಯಿಲ್ಲದೆ ಇನ್ನೊಬ್ಬರನ್ನು ಅನುಸರಿಸುವ ಬುದ್ಧಿ: ಇದು ಜನರ ಕುರಿಬುದ್ಧಿಯನ್ನು ಮಾತ್ರ ತೋರಿಸುತ್ತದೆ (ಧ್ವನ್ಯಾಲೋ. ೧೧೯). [ಕುರಿ$_3$ (< ಕುಱಿ$_3$) + ಬುದ್ಧಿ]

**ಕುರಿಬೆಳ್ಳಿ** (ನಾ). ಶುದ್ಧವಾದ ಬೆಳ್ಳಿ; ಚೊಕ್ಕ ಬೆಳ್ಳಿ: ಮುಂಗೈಗೆ ಒಂದೊಂದು ಸೇರು ಕುರಿಬೆಳ್ಳಿಯಿಂದ ಮಾಡಿದ ಬಳೆಗಳು (ಸುವಸಂ. ೫೩). [<ಖುರೆ + ಬೆಳ್ಳಿ]

**ಕುರಿಹಿಂಡು** 'ಕುಱಿವಿಂಡು' ನೋ.

**ಕುರು$_1$**, ಕುರ್$_1$, ಕುರುವು$_1$ (ನಾ). ೧. ಕೀವು, ರಕ್ತಗಳಿಂದ ಕೂಡಿ ಮೈಮೇಲೆ ಏಳುವ ಗುಳ್ಳೆ, —ಗಡ್ಡೆ: "ಕುರು ಗಡುವೆನಿಕ್ಕು" (ಮಂಗರಾ. ೧೧೩-೨); ಕ್ಷಾರಗುಡಂಗಳನೆ ತೊಡೆಯೆ ಮೇಣ್ ಕುಱು[ರು]ಕಿಡುಗುಂ (ಲೋಕೋಪ. ೯-೧೬೦); ಕುರುವೊಂದೇಟಲ್ ಮೊದಲಾಗಿರೆ ಸೈರಿಸ ಬಾರದು (ಧರ್ಮಾಮೃ. ೯-೮೩); ಕರಗುಂಗುಮೇಱುಗ್ರೊರೆಯೆನಿಪ್ಪಕುರುವುಂ ಕ್ಷಣದೊಳ್ (ಕಾವ್ಯಾವ. ೨೭೧); ಜ್ವರವದೆಯ್ದೆ ಕುರುವದೆಯ್ದೆ ಗ್ರಹಣಿಯಲ್ಲಿ ಕ್ಷಯವದಲ್ಲಿ (ಸಾನಂಚ. ೯-೧೬೯ ರ). ೨. (ಅಲಂ) ನಿರಂತರವಾದ ವೇದನೆ: ಎಂತುಂ ಕುಱು[ರು]ಪೋದುದೆ (ರಾಮಾಶ್ವ. ೩೫-೧).

**ಕುರ್$_1$**: ೧. ಕಂಕುಳೊಳಗಿನ ಕುರಸಲ್ಲ ಕೊಂಕಣಿಗರನೆರೆ ಸಲ್ಲ (ಹಾಸ್ಯಮಂ. ೮); ಕುರದ ಮೇಲೆ ಬೊಕ್ಕೆ ಮೂಡಿದಹಾಗೆ (ಗಾದೆ). **ಕುರುವು$_1$**: ೧. ಮರವು ಮಗುವಿಗೆ ಹೊಲ್ಲ ಕುರುವು ಕುಂಡೆಗೆ ಹೊಲ್ಲ (ಸರ್ವಜ್ಞ. ೭೨೪); ಕುರುವಿನಷ್ಟು ನೋವಿಲ್ಲ, ನೋಡ ಬರುವ ನಾರಿಯಿಲ್ಲ (ಗಾದೆ).

ಕುರುವಿನ ಮೇಲೆ ಬೊಕ್ಕೆ = ಕಷ್ಟದ ಮೇಲೆ ಬರುವ ಕಷ್ಟ: ಕುರುವಿನ ಮೇಲೆ ಬೊಕ್ಕೆ ಎದ್ದಂತಾಗಿ ಸಂಕಟ ಮತ್ತಷ್ಟು ಹೆಚ್ಚಾಯಿತು (ನಮ್ಮೂರ. ೧೨೩).

[ದೇ. ‖ ತಮಿ. ಮಲ. ಕುರು; ತುಳು. ಕುರಿ; ತೆಲು. ಕುಱುಪು; ನಾಯ್ಕಿ. ಕುರುಪ್; ಪರ್ಜಿ. ಕುರ್; ಕುವಿ. ಕೂರು]

**ಕುರು$_2$** 'ಕುಱು$_2$' ನೋ.

**ಕುರು$_3$** (ನಾ). ೧. ಅನ್ನ; ಪಕ್ವವಾದ ಓದನ. ೨. ಚಂದ್ರವಂಶದಲ್ಲಿ ಹುಟ್ಟಿದ ದೊರೆ; ಕೌರವ ಪಾಂಡವರ ವಂಶಕ್ಕೆ ಮೂಲ ಪುರುಷ. 'ಕುರುವಂಶ' ಪರಾ. ೩. ಒಂದು ದೇಶದ ಹೆಸರು: ಗೌಳಸಾಂಧ್ರ ಕಳಿಂಗ ಕುರುನೇಪಾಳ ನಿಷಧ ವಿದರ್ಭಧರಣೀಪಾಲತತಿ ಸಂದಣಿಸಿದುದು ಸಾಕೇತನಗರಿಯಲಿ (ತೊರರಾ. ೧-೭-೧೮); ಕುರುಧರಣೀವರರು ಕುಠಾರ ಪರಾಕು (ಯಾದವ. ೩-೧ ವ). ೪. ಕುರುವಂಶದ ದೊರೆಗಳು; ಕೌರವರು. 'ಕುರುವೈರಿ' ಪರಾ. ೫. ಕುರುದೇಶದ ಜನ. [ಸಂ.]

**ಕುರುಂಕುರುಂ**, ಕುರುಕುರು$_2$ (ನಾ). ಕರಿದ ಅಥವಾ ಹುರಿದ ತಿನಿಸುಗಳನ್ನು ತಿನ್ನುವಾಗ ಉಂಟಾಗುವ ಶಬ್ದ: ಅವನು ಕುರುಂ ಕುರುಂ ಎಂದು ಚಕ್ಕುಲಿ ತಿಂದ (ರೂಢಿ). **ಕುರುಕುರು$_2$**: ಮಕ್ಕಳೊಂದಿಗೆ ಕುಳಿತು, ಕುರುಕುರು ತಿಂದು ಹೊರಜಗ ಮರೆಯಿರಿ (ನಿಲಮು. ೧೩). [?]

**ಕುರುಂಗ** (ನಾ). ಒಂದು ಪಕ್ಷಿಯ ಹೆಸರು (?): ತೆಂಗು ಕೊಂಗು ಕಾವಲರಲರಂಜಿಗಳ್ಗಂಗುವ ಕೊಂಚೆಬೆಂಚೆಗಳಿಂ ಭೃಂಗಕುರಂಗ ಪುರುಳಿ ಗಿಳಿನಳಿನವುನಂಗೊಳಲೊಪ್ಪಿಹವಲ್ಲಿ (ಅನಂಚ. ೧-೧೯). [?]

**ಕುರುಂಜಿಗೆ**, ಕುರುಚಿಗೆ, ಕುರುಜಿಗೆ (ನಾ). ೧. ವ್ಯವಸಾಯದ ಒಂದು ಉಪಕರಣ; ನೆಲದ ಹುಲ್ಲನ್ನು ಕೆತ್ತಿ ತೆಗೆಯಲು ಉಪಯೋಗಿಸುವ, ಹರಿತವಾದ ಅಲಗನ್ನುಳ್ಳ ಒಂದು ಸಲಕರಣೆ; ಉಜ್ಜಾರಿ; ಕೆತ್ತುವಾರೆ: ಕುಡನಂ ಕುಳಿನಂ ಕುರುಂಜಿಗೆ [ಪಾಠಾಂ. ಕುರುಂದಿ]ಯಂ ಕುಡರಿಂದುಂ ಪೆಱರ್ಗೆ (ಸಮುಪ. ೫-೧೬); ಕುಡು ಗೋಲಂ ಕೂರಿಗೆಯಂ ಕೊಡಲಿ ಕುರುಂಜಿಗೆಯನಗಳ್ವ ಹರೆಗುವ ಕುಡಿನಂ ಬಡಿವಿರಿಸುವ ಮುಟ್ಟಂ ಕುಡಲಾಗದು ಪೆಱರ್ಗೆ ಮಾಱಲಾಗದು ಜೈನರು (ಶಾಸ್ತ್ರಟೀ. ೫೧-೭). ೨. ಕಾವಲಿಯಿಂದ ದೋಸೆ, ಮೊದಲಾದುವನ್ನು ಎತ್ತುವ ಸಾಧನ; ಮಗಚುವ ಕೈ; ಖಡಚಿ. **ಕುರುಚಿಗೆ**: ೧. ಎರಡುಸಾರಿ ಕುಂಟೆಯನ್ನು ಎತ್ತಿ ಕುಡಕ್ಕೆ ಸುತ್ತಿಕೊಂಡಿದ್ದ ತೆಮಟೆಯನ್ನು ಕುರುಚಿಗೆಯಿಂದ ತೆಗೆಯುವುದಕ್ಕೆ ಇವನ ರಟ್ಟೆ ಬಿದ್ದು ಹೋಗಿದ್ದವು (ಬೆಳುಮ. ೨೬೯). **ಕುರುಜಿಗೆ**: ೧. ಕುರುಜಿಗೆಯಾಕಾರದ ರಸನೇಂದ್ರಿಯಮುಂ (ಶಾಸ್ತ್ರಟೀ. ೧೧೮-೪); ಕುರುಜಿಗೆಯ ಈಸಿಕೊಟ್ಟು ಕಳುಹಿದಡೆ (ಕಗವಿ. ೧೫೧-೨೬). [?]

**ಕುರುಂದ**, ಕುರಂಗ$_1$, ಕುರಂಜಿ$_1$, ಕುರಂದ (ನಾ). ಬಹುಗಟ್ಟಿಯಾದ ಒಂದು ಖನಿಜ; ನೀಲಿ, ಬೂದು, ಕೆಂಪು, ಕಪ್ಪುಬಣ್ಣವುಳ್ಳ ಒಂದು ಕಲ್ಲು; ಕುರುವಿಂದ: ಕುರುಂದದ ಕಲ್ಲು ಅಲೂಮಿನದಿಂದ ಹುಟ್ಟುವ ಕಾರಣ ಇದು ಮೇಲಿನ ರತ್ನಜಾತಿವರ್ಗದೊಳಗೆ ಬರುತ್ತದೆ (ಮುಂಬಯಿ. ೪-೪೫). **ಕುರಂಗ$_1$**: "ಕುರುಂದ; ಕುರಂಗದಕಲ್ಲು" (Corundum. ಇಂಕನಿ). **ಕುರಂಜಿ$_1$**: (ಕಿ). **ಕುರಂದ**: ಕುರಂದದ ಕಲ್ಲಿನ ಪುಡಿ (ಮುಂಬಯಿ. ಕಿ. ೪-೧೫೪).

ಕುರಂಗದಕಲ್ಲು = ಬೀಸುವ ಕಲ್ಲಿಗಾಗಿ ಉಪಯೋಗಿಸುವ ಕಲ್ಲು: "ಬೀಸುವ ಕಲ್ಲಿಗಾಗಿ ಉಪಯೋಗಿಸುವ ಗಟ್ಟಿಕಲ್ಲು; ಕುರಂಗದ ಕಲ್ಲು: ಮಸೆಗಲ್ಲು; ಸಾಣೆಯ ಕಲ್ಲು" (Burr. ಇಂಕನಿ).

[?. / ತಮಿ. ಕುರುನ್ದ; ತೆಲು. ಕುರವಿಂದ, ಕೋರಿನ್ದ. / ಸಂ. ಕುರುವಿಂದ; ಮರಾ. ಕುರನ್ದ]

**ಕುರುಂಬ** 'ಕುಱುಂಬ' ನೋ.

**ಕುರುಂಬಳೆ** 'ಕುರುಂಬಾಳೆ' ನೋ.

**ಕುರುಂಬಾಳೆ**, ಕುರುಂಬಳೆ (ನಾ). ಅಡಕೆ, ತೆಂಗಿನ ಹೂಗಳ ಗೊಂಚಲನ್ನು ಮುಚ್ಚಿಕೊಂಡಿರುವ ಕವಚ; ಹೊಂಬಾಳೆ: ಕುರುಂಬಾಳೆಯನ್ನು ತಂದು ಒಲೆ ಹೊತ್ತಿಸಿದರು (ರೂಢಿ). **ಕುರುಂಬಳೆ**: ಕುರುಂಬಳೆ ಕರಿಕು ಹಲ್ಲು ತಿಕ್ಕಲು ಒಳ್ಳೆಯದು (ರೂಢಿ). [?]

**ಕುರುಂಬಿಕೆ** (ನಾ). ಕುರುಬನ ಸ್ಥಿತಿ; ಕುರಿಗಳನ್ನು ಸಾಕುವ ಅಥವಾ ಮೇಯಿಸುವ ವೃತ್ತಿ; ಕುರಿಸಾಕಣೆ: ತಮಿಳರೂ ಪ್ರಾಚೀನ ಕಾಲದಲ್ಲಿ ಹಟ್ಟಿಕಾರ ದನಕಾರರೇ ಆಗಿದ್ದರು. ಆ ಜನಾಂಗದ ಪ್ರಾಥಮಿಕ ಅವಸ್ಥೆಯೂ ಕುರುಂಬಿಕೆಯೆ ಎಂದೂ ಪ್ರತಿಪಾದಿಸಿದ್ದಾರೆ (ಕರ್ಣಾಪೂ. ೧೭). [ಕುರುಂಬ (< ಕುಱುಂಬ) + -ಇಕೆ]

**ಕುರುಂಬು** 'ಕುಱುಂಬು$_1$' ನೋ.

**ಕುರುಂಬೆ**, ಕುರುಬು$_1$, ಕುರುಬೆ (ನಾ). ಬಹಳ ಎಳೆಯ ತೆಂಗಿನ ಕಾಯಿ; ಎಳೆಯ ಕಾಯಿ: (ಕಿ). **ಕುರುಬು$_1$**: ಅದಿನ್ನೂ ಕುರುಬು ಎಳನೀರಲ್ಲ (ರೂಢಿ). **ಕುರುಬೆ**: ಚಾರು ಚುಂಬಕವು ನಾರಿಕೇಳದ ಕುರುಬೆಯಂತೆಸೆಯೆ (ಯಾದವ. ೪-೨೫).

[ದೇ. ‖ ತಮಿ. ಕುರುಮ್ಬೈ; ಮಲ. ಕುರುಮ್ಪು; ತುಳು. ಕರುಕ್ಕು]

**ಕುರುಕಲ್** (?) (?) : ಭೂಮಿ ಪರ್ವಿದಂತೆ ಸೀಗೆಪುಟ್ಟಯನಳವನಂತೆ ಮೊಳಗೆ [ಪಾಠಾಂ. ಸೆ] ಕುರುಕಲ್ಕಿ [ಪಾ ಠಾಂ . ಲಿ]ಕ್ಕುವ ಪ ಯ ಣ ದಂತಿರ್ವಿಳಿಡು ನೃತ್ಯದಂತೆ ತಾಳ . . . ಮ ತ್ತ ಮೆ ನಿ ತಾ ನು ಂ ತೆಜದ ಮರೆದುಬುಗಲ್ಗಳೊಳಗೆ (ಬಂಹರಿ. ೨–೩೮ ವ). [?]

**ಕುಬುಕಲು** 'ಕುಜುಕಲು' ನೋ.

**ಕುರುಕಲುತಿಂಡಿ** (ನಾ). ಕುರುಂಕುರುಂ ಶಬ್ದವಾಗುವಂತೆ ಅಗಿದು ತಿನ್ನುವ ತಿನಿಸು; ಹುರಿಗಾಳು ಮೊದಲಾದ ತಿಂಡಿ : ಬಾಯಿ ಚಪಲರಿಗೆ ಕುರುಕಲು ತಿಂಡಿಯ ಆಸೆ (ರೂಢಿ).
[ಕುರುಕಲು (< ಕುಜುಕಲು) + ತಿಂಡಿ]

**ಕುರುಕು**$_1$ 'ಕುಜುಂಕು' ನೋ.

**ಕುರುಕು**$_2$, ಕುಲುಕು$_2$ (ಕ್ರಿ). ಮೆಲ್ಲನೆಹೇಳು ; ಗುಣುಗುಟ್ಟು ; ಗುಂಯಿಗುಟ್ಟು : "... ದಯಾಕಟಾಕ್ಷದಿಂ ಕರಗಿಪುದೆನ್ನನೆಂದೊಸೆದು ನೀಂ ಕೃಪೆಯಿಂದಲೆ ಹಂಪೆಯಾಳ್ದನೆ" ಎಂದು ಕುರುಕುತ್ತಿರುವನು (ತುಂಗಭ. ೧೬). **ಕು ಲು ಕು**$_2$ : ಎಷ್ಟಾದಡಂ ಜಪವನುಲುಕುತಂ ಕುಲುಕುತಂ (ಪತಿಲ. ೫–೬೫) ; ಲಲನೆಯರೊಡನೆ ನಕ್ಕಾಡುತ ಜಪಗಳ ಕುಲುಕುವಗೆಲ್ಲಿಯ ಮೋಕ್ಷ (ಅಮುಸಾಂ. ೪–೧೨೭). [?]

**ಕುರುಕುತಿಂಡಿ** (ನಾ). = ಕುರುಕಲು ತಿಂಡಿ : ಮಕ್ಕಳಿಗೆ ಕುರುಕುತಿಂಡಿ ಯೆಂದರೆ ಬಹಳ ಪ್ರೀತಿ (ರೂಢಿ). [ಕುರುಕು$_1$ (< ಕುಜುಂಕು) + ತಿಂಡಿ]

**ಕುರುಕುಪದ** (ನಾ). ಸಣ್ಣಹಾಡು ; ಗುಯ್ಗುಟ್ಟುವ ಗೀತ : ನಮ್ಮ ಕಾವ್ಯಮಾಲೆ ಒಡ್ಡರು ಹೇಳುವ ಕುರುಕುಪದವೂ ಅಲ್ಲ (ಕಬಸಾ. XXIV, ಪೀಠಿಕೆ) ; ಕಾಯಿ ಕೊಯ್ಯುತ್ತ ಕುರುಕುಪದವನ್ನು ಹಾ ಡು ತ್ತಿ ದ್ದ (ಇಣಿನೋ. ೧೪). [ಕುರುಕು$_2$ + ಪದ$_2$]

**ಕುರುಕುರಿ** 'ಕುರಕುರಿ' ನೋ.

**ಕುರುಕುರಿರೋಗ**, ಕುರ್ಕುರಿರೋಗ (ನಾ). ಕುದುರೆಗಳಿಗೆ ಬರುವ ಒಂದು ಬಗೆಯ ಉದರರೋಗ : (+). **ಕುರ್ಕುರಿರೋಗ** : (+).
[ಕುರುಕುರಿ ? + ರೋಗ]

**ಕುರುಕುರಿಸು** (ಕ್ರಿ). ಬಾಧಿಸು ; ಪೀಡಿಸು : ಬಂಕೆಯನ ಕಡೆಯ ಪತ್ರವನ್ನೀಕ್ಷಿಸಿದ ಮೇಲೆ . . . ಎದೆಯನ್ನು ಕುಕ್ಕಿ ಕುರುಕುರಿಸುತ್ತಿದ್ದ ಬಲು ಬಗೆಯ ಸಂಶಯಗಳೆಲ್ಲ ಮಾಸಿ ಹೋಗಿದ್ದುವು (ವೀರಬಂ. ೯೬).
[ಕುರುಕುರು$_1$ (ಕುರಕುರಿ) + –ಇಸು$_3$]

**ಕುರುಕುರು**$_1$ 'ಕುರಕುರಿ' ನೋ.

**ಕುರುಕುರು**$_2$ 'ಕುರುಂಕುರುಂ' ನೋ.

**ಕುರುಕುರುಕಾರ** (ನಾ). ಅಕ್ಕಸಾಲಿಗ ; ಸೊನ್ನಗಾರ : "ಐರಣಿಕಂ ಕುರುಕುರುಕಾರಂ" (ವಸ್ತುಕೋ. ೬೫–೮೦). [?]

**ಕುರುಕುಲ**, ಕುರುಕುಳ (ನಾ). ಕುರುವಂಶ : ಕುರುಕುಲ ಜೀವಾ ಕರ್ಷಣ ಪರಿಣತವಿದು ಕಾಳ ಹಸ್ತಮಲ್ಲದೆ ಪರಮೇಶ್ವರಿ ಕೇಶಹಸ್ತ ಮಕ್ಕುಮೆ (ಗದಾಯು. ೧–೬೭). 'ಕು ರು ಕು ಲ ಲ ಲಾ ಮ' ಪರಾ. **ಕು ರು ಕು ಳ** : ಕುರುಕುಳ ಚೂಡಾಮಣಿಯನೇನುಂ ಮಾ ಡ ದೆ (ಪಂಪಭಾ. ೧೩–೯೭ ವ). [ಕುರು$_3$ + ಕುಲ]

**ಕುರುಕುಲಲಲಾಮ** (ನಾ). ಕುರುಕುಲಕ್ಕೆ ಅಲಂಕಾರ ಪ್ರಾಯ ನಾದವನು ; ಕು ರು ವಂ ಶ ಶ್ರೇ ಷ್ಠ : ಕುರುಕುಲಲಲಾಮನಪ್ಪ ಚಕ್ರವರ್ತಿಯ ಕೀರ್ತಿಯೇ ಬಿರ್ದುವಂದಂತೆಸೆವುದುಂ (ಶಾ ಂ ತಿ ಪು. ೧೧–೧೩೭ ವ). [ಕುರುಕುಲ + ಲಲಾಮ]

**ಕುರುಕುಲಾಗ್ರಣಿ** (ನಾ). ಕೌರವವಂಶದ ಮುಂದಾಳು ; ಕೌರವ ರಾಜ : ಕುರುಕುಲಾಗ್ರಣಿಗಳ ಸು ಸ ನ್ನಾ ನ ವ ನು ಕೈ ಕೊ ಳು ತ (ಕುವ್ಯಾಉ. ೮–೬೦). [ಕುರುಕುಲ + ಅಗ್ರಣಿ]

**ಕುರುಕುಳ** 'ಕುರುಕುಲ' ನೋ.

**ಕುರುಕ್ಷಂದಟ್ಟಿ** (ನಾ). ಒಂದು ನಾಡಿನ ಹೆಸರು : ಅಯ್ಯಪದೇವನ ಮಗಂ ಗನ್ನರಸಂ ದಟಿಗವಾಡಿಯ ಕುರುಕ್ಷನ್ದಟ್ಟಿಯನಾಳುತ್ತಿರೆ (ಎಕ. IX, ಹೊಸಕೋ. ೧೧೧–೪ ; 997). [?]

**ಕುರುಕ್ಷೇತ್ರ** (ನಾ). ೧. ಪಾಂಡವರಿಗೂ ಕೌರವರಿಗೂ ಯುದ್ಧ ನಡೆದ ಪ್ರದೇಶ, — ಯುದ್ಧಭೂಮಿ : ನರರಥಂ ತೂಳ್ದಾ ಕುರುಕ್ಷೇತ್ರದಿಂಪಡುವೆ ಣ್ಣಾವುದು ಪೋಗೆ ಪೋಗಡಿಸುವೆಂ (ಪಂಪಭಾ. ೧೦೨–೫). ೨. ಒಂದು ಪುಣ್ಯಕ್ಷೇತ್ರ ; ತೀರ್ಥಸ್ಥಳ : ಇದಂ ಕಾಯದೆ ಕಾಯ್ವ ಪಾಪಿಗಂ ಕುರು ಕ್ಷೇತ್ರೋರ್ವಿಯೊಳ್ ವಾರಣಾಸಿಯೊಳೆಕ್ಕೋಟಿ ಮುನೀಂದ್ರರಂ . . . ಕೊನ್ದದೊನ್ದಯಸಂ ಸಾರುಗುಂ (ಎಕ. XII, ತಿಪಟೂ. ೪೨–೪೬ ; 1229). ೩. (ಅಲಂ) ತಿಕ್ಕಾಟ; ಜಗಳ; ಘರ್ಷಣೆ : ರಮೆಯ ಕೈಹಿಡಿದ ದಿನದಿಂ ದಲೇ ಮನೆಯಲ್ಲಿ ನಿತ್ಯ ಕುರುಕ್ಷೇತ್ರ ಆರಂಭವಾಯಿತು (ಹೂಹಣ್ಣು. ೯). ೪. (ಅಲಂ) ಕಲಹಕ್ಷೇತ್ರ ; ರಣರಂಗ : ಒಂದು ವಾರದಿಂದ ಅವರ ಮನೆಯೊಂದು ಕುರುಕ್ಷೇತ್ರವಾಗಿದೆ (ರೂಢಿ). [ಕುರು$_3$ + ಕ್ಷೇತ್ರ]

**ಕುರುಗಂಟು** 'ಕುಜುಗಂಟು' ನೋ.

**ಕುರುಗಡ್ಡ** 'ಕುಜುಗಡ್ಡ' ನೋ.

**ಕುರುಗಣ್** 'ಕುಜುಗಣ್' ನೋ.

**ಕುರುಗು** 'ಕುಟ್ಗು' ನೋ.

**ಕುರುಗುಟ್ಟು** (ಕ್ರಿ). ಮಿಡಿ ; ಚಿಮ್ಮು : ಅಂದೆಲ್ಲಾ ನನಗೆ ಹಿಡಿಸಲಾರ ದಷ್ಟು ಹಿಗ್ಗು ; ಮನಸ್ಸಿನಲ್ಲಿ ಆನಂದ ಕುರುಗುಟ್ಟುತ್ತಿತ್ತು (ಸಾವಿಸ. ೩೭).
[ಕುರು$_0$ + ಕುಟ್ಟು$_1$]

**ಕುರುಗುಡಿ** (ನಾ). ಒಂದು ಜಾತಿಯ ಹಣ್ಣಿನ ಗಿಡ : "ಬಂಧಕಾರೀ– ಕುರುಗುಡಿಯ ಹಣ್ಣು" (ಒಷಧಿ. ೧೦೬). [?]

**ಕುರುಗೆರೆ** (ನಾ). ಸಣ್ಣಗೆರೆ; ರೇಖೆ : ಗಂಗೆ ಮೊದಲಾದ ತೊರೆಗಳುಂ ಕೊಂಕಿದೊಂದೊಂದು ಕು ರು ಗೆ ರೆ ಗ ಳ ೦ ತಿ ರೆ ಕಾಣ್ಬುವೇನೆಂಬೆನು (ಶೇಷರಾ. ೮–೪೪). [ಕುರು$_2$ (< ಕುಜು$_2$) + ಗೆರೆ]

**ಕುರುಚಲು** (ಗು). ೧. ಸಣ್ಣದಾದ ; ಚಿಕ್ಕ : ಮರಳ ರಾಶಿಯ ಮೇಲಿನ ಕುರುಚಲು ಕಡಲು – ಪೊದೆಗಳು (ಹೊಸಕ್ಷಿ. ೬೩). (ನಾ). ೨. ಗಿಡಗಂಟೆ ; ಪೊದರು ; ಗುಲ್ಮ : ಕುರುಚಲುಗಿಡ ಬೆಳೆದು ಕಾಲಿಡ ಲಾಗದಂತೆ ಕಲ್ಮುಳ್ಳು ಕಿಕ್ಕಿರಿದು ತುಂಬಿರುವ (ನಡೆದಾ. II, ೯೫೯) ; ಕು ರು ಚ ಲಿ ನ ೦ ತೆ ಬೆಳೆದಿರುವ ಗಡ್ಡ, ಕೆದರಿದ ತಲೆ ಕೂದಲು (ಬೆಂದಜೀ. ೫೭). [ಕುರುಚು + – ಅಲು (< –ಅಲ್$_2$)]

**ಕುರುಚಲುಗೂದಲು** (ನಾ). ಪೊದೆಯಂತೆ ಬೆಳೆದ ಗಿಡ್ಡ ಕೂದಲು : ಶೋಭಾಯಮಾನವಾಗಿದ್ದ ಕುರುಚಲುಗೂದಲ, . . . ಹೆಂಗಸು ಬಹು ಪ್ರಭಾವಶಾಲಿಯಾಗಿ ಕಾಣುತ್ತಿದ್ದಳು (ಪುನರು. ೧೪೦).
[ಕುರುಚಲು + ಕೂದಲು (< ಕೂಂದಲ್)]

**ಕುರುಚಿಗೆ** 'ಕುರುಂಜಿಗೆ' ನೋ.

**ಕುರುಚು** 'ಕುಜುಚು' ನೋ.

**ಕುರುಚುಕಾಡು** (ನಾ). ಗಿಡಗಂಟೆಗಳ ಕಾಡು ; ಸಣ್ಣಕಾಡು : ಕೆನ್ನೆಗಡ್ಡದ ಕು ರು ಚು ಕಾ ಡಿ ನ ಮೇಡಿನೊಲು ಮುಡಿಯೆದ್ದಿರೆ (ಗಣೇಶ. ೭೩–೧೪). [ಕುರುಚು (< ಕುಜುಚು) + ಕಾಡು$_2$]

**ಕುರುಚುಜಂಪೆ** (ನಾ). [ಸಂಗೀತ] ಒಂದು ತಾಳದ ಹೆಸರು : ಕುರುಚು ಜಂಪೆ (ಯನಳ. ೪೮). [ಕುರುಚು + ಜಂಪೆ]

**ಕುರುಚಿ** (ನಾ). ಒಂದು ಬಗೆಯ ಔಷಧಿ ಗಿಡ : ಜ್ವರಕ್ಕೆ . . . ನೆಲ ಗುಳ್ಳ ಹೆಗ್ಗುಳ್ಳ . . . ಕುರುಚಿ . . . ಅಲಸಂಧಿ ಇವನ್ನು ಕಷಾಯ ಕಾಸಿ ಕೊಡುವುದು (ವಿವೈವಿ. ೧೪೩). [?]

**ಕುರುಜ** 'ಕುರುಜು' ನೋ.

**ಕುರುಜಾತ** (ನಾ). ಕುರುವಂಶದಲ್ಲಿ ಹುಟ್ಟಿದವನು; ಕೌರವ: "ಕುರುಜಾತನೆನಲು ಕೌರವನಕ್ಕು" (ಮಂಗರಾ. ೭೮-೨). [ಕುರು₃ + ಜಾತ]

**ಕುರುಜಾತು** (ನಾ). "ಪ್ರಾಚೀನ ಕಾಲದ ಒಂದು ನಾಣ್ಯ" (ಕಸ್ತೂ.ಕೋ. ೨೨೬). [< ಸಂ. ?]

**ಕುರುಜಿಗೆ** 'ಕುರುಂಜಿಗೆ' ನೋ.

**ಕುರುಜು**, ಕುರಜು, ಕುರಿಜು, ಕುರುಜ, ಕುರುಜೆ, ಕುರ್ಜು, ಗುರಜೆ (ನಾ). ೧. ವಿಗ್ರಹಗಳನ್ನಿಡುವುದಕ್ಕೋಸ್ಕರ ಅಥವಾ ರಾಜರು, ವಧೂವರರನ್ನು ಕೂರಿಸುವುದಕ್ಕೋಸ್ಕರ ಅಲಂಕರಿಸಿದ ಮಂಟಪ: ಪುರದೊಳೆಲ್ಲೆಲ್ಲಿಯುಂ ನವ ಕುರುಜುಗಳ್ ಮಹಾಮೇರುವಿನೆಗಳುಂ ಮೆಱೆದುವು (ಚಬಪು. ೫-೪); ಸಱಯೂಡಿನ ಬಿಱುಸುಗಟ್ಟಿ ರಚಿಸಿದ ಕುರುಜೆಂಬಂತೆ (ಶಬಶಂ. ೨-೪೨ ವ); ಅಂತರದೊಳೆರ್ದ ಪೊಸ ಕುರುಜು ಕಣ್ಗೊಂಡುದು (ಶ್ರೀರಾಮಾ. ೪-೫೨). ೨. (ಉಪ್ಪರಿಗೆ, ಕೋಟೆ ಮೊದಲಾದ ಸ್ಥಳಗಳಲ್ಲಿ ಕಟ್ಟಿದ) ಗೋಪುರ; ಸಣ್ಣ ಮಂಟಪ; ಅಟ್ಟಳೆ: ಕರಮೆಸೆದುವು ಕುರುಜುಗಳು (ಚಂಪ್ರಸಾಂ. ೧೨-೨೨); ಕುರುಜುಗಳೊಳು ನೋಡುತಿಳಿದಳುಪ್ಪರಿಗೆಯನವಳು (ಮೋಹತ-೨೮-೭); ಎತ್ತಿದ ಮಣಿಮಯ ಕುರುಜುಗಳೊಳು ಚೆಲುವೆತ್ತುವು ವೀಥಿಗಳು (ನಾಗಕು. ೨೯-೨೬); ಮನೆಮನೆಯ ಬಾಗಿಲ ಪೊನ್ನ ಕುರುಜುಗಳ್ ಘನಮಂಡಲವನದರ್ದಾಗ ದಿನಕರ ಕಿರಣದೊಡನೆ ತರ್ಕಿಸಿ (ಕಂಅವಿ. ೨೦-೧೬); ದೊರೆಯಪ್ಪಣೆಯಿಂದ ಊರೊಳಗಲ್ಲೆಲ್ಲ ಕುರುಜುಗಳೆದ್ದವು ಪಲವು (ಜ್ಞಾನಚ. ೪೦-೫); ಬುರುಜು ಇಲ್ಲದಿದ್ದರೆ ಕುರುಜು ಅದರೂ ಕಟ್ಟಬಾರದೇ (ಗಾದೆ). ೩. ಕರ್ಪೂರವನ್ನು ತೂಗುವ ಒಂದು ಮಾನ: ಗಂಬೂರ ಕುರುಜು ೪೧೧ ಕಸ್ತೂರಿ ಕಳಂಜು ೫೦೧ (ಸೌಇ. IX-ii, ೫೪೭-೩; 1532); ಹವಳಕ್ಕೆ ಕಣಜ, ಮುತ್ತಿಗೆ ಚವ್ವ, ಪಚ್ಚೆಗೆ ರತಿ, ವಜ್ರಕ್ಕೆ ಮುಂಜಾಡಿ, ಕರ್ಪುರ ಕುರುಜು . . . ಇವು ತೂಗಿ ಮಾಱುವಂತ ವಿವರಗಳು (ಭಾಸ್ಕರ. ೭೮-೧). ೪. (ಬತ್ತೇರಿಯ ಆಕಾರದಲ್ಲಿ ಅಳವಡಿಸಿದ) ರಾಶಿ; ಗುಡ್ಡೆ; ಒಟ್ಟಿಲು: ಪಂಪಿರಿಯ ಪೂಸರಗಳನು ಕರ್ಪುರದ ಕುರುಜುಗಳಾಂತು . . . ಸತಿಯರ್ಬೈದಿದರು (ಸನತ್ಕು. ೫-೫೯); ನವಮಾಣಿಕ್ಯದ ಸುಲಲಿತವಹ ಕುರುಜೆಲ್ಲಂ ಮಯಣದ ಕೆಲಸಂ ಮಾಡಿದ ರೋಹಣಗಿರಿಯೆಂಬಂದದಿನೊಪ್ಪಿದುವು (ಜಯಕಾ. ೪-೪೯). **ಕುರಜು**: ೨. ಪದಾತಿಸಮೇತ ವೀಥೀಪ್ರಸ್ತಾರ ಕುರಜು ಮರಗುಡಿ ಮಕರಚಕ್ರ ತ್ರಿಶೂಲಾಯುಧ (ಎಕ. VII, ಶಿವಮೊ. ೫೦-೪೫; 1235). **ಕುರಿಜು**: ೨. ಕಲ್ಯಾಣ ಪುರತನಕಲಿ ಗುಡಿತೋರಣ ಪಲ್ಲವ ತಳೆ ಛತ್ರ ಕುರಿಜಾ [ಪಾಠಾಂ. ಕುರುಬೊ] ಸಲ್ಲೀಲೆಯಿಂದ ಕಟ್ಟಿಸುತಾನೆ (ಅಮುಸಾಂ. ೭-೫). **ಕುರುಜ**: ೧. ತೋರಣ ಕಟ್ಟಿದ್ದುವಲ್ಲಲ್ಲಿ ಕುರುಜ ಸಿಂಗಾರಿಸಿರ್ದುವು ಕೆಲಬಲದಿ (ಭರಚ. ೩೬-೨೫). **ಕುರುಜೆ**: ೨. ಕಡುಜುರಿನ ತೊನೆ ವಸಿಯ ಕೊಡೆಗಳ ಸಿಡಿಲ ಬಡಿಗೆಯ ಕಡಿಕುಯಂತ್ರದ ಬಿಡದ ಕುರುಜೆಯ ಹಿಂದು ತುದಿಯಲಿ ತುಂಬೆ ಎಡೆಬಿಡದೆ (ಕೌಶಿರಾ. ೧೬-೪೦). **ಕುರ್ಜು**: 'ಕುರ್ಜುಗಲ್ಲು' ಪರಾ. **ಗುರಜೆ**: ೨. "ಕುರುಜು . . . ಬುರುಜು, ಅಟ್ಟ, ಮಂಡಪ, ಗುರಜೆ" (ಕಸ್ತೂ.ಕೋ. ೨೨೬). [ದೇ. ॥ ತುಳು. ಕುರುಜಿ, ಗುರ್ಜಿ. ತೆಲು. ಕುರುಜು]

**ಕುರುಜುತೋರಣ** (ನಾ). ತುದಿಯಲ್ಲಿ ಕುರುಜಿರುವ ತೋರಣ: ಸೋಮಸೂರ್ಯವೀಧಿಗಳೊಳು ಕುರುಜು ತೋರಣಗಳಲ್ಲಲ್ಲಿ ಮಿರುಗುವ ಕೇತು ಪೂವಮಾಲೆಗಳಿಂದಲಿ ಸುರಪುರವನು ನಗುತಿಹುದು (ಜಿನರಾ. ೯-೯೬). [ಕುರುಜು + ತೋರಣ]

**ಕುರುಜುಮಾಡ** (ನಾ). ಕುರುಜಿನ ಉಪ್ಪರಿಗೆ; ಕುರುಜುಕಟ್ಟಿದ ಮಹಡಿ: ಗಗನದೊಳ್ ಬರುತಿರ್ದ ನಮಿರಾಜ ನೋಡಿದ ನೆಗೆದ ತೋರಣಗುಡಿಗಳನು ಬಗೆಬಗೆಯಾಗಿ ಸಿಂಗರಿಸಿದ ಕುರುಜುಮಾಡಗಳ ಚಕ್ರಿಯ ಕಟಕದೊಳು (ಭರಚ. ೩೬-೭೪). [ಕುರುಜು + ಮಾಡ₁]

**ಕುರುಜುಮುತ್ತು** (ನಾ). ಗುಮ್ಮಟದ ಆಕಾರದಲ್ಲಿ ಅಳವಡಿಸಿದ ಮುತ್ತು: ದಾರುವರ್ಮನು ರಾಜದ್ವಾರವನ್ನು ಕುರುಜುಮುತ್ತಿನ ಕುಚ್ಚುಗಳಿಂದಲಂಕರಿಸಿದನು (ಮುದ್ರಾಮಂ. ೧೯೨). [ಕುರುಜು + ಮುತ್ತು₂]

**ಕುರುಜೆ** 'ಕುರುಜು' ನೋ.

**ಕುರುಟ** (ನಾ). ಒಂದು ಜಾತಿಯ ಹಕ್ಕಿ: ಪರಪುಟಂ ನವಿಲು ಶಿಖಿ ಬಕ ಕ್ರೌಂಚ ಗೀಜಿಗಂ ಕುರುಟ ಲಾವುಜೆ (ವುರುಚಾ. ೧-೨೯). [?]

**ಕುರುಟಿಕೆ** 'ಕುರಂಟಿಗೆ' ನೋ.

**ಕುರುಟಿಗ** (ನಾ). ೧. ಹುಳದ ಬಾಧೆಯನ್ನು ನಿವಾರಿಸಲು ಉಪಯೋಗವಾಗುವ ಬೀಜಗಳುಳ್ಳ ಒಂದು ಜಾತಿಯ ಔಷಧಿಗಿಡ; ಕೊಡಸಿಗೆ: "ಕುಟಜ – ಕುರುಟಗಿನ ಗಿಡ" (ಗಂಗಾಮ. ೮೮). ೨. "ಗಿರಿಮಲ್ಲಿಕಾ" (ಪಂಡಿತ).

ಕುರಟಗನಬೀಜ: "ಇಂದ್ರಯವ = ಕುರಟಗನ ಬೀಜ" (ಗಂಗಾಮ. ೩೨). [?]

**ಕುರುಟಿಗೆ** 'ಕುರಂಟಿಗೆ' ನೋ.

**ಕುರುಟು** (ನಾ). (ಕರಾ) (ಧಾನ್ಯದ) ಒಂದು ಅಳತೆ; ಚಿಕ್ಕ ಮುಡಿ. [← ತುಳು. ಕುರುಂಟು]

**ಕುರುಡ** (ನಾ). ೧. ಕಣ್ಣು ಕಾಣದವನು; ಅಂಧ: "ಅಂಧನೆನೆ ಕುರುಡನಕ್ಕು" (ಮಂಗರಾ. ೧೧೪-೫); ಕುರುಡಂ ಕಣ್ಪೆತ್ತವೊಲ್ (ಪಂಪಭಾ. ೯-೧೫); ಕುರುಡಂಗೆ ಕನ್ನಡಿಯಂ ತೋಱುಹವೂಂ (ಪಂಚತಂ. ೧೩೬-೧೦); ಕುರುಡಂ ಲಾವಗೆ ಮೆಟ್ಟಿದಂತೆ (ಜೀವಸಂ. ೧-೨೬); ಏಕೆ ಕನ್ನಡಿ ಕುರುಡರಿಗೆ (ಕುವ್ಯಾಸ. ೧೦-೩೬); ಬಳ್ಳಿಗುರುಡರು ಕೂಡಿ ಹಳ್ಳವನು ಬಿದ್ದಂತೆ (ಸರ್ವಜ್ಞ. ೫೯); ಕುರುಡನಿಗೆ ಹಗಲೇನು ಇರುಳೇನು (ಗಾದೆ). ೨. (ಅಲಂ) ಅಜ್ಞಾನಿ; ತಿಳುವಳಿಕೆಯಿಲ್ಲದವನು: ಮಾರ್ಗಂದಪ್ಪಿದ ಕುರುಡರನಱದ ಬಟ್ಟೆಗುಯ್ವರೆ ಪಿರಿಯರ್ (ಶಾಂತಿಪು. ೪-೧೧೧). [ಕುರುಡು + -ಅ₇]

**ಕುರುಡಕ್ಕಿ** (ನಾ). ಬತ್ತದ ಮೇಲಿನ ಸಿಪ್ಪೆಮಾತ್ರ ಸುಲಿದು, ಚೆನ್ನಾಗಿ ತೊಳಸದಿರುವ ಅಕ್ಕಿ: ಒಂದಿಬ್ಬೆ ಮಾಡಿದರೆ ಕುರುಡಕ್ಕಿಯಾದವು ಸಾಕಣ್ಣಾ ನಿನ್ನ ಮನೆಗೆಲಸ (ನಾಪದ. ೮೯). [ಕುರುಡು + ಅಕ್ಕಿ₁]

**ಕುರುಡಾಗು** (ಕ್ರಿ). ಕಣ್ಣುಕಾಣದಂತಾಗು; ಅಂಧತ್ವ ಉಂಟಾಗು: ಕುರುಡಾಗಿ ಕಣ್ಗಳೆರಡುಂ ಚರಣಂಗಳ್ ಪಱದು ಬೀೞೆ ತೊನ್ನಿಂದಂ (ಧರ್ಮಾಮೃ. ೭-೧೮೧). [ಕುರುಡು + ಆಗು₁]

**ಕುರುಡಾವು** (ನಾ). ಕಣ್ಣುಕಾಣದ ಹಸು; ಕುರುಡಾದ ಹಸು: ಊರಾವುಗಳೋಡುವುದಂ ಕಂಡು ಕುರುಡಾವುಂ ಓಡಿತೆಂಬಂತೆ (ಧರ್ಮಾಮೃ. ೧೧-೩೫). [ಕುರುಡು + ಆವು]

**ಕುರುಡಿ** (ನಾ). ಕಣ್ಣುಕಾಣದವಳು; ಅಂಧೆ: ಕುರುಡಿ ಜೋಳಮಂ ಕುಟ್ಟುವಂತೆ (ಧರ್ಮಾಮೃ. ೧೪-೪); ಕುರುಡಿ, ಕಿವುಡಿ, ಗುಜ್ಜಿ, ಕೆಂಚಿ (ಭಾಷಾಭೂ. ೧೯೧ ಅಡಿಟ); 'ಹಣ ಹಗುರ' ಅಂತ ಕುರುಡಿ ತರೋದಕ್ಕಾದೀತೆ (ಬೆಳುಮ. ೩೧); ಕುರುಡಿಯ ಮದುವೆಯಾದರೆ ಮನೆ ಗಡಿಗೆಗೆ ಮೂಲ (ಗಾದೆ).

ಕುರುಡಿಯ ಪುಳು = ಕುರುಡೀ ಕುಠಾರ: ಇದಿರ ಕುರುಡಿಯ ಪುಳುವನೊಂದನು ಬಿದಿರ ಹೊಳವೊಳಗಿರಿಸಿ (ನಿಭಾಗ. ೧೧-೧೬-೩೬). [ಕುರುಡ + -ಇ₂]

**ಕುರುಡಿಗೆ$_1$**, ಕುರುಡುಗೆ (ನಾ). (ಉಕ) ಅಕ್ಕಿ, ಗೋಧಿ, ಜೋಳ ಮುಂತಾದವುಗಳಿಂದ ತಯಾರಿಸಿದ ಸಂಡಿಗೆ: ಚಕ್ಷುವಿಗೆ ಚಣಯಿಗೆಯಾಕಾರ . . . ಜಿಹ್ವಕ್ಕೆ ಕುರುಡಿಗೆಯಾಕಾಕೃತಿ (ಪಸಾರ. ೧೮೭-೪); ಸಣ್ಣಾದ ಮಾಲೂದಿ ಎಣ್ಣೆ ಹೋಳಿಗೆ ಲಡ್ಡುಗಿ ಬಣ್ಣೀನ ಕುರುಡಿಗೆ ಉಗೆದಪ್ಪಳ ಮಿತ್ರೇಯರು ಅಣಿಮಾಡಿ ಕಳುಹಿದರು ಛತ್ರಕ್ಕೆ (ಸಿದ್ಧಪು. ೧೭-೬೩). **ಕುರುಡುಗೆ**: ಸಾವಿನಿ ಸಕ್ಕರಿ ಲಿಂಬಿಉಪ್ಪಿನಕಾಯಿ ಮ್ಯಾಲೆ ಕುರುಡುಗಿ ನೀಡಾಕ ಭೂಮುಕ್ಯಾರ್ಯಾರು ಬರಬೇಕ (ಲೋಕಗೀ. ೫೦-೧೮).

[← ಮರಾ. ಕುರವಡ್ಯಾ, ಕುರೋಡ್ಯಾ]

**ಕುರುಡಿಗೆ$_2$** 'ಕುರಂಟಿಗೆ' ನೋ.

**ಕುರುಡೀಕುಠಾರ**, ಕುರಡೀಕುಠಾರ (ನಾ). ಗೋಡೆಯಲ್ಲಿ ಅಥವಾ ಬಾಗಿಲಿನ ಮೂಲೆಯಲ್ಲಿ ಒಂದೇ ರಂಧ್ರದ ಗೂಡನ್ನು ಕಟ್ಟುವ ಒಂದು ಜಾತಿಯ ಕಣಜದ ಹುಳ; ಒಂದು ಜಾತಿಯ ಭ್ರಮರ: ಕುರುಡೀಕುಠಾರಿಗೆ ಜೇನುತುಪ್ಪವಾಗಲೀ ಮತ್ತೇನಾದರೂ ತಿನ್ನುವ ಪದಾರ್ಥವಾಗಲಿ ಸಿಕ್ಕರೆ . . . ಅದು ಮಿಕ್ಕ ಹುಳಗಳಿಗೆ ಸುದ್ದಿ ಹೇಳುತ್ತದೆ (ಮುಂಬಯಿ. ೫-೪೭). **ಕುರಡೀಕುಠಾರ**: ಈ ಕುರಡೀಕುಠಾರದ ಹುಳದ ಮನೆಯೊಳಗಿನ ಹಸುರು ಹುಳುವು ಕುರಡೀಕುಠಾರದ ಹುಳದ ಭಯದಿಂದ ಅದರ ನಿಧಿಧ್ಯಾಸ ಮಾಡಿ ತಾನೂ ಕುರಡೀ ಕುಠಾರವೇ ಆಗುವುದು (ಭಾವ್ಯಮೃತ. ೪೬೩).

[← ಮರಾ. ಕುರ್ಡೂಕಟಾರನಾ]

**ಕುರುಡಿಹಣ್ಣಿನಗಿಡ** (ನಾ). ಒಂದು ಬಗೆಯ ಗಿಡ: (ಮೈಬಿಗ. ೬೯-೧೪೦೫). [ಕುರುಡಿ$_0$ + ಹಣ್ಣು (< ಪಣ್) + ಗಿಡ (< ಗಿಡು)]

**ಕುರುಡು**, ಕುರುಳ್ಳು$_2$ (ನಾ). ೧. ಕಣ್ಣು ಕಾಣದಿರುವಿಕೆ; ದೃಷ್ಟಿಹೀನತೆ; ಅಂಧತ್ವ: ಕುಮಾರನೆರಡುಂ ಕಣ್ಗಳುಮನೊಡೆದು ಕುರುಡಂ ಮಾಡಿದ ಕೆಲವು ದಿವಸದಿಂದ (ವಡ್ಡಾರಾ. ೬೯-೨೦). ೨. ಅಂಧವಾದುದು; ದೃಷ್ಟಿಶೂನ್ಯವಾದುದು: ವಂದಿ ಕುರುಡು ಕುಂಟಿಂದಲಸದೆ (ಪಂಪಭಾ. ೫-೪೬); ಹುಟ್ಟಿದಾಗ ಆ ಕುನ್ನಿಗಳು ಕುರುಡು ಇರುತ್ತವೆ (ಮುಂಬಯಿ. ೨-೪೬). ೩. ಕುರುಡ: ಮಗಂ ಕುರುಡಾದುದಂ ಕಂಡು (ವಡ್ಡಾರಾ. ೬೫-೨೭). ೪. (ಅಲಂ) ಅಜ್ಞಾನ; ಅವಿವೇಕ; ಮೂರ್ಖತನ: ಕುರುಡಾಗಿ ಮಾಡುವ ಕಾರ್ಯವು ಬೆಲೆಯಿಲ್ಲದ್ದು (ಶೂನ್ಯಕು. ೧೯೭). **ಕುರುಳ್ಳು$_2$**: ೨. ಕಡಗಿ ಕಣ್ಕುರುಳಾಗಿವುಳ್ಳ ವಿಗಡ ಮುಹಂತನು ಮುನ್ನಲಿಂಗವ ಎಡವಿದೊಡೆ (ಬಸವಪು. ೮-೧೧).

ಕುರುಡಾಗು = ವಿವೇಕವಿಲ್ಲದಂತಾಗು; ತಿಳಿವಳಿಕೆಯಿಲ್ಲದಾಗು: ಕಣ್ಕುರುಡಾದೊಡೇನೊ ಕುರುಡಾಗಲೆವೇಳ್ಪುದೆ ನಿಮ್ಮ ಬುದ್ಧಿಯುಂ (ಪಂಪಭಾ. ೨-೯೧); ಅವನು ಸಿಟ್ಟಿನಿಂದ ಕುರುಡಾಗಿ ಮಗನನ್ನು ದನ ಬಡಿವಂತೆ ಬಡಿದನು (ರೂಢಿ).

[ದೇ. ‖ ತಮಿ. ಮಲ. ಕುರುಡು; ತುಳು. ಕುರುಡು; ತೆಲು. ಗ್ರುಡ್ಡಿ; ಗ್ರುಡ್ಡು]

**ಕುರುಡುಕವಡೆ** (ನಾ). ೧. ತೂತು ಬಿದ್ದ ಕವಡೆ. ೨. ಬಳಸದ ಕವಡೆ. ೩. ಚಲಾವಣೆಯಿಲ್ಲದ ಅತ್ಯಲ್ಪ ಬೆಲೆಯ ನಾಣ್ಯ: ನಿಮಗೇನು ವರಹವೆಂದರೆ ಕುರುಡು ಕವಡೆಯೇನು? (ಮಂತ್ರಶ. ೩೧-೧೦); ನಿನ್ನ ಬಳಿಯಲ್ಲಿ ಒಂದು ಕುರುಡುಕವಡೆಯನ್ನಾದರೂ ಬಡ್ಡಿಯಾಗಿ ತೆಗೆದುಕೊಳ್ಳದೆ (ಕವಿಕ. ೫); ಒಂದು ಕುರುಡುಕವಡೆಯಷ್ಟು ಪುರಸ್ಕಾರವೂ ನನಗೆ ದೊರೆತಿಲ್ಲ (ಝಾರಾಣಿ. ೩೫೮). [ಕುರುಡು + ಕವಡೆ]

**ಕುರುಡುಕಾಂಚಾಣ** (ನಾ). ೧. ಸವೆದು ಹೋದ ನಾಣ್ಯ; ಬೆಲೆಯಿಲ್ಲದ ಹಣ: ನೀನು ಬೆಳಗಾವಿಗೆ ಬರುವ ಮುಂಚೆ ನಿನ್ನಲ್ಲಿ ಒಂದು ಕುರುಡುಕಾಂಚಣವಿರಲಿಲ್ಲ (ಜಯಂತ. ೪೨೫). ೨. ವಿವೇಚನೆಯಿಲ್ಲದ ಸಂಪತ್ತು; ನಿರ್ದಯವಾದ ಐಶ್ವರ್ಯ: ಕುರುಡು ಕಾಂಚಾಣಾ ಕುಣಿಯುತಲಿತ್ತು ಕಾಲಿಗೆ ಬಿದ್ದವರ ತುಳಿಯುತಲಿತ್ತೊ (ನಾದಲೀ. ೩೮-೧). [ಕುರುಡು + ಕಾಂಚಾಣ$_1$]

**ಕುರುಡುಗಜ್ಜಿಗ**, ಕುರುಡುಗಜ್ಜಿಗೆ (ನಾ). ಒಂದು ಬಗೆಯ ಗಿಡ: (ಮೈಬಿಗ. ೧೫-೨೬೪). **ಕುರುಡುಗಜ್ಜಿಗೆ**: ಸಂಕೀರ್ಣ-ತೊಗರಿ, ಹೊಂಗೆ, ಕುರುಡುಗಜ್ಜಿಗೆ, ಕಕ್ಕಿ, ತಂಗಡಿ (ನಮ್ಮನು. ೨೩೮).

[ಕುರುಡು + ಗಜ್ಜಿಗ (< ಗರ್ಡುಗು)]

**ಕುರುಡುಗಜ್ಜಿಗೆ** 'ಕುರುಡುಗಜ್ಜಿಗ' ನೋ.

**ಕುರುಡುಗಣ್ಣು** (ನಾ). ನೋಟವಿಲ್ಲದ ಕಣ್ಣು; ದೃಷ್ಟಿರಹಿತ ನೇತ್ರ.

ಕುರುಡುಗಣ್ಣುಮಾಡು = ನೋಡದಿರು; ಅಲಕ್ಷ್ಯ ಮಾಡು; ಕಡೆಗಣಿಸು: ನಮ್ಮ ಕೌಟುಂಬಿಕ ದುರ್ದೆಸೆಯತ್ತ ಕುರುಡುಗಣ್ಣು ಮಾಡಿ (ಹುಚ್ಚಾಟ. ೧). [ಕುರುಡು + ಕಣ್ಣು (< ಕಣ್)]

**ಕುರುಡುಗತ್ತಲು** 'ಕುರುಡುಗಳ್ತಲೆ' ನೋ.

**ಕುರುಡುಗಪ್ಪಟಿಹಕ್ಕಿ** (ನಾ). ಕುರುಡುಬಾವಲಿ; ಕಪ್ಪಡಿಹಕ್ಕಿ: ಅವನ ಸಮೀಪದಲ್ಲಿ ಏನೋ ಪಟಪಟನೆ ಸದ್ದಾಗಿ ವಿಕಾರವಾಗಿ ಕೂಗಿಕೊಂಡಿತು . . . ಅವನು ಅನುದ್ವಿಗ್ನನಾಗಿದ್ದರೆ ಅದೊಂದು ಕುರುಡು ಗಪ್ಪಟಿಹಕ್ಕಿ ಎಂದು ಗೊತ್ತಾಗುತ್ತಿತ್ತು (ಕಾನೂರು. ೧೧೭).

[ಕುರುಡು + ಕಪ್ಪಟ್ಟಿ (< ಕಪ್ಪಡ್ಡಿ) + ಹಕ್ಕಿ (< ಪಕ್ಕಿ$_1$)]

**ಕುರುಡುಗಳೆ** (ಕ್ರಿ). ೧. ಅಂಧತ್ವವನ್ನು ನೀಗು. ೨. (ಅಲಂ) ಅಜ್ಞಾನವನ್ನು ಕಳೆ: ತಿರುಳುಗೊಂಡ ಮನಗಳೇ ಕುರುಡುಗಳೆದ ದಿನಗಳೇ ಜಾರಿಹೋದ ಕನಸುಗಳೇ (ನಾದಲೀ. ೧೫-೨೪). [ಕುರುಡು + ಕಳೆ$_1$]

**ಕುರುಡುಗಳ್ತಲೆ**, ಕುರುಡುಗತ್ತಲು (ನಾ). ಕುರುಡುಗೊಳಿಸುವ ಕತ್ತಲೆ; ಕಗ್ಗತ್ತಲೆ; ಗಾಢಾಂಧಕಾರ: ಇರುಳ ಬಾನಿನೊಳೆಸೆವ ಚಿನ್ನ ಚುಕ್ಕಿಗಳಂತೆ ಕುರುಡುಗಳ್ತಲೆಯ ಕಳ್ಮೆಯ್ಗೆ ಕಿಡಿಕಿಡಿ ನವಿರ್ ಕೆತ್ತಿಸುವ ಮಿಂಚುಂಬುಳುಗಳಂತೆ (ಶ್ರೀರಾಮಾ. ೨೩೧-೮೬).

**ಕುರುಡುಗತ್ತಲು**: ಕುರುಡುಗತ್ತಲುಳ್ಳನಾಡು ಸೂರ್ಯನಿರದ ಕಪ್ಪುಗಾಡು (ಮುಕ್ತಕಂ. ೩೧-೧೦). [ಕುರುಡು + ಕಳ್ತಲೆ (< ಕಟ್ತಲೆ)]

**ಕುರುಡುಗಾಜು** (ನಾ). ಕಾಣಿಸದ ಗಾಜು; ಮುಸುಕಾದ ಕನ್ನಡಿ: ಆ ಕಣ್ಣು ಎಂದಾರೆ ಈ ಕಣ್ಣು ತಾಗಿದರೆ ಗೊಂಬಿ ಮೂಡದ ಕುರುಡು ಗಾಜಾಗಿರೆ (ಸಖೀಗೀ. ೩೧-೬೪೨). [ಕುರುಡು + ಗಾಜು (< ಕಾಜು)]

**ಕುರುಡುಗಾಸು** (ನಾ). = ಕುರುಡುಕಾಂಚಾಣ: ಅವನ ಬಳಿ ಒಂದು ಕುರುಡುಗಾಸೂ ಇರಲಿಲ್ಲ (ರೂಢಿ). [ಕುರುಡು + ಕಾಸು]

**ಕುರುಡುಗೆ** 'ಕುರುಡಿಗೆ$_1$' ನೋ.

**ಕುರುಡುಗೈಯು** (ಕ್ರಿ). ಕಣ್ಣು ಕಾಣಿಸದಂತೆ ಮಾಡು; ಕುರುಡುಗೊಳಿಸು: ಕಂಗಳಂ ಕುರುಡುಗೈಯುವ ತೆರದಿ ಉರಿಯುತಿಹುದರಮನೆ (ಚಂದ್ರಸ. ೬೫). [ಕುರುಡು + ಗೈ (< ಕೆಯ್$_1$)]

**ಕುರುಡುಚಿತ್ತೆ** (ನಾ). ೧. ಅಲ್ಲಷ್ಟು ಇಲ್ಲಷ್ಟು ಖಂಡಖಂಡವಾಗಿ ಸುರಿವ ಚಿತ್ತೆಮಳೆ. ೨. ಒಂದೇ ಕಡೆಗೆ ಪುನಃ ಪುನಃ ಸುರಿವ ಚಿತ್ತೆಮಳೆ: ಕುರುಡುಚಿತ್ತೆ ಹುಯ್ದ ಕಡೆಗೇ ಹುಯ್ಯುತ್ತೆ (ರೂಢಿ).

[ಕುರುಡು + ಚಿತ್ತೆ]

**ಕುರುಡುತನ** (ನಾ). ೧. ಕಣ್ಣು ಕಾಣದಿರುವಿಕೆ; ಅಂಧತ್ವ: ಕೆಲವೊಮ್ಮೆ ಸಿಡುಬುರೋಗದಿಂದ ಮನುಷ್ಯನಿಗೆ ಕುರುಡುತನ ಬರುತ್ತದೆ (ರೂಢಿ). ೨. (ಅಲಂ) ಅವಿವೇಕ; ತಿಳುವಳಿಕೆಯಿಲ್ಲದಿರುವುದು ೩. (ಅಲಂ) ಅಸಡ್ಡೆ; ಅಲಕ್ಷ್ಯ; ಔದಾಸೀನ್ಯ. ೨, ೩: ಅವನ ಕುರುಡುತನದಿಂದ ಆಸ್ತಿಯೆಲ್ಲವೂ ಶತ್ರುಗಳ ಪಾಲಾಯಿತು (ರೂಢಿ).

[ಕುರುಡು + -ತನ]

**ಕುರುಡುದರಬಾರು,** ಕುರುಡುದರ್ಬಾರು (ನಾ). ವಿವೇಕವಿಲ್ಲದ ಆಳಿಕೆ; ಅಂಧೇರಿ ದರ್ಬಾರು : ತೊಗಲಖ್ ಮಹಮ್ಮದನ ಕುರುಡು ದರಬಾರಿನಿಂದ ಪ್ರಜೆಗಳೆಲ್ಲ ಕಷ್ಟಕ್ಕೊಳಗಾದರು (ರೂಢಿ). ಕೊಟ್ಟೋರಿಗೆ ಕೊಡುತ್ತಿದ್ದ ಇಲ್ಲದವರಿಗೆ ಇಲ್ಲವೇಇಲ್ಲ ಎಲ್ಲಾ ಕುರುಡುದರಬಾರು ನಡೆಸಿ ಬಿಟ್ಟ (ಮರಳಿ. ೩೮). **ಕುರುಡುದರ್ಬಾರು :** ಕುರುಡುದರ್ಬಾರಿನಿಂದ ಕುರುಡುಕಾಸಿಗೂ ಗತಿಯಿಲ್ಲದಂತೆ ಮಾಡಿಕೊಂಡ (ರೂಢಿ).

[ಕುರುಡು + ದರಬಾರು]

**ಕುರುಡುದರ್ಬಾರು** 'ಕುರುಡುದರಬಾರು' ನೋ.

**ಕುರುಡುನಂದಿ** (ನಾ). ಒಂದು ಔಷಧಿಗಿಡ. (ಮೈಔಗಿ. ೩೯–೭೭೭). [?]

**ಕುರುಡುನಂಬಿಕೆ,** ಕುರುಡುನಂಬುಗೆ (ನಾ). ವಿವೇಚನೆಯಿಲ್ಲದೆ ನಂಬುವುದು; ಮೂಢನಂಬಿಕೆ; ಮೂಢ ವಿಶ್ವಾಸ : ಕೇವಲ ಕುರುಡುನಂಬಿಕೆಯಾಗಲಿ; ಸಂಪ್ರದಾಯ ಶರಣತೆಯಾಗಲಿ ಅಷ್ಟು ಪ್ರಭಾವಬೀರಲಾರವು (ಶಿಕ್ಷದ. ೩೧೧); ಹಿಂದಿನಿಂದ ಬಂದ ಕುರುಡು ನಂಬಿಕೆಗಳು ಬೇರು ಸಹಿತ ಕಿತ್ತು ಹೋಗದೆ (ಕಪಪು. ೬–೩೭). **ಕುರುಡುನಂಬುಗೆ :** ಕುರುಡುನಂಬುಗೆಗಳನ್ ಅವರೊಳಗೆ ಮನೆ ಮಾಡಗೊಟ್ಟನ್ (ಬದ್ಧಪ್ರ. ೧೪–೨೫). [ಕುರುಡು + ನಂಬಿಕೆ]

**ಕುರುಡುನಂಬುಗೆ** 'ಕುರುಡುನಂಬಿಕೆ' ನೋ.

**ಕುರುಡುಸನ್ನಿ** (ನಾ). ೧. ಕಣ್ಣಿನ ದೃಷ್ಟಿಯನ್ನು ಹೋಗಲಾಡಿಸುವ ಸನ್ನಿ, —ವಿಷಮಜ್ವರ. ೨. ಕುರುಡು ಸನ್ನಿಯಿಂದ ಪೀಡಿತನಾದ ವ್ಯಕ್ತಿ : ಕುರುಡುಸನ್ನಿ ಬಗುಳುಸನ್ನಿಗಳ ಮೂಗನ್ನೊತ್ತಿ ಹಿಡಿದುಗಂಟಲು ಗಳಿಗೆ ಮದ್ದೆರೆದರೆ ಸಾಲದು (ನಡೆದಾ. I, ४३೮). [ಕುರುಡು + ಸನ್ನಿ]

**ಕುರುಣಿ$_1$** 'ಕುರಣಿ' ನೋ.

**ಕುರುಣಿ$_2$** (ನಾ). ಧಾನ್ಯದ ಒಂದು ಅಳತೆ : ಕಲ್ಲ ಕೊಡಸಿಗೆ ತೆರುವ ಸುಳಿ ಗೋಡು ಕುರುಣಿಮಕಿ ಮೇಲುವಾಸಿ(ಎಕ. VIII, ತೀರ್ಥಹ. ೩–೧; 1640).

[← ತಮಿ. ಕುಱುಣಿ]

**ಕುರುಳೆ$_1$,** ಕುರುಳ್ಳಿ$_2$ (ನಾ). ೧. (ಪಶು, ಪಕ್ಷಿಗಳ) ಮರಿ; ಕರು; ಶಿಶು, ಪೋತ : ಪೋತಾನಾಂ–ಕುರುಳೆಯಾಗಿ ಪುಟ್ಟುವುದುಂ (ತಸೂವೃ. ೪೯); ಸುರಿವ ಮದಧಾರೆ ಮಿಂಚಿನ ದೊರೆಯೆನಿಸುವ ದಂತ ಮಿಡಿದ ಮೆಯ್ಗುರ್ಪಳವಟ್ಟಿರೆ ಕಾರ್ಮುಗಿಲ್ಗಳಿಕ್ಕಿದ ಕುರುಳೆಗಳೆನೆ ಕರಿಗಳಿರ್ದುವಾ ಗಿರಿತಟದೊಳ್ (ಲೀಲಾವ. ೮–೨); ಕುರುಳೆಯಾಗಿ ಪುಟ್ಟುವಪೋತಜಮೆಂಬಿವು ಗರ್ಭಜಜನ್ಮಮಕ್ಕುಂ(ಪಸಾರ. ೨೮೪–೨೧); ಪುಲಿಯ ಮಱಿಸಿಂಗದ ಕಱುಗಳಿಕ್ಕಲನ ಕುರುಳೆಗಳಿಂತಿವನು ಕೊಂಡು ಪೊಳಲಿಗೆ ಪೋಪ ಬೇಡರ ನೆರವಿಯೊಪ್ಪಿದುದು (ಸಾಳ್ವಭಾ. ೬–೭). (ಗು). ೨. ಎಳೆಯ; ಎಳಸಾದ. 'ಕುರುಳೆವಱಿ' ಪರಾ. **ಕುರುಳ್ಳಿ$_2$ :** ೩. ಸಣ್ಣವನು; ಚಿಕ್ಕಮಗು : ಹರಿಗಳನೇಕೆ ಹೊಡೆವಿರಿ ಭಂಡರಿರ ಬಾಹಿರರಜ್ಞರಿರ ಸಾಕು ನಂದನ ಕುರುಳಿ[ಪಾಠಾಂ. ಕೂಳಿ] ಕುಹಕಿಯನೇಕೆ ಕೊಂಡಾಡುವಿರಿ (ಸಭಾಗ. ೧೦–೩೯–೩೨).

[ದೇ. ‖ ತಮಿ. ಕುರುಳೈ ; ತುಳು. ಕುರ್ಲೆ]

**ಕುರುಣೆ$_2$** (ನಾ). (ಇಲಿ, ನಾಯಿ ಮೊದಲಾದ ಪ್ರಾಣಿಗಳ) ಪಿಟ್ಟೆ; ಹಿಚಿಕೆ; ಮಲ : ಮುದದಿಂದಂ ಬಂಜೆಯೆರಡುಂ ಮದನಫಲಂ ದೇವ ದಾಳಿಯುಂ ಕೂಡಿರಲಂತದನರೆದು ಗೋತದಿಂ ಕುಡಿಸದು ಕುರುಣೆಯ ವಮನದಿಲಿಯ ವಿಷಮುಂ ಕಳೆಗುಂ(ಖಮದ.೧೨–೪೫). [ತುಳು. ಕುರುಣಿ]

**ಕುರುಣೆವಱಿ** (ನಾ). ಎಳೆಯ ಮರಿ; ಪೋತ : ಪೆರ್ಮರದೆ ನಟ್ಟಿ ಗೊಂಚಿನ ಕವಲ್ದಲೆಯೊಳಿಟ್ಟ ಗೂಡುಗಳೊಳ್ ಗೂಡುಗೊಂಡಿರ್ದ ಕುರುಣೆ[ಪಾಠಾಂ. ಱುಳೆ]ವಱಿಗಳ್ಗೆ ಕುಟುಂಕನಿಕ್ಕಿ (ಚಂದ್ರಪ್ರ. ೮–೪೭).

[ಕುರುಣೆ$_1$ + ವಱಿ]

**ಕುರುದೆ,** ಕುರ್ದೆ (ನಾ). ಹಳೇಪೈಕ ಮೊದಲಾದ ಜಾತಿಗಳಿಗೆ ಸೇರಿದ ಜೀತದ ಆಳುಗಳ ಚಿಕ್ಕ ವಯಸ್ಸಿನ ಹುಡುಗ ಅಥವಾ ಹುಡುಗಿ : ಜೀತದ ಆಳುಗಳ ಮಕ್ಕಳಿಗೆ ಕುರುದೆಗಳೆನ್ನುತ್ತಿದ್ದರು ಕುರುದೆಗಳು ಎಂಟು ಅಥವಾ ಹತ್ತು ವರ್ಷಗಳು ತುಂಬಿದೊಡನೆ ಅವರೂ ಸಹ ಜೀತದ ಕೆಲಸಕ್ಕೆ ಹೋಗಬೇಕಾಗಿತ್ತು (ಪಂಜಪಂ. ೯); ತಮ್ಮ ಕೂಲಿಯಾಳುಗಳ ಕುರುದೆಯೂ ಅಗಿದ್ದ ಪೀಂಚಲು ವಿಚಾರದಲ್ಲಿಯೂ ಆಸಕ್ತಿ ಇರುತ್ತಿತ್ತು (ಮಲೆಮ. ೧೬೬). **ಕುರ್ದೆ :** ಈ ಹೊತ್ತಲ್ಲಿ ಈ ಕುರ್ದೆಯೇನು ಮಾಡುತ್ತದೆ (ಸಂಸ್ಕಾರ. ೫೪). 'ಕುರುಣೆ$_1$' ಪರಾ.

[← ತಮಿ. ಕುರುನ್ದು, ಕುಟನ್ದೈ = ಮಗು]

**ಕುರುಧ್ವಜಿನಿ** (ನಾ). ಕೌರವರ ಸೈನ್ಯ : ಗಾಳಿಗೊಡ್ಡಿದ ಸೊಡರಂತೆ ನಡನಡ ನಡುಗುವ ಕುರುಧ್ವಜಿನಿಯಂ ಕಂಡು (ಪಂಪಭಾ. ೮–೧೧೧ ವ).

[ಕುರು$_3$ + ಧ್ವಜಿನಿ]

**ಕುರುಪಕೆಱೆ** (ನಾ). ಒಂದು ಕೆರೆಯ ಹೆಸರು : ತತಃ ಪ್ರಾಗ್ಗತ್ವಾ ನೇಱಿಲ್ಗೆಱೆ ತತಃ ಕುರುಪಕೆಱೆ (ಎಕ. XI, ದಾವಣ. ೬೬–೩೪; 694).

[ಕುರುಪು$_0$ + ಕೆಱೆ]

**ಕುರುಪತಿ** (ನಾ). ಕೌರವರ ಒಡೆಯ; ದುರ್ಯೋಧನ : ಕುರುಪತಿ ನಿನ್ನ ಪೊಕ್ಕ ತೋಱಿಗಳ್ಕೊದಲಾಗಿರೆ ಬತ್ತಿದಪ್ಪುವು (ಗದಾಯು. ೬–೧೨); ಕುರುಪತಿಯಂ ವಿಷ್ಣು ಬೇಡಿದಂ ಧರೆಯುರೆಯಂ (ಶಮದ. ೭೪ ಪ್ರಯೋ).

[ಕುರು$_3$ + ಪತಿ$_1$]

**ಕುರುಪದ** (ನಾ). ಕುರುಕುಪದ : ಈ ತಿರುಪೆಯವನಿಗೆ ತಿಳಿದಿರುವುದು ಅದೊಂದೆ ಕುರುಪದ (ರೂಢಿ).

[ಕುರು$_2$ (< ಕುಱು$_2$) + ಪದ$_2$]

**ಕುರುಪಾಟ** (ನಾ). ಗುರಿ ತಾಗುವಿಕೆ, —ನಾಟುವಿಕೆ : ಕೋಟ ಯೊನಲಿಯಂತಾದುದಂಬಿನ ಕುರುಪಾಟವನೇನ ಹೇಳುವೆನು (ನಾಗಕು. ೧೦–೨೬); ಬೋಳಂಬಿನ ಕುರುಪಾಟದೇಳಿಗೆಯನು ತಾಳಲಾರದೆ ಭಟ ತತಿಯು (ಜ್ಞಾನಚ. ೫೩೭). [ಕುರುಪು$_2$ (< ಕುಱುಪು) + ಅಟ]

**ಕುರುಪಿ** 'ಕುರುಪೆ$_1$' ನೋ.

**ಕುರುಪು$_1$,** ಕುರುಹು$_3$ (ನಾ). ಒಂದು ಬಗೆಯ ಆಯುಧ : ಕೊಂಕು ಸರಳಿಂ ಹೊಸೆವ ಚಕ್ರದಿಂದಿಡುವ ಕುರುಪಿಂ . . . ಕೊಱೆವ ರೌರವದ ನರಕಂ ಭಯಂಕರಮಾದುದು (ಸಿದ್ಧರಾ. ೮–೨೮). **ಕುರುಹು$_3$ :** ಶಸ್ತ್ರ; ಆಯುಧ : "ಶಸ್ತ್ರಂ ಕುರು[ಪಾಠಾಂ. ಕೂರ] ಹಕ್ಕು" (ಮಂಗರಾ. ೧೧೩–೮). [?]

**ಕುರುಪು$_2$** 'ಕುಱುಪು' ನೋ.

**ಕುರುಪೂರು** (ನಾ). ಒಂದು ಊರಿನ ಹೆಸರು : ತತಃ (ತ) ಉತ್ತರಂ ಗತ್ವಾ ಕು(ಕ)ರುಪೂರಗ್ರಾಮಸ್ಯ ಕ(ಕೆ)ಣ್ಣು ಕ್ರೂರಗ್ರಾಮಸ್ಯ (ಇಆ. V, ೫೨–೨೧; 5ನೆಯ ಶತ).

[ಕುರುಪು$_2$ (< ಕುಱುಪು) + ಊರು$_3$ (< ಊರ್)]

**ಕುರುಪೆ$_1$,** ಕುರುಪಿ, ಖುರಪೆ, ಖುರ್ಪಿ (ನಾ). ೧. ಕುರುಚಿಗೆ; ಉಜ್ಜುಗೋರಿ : ನಾಲ್ಕುದಿನ ಬಿಟ್ಟರೋ, ಕಸ ತುಂಬಿ ಬಿಡುತ್ತದೆ. ಕುರುಪೆ ಹಿಡಿದು ಕೆತ್ತುತ್ತ ಇರಬೇಕು (ಗಾಳಿಪ. ೧೧೩); ಚಿಕ್ಕ ಕುರುಪೆ ಯಿಂದ ಪೊದೆಗಳನ್ನು ಕೀಳತೊಡಗಿದಳು (ಮಣ್ಣಿಮ. ೨೦). ೨. ಖಡಚಿ; ಮಗುಚುಗೈ; ಹಲ್ಲೆ : ದೋಸೆಯನ್ನು ಕುರುಪೆಯಿಂದ ಮಗುಚಿ ಹಾಕು (ರೂಢಿ). **ಕುರುಪಿ :** ಆಕೆ ಕೈಯಲ್ಲಿ ಕುರುಪಿ ಹಿಡಿದುಕೊಂಡು ಜೋಳದ ಹೊಲದ ಕಡೆ ನಡೆದಿದ್ದುದು ಕಾಣಿಸಿತು (ಜೋಳಬಿ. ೨೦); ಮೂವರೂ ಕೈಯಲ್ಲಿ ಕುರುಪಿ ಹಿಡಿದುಕೊಂಡು ತೋಟಕ್ಕೆ ಹೊರಟರು (ಸ್ವಾತಂತ್ರ್ಯ. ೫೬); ಕೈಯಾಗಿನ ಕುರುಪಿ ಹಾಂಗ (ಅಗಸ್ಟ್. ೫೯).

**ಖುರಪೆ:** ಹೊಳೆ ಬೀಳುವ ಸ್ಥಳದಲ್ಲಿ ಗುಡ್ಡದ ಅಂಚು ಹಿಡಿಸಹಿತ ಖುರಪೆಯ ಆಕಾರವಾಗಿರುತ್ತದೆ. ಖುರಪೆಯಂತೆ ಮಣಿದ ಭಾಗವು ಕಾರವಾಡದ ದಿಕ್ಕಿನಲ್ಲಿ (ಕಥಾ.ಗ. ೧೬). **ಖುರ್ಪಿ:** ೧. ಎಲ್ಲಾ ಕಡೆಯಲ್ಲಿ ಉಪಯೋಗಿಸುವ ಮುಖ್ಯಗಳೆಯ ಸಾಮಾನು ನೇಗಲು . . . ಖುರ್ಪಿ (ಕಥಾಗ. ೨೬೪). [< ಪ್ರಾ. ಖುರಪ್ಪ ; ಸಂ. ಕ್ಷುರಪ್ರ]

**ಕುರಪೆ₂** (ನಾ). ಕೃಪೆ; ದಯೆ: (ಕ). [< ಸಂ. ಕೃಪಾ]

**ಕುರುಪ್ರಭು** (ನಾ). ಕುರುದೇಶದ ಒಡೆಯ, —ರಾಜ; ದುರ್ಯೋಧನ: ಕುರುಪ್ರಭು ಕಂಡಂ ಶರಜಾಲ ಜರ್ಜರಿತ ಗಾತ್ರ ತ್ರಾಣನಂ ದ್ರೋಣನಂ (ಗದಾಯು. ೪-೪೭). [ಕುರು₃ + ಪ್ರಭು]

**ಕುರುಬ** 'ಕುಱುಂಬ' ನೋ.

**ಕುರುಬಗಿತಿ** 'ಕುರುಬಗಿತ್ತಿ' ನೋ.

**ಕುರುಬಗಿತ್ತಿ,** ಕುರುಬಗಿತಿ (ನಾ). ಕುರಿಮಂದೆಯನ್ನು ಕಾಯುವವಳು; ಕುರುಬ ಜಾತಿಯವಳು; ಕುರುಬಿತ್ತಿ: ಮನುಜರೆಂಬುವ ಕುರಿಯ ಮಂದೆಯನು ಕಾಯುವಾ ಓ ಕುರುಬಗಿತ್ತಿ (ಪಾಂಚಜ. ೨೭).
**ಕುರುಬಗಿತಿ**: (ಕ). [ಕುರುಬ₁ (< ಕುಱುಂಬ₁) + -ಗಿತ್ತಿ]

**ಕುರುಬತನ** (ನಾ). ೧. ಕುರುಬನ ವೃತ್ತಿ, —ಕೆಲಸ: (ಕ). ೨. ಹಟಮಾರಿತನ; ಒರಟುತನ; ತಿಳಿಗೇಡಿತನ: (ಕ).
[ಕುರುಬ₁ (< ಕುಱುಂಬ₁) + -ತನ]

**ಕುರುಬನಗಡ್ಡೆ** (ನಾ). ಕೆಂಪು ಬಣ್ಣದ ದೊಡ್ಡ ಹೂ ಬಿಡುವ ಒಂದು ಜಾತಿಯ ಬಳ್ಳಿ: (ಕ). [ಕುರುಬ ? + ಗಡ್ಡೆ₂]

**ಕುರುಬಹೆಗ್ಗಡೆ** (ನಾ). ಕುರುಬರ ಮುಖ್ಯಸ್ಥ: (ಕ).
[ಕುರುಬ₁ (< ಕುಱುಂಬ₁) + ಹೆಗ್ಗಡೆ (< ಪೆರ್ಗಡೆ)]

**ಕುರುಬಾಗಿಲು** (ನಾ). ಸಣ್ಣ ಬಾಗಿಲು; ಹಿಂದಿನ ಬಾಗಿಲು; ದಿಡ್ಡಿ ಬಾಗಿಲು: ಕಳ್ಳ ಕುರುಬಾಗಿಲಿನಲ್ಲಿ ಮನೆಹೊಕ್ಕ (ರೂಢಿ).
[ಕುರು₂ (< ಕುಱು₂) + ಬಾಗಿಲು (< ಬಾಗಿಲ್)]

**ಕುರುಬಾಣ** 'ಕುಱುಬಾಣ' ನೋ.

**ಕುರುಬಾನಿ** (ನಾ). ಬಲಿ ಕೊಡುವುದು; ನಿವಾಳಿಸುವುದು: ಭಾರತೀಯರಲ್ಲಿ ಬೇರೂರಿದ್ದ ಮೂರ್ತಿಪೂಜೆ . . . ಮುಸಲ್ಮಾನರ ಕುರುಬಾನಿ – ಕಾಫರರ ಕೊಲೆ – ನಮಾಜು ಇತ್ಯಾದಿ ಅತಿರೇಕಗಳನ್ನು ತೊಳೆದು (ಭಾರದ. ೪೫೮).
[← ಹಿಂ. ಮರಾ. ಕುರಬಾನೀ ; ಅರ. ಕುರ್ಬಾನ್]

**ಕುರುಬಿತಿ** 'ಕುಱುಂಬಿತಿ' ನೋ.

**ಕುರುಬಿತ್ತಿ** 'ಕುಱುಂಬಿತಿ' ನೋ.

**ಕುರುಬು₁** ಕುಱುಂಬು₁' ನೋ.

**ಕುರುಬು₂** 'ಕುರುಂಬೆ' ನೋ.

**ಕುರುಬೆ** 'ಕುರುಂಬೆ' ನೋ.

**ಕುರುರಂಗ** (ನಾ). = ಕುರುಕ್ಷೇತ್ರ: ಕುರುರಂಗದ ಶರಶಯ್ಯೆಯಲಿ ಭೀಷ್ಮನು ಮಲಗಿದನು (ಪಾಂಚಜ. ೧೩). [ಕುರು₃ + ರಂಗ]

**ಕುರುರಾಯ** (ನಾ). = ಕುರುಭೂಪಾಲ: ರವಿಸೂನು . . . ಮನೋನುರಾಗದಲ್ಲೆದಿದನು ಕುರುರಾಯನೋಲಗವ (ಕುವ್ಯಾದ್ರೋ. ೧-೩೨). [ಕುರು₃ + ರಾಯ]

**ಕುರುಲು** (ನಾ). ಗುಂಗುರು ತಲೆಕೂದಲು; ಕುರುಳು; ಕೇಶಗುಚ್ಛ: ಕಂಬಳಿಯಲ್ಲಿ ಕುರುಲ ಶ್ವಪಚಾಧಮನೊಳತ್ಯಂತ ಶುಚಿಯ . . . ಅಱಿದೊರೆದು ನೋಡಲೇಂ (ಮದೇವು. ೨೯-೯); ಅರಲುಗಳ ಕೆಚ್ಚಿರ್ದ್ದ ವೇಣಿಯ ಕುರುಲುಗಳು (ರಘುವಂ. ೮೩). [< ಸಂ. ಕುರಲ]

**ಕುರುವ** 'ಕುಱುವ₁' ನೋ.

**ಕುರುವಂಜಿ** 'ಕೊಱವಂಜಿ' ನೋ.

**ಕುರುವಕ** (ನಾ). = ಕುರವಕ: ಸುರಹೊನ್ನೆ ಬಾವನ್ನ ಕುರುವಕ ದ್ರಾಕ್ಷೆ ಭಾಸುರ ನಾಗವಲ್ಲಿ ಕದಂಬ (ಭೈರವೇ. ೧-೬೬); ಕುರುವಕದೊಳಂಕುರದ ಕುಟ್ಮಳದೊಳಲ್ಲಮಂ ಸಂಪಗೆಬಿರಿಮುಗುಳ ಪೂವಸೆಯೊಳಲ್ಲಮಂ (ಅಪ್ರಭು. ೩೯); ಕುಂದ, ಕುರುವಕ, ಕುಟಜ ಮೊದಲಾದ ಅನೇಕ ದಿಬ್ಬಣಗಳೂ ಬಂದಿದ್ದವು (ಕಮಕ. ೮೨). [< ಸಂ. ಕುರವಕ]

**ಕುರುವಗೆಯ್** (ನಾ). ಒಂದು ಬಗೆಯ ಬತ್ತದ ಗದ್ದೆ: ಗುಣಶಾಸನ ದಿನಾಳಕ್ಕರಿಗವೃತ್ತಿ ಮತ್ತರಿರ್ಪ್ಪತ್ತೈದು ಮನೆಯೊಂದು ಕುರುವಗೆಯ್ಮತ್ತರ್ಪ್ಪನ್ನೆರಡು (ಎಇ. XX, ೬-೨೮ ; 1012).
[ಕುರುವ (< ಕುಱುವ₁) + ಕೆಯ್₃]

**ಕುರುವಬ್ಬೆ** (ನಾ). ಒಬ್ಬಾಕೆಯ ಹೆಸರು: ದಣ್ಡಗಾಯಿಗಜ್ಜ ಕುರುವಬ್ಬೆಗ ಪುಟ್ಟಿದ ಮಗ ದಸವರ್ಮ್ಮಗಾಯಿಗಂ (ಎಕ. VIII, ಸೊರಬ. ೫೭೦-೧೪ ; 951). [ಕುರು₃ + ಅಬ್ಬೆ₁]

**ಕುರುವರ** (ನಾ). ಒಬ್ಬಾತನ ಹೆಸರು: ಕುರುವರನ ಮಗ ಚಿಕು ಶಂಭುವನಯ್ದೊ ಸೀಜ ಎಡೆನಾಣ್ಡೆಬ್ಬತ್ತು ಆಳುತ್ತಿರೆ (ಎಕ. VIII, ಸೊರಬ. ೫೭೦-೧೪ ; 951). [?]

**ಕುರುವಾಯಿ** (ನಾ). ಹರಿತವಾದ ಬಾಯುಳ್ಳ ಒಂದು ಬಗೆಯ ಕೀಟ: ಮರಗಳನ್ನೇ ಕೊರೆದು ಕೊರೆದು ಅವನ್ನು ಕೊಂದು ಬಿಡುವ ದೊಡ್ಡ ಕುರುವಾಯಿ (Beetle)ಗಳನ್ನು ಕಂಡಿರುವೆವು (ಬಾಲಪ್ರ. III, ೧೦೮೫). [ಕುರು₀ (< ಕೊರ್₃) + ಬಾಯ್ + -ಇ₃]

**ಕುರುವಾಳು** (ನಾ). ಚಿಕ್ಕ ಕತ್ತಿ; ಸಣ್ಣ ಕಠಾರಿ: ತುಂಬಿಲ್ಲ ಕೋವಿಯಂ ಕುರುವಾಳ ಸೆಳೆದಂ (ಕಾಲೂರ. ೯೫-೧೮೯).
[ಕುರು₂ (< ಕುಱು₂) + ಬಾಳು₃ (< ಬಾಳ್₃)]

**ಕುರುವಿಂಗಿ** (ನಾ). ಒಂದು ಬಗೆಯ ಔಷಧಿಗಿಡ: (ಮೈಔಗಿ. ೩೨-೬೨೮).
[?]

**ಕುರುವಿಂದ** (ನಾ). ಪಾದರಸದಿಂದ ಆದ ಒಂದು ಅದಿರು, —ಇಂಗಲೀಕ: ೧. "ಹಿಂಗುಳಂ ಹಂಸಪಾದಮೆನೆ ಕುರುವಿಂದವೆನೆ ಲಿಂಗಲೀಕಂ" (ಮಂಗರಾ. ೩೧-೭). ೨. ಒಂದು ಬಗೆಯ ಸುವಾಸನೆಯ ಹುಲ್ಲು; ಕೊನ್ನಾರಿ ಗೆಡ್ಡೆ; ಭದ್ರಮುಸ್ತೆ: "ಮುಸ್ತಕಃ ಕುರುವಿಂದಃ, ಭದ್ರಾ, ಜಳದಃ –ಈ ೪ ಭದ್ರಮುಸ್ತೆ" (ಹಲಾಯು. ೧೦೨-೪೬೮); ಕುರುವಿಂದಂ ಕಟುಕತ್ರಯಮುಮುರು ಕಡಸಿಗೆಯೆಂಬಿವಂ ಸುನಿಂಬೆಯ ರಸದಿಂದರೆದು ಕುಡಿಸುವುದು (ಖಮದ. ೨-೧೭೧). ೩. ಕೆಂಪು ರತ್ನ; ಮಾಣಿಕ್ಯ: "ಕುರುವಿಂದಮುಕ್ಕು ಕಿಸುಗಲ್ ಕೆಂಬರಲ್ ರನ್ನವರಲೆನಲ್" (ಕಬ್ಬಕ್ಕಿ. ೪೭); ವರವಜ್ರದ ಮುಂಡಿಗೆ ದಾಡೆಗಳಾ ಕುರುವಿಂದದ ಕೀಲ್ಮೇಲ್ಗಟ್ಟುಗಳೆ (ಜಯಕಾ. ೧-೫೪); ಕುರುವಿಂದ ಖಚಿತ ಕರುಮಾಡುಗಳ (ವೆಂಕಾರಾ. ೨-೬-೨೭); ಕುರುವಿಂದವೆಂಬ ಕೆಂಪು ರತ್ನವು ಕ್ಷತ್ರಿಯ ಜಾತಿಯು (ಸೌಗಂಧಿ. ೩೬೬-೩೨). ೪. ಒಂದು ಪರ್ವತದ ಹೆಸರು: ತ್ರಿಕೂಟ, ಕುರುವಿಂದ . . . ನಿಷಧವೆಂಬೈದು ಗಿರಿಗಳೇ . . . ಮಧ್ಯಭಾಗದೊಳಗಿಹವು (ವಿವೇಕ. ೨೧೪). ೫. ಕುರುಂದ ಕಲ್ಲು. [?]

**ಕುರುವಿಂದಕ** (ನಾ). ಕೆಂಪುರತ್ನ; ಮಾಣಿಕ್ಯ: ಕುರುವಿಂದಕಂ ಮೆಚಿಕೆಯ ಪಾದಾಂತ್ಯ ಪೆಚ್ಚುವುದು (ರತ್ನಶಾ. ೧೧-೧೭). [ಸಂ.]

**ಕುರುವಿಸ್ತ** (ನಾ). ಒಂದು ಪಲ ತೂಕದ ಚಿನ್ನ; ಏಳುನೂರು ಗ್ರೇನ್ ತೂಕದ ಚಿನ್ನ: (ಕ). [?]

**ಕುರುವು₁** 'ಕುರು₁' ನೋ.

**ಕುರುವು₂** 'ಕುಱಪು' ನೋ.

**ಕುರುವೆ$_1$** (ನಾ). ಕುಕ್ಕೆ: ಬುಟ್ಟಿ ಕುರುವೆ ಮೊದಲಾದವುಗಳನ್ನು ತಯಾರಿಸ ಲಿಕ್ಕೆ ಬೇಕಾದ 'ರಂಬೆರು' ಬೀಳಲು, 'ಮನೆ ಬೀಳಲು' ಈ ಆಡವಿಯಲ್ಲಿ ಸಾಕಷ್ಟು ಬೆಳೆದಿರುತ್ತದೆ (ದಂಬನಾ. ೧೮). [← ತುಳು. ಕುರುವೆ]

**ಕುರುವೆ$_2$** 'ಕುಱುವ' ನೋ.

**ಕುರುವೇರು,** ಕುರುವೇಲು (ನಾ). ಮುಡಿವಾಳ; ಲಾಮಂಚದ ಒಂದು ಪ್ರಭೇದ: "ಬಾಲಂ, ಹ್ರೀಬೇರಂ . . . ಲಾಮಂಚದಲ್ಲಿ ಭೇದ, ತೆಲುಗಿನಲ್ಲಿ ಕುರುವೇರುಯೆಂದು ಪೆಸರು" (ಸಿದ್ಧಾಂತಿ. ೧೨೩). **ಕುರುವೇಲು** : ಭದ್ರಮುಸ್ತೆ, ಲಾಮಂಚ, ಪರ್ಪಾಷ್ಟಕ, ಶ್ರೀಗಂಧ, ಕುರುವೇಲು . . . ಕಷಾಯಂ ಕಾಸಿಕೊಡಲು (ಸಕವೈ. ೨೮೪).

[ದೇ. ‖ ತಮಿ. ಕುಱುವೇರ್; ತೆಲು. ಕುರುವೇರು]

**ಕುರುವೇಲು** 'ಕುರುವೇರು' ನೋ.

**ಕುರುವೈರಿ** (ನಾ). ಕೌರವರ ಶತ್ರು; ಭೀಮಸೇನ: "ಕುರುವೈರಿ ವಾಯುಪುತ್ರಂ ವೃಕೋದರನೆನಲು ಭೀಮನಕ್ಕು" (ಮಂಗರಾ. ೭೮–೩).

**ಕುರುಶಾಬ** (ನಾ). ಕುರುವಂಶದ ಮರಿ; ಕೌರವ: ಕುರುನಂದನರಂ ಕೊಂದೆಂ ಕುರುಶಾಬಾನುಜನ ನೆತ್ತರಂ ಕುಡಿದೆಂ (ಗದಾಯು. ೧–೬೯).

[ಕುರು$_3$ + ಶಾಬ]

**ಕುರುಸಾನಿ** 'ಖುರಾಸಾನಿ' ನೋ.

**ಕುರುಹ** 'ಕುಱುಪು' ನೋ.

**ಕುರುಹು$_1$** 'ಕುಱುಪು' ನೋ.

**ಕುರುಹು$_2$** 'ಕುರುಪೆ$_1$' ನೋ.

**ಕುರುಳ್$_1$,** ಕುರುಳು$_1$ (ನಾ). ಕೂದಲು; ಸುರುಳಿಗೂದಲು; ಮುಂಗೂದಲು; ಗುಂಗುರುಗೂದಲು: ನಡು ನಡುಗಲ್ಕೆ ಪುರ್ಬು ಪೊಡರಲ್ಕೆ ಕುರುಳ್ ಮಿಳಿರಲ್ಕೆ (ಪಂಪಭಾ. ೭–೮೯); ನೊಸಲೊಳ್ ಕುರುಳುಯ್ಯಲನಾಡೆ (ಕಬ್ಬಿಕಾ. ೩೩೪); ಅಳಿಗುರುಳ ತಾವರೆಮೊಗದ ಪೊಳೆವರಳುಗಂಗಳ (ಸಾಳ್ವಭಾ. ೨–೨); ಓರ್ವಳ್ ಕೊಂಕುಗುರುಳ ಬಿಂಕದ ರಂಭೆ (ರಾಮಾಶ್ವ. ೫೯–೨೯). **ಕುರುಳು$_1$**: ಕುರುಳಿನಲ್ಲಿ ಕೂಳ ಕಟ್ಟಿ ಕೂದಲ ಶೋಧಿಸಬಹುದೇ ಆಯ್ಯಾ (ಮೋಳಿಮಾ. ೭೬–೩೦೦); ಕುರುಳ ಬೆಂಬಲ ಪಿಡಿದುಕೊಂಡು (ಸೌಂದಪು. ೩–೩೬); ಮಂಡೆಯ ಕುರುಳ ಹಿಕ್ಕುವರೊಂದು ಕೆಲರು ಪೂದಂಡೆಯ ಮುಡಿಸುವರ್ ಕೆಲರು (ಮೋಹತ. ೨೭–೩೪); ಇಂದೀವರಾಕ್ಷಿಯ ಕುರುಳ ನೇವರಿಸುತ (ಶಂಸವಿ. ೧೦–೩೬).

[ದೇ. ‖ ತಮಿ. ಮಲ. ಕುರುಳ್, ಕೂರುಳ್; ತುಳು. ಕುರುಂಬಿ; ತೆಲು. ಕುರುಳು]

**ಕುರುಳ್$_2$,** ಕುರುಳು$_3$ (ನಾ). ಒಣಗಿದ ಸಗಣಿ; ಬೆರಣಿ: (ಕ). **ಕುರುಳು$_3$** : "ಗೋಮಯಯದ ಪಿಂಡದೊಳ್ಕುರುಳು" (ಶಬ್ದಮಂ. ೧೧೨); ಕುರುಳಾರಿಸುತಿದ್ದ ಗುರುಪತ್ನಿಗೆ ನಮಸ್ಕರಿಸಿ (ಕೃವಾಅ. ೩೯); ಒಲೆ ಮಗ್ಗುಲಲ್ಲೆ ಕುರುಳು ಕಟ್ಟಿಗೆ ರಾಶಿ (ಜಂಗೂಲಿ. ೧೫೩). [?]

**ಕುರುಳ,** ಕುರುಳು$_4$ (ನಾ). [ಸಂಗೀತ] ಗಮಕದಲ್ಲಿ ಒಂದು ಪ್ರಕಾರ: ಕುರುಳ–ಒಂದು ಸ್ವರಸ್ಥಾನದಲ್ಲಿ ತಂತಿ ಜಗ್ಗಿಸಿ ಮತ್ತೊಂದು ಸ್ವರನುಡಿಸು ವುದು (ಸಂಗೀತ. ೨೭). **ಕುರುಳು$_4$.** 'ಕುರುಳುವಳಿ' ಪರಾ. [?]

**ಕುರುಳಕಾಂತ** (ನಾ). ಒಂದು ಗೌರವದ ಚಿಹ್ನೆ; ಶೀರ್ಷಾಭರಣ; ತಲೆಯೊಡವೆ (?) : ಪರನ್ಪರಂ ಪಳಂಚಲೆದು ಬಂದಡೆ ವಿಕ್ರಮ ಚಕ್ರಿ ತಂನನಾದರಿಸಿ ವಿ[ಳಾ]ಸದಿಂ ಧವಳ ಶಂಖಮನಗ್ಗದ ಧಾ[ರೆ]ಗಾಳೆಯಂ ಬಿರುದಿನ ನಾಮಮಂ ಕುರುಳಕಾನ್ತಮನೋಜ್ಞರವಾಕ್ಯದಲ್ಕಿದಚ್ಚರಿಯೆನೆ ಪೆತ್ತ ಪೆಂಪಿನಳವಾರಳವೀಶ್ವರದಣ್ಣನಾಥನ (ಸೌಇಇ. XX, ೭೪–೧೯; 1112).

[?]

**ಕುರುಳಪಾವೆ** (ನಾ). ಒಂದು ಊರಿನ ಹೆಸರು : ವಿಮಳ ನರ್ಮ್ಮದಾ ನದಿಯ[ಕು]ರುಳಪಾವೆಯ ಜಿನನಂ ವಿನುತಂ ಕಾಣ್ಪೆನೆಗಂ ಕೂಳನೆ ತೊಱೆದುದು ಸನ್ನುದನ್ತದಾಜನ್ಮಾನ್ತಂ (ಸೌಇಇ. XI–i, ೫೨–೨೬; 1008).

[?]

**ಕುರುಳಿ$_1$** (ನಾ). ಬಹಳ ಚಿಕ್ಕದಾದ ಮಣ್ಣಿನ ಕುಡಿಕೆ : "ಲವಕುಟಂ ಕುರುಳಿಯಕ್ಕು" (ಮಂಗರಾ. ೬೨–೨೪); ಬಾಗಿಲಲೊಂದು ಮುಷ್ಟಿ ಕೂಳುಮನೊಂದು ಕುರುಳಿಯೊಳುದಕಮುಂ ದಿನಂಪ್ರತಿ ನೀಡುತ್ತಂ ಬರಲ್ (ಪುಣ್ಯಾಸ್ರ. ೯–೩ ವ). [← ತಮಿ. ಕುಱುಳ್ಳೈ ?]

**ಕುರುಳಿ$_2$** 'ಕುರುಣೆ$_1$' ನೋ.

**ಕುರುಳಿ$_3$** (ನಾ). ಸುಕ್ಕು; ಮುದುಡು : 'ಕುರುಳಿಗೊಳ್' ಪರಾ.

[< ಸುರುಳಿ ?]

**ಕುರುಳಿಗೊಳ್** (ಕ್ರಿ). ಸುಕ್ಕಾಗು; ಮುದುಡಿಕೊಳ್ಳು : ಕೀಸಿವಲ್ ಪೊಕ್ಕಡಗಿರ್ದ ಕರ್ಣ ಕುರುಳಿಗೊಂಡರೆಬತ್ತಿದ ಬಾಯ್ (ಲೀಲಾವ. ೩–೬೮); ಅಂಘ್ರಿಕ್ಷೇಪದಿಂದಂ ಕುಸಿದು ಕುರುಳಿಗೊಂಡುರ್ವಿ ದಾನಾಂಬುವಿಂ ತೀವಿದುದೆಂಬನ್ನಂ ಜಗನ್ಮಂಡಲವೆಡೆಗಿಡೆ ಬಂದತ್ತು ಮತ್ತೇಭವೃಂದಂ (ವರ್ಧಪು. ೮–೯). [ಕುರುಳಿ$_3$ + ಕೊಳ್$_1$]

**ಕುರುಳಿಡು** (ಕ್ರಿ). ೧. ಕೂದಲುಕೊಡು; ಮುಡಿಕೊಡು. ೨. ಬೆರಣಿ ಗಳನ್ನು ಇಡು : ಮೆಯ್ಯುಟ್ಟು ಕುರುಳಿಟ್ಟು ಭಕ್ತಿಯನ್ ತೋರ್ಪಂ (ಅಶ್ವತ್ಥಾ. ೫೧–೧೦). [ಕುರುಳ್$_2$ + ಇಡು$_1$]

**ಕುರುಳು$_1$** 'ಕುರುಳ್$_1$' ನೋ.

**ಕುರುಳು$_2$** 'ಕುರುಡು' ನೋ.

**ಕುರುಳು$_3$** 'ಕುರುಳ್$_2$' ನೋ.

**ಕುರುಳು$_4$** 'ಕುರುಳ' ನೋ.

**ಕುರುಳುಗೂದಲು** 'ಕುರುಳ್ಗೂದಲ್' ನೋ.

**ಕುರುಳುವಳಿ** (ನಾ). [ಸಂಗೀತ] ಒಂದು ಪ್ರಕಾರದ ಗಮಕ: ಆಹತ ಆಂದೋಳಿತ ಲೀನ ಕಂಪಿತ ಕುರುಳುವಳಿ ಮೊದಲಾದ ಗಮಕಂ ಗಳಿಂ ಚಮತ್ಕಾರಮಂ ಪುಟ್ಟಿಸಿ (ವಿರೂಪಾ. ೭೪).

[ಕುರುಳು$_4$ (< ಕುರುಳ) + –ವಳಿ ?]

**ಕುರುಳೆ** (ನಾ). ಗುಂಗುರು ಗೂದಲುಳ್ಳವಳು : ರಸಗಾನಲೋಲೆ ಹರಿಮಧ್ಯೆಯೊರ್ವಳು . . . ಕೊಂಕಿದ ಕುರುಳೆ ಬಂದು (ಚೆಬಪು. ೧೦–೨೩).

[ಕುರುಳ್$_1$ + –ಎ$_2$]

**ಕುರುಳೋಳಿ** (ನಾ). ಕೂದಲಿನ ಸಾಲು; ಕೇಶರಾಶಿ: ಕುರುಳೋಳಿಯಿಂ ಬಗೆಗೊಳಿಸಿದುದೋರಂತೆ ಮಿಸುಪ ನಗೆಮೊಗಮವಳಾ (ಕಬ್ಬಿಕಾ. ೭೭); ಕುಸುಂಗಿತು ಕುರುಳೋಳಿ (ಜಯುಕಾ. ೩–೨೫).

[ಕುರುಳ್$_1$ + ಓಳಿ]

**ಕುರುಳ್ಕಟ್ಟು** (ನಾ). ಕೂದಲುಗಳನ್ನು ಕಟ್ಟುವಿಕೆ; ಕೇಶಬಂಧ: ಸರ್ವಾಂಗಮಾವರಿಸಿದಾ ರಜವ ಕಳವಿಳಾಸಿಯರಿಂದ ಕೊಡಹಿಸುತ ಕುರುಳ್ಕಟ್ಟ ಸಡಿಲ್ದುಡಿಗೆ ಬಿಗಿದುಡಿಸುತೆ (ನವಮೋ. ೭–೩೩).

[ಕುರುಳ್$_1$ + ಕಟ್ಟು$_2$]

**ಕುರುಳ್ಗೂದಲ್,** ಕುರುಳುಗೂದಲು (ನಾ). ಗುಂಗುರುಕೂದಲು; ಕುಟಿಲಕುಂತಳ: "ಭ್ರಮರಕಃ–ಕುರುಳ್ಗೂದಲ್" (ಕಾಶಕ್ಯ. ೧೯೦). **ಕುರುಳುಗೂದಲು** : "ಅಳಕಾಃ, ಚೂರ್ಣಕುಂತಲಾ –ಈ ೨ ಕುರುಳು ಗೂದಲು" (ನಾಚಿರಾ. ೧೨೫); ಸಣ್ಣ ಕುರುಳುಗೂದಲು ಬೆನ್ನಮೇಲೆ ಬಿದ್ದಿರುತ್ತವೆ (ಇಪ್ಪಕ. ೫೬). [ಕುರುಳ್$_1$ + ಕೂದಲ್ (< ಕೊಂದಲ್)]

**ಕುರುಳ್ಗೊಯ್** (ಕ್ರಿ). ಕೂದಲನ್ನು ಕತ್ತರಿಸು : ಬಾಯನೊಡೆಬಡಿ ಮಿಸೆಗೀಳ್ ಕುರುಳ್ಗೊಯ್ (ಚೆಬಪು. ೯೯–೯೯). [ಕುರುಳ್$_1$ + ಕೊಯ್]

**ಕುರುಳ್ಚು** (ಕ್ರಿ). ಆಯುಧವನ್ನು ಝಳಪಿಸು, —ತಿರುಗಿಸು: "ಕುರುಳ್ಚ – ಶಸ್ತ್ರ ಸಂಚಾಲನೇ" (ಶಮಧಾ); **ಪೊಟ್ಟಳಿಸಿ** ಗೇಣಂ ಕಿತ್ತು ತೂಟ್ಟುಟ್ಟಿ ಗಿಱ್ರಿನಲೀಡಾಡಿ ಕುರುಳ್ಚಿ ಕುಪ್ಪಳಿಸಿ ಮುಂತುಂ ಪಿಂತುಮಂ ನೋಡಿ (ಎಕ. XI, ಚಿತ್ರದು. ೩೪-೧೯; 1124); ನಭಕ್ಕೆ ಚಿಮ್ಮಿ ಕುರುಳ್ಚಿ ಕೈಮಾಡುವ ಕೊಂತಗಾಱರ ತಿಂತಿಣಿಯು ನಡುವೆ (ಗಿರಿಕ. ೬-೫೫ ವ); ಒಱೆಗಳೆದು ಕುರುಳ್ಚುವ ಕೈದುಗಳ ಬಳ್ಳಿವೆಳಗಿಂ (ರಾಜಶೇ. ೧೩-೭೭ ವ); ಗುಪ್ತಕೋಶದಿಂದ ಬರಸೆಳೆದೆತ್ತಿದಲಗನ್ನು ಕುರುಳ್ಚಿ ಅಭಿನಯಿಸುತ್ತ (ಚಿಟ್ಟಅ. ೧೮೮-೧೬). [?]

**ಕುರುಳ್ತಿದ್ದು** (ಕ್ರಿ). ಕೂದಲುಗಳನ್ನು ಓರಣಗೊಳಿಸು, —ಸರಿಪಡಿಸು: ಪಿಡಿದೆತ್ತಿ ಮೊಗಮನ್ನೋಡಿ ಕುರುಳ್ತಿದ್ದೆ (ನವಮೋ. ೧೩-೨೬). [ಕುರುಳ್₁ + ತಿದ್ದು (< ತಿರ್ದು)]

**ಕುರುಳ್ದಲೆ** (ನಾ). ಗುಂಗುರುಗೂದಲುಳ್ಳ ತಲೆ: ಕರಿದಪ್ಪ ಕುರುಳ್ದಲೆಯುವನತಿಸುಖಿ ಶುಕ್ಲಸಾರನಕ್ಕುಂ ಶುಕ್ರಂ (ಜಾತತಿ. ೨-೨೪). [ಕುರುಳ್₁ + ತಲೆ₁]

**ಕುರುಳ್ದೊಂಗಲ್** (ನಾ). ಕೂದಲಿನ ತೊಂಗಲು; ಕೇಶರಾಶಿ: ಚೆಲ್ವಿನಾಸನದೊಳುಱೆ ಮಿಱುಗುವ ಕುರುಳ್ದೊಂಗಲ... ಕಪ್ಪು ಚೆಲ್ವಿಂದೆ ಕಣ್ಗೆಸೆದಿರ್ದುದು (ಜೈಮಿಭಾ. ೧೮-೩೫). [ಕುರುಳ್₁ + ತೊಂಗಲ್]

**ಕುರುಳ್ಬೆರಸು** (ಕ್ರಿ). ಕೂದಲನ್ನು ಕೂಡಿಸು; ಕೇಶರಾಶಿ ಮಾಡು: ಮಣಿದೊಡವನಿಕ್ಕಿ ಕುರುಳ್ಬೆರಸಿ ಜಡೆಮುಡಿ ರಚಿಸಿ ಪೂ ಮುಡಿಸಿ (ನವಮೋ. ೨೩-೩೨). [ಕುರುಳ್₁ + ಬೆರಸು₁]

**ಕುರುಳ್ವಿಡಿ** (ಕ್ರಿ). ಕೂದಲನ್ನು ಹಿಡಿ: ಸುರಿಯೆ ಬೆಮರ್ ಕುರುಳ್ವಿಡಿದು ಮುತ್ತುಗಳಂ ಮಱಿದುಂಬಿ ಕಾಱುವಂತಿರೆ (ಪಂಪಭಾ. ೮-೬೦); ಕುರುಳ್ವಿಡಿವುತಧರ ಸುಧೆಯ ನೀಂ ತಳುವದೀಂಟೊ (ಚಿಬವು. ೧೯-೩೭). [ಕುರುಳ್₁ + ಪಿಡಿ₁]

**ಕುರೂಪ** (ನಾ). ೧. ಅಂದಗೇಡಿತನ; ಕುರೂಪತನ: ಸುಂದರಿಯ ಕಂಠದ ಮೆಚ್ಚುಗೆಯ ಮರೆಯಲ್ಲಿ ಅಡಗಿದುದು ಅವಳ ಕುರೂಪದ ಬಗ್ಗೆ ಅನುಕಂಪ (ಮೂರುದಾ. ೧೧೩). ೨. ಅಂದಗೇಡಿಯಾದವನು; ಕುರೂಪಿ: ಈ ಚಾರುರೂಪ ಲಲಿತ ವನೇಚರಿಯರನೀ ಕುರೂಪರೊಳ್ ಕೂಡಿ ನಿರಾಲೋಚಕನಾ ಬಿದಿ ವೇದಜಡೋಚಿತವೃತ್ತಿಯನದಿಂತು ಕನ್ನಡಿಸುವನೇ (ಪುಷ್ಪಪು. ೫-೯೧). [ಸಂ.]

**ಕುರೂಪತೆ** (ನಾ). ಅಂದಗೇಡಿಯಾಗಿರುವಿಕೆ; ಕುರೂಪವಾಗಿರುವಿಕೆ: ಮನ್ನಣೆ ಕುರೂಪತೆಗೆ ತಾನೆಲ್ಲಿ (ಶ್ರೀರಾಮಾ. ೨೪-೬೪೨). [ಸಂ. ಕುರೂಪತಾ]

**ಕುರೂಪಿ** (ಗು). ೧. ರೂಪುಗೆಟ್ಟ; ಅಂದಗೇಡಿಯಾದ. (ನಾ). ೨. ರೂಪಹೀನ ವ್ಯಕ್ತಿ: ಕುತ್ಸಿತೆ ಕುರೂಪಿ ಕುಭಾಗ್ಯೆ... ಎಂಬಟವುಟ ಕಾತ್ತಿರ್ಯರ್ ಸತಿಯರ್ (ಸೌಇಇ. XX, ೨೪೮-೪೧; 1228). ಕಾಂತೆಯರು ತಾವಂಗಹೀನಂಗೆಂತು ಸಿಕ್ಕುವರಯ್ಯ ಬಳಿಕ ಕುರೂಪಿಯಾಗಿರಲು (ಬಸಪು. ೧೮-೬೯); ಕಮಲು ಅಪ್ರತಿಮ ಸುಂದರಿಯಲ್ಲದಿದ್ದರೂ ಕುರೂಪಿಯಾಗಿರಲಿಲ್ಲ (ಸೋತುಗೆ. ೪೪). [ಸಂ. ಕುರೂಪಿನ್]

**ಕುರೂಪಿತನ** (ನಾ). = ಕುರೂಪತೆ: ಬಿಡದೆ ಮುನ್ನಿನ ರೂಪು ಬೇಕಾದಡೆ ನೆನೆವುದಾ ಪಕ್ಷಿಗಳ ಹಚ್ಚಡವ ನೀವು ಧರಿಸಲಡಗುವುದೀ ಕುರೂಪಿತನ (ನಳಚ. ೬-೨೦). [ಕುರೂಪಿ + -ತನ]

**ಕುರೂಪು** (ನಾ). = ಕುರೂಪತೆ: "ಕೊಂಕು ಕುರೂಪು ದೊಡ್ಡಿತಿನಿತುಂ ವಿಕಟಾಹ್ವಯಂ" (ನಾನಾರ. ೧೪೭). [< ಸಂ. ಕುರೂಪ]

**ಕುರ್ರೆ₁, ಕುರ್ರೊ** (ನಾ). ನಾಯಿಯನ್ನು ಕರೆಯುವಾಗ ಬಳಸುವ ಶಬ್ದ. ಕುರೆಕುರೆ, ಕುರೊಕುರೊ (ದ್ವಿರುಕ್ತಿ).

**ಕುರ್ರೆ₂** 'ಖುರೆ' ನೋ.

**ಕುರ್ರೊ** 'ಕುರ್ರೆ₁' ನೋ.

**ಕುರ್ಕ** (ನಾ). ಕಿರುಬ; ಚಿರತೆ; ಚಿರ್ಚ: ಪಾಳ್ ಕುರ್ಕನೊಂದು ನನ್ನ ಮೇಲೆಗರಿ ಪರಚಿ ಗಂಟಲ್ಮುರಿದು ಕೊಲಲೆಳಸುತಿತ್ತು (ಚಂದ್ರಸ. ೨೯); ರಾತ್ರಿ ಹೊರಗೇ ಉಳಿದರೆ ಕುರ್ಕವೋ ಹುಲಿಯೋ ಹಿಡಿದು ತಿಂದೀತು (ಸ್ವಪ್ನಹೊ. ೧೭); ಹುಲಿ, ಕರಡಿ, ಕುರ್ಕ ಮುಂತಾದ ಇತರ ಪ್ರಾಣಿ ವರ್ಗಕ್ಕೆ ಕಾಡಿನಲ್ಲಿ ಮಿತಿಯೇ ಇರಲಿಲ್ಲ (ಪಂಜಪ. ೨). [← ತಮಿ. ಕುಱುಕ್ಕೈ = ಹುಲಿ]

**ಕುರ್ಕರ** (ನಾ). ನಾಯಿ; ಶ್ವಾನ: ಭರದಿ ಕುರ್ಕರನಟ್ಟೆ ಬರೆ ವರಾಹಂ ಭಯದಿ... ಕೂಪದಲಿ ಬಿದ್ದು (ರಾಘಚ. ೧೧-೩೦). [< ಸಂ. ಕುಕ್ಕುರ]

**ಕುರ್ಕೀಲು** (ನಾ). (ಕರಾ) ಬುಟ್ಟಿ; ಮಂಕರಿ: ನಾಳೆ ಬೆಳಗ್ಗೆ ಇಬ್ಬರೂ ನೀವು ಒಂದೊಂದು ಕುರ್ಕೀಲು ತರಗೆಲೆ ತರದಿದ್ದರೆ... ಹೊರಗಿಡ ಬೇಕಾದೀತು (ಪರಾವ. ೧೭೯). [← ತುಳು. ಕುರ್ಕಿಲ್]

**ಕುರ್ಕು** 'ಕೊಕ್ಕು₃' ನೋ.

**ಕುರ್ಕುಟ** (ನಾ). ಕೋಳಿ. 'ಕುರ್ಕುಟಾಹಿ' ಪರಾ. [ಸಂ.]

**ಕುರ್ಕುಟಾಹಿ** (ನಾ). ಕೋಳಿಯ ಶರೀರ ಹಾಗೂ ಹಾವಿನ ತಲೆಯುಳ್ಳ ಒಂದು ಬಗೆಯ ಸರ್ಪ: ಅತಿಭಯಂಕರ ಕುರ್ಕು[ಪಾಠಾಂ. ಕ್ಕು]ಟಾದ್ಯಾ[ಹ್ಯಾ]ಗ್ರಹ ನಿಗ್ರಹದೊಳಂ (ಅಜಿಪು. ೧೧-೧೦ ವ). [ಕುರ್ಕುಟ + ಅಹಿ]

**ಕುರ್ಕುರ** (ನಾ). = ಕುರ್ಕರ: ಕುರ್ಕುರಂಗೆ ಪಟ್ಟೆ ಮಂಚ ಸುಪ್ಪತ್ತಿಗೆ ಅಮೃತಾನ್ನವನಿಕ್ಕಿ ಸಲಹಿದಡೂ ಹಡುವಿಂಗೆ ಚಿತ್ತವನಿಕ್ಕುವುದೇ ದಿಟ (ಸರ್ವವ. ೩೫-೫೭೫); ವರಾಹನೊಂದು ಸುಳಿಯೆ ಕಂಡವನದಱ ಮೇಲೆ ಕುರ್ಕುರ[ಪಾಠಾಂ. ಕುಕ್ಕುರ]ನ ಬಿಡೆ (ಪ್ರೌಢರಾ. ೧೬-೩). ೨. ಒಂದು ಬಗೆಯ ಸಸ್ಯ; "ನಸುಗುನ್ನಿ" (ಖಮುದ. ಟೀಕೆ): ಕುರ್ಕುರನ ಬೀಜ ಮರಿಚಂ ಸಕ್ಕರೆ ತಿಲಂ . . . ಕಿಡುಗುಮುದಱಿಂದೆ ವಿಷಂ (ಖಮುದ. ೧೩-೩೫). [ಸಂ.]

**ಕುರ್ಕುರಧ್ವನಿ** (ನಾ). ನಾಯಿಯ ಬೊಗುಳುವಿಕೆ: "ಬಗುಳ್ – ಕುರ್ಕುರಧ್ವನೌ; ಸಾರಣೇಚ" (ಶಮಧಾ). [ಕುರ್ಕುರ + ಧ್ವನಿ]

**ಕುರ್ಕುರಿ** (ನಾ). ಹೆಣ್ಣುನಾಯಿ: "ನಾಯೀ = ಕುರ್ಕುರಿಯುಂ, ಮಲಯಾಳಿತಿಯುಂ" (ಕಾಶಕ್ಯ. ೧೫೮). [ಸಂ. ಕುರ್ಕುರೀ]

**ಕುರ್ಕುರಿರೋಗ** 'ಕುರುಕುರಿರೋಗ' ನೋ.

**ಕುರ್ಕುರೊಟ್ಟಿ** (ನಾ). ಒಂದು ಬಗೆಯ ರೊಟ್ಟಿ: ಕ್ಷೀರ ಗಾರಿಗೆಯಮೃತ ಫಲ ಕುರ್ಕುಱೊ[ರೊ]ಟ್ಟಿ ಕಜ್ಜೂರ ವಡೆಗಡುಬು (ಚೇರಮು. ೧೦-೨೮). [ಕುರ್ಕು₀ + ರೊಟ್ಟಿ]

**ಕುರ್ಕೆ** (ನಾ). (ಕರಾ) ಒಂದು ಬಗೆಯ ಸಣ್ಣಮೀನು. [← ಮರಾ. ಕುರ್ಕೀ]

**ಕುರ್ಗಲ್** (ನಾ). ಒಂದು ಊರಿನ ಹೆಸರು: ಕುರ್ಗಲ್ಲ ಬೂತುಗನರಸಿ ಪರಮಬ್ಬೆಯಾಳುತ್ತಿರೆ ಕುರ್ಗಲ್ಲ ಗಾವುಣ್ಡ ತಮ್ಮುತ್ತಿಬೋರರ್ ತುಱುಗಳೊಳ್ಕಾದಿ ಸತ್ತರ್ (ಎಕ. IV, ಹುಣಸೂ. ೯೨-೭; 920). [?]

**ಕುರ್ಗಿಸು** 'ಕುಱ್ಗಿಸು' ನೋ.

**ಕುರ್ಗು₁** 'ಕುಱ್ಗು' ನೋ.

**ಕುರ್ಗು₂** (ನಾ). ದೇಹ ಕುಗ್ಗಿರುವಿಕೆ; ಕುಳ್ಳತನ; ಕುಬ್ಜತೆ: "ಸೊಗಯಿಪ ಶರೀರ ಕುರ್ಗಿ [ಪಾಠಾಂ. ಗ್ಗಿ]ನೊಳು ಕುರಪಿನೊಳು ಕೊನೆಗೆ ಪೆಸರು" (ಶಬ್ದಮಂ. ೧೦೧). [< ಕುರ್ಗು₁]

**ಕುರ್ಚಿ$_1$**, ಖುರ್ಚಿ, ಖುರ್ಚೆ (ನಾ). ಕುಳಿತುಕೊಳ್ಳುವ ಎತ್ತರವಾದ ಪೀಠ, —ಆಸನ: ಪಕ್ಕದ ಕುರ್ಚಿಯ ಪೀಠದೆ ಸುಖದಾಸನವಂ ಕೊಂಡಿಹ ಮಾಟದಿ (ಗಣೇಶ. ೨–೩೧) ; ಮೇಜು ಕುರ್ಚಿ ಮುಂತಾದುವುಗಳು ಶರೀರದಂತೆ ಕೆಲಸ ಮಾಡಲಾರವು (ಜೀವಾತ್ಮ. ೨೫೭) ; ಒಂದು ಪಕ್ಕದಲ್ಲಿ . . . ಮೂರು ಕುರ್ಚಿಗಳಿದ್ದುವು (ಪುನರು. ೩೧). **ಖುರ್ಚಿ**: ವ್ಯಾಸ ತನ್ನ ಕೊಠಡಿಗೆ ಹೋಗಿ ಸ್ವಸ್ಥವಾಗಿ ಖುರ್ಚಿಯ ಮೇಲೆ ಕುಳಿತುಕೊಂಡ (ನಿರ್ದೋಷಿ. ೧೭೭) ; ಎಲ್ಲರೂ ಕೂಗುತ್ತಾ ಖುರ್ಚಿಗಳನ್ನು ಎಸೆಯುತ್ತಾ, ಹೊರಗೆ ಬಂದರು (ರಾಯಕ. ೭೭) ; ನಾನು ಸಮೀಪದಲ್ಲಿಯೇ ಖುರ್ಚಿಯ ಮೇಲೆ ಕುಳಿತೆ (ಚಂದುಟ. ೮೭). **ಖುರ್ಚೆ**: ಮಂಚ, ಖುರ್ಚೆ, ಮೇಜು, ಪೆಟ್ಟಿಗೆ ಮೊದಲಾದ ಸಾಮಾನುಗಳನ್ನು ನೋಡಿರಿ (ಕೃಷಿಪ್ರ. ೨೬೩). [← ಅರ. ಕುರ್ಸೀ]

**ಕುರ್ಚಿ$_2$** (ನಾ). (ಕರಾ) ಒಂದು ಬಗೆಯ ಮೀನು: ನದಿಯ ಮೀನು ಅಲ್ಲದೆ ಸಮುದ್ರದ ಕಾಣೆ, ಕುರ್ಚಿ, ಬೈಗೆ, ಬೂತಾಯಿ ಎಲ್ಲ ಪಡುಕರೆಯ ಮೊಗೇರತಿಯರು ತಂದಿದ್ದರು (ಹೊಸಕ್ಷಿ. ೫೮). [← ತುಳು. ಕುರ್ಚಿ]

**ಕುರ್ಚಿ$_3$** (ನಾ). ಒಂದು ಬಗೆಯ ಮರ: ಕೊಡಚಗ . . . ಕುರ್ಚಿ (ವೈಔಗಿ. ೪೪–೮೬೩). [?]

**ಕುರ್ಚಿಮಂಚ** (ನಾ). "ಮಂಚವಾಗಿ ವಿಸ್ತರಿಸಲಾಗುವ ಕುರ್ಚಿ; ಕುರ್ಚಿಮಂಚ" (Chair–bed. ಇಂಕನಿ). [ಕುರ್ಚಿ$_1$ + ಮಂಚ]

**ಕುರ್ಜು** 'ಕುರುಜು' ನೋ.

**ಕುರ್ಜುಗಲ್ಲು** (ನಾ). ಅಟ್ಟಣೆಯ ಕಲ್ಲು; ಕಲ್ಲಿನಿಂದ ಕಟ್ಟಿದ ಅಟ್ಟಣೆ: ನಮ್ಮೂರಿಗೆ ದೊಂಬರು ಬಂದು ಕುರ್ಜುಗಲ್ಲಿನ ಹತ್ತಿರ ಗಣೆ ಹಾಕಿ ದೋಣು ಬಾರಿಸಿ (ಚಂಗಾಳ್ವ. ೪೨).

[ಕುರ್ಜು (< ಕುರುಜು) + ಕಲ್ಲು (< ಕಲ್$_3$)]

**ಕುರ್ಣಿ** (ನಾ). ಬೊಬ್ಬುಳಿ ಮರ; ಜಾಲಿಮರ. 'ಕಪ್ಪುಕುರ್ಣಿ' ಪರಾ. [?]

**ಕುರ್ತಾ** 'ಕುಡತಿ' ನೋ.

**ಕುರ್ತಿಕೆ** (ನಾ). ಒಂದು ಬಗೆಯ ಸಸ್ಯ: ಕುರ್ತಿಕೆ, ಕುರತಿರುಗಿ, ಅಲ್ಲಿಬೀಜ (ವೈಔಗಿ. ೫೦–೯೯೨). [?]

**ಕುರ್ದೆ** 'ಕುರುದೆ' ನೋ.

**ಕುರ್ನಿಸಾತ್** 'ಕುರ್ನೀಸಾತು' ನೋ.

**ಕುರ್ನಿಸಾತ** 'ಕುರ್ನೀಸಾತು' ನೋ.

**ಕುರ್ನೀಸಾತು**, ಕುರ್ನಿಸಾತ್, ಕುರ್ನಿಸಾತ (ನಾ). ಸಲಾಮು; ನಮಸ್ಕಾರ: ಅಲಿಯು ಕುರ್ನೀಸಾತು ಮಾಡಿ (ದೌಲತ್. ೩೩). **ಕುರ್ನಿಸಾತ್**: ಕರಿಲಿಭಕ್ಷನು ಕುರ್ನಿಸಾತ್ ಮಾಡಿದನು (ದೌಲತ್. ೧೧೧); ಅವರಿಗೆ ಕುರ್ನಿಸಾತ್ ಮಾಡಿ (ಹಂಸಾ. ೧೬೯). **ಕುರ್ನಿಸಾತ**: ಅವರು ವಿಜಯನಗರದ ರಾಯರಿಗೆ ಬಗ್ಗಿ ಕುರ್ನಿಸಾತ ಮಾಡಲವಶ್ಯವಿಲ್ಲ (ಕನ್ನಡಿ. ೧೦೯).

[← ಮರಾ. ಹಿಂ. ಕುರ್ನಿಸಾತ್; ತುರ್ಕಿ. ಕೋರ್ನಿಶಾತ್]

**ಕುರ್ಬಾನೀಸ್** (ನಾ). ಸಲಾಮು; ನಮಸ್ಕಾರ: ಪೂರ್ಣಯ್ಯನವರು ಸುಲ್ತಾನರಿಗೆ ಕುರ್ಬಾನೀಸ್ ಮಾಡಿ ಸಭೆಯಿಂದ ಹೊರಟುಹೋದರು (ಕೃಷ್ಣಭೂ. ೧೭). [?]

**ಕುರ್ವ** 'ಕುಱುವ' ನೋ.

**ಕುರ್ವಾಣ** (ಗು). ಮಾಡುವ; ರಚಿಸುವ. 'ಕಿಂಕುರ್ವಾಣ' ಪರಾ. [ಸಂ.]

**ಕುರ್ವಾಣತೆ** (ನಾ). ಮಾಡುವಿಕೆ. 'ಕಿಂಕುರ್ವಾಣತೆ' ಪರಾ. [ಸಂ. ಕುರ್ವಾಣತಾ]

**ಕುರ್ವು** 'ಕೊರ್ವು$_1$' ನೋ.

**ಕುಲ**, ಕುಳ$_5$ (ನಾ). ೧. ಗುಂಪು; ಸಮೂಹ; ರಾಶಿ: ಉರಿವ ಬೆಂಕಿಗೆ ಕಂಪು ತುಪ್ಪ ತಿಲ ಮೊದಲಾದ ಕುಲವಂ ಹಾಕಿ (ಪೋಳಮಾ. ೫೭–೨೩೯). ೨. ವಂಶ; ಜಾತಿ: "ಸಮಾನವಹ ಜಾತಿಗಳ ಸಮೂಹವು ಕುಲಂಯೆನಿಸುಗುಂ" (ನಾಚಿರಾ. ೧೧೫) ; "ಅನ್ವಯಂ ಕುಲಂ ಗೋತ್ರಮಭಿಜನಮೆನಲು ವಂಶಮಕ್ಕುಂ" (ಮಂಗರಾ. ೭೪–೨) ; ಏಂಗಳ ನಿಮ್ಮ ಕುಲಂಗಳಾಂತು ಮಾರ್ಮಲೆವನನಟ್ಟಿ ತಿಂಬುವೆ . . . ನಿಮ್ಮ ಕುಲವಾಕುಲವಂ ನಿಮಗುಂಟುಮಾಡುಗುಂ (ಪಂಪಭಾ. ೧೦–೨೧) ; ಕುಲವ ನಱಿಸದಿರಿಂ ಭೋ ಕುಲದಿಂದ ಮುನ್ನೇನಾದಿರಿಂ ಭೋ (ಬಸವ. ೫೯೦) ; ತನ್ನಿನಿಯನ ತಾಯ್ತಂದೆಯ ಕುಲಗಳನುನ್ನತಿಗೈದು (ಹದಿಬ. ೨–೧೧) ; ಕುಲವನ್ನು ನಾಲಗೆ ಹೇಳುತ್ತದೆ (ಸುವಸಂ. ೨೩); ಕುಲ ಪ್ರಮಾಣ ನಾಲಗೆ, ಜಲಪ್ರಮಾಣ ತಾವರೆ (ಗಾದೆ). ೩. ಒಳ್ಳೆಯ ಮನೆತನ; ಉದಾತ್ತವಾದ ವಂಶ. 'ಕುಲಜೆ' ಪರಾ. ೪. ವಾಸಸ್ಥಳ; ಮನೆ: (ಕಿ). **ಕುಳ$_5$**: ೨. ಆದಿ ಕುಳಕ್ಕೆ ನೀನೆ ಮೂಲಿಗ (ಶೂನ್ಯಸಂ. ೭೨–೧೧) ; ನಿಮ್ಮ ಮಾರಾಜರ ಕುಳಕೆ ತಲೆತಲಾಂತರದಿಂದ ಅರಮನೆಯ ಊಳಿಗದಲ್ಲಿ (ಮಂತ್ರಶ. ೮೦–೧೪). ೪. ಹುಟ್ಟೂರ ಶಿವಾಚಾರದವರ ಕುಳಗಳು (ಬಿಟ್ಟಅ. ೪೮–೧೭). ೫. ಆಸಾಮಿ; ವ್ಯಕ್ತಿ: ಪಟೇಲರು . . . ಪ್ರಭಾವಶಾಲಿಯಾದ ಕುಳ (ದೂರಸ. ೭೩). [ಸಂ.]

**ಕುಲಂಕರ**, ಕುಲಕರ (ನಾ). [ಜೈನ] ಮನು: "ಜೈನಗ್ರಂಥಗಳಲ್ಲಿ ಮನುಗಳಿಗೆ ಕುಲಂಕರರೆಂದೂ ಹೆಸರುಂಟು. ಈ ಕುಲಂಕರರು ಹದಿನಾಲ್ಕು ಜನರು (ಜೈನಪ. ೨೬). **ಕುಲಕರ**: ಕುಳಧರನುಂ ಕುಲಕರನುಂ ಕುಳತಿಳಕನುಮೆನಿಸಿದ ನಾಭಿರಾಜಂಗೆ (ಆದಿಪು. ೬–೭೯). [ಸಂ.]

**ಕುಲಂಗೆಡು**, ಕುಲಗೆಡು (ಕ್ರಿ). ಜಾತಿ ಕೆಡು; ಕುಲವಿಲ್ಲದಾಗು; ಭ್ರಷ್ಟನಾಗು: ಬಾಲನಂ ಕೊಲುವುದು ಸತಿಯನೀವುದು ಕುಲಂಗೆಟ್ಟು ಕೀಳುಜಾತಿಯ ಮನೆಯಲುಂಬುದು (ಬಸಪು. ೨೮–೩೨). **ಕುಲಗೆಡು**: ೧. ಲಜ್ಜೆಗೆಟ್ಟನು ನಾಣುಗೆಟ್ಟನು ಕುಲಗೆಟ್ಟನು (ಬಸವ. ೫೨೨) ; ಕುಲಗೆಟ್ಟು ವಿಪ್ರಾಚಾರಮಂ ನೆಱೆಬಿಟ್ಟು (ಬಿಸಪು. ೫೫–೩) ; ಕುಲಗೆಟ್ಟವರ ಚಿಂತೆ ಒಳಗಿರ್ಪರಂತಲ್ಲ ಕುಲಗೆಟ್ಟು ಶಿವನ ಮಱೆಹೊಕ್ಕು ಋಷಿಗಳು ಕುಲವಾದರಯ್ಯ (ಸರ್ವಜ್ಞ. ೧೯). ೨. ಹಾಳಾಗು; ಕೆಟ್ಟುಹೋಗು: ಈ ಶಾಲೆಗೆ ನಾವು ಬಂದ ಮೇಲೆ ಇದು ಕುಲಗೆಟ್ಟು ಹೋಯ್ತು ಎನ್ನುತ್ತಾರೆ (ಕಾವೇರಿ. ೮೯). [ಕುಲ + ಕೆಡು]

**ಕುಲಂಜ** (ನಾ). ಒಂದು ಬಗೆಯ ಔಷಧಿ ಸಸ್ಯ; ಕೊಳಂಜ: "ಗಂಧಮೂಲಃ – ಕುಲಂಜ" (ಒಷಧಿ. ೪೬). [ಸಂ.]

**ಕುಲಂಜನ** (ನಾ). = ಕುಲಂಜ: (ಕಿ). [ಸಂ.]

**ಕುಲಕ**, ಕುಳಕ (ನಾ). ೧. ಕುಲಕ್ಕೆ ಸಂಬಂಧಿಸಿದುದು; ಸತ್ಕುಲ ಪ್ರಸೂತವಾದುದು. ೨. ಒಂದು ಜಾತಿಯ ಮರ; ಕಾಗೆ ತೂಬರೆ ಮರ. ೩. ಒಂದು ಜಾತಿಯ ಪಡುವಲಬಳ್ಳಿ: "ಕುಲಕಂ ಪಟೋಳಂ" (ವಸ್ತುಕೋ. ೩೯–೩೭) ; "ಪಡಳಂ ಪಟೋಳವದು ಕುಲಕಂ" (ಮಂಗರಾ. ೪೪–೪೪). ೪. [ಕಾವ್ಯಮೀ] ಒಂದೇ ಕರ್ತೃ ಹಾಗೂ ಕ್ರಿಯಾಪದ ಸಂಬಂಧವುಳ್ಳ (ಏಕಾನ್ವಯವಾದ) ನಾಲ್ಕಕ್ಕಿಂತಲೂ ಹೆಚ್ಚು ಪದ್ಯಗಳ ಸಮುದಾಯ: ಕಾವ್ಯಗಳಲ್ಲಿ ಅನೇಕ ಪ್ರಭೇದಗಳುಂಟು: ಸಂಸ್ಕೃತ ಪ್ರಾಕೃತ ಮತ್ತು ಅಪಭ್ರಂಶ ಭಾಷೆಗಳಲ್ಲಿ ರಚಿತವಾದ ಮುಕ್ತಕ, ಸಂದಾನಿತಕ, ವಿಶೇಷಕ, ಕಲಾಪಕ, ಕುಲಕಗಳು (ಧ್ವನ್ಯಾಲೋ. ೧೪೧). **ಕುಳಕ**: ೪. ಇಡುಕುಂಗಬ್ಬಂ ಮುಕ್ತಕಮೊಡಂಬಡಲ್ ನೆಗಱೆ ಪಲವುಮೇಕಕ್ರಿಯೆಯೊಳ್ ಪಡೆಗುಂ ಕುಳಕಾಖ್ಯೆಯಂ (ಕಾವ್ಯಾವ. ೯೫೧). [ಸಂ.]

**ಕುಲಕಂಟಕ** (ನಾ). ಕುಲಕ್ಕೆ ಮುಳ್ಳಿನಂತಿರುವವನು ; ಮನೆತನಕ್ಕೆ ಅಪಕೀರ್ತಿ ತರುವವನು: ಒಬ್ಬಿಬ್ಬ ಕುಲಕಂಟಕರೂ ಅವರ ಜೊತೆ ಸೇರಿಕೊಂಡಿರುವುದುಂಟು (ಗ್ರಂಥಾಲ. ೬೫). [ಕುಲ + ಕಂಟಕ]

**ಕುಲಕಂಟಕತನ** (ನಾ). ಕುಲಕ್ಕೆ ಬಾಧೆ ತರುವಿಕೆ : ಇದನ್ನೇಕೆ ನೀವು ನಡೆಯಗೊಡಬಾರದು ? ಇದು ಕುಲಕಂಟಕತನ (ಮಣ್ಣಮು. ೨೬೯). [ಕುಲಕಂಟಕ + -ತನ]

**ಕುಲಕಂಟಕಿ** (ನಾ). ಕುಲಕ್ಕೆ ಮುಳ್ಳಿನಂತಿರುವವಳು : ಇಂಥ ಕೆಲಸ ಮಾಡುವುದಕ್ಕಿಂತ ಎಲ್ಲಿಯಾದರೂ ಹೊಳೆ ಬಾವಿ ಬೀಳಬಾರದೇನೇ ಕುಲಕಂಟಕಿ (ಸುವಸಂ. ೧೮). [ಕುಲಕಂಟಕ + -ಇ$_3$]

**ಕುಲಕರ** 'ಕುಲಂಕರ' ನೋ.

**ಕುಲಕರಣಿ,** ಕುಲಕರ್ಣಿ, ಕುಳಕರಣಿ, ಕೊಳಕರಣಿ (ನಾ). ಗ್ರಾಮದ ಅಧಿಕಾರಿ; ಕುಲಪರಂಪರೆಯಿಂದ ಕರಣಿಕನಾಗಿರುವವನು; ಶಾನುಭೋಗ: ಇವರಲ್ಲಿ ಕೆಲವರು ಕುಲಕರಣಿ ಕೆಲಸಮಾಡುವರು (ಕಭಾಗ. ೧೨೦) ; ಅಲ್ಲಿಯ ಕುಲಕರಣಿಯುವರಾದ ಹಣಮಂತರಾಯ ಭೀಮರಾಯ ಎಂಬ ಹೆಸರಿನ ಅಣ್ಣತಮ್ಮಂದಿರು (ಕಲಿಕು. ೧೭೬). **ಕುಲಕರ್ಣಿ :** ದೇಶಾಯಿ ದೇಶ ಕುಲಕರ್ಣಿ ನಾಡಕರ್ಣಿ (ಇಎ. ೧೯೫೦, ಹಾನಗಲ್. ೧೨೭-೬, 1735) ; ಗೌಡನ ಕೈಕೆಳಗೆ ಲೆಕ್ಕ ಬರೆಯುವ ಮನುಷ್ಯನು ಕುಲಕರ್ಣಿ ಅಥವಾ ಶಾನುಭೋಗನು (ವಿಜಾಭೂ. ೫೪). **ಕುಳಕರಣಿ :** ಬರೆದಂ ಸೂಣ್ದಿಯ ಕುಳಕರಣಿ ರಾವಪಯ್ಯ (ಎಇ. XV, ೯೧-೬೩ ; 1060). **ಕೊಳಕರಣಿ :** ಸರಸ್ವತಿಗ ×× ಸಿ ಕೊಳಕರಣಿ ಕಾಳಿಯ ಬರದ ಕಣ್ಣಾರಿಸಿದೆ ಚೆಲು ×× (ಸೌಇಇ. IX-i, ೧೭೭-೩೦, 1108). [ಕುಲ + ಕರಣಿ$_4$]

**ಕುಲಕರ್ಣಿ** 'ಕುಲಕರಣಿ' ನೋ.

**ಕುಲಕರ್ಣಿಕೆ** (ನಾ). ಶಾನುಭೋಗನ ಕೆಲಸ, —ವೃತ್ತಿ : ತನ್ನ ಗಂಡ ಕುಲಕರ್ಣಿಕೆಯನ್ನು ಕಳೆದುಕೊಂಡ ಕುಲಕರ್ಣಿಯಾಗಿದ್ದ (ಹೊಸಬಿ. ೧೦೩). [ಕುಲಕರ್ಣಿ (< ಕುಲಕರಣಿ) + -ಇಕೆ]

**ಕುಲಕಲಂಕಿನಿ** (ನಾ). ಕುಲಕ್ಕೆ ಕಲಂಕ ತರುವವಳು ; ಅವನ ಸಹವಾಸದಿಂದ ಕುಲಕಲಂಕಿನಿಯೆಂದು ಜನರಿಂದ ಅನಿಸಿಕೊಳ್ಳದಿದ್ದರೂ (ಅಂಬಕೆ. ೩೭). [ಕುಲ + ಕಲಂಕಿನಿ]

**ಕುಲಕಸಬು,** ಕುಲಕಸುಬು (ನಾ). ಮನೆತನದ ಉದ್ಯೋಗ; ಪರಂಪರಾಗತವಾದ ವೃತ್ತಿ : ಚೆನ್ನಾಗಿ ಯೋಚಿಸು . . . ಹೇಗೂ ನಿಮ್ಮ ಕುಲಕಸಬು (ದೇವಹಂ. ೧೫೧). **ಕುಲಕಸುಬು:** ಕಾಲಕ್ರಮದಲ್ಲಿ ಬೇರೆ ಬೇರೆ ಕಸುಬುಗಳನ್ನು ಕುಲಕಸುಬುಗಳಾಗಿ ಸ್ವೀಕರಿಸಿದ ಕುಟುಂಬಗಳು ಬೇರೆಬೇರೆ ಜಾತಿಗಳೆಂದು ವ್ಯವಸ್ಥೆಯಾಯಿತು (ಕ್ರಿಯಾಶಿ. ೯೬). [ಕುಲ + ಕಸಬು]

**ಕುಲಕಸುಬು** 'ಕುಲಕಸಬು' ನೋ.

**ಕುಲಕಳಂಕ** (ನಾ). ಕುಲಕ್ಕೆ ಕುಂದು, —ಕಲಂಕ : ಕುಲಕಳಂಕರಾದ ಜ್ಞಾತಿಗಳು ಇಲ್ಲದವನೇ ಲೋಕದಲ್ಲಿ ಸುಖದಿಂದ ಜೀವಿಸಬಲ್ಲವನು (ವಚಭಾ. ೩೬). [ಕುಲ + ಕಳಂಕ (= ಕಲಂಕ)]

**ಕುಲಕಾಯಕ** (ನಾ). = ಕುಲಕಸಬು : (ಕ). [ಕುಲ + ಕಾಯಕ]

**ಕುಲಕುಧರ** (ನಾ). ಕುಲಗಿರಿ : ಅಳುಕಲಜಿುವುದೆ ಸಿಡಿಲ ಹೊಯ್ಲಲಿ ಕುಲಕುಧರ (ಕುವ್ಯಾಶ. ೨-೩೦). [ಕುಲ + ಕುಧರ]

**ಕುಲಕೋಟಿ** (ನಾ). ಕೋಟಿ ಸಂಖ್ಯೆಯಷ್ಟು ಕುಲ; ಅನೇಕ ಪೀಳಿಗೆ, —ತಲೆಮಾರು : ಕಲಿಯುಗದೊಳು ಹರಿನಾಮವ ನೆನೆದರೆ ಕುಲಕೋಟಿಗಳುದ್ಧರಿಸುವುವು (ಪುರಂದ. ೩-೭೧ ಪಲ್ಲವಿ) ; ಮಾನವ ಕುಲಕೋಟಿ ಕೋಟಿಯುದ್ಧವ ಹೂಡಿ ಉದ್ಧಾರವಾಗಿದೆ ನೋಡಿ (ಇಂಚಾಪ. ೧೦೧-೯೪). [ಕುಲ + ಕೋಟಿ]

**ಕುಲಕ್ಷತಿ** (ನಾ). ಕುಲದ ನಾಶ; ಕುಲಕ್ಕೆ ಕೇಡು : ಈ ಸಮಯದತ್ತಲೆಜಗಿದೊಡೆ ಕುಲಕ್ಷತಿಯಕ್ಕುಂ (ಸುಕುಮಾ. ೩-೩೧) ; ಪ್ರತಿವಿದ್ಯೆಯನಾಕೆ ಕುಲಕ್ಷತಿಯುಂ ಪತಿಗಪ್ಪ ಹಾನಿಯುಂ ಬಗೆಯದೆ ದುರ್ಮತಿ ಕೊಟ್ಟಳ್ (ಪಂರಾಮಾ. ೧೦-೧೯೩). [ಕುಲ + ಕ್ಷತಿ]

**ಕುಲಕ್ಷಯ** (ನಾ). = ಕುಲಕ್ಷತಿ : ಪರನಿಂದೆ ಗೃಹಕ್ಷಯ, ಯತಿನಿಂದೆ ಕುಲಕ್ಷಯ (ಗಾದೆ). [ಕುಲ + ಕ್ಷಯ]

**ಕುಲಗಿರಿ** (ನಾ). ೧. ಮುಖ್ಯವಾದ ಏಳು ಪರ್ವತಗಳು. ℙ ಭರತಖಂಡದ ಪ್ರತಿಯೊಂದು ಭಾಗಕ್ಕೆ ಒಂದರಂತೆ ಇರುವ ಏಳು ಕುಲಗಿರಿಗಳು – ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷ, ವಿಂಧ್ಯ, ಪಾರಿಯಾತ್ರ : ಕರುಮಾಡಮಿಳಿಪುದು ಕುಲಗಿರಿಗಳ್ ಬಳಸಿನಿಂದ ಮಂದರಗಿರಿಯುಂ (ಪುಷ್ಪಪು. ೨-೯೪) ; ಕೀಳುವೆನು ಕುಲಗಿರಿಗಳನು ತೊಡೆವೆನು ಕೃತಾಂತನ ಭಾಳದಕ್ಕರವ (ಕುವ್ಯಾಉ. ೬-೨೮). ೨. 'ಏಳು' ಎಂಬ ಸಂಖ್ಯೆಯ ಸಂಕೇತ : ವಿರಾಮಂ ಕುಲಗಿರಿಯೊಳ್ ನಿಲೆನಾಕಿಗನೆಂದಂ ಲಲಿತಪದಂ ಪೆಸರಿಂ (ಛಂದೋಂಬು. ೨-೧೩೩). [ಕುಲ + ಗಿರಿ$_1$]

**ಕುಲಗುರು** (ನಾ). ಮನೆತನದ ಗುರು; ಕುಲಕ್ಕೇ ಗುರುವಾದವನು : ವಸಿಷ್ಠರು ಸೂರ್ಯವಂಶದ ಕುಲಗುರುವಾಗಿದ್ದರು (ರೂಢಿ). [ಕುಲ + ಗುರು$_2$]

**ಕುಲಗೃಹ** (ನಾ). ೧. ಉತ್ತಮವಾದ ಮನೆ ; ಶ್ರೇಷ್ಠವಾದ ಮನೆ : (ಕ). ೨. ಪರಂಪರಾಗತವಾದ ವಸತಿ; ತವರುಮನೆ : ಚೆಲ್ವಿನ ಕುಲಗೃಹಮುಮಿರ್ಪಂತಿರ್ದ ವಸಂತಗೃಹಮಂ ಪೊಕ್ಕು (ಚಂದ್ರಪು. ೭-೯೫ ವ). [ಕುಲ + ಗೃಹ]

**ಕುಲಗೆಡಿಕ** 'ಕುಲಗೆಡುಕ' ನೋ.

**ಕುಲಗೆಡಿಕೆ** (ನಾ). ಕುಲವನ್ನು ಕೆಡಿಸುವವಳು : ಅಪಸರಿಯರುಜಿಕುಲಗೆಡಿಕೆಯರು ಕೃಪಣೆಯರು ಜೋರಕರ ತಾಯ್ಗಳು (ಬಸವು. ೪೦-೫೪). [ಕುಲಗೆಡಿಕ (< ಕುಲಗೆಡುಕ) + -ಎ$_2$]

**ಕುಲಗೆಡಿಸು** (ಕ್ರಿ). ೧. ಜಾತಿಯನ್ನು ಕೆಡಿಸು ; ಕುಲಗೆಡುವಂತೆ ಮಾಡು. ೨. ಹಾಳುಮಾಡು ; ನಾಶಮಾಡು : ಪಂಚಮುಖದ ಗಿರಿಯಗಂಹರದಲ್ಲಿ ಮುಂಚಿದರಯ್ದುವ ಹುಲಿಗಳ ಕಂಡೆ . . . ಹೊಕ್ಕು ಹುಲಿಯ ಕುಲಗೆಡಿಸಬೇಕು (ಮೋಳಿಮಾ. ೧೯೯-೭೪೧) ; ಸ್ವಾರ್ಥವು ಮುಂದೆ ಬಂದು ನೀತಿಯನ್ನು ಕುಲಗೆಡಿಸುವುದು ವಾಡಿಕೆ (ರಾಜವಂ. ೪೬); ತಮ್ಮ ನಾಟಕದ ಕಲೆಯನ್ನು ತಾವೇ ಕುಲಗೆಡಿಸುತ್ತಿದ್ದಾರೆ (ಯಕ್ಷಬ. ೨೦). [ಕುಲಗೆಡು (< ಕುಲಂಗೆಡು) + -ಇಸು$_3$]

**ಕುಲಗೆಡು** 'ಕುಲಂಗೆಡು' ನೋ.

**ಕುಲಗೆಡುಕ,** ಕುಲಗೆಡಿಕ (ನಾ). ಕುಲವನ್ನು ಕೆಡಿಸುವವನು ; ಕುಲಗೇಡಿ : ಸುಡುಸುಡೆನ್ನನು ನಿಂದ್ಯನನು ಕುಲಗೆಡುಕನನು (ನಿಭಾಗ. ೬-೨-೩೦). **ಕುಲಗೆಡಿಕ :** ಶೂದ್ರಿಕಂ ಕುಲಗೆಡಿಕನಹ ಕೀಚಕನುನೆಜಿ ಕಡಿವಡೆದರು (ಬಸವು. ೧೧-೫೧). [ಕುಲಗೆಡು + -ಕ$_3$]

**ಕುಲಗೇಡಿ** (ನಾ). ೧. ಕುಲವನ್ನು ಕೆಡಿಸುವವನು ; ಕುಲನಾಶಕ : ನೋಡಲಾಗದು ಮಕ್ಕಳಿರ ಕುಲಗೇಡಿಗಳ ಕಪಟವ (ಕುವ್ಯಾಸ. ಓರಿಇ. ೧೬-೭೯) ; ಹೆಂಬೇಡಿ ನೀನೆಲವೊ ಕುಲಗೇಡಿ (ಜೈವಿಭಾ. ೧೭-೫೪) ; ಕುಚೋದ್ಯದ ಅರಸಗೆ ಕುಲಗೇಡಿ ಪ್ರಧಾನಿ (ಗಾದೆ). ೨. ಕುಲಗೆಟ್ಟ ವ್ಯಕ್ತಿ : ಕುಹಕೆ ಕುಜೆ ತಡ್ಡೆ ಕುಲಗೇಡಿ . . . ತಾಮಸಿಯೆನಿಪ ವನಿತೆಯರ (ಜೈವಿಭಾ. ೫-೬೧). [ಕುಲ + ಕೇಡಿ$_1$]

**ಕುಲಗೇಡಿಗ** (ನಾ). = ಕುಲಗೇಡಿ : ಪಿರಿದುಮ್ಮಳವನೆಮಗೆ ತಂದಕಟ ಕುಲಗೇಡಿಗ [ಪಾಠಾಂ. ಗೆಡಿಕ] ನಹರೆ ಕಂದ (ಬಸವು. ೩-೫೯). [ಕುಲಗೇಡಿ + -ಇಗ]

**ಕುಲಗೇಡಿತನ** (ನಾ). ಕುಲವನ್ನು ಕೆಡಿಸುವಿಕೆ; ಕುಲಗೆಡಿಸುವ ಕಾರ್ಯ: "ವಿಜಾತಿ – ೧. ವಿಲಕ್ಷಣ. ೨. ಹಕ್ಕಿಗಳ ಜಾತಿ. ೩. ಕುಲಗೇಡಿತನ" (ಗಂಗಾಮು. ೨೮೯). [ಕುಲಗೇಡಿ + –ತನ]

**ಕುಲಗೇಹ** (ನಾ). = ಕುಲಗೃಹ: ಮಲಯಾದ್ರಿಯೆ ಬಂ[ಪಾಠಾಂ. ದಲ್] ಹಿಮವಚ್ಛಂದನ ಮಹಿರುಹ ಸಮಿತಿಗೆ ಕುಲಗೇಹಂ (ಕಾವ್ಯಾವ. ೪೮೪); ಇದೂವೇಳೆಯುಂ ಕಾರ್ಯಸಿದ್ಧಿಪ್ರಮುದಿಗೆ ಕುಲಗೇಹಂ ಮತಿಶ್ರೀಗೆ ನೃತ್ಯಾಸ್ಪದಂ (ಚಂದ್ರಪ್ರ. ೯–೧೩೦). [ಕುಲ + ಗೇಹ]

**ಕುಲಗೋತ್ರ** (ನಾ). ೧. ಕುಲ ಮತ್ತು ಗೋತ್ರ: ಯಾರಯಾರವೋ ಕುಲಗೋತ್ರಗಳು ಚರ್ಚೆಗೆ ಬಂದು ಉದ್ಧಾರವಾದುವು (ಮೂರುದಾ. ೧೪೧). ೨. ಜಾತಿ ಮತ್ತು ವಂಶ: ಅವರ ಕುಲಗೋತ್ರದನ್ವಯಂಗಳುವೆರಸಿ (ನಂಬಿರ. ೭–೩೯); ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು ಸುಡುವಗ್ನಿಯೊಂದೆ ಇರುತಿರಲು ಕುಲಗೋತ್ರ ನಡುವೆ ಎತ್ತಣದು (ಸರ್ವಜ್ಞ. ೯೩೨). ೩. ಪೂರ್ವಾಪರ ವೃತ್ತಾಂತ: ಅವನ ಕುಲಗೋತ್ರ ಗೊತ್ತಿಲ್ಲ (ರೂಢಿ). [ಕುಲ + ಗೋತ್ರ]

**ಕುಲಘ್ನ** (ನಾ). ಕುಲವನ್ನು ನಾಶಮಾಡುವವನು; ಕುಲಘಾತಕ; ಕುಲಗೇಡಿ: ಈ ಕೌರವಕುಲವನ್ನು ನಾಶಮಾಡಿ ಕುಲಘ್ನನೆನಿಸಿಕೊಳ್ಳಬೇಡ (ಭೀಷ್ಮಚ. ೧೫೪). [ಸಂ.]

**ಕುಲಚರ್ಯೆ** (ನಾ). ೧. = ಕುಲಾಚಾರ. ೨. [ಜೈನ] ಐವತ್ತು ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು: ಕುಲಚರ್ಯೆಯುಂ ಗೃಹೀತೇಶಿತ್ವಮುಂ ಪ್ರಶಾಂತಿಯುಂ . . . ಅಪ್ಪಯ್ವತ್ತು ಮೂಱು ಗರ್ಭಾನ್ವಯ ಕ್ರಿಯೆಯೊಳು (ಚಾವುಂಪು. ೨೨೯). [ಕುಲ + ಚರ್ಯೆ]

**ಕುಲಜ** (ನಾ). ಒಳ್ಳೆಯ ಕುಲದಲ್ಲಿ ಹುಟ್ಟಿದವನು; ಕುಲೀನ: "ಅಭಿಜಾತಃ, ಕುಲೀನಃ – ಈ ೨ ಕುಲಜಂ" (ಹಲಾಯು. ೬೪–೨೩೫); ಕುಲಜನೀತನೆ ಪಂಡಿತನೀತನೆ (ಕವಿರಾ. ೧–೧೩೮); ಸಿರಿಯನುಳ್ಳವನವನೆ ಕುಲಜನು (ಕುವ್ಯಾಉ. ೩–೩೮). [ಸಂ.]

**ಕುಲಜೆ** (ನಾ). ಒಳ್ಳೆಯ ಕುಲದವಳು; ಕುಲೀನೆ: ಬಡಗಿ ಮಾಚಲದೇವಿಯ ಕುಲಜೆಯ ಮಾಡಿಹೆನೆಂದು . . . ಕೂಳನಟ್ಟುಂಬವರನೇನೆಂಬೆ (ಬಸವ. ೫೮೪); ಅಗಲರ್ ಸೂಳೆಯ ನಾಳರಾ ಕುಲಜೆಯಂ (ಸೋಮೇಶ. ೪೬). [ಸಂ. ಕುಲಜಾ]

**ಕುಲಟಾಂಗನೆ** (ನಾ). ಹಾದರಮಾಡುವ ಹೆಣ್ಣು; ಜಾರೆ; ವ್ಯಭಿಚಾರಿಣಿ: ಲಲನಾಜನದೊಳು ಕುಲವಧು ಕುಲಟಾಂಗನೆ ವೇಶ್ಯೆಯೆಂದು ಮೂಱುಂ ತೆಱದಿಂ ಲಲಿತಾಂಗಿಯರಪ್ಪರ್ (ಮದಹಿ. ೮–೧); ಕುಲಟಾಂಗನೆಯರ್ಗೆ ಜವ್ವನದೇಟ್ಗೆ ಮೆಱೆಯೆ (ರಾಮಾಶ್ವ. ೧೭–೪). [ಸಂ. ಕುಲಟಾಂಗನಾ (ಕುಲಟಾ + ಅಂಗನಾ)]

**ಕುಲಟಾವಧು** (ನಾ). = ಕುಲಟಾಂಗನೆ: ಶ್ರೀವಧುಕುಲಟಾವಧು ವೆಂಬೊಂದಧಮತೆ ತಳ್ತತ್ತು ಚಕ್ರವರ್ತಿಯ ಬಗೆಯೊಳ್ (ಶಾಂತಿಪು. ೯–೭೭). [ಸಂ. (ಕುಲಟಾ + ವಧು)]

**ಕುಲಟೆ** (ನಾ). = ಕುಲಟಾಂಗನೆ: ಆತನ ಪೆಂಡತಿ ದುರ್ಮತಿಯೆಂಬಳ್ ಕುಲಟೆ (ಪಂಚತಂ. ೨೭೧–೬); ಕುಲವಧುವನೊಲ್ಲದೆಳಿಪಿಂ ಕುಲಟೆಯ ರೊಳ್ನೆಱೆದು (ಸಮಪ. ೫–೭೦); ದೇವೀಶಾಪದಿಂದ . . . ಅಡಿಗೆಯವಳಾಗಿ ಕುಲಟೆಯಾಗಿ ಆಚರಿಸಬೇಕಾಯಿತು (ಬಂಕಿಮು. ೧೨೨). ೨. ಒಂದು ಔಷಧಿ ಸಸ್ಯ: "ಷಂಡಾಲೀ–ಕುಲಟಿ" (ಒಷಧಿ. ೧೭೩). [ಸಂ. ಕುಲಟಾ]

**ಕುಲತಿಲಕ, ಕುಳತಿಳಕ** (ನಾ). ಕುಲಕ್ಕೆ ಭೂಷಣನಾದವನು: ಶ್ರೀ ಸತ್ಯಾಶ್ರಯ ಕುಲತಿಲಕಂ (ಗದಾಯು. ೧–೭೪ ವ). **ಕುಳತಿಳಕ**: ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ (ಎಇ. XX, ೬–೭; 1012). [ಕುಲ + ತಿಲಕ]

**ಕುಲತ್ಥ** (ನಾ). ೧. ಹುರುಳಿ: ಕಳಮ ಷಷ್ಟಿಕಾ ವ್ರೀಹಿ ಯವ ಯಾವನಾಳ ಗೋಧೂಮ ಕಂಗು ಸ್ಯಾಮಾಕ ಕೋದ್ರವ . . . ಕುಲತ್ಥ[ಪಾಠಾಂ. ಳುತ್ಥ] ಮುದ್ಗ ಮಾಷರಾಜಮಾಷ (ಆದಿಪು. ೬–೭೨ವ). ೨. = ಕುಲತ್ಥಿಕೆ: (ಕ). [ಸಂ.]

**ಕುಲತ್ಥಿಕೆ** (ನಾ). ಕಜ್ಜಳವಾಗಿ ಉಪಯೋಗಿಸುವ ಒಂದು ಬಗೆಯ ನೀಲವರ್ಣದ ಕಲ್ಲು: (ಕ). [ಸಂ. ಕುಲತ್ಥಿಕಾ]

**ಕುಲಥಾಂಜನ** (ನಾ). = ಕುಲತ್ಥಿಕೆ: "ಚಕ್ಷುಷ್ಯೆ ಕುಲಾಲಿ ಕುಲತ್ಥಿಕೆ ಎಂದು, ಕುಲಥಾಂಜನ, ಕಂಬೆಳಗಿನ ಬೀಜಮೆಂದೂ ಎಂಬರು" (ನಾಚರಾ. ೩). [ಸಂ. ಕುಲತ್ಥಾಂಜನ]

**ಕುಲದೀಪಕ** (ನಾ). ಕುಲಕ್ಕೆ ದೀಪದಂತೆ ಬೆಳಕು ಕೊಡುವವನು; ಮನೆತನವನ್ನು ಬೆಳಗುವವನು: ಕುಲದೀಪಕ ಎನಿಸಿ ನೆಗಟ್ದನಖಿಲಾವನಿಯೊಳ್ (ಶಾಂತಿಪು. ೨–೧೦); ದೇವದೇವ ರಾಜಕುಲದೀಪಕನ ರೂಪು ಸೌಂದರ್ಯಮನೇನೆಂದು ಬಣ್ಣಿಪೆಂ (ನಂಬಿರ. ೩–೧೯). [ಕುಲ + ದೀಪಕ]

**ಕುಲದೂಷಣ** (ನಾ). ಕುಲಕ್ಕೆ ಕುಂದು ತರುವವನು; ಕುಲಕಂಟಕ: ಧನುಜೇಜ್ಯಂ ಕುಜಗೇಹದೊಳ್ ನಿಲೆ ಪರಸ್ತ್ರೀಲೋಲನಾಳಾಪದಿಂ ಧನನಾಶಂ ಕುಲದೂಷಣಂ (ಜಾತಕ. ೧೭–೨೯). [ಕುಲ + ದೂಷಣ]

**ಕುಲದೇವತೆ** (ನಾ). ಮನೆತನದ ದೇವತೆ; ವಂಶದೇವತೆ: ಕುಲದೇವತೆಯೆಂದು ಕೂರ್ತು ತಂತಮ್ಮಿಷ್ಟಫಲವ ಪಡೆವರೆನ್ನಿಂದ (ಹದಿಬ. ೧–೪೧); ಪತಿಕುಲದೇವತೆಗಳು ನಿನಗೆ ಮಂಗಳವನ್ನುಂಟುಮಾಡಲಿ (ಶಾಕುಂತ. ೬೪). [ಕುಲ + ದೇವತೆ]

**ಕುಲದೇವರು** (ನಾ). = ಕುಲದೇವತೆ: ಆ ಯಾದವರಿಗೆ ಕುಲದೇವರೆನಿಪ ನಾರಾಯಣನಾದಿಕಾರಣನು (ಹದಿಬ. ೧–೪); ಊರ ಕುಲದೇವರ ಹೆಸರಿನಿಂದ (ಬಿಟ್ಟಹೊ. ೪೫). [ಕುಲ + ದೇವರು]

**ಕುಲದೇವಿ** (ನಾ). = ಕುಲದೇವತೆ: ದೇವಿಯರ ಪ್ರತಿಮೆಗಳು ಮೂರು ವಿಧವಾಗಿ ವಿಂಗಡಿಸಲ್ಪಡುವುವು – ೧. ಪ್ರಾಸಾದದೇವಿಯರು ೨. ಕುಲದೇವಿಯರು ೩. ಸಂಪ್ರದಾಯದೇವಿಯರು (ಭಾರದ. ೫೧೪). [ಕುಲ + ದೇವಿ]

**ಕುಲದೈವ** (ನಾ). = ಕುಲದೇವತೆ: ಅದು ಚಿತ್ರಜಂಗೆ ಕುಲದೈವಂ (ಆದಿಪು. ೨–೭೪); ಮನೆದೈವ, ಕುಲದೈವ ಎನಗೆ ನಿಮ್ಮವರಯ್ಯಾ (ಬಸವ. ೩೭೩); ಹರಸುತಿಹವು ಕುಲದೈವಗಳು (ನಲ್ಮೆ. ೭). [ಕುಲ + ದೈವ]

**ಕುಲಧನ** (ನಾ). ವಂಶಪಾರಂಪರ್ಯವಾಗಿ ಬಂದ ಧನ, —ಆಸ್ತಿ: ಬಗೆಗೊಂಡ ಕುಲಧನಂ ಸಮದಗಜಂ ಜಾತ್ಯಶ್ವಮೆಂಬಿವಂ . . . ಕೊಟ್ಟು (ಆದಿಪು. ೧೨–೯೮). [ಕುಲ + ಧನ]

**ಕುಲಧರ, ಕುಳಧರ** (ನಾ). ೧. ವಂಶೋದ್ಧಾರಕ ೨. [ಜೈನ] ಮನು: ದಶಮಭಾಗಾಯುಷ್ಯನುಮಪ್ಪಗ್ರಿಮ ಕುಲ[ಪಾಠಾಂ. ಳ]ಧರಂ ಪ್ರತಿಶ್ರುತಿಯೆಂಬಂ (ಆದಿಪು. ೬–೫೨ ವ); ಆತನಿಂ ಬಳಿಯಂ ಮೂಱನೆಯ ಕುಲಧರಂ ಕ್ಷೇಮಂಕರನೆಂಬಂ (ಪಂರಾಮಾ. ೧–೭೧ವ). **ಕುಳಧರ**: ಕಮಳವದನಂ ಪಂಚಮ ಕುಳಧರಂ ಪುಟ್ಟಿ (ಆದಿಪು. ೬–೫೬ ವ). [ಸಂ.]

**ಕುಲಧರ್ಮ** (ನಾ). ವಂಶ ಪರಂಪರೆಯಾಗಿ ಬಂದ ಧರ್ಮ; ಕುಲಾಚಾರ: ಎಲವೊ ಕುಲಧರ್ಮದಲಿ ಬಾಳುವುದಿಳೆಯೊಳನಿಬರು ಮೆಚ್ಚುವಂತಿರೆ (ಕೌಶಿರಾ. ೨೮–೬೭); ಪರರಸುದೆಗೆವುದೆ ಕುಲಧರ್ಮವಾಗಿರಲವನಿಗಿನ್ನುಪದೇಶವೇಕೆ (ಇಂಚಾಪ. ೨೧೭–೭೧). [ಕುಲ + ಧರ್ಮ]

**ಕುಲಧ್ವಜ** (ನಾ). ಕುಲಕ್ಕೆ ಬಾವುಟದಂತಿರುವವನು; ಕುಲಕ್ಕೆ ಕೀರ್ತಿಪ್ರಾಯನಾದವನು: ಕುಲಧ್ವಜ ಬೆಸಸು ನಿನ್ನವೊಲೀಪ್ರಜಾ ಪತಿತ್ವಕ್ಕೆ ಮುನ್ನ ನೋಂತರುಮೊಳರೇ (ಆದಿಪು. ೮-೬೩). [ಕುಲ + ಧ್ವಜ]

**ಕುಲನಗ** (ನಾ). = ಕುಲಗಿರಿ: ಕುಲನಗವನಡರ್ವ ಜಲನಿಧಿಜಲಮಂ ಪಾಯ್ವ (ಶಾಂತಿಪು. ೫-೧೫೪); ಕುಲನಗಂ ಬೀೞ್ವಂತೆ ಬೇೞೊಂದು ದೈತ್ಯಕರಾಳಾಕೃತಿ ಬೀೞೆ (ಜಗವಿ. ೩-೩೦). [ಕುಲ + ನಗ್ರ]

**ಕುಲನಾಮ** (ನಾ). (ಉಕ) ಮನೆತನದ ಹೆಸರು; ಅಡ್ಡಹೆಸರು: ಹೆಗ್ಗಡೆಯೆಂಬುದು ಅವರ ಕುಲನಾಮ (ರೂಢಿ). [ಕುಲ + ನಾಮ]

**ಕುಲನಾರಿ** (ನಾ). ಕುಲೀನೆ; ಪತಿವ್ರತೆ: "ಕುಲನಾರಿ ಕುಲಸಾರಿಕೆ ಯೆನಲು ಪತಿವ್ರತೆಯಕ್ಕು" (ಮಂಗರಾ. ೯೦-೫); ಇವಳೀಂ ಕುಲನಾರಿಯೊ ವಾರನಾರಿಯೊ (ಪಂಪಭಾ. ೮-೬೩). [ಕುಲ + ನಾರ್ರಿ]

**ಕುಲನಾಶಕ** (ನಾ). ಕುಲವನ್ನು ನಾಶಮಾಡುವವನು, ಕುಲ ಘಾತಕ: ಇಳೆಗೆ ಕುಲದೀಪಕನುದಯಿಸಲು ಕುಲಮೊಡನೆ ವರ್ಧಿಸುವು ದಾಗಳು ಬಳಿಕ ಕುಲನಾಶಕನು ಪುಟ್ಟಲು ಕುಲವಳಿದು ಪೋಕು (ಬಸವು. ೩-೫೮). [ಕುಲ + ನಾಶಕ]

**ಕುಲಪತಿ** (ನಾ). ೧. ಮನೆತನದ ಯಜಮಾನ, —ಮುಖ್ಯಸ್ಥ: ನೀಮಾಳ್ಗಳಿರಾನೆ ನಿಮ್ಮ ಕುಲಪತಿಯೆನ್ (ಆದಿಪು. ೧೨-೯೫). ೨. ಹತ್ತು ಸಾವಿರ ವಿದ್ಯಾರ್ಥಿಗಳಿಗೆ ಅನ್ನವಸತಿ ಕೊಟ್ಟು ವಿದ್ಯಾಭ್ಯಾಸ ಮಾಡಿಸುವ ಗುರು; ಪ್ರಧಾನ ಶಿಕ್ಷಾಚಾರ್ಯ: ಕುಲಪತಿಗಳಾದ ಕಣ್ವರು . . . ನಿಮಗೆ ಈ ಮಾತನ್ನು ಹೇಳಿರುವರು (ಶಾಕುಂತ. ೬೫); ತಕ್ಷಶಿಲೆಯಲ್ಲಿ ಕುಲಪತಿಗಳು ಜೀವಕನ ತಾಯಿತಂದೆಯರನ್ನು ಕುರಿತು ಕೇಳಿದರು (ಹತ್ತು ಮ. ೧೧೨). ೩. ವಿಶ್ವವಿದ್ಯಾಲಯದ ಅಧ್ಯಕ್ಷ; ಛಾನ್ಸಲರ್: ರಾಜ್ಯಪಾಲರೇ ಸಾಮಾನ್ಯವಾಗಿ ವಿಶ್ವವಿದ್ಯಾಲಯದ ಕುಲಪತಿಗಳಾಗಿರುತ್ತಾರೆ (ರೂಢಿ). 'ಉಪಕುಲಪತಿ' ಪರಾ. [ಕುಲ + ಪತಿ]

**ಕುಲಪರಂಪರೆ** (ನಾ). ಕುಲಕ್ರಮ ಪದ್ಧತಿ, —ಸಂಪ್ರದಾಯ: ಮದುವೆ . . . ವರನ ಮನೆಯಲ್ಲಿಯೆ ಆಗತಕ್ಕದ್ದು. ಅದು ಅವರ ಕುಲಪರಂಪರೆ (ಇಪ್ಪಕ. ೪೩೮). [ಕುಲ + ಪರಂಪರೆ]

**ಕುಲಪರಿಭವ** (ನಾ). ಕುಲಕ್ಕೆ ಅವಮಾನ: ಆತನ ಮನೆಯ ಕೆಲದೊಳ್ ಒಂದು ಮನೆಯೊಳಿರ್ದು ಮಗನಂ ಪಡೆಯೆ ಸರ್ವದಯಿತ ನೆಮಗಿದು ಕುಲಪರಿಭವಮೆಂದು ಆ ಮಗನಂ . . . ಬಿಸುಟು ಬರ್ಪು ದೆಂದಟ್ಟದೊಡೆ (ಚಾವುಂಪು. ೭೧-೨೦). [ಕುಲ + ಪರಿಭವ]

**ಕುಲಪರ್ವತ** (ನಾ). = ಕುಲಗಿರಿ: ಕುಲಪರ್ವತಂಗಳ ಧರಾಚಕ್ರದ ಬಂಧನಂಗಳ ಬಿಗುಹು ಬಿಡೆ ಕಲಕಲುಂ ಸಕಲ ಸಿಂಧುಗಳ್ (ಚೆಬಪು. ೪೭-೩೧). [ಕುಲ + ಪರ್ವತ]

**ಕುಲಪಾಂಸುಲ** (ನಾ). ಕುಲಗೇಡಿ; ಕುಲಗೆಡುಕ: ಮಲೆಮಲೆದುರ್ಕಿ ಸೊರ್ಕಿ ಸಭೆಯೊಳ್ ಕುಲಪಾಂಸುಲನೀ ಶಿರೀಷ ಕೋಮಲೆಯ ವಿಲೋಲನೀಲಕಬರೀಭರಮಂ ತೆಗೆವಾಗಳ್ (ಪಂಪಭಾ. ೭-೫೭). [ಕುಲ + ಪಾಂಸುಲ]

**ಕುಲಪಾಂಸುಲೆ**, ಕುಲಪಾಂಸುಳೆ (ನಾ). ಕುಲಗೇಡಿಯಾದ ಹೆಂಗಸು; ಕುಲಟೆ. **ಕುಲಪಾಂಸುಳೆ**: "ಪುಂಶ್ಚಲಿ ಕುಲಟೆಯ ಸತಿ ಕುಲಪಾಂಸುಳೆ ಬಂಧಕಿ ಜಾಱೆ ಪಾಪ್ಪೆ ಯಿತ್ವರಿಕೆಯವಳ್" (ವಸ್ತುಕೋ. ೫೨-೪). [ಸಂ. ಕುಲಪಾಂಸುಲಾ]

**ಕುಲಪಾಂಸುಳೆ** 'ಕುಲಪಾಂಸುಲೆ' ನೋ.

**ಕುಲಪಾಲನ** (ನಾ). ಕುಲಧರ್ಮವನ್ನು ಪಾಲಿಸುವಿಕೆ: ಕುಲಪಾಲನ ಮೆಂಬುದು ಕುಲಧರ್ಮಮಂ ಪಿಡಿದು ಪ್ರಯತ್ನದಿಂ ಪಾಲಿಸುವುದು (ಚಾವುಂಪು. ೨೩೪). [ಕುಲ + ಪಾಲನ]

**ಕುಲಪಾಲಿಕೆ**, ಕುಲಪಾಳಿಕೆ (ನಾ). ಕುಲದ ಗೌರವವನ್ನು ಕಾಪಾಡುವವಳು; ಸಾಧ್ವಿ; ಕುಲವನಿತೆ; ಪತಿವ್ರತೆ: "ಕುಲಪಾಲಿಕಾ, ಕುಲಸ್ತ್ರೀ . . . ಸಾಧ್ವೀ – ಈ ೫ ಪತಿವ್ರತೆ" (ಹಲಾಯು. ೮೧-೩೪೧); ಬಳಲಿದೆನೆನಗುಣಬಡಿಸೆಂದಲ್ಲಿರ್ದ ಕುಲಪಾಲಿಕೆ ಗುಸುರಿದನು (ಹದಿಬ. ೨-೩). **ಕುಲಪಾಳಿಕೆ**: "ಕುಲಪಾಳಿಕೆ ಸತಿ ಚರಿತ್ರವತಿಯಕ್ಕುಂ" (ವಸ್ತುಕೋ. ೫೨-೪). [ಸಂ. ಕುಲಪಾಲಿಕಾ]

**ಕುಲಪಾಳಿಕೆ** 'ಕುಲಪಾಲಿಕೆ' ನೋ.

**ಕುಲಪುತ್ರ** (ನಾ). = ಕುಲಜ: ಕುಲಪುತ್ರನೋದಿ ತಿಳಿದು ನಡೆದಲ್ಲದೆ ಕುಲವನುದ್ಧರಿಸಲಱಿಯನು (ಹದಿಬ. ೫-೯). [ಕುಲ + ಪುತ್ರ]

**ಕುಲಪುತ್ರಿ** (ನಾ). = ಕುಲೀನೆ: ಕುಲಪುತ್ರಿಯೊಳ್ಳುವರನಿಗಿತ್ತ ಮಾತ್ರಕೆ ಕುಲಕೋಟಿಯನುದ್ಧರಿಪಳು (ಹದಿಬ. ೫-೯). [ಕುಲ + ಪುತ್ರಿ]

**ಕುಲಪುರೋಹಿತ** (ನಾ). ಮನೆತನದ ಪುರೋಹಿತ; ಪರಂಪರಾಗತ ವಾದ ವಂಶಪುರೋಹಿತ: ದೊರೆ ಕುಲಪುರೋಹಿತರಿಂದೆ ಋಷಿ ಗರ್ಘ್ಯಮಂ ಕೊಡಿಸಿ (ಶ್ರೀರಾಮಾ. ೨೮-೧೧). [ಕುಲ + ಪುರೋಹಿತ]

**ಕುಲಪ್ರದೀಪ** (ನಾ). = ಕುಲದೀಪಕ: ಪೊಗೞ್ವುದು ಭುವನಂ ಕೌಂಡಿನ್ಯ ಕುಲಪ್ರದೀಪನಂ ಮಲ್ಲಪನಂ (ಅಜಿಪು. ೧-೨೮). [ಕುಲ + ಪ್ರದೀಪ]

**ಕುಲಪ್ರಮಾಣ** (ನಾ). ಕುಲವನ್ನು ತಿಳಿಸುವ ಆಧಾರ, —ರುಜುವಾತು: ಕುಲಪ್ರಮಾಣ ನಾಲಗೆ ಜಲಪ್ರಮಾಣ ತಾವರೆ (ಗಾದೆ). [ಕುಲ + ಪ್ರಮಾಣ]

**ಕುಲಭೂಭೃತ್ತು**, ಕುಳಭೂಭೃತ್ತು (ನಾ). = ಕುಲಗಿರಿ. 'ಕುಲ ಭೂಭೃದ್ಭವೆ' ಪರಾ. **ಕುಳಭೂಭೃತ್ತು**: ಕುಳಭೂಭೃತ್ಕೂಟದೊಳ್ ಮಾಣಿಕದೆಳವಿಸಿಲ್ (ಪಂರಾಮಾ. ೩-೧೩). [< ಸಂ. ಕುಲಭೂಭೃತ್]

**ಕುಲಭೂಭೃದ್ಭವೆ** (ನಾ). ೧. ಕುಲಪರ್ವತದಲ್ಲಿ ಹುಟ್ಟಿದವಳು. ೨. ಕುಲೀನನಾದ ಅರಸನ ಮಗಳು. ೧, ೨: ಕುಲಭೂಭೃದ್ಭವೆ ಲಕ್ಷ್ಮಣಾಭಿನುತೆರಾಮೋತ್ಕಂಠೆ ವೈದೇಹಿ . . . ಕಂಗೊಳಿಕುಂ ವಾಹಿನಿ ಸೀತೆ ಪೋಲ್ತುಭುವನಪ್ರಖ್ಯಾತೆಯಂ ಸೀತೆಯಂ (ಪುಷ್ಪಪು. ೨-೮). [ಸಂ. ಕುಲಭೂಭೃದ್ಭವಾ (ಕುಲ + ಭೂಭೃತ್ + ಭವ + -)]

**ಕುಲಭೇದ** (ನಾ). ೧. ಕುಲದಲ್ಲಿ ಒಂದು ಪ್ರಕಾರ: "ಅನಲ ಹಿಮಾಂಶು ಶಂಖ ಕುಲಭೇದಗಳೆಂತಿವು ಪಾಂಚಜನ್ಯಮೆಂದೆನಿಕು" (ನಾನಾರ. ೬೬). ೨. ಕುಲಗಳಲ್ಲಿ ಮೇಲು ಕೀಳೆಂದು ವಿಂಗಡಿಸುವಿಕೆ: ಎಲುವಿಲ್ಲ ನಾಲಿಗೆಗೆ . . . ತೊಲೆಕಂಬವಿಲ್ಲ ಗಗನಕ್ಕೆ ದೇವರಲಿ ಕುಲ ಭೇದವಿಲ್ಲ (ಸರ್ವಜ್ಞ. ೯೫೭). [ಕುಲ + ಭೇದ]

**ಕುಲಭ್ರಷ್ಟ** (ನಾ). ಕುಲದಿಂದ ಹೊರದೂಡಲ್ಪಟ್ಟವನು; ಜಾತಿ ಕೆಟ್ಟವನು; ಕುಲಗೆಟ್ಟವನು: (ಕ). [ಕುಲ + ಭ್ರಷ್ಟ]

**ಕುಲಮಗ** (ನಾ). ಮದುವೆಯಾಗದೆ ಉಳಿದ ಹರಿಜನ ಹೆಣ್ಣು ಮಗಳು: ಅವಳಿಗೆ ಕುಲಮಗನೆಂದು ಹೆಸರು. ಮಗನಂತೆ ತಂದೆಯ ಆಸ್ತಿಪಾಸ್ತಿಗಳಿಗೆ ಹಕ್ಕುದಾರಳಾಗಿ ತಂದೆತಾಯಿಗಳ ಅಪರಕರ್ಮಗಳನ್ನು ಮಗನಂತೆನಡೆಯಿಸುವ ಅಧಿಕಾರ ಅವಳಿಗೆ ಇರುತ್ತದೆ (ಎಸಮೈ. II, ೮). [ಕುಲ + ಮಗ]

**ಕುಲಮದ** (ನಾ). ಕುಲದ ಹೆಮ್ಮೆ; ತಾನು ಮೇಲುಜಾತಿಯವನೆಂಬ ಅಹಂಕಾರ: ಕುಲಮದಕ್ಕೆ ಹೋರಿ ಜಂಗಮಭೇದವ ಮಾಡುವ ಫಲವೇನು (ಬಸವ. ೨೮೪); ಹೆಮ್ಮೆಯಿಂದವ ನಗುವರನಱಿಯ ಕುಲ ಮದವೆಂಬ ಗರಹೊಡೆದು (ಅಮೃತ. ೨-೫೫). [ಕುಲ + ಮದ₁]

**ಕುಲಮಹಿಷಿ** (ನಾ). ೧. ಕುಲಾಂಗನೆ. ೨. ಮನೆಯ ಹೆಂಗಸು; ಮಡದಿ: ಕುಲಮಹಿಷಿ ದುರ್ಮಾರ್ಗ ಮುಖದಲಿ ಗಳಿಸಿದರ್ಥವನುಂಡು ಕಾಲವ ಕಳೆವ ನಿರ್ಭಾಗ್ಯರು ಕಣಾ ಮಾಹಿಷಿಕರೆಂಬವರು (ಕುವ್ಯಾಉ. ೪-೪೯). [ಕುಲ + ಮಹಿಷಿ]

**ಕುಲಮಾನಿನಿ** (ನಾ). ಗೃಹಿಣಿ; ಪತ್ನಿ: ಮತ್ಸ್ಯನೆಂಬ ಪರದಂಗೆ ಜೈನೆಯೆಂಬ ಕುಲಮಾನಿನಿ (ಸುಕುಮಾ. ೭-೩೦). [ಕುಲ + ಮಾನಿನಿ]

**ಕುಲಮಾರೆ** (ನಾ). ಜೀತದ ಆಳುಗಳ ಮದುವೆ: ಜೀತದ ಆಳುಗಳ ಮದುವೆಗೆ 'ಕುಲಮಾರೆ' ಎನ್ನುತ್ತಿದ್ದರು (ಪಂಜಪಂ. ೯). [?]

**ಕುಲಮುದ್ದ** (ನಾ). ಒಬ್ಬಾತನ ಹೆಸರು: ಕುಲಮುದ್ದ ನೀನೀ ಕಯ್ಯ ಪೊಕ್ಕು ಕಾದೆನ್ದು ಬೆಸಸೆ (ಎಕ. VIII, ಸೊರಬ. ೧೦-೬; ಸು. 800). [?]

**ಕುಲಮೆ** 'ಕೊಲಿಮೆ' ನೋ.

**ಕುಲಯುತ** (ನಾ). ಒಳ್ಳೆಯ ಕುಲದವನು; ಕುಲೀನ: ಕುಲಯುತನು ಕೋವಿದನು ಕರುಣಾಜಲಧಿ (ಕುವ್ಯಾಉ. ೪-೪೦). [ಕುಲ + ಯುತ]

**ಕುಲರನ್ನ** (ನಾ). ಕುಲಕ್ಕೆ ರತ್ನದಂತೆ ಇರುವವನು; ಕುಲಭೂಷಣ: ಎಲರು ತೀಡಿದೊಡಾನೆ ನಿನ್ನೆಡೆಗೆಯ್ದುರೆ ಕುಲರನ್ನ ನುಡಿಸೆ (ವರ್ಧಸಾಂ. ೮-೨೯). [ಕುಲ + ರನ್ನ]

**ಕುಲರಸಿಕ** (ನಾ). ಸ್ವಭಾವದಿಂದಲೆ ರಸಿಕ; ಹುಟ್ಟುರಸಿಕ: ಕತ್ತಿಯಬಿಚಿದಡಲ್ಲಿ ತೊತ್ತು ಹಾಡಿದಡಲ್ಲಿ ಮತ್ತೆ ಕುಲರಸಿಕನಿರುವಲ್ಲಿ ಕಡುನಗೆಯ ಹುತ್ತು ಕಾಣಯ್ಯ (ಸರ್ವಜ್ಞ. ೧೩೫೬). [ಕುಲ + ರಸಿಕ]

**ಕುಲರಾಜ** (ನಾ). ಕುಲೀನನಾದ ಅರಸು, —ರಾಜ: ತಮ್ಮನುಂ ತಾನುಂ ಅನೇಕ ಕುಲರಾಜಸಮಾಜಂ ಬೆರಸು ಆಡುವ ನೆವದೊಳ್ ಪೋಗಿ (ಶಾಂತಿಪು. ೫-೨೫ವ). [ಕುಲ + ರಾಜ]

**ಕುಲಲಲಾಮ** (ನಾ). = ಕುಲತಿಲಕ: ತೊಲಗದಿರಿ ತಮ್ಮಂದಿರಿರ ಕುರುಕುಲಲಲಾಮರು ಜಗದೊಳತಿವೆಗ್ಗಳೆಯ ಸುಭಟರು ನೀವು (ಕುವ್ಯಾದ್ರೋ. ೧೨-೩೦). [ಕುಲ + ಲಲಾಮ]

**ಕುಲವಧು**, ಕುಳವಧು (ನಾ). ೧. = ಕುಲನಾರಿ: "ಕುಲವಧು ಸಾಧ್ವಿ ಪತಿವ್ರತೆ . . . ಚರಿತ್ರವತಿಯಕ್ಕುಂ" (ವಸ್ತುಕೋ. ೫೨-೪); ಪೇಸದೆ ದುರ್ಜನದೊಳಾದ ಪರಿಚಯಂ ಮಾಸಿಸಿ ಕಿಡಿಸುವವೊಲೊಪ್ಪುವ ಕುಲವಧುವಂ (ಕವಿರಾ. ೧-೧೧೧); ಇದು ಮತ್ತೋನ್ಮತ್ತ ಜಲ್ಪಂ ಕುಲವಧುವರ ಮಾತಲ್ತು (ಪಂರಾಮಾ. ೯-೧೬೯). ೨. ಹೆಂಡತಿ: ಮಹಾಸತಿ ತತ್ಪತಿಗೇಚಕಬ್ಬೆ ಕುಲವಧುವಾದಳ್ (ಕಇಅ. ೩-೨-೬೨; 1058); ಮಹಾದೇವಿಸೆಟ್ಟಿಗೆ ಕನಕರತ್ನಂಗಳಂ ಕೊಡುವುದರಿದಲ್ಲ, ಕುಲವಧುವಂ ಕೊಡುವುದರಿದು ಎಂದು (ಬಸರ.೧೨-೬೧); ಸುಮ್ಮಾನವಳಿಯದೆ ಸುಮ್ಮನಿಹುದು ಗುಣವಮ್ಮ ಕುಲವಧುಗೆ (ಶಾಕುಂತ. ೫೭ ಅಡಿಟ). **ಕುಳವಧು**: ೧. "ಜಾಮಿ ಕುಳವಧೂ ಸ್ವಸ್ರನಾಮಂ" (ವಸ್ತುಕೋ. ೧೩೯-೧೨೪). [ಸಂ. ಕುಲವಧೂ]

**ಕುಲವನಿತೆ** (ನಾ). = ಕುಲನಾರಿ: ಧರ್ಮಕ್ಕರ್ಥಕ್ಕತಿಥಿಗೆ ಪೆರ್ಮೆಯ ಪಿತೃಗಳ್ಗೆ ದೇವಕಾರ್ಯಕ್ಕೆಂದುಂ ನಿರ್ಮಳ ಸಂತತಿಗಳ್ಗಕ್ಕೂರ್ಮೆಯ ಕುಲವನಿತೆ ಮುಖ್ಯವಾಕೆಯ ಪೂಜ್ಯಂ (ಮದಕ. ೮-೫). [ಕುಲ + ವನಿತೆ]

**ಕುಲವರ್ಧನ** (ನಾ). ೧. ಕುಲದ ಏಳಿಗೆ. ೨. ವಂಶವನ್ನು ಬೆಳೆಯಿಸುವವನು: ಕುರುಸುತ ಕುರುಕುಲವರ್ಧನ . . . ಪೊರಳ್ದಿ ಕೊಲಲೆಂದು ಬಂದ ಭೀಮಕಿರಾತಂ (ಗದಾಯು. ೬-೩೨). [ಕುಲ + ವರ್ಧನ]

**ಕುಲವಳಿ** 'ಕುಲವಟಿ' ನೋ.

**ಕುಲವಜಿ** (ನಾ). = ಕುಳದೇಜಿಗೆ: ಕಂಚಗಾಜದಾ ಕುಲವಜಿ ಆ ಚಂದ್ರಸ್ತಾವಿ ನಡ ಉತ್ತಿರೆ (ಸೌಇಇ. XI-ii, ೧೫೩-೧೩; 1103). [ಕುಲ + ವಜಿ (< ವರಿ$_1$)]

**ಕುಲವಟಿ**, ಕುಲವಳಿ (ನಾ). ವಂಶಪಾರಂಪರ್ಯವಾಗಿ ಬಂದ ಕ್ರಮ; ಅನ್ವಯಾಗತ ಕ್ರಮ: ವೈರಾಗ್ಯಮೆ ಕುಲವಟಿಯೆಂಬಂತೆ (ಶಾಂತಿಪು. ೯-೫೩). **ಕುಲವಳಿ**: ಆವಂದಿರಿನಗೆ ಕುಲವಳಿಯ ಬಳಿದೊತ್ತಿರವುದಱಿಂದ (ನಂಬಿರ. ೬-೧೧೦). [ಕುಲ + ಬಟ್ಟಿ]

**ಕುಲವಾಕ್ಕ್ರಿಯೆ** (ನಾ). = ಕುಲಚರ್ಯಕ್ರಿಯೆ: ಆರ್ಯಷಟ್ಕರ್ಮದೊಳು ವಿಶುದ್ಧ ವೃತ್ತವಾಗಿ ನೆಗಟ್ಟುದು ಕುಲವಾಕ್ಕ್ರಿಯೆ (ಚಾವುಂಪು. ೨೪೩). [ಸಂ. ಕುಲವಾಕ್ಕ್ರಿಯಾ]

**ಕುಲವಾಡಿ**, ಕುಳವಾಡಿ, ಕುಳುವಾಡಿ (ನಾ). ೧. ಗ್ರಾಮದ ಸೇವಕ, —ಆಳು: ಕುಲವಾಡಿಯನ್ನು ಕರೆದು ಸಾರುವುದಕ್ಕೆ ಅಪ್ಪಣೆ ಕೊಡುವರು (ಹುಟ್ಟಿಹ. ೧೯). **ಕುಳವಾಡಿ**: ಕುಳವಾಡಿಗಳು ತಳವಾರರು ನೀರಗಂಟಿಗಳು ಮುಂತಾದ . . . ಚಾಕರರು ಉಂಟು (ಕಥಾಮಂ. IV, ೨೩); ಪಟೇಲ ಕುಳವಾಡಿಯನ್ನು ಕರೆದು(ಇಜನೋ.೧೬). ೨. ಮನೆತನ; ವಂಶ: ಕುಳವಾಡಿ ಸಹಿತ ಹೆಸರು ಹೇಳಬೇಕು (ಚೆಂಗೂಲಿ. ೧೬೨). **ಕುಳುವಾಡಿ**: ೨. ನಿನ ಮಗ ಹೋಗ್ಯವನೆ ದೂರಕ್ಕೆ ಕುಳುವಾಡಿ ಪೂಜೆಗೊಂಬಾಳೇ ತರಲಿಕ್ಕೆ (ಜಗೀತ. ೧೪). [?]

**ಕುಲವಾಡಿಕೆ**, ಕುಳವಾಡಿಕೆ (ನಾ). ಕುಳವಾಡಿ ವೃತ್ತಿ: ಇನಾಂತಿ ಜಮೀನು ಕುಲವಾಡಿಕೆಗಾಗಿ ಬಿಟ್ಟಿತ್ತು (ಹುಟ್ಟಿಹ. ೬೬). **ಕುಳವಾಡಿಕೆ**: (೬). [ಕುಲವಾಡಿ + -ಇಕೆ]

**ಕುಲವಿದೂಷಕ** (ನಾ). ಮನೆತನದ ಹೆಸರನ್ನು ಕೆಡಿಸುವವನು, —ಕುಲಗೇಡಿ: ಕುಲವಿದೂಷಕನೇತಕೆದ್ದನೊ ಎಲೆಲೆ ಬಾಬಾ ಕೆಟ್ಟೆವೆನುತವೆ ಕುಲುಲುಗುಟ್ಟುತ (ಕೌಶಿರಾ. ೨-೩೨). [ಕುಲ + ವಿದೂಷಕ]

**ಕುಲವಿದ್ಯೆ** (ನಾ). ಮನೆತನದ ವಿದ್ಯೆ; ವಂಶಾನುಗತವಾಗಿ ಬಂದ ವಿದ್ಯೆ: ಕುಲವಿದ್ಯೆಯಲ್ಲಿ ಪಾರಂಗತನಾಗಬೇಕಿತ್ತು (ಕುರುಕಾ. ೨೫). [ಕುಲ + ವಿದ್ಯೆ]

**ಕುಲವಿನಾಶಿ** (ನಾ). ಕುಲವನ್ನು ನಾಶಮಾಡುವವನು: ಅಜಿಯದಾದೆನು ಕುಲವಿನಾಶಿಯೆಂಬುದ ಮುನ್ನ (ವೆಂಕಾರಾ. ೨-೬-೩೬). [ಸಂ. ಕುಲವಿನಾಶಿನ್]

**ಕುಲವಿಭ್ರಂಶೆ** (ನಾ). ಕುಲಗೆಟ್ಟವಳು; ಕುಲಹೀನೆ: ಕುಲವಿಭ್ರಂಶೆಯರೊಳ್ ಮನೋಜಸುಖಮಂ ಮಾಟ್ಪಂಗೆ ಪೆಂಪೆಯ್ದುದು (ಮದಕ. ೯-೧). [ಸಂ. ಕುಲವಿಭ್ರಂಶಾ (ಕುಲ + ವಿಭ್ರಂಶ + -)]

**ಕುಲವಿಹೀನ** (ನಾ). = ಕುಲಹೀನ: ಕುಲವಿಹೀನರು ಕನಿಷ್ಠರು ಕುಲಜರುತ್ತಮ ಪುರುಷರು (ಬಸವು. ೪೦-೭೦). [ಕುಲ + ವಿಹೀನ]

**ಕುಲವೀರ** (ನಾ). ಆಜನ್ಮಶೂರ; ಕಡುಗಲಿ: ಹಲವನೋದಿದಡೇನು ಚೆಲುವನಾದಡದೇನು ಕುಲವೀರನೆನಿಸಿ ಫಲವೇನು ಲಿಂಗದ ಒಲುಮೆ ಇಲ್ಲದಲೆ (ಸರ್ವಜ್ಞ. ೧೪೧). [ಕುಲ + ವೀರ]

**ಕುಲವೃದ್ಧ** (ನಾ). ಕುಲದಲ್ಲಿ ಹಿರಿಯನಾದವನು; ವಂಶದಲ್ಲಿ ಹಿರಿಯ: ಕುರುವೃದ್ಧಂ ಕುಲವೃದ್ಧಂ ಸರಿತ್ಸುತಂ ತಕ್ಕನೆಂದು (ಪಂಪಭಾ. ೬-೪೪); ಕುಲವೃದ್ಧರ ನುಡಿಯಂ ವಿಜಯಂ ಕೇಳ್ದು (ಶಾಂತಿಪು. ೫-೨೫ ವ). [ಕುಲ + ವೃದ್ಧ]

**ಕುಲವೆಣ್** (ನಾ). = ಕುಲನಾರಿ: ಕುಲವಿದ್ಯಾದಿ ನಿಜಾನ್ವಯ ಪ್ರಕೃತಿಯೊಳ್ ತಜ್ಜಾತಿ ವಿದ್ಯೋತ್ಕರಂ ಕುಲವೆಣ್ಣೊಳ್ (ಶಾಂತಿಪು. ೫-೧೩); ಸುಜ್ಞಾನದೊಳ್ ಕೂಡಿದಾ ಕುಲವೆಣ್ಣಂಗೆಜೆಯಾವುದೈ (ಸೋಮೇಶ. ೭). [ಕುಲ + ಪೆಣ್]

**ಕುಲವ್ವೈರಿ** (ನಾ). ಕುಲಕ್ಕೇ ಶತ್ರು; ಜಾತಿವ್ವೈರಿ: ಕೊಲಿಸಿದರೆ ಕುಲವ್ವೈರಿ ಮಾರ್ಜಾಲನಪಕೀರ್ತಿ ಸಲದೆ ನಿನ್ನಂಥ ನರಕುಲರಾಣಿಗೆ (ಕಎಪು. ೩೩). [ಕುಲ + ವ್ವೈರಿ]

**ಕುಲವ್ರತ** (ನಾ). ಕುಲಾಚಾರ; ವಂಶದಲ್ಲಿ ನಡೆದುಬಂದ ನಿಯಮ: ಪುರುವಂಶದವರಿಗೆ ವನನಿವಾಸವು ಮುಪ್ಪಿನಲ್ಲಿ ಕುಲವ್ರತ (ಶಾಕುಂತ. ೧೦೭). [ಕುಲ + ವ್ರತ]

**ಕುಲಶಿಲೋಚ್ಚಯ** (ನಾ). = ಕುಲಗಿರಿ: ಕುಲಿಶಹತಿಯಲಿ ಕುಲ ಶಿಲೋಚ್ಚಯವಿಳೆಗೆ ಕೆಡೆವಂದದಲಿ (ಕುವ್ಯಾದ್ರೋ. ೭-೪).
[ಕುಲ + ಶಿಲೋಚ್ಚಯ]

**ಕುಲಶೈಲ** (ನಾ). = ಕುಲಗಿರಿ: ಕುಲಶೈಲನಿಚಯದ ನೆತ್ತಿ ಬಿರಿಯಲು ಮೊಳಗಿದವು ನಿಸ್ಸಾಳ ಕೋಟಿಗಳು (ಕುವ್ಯಾವಿ. ೮-೨). [ಕುಲ + ಶೈಲ]

**ಕುಲಶ್ರೇಷ್ಠಿ** (ನಾ). ೧. ಒಳ್ಳೆಯ ಕುಲದಲ್ಲಿ ಹುಟ್ಟಿದವನು. ೨. ಸೆಟ್ಟಿಗಳ ಮುಖಂಡ: (*). [ಕುಲ + ಶ್ರೇಷ್ಠಿ]

**ಕುಲಸಂಕರ** (ನಾ). ಜಾತಿಗಳ ಕಲಬೆರಕೆ; ವರ್ಣಸಂಕರ: ಹೊಲೆಗಲಸಿ ಕುಲಸಂಕರವನಗ್ಗಲಿಸಿಯೀ ಕಲ್ಯಾಣಕಟಕವನಿಂತು ಕೆಡಿಸುವರೆ (ಬಸಪು. ೫೫-೧೨). [ಕುಲ + ಸಂಕರ]

**ಕುಲಸಂಭವ**(ನಾ). ವಂಶದಲ್ಲಿ ಹುಟ್ಟಿದವನು: (*). [ಕುಲ+ಸಂಭವ]

**ಕುಲಸಂಹಾರಿ** (ಗು). ವಂಶವನ್ನು ನಾಶಮಾಡುವ: ನಾರಿ ನರಕಕೆ ದಾರಿ ದುರ್ಜನಕಾರಿ ಕುಲಸಂಹಾರಿ (ಕೌಶಿರಾ. ೨೩-೨೮).
[ಸಂ. ಕುಲಸಂಹಾರಿನ್]

**ಕುಲಸತಿ** (ನಾ). = ಕುಲನಾರಿ: ಕುಲಸತಿ ಕುರೂಪಿಯಾದೊಡೆಯೇನು ಗುಣಮೆ ಕಾರಣ (ನವಮೋ. ೭-೨೪). [ಕುಲ + ಸತಿ]

**ಕುಲಸಮ್ರುದ್ಧಿ** (ನಾ). ವಂಶದ ಬೆಳವಣಿಗೆ; ವಂಶವೃದ್ಧಿ: ಬಸಿರಾಂತ ಮತ್ಕುಲಸಮೃದ್ಧಿಕಾರಿಣಿಯ ಧರ್ಮಪತ್ನಿಯನುಳಿದೆಂ (ಶಾಕುಂತ. ೮೪-೧೫೫). [ಕುಲ + ಸಮೃದ್ಧಿ]

**ಕುಲಸಾರಿಕೆ** (ನಾ). = ಕುಲನಾರಿ: "ಕುಲನಾರಿ ಕುಲಸಾರಿಕೆಯೆನಲು ಪತಿವ್ರತೆಯಕ್ಕು" (ಮಂಗರಾ. ೯೦-೫). [ಸಂ. ಕುಲಸಾರಿಕಾ]

**ಕುಲಸೂತಕ** (ನಾ), ಕುಲದಿಂದ ಬಂದ ಮೈಲಿಗೆ; ಜಾತಿದೋಷ: ಎನ್ನ ಕುಲಸೂತಕವನಳಿದ ಬಸವಣ್ಣ (ವಚಸಂ. ೨೮೨-೨೬).
[ಕುಲ + ಸೂತಕ]

**ಕುಲಸ್ತ** (ನಾ). = ಕುಲಸ್ಥ$_2$: ಅವನ ಕುಲಸ್ತರಂತೂ ಹೇಳಲಸಾಧ್ಯ (ಚಂಗಾಳ್ವ. ೫೬೩). [< ಸಂ. ಕುಲಸ್ಥ]

**ಕುಲಸ್ತ್ರೀ** (ನಾ). = ಕುಲನಾರಿ: "ಕುಲಸ್ತ್ರೀಯಲ್ಲಿಯುಂ ಜಾವಿಯೆಂಬುದು" (ಹಲಾಯು. ೧೩೨-೬). [ಸಂ.]

**ಕುಲಸ್ಥ$_1$** (ನಾ). = ಕುಲತ್ಥ: "ಕುಲಸ್ಥ – ಹುರ್ಳಿ" (ಗಂಗಾಮು. ೯೧).
[< ಸಂ. ಕುಲತ್ಥ]

**ಕುಲಸ್ಥ$_2$** (ಗು). ೧. ಕುಲ ಅಥವಾ ಜಾತಿಯಲ್ಲಿ ಇರುವ. (ನಾ). ೨. ಒಳ್ಳೆಯ ಕುಲದಲ್ಲಿ ಹುಟ್ಟಿದವನು; ಕುಲೀನ: (*). [ಸಂ.]

**ಕುಲಸ್ಥಾನ** (ನಾ). ಹುಟ್ಟಿದ ಸ್ಥಳ; ಮೂಲಸ್ಥಾನ: ಕುಸುಮ ಚಂದನ . . . ಮೌಕ್ತಿಕ ರತ್ನಂಗಳು ಕುಲಸ್ಥಾನವಂ ಬಿಟ್ಟು ಯೋಗ್ಯವಾದಂತೆ (ಮೋಳಿಮಾ. ೧೩೩-೫೧೫). [ಕುಲ + ಸ್ಥಾನ]

**ಕುಲಸ್ಥೆ** (ನಾ). ಕುಲೀನೆ; ಕುಲಜೆ: (*). [ಸಂ. ಕುಲಸ್ಥಾ]

**ಕುಲಹೀನ**(ನಾ). ಹೀನಕುಲದವನು; ಕೀಳುಕುಲದವನು: ಭಕ್ತರಂ ಕುಲಹೀನರೆಂದು ದುರುಕ್ತಿಗಳನಿಂತಾಡಲಹುದೇ (ಬಸಪು. ೫೭-೬೬); ಕುಲಹೀನನಲಿ ಗುಣವಜಸಲೇಕೆಂದೆನುತ (ಕುವ್ಯಾಕ. ೨೫-೪೨).
[ಕುಲ + ಹೀನ]

**ಕುಲಾಂಗನೆ** (ನಾ). = ಕುಲನಾರಿ: ಉದಾತ್ತ ಕೀರ್ತಿಲಕ್ಷ್ಮೀ ವಿಭವಾಭಿರಾಮೆ ಗುಣಧಾಮೆ ಕುಲಾಂಗನೆ (ಸುಕುಮಾ. ೨-೪); ವಿಭವದ ಕಾಮಿಸೆಟ್ಟಿಯ ಕುಲಾಂಗನೆ ವೆಂಣ್ನಲಸೆಟ್ಟಿಕವ್ವೆ (ಕಇ. IV, ೧-೪; 1204).
[ಕುಲ + ಅಂಗನೆ]

**ಕುಲಾಂಗಾರ** (ನಾ). ೧. ಕುಲಕ್ಕೆ ಬೆಂಕಿಯಾದವನು; ಕುಲನಾಶಕ. ೨. ಕುಲಕ್ಕೆ ಮಸಿಬಳಿಯುವವನು: ಇಂಥ ಆತ್ಮಘಾತಕರಾದ ಕುಲಾಂಗಾರರನ್ನು ಕಂಡು ಬಲು ಕೆಡುಕೆನಿಸುವುದು (ಬ್ರಹ್ಮಜೀ. ೨೮); ಈ ಕುಲಾಂಗಾರನನ್ನು ಮತ್ತೊಮ್ಮೆ ನೋಡಬಾರದೆಂದು (ಮಾಡಿಮ. ೭೭); ಕ್ಷತ್ರಿಯಾಧಮಾ, ಕುಲಾಂಗಾರ, ಭರತವಂಶದ ಕಲಂಕಸ್ವರೂಪನೆ (ಕುರುಕ್ಷೇ. ೧೩೦). [ಕುಲ + ಅಂಗಾರ]

**ಕುಲಾಂತಕ**, ಕುಳಾಂತಕ (ನಾ). ಕುಲವನ್ನು ನಾಶಪಡಿಸುವವನು; ವಂಶವನ್ನು ಕೊನೆಗಾಣಿಸುವವನು: ಸಂತತಿ ನಡೆಯದಿರ್ದೊಡೆ ಕುಲಾಂತಕಂ ತಾನಾದಪೆಂ (ಜೈಮಿಭಾ. ೧೮-೧೬). **ಕುಳಾಂತಕ**: ಕುರುಕುಳಾಂತಕಂ ಗಳಿತಕೋಪನೇ[ಕಲಿ]ಭೀಮರ (ಗದಾಯು. ೧-೬೩).
[ಕುಲ + ಅಂತಕ]

**ಕುಲಾಂತರ** (ನಾ). ಬೇರೆ ಕುಲ; ಅಂತರ ಜಾತಿ. 'ಕುಲಾಂತರ ವಿವಾಹ' ಪರಾ. [ಸಂ.]

**ಕುಲಾಂತರವಿವಾಹ** (ನಾ). ಬೇರೆ ಬೇರೆ ಕುಲದವರ ನಡುವೆ ಉಂಟಾಗುವ ವಿವಾಹ; ಅಂತರ್ಜಾತೀಯ ವಿವಾಹ: "ಬೇರೆ ಬೇರೆ ಮನೆತನ, ಕುಲ, ಬುಡಕಟ್ಟು, ಜಾತಿ, ಮೊದಲಾದವಕ್ಕೆ ಸೇರಿದ ಗಂಡು ಹೆಣ್ಣಿಗೆ ಮದುವೆ; ಕುಲಾಂತರ, ಜಾತ್ಯಂತರ, —ವಿವಾಹ" (Intermarriage. ಇಂಕನಿ).
[ಕುಲಾಂತರ + ವಿವಾಹ]

**ಕುಲಾಚಲ**, ಕುಳಾಚಳ (ನಾ). = ಕುಲಗಿರಿ: ಪೆರ್ಗಡಲಂ ಪೀರ್ವ ಕುಲಾಚಲಂದಳೆದು ಪೊಯ್ಸಂಡಾಡುವ (ಶಬಶಂ. ೩-೧೯). **ಕುಳಾಚಳ**: ಕುಳಾಚಳದಂತೆ ನಭವುನಳ್ಳಿಜಿವುತ್ತುಂಗ ಚೈತ್ಯ ಕುಲದಿಂ (ಮಲ್ಲಿಪು. ೨-೫೪ ವ). [ಕುಲ + ಅಚಲ]

**ಕುಲಾಚಾರ** (ನಾ). ಕುಲಧರ್ಮ; ವಂಶಪರಂಪರೆಯಿಂದ ನಡೆದು ಬಂದ ಸಂಪ್ರದಾಯ: ಆರ್ಯಷಟ್ಕರ್ಮಂಗಳಂ ನಿಮಗಿವು ಕುಲಾಚಾರಂಗಳೆಂದಱಿಯೆ ಪೇೞ್ದು ಕೈಕೊಳಿಸಿ (ಆದಿಪು. ೧೫-೧೩ ವ); ಅವನೊಳಿನ್ನಾವುದು ಕುಲಾಚಾರವಜಸುವುದೆ (ಇಹರ. ೩೭).
[ಕುಲ + ಆಚಾರ]

**ಕುಲಾಚಾರ್ಯ** (ನಾ). ಕುಲಪುರೋಹಿತ; ಕುಲಗುರು: ನಾವು ರಾಢೀಯ ಶ್ರೇಣಿಯವರು, ವಂಶದಲ್ಲಿ ಕುಲಾಚಾರ್ಯರು (ಕಪಾಕುಂ. ೩೩). [ಕುಲ + ಆಚಾರ್ಯ]

**ಕುಲಾದ್ರಿ** (ನಾ). = ಕುಲಗಿರಿ: ಜಲಧಿ ಮೇರೆಯನೊದೆದು ಹಾಯಲಿ . . . ನಡೆದಾಡಲಿ ಕುಲಾದ್ರಿಗಳು (ಕುವ್ಯಾವಿ. ೭-೨೩).
[ಕುಲ + ಅದ್ರಿ]

**ಕುಲಾಪಘಾತ** (ನಾ). ಕುಲಕ್ಕೆ ಕೇಡು; ವಂಶಕ್ಕೆ ಕೆಡುಕು: ಕೂಡಿಕೊಂಡು ಕುಲಾಪಘಾತದ ಕೇಡಿಗರ ಕಲ್ಪನೆಯ ಕಲುಷದ ಜೋಡಿಯನೆ ನಿಶ್ಚೈಸಿ ವಿದುರಂಗಜುಹಿದನು ಕರೆಸಿ (ಕುವ್ಯಾಸ. ೧೨-೭೩).
[ಕುಲ + ಅಪಘಾತ]

**ಕುಲಾಪವಾದ** (ನಾ). ವಂಶಕ್ಕೆ ಬಂದ ಅಪವಾದ, —ನಿಂದೆ: ಈ ದೊರೆಯ ಕುಲಾಪವಾದವಾಗೆಯುಂ (ಶಾಂತಿಪು. ೪-೭೮); ಆತ್ಮಜರಿನಾದ ಕುಲಾಪವಾದ ಪರಾಭವದ ದಾವಾನಳದಿಂ (ಸುಕುಮಾ. ೨-೧೦ ವ).
[ಕುಲ + ಅಪವಾದ]

**ಕುಲಾಬಿ** (ನಾ). (ಉಕ) ಉಯ್ಯಾಲೆ ಮೊದಲಾದವುಗಳಿಗಾಗಿ ಜಂತೆಯಲ್ಲಿ ಸೇರಿಸಿದ ಕಬ್ಬಿಣದ ಕೊಕ್ಕೆ: ಜಂತಿಯ ಕುಲಾಬಿಯಿಂದ ಅಂಕಣದ ತೊಲೆಯವರೆಗೆ (ದೀಪಹ. II, ೯೭).
[← ಮರಾ. ಕುಲಾಬ್ ; ಹಿಂ. ಕುಲಾಬಾ]

**ಕುಲಾಯ$_1$**, ಕುಳಾಯ (ನಾ). ಹಕ್ಕಿಗಳ ಗೂಡು: "ಕುಲಾಯಃ, ನೀಡಂ- ಈ ೨ ಗೂಡು" (ಹಲಾಯು. ೪೦-೮೭); ದೀಪದೇವಾಲಯದಿ ತಲೆದೋಱೆ ಖಗಚಯ ಕುಲಾಯಿಗಳ ಪೊರ್ದುತಲಿರೆ (ಪ್ರೌಢರಾ. ೯-೨೬); ಖಗಚಯ ಪೊರ್ದಿದವು ಕುಲಾಯಗಳನು (ರಾಘಚ. ೭-೧೭). **ಕುಳಾಯ**: ತಳರ್ದು ಕುಳಾಯದಿಂ . . . ಪಕ್ಕಿಗಳ್ (ಜಗವಿ. ೧೪-೧೦). [ಸಂ.]

**ಕುಲಾಯ$_2$**, ಕುಲಾಯಿ, ಕುಲಾವಿ, ಕುಳ್ಳಾವಿ (ನಾ). ೧. ತಲೆಗೆ ಹಾಕಿಕೊಳ್ಳುವ ಒಂದು ಬಗೆಯ ಟೋಪಿ; ತಲೆಯುಡಿಗೆ: "ಕುಲಾಯ :- ಗೂಡುಂ, ಟೋಪಿಯುಂ" (ಕಾಶಕ್ಯ. ೧೬೬); ಅಂಗವಸ್ತ್ರ ೫, ಕುಲಾಯ ೬ (ಸೌಇಇ. IX-ii, ೫೫೧-೪ ; 1532). ೨. ಕೂಸಿನ ತಲೆಗೆ ಕಟ್ಟುವ ಟೋಪಿ: ಪಾಲ್ಗುಡಿಸಿ ಕುಂಚಿಗೆಯುಂಗಿ ನೆತ್ತಿಯ ಕುಲಾಯಮಂ ತೊಡಿಸಿ (ನವಮೋ. ೧೫-೫೬). **ಕುಲಾಯಿ**: ೧. ಶಿರದಿ ಚಿಂದಿ ಕುಲಾಯಿ ಕರ್ಣದೊಳಿರುವ ಕುಂಡಲ (ಸನತ್ಕು. ೧೭-೧೩); ಕೆಲವು ಭೂಷಣ ದಟ್ಟಿ ಕುಲಾಯಿಯುಳವಟ್ಟು ಕಳದಲ್ಲಿ ನಿಂದನಾ ಕಾಮ (ಭರಜ. ೫೧-೩೨); ರಂಗು ಮಾಣಿಕದ ಕುಲಾಯಿ ಭೂಪಾಲಗೆ ಮಂಗಳೋತ್ಸವದೊಳೊಪ್ಪಿದುವು (ಕಂನವಿ. ೨೨-೫೯). ೨. ಪುಟ್ಟ ಮಗುವಿನ ಅಂಗಿ ಕುಲಾಯಿ ಕೊಡು (ಕಪಪು. ೩-೭); ಮುದುಕಿ ಬೇಡ್ವಾಳ ಕುಲಾಯಿ (ಕನ್ನಜಾ. ೬೧). **ಕುಲಾವಿ**: ೧. ವಿಶಾಲವಕ್ಷಂ ಮೇಲ್ಕುಲಾವಿ ಪೈಠಣೆ (ವೀಕೃಪು. ೪-೧೨-೨೫); ಸೈನಿಕರು . . . ಚಪ್ಪಟೆಯಾದ ಉಕ್ಕಿನ ಕುಲಾವಿಗಳನ್ನು ಧರಿಸುತ್ತಿದ್ದರು (ದಭಾಇ. ೧೦೩); ಮಂತ್ರಿಯು . . . ತಲೆಗೆ ಒಂದು ಕುಲಾವಿಯನ್ನು ಹಾಕಿಕೊಂಡು (ಪಿಶಾಪ. ೧೨೭). ೨. ಕರೀಕುಲಾವಿಯನ್ನು ಧರಿಸಿದ್ದಾರೆ (ದೌಲತ್. ೧೧೪); ಒಂದು ವರ್ಷದ ಕೂಸೊಂದು ಅದರ ತಲೆಗೆ ಒಂದು ಮೇಣಗಟ್ಟಿದ ಕುಲಾವಿ (ರಾಮಾನೆ. ೧೧೦); ಕೂಸು ಹುಟ್ಟುವುದಕ್ಕೆ ಮುಂಚೆ ಕುಲಾವಿ ಹೊಲಿಸಿದರು (ಗಾದೆ). **ಕುಳ್ಳಾವಿ**: "ಶೀರ್ಷಕಂ- ಶೀರ್ಷಣ್ಯಂ - ಶಿರಸ್ತ್ರಂ- ೩ ತಲೆಯನ್ನು ರಕ್ಷಿಸುವ ಲೋಹದ ಟೊಪ್ಪಿಗೆ, ತೊಗಲ ಟೋಪಿ, ಕುಳ್ಳಾವಿ ಮುಂತಾದ ಶಿರಸ್ತ್ರಾಣದ ಪೆಸರು" (ಸಿದ್ಧಾಂತಿ. ೨೧೯).
[← ಅರ. ಕುಲ್ಲಾದ್ ; ಹಿಂ. ಕುಲಾಹ್]

**ಕುಲಾಯಿ** 'ಕುಲಾಯ$_2$' ನೋ,

**ಕುಲಾಯಿಸು**, ಖುಲಾಯಿಸು (ಕ್ರಿ). ತೆರೆ; ಒದಗಿ ಬರು: ನಿಮಗೆ ಅಧಿಕಾರ ಬಂದರೆ ನಮಗೂ ಅದೃಷ್ಟ ಕುಲಾಯಿಸುವುದು (ಚೆಂಗಾಳ್ವ. ೫೮೯); ಸಾಹೇಬರ ಸಮ್ಮುಖದಲ್ಲಿ ನತಮಸ್ತಕನಾಗಿ ಹೋದರೆ ಆಗ ಆತನ ಅದೃಷ್ಟವು ಕುಲಾಯಿಸುತ್ತಿದ್ದಿತು (ಝೂರಾಣಿ. ೧೫೭). **ಖುಲಾಯಿಸು**: ಸದಾನ ಅದೃಷ್ಟ ಖುಲಾಯಿಸಿತು (ಅನ್ನಪೂ. ೩೫); ನಮ್ಮ ಅದೃಷ್ಟ ಸ್ವಲ್ಪ ಖುಲಾಯಿಸಿದಂತೆ ತೋರಿತು (ಕೆಲನೆ. ೧೦೧).
[← ಹಿಂ. ಖುಲ್ನಾ]

**ಕುಲಾಲ$_1$** (ನಾ). ಕುಂಬಾರ: ಕುಲಾಲ ಕರನಿರ್ಭರಭ್ರಮಿತ ಚಕ್ರಲೀಲಾಯಿತಂ (ಪಂಪಭಾ. ೪-೨೭); ಕುಲಾಲನು ತಿಗರಿಗೆ ಮಣ್ಣುಮಾಡಿ ಕೋಲಿನಿಂದ ತಿರುಹಿ (ಮೋಳಮಾ. ೧೨೧-೪೭೪ ಟೀಕು). [ಸಂ.]

**ಕುಲಾಲ$_2$** (ನಾ). (?): ಶಿಲೆಯೊಳಗಿಪ್ಪ ಕುಲಾಲ [ಸಾಠಾಂ. ಕುಲಹೀನನ] ಬೆಳಗಿ ತೊಳಗುವ ಆ ಮಲಿನರ ಮುಖವ ಕಂಡು ಮತ್ತೆ ದಿಂಗುವಿಡಿಯಲೇಕೋ (ಮೋಳಮಾ. ೧೮೪-೬೯೩). [?]

**ಕುಲಾಲಕರಣ** (ನಾ). ಕುಲಾಲನ ಉದ್ಯೋಗ; ಕುಂಬಾರನ ಕೆಲಸ: "ಬಾನ್ - ಕುಲಾಲಕರಣೇ" (ಶಮುಧಾ).
[ಕುಲಾಲ + ಕರಣ]

**ಕುಲಾಲಗೇಹ** (ನಾ). ಕುಂಬಾರನ ಮನೆ: ಪಂಜರಂ ಶುಕತತಿಯೊಳ್ಕುಲಾಲಗೇಹಂಗಳೊಳಂ ಪರಚಕ್ರಭ್ರಾಂತಿಗಳ ಧ್ವರದೊಳ್ ನೆಗಟ್ಟುಂ ಮಹಾಹವಧ್ವನಿ ನಿಯತಂ (ಕವಿರಾ. ೩-೧೧೧).
[ಕುಲಾಲ + ಗೇಹ]

**ಕುಲಾಲಚಕ್ರ** (ನಾ). ಕುಂಬಾರನ ಚಕ್ರ; ತಿಗುರಿ: ಕುಲಾಲಚಕ್ರಂ ತಿರಿವಂತಿರೆ ತಿರಿಯೆ (ಆದಿಪು. ೧೪-೬೯); ದಂಡಭ್ರಮಂ ಕುಲಾಲ ಚಕ್ರದೊಳ್ (ಚಂದ್ರಪ್ರ. ೩-೯ ವ). [ಕುಲಾಲ + ಚಕ್ರ]

**ಕುಲಾವಧಿ** (ನಾ). [ಜೈನ] ಕುಲಾಚಾರವನ್ನು ಕಾಯ್ದುಕೊಳ್ಳುವುದು: ಕುಲಾವಧಿಯೆಂಬುದು ಕುಲಾಚಾರಮಂ ದರ್ಶನಕ್ಕವಿರುದ್ಧಮಾಗೆ ಕಾದು ನೆಗಟ್ಟುದು (ಚಾವುಂಪು. ೨೫೮). [ಕುಲ + ಅವಧಿ]

**ಕುಲಾಲಿ** (ನಾ). ೧. ಕುಂಬಾರನ ಹೆಂಡತಿ. ೨. ಹಾಲುಹುರುಳಿ ಎಂಬ ಒಂದು ಸಸ್ಯ: "ಹಾಲುಹುರುಳಿ ಕುಲಾಲಿಯಕ್ಕು" (ಮಂಗರಾ. ೪೪-೪೬). ೩. ಕುಳುತ್ಥಾಂಜನ. [ಸಂ. ಕುಲಾಲೀ]

**ಕುಲಾವಿ** 'ಕುಲಾಯ$_2$' ನೋ.

**ಕುಲಾಸ್**, ಖುಲಾಸ (ನಾ). ೧. ತೆರೆದುದು; ಪ್ರಕಟವಾದುದು: ಎಲ್ಲಾ ಅವತ್ತಿಗೆ ಕುಲಾಸ್ (ಚೆಂಗೂಲಿ. ೮೭). ೨. ಬಿಡುಗಡೆ; ಅನಿರ್ಬಂಧತೆ. ೩. ಆರಾಮ; ನೆಮ್ಮದಿ: ಮಗಳ ಮದುವೆ ಮಾಡಿ ಕುಲಾಸಾಗಿದ್ದಾನೆ (ರೂಢಿ). **ಖುಲಾಸ**: ೧. ಅವರಿಗೆ ಪುನಃ ಖುಲಾಸ ಹೇಳಬೇಕಾಗುತ್ತದೆ (ಮುಂಬವ್ವಾ. ೧೨), ೪. ತೆರವು ಖಾಲಿಯಾಗಿರುವಿಕೆ: (ಕ). [← ಅರ. ಹಿಂ. ಖುಲಾಸ್ ; ಮರಾ. ಖುಲ್ಲಾಸ್]

**-ಕುಲಿ$_1$** (ಪ್ರ). ಕೊಲ್ಲುವವನು, ಕೆಡಿಸುವವನು, ಹಾಳುಮಾಡುವವನು ಎಂಬ ಅರ್ಥದಲ್ಲಿ ಬರುವ ತದ್ಧಿತ ಪ್ರತ್ಯಯ. 'ಅಱಗುಲಿ', 'ಮಿಾಂಗುಲಿ' ಪರಾ.
[ದೇ. ‖ ತಮಿ. ಮಲ. ಕೊಲ್ಲಿ]

**ಕುಲಿ$_2$** (ನಾ). ಒಂದು ಬಗೆಯ ಸಸ್ಯ; ಹೆಗ್ಗುಳ್ಳದ ಗಿಡ; "ಕಂಟಕಶ್ರೇಣಿ" (ಪಂಡಿತ). [ಸಂ.]

**ಕುಲಿ$_3$** (ನಾ). ಕುಲವುಳ್ಳವನು; ಕುಲವಂತ; ಕುಲಜ: ಚೆಲುವಿರಲು ಸಿರಿಯಿಲ್ಲ ವಿದ್ಯದ ಬಲುಮೆಯುಳ್ಳರೆ ರೂಪಭಾಗ್ಯವು ನೆಲಸಿತಾದರೆ ಕುಲವು ಕೂಡದು ಕುಲಿಗೆ ಬಲವಿಲ್ಲ (ಕೌಶಿರಾ. ೨-೩೯). [ಸಂ. ಕುಲಿನ್]

**ಕುಲಿಂಗ** (ನಾ). ಕೆಟ್ಟ ಚಿಹ್ನೆ; ಕೆಟ್ಟ ಲಾಂಛನ: ಅಲ್ಲಿ ಜಯಲಿಂಗಂ ತೃಪ್ತಿ ಲಕ್ಷಣಂ ಪರಿನಿರ್ವಾಣ ಸಾಧನಲಿಂಗಮುೞಿದೆಲ್ಲಂ ಕುಲಿಂಗಮೆಂದಱಿಗೆ (ಚಾವುಂಪು. ೨೪೧); ಪಿಹಾಜಿನಾದಿಕುಲಿಂಗಗಳಂ ಬಿಟ್ಟು ಜಿನದೇಶಿಕವಾದ ದಿಗಂಬರತ್ವವೆಂಬ ಚಿಹ್ನೆಯಂ ಧರಿಸುವದೇ ಲಿಂಗವು (ಪುರುಚ. ೨೧೬). [ಸಂ.]

**ಕುಲಿಂಗಿ** (ನಾ). ಕೆಟ್ಟಚಿಹ್ನೆಗಳುಳ್ಳವನು: ಜೈನಾಗಮವಿದರಂ ಸಾರದೆ ವೋಗಿ ಕುಲಿಂಗಿಗಳನೀ ಜನಂ ಸೇವಿಸುಗುಂ (ಆದಿಪು. ೧೫-೩೫); ಪರಿಗ್ರಹದಿಂದೊಡಗೂಡಿದ ಪ್ರತಿಶಾಸ್ತ್ರಗಳಂ ಪ್ರತಿದೈವಗಳಂ ಸಹ ಕುಲಿಂಗಿಗಳು ಉಂಟುಮಾಡುವರು (ಪುರುಚ. ೨೨೨). [ಸಂ. ಕುಲಿಂಗಿನ್]

**ಕುಲಿಕ**, ಕುಳಿಕ (ನಾ). ೧. ಕುಲೀನ; ಸತ್ಕುಲದಲ್ಲಿ ಹುಟ್ಟಿದವನು. ೨. ಒಂದು ಬಗೆಯ ಹಾವು; ಅಷ್ಟಸರ್ಪಗಳಲ್ಲಿ ಒಂದು: ಕುಲಿಕಾಟೋಪಮನಂತಕಾರಭಟಿಯಂ . . . ಗೆಲೆವಂದೊರ್ಮೆಯೆ ಮುಟ್ಟಿವಂದುದು ಬೆರಂಟುತ್ತುಂ ಮಹೀರಂಗವಂ (ಜಗವಿ. ೫-೩೬). ೩. "ಶಿಲ್ಪಿಗಳ ಕುಲದಲ್ಲಿ ಮುಖ್ಯನಾದವನು" (ಗಂಗಾಮು. ೯೧).

**ಕುಳಿಕೆ:** ೨. ದುರ್ಯೋಧನಂ ದಾಡೆಗಳೆದ ಕುಳಿಕನಂತೆಯುಂ ಕೋಡುಡಿದ ಮದ ಹಸ್ತಿಯಂತೆಯುಂ (ಪಂಪಭಾ. ೭-೩೯ ವ); ಕುಳಿಕನ ಪಲ್ಗಳಂ ಮುಱಿಯೆ ಮೋದಿದರಾರ್ (ಗದಾಯು. ೯-೨೦); ಸಿಡಿಲ ಬಳಗಕೆ ಕುಳಿಕನ ಕುಡುದಾಡೆಗೆ ಮೂರಿವಿಟ್ಟ ಮಾರಿಗೆ (ಕಇ. I, ೨೫-೪೫; 1186). ೩. [ಜ್ಯೋತಿ] ನವಗ್ರಹಗಳಿಂದ ಹೊರತಾಗಿ, ಜಾತಕನಿಗೆ ಅಶುಭವನ್ನು ತರುವ ಒಂದು ಕ್ರೂರವಾದ ಉಪಗ್ರಹ; ಗುಳಿಗ: ಶನಿಯುಂಗಾರಕರೊಳ್ಳಿದರೆನಿಸರ್ ಮತ್ತಲ್ಲಿ ವಿಷ್ಟಿಗಿತ್ತುಂ ಕುಳಿಕಂ ಜನಿಯಿಸುಗುತ್ಪಾತಂಗಳುಂ (ಜಟ್ಟಮು. ೯-೧೩). [ಸಂ.]

**ಕುಲಿಕುಲಿ,** ಖುಲಿಖುಲಿ (ಅ). ಒಂದು ಅನುಕರಣ ಶಬ್ದ; ಕಲಕಲ; ಕಳಕಳ; ಜಯಘೋಷದ ಧ್ವನಿ: ಬೀಗಿ ಮುಂಬರಿದು ಕುಲಿಕುಲಿರವದಿ ತರುಣಿಯರ್ಕಾದಿದರ್ (ಜಿನಮು. ೩-೪೧); ಕುಲಿಶ ಬಾಣವನೆತ್ತಿ ಹಾಕಿದ ಪಾರ್ಥ ಕುಲಿಕುಲಿಯೆಂದು ಬೊಬ್ಬಿಡುತ (ಜಿನಭಾ. ೭೫-೫೪). **ಖುಲಿಖುಲಿ:** ಬೆಟ್ಟಗಳನಿಟ್ಟಗ್ನಿಶರದಿ ತೂರಿಟ್ಟು ಖುಲಿಖುಲಿಯೆಂದು (ಜಿನಮು. ೧೭-೨೦). [?]

**-ಕುಲಿಗ** (ಪ್ರ). ಕೊಲ್ಲುವವನು ಎಂಬರ್ಥದಲ್ಲಿ ಸೇರುವ ತದ್ಧಿತ ಪ್ರತ್ಯಯ. 'ಮಿಾಂಗುಲಿಗ' ಪರಾ. [- ಕುಲಿ$_1$ + - ಗ]

**ಕುಲಿಗು** 'ಕುನುಂಗು' ನೋ.

**ಕುಲಿಮೆ** 'ಕೊಲಿಮೆ' ನೋ.

**ಕುಲಿಲಿ,** ಕುಲಿಲು, ಕುಲುಲು (ನಾ). = ಕುಲಿಕುಲಿ: ಕೊಲಲು ಮಲ ತುನಿಲುತ ಕುಲಿಲಿಯೆಂಬ ಕಾಲದೊಳಗೆ ಕಾಯುವುರಿದೋಡುರಿಯಲೆಂದು ಜೀವವಿರ್ದ ಮಾರಿಯಂತೆ (ಸಾನಂಚ. ೬-೩೭); ಖೋ ಕುಲಿಲಿ ಖೋ ಎಂದು ಬಂದನು (ಶರಲೀ. ೫೪೩-೭); ಕುಲಿಲೆನುತಾಲಿ ಬೊಬ್ಬಿಱಿದು (ಮೋಳಪು. ೩-೧೧೦). **ಕುಲಿಲು.** 'ಕುಲಿಲಿಡು' ಪರಾ. **ಕುಲುಲು.** 'ಕುಲುಲುಗುಟ್ಟು' ಪರಾ. [← ತಮಿ. ಕುಲಿಲಿ]

**ಕುಲಿಲಿಡು** (ಕ್ರಿ). ಕಳಕಳರವ ಮಾಡು; ಜಯಘೋಷ ಮಾಡು: ಕುಲಿಲಿಟ್ಟು ಕೊಂಡಾಡುತಿಹರ ಬೊಬ್ಬೆಯಲಿ ದಿಗುವಳೆಯ ಕಂಪಿಸಲು (ಅಮುಸಾಂ. ೩-೧೧೪). [ಕುಲಿಲು (< ಕುಲಿಲಿ) + ಇಡು$_1$]

**ಕುಲಿಲು** 'ಕುಲಿಲಿ' ನೋ.

**ಕುಲಿಶ,** ಕುಳಿಶ (ನಾ). ೧. ಇಂದ್ರನ ಆಯುಧ; ವಜ್ರಾಯುಧ: "ಇಂದ್ರಾಯುಧಂ ದಂಭೋಳಿಯಶನಿ ಕುಲಿಶಂ" (ಮಂಗರಾ. ೧೩-೫); ಅಂತು ಕುಲಿಶಾಭಿಘಾತದಿಂ ನೀಲಾಚಲಮೆ ಕೆಡೆವಂತೆ ಕೆಡೆದು (ಗದಾಯು. ೮-೨೭ವ); ಆವನಂ ಕರಸಿದನು ಮದನಗಿರಿಕುಲಿಶನು (ಸಿದ್ಧರಾ. ೪-೭೦). ೨. ವಜ್ರ: ಮಾಣಿಕ ಮಣಿಗಂಭ ಕುಲಿಶದ ಕುಮುದವಟ್ಟಿಗೆ ಪಸುರ್ಗಲ್ಲ ಮೇಲ್ನೆಲೆಯ ಮುಚ್ಚಳ (ಶ್ರೀಪಾಲ. ೬-೫೧). ೩. ಒಂದು ಜಾತಿಯ ಮಿಾನು: "ಶಾಲಃ; ಶಲಕಃ, ಕುಲಿಶಃ ರಾಜೀವಃ, ಲೋಹಿತಃ, ಪಲ್ಲವಕಃ - ಈ ೬ ಮತ್ಸ್ಯದಭೇದಂಗಳ್" (ಹಲಾಯು. ೧೯೯-೩೨). ೪. [ಛಂದ] ಮೂರು ಲಘುವುಳ್ಳ ಅಕ್ಷರ ಗಣ; ನಗಣ: ಕುಲಿಶ ಭೂಯುಗ್ಮಂ ನೆಲಸಿದಂದಕ್ಕುಂ... ಸುಲಲಿತಂ ವೃತ್ತಂ (ಛಂದೋಂಬು. ೨-೮೧). **ಕುಳಿಶ:** ೧. ಹಳ ಕುಳಿಶ ಶಂಖಚಕ್ರಲಾಂಛಿತಮಪ್ಪಡಿವಜ್ಜೆಯಂ ಕಂಡು (ಪಂಪಭಾ. ೧೩-೭೭ ವ); ರಿಪುಗಿರಿಕುಳಿಶಂ (ನೇಮಿಪು. ೭-೨೦೫). [ಸಂ.]

**ಕುಲಿಶಗೊಳ್** (ಕ್ರಿ). ೧. ವಜ್ರಾಯುಧವನ್ನು ಹಿಡಿ. ೨. ವಜ್ರಾಯುಧದಿಂದ ಪೆಟ್ಟುತಿನ್ನು, —ಹೊಡೆಸಿಕೊಳ್ಳು: ಕುಲಿಶಗೊಂಡ ಮಹಾದ್ರಿಯಂತಕ್ಕುಳಿಸಿ ಜರಿದಳವಳಿದು ದಿಗ್ಗಜವಳಿಗೆ ಮುಂಗಾಲೂಱಿ (ನಿಭಾಗ. ೬-೧೦-೩೧). [ಕುಲಿಶ + ಕೊಳ್$_1$]

**ಕುಲಿಶಧರ,** ಕುಳಿಶಧರ (ನಾ). ೧. ವಜ್ರಾಯುಧವನ್ನು ಹಿಡಿದವನು; ಇಂದ್ರ: ಕುಲಿಶಧರ ಮರ್ಕಟದ ವೇಷವ ತಳೆದು ಕೀಳುವನದ್ರಿಗಳ ನೆನೆ (ಕೌಶಿರಾ. ೧೬-೯); ಬಿಡು ಬಿಡ್ಯೆ ನೀಂ ಕುಲಿಶಧರ ವೀರನೆನೆಂದೆಂಬ ನುಡಿಯನು (ವೀಕ್ಷಿಪು. ೩-೨೧-೧೦). ೨. = ಕುಲಿಶ ೪: ಕುಲಿಶಧರಾರ್ಕಯುಗಂಗಳ ಮುಂದಾ ಜಲಗಣಮೊಪ್ಪಿರೆ ಬಂದು ವಿರಾಮಂ ಕುಲಗಿರಿಯೊಳ್ನಿಲೆ... ಲಲಿತ ಪದಂ ಪೆಸರಿಂ (ಛಂದೋಂಬು. ೨-೧೩೩). **ಕುಳಿಶಧರ:** ೧. ಇಕ್ಷ್ವಾಕು ವಂಶ ಚೂಡಾಮಣಿಯಂ ಕುಳಿಶಧರಂ ಪೊಗಟ್ಟು (ಅಜಿಪು. ೫-೭). [ಸಂ.]

**ಕುಲಿಶಧಾರಿ** (ನಾ). ವಜ್ರಾಯುಧವನ್ನು ಧರಿಸಿದವನು; ಇಂದ್ರ: (ಕ). [ಸಂ. ಕುಲಿಶಧಾರಿನ್]

**ಕುಲಿಶಭೀತಿ** (ನಾ). ವಜ್ರಾಯುಧದ ಬೆದರಿಕೆ: ಜಲಧಿಯೊಳು ಜಂಗುಳಿಸಿ ಕುಧರಕೆ ಕುಲಿಶಭೀತಿಯ ಬೀಱು (ಕುವ್ಯಾಭೀ. ೩-೧೯). [ಕುಲಿಶ + ಭೀತಿ]

**ಕುಲಿಶವಿಘಾತ** (ನಾ). ೧. ವಜ್ರಾಯುಧದ ಹೊಡೆತ. ೨. ಮುಷ್ಟಿಯುದ್ಧದಲ್ಲಿ ಒಂದು ಬಗೆಯ ಪ್ರಹಾರ: ಕುಲಿಶವಿಘಾತಮೆಂಬ ದೃಢಮುಷ್ಟಿವಿಘಾತಮೆಂಬ ದೃಢಮುಷ್ಟಿವಿಘಾತದಿನುಣ್ಕೆ ಪಾಯ್ವಿನಂ (ಜಗವಿ. ೪-೫೭). [ಕುಲಿಶ + ವಿಘಾತ]

**ಕುಲಿಶಹತಿ** (ನಾ). ವಜ್ರಾಯುಧದ ಪೆಟ್ಟು: ಕುಲಿಶಹತಿಯಲಿ ಕುಲಶಿಲೋಚ್ಚಯವಿಳೆಗೆ ಕೆಡೆವಂದದಲಿ (ಕುವ್ಯಾದ್ರೋ. ೬-೪) [ಕುಲಿಶ + ಹತಿ]

**ಕುಲಿಶಹಸ್ತ** (ನಾ). ವಜ್ರಾಯುಧವನ್ನು ಕೈಯಲ್ಲಿ ಹಿಡಿದವನು; ಇಂದ್ರ: (ಕ). [ಕುಲಿಶ + ಹಸ್ತ]

**ಕುಲಿಶಾಯುಧ,** ಕುಳಿಶಾಯುಧ (ನಾ). ೧. ವಜ್ರಾಯುಧ: ತನ್ನ ಸಾಮಾನ್ಯಾಯುಧಮಂ ಕುಲಿಶಾಯುಧಮೆಂದು ಬಗೆದು (ಪಂರಾಮಾ. ೧-೧೩೪ ವ). ೨. ವಜ್ರಾಯುಧವನ್ನುಳ್ಳವನು; ಇಂದ್ರ: ಜಲ ಗಂಧಾಕ್ಷತೆ... ಕುಲಿ [ಪಾಠಾಂ. ಳಿ] ಶಾಯುಧನರ್ಚಿಸೆ ತಳತಳ ತೊಳಗಿದುವೆಳಸಿ ಬಳಸಿ ಜಿನನಡಿದಳಿರೊಳ್ (ಆದಿಪು. ೭-೧೦೪). **ಕುಳಿಶಾಯುಧ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕುಲಿಶ + ಆಯುಧ]

**ಕುಲಿಶಾವನ** (ನಾ). ಒಂದು ಬಗೆಯ ಆಯುಧ: ಅನ್ನಿಜ ಸುಲದಿ ಕಂಬು ಕಂಟ ಕುಲಿಶಾವನ ಶಿತ್ರಾ ನಂದಿಕೋಲು ಸಂಗಮೇಶ್ವರನ ನುಡಿಗೆ ಸಬಳ ...ಮೊದಲಾದ ಬತ್ತೀಶಾಯುಧ (ಎಕ. XVI, ಗುಬ್ಬಿ. ೭೪-೨೦; 1672). [?]

**ಕುಲಿಶಾಸ್ತ್ರ,** ಕುಳಿಶಾಸ್ತ್ರ (ನಾ). ೧. ವಜ್ರಾಸ್ತ್ರ: ಕುಲಿಶಾಸ್ತ್ರದ ಪಿಳ್ಕು ನಾರಿಯೊಳ್ ಕೋದು ಕದಂಪನೆಯ್ದೆ ಧನುವಂ ತೆಗೆದರ್ವಿಸಿದಂ ಜನಾರ್ದನಂ (ಪಂರಾಮಾ. ೧೪-೧೭೫). **ಕುಳಿಶಾಸ್ತ್ರ:** ೧. ಪೊಳಲಿಚರೆಲ್ಲ ಕೆಟ್ಟೋಡಿದರೊದಱಿದರ್ ಕುಳಿಶಾಸ್ತ್ರದಾರಕರ್ (ವರ್ಧಸಾಂ. ೧೧-೨೦). ೨. ದೇವೇಂದ್ರ: ಸಿಂಹಾಸಂಧಿಯೊಳ್ ಬಾಲನಂ ಕುಳಿಶಾಸ್ತ್ರಂ ಪಿರಿದುಂ ವಿಭೂತಿವೆರಸಿಟ್ಟೀಂ ಸಂತಸಂಬಟ್ಟನೋ (ಆದಿಪು. ೭-೧೦೯). [ಕುಲಿಶ + ಅಸ್ತ್ರ]

**ಕುಲಿಶಿ,** ಕುಳಿಶಿ (ನಾ). ಇಂದ್ರ: ಕುಲಿಶಿಯ ತೋಳ್ಗಳೊಳಮುರಸ್ಥಲದೊಳ್ (ಅಜಿಪು. ೫-೨೦); ಪೌಲೋಮಿ ಬಂದಳ್ ಕುಲಿಶಿಗಪಜಯ ಶ್ರೀಯೆ ಬರ್ಪಂದದಿಂದಂ (ಜಗವಿ. ೧೩-೫೧). **ಕುಳಿಶಿ:** ಪಳಿಕಿನ ಕುಂಭದಿಂ ಕುಳಿಶಿ ಪೊಯ್ವ ಪಯೋರಸಧಾರೆ (ಪುಷ್ಪಪು. ೧೧-೨೬). [ಸಂ. ಕುಲಿಶಿನ್]

**ಕುಲಿಸ** (ನಾ). (?): ಬಸವಣ್ಣನಂಗದಲ್ಲಿ ಹರಿದು ಚೆನ್ನಬಸವಣ್ಣನ ಹೃದಯದಲ್ಲಿ ಮೂಡಿ ಪ್ರಭುದೇವರ ಕೈಯಲ್ಲಿ ಸಿಕ್ಕಿದೆಯಲ್ಲಾ ಸಿಕ್ಕಿ ನಿನ್ನ ಕುಲಿಸದ ಹೊಲಸೇಕೆ ಅಡಗದು? (ಸರ್ವವ. ೫೯-೩೧೪). [?]

**ಕುಲೀನ,** ಕುಳೀನ (ಗು). ೧. ಒಳ್ಳೆಯ ಕುಲದಲ್ಲಿ ಹುಟ್ಟಿದ; ಸತ್ಕುಲಪ್ರಸೂತನಾದ : ಕುವರಿ ಕುಲೀನನಾದ ಪತಿಗೊಪ್ಪುವ ಪಟ್ಟದ ರಾಣಿಯಾಗಿ (ಶಾಕುಂತ. ೫೭-೯೭); ಸಪ್ತಗ್ರಾಮದಲ್ಲಿ ಕುಲೀನನಾದ ಒಬ್ಬ ಬ್ರಾಹ್ಮಣನಿದ್ದನು (ಬಂಕಿಮ. ೧೫೮). ೨. ಮನೆತನಕ್ಕೆ ಸೇರಿದ; ಕುಲಕ್ಕೆ ಸಂಬಂಧಪಟ್ಟ: (ಕ). (ನಾ). ೩. ಕುಲಜ; ಜಾತಿವಂತ; ಒಳ್ಳೆಯ ಕುಲದವನು : ಮಾನೋನ್ನತ ನಿರವದ್ಯ ಕುಲೀನ ಮಹಾಪುರುಷ (ಶಾಂತಿಪು. ೩-೭೭); ಉತ್ತಮ ಕುಲೀನನತ್ಯಧಿಕ ವಿಪ್ರಂ (ಹರಿಕಾ. ೧೦-೧೭); ಅತ್ತೆಮಾವ ಇರುವ ದೊಡ್ಡದೊಂದು ಕುಲೀನರ ಮನೆಗೆ ಸೇರಿಸಬೇಕೆಂದು ನಮ್ಮ ಹಂಬಲ (ಸಂಸ್ಕಾರ. ೧೩೮).

**ಕುಳೀನ :** ೧. ಮಹಾದೇವಿಯುಮಖಿಲಾಂತಃಪುರಮುಂ ಕುಳೀನ ರಾಜಕಮುಂ ಸಾಮಂತರು (ಶಾಂತಿಪು. ೯-೧೬೦). [ಸಂ.]

**ಕುಲೀನತ್ವ** (ನಾ). ಕುಲಜನಾಗಿರುವಿಕೆ; ಕುಲಗೌರವ. "ಕೌಲೀನ - ಕುಲೀನತ್ವ" (ಗಂಗಾಮು. ೧೦೫). [ಸಂ.]

**ಕುಲೀನವೃತ್ತಿ** (ನಾ). ೧. ಕುಲೀನ ನಡವಳಿಕೆ; ಸದಾಚಾರ. ೨. ಭೂಮಿಯಲ್ಲಿ ಅಡಗಿರುವಿಕೆ. ೧, ೨ : ಮತ್ತಮಾವನಂ ಬಹುಲ ತಾನ್ವಿತಮಾಗಿಯುಂ ಅಶಿಶಿರ ಬಾಧಾವಳಂಬಮುಲ್ತು, ವಿನೂತಜಾತಿಯುತಮಾಗಿಯುಂ ಕುಲೀನವೃತ್ತಿವರ್ತನಮುಲ್ತು (ಚಂದ್ರಪ್ರ. ೧೫-೪೦ ವ). [ಕುಲೀನ + ವೃತ್ತಿ]

**ಕುಲೀನೆ** (ನಾ). = ಕುಲಜೆ : ನೃಪೇಂದ್ರನಂ ಕಾಣುತಾ ಕೇಕಯ ಕುಲೀನೆಯಾಕುಲೆಯಾದಳೆದೆಗರಗಿ (ಶ್ರೀರಾಮಾ. ೭೧-೪೭೧). [ಸಂ. ಕುಲೀನಾ]

**ಕುಲೀರ,** ಕುಳೀರ (ನಾ). ೧. ಏಡಿ; ನಳ್ಳಿ: (ಕ). **ಕುಳೀರ:** ೧. "ಕುಳೀರಮದು ಕರ್ಕಿ ತರ್ಕಿಸಲ್ ಕರ್ಕಟಕಂ" (ವಸ್ತುಕೋ. ೨೩-೬); ಕುಳೀರದ ಪಿಶಿತಂ ಮಣೀಶಿಲೆ ಕುಸುಂಬೆಯ ಪೂವರಿದಾಳಂ (ಲೋಕೋಪ. ೧೦-೨೭); ವಾರಾಶಿಯ ಮಣಿಗಣಮಂ ಕ್ರೂರ ಕುಳೀರಕ್ಕೆ ಸುಗಿದು ಸಾಂಯಾತ್ರಿಕನೇಂ ತಾರನೆ (ಪಂರಾಮಾ. ೧-೩೦). ೨. [ಜ್ಯೋತಿ] ಹನ್ನೆರಡು ರಾಶಿಗಳಲ್ಲೊಂದು; ಕರ್ಕ; ಕರ್ಕಾಟಕ: ಶುಕ್ರವಾರ ದೊಳತ್ಕಂತ ಕುಳೀರ ಲಗ್ನದೊಳ್ ಕುಳೀರದೊಳ್ ಕಾಣ್ಬೊಡದಂ ವಿಧು (ಜಾತಕ. ೭-೨೨); ಕುಳೀರ ರಾಶಿಯನನುವಿಂದಂ ಪೊರ್ದಿ ದಕ್ಷಿಣಾಯನ ಮನೊಡರ್ಚೆ (ವಿಷ್ಣುಪು. ೭-೩೭). [ಸಂ.]

**ಕುಲುಂಕು** 'ಕುಲುಕು₁' ನೋ.

**ಕುಲುಂಗು** 'ಕುಸುಂಗು' ನೋ.

**ಕುಲುಕಣೆ** (ನಾ). ೧. ಕುಲುಕಾಟ; ಕುಲುಕುವಿಕೆ. ೨. ಕೈ ಕುಲುಕುವುದು; ಹಸ್ತಲಾಘವ: ಅವನು . . . ಮೇಲೇಳದೆಯೆ ಕುಲುಕಣೆಗಾಗಿ ತನ್ನ ಕೈ ಮುಂದೆ ಚಾಚಿದನು (ಪುನರು. ೫೨೦). [ಕುಲುಕು₁ + -ಅಣೆ₄]

**ಕುಲುಕಾಟ** (ನಾ). ೧. ಅಲುಗಾಟ; ತೂಗಾಟ: ಗಾಡಿಯ ಕುಲುಕಾಟದಿಂದ ಕಣ್ಣಿಗೆ ಸ್ವಲ್ಪ ಜಂಪು ಹತ್ತಿದೆ ಹೆಗ್ಗಣದಯ್ಯನು (ಗುರುದಾ. ೨೨); ಬಂಡಿಯ ಕುಲುಕಾಟದಿಂದ ಅತ್ತಿಂದಿತ್ತ ಅಲುಗಾಡುತ್ತ (ಪುನರು. ೫೫೬). ೨. = ಕುಲುಕಣೆ. ೨. [ಕುಲುಕು₁ + ಆಟ]

**ಕುಲುಕಾಡಿಸು** (ಕ್ರಿ). ಅಲುಗಾಡಿಸು; ಹೊಯ್ದಾಡಿಸು: ಗೇಬ್ರಿಯಲ್ ಎಂಬ ಒಬ್ಬ ಯಹೂದಿಯೂ ನನ್ನ ಮನಸ್ಸನ್ನು ಕುಲುಕಾಡಿಸಿದ್ದನು (ನಿಬಂಧ. II, ೫೪). [ಕುಲುಕು₁ + ಆಡಿಸು]

**ಕುಲುಕಿಸು** (ಕ್ರಿ). ಅಲುಗಾಡಿಸು; ಅಲ್ಲಾಡಿಸು: ಆಗಾಗ ಸೀಸೆಯನ್ನು ಕುಲುಕಿಸುತ್ತಾ ಇರಬೇಕು (ಅಡುಸೌ. ೪೫). [ಕುಲುಕು₁ + -ಇಸು₃]

**ಕುಲುಕು₁,** ಕುಕ್ಕು₃, ಕುಲುಂಕು (ಕ್ರಿ). ೧. ಒತ್ತಿ ತುಂಬು; ತುರುಕಿತುಂಬು: "ಕುಲುಕು - ಗಾಢ ಪೂರಣೇ (ಹೆಚ್ಚಾಗಿ ತುಂಬು)" (ಶಮುಧಾ). ೨. ಅಲುಗಾಡಿಸು; ಹೊಯ್ದಾಡಿಸು: ತಾನೇ ಕೈಚಾಚಿ ಹಸ್ತವನ್ನು ಕುಲುಕುತ್ತ ನುಡಿದಳು (ಹೇಮಂತ. ೨೦೭); ಎಣ್ಣೆಯ ಪಸೆ ಇಲ್ಲವಾದರೆ ತಣ್ಣೀರಿನಲ್ಲಿ ಕುಲುಕಬಹುದು (ಅಡುಸೌ. ೪೩). ೩. ಮೈಯನ್ನು ಕುಣಿಸು; ಅಳ್ಳಾಡಿಸು : ಹುಡುಗರೆಲ್ಲರೂ ಸಣ್ಣದಾಗಿ ನಗುವಿನಿಂದ ಕುಲುಕುವುದನ್ನು ಕಂಡು ಅವರು ಬೆರಗಾದರು (ಸರ್ವಮಂ. ೯೩); ಕುದುರೆಗಳು ಓಡುವಾಗ ಒಟ್ಟಾಗಿ ಕುಲುಕುತ್ತಿದ್ದರೆಂದು ಆಶ್ಚರ್ಯ ಪಡುತ್ತಿದ್ದನು (ಮಲೆನಾ. ೭). ೪. ಬೆಡಗು ಬಿನ್ನಾಣ ತೋರು; ಒನಪುಮಾಡು: (ಕ). **ಕುಕ್ಕು₃ :** ೪. ತಿವಿ; ಬಡಿ: . . . ಸೌದೆಯ ತುಸು ಕುಕ್ಕಿ ಅಲುಗಿಸುತಿದ್ದರೆ ಒಲೆ ಹೊತ್ತಿ ಉರಿವುದು ಬೇಗ (ಇಂಚಾಪ. ೧೨೭-೨೨). **ಕುಲುಂಕು :** ೩. ನಿಂದಿರು ಕುಲುಂಕದಿರೆ ರಂಕೆಗಳ (ಗಿರಿವಿಂ. ೧-೧).

[ದೇ. ‖ ತಮಿ. ಕುಲುಙ್ಙು, ಕುಲುಕ್ಕು; ಮಲ. ಕುಲ್ಙುಙ್ಙು, ತುಳು. ಕುರ್ಕ್; ಕೊಡ. ಕುಲಿಂಗ್, ಕುಲಿಕ್; ತೆಲು. ಕುಲುಕು]

**ಕುಲುಕು₂** 'ಕುರುಕು₂' ನೋ.

**ಕುಲುಕು₃** (ನಾ). ೧. ಅಲ್ಲಾಟ; ಕುಲುಕಾಟ: ಗಾಡಿಯ ಕುಲುಕು ಅವರಿಗೆ ಹಿಂಸೆಯನ್ನುಂಟುಮಾಡಿತು (ಮುನಿಮಾ. ೯). ೨. ಬಿನ್ನಾಣದಿಂದ ಮೈಯನ್ನು ಕುಣಿಸುವಿಕೆ; ಒನಪು: ಒಂದು ಕುಲುಕಿಗೆ ಜಗವ ಕುಲುಕುತಿದ್ದಾ ದೇಹವಿಂದು ದುರ್ಬಲವಾಗಿ ನಡುಗುತಿಹುದು (ನನ್ನರ. ೮); ಹರಯವು ಮೈಯನು ಮುಪ್ಪಿಗೊಪ್ಪಿಸುತಿಹುದು ಆದರೂ ಏತಕೀ ಕುಲುಕು (ಚಂದ್ರವೀ. ೭೪-೫೪). ೩. ಕುದುರೆಗಳ ನಡಗೆಯಲ್ಲಿಯ ಕುಕ್ಕೋಟ. 'ಕುಲುಕೋಟ' ಪರಾ. [< ಕುಲುಕು₁]

**ಕುಲುಕುಗಾತಿ** (ನಾ). ಒಯ್ಯಾರಿ; ಒನಪುಗಾತಿ: (ಕ). [ಕುಲುಕು₃ + -ಗಾತಿ₂]

**ಕುಲುಕುಲು** (ನಾ). ನಗುವನ್ನು ಸೂಚಿಸುವ ಒಂದು ಅನುಕರಣ ಶಬ್ದ: ನಮ್ಮೆಲ್ಲರ ಮಾತು ಕೇಳಿ ಕುಲುಕುಲು ನಕ್ಕಿರಬಹುದು (ಮೋಹಿನಿ. ೯೩); ಒಳಹದುಳದಲಿ ಕುಲುಕುಲು ನಗುವ ಚುಮು ಚುಮು ನಸುಕಿನೊಲು (ಜೀವಲ. ೯).

**ಕುಲುಕೋಟ** (ನಾ). ಕುಕ್ಕೋಟ; ಕುದುರೆಯಂತೆ ನಡೆಯುವುದು : ನನ್ನ ಕುದುರೆಯು ಕುಲುಕೋಟಕ್ಕೆ ಪ್ರಾರಂಭಿಸಿತು (ಚಂಗಾಳ್ವ. ೩೩); ಅವನು ಕುಲುಕೋಟದಲ್ಲಿ ಕುದುರೆಗಳನ್ನು ಓಡಿಸಿದನು (ಪುನರು. ೫೫೮). [ಕುಲುಕು₃ + ಓಟ]

**ಕುಲುಮೆ** 'ಕೊಲಿಮೆ' ನೋ.

**ಕುಲುಮೆಕಂದಾಯ** (ನಾ). ಕಮ್ಮಾರರ (ಕುಲುಮೆಯ) ಮೇಲೆ ಹಾಕುವ ತೆರಿಗೆ: (ಕ). [ಕುಲುಮೆ (< ಕೊಲಿಮೆ) + ಕಂದಾಯ]

**ಕುಲುಮೆಗಾಜಿ** (ನಾ). ಕಮ್ಮಾರ: ಕಲಹಕ್ಕೆ ಇದಿರಾಹ ಕುಲುಮೆ ಗಾಜಿರಿಗೇಕೆ ಮೂಜಕ್ಷರ ಒಲವರ (ಕೋಲಶಾಂ. ೪೮). [ಕುಲುಮೆ (< ಕೊಲಿಮೆ) + -ಗಾಜಿ]

**ಕುಲುಲು** 'ಕುಲಿಲಿ' ನೋ.

**ಕುಲುಲುಗುಟ್ಟು** (ಕ್ರಿ). ಕಲಕಲ ಶಬ್ದಮಾಡು: ಎಲೆಲೆ ಬಾಬಾ ಕೆಟ್ಟೆವೆನುತವೆ ಕುಲುಲುಗುಟ್ಟುತ ಮೀಟಿ ಕೆಡಹಿದರಧಟರಾ ಧನುವ (ಕೌಶಿರಾ. ೨-೩೨). [ಕುಲುಲು (< ಕುಲಿಲಿ) + ಕುಟ್ಟು₁]

**ಕುಲುಸೆ** (ನಾ). ಎಲೆಗಳ್ಳಿ: ಕುಲುಸೆಯ ದುಗ್ಧದೊಳೆಂದಿರೆ ಪಲವುಂ ಸೂಜಿಯ್ ತೊಯ್ದು ಪೂಗ ಫಳಮಂ (ಲೋಕೋಪ. ೯-೧೨೫). [?]

**ಕುಲೆಸೊಪ್ಪು** (ನಾ). ಒಂದು ಬಗೆಯ ಸೊಪ್ಪು: ಅದೊಂದು ಕುಲೆ ಸೊಪ್ಪಿನ ಕಾಟವಂತೆ. ಆ ಸೊಪ್ಪು ಕಾಡುದಾರಿಯಲ್ಲಿ ನಮಗೆ ತಾಗಿದರೆ ನಮ್ಮ ದಾರಿ ಖಂಡಿತಕ್ಕೂ ತಪ್ಪಿ ಗೋಳಾಗುವುದು (ಕಂಬಹು. ೭೪). [? + ಸೊಪ್ಪು]

**ಕುಲೇಂದ್ರ** (ನಾ). ಕುಲಕ್ಕೆ ಒಡೆಯ; ಮನೆತನದ ಮುಖಂಡ: ಹಿಮಕರ ಕುಲೇಂದ್ರ ಕೇಳ್ (ಜೈಮಿಭಾ. ೨೦-೧). [ಕುಲ + ಇಂದ್ರ]

**ಕುಲೋದ್ದಾಮ** (ನಾ). ಕುಲದಲ್ಲಿ ಶ್ರೇಷ್ಠನಾದವನು: ನೃಪಕುಲೋದ್ದಾಮ ಜನಮೇಜಯ (ಜೈಮಿಭಾ. ೧೬-೬೦). [ಕುಲ + ಉದ್ದಾಮ]

**ಕುಲೋದ್ಧಾರಕ** (ನಾ). ಕುಲ ಅಥವಾ ವಂಶಕ್ಕೆ ಏಳ್ಗೆಯನ್ನುಂಟು ಮಾಡುವವನು: (ಕ). [ಕುಲ + ಉದ್ಧಾರಕ]

**ಕುಲೋದ್ಭವ** (ನಾ). ೧. ವಂಶದಲ್ಲಿ ಹುಟ್ಟಿದವನು: ಶಶಿಕುಲೋದ್ಭವ ಯುಧಿಷ್ಠಿರ ನೃಪನ ಕುದುರೆ ಗಡ (ಜೈಮಿಭಾ. ೧೬-೨). ೨. ಕುಲೀನ; ಕುಲಜ. [ಕುಲ + ಉದ್ಭವ]

**ಕುಲೋದ್ಭೂತ** (ನಾ). ಕುಲೀನ; ಸತ್ಕುಲದಲ್ಲಿ ಹುಟ್ಟಿದವನು: ಕುಲೋದ್ಭೂತರುಂ ತತ್ವವೇದಿಗಳುಂ ಮನೆವಾಟಿನಾಸೆವಡಲಾಗದು (ಶಾಂತಿಪು. ೪-೬೨ ವ). [ಕುಲ + ಉದ್ಭೂತ]

**ಕುಲೋನ್ನತಿ** (ನಾ). ಕುಲದ ಅಭ್ಯುದಯ,— ಏಳಿಗೆ: ಕನಕಶಾಂತಿ ಕುಲೋನ್ನತಿ ಪುಟ್ಟೆ ಪುಟ್ಟಿದಂ (ಶಾಂತಿಪು. ೮-೧೧೬). [ಕುಲ + ಉನ್ನತಿ]

**ಕುಲೋರ್ವೀಧರ** (ನಾ). = ಕುಲಗಿರಿ: ಕುಲೋರ್ವೀಧರಮೇಱುಂ ದ್ವೀಪವೇಱುಂ ಬೆರಸು (ಜಗವಿ. ೩-೬೩). [ಕುಲ + ಉರ್ವೀಧರ]

**ಕುಲ್ಮಾಷ** (ನಾ). ೧. ಹುಳಿಗಂಜಿ. ೨. ಅರ್ಧ ಬೆಂದ ಧಾನ್ಯ. ೩. ಅಲಸಂದಿ; ಕಾಡುದ್ದು: "ಯಾವಕಃ, ಕುಲ್ಮಾಷಃ – ಕಾಡುದ್ದು ಎಂಬರು" (ನಾಚಿರಾ. ಕ); "ಯಾವಕಃ, ಕುಲ್ಮಾಷಃ ೨ ಅಲಸಂದಿಗೆ ಕಾಳು, ಕಾಡುವುದ್ದಿಗೂ ಹೆಸರು" (ಸಿದ್ಧಾಂತಿ. ೨೩೯). [ಸಂ.]

**ಕುಲ್ಯ**$_1$ (ನಾ). ಹಳ್ಳ; ಕಾಲುವೆ: ಕೆರೆತೊರೆ ಬೆಂಚೆ ಕುಲ್ಯಂಗಳಿಂ (ಕುಮಾವ್ಯಾ. ೨-೪); ನದನದಿ ಕುಲ್ಯ ಜಲಪೂರದಿಂ (ಜ್ಞಾನಚಂ. ೧-೬). ೨. ಕಂದಕ, ಅಗಳು. ೩. ಒಂದು ಅಳತೆ; ಎಂಟು ದ್ರೋಣ. [< ಸಂ. ಕುಲ್ಯಾ]

**ಕುಲ್ಯ**$_2$ (ಗು). ೧. ವಂಶದಲ್ಲಿ ಹುಟ್ಟಿದ; ಕುಲಕ್ಕೆ ಸಂಬಂಧಿಸಿದ. (ನಾ). ೨. ಕುಲಜ; ಕುಲೀನನಾದ ವ್ಯಕ್ತಿ: ದಿವಸದಾಯವ್ಯಯ ಸಂಭಾಷಣಂಗಳಿಂ ಕುಲ್ಯರಂ ಸೌಶೀಲ್ಯವೃತ್ತಿಗೆ ಸಲಿಸಿಯುಂ (ಚಂದ್ರಪ್ರ. ೨-೬೦ ವ). ೩. ಕುಟುಂಬದ ಯೋಗಕ್ಷೇಮವನ್ನು ವಿಚಾರಿಸುವುದು. ೪. ಮೂಳೆ; ಎಲುವು: "ಅಸ್ಥಿ, ಧಾತು, ಕೀಕಸಂ, ಕುಲ್ಯಂ—ಈ ೪ ಎಲ್ವು" (ಹಲಾಯು. ೧೧೪-೧೧). [ಸಂ.]

**ಕುಲ್ಯ**$_3$ (ನಾ). ಒಂದು ಜಾತಿಯ ಕಾಡು ಜನಾಂಗ: ಕತ್ತಿಗರು ಕುಲ್ಯರು ಬಿಲ್ಲರು ಎಂಬ ಕಾಡು ಜನರು ಗುಜರಾತ್ ದೇಶದ ಕಾಡುಗಳಲ್ಲಿ ವಾಸವಾಗಿದ್ದಾರೆ (ಭೂಗೋಳ. ೭೭). [?]

**ಕುಲ್ಯೆ** (ನಾ). ೧. ಕುಲೀನಳಾದ ಹೆಂಗಸು; ಉತ್ತಮಕುಲದಲ್ಲಿ ಹುಟ್ಟಿದವಳು: "ಉನ್ನತ ಕುಲದ ಕಾಂತೆಯುಂ ಕುಲ್ಯೆಯೆಂಬುದು" (ಮಂಗರಾ. ೧೩೯-೬). ೨. ತೊರೆ; ಹಳ್ಳ; ಕಾಲುವೆ; ಸಣ್ಣಹಳ್ಳ: "ಸಿಂಧುಃ . . . ಕುಲ್ಯಾ; ದ್ವೀಪವತೀ, ಸರಿತ್, ರೋಧೋವಕ್ರಾ—ಈ ೨೧ ತೊಱೆ" (ಹಲಾಯು. ೧೧೦-೪೪). ೩. ಕಂದಕ; ಅಗಳು. ೪. ಬದನಿಕೆಗಿಡ; ಗುಳ್ಳ. ೫. ಲಕ್ಷ್ಮಿ: "ಕುಲವಧು ನದಿಮೋಹಂ ರಮಾರಣ್ಯ ಕುಲ್ಯಾಭಿಧಾನಂ" (ನಾನಾರ. ೪೩). [ಸಂ. ಕುಲ್ಯಾ]

**ಕುಲ್ಲ** (ನಾ). ೧. ದುಷ್ಟನಾದವನು; ಅಲ್ಪ; ನೀಚ: ಕುಲ್ಲರೆಡೆಯಲ್ಲೋದಿ ಕೊಂಕದಿರ್ದುರ್ವೆನೆಂದು (ಲಿಂಗಪು. ೧-೨೨). ೨. ಚಿಕ್ಕವನು; ಕಿರಿಯವನು: ತಿಳಿದವರ್ ತಿಳುಪಬೇಹುದು ಕುಲ್ಲರಾದರಿಗೆ (ವಿವೇಭ. ೮-೫೩). (ಗು). ೩. ಚಿಕ್ಕದಾದ; ಸಣ್ಣದಾದ. ೪. ಕಿರಿಯ; ಕನಿಷ್ಠ. ೫. ನೀಚ; ಅಧಮ. [< ಸಂ. ಖುಲ್ಲ]

**ಕುಲ್ಲತನ**, ಖುಲ್ಲತನ (ನಾ). ೧. ಸಣ್ಣತನ; ಅಲ್ಪತೆ; ಕ್ಷುದ್ರತೆ: ಸೊಲ್ಲು ಬಳ್ಳಿತ್ತಲ್ಲಾ ಎಂದು ಎಲ್ಲರೊಳಗೆ ಹೇಳುವ ಕುಲ್ಲತನ ಬಲ್ಲತನವಸೊಲ್ಲ ಅರ್ಕೇಶ್ವರ ಲಿಂಗ (ಮಧುವ. ೫೫). ೨. ಸಂಕೋಚ: ಕುಲ್ಲತನವೇಕುಳಿದ ಪಣ್ಣುಮನದಣಿಯುಂಡು . . . ಸುಖಿಸುವುದೆನಲು (ಪ್ರೌಢರಾ. ೫-೨೮). **ಖುಲ್ಲತನ**: ೧. ಎನ್ನಲ್ಲಿ ನಿಮಗೆ ಖುಲ್ಲತನ ಬೇಡ (ಸರ್ವವ. ೫೫-೨೧೧); ಖುಲ್ಲತನದಲಿ ವಿಕೃತ ವೇಷದಲಲ್ಲಮನೆ ತಾ ಬಂದನೈಸಲೆ (ಪ್ರಭುಲೀ. ೭-೧೮); ಬೆನ್ನಿತ್ತು ಓಡಿ ಬದುಕಿಕೊಳ್ಳುವ ಖುಲ್ಲತನಕ್ಕೀಡು (ಸುಗುಗಂ. ೧೧೫-೧೬). [ಕುಲ್ಲ + -ತನ]

**ಕುಲ್ಲಾ**, ಖುಲ್ಲ$_2$, ಖುಲ್ಲಾ (ಗು). ೧. ತೆರೆದ; ತೆರವಾದ; ಸ್ಪಷ್ಟವಾದ; ಪ್ರಕಟವಾದ; ವಿಸ್ತರಿಸಿದ: (ಕ). **ಖುಲ್ಲ**$_2$: ಮೊಹರು ಮಾಡಿ ಶಿರೂವ ಪ್ರಕಾರ ಖುಲ್ಲ ತಸದೀಕು (ಎಕ. III, ತಿರುಮ. ೫೬-೩೨; 1655). **ಖುಲ್ಲಾ**: ಪೋಲೀಸ್ ಚೌಕಿಗೆ ಹೋದಮೇಲೆ ಕೀಲಿ ಖುಲ್ಲಾ ಆಗಲಿ (ಹೊಸಂಸಾ. ೧೧೫). ೨. ಬರಿದಾದ; ಶೂನ್ಯವಾದ: ಧುಂಡೋಜಿಗೆ ಏನೇನೂ ಬಾರದು, ತಲೆಯಂತೂ ಖುಲ್ಲಾ (ಅರರೋ. ೨೫). [← ಹಿಂ. ಮರಾ. ಖುಲಾ]

**ಕುಲ್ಲಿ** (ನಾ). ನೀಚ ಹೆಂಗಸು: ಅಲ್ಲದೊಸ್ತುವ ಬಯಸಿ ಕುಲ್ಲಿ ತಾ ಪೋದಂತೆ . . .ಎಲ್ಲಾ ಕಾಲದಲಿ ನಾನಪರಾಧಿಯು (ಮೋಕ್ಷದೀ. ೧೦೦-೩). [ಕುಲ್ಲ + -ಇ$_2$]

**ಕುಲ್ಲು**$_1$ 'ಕೊಲ್$_1$' ನೋ.

**ಕುಲ್ಲು**$_2$ (ನಾ). ಕ್ಷುದ್ರವಾದುದು; ದುಷ್ಟವಾದುದು: ಕುಲ್ಲು ಅದು ನಿನ್ನ ಸೊಲ್ಲು (ಸುನೀತ. ೫೦); ಯಾರಾದರೂ...ಕುಲ್ಲು ನುಡಿದಾರು ಎಂದು ಅವನಂತಹಬಗೆಯವರು ಯೋಚಿಸುವರು ಸ್ವಾಭಾವಿಕ (ಸಪತಿ. ೯೦). [<ಕುಲ್ಲ]

**ಕುಲ್ಲು**$_3$ (ಗು). ಒಟ್ಟು; ಎಲ್ಲ; ಸಮಗ್ರ. [← ಹಿಂ. ಕುಲ್]

**ಕುಲ್ಲೆ** (ನಾ). ಹೊಳೆ; ನದಿ; ಹಳ್ಳ; ಕಾಲುವೆ: ಸೆಳೆನೀರಿನ ಕುಲ್ಲೆಯೊಳೊಂದೇ ಭಲ್ಲೆಯೊಳೆಳೆ ಸಸಿಲೆಯನಿಕ್ಕಡಿಗೆಯ್ವ (ಹಬ್ಬರ. ೧-೧೪೫). [< ಸಂ. ಕುಲ್ಯಾ]

**ಕುವಂಶ** (ನಾ). ಹೀನ ವಂಶ; ಕೀಳು ಕುಲ: ಆರಿಗಾವುದು ದೇಶವಾ ಸಂಸ್ಕಾರವವರಿಗೆ ಬಿಡದು ಬುದ್ಧಿಗೆ ಬೇರುಗೊಲೆಯಲ್ಲಾ ಕುದೇಶ ಕುವಂಶ ಸಂಭೂತಿ (ಕುವ್ಯಾಕ. ೯-೧೯). [ಸಂ.]

**ಕುವಕ** 'ಕುಯಕ' ನೋ.

**ಕುವತ್ತು**, ಕುವ್ವತ್ತು, ಕೂವತ್ತು, ಕೋತ್ತ, ಕೋತ್ತು, ಖುವತ್ತು (ನಾ). ೧. ತಾಕತ್ತು; ಶಕ್ತಿ; ಸಾಮರ್ಥ್ಯ; ತ್ರಾಣ: ತಮ್ಮ ಬೆವರ ಹನಿಯಿಂದ ಗಳಿಸೋ ಕುವತ್ತು ತಮಗೆ ಇಲ್ಲ (ನಡುಮ. ೧೦೫); ಕಿಕೀಟ ಕೊಳ್ಳೋ ಕುವತ್ತಿದ್ದಿದ್ದರೆ (ದರ್ಶನ. ೧೯). **ಕುವ್ವತ್ತು**: ನನ್ನ ತಡವೋ ಕುವ್ವತ್ತು ಯಾವನಿಗೂ ಇಲ್ಲ (ಪರಿಲ. ೧೩). **ಕೂವತ್ತು**: ಅವರ ಕೂವತ್ತು ಹೆಚ್ಚು; ಧೈರ್ಯವು ಬಹಳ (ಧಾರ್ಮಿಕೀ. ೨೩೨); ನೀವು ಬೇಡೋ ಅಷ್ಟು ವರದಕ್ಷಿಣೆ ಕೊಡೋ ಕೂವತ್ತು ನಮ್ಮದಲ್ಲ (ಸಮಜೀ. ೨೦೧). **ಕೋತ್ತ**: ಕೋತ ಇದ್ದರ ನಿಮ್ಮ ಓಡಿಯವರು (ಮನೆಬೆ. ೧೯). **ಕೋತ್ತು**: "ಶಕ್ತಿ, ತ್ರಾಣ" (ಜಾನಕೋ. ೪೩). **ಖುವತ್ತು**: ೨. ಶಕ್ತಿಯುಳ್ಳದು; ಬಲಶಾಲಿ: ತಿಂದು 'ಖುವತ್ತಾಗಿ' ಇದ್ದವು (ಸರ್ವಮಂ. ೧೯೪). [← ಅರ. ಕುವ್ವತ್]

**ಕುವಧೂಕ** (ನಾ). ಕೆಟ್ಟ ಹೆಂಡತಿಯುಳ್ಳವನು; ದುಷ್ಟ ಪತ್ನಿಯುಳ್ಳವನು: ಧರಣೀ ಪುತ್ರ ನಿವಾಸದೊಳ್ ನಿಲೆ ಬುಧಂ ಕೂಟ ಕ್ರಿಯಾವೇದಿ ತಸ್ಕರನದ್ರವ್ಯನಸತ್ಕವಾದಿ ಕುವಧೂಕಂ (ಜಾತಕ.೧೭-೨೨). [ಸಂ.]

**ಕುವರ**$_1$ 'ಕೊವರ$_1$' ನೋ.

**ಕುವರ**$_2$, ಕುಮರ$_1$; ಕೊಮರ, ಕೊಮಾರ$_1$, ಕೊವರ$_2$, ಕೋರ$_1$, ಗೊವರ(ನಾ). ೧. ಮಗ; ಕುಮಾರ: ಕುವರಂ ವಂಶಕೆ ಭೂಷಣಂ (ಸೋಮೇಶ. ೫); ತೊಲಗು ಕೆಲಸಾರೆಲವೊ ರಕ್ಕಸಕುಲವಿನಾಶಿಯ ಕುವರ ಸಾಯದೆ (ಕೌಶಿರಾ. ೨೬-೨೭). ೨. ತರುಣ; ಯುವಕ: ಕಂಡರು ಬಾಗಿಲ ಕೆಳದಿಯರ್ ಕುಸುಮಕೋದಂಡನಂತಿರುವ ಕುವರನ (ಕಂನವಿ. ೧೦-೨೪). ೩. ಕುಮಾರಸ್ವಾಮಿ; ಷಣ್ಮುಖ: "ಕುವರಂ ಮರಗೂಟ ಮಗಂ ನವಿಲ್ದೇರಂ ಬಗೆಯಲಱುಮೊಗಂ ತಾನೆನ್ನಲ್" (ಕವಿಕಂ. ೨೧); ಗಿರಿಜೆ ಕುವರನನೆತ್ತಿ ಮುದ್ದಾಡುತಿರಲಾಗ (ಚಬಪು. ೩೮-೧೭). **ಕುಮರ**$_1$: ೧. ತಲೆಗಳ ಕುಟ್ಟಿ ಕಳುಹಿದನು ಕುಮರ(ಮೋಹತ.೩೫-೧೫). **ಕೊಮರ**: ೧. ಶ್ರೀಮತು ಸಿಂಗ್ಯದ ನಾಯಕರ ಕೊಮರನ ನಿರೂಪದಿಂದ (ಎಕ. II, ೩೮೭-೨; 1300); ಆ ಡೊಳೇಶ್ವರೈಯ್ಯಗಳ ಕೊಮರ ಚೆಂನ ಹೊಟ್ಟೇಶ್ವರೈಯ್ಯಗಳ (ಎಕ. XI, ಹಿರಿಯೂ. ೬-೭; 1592). **ಕೊಮಾರ**$_1$: ೧. ರಾಯವೊಡೆಯರ ಕೊಮಾರ ಧನಂಜಯ ರಾಯವೊಡೆಯರು (ಎಕ. V, ಹಾಸನ. ೧೩-೧೦; 1516); ವೆಂಕಟಾದ್ರಿ ರಾಜ್ಯೆಯನವರ ಕೊಮಾರ ರಂಗಪ್ಪ ರಾಜ್ಯೆಯ್ಯನ್ನ (ಎಕ. VII, ಶಿವಮೊ. ೧೧೭-೬; ?). **ಕೊವರ**$_2$. 'ಕೊವರಾಚಾರಿ' ಪರಾ. **ಕೋರ**$_1$: ೧. ಸಂಸಾರ ಸಾರನೆನಿಸಿದಂ ಕೋರಂ (ಸೌಇಇ. IX-i, ೨೪೭-೨೮; 1147); ೨. ಕೋರನ ರೂಪೀ ರೂಪೆ ಸಾಲ್ಗುಂ ಜಗಮನೆಜಗಿಸಲ್ ವ್ಯರ್ಥಮೀ ಕೈದುವೆಂದು (ಅನಂಪು. ೬-೨೨); ಕುಮಾರ – ಕೋರ, ಕುವರ (ಶಮದ. ೨೭೫ ಪ್ರಯೋ). **ಗೊವರ**: ೨. ಪೊಸಮದುವಳುಮಾ ಕೊಳ್ವ ಗೊವರನುಂ ನಡೆದು (ಲೀಲಾವ. ೧೩-೨೨). [< ಸಂ. ಕುಮಾರ]

**ಕುವರಿ**, ಕುಮರಿ$_2$, ಕೊಮರಿ$_1$, ಕೊವರಿ, ಕೋರಿ$_3$ (ನಾ). ೧. ಮಗಳು; ಸುತೆ: ಉಪ್ಪರಿಗೆಯನೇಱಿ ಕುವರಿಯ ಮನಸಿಂಗೆ ಬಪ್ಪಂತೆ ಸುದ್ದಿವೇಳಿದಳು (ಮೋಹತ. ೨೩-೭); ಅಬುಜಜಂ ಮೊಮ್ಮನಿಂದಿರೆ ಕುವರಿ ಸುರಗಂಗೆ ಸತಿ (ಚಬಪು. ೨-೫); ಕುವರನಾದೊಡೆ ಬಂದ ಗುಣವೇನದರಿಂದ ಕುವರಿಯಾದೊಡೆ ಕುಂದೇನು (ಹದಿಬ. ೫-೮). **ಕುಮರಿ**$_2$: ೨. ಕನ್ನೆ; ಕುಮಾರಿ: ನಡೆದಳು ಕುಮರಿ ಗೀರ್ವಾಣರ ಮೊಗವ ನಿಟ್ಟಿಸದೆ (ಮೋಹತ. ೨೪-೩೬). **ಕೊಮರಿ**$_1$: ಕುಱಿತು ನೋಡುವ ನೋಟದ ಕೊಮರಿಯ ಬಗೆಯಱಿತೆಜಕದೊಳೆಜಗಿವುದು (ಹದಿಬ. ೬-೧೭); ಕತ್ತಲೊಳಿದ್ದರು ದೀಪದ ಕುಡಿಯಂತೆ ಕಾಂಬರು ಕೊಮರಿ ಸಮಂತು (ಗಾಥಾಸ. ೫-೧೫). **ಕೊವರಿ**: (೬). **ಕೋರಿ**$_3$: ಚಂದದಿಂ ನರ್ತಿಸುವ ಕೋರಿಯಪಾಂಗ ಕಾಂತಿಯದೋ (ಸನತ್ಕು. ೧-೨೧); ಹೋರಿ ಮೇಲೆ ಕೂತು ಕೋರಿಯ ನಾ ಕಂಡೆ ಊರುವಸಿಯಂತ ಮೊಕದವಳ (ಹಳ್ಳಿಬಾ. ೩೫-೬). [< ಸಂ. ಕುಮಾರಿ]

**ಕುವರು** (ಕ್ರಿ). ಮುಚ್ಚು; ತುಂಬು: ಮರುದಿನ ಬೆಂಕಿ ಎಲ್ಲೆಲ್ಲಿ ಹಬ್ಬಿದೆಯೆಂದು ನೋಡಿಕೊಂಡು ಬಂದರು. ನೆಲವೆಲ್ಲ ಕರಿಯಿಂದ ಕುವರಿತ್ತು (ಬಾಳಿಗಿ. ೫೨).

[ದೇ. ‖ ತಮಿ. ಕುಮಿ; ಮಲ. ಕುಮಿ, ಕುವಿಕ; ಕೊಲಾ. ಗುಮಿರ್]

**ಕುವರೇಂದ್ರ** (ನಾ). ಉತ್ತಮನಾದ ಮಗ; ಕುಮಾರಶ್ರೇಷ್ಠ: ಯಾದವಕುಲಾರ್ಣವವ ಪೊಂದಿ ವರ್ಧಿಪ ಪೂರ್ಣಚಂದ್ರ ಕುವರೇಂದ್ರ ಬಾರೆಂದು (ನವಮೋ. ೧೬-೪೨). [< ಸಂ. ಕುಮಾರೇಂದ್ರ]

**ಕುವರ್ಣ** (ನಾ). ೧. ಕೆಟ್ಟಬಣ್ಣ; ಕಪ್ಪುಬಣ್ಣ. ೨. (ಗು). ಕೆಟ್ಟ ಬಣ್ಣವುಳ್ಳ; ಕಪ್ಪಾದ: ಕುವರ್ಣಮಾಗೆ ನಖದಂತಚಯಂ... ದಪ್ಪನ ಸಾವು ನಿಶ್ಚಯಂ (ಲೋಕೋಪ. ೧೧-೯). [ಸಂ.]

**ಕುವಲ** (ನಾ). ೧. ಎಲಚಿಗಿಡ; ಬೋರೆಗಿಡ; ಅದರ ಹಣ್ಣು: "ಕುವಲಂ, ಫೆನಿಲಂ, ಸೌವೀರಂ, ಬದರಂ, ಕೋಲಂ, ಎಳಚೀಹಣ್ಣು" (ಸಿದ್ಧಾಂತಿ. ೧೧೫). ೨. ನೈದಿಲೆ: (೬). [ಸಂ.]

**ಕುವಲಯ**, ಕುವಳಯ(ನಾ). ೧. ನೀಲಿಯ ಕಮಲ; ಕನ್ನೈದಿಲೆ: ಕುವಲಯಶ್ಯಾಮನಂ ನಿಜತನು ಶ್ಯಾಮನಂ (ಜೈಮಿಭಾ. ೧೯-೨೨); ಕುವಲಯದಳದಂತೆ ನೀಲವರ್ಣವನಾಂತು (ಭಾಸನಾ. ೧). ೨. ಬಿಳಿಯ ಕಮಲ; ಬೆಳ್ದಾವರೆ: ಆಕೆಯ ಕಣ್ಣು ಬೆಳ್ಪುಗಳ್ ಪಸರಿಸೆ ತುಂಬಿಗಳ್ ಕುವಲಯಂಗಳರಲ್ದುವೆ ಗೆತ್ತು ಮತ್ತೆಯುಂ ಮುಸುಱುವುದುಂ (ಪಂಪಭಾ. ೫-೬೩); ಕುವಲಯಕ್ಕಮೃತಾಂಶು... ಓರಗೆಯಾಗಿ (ನಂಬಿರ. ೧೪-೧೦೬); ಕುವಲಯ ಮಾಲೆಯ ಪೋಲ್ವುದು ನಯನವು, ಪೋಲ್ವುದು ಶಶಿಯನು ಮುಖವು (ಇಂಚಾಪ. ೧೭೪-೫೭). ೩. ಭೂಮಿಯ ಮಂಡಲ. ೧, ೩: ಧರೆಯು ಮಂಡಲದಂತೆ ಕುವಲಯಾನ್ವಿತದಿಂದೆ ಸರಸಿ ಶೋಭಿಸುತಿರ್ದುದು (ನವಮೋ. ೮-೩೩). **ಕುವಳಯ**: ೧. "ನೀಲೋತ್ಪಳಂ, ಕುವಳಯಂ –ಈ ೨ ಕನ್ನೆಯ್ದಿಲ್" (ಹಲಾಯು. ೧೧೨-೫೯); ಹೊಗರು ಕುವಳಯ ಕಳಿಯೆ... ರವಿಯುದಯಾಚಳಕೆ ಬಂದ (ಕುವ್ಯಾಕ. ೨-೧). ೧, ೨: ಕುವಳಯ ಬಾಂಧವನೆಸೆವನೆ ಕುವಳಯಮಂ ಬೆಳಗಿ ಕುವಳಯಂ ಪೊಜಗೆನೆ (ಪಂಪಭಾ. ೯-೩೭). [ಸಂ.]

**ಕುವಲಯಪತಿ**, ಕುವಳಯಪತಿ (ನಾ). ೧. ನೈದಿಲೆಯ ಒಡೆಯ; ಚಂದ್ರ: ಕುವಲಯ ಪತಿಯನುಕ್ರಮೋದಯ ವಿಲಾಸಮೇನೊಪ್ಪಿದುದೋ (ಕಾದಂಉ. ೮೯). **ಕುವಳಯಪತಿ**: ೨. ಭೂಮಂಡಲದ ಅಧಿಪತಿ, —ರಾಜ: ಕುವಳಯಪತಿಯೆಂಬ ಪೆಂಪೊಡಂಬಡೆ (ಪಂಪಭಾ. ೯-೩೭). [ಕುವಲಯ + ಪತಿ$_1$]

**ಕುವಲಯಸಖ** (ನಾ). ನೈದಿಲೆಗಳ ಮಿತ್ರ; ಚಂದ್ರ: ಕುವಲಯ ಸಖನಿರೆ ವೃಷಭನೊಳ್ (ಜಾತಕ. ೨೦-೨). [ಕುವಲಯ + ಸಖ]

**ಕುವಲಯಾಧಾರಿ** (ನಾ). ೧. ನೈದಿಲೆಗಳಿಗೆ ನೆಲೆಯಾದುದು; ಕೊಳ. ೨. ಭೂಮಂಡಲಕ್ಕೆ ಆಧಾರವಾದವನು. ೧, ೨: ಅನಿಮಿಷಾಶ್ರಯ ಮೂರ್ತಿಯೆನೆ ಕುವಲಯಾಧಾರಿ ಕುವಲಯಾಧಾರಿಯ ಪೋಲ್ ವನಮಾಲಿಯೆನಿಸಿ ರಂಜಿಸುವ ಕಾಸಾರವಮಂ ಸರ್ವಮಂಗಳೆ ಕಂಡಳು (ಜೈಮಿಭಾ. ೧೫-೧೨). [ಸಂ. ಕುವಲಯಾಧಾರಿನ್]

**ಕುವಲಯಿತ**, ಕುವಳಯಿತ (ಗು). ಕುವಲಯ ಪುಷ್ಪಗಳನ್ನುಳ್ಳ; ನೈದಿಲೆಗಳಿಂದ ತುಂಬಿದ: ಯುವತೀ ನಿಕರ ಚಿಕುರ ಕಾಂತಿಕುವಲಯಿತವೀಧೀಭಾಗನುಂ (ಚಂದ್ರಪು. ೮-೮೨). **ಕುವಳಯಿತ**: ಕಿಱು ಬಾಳ್ಗಳ ಗೊಂದಣ ಬೆಳಗುಗಳ ಬಳಗಂಗಳೊಳಾಗಸವಳಯಮೆಲ್ಲಂ ಕುವಳಯಿತಮಾಗೆ (ಶಾಂತಿಪು. ೪-೨೬ ವ). [ಸಂ.]

**ಕುವಲಯೇಕ್ಷಣೆ** (ನಾ). ನೈದಿಲೆಯಂತೆ ಕಣ್ಣುಗಳನ್ನುಳ್ಳವಳು: ಕುವಲಯೇಕ್ಷಣೆ ಕೇಳೆನಲ್ಕೆ ಕೈಮುಗಿದು (ವೀಶೈಪು. ೭-೬-೮).

[ಸಂ. ಕುವಲಯೇಕ್ಷಣಾ (ಕುವಲಯ + ಈಕ್ಷಣ + –)]

**ಕುವಲಾಲ**, ಕುವಳಾಲ, ಕೊವಳಲ ಕೋಳಾಲ (ನಾ). ಒಂದು ಊರಿನ ಹೆಸರು. ☞ ಈಗಿನ ಕೋಲಾರ: ಕುವಲಾಲ ತ್ಪಷಕಾರಸ್ಯ ಇಳಪ್ಪುಟುವಸ್ಯ ಪುತ್ರೇಣ ಪೆರೆರನ್ನಾಮ ಲಿಖಿತಾಮ್ಪಟ್ಟಕಾಂ (ಮೈಆರಿ. ೧೯೩೪, ೧-೩೯; 570). **ಕುವಳಾಲ**: ಪೊಳಲ್ ಕುವಳಾಲಮಾಂ (ಎಕ. VII, ಶಿವಮೊ. ೪-೩೩; 1122).

**ಕೊವಳಲ:** ಕಾದುವಟ್ಟಿ ಕೊವಳಲದುಳ್ ಏಱಿದೋರ್ (ಎಕ. X, ಹೊಸಕೋ. ೨೧–೫; 750). **ಕೋಳಾಲ:** ಕೆಲವಾನುಂ ದಿವಸದಿಂ ಕೋಳಾಲಕ್ಕೆ ಪೋಗಿ ಸುಖದಿಂ ರಾಜ್ಯಂ ಗೆಯ್ಯುತ್ತಮಿರೆ (ಎಕ. VII, ಶಿವಮೊ. ೪–೩೯; 1122); ಕೋಳಾಲ ಗ್ರಾಮೇ (ಎಇ. VI, ೧೪–೭; ?); ಬಳಲಾಪುರ ಬೆಂಗಳೂರು ಕೋಳಾಲದಿಳೆ ಯಾಣ್ಮರುರೆ ಕಂಗೆಟ್ಟು (ಕಂಸವಿ. ೩–೯೨). [?]

**ಕುವಲಾಲಪುರ**, ಕುವಳಾಲಪುರ, ಕುವಳಾಳಪುರ, ಕೊವಳಾಲಪುರ, ಕೊವಳಾಳಪುರ, ಕೊವಳಾಟಿ, ಕೊಳಾಳಪುರ, ಕೋಳಾಲಪುರ, ಕೋಳಾಳಪುರ, ಕೋಟೂಾಲಪುರ (ನಾ). = ಕುವಲಾಲ: ಕುವಲಾಲಪುರವರೇಶ್ವರಂ (ಇಆ. XVIII, ೩೧೧–೪; 11ನೆಯ ಶತ). **ಕುವಳಾಲಪುರ:** ಕುವಳಾಲಪುರವರೇಶ್ವರ ನನ್ದಗಿರಿನಾಥ ಶ್ರೀಮತ್ ರಾಚಮಲ್ಲಂಗೆ (ಎಇ. VIII, ೫೪–೩; 1000). **ಕುವಳಾಳಪುರ:** ಮಹಾರಾಜಾಧಿರಾಜ ಕುವಳಾಳಪುರವರೇಶ್ವರಂ (ಎಕ. V, ಅರಕ. ೩೫–೨; 930 ?). **ಕೊವಳಾಲಪುರ:** ಕೊವಳಾಲಪುರವರೇಶ್ವರ ನನ್ದಗಿರಿನಾಥ (ಮೈಆರಿ. ೧೯೩೧; ೪೮–೨; 856). ಕೊವಳಾಲಪುರವರೇಸ್ವರ (ಎಕ. V, ಅರಕ. ೨೭–೩; ಸು. 915). **ಕೊವಳಾಳಪುರ:** ಕೊಙ್ಗಣಿವರ್ಮ ಧರ್ಮ್ಮ ಮಹಾರಾಜಾಧಿರಾಜ ಕೊವಳಾಳಪುರವರೇಶ್ವರ (ಎಕ. V, ಅರಕ. ೫–೧; ಸು. 915). **ಕೊವಳಾಟಿ:** ಪೊಟ್ಟರಾವ ಕೊವಳಾಟಿ ಮಹೇಶ್ವರದಿವಿಜಗ್ಗಬವಲ್ಲಹ (ಎಕ. XVI, ತುಮಕೂ. ೯೧–೧೬; 780). **ಕೊಳಾಳಪುರ:** ಕೊಳಾಳಪುರವರೇಶ್ವರ ನನ್ದಗಿರಿನಾಥ (ಇಆ. XIV, ೭೬–೩; 899). **ಕೋಳಾಲಪುರ:** ಕೋಳಾಲಪುರವರೇಶ್ವರನ್ (ಎಕ. XV, ಅರಸಿ. ೨೧೫–೧; 890). **ಕೋಳಾಳಪುರ:** ಮಹಾರಾಜಾಧಿರಾಜಂ ಕೋಳಾಳಪುರವರೇಶ್ವರಂ (ಸೌಇಇ. XX, ೩೫–೩; 1055). **ಕೋಟೂಾಲಪುರ:** ಮಹಾರಾಜಾಧಿರಾಜ ಕೋಟೂಾಲಪುರ ಪರಮೇಶ್ವರ (ಮೈಆರಿ. ೧೯೨೧; X–೧೪೨; 967).
[ಕುವಲಾಲ + ಪುರ್ರ]

**ಕುವಲಿ**, ಕುವಳಿ (ನಾ). ಎಲಚಿಗಿಡ; ಬೋರೆಗಿಡ; ಬದರೀವೃಕ್ಷ: "ಬದರೀ, ಕುವಲೀ, ಕರ್ಕಂಧೂ: –ಈ ೩ ಬೋರೆಗಿಡದ ಪೆಸರ್" (ಹಲಾಯು. ೩೨–೯೧). **ಕುವಳಿ:** "ಎರದ ತರು ಕರ್ಕಂಧು ಬದರಿ ಕುವಳಿಯೆನಿಕ್ಕು" (ಮಂಗರಾ. ೩೪–೧೧). 'ಕೋಲಿ₂' ಪರಾ.
[ಸಂ. ಕುವಲೀ]

**ಕುವಳಯ** 'ಕುವಲಯ' ನೋ.

**ಕುವಳಯಪತಿ** 'ಕುವಲಯಪತಿ' ನೋ.

**ಕುವಳಯಬಂಧು** (ನಾ). ೧. ಕುವಲಯಸಖ; ಚಂದ್ರ. ೨. ಭೂಮಂಡಲಕ್ಕೆ ಬಂಧುವಾದವನು. ೧, ೨: ಕುವಳಯಬಂಧುವಾಗಿಯುಮಿನಂ . . . ಉದಾತ್ತ ಸಂಭವನೆನಿಸಿರ್ದು ಮತ್ತಮವಿರುದ್ಧ ಗುಣೋನ್ನತನಾ[ದನಾ]ನೃಪಂ (ಪುಷ್ಪಪು. ೧೩–೭).
[ಕುವಳಯ (= ಕುವಲಯ) + ಬಂಧು]

**ಕುವಳಯಿತ** 'ಕುವಲಯಿತ' ನೋ.

**ಕುವಳಾಲ** 'ಕುವಲಾಲ' ನೋ.

**ಕುವಳಾಲಪುರ** 'ಕುವಲಾಲಪುರ' ನೋ.

**ಕುವಳಾಳಪುರ** 'ಕುವಲಾಲಪುರ' ನೋ.

**ಕುವಳಿ** 'ಕುವಲಿ' ನೋ.

**ಕುವಾಕ್ಛ್ರುತ** (ನಾ). ಚಾಡಿಮಾತಿಗೆ ಕಿವಿಗೊಡುವವನು: "ಕುವಾಕ್ಛ್ರುತನೆನಲು ಚಹಡಮಂ ಕೇಳ್ವಂಗೆ ನಾಮಮುಕ್ಕುಂ" (ಮಂಗರಾ. ೭೨–೨೩). [ಸಂ. (ಕುವಾಚ್ + ಶ್ರುತ]

**ಕುವಾಡ** (ನಾ). (?): ಹತ್ತರ ಹಸಿ(ಸು)ಗೆಯಲಚ್ಚಾದ ಪರಿಗಳ ನೀವೆತ್ತ ಬಲ್ಲಿರೋ! ಗಣಿತದ ಗುಣಿತ(ದ)ವ ನಾಲ್ಕು ಬಂದಡೆ ಕಳೆ, ಐದು ಬಂದಡೆ ನಂದಿ ಆಱು ಬಂದಡೆ ಜಾಗರ, ಏಳು ಬಂದಲ್ಲಿಗೈದು, ಜಾಣರೆಂಬುವರಿಗೆ ಕುವಾಡ ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ ಜೂಜುಗೊಳ್ಳದು ನಿಲ್ಲು (ಸರ್ವವ. ೧೬೯–೭೯೯). [?]

**ಕುವಾಡಯೋಗ**, ಕುವ್ವಾಡಯೋಗ (ನಾ). (?): ಕೂರ್ಮನ ಗತಿಯ ಕುವಾ[ಪಾಠಾಂ. ವ್ವಾ]ಡ ಯೋಗವು ಕುಹಕವಾದಿಗಳವಡದು (ಲಿಂಗಲೀ. ೩೭೧–೧೭). **ಕುವ್ವಾಡಯೋಗ.** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕುವಾಡ + ಯೋಗ]

**ಕುವಾದ** (ಗು). ೧. ಹೀಗಳೆಯುವ; ನಿಂದಿಸುವ: (೬). (ನಾ). ೨. ಕೆಟ್ಟಮಾತು; ನಿಂದೆ; ಅಪವಾದ: (೬). ೩. ಕೆಟ್ಟವಾದ; ಕುತರ್ಕ. [ಸಂ.]

**ಕುವಾದಿ** (ನಾ). ಕೆಟ್ಟ ವಾದವನ್ನು ಮಾಡುವವನು; ವಿತಂಡವಾದಿ: ಗುಣವರ್ಮನೊಳ್ ಸಮಂ ಬರ್ಪವರಾರ್ ಕವಿತೆಯೊಳಂ ಗಮಕದೊಳಂ ಕುವಾದಿವಿಜಯದೊಳಮಮೃತವಾಗ್ವೃತ್ತಿಯೊಳಂ (ಪುಷ್ಪಪು. ೧–೬೪).
[ಸಂ. ಕುವಾದಿನ್]

**ಕುವಿ** (ಕ್ರಿ). ಕೂಗು; ಗಟ್ಟಿಯಾಗಿ ಧ್ವನಿಮಾಡು: ಮಂದಸ್ವರಂ ಬೆರೆಯೆ ಕುವಿದು ನಿಜಾಶ್ರಯಂಗಳಂ ಸಾರ್ದುವು (ರಾಮಾಶ್ವ. ೨೨–೧೬); ಕುವಿದ ಬಗೆಯಳಲುರಿಗೆ ಮಳೆ ಸುರಿವುದೊಮ್ಮೆ (ಕಾಲೂರ. ೩೧–೨೬).
[ದೇ. ‖ ತಮಿ. ಮಲ. ಕೂ, ಕೂವು (ಕೂಲಿ); ತೆಲು. ಕೂಯ ಪರ್ಜಿ. ಕೂಯ್; ಗಡಬ. ಕೂಯ್, ಗೂಯ್]

**ಕುವಿಂದ** (ನಾ). ನೆಯ್ಗೆ ಕೆಲಸದವನು; ನೇಕಾರ: ಸೌವರ್ಣಕರಾಗಿ ಕುವಿಂದರಾಗಿ . . . ಪುಟ್ಟುವರು (ಶೀಪಧ. ೧೮–೨೩). [ಸಂ.]

**ಕುವಿಂದಕ** (ನಾ). = ಕುವಿಂದ: "ತಂತುವಾಯಃ, ಕುವಿಂದಕ: –ಈ ೨ ಸಾಲಿಗಂ" (ಹಲಾಯು. ೯೭–೪೩೬); "ಸಾಳೆಯ ಕುವಿಂದಕನೆನಿಕ್ಕು" (ಮಂಗರಾ. ೧೧೧–೨). [ಸಂ.]

**ಕುವಿಕಿಲಗೆಡ್ಡೆ** (ನಾ). ಒಂದು ಗಿಡ ಮೂಲಿಕೆ: "ಗಂಧಬಹುಳಾ–ಕಗ್ಗೊರಲೆ, ಕುವಿಕಿಲಗೆಡ್ಡೆ" (ಒಷಧಿ. ೪೭). [ಕುವಿಕಿಲ್ರ + ಗೆಡ್ಡೆ (< ಗಡ್ಡೆ)]

**ಕುವಿಚಾರ** (ನಾ). ಕೆಟ್ಟಯೋಚನೆ; ದುಷ್ಟವಿಚಾರ: ಕುವಿಚಾರಗಳನ್ನ ಸುರಿದುಕೊಳ್ಳಬಾರದು (ವಿಚಾಮಂ. ೫೦). [ಸಂ.]

**ಕುವಿಟ** (ನಾ). ಕೆಟ್ಟ ವಿಟ; ಕುತ್ಸಿತನಾದ ವಿಟ: ವಿಟನಱಿಗುಂ ಕುವಿಟಂ ಸ್ತ್ರೀರತರಹಸ್ಯದೊಳಗಱಿದಪನೇ (ಆದಿಪು. ೧–೨೦); ಆ ಕುವಿಟನಲ್ಲಿಂದೊಚ್ಚ ಹೊತ್ತಿಂಗಿಲ್ಲಿಗೆಯ್ತಂದು (ಬಸಪು. ೨೮–೪೨). [ಸಂ.]

**ಕುವಿದ್ಯೆ** (ನಾ). ಕೆಟ್ಟವಿದ್ಯೆ; ದುಷ್ಟವಿದ್ಯೆ: ಖಳರು ಮೊದಲಲಿ ಕಲಿಮೊಳೆಯನಂಕುರಿಸುವ ಕುವಿದ್ಯಾಕಲಿತಮಾಯರು ಕರ್ಣಶಕುನಿಗಳವರ ಸಂಗದಲಿ (ಕುವ್ಯಾಸ. ೧೬–೩೩). [ಸಂ. ಕುವಿದ್ಯಾ]

**ಕುವಿಲಾಸಿ**, ಕುವಿಳಾಸಿ (ನಾ). ಅಯೋಗ್ಯವಾದ ವಿಲಾಸಗಳಲ್ಲಿ ಆಸಕ್ತನಾದವನು; ದುರಾಚಾರಿ: (೬). **ಕುವಿಳಾಸಿ:** "ಕುಚರಂ ನಿಯತಹಾರಿ ಕುವಿಳಾಸಿ[ಪಾಠಾಂ. ಹಾರಿಕಂ ವಿಳಾಸಿ]ಯೆನೆ ವಕ್ರಿಯೆನಿಸಿಕ್ಕು" (ಮಂಗರಾ. ೭೨–೨೩). [ಸಂ. ಕುವಿಲಾಸಿನ್]

**ಕುವಿಳಾಸಿ** 'ಕುವಿಲಾಸಿ' ನೋ.

**ಕುವೇಣಿ** (ನಾ). ೧. ಮೀನು ಹಿಡಿಯುವ ಬಲೆ; ಜಾಲಗಾರನ ಬಲೆ: "ಆನಾಯಃ, ಜಾಳಃ, ಕುವೇಣೀ ಮತ್ಸ್ಯಬಂಧಿನೀ–ಈ ೪ ಬಲೆ" (ಹಲಾಯು. ೯೭–೪೪೦); "ಬಲೆ ಕುವೇಣಿ ಜಾಲಮೆನಿಕ್ಕು" (ಮಂಗರಾ.೧೧೩–೩). ೨. ಮೀನಿನ ಬುಟ್ಟಿ. ೩. ಚೆನ್ನಾಗಿ ಹೆಣೆಯದ ಜಡೆ. [ಸಂ. ಕುವೇಣೀ]

**ಕುವೇರ** (ನಾ). = ಕುಬೇರ: "ಆ ಕುವೇ[ಪಾಠಾಂ. ಬೇ]ರಂ ಪೊನ್ನೊಡೆಯ" (ಕಬ್ಬಿಕೈ. ೧೫). [ಸಂ.]

**ಕುವೇರಕ** (ನಾ). ಒಂದು ಜಾತಿಯ ಮರ; "ನಂದಿವೃಕ್ಷ" (ಪಂಡಿತ). [ಸಂ.]

**ಕುವೇರಾಕ್ಷಿ** (ನಾ). ಒಂದು ಜಾತಿಯ ಸಸ್ಯ; ಸಿತಪಾಟಲಿ; ಹಸಿರು ಪಾದರಿ ಗಿಡ: (*). [< ಸಂ. ಕುಬೇರಾಕ್ಷೀ]

**ಕುವೇಷ** (ನಾ). ಕುತ್ಸಿತವಾದ ವೇಷ; ಅಸಹ್ಯವಾದ ಉಡುಪು ತೊಡುಪು: ಕುಶೀಲ ಕುತ್ಸಿತಾಚಾರ ಕುವೇಷ ಕುದೃಷ್ಟಿಗಳುಂ (ಆದಿಪು. ೫-೪೧ ವ). [ಸಂ.]

**ಕುವ್ವತ್ತು** 'ಕುವತ್ತು' ನೋ.

**ಕುವ್ವಾಡ**, ಕೂವಾಡ (ನಾ). ಕುಚೇಷ್ಟೆ; ಕುಚೋದ್ಯ: ಕೂಳು ಹೆಚ್ಚಾದ್ರೆ ಕುವ್ವಾಡ ಹೆಚ್ಚಿತಂತೆ (ದಾಕೂಟ. ೮೨). **ಕೂವಾಡ**: "ಮಾಯನಂ, ಮಾಯಕಂ, ಈ ೨ ಮನದ ಕೂವಾಡಂ" (ಕಾಶಕೃ. ೨೯೫).

[← ತೆಲು. ಕುವಾಡ, ಕುವ್ವಾಡ = ಮೋಸ, ನಟನೆ]

**ಕುವ್ವಾಡಯೋಗ** 'ಕುವಾಡಯೋಗ' ನೋ.

**ಕುವ್ವೆ$_1$** 'ಕೂವೆ$_1$' ನೋ.

**ಕುವ್ವೆ$_2$** 'ಕೂವ' ನೋ.

**ಕುವ್ವೆಹಿಟ್ಟು** 'ಕೂವೆಹಿಟ್ಟು' ನೋ.

**ಕುಶ** (ನಾ). ೧. ಹೋಮ ಹವನಾದಿಗಳಿಗೆ ಬಳಸುವ ಒಂದು ಬಗೆಯ ಸೂಜಿಯಂತೆ ಮೊನೆಯುಳ್ಳ ಹುಲ್ಲು; ದರ್ಭೆ: "ಬರ್ಹಿಃ ಕುಶಂ ಕುಥಮೆನಲು ದರ್ಭೆಯದು" (ಮಂಗರಾ. ೩೪-೯); ವಿವಾಹಗೇಹದಂತೆ ಸಮಿತ್ಕುಶ ಕುಸುಮ ಶಮೀಪಲಾಶೋಪಶೋಭಿತಮುಂ (ಕಾದಂಪೂ. ೧೦೦); ಚರುಸಮಿಧೆ ಕುಶಗಳನು ಬೇಳುತ್ತಿರಲು (ಕೌಶಿರಾ. ೧-೮೯). ೨. ನೀರು: "ಕುಶಮಪ್ಪು ಪಯ. . .ವಾರಿ ಘನರಸಮೆನಲ್ ನೀರಿಂಗೆ ಪೆಸರಕ್ಕು" (ಮಂಗರಾ. ೧೧೯-೧). ೩. ಸಪ್ತದ್ವೀಪಗಳಲ್ಲಿ ಒಂದು. ೪. ಶ್ರೀರಾಮನ ಹಿರಿಯಮಗನ ಹೆಸರು: ಕುಶನಳುತಿರ್ಪ ತನ್ನ ತಾಯಂ ಕಂಡು (ಜೈಮಿಭಾ. ೨೦-೨೧); ಉರುತರ ಕ್ರೋಧವಿವಶಂ ಕುಶಂ ಕಡುವೇಗದಿಂ ಬಂದು (ಶೇಷರಾ. ೩೧-೧). ೫. [ಛಂದ] ಒಂದು ಅಕ್ಷರಗಣ; ಯಗಣ (◡ – –): ಕುಶಂವಾರ್ಧಿಪರ್ಯಾಯಮಕ್ಕುಂ ವಿರಾಮಂ ದಿಶಾಸಂಖ್ಯೆಯಕ್ಕುಂ . . . ಪ್ರಶಸ್ತಂ ಸಮಸ್ತಂ ಭುಜಂಗ ಪ್ರಯಾತಂ (ಛಂದೋಂಬು. ೨-೭೭). [ಸಂ.]

**ಕುಶಗ್ರಂಥಿ** (ನಾ). ದರ್ಭೆಯ ಗಂಟು, —ಕಟ್ಟು: ಧರಿಸಿದ ಕಂಥೆಯ ಕುಶಗ್ರಂಥಿಗಳು ತಿದ್ದಿ ರಾಜಿಸುವ [ಪಾಠಾಂ. ಕುಶಲಗ್ರಂಥಿಗಳು ತಿದ್ದಿ ವಿರಾಜಿಸುವ] ದಂಡ ಕರಮೆಸೆವ ಮುಂಗೈಯ ಜೋಳಿಗೆಯ (ಗುರುಚಾ. ೩-೪೦). [ಕುಶ + ಗ್ರಂಥಿ]

**ಕುಸಜ** (ನಾ). ತಾವರೆ; ಕಮಲ: ಕುಶ[ಪಾಠಾಂ. ಸ] ಜನಯುನಂಗಳ ಸಮುಜ್ವಳ ದಶನ ಪಂಙ್ತಿಯ (ಬಸವು. ೧೨-೫). [ಸಂ.]

**ಕುಶತಂತ್ರ** (ನಾ). ಪ್ರೋದ್ಗೀತಾಗಮದ ಹದಿನಾರು ಭೇದಗಳಲ್ಲಿ ಒಂದು: ಕವಚಾಗಮವರಾಹತಂತ್ರ ಪಿಂಗಳಮತ, ಪಾಶಾಬಂಧ ಸಂಹಿತೆ, ದಂಡಧರತಂತ್ರ, ಕುಶ[ಪಾಠಾಂ. ಶುಕ]ತಂತ್ರ . . . ಆ ತೋದ್ಯವೆಂದು ಪ್ರೋದ್ಗೀತಾಗಮದ ಷೋಡಶಭೇದಂಗಳು (ವಿವೇಕ.೭೧). [ಕುಶ+ತಂತ್ರ]

**ಕುಶದ** (ನಾ). ಮುಗಿಲು; ಮೋಡ: ಭೋಂಕನೋಡಿ ಬಂದು ಕುಶದ ದಂತಾದರ್ಧ ಘಟ್ಟಿಸಿ ಮುಷ್ಟಿಯಿಂ (ಶೇಷರಾ. ೩೧-೨೭). [ಸಂ.]

**ಕುಶದಳ** (ನಾ). ದರ್ಭೆಯ ಎಸಳು; ಕುಶ ಎಂಬ ಹುಲ್ಲಿನ ಗರಿ: ಆ ಕುಶದಳಸವರ್ಣವರ್ಣಗೆ ಕುಶಾಗ್ರಮತಿ ಸುಮತಿಯೆಂದು ಹರಿ ಪೆಸರಿಟ್ಟಂ (ಶಾಂತಿಪು. ೪-೮೬). [ಕುಶ + ದಳ (=ದಲ)]

**ಕುಶಧಿ** (ನಾ). ಕಡಲು; ಸಮುದ್ರ: ಕುಶಧಿ ತನುಜಾನಾಥ ವಿಷಜಾತ ಜಾತನುತ ವಿಷಧರಾಭರಣ ವಿಷಧರ ಪಾಹಿಮಾಂ (ಪ್ರೌಢರಾ. ೨೧-೪೧); ಕುಶಧಿಯೊಳು ಚಕ್ರಮಂ ಬರೆದೆತ್ತುಮೆನೆ ಕೋಪ ಮಸಗಿ ತಲೆಯೊಡ್ಡಿ ನೆಗಪುತ್ತಿರಲು (ಗುರುಚಾ. ೪-೧೮). [ಸಂ.]

**ಕುಶಪಿಷ್ಟೆ** 'ಕುಸಿವಿಷ್ಟೆ' ನೋ.

**ಕುಶಬ್ದ** (ನಾ). ಕೆಟ್ಟಶಬ್ದ: ವಿಲಾಸಮಂ ತೀರದೆ ಕುಶಬ್ದಮಂ ತಾರದೆ (ಮಂಗರಾ. ೧-೨). [ಸಂ.]

**ಕುಶರ್ತ** (ನಾ). ಒಂದು ಜಾತಿಯ ಮರ: ನಾರವಳ್ಳಿ, ನೀರವಳ, ಕುಶರ್ತ, ರುದ್ರಾಕ್ಷಿ, ಯೆಣ್ಣೇಮರ (ನಮ್ಮನು. ೨೩೭). [?]

**ಕುಶಲ**, ಕುಶಳ (ಗು). ೧. ಸರಿಯಾದ; ಯುಕ್ತವಾದ. ೨. ಕ್ಷೇಮಕರವಾದ; ಸುಖಕರವಾದ. ೩. ಚತುರನಾದ; ಪ್ರವೀಣನಾದ (ನಾ). ೪. ಚತುರತೆ; ಚಾತುರ್ಯ: ಕುಸುಮದಲ್ಲಿ ವಾಸನೆ ಇದ್ದಡೇನು ಅದು ಎಸೆಯದನ್ನಕ್ಕ? ಕುಶಲದಲ್ಲಿ ರಸಿಕನಿದ್ದಡೇನು ಅದು ಎಸಗದನ್ನಕ್ಕ (ಮೋಳಿಮಾ. ೧೧೭-೪೬೦). ೫. ಚತುರನಾದವನು; ಬಲ್ಲವನು: "ಚತುರಂ ಪ್ರವೀಣಂ ಕುಶಲನಭಿಜ್ಞಂ ಸುಶಿಕ್ಷಿತನೆನಲ್ . . . ಬಲ್ಲವಗೆ ನಾಮಂ" (ಮಂಗರಾ. ೬೬-೩). ೬. ಕ್ಷೇಮ; ಸಂತೋಷ: ಶಿವಶಿವ ಕುಶಲವೇ ರುದ್ರಭಟ್ಟರಿ (ನಂಬರ. ೭-೩೩); ಮಂದಿರದ ಸುಕ್ಷೇಮ ಕುಶಲವನಂದು ಕೇಳಿದು ವೀಳೆಯವನಾ ಮಂದಿಗಿತ್ತನು (ಕುವ್ಯಾಉ. ೭-೨೨). ೭. ಸದ್ಗುಣ: (*). ೮. ಸಮರ್ಪಕತೆ: (*). ೯. ಚಿತ್ರದ ಪಟ್ಟೆ (?): ಹೊಸಲು ತಡೆದಾವು ಕುಸಿದು ಬಾರೆ ಹರಿಯಮ್ಮ . . . ಹೊಸಲೀಗೆ ಕುಶಲವ ಬಿಗಿಸ್ಯಾನು (ಕುಮಾಸಾಂ. ೨೫೯). **ಕುಶಳ**: ೬. ಕುಶಳಮೆ ಮಾತುಳಂಗೆ ಜಯವರ್ಮನೃಪಂಗೆ . . . ಕುಶಲಮೆ ದೇವ (ಪುಷ್ಪಪು. ೭-೩೮). [ಸಂ.]

**ಕುಶಲಕರ್ಮ** (ನಾ). ಚಾತುರ್ಯದ ಕೆಲಸ; ನಯಗಾರಿಕೆಯ ಕೆಲಸ: ಶಬ್ದ, ರೇಖೆ ಬಣ್ಣ ಮುಂತಾದುವುಗಳಿಂದ ಕಲಾನಿಪುಣನು ರಚಿಸಿದ ಕುಶಲಕರ್ಮದಲ್ಲಿ (ಕೈಪಿಡಿ. ೧೬೯).

[ಕುಶಲ + ಕರ್ಮ]

**ಕುಶಲಕ್ರಿಯೆ** (ನಾ). = ಕುಶಲಕರ್ಮ: ಜಿನಮಾತೃಗರ್ಭ ಸಂಶೋಧನಾದಿ ರಮಣೀರಹಸ್ಯ ಕುಶಲಕ್ರಿಯೆಗಂ ಬಿನದಕ್ಕಂ ಬೆಸಕಂ . . . ನೆರೆದು ನೆಗಟ್ದಿಂ (ಪುಷ್ಪಪು. ೯-೫೯). [ಕುಶಲ + ಕ್ರಿಯೆ]

**ಕುಶಲಗಾರ** (ನಾ). ಚತುರನಾದವನು; ನಿಷ್ಣಾತ; ಜಾಣ: (*).

[ಕುಶಲ + –ಗಾರ$_1$ (< –ಕಾಱ)

**ಕುಶಲಗಾತಿ** (ನಾ). ಚತುರೆ; ಜಾಣೆ: (*).

[ಕುಶಲಗಾರ + –ತಿ (< –ಇತ್ತಿ)]

**ಕುಶಲಗೆಡು** (ಕ್ರಿ). ಕ್ಷೇಮವನ್ನು ಕಳೆದುಕೊಳ್ಳು; ಸ್ವಾಸ್ಥ್ಯವಿಲ್ಲವಾಗು: ಕುಶಲಗೆಟ್ಟಾನೆಯಟ್ಟಿದರೂ ಜೈನಾಲಯ ವಶಕೆಯ್ದು ಬೇಡೆಂ ಬರಳಲಿ (ಭರಚ. ೬೧-೧೮). [ಕುಶಲ + ಕೆಡು$_1$]

**ಕುಶಲಚಿತ್ರ** (ನಾ). ನಯವಾಗಿ ಬರೆದ ಚಿತ್ರ; ಚೆಲುವಾದ ಚಿತ್ರ: ಹೇಮದ ರೂಪವಳಿದು ಸ್ವರೂಪವಡಗಿದಲ್ಲಿ ಕುಶಲಚಿತ್ರವೆಲ್ಲಿದ್ದಿತ್ತು (ಮದೇಮ್ಮ. ೨೮೭-೬೬). [ಕುಶಲ + ಚಿತ್ರ]

**ಕುಶಲತನ** (ನಾ). ಜಾಣತನ; ಬುದ್ಧಿವಂತಿಕೆ: ವಿಮರ್ಶಕರು ಎತ್ತಬಹುದಾದ ಪ್ರಶ್ನೆಗಳನ್ನು ಲೇಖಕರು ತಾವೇ ಎತ್ತಿ ಕುಶಲತನದಿಂದ ಉತ್ತರಕೊಟ್ಟಿದ್ದಾರೆ (ಸಾಸಮಾ. ೬೮). [ಕುಶಲ + –ತನ]

**ಕುಶಲತೆ$_1$** (ನಾ). ನಿಪುಣತೆ; ಚಾತುರ್ಯ; ಕೌಶಲ: ಈಗ ನಿನ್ನ ಕೈಗಳ ಕುಶಲತೆಯನ್ನು ತೋರಿಸುವವನಾಗು (ಅರ್ಕಮಾ. ೧೪).

[ಸಂ. ಕುಶಲತಾ]

**ಕುಶಲತೆ₂** (ನಾ). ಒಂದು ಜಾತಿಯ ಸಸ್ಯ: "ಕುಶಲತೆಯೆನಲ್ ಬಳ್ಳಿ" (ಮಂಗರಾ. ೪೫-೯೭). [ಕುಶ + ಲತೆ]

**ಕುಶಲನಡೆ** (ನಾ). ನಯವಾದ ನಡೆ: ಮಾರನಂಕದ ಮದವಾರಣಂಗಳ ಗತಿಯ ನಾರಿಯರ ಕುಶಲನಡೆ ಗಂಡಳ್ಳಿಯಿರದೆ ಕಾಸಾರಮಂ ಪೊರಮಟ್ಟು ಪೋದಂತೆ ರಾಜಹಂಸಂಗಳು ಹೆರಸಾರ್ದುವು (ನವಮೋ. ೧೦-೪೬). [ಕುಶಲ + ನಡೆ₂]

**ಕುಶಲಪತ್ರಿಕೆ** (ನಾ). ಸಂತೋಷವಾರ್ತೆಯನ್ನು ತಿಳಿಸುವ ಪತ್ರ; ಯೋಗಕ್ಷೇಮ ಪತ್ರ: ಈ ಹುಲ್ಲಿಗೆ ಯಾವಾಗ ಸುಖಪ್ರಸವವಾಗು ವುದೋ ಆಗ ನನಗೆ ಕುಶಲಪತ್ರಿಕೆಯನ್ನು ಕಳುಹಿಸಬೇಕು (ಶಾಕುಂತ. ೫೫). [ಕುಶಲ + ಪತ್ರಿಕೆ]

**ಕುಶಲಪ್ರಶ್ನ** (ನಾ). ಕ್ಷೇಮವನ್ನು ಕೇಳುವುದು: ಕುಲಪತಿಗಳಾದ ಕಣ್ವರು ಕುಶಲಪ್ರಶ್ನಪೂರ್ವಕವಾಗಿ ನಿನಗೆ ಈ ಮಾತನ್ನು ಹೇಳಿರುವರು (ಶಾಕುಂತ. ೬೫). [ಕುಶಲ + ಪ್ರಶ್ನ]

**ಕುಶಲಪ್ರಶ್ನೆ** (ನಾ). = ಕುಶಲಪ್ರಶ್ನ: ಅವರಿಬ್ಬರೂ ಕುಶಲಪ್ರಶ್ನೆಗಳನ್ನು ಮಾಡಿಕೊಳ್ಳುತ್ತಿದ್ದಾಗ (ಶ್ರೀರಾಯ. ೧೫). [ಕುಶಲ + ಪ್ರಶ್ನೆ]

**ಕುಶಲಮಂಟಪ** (ನಾ). ಚಿತ್ರಗೆಲಸದ ಮಂಟಪ (?): ಅಸದ್ರುಶ ಶ್ರೀ ಕುಶಲಮಂಟಪಾದಿ ಯುಕ್ತ ರಾಜಕಮಲಾಖ್ಯ ಪದ್ಮಕರಾಭಿರಾಮ ನೂತನೋಂಕಾರೇಶ್ವರ ದೇವಸ್ಥಾನವನ್ನು ಪ್ರಾರಂಭಿಸಿ (ಎಕ. I, ೧೭-೧೧; 1820). [ಕುಶಲ + ಮಂಟಪ]

**ಕುಶಲವಸ್ತು** (ನಾ). ಕೌಶಲ್ಯದಿಂದ ನಿರ್ಮಿಸಿದ ವಸ್ತು: ಭಾರತದ ಕುಶಲವಸ್ತುಗಳನ್ನು ಎಲ್ಲ ದೇಶಗಳವರೂ ಬಯಸುವವರಾದರು (ಭಾರದ. ೩೮೭). [ಕುಶಲ + ವಸ್ತು]

**ಕುಶಲವಾರ್ತೆ** (ನಾ). ಕ್ಷೇಮ ಸಮಾಚಾರ: ಕ್ಷಿತಿಪತಿಯಂ ಬರಿಸಿ ಜಗನ್ನುತನಂ ಸಂತೈಸಿ ಕುಶಲ ವಾರ್ತಾಂತರಮಂ ಮಿತವಚನಂ ಬೆಸಗೊಂಡು (ಕವಿರಾ. ೨-೮). [ಕುಶಲ + ವಾರ್ತೆ]

**ಕುಶಲವಿದ್ಯೆ** (ನಾ). ಚಾತುರ್ಯದ ವಿದ್ಯೆ; ಕುಶಲತೆಯ ವಿದ್ಯೆ; ಚಿತ್ರಕಲೆ ಮುಂತಾದುವು: ಕುಶಲವಿದ್ಯೆಯಿಂದ ಬದುಕುವಾತನು ವಸುಧೆಯೊಳಗುತ್ತಮನು (ಕೌಶಿರಾ. ೩೮-೫೬). [< ಸಂ. ಕುಶಲವಿದ್ಯಾ]

**ಕುಶಲಸಂಭಾಷಣೆ** (ನಾ). ಕ್ಷೇಮ ಸಮಾಚಾರದ ಮಾತುಕತೆ: ಅವನು ನೆಕ್ಕಲ್ಲದೋವನೊಡನೆ ಕುಶಲಸಂಭಾಷಣೆಗೆ ತೊಡಗಿದನು (ಪುನರು. ೨೪೬). [ಕುಶಲ + ಸಂಭಾಷಣೆ]

**ಕುಶಲಹಸ್ತ** (ನಾ). ಹಸ್ತಕೌಶಲವುಳ್ಳವನು: ವಿಶ್ವಶಿಲ್ಪದ ಕುಶಲ ಹಸ್ತನು ವಿಶ್ವರಕ್ಷೆಯ ಮಂತ್ರವಾದಿಯು (ಕುವ್ಯಾಸ. ೯-೨೭). [ಕುಶಲ + ಹಸ್ತ]

**ಕುಶಲಿ₁** (ನಾ). ಜಾಣೆ; ಚತುರೆ; ಬುದ್ಧಿಮತಿ: (ಕಿ). [ಕುಶಲ + -ಇ₂]

**ಕುಶಲಿ₂** (ಗು). ೧. ಚತುರನಾದ: ಕುಶಲಿ ಬಿಲ್ಲಾಳು ಬಿಡುವ ಸರಳಂತೆ (ಗೋಕುನಿ. ೩೬). (ನಾ). ೨. ಕ್ಷೇಮವುಳ್ಳವನು. [ಸಂ. ಕುಶಲಿನ್]

**ಕುಶಲಿಕೆ** (ನಾ). = ಕುಶಲತೆ: ಇವಜಿತೋಳಾದಮಾನುಮಜಿತವಮುಂ ಕುಶಲಿಕೆಯುಂ ನಂಬುಗೆಯುಮಾಗಿ (ವಡ್ಡಾರಾ. ೬-೨೦). [ಕುಶಲ + -ಇಕೆ]

**ಕುಶಲಿಸು** (ಕ್ರಿ). ಸಂತೋಷಪಡಿಸು; ನಲಿಸು: ಕುಸುಮಿತಿ ಕುಸುಮಿಣಿ ಯೆಂದು ನಲ್ಲಳ ಕುಶಲಿಸಿ ಕೇಳ್ವ ರಾಯನೊಪ್ಪೊಮ್ಮೆ (ಭರತೇ. ೧೦-೧೦). [ಕುಶಲ + -ಇಸು₁]

**ಕುಶವ** (ನಾ). ಕುಂಬಾರ: ಭಕ್ತನಿರ್ಪಂ ನೋಡ ಪೆಸರೆಸೆವ ತಿರುನೀಲ ಕುಶವನೋರ್ಡ (ತಿರುರ ೩-೨೫). [ದೇ. ‖ ತಮಿ. ಮಲ. ಕುಶವ; ತುಳು. ಕುಸವೆ]

**ಕುಶಶಯನ** (ನಾ). ನೀರಿನಲ್ಲಿ ಮಲಗುವವನು; ವಿಷ್ಣು: ದ್ವಾದಶಿಯೊಳು ಕುಶಶಯನಪೂಜೆಯಂ ಮಾಡಿ (ಜೈಮಿಭಾ. ೨೯-೧೩). [ಕುಶ + ಶಯನ]

**ಕುಶಸೂಚಿ** (ನಾ). ದರ್ಭೆಯ ಮೊನೆ, —ತುದಿ: ಕುಶಸೂಚಿ ತಾಗಿದ ಮೊಗದೊಳ್ ವ್ರಣಹರಣ ತೈಲವನೆರೆಯುತೆ (ಶಾಕುಂತ. ೫೫-೯೨). [ಕುಶ + ಸೂಚಿ]

**ಕುಶಳ** 'ಕುಶಲ' ನೋ.

**ಕುಶಾಂಕುರ** (ನಾ). ದರ್ಭೆಯ ಮೊಳಕೆ, —ಮೊನೆ: ನಡೆಯುತ್ತೊಡನೆ ಕುಶಾಂಕುರಮಡಿಯೊಳ್ ತಾಗಿದುದೆನುತ್ತ ನಿಂದಳ್ (ಶಾಕುಂತ. ೨೬-೪೭). [ಕುಶ + ಅಂಕುರ]

**ಕುಶಾಗ್ರ** (ನಾ). ೧. ದರ್ಭೆಯ ಮೊನೆ. ೨. (ಆಲಂ) ಬಹಳ ತೀಕ್ಷ್ಣವಾದುದು; ಚುರುಕಾದುದು. 'ಕುಶಾಗ್ರಬುದ್ಧಿ' ಪರಾ. [ಕುಶ + ಅಗ್ರ₁]

**ಕುಶಾಗ್ರತೆ** (ನಾ). (ಬುದ್ಧಿಯ) ತೀಕ್ಷ್ಣತೆ; ಸೂಕ್ಷ್ಮತೆ: ಇನ್ನೊರ್ವರ ಲಗ್ನ ಮುಂತಾದ ಕಾರ್ಯಗಳಲ್ಲಿ ಈ ಬಗೆಯ ಮಂಗತನದಲ್ಲಿ ಅವಳ ಕುಶಾಗ್ರತೆ ಬಹಳ (ಗಂಮಾಯಿ. ೮೫). [ಸಂ. ಕುಶಾಗ್ರತಾ]

**ಕುಶಾಗ್ರಬುದ್ಧಿ** (ನಾ). ೧. ಬಹು ತೀಕ್ಷ್ಣವಾದ ಬುದ್ಧಿ. ೨. ತೀಕ್ಷ್ಣವಾದ ಬುದ್ಧಿಯುಳ್ಳವನು: "ಕುಶಾಗ್ರಬುದ್ಧಿಯೆನೆ ಸೂಕ್ಷ್ಮಮತಿಯುಳ್ಳವನೆನಿಕ್ಕುಂ" (ಮಂಗರಾ. ೭೨-೨೧); ಆರ್ ಗಳ ಗುಣಾರ್ಣವನಂತು ಕುಶಾಗ್ರಬುದ್ಧಿಗಳ್ (ಪಂಪಭಾ. ೨-೩೪); ನೀನುಪಾಯಕುಶಲನುಂ ಕುಶಾಗ್ರಬುದ್ಧಿಯುಮಪ್ಪುದರ್ಕೇನುಂ ಸಂದೆಯಮಿಲ್ಲ (ಪಂಚತಂ. ೯೧-೧೩). [ಕುಶಾಗ್ರ + ಬುದ್ಧಿ]

**ಕುಶಾಗ್ರಮತಿ** (ನಾ). = ಕುಶಾಗ್ರಬುದ್ಧಿ ೨: ಅಂ ನಿನ್ನ ಮಗಂದಿರ ನೋದಿಸುವಲ್ಲಿಗೊಡನೊಡನೆ ಬಂದಿವಂ ಕುಶಾಗ್ರಮತಿ ಕಲ್ತುಂ ಮತ್ತಮಿವರ್ಕಳೇಗೆಯ್ದುಂ ಕಲಲಾಜರ್ (ಶಾಂತಿಪು. ೬-೩೪ ವ); ಕುಶಾಗ್ರಮತಿಯಾದ ಹೈದರನು . . . ಪಿತೂರಿ ನಡೆದಿದೆಯೆಂದು ಗ್ರಹಿಸಿದನು (ಒಡೆಕ. ೮೫). [ಕುಶಾಗ್ರ + ಮತಿ]

**ಕುಶಾಗ್ರೀಯ** (ಗು). ೧. ದರ್ಭೆಯ ತುದಿಯಂತೆ ಹರಿತವಾದ. ೨. ಸೂಕ್ಷ್ಮ ಬುದ್ಧಿಯುಳ್ಳ. 'ಕುಶಾಗ್ರೀಯ ಬುದ್ಧಿ' ಪರಾ. [ಸಂ.]

**ಕುಶಾಗ್ರೀಯಬುದ್ಧಿ** (ನಾ). = ಕುಶಾಗ್ರಬುದ್ಧಿ ೧: ಅವ್ಯಗ್ರ ಕುಶಾಗ್ರೀಯ ಬುದ್ಧಿ ಸಮೃದ್ಧಂ ಸ್ವಯಂಬುದ್ಧಂ (ಆದಿಪು. ೨-೯ ವ). [ಕುಶಾಗ್ರೀಯ + ಬುದ್ಧಿ]

**ಕುಶಾಗ್ರೀಯಮತಿ** (ನಾ). = ಕುಶಾಗ್ರಬುದ್ಧಿ ೨: ಕುಶಾಗ್ರೀಯಮತಿಃ, ಸೂಕ್ಷ್ಮದರ್ಶೀ – ೨ ಸೂಕ್ಷ್ಮಬುದ್ಧಿಯುಮುಳ್ಳವಂ" (ಹಲಾಯು. ೬೧-೨೧೮). ಕುಶಾಗ್ರೀಯಮತಿ ಪ್ರಭಾವಂ ಬಲದೇವಂ ನಿಜಾನುಜ ಸಮೇತಂ ಗಮನೋದ್ಯುಕ್ತನಾಗಿರೆ (ಶಾಂತಿಪು. ೨-೬೬ ವ). [ಕುಶಾಗ್ರೀಯ + ಮತಿ]

**ಕುಶಾಮತ್** 'ಕುಶಾಮತ್ತು' ನೋ.

**ಕುಶಾಮತ್ತು**, ಕುಶಾಮತ್, ಖುಷಾಮತಿ, ಖುಷಾಮತು (ನಾ). ೧. ಕುಷಿ; ಮಜ; ಮೋಜು: "ಅವರು ಕಿಲಸ್ತರವಳನ್ನೆ ಒಬ್ಬಳನ್ನು ಮದುವೆ ಆಗ್ತಾರಂತೆ." "ಆದೇ ಅಂತೆ ಕಣೋ, ಕುಶಾಮತ್ತು" (ಮಲೆಮ. ೧೭೭). **ಕುಶಾಮತ್**: ೨. ಸಂತೋಷಗೊಳಿಸುವಿಕೆ; ಮುಖಸ್ತುತಿ: ಮಾಡುವುದು ಕುಶಾಮತ್ ಆಗುವುದು ಹಜಾಮತ್ ಇದೆಲ್ಲಿಯ ಮಲಾಮತ್ (ಗಾದೆ). **ಖುಷಾಮತಿ**: ೨. ಬರಹಾಮುದ್ದೀನನು ಅವನನ್ನು ಖುಷಾಮತಿ ಮಾಡುತ್ತಾ . . . ಮೀರ್‌ಸಾಹೇಬರೇ ಎಂದು ನುಡಿದನು (ಝೂರಾಣಿ. ೩೫೩). **ಖುಷಾಮತು**: (ಕಿ). [← ಮರಾ. ಖುಶಾಮತ್; ಪಾರ. ಹಿಂ. ಖುಶಾಮದೀ]

**ಕುಶಾರಣ** (ನಾ). [ಜೈನ] ಒಂದು ವ್ರತ (?) : ಪಾಪ ವಿನಾಶಕಾರಣ ಕುಶಾರಣವುಂ ಖಿಳಕರ್ಮಪಾವಕೋದ್ದೀಪನದಲ್ಲಿ ಧಾರಣೆಯುಮಂ (ಚಾವುಂಪು. ೧೪೬-೪). [?]

**ಕುಶಾಲ್** 'ಕುಶಾಲು' ನೋ.

**ಕುಶಾಲ್‌ಫಿರಂಗಿ** 'ಕುಶಾಲುಫಿರಂಗಿ' ನೋ.

**ಕುಶಾಲು**, ಕುಶಾಲ್, ಖುಶಾಲ್, ಖುಶಾಲ, ಖುಶಾಲು (ನಾ). ೧. ಸಂತೋಷ; ಹರ್ಷ: ಬೀಳುಕೊಡಲ್ಕೆದಿದನು ಮಂತ್ರಿ ಕುಶಾಲಿನೊಳಗೆ (ಜಿನಭಾ. ೨೮-೧) ; ಆದಿಲಷಾಹಿಯು ಕುಶಾಲಿನಿಂದ ಸದರು ಮಾಡಿಕೊಂಡು ಕುಳಿತಿದ್ದನು (ಬಜೈರು. ೮). ೨. ವಿನೋದ; ತಮಾಷೆ: ಕುಶಾಲಿಗೆ ಹೇಳಿದರೆ ನಿಜಾ ಅಂತ ಮಾಡಿಕೊಂಡು ಗೋಳಾಡ್ತಿಯಲ್ಲೋ (ಮಲಿಮ. ೬೦೧) ; ಪ್ರಭುಗಳು ಆಗ ಕುಶಾಲಿಗೆಂದ ಮಾತು ಸರ್ವಥಾ ನಿಜವಾಯಿತು (ಶಾಂತಲಾ. ೧೨೩). **ಕುಶಾಲ್**: ೨. ಕುಶಾಲ್ ಸಾಕು ಒಂದು ಪಾಡ್ದನ ಹೇಳು ಲಚ್ಮಕ್ಕ (ಬಾಳಿಗಿ. ೧೦೬). **ಖುಶಾಲ್**: ೧. ಖುಶಾಲ್, ಹೋಗಿಬಾ (ಕಪ್ಪುಹು. ೬೦-೨೫). **ಖುಶಾಲ**: ೩. ಕ್ಷೇಮ : "ಅಕ್ಕಾಸಾಹೇಬ, ಯಾವಾಗ ಬಂದಿರಿ ? ಎಲ್ಲಾ ಖುಶಾಲ ಹೌದಲ್ಲೊ ?" ಎಂದು ಕುಶಲ ಪ್ರಶ್ನೆ ಮಾಡಿದ (ಗ್ರಾಮಾಯ. ೭). **ಖುಶಾಲು** : ೨. 'ಭಟ್ಟರೆ, ಕೋಪವೆ ? ಖುಶಾಲಿಗೆ ಎಂದೆನಲ್ಲವೆ ?' ಎಂದು ಸಮಾಧಾನಕ್ಕೆ ಬಂದರು (ಕೋದಂಡ. ೨೭) ; ಈಗ ನಾಲ್ಕು ದಿನ ಖುಶಾಲು ಮಾಡಿಯಾನು (ತ್ಯಾಗಮ ೧೭).

[ಮರಾ. ಖುಶಾಲ್ ; ಪಾರ. ಹಿಂ. ಖುಶ್‌ಹಾಲ್. / ಸಂ. ಕುಶಲ]

**ಕುಶಾಲುತೋಪು** (ನಾ). ಗೌರವ ಹಾಗೂ ಸಂತೋಷ ಪ್ರಕಟನೆಗಾಗಿ ಹಾರಿಸುವ ತೋಪು: ರಾಷ್ಟ್ರಾಧ್ಯಕ್ಷರ ಗೌರವಾರ್ಥವಾಗಿ ಇಪ್ಪತ್ತೊಂದು ಕುಶಾಲುತೋಪುಗಳನ್ನು ಹಾರಿಸಲಾಯಿತು (ರೂಢಿ).

[ಕುಶಾಲು + ತೋಪು$_2$]

**ಕುಶಾಲುಪಿರಂಗಿ**, ಕುಶಾಲ್‌ಫಿರಂಗಿ (ನಾ). = ಕುಶಾಲುತೋಪು : (*). **ಕುಶಾಲ್‌ಫಿರಂಗಿ** : ಐದು ಕುಶಾಲ್‌ಫಿರಂಗಿಗಳನ್ನು ಹಾರಿಸಿದ ಮೇಲೆ (ಮಹಾವಂ. I, ೩೭). [ಕುಶಾಲು + ಪಿರಂಗಿ]

**ಕುಶಾಸನ** (ನಾ). ದರ್ಭೆಯಿಂದ ಮಾಡಿದ ಚಾಪೆ; ಹುಲ್ಲಿನ ಚಾಪೆ : ಈ ಕುಶಾಸನದ ಮೇಲೆ ಕುಳಿತುಕೊ (ಶಾಂತಲಾ. ೩೦೮). [ಕುಶ + ಆಸನ]

**ಕುಶಾಸ್ತ್ರ** (ನಾ). ೧. ಕುತ್ಸಿತವಾದ ಶಾಸ್ತ್ರ : ಎಮ್ಮ ಮುಂದೋಡಿಸಿರೆ ಅಯ್ಯನಕುಶಾಸ್ತ್ರಮಂ ಎನೆ (ನಂಬಿರ. ೭-೬೪). ೨. ಕುಶನೆಂಬವನ ಬಾಣ. ೧, ೨ : ಜಗದೊಳ್ಕುಶಾಸ್ತ್ರಪ್ರಕರಕೆ ಮೈಗೊಟ್ಟವರಂ ಮಿಗೆ ಪತಿತನಾಗದಿರ್ದಪನೆ (ಜೈಮಿಭಾ. ೨೧-೨೧). [ಸಂ. (ಕು + ಶಾಸ್ತ್ರ ; ಕುಶ + ಅಸ್ತ್ರ)]

**ಕುಶಿ$_1$** (ನಾ). ೧. ಹದ ಮಾಡಿದ ಕಬ್ಬಿಣ. ೨. ನೇಗಿಲ ಕುಡ, —ಗುಳ. [ಸಂ. ಕುಶೀ]

**ಕುಶಿ$_2$** 'ಖುಶಿ' ನೋ.

**ಕುಶಿಕ** (ನಾ). ೧. ನೇಗಿಲ ಕುಡ, —ಗುಳ: "ಫಾಳಃ ಕುಶಿಕ ಉಚ್ಯತೇ" (ಹಲಾಯು. ೯೪-೪೨೧). ೨. ವಿಶ್ವಾಮಿತ್ರನ ತಾತ. 'ಕುಶಿಕತನಯ' ಪರಾ. [ಸಂ.]

**ಕುಶಿಕತನಯ** (ನಾ). ಕುಶಿಕನ ವಂಶದಲ್ಲಿ ಹುಟ್ಟಿದವನು; ವಿಶ್ವಾಮಿತ್ರ : ಕಾಯಿಸಿದ ಕಬ್ಬಿಣವ ಕರಗಿ ಹೊಯ್ದಂತಾದುದಯ್ ದಶರಥಗೆ, ಕುಶಿಕತನಯನ ಪೇಳ್ದ ಕೂರ್ನುಡಿಗೆ (ಶ್ರೀರಾಮಾ. ೨೯-೩೫).

[ಕುಶಿಕ + ತನಯ]

**ಕುಶಿಕೋದ್ಭವ** (ನಾ). = ಕುಶಿಕತನಯ : ಋಷಿಗರ್ಘ್ಯಮಂ ಕೊಡಿಸಿ ಪಾಳಿಯಿಂದಡಿತಡಿಗೆ ಮಣಿಯೆ ಕುಶಿಕೋದ್ಭವಂ (ಶ್ರೀರಾಮಾ. ೨೮-೧೩).

[ಕುಶಿಕ + ಉದ್ಭವ]

**ಕುಶಿನಿ** (ನಾ). ಹದ್ದು; ಗಿಡಗ : ಕುಶಿನಿ ಬಂದು ತನ್ನ ಮರಿಯನ್ನು ತೆಗೆದುಕೊಂಡು ಹೋದಾಗ ಕೊಕ್ಕೊಕ್ಕೊ ಎನ್ನುವ ಹೇಂಟೆ (ನಮ್ಮನು. ೨). [?]

**ಕುಶಿರ** (ನಾ). ನೇಗಿಲ ಕುಡ, —ಗುಳ : "ಕುಶಿರಮೆನೆ ಪಾಳಮೆನೆ ಕುಟುಕುರ್ಣಯೆನೆ ಕುಡಿನು" (ಮಂಗರಾ. ೧೯೯-೧). ☞ ಇದು 'ಕುಶಿಕ' ಎಂಬುದರ ಅಪಲಿಖಿತವಿರಬಹುದು. [?]

**ಕುಶೀಲ** (ನಾ). ೧. ಕೆಟ್ಟ ಸ್ವಭಾವ; ದುಶ್ಶೀಲ : ಮತ್ತಮಲ್ಲಿ ಕುಶೀಲ ಕುತ್ಸಿತಾಚಾರ ಕುವೇಷ ಕುದೃಷ್ಟಿಗಳುಂ (ಆದಿಪು. ೫-೪೦ ವ). [ಸಂ.]

**ಕುಶೀಲವ** (ನಾ). ೧. ಚಾರಣಕವಿ; ಸ್ತುತಿಪಾಠಕ. ೨. ಅಭಿನಯಕಾರ; ನಟ : "ಶೈವಲಾಲೀ, ಶೈಲೂಷಃ; ಕುಶೀಲವಃ, . . . ನಟಃ – ಈ ೮ ನಟ್ಟವಿಗಂ" (ಹಲಾಯು. ೯೭-೪೩೮) ; ನಟನರ್ತನ ಗಾಯಕ ವಾದಕ ವಾಗ್ಜೀವನ ಕುಶೀಲವಾದಿಗಳೂ . . . ಗ್ರಾಮಗಳಲ್ಲಿ ನೆಲಸಕೂಡದು (ಭಾರದ. ೩೬೧). [ಸಂ.]

**ಕುಶೀಳೆ** (ನಾ). ಕೆಟ್ಟ ಶೀಲವುಳ್ಳವಳು; ದುರಾಚಾರಿಣಿ : ಕುಭಾಗ್ಯೆ ಕುಶೀಳೆ ಜಿಹ್ವಲಂಪಟಿ . . . ಎಂಬಟಮಟಕಾತಿಯರ್ ಸತಿಯರೆ (ಸೌಇಇ. XX, ೨೪೮-೪೧ ; 1223). [< ಸಂ. ಕುಶೀಲಾ]

**ಕುಶೂಲ** (ನಾ). ಧಾನ್ಯವನ್ನು ಸಂಗ್ರಹಿಸಿಡುವ ಸ್ಥಳ; ಕಣಜ : ಕುಶೂಲವೆಂದರೆ ಕಣಜವು (ಆರ್ಯಧ. ೮೬). [ಸಂ.]

**ಕುಶೂಲಧಾನ್ಯ** (ನಾ). ೧. ಕಣಜದಲ್ಲಿ ಶೇಖರಿಸಿಟ್ಟ ಧಾನ್ಯ. ೨. ಕಣಜದಲ್ಲಿ ಧಾನ್ಯ ಸಂಗ್ರಹಿಸಿಟ್ಟುಕೊಳ್ಳುವವನು : ತನ್ನ ತನ್ನವರ ಜೀವನಕ್ಕೂ ನಿತ್ಯ ನೈಮಿತ್ತಿಕ ಧರ್ಮಕಾರ್ಯಗಳಿಗೂ ಮೂರು ವರ್ಷಕ್ಕೆ ಸಾಕಾಗುವಷ್ಟು ಧಾನ್ಯಾದಿಗಳನ್ನು ಶೇಖರಿಸಿಟ್ಟುಕೊಳ್ಳುವವನು ಕುಶೂಲಧಾನ್ಯನು (ಆರ್ಯಧ. ೮೬). [ಕುಶೂಲ + ಧಾನ್ಯ]

**ಕುಶೆ$_1$** (ನಾ). ೧. ದರ್ಭೆ : ಅಸಿಮಷಿ ಕುಶೆ (ಷು) ಪಿಡಿ ಪಿಡಿಕಲ್ ಕುಸಿಯುಂ ಮಗುಳ್ದೀನಿದು ಯೋಗಿಧರ್ಮಮೇ (ಶಬಶಂ. ೨-೧೦೮). ೨. ಮುಚ್ಚುವ ಹಲಗೆ : (*). ೩. ಮರದ ತುಂಡು : (*).

[< ಸಂ. ಕುಶ]

**ಕುಶೆ$_2$** (ನಾ). ೧. ಕಡಿವಾಣದ ಹಗ್ಗ ; ವಾಘೆ ; ಲಗಾಮು : "ಕುಶೆ ರಶ್ಮಿಯೆನೆ ವಾಘೆಯಕ್ಕು" (ಮಂಗರಾ. ೮೧-೧೩). [ಸಂ. ಕುಶಾ]

**ಕುಶೇಶಯ** (ನಾ). ೧. ನೀರಿನಲ್ಲಿ ಇರುವುದು ; ತಾವರೆ ; ಕಮಲ : ಬುಧಕುಶೇಶಯೋದ್ಬೋಧಕರ ಲಸತ್ತಿಗ್ಮಕರಂ (ಆದಿಪು. ೬-೬೬) ; ಕುಶೇಶಯಂಗಳ್ಗೆ ನೀಡೆ ಕರಮಂ ಮಿತ್ರಂ (ಅಜಿಪು. ೬-೬೭) ; ಯದುಕುಲವರಕುಶೇಶಯ ಭಾನು . . . ಹೊಕ್ಕನು ಹಸ್ತಿನಾಪುರವ (ಕುವ್ಯಾಉ. ೭ ಸೂಚನೆ). ೨. ವಿಷ್ಣು. [ಸಂ.]

**ಕುಶೇಶಯಗರ್ಭ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ : ಆ ಮಹಾಪ್ರಕಾಶಮಂ ಕುಶೇಶಯಗರ್ಭಂ ನೋಡಲ್ಕಳ್ಕಿ ಬಳ್ಕುತ್ತುಂ (ಜಗವಿ ೧-೪೭ ವ). [ಕುಶೇಶಯ + ಗರ್ಭ]

**ಕುಶೇಶಯನಯನ** (ನಾ). ಕಮಲದಂತೆ ಕಣ್ಣುಗಳನ್ನುಳ್ಳವನು ; ಕಮಲಾಕ್ಷ; ಕೃಷ್ಣ : ರಂಜಿಸಿದಂ ಶೈಶವದೊಳಾ ಕುಶೇಶಯನಯನಂ (ಜಗವಿ. ೩-೩೪). [ಕುಶೇಶಯ + ನಯನ]

**ಕುಶೇಶಯಲೋಚನ** (ನಾ). = ಕುಶೇಶಯನಯನ : ಶೈಶವದೊಳ ಬಲೆಯರ್ಗೆ ಕುಶೇಶಯಲೋಚನನ ಮೂರ್ತಿ ಪಡೆದುದು ರಾಗಾವೇಶಮಂ (ಜಗವಿ. ೩-೭೧). [ಕುಶೇಶಯ + ಲೋಚನ]

**ಕುಶೇಶಯಶರ** (ನಾ). ಕಮಲವನ್ನೇ ಬಾಣವಾಗಿ ಉಳ್ಳವನು ; ಕಾಮ : ಈ ಶಶಿಮುಖಿಯುದ್ದೇಶಿಸಿ ನಿನ್ನನೆ ಕ್ಲೇಶಪಡುವಳು ಕುಶೇಶಯಶರನಿಂ (ಶಾಕುಂತ. ೩೯ ಅಡಿಟ). [ಕುಶೇಶಯ + ಶರ]

**ಕುಶ್ರಮ** (ನಾ). ಭೂಮಿಯ; (ಲೋಕದ) ಆಯಾಸ: ಬೆಳಸಿರಿಯ ಭರಭಾರಿ ಕುಶ್ರಮಸಂಕ್ಷು ವೈರಿ . . . ಕಾವೇರಿ ಭೋರ್ಗರೆದೆಸೆದುದು (ಭಾವಚಿಂ. ೨-೭). [ಸಂ.]

**ಕುಶ್ರೀ** (ಗು). ೧. ಕುರೂಪಿಯಾದ; ಅಂದಗೇಡಿಯಾದ: ಆ ರೂಪವನ್ನು ಹಿಡಿದು ಕುಳಿತವಳು ಈ ಕುಶ್ರೀ ಬಾಲಿಕೆ (ಇಪ್ಪಕ. ೫೩೫). (ನಾ). ೨. ಕುರೂಪ; ಅಂದಗೇಡಿತನ: ಮುಕ್ಕಾಲಿಗಿಂತ ಮಿಕ್ಕು ಜನಕ್ಕೆ ಸೌಂದರ್ಯ ಬೋಧವೇ ಇಲ್ಲ ಮತ್ತು ಕುಶ್ರೀ ಎಂಬುದು ಅವರಿಗೆ ಎಳ್ಳಷ್ಟೂ ಪೀಡೆಗೊಡದು (ಇಪ್ಪಕ. ೨೩೨). [ಸಂ.]

**ಕುಶ್ರುತ** (ನಾ). ದೋಷಯುಕ್ತವಾದ ಜ್ಞಾನ: ಕುಮತಿ ಕುಶ್ರುತ ವಿಭಂಗ ಮತಿ ಶ್ರುತ ಅವಧಿ ಮನಃ ಪರ್ಯಾಯ ಕೇವಲ ಜ್ಞಾನವಿಕಲ್ಪದಿಂ ಜ್ಞಾನಮುಷ್ಟವಿಧಂ (ತತ್ತ್ವಪ್ರ. ೧೭). [ಸಂ.]

**ಕುಷ್‌ಬಾಷ್**, ಖುಷ್ಬಾಷ್ (ನಾ). ಸ್ವೇಚ್ಛಾಚಾರಿ (?): ಗ್ರಾಮಾಂತರಗಳಲ್ಲಿ ರೈತ ಪ್ರಜೆಗಳು ವರ್ತಕರು ಇತರ ಕುಷ್‌ಬಾಷ್ ಜನಗಳು ಲೈಸೆನ್ಸ್ ಇಲ್ಲದೆ ಬಂದೂಖುಗಳನ್ನು . . . ಇಡಕೂಡದೆಂದು (ಗ್ರಾಮಾಕ. ೧೫೭). **ಖುಷ್ಬಾಷ್**: (ರೈಸ್‌ಗೆ. II, ೫೫೩). [?]

**ಕುಷರಥ** (ನಾ). ಒಂದು ಸಸ್ಯದ ಹೆಸರು: (ವೈಔಗಿ. ೩೧-೬೦೩). [?]

**ಕುಷಿ** 'ಖುಶಿ' ನೋ.

**ಕುಷ್ಕಿ**, ಖುಷ್ಕಿ (ನಾ). ಮಳೆಯ ನೀರಿನಿಂದ ಬೆಳೆ ಬೆಳೆಯುವ ಭೂಮಿ; ಕಾಡಾರಂಬ: ನಾಲ್ಕು ಎಕರೆ ಕುಷ್ಕಿ ಜಮಾನು ಲಕ್ಷ್ಮೀನಾರಣಪ್ಪನವರ ಕೈವಶವಾಯಿತು (ತಾಯಿಕ. ೬). **ಖುಷ್ಕಿ**: ನನಗೇ ನಲವತ್ತೈದು ಖುಷ್ಕಿ ಇದೆ (ಬಿಸ್ತಕ ೨೫); ಖುಷ್ಕಿಯ ನೆಲವಾಗಿಯೇ ಇದ್ದರೂ ಇರಲಿ (ಮಹಾಗ. ೧೯೧). 'ತರಿ' ಪರಾ.
[← ಪಾರ. ಹಿಂ. ಮರಾ. ಖುಷ್ಕೀ]

**ಕುಷ್ಕಿಸಾಗುವಳಿ** (ನಾ). ಹೊಲದ ಬೇಸಾಯ: (ರೈಸ್‌ಗೆ. II, ೫೫೪).
[ಕುಷ್ಕಿ + ಸಾಗುವಳಿ]

**ಕುಷ್ಟ** (ನಾ). ೧. = ಕುಷ್ಠ: "ಪಾದಸ್ಫೋಟಃ ವಿಪಾದಿಕಾ ಈ ೨ ಕಾಲು ತಳವಡದಿಹ ಕುಷ್ಟದ ಪೆಸರು" (ನಾಚಿರಾ. ೧೧೯). ೨. ಕುಷ್ಠರೋಗವುಳ್ಳವನು: ಕುಷ್ಟರಾಗಿ ಹಸ್ತಪಾದ ನಷ್ಟರಾಗಿಯಿರಲು (ಸುಸಾರ. ೮೭-೫). [< ಸಂ. ಕುಷ್ಠ]

**ಕುಷ್ಟಗುಲ್ಮ** (ನಾ). ಗುಲ್ಮಕ್ಕೆ ಕುಷ್ಠಹಿಡಿಯುವ ಒಂದು ರೋಗ: ಕೆರಕುಂ, ತುಜಿ ಕುಷ್ಟಗುಲ್ಮಂ ಪಿರಿದಕ್ಕುಂ ಪೆರ್ಚಿದಾಮದಿಂ (ಕಲ್ಯಾಕಾ. ೪-೬). [ಕುಷ್ಟ + ಗುಲ್ಮ]

**ಕುಷ್ಟಿಗ** (ನಾ). ಒಂದು ಜಾತಿಯ ಬಳ್ಳಿ; ಕುಂಟೆಗ; ಕುಷ್ಟಿಗನಬಳ್ಳಿ: (ಕಿ). [?]

**ಕುಷ್ಟೆ** (ನಾ). ಕುಟ್ಟೆ. 'ಕುಷ್ಟೆವೀಟು' ಪರಾ.
[< ಸಂ. ಕುಷ್ಠ ?]

**ಕುಷ್ಟೆವೀಟು** (ಕ್ರಿ). ಕುಟ್ಟೆಹಿಡಿ; ಹುಳಿತುಹೋಗು: ಕುಷ್ಟೆವಿಟ್ಟ ಬಿದಿರಂತೆ ಕುಲಕ್ಷಯಮಾಗುಗುಂ (ಎಕ. VIII, ನಗರ. ೬೦-೧೫; 897).
[ಕುಷ್ಟೆ + ಬೀಟು$_1$]

**ಕುಷ್ಠ** (ನಾ). ೧. ಒಂದು ಬಗೆಯ ತೊನ್ನು ರೋಗ; ಶ್ವೇತರೋಗ; ಶ್ವಿತ್ರ: "ಕುಷ್ಠಮೆನೆ ತೊನ್ನು" (ಮಂಗರಾ.೧೧೩-೨); ಹರಿಯ ಕೈಯಲು ಹೋಗದಿಹ ದುರ್ಧರದ ಕುಷ್ಠವನಂತಪಹರಿಸಿ (ಬಸಪು. ೫೪-೭೦); ಸ್ಥಾವರವಿಷ, ಜಂಗಮವಿಷ, ಕುಷ್ಠ, ಅಪಸ್ಮಾರ . . . ಮುಂತಾದ ರೋಗಗಳು (ಸಕವೈ. ೨೨). ೨. ಕುಷ್ಠರೋಗವುಳ್ಳವನು: ಕುನಖಿ ಕುಷ್ಠ ಕುಶೀಲಕನು ಕುಬ್ಜನನು . . . ಉಪ್ಪವಡಿಸುವ ಸಮಯದೊಳೆನಿಬರನು ಕಾಣ್ಬುದು ಮಹೀಶರಿಗಂಗವಲ್ಲೆಂದ (ಕುವ್ಯಾಉ. ೩-೧೦೭).
೩. ಒಂದು ಜಾತಿಯ ಔಷಧಿ ಸಸ್ಯ; ಕೊಳಂಜ; ಚೆಂಗಲಕೋಷ್ಠ: ರಾಷ್ಟ್ರೆಕುಷ್ಠಂ ಬಜೆ ಪುಲಿಗಿಲಬೇರ್ ಪಿಪ್ಪಲೀಮೂಲಮುಯ್ದುಪ್ಪೆರಡೋವಂ ಪಾಲೆ ಬೇವಿಂಗತಿಬಜೆ (ಲೋಕೋಪ. ೯-೨೫). [ಸಂ.]

**ಕುಷ್ಠಗಂಧಿ** (ನಾ). ಒಂದು ಔಷಧಿ ಸಸ್ಯ: "ಕುಷ್ಠಕಂದಃ – ಕುಷ್ಠಗಂಧಿ, ಚಿಕ್ಕೇಲಕ್ಕಿ ಹಸ್ತಿಕಂದ" (ಓಷಧಿ. ೩೭). [ಸಂ.]

**ಕುಷ್ಠರೋಗ** (ನಾ). = ಕುಷ್ಠ ೧: ಆ ತಪೋನಿಧಿ ಕುಷ್ಠರೋಗಪರೀತ ಬೀಭತ್ಸೆಯಲಿ ಹುದುಗಿರಲು (ಕುವ್ಯಾಅ. ೧೬-೪೪); ಕುಷ್ಠರೋಗದವರು ಮೊಟರುಗಂಟನ ರೋಗದವರು . . . ವಮನಯೋಗ್ಯರೆಂದರಿವುದು (ಸಕವೈ. ೨೫). [ಕುಷ್ಠ + ರೋಗ]

**ಕುಷ್ಠಿ** (ನಾ). ತೊನ್ನು ಹಿಡಿದವನು; ಕುಷ್ಠರೋಗಿ: ಒಬ್ಬ ಕುಷ್ಠಿಯನ್ನೂ . . . ಗುಣಪಡಿಸಿ (ಗೊಲ್ಗೊಥಾ. IV ಮುನ್ನುಡಿ).
[ಸಂ. ಕುಷ್ಠಿನ್]

**ಕುಷ್ಮಿಕೆ** (ನಾ). ಕರುಳು; ಅಂತ್ರ: ರೋಮಾಜಿನ ಕುಷ್ಮಿಕೆಗಳ್ ಕೋಮಲವತಿರಭಸ [ವೇಗಮಾನ] ವಿಲಾಸೋದ್ದಾಮಂ ದಂಡನಿರಕ್ಷಣ ರಾಮಸಸಂ ವಿಷಮಮಾನ ನಯನೋತ್ಥಾನಂ (ಅಶ್ವಶಾ. ೩-೪೧); ಸ್ಥೂಲಾಜಿನ ಕುಷ್ಮಿಕೆ ರೋಮಾಳಿಗಳಂ (ಅಶ್ವಶಾ. ೩-೪೪).
[ಸಂ. ಕುಷ್ಮಿಕಾ]

**ಕುಷ್ಮಾಂಡಕೆ** (ನಾ). ಕುಂಬಳ; ಕುಂಬಳಕಾಯಿ. [ಸಂ.]

**ಕುಸ** 'ಕುಸು' ನೋ.

**ಕುಸಂಗ** (ನಾ). ಕೆಟ್ಟಸಹವಾಸ. [ಸಂ.]

**ಕುಸಂಧಿ** (ನಾ). ೧. ಇಕ್ಕಟ್ಟಾದ ಸ್ಥಳ, —ಸಂದಿ. ೨. ಅಶುಭವಾದ ಗ್ರಹಯೋಗ. ೩. [ವ್ಯಾಕ] ಅಸಾಧುವಾದ ಸಂಧಿ. [ಸಂ.]

**ಕುಸಂಬಿ** 'ಕುಸುಂಬೆ' ನೋ.

**ಕುಸಂಸ್ಕಾರ** (ನಾ). ಕೆಟ್ಟ ಸಂಸ್ಕಾರ: ಆದರೊಳಗೆ ಸ್ವಲ್ಪಮಾತ್ರವೂ ಕುಸಂಸ್ಕಾರವಿರಲಿಲ್ಲ (ನಿಬಂಧ. I, ೩೮); ಎಷ್ಟೊಂದು ಕುಸಂಸ್ಕಾರಗಳು ಆ ಬಾಲಿಕೆಯರ ಮೇಲೆ (ಘೇಮ್ಸುಗಂ. ೧೪೩). [ಸಂ.]

**ಕುಸಕ**, ಕುಸುಕ$_1$ (ನಾ). ಉಪ್ಪರಿಗೆಯ ಮೊಗಸಾಲೆ (?): ಸುಕರ ಹೇಮದ ಕಲಶ ಝಲ್ಲಿಯ ನಿಕರದಿಂ ದಿವ್ಯಾಂಬರದಿ ಕೌತುಕದ ಬೀಜಿದುವಾ ಪುರದ ಕುಸಕಗಳು ಕಂಗಳಿಗೆ (ಸನತ್ಕು. ೧೩-೩೦); ಮಾಳಿಗೆ ಕುಸಕ ಚಪ್ಪರ ಮನೆ ಮಾಡಗಳೋಳಿಯ ಮೇಲೆ ಬಾಲೆಯರು (ಕುರಾಸಾಂ. ೩೧-೨೯); ಇತ್ತರದೊಳಗೊಪ್ಪುವ ಕುಸಕಗಳಿಂದತ್ಯಂತವೀಧಿ ಮೆಜೆದವು (ಅನಂಚ. ೨೫-೯೧). **ಕುಸುಕ$_1$**: ಚಾರು ನೆಲೆವಾಡಗಳ ಕುಸುಕದ ಭಾರವಣೆ ಮಿಗೆ ನಗರವೆಸೆದಿರೆ ಕಂಡು ಬೆಜಗಾದ (ವೈರಾಕಾ. ೧೨-೨೨); ಮುಂಗಡೆಯ ಬಾಗಿಲ್ವಾಡದೆಡೆಯ ಕುಸುಕದಲ್ಲಿ ನಿಂದಾ (ಭರಚ. ೩-೧೮). [?]

**ಕುಸಕಚಪ್ಪರ** (ನಾ). ಇಳಿಜಾರಾದ ಛಾವಣಿ, —ಚಪ್ಪರ: ಒಪ್ಪುವ ಕುಸಕಚಪ್ಪರದಿ ಸತಿಯರಿರ್ದೊಪ್ಪುವನೇನ ಬಣ್ಣಿಪೆನು (ಅನಂಚ. ೧೩-೪೨). [ಕುಸಕ + ಚಪ್ಪರ]

**ಕುಸುಕುಸ** 'ಕುಸು' ಪರಾ.

**ಕುಸಗುಟ್ಟು** 'ಕುಸುಗುಟ್ಟು' ನೋ.

**ಕುಸಗೆ** (ನಾ). ೧. ನಾಯಿ; ಸೊಣಗ: ನಮ್ಮ ಮನೆಯ ಕುಸಗೆ ಎಲ್ಲಿಯೋ ಹೋಗಿದೆ (ರೂಢಿ). ೨. ನಾಯಿಯನ್ನು ಕರೆಯುವಾಗ ಬಳಸುವ ಮಾತು: ಕುಸಗೆ ಕುಸಗೆ (ರೂಢಿ). [?]

**ಕುಸಮಯ** (ನಾ). ೧. ಕೆಟ್ಟ ಮತ; ದುಷ್ಟ ಸಿದ್ಧಾಂತ: ಕುಸಮಯ [ಪಾಠಾಂ. ಕುಸುಮಶರ] ಮದವೇದಂಡ ಕಂಠೀರವ ಬಸವ (ಬಸಪು. ೮-೧೯). ೨. ಕೆಟ್ಟ ಕಾಲ; ಅವೇಳೆ. [ಸಂ.]

**ಕುಸರಿ** (ನಾ). ಒಂದು ಬಗೆಯ ಬೀಜ : ಬರಗಾಲದ ಆಹಾರ . . . ಬಿದಿರಕ್ಕಿ, ಗೋದಿಬಾರ್ಮೊಂಡ, ೪ ಕುಸರಿ : ಅಡವಿ ರಾಜಗೀರಿ (ಕಭಾಗ. ೧೧ ಪಂ). [← ಮರಾ. ಕುಸರೀ]

**ಕುಸಲ್** 'ಕುಸುಬಲು' ನೋ.

**ಕುಸಲ** (ನಾ). ೧. ಚಾತುರ್ಯ; ಕೌಶಲ : "ಕುಸಲಮೆ ಕೌಶಲ್ಯಂ" (ಚತುನಿ. ೧೧೯); ವಸುಮತಿಯ ಶಿವಭಕ್ತರೆಸಗುವ ಕುಸಲದೊಯ್ಯಾರವನು ನವಿಮ್ಮಾ ಮಸುಳಿಸಿದ ಮತಿಗಜಿಯಬಹುದೇ (ಪ್ರಭುಲೀ.೧೫-೧೩). ೨. ಕುಸುರಿ ಕೆಲಸ; ಚಿತ್ತಾರದ ಕೆಲಸ : ಹಸರ ಈ ಕಂಬಳಿಯ ಹಸನಿ ಗಂಗವ್ವ ಹಾಸ ಕುಸಲದಡ್ಡಣಗಿ ನಡುವಿಡ (ಲೋಕಗೀ. ೧೬-೮); ಕುಸಲದ ಗೆಜ್ಜೆ ಕೆಸರಾಯ್ತು (ಕನ್ನಜಾ. ೪೭). ೩. ಸೌಖ್ಯ; ಸಂತೋಷ : "ಕುಸಲ-ಕುಶಲ = ಸೌಖ್ಯ, ಸಂತೋಷ" (ತದ್ಭಕೋ. ೮); ಆ ಗುಬ್ಬಿ ಕುಸಲದ ನಗುವ ನಗತಾವ (ಗರತಿ. ೭೭); ದಸರೀಕ ತವರೀಗೆ ಕುಸಲದಿ ನಾ ಹೋದೆ (ಕನ್ನಜಾ. ೧೬೪). ೪. ನಾಟ; ಮಾಯೆ : ಕೇಳ್ದ ಕಡೇಲೆಲ್ಲಾ ಇದು ದೇವರ ಕುಸಲ, ಸೌಂತಿ ಕುಸಲ ಅಂತ್ಲೇ ಬಂತ್ಕಣವ್ವಾ (ಹುಟ್ಟಿಹ. ೧೩೪). [< ಸಂ. ಕುಶಲ]

**ಕುಸಲಂಬೆಱು** (ಕ್ರಿ). ಸಂತೊಷಪಡು; ನಲಿ : ಕುಸಲಂಬೆತ್ತುಜಿ ಯಾಳುತಿರ್ದು ಪದಿನಾಡಾಖ್ಯಾತ ಭೂಭಾಗಮುಂ (ಎಕ. IV, ಎಳಂದೂ. ೧-೪೨; 1654). [ಕುಸಲ + ಪೆಱು₁]

**ಕುಸಲಕ್ಕಿ** 'ಕುಸುಬಲಕ್ಕಿ' ನೋ.

**ಕುಸಲಿಸು** (ಕ್ರಿ). ಕುಶಲತೆಯನ್ನು ಕಾಣಿಸು; ಕೌಶಲ್ಯ ತೋರಿಸು : ಹಸೆಯ ಬರೆಯೋರು ಕುಸಲಿಸಿ ಬರಿರವ್ವಾ ಸಣ್ಣಮುತ್ತಿನ ತಳಿ ಕೊಡಿ-ಈ ಮನೆಯ ಸಿಸು ಕುಳ್ಳಿರುವ ಜಗಲಿಗೆ (ಹಳ್ಳಿಬಾ. ೫೭). [ಕುಸಲ + -ಇಸು₃]

**ಕುಸಲೆ** (ನಾ). ಚದುರೆ; ಚತುರೆಯಾದವಳು; ಕುಶಲೆ : ಬಿಸಿಲ ಕಳೆದು ಸಂಜೆವೆಣ್ ಕುವಲಯ ಲಕ್ಷ್ಮಿಗೆಸೆವ ಬೆಳ್ದಿಂಗಳನುಡಿಪ ಎಸಕದಿ ದುಗುಲನುಡಿಸಿದಳೊರ್ವಳು ಕುಸಲೆ ಪೊಂಬಟ್ಟೆಯನುಳಿದು (ನಾಗಕು. ೨೭-೨೫). [< ಸಂ. ಕುಶಲಾ]

**ಕುಸಳಿ** (ನಾ). ಸಾಧು; ಸಂತ (?) : ಖಣ್ಡಸ್ಫುಟಿತ ನವ ಕರ್ಮಕ್ಕಂ ಯೋಗಿನಿಯರ ಕುಸಳಿಯರ ಸಂನ್ಯಾಸಿಗಳ ಆಹಾರದಾನಕ್ಕಂ (ಎಕ. VII, ಶಿಕಾರಿ. ೧೭೦-೧೮; 1068). [?]

**ಕುಸಾಲೆ**, ಕಸಲೆ, ಕಸಾಲೆ₁ (ನಾ). ಒಂದು ಬಗೆಯ ಸೊಪ್ಪು. 'ಕಿಱುಕುಸಾಲೆ' ಪರಾ. **ಕಸಲೆ** : (ಅ). **ಕಸಾಲೆ₁**. 'ಕಿರುಕಸಾಲೆ' ಪರಾ. [?]

**ಕುಸಿ₁** (ಕ್ರಿ). ೧. ಕುಗ್ಗು; ಕುಂದು; ಶಕ್ತಿಗುಂದು; ಕ್ಷೀಣಿಸು : "ಕುಸಿ ಕ್ಷೀಣತ್ವೇ, ಕವಾಟಶಲಾಕಾಯಾಂ ಚ" (ಶಮಧಾ); "ತಱ್ಗಿದ ನೆಂದು ಕುಸಿದಂ" (ಶಮದ. ಪರಿ. ೫); ಕಣ್ಣುಮುಚ್ಚುಸಿರ್ ಕುಸಿದು . . . ಜೋಲ್ದನಭಿಮನ್ಯು (ಪಂಪಭಾ. ೧೧-೧೦೪); ಬೆಕ್ಕಂ ಕಂಡಿಲಿಯಂತುಸಿರ್ ಕುಸಿದು ಕುನುಂಗಿ (ಸುಕುಮಾ. ೨-೨೦); ಕುಸಿದ ಹರುಷದ ಕೊರಗಿದಾನನದ (ತೊರರಾ. ೬-೧೨-೧). ೨. ಹಿಂದೆಗೆ; ಹಿಮ್ಮೆಟ್ಟು; ಸೋಲು : ಆಹವದೊಳ್ ಕುಸಿದು ಪೆಱಪಿಂಗಿ ಪೇಱ್ ಮಾನಸರೇ ನಿನ್ನೂಱು ವರ್ಷಮಂ ಬಟ್ಟಿಪರೇ (ಪಂಪಭಾ. ೧೨-೧೭೬); ಯುದ್ಧರಂಗದೊಳ್ ಕುಸಿಯದೆ (ಗದಾಯು. ೪-೫೯); ತಳಾಱನಂ ಕಂಡ ಕಳ್ಳನಂತೆ ಕುಸಿದಂ (ಧರ್ಮಾಮೃ. ೩-೩೫); ಕಲಿತನಂ ಪೊಣರ್ದಲ್ಲಿ ಕುಸಿಯದಿರ್ಪುದೆ (ಜೀವಸಂ. ೨೨-೪೦); ಮೇಲುಗ್ಗೆ ನೀನಾದೆ ಕುಸಿದರು ಪಾಂಡುನಂದನರು (ಕುಮ್ವಾಸ. ೧೩-೭೦). ೩. ಜರಿ; ಕೆಳಕ್ಕೆ ಇಳಿ; ತಗ್ಗು : "ಕುಸಿಯೆನೆ ಜರಿದುದು" (ಭಾರಶ. ೫೭); ಸುರರೆಲ್ಲಂ ಬಡಗಲು ನೆರೆದಿರಲಾ ದೆಸೆ ಕುಸಿದು ತೆಂಕ ನೆಗೆದೊಱೆ (ಸಮಪ. ೧೦-೧೧೧); ಜವಗುಂದಿ ತಲೆ ಕುಸಿದು ನಡೆಗೆಟ್ಟು (ಹಚಕಾ. ೧೨-೭); ಅವನಿ ಕುಸಿದುದು ನೆರೆದ ಸೇನೆಯ ಹವಣಿಗೆ (ಕುಮ್ವಾದ್ರೋ. ೯-೨೫); ನೀನಂಜದಳುಕದೆ ಕುಸಿದ ತಲೆಯನು ನೆಗೆದು ನಲ್ಲಳಿ ಹೇಳು ಹೇಳೆಂದ (ಸಾಳ್ವಭಾ. ೯-೪೪); ಅವನ ಜಂಘಾಬಲವೇ ಕುಸಿಯಿತು (ಕಂಬಹು. ೫೧); ನಿಂತ ಹಾಗೇ ಅಪ್ಪಾಜಿ ಕುಸಿದುಬಿಟ್ಟರು (ಚಿಕ್ಕದೇ. ೨೫೫). ೪. ತಗ್ಗಿಸು; ಜಾರಿಸು; ಬಾಗಿಸು : ಕೊರಲಂ ಕುಸಿಯುತ್ತುಮುತ್ತರಿಸಿದ ಕುದುರೆಯಂತೆ ಮೋಱೆಯಂ ನೆಗಪುತ್ತುಂ (ಧರ್ಮಾಮೃ. ೫-೧೩೬); ಕರಿಘಟಿಗಳುಪ್ಪರಿಸೆ ಜಗ್ಗನೆ ಜರಿದು ನಿಂದವು ಕುಣಿವ ಕುದುರೆಗಳುರಕೆ ಕಬ್ಬಿಯ ಕುಸಿದು ಕಕ್ಕರಿಸಿದವು ಭೀತಿಯಲಿ (ತೊರರಾ. ೧-೧೭-೪). ೫. ತಡೆಹಿಡಿ; ನಿರೋಧಿಸು : ಪರಿವ ಕಟಾಕ್ಷಂಗಳನೋಸರಿಸುತ್ತುಂ ನಿಮಿರ್ವ ಸುಯ್ಯಗಳಂ ಕುಸಿಯುತ್ತಂ (ಆದಿಪು. ೪-೫೦); ಅಪತ್ಯಷ್ಣೆಯಂ ಕುಸಿದು ಮಾಣಿಸುವಯ್ದುಮಣು ವ್ರತಂಗಳಂ (ಆದಿಪು. ೬-೭). ೬. ಕೀಳು; ತೆಗೆ; ಉತ್ಪಾಟಿಸು : ಪುಸಿಬಸನಮೆಂದು ಕೆಲಬರ್ ಕುಸಿವರ್ ನಾಲಗೆಯನಿಕ್ಕುಱೊಳ್ (ಆದಿಪು. ೫-೮೭); ಪುಸಿ ನಾಲ್ಕು ಮಾಱ್ಕೆಯಾಗಿಯುಮುಸದ್ವೃಶಗುಣ ಕಲ್ಪವೃಕ್ಷಮಂ ಬೇರಿಂದಂ ಕುಸಿಗುಂ ಪುಸಿದೊಡವಂ ತಾಂ ಕುಸಿದಾಳ್ಗುಂ ನೆಟ್ಟನುಗ್ರ ನರಕಾರ್ಣವದೊಳ್ (ಜೀವಸಂ. ೧೩೮-೫). ೭. ಚಿಮ್ಮು; ಹೊಮ್ಮು (?) : ರಸದೊಳವರ್ಕೆ ಬಿನ್ನಣದೊಳೊಟ್ಟಜೆ ಮಾತಿನ ರೀತಿಯೊಳ್ ಚಲಂ ಕುಸಿವ ನಿಮಿರ್ಚುವೋಜೆಯೊಳುದಾತ್ತತೆ . . . ಪೊಸದೇಸೆಯೊಳೊಂದಿದ ಮಾರ್ಗಮೊಳ್ಪುವೆತ್ತೆಸದಿರೆ ಪೇೞ್ದುರಂಜಿಸದೆ (ಸುಕುಮಾ. ೧-೪೪). ೮. [ಗಣಿತ] ಗುಣಿಸು; ಗುಣಾಕಾರ ಮಾಡು : "ಅರಂಕು, ಕುಂಕು, ಕುಸಿ . . . ಇಂತಿನಿತುಂ ಗುಣಿಸೋದಕ್ಕೆ ಹೆಸರು" (ವ್ಯವಹಾ. ೧೧-೮).

ಕುಸಿಕುಸಿದು (ದ್ವಿರುಕ್ತಿ) ೧. ಕುಗ್ಗಿಕುಗ್ಗಿ; ಜರಿ ಜರಿದು : ಕುರುಕುಲತಿಲಕಂ ಕುಸಿಕುಸಿದು ಮೆಲ್ಲಮೆಲ್ಲನೆ ನಡೆದಂ (ಗದಾಯು. ೪-೧೭). ಕಾಲಿಡಲೆಡೆಯಿಲ್ಲದೆ ಹೆಣಗಳನ್ನು ಮೆಟ್ಟಿ ಮೆಟ್ಟಿ ಕುಸಿಕುಸಿದು ಮುಂದುವರಿಯುತ್ತಿದ್ದನು (ಭಾಮಣಿ. ೫೧). ೨. ಬಾಗಿಬಾಗಿ; ಹೊರಹೊರಳಿ : ಚಾರುಚಲನ್ನಯನ ತ್ರಿಭಾಗದಿಂ ಕುಸಿಕುಸಿದೆನ್ನನೀಕ್ಷಿಸುವಳ್ (ಕಾದಂಉ. ೮೯). ಕುಸಿದುಬೀಳು = ಕುಪ್ಪರಿಸಿ ಬೀಳು; ಉಡುಗಿ ಬೀಳು; ಜರಿದು ಬೀಳು : ಉತ್ಸಾಹಭಂಗಕ್ಕಿಂತಲೂ ದಾರಿಗಾಣದ ಕುತೂಹಲ ಕುಸಿದುಬೀಳುವಂತಾಗಿತ್ತು (ಕಮನಿ. ೧); ಕುಸಿದು ಬೀಳುತ್ತಿರುವ ಮನೆಗಳು ಸುಟ್ಟು ಕಪ್ಪಾಗಿ ಕಾಣುವ ಚಿಮಣಿಗಳು (ಯೋಧಪು. ೧); ಜಗದೊಳಗೊಬ್ಬನು ಮೇಲೆದ್ದು ನಲಿವಂದು ಒಬ್ಬನು ಕುಸಿದು ಬೀಳುವನು (ಇಂಚಾಪ. ೭೩-೫೧).

[ದೇ ॥ ತುಳು. ಕುಸಿ; ತೆಲು. ಕುದಿ]

**ಕುಸಿ₂** (ನಾ). ೧. ಕೆಳಕ್ಕೆ ಜರಿಯುವುದು; ಕುಸಿತ. 'ಕುಸಿಗೊಳಿಸು' ಪರಾ. ೨. ಮನದ ಕುಗ್ಗು; ಉತ್ಸಾಹಹೀನತೆ : "ಕುಸಿ ಇತಿ ಭಯೇನ ಲಜ್ಜಯಾ ವಾ ಉತ್ಸಾಹವಿಕಲಂ ಚೇತಃ" (ಶಬ್ದಾನು. ೪೪೧ ವ್ಯಾಖ್ಯಾ). [< ಕುಸಿ₁]

**ಕುಸಿ₃** (ನಾ). ೧. ಬಾಗಿಲಿಗೆ ಹಾಕುವ ಅಗುಳಿ : "ಕುಸಿ - ಕ್ಷೀಣತ್ವೇ, ಕವಾಟ ಶಲಾಕಾಯಾಂ ಚ (ಅಗುಳಿ)" (ಶಮಧಾ). ೨. ಸಟ್ಟುಗ; ಸೌಟು (?) : ಕುಸಿಯುಂ ಪುರಿಯೋಡುಕೋಡುಕಾವಲಿ ನುಲಿಯುಂ ಬೆಸಗೊಂಬರ್ ಪಿಡಿದಿರೆಯುಂ . . . ಜಗಕ್ಕೆ ಮಱೆಯಿಲ್ಲೆಂದಂ (ಜಟ್ಟಮ. ೧-೪೪). ೩. (?) : ಬಸವನನು ಹೂಡಿದನು ಗಾಣದ ಕುಸಿಯಕೊಂಡನು ಯಳ್ಳು ಹೊಯಿದನು ಹೊಸನೊರೆಯ ಮಾಗಿದೆಣ್ಣೆಯಕ್ಕುತ ಹಡಗಗಳತುಂಬಿ (ರೇವಕಾ. ೨-೨೬). [< ಸಂ. ಕುಶೀ]

**ಕುಸಿ₄** 'ಖುಶಿ' ನೋ.

**ಕುಸಿಕ** (ನಾ). ಉತ್ಸಾಹ ಕುಗ್ಗಿದವನು; ನಿರುತ್ಸಾಹಿ: ಕುಸಿಕಂ ಕುಸಿ ಇತಿ ಭಯೇನ ಲಜ್ಜಯಾ ವಾ ಉತ್ಸಾಹವಿಕಲಂ ಚೇತಃ ತದ್ವಾನ್ (ಶಬ್ದಾನು. ೪೪೧ ವ್ಯಾಖ್ಯಾ). [ಕುಸಿ$_2$ + -ಕ$_3$]

**ಕುಸಿಕಿಱು** 'ಕುಸುಕಿಱು' ನೋ.

**ಕುಸಿಕು** 'ಕುಸುಂಕು' ನೋ.

**ಕುಸಿಗಾರ** (ನಾ). ಸಂತೋಷವನ್ನು ಹೊಂದಿದವನು; ಕುಷಿಯಾದವನು: "ಹರ್ಷಿತಾ, ಹೃಷ್ಟಃ, ಹೃಷಕಃ ಈ ೩ ಕುಸಿಗಾರಂ" (ಕಾಶಕ್ಯ. ೬೧). [ಕುಸಿ$_4$ (< ಖುಶಿ) + -ಗಾರ$_1$ (< -ಕಾಱ)]

**ಕುಸಿಗುಟ್ಟು** (ಕ್ರಿ). ಕೆಳಕ್ಕೆ ಅದುಮು; ಕೀೞ್ಗೊಳಿಸು: ಒಡೆಯನ ಕುಸಿಗುಟ್ಟಿ ಪರರ ಹೆಚ್ಚಿಸಿ ನಾಡೆ ನುಡಿವುದಧಮತನವಹುದು (ಭರಚ. ೨೪-೬೮); ಕಿಸುರದೆ ಹಳೆಯ ಕರ್ಮಗಳ ಕುಸಿಗುಟ್ಟುವುದೆ ತಾನೆ ನಿರ್ಜರೆ (ಭರಚ. ೬೮-೬೧). [ಕುಸಿ$_1$ + ಕುಟ್ಟು$_1$]

**ಕುಸಿಗೊರಲ್** (ನಾ). ಕುಗ್ಗಿದ ಕೊರಳು; ಗುಜ್ಜುಗೊರಳು: ಪಟ್ಟುಕ ಮೂಗಿನ ಮರವುಲಿವೊಟ್ಟೆಯ ಕುಸಿಗೊರಲ ಕೆಂಚುದಲೆನವಿರ (ಕಾವ್ಯಾವ. ೨೧೦); ಕುಸಿಗೊರಲಿಱುದೆರ್ದೆ ಪೊಱಂಟೆ ಬೆನ್ ಬಾತ ಬಸಿಱಡಂಗಿದ ಜಘನಂ (ಯಶೋಚ. ೨-೩೮); ಅದು ಕುಸಿಗೊರಲ್ (ಶಮದ. ೮೯ ಪ್ರಯೋ). [ಕುಸಿ$_1$ + ಕೊರಲ್]

**ಕುಸಿಗೊರಲ** (ನಾ). ಕುಗ್ಗಿದ ಕತ್ತುಳ್ಳವನು; ಗುಜ್ಜುಗೊರಳಿನವನು: ಕಲ್ಲೆರ್ದೆಯಂ, ಕುಸಿಗೊರಲಂ (ಭಾಷಾಭೂ. ೧೩೧ ಉದಾ); ಹೆಱಗಾಲಂ, ನಿಡುಮೂಗಂ, ಕುಸಿಗೊರಲಂ (ಶಮದ. ೬೬ ಪ್ರಯೋ); ಕುಸಿಗೊರಲಂ ಕುಸಿಗೊರಲಿ (ಶಬ್ದಾನು. ೩೨೮ ಪ್ರಯೋ). [ಕುಸಿಗೊರಲ್ + -ಅ$_7$]

**ಕುಸಿಗೊರಲಿ** (ನಾ). ಕುಗ್ಗಿದ ಕತ್ತನ್ನುಳ್ಳವಳು; ಗುಜ್ಜುಗೊರಳಿನವಳು: ಅವಳ್ ಕುಸಿಗೊರಲಿ[ಪಾಠಾಂ. ಲೆ] (ಶಮದ. ೮೯ ಪ್ರಯೋ); ಕುಸಿಗೊರಲಂ ಕುಸಿಗೊರಲಿ (ಶಬ್ದಾನು. ೩೨೮ ಪ್ರಯೋ). [ಕುಸಿಗೊರಲ್ + -ಇ$_2$]

**ಕುಸಿಗೊಳಿಸು** (ಕ್ರಿ). ಒಳಕ್ಕೆ ಸರಿಸು; ಒತ್ತಿಕ್ಕು: ನೊಸಲ ಬಾಲೇಂದುವನು ಕರದಿಂ ಕುಸಿಗೊಳಿಸಿ ಜಾಹ್ನವಿಯನೆಡೆಗೆಡೆಗೊಸರದಂದದಿ ಜಡೆಯೊಳೌಕುತ (ಅಂಬಕಾ. ೨೯-೨೯). [ಕುಸಿ$_2$ + ಕೊಳ್$_1$ + -ಇಸು$_3$]

**ಕುಸಿತ** (ನಾ). ೧. ಕೆಳಕ್ಕೆ ಇಳಿಯುವಿಕೆ; ಕುಸಿಬೀಳುವಿಕೆ; ಜರಿಯುವಿಕೆ: ಭೂಮಿಯ ಕುಸಿತದಿಂದಾಗಿ ಗೋಡೆ ಬಿರುಕು ಬಿಟ್ಟಿತು (ರೂಢಿ). ೨. (ಧಾರಣೆ ವಾಸಿಯಲ್ಲಿ) ತಗ್ಗುವಿಕೆ; ಇಳಿತ: ಬೇಡಿಕೆ ಕಡಮೆಯಾದುದರಿಂದ ಬೆಲೆಯಲ್ಲಿ ಒಮ್ಮೆಲೆ ಕುಸಿತ ಕಂಡುಬಂತು (ರೂಢಿ). [ಕುಸಿ$_1$ + -ತ$_2$]

**ಕುಸಿದಲೆ** (ನಾ). ಭಾರದಿಂದ ಬಗ್ಗಿದ ತಲೆ; ಕುಸಿದ ತಲೆ: ಕಳಿದ ಹೂವಿನ ತೊಡಬೆಯೋ ಕುಸಿದಲೆಯ ಬಿಟ್ಟೆಯ ಭಾರವೋ ನಿರ್ಮಳನ ಚಿತ್ತದ ಖತಿಯೊ . . . ಕೈಗಳ ಉಳಿವುಪಾಯದ ಜೋಡ ತೊಟ್ಟುದು ಪಾಂಡುಸುತಸೇನೆ (ಕುವ್ಯಾದ್ರೋ. ೧೬-೩೮). [ಕುಸಿ$_1$ + ತಲೆ$_1$]

**ಕುಸಿಬಿಷ್ಟಿ** 'ಕುಸಿವಿಷ್ಟೆ' ನೋ.

**ಕುಸಿಬೀಳು** (ಕ್ರಿ). ಕುಸಿದುಬೀಳು; ಜರಿದು ಬೀಳು; ಕುಪ್ಪರಿಸು: ಅದು ಒಮ್ಮಿಂದೊಮ್ಮೆ ನೆಲಕ್ಕೆ ಕುಸಿಬಿತ್ತು (ಮುಂಬಯಿ. ೫-೧೨೮); ನಿನ್ನ ಚರಿತದ ಒಂದು ಮಗ್ಗಲು ನಿನ್ನೊಡನೆ ಕುಸಿಬಿತ್ತು (ಹಾಡುಪಾ. ೪೬-೫); ದೊಡ್ಡ ಕುತ್ತಿನೊಳಗೆ ಕುಸಿಬಿದ್ದಿದ್ದಾನೆ (ಜಮಾನ್ದಾ. ೫೦). [ಕುಸಿ$_1$ + ಬೀಳು$_1$ (< ಬೀೞ್$_1$)]

**ಕುಸಿಯತರ** (ನಾ). ಇಳಿಜಾರು ಭೂಮಿ (?): ಮೂವರು ಅಡಿಗಳು ಅವರಿಗೆ ಬಿಟ್ಟ ಬಾಳು ಕಂಬಳಗದ್ದೆ ಕುಸಿಯತರದ ಗದೆಗಳು ೫ ಒತ್ತಿನ ತಂಬು ೧. (ಸೌಇಇ. IX–ii, ೪೭೦-೪೬ ; 1482). [?]

**ಕುಸಿಯಾಗು** (ಕ್ರಿ). ಕೆಳಗೆ ಬಾಗಿರು; ಕುಳ್ಳಾಗು: ಹುಲ್ಲಿನ ಮಾಡು ಕುಸಿಯಾಗಿದ್ದುದರಿಂದ ಜಗಲಿ ಕಿರುಜಗಲಿಗಳಲ್ಲಿ ಕವಿದಿದ್ದ ಅರಗತ್ತಲೆಯಲ್ಲಿ (ಮಲೆಮ. ೫೯). [ಕುಸಿ$_2$ + ಆಗು$_1$]

**ಕುಸಿಯಿಸು** (ಕ್ರಿ). ಕುಸಿಬೀಳುವಂತೆ ಮಾಡು; ಕುಗ್ಗಿಸು; ಸೋಲಿಸು: ವಾದಿಮದಗಜೇನ್ದ್ರನನ್ತನ್ನ ವಚನಾಂಕುಚ(ಶ)ದಿಂ ಕುಸಿಯಿಸೆ (ಇಆ. VIII, ೨೧೩-೫೪ ; 10ನೆಯ ಶತ); ಅಬಲಿಂ ಪಲವುಪವಾಸಂಗಳಿ ನೋವದೆ ದೇಹಮಂ ಕರಂ ಕುಸಿಯಿಸುತುಂ(ಧರ್ಮಾಮೃ.೩-೨೬೮); ಬಳಿಕ ತೆರೆಯ ನಡಪರಿಯಂತ ಕುಸಿಯಿಸಿ ಜಲಜಗಂಧಿಯರು ತೋಱಿದರು (ಭರಚ. ೧೩-೪೧); ಅಸಿನಡುವಿನ ಚನ್ನಮ್ಮನ ಸೊಬಗೀ ವಸುಧೆಯಸತಿಯರೆಲ್ಲರನ್ನು ಕುಸಿಯಿಸುವುದು (ಜಿನರಾ. ೧-೯೭). [ಕುಸಿ$_1$ + -ಇಸು$_3$]

**ಕುಸಿಯೊತ್ತು** (ಕ್ರಿ). ಕುಸಿಯುವಂತೆ ಒತ್ತು, —ಅದುಮು: ಮದಹಸ್ತಿಯಂ ಭಯಂಗೊಳೆ ನೆಲಕಿಕ್ಕಿ ಕೋಡೆರಡುಮಂ ಕುಸಿಯೊತ್ತಿದರಾರ್ (ಗದಾಯು. ೯-೨೦); ಪುಸಿವಾರ್ತೆಯಂ ಪೇಟ್ದನೀ ಪುಸಿವನಂ ಕುಸಿಯೊತ್ತಿ ಬಟ್ಟೆಯೊಳ್ ಪೆಟ್ಟಮೆಟ್ಟಿದು ಬಳಸಿದ ದಸಿಯೊಳ್ತೆಗೆಯಿಂ (ಸುಕುಮಾ. ೭-೫ ವ). [ಕುಸಿ$_1$ + ಒತ್ತು$_1$]

**ಕುಸಿರಿ** (ನಾ). ಅಯೋಗ್ಯವಾದ ಸಿರಿ, —ಸೌಭಾಗ್ಯ: ಆಸವಳಿದುಲೂಪಿ ಚಿತ್ರಾಂಗಿಯರು ಕಾಣುತಂ ಬಸವಳಿದು ಧಾತ್ರಿಯೊಳ್ಬಿದ್ದಳುತ . . . ಕುಸಿರಿಯಿನ್ನೇಕೆನುತ ತಲೆ ಬಸರುಗಳ ಹೊಯ್ದುನೋಳ್ಪಣಿಗಣ ಸರಂಗಳಂ ದೆಸೆದೆಸೆಗೆ ಪರಿದಿಡುತಿ (ತುರಂಗ. ೮೨-೩೦). [ಕು$_0$ + ಸಿರಿ]

**ಕುಸಿರು** 'ಕುಸುರಿ$_1$' ನೋ.

**ಕುಸಿರುವೇದಿಕೆ** (ನಾ). ಕುಸುರಿ ಕೆಲಸ ಮಾಡಿದ ಜಗಲಿ,—ವೇದಿಕೆ: ಹಸಿರು ಮುರಿವಂಥೊಂದು ತರುವಿನ ಕುಸಿರುವೇದಿಕೆಯೇರುತ (ಚಿಂತನ. ೧೮). [ಕುಸಿರು (< ಕುಸುರಿ$_1$) + ವೇದಿಕೆ]

**ಕುಸಿರೆಲೆ** (ನಾ). ನವಿರಾದ ಎಲೆ: ಸಸಿಯೊಂದು ಇಳಿಯುತಿದೆ ಅದರ ಕುಸಿರೆಲೆಯ ತುಂಬ ಕುಣಿವ ಹೆಣ್ಣು (ನವ್ಯಕಾ. ೩೪). [ಕುಸಿರು (< ಕುಸುರಿ$_1$) + ಎಲೆ$_1$]

**ಕುಸಿವಿಷ್ಟೆ, ಕುಶಪಿಷ್ಟೆ, ಕುಸಿಬಿಷ್ಟಿ, ಕುಸುಬಿಷ್ಟೆ** (ನಾ). ಒಣಜಂಬ; ಒಣಹೆಮ್ಮೆ: ಕೆನೆಮೊಸರು ಇಲ್ಲದೆ ಅನ್ನದ ತುತ್ತು ಗಂಟಲಿಗೇ ಹೋಗುವುದಿಲ್ಲ ಎನ್ನುವ ಕುಸಿವಿಷ್ಟೆಯ ಸ್ವಭಾವ ಯಾರಿಗಾದರೂ ಇದ್ದರೆ ಅಂಥವನಿಗೆ ಪ್ರವಾಸ ಒಳ್ಳೆಯ ಪಾಠಗಳನ್ನು ಕಲಿಸುತ್ತದೆ (ನಂಟರು. ೧೧೮). **ಕುಶಪಿಷ್ಟೆ**: "ದರ್ಪದ, ಪ್ರತಿಷ್ಠೆಯ, ಉಪೇಕ್ಷೆಯ, ತಿರಸ್ಕಾರ ಸ್ವಭಾವದ, ಕಟುವಿಮರ್ಶೆಯ, ಕುಶಪಿಷ್ಟೆಯ" (supercilious. ಇಂಕನಿ). **ಕುಸಿಬಿಷ್ಟಿ**: ಬಹಳ 'ಕುಸಿಬಿಷ್ಟಿ' ಯಾರು ಮಾಡುತ್ತಿರುತ್ತಾರೆ ಅವರು ಒಪ್ಪೋದು ಇಂತಹ ಹೆಣ್ಣುಗಳನ್ನೇ (ಸಂಧ್ಯಾರಾ. ೭೨). **ಕುಸುಬಿಷ್ಟೆ**: ಯಾಕೋ ಕುಸುಬಿಷ್ಟೆ ಜಾಸ್ತಿ ಆಗಿದೆ; ನಿಮ್ಮನ್ನು ತೃಪ್ತಿಗೊಳಿಸುವುದಕ್ಕೆ ಆಗೋದಿಲ್ಲ ಬಿಡಿ (ರಂಗನಾ. ೪೯). [< ಸಂ. ಕುಶ್ರವಿಷ್ಠ]

**ಕುಸಿವೆಱು** (ಕ್ರಿ). ತಗ್ಗು; ಕುಗ್ಗು: ದೆಸೆಯಿಂದೆ ದೆಸೆಯಾವ ತಾಣಕ್ಕೆ ಹೂಡಿದ ಹೊಸಮಸೆವೆತ್ತ ಖಡ್ಗದಲಿ ಕುಸಿವೆತ್ತು ಖಳನ ಮಸ್ತಕವ ಕೀಳ್ಪಡಿಸಿ ರಂಜಿಸೆ ಕಾಮದೇವ ನಿಟ್ಟಿಸಿದ (ಮೋಹತ. ೧೧-೬೬). [ಕುಸಿ$_2$ + ಪೆಱು$_1$]

**ಕುಸಿಹ** (ನಾ).= ಕುಸಿತ: ಇವು ತಿಳಿಯೆ ಷಡ್ಭಾವ ವಿಕೃತಿಗಳ್ ಜಾಯತೆಯೆ ತವೆ ಜನನಿಯುದರದಿಂ ಬರ್ಪುದು . . . ವರ್ಧತೆಯೆ ಬಳೆವ ಪಕ್ವತೆಯೆ ಕುಸಿಹಂ ಸವಿನಶ್ಯತೆಯೆ ಕೆಡುವುದು (ಚಿಬವು. ೫೮-೪೨). [ಕುಸಿ$_1$ + -ಹ$_2$]

**ಕುಸಿಹಾಲೆ** (ನಾ). ಒಂದು ಜಾತಿಯ ಸಸ್ಯ; ಬಳ್ಳಿ: ಜ್ವರದವರಿಗೆ ಪಥ್ಯದ್ರವ್ಯಗಳು ಹುರುಳಿಕಟ್ಟು . . . ಹಾಲುಸೋರೆ ಕುಸಿಹಾಲೆಸೊಪ್ಪು (ಸಕವೈ. ೧೦೨). [ಕುಸಿ$_0$ + ಹಾಲೆ$_4$]

**ಕುಸೀದ** (ನಾ). ೧. ಹಣವನ್ನು ಬಡ್ಡಿಗೆ ಕೊಡುವುದು. **೨.** ಬಡ್ಡಿ ಹಣದಿಂದ ಜೀವಿಸುವವನು : "ಕುಸೀದಂ, ವೃದ್ಧಿಜೀವನಂ – ಈ ೨ ಬಡ್ಡಿಯಿಂದ ಬಾಳ್ವವಂ" (ಹಲಾಯು. ೯೪–೪೧೮) ; "ಕುಸೀದನೆನೆ ಬಡ್ಡಿಯುಂಬಂ" (ಮಂಗರಾ. ೧೧೨–೧). **೩.** ಹಣವನ್ನು ಇಟ್ಟು ಕೊಂಡು ಬಡ್ಡಿ ಕೊಡುವ ಸಂಸ್ಥೆ ; ಬ್ಯಾಂಕು : ಈಗಿನ ಕಾಲದಲ್ಲಿ ಬ್ಯಾಂಕುಗಳಿವೆ. ಜನರು ಈ ಕುಸೀದಗಳಲ್ಲಿ ಹಣವನ್ನು ಇಡಪಿಡುವರು (ಮತಂಒ. ೫೦). [ಸಂ.]

**ಕುಸೀದಕ** (ನಾ). ಬಡ್ಡಿಗೆ ಹಣ ಕೊಡುವವನು ; ಸಾಲ ಕೊಡುವವನು : "ದ್ವೈಗುಣಿಕಃ, ವಾರ್ಧುಷಿಕಃ, ವೃದ್ಧ್ಯಾಜೀವಃ, ಕುಸೀದಕಃ –ಈ ೪ ಬಡ್ಡಿಗುಡುವವಂ" (ಹಲಾಯು. ೯೩–೪೧೭) ; "ಕುಸೀದಕನು ವಾರ್ಧುಷಿಕ . . . ವೃದ್ಧ್ಯಾಜೀವನೆನೆ ಬಡ್ಡಿಗೊಡುವ ನಕ್ಕುಂ" (ಮಂಗರಾ. ೧೧೨–೧). [ಸಂ.]

**ಕುಸೀದಾಗಾರ** (ನಾ). ಹಣವನ್ನಿಟ್ಟುಕೊಂಡು ಬಡ್ಡಿಕೊಡುವ ಸ್ಥಳ ; ಬ್ಯಾಂಕು : ಕುಸೀದಾಗಾರ ಅಥವಾ ಬ್ಯಾಂಕುಗಳು (ಭಾರದ. ೩೫೭). [ಕುಸೀದ + ಆಗಾರ]

**ಕುಸೀದಿಕ** (ನಾ). = ಕುಸೀದಕ : "ಕುಸೀದಿಕ – ಬಡ್ಡಿಯ ಕೊಟ್ಟು ಸಂಪನ್ನನಾದವನು" (ನಾಚಿರಾ. ೬). [ಸಂ.]

**ಕುಸು,** ಕುಸ, ಗುಸ್ು, ಗುಸು (ನಾ). ಪಿಸುಮಾತನ್ನು ಸೂಚಿಸುವ ಒಂದು ಅನುಕರಣಶಬ್ದ. 'ಕುಸುಗುಟ್ಟು' ಪರಾ. **ಕುಸ.** ಕುಸ ಗುಟ್ಟು' ಪರಾ. **ಗುಸ್$_1$** : (೬). **ಗುಸು** : (೬).

**ಕುಸುಕುಸು, ಕುಸಕುಸ, ಗುಸಗುಸ, ಗುಸುಗುಸು (ದ್ವಿರುಕ್ತಿ).** ಮಕ್ಕಳು ತಮ್ಮಲ್ಲಿಯೆ ಕುಸುಕುಸು ಮಾತಾಡಿಕೊಳ್ಳುತ್ತಿದ್ದರು (ರೂಢ). ಕುಸಕುಸ : (೬) ; ಇಂಗ್ಲಿಷ್ . . . ಸ್ಕೂಲಿನಿಂದ ಬಂದಿದ್ದಾನೆ ಅಂತ ಎಲ್ಲರೂ ಗುಸಗಸು (ಸ್ವಾಮಿಸ್ನೇ. ೧೭) ; ಸಸಿವದನೆಯರ ಮುಸಿಮುಸಿ ನಗೆಯ ಗುಸುಗುಸುಗಳೆಸಗಿರಲು (ಅನಂರಾ. ೧–೨೩–೨೭) ; ಹೆಂಗಸರ ಗುಂಪಿನಲ್ಲಿ ಗುಸುಗುಸು ಗುಜಗುಜ (ಸುವಸಂ. ೪೮) ; ಹೀಗೆ ಕದ್ದುಕದ್ದು ನೋಡಿ . . . ಗುಸುಗುಸು ಯಾಕೆ ಮಾತಾಡ್ತೀರಿ ? (ಮೂರುದಾ. ೧೪೦).

[ದೇ. ‖ ತಮಿ. ಕುಚುಕುಚು ; ಮಲ. ತೆಲು. ಕುಸುಕುಸು ; ತುಳು. ಕುಸುಕುಸು, ಗುಜುಗುಜು, ಗುಜ್ಜುಗುಜ್ಜು, ಗುಸುಗುಸು]

**ಕುಸುಂಕಳು** 'ಕುಸುಂಕುಳು' ನೋ.

**ಕುಸುಂಕು,** ಕುಸಿಕು, ಕುಸುಕು$_1$, ಕುಸುಗು (ಕ್ರಿ). ಕುಟ್ಟು ; ಗುದ್ದು ; ಬಾರಿಸು ; ಹೊಡೆ : "ಕುಸುಕು, ಕುಸುಂಕು – ಘಾತನೇ" (ಶಮಧಾ). **ಕುಸಿಕು : ೨.** (ಬಟ್ಟೆಯನ್ನು) ಮೆತ್ತಗೆ ಕುಕ್ಕು ; ಸ್ವಚ್ಛಮಾಡು : ಬಟ್ಟೆಯನ್ನು ಮಡಿಮಾಡುತ್ತೇವೆಂದು . . . ಒಂದೆರಡಾವೃತ್ತಿ ಕುಸುಕಿ ಹಿಂಡುವವರೂ ಇದ್ದಾರೆ (ಆರ್ಯಧ. ೧೧೨). **ಕುಸುಕು$_1$** : ೧. ಮುಂದಲೆಯ ಪಿಡಿದು ಕುಸುಕಿ ಕೆಡೆಮೆಟ್ಟಿ (ಹಚಕಾ. ೧೩–೧೦) ; ವನಕರಿಯವೊಲು ಬರೆ ಕೈಗೆ ಕೈಯಿಕ್ಕಿರದೆ ತೆಗೆದನು ಕುಸುಕಿದನು ಯಿಳೆಗಳಿಲೆಗೀಳ್ವಂತೆ (ಸಾಳ್ವಭಾ. ೧೨–೬೧) ; ಅಸಿಗಳಿಂದಿಱಿದು ಚಕ್ರದೊಳಿಟ್ಟು ಸಬಳದಿಂ ಕುಸುಕಿ (ಚೆಬಪು. ೪೪–೩೨) ; ನಿನ್ನನ್ನು ಕೊಚ್ಚಿ ಕುಸುಕಿ ತೀರಿಸುವೆನು (ಸುಗುಗಂ. ೬೧–೭). **೨.** ಬೀಸುವೊಗೆವ ಕುಸುಕುವ ಹಿಂಡಿ ಹಿಳಿವ (ಸಿದ್ಧರಾ. ೮–೨೯). **೩.** ಕುಸಿ ; ಕುಗ್ಗು : ಬಿಸಿಲಿನಿಂ ಕಳವಳಿಸಿ ಕುಸುಕಿ (ಹಮುಚ. ೫೧) ; ವ್ಯಸನವ ಮಾಡದೆ ಮನದಿ ಕುಸುಕದಿರೆಲೆ ಪ್ರಿಯ ಬೆಸಸೀಗ ಹೋಗುವೆ (ಹಮುಚ. ೬೯). **ಕುಸುಗು : ೪.** ಜಾರು ; ಜಾರಿಬೀಳು : ವಸುಧೆಪಾಲಕರೆಲ್ಲ ವ್ಯಸನ ಕಷ್ಟಾರ್ಣವದಿ ಕುಸುಗಿ ಮುಳುಗುತಲವರು (ಹಮುಚ. ೨೧).

[ದೇ. ‖ ತಮಿ. ಕುಚಕ್ಕು ; ತುಳು. ಕುರ್ಕಾವುನಿ ; ತೆಲು. ಗುಂಜು]

**ಕುಸುಂಕುಳು,** ಕುಸುಂಕಳು, ಕುಸುಕಳು, ಕುಸುಕುರು, ಕುಸುಕುಳು (ನಾ). ೧. ಗಿಡುಬಳ್ಳಿಗಳಿಂದ ಒತ್ತಾದ ಸ್ಥಳ ; ಇಡುಕುರು ; ಹೊದರು : ಕುಬ್ಜಾಮ್ರಕುಜದ ಬೀೞ್ಕೊಂಬಿನ ಪಸುರೆಲೆಯ ಕುಸುಂಕುೞೊಳಗೆ . . . ತನಿವಣ್ಣಂ ತಿಱಿಯಲೊಡನೆ (ಅರ್ಧನೇ.೩–೮೦ ವ) ; ತಲೆ ಯುದ್ಧಮಾಗಿ ತುಱುಗಿ ಬೆಳೆದೊಱಗಿ ರಾಜಿಸುವ ರಾಜಾನ್ನದ ಕುಸುಂಕುೞೊಳಗೆ (ಲೀಲಾವ. ೫–೮೪ ವ) ; ಸರಸಿಜಪತ್ರ ಕೋಟಿಯ ಕುಸುಂಕುೞಂ ನತ್ತೆಱೆದುಯ್ದು ಕಾಂತನೊಳ್ ನೆರೆದು (ಚಂದ್ರಪು. ೮–೧೧೧). **ಕುಸುಂಕಳು : ೧.** ಎಸಳ ಕುಸುಂಕೞೊಳ್ಮುಸುಂಬಿಟ್ಟು (ರಾಜಶೇ. ೨–೭೬ ವ) ; ಕಿತ್ತಿಸಳ ಕೇಸರದ ಕುಸುಂಕೞೊಳ್ಮುಸುಂಕಿ (ರಾಜಶೇ. ೧೨–೩೯ ವ). **ಕುಸುಕಳು : ೧.** ಇಡಿದ ದರಿಕೆಯೊಂದ ಕುಸುಕೞ ಕಡುಗೞ್ತಲೆ ತಲೆಯನೆತ್ತದೊತ್ತರಿಸದೆ (ಶಾಂತಿಪು. ೬–೧೧೮). **ಕುಸುಕುರು : ೨.** ಸಂದು ; ಮೂಲೆ : ವಸುಮತಿಯೊಳಗಿೞ್ದುಂಟು [ಂದೆ]ಸೆಗಳ ಕುಸುಕುರುಮನೆಯ್ದಿಮಾಣದೆಮತ್ತಂ ದಿ[ಸ]ರುಹಗರ್ಭಾಣ್ಡಕ್ಕಂ ಪಸರಿಸಿದುದು[ಕೀ]ರ್ತಿ ನೆಟ್ಟನನುಪಮ ಕವಿಯಾ (ಎಇ. X, ೧೫೧–೨೫ ; 915). **ಕುಸುಕುಳು : ೨.** ಕಳ್ಳನಿರ್ದನೆಂದು ಕೋಣೆಯಿಟ್ಟೆಡೆ ಕುಸುಕುೞೊಳೆಲ್ಲಂ ನೋಡಿ (ಧರ್ಮಾಮೃ. ೧೨–೬೫). [?]

**ಕುಸುಂಬ** 'ಕುಸುಂಬೆ' ನೋ.

**ಕುಸುಂಬರಿ** 'ಕೋಸುಂಬರಿ' ನೋ.

**ಕುಸುಂಬಾ** 'ಕುಸುಂಬೆ' ನೋ.

**ಕುಸುಂಬಿ** 'ಕುಸುಂಬೆ' ನೋ.

**ಕುಸುಂಬೆ,** ಕುಸಂಬಿ, ಕುಸುಂಬ, ಕುಸುಂಬಾ, ಕುಸುಂಬಿ, ಕುಸುಬಿ$_1$, ಕುಸುಬೆ, ಕುಸುಮೆ$_1$ (ನಾ). ೧. ಒಂದು ಬಗೆಯ ಗಿಡ ; ಅದರ ಬೀಜ : "ಕುಸುಂಭ–ಕುಸುಂಬೆ" (ಶಮದ. ೨೫೫ ಪ್ರಯೋ) ; ಮೊಸರ ರಸದೊಳ್ ಕುಸುಂಬೆಯ ಪೊಸಪೂವಂ ಕರ್ಚಿ ಗಂಧಮಂ ತೆಗೆದಿರದಾಱಿಸಿ (ಲೋಕೋಪ. ೭–೬೨) ; ಜಪಾಪ್ರಸವದ ಕೆಂಪಂಬರಿಸಿ ಕುಸುಂಬೆಯನೂಡಿ ಲಸದ್ವಿದ್ರುಮದ ರುಚಿಯನ್ನೊತ್ತಿ (ಜಯಕಾ. ೩–೨೬) ; ಮಿಸುಪ ಬೆಟ್ಟದಾವರೆ ಕುಸುಂಬೆಯು ಬಾಳೆ (ಗುರುಚಾ. ೬–೧೬). **ಕುಸಂಬಿ : ೨.** ಕುಸುಬೆ ಹೂವಿನ ಬಣ್ಣ ; ಕೇಸರ ವರ್ಣ : ಕುಸುಬಿಯ ಹೂವಿಂದ ಮಾಡಿದ ಬಣ್ಣಕ್ಕೆ ಕುಸುಂಬಿಯ ಬಣ್ಣವೆನ್ನುತ್ತಾರೆ (ಕೃಷಿಪ್ರ. ೮೪). **ಕುಸುಂಬ : ೧.** "ಕುಸುಮೆ ಕುಸುಂಬಂ" (ವಸ್ತುಕೋ. ೯೫–೧೮) ; "ತಿಳಿಯಲು ಕುಸುಂಬಮೆನೆ ಕುಸುಬೆ" (ಮಂಗರಾ. ೧೧೧–೫) ; ಕಡೆಗೆ ಕುಸುಂಬ ರಸವನ್ನು ಮಾಡಿ ಅದಕ್ಕೆ ವಿಷವನ್ನು ಬೆರೆಸಿಕೊಟ್ಟರು (ಆರ್ಯಕೀ. ೧೩೭) ; ಸೇವಂತಿಕೆ, ಕುಸುಂಬ, ಸಣ್ಣೆ, ಸೂರ್ಯಕಾಂತಿ (ನಮ್ಮಸು. ೨೩೮). **ಕುಸುಂಬಾ : ೨.** ಕುಸುಂಬಾ ಬಣ್ಣದ ಸೀರೆಯನ್ನು ಉಟ್ಟು (ಭಕ್ತವಿಾ. ೮೯). **ಕುಸುಂಬಿ : ೨.** ಅಸ್ಮಾನಿ ಬಣ್ಣ, ಕಿರಮಿಂಜಿ ಬಣ್ಣ, ಕುಸುಂಬಿ ಬಣ್ಣ, ಕರೇಬಣ್ಣ (ಮುಂಬವ್ಯಾ. ೧೦೦). **ಕುಸುಬಿ$_1$** : ೧. ಕುಸುಬಿಯ ಹೂವಿಂದ ಮಾಡಿದ ಬಣ್ಣಕ್ಕೆ ಕುಸಂಬಿಯ ಬಣ್ಣವೆನ್ನುತ್ತಾರೆ (ಕೃಷಿಪ್ರ. ೮೪). **ಕುಸುಬೆ : ೧.** ಗೋಧಿಕಡಲೆ ಎಳ್ಳು ಅಗಸಿ ಕುಸುಬೆ ಹೆಸಱು ಉದ್ದು ತೊಗರಿ ಹುರುವಲ್ಲಿ ಮುಂತಾದ ಧಾನ್ಯಕ್ಕೆ (ಎಕ. V, ಬೇಲೂರು. ೭೫–೯೪ ; 1382) ; ಕುಸುಬೆಯ ಕುರುವಿಂದದ ಕಡುರಂಗನು (ಚಂಪ್ರಸಾಂ. ೨೫–೬೨) ; ಕುಸುಬೆಯಂ ಪಿಡಿಯೊಳಿರಿಸಿ ಮೋಸಮಲ್ಲಳಸಂದೆಯೆಂಬರ್ (ಪರಶು. ೪–೨೬) ; ಜೀರಿಗೆ ತುಪ್ಪ ಕುಸುಬೆ ಅರಿಸಿನ (ಮೈಆರಿ. ೧೯೩೫, ೨೮–೨೨ ; 1751) ; ಹೆಸರು ಕುಸುಬೆ ಮೊದಲಾದ ಹುರುಕಲಂ ರುಚಿ ನೋಡುತ್ತಾ (ಸೌಗಂಧಿ. ೩೨–೧೧). **ಕುಸುಮೆ : ೧.** "ತಿಳಮೆಳ್ಳು ವನಜವುದು ಜತ್ತಿಳಮತಸೀ ನಾಮುಮುಮೆ ಕುಸುಮೆ ಕುಸುಂಬಂ" (ವಸ್ತುಕೋ. ೯೫–೧೮). [< ಸಂ. ಕುಸುಂಭ]

**ಕುಸುಂಬೆಯೆಣ್ಣೆ** (ನಾ). ಕುಸುಬೆ ಬೀಜವನ್ನು ಹಿಂಡಿ ತೆಗೆದ ಎಣ್ಣೆ: ಬೆರಕೆಯಿಲ್ಲದ ಕುಸುಂಬೆಯೆಣ್ಣೆಯಂ ಕಾಸಿಗೊಂಡು (ಸೂಪಶಾ. ೨-೨೦).
[ಕುಸುಂಬೆ + ಎಣ್ಣೆ]

**ಕುಸುಂಬೆವಟ್ಟೆ** (ನಾ). ಕಡುಗೆಂಪು ಬಣ್ಣದ ಬಟ್ಟೆ: (ಕೆಂಕವಿಟ್ಟೆಳಸಿದ ಕುಚ್ಚುಗಳು ಕುಸುಂಬೆವಟ್ಟೆಯ ಮೇಲ್ಕಟ್ಟುಗಳು) (ಮಂತ್ರಶ. ೧೮೯-೯).
[ಕುಸುಂಬೆ+ ಬಟ್ಟೆ$_1$]

**ಕುಸುಂಭ** (ನಾ). ೧. = ಕುಸುಂಬೆ ೧: ಚಣಕ ಕುಸುಂಭ ಕಾರ್ಪಾಸ ಸರ್ಷಪ. . . ವಿವಿಧ ಧಾನ್ಯ ಭೇದಂಗಳುಂ (ಆದಿಪು. ೬-೬೨ ವ); ತಿಳಾತಸೀ ಕುಸುಂಭಾದಿ ದಿವ್ಯೌಷಧಿಗಳುಮಂ (ಚಾವುಂಪು. ೩೩). ೨. ಸಂನ್ಯಾಸಿಯ ಜಲಪಾತ್ರೆ; ಕಮಂಡಲು: "ಕುಸುಂಭಂ - ಕುಸುಂಬೇ ಬಣ್ಣದ ಹುವ್ವು, ಕಮಂಡಲವೆಂಬ ಪಾತ್ರೆ" (ಸಿದ್ಧಾಂತಿ. ೩೫೦). [ಸಂ.]

**ಕುಸುಕ$_1$** (ನಾ). ಕೆತ್ತನೆಯ ಕೆಲಸ; ಕುಸುರಿಗೆಲಸ: ಸಾರಣೆಗಳಿಂ ರಂಗವಲ್ಲಿಯಿಂ ಕುಸುಕದಿಂದೋರಂತೆಸೆವ ಕುರುಜಿನಿಂ (ಪದ್ಮರಾ. ೩-೪೦); ಕುಸುಮೋಪಹಾರ ಕುಸುಕ ಗುಡಿ ತೋರಣ ಮಿಸುಪ ಕನ್ನಡಿ ಕಳಸಗಳ (ಕುರಾಸಾಂ. ೨೦-೮೭); ಬಿನ್ನಾಣದ ಸುಚಿತ್ರ ಪತ್ರದ ಕುಸುಕ ದೆಸಕದಿಂ ಮೆಱೆವ ಬಾಗಿಲ್ಗಳಿಂದ (ಜೈಮಿಭಾ. ೧೭-೬). [?]

**ಕುಸುಕ$_2$** 'ಕುಸಕ' ನೋ.

**ಕುಸುಕಹಜಾರ** (ನಾ). "ಕೆತ್ತನೆಗೆಲಸದಚಾವಡಿ" (ರಾಮವಿ. ಅನುವಾದ): ಕುಸು [ಪಾಠಾಂ. ಸ]ಕಹಜಾರ ದಿವಾಣ ಚಾವಡಿ ಪೊಸ ಕಿಸುಗಲ್ಲ ಹರ್ಮ್ಯತತಿಗಳಿಂ (ರಾಮವಿ. ೩-೧೨೭).
[ಕುಸುಕ$_1$ + ಹಜಾರ]

**ಕುಸುಕಱು** 'ಕುಸುಂಕುಱು' ನೋ.

**ಕುಸುಕಿಱು**, ಕುಸಿಕಿಱು (ಕ್ರಿ). ತಿವಿ; ಗುದ್ದು; ಜಜ್ಜು; ಹೊಡೆ: ಕೆಸಱೊಳಗೆ ಮುಳುಗಿ ಪೊಸಸೀರೆ ಎಂದರೆ ಅದರ ಪಾಶ ಕುಸುಕಿಱುಯದೆ ಮಾಣ್ಬುದೆ (ಮೋಳಮಾ. ೪೯-೨೦೧); ಕುಸುಬಿ ಕುಸುಕಿಱಿದು ಪೊಸೆದು ಪೂಳ್ವ ಸಾಹಸಿತನಕೆ (ಗಿರಿಕ. ೨-೧೦೫ ವ); ದೈತ್ಯನ ಕುಸುಕಿಱಿದು ತಿವಿತಿವಿದು ಕೊಂದನು (ಕುವ್ಯಾಅ. ೧೧-೧೧); ಕುಟ್ಟಿ ಕೆಲರ ಕುಸುಕಿಱಿದು ಕೆಲರ (ನೇಮಿಸಂ. ೧೬-೧೩೪). **ಕುಸಿಕಿಱು**: ಇರದೆ ನೀವಾ ಬಂಡಿಯಂ ಕುಸಿಕಿಱಿದು ಬರಲೀಸದಿರಿ (ಬಸವಪು. ೫೬-೨೯).
[ಕುಸುಕು$_1$ (< ಕುಸುಂಕು) + ಇಱು$_1$]

**ಕುಸುಕು$_1$** 'ಕುಸುಂಕು' ನೋ.

**ಕುಸುಕು$_2$** (ನಾ). ಪ್ರಕಾರ; ಗತ್ತು (?): 'ದುಂದುಮಿ'ಯು ಹೋಳಿಯ ಪದದ ಒಂದು ಉತ್ಕೃಷ್ಟವಾದ ಕುಸುಕು (ಕನ್ನಜಾ. ೯೩). [?]

**ಕುಸುಕುರು** 'ಕುಸುಂಕುಱು' ನೋ.

**ಕುಸುಕುಱು** 'ಕುಸುಂಕುಱು' ನೋ.

**ಕುಸುಕುಱುಕೋಣೆ** (ನಾ). ಇಕ್ಕಟ್ಟಿನ ಕೋಣೆ; ಮೂಲೆಯಲ್ಲಿರುವ ಕೋಣೆ: ಕಲ್ಲ ಕವಿಯ ಕುಸುಕುಱ ಕೋಣೆಗಳೊಳೊತ್ತುಗೊಂಡ ಕಬ್ಬುಲೆಯ ಮೊತ್ತಕ್ಕೆ ಮಾರ್ತಂಡಂ ಕ್ಷೀಣಮಾದುದಂ ಪೇೞ್ದು ಪೊಱಮಡಿಸಲ್ ಪರಿವ ಪೇಱುಗರಂತೆ ಕೇಳೀ ಕಪೋತಂಗಳ್ . . . ಸಾರೆಯುಂ (ವರ್ಧಪು. ೬-೨೩ ವ).
[ಕುಸುಕುಱು (< ಕುಸುಂಕುಱು) + ಕೋಣೆ$_2$]

**ಕುಸುಕುಱುಧರ್ಮ** (ನಾ). ಮೂಲೆಯಲ್ಲಿ ಅಡಗಿರುವ ಧರ್ಮ; ಅಪ್ರಸಿದ್ಧ ಧರ್ಮ: ವಸುಮತಿಯೊಳ್ ಪಲರುಂ ಪೂಜಿಸುವೆಸಗುವ ದೈವಮಂ ಮಹಾಧರ್ಮಮುಮಂ ಬಿಸುಟಿಹಹ ನೋಡ ಕೋಣೆಯ ಕುಸುಕುಱುಧರ್ಮಮನದೆಂತು ನಂಬಿದನೀತಂ (ಧರ್ಮಾಮೃ. ೧-೧೦೪).
[ಕುಸುಕುಱು (< ಕುಸುಂಕುಱು) + ಧರ್ಮ]

**ಕುಸುಗಕೆಱೆ** (ನಾ). ಒಂದು ಕೆರೆಯ ಹೆಸರು: ಅಲುಕುರ ಕೆಱೆ ಕುಸುಗಕೆಱೆಯ ಪುಳುಂಸೆ ಅಳರಿ (ಇಆ. XIV, ೨೩೩-೬೦; 9ನೆಯ ಶತ).
[ಕುಸುಗ$_0$ + ಕೆಱೆ]

**ಕುಸುಗು** 'ಕುಸುಂಕು' ನೋ.

**ಕುಸುಗುಟ್ಟು**, ಕುಸುಗುಟ್ಟು, ಗುಸುಗುಟ್ಟು (ಕ್ರಿ). ತಮ್ಮ ತಮ್ಮೊಳಗೇ ಮಾತನಾಡಿಕೊಳ್ಳು; ಪಿಸುಮಾತು ಹೇಳು; ಪಿಸುಗುಟ್ಟು: (೬). **ಕುಸಗುಟ್ಟು**: (೬). **ಗುಸುಗುಟ್ಟು**: ಮತ್ತೊ ಬ್ಯಾಕೆ ಗುಸುಗುಟ್ಟಿದಳು (ಕೊನೆಭೇ. ೧೫೪); ತಮ್ಮ ತಮ್ಮಲ್ಲೇ ಗುಸುಗುಟ್ಟಿಕೊಂಡು (ಗಲಾಟೆ. ೧೧೪). [ಕುಸು + ಕುಟ್ಟು$_1$]

**ಕುಸುಬಲಕ್ಕಿ** 'ಕುಸುವಲಕ್ಕಿ' ನೋ.

**ಕುಸುಬಲು**, ಕುಸಲ್ (ನಾ). = ಕುದುಪಲ್: ಕುಟ್ಟೇದಕ್ಕಿಲ್ಲಾ ಕುಸುಬಲ ಬತ್ತಿಲ್ಲವೂ (ಹುಟ್ಟಿಹ. ೮೭); ಒಂದು ಸೇರು ಕುಸುಬಲಅಕ್ಕಿಯನ್ನು ಬೇಯಿಸಲು ಅದೆಷ್ಟು ಟನ್ ಕಟ್ಟಿಗೆ ಬೇಕಾಗುತ್ತದೆಂಬುದು ನನಗಿನ್ನೂ ಗೊತ್ತಾಗಿಲ್ಲ (ನಾಡಿಗೇ. ೨೫೯). **ಕುಸಲ್**. 'ಕುಸಲಕ್ಕಿ' ಪರಾ.
[ಕುಸುಬು$_1$ (< ಕುಸುವು$_1$) + -ಅಲು (< -ಅಲ್$_2$)]

**ಕುಸುಬಿ$_1$** 'ಕುಸುಂಬೆ' ನೋ.

**ಕುಸುಬಿ$_2$** (ನಾ). ಆಡಂಬರದವಳು; ಒಯ್ಯಾರಿ (?): ಉಟ್ಟಲಾರದ ಕುಸುಬಿ ಬೀಸಲಾರದ ಬೆಡಗಿ ಅಟ್ಟುಣ್ಣಲಾರ್ದ ಅರಬೆಡಗಿ ನೀನೀಗ ಬಟ್ಲು ಕೊಟ್ಟೇನು ತಿರಿದುಣ್ಣೆ (ಹಳ್ಳಿಯ. ೧೪೦). [?]

**ಕುಸುಬಿಷ್ಟೆ** 'ಕುಸಿವಿಷ್ಟೆ' ನೋ.

**ಕುಸುಬು$_1$** 'ಕುಸುವು$_1$' ನೋ.

**ಕುಸುಬು$_2$**, ಕುಸುಮು$_1$ (ಕ್ರಿ). ೧. (ಬಟ್ಟೆಗಳನ್ನು ಕಲ್ಲಿನ ಮೇಲೆ) ಒಗೆ; ಮೃದುವಾಗಿ ಕುಕ್ಕು; ಕುಸುಕು: ವಸ್ತ್ರಮಂ ಕುಸುಬು [ಪಾಠಾಂ. ಕು]ವಲ್ಲಿಯು ತಾಡನದೊಳು ಜನನದೊಳಗೊಗೆ (ಶಬ್ದಮಂ. ೮೧). ೨. ಹೊಡೆದು ಕೆಡಹು; ಬಡಿ: ಸೆಳೆಹನಂ ಸೆಳೆದು ಕೆಡಪಿ ಪಿಡಿದೆತ್ತಿಯೊತ್ತಿ ಕುಸುಬಿ ಕುಸುಕಿಱಿದು ಪೊಸೆದು ಪೂಳ್ವ ಸಾಹಸಿತನಕೆ (ಗಿರಿಕ. ೨-೧೦೫ ವ); ಘುಲ್ಲಿಸಿ ಕುಸುಬಿ ಕುಕ್ಕುಱಿಸಿ ಕುಮ್ಮಿ ಕುಕ್ಕೆಯೊಳದ್ದು (ಪಿಂಡೋರ. ೨-೧೨); ಮೇಲುದ ಬರಸೆಳೆದು ತುಱುಬಿಗೆ ಹಾಯ್ದನು ಹಿಡಿದು ಕುಸುಬಿದನು (ಕುವ್ಯಾಅ. ೨೨-೧೯). 'ಕುಸುಕು$_1$' ಪರಾ. **ಕುಸುಮು$_1$**. 'ಕುಸುಮಾರೆ' ಪರಾ. [?]

**ಕುಸುಬೆ** 'ಕುಸುಂಬೆ' ನೋ.

**ಕುಸುಮ** (ನಾ). ೧. ಹೂವು; ಅರಳು; ಪುಷ್ಪ: ಮಜ್ಜನ ಭೋಜನ ತಾಂಬೂಲಾನುಲೇಪ[ನ] ವಿಭೂಷಣ ಸುರಭಿ ಕುಸುಮ ದಾಮಾದಿಗಳಿಂ ಸಂತಸಂಬಡಿಸಿ (ಪಂಪಭಾ. ೪-೫೩ ವ); ಕುಸುಮಾಕ್ಷತ ಫಲಹಸ್ತಂ ಪ್ರಸನ್ನಚಿತ್ತಂ (ಜಟ್ಟಮ. ೧-೩೭); ಹರಿಚಂದನ ಕುಸುಮಂಗಳನಿರದ ಮರಸೂರ್ಗಸ (ಹಮ್ಮಿರ. ೨-೧೨). ೨. ಹೂವಿನ ಎಸಳು, —ದಳ: "ಪುಷ್ಪಮುಕುಟ, ಹೂವಿನ ಕುಸುಮ" (ಪಾಂಶಿ. ೨೩). ೩. ಕಿತ್ತಳೆ, ನಿಂಬೆ ಮೊದಲಾದ ಹಣ್ಣುಗಳ ತೊಳೆಯ ಒಳಗಿರುವ ಎಸಳು. ೪. ಹೆಂಗಸರ ಮುಟ್ಟು; ರಜಸ್ಸು. 'ಕುಸುಮರಕ್ತ' ಪರಾ. ೫. ಒಂದು ಬಗೆಯ ಬಿಳಿಯ ಹೂವನ್ನು ಬಿಡುವ ಕಬ್ಬಿನಂತೆ ಕಾಣುವ ಸಸ್ಯ; ಕಾಶಗಬ್ಬು: "ಇಕ್ಷುಶರಾ - ಕಾಶಗಬ್ಬು, ಕುಸುಮ" (ಒಷಧಿ. ೧೩). ೬. ಮುಟ್ಟಿನ ದೋಷ; ರಜೋದೋಷ: ಕರಿ ಆಡಿನ ಹಾಲು, ಗೋದಿಹಿಟ್ಟು ಮೂರು ದುಡ್ಡುತೂಕ . . . ಇವನ್ನೆಲ್ಲಾ ಕಲಸಿ ಕೊಡಲು ಕುಸುಮ ಪರಿಹಾರವಾಗುವುದು (ಸಕವೈ. ೪೩೧ ಪರಿ). ೭. = ಕುಸುಮ ಷಟ್ಪದಿ: ಶರಕುಸುಮ ಭೋಗಭಾಮಿನಿ ಪರಿವರ್ಧಿನಿ ವಾರ್ಧಕಂಗಳಿಂದಾಱುತೆಱಂ. . .ಷಟ್ಪದಿ (ಛಂದೋಂಬು. ೫-೨೦ ಅಡಿಟ).

೮. [ಛಂದ] ತ್ರಿಷ್ಟುಪ್ ಎಂಬ ಛಂದಸ್ಸಿನಲ್ಲಿ ಒಂದು ಭೇದ; ಪ್ರತಿ ಪಾದದಲ್ಲಿಯೂ ಹನ್ನೊಂದು ಅಕ್ಷರಗಳುಳ್ಳ ನಾಲ್ಕು ಪಾದಗಳ ಒಂದು ವರ್ಣವೃತ್ತ: "ಅಕ್ಕುಂ ಕುಸುಮಂ ತಜಜಂ ಲಗಮುಂ" (ಕೈಪಿಡಿ. ೮೮). [ಸಂ.]

**ಕುಸುಮಕಳಂಬ** (ನಾ). ಹೂವಿನ ಬಾಣಗಳನ್ನುಳ್ಳವನು; ಮನ್ಮಥ: ಕುಸುಮಕಳಂಬನ ಕೇಳೀನಿಲಯದಂತೆ (ರಾಜಶೇ. ೮-೫ ವ). [ಕುಸುಮ + ಕಳಂಬ (= ಕಲಂಬ)]

**ಕುಸುಮಕುಲ** (ನಾ). ಹೂವಿನ ರಾಶಿ, —ಮೊತ್ತ: ಕುಸುಮ ಕುಲಮಂ ಮುತ್ತಿ ಝೇಂಕರಿಪ ತುಂಬಿಯಿಂ (ತಿರುರ. ೨). [ಕುಸುಮ + ಕುಲ]

**ಕುಸುಮಕೋದಂಡ** (ನಾ). ೧. ಹೂವಿನ ಬಿಲ್ಲು: ಮೋಹರಾಜ ನುದ್ದಂಡ ಸೇನಾನಾಯಕರು ಮಂಡಲಪತಿ ನೋಡೆಂದು ಕುಸುಮ ಕೋದಂಡವ ಪಿಡಿದನುಸಾಗಿ (ಶ್ರೀಪುಸಾಂ. ೨೨೯). ೨. ಹೂವಿನ ಬಿಲ್ಲನ್ನುಳ್ಳವನು; ಮನ್ಮಥ. 'ಕುಸುಮಕೋದಂಡದಲ್ಲಣ' ಪರಾ. [ಕುಸುಮ + ಕೋದಂಡ]

**ಕುಸುಮಕೋದಂಡದಲ್ಲಣ** (ನಾ). (ತನ್ನ ಸೌಂದರ್ಯದಿಂದ) ಮನ್ಮಥನಿಗೆ ಭಯ ಅಥವಾ ದುಗುಡವನ್ನುಂಟುಮಾಡುವವನು; ಅತಿಸುಂದರ: ಗುಂಡಾಕ್ರಿ ಭೈರವಿಯಿಂದ ಕುಸುಮಕೋದಂಡದಲ್ಲಣನ ಪಾಡಿದರು (ಭರಜ. ೧-೮೦). [ಕುಸುಮಕೋದಂಡ + ತಲ್ಲಣ]

**ಕುಸುಮಧನ್ವ** (ನಾ). ಹೂವಿನ ಬಿಲ್ಲನ್ನುಳ್ಳವನು; ಕಾಮ; ಮನ್ಮಥ: ಬಂಡಡರ್ದಂ ಜಯರವದೊಳಾ ಸುಧನ್ವಂ ತಿರಸ್ಕೃತ ಕುಸುಮ ಧನ್ವನು (ಜೈನಿಭಾ. ೧೨-೪). [ಕುಸುಮ + ಧನ್ವ]

**ಕುಸುಮಧೂಳಿ** (ನಾ). ಹೂವಿನ ಪರಾಗ: ವರ ಕುಸುಮಧೂಳಿಯಿಂ ಸಪಕ್ಷಪಳರಸದಿಂದೆ (ನವಮೋ. ೪-೨೫). [ಕುಸುಮ + ಧೂಳಿ (= ಧೂಲಿ)]

**ಕುಸುಮಬಾಣ** (ನಾ). ೧. ಹೂವಿನ ಬಾಣ; ಪುಷ್ಪಚಾಪ: ಮಲಂಗಿ ಸಿದ ಕುಸುಮಬಾಣಂಗಳಿಂ (೧೦ಕ. ೭-೧೧ ವ). ೨. = ಕುಸುಮಧನ್ವ: ಕುಸುಮಬಾಣನ ಪಿತನ ಪದಯುಗವನು ಭಜಿಸಲಿಕೆ (ಗಗತಾ. ೧೯-೨೦). [ಕುಸುಮ + ಬಾಣ]

**ಕುಸುಮಭವ** (ನಾ). ಹೂವಿನಲ್ಲಿ ಹುಟ್ಟಿದವನು; ಬ್ರಹ್ಮ: ಒಸೆದು ನಿದ್ರೆಯನಿತ್ತು ಲೋಕವ ಕುಸುಮಭವನುಳುಹಿದನು ಮರ್ಬು ಭಾಪೆನುತ ಬೆಜಗಾದ (ಕೌಶಿರಾ. ೧೦-೩೫). [ಸಂ.]

**ಕುಸುಮಮಂಜರಿ** (ನಾ). ಹೂಗೊಂಚಲು; ಪುಷ್ಪಗುಚ್ಛ: ಈತಂಗೀ ವ್ರತವಿರುದ್ಧಮಪ್ಪ ಕುಸುಮಮಂಜರಿಯೆಂತು ಬಂದುದು (ಕಾದಂಪೂ. ೭೯೫). [ಕುಸುಮ + ಮಂಜರಿ]

**ಕುಸುಮಮಾಲಿಕ** (ನಾ). ಹೂವಿನ ಮಾಲೆಯನ್ನು ಕಟ್ಟುವವನು; ಮಾಲೆಗಾರ: ಕುಸುಮಮಾಲಿಕ ಹಾವಾಡಿಗರಿಂದೆಸೆವ ಹರದರ ಕೇರಿಗಳಲುಬ್ಬಿಸಿದನುಬ್ಬಿಜಿದಬ್ಬಜಿಸಿ ಕಪಿ ಹವ್ಯವಾಹನನ (ತೊರರಾ. ೫-೮-೫೨). [ಸಂ.]

**ಕುಸುಮಮಾಳಿ** (ನಾ). ೧. ಹೂಗಳ ಸಾಲು: ಕುಸುಮಮಾಳಾ ರಾಮುಮಾರಾಮಂ (ಜಗವಿ. ೨-೨). ೨. ಹೂವಿನ ಮಾಲೆ; ಹೂಸರ. [ಕುಸುಮ + ಮಾಳಿ (= ಮಾಲಿ)]

**ಕುಸುಮರಕ್ತ** (ನಾ). ಒಂದು ಬಗೆಯ ಮುಟ್ಟಿನ ರೋಗ: ಮುಟ್ಟಿನ ಕಾಲದಲ್ಲಿ ಹೆಚ್ಚು ರಕ್ತಸ್ರಾವವಾಗುವ ಕಾಯಿಲೆ: ಸಿಹಿ ಪಡವಲದ ಬೇರು ಮತ್ತು ನೇರಳೆ ಬೇರು ಇವು ಒಂದು ಹಿಡಿಯಷ್ಟನ್ನು ಚೆನ್ನಾಗಿ ಕುಟ್ಟಿ ರಸಹಿಂಡಿ ಅದನ್ನು ಕುಡಿಯಲು ಕುಸುಮ ರಕ್ತ ನಿಲ್ಲುವುದು (ಸಕವೈ. ೪೩೦ ಪರಿ). [ಕುಸುಮ + ರಕ್ತ]

**ಕುಸುಮರಜ** (ನಾ). ಹೂವಿನ ಧೂಳು; ಪರಾಗ: ತರುಶತದೊಳು ದಿರ್ವ ಕುಸುಮರಜದ ಮಂದೈಸಿ ನೆಗೆದ ಕೆಂಧೂಳಿಯಿಂದೆ (ಪುಷ್ಪಪು. ೨-೩೯ ವ). [ಕುಸುಮ + ರಜ$_1$]

**ಕುಸುಮರಸ** (ನಾ). ೧. ಹೂವಿನ ರಸ; ಮಕರಂದ: ಅಜಿವುದೇ ನೊಣ ಮಧು ಕುಸುಮರಸವ (ಬಸವು. ೬೦-೪೩). ೨. [ಛಂದ] ಒಂದು ಬಗೆಯ ಸಮವೃತ್ತದ ಹೆಸರು: ಸರಸಿರುಹದಳನಯನೆ ಕರಮೆಸೆವ ಕುಸುಮರಸ ನಿರತಿಶಯಮೆಂಬುದು ನಿತಾಂತಂ (ಛಂದೋಂಬು. ೩-೪). [ಕುಸುಮ + ರಸ]

**ಕುಸುಮವರ್ಷ** (ನಾ). ಹೂಗಳನ್ನು ಸುರಿಸುವುದು; ಹೂವಿನ ಮಳೆ; ಪುಷ್ಪವೃಷ್ಟಿ: ಆ ತ್ರಿಲೋಕಚೂಡಾಮಣಿಯುದಯದೊಳ್ . . . ಅಭಿನವ ಮೇರು ಮಂದಾರ ಪಾರಿಜಾತ ಕುಸುಮವರ್ಷಮುಂ (ಶಾಂತಿಪು. ೯-೧ ವ). [ಕುಸುಮ + ವರ್ಷ$_1$]

**ಕುಸುಮವಿಚಿತ್ರ** (ನಾ). [ಛಂದ] ಒಂದು ಅಕ್ಷರ ವೃತ್ತದ ಹೆಸರು: ನಯನಯಂ ಕುಸುಮವಿಚಿತ್ರಂ (ಛಂದೋಂಬು. ಕಿ. ೨-೧೬೨). [ಸಂ.]

**ಕುಸುಮವಿಶಿಖ** (ನಾ). ೧. ಹೂವಿನ ಬಾಣ. ೨. = ಕುಸುಮಧನ್ವ: ಕುಸುಮವಿಶಿಖವಿಕಾರದೂರನು (ಬಸವು. ೩೨-೨). [ಕುಸುಮ + ವಿಶಿಖ]

**ಕುಸುಮವೃಷ್ಟಿ** (ನಾ). = ಕುಸುಮವರ್ಷ: ಕುರುಬಲ ಸರಿಯೆ ಸುರಕುಲ ಕುಸುಮವೃಷ್ಟಿಯ ಸುರಿಯೆ (ಕುವ್ಯಾದ್ರೋ. ೩-೭೬). [ಕುಸುಮ + ವೃಷ್ಟಿ]

**ಕುಸುಮವೇದಿಕೆ** (ನಾ). ಹೂವಿನಿಂದ ಮಾಡಿದ ವೇದಿಕೆ, —ಜಗಲಿ: ಕುಸುಮವೇದಿಕೆಯ ಮೇಲಿರ್ಪ ಚೈತ್ರನ ತೇಜದೆ (ನಂಬಿರ. ೩-೭೫). [ಕುಸುಮ + ವೇದಿಕೆ]

**ಕುಸುಮಶರ** (ನಾ). ೧. ಕುಸುಮವನ್ನೇ ಬಾಣವಾಗಿ ಉಳ್ಳವನು; ಮನ್ಮಥ: ಕುಸುಮಶರನುರವಣೆಯ ಗಾಯದಲೆಸುಗೆವಡೆದನು ಕೀಚಕನು (ಕುವ್ಯಾವಿ. ೩ ಸೂಚನೆ); ಕುಸುಮಶರನೆಂದು ನಿನಗಾರ್ಪೆಸರಿಟ್ಟರೊ (ಶಾಕುಂತ. ೩೭ ಅಡಿಟ). ೨. [ಛಂದ] ಒಂದು ಬಗೆಯ ಸಮವೃತ್ತ: ಸರಸಿರುಹದಳನಯನೆ ಕರಮೆಸೆವ ಕುಸುಮಶರ [ಪಾಠಾಂ. ರಸ] ನಿರತಿಶಯ ಮೆಂಬುದು ನಿತಾಂತಂ (ಛಂದೋಂಬು. ೩-೪). [ಕುಸುಮ + ಶರ]

**ಕುಸುಮಶಿಲೀಮುಖ** (ನಾ). ೧. ಕುಸುಮಬಾಣ; ಪುಷ್ಪಬಾಣ. ೨. ಹೂಗಳನ್ನು ಮುತ್ತುವ ದುಂಬಿ. ೧, ೨: ಕುಸುಮಶಿಲೀಮುಖ ಪ್ರಚಾರಂ ವಿರಹಿತತಿಯೊಳಂ ಮಾಳತಿಯೊಳಂ (ಜಗವಿ. ೪-೭೫ ವ). ೩. = ಕುಸುಮಶರ ೧. [ಕುಸುಮ + ಶಿಲೀಮುಖ (= ಶಿಲೀಮುಖ)]

**ಕುಸುಮಷಟ್ಪದಿ** (ನಾ). [ಛಂದ] ಷಟ್ಪದಿಯಲ್ಲಿ ಒಂದು ಭೇದ: ಒಸೆಯೆ ಮೊದಲೆರಡು ನಾಲ್ಕೈಸೆವಯ್ದನೆಯ ಪದದೆ ದಶದಶ ಸುಮಾತ್ರೆ ಮೂಜಾಜನೆಯೊಳು ಮಿಸುಪ ಪದಿನೇಳು ಲಘು ರಸದಿನೆಪ್ಪತ್ನಾಲ್ಕು ಕುಸುಮಷಟ್ಪದಿಗಿಂತು ಕಮಲನಯನೇ (ಛಂದೋಂಬು. ೫-೨೧ ಅಡಿಟ). [ಕುಸುಮ + ಷಟ್ಪದಿ]

**ಕುಸುಮಸಂಕೋಚನ** (ನಾ). ಹೂಗಳು ಮುಚ್ಚಿಕೊಳ್ಳುವುದು: "ಕುಸುಮ ಸಂಕೋಚನದೊಳಿಲ್ಲಮೆಯೊಳಂ ಮುಗಿ" (ಶಬ್ದಮಂ. ೮೧). [ಕುಸುಮ + ಸಂಕೋಚನ]

**ಕುಸುಮಸಾಯಕ** (ನಾ). = ಕುಸುಮಶರ: ಮಹಾಸಾಮನ್ತಾಧಿಪತಿ ಮಹಾಪ್ರಚಣ್ಡ ದಣ್ಡನಾಯಕಂ ನೀತಿನಿತಂಬಿನೀ ಕುಸುಮಸಾಯಕಂ (ಸೌಇಇ. XI-ii, ೧೩೯-೧೯; 1095). [ಕುಸುಮ + ಸಾಯಕ]

**ಕುಸುಮಸಾರ** (ನಾ). = ಕುಸುಮರಸ: ತನ್ನ ಕೌಶಲದಿಂದ ಕುಸುಮ ಸಾರವನ್ನೆಲ್ಲ ಚೆನ್ನಾಗಿ ಹೀರುವುದು ದುಂಬಿ (ರಾಕ್ಷಮು. ೩೧). [ಕುಸುಮ + ಸಾರ$_2$]

**ಕುಸುಮಸ್ತಬಕ** (ನಾ). ಹೂವಿನ ಗೊಂಚಲು; ಪುಷ್ಪಗುಚ್ಛ: ಪೊಸತಲರ್ದ ಸಿಂಧುವಾರದ ಕುಸುಮಸ್ತಬಕಂಗಳಂದು . . . ರಂಜಿಸಿ ತೋರ್ಕುಂ (ಪುಷ್ಪಪು. ೬-೪೧). [ಕುಸುಮ + ಸ್ತಬಕ]

**ಕುಸುಮಾಂಘ್ರಿಪ** (ನಾ). ೧. ಹೂಗಳಿಂದ ಕೂಡಿದ ಮರ; ಹೂವಿನ ಮರ. ೨. [ಛಂದ] ಒಂದು ವೃತ್ತದ ಹೆಸರು: ತ್ರಿದಶ ಚಂದ್ರ ಹುತಾಶನಾನಿಲರುಂ ಲಗಂ ಪುದಿದುಕೊಂಡಿರೆ ವಿಶ್ರಮಂ ನಿಧಿಯೊಳ್ಪಡಂಗೊದವಿ ಬಂದಿರೆ . . . ಕುಸುಮಾಂಘ್ರಿಪಂ [ಪಾಠಾಂ. ಕುಸುಮಾಪದಂ] (ಛಂದೋಂಬು. ೨-೧೪೪). [ಕುಸುಮ + ಅಂಘ್ರಿಪ]

**ಕುಸುಮಾಂಜನ** (ನಾ). ಹಿತ್ತಾಳೆ ಭಸ್ಮದಿಂದ ತಯಾರಿಸಿದ ಕಣ್ಣಿನ ಅಂಜನ: "ಪುಷ್ಪಂ, ಪುಷ್ಪಕೇತುಃ, ಪೌಷ್ಪಕಂ, ಕುಸುಮಾಂಜನಂ – ೪ ಕುಸುಮಾಂಜನದ ಹೆಸರು" (ಸಿದ್ಧಾಂತಿ. ೨೬೨). [ಕುಸುಮ + ಅಂಜನ]

**ಕುಸುಮಾಕರ** (ನಾ). ೧. ಹೂಗಳಿಂದ ತುಂಬಿದ ಸ್ಥಳ; ಪುಷ್ಪವಾಟಿ. ೨. ಹೂಗೊಂಚಲು. ೩. ವಸಂತ ಋತು: ಕುಸುಮಾಕರ ಸಮಯದೊಳತಿ ಮಸೃಣತರಂ ಚೂತಪೋತಕಂ ನನೆಯಿಂ ರಂಜಿಸುವಂತಿರೆ (ಜಗವಿ. ೬-೩೪). [ಕುಸುಮ + ಆಕರ]

**ಕುಸುಮಾಕೀರ್ಣ** (ಗು). ಹೂವುಗಳಿಂದ ತುಂಬಿದ: ಕುಸುಮಾಕೀರ್ಣಮಾದ ಕರ್ಣಿಕಾರ ಲತೆಗಳುಮಂ (ಮಲ್ಲಿಪು. ೬-೨೦). [ಕುಸುಮ + ಆಕೀರ್ಣ]

**ಕುಸುಮಾಪಚಯ** (ನಾ). ಹೂಗಳನ್ನು ಎತ್ತುವುದು; ಬಿಡಿಸುವುದು, —ಸಂಗ್ರಹಿಸುವುದು: ಪುನ್ನಾಗಲತಿಕೆಗಳುಮಂ ನೋಡುತ್ತುಂ ಕುಸುಮಾಪಚಯ ಕ್ರೀಡಾವಿಳಾಸದಿಂ ತೊಟಲ್ವಲ್ಲಿ (ಆದಿಪು. ೧೧-೯೩ ವ). [ಕುಸುಮ + ಅಪಚಯ]

**ಕುಸುಮಾಭ** (ಗು). ಹೂವಿನ ಕಾಂತಿಯುಳ್ಳ; ಕುಸುಮಸದೃಶವಾದ: ವನಭೃತ್ಕುಂತಳೆಯಾ ಶಿರೀಷಕುಸುಮಾಭಾಂಗಕ್ಕೆ ಕಂದಂ . . . ಮಾಡಿದನಾವನಾತನೆ ವಲಂ ಗಂಭೀಭವಿದ್ಯಾಧರಂ (ಪಂಪಭಾ. ೪-೬೯). [ಸಂ.]

**ಕುಸುಮಾಮೋದ** (ನಾ). ಹೂವಿನ ಸುವಾಸನೆ, —ಕಂಪು; ಪರಿಮಳ: ಅಗಳಂತಃಪುರಕಾಂತಾ ಪ್ರಸಾಧನ ಕುಸುಮಾಮೋದಮತಿ ಪ್ರಮೋದಮಂ ಪಡೆಯೆ (ಆದಿಪು. ೧೧-೧೨೫ ವ). [ಕುಸುಮ + ಆಮೋದ]

**ಕುಸುಮಾಯುಧ** (ನಾ). ೧. ಹೂವನ್ನು ಆಯುಧವನ್ನಾಗಿ ಉಳ್ಳವನು; ಪುಷ್ಪಬಾಣ; ಕಾಮ: ಆತನ ರೂಪಸಂಪತ್ತಿಯಿಂ ಕುಸುಮಾಯುಧಂಗೆ ದುರ್ಜಯತ್ವಮಾದುದೆಂದು ಬಗೆಯುತ್ತ (ಕಾದಂಪೂ. ೮೯೧). ೨. (ಯೌವನಾವಸ್ಥೆಯಲ್ಲಿ ಉದಯಿಸುವ) ಕಾಮ, —ಅನುರಾಗ (?): ಆಕೆಗೀಗಗಳೀಗಳಿಂದು ನಾಳೆ ಕುಸುಮಾಯುಧ ಪ್ರಥಮ ಪುಷ್ಪಿತಾಸಮಯಂ (ನಂಬಿರ. ೧೦-೧೫). [ಕುಸುಮ + ಆಯುಧ]

**ಕುಸುಮಾರೆ** (ನಾ). ಕುಟ್ಟುವ ದೊಡ್ಡ ಹಾರೆ; ಗುದಿಗೆ: "ದ್ರುಘಣಃ, ಮುದ್ಗರಃ, ಘನಃ – ಈ ೩ ಕಬ್ಬಿಣದ ಕುಸುಮಾರೆ; ದೊಡ್ಡಹಾರೆ, ಗುದಿಗೆ" (ಸಿದ್ಧಾಂತಿ. ೨೨೮). [ಕುಸುಮು$_1$ (< ಕುಸುಬು$_2$) + ಅರೆ$_1$ (< ಪಾರೆ$_1$)]

**ಕುಸುಮಾಸವ** (ನಾ). ೧. = ಕುಸುಮರಸ: ಅಭಿನವ ಪಾರಿಜಾತ ಕುಸುಮಾಸವಮೊರ್ಮೊದಲುಣ್ಕೆ (ಆದಿಪು. ೨-೬೩); ನವಕುಸುಮಾಸವದೆ ಸೊಕ್ಕಿದಳಿನಿಯ ತೆಜದಿಂ (ಕಾದಂಪೂ. ೭೪೫). ೨. ಹೂವಿನಿಂದ ತಯಾರಿಸಿದ ಮದ್ಯ. [ಕುಸುಮ + ಆಸವ]

**ಕುಸುಮಾಸಾರ** (ನಾ). ಹೂವಿನ ಸುರಿಮಳೆ; ಪುಷ್ಪವೃಷ್ಟಿ: ಅಮರ ಕುಸುಮಾಸಾರಂ ತನ್ನಿಂದ ತಾನೆ ಪೊದಟ್ದುದು (ಪುಷ್ಪಪು. ೧೦-೧೨). [ಕುಸುಮ + ಆಸಾರ]

**ಕುಸುಮಾಸ್ತರಣ** (ನಾ). ಹೂಗಳನ್ನು ಹಾಸುವುದು; ಹೂವಿನ ಹಾಸಿಗೆ: ಇದೋ . . . ಶಕುಂತಳೆಯು ಕುಸುಮಾಸ್ತರಣದಿಂದ ಕೂಡಿದ ಶಿಲಾಫಲಕದಲ್ಲಿ ಮಲಗಿ, ಸಖಿಯರಿಂದ ಸಂತೈಸಲ್ಪಡುತ್ತಿರುವಳು (ಶಾಕುಂತ. ೩೩-೧೯). [ಕುಸುಮ + ಆಸ್ತರಣ]

**ಕುಸುಮಾಸ್ತ್ರ** (ನಾ). ೧. ಹೂವಿನ ಬಾಣ: ನಿನ್ನ ವಿಗ್ರಹಕೆ ನಮಗಿಕ್ಷುಚಾಪವಾಜಿಡಿವೆದೆ ಸಮಗ್ರ ಕುಸುಮಾಸ್ತ್ರಂಗಳಿಲ್ಲ (ಜೈಮಿಭಾ. ೭-೩೪); ತಪಭಂಗಕೆ ಕುಸುಮಾಸ್ತ್ರವನಣೆಗೈವನೊ ಮಾರಂ (ಮಾಂದಳಿ. ೪೯). ೨. ಹೂವಿನ ಬಾಣಗಳನ್ನುಳ್ಳವನು; ಮನ್ಮಥ: ಆ ಸಸಿಯ ಕೋಗಿಲೆಯ ತುಂಬಿಯನಾ ಸರೋಜವ ಮಲ್ಲಿಗೆಯ ಕೈವೀಸಿದನು ಕುಸುಮಾಸ್ತ್ರನೀ ಕೀಚಕನ ಕಗ್ಗೊಲೆಗೆ (ಕುವ್ಯಾವಿ. ೨-೫೩). [ಕುಸುಮ + ಅಸ್ತ್ರ]

**ಕುಸುಮಿತ** (ಗು). ಹೂತ; ಹೂಬಿಟ್ಟ; ಪುಷ್ಪಿತ: ಕುಸುಮಿತ ಕದಂಬ ವೃಕ್ಷಂಬೊಲ್ (ವಡ್ಡಾರಾ. ೫೫-೧೧); ಹರಿಣಧರಂ ಸೊಗಯಿಸಿದಂತಿರೆ ಕುಸುಮಿತ ಚೂತವಿತತಿ ಸೊಗಯಿಸಿತೆನಸುಂ (ಕವಿರಾ. ೩-೩೩); ಕುಸುಮಿತಾನೇಕ ಕುಸುಮವಲ್ಲರೀ ಪ್ರಸರವಿಸರದೊಳ್ (ಚಂದ್ರಪು. ೭-೪೮ ವ). [ಸಂ.]

**ಕುಸುಮಿಸು** (ಕ್ರಿ). ೧. ಹೂವಾಗು; ಅರಳು; ವಿಕಸಿಸು: ಕುಸುಮಿಸಿದ ಕುಸುಮದೆಸಳ ಮಿಸುಗುವ ಪೊಸ ಪೊಸ ಪಸೆಯೊಳಸದಳ ಮೆಸೆಯೆ (ಆದಿಪು. ೪-೧೨ ವ); ಅನಿಮಿಷವಧು ಕತ್ತುರಿಗದಡಿನ ಚಳಯಂಗೊಟ್ಟೆಳಲ್ಲಿ ಸೆಳ್ಳುಗುರ್ಗಳ ತೆಳ್ಪನೆ ತಿಳಿದ ಕಾಂತಿ ಕುಸುಮಿಸುವಿನೆಗಂ (ಅನಂಪು. ೬-೪೭). ೨. ಹೂವನ್ನು ಬಿಡು: ಉನ್ಮದ ಭೃಂಗಕುಳಕ್ಕೆ ಕಂಪುವೀಜುವ ಕುಸುಮಂಗಳಿಂ ಕುಸುಮಿಸಿತ್ತು . . . ಮನೋಜಮನೋರಥದ್ರುಮಂ (ಅಜಿಪು. ೬-೧೧); ಕುಸುಮಿಸಿ[ಪಾಠಾಂ. ರಿ]ದುವು ನಿಕ್ಕೆಸೆವಾಕ್ಸುಪಕುಜಾತ ವೀರುತ್ತುಗಳುಂ (ಕಾವ್ಯಾವ. ೧೯೫). ೩. ಹೂಬಿಡುವಂತೆ ಮಾಡು: ನೂಪುರಕ್ವಣಿತ ಸುಭಗ ವಾಮಪಾದಪ್ರಹರಣದೊಳಶೋಕತರುಗಳಂ ಕುಸುಮಿಸಿಯುಂ (ಆದಿಪು. ೧೧-೧೩೦ ವ); ಧವಳ ಕಳಮಾಕ್ಷತಂಗಳಿನಳಕವಲ್ಲರಿಯಂ ಕುಸುಮಿಸುತ್ತುಂ (ಪಂಚಾಮಾ. ೫-೧೧೧ ವ). [ಕುಸುಮ + -ಇಸು$_3$]

**ಕುಸುಮು$_1$** 'ಕುಸುಬು$_2$' ನೋ.

**ಕುಸುಮು$_2$** (ನಾ). ಚೆನ್ನಾಗಿ ಬಲಿಯದ ಬತ್ತ ಅಥವಾ ಅಕ್ಕಿಯ ಕಾಳು: ಕುಟ್ಟೀದ ಅಕ್ಕಿಲಿ ಕುಸುಮಾವ ತೆಗೆವಾಳು (ಹಳ್ಳಿಬಾ. ೫೩). [< ಕುಸುಮ]

**ಕುಸುಮೆ$_1$** 'ಕುಸುಂಬೆ' ನೋ.

**ಕುಸುಮೆ$_2$** (ನಾ). ೧. ಮುಟ್ಟಾಗುವುದು; ರಜೋದರ್ಶನ. ೨. ಒಂದು ಜಾತಿಯ ಗಿಡ: "ಕುಸುಮೆ ಕೆಂಜಿಗೆಯಕ್ಕು" (ಮಂಗರಾ. ೪೫-೩೭). [< ಸಂ. ಕುಸುಮ]

**ಕುಸುಮೆಜಾಡ್ಯ** (ನಾ). ಮುಟ್ಟಿನ ರೋಗ; ಪ್ರದರರೋಗ: "ಪ್ರದರಃ —೧. ಮುರಿಯುವಿಕೆ. ೨. ಕುಸುಮೆ [ಪಾಠಾಂ. ಮು]ಜಾಡ್ಯ. ೩. ಬಾಣ" (ಸಿದ್ಧಾಂತಿ. ೩೫೬). [ಕುಸುಮೆ$_2$ + ಜಾಡ್ಯ]

**ಕುಸುಮೇಷು** (ನಾ). ೧. ಹೂವಿನ ಬಾಣ: ಪೂವಿನ ಬಿಲ್ಗೆ ಪುರ್ವು ಕುಸುಮೇಷುಗೆ ಕಣ್ (ಶಾಂತಿಪು. ೮-೮೩). ೨. ಹೂವಿನ ಬಾಣಗಳನ್ನುಳ್ಳವನು; ಮನ್ಮಥ: ಆ ನಾಡು ದಿವಕ್ಕೆ ತೋಡು ಕುಸುಮೇಷುಗೆ ಬೀಡು (ಪುಷ್ಪಪು. ೯-೧೪). [ಕುಸುಮ + ಇಷು]

**ಕುಳೀರಸಂಭವ** (ನಾ). [ಜ್ಯೋತಿ] ಕರ್ಕಾಟಕ ರಾಶಿಯಲ್ಲಿ ಜನಿಸಿದವನು : ವನಜಲಕೇಳಿಯರ್ಥಿಯೊಡೆಯಂ . . . ಕುಬ್ಜಶರೀರಿ ಕುಳೀರಸಂಭವಂ (ಜಾತತಿ. ೧೭–೪). [ಕುಳೀರ (= ಕುಲೀರ) + ಸಂಭವ]

**ಕುಳು** 'ಕುಳ್$_2$' ನೋ.

**ಕುಳುಂಪೆ** (ನಾ). ನೀರು ನಿಂತಿರುವ ಗುಂಡಿ; ಕುಂಟೆ: ಜಳರಾಸಿಯಿರೆ ಕುಳುಂಪೆಯ ನೀರಂ ಎಱೆವ (ಆದಿಪು. ೯–೧೦೪) ; ಅನಿಮಿಟ್ಟದ ಕುಳುಂಪೆಯ ನೀರಂತೆ ದೆಸೆದೆಸೆಗೆ ಸೂಸುವನ್ನೆಗಂ(ಪಂಪಭಾ.೧೧–೧೩೭ವ); ತಿಳಿವುದುಮಾ ಕದಡುವುದುಂ ಕುಳುಂಪೆಯೊಳ್ ನೆಗಟ್ಟುಮುದಧಿಯೊಳ್ ನೆಗಟ್ಟುವುದೇ (ಶಾಂತಿಪು. ೧೧–೯೫) ; ದಟ್ಟಕಾಡಿನ ನಡುವೆ ಒಂದು ಕುಳುಂಪೆಯ ಪಕ್ಕದ ಹೊದರಿನಲ್ಲಿ (ಮಲೆಮ. ೩೧೩).

[ದೇ. ‖ ತಮಿ. ಕುೞುಮ್ಬು]

**ಕುಳುಂಪೆಗೊಳ್** (ಕ್ರಿ). ಕೆಸರುಗಟ್ಟು; ಗುಂಡಿಯಂತಾಗು: ಕುಂಜರ ಗುರುಕುಂಭಮಂಡಳದಿನಲ್ಲುಗು ತಂದು ಕುಳುಂಪೆಗೊಂಡ ನೆತ್ತರ ಪೊಸವಜ್ಜೆಯೊಳ್ ಕೆದಱಿ ಕಣ್ಗೆಸೆದಿರ್ದುವು . . . ಕೇಸರ್ದಿಯ ಬೀರದ ಬಿತ್ತುಗಳಂತೆ ಮುತ್ತುಗಳ್ (ಮಲ್ಲಿಪು. ೧೦–೯೫).

[ಕುಳುಂಪೆ + ಕೊಳ್$_1$]

**ಕುಳುಗಿಡಿ** (ನಾ). ಉರಿಯುತ್ತಿರುವ ಕಿಡಿ; ತೀಕ್ಷ್ಣವಾದ ಕಿಡಿ (?) : ಉಗುಳಿದವು ಕುಳು[ಪಾಠಾಂ. ಳಿ]ಗಿಡಿಗಳನು ಕೈಬೊಗಳು (ಕುವ್ಯಾಸ. ೧೫–೪೧) ; ಕುಳುಗಿಡಿಗಳಗ್ನಿಜನ ಮುಷ್ಟಿಯ ಬಳಯಿಂದ ತರಿಸಿದವೊ ಪೇಳೆನಲೊಲೆದು ತಿವಿದನು ತೀವ್ರಹತಿಯಲಿ ರಿಪುಚಮೂಪತಿಯ (ತೊರರಾ. ೬–೧೯–೫೭). [ಕುಳು$_0$ + ಕಿಡಿ]

**ಕುಳುತ್ಥ** (ನಾ). ಒಂದು ಬಗೆಯ ದ್ವಿದಳಧಾನ್ಯ; ಹುರುಳಿ: "ಕುಳುತ್ಥಂ – ಹುರುಳಿ" (ಕಾಶಕ್ಯ. ೧೪೭); ನೀವಾರತಿಳತಳ ಮಸೂರಿಕಾ ಕುಳುತ್ಥ ಮುದ್ಗ ಮಾಷ . . . ಜೀರಕಧಾನ್ಯಕಾದಿ ವಿವಿಧ ಧಾನ್ಯ ಭೇದಂಗಳುಂ (ಆದಿಪು. ೬–೭೨ ವ).

[< ಸಂ. ಕುಲತ್ಥ]

**ಕುಳುತ್ಥಕ** (ನಾ). = ಕುಳುತ್ಥ: "ಕುಳುತ್ಥಕಂ ಕೊಳ್ಳು" (ವಸ್ತುಕೋ. ೯೫–೧೮). [< ಸಂ. ಕುಲತ್ಥಕ]

**ಕುಳುಪು** (ನಾ). ತುಂಡು; ಶಕಲ; ಖಂಡ (?) : ಸರಸಿಜಭವ ಚಂದ್ರ ಸೂರ್ಯ ನಕ್ಷತ್ರವ ಎರಕದಿ ನಿರ್ಮಿಸಿ ಮಿಕ್ಕ ಮೆಱೆವ ಕುಳುಪುಗಳೀ ಗಿರಿಯೊಳೊಟ್ಟಿದನೆನೆ ತರಣೇಂದುಕಾಂತವಲ್ಲಿಹುದು (ಜ್ಞಾನಜ. ೧೦–೧೧೪). [?]

**ಕುಳುಮೆ** 'ಕುಳಿಮೆ' ನೋ.

**ಕುಳುಮೆಕಾರ್ತಿ** (ನಾ). "ಗರ್ಭಿಣಿ" (ಹುಲಿಹಾ. ಕೋಶ) : ತಂಗವ್ವನಿಗೆ ಪೂವಿ ಕುಳುಮೆಕಾರ್ತಿ ಎಂಬ ಸಂಗತಿ ತಿಳಿಯಿತು (ಹುಲಿಹಾ. ೩೬೨).

[ಕುಳುಮೆ (< ಕುಳಿಮೆ) + -ಕಾರ್ತಿ]

**ಕುಳುರು** (ಕ್ರಿ). ಸಂಚರಿಸು ; ತಿರುಗಾಡು (?) : ಮೂರುಲೋಕದಿ ತನ್ನ ಮನದಿಚ್ಛೆ ಬಂದಂತೆ ಹಾರುತ್ತ ಕುಳುರುತ್ತಾರವನು ಮಾರನುಪದ್ರವ ಕಾಜಾವೆ ಗಾರಾಗಿಯು ತೀರದ ದುಃಖವನ್ನೆದುವೆನು (ಪೂಜ್ಯಚ.೧೧–೫೪).

[?]

**ಕುಳುವಾಡಿ** 'ಕುಲವಾಡಿ' ನೋ.

**ಕುಳುವಾರು** 'ಕುಳವಾರು$_1$' ನೋ.

**ಕುಳೆ** 'ಕೂಳೆ$_2$' ನೋ.

**ಕುಳ್ಳ** (ನಾ). ಎತ್ತರವಿಲ್ಲದವನು ; ಗಿಡ್ಡ ; ಕುಬ್ಜ : ಅದೊಂದು ಕುಳ್ಳ ಆಸಾಮಿ (ಅಸಾಮಿ. ೯೫). ಕಳ್ಳನ ನಂಬಿದರೂ ಕುಳ್ಳನ ನಂಬಬಾರದು (ಗಾದೆ). [ಕುಳ್ಳು$_2$ (< ಕುಱುಳ್) + -ಅ$_7$]

**ಕುಳ್ಳಕುಮ್ಮಟಿ** (ನಾ). ಒಂದು ಬಗೆಯ ಆಟ ; ಮರಕೋತಿ (?) : ಕುಳ್ಳಕುಮ್ಮಟಿಯಾಡುವೆವು ಮರದಲ್ಲಿ ಬಾರೆಂದೆಲ್ಲರೊಂದೆಡೆಯಲ್ಲಿ ಕೂಡಾಲೋಚಿಸುತಲೀ ಭೀಮ ಮೊದಲಾಗಿ (ಜನಭಾ. ೭–೯).

[ಕುಳ್ಳ + ಕುಮ್ಮಟಿ$_1$ (< ಕುಂಪಟ)]

**ಕುಳ್ಳಾವಿ** 'ಕುಲಾಯ್ಯ$_2$' ನೋ.

**ಕುಳ್ಳಿ**$_1$ (ನಾ). ಎತ್ತರವಿಲ್ಲದವಳು ; ಗಿಡ್ಡಿ ; ಕುಬ್ಜೆ : ಬಂಜೆ ಕುಳ್ಳಿ ಕುಂಟಿಯಿವರುಗಳಂ ಕಂಡರೆ ಕಾರ್ಯನಾಶ (ಸೌಗಂಧಿ. ೫೪೫–೧೩).

[ಕುಳ್ಳ + -ಇ$_2$]

**ಕುಳ್ಳಿ**$_2$ (ನಾ). (ಬೆಲ್ಲದ) ಅಚ್ಚು : ಭಕ್ತನಾದಡೆ ಬಾಳೆಯ ಹಣ್ಣಿನಂತಿರಬೇಕು ಭಕ್ತನಾದಡೆ ಬೆಲ್ಲದ ಕುಳ್ಳಿಯಂತಿರಬೇಕು (ವಚಶಾ. I, ೧೯೩). [?]

**ಕುಳ್ಳಿರ್**, **ಕುಳಿರ್**$_2$, **ಕುಳ್ಳಿರು** (ಕ್ರಿ). ಕುಳಿತುಕೊಳ್ಳು ; ಆಸೀನನಾಗು : ಕಿತ್ತ್ಯಯ್ಯಂಗಳುಮಂ . . . ವಂದಿಸಿ ಭಟಾರರಲ್ಲಿಗೆ ವಂದು ಕುಳ್ಳಿರ್ದರ್ (ವಡ್ಡಾರಾ. ೭೯–೧೭) ; ಮಣಿಮಯ ಹೇಮಾಸನದೊಳ್ ಕುಳ್ಳಿರ್ದನಂ ನೋಡಿ (ಪಂಪಭಾ. ೧೦–೫ ವ) ; ರುದ್ರಕನ್ನೆಯರೊಲಿದು ಸಿಂಗರಿಸಿ ಕುಳ್ಳಿರಲು (ಬಸರ. ೧–೧೩) ; ಅರಣ್ಯದಿದ್ರುಮಸಾನು ದೇಶದೊಳು ಕುಳ್ಳಿರುತಂ (ಪುಣ್ಯಾಸ್ರ. ೭–೧೯) ; ಯುಯುತ್ಸು ಶಿಖಂಡಿ ಪ್ರತಿವಿಂಧ್ಯಕರು ಪಾರ್ಥನನುಪಚರಿಸಿ ಕುಳ್ಳಿರ್ದರಲ್ಲಲ್ಲಿ (ಕುವ್ಯಾಕ. ೧೬–೭).

**ಕುಳಿರ್**$_2$ : "ಕುಳಿರ್ – ಖುಜುಭೀದೇ (ಬಗ್ಗು, ಕುಳಿತುಕೊಳ್)ಹ್ಯಮೇಚ (ಶೀತಲವಾಗು)" (ಶಮಧಾ); ಅಲ್ಲಿ ಕುಳಿತನು ಮೆಲ್ಲನೆಯು ತನುವೆಲ್ಲ ಪುಲಕಿಸಲು (ಗಗತಾ. ೨–೨೨). **ಕುಳ್ಳಿರು** : ಧಾರುಣೀಪತಿ ಕುಳ್ಳಿರ್ದೆ ಪರಿವಾರ ಕುಳ್ಳಿರಿ (ಕುವ್ಯಾಗ. ೬–೧೩).

ಕುಳ್ಳಿರಿಡಿಸು = ಕುಳಿತುಕೊಳ್ಳಲು ಆಸನವನ್ನು ಇಡುವಂತೆ ಮಾಡು ; ಕುಳಿತುಕೊಳ್ಳಲು ಅಣಿಮಾಡು : ಬಂದುದುತ್ತಮವಾದುದಿತ್ತ ಬಾ ದಕ್ಷಿಣಯೆಂದೊತ್ತಿನೊಳು ಕುಳ್ಳಿರಿಡಿಸಿ (ಭರಚ. ೪೭–೮೭).

[ಕುಳ್ + ಇರ್$_1$]

**ಕುಳ್ಳಿರಿಸು**, **ಕುಳಿರಿಸು**$_2$ (ಕ್ರಿ). ಕುಳಿತುಕೊಳ್ಳುವಂತೆ ಮಾಡು : ಕಾಲಂ ಕರ್ಚಿ ಭಟ್ಟಾರಕರ್ಗೆಱಗಿ ಕುಳ್ಳಿರಿಸಿ (ವಡ್ಡಾರಾ. ೭೮–೧೨ ವ) ; ಚೌಪಳಿಗೆಗಳೊಳ್ ಕುಳ್ಳಿರಿಸಿದರ್ (ಪಂಪಭಾ. ೨–೬೭) ; ಕುಳ್ಳಿರಿಸಿದನು ವಿನಯದಲಿ (ತೊರರಾ. ೪–೬–೨೪). **ಕುಳಿರಿಸು**$_2$ : ತೆಗೆದು ತಾ ಬಿಗಿಯಪ್ಪಿ ಕುಳಿರಿಸೆ (ಕೌಶಿರಾ. ೩೯–೨೩) ; ಬಳಿಬಂದರೆಲ್ಲರ ಕಂಡು ಚಕ್ಕಳದಲ್ಲಿ ಕುಳಿರಿಸಿ (ಭರಚ. ೩೯–೧೦೦).

ಕುಳ್ಳಿರಿಸಿಕೊಳ್ಳು = ಕುಳಿತುಕೊಳ್ಳುವಂತೆ ಮಾಡು : ತಲೆವಿಡಿದೆತ್ತಿ ತಕ್ಕೈಸಿ ತನ್ನಯ ತೊಡೆಯೊಳಗೆ ಕುಳ್ಳಿರಿಸಿಕೊಂಡು (ಕಂನವಿ. ೯–೧೯೨).

[ಕುಳ್ಳಿರ್ + -ಇಸು$_3$]

**ಕುಳ್ಳಿರು** 'ಕುಳ್ಳಿರ್' ನೋ.

**ಕುಳ್ಳು**$_1$ 'ಕುಳ್' ನೋ.

**ಕುಳ್ಳು**$_2$ 'ಕುಱುಳ್' ನೋ.

**ಕುಳ್ಳೆ** (ನಾ). ಮಲದ ಕುಪ್ಪೆ, —ಉಂಡೆ : ಇಬ್ಬರಿಗೂ ಪದ್ಧತಿಯಂತೆ ಬೈಗುಳದ ಒಂದು ಲಡಾಯಿವೆ ನಡೆದುಹೋಯ್ತು, ಅವಾಚ್ಯ – ಅಶ್ಲೀಲ ಭಾಷೆಯ ಕುಳ್ಳೆಗಳನ್ನೆ ಒಬ್ಬರ ಮೇಲೊಬ್ಬರು ಎಸೆದಾಡಿ (ಮಲೆಮ. ೪೫೦). [< ಕುರುಳ್$_2$ ?]

**ಕುಳ್ಳಿಡೆ** (ನಾ). ಕುಳಿತುಕೊಳ್ಳುವ ಎಡೆ, —ಜಾಗ; ಆಸನ: "ಕುಳಿತು ಕೊಳ್ಳುವುದಕ್ಕಾಗಿ ಮಾಡಿರುವ ಸಲಕರಣೆ, ಸ್ಥಳ (ಕುರ್ಚಿ, ಮಣೆ, ಮೊ. ವು) ; ಆಸನ, ಪೀಠ, ಕುಳ್ಳಿಡೆ" (Seat. ಇಂಕನಿ) ; ಕೆಂಪು ಮೋರೆಯ ಬೆಮರಿಡಿದ ಹೆಂಗಸರಿಂದ ಕುಳ್ಳಿಡೆಗಳೆಲ್ಲ ಭರ್ತಿಯಾಗಿದ್ದುವು (ಪುನರು. ೪೫೪). [ಕುಳ್$_3$ + ಎಡೆ$_3$]

**ಕುಸುರಿಕಡಗ** (ನಾ). ಕುಸುರಿಗೆಲಸ ಮಾಡಿರುವ ಕಡಗ, —ಬಳೆ: ಮೊಸರು ಮಾರುತ ಬಂದಳಾಕೆ ಕುಸುರಿಕಡಗದ ಗೊಲ್ಲಿತಿ (ನಾಪದ. ೨೧೪). [ಕುಸುರಿ$_1$ + ಕಡಗ$_1$]

**ಕುಸುರಿಕಾಳು** (ನಾ). ಎಳ್ಳು, ಜೀರಿಗೆ ಮೊದಲಾದ ಸಣ್ಣ ಕಾಳುಗಳನ್ನು ಸಕ್ಕರೆಪಾಕದಲ್ಲಿ ಅದ್ದಿ ತಯಾರಿಸಿದ ಒಂದು ಬಗೆಯ ಖಾದ್ಯ: ರಾತ್ರಿ ಊಟಮಾಡಿ, ಕುಸುರಿಕಾಳು, ಎಳ್ಳು . . . . ಮುಕ್ಕಿದ್ದೆ (ಮನೋನಂ. ೧೨೫). [ಕುಸುರಿ$_1$ + ಕಾಳು$_3$ (< ಕಾಳ್$_2$)]

**ಕುಸುರಿಕಿಡಿ** (ನಾ). ಸಣ್ಣ ಕಿಡಿ, —ಬೆಂಕಿಯ ಕಣ: ಕುಸುರಿಕಿಡಿಗಳು ಭುಗಿಲು ಭುಗಿಲೆನುತುಕುಸುರಿಗುಬ್ಬಸ ಹುಟ್ಟೆ ಕಂಡವರೆಸುಗಳುಡುಗಿದುವಾರು ನಿಲುವರು ಶಕ್ತಿಯಿದಿರಿನಲಿ (ಕೌಶಿರಾ. ೨೨–೬೫). [ಕುಸುರಿ$_1$ + ಕಿಡಿ$_1$]

**ಕುಸುರಿಖಂಡ** (ನಾ). ಸಣ್ಣ ತುಂಡು; ಚೂರುಚೂರಾದ ಖಂಡ: ಬಿದಿರಿದಿರು ಕೊಯ್ದಲೆಗಳನು ಕಾಱಿದರು ಕರುಳನು ಕುಸುರಿಖಂಡದ ಕದಳಿಮ್ಮೆಗಳ ಚೂಣಿ ಮಲಗಿತು ತಾಱು ಥಟ್ಟಿನಲಿ (ಕುವ್ಯಾದ್ರೋ. ೧೭–೨೧). [ಕುಸುರಿ$_1$ + ಖಂಡ]

**ಕುಸುರಿಗಂಡ** (ನಾ). = ಕುಸುರಿಖಂಡ: ಹಸಿಯ ತೊಗಲುಡಿಗೆ ಹಿಂಡಿಲುಗರುಳ ಚಲ್ಲಣಂ ಕುಸುರಿಗಂಡದ ತೊಂಗಲ್ . . . ಎಸೆಯೆ ಮಾಮಸಕದಿಂ . . . ಭೂತ ಭೇತಾಳರಾಡಿದರು (ಹಚಕಾ. ೧೨–೩೩); "ತೆಳುವಮಾಂಸ ವಪೆ" (ಪ್ರಭಣ್ಣ). [ಕುಸುರಿ + ಕಂಡ$_1$]

**ಕುಸುರಿಗರುಳು** (ನಾ). ಕತ್ತರಿಸಿದ ಕರುಳು; ತುಂಡಾದ ಕರುಳು: ಬಸಿವ ಹೊಸರುಧಿರಕ್ಕೆ ಜೋಲುವ ಕುಸುರಿಗರುಳಿಂದುದಿರುವಡಗಿನ ಬಸಗೆ ಬಂದೆಱಗಿದವುಲೂಕಧ್ವಾಂಕ್ಷ ಸಂದೋಹ (ಕುವ್ಯಾಭೀ. ೪–೪೫); ನೆರೆದು ಜಂಬುಕ ಗೃಧ್ರಸಂತತಿ . . . ಕುಸುರಿಗರುಳನು ಮೆದ್ದು ಸಲೆ ದಣಿದು (ಮೂಲರಾ. ೫–೩೬). [ಕುಸುರಿ$_1$ + ಕರುಳು (< ಕರುಳ್)]

**ಕುಸುರಿಗಾಯಿ**, ಕುಸುರುಗಾಯಿ (ನಾ). ಎಳೆಯ ಕಾಯಿ; ಕಸುಗಾಯಿ; ಹೀಚು; ಮಿಡಿ: (+). **ಕುಸುರುಗಾಯಿ**: (+). [ಕುಸುರಿ$_1$ + ಕಾಯಿ$_4$ (< ಕಾಯ್$_4$)]

**ಕುಸುರಿಗೆಲಸ**, ಕುಸುರುಕೆಲಸ, ಕುಸುರುಗೆಲಸ (ನಾ). ೧. ಅತಿ ಸೂಕ್ಷ್ಮವಾದ ಕೆತ್ತನೆಯ ಕೆಲಸ; ನಯನಾಜೂಕಿನ ಕೆಲಸ: ಕುಸುರಿಗೆಲಸದ ಮಿಸುನಿಯ ತೊಡಿಗೆಯ ಬಿಟ್ಟು (ಶೂನ್ಯಸಂ. ೩೯೧–೯); ಕುಸುರಿಗೆಲಸದ ಮಣಿಪದಕವನೊಪ್ಪುವ ಮುತ್ತಿನ ಸಮ ಹಾರಾವಳಿಯ (ಪದ್ಮರಾ. ೩–೪೬); ಒಳ್ಗನ್ನಡದ ಕಲೆಯೊ, ಕುಸುರಿಗೆಲಸದ ಸಿಲೆಯೊ (ಹೂಂಗಳು. ೧೬–೧೦). **ಕುಸುರುಕೆಲಸ**: ಚಮತ್ಕಾರ, ಪಾಂಡಿತ್ಯ, ಶಾಸ್ತ್ರವೈಖರಿ, ಕುಸುರುಕೆಲಸ – ಇವಾವುವೂ ಕಲೆಯ ಮುಖ್ಯ ಲಕ್ಷಣಗಳೆನಿಸವು (ಜಾನಗೀ. ೨). **ಕುಸುರುಗೆಲಸ**: ೨. ಚಿತ್ರಕಲೆಯಿಂದ ಕೂಡಿದ ಸೂಕ್ಷ್ಮವಾದ ಕಸೂತಿ ಕೆಲಸ: ಕುಸುರುಗೆಲಸದಿಂದ ತುಂಬಿದ ಅಂಚುಳ್ಳ ಸೆರಗಿನ ರೇಶಿಮೆಯ ಸೀರೆಯನ್ನುಟ್ಟು (ದೂರಸ. ೮೬). [ಕುಸುರಿ$_1$ + ಕೆಲಸ]

**ಕುಸುರಿತಿರಿ** (ಕ್ರಿ). = ಕುಸುರಿದಱಿ: ಶಶಿಮುಖಿಯರನ್ನು ಕಂಡು ಕಾಮದ ವ್ಯಸನ ಭಾಳಾಗಿಹನು ಅವರನು ಕುಸುರಿತಿರಿದು ಯಮದೂತರೊಯ್ವುದ ನರಿಯರವರೆಂದ (ಜ್ಞಾನಸಿಂ. ೨–೧೦). [ಕುಸುರಿ$_1$ + ತಿರಿ$_3$ (< ತಿಱಿ$_1$)]

**ಕುಸುರಿದಱಿ** (ಕ್ರಿ). ಸಣ್ಣಸಣ್ಣದಾಗಿ ಕತ್ತರಿಸು; ತುಂಡುತುಂಡು ಮಾಡು; ಕೊಚ್ಚು: ಮುಂಗುಡಿಯ ಮೋಹರವ ಕುಸುರಿದಱಿದಲ್ಲರಂ ಕೊಂದು (ಹಚಕಾ. ೬–೧೬); ಕುಸುರಿದಱಿದಡಗಿನಂತೆವೊಲೆಸೆದುವು ತದ್ವನದೊಳುದಿರ್ದ ಮುತ್ತದ ಮುಗುಳ್ಗಳ್ (ಯಶೋಚ. ೧–೩೭); ಕುಸುರಿದಱಿದೊಟ್ಟಿದನು ಕನಲಿದು ಕವಿವ ಕಪಿಬಲವ (ತೊರರಾ. ೬–೧೧–೧೭). [ಕುಸುರಿ$_1$ + ತಱಿ$_1$]

**ಕುಸುರಿಮಾತು** 'ಕುಸುರಿವಾತು' ನೋ.

**ಕುಸುರಿವಾತು**, ಕುಸುರಿಮಾತು (ನಾ). ಸೂಕ್ಷ್ಮವಾದ ನುಡಿ; ನಾಜೂಕಿನ ಮಾತು: ಬಣ್ಣಿನೆಯ ಕುಸುರಿವಾತುಗಳಣ್ಣಿಂದಿರ ತೆಱದಿನನ್ನವಿನ್ನದೆನುತ್ತಂ ಬಣ್ಣಿಸಲಱಿಯೆಂ (ಧರ್ಮನಾ. ೧–೬೦). **ಕುಸುರಿಮಾತು**: ಕವಿಮಾತು, ಕುಸುರಿಮಾತು, ಶ್ಲೇಷೋಕ್ತಿ, ವ್ಯಾಜೋಕ್ತಿ ಮೊದಲಾದ ಉಕ್ತಿಪ್ರಕಾರಗಳು . . . ಹರಟೆಗೆ ಸಂಸ್ಕಾರವನ್ನು ಕೊಡುವುವು (ಸಾಹಿವಿ. ೧೧೫). [ಕುಸುರಿ$_1$ + ಮಾತು$_1$]

**ಕುಸುರಿವೆಸ** (ನಾ). = ಕುಸುರಿಗೆಲಸ: ಸುಂದರಮೆನಿಪ ಕುಸುರಿವೆಸದಿಂದರಮನೆ ಮಾಡ್ಪುದು ಮಯಂಗಮತಿವಿಸ್ಮಯಮಂ (ಪಂಠಾಮಾ. ೧–೧೨೯); ಹೀರೆಯ ಪೂವಿನ ಬಣ್ಣದ ನೇರಾಣಿಯ ಕುಸುರಿವೆಸದ ನೆಲೆಮಾಡಂಗಳ್ (ಯಶೋಚ. ೧–೩೦); ಬಳಪೊಕ್ಕಳು ಮಿಸುನಿಯ ಕುಸುರಿವೆಸದ ಸಜ್ಜೆವನೆಯ (ಕುರಾಸಾಂ. ೮–೪). [ಕುಸುರಿ + ಬೆಸ$_2$]

**ಕುಸುರು$_1$** (ಕ್ರಿ). ೧. ನಯಗೆಲಸಮಾಡು; ಸೂಕ್ಷ್ಮವಾದ ಕೆತ್ತನೆ ಕೆಲಸಮಾಡು. ೨. ಚೂರುಮಾಡು; ತುಂಡುಮಾಡು; ಕೊಚ್ಚು: ಕುಱಿದಲೆಯ ಹಂತಿಯು ಕುಸುರಿದೆಲುವಿನ ಕೋದಮಿನಂಗಡಿಯಲ್ಲೈತಂದ (ಕುವ್ಯಾಆ. ೧೫–೮). ೩. ಕುಸುಕು; ಕುಕ್ಕು; ಚಚ್ಚು: ಕರುಳ ತೆಗೆ ತಿನ್ನಡಗನೆನುತಬ್ಬರಿಸಿ ಸೂರ್ಯನು ಕೊಟ್ಟ ದಾನವನುರವಣಿಸಿ ಕೀಚಕನ ಹೊಯ್ದನು ಹಿಡಿದು ಕುಸುರಿ [ಪಾಠಾಂ. ಬಿ]ದನು (ಕುವ್ಯಾವಿ. ೩–೧೬); ಮುಸುಡೆಡೆಗೆ ಮದವೇಱಿದಿಭಪತಿ ಕುಸುರಿ [ಪಾಠಾಂ. ಕಿ]ದೆಳೆಗುಂಬಳದ ವೊಲು ರಕ್ಕಸನ ನಿಜದಾಕಾರೆಕಾರೆಮವಾಯ್ತು (ತೊರರಾ. ೬–೨೪–೩೧). ೪. ಗಿಡಿ; ತುಂಬು: ಒಮ್ಮಾನವನುಟ್ಟು ಕುಡಿಕೆಯಲ್ಲಿ ಕುಸುರಿ ಕೊಳೊಡೆದು ಬಾಲರಿಗೋಗರವಾಯಿತ್ತು (ಮೋಳಮಾ. ೨೧೭–೭೭೧); "ಗಡಣಿಸಿ" (ಮೋಳಮಾ. ಟೀಕ). ೫. ಮುಸುರು; ಮುತ್ತು: ಆ ಸಮರಾಂಗಣದೊಳಗಿದಿರಾದೇಳುಂ ಪೆಸವೆಸಿಪ ಧೀರರನು ಕುಸುರಿ [ಪಾಠಾಂ. ಮುಸುಕಿ] ಮುಂದಲೆಯ ಪಿಡಿದು ಕೊಚ್ಚಿ ಕೆಡಹಿದರಸಮ ಭಟರುಗಳೆನಿಪರು (ತ್ರಿಪುಸಾಂ. ೧೯–೨೧೦). ೬. ಬಾಗು; ಕುಗ್ಗು: ಕ್ರೋಧಾರ್ತಂ ಪನ್ನಗೇಂದ್ರಂ ಸೆಡೆದು ಕುಸುರಿದಂ ಕುರ್ಗೆ ದಿಗ್ದಂತಿಜಾಲಂ (ಬೇಳವಂ. ೨೬). ೭. ಕಡೆಯಲ್ಪಡು; ಚಿತ್ರಿತವಾಗು: ಕನ್ನಡರ ಕೈವಾಡದಿಂದ್ರಜಾಲಕೆ ಕಲ್ಲು ಕುಸುರಿತು (ಉಯ್ಯಾಲೆ. ೬೫–೧೦). [?]

**ಕುಸುರು$_2$** 'ಕುಸುರಿ$_1$' ನೋ.

**ಕುಸುರುಕೆಲಸ** 'ಕುಸುರಿಗೆಲಸ' ನೋ.

**ಕುಸುರುಗಾಯಿ** 'ಕುಸುರಿಗಾಯಿ' ನೋ.

**ಕುಸುರುಗೆಲಸ** 'ಕುಸುರಿಗೆಲಸ' ನೋ.

**ಕುಸುರೆಳ್ಳು** (ನಾ). = ಕುಸುರಿಕಾಳು: ಮಕರಸಂಕ್ರಾಂತಿಗೆ ಮೈತುಂಬ ತುಟಿತುಂಬ ಎದೆತುಂಬ ಕುಸುರೆಳ್ಳು ಮೂಡುತಿದೆ (ಸಖಗೀ. ೨೩–೪೦೬); ಆಸೆಯ ಕುಸುರೆಳ್ಳು ತಿನಿಸುವರೆಲ್ಲರು ಬಂದರು (ಇಂಚಾಪ. ೧೧೭–೭೫); ಅವರೆಲ್ಲ . . . ಕೈಯಲ್ಲಿ ಕುಸುರೆಳ್ಳಿನ ಕರಂಡಕವನ್ನು ಹಿಡಿದುಕೊಂಡು ಅತ್ತಿತ್ತ ಹಾರಾಡಿದರು (ರಂಗರೋ. ೧೧೪). [ಕುಸುರು$_2$ (< ಕುಸುರಿ$_1$) + ಎಳ್ಳು (< ಎಳ್)]

**ಕುಸುವಲಕ್ಕಿ**, ಕುಸಲಕ್ಕಿ, ಕುಸುಬಲಕ್ಕಿ (ನಾ). = ಕುದುಪಲಕ್ಕಿ: ಕರಾವಳಿ ಪ್ರದೇಶದಲ್ಲಿ ಕುಸುವಲಕ್ಕಿ ಅನ್ನವನ್ನೇ ಹೆಚ್ಚಾಗಿ ಊಟಮಾಡುತ್ತಾರೆ (ರೂಢಿ). **ಕುಸಲಕ್ಕಿ**: (+). **ಕುಸುಬಲಕ್ಕಿ**: ಎಷ್ಟು ದಿನವಾಯಿತೋ ಕುಸುಬಲಕ್ಕಿಯ ಅನ್ನ ತಿಂದು? ಹಲಸಿನ ಬೀಜದ ಹುಳಿ, ಕುಸುಬಲಕ್ಕಿ ಅನ್ನ, ಹೊಸದಾಗಿ ಬೆಣ್ಣೆಕಾಯಿಸಿದ ತುಪ್ಪ (ಸಾಹೇಬ್. ೨೫೧). [ಕುಸುವಲ್ಲು + ಅಕ್ಕಿ$_1$]

**ಕುಸುವು₁, ಕುಸುಬು₁** (ಕ್ರಿ). ಬೇಯಿಸು; ಪಕ್ವಮಾಡು: ಒಂದು ತರಹ ಬೀಜವುಳ್ಳ ಕಾಯನ್ನು ಸಿಪ್ಪೆ ಸಮೇತ ಕುಸುವಿ ತಿನ್ನುತ್ತಾರೆ (ಪ್ರವಾಇ. I, ೭); ಮನೆಮಕ್ಕಳೆಲ್ಲ ಕುಸುವಿದ ಅವರೆಕಾಯನ್ನು ಸುಲಿದು ತಿಂದು ನಲಿದಾಡುತ್ತಾರೆ (ನನ್ನೂರು. ೪೪). **ಕುಸುಬು₁**: ಕುಸುಬಿದ ಕಡಲೆಕಾಯಿ (ರೂಢಿ). [?]

**ಕುಸುವು₂** (ನಾ). ಒಂದು ಜಾತಿಯ ಕಾಡು ಹುಲ್ಲು: (ಶಿ). [?]

**ಕುಸೂಲ** (ನಾ). ಕಣಜ; ದವಸಧಾನ್ಯಗಳನ್ನು ತುಂಬುವ ಉಗ್ರಾಣ: "ಕುಸೂಲ - ಕುಶೂಲ = ಕಣಜ" (ತದ್ಭಕೋ. ೮); ಕುಸೂಲ ಮೆಂದೊಡಂ ಪಲ್ಯೋಪಮಮೆಂದೊಡಮೇಕಾರ್ಥಮೆಂದಱಿವುದು (ತತ್ತ್ವಪ್ರ. ೧೭೫). [ಸಂ.]

**ಕುಸೂಲಗೃಹ** (ನಾ). ಉಗ್ರಾಣದ ಮನೆ; ಕೋಠಿ; ಕೋಟ್ಟಾರ: "ಅಂತರ್ಗೃಹಂ ಕುಸೂಲಗೃಹಾಂತರ್ದೇಶಂಗಳೞಗೆ ಕೋಷ್ಠಮದಕ್ಕುಂ" (ವಸ್ತುಕೋ. ೧೩೨-೮೭). [ಕುಸೂಲ + ಗೃಹ]

**ಕುಸೃತಿ** (ನಾ). ೧. ವಂಚನೆ; ಮೋಸ: "ಕುಸೃತಿ ಮಾಯೆ ಕುಹಕ" (ಮಂಗರಾ. ೧೩೩-೨೮). ೨. ಕೆಟ್ಟ ನಡತೆ; ಕುನೀತಿ: (ಶಿ). ೩. ಇಂದ್ರಜಾಲ; ಮಾಟ; ಮಂತ್ರ: (ಶಿ). [ಸಂ.]

**ಕುಸೃತಿಬಂಧ** (ನಾ). ಇಂದ್ರಜಾಲದ ಕಟ್ಟು; ತೊಡರು: ವಿಕೃತ ಘೋರ ಸಂಸಾರಮಿಂತಿದೇಂ ವೃಜಿನಬಂಧಮೋ ಕುಸೃತಿಬಂಧಸಂಬಂಧ ಮೆಂದದೇಂ ತಳೆದನೋ ಮುನಿಪ್ರವರನಾಗಳುದ್ವೇಗಮಂ (ಸುಕುಮಾ. ೪-೬೧). [ಕುಸೃತಿ + ಬಂಧ]

**ಕುಸೆ** (ನಾ). ಒಂದು ಜಾತಿಯ ಹುಲ್ಲು (?): ಮೊದೆಬಾಳಂ ಕುಸೆಗೇರ್‌ಪ್ಲವಂ ಬಸುರಿದಾವಲ್ಮಲಂ ಜಂಜಲಪ್ರದಮುಂ ಸಿಂಧುರ ಮಿಂಚುವತ್ತಿ (ಜಟ್ಟಮ. ೧೧-೫೬). [< ಸಂ. ಕುಶ ?]

**ಕುಸೆಗಾತಿ** (ನಾ). ಬೆಡಗುಗಾತಿ; ಬಿನ್ನಾಣಗಿತ್ತಿ; "ವಿನೋದವುಳ್ಳವಳು" (ಪ್ರಭಣ್ಣ): ಸವಿನುಡಿಯ ಸುಂದರಾಂಗಿ ಚೆಲ್ಲದ ಫುಲ್ಲೋಲ್ಲಾಸೆ ಕೊಸರಿನ ಕುಸೆಗಾತಿ ಇಂಗಿತವನಱಿವ ಭಂಗಾರದ ಪುತ್ರಿಕೆ (ಉದ್ಭಟ. ೫-೫೩ ವ). [< ಕುಸುರಿಗಾತಿ]

**ಕುಸ್ತ** (ಗು). ಭೂಮಿಯಲ್ಲಿರುವ: ವಿಸ್ತರಿಸಿ ಸಾಸನವ ಸುಕುಮಾರರೆಡೆಯ ಮಣಿಕುಸ್ತಸಿಂಹಾಸನಾಲಂಕೃತಾನಂದ ಮಿಗಿಲೆಸ್ತರವೇಳ್ಪುದಾ (ಜಿನಮು. ೧೭-೧೬); ಕುಪಿತಸ್ಥಳದಿ ವಿಸ್ತರದೆ ಕುಸ್ತಬಲಘುಸ್ತದಿಂ ಭಸ್ತಕೆಡದು (ಜಿನಮು. ೧೭-೧೭). [< ಸಂ. ಕುಸ್ಥ]

**ಕುಸ್ತರಣೆ** (ನಾ). ಸಮಾಧಾನಪಡಿಸುವಿಕೆ; ಆಶ್ವಾಸನೆ ಕೊಡುವಿಕೆ (?): ವಿಸ್ತರಿಸಲೇನದನು ನಿಮ್ಮ ಸಮಸ್ತಬಲನಯನೇಂದು ರಾಹುಗ್ರಸ್ತವಾದುದು ಕಾಣರೊಬ್ಬರನೊಬ್ಬರಾಜಿಯಲಿ ಹಸ್ತಗಳ ಸೋಕುಗಳ ಕುಱುಹಿನ ಕುಸ್ತರಣೆಗಳ ಭ[ಪಾಠಾಂ. ದುಸ್ತರದ, ದುರ್ಭರ]ಯದ ಕರೆವಿನ್ಯಸ್ತಗಿರಿತರುಗಳ ಸಗಾಢದಲಿದ್ದುದಾ ಸೇನೆ (ತೊರರಾ. ೬-೩೫-೩೭). [?]

**ಕುಸ್ತರಿಸು, ಕುತ್ತರಿಸು** (ಕ್ರಿ). ೧. ಸಮಾಧಾನಪಡಿಸು; ಸಂತೈಸು: ನಿನ್ನಾಣೆಯೆಂದು ಕೂರ್ಮೆಯಿಂ ಕುಸ್ತರಿಸಿ ಆಳ್ವಂಗಾಸಜುದೋಜದಂತೆ (ವಿರೂಪಾ. ೭೦ ವ); ಅರಸ ಬಳಿಕಾ ರತುನವನು ನಿಜಶರಣನುರು ಶೋಕಾಗ್ನಿಯನುಪಹರಿಸಿಕೊಟ್ಟನು ಕುಸ್ತರಿಸಿ ಕರುಣಾಮೃತವ ಸುರಿದು (ತೊರರಾ. ೬-೨೮-೬೭); ಸೀತೆಗೆ ಗುರುತಾ ಕೊಡ ಕೊಡುತ್ತ ಕುಸ್ತರಿಸಿದಂತೆ ಹನುಮಂತಾ (ವಾದಿಕೀ. ೧-೨೮-೧). ೨. ಉಪಚರಿಸು; ಆದರಿಸು: ಜಲಜಾಕ್ಷಿಯರ ಕುಸ್ತರಿಸಿ ವಿಯೋಗಪಾಂತಲರಂಬಗೆರ್ದೆಯ ನೊಡ್ಡುವರು (ಮೋಹತ. ೧೮-೨೬); ಹೆತ್ತಮ್ಮ ನಮ್ಮನ್ನು ಕುಸ್ತರಿಸಿ ಇಷ್ಟೊತ್ತು ಮತ್ತೇತಕಾಯಿತೆನೆ (ಶರಲೀ. ೪೮೫-೩); ಇತ್ತ ಬಾರೆಂದೆಡೆಯೊಳಾಸನವಿತ್ತು ಕುಸ್ತರಿಸುತಲಿ (ಜಿನಭಾ. ೨೬-೧೮). ೩. ವಿವರಿಸು; ವರ್ಣಿಸು: ಕೊರವಿತ್ತಿ ವೇಷವನು ಬಿತ್ತರದಿ ತಾಳುತ್ತಲಿರ್ಪನು ಕುಸ್ತರಿಸಿ ಪೇಳಲ್ಕೆಯದೆನಾನೆತ್ತ ಬಲ್ಲೆನು (ಅರ್ಜಾವಿ. ೧-೧೮). ೪. ನಿವಾರಿಸು; ಕಳೆ; ಹೋಗಲಾಡಿಸು: ಕಂದರ್ಪ ಖಳನೊಡಲಿಂದೆ ಸುರಿವ ರಕ್ತಚಂದನ ಬೊಟ್ಟಿಟ್ಟು ರತಿಯ ಹಿಂದಣ ನೋವ ಕುಸ್ತರಿಸಲು ನಾರದ ಬಂದಂಗಜನ ಕೀರ್ತಿಸಿದ (ಮೋಹತ. ೧೩-೩). ೫. ಕದಲಿಸು; ಅಲುಗಾಡಿಸು: ಮಸ್ತಕ ಮೊದಲಾದ ದಿವ್ಯದೇಹವ ಹೊತ್ತು ನಿಸ್ತರಿಸಿದ ಪಾದಯುಗವ ಕುಸ್ತರಿಸುವರುಂಟೆ ಕುವರಿ ಕೇಳ್ ನಿನ್ನಯ ಹಸ್ತಾಂಘ್ರಿಪದ್ಮವಾನ್ಯೆಸೆ (ಮೋಹತ. ೩೧-೪೧). ೬. ತೃಪ್ತಿಪಡಿಸು; ತಣಿಸು: ಕುಸ್ತರಿಸುವುವಲ್ಲಲ್ಲಿ ಬಳಲ್ದ ಸಮುಸ್ತರ ದೃಗುಯುಗಳಕ್ಕೆ ವಿಸ್ತರಿಸುವಚ್ಚರಿಯೆನೆ . . . ಕೆಱೆಗಳೊಪ್ಪಿದುವು (ಮೋಹತ. ೨-೩೫); ಬೇಡಿದುದ ಅಪರಿಮಿತಾಶ್ರಿತ ಜನರಿಂಗೆ ಕೊಟ್ಟ ಶ್ರೀ ಕೃಪೆಯಿಂದ ಕುಸ್ತರಿಸಿದನು (ಮೋಹತ. ೪-೭೧). ೭. ಕುಳ್ಳಿರಿಸು: ನೆಗಪಿ ಪರಿಯಂಕಾಗ್ರ ತಳ್ಪದೊಳೊಲ್ದು ಕುಸ್ತರಿಸಿ (ಮದೇಪು. ೫-೫೬); ಪಿಡಿದೆತ್ತಿ ಕುಸ್ತರಿಸಿ ಬೋಳೈಸಿ ಬಿಗಿದಪ್ಪಿ (ಚೋರಬ. ೮-೨೧). **ಕುತ್ತರಿಸು**: ೧. ಕರಮೆಸೆವ ಸೋಗೆ ಚಿತ್ರದ ಬೇಗೆಯಂತಿರಾ ಪರವೆಗಾದುದು ದಯಾಪರ ವೇಗದಿಂದ ಲೊಡವೆರಸಿ ಕುತ್ತರಿಸೆಂದೆಳು (ಸೌಂದಪು. ೮-೭೮).

[? . / ತೆಲು. ಕುಸ್ತರಿಂಚು]

**ಕುಸ್ತಿ** (ನಾ). ಜಟ್ಟಿಕಾಳಗ; ಮಲ್ಲಯುದ್ಧ: ಜನರು ಕುಸ್ತಿ ಕಸರತ್ತು ಮೊದಲಾದುವುಗಳಲ್ಲಿ ತಮ್ಮ ಹೊಸತನವನ್ನು ಹೊಮ್ಮಿಸುವರು (ಕನ್ನಜಾ. ೧೭೭); ಗರಡಿ, ಸಾಮು, ಕುಸ್ತಿ, ಕೋಲಾಟ ಮೊದಲಾದವುವನ್ನೂ ಸಾಮೂಹಿಕ ನೃತ್ಯಗಳನ್ನೂ ಪ್ರಚಾರಕ್ಕೆ ತರಬೇಕು (ಶಿಕ್ಷದ. ೩೮೬).

[← ಪಾರ. ಕುಶ್ತೀ]

**ಕುಸ್ತಿಬಿಡು** (ನಾ). ಜಟ್ಟಿಕಾಳಗ ಮಾಡಿಸು; ಮಲ್ಲಯುದ್ಧಕ್ಕೆ ತೊಡಗಿಸು: (ಶಿ). [ಕುಸ್ತಿ + ಬಿಡು]

**ಕುಸ್ತಿಯಾಡು** (ಕ್ರಿ). ಜಟ್ಟಿಕಾಳಗ ಮಾಡು; ಮಲ್ಲಯುದ್ಧಮಾಡು: ಅವಳ ಲಕ್ಷ್ಯವನ್ನು ಸೆಳೆಯಲೆಂದು ಹುಡುಗರು ಕುಸ್ತಿಯಾಡುತ್ತಿದ್ದರು (ಮಹಾತ್ಮಾ. ೯೩). [ಕುಸ್ತಿ + ಆಡು₁]

**ಕುಸ್ತಿಹಿಡಿ** (ಕ್ರಿ). = ಕುಸ್ತಿಯಾಡು: ಆಗ ನಾನು ಸಂಗೀತದೊಡನೆ ಸ್ನೇಹದ ಕುಸ್ತಿಹಿಡಿಯುತ್ತೇನೆ (ಗಾಳಿಪ. ೪೬).

[ಕುಸ್ತಿ + ಹಿಡಿ₁ (< ಪಿಡಿ₁)]

**ಕುಸ್ತು** (ಕ್ರಿ). ಸಾಧ್ಯವಾಗು; ಶಕ್ತವಾಗು (?): ಹಸ್ತವಲಯಗಳಂತೆ ಮುತ್ತಿನೊಂಟಿಗಳಂತೆ ನೆಸ್ತವಾಗಿಹ ಕರ್ಣಪತ್ರಗಳ ವಕ್ಷರುಹ ವಿಸ್ತರವ ಪೋಲ್ವಬುಜನೇತ್ರೆಯರ ನೋಡಿ ತಂಮಿಚ್ಛಾನುಭಾವದಿಂದ ವಿಸ್ತರಿಸ ಲವನೀಶರಂಗಾಂಗವರ್ಣನೆಯು ಕುಸ್ತುದಿಲ್ಲಾವೆಡೆಗೆ ಲಾವಣ್ಯ ನದಿಯ ಸದ್ವಸ್ತುವಂತೆಸೆದಿರ್ದರೇವೇಳ್ವುದಾಶ್ಚರಿಯನಾ ಸಖಿಯರವನೀಶನೆ (ಜಿನಮು. ೪-೩೫). [?]

**ಕುಸ್ತುಂಭರ** (ನಾ). = ಕುಸ್ತುಂಬರಿ: "ಕೊತ್ತುಂಬರಿ ಕುಸ್ತುಂಭರ" (ಕವಿಕಂ. ೨೬೧). [< ಸಂ. ಕುಸ್ತುಂಬರಿ]

**ಕುಸ್ತುಂಬರಿ** (ನಾ). ಕೊತ್ತುಂಬರಿ; ಧನಿಯ: "ಕುಸ್ತುಂಬರಿಯೇ ಕೊತ್ತುಂಬರಿ" (ಚತುನಿ. ೧೧೧). [ಸಂ. ಕುಸ್ತುಂಬರೀ]

**ಕುಸ್ತುಂಬುರು** (ನಾ). = ಕುಸ್ತುಂಬರಿ: "ಕುಸ್ತುಂಬುರು, ಧಾನ್ಯಕಂ -ಈ ೨ ಕೊತ್ತುಂಬರಿ" (ಹಲಾಯು. ೧೧೧-೯೬೩). [ಸಂ.]

**ಕುಸ್ಥ** (ನಾ). [ದ್ವೈತ] ಮಹಾವಿಷ್ಣುವಿನ ಹೆಸರುಗಳಲ್ಲೊಂದು: ಕುಸ್ಥನೆನಿಸುವ ಭೂಮಿಯೊಳು (ಹಸಾರ. ೨೨-೨೨); "ಭೂಮಿಯೊಳಗೆ ಇರುವ ಪರಮಾತ್ಮನಿಗೆ ಕುಸ್ಥನೆಂದು ಹೆಸರು" (ಹಸಾರ. ೨೨-೨೨ ತಾತ್ಪರ್ಯ). [ಸಂ.]

**ಕುಹಕ** (ನಾ). ೧. ಮೋಸ; ಕಪಟ; ವಂಚನೆ: ಕುಟಿಲ ಕುಹಕ ಕ್ರೋಧ ಕ್ಷುದ್ರ ಮಿಥ್ಯೆ – ಇವನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯಾ (ಬಸವ. ೪೬); ಮತ್ತೊಂದು ಕುಹಕವನಲ್ಲಿ ಮುಂದಿಟ್ಟು (ತಿರುರ. ೧೧); ದಿಟ್ಟೆಯರು ಕುಟಿಲೆಯರು ಕುಹಕದ ಘಟ್ಟೆಯರು (ಬಸಪು. ೪೦-೫೬); ತಮ್ಮ ಪತ್ತೆ ಹಚ್ಚುವುದಕ್ಕಾಗಿ ಸರಾಫನು ಈ ಕುಹಕವನ್ನು ನಡೆಸಿರಬಹುದು (ವಿಧಿವ್ಯೆ. ೩೧). ೨. ಮಾಯೆ; ಮಾಟ; ಇಂದ್ರಜಾಲ: "ಮಾಯೆ ಕುಹಕ ಕುಸೃತಿ" (ಮಂಗರಾ. ೧೩೩-೨೮). ೩. ಮೋಸಗಾರ; ಕಪಟಿ; ವಂಚಕ: ಅಪನಿಂದಾನ್ವಿತರಾತ್ಮಬೋಧ ಕುಹಕರ್ . . . ನೃಪರೊಳ್ ಮಾನ್ಯರೆನಿಪ್ಪರ್ (ಸೋಮೇಶ. ೫೯); ಕುಹಕರ ಕೊಂಕು ಕೊಳಕು ಮಾತು (ಸಾಹಿವಿ ೧೧೫). [ಸಂ.]

**ಕುಹಕತಂತ್ರ** (ನಾ). ಮೋಸದ ತಂತ್ರ, —ಹಂಚಿಕೆ; ಕುಟಿಲೋಪಾಯ: ಕುಹಕತಂತ್ರದ ಹೊಣಿಗೆವಾಳನ ಸಂಗದಲಿ ನೀವ್ ಕೆಟ್ಟಿರಕಟ (ಕುವ್ಯಾದ್ರೋ. ೧೪-೧೬). [ಕುಹಕ + ತಂತ್ರ]

**ಕುಹಕತನ** (ನಾ). ಕಪಟ; ಮೋಸ; ವಂಚಕತನ: ಇದರಲ್ಲಿ ಯಾರದೋ ಕುಹಕತನವಿದೆಯಾಗಿ ತಿಳಿದುಬರುತ್ತದೆ (ಬಂಗಾಹೆ. ೬೦); ಕತ್ತಿನ ಕೊಂಕಿನಲ್ಲಿ ಕುಹಕತನದ ವೈಯ್ಯಾರ ನಡೆಸಿದಳು (ಹೊಸಕ್ಷಿ. ೫೫). [ಕುಹಕ + -ತನ]

**ಕುಹಕತೆ** (ನಾ). ೧. ಕಪಟತನ; ಮೋಸ. ೨. ಮಾಟಗಾರಿಕೆ; ಇಂದ್ರಜಾಲ: "ಕುಹಕತೆಯಂ ಕೊಂಡಾಡುವನಿಂದ್ರಜಾಲಿಕಂ" (ವಸ್ತುಕೋ. ೬೬-೮೬). [ಸಂ. ಕುಹಕತಾ]

**ಕುಹಕಬುದ್ಧಿ** (ನಾ). ಮೋಸದ ಬುದ್ಧಿ; ಕುಟಿಲಬುದ್ಧಿ: ನೀನಾ ನಳಿನಮುಖಿಯನು ಕೊಟ್ಟು ಕಾಂಬುದು ಗಳಹಿ ರಾವಣ ಕುಹಕಬುದ್ಧಿಗಳೇನು ಹಿತವಲ್ಲ (ಕಾಶಿರಾ. ೧೮-೪೪). [ಕುಹಕ + ಬುದ್ಧಿ]

**ಕುಹಕವಿದ್ಯೆ** (ನಾ). ಮೋಸವಿದ್ಯೆ; ಕಪಟವಿದ್ಯೆ: ನೀನವಿವೇಕಿತನದಲಿ ಮಗನ ಹೆಚ್ಚಿಸಿ ಸಾಕಿ ಕಲಿಸಿದೆ ಕುಟಿಲತನವನು ಕುಹಕವಿದ್ಯೆಗಳ (ಕುವ್ಯಾದ್ರೋ. ೧-೫). [ಕುಹಕ + ವಿದ್ಯೆ]

**ಕುಹಕವ್ಯಾಪಾರ** (ನಾ). ಮೋಸದ ವ್ಯವಹಾರ; ಕಪಟವರ್ತನೆ: ಕುಹಕವ್ಯಾಪಾರವ ಹೊದ್ದನಯ್ಯ ನಿಮ್ಮ ಶರಣ (ಅಖಂಡೇ. ೧೦೫-೩೮). [ಕುಹಕ + ವ್ಯಾಪಾರ]

**ಕುಹಕಿ** (ನಾ). ೧. ಮಾಯಾವಿ: "ಮಾಯಿಕಂ ಕುಹಕಿ . . . ಮಾಯಾವಿ" (ಮಂಗರಾ. ೬೭-೬). ೨. ಮೋಸಗಾರ; ಕಪಟಿ: ಆರು ಕುಹಕಿಗಳಾರು ದುರ್ಜನರಾರು ಖುಲ್ಲರು (ಕುವ್ಯಾದ್ರೋ. ೧-೬); ನಿಮ್ಮ ಶತ್ರುರಾಜರು ಕುಹಕಿಗಳು, ಧರ್ಮದೂರರು (ರಾಜಸೂ. ೨). ೩. ಹುರುಡಿಗ; ಈರ್ಷ್ಯೆಯುಳ್ಳವನು: "ಹುರುಡಿಗಂ ಕುಹಕಿಯೀರ್ಷ್ಯಾಳುವೆನಿಸಿಕ್ಕು" (ಮಂಗರಾ. ೭೨-೨೨). [ಸಂ. ಕುಹಕಿನ್]

**ಕುಹಕೆ** (ನಾ). ಮೋಸಗಾರ್ತಿ; ಬೂಟಾಟಿಕೆಯವಳು: ಕುಪಿತೆ ಕುತ್ಸಿತೆ ಕುಹಕೆ [ಪಾಠಾಂ. ಕಿ] ಕುಜೆ (ಜೈಮಿಭಾ. ೫-೬೧). [ಸಂ. ಕುಹಕಾ]

**ಕುಹಕೋಪಾಯ** (ನಾ). = ಕುಹಕತಂತ್ರ: ಬಹುವಿಧದ ಕುಹಕೋಪಾಯಗಳನುಸಿರಲು (ವೆಂಕರಾ. ೨-೫-೭); ಸುಟ್ಟು ಕುಹಕೋಪಾಯ ಕೆಟ್ಟ ತಂತ್ರಗಳನ್ನು ಬಿಟ್ಟು (ಕಏಪು. ೨-೧೮). [ಕುಹಕ + ಉಪಾಯ]

**ಕುಹನ** (ಗು). ೧. ಬೂಟಾಟಿಕೆಯ; ಮೋಸದ. ೨. ಅಸೂಯೆಯ; ಹೊಟ್ಟೆಕಿಚ್ಚಿನ. [ಸಂ.]

**ಕುಹನೆ** (ನಾ). ಬೂಟಾಟಿಕೆ; ವಂಚನೆ; ಕಪಟ: "ಕುಹನಾ ಶಾಠ್ಯಂ ಡಂಭಂ" (ವಸ್ತುಕೋ. ೧೧೩-೧೪). [ಸಂ. ಕುಹನಾ]

**ಕುಹರ** (ನಾ). ೧. ಗವಿ; ಗುಹೆ: "ಗಿರಿಯ ಗುಹೆ ಕುಹರಮೆನಿಸಿಕ್ಕು" (ಮಂಗರಾ. ೩೦-೨); ಉದಯಗಿರಿಕಟಕ ಕುಹರ ಪರಿಕರ ನಿಶಾಕರಂ (ಪಂಪಭಾ. ೪-೪೯ ವ). ೨. ತೂತು; ರಂಧ್ರ: "ಅವಟಂ ಛಿದ್ರಂ ಕುಹರಂ ವಿವರಂ ಶ್ವಭ್ರಂ ಬಿಲಂ ದರಂ ರಂಧ್ರಂ" (ವಸ್ತುಕೋ. ೧೯-೬); ದಳ್ಳಿಸೆ ವಹ್ನಿಜ್ವಾಲೆ ದೀರ್ಣಾನನ ಕುಹರಸಹಸ್ರಂಗಳಿಂ (ಪಂರಾಮಾ. ೫-೭೪); ಕುಹರಕರುವೆಯನಿಡುಕಿ (ಶ್ರೀರಾಮಾ. ೭೭-೬೧೬). [ಸಂ.]

**ಕುಹರಣ** (ನಾ). ಸುರತಧ್ವನಿ; ಅಳಸು: ಸಹಕಾರಾಸಾರಾನೋಕಹದ ಮದಪಿಕ ನಿವಹ ಭಾಷಣಂಗಳುಮೆಸೆದುವು ಕಿನ್ನರ ಕುಹರಣದೊಡನೆ ಸೆಣಸುತ್ತುಂ (ಶಾಂತಿಪು. ೨-೯೨); ಕಳಕೇಳೀ ತೀರ ಪಾರಾವತ ಕುಹರಣ ವಾಚಾಲಂ (ಚಂದ್ರಪು. ೮-೪೫). [ಸಂ.]

**ಕುಹಳ**$_1$ 'ಕುಹಳಿ' ನೋ.

**ಕುಹಳ**$_2$ (ನಾ). [ನಾಟ್ಯ] ನೃತ್ಯದ ಒಂದು ಭಂಗಿ: ಭರತಮಾತಂಗದ ತಿರಪು ಭಾಂಡಕ ಕುಹಳರ ಪರಿಯಿಂದಾಡುತಿರಲು ಹರ ಮೆಚ್ಚಿ ಹೋ ಹೋ ಭಾಪುರೆ ಪುರೆಯೆನೆ ಸುರಿದ ಪೂರ್ವಮಳೆಯ ನಿರ್ಜರರು (ಭೈರಸೂ. ೨೫೮). [?]

**ಕುಹಳಿ**, ಕುಹಳ$_1$ (ನಾ). ಅಡಕೆ ಹೂವಿನ ಗೊಂಚಲು; ಹೊಂಬಾಳೆ: ನವಕುಹಳಿಯೊಜ್ಜೆಯುಗಿದ ಸುರಗಿಗಳ ಸುಗ್ಗಿಯ ಸೂಜಿದೋಜಿ ಪಂಚಾಯುಧಂ ಬಗೆಯೆ ಪಂಚಾಯುಧಂ ತಾನಲ್ತು (ಪದ್ಮರಾ. ೮-೩೪); ಕುಟ್ಮಲಿತ ಕುಹಳಿ (?) ಯಂತಿರೆ ಹೆಟ್ಟುಗೆಯರ ತೆಳ್ಪುವಡೆದ ಜಠರದ ಪರಿಯಂ ನಿಟ್ಟಿಸೆ (ಬೀಳವಂ. ೨-೧೦೦). **ಕುಹಳ**$_1$: ತಂಗಾಳಿಗೊಲೆವ ಕುಹಳದ ತೊಂಗಲನಾಂತೆಸೆದುಹಲ್ಲಿ ಪೂಗಮಹೀಜಂ (ಉದ್ಭಟ. ೯-೧೬). [< ಸಂ. ಕುಹಲಿ]

**ಕುಹು** (ನಾ). ೧. ಚಂದ್ರನ ಕಲೆಯು ಕಾಣಿಸದಿರುವ ಅಮಾವಾಸ್ಯೆ: ಮಿಳಿಗಳಾದವು ಕುಹು ಸುತಾರಾವಳಿಗಳಮಳ ಪ್ರಣವವಾದುದು ಮೊಳೆಯ ಬಲುಚಮ್ಮಟಿಗೆ (ಕುವ್ಯಾಕ. ೭-೬). ೨. ದೇಹದಲ್ಲಿರುವ ಹದಿನಾಲ್ಕು ಪ್ರಧಾನವಾದ ನಾಡಿಗಳಲ್ಲೊಂದು: ಸ್ಫುರಿತ ಕುಹು ವಿಶ್ವೋದರಿಯು (ಗಗತಾ. ೯-೧೨). ೩. ಕೋಗಿಲೆಯ ಶಬ್ದ: ಕೋಗಿಲೆಯ ಕುಹು ಕೇಳಿ ಕಾಗೆ ಇನ್ನೆನಲೆ? (ಹೆಬ್ಬೆರ. ೨೩-೧೩). [ಸಂ.]

**ಕುಹುಂಡಿ** (ನಾ). ಒಂದು ದೇಶದ ಹೆಸರು: ತತ್ಪ್ರಸಾದ ಸಮಾಸಾದಿತ ಕುಹುಣ್ಡಿ ವಿಷಯ (ಇಆ. VII, ೪೪-೨೨; 10ನೆಯ ಶತ). [?]

**ಕುಹುಯೋಗ** (ನಾ). ೧. ಒಂದು ಅನಿಷ್ಟಕಾರಕಯೋಗ; ಚಂದ್ರನ ಕಲೆಯು ಕಾಣಿಸದ ಅಮಾವಾಸ್ಯೆಯು ಸೇರಿರುವ ಯೋಗ. ೨. ಅಂತಹ ಯೋಗದಿಂದುಂಟಾಗುವ ಅನಿಷ್ಟ; ದೋಷ: ರಾಯಗದ್ದುಗೆಯೇರಿ ಅವಗೆ ಬಂದ ಕುಹ[ಹು]ಯೋಗವನೆ ನೂಕಿ . . . ಸುವರ್ಣಛಾಯದಂದದಿ ಒಪ್ಪುತಾ (ಕಭವಿ. I, ೬೭); ವ್ಯಾಸರಾಯ ಇಲ್ಲವೆ ವ್ಯಾಸತೀರ್ಥ – ಇವನು . . . ಕೃಷ್ಣದೇವರಾಯನ ಆಳಿಕೆಯಲ್ಲಿ ಒದಗಿದ ಕುಹುಯೋಗವನ್ನು ನಿವಾರಿಸಿದನು (ಕಸಾಚ. ೨೮೦). [ಕುಹು + ಯೋಗ]

**ಕುಹೂ** (ನಾ). ೧. = ಕುಹು ೧: "ಸಾಯಂಕಾಲಕ್ಕೆ ಚತುರ್ದಶಿಯಾಗಲೀ ಪಾಡ್ಯವಾಗಲೀ ಇರುವ ಅಮಾವಾಸ್ಯೆಗೆ ಸೀನೀವಾಲಿಯೆಂದು ಹೆಸರು . . . ಕಾಣಿಸಲ್ಪಡದೇ ಇರುವ ಚಂದ್ರಕಲೆಯುಳ್ಳ ಅಂಥಾ ಅಮಾವಾಸ್ಯೆಗೆ ಕುಹೂ ಎಂದು ಹೆಸರು" (ಸಿದ್ಧಾಂತಿ. ೩೬). ೨. = ಕುಹು ೨: "ಶಶಿಯಡಗಲು ಕುಹೂಸಮಾಖ್ಯಂ" (ಮಂಗರಾ. ೨೧-೧೦). ೩. = ಕುಹು ೩: ಕೊಂಬೆಯ ಮೇಲಿದ್ದ ಕೋಗಿಲೆ ಕುಹೂ ಎನ್ನುವುದು (ತುಂಗಭ ೧೦೦). [ಸಂ.]

**ಕುಹೂಯೋಗ** (ನಾ). = ಕುಹುಯೋಗ : ಸುಯೋಗವಲ್ಲ ಸ್ವಾಮಿ, ಕುಹೂಯೋಗ (ಕೈಲಾಶ. ೭೬). [ಕುಹೂ + ಯೋಗ]

**ಕುಹೂರಟಿ** (ನಾ). = ಕುಹೂರವ ೧ : ಲೀಲೆಯಿಂ ನಟಿಸಿ ಕುಹೂರಟ ವಿಂಡಲ್ಲಿ ಆಳಾಪಿಸೆ (ಜ್ಞಾನಚ. ೨೫-೭೧) ; ಕೂಗುವ ಕುಹೂರಟಿಗಳು ನುಡಿವರೆ ಕೇಳಿ (ಜ್ಞಾನಚ. ೩೯-೧೬). [?]

**ಕುಹೂರವ** (ನಾ). ೧. ಕುಹೂ ಶಬ್ದವನ್ನು ಮಾಡುವ ಪಕ್ಷಿ; ಕೋಗಿಲೆ. ೨. ಕೋಗಿಲೆಯ ಧ್ವನಿ ; ಕೂಜನ.
[ಕುಹೂ + ರವ]

**ಕುಹೇತು** (ನಾ). ಕೆಟ್ಟಹೇತು ; ದೋಷಯುಕ್ತವಾದ ಹೇತು : ತಂತಮ್ಮ ಮತದ ಕುಹೇತು ಕುದೃಷ್ಟಾಂತಗಳಿಂದವಿಂತು ಮೂವರೂ ಜೀವಾಭಾವಮನೆ ಸಮರ್ಥಿಸಿದೊಡೆ (ಚಾವುಂಪು. ೧೩). [ಸಂ.]

**ಕುಹೇತುಕ** (ಗು). ದುಷ್ಟಹೇತುವಿನಿಂದ ಕೂಡಿದ : ಬಿಸುಟು ಮಿಥ್ಯಾ ಮಾರ್ಗಮಂ . . . ನಾನಾ ಕುಹೇತುಕ ಕುದೃಷ್ಟಾಂತ ಕುಮಾರ್ಗ ಕುತ್ಸಿತ ಕುಭಾಷ್ಯಾದಿ ದೋಷಂಗಳಂ (ಸುಕುಮಾ. ೧-೪೬). [ಸಂ.]

**ಕುಹೇಲಿಕಾಜಾಲ** (ನಾ). ಹಿಮದ ಒಡ್ಡು ; ಮಂಜಿನ ರಾಶಿ, —ಬಲೆ : ಆಧುನಿಕ ಗಿರಿನಗರ ದಾರ್ಜಿಲಿಂಗದ ಘನನಿಬಿಡ ಕುಹೇಲಿಕಾ ಜಾಲದ ಮಧ್ಯದಲ್ಲಿ (ಇಪ್ಪಕ. ೧೮೫). [ಸಂ. (ಕುಹೇಲಿಕಾ + ಜಾಲ)]

**ಕುಹೇಲಿಕೆ** (ನಾ). ಮಂಜು ; ಹಿಮ : ಆ ಗುರುತಿಸದೆ ಇರುವಿಕೆಯೇ ಒಂದು ಕುಹೇಲಿಕೆ ಇದ್ದ ಹಾಗೆ. ಅದೇ ಮಾಯೆ (ಇಪ್ಪಕ. ೪೫೮).
[ಸಂ. ಕುಹೇಲಿಕಾ]

**ಕುಳ್**, ಕುಳ್ಳು$_1$ (ಕ್ರಿ). ಕುಳಿತು, ಕುಳಿತ್ತು, ಕುಳಿದು, ಕುಳುತ್ತು, ಕುಳ್ತು, ಕುಳ್ಳಿತು, ಕುಳ್ಳಿದು, ಕೂತ$_1$, ಕೂತು$_1$ (ಭೂತನ್ಯೂ). ಆಸೀನನಾಗು ; ಕುಳಿತುಕೊಳ್ಳು : ಬಳ್ಕುತ್ತುಮುಳ್ಕುತ್ತುಮೋರಡಿ ಗೊರ್ಮೊರ್ಮೆ ಕುಳುತ್ತುಮೇೞುತಿರೆ (ಪಂಪಭಾ. ೩-೯) ; ಶ್ರೀಮದಶೇಷ ಮಹಾಜನಂಗಳು ಸಭಾಸ್ಥಳದಲ್ಲಿ ಕುಳಿದು (ಎಕ. V, ಅರಸೀ. ೧೫೮-೧೧ ; 1324 ?) ; ಗದ್ದುಗೆ ಮೇಲೆ ಕುಳಿತು ಬಟ್ಟಕರೆಯನು ಬಿಟ್ಟು (ಸಂಭಪ. ೩-೪೩); ವರದರಾಜ ದೇವರಿಗೆ ತಿರುನಾಳವುತ್ಸವಾ . . . ಸಿಂಹಾ ಸನದಲ್ಲಿ ಕುಳಿತ್ತು (ಎಕ. X (S), ಮುಳುಬಾ. ೧೯೧-೧೨ ; 1441) ; ಜಪದ ಮಂಟಪದಲ್ಲಿ ಕುಳಿತರು ಬುಧರು ಸಂದಣಿಸಿ (ಮೋಹತ. ೩-೪೪) ; ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ ಕುಳಿತು ಪಾಡಲು ನಿಲುವ (ಹಸಾರ. ೨-೫) ; ತೊಡೆತೊಡೆಸೋಂಕಿ ಕುಳ್ಳಿಕೊಲವಿಂ (ಬೀಳವಂ. ೨-೧೪೦) ; ಮುನಿವರರು ಶಿಷ್ಯಜನಜಾಲ ಪ್ರಶಿಷ್ಯಜನ ಮುಂತಾಗಿ ಕುಳ್ತಿರೆ (ತುರಂಗ. ೬-೩೨) ; ಒಂದು ಮಾತಾಡದೆಯೆ ಕುಳ್ತನ್ ಬಲ್ ಪೊೞ್ತು (ಅಶ್ವತ್ಥಾ. ೨೬೫) ; ಕೂತುಂಬುವವನಿಗೆ ಕುಡಿಕೆ ಹಣ ಸಾಲದು (ಗಾದೆ). **ಕುಳ್ಳು$_1$** : ಅವರಿರ್ಬರ್ . . . ಉದ್ಯಾಹ ನಿವಾಸದ ಪಸೆಗೆಯ್ತಂದು ಕುಳ್ಳಿದರ್ ನಲವಿಂದಂ (ನಳಚಂ. ೪೩೦) ; ಪಾಲುಣಲೆಂದು ಬಂದು ಗಿಳಿವಿಂಡುಗಳೀ ಕಮಲಸ್ಥಳಂಗಳಂ ಮೇಲೆ ಮುಸುಂಕಿ ಕುಳ್ಳಿದಿರೆ (ಬಾಧಪು. ೧-೮೩).

ಕುಳಿತುಕುಳಿತು (ದ್ವಿರುಕ್ತಿ) : ಒಂದೇ ಕಡೆಯಲ್ಲಿ ಕುಳಿತು ಕುಳಿತು ನಿಮಗೆ ಬಹಳ ಬೇಸರ ಬಂದಿದ್ದೀತು (ಮುಂಬಯಿ. ೩-೬೭); ಕುಳಿತುಕೊಳ್, ಕುಳಿತುಕೊಳ್ಳು, ಕೂತುಗೊಳ್ಳು = ಕುಳ್ಳಿರು : ಅರಸುಗಳು ಕುಳಿತುಕೊಳ್ಳುವುದಕ್ಕೆ ತಕ್ಕ ಉತ್ತಮವಾದ ಗದ್ದಿಗೆ, (ಸಿದ್ಧಾಂತಿ. ೨೧೦) ; ಎಂಟುದಿವಸ ನಾನು ಸಾಲೆಗೆ ಹೋಗಲಾರದೆ ಮನೆಯಲ್ಲಿಯೇ ಕೂತುಗೊಂಡು (ಕೃವಾಲು. ೧೪೮).
[ದೇ. ‖ ತಮಿ. ಕುಳಿರ್ ; ತುಳು. ಕುಳ್ಳು]

**ಕುಳ್$_1$** 'ಕುೞು' ನೋ.

**ಕುಳ್$_2$**, ಕುಳು, ಗುಳ್ಳು$_2$ (ನಾ). ೧. ತೆರಿಗೆ ; ಸುಂಕ : ನಾಲ್ವತ್ತು ಹೊಂನನೂ ಕುಳವ ಕಡಿದು ಆ ಹೊಂನಿಗೆ (ಸೌಇಎ. ೧೯೩೦, ಕುಂದಾಪು. ೫೫೩-೧೦ ; 1369) ; ಸರ್ವ್ವ ಆದಾಯವನೂ ಅನುಭವಿಸಿಕೊಂಡು ಆ ಗ್ರಾಮದ ಕುಳಗಳ ಅಕ್ಷರದಲ್ಲೂ ಮೂವತ್ತ ಐದು ವರಹನ ಗ್ರಾಮ [ವ]ನೂ (ಎಕ. XIV, ಗುಂಡ್ಲುಪೇ. ೧೩೨-೧೧ ; 1540). ೨. ಗೇಣಿದಾರ. 'ಕುಳನಷ್ಟ' ಪರಾ. **ಕುಳು** : ೧. ಶ್ರೀ ಗೋಪಾಳದೇವರ ಅಮೃತಪಡಿ ದೀಪೋತ್ಸವ ಚೈತ್ರ ಪವಿತ್ರ ಒಳಗಾದ . . . ಧವಳಾರದ ಭಂಡಿ ಅಡುಗಬ್ಬಿನಭಂಡಿ ತುಪ್ಪದಳಮಿಳಿ ಕುಳು ನೂಲೊಳಗಾದವು ಕಟ್ಟುಗೂಳು (ಎಕ. XVI, ಚಿಕ್ಕನಾ. ೭೧-೨೬ ; 1330). **ಗುಳ್ಳು$_2$** : ೧. ತುಪ್ಪದಳಮಿಳಿ ಗುಳು ನೂಲು (ಎಕ. XV, ಬೇಲೂರು. ೨೫೨-೬ ; 1298). [?]

**ಕುಳ್$_3$** (ನಾ). ನಾಲ್ಕು ಬಳ್ಳಗಳ ಒಂದು ಅಳತೆ ; ಕೊಳಗ : ಪದಿನ್ಕುಳ ಪಾೞುಂ ಇದಂ ಪಡೆದೊರೀಶ್ವರದಾಸರ್ (ಎಕ. X (S), ಚಿಕ್ಕಬ. ೧೦೬-೭೪ ; 850). 'ಅಯ್ಗುಳ', 'ಒಕ್ಕುಳ' ಪರಾ. [< ಕೊಳಗ$_1$]

**ಕುಳ್$_4$** (ನಾ). 'ಳ' ಎಂಬ ಕನ್ನಡ ವರ್ಣ; (ದೇಶ್ಯ ಶಬ್ದಗಳಲ್ಲಿ ಬರುವ) ಳಕಾರ : ನೋಡುವೊಡೊಂದಕ್ಕರಮದು ಮಾಡುವೊಡುಚ್ಚರಣೆ ಗರಿದು ಮೂಱುಂ ತೆಱನಂ ಕೂಡೆ ಕವಿತತಿ ವಿಚಾರಿಸಬೇಡದಱಿಂ ಱಳಕುಳಕ್ಷಳಂಗಳನಿದಱಿಕೊಳ್ (ಗಂಕ. ೧-೩೨) ; ಕುಳದ ನಿಯಾಮದೊ ಳೆಂದುಂ ಕ್ಷಳಕ್ಕೆ ಲಾಕ್ಷರವಿಕಲ್ಪಮಿಲ್ಲ (ಶಮದ. ೫); ರಳಕುಳ ಶಿಥಿಲ ಸಮಾಸ ಮುಂತಾದವರೊಳಗಿಲ್ಲಿ ಕೆಲವುಳ್ಳರುಂಟು (ಭರಚ. ೧-೮). 'ಕ್ಷಳ', 'ಱಳ' ಪರಾ. [?]

**ಕುಳ್$_5$** 'ಕುಲ' ನೋ.

**ಕುಳಕ** 'ಕುಲಕ' ನೋ.

**ಕುಳಕರಣಿ** 'ಕುಲಕರಣಿ' ನೋ.

**ಕುಳಕಾಳಾಂಚಿ** (ನಾ). ಕುಲಪರಂಪರೆಯಿಂದ ಆಶ್ರಿತನಾದವನು ; ಪರಂಪರಾಗತವಾಗಿ ಒಂದು ವಂಶದ ಆಶ್ರಯವನ್ನು ಪಡೆದವನು : ವೆಂಕಟಾದ್ರಿ ನಾಯಕಯ್ಯನವರು ಕುಳಕಾಳಾಂಚಿಯಾಗಿ ನಡಸಿಕೊಂಡು ಬಹ ಬೊಂಮಣ್ಣ ಹೆಗ್ಗಡೆಯಾತಂ (ಎಕ. VIII, ತೀರ್ಥಹ. ೧೬೬-೯ ; 1610). [ಕುಳ್$_5$ (= ಕುಲ) + ಕಾಳಾಂಚಿ]

**ಕುಳಕೂಡಿಸು** (ಕ್ರಿ). ಕುಲದ ಮುಖ್ಯಸ್ಥರಾದ ಜನರನ್ನು ಸೇರಿಸು, —ಕಲೆಹಾಕು : ಕುಳಕೂಡಿಸಿ, ಪಂಚಾಯತ ಹಾಕಿಸಿ, ದಳವಾಯಿಗಳ ಚಾವಡಿಗೆ ಓಲೆ ಬರೆದು (ಚಿಟ್ಟಅ. ೧೫೫-೧೩).
[ಕುಳ್$_5$ (= ಕುಲ) + ಕೂಡಿಸು]

**ಕುಳಚ್ಚ** (ನಾ). ಪರಿಶುದ್ಧವಾದುದು ; ನಿರ್ಮಲವಾದುದು : "ಕುಳಚ್ಚಂ ವಿಮಳದ ಪೆಸಱ್" (ಕರ್ಣಾನಿ. ೫-೨).
[ಕುಳ್$_5$ (= ಕುಲ) + ಅಚ್ಚ$_1$]

**ಕುಳತಿಳಕ** 'ಕುಲತಿಲಕ' ನೋ.

**ಕುಳತೆರಿಗೆ** 'ಕುಳದೆಱಿಗೆ' ನೋ.

**ಕುಳತೆವಟ್ಟ** (ನಾ). ಒಂದು ಬಗೆಯ ವಟ್ಟ, —ಕಂದಾಯ (?) : ನಾಗರಖಂಡೆಯದ ಎಪ್ಪತ್ತಱ ಒಳಗಣ ಮುಚ್ಚುಂಡಿಯ ಕುಳತೆವಟ್ಟ ಸಹಿತವಾಗಿ ವರಹ ಗ ೩೦ ಆ ಕಾಲುವಳಿ ಮುತ್ತ ಹಳ್ಳಿಯ ಕುಳವರಹ ಗ ೧೦ (ಎಕ. VII, ಶಿಕಾರಿ. ೨೮೨-೭೪ ; 1368). [ಕುಳತೆ$_0$ + ವಟ್ಟ]

**ಕುಳತೆಱಿಗೆ** 'ಕುಳದೆಱಿಗೆ' ನೋ.

**ಕುಳದಗ್ಗು** (ಕ್ರಿ). ತೆರಿಗೆ ಕಡಮೆಯಾಗು ; ಸುಂಕ ತಗ್ಗಿಹೋಗು : ದೇವರ ಸುಂಕದ ಹೊಂನನೂ ವಿಚಾರಿಸದೆ ಕುಳದಗ್ಗಿದ ಸಂಮಂಧ ತಗಡೂರು ನಾಡ – ಮಾಗಣೆಯ ಮಾಡುತಿದ ನಾಗರಸರು (ಎಕ. III, ನಂಜನ. ೧೧೮-೧೨ ; 1491). [ಕುಳ್$_2$ + ತಗ್ಗು$_1$ (< ತಱ್ಗು)]

**ಕುಳದೆಱಂಗೆ**, ಕುಳತೆರಿಗೆ, ಕುಳತೆಱಂಗೆ (ನಾ). ಒಂದು ಬಗೆಯ ತೆರಿಗೆ; ಕುಲದ ವೃತ್ತಿಗೆ ಸಂಬಂಧಪಟ್ಟ ತೆರಿಗೆ: ನಾಯಂದರಿಗೆ ಕುಳದೆಱಂಗೆ ಸುಂಕಯೇನುಂಟಾದದನು ಸರ್ವಮಾನ್ಯವಾಗ್ಗಿ ಬಿಟ್ಟರು (ಎಕ. XII, ತಿಪಟೂ. ೧೨೩-೧೧; 1545). **ಕುಳತೆರಿಗೆ:** ರೈತನು ಜಮೀನು ಭಘಾವಣೆ ಮಾಡಿದ್ದು, ಕುಳತೆರಿಗೆ ಪಾಳುಭೂಮಿಯ ಸಾಗುವಳಿ ವಿಷಯ (ಮಹಾವಂ. II, ೫೬). **ಕುಳತೆಱಂಗೆ:** ನಾವಿಂದರಿಗೆ ಕುಳತೆಱಂಗೆ ಸುಂಕ (ಎಕ. VI, ತರೀಕೆ. ೧೩-೬; 1545).
[ಕುಳ$_5$ (= ಕುಲ) + ತೆಱಂಗೆ]

**ಕುಳಧರ** 'ಕುಲಧರ' ನೋ.

**ಕುಳನಷ್ಟ** (ನಾ). ರೈತನ ನಷ್ಟ; ಗೇಣಿದಾರನ ನಷ್ಟ; ಗುತ್ತಿಗೆ ದಾರನ ಹಾನಿ (ಮೈಗಜೆ. IV, ೭೭೭). [ಕುಳ$_3$ + ನಷ್ಟ]

**ಕುಳನೆಲ್ಲೂರ್** (ನಾ). ಒಂದು ಊರಿನ ಹೆಸರು: ಕುದುರೆ ಇನ್ದಿಟಿದು ನಡದಿಱುದೊಟ್ಟಕೆಯ್ದು ಬಿಟ್ಟನ್ ಅವಗೆ ಬಾಳ್ಗಟ್ಟು ಕೊಟ್ಟೊದು ಕುಳ ನೆಲ್ಲೂರ ಸವ್ವ ಪರಿಹಾರ (ಎಕ. X, ಶ್ರೀನಿವಾ. ೫-೧೦; 780). [?]

**ಕುಳಪು** (ನಾ). ಕುಂದಣ: ಮಾಣಿಕವರಳೊಳು ವಜ್ರದ ಕುಳಪನು ಜಾಣಿಂದಲಜಸ್ವರ್ಣಕಾರ ಮಾಣದೆಯುರುಟಾಗಿ ತೆತ್ತಿಸಿ ಬೆಚ್ಚಂತೆ ಕಾಣಿಸಿತದರ ದೃಷ್ಟಿಗಳು (ಜ್ಞಾನಜ. ೭-೪).
[← ಮರಾ. ಕುಲಪೀ, ಕುಲ್ಪೀ = ಬಂಧಿಸಿದ, ಕಟ್ಟಿದ]

**ಕುಳಪಾಲು** (ನಾ). ರೈತನ ಪಾಲು; ಬೇಸಾಯ ಮಾಡಿದವನ ಭಾಗ: ನೀಉ ಕಟ್ಟಿಮಾನ್ಯವಾಗಿ ಕೊಟ ಬೀಜವರಿಯ ಗದೆ ಹಸಿಗೆ ಕೊಳಗದಲು ಖಂಡುಗ ಗದೆಯ ಕುಳಪಾಲನು ಕಳದು ರಾಜಪಾಲಿಗೆ ಬಂದ ಫಲವನು (ಸೌಇಇ. IV, ೨೫೦-೫; 1521).
[ಕುಳ$_5$ (= ಕುಲ) + ಪಾಲು$_2$ (< ಪಾಲ್)]

**ಕುಳಬಿರಾಡ** (ನಾ). ರೈತ ಕೊಡಬೇಕಾದ ತೆರಿಗೆ: ತೋಟದ ವಕಲ ಪಾಲು ರಾಜಪಾಲು ಕುಳಬಿರಾಡ ಅನೀತಬಿರಾಡ ಸಹವಾಗಿ ಸರ್ವಮಾನ್ಯ ವಾಗಿ (ಸೌಇಇ. IX-ii, ೬೪೨-೧೮; 1551); ಕುಳಬಿರಾಡದಿಂದ ಗ ೨॥೦ ಸುಂಕ ಕೊಡವೀಸ (ಎಕ. VIII (S), ಕುಂಸಿ. ೧-೧೯; 1721).
[ಕುಳ$_5$ (= ಕುಲ) + ಬಿರಾಡ]

**ಕುಳಭವನ** (ನಾ). ತವರು ಮನೆ: ವಿನಯಕ್ಕಾಧಾರಭೂತಂ ಪತಿಹಿತ ಚರಿತಕ್ಕಾಶ್ರಯಂ ಸದ್ವಿವೇಕಕ್ಕೆ ನಿವಾಸಂ ಶೌಚಸಂಪತ್ತಿಗೆ ಕುಳಭವನಂ (ಎಇ. XVI, ೫೫-೧೧; 1053). [ಕುಳ$_5$ (= ಕುಲ) + ಭವನ]

**ಕುಳಭೂಷಣೆ** (ನಾ). ಕುಲಕ್ಕೆ ಭೂಷಣಳಾದವಳು; ವಂಶಕ್ಕೆ ಅಲಂಕಾರಪ್ರಾಯಳಾದವಳು: ನೆಗಟ್ದ ಗುಣಾಬ್ಧಿ ಸಿಂಗವಿಭುಗಂ ಕುಳಭೂಷಣೆಯಪ್ಪ ಬಾಗಳಬ್ಬೆಗವನೀತಳಂ ಪೊಗಳೆ ಪುಟ್ಟಿದರ್ (ಸೌಇಇ. XX, ೬೬-೨೫; 1118).
[ಸಂ. ಕುಲಭೂಷಣಾ (ಕುಲ + ಭೂಷಣ + -)]

**ಕುಳಮಂದಿರ** (ನಾ). = ಕುಳಭವನ: ಪರ್ವಿದ ವಕ್ಷಮಾ ಕ್ಷಮಾತಳ ಕುಳಲಕ್ಷ್ಮಿಗಾಯ್ತು ಕುಳಮಂದಿರಂ (ಪಂಪಭಾ. ೨-೩೬).
[ಕುಳ$_5$ (= ಕುಲ) + ಮಂದಿರ]

**ಕುಳರ್ಪಗೆಱೆ** (ನಾ). ಒಂದು ಕೆರೆಯ ಹೆಸರು: ಆಗ್ನೆಯದ ದೆಸೆಗೆ ಸೀಮೆ ಕುಳರ್ಪ್ಪಗೆಱೆಯ ಒಳಗಣ ಪಟಿ ಏಱೆಯೆ (ಎಕ. IX (S), ಬೆಂಗಳೂ. ೧೫೧-೫೫; 828). [ಕುಳರ್ಪ$_0$ + ಕೆಱೆ]

**ಕುಳವ** (ನಾ). ಒಂದು ಬಗೆಯ ನೀರುಹಕ್ಕಿ: ಕರಿಣ ದೇಹದ ಹುಲಿಯೆರಳೆ ನವಿಲರಗಿಳಿಗಳಾ ಕುಳವ ಲಾವಿಗೆ ಪುರುಳಿ . . . ಪಕ್ಕಿಗಳವಚಿಕೊಳೊಪ್ಪಿದುವು (ಸಾಳ್ವಭಾ. ೩-೨೧).
[? . / ತಮಿ. ಕುಳವೈ]

**ಕುಳವಡೆ** (ನಾ). ಬೆಳೆ ಕಾಯುವುದಕ್ಕಾಗಿ ಕುಳವಾಡಿಗೆ ಕೊಡುವ ವೇತನ: ಕುಳವಡೆ ಸಾರಡೆ ದುಳರವಟ ಕಟಳೆವಟ ಏರಿ ಮಿನಬೆಲೆ ಸಂತೆ ಉಂಟಾದ ಹಲ ಉಪಾಧಿಗಳೂ ಸಹ ಸೇರ್ರ್ಸಿ ಕೊಟ್ಟೆವು (ಸೌಇಇ. IX-ii, ೪೬೩-೮; 1470). [ಕುಳ$_3$ + ಪಡಿ?]

**ಕುಳವರ್ತನೆ** (ನಾ). ಗ್ರಾಮಾಧಿಕಾರಿಗಳು ತಮ್ಮ ಸಂಬಳದ ಜತೆಗೆ ರೈತರಿಂದ ಪಡೆದುಕೊಳ್ಳುವ ಸಂಭಾವನೆ, —ಮಾಮೂಲು: (ಕ).
[ಕುಳ$_5$ (= ಕುಲ) + ವರ್ತನೆ]

**ಕುಳವಧು** 'ಕುಲವಧು' ನೋ.

**ಕುಳವಾಡಿ** 'ಕುಲವಾಡಿ' ನೋ.

**ಕುಳವಾಡಿಕೆ** 'ಕುಲವಾಡಿಕೆ' ನೋ.

**ಕುಳವಾಡಿಗ** (ನಾ). = ಕುಲವಾಡಿ: (ಕ).
[ಕುಳವಾಡಿ (= ಕುಲವಾಡಿ) + -ಗ$_3$]

**ಕುಳವಾಡಿಗಿತ್ತಿ** (ನಾ). = ಕುಲವಾಡಿಯ ಹೆಂಗಸು: (ಕ).
[ಕುಳವಾಡಿಗ + -ಇತ್ತಿ]

**ಕುಳವಾಡಿತನ** (ನಾ). = ಕುಲವಾಡಿಕೆ: (ಕ).
[ಕುಳವಾಡಿ (= ಕುಲವಾಡಿ) + -ತನ]

**ಕುಳವಾರ್** 'ಕುಳವಾರು$_2$' ನೋ.

**ಕುಳವಾರಿ** 'ಕುಳವಾರು$_1$' ನೋ.

**ಕುಳವಾರು$_1$**, ಕುಳವಾರಿ, ಕುಳುವಾರು (ನಾ). ೧. ಗಣನೀಯ ವ್ಯಕ್ತಿ ಅಥವಾ ಮನೆತನ: ಮುಂದೆಯೂ ಹೀಗೆ ನಡೆದು ನಿನ್ನ ಮನೆ ತನವೊಂದು ಘಟ್ಟ ಕುಳವಾರಾಗುವಂತೆ ಮಾಡಬೇಕು (ಕುರುಕಾ. ೧೪೬). ೨. ಕೊಳ್ಳುವವನು; ಗಿರಾಕಿ: ನನ್ನ ಖಾಯಂ ಕುಳವಾರುಗಳಿಗೇ ಕೊಟ್ಟು ಬರುತ್ತೇನೆ (ಹೂಸಕ್ಷಿ. ೫೬); ಅತ್ಯಂತ ಪ್ರಾಮಾಣಿಕರೆಂದು ಕಂಡು ಬಂದ ಕೆಲವೊಂದು ಕುಳವಾರುಗಳಿಗೆ . . . ಭತ್ತ ಕೊಡು ತ್ತಿದ್ದರು (ಭ್ರಾಂತಿಸು. ೪). **ಕುಳವಾರಿ:** ೧. ನಾವು ಎಷ್ಟು ಗಟ್ಟಿ ಕುಳವಾರಿಗಳೆಂದು ಇವರಿಗೆ ತೋರಿಸೋಣ (ಹುಚ್ಚಮ. ೬೬). ೨. ಅ ಅಂಗಡಿಯವನಿಗೆ ಗಟ್ಟಿ ಕುಳವಾರಿ ಸಿಕ್ಕಿದಾನೆ (ರೂಢಿ). **ಕುಳುವಾರು:** ೨. ಎಲ್ಲಾ ಕಡೆಗಳಿಗಿಂತ ಹೆಚ್ಚು ದರ ನನ್ನ ಕುಳುವಾರುಗಳಿಗೆ ದೊರೆಯುತ್ತದೆ (ಹರಿಕೋ. ೫೬). ೩. ಆಸಾಮಿ; ವ್ಯಕ್ತಿ: ಖತಾಳರು ಗಟ್ಟಿಕುಳುವಾರು (ಮರಮು. ೧೧೪). [← ತುಳು. ಕುಳವಾರ್]

**ಕುಳವಾರು$_2$**, ಕುಳವಾರ್ (ನಾ). ಪ್ರತಿ ರೈತನಿಗೂ ಸಂಬಂಧಿಸಿದ ವೈಯಕ್ತಿಕ ಲೆಕ್ಕಪತ್ರ: ಕುಳವಾರು ಇಲ್ಲದೆ ಊರಿಗೆ ತಳವಾರ ಏನು ಮಾಡ್ಯಾನು (ಗಾದೆ); ತಳವಾರನಿಗೆ ಪಟ್ಟಾ ಕಟ್ಟಿದರೆ ಕುಳವಾರು ಹೋದೀತೋ (ಗಾದೆ). **ಕುಳವಾರ್:** "ಕುಳವಾರ್, ಕುಳವಾರು – ಜಮೀನಿಗೆ ಅನುಸಾರವಾಗಿ ತಯಾರಿಸಿದ ತಖ್ತೆಗಿಂತ ಪ್ರತ್ಯೇಕವಾಗಿ ರೈತರಿಗೆ ಸಂಬಂಧಿಸಿದಂತೆ ಬೇರೆಯಾಗಿ ಸಿದ್ಧಪಡಿಸಿದ ವೈಯಕ್ತಿಕ ಲೆಕ್ಕ ಪತ್ರ" (ಮೈಗಜೆ. IV, ೭೭೭). [← ಮರಾ. ಕುಳವಾರೀ, ಕೂಳವಾರೀ]

**ಕುಳವಾರ್ಚಿಟ್ಟಿ** 'ಕುಳವಾರ್ಚಿಟ್ಟೆ' ನೋ.

**ಕುಳವಾರ್ಚಿಟ್ಟೆ**, ಕುಳವಾರ್ಚಿಟ್ಟಿ (ನಾ). ಪ್ರತಿ ರೈತನಿಂದ ಸಾಗುವಳಿ ಮಾಡಲಾದ ಬೇರೆ ಬೇರೆ ಜಮೀನಿನ ಲೆಕ್ಕ, —ತಃಖ್ತೆ: (ಕ). **ಕುಳವಾರ್ಚಿಟ್ಟಿ:** ಪ್ರತಿಯೊಬ್ಬ "ರೈತನಿಂದ ಸಾಗುವಳಿ ಮಾಡಲ್ಪಟ್ಟ ಜಮೀನಿನ ವಿವರವಾದ" ಲೆಕ್ಕ (ಮೈಗಜೆ. IV, ೭೭೭; ರೈಸ್‌ಗೆ. II, 554). [ಕುಳವಾರ್ (< ಕುಳವಾರು$_2$) + ಚಿಟ್ಟೆ]

**ಕುಳವಾರ್ಜಮಾಬಂದಿ** (ನಾ). "ಪ್ರತಿರೈತನು ಕೊಡಬೇಕಾದ ತೆರಿಗೆ ಕಂದಾಯಗಳ ಒಟ್ಟು ಲೆಕ್ಕ ನಿರ್ಧಾರ" (ಮೈಗಜೆ. IV, ೭೭೭).
[ಕುಳವಾರ್ (< ಕುಳವಾರು$_2$) + ಜಮಾಬಂದಿ]

**ಕುಳವಾರ್ಪಟ್ಟೆ**, ಕುಳವಾರ್ಪಟ್ಟೆ (ನಾ). = ಕುಳವಾರ್ಚಿಟ್ಟೆ. (ಮೈಗೆಜಿ. IV, ೭೭೭). **ಕುಳವಾರ್ಪಟ್ಟೆ**: (ಕೈಸ್‌ಗೆ. II, ೫೫೪). [ಕುಳವಾರ್ (< ಕುಳವಾರು$_2$) + ಪಟ್ಟೆ$_2$]

**ಕುಳವಾರ್ಪಟ್ಟೆ** 'ಕುಳವಾರ್ಪಟ್ಟೆ' ನೋ.

**ಕುಳವಾಸಿಯ** (ನಾ). = ಕುಳವಾರ್ಜವಾಬಂದಿ (?): ಈ ತೇರ ಕಾಣಿಕೆಯ ಹೊನ್ನ ತೆರಕಣಾಂಬಿಯ ಚಾವಡಿಗೆ ಚಿಕ್ಕಪಾರುಪತ್ಯಗಾಜರು ಯಿಾ ಲೆಕ್ಕದಲ್ಲಿ ಕುಳವಾಸಿಯಕ್ಕೆ ಕೊಟ್ಟು (ಎಕ. XIV, ಗುಂಡ್ಲುಪೇ. ೮-೧೫; 1520). [ಕುಳ್$_0$ + ವಾಸಿಯ ?]

**ಕುಳವಿಡಿ** (ನಾ). (?): ಆವಸ್ಥಲವಂಗೀಕರಿಸಿದಲ್ಲಿ ಪರಿಪೂರ್ಣನಾಗಿ ಏನ ಹಿಡಿದಲ್ಲಿಯೂ ತಲೆವಿಡಿಯಿಲ್ಲದೆ, ಏನ ಬಿಟ್ಟಲ್ಲಿಯೂ ಕುಳವಿಡಿಯಿಲ್ಲದೆ ಕರ್ಪುರದ ಮಹಾಗಿರಿಯ ಸುಟ್ಟಡೆ ಒಕ್ಕುಡಿತೆ ಬೂದಿಯಿಲ್ಲದಂತೆ ಚಿತ್ತ ನಿಶ್ಚಯವಾದ ಸದ್ಭಕ್ತನ ಪರಮವಿರಕ್ತನಿರವು (ಸರ್ವವ.೧೩೪-೭೮೩). [?]

**ಕುಳಸ್ಥಲ**, ಕುಳಸ್ಥಳ (ನಾ). ೧. [ವೀಶೈ] ಶಿವ ದೀಕ್ಷೆಯಾದವನಿಗೆ ಭಾವಸ್ಥಲದಿಂದ ಆರಂಭಿಸಿ ಕೊನೆಯದಾದ ಭಕ್ತಸ್ಥಲದವರೆಗೆ ಕ್ರಮವಾಗಿ ಒಂದರಿಂದ ಮತ್ತೊಂದರಂತೆ ಉದಯವಾಗುವ ಮೂವತ್ತಾರು ಸ್ಥಲಗಳು. ಈ ಸ್ಥಲಗಳಲ್ಲಿ ಪ್ರತ್ಯೇಕವಾಗಿ ಆರು ಬಗೆಗಳನ್ನುಳ್ಳ ನೀಃಪತಿತತ್ವ, ಪ್ರತಿತತ್ವ, ಸಶೀಲ, ಅಸಾಧ್ಯ, ನಿರುಪಾಧಿಕ ಮತ್ತು ಸಾಕಾರವೆಂಬ ಆರು ಸ್ಥಲಗಳು ಅಡಕವಾಗಿವೆ: ಶಂಭು ಸೊಡ್ಡಳ ಮಹಂತರುಮಪ್ಪ ಮೂವತ್ತಾಱು ಕುಳಸ್ಥಲವಱಿದವಂಗೆ ಶರಣು ಶರಣೆಂಬೆ (ಸರ್ವವ. ೧೬೪-೭೮೦). **ಕುಳಸ್ಥಳ**: ೨. ವಿವರ: ನಾದ ಮುನ್ನವೋ ಬಿಂದು ಮುನ್ನವೊ ಕಾಯ ಮುನ್ನವೋ ಜೀವಕಾಯದ ಕುಳಸ್ಥಳಂಗಳ ಬಲ್ಲವರು ನೀವು ಹೇಳಿರೇ (ಅವಚಂ. ೧೪೪-೬೫೯); ಆದಿವಿಡಿದು ಬಂದಾತನೆ ಭಕ್ತ ಅನಾದಿವಿಡಿದು ಬಂದಾತನೆ ಜಂಗಮ ಆದಿಗುರು ಅನಾದಿಶಿಷ್ಯ ಈ ಉಭಯ ಕುಳಸ್ಥಳವ ಬಲ್ಲರೆ ಆತ ಲಿಂಗಸಂಬಂಧಿ (ಬಸವ. ೮೦೩); ಇಂತೀಭಕ್ತಿಯ ಕುಳಸ್ಥಳ [ಪಾಠಾಂ. ಲ] ವನಱಿಯದೆ ಎಲ್ಲರೂ ಎಂದಂತೆ ಎಂದರು ಬಂದಲ್ಲಿ ಬಂದರು (ಮಡಿವಾ. ೬೨-೯೧). [ಕುಳ್$_5$ (= ಕುಲ) + ಸ್ಥಲ]

**ಕುಳಸ್ಥಳ** 'ಕುಳಸ್ಥಲ' ನೋ.

**ಕುಳಾಂತ**(ನಾ). ಕುಳದಿಂದ ಕೊನೆಗೊಳ್ಳುವ ಶಬ್ದ: ಬೆರಲೆರಲ್ಕೊರಲ್ . . . ಮುಂಗೈ ಸರಲುಂ ಲಾಂತಮಿವಂ ಗ್ರಾಮ್ಯರಱಿಯದುಚ್ಚರಿಸುವರ್ ಕುಳಾಂತಭ್ರಮೆಯಿಂ (ಶಮದ. ೨೮). [ಕುಳ್$_4$ + ಅಂತ$_2$]

**ಕುಳಾಂತಕ** 'ಕುಲಾಂತಕ' ನೋ.

**ಕುಳಾಗ್ರಶುದ್ಧಿ** (ನಾ). ಕುಲಮುಖ್ಯನಿಗೆ ಕೊಡಬೇಕಾದ ಸಂಭಾವನೆಯ ವಿನಾಯಿತಿ (?): ಸೆಟ್ಟಿ ನಿವೇದ್ಯಕ್ಕೆ ಬಿಟ್ಟ ಕುಳಾಗ್ರ ಶುದ್ಧಿಯ ಅಂಗಡಿ ಒಂದು ನೆಲೆದೆಱೆಯುಮಂ ಮಾನ್ಯವಾಗಿ ಬಿಟ್ಟರು (ಸೌಇಇ. XX, ೧೧೩-೫೪; 1144). [ಕುಳಾಗ್ರ$_0$ + ಶುದ್ಧಿ]

**ಕುಳಾಗ್ರಿ** (ನಾ). ಒಂದು ಗುಂಪಿನ ಮುಖ್ಯಸ್ಥ, —ಮುಖಂಡ: ಶ್ರೀಮದ್ರಾಜಧಾನಿ ಪಟ್ಟಣಮೆರಮ್ಬುರಗೆಯ ಕುಳಾ[ಗ್ರಿ] ಸೇನಬೋವ ಆಚಣ್ಣ (ಕಇಆ. ೬೩-೧೧-೩; 12ನೆಯ ಶತ). [< ಸಂ. ಕುಲಾಗ್ರಿನ್]

**ಕುಳಾಚಲ** 'ಕುಲಾಚಲ' ನೋ.

**ಕುಳಾಡಿ** (ನಾ). ಮಲ್ಲಯುದ್ಧದಲ್ಲಿ ಒಂದು ಬಗೆಯ ಪಟ್ಟು, —ವರಿಸೆ: ತಿರುಣಿ ಕುಳಾಡಿ [ಪಾಠಾಂ. ಡೆ] ಬಾಹುಗೆಣೆಸಂದ ಸುಬಾಹುಡೆ . . . ಪಟ್ಟಿ ಕತ್ತರಿಗೆಳಿನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಷುವಿ. ೨೬-೧೮). 'ತುಳಾಡಿ' ಪಠಾ. [?]

**ಕುಳಾಪವಾದನ** (ಗು). ಕುಲಕ್ಕೆ ಅಪವಾದ ತರುವಂತಹ: ಸ್ವೈರಿಸದಳವಲ್ಲದಳುರ್ದು ಕುಳಾಪವಾದನದ ನುಡಿಯೆಯ್ತರೆ (ಶಾಂತಿಪು. ೩-೮೦ ವ). [< ಸಂ. ಕುಲಾಪವಾದನಾ]

**ಕುಳಾಯ** 'ಕುಲಾಯ$_1$' ನೋ.

**ಕುಳಿ$_1$** 'ಕುೞಿ$_1$' ನೋ.

**ಕುಳಿ$_2$** 'ಕುೞಿ$_2$' ನೋ.

**-ಕುಳಿ$_3$**, -ಗುಳಿ$_3$ (ಪ್ರ). ಇದು ಇವನ ಸ್ವಭಾವ ಅಥವಾ ಶೀಲ ಎಂಬ ಅರ್ಥಗಳಲ್ಲಿ ಬರುವ ತದ್ಧಿತ ಪ್ರತ್ಯಯ: "ಉಕ ಕುಳಿಯಾಳಿ ಪ್ರತ್ಯಯಮಿಕಮುಂ ಶೀಲಾದಿ ವಿಶ್ರುತಾರ್ಥದೊಳ್" (ಶಮದ. ೨೦೩); ಆಟಕುಳಿ, ಅಂಜುಕುಳಿ, ಓಡುಕುಳಿ (ಭಾಷಾಭೂ. ೧೮೪ ಉದಾ); ಕುಳಿ ಪ್ರತ್ಯಯಕ್ಕೆ – ಪೋರ್ಕುಳಿ, ಓಡುಕುಳಿ, ಹುಡುಕುಳಿ, ಪಾಡುಕುಳಿ (ಶಮದ. ೨೦೩ ಪ್ರಯೋ). **ಗುಳಿ$_3$**: ಒದವುದು ಗುಳಿ ಪ್ರತ್ಯಯಮದು ಪೂರ್ವದ ಬಿಂದುವೆರಸು ಶೀಲಗ್ರಹಣಾರ್ಥದೊಳ್ . . . ಆಟಂಗುಳಿ, ಸಾಲಂಗುಳಿ, ಕುತ್ತಂಗುಳಿ (ಶಮದ. ೨೦೨ ಪ್ರಯೋ).

**ಕುಳಿಕ** 'ಕುಲಿಕ' ನೋ.

**ಕುಳಿಕಾಹಿ** (ನಾ). ಕುಳಿಕನೆಂಬ ಸರ್ಪ: ಬಱಸಿಡಿಲಬಳಗದಂತೆ ಕುಳಿಕಾಹಿಯ ಕಡುಪಿನಂತೆ (ಜಗವಿ. ೧೫-೧೫ ವ); ಅಂತು ಪೊರೆಗಳೆದ ಕುಳಿಕಾಹಿಯಂತಂತಃಶೃಂಖಳಂ ಖಳಂ ಕೆಳರ್ದು (ವರ್ಧಪು. ೮-೭೦ ವ). [ಕುಳಿಕ (= ಕುಲಿಕ) + ಅಹಿ]

**ಕುಳಿಕೆ$_1$**, ಕುಣಿಕೆ$_2$ (ನಾ). ೧. ಜೀರುಗುಣಿಕೆ; ಗಂಟು; ಸರಗಂಟು; ದಾರದ ಮಲಕು: ಬಳೆದ ನಿತಂಬದೆ ಕಾಂಚೀಕಳಾಪಮಂ ಕಟ್ಟಲಣಮೆ ನೆಱೆಯದಿದೆಂದಗ್ಗಳಿಸಿ ಕು[ಪಾಠಾಂ. ಸೀರ್ಕು]ಳಿಕೆಗಳಿನೀಂ ಕಣ್ಗೊಳಿಸಿದು[ದೋ] ಸುಭಗೆಯಾದ ಸುದತಿಯ ಗರ್ಭಂ (ಶಂಪಭಾ. ೧-೧೪೩); ಅಂಗವೆ ಸಜ್ಜೆ ಆಚಾರವೆ ಶಿವದಾರ ತ್ರಿಕರಣಶುದ್ಧವಾದುದೆ ಕುಳಿಕೆ ಈ ತ್ರಿವಿಧದ ಗುಣವನಱಿಯಬೇಕು (ಚಿನ್ನವ. ೬೩-೩); ಅವನು ಸುಮ್ಮನೆ ಕುಳಿಕೆ ಬಿಚ್ಚಿದ ಕರುವಿನಂತೆ ತಿರುಗುವುದು ಅವರಿಗೆ ಅಪ್ರಿಯ ವಿಷಯವಾಗಿತ್ತು (ಮುಗಿಮು. ೧೧). **ಕುಣಿಕೆ$_2$**: ೧. ಆಱುಮಣಿಗೆ ದಾರವನೇಱಿಸಿ ಕುಣಿಕೆಗೆ ಮಣಿ ಇಲ್ಲದೆ ಅಱಸುತ್ತಿದ್ದರಯ್ಯಾ ತತ್ತ್ವಜ್ಞರು (ಮದೇವು. ೨೭೧-೬); ಜಗದ್ವಂದ್ಯರೆಂದು ನುಡಿದು ನಡೆವರು ನೋಡಾ ಭವಬಂಧನದ ಕುಣಿಕೆಯ ಕಳೆಯಲಱಿಯರು ನೋಡಾ (ಅವಚಂ.೧೦೬-೪೮೩); ರನ್ನಮಂ ಕೆಪ್ಪಿನ ಕುಣಿಕೆಗಿಕ್ಕಿದಂತಾಯಿತು (ವಾಗೀರ. ೬೬-೧೦); ದೈವವಿಕ್ಕಿದ ಕೊರಳಕಣ್ಣಿಯ ಕುಣಿಕೆ ಯಾರಲಿ ಹಱಿವುದೈ (ಕುವ್ಯಾಅ. ೧೪-೪); ಕೊರಳ ದಾವಣಿಗೆ ಕುಣಿಕೆ ಬೇಕು (ಅರಳು. ೨೯೨-೭). ೨. (ಅಲಂ) ವಿಶೇಷ ರೀತಿಯ ಪವಣಿಕೆ, —ಬಂಧ: ರಸಮಂ ಭಾವಮುಮಂ ಕಾಳಸಮಂ ಕುಣಿಕೆಯುಮನಱಿದು ಕವಿಮಾರ್ಗದೊಳಂ (ಗದಾಯು. ೧-೩೯); ಮೇಲೆ ಕಾರ್ಯದ ಕುಣಿಕೆಯನು ತಾ ಬಲ್ಲ ನಾರಾಯಣನು (ನಿಭಾಗ. ೪-೩-೭). [ದೇ. ‖ ತಮಿ. ಕುಟ್ಕೈಚ್ಚು, ಕುಳಚ್ಚು; ತುಳು. ಕೊಲಿಕೆ, ಕೊಳಿಕೆ; ತೆಲು. ಕೊಲಿಕೆ, ಕೊಣಮು]

**ಕುಳಿಕೆ$_2$** 'ಕುಣಿಕೆ$_1$' ನೋ.

**ಕುಳಿಕೋರಗ** (ನಾ). = ಕುಳಿಕಾಹಿ: ಕೊನ್ತಂ ಕುಳಿಕೋರಗನ ಮುಖಾನ್ತಂ (ಬೊಂಕಶಾ. ೧೯೩೮, ಇಂಡಿ. ೫೮-೭೬; 941). [ಕುಳಿಕ + ಉರಗ]

**ಕುಳಿಚು** (ನಾ). ಒಂದು ಜಾತಿಯ ಮೀನು: ಕುಳಿಚು [ಪಾಠಾಂ. ಕೊಳಲಿ, ಕೊಳಚಿ]ಸೂಜಿಗನಗಲು ಹೆಲ್ಲರಂ ಬಂಕುರುಂ ಹಳಲೆ ಕಪ್ಪೆಗಳೊಱಲೆ . . . ಎಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಚಕಾ. ೫-೪೬). [?]

**ಕುೞಿತಟ್ಟೆ** (ನಾ). "ರಸ ಕೂಡಿಕೊಳ್ಳಲು ಅನುಕೂಲಿಸುವಂತೆ ಮಧ್ಯದಲ್ಲಿ ಕುೞಿಯಿರುವ ತಟ್ಟೆ" (Well-dish. ಇಂಕನಿ).
[ಕುೞಿ$_2$ (< ಕುೞ್$_2$) + ತಟ್ಟೆ$_1$]

**ಕುೞಿಬೀಳು, ಗುಳಿಬೀಳು** (ಕ್ರಿ). ತಗ್ಗು ಬೀಳು; ಗುಣಿಯಾಗು: ಸಾಮಾನ್ಯವಾಗಿ, ಸುಪ್ತಗಂಗೆಯ ಮೇಲಣ ಕುೞಿಬಿದ್ದ ಹಿಮದ ಪ್ರಕಾಶವೇ ಅಪಾಯದ ಮುನ್ಸೂಚನೆ ಕೊಡುತ್ತಿತ್ತು (ಏಳಜೇ. ೯೩). **ಗುಳಿಬೀಳು**: ನಗುವಾಗ ಎರಡೂ ಗಲ್ಲಗಳಲ್ಲಿ ಗುೞಿಬಿದ್ದು ಅವಳ ಚೆಲುವಿಗೆ ಇನ್ನೂ ಕಳೆ ಕಟ್ಟುತ್ತಿತ್ತು (ತೇಮೋಡ. ೧೯).
[ಕುೞಿ$_1$ (< ಕುೞ್$_1$) + ಬೀೞು$_1$ (< ಬೀೞ್$_1$)]

**ಕುೞಿಮಾವು** (ನಾ). ಒಂದು ಜಾತಿಯ ಮರ: ಬೆಟಲೆರಡರ ಬೇರಂ ಮೇಣ್ ಕುೞಿ [ಪಾಠಾಂ.ಗಳ]ಮಾವು ಸಮುದ್ರದ ಫಲಮಿಲುಮಿಚ್ಚೆಯ ಪಣ್ಪೞಿಯಿಂ ಪಾನಮನಾಗಿಸೆ ಕಳೆಗುಂ ಜಂಗಮವಿಷಂಗಳಂ (ಖಮುದ. ೧೩-೧೪೬). 'ಕೊಳಮಾವು' ಪರಾ. [ಕುೞಿ$_0$ + ಮಾವು]

**ಕುೞಿಮೆ,** ಕುಳುಮೆ (ನಾ). ಬಸಿರು; ಗರ್ಭ: ನಿನ್ನ ಹೊಡೆತದ ಬಾಧೆಯಿಂದ ನನ್ನ ಚೊಚ್ಚಲು ಕುೞಿಮೆಪ್ಪೆ ಇಳಿದುಹೋಯಿತು (ನಡೆದಾ. II, 1138). **ಕುಳುಮೆ.** 'ಕುಳುಮೆಕಾರ್ತಿ' ಪರಾ. [?]

**ಕುೞಿಯ** (ನಾ). ಎಗ್ಗ; ಮೂಢ: "ನುಡಿಯಲ್ಕೇೞಲ್ಕಣಂ ಪಾಂಗಱಿಯದ ಕುೞಿಯಂ ಪೇೞ್ವುದಾನೇಕಮೂಢಂ" (ವಸ್ತುಕೋ. ೭೪-೪೦); ತಪ್ಪಂ ಮಱಸಿ ಪುಸಿನುಡಿವ ಜಜ್ಜುಚರ ತೇಜನಂ ಕಂಡಱಿಯದಂತು ಕುೞಿಯುರುಮೊಳರೇ (ಕಾವ್ಯಾವ. ೩೯೩); ಕುೞಿಯಂ ಮಾೞಿಗೆ ಜಾೞಿಗೆ ತೞಿಗೆಯೊೞಿರ್ಬೞಸು ಬೞಸಿಗಂ ಮೊೞೆ ತಾೞಂ (ಶಮುದ. ೨೬). [?]

**ಕುೞಿಯೊಗು** (ಕ್ರಿ). (?): "ಆಗಂತುಕೇಷು = ಕುೞಿಯೊಕ್ಕು ಕೈಕೊಂಡ ಮಗನುಮೆಂಬಿವರೊೞ್ (ಒಂದಾನೊಂದು ಸಂಬಂಧದಿಂದ ಬಂದವನು)" (ನೀತಿವಾ. ೨೩-೮೩). [ಕುೞಿ$_0$ (< ಕುಡಿ) + ಪೊಗು (< ಪುಗು)]

**ಕುೞಿರ್$_1$** (ಕ್ರಿ). ತಣ್ಣಗಿರು; ತಂಪಾಗಿರು: "ಕುೞಿರ್ ಋಜುಭೇದೇ (ಬಗ್ಗು, ಕುೞಿತುಕೊೞ್), ಹೈಮೇ ಚ (ಶೀತಳವಾಗು)" (ಶಮುಧಾ); ಕುೞಿರ್ವ ತಿಳಿನೀರನುಡುಗದೆ ತಳಿ ತಳಿರಂ ಪಾಸು (ಆದಿಪು. ೨-೧೪); ಕುೞಿರ್ವಲರ್ದಲರೆಸಳ ಪಸೆಯ ಮೇಲೊಱಗಿರ್ದ್ದಂ (ಕಾದಂಪೂ. ೯೦೫); ಪೂವಿನಂಬಿನ ಕೋಳ್ಗಂ ಕುೞಿರ್ವಾಲಿನೀರ್ಗಮಲರ್ವಾಸಿಂಗಂ ಕುೞಿರ್ಕೋಟ್ವ ನಂದನಕಂ (ಕಾವ್ಯಾವ. ೭೮೩); ಕುೞಿರ್ವ್ವ ಸರೋಜ ಷಂಡ ಮಲರ್ದ್ದೊರ್ಪ್ಪುವ ಮಲ್ಲಿಗೆ (ಎಕ. XI, ಚಿತ್ರದು. ೨೩-೨೭; 1205); ಕುೞಿರ್ವ್ವ ಮಂಜಿನ ಪನಿಗಳಂ (ಚೆಬಪು. ೮-೫); ಮೆಯ್ಯ್ ಸೆಡಪಿ ನೆತ್ತರ್ ಕುೞಿರ್ಪ ಕಟ್ಟಿಸಕಕ್ಕೆ ನೀನ್ ಬೆಂಕೆಯೆರ್ದೆಯಯ್ (ಅಂತಿಗೊ. ೭೩). ೨. ತಂಪಾಗು; ತಣ್ಣಗಾಗು: ಕೈಸೋಂಕಿನೊೞ್ ಕಣ್ಣುೞಿರೆ ಪೊೞೆವ ಚಂದು ನಿಂದಿರ್ಕುಮಿಾಗೞ್ (ಚಿಕವಿ. ೬-೨೦೦).
[ದೇ. ॥ ತಮಿ. ಮಲ. ಕುೞಿರ್; ತುಳು. ಚೌೞಿ; ಕೊಡ. ಕುೞಿ]

**ಕುೞಿರ್$_2$** 'ಕುಳ್ಳಿರ್' ನೋ.

**ಕುೞಿರ್$_3$,** ಕುಳಿರು (ನಾ). ೧. ಚಳಿ; ತಂಪು; ಶೈತ್ಯ: "ಕುೞಿರೆನೆ ಶೈತ್ಯಂ" (ರನ್ನಕಂ. ೧); ಚಳಿಗಳ್ಕಿ ಭೋಗಿಗಳ್ ಕೂರ್ತೆಳವೆಣ್ಗಳ ತುಂಗಕುಚಮನಾಶ್ರಯಿಸಿ ತದಾಕಳಿತೋಷ್ಣದಿಂದೆ ಪರ್ವಿದ ಕುೞಿರಂ ಕಳೆವರ್ (ಉದ್ಭಟ. ೪-೩೯); ಮೃಗಪ್ರತತಿ ಕುೞಿರಂ ಮಾಣ್ದು ಪೞಚಲಮ್ಮದು (ನಂದಿಮಾ. ೨-೨೨). ೨. ಹಿಮ; ಮಂಜು: ಘರ್ಮಕೆ ಕುೞಿರ್ಕೞಿರ್ಗತಿ ಘರ್ಮಮನೀವ (ಉದ್ಭಟ. ೯-೩೬); ಭಾಜಹರನೆಸೆದಂ ಕುೞಿರಾವರಿಸಿದ ಪರ್ವತಂಬೊಲುಜಿತ ರಂಜಿಸುತಂ (ವೀರವಿ. ೩-೬೩); ಮುಸುಱಿದ ಕುೞಿರೊೞ್ ದೆಸೆಯಾಗಸಮಿೞೆ ಬೆಟ್ಟಡವಿಯೆಂಬಿವೆಂತಾನುಂ ಕಾಣಿಸಲಾರ್ತುವಿಲ್ಲಂ (ಶಬ್ದಾನು. ೬೫ ಪ್ರಯೋ). **ಕುಳಿರು**: ೧. ಬಿಸಿಲಿನಿಂದ ಅವರು ತ್ರಸ್ತರಾಗಿದ್ದಿಲ್ಲ ಚಳಿಗಾಲದ ಕುಳಿರಿನಿಂದ ಮುದುಡಿಕೊಂಡಿದ್ದಿಲ್ಲ (ರಕ್ತಧ್ವ. ೨೦೫); ಕುಳಿರಿನಿಂದ ಮೈಕುಟುಕಿದಾಗಲೇ ಅನಾರೋಗ್ಯದ ಅವತಾರವಾಗುವುದು (ಬಾಬಲ. ೭೫). ೨. "ಕುಳಿರು ಹಿಮ" (ಕಶರ. ೨೫); ಬಾಲೇಂದುಮೌಳಿಯ ತಪದತೀವ್ರಾಗ್ನಿಯ ಜ್ವಾಲೆಯೊೞ್ ಕುದಿಗೊಂಡ ಕುೞಿರು ಮೇಲುಷ್ಣೋದಕ ದ್ರೋಣಿಗಳಾಗಿರ್ದ ಲೀಲೆಯನೇನ ಬಣ್ಣಿಪೆನು (ಮೋಹತ. ೬-೫೧). 'ಕುಳಿರುವೆಟ್ಟು' ಪರಾ. [< ಕುೞಿರ್$_1$]

**ಕುೞಿರ್$_4$** (ನಾ). ಒಂದು ಅನುಕರಣ ಶಬ್ದ (?): ಬರವಂ ಬಯಸುತೆ ಕುೞಿರೆಂಬ ರವಂ ಮಿಗೆ ಪತ್ತೆಸಾರುತಿಂತಿವೆ ಚಕ್ರಂ ಅರುಣೋದಯಮಂ ಸೂಚಿಸುತರುಣೋದಯಮಿತ್ರಲಾಗುತಿದೆ ಗಿರಿರಾಜ (ಗಿರಿಕ. ೪-೧೬೧). [?]

**ಕುೞಿರಿಸು$_1$** (ಕ್ರಿ). ಚಳಿಯನ್ನುಂಟುಮಾಡು; ಶೀತಬಾಧೆಯನ್ನುಂಟುಮಾಡು: ಎನ್ನಭಿಮುಖದೊಳಡ್ಡಮೆಳ್ದೆನ್ನ ಕಾಲ್ ವಿಸುಕದಂತಿರೆ ತರುಬಿ ಕುೞಿರಿಸಿದ ಪನಿಯಿರದ ಮಂಚಿನೊಟ್ಟಿಲದೊಂದು (ಸಂಸಪ ೩೨-೧೯೦).
[ಕುೞಿರ್$_1$ + -ಇಸು$_3$]

**ಕುೞಿರಿಸು$_2$** 'ಕುಳ್ಳಿರಿಸು' ನೋ.

**ಕುೞಿರು** 'ಕುಳಿರ್$_3$' ನೋ.

**ಕುೞಿರುಕೋಳು** 'ಕುೞಿರ್ಕೋಡು' ನೋ.

**ಕುೞಿರುವೆಟ್ಟು** 'ಕುೞಿರ್ವೆಟ್ಟು' ನೋ.

**ಕುೞಿರೆಲರ್** (ನಾ). ತಣ್ಣನೆಯ ಗಾಳಿ; ಶೀತಮಾರುತ: ಕುೞಿರೆಲರಾಲವಟ್ಟಲೆಗಳಿಂ (ಕಂನವಿ. ೯-೬); ತಳಿರೊಳು ಕುೞಿರೆಲರಾಡಿದುದು (ಸಾಸಮಾ. ೯೬). [ಕುೞಿರ್$_3$ + ಎಲರ್]

**ಕುೞಿರ್ಕಾಂತಿ** (ನಾ). ತಂಪಾದ ಕಾಂತಿ; ಶೀತಲವಾದ ಹೊಳಪು: ತಗುೞಿದುದು ಮುಗಿಲಿನಂಚಿಗೆ ಬೆಳ್ಳಿನೀರ್, ಶಶಿಯ ಚಳಿಗರ್ದಿಗಳ ಕುೞಿರ್ಕಾಂತಿ (ಶ್ರೀರಾಮಾ. ೪೨೦-೭). [ಕುೞಿರ್$_3$ + ಕಾಂತಿ]

**ಕುೞಿರ್ಕೂಟ** (ನಾ). ಹಿಮದ ರಾಶಿ; ಮಂಜಿನ ಸಮೂಹ: ಕರ್ಬುರೇಂದ್ರಂ ಖಿನ್ನಮುಖಿಯಾಗಿ ಕಂಡನಾ ನೋಟಮಂ, ಬರಬಡಿದ ತೋಟಮಂ, ಬೇಟದ ಬಿಸಿಗೆ ಕುೞಿರ್ಕೂಟಮಂ (ಶ್ರೀರಾಮಾ. ೪೮೯-೯೧).
[ಕುೞಿರ್$_3$ + ಕೂಟ]

**ಕುೞಿರ್ಕೆ** (ನಾ). ಕುಳಿತುಕೊಳ್ಳುವಿಕೆ: "ಪಿಠತೀತಿ ಕುೞಿತಪನೆಂಬುದು ಪಿಠಃ = ಕುೞಿರ್ಕ್ಕೆ" (ಕಾಶಕ್ಕೃ. ೨೨).
[ಕುೞಿರ್$_2$ (< ಕುಳ್ಳಿರ್) + -ಕೆ]

**ಕುೞಿರ್ಕೊಳ್** 'ಕುೞಿಗೊಳ್' ನೋ.

**ಕುೞಿರ್ಕೊಳಿಸು** 'ಕುೞಿಗೊಳಿಸು' ನೋ.

**ಕುೞಿರ್ಕೋಡಿಸು** (ಕ್ರಿ). ಚಳಿಯಾಗುವಂತೆ ಮಾಡು: ಶೀತಗೊಳಿಸು: ಕಾಯ್ದುರಿವ ಭುವನಮಂ ವಿಜಯ ಯಶಶ್ಚಂದನರಸದಿಂದಂ ತೊಳೆದಿಂದು ಮುರಧ್ವಂಸಿ ಕುೞಿರ್ಕೋಡಿಸಿದೈ (ಜಗವಿ. ೬-೮೧); ಸಕಳಾವನಿಯಂ ಮುಸುಕಿ ಕುೞಿರ್ಕೋಡಿಸಿದುದು (ವರ್ಧಪು. ೮-೭೬).
[ಕುೞಿರ್ಕೋಡು + -ಇಸು$_3$]

**ಕುೞಿರ್ಕೋಡು,** ಕುಳಿರುಕೋಳು, ಕುಳಿರ್ಕೋಳು (ಕ್ರಿ). ೧. ಚಳಿಯಾಗು; ಶೀತಲವಾಗು: ಕುೞಿರ್ಕೋಟ್ಪ ಚಂದನರಸಮನೆರ್ದೆಯೊಳಂ ಮೆಯ್ಯೊಳಂ ತಳ್ಕಿಱಿದು (ಪಂಪಭಾ. ೫-೬೮); ಹೈಮದಂತೆ ಕುೞಿರ್ಕೋಡುವ ತದ್ರಸದಿಂ . . . ಅಂಗಚರ್ಚೆಯನೆಡೆವಿಡದೊಡರ್ಚೆಯುಂ (ಕಾದಂಪೂ. ೮೫೫); ಬಳಸಿಗಮೊಪ್ಪಿದುವು ಜಿನುಗಿ ಗಳಪಿ ಕುೞಿರ್ಕೋಡಿ ಕಳ್ತಲಿಸಿ ಮಲೆದುದ್ದಂಡಳೆದು ಫಲವಾಗಿ ಪರಿವಡೆದಳಿಗಿಳಿ ಮುಡುಗಿಡು ಕರಿಗಿರಿ ಚೂತಂಗೀತಂ (ಗಿರಿಕ. ೨-೨೭);

**೨.** ತಣಿ ; ಸಂತುಷ್ಟ ವಾಗು ; ಹಿಗ್ಗು : ಕಾರಮುಗಿಲ್ವನಿಯಂ ಮನಂ ಕುಳಿರ್ಕೋಡುವಿನಂ ಕರ್ದುಂಕಿ (ಪಂರಾಮಾ. ೬-೧೪೭) ; ಮಹಾವಿಭವ ದಿನಿರ್ಪರೆರ್ದೆ ಕುಳಿರ್ಕೋಡುವಿನಂ (ಧರ್ಮಾಮೃ. ೮-೧೦೯) ; ಮಗನ ಮುದ್ದುತನವಂ ಬಸವರಾಜಂ ಕಂಡು ಮನಂ ತಣಿದು ಕುಳಿರ್ಕೋಡಿ ಹಾರೈಸಿ (ಬಸರ. ೧೦-೧೨೨) ; ಸಾಕೆಯ ಸಖರು ಮುಂತಾದವರೆಲ್ಲ ಕುಳಿರ್ಕೋಡಿದರು ನೋಡಿ ಜಿನನಾ (ಭರಚ. ೭೭-೯೦). **೩.** ತಣಿಸು ; ತಂಪುಗೊಳಿಸು ; ಉಲ್ಲಾಸಗೊಳಿಸು : ಶೀತಮಾರುತ ಬಂದು ಸತಿಯರೆದೆಯ ಪೊಕ್ಕು ಪೋತು ಕುಳಿರ್ಕೋಡಿದನು (ಅನಂಚ. ೯-೧೨೬). **ಕುಳಿರುಕೋಳು** : ೧. ಮುಳುಗಿದನು ಮರಳಿ ಮೇಲೇಳಗೊಡದಿಹ ಕಡಲ ಕುಳಿರುಕೋಳುವ ತಣ್ಣನೆಯ ತಳಾತಳತಳಕ್ಕೆ (ಶ್ರೀರಾಮಾ. ೫೯೬-೩೩೦). **ಕುಳಿರ್ಕೋೞು** : ೨. ಏಳುತತಿಗಳ ಕಾಣುತಾಳುತಲಿ ಸಂತಸದೊಳೇಳು ತಲೆಗಳ ಕುಳಿರ್ಕೋೞುತಲಿ ಬಿರ್ದನಿಂದೇಳುತಲೆ . . . ಮೆಚ್ಚಿಯುತಿರಲ್ (ಭಾವಚಿಂ. ೯-೪೧). [ಕುಳಿರ್$_3$ + ಕೋಡು$_1$]

**ಕುಳಿರ್ಕೋೞು** 'ಕುಳಿರ್ಕೋಡು' ನೋ.

**ಕುಳಿರ್ಗದಿರ್**, ಕುಳಿರ್ಗದಿರು (ನಾ). ತಂಪಾದ ಕಿರಣ; ಚಂದ್ರನ ಕಿರಣ; ಬೆಳುದಿಂಗಳು. 'ಕುಳಿರ್ಗದಿರ' ಪರಾ. **ಕುಳಿರ್ಗದಿರು** : ಕುಳಿರ್ಗದಿರುಗಳ ಪಳಿವ ಪಳುಕಿನ ತಳತಳಿಪ ಭಿತ್ತಿಗಳೊಳ್ (ಸಾಳ್ವಭಾ. ೪-೩೯). [ಕುಳಿರ್$_3$ + ಕದಿರ್$_2$]

**ಕುಳಿರ್ಗದಿರ** (ನಾ). ತಂಪಾದ ಕಿರಣಗಳುಳ್ಳವನು; ಶೀತಕಿರಣ; ಚಂದ್ರ : ಕುಂದದ ಕುಳಿರ್ಗದಿರಂ . . . ಎಂಬಂದದಿನತಿ ವಿಭ್ರಾಜಿಸಿದಂ ರಾಜಪ್ರಭ ರಾಜಿಸುತಂ (ಜಯಕಾ. ೨-೬೯).
[ಕುಳಿರ್ಗದಿರ್ + -ಅ$_7$]

**ಕುಳಿರ್ಗದಿರು** 'ಕುಳಿರ್ಗದಿರ್' ನೋ.

**ಕುಳಿರ್ಗದಿರ್ವಕ್ಕಿ** (ನಾ). ಚಂದ್ರಕಿರಣವನ್ನೇ ಆಹಾರವಾಗುಳ್ಳ ಹಕ್ಕಿ; ಚಕೋರಪಕ್ಷಿ: ಕುಳಿರ್ಗದಿರ್ವಕ್ಕಿಯು ಕುಸುಮಾಹಾರಿಯ ಪೊಳೆವೆಳವಿನ ಕರಿಯ ಹಕ್ಕಿಯವೋಲ್ ಲಲಿತಾಂಗಿಯ ಕಣ್ಗಳ್ ನಲಿದುವು ಭೂವರಕುಲಚಂದ್ರಮನ (ಜಯಕಾ. ೫-೫೮).
[ಕುಳಿರ್ಗದಿರ್ + ಪಕ್ಕಿ]

**ಕುಳಿರ್ಗಯ್** 'ಕುಳಿರ್ಗೆಯ್' ನೋ.

**ಕುಳಿರ್ಗಯ್ಯ** 'ಕುಳಿರ್ಗೆಯ್ಯ' ನೋ.

**ಕುಳಿರ್ಗಯ್ಯಹಚ್ಚ** (ನಾ). ಚಂದ್ರನನ್ನು (ತಲೆಯಲ್ಲಿ) ಆಭರಣವಾಗಿ ಧರಿಸಿದವನು ; ಶಶಿಭೂಷಣ ; ಶಿವ : ಕುಳಿರ್ಗಯ್ಯಹಚ್ಚನ ಮೇಲೆ ನೋವುತಂ ಪ್ರಭುದೇವ ಬಸವನೊಳು ಮುಗುಳ್ದಂದನು. (ಪ್ರಭುಪು. ೮-೯).
[ಕುಳಿರ್ಗಯ್ಯ (< ಕುಳಿರ್ಗೆಯ್ಯ) + ಹಚ್ಚ (< ಪಚ್ಚ$_3$)]

**ಕುಳಿರ್ಗಲ್**, ಕುಳಿರ್ಗಲ್ಲು (ನಾ). ತಂಪಾದ ಕಲ್ಲು; ಚಂದ್ರಕಾಂತ ಶಿಲೆ : "ಚಂದ್ರಗಲ್ ಕುಳಿರ್ಗಲ್ಲೆನಲೊಸಗರ್ಗಲ್" (ಚತುನಿ. ೧೧೦) ; ಕುಳಿರ್ಗಲ್ಲ ಪುತ್ಥಳಿಯಂತೆ ಕರಗುತ (ಪದ್ಮರಾ. ೭-೩೧) ; ಕುಳಿರ್ಗಲ್ಲ ಭದ್ರಭವನಂಗಳಾ ಶೃಂಗಾರವನದೊಳತಿ ಶೋಭಿಸುತಿರೆ (ಸೌಂದಪು. ೧೦-೧೬). **ಕುಳಿರ್ಗಲ್ಲು** : ಕುಳಿರ್ಗಲ್ಲಿನ ಸುಣ್ಣಿಳಸದ ಮೇಲುಜದ ಳವಡಿಸಿದ ಕೆಂಬರಲಿನ ಪೊಳೆವು (ಉದ್ಭದೇ. ೨-೪೦) ; ಅಂಗನೆಯರ ಪಾದದರುಣ ಮರೀಚಿ ಬೆಡಂಗುವಡೆದ ಕುಳಿರ್ಗಲ್ಲಾ (ವರ್ಧಚ. ೧-೩೨).
[ಕುಳಿರ್$_3$ + ಕಲ್$_3$]

**ಕುಳಿರ್ಗಲ್ಲಜಿ** (ನಾ). = ಕುಳಿರ್ಗಲ್ : ಏಟುಂಜವ್ವನೆಯರಾದ ಗೋಪಿಯರ್ಕುಳಿರ್ಗಲ್ಲಜಿಯ ಮೇಲೆ (ಪದ್ಮರಾ. ೮-೧೫).
[ಕುಳಿರ್ಗಲ್ + ಅಜಿ$_4$]

**ಕುಳಿರ್ಗಲ್ಲು** 'ಕುಳಿರ್ಗಲ್' ನೋ.

**ಕುಳಿರ್ಗಾಳಿ** (ನಾ). ತಣ್ಣನೆಯ ಗಾಳಿ ; ಶೀತಮಾರುತ : ಕುಳಿರ್ಗಾಳಿ ಬೆಳರ್ಗಂಪು (ಶಮದ. ೪೩ ಪ್ರಯೋ) ; ತಡೆತಡೆದುಂ ಕುಳಿರ್ಗಾಳಿ ಸುಜಿಯಲ್ಕೊಡಂಗೆ (ರಾಮಾಶ್ವ. ೨೬-೩೦). [ಕುಳಿರ್$_3$ + ಗಾಳಿ$_1$]

**ಕುಳಿರ್ಗೆಯ್**, ಕುಳಿರ್ಗಯ್ (ನಾ). ತಂಪಾದ ಕಿರಣ ; ಚಂದ್ರ ಕಿರಣ. 'ಕುಳಿರ್ಗೆಯ್ಯ' ಪರಾ. **ಕುಳಿರ್ಗಯ್**. 'ಕುಳಿರ್ಗಯ್ಯ ಹಚ್ಚ' ಪರಾ. [ಕುಳಿರ್$_3$ + ಕೆಯ್$_2$]

**ಕುಳಿರ್ಗೆಯ್ಯ**, ಕುಳಿರ್ಗಯ್ಯ (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : "ಚಂದ್ರ" (ಚತುನಿ. ೬. ೧-೫೫). **ಕುಳಿರ್ಗಯ್ಯ** : 'ಕುಳಿರ್ಗಯ್ಯಹಚ್ಚ' ಪರಾ. [ಕುಳಿರ್ಗೆಯ್ + -ಅ$_7$]

**ಕುಳಿರ್ಗೊಳ್**, ಕುಳಿರ್ಕೊಳ್ (ಕ್ರಿ). ೧. ತಂಪು ಹಿಡಿ ; ತಣ್ಣಗಿರು : ಮಳೆಯಿಂದು ಹೆಚ್ಚದೆ ಗ್ರೀಷ್ಮವೆಂದಳಿಯದೆ ಜಲಚರಗಳಿಗಿಂಬುಗೊಡದೆ ಥಳಥಳಿಸುತ ಕನ್ನಡಿಯಂತೆ ಕುಳಿರ್ಗೊಂಡಿಹುದಾ ಕೊಳನು (ನಾಗಕು. ೧-೩೨). **೨.** ಸಂತೋಷಪಡು ; ಉಲ್ಲಾಸವನ್ನು ಪಡೆ ; ತೃಪ್ತಿ ಹೊಂದು. 'ಕುಳಿರ್ಗೊಳಿಸು' ಪರಾ. **ಕುಳಿರ್ಕೊಳ್** : ೧. ಜಾಸಜಿ ತಪ್ತಮಾತಪದಿನೆಂದು ಕುಳಿರ್ಕೊಳುತಿರ್ಪ ಪಾಂಡುಪದ್ಮಾಸನಮುಂ ಪದಕ್ಕೆ ಧವಳಾತಪವಾರಣಂ ಶಿರಕ್ಕರಣ್ಯಾನಿತದೇವತಾಪ್ರತತಿ ತಾಂ ಸಮುಕಟ್ಟಿದುದು (ಚಂದ್ರಪು. ೧೪-೧೬). **೨.** ತತ್ತ್ವಚಿಂತೆಕ್ಕೆ ಮಿಗೆ ಹೃದಯಂ ಕುಳಿರ್ಕೊಳುತಮಿರ್ದುದಿದೇಂ ಧೃತಿಯೋ ಮೃಗೇಂದ್ರನಾ (ವರ್ಧಪು. ೧೨-೩೫).
[ಕುಳಿರ್$_3$ + ಕೊಳ್$_1$]

**ಕುಳಿರ್ಗೊಳ** (ನಾ). ತಂಪಾದ ಕೊಳ; ತಣ್ಣಗಿರುವ ನೀರನ್ನುಳ್ಳ ಸರೋವರ : ಮುಗಮುಗಿಪಲರ್ಗಳ ಕುಳಿರ್ಗೊಳನಿಂ . . . ಆ ಬನವೆಸೆಗುಂ (ಉದ್ಭದೇ. ೨-೩೦). [ಕುಳಿರ್$_3$ + ಕೊಳ$_2$]

**ಕುಳಿರ್ಗೊಳಿಸು**, ಕುಳಿರ್ಕೊಳಿಸು (ಕ್ರಿ). ೧. ತಣ್ಣಗೆ ಮಾಡು; ಶೈತ್ಯಗೊಳಿಸು. **೨.** ಸಂತಸವುಂಟುಮಾಡು; ತೃಪ್ತಿಪಡಿಸು : ಪೊಳೆವ ಮಣಿಕಿರೀಟಂ ಭೂರಿತೇಜೋಲಲಾಟಂ ಕುಳಿರ್ಗೊಳಿಸುವನೋಟಂ ಕೊಂಕಿದೊಳ್ಪುರ್ಬಿನಾಟಂ (ಚಿಕವಿ. ೩-೮೭). **ಕುಳಿರ್ಕೊಳಿಸು.** ೧, ೨ : ನೆನೆದರುಮಂ ಕುಳಿರ್ಕೊಳಿಪ ಪೂಗೊಳನಂ ಸೆಜಿಗೆಯ್ದು ನಲ್ಲಳಂ (ವರ್ಧಪು. ೪-೭೪). [ಕುಳಿರ್ಗೊಳ್ + - ಇಸು$_3$]

**ಕುಳಿರ್ಚಳಿ** (ನಾ). ಕೊರೆಯುವ ಚಳಿ; ಅತಿ ಶೀತ: ಭೀತಿ ತಾಂ ಛಾಯೆಛಾಯೆಗಳಾಗಿ ರಾಹುವೊಲಲೆದತ್ತು ಕುಳಿರ್ಚಳಿಗಳಂ ಪುಯ್ದು (ಶ್ರೀರಾಮಾ. ೨೬೪-೩೭). [ಕುಳಿರ್$_1$ + ಚಳಿ$_2$]

**ಕುಳಿರ್ದಿಂಗಳ್** (ನಾ). ೧. ತಣ್ಣಗಿರುವ ತಿಂಗಳು; ಶೀತಲ ಚಂದ್ರ ; **೨.** ತಣ್ಣಗಿನ ಬೆಳ್ದಿಂಗಳು : ನೇಲ್ದು ಕಟಿಯಿಂ ಖಣಿಲ್ ಖಣಿಲೆಂದು ಕರ್ಕಶಸ್ವನಂಗೆಯ್ದುದಾಭೀಳದೀರ್ಘಖಡ್ಗಂ, ಕಡಿವೋಲ್ ಕುಳಿರ್ದಿಂಗಳಾ ಚಳಿಮೌನವಂ (ಶ್ರೀರಾಮಾ. ೪೬೪-೫೦೯).
[ಕುಳಿರ್$_1$ + ತಿಂಗಳ್]

**ಕುಳಿರ್ನೋಟ** (ನಾ). ತಂಪನ್ನು ಬೀರುವ ನೋಟ : ಕರುಣಾಮೃತಾಬ್ಧಿ ಕಲ್ಲೋಲಂಗಳಂ ಪೋಲ್ವ ಕುಳಿರ್ನೋಟವಂ (ಚಿಕವಂ. ೧೧೯).
[ಕುಳಿರ್$_1$ + ನೋಟ]

**ಕುಳಿರ್ಪನಿ** 'ಕುಳಿರ್ವನಿ' ನೋ.

**ಕುಳಿರ್ಪಾಱು** (ಕ್ರಿ). ಚಳಿ ಹಾರಿಹೋಗು ; ಶೀತ ಮಾಯವಾಗು : ಅಳ್ಕಿರ್ದ ಪವ್ವನೆ ಪಾಱಿ ಕುಳಿರ್ಪಾಱಿ (ಜಗವಿ ೧೭-೬೧).
[ಕುಳಿರ್$_3$ + ಪಾಱು$_1$]

**ಕುಳಿರ್ಮಸಗು** (ಕ್ರಿ). ತಂಪು ಉಂಟಾಗು ; ಶೀತಲವಾಗು : ಬಳಲಿಕೆ ಪಿಂಗುವಂತೆ ನಿನಗಾಂ ನಳಿನೀದಳ ತಾಳವೃಂದದಿಂ ಸುಳಿಯಿಪೆನೇಂ ಕುಳಿರ್ಮಸಪ ತಂಬೆಲರಂ (ಶಾಕುಂತ. ೪೧-೭೨). [ಕುಳಿರ್$_3$ + ಮಸಗು$_1$]

**ಕುಳಿರ್ಮೆ** (ನಾ). ೧. ತಂಪು; ಶೈತ್ಯ. ೨. ದಯೆ; ಕರುಣೆ; ಸ್ನೇಹ. ೧, ೨ : ಜಳಧಿಗಳೊಂದನೆ ಸೇರಿಯುಮುಱಿಯಿಸದೊಂದೊಡಲ ಬೇಗೆಯಿಾ ಘನಮಹಿಮಂ ಕೆಳೆಗೊಂಡು ವರ್ತಿಸಲ್ ಮಱುಗಱಿಗೆಯೊಳ ಱಿಗುಂ ಕುಳಿರ್ಮೆ ಸಾಧಾರಣಮೇ (ವಸ್ತುಪಂ. ೫೧).
[ಕುಳಿರ್$_3$ + -ಮೆ$_1$. / ತಮಿ. ಕುಳಿರ್ಮೈ]

**ಕುಳಿರ್ವನಿ,** ಕುಳಿರ್ಪನಿ (ನಾ). ೧. ತಂಪಾದ ನೀರಿನ ಹನಿ, —ಜಲಬಿಂದು: ಕುಳಿರ್ವನಿಗಳಿಡಿದು ಕಣ್ಗೊಳಿಪ ಶಶದಂಬುಜದಂತೆ ಬೆಮರ್ವನಿಗಳ್ ತೀವಿ ನೋಳ್ಪರ ನೋಟಕ್ಕೆ ಸಫಲವಂಗೈವ ಕೃಷ್ಣನ ವದನಮನವಲೋಕಿಸರಮ್ಮ (ಕಗಪಿ. ೭೮ ವಿಷ್ಣುಪು). **ಕುಳಿರ್ಪನಿ:** ೨. ಮಂಜಿನ ಹನಿ; ಹಿಮಬಿಂದು: ಬಿಲ್ಲತ್ತರದ ಕರೆಡವುಲ್ ಬಿತ್ತರದ ಬಯಲ್ ಮಿಳಿರ್ದತ್ತು ಕುಳಿರ್ಪನಿಗಳಿಂದೆ, ತುರುಗೆಮಿಗಳಂ ಪೋಲ್ದು (ಶ್ರೀರಾಮಾ. ೨೬೮-೧೩೮). [ಕುಳಿರ್$_3$ + ಪನಿ$_2$]

**ಕುಳಿರ್ವನೆ** (ನಾ). ತಂಪಾದ ಮನೆ; ಶೈತ್ಯಾಲಯ: "ಶೈತ್ಯಾಲಯಂ ಕುಳಿರ್ವನೆಯೆನಿಕ್ಕು" (ಕಬ್ಬಿಕೈ. ೨೨).
[ಕುಳಿರ್$_3$ + ಮನೆ]

**ಕುಳಿರ್ವಳ್ಳ** (ನಾ). ತಣ್ಣನೆಯ ಹಳ್ಳ; ಶೀತಲ ನದಿ: ಬೇಗೆಯು ಬೆಂಕೆಗಳ್ಕಿ ಕುಳಿರ್ವಳ್ಳದೊಳಿರ್ದ ಮುದುಂಕಿಯೊಪ್ಪಿದಳ್ (ದಶಕು. ೨-೧೨೭). [ಕುಳಿರ್$_3$ + ಪಳ್ಳ]

**ಕುಳಿರ್ವೆಟ್ಟಣುಗಿ** (ನಾ). ಹಿಮವಂತನ ಮಗಳು; ಪಾರ್ವತಿ: "ಕುಳಿರ್ವೆಟ್ಟಣುಗಿಯೆನಲ್ಕುಮೆ" (ಚತುನಿ. ೧೧೩); "ಕುಳಿರ್ವೆಟ್ಟಣುಗಿ ಪಾರ್ವತಿಗೆ ನಾಮಮಕ್ಕುಂ" (ಕಶರ. ೨೫); ಸಂಭ್ರಮದೆ ಕುಳಿರ್ವೆಟ್ಟಣುಗಿ ಯೊಡನೆ ಪಸೆನಿಂದು (ಭಾವಚಿಂ. ೯-೫೭).
[ಕುಳಿರ್ವೆಟ್ಟು + ಅಣುಗಿ (< ಅಣುಂಗಿ)]

**ಕುಳಿರ್ವೆಟ್ಟು,** ಕುಳಿರುವೆಟ್ಟು (ನಾ). ಹಿಮಗಿರಿ; ಹಿಮಾಲಯ ಪರ್ವತ: "ಕುಳಿರ್ವೆಟ್ಟೆನೆ ಹಿಮಾದ್ರಿಯಕ್ಕುಂ" (ಕವಿಕಂ. ೯೯); ಶಿವನು . . . ಕುಳಿರ್ವೆಟ್ಟನಾತ್ಮಭವೆವೆರಸಿ ಸಕಲ ಪ್ರಮಥಕುಳವೆರಸಿ ಬಿನದದಿಂದಿರಲು (ಸೌಂದಪು. ೮-೨೫); ಮಾರಾರಿಯುರಿಲಿಂಗವಾಗಿ ಕುಳಿರ್ವೆಟ್ಟನ ಕುಮಾರಿಯೆಡೆನರ್ಧನಾರೀಶತ್ವದಿಂದೊಳಗೆ ರಾರಾಜಿಸುತ್ತ (ಭಾವಚಿಂ. ೩-೧೫); ಕುಳಿರ್ವೆಟ್ಟು ಮುನ್ನೀರ್ಗಟ್ಟಿಯ ನಡುವಣ ಇಳೆ ಯಾಣ್ಮರು ಬೇಗದಿಂದ ತಳರ್ದರೋಲಗಕೆ (ಕುರಾಸಾಂ. ೧೮-೩೦). **ಕುಳಿರುವೆಟ್ಟು:** ಕುಳಿರುವೆಟ್ಟನ ಕುವರಿಯ ಶ್ರೀಪದಯುಗನಳಿನ ಸುಗಂಧ (ನೋಹಕ. ೭-೯೬); ಕುಳಿರುವೆಟ್ಟನ ಸುತ ಜಲನಿಧಿಯೊಳು ಮುಳುಗಿಹನು (ಕಂಸವಿ. ೧೩-೯). [ಕುಳಿರ್$_3$ + ಬೆಟ್ಟು$_2$]

**ಕುಳಿರ್ವೆಟ್ಟುಮಗಳು** (ನಾ). ಹಿಮವಂತನ ಮಗಳು; ಪಾರ್ವತಿ: ಕುಳಿರ್ವೆಟ್ಟುಮಗಳ ತನುಕಾಂತಿ ಜಲದೊಳ್ ಮಿಂದು (ಪದ್ಮರಾ. ೧-೩೨); ಕುಳಿರ್ವೆಟ್ಟುಮಗಳುವೆರಸೆಳಸುವ ಮಱಿದಿಂಗಳಹಜ್ಜಂ ಹೆಮ್ಮೆಯ ಸಮ್ಮಂಗುಡಿಗೆಮಗೆ (ಉದ್ಭದೇ. ೭-೩).
[ಕುಳಿರ್ವೆಟ್ಟು + ಮಗಳು (< ಮಗಳ್)]

**ಕುಳಿರ್ವೆಟ್ಟೆಱಿಯ** (ನಾ). ಹಿಮಪರ್ವತದ ಒಡೆಯ; ಹಿಮವಂತ: (ಕ).
ಕುಳಿರ್ವೆಟ್ಟೆಱಿಯನಣುಗಿ = ಹಿಮವಂತನ ಮಗಳು; ಪಾರ್ವತಿ: "ಉಮೆ ಕುಳಿರ್ವೆಟ್ಟೆಱಿಯನಣುಗಿ" (ಚತುನಿ. ೧೧೩).
[ಕುಳಿರ್ವೆಟ್ಟು + ಎಱಿಯ]

**ಕುಳಿರ್ವೆರಸು** (ಕ್ರಿ). ಶೀತದಿಂದ ಕೂಡಿರು; ತಣ್ಣಗಿರು: ಬಟ್ಟೆ ಬಟ್ಟೆಯೊಳ್ಳಿಲ್ಲಿಯುಂ ಕುಳಿರ್ವೆರಸಿದಱಿವಟ್ಟೆಗೆಯ ಸದನಂಗಳಿಂದೆ (ಜೈಮಿಭಾ. ೩-೯). [ಕುಳಿರ್$_3$ + ಬೆರಸು$_1$]

**ಕುಳಿರ್ವೆಳಗ** (ನಾ). ತಂಪು ಬೆಳಕನ್ನುಳ್ಳವನು; ಚಂದ್ರ: "ಜೊನ್ನೊಡಲಂ . . . ಕುಳಿರ್ವೆಳಗಂ . . . ಕಟ್ಟಲೆವಣಿ, ತಿಂಗಳ್ -ಈ ೨೦ ಚಂದ್ರನ ಪೆಸರ್" (ಕಶಸಾ. ೩-೨೩); "ಕುಳಿರ್ವೆಳಗನು ಮಾಲಿವೆಳಗನುಱ ತಾಂ ನೆಯ್ದಿಲ್ಗೆಳೆಯ . . . ಚಂದಂ" (ಕವಿಕಂ. ೪೩).
[ಕುಳಿರ್$_3$ + ಬೆಳಗು$_3$ + -ಅ$_7$]

**ಕುಳಿಲ್** (ನಾ). ಮರಗಳ ಮೇಲೆ ನೆಗೆದಾಡುವ ಆಟ; ಮರಕೋತಿ ಆಟ: "ಕು [ಪಾಠಾಂ. ಕ]ಳಿಲೆಂದು ಮರವಾಯ್ದು ಬಿನದಿಪುದು" (ಕಶಸಾ. ೨೭-೫೫೭); ಪಾಱುಂಬಳೆ ಮರಗೆರಸಿ ಕುಳಿಲ್ಸೆಂಡು ಬಟ್ಟೆ ಕಿಱುಕಲ್ಲು . . . ಇವನಾ ಮುರಹರನಲ್ಲಲ್ಲಿಗಾಡುತುಂಬರಲ್ (ಜಗವಿ. ೪-೪೪). [?]

**ಕುಳಿವುಗು** 'ಕುಱುವೊಗು' ನೋ.

**ಕುಳಿಶ** 'ಕುಲಿಶ' ನೋ.

**ಕುಳಿಶಧರ** 'ಕುಲಿಶಧರ' ನೋ.

**ಕುಳಿಶಾಗಾರ** (ನಾ). ೧. ವಜ್ರದಿಂದ ನಿರ್ಮಿತವಾದ ಮನೆ. ೨. (ಆಲಂ) (ವಜ್ರದಮನೆಯಂತೆ) ಬಲವಾದ ರಕ್ಷೆಯನ್ನು ಕೊಡುವವನು; ಒಂದು ಬಿರುದು: ಎರೆದ ಮನುಜಂಗೆ ಸುರಭೂಮಿರುಹಂ ಶರಣೆಂದವಂಗೆ ಕುಳಿಶಾಗಾರಂ . . . ಧುರದೊಳು ಪೊಣರ್ದ್ದಂಗೆ ಮಿತ್ಯು ವಿನಯಾದಿತ್ಯಂ (ಎಕ. V, ಚನ್ನರಾ. ೧೪೮-೧೧ ; 1094).
[ಕುಳಿಶ (= ಕುಲಿಶ) + ಅಗಾರ]

**ಕುಳಿಶಾಯುಧ** 'ಕುಲಿಶಾಯುಧ' ನೋ

**ಕುಳಿಶಾಶ್ಮ** (ನಾ). ವಜ್ರದ ಕಲ್ಲು; ವಜ್ರಶಿಲೆ: ಇದಱ ಕುಂಜೋಪಾಂತಂ ಥಳಥಳಿಸಿ ಬೆಳಗೆ ಕುಳಿಶಾಶ್ಮಂಗಳ್ (ಶಾಂತಿಪು. ೨-೧೧೫).
[ಕುಳಿಶ (= ಕುಲಿಶ) + ಅಶ್ಮ]

**ಕುಳಿಶಾಸ್ತ್ರ** 'ಕುಲಿಶಾಸ್ತ್ರ' ನೋ.

**ಕುಳಿಶಿ** 'ಕುಲಿಶಿ' ನೋ.

**ಕುಳಿಸ** (ನಾ). ೧. ನವರತ್ನಗಳಲ್ಲಿ ಒಂದು; ವಜ್ರ: ಮುತ್ತು ಪಚ್ಚೆ ವರಲ್ಗಳುಂ ಕುಳಿಸಮುಂ ಮುಂತಾಗಿ ಕುಂದಿಲ್ಲದೊಂಬತ್ತುಂ ರನ್ನದ ಸುಣ್ಣದಿರ್ (ಕಬ್ಬಿಕಾ. ೩೭); ಚಳಿಸದಿರೆ ದಿಟ್ಟಿಯೊಳು ಚಿತ್ತವು ಕುಳಿಸದಂಕುಶ ಕುಂಭದೊಳು ಮಾರ್ಪೊಳೆಯೆ ನಭದಿಂದವನಿಗಿಳಿತಂದುದು ದಿವಿಜಗಜವು (ಸಾಳ್ವಭಾ. ೨೧-೨೦). ೨. ಇಂದ್ರನ ವಜ್ರಾಯುಧ: "ಕುಳಿಸ – ಕುಲಿಶ = ವಜ್ರಾಯುಧ" (ತದ್ಭಕೋ. ೮); ಬೆಟ್ಟುವಗೆಯಂ ಪಗೆಯುನಿಟ್ಟ ಕುಳಿಸದ ಕಡಿಕಂಡದಂತೊಪ್ಪುವಚ್ಚವಳಿಕಿನ ಗಂಡಶೈಲದಿಂ (ರಾಮಾಶ್ವ. ೭೨-೨೩). [< ಸಂ. ಕುಲಿಶ]

**ಕುಳಿಸಿ** (ನಾ). ವಜ್ರಾಯುಧವನ್ನು ಧರಿಸಿದವನು; ಇಂದ್ರ: "ಬಿಡೌಜಂ ಕುಳಿಸಿ" (ಕರ್ಣಾನಿ. ೪೮); ಕುಳಿಸಿಯ ಜಯಂತನ ವಿಳಾಸಮು ಮನಿಳಿಕೆಯ್ದು (ಕುಸುಮಾ. ೭-೧೩೩ ರ). [< ಸಂ. ಕುಲಿಶಿನ್]

**ಕುಳಿಹೋಗು** (ಕ್ರಿ). ತಗ್ಗುಬೀಳು; ಹಳ್ಳವಾಗು: ಕುಳ್ಳಿರೆಂದರೆ ನೆಲ ಕುಳಿಹೋಹುದೆ (ಬಸವ. ೨೪೧).
[ಕುಳಿ$_2$ (< ಕುಱಿ$_2$) + ಹೋಗು$_1$ (< ಪೋಗು$_1$]

**ಕುಳೀನ** 'ಕುಲೀನ' ನೋ.

**ಕುಳೀರ** 'ಕುಲೀರ' ನೋ.

**ಕುಳೀರಕ** (ನಾ). [ನಾಟ್ಯ] ಮೂವತ್ತೈದು ಬಗೆಯ ದೇಶಿಯ ಭೌಮಚಾರಿಗಳಲ್ಲೊಂದು: ಉರುತರ ಕುಳೀರಕಂ ಕಾತರ ವಿಶ್ಲಿಷ್ಟಾಖ್ಯ ಪಾರ್ಷ್ಣಿರೇಚಿತಕಂಗಳ್ (ಲಾಸ್ಯರಂ. ೬-೯). [ಸಂ.]

**ಕುಳೀರಮಂದಿರ** (ನಾ). [ಜ್ಯೋತಿ] ಕರ್ಕಾಟಕ ರಾಶಿ: ನಿಲೆ ಕುಜಂ . . . ಕುಳೀರಮಂದಿರದೊಳ್ ಅರ್ಥಯುತಂ ವಿಕಲೇಕ್ಷಣಂ (ಜಾತಕ. ೧೩-೧೯). [ಕುಳೀರ (= ಕುಲೀರ) + ಮಂದಿರ]

**ಕುಳೀರಸಂಭವ** (ನಾ). [ಜ್ಯೋತಿ] ಕರ್ಕಾಟಕ ರಾಶಿಯಲ್ಲಿ ಜನಿಸಿದವನು : ವನಜಲಕೇಳಿಯರ್ಥಿಯೊಡೆಯಂ . . . ಕುಬ್ಜಶರೀರಿ ಕುಳೀರ ಸಂಭವಂ (ಜಾತತಿ. ೧೭-೪). [ಕುಳೀರ (= ಕುಲೀರ) + ಸಂಭವ]

**ಕುಳು** 'ಕುಳ್ಳ$_2$' ನೋ.

**ಕುಳುಂಪೆ** (ನಾ). ನೀರು ನಿಂತಿರುವ ಗುಂಡಿ; ಕುಂಟೆ: ಜಳರಾಶಿಯಿರೆ ಕುಳುಂಪೆಯ ನೀರಂ ಎಱೆವ (ಆದಿಪು. ೯-೧೦೮) ; ಆನೆಮೆಟ್ಟಿದ ಕುಳುಂಪೆಯ ನೀರಂತೆ ದೆಸೆದೆಸೆಗೆ ಸೂಸುವನ್ನೆಗಂ (ಪಂಪಭಾ.೧೧-೧೩೬ವ); ತಿಳಿವುದುಮಾ ಕದಡುವುದುಂ ಕುಳುಂಪೆಯೊಳ್ ನೆಗೞ್ಗುಮುದಧಿಯೊಳ್ ನೆಗೞ್ದಪುದೇ (ಶಾಂತಿಪು. ೧೧-೯೫) ; ದಟ್ಟಕಾಡಿನ ನಡುವೆ ಒಂದು ಕುಳುಂಪೆಯ ಪಕ್ಕದ ಹೊದರಿನಲ್ಲಿ (ಮಲೆಮ. ೩೧೩).

[ದೇ. ‖ ತಮಿ. ಕುೞುಮ್ಬು]

**ಕುಳುಂಪೆಗೊಳ್** (ಕ್ರಿ). ಕೆಸರುಗಟ್ಟು; ಗುಂಡಿಯಂತಾಗು: ಕುಂಜರ ಗುರುಕುಂಭಮಂಡಳದಿನಲ್ಲುಗು ತಂದು ಕುಳುಂಪೆಗೊಂಡ ನೆತ್ತರ ಪೊಸವಜ್ಜೆಯೊಳ್ ಕೆದಱಿ ಕಣ್ಗೆಸೆದಿರ್ದುವು . . . ಕೇಸಱಿಯ ಬೀರದ ಬಿತ್ತುಗಳಂತೆ ಮುತ್ತುಗಳ್ (ಮಲ್ಲಿಪು. ೧೦-೯೫).

[ಕುಳುಂಪೆ + ಕೊಳ್$_1$]

**ಕುಳುಗಿಡಿ** (ನಾ). ಉರಿಯುತ್ತಿರುವ ಕಿಡಿ; ತೀಕ್ಷ್ಣವಾದ ಕಿಡಿ (?): ಉಗುಳಿದವು ಕುಳು [ಪಾಠಾಂ. ಳಿ] ಗಿಡಿಗಳನು ಕೈದುಗಳು (ಕುವ್ಯಾಸ. ೧೫-೪೧) ; ಕುಳುಗಿಡಿಗಳಗ್ನಿಜನ ಮುಷ್ಟಿಯ ಬಳಿಯಲವ ತರಿಸಿದವೊ ಪೇಳೆನಲೊಲಿದು ತಿವಿದನು ತೀವ್ರಹತಿಯಲಿ ರಿಪುಚಮೂಪತಿಯ (ತೊರರಾ. ೬-೧೯-೫೭). [ಕುಳು$_0$ + ಕಿಡಿ]

**ಕುಳುತ್ಥ** (ನಾ). ಒಂದು ಬಗೆಯ ದ್ವಿದಳಧಾನ್ಯ; ಹುರುಳಿ: "ಕುಳುತ್ಥಂ – ಹುರುಳಿ" (ಕಾಶಕ್ಕ. ೧೪೭); ನೀವಾರತಿಳತಳ ಮಸೂರಿಕಾ ಕುಳುತ್ಥ ಮುದ್ಗ ಮಾಷ . . . ಜೀರಕಧಾನ್ಯಕಾದಿ ವಿವಿಧ ಧಾನ್ಯ ಭೇದಂಗಳುಂ (ಆದಿಪು. ೬-೭೨ ವ).

[< ಸಂ. ಕುಲತ್ಥ]

**ಕುಳುತ್ಥಕ** (ನಾ). = ಕುಳುತ್ಥ: "ಕುಳುತ್ಥಕಂ ಕೊಳ್ಳು" (ವಸ್ತುಕೋ. ೯೫-೧೮). [< ಸಂ. ಕುಲತ್ಥಕ]

**ಕುಳುಪು** (ನಾ). ತುಂಡು; ಶಕಲ; ಖಂಡ (?): ಸರಸಿಜಭವ ಚಂದ್ರ ಸೂರ್ಯ ನಕ್ಷತ್ರವ ಎರಕದಿ ನಿರ್ಮಿಸಿ ಮಿಕ್ಕ ಮೆಱೆವ ಕುಳುಪುಗಳೀ ಗಿರಿಯೊಳೊಟ್ಟಿದನೆನೆ ತರಣೀಂದುಕಾಂತವಲ್ಲಿಹುದು (ಜ್ಞಾನಚ. ೧೦-೧೧೪). [?]

**ಕುಳುಮೆ** 'ಕುಳಿಮೆ' ನೋ.

**ಕುಳುಮೆಕಾರ್ತಿ** (ನಾ). "ಗರ್ಭಿಣಿ" (ಹುಲಿಹಾ. ಕೋಶ) : ತಂಗವ್ವನಿಗೆ ಪೂವಿ ಕುಳುಮೆಕಾರ್ತಿ ಎಂಬ ಸಂಗತಿ ತಿಳಿಯಿತು (ಹುಲಿಹಾ. ೩೬೨).

[ಕುಳುಮೆ (< ಕುಳಿಮೆ) + -ಕಾರ್ತಿ]

**ಕುಳುರು** (ಕ್ರಿ). ಸಂಚರಿಸು; ತಿರುಗಾಡು (?): ಮೂರುಲೋಕದಿ ತನ್ನ ಮನದಿಚ್ಛೆ ಬಂದಂತೆ ಹಾರುತ್ತ ಕುಳುರುತ್ತಾರವನು ಮಾರನುಪದ್ರವ ಕಾಱಾದೆ ಗಾರಾಗಿಯು ತೀರದ ದುಃಖವನೈದುವೆನು (ಪೂಜ್ಯಚ.೧೧-೮೪).

[?]

**ಕುಳುವಾಡಿ** 'ಕುಲವಾಡಿ' ನೋ.

**ಕುಳುವಾರು** 'ಕುಳವಾರು$_1$' ನೋ.

**ಕುಳೆ** 'ಕೂಳೆ$_2$' ನೋ.

**ಕುಳ್ಳ** (ನಾ). ಎತ್ತರವಿಲ್ಲದವನು ; ಗಿಡ್ಡ ; ಕುಬ್ಜ : ಅದೊಂದು ಕುಳ್ಳ ಆಸಾಮಿ (ಆಸಾಮಿ. ೯೫). ಕಳ್ಳನ ನಂಬಿದರೂ ಕುಳ್ಳನ ನಂಬಬಾರದು (ಗಾದೆ). [ಕುಳ್ಳು$_2$ (< ಕುಱುಳ್) + -ಅ$_7$]

**ಕುಳ್ಳಕುಮ್ಮಟಿ** (ನಾ). ಒಂದು ಬಗೆಯ ಆಟ ; ಮರಕೋತಿ (?) : ಕುಳ್ಳಕುಮ್ಮಟಿಯಾಡುವೆವು ಮರದಲ್ಲಿ ಬಾರೆಂದೆಲ್ಲರೊಂದೆಡೆಯಲ್ಲಿ ಕೂಡಾಲೋಚಿಸುತಲೀ ಭೀಮ ಮೊದಲಾಗಿ (ಜನಭಾ. ೭-೯).

[ಕುಳ್ಳ + ಕುಮ್ಮಟಿ$_1$ (< ಕುಂಪಟ)]

**ಕುಳ್ಳಾವಿ** 'ಕುಲಾಯ್ಯ$_2$' ನೋ.

**ಕುಳ್ಳಿ$_1$** (ನಾ). ಎತ್ತರವಿಲ್ಲದವಳು ; ಗಿಡ್ಡಿ ; ಕುಬ್ಜೆ : ಬಂಜೆ ಕುಳ್ಳಿ ಕುಂಟಿಯಿವರುಗಳಂ ಕಂಡರೆ ಕಾರ್ಯನಾಶ (ಸೌಗಂಧಿ. ೫೮೫-೧೩).

[ಕುಳ್ಳ + -ಇ$_2$]

**ಕುಳ್ಳಿ$_2$** (ನಾ). (ಬೆಲ್ಲದ) ಅಚ್ಚು : ಭಕ್ತನಾದಡೆ ಬಾಳೆಯ ಹಣ್ಣಿನಂತಿರಬೇಕು ಭಕ್ತನಾದಡೆ ಬೆಲ್ಲದ ಕುಳ್ಳಿಯಂತಿರಬೇಕು (ವಚಶಾ. I, ೧೯೩). [?]

**ಕುಳ್ಳಿರ್**, **ಕುಳಿರ್$_2$**, **ಕುಳ್ಳಿರು** (ಕ್ರಿ). ಕುಳಿತುಕೊಳ್ಳು ; ಆಸೀನನಾಗು : ಕಿತ್ತಯ್ಯಂಗಳುಮಂ . . . ವಂದಿಸಿ ಭಟಾರರಲ್ಲಿಗೆ ವಂದು ಕುಳ್ಳಿರ್ದು (ವಡ್ಡಾರಾ. ೭೯-೧೭) ; ಮಣಿಮಯ ಹೇಮಾಸನದೊಳ್ ಕುಳ್ಳಿರ್ದನಂ ನೋಡಿ (ಪಂಪಭಾ. ೧೦-೫ ವ); ರುದ್ರಕನ್ನೆಯರೊಲಿದು ಸಿಂಗರಿಸಿ ಕುಳ್ಳಿರಲು (ಬಸರ. ೧-೧೩) ; ಅರಣ್ಯದಿದ್ರುಮಸಾನು ದೇಶದೊಳು ಕುಳ್ಳಿರುತಂ (ಪುಣ್ಯಾಸ್ರ. ೭-೧೯) ; ಯುಯುತ್ಸು ಶಿಖಂಡಿ ಪ್ರತಿವಿಂದ್ಯಕರು ಪಾರ್ಥನನುಪಚರಿಸಿ ಕುಳ್ಳಿರ್ದರಲ್ಲಲ್ಲಿ (ಕುವ್ಯಾಕ. ೧೬-೭). **ಕುಳಿರ್$_2$** : "ಕುಳಿರ್ – ಖುಜುಭೇದೇ (ಬಗ್ಗು, ಕುಳಿತುಕೊಳ್) ಹೈಮೇಚ (ಶೀತಲವಾಗು)" (ಶಮಧಾ); ಅಲ್ಲಿ ಕುಳಿತನು ಮೆಲ್ಲನೆಯು ತನುವೆಲ್ಲ ಪುಲಕಿಸಲು (ಗಗತಾ. ೨-೨೨). **ಕುಳ್ಳಿರು** : ಧಾರುಣೀಪತಿ ಕುಳ್ಳಿರ್ದೈ ಪರಿವಾರ ಕುಳ್ಳಿರಿ (ಕುವ್ಯಾಗ. ೬-೧೩).

ಕುಳ್ಳಿರಿಡಿಸು = ಕುಳಿತುಕೊಳ್ಳಲು ಆಸನವನ್ನು ಇಡುವಂತೆ ಮಾಡು ; ಕುಳಿತುಕೊಳ್ಳಲು ಅಣಿಮಾಡು : ಬಂದುದುತ್ತಮವಾದುದಿತ್ತ ಬಾ ದಕ್ಷಿಣಯೆಂದೊತ್ತಿನೊಳು ಕುಳ್ಳಿರಿಡಿಸಿ (ಭರಚ. ೪೭-೮೬).

[ಕುಳ್ + ಇರ್$_1$]

**ಕುಳ್ಳಿರಿಸು**, **ಕುಳಿರಿಸು$_2$** (ಕ್ರಿ). ಕುಳಿತುಕೊಳ್ಳುವಂತೆ ಮಾಡು : ಕಾಲಂ ಕರ್ಚಿ ಭಟ್ಟಾರಕರ್ಗೆಱಗಿ ಕುಳ್ಳಿರಿಸಿ (ವಡ್ಡಾರಾ. ೭೮-೧೨ ವ) ; ಚೌಪಳಿಗೆಗಳೊಳ್ ಕುಳ್ಳಿರಿಸಿದರ್ (ಪಂಪಭಾ. ೨-೬೭) ; ಕುಳ್ಳಿರಿಸಿದನು ವಿನಯದಲಿ (ತೊರರಾ. ೪-೬-೨೪). **ಕುಳಿರಿಸು$_2$** : ತೆಗೆದು ತಾ ಬಿಗಿಯಪ್ಪಿ ಕುಳಿರಿಸೆ (ಕೌಶಿರಾ. ೩೯-೨೩) ; ಬಳಿಬಂದರೆಲ್ಲರ ಕಂಡು ಚಕ್ಕಳದಲ್ಲಿ ಕುಳಿರಿಸಿ (ಭರಚ. ೩೯-೧೦೦).

ಕುಳ್ಳಿರಿಸಿಕೊಳ್ಳು = ಕುಳಿತುಕೊಳ್ಳುವಂತೆ ಮಾಡು : ತಲೆವಿಡಿದೆತ್ತಿ ತಕ್ಕೈಸಿ ತನ್ನಯ ತೊಡೆಯೊಳಗೆ ಕುಳ್ಳಿರಿಸಿಕೊಂಡು (ಕಂನವಿ. ೯-೧೯೨).

[ಕುಳ್ಳಿರ್ + -ಇಸು$_3$]

**ಕುಳ್ಳಿರು** 'ಕುಳ್ಳಿರ್' ನೋ.

**ಕುಳ್ಳು$_1$** 'ಕುಳ್' ನೋ.

**ಕುಳ್ಳು$_2$** 'ಕುಱುಳ್' ನೋ.

**ಕುಳ್ಳೆ** (ನಾ). ಮಲದ ಕುಪ್ಪೆ, —ಉಂಡೆ : ಇಬ್ಬರಿಗೂ ಪದ್ಧತಿಯಂತೆ ಬೈಗುಳದ ಒಂದು ಲಡಾಯಿವೆ ನಡೆದುಹೋಯ್ತು, ಅವಾಚ್ಯ-ಅಶ್ಲೀಲ ಭಾಷೆಯ ಕುಳ್ಳೆಗಳನ್ನೆ ಒಬ್ಬರ ಮೇಲೊಬ್ಬರು ಎಸೆದಾಡಿ (ಮಲೆಮ. ೪೫೦). [< ಕುರುಳ್$_2$ ?]

**ಕುಳ್ಳಿಡೆ** (ನಾ). ಕುಳಿತುಕೊಳ್ಳುವ ಎಡೆ, —ಜಾಗ; ಆಸನ: "ಕುಳಿತು ಕೊಳ್ಳುವುದಕ್ಕಾಗಿ ಮಾಡಿರುವ ಸಲಕರಣೆ, ಸ್ಥಳ (ಕುರ್ಚಿ, ಮಣೆ, ಮೊ. ವು) ; ಆಸನ, ಪೀಠ, ಕುಳ್ಳಿಡೆ" (Seat. ಇಂಕನ) ; ಕೆಂಪು ಮೋರೆಯ ಬೆಮರಿಡಿದ ಹೆಂಗಸರಿಂದ ಕುಳ್ಳಿಡೆಗಳೆಲ್ಲ ಭರ್ತಿಯಾಗಿದ್ದುವು (ಪುನರು. ೪೫೪). [ಕುಳ್$_3$ + ಎಡೆ$_3$]

**ಕುಱಕಾಲರಸನಾಳಿಯರ್** (ನಾ). ಒಬ್ಬಾತನ ಹೆಸರು (?): ಸ್ವಸ್ತಿ ಶ್ರೀ ಸಿಯಗೆಲ್ಲರಾಳ ಕುಱಕಾಲರಸನಾಳಿಯರ್ ರಣಾಲಿ ಅರಸರಲ್ಲಿನ್ಮಳಿದು ಬನ್ದು (ಎಕ. XVI, ತುಮಕೂ. ೯೪–೧ ; 780). [?]

**ಕುಱವ** 'ಕುಱುವ$_1$' ನೋ.

**ಕುಱಳ್**, ಕುಳ್ಳು$_2$ (ನಾ). ೧. ಗಿಡ್ಡದಾಗಿರುವಿಕೆ; ಚಿಕ್ಕದಾಗಿರುವಿಕೆ. ೨. ತಮಿಳು ಛಂದಸ್ಸಿನಲ್ಲಿರುವ ಎರಡು ಸಾಲಿನ ಒಂದು ಪದ್ಯ ಜಾತಿ: ಕುಱಳ್ ಎಂದರೆ ಚಿಕ್ಕದು ಎಂದರ್ಥ . . . ಅದೇ ಕುಱಳ್ ಛಂದಸ್ಸಿನಲ್ಲಿ ಬರೆದ (ಕುಱಳ್. XII, ಪೀಠಿಕೆ). **ಕುಳ್ಳು$_2$**: ೧. ಆ ಹೆಣ್ಣು ಗಂಡಿಗಿಂತ ತೀರ ಕುಳ್ಳು (ರೂಢಿ). [← ತಮಿ. ಕುಱಳ್]

**ಕುಱಿ$_1$**, ಕುರಿ$_1$, ಕುಱು$_1$ (ಕ್ರಿ). ಕುಱಿತು, ಕುರಿತು, ಕುಱುತ್ತು (ಭೂತನ್ಯೂ). ೧. ಗುರುತಿಸು; ಗುರುತುಮಾಡು: ಸ್ಮರನಂ ನೋಡಿದನೀತನೆ ಸಮುದ್ಧತ್ಕ್ರೋಪದಿಂ ದಕ್ಷನಧ್ವರಮಂ ಸುಟ್ಟವನೀತನೀತನೆ ಕುಱಿ [ಪಾಠಾಂ. ಱು]ತ್ತೆಯ್ತಂದು ನಿಂದಂಧಕಾಸುರನಂ ಮೆಟ್ಟಿದನು (ಪಂಪಾಶ. ೨೭). ೨. ಗಮನಿಸು; ಲಕ್ಷ್ಯಕೊಡು: ಲಿಂಗವ ಕುಱಿತಲ್ಲಿ ಅಂಗವ ಕುಱಿಯಬಾರದು (ಮೋಳಿಮಾ. ೧೧೫–೪೫೩). ೩. ಉದ್ದೇಶಿಸು; ಗುರಿಯಿಡು; ಆಲೋಚಿಸು: ಆ ನಾಡವರ್ಗಳ್ ಚದುರರ್ ನಿಜದಿಂ ಕುಱಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್ (ಕವಿರಾ. ೧–೩೮); ಈ ತೆಱದಿತಿಹಾಸ ಕಥೆಯನೊಪ್ಪಿಸೆ ಕುಱಿತಂ (ಪಂಪಭಾ. ೧೪–೫೧); ಅನೇಕ ಪ್ರಕಾರ ಮಾಡುವ ಕಥೆಗಳಂ ಕುಱಿತು ದೃಷ್ಟಾಂತಂಗಳಂ . . . ಪೇೞ್ದು (ಪಂಚತಂ. ೧೩೧–೧); ಉದಕಂಗಳುದಧಿಯಂಶಗಳೆಂದು ಕುಱಿವಂತೆ ಮೊದಲು ತಾ ಶಿವನಂಶವೆಂದು (ಪತಿಲ. ೫–೨೧). ೪. ಲೇಪಿಸು; ಬಳಿ: ವರಚಂಡ ಭಾಸ್ಕರ ರಸಮೆಂಬುದೊಂದನೆಯುಱಿ ಮೃದುಕೋಷ್ಠದೊಡಲಿಗೆ ಕುಱಿಯಲಾಮಾಂತವಾಗಿಯೆ ವಿರೇಚಿಸುವುದು (ಸಾಳ್ವಸಾಂ. ೫). **ಕುರಿ$_1$**: ೨. ದೊಡ್ಡ ಚಾಮುಪ್ಪನತ್ತ ಕುರಿವನು ಬೆಟ್ಟದ ಅರಸು (ಬೆಟ್ಟಅ. ೭೬–೨೪). ೩. ಹರನನ್ನೂ ಹರಶರಣನನ್ನೂ ಕುರಿಯದ ಕವಿತೆ ಕಲಾಕೃತಿಯಾದರೇನು ಆಗದಿದ್ದರೇನು (ತುಂಗಭ. ೪೩). **ಕುಱು$_1$**: ೩. ಮಧ್ಯಮವರ್ತಿಗಳಂ ಕುಱುತ್ತು ತತ್ತ್ವನಿಶ್ಚಯೋಪಾಯಮಂ ಪೇೞ್ದಪರ್ (ತಸೂವೃ. ೮); ತನ್ನಂ ಕುಱುತ್ತು ಮಾಡಿದರನ್ನುಮನೌಷಧಮನೊಲ್ಲಂ (ಧರ್ಮಾಮೃ. ೫–೧೪೭); ಅಸಹಾಯಶೂರರ ಕಥಾಪ್ರಪಂಚಂಗಳನವರಂ ಕುಱುತ್ತು ಪೇೞ್ದ ಸುಭಾಷಿತಂಗಳಂ ಕೇಳುತ್ತಿರ್ದಂ (ಕೊಲ್ಹಾಶಾ. ೧೫–೬೭; 1186).
[ದೇ. ‖ ತಮಿ. ಮಲ. ಕುಱಿ; ತುಳು. ಗುರಿ; ತೆಲು. ಗುಱಿ]

**ಕುಱಿ$_2$**, ಗುಱಿ, ಗುರಿ (ನಾ). ೧. ಗುರುತು; ಚಿಹ್ನೆ: "ಕುಱಿ=ಕುಱಿಪು (ಕುಱುವು)" (ಶಮದ. ಪರಿ. ೨); "ಕುಱಿಯೆನೆ ಕುಱುಪಿನೊಳು" (ಕರ್ಣಾನಿ. ೬೮). **ಗುಱಿ**: ೧. ಹಲವು ಮಾತಿನಲೇನು ಭೂಪತಿ ಕೆಲಕೆ ಸಿಲುಕಿದನವದಿರೊಡ್ಡಿದ ಬಲೆಗೆ ಬಂದನು ನೆತ್ತಸಾರಿಯ ಗುಱಿಯ ಗದ್ದುಗೆಗೆ (ಕುವ್ಯಾಸ. ೧೩–೪೫). ೨. ಲಕ್ಷ್ಯ; ಈಡು: ನೆಗೞ್ದ ಪೊಗೞ್ತೆಗಂ ನೆಗೞ್ತೆಗಂ ತಾನೆ ಗುಱಿಯಾಗಿ (ಪಂಪಭಾ. ೨–೩೫ ವ); ಕೆಡದ ಜಸಕ್ಕೆ ತಾನೆ ಗುಱಿಯಾದ ಚಲಂ (ಎಕ. II, ೧೩೩–೨೧ ; 982); ಶಿವಶರಣರ ಮನದಲ್ಲಿ ಕೋಪಾಗ್ನಿ ಎದ್ದರೆ ನಿಂದಕರೆ ಗುಱಿ (ಶೂನ್ಯಸಂ. ೩೯–೧೮); ಗುಱಿಯ ತಾಗದ ಕೋಲ ಸೂಜಾರನೆಸೆದೇನು (ಸರ್ವಜ್ಞ. ೨೫೭). ೩. ಉದ್ದೇಶ: ಕೆಳೆಯುಂ ಗುಱಿಯುಂ ಗೊಟ್ಟೆಯುಮಳವಿಗೆ ಪಿರಿದಾಗೆ ತನಗೆ ದುರ್ಯೋಧನನೊಳ್ ಮುಳಿಸುಂ ನೋವುಂ ಕಲುಷಮುಮಳುಂಬಮೆನೆ ತನಗರಾತಿಕಾಳಾನಳನೊಳ್ (ಪಂಪಭಾ. ೨–೫೮); ಗುಱಿ [ಪಾಠಾಂ. ಕುರಿ] ನೆಱೆವಿನೆಗಂ ಸಯ್ತಿರಲಱಿಯದೆ ಕೊಲುತಿರ್ಪ ಜವನನಱಿದುಂ ಪಾಪಕ್ಕೆಱಗಿ ನೆಗೞ್ಪಂದಮೇಂ (ಜೀವಸಂ. ೧೧–೧೮). ೪. ಸೀಮೆ; ಎಲ್ಲೆ; ಮೇರೆ: ವಜ್ರನಾಭಿ ಅಳವಿಂಗೆ ದಳಮುಂ ಅಱಿವಿಂಗೆ ಗುಱಿಯುಂ ಅಗಿ ಬಳೆವನ್ನೆಗಂ (ಆದಿಪು. ೬–೨೨ ವ). **ಗುರಿ**: ೨. ಬಾಣದ ಗುರಿನೊಳದ ಮೇಲೆಯೇ (ಗಾದೆ). ೩. ಹೆಡ್ಡನ ನೆರೆಹೀನಮೊಡ್ಡನ ಗುರಿಹೀನ (ಇಂಚಾಪ. ೯೭–೭೫); ದಾರಿಯೂ ಸಾಗದು, ಗುರಿಯೂ ಸಾಧಿಸದು (ದೀಪಹ. II, ೧೮೦).
[< ಕುಱಿ$_1$]

**ಕುಱಿ$_3$**, ಕುರಿ$_3$ (ನಾ). ೧. ಮೈತುಂಬ ಉಣ್ಣೆಯುಳ್ಳ ಒಂದು ಪ್ರಾಣಿ; ಮೇಷ: "ಅವಿಃ, ಊರ್ಣಾಯುಃ, ಉರಭ್ರಃ . . . ಮೇಷಃ, ಮೇಂಡಃ — ಈ ೮ ಕುಱಿ" (ಹಲಾಯು. ೪೭–೧೨೪); ಕುಱಿಯಂ ಕೊಂದು ಸುಟ್ಟು ತಿಂಬರ್ (ವಡ್ಡಾರಾ. ೧೨–೧೯); ಕುಱಿ ನಡೆವ ಧೂಳು ಪರಿದೊಡೆ ಪೋಕುಂ ಸಿರಿಯೆಂಬರ್ (ಸಮುಪ. ೧೨–೭೭); ಹಬ್ಬಕ್ಕೆ ತಂದ ಹರಕೆಯ ಕುಱಿ ತೋರಣಕ್ಕೆ ತಂದ ತಳಿರ ಮೇಯಿತ್ತು (ಬಸವ. ೧೨೯); ಕುಱಿಗಳೋಪಾದಿಯಲಿ ಕಬ್ಬಿನ ಹೊಱಗಣೆಲೆಯನೆ ಮೇದು (ಪ್ರಭುಲೀ. ೧–೧೪); ದಕ್ಷನ ತಲೆಯ ಹೊಡೆದು ಹೋಮದೊಳಿಟ್ಟು ಕುಱಿಯ ತಲೆಯಂ ಕೊಟ್ಟು (ಚೆಬಪು. ೧–೧೬). ೨. (ಆಲಂ) ಹೆಡ್ಡ; ದಡ್ಡ. 'ಕುಱಿತನ' ಪರಾ. **ಕುರಿ$_2$**: ೧. ಈ ಕಾವಲುಗಳಲ್ಲಿ ಕುದುರೆ, ದನ, ಕುರಿಗಳನ್ನು ವಿಶೇಷವಾಗಿ ಸಾಕುತ್ತಿರುವರು (ಭೂರಚೆ. ೧೯೯); ನರಹತ್ಯಕ್ಕೆ ಹೆದರದವ ಕುರಿಹತ್ಯಕ್ಕೆ ಹೆದರಾನೇ (ಗಾದೆ).
[ದೇ. ‖ ತಮಿ. ಮಲ. ಕೊಱಿ; ತುಳು. ಕುರಿ; ತೆಲು. ಗೊಱಿ; ಗೊಱ್ಱೆ]

**ಕುಱಿಂದಿಗೆ**(ನಾ).=ಕುರುವಿಂದ(?): ಜಳರೇಖೆಯುಮಂ ಬೆತ್ತಮುಮಂ ಕುಱಿಂದಿಗೆಯುಮಂ ಹರಿದ್ರಾರಾಗಮುಮಂ ಪೋಲ್ವ ಕ್ರೋಧಾದಿಗಳು ಮಂದತರ ಕಷಾಯಂಗಳಿಂತೀ ನಾಲ್ಕುಮಾತ್ಮನಂ ದೇವ ಲೋಕದೊಳು ಪುಟ್ಟಿಸಿ ದಿವ್ಯ ಸುಖಮನೂಡುಗುಂ (ಪಸಾರ. ೫೭೫–೧೩). [?]

**ಕುಱಿಂಬ** 'ಕುಱುಂಬ$_1$' ನೋ.

**ಕುಱಿಂಬಗಾವುಂಡ** (ನಾ). ಒಬ್ಬಾತನ ಹೆಸರು: ಅಮ್ಮೆಳೆಯಪಳ್ಳಿ ಕುಱಿಪಟ್ಟಿಯೊಳೆ ಕಲಿಪಟ್ಟೊಡೆಯ ಕುಱಿಂಬಗಾವುಣ್ಡಂಗಂ (ಮೈಆರಿ. ೧೯೩೩, ೩೮–೭ ; 801).
[ಕುಱಿಂಬ (< ಕುಱುಂಬ$_1$) + ಗಾವುಂಡ (< ಗಾಮುಂಡ)]

**ಕುಱಿಂಬದೆಱೆ** (ನಾ). ಕುರುಬರ ಮೇಲೆ ಹಾಕುವ ತೆರಿಗೆ, —ಕಂದಾಯ: ಎಲ್ಲಾ ಕಾಲಕ್ಕಂ ಕುಱಿಂಬದೆಱೆಯಂ ಪರಿಹಾರಂ ಬಿಟ್ಟರ್ (ಮೈಆರಿ. ೧೯೩೩ ; ೩೮–೮ ; 801).
[ಕುಱಿಂಬ (< ಕುಱುಂಬ$_1$) + ತೆಱೆ$_3$]

**ಕುಱಿಕು** 'ಕುಱುಂಕು' ನೋ.

**ಕುಱಿಕೆ** 'ಕುಱುಕಿ' ನೋ.

**ಕುಱಿಗಳ್ಳ**, ಕುರಿಗಳ್ಳ (ನಾ). ಕುರಿಗಳನ್ನು ಕದಿಯುವವನು: ಶೂದ್ರಿಕನು ಮುನ್ನ ವಸುಧೆಯೊಳು ಕುಱಿಗಳ್ಳನಾಗೆಬ್ಬಿಸಿದ ಶೂಲಕೆ ಸಿಲುಕಿದನು (ಬಸಪು. ૩೧–೨೩). **ಕುರಿಗಳ್ಳ**: ಕುರಿಗಳ್ಳರು ಕುರಿ ಕದ್ದಿದ್ದಾರೆ (ರೂಢಿ). [ಕುಱಿ$_3$ + ಕಳ್ಳ$_1$]

**ಕುಱಿಗೊಳ್** (ಕ್ರಿ). (ವಿಷಯದ ಮೇಲೆ) ಲಕ್ಷ್ಯವಿಡು; ಗುರಿಯಿಡು: ಧೀರಸತ್ತ್ವರಱಿದುಂ ಕುಱಿಗೊಂಡು ವಿಭಾಗಿಸರ್ (ಕವಿರಾ. ೧–೧೨೫). [ಕುಱಿ$_2$ + ಕೊಳ್$_1$]

**ಕುಱಿತಕುಂಟೆ**, ಕುಱಿತಕೊಂಟೆ, ಕುಱುತ್ತಕುಂಟೆ (ನಾ). ಒಂದು ಊರಿನ ಹೆಸರು. ⓟ ಈಗಿನ ಕುರ್ತುಕೋಟೆ: ಇಟ್ಟಗೆಯ ಬಟ್ಟೆಯಿಂ ಬಡಗಲು ಕುಱಿತಕುಂಟೆಯ ಕೋಲೊಳ್ಪನ್ನೆರಡು ಮತ್ತರ್ಕ್ಕೆಯ್ಯುಂ ಮಹಾಜನಂ . . . ಪ್ರತಿಪಾಳಿಸುವರ್ (ಸೌಇಇ. XI–i, ೮೧–೧೩ ; 1649).

**ಕುಱಿತಕೊಂಟೆ :** ಕಾರ್ತ್ತಿಕ ಸುದ್ದ ಪಞ್ಚಮಿಯುಮಾದಿತ್ಯವಾರ ದಂದು ಕುಱಿತಕೊಣ್ಟೆಯ ಮೂಲಸ್ಥಾನ[ದ] ದೇವರ್ಗ್ಗೆ (ಸೌಇಇ. XI–i, ೩೬–೧೦; 946). **ಕುಱುತ್ತಕುಂಟೆ :** ಶ್ರೀಮತ್ ಲೋಕತಿನಿಮ್ಮಡಿ ಗಳ್ಕುಱುತ್ತ[ಕುಂಟೆ] ಆಳೆ (ಸೌಇಇ. XI–i, ೨–೬; ?). 'ಕೊಱಿತ ಕುಂಟೆ' ಪರಾ. [ಕುಱಿತ$_0$ + ಕುಂಟೆ$_3$]

**ಕುಱಿತಕೊಂಟೆ** 'ಕುಱಿತಕುಂಟೆ' ನೋ.

**ಕುಱಿತನ, ಕುರಿತನ** (ನಾ). ಕುರಿಯಂತಿರುವಿಕೆ; ಹೆಡ್ಡತನ ; ದಡ್ಡ ತನ : ಅಱಿಯದವರನು ನಂಬಿ ಹಗೆಯುಲಿ ತೆಱನಱಿಯದೊದಗುವುದು ನಮ್ಮದು ಕುಱಿತನವು (ತೊರರಾ. ೪–೩–೨೪). **ಕುರಿತನ :** "ಹೆಡ್ಡತನ; ಮಡ್ಡತನ" (ಜಾನಕೋ. ೩೯). [ಕುಱಿ$_3$ + –ತನ]

**ಕುಱಿದಲೆ** (ನಾ). ಕುರಿಯ ತಲೆ : ಶೂಲಿ ದಕ್ಷನಹಂಕರಿಸೆ ತಲೆಹೋದು ದಕ್ಕಲ್ಲ ಕೀಲಿಸಿದ ಕುಱಿದಲೆಯ ಸಾಕ್ಷಿ ಸುರಾಳಿಯೊಳು (ಬಸವು. ೫೪–೫೧); ಮೆಱೆದವಿದಿರಲಿ ಕೋಣ ಕುಱಿದಲೆ (ತೊರರಾ. ೫–೨–೩೫).

[ಕುಱಿ$_3$ + ತಲೆ$_1$]

**ಕುಱಿದಲೆಗ** (ನಾ). ೧. ಕುರಿಯ ತಲೆಯನ್ನುಳ್ಳವನು ; ದಕ್ಷಬ್ರಹ್ಮ. ೨. ಒಂದು ಜಾತಿಯ ಮೀನು : ಕುಱಿದಲೆಗ ಚೆಮ್ಮೀನು ಕೆಮ್ಮೀನು ಮುಕ್ಕಣ್ಣನಾರೆ ನಿಱಿಲು . . . ಗಿಱಿಲುಗಳೆಂಬ ಹೊಳೆವಳಿಯ ಮೀನ್ಗಳಂ (ಹಚಕಾ. ೫–೪೬). [ಕುಱಿದಲೆ + –ಗ$_2$]

**ಕುಱಿದಱಿ$_1$, ಕುರಿದರಿ** (ಕ್ರಿ). ೧. ಕುರಿಯನ್ನು ಕತ್ತರಿಸು,—ಕಡಿದು ಹಾಕು. ೨. ಕುರಿಯನ್ನು ಕತ್ತರಿಸುವಂತೆ ಕತ್ತರಿಸು; ಕಗ್ಗೊಲೆ ಮಾಡು : ಇಱಿದು ಕಳ್ಳರವಳ್ಳಿಗಳ ಕುಱಿದಱಿದು ಭೂಸುರರೂರುಗಳ (ಕುವ್ಯಾಅ. ೧೯–೯). **ಕುರಿದರಿ :** ೨. ಕುರಿದಂದು ಕತ್ತರಿಸಿ ತುಳಿತುಳಿದು ಆ ರಾಜಪುತ್ರರನ್ ಕೊಂದರ್ (ಪಾರಸಿ. ೧೮–೩). [ಕುಱಿ$_3$ + ತಱಿ$_1$]

**ಕುಱಿದಱಿ$_2$** (ನಾ). ೧. ಕುರಿಯನ್ನು ಕತ್ತರಿಸುವುದು. ೨. ಕತ್ತರಿಸಿದ ಕುರಿಗಳ ಒಟ್ಟಿಲು, —ರಾಶಿ. ೩. ಕುರಿಗಳನ್ನು ಕತ್ತರಿಸುವಂತೆ ತರಿಯುವುದು ; ಕಗ್ಗೊಲೆ : ದೆಸೆದೆಸೆಗೊರಲಿ ಚಿಮ್ಮುವ ಚಪಲರನು ಬೆಂಬತ್ತಿ ಬರಿಕೈದು ಕುಱಿದಱಿಯ ಮಾಡಿದನು (ಕುವ್ಯಾವಿ. ೩–೧೦೨) ; ಇಱದೆಚ್ಚು ಕೊರೆದಿತ್ತಲತ್ತ ಕೂರಾಳ್ಗಳು ಕುಱಿದಱಿ ಕಡಿಖಂಡವಾಗೆ (ಭರಚ. ೫೬–೩೮); ಮಡಿದುವಾನೆಗಳ್ಸೇನೆಗಳ್ಕುಱಿದಱಿವೊಲಾದರರಿವೀರ ರೊಳ್ಧೀರರೊಳ್ಪಾರ್ಥನಂದನನ ಮುಂದೆ (ಜೈಮಿಭಾ. ೨೨–೪೦).

[ಕುಱಿ$_3$ + ತಱಿ$_3$]

**ಕುಱಿದಱಿದಱಿ** (ಕ್ರಿ). ೧. ಕುರಿಯನ್ನು ಕತ್ತರಿಸುವಂತೆ ಕತ್ತರಿಸು, —ತರಿ. ೨. ಕಗ್ಗೊಲೆಮಾಡು ; ಕೊಚ್ಚು : ನೆಗೆದು ಬರ್ಪ ವಿಷ ಪನ್ನಗನಂ ಪನ್ನತನನೆಡೆಯೊಳರಿಗಂ ತನ್ನಯ ಗರುಡಾಸ್ತ್ರದಿಂದೆ ಕುಱಿದಱಿ ದಱಿದಂ (ಪಂಪಭಾ. ೧೨–೨೦೫); ಪಡೆಯಂ ಕೊಳೆ ಲಕ್ಕಲಕ್ಕಮಾಗುರ್ಚಿ ಮುವಟ್ಟಿಡಿದುವು ಕುಱಿದಱಿದಱಿದುವು ಕಡುಪಿಂದಿಸೆ ವಿಬುಧ ವನಜವನಕಳಹಂಸಂ (ಶಾಂತಿಪು. ೪–೨೬) ; ಕೆಲರಂ ಕುಱಿದಱಿದಱಿದಂ ಕೆಲಂಬರಂ ಸಂಧಿಸಂಧಿಯಂ ಸಱಿಯೆಚ್ಚಂ (ಗದಾಯು. ೩–೧೦); ಸರಲೊಳೆ ಕೊಱೆಕೊಱೆದು ನೆಱೆಯೆ ಕುಱಿದಱಿದಱಿದಂ (ಕಾವ್ಯಾವ. ೨೫).

[ಕುಱಿದಱಿ$_2$ + ತಱಿ$_1$]

**ಕುಱಿದಱಿಮಾಡು** (ಕ್ರಿ). = ಕುಱಿದಱಿದಱಿ : ಅಡಂ ಕೊಂದುಂ ಕುಱಿದಱಿಮಾಡಿದರಂ ಮುಟ್ಟೆ ಪುಣ್ಯಮಱಿಯದೆ ಪೋಗಿದಾರ್ಪಡಂ ಕಟ್ಟಿದ ಮರನಂ ನೋಡಿರೆ ಮುಟ್ಟದೊಡೆ ಮೀವರೆಂಬಪಾರ್ವರ್ರ್ (ಸಮುಪ. ೧೧–೧೧೩) ; ಕುತ್ತಿ ಕೊಂತದಿಂ ಕುಱಿದಱಿಮಾಡಿ (ಎಕ. VIII, ಸೊರಬ. ೫೦೬–೬ ; 1216) ; ಸರಿಗರಕ್ಕಸರಾನೆಕುದುರೆಸಹಿತೊತ್ತಿ ಕುಱುನಱಿಮಾಡಿ (ಚಿಬಪು. ೨೪–೨೧). [ಕುಱಿದಱಿ$_2$ + ಮಾಡು$_1$]

**ಕುಱಿದಱಿಯಾಗು** (ಕ್ರಿ). (ಕತ್ತರಿಸಿದ ಕುರಿಯಂತೆ) ತುಂಡಾಗು ; ಖಂಡಖಂಡವಾಗು : ಯುದ್ಧದೊಳ್ ಕುಱಿದಱಿಯಾಗಿ ಬಿಟ್ಟರಿ ಬಲಂಗಳೆ ಪೇೞವೆ ನಿನ್ನ ಬೀರಮಂ (ಗದಾಯು. ೨–೩) ; ಇದಿರ್ಚಿದ ಘೋಟಿಬಾಯ್ಲರ್ಕಳೊಳೆಕ್ಕತುಳಮಿಱಿದು ಕುಱಿದಱಿಯಾದರ್ (ಕಾವ್ಯಾವ. ೫೮) ; ಅಸಿಪತ್ರವನದ ಕೂರಲೆ ಕುಸುಮದ ಕೊನೆ ಕೊಯ್ದು ಕುಱಿದಱಿಯಪ್ಪರ್ (ಅನಂಪು. ೯–೩೩) ; ಒಱೆವ ರಕ್ತದ ಛಾಯದಿಂದ ಕಾಲಾಳ್ಗಳು ಕುಱಿದಱಿಯಾದರೀರ್ವಲದಿ (ವರ್ಧಚ. ೬–೯೩).

[ಕುಱಿದಱಿ$_2$ + ಅಗು$_1$]

**ಕುಱಿದಱಿಹಿ** (ನಾ). ತುಂಡುತುಂಡಾಗಿ ಕತ್ತರಿಸುವವನು : ಸಾಲ ಕುಱಿದಱಿಹಿಗಳ ಕರ್ಮದ ಕೂಲಿಗರ (ಕುವ್ಯಾಅ. ೬–೧೫).

[ಕುಱಿ$_3$ + ತಱಿಹ + –ಇ$_3$]

**ಕುಱಿದೆಱಿಗೆ** (ನಾ). ಕುರಿಗಳ ಮೇಲೆ ಹಾಕುವ ತೆರಿಗೆ : ಕುಱುಬ ಗೌಡಗಳಿಗೆ ಕುಱಿದೆಱಿಗೆಯಿಲ್ಲಾಯೆಂದು ಬಿಟ್ಟು ಕೊಟ್ಟ ಶಾಸನ (ಸೌಇಇ. IX–ii, ೬೪೧–೧೫ ; 1557).

[ಕುಱಿ$_3$ + ತೆಱಿಗೆ]

**ಕುಱಿದೆಱೆ, ಕುಱುದೆಱೆ** (ನಾ). = ಕುಱಿದೆಱಿಗೆ : ಕುಱಿದೆಱೆ ಮಾನ್ಯಂಗೊಂಟಗೆ ಎಂಚಗೊಳಗ (ಸೌಇಇ. XV, ೫೮೧–೧೪; 12ನೆಯ ಶತ); ಹೊಲದೆಱೆ ಕುಱಿದೆಱೆ (ಸೌಇಇ. XX, ೯೧–೪೫ ; ?). **ಕುಱುದೆಱೆ :** ತಿಪ್ಪೆಯೂರೊಳಾದ ಅಟ್ಟದೆಱೆಯಂ ಕುಱುದೆಱೆಯ ಮುಟ್ಟ ಸಾಮನ್ತ ದೆಱೆಯೆಲ್ಲವಮ್ಬಿಟ್ಟಂ (ಎಕ. III, ಮಳವ. ೩೦–೧೦ ; 909).

[ಕುಱಿ$_3$ + ತೆಱೆ$_3$]

**ಕುಱಿಪಟ್ಟಿ** (ನಾ). ೧. ಕುರಿಯ ಹಟ್ಟಿ ; ರೊಪ್ಪ. ೨. ಒಂದು ಊರಿನ ಹೆಸರು : ಸೂರ್ಯಗ್ರಹಣದೊಳು ಅಮ್ಮೆಳೆಯ ಪಳಳ ಕುಱಿಪಟ್ಟಿಯೊಳೆ ಕಲಿಪಟ್ಟೊಡೆಯ ಕುಱುಂಬಗಾವುಣ್ಡಂಗಂ (ಸ್ಟೈಅರಿ. ೧೯೩೩, ೩೮–೬ ; 801). [ಕುಱಿ$_3$ + ಪಟ್ಟಿ$_1$]

**ಕುಱಿಪಟ್ಟಿಗೆ** (ನಾ). = ಕುಱಿಪಟ್ಟಿ : ಕಾಳರಕ್ಕಸಿ ನಾಂ ಕುಱಿದಿಡಿ ದೊಡೆಂದಡಿಕ್ಕುವಕ್ಕುಱಿಪಟ್ಟಿಗೆಯಿದೆ ತಿನಲಾಱದೆ ದೇವಿಗೆ ಮತ್ತಮಾದುದೆ (ಶ್ರಾವಕಾ. ೧೦೬–೧೯). [ಕುಱಿ$_3$ + ಪಟ್ಟಿಗೆ ?]

**ಕುಱಿಪಿಡು, ಕುಱುಪಿಡು, ಕುಱುಹಿಡು** (ಕ್ರಿ). ಗುರುತಿಸು; ಲಕ್ಷಿಸು : ಏಕೆನ್ನನೋವೆಡೆಯನಱಿಸಿ ಕುಱಿಪಿಡ ಬಗೆವೆ (ಅಂತಿಗೂ. ೧೫–೨೯೫). **ಕುಱುಪಿಡು :** ಬಂಧಿಸಿ ಕುದುರೆಯ ಸಾಕದೆ ಕೊಂದಗೆ ಪಾತಕಮೆನಿತ್ತೊ ಕುಱುಪಿಡಲಱಿಯೆಂ (ಅಶ್ವಶಾ. ೧೦–೧೧) ; ಬಂಡು ಬೂತಾಟದ[ಬಣ್ಣನೆ] ಯನು ಕಿವಿಗೊಂಡು ಕೇಳದೆ ಕುಱುಪಿಡದೆ (ಹದಿಬ. ೮–೪೪) ; ಪೊಸ ಬಗೆಗೆ ಪೊಸತೊಂದು ಕುಱುಪಿಟ್ಟು (ಅಶ್ವತ್ಥಾ. ೩೦–೪). **ಕುಱುಹಿಡು :** ಕುಱುಹಿಲ್ಲದ ಜ್ಞಾನವ ಕುಱುಹಿಟ್ಟು ಅಱಿವ ಪರಿ ಇನ್ನೆಂತೊ (ಮೋಳಿಮಾ. ೩–೬) ; ಈ ಜೀವ ನಿಕರವ ಕೂಡುವಳು ಕುಱುಹಿಟ್ಟು ತತ್ತ್ವದುಪಾಧಿ ಭೇದದಲಿ (ನಿಭಾಗ. ೧೦–೯೩–೨೬).

[ಕುಱಿಪು + ಇಡು$_1$]

**ಕುಱಿಪು, ಕುರುಪು$_2$, ಕುರುವು$_2$, ಕುರುಹ$_1$, ಕುರುಹು$_1$, ಕುಱುಪು, ಕುಱುವು$_1$, ಕುಱುಹು** (ನಾ). ೧. ಗುರುತು ; ಚಿಹ್ನೆ : ಕುಱಿತಂತೆ ಪೇೞ್ದನಾಲ್ಕುಂ ಕುಱಿಪುಗಳಿಂದಱಿದು ಪರರ ದೋಷಂಗಳುಮಂ (ಕವಿರಾ. ೧–೬೨) ; ಮುಬಿಲೊಂದನಲ್ಲಿ ಕುಱಿಪಂ ಮಾಡಿಟ್ಟು (ಸುಕುಮಾ. ೫–೩೩) ; ಕುಱಿಪಂ ಮನ್ಮಾತೆ ಪೇೞ್ದಟ್ಟಿದಳು (ಪಂರಾವಾ. ೧೧–೧೬೮). ೨. ವರ್ಣನೆಯ ವಸ್ತು; ವಿಷಯ (?) : ತುಂಬಿ ಗಿಳಿ ಪುರುಳಿ ಕೋಗಿಲೆ ಯೆಂಬಿವುವೆರಸಮರತರುಗಳಿಂದ್ರನ ಬೆಸದಿಂದಂ ಬಂದುವೆಂದೊಡು ಪವನಮುಂ ಬಣ್ಣಿಸಲೆನಗೆ ನಾಡೆಯುಂ ಕುಱಿಪಲ್ತೇ (ಆದಿಪು. ೬–೯೨).

**ಕುರುಪು₂**: ೧. ಏನಾದರೂ ಕುರುಪು ಕೊಂಡೊಯ್ದುರಾಯ್ತು (ಚಂದ್ರಸ. ೨೬); ಕುರುಪಿಟ್ಟು ಕರಪಿಡಿದು ಕಥೆಯನುಸುರಿದನು (ಕಗದ್ಯ. ೭೫). **ಕುರುವು₂**: ೧. ಕುರುನೃಪನಹುದಲ್ಲಿಯೆಂದೆನಿಸಿ ದೂರವೋಳ್ಪಿರಿದಾಗಿ ಸಂಶಯಗೊಳುತ ಬರೆ ಸಂಜಯಂ ಕುರುವರಿದು (ತುರಂಗ. ೭೩-೫೦); ಹಾಗಲ್ವಾಡಿಯ ಹರಿಯೊ ಹಳ್ಳದ ನೀರ ಹಾಲೆಂದು ಕುಡಿದ ದೊರೆಮಗ ಚೋಣೂರ ಬಾವಿಯ ಕುರುವ ಹರಿದನು (ನಾಪದ. ೧೪೦). **ಕುರುಹ₁**: ೧. ಹರನ ಸಂದರ್ಶನದ ಲಾಭದ ಕುರುಹವಾದರು ತೋರದಿದೆ ಫಲದಾಶೆಯೆತ್ತಣದು (ಪಾರ್ವಪ. ೧೮). **ಕುರುಹು₁**: ೧. ತವಕಪಡನೇತಕೋ ಕುರುಹ ತೋರಲು ನಮಗೆ (ಮಂಕುಕ. ೩೬); ಆ ಮಹಾ ಗೌರವದ ಕುರುಹು ಈ ನಮಸ್ಕಾರ (ಅಲಹೂ. ೨೪). **ಕುಱುಪು**: ೧. ಕುಱುಪಂ ಪುರ್ವಿನ ಜರ್ವೆ ತೋಱೆ ಬಗೆಯಂ ಕಣ್ಸನ್ನೆಗಳ್ ಪೇೞೆ (ಪಂಪಭಾ. ೪-೮೨); ಕಿವಿಯೋಲೆಯಲ್ಲಿ ಕುಱುಪಂ ಬರೆದಂ (ಕಾದಂಉ. ೩೦೪); ಕುಱುಪ ಕಳುಪದೆ ಕೂರ್ಪರನೊಲಿದಟ್ಟಿದೆ (ಕುರಾಸಾಂ. ೩೬-೧೦). ೩. ಕೀರ್ತಿ; ಪ್ರಸಿದ್ಧಿ: ಮೆಱೆವನೆಱೆಯಂಗನಾತನ ಕುಱುಪಿನ ಸುತನೆಱಗಿದವರ್ಗೆ ವುಳೆಯೊಱಗಿದವೊಲ್ ಕೆಱೆವಂ ಹೊಂವುಳೆಗಳನುಱದೆಱದವರ್ಗೆಱಗುತಿರ್ಪ ಬಱಸಿಡಿಲೆನಿಪಂ (ಎಕ. XI, ದಾವಣ. ೨೫-೨೧; 1224). **ಕುಱುವು₁**: ೧. ಶರೀರದ ನೆಲವುನೆಯಲ್ಲಿದ್ದು ನೆರೆ ವಸ್ತುವನಱಿವುದಕ್ಕೆ ಕುಱುವಾವುದು (ನೋಳಿವಾ. ೫೩-೨೨೦); ಅಂದಾ ಭವದ ಸುಕೃತವೊದಗಿತ್ತು ಎಂಬುದಕಿದು ಕುಱುವಾಯ್ತು (ಪರಗೀ. ೧೦-೧). **ಕುಱುಹು**: ೧. ಅಱಿವು ತಲೆದೋಱಿದಲ್ಲದೆ ಕುಱುಹು ನಷ್ಟವಾಗದು ಕುಱುಹು ನಷ್ಟವಾದಲ್ಲದೆ ಮಾಯೆ ಹಿಂಗದು (ಅವಚಂ. ೨೬೩-೧೨೫೬); ಎನಗೆ ಬರ್ಪುದಕೆ ಕುಱುಹೆಂತು ಹೇಳೆಲೆ ದೇವ (ನಂಬರ. ೧-೭೮); ಅವರಂ ಕರೆದು ಕುಱುಹು ಕೂನಂಗಳಂ ಬೆಸಗೊಂಡು (ಪುಣ್ಯಾಸ್ರ. ೩-೩೮ ವ); ವ್ಯಾಧಿಯ ಪೆಸರಂ ಕುಱುಹಂ ಸಾಧಕರಱಿವಂತೆ ಪೇೞ್ದೆ (ಅಶ್ವಶಾ. ೧೦-೧೩); ಎಲ್ಲಿ ನೋಡಿದರು ಜನಕಜೆಯ ಕುಱುಹನು ಕಾಣೆ (ವೆಂಕಾರಾ. ೫-೪-೩೨).

[ಕುಱಿ₁ + -ಪು₂. / ತಮಿ. ಮಲ. ಕುಱಿಪ್ಪು]

**ಕುಱಿಬ** 'ಕುಱುಂಬ₁' ನೋ.

**ಕುಱಿಮನ** (ನಾ). ೧. ಕುರಿಯ ಮನಸ್ಸು, —ಸ್ವಭಾವ. ೨. (ಆಲಂ) ಪುಕ್ಕಲು ಮನಸ್ಸು; ಹೇಡಿಬುದ್ಧಿ: ಚಿತ್ರಸೇನನ ಸೆಱಗ ಹಿಡಿದುದು ಸಮರ ಹೊಯ್ ಹೊಯ್ ಕುಱಿಮನದ ಕುನ್ನಿಗಳನೆನುತೇಱಿದನು ಮಣಿರಥವ (ಕುವ್ಯಾಅ. ೧೯-೧೪). ೩. ಮೂಢಮನಸ್ಸು; ಹೆಡ್ಡತನ: ನೆಱೆ ನಿಮ್ಮ ನೆನೆಯಲೊಲ್ಲದ ಕುಱಿಮನಮಂ ಸುಡುವೆಂ (ಶಂಕಕಂ. ೫-೧೬). [ಕುಱಿ₃ + ಮನ₁]

**ಕುಱಿಮಾಡು** (ಕ್ರಿ). ಗುರುತುಮಾಡು; ಲೆಕ್ಕಿಸು: ಇಂತೆ ಪೆಱವುಮನೀ ಕುಱಿಪನೆ ಕುಱಿಮಾಡಿ ಪೇೞ್ಗೆ ಕಬ್ಬಮುಂ (ಕವಿರಾ. ೧-೧೩೬); ಮತ್ತದನೆ ಪೋಲ್ವುದಂ ಕುಱಿಪುಗಳಂ ಕುಱಿಮಾಡಿ ಮಾಡಿ ಪೇೞ್ವುದು (ಕವಿರಾ. ೩-೧೨೬). [ಕುಱಿ₂ + ಮಾಡು₁]

**ಕುಱಿಯಪ** (ನಾ). ಒಬ್ಬಾತನ ಹೆಸರು: ರೇವನಕೆಱೆಯ ಕೆಱೆಗೊಮ್ಮತ್ತರ್ ಗುಣ್ಡುಮೊಗೆಯೊಮ್ಮತ್ತರ್ ಮಣಲಿಯೊಮ್ಮತ್ತರ್ ಕೇಸರಿಯೊಮತ್ತರ ಅಪ್ಪುಟ್ಟಕಮ್ಮ ಕುಱಿಯಪ (ಎಕ. VII, ಶಿವಮೊ. ೧೧೫-೧೪; ?). [ಕುಱಿ ? + ಅಪ (< ಅಪ್ಪ₁)]

**ಕುಱಿವಡವು** (ನಾ). = ಕುಱುವಡಿ₂: ಅರ್ಥಗಪ್ಪಡಮುಂ ಬಿಸುಟ್ಟು ಕಟ್ಟೆಗಟ್ಟದೆ ಸಯ್ಯುತ್ತಡುವರುಂ ಕುಱಿವಡವಂ ಪೊ [ಪಾಠಾಂ. ವಂಡಬೊ, ಕಡಂಬೊ] ದೆವರುಮಾದೊರಲ್ಲಿಂದತ್ತ ಕಂಬಳತೀರ್ಥವೆಂಬುದಾದುದವರುಂ ಶ್ವೇತಪಟರೆಂಬೊರಾರದರ್ (ವಡ್ಡಾರಾ. ೯೩-೧೪). [?]

**ಕುಱಿಮಾನಿಸ** (ನಾ). ಕುರಿಯಂತಹ ಮನುಷ್ಯ; ತಿಳಿಗೇಡಿ; ದಡ್ಡ: ಕುಱಿಮಾನಿಸರ ಕುಯುಕ್ತಿಗೆ ನಸುನಗುತೆ (ಪದ್ಮರಾ. ೬-೨೧); ನೀನಾರವಂ ಮಲೆನಾಡೊಳ್ಕುಱಿಮಾನಿಸಂ (ಅಪ್ರತಿ. ೧೪೪-೩); ಕುಱಿಮಾನಿಸರೆಮ್ಮ ತಪ್ಪನೆಣಿಸಿದೊಡೇನುಂಟು (ಹಾಲಾಸ್ಯ. ೨-೨೬); ಶಾಪಾನುಗ್ರಹ ಸಮರ್ಥರ್ ನೀಮೆ ವಲಂ ಪರಿವ ನೆತ್ತರೇನೊ ಎಂತಱಿವಿನೀ ವ್ಯೆಮೆಯಂ ಕುಱಿಮಾನಿಸನೆಂ (ರಾಮಾಶ್ವ. ೩೬-೧೬).

[ಕುಱಿ₃ + ಮಾನಿಸ (< ಮಾನಸ₁)]

**ಕುಱಿವಿಂಡು**, ಕುರಿಹಿಂಡು (ನಾ). ೧. ಕುರಿಗಳ ಹಿಂಡು, —ಮಂದೆ: ಮಹಾಟವಿಯೊಳಾಡುತಿರ್ಪ ಕುಱಿವಿಂಡು ನೀರುಣಲ್ ಬಗೆದು ಬಂದಲ್ಲಿ (ಪಂಚತಂ. ೭೬-೧೨); ಕುಱಿವಿಂಡಂ ತೋಳಂ ಪೊಕ್ಕಂತೆ (ಧರ್ಮಾಮೃ. ೭-೭೧). ೨. (ಆಲಂ) ಹೇಡಿಗಳ ಗುಂಪು, —ಸಮೂಹ: ಜಗವ ಹೂಡುವ ಹೊಱವ ಬಲುಗೈಯಗಧರಂಗೀ ನೃಪರ ಕುಱಿವಿಂಡುಗಳ ಕುಮ್ಮರಿಗಡಿತಕಾವುದು ಬೇಕು ಭುಜಸತ್ವ (ಕುವ್ಯಾಸ. ೧೦-೧೦). **ಕುರಿಹಿಂಡು**: ೧. ಕುರಿಹಿಂಡಿಗೆ ತೋಳ ಹಾರಿದಹಾಗೆ (ಗಾದೆ). [ಕುಱಿ₃ + ಪಿಂಡು₂]

**ಕುಱಿಹಿಕ್ಕೆ** (ನಾ). ಕುರಿಯ ಹಿಕ್ಕೆ, —ಮಲ: ಬಳ್ಳದೊಳ್ಕುಚ ಕುಱಿಹಿಕ್ಕೆ ಮರಳು ಮರ ಮುಳ್ಳು ಮೊನೆಯು ಖಡ್ಗದೊಳಗೆ ಎಲ್ಲಿ ಭಾವಿಸಿದೊಡಲ್ಲಲ್ಲಿರುವನು ಶಿವ ಕಲ್ಲುಮನೆಯ ಬಯಸಿದನೆ (ಅಮುಸಾಂ. ೪-೯೩). [ಕುಱಿ₃ + ಹಿಕ್ಕೆ (< ಪಿಕ್ಕೆ)]

**ಕುಱು₁** 'ಕುಱಿ₁' ನೋ.

**ಕುಱು₂**, ಕುರು₂ (ಗು). ಸಣ್ಣದಾದ; ಚಿಕ್ಕದಾದ: ಕಿಱಿದಕ್ಕರ ಕುಱೆಂಬೆಡೆಯಲ್ಲಿ ತಕಾರಂ ಸ್ವರಮಡಸೆ ಪರಕ್ಕೃತ್ವಮಸ್ವರಂ ನಿಲೆ ಪರದೊಳ್ (ಶಮದ. ೧೮೧). 'ಕುಱುಗಡ್ಡ', 'ಕುಱುಗೆಯ್', 'ಕುಱುದಡಿ' ಪರಾ. **ಕುರು₂**. 'ಕುರುಗೆರೆ' ಪರಾ.

[ದೇ. ‖ ತಮಿ. ಮಲ. ಕುಱು; ಕೊಡ. ಕೊರ; ತೆಲು. ಕುರು]

**ಕುಱು₃** (ನಾ). ಗುರುತು; ಚಿಹ್ನೆ: ಅಯ್ಯಾವೊಳೆಯ ತಳದಿನಿದುವೆನೆ ಗ್ಗಿರ್ಱಿದೆನಿಪ ರಯ್ಯಮಾ ದ್ವಾರಾವತೀಪುರಕೆ ಕುಱುವೆನಿಪ ಕುಱುಗೋಡ ತಳದೊಳಗೆ ತಳರದಯ್ಯೂರ್ವ್ವರುಂ (ಸೌಇಇ. IX-i, ೨೯೬-೨೪; 1196).

[< ಕುಱಿಪು]

**ಕುಱುಂಕು**, ಕುರಿಕು, ಕುರುಕು₁, ಕುಱುಕು₁, ಕೊರಕು (ಕ್ರಿ). ಕೊಂಚ ಕೊಂಚವಾಗಿ ಕಚ್ಚಿ ತಿನ್ನು; (ಕೊಕ್ಕಿನಿಂದ) ಕುಕ್ಕಿ ತಿನ್ನು: "ಕುಱುಕು, ಕುಱುಂಕು – ಖಾದನೇ (ತಿನ್ನು)" (ಶಮಧಾ); ಹಳಹಳನಿರ್ದ ತಾರೆಗಳಸಾಯ್ದು ಕುಱುಂಕುತುಂ ಉದಯಾದ್ರಿಯನರ್ಕನೇಱಿದಂ (ಕುಸುಮಾ. ೧೪-೨೧); ಸಣ್ಣ ಮೀಂಗಳಂ ಮಿಡಿಚೆಗಳಂ ಕುಱುಂಕಿ ಮುಗುೞ್ದೀಂಟಿಯೆ ಡೞ್ಳನೆ ತೇಗಿ (ದಶಕು. ೮-೨೧೪); ಪಾರ್ಥಕ ಬಕನಾಯ್ದುಱಿಸಿ ಕು [ಪಾಠಾಂ. ಕ] ಱುಂಕುವ ಕಣ್ಣಂ ಮಿಱುಗುವ ಮೀನೆನ್ನದೇನೆಂದಪುದೊ (ಧರ್ಮನಾ. ೫-೯೬); ಕುಱುಂಕು ಕುಱುಕು (ಶಬ್ದಾನು. ೮೦ ವ್ಯಾಖ್ಯಾ). **ಕುರಿಕು**: "ಜಿಲಾ = ಜರಿ ಬಿಲ್ಲತೀತಿ ಕುರಿಕಿದಪುದೆಂಬುದು" (ಕಾಶಕ್ರ. ೫೦). **ಕುರುಕು₁**: ಪರಸ್ಪರ ಹೊಡೆದಾಡುತ್ತಿದ್ದವರು ಈಗ ಅಕ್ಕಪಕ್ಕಗಳಲ್ಲಿ ಕುಳಿತು ತಿಂಡಿ ಕುರುಕುತ್ತ ... ಸರಸವಾಡುತ್ತಿದ್ದರು (ಹುಲಿಹಾ. ೧೨೦). **ಕುಱುಕು₁**: "ಕುಱುಕು, ಕುಱುಂಕು–ಖಾದನೇ (ತಿನ್ನು)" (ಶಮಧಾ); ಈಪಾಡಿದ ಕೂಳಂಬಲಿಯ ನಾಯ್ದು ಕುಱುಕುವ ಹೇಸಿ ದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ (ಬಸವ. ೫೫೬); ಬಾಂದೊಱೆಯಪರತಟದೊಳೆಳಮೀಂಗುಱುಕುವ ಬಕನಂತಿರಿರ್ದುದಿಂದುವಬಿಂಬಂ (ಲೀಲಾವ. ೭-೯೯); ಹುಱಿದರಳನು ಕುಱುಕುವನಂತಿಧನಱಿಯೆಂದನು (ಯೋಗಾಂವಿ. ೪-೩೬).

**ಕೊರಕು :** ಪರಭೃತಂಗಳು ತಳಿರೆಂದೇ ಭರದಿ ಕೊರಕಲ್ಕರದಿ ಬಿಡಿಸಲು ತರುಣಪಲ್ಲವವೆಂದು ಬೆರಳನು ಕಚ್ಚೆ ಬೆದರುವರೂ (ಕೃಕರ್ಣಾ. ೩-೩೫) ; ಎಲ್ಲರಿಗೂ ಇಟ್ಟು ತಾನೂ ಒಂದು ಚೂರು ಕೊರ ಕುತ್ತಾ ಕುಳಿತಳು (ಕಣ್ಮಣಿ. ೬೮).

[ದೇ. ‖ ತಮಿ. ಮಲ. ಕೊಱು ; ತೆಲು. ಕೊಱುಕು]

**ಕುಱುಂಗೋಡು,** ಕುಱುಗೋಡು (ನಾ). ಒಂದು ಊರಿನ ಹೆಸರು. ▷ ಈಗಿನ ಬಳ್ಳಾರಿ ಜಿಲ್ಲೆಯ ಕುರುಗೋಡು : ಶ್ರೀಮದಱುಬಲ್ಲ ದಾಗ್ರದುಂ ಕುಱುಂಗೋಡ ಮೂನೂರ್ವರ್ಮ್ಮಹಾಜನರುವೊಡೆತಿಟ್ಟುದೇ ಕಮ್ಮನ ದೇಗುಲಕೆ ಕುಱುಂಗೋಡಪೊಲದೊಳಱುವತ್ತಿಮ್ಮರ್ತರ್ಕೆಯ್ಯಂ (ಸೌಇಇ. IX-i, ೬೫-೮ ; 947). **ಕುಱುಗೋಡು :** ಮೆಱೆವುದು ಕುಲಗಿರಿ ಕುಱುಗೋಡ ದುರ್ಗ್ಗವಾಗ್ಗ್ರಂ ದುರ್ಗ್ಗಂ (ಎಇ. XIV, ೨೭೧-೧೨೦ ; 1173) ; ತೆಲುಂಗ ಭೂಪಾಲನೇಳೆದಿಕ್ಕೆಯನೆ ಮಾಡುವುದೀ ಕುಱುಗೋಡ ಕೋಟೆ ತಾಂ (ಸೌಇಇ. IX-i, ೨೯೬-೧೪ ; 1176). [?]

**ಕುಱುಂಬ$_1$,** ಕುರುಂಬ, ಕುರುಬ$_1$, ಕುಱಿಂಬ, ಕುಱುಬ, ಕುಱುಬ$_1$ (ನಾ). ೧. ಕುರಿ ಸಾಕುವವನು ; ಕುರಿಗಾಹಿ : ಕುಱುಂಬರ ಪಳ್ಳಿಗೆ ಪೋಗಿ ಕುಱಿಯಂ ಕಳ್ದು ತಂದು (ಸುಕುಮಾ. ೬-೨೭ ವ) ; ಕುಱುಂಬ ನರಸುಗಂಡಂತೆ ನೋಡುತ್ತಮಿರ್ಪನ್ನೆಗಂ (ಧರ್ಮಾಮೃ. ೧-೨೧೨) ; ಕುಱುಂಬನ ಕುತ್ತಕ್ಕೆ ಕುಱಿಯ ಪಿತ್ತಮೆ ಮದ್ದಾಯ್ತು (ರಾಮಾಶ್ವ. ೩೭-೫). ೨. (ಆಲಂ) ದಡ್ಡ ; ಮೂಢ : ಕುದುರೆಯೇರ್ದ ಕುಱುಂಬನಂತೆ ನಡುಗುತ್ತುಂ (ಧರ್ಮಾಮೃ. ೧-೧೪೪). **ಕುರುಂಬ :** ೧. 'ಕುರುಂಬಿಕೆ' ಪರಾ. **ಕುರುಬ$_1$ :** ೧. "ಜಾಬಾಲಃ, ಅಜಾಜೀವಿ -೨ ಕುರುಬನ ಪೆಸರು" (ಸಿದ್ಧಾಂತಿ. ೨೬೭) ; ಈ ಪ್ರದೇಶ . . . ಕ್ರಮೇಣ ಕುರುಬರ ವಾಸಸ್ಥಳವಾಗಿ (ಹುಟ್ಟಿಹ. ೪) ; ಕುರುಬನಿಲ್ಲದ ಕುರಿಯಹಿಂಡು ತೋಳನ ಬಾಯಿಗೆ ತುತ್ತಾಗಬಹುದು (ಹಾಹುತ್ತ. ೧) ; ಕುರಿ ಕೊಬ್ಬಿದಷ್ಟು ಕುರುಬನಿಗೆ ಲಾಭ (ಗಾದೆ). ೩. (ಉಕ) ಹಳಬ : ಬೆಳಗಾವಿ ಜಿಲ್ಲೆಯಲ್ಲಿ ಕುರುಬ = ಹಳಬ (ಕರ್ನಾಟ. ೬೭). **ಕುಱಿಂಬ :** ೧. ಸಿರಿವುರದಿನ್ದಿಟ್ಟಗೆಗೆ ಪೋದ ಬಟ್ಟೆಯ ಕಣ್ಣ ಕುಱಿಂಬನ ಕಲ್ಲ ಬಡಗಣ ದೆಸೆಯೊಳ್ (ಎಇ. XVI, ೨೯-೨೭ ; 1010) ; ಅದಱ ಸೀಮೆ ಮೂಡಲು ಕುಱಿಂಬರ ಸಿದ್ದೇಶ್ವರದ ಕೆಯಿ ತೆಂಕಲು ಕರಿಗ ಸೊವಣನ ಕೆಯಿ (ಕಕಲ. ೧೦-೩೮) ; ಅಯ್ಯೂಱು ಕುಱಿಂಬರ ಸೋಮನಾಲದ ಕೆಱೆಯಲು ಬಿಟ್ಟಗದ್ದೆ (ಎಕ. VI, ಕಡೂರು. ೩೭-೬೪ ; 1187) ; **ಕುಱಿಬ :** ೧. ಅಲ್ಲಿಂ ತೆಂಕ ಕುಱಿಬರ್ದಿಟ್ಟೆ ಬಿದಿರ ಕುಳಧರ್ಮ ನಡಿಹದೇಗುಲ (ಎಕ. X, ಶ್ರೀನಿವಾ. ೬-೩೨ ; 988 ?) ; ನೂಲಪರ್ವ್ವಕ್ಕೆ ವರ್ಷಂಪ್ರತಿ ಕುಱಿಬ ಸೇಣಿಗರೊಕ್ಕಲೊಕ್ಕಲು ವೀಸವಯ್ದಂ ಕೊಟ್ಟರ್ (ಎಇ. V, ೨೦-೬೯ ; 1161) ; ಕುಱಿಬರಲ್ಲಿ ಕಂಬಳಿ ೧. (ಸೌಇಇ. XX, ೩೪೭-೭ ; 13ನೆಯ ಶತ). **ಕುಱುಬ$_1$ :** ೧. ಹುಲು ಬೇಡಂ ಮುರವೈರಿಯಂ ಕುಱುಬನಾ ಶೂದ್ರೀಕನಂ . . . ಹತಮಾಡರೇ ಪಡೆಯೊಳಂ ಪೂರ್ವಾರ್ಜಿತಂ ಹಾಗಿರಲ್ (ಸೋಮೇಶ. ೩೧) ; ಆ ನಗರೇಜ ಸೀಮೆವೊಳಗಣ ಕುಱುಬರ ಕಾಳೆಯನ ಕೆಱೆಯನೂ (ಎಕ. XI, ಚಿತ್ರದು. ೧೨-೨೦ ; 1286). ೨. "ಕುಱುಬನೆನಲ್ ಮೂಢಚಿತ್ತನೆಂದಱಿಗೆಬುಧರ್" (ಭಾರನಿ. ೧೫) ; ಅಱಿದೆನೆಂಬ ಕುಱುಬನ ನೋಡಾ (ವಚಶಾ. I, ೮೧) ; ಸುಭವ್ಯರಂ ಖು(ರು)ಷಿಯರ ನೆಱೆಸಾರದೆ ಸಾರ್ವರೆಬ್ಬು(ಧಿ)ಯಿಂ ಕುಱುಬನ(ರ)ನಜ್ಞನ(ರ)ಂ ಖಲರನನ್ಯವಧೂರತರಂ (ಜೀವಸಂ. ೨೩೮-೯ ಪರಿ. ೧) ; ಕುಱುಬರೂರಲಿ ಗಾಜು ಮಾಣಿಕ (ಕುವ್ಯಾಸ. ೮-೩೪).

[ದೇ. ‖ ತಮಿ. ಮಲ. ಕುಱುಮ್ಬ ; ತುಳು. ಕೊಡ. ಕುರುಬೆ ; ತೆಲು. ಕುರುಪ, ಕುರುಮ]

**ಕುಱುಂಬ$_2$** (ನಾ). ೧. ಕೋಟೆಯ ಕಾವಲುಗಾರ ; ದುರ್ಗರಕ್ಷಕ : "ಕುಱುಂಬರೆಂದು ಅಡಂಗಾಯ್ತರೆಂದು ಕೊಟ್ಟವಳರ್" (ಕಶಸಾ. ೧೮-೩೫೧) ; "ಅಡಂಗಾಯ್ತ ಕುಱುಂಬರೆನೆ ಕೊಟ್ಟವಳರು" (ಕಬ್ಬಿಕೈ. ೩೭) ; ಮಲೆಪರ್ ಮಾಱಾಂಪರಿಲ್ಲ ಕ್ರಮದಿನದಟರಾಟಂದರಿಲ್ಲುರ್ಕಿ ಬೇಡರ್ಕಲದಿಂ ಮಾರ್ಕೊಂಡರಿಲ್ಲೊಟ್ಟಜೆವೆರದು ಕುಱುಬರ್ತ ಱುಂಬಿರ್ದರಿಲ್ಲ . . . ಭೂಮಂಡಳಮಾಜ್ಞಾಸಿದ್ಧಮಾದತ್ತು (ಸುಕುಮಾ. ೧-೮೦) ; ಮುಂತೆ ಪೆರುಮಳಲೆಂದು ಕುಱುಂಬರ್ ಗುಡಿಯ ನೆತ್ತೆ ಸಂತತಂ ಪರಿಜನಂ ನಲಿವುತ್ತೆ ಬೆಂಬತ್ತೆ (ನಂಬಿರ. ೧೧-೩೭). ೨. ಕೊಠಾರಿ ; ಉಗ್ರಾಣದ ಅಧಿಕಾರಿ : "ಕುಱುಂಬಂಗೆ ಪೆಸರೀಗ ಕೊಟ್ಟಾರಿಯೆಂದು" (ಕಶರ. ೧೨). [← ತಮಿ. ಕುಱುಮ್ಬು]

**ಕುಱುಂಬ$_3$** ಕುಱುಬ$_2$ (ನಾ). ಕುಂಬಾರ ; ಗಡಿಗೆ, ಮಡಕೆ ಮಾಡುವವನು : "ಬಾಂಬಂ = ಕುಱುಂಬಂ" (ಶಮದ. ಪರಿ. ೨). **ಕುಱುಬ$_2$ :** "ಬಾಂಬರೆನೆ ಕೋವರೆನೆ ಕುಱುಬರ್" (ಕಬ್ಬಿಕೈ. ಕಿ. ೯೧).

[< ಕುಂಬಱ ?]

**ಕುಱುಂಬ$_4$** 'ಕುಱುವ$_1$' ನೋ.

**ಕುಱುಂಬ$_5$** 'ಕುಱುಂಬು$_2$' ನೋ.

**ಕುಱುಂಬಕೋಟೆ** (ನಾ). ರಕ್ಷಕರಿಂದ ಕೂಡಿದ ಕೋಟೆ : ಕುಱುಂಬ ಕೋಟೆ ಪೋಗದ ಪಗೆ ಇಲ್ಲದೇಂ ಪಿರಿದಿಂ ಬಾಹುಬಳನ್ನಳಿದನ್ತೆ ಗಣ್ಡನ (ಕಇಅ. ೪-೨-೧೨೫ ; 1058). [ಕುಱುಂಬ$_2$ + ಕೋಟೆ$_1$ (< ಕೋಂಟೆ)]

**ಕುಱುಂಬರಾಯ** (ನಾ). ಕುರುಬರ ವಂಶಕ್ಕೆ ಸೇರಿದ ಅರಸು, —ರಾಜ : ಮೊದಲೊಳ್ ಹರಿಹರ ಬುಕ್ಕರ್ ಮೊದಲೆನಿಸಿದರರಸುಗೆ ಗೆಯ್ದು ಪಸರಿಸಿ ಜಸಮಂ ಪದಪಿಂ ಕುಱುಂಬರಾಯರ್ ಪದಿಮೂವರ್ ಬರ್ದಿಲವೇಱ ಬಣ್ಣಂಬಡೆದರ್ (ಚಿಕವಿ. ೨-೧೩).

[ಕುಱುಂಬ$_1$ + ರಾಯ]

**ಕುಱುಂಬಿಡಿ** (ನಾ). ಒಂದು ಬಗೆಯ ತೆರಿಗೆ (?) : ಇರ್ವ್ವರುಂ ಸಬ್ಬಜ್ಗಿದರ್ ವಿಚಾರಸರುಂ ಪಲ್ಕಡಿಗೆ ಕುಱುಮ್ಬಿಡಿ ವಿಟ್ಟಾರ್ (ಮೈಆರಿ. ೧೯೩೬, ೧೬-೧೪ ; ಸು. 450). [?]

**ಕುಱುಂಬಿತಿ,** ಕುರುಬಿತಿ, ಕುರುಬಿತ್ತಿ, ಕುಱುಬಿತಿ, ಕುಱುಬಿತ್ತಿ (ನಾ). ಕುರುಬ ಜಾತಿಯ ಹೆಂಗಸು; ಕುರುಬರವಳು : ಮೇರಡಿಗಿತಿ, ಕುಱುಂಬಿತಿ, ತೆಲುಂಗಿತಿ (ಶಮದ. ೨೦೮ ಪ್ರಯೋ). **ಕುರುಬಿತಿ :** ಭೈರವನಿಗೆ ಮೊದಲನೆಯ ಹೆಂಡತಿಯಾದ ಪಾರ್ವತಿ ಇರುತ್ತ ಆತ ಒಬ್ಬಳು ಕುರುಬಿತಿಯಲ್ಲಿ ಅನುರಕ್ತನಾಗುತ್ತಾನೆಂದು ಆ ಪ್ರಾಂತದ ಜಾನಪದ ಗೀತೆ ತಿಳಿಸುತ್ತದೆ (ಜಾನಗೀ. ೬೯). **ಕುರುಬಿತ್ತಿ :** (ಕಿ). **ಕುಱುಬಿತಿ :** ಗಿಡುಮರದ ಕುಱುಬಿತಿಯ ಜವ್ವನದಂತೆ ನುಡಿಯಲಱಿ ಯದ ಮುಗ್ಧೆಯಾಗಿರ್ದನವ್ವಾ (ವಚಶಾ. I, ೨೪೨). **ಕುಱುಬಿತ್ತಿ :** ಅಂತದು ಪರಿಣತವಯಸ್ಕನಾಗಿಯಾ ಭಿಲ್ಲಪಳ್ಳಿಯ ಕುಱುಬಿತ್ತಿ ಕೌಸಂಬಿ ಪುರಕ್ಕೆ ಮೊಸರ ಮಾಱ ಪೋಗೆ ತಾಂ ಬೆಂಬೞಿಯೊಳ್ ಪೋಗಿ (ಪುಣ್ಯಾಸ್ರ. ೫-೪೩ ವ). [ಕುಱುಂಬ$_1$ + -ಇತಿ$_1$ (< -ಇತ್ತಿ)]

**ಕುಱುಂಬು$_1$,** ಕುರುಂಬು, ಕುರುಬು$_1$ (ನಾ). ದ್ವೇಷ ; ಅಸೂಯೆ : "ಅಸೂಯೆಯು ಕುಱುಂಬೆನಿಸುವುದು" (ಕಶರ. ೨೫) ; ನಿತ್ಯಬಿಂದುಗೆ-ಬೆಡಂಗು, ಕಡಂಗು . . . ತಱುಂಬು, ಕುಱುಂಬು, ಕುಱುಂಬಂ (ಶಮದ. ೩೭ ಪ್ರಯೋ). **ಕುರುಂಬು :** ಅವನ ಧೈರ್ಯವು ಅಪರ ಒಕ್ಕಟ್ಟನ್ನು ಮುರಿಯಿತು. ಅವರ ಕುರುಂಬನ್ನು ಹೆಚ್ಚಿಸಿತು (ಮೋಬಾದ. ೨೪). **ಕುರುಬು$_1$ :** ನಾನಾವ ಮಾಟ ಮಾಡಿದ್ದೇನೆ? ನನ್ನ ಮೇಲೇಕೆ ನಿಮ್ಮ ಕುರುಬು ! (ಚಂದುಟ. ೩೩).

[ದೇ. ‖ ತಮಿ. ಮಲ. ಕುಱುಮ್ಬು]

**ಕುಱುಂಬು$_2$**, ಕುಱುಂಬ$_5$ (ನಾ). ಒಂದು ಬಗೆಯ ಪರ್ವತವಾಸಿ ಜನ: ಮಲೆ ತಲೆದೋಱದೆಂದುದನೆ ಕೊಟ್ಟುದಡಂಗಮುಡಂಗಿ ಬಂದೊಡೊಕ್ಕಲಿಗವೆಸರ್ಗೆ ಪೂಣ್ದುದು ಕುಱುಂಬು ತಱುಂಬದೆ ಮಿಕ್ಕ ಶತ್ರುಮಂಡಲಿಕರೆ ಮಿತ್ರ ಮಂಡಳಿಕರಾದರ್ (ಪಂಪಭಾ. ೨-೯೦). **ಕುಱುಂಬ$_5$**: ನಂದಿಯಭಿನವ ತ್ರಿಯಂಬಕನೆಂದುಱಿ ನಂದಿ ಪೆರ್ಗುಡಿ ಗಟ್ಟಿ ನಲಿದು ಮುಂಬಿನೊಳ್ಕುಣಿದ ಕುಱುಂಬರೆಂತೆಂತಾಡಿದೆಂ (ಭೈರಸೂ. ೨೫೭). [?]

**ಕುಱುಂಬುಗಾಱ** (ನಾ). ಹಟಮಾರಿ; ಮೊಂಡುತನವುಳ್ಳವನು: (+). [ಕುಱುಂಬು$_1$ + -ಗಾಱ$_1$ (< -ಕಾಱ)]

**ಕುಱುಂಬುಗೊಳಿಸು** (ಕ್ರಿ). ಸಜ್ಜುಗೊಳಿಸು; ಏರ್ಪಡಿಸು: ಪನ್ನೆರಡು ಯೋಜನಂ ನೀಳಂ ನವಯೋಜನದಗಲಮೆನೆ ಬಿಡಿಸಲ್ ಬೀಡಂ ನೆಲನೆಯ್ದದೆ ಪಡೆವಳ [ನಿನ್ನಿಂತು] ನೆಱೆಯೆ ಕುಱುಂಬುಗೊಳಿಸಿದ ನಾಗಳ್ (ಪಾರ್ಶ್ವಪು. ೧೦-೯೯).

[ಕುಱುಂಬುಗೊಳ್$_0$ + -ಇಸು$_3$]

**ಕುಱುಂಬುಲ್** (ನಾ). ಕುರುಚಲು ಹುಲ್ಲು; ಎತ್ತರ ಬೆಳೆಯದ ಸಣ್ಣ ಹುಲ್ಲು: ಕೆಯ್ವೊಲನೊಳ್ ಬೆಳೆದ ಕುಱುಂಬುಲ್ಲಂ ಕಿೞ್ತು ಬಿಸುಡುವಂತಿರೆ ಸೀತೆಯಂ ಬಿಡುವೆಂ ಎಂದೇ ಬಗೆದು (ರಾಮಾಶ್ವ. ೨೫-೨).

[ಕುಱು$_2$ + ಪುಲ್]

**ಕುಱುಂಬೂರು** (ನಾ). ಒಂದು ಊರಿನ ಹೆಸರು: ಕುಱುಮ್ಬೂರ ಮಹಾಜನಂ ನೂಱೆಣ್ಬರ್ಗ್ಗಂ ಪದಿನಯ್ದು ಗದ್ಯಾಣ ಪೊನ್ನ ಕೊಟ್ಟರ್ (ಎಕ. X, ಚಿಂತಾಮ. ೪೩-೧೫; 960).

[ಕುಱುಂಬು$_0$ + ಊರು$_3$ (< ಊರ್)]

**ಕುಱುಕ** (ನಾ). ೧. ಸಣ್ಣವನು; ಚಿಕ್ಕವನು; ಗಿಡ್ಡ: ಬಂದೊರ್ಬ ಕುಱುಕನಿದ ಬರೆದನೆನೆ ಕರಸಲವನವರಳುಕ ನಿಶ್ಶಂಕೆಯಿಂ ಬಂದನು (ವೀಶೈವ. ೭-೪-೪೯). ೨. ಕ್ಷುಲ್ಲಕ; ಅಲ್ಪ: ಹಡಕಿಯ ಕೊಳಕಿನ ತೊಗಲ ಹೊದಿಕೆಯ ಹೊಱೆಯೊಳಗೆ ಅಱಸಿ ಕಂಡಿಹೆನೆಂಬ ಕುಱುಕರ ನೋಡಾ (ಮೋಳಿಮಾ. ೩೩-೧೩೯). [ಕುಱು$_2$ + -ಕ$_3$]

**ಕುಱುಕಲು**, ಕುರುಕಲು (ನಾ). ಮೆಲುಕು ಹಾಕಿ ತಿನ್ನುವ ತಿಂಡಿ; ಹುರಿಗಾಳು: ಕತ್ತುರಿಯ ಸುಟ್ಟರಳ ಕುಱುಕಲನುಗೆಯ್ವರೇ [ಪಾಠಾಂ. ಸುಟ್ಟು ಅರಳಂ ಮುಕ್ಕುವರೇ ನೆಱೆ, ನುರುಹಿ ಕುಱುಕಿದ ರುಂಟೆಯರಳನೆಱೆ ಕುಱುಗಿರುಳಿಗರಳನಿಕ್ಕುವರೆ] (ಹಚಕಾ. ೮-೭೭). **ಕುರುಕಲು**: ಚಳಿಗಾಲಕ್ಕೆ ಏನಾದರೂ ಕುರುಕಲು ಇದ್ದರೆ ಚೆನ್ನು (ರೂಢಿ). 'ಕುರುಕಲುತಿಂಡಿ' ಪರಾ.

[ಕುಱುಕು$_1$ (< ಕುಱುಂಕು) + -ಅಲು (< -ಅಲ್$_2$)]

**ಕುಱುಕಿ**, ಕುರಿಕ್ಕೆ, ಕುಱಿಕೆ, ಕುಱುಕ್ಕೆ, ಕುಱುಕ್ಕಿ (ನಾ). ಸಣ್ಣ ಹಳ್ಳಿ(?): ಮೂಡ ಸೆಂಬಲತ್ತೂರ ಬೆಟ್ಟದ[ಕೆ]ಱಗಣ ಪೇರಬ್ಬಿನ ತೆಂಕಣ ಕುಱುಕಿ (ಎಇ. X, ೭೭-೫೭; 892). **ಕುರಿಕ್ಕೆ$_2$**: "ಕೊಪ್ಪಲು, ಕುರಿಕೆ, ಉಪಗ್ರಾಮ" (ನಮ್ಮನು. ೨೪೧). **ಕುಱಿಕೆ**: ಗನ ××× ಉ ಕುಱಿಕೆ ಬರಾ ××× ತಂದು ತಂದೆಗೆ ಪರಾ (ಎಕ. X(S), ಬಾಗೇಪ. ೧೦೫-೧; 15ನೆಯ ಶತ). **ಕುಱುಕ್ಕೆ$_2$**: ಸಿದ್ಧೇಶ್ವರ ದೇವರ್ಗೆ ಕುಱುಕೆಯಿಂ ಬಡಗ ಮತ್ತರು ಒಂದು ತೋಂಟ! (ಸೌಇಇ. IX-i, ೨೪೯-೯೯; 1147). **ಕುಱುಕ್ಕಿ**: ಸೀಯ ಮಂಗಲದ ಪೊಲಮೇರೆ ಇಸಾನದ ದೆಸೆ ನಡುಗಲ್ಲೆ ಅವ್ವುಲ ತಿಣ್ಣೆಯಿನ್ತೆಂ ಕಾಯಲ್ ಪೇರೊಟ್ಟಿಯೆ ಅರಕೆಱೆಯಿ ಪಿಟ್ಟಿ ಕುಱುಕ್ಕಿಯ (ಎಕ. X(S), ಚಿಕ್ಕಬ. ೧೦೭-೭೭; 850).

[← ತಮಿ. ಕುಱಿಚ್ಚಿ]

**ಕುಱುಕು$_1$** 'ಕುಱುಂಕು' ನೋ.

**ಕುಱುಕು$_2$** (ನಾ). = ಕುಱುಕಲು: ಸ್ಮರಗುಣಿಸುವ ಸುದ್ದಗೆರೆಯೋ ಕುಱುಕುಗಳೋ ಎನಲೆಸೆದು ವಾಱಡಿವಱಿಗುರುಳೋಳಿಯಾ ಕೋವಮಲೆಗೆ (ಶ್ರೀಪಾಲ. ೩-೬೫); ಲಕ್ಷ್ಮಣದೇವರು ತುಪ್ಪ ಪಂಚಾಮೃತ ಅಂದು ಅಡವಿಗಡ್ಡೆಗಳೆಂದು ಕರ್ಪೂರ ವೀಳ್ಯವೆಂದು ಕುಱುಕು ಇಂದು (ಕನಕ. ೧೨-೧). [< ಕುಱುಂಕು]

**ಕುಱುಕುಂದಾಜ್ಜಿನಾಡು** (ನಾ). ಒಂದು ದೇಶದ ಹೆಸರು: ಕುಱುಕುಂದಾಜ್ಜಿನಾಡ ನಾಟ್ಟಾವುಣ್ಡಂ ಜೋಳಗಾವುಣ್ಡನುಂ ಪಿರಿಯ ಸೆಟ್ಟಿ ಮಜ್ಜಲದ ಪುಣ್ಯಸಮ್ಯರ್ಗನುಂ (ಎಕ. IX, ನೆಲಮಂ. ೧-೧೮; 1029). [?]

**ಕುಱುಕುಗಡಲೆ**, ಕುರುಕುಗಡಲೆ (ನಾ). ಕುರುಕುವ ಕಡಲೆ; ಹುರಿಗಡಲೆ: ಖಳರು ಕಂಡರೆ ಕುಱುಕುಗಡಲೆಯ ಮೆಲುವರೈ ನೀ ಹೋಗಿ ರಮಣಂಗೆನ್ನ ಹುಯ್ಯಲನು ತಿಳಿಯ ಬಿನ್ನವಿಸು (ಕೌಶಿರಾ. ೧೧-೮). **ಕುರುಕುಗಡಲೆ**: ಕುರುಕುಗಡಲೆಯೆಂದರೆ ಮಕ್ಕಳಿಗೆ ತುಂಬಾ ಪ್ರೀತಿ (ರೂಢಿ). [ಕುಱುಕು$_1$ (< ಕುಱುಂಕು) + ಕಡಲೆ]

**ಕುಱುಕುಣಿಕೆ** (ನಾ). ಕಿರುಬೆರಳು: ಕಿಱಿಯನಿವಂ ಪ್ರಾಯದೊಳಂದುಱದೆನ್ನಂ ನುಡಿವುದಳವೆ ಬಲ್ಪಿನೊಳೆನ್ನೀ ಕುಱುಕುಣಿಕೆಗೆ ನೆಱೆಯ್ಯ ಪೊಚ್ಚಱಿನೊಳಿದೇಂ ಪೊಣರ್ದು ನೋಡಲಾಗದೆ ಕೆನ್ನಂ (ಬಂಹರಿ. ೧೦-೩೩). 'ಕಿಱುಕುಣಿಕೆ' ಪರಾ.

[ಕುಱು$_2$ + ಕುಣಿಕೆ$_3$]

**ಕುಱುಕುಮೆಟ್ಟು** (ಕ್ರಿ). = ಕುಱುಕುಱುಂಮೆಟ್ಟು: ಆಱಿಪಾಡಿ ಮೆಱದಾಡಿ ಕುಱುಕುಮೆಟ್ಟುತ್ತಾಡಿ ಕರ[ಱೆ]ಕಂಠ ನಿಮ್ಮ ಭಕ್ತಿಯ ರಸದೊಳೋಲಾಡಿ (ಲಿಂಗಾರ. ೧೧-೨೧).

[< ಕುಱುಕುಱುಂಮೆಟ್ಟು]

**ಕುಱುಕುಳಿ** (ನಾ). ಗೌರವ ಕುಗ್ಗಿಸುವವನು; ದೂಷಕ; ನಿಂದಕ: ಕುಳಿಪ್ರತ್ಯಯಕ್ಕೆ - ಪೋರ್ಕುಳಿ [ಪಾಠಾಂ. ಕುಱುಕುಳಿ] ಕುಱುಕುಳಿ ಪೆಂಕುಳಿ (ಶಮದ. ೨೦೩ ಪ್ರಯೋ). [ಕುಱು ? + -ಕುಳಿ$_3$]

**ಕುಱುಕುಱು** 'ಕುಱುಕುಱುಂ' ನೋ.

**ಕುಱುಕುಱುಂ**, ಕುಱುಕುಱು (ಅ). ಅತಿ ಸಣ್ಣಗೆ; ನಿಧಾನವಾಗಿ; ಮೆಲ್ಲಗೆ. 'ಕುಱುಕುಱುಂಮೆಟ್ಟು' ಪರಾ. **ಕುಱುಕುಱು**: 'ಕುಱುಕುಱುಮೆಟ್ಟು' ಪರಾ. [ಕುಱು$_2$ + ಕುಱು$_2$]

**ಕುಱುಕುಱುಂಮೆಟ್ಟು**, ಕುಱುಕುಱುಮೆಟ್ಟು (ಕ್ರಿ). ಬಹಳ ನಿಧಾನವಾಗಿ ಹೆಜ್ಜೆಯಿಡು; ಬಹಳ ಮೆಲ್ಲಗೆ ನಡೆ: ಭೋರೆಂದು ಸುರಿವ ಕೀೞ್ಮದದ ಪೂರದಿಂ ಕಾರ ಕಾವಣಮಂ ಜಂಝಾನಿಳನೊತ್ತುವಂತೆ ಕುಱುಕುಱುಂಮೆಟ್ಟಿ ನಡೆಯಿಸುತ್ತುಂ (ಅನಂಪು. ೨-೫೪ವ). **ಕುಱುಕುಱುಮೆಟ್ಟು**: ಬಟ್ಟಿಗಾಣದೆ ದಿಙ್ಮೂಢರಾಗಿ ನಿಲಲುಂ ಸರಸರಸಿ ಪೋಗಲುಮಾಱಿಯದೆ ಕುಱುಕುಱುಮೆಟ್ಟುತ್ತುಮಿರ್ಪಿನಂ (ಅರ್ಧನೇ. ೭-೪೪ವ); ಕನ್ನೆಯೆಗೆತ್ತು ಭಯಮುತ್ತು ಮತ್ತೊಂದು ರೂಪಾಗಿ ಕುಱುಕುಱುಮೆಟ್ಟೆ ಕಿಱಿದಂತರದೊಳ್ (ಲೀಲಾವ. ೮-೨೮ವ); ಮಱೆಯುತ್ತೆಳ್ಚುತುಂ ಕುಱುಕುಱುಮೆಟ್ಟುತ್ತಡಿಯನೆತ್ತಿ ತಾನೆಂದಿದಿರೆಂದಱಿಯದೆ ಕಾಮವಿಕಾರಂ ನೆಱೆ ಪತ್ತಿ ಸುರೇಂದ್ರಮಂತ್ರಿ ದಡದಡಿಸುತ್ತಂ (ಗಿರಿಕ. ೭-೧೨); ಕಿಱಿದೆಡೆಯಂ ನಡವುತ್ತಂ ನಿಂದಿರುತಂ ಕುಱುಕುಱುಮೆಟ್ಟುತ ಬರ್ಪವರಂ ಮಿಗೆ ಬಗೆವುತ್ತಂ . . . ನಡೆದಂ ಪಾಪಾತುರನು (ವೀರೇಚ. ೧-೨೪); ಮಿಱುಮಿಱುಪಾದ ಮೈ ಹೊಳಹಿಂದ ತೆಱೆಗಟ್ಟಿ ನಿಱಿದೇಳ್ವ ಹೊಂಗಾಸೆಯಿಂದ ಕುಱುಕುಱುಮೆಟ್ಟಿ ರಂಗದೊಳು ತಂಪಿನ ಬಯಲ್ಪೊಱೆ ಹೊಳೆವಂತೆ ಹೊಳೆವರು (ಭರಚ. ೧೩-೧೦೧).

[ಕುಱುಕುಱುಂ + ಮೆಟ್ಟು$_1$]

**ಕುಱುಕುಱುಕಡಲೆ** (ನಾ). ತಿನ್ನುವಾಗ ಕುರುಕುರು ಎಂದು ಶಬ್ದ ಮಾಡುವ ಕಡಲೆ; ಹುರಿಗಡಲೆ: ಹಱಕು ಹೋಳಿಗೆ ಲೇಸು ಮುಱುಕ ಹಪ್ಪಳ ಲೇಸು ಕುಱುಕುಱು ಕಡಲೆ ಬಲು ಲೇಸು ಪಾಯಸದ ಸುಱುಕು ಲೇಸು (ಸರ್ವಜ್ಞ. ೧೧೩೦).
[ಕುಱುಕುಱು (< ಕುಱುಕುಱುಂ) + ಕಡಲೆ]

**ಕುಱುಕುಱುಗೊಳ್** (ಕ್ರಿ). ಸಣ್ಣಸಣ್ಣ ಹೆಜ್ಜೆ ಹಾಕು; ಮಂದ ಗಮನದಿಂದ ನಡೆ: ಲಜ್ಜೆಯಿಂ ಕುಱುಕುಱುಗೊಂಡು ಕಾಲ್ವಿಡಿದು ದೊಳ್ಳಡೆಗಟ್ಟಿ ಮರಾಳನಾವಗಂ (ಧರ್ಮನಾ. ೩-೫೩).
[ಕುಱುಕುಱು (< ಕುಱುಕುಱುಂ) + ಕೊಳ್$_1$]

**ಕುಱುಕುಱುಮೆಟ್ಟು** 'ಕುಱುಕುಱುಂಮೆಟ್ಟು' ನೋ.

**ಕುಱುಕೆ$_1$** 'ಗುಱುಕು' ನೋ.

**ಕುಱುಕೆ$_2$** 'ಕುಱುಕಿ' ನೋ.

**ಕುಱುಕ್ಕಿ** 'ಕುಱುಕಿ' ನೋ.

**ಕುಱುಗಂಟು**, ಕುರುಗಂಟು (ನಾ). ಸಣ್ಣಗಂಟು; ಚಿಕ್ಕಕಟ್ಟು: ಬಡವರ[ಮಾ]ರಿ ಪೆಂಪು ಮುಗಿಲೊಡ್ಡಱುತ ಕುಱುಗಂಟು ನಂಟು ಹಲ್ಲಡಿವಿನಯಂ ಪ್ರಪಂಚ ಪುರುಷಾರ್ತ್ಥಮನರ್ತ್ಥಕಮೆಂಬ ನಾಡ ನಿಗ್ಗಡಿಗಳಗೆನ್ನು ಪೋಲಿಪೆನೋ ಕೇಶವದೇವನೊಳನ್ಯ ಮರ್ತ್ತ್ಯರ (ಸೌಇಇ. XV, ೪೮-೫; 1152); ಕುಱುಗಡ್ಡಂ ಕುಱುಗಂಟು (ಶಮದ. ೧೪೮ ಪ್ರಯೋ); ಕುಱುಗಂಟು, ಕುಡುಗೋಲ್ (ಶಬ್ದಾನು. ೪೭ ಪ್ರಯೋ). **ಕುರುಗಂಟು**: ಕುರುಗಂಟನಾಂತ ವಲ್ಕಲದಿಂ ಸುಂದರಿಯ ತನು ತನ್ನ ಕಾಂತಿಯ ಪೊರೆದುದು (ಶಾಕುಂತ. ೯-೧೯). [ಕುಱು$_2$ + ಗಂಟು]

**ಕುಱುಗಡ್ಡ**, ಕುರುಗಡ್ಡ (ನಾ). ಕುರುಚಲು ಗಡ್ಡ; ಚಿಕ್ಕಗಡ್ಡ; ಮೋಟುಗಡ್ಡ: ಕುಱುಗಿಡಂ, ಕುಱುದಡ್ಡಿ, ಕುಱುಗಡ್ಡಂ, ಕುಱುಗಂಟು (ಶಮದ. ೧೪೪ ಪ್ರಯೋ); ಕುಱುಗಡ್ಡಂ, ಕುಱುಗಂಟು (ಶಬ್ದಾನು. ೩೭೯ ಪ್ರಯೋ). **ಕುರುಗಡ್ಡ**: ಕುರುಗಡ್ಡದ ನಿಡುಮೂಗಿನ ಮುಂದ್ರಧ್ವನಿಯ ಎತ್ತರದ ವ್ಯಕ್ತಿ (ಪುನರು. ೩೦೧). [ಕುಱು$_2$ + ಗಡ್ಡ]

**ಕುಱುಗಣ್**, ಕುರುಗಣ್, ಕುಱುಗಣ್ಣು (ನಾ). ಸಣ್ಣಕಣ್ಣು; ಚಿಕ್ಕ ಕಣ್ಣು: ಕುಱುಗಣ್, ಕುಱುಗಯ್ (ಶಮದ. ಮ. ೧೪೪ ಪ್ರಯೋ). **ಕುರುಗಣ್**: ಕುರುಗಣ್ಣಳಾಟವಿದೆನಿತೊಂದು ಚಂದವು (ಚಂದ್ರವೀ. ೧೭೧-೪೪). **ಕುಱುಗಣ್ಣು**: ಕುಱುಗಣ್ಣು ಕೊನಬೆನ್ ಕಾಲ್ ಮಱಿ ಯಿಸುವುದು ಟೊಂಕ ಮುಱಿದ ಕತ್ತೆಯ ಕಾಲಂ (ಯಶೋಚ. ೨-೩೯). [ಕುಱು$_2$ + ಕಣ್]

**ಕುಱುಗಣಿ** (ನಾ). ೧. ಕುಗ್ಗಿದ ಸ್ಥಿತಿ: (ಕ). ೨. ಕಡಮೆಯಾದ ಅಥವಾ ಗಿಡ್ಡವಾದ ವಸ್ತು: (ಕ). ೩. ಕುದಿತದಿಂದ ಅಥವಾ ಆವಿಯಾಗುವಿಕೆಯಿಂದ ಮಂದವಾದ ದ್ರವವಸ್ತು,—ಘನೀಭೂತ ವಾದ ವಸ್ತು: (ಕ). ೪. ಉಣ್ಣೆಯ ಅಥವಾ ಕಂಬಳಿಯ ನೂಲು (ರೀವ್). [ದೇ. ॥ ತಮಿ. ಕುಱುಗು, ಕುಱಿೖ; ಮಲ. ಕುಱು, ಕುಱಿ]

**ಕುಱುಗಣ್ಣು** 'ಕುಱುಗಣ್' ನೋ.

**ಕುಱುಗಯ್** 'ಕುಱುಗೆಯ್' ನೋ.

**ಕುಱುಗಯ್ಯ** 'ಕುಱುಗೆಯ್ಯಿ' ನೋ.

**ಕುಱುಗಲಿ** (ನಾ). ಅಲ್ಪ ಪರಾಕ್ರಮಿ; ಕ್ಷುದ್ರ ಬಂಟ: ಪೊಱಗಣ ಬಾಗಿಲ್ಗಾಪಿನ ಕುಱುಗಲಿಗಳ್ ನೆಱೆದು ತಾಗೆ ಮುನಿದನಿಲಸುತಂ (ನೇಮಿಪು. ೧೦-೧೦೦). [ಕುಱು$_2$ + ಕಲಿ$_2$]

**ಕುಱುಗಾಡು** (ನಾ). ಚಿಕ್ಕಕಾಡು: ದರಿಯ ದಿಂಟಿಯ ಕುಱುಗಾಡ ಹಕ್ಕಲುಗಾಡ ಮರಗಾಡ ಬಲ್ಮೊಳೆಗಾಡ (ನಾಗಕು. ೧೩-೯). [ಕುಱು$_2$ + ಕಾಡು$_1$]

**ಕುಱುಗಿಡ** (ನಾ). ಕುರುಚಲು ಗಿಡ; ಸಣ್ಣಗಿಡ: ಕುಱುದಡಿ, ಕುಱುಗಿಡಂ (ಶಮದ. ೧೪೪ ಪ್ರಯೋ). [ಕುಱು$_2$ + ಗಿಡ (< ಗಿಡು)]

**ಕುಱುಗಿಣ್ಣು** (ನಾ). ಕಬ್ಬು, ಬಿದಿರು ಮೊದಲಾದುವುಗಳ ಕಾಂಡ ದಲ್ಲಿರುವ ಚಿಕ್ಕ ಗೆಣ್ಣು; ಪರ್ವ: (ಕ).
[ಕುಱು$_2$ + ಗಿಣ್ಣು$_2$ (< ಗೆಣ್ಣು)]

**ಕುಱುಗುಣಿ** (ನಾ). ಮೋಟಾದ ಗೂಟ, —ಕೀಲು (?): ಉರಗ ನಾಳದ ಹೊರಜೆ ನವಸಾವಿರದ ಕುಱು [ಪಾ ಅ ೦. ರಿ]ಗುಣಿಯೊಸುಗಳು ತೌವೆರಡು ಮಡಿ ತೊಂಬತ್ತುವೊಂದುಸಹಸ್ರದರ್ಧವದು ಪರಿಯ ನೊಗನದಱನಿತು ಸಂಖ್ಯೆಗೆ ಸರಿಯೆನಿಪ ಮೇಲಚ್ಚು ಮಂಗಳತರವೆನಿಪ ನವರತ್ನರಚನೆಯ ಚಿತ್ರರಥವೆಂದ (ಕುವ್ಯಾಅ. ೭-೬೪).
[ಕುಱು$_2$ + ಗುಣಿ$_2$]

**ಕುಱುಗೆಯ್**, ಕುಱುಗಯ್, ಕುಱುಗೆಯ್ಯಿ (ನಾ). ೧. ಸಣ್ಣಕೈ; ಗಿಡ್ಡಕೈ: (ಕ). ೨. ರಥದ ಮುಂಭಾಗ: "ಅಪಸ್ಕರಃ, ರಥಾಗ್ರಂ —ಈ ೨ ಕುಱುಗೆಯ್ [ಪಾಠಾಂ. ಕಿ. ಯ್ಯಿ]" (ಹಲಾಯು. ೭೪-೨೯೪); "ಅಕ್ಷೋಗ್ರಮೆನೆ ಕೀಲಪಸ್ಕರಂ ಕುಱುಗೆಯ್" (ಮಂಗರಾ. ೮೪-೨೫). **ಕುಱುಗಯ್**: ೧. "ಕುಱುಗಿಡಂ . . . ಕುಱುಗಯ್" (ಶಮದ. ೧೪೪ ಪ್ರಯೋ). **ಕುಱುಗೆಯ್ಯಿ**: ೨. ಮೇಲಿನ ಹಲಾಯು ಪ್ರಯೋಗದ ಪಾಠಾಂತರವನ್ನು ನೋಡಿ. [ಕುಱು$_2$ + ಕೆಯ್$_2$]

**ಕುಱುಗೆಯ್ಯ**, ಕುಱುಗಯ್ಯ (ನಾ). ಸಣ್ಣ ಕೈಯುಳ್ಳವನು; ಮೊಂಡುಗೈಯವನು; ಮೋಟುಗಯ್ಯ: ಮಲ್ಲಡಿಯಂ ಕುಱುಗೆಯ್ಯಂ, ಬಿಸುಗದಿರಂ (ಭಾಷಾಭೂ. ೧೩೧ ಉದಾ). **ಕುಱುಗಯ್ಯ**: ಕುಱುಗಯ್ಯಂ, ನಿಡುದಲೆಯಂ (ಶಬ್ದಾನು. ೯೭ ಪ್ರಯೋ). [ಕುಱುಗೆಯ್ + -ಅ$_7$]

**ಕುಱುಗೆಯ್ಯಿ** 'ಕುಱುಗೆಯ್' ನೋ.

**ಕುಱುಗೋಡು** 'ಕುಱುಂಗೋಡು' ನೋ.

**ಕುಱುಗೋಲ್** (ನಾ). ಸಣ್ಣಕೋಲು; ಕಿರುದಡಿ: ಅಗ್ರಜಂ ಶರಧಿ ಯೊಳು ಮಡಿಯೆ ತಮ್ಮಂ ಅತಿಬಾಧೆಯಿಂ ಬೇಡೆ ಧನವನವರಣ್ಣನಾಕೃತಿ ಯೊಳೈತಂದವನ ಭಕ್ತಿಯಾಕುಱು [ಪಾಠಾಂ. ತರು] ಗೋಲೊಳತನುರಿಪು ಸದೆದು ಬಯಲಾಗೆ ಮೆಱೆದಾ ಶಿವಪ್ರಿಯ ನಾಚಿಯಡಿಗೆ ಶರಣು (ಭಾವಚಿಂ. ೬-೬). [ಕುಱು$_2$ + ಕೋಲ್$_1$]

**ಕುಱುಚಾಳ್** (ನಾ). ಸಣ್ಣ ಆಳು; ಗಿಡ್ಡ: ಕೆಲರ್ ಕುಱುಚಾಳ್ಗಳ್ ಕೆಲರ್ ನಿಡುಮೊಗದವರ್ (ಅದ್ಭುತ. ೪೨-೨೨). [ಕುಱುಚು + ಆಳ್$_2$]

**ಕುಱುಚು**, ಕುರಚಿ, ಕುರುಚು, ಕುಱುಜು, ಕುಱುಜೆ (ನಾ). ೧. ಸಣ್ಣ ದಾಗಿರುವಿಕೆ; ಕುಳ್ಳಾಗಿರುವಿಕೆ. (ಗು). ೨. ಸಣ್ಣದಾಗಿರುವ; ಚಿಕ್ಕ; ಗಿಡ್ಡ: ಕುಱುಚಾದ ಕಿವಿಗಳಿಂ (ಸೌಗಂಧಿ ೧೨೮-೨೦). 'ಕುಱುಚಾಳ್' ಪರಾ. **ಕುರಚಿ**: ೨. 'ಕುರಚಿಕಾಡು' ಪರಾ. **ಕುರುಚು**: ೨. 'ಕುರುಚುಕಾಡು' ಪರಾ. **ಕುಱುಜು**: ೧. "ಕೂನೆಂದು ಕುಱುಜು" (ಕವಿಕಂ. ೨೦೪). ೩. ಗಿಡಗಂಟೆಗಳ ಸಮೂಹ; ಪೊದರು: ಮದನಿಯ ಪೊಸಮಾಲೆಗಳ ಮೆಳೆಗಳಿಂದರ್ದುಗಂಚಿಯ ಕುಱುಜುಜಂಗಳ ಕಳೆಗಳಿಂ (ಉದ್ಭಟ. ೫-೨೨). **ಕುಱುಜೆ**: ೩. ಪಕ್ಷಿಗಳು ಲತೆ ಗಿಡು ಕುಱುಜೆ ಪುಳುಪಾವು ಪಲ್ಲಿಗಳು ಲೆಕ್ಕವಿಲ್ಲದೆ ಕಣ್ಗೆ ಪಸರಿಸುತ (ಶಂಕದಾ. ೫-೧೫). [ಕುಱು$_2$ + -ಚು. / ತೆಲು. ಕುಱುಜು]

**ಕುಱುಜಂಗೆ**, ಕುಱುಜಂಘೆ (ನಾ). ಸಣ್ಣಹೆಜ್ಜೆ; ಚಿಕ್ಕ ಪಾದ: ಎಲ್ಲಿಗೆಯ್ದುವೆವೆಲ್ಲಿ ಹೋಗುವೆವದೆಲ್ಲಿ ಸಾರುವೆವೆನುತ ಕಳವಳದಲ್ಲಿ ಮಿಗೆ ಕುಱುಜಂಗೆ [ಪಾಠಾಂ. ಘೆ]ಯಂ ನಿಡುಜಂಘೆಗಳನಿಡುತ (ಬಸವ. ೨೫-೩೧). **ಕುಱುಜಂಘೆ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕುಱು$_2$ + ಜಂಗೆ]

**ಕುಱುಜಂಘೆ** 'ಕುಱುಜಂಗೆ' ನೋ.

**ಕುಱುಜು** 'ಕುಱುಚು' ನೋ.

**ಕುಱುಜೆ** 'ಕುಱುಚು' ನೋ.

**ಕುಱುಟ** (ನಾ). ಹುಡುಗ; ಕಿರಿಯ: ಆ ಬಾಳಿಂಗೆ ಉಳ್ಳ ಹೊಲೆಯಾಳು ಹೆಣ್ಣಾಳು ಗಂಡಾಳು ಕುಱುಟಗಳು ಸಹ ಜನ ಆ ಯಿಾಡು . . . ನಡದು ಬಹುದು (ಸೌಇಇ. IX–ii, ೪೧೭–೧೦ ; 1377).

[ಕುಱುಂಟು$_0$ + –ಅ$_7$]

**ಕುಱುತ್ತಕುಂಟೆ** 'ಕುಱುತಕುಂಟೆ' ನೋ.

**ಕುಱುದಡಿ** (ನಾ). ಸಣ್ಣಬೆತ್ತ; ಚಿಕ್ಕದೊಣ್ಣೆ (?): ಕುಱುದಡಿ, ಕುಱುಗಡ್ಡಂ, ಕುಱುಗಿಣ್ (ಶಮದ. ಮ. ೧೮೪ ಪ್ರಯೋ).

[ಕುಱು$_2$ + ದಡಿ$_1$]

**ಕುಱುದಡ್ಡಿ** (ನಾ). ಕುಳ್ಳು ತಡಿಕೆ; ಗಿಡ್ಡ ತಡಿಕೆ (?): ಕುಱುದಡ್ಡಿ, ಕುಱುಗಡ್ಡಂ (ಶಮದ. ಮ. ೧೮೪ ಪ್ರಯೋ). [ಕುಱು$_2$ + ದಡ್ಡಿ$_1$]

**ಕುಱುದಱಿ** (ನಾ). ಚಿಕ್ಕಚೂರು; ಸಣ್ಣನುಚ್ಚು, —ತರಿ: ಕುಱುದಱಿ, ಕುಱುಗಯ್ (ಶಮದ. ೧೮೪ ಪ್ರಯೋ).

[ಕುಱು$_2$ + ತಱಿ$_2$]

**ಕುಱುದಾರಿ** (ನಾ). ಕಿರುದಾರಿ; ಚಿಕ್ಕಹಾದಿ: ಆದಱಿಂದೆ ಕುಱುದಾರಿ ವಿಡಿದಾಯ್ತು (ಅಂಕಿಗೊ. ೧೧–೨೧೪). [ಕುಱು$_2$ + ದಾರಿ$_1$]

**ಕುಱುದೆಱೆ** 'ಕುಱುದೆಱೆ' ನೋ.

**ಕುಱುದೊಡೆ** (ನಾ). ಗುಜ್ಜು ತೊಡೆ; ಗಿಡ್ಡತೊಡೆ: ಕಂಬುಗ್ರೀವದ ಕಲ್ಯಾಣಿ ಪೇರುರದ ಪಾರಿಜಾತೆ ಕುಱುದೊಡೆಯ ಕಾಮಧೇನು ಮೃದುತಳದ ಮಂದಯಾನೆ (ಉದ್ಭಟ. ೫–೫೩ ವ).

[ಕುಱು$_2$ + ತೊಡೆ$_2$]

**ಕುಱುಪಕೆಱೆ** (ನಾ). ಒಂದು ಕೆರೆಯ ಹೆಸರು: ತತ(ತಃ) ಕುಱುಪಕೆಱೆ (ಇಆ. VII, ೩೦೨–೩೪ ; 694).

[ಕುಱುಪ$_0$ + ಕೆಱೆ]

**ಕುಱುಪಾಟ** (ನಾ). ಗುರಿಯಿಟ್ಟು ಹೊಡೆಯುವುದು: ಆ ಕುವರ ನೀಡಿನ ಕುಱುಪಾಟವನೇನ ಪೇಳುವೆನು (ಕುರಾಸಾಂ. ೩೧–೧೧೧); ಭಯವೆತ್ತಣದೆತ್ತಣದಾರ್ತರೌದ್ರಮಿಾ ತನುಸುಖದಾಸೆಯೆತ್ತಣದು ತೀವ್ರ ಪರೀಷಹಮೆತ್ತ ಮೋಹಮಲ್ಲನ ಕುಱುಪಾಟವೆತ್ತ ಪಲವುಂ ಕೊಸಱೀಕ ಪರಾಜಿತೇಶ್ವರಾ (ಅಪಶ. ೭೮); ಕೋಟಿಯೊನಲಿಯಂತಾದುದಂಬಿನ ಕುಱುಪಾಟವನೇನ ಹೇಳುವೆನು (ನಾಗಕು. ೧೦–೨೩)

[ಕುಱುಪು (< ಕುಱಿಪು) + ಆಟ]

**ಕುಱುಪಿಡು** 'ಕುಱಿಪಿಡು' ನೋ.

**ಕುಱುಪು** 'ಕುಱಿಪು' ನೋ.

**ಕುಱುಪುಗೊಳ್**, ಕುಱುಹುಗೊಳ್ (ಕ್ರಿ). ಗುರುತಿಸು; ಲಕ್ಷಿಸು; ಗಮನಿಸು: ಗಿರೀಶ್ವರಂ . . . ನಾರದ ಮುನೀಶ್ವರನಱಪಿ ಪೋದುದಂ ಕುಱುಪುಗೊಂಡು (ಗಿರಿಕ. ೫–೯ ವ); ಎಮ್ಮಯ ಠಾವುಗಳೆಂದು ಕುಱುಪುಗೊಂಡು (ದಶಕು. ೧–೩೪); ವಸಂತಕನವಳ ಮುಗಳಿರವಂ ನಿರವಿಸಿ ಕುಱುಪುಗೊಂಡು (ಚಕವಿ. ೬–೧೧೦ ವ). **ಕುಱುಹುಗೊಳ್**: ಐಕ್ಯಂಗೆ ಕುಱುಹುಗೊಂಬುದಕ್ಕೆ ಮುನ್ನವೆ ನಿರಾಳ (ಮೋಳಮಾ. ೨೮೨–೫೦); ಅಱಿಯದಱಸಿ ಮಱದು ಮಱುಗಿ ಕುಱುಹುಗೊಂಡೆ [ಪಾಠಾಂ. ಗೆಟ್ಟೆ]ನೆನ್ನ ಗುರುವೆ (ಹಂಪೆರ. ೭–೨೧); ಅಱಸಿಹೊಗಲಾ ವ್ನಾಯ ನಿಕರಕೆ ತೆಱಹುಗುಡದ ಪರಸ್ವರೂಪನು ಕುಱುಹುಗೊಂಡರೆ ಮಂದಿವಾಳವೆ (ಕುವ್ಯಾಭೀ. ೭–೧೬).

[ಕುಱುಪು (< ಕುಱಿಪು) + ಕೊಳ್$_1$]

**ಕುಱುಪುವೇೞ್** (ಕ್ರಿ). ೧. ಗುರುತನ್ನು ಹೇಳು; ಲಕ್ಷಣವನ್ನು ಹೇಳು: ನವಭೂತಭಾಷೆಯಿಂ ಕುಱುಪುವೇೞ್ದು ತಾಮುಡ್ಡಗವಿತೆಯಂ ಮಾಡಿ (ಗದಾಯು. ೪–೪೧). ೨. ಸಂಕೇತಸ್ಥಾನವನ್ನು ಹೇಳು: ವಿರಾಟ, ನಾಟಕ ಶಾಲೆಯನೆ ಪೂರ್ವಸೂಚಿತಕ್ರಮದೊಳ್ ಕುಱುಪು ವೇೞ್ದುಂ (ಪಂಪಭಾ. ೮–೭೩ ವ); ತಡೆದ್ಯೆ ವಂಚಕ ಕೂರ್ತ್ತನೊಲ್ಕುಱುಪು ವೇೞ್ದಿಲ್ಲಿರ್ದೆ (ಕಾದಂಪೂ. ೩೨೩).

[ಕುಱುಪು (< ಕುಱಿಪು) + ಪೇೞ್]

**ಕುಱುಪೊಂದು** (ಕ್ರಿ). ಕುರುಪನ್ನು ಹೊಂದು; ಗುರುತನ್ನು ಪಡೆ: ಮಿಱುಗುವ ಕಱೆಮಱೆಯಿಲ್ಲದ ಕುಱುಪೊಂದದ ಸೂಕ್ಷ್ಮರೂಪನಂ ಜಾನಿಸಿದಂ (ಶಬಶಂ. ೨–೯೫). [ಕುಱುಪು (< ಕುಱಿಪು) + ಒಂದು$_1$]

**ಕುಱುಬ$_1$** 'ಕುಱುಂಬ$_1$' ನೋ.

**ಕುಱುಬ$_2$** 'ಕುಱುಂಬ$_3$' ನೋ.

**ಕುಱುಬಾಣ**, ಕುರುಬಾಣ (ನಾ). ಒಂದು ಬಗೆಯ ಭಾಣ; ಚಿಕ್ಕ ಬಾಣ (?): ಸಿಂಗಾಡಿಯ ಕುಱುಬಾಣದೊಳಗೆ ಮಿಗೆ ಸಂಗಡಿಸುತ ಲೌಡಿಯನು ಪಿಂಗದೆ ಪಿಡಿದು ನೋಡಿದನು ಖಾನರ ಬಲುಜಂಗುಳಿಯನು ರಾಮನಾಥ (ಕುರಾಸಾಂ. ೨೦–೩೬). **ಕುರುಬಾಣ**: ಆಗ ಯುದ್ಧ ರಂಗದಲ್ಲಿ ಬಳಸುತ್ತಿದ್ದ ಸಾಮಾನು ಸರಕುಗಳಲ್ಲಿ ಮತ್ತು ಆಯುಧಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಕೊಟ್ಟಿದೆ; ಗುದಿಗೆ, ದಡಿ . . . ಪಾಶಾಂಕುಶ, ತರವಾರಿ, ಕುರುಬಾಣ, ದಾಬೆ, ಕೃಪಾಣ (ನಂಜುಂಡ. ೧೩೧).

[ಕುಱು$_2$ + ಬಾಣ]

**ಕುಱುಬಿತಿ** 'ಕುಱುಂಬಿತಿ' ನೋ.

**ಕುಱುಬಿತ್ತಿ** 'ಕುಱುಂಬಿತಿ' ನೋ.

**ಕುಱುಬುವಾಡು** (ನಾ). ಕುರುಬರ ಹಾಡು (?): ಬೀದಿವಾಡಿಗೆ ತಾರೆಲೆಲೆ ತಾರೆಲೆಯೆಂಬ ವೋದಿಂಗೆ ಕುಱುಬುವಾಡಿಂಗೆ ಗಿಱುಗಟೆಯು ಮೊದಲಾದ (ಏಕೋಪು. ೧–೩೩).

[ಕುಱುಬು$_0$ (< ಕುಱುಂಬ$_1$) + ಪಾಡು$_2$]

**ಕುಱುಮನೆ** (ನಾ). ಸಣ್ಣ ಮನೆ: ಕುಱುಗಡ್ಡಂ, ಕುಱುಗಂಟು, ಕುಱುಮನೆ (ಶಬ್ದಾನು. ೩೬೯ ಪ್ರಯೋ). [ಕುಱು$_2$ + ಮನೆ]

**ಕುಱುಮೆಂದುರ್** (ನಾ). ಒಂದು ಊರಿನ ಹೆಸರು: ಪರ್ವ್ವಯಲ ಕುಱುಮೆನ್ದುರ ಪೆರ್ಮ್ಮನಡಿ ಗಾಮುಣ್ಡಜ್ಗಣಿಗಂ (ಎಕ. IV, ಹೆಗ್ಗಡ. ೧೦೩–೧೧ ; 910). [?]

**ಕುಱುವ$_1$**, ಕುರುವ, ಕುರುವೆ$_2$, ಕುರ್ವ, ಕುಱಿವ, ಕುಱುಂಬ$_4$, ಕುಱುವು$_2$ (ನಾ). ೧. ನೀರಿನಿಂದ ಸುತ್ತುವರಿದ ಪ್ರದೇಶ; ದ್ವೀಪ; ನಡುಗಡ್ಡೆ; ಅಂತರೀಪ: "ಅಂತರೀಪಮೆಂಬುದು ಸುತ್ತುಂಗಡಲ ಹರಿದ ಕುಱುವಂ" (ಹಲಾಯು. ೧೧೦–೪೮); "ಅಂತರೀಪಂ ನೀರ ನಡುಕುಱುವಮೆನಿಸಿಕ್ಕುಂ" (ಮಂಗರಾ. ೧೨೩–೧೩); ಪುಟ್ಟಿದಂ ಭಾಸುರ ತೇಜೋಭಾಸಿ ಸಿಂಧೂನದಿಯ ಕುಱುವದೊಳ್ ಸಿಂದನೆಂಬ ಕುಮಾರ (ಎಇ. III, ೨೩೨–೧೨ ; 1070); ನದೀಪತಿಯೊಳೊಂದು ಕಿಱಿದಾನುಂ ಕುಱುವಮಿರಲ್ ಅದಱ ಸಮಿಾಪದೊಳ್ (ನೇಮಿಪು. ೪–೧೦೭ ವ); ಕುಲವು ಯದುಕುಲ ರಾಜ್ಯವೇ ಕಡಲೊಳ ಕುಱುವ ನಿನ್ನೋಟಗುಳಿತನ ದಳವ ಮಾಗಧ ಕಾಲ ಯವನರು ಬಲ್ಲರು (ಕುವ್ಯಾಸ. ೮–೩೫); ಜನವವಿಲ್ಲದುದೊಂದು ಕುಱುವವ ಸಾರ್ದು ಮೂಱುದಿನ ವಿನುತನಿರ್ದನು (ಸಾಳ್ವಭಾ. ೭–೪೭). ೨. ದಿಬ್ಬ; ಗುಡ್ಡ; ದಿಣ್ಣೆ: ಮೂಡಲು[ಹೊ]ನ ಕುಱುವದಲ್ಲಿ ಕೋಂಟ (ಸೌಇಇ. XI–ii, ೧೭೫–೩೬ ; 1124); ನಡುವಣ ತುಂಬಿನ ಹಿರಿಯ ಕುಱುವದ ಮೂಡಲೇರಿಯ ತೋಟಗದ್ದೆ (ಎಕ. XI, ಹೊಳಲ್ಕೆ. ೨೨೧–೧೪ ; 1240).

**ಕುರುವ** : ೧. ಕಡಲ್ ಪೊಯ್ದು ಆ ಅಯಸಕುರುವಮನ್ ಬಳಸುತ್ತ ತೇಲಾಡುತಿರ್ಪನ್ (ಪಾ ರ ಸಿ. ೧೩-೩೦೮); ಈ ಕಡಲ ಕುರುವದಲ್ಲಿ ನಾನಿರುತ್ತಿರುವಾಗ (ಬಿ ದು ರಿ. ೧೯೯). ೨. ಕುರುವಗಳನೊಳಕೊಂಡ ಧರಣಿ ರನ್ನಗಳ ಮಳೆಗರೆದೊಡಂ ಸಂತಸಮನೀಯದೀಗ(ದಿಲೀಚ.೧-೫೫). **ಕುರುವೆ** : ೧. "ಕುರುವೆ – ನಡುಗಡ್ಡೆ" (ಜಾನಕೋ. ೩೯). **ಕುರ್ವ** : ೧. ಪಡದರನಗಲ್ದು ಕ್ಕುದೊಱೆಯೆಡೆಗುರ್ವವನಡರ್ದರ್ಭಕನ ಮಾಳ್ಕೆಗೆ ಸಂದೆ (ಸೊಬಸೋ. ೧೫-೧೩೧); ಅದಕೆ ಸಲುವ ಕುರ್ವಗಳ[ಹಿ]ರಿಯ ಕುರ್ವ[ಯೆ]ಕ್ಕೆ ಕುರ್ವ (ಸೌಇ. IV, ೨೫೫-೧೧; 1513); ಸಾಗರದ ನಡುವೆ ಕುರ್ವಕೆ ವರಹಯಂಗಳತಿವೇಗದಿಂದೈದಲ್(ಜೈಮಿಭಾ.೩೨-೨೫). **ಕುಱವ** : ೧. ಮಂದರದ ತೆಂಕಣ ಕುಱವದೊಳ್ ಮೂಱು ಪಳಿತೋಪ ಮಾಯುಷ್ಯರಾಗಿ ಪುಟ್ಟಿದರ್ (ಪಂರಾಮಾ. ೧೭-೭೧ ವ); ಮಂದರ ದಿಶಾನದುತ್ತರ ಕುಱವದೊಳು (ಶಾಸ್ತ್ರಟೀ. ೨೯-೩). ೩. ಧಾರಾಪೂರ್ವಕ ವಾಗಿ . . . ಕಪ್ಪುರನ ಕುಱವದೊಳಗೆ (ಎಕ. VI, ಕಡೂರು. ೧೪೮-೫೫; 1202). **ಕುಱುಂಬ₄** : ೨. ವಾಸ್ತುವಿಭಾಗಕ್ಕೆಡೆಯಿಲ್ಲದೆ ಕುಱುಂಬ ಗಳೊಳ್ ಬೀಡಂ ಬಿಡಿಸಿದಾಗಳ್ (ಆದಿಪು. ೧೨-೬೮ ವ). **ಕುಱುವು₂** : ೨. ಕುಱುವಿನೊಳಗೆ ಬಯಿರ ಕಣಗಿ ಹನ್ನೆರಡು ಮೂಡೆ (ಕಇ. III, ೬-೧೭; 1348). [ದೇ. ‖ ತಮಿ. ಕುಱೈ]

**ಕುಱುವ₂** (ನಾ). ಒಂದು ಮನೆತನದ ಹೆಸರು : ಗುರುಗಳ ಮಗಳು ಕುಱುವರ ಬಾಗಿಯಕ್ಕದೇವರ ಗರ್ಭಗ್ರಿಹ ಸೊಖನಾಸಿಯ ಕೆಲಸಕ್ಕೆಂದು ಕೊಟ್ಟ ಗದ್ಯಾಣ ೧೫ (ಸೌಇ. XX, ೮೪-೫೨; 1123). [?]

**ಕುಱುವಜ್ಜೆ** (ನಾ). ಸಣ್ಣ ಹೆಜ್ಜೆ; ಚಿಕ್ಕಪಾದ : ಕುಱುವಜ್ಜೆಗಳ ಘಣಘಣನಿಟ್ಟು ಬೇಱೊಂದು ಮುಱುಕದಿ ನಡೆದುದಾ ತುರಗ (ಭರಚ. ೨೯-೬೩); ಕುಱುವ [ಪಾಠಾಂ ಕಿಱುಪೆ]ಜ್ಜೆಗಳಿಡುತೆ ಮ ಲು ಹ ಣ ಂ ನಡೆತಂದಂ (ವೃಷವಿ. ೨೯-೮೩) [ಕುಱು₂ + ಪಜ್ಜೆ]

**ಕುಱುವಡಿ₁** (ನಾ). = ಕುಱುವಜ್ಜೆ : ಕುಳಿಶ ಸಮುಪಾಷಾಣನಿಕರಂಗಳಂ ಮೆಟ್ಟಲಳುಕಿ ಕುಱುವಡಿಯಿಡುತ್ತಂ ಬಳಲುತ್ತೆ ಬರ್ಪ ವೃದ್ಧರ್ಕಳಂ ಕೈವಿಡಿದು (ಅರಾಚ. ೬-೩೦). [ಕುಱು₂ + ಅಡಿ₁]

**ಕುಱುವಡಿ₂** (ನಾ). ಸಣ್ಣ ಮಡಿ; ಒಗೆದ ಚಿಕ್ಕ ವಸ್ತ್ರ : ಎಸೆಯೆ ಜಲದೇವತೆಗಳ್ ನಿಱಿವಿಡಿದುಡಲ್ ನಿವಿರ್ಚಿದ ಕು ಱು ವ ಡಿ ಯ ತರಂಗದಂತೆ ಬಂಬಲ್ದೆರೆಗಳ್ (ಪಂಪಭಾ. ೫-೫೭); ಕುಱುವಡಿಯಂ ಪಡೆದೆನೆಂದಿರ್ಪ ಕಳ್ಳನಂತಪ್ಪರ್ (ಸುಕುಮಾ. ೭-೨೭ ವ).

[ಕುಱು₂ + ಮಡಿ₅]

**ಕುಱುವಡೆ** (ನಾ). ಚಿಕ್ಕಸೇನೆ; ಸಣ್ಣ ದಂಡು : (ಶಮುದ. ೩. ೨೧೮).

[ಕುಱು₂ + ಪಡೆ₄]

**ಕುಱುವತ್ತಿ** 'ಕುಱುವರ್ತಿ' ನೋ.

**ಕುಱುವನಿಗೆ** (ನಾ). ಒಂದು ಬಗೆಯ ತೆರಿಗೆ : ಮ ಹಾ ದೇ ವ ರಿ ಗೆ ಅಂಕನಾಥಪೆಸರಿಂ ಅಂಕವಲ ತಳವಿರ್ತಿ ಕೊತ್ತಸಿ ಕುಱುವನಿಗೆ ಈ ಹಳ್ಳಿ ಮಾಂಧಾತ ಚಕ್ರವರ್ತ್ತಿ ಬಿಟ್ಟ ಧರ್ಮ (ಎಇ. XXI, ೨-೫೬; 1260). [?]

**ಕುಱುವರ್ತಿ**, ಕುಱುವತ್ತಿ(ನಾ). ಒಂದು ಊರಿನ ಹೆಸರು. ₱ ಈಗಿನ ಬಳ್ಳಾರಿ ಜಿಲ್ಲೆಯ ಕುರುವತ್ತಿ : ಕುಱುವರ್ತ್ತಿಯೊಳ್ಪರಮಯೋಗ ನಿಯೋಗದೆ (ಎಕ. VII, ಶಿಕಾರಿ. ೧೩೬-೬; 1068). **ಕುಱುವತ್ತಿ** : ಪೆಱಾಯದ ಕು ಱು ವ ತ್ತಿ ಬೇ ಡ ಗಾ ವು ಣ್ಡ ನು ಂ (ಮೈಆರಿ. ೧೯೩೫, ೧೭-೧೨; 1010); ಕುಱುವತ್ತಿಯ ದಕ್ಷಿಣಂ ಸ್ವಪೂರ್ವ್ವಮೂಂವತ್ತಱು ಮತ್ತರು ಕೆಂಮೊಗೆಯಂ (ಸೌಇ. IX-i, ೩೩೬-೧೦; 1220). [?]

**ಕುಱುವಳೆ** (ನಾ). ಒಂದು ದೇಶದ ಹೆಸರು : ಕುಱುವಳೆ ವಿಷಯೇ (ಮೈಆರಿ. ೧೯೨೮, ೮೦-೧೦೮; 799). [?]

**ಕುಱುವಳ್ಳೆ** (ನಾ). ಸಣ್ಣ ಹಳ್ಳ; ಚಿಕ್ಕಕಾಲುವೆ : ಆ ರಾಮುಸೈನ್ಯಕ್ಕೆ ನೆಟ್ಟನೆ ದಾಂಟಲ್ಕುಱುವಳ್ಳವಾಯ್ತು ನಗುವುದಾ ವಾ ರಾ ಶಿ ಯ ಂ ಪೇರಗಟ್ (ಶಾಂತೀಶ್ವ. ೧೩ ೫೧). [ಕುಱು₂ + ಪಳ್ಳ]

**ಕುಱುವಿಡಿ₁** (ಕ್ರಿ). ೧. ಕುರುಹನ್ನು ಹಿಡಿ; ಗು ರು ತು ಹಿ ಡಿ. ೨. [ವೀಶೈ] ಇಷ್ಟಲಿಂಗವನ್ನು ಹಿಡಿ, —ಧರಿಸು : ಕುಱುವಿಡಿದು ಕಂಡಿಹನೆಂದಡೆ ಪುಣ್ಯವ ಮಾಡಬೇಕೆಂಬರು (ಮೋಳಿಮಾ. ೨೫-೧೦೨).

[ಕುಱುವು₁ (< ಕುಱುಪು) + ಪಿಡಿ₁]

**ಕುಱುವಿಡಿ₂** (ನಾ). ಸಣ್ಣ ಹಿಡಿ; ಚಿಕ್ಕ ಮುಷ್ಟಿ. 'ಕುಱುವಿಡಿನಡು' ಪರಾ. [ಕುಱು₂ + ಪಿಡಿ₂]

**ಕುಱುವಿಡಿನಡು** (ನಾ). ಸಣ್ಣ ಹಿಡಿಯಷ್ಟು ಸೊಂಟ; ಅಸಿನಡು; ಪಿಡಿನಡು : ತುಱುಗಿ ನೋಡುತ್ತಿರಲಾ ಪುರವರವೆಲ್ಲ ಕೊಱವಿಯರಂದವ ಧರಿಸಿ ಕುಱುವಿಡಿನಡುವಿನ ಕುವರಿ ಕಾಣ್ಬಂದದಿ ದುರುದುಂಬಿಗಳು ಬಂದರಾಗ (ನೇಮಿಸಂ. ೨೧-೫೨). [ಕುಱುವಿಡಿ₂ + ನಡು₂]

**ಕುಱುವು₁** 'ಕುಱುಪು' ನೋ.

**ಕುಱುವು₂** 'ಕುಱುವ₁' ನೋ.

**ಕುಱುವೆ** (ನಾ). ಒಂದು ಬಗೆಯ ಬತ್ತ : ನಂದನವನದ ಮಾಕಂದ ಭೂರುಹದ ಮುಂದಚ್ಛಾಯೆಯೊಳ್ಪೀಸುವ ಕುಱುವೆಯ ಬಿಜ್ಜಣಿಗೆಯೊಳಂ ಪಾಸುವ ಬಾಳಪ್ರವಾಳ ತಳ್ಪತಳದೊಳಂ (ಅನಂಪು. ೧೧-೨೯ ವ).

[ದೇ. ‖ ತಮಿ. ಕುಱುವೈ]

**ಕುಱುಹಂದಿ** (ನಾ). ಸಣ್ಣ ಹಂದಿ; ಊರಹಂದಿ : ಕುಱಿ, ಹಂದಿ, ಕುನ್ನಿ, ಕುಱುಹಂದಿ, ಕೋಳಿ ಮೊದಲಾದವು ಸಾಕಿದೊಡೆಯನ ಬಲ್ಲವು ಅರೆಮರುಳೇ (ಮೋಳಿಮಾ. ೨೫-೧೦೦).

[ಕುಱು₂ + ಹಂದಿ (< ಪಂದಿ)]

**ಕುಱುಹಿಡು** 'ಕುಱುಪಿಡು' ನೋ.

**ಕುಱುಹು** 'ಕುಱುಪು' ನೋ.

**ಕುಱುಹುಗಂಟು** (ನಾ). ಗುರುತು ಗಂಟು (?) : ಹಾರುವ ಹಕ್ಕಿಯ ಹಿಡಿದೆ ಬೀಸುವ ಘಾಳಿಯ ಹಿಡಿದೆ ವೈಶಾಖದ ಬಿಸಿಲ ಹಿಡಿದೆ ಜಗವ ಹಾಸಿ ಕಟ್ಟಿದೆವೊಂದು ತಾರುಗಂಟುವೊಂದು ಜಿಗುಳು ಗಂಟು ವೊಂದು ಕುಱುಹುಗಂಟು (ಮನುಗುಂ. ೫೧).

[ಕುಱುಹು (< ಕುಱುಪು) + ಗಂಟು]

**ಕುಱುಹುಗಾಣ್** (ಕ್ರಿ). ಗುರುತನ್ನು ಕಾಣು; ಗುರುತು ಹಿಡಿ : ತನ್ನನು ಕುಱುಹುಗಾಣವು ವೇದ ಶಿರವು (ಕುವ್ಯಾಆ. ೨೦-೬).

[ಕುಱುಹು (< ಕುಱುಪು) + ಕಾಣ್]

**ಕುಱುಹುಗಾಣಿಸು** (ಕ್ರಿ). ಚಿಹ್ನೆಯನ್ನು ತಿ ಳಿ ಯ ಪ ಡಿ ಸು; ಗುರುತನ್ನು ತೋರಿಸು: ಕುಱುಹುಗಾಣಿಸದವಂ ಸುಮ್ಮನೇತಕೆ ಸಿಕ್ಕಿದಂ (ಜೈಮಿಭಾ. ೬-೪೯). [ಕುಱುಹುಗಾಣ್ + –ಇಸು₃]

**ಕುಱುಹುಗೆಡು** (ಕ್ರಿ). ಗುರುತು ಹಾಳಾಗು; ರೂ ಪ ಕೆ ಡು : ದಿವ್ಯಜ್ಞಾನ ಕು ಱು ಹು ಗೊ ಂ ಡು ತ್ರಿ ವಿ ಧ ಕು ಱು ಹು ಗೆ ಟ್ಟಿ ತು (ಮೋಳಿಮಾ. ೧೯೭-೭೦೦); ಅಱಿವು ಮಱೆಯಿತ್ತು ಕುಱುಹುಗೆಟ್ಟಿತ್ತು (ಅವಚಂ. ೬೮-೨೯೮). [ಕುಱುಹು (< ಕುಱುಪು) + ಕೆಡು₁]

**ಕುಱುಹುಗೊಡು** (ಕ್ರಿ). ಗುರುತನ್ನು ತಿಳಿಸು; ಸುಳಿವುಕೊಡು : ಸಂಕೇತ ನಿಕೇತನದ ಕೂಟಣಿಗಳಲಿ ಕುಱುಹುಗೊಡದೆಡೆಯಾಟದವರಲಿ . . . ಅಱಸಿದನು ಮಱೆಯದೆ ಮುಂದಗಾಮಿನಿಯ (ತೊರರಾ. ೫-೨-೨೦).

[ಕುಱುಹು (< ಕುಱುಪು) + ಕೊಡು₁]

**ಕುಱುಹುಗೊಳ್** 'ಕುಱುಪುಗೊಳ್' ನೋ.

**ಕುಱುಹುತೋಱು** 'ಕುಱುಹುದೋಱು' ನೋ.

**ಕುಱುಹುದಾಣ** (ನಾ). ಗುರುತಿನ ತಾಣ; ಸಂಕೇತ ಸ್ಥಾನ: "ಕಾಹುಯೆನೆ ಕಾವು ಮೇಣ್‌ಕುಱುಹುದಾಣಮು [ಪಾಠಾಂ. ತಾಹೆಯೆನೆ ತಾವುಮೇಣ್ಕುಱುಹು ದಾಣ]ಮೆನಿಕ್ಕು" (ಕಬ್ಬಿಕೈ. ೫೬).
[ಕುಱುಹು (< ಕುಱಿಪು) + ತಾಣ$_2$]

**ಕುಱುಹುದೊಱೆ** (ಕ್ರಿ). ಗುರುತನ್ನು ಕಳೆದುಕೊಳ್ಳು: ಕುಱುಹು ದೊಱೆಯಿತು ದೇಹ ಅಱಿವನಱಿಯಿತು ಪ್ರಾಣ ಹಱುವಾಗಿ ಹೋಯ್ತು ಭವಪಾಶ ಮುಕ್ತಿಯ ಇರವು ನಿರವಯವು (ಸರ್ವಜ್ಞ. ೧೭).
[ಕುಱುಹು (< ಕುಱಿಪು) + ತೊಱೆ$_1$]

**ಕುಱುಹುದೋಱು**, ಕುಱುಹುತೋಱು (ಕ್ರಿ). ೧. ಗುರುತು ಕಾಣಿಸು; ಗೋಚರವಾಗು: ಆ ಪುತ್ತಳಿಯ ಗರ್ಭದಲ್ಲಿ ಆಕಾಶ-ಮಹದಾಕಾಶವೆಂಬ ಕುಱುಹುದೋಱಿತ್ತು (ಮೋಳಿಮಾ. ೮-೨೬). ೨. ಕಾಣಿಸಿಕೊಳ್ಳು; ಪ್ರತ್ಯಕ್ಷವಾಗು: ಕಾಳೋದರವೆಂಬ ಮಹಾತಮದಲ್ಲಿ ಒಂದು ಜೀವಭಾವವೆಂಬ ಮಾಯೆ ಹುಟ್ಟಿ ದಿವ್ಯಜ್ಞಾನವೆಂಬ ವಸ್ತು ಕುಱುಹುದೋಱಿತ್ತು (ಮೋಳಿಮಾ. ೩-೯); ಕುಱುಹುದೋಱ್ಕೈ ಕೃಷ್ಣ (ಕುವ್ಯಾಆ. ೧೬-೨೬). ಒಡನೆ ಪಿಡಿದ ಪದ್ಮಾದಿಗಳಿಂ ಒಡೆಯುನೆನೆ ಕುಱುಹುದೋಱುತುಂ (ವಸ್ತವಂ. ೬೩). **ಕುಱುಹುತೋಱು**: ೩. ನೆಪಮಾತ್ರಕ್ಕೆ ತೋರಿಸು; ತೋರಿಸಿದ ಹಾಗೆ ಮಾಡು: ಒಡೆಯರಿಗೆ ಕುಱುಹುತೋಱಿ ತಾ ಹಿರಿದಾಗಿ ಉಂಬ ಕಡುಗಲಿಯ ನೋಡಾ (ಮೋಳಿಮಾ. ೨೨-೮೫).
[ಕುಱುಹು (< ಕುಱಿಪು) + ತೋಱು$_1$ (< ತೋಱಿರ್)]

**ಕುಱುಹುವಿಡಿ** (ಕ್ರಿ). ಗುರುತು ಹಿಡಿ; ಪತ್ತೆಹಚ್ಚು: ಜ್ಞಾನ ಮುಕುರದೊಳಗೆ ನೋಡಿ ತಾನು ತನ್ನ ಕುಱುಹುವಿಡಿದು ತಾನು ತನಗೆ ಅನ್ಯರಿಲ್ಲವೆಂಬ ಭೇದವ ತಾನೆಯಱಿದು (ಶಿವಗೀ. ೪-೯); ಗುರುವ ಶಿಷ್ಯನವಗ್ರಹಿಸಿ ಶಿಷ್ಯನೆಂಬ ಭಾವಭೇದ ಹಱಿದು, ಉಭಯಗೆಟ್ಟ ನಿಲವ ಕುಱುಹುವಿಡಿಯ ಬಪ್ಪುದೇ (ಶಿವಗೀ. ೯೭-೪೭೧).
[ಕುಱುಹು (< ಕುಱಿಪು) + ಪಿಡಿ$_1$]

**ಕುಱುಳ್‌ಗೊಂಗಾಲ್** (ನಾ). ಒಂದು ಊರಿನ ಹೆಸರು: ಕೊಪಾಲ ತೆಂಕಣ – ಪಳ್ಳಮ್ ಕುಱುಳ್‌ಗೊಂಗಾಲಾ ಪಳ್ಳಮ್ ಕಂದಳ್ ಮೊರಡಿ (ಮೈಆರಿ. ೧೯೨೪, ೮೦-೧೦೯; 799). [?]

**ಕುಱು$_1$** (ನಾ). ಕಳವಳ; ಗಾಬರಿ. 'ಕಱುಕುಱು' ಪರಾ. [?]

**ಕುಱು$_2$** 'ಕುಱು' ನೋ.

**ಕುೞಿ$_1$**, ಕುಳಿ$_1$, ಗುೞಿ$_1$ (ಕ್ರಿ). ೧. ಗುಣಿ ಬೀಳು; ಒಳಕ್ಕೆ ಇಳಿ; ಕುಸಿ: ಕುೞಿಯೆ ಪೊಱಂಡಾಗಿರೆಯುಂ ಕುೞಿದಿರೆಯುಂ ಬೆನ್ನ ನಿಷ್ಟಮಂ ಮಾೞ್ಕುಂ (ಲೋಕೋಪ. ೧೧-೫೬); ಜೋಲ್ದುಪುರ್ಬು ಕುೞಿ ದಕ್ಷಿಯುಗಂ (ಧರ್ಮಪ. ೩-೯೬); ಅಳಿಪಿನ ಮೋಹಮೆಂಬ ಕುೞಿದ್ರವ್ಯ ಮನೆನಿತೆನಿತನಿಕ್ಕುಗುಮನಿತನಿತೆ ಕುೞಿಗುಂ (ಜೀವಸಂ. ೧೫೬-೧೩ ವ). ೨. ತೋಡು; ಅಗೆ: "ಕುೞಿ – ಖನನೇ, ನಿಮ್ನ ಭೂಮೌ ಚ" (ಶಮಧಾ). ೩. ಸೊರಗು; ಕೃಶವಾಗು: "ಕುೞಿದನೆನಲ್ ಕೃಶಾಂಗದೊಳ್" (ಕರ್ಣಾನಿ. ೭೯); ಕ್ಷುಧಾತಿ ತೃಷಾರ್ತಿಯಿಂ ಕುೞಿಯನೞಿಯಂ ಕಂದಂ ಕುಂದಂ (ಪುಷ್ಪಪು. ೧೨-೮೮). **ಕುಳಿ$_1$**: ೧. ಬಸಿಱೊಡನೆ ಬಾಸೆ ಬಲಕೊಲೆಯೆ . . . ಕಣ್ ಕುಳಿಯೆ (ಸಿದ್ಧರಾ. ೧-೫೨); ವಳಗೆ ಉದ್ದ ಕುಳಿಯಾದ ಕಿವಿಗಳು (ಸೌಗಂಧಿ. ೪೯೩-೯). **ಗುೞಿ$_1$**: ಪಳ್ಳಮುಂ ಕೊಳ್ಳಮುಮಾದೊಡೆಲ್ಲಂ ಬತ್ತಿದ ಮಹಾಸಮುದ್ರದಂತೆ ಸೇರಿತ್ತು ಗುೞಿದು ಮಳಲು ನೆಲವಾಯ್ತು (ಬಂಹರಿ. ೧೦-೫೯ ವ).

[ದೇ. ‖ ತಮಿ. ಮಲ. ಕುೞಿ; ತುಳು. ಗುರಿ; ತೆಲು. ಕೋಲು, ಕ್ರೋಲು, ಗ್ರೋಯ್ಯಿ]

**ಕುೞಿ$_2$**, ಕುಣಿ$_2$, ಕುಳಿ$_2$, ಗುಣಿ$_1$, ಗುಳಿ$_1$, ಗುೞಿ$_2$ (ನಾ). ಅಗೆದ ಗುಣಿ; ತಗ್ಗು; ಹಳ್ಳ: "ಕುೞಿ – ಖನನೇ, ನಿಮ್ನ ಭೂಮೌ ಚ" (ಶಮಧಾ); "ಕುೞಿ – ಅಗುೞ್ದಡೆ" (ಶಮದ. ಪರಿ. ೧); ಕರುಂಗಲ್ ಕುೞಿಯಿಂದಿೞ್ದು ಪಡುವ ಬನ್ದ ಪಳ್ಳ (ಎಇ. X, ೬೭-೧; 892); ಕುೞಿಗಳ ತೀವಿರೆ ಗೋರೆಯಾಯ್ತು ನೆಲಂ (ಕಾವ್ಯಸಾ. ೪೬೫ ಶೂದ್ರಕ); ಅಗುೞ್ದಿರಲಾ ಕುೞಿಯೊಳಗೆ ನಿಧಿಗಂಡಂತೆ (ಪಂಪಭಾ. ೧-೯೭); ಪೊನ್ನ ನೆಲ್ಲಮಂ ಕೊಂಡು ಕುೞಿಯಂ ಮುನ್ನಿನಂತೆ ಪೂೞ್ದು (ಪಂಚತಂ. ೧೭೦-೧೭); ಕಱಿದೊವಲ ಪಱಿಯ ಕುೞಿಯಂ ತೆಱಿದಂದಂ ಮೈಯ ನಾತಂ (ಯಶೋಚ. ೨-೩೯); ಕಾಮ ಕಿರಾತಂ ಮುನಿಸಿಂ ಮಾಡಿದ ಕುೞಿಯೊಂದೆನೆ (ಪುಷ್ಪಪು. ೩-೩೫). **ಕುಣಿ$_2$**: ಕಲ್ಲು ಮರ ಮೊರಡಿ ಕುಣಿ ತೆವರಿಡಿದ ಬೆತ್ತದೊಳು ಪೊಕ್ಕು (ಕಣ್ಣರ. ೪೫-೨೨); ತಗ್ಗಿದ ಕುಣಿಯೆಂದು ಅಗ್ಗವಾಡಲು ಬೇಡ (ಸರ್ವಜ್ಞ. ೧೬೫೮); ಕುಣಿ ಅಗೆಸಿದರೆ ಋಣ ತೀರೀತೆ (ಗಾದೆ). **ಕುಳಿ$_2$**: "ಗರ್ತ, ಅವಟ – ಈ ೨ ಭೂಮಿಯ ಕುಳಿಯ ಪೆಸರು" (ನಾಚಿರಾ. ೯೮); ಮಣ್ಣಾಗಿ ಕುಳಿಯಾಗಿ ತೆವರಾಗಿ (ಪಿಂಡರ. ೧-೩); ವಿಷಯದ ಕುಳಿಯೊಳಗೆ ಕಾಲ್ದೊಡಕಿ ಬಿದ್ದ ಸುಯೋಗಿಯಂದದಲಿ (ಕುವ್ಯಾಸ. ೧೬-೪೮); ಸಿಲುಕಿದವು ಮೃಗವಿಂಡು ನಾನಾ ಬಲೆಗಳಲಿ ಕುಳಿಗಳಲಿ (ತೊರರಾ. ೩-೩-೧೭); ಕುಳಿ ದರಿ ಪಳ್ಳ ಪೆರ್ಗಾಡು (ಕುರಾಸಾಂ. ೪-೧). **ಗುಣಿ$_1$**: ಗುಣಿಯೆನದೆ ತಿಟ್ಟೆನದೆ ಸಿಕ್ಕಿದೆಡೆ ಬೆಳೆದು (ಮಂಕುಕ. ೧೬೬). 'ಗುಣಿಗಣ್ಣು', 'ಗುಣಿಗಲ್ಲ' ಪರಾ. **ಗುಳಿ$_1$**: ಹುಟ್ಟುಗುರುಡನು ಕೆಟ್ಟ ಕಣ್ಣವನ ಕೈವಿಡಿದು ಬಟ್ಟೆಯಱಿಯದೆ ಗುಳಿಯ ಬಿದ್ದವನ ತೆಱನಹುದು (ದೀಕ್ಷಾಬೋ. ೯೦-೧೧); ಗುಳಿಗಳೊಳು ಗುಡ್ಡೆಗಳ ಮಱೆಗಳೊಳು (ಸಿದ್ಧರಾ. ೨-೩೬); ಗುಳಿಯಾದ ಕಾವಲಿಯ (ಸೂಪಶಾ. ೧-೭೭). **ಗುೞಿ$_2$**: ಇಱಿಸಿಲ್ ಮಿಗಮಂ ಕೆಡಪುವ ಗುೞಿ (ಶಮದ. ಪರಿ. ೨); ಪಣ್ಗಳ ಸಾಲಿಂದೆನಸುಂ ಮೊದಲ್ ಗುೞಿಗಳೆಲ್ಲಂ ತೀವಿ ತುಂಬಿ (ಕುಸುಮಾ. ೧-೯೫).

ಕುಳಿಯಸುಂಕ = ೧. ಒಂದೊಂದು ಮಡಿಯ ಮೇಲೆ ಹಾಕುವ ಸುಂಕ. ೨. "ತೋಟದ ಬಾವಿಯ ಮೇಲೆ ಹಾಕುತ್ತಿದ್ದ ತೆರಿಗೆ" (ಕಶಾಅ. ೩೯೯): ಕುಳಿಯ ಸುಂಕದಾ ಕಾರಣೆಯಿಂ ಬಿಟ್ಟತೋಂಟ (ಸೌಇಇ. XI-ii, ೧೫೮-೨೫; 1109). ಗುಣಿಗಿಕ್ಕು = ಹೆರಿಗೆಯಾದ ನಂತರ ಮಗುವಿನ ಚೀಲವನ್ನು (ಸೆತ್ತೆ) ವಿಧಿಪೂರ್ವಕವಾಗಿ ಗುಂಡಿಯಲ್ಲಿಡು: ಗುಣಿಗಿಕ್ಕೊ ದಿವಸವೆ ವಿಧಿಯಮ್ಮ ಬಂದು ಬರೆಯೋದು (ನನ್ನೂರು. ೨೯೩). ಗುಣಿಸದೆಮಾಡು = ಮರದ ಸುತ್ತಲೂ ಪಾತಿಮಾಡು; ಗುಣಿಮಾಡು: (ಕಿ). ಮಾವಿನ ಗಿಡಕ್ಕೆ ಗುಣಿಸದೆ ಮಾಡಿ ನೀರು ಹಾಕು (ರೂಢಿ). [< ಕುೞಿ$_1$]

**ಕುೞಿಕಣ್**, ಗುಣಿಗಣ್ಣು, ಗುಳಿಗಣ್ಣು, ಗುೞಿಗಣ್ (ನಾ). ಗುಳಿ ಬಿದ್ದ ಕಣ್ಣು, ಒಳಕ್ಕೆ ಇಳಿದ ಕಣ್ಣು: ವಿಭಾವಮಂಗಶಿಥಿಲಂ ಕುೞಿಕಣ್ ನಡುಕಂ ಕಪೋಲವಾಗ್ದೀನಗತಿಸ್ವಭಾವಮನುಭಾವಮಿವಲ್ತೆ ವಿವರ್ಣಕಾದಿಗಳ್ (ರಸರ. ೪-೧೨೬). **ಗುಣಿಗಣ್ಣು**: (ಕಿ). **ಗುಳಿಗಣ್ಣು**: ಕಣ್ಣೀರು ತುಂಬಿದ ಗುಳಿಗಣ್ಣುಗಳಿಂದ ಮಗಳನ್ನೇ ನೋಡುತ್ತಾ ಗಿರಿಯಪ್ಪ . . . ಗದ್ಗದಧ್ವನಿಯಿಂದ (ನಿಶಉ. ೧೬೫). **ಗುೞಿಗಣ್**: ಕೆಲರ್ಗೆ ಪೆಱಗಾಲ್ ಕೆಲರ್ಗೆ ಕುಡುಗೆಯ್ ಗುೞಿಗಣ್ ಕೆಲರ್ಗೆ (ಅದ್ಭುತ. ೨೫-೨೬). [ಕುೞಿ$_2$ + ಕಣ್]

**ಕುೞಿಗೊಳ್** (ಕ್ರಿ). ಕುಸಿ; ಕುಗ್ಗು; ಕ್ಷೀಣಿಸು: ಪೊಸವೇಟಕಾಱರೆರ್ದೆಗಳ್ ಪೊಸಕಾರ ಪೊಡಪುಗಂಡ[ದೇಂ]ಕರಿತುವದೇಂ ಕಲಂಕಿದುವದೇಂ ಕುೞಿಗೊಂಡುವದೇಂ ಕನಲ್ದುವೋ (ಪಂಪಭಾ. ೭-೨೩); "ಛಿದ್ರವಾಗು" (ಪಂಪಭಾ. ಕೋಶ). [ಕುೞಿ$_1$ + ಕೊಳ್$_1$]

**ಕುೞಿತೆವಱು** (ನಾ). ಹಳ್ಳತಿಟ್ಟು; ತಗ್ಗುದಿಬ್ಬ: "ಸ್ಥಪುಟಂ, ವಿಷಮೋನ್ನತಂ - ಈ ೨ ಕುೞಿತೆವಱು" (ಹಲಾಯು. ೧೨೪-೬೮).
[ಕುೞಿ₂ + ತೆವಱು]

**ಕುೞಿನೊಸಲ್** (ನಾ). ಗುಳಿಬಿದ್ದ ನೊಸಲು; ಒಳಕ್ಕೆ ಇಳಿದ ಹಣೆ: ಪಱಿದಲೆ ಕುೞಿನೊಸಲೞಿಗಣ್ಣೊಱಿವಾಯ್ ಹಪ್ಪಳಿಕೆ ಮೂಗು ಮುರುಟಿದ ಕಿವಿ (ಯಶೋಚ. ೨-೩೮). [ಕುೞಿ₂ + ನೊಸಲ್]

**ಕುೞಿವಟ್ಟು** (ನಾ). ಗುಳಿ ಇರುವ ಬಟ್ಟಲು; ಕುಂದಣ (?): ತರತರದಿಂ ತುಱುಗಿದ ವಿವಿಧ ರತ್ನಮಯಮಪ್ಪ ಪೊನ್ನಕುೞಿವಟ್ಟುಗಳಿಂ ನಿರುಪಮ ಕನಕ ಸರೋಜಾಕರಮಲರ್ದಂತಿರ್ದುದನ್ನವಾಸವಿಲಾಸಂ (ಸುಕುಮಾ. ೧೧-೨೭); "ಗುಣಿಯಲ್ಲಿರುವ ಆಭರಣಗಳು" (?): (ಸುಕುಮಾ. ಕೋಶ). [ಕುೞಿ₂ + ವಟ್ಟು ?]

**ಕುೞಿವಳ್ಳ** (ನಾ). ತಗ್ಗಿನಲ್ಲಿರುವ ಹಳ್ಳ; ಆಳವಾದ ಹಳ್ಳ: ನೀರಱಿದು ಪುದುದಿಂಟೆಯ ದರಿಯ ಕುಳಿಯ ಕುತ್ತುಱ ಕುೞಿವಳ್ಳಮಂ ಕಂಡದಱ ಬೞಿವಿಡಿದುಬೆಳೆದಬಳ್ಳಿಯಪಸಿಯಪುಲ್ಲ ಲೀಲಾವ ೬-೪೯) [ಕುೞಿ₂+ಪಳ್ಳ]

**ಕುೞಿವುಗು** 'ಕುೞಿವೊಗು' ನೋ.

**ಕುೞಿವೊಗು**, ಕುೞಿವುಗು (ಕ್ರಿ). ಹೆರಿಗೆಯಾದ ಅಥವಾ ಮುಟ್ಟಾದ ಅನಂತರ ಶುದ್ಧಿಗಾಗಿ ಸ್ನಾನಮಾಡು; ಶುದ್ಧಿಸ್ನಾನಕ್ಕಾಗಿ ಕುಳಿಯಲ್ಲಿ ಪ್ರವೇಶಿಸು: ಜಳಜಾನನೆಗೆ ಕುೞಿವೊಗೆ . . . ಅನುರಾಗ ರಸದೋಳೋಕುಳಿಮಾಡಿದುದಾಗಳಿಳ ಬಾಂಧವನಿವಹಂ (ಪಾರ್ಶ್ವಪು. ೭-೮೬); ಅಚ್ಯುತನಂ ಕುೞಿವೊಕ್ಕು ಕೊಂಡ ಜಸದೆಗೆ . . . ಗೋಪಿಯರೆ ಮಾಯಲೊಲವಿಂದೆಱೆದರ್ (ಅರ್ಧನೇ. ೭-೫೨). **ಕುೞಿವುಗು**: ಕುೞಿವುಗದೆ ನಾಣ್ಚಿ ನಿನ್ನೊಡಲೊಳ್ ನೀನೋಡಿ ಪುಗುವುದುಂ (ಲೀಲಾವ. ೭-೩೯ ವ).
[ಕುೞಿ₂ + ಪೊಗು]

**ಕುೞಿವೊಕ್ಕುೞ್** (ನಾ). ಗುಳಿ ಬಿದ್ದ ಹೊಕ್ಕುಳು; ಒಳಕ್ಕಿಳಿದ ಹೊಕ್ಕುಳು: ವನಿತೆಯ ತೆಳ್ವಸಿಱುಳತೆಯು ವನಿತೆಯ ತನುರಸತಟಾಕ ಕುೞಿಯೆನೆ ಚಂದ್ರಾನನೆಯ ಕುೞಿವೊಕ್ಕುೞೆಸೆದುದು (ಜಗವಿ.೧೦-೨೮).
[ಕುೞಿ₂ + ಪೊಕ್ಕುೞ್]

**ಕುೞಿಸು** (ಕ್ರಿ). ಕೀಳಾಗಿಸು; ಕೆಳಗುಮಾಡು: ಶ್ರೀರಾಮಚರಿತಮ ನಿಳಿಸಿ ಕುೞಿಸಿ ನುಡಿದೆನಿಲ್ಲಂ (ರಾಮಾಶ್ವ. ೧೬೪-೩). [ಕುೞಿ₁+ -ಇಸು₃]

**ಕುೞು**, ಕುಡ₁, ಕುಳ₁, ಕುೞ₂, ಗುಳ₃, ಗುಳು₁, ಗುೞು (ನಾ). ೧. ಕುಂಟೆ, ನೇಗಿಲುಗಳ ಬಾಯಿಗೆ ತೊಡಿಸುವ ಕಬ್ಬಿಣದ ಪಟ್ಟಿ, —ಹಲ್ಲು: "ಫಾಳಃ, ಕುಶೀರಃ - ಈ ೨ ಕುೞು" (ಹಲಾಯು. ೯೪-೨೪೧); ಧನ್ಯಕುಮಾರ ನೇಗಿಲ ಕೊಂಬಂ ಪಿಡಿದು ನೋೞ್ಪೆನೆಂದೆತ್ತುಗಳಂ ಪೊಡೆಯ ಕುೞುವಿನ ಮೊನೆಯಂ ನಾಲ್ಪೆರಳಂ ನಾಂಟಿದ ಮುನ್ನಮೆ ಪೊನ್ನ ತುಂಬಿದ ಕಳಸಂ ಪೊಱಮಡೆ (ಪುಣ್ಯಾಸ್ರ. ೧೨-೧೬ ವ). ೨. ಬರೆಹಾಕುವ ಕಬ್ಬಿಣದ ಸಲಾಕೆ: ದೋಷಿ ಪಿಡಿವಂತೆ ದಿವ್ಯದ ಕಾಸಿದ ಕುೞುವಂ ಕಡಂಗಿ ಕಾಳೋರಗನಂ ಕೂಸು ಪಿಡಿವಂತೆ ಪಿಡಿದಂ (ಪಂರಾಮಾ. ೯-೧೦೧). **ಕುಡ₁**: ೧. ಕೊಣಬೇಗೌಡೆಂಬೋನು ದೊಡ್ಡ ಸಾವ್ಕಾರ ಕೂರಿಗೆ ನೂರು ಕುಡ ನೂರು ಕೊಣಬೇಗೌಡ್ನ ಆರಂಬದೆತ್ತು ಆಯ್ನೂರು (ನಾಪದ.೨೧); ನೀವು ನಮಗೆ ರೈತರಿಗೆ ಒಂದು ಹಳಿ ಕೊಡಲಿಲ್ಲ ಕುಡ ಕೊಡಲಿಲ್ಲ (ಬಲಿಬೇ. ೨೪೦). ೨. ಆದಕ್ಕೆ ಯಾವುದೋ ರೋಗ ವಡಸಿತೆಂದು ಲುಬ್ಧಕನು ಕಬ್ಬುನದ ಕುಡ ಕಾಸಿ ಆದರಂಗಕ್ಕೆ ಬರೆ ಕೊಟ್ಟನೆ (ಮೋಳಿಮಾ. ೬೧ ಪ್ರಸ್ತಾವನೆ). **ಕುಳ₁**: ೧. ನೇಗಿಲಿಗೆ ಹಾಕಿರುವ ಕಬ್ಬಿಣದ ತುಂಡು (ಎಸಮ್ಮೆ. XV, ೨೮); ನೇಗಿಲ ಕುಳಂ ದೊರೆಯ ಕತ್ತಿಯಂ ಕಿತ್ತೆಸೆದು (ಕೋಗಿಲೆ. ೧೮-೫೯). ೨. ಶೀನಪ್ಪನ ಎದೆಗೆ ಕಾದ ಕುಳದಿಂದ ಇರಿದಂತಾಯಿತು (ಹೇಮಕೂ. ೫೩). **ಕುೞ₂**: ೧. "ಕುೞಂ (ಗುೞಂ) - ನೇಗಿಲ್ವಾಯ ಕಬ್ಬಿಣಂ" (ಶಮದ. ಪರಿ. ೧); ಪರರ ಮನೆಯ ಸೂಜಿಯ ಕೇಡಂ ಬಯಸುವ ಕಳ್ಳಂಗೆ ತನ್ನ ಮನೆಯ ಕುೞಂ ಕೆಟ್ಟುದೆಂಬಂತೆ (ಧರ್ಮಾಮೃ. ೯-೨೫೪). **ಗುಳ₃**: ೧. ನೇಗಿಲಗ್ರದ ಗುಳವನು (ವೀಶೈಪು. ೪-೧೯-೪೯). **ಗುಳು₁**: ೧. ಹಾರೆಗುಳು ಗುದ್ದಲಿಗಳ್ (ಜೀವಸಂ. ೧೩೪-೧೧೫). **ಗುೞು**: "ನೇಗಿಲ ಗುೞುವಿನಲ್ಲಿ ಕೂಟು ಎನಿಸುಗು" (ನಾಚಿರಾ. ೬).
ಗುೞುವಿನಪೊಮ್ಮು = ಒಂದು ತೆರಿಗೆ; ನೇಗಿಲಿನ ಗುಳದ ಮೇಲೆ ಹಾಕುವತೆರಿಗೆ: ಇವು ಪೂರ್ವಕಾಲದ ತೆರಿಗೆಗಳು: ಮನೆತೆರಿಗೆ, ಹುಲ್ಲಹಣ . . . ಪಾಶವಾರು, ಗುೞುವಿನ ಪೊಮ್ಮು, ತೆರೆದಬಾಗಿಲ ಹೊನ್ನ (ನಮ್ಮನ್ನು. ೨೪೩); ಗುೞುವಿನ ಪೊಮ್ಮು (ಮಹಾವಂ. I, ೧೨೪).
[ದೇ. ‖ ತಮಿ. ಕೊೞು; ತುಳು. ಕೊರು; ಕೊಡ. ಕೊವ್; ತೆಲು. ಕಱು; ಕೊಱು]

**ಕುೞುವ** (ನಾ). ಒಬ್ಬಾತನ ಹೆಸರು: ಕುೞುವರುಂ ಬಿನಾಕಳ್ಳಿ ಗ್ರಾಮುಣ್ಡುಗೆಯ್ಕೆ (ಎಕ. VIII, ಸೊರಬ. ೪೫೭-೪; 972); ಕುೞುವರಗಾಯಿಗ ಹೊರವಯ್ಯಂ ಸತ್ತು ಸುರಲೋಕಕ್ಕೆ ಪೋದ (ಎಕ. VIII, ಸೊರಬ, ೪೫೪-೫; 973). 'ಕುಡುವ' ಪಠಾ. [?]

**ಕುೞ್ಗಿಸು**, ಕುಗ್ಗಿಸು, ಕುರ್ಗಿಸು (ಕ್ರಿ). ೧. ಸಂಕೋಚಗೊಳಿಸು; ಚಿಕ್ಕದಾಗಿಸು: (ಕ). **ಕುಗ್ಗಿಸು**: ೧. ಸಮಾಜವನ್ನೇ ಕುಗ್ಗಿಸಿ ಬಿಡಬಹುದೆಂಬ ಧಾರ್ಮಿಕ ಭೀತಿಯೇ ಆ ನಿಯಮಕ್ಕೆ ಕಾರಣವು (ನಾಡೋಜ.೩೬೫). ೨. ಕುಂದಿಸು; ಖಿನ್ನಗೊಳಿಸು: ನಿರುತ್ಸಾಹಗೊಳಿಸು: ಪುತ್ರಶೋಕವು ಆರ್ಯಕನನ್ನು ಕುಗ್ಗಿಸಿತು (ಆರ್ಯಕ. ೭೦). **ಕುರ್ಗಿಸು**: ೧. "ಕುರ್ಗಿಸು - ಸಂಕೋಚೇ" (ಶಮಧಾ).
[ಕುೞ್ಗು + -ಇಸು₃]

**ಕುೞ್ಗು**, ಕುಕ್ಕು₄, ಕುಗ್ಗು₁, ಕುರುಗು, ಕುರ್ಗು₁ (ಕ್ರಿ). ೧. ಸಂಕೋಚವಾಗು; ಚಿಕ್ಕದಾಗು; ಕಡಿಮೆಯಾಗು: "ಕುೞ್ಗು [ಪಾಠಾಂ. ತರ್ಗು] - ಆಕುಂಚನೇ (ಕುಗ್ಗು)" (ಶಮಧಾ). **ಕುಕ್ಕು₄**: ಕಕ್ಕುಲತೆ ನಮಗಿಲ್ಲವೆಂದೆನಲ್ಧರಣಿಪತಿ ಕುಕ್ಕಿದನು ತನಗಾಸೆಯಿಲ್ಲೆಂದು (ತುರಂಗ. ೪೩-೪೦). **ಕುಗ್ಗು₁**: ೨. ಬಾಗು; ಬಗ್ಗು: ಕಾಲ್ಗೆಱಗಿ ಕುಗ್ಗಿ ಕಿಂಕರತೆಯಿಂ ನೆಱೆ ಪೆಚ್ಚಿ ಕೈಗೊಟ್ಟು ತಂದು ಬಿಜಯಂಗೆಯ್ಸಿ ಕುಳ್ಳಿರಿಸಿ (ಬಸರ. ೭-೨೮). ೩. ಕುಂದು; ಕೊರಗು; ಮ್ಲಾನವಾಗು: ವಾರಿಜವೃತ್ತ ಪಕ್ಷಿಗಳು ಕುಗ್ಗಿದುವು ಚಕೋರ ನೀಲಾಬ್ಜ ಹಿಗ್ಗಿದವು (ಮೋಹತ. ೨೭-೨೩); ಸುಖ ಬಂದಾಗ ಹಿಗ್ಗಿ ದುಃಖ ಬಂದಾಗ ಕುಗ್ಗಿ . . . ಬದುಕಿಹೋಗುವ ಜನವೇ ಹೆಚ್ಚು (ಧರ್ಮಸಾ. ೧೦೬). **ಕುರುಗು**: ೧. ಸಮರಾಂಗಣಕೆ ವಿಮುಖವನು ತಿರುಹಿದರೆ ಸರಿಯರಸರಲ್ ತಲೆ ಕುರುಗುವುದು (ಜಿನಭಾ. ೬೭-೪೧). **ಕುರ್ಗು₁**: ೧. ಸುರುಳ್ದು ಕುರ್ಗಿದ ಕಱಂಗಿದ ಖೇಚರನಂಗಮಂ ಮೃಗಂಗಳುಮಿರದೆಯ್ದೆವಂದು ನಡೆನೋಡಿದವು (ಆದಿಪು. ೨-೫೯); ಮೇಘರಥನೞಿದುಂಗುಷ್ಠಾಗ್ರದೊಳೆತ್ತುವುದುಂ ಕುರ್ಗಿ ಪುಯ್ಯಲ್ಚುವ ರವಮಂ (ಚಾವುಂಪು. ೫೨); ನುರ್ಗಾಗಿ ಚಿಟಿಲ್ಚಿಟಿಲೆನೆ ಕುರ್ಗುತ್ತುಂ ನೆಲದೊಳೊರಸಿ ಮೇಲ್ಕುತ್ತುತ್ತುಂ (ಧರ್ಮಾಮೃ. ೬-೧೯೦); ತಲ್ಲಣಗೊಂಡುದು ಕುರ್ಗಿ ಕುಕ್ಕಱಿಸಿ ಘೀಳಿಡುತಿರ್ದುದು (ಗಿರಿಕ. ೧-೧೧೩).
[ದೇ. ‖ ತಮಿ. ಮಲ. ಕುಱ್ಗು; ತುಳು. ಕುಗ್ಗು; ತೆಲು. ಕ್ರುಂಗು; ಕುಯಿ. ಕ್ರುಂಬು]

**ಕುೞ್ದಿಕ್ಕಾಲ್** (ನಾ). ಒಂದು ಕಾಲುವೆಯ ಹೆಸರು (?): ಕಿಱುವದಿಕ್ಕಾಲ್ ತನ್ನೊೞ್ಪಿಎ ಕುೞ್ದಿಕ್ಕಾಲ್ ತೆನ್ನೊೞ್ಪಿಎ (ಇಆ. XVII, ೩೬೮-೨೫; 8ನೆಯ ಶತ). [ಕುೞ್ದ₀ + ಕಾಲ್₂]

**ಕೂ$_1$** (ನಾ). ೧. ಕೂಗುವಿಕೆ ; ಕರೆ : (೬). ೨. ಪಕ್ಷಿಗಳ ಕೂಗಿನ ಅನುಕರಣ ಪದ. 'ಕುಕ್ಕೂಕೂ' ಪರಾ. [ದೇ. ‖ ತಮಿ. ತುಳು. ಕೂ]

**ಕೂ$_2$** 'ಕೂವ' ನೋ.

**ಕೂ$_3$** (ನಾ). ೧. ಹೆಣ್ಣು ಪಿಶಾಚಿ. ೨. ಭೂಮಿ; ನೆಲ: ಜ್ಯಾ, ಮಾ . . . ಭ್ರೂ, ಕೂ – ಎಂಬಿವು ಮೊದಲಾದ ಏಕಾಕ್ಷರ ಶಬ್ದಂಗಳಿರ್ದ ತೆಱದಿಂ ವಿಭಕ್ತಿಯುಂ ಪಡೆವುವು (ಶಮದ. ೮೩ ಪ್ರಯೋ). [ಸಂ.]

**ಕೂಂಕಿಱಿ** (ಕ್ರಿ). ತಿವಿದು ಇರಿ; ಚುಚ್ಚು: ಮಣಿಯದೆ ಕೊಕ್ಕು ಕೂಂಕಿಱಿ (ಎಕ. VI, ಕಡೂರು. ೧೪೯-೪೫; 1205). [ಕೂಂಕು + ಇಱಿ$_1$]

**ಕೂಂಕು,** ಕೂಕು$_1$ (ಕ್ರಿ). ೧. ಮೇಲಕ್ಕೆ ನೆಗೆ; ಮೇಲಕ್ಕೆ ಹಾರು; "ಕೂಂಕು – ಉತ್ಸರ್ಪಣೇ" (ಶಮುಧಾ) ; ಸುರಭಿಗಳ ತೊರೆದ ಪೊಲೆಗಳ ನುಣ್ಬವಱ ಮಱಿಗಳಂ ಪೋಗೆ ನೂಂಕಿ ಕೂಂಕಿ ಮೊಲೆಗಳನುಣ್ಬ ಕಿಶೋರ ಕೇಸರಿಗಳುಮಂ (ಪಂಪಭಾ. ೧–೧೧೫ ವ) ; ಮೇಲ್ವಾಯ್ದು ಕೇಶಗ್ರಹಂಗೆಯ್ದು ತಂದಾ ಮೇಲ್ವಾಸಿನೊಳ್ ಕೂಂಕಿ ತನ್ನುಬ್ಬಿನಿಂದಂ (ಅನುಮು. ೭೦). ೨. ನುಗ್ಗು; ತಳ್ಳು; ದೂಡು: ಎಱೆದು ನೆಲಕ್ಕಿಕ್ಕಿದರ್ ಕೂಂಕಿದರ್ (ಅರ್ಥನೀ. ೮–೯೭) ; ತೊಡಂಕುವ ತೋಟಗೈವ ಕೂಂಕುವ ನೆಱೆ ನೂಂಕುವೇಳ್ಗೆಯ ಬಲಂ (ರಾಜಶೇ. ೧೩–೮೪). ೩. ತಳ್ಳಿಹಾಕು; ತಿರಸ್ಕರಿಸು; ಕಳೆ: ಸಂಕಂ ಕೂಂಕುವ ಮುದ್ದು ಮೂಗೆಱೆಗೊರಲ್ ತಳ್ತಿರ್ಪ ಕಂದಂ (ಚಿಕವಿ. ೩–೨೦); ಪೃಥ್ವೀಭಾರಮಂ ಕೂಂಕಿ ಪಾಂಡುಕುಮಾರರ್ಕಳನೋವಿದಂ ಕರುಣದಿಂ ಶ್ರೀಕೃಷ್ಣನುಲ್ಲಾಸದಿಂ (ದಿವ್ಯಚ. ೧–೫೭). **ಕೂಕು$_1$** : ೧. ಅಸುವನುಂ ಕೂಕುವನುಂ ಬೀಸುವನುಂ ಗಡಯೆ ನೆಗಟ್ದ ತಕ್ಕಡಿಯೊಳೆನು ತ್ತಾ ಸದೆಯುಂ ಕುಂಕದೆಯು ಬೀಸಂದೆಯು (ಎಕ. II, ೧೩೩–೧೩೧ ; 982). [?]

**ಕೂಂಟಣಿ** 'ಕುಂಟಣಿ' ನೋ.

**ಕೂಂಟಣಿದೊಱ್ತು** 'ಕುಂಟಣಿದೊಱ್ತು' ನೋ.

**ಕೂಂಟಿ** 'ಕುಂಟಿ$_1$' ನೋ.

**ಕೂಂಟು,** ಕುಂಟು$_1$ (ಕ್ರಿ). ೧. ಒಂದೇ ಕಾಲಿನ ಮೇಲೆ ಹೆಚ್ಚು ಭಾರ ಹಾಕಿ ವಿಕಾರವಾಗಿ ನಡೆ; ವಕ್ರವಾಗಿ ನಡೆ: "ಕೂಂಟು – ವಿಕೃತಗತೌ" (ಶಮುಧಾ) ; ಕುಸಿಯುತ್ತುಂ ಕೂಂಟುತುಂ ನುಣ್ಮೞಲೊಳಡಿಗಳಂ ಪಾಸಿ ಮೆಟ್ಟುತ್ತುಂ (ಲೀಲಾವ. ೬–೪೭) ; ಕುಂದನೊಂದಿದ ದಂದುಗದೊಳ್ ಕೂಂಟ ನಡೆವ ಕಲಿಯುಂ ಕಲಿಯೇ (ರಾಮಾಶ್ವ. ೧೨೬–೧೫). **ಕುಂಟು$_1$**: ೧. ನಡೆದು ಕುಂಟುತ್ತಿನಿತು ದೂರಂ ತುದಿಯ ಕಾಲಿಂದ (ಬಸಪು. ೪೩–೮೫). ೨. (ಆಲಂ) ತತ್ತರಿಸು; ಮುಗ್ಗರಿಸು; ತಡವರಿಸು: ಪೇಳ್ವೆನೆಂದರೆ ಜಿಹ್ವೆ ಕುಂಟುತಿರ್ದುದು (ಭರಚ. ೫೫–೭೧); ಕೆಲಸ ಕುಂಟುತ್ತಾ ಸಾಗಿದೆ (ರೂಢಿ).

[ದೇ. ‖ ತುಳು. ಕುಂಟು, ಕೊಂಟು ; ಕೊಡ. ಕುಂಟ್ ; ತೆಲು. ಕುಂಟು ; ಕೋಲಾ. ಕುಂಟ್]

**ಕೂಂಟು$_2$,** ಕುಂಟು$_2$ (ನಾ). ಕುಂಟುವಿಕೆ; ಕುಂಟುತನ: ಸಹಜಧಾತುವುಂ ಭಾವಮಕ್ಕುಂ – ಸೊಕುರ್, ದಾಂಟು, ಕೂಂಟು (ಶಮದ. ೨೧೩ ಪ್ರಯೋ); ಕೂಂಟು, ಕೂಂಟಣಿ (ಶಬ್ದಾನು. ೮೦ ವ್ಯಾಖ್ಯಾ). **ಕುಂಟು$_2$**: ಕುರುಡು ಕುಂಟಿಂದಲಸದೆ (ಪಂಪಭಾ. ೫–೪೬); ಕುಂಟರಪ್ಪವರ್ಗಂ ಕೆಟ್ಟುವು ಕುಂಟು ಕುರುಡರ್ ಕಂಡರ್ ಮಹಾವ್ಯಾಧಿ ಕೆಟ್ಟುವು (ಬಂಹರಿ. ೯–೨೫). [< ಕೂಂಟು$_1$]

**ಕೂಂಟೆ$_1$** 'ಕುಂಟೆ$_2$' ನೋ.

**ಕೂಂಟೆ$_2$** 'ಕುಂಟೆ$_3$' ನೋ.

**ಕೂಂಡೆ** (ನಾ). ಗೂಡೆ (?) : ಊರೊಡೆಯರ್ಗ್ಗೆ ಮಾನ್ಯದ ಕೆಮ್ಮತ್ತರಿನ್ನೂಱು ಮನೆಗೆಣ್ಣೆಯ್ಯಗಲವಿಪ್ಪರ್ತ್ತೈಗೈನೀಳದ ನಿವೇಶನಂ ಮೂರು ಸಾಶ್ವತ ಸುಂಕಂ ಗಾಣವೆಯಿಲಿಗೆ ಕೂಣ್ಡೆ ಮುಟ್ಟಿಗೆ ಪಡಿಯಳೆ ಯಜ್ಞದಲೊನ್ದು ಗದ್ಯಾಣಂ (ಎಇ. XX, ೬–೩೪ ; 1012). [?./ ತಮಿ. ಕೂಡೈ]

**ಕೂಂದಲ್,** ಕೂಂದಲು, ಕೂದಲ್, ಕೂದಲು (ನಾ). ಕುರುಳು ; ಕೇಶ; ರೋಮ: "ಚಿಕುರಂ ಕಚಂ . . . ಕೇಶಮಾವಾಳಮೆನೆ ಕೂಂದಲಕ್ಕುಂ" (ಮಂಗರಾ. ೯೪–೫) ; ಇಂದ್ರವಲ್ಲಭೆಯ ವೇಣೀಭಾರಮಂ ಸಾರ್ಚಿ ಬೆಚರ್ದಳಗ್ರಾಂಗುಲಿಮಾಲೆ ಕೂಂದಲನೆ ಬಂದೊರ್ವಳ್ (ಅನಂಪು. ೪–೯೭) ; ವಿಲಸನ್ಮಂತ್ರಯುತಂ ಕೂಂದಲ ನೇಣಂ ಮುಸಲಮಂಥಮಂ ಪೊರೆವುದು (ಖಮುದ. ೧೬–೯೨). **ಕೂಂದಲು**: ತಲೆಯಲಿ ಕರಿದು ಕೂಂದಲುಗಳೌಷಧಿಗಿಲ್ಲ (ಮೋಹತ. ೧೮–೭೮). **ಕೂದಲ್**: "ಕಚಃ – ಕೂದಲ್" (ಕಾಶಕ್ರ. ೯೪); ನಿಮ್ಮಯ ಮುಗಳ ಕೂದಲತ್ಯಂತವ್ರುದು (ಮಾಸರ. ೧೬೮). **ಕೂದಲು** : "ನವಿರೆಂದು ಕೂದಲು" (ಶಮದ. ಪರಿ. ೨) ; ಎಲ್ಲಾ ಶರೀರಂ ಪೊಱಮುಟ್ಟು ಬಾಲದ ಕೂದಲು ಸಿಕ್ಕಿಯಲ್ಲಿಯೆ ನಿಲ್ವುದುಂ (ಧರ್ಮಪ. ೫–೧೫ ವ) ; ಬಿಸುಡು ಚಕ್ರವ ನೆನ್ನ ಕಾಯದಲಿ ಅಳುಕಿ ಕೂದಲು ಹಱಿದುದಾದರೆ ಬಳಿಕ ನಾ ಡಿಂಗರಿಗನಲ್ಲ (ಕುವ್ಯಾಭೀ. ೬–೪೫) ; ತುಱುಕಱು ಕೂದಲು ತುಱುಬಿಗೆ ಸುತ್ತಿದರೆ ಎಣಿಕೆಯಿಲ್ಲದ ಮುತ್ತೈಡೆಯರಣ್ಣ (ಪುರಂದ. ೧–೧೭೯–೪) ; ತಲೆಯೆತ್ತೆ ಕೂದಲ ಸೆಳೆಕೊಳ್ವ ಮುಳ್ಳು (ಕಂನವಿ. ೧೮–೪೭) ; ಬೆಣ್ಣೆಯೊಳಗಿನ ಕೂದಲು ತೆಗೆದಂತೆ (ಗಾದೆ).

[ದೇ. ‖ ತಮಿ. ಮಲ. ಕೂನ್ದಲ್; ತುಳು. ಕುಜಲ್. / ಸಂ. ಕುಂತಲ]

**ಕೂಂದಲು** 'ಕೂಂದಲ್' ನೋ.

**ಕೂಂಪು** (ಕ್ರಿ). ಕುಕ್ಕು; ಕುಟುಕು: ಯಾವ ಕಾಯಿ ಹಣ್ಣಾಗಿದೆ ; ಯಾವುದನ್ನು ಕಾಗೆ ಕೂಂಪಿದೆ ಎಂದು ಹುಡುಕಲಾರಂಭಿಸಿದರು (ಮೊಮುಗು. ೬೪). [?]

**ಕೂಕ$_1$** 'ಕುಯುಕ' ನೋ.

**ಕೂಕ$_2$** (ನಾ). (?): ಕೂಕನೇಱಿದ ನೂಲ ಕೊಂಡು ತಂದು ಅದಱೊಳಗೆ ತೊಡರ್ದ ಗುರು ಲಘುತೆಯುಂ ಶೋಧಿಸಲ್ಕುಂಟೆ (ಭಕ್ತಿಸ. IV, ೫೮). [?]

**ಕೂಕಂಬ$_1$** 'ಕೂವಕಂಭ' ನೋ.

**ಕೂಕಂಬ$_2$** (ನಾ). ಒಂದು ಮರದ ಹೆಸರು (?) : ಮತ್ತಮಾಂಸಮದುಱಿಯೆ ಪಡಹದ ಪಿಳುಕುಱಿಯೆ ಕೊಳಂಬೆಯ ಕೂಕಂಬದ ಕೋಡಂಬೆಯ ಮುಡಿಗೆಯ ತಾಣಂಗಳೊಳ್ ಮೇದು (ಅನಂಪು. ೧೧–೩೯ ವ). [?]

**ಕೂಕಂಭ** 'ಕೂವಕಂಭ' ನೋ.

**ಕೂಕಕಂದರ್ಪ** (ನಾ). ಒಂದು ಬಿರುದು (?) : ಶ್ರೀಮತ್ ನನ್ನಿಯ × × ಕೂಕಕನ್ದರ್ಪ ತರುಣೀವಿಳಾಸ (ಎಕ. XI, ಹೊಳಲ್ಕೆ. ೮೭–೩ ; 975).

[ಕೂಕ$_0$ + ಕಂದರ್ಪ]

**ಕೂಕಟಿ** (ನಾ). ಜುಟ್ಟು; ಜಡೆ: ವಳೆಯದ ಕೂದಲು ಯಂಚೆಯ ತೊಡದ ಹಾಂಗೆಯಿರಲೂ ಕೂಕಟಿಯ ಹಿಡಿದು ಹಿಡಿದು ತೆಗದರೆ ಕೂದಲು ಕೈಯಲ್ಲಿ ಕಿತ್ತು ಬಂದರಂ (ಅಶ್ವವೈ. ೭–೪೨ ಟೀಕೆ).

[← ತೆಲು. ಕೂಂಕಟಿ. / ಸಂ. ಕೂಟಕ]

**ಕೂಕಣಿ**, ಕುಕ್ಕಣಿ, ಕೂಗಟ್ಟೆ$_2$, ಕೂಗಣಿ, ಕೂಗಣೆ, ಕೂಗಳಿ (ನಾ). ೧. ಕಿವಿಯ ಮಲ; ಗುಗ್ಗೆ: "ಕಿವಿಯಲ್ಲಿಯ ಹೊಲಸು" (ಜಾನಕೋ. ೪೦). **ಕುಕ್ಕಣಿ:** ಮಳೆಯು, ಕಿವಿಯಲ್ಲಿನ ಕುಕ್ಕಣಿ ತೆಗೆಯುತ್ತಿದ್ದ (ಬೆಂದಜೀ. ೪). **ಕೂಗಟ್ಟೆ$_2$.** 'ಕೂಗಟೆಹುಣ್ಣು' ಪರಾ. **ಕೂಗಣಿ:** ಈ ತೂತಿನೊಳಗೆ (ಬಾಹ್ಯ ಕರ್ಣದ) ಸಣ್ಣ ಕೂದಲುಗಳೂ ಖೈಯಾದ ಕೂಗಣಿಯು ಉಂಟು (ಮುಂಬಯಿ.೬–೩೩೧). **ಕೂಗಣೆ:** "ಪಿಂಜೂಷ – ಕಿವಿಯೊಳಗಿನ ಕೂಗಣೆ" (ಗಂಗಾವು. ೨೦೩). **ಕೂಗಳಿ:** "ಕೂಕಣಿ, ಕೂಗಳಿ = ಕೂಗಣಿ" (ಗಂಗಾವು. ೯೩).
[ದೇ. ‖ ತಮಿ. ಕುರುಮ್ಬ್ಯ; ಗೊಂಡಿ. ಕೊರಂಗೆಡ್]

**ಕೂಕತನ** (ನಾ). ವಂಚಕತನ; ಮೋಸಗಾರಿಕೆ: ನೂಕಿದರು ಅವರಾಗ ಕೂಕತನದೊಳು ಬೇಗ ಲೋಕದೊಳಗೆಲ್ಲ ಕಂಡುದನು ನುಡಿದು ತಾನೇಕವಾಗಿಹನು (ಸರ್ವಜ್ಞ. ೧೬). [ಕೂಕ$_2$ (< ಕುಯಕ) + –ತನ]

**ಕೂಕರಿ** (ನಾ). ಕ್ಷುದ್ರವ್ಯಕ್ತಿ; ಕೀಳಾದವನು; ಅಲ್ಪಮನುಷ್ಯ: ಗಾದೆ ಉಂಟು ಕೊಡಗರಲ್ಲಿ – ದೊಡ್ಡ ಕೆಲಸಕ್ಕೆ ದೊಡ್ಡ ಕೆಣ, ಚಿಕ್ಕ ಕೆಲಸಕ್ಕೆ ಚಿಕ್ಕ ಕೆಣ, ಕೂಕರೀನ ತಂದು ತಕ್ಕ ಎಂದರೆ ಮುಂದಿ ಎದುರು ಮೈ ಕೆಣ (ಚಕರಾ. ೧೯೨). [< ಕುಕ್ಕಾರ]

**ಕೂಕಿಡು** (ಕ್ರಿ). ಕೂಗು; ಧ್ವನಿಮಾಡು: ಕೂಡೆ ಕೂಕಿಡುವ [ಪಾಠಾಂ. ಕಿಱಿವ] ಕುಕಿಲ್ವ ಬಿಕ್ಕುಳಿಪ ತೇಗುವ (ಪಂಪಭಾ. ೪–೯೦).
[ಕೂಕು$_2$ + ಇಡು$_1$]

**ಕೂಕಿಱಿ**, ಕುಕ್ಕಿಱಿ (ಕ್ರಿ). ಕೂಗಾಡು; ಆರ್ಭಟಿಸು: ಒರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ ತ್ರಿಪುಂಡ್ರಮಿಟ್ಟುಂ ಕೂಕಿಱಿದುಂ (ಪಂಪಭಾ. ೧೨–೧೫೮ವ) ; ಕೂಡೆ ಕೂಕಿಱಿದು ಗೋಕುಳಪಾಳಕರಾರ್ದಿಸಲ್ಕೆ (ನೇಮಿಪು. ೧೦–೧೪೧) ; ಬಿಲುವೊಯ್ದು ತೆಗೆ ನೆಱಿದು ಕೂಕಿಱಿದು [ಪಾಠಾಂ. ಕುಕಿಲಿಱಿದು] (ಹಚಕಾ. ೫–೪೧) ; ನೊಸಲುರಿಗಣ್ಣನಾಳ್ವ ಚೌಡೇಶ್ವರಿ ಕೂಕಿಱಿದಾರ್ವ ಕಾಟಿಯುಂ (ಪಾರ್ಶ್ವಪು. ೧೫–೧೧) ; ಕೂಕಿಱಿದಾರ್ದು ನೋಡೆನುತ (ಎಕ. VIII, ಸೊರಬ. ೫೦೨–೧೩ ; 1294); ಆಕಾಶದೊಳು ಭೂತಕೋಟಿ ಕೂಕಿಱಿದುವು (ಭರಚ. ೩೬–೯೭). **ಕುಕ್ಕಿಱಿ:** ಕರಡೆ ಜಗ್ಘಟೆ ಜರ್ಝರಿಗಳಿಂ ಕುಂಭಿ ಕುಕ್ಕಿಱಿದಾರ್ದ ಳುಂಬಮಾಗಿರೆ ಗಿರಿನಿತಂಬದೊಳು ರಾಕ್ಷಸರು ನೆರೆದಿರ್ದರು (ಕುಮುರಾ. ೭–೫೩). [ಕೂಕು$_2$ + ಇಱಿ$_1$]

**ಕೂಕು$_1$** 'ಕೂಂಕು' ನೋ.

**ಕೂಕು$_2$** (ನಾ). ಕೂಗುವಿಕೆ; ಕೂಗಾಟ. 'ಕೂಕಿಡು', 'ಕೂಕಿಱಿ' ಪರಾ. [< ಕೂಗು$_2$]

**ಕೂಕು$_3$** (ನಾ). ದಿಣ್ಣೆ; ದಿಬ್ಬ (?) : ಪ್ರತಿ[ೀ]ಚಿ[ೀ]ದೆಸೆ ಪೆದ್ದಾಣ ಏವಾಯುವ್ಯದೆಸೆ ಪೆಬ್ದಿಣ್ಣಲೆನ್ಬಡಕಾಯ್ಕುಕು ಉದಿ[ೀ]ಚಿ ದೆಸೆ ಕೆಱೆಯಿನ್ನೀಗ್ಗೊರೆ ಮುಟ್ಟೆ (ಎಕ. X (S), ಮುಳುಬಾ. ೩೨೮–೫೨ ; 650). [?]

**ಕೂಕುಂಬ** 'ಕೂವಕಂಭ' ನೋ.

**ಕೂಕುಂಬಕಾಱಿ**, ಕೂಕುಂಬಿಕಾಱಿ (ನಾ). ಹಡಗಿನ ಕರ್ಣಧಾರ; ನಾವಿಕ: "ಕರ್ಣಧಾರೆ, ನಾವಿಕ ಕೂಕುಂಬಕಾಱಿ [ಪಾಠಾಂ. ಕೂಕುಂಬಿಕಾಱಿ]" (ನಾಚರಾ. ೬). **ಕೂಕುಂಬಿಕಾಱಿ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕೂಕುಂಬ (< ಕೂವಕಂಭ) + –ಕಾಱಿ]

**ಕೂಕುಂಬಿಕಾಱಿ** 'ಕೂಕಂಬಕಾಱಿ' ನೋ.

**ಕೂಗ** (ನಾ). ನೀಚ; ದುಷ್ಟ (?) : ಲೋಚಿನ ಲಾಲ್ಯರುಂ ಬತ್ತಲೆಯ ಬಾಹ್ಯರುಂ ಕುಂಚದ ಕೂಗ[ಪಾಠಾಂ. ಖೂಳ]ರುಂ (ಆದರ. ೧೪೮–೧). [?]

**ಕೂಗಟಿ$_1$** 'ಕೂಗಟೆ$_1$' ನೋ.

**ಕೂಗಟ್ಟೆ$_2$** (ನಾ). ಒಂದು ಜಾತಿಯ ಹಕ್ಕಿ. 'ಕೂಗಟವಕ್ಕಿ' ಪರಾ. [?]

**ಕೂಗಟವಕ್ಕಿ** (ನಾ). = ಕೂಗಟ್ಟೆ$_2$: ಗಳಪುವಕ್ಕಿ ಕೂಗಟವಕ್ಕಿ ಗೆಡೆವಕ್ಕಿಯು (ಪ್ರಭುಪು. ೩–೧೪). [ಕೂಗಟ್ಟೆ$_2$ + ಪಕ್ಕಿ$_1$]

**ಕೂಗಟೆ$_1$**, ಕುಗ್ಗಟೆ, ಕೂಗಟಿ$_1$ (ನಾ). ಅಂಟುವಾಳದ ಮರ: ಕೂಗಟೆಮರ, ಅಂಟುವಾಳ, ನೊರೆಕಾಯಿ (ವೈಔಗ. ೬೮–೧೩೮೩). 'ಹೆಗ್ಗೂಗಟೆ' ಪರಾ. **ಕುಗ್ಗಟೆ:** (೬). **ಕೂಗಟಿ$_1$:** ಮರಗಳು – ಪೆರಚೆ, ಕೂಗಟಿ (ಅಂಟವಾಳ), ಅಶೋಕ (ನಮ್ಮನು. ೨೩೬).
[← ತೆಲು. ಕೂಕುಡು, ಕುಂಕುಡು]

**ಕೂಗಟೆ$_2$** 'ಕೂಕಣಿ' ನೋ.

**ಕೂಗಟೆಹುಣ್ಣು** (ನಾ). ಕಿವಿಯಲ್ಲಿ ಗುಗ್ಗೆ ತುಂಬಿ ಉಂಟಾಗುವ ಒಂದು ಬಗೆಯ ಹುಣ್ಣು : ಕೂಗಟೆಹುಣ್ಣು ಆದರೆ ಜಾಗಟೆ ಬಡಿಯುವುದಕ್ಕೆ ಆಗದೆ (ರೂಢಿ).
[ಕೂಗಟೆ$_2$ (< ಕೂಕಣಿ) + ಹುಣ್ಣು (< ಪುಣ್)]

**ಕೂಗಣಿ** 'ಕೂಕಣಿ' ನೋ.

**ಕೂಗಣೆ** 'ಕೂಕಣಿ' ನೋ.

**ಕೂಗರಿ**, ಕೂಗಲಿ, ಕೂಗಲು, ಕೂಗುರಿ (ನಾ). ಒಂದು ಬಗೆಯ ಕಾಯಿಪಲ್ಯ, —ತರಕಾರಿ: ಪಾಗಲ್ಕೂಷ್ಮಾಂಡಂ ಮುಡುಪಾಗಲ್ ಪೊಸತವರೆ ತೊಂಡೆ ಪಡಲಂ ಮೋಚಂ ಕೂಗರಿ ಬದನೆಯೆನಿಪ ಮೇಲೋಗರಮಂ ಪಲವನಿಕ್ಕಿದರ್ (ತ್ರಿಪುವಿ. ೧೦–೩೨) ; ಕುಂಬಳ ತೊಂಡೆ ಹಲಸು ಕೂಗರಿ ಹಡಲ ಬಾಳೆ ಮೊದಲಾದ ಕಾಯುಸಹಿ (ಸೂಪಶಾ. ೪–೩೩); ಗುಳ್ಳಂ ಪಡಲಂ ಕೂಗರಿ . . . ಮಾಡಿದ ಮೋಗರ (ನೀತಿಸಾ. ೬೪೪). **ಕೂಗಲಿ:** ಸಿಂಬೆ ಕೂಗಲಿ ಪಿಪ್ಪಲಗಾಯ ಕೊಯ್ದರು ನಿಂಬೆಯ ಕಳಿವಣ್ಗಳೊಡನೆ (ಮೋಹತ. ೪–೬೦). **ಕೂಗಲು:** ನಿಮ್ಮಕ್ಕನ ಊರ್ ಹಾದಿ ತೋರೇನು ಭಾವಯ್ಯ ಗೋರಿ ಕಲ್ಲೊಡದು ಮಳೆಲೆದ್ದು ಆದರಾಚಿಕೆ ಹಾಗಲು ಹಬ್ಬಿ ಕುಡಿಹಬ್ಬಿ ಅದರಾಚಿಕೆ ಕೂಗಲು ಹಬ್ಬಿ ದನಿಹಬ್ಬಿ (ನಾಪದ. ೬೫). **ಕೂಗುರಿ:** "ಕೂಗುರಿ[ಪಾಠಾಂ. ತಿ]ಯವರೆಗಳು ವಲಾಖ್ಯಂ" (ಮಂಗರಾ. ೪೫–೪೮) ; ಚಂಟಿ ಕೂಗುರಿ ಕೊತ್ತುಂಬರಿಯ ನೀಡಿ (ಶರಲೀ. ೫೦೯–೪). [?]

**ಕೂಗಲಿ** 'ಕೂಗರಿ' ನೋ.

**ಕೂಗಲು** 'ಕೂಗರಿ' ನೋ.

**ಕೂಗಳ** (ನಾ). (ಕರಾ) ಮಾಡಿನ ಮುಖ್ಯ ತೊಲೆ; ಬೆನ್ನುತೊಲೆ.
[← ತುಳು. ಕುಬಲ್, ಕುಬಳ್]

**ಕೂಗಳತೆ** (ನಾ). ಗಟ್ಟಿಯಾಗಿ ಕೂಗಿದರೆ ಕೇಳುವಷ್ಟು ದೂರ: "ಗವ್ಯೂತಿ, ಕ್ರೋಶಯುಗ ಎರಡು ಕೂಗಳತೆಯ ಮಾರ್ಗ" (ನಾಚರಾ. ೬) ; ಒಂದೇ ಕೂಗಳತೆ ವೈಕುಂಠ (ಪುರಂದ. ೨–೧೨೪–೧) ; ಕೂಗಳತೆಗೆ ಕೊಂಚವೋ ಇದಕ್ಕೆ ನೋಡು ನಾಗರಾಜನೆ ಸಾಕ್ಷಿಯೋ (ವಾದಿಕೀ. I, ೧೪೨–೫); ಒಂದು ಕೂಗಳತೆಯ ದಾರಿ ಕ್ರಮಿಸಿರಬೇಕು (ಹಾಡುಹು. ೭೧). [ಕೂಗು$_2$ + ಅಳತೆ]

**ಕೂಗಳಿ** 'ಕೂಕಣಿ' ನೋ.

**ಕೂಗಾಟ** (ನಾ). ಕೂಗುವಿಕೆ; ಕೂಗಾಡುವಿಕೆ: ಗಂಡುಗೋಗಿಲೆಯ ಮುಂಬರಿಯ ಕೂಗಾಟದಿಂ ಬಗ್ಗಿಸುತೆ ಮೆಱೆದುವಾ ವನಂ (ಪದ್ಮರಾ. ೮–೨೫) ; ನಮ್ಮ ಸಂತೋಷದ ಕೂಗಾಟವನ್ನು ಕೇಳಬೇಕಾಗಿತ್ತು (ಶಾಲೆವು. ೬). [< ಕೂಗಾಡು]

**ಕೂಗಾಡು** (ಕ್ರಿ). ೧. ಗಟ್ಟಿಯಾಗಿ ಧ್ವನಿಮಾಡು, —ಕೂಗು: ಇಂದ್ರರ್ ನಿಂದು ಕೂಗಾಡೆ ಮಾಡಿದನಾಸೇಚನಮಂ ಜಗತ್ಪತಿಗೆ (ಅನಂಪು. ೯–೫೭). ೨. (ಆಲಂ) ರೇಗಾಡು: ಬಂದಿಯೊಡನೆ ಅವನು ಹುಚ್ಚಾಬಟ್ಟೆ ಕೂಗಾಡುತ್ತಿದ್ದನು (ಪುನರು. ೧೮೬). [ಕೂಗು$_2$ + ಆಡು$_1$]

**ಕೂಗಿಡಿಸು** (ನಾ). ಕೂಗಿಕೊಳ್ಳುವಂತೆ ಮಾಡು; ಗೋಳಾಡಿಸು: ಬೀದಿವರಿದು ತೊತ್ತಳದುಳಿದು ಕೊಂದು ಕೂಗಿಡಿಸಿತ್ತು ಲುಬ್ಧಕರನು (ಹಚಕಾ. ೬–೨೭); ತಾಗಿ ಗವಯನ ಗಜ ಗವಾಕ್ಷನ ಕೂಗಿಡಿಸಿ ಪರಿಭವಿಸಿ (ತೊರರಾ. ೬–೩೮–೫); ಮನ್ನೆಯರ ಮಾರ್ಬಲ ನೆರೆ ಕೊಂದು ಕೂಗಿಡಿಸಿತು ಖಳರ (ಕಂನವಿ. ೧೯–೬೨).
[ಕೂಗಿಡು + –ಇಸು$_3$]

**ಕೂಗಿಡು** (ಕ್ರಿ). ಗಟ್ಟಿಯಾಗಿ ಕೂಗು, —ಧ್ವನಿಮಾಡು; ಅರಚು: ಕೂಗಿಡೆಯಿಡೆ ದಜದಜಮೆಂದೆಚಿದು ಪುಯ್ಯಲಿಡೆಯಿಡೆ ಕೊಲ್ಲುಂ ಕುಜಿಯಂ ಕೊಲ್ವಂತಿರೆ (ಅಜಿಪು.೧೦–೨೮); ಗಜಮಾಂಸವನುಬ್ಬಿ ತಿಂದು ಕೂಗಿಡುವ ಮರುಳ್ (ಎಕ. VIII, ಸೊರಬ. ೧೮೪–೧೦; 1033); ಮಂದ್ಯೈಪ ಪುಳಕದಿಂ ಕೆಳೆಯೇಜಿ ಕೂಗಿಡುತೆ (ಬಸರ. ೯–೨೪); ನಾಕಿ ಪ್ರಸರ ಕೂಗಿಡುತಿರಲಿ ಕಾಕ್ಷಣ ಬಿಸರುಹಾಕ್ಷನು ಬಂದು (ಸಂಥಪ. ೫–೧೦೬); ಬೆಡಗಿನ ನವಿಲು ಕೂಗಿಡುವ ಪಡಿಯ ಐವಕ್ಕಿ ಮೊಜಿವ ಪಜಮೆ (ಕುರಾಸಾಂ. ೨–೩೩).
[ಕೂಗು$_2$ + ಇಡು$_1$]

**ಕೂಗಿಸು** (ಕ್ರಿ). ಕೂಗುವಂತೆ ಮಾಡು: ಕೋಗಿಲೆಯೆಂಬ ಕಟ್ಟಿಗೆ ಗಾಜನ ಕೈಯ ಕೂಗಿಸಿದನು ತೀಕ್ಷ್ಣದಿ (ಮೋಹತ. ೬–೧೪); ಹೀಗೆ ಲೋಕವನ್ನು ಪೀಡಿಸಿ ಕೂಗಿಸುತ್ತಿದ್ದುದರಿಂದ ಅವನಿಗೆ ರಾವಣ (ಕೂಗಿಸುವವನು) ಎಂದು ಹೆಸರಾಯಿತು (ವಚಭಾ. ೪೦೪).
[ಕೂಗು$_1$ + –ಇಸು$_3$]

**ಕೂಗು$_1$** (ಕ್ರಿ). ೧. ಧ್ವನಿಮಾಡು; ಅರಚು: "ಕೂಗು – ಉಚ್ಚೈರ್ಧ್ವನೌ" (ಶಮುಧಾ); ಕುಕ್ಕೂಕೂ ಎಂದು ಕೋಟಿ ಕೂಗಿದುವಾಗಳ್ (ಕಾವ್ಯಾವ. ೧೧); ತಳಾಜರೀತನಂ . . . ಕೊಂದು ಕೂಗಿದಪರ್ (ಸುಕುಮಾ. ೭–೩೭ ವ); ತಂಡತಂಡದಿಂ ಕೂಗುವ ಗಂಡುಗೋಗಿಲೆಗಳಿಂ (ಗಿರಿಕ. ೩–೧೦೩ ವ); ಅರಗಿಳಿಯೆಂಬಂತೆ ನುಡಿವಳು ಕೋಕಿಲ ಸ್ವರದಿಂದೆ ಕೂಗುವಳೊಡನೆ (ಮೋಹತ. ೧೭–೧೪); ಮುಂಗೋಳಿಗಳಾ ಪುರದೊಳಗೆ ಕೂಗಿದವು (ಕಂನವಿ. ೯–೨೦೭); ನಾಯಿ ಕೂಗಿದರೆ ದೇವಲೋಕ ಹಾಳೆ (ಗಾದೆ). ೨. ಹತ್ತಿರಕ್ಕೆ ಬರಹೇಳು; ಕರೆ; ಆಹ್ವಾನಿಸು: ರಾಯರು ನನ್ನನ್ನು ಕಂಡು ಕೂಗಿದರು (ರಾಯುಕ. ೮೩).
[ದೇ. ‖ ತಮಿ. ಕೂವು; ಮಲ. ಕೂಕು, ಕೂವು; ಕೊಡ. ಕೂ; ತೆಲು. ಕೂಯು; ನಾಯ್ಕಿ. ಕೂಗ್; ಪರ್ಜಿ. ಕೂಯ್; ಗಡಬ. ಕೂಯ್, ಗೂಯ್]

**ಕೂಗು$_2$** (ನಾ). ಕೂಗುವಿಕೆ; ಧ್ವನಿ: ಗುರು ಪ್ರಿಯನಂದನ ಕೂಗಡಂಗದಿರ್ದೊಡೆ ಬರ್ದುಕಾವುದಿರ್ ಪೊಡರ್ದೊಡೀಗಡೆ ಕೊಂದಪೆನ್ (ಪಂಪಭಾ. ೭–೩೩); ಆದಿರದ ವೀರರಿಲ್ಲಳಹಗುಂದದ ಮನ್ನೆಯರಿಲ್ಲ ಕೂಗಡಂಗದ ನರನಾಥರಿಲ್ಲ (ಎಕ. VIII, ಸಾಗರ. ೧೫೯–೨೬; 1159); ವಿಕ್ರಮಕ್ಕೆ ರಿಪುಖಗಪತಿಗಳ್ ಕೂಗಡಗಿ ಬೀತ ಮಾವಿನ ಕೋಗಿಲೆಯೊಲ್ ಕೊಂಬುಗೊಂಡು ಕುಂಬುಟಿರ್ಪರ್ (ಅರ್ಧನೇ. ೨–೮೫); ನರೀ ಕೂಗು ಗಿರೀ ಮುಟ್ಟೀತೇ (ಗಾದೆ).
[< ಕೂಗು$_1$]

**ಕೂಗುಗ** (ನಾ). ಕೂಗುವವನು: "ಚಣಕಃ – ಕೂಗುಗಂ" (ಶಾಶಕ್ಯ. ೨೩೯).
[ಕೂಗು$_1$ + –ಗ$_2$]

**ಕೂಗುದಾರಿ** (ನಾ). = ಕೂಗಳತೆ: ಮರಂಗಳಾವಗಂ ಫಲಪುಷ್ಪಯುಕ್ತಮಾಗಿ ಅರೆಕೂಗುದಾರಿಯುದ್ದಮಾಗಿರ್ಕುಂ (ಚಿಕಬಿ. ೧೬); ಒಂದು ಕೂಗುದಾರಿ ಪ್ರಮಾಣವುಳ್ಳ ಸರ್ಪಂಗಳು . . . ಮಹಾಗ್ನಿಯಲ್ಲಿ ಬಿದ್ದವು (ಕೃವಾಳ. ೭೭).
[ಕೂಗು$_1$ + ದಾರಿ$_1$]

**ಕೂಗುಬಂಡೆ** (ನಾ). = ಕೂಗಿದರೆ ಪ್ರತಿಧ್ವನಿ ಕೊಡುವ ಬಂಡೆ: ಆ ಬೆಟ್ಟದಲ್ಲಿ ಕೂಗುಬಂಡೆಯಿದೆ (ರೂಢಿ).
[ಕೂಗು$_1$ + ಬಂಡೆ]

**ಕೂಗುಮಾರಿ** (ನಾ). ೧. ಕೂಗುವ ಮಾರಿದೇವತೆ: ಬೇಗ ಬಂದಳ ದೊರ್ವ ದಾನವಿ ಕೂಗುಮಾರಿಯು ತೆರದಿನರಚುತೆ ಬಹುವಿಕಾರದೊಳು (ರಾಮಾಸಂ. ೧–೩–೨೫). ೨. = ಕೂಗುಬಂಡೆ.
[ಕೂಗು$_1$ + ಮಾರಿ]

**ಕೂಗುರಿ** 'ಕೂಗರಿ' ನೋ.

**ಕೂಗುಹಾಕು** (ಕ್ರಿ). = ಕೂಗಿಡು: ಒಂದು ಕೂಗುಹಾಕು (ರೂಢಿ).
[ಕೂಗು$_2$ + ಹಾಕು (< ಪಾಯ್ಕು$_1$)]

**ಕೂಚ್** 'ಕೂಚು$_4$' ನೋ.

**ಕೂಚ$_1$** 'ಕೂಚು$_1$' ನೋ.

**ಕೂಚ$_2$** (ನಾ). ಕುಂಚ; ಕೂರ್ಚ: ಹಡಪ ಚಾಮರಗಿಂಡಿ ಸಗ್ಗಳೆ ಪಡಿಗ ಸತ್ತಿಗೆ ಕೂಚ ಕಟ್ಟಿಗೆ ಬಿಡು ಮಣಿಹ ಕಾಳಂಜಿ (ಪ್ರಹ್ಲಾಚ. ೪–೫೮).
[< ಸಂ. ಕೂರ್ಚ]

**ಕೂಚ$_3$** 'ಕೋಸು$_2$' ನೋ.

**ಕೂಚಂಭಟ್ಟ** 'ಕೋಚುಭಟ್ಟ' ನೋ.

**ಕೂಚಗಲ್ಲು** (ನಾ). ಕಂಬದ ಕಲ್ಲು: ಕೋಟೆಯಮೇಲೆ . . . ನಿಲ್ಲಿಸಿದ್ದ ಕೂಚಗಲ್ಲು ಉರುಳಿಬಂದು (ಭಾರವೀ. ೧೦೦).
[ಕೂಚ$_1$ (< ಕೂಚು$_1$) + ಕಲ್ಲು (< ಕಲ್$_3$)]

**ಕೂಚಾಗು** (ಕ್ರಿ). ದಂಡು ಚಲಿಸು (?): ಈಗಲೆ ಲಷ್ಕರು ಕೂಚಾಗಿ ಬರುತ್ತದೆ (ರಾಜೇಂದ್ರ. ೩೭); ಮುಂಬಯಿ ಫೌಜುಸಮೇತ ಕೂಚಾಗಿ (ರಾಜೇಂದ್ರ. ೩೯).
[ಕೂಚು$_4$ + ಆಗು$_1$]

**ಕೂಚಿ$_1$** 'ಕೋಸು$_2$' ನೋ.

**ಕೂಚಿ$_2$** 'ಕೂಚು$_4$' ನೋ.

**ಕೂಚಿ$_3$** (ನಾ). ಶ್ರೇಷ್ಠವಾದುದು; ಶಿಖರ; ಶಿರೋಬಿಂದು: ಸುದತಿಯರು ನಡೆತಂದರದಿರಿನೊಳು ಪರವೆನಾಚಿಯ ಜಗತ್ತ್ರಯವಶ್ಯದೌಷಧಿಯ ತಲೆಕೂಚಿಯ (ಸೌಂದಪು. ೭–೫೬).
[? . / ತಮಿ. ಕುಚ್ಚಿ]

**ಕೂಚಿಪತ್ರ** (ನಾ). ಆಧಾರಪತ್ರ ದಾಖಲೆ; "ವಿಷಯವನ್ನು ಬರೆದಿಟ್ಟಿರುವ ಪತ್ರ" (ಜೀವಸಂ.ಕೋಶ): ಬೆಲೆಯಿಲ್ಲೆಂಬನಿತಗ್ಗಳಿಕೆಯ ಮಹಾರತ್ನಂಗಳಾಗಳ್ ಕರಂ ಪಲವುಂ ತೊಟ್ಟನೆ ಕೂಚಿಪತ್ರ ಸಹಿತಂ ಬಂದೊಕ್ಕುವಂ ಕಂಡು (ಜೀವಸಂ. ೧೯೭–೩೦).
[ಕೂಚಿ$_3$ + ಪತ್ರ]

**ಕೂಚಿಪುಡಿ, ಕೂಚುಪುಡಿ** (ನಾ). [ನಾಟ್ಯ] ಒಂದು ಬಗೆಯ ನೃತ್ಯ: ಕೂಚಿಪುಡಿ ನಾಟ್ಯ – ವಿಜಯನಗರಸಾಮ್ರಾಜ್ಯ ಕಾಲದಲ್ಲಿ ಆಂಧ್ರದಲ್ಲಿ ಅವತರಿಸಿದ ಈ ನಾಟ್ಯವು ಬಹಳ ಜನಪ್ರಿಯವಾಗಿತ್ತು (ಭಾರದ. ೫೬೨).
**ಕೂಚುಪುಡಿ**: ಕೂಚುಪುಡಿ, ಒಡಿಸ್ಸಿ ಮುಂತಾದ . . . ಸಂಪ್ರದಾಯಗಳೂ (ಭಾರದ. ೫೫೪).
[?]

**ಕೂಚಿಭಟ** (ನಾ). ಒಬ್ಬಾತನ ಹೆಸರು: ಬಾಳಶಕ್ತಿಭಟರ ಶಿಷ್ಯ ಕೂಚಿಭಟರ್ಗ್ಗೆ ಭಗಿತಿ ಮಹಾ ಬೀಎಂ ಭಗವತಿಯೆನ್ಸಿನ್ಪವರೊಳ್ ಐವರ್ (ಎಕ. III, ನಂಜನ. ೧೮೩–೬; 977).
[ಕೂಚಿ$_3$ + ಭಟ]

**ಕೂಚಿಭಟ್ಟ** 'ಕೋಚುಭಟ್ಟ' ನೋ.

**ಕೂಚಿಭಟ್ಟಾರ** (ನಾ). ಒಬ್ಬಾತನ ಹೆಸರು: ಉತ್ತರಾಯಣ ಸಂಕ್ರಾಂತಿಯೊಳ್ ಕೂಚಿಭಟ್ಟಾರರ ಕಾಲಂ ಕಟ್ಚಿ ಧಾರೆಯನೆಜೆದು ಬಿಟ್ಟು (ಎಕ. IV, ಚಾಮರಾ. ೧೮–೧೬; 1000).
[ಕೂಚಿ$_3$ + ಭಟ್ಟಾರ]

**ಕೂಚು$_1$, ಕೂಚ$_1$** (ನಾ). ತೊಲೆಗೆ ಆಧಾರವಾಗಿ ನಿಲ್ಲಿಸುವ ಕಂಭ; ಮನೆಯ ನಿಲುಗಂಬ; ಊರೆಗಂಬ: ಲೋಚನಾಂಜನಕಿಂಬು ಕೂಚುಗಳು ಮಾಳಿಗೆಗೆ (ಸರ್ವಜ್ಞ. ೨೭೫); ಮಾರಿಗೆ ಒಂದು ಕೂಚು, ಮೊಳಕ್ಕೆ ಒಂದು ಗುಜ್ಜು (ಗಾದೆ). **ಕೂಚ$_1$**: ಕಲ್ಲಿನ ದಿಂಡುಗಳನ್ನು ಕೂಚಗಳನ್ನು ತುಂಬಿದ ಗಾಡಿಗಳನ್ನು ಎಳೆಯುವ ಕುದುರೆಗಳ (ಸವತಿ. ೭೮). 'ಗುಜ್ಜು' ಪರಾ.
[?]

**ಕೊಚು₂** 'ಕೋಸು₂' ನೋ.

**ಕೂಚು₃** (ನಾ). ಸಿದ್ಧತೆ; ಸಜ್ಜು : ಕೂಚು [ಪಾಠಾಂ. ಕೂಚಿ, ಕೋಚಿ] ಮಾಡಿತು ಮೇಲೆ ಸಾಸಿರ ಲೋಚನನ ಕಟಕದಲಿ ಸಂಧ್ಯಾ ಸೂಚನೆಯ ಲೆರಡಂಕ ತೆಗೆದವು ತಮದ ಮುಂಚಿನಲಿ (ತೊರರಾ. ೬-೨೫-೩೦); ದಾನವಾಧೀಶ್ವರಂ ಕೂಚು [ಪಾಠಾಂ. ಚಿ] ಮಾಡಿಸಿ ತೆರಳ್ದಂ ಮಹಾ ವೇಗದಿಂದೆ ಸೇನೆ ನಡೆದುದು ವಿಷ್ಣುಲೋಕಂ ಬಿಡದಡೇನೆಂಬೆನ್ನೆ (ಚಬಪು. ೨೪-೪೦). [?]

**ಕೂಚು₄, ಕೂಚ್, ಕೂಚಿ₂** (ನಾ). ಶಿಬಿರದಿಂದ ಸೈನ್ಯದ ರವಾನೆ; ದಂಡಿನ ಚಲನೆ: ಏನು ಹಾರಿಕೆಯ ದೌಡು ಇಡುವೆ ಆ ಚಿರಂತನದ ಕೂಚು (ಅರಳು. ೨೧೪); ಕೂಚು ಮಾಡುತ್ತ ಸ್ಕೌಟ್ ಪದಗಳನ್ನು ಹೇಳುತ್ತ ಸಾಗಿದೆವು (ವೈನಿ. ೬೨); ಮರು ದಿವಸ . . . ಚಾರರಿಗೆ ಕೂಚು ಮಾಡಬೇಕೆಂದು ಅಪ್ಪಣೆ ಕೊಟ್ಟನು (ಕಗದ್ಯ. II, ೧೬). **ಕೂಚ್** : ಆ ಜನ ಅತ್ತ ಇತ್ತ ಹಣಿಕಿಹಾಕಿ ಮುಂದೆ ಕೂಚ್ ಮಾಡಿದರು (ಸ್ಮೃತಿಚಿ. ೨೩೫). **ಕೂಚಿ₂** : ಕೂಚಿಯಂ ನೇಮಿಸಿ ಮಹಾಬಲಕೆ . . . ರಾಕ್ಷಸೇಂದ್ರರೈತರೆ (ಚಬಪು. ೪೮-೨).

**ಕೂಚುಮಾಡು** = (ದಂಡಿನೊಡನೆ) ಪ್ರಯಾಣಮಾಡು : ಮುಂಬಯಿ ಫೌಜುಸಮೇತ ಕೂಚುಮಾಡಿ ಸುಲ್ತಾನ್ ಪೇಟೆ ಬಳಿಯೆ ಇಳುಕೊಂಡರು (ರಾಜೇಂದ್ರ. ೪೩); ದಂಡನ್ನು ಕೂಚುಮಾಡಿ ಅವರ ರೂಬರು ಇಳಿದು ಲಡಾಯಿ ಕೊಡಬೇಕು (ಚಿತ್ರಪಾ. ೬೩).

[← ಹಿಂ. ಮರಾ. ಕೂಚ್ ; ಪಾರ. ಕುಚ್]

**ಕೂಚುಕೋಲು** 'ಕೂಚುಗೋಲು' ನೋ.

**ಕೂಚುಗೊಳಿಸು** (ಕ್ರಿ). ಪ್ರಯಾಣಮಾಡಿಸು ; ಸಾಗಿಸು : ದಂತಿಯು ನಡಿಸು ಪಲ್ಲಕ್ಕಿಯ ಹಿಡಿಸು ಭೂಕಾಂತರೆಲ್ಲರಂ ಕೂಚುಗೊಳಿಸು (ಸೌಂದರ. ೫-೧೩೨). [ಕೂಚು₄ + ಕೊಳ್₁ + -ಇಸು₃]

**ಕೂಚುಗೋಲು, ಕೂಚುಕೋಲು** (ನಾ). ಬಾಗಿಲ ಚಿಲಕ ಹಾಕುವುದಕ್ಕೆ ಉಪಯೋಗಿಸುವ ಕೊಕ್ಕೆ, —ಕೊಂಡಿ : (ಕ). **ಕೂಚುಕೋಲು** : (ಕ).

[ಕೂಚು₂ (< ಕೋಸು₂) + ಕೋಲು₁ (< ಕೋಲ್₁)]

**ಕೂಚುನಗಾರಿ** (ನಾ). ದಂಡಿನ ಕೂಚಿನಲ್ಲಿ ಬಾರಿಸುವ ನಗಾರಿ : ದಂಡಿನವರ ತಿಳುವಳಿಕೆಗೆ ಕೂಚುನಗಾರಿ ಧರ್ಮಕಹಳೆ ಮೊದಲಾದ್ದನ್ನು ಉಪಯೋಗಿಸುತ್ತಿದಂತೆ (ಚಿತ್ರಪಾ. ೭ ಉಪೋದ್ಘಾತ); ಕೂಚುನಗಾರಿಗೆ ಹುಕುಂ ಮಾಡಿದರು (ಚಿತ್ರಪಾ. ೬೩). [ಕೂಚು₄ + ನಗಾರಿ]

**ಕೂಚುಪುಡಿ** 'ಕೂಚಿಪುಡಿ' ನೋ.

**ಕೂಚುಭಟ್ಟ** 'ಕೋಚುಭಟ್ಟ' ನೋ.

**ಕೂಚೆ** (ನಾ). ಸಿದ್ಧತೆ; ಸಜ್ಜು. 'ಕೂಚೆಯಾಗು' ಪರಾ. [?]

**ಕೂಚೆಯಾಗು** (ಕ್ರಿ). ಸಿದ್ಧವಾಗು ; ಸಜ್ಜಾಗು : ಕೂಚೆಯಾದುದು ಕೂಡೆ ಸಾಸಿರಲೋಚನನ ಕಟಕದಲಿ ಗುಡಿಗಳು ರಾಚಿ ಕೆಡೆದವು (ಅಂಬಿಕಾ. ೪೬-೧೦); ಕೂಚೆಯಾದುದು ವುತ್ತೆ ನಗರದೊಳೀಚೆಯಲಿ ಪಟ್ಟಾಭಿಷೇಕಕೆ ನಳನೃಪೋತ್ತಮನ (ಅಂಬಿಕಾ. ೪೮-೭೪). [ಕೂಚೆ + ಆಗು₁]

**ಕೂಜ, ಕೂಜೆ** (ನಾ). ಒಂದು ಬಗೆಯ ಉದ್ದವಾದ ಕತ್ತುಳ್ಳ ಪಾತ್ರೆ; ಹೂಜಿ : ಕೂಜದೊಳಗಿನ ನೀರು ಬಿಸಿಲು ಬಿದ್ದು ಕಾಮನಬಿಲ್ಲಿನ ಬಣ್ಣ ಗಳಿಂದ (ಕುಟುಂಸೌ. ೩೫); ಕುಡಿಯುವಾಗ ಕೂಜವನ್ನು ಬಾಯಿಗೆ ತಗಲಿಸುವುದಿಲ್ಲ (ಪ್ರವಾಇ. II, ೩೧೧). **ಕೂಜೆ** : ರನ್ನದ ಕೂಜೆಯ ಹರಿನೀಲದ ಪೊಸಬಿನ್ನಾಣದ ಕರಕವ (ಮದೇವು. ೧೯-೪೪); ಕೂಜೆ ಯಿಂದಷ್ಟು ನೀರು ತೆಗೆದು ಮುಖದ ಮೇಲೆ ಹನಿಸಿದ (ಏಕಾಂಗಿ. ೯೫).

[← ಮರಾ. ಕುಜಾ, ಕುಜ್ಯಾ ; ಹಿಂ. ಕುಜ್ಜಾ ; ಪಾರ. ಕುಜಾಹ್]

**ಕೂಜನ** (ನಾ). ಕೂಗು ; ಕುಕಿಲು ; ಧ್ವನಿ : ವಿಹಗಕುಳಂಗಳಂ ನೆರಪಿ ಕೂಜನದೇಟ್ಗೆ ಮನೋಜರಾಜ್ಯಮಂ ಬಹಳಿಕೆಯಿಂದ ಮೂವಡಿಸಿ (ಪುಷ್ಪಪು. ೨-೪೨); ಪಾರಿವದ ಕೂಜನದ ಸೊಗದ ಮೆಲ್ನುಡಿಗಳನು (ಅರುಣ. ೧೧); ಹಸಿರು ಹಾಸಿದೆ ಪಯಿರು ಈಸಿದೆ. ಸಾಕು, ನಿಲ್ಲಲಿ ಕೂಜನ (ಚಿಂತನ. ೧೮). [ಸಂ.]

**ಕೂಜಿತ** (ನಾ). = ಕೂಜನ : ಉತ್ಕಂಠಗಳಾದ ಸಾರಸಂಗಳ ಕೂಜಿತಂ ಗಳೊಳಂ (ಕಾದಂಪೂ. ೬೭); ಕಾದಲರ ಕಾಮಕೇಳಿ ಕೂಜಿತದೊಳ್ ಕೂಡಿ (ಚಂದ್ರಪು. ೮-೬೬ ವ); ಕಲ ಹಂಸಾಳಿಯ ಮದ ಮಂಜುಲತೆಯ ನೊಳಕೈದ ಕೂಜಿತಂ ನಿಮಿರ್ದುದು (ಮಾಧವಾ. ೨-೩೨೪). [ಸಂ.]

**ಕೂಜಿಸು** (ಕ್ರಿ). ಪಕ್ಷಿಯಂತೆ ಕೂಗು ; ಕುಕಿಲು : ಕೂಜಿಸಿದಳ್ ಲಾವಗೆಯ ಗೂಡನಲ್ಲಾಡಿದವೋಲ್ (ಲೀಲಾವ. ೧೩-೨೫); ಬನಂ ಗಳೊಳ್ ಮೊರೆವ ಮದಾಳಿ ಕೂಜಿಸುವ ಕೋಗಿಲೆ (ಸೂಕ್ತಿಸು. ೪-೪೧); ಆ ಜಾರೆ ವಿಲಸಿತ ಕಂಬುಕಂಠದಿಂ ಕೂಜಿಸಲಾ ಸ್ವರದಿಂಪು (ಪ್ರಭಂಜ. ೪-೧೦೪); ಒಸೆದು ಕೂಜಿಸುವ ಕೋಕಿಲರವಂ (ಚಬಪು. ೩೫-೮); ಆಹಾರ, ವಿಹಾರ, ವಿಷಾದ, ವಿಶ್ರಾಂತಿಗೆ ನಿರಾವಲಂಬದಲ್ಲಿ ನೆಲೆಗೊಂಡು ಕನ್ನಡ ಸಾಹಿತ್ಯ ಶಾಖೆಯಲ್ಲಿ ಕುಳಿತು ನಾವು ಕೂಗಬಹುದು ಕೂಜಿಸಬಹುದು (ವಿಚಾಮಂ ೬).

[ಕೂಜನ + - ಇಸು₃]

**ಕೂಜೆ** 'ಕೂಜ' ನೋ.

**ಕೂಟ₁, ಕೂಟು** (ನಾ). ೧. ಸೇರುವಿಕೆ; ಕೂಡಿಕೆ; ಬೆರೆಯುವಿಕೆ; ಸಂಯೋಗ : ಕೂರ್ಮೆಯಿಂದಿರ್ವರುಮಿರ್ಪರ್ ಪಾಲ ನೀರ ಕೂಟದ ತೆಱದಿಂ (ಧರ್ಮಾಮೃ. ೨-೧೬೦); ನೋಟ ಸ್ಥಾವರ ಮಾಟ ಜಂಗಮ, ಕೂಟ ಕೂಡಲ ಚೆನ್ನಸಂಗನಲ್ಲಿ (ಶಿವಗೀ. ೧೯-೭೬). ೨. ರಾಶಿ; ಸಮುದಾಯ : "ರಾಶಿ, ಪುಂಜಮುತ್ಕರ[ಸ]ಮುಚ್ಚಯಂ ಕೂಟ ತಾಂ" (ವಸ್ತುಕೋ. ೧೦೩-೨೯); ಎಲುವೆ ಮನೆಯ ಕಸದ ಕೂಟಂ ಬಸೆಯೆ ತುಪ್ಪಂ ನಾಯ್ಗಳೆ ಪರಿವಾರಂ (ಕಾದಂಉ. ೭೪೭); ಭಾಸುರ ಮಣಿಗಣ ನಾನಾಂಶು ಕೂಟಂ ಕಿರೀಟಂ (ಪಂರಾಮಾ. ೬-೧೨೫). ೩. ಸಭೆ; ಮೇಳ : ಸನ್ಯಾಸಿಗಳ ಸಂಗಡಮುಪಾಧ್ಯಾಯರುಗಳ ಕೂಟ (ಸಮ್ಯಕೌ. ೭-೧೯). ೪. ನಾಲ್ಕಾರು ದಾರಿಗಳು ಸೇರುವ ಸ್ಥಳ; ಚೌಕ : ಮುಂದೆ ನಡೆದ . . . ಕೂಟವನ್ನು ದಾಟಿದ (ಕೊತಕಾ. ೧೯). ೫. ಜೊತೆ; ಸಂಗ : ಅಲಂಪುವೆರಸಿದ ನೋಟಕ್ಕಮಿಂಬುವೆರಸಿದ ಕೂಟಕ್ಕಂ (ಪಂಪಭಾ. ೪-೧೭ ವ); ಸಿತಗರ ಕೂಟದಿಂದೆ ಕೆಡದವರೊಳರೆ (ಧರ್ಮಾಮೃ. ೨-೭೬); ವ್ಯರ್ಥರುಗಳೊಡನಾಟ ತಮ್ಮ ಸ್ವಾರ್ಥವಿಲ್ಲ ದರುಗಳ ಕೂಟ . . . ಅನರ್ಥಪಾರಂಪರ್ಯೆಯಲೇ (ಕುವ್ಯಾಉ ೪-೫೬); ಗಿಳಿಯ ಗಿಡುಗನ ಕೂಟ ಮರಿಗೋಗಿಲೆಯ ಸಾಳ್ವನ ಸಖ್ಯ (ತೊರರಾ. ೧-೫-೪೨); ನೋಟಕ್ಕೆ ನಾಟ್ಯ, ಊಟಕ್ಕೆ ಕೂಟ (ಗಾದೆ). ೬. ಸಂಭೋಗ; ರತಿಕ್ರೀಡೆ : "ಶ್ರೋತಂ . . . ಮೈಥುನಂ ಯಭಮೆನೆ ಕೂಟಮದು" (ಮಂಗರಾ. ೯೭-೧೫); ಕೂಟದೊಳುತ್ಕೃದ ಬೆಚ್ಚತಟ್ಟೆಯೊಳ್ ಕೂಟ ಸುಖಂಗಳಂ ಪಡೆದನೇಂ ಚದುರಂಗಳ ಬದ್ದೆದಲ್ಲಟಿಂ (ಪಂಪಭಾ. ೩-೮೨); ಕೂರ್ಪ ಪೆಂಡಿರ ಕೂಟದಂತೆ (ಧರ್ಮಾಮೃ. ೫-೧೨೫); ಸುಳಿವ ವಿಟನಂ ನೋಟದೊಳವುಗಿಸಿ ಕೂಟದೊಳ್ ಕೊಸಱಿ (ಗಿರಿಕ. ೨-೧೦೫ ವ); ಕೂಟದಿ ನಾಗರಿಕನ ಮಱಿದೊರಗಿಸಿ (ಮೋಹತ. ೧೮-೪೮). ೭. ಒಂದು ಬಗೆಯ ತೆರಿಗೆ; ಸಭೆಯ ಮೇಲೆ ಹಾಕುವ ಸುಂಕ : ಮನೆದೆಱೆ ಮದುವೆದೆಱೆ. . .ಕೂಟಕಕನ್ನಿ ಬೀರವಣ ಕೊಡತಿವಣ (ಮೈಆರಿ. ೧೯೩೨, ೧೬-೩೦; 1069); ಮತ್ತಮಾ ಶಂಭೋಜಿಗೆ ಕಪ್ಪವಿತ್ತುಂ ಕೂಟಮಂ ಕಳಿಪಿ ಪೆಂಪುಗೆಯ್ದು (ಚಿಕವಿ. ೧೫ವ).

**ಕೂಟು**: ೩. "ಗುಂಪು, ಕೂಟು, ಬಳಗ" (ಕಂನುಹು. ೮೩). ೪. ತಾಲೂಕು ಕಚೇರಿಯ ಕೂಟಗೆ ಕೆಲವರು ಮಾತನಾಡುತ್ತ ನಿಂತಿದ್ದರು (ಮುಂಗಾಪು. ೧೦೪); ನಾನೇ ಸ್ವತಃ ಊರ ಮಧ್ಯದ ಕೂಟಗೆ ನಿಂತು ಪತ್ರಿಕೆ ಮಾರಬೇಕು (ಅಪನಾ. ೭). ೬. ಶರಧಿಸಮಾನವೀಕ್ಷಿಸೆ ಗಂಭೀರದೊಳೊಪ್ಪುವ ಕೂಟ ನೇಳ್ಗೆಯೊಳು ದೊರೆ ಮಕರಧ್ವಜಂ (ಕಇ. IX, ೧–೬೬; 1204). ೮. ಅನೇಕ ತರಕಾರಿಗಳನ್ನು ಕೂಡಿಸಿ ಮಾಡಿದ ಮೇಲೋಗರ: ಕೂಟು, ಮಜ್ಜಿಗೆಹುಳಿ, ಚಿತ್ರಾನ್ನ . . . ಮತ್ತು ಪಾಯಸಗಳನ್ನು (ರಂಗಕ. ೧೨೬).

[< ಕೂಡು./ ತಮಿ. ಮಲ. ಕೂಟ್ಟು; ತೆಲು. ಕೂಟ]

**ಕೂಟ$_2$** 'ಗೂಂಟ' ನೋ.

**ಕೂಟ$_3$** (ನಾ). ೧. ಎತ್ತರವಾದುದು; ನೆತ್ತಿ; ಶಿಖರ: "ಶೃಂಗಂ, ಶಿಖರಂ, ಕೂಟಂ – ಈ ಮೂಱುಂ ಕೋಡುಂಗಲ್" (ಹಲಾಯು. ೨೭–೧೨); "ಕೂಟಮಾ ಶಿಖರಮಾ ಶೃಂಗಮೆಂದರೆ ಕೋಡುಗಲ್ಲಕ್ಕು" (ಮಂಗರಾ. ೩೦–೨); ನಿಜ ಕೂಟಾಗ್ರದೊಳ್ ಪಾಯ್ವ ಗಂಗಾಜಲದಿಂ (ಪಂಪಭಾ. ೪–೧೪); ಉತ್ತುಂಗ ಧ್ವಜ ತೋರಣಂಗಳಿಂ ಸೊಗಯಿಪ ಕೂಟಂಗಳಿಗೆಲ್ಲಂ ನಾಡೆ ಮನಂಗೊಳಿಪುವು (ಕಾವ್ಯಾವ. ೯೯); ಅವಳು ಚತುಃಶೃಂಗಿ ಕೂಟವನ್ನು ದಾಟಿ . . . ಹೋಗಿದ್ದಳು (ಚಂದುಟ. ೫೩). ೨. ಚಲನವಿಲ್ಲದಿರುವಿಕೆ; ಅಚಲತೆ; ಸ್ಥಿರತೆ. ೩. ಇಂದ್ರಜಾಲ; ಕಪಟ; ಮೋಸ: "ಕೈತವಂ, ಕಪಟಂ, ಕೂಟಂ . . . ವ್ಯಪದೇಶಃ – ಈ ೧೦ ನೆವಂ" (ಹಲಾಯು. ೧೧೭–೨೪) ೪. ಹಡಗು; ದೋಣಿ. ೫. ನೇಗಿಲಿನ ಭಾಗ; ಕುಳು. ೬. ಚಮ್ಮಟಿಗೆ; ಸುತ್ತಿಗೆ. ೭. (ಎತ್ತು ಮೊದಲಾದವು) ಕೊಂಬು ಮುರಿದದ್ದು; ಕೊಂಬಿಲ್ಲದ್ದು: "ನಿರ್ಭಗ್ನಶೃಂಗನಕ್ಕುಂ ಕೂಟಂ" (ವಸ್ತುಕೋ. ೮೯–೫); "ಕೊಂಬೊತ್ತಿ ಮುಱಿದಿರೆ ಕೂಟವಕ್ಕು" (ಮಂಗರಾ. ೫೩–೨). ೮. ಏಲಕ್ಕಿ. ೯. ಜಿಂಕೆ ಮೊದಲಾದುವನ್ನು ಹಿಡಿಯುವ ಬಲೆ: "ಭೈತ್ರ ಮೇಖಲೆ ಯೋಗಂ ಕಪಟಂ ಸಮಂಗಳಿವು ಕೂಟಾಖ್ಯಾನಂ" (ನಾನಾರ. ೧೫೩). ೧೦. [ಜ್ಯೋತಿ] ಜಾತಕಗಳ ಹೊಂದಾಣಿಕೆ. ℙ ವಧೂವರರ ಜನ್ಮಪತ್ರಿಕೆಗಳಿಗನುಗುಣವಾಗಿ ಹೊಂದಾವಣೆ ಯಾಗುವಂತೆ ನೋಡುವ ಕ್ರಮ: ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯ, ರಾಶಿ ಕೂಟ ಋಣಸಂಬಂಧವುಂಟೆಂದು ಹೇಳಿರಯ್ಯ (ಬಸವ. ೮೩).

ಕೂಟದನಾಯಕರಗಂಡ = ಒಂದು ಬಿರುದು: ಮಱಿಹೊಕ್ಕರೆ ಕಾವಕೂಟದನಾಯಕರಗಂಡ ಕಾಡನೂರಮಲ್ಲೆಯ ನಾಯಕನ ಮಗ (ಎಕ. XVI, ಗುಬ್ಬಿ. ೧೮–೪; 1366). [ಸಂ.]

**ಕೂಟಕ** (ನಾ). ೧. ಗುಂಪು; ಸಮೂಹ. ೨. ಗೋಲ. ೩. ನೇಗಿಲ ಕುಳ. ೪. ಕುಳ ಹಾಗು ಈಸುಬಿಟ್ಟು ಮಿಕ್ಕ ನೇಗಿಲ ಭಾಗ; ನೇಗಿಲ ದಿಂಡು. [ಸಂ.]

**ಕೂಟಕುಳಿ** (ನಾ). ಗುಂಪುಗೂಡುವ ಜನ; ನೆರವಿ: ಜನಮೆಲ್ಲಂ ನೆರೆದಕ್ಕಟಣ್ಣರಿವರಿಂದೇವಂದರೇವೋದರೆಂಬಿನಮೇಂ ಪೋಪಮೆ ನಾಡ ಕೂಟಕುಳಿಗಳ್ಗೇದೋಸಮೇಂ [ಪಾಠಾಂ. ಮೆಂ] ಬನ್ನಂ (ಪಂಪಭಾ. ೩–೬೫); "ತಾದಾತ್ವಿಕಬಲಸ್ಯ = ಕೂಟಕುಳಿಯಪ್ಪ ಬಲವನುಳ್ಳಂಗೆ ಆಗಳಹ ಬಲವನ್ನುಳ್ಳಂಗೆ" (ನೀತಿವಾ. ೩೧–೨೪); ಮೃಡನಿರ್ದಂತಿರೆ ಕೋಟಿ ಕೂಟಕುಳ[ಳಿ] ದೈವಕ್ಕಾಸೆಯಂ ಮಾಡಿ ನೀಂ ಕಿಡದಿರ್ (ಪಂಪಾಶ. ೬೨). [ಕೂಟ$_1$ + –ಕುಳಿ$_3$]

**ಕೂಟಕೂಡು** (ಕ್ರಿ). ನೆರವಿಯಾಗು; ಗುಂಪಾಗಿ ಸೇರು; ಸಭೆ ಸೇರು: (+). [ಕೂಟ$_1$ + ಕೂಡು$_1$]

**ಕೂಟಕ್ರಿಯೆ** (ನಾ). ಮೋಸಮಾಡುವಿಕೆ; ವಂಚನೆ; ಕಪಟ: ಧರಣೀಪುತ್ರ ನಿವಾಸದೊಳ್ ನಿಲೆ ಬುಧಂ ಕೂಟಕ್ರಿಯಾವೇದಿ ತಸ್ಕರಂ . . . ಎನಿಕುಂ (ಜಾತಕ. ೧೭–೨೨). [ಕೂಟ$_3$ + ಕ್ರಿಯೆ]

**ಕೂಟಗಡೆ** (ನಾ). ಸಂಭೋಗದ ಮುಕ್ತಾಯ; ರತಿಕ್ರೀಡೆಯ ಅಂತ್ಯ: ಬಿಡುಮುಡಿ ಬಿಗುಹುಗುಂದಿದ ಮೊಲೆ ಬೆಳರ್ದುಟಿ ಬಿಡದೆ ಪೊಯ್ವಳ್ಳೆ ಕಂಪಿಸುವ ತೊಡೆಯೆಸೆದಿರೆ ಕೂಟಗಡೆಯ ವಾರಸ್ತ್ರೀಯರೊಡನೆ ಬಂದವನ ನೋಡಿದರು (ಕುರಾಸಾಂ. ೩೧–೨೫). [ಕೂಟ$_1$ + ಕಡೆ$_3$]

**ಕೂಟಗಾನ** (ನಾ). ಸಾಮೂಹಿಕ ಗೀತೆ; ಮೇಳಗಾನ: ಗ್ರೀಕರು ತಮ್ಮ ರುದ್ರನಾಟಕಗಳಲ್ಲಿ ಕೆಲವು ಕಡೆಮಾತ್ರ ಕೂಟಗಾನದೊಂದಿಗೆ ನಾಟ್ಯವನ್ನು ಪ್ರದರ್ಶಿಸುತ್ತಿದ್ದರು (ಭಾರದ. ೫೪೯). [ಕೂಟ$_1$ + ಗಾನ]

**ಕೂಟಗೆ$_1$** (ನಾ). ಸಂತರ್ಪಣೆ; ಸಮಾರಾಧನೆ: ಕೂಟಗೆಯ ಕೂಳ ನುಣ ಬಂದವರೆಲ್ಲರು ಅಜಾತನ ನಿಲವ ಬಲ್ಲರೆ? ಬೇಟದ ಕಣ್ಣನವರೆಲ್ಲರು ಸತ್ಸಂಗವ ಬಲ್ಲರೇ (ಮೋಳಿಮಾ. ೨೬–೧೦೫); "ಭಿಕ್ಷಾನ್ನ; ದಾಸೋಹ" (ಮೋಳಿಮಾ. ಕೋಶ). [< ಕೂಟ$_1$ ?]

**ಕೂಟಗೆ$_2$** (ನಾ). (ಕರಾ) ಕಹಿಯಾದ ಔಷಧಿಯೊಡನೆ ಸೇರಿಸುವ ಸಿಹಿ: ಅವನು ಕೂಟಗೆ ಇಲ್ಲದೆ ಔಷಧಿ ಕುಡಿಯುವುದಿಲ್ಲ (ರೂಢಿ). [?]

**ಕೂಟಚಾತುರ್ಯ** (ನಾ). ಮೋಸಗಾರಿಕೆಯ ಚತುರತೆ: ನಿನ್ನೆ ಅವರ ಮುಖದ ಮೇಲೆ ಕಂಡು ಬಂದ ಕೂಟಚಾತುರ್ಯ ಇಂದು ಕಂಡು ಬರಲಿಲ್ಲ (ಬಾಣಅ. ೧೩೦). [ಕೂಟ$_3$ + ಚಾತುರ್ಯ].

**ಕೂಟಣಿ** 'ಕುಂಟಣಿ' ನೋ.

**ಕೂಟಣಿಗ** (ನಾ). = ಕುಂಟಣಿಗ: ಕೂಟಣಿಗರೊಡನಾಡಿ ಮಡಿಯ ದಿರಕಟ ಸಾರುವೆನು (ಅಂಬಿಕಾ. ೩೪–೧೦೦).

[ಕೂಟಣಿ (< ಕುಂಟಣಿ) + –ಇಗ]

**ಕೂಟತರ್ಕ** (ನಾ). ಕುತಂತ್ರದ ತರ್ಕ; ಕುಯುಕ್ತಿ: (ಮೋಸ ಗೊಳಿಸುವುದಕ್ಕಾಗಿ ಹೂಡಿದ) ಕೂಟತರ್ಕ, ಕುತರ್ಕ, ತರ್ಕಾಭಾಸ, ಸತ್ಯಾಭಾಸ (Sophism. ಇಂಕನಿ). [ಕೂಟ$_3$ + ತರ್ಕ]

**ಕೂಟತಾನ** (ನಾ). [ಸಂಗೀತ] ತಾನಗಳಲ್ಲಿ ಒಂದು ಪ್ರಕಾರ: ತಾನದಲ್ಲಿ ಕೂಟತಾನವೆಂದೂ ಶುದ್ಧತಾನವೆಂದೂ ಎರಡು ವಿಧ. ಕೂಟತಾನದಲ್ಲಿ ವಕ್ರರೀತಿಯಲ್ಲಿ ಸ್ವರಮೇಳೈಕೆ ಇರುತ್ತದೆ (ಸಂಗೀಚಂ. ೮೯). [ಕೂಟ$_3$ + ತಾನ$_1$]

**ಕೂಟದಳೆ** (ಕ್ರಿ). ಒಟ್ಟುಗೂಡು; ಸೇರಿಕೊಳ್ಳು; ಸಮ್ಮಿಶ್ರವಾಗು: ಹುಳಿದಾಳಿದ ಸಾಱು ಶಿಖರಣಿ ಬಹು ಕೂಟದಳೆದ ನಿಂಬೆಯ ಹಣ್ಣು ಸವಿದು (ಪೋಹತ. ೩–೫೩). [ಕೂಟ$_1$ + ತಳೆ$_1$]

**ಕೂಟನಾಟ್ಯ** (ನಾ). ಸಾಮೂಹಿಕ ನಾಟ್ಯ; ಮೇಳನೃತ್ಯ: ನಿಸರ್ಗದ ಆನಂದದಲ್ಲಿ ತುಂದಿಲರಾದ ಈ ಜನರು ಕೂಟನಾಟ್ಯಗಳನ್ನು ರಚಿಸಿ . . . ನಿಯೋಜಿಸಿಕೊಳ್ಳುತ್ತಾರೆ (ಭಾರದ. ೫೬೪).

[ಕೂಟ$_1$ + ನಾಟ್ಯ]

**ಕೂಟನೀತಿ** (ನಾ). ಕಪಟ ವರ್ತನೆ; ಮೋಸದ ನಡತೆ: ಮೊಹಬತ್ ಖಾನನೆ ಜಹಂಗೀರನ ಬಂದಿಯಾಗುವಂತೆ ರಾಣಿ ಕೂಟನೀತಿಯನ್ನು ರಚಿಸಿ ಕೃತಿಗೈದಳು (ನೂರಜ. ೫೪); ಈ ಸಮಯದಲ್ಲಿ ಕೂಟನೀತಿ ಆವಶ್ಯವೆಂದು ಜ್ಞಾನಶಂಕರರಿಗೆನಿಸಿತು (ಪ್ರೇಮಾಶ್ರ. ೧೨೨).

[ಕೂಟ$_3$ + ನೀತಿ]

**ಕೂಟನೀತಿಜ್ಞ** (ನಾ). ಕಪಟನೀತಿಯಲ್ಲಿ ನಿಪುಣನಾದವನು; ಮೋಸದ ರೀತಿಯನ್ನು ಬಲ್ಲವನು: ಈ ನೀತಿವಿಕಾಸಗೊಂಡಿದ್ದೂ ಕೂಡ ಕೂಟನೀತಿಜ್ಞರ ಕುತಂತ್ರಗಳ ಆಧಾರದಿಂದಲ್ಲ (ಶ್ರೀಕೃಪ್ರ. ೧೭೫).

[ಸಂ.]

**ಕೂಟಪತ್ರ** (ನಾ). ಕಪಟ ಪತ್ರ ; ಮೋಸದ ಪತ್ರ : “ಇದು ಕೂಟ ಪತ್ರವಿರಬೇಕು (ಹೇಮುಕೂ. ೧೦೨). [ಕೂಟ$_3$ + ಪತ್ರ]

**ಕೂಟಪದ್ಯ** (ನಾ). ಸಂದಿಗ್ಧಾರ್ಥವುಳ್ಳ ಪದ್ಯ; ಗೂಢಾರ್ಥದ ಪದ್ಯ : ಇಬ್ಬರೂ ಅರ್ಥವಾಗದ ಕೂಟಪದ್ಯಗಳನ್ನು ಅಲ್ಲಲ್ಲಿ ಬರೆದವರೇ (ಸಾಹಿಜೀ. ೧೧೧). [ಕೂಟ$_3$ + ಪದ್ಯ]

**ಕೂಟಪಾಕಳ** (ನಾ). ೧. ಪಿತ್ತಜ್ವರ. ೨. ಆನೆಗಳಿಗೆ ಬರುವ ಒಂದು ಬಗೆಯ ಜ್ವರ: ಮಾರ್ಬಲದಾನೆಗೆ ಕೂಟಪಾಕಳಂ ಕುದುರೆಗೆ ಕರ್ಣ ದೂಷಿಕೆ (ಪಂರಾಮಾ. ೪-೬೬); ಖೇಚರ ಚಕ್ರವರ್ತಿ . . . ಅರಾತಿಮದ ದ್ವಿಪ ಕೂಟಪಾಕಳಂ ಯಾಚಕ ಯಾಚಿತಾರ್ಥ ಸುಸಮರ್ಥಂ (ಚಂದ್ರಪು. ೬-೧೯). [< ಸಂ. ಕೂಟಪಾಕಲ]

**ಕೂಟಪಾಲಕ** (ನಾ). ೧.= ಕೂಟಪಾಕಳ : (ಕ). ೨. ಕುಂಬಾರ; ಕುಲಾಲ. ೩. ಕುಂಬಾರನ ಆವಗೆ, —ಒಲೆ. [ಸಂ.]

**ಕೂಟಪ್ರಕರ** (ನಾ). ಬೆಟ್ಟದ ಶಿಖರಗಳ ಸಮೂಹ: ಮುಗಿಲಂ ಪೊತ್ತಿರ್ಪ ಕೂಟಪ್ರಕರದಿನ್ . . . ಕಡುವೆಳ್ಪೇಱಿದಿಂದ್ರಾದ್ರಿಯೆಂಬನ್ನೆಗಮೊಪ್ಪಂಬೆತ್ತುವಂ (ಚಂದ್ರಪು. ೩-೮೧). [ಕೂಟ$_1$+ ಪ್ರಕರ]

**ಕೂಟಪ್ರಶ್ನೆ** (ನಾ). ತೊಡಕಿನ ಪ್ರಶ್ನೆ ; ಬಿಡಿಸಲಾಗದ ಒಗಟು; ಕಗ್ಗಂಟು : ಒಬ್ಬನಿಗೆ ಇರುವಿಕೆಯ ಸಮಸ್ಯೆ, ಇನ್ನೊಬ್ಬನಿಗೆ ಕರ್ಮದ ಕೂಟ ಪ್ರಶ್ನೆ (ವಿಚಾಮಂ. ೬೨); ಏನು ಮಾಡಬೇಕೆಂಬ ಕೂಟಪ್ರಶ್ನೆ . . . ಅವನೆದುರಿಗೆ ಹೆಡೆಯೆತ್ತಿ ನಿಲ್ಲುತಿತ್ತು (ಸಮಜೀ. ೭೨೦). ಇಂದಿನುತ್ತರ ಮುಂದೆ ಕೂಟಪ್ರಶ್ನೆ (ಕಲ್ಲೋಲ. ೫೮). [ಕೂಟ$_3$ + ಪ್ರಶ್ನೆ]

**ಕೂಟಮಾನ$_1$** (ನಾ). ಮೋಸದ ಅಳತೆ ಅಥವಾ ತೂಕ : (ಕ). [ಕೂಟ$_3$+ ಮಾನ]

**ಕೂಟಮಾನ$_2$** (ನಾ). ವಾದ್ಯಗಳ ಮೇಳ, —ಹೊಂದಾಣಿಕೆ: ರೂಪು ನೇರು ಲಾಗು ಲವಣಿಯಡವು ತಿರುವು ಕೈಮುಱಿಕಳಾಸ ಕೂಟಮಾನಂಗಳಂ ಸಂಗಳಿಸಿ ರಸಭಾವಂದಪ್ಪದೆ (ರಾಜಶೇ. ೫-೧೯ವ). [ಕೂಟ$_1$ + ಮಾನ]

**ಕೂಟಯಂತ್ರ** (ನಾ). ಮೃಗಪಕ್ಷಿಗಳನ್ನು ಉಪಾಯದಿಂದ ಹಿಡಿಯುವ ಸಾಧನ, —ಬಲೆ, —ಬೋನು: “ಉನ್ಮಾಥಃ, ಕೂಟಯಂತ್ರಂ, ನಿರ್ಯಂತ್ರಣಂ – ಈ ೩ ತಗವುದು [ಬಲೆ, ಬೋನು]” (ಹಲಾಯು. ೧೨೯-೯೬). [ಕೂಟ$_3$ + ಯಂತ್ರ]

**ಕೂಟಯುಕ್ತಿ** (ನಾ). ಕಪಟದ ಉಪಾಯ; ಮೋಸದ ಯುಕ್ತಿ : ಕೃಷ್ಣನು ಅವನ ಕೂಟಯುಕ್ತಿಯನ್ನು ಲಕ್ಷ್ಯವೇ ಮಾಡಲಿಲ್ಲ (ಭೀಷ್ಮಚ. ೧೬೦). [ಕೂಟ$_3$ + ಯುಕ್ತಿ]

**ಕೂಟಯುದ್ಧ** (ನಾ). ಕಪಟಯುದ್ಧ : ಪೊನ್ನಮಯ್ಯನಿಲ್ಲದೇ ಹೋಗಿದ್ದರೆ . . . ಗೊಜ್ಜಿಗನ ಕೂಟಯುದ್ಧವನ್ನು ಎದುರಿಸಲು ಸಾಧ್ಯವಾಗುತ್ತಿರಲಿಲ್ಲ (ದಾನಚಿಂ. ೧೧೯). [ಕೂಟ$_3$ + ಯುದ್ಧ]

**ಕೂಟಯೋಗ** (ನಾ). [ಜ್ಯೋತಿ] ಮೂವತ್ತೆರಡು ನಾಭಸ ಯೋಗಗಳಲ್ಲಿ ಒಂದು: ನಾಲ್ಕನೆಯ ರಾಶಿಯಿಂದ ಹತ್ತನೆಯ ರಾಶಿಯವರೆಗಿರುವ ಏಳು ರಾಶಿಗಳಲ್ಲೂ ಗ್ರಹವಿದ್ದರೆ ಕೂಟಯೋಗ” (ಜಾತತಿ. ೧೩-೮ ಟೀಕೆ). [ಕೂಟ$_1$+ ಯೋಗ]

**ಕೂಟಯೋಧಿ** (ನಾ). ಕೂಟಯುದ್ಧ ಮಾಡುವವನು; ಕಪಟಯುದ್ಧ ಮಾಡುವವನು: ಆ ಕ್ರತುಪ್ರಯತ್ನಮಂ ಕಿಡಿಸಿ ಭಂಗಿಸಿ ಕೂಟಯೋಧಿಯಂ (ಶ್ರೀರಾಮಾ. ೭೧೫-೧೬೬). [ಸಂ. ಕೂಟಯೋಧಿನ್]

**ಕೂಟರಾಜ** (ನಾ). ಶಿಖರದಲ್ಲಿರುವ ರಾಜ(?) : ಕೂಟರಾಜನ ಗಾಡಿ ನಟರಾಜನ ನೋಡಿ ಚಿದಂಬರದಿ(ಸೂರ್ಯಪಾ.೮೦-೪). [ಕೂಟ$_1$+ ರಾಜ]

**ಕೂಟಲೇಖ** (ನಾ).=ಕೂಟಪತ್ರ. ‘ಕೂಟಲೇಖಕರಣ’ ಪರಾ. [ಸಂ.]

**ಕೂಟಲೇಖಕರಣ** (ನಾ). ಕಪಟ ಪತ್ರ ಮೊದಲಾದುವನ್ನು ಬರೆದು ಮೋಸಗೊಳಿಸುವಿಕೆ: ವರಪ್ರಯೋಗವಶದಿಂ ಕಳ್ಪೊಲೆಯಂ ವಂಚಿಸುವುದು ಕೂಟಲೇಖಕರಣಂ (ಶ್ರಾವಕಾ. ೧೨೬-೧). [ಕೂಟಲೇಖ + ಕರಣ]

**ಕೂಟಲೇಖಕ್ರಿಯೆ** (ನಾ). = ಕೂಟಲೇಖಕರಣ : ನ್ಯಾಸಾಪಹಾರ ಕ್ರಮಮನುಗತಿಯಿಂ ಕೂಟಲೇಖಕ್ರಿಯಾವಿಜ್ಞಾನಂ(ಸುಕುಮಾ. ೬-೧೪). [ಕೂಟಲೇಖ + ಕ್ರಿಯೆ]

**ಕೂಟವಡೆ** (ನಾ). ಒಟ್ಟುಗೂಡಿದ ಸೈನ್ಯ: ಇಂತು ಕೂಟವಡೆಯಂ ಕೋಟಲೆಗೊಳಿಸಿ ದಾಂಟಿಸಿ (ಚಿಕವಿ. ೨-೫೨). [ಕೂಟ$_1$+ ಪಡೆ$_2$]

**ಕೂಟವಾದ** (ನಾ). ಕಪಟದ ವಾದ; ಸುಳ್ಳುವಾದ: ಅವನು ಯಥಾರೂಢಿಯ ಕೂಟವಾದಗಳನ್ನೆಲ್ಲ ಆಶ್ರಯಿಸಬೇಕಾಯಿತು (ಪುನರು. ೩೬೪). [ಕೂಟ$_3$ + ವಾದ$_3$]

**ಕೂಟಶಾಲ್ಮಲಿ** (ನಾ). ೧. ಒಂದು ಬಗೆಯ ಬೂರುಗದ ಮರ: ಬೀಱುತ್ತುವೇಱುತ್ತುವೆಂತಾನುಮೆಯ್ದು ಕೂಟಶಾಲ್ಮಲಿಯನಡರ್ವನನಡಿಯಿಂದಾಮುಸ್ತಕಂಬರಂ (ಶಾಂತಿಪು. ೭-೧೧ ವ). ೨. ಒಂದು ನರಕದ ಹೆಸರು: ಕೂಟಶಾಲ್ಮಲಿ . . . ಸುಮನವೆಂಬೈದು ಮಂತ್ರಿನರಕಂಗಳೊಡನೆ (ವಿವೇಕ. ೧೮೦). [?]

**ಕೂಟಶಾಸನ** (ನಾ). ಕೃತಕ ಶಾಸನ ; ನಕಲಿ ಶಾಸನ: ತಾಮ್ರ ಪಟಗಳಲ್ಲಿ ಕೆಲವು ಕೂಟಶಾಸನಗಳೂ ಆಗಿರುವುದುಂಟು (ಕಶಾಅ. ೩೬). [ಕೂಟ$_3$ + ಶಾಸನ]

**ಕೂಟಸಂಭವ** (ನಾ).[ಜ್ಯೋತಿ] ಕೂಟಯೋಗದಲ್ಲಿ ಹುಟ್ಟಿದವನು : ಅಸತ್ಯವಚೋನ್ವಿತ ಕೂಟಸಂಭವಂ (ಜಾತತಿ. ೧೩-೧೮). [ಕೂಟ$_3$ + ಸಂಭವ]

**ಕೂಟಸಮಸ್ಯೆ** (ನಾ). ತೊಡಕಿನ ಸಮಸ್ಯೆ ; ಬಿಡಿಸಲಾಗದ ಸಮಸ್ಯೆ: ಸುಮ್ಮನೇ ಕೂಟಸಮಸ್ಯೆಗಳನ್ನು ಬಿಡಿಸುವ ತೊಡಕಿನಲ್ಲಿ ಬೀಳಬೇಡಿರಿ (ಪ್ರಬಂಧ. ೧೨೧). [ಕೂಟ$_3$ + ಸಮಸ್ಯೆ]

**ಕೂಟಸಾಕ್ಷಿ** (ನಾ). ೧. ಸುಳ್ಳುಸಾಕ್ಷಿ: ಕಪಟೋಪಾಯರು ಕೂಟಸಾಕ್ಷಿಯ ಜನರ್ (ಸೋಮೇಶ. ೫೯). ೨. ಸುಳ್ಳುಸಾಕ್ಷ್ಯವನ್ನು ಹೇಳುವವನು : ಪಾಷಂಡಗಾತ್ಮ ವಿರಾಮಕಾರಂಗೆ ಕೂಟಸಾಕ್ಷಿಗೆ ನಾಮಧಾರಿಗೆ ಪಾರ್ಥಕೇಳ್ ಪರಲೋಕವಿಲ್ಲೆಂದ (ಕುವ್ಯಾಅ. ೪-೨೬); ಬಯಲಾಯ್ತು ಕೂಟಸಾಕ್ಷಿಯ ಸಿರಿವೊಲು (ಜೈಮಿಭಾ. ೨೦-೧೬). [ಕೂಟ$_3$ + ಸಾಕ್ಷಿ]

**ಕೂಟಸಾಕ್ಷ್ಯ** (ನಾ). = ಕೂಟಸಾಕ್ಷಿ : ಮಾನನಿಧಿಯೆನಿಸುವನ ತೀರ್ಥಸಂಗತನ ಸಲೆ ಕೂಟಸಾಕ್ಷ್ಯವಂ ನುಡಿಯದವನ . . . ಮನೆಯೊಳಿಂದಿರೆ ಬಿಡದೆ ನೆಲಸಿರ್ಪಳು (ಜೈಮಿಭಾ. ೫-೬೬). [ಕೂಟ$_3$ + ಸಾಕ್ಷ್ಯ]

**ಕೂಟಸ್ಥ** (ಗು). ೧. ತುದಿಯಲ್ಲಿರುವ; ಶಿಖರದಲ್ಲಿ ನೆಲಸಿರುವ. ೨. ಸಮೂಹದ ಮಧ್ಯದಲ್ಲಿರುವ (ನಾ). ೩. ಮನೆತನದ ಮುಖಂಡ, —ಯಜಮಾನ. ೪. (ಚಿತ್‌ಸ್ವರೂಪದಲ್ಲಿ) ಕೂಡಿಕೊಳ್ಳುವಿಕೆ ; ಐಕ್ಯ : ಎನ್ನ ಅಲ್ಲಿಗಿಲ್ಲಿಗೆಳೆಯದೆ ನಿನ್ನಲ್ಲಿಗೆ ಕೂಟಸ್ಥವ ಮಾಡಾ (ಮೋಳಿಮಾ. ೧೮೩-೬೧). ೫. ಚಿತ್‌ಸ್ವರೂಪದಲ್ಲಿ ಐಕ್ಯಹೊಂದಿದವನು: ಅದೇತಕೆ ಅಯ್ಯಾ ಶಿವನೊಳಗೆ ಕೂಟಸ್ಥನಾದಹನೆಂಬ ಹಲುಬಾಟ (ಮೋಳಿಮಾ. ೨೬೯-೧); ಕೂಟಸ್ಥನಲ್ಲದವ ನೋದು ಗಿಳಿ ಕಲಿತ ಪಾಠದಂತಕ್ಕು (ಸರ್ವಜ್ಞ. ೪೪೦). ೬. ನಾಶವಿಲ್ಲದವನು; ಪರಮಾತ್ಮ : ಏಕಂ ಕೂಟಸ್ಥಂ ನಿಸ್ಸಾಕಾರ ತ್ರಿತಯವಾದ ವಿಭುತೆ ಸಮಗ್ರಂ (ಜಗವಿ. ೪-೧೦೪). [ಸಂ.]

**ಕೂಟಸ್ಥಲ** (ನಾ). [ವೀಶೈ] ಐಕ್ಯಸ್ಥಲ: ಅಂಗಭವಿ ಭಕ್ತಂಗೆ ಮನಭವಿ ಮಹೇಶ್ವರಂಗೆ ... ಕೂಟಸ್ಥಲ ಭವಿ ಐಕ್ಯಂಗೆ (ಮೋಳಿಮಾ. ೧೩೨-೫೧೧).
[ಕೂಟ$_1$ + ಸ್ಥಲ]

**ಕೂಟಸ್ಥಾನ** (ನಾ). ೧. ಕೂಡುವ ಸ್ಥಳ; ದಾರಿಯ ಕೂಟ: ಅವರಿಬ್ಬರೂ ಹೋಗಬೇಕಾದ ದಾರಿಗಳು ಬೇರೆಯಾಗುವ ಕೂಟಸ್ಥಾನ ಬಂತು (ಮೂರುದಾ. ೮೮). ೨. ಸೇರುವಸ್ಥಳ: ಅವನು ... ಅವರ ಆಟದ ಕೂಟಸ್ಥಾನದಲ್ಲಿ ಹೊಕ್ಕಿದ್ದನು (ಇಪ್ಪಕ. ೨೪೫).
[ಕೂಟ$_1$ + ಸ್ಥಾನ]

**ಕೂಟಾಕ** (ನಾ). ಸುತ್ತಿಗೆ: (?). [< ಸಂ. ಕುಟ್ಟಾಕ]

**ಕೂಟಾಗಾರ** (ನಾ). ಮನೆಯ ಮೇಲ್ಭಾಗದಲ್ಲಿರುವ ಕೋಣೆ; ಶಯ್ಯಾಗಾರ: "ವಲಭಿ – ಕೂಟಾಗಾರ, ಮಲಗುವ ಮನೆ" (ಗಂಗಾಮು. ೨೮೩). [ಕೂಟ$_3$ + ಆಗಾರ]

**ಕೂಟಾಚಾರ** (ನಾ). ೧. ಕೂಟದ ಅಥವಾ ಪಂಗಡದ ಆಚಾರ: ದೇಶಾಚಾರ, ಜಾತ್ಯಾಚಾರ ... ಕುಲಾಚಾರ, ಕೂಟಾಚಾರ ... ಸಂಪ್ರದಾಯವೆಂಬುದು ಮೊದಲಾದವುಗಳಂ ತಿಳಿದು (ವಿವೇಕ.೧೮೬). ೨. ಒಂದು ಬಗೆಯ ತೆರಿಗೆ: (೧) ಮನೆದೆರಿಗೆ ... (೧೦) ಕೂಟಾಚಾರ ... ಈ ಮೇರೆಗೆ ಹತ್ತೊಂಬತ್ತು ಬಾಬುಗಳನ್ನು ರೈತರಿಗೆ ನಿಷ್ಕರ್ಷೆಮಾಡಿಸಿ (ಮಹಾವಂ. I, ೧೨೪). [ಕೂಟ$_1$ + ಆಚಾರ]

**ಕೂಟಾಯಿ** (ನಾ). (ಕರಾ) ಧಾನ್ಯವನ್ನು ಸಂಗ್ರಹಿಸಿಡುವ ಸಾಧನ; ಕಣಜ: ಅಂಗಳದಲ್ಲೊಂದು ಐನೂರು ಮುಡಿ 'ಕೂಟಾಯಿ' ... ಚಿನ್ನದ ನೇವಳ - ಇಷ್ಟೆಲ್ಲ ಇತ್ತು ನೋಡಿ (ಪಳಮ. ೧೯).
[← ತುಳು. ಕೂಟಾಯಿ, ಕುಟಾಯಿ]

**ಕೂಟಾವಳಿ** (ನಾ). ಕೂಟಗಳ ಸಾಲು; ಶಿಖರಗಳ ಸಮೂಹ: ಕಾಂಚನ ರುಚಿರ ಸುದರ್ಶನ ರಜತಾಂಕಿತ ವಿಚಿತ್ರ ಕೂಟಾವಳಿಯೊಳ್ (ಶಾಂತಿಪು. ೯-೧೬೯). [ಕೂಟ$_3$ + ಆವಳಿ$_1$ (= ಆವಲಿ)]

**ಕೂಟಾಳಿ** (ನಾ). ಸಂಗಾತಿ; ಮೇಳಿಗ (?): ಗಳಗಳನೆ ಪೋಗಲಾಗದು ಚಿತ್ತವಿದ್ದೊಲಿರದಳುಕಿ ದ್ವಾರದಿ ನಿಂದು ಮೆಲ್ಲನಲ್ಲಿಹ ಜನರ ಸಮಯವೇನೆಂದು ಕೇಳಿ ಸುಳಿದಾಡುವರೊ ಯಂಮ ಕೂಟಾಳಿಗಳು ವಳಗೆಯಿಲ್ಲದೆ ಅಂತಸ್ಸವಾಗಿರೆ (ಕೃಷ್ಣವಿ. ೪-೨೨). [ಕೂಟ$_1$ + -ಆಳಿ$_3$]

**ಕೂಟೆ** (ನಾ). ಕೀಲು; ತಿರುಗಣಿ: ಬ್ರಿಟನ್ನಿನಲ್ಲಿ ಮಾಡಿದ ಕೂಟೆಗಳ ಮೇಲೆ ಬಾಗಿಲು ತಿರುಗಿದುದರಿಂದ ಸ್ವಲ್ಪವೂ ಸದ್ದಾಗಲಿಲ್ಲ (ಪುನರು.೧೧೬).
[< ಕೂಟ$_2$]

**ಕೂಟಕೆ ತೆರಿಗೆ** (ನಾ). ಒಂದು ಬಗೆಯ ತೆರಿಗೆ; ಕೂಡಿಕೆ ತೆರಿಗೆ: ಮನೆತೆರಿಗೆ, ಹುಲ್ಲಹಣ ... ಮಗ್ಗಕಂದಾಯ, ಕೂಟಕೆ ತೆರಿಗೆ, ಮದಿವೆ ತೆರಿಗೆ (ನಮ್ಮನು. ೨೪೩). [ಕೂಟಕೆ$_0$ + ತೆರಿಗೆ (< ತೆಱಿಗೆ)]

**ಕೂಟಿಗ** (ನಾ). ಕೂಟದಲ್ಲಿ ಆಸಕ್ತನಾದವನು; ವಿಟಪುರುಷ: ಜಾಟಿಗಾತಿಯರಿರವಿಗೆಳೆನಗೆಯಾಟದಿಂ ಬರುವಾಗಲೊಂದೆಡೆ ಕೂಟಿಗರು ಯೆಸೆದಿರ್ದರರಿದರು ಮಿತ್ರಪಂಚಕರು (ಜಿನಭಾ. ೮೦-೫೦).
[ಕೂಟ$_1$ + -ಇಗ]

**ಕೂಟಿಗೇರು** (ನಾ). ಒಂದು ಜಾತಿಯ ಸಸ್ಯ: ಕೂಟಿಗೇರು ... ಕಂಕಣಗಾಳ (ಪ್ಲೈಟಿಗಿ. ೪೪-೮೭೭). [?]

**ಕೂಟು** 'ಕೂಟ$_1$' ನೋ.

**ಕೂಟ್ಟ$_1$** (ನಾ). ಸಂಘ; ಸಭೆ: ಅವರ ರಾಜ್ಯ ಕುಜುಬೂರ ಅಯ್ಯಗಳ ಕೂಟಗಳ ದರ್ಮ (ಎಕ. X, ಗೋರಿಬಿ. ೯-೧೫; 1409). [< ಕೂಟ$_1$]

**ಕೂಟ್ಟ$_2$** (ನಾ). = ಕೂಟ್ಟ$_3$: ಹನ್ನರ ಹಣ ಹೊಲೆದೆಱ ಕೂಟ ವೃದ್ಧಿಗೆ ಕೊಳಂ (ಬೊಂಕಶಾ. ೧೯೩೫, ರಾಣಿಬೆ. ೬೩-೨೦; ?). [< ಕೂಟ$_3$]

**ಕೂಟೋಪಾಯ** (ನಾ). ಮೋಸದ ಉಪಾಯ; ಒಳಸಂಚು: (ಒಳ) ಸಂಚು, ಹೂಟ, ಪಿತೂರಿ, ತಂತ್ರ, ಮಸಲತ್ತು, ಕೂಟೋಪಾಯ (Scheme. ಇಂಕನಿ). 'ಕುಟಿಲೋಪಾಯ' ಪರಾ.
[ಕೂಟ$_3$ + ಉಪಾಯ]

**ಕೂಡ, ಕೂಡೆ** (ಅ). ೧. ಒಡನೆ; ಸಂಗಡ; ಜೊತೆಯಲ್ಲಿ: ಮುನಿದೊಡಮ್ಮನ ಕೂಡ ಮುನಿಯಲಿ (ಬಸವು. ೪೭-೨೮); ಕರಸಿ ಮಂತ್ರಿ ಪುರೋಹಿತರ ಕೂಡೊರೆದನೇಕಾಂತದಲಿ (ತೊರರಾ. ೧-೫-೧೮); ದುರ್ಜನರ ಕೂಡ ಒಡನಾಟ ಬಚ್ಚಲ ರೊಚ್ಚಿನಂತಿಹುದು (ಸರ್ವಜ್ಞ. ೮೦೯). ೨. ಸಹ: ವಿಜಯನಗರದಂಥ ಸಾಮ್ರಾಜ್ಯವನ್ನು ಕೂಡ ಮಣ್ಣುಗೂಡಿಸಿದ ಕಾಲಪುರುಷನಿಗೆ ನಮಸ್ಕಾರ (ಮಧ್ಯಮ. ೧೫೯). **ಕೂಡೆ:** ೧. ಸಂಕ್ರಮಣಕಾಲದೊಳ್ ಕೂಡೆ ಬನ್ದ ಪೌಷದ ತಿಥಿಯೊಳ್ (ಇಅ.XII, ೨೨೩-೪; 929); ಗಾಣರ ಶಾಕಳಿ ಕೂಡೆ ಸೋರ್ವ ಮಾವಿನ ಸೊನೆ (ಆದಿಪು. ೧೩-೬); ದುಶ್ಶಾಸನ ಶಕುನಿ ದಿವಾಕರಾತ್ಮಜರ ಕೂಡೆ ಸುಯೋಧನನಳಿದನೆಂದೊಡೇಂ (ಧರ್ಮಾಮೃ. ೨-೭೫); ಬೇಟೆ ಕರ್ಣನ ಕೂಡೆ ಷಡುರಸದೂಟ ಕರ್ಣನ ಕೂಡೆ (ಸಂಭಪ. ೧೭-೧೧೩); ಕುಲಹೇಡಿಯ ಕೂಡೆ ಸರಸವೇ (ಗಾದೆ). ೩. ಕೂಡಲೆ; ತಕ್ಷಣ; ಒಮ್ಮೆಲೆ: ಅಡವಿಯಂ ಕೂಡೆ ಕಾಳಿಂದಿಯೆತ್ತಂ ಪರ್ಬಿತ್ತೆಂಬಂತೆ (ಕಾದಂಪೂ. ೧೬೫); ವಿಚಿತ್ರವನಾಳಿ ಕೂಡೆ ತಳ್ತೆಸೆದಿರೆ (ಎಕ. VIII, ಸಾಗರ. ೧೦೮-೨೬; 1042); ಶಾಂತಿಯ ಮಾಡ ಹೋದರೆ ಕೂಡೆ ಬೇತಾಳನಾಯ್ತು (ಬಸವ. ೫೨೬); ಕೂಡೆ ಕೈಕೊಳಹೇಳಿ ಕೈತಪ್ಪಾಗದಿರದು ನೃಪಾಲಕಂಗೆ (ಕುವ್ಯಾದ್ರೋ. ೨-೩೨); ತಲೆಯ ಕಡಿ ಕೊಲ್ಲೆನುತ ಕವಿದುದು ಕೂಡೆ ಖಳನಿಕರ (ತೊರರಾ. ೧-೧೧-೧೧).

**ಕೂಡಣ** = ಕೂಡಿರುವ; ಸಂಗಡದ; ಜೊತೆಯ: ಬೊಮ್ಮನ ಕೂಡಣ ಮುನಿಸಿಂ ಕೌಶಿಕಮುನಿ ಸಕಲವ ಹುಟ್ಟಿಸನೇಂ (ವೀರೇಚ. ೧-೩೦); ಅಸುರನನು ಕೊಂದವರ ಕೂಡಣ ಕಳಹ ಬೇಡೆಂದ (ನಿಭಾಗ. ೧೦-೭೭-೩೭); ಸಿಂಗನ ಕೂಡಣ ಕಲಹದೆ ಕರಿಗಳ ಜಂಗುಳಿ ಜೀವಿಸಲಹುದೆ (ಕಂನವಿ. ೧೫-೧೦೮).
[ದೇ. ‖ ತಮಿ. ಮಲ. ತುಳು. ತೆಲು. ಕೂಡ]

**ಕೂಡಂಚು** (ನಾ). ೧. "ಎರಡು ಚಾವಣಿ ಕಮಾನುಗಳು ಒಂದಕ್ಕೊಂದು ಸಂಧಿಸಿ ಆದ ಅಂಚು (Groin. ಇಂಕನಿ). ೨. (ಸೀರೆ ಮೊದಲಾದವುಗಳಿಗೆ) ಸೇರಿಸಿದ ಅಂಚು: ಕೂಡಂಚಿನ ಸೀರೆ (ರೂಢಿ).
[ಕೂಡು$_1$ + ಅಂಚು$_2$]

**ಕೂಡಲ್, ಕೂಡಲು** (ನಾ). ೧. ಕೂಡಿಕೊಳ್ಳುವಿಕೆ; ಜೊತೆ; ಸಂಗಮ: "ಸಂಭೇದಃ, ಸಂಗಮಃ, ಸಂಭೇದ್ಯಂ – ಈ ೩ ಕೂಡಲ್" (ಹಲಾಯು. ೧೧೦-೪೭); ಪಳದಾ ಕೂಡಲ್ (ಎಕ. IV, ನಾಗಮಂ. ೭೫-೬೨; 776); ಸತಿಕಾಳಿಂದಿಯ ಸುರನದಿಯ ಕೂಡಲಂ ಪೋಲ್ತಿರ್ದಳ್ (ರಸರ. ೪-೧೮೦). **ಕೂಡಲು:** ೧. ಮೂಡಲೆರಡುಂ ಪಳ್ಳದ ಕೂಡಲೆ ಮೇರೆಯಾಗೆ (ಸೌಇಇ. XI-i, ೫೨-೫೮; 1007); ತೆಂಕಣಲು ತೊಱೆಯ ಕೂಡಲು (ಎಇ. XXI, ೨-೭೧; 1260); ಹೃದಯ ಹೃದಯಗಳ ಕೂಡಲಾಗುವುದು ದೇವಯಾತ್ರೆಗಾಗಿ (ಸೂರ್ಯಪಾ. ೩೪-೧೧). ೨. ಕೃಷ್ಣಾ ಹಾಗೂ ಮಲಪ್ರಭಾ ನದಿಗಳ ಸಂಗಮಸ್ಥಾನ: ಎನ್ನ ಸುಖನಿಧಿಯೆ ಗುಣನಿಧಿಯೆ ಕೂಡಲ ಸಂಗ (ಬಸರ. ೩-೭೩). [ಕೂಡು$_1$ + -ಅಲ್$_2$]

**ಕೂಡಲಿ** (ನಾ). ೧. ಒಬ್ಬಾತನ ಹೆಸರು: ಕೂಡಲಿಯನಿಱಿದು ಬೀಡ ... ಕೊಣ್ಡುಪೋಗೆ (ಎಕ. VIII, ಸೊರಬ. ೨೦೨-೪; 955). ೨. ಒಂದು ಊರಿನ ಹೆಸರು: ಕೂಡಲೀ ರಾಮಾಭಟ್ಟರ ಮಕ್ಕಳು ಶಂಕರಭಟ್ಟರಿಗೆ (ಎಕ. VII, ಶಿವಮೊ. ೨-೯೦; 1641). [?]

**ಕೂಡಲಿಕ್ಕು** (ಕ್ರಿ). ೧. ಸೇರಿಸಿ ಇಡು; ಕೂಡಿಡು: ಉಬ್ದಾರ್ಜಿತೈಶ್ವರ್ಯಮುಂ ಪೊಲೆಸಾಡಿಂ ದಲೆ ಕೂಡಲಿಕ್ಕಿ ಪೆರರ್ಗಂ ತಾನಾಗದೇ ಪೋಗುವೊಲ್ (ಸೋಮೇಶ. ೯೧). ೨. ಸೇರಿಸು; ಕೂಡಿಸು: ದ್ವೈತಾದ್ವೈತದೊಳಗೆ ಕೂಡಲಿಕ್ಕಿ ನುಡಿಯಲಾಗದು (ಸಿದ್ಧೇವ. ೩೮). ೩. ಈಡೇರಿಸು; ನೆರವೇರಿಸು: "ಸಾಧಿಸಲು ಪಟ್ಟ ಬುದ್ಧಿಯುದ್ಯೋಗ (ಯತ್ನ ಎಲ್ಲವಂ ಕೂಡಲಿಕ್ಕುವ ಬುದ್ಧಿ)" (ನಾನಾರ. ೬. ೧೪೮). [ಕೂಡಲ್ + ಇಕ್ಕು]

**ಕೂಡಲಿಸೊಪ್ಪು** (ನಾ). ಒಂದು ಬಗೆಯ ಸಸ್ಯ: (ವೈಔಗಿ. ೧೩–೨೨೬). [ಕೂಡಲಿ$_0$ + ಸೊಪ್ಪು$_3$]

**ಕೂಡಲು** 'ಕೂಡಲ್' ನೋ.

**ಕೂಡಲುಗೊಳ್** (ಕ್ರಿ). ಕೂಡಿಕೊಳ್ಳು; ಜೊತೆಯಾಗು; ಸಂಗಮವಾಗು: ಕೂಡಲುಗೊಂಡು ರಸ ಪ್ರವಾಹವಾಗಿ ಹರಿದು ಧರ್ಮಸಾಗರದಲ್ಲಿ ಸಂಗಮವಾಗುವುದೇ (ನಾಡೋಜ. ೩೪೯). [ಕೂಡಲು (< ಕೂಡಲ್) + ಕೊಳ್$_1$]

**ಕೂಡಲೂರ್**, ಕೂಡಲೂರು (ನಾ). ಒಂದು ಊರಿನ ಹೆಸರು: ಮರುಕರ ವಿಷಯೇಗ್ರಾಮಂ ಕೂಡಲೂರನ್ನಾಮ ಸಂಜ್ಞಿತಮ್ (ಮೈಅರಿ. ೧೯೩೦, ೮೮–೧೧; 475). **ಕೂಡಲೂರು**: ಪೆಕ್ಕಲಿಯ ಮುವಲ್ಪೊಗೆಯು ಕೂಡಲೂರು ಇನೆತ್ತುಮೂರ್ ನೆರಸಾಸನಮಾಗೆ (ಎಕ. IV, ಗುಂಡ್ಲುಪೇ. ೮೮–೫; 750). [ಕೂಡಲ್ + ಊರ್]

**ಕೂಡಲೂರು** 'ಕೂಡಲೂರ್' ನೋ.

**ಕೂಡಲೆ$_1$** (ನಾ). ಒಂದು ಊರಿನ ಹೆಸರು: ಎಟ್ಟುಕ್ಕೆಪರವೂರು ಕೂಡಲೆ ಇನಿತುಮಂ . . . ಇತ್ತನ್ (ಎಕ. IX, ಬೆಂಗಳೂ. ೮೩–೧೫; 890). [?]

**ಕೂಡಲೆ$_2$**, ಕೂಡಲೇ (ಅ). ಸಂಗಡವೆ; ತಕ್ಷಣ; ಆ ಕ್ಷಣ: ಅವನನ್ನು ಕಂಡ ಕೂಡಲೆ (ಮುಂಬಯಿ. ೨–೧೯); ಗೊನೆಯನ್ನು ಇಳಿಸಿಕೊಂಡ ಕೂಡಲೆ (ಮುಂಬಯಿ. ೨–೩೭). **ಕೂಡಲೇ**: ಯಜಮಾನರು ಹೇಳಿದ ಕೆಲಸವನ್ನು ಕೂಡಲೆ ಮಾಡಬೇಕು (ಮುಂಬಯಿ. ೧–೧೪); ಅವರು ಕೂಡಲೇ ಹಾಗೆ ಮಾಡಬೇಕು (ಯಕ್ಷಪ್ರ. ೬೨). [?]

**ಕೂಡಲೇ** 'ಕೂಡಲೆ$_2$' ನೋ.

**ಕೂಡಲೊಟ್ಟು** (ಕ್ರಿ). ಗುಂಪುಗೂಡಿಸು; ರಾಶಿಹಾಕು; ಒಟ್ಟು: ಗುಲ್ಮವಂ ಕಡಿದು . . . ಒಣಗಿಸಿ ಅವಂ ಕೂಡಲೊಟ್ಟಿ (ಸರ್ವವ. ೧೦೫–೫೬೮). [ಕೂಡಲ್ + ಒಟ್ಟು$_1$]

**ಕೂಡಾಟ** (ನಾ). ಕೂಡಿಕೊಂಡಿರುವಿಕೆ; ಒಡನಾಟ: ಬೇಟ ಮನದಲಿ ನಗೆಯ ಮಧುರದ ನೋಟ ಕಣ್ಣಲಿ ಬಲಿದವರ ಕೂಡಾಟಗಳಲಿವರಿಬ್ಬರೊಂದೆನಿಸಿದರು ಜಗವಱಿಯೆ (ಸಂಭಪ. ೧೬–೧೧೩). [ಕೂಡು$_1$ + ಆಟ]

**ಕೂಡಾಡಿ** (ನಾ). ಒಡನಾಡಿ; ಸಂಗಾತಿ: "ಜೊತೆಗಾರ, ಸಂಗಾತಿ, ಸಂಗಡಿಗ, ಗೆಣೆಯ, ಕೂಡಾಡಿ, ಸಹಚರ" (Fellow. ಇಂಕನಿ). [ಕೂಡು$_1$ + –ಆಡಿ$_1$]

**ಕೂಡಾವಳಿ** 'ಕೂಡುವಳಿ' ನೋ.

**ಕೂಡಾಳಿ** (ನಾ). = ಕೂಡಾಡಿ. 'ಕೂಡಾಳಿಕೆ' ಪರಾ. [ಕೂಡು$_1$ + –ಆಳಿ$_3$]

**ಕೂಡಾಳಿಕೆ** (ನಾ). ಕೂಡಿರುವಿಕೆ; ಸಹವಾಸ: ಕಾಳರ ಕಿನಿಸು ಕುಜನರ ಕೂಡಾಳಿಕೆ ಕೂಕೆ ಕೈಕೊ ಕೌಕಂಕನೆ (ಶತಸಾಂ. ೭೫–೮೧). [ಕೂಡಾಳಿ + –ಇಕೆ]

**ಕೂಡಿಕೆ** (ನಾ). ೧. ಸೇರುವೆ; ಬೆರಕೆ; ಸಂಗಮ; ಕೂಟ: ಮಹಾ ವೈದ್ಯನಾಥ ಅಯ್ಯರ್ ಮತ್ತು ರಾಮಸ್ವಾಮಿ ಶಿವನ್ ಅವರದು ಹಿತವಾದ ಕೂಡಿಕೆಯಾಗಿತ್ತು (ಸಂಗೀತ. ೧೫); ಕರಿಯುವುದು ಮತ್ತು ಕುದಿಸುವುದು ಇವೆರಡರ ಕೂಡಿಕೆ (ಅಡುಸೌ. ೯೧). ೨. ವಿಧವೆ ಅಥವಾ ಗಂಡನನ್ನು ಬಿಟ್ಟವಳು ಇನ್ನೊಬ್ಬನೊಡನೆ ಮದುವೆಯಾಗುವಿಕೆ; ಉಡಿಕೆ: ರಾಧಾದೇವಿಯು ಮದುವೆಯ ಹೆಂಡತಿಯಂತಾಗದಿದ್ದರೂ ಕೂಡಿಕೆಯವಳಂತಾದರೂ ನನ್ನೊಡನೆ ವರ್ತಿಸುತ್ತಿದ್ದರೆ ನಾನು ಧನ್ಯನಾಗುತ್ತಿದ್ದೆನು (ಸ್ಕೂಲವಿ. ೨೧೬); ಬಾಡಿಗೇ ಮನೆ ಕೂಡಿಕೇ ನಂಟರು (ಗಾದೆ).

**ಕೂಡಿಕೆಗಂಡ** = ಕೂಡಿಕೆ ಮಾಡಿಕೊಂಡವನು: (೬). **ಕೂಡಿಕೆಸಾಲು** = ಕೂಡಿಕೆಯ ಪದ್ಧತಿ: (ಎಸವ್ಯ. I, ೫). **ಕೂಡಿಕೆಹೆಂಡತಿ** = ಪುನರ್ವಿವಾಹವಾದವಳು: (೬). [ಕೂಡು$_1$ + –ಇಕೆ]

**ಕೂಡಿಕ್ಕು** (ಕ್ರಿ). ಕೂಡಿಹಾಕು; ಒಟ್ಟುಗೂಡಿಸು: ಪತ್ರೆಯನೆಲ್ಲವಂ ಕೂಡಿಕ್ಕಿ ಕಾವದಱಲ್ಲಿ ಅನಲವನಿಕ್ಕಿ (ಬಸವು. ೪೩–೬೯). [ಕೂಡು$_1$ + ಇಕ್ಕು]

**ಕೂಡಿಗೆ** (ನಾ). ಕೂಡಿಸುವಿಕೆ; ಶೇಖರಣೆ: ಐದು ಲಕ್ಷ ಹಂಗಾಳಿ ಅಕ್ಕಿಯಂನು ಕೂಡಿಗೆ ಮಾಡಿಸಿ (ರಾಜೇಂದ್ರ. ೪೨). [< ಕೂಡಿಕೆ ?]

**ಕೂಡಿಡು** (ಕ್ರಿ). ೧. ಕೂಡಿಕ್ಕು: ದೆಸೆಯಂ ತೆಕ್ಕನೆ ತೀವಿ ಪರ್ಬಿ ಗಗನಂ ಕೂಡಿಟ್ಟವೋಲ್ ನೀಳ್ದಗುರ್ವಿಸೆ (ಗದಾಯು. ೬–೨೨); ದುಡ್ಡು ಕೂಡಿಟ್ಟು ಬಳಿದು ಹೋಗುವಾಗ ಬಳಲಿ (ಪುರಂದ. ೨–೫೨–೧). ೨. ಒಂದಕ್ಕೊಂದು ಜೋಡಿಸಿಡು: (೬). [ಕೂಡು$_1$ + ಇಡು$_1$]

**ಕೂಡಿನ** 'ಕುಡಿನ' ನೋ.

**ಕೂಡಿರಿಸು** (ಕ್ರಿ). ಜೊತೆಯಲ್ಲಿ ಇರಿಸು: ಮರುಭವದೊಳಪ್ಪೊಡಂ ನಿನ್ನಂ ಕೂಡಿರಿಸಿ ಕೊಳ್ವೆನಕ್ಕೆಂದು ನಿದಾನಂಗೆಯ್ದು (ಚಾವುಂಪು. ೮೯–೯); ಬೇಱಿರಿಸಿ ಕೂಡಿರಿಸಿ ನಿಮಗೆಯು ತೋಱದುದೆ ಮತ ನಿಮ್ಮ ನೇಮವ ಮೀಱ ಬಲ್ಲನೆ (ಕುವ್ಯಾಅ. ೯–೭೫). [ಕೂಡು$_1$ + ಇರಿಸು]

**ಕೂಡಿಲು** (ನಾ). ಒಂದು ಬಗೆಯ ಮೀನು: ಹೆಮ್ಮಲಗು ಬಿಳಿಯಾನೆ ಮಳಲಿ ಕೂಡಿಲು . . . ಮೀನ್ಗಳಂ (ಹಚಕಾ. ೫–೪೬). [?]

**ಕೂಡಿಸು** (ಕ್ರಿ). ೧. ಕೂಡಿಡು; ಸಂಗ್ರಹಿಸು: ಹೊಸ ಹರೆಯದಲಿ ದ್ರವ್ಯವ ನೆಱೆ ಕೂಡಿಸು (ಮೋಹತ. ೧೮–೭೫); ಪ್ರಾಣವಿರುವಾಗ್ಗೆ ಕೂಡಿಸಿದ ಹಣ ಹೆಣವಾದ ಮೇಲೆ ಬಂದೀತೇ (ಗಾದೆ). ೨. ಹೊಂದಿಸು; ಅನ್ವಯಿಸು: ಶಾಸ್ತ್ರಿಗಳು ಜಾತಕಗಳನ್ನು ಕೂಡಿಸಿನೋಡಿದರು (ರೂಢಿ). ೩. ಒಟ್ಟುಗೂಡು; ಸೇರಿಸು: ಎರಡೂ ಸಂಖ್ಯೆಗಳನ್ನು ಕೂಡಿಸಿದರೆ ಎಷ್ಟಾಗುವುದು (ರೂಢಿ). ೪. ಕೂಡುವಂತೆ ಮಾಡು; ಜೋಡಿಸು; ಬೆಸೆ; ಕೆಚ್ಚು: ತುಪ್ಪಕ್ಕೆ ಮುಪ್ಪು ಬಂದರೆ ಸಂದು ಕೂಡಿಸುತ್ತದೆ; ಮನುಷ್ಯನಿಗೆ ಮುಪ್ಪು ಬಂದರೆ ಮಣ್ಣು ಕೂಡಿಸುತ್ತದೆ (ಗಾದೆ). [ಕೂಡು$_1$ + –ಇಸು$_3$]

**ಕೂಡು$_1$** (ಕ್ರಿ). ೧. ಒಂದಾಗು; ಸೇರು; ಬೆರೆ; ಜೊತೆಯಾಗು: "ಕೂಡು – ಸಂಮೇಲನೇ" (ಶಮಧಾ); ಏಕವಾಕ್ಯಸಂಜಾತಗುಣಂ ತದೇಕವಚನಂಗಳೊಳಂ ದೊರೆವೆತ್ತು ಕೂಡುಗುಂ (ಕವಿರಾ. ೧–೧೯೧); ಮಹಾಸಮುದ್ರದೊಳ್ ಮಹಾನದಿಗಳ್ ಕೂಡುವಂತೇಟಕ್ಷೋಹಿಣೀ ಬಲಂ ಕೂಡಿ ನಡೆಯೆ (ಪಂಪಭಾ. ೯–೯೫ವ); ಕೂಡಿದವು ಪುರ ಮೂಱು (ಕುವ್ಯಾಕ. ೭–೪೦); ಭಕ್ತಿಯೆಂದರೆ ಭಗವಂತನನ್ನು ಬೇಡುವುದಲ್ಲ, ಭಗವಂತನಲ್ಲಿ ಕೂಡುವುದು (ಭಾರದ. ೧೧೮). ೨. ಸಾಧ್ಯವಾಗು; ಉಂಟಾಗು: ಎಲ್ಲಿರ್ದೊಡಂ ಕೂಡದಾಗಳಣಂ ಕೂಡದು ಬಾಟ್ಟು ಮಾತೆನಗೆ (ಆದಿಪು. ೩–೯೧); ಎನ್ನ ಮನೋರಥಂ ನೀಡಿರದೆ ಕೂಡಿದಪ್ಪುದು (ಕಾದಂಉ. ೪೧೩); ಜಿನೇಂದ್ರಾರ್ಚನೆಯಂ ಮಾಡದೆ ಸುಖಮಂ ಮನದೊಳ್ ಬಯಸಿದೊಡೆ ಕೂಡಲಱಗುಮೆ ಧರೆಯೊಳ್ (ಧರ್ಮಾಮೃ. ೬–೧೯೮); ನೋಡುವೆವು ಧರ್ಮಪುತ್ರನ ಕೇಡು ಕಲಿಯುಗ ಬೀಜವೀಪರಿ ಕೂಡದೀ ಹೊತ್ತಿನಲಿ (ಕುವ್ಯಾಕ. ೧೬–೨).

೩. ಸಂಭೋಗಿಸು; ರತಿಕ್ರೀಡೆಯಾಡು: ತಾರದಿರ್ ಮೊಗಮನಿತ್ತು ನುತುಂ ಬೆಱಗಾಗೆ ಕೂಡಿದಳ್ (ಕಾವ್ಯಸಾ. ೯೯೪ ಶೂದ್ರಕ); ದಿವ್ಯ ಮುನಿಯುಂ ಮೃಗಮಾಗಿ ಮರಲ್ದು ಕೂಡೆ (ಪಂಪಭಾ. ೧೦-೧೧೧); ನಲ್ಲರ ಕೂಡುವಾಸೆಯೆ ಬರ್ದುಕುವುದಕ್ಕೆ ನಿಮಿತ್ತಮಾಗದೆ (ಕಾದಂಉ. ೩೨೮); ಮದನ ಜನಕ ತಾನು ಸೊಬಗುಳ್ಳನಾದರೆ ಮುದುಕಿ ಕುಬುಜೆಯನ್ನು ಕೂಡುವನೆ (ಪುರಂದ. ೨-೪೮-೧೩); ೪. ಕೂಡಿಸು; ಸೇರಿಸು; ಜೊತೆಮಾಡು: ನಿನ್ನಾಣ್ಮನಂ ನಿನ್ನೊಳಿಂದಿರದಾಂ ಕೂಡುವೆವು (ಪಂಪಭಾ. ೭-೩೬); ನಿಮ್ಮಡಿಯ ಭಯಮಮಂ ಕಳೆಯಲೆಂದಾ ಮಹಾಸತ್ವ ಸಂಪನ್ನನಂ ನಿಮ್ಮೊಳ್ ಕೂಡುವುದುಂ (ಪಂಚತಂ. ೯೨-೧೧); ಕನ್ನಡಮಮಂ ಚಿಂತಿಸಿ ಕೂಡಲಾಱದಕ್ಕಟ ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೆ (ಧರ್ಮಾಮೃ. ೧-೪೧). ೫. ಒಪ್ಪು; ಶೋಭಿಸು; ಹೊಂದಿಕೆಯಾಗು: ಸರ್ವಜ್ಞನೆಂಬೀ ಪೆಸರ್ ದೇವರದೇವಂ ಶ್ರೀಜಿನೇಂದ್ರಂಗಮುಗ್ರ್ಮುಳಿದರೊಳ್ಕೂಡದಿಂತಪ್ಪ ನಾಮಂ (ಸಮುಪ. ೮-೧೦೪); ಜಾತಕ ಕೂಡಿ ಬರಲಿಲ್ಲ (ರೂಢಿ). ೬. ಹಾಕು; ಒಟ್ಟು: ಫಲಪ್ರಾತಮನಾ ನೈವೇದ್ಯಮಂ ವರ್ಧಿಸು ಸರಭಿಲಸದ್ಧೂಪಮಂ ಕೂಡು ದೀಪೋದ್ಗಮಂ ಮಾಡು (ಚಂದ್ರಪ್ರ. ೧೪-೯೮). ೭. ಇಡು: ಪುತ್ರಂಗೆ ಜಾತಕರ್ಮವ ಮಾಡಿ ರಾಗದಿಂ ಬಸವನೆಂಬಭಿದಾನವಂ ಕೂಡಿ [ಪಾಠಾಂ. ಮಾಡಿ] ಹರನಿತ್ತ ಪೆಸರೆ ವಂಶಾವಳಿಯ ಪೆಸರಾಗೆ (ಬಸರ. ೧-೧೩೪). ೮. ಬಂಧಿಸು; ಒಳಗೆ ಹಾಕು: ಅವಳನ್ನು ಕುಂಭಮೇರು ದುರ್ಗದಲ್ಲಿ ಕೂಡಿ ಬೀಗಹಾಕಿದನು (ಭಕ್ತವಿ. ೨೮). ೯. [ಗಣಿತ] ಅಂಕಿಗಳನ್ನು ಒಂದಕ್ಕೊಂದು ಸೇರಿಸು: "ಯುಕ್ತಂ, ಯುತ್ತಂ, ಮಿಶ್ರಂ, ಸಂಮಿಶ್ರಂ - ಈ ೪ ಕೂಡುವುದಕ್ಕೆ ಪೆಸರು" (ಭಾಸ್ಕರ. ೬೬-೩); "ಯುತಂ . . . ಸಹಿತಂ, ಕೂಡು, ಬತಂ - ಇಂತಿನಿತುಂ ಕೂಡೂದಕ್ಕೆ ಹೆಸರು" (ವ್ಯವಹಾ. ೧೧-೧೨ ವ); ಲಘುವ್ರಜಂಗಳೆಡೆಯೊಳ್ ನಿಂದಂಕಮಂ ಕೂಡಿ (ಛಂದೋಂಬು. ೬-೨೬೩); ಗುಣಿಸಿ ಕೂಡಲು ಸಮಕೆ ಬಾರವು (ಕುವ್ಯಾಆ. ೭-೬೦).

ಕೂಡದು = ಸರಿಹೋಗದು; ಯೋಗ್ಯವಾಗದು; ಸಾಧ್ಯವಾಗದು: ಅಚ್ಯುತಂಗಿನಿಸೆರ್ದೆನೋವೆಯಪ್ಪೊಡದು ಕೂಡದು (ಪಂಪಭಾ. ೫-೧೦೨); ಅತಿಥಿಗಳೆಂದು ಬಂದರೆ ಮನೆಗೆ ಗತಿಯಿಲ್ಲ ಕೂಡದು ಎಂದೆ ಎನಗೆ (ಪುರಂದ. ೧-೧೬೬-೧೩). ಕೂಡದನ್ = ಕೂಡಿ ಇರಲು ಆಗದವನು; ವಿರಹಿ: ಕೂಡದರ ಕಲ್ಲೆರ್ದೆ ಪವ್ವನೆ ಸೀೞ್ (ಕಬ್ಬಿಕಾ. ೩೦೦). ಕೂಡಬೀಳು = ಸೇರುವೆಯಾಗು; ಜೊತೆಯಾಗು; ಸೇರು: ಇಷ್ಟೇ ಹಾಲು ಮಾರುತ್ತ ಹೋದರೆ ಕೈಯೊಳಗೆ ದುಡ್ಡು ಕೂಡ ಬೀಳುವುದಿಲ್ಲ (ಮುಂಬಯಿ. ೧-೧೯). ಕೂಡಹಾಕು = ಕೂಡಿಡು; ಸಂಗ್ರಹಿಸು; ಶೇಖರಿಸು: ಧರ್ಮಗುಪ್ತನೆಂಬ ಒಬ್ಬ ವೈಶ್ಯನಿದ್ದನು. ಇವನು ಕಾಸಿಗೆಕಾಸು ಕೂಡಹಾಕುತ್ತಿದ್ದನು (ನೀತಿಚಿಂ. X, ೩). ಕೂಡಿಕೊಡು=ಕೂಡಿಸಿಕೊಡು; ಒದಗಿಸು: ಪರಿಚಾರಪಟುಗಳೆನಿಸುವ ತರುಣಿಯರಂ ಕೂಡಿಕೊಟ್ಟು ಸಂತಸದಿಂದಂ (೧ರಿಕ. ೩-೯); ತುರಗದಳವ ಕೂಡಿಕೊಟ್ಟು ಕರ್ಣಾಟವನಿರದೆ ಸಾಧಿಸು ಹೋಗೆಂದ (ಕಂನವಿ.೧೧-೮). ಕೂಡಿಕೊಳ್, ಕೂಡಿಕೊಳ್ಳು = ೧. ಸೇರಿಸಿಕೊಳ್ಳು; ಹೊಂದಿಸಿಕೊಳ್ಳು; ಜೊತೆಯಾಗು: ಸೈಪಿಂದಮೆ ಬಂದಿರೇ ಕುಶಲಮೇ ನಿಮಗೆಂದು . . . ಅನಿತುಮಂ ಪೆಸಗೊರ್ಂಡನೊ ಕೂಡಿಕೊಂಡನೊ (ಅಜಿಪು. ೬-೧೪); ತನ್ನನಾಶ್ರಯಿಸಿ ಬರ್ಪರೆಲ್ಲರುಮಂ ಕೂಡಿಕೊಂಡು (ಧರ್ಮಾಮೃ. ೬-೬೪); ನಾಡಮನ್ನೆಯಗಿನ್ನೆಯರುಗಳ ಕೂಡಿಕೊಂಡೆಮ್ಮೊಡನೆ ಕಲಹವ ಬೇಡಿ (ಕುವ್ಯಾಭೀ.೧-೫). ೨. ಕೂಡಿಕೆಯಾಗು; ಸ್ನೇಹಮಾಡು: ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು (ಮಹಾದೇ. ೩೯-೩); ಸಮರಕೆ ಹಿಮ್ಮೆಟ್ಟಿ ಬದುಕುವ ರಣಭಂಡರನು ಕುದುಕುಳಿ ಜಯಲಕ್ಷ್ಮಿ ಕೂಡಿಕೊಂಬವಳಲ್ಲ (ಮೋಹತ. ೪೦-೨೮). ಕೂಡಿಬರ್, ಕೂಡಿಬರು = ೧. ಹೊಂದಿಕೆಯಾಗು: ತಕ್ಕೆಡೆಗಳೊಳ್ ವೈವಾಹಿಕಂ ಕೂಡಿಬರ್ಪುದನಾಪೇಕ್ಷಿಸುತುಂ (ಶಾಂತಿಪು.೨-೭೮); ಕೇಡು ಮಾಡಿದವು ವಿಧಿ ಕೂಡಿ ಬಂದ ಕಾಲಕ್ಕೆ (ಸರ್ವಜ್ಞ. ೮೬೧); ಅವಳಿಗೂ ಅವಳ ಗಂಡನಿಗೂ ಕೂಡಿ ಬಾರದು (ಮುಂಬಯಿ. ೫-೪೮); ಇವರೊಡನೆ ಕೂಡಿ ಬರದಿದ್ದರೆ ನನ್ನ ನಾಲ್ಕನೆಯ ಒಡೆಯನ ಕಡೆಗೆ ಹೊರಟುಹೋಗುತ್ತೇನೆ (ಸ್ಮೃತಿಚಿ. ೨೦೮). ೨. ಜೊತೆಯಾಗಿ ಬರು; ಒಟ್ಟಾಗಿ ಸೇರು: ಮೂವರುಮನಂತಬಲಂ ಬೆರಸು ಕೂಡಿಬರೆ (ಪಂಪಭಾ. ೧೦-೨೮ ವ); ಆದಿತ್ಯವಾರಮುತ್ತರಾಯಣ ಸಂಕ್ರಾಂತಿವ್ಯತೀಪಾತಮುಂ ಕೂಡಿಬನ್ದಂದು (ಸೌಇಇ. XX, ೩೫-೯; 1055); ಒಬ್ಬನೆಯೆ ಬರುವನೊ? ಕೂಡಿ ಬರುವನೊ? (ಚಂದ್ರಸ. ೧೦೦). ೩. ಸಾಧ್ಯವಾಗು; ಕೈಗೂಡು: (+).

[ದೇ. ‖ ತಮಿ. ಮಲ. ತುಳು. ತೆಲು. ಕೂಡು]

**ಕೂಡು₂** (ಕ್ರಿ). ಕುಳಿತುಕೊಳ್ಳು; ಆಸೀನನಾಗು: ಯಾವ ಕಿರಿಯನಿಗೂ ಅಲ್ಲಿ ಕೂಡುವ ಅಧಿಕಾರವಿರಲಿಲ್ಲ (ಕಂಬಹು. ೧); ನೀನು ಮಾತಾಡಬೇಡ, ಸುಮ್ಮನೆ ಕೂಡು (ರೂಢಿ). [?]

**ಕೂಡು₃** (ನಾ). ಕೂಡುವಿಕೆ; ಜೊತೆ; ಕೂಟ: ಭಾವಿಸಲು ಗುರುಭಕ್ತಿಯೇ ತಾ ಜೀವವೆಮಗಿಬ್ಬರಿಗೆ ನಿಜವಿಂತಾವಗಂ ನಾ ನಿನ್ನ ಕೂಡಿಂಗಾಸೆಯಂ ಮಾಡಿ (ಬಸಪು. ೪೫-೫). [< ಕೂಡು₁]

**ಕೂಡು₄** (ನಾ). ಒಂದು ಬಗೆಯ ತೆರಿಗೆ: ಆಯಿ ಮಲತಿಗೆ ಕೂಡುಗಂಜಿವು ಬ್ರಾ(ಂಹ್ಮ)ರಿಗೆ ಸಲುವ ××× ಕಟ್ಟಳೆಯ ಮಾ(ಂ)ನ್ಯವನೂ (ಸೌಇಇ. IX–ii, ೪೦೮-೩೪; 1364); ಉಲುಪೆ ಉಡುಗೊಱೆ ಬಿಟ್ಟಿ ಕೊಟ್ಟಣ ಹಾಲು ಕೂಡು ಬಿಡಾರ ಅಂಗಜಾವಿಗೆ ಮದಾಱಿಕೆ ಸೇನಬೋಯಿಕೆ . . . ಮುಂತಾಗಿ ಏನುಳ ಸರ್ವಸ್ವಾಮ್ಯವನು (ಸೌಇಇ. IX–ii, ೪೪೦-೨೬; 1419). [?]

**ಕೂಡುಂಬಳಿ** (ನಾ). ಸಾಮೂಹಿಕವಾದ ಉಂಬಳಿ: ನೋಡಿ ವಿಸ್ಮಿತನಾಗಿ ಪಾತ್ಸಾಹ್ಯವು ತಲೆದೂಗಿ ಕೂಡುಂಬಳಿಯಿತ್ತವಗೆ ಮೂಡಿದುಮ್ಮಳದೆ ಮೂಕೊಱೆಯ ವೀದಿಯ ಕಡೆ ಮಾಡಿಸಿ ಕೊಟ್ಟನಾ ಪುರದ (ಕಂನವಿ. ೧೩-೬೪). [ಕೂಡು₃ + ಉಂಬಳಿ]

**ಕೂಡುಕೊಂಡಿ** (ನಾ). ಕೂಡಿಸುವ ಕೊಂಡಿ; ಜೋಡಿಸುವ ಕೊಂಡಿ: "(ರೈಲುಬಂಡಿಗಳನ್ನು ಜೊತೆಗೂಡಿಸುವ) ಕೂಡುಕೊಂಡಿ" (Coupling. ಇಂಕನಿ). [ಕೂಡು₁ + ಕೊಂಡಿ]

**ಕೂಡುಗ** (ನಾ). ಕೂಡಿಕೊಳ್ಳುವವನು; ಸೇರಿಕೊಳ್ಳುವವನು: "ಲಗಃ, ಲಗಕಃ, ಲಗನ್- ಈ ೩ ಕೂಡುಗಂ" (ಕಾಶಕ್ಯ. ೧೩೮).

[ಕೂಡು₁ + -ಗ₂]

**ಕೂಡುಗಂಬಿ** (ನಾ). (ಪಕ್ಷಿಗಳು) ಕುಳಿತುಕೊಳ್ಳುವ ಕಂಬಿ: "ಹಕ್ಕಿ ಹಾರಿಬಂದು ಕುಳಿತುಕೊಳ್ಳುವ, ವಿಶ್ರಮಿಸಿಕೊಳ್ಳುವ ಸ್ಥಳ, ಅಡ್ಡಕಂಬಿ, ಕೂಡುಗಂಬಿ" (Roost. ಇಂಕನಿ). [ಕೂಡು₁ + ಕಂಬಿ₁]

**ಕೂಡುಗಚ್ಚು** (ನಾ). ಕೂಡಿಸುವ ಗಚ್ಚು, —ಗಾರೆ: ಕನ್ನಡದಲ್ಲಿ ಮಯರ್‌ಯ ಕೂಡುಗಚ್ಚಿನಿಂದ ಅನೇಕಾನೇಕ ಕೂಡುನುಡಿಗಳಾಗಿರುವುದನ್ನು ನಾವು ಬಲ್ಲೆವಷ್ಟೆ (ಕನ್ನಸು. I, ೩೪೨). [ಕೂಡು₂ + ಗಚ್ಚು₂]

**ಕೂಡುಗಟ್ಟು** (ನಾ). ಹೊಂದಾಣಿಕೆ; ಸಂಬಂಧ: ಆ ಪಂಪೆಗೂ ಈ ಪಂಪನಿಗೂ ಹೆಸರಿನೊಳಗೇನಾದರೊಂದು ಕೂಡುಗಟ್ಟಿರಬಹುದೇ (ನಾಡೋಜ. ೩೫). [ಕೂಡು₁ + ಕಟ್ಟು₂]

**ಕೂಡುಗಣ್ಣು** (ನಾ). ಅನೇಕ ಕಣ್ಣುಗಳುಳ್ಳುದು; ಬಹುಮುಖವಾದುದು: ಕೂಡುಗಣ್ಣಿನ, ಸಂಯುಕ್ತನೇತ್ರದ ಒಂದು ಭಾಗ (Facet. ಇಂಕನಿ). [ಕೂಡು$_1$ + ಕಣ್ಣು (< ಕಣ್)]

**ಕೂಡುಗಲಕ** (ನಾ). ಒಗ್ಗಟನ್ನು ಮುರಿಯುವವನು; ಕೂಡಿದವರನ್ನು ಬಿಡಿಸುವವನು: ಕೂಡುಗಲಕರು ನಿಲ್ಲಿ ಇಹಪರಗೇಡಿಗರು ಹೆರಸಾರಿ (ಕುವ್ಯಾಕ. ೮-೩೦). [ಕೂಡು$_1$ + ಕಲಕು$_1$ + -ಅ$_7$]

**ಕೂಡುಗೆ** (ನಾ). ಕೂಡುವಿಕೆ; ಸೇರಿಕೆ: "ಲಗುಃ . . . ಲಾಗುಃ – ಈ ಕೂಡುಗೆಯುಂ ಮೇಷಾದಿ ರಾಶಿಗಳ ತೋರ್ಕೆಯುಂ" (ಕಾಶಕ್ಯ. ೧೩೮). [ಕೂಡು$_1$ + -ಗೆ]

**ಕೂಡುಗೆರೆ** (ನಾ). "ಎರಡು ಪದಗಳನ್ನು ಒಟ್ಟುಗೂಡಿಸುವುದಕ್ಕಾಗಿ ಪಂಕ್ತಿಯ ಕೊನೆಯಲ್ಲಿ ಮುರಿದ ಒಂದು ಪದದ ಭಾಗವನ್ನು (ಮುಂದಿನ ಪಂಕ್ತಿಯಲ್ಲಿ) ಸೇರಿಸುವ ಸೂಚನೆಗಾಗಲಿ ಅಥವಾ ಒಂದು ಪದವನ್ನು ಭಾಗಗಳಾಗಿ ವಿಂಗಡಿಸುವುದಕ್ಕಾಗಲಿ ಉಪಯೋಗಿಸುವ ಚಿಹ್ನೆ (-); ಕೂಡುಗೆರೆ" (Hyphen. ಇಂಕನಿ). [ಕೂಡು$_1$ + ಗೆರೆ]

**ಕೂಡುಗೆಲಸ** (ನಾ). ಕೂಡಿಮಾಡುವ ಕೆಲಸ; ಸಂಯುಕ್ತಕಾರ್ಯ: (ಪತ್ರಿನಿ. ೪೬). [ಕೂಡು$_1$ + ಕೆಲಸ]

**ಕೂಡುಗೆಳೆಯ** (ನಾ). ಓರಗೆಯ ಗೆಳೆಯ; ಸಂಗಡಿಗ; ಸಂಗಾತಿ: "ವಯಸ್ಯ, ಸ್ನಿಗ್ಧ, ಸವಯಸ್" (ನಾಚಿರಾ. ೬). [ಕೂಡು$_2$ + ಗೆಳೆಯ (< ಕೆಳೆಯ)]

**ಕೂಡುಜೀವಿ** (ನಾ). ಜೊತೆಗೆ ಇರುವ ಜೀವಿ; ಸಂಗಾತಿ: "ಸಹಜೀವಿ, ಕೂಡುಜೀವಿ" (Symbion(t). ಇಂಕನಿ). [ಕೂಡು$_2$ + ಜೀವಿ]

**ಕೂಡುಣ್ಣು** (ಕ್ರಿ). ಜೊತೆಯಲ್ಲಿ ಉಣ್ಣು; ಸಹಭೋಜನಮಾಡು: ತಾನೆ ಬಸವನು ಶಿವನಿಗಿನ್ನಧಿಕಾನೆಯೆಂದ್ಕೂಡುಂಡು (ಬಿಜ್ಜಪು. ೩೨-೨೩). [ಕೂಡ + ಉಣ್ಣು (< ಉಣ್)]

**ಕೂಡುದಲೆ** (ನಾ). ಕೈಗೂಡುವುದು; ನೆರವೇರಿಕೆ; ಜಯ; ಏಳಿಗೆ; ಅಭ್ಯುದಯ: (೬). [← ತಮಿ. ಕೂಡುದಲ್, ಕೂಡುದಲೈ]

**ಕೂಡುದಾರಿ** (ನಾ). ದಾರಿಗಳು ಕೂಡುವ ಸ್ಥಳ; ಚೌಕ: ಮೆರವಣಿಗೆ ಅಡ್ಡವಾದುದರಿಂದ ಕೂಡುದಾರಿಯುಲ್ಲೊಂದು ಸುಂದರವಾದ ಬಂಡಿ ನಿಲ್ಲಬೇಕಾಯಿತು (ಪುನರು. ೪೩೯). [ಕೂಡು$_1$ + ದಾರಿ$_1$]

**ಕೂಡುದೊಡ್ಡಿ** (ನಾ). ಸಾಮೂಹಿಕವಾದ ದೊಡ್ಡಿ; ಅನೇಕ ಪ್ರಾಣಿಗಳನ್ನು ಒತ್ತಟ್ಟಿಗೆ ಸೇರಿಸಿಡುವ ದೊಡ್ಡಿ: ಆ ಊರಲ್ಲಿದ್ದುದು ದೊಡ್ಡ ಸೆರೆಮನೆಯೇನಲ್ಲ ವಿಶಾಲವಾದ ಲಾಕಪ್ಪು, ಕೂಡುದೊಡ್ಡಿ (ಚಿರಸ್ಮ. ೨೪೧). [ಕೂಡು$_1$ + ದೊಡ್ಡಿ]

**ಕೂಡುನುಡಿ** (ನಾ). ಎರಡು ಅಥವಾ ಹೆಚ್ಚುಪದಗಳು ಕೂಡಿ ಆಗಿರುವ ಸಂಯುಕ್ತಪದ; ಸಮಾಸ: ಎರಡು ನುಡಿಗಳು ಕೂಡಿ ಆಗುವುದರಿಂದ ಇದಕ್ಕೆ 'ಕೂಡುನುಡಿ' ಅಥವಾ ಸಮಾಸವೆಂದು ಕರೆಯಬಹುದು (ಕಂನುಹು. ೩); ಕನ್ನಡ ಶಬ್ದ ಕೂಡುನುಡಿಯೆ ಹೊರತು ಅಖಂಡಪದವಲ್ಲವೆಂಬುದನ್ನು ಬಹುಮಟ್ಟಿಗೆ ಎಲ್ಲ ವಿದ್ವಾಂಸರೂ ಒಪ್ಪಿದ್ದಾರೆ (ದ್ರಾವಿವಿ. ೮೯). [ಕೂಡು$_1$ + ನುಡಿ$_2$]

**ಕೂಡುಪಾಲು** (ನಾ). ಜೊತೆಯ ಪಾಲು; ಸಹಭಾಗ: "ದಾಯಾದ್ಯದ ಆಸ್ತಿಯಲ್ಲಿ ಸಹಭಾಗ; ಸಹಭಾಗಿತ್ವ; ಸಹಸ್ವಾಮ್ಯ; ಕೂಡುಪಾಲು" (Coparcenary. ಇಂಕನಿ). [ಕೂಡು$_3$ + ಪಾಲು$_2$ (< ಪಾಲ್$_2$)]

**ಕೂಡುಬಂಡವಾಳ** (ನಾ). ಪಾಲುಗಳಾಗಿ ವಿಂಗಡಿಸಿರುವ, ಕೂಡು ಒಡೆತನದ ಬಂಡವಾಳ: "ಕೂಡುಬಂಡವಾಳ" (Joint – stock. ಇಂಕನಿ). [ಕೂಡು$_3$ + ಬಂಡವಾಳ]

**ಕೂಡುಬೆಣೆ** (ನಾ). ಕೂಡಿಸುವುದಕ್ಕಾಗಿ ಸೇರಿಸಿದ ಬೆಣೆ: ಕಲ್ಲಿನ ಅಥವಾ ಮರದ ಎರಡು ತುಂಡುಗಳು ಒಂದರ ಮೇಲೊಂದು ಜಾರಿ ಹೋಗದಂತೆ ಹಾಕಿದ ಸಣ್ಣ ಕೂಡುಬೆಣೆ (Joggle. ಇಂಕನಿ). [ಕೂಡು$_1$ + ಬೆಣೆ]

**ಕೂಡುಮಾತು** (ನಾ). ಕೂಡಿ ಆಡುವ ಮಾತು; ಸಂಕಥೆ; ಸಲ್ಲಾಪ: "ಸಂಗೀತ ಸಂಕಥೆಯೆನಲ್ ಕೂಡುಮಾತಕ್ಕು" (ಮಂಗರಾ. ೧೩೬-೩೯). [ಕೂಡು$_1$ + ಮಾತು$_1$]

**ಕೂಡುಮೊಳೆ** (ನಾ). ಕೂಡಿಸುವ ಮೊಳೆ: "ಕಲ್ಲು ಮೊದಲಾದವುಗಳ ದಿಮ್ಮಿಗಳನ್ನು ಕೂಡಿಸಿ ಬಿಗಿಯಾಗಿ ಹಿಡಿದುಕೊಂಡಿರುವ ಮೊಳೆ, ಕೂಡುಮೊಳೆ" (Gudgeon. ಇಂಕನಿ). [ಕೂಡು$_2$ + ಮೊಳೆ$_2$]

**ಕೂಡುಲಗಾಮು** (ನಾ). "ಒಂದು ಕುದುರೆಯ ಲಗಾಮನ್ನು ಮತ್ತೊಂದರ ಕಡಿವಾಣಕ್ಕೆ ಕೂಡಿಸುವ ಲಗಾಮು; ಕೂಡುಲಗಾಮು" (Check – rein. ಇಂಕನಿ). [ಕೂಡು$_2$ + ಲಗಾಮು]

**ಕೂಡುವಳಿ, ಕೂಡಾವಳಿ** (ನಾ). ೧. = ಕೂಡಿಕೆ: ಮದುವೆಯೊ ಕೂಡುವಳಿಯೊ ಅದರ ಸಮಾಚಾರವೇನಗಿಲ್ಲ (ದೇವಿಚೌ. ೧೬೯). ೨. ಸಲುವಳಿ; ವ್ಯವಹಾರ. **ಕೂಡಾವಳಿ**: ೧. ಆವಳಿಗೆ ಸತ್ಯಾನಂದನೊಡನೆ ಕೂಡಾವಳಿ ಮಾಡಿಸುತ್ತೇನೆ (ಬಂಕಿಮ. ೨೬೭); ನಿನ್ನ ತಮ್ಮನನ್ನು ಕೂಡಾವಳಿ ಮಾಡಿಕೊಂಡುದಕ್ಕೆ ಮುನಿಯದಿರು (ನಡೆದಾ. II, ೧೧೪೫). [ಕೂಡು$_1$ + -ವಳಿ$_1$]

**ಕೂಡುಹ** (ನಾ). ಕೂಡುವಿಕೆ; ಸಂಗಮ: "ಮೇಲಕ, ಸಂಗ, ಸಂಗಮ" (ನಾಚಿರಾ. ೬). [ಕೂಡು$_1$ + -ಹ]

**ಕೂಡುಹಿಡಿಕೆ** (ನಾ). "ಎರಡು ಹಲಗೆ, ಮೊದಲಾದವನ್ನು ಒಟ್ಟಿಗೆ ಬಿಗಿದು ಹಿಡಿಯುವುದಕ್ಕಾಗಿ ಉಪಯೋಗಿಸುವ ಸಲಕರಣೆ, ಕೂಡುಹಿಡಿಕೆ, ಬಂಧಿನಿ (Cramp–iron. ಇಂಕನಿ); ಅನೇಕ ಸಂದರ್ಭಗಳಲ್ಲಿ ಅವರು ಕೂಡುಹಿಡಿಕೆಯಿಲ್ಲದ ನೂಕುಚಕ್ರವೆಂಬಂತೆ ಧೀಶಕ್ತಿಯನ್ನು ಪರಿಗಣಿಸುತ್ತಾರೆ (ಪುನರು. ೪೭೪). [ಕೂಡು$_1$ + ಹಿಡಿಕೆ]

**ಕೂಡುಹಿಡುವಳಿದಾರ** (ನಾ). ಜೊತೆ ಜಮೀನುದಾರ: "ಕೂಡುಹಿಡುವಳಿದಾರ, ಜೊತೆ ಬಾಡಿಗೆದಾರ" (Co – tenant. ಇಂಕನಿ). [ಕೂಡು$_1$ + ಹಿಡುವಳಿದಾರ]

**ಕೂಡೆ** 'ಕೂಡ' ನೋ.

**ಕೂಡೆವರ್** (ಕ್ರಿ). ಜೊತೆಯಲ್ಲಿ ಬರು; ಸಂಗಡಬರು: ವೃಕೋದರಂ ತನ್ನ ರಥಮನೇಱಿಸಿಕೊಂಡು ಕೂಡೆವಂದಂ (ಪಂಪಭಾ. ೨-೧೪೪ ವ); ತವಕದಿಂ ಬರುತ್ತುಂ ಕೂಡೆವರಲುಮಿರಲುಮಱಿಯದೆ ತಡಂಗಾಲ್ಗೊಂಡು (ಪುಷ್ಪಪು. ೩-೭೬ ವ). [ಕೂಡೆ (< ಕೂಡ) + ಬರ್$_1$]

**ಕೂಡೊಕ್ಕಲು** (ನಾ). ೧. ಜೊತೆಯಲ್ಲಿ ಒಕ್ಕಲಾಗಿರುವಿಕೆ; ಕೂಡೊಕ್ಕಲು (Co–tenancy. ಇಂಕನಿ). ೨. ಸಂಯುಕ್ತ ಕುಟುಂಬ; ಅವಿಭಕ್ತ ಕುಟುಂಬ (Joint-family. ಇಂಕನಿ). [ಕೂಡು$_1$ + ಒಕ್ಕಲು (< ಒಕ್ಕಲ್)]

**ಕೂಡೊಲೆ** (ನಾ). ೧. ಎರಡು ಒಲೆಗಳ ಕೂಟ; ಜೋಡೊಲೆ. ೨. ಕೂಡಿದ ಒಲೆ. 'ಕೋಡೊಲೆ' ಪರಾ. [ಕೂಡು$_1$ + ಒಲೆ$_4$]

**ಕೂಣಿ** 'ಕೂಳಿ$_1$' ನೋ.

**ಕೂಣಿತ** (ಗು). ೧. ಮುಚ್ಚಿದ; ಮುಗಿದ: ಮನಂ ಬೆಱಗಿನಿಂ ಮರವಟ್ಟಿರೆ ವಕ್ತ್ರಪಂಕಜಂ ಕೂಣಿತ ದೃಷ್ಟಿಯಿಂದೆಸೆಯೆ (ದಶಕು. ೬-೧೪೯). ೨. ಸಂಕುಚಿತವಾದ; ಸಂಕೋಚಗೊಂಡ: ಕೂಣಿತದೃಷ್ಟಿಯಿಂದಡರ್ದು ನೋಡಲೊಡಂ (ದಶಕು ೧೨-೩೬). [ಸಂ.]

**ಕೋಣೆಮೀನ್** (ನಾ). ಬಲೆಗೆ ಸಿಕ್ಕ ಮೀನು; ಬುಟ್ಟಿಗೆ ಬಿದ್ದ ಮೀನು: ತೊಟ್ಟನೆಯೆ ಮುಂದೋರ್ದುದೊಂದು ರಕ್ಕಸರ ಬೇಹಿನ ಚಾಣ, ಕಜ್ಜೊಲದ ಕೋಣೆಮೀನಾಗಿ (ಶ್ರೀರಾಮಾ. ೩೭೧–೨೫೭).
[ಕೋಣೆ (< ಕೋಳ್$_1$) + ಮೀನ್$_3$]

**ಕೋಣೆಸು** (ಕ್ರಿ). ಸಂಕೋಚಗೊಳ್ಳು; ಮುಚ್ಚು; ಮುದುಡು (?): ಕೈಕರಣಂ ಕೈಗಣ್ಮೆ ಕಣ್ಮೊ [ಪಾಠಾಂ. ಣ್ಮಾ]ಣಿಸಿ ಬಿಡೆ ಮಣಿ ಭೂಷಾಳಿ ಮೈಸೋಂಕೆ ಬಿಂಬಾಧರೆ ಪಿಂಗಲ್ ನಿಂದು . . . ಕಣ್ಣೆಡ್ಡಮಾದಳ್ (ಅನಂಪು. ೪–೯೩). [ಕೋಣನ್$_0$ + –ಇಸು$_3$]

**ಕೋಣು** (ಕ್ರಿ). ಮುಚ್ಚಿಬಿಡು; ಹೂತುಹಾಕು; ಮುಗಿಸಿಬಿಡು: ಸುಟ್ಟು ಕೋಣಿದರವನಿಯಮರರನಟ್ಟಿ ಹೊಯ್ದರು ಧಾರ್ಮಿಕರ (ನಿಭಾಗ. ೭–೨–೧೧). [?]

**ಕೊತ್**$_1$ 'ಕೊರ್$_3$' ಪರಾ.

**ಕೊತ್**$_2$ 'ಕೊರ್$_1$' ಪರಾ.

**ಕೊತ್**$_3$, ಕೂತು$_2$, ಕೂತ್ತು (ನಾ). ೧. ಕುಣಿತ; ನರ್ತನ. 'ಕೂತಾಡು' ಪರಾ. ೨. ಕುಣಿಯುವವನು; ನರ್ತಕ. ೩. ನಟರಾಜ; ಶಿವ: ಇದುವೇಣಿದುವೇನಂಬಲ ಕೂತರೆ . . . ಆಳಳಿಯ ಕೂತರೆ (ತಿರುನಾ. ೨೨೫–೧). **ಕೂತು**$_2$: ೧. 'ಕೂತುವಾಹನ' ಪರಾ. **ಕೂತ್ತು**: ೧. ದೇವನಾಟ್ಯಗಳಾದ ಕೂತ್ತು ಮತ್ತು ದಾಸಿ ಆಟ್ಟಂಗಳನ್ನು ಆಧರಿಸಿ (ಭಾರದ. ೫೫೫).
[ದೇ. ‖ ತಮಿ. ಮಲ. ಕೂತ್ತು; ತೊದ. ಕುತ್]

**ಕೊತನಿಡುನಲ್ಲೂರು** (ನಾ). ಒಂದು ಊರಿನ ಹೆಸರು: ಪೂವಿನ ಪುಲ್ಲಿ ಮಜ್ಜಲ ಕೂತನಿಡುನಲ್ಲೂರು ನಲ್ಲೂರು ಕೊಮರಜ್ಜುನ್ನು ಇಗ್ಗಲೂರು (ಎಕ. IX, ಬೆಂಗಳೂ. ೫೩–೬; 890); ಕೊತನಿಡುನಲ್ಲೂರು (ಎಇ. I, ೩೫೦–೬; 900). [?]

**ಕೂತಾಡು** (ಕ್ರಿ). ಕುಣಿ; ನರ್ತನ ಮಾಡು: ನಡದು ಕೂತಾಡುವರ ಕೂಡಿಸುತ್ತುಂ ತಿರುಗಿ ಒಡನೆ ಶಿವನಿಳಯಮಂ ಪೊಗುತ (ಕಳರ. ೫೦–೧೨). [ಕೂತ$_3$ + ಆಡು$_1$]

**ಕೂತು**$_1$ 'ಕೂರ್$_3$' ಪರಾ.

**ಕೂತು**$_2$ 'ಕೂತ್$_3$' ನೋ.

**ಕೂತುರು** (ನಾ). ಒಂದು ಜಾತಿಯ ಮೂಲಿಕೆ: (೬). [?]

**ಕೂತುವಾಹನ** (ನಾ). ದೇವತಾ ವಿಗ್ರಹವನ್ನಿಟ್ಟಿರುವ ಕುರುಜು; ಇದರ ಮುಂದೆ ನರ್ತಿಸುತ್ತಾ ಜನರು ಮೆರವಣಿಗೆಯಲ್ಲಿ ಸಾಗುವರು: (೬). [ಕೂತು$_2$ (< ಕೂತ$_3$) + ವಾಹನ]

**ಕೂತೂಹಲ** (ನಾ). = ಕುತೂಹಲ: ಅಂತ ಪ್ರಜ್ವಲಿತ ಮಹತಾಪಿ ನೋೞ್ ವೆಳಗಂ ಕಂಡಿಂತಿದೇನೆಂದು ಕೂತೂಹಲವ ನೋಳ್ಪ ಮನವಾಂತು (ಜಿನಮು. ೧೪–೨). [< ಸಂ. ಕುತೂಹಲ]

**ಕೂತ್ತು** 'ಕೂತ್$_3$' ನೋ.

**ಕೂದಲ್** 'ಕೂಂದಲ್' ನೋ.

**ಕೂದಲು** 'ಕೂಂದಲ್' ನೋ.

**ಕೂನ್**$_1$, ಕೂನು$_1$ (ಕ್ರಿ). ಕೂಂತು (ಭೂತಕೃ). ಬಾಗು; ಬಗ್ಗು ವಕ್ರವಾಗು: "ಕೂನ್ – ಆನಮೇ (ಬಗ್ಗು)" (ಶಮಧಾ); ಕೂನ್, ಪೇನ್, ಸೀನ್, ಆನ್, ನೋನ್, ಈನ್ (ಶಬ್ದಾನು. ೫೦೭ ಪ್ರಯೋ). **ಕೂನು**$_1$: ಅವನಿಗೆ ಬೆನ್ನು ಕೂನಿದೆ (ರೂಢಿ).

**ಕೂಂತುಕೊಳ್** = ಬಾಗಿರು; ವಕ್ರವಾಗಿರು: "ರುಜಾಭುಗ್ನಃ, ನ್ಯುಬ್ಜಃ – ಕುತ್ತದಿಂದ ಕೂಂತುಗೊಂಡವನು" (ನಾಚಿರಾ. ೬).
[ದೇ. ‖ ತಮಿ. ಮಲ. ಕೂನು; ತುಳು. ತೆಲು. ಗೂನು; ಕೊಡ. ಕೂನ್]

**ಕೂನ್**$_2$, ಕೂನು$_2$, ಗೂನು (ನಾ). ೧. ಬೆನ್ನು ಬಾಗಿರುವಿಕೆ, —ಉಬ್ಬಿರುವಿಕೆ; ಡೂಗು: ಅವನ ಬೆಂಗಡರಿ ಭಾರ್ಯೆಪ ಕೂನ ಭಸ್ಮದಿ ಕಳದು (ಲಿಂಗಪು. ೩೬–೩೦). **ಕೂನು**$_2$: ೧. "ಶರೀರ ಕುಗ್ಗಿನೊಳು ಕುಜುಪಿನೊಳು ಕೂನಿಗೆ ಪೆಸರು" (ಶಬ್ದಮಂ. ೧೧೧); ಕೂನ[ನು] ವೆರಸಿದ ಕುಬ್ಜಾಕಾರಮಂ ಕೈಕೊಂಡು ಬರೆ (ಮಹಾನೇ. ೭–೩೦ ವ); ನೃಪನ ಬೆನ್ನ ಕೂನಂ ನೀನು ಬಿಡಿಸಲಾವೇ ಸೋಲ್ತೆವೆನಲು (ವೀಶೈವು. ೪–೯–೩೪); ನೃಪನಿಗಪ್ಪಿದ ಕೂನನಳಿದು (ಮದೇಪು. ೨೫–೧೫); ನಿನ್ನಯ ಕೂನನಿವ ಕಳೆಯೆ (ಪ್ರಾಭರಾ. ೧೮–೪೫). ೨. ವಕ್ರತೆ; ಕೊಂಕು: ಅವಯವಂಗಳು ನೂನಕೂನವಿಲ್ಲದೆ (ಚನ್ನವ. ೧೧೩). **ಗೂನು**: ೧. ತಾತನದೇ ಕಣ್ಣು ಅಜ್ಜಿಯದೇ ಬಣ್ಣ ತಂದೆಯ ಹಾಗೆಯೆ ಗೂನು (ಇಂಚಾಪ. ೩೮–೨೮); ಕಂಕುಳಿನಲ್ಲಿ ನೀರಿನ ಗಡಿಗೆ ಸಾಲದುದಕ್ಕೆ ಗೂನು, ನೆಲದವರೆಗೂ ಬಗ್ಗಿ ಹೋಗಿದ್ದಾನೆ (ದೇಶಾಂಕ. ೧೬). 'ಗೂನುಬೆನ್ನು' ಪರಾ.' [< ಕೂನ್$_1$]

**ಕೂನ**$_1$, ಗೂನ$_1$ (ನಾ). ೧. ಕುಳ್ಳಾಗಿರುವಿಕೆ; ಕುಬ್ಜತೆ: "ಕೂನಮೆಂದು ಕುಜುಜು" (ಕಶಸಾ. ೨೪–೫೧೩); ಧರೆ ಪೀರ್ಗುರ್ಯೆನೆ ಕೂನಮಾಗಿ ಪೂಜ್ಯರಿಸಿಯು ನಿಮಿರ್ದೆಳ್ದು ಪೊರಪೊರಳ್ದು ಕಡಿವೋಗಿ (ಸಂಸಪ. ೩೩–೩). ೨. ಕೂನು ಉಳ್ಳವನು; ಡೂಗ: ಮದನನದುವಂ ಬಿಸುಟು ಕೂನನುಂ ಕುಬ್ಜನುಮಾಗಿ ಬರೆ (ನೇಮಿಪು. ೭–೧೮೨ ವ). ೩. ಬಾಗಿರುವಿಕೆ; ವಕ್ರತೆ. 'ಕೂನಗೊರಡು' ಪರಾ. **ಗೂನ**$_1$: ೨. "ವಾಮನ – ಗೂನ" (ಗಂಗಾಮು. ೨೮೬). [ಕೂನ್$_1$ + –ಅ$_7$]

**ಕೂನ**$_2$, ಕೂನು$_3$, ಖೂನ (ನಾ). ಗುರುತು; ಕುರುಹು; ಅಭಿಜ್ಞಾನ: "ಕುಜುಪು ಕೂನವೆನಿಕ್ಕು" (ಕಬ್ಬಕೈ. ೫೬); ಮತ್ತಮದರ್ಕೊಂದು ಕೂನಮುಂ .ಪೇೞ್ದಪ್ಪರ್ (ಅರ್ಥನೀ. ೨–೩೭); ಕೂನವೇಂ [ಪಾಠಾಂ. ಖೂನವೆಂ] ಕೂಸುವೆರೆಯದ ಜಾಡ್ಯನತಿ ಕೆಂಚನು (ಸಿದ್ಧರಾ. ೨–೫೧); ಅವರಂ ಕುಜುಹು ಕೂನಂಗಳಂ ಬೆಸಗೊಂಡು (ಪುಣ್ಯಾಸ್ರ. ೩–೩೮ವ). **ಕೂನು**$_3$: "ಕುಜುಪಿಂಗೆ ಕೂನೆನಿಕ್ಕುಂ" (ಶಬ್ದಮಂ. ೬೩); "ಗುರುತಿನೊಳ್ ಕೂನಕ್ಕು" (ಕಶರ. ೨೭). **ಖೂನ**: ತುರೀಯಾವಸ್ಥೆಯಲ್ಲಿ ಬೆರೆದು ಕೂಡಿದ ಜ್ಞಾನಿ ಬಲ್ಲ ಖೂನ (ಕಥವಿ. II, ೨೬೦); ಮರ್ಕಟನು ರಾಮನ ಪಟ್ಟದರಸಿಗೆ ಖೂನದುಂಗುರ ಕೊಟ್ಟು ಪ್ರಭುವಿನ ಸ್ಥಿತಿಯನಾಕೆಗೆ ಅರುಹೆ (ರಘುವಂ. ೧೩೨).
[← ಮರಾ. ಖೂಣ್]

**ಕೂನಗೊರಡು** (ನಾ). ಬಾಗಿದ ಕೊರಡು; ಕೊಂಕಾದ ಕೊರಡು: ಮುರುಡನಪ್ಪವಂಕಂ ಮೊದಲೊಣಗಿದ ಕೂನಗೊರಡಿನಂದದ ಕೊಂಕಂ (ಯಶೋಚ. ೨–೪೦). [ಕೂನ$_1$ + ಕೊರಡು (< ಕೊಱಂಡು)]

**ಕೂನದೇಹ** (ನಾ). ಗೂನುಳ್ಳವನು; ವಕ್ರದೇಹಿ: ಪಂಗುಳನಾಗದೆ ಕೂನದೇಹನಾಗದೆ (ಪಂಪಾಶ. ೭೫). [ಕೂನ$_1$ + ದೇಹ]

**ಕೂನಬೆನ್**, ಕೂನುಬೆನ್ನು, ಗೂನುಬೆನ್ನು (ನಾ). ಕೂನಾದಬೆನ್ನು; ಡೂಗುಬೆನ್ನು: ಕುಜುಗಣ್ಣು ಕೂನಬೆನ್ (ಯಶೋಚ. ೨–೬೯); ಕೂನಬೆನ್ನ ಕುಗ್ಗಿದ ಕೊರಲ (ಚಿಬಪು. ೫೩–೨೨). **ಕೂನುಬೆನ್ನು**: ದೊಡ್ಡಹೊಟ್ಟೆಯ ಕೂ [ಪಾಠಾಂ. ಗೂ]ನುಬೆನ್ನಿನ ಅಡ್ಡಮೋಜಿಯ ಗಂಟುಮೂಗಿನ (ನಳಚ. ೬–೧೪). **ಗೂನುಬೆನ್ನು**: ಮೇಲಿನ ನಳಚ. ಪ್ರಯೋಗದ ಪಾಠಾಂತರವನ್ನು ನೋಡಿ. [ಕೂನ$_1$ + ಬೆನ್]

**ಕೂನಿ**$_1$, ಗೂನಿ (ನಾ). ಕೂನುಬೆನ್ನು ಉಳ್ಳವಳು: (೬). **ಗೂನಿ**: ಇವನ ಸೇವೆಯಲ್ಲಿ ತೊಡಗಿರುವ ಹೆಂಗಸರು ಗೂನಿಯರು. ಇವರನ್ನು ಬಗ್ಗಿಸಿ ಗೂನಿಯರನ್ನಾಗಿ ಮಾಡಿ ತನ್ನ ಸೇವೆಗೆ ಇಟ್ಟುಕೊಂಡಿದ್ದಾನೆ (ಪ್ರವಾಇ. II, ೩೫೪). [ಕೂನ್$_2$ + –ಇ$_2$]

**ಕೂನಿ₂** (ನಾ). ಮಣ್ಣಿನ ಪಾತ್ರೆ; ಬಾನಿ; ಗಡಿಗೆ: ಏತದ ಕೂನಿಯ ಘಾತದ ವೆಜ್ಜದಂತೆ ಅವನ ನೀತಿಯ ಇರವು (ಸುಂಕಬಂ. ೬೩); ಯಾತದ ಜಾಟಾಳದ ಕೂನಿಯಂತೆ ಭವಪಾಶದಲ್ಲಿ ಬಿದ್ದು ಘಾಸಿಯಾದ ಮತ್ತೆ ನಿನಗಿನ್ನೇತರ ಭಾಷೆಯೋ (ನೋಳಿಮಾ. ೪೮-೨೦೦); ಮುಸುರೆ ಕೂನಿ (ರೂಢಿ). [ದೇ. ‖ ತಮಿ. ಕೂನ್ಕೈ; ತೆಲು. ಗೂನ]

**ಕೂನಿಸು** (ಕ್ರಿ). ಗುರುತಿಸು; ಪರಿಭಾವಿಸು: ಪರಹಿತ ಮಾನವರಲ್ಲದೆ ಮಿಕ್ಕಾಹೀನರು ದುಶ್ಚರಿತರುಗಳೆಂಬುವರು ಕೂನಿಸಿ ನೋಡೆ ಮತ್ತಿಲ್ಲ (ಜಿನರಾ. ೧-೪೪). [ಕೂನ್₃ + -ಇಸು₃]

**ಕೂನು₁** 'ಕೂನ್₁' ನೋ.

**ಕೂನು₂** 'ಕೂನ್₃' ನೋ.

**ಕೂನು₃** 'ಕೂನ್₂' ನೋ.

**ಕೂನುಗಯ್** (ನಾ). ಊನವಾದ ಕೈ; ವಕ್ರವಾದ ಕೈ: ಅರಿಮುಗಿದಿರ್ದ ಕಣ್ಮಲರ್ಗಳುಂ ನಿಮಿರ್ದೆತ್ತಿದ ಕೂನುಗಯ್ಯುಮಾಸುರದರೆಗರ್ಚಿದೌಂಡುವೆರಸು (ರಸರ. ೪-೧೯೧).

[ಕೂನು₂ (< ಕೂನ್₂) + ಕಯ್₂ (< ಕೆಯ್₂)]

**ಕೂನುಬೆನ್ನು** 'ಕೂನಬೆನ್' ನೋ.

**ಕೂನೆ** (ನಾ). = ಕೂನಿ₁: ಕುಟಿಲಗಳ ಮನೆ ಕಪಟಮಂದಿರಂ ... ಪುಟಮಾಯಗಳ ತಾಣಮೆನಿಪ ಬೆನ್ನಿನ ಕೂನೆ ಪುಟಮಿಡಿದ ಪೊಂಬಣ್ಣ ವಸನಮನಲಂಕರಿಸಿ (ವೆಂಕಾರಾ. ೨-೫-೨೭). [ಕೂನ್₂ + -ಎ₃]

**ಕೂನ್ಕೆ** (ನಾ). ಬಾಗಿರುವಿಕೆ; ಕುಗ್ಗಿರುವಿಕೆ: ಕೂನ್ಕೆ, ಪೇನ್ಕೆ (ಶಬ್ದಾನು. ೫೫೭ ಪ್ರಯೋ). [ಕೂನ್₁ + -ಕೆ]

**ಕೂಪ₁** 'ಕೂರ್ಪ₁' ನೋ.

**ಕೂಪ₂** (ನಾ). ೧. ತಗ್ಗು; ಹಳ್ಳ; ಗುಳಿ: ರಾಮು ಪಕ್ಷಂ ... ಕೆಡಹುವುದು ಸತ್ತ್ವನಿಧಿ ಬಾಲರ್ಷಿ ಭರತನಂ ಕೂಪಕ್ಕೆ (ಶ್ರೀರಾಮಾ. ೬೫-೩೧೨). ೨. ಬಾವಿ: "ಅಂಧುಃ, ಕೂಪಃ - ಈ ೨ ಬಾವಿ" (ಹಲಾಯು. ೧೧೩-೬೨); ನೆರೆದಿಸುತಿರೆ ತೋಳ್ವುಲ್ಲೆಯನಿರದದು ಬಿಟ್ಟೊಡೆ ಪುರಾಣಕೂಪದೊಳ್ (ಪಂಪಭಾ. ೨-೫೧); ಪರುಷದ ಜಲಂ ಸುಧಾರಸದ ಕೂಪಂಗಳಂ (ನಂಬಿರ. ೧೯-೧೦೪); ಹೊಯಿಸಳ ಸೇನೆ ... ಹೊಸದಾಗಿ ವಾಪೀ ಕೂಪ ತಟಾಕಾದಿಗಳನ್ನು ನಿರ್ಮಿಸಿಕೊಳ್ಳಬೇಕಾಯಿತು (ಶಾಂತಲಾ. ೪೦೦). ೩. ಕೂವೆಯ ಕಂಬ; ಹಡಗಿನ ಸ್ತಂಭ. [ಸಂ.]

**ಕೂಪಕ** (ನಾ). ೧. ಹಳ್ಳ; ಗುಳಿ. ೨. ತೂತು; ಕಂಡಿ. ೩. ನದಿ ಅಥವಾ ಹಳ್ಳದಲ್ಲಿ ನೀರಿಗಾಗಿ ತೋಡಿದ ಕುಳಿ. ೪. ಕೂವೆಯ ಕಂಬ, —ಮರ: "ಕೂಪಕಃ ಗುಣವೃಕ್ಷಕಃ - ಈ ೨ ಕೂಪಕಂಬಂ" (ಹಲಾಯು. ೧೦೮-೩೩); "ಕೂಪಕಃ, ಗುಣವೃಕ್ಷಕಃ - ೨ ಹಡಗಿನ ಮೇಲೆ ಧ್ವಜಪಟವನ್ನು ಎತ್ತಿ ಕಟ್ಟುವ ಸ್ತಂಭದ ಪೆಸರುಗಳು. ಅಂದರೆ, ಹಡಗಿನ ಮಧ್ಯದಲ್ಲಿರುವ ನಿಶಾನೀ ಝಾಂಡೀ" (ಸಿದ್ಧಾಂತಿ. ೭೧). ೫. ನದಿಯ ಮಧ್ಯದಲ್ಲಿರುವ ಬಂಡೆಗಲ್ಲು ಅಥವಾ ಮರ. ೬. ಎಣ್ಣೆ ತುಂಬುವ ತೊಗಲಿನ ಚೀಲ; ಬುದ್ದಲಿ. ೭. = ಕುಕುಂದರ: "ಕೂಪಕಂ ಕುಕುಂದರಮೆರಡುಂ ಘಟಿತ ತ್ರಿಕ್ಷಿಪದಂ" (ವಸ್ತುಕೋ. ೭೮-೫). [ಸಂ.]

**ಕೂಪತನ** (ನಾ). ಸ್ನೇಹ; ಕೂರ್ಮೆ; ಪ್ರೀತಿ: ಕೂಪತನದೊಳು ಕೈಮುಗಿಯೆ ಮೆಚ್ಚಿದ (ಭರತ. ೪೩-೧೦೩); ಕೂಪತನದೊಳಣ್ಣಗೆಜಗಿ ಬಂದಪೆನೆಂದನು (ಭರತ. ೫೦-೬೧).

[ಕೂಪ₁ (< ಕೂರ್ಪ₁) + -ತನ]

**ಕೂಪರ** (ನಾ). = ಕೂಪಾರ: ಸತ್ಯವೊಂದೇ ಸೋಪಾನವು ಸಗ್ಗಕ್ಕೆ ಜನ್ಮದ ಕೂಪರಕ್ಕಿದು ನಾವೆ (ಕುವ್ಯಾಉ. ೩-೪). [< ಸಂ. ಕೂಪಾರ]

**ಕೂಪಾರ** (ನಾ). ಸಾಗರ; ಸಮುದ್ರ: ಅರಾತಿ ಸೈನ್ಯಕೂಪಾರದ ಪಾರಮಂ ತಡೆಯದೆಯ್ದುವೆನೆಂಬುದುಮಂತೆ ಬಂದು (ಪಂಪಭಾ. ೮-೯೭); ವೀರಸೇನಂ ... ಪೆರ್ಚಿದ ಕೂಪಾರಂ ಸೀಮೆಯಾಗಲಾಳುತ್ತಿರ್ದಂ (ನಳಚಂ. ೧೭). [ಸಂ.]

**ಕೂಪಾರಾರವ** (ನಾ). ಸಮುದ್ರದ ಗರ್ಜನೆ: ವಿಳಯಾನಿಲೋಚ್ಚಳಿತ ಕೂಪಾರಾರವಂ ಖೇಚರೇಂದ್ರಂ ದಷ್ಟಾಧರನಾತ್ಮಪೀಠತಳಮಂ ಪೊಯ್ದೆಬ್ಬು (ಶಾಂತಿಪು. ೫-೪೫). [ಕೂಪಾರ + ಆರವ]

**ಕೂಪಾರೋದಿತ** (ನಾ). ಸಮುದ್ರದಿಂದ ಹುಟ್ಟಿದ್ದು; ತುತ್ಥೆ: "ಕೂಪಾರೋದಿತ ತುತ್ಥಿ" (ಮಂಗರಾ. ೪೩-೪೨). [ಕೂಪಾರ + ಉದಿತ]

**ಕೂಪಿ** (ನಾ). ೧. ಹಳ್ಳ; ಗುಳಿ. ೨. ಹೊಕ್ಕುಳ ಗುಳಿ; ನಾಭಿಕೂಪ. ೩. ಕುಪ್ಪಿ; ಗಾಜಿನ ಸೀಸೆ; ಮಸಿಕುಡಿಕೆ. ೪. ಎಣ್ಣೆಯ ಪಾತ್ರೆ. [ಸಂ. ಕೂಪೀ]

**ಕೂಪಿಡು** (ಕ್ರಿ). ಕೂಗು ಹಾಕು; ಕರೆ (?): ಪುಗದೆಡೆಮಾಡು ಚಪ್ಪರಿಸು ರೂಪಿಡು ಕೂ [ಪಾಠಾಂ. ಕಾ] ಪಿಡು ಕೂರ್ಪುದೋಜು (ಕಾವ್ಯಾವ. ೪೦೭). [← ತಮಿ. ಕೂಪ್ಪಿಡು]

**ಕೂಪುರುಷ** (ನಾ). ಪ್ರೀತಿ ಮಾಡುವ ಪುರುಷ (?): ವಿರಕ್ತಿಯೆಂಬ ಘನಲಿಂಗದ ಕೂಪುರುಷ ನೀನಾಗಿ (ಕಲ್ಯಾಶಾಂ.೨೨). [< ಕೂರ್ಪುರುಷ?]

**ಕೂಬರ** (ನಾ). ೧. ಬಂಡಿಯ ಅಥವಾ ರಥದ ಈಸು; ಮೂಕು: "ಯುಗಂಧರೋದ್ದೇಶದಲ್ಲಿ ಕೂಬರಮಕ್ಕುಂ" (ವಸ್ತುಕೋ. ೮೭-೨೯); "ಕೂಬರಮೆನಲ್ಕೀಸು" (ಮಂಗರಾ. ೮೪-೨೫); ತೇರುಗಳ ಕೀಲಚ್ಚು ಕೂಬರಯುಗವನಾರೈದು (ಕುವ್ಯಾಗ. ೧-೨೫); ಮಿಣಿ ನೊಗನು ಕೀಲಚ್ಚು ಕೂಬರ ಬೆಳೆ ಮೊಳೆಯನಾರೈದು (ತೊರರಾ. ೫-೭-೫). ೨. ಬಂಡಿ; ರಥ: ರಾಯನೈನೂಜಿರಸಿಯರು ಸಹ ರಾಘವನ ಕೂಬರವ ಬೆಂಬಿಡದೈತರುತ (ಆನಂರಾ. ೨-೨-೧). [ಸಂ.]

**ಕೂಬರಿ** (ನಾ). ಎತ್ತಿನ ಬಂಡಿ; ಗಾಡಿ: "ಅನಃ ... ಕಂಬಳವಾಹ್ಯಂ, ಕೂಬರೀ - ಈ ೯ ರಥಂ" (ಹಲಾಯು. ೭೩-೨೯೦). [ಸಂ. ಕೂಬರೀ]

**ಕೂಬೆ** 'ಕೂವೆ₁' ನೋ.

**ಕೂಬೆಹಿಟ್ಟು** 'ಕೂವೆಹಿಟ್ಟು' ನೋ.

**ಕೂಮೆ₁** 'ಕೂವ' ನೋ.

**ಕೂಮೆಮರ** 'ಕೂವೆಮರ' ನೋ.

**ಕೂರ್₁**, **ಕೂರು₁** (ಕ್ರಿ). ಕೂರ್ತ (ಭೂತಕೃ), ಕೂರ್ಪ₃ (ಭವಿಕೃ). ೧. ಪ್ರೀತಿಸು; ಒಲವುತೋರು: "ಕೂರ್ - ಸ್ನೇಹೇ" (ಶಮುಧಾ); ಎರಡಱಿಯದೆ ಕೂರ್ತ ನಲ್ಲಳ್ಗೆ (ಆದಿಪು. ೧೨-೧೨ ವ); ಮುನ್ನಿನ್ನ ಕೂರದ ದಾಯಾದರ ಮಿಕ್ಕ ಪಂದಲೆಗಳಂ ಕಣ್ಣಾಱೆ ಕಂಡು (ಗದಾಯು. ೯-೨೯); ತಡೆದೈ ವಂಚಕ ಕೂರ್ತವೋಲ್ ಕುಱುಪು ವೇಟಿಕ್ಕಿದ್ದಿಲ್ಲಿರ್ದೆ (ಕಾದಂಪೂ. ೩೨೩); ಪಿರಿದೀವಂ ಕಲಿ ಕೂರೆ ಕೂರ್ಪ ನುಱುವಂ ನೀಱಂ ಕರಂ ಭಾವಕಂ (ಲೀಲಾವ. ೨-೬೫); ಕೃತಿಗಾದಿನಾಥನ ಕೂರ್ತುದ ಕೇಳ್ವುದು ಕಾವ್ಯಕೃತನ ದೋಷವ ನೋಡಬೇಡ (ಭರತ. ೧-೧೭). ೨. ಒಪ್ಪು; ಮೋಹಿಸು; ಮೆಚ್ಚು: ಎನಗೆ ಕೂರ್ಪುದನಾ ಘಟಸಂಭವಂ ನಿನಗೆ ಕೂರನ್ (ಪಂಪಭಾ. ೧೨-೩೭); ಈ ವಿನಯಕ್ಕಾರೊಳಗಾಗರೀ ರುಜುಗುಣಕ್ಕಾರ್ಕೂರರ್ (ಕಾದಂಉ. ೧೧೦); ನಿಸ್ಪೃಹಂಗೆ ಕೂರ್ಪಂತೆ ಕಾಂಕ್ಷಿತರ್ಗೇಕೆ ಕೂರರ್ (ಧರ್ಮಾಮೃ. ೭-೪೩); ಪರಾಂಗನೆಗೆ ಕೂರ್ತು ಒಸೆದು ತಾಯಂ ತೊಱೆವ ಬೆಸನಿ (ಸಿದ್ಧರಾ. ೧-೫೯). **ಕೂರು₁**: ೧. ಘಟಕುಚೆಯರು ಬಿಟ್ಟ ಸುಟಿಯೊಳೊದಗಿ ಕೂರಿ ನೋಡಿ (ಭೈರವೇ. ೨-೪೧); ಶತ್ರುವನು ಕೂರೆಂದು ಯೇಸು ರೂಪಮೊಳಂದುನೀನೊರೆದುದಕನರ್ಥವಾದಪುದೆ ಇಂದು? (ಗಿಳಿವಿಂ. ೧೯-೧೧).

ಕೂರದನ್ = ಪ್ರೀತಿಸದವನು; ವೈರಿ: ಕೂರದನಿದನೊಡ್ಡಿದಂ ಪಗೆಗೆ ಸಂತಸಮಾಗಿರೆ ಮಾರಿ ಸುಯ್ಯುಮೇ (ಪಂಪಭಾ. ೩-೪); ಆತ್ಮಬಂಧುಜನಂ ಕೂರದರಾರುಮಿಲ್ಲ (ಮಲ್ಲಿಪು. ೪-೨೨). ಕೂರಿದನ್ = ಸ್ನೇಹವುಳ್ಳವನು; ನೇಹಿಗ: ಕೂರಿದನಿವನೆಂದುದಾತ್ತಮನನೆಂದಕಳಂಕಚರಿತ್ರನೆಂದಿದೇಂ ಪದುಳಿದನೆಂದು ಕೀರ್ತಿಪುದು ಗೋಸುಗನಂ ಸಕಳಾವನೀತಳಂ (ಎಕ. VIII, ಸಾಗರ. ೧೦೯-೧೭; 1047). ಕೂರ್ತ = ಪ್ರೀತಿಸಿದವನು; ಪ್ರಿಯಕರ; ನಲ್ಲ: ಒಲವಿಂದಿಂತಿರ್ದ ಮುಟ್ಟೆ ಕೂರ್ತನೊಳನೇ ಕರ್ಣಂಗೆ ದುರ್ಯೋಧನಂ (ಪಂಪಭಾ. ೧೩-೬೦); ನಿಹಿತವ ಬಿಟ್ಟು ಕೂರ್ತನಾಗಿ ಬಿಡು ಭಾಗೆಯೇಕೆ (ನಗೆಮಾ. ೧೨). ಕೂರ್ತಳ್ = ಪ್ರೇಯಸಿ; ಪ್ರಿಯೆ; ನಲ್ಲೆ: "ಕೂರ್ತಳೆಂದು ಪ್ರೀತಿವಟ್ಟಳ್ಗೆ ಪೆಸರ್" (ಕಕಸಾ. ೧೯-೩೮೪); "ಗುಣಕರುಗೊಂಡಳೆಂದೊಡಳ್ಕರ್ತಳೆಂದೊಡೆ ಮೇಹೊಜಲ್ಲದೆಂಬೀ ಪೆಸರ್ ಕೂರ್ತಳ್ಗೆ ತಾನೆನಿಕ್ಕು" (ಕಬ್ಬಿಗ. ೨೮). ಕೂರ್ಪವರ್ = ಪ್ರೀತಿಸುವವರು; ಪ್ರಿಯವಾದವರು: ಎನ್ನಣುಗಿನಳಿಯಂಗೆನ್ನಿಂ ಮೇಗಿಲ್ಲ ಕೂರ್ಪವರ್ (ಆದಿಪು. ೪-೯೦); ಇವರೊಳಱಿಪುಗುಂ ಕೂರ್ಪವರೊಳ್ (ಗದಾಯು. ೯-೧೨); ಎಯ್ದೆ ಕೂರ್ಪವರ ಪೇೞ್ದುದ ನಿಂಬೆನೆ ಕೇಳದಾತನೇತಱ ವಿಭು (ಪಂಚತಂ. ೪೩-೨೦); ಕೂರ್ಪವರ ನಾರನೂ ಕಾಣೆನು ಮಾದಾರಚೆನ್ನಯ್ಯನಲ್ಲದೆ (ಬಸವ. ೬೫೧). ಕೂರ್ಪವಳ್ = ಕೂರ್ತಳ್: ಕೂರ್ಪವಳ ಸೊಲ್ಲು ಲೇಸು (ಸರ್ವಜ್ಞ. ೧೧೨೧).

[ದೇ. ‖ ತಮಿ. ಕೂರ್; ಮಲ. ಕೂರ್, ಕೂರು; ತೆಲು. ಕೂರಿಮಿ, ಕೂರ್ಮಿ]

**ಕೂರ್₂** (ಕ್ರಿ). ೧. ಹರಿತವಾಗು; ತೀಕ್ಷ್ಣವಾಗು; ಉಗ್ರವಾಗು: ಕೋಪವೆರಸಿ ಕೂರ್ತು ನೋಡೆ ತಾಪಸನಂದಾ ಪಕ್ಕಿಗಸುವಡಗಿದುದು (ಹದಿಬ. ೨-೩೪). ೨. (ಕರಾ) ಗಿಡಿ; ತುಂಬು: ಉರಿಯೋ ಗಾಯಕ್ಕೆ ಉಪ್ಪುಕೂರಿದ ಹಾಗೆ (ಗಾದೆ).

[ದೇ. ‖ ತಮಿ. ಮಲ. ಕೂರ್; ತೆಲು. ಕೂರು]

**ಕೂರ್₃**, ಕೂರ್ರು₂ (ಕ್ರಿ). ಕೂತ₁ (ಭೂತಕೃ), ಕೂತು (ಭೂತನ್ಯೂ). ಕುಳಿತುಕೊಳ್ಳು; ಆಸೀನವಾಗು: (ಕ). ಕೂರ್ರು₂: ಕೂರುವ ವೇಳೆಯೊಳಾವ ಮೊಳಕಾಲನು ಒಂಟಿಯೂರುವುದೆಂದು ಗೊತ್ತೆ (ಇಂಚಾಪ. ೨೩೪-೬೦); ನನಗೆ ಅವನನ್ನು ಮಾತನಾಡಿಸದೆ ಸುಮ್ಮನೆ ಕೂರಲಾಗಲಿಲ್ಲ (ದೀಪದ. ೪೦); ಕೂರುವುದು ಏಳುವುದು, ಹಿಂದಿರುಗುವುದು, ಈ ರೀತಿ ತರತರದ ಕುಣಿತಗಳಾಗುತ್ತವೆ (ನನ್ನೂರು. ೪೬); ಕೂತಪಟ್ಟಿಗೆ ಒಂದೇ ಸ್ಫೂರ್ತಿಯಲ್ಲಿ ಅದನ್ನು ನಾನು ... ಬರೆದು ಮುಗಿಸಿದೆನು (ಕ್ರೌಂಚಧ್ವ viii, ಮುನ್ನುಡಿ); ಗಂಡಸು ಕೂತು ಕೆಟ್ಟ, ಹೆಂಗಸು ತಿರುಗಿ ಕೆಟ್ಟಳು (ಗಾದೆ); ಕೂತು ತಿಂಬುವವನಿಗೆ ಕುಡಿಕೆಹಣ ಸಾಲದು (ಗಾದೆ). [?]

**ಕೂರ್₄**, ಕೂರ್ರು₃ (ನಾ). ಪ್ರೇಮ; ಪ್ರೀತಿ; ನಲ್ಮೆ: ಕೂರೊಳು ಸುಭಗಂ ಕುಳವಧು ವಾರಿಜಮುಖಿ ಮಾದಿಯಬ್ಬೆಗಂ ಪುಟ್ಟಿದಂ ... ಮಾರಸಿಂಗನಾಹವಧೀರಂ (ಸೌಇಇ. IX-i, ೧೮೬-೧೭; 1111); ಮದವರ್ತಳ ಕೂರೆಂಬ ಲತೆಯ ಬೇರ್ಗಳ್ಪೋರಂತೆಱೆವಂತೆ ನೀರನಂದಾ ಪದದೊಳ್ (ವೀರವಿ. ೯-೮೧). ಕೂರ್ರು₃. 'ಕೂರುಗೊಳ್₁' ಪರಾ.

ಕೂರಿತುಗಿಡು = ಪ್ರೀತಿಕೆಡು: ಕೂರಿತುಗೆಟ್ಟ ಮನವ ಕೂರಮಾಳ್ಪ ಕರ್ಪೂರ ಕದಂಬ ಭಕ್ಷಗಳಾಹಾರವಱಿದು ಹವಣಱಿದೆಡೆ ಮಾಡಿದಳಾ ರಾಣಿ ರಮಣನಿಗರ್ತಿಯೊಳ್ (ಭರತ. ೧೦-೩೦). [< ಕೂರ್₁]

**ಕೂರ್₅**, ಕೂರ₁ (ಗು). ೧. ಹರಿತವಾದ; ತೀಕ್ಷ್ಣವಾದ. 'ಕೂರಂಬು', 'ಕೂರ್ಮೊನೆ' ಪರಾ. (ನಾ). ೨. ಹರಿತವಾಗಿರುವಿಕೆ; ತೀಕ್ಷ್ಣತೆ: ಕೂರಿಹ ಕಠಾರಿಯ ಹಣಿಗೆಯಲಿ ಬಾಚಿದನು ಸಿರಿಮುಡಿಯ (ಕುವ್ಯಾಅ. ೨೨-೪೧).

**ಕೂರ₁**: ೧. ಹಳ್ಳಿಗೊಲ್ಲರು ವೆಚ್ಚೆ ಕಱುವ ಕಾದೊಡೆ ಕೂರವುಳ್ಳ ವೀರನೆ ದಿಟದಿ ಕೊಳುಗುಳಕೆ ನೀನು (ಸಾಳ್ವಭಾ. ೧೫-೩೦); ಕೂರಾದ ಬಿಸಿಲು ಬಡಿಯಿತು (ಮರವು. ೨೩). ೨. ವಾರನಾರಿಯರನು ಭವಂಗಳು ಕೂರ [ಪಾಠಾಂ. ಕ್ರೂರ] ವಲ್ಲದೆ ಮಾರ್ದವಂಗಳೆ (ಬಸವು. ೪೦-೮೧); ಬಿಳುವಕ್ಕಿ ಬೀಱುವ ದನಿ ಮಿಗೆ ಕೂರಮಾಗಿರೆ ಕೊನರಿದುದು (ಹದಿಬ. ೨-೩೩). ೩. ಪರಾಕ್ರಮ; ಶೌರ್ಯ. 'ಕೂರಾಳ್₁' ಪರಾ. [<ಕೂರ್₂]

**ಕೂರ₁** 'ಕೂರ್₅' ನೋ.

**ಕೂರ₂** (ನಾ). ಅನ್ನ; ಆಹಾರ: "ಅಂಧಃ, ಕೂರಂ, ಭಕ್ತಂ ... ಆಹಾರಃ – ಈ ೯ ಕೂಳ್" (ಹಲಾಯು. ೫೩-೧೬೪); ಸಕಲ ಧಾನ್ಯದ ಕೂರನೂ ನೀಉ ... ಅನುಭವಿಸುವದೂ (ಸೌಇಇ. IX-ii, ೫೩೯-೧೩; 1534). 'ಕೂಳ್₁' ಪರಾ. [ಸಂ.]

**ಕೂರಂಕುಶ** (ನಾ). ಹರಿತವಾದ ಅಂಕುಶ; ಮೊನೆಯಾದ ಸೃಣಿ: ಕೂರಂಕುಶವಂ ಚಾರಿಸುತುಮಾನೆಗಳನಾಧೋರಣರಾ ರಣದೊಳಜೆದು ನೂಂಕಿದರ್ (ಪಂರಾಮಾ. ೧೩-೬೩); ಕೂರಂಕುಶದಲಾನೆಯ ಬಿಗಡುಗೊಳಿಸಲು (ಕುವ್ಯಾದ್ರೋ. ೩-೧೩); ಪೊಳೆವ ಕೂರಂಕುಶ ಮಿಂಚಾಗೆ ಪಲವಣ್ಣದೊಳುರಜೆಯ ಸುರಧನುವಾ ತಳಿದಾನೆ ಬಿರ್ದುದು ನೆಲಕೆ (ವರ್ಧಸಾಂ. ೬-೧೧೪). [ಕೂರ್₅ + ಅಂಕುಶ]

**ಕೂರಂಕುಸ** (ನಾ). = ಕೂರಂಕುಶ: ಕೂರಂಕುಸದ ಪೊಳೆಪನಾ ತೋಱುವಂ ವಜ್ರಜಂಘಂ (ಆದಿಪು. ೪-೨೫); ದೇವದಂತಿ ಶಿರದೊಳ್ ಕೂರಂಕುಸಂ ಚಾರಣಕ್ರಮದಿಂದಾದಱುವತ್ತು ನಾಲ್ಕುಪೊಳೆಪಿಂ ಕಣ್ಗೊಪ್ಪೆ (ಶಾಂತಿಪು. ೪-೧೧೬); ಕರದೊಳ್ ಕೂರಂಕುಸಂಗಳ್ ಪೊಳೆಯೆ (ಜಗವಿ. ೭-೯೦). [ಕೂರ್₅ + ಅಂಕುಸ]

**ಕೂರಂಗಿ** (ನಾ). ಒಂದು ಕಾಡುಪ್ರಾಣಿ: ಕರಡಿ ಮೊಲಂ ಕೊಡಂಗುರಿ ನರಿದರಿ ಕೂರಂಗಿ ಬೆಕ್ಕು ಹೇರುಡು ಕಾಕಂ (ಸೂಕ್ತಿಸು. ೩-೧೪೪); ಮರೆ ಮೂಗುರಿ ಕೂರಂಗಿಯಳಿಲು ಬೆಕ್ಕರಲೆ ಕೊಱವ ಮುಸು ಸಾರಗ ಸೀರುಡುವೆಕ್ಕಲ ಕಪಿ ಪಂದಿ (ಜಯಕಾ. ೧೫-೨೯). [?]

**ಕೂರಂಬು** (ನಾ). ಹರಿತವಾದ ಅಂಬು; ಚೂಪಾದ ಬಾಣ: ಒಡನೆ ಸುರಿವ ಪಲವಂದದ ಕೂರಂಬುಗಳುಮಂ (ಆದಿಪು. ೧೩-೬೪); ಕೂರಂಬೊಂದು ಬಂದು ನಡೆ ನೋವಿಂ ಬಿದ್ದಂ (ಧರ್ಮಾಮೃ. ೧-೨೦೯); ಕೂರಂಬಿನಲಿ ಕೋದನು ಗಜದಮಸ್ತಕವ (ಕುವ್ಯಾದ್ರೋ. ೩-೬೪); ಕಾವನ ಕೂರಂಬಿನ ಬತ್ತಳಿಕೆಯ ಭಾವವ ಜಱಿದು (ಕಂನವಿ. ೯-೨೦).

[ಕೂರ್₅ + ಅಂಬು₁]

**ಕೂರಗೆ** (ನಾ). = ಕೂರಂಗಿ: ಅಂ ಪೋಗಿ ಕೂರಗೆವಿಂಡಂ ಗಜವೈರಿ ಪೊಕ್ಕುಪೊಲರಿಪ್ರಧ್ವಂಸನಂ ಮಾಡುವಂ (ಶಾಂತಿಪು. ೭-೫೪); ಕಡದೆಳೆ ಬಳ್ಳು ಕೊಂಡುಗುಱಿ ಕೂರಗೆಯೆಂಬಿವನ್ನೆದೆ ಕಾಪಿನೊಳ್ಪಡಣಬೆ ಪೊತ್ತು ಬೇಡವಡೆ ಬಂದುದು (ಸೂಕ್ತಿಸು. ೩-೧೬೮). [?]

**ಕೂರತೆ** (ನಾ). ಹರಿತ; ತೀಕ್ಷ್ಣತೆ: "ಕೂರ್ಪುಕೂರತೆಯೊಳ್" (ಕರ್ಣಾನಿ. ೭). [ಕೂರ₁ (<ಕೂರ್₅) + -ತೆ]

**ಕೂರದಂಟು** (ನಾ). ಬಲಿತದಂಟು, —ದಿಂಡು; "ಕಠಿಣವಾದ ದಂಟು" (ಕಬ್ಬಿಕಾ. ಕೋಶ): ಪರ್ಬುವ ಕನಲ್ಕೆಯೆಂಬ ಬಳ್ಳಿ ಕೂರದಂಟಾದಂತೆ ಪಿಡಿದ ಲಾಗುಳವುಮಂ ಅಂಜಿಕೆಯುಂ ಪುಟ್ಟಿಸೆ (ಕಬ್ಬಿಕಾ. ೩೧೦). [ಕೂರ₁ (< ಕೂರ್₅) + ದಂಟು]

**ಕೂರಪಂದಿ** (ನಾ). ಕ್ರೂರವಾದ ಹಂದಿ; ಮುಳ್ಳುಹಂದಿ: ಸಾರಂಗ ಇಪ್ಪತ್ತೊಂದು ಕಡವೆ ನಾಲ್ವತ್ತಪಂಭತ್ತು ಹಂದಿ ಯರಡು ಕರಡಿವಂದು ಕೂರಪಂದಿ ನಾಲ್ಕು ಕಾಟಿ ಅರು (ರಾಜೇಂದ್ರ. ೧೪೪). [ಕೂರ್ಮ + ಪಂದಿ]

**ಕೂರಮಾಡು** (ಕ್ರಿ). ಚುರುಕುಗೊಳಿಸು; ಹುರುಪುಗೊಳಿಸು: ಕೂರಿತುಗೆಟ್ಟವುನವ ಕೂರಮಾಳ್ಪ ಕರ್ಪೂರ ಕದಂಬ ಭಕ್ಷಗಳಾಹಾರ ವಱಿದು ಹವಣಱಿದೆಡೆಮಾಡಿದಳು (ಭರಚ. ೧೦-೩೧).
[ಕೂರ$_1$ (< ಕೂರ್$_5$) + ಮಾಡು$_1$]

**ಕೂರಲಗು** (ನಾ). ಹರಿತವಾದ ಅಲಗು; ಚೂಪಾದ ಬಾಣ: ಕೂರಲಗಿಂ ಗಿಱ್ಱನೆ ತೂಳ್ದು ಬೇಗಮಿಱಿದಪಂ (ಧರ್ಮಾಮೃ. ೧೩-೧೦೮); ಶಿವಚಿತ್ತವೆಂಬ ಕೂರಲಗ ಕೊಂಡು ಶರಣಾರ್ಥಿಯೆಂಬ ಶ್ರವವ ಕಲಿತರೆ (ಬಸವ. ೬೨೫); ಶೀಲವಂತರ ಕೈಯ ಕನ್ನಡಿ ಕಾಲಕಂಠನ ಕೂರಲಗು (ಬಸವು. ೧-೩೩); ಗಳಹದಿರು ದಿಟ ವೀರನೇ ಕೂರಲಗಿನಲಿ ಮಾತಾಡು ಬಱಿನುಡಿ ಭಂಡತನ (ಕುವ್ಯಾದ್ರೋ. ೧೪-೩). [ಕೂರ್$_5$ + ಅಲಗು$_3$]

**ಕೂರಲಗುಗೊಳ್** (ಕ್ರಿ). ಹರಿತವಾದ ಅಲಗಿನಿಂದ ಗಾಯಗೊಳ್ಳು: ಮುಂದಿರ್ದ ಕಾಮಿನಿಯ ಚಾರುರೂಪವ ಕಂಡು ಕಾಮನ ಕೂರಲಗು ಗೊಂಡಂಗಜನ ಪರಿವಾರದಧಿದೇವತೆಯೊಡನೆ ಜಡನಾಗುತ (ಸಿಭಾಗ. ೫-೨-೧೦). [ಕೂರಲಗು + ಕೊಳ್$_1$]

**ಕೂರವ** (ನಾ). (?): ದೇಹಾರದ, ರೆಂಚೆಯ, ಕೊಂಚೆಯದ, ಕೂರವದ, ಕೊಟ್ಟಿಗೆಯ ಗುಡಿಯ ಜಳಗುಡಿಯ, ಗೊಲ್ಲಣಿಗೆಯ, ಮಂಡವಿಗೆಯ, ವಿಳಾಸ ನಿವಾಸಂಗಳಿಂದಂ (ಶಾಂತಿಪು. ೧೦-೧೪೭ ವ). [?]

**ಕೂರವಾಡಿ** (ನಾ). ಒಂದು ಪ್ರದೇಶದ ಹೆಸರು: ಕೂರವಾಡಿ ಮೂನೂಱರ ಬಱಿಯ ಲೋಕಾಯ್ತವೊಬಲುಂಗುಣ್ಡೇರೊಳಿಪ್ಪರ್ತ್ತ ನಾಲ್ಕು ಮತ್ತರ್ಕ್ಕರಿಯ ಕೆಯ್ಯ (ಎಕ. XI, ಹೊಳಲ್ಕೆ. ೨೩-೧೭; 668). [ಕೂರ$_0$ + ಪಾಡಿ$_1$]

**ಕೂರಸಿ** (ನಾ). ಹರಿತವಾದ ಕತ್ತಿ; ತೀಕ್ಷ್ಣವಾದ ಖಡ್ಗ: ತನ್ನ ಕೂರಸಿಯೊಳಡುತರ್ಪ ಕೊಂದಸಿಯುಳಿ[ರ್ಕ]ಸಿಯೊಳ್ ಪಡೆಮಚ್ಚಿ ಗಂಡನಾ (ಪಂಪಭಾ. ೧-೬); ಮಱಹೆಂಬ ಕೂರಸಿಗೆ ಗುಱಿಮಾಡಿದ ರಾರಯ್ಯ (ಸಿದ್ಧವ. ೧೫೦); ಹೊಡೆದು ತಲೆಯನು ನಿನ್ನ ರಕುತವ ಕುಡಿಸುವೆನು ಕೂರಸಿಗೆ (ಕುವ್ಯಾಕ. ೯-೩೮). [ಕೂರ್$_5$ + ಅಸಿ$_8$]

**ಕೂರಳಲ್** (ನಾ). ಅತಿಯಾದ ಅಳಲು; ತೀವ್ರವಾದ ದುಃಖ: ನೆನೆ ನೆನೆದು ಪಾಡುವೆನು ಕಟ್ಟಳಲ ಕೂರಳಲ ಪಾಡನ್ (ಪಾರಸಿ. ೨೦-೧೪). [ಕೂರ್$_5$ + ಅಳಲ್$_2$ (< ಅೞಲ್$_3$)]

**ಕೂರಳಿಸು** (ಕ್ರಿ). ಮೂಲೆ ಕತ್ತರಿಸು (?): ಆ ಕೆಱೆಯಲೂ ಅ ಗದ್ದೆಯ ಕೂರಳಿಸಿ ಕೊಟ್ಟ ಗದ್ದೆ ಕಂಬ ೧೦ (ಎಕ. VI, ತರೀಕೆ. ೯-೨೨; 1279). [ಕೂರ್$_5$ + ಅಳಿಸು$_2$ (< ಅೞಿಯಿಸು)]

**ಕೂರಾಂಬು** (ನಾ). ಅನ್ನದ ಮೇಲಿನ ನೀರು; ಗಂಜಿ: "ಕೂರಾಂಬು ವೃಷ್ಟಿಕೆ ಯವಾಗುವೆನೆ ಗಂಜಿ" (ಮಂಗರಾ. ೬೩-೧). [ಕೂರ$_2$ + ಅಂಬು$_3$]

**ಕೂರಾಟ** (ನಾ). ಪ್ರೀತಿಯ ಆಟ; ಪ್ರಣಯಲೀಲೆ: ವಿರಹದ ನೆಲೆ ವೀಡೋಪರ ಕೂರಾಟದ ಕೊಸಱಿನ ಗೊತ್ತು (ಮಡಿಶ್ಯಾ. V, ೧೧೯೨; ಅಮರುಕ). [ಕೂರ್$_4$ + ಆಟ]

**ಕೂರಾಡಮಂಚ** (ನಾ). ಒಂದು ಬಗೆಯ ಮಂಚ: ಸೆಳೆಮಂಚ ಚಪ್ಪರಮಂಚ ಶಕುನಿಮಂಚ ನಳನಳಿಸುವ ತೂಗುಮಂಚ ತೊಳಪ ಕೂ [ಪಾಠಾಂ. ಕು]ರಾಡಮಂಚಗಳಾ ಸೆಜ್ಜೆಯ ನಿಳಯದೊಳಗೆ ಕಣ್ಗೆಸೆದವು (ಕುರಾಸಾಂ. ೩೬-೪೮). [ಕೂರಾಡ$_0$+ ಮಂಚ]

**ಕೂರಾನೆ** (ನಾ). ಬಲಿಷ್ಠವಾದ ಆನೆ; ಉಗ್ರವಾದ ಆನೆ (?): ಲಕ್ಕ ಕಾಲಾಳೈದು ಸಾವಿರ ಕುದುರೆ ಮೇಲಿಕ್ಕುವ ಕೂರಾನೆ ನೂಱು (ಕುರಾಸಾಂ. ೧೨-೬); ಕೂರಾನೆ ಹರಿವುದು ನಲ್ಲನೆಡೆಗೆ ಸೂಳೆಗೇರಿ ಯೊಳ್ಪರಿವ ಸೂಳೆವೊಲು (ಭರಚ. ೩೬-೭೪). [ಕೂರ$_2$ + ಆನೆ$_1$]

**ಕೂರಾಯುಧ** (ನಾ). ಹರಿತವಾದ ಆಯುಧ: ಪಕ್ಕಗಳಂತಿರೆ ಹರಿಗೆ ಕೂರಾಯುಧ ಚೊಕ್ಕಾಗಿ ಹಳಚುತೋಲೈಸಿ (ಭರಚ. ೫೦-೭೮). [ಕೂರ್$_5$ + ಆಯುಧ]

**ಕೂರಾಳ್**, ಕೂರಾಳು (ನಾ). ಕಡುಗಲಿ; ಪರಾಕ್ರಮಿ: "ಕೂರಾಳು ಕಾರ್ಳೆಂದುಂ ಧೀರರ್ ಬಲ್ಬಂಟನೆಂದು . . . ವೀರರ್ಗೆ ನಾಮಮಕ್ಕುಂ" (ಕವಿಕಂ. ೧೨೬); ಕೂರಾಳಿಂ ಕೂರಾಳಂ . . . ವಾರಣದಿಂ ವಾರಣಮಂ ನಾರಾಯಣನಿಟ್ಟು ತವಿಸಿದಂ (ಪಂರಾಮಾ. ೭-೬೦); ಕೂರಾಳ್ಗಂಗಡಿ ಕಾಱರು ಗಣಿಕೆಯರಾರೋಹಕರು (ಭರಚ. ೨೪-೮೫); ಇದೞೊಳ್ ಕೂರಾಳ ಬಗೆ ಪೇಟಲ್ಪಟ್ಟುದು (ಅಪ್ರತಿ. ೧೬-೧೩). **ಕೂರಾಳು**: ಪಲವಾನೆ ಕುದುರೆ ಕೂರಾಳು ತೇರುಗಳನು ನೆಲಕಿಕ್ಕಿದನು ನಿಮಿಷದೊಳು (ನೇಮಿಸಂ. ೧೨-೭೮); ಕೊಂಗು ಕೊಡಗು ಮಲೆಯಾಳ ತಿಗುಳ ದೇಶಂಗಳ ಕೂರಾಳುಗಳ (ಕುರಾಸಾಂ. ೧೧-೪); ಕಂಸನ ಸಖರು ಮಿಗೆ ಕೂರಾಳು ಮಾಧವಗೆ ಮುನಿದು (ಸಾಳ್ವಭಾ. ೧೩-೧). [ಕೂರ್$_5$+ ಆಳ್$_3$]

**ಕೂರಾಳು** 'ಕೂರಾಳ್' ನೋ.

**ಕೂರಾಳ್ತನ** (ನಾ). ಕಲಿತನ; ಪರಾಕ್ರಮ; ಶೌರ್ಯ: ಗೇಣ್ವಾಯ್ಗೆ ವೀಚಿದೆ ಕೂರಾಳ್ತನವಣ್ಮುಮುಣ್ಮುಱಿಕೆಯಿಂ (ಶಮದ. ಮ. ೬೭ ಪ್ರಯೋ). [ಕೂರಾಳ್ + -ತನ]

**ಕೂರಿಕೆ** (ನಾ). ಹರಿತವಾಗಿರುವಿಕೆ; ಮೊನಚಾಗಿರುವಿಕೆ: ಎಱಿಸಿದ ಬಿಲುದಿರುವಿನಂಬಿನ ಕೂ[ಪಾಠಾಂ. ಕೋ, ತೋ]ರಿಕೆಯ ತುದಿವೆರಳುಗಳ ಕೆಂಪೇಱಿದಕ್ಷಿಯ ಕುಣಿವ ಮೀಸೆಯ ಕಾಹುರದ ಮನದ (ತೊರರಾ. ೪-೬-೧೮). [ಕೂರ್$_5$ + -ಇಕೆ]

**ಕೂರಿಗೆ** 'ಕೂಱಿಗೆ' ನೋ.

**ಕೂರಿಗೆನೆಲ್ಲು** (ನಾ). ಒಂದು ಬಗೆಯ ನೆಲ್ಲು, —ಭತ್ತ: ಗದ್ದೆಯ ನೆಲ್ಲು ಕೂರಿಗೆನೆಲ್ಲು ಎಂದು ಎರಡು ಪ್ರಕಾರದ ಬೆಳೆಯನ್ನು ಮಾಡಿ ಕೊಳ್ಳುತ್ತಾರೆ (ಕೃಷಿಪ್ರ. ೫೪). [ಕೂರಿಗೆ$_0$ + ನೆಲ್ಲು (< ನೆಲ್)]

**ಕೂರಿಟ್ಟಿ** (ನಾ). ಹರಿತವಾದ ಈಟಿ, —ಭರ್ಜಿ: ಮಿಸುಪ ತೆಳ್ವಸುಱ ಮೇಲಡರ್ದ ಕೂನೆವಾಸೆ ಕೂರಿಟ್ಟಿ (ರೇವಣ. ೩-೫೯); ಎಸಳುಗಂಗಳ ದಿಟ್ಟಿಯ ಕೂರಿಟ್ಟಿಯ ಮಿಸುಪ ಸೆಳ್ಳುಗುರ ಸುರಗಿಯ (ಕಂನವಿ. ೨೪-೮). [ಕೂರ್$_5$ + ಇಟ್ಟಿ$_2$]

**ಕೂರಿತು** 'ಕೂರಿತ್ತು' ನೋ.

**ಕೂರಿತ್ತು**, ಕೂರಿತು (ಗು). ಹರಿತವಾದ; ಮೊನೆಯಾದ; ತೀಕ್ಷ್ಣವಾದ: ಮುನ್ನ ಬಂದ ಕಿವಿಯಿಂದಂ ಬೞಿಕಂ ಬಂದ ಕೋಡು ಕೂರಿತ್ತು (ಧರ್ಮಾಮೃ. ೨-೧೦೮); ಆನೋವು ಕೂರಿತ್ತು, ಕಯ್ಯಾರ ನಾವೆ ಕೊಂಡೆಸಗಿ ಕಣ್ಣಾರೆ ನೋಡುವಱಿಗೆಯ್ಕೆ (ಅಶ್ವತ್ಥಾ. ೧೧-೧೧). **ಕೂರಿತು**: ಕೂರಿತಪ್ಪ ಬಾಳಂ ಪಿಡಿದಿರ್ದರ್ಳ್ (ವಡ್ಡಾರಾ. ೧೯-೧); ಬಲ್ಲಿತ್ತಱ ಕೋಡು ಕೂರಿತು (ಆದಿಪು. ೧-೨೫); ಸೂಜಿಯ ಮೊನೆಯಂತೆ ಕೂರಿತಪ್ಪ (ಧರ್ಮಾಮೃ. ೩-೧೮೬); ಕ್ಷಿತಿಯ ಕುಜನರ ಜಿಹ್ವೆ ಕಡುಕೂರಿತು (ತೊರರಾ. ೨-೨-೪೪).

**ಕೂರಿದನ್** = ಕಡುಗಲಿ; ಪರಾಕ್ರಮಿ: ಕೂರಿದರಪ್ಪ ಧನುರ್ಧರ ಬೀರರ . . . ನಿರ್ದಾರಿಸೆ (ಶಾಂತಿಪು. ೪-೧೦); ಪಜ್ರಮಂ ಖರೆಸಾಣೆ ಯಿಟ್ಟಂತೆ ಕೂರಿದನಂ (ನೇಮಿಪು. ೫-೭೮ ವ); ಆರದಟರ್ ಕೂರಿದರಾರ್ ಬೀರರದಾರೆನುತುಂ (ಜಯಕಾ. ೭-೧೬). **ಕೂರಿದವು, ಕೂರಿದುವು** = ಹರಿತವಾದುವು; ಮೊನೆಯಾದುವು; ತೀಕ್ಷ್ಣವಾದುವು: ತಿಕ್ಷಕಂಡೇಣ - ಕೂರಿದ[ಪಾಠಾಂ. ತ]ವಪ್ಪಂಬುಗಳಿಂದಂ (ವಡ್ಡಾರಾ. ೧೬೯-೫); ಎಲರಿಂದಳ್ಳಾಡುವೀ ಕೂರಿದವೆನಿಪೆಲೆಗಳ್ (ಬಾಧಪು. ೧-೭೯); ಕೂರಿದವಪ್ಪ ತ್ರಿಶೂಲದಮೇಲೆ ಕರ್ಮತ್ರಯಮಂ ಮುಱಿದಿಕ್ಕಿ (ಪಸಾರ. ೯೨೪-೧೯); ಕೂರಿದುವಪ್ಪ ಕಣ್ಮಲರ್ಗಳಳ್ಳೆರ್ದೆಯೊಳ್ ತಡಮಾಡೆ (ಪಂಪಭಾ. ೪-೮೩).

ಕೂರಿಯಾಳ್ = ಪರಾಕ್ರಮಿ; ಶೂರ : ಕಾಮಾರ್ತರುಪಕಾರಿ ರತಿಕುಶಲ ವಿಸ್ತಾರಿಯಲರ್ವಿಲ್ಲರಸನ ಸೇರಿಯೋಲೈಸುತಿಹ ಕೂರಿಯಾಳ್ಗಳು ನಡೆವ ದಾರಿ ಬಹು ಹೃದಯ ಸಂಚಾರಿ . . . ಸೂಳೆಗೇರಿಗೆಯ್ತಂದನರಸಂ (ಚೇರಮು. ೮-೫). [< ಕೂರ್$_5$]

**ಕೂರಿಲಿ** (ನಾ). ಹರಿತವಲ್ಲದುದು; ಮೊಂಡು: ಸೊಗಯಿಸುಗುಮೆ ಪಲ್ಲಿಲಿವಾಯಗಿಲಿಲಿಗಂಧಂ ಸಮಂತು ಕೂರಿಲಿ ಕುಡುಗೋಲ್ (ಕಾವ್ಯಾವ. ೨೫೭). [ಕೂರ್$_5$+ -ಇಲಿ$_3$]

**ಕೂರಿಸು$_1$** (ಕ್ರಿ). ಪ್ರೀತಿಸುವಂತೆ ಮಾಡು; ಒಲಿಸು : ಕೂರಿ[ಸಿ] ಗುರು ಶುಶ್ರೂಷೆಯೊಳಾ ರಾಮನಂ (ಪಂಪಭಾ. ೧-೧೦೪); ಕೂರಿಸಿ ವಿಜಯ ಶ್ರೀಯಂ ಕೂರದರಂ ಕೊಂದು (ಗದಾಯು. ೧-೫); ಕೂರಿಸುವ ಕೂರ್ಪ ಮಾತಂ ಮಾರಿಗೆ ಕುಡು (ಯಶೋಚ. ೨-೬೩); ಕುಮಾರನ ಮಯೂರಮಂ ಕೂರಿಸಿದ ಸೋಗೆವೆಣ್ಣಲ್ಲ (ಪುಷ್ಪವೃ. ೯-೨೧ ವ); ಕೂರಿಸ ಬೇಡವಂಗೆಳಸಿ ಮುಂ ಬಸವಾದರ ಕಾಮದಾಹಮಂ ನಾರಿ ನಿರೀಕ್ಷಿಸು (ರಸರ. ೧-೩೭). [ಕೂರ್$_1$ + -ಇಸು$_3$]

**ಕೂರಿಸು$_2$** (ಕ್ರಿ). ಕುಳಿತುಕೊಳ್ಳುವಂತೆ ಮಾಡು; ಕುಳ್ಳಿರಿಸು : ವಿಟನೋರೋರ್ವರ ಕುರಿತು ಕೂರಿಸಲು ಅಲ್ಲಿ ನೆಱೆ ಪೀಠವರ್ಧನಂ ಬೆಱಗಿನಿಚ್ಚೆಯಸಾಡಲ್ (ಚೇರಮು. ೮-೩೭); ನಂಮ ಮಗನಿಗೆ ಪೆರಿಯಾಪಟ್ಟಣದ ದವಲತ್ತಿನಲ್ಲಿ ನಿಮ್ಮ ಒಡಂಬಡಿಕೆಯಿಂದ ಕೂರಿಸು (ರಾಜೇಂದ್ರ. ೩). [ಕೂರ್$_3$ + -ಇಸು$_3$]

**ಕೂರು$_1$** 'ಕೂರ್$_1$' ನೋ.

**ಕೂರು$_2$** 'ಕೂರ್$_3$' ನೋ.

**ಕೂರು$_3$** 'ಕೂರ್$_4$' ನೋ.

**ಕೂರು$_4$** 'ಕೂಱು$_1$' ನೋ.

**ಕೂರು$_5$** (ನಾ). ಒಂದು ತೂಕದ ಪ್ರಮಾಣ: ಇಪ್ಪಣ ಸುಗಂಧಗಳಿಗೆ ಪಚ್ಚೆಕರ್ಪುರ ಕೂರು ಒಂದಕ್ಕೆ ಹಾಗ ಪನ್ನೆ ಕುರು ಒಂದಕ್ಕೆ ಬೇಳೆ (ಎಕ. V, ಬೇಲೂರು. ೭೫-೮೦ ; 1382). [< ಕುರುಜು ?]

**ಕೂರು$_6$** (ನಾ). ಕುಯ್ಲು; ಕೊಯಿಲು : ಮತ್ತೊಂದು ಮರದ ತುಂಡಿನಲ್ಲಿ ತೋಡಿರುವ ಕುಳಿಯೊಳಗೆ ಸರಿಯಾಗಿ ಕೂರಿಸಲಾಗುವಂತೆ ಒಂದು ಮರದ ತುಂಡಿನ ತುದಿಯಲ್ಲಿ ಮಾಡಿದ ಚಾಚು : ಕೂರು (ತುದಿ) (Tenon. ಇಂಕನಿ). [?]

**ಕೂರುಗಣೆ** 'ಕೂರ್ಗಣೆ' ನೋ.

**ಕೂರುಗುರ್**, ಕೂರುಗುರು (ನಾ). ಹರಿತವಾದ ಉಗುರು; ಮೊನೆಯಾದ ನಖ: ಪೊಳೆವಂಕುಶದಂತಿರೆ ಕೊಂಕುವೆತ್ತ ಕೂರುಗುರ್ಗಳೊಳ್ . . . ಕೊಲ್ವರೆತ್ತಲುಂ ಮೃಗಪತಿಯೂಥಮಂ ಪಲಬರಾ ಬನದೊಳ್ (ಕಾದಂಪೂ. ೯೯); ಕೂರುಗುರ ಹೊಯ್ಲು ತೋಳ್ಬಿಗುಹಳಿದ ಗುರುಕುಚಂ (ಪದ್ಮರಾ. ೩-೭೦); ಕೂರುಗುರಿಂದ ಸೀಳ್ದಲೆಯ ಮುಡಿದು ಕೊಟ್ಟಳಾ ರಾಯಗೆ (ಭರಚ. ೧೦-೯೦). **ಕೂರುಗುರು** : ಕೂರುಗುರ ನಾಟಿಸಿ ಮೆಱೆದು (ಹರಿಸಾ. ೩೯); ಕಳಿಲೆಯ ನಖದಲಿ ಚಿವುಟಲಹುದು ಮುಂದೆ ಲಳಿಗೆ ಕೂರುಗುರಿಗಂಜುವುವೇ (ಮೋಹತ. ೧೧-೧೩); ಹರನೆಡದ ಕೂರುಗುರಿನಿಂದಜನ ಶಿರವರಿಯೆ (ಚಿಬಪು. ೧೮-೧೫); ಬೊಗರಿ ಮೊಲೆಗಳಿಗೆ ಕೂರುಗುರು ತಾಗಿದವೊ (ಕರಿಕ. ೫೫-೬). [ಕೂರ್$_5$ + ಉಗುರ್$_1$]

**ಕೂರುಗುರು** 'ಕೂರುಗುರ್' ನೋ.

**ಕೂರುಗುರ್ಗಲೆ** (ನಾ). ಹರಿತವಾದ ಉಗುರಿನ ಕಲೆ, —ನಖಕ್ಷತ: ಕೂರುಗುರ್ಗಲೆಯಂ ನಲ್ಮೆಯೊಳೊಡರಿಸುತ (ಉದ್ಭದೇ. ೨-೬೧). [ಕೂರುಗುರ್ + ಕಲೆ$_2$]

**ಕೂರುಗುರ್ಗೊನೆ** (ನಾ). ಹರಿತವಾದ ಉಗುರಿನ ಕೊನೆ: ಕೂರುಗುರ್ಗೊನೆಯಿಂದೆ ಸೀಳಿದಳೊಂದು ಬೆಳ್ಳೆಲೆಯ (ಮೋಹತ. ೧೭-೩೩). [ಕೂರುಗುರ್ + ಕೊನೆ$_2$]

**ಕೂರುಗೆಂಜಿಗ** (ನಾ). ಒಂದು ಜಾತಿಯ ಮರ: ಕಾರೆ ಮಗ್ಗಾರೆ ಗೂಳವು ಮುಳ್ಳು ಬೊಬ್ಬುಲಿ ಕೂರುಗೆಂಜಿಗ ಮಂಡೆಸೀಗೆ (ಕಂನವಿ. ೧೮-೩೫). [ಕೂರು$_0$ + ಕೆಂಜಿಗ$_1$ (< ಕೆಂಜಿಗೆ$_1$)]

**ಕೂರುಗೊಳ್$_1$** (ಕ್ರಿ). ೧. ನೇಹಗೊಳ್ಳು; ಪ್ರೇಮಮಾಡು; ಪ್ರೀತಿಸು : ತೋಱುತ ಮಱಸು ಚಕ್ರಿಯ ಮನದಲ್ಲಿ ಕೂರುಗೊಂಡಿಹ ಹಂಸನಾಥಾ (ಭರಚ. ೧೩-೧೧೭). ೨. ಅಂಟಿಕೊಳ್ಳು; ಸೇರು : ಕೂರುಗೊಂಡೆಂಟು ಕರ್ಮವೆ ದ್ರವ್ಯ ಕರ್ಮ (ಭರಚ. ೭೭-೧೧೧). [ಕೂರು$_3$ (< ಕೂರ್$_4$) + ಕೊಳ್$_1$]

**ಕೂರುಗೊಳ್$_2$** (ಕ್ರಿ). ಚಿಕ್ಕದಾಗು; ಸಂಕುಚಿಸು (?) : ಕುಳುತು ಕುಳುತು ದ್ರಿಷ್ಟಿ ಕೂರುಗೊಳುತಲೀರೆ (ಚಿದಾವ. ೯೨-೭). [?]

**ಕೂರುಮ** (ನಾ). ೧. ಆಮೆ. ೨. ಭೂಮಿಯನ್ನು ಹೊತ್ತಿರುವ ಕೂರ್ಮ : ಕುಸಿಯನೇ ಕೂರುಮನು ಭಾರಕೆ ನಸಿಯನೇ ನಾಗೇಂದ್ರನು (ಕುವ್ಯಾಉ. ೨-೧೯); ಕೂರುಮನಜೀಚೆ ದಿಗ್ಗಜ ದಿಕ್ಕುದಿಗಲೆನೆ (ತೊರರಾ. ೪-೪-೨೭). [< ಸಂ. ಕೂರ್ಮ]

**ಕೂರುಮೆ** 'ಕೂರ್ಮೆ' ನೋ.

**ಕೂರುಳಿ** (ನಾ). ಒಂದು ಬಗೆಯ ಆಯುಧ; ಹರಿತವಾದ ಉಳಿ : ಕೊಡಲಿ ಕರವತಿಗೆ ಕೂರುಳಿ ಕವಡೆ [ಪಾಠಾಂ. ಕೊಳಿಕ್ಕವಡ]ದಂಡೆ ಕೈಹೊಡೆಯಿಟ್ಟ ಗೂಡುಗಳು . . . ಸಿಂಹ ಪ್ರಕರವೆರಸಿ ನಡೆವರ ಕಂಡನು (ಹಚಕಾ. ೫-೯). [?]

**ಕೂರೂಟ** (ನಾ). (ಉಕ) ಪ್ರೀತಿಯ ಊಟ: ಅವನಿಗೀಗ ಎರಡು ಮುಖ್ಯ ಕರ್ತವ್ಯಗಳಿದ್ದವು. ಒಂದು ತಾಯಿಯು ಸಿದ್ಧಪಡಿಸಿದ ಕೂರೂಟವನ್ನು ಉಣ್ಣುವುದು, ಎರಡನೇದು ನಾಗರಿಕರ ಅಪ್ಪಣೆ ಪಡೆಯುವುದು (ಗೌರಾಂಗ. ೧೪೧). [ಕೂರ್$_4$ + ಊಟ]

**ಕೂರೆ** 'ಕೂಱೆ' ನೋ.

**ಕೂರೆಲೆ** (ನಾ). ಮೊನಚಾದ ಎಲೆ; ಚೂಪೆಲೆ : ಕೂರೆಲೆಗಳಬಾಯ್ದೆರೆಗೆ ಕೋರಯಿಸಿ ಮುಸುಂಕಿದಂತೆ (ವರ್ಧಪು. ೧-೪೧). [ಕೂರ್$_5$ + ಎಲೆ$_1$]

**ಕೂರ್ಕಲಿ** 'ಕೂರ್ಗಲಿ' ನೋ.

**ಕೂರ್ಗಣೆ**, ಕೂರುಗಣೆ (ನಾ). ಹರಿತವಾದ ಕಣೆ; ಮೊನೆಯಾದ ಬಾಣ; ನಿಶಿತಾಸ್ತ್ರ : ಅಣಂ ಬೆದಱದೆ ನಟ್ಟ ಕೂರ್ಗಣೆಯ ಬಿಣ್ಪೊಱೆಯಿಂದೆ ಬಱಲ್ದನ್ (ಪಂಪಭಾ. ೧೧-೪೫); ಕಾವನ ಕೂರ್ಗಣೆಗಳ ಮೂಡಿಗೆಗಳಂತಿರೆ ಬಿಱಿದ ಪೊಂಬಾಳೆ (ಪದ್ಮರಾ. ೮-೩೪); ನೆಟ್ಟುದು ಕೂರ್ಗಣೆ ಕುವರಿಯ ಹರಣ ಕಂಗೆಟ್ಟುದು (ಮೋಹತ. ೨೮-೧೫). **ಕೂರುಗಣೆ** : ತೋಱಿದವು ಬಳಿಕೀ ಖರಾರಿಯ ಕೂರು [ಪಾಠಾಂ. ತೂಱು]ಗಣೆ ರಿಪುಭಟರ ಚಾಪದ ಚೀಱಿಕೆಯ ಸರಿಸದಲಿ (ತೊರರಾ. ೬-೧೫-೨೦). [ಕೂರ್$_5$ + ಕಣೆ$_1$]

**ಕೂರ್ಗಣೆವಳೆ** (ನಾ). ಹರಿತವಾದ ಬಾಣಗಳ ಮಳೆ: ಅಮರ್ತ್ಯಲುಬ್ಧಕರೆತ್ತಂ . . . ಕೂರ್ಗಣೆವಳೆಯಂ ಸುತ್ತಿಱಿದು ಕಱಿದರ್ (ಶಬಶಂ. ೪-೧೪). [ಕೂರ್ಗಣೆ + ಮಳೆ (< ಮೞೆ)]

**ಕೂರ್ಗತ್ತಿ** (ನಾ). = ಕೂರಸಿ : ಬಲ್ಮೊಲೆ, ಮೆಲ್ಲಡಿ, ಕೂರ್ಗತ್ತಿ (ಶಬ್ದಾನು. ೩೪೫ ಪ್ರಯೋ). [ಕೂರ್$_5$ + ಕತ್ತಿ]

**ಕೂರ್ಗತ್ತಿಗೆ** (ನಾ). ತೀಕ್ಷ್ಣವಾದ ಕತ್ತಿಗೆ; ಕಿರುಗತ್ತಿ : ಖಂಡಗಳ ನರಿದು ತಿನಲ್ ಕೂರ್ಗತ್ತಿಗೆಯಂ ಕೊಂಡದ್ಭುತ ರಾಕ್ಷಸಿಯರ ತಂಡಂ ಬರೆ (ಜೀವಸಂ. ೧೮೨-೪೩). [ಕೂರ್$_5$ + ಕತ್ತಿಗೆ]

**ಕೂರ್ಗಲ್** (ನಾ). ಒಂದು ಊರಿನ ಹೆಸರು : ಕೂರ್ಗಲ್ಲ ಬೂತುಗನರಸಿ ಪರಮಬ್ಬೆಯಾಳುತಿರೆ ಕೂರ್ಗಲ್ಲ ಗಾವುಣ್ಡ . . . ತುಱುಗೋಳೊಳ್ ಕಾದಿ ಸತ್ತರ್ (ಎಕ. IV, ಹುಣಸೂ. ೯೨-೫ ; 920). [?]

**ಕೂರ್ಗಲಹ** (ನಾ). ಪ್ರಣಯ ಕಲಹ; ಪ್ರೇಮದ ಜಗಳ : ಎನಿಸುಂ ಕೂರ್ಗಲಹದೊಳುಱದೊಱಗಿರಲನಿತಱೊಳಗೆ 'ನಿದ್ರೆವರಲ್ (ಉದ್ಭದೇ. ೪-೨೫). [ಕೂರ್$_4$ + ಕಲಹ]

**ಕೂರ್ಗಲಿ, ಕೂರ್ಕಲಿ** (ನಾ). = ಕೂರಾಳ್ : ವಾರ್ಗದಿ ಹಿಂದಿಕ್ಕಿ ಹೋಹನ ಹಿಂದಣ ಕೂರ್ಗಲಿ ಕೂಡೆ ಹಿಂದಿಕ್ಕಿ ತಾಗೊಂಡು ಬರುತಿದ್ದ ನೂರ್ಗ (ಭರಚ. ೪೪-೫೭). **ಕೂರ್ಕಲಿ** : ಬೇರ್ಕೆಯ್ದ ರೆಬರನವರೊಳ್ ಕೂರ್ಕಲಿಗಳನಾತ್ಮ ನಿಕಟದೊಳ್ ಮಿಕ್ಕವರಂ ತಾರ್ಕಣಿಸಿದ ಸಮರ ಕೇಳಿಗೆ ನೂರ್ಕಡಿಗಡಿದಂ ನೃಪಾಲಕಂ ರಿಪುಬಲಮಂ (ಶಬ್ದಾನು. ೯೦ ವ್ಯಾಖ್ಯಾ). [ಕೂರ್$_5$ + ಕಲಿ$_2$]

**ಕೂರ್ಗಲ್ಲರೆ** (ನಾ). ಹರಿತವಾದ ಕಲ್ಲುಬಂಡೆ; ತೀಕ್ಷ್ಣವಾದ ಬಂಡೆಗಲ್ಲು (?) : ಸಲಮಿಸ್ ಕರೆಯೊಳ್ ಕೂರ್ಗಲ್ಲರೆಯೊಳ್ ಬಿದ್ದರ್ ಸತ್ತರ್ (ಪಾರಸಿ. ೩೬-೮೪೦). [ಕೂರ್$_5$ + ಕಲ್ಲರೆ (< ಕಲ್ಲಱೆ)]

**ಕೂರ್ಗಾಯ** (ನಾ). ತೀಕ್ಷ್ಣವಾದ ಗಾಯ; ತೀವ್ರಗಾಯ : ಕೂರ್ಗಾಯವ ನೋಡೆಂದು ಕೋಲಿಂದೆಚ್ಚು ಬೊಬ್ಬಿಱಿದ (ಮೋಹತ. ೩೯-೧೦). [ಕೂರ್$_5$ + ಗಾಯ$_1$]

**ಕೂರ್ಗೆಯ್, ಕೂರ್ಗೈ** (ಕ್ರಿ). ೧. ಹರಿತಮಾಡು ; ಚೂಪುಮಾಡು; ತೀಕ್ಷ್ಣಗೊಳಿಸು. ೨. ಪ್ರೀತಿಮಾಡು ; ಪ್ರೇಮಿಸು. ೧, ೨ : ಕೂರ್ಗೆಯ್ದುದಣುಗಗಲಹದೊಳಲ್ಲದಿಲ್ಲ (ಉದ್ಭದೇ. ೨-೧೬). **ಕೂರ್ಗೈ** : ೧. ಅಲರ್ವಿಲ್ಲಂ ಮುಳಿದಂಬುಜಾತಶರಮಂ ಕೂರ್ಗೈದು ಮೂಲೋಕಮಂ ಗೆಲಲ್ . . . ತೆರಳ್ದಿನಂ (ಚಕವಿ. ೬-೧೮). [ಕೂರ್$_5$ + ಕೆಯ್$_1$ ; ಕೂರ್$_4$ + ಕೆಯ್$_1$]

**ಕೂರ್ಗೆಲಸ** (ನಾ). ಕ್ರೂರವಾದ ಕೆಲಸ ; ಕೆಟ್ಟ ಕೆಲಸ : ಕೈಕೆಯ ತಾತನೊರ್ದಿನಂ ಬೇಂಟೆಯಾಯಾಸದಿಂ . . . ಬರುತಿರೆ . . . ಕೂರ್ಗೆಲಸದಿಂ ಪಿಂತಿರುಗುತಿರ್ದ ಪಾರ್ಥಿವನೊಳುದಿಸಿತು ಕರುಣೆ (ಶ್ರೀರಾಮಾ. ೨೨-೫೭೫). [ಕೂರ್$_5$ + ಕೆಲಸ]

**ಕೂರ್ಗೈ** 'ಕೂರ್ಗೆಯ್' ನೋ.

**ಕೂರ್ಗೈದು** (ನಾ). ಹರಿತವಾದ ಕೈದು ; ಮೊನಚಾದ ಆಯುಧ : ಕಡುಕೂರ್ಗೈದುಗಳಿಂದ ಮಂದ್ರಿಕರಿಣಾಂಗ ಕ್ರೂರ ದೈತ್ಯಾಳಿ ಪೊಯ್ದೊಡಂ (ವಿಷ್ಣುಪು. ೫-೫). [ಕೂರ್$_5$ + ಕೈದು$_1$ (< ಕೆಯ್ದು)]

**ಕೂರ್ಗೊಂಬು** (ನಾ). ಮೊನಚಾದ ಕೊಂಬು ; ಹರಿತವಾದ ಕೋಡು : ಕೂರ್ಗೊಂಬುದುದಿಗಳಿಂದೆ ಇರ್ಕಲದ ದಾನವರನಿಱಿವುತುಂ ಮುಱಿವುತುಂ (ಚಬಪು. ೪೪-೧೮). [ಕೂರ್$_5$ + ಕೊಂಬು$_2$]

**ಕೂರ್ಗೊನೆ** (ನಾ). ಮೊನಚಾದ ಕೊನೆ ; ತೀಕ್ಷ್ಣವಾದ ತುದಿ : ಮಾರ್ಗವೆಂದೆರಡು ಪಾತ್ರವ ಕಿದ್ದಿದೆನು ಕಣ್ಣ ಕೂರ್ಗೊನೆಯೊಳ್ ನೋಡು ಸಾಕು (ಭರಚ. ೧೨-೫೩). [ಕೂರ್$_5$ + ಕೊನೆ$_2$]

**ಕೂರ್ಗೊಳ್** (ಕ್ರಿ). ಹರಿತವಾಗಿ ಚುಚ್ಚು ; ತೀವ್ರವಾಗಿ ನಾಟು ; ಮೊನೆಗೊಳ್ಳು : ತನ್ನವಯವದೊಳು ತೋಡಿ ಕೂರ್ಗೊಂಡಿರ್ದ ಶರವ (ಮೋಹತ. ೩೮-೫೪) ; ನೃಪನ ತೇರ್ಗೆಱಗಿ ಕೂರ್ಗೊಂಡು ಮುತ್ತಿತು ಶರೌಘ (ಜೈಮಿಭಾ. ೪-೩೫) ; "ಪ್ರವೇಶಮಾಡು" (ಜೈಮಿಭಾ. ಟೀಕ). [ಕೂರ್$_5$ + ಕೊಳ್$_1$]

**ಕೂರ್ಗೊಳಗು**(ನಾ). ಕರ್ಕಶವಾದ ಕೊಳಗು; ಬಿರುಸಾದಗೊರಸು: ಕೃಷ್ಣನ ಕಡೆಗಣಿಸಿ ಕೂರ್ಗೊಳಗು [ಪಾಠಾಂ. ಗೊರ್ಲು] ಗಳಲಿಳೆ ಯೊಡೆಯಲಪ್ಪಳಿಸುತ್ತ (ನಿಭಾಗ. ೧೦-೩೦-೩೮). [ಕೂರ್$_6$ + ಕೊಳಗು]

**ಕೂರ್ಗೋಡು** (ನಾ). = ಕೂರ್ಗೊಂಬು : ಪಸು ಕೂರ್ಗೋಡಿಂದೆ ಕೋಡೆತ್ತಿ . . . ಕೆಡೆವಂತೀಡಾಡಿದತ್ತು (ವರ್ಧಪು. ೩-೬) ; ಕೂರ್ಗೋಡುಗಳ ಕಮನೀಯತೆಯನಿದ ನೋಡಿದವರೆದೆ ಬಿಱಿವುತಿದೆ ತಾಗಿದಡದೇನಹುದೋ (ನಿಭಾಗ. ೫-೨-೧೪). [ಕೂರ್$_5$ + ಕೋಡು$_5$]

**ಕೂರ್ಗೋಲ್** (ನಾ). = ಕೂರ್ಗಣೆ : ದಿವ್ಯದೇಹ ಕೂರ್ಗೋಲಿಂದೆ ನೊಂದಿರೆ ಮೆಯ್ದಡವಿದನು (ಮೋಹತ. ೩೫-೫೦) ; ಕತ್ತರಿಸಿದನು ಹಗೆಯ ಕೂರ್ಗೋಲ್ಗಳಂ (ಶ್ರೀರಾಮಾ. ೮೦೩-೯೫). [ಕೂರ್$_5$ + ಕೋಲ್$_1$]

**ಕೂರ್ಗೋಲಗಾಱ** (ನಾ). ಶೂರನಾದ ಬಿಲ್ಲುಗಾರ : ರಣಮಾರ್ಗದಿ ನಿಖಿಳಾಯುಧವೇಱಿನ ಬಣಗುಗಳ್ ಬಂದು ತನ್ನೊಡನೆ ಸೆಣಸಲು ಕೂರ್ಗೋಲಗಾಱ ಸುಂಕಕೆ ತಲೆವಣಗೊಂಡು ಬಿಟ್ಟರೆಲ್ಲರನು (ಮೋಹತ. ೩೫-೧೭). [ಕೂರ್$_5$ + ಕೋಲಗಾಱ (< ಕೋಲ್ಗಾಱ)]

**ಕೂರ್ಗೋಱೆ** (ನಾ). ಹರಿತವಾದ ಕೋರೆ, —ದಾಡೆ : ತಮ್ಮ ಬಾಗಿದ ಕೂರ್ಗೋಱೆಗುದ್ದಲಿಗಳಿಂದಗೆವ ಕಾಟ್ಪಂದಿಯ ಮಂದೆಗಳಂ (ಚಕವಂ. ೧೦೪-೧). [ಕೂರ್$_5$ + ಕೋಱೆ]

**ಕೂರ್ಚ** (ನಾ). ೧. ಕುಚ್ಚು ; ಗುಚ್ಛ. ೨. ತಲೆ ; ಶಿರಸ್ಸು. ೩. ಹುಬ್ಬುಗಳ ನಡುವಣ ಸ್ಥಳ : "ಹುಬ್ಬುಭ್ರೂವಲ್ಲಿಯಕ್ಕದಱ ನಡು ಕೂರ್ಚಮಕ್ಕುಂ" (ಮಂಗರಾ. ೯೪-೩). ೪. ಗಡ್ಡ ; ಮೀಸೆ : ಬಹು ಕುಂಚಿತಕೇಶಪಾಶನಾಲಂಬಿತ ಕೂರ್ಚಂ ಸಿಂಹದಂತಿಮದ್ರೇಕ್ಕಾಣಂ (ಜಾತತಿ. ೧೯-೧೫). ೫. ಕವಲು ; ವಿಭಾಗ : (ಕ). ೬. ಕುದುರೆ ಅಥವಾ ದನಗಳ ಪಾದದ ಮೇಲ್ಭಾಗ : "ಮುಖ ನಡುಕವಲುಂ ಶ್ಮಶ್ರುಗಳ್ಕೂರ್ಚಮಕ್ಕುಂ" (ನಾನಾರ. ೯೦) ; ಪಳಿಹಸ್ತ(ತ್ರ)ಮನಾಶ್ರಯಿಸಿದುದರ್ಕೆ ಕೂರ್ಚಮೆಂಬ ಪೆಸರಕ್ಕುಂ (ಅಶ್ವಶಾ. ೮೮-೨೩). 'ಕೂರ್ಚರೋಗ', 'ಕೂರ್ಚರೋಮ' ಪರಾ. ೭. ದರ್ಭೆ ; ಹುಲ್ಲು. 'ಕೂರ್ಚಾಸನ' ಪರಾ. ೮. ಕುಂಚ ; ಕೊಳೆಯನ್ನು ತೆಗೆಯಲು ಅನುಕೂಲವಾದ ಒರಟು ಕೂದಲು, ಜುಂಗು ಮೊದಲಾದುವುಗಳ ಗುಚ್ಛ : ಕೂರ್ಚಗಳು, ದಂತಧಾವನ ಸಾಮಗ್ರಿಗಳು . . . ತುಂಬಿದ್ದ ಪ್ರಸಾಧನ ಸಂಪುಟ (ಪುನರು. ೬೬). ೯. ಪೀಠ ; ಆಸನ ; ಕುರ್ಚಿ : ಕೂರ್ಚದಲ್ಲಿ ಕುಳಿತು ಹಿಂದಕ್ಕೆ ಒರಗಿದನು (ಚಕರಾ. ೪೦೭). [ಸಂ.]

**ಕೂರ್ಚಕ** (ನಾ). ೧. ಕುಂಚ ; ಗುಚ್ಛ : (ಕ). ೨. ಬಾವುಟದ ತುದಿಗಿರುವ ಗೊಂಡೆ : (ಕ). ೩. ಗಡ್ಡ : "ಕೂರ್ಚಕಂ ಹನುರೋಮಮಂ" (ವಸ್ತುಕೋ. ೭೧-೨೨). [ಸಂ.]

**ಕೂರ್ಚಕಲಾಪ, ಕೂರ್ಚಕಳಾಪ** (ನಾ). ೧. ಗಡ್ಡದ ಕೂದಲುಗಳ ಗುಚ್ಛ. ೨. ಗಡ್ಡವನ್ನುಳ್ಳವನು : ಲಂಬೋದರಂ ಲಂಬಕೂರ್ಚಕಲಾಪಂ (ಪಂರಾಮಾ. ೨-೨). **ಕೂರ್ಚಕಳಾಪ** : ೨. ನಾಭಿಕೂಪಾವಲಂಬಿ ಕೂರ್ಚಕಳಾಪಂ (ಆದಿಪು. ೧೩-೪೫ ವ). [ಕೂರ್ಚ + ಕಲಾಪ$_2$]

**ಕೂರ್ಚಕಳಾಪ** 'ಕೂರ್ಚಕಲಾಪ' ನೋ.

**ಕೂರ್ಚರೋಗ** (ನಾ). ಪಶುಗಳ ಪಾದಕ್ಕೆ ಬರುವ ಒಂದು ರೋಗ : ತುರಗದ ಕೂರ್ಚಸ್ಥಾನಾಂತರದೊಳಮತಿ ರೌದ್ರವೇದನಂ ಪುಟ್ಟೆ ಭಯಾತುರನಾಗಿ ಕುಂದಿ ನಡುಗುತ್ತಿರೆ ಕೂರ್ಚರೋಗಮೆಂದಱಿವುದದಂ (ಅಶ್ವಶಾ. ೧೨೦-೭). [ಕೂರ್ಚ + ರೋಗ]

**ಕೂರ್ಚರೋಮ** (ನಾ). ೧. ಪಶುಗಳ ಪಾದದ ಮೇಲಿನ ಕೂದಲು : ಕುಷ್ಠಿಕೆಯವು ನಿಡಿಯವು ಕೂರ್ಚರೋಮದಿಂ ದಶಮಾಸಂ (ಅಶ್ವಶಾ. ೩೬-೧೦). ೨. "(ದುಂಬಿಯ ಕಾಲುಗಳ ಮೇಲೆ ಇರುವ, ಪರಾಗ ಸಂಗ್ರಹಣಕ್ಕೆ ಉಪಯೋಗವಾಗುವ) ಸಣ್ಣ ಬಿರುಗೂದಲ ಕುಚ್ಚು" (scopa. ಇಂಕನಿ). [ಕೂರ್ಚ + ರೋಮ]

**ಕೂರ್ಚಶೀರ್ಷ** (ನಾ). ಒಂದು ಬಗೆಯ ಗಿಡಮೂಲಿಕೆ; ಜೀವಕ: "ಕೂರ್ಚಶೀರ್ಷ ಮಧುಕರಃ, ಶೃಂಗಃ, ಹ್ರಸ್ವಾಂಗಃ, ಜೀವಕಃ – ೫ ಜೀವಕವೆಂಬ ಔಷಧಿ; ಹಕ್ಕಿಶಿಳ್ಳೆಗಿಡ" (ಸಿದ್ಧಾಂಶಿ. ೧೨೬). [ಕೂರ್ಚ + ಶೀರ್ಷ]

**ಕೂರ್ಚಾಲ**, ಕೂರ್ಚಾಳ (ಗು). ಗಡ್ಡಮೀಸೆಗಳುಳ್ಳ: ಕೂರ್ಚಾಲ [ಪಾಠಾಂ. ಳ] ತುಂದಿಳ ಜರತ್ ಸಾಮಂತ ಸಂದೋಹಕ್ಕಪ್ಪಯಿಸಿ (ಆದಿಪು. ೪-೯೧ ವ). **ಕೂರ್ಚಾಳ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [< ಸಂ. ಕೂರ್ಚಲ]

**ಕೂರ್ಚಾಸನ** (ನಾ). ದರ್ಭಾಸನ; ಹುಲ್ಲಿನ ಚಾಪೆ: ಆ ಋಷಿಗಳ ಕೂರ್ಚಾಸನವೆಂಬ ಆಸನವು ಇದೇ ಪ್ರಕಾರದ್ದಿತ್ತೆಂದು . . . ಹೇಳುತ್ತಾರೆ (ಮುಂಬಯಿ. ೬-೨೮). [ಕೂರ್ಚ + ಆಸನ]

**ಕೂರ್ಚಾಳ** 'ಕೂರ್ಚಾಲ' ನೋ.

**ಕೂರ್ಚಿಕೆ** (ನಾ). ೧. ಕಾಯಿಸಿ ಗಟ್ಟಿಗೊಳಿಸಿದ ಹಾಲು; ಗಿಣ್ಣು: "ಕೀಲಾಟಃ, ಕೂರ್ಚಿಕಾ–ಈ ೨ ಕ್ಷಿ(ಕಿ)ೀರಸಂ" (ಹಲಾಯು.೫೪-೧೬೯). ೨. ಕಾಯಿ ಮೊದಲಾದುವನ್ನು ತುಪ್ಪದಲ್ಲಿ ಬೆರಸಿ ಮಾಡಿದ ಒಂದು ತಿಂಡಿ: "ತುಪ್ಪದುವು[ದವುಗು]ಗಳು ಕೂರ್ಚಿಕೆಯುಕ್ಕು" (ಮಂಗರಾ. ೬೪-೩). [ಸಂ. ಕೂರ್ಚಿಕಾ]

**ಕೂರ್ಚೆ** (ನಾ). ೧. ಗೊರಸಿನ ಮೇಲೆ ಬೆರಳಿನಂತಿರುವ ಭಾಗ; ಕಿರುಗೊಳಗು: ಕಣ್ಪೊದಬ್ದು ತೋಱುವೊಡೊಳವೊಕ್ಕು ನೀರನಡುರ್ದುಕ್ಕೊಡೆ ಕೂರ್ಚೆಗಳಾರೆ ಕೋಟಿಯಾರೆವೊಲಿರೆ (ಲೋಕೋಪ. ೧೧-೬೫); ಪಱಿಹತ್ತಮನಾಶ್ರಂಗೆಯ್ದು ಕೂರ್ಚೆಯೆಂಬುದು (ಅಶ್ವಶಾ. ೯-೩೫). ೨. ಕುಚ್ಚು; ಗುಚ್ಛ: ಆ ಮುದುಕನು ಅಪೂರ್ವ ಕೌಶಲದಿಂದ ದರ್ಭೆಯ ಕೂರ್ಚೆಯನ್ನುಪಯೋಗಿಸಿ ಆ ಕ್ರೀಡಾ ಕಂದುಕವನ್ನು ಮೇಲಕ್ಕೆತ್ತಿದನು (ಭೀಷ್ಮಚ. ೫೩). [< ಸಂ. ಕೂರ್ಚ]

**ಕೂರ್ತ** 'ಕೂರ್$_1$' ಪರಾ.

**ಕೂರ್ದನ** (ನಾ). ೧. ಹಾರಾಟ; ಕುಣಿದಾಟ. ೨. ಆಟ; ಲೀಲೆ. [ಸಂ.]

**ಕೂರ್ದಸಿ** (ನಾ). ಹರಿತವಾದ ದಸಿ; ಮೊನಚಾದ ಗೂಟ: ಅಸವಸದೊಳೆಯ್ದುತಿರೆ ಕೂರ್ದಸಿಯೊಂದಂಗಾಲೊಳೆಯ್ದೆ ಮೂಡಿದುದು (ವೃಷವಿ. ೨೯-೧೧೯); ಕೂರ್ದಸಿಯನಿಳುಹಿದಂತಾಯ್ತು ಕರ್ಣದೊಳಾಗ (ಜೈಮಿಭಾ. ೩೧-೩೦); ರಸಿಕನಲ್ಲದನ ಬರಿಮಾತು ಕಿವಿಗೆ ಕೂರ್ದಸಿಯ ಬಡಿದಂತೆ (ಸರ್ವಜ್ಞ. ೧೩೫೦). [ಕೂರ್$_5$ + ದಸಿ]

**ಕೂರ್ದಾಡೆ** (ನಾ). ಹರಿತವಾದ ದಾಡೆ; ತೀಕ್ಷ್ಣವಾದ ಕೋರೆ ಹಲ್ಲು: ತೆಱೆದ ಬಾಯ್ ಕೂರ್ದಾಡೆ (ಕಾವ್ಯಾವ. ೮೨೨); ಎಳವೆಱೆಯೊಗೆದಂತಿರ್ದ ಕೂರ್ದಾಡೆ ಮೈವೆತ್ತಿರೆ (ಸೂಕ್ತಿಸು. ೩-೩೫); ಮೊಳೆಯೆ ಕೂರ್ದಾಡೆ ಕೆಂಗಣ್ಗಳಿಂ ಕೆಂಗಿಡಿ ಸುತ್ತಂ ಸೂಸೆ (ಶಬಶಂ. ೩-೬೨); ಕುಡಿಮಿಂಚಿದೆಂಬಂತೆ ಕೂರ್ದಾಡೆ ತೋರೆ (ಕುಮಾಪು. ೩-೯೯). [ಕೂರ್$_5$ + ದಾಡೆ (< ದವಡೆ)]

**ಕೂರ್ದಾಲ** (ನಾ). ೧. ಗುದ್ದಲಿ; ಸಲಿಕೆ; ಕುದ್ದಾಲ: "ಗೋದಾರಣಂ, ಕೂರ್ದ್ದಾಲಂ – ಈ ೨ ಗುದ್ದಲಿ" (ಹಲಾಯು. ೯೪-೪೨೩). ೨. ಒಂದು ಬಗೆಯ ಮರ; ಕೆಂಪು ಕಾಂಚಿವಾಳ: (ಕ). [< ಸಂ. ಕುದ್ದಾಲ]

**ಕೂರ್ದಿಟ್ಟಿ** (ನಾ). ಹರಿತವಾದ ದೃಷ್ಟಿ; ತೀಕ್ಷ್ಣವಾದ ನೋಟ: (ರೆಪ್ಪೆಯಾಡದ ತನ್ನ ಕೂರ್ದಿಟ್ಟಿಗೆ ಮಹಾರಾಜನನ್ನು ಸಿಕ್ಕಿಸಿಕೊಳ್ಳಲು ಪ್ರಯತ್ನಿಸುತ್ತ) . . . ಶಿವಶಿವಾ! ಮಾಯೆಯ ಸಾಮರ್ಥ್ಯವು ಮಹಾ ದೊಡ್ಡಿತು (ಬೆಟ್ಟಅ. ೧೬-೨). [ಕೂರ್$_5$ + ದಿಟ್ಟಿ]

**ಕೂರ್ನಾಯ್** (ನಾ). ಚುರುಕಾದ ನಾಯಿ; ಉಗ್ರವಾದ ನಾಯಿ: ಭಿಲ್ಲಪ್ರಕರಮುಡಸಿ ಕೂರ್ನಾಯ್ಗಳಂ ಬಿಟ್ಟು ಬೊಬ್ಬಿಟ್ಟು (ಗಿರಿಕ. ೧-೧೦೧); ಕೂರ್ನಾಯ್ವೆರಸಿ ಶಬರರೊಂದಿಗೆ ಬಂದಂ ಪುಳಿಂದಂ (ರಾಜಶೇ. ೫-೫೧). [ಕೂರ್$_5$ + ನಾಯ್. / ತುಳು. ಕೂರ್ನಾಯಿ]

**ಕೂರ್ನಾಲಗೆ** (ನಾ). ೧. ಹರಿತವಾದ ನಾಲಗೆ. ೨. ತೀಕ್ಷ್ಣವಾದ ಮಾತು: ಕರ್ಬು ಕಡಿದಂತಿಂದು ನೀನ್ ನುಡಿಯೆ ಏನೆಂಬನ್? ನಿನ್ನ ಕೂರ್ನಾಲಗೆಗೆ ನನ್ನ ಧ್ಯೇಯಂ ಪೋಯ್ತು (ಅಶ್ವತ್ಥಾ. ೨೪-೪೬೨). [ಕೂರ್$_5$ + ನಾಲಗೆ]

**ಕೂರ್ನುಡಿ** (ನಾ). ತೀಕ್ಷ್ಣವಾದ ನುಡಿ; ಉಗ್ರವಾದ ಮಾತು: ಕಾಯಿಸಿದ ಕಬ್ಬಿಣವ ಕರಗಿ ಹೊಯ್ದಂತಾದುದಯ್ ದಶರಥಗೆ ಕುಶಿಕತನಯನ ಪೇಳ್ದ ಕೂರ್ನುಡಿಗೆ (ಶ್ರೀರಾಮಾ.೨೯-೩೫). [ಕೂರ್$_5$+ ನುಡಿ$_2$]

**ಕೂರ್ನೋವು** (ನಾ). ತೀಕ್ಷ್ಣವಾದ ನೋವು; ಅತಿಯಾತನೆ: ನಿನ್ನೊಲವು, ಚೆಲುವೆ, ನಿನಗೆ ಕಿಱಿದೇನುಮಲ್ಲವಾ ಕೂರ್ನೋವನಣಿಗೊಳಿಸಿ ಇರ್ಪುದವ್ (ಬದ್ಧಪ್ರ. ೩೯-೮೪೯). [ಕೂರ್$_5$ + ನೋವು]

**ಕೂರ್ಪ$_1$**, ಕೂಪ$_1$ (ನಾ). ಪ್ರೀತಿಸುವವನು; ಪ್ರಿಯ; ಕಾದಲ; ನೇಹಿಗ: ಕೂರ್ಪರನಟ್ಟಿ ಆವರೋದುವ ಕ್ಷೇತ್ರದೆ ಬಳಸಿಯುಂ ನೋಡಿಸುವುದು (ವಡ್ಡಾರಾ. ೧೬೬-೨೨); ಕೂರ್ಪರೊಳ್ ನುಡಿದೊಡಲ್ಲದೇಂ ಪೋಕುಮೇ (ಆದಿಪು. ೩-೩೨); ಬಿಜುಸರಳ್ತಮ್ಮ ಕೂರ್ಪರ ಮೇಲೆ ಬರಲದಕೆ ಗುರಿಯಾಗಿ ತೊಱೆದುವಸುವಂ ಕೆಲವು ಪುಲ್ಲೆಗಳು (ಜೈಮಿಭಾ. ೨೮-೫೦). **ಕೂಪ$_1$**: ಕೂಪರ ಠಾವಿನಲ್ಲಿ ಕೂಟಜೀವಾಳ (ಬಸವ. ೩೬೬); ಕೂಪರಾರ್ ನೀನಲ್ಲದೆಮಗೆ (ಬಸಪು. ೨೩-೨೨). [ಕೂರ್ಪು$_1$ + –ಅ$_7$]

**ಕೂರ್ಪ$_2$** (ನಾ). ೧. ಹುಬ್ಬುಗಳ ನಡುವಿನ ಪ್ರದೇಶ: "ಕೂರ್ಚ(ರ್ಪ)ವೆಂಬುದು ಎರಡುಹು(ಪು)ಬ್ಬಿನ ನಡು" (ಹಲಾಯು. ೮೬-೩೬೬). ೨. ಒಂದು ಬಗೆಯ ಕುಕ್ಕೆ; ಗೆರಸೆ: "ಕೆ(ಗೆ) ರಸಿ (ಶಿ) ಕೂರ್ಪಮೆನಿಕ್ಕು" (ಮಂಗರಾ. ೬೨-೨೨). ೩. ಸ್ತ್ರೀಯರ ಯೋನಿಯ ಸುತ್ತಲಿನ ರೋಮ: "ವರಾಂಗಮೆನಲಂಗನೆಯ ಯೋನಿಯಕ್ಕದಱಂಕುರಂ ಶಿಖಮದಂಗು ತದ್ರೋಮಗಳು ಕೂರ್ಪಂ" (ಮಂಗರಾ. ೯೬-೧೪). [ಸಂ.]

**ಕೂರ್ಪ$_3$** 'ಕೂರ್$_1$' ಪರಾ.

**ಕೂರ್ಪರ** (ನಾ). ೧. ಮೊಳಕೈ: "ಕಫೋಣಿಃ, ಕೂರ್ಪರಃ – ಈ ೨ ಮೊ(ಬ)ಣಕೆಯ್" (ಹಲಾಯು. ೮೮-೩೭೯); "ಮೊಳಕೈ ಕಫೋಣಿ ಕೂರ್ಪರಮೆಂದೆನಿಕ್ಕುಂ" (ಮಂಗರಾ.೯೫-೯). ೨. ಮೊಣಕಾಲು: (ಕ). [ಸಂ.]

**ಕೂರ್ಪಾಸ** (ನಾ). ಕುಪ್ಪಸ; ಕಂಚುಕ: "ಕಂಚುಕಃ, ವಾರವಾಣಃ, ಕೂರ್ಪಾಸಃ, ನಿಚೋಳಕಃ – ಈ ೪ ಕುಪ್ಪಸಂ" (ಹಲಾಯು. ೯೧-೩೯೮); ತಜ್ಜಂಗಮಂ ತೊಟ್ಟು ಕೂರ್ಪಾಸಮಂ ಪಿಡಿವುತೆ (ಪದ್ಮರಾ. ೪-೬೨); ಬೀಳ್ದಿರ್ಪಂ ತನುವೆಂಬ ಪಂದೊವಲ ಕೂರ್ಪಾಸಂಗಳಂ ತೊಟ್ಟು (ರತ್ನಾಶಾ. ೧೦). [ಸಂ.]

**ಕೂರ್ಪಾಸಕ** (ನಾ). = ಕೂರ್ಪಾಸ: "ವಾರವಾಣಕಂ ಕಂಚುಕಂ ಕೂರ್ಪಾಸಕಂ ನಿಚೋಲಕಂ" (ವಸ್ತುಕೋ. ೬೮-೨೧). [ಸಂ.]

**ಕೂರ್ಪಿಡು** (ನಾ). ಹರಿತಗೊಳಿಸು; ಮಸೆ: ಕುಸುಮಬಾಣಮಂ ಪೊಸಗಂಪಿಂ ಕೂರ್ಪಿಡುವಂತೆ (ಗಿರಿಕ. ೫-೬೬ ವ). [ಕೂರ್ಪು$_2$ + ಇಡು$_1$]

**ಕೂರ್ಪು$_1$** (ನಾ). ಒಲವು; ಸ್ನೇಹ; ಪ್ರೀತಿ: "ಕೂರ್ಪೊಱಲುಂ ಕಾದಲ್ಮೆಯೆನ್ನಲಿವು ಸುಸ್ನೇಹಂ" (ಕವಿಕಂ. ೧೬೩); ಕಾದಲರಾಡುವ ಕೂರ್ಪಿನ ಮಾತು ಪೆರರು ಕೇಳ ತಗವು (ರಾಮನ. ೨೩). [ಕೂರ್$_1$ + –ಪು$_1$]

**ಕೂರ್ಪು₂** (ನಾ). ೧. ಹರಿತವಾಗಿರುವಿಕೆ; ಮೊನೆ; ತೀಕ್ಷ್ಣತೆ: "ಕೂರ್ಪು ಕೂರತೆಯೊಳ್ಪುದಿದಿರ್ಕುಂ" (ಕರ್ಣಾನಿ. ೭); ಸೂಜಿಯ ಕೂರ್ಪು ಕುಂಬಳದೊಳದಂಗುವಂತೆ (ಪಂಪಭಾ. ೧೩-೬೫ ವ); ಇವಳ ಕಡೆಗಣ್ಣಿಂಬೀಲೇಸಪ್ಪ ಕೂರ್ಪಿನ ಬಾಣದಿಂ (ಧರ್ಮಾಮೃ. ೩-೩೪); ಅಲರ್ಗಣೆಗೆ ಕೂರ್ಪು ಕೊಡುವ ತೆಜದಿಂ (ಗಿರಿಕ. ೪-೨); ನನಗಣೆಯ ಕೂರ್ಪುಮಂ ಕೂಡಿಕೊಂಡು (ಸಿದ್ಧರಾ. ೪-೬೦). ೨. ಕಲಿತನ; ಪರಾಕ್ರಮ: ಬಲ್ಪುಂ ಕೂರ್ಪುಮಾರ್ಪುಂ ನಿರಂತರಮೊಪ್ಪಲ್ (ಎಇ. XIII, ೩೨೯-೫; 927); ನಿನ್ನೊಂದೆ ಮೆಯ್ಯೊಳಾದ ಕೂರ್ಪು ಪಗೆವರ ದರ್ಪಮನದಿರ್ಪುದಲ್ತೆ (ಪಂಪಭಾ. ೧೩-೬೫ ವ); ಕೂರ್ಪುಳ್ಳನಲ್ಲಂ ಗುಣಾನ್ವಿತನಂತಲ್ಲನೆನಿಪ್ಪನಂ ಪೊರೆಯವೇಡೇನಾದೊಡಂ ಭೂಭುಜಂ (ಪಂಚತಂ. ೨೬೬-೨೭); ನಿನ್ನ ಕಲಿಗಳ ಕೂರ್ಪು (ಹೊಂಗಳು. ೧೫-೨೦). ೩. ಅತಿಶಯ; ಆಧಿಕ್ಯ: ವಿನಯದ ಬೆಟ್ಟು ವೀರರಸದಾಗರಮೊಪ್ಪಿನ ಕೂರ್ಪು (ಎಕ. V, ಅರಸೀ. ೧೬೨-೩೫; 1162). [ಕೂರ್₅ + -ಪು]

**ಕೂರ್ಪುಗಿಡು** (ಕ್ರಿ). ೧. ತೀಕ್ಷ್ಣತೆಯನ್ನು ಕಳೆದುಕೊಳ್ಳು; ಮೊಂಡಾಗು: ಬಜಿಯೊಳಗಣ ಕೂರಸಿಯಂತೆ ಕೂರ್ಪುಗಿಡದೆ ಸೌಜನ್ಯಮನುಂಟುಮಾಡಿ (ಶಾಂತಿಪು. ೬-೩). ೨. ಕಲಿತನ ಕುಂದು; ಸಾಮರ್ಥ್ಯ ಕಡಿಮೆಯಾಗು: ತನ್ನ ಪಕ್ಷಂ ಸತ್ತೊಡಂ ಮಾತು ಸಾಯದೆ ತೋರ್ಪುಗೆಟ್ಟೊಡಂ ಕೂರ್ಪುಗಿಡದೆ (ಶಾಂತಿಪು. ೪-೩೨ ವ). [ಕೂರ್ಪು₂ + ಕಿಡು (< ಕೆಡು₁)]

**ಕೂರ್ಪುಡುಗು** (ಕ್ರಿ). = ಕೂರ್ಪುಗಿಡು: ದಡಿಗನ ಮಿಟ್ಟುವಂ ಮಿದಿದೊಡಲ್ಲದೆ ಮಾಣನವೋಘಮೆಂದು ಕೂರ್ಪುಡುಗದೆ ಬಂದು ತಾಗೆ (ಪಂಪಭಾ. ೧೨-೧೬೨); ಕಡುಗಾಯ್ದು ಶಿಲೆಗಳೊಳ್ ಕೂರ್ಪುಡುಗದ ಕೈದುಗಳೊಳೆಜಗಿ (ಅಜಿಪು. ೧೧-೯). [ಕೂರ್ಪು₂ + ಉಡುಗು₁]

**ಕೂರ್ಪೇಱಿಸು** (ಕ್ರಿ). ಕಲಿತನವನ್ನು ಹೆಚ್ಚುಮಾಡು; ಪರಾಕ್ರಮವನ್ನು ಹುಟ್ಟಿಸು: ಸ್ಮರನಂ ಕೂರ್ಪೇಱಿಸಲ್ ಸಾರ್ದಲರ್ಗಣೆ ಕಡು ಕೂರ್ಪೇಱಿರಲ್ (ಜಗವಿ. ೧೦-೭೮). [ಕೂರ್ಪು₂ + ಏಱಿಸು]

**ಕೂರ್ಪೇಱು** (ಕ್ರಿ). ಹರಿತವಾಗು; ತೀಕ್ಷ್ಣತೆ ಹೆಚ್ಚಾಗು: ಕಾಮನ ಶರಂ ಕೂರ್ಪೇಱೆ ಪುಂಡ್ರೇಕ್ಷುಚಾಪನ ಚಾಪಂ ಗೊಲೆಗೇಱೆ (ಧರ್ಮಾಮೃ. ೧೩-೧೦); ಅಲರ್ಗಣೆ ಕಡು ಕೂರ್ಪೇಱಿರಲ್ (ಜಗವಿ. ೧೦-೭೮). [ಕೂರ್ಪು₂ + ಏಱು₁ (< ಏಱ್₁)]

**ಕೂರ್ಬಟ್ಟೆಳೆ** (ನಾ). (?): ಮುಟ್ಟಿದಲಗಹಿತರ ಬೆನ್ನಟ್ಟಿದಲಗು ಜಗದೊಳುಳ್ಳ ಕಂಟಕರಂ ಕೂರ್ಬಟ್ಟೆಳಮೆನಿಸುವ ಚಕ್ರಿಯ ಕೆಟ್ಟಿದಲಗು ಮಲ್ಲಭೂಪನಾದಿದೀಳಿಪ (ಸೌಇಇ. IX-i, ೧೬೨-೨೪; 1106). [?]

**ಕೂರ್ಬಾಳ್** 'ಕೂರ್ವಾಳ್' ನೋ.

**ಕೂರ್ಮ** (ನಾ). ೧. ಆಮೆ; ಕಮಠ: "ಕಚ್ಛಪಃ, ಕಮಠಃ, ಕೂರ್ಮಃ – ಈ ೩ ಆವೆ" (ಹಲಾಯು. ೧೦೮-೩೪); ಮನುಜಮಾಂಧಾತನ ಪೊಜ ಅಡಿಗಳ್ . . . ಕೂರ್ಮೋನ್ನತಂಗಳಾದುವು (ಪಂಪಭಾ. ೨-೩೯ ವ). ೨. ವಿಷ್ಣುವಿನ ಹತ್ತು ಅವತಾರಗಳಲ್ಲಿ ಎರಡನೆಯದು: ಆನೆ ಮೆಟ್ಟಿದೆಸಮುರ್ಚ್ಚಿವೊಲಾಗೆ ಕೂರ್ಮನೊಡೆದಂ (ಜಗವಿ. ೧-೩೦). ೩. ದೇಹದ ಹತ್ತು ವಾಯುಗಳಲ್ಲಿ ಒಂದು: "ಹೃದಯದನಿಲಂ ಪ್ರಾಣಮೆನಿಕ್ಕು . . . ಪುದಿದಂಗಮುಂ ಬಲಿದಿಹುದು ಕೂರ್ಮಮಕ್ಕು" (ಮಂಗರಾ. ೧೫-೧೨). ೪. ಐದು ಮಂತ್ರಿನರಕಗಳಲ್ಲಿ ಒಂದು: ಮತ್ತಂ ಸರ್ಪ ಕೂರ್ಮ . . . ಉಲೂಕವೆಂಬೈದು ಮಂತ್ರಿನರಕಂಗಳಿಂ (ವಿವೇಕ. ೧೮೦). ೫. [ನಾಟ್ಯ] ಒಂದು ಬಗೆಯ ಹಸ್ತಮುದ್ರೆ: ಸ್ವಸ್ತಿಕ . . . ಕೂರ್ಮ . . . ವೃಷಭಾಸನ – ಈ ಇಪ್ಪತ್ತಮೂಱು ಸ್ಥಾನಕಂಗಳ್ (ಲಾಸ್ಯರಂ. ೭-೧೨ ವ). [ಸಂ.]

**ಕೂರ್ಮಗತಿ** (ನಾ). ಆಮೆಯ ನಡಗೆ; ಮಂದಗತಿ: ಆವಸರ ಮತ್ತು ಆರ್ಥಿಕ ಸಮಸ್ಯೆಗಳ ಇಂದಿನ ದಿವಸದಲ್ಲಿ ಯಾರೂ ಕೂರ್ಮಗತಿಯಿಂದ ಸಾಗರು (ಪತ್ರಿಕಾ. ೬೦). [ಕೂರ್ಮ + ಗತಿ]

**ಕೂರ್ಮಚಕ್ರ** (ನಾ). (ತಂತ್ರಸಾರದಲ್ಲಿ ಹೇಳಿರುವ) ಕೂರ್ಮಾಕಾರವಾದ ಒಂದು ಚಕ್ರ: ಬಳಿಕ ಮಂತ್ರಸಿದ್ಧಿ ಸೂಚಕವಾದ ಮಾತೃಕಾಚಕ್ರ, ಸರ್ವತೋಭದ್ರ, ಕೂರ್ಮಚಕ್ರ . . . ಇತ್ಯಾದಿಗಳ ಕ್ರಮುವಱಿತು (ವಿವೇಕ. ೮೦). [ಕೂರ್ಮ + ಚಕ್ರ]

**ಕೂರ್ಮಪುಟ** (ನಾ). (ಔಷಧಿಯನ್ನು ಭಟ್ಟಿಯಿಳಿಸುವುದಕ್ಕೆ ಹಾಕುವ) ಪುಟದಲ್ಲಿ ಒಂದು ಬಗೆ: ಒಂದು ವೇಳೆ ಕೂರ್ಮಪುಟಮಂ ಹಾಕಿ . . . ತೆಗೆದುಕೊಳ್ಳೆ ಸರ್ವಾತಿಸಾರಂ, ಗ್ರಹಿಣಿ, ವರ್ದಿ ಸಹ ಮಾಣ್ಗುಂ (ಸಕವೈ. ೩೨೫). [ಕೂರ್ಮ₀ + ಪುಟ₃]

**ಕೂರ್ಮಪುರಾಣ** (ನಾ). ಹದಿನೆಂಟು ಪುರಾಣಗಳಲ್ಲಿ ಒಂದು: ಬ್ರಹ್ಮಪುರಾಣ, ಪದ್ಮಪುರಾಣ . . . ವಾಮನಪುರಾಣ, ಕೂರ್ಮಪುರಾಣ, ಮತ್ಸ್ಯಪುರಾಣ, ಗಾರುಡಪುರಾಣ, ಬ್ರಹ್ಮಾಂಡಪುರಾಣವೆಂಬವೇ . . . ಹದಿನೆಂಟು ಮೂಲಪುರಾಣಂಗಳು (ವಿವೇಕ. ೭). [ಕೂರ್ಮ + ಪುರಾಣ]

**ಕೂರ್ಮರೋಮ** (ನಾ). (ಆಮೆಯ ಕೂದಲಿನಂತೆ) ಅಸಂಭವವಾದುದು; ಅಸತ್ಯವಾದುದು: ಮೊದಲಿಂದಂ ಕೂರ್ಮರೋಮಂ [ಪಾಠಾಂ. ಕೂರ್ಮರೋಗಂ]ಟಗೆಯ ಶಶವಿಷಾಣಂ ವಿಯತ್ಪುಷ್ಪದಂತಿಲ್ಲದುದೇ ಸತ್ಯಂ ಪ್ರಪಂಚೆಂದಱಿದು ತಿಳಿದು (ರಕ್ಷಾಶ. ೯೨). [ಕೂರ್ಮ + ರೋಮ]

**ಕೂರ್ಮವದನ** (ನಾ). ೧. ಆಮೆಯ ಮುಖ. ೨. ಆಮೆಯಂತೆ ಮುಖವುಳ್ಳವನು: ಕೂರ್ಮವದನಂ ಮಲಯಾಕರಮಂ ರಕ್ಷಿಸುವಂ ಕೇಸರಿರೂಪಂ ವೃಶ್ಚಿಕಾಂತಿಮುದ್ರೇಕಾಣಂ (ಜಾತತಿ. ೧೯-೨೪). [ಕೂರ್ಮ + ವದನ]

**ಕೂರ್ಮವಾಯು** (ನಾ). = ಕೂರ್ಮ ೩: ದಶವಾಯುಗಳ ಸ್ಥಾನಂಗಳಾವುವೆಂದಡೆ . . . ಪಿಂಗಳನಾಳದಲ್ಲಿ ಕೂರ್ಮವಾಯು, ಸುಷುಮ್ನನಾಳದಲ್ಲಿ ಕೃಕರವಾಯು (ಚನ್ನಪ. ೮೬೯). [ಕೂರ್ಮ + ವಾಯು]

**ಕೂರ್ಮವೀಣೆ** (ನಾ). ಒಂದು ಬಗೆಯ ವೀಣೆ: ಮಾದರಸನ ರಾವಣವೀಣೆ, ರುದ್ರವೀಣೆ, ಕೂರ್ಮವೀಣೆ . . . ಮೊದಲಾದ ಮೂವತ್ತೆರಡು ವೀಣೆಗಳನ್ನೂ (ಶರಚ. ೨೮೫). [ಸಂ. ಕೂರ್ಮವೀಣಾ]

**ಕೂರ್ಮಸೆ** (ನಾ). ಹರಿತವಾಗುವಂತೆ ಮಸೆಯುವಿಕೆ. 'ಕೂರ್ಮಸೆಯಿಡು' ಪರಾ. [ಕೂರ್₅ + ಮಸೆ₂]

**ಕೂರ್ಮಸೆಯಿಡು** (ಕ್ರಿ). ಮಸೆದು ಹರಿತವಾಗು, —ತೀಕ್ಷ್ಣವಾಗು; ಸಾಣೆಯಿಡು: ಮಸೆದುದು ಮದನನ ಬಾಳ್ ಕೂರ್ಮಸೆಯಿಟ್ಟುದು ಕಾಮನಂಬು (ಪಂಪಭಾ. ೩-೪೭). [ಕೂರ್ಮಸೆ + ಇಡು₁]

**ಕೂರ್ಮಾವತಾರ** (ನಾ). = ಕೂರ್ಮ ೨: ಸೇವಿಸನೆ ಕೂರ್ಮೇಶನಂ ಕೂರ್ಮಾವತಾರನು (ಬಸಪು. ೫೪-೬೨). [ಕೂರ್ಮ + ಅವತಾರ]

**ಕೂರ್ಮಾಸನ** (ನಾ). ೧. ಮರದ ಅಥವಾ ಲೋಹದಿಂದ ಮಾಡಿದ ಆಮೆಯಾಕಾರದ ಆಸನ, —ಪೀಠ: ಆಚಾರ್ಯ, ಇದು ಕೂರ್ಮಾಸನ ಕುಳಿತುಕೊಳ್ಳಬೇಕು (ಭಾಸನಾ. ೩೩). ೨. ಯೋಗಾಸನಗಳಲ್ಲಿ ಒಂದು: ಯೋಗಾಸನಗಳಲ್ಲಿ . . . ಕೂರ್ಮಾಸನ . . . ಅರ್ಧಾಸನಾದಿಯೆಂಭತ್ತಾಲ್ಕಾಸನ ಭೇದಂಗಳಂ (ವಿವೇಕ. ೧೪೯). [ಕೂರ್ಮ + ಆಸನ]

**ಕೂರ್ಮಾಸ್ಥಿಧರ** (ನಾ). ಆಮೆಯ ಮೂಳೆಯನ್ನು ಧರಿಸಿದವನು; ಶಿವ: ಕನತ್ಕೂರ್ಮಾಸ್ಥಿಧರ ನುತಚತುರ್ಮುಖ (ಉದ್ಭದೇ. ೬-೨೯). [ಸಂ.]

**ಕೂರ್ಮಿ** (ನಾ). ಹೆಣ್ಣಾಮೆ : (ಶ). [ಸಂ. ಕೂರ್ಮಿ]

**ಕೂರ್ಮುಳ್** (ನಾ). ಮೊನಚಾದ ಮುಳ್ಳು ; ಚೂಪಾದ ಮುಳ್ಳು : ಇರಿತದ ಕೂರ್ಮುಳ್ಗಳ ಲಾಳಗಳಿಂದ ಕುಣಿದಾಡುತ್ತಿರುವಂತೆ (ಮಂತ್ರಶ. ೭೩–೨೩). [ಕೂರ್$_5$ + ಮುಳ್$_2$]

**ಕೂರ್ಮೆ**, ಕೂರುಮೆ (ನಾ). ಒಲ್ಮೆ ; ನಲ್ಮೆ ; ಪ್ರೇಮ : "ತಕ್ಕು. . . ಕೂರ್ಮೆ ಎಱಕಂ ಒಪು- ಈಲ ಸ್ನೇಹಕ್ಕೆ ಪೆಸರ್" (ಕಶಸಾ. ೧೯–೩೯೦); ಕೂಸಿನ ಮೇಗೆ ನಿಮಗೆ ಕೂರ್ಮೆಯಾದುದು (ವಡ್ಡಾರಾ. ೧೦–೮); ಒರ್ಮೆಯುಮುವಚಱದೊಲವಿನ ಕೂರ್ಮೆಯ ತತ್ಪತಿಗವೂಕೆಗಂ . . . ಇರ್ವರ್ ತನಯರ್ (ಆದಿಪು. ೨–೩೭); ಪಾಲುಂ ಕೂರ್ಮೆಯುಂ ಮಱುಗಿದೊಡಲ್ಲದೆ ಲೇಸಾಗವು (ಧರ್ಮಾಮೃ. ೬–೬೮); ಕೃಷ್ಣನ ಕೂರ್ಮೆಯಿರಲಿನ್ನಾವುದರಿದೆಮಗೆ (ಕುವ್ಯಾಆ. ೧೬–೪೭). **ಕೂರುಮೆ** : ದೈವದ ಕೂರುಮೆಯು ನೆಲೆ ಬೇಱೆ (ಕುವ್ಯಾದ್ರೋ. ೨–೪); ಬಲವಂದು ವಂದಿಸಿ ಕೂರುಮೆಯ ಭಕ್ತಿಯಲಿ ಕೇಳಿದನಧಿಕತರ ವರವ (ಅಂಬಿಕಾ. ೬–೪೭); ವೀರರಿದ್ದೇನಹುದು ದೈವಗತಿಯ ಕೂರುಮೆಯು ಬೇರಾದ ಮೇಲೆ (ತುರಂಗ. ೫೭–೪೭). [ಕೂರ್$_1$ + –ಮೆ$_1$]

**ಕೂರ್ಮೆಗೆಡು** (ಕ್ರಿ). ಒಲುಮೆಯನ್ನು ಕಳೆದುಕೊಳ್ಳು; ಪ್ರೇಮದಿಂದ ವಂಚಿತನಾಗು : ಒಪಳೆ ಕೂರ್ಮೆಗೆಟ್ಟನಗೆ ನೀನೇನಾನುಮೊಂದೇವಮಂ ಮನದೊಳ್ ಮಾಡಿದೊಡಂದೆ ದೀವಳಿಗೆಯುಂ ಮಾನಾಮಿಯುಂ ಮಾಡೆಸೇ (ಪಂಪಭಾ. ೪–೯೩); ಕೂರ್ಮೆಗೆಟ್ಟ ಹೃದಯಗಳು ಭಿನ್ನಗಳಾಗಿ ಸೇರಲಾರವು (ಲಕ್ಷ್ಮೀಪ್ರ. ೧೭೩). [ಕೂರ್ಮೆ + ಕೆಡು$_1$]

**ಕೂರ್ಮೇಶ** (ನಾ). ೧. ಆಮೆಗಳ ಒಡೆಯ; ಆದಿ ಕಮಠ. ೨. ಒಂದು ಶಿವಲಿಂಗ : ಸೇವಿಸನೆ ಕೂರ್ಮೇಶನಂ ಕೂರ್ಮಾವತಾರನು ಸೇತುವಿನೊಳಾ ರಾಮನಾಥನನು (ಬಸಪು. ೫೪–೬೨). [ಕೂರ್ಮ + ಈಶ]

**ಕೂರ್ಮೊತ್ತ** (ನಾ). ಗಾಢ ಪ್ರೇಮ : ಪೊಲಗೆಟ್ಟು ಪೊಕ್ಕ ಮೃಗಶಾಬಾನೀಕಮಂ ಕೊಂಡು[ಪಾಠಾಂ. ದು] ಕೇಸಡಗಂ ಸೂಡುವರಲ್ಲಿ ಬಾಲೆಯರೆನಲ್ಕೂರ್ಮೊತ್ತದಿಂ ಮತ್ತಮೊಂದೆಡೆಗೇ ನೀಗುಮೆ ಪೋಗಲುತ್ಕಟ ಮಹಾಪಾಪಕ್ಕೆ ತಾಂ ಪಕ್ಕಣಂ (ಅರ್ಧನೇ. ೩–೫೦). [ಕೂರ್$_1$ + ಮೊತ್ತ]

**ಕೂರ್ಮೊನೆ** (ನಾ). ಹರಿತವಾದ ಮೊನೆ; ತೀಕ್ಷ್ಣವಾದ ತುದಿ : ಕಡೆಗಣ್ಣ ಕೂರ್ಮೊನೆಗಳಿಂ ದೈತ್ಯಾರಿಯುಂ ನೋಡಿದಳ್ (ಜಗವಿ.೧೬–೮೬); ಜವನ ಮಂತಣ ಸೂಲದಂತೆ ನೆಗೆದ ಕೊಂತದ ಕೂರ್ಮೊನೆಯ ಕೋಲಾಟಕ್ಕೆ (ಕಬ್ಬಿಕಾ. ೨೮೮); ಕೂರ್ಮೊನೆಯ ಸರಳ್ಗಳಿಂದೆಸೆಯಲ್ಕೆ (ಚಿಬಪು. ೪೩–೧೯). [ಕೂರ್$_5$ + ಮೊನೆ$_1$]

**ಕೂರ್ಯ** (ನಾ). ಶೂರ; ಕಲಿ (?) : ವೀರ್ಯದಲ್ಲಿ ಶುದ್ಧಮರ್ಯಾದೆ ತಪ್ಪದೆ ತೂರ್ಯಗಣದಲ್ಲಿ ಕೂರ್ಯನೆಂದೆನಿಸು ಸೂರ್ಯನಾಮಕದೇವ ವಿಜಯವಿಠ್ಠಲನ ಚಾತುರ್ಯದಿಂದ ಸ್ತುತಿಸಿ (ವಿಪ್ರಸು. ೨೮–೩). [?]

**ಕೂರ್ವಡೆ** (ನಾ). ಪ್ರಬಲವಾದ ಸೈನ್ಯ; ಬಲಿಷ್ಠ ಪಡೆ : ಅರಲಲಗನ ಕೂರ್ವಡೆಯಂ ಗೆಲ್ದಂ (ಸೌನಂದ. ೩–೭). [ಕೂರ್$_5$ + ಪಡೆ$_2$]

**ಕೂರ್ವಾಳ್**, ಕೂರ್ಬಾಳ್ (ನಾ). = ಕೂರಸಿ : ಅಳ್ಕದೆ ಚಕ್ರವರ್ತಿಯ ತನೂಜೆಯನೊಯ್ದನ ಬೆನ್ನನೆನ್ನ ಕೂರ್ವಾಳ್ಕೊಳೆ (ಶಾಂತಿಪು. ೩–೬೯); ಭರತನ ಕೂರ್ವಾಳನಸುಮಸೆಗೆ ಬಾಲಮೃಣಾಳಂ ರಿಪುನೃಪರ ಕಂಠನಾಳಂ ಧುರದೊಳ್ (ಪಂರಾಮಾ. ೮–೨೭); ಮಗಧಾಧೀಶನ ನೆತ್ತಿಯೊಳ್ಮುಱಿದ ಕೂರ್ವಾಳ್ (ಎಕ. XI, ದಾವಣ. ೩೫–೧೭; 1160); ಇರ್ದಳ್ ಮನೋಜನ ಕೂರ್ವಾಳೆನೆ ಬಾಲೆ (ಕುಸುಮಾ. ೧೧–೧೪೭). **ಕೂರ್ಬಾಳ್** : ಎಸೆವೀ ಬಲ್ಲಾಳದೇವಂಗವಿೂತನೆ ಬಲಮೊಳ್ ತೋಳ್ಗೆ ಸಂದಿರ್ದ ಕೂರ್ಬಾಳ್ ಬಸವಂ (ಎಕ. VI, ತರೀಕೆ. ೪೫–೮೬ ; 1196). [ಕೂರ್$_5$ + ಬಾಳ್$_2$]

**ಕೂರ್ವಿಸಿಲ್** (ನಾ). ಉಗ್ರವಾದ ಬಿಸಿಲು ; ಕಡುಬಿಸಿಲು : ಒದವಿದ ಬೆಟ್ಟಬೇಸಗೆಯ ಕೂರ್ವಿಸಿಲರ್ವಿಸೆ ಬೆರ್ಚಿ (ಚಂದ್ರಪು. ೯–೭೭). [ಕೂರ್$_5$ + ಬಿಸಿಲ್]

**ಕೂರ್ವು** (ನಾ). = ಕೂರ್ಪು$_1$ : ಆ ಸೇನೆಯುಂ ಕೂರ್ವಿನಿಂ ಪೊರೆವುತೆಲ್ಲ ವನಱಿದು ಕೈದುವಿಡಿದೂರ್ವಿ (ವೀಶೈಪು. ೭–೨–೧೩). [ಕೂರ್$_1$ + –ವು]

**ಕೂರ್ವೆ** (ನಾ). ನಡುಗಡ್ಡೆ ; ದ್ವೀಪ : ಉಪ್ಪಿನ ಪಟ್ಟಣದಿಂದ ಮುಂದಿನ ಪಾತ್ರದಲ್ಲಿ ಕೆಲವು ಸಣ್ಣಸಣ್ಣ ಕೂರ್ವೆಗಳು ಆಗಿವೆ (ಕಾರವ. ೧೪). [< ಕುರುವ]

**ಕೂರ್ಸರಲ್**, ಕೂರ್ಸರಳು (ನಾ). = ಕೂರಂಬು : ತೂಗುತುಂ ಕೂರ್ಸರಲನರುಣನೇತ್ರಾರವಿಂದಂ ಪುಳಿಂದಂ (ಕುಸುಮಾ. ೧೦–೧೪೮). **ಕೂರ್ಸರಳು** : ಮಲಗಿನೊಳು ಸೂಸಿದರಳುಗಳು ಕೂರ್ಸರಳುಗಳು ಗಿಳಿವಾತು ಬೂತು ತಂಗಾಳಿ ಮದನನ ದಾಳಿ (ರಾಘಚ. ೧೩–೨೯). [ಕೂರ್$_5$ + ಸರಲ್$_1$]

**ಕೂರ್ಸರಲ್ಸರಿ** (ನಾ). ಹರಿತವಾದ ಬಾಣಗಳ ಮಳೆ : ಕರ್ವುವಿಲ್ಲಾಸಿಗಂ ತುಂಬಿ ತೆಗೆದೆಸುವಮಳ್ಕೂರ್ಸರಲ್ಸರಿಯ (ಉದ್ಭದೇ. ೫–೧೯). [ಕೂರ್ಸರಲ್ + ಸರಿ$_6$]

**ಕೂರ್ಸರಳು** 'ಕೂರ್ಸರಲ್' ನೋ.

**ಕೂಲ್**$_1$ 'ಕೋಲ್$_1$' ನೋ.

**ಕೂಲ್**$_2$, ಕೂಲು$_3$ (ನಾ). ೧. ವಿಗ್ರಹ ಮೊದಲಾದುವುಗಳನ್ನು ಸ್ಥಿರವಾಗಿ ಕೂಡಿಸುವುದಕ್ಕಾಗಿ ಮಾಡಿದ ತಳಗೂಟ; ಬೆಣೆ; ಕೂರು : "ಪೀಠರಂಧ್ರ ಪ್ರವೇಶ್ಯಭಾಗ" (ಶಬ್ದಾನು. ೧೪೮ ವ್ಯಾಖ್ಯಾ). ೨. ತುದಿ ; ಕೊನೆ : ಕೂಲೊಳ್ ಪಾಂ[ಪಾಠಾಂ. ಪೂಂ]ಗುನೂಲಂ ಸುತ್ತುವ ಕುಡುಗೋಲ್ಗಳುಂ (ಲೀಲಾವ. ೭–೬೮ ವ); ಭಾನುಜನ ಧ್ವಜಗಂಭ ಕೂಲ್ಮುರಿದು ಕನಕಮಯ ರಥದ ಮೇಲ್ಬೀಳಲ್ಕೆ (ತುರಂಗ. ೭೦–೪೫). **ಕೂಲು**$_2$ : ೧. ಬೇಲೂರೊಳಂ ಮಹಾದೇವಿ ಲಿಂಗದ ಶಿರಂ ಕೂಲಿಂಗೆ ಮುಱಿಯೆ (ಗುರುಚಾ. ೧೬–೨೩) ; ಒಂದು ಸೊಂಟಮಟ್ಟ ತೆಗೆದ ಮೇಲೆ ಕೂಲು ಸಿಕ್ಕಿತು (ಸುವಸಂ. ೯೧). [< ಸಂ. ಕೂಲ]

**ಕೂಲ** (ನಾ). ೧. ರಾಶಿ ; ಸಮೂಹ. ೨. ದಂಡೆ; ತಟ ; ದಡ : "ತೀರಂ ತಟಂ ಕೂಲಮೆನೆ ಕಚ್ಚಮನೆ ತೊಱೆಯ ತಡಿಗೆ ನಾಮಂ" (ಮಂಗರಾ. ೧೨೨–೧೦); ಆಕೆಯುಮಾ ಕಾಂತಾರನದೀಕೂಲದೊಳಿರ್ದು (ಪಂರಾಮಾ. ೧೪–೫೪). ೩. = ಕೂಲ್$_2$ ೧ : ಕೂಲ್, ಕೂಲ್ಗೆ, ಕೂಲೊಳ್ ಇತ್ಯಾದಿ (ಶಬ್ದಾನು. ೧೪೮ ವ್ಯಾಖ್ಯಾ). [ಸಂ.]

**ಕೂಲಂಕಷ** (ಗು). ೧. ದಂಡವನ್ನು ಕೊರೆಯುವ : ಕೆಡಪಲ್ಕೇಕೆಳಸುವೆ ಕೂಲಂಕಷ ಶೈವಲಿನಿಯವೋಲ್ (ಶಾಕುಂತ. ೬೯–೧೨೧). ೨. ಸಮಗ್ರವಾದ ; ಮೊದಲಿನಿಂದ ಕೊನೆಯವರೆಗಿರುವ : ಇದನ್ನು ಕೂಲಂಕಷವಾಗಿ ವಿಂಗಡಿಸಿ ತೋರಿಸಲು ಹವಣಿಸಿದರೆ (ಸಮಜೀ. ೨೫ ಪೀಠಿಕೆ); ಅನೇಕಾನೇಕ ವಿಷಯಗಳನ್ನು ಕೂಲಂಕಷವಾಗಿ ಚರ್ಚಿಸಿದ್ದಾರೆ (ಸಸ್ಯಕ. ೨೦). [ಸಂ.]

**ಕೂಲಂಕಷೆ** (ನಾ). ದಡವನ್ನು ಕೊರೆಯುವುದು ; ನದಿ : "ಸಿಂಧುಃ . . .ಕೂಲಂಕಷಾ . . . –ಈ ೨೧ ತೊಱೆ" (ಹಲಾಯು. ೧೧೦–೪೩). [ಸಂ. ಕೂಲಂಕಷಾ]

**ಕೂಲದೇಶ** (ನಾ). ತೀರಪ್ರದೇಶ; ದಂಡೆ: "ಮರ್ಯಾದಾ, ಕೂಲದೇಶಃ –ಈ ೨ ತಡಿ" (ಹಲಾಯು. ೧೦೮–೩೨) ; "ಮರ್ಯಾದೆ ಕೂಲದೇಶಮೆನಲ್ಕೆ ತಡಿಯೆನಿಕ್ಕುಂ" (ಮಂಗರಾ. ೧೨೦–೩). [ಕೂಲ + ದೇಶ]

**ಕೂಲಪಾಕ** (ನಾ). ಕಿಡಿಗೇಡಿತನ ; ಕುಚೇಷ್ಟೆ (?) : ಬಾಬೂನ ಕೂಲಪಾಕ ಆರಂಭವಾಯಿತೇನು ? (ರಕ್ತಧ್ವ. ೧೫೬). [?]

**ಕೂಲಬಡು** (ಕ್ರಿ). ಕುಸಿ ; ಕುಕ್ಕರಿಸು : ಬೆಟ್ಟವನ್ನು ಹತ್ತಲಾರದೆ ಕೂಲ ಬಡುತ್ತಿದ್ದ ಮುದುಕಿಯರು (ಲಕ್ಷ್ಮೀಪ್ರ. ೨೧೬).
[← ತೆಲು. ಕೂಲಬಡು]

**ಕೂಲವತಿ** (ನಾ). ಹೊಳೆ; ನದಿ: ಕೂಲವತಿಗಳ ನಂದನದ ನಿರ್ಮಳ ಸರೋವರದ . . . ವಿನೋದದಲಾಳಿದರು ವನವಾಸ ಸಾಮ್ರಾಜ್ಯವನು (ಕುವ್ಯಾಅ. ೧೦-೧). [ಸಂ. ಕೂಲವತೀ]

**ಕೂಲಾಂತರ** (ನಾ). ಎರಡು ದಡಗಳ ನಡುವಿನ ಪ್ರದೇಶ ; (ನದಿಯ) ಒಡಲು ; ಪಾತ್ರ : "ಪಾತ್ರಂ ಕೂಲಾಂತರಮುಂ" (ವ ಸ್ತು ಕೋ. ೧೩೮-೧೧೮). [ಕೂಲ + ಅಂತರ]

**ಕೂಲಿ₁** (ನಾ). ೧. ದುಡಿಮೆಗಾಗಿ ಕೊಡುವ ಹಣ, ಕಾಳು ಮೊದಲಾದ ಪ್ರತಿಫಲ; ಮಜೂರಿ: ತೊಟ್ಟಿನಂತೆ ಪೆಜರ ವಶವಾಗದೆ ಕೂಲಿಯ ಬಂಟನಂತೆ ಬೆಲೆಯುಂ ಪಾರದೆ (ಧರ್ಮಾಮೃ. ೫-೯೯) ; ಕೂಲಿಗೆ ಹಾವ ಕಚ್ಚಿಸಿಕೊಂಡು ಸಾವನ ತೆಱದಂತೆ (ಎಲೇಶ್ವ. ೩೬); ನಾಂ ಕೊಟ್ಟ ಕೂಲಿಗೆ ಕೈಗಳಂ ಕೊಯ್ದು ಜೀವಿಪಂ (ಅಂಠ. ೫೨-೮) ; ಈ ಹೊತ್ತಿನ ಕೂಲಿಯೆಲ್ಲಾ ಇದೊಂದೇ ಸಣ್ಣ ರೊಟ್ಟಿಗೆ ಹೋಗಿರುತ್ತದೆ (ಮುಂಬಯಿ. ೪-೬೫). ೨. ಗಳಿಕೆ ; ಸಂಪಾದನೆ : ನೇಮದ ಕೂಲಿಯಂ ದಿನ ನಿತ್ಯನೇಮದಲ್ಲಿ ಸಂದಿರಬೇಕು ನೇಮದ ಕೂಲಿಯ ಬಿಟ್ಟು ಹೇಮು ದಾಸಿಗೆ ಕಾಮಿಸಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯ (ಶೂನ್ಯಸಂ. ೨೫೩-೧೩). ೩. ಬೆಲೆ ; ಬಾಡಿಗೆ : ಈ ಹಯದ್ವಯಮುಂ ಕೂಲಿಯಂ ಕೊಟ್ಟಲ್ಲದೀ ಹಡಗ ನಡೆಯಿಸುವುದಿಲ್ಲೆಂದು ನುಡಿದ ನೌವಾಹಕನ ನುಡಿಗೆ (ಸಮ್ಯಕೌ. ೧೧-೩೧). ೪. ಕೂಲಿಗಾಗಿ ದುಡಿಯುವವನು ; ಕೂಲಿಕಾರ: ಕೊಡಸೀರ ಕೊಟ್ಟಣದವರ್ ಕಸಂಗಳಸಿರದೆ ಗುಡಿಪ ಕೂಲಿಗಳವರ್ (ಚಬಪು. ೪೬-೪೨) ; ಕೂಲಿಯನ್ನು ಗದರಿಸುತ್ತ ಹೇಳುತ್ತಿದ್ದಳು (ಬಾಣಳ. ೬). ೫. ಹಣಕ್ಕಾಗಿ ಮಾಡುವ ಕೆಲಸ: ಅತ ಕೂಲಿ ಮಾಡಿ ಜೀವನ ಸಾಗಿಸುತ್ತಿದ್ದಾನೆ (ರೂಢಿ).

ಕೂಲಿಕಂಬಳ, ಕೂಲಿಕುಂಬಳಿ = ಕೂಲಿ₁ : ಕೂಲಿಕಂಬಳವೆಷ್ಟು, ಕೆಲಸ ತೊಡಗುವುದೆಂದು (ನವರಾ. II, ೪೯) ; ಕೂಲಿಕುಂಬಳಿ ಕಷ್ಟ, ಅನ್ನವೋ ಅಪರೂಪ (ಸೂರ್ಯಪಾ. ೯೬-೯) ; ಕೂಲಿಕುಂಬಳಿಯವರ ಪಾಲಿನ ಮೈದೊಗಲ ಧೂಳಿಯು ಭಂಡಾರ ಹಣೆಯೊಳಗಿತ್ತೋ (ನಾದಲೀ. ೩೮-೧೬). ಕೂಲಿಕುಪ್ಪಟೆ = ಕೂಲಿಕಂಬಳ : (ಕಿ). ಕೂಲಿನಾಲಿ = ಕೂಲಿಕಂಬಳ : ಕೂಲಿನಾಲಿ ದುಡಿಯುವ ನೀವೆ ನಮ್ಮ ನಾಡಿನ ಸಿರಿಯ ಅಡಿಗಲ್ಲು, ಒರೆಗಲ್ಲು (ಕಜಸಾ. ೧೫೮). ಕೂಲಿಮಾಡು = ಕೂಲಿಗಾಗಿ ದುಡಿ : (ಕಿ). ಕೂಲಿಯವ = ಕೂಲಿ ಕೆಲಸದವನು ; ಕೂಲಿಯಾಳು : ಆ ಕೂಲಿಯವನಂ ಕರದು (ಧರ್ಮಪ. ೬-೧೪ ವ).
[ದೇ. ‖ ತಮಿ. ಮಲ. ಕೊಡ. ತೆಲು. ಪರ್ಜಿ. ಕೂಲಿ]

**ಕೂಲಿ₂** (ನಾ). ಒಂದು ಬಗೆಯ ಸಸ್ಯ : ಕೂಲಿ, ಕುಮುತಿ, ಕಾಶ್ಮೀರಿ ಮರ, ಹುಚ್ಚುನರವೆ (ಮೈಔಗಿ. ೪೦-೬೮೨) ; ಬೀಟೆ, ಪಚರಿ, ಬಿರಡಿ, ಕೂಲಿ, ತಡಸಲು, ತಪಸಿ (ನಮ್ಮನು. ೨೩೬). [?]

**ಕೂಲಿಅಟ್ಟು** (ಕ್ರಿ). ಕೂಲಿಕೊಟ್ಟು (ದನಗಳನ್ನು) ಮೇಯಿಸಿಕೊಂಡು ಬರಲು ಕಳಿಸು : ದನಗಳನ್ನು ಕೂಲಿಅಟ್ಟುತ್ತೀರಾ (ಬೆಳುಮ. ೧).
[ಕೂಲಿ₁ + ಅಟ್ಟು₁]

**ಕೂಲಿಕಾತಿ** 'ಕೂಲಿಕಾರ್ತಿ' ನೋ.

**ಕೂಲಿಕಾರ** 'ಕೂಲಿಕಾಱ' ನೋ.

**ಕೂಲಿಕಾರ್ತಿ**, ಕೂಲಿಕಾತಿ (ನಾ). ಕೂಲಿಕೆಲಸದವಳು ; ಕೂಲಿ ಮಾಡುವವಳು : "ಗುರ್ವಿರೀ – ಕೂಲಿಕಾರ್ತಿ" (ಕಾ ಶ ಕೃ. ೫೩). **ಕೂಲಿಕಾತಿ** : (ಕಿ). [ಕೂಲಿಕಾಱ + –ತಿ₁ (< –ಇತ್ತಿ)]

**ಕೂಲಿಕಾಱ**, ಕೂಲಿಕಾರ, ಕೂಲಿಗಾರ (ನಾ). ಕೂಲಿ ಕೆಲಸ ಮಾಡುವವನು ; ಕಾರ್ಮಿಕ ; ಮಜದೂರ : "ಪ್ರೇಷ್ಯಃ, ಪ್ರತಿಸ್ಕಂದಃ – ಈ ೨ ಕೂಲಿಕಾಱಂ" (ಹಲಾಯು. ೬೧-೨೧೪). **ಕೂಲಿಕಾರ** : ಕೃಷಿಕರು ಮತ್ತು ಕೂಲಿಕಾರರು ಸಂಪತ್‌ಶಾಲಿಗಳಾಗುವರು (ಪ್ರ ಕಾ ಶ. ೧೩೫). **ಕೂಲಿಗಾರ** : ಕೂಲಿಗಾರರ ರಾಜ್ಯಸೃಷ್ಟಿಯಂತೆ (ಕೊಸಭೇ. ೩೪).
[ಕೂಲಿ₁ + –ಕಾಱ]

**ಕೂಲಿಕೆಲಸ** (ನಾ). ೧. ನಿತ್ಯದ ಕೂಲಿಗಾಗಿ ಮಾಡುವ ಕೆಲಸ, —ದುಡಿತ : (ಕಿ). ೨. ಕೂಲಿಯ ಆಳುಗಳಿಂದ ಮಾಡಿಸುವ ಕೆಲಸ: ತೋಟದಲ್ಲಿ ಕೂಲಿಕೆಲಸ ಮಾಡಿಸುತ್ತಿದ್ದಾರೆ (ರೂಢಿ). [ಕೂಲಿ₁ + ಕೆಲಸ]

**ಕೂಲಿಕೊಳಗ** (ನಾ). ಕೂಲಿಗಾಗಿ ಕಾಳನ್ನು ಅಳೆದುಕೊಡುವ ಕೊಳಗ : ಕೂಲಿಯವರಿಗೆ ಅಳೆದುಕೊಡುವಾಗ ಕೂಲಿಕೊಳಗದಲ್ಲಿ ಕೊಡುತ್ತಿದ್ದರು (ಪಂಜಪಂ. ೯). 'ಗಡಿಕೊಳಗ' ಪರಾ.
[ಕೂಲಿ₁ + ಕೊಳಗ₁]

**ಕೂಲಿಗ** (ನಾ). ಕೂಲಿ ಮಾಡುವವನು ; ಕೂಲಿಯ ಆಳು : ಸಾಲ ಕುಱುದಱುಹಿಗಳ ಕರ್ಮದ ಕೂಲಿಗರ ಜಡ ಜಂಝುಪೂಗರ ಜಾಲ ಸಿರಿಯುನಿಮಿಷರ ಪುರಿ ವಶವಾಯ್ತು ನಿನಗೆಂದ (ಕುವ್ಯಾಅ. ೬-೧೫) ; ಕೂಲಿಗರ ಕೊನಬರೊಡನನವರತ ಬಿಡದಾಡಿದೀ ಲಂಡತನವ ಬಿಡದಾದೆಯಲ್ಲಾ (ಸಮ್ಯಕೌ. ೧೦-೧೦). [ಕೂಲಿ₁ + –ಗ₂]

**ಕೂಲಿಗಾರ** 'ಕೂಲಿಕಾಱ' ನೋ.

**ಕೂಲಿಗೊಳ್** (ಕ್ರಿ). ಕೂಲಿಯನ್ನು ಪಡೆ, —ಹೊಂದು : ಭಕ್ತರಂ ಕಂಡೊಡೆಱಗುವನೆಱಗದಂದದಿಂ ಕೂಲಿಗೊಳ್ವಂ (ಅಂಠ. ೧೭೪-೧೫) ; ತಂದೆಗೇನಾನುಮೊಂದೂಱಿಗಂ ಗೆಯ್ದೊಲಿಸಿಯದರ್ಕೆ ಕೂಲಿಗೊಂಬೆಡೆಯೊಳಂ (ಚಕವಂ. ೯೨-೮). [ಕೂಲಿ₁ + ಕೊಳ್₁]

**ಕೂಲಿಜನ** (ನಾ). ಕೂಲಿಮಾಡುವ ಜನ; ಕೂಲಿಕೆಲಸದವರು : ಸ್ಟೇಷನ್ನಿನಲ್ಲಿ ಮೂಟೆ ಹೊರುವುದಕ್ಕೆ ಕೂಲಿಜನ ಇದ್ದಾರೆ (ಮಹಾಗ. ೧೫).
[ಕೂಲಿ₁ + ಜನ]

**ಕೂಲಿಮಠ** (ನಾ). ಕೂಲಿಯನ್ನು ಪಡೆದು ನಡೆಸುತ್ತಿದ್ದ ಶಾಲೆ: ಅರ್ಧಶತಮಾನಕ್ಕೆ ಹಿಂದೆ ಕೂಲಿಮಠಗಳಿದ್ದುವು (ಹುಟ್ಟಿಹ. ೮).
[ಕೂಲಿ₁ + ಮಠ]

**ಕೂಲಿಸು** (ಕ್ರಿ). ಕೆಡಹು ; ಬೀಳಿಸು : ಭೂಲಲನೆಗೆ ಭಾರವನು ಕೀಲಿಸಿದ ದಶಾಸ್ಯನನು ಕೂಲಿಸಿ ಜಗಗಳ ಪಾಲಿಸಿ (ಕುಚೇಲೋ. ೧೪೦).
[ಕೂಲು₁ + –ಇಸು₃]

**ಕೂಲು₁** (ಕ್ರಿ). ಕುಗ್ಗು ; ಕುಸಿ ; ಬೀಳು : ಮೇರುಗಿರಿ ಕುಲಿಶ ಹತಿಯಿಂ ಕೆಡೆದುದೋ ಮೇಣುದಾರ ನೀಲಾಚಲಂ ಕೂಲಿದುದೊ (ನೇಂಕಾರಾ. ೬-೫೭-೪೨); ಕೋಸಲ ಭೂಮಿ ಹೊಲೆಗಲಸಿ ಹಾಳಾಗಿ ಕೆಸರಿನಲಿ ಕೂಲುವುದು (ಯಶೋಧ. ೩೫).

ಕೂಲಿಹೋಗು = ಹಾಳಾಗು ; ನಾಶವಾಗು : ವ್ಯಾಜ್ಯಕ್ಕಾಗಿ . . . ನಮ್ಮ ಕುಟುಂಬವು ಕೂಲಿಹೋಯಿತು (ಲಕ್ಷ್ಮೀಪ್ರ ೫) ; ಸಂಸಾರಗಳು ಕೂಲಿಹೋಗುತ್ತಿವೆ (ಮಹಾಗ. ೧೨೩).
[ದೇ. ‖ ತೆಲು. ಕೂಲು ; ಕುಇ. ಕೂರ]

**ಕೂಲು₂** 'ಕೂಲ್₂' ನೋ.

**ಕೂಲು₃** (ನಾ). ೧. ಮೆಟ್ಟಿಲು ; ಸೋಪಾನ : "ಕೂಲು – ಪಾವುಟಗೆ" (ಜಾನಕೋ. ೪೦). ೨. ಕೆರೆ ಅಥವಾ ಬಾವಿಯ ಸೋಪಾನ ಮಾರ್ಗ : (ಕಿ). 'ಕೂಲುಬಾವಿ' ಪರಾ. [?]

**ಕೂಲುಕಂಬ** (ನಾ). ಕೂಲುಗಳುಳ್ಳ ಕಂಬ : (ಕಿ).
[ಕೂಲು₂ (< ಕೂಲ್₂) + ಕಂಬ₁ (< ಕಂಭ)]

**ಕೊಲುಗಗೇರಿ** (ನಾ). ಒಂದು ಪ್ರದೇಶದ ಹೆಸರು: ಆ ದೇವರ್ಗ್ಗೆ ಕೊಲುಗಗೇರಿಯ ಆಗ್ನೇಯದ ಗೋಡೆ (ಸೌಇಇ. XX, ೧೧೦-೫೩; 1139). [?]

**ಕೊಲುದುಂಬು** (ನಾ). ಅರೆಗಳನ್ನು ಹಿಡಿದುಕೊಂಡಿರುವ ಚಕ್ರದ ಮಧ್ಯದಲ್ಲಿರುವ ಗಡ್ಡೆ; ಗುಂಬ; ಪಿಂಡಿಕೆ: "ನಾಭಿ ಪಿಂಡಿಕೆಯೆನಲು ಕೊಲುದುಂಬಕ್ಕು" (ಮಂಗರಾ. ೮೪-೨೪). [ಕೊಲ್ಲು$_2$ (< ಕೊಲ್$_2$) + ತುಂಬು$_2$]

**ಕೊಲುಬಾವಿ** (ನಾ). ಕೊಲುಗಳಿರುವ ಬಾವಿ; ಮೆಟ್ಟಿಲು ಬಾವಿ: ಕಾಳೇಗೌಡನ ತೋಟದ ಕೊಲುಬಾವಿಯ ಬಳಿಗೆ ಬಂದರು (ನಸ್ನೂರು. ೨೦). [ಕೊಲ್ಲು$_3$ + ಬಾವಿ]

**ಕೊಲುವೆಜ್ಜ** (ನಾ). ಕೊಲನ್ನು ಕೂರಿಸಲು ಮಾಡುವ ರಂಧ್ರ: "ಹಲಗೆ, ಮೊ, ಗಳ ಕೂರು . . . ಕೊಲುವೆಜ್ಜ" (Mortise. ಇಂಕನಿ). [ಕೊಲ್ಲು$_2$ (< ಕೊಲ್$_2$) + ವೆಜ್ಜ]

**ಕೊಲುಳಿ** (ನಾ). ಕೊಲುವೆಜ್ಜ ಮಾಡುವ ಉಳಿ: "ಕೊಲುಳಿ; ವೆಜ್ಜದ ಉಳಿ" (Mortise Chisel. ಇಂಕನಿ). [ಕೊಲ್$_1$ + ಉಳಿ$_1$]

**ಕೂವ**, ಕುವ್ವೆ$_2$, ಕೂ$_2$, ಕೂಮೆ$_1$, ಕೂವೆ$_2$ (ನಾ). ೧. ಹಡಗಿನ ಮಧ್ಯದಲ್ಲಿರುವ ಕಂಬ; ಕೂಪಸ್ತಂಭ. 'ಕೂವಕಂಭ' ಪರಾ. ೨. ಬಾವಿ: ಕೂಪ, ಕೂವ (ಶಬ್ದಾನು. ೧೪೪ ಪ್ರಯೋ); ನೀನು ಕೂವಕ್ಕೆ ಹೋಗಿ ಗಂಗೆ ಪೂಜೆಮಾಡಿ ಕೊಡದಲ್ಲಿ ನೀರುತುಂಬಿ ಮನೆಗೆ ತರಬೇಕಾಗಿತ್ತು (ನಡೆದಾ. II, ೧೧೩೩). **ಕುವ್ವೆ**: ೧. (೬). **ಕೂ$_2$**: ೧. 'ಕೂಕಂಬ$_1$' ಪರಾ. **ಕೂಮೆ$_1$**: ೧. 'ಕೂಮೆಮರ' ಪರಾ. **ಕೂವೆ$_2$**: ೧. ನಡು ಮುರಿಯುತ ನಗನಾವೆಗೆ, ಕೂವೆಗೆ ಉಡಿಸಿದ ಹಾಯಿಯುಹರಿಯುತ ಬಿರಿಯುತ (ಪಂಜೆನಿ. ೨-೧೫೩). [< ಸಂ. ಕೂಪ]

**ಕೂವಕ** (ನಾ). = ಕೂವಕಂಬ: ಕಟ್ಟಾಚಾರಮೆ ತರಣಿಯ ಜುವೆ ಪಟಕಟ್ಟುವ ಗುಣವೇ ಮಾನಸಸಾಧನದೊಟ್ಟಜೆ ಮಿಗೆ ಸತ್ಕ್ರಿಯೆಯೇ ಕೂವಕ (ಉದ್ಧದೇ. ೬-೬). [< ಸಂ. ಕೂಪಕ]

**ಕೂವಕಂಬ** 'ಕೂವಕಂಭ' ನೋ.

**ಕೂವಕಂಬಿಗ** (ನಾ). ಹಡಗಿನ ಚಾಲಕ; ಕರ್ಣಧಾರ: "ನಿರ್ಯಾಮಃ, ಕರ್ಣಧಾರಕಃ – ಈ ೨ ಕೂವಕಂಬಿಗಂ" (ಹಲಾಯು. ೧೧೮-೩೩); ಚಾರಿತ್ರಮೆಂಬ ಯಾನಪಾತ್ರಯನೇಱಿ. . .ಸಮ್ಯಕ್ತ್ವಮಂ ಕೂವಕಂಬಿಗಂ ಮಾಡಿದೊಡೆ (ಪಸಾರ. ೯೬೨-೧೨೨); ಸಮ್ಯಕ್ತ್ವಂ ಮೋಕ್ಷದ ಬಟ್ಟೆಗೆ ಕೂವಕಂಬಿಗನಾದುದೆಂತೆಂದೊಡೆ (ರತ್ನಕ. ೧-೨೦ ವ). [ಕೂವಕಂಬ (< ಕೂವಕಂಭ + -ಇಗ)]

**ಕೂವಕಂಭ**, ಕೂಕಂಬ$_1$, ಕೂಕಂಭ, ಕೂಕುಂಬ, ಕೂವಕಂಬ, ಕೂವೆಗಂಬ (ನಾ). ಹಗ್ಗವನ್ನು ಎಳೆದು ಕಟ್ಟುವ ಹಡಗಿನ ಮಧ್ಯಭಾಗದ ಕಂಭ; ಕೂವೆ: ಮತಿಗೆಟ್ಟಾಲಾಪಮೆಲ್ಲದಱಿಯದೆ ಕಾಳೆಗದೊಳ್ ಕೂವ[ಪಾಠಾಂ. ನ]ಕಂಭದಂತಿರೆ ನಿಂದಂ (ಧರ್ಮಾಮೃ. ೧೩-೧೬೦); ನಿಜ್ಜೀವನುಮೆರ್ದು ಪೋಗೆ ಕೂವಕಂಭಂ ಮುಱಿಯೆ (ಬಂಹರಿ. ೧೮-೧೮). **ಕೂಕಂಬ$_1$**: (೬). **ಕೂಕಂಭ**: "ನಿರ್ಯಾಮಕಂ ಕರ್ಣಧಾರನೆನಲ್ಕಾ ಕೂಕಂಭದವನಕ್ಕು" (ಮಂಗರಾ. ೧೨೦-೪); ಜಗವೆಂಬ ಹಡಗಿನ ನಡುವೊಂದು ಕೂಕಂಭ ನೆಗೆದಂತೆ ನಿಂದಿರ್ದನಾಗ (ಭರತ. ೬೮-೧೮). **ಕೂಕುಂಬ**: "ಕೂಪಕ, ಗುಣವೃಕ್ಷಕ" (ನಾಚಿರಾ. ೬). **ಕೂವಕಂಬ**: "ಕೂಪಕಃ, ಗುಣವೃಕ್ಷಕಃ – ಈ ೨ ಕೂವ ಕಂಬಂ" (ಹಲಾಯು. ೧೧೮-೩೩); "ಕೂಪಸ್ತಂಭ – ಕೂವಕಂಬ" (ಶಮದ. ೨೫೮ ಪ್ರಯೋ); ತನ್ನಾವೆ ಸೀಯಂ ಪಱಿಯೆ ಮುಱಿವುದುಂ ಕೂವಕಂಬಂ ಸಮುಂತಾಕುಳವಾಗಲ್ ನಾವಿಕರ್ (ನೇಮಿಪು. ೪-೭೩); ವಸುಮತಿಯೆಂಬ ಚಾರುನಾವೆಯ ಕೂವಕಂಬಮೆಂಬಂತೆಸೆವ (ಸಿದ್ಧರಾ. ೧-೧೪); ದೇವನ ನಾಭಿಪದ್ಮದ ಮೃಣಾಳಂ ಕೂವಕಂಬಂ ಬೊಲಚ್ಚರಿಯಾಗಿರ್ದುದು (ಎಕ. VI, ತರೀಕೆ. ೪೫-೮; 1196). **ಕೂವೆಗಂಬ**: ಪಡಗುಗಳ ಕೂವೆಗಂಬದೆ ಪಸರಿಸಿರ್ಪ ಬೆಳ್ಪಚ್ಚಡಗಳು (ಶೀಪರಾ. ೧೪-೯). [ಕೂವ + ಕಂಭ]

**ಕೂವತ್ತು** 'ಕುವತ್ತು' ನೋ.

**ಕೂವರ** (ನಾ). ಬಂಡಿ ಅಥವಾ ರಥದ ಈಸು: (೬). 'ಕೂಬರ' ಪರಾ. [ಸಂ.]

**ಕೂವಾಡ** 'ಕುವ್ವಾಡ' ನೋ.

**ಕೂವು** (ನಾ). ಒಂದು ಅನುಕರಣ ಶಬ್ದ: "ಕೂವು" ಎನ್ನುವದು ಕೋಗಿಲೆಯ ಜೀವನದ ಬಣ್ಣವು (ಭಾರಸಂ. ೫೭); ಹಸಿವಿನ ಭೂತವು ಕೂಯುವ ಕೂವೊ? (ಕಎಪು. ೨೭-೩). [?]

**ಕೂವೆ$_1$**, ಕುವ್ವೆ$_1$, ಕೂಬೆ (ನಾ). ಪುಷ್ಟಿಕರವಾದ ಪಿಷ್ಟಾಹಾರವನ್ನು ಒಳಗೊಂಡ ಒಂದು ಬಗೆಯ ಗೆಣಸು; ಅದರಗಿಡ: ಈ ಪ್ರಾಂತ್ಯದ ದೇಶಿಯರು ಅಕ್ಕಿ, ಕೂವೆ, ನೆಲಗಡಲೆ ಮೊದಲಾದವನ್ನು ನೆಟ್ಟುಬೆಳೆಯಿಸುವುದುಂಟು (ಬಾಲಪ್ರ. I, ೩೧೪); ಮರಗಳು: ಹೆಸವ, ಹೆಬ್ಬಲಸು, ಕರೇ, ಮುಲ್ಲಾಳಿ, ಕೂವೆ, ಬೊಟ್ಟಿ, ದೇವದಾರು (ನಮ್ಮನು. ೨೩೩). **ಕುವ್ವೆ$_1$**: ಒಣಗಿದ ಕುವ್ವೆಯೆಲೆಗಳನ್ನು ಗೊರಗುಮಾಡಿ ಮಳೆಗಾಲದಲ್ಲಿ ಬಳಸುತ್ತಾರೆ (ರೂಢಿ). **ಕೂಬೆ**. 'ಕೂಬೆಹಿಟ್ಟು' ಪರಾ. [ದೇ. ॥ ತಮಿ. ಕೂಗ್ಯೆ; ತುಳು. ಕೂವೆ]

**ಕೂವೆ$_2$** 'ಕೂವ' ನೋ.

**ಕೂವೆಗಂಬ** 'ಕೂವಕಂಭ' ನೋ.

**ಕೂವೆಗಿಡ** (ನಾ). ಒಂದು ಬಗೆಯ ಗಿಡ: ಕೂವೆಗಿಡ, ತವಕ್ಷೀರ (ವೈಜಿಗಿ. ೨೭-೪೯೭). [ಕೂವೆ$_2$ (< ಕೂವ) + ಗಿಡ (< ಗಿಡು)]

**ಕೂವೆಮರ**, ಕೂಮೆಮರ (ನಾ). = ಕೂವಕಂಭ: ಕಪ್ತಾನ್ ಕೂವೆ ಮರವನ್ನೇರಿ ದುರ್ಬೀನು ಹಿಡಿದು ನಾಲ್ಕು ಕಡೆಗೂ ನೋಡುತ್ತಿದ್ದನು (ಮಾರ್ಟಿನ್. ೧೯). **ಕೂಮೆಮರ**: ಆ ಊರಿನ ಐದಾರುಮನೆಗಳು ವಿಸ್ತಾರವಾದ ಸಮುದ್ರದಲ್ಲಿ ಹಡಗಿನ ಕೂಮೆಮರಗಳಂತೆ ಕಾಣುತ್ತಿದ್ದುವು (ಅನಾಥೆ. ೩). [ಕೂವೆ$_2$ (< ಕೂವ) + ಮರ]

**ಕೂವೆಹಿಟ್ಟು**, ಕುವ್ವೆಹಿಟ್ಟು, ಕೂಬೆಹಿಟ್ಟು (ನಾ). ಕೂವೆ ಗಡ್ಡೆಯಿಂದ ತಯಾರಿಸಿದ ಹಿಟ್ಟು: ಕೂವೆಹಿಟ್ಟಿನ ಮಣ್ಣಿ ಮಕ್ಕಳಿಗೆ ಆರೋಗ್ಯಕರ (ರೂಢಿ). **ಕುವ್ವೆಹಿಟ್ಟು**: (೬). **ಕೂಬೆಹಿಟ್ಟು**: ಕೂಬೆ ಹಿಟ್ಟು ಆಮಶಂಕೆಗೆ ಒಳ್ಳೆ ಔಷಧಿ (ರೂಢಿ). [ಕೂವೆ$_1$ + ಹಿಟ್ಟು (<ಪಿಟ್ಟು)]

**ಕೂಷ್ಮಾಂಡ** (ನಾ). ೧. ಕುಂಬಳ; ಕುಂಬಳಕಾಯಿ. ೨. ಒಂದು ಬಗೆಯ ಪಿಶಾಚಿ: ಕುಂಭಂಡರುಂ (ಕೂಷ್ಮಾಂಡರು) ರಾಕ್ಷಸರುಂ ಯಕ್ಷರುಂ . . . ಎಂದು ಪಿಶಾಚರ್ ಚತುರ್ದಶವಿಧಂ (ತತ್ತ್ವಪ್ರ. ೧೯೩). ೩. ಶಿವನ ಹೆಸರುಗಳಲ್ಲಿ ಒಂದು: ಈಶ್ವರ ರುದ್ರ ವಿಷ್ಣು ಶುಭಕರನೆಯೂ ಬ್ರಹ್ಮಹಾಟಕನು ಕೂಷ್ಮಾಂಡ ಕಾಲಾಗ್ನಿರುದ್ರಾಧೀಶನೂ (ವೀಶೈಪು. ೬-೪-೨೩). [ಸಂ.]

**ಕೂಷ್ಮಾಂಡಿ** (ನಾ). ೧. ದುರ್ಗೆಯ ಒಂದು ಹೆಸರು. ೨. [ಜೈನ] ಒಬ್ಬ ಯಕ್ಷಿಯ ಹೆಸರು: ಕೂಷ್ಮಾಂಡಿಯೆಂಬಿಕೆ ಯಕ್ಷೇಶ್ವರಿ ಕೂರ್ತು ರಕ್ಷಿಸುಗೆ (ಸುಕುಮಾ. ೧-೮); ಓಸರಿಸದೆಯೆಲೆ ಕೂಷ್ಮಾಂಡಿಯಕ್ಷಿ ಕೊಡೀ ಸತ್ಕೃತಿಗೆ ಮಂಗಲವ (ನಾಗಕು. ೧-೨೧). [ಸಂ. ಕೂಷ್ಮಾಂಡೀ]

**ಕೂಷ್ಮಾಂಡಿನಿ** (ನಾ). = ಕೂಷ್ಮಾಂಡಿ ೨: ಎರಡು ಕೂಷ್ಮಾಂಡಿನಿ ಮತ್ತು ಒಂದು ಬಾಹುಬಲಿ ವಿಗ್ರಹಗಳನ್ನು ಬಿಟ್ಟರೆ ಮಿಕ್ಕವೆಲ್ಲವೂ ತೀರ್ಥಂಕರರ ವಿಗ್ರಹಗಳಾಗಿವೆ (ಹೊಯ್ಸವಾ. ೨೦೬). [ಸಂ. ಕೂಷ್ಮಾಂಡಿನೀ]

**ಕೂಸ** (ನಾ). ಚಿಕ್ಕವನು ; ಎಳೆಯ ಬಾಲಕ: ಮಗನೆ ನೀನಿನ್ನುಂ ಕೂಸನ್ಸೈ (ಪಡ್ಮಾರಾ. ೧೧೩-೬) ; ಕೂಸನೊಡನಾಡುವೆಡೆಯೊಳ್ ಭಾಸುರ ಸುರಮಂತ್ರಿ ಮಂತ್ರದೊಳ್ ರಿಪು ತಂತ್ರೋಗ್ರಾಸುರ ರಣರಂಗಾಗ್ರದೊಳಾಸುರ ಕೇಸರಿ . . . ನೆಟ್ಟನೆ ಚಟ್ಟಂ (ಎಕ. V, ಬೇಲೂರು. ೧೯೩-೮೦ ; 1160). [ಕೂಸು + -ಅ$_7$]

**ಕೂಸಂಭಟ್ಟ** 'ಕೋಚುಭಟ್ಟ' ನೋ.

**ಕೂಸಾಟ** (ನಾ). ಕೂಸುಗಳ ಆಟ ; ಮಕ್ಕಳಾಟ ; ಬಾಲಲೀಲೆ: "ಕೂಸಾಟಂ ಚಿಣ್ಣರಾಟಮದು" (ಚ ತು ನಿ. II, ೬೭) ; ಕಣ್ಗಚ್ಚಱಂ ರಾಗದಾಡುವ ಕೂಸಾಟದ ಚೆಲ್ವುಗಳ್ ಕುಡೆ (ಆದಿಪು. ೭-೧೨೮) ; ಕೌರವ ಪಾಂಡವ ಕುಮಾರರ್ ಕೂಸಾಟಮಾಡುವಡಂ (ಬಂಹರಿ. ೧೦-೩೧ ವ) ; ನೀಂ ನಿನ್ನ ಮುನ್ನಿನ ಕೂಸಾಟಮನೆಲ್ಲಿಯುಂ ಬಿಸುಡೆ (ಶೃಂಗಾರ. ೧-೫೨). [ಕೂಸು + ಆಟ]

**ಕೂಸಾಡಿಸು** (ಕ್ರಿ). ೧. ಕೂಸನ್ನು ಆಡಿಸು: (*). ೨. ಕೂಸಾಟವನ್ನು ಆಡಿಸು ; ತಮಾಷೆ ಮಾಡು ; ವಿನೋದಮಾಡು : ಕಳ್ವ ಕೊಳ್ವ ಖಳರಿ ಕೆ ರ್ಮ ಕಬ್ಬಿಗಗಳ್ಯರೆಂದು ಕೂಸಾಡಿಸಬಾರದಕ್ಕರದ ರಾಜ್ಯದೊಳೀ ಕವಿಚಕ್ರವರ್ತಿಯಾ (ಶಾಂತಿಪು. ೧೨-೭೭) ; ನಾಡೊಳಗೆ ಮಾಸೆದೆಱೆಯಂ ಬೇಡಿಸುವಂ ಬೀರರರಸಿಯರ ವೆಸರಿಂ ಕೂಸಾಡಿಸಲೀಯಂ (ಅರ್ಧನೇ. ೩-೫೯). ಅಲಮಲಂ ! ಕೂಸಾಡಿಸದಿರೆನ್ನ (ಹೆಬ್ಬೆರ. ೧೨-೭೬). [ಕೂಸಾಡು + -ಇಸು$_3$]

**ಕೂಸಾಡು** (ಕ್ರಿ). ಕೂಸಿನಂತೆ ಆಡು ; ಮಗುವಿನಂತೆ ಆಡು. 'ಕೂಸಾಡಿಸು' ಪರಾ. [ಕೂಸು + ಆಡು$_1$]

**ಕೂಸಾಳು** (ನಾ). ಕೂಸಿನಂತೆ ದುರ್ಬಲನಾದವನು ; ಕೈಲಾಗದವನು : ದೋಸೇಹಿಟ್ಟು ಕೂಸಾಳಿಗೆ ಸಿಕ್ಕೀತೇ (ರೂಢಿ). [ಕೂಸು + ಆಳು$_2$ (< ಆಳ್$_2$)]

**ಕೂಸು** (ನಾ). ೧. ಮಗು ; ಶಿಶು ; ಹಸುಳೆ: ಕೂಸಿನ ತಲೆಯೊಳ್ ಬಿಜ್ಜೊವಱೆಯನಿಟ್ಟವೊಲಸುಖಕರಂ (ಕವಿರಾ. ೨-೬) ; ಕೂಸಿಂಗೆ ಭದ್ರಬಾಹುವೆಂಬ ಪೆಸರನೆಲ್ಲರುಂ ನೆರೆದಿಟ್ಟೊಡೆ (ವಡ್ಡಾರಾ. ೩೭-೨೦) ; ಕುಡಿಯಲೊಲ್ಲದು ಪಾಲನೆಂದೊಡೆ ಕೂಸನೊಲ್ಲದೆ ನೊಂದು ತಾಯ್ ಬಿಡುವಳೇ (ಧರ್ಮಾಮೃ. ೭-೧೩೦). ೨. (ಮದುವೆಯಾಗದ) ಹೆಣ್ಣು ; ಕನ್ಯೆ : "ಕೂಸೆಂದೆನೆ ಕನ್ನಿಕೆ" (ಕವಿಕಂ. ೨೩೩) ; ಎಲೆ ಕೂಸೆ ನೀರಂ ಕುಡಿಯಲೆಱೆಯಾ (ವಡ್ಡಾರಾ. ೧೧೧-೧) ; ನೆಗೞ್ತೆಯನಾಳ್ದ ಕಬ್ಬಮಂ ಕೂಸುಮನೀವುದರಿಕೇಸರಿಗೆ (ಪಂಪಭಾ. ೧-೯) ; ಭದ್ರಂಗೆ ಕುಡಲ್ವೇಡಿರ್ದ ಕೂಸನೆನಗೆ ಮದುವೆಯಾಗೆಂಬುದುಂ (ಸುಕುಮಾ. ೭-೩೨) ; ಆರು ಮುನಿದು ನಮ್ಮನೇನ ಮಾಡುವರು . . . ನಮ್ಮ ಕುನ್ನಿಗೆ ಕೂಸ ಕೊಡಬೇಡ (ಬಸವ. ೭೫೨) ; ವರ ವೈಶ್ಯರೊಳೊರ್ವ್ವಂ ಕುಡಿಯರ ಕೂಸಂ ಮದುವೆ ನಿಲ್ತೊಡೆ (ಕಇ. I, ೨೫-೪೯ ; 1186) ; ಕೊಬ್ಬಿ ನರಿ ಹೆಬ್ಬುಲಿಯ ಕೂಸನು ಬೇಡುವಂದದಿ (ಕುವ್ಯಾದ್ರೋ. ೫-೪೨). ೩. ಹುಡುಗ ; ಬಾಲಕ : ಸಾಚಿಯಾಣ್ಣಬ್ಬು ಏಱುವರಿಸದ ಕೂಸಾಗಿ ನಿರಿಸಿದ ವರಿಷಕ್ಕೆ ಕೆಱೆತೊಮ್ಮು (ಎಕ. X (S), ಮುಳಬಾ. ೧೬೧-೭ ; 10ನೆಯ ಶತ) ; ನೀನಾ ಕೂಸುಗಳನೊಡಂಗೊಂಡು ನೀರಂ ಕೊಂಡು ತಡೆಯದೆ ಬಾ (ಪಂಪಭಾ. ೮-೪೦ ವ) ; ಮುತ್ತನಿವಂ ಕೂಸಿವನುದ್ವೃತ್ತನಿವಂ ತಕ್ಕನಿವಂ (ಜೀವಸಂ. ೯-೧೨). ೪. ಶಿಷ್ಯ ; ವಿದ್ಯಾರ್ಥಿ ; ಮಾಣಿ : ಚಿಕ್ಕ ಬೇರುಂಡನ ಮಠದ ಸಮಸ್ತ ಕೂಸುಗಳು ಸೋಮನಾಥದೇವರ ದೇವಾಲ್ಯದ ಹೊಲಥರದ ಕಲಕೆಲಸಕೆ ಗದ್ಯಾಣ ಹತ ಕೊಟ್ಟರು (ಮೈಆರಿ. ೧೯೪೨, ೪೬-೬ ; 1228). [ದೇ. ‖ ತಮಿ. ಕುಞ್ಞು ; ತೆಲು. ಕೂಸು, ಕೂತು]

**ಕೂಸುಕೋಣೆ** (ನಾ). ಚಿಕ್ಕಮಕ್ಕಳಿಗಾಗಿ ಇರುವ ಕೋಣೆ : "ಮಕ್ಕಳಿಗೂ ಅವರ ದಾದಿಯರಿಗೂ ಗೊತ್ತು ಮಾಡಿರುವ ಕೋಣೆ ; ಕೂಸುಕೋಣೆ" (Nursery. ಇಂಕನಿ). [ಕೂಸು + ಕೋಣೆ]

**ಕೂಸುಗುಡು** 'ಕೂಸುಗೊಡು' ನೋ.

**ಕೂಸುಗೊಡು, ಕೂಸುಗುಡು** (ಕ್ರಿ). ಹೆಣ್ಣುಕೊಡು ; ಕನ್ಯೆಯನ್ನು ಕೊಡು : ಒಡವೆಯನಿತ್ತುಂ ಸಂತತವೊಡನುಂಡುಂ ಕೂಸುಗೊಟ್ಟು ಮೆಂದುದನೆಂದುಂ ಕಡುಗೂರ್ತರ್ಮಹಿತಬಲಮಂ ಕಿಡಿಸುವುದುಚಿತಂ ನೃಪಂಗೆ (ಪಂಚತಂ. ೨೪೩-೨೫). **ಕೂಸುಗುಡು** : ಪುರುಷೋತ್ತಮದೇವಂಗೆ ಕೂಸುಗುಡಲಾರ್ ಪಡೆವರ್ (ಪಂರಾಮಾ. ೮-೧೬) ; ಛೈತ್ರಮಿಲ್ಲದೆ ಸಮುದ್ರದೊಳ್ ಪೋಪೆನೆಂಬ ಗೋತ್ರಮಱಿಯದೆ ಕೂಸುಗುಡುವೆನೆಂಬ (ಧರ್ಮಾಮೃ. ೧-೬೭). [ಕೂಸು + ಕೊಡು$_1$]

**ಕೂಸುತನ** (ನಾ). ಚಿಕ್ಕಂದು ; ಎಳೆತನ ; ಬಾಲ್ಯ : ನೀಂ ಬೇಱೆಮಗೆ ಸುಯೋಧನನೇಂ ಬೇಱೆಯೆ ಕೂಸುತನದೊಳಾದೊಡಂ (ಪಂಪಭಾ. ೭-೬೩) ; ಕೂಸುತನದೊಳೆ ನಿಜ ರಾರಾಜಿತ ತೇಜಂ ಕೇಸವರಾಜಂ (ಸೌಇಇ. XI-i, ೭೬-೪ ; 1045) ; ಕೂಸುತನದೊಳಂ ಕೇಸರಿಯಂ ತವೆ ಕೊಂಡು (ವರ್ಧಪು. ೩-೭೨) ; ಅಱಿಯಮೆಯಾಯ್ತು ಕೂಸುತನದೊಳ್ (ಜೀವಸಂ. ೮೫-೨೨). [ಕೂಸು + -ತನ]

**ಕೂಸುಬಿನ್ನಾಣ** (ನಾ). ಮಗುವಿನ ಬಿನ್ನಾಣ ; ಮುದ್ದಾದ ಆಟ : ಕಡುಜಾಣ ಕಂದಯ್ಯ ಹಿರಿಹಿರಿದೊ ಕೂಸುಬಿನ್ನಾಣ (ಗರಿ. ೧೦೯-೧೫). [ಕೂಸು + ಬಿನ್ನಾಣ]

**ಕೂಸುಮರಿ** (ನಾ). ೧. ಎಳೆಯ ಮಗು ; ಮರಿ. ೨. ಮಕ್ಕಳನ್ನು ಆಡಿಸುವ ಒಂದು ಬಗೆಯ ಆಟ : ದೇಶದೇಶದ ಬಿಸಿಲ ನನ್ನ ಕೆನ್ನೆಗೆ ತಳ್ಳಿ ಕೂಸುಮರಿ ಮಾಡಿ ಬಾಂದಳದಲಿ (ಶಿಲಾಲ. ೭೭) ; ಕಚಗುಳಿ ಇಟ್ಟು ನಗಿಸುವುದು ಕೂಸುಮರಿಮಾಡುವುದು . . . ಇವೆಲ್ಲಾ ಅವನ ಪಾಲೇ (ರಂಗನಾ. ೮೦). [ಕೂಸು + ಮರಿ (< ಮಱಿ)]

**ಕೂಸುಮೃಗ** (ನಾ). ಮೃಗದ ಮರಿ ; ಮರಿಜಿಂಕೆ : ಬೇಸಗೆಯ ಬೆಂಕೆಯಿಂದಂ ಕಾಸಿದವೋಲ್ ಕುದಿದು ಪರಿವ ನಿರ್ಝರಜಳಮಂ ಕೂಸುಮೃಗಂ ಕುಡಿಯಲ್ (ಬಾಧಪು. ೪-೮೭). [ಕೂಸು + ಮೃಗ]

**ಕೂಸೆ** (ನಾ). (ಕರಾ) ಒಂದು ಬಗೆಯ ಮೀನು : ನಿಮಗೆ ಬೇಕಾದ ಹೊಳೆಯ ಮೀನು, ಮುಡಾವು, ಅಬ್ರೋನಿ, ಕೂಸೆ, ಕಲ್ಲೂರಿ, ಕೊಂತಿ ಯಾವುದೂ ಇಲ್ಲ (ಹೊಸಕ್ಷಿ. ೫೪). [?]

**ಕೂಹಕ** (ನಾ). ಮೋಸ ; ಕಪಟ : ಪುಸಿಗೆ ಪಿಸುಣ್ಗೆ ಪೋರಟಗೆ ಮಾಯೆಗೆ ಹಿಂಸೆಗೆ ಕೂಹಕಕ್ಕೆ ಬೇವಸಕೆ ಮರುಳ್ತನಕ್ಕೆ ಕಳವಿಂಗೆ (ಚಿಕವಿ. ೩-೧೫) ; ಆಹವದಿ ಖತಿಮಸಗಿದಂತೆಯು ಕೂಹಕದಿ ಪಾರ್ಥನನು ಮೂದಲಿಸಿದನು (ಕೋಗಯು. ೨೬-೩೭). [< ಸಂ. ಕುಹಕ]

**ಕೂಹಾಕು** (ಕ್ರಿ). ಕೂಗುಹಾಕು : ಇವರಾದರೂ ಜೊತೆಯಾದಾರು ಎನ್ನುವ ಚಿಗುರಾಸೆಯಿಂದ 'ಓಯ್' ಎಂದು ಕೂಹಾಕಿದ್ದಕ್ಕೆ (ಹೊಸಕ್ಷಿ. ೪೯). [ಕೂ$_2$ + ಹಾಕು (< ಪಾಯ್ಕು$_1$)]

**ಕೂಹೆ** (ನಾ). = ಕೂವೆ (?) : ವಾಯುವ್ಯದ ಮೂಲೆಯಿಂದ ತೆಂಕಲಾಗಿ ಪೊಳಗೆರೆ ಕೂಹೆಯ ಕಾಲ ಹಾಕಿಕೊಂಡು ಪಡುವಲಾಗಿ ತಿರುಗಿದ್ದು (ಎಕ. III, ತಿರುಮ. ೬೨-೧೯೯ ; 1612). [?]

**ಕೂಳ್** 'ಕೂಟ್$_1$' ನೋ.

**ಕೂಳ$_1$** 'ಕೂಟ' ನೋ.

**ಕೂಳತನ, ಖೂಳತನ** (ನಾ). ದುರುಳತನ ; ನೀಚತನ ; ದುಷ್ಟತನ: ಈ ಕೀಳ್ಪಗೆಯ ಕೂಳತನವು ವಿಕ್ರಮರಾಯರ ಹೆಸರನುಚ್ಚರಿಸಿದನ ನೆಳಲ ಕನಸು ಗಂಡವರಿಂಗಂ ಬಾರದು (ಬಿಟ್ಟಆ. ೨೧೨-೧೯).

ಖೂಳತನ: ಪಾಳಿಯಿಲ್ಲದೆ ಸುಮ್ಮನಿಹುದಿದು ಖೂಳತನವಲ್ಲಾ (ಬಸಪು. ೨೬-೫೮); ಬಳಿಕ ಬಂದುದು ಖೂಳತನ ನಿನಗೆ (ಕುವ್ಯಾಕ. ೫-೨೩); ಮೇಲುಪೋಗನು ನೋಡದೀ ಪರಿ ಖೂಳತನವನು ಮಾಡದಿರು (ನಿಭಾಗ. ೬-೧೦-೪೦). [ಕೂಳ$_1$ (< ಕೂಟ) + -ತನ]

**ಕೂಳಪಾಳೆಯ** (ನಾ). ಆಹಾರ ಸಂಗ್ರಹಾಲಯ; ಉಗ್ರಾಣ (?): ಕೂಳಪಾಳೆಯದ ಸಂಗಡ ಕುದುರೆಯ ಮೇಲೆ ಕಾಲಕುಪ್ಪಸ ಪಾಪೋಸು (ಕಂನವಿ. ೧೧-೩೪); ಖಾನಖಾನರಿಗೆಚ್ಚರ ಪೇಳಿ ಮುಂದಣ ಕೂಳಪಾಳೆಯಕೆ ಸಂದಿಸಿ ಕುದುರೆಯ ಕಾವಲ (ಕಂನವಿ. ೧೧-೧೦೦).
[< ಕೂಟ್$_1$ + ಪಾಳೆಯ]

**ಕೂಳಬಕ್ಕ**, ಕೂಳಬಾಕ, ಕೂಳ್ಬಕ್ಕ (ನಾ). ಕೂಳಿಗೆ ಆತ್ಯಾಸೆ ಪಡುವವನು; ಹೊಟ್ಟೆಬಾಕ: ಕೂಳಬಕ್ಕನ ಹಾಗೆ ಒಬ್ಬನೇ ಎಲ್ಲಾ ಬೇಡ ಹತ್ತಿದರೆ (ಮುಂಬಯಿ. ೫-೪೫). **ಕೂಳಬಾಕ**: ಈ ಯುಗದಲ್ಲಿ ಜನರು . . . ಕೂಳಬಾಕರೂ, ಕಾಮುಕರೂ ಆಗುವರು (ಭಾವ್ಯತ. ೫೦೧). **ಕೂಳ್ಬಕ್ಕ**: ಕೂಳ್ಬಕ್ಕನು ಏಳೇಳು ಜನ್ಮಗಳಲ್ಲಿಯೂ ಸಹ ಬ್ರಹ್ಮಚಾರಿಯಾಗಲಾರನು (ಬ್ರಹ್ಮಜೀ. ೧೨೬). [< ಕೂಟ್$_1$ + ಬಕ್ಕ]

**ಕೂಳಬಾಕ** 'ಕೂಳಬಕ್ಕ' ನೋ.

**ಕೂಳಬಿಯ** (ನಾ). ಆಹಾರದ ಸರಬರಾಜು, —ವಿತರಣೆ (?): ಕಾಳಿಗನಿಕ್ಕುವ ಸತ್ರದ ಕೂಳಬಿಯಂ ಕಾಮಧೇನು ಚಿಂತಾಮಣಿ ಸಲ್ಲಿಳಿಯ ಸಮುದ್ರ[ಮು]ಳಿದರ ಕೂಳಬಿಯಂ ಕೂಳಬಿಯಮ[ದೇ]ಬಿಯಮದೇಬಿಯಮೆನಿಕುಂ (ಸೌಇಇ. XX, ೩೧-೧೮; 1014).
[< ಕೂಟ್$_1$ + ಬಿಯ (< ಬೀಯ$_2$)]

**ಕೂಳಾಟ** (ನಾ). ಮಕ್ಕಳು ಅಡಿಗೆ ಮಾಡಿ ಆಡುವ ಆಟ; ಅಟ್ಟುಗೂಳಾಟ: ನನ್ನಕ್ಕ ತನ್ನ ಬದಿಯ ಗೆಳತಿಯರೊಡನೆ ಕೂಳಾಟವನ್ನ ಒದವಿಸೆನಗಿತ್ತ ಹಪ್ಪಳ ಹುರಿಯ ಅನ್ನ (ಕಎಪು. ೨೫-೬).
[ಕೂಳ್ (< ಕೂಟ್$_1$) + ಆಟ]

**ಕೂಳಿ** 'ಕೂಳೆ$_1$' ನೋ.

**ಕೂಳು$_1$** (ಕ್ರಿ). ತಿವಿ; ಚುಚ್ಚು; ಇರಿ: ಪರಿದು ಲೋಕವನಾಳು ಮಾರಾಂತರಿಗೆ ಬಾಣವ ಕೂಳು ಹೋಮದ ಹರಿಗೆ ಹನ್ಯವ ಬೇಳು (ಅನಂರಾ. ೬-೨೨-೨೦). [ದೇ. ‖ ತಮಿ. ಮಲ. ಕುಳಿ]

**ಕೂಳು$_2$** 'ಕೂಟ್$_1$' ನೋ.

**ಕೂಳುಗೇಡಿ** (ನಾ). ಕೂಳು ದೊರೆಯದವನು; ಆಹಾರವನ್ನು ಪಡೆಯಲಾರದವನು: ಮೊಗಲರನ್ನು ದಿಕ್ಕಾಪಾಲಾಗಿ ಚದರಿಸಿ ಅವರನ್ನು ಕೂಳುಗೇಡಿ ನೀರುಗೇಡಿಗಳನ್ನು ಮಾಡಿದನು (ಹಂಮುಸ. ೫೫).
[ಕೂಳುಗೇಡು + -ಇ$_2$]

**ಕೂಳುಗೇಡು** (ನಾ). ಆಹಾರ ದೊರೆಯದೆ ಹೋಗುವಿಕೆ; ಅನ್ನಕ್ಕೆ ಅಭಾವವಾದ ಸ್ಥಿತಿ.

ಕೂಳುಗೇಡಾಗು = ಆಹಾರವಿಲ್ಲದಾಗು; ಅನ್ನಕ್ಕೆ ಗತಿಯಿಲ್ಲದಾಗು: ಯಾರು ಜೇಲಿಗೆ ಹೋದರು, ಯಾರು ಗಡಿಪಾರಾದರು ಅವರ ಮಕ್ಕಳುಮರಿ ಕೂಳುಗೇಡಾಗಿವೆ (ಪ್ರೇಮಾಶ್ರ. ೧೯೬).
[ಕೂಳು$_2$ (< ಕೂಟ್$_1$) + ಕೇಡು]

**ಕೂಳುಭಂಡ** (ನಾ). ಕೂಳಿಗೆ ಮಾತ್ರ ಬದುಕಿರುವವನು; ಕೆಲಸಗೇಡಿ: ದುಡಿಯದ ಸೋಮಾರಿ ಕೂಳುಭಂಡರು ಹಾಕಿದ್ದು ತಿನ್ನಬೇಕು (ಭಾರದ. ೪೬೩). [ಕೂಳು$_2$ (< ಕೂಟ್$_1$) + ಭಂಡ]

**ಕೂಳುವ್ಯಾಧಿ** (ನಾ) ಆಹಾರದ ಬೆಳೆ ಕಟಾವಿಗೆ ಬಂದ ಕಾಲದಲ್ಲಿ ಅದಕ್ಕೆ ತಗಲುವ ಒಂದು ರೋಗ: (ಎಸಮ್ಮೆ. XV, ೩೬).
[ಕೂಳು$_2$ (< ಕೂಟ್$_1$) + ವ್ಯಾಧಿ]

**ಕೂಳೆ$_1$**, ಕೂಣಿ, ಕೂಳಿ, ಗೂಳ್ಳಿ$_2$ (ನಾ). ಮೀನು ಹಿಡಿಯುವ ಬುಟ್ಟಿ: "ಮತ್ಸ್ಯಧಾನಿ, ಕುವೇಣಿ" (ನಾಚಿರಾ. ೯); ಪುಲ್ದಂಡೆ ಬೆಳ್ವಾರ್ಪಟಮೆರೆಬಲೆಗಳ್ ಸಾಳುವಂ ಕೂಳೆ ಗಾಳಂ (ಗಿರಿಕ. ೧-೬೯); ಕೂಳೆಗಳ ಕುಡಿಮೀನವೋಲ್ ವಿಹಗಾಳಿ ಹುದುಗಿತು ನಡುಗಿದರು ವನಪಾಲಕರು (ಕುವ್ಯಾಅ. ೨೦-೨೩). **ಕೂಣಿ**: ಸಣ್ಣ ಕೂಣಿಗೆ ಕೈ ಹಾಕಲು ಮೀನು ಚೂರುಗಳನ್ನು ತಿನ್ನುತ್ತಿದ್ದ ಇಲಿಯೊಂದು ಕೈಮೇಲೆಯೇ ಹತ್ತಿ (ಕಾನೂರು. ೫೯); ಅವರು ಮೀನು ಹಿಡಿಯಲು ಹತ್ತು ಕೂಣಿ ಹಾಕಿಸಿದ್ದರು (ಗಿರಿಬಾ. ೯೪). **ಕೂಳಿ**: ಬಲೆಗೊಳಗಾಗೆ ಕೂಳಿಯಯಿಜಿತದ ಡಾವರಕ್ಕೆ ನಿಲ್ಲೆ (ಪಾರಿವ. ೩-೨೧೩); ತಡಿಕೆಗಳ ಬಲೆ ಗಾಣ ಕೂ [ಪಾಠಾಂ. ಗೂ]ಳಿ ಬಿಲು ಸರಳು ನಾಯ್ ಗಿಡುಗ ನೆರೆ ಮಡ್ಡಿ ಬೆಳ್ವಾರ್ಪಟಂ (ಹಚಕಾ. ೫-೯); ಕೂಳಿಯ ತೀವಿ ತೀವೆವು ಕೊಳಚೆಗಳ ಬಾಣಾವಳಿಯ ತಡಿಕೆಯಲಿ ಹೊಯ್ವೆವು (ಕುವ್ಯಾಕ. ೨೨-೨೯); ಬಡಿಕೋಲ್ನೊಕ್ಕಿನ ಮರ್ದು ಕೂಳಿ ಪದವಿಲ್ (ಯಾದಮ. ೪-೫೮). **ಗೂಳ್ಳಿ$_2$**: ಗೂಳಿ ಹಾಕಿ ಮೀನು ಹಿಡಿಯುವ ಬೆಸ್ತರಿಗೆ (ಮರಮ. ೬೬). 'ಗೂಡೆ' ಪರಾ.

ಕೂಣಿಹಾಕು = ತಂತ್ರಹೂಡು: ತನ್ನ ಕೀಳು ಗೀಳಿನ ತೃಪ್ತಿಗೆ ಕೂಣಿಹಾಕಿಕೊಂಡು ಕುಳಿತಿದ್ದಾಳಲ್ಲವೆ? (ಮಲೆಮ. ೨೮೪).

[ದೇ. ‖ ತಮಿ. ಕೂಡ್ಯೆ, ಕೂಡು; ಮಲ. ಕೂಟ; ತುಳು. ಗೂಡೆ; ಕೊಡ. ಕೂಡೆ; ತೆಲು. ಗೂಡ]

**ಕೂಳೆ$_2$**, ಕುಳೆ (ನಾ). ೧. ಪೈರನ್ನು ಕೊಯ್ದು ಬಳಿಕ ತಳದಲ್ಲಿ ಉಳಿಯುವ ಮೋಟು; ತುಂಡು ಕೋಲಿ: ಬೆಳಕಿನಲ್ಲಿ ದಾರಿ ನಡೆಯುತ್ತಿರುವಾಗ ನನ್ನ ಕಾಲಿಗೆ ಕೂಳೆ ಹೊಕ್ಕಿತು (ಪ್ರವಾಇ. I, ೪೧೩); ಹೊಲಗಳಲ್ಲಿ ಹಳೆಯ ವರ್ಷದ ಬೆಳೆಯ ಕೂಳೆಗಳು, ದೊಡ್ಡ ದೊಡ್ಡ ಮುಳ್ಳುಗಳಂತೆ ಸಾಲುಸಾಲಾಗಿ ನಿಂತಿದ್ದವು (ದೂರಸ. ೧೧೬); ಕೂಳೆ ಕಿತ್ತು ನೆಲವನುಳುವೆವು (ವಿಸೀಗೀ. ೮೧-೧೨). ೨. ಕೂಳೆಯ ಭಾಗದಲ್ಲಿ ಹುಟ್ಟಿದ ಹೊಸಮೊಳಕೆ: ಹುರಿದ ಬೀಜಗಣಂಗಳಂ ಬಿತ್ತಿಬೆಳೆದನಾ . . . ಒಗೆದ ಮರುಕೂಳೆಯೊಳ್ ತೆನೆಗಳಂ ಕೊಯ್ದನು (ಚೆಬಪು. ೫೬-೨೬); ಆಚಾರ್ಯರಿಗೆ . . . ಗಡ್ಡದ ಕೆಳಗೆ ಮಾತ್ರ ಹೊಲದ ಕೂಳೆಯ ಹಾಗೆ ಸ್ವಲ್ಪಸ್ವಲ್ಪ ಬೆಳೆಯುತ್ತಿತ್ತು (ನಟಸಾ. ೩). **ಕುಳೆ**: ೩. ನೆನೆ ಹಾಕಿದ ಕಾಳಿನಲ್ಲಿ ಹೊರಡುವ ಮೊಳಕೆ: ಬಿತ್ತಿ ಬೆಳೆದ ಅಥವಾ ಕುಳೆ ಒಡೆದ ಕಾಳು ಕಡ್ಡಿ ಮುಂತಾದವನ್ನು ತಿನ್ನದೆ . . . ಪವಿತ್ರ ಪದಾರ್ಥಗಳಿಂದ ವಾನಪ್ರಸ್ಥನು ಜೀವಿಸಬೇಕು (ಭಾವ್ಯತ. ೪೫೮). [ದೇ. ‖ ತಮಿ. ಕೂಟ್ಯಿ]

**ಕೂಳೆ$_3$** (ನಾ). ಕೀವು; ಕೊಳೆ: ಗಾಯಂ ಸಮನಿಸಿದೆಡೆಯಿಂದ ಕೂಳೆ ಸುರಿಗುಮವಶ್ಯಂ (ಖಮದ. ೧೫-೧೮). [← ತಮಿ. ಕೂಟ್ಯಿ = ಕೆಸರು]

**ಕೂಳೆ$_4$**, ಖೂಳೆ (ನಾ). ಕೀಳು ಹೆಂಗುಸು; ದುಷ್ಟೆ: ಕುಪಿತಮತಿಗಳು ಕೂಳೆ [ಪಾಠಾಂ. ಖೂಳೆ, ಖುಲ್ಲೆ]ಯರು ಕಳ್ಳೆಯರು (ಬಸಪು. ೪೦-೫೪); **ಖೂಳೆ**: ಖೂಳೆಯರ್ತಮತಮಗೆ ಮಾರಾಂತು ನಿಂದು (ಕೊಟ್ಟೂಬ. ೯-೬). [ಕೂಳ$_1$ (< ಕೂಟ) + -ಎ$_2$]

**ಕೂಳೆಕಾಯಿ** (ನಾ). ೧. ಬದನೆಗಿಡವನ್ನು ಕತ್ತರಿಸಿದ ಮೇಲೆ ಚಿಗಿತು ಬಿಡುವ ಕಾಯಿ: (ಕಿ). ೨. ಹೊಲಿಗೆಯ ಅಂಚು, —ಕೊನೆ: (ಕಿ). [ಕೂಳೆ$_2$ + ಕಾಯಿ$_4$ (< ಕಾಯ್$_4$)]

**ಕೂಳೆಗಿಡ** (ನಾ). ಕೊಯ್ದ ಮೇಲೆ ಕೂಳೆಯಲ್ಲಿ ಚಿಗಿವ ಗಿಡ: (ಕಿ).
[ಕೂಳೆ$_2$ + ಗಿಡ (< ಗಿಡು)]

**ಕೂಳೆಬೆಳೆ** (ನಾ). ಕೂಳೆ ಚಿಗಿತು ಬರುವ ಬೆಳೆ: (ಕಿ). [ಕೂಳೆ$_2$ + ಬೆಳೆ$_2$]

**ಕೂಳೊಡೆ** (ಕ್ರಿ). ಚಿಗುರು; ಮೊಳೆಯೊಡೆ: ಕುಡಿಕೆಯಲ್ಲಿ ಕುಸುರೆ ಕೂಳೊಡೆದು ಬಾಲರಿಗೋಗರವಾಯಿತ್ತು (ಮೋಳಿಮಾ. ೨೧೬-೬೭೧).
[ಕೂಳೆ$_2$ + ಒಡೆ$_1$]

**ಕೂಳ್ಕರೆ** (ನಾ). ಕೂಳಿನ ಕರೆ; ಅನ್ನದ ಕೂಗು: ಊಳಿಗವೊ ಕಾಳಗವೊ ಕೂಳ್ಕರೆಯೊ ಗೋಳ್ಕರೆಯೊ (ಮಂಕುಕ. ೨೪೯).
[ಕೂಳ್ (< ಕೂೞ್$_1$) + ಕರೆ$_2$]

**ಕೂಳ್ಕೆ** (ನಾ). ಕೊಡುವಿಕೆ (?): ಪೊಱಮಡಲೊಂದು ಕಾಯ್ಪೆರಡು ಕೂಳ್ಕೆ ಮೊಗಂದೆಗೆಯಲ್ಕೆ ಮೂಱು . . . ಪತ್ತಿವು ಪೋದ ನಲ್ಮೆಗಳ್ (ಮನ್ಮವಿ. ೮-೧೩). [< ಕೂಡು$_1$ + -ಕೆ$_2$]

**ಕೂಳ್ಗಂಜಿ** (ನಾ). ಅನ್ನದ ಗಂಜಿ: ಕೂಳ್ಗಂಜಿಗೊಂಡುದನೊಳ್ಕಿಕ್ಕಿ ಪೋದುದು ಮನುಣ್ಬುದೆಂಬ ದುಃಪರ್ವಾಹಾರಮುಂ . . . ಎಂಬ ಮೂಜನೆಯ ಶಿಕ್ಷಾವ್ರತದತಿಚಾರಮಕ್ಕುಂ (ಪಸಾರ. ೬೩೩-೧೪).
[ಕೂಳ್ (< ಕೂೞ್$_1$) + ಗಂಜಿ]

**ಕೂಳ್ಗುದಿ$_1$** 'ಕೂೞ್ಗುದಿ$_1$' ನೋ.

**ಕೂಳ್ಗುದಿ$_2$** 'ಕೂೞ್ಗುದಿ$_2$' ನೋ.

**ಕೂಳ್ಗುದಿಗುದಿ** (ಕ್ರಿ). ಅನ್ನ ಕುದಿಯುವಂತೆ ಕುದಿ; ಬಹಳವಾಗಿ ಕುದಿ: ಕುದಿದುರಿವ ಹುತ್ತಿನಲಿ ಕೂಳ್ಗುದಿಗುದಿಹ ಸರ್ಪಸ್ತೋಮ (ಕುವ್ಯಾ ಆ. ೨೦-೬೨); ಶರಧಿ ಕೂಳ್ಗುದಿಗುದಿದುದಟವೀಚರರ ಬಲ್ಲವರಾರು (ತೊರರಾ. ೬-೫೦-೧೪); ಕೂಳ್ಗುದಿಗುದಿದು ಗದಗದಿಸೆ ಜೀವನಂ (ಶ್ರೀರಾಮಾ. ೬೩೩-೧೧೮).
[ಕೂಳ್ಗುದಿ$_2$ (< ಕೂೞ್ಗುದಿ$_2$) + ಕುದಿ$_1$]

**ಕೂಳ್ಗುದಿಗೊಳ್** 'ಕೂೞ್ಗುದಿಗೊಳ್' ನೋ.

**ಕೂಳ್ದೆಱೆ** (ನಾ). ಒಂದು ಬಗೆಯ ತೆರಿಗೆ: ಮನೆದೆಱೆ ಬಿಟ ಬೆಸಕೂಳ್ದೆಱೆ ಮೊದಲಾಗೆ ಸರ್ವ್ವಮಾನ್ಯಮಾಗೆ ಬಿಟ್ಟರ್ (ಕಇ. II, ೮-೩೩; 1072). [ಕೂಳ್ ? + ತೆಱೆ$_2$]

**ಕೂಳ್ಪಕ್ಕ** 'ಕೂಳಬಕ್ಕ' ನೋ.

**ಕೂಳ್ಪಡಕ** 'ಕೂಟ್ಬಡಿಕ' ನೋ.

**ಕೂಳ್ಪಡಿಕ** 'ಕೂಟ್ಬಡಿಕ' ನೋ.

**ಕೂಳ್ಪಡಿಕತನ** (ನಾ). ಹೊಟ್ಟೆಬಾಕತನ; ಕೂಳ್ಬಕ್ಕತನ: (ಕಿ).
[ಕೂಳ್ಪಡಿಕ (< ಕೂಟ್ಬಡಿಕ) + -ತನ]

**ಕೂಳ್ಪಣಿಗ** 'ಕೂಟ್ವಣಿಗ' ನೋ.

**ಕೂಳ್ವಣಿಗ** 'ಕೂಟ್ವಣಿಗ' ನೋ.

**ಕೂಳ್ಪುಗು** (ಕ್ರಿ). ಆಹಾರ ಸೇರು; ಅನ್ನ ಸೇರು: ಚಿಂತಿಪ ಸುಯ್ವು ಜಾನಿಸುವ ಕಂದುವ ಕುಂದುವ . . . ಕೂಳ್ಪುಗದಾಪ್ತರ ಮಾತುಗೇಳದ (ಪುಷ್ಪಪು. ೧೯-೩೪).
[ಕೂಳ್ (< ಕೂೞ್$_1$) + ಪುಗು]

**ಕೊಱಬ** (ನಾ). ಹಾಳಾದವನು; ದಿವಾಳಿಯಾದವನು: ಸಲುವ ಹಣಕೆ ಕೊಡಲಾಱದೆ ಕೊಱಬನಾಗಿ ಹೋದೆವುಯೆಂನಲಾಗಿ (ಎಕ. III, ನಂಜನ. ೧೧೭-೯; 1652). [?]

**ಕೊಱಾಡು** (ಕ್ರಿ). ಅದುಮು; ಒತ್ತು (?): ಜವದೂತರ ಜಡ್ಡಂ ಕೊಱಾಡುವರಾ ಬಱಸಿಡಿಲಂ ಪಿಡಿದು ಮೆಱೆವಪ್ರರ್ತಿಯಪ್ಪವನಂ ಜವಂಗೆ ಕುಡುವರ್ (ಸೌಇಇ. IX-i, ೩೯೧-೬; 1195).
[ಕೊಱು$_1$ + ಅಡು$_1$]

**ಕೊಱಿಗೆ, ಕೂರಿಗೆ** (ನಾ). ೧. ಹೊಲಗಳಲ್ಲಿ ಬೀಜಬಿತ್ತುವ ಉಪಕರಣ: "ವಾಪಿ ಕೊಱಿಗೆ ಸಡ್ಡೆಯಡ್ಡೆಯಕ್ಕುಂ" (ಮಂಗರಾ. ೧೧೯-೧); ಕುಡು ಗೋಲಂ ಕೊಱಿಗೆಯಂ . . . ಕೊಡಲಿಯನಾಯುಧ ಚಯಮಂ ಕುಡ ರೆಂತುಂ ಪೆಱರ್ಗೆ ಪಾಪಭೀತರ್ ಜೈನರ್ (ಸಮಪ. ೫-೧೭); ಪೊಸ ಕೊಱಿಗೆ ಮಡಕೆಗಳಂ ಕೆಸುಮಣ್ಣಾನೆ ಪೂಸಿ (ಜಟ್ಟಮು. ೯-೨೮). **ಕೂರಿಗೆ:** ೧. ಕೂರಿಗೆಯಿಂದ ನೆಲ್ಲು ಬಿತ್ತುವುದು ಉತ್ತಮವು (ಕೃಷಿಪ್ರ. ೫೯). ೨. ಹೊಲವನ್ನು ಅಳೆಯುವ ಒಂದು ಅಳತೆ. ℙ ನಾಲ್ಕು ಎಕರೆಯಿಂದ ಎಂಟು ಎಕರೆಯವರೆಗೆ ಇರಬಹುದು: ಒಂದು ಕೂರಿಗೆಯಿಂದ ಪೊಂದುದಿನದಲ್ಲಿ ಬಿತ್ತುವಷ್ಟು ಭೂಮಿಗೆ ಕೂರಿಗೆಯೆನ್ನುವರು (ಕಭಾಗೆ. ೨೯೧); ಒಂದು ಕೂರಿಗೆಗೆ ಸುಮಾರು ನಾಲ್ಕು ಎಕರೆಯಾಗುತ್ತದೆ (ಕೃಷಿಪ್ರ. ೧೫೦). [?]

**ಕೊಱಿಗೆಗೊಳಗ** (ನಾ). ಬಿತ್ತುವ ಕೂರಿಗೆಯ ಬಟ್ಟಲು: ನಡುಬಿಟ್ಟ ದಿಂದಿತ್ತ ಕೆಳಗಿರ್ದು ಹಬ್ಬುಗೆ ಕೆಡುವಂತೆ ಕೀಸಿ ದಂಡದೊಳು ಕುಡಿಯರು ಬಿತ್ತುವ ಕೊಱಿಗೆಗೊಳಗದಂತೊಡರಿಸಬೇಕೆಂದು ಬಗೆದಾ (ಭರಚ. ೭೧-೧೩). [ಕೊಱಿಗೆ + ಕೊಳಗ$_1$]

**ಕೊಱಿತಕುಂಟೆ** (ನಾ). ಒಂದು ಊರಿನ ಹೆಸರು. ℙ ಈಗಿನ ಧಾರವಾಡ ಜಿಲ್ಲೆಯ ಕುರ್ತುಕೋಟೆ: ಏತೇಷಾಂ ಸಪ್ತಮ (ಸಪ್ತ) ಗ್ರಾಮ (ಮಾಣಾಂ) ಮಧ್ಯಸ್ಥಿತೇ ಶ್ರೀ ಕೊಱಿತಕುಣ್ಟೆಗ್ರಾಮ (ಮೇ) ನಾಮಸ್ಯತಸ್ಯ . . . ಅದೇಯಂ ದತ್ತಂ (ಇಆ. VII, ೨೨೦-೪೫; 658). 'ಕುಱಿತಕುಂಟೆ' ಪರಾ. [ಕೊಱಿತ$_0$ + ಕುಂಟೆ]

**ಕೊಱು$_1$, ಕೂರು$_4$** (ನಾ). ಪಾಲು; ಅಂಶ. 'ಕೊಱುಗೊಳ್' ಪರಾ. **ಕೂರು$_4$:** (ಕಿ). [ದೇ. ‖ ತಮಿ. ಮಲ. ಕೂರುಮ್ಮು; ತೆಲು. ಕೂರು]

**ಕೊಱು$_2$** (ನಾ). ತಾಳಭೇದ; ನಾದ; ತಾನ (?): ಮೋಹರಂಗಳ ಕಾಣಿಸಿ ಎಣಿಪ ಪಂಚಾಕ್ಷರಿಯ ಮಾಳ್ಕೆಯಿಂ ತದ್ದಿತೋ ಕಿಣವೆಂಬ ಕೊಱಿಂದೆ ನಂದಿ ಮದ್ದಳೆಯ ದಾಂಧಣವೆಂದು ಶಬ್ದಮಂ ಕೈದೋಱಿ (ಚೀರಮು. ೧೦-೩೫). [?]

**ಕೊಱುಗೊಳ್** (ಕ್ರಿ). ೧. ತುರುಕಿಕೊ; ಗಿಡಿದುಕೊ: ಸಿಡಿಖಂಡಂ ಗೊಂಡುಗಿಬಗಿದಿಡಿದಿಡಿದೆಡೆವಿಡದೆ ಕೊಱುಗೊಳ್ವರ್ ಬಾಯೊಳ್ (ಸುಕುಮಾ. ೧೧-೪೨); ಕಟ್ಟುವಡೆದಂತೆಯುಂ ಕಾಸಿ ಬೆಚ್ಚಂತೆಯುಂ ಕೊಱಿದು ಕೋದಂತೆಯುಂ ಕೊಱುಗೊಂಡಂತೆಯುಂ ಅಗೆದು ನಟ್ಟಂತೆಯುಂ (ಚಿಕವಂ. ೯೦-೧೯). ೨. ಕತ್ತರಿಸು; ಭಾಗಮಾಡು: ಸಾಱಿದೆನು ಬೇಡಕಟ ಫಲವನು ಕೊಱುಗೊಳದಿರು ಕೇಳು ಹೇಳುವೆ ತೋಱುವೀ ದೈವದ ಮಹತ್ವವನೆಂದನತಿ ಕಾಯ (ತೊರರಾ. ೬-೩೪-೮).
[ಕೊಱು$_1$ + ಕೊಳ್$_1$]

**ಕೊಱೆ, ಕೂರೆ, ಕೊರ್ಎ$_6$, ಕೊಱೆ$_7$** (ನಾ). ೧. ಕೊಳಕಾದ ಬಟ್ಟೆ; ಮಲಿನ ವಸ್ತ್ರ: ಮುರಿದು ಬಿರ್ದ್ದ ಪೆಣಕ್ಕಂ ಸೂಱೆವೋದ ಚಂಡಕ್ಕಂ ಎತ್ತಿದ ನೆತ್ತರ ಕೊಱೆಗಂ ಪಟ್ಟಪಾಳಕ್ಕಂ ಪಾಯ್ದುಬಲಿಗಂ ಮೊಱೆ ಯೆಂಬ ಶಬ್ದಕ್ಕಂ ಸಮೆಯ ಧರ್ಮಕ್ಕೆ ಕೂಡಿದ ಸಂಘಾತಕ್ಕಂ ಮಾಡಿದ ಬೈಬಸ್ಥೆಗಂ ತಪ್ಪುವರಲ್ಲರು (ಎಕ. VII, ಶಿಕಾ. ೧೧೮-೫೨; 1054); ತೋಱಿಸುಗುಮೆಮಗೆ ತೋರ್ಪೀ ಕೊ[ಪಾಠಾಂ. ಕೋ]ಱೆಯ ದೇವಕಿಯ ತನಯನಿಂದಂ ನೆತ್ತರ್ಗಾಱುವ ಕಂಸನ ನೆತ್ತರ ಕೊಱೆ ಯನಿದು ತಪ್ಪಿದಂದು ನಿನಗುಂ ಮಗಳೇ (ಅರ್ಧನೇ. ೭-೯). ೨. ಕೊಳಕಾದ ಬಟ್ಟೆಗಳಲ್ಲಿ ಹುಟ್ಟಿಕೊಳ್ಳುವ ಒಂದು ಜಾತಿಯ ಕ್ರಿಮಿ: "ವಚನಾಶ್ರಯಂ ಕೊಱೆಯಕ್ಕು" (ಮಂಗರಾ. ೪೯-೧೪); ಶಯ್ಯಾತಳ ದೊಳ್ ಮಂದವಿ ಸರ್ಪಿಣಿಯೆಂಬುದೊಂದು ಯೂಕಮಿರ್ಪುದು ಅ ಕೊಱೆಯಿರ್ದ ಠಾವಿಗೆ [ಪಾಠಾಂ. ಪೇನಿರ್ಪುದು ಅಲ್ಲಿಗೆ] ಢುಂಡುಕ ನೆಂಬ ತಿಗುಣೆ ಬಂದು (ಪಂಚತಂ. ೧೨೩-೧೧). **ಕೂರೆ:** ೨. ಕೂರೆಗೆ ತಿಗುಣೆಗೆ ದೂರ ಹೋಗುವುದೇಕೆ ಇದ್ದಾವು ನಿಮ್ಮ ಬಟ್ಟೆಯೊಳು (ಇಂಚಾಪ. ೭೯-೮೧); ದರಿದ್ರಕ್ಕೆ ಮೈಯೆಲ್ಲಾ ಕೂರೆ (ಗಾದೆ). **ಕೊರ್ಎ$_6$:** ೧. ಅರು ಮಾರುದ್ದ ಕೊರೆಗಳ ಕೋಡು (ಜನಗೀ. ೮೫). **ಕೊಱೆ$_7$:** ೧. 'ಉಡುಗೊಱೆ' ಪರಾ.
[ದೇ. ‖ ತಮಿ. ಕೊಱಿಕೈ; ಮಲ. ಕೂಱ; ತುಳು. ಕುರೆ = ಕೊಳಕು]

**ಕೂೞ್$_1$**, ಕೂಳ್, ಕೂಳು$_2$, ಕೂೞು (ನಾ). ೧. ಅನ್ನ; ಓಗರ; ಓದನ: "ಓಗರದಲ್ಲಿ ಕೂೞ್" (ಶಬ್ದಮಂ. ೧೧೩); ವೀಡಿಲ್ಲಾದುದು ಕೂೞಿಲ್ಲಾದುದು (ಎಇ. XIV, ೧೯೧–೩೦; 725); ಉಪಾಧ್ಯಾಯರಿಗೆ ಕೞಿಮೆಯ ಕೂೞುಂ ತುಪ್ಪಮಂ (ವಡ್ಡಾರಾ. ೬೯–೧೩); ವಿದುರನೆಂಬೀ ತೊೞ್ಪುಟ್ಟಿಯ ಮನೆಯ ಕೂೞ್ ನುಡಿಯಿಸೆ ನುಡಿದೈ (ಪಂಪಭಾ. ೯–೫೮). ಕುದಿವ ಕೂೞಂತೆ ಕುದಿದು (ಧರ್ಮಾಮೃ. ೩–೩೫). **ಕೂಳ್**: ೧. ಕುಲಹೀನನೋರ್ವನಂ ಮೆಯ್ಕುಟ್ಟು ಕೂಳ್ ಪುಟ್ಟದಲೆವೆತ್ತು (ಪದ್ಮರಾ. ೪–೪೦). ಸೊರ್ಕನಿಂ ಕೂಳ್ಗೆ ಬಂದಾವಗಮಿರ್ಪರ್ (ವೀರವಿ. ೧೦–೬). **ಕೂಳು$_2$**: ೧. ಧರೆಯ ಕೌರವರಾಳುತಿಹರಿಂದವರ ಹಂಗಿನ ಕೂಳಿನಲಿ ಬೆಂದೊಡಲ ಹೊರೆವವರು (ಸಂಭಪ. ೨೦–೩೦); ನೀಲಮೇಘ ಶ್ಯಾಮ ನಿನ್ನಾಳೆಂಬವರಿಗೆ ಕೂಳು ಹುಟ್ಟದೆ ಹೋಯಿತು (ಪುರಂದ. ೧–೧೬೧–೧೨); ನಾಳೆ ಸುಜ್ಞಾನ ಸುಖವನುಣಬಹುದಿಂದು ಕೂಳಸುಖವನು ನೋಡೆಂದ (ಭರತೇ. ೧೦–೪೫). ೨. (ಹೀನಾರ್ಥದಲ್ಲಿ) ಆಹಾರ: ಎಲವೋ ಕುನ್ನಿ ಕೂಳಿದೆ ತಿನ್ನು ಬಾರೆನುತ (ಕುವ್ಯಾಅ. ೧೦–೩೦); ನಮ್ಮ ಮನೆಯ ಕೂಳಿನಲ್ಲಿ ಬಿದ್ದಿದ್ದಾನೆ (ರೂಢಿ). **ಕೂೞು**: ೧. ಅರಸರಾಳ್ವ ಬನ್ನಾದನ್ನಾರ್ಯಯಕಗ್ಗರ್ ಸೊಲ್ಲಗೆ ಕಿೞೂಳ್ಗೆ ಕೂೞುವುಣ × × × × ಯ ಕುಡುವೊರ್ (ಎಕ. XVI, ತುಮಕೂ. ೮೧–೧೧; 907); [ಗದ್ಯಾ]ಣ ಸಹಣ ಕಾ[ಟ] × × ಕೂೞು × × ತುಪ್ಪಮಾನಮೊನ್ದು (ಸೌಇಇ. XI–i, ೪೦–೧೩; 965).

[ದೇ. ‖ ತಮಿ. ಮಲ. ಕೂೞ್; ತುಳು. ಕೂರು, ಕೂಳು; ಕೊಡ. ಕೂಳಿ; ತೆಲು. ಕೂಡು. / ಸಂ. ಕೂರ]

**ಕೂೞ್$_2$** (ಗು). ೧. ಕ್ರೂರವಾದ; ನಿರ್ದಯವಾದ; ದುಷ್ಟವಾದ. 'ಕೂೞ್ಕಮ್ಮಿ' ಪರಾ. ೨. ಬಿಸಿಯಾದ. ೩. ಹರಿತವಾದ; ಮೊನಚಾದ: (ಕ). [< ಸಂ. ಕ್ರೂರ]

**ಕೂೞ**, ಕೂಳ$_1$, ಖೂಳ, ಖೂೞ (ನಾ). ಮೂರ್ಖ; ಎಗ್ಗ; ಅಲ್ಪ; ನೀಚ: "ಕೂೞಂ = ಎಗ್ಗಂ (ಶಮದ. ಪಂ. ೧); "ಕೂೞನೆಂದುಂ ಕಿಱುಕುಳನೆಂದುಂ ಅಲ್ಪಂ" (ಕಶಸಾ. ೧೮–೩೬೪); ಕೂೞಂ ಕೊಱಚಾಡೆ ನೀನೊಂದಾಡುವುದೇ (ರಾಮಾಶ್ವ. ೨೫–೨೩). **ಕೂಳ$_1$**: ಶಾಪದಗ್ಧರ ಶಠರ ಕೂಳರ ಕುತರ್ಕಿಗಳ . . . ದುರ್ಯೋಧಕೆಲೆ ಭೂಪಾಲ ನೀನಿಂತು ಮರುಳಪ್ಪರೇ (ಪದ್ಮರಾ. ೫–೧೨); ಕೇಳಿದೊಡೇನೊ ಕೇಳದೊಡೇನೊ ಮನಗೊಂಡು ಕೂಳರದೞಿನೇನು ಸಿದ್ಧಿ (ನೇಮಿಸಂ. ೧–೩೧). **ಖೂಳ**: ಖೂಳನೆಂಬೆನೆ ನೀ ಸಮುಸ್ತಕಳಾಳೀ ನಿಪುಣನು (ಕುವ್ಯಾಕ. ೫–೨೧); ಕಾಳನೆಣಿಸಿದೆ ಖೂಳ ಹೋಗೆಂದ (ತೊರರಾ. ೩–೭–೩೬); ಕೇಳಿದುತ್ತರಂ ಬೇಳಲಾಜದೆ ಮೊಗಂಬೆಮರ್ದು ಕಂಗೆಟ್ಟೊಳ್ವ ಖೂಳ ಕುಕವಿಯ ಕಾವ್ಯದಂತಲ್ಲ (ಚಬಪು. ೧–೩೫). **ಖೂೞ**: ಖೂೞ, ನಾೞ, ಬೋೞ (ಶಬ್ದಾನು. ೧೪೦ ಪ್ರಯೋ). 'ಖುಲ್ಲ' ಪರಾ. [< ಸಂ. ಕ್ಷುಲ್ಲ]

**ಕೂೞವುೞ್** (ನಾ). ಅನ್ನದ ಅಗುಳು: "ಕೂೞವುೞಲ್ಲಿಯುಂ ಹಾಲು ಧಾನ್ಯದಲ್ಲಿಯುಂ ಪುಲಾಕವೆಂಬುದು" (ಹಲಾಯು. ೧೩೮–೪೦).
[ಕೂೞ್$_1$ + ಅವುೞ್]

**ಕೂೞು** 'ಕೂೞ್$_1$' ನೋ.

**ಕೂೞ್ಕಮ್ಮಿ** (ನಾ). ಕ್ರೂರವಾದ ಕೆಲಸಮಾಡುವವನು; ಕ್ರೂರಕರ್ಮಿ: "ಕ್ರೂರಕರ್ಮಿ – ಕೂೞ್ಕಮ್ಮಿ" (ಶಮದ. ೨೮೯ ಪ್ರಯೋ).
[ಕೂೞ್$_2$ + ಕಮ್ಮಿ$_1$]

**ಕೂೞ್ಕುದಿಗೊಳ್** 'ಕೂೞ್ಗುದಿಗೊಳ್' ನೋ.

**ಕೂೞ್ಗಟ್ಟೆ** (ನಾ). ಅನ್ನನೀರು ನೀಡುವ ಕಟ್ಟೆ; ಜಗಲಿ: ನೀರ್ಗಂಡಿ, ಕೂರ್ಗಲಿ, ಕೂೞ್ಗಟ್ಟೆ (ಶಬ್ದಾನು. ೯೦ ಪ್ರಯೋ). [ಕೂೞ್$_1$ + ಕಟ್ಟೆ$_1$]

**ಕೂೞ್ಗುದಿ$_1$**, ಕೂಳ್ಗುದಿ$_1$ (ಕ್ರಿ). ಅನ್ನ ಕುದಿಯುವಂತೆ ಕುದಿ: ಲವಣಾಂಬುರಾಶಿ ಕುಕ್ಕುೞಗುದಿವಲ್ಲಿ ಕೂೞ್ಗುದಿಯೆ ಮೇಗೆ ಸಿಡಿಲ್ದಗುಳಂತೆ (ಪಂಪಭಾ. ೧೧–೧೫೩). **ಕೂಳ್ಗುದಿ$_1$**: ಕೂಳ್ಗುದಿದ ವೇಳಂಬುಧಿಗಳೇನೆಂಬೆನು ಮಹಾದ್ಭುತವ (ನಿಭಾಗ. ೭–೮–೪). 'ಬೇಗುದಿ' ಪರಾ. [ಕೂೞ್$_1$ + ಕುದಿ$_1$]

**ಕೂೞ್ಗುದಿ$_2$**, ಕೂಳ್ಗುದಿ$_2$ (ನಾ). ಅನ್ನ ಕುದಿವಂತೆ ಕುದಿಯುವಿಕೆ; ಒಳಗೊಳಗೆ ಕುದಿಯುವಿಕೆ. 'ಕೂೞ್ಗುದಿಗೊಳ್' ಪರಾ. **ಕೂಳ್ಗುದಿ$_2$**. 'ಕೂಳ್ಗುದಿಗುದಿ' ಪರಾ. [< ಕೂೞ್ಗುದಿ$_1$]

**ಕೂೞ್ಗುದಿಗೊಳ್**, ಕೂಳ್ಗುದಿಗೊಳ್, ಕೂೞ್ಕುದಿಗೊಳ್ (ಕ್ರಿ). ೧. ಅನ್ನ ಕುದಿವಂತೆ ಕುದಿ; ಕತಕತ ಕುದಿ. ೨. (ಅಲಂ) ತಳಮಳಿಸು; ಪರಿತಪಿಸು; ಸಂಕಟಪಡು: ಜಲಚರ ಜೀವರಾಶಿಗಳೆಲ್ಲ ಮಸುಂಗೊಳೆ ಗೋಳುಂಡೆಗೊಳೆ ಕೂೞ್ಗುದಿಗೊಳೆ ಮಹೋತ್ತುಂಗ ಸಿಂಹನಾದಂಗೆಯ್ಯೆ (ಗದಾಯು. ೭–೨೧ ವ); ಶೋಕ ವಿಹ್ವಲದಿಂ, ಕೂೞ್ಗುದಿಗೊಂಡುದಾ ಕುರುಕುಲಕ್ಷ್ಮಾಪಾಲನಂತಃಪುರಂ (ಗದಾಯು. ೧೦–೧೩). **ಕೂಳ್ಗುದಿಗೊಳ್**: ೨. ತಲೆವಾಗಿರ್ದ ಪರವೆಯರಂ ಕಂಡು ನಂಬಿಯಣ್ಣನ ಕರಣಂ ಕೂಳ್ಗುದಿ[ಪಾಠಾಂ. ಕೊಳ್ಗುದಿ, ಕೋಳ್ಗುದಿ, ಗಳೊಗ್ಗಡಿ, ಕೊಗ್ಗುದಿ]ಗೊಂಡು (ನಂಬರ. ೧೬–೮೯); ಕರಣವೆಲ್ಲಂ ನೊಂದು ಬೆಂದು ಕೂ[ಪಾಠಾಂ. ಕೋ]ಳ್ಗುದಿಗೊಂಡುದಿನ್ನಾಡಿ ತೋಱಲೇಕೆ (ಹಚಕಾ. ೮–೪); ಜಯಮಾಗದೆ ಸೋಲ್ತು ಕುವರನೊಳ್ಕೂಳ್ಗುದಿಗೊಂಡಿರದೊಂದು ಕುಹಕಮಂ ಚಿಂತಿಸಿದರ್ (ವೃಷವಿ. ೩೪–೭೩). **ಕೂೞ್ಕುದಿಗೊಳ್**: ೨. ನಿನ್ನಾಣತಿಗಬಲೆ ಮಱುಗಿದಳಿಲ್ಲ . . . ಕೂೞ್ಕುದಿಗೊಂಡಳಿಲ್ಲ (ರಾಮಾಶ್ವ. ೩೮–೧೦). [ಕೂೞ್ಗುದಿ$_2$ + ಕೊಳ್$_1$]

**ಕೂೞ್ನೀರ್** (ನಾ). ಅನ್ನ ಮತ್ತು ನೀರು: ಶತ್ರುಹನ ಸಾಯಿರ ಸಾಯಿರ ಲೆಕ್ಕದಿನಿವಿರಿದು ಪಡೆಗರಣ್ಯಕಂ ಕೂೞ್ನೀರಿತ್ತು ಸಮ್ಮಾನಿಸಿದನೆ (ರಾಮಾಶ್ವ. ೧೧೫–೨೪). [ಕೂೞ್$_1$ + ನೀರ್$_1$]

**ಕೂೞ್ಪಡೆ** 'ಕೂೞ್ವಡೆ' ನೋ.

**ಕೂೞ್ಪಡಿಕ**, ಕೂಳ್ಬಡಕ, ಕೂಳ್ಬಡಿಕ (ನಾ). ೧. ಹೊಟ್ಟೆಬಾಕ; ತಿನ್ನಾಳಿ. ೨. ಹೊಟ್ಟೆಬಾಕತನ: ಪೊಂಗಿಲ್ಪಂಡುಗ ಜೋಳದಿಂದೆರವನುಂ ಚಾವುಂಡಿಯುಂ ಬೊಮ್ಮನುಂ ಪೊಂಗೊಂಡೀ ಪರೆಕಳ್ಳಿಪೋದರು ಬಸುರ್ಗಿಲ್ಲಾಗಿ ಮೇಣ್ಸತ್ತರುಂ ಪೊಂಗಿಪ್ಪಾತನ ಕೇಳ್ದು ಕೂೞ್ಬಡಿಕ [ಪಾಠಾಂ. ಕೂೞ್ವಡಕ]ದಿಂ ಮೇಣ್ಬಂದರುಂ ಮೂಢಲೋಕಂಗಳ್ತಮ್ಮ ಕುತತ್ವಮೆಂದೞಿಯರಾರೇನೆಂದಡಂ ನಂಬುವರ್ (ಶ್ರಾವಕಾ. ೧೦೭–೧೨; ಶಾಸ್ತ್ರಸಾರ. ಕ). **ಕೂಳ್ಬಡಕ**: ೧. ಲೋಕದಲ್ಲಿ ಕೂಳ್ಬಡಕನೆಂಬ ನಿಂದೆಗೆ ಅಪಕೀರ್ತಿಗೆ ಗುರಿಮಾಡುವುದು (ಬ್ರಹ್ಮಜೀ. ೨೨೫). **ಕೂಳ್ಬಡಿಕ**: ೧. 'ಕೂಳ್ಬಡಿಕತನ' ಪರಾ. [ಕೂೞ್$_1$ + -ಬಡಿಕ]

**ಕೂೞ್ಪಸವು** (ನಾ). ಅನ್ನದ ಬರ; ದುರ್ಭಿಕ್ಷ: ಪುಸಿವಂತುಂ ಮುಳಿವಂತು ಮಾಡಿದುಣಿಸಿಂ ನೀಮಿಂತಬ್ಬ ನೋಡಲ್ಕೆ ಕೂೞ್ಪಸವೇಂ ಕೊಳ್ಳಿರೆ ನಿಮ್ಮ ಕೂೞನೆನುತುಂ (ಬಂಹರಿ. ೯–೨೯). [ಕೂೞ್$_1$ + ಪಸವು]

**ಕೂೞ್ಮಿಗ** (ನಾ). ಕ್ರೂರವಾದ ಮೃಗ, — ಪ್ರಾಣಿ: ಬೇಡರಂ ಕಂಡು ಬೆರ್ಚುವೆ ಬಾಲೆ ತನ್ನೊಡನೆ ಬೇಡ ಬರ್ಪುದು ಕೂೞ್ಮಿಗಂಗಳಿರ್ದಪುವೆಂದು ಬೇಡಲ್ (ಶ್ರೀರಾಮ. ೩೭–೧೫). [ಕೂೞ್$_2$ + ಮಿಗ]

**ಕೂೞ್ವಡೆ**, ಕೂೞ್ಪಡೆ (ಕ್ರಿ). ಆಹಾರವನ್ನು ದೊರಕಿಸು, — ಪಡೆ: ಕೂೞ್ವಡೆಯದನಂತೆ ಬಂಬಲ್ಪಾಡುತ್ತುಂ (ಧರ್ಮಾಮೃ. ೧–೧೪೪); ಅವುಪಾಯದೊಳಮೊಡಲ್ಗೆ ಕೂೞ್ವಡೆದು ಜೀವಿಪುದೊಂದೆ ವಿಧೇಯಂ (ವರ್ಧಪು. ೩–೧೨). **ಕೂೞ್ಪಡೆ**: ಕೂೞ್ಪಡೆಯದ ತಿರಿಕರಂತೆ ಗಿಡಿಗಿಡಿ ಜಂತ್ರಮಾಗಿ (ಧರ್ಮಾಮೃ. ೮–೫೦). [ಕೂೞ್$_1$ + ಪಡೆ$_1$]

**ಕೊಬ್ಬಣಿಗೆ,** ಕೊಳ್ಬಣಿಗೆ, ಕೊಳ್ವಣಿಗೆ (ನಾ). = ಕೊಬ್ಬುಡಿಕೆ: "ಕೊಬ್ಬಣಿಗೆಗನೆಂದು ತಿನಾಳಿ" (ಕಶಸಾ. ೧೮-೩೫೮); ವಣಿಗ ಪ್ರತ್ಯಯಕೆ -ಕೊಬ್ಬಣಿಗಂ ಮತ್ತೆ ಕೆಲವಜಿಕೊಳುಂಟು – ಲಂಚವಣಿಗಂ ಸಾಲವಣಿಗಂ (ಶಮದ. ೨೦೬ ಪ್ರಯೋ). **ಕೊಳ್ಬಣಿಗೆ:** "ಪಿರಿದುಂಬವಂಗೆ ಕೊಳ್ಬಣಿಗನೆಂದೊಪ್ಪುವುದು" (ಕಶಶ. ೨೬). **ಕೊಳ್ವಣಿಗೆ:** "ಅನ್ನಾದಂ = ಕೊಳ್ವಣಿಗಂ" (ಕಾಶಕ್ಯ. ೧೬೨). [ಕೊಬ್$_1$ + –ವಣಿಗ]

**ಕೊಬ್ಬೇಡು** (ಕ್ರಿ). ಆಹಾರವನ್ನು ಬೇಡು; ಅನ್ನವನ್ನು ಯಾಚಿಸು: ಕಾಳೆಗಕ್ಕೆ ಬಂದ ಬೂತಿನಂತೆ ಕೊಬ್ಬೇಟ್ಟ ಬಾರಿಕನಂತೆ ದಂಡುವೇಟ್ಟರಸಿನಂತೆ ತೂಗಿಬಿಡುವ ನಾಯಕನಂತೆ ಕಲಹಂಮಾಟ್ಟ ಕೊಂಡೆಯನಂತೆ ... ಕಳಕಳಿಸಿನಕ್ಕು ಮನದೊಳ್ ರಾಜ್ಯಕ್ಕೆ ಪೇಸಿ (ಧರ್ಮಾಮೃ. ೯-೨೩).
[ಕೊಬ್$_1$ + ಬೇಡು]

❋

# ಕೃ



**ಕೃಂತ** (ನಾ). =೧. ಕೃಂತನ. 'ಕರ್ಮಕೃಂತ' ಪರಾ. ೨. ತುಂಡು ಮಾಡುವ ಸಾಧನ; ಕತ್ತರಿಸುವ ಸಲಕರಣೆ: ಇದು ಭವಪಾಶವರಿವ ಕತ್ತರಿ ಮತ್ತಿದು ಭವಲತೆಗೊಯ್ವ ಕೃಂತ (ನೋಳಿಪು. ೩-೧೬೧). [ಸಂ.]

**ಕೃಂತನ** (ನಾ). ತುಂಡುಮಾಡುವುದು; ಕತ್ತರಿಸುವುದು: "ಅರಿ-ಕೃಂತನೇ" (ಶಮಧಾ). [ಸಂ.]

**ಕೃಕ** (ನಾ). ಗಂಟಲು; ತಾಳಿಗೆ. [ಸಂ.]

**ಕೃಕಣ** (ನಾ). ಪಕ್ಷಿಗಳಲ್ಲಿ ಒಂದು ಬಗೆ; ಕಬ್ಬಕ್ಕಿ: "ಕೃಕಣಃ, ಕೃಕರಃ – ಈ ೨ ಕಬ್ಬಕ್ಕಿ ಹೆಸರು, ಕಕ್ಕರವಕ್ಕಿ; ಕಾಡುಕೊಕ್ಕರೆ, ಕಾಡುಬಕ" (ಸಿದ್ಧಾಂತಿ. ೧೩೯). [ಸಂ.]

**ಕೃಕರ** (ನಾ). ೧. = ಕೃಕಣ: ಕೃಕರ ಕರೇಟು ಕುಕ್ಕುಟ ಕಪೋತ ಕಿಕೀದಿವಿ ಕುಕ್ಕುಭಾಳಿಯಿಂ ... ವಿರಾಜಿಕುಮುನ್ನತಂ ವನಂ (ಹಮ್ಮಿ.ರ. ೪-೭೨). ೨. ದೇಹದ ಪಂಚವಾಯುಗಳಲ್ಲೊಂದು; ಪಚನ ಕ್ರಿಯೆಗೆ ನೆರವಾಗುವ ಹಾಗು ಕಣ್ಣಿನ ರೆಪ್ಪೆಗಳನ್ನು ಮುಚ್ಚಲೂ ತೆರೆಯಲೂ ಸಹಾಯಕವಾಗುವ ವಾಯು: "ಆಲಿಗಳ ಮುಚ್ಚಿ ತೆರೆಯುವುದು ಕೃಕರಮಕ್ಕು" (ಮಂಗರಾ. ೧೬-೧೩); ಸುಷುಮ್ನಾನಾಳದಲ್ಲಿ ಕೃಕರವಾಯು ಹಸ್ತದಲ್ಲಿ ದೇವದತ್ತವಾಯು (ಚನ್ನವ. ೬೬-೧೩); ಕೂರ್ಮವಾಯುವಿಗಾ ನಿಮಿಷಾಲನ ಧರ್ಮವಾದಿಯ ದಾದವವುಗಳ್ ಸಮ್ಮತಿಸುವವೀ ಕೃಕರಕೆಯು ಕ್ಷುತು[ತ] ಧರ್ಮವಪ್ಪಿಹುದೂ (ಗಗತಾ. ೯-೬೪). [ಸಂ.]

**ಕೃಕಲ** (ನಾ). = ಕೃಕರ: ಹಸಿವು ರೂಪು ಕ್ರಿಯೆಯಂ ಮಾಡುವುದರಿಂದ ಕೃಕಲ ಸಂಜ್ಞೆಯನ್ನೂ ವಿಜೃಂಭಣರೂಪಕ್ರಿಯೆಯಂ ಮಾಡುವುದರಿಂದ ದೇವದತ್ತ ಸಂಜ್ಞೆಯನ್ನೂ ... ಪಡೆದುಕೊಂಡಿರುವುದು (ಮುಮುಕ್ಷು. ೩). [ಸಂ.]

**ಕೃಕಲಾಸ** (ನಾ). ಹೆಂಟೆಗೊದ್ದ; ಓತಿಕೇತ; ಸರಟ: "ಸರಟಃ, ಕೃಕಲಾಸಃ – ಈ ೨ ಓತಿ" (ಹಲಾಯು. ೩೯-೮೧); ನೃಗನು ತನಗೆ ಈ ಕೃಕಲಾಸಜನ್ಮವು ಬಂದ ಕತೆಯನ್ನೆಲ್ಲಾ ವಿವರಿಸಿ ... ಹೊರಟು ಹೋದನು (ಸುಧಾ. ೫೬). [ಸಂ.]

**ಕೃಕವಾಕ** (ನಾ). = ಕೃಕವಾಕು: ಸೂಕರನಹನಂತ್ಯದಿ ಸುರೆಯಿಂ ಕೃಕವಾಕನಹನು ಸಂತತ ಗರ್ವಿಸಿದವ (ಯೋಗಾಂವಿ. ೧-೪೭).
[< ಸಂ. ಕೃಕವಾಕು]

**ಕೃಕವಾಕು** (ನಾ). ೧. ಕೋಳಿ; ಕುಕ್ಕುಟ: "ಕೃಕವಾಕುಃ, ತಾಮ್ರಚೂಡಃ, ಕುಕ್ಕುಟಃ, ಚರಣಾಯುಧಃ – ಈ ೪ ಕೋಟಿ" (ಹಲಾಯು. ೪೧-೯೪); ಪೊಡೆಯೆ ಕೃಕವಾಕು ನಿನದಂ ಬಿಡದುಣ್ಮುತಿರಲ್ಕೆ ಕೆಯ್ಯ ಬಾಳ್ ಬೀಟ್ತರೆ (ಯಶೋಚ. ೩-೨೬). ೨. ನವಿಲು. ೩. ಓತಿಕೇತ; ಸರಟ. ೪. ಒಂದು ಬಗೆಯ ಗಿಡ; ನೇತ್ರಿ: "ಕೃಕವಾಕು [ಪಾಠಾಂ. ತು] ಮಸ್ತಕಂ ನೇತ್ರಿಯೆನೆ ಚವ್ಯವಕ್ಕು" (ಮಂಗರಾ. ೪೨-೩೮). [ಸಂ.]

**ಕೃಕಾಟಿಕ** 'ಕೃಕಾಟಿಕೆ' ನೋ.

**ಕೃಕಾಟಿಕೆ,** ಕೃಕಾಟಿಕ (ನಾ). ಕುತ್ತಿಗೆಯ ಹಿಂಭಾಗ; ಹೆಕ್ಕತ್ತು: "ಅವಟು ಕೃಕಾಟಿಕೆ ಘಾಟಾಹ್ವಯವದಕ್ಕುಂ" (ವಸ್ತುಕೋ. ೭೦-೧೮). **ಕೃಕಾಟಿಕ:** "ಕೃಕಾಟ [ಪಾಠಾಂ. ಟ] ಕಂ ಹೆಡಕೆನಿಕ್ಕು" (ಮಂಗರಾ. ೯೭-೧೩). [ಸಂ. ಕೃಕಾಟಿಕಾ]

**ಕೃಚ್ಛ್ರ** (ಗು). ೧. ಕಷ್ಟಕರವಾದ; ನೋಯಿಸುವ. (ನಾ). ೨. ಪ್ರಯಾಸ; ಶ್ರಮ: "ಗಹನಂ ಕಷ್ಟಂ ಸಘೋರಮಂತದು ಕೃಚ್ಛ್ರಂ" (ವಸ್ತುಕೋ. ೧೧೩-೧೪). ಖೇಚರರಾಜಂಗೆ ಕೃಚ್ಛ್ರಸಾಧ್ಯಕ್ಕಮಿವರಿರ್ವರೆ ಅಪಾರಭುಜಾಯಮಾನರ್ (ಶಾಂತಿಪು. ೨-೭೭ ವ). ೩. ಅಪಾಯ; ಗಂಡಾಂತರ; ವಿಪತ್ತು. ೪. ದುಃಖ; ನೋವು: "ಪೀಡಾ, ... ಕೃಚ್ಛ್ರಂ, ಅಭೀಲಂ – ೯ ಸಾಮಾನ್ಯವಾಗಿ ದುಃಖದ ಹೆಸರುಗಳು" (ಸಿದ್ಧಾಂತಿ. ೬೮). ೫. ಆಹಾರ ಸೇವನೆಯಲ್ಲಿರುವ ಒಂದು ಬಗೆಯ ವ್ರತ: ಕೃಚ್ಛ್ರಾತಿಕೃಚ್ಛ್ರ ಚಾಂದ್ರಾಯಣ ಸಾಂತಪನಾದಿ ಮಹಾ ತಪಂಗಳಿಂ ತಪ್ಪರಾಗಿ (ಪಂಚತಂ. ೧೧೮-೧೫); ಕೃಚ್ಛ್ರಾದಿ ತಪಸಿನ ಫಲವು ಜ್ಯೋತಿಷ್ಟೋಮ ಯಾಗಫಲ ... ಭಾರತದೊಳೊಂದಕ್ಷರವ ಕೇಳ್ದರಿಗೆ (ಕುವ್ಯಾಆ. ೧-೨೦); ದುಶ್ಚರಗಳೆನಿಸಿರ್ಪ ಬಹುವಿಧ ಕೃಚ್ಛ್ರ ಚಾಂದ್ರಾಯಣಗಳೆಂಬ ಮಹೋಚ್ಛ್ರಯದ ಪಂಚಾಗ್ನಿ ಮಧ್ಯದಿ (ಅಮೃತ. ೨-೩೯). ೬. (ಆಲಂ) (ಪಾಪದ ಪರಿಹಾರಕ್ಕಾಗಿ ದಾನ ಕೊಡುವ) ಪ್ರಾಯಶ್ಚಿತ್ತ ಧನ, —ದಕ್ಷಿಣೆ: ಪುರೋಹಿತರಿಗೆ ಎರಡಾಣೆ ನಾಲ್ಕಾಣೆ ಕೃಚ್ಛ್ರ ಕೊಟ್ಟು (ನಮ್ಮೂರ. ೨೫). ೭. [ವೈದ್ಯ] ಮೂತ್ರ ತಡೆಯುವಿಕೆ; ಒಂದು ಬಗೆಯ ಮೂತ್ರರೋಗ: ಗೃಹಣಿ, ಕೃಚ್ಛ್ರ, ಶ್ವಾಸ, ಖಾಸ, ಭಗಂದರ ಮುಂತಾದ ಸಮುಸ್ತರೋಗವೂ ಮಾಣ್ಗುಂ (ಸಕವೈ. ೩೪೧). [ಸಂ.]

**ಕೃಚ್ಛ್ರಜೀವನ** (ನಾ). ಕಷ್ಟದ ಬದುಕು : "ಕ್ಷಜಿ – ಕೃಚ್ಛ್ರಜೀವನೇ, ಕಷ್ಟದ ಬಾಳ್ವೆಯೊಳ್" (ಕಾಶಕ್ಕ. ೨೬೨). [ಕೃಚ್ಛ್ರ + ಜೀವನ]

**ಕೃಚ್ಛ್ರಮೂತ್ರಪುರೀಷತ್ವ** (ನಾ). ಮಲಮೂತ್ರ ವಿಸರ್ಜನೆಯಾಗುವಾಗ ನೋವಾಗುವುದು, —ತೊಂದರೆಯಾಗುವುದು. [ಸಂ.]

**ಕೃಚ್ಛ್ರಸಾಧನೆ** (ನಾ). ಪ್ರಯಾಸದ ಸಾಧನೆ : ಕೃಚ್ಛ್ರಸಾಧನೆಯನ್ನೇ ಲಾಭವೆಂದು ಭಾವಿಸಿ ಕೊನೆಗೆ ಆತ್ಮಹತ್ಯೆಗೆ ಬಂದು ನಿಲ್ಲಬೇಕಾಗುತ್ತದೆ (ನಿಬಂಧ. II, ೨೬೪). [ಕೃಚ್ಛ್ರ + ಸಾಧನೆ]

**ಕೃತ** (ಗು). ೧. ಮಾಡಿದ; ನೆರವೇರಿಸಿದ; ಮುಗಿಸಿದ: ಕ್ಷಿತಿಯೊಳಬುಜ ಮೃಣಾಳಕೋಸುಗ ಕೃತ ತಟಾಕವನೊಡೆದವೊಲು (ಕುವ್ಯಾಕ. ೧೬–೨೦); ರತ್ನ ಕೃತ ಕೃತಕ ಖದ್ಯೋತ ಸಂಕುಲಮಯಂ ಚಾಮೀಕರಾಲಂಕೃತಂ ಲತಾಭವನಮಂ ಪೊಕ್ಕು (ಶ್ರೀರಾಮಾ. ೨೦–೫೩೩). (ನಾ). ೨. ನಾಲ್ಕು ಯುಗಗಳಲ್ಲಿ ಮೊದಲನೆಯದು : ಪಸರಿಸಿ ಪರ್ಬ್ಬಿ ಗೊಂದಳಿಸಿ ನಿಂದ ತಮಸ್ತಮಮಂ ತೆರಳ್ಚಿ ಬಂದೊಸೆವಿನನೇಱುವಂತುದಯ ಪರ್ಬ್ಬತಮಂ ಕಲಿಕಾಲದೇಳ್ಗೆಯಂ ದೆಸೆಗಿಡೆ ತೂಳ್ದಿ ತಾಳ್ದಿ ಕೃತ ಲಕ್ಷ್ಮಿಯ ನೊಳ್ಪಿನ ತೆಳುಪುಗಳು ಜಗಕ್ಕೆಸೆದಿರೆ ಸಿಂಘವಿಷ್ಟರಮನೇಱಿದನಾ ಜಯಸಿಂಘ ವಲ್ಲಭಂ (ಎಕ. VII, ಶಿಕಾರಿ. ೧೨೫–೧೫ ; 1019). ೩. ಧನ್ಯನಾದವನು ; ಪುಣ್ಯವಂತ : ಕಂದನಾಡುವ ಬಾಲಲೀಲೆಯಂ ನೋಡಿ ತೊದಲೊಂದಿದಿನಿವಾತನುಱಿಕೇಳ್ದು . . . ಪಂಚೇಂದ್ರಿಯ ಪ್ರೀತಿಯಂ ಪಡೆವರಿನ್ನಾವ ಕೃತರೊ (ಜೈಮಿಭಾ. ೧೮–೨೦). ೪. ಯಮ : (ಕ). ೫. ಮಾಡಿದ ಉಪಕಾರ; ಅನುಗ್ರಹ. ೬. ಸಾಕಾಗುವಷ್ಟು; ಪರ್ಯಾಪ್ತವಾದುದು: "ಕೃತಮೆಂಬುದು ಪರ್ಯಾಪ್ತಂ" (ವಸ್ತುಕೋ. ೧೩೯–೧೨೬); "ಯುಗಂ ಸವನಂ ತಾಂ ಕಡೆಗಂಡ ಕಾರ್ಯ ಕೃತ ಶಬ್ದಂ" (ನಾನಾರ. ೧೦೪). 'ಕೃತಜ್ಞ' ಪರಾ.

ಕೃತಮಱು = ಮಾಡಿದ ಉಪಕಾರವನ್ನು ನೆನೆ, —ಸ್ಮರಿಸು : ಬಾರ್ತೆಗೆಟ್ಟ ಕೃತಮಱಿಯದ ಮಾಯದ ನನ್ನೀವೊಡಲಂ ನಿಲಿಸಿದುದರ್ಕೇ ನಾನುಮೊಂದು ನೆವಮುಸಿರ್ದಪ್ಪೆಂ (ಕಾದಂಪೂ. ೯೩೫). [ಸಂ.]

**ಕೃತಕ** (ಗು). ೧. ಸ್ವಾಭಾವಿಕವಲ್ಲದ ; ಮಾಡಿದ ; ನಿರ್ಮಿಸಿದ : ಕಳಧೌತ ಸುರತ್ನ ಕೃತಕಭಿತ್ತಿ ಸ್ತಂಭೋಜ್ವಳ ಮುಕ್ತಿಕಾವಿತಾನಂ ಥಳಥಳಿಪುವು (ಜಗವಿ. ೨-೨೪) ; ಕೂಗಿದುದೇಕೀ ಕೃತಕತಾಮ್ರಚೂಡಂ (ಯಶೋಚ. ೩–೨೬). ೨. ಕಪಟದ ; ಮೋಸದ ; ಕೃತ್ರಿಮವಾದ : ಅಂಧನೃಪಂ ತನ್ನಯ[ಜ]ನದೊಳ್ ಕೆಲನಱಿಯೆ ಕೃತಕ ಶೋಕಂಗೆಯ್ದಂ (ಪಂಪಭಾ. ೩–೮). (ನಾ). ೩. ಕಪಟ ; ಮೋಸ : ಪತಿಯಂ ವಂಚಿಸಲೆ ನಿಜ ಕೃತಕದಿಂ . . . ಒಳಪೊಯ್ವೀ ದುರ್ವ್ರತೆಯರ್ (ಎಕ. VIII, ನಗರ. ೪೬–೯೧; 1062); ನಿನ್ನ ಮಡದಿಗಿರಲೆಂದರೆ ಮಡದಿಯ ಕೃತಕ ಬೇಱೆ (ಬಸವ. ೨೦೧). ೪. ನಿರ್ಮಾಣ ; ರಚನೆ : ನಯನಾನಂದದ ಜಾಣ್ಮೊದಲ್ ಹೃದಯರಾಗಕ್ಕಾಗರಂ ಕಾಮತೃಪ್ತಿಯ ನವ್ಯಾಭಿನಯಾಂಗಮೆಂಬ ಕೃತಕಂ ಕೈಗೊಳ್ವಿನಂ ರತ್ನಮಾಲೆಯಂ . . . ಕೈಗೈದು (ಅನಂಪು. ೬–೫೨). ೫. ಮೋಸಗಾರ ; ವಂಚಕ : ಎನ್ನುತದ ಬಿತ್ತಿದರು ಕೃತಕರು ಮನಕೆ ಬಂದಂತೆ (ಬಿಜ್ಜಪು. ೧೦೯–೮೪). ೬. ಒಂದು ಬಗೆಯ ಉಪ್ಪು ; ಬಿಡುಲವಣ ; ವಿಡಲವಣ : "ಬಿಡುಲವಣಮದು ಕೃ[ಪಾಠಾಂ. ಘೃ] ತಕಮೆನಿಸಿಕ್ಕು" (ಮಂಗರಾ. ೪೩–೪೧). [ಸಂ.]

**ಕೃತಕಗಿರಿ** (ನಾ). = ಕೃತಕನಗ : ಕನಕಕೃತಕಗಿರಿಗಳಿಂ ಫಳಪ್ರಕೀರ್ಣ ತರುಗಳಿಂ (ಪಂಪಭಾ. ೧–೫೮). [ಕೃತಕ + ಗಿರಿ$_1$]

**ಕೃತಕದ್ವಿಜ** (ನಾ). ಕಪಟ ಬ್ರಾಹ್ಮಣ : ಜೀವತತ್ವ ವಿಷಯದೊಳ್ ಕೃತಕದ್ವಿಜಂ ಚಾರ್ವಾಕ ಮತಾವಲಂಬಿಯಾಗಿ (ಶಾಂತಿಪು. ೮–೧೨೬ ವ). [ಕೃತಕ + ದ್ವಿಜ]

**ಕೃತಕನಗ** (ನಾ). ಕೃತ್ರಿಮವಾದ ಪರ್ವತ; ಕ್ರೀಡೆಗೋಸ್ಕರ ಶಿಲೆ ಮೊದಲಾದುವುಗಳಿಂದ ರಚಿತವಾದ ಬೆಟ್ಟ : ಬಳ್ಳಿತೊವಲ್ತೆಲೆವಳ್ಳಿ ನಗಂ ಕೃತಕನಗಂ ಪಲಸು ಬಕ್ಕೆವಲಸಾ ಬನದೊಳ್ (ಜಗವಿ. ೨-೧೪). [ಕೃತಕ + ನಗ$_2$]

**ಕೃತಕನಾಣ್ಯ** (ನಾ). ೧. "(ಆಟಗಳಲ್ಲಿ ಉಪಯೋಗಿಸುವ, ಲೋಹ, ದಂತ ಮೊದಲಾದವುಗಳಿಂದ ಮಾಡಿದ ಸಾ. ದುಂಡಾಗಿರುವ) ಎಣಿಕೆಯ ಕಾಯಿ" (Counter. ಇಂಕನಿ). ೨. ಕೃತ್ರಿಮವಾದ ನಾಣ್ಯ; ಖೋಟಾ ನಾಣ್ಯ. [ಕೃತಕ + ನಾಣ್ಯ]

**ಕೃತಕನಿದ್ರೆ** (ನಾ). ತೋರಿಕೆಯ ನಿದ್ದೆ ; ಕಳ್ಳನಿದ್ದೆ : ನಾನು ನೋಡಿದಾಗ ಅವನು ಕೃತಕನಿದ್ರೆ ಮಾಡುತ್ತಿದ್ದನು (ರೂಢಿ). [ಕೃತಕ + ನಿದ್ರೆ]

**ಕೃತಕಪುತ್ರ** (ನಾ). ಮಗನೆಂದು ಸ್ವೀಕರಿಸಲ್ಪಟ್ಟವನು; ದತ್ತುಮಗ: ಆತನ ಪುರೋಹಿತಂ ಶಕ್ತಿಷೇಣನೆಂಬೊಂಗಮುಟವಿಶ್ರೀಗಂ ಸತ್ಯದೇವನೆಂಬೊಂ ಕೃತಕಪುತ್ರನಾದೊಂ (ಚಾವುಂಪು. ೫೬–೧೨). [ಕೃತಕ + ಪುತ್ರ]

**ಕೃತಕಪ್ರಣಯ** (ನಾ). ತೋರಿಕೆಯ ಪ್ರೀತಿ ; ನಟನೆಯ ಪ್ರೇಮ : ಭೃತಕಂ ಕೃತಕಪ್ರಣಯಮೆಂದಱಿಯದೆ (ಸುಕುಮಾ. ೭–೨೮ ವ). [ಕೃತಕ + ಪ್ರಣಯ]

**ಕೃತಕರೂಪು** (ನಾ). ಕೃತ್ರಿಮವಾದ ರೂಪು; ಮಣ್ಣು, ಕಲ್ಲು ಮೊದಲಾದುವುಗಳಿಂದ ಮಾಡಿದ ಆಕೃತಿ; ಗೊಂಬೆ: ಅಸುಗಳೆದ ತಾಪಸಿಗೆ ಗೂಳಿಗೆ ಬಿಸಜನಯನೆಗೆ ಕೃತಕರೂಪಿಂಗೊಸೆದು ಜೀವವನಿತ್ತು ಮೆಱೆದನು (ಬಸಪು. ೩೨ ಸೂಚನೆ). [ಕೃತಕ + ರೂಪು]

**ಕೃತಕರೇಷ್ಮೆ** (ನಾ). ಕೃತ್ರಿಮವಾದ ರೇಷ್ಮೆ : ರೆಯಾನ್ ನಾರು–ಜನಜನಿತವಾಗಿ ಇದನ್ನು ಕೃತಕರೇಷ್ಮೆ ಎಂದು ಕರೆಯುವರು (ಗೃಹವಿ. ೬೯). [ಕೃತಕ + ರೇಷ್ಮೆ]

**ಕೃತಕರ್ಮ** (ನಾ). ೧. ಮಾಡಬೇಕಾದ ಕೆಲಸವನ್ನು ಮಾಡಿದವನು; ಕರ್ತವ್ಯವನ್ನು ನೆರವೇರಿಸಿದವನು. ೨. ಕಾರ್ಯಚತುರ; ಸಮರ್ಥ ; ನಿಪುಣ : "ಕೃತಕರ್ಮಂ ಕೋವಿದಂ . . . ಜಾಣಂ" (ವಸ್ತುಕೋ. ೯೯–೫) ; "ಚತುರಂ ಪ್ರವೀಣಂ ಕುಶಲಂ . . . ಕೃತಕರ್ಮನೆಂದೆನಲು ಕೃತಹಸ್ತನೆನಲು ನಿಷ್ಣಾತಂ" (ಮಂಗರಾ. ೬೬–೩). [ಸಂ. ಕೃತಕರ್ಮನ್]

**ಕೃತಕಲ್ಪ** (ನಾ). ಕೃತಯುಗ : ಇದು ಕೃತಕಲ್ಪಜನ್ಮನಿಲಯಂ . . . ಸಮಂತಿದು ಘನಪುಣ್ಯಸಂಪದ ನಿಕೇತನಮೆಂಬಿನಮೊಪ್ಪಿ ತೋಱುತಿರ್ಪುದು ಸಲೆ ವೀರಕೇಶವಪುರಂ (ಎಕ. VII, ಶಿಕಾರಿ. ೧೨೩–೫೫; 1158). [ಕೃತ + ಕಲ್ಪ]

**ಕೃತಕವಾರ್ತೆ** (ನಾ). ಕಪಟದ ವರ್ತಮಾನ; ಸುಳ್ಳುಸುದ್ದಿ : ಸೂತರ್ಪೈದಿದರಿವರ ಸೂಱೆಯ ಕೈತವಕಿಗರು ಕೃತಕವಾರ್ತಾಭೀತ ಪುರಜನ ಮುಖದ ದುಗುಡದ ದಡ್ಡಿಗಳನುಗಿದು (ಕುವ್ಯಾಸ. ೧–೨). [ಕೃತಕ + ವಾರ್ತೆ]

**ಕೃತಕವಿಷಾದ** (ನಾ). ೧. ತೋರಿಕೆಯ ದುಃಖ. ೨. ದುಃಖಗೊಂಡವನಂತೆ ನಟಿಸುವವನು : ಈ ಮೃದು ಹೃದಯನಪ್ಪ ಸಂಜೀವಕನಂ ಭೇದಿಸುವುದಾವಗಹನಮೆಂದು ಕೃತಕವಿಷಾದಂ ದೀನವದನನಾಗಿ ಬಂದು (ಪಂಚತಂ. ೧೩೨–೧೫). [ಕೃತಕ + ವಿಷಾದ]

**ಕೃತಕಶಾಸನ** (ನಾ). ಕೃತ್ರಿಮವಾದ ಶಾಸನ ; ಸುಳ್ಳುಶಾಸನ : ರಾಯಿಸರು ಕೃತಕಶಾಸನಗಳನ್ನು ಆಧಾರವಾಗಿಟ್ಟುಕೊಂಡು ಅವಿನೀತನನ್ನು ೫ನೆಯ ಶತಮಾನಕ್ಕೆ ಒಯ್ದಿದ್ದಾರೆ (ಕರ್ಣಾಅ. ೧೩೬). [ಕೃತಕ + ಶಾಸನ]

**ಕೃತಕಶೈಲ** (ನಾ). = ಕೃತಕನಗ: ಉಜ್ವಳರತ್ನಾರ್ಚಿರಲಂಕೃತಂ ಕೃತಕಶೈಲಂ (ಜಗವಿ. ೨-೨); ಪಂಚಬಾಣಕ್ಕೆ ತಕ್ಕ ಕುಸುಮಶರಮಂ ಬೆಸಲೆಯಾಗದ ಮಲ್ಲೀವಲ್ಲರಿಗಳಿಲ್ಲ ಹರಿಸುತಂಗೆ ಗಿರಿದುರ್ಗಮಾಗಿ ಪಾಳಿಸದ ಕೃತಕಶೈಲಮಿಲ್ಲ (ಪುಷ್ಪಪು. ೯-೨೧ ವ). [ಕೃತಕ + ಶೈಲ]

**ಕೃತಕಸರಸಿ** (ನಾ). ಕೃತಕ ಸರೋವರ; ಮಾಯಾತಟಾಕ: ಲಲನೆಯರ ಹೃದಯದವೋಲೀಕ್ಷಿಸೆ ನೆಲೆಯನೀಯದ ಕೃತಕಸರಸಿಯ ಸುಲಭತೆಗೆ ಸಹದೇವನಣ್ಣನು ಸೋತು ನಡೆತಂದ (ಕುವ್ಯಾಅ. ೨೩-೧೬). [ಕೃತಕ + ಸರಸ್ಸು]

**ಕೃತಕಾಚಲ**, ಕೃತಕಾಚಳ (ನಾ). = ಕೃತಕನಗ: "ಕೃತಕಾಚಲಕ್ಕಂ ಲೋಕದೊಳಂ ಗತಕವೆಟ್ಟುಮೆಂಬರು" (ಕವಿಕಂ.೨೪೭); ಅಜಸುವರ್ಬನದೊಳ್ ಕೃತಕಾಚಲಂಗಳಂ (ಮಲ್ಲಿಪು. ೨-೩೫). **ಕೃತಕಾಚಳ**: ಅಲ್ಲಿಯ ಕೃತಕಾಚಳದ ಮೇಗಣ ಗಣನಾತೀತ ಕನನ್ಮಣಿಗಣಸಂಗತ ತುಂಗ ಶೃಂಗದ (ಶಾಂತಿಪು. ೯-೭೭ ವ). [ಕೃತಕ + ಅಚಲ]

**ಕೃತಕಾಚಳ** 'ಕೃತಕಾಚಲ' ನೋ.

**ಕೃತಕಾದ್ರಿ** (ನಾ). = ಕೃತಕನಗ: ಅರಮರಸಂ ಕೃತಕಾದ್ರಿಯೊಳರಮರಮನೆಯೊಳಗೆ . . . ಎಂದುಂ ನಿಲ್ವಂ (ಕವಿರಾ. ೧-೯೭). [ಕೃತಕ + ಅದ್ರಿ]

**ಕೃತಕಾಮ** (ನಾ). ಆಸೆಯನ್ನು ಪೂರೈಸಿಕೊಂಡವನು: ಕೃತಕಾಮರೆಲ್ಲರಾದೊಡೆ ಕೃತ್ಯವುಳಿಯದೊಡೆ ಕಥೆಮುಗಿವುದಲ ಜಗಕೆ (ಮಂಕುಕ. ೮೫೭). [ಕೃತ + ಕಾಮ]

**ಕೃತಕಿ** (ನಾ). ಕಪಟಿ; ಮೋಸಗಾರ: ಋತ್ವಕ್ಕೃತ್ವಂ – ಕೃತಕಿ – ಗದಕಿ (ಶಮದ. ೨೬೮ ಪ್ರಯೋ). [ಸಂ. ಕೃತಕಿನ್]

**ಕೃತಕೃತ್ಯ** (ನಾ). ಮಾಡತಕ್ಕ ಕೆಲಸವನ್ನು ಮಾಡಿದವನು; ಉದ್ದೇಶವನ್ನು ನೆರವೇರಿಸಿದವನು; ಕೃತಾರ್ಥನಾದವನು: ಅತಿಶಯ ಧವಳೋರ್ವಿ ಪ್ರೋದಿತಾಳಂಕೃತಿಮತಿ[ಯೆ]ನಿರಂತರಪ್ರತೀತಂ ಶ್ರುತಿಯುವತಿ ಕೃತೋಪಚಾರ ಸಾರಸತ್ವ ಗುಣದಿಂದೆ ಕೃತಕೃತ್ಯಮಕ್ಕುಂ (ಕವಿರಾ. ೧-೧೪೮); ಕುರುಪತ್ಯೂರು ಕಿರೀಟಭಂಗಮಂ ಪಡೆದು ಜಗತ್ಸ್ತುತ್ಯ ಕೃತಕೃತ್ಯನೆನಿಸದೆ ಸತ್ಯಾಶ್ರಯವೆಸರ್ಗೆ ಮುಯ್ಯನಾಂಪನೆ ಭೀಮಂ (ಗದಾಯು. ೧-೬೪). [ಕೃತ + ಕೃತ್ಯ]

**ಕೃತಕೃತ್ಯತೆ** (ನಾ). ಮಾಡಬೇಕಾದ ಕೆಲಸವನ್ನು ಮಾಡಿ ಮುಗಿಸಿರುವಿಕೆ; ಕೃತಾರ್ಥನಾಗಿರುವಿಕೆ: ಇಂದು ಪಯೋಜಜಂಗೆ ಕೃತಕೃತ್ಯತೆ ಸಾರ್ದುದು (ಚಂದ್ರಪು. ೬-೭೯); ಪೋಲೀಸಿನವನೊಬ್ಬನು ಕೃತಕೃತ್ಯತೆಯಿಂದ ಶಾಂತಚಿತ್ತನಂತೆ . . . ಬರುತ್ತಿದ್ದನು (ಪಿಶಾಪ. ೪). [ಸಂ. ಕೃತಕೃತ್ಯತಾ]

**ಕೃತಗೇಡಿ** (ನಾ). = ಕೃತಘ್ನ: ಕೃತಗೇಡಿಗುಚಿತವನೇನ ಮಾಡುವ ನೆಂದನಾ ಕರ್ಣ (ಕುವ್ಯಾಕ. ೯-೧೫). [ಕೃತ + ಕೇಡಿ]

**ಕೃತಘ್ನ** (ನಾ). ಮಾಡಿದ ಉಪಕಾರವನ್ನು ನೆನೆಯದವನು; ಉಪಕಾರಗೇಡಿ: "ಕೃತಘ್ನಂ ಕೃತನಾಶಿ" (ವಸ್ತುಕೋ. ೧೦೧-೨೧); ಶ್ರುತಹೀನರಂತೆ ಕೆಮ್ಮನೆ ಕೃತಘ್ನರಾದಂದು ನಮಗಿಹಂ ಪರಮುಂಟೇ (ಸುಕುಮಾ. ೨-೬೭); ದಳಿತ ಮರ್ಯಾದನ ಕೃತಘ್ನನ ಭರ್ತೃನಿಂದಕನ (ಕುವ್ಯಾದ್ರೋ. ೮-೩೮). [ಸಂ.]

**ಕೃತಘ್ನತೆ** (ನಾ). ಮಾಡಿದ ಉಪಕಾರವನ್ನು ನೆನೆಯದಿರುವುದು; ಉಪಕಾರಗೇಡಿತನ: ರಾಯನೆನ್ನನು ನೆಚ್ಚಿ ಹೊರೆದನು ಸಾಯಲಳುಕುವೆನೇ ಸುಡೇತಜದೀಯಿಳೆಯ ಬಾಳಿಕೆ ಕೃತಘ್ನತೆ[ಪಾಠಾಂ. ರಿ]ಗೆಲ್ಲಿ ಗತಿಯೆಂದ (ಕುವ್ಯಾಉ. ೧೦-೩೨). [ಸಂ. ಕೃತಘ್ನತಾ]

**ಕೃತಘ್ನಭಾವ** (ನಾ). ೧. = ಕೃತಘ್ನತೆ. ೨. ಕೃತಯುಗವನ್ನು ಕೊನೆಗಾಣಿಸುವಿಕೆ. ೧, ೨: ಕೃತಘ್ನಭಾವಂ ತ್ರೇತಾಪ್ರವೇಶದೊಳ್ . . . ಜನಂಗಳೊಳಿಲ್ಲ (ಜಗವಿ. ೨-೧ ವ). [ಕೃತಘ್ನ + ಭಾವ]

**ಕೃತಜ್ಞ** (ನಾ). ಮಾಡಿದ ಉಪಕಾರವನ್ನು ನೆನೆಯುವವನು: ಕೃತಜ್ಞನ ದಾನಹರನ . . . ಬಹುವಿಧದ ಧರ್ಮಂಗಳಂ ರಚಿಸುವನ ಮನೆಯೊಳಿಂದಿರೆ ಬಿಡದೆ ನೆಲಸಿರ್ಪಳು (ಜೈಮಿಭಾ. ೬-೭೭). [ಸಂ.]

**ಕೃತಜ್ಞತಾಪೂರ್ವಕ** (ಗು). ಕೃತಜ್ಞತೆಯಿಂದ ಕೂಡಿದ; ಉಪಕಾರಸ್ಮರಣೆಯಿಂದ ಕೂಡಿದ: ಸೇವಕನು ತನ್ನ ಒಡೆಯನಿಗೆ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸಿದನು (ರೂಢಿ). [ಸಂ. (ಕೃತಜ್ಞತಾ + ಪೂರ್ವಕ)]

**ಕೃತಜ್ಞತಾಭಾರ** (ನಾ). ಕೃತಜ್ಞತೆಯ ಭಾರ; ಹೆಚ್ಚಾದ ಕೃತಜ್ಞತೆ: ಸುಯ್ದುರ್ ಕೃತಜ್ಞತಾಭಾರದಿಂ ದಂಪತಿಗಳಿರ್ವರುಂ (ಶ್ರೀರಾಮಾ. ೧೪೯-೧೧೪). [ಸಂ. (ಕೃತಜ್ಞತಾ + ಭಾರ)]

**ಕೃತಜ್ಞತೆ** (ನಾ). ಮಾಡಿದ ಉಪಕಾರವನ್ನು ಸ್ಮರಿಸುವುದು; ಉಪಕಾರಸ್ಮರಣೆ: ಒಗ್ಗಾಲಿಯು ಕೃತಜ್ಞತೆಯಿಂದ ಸ್ವೀಕರಿಸಿದನು (ಕಂಬಹು. ೨೨); ಅವರೆಲ್ಲರಿಗೆ ನನ್ನ ಕೃತಜ್ಞತೆಗಳು (ಧರ್ಮಸಾ. ೫೦). [ಸಂ. ಕೃತಜ್ಞತಾ]

**ಕೃತಜ್ಞತ್ವ** (ನಾ). = ಕೃತಜ್ಞತೆ: (ತಿ). [ಸಂ.]

**ಕೃತನಾಶಿ** (ನಾ). = ಕೃತಘ್ನ: "ಕೃತಘ್ನಂ ಕೃತನಾಶಿ" (ವಸ್ತುಕೋ. ೧೦೧-೨೧); ಗುರುನಿಂದ್ಯಂ ಕೃತನಾಶಿ ಶೂನ್ಯಹೃದಯಂ . . . ನಿರ್ವಿಚಾರರತಂಗೀವುದಯುಕ್ತಮಲ್ತೆ ಹಯಶಾಸ್ತ್ರಾರ್ಥೋಕ್ತಿಯಂ ವ್ಯಕ್ತಿಯಿಂ (ಅಶ್ವಶಾ. ೧೦-೨). [ಸಂ. ಕೃತನಾಶಿನ್]

**ಕೃತಪುಂಖ** (ನಾ). ಬಿಲ್ಲು ವಿದ್ಯೆಯನ್ನು ಬಲ್ಲವನು: "ಬಿಲ್ಲವಿದ್ಯೆಯಂ ಬಲ್ಲವಂ ಕೃತಪುಂಖನಕ್ಕು" (ಮಂಗರಾ. ೮೭-೩೩). [ಕೃತ + ಪುಂಖ]

**ಕೃತಪುಣ್ಯ** (ನಾ). ಪುಣ್ಯ ಮಾಡಿದವನು; ಪುಣ್ಯಶಾಲಿ: ಶ್ರುತವಾರಿನಿಧಿಯ ಪಾರಮನತಿಪ್ರಬಂಧಾಭಿಯೋಗರಾರೆಯ್ದಿದೊಡಂ ಕೃತಪುಣ್ಯಂಗಲ್ಲದೆ ವಿಶ್ರುತ ಕವಿತಾರತ್ನಮಲ್ಲಿ ಸಂಭವಿಸುಗುಮೇ (ಕಾವ್ಯಾವ. ೪೨೫). [ಕೃತ + ಪುಣ್ಯ]

**ಕೃತಮತಿ** (ನಾ). ೧. ಮನಸ್ಸಿನಲ್ಲಿ ನಿರ್ಣಯಮಾಡಿಕೊಂಡವನು; ನಿಶ್ಚಿತಬುದ್ಧಿಯವನು. ೨. ವಿವೇಕಿ; ಬುದ್ಧಿವಂತ: "ಕೃತಮತಿ ನಿಪುಣಂ ವಿಜ್ಞಂ" (ವಸ್ತುಕೋ. ೯೯-೫); ನೊಂದು ನುಡಿವ ಜಡಮತಿಗಳಂ ಕೆಲರ್ ಕೃತಮತಿಗಳ್ ಮಾರ್ಕೊಂಡು (ಪುಷ್ಪಪು. ೧೩-೯೦ ವ). [ಕೃತ + ಮತಿ]

**ಕೃತಮಾಲ**, ಕೃತಮಾಳ (ನಾ). ಕಕ್ಕೆಗಿಡ: (ತಿ). **ಕೃತಮಾಳ**: "ಕೃತಮಾಳಂ ಶಮ್ಯಾಕಂ" (ವಸ್ತುಕೋ. ೩೫-೧೩). [ಸಂ.]

**ಕೃತಮಾಳ** 'ಕೃತಮಾಲ' ನೋ.

**ಕೃತಮುಖ** (ನಾ). ಚತುರ; ಜಾಣ; ಉಪಾಯಗಾರ: "ಪ್ರವೀಣಃ, ನಿಪುಣಃ, ಅಭಿಜ್ಞಃ, ವಿಜ್ಞಃ, ನಿಷ್ಣಾತಃ, ಶಿಕ್ಷಿತಃ, ವೈಜ್ಞಾನಿಕಃ, ಕೃತಮುಖಃ, ಕೃತೀ, ಕುಶಲಃ – ೧೦ ಕೆಲಸದ ಉಪಾಯಗಾರನ ಪೆಸರು, ಚತುರನು; ಜಾಣನು" (ಸಿದ್ಧಾಂತಿ. ೨೭೮). [ಕೃತ + ಮುಖ]

**ಕೃತಯುಗ** (ನಾ). ನಾಲ್ಕು ಯುಗಗಳಲ್ಲಿ ಮೊದಲನೆಯದು. ಹದಿನೇಳು ಲಕ್ಷದ ಇಪ್ಪತ್ತೆಂಟು ಸಾವಿರ ಮಾನುಷ ವರ್ಷಗಳ ಪರಿಮಿತಿಯುಳ್ಳ ಯುಗ: ಭಗವತ್ಕೃತಯುಗಮಾದುದಱಿಂದಂ ಕೃತಯುಗಮೆಂಬರ್ (ಆದಿಪು. ೮-೬೬); ಕೃತಯುಗದೊಳ್ ಧರ್ಮೋದಯದತಿ ಸುಖದುನ್ನತಿಗಳಿಂದಮಿಪ್ಪುದು ಲೋಕಂ (ಲಾಸ್ಯರಂ. ೧-೩). [ಕೃತ + ಯುಗ]

**ಕೃತಲಕ್ಷಣ** (ನಾ). ಒಳ್ಳೆಯ ಗುಣಗಳಿಂದ ಶೋಭಿಸುವವನು: (ಕ).
[ಕೃತ + ಲಕ್ಷಣ]

**ಕೃತವಿದ್ಯ** (ನಾ). ವಿದ್ಯೆಯನ್ನು ಚೆನ್ನಾಗಿ ಅಭ್ಯಾಸಮಾಡಿದವನು; ವಿದ್ಯಾಪಾರಂಗತ: ಕೃತವಿದ್ಯರ ಭೀಕರಶರತತಿ ಮೊಳೆ ತೇವಂತೆ ಸಮೆದುಬಿಟೆ ಸಂಗರದೊಳ್ (ಗದಾಯು. ೪–೩೩).
[ಸಂ. (ಕೃತ + ವಿದ್ಯಾ + –)]

**ಕೃತವೇದಿ** (ನಾ). = ಕೃತಜ್ಞ: ನಿಲೆ ಕುಜನಂಗನಾಮಿಥುನದೊಳ್ . . . ಮಿತ್ರರಹಿತಂ ಕೃಪಣಂ ಕೃತವೇದಿಯಾಚಕಂ (ಜಾತತಿ. ೧೭–೧೯).
[ಸಂ. ಕೃತವೇದಿನ್]

**ಕೃತಸಮಯ** (ನಾ). ಪ್ರತಿಜ್ಞೆ ಮಾಡಿದವನು; ಶಪಥಮಾಡಿದವನು: ದುಗುಡದಲಿ ಹರಿ ರೌಹಿಣೇಯನ ಮೊಗವ ನೋಡಿದಡಾತನಿದು ಕಾಳೆಗವಲೇ ಕೃತಸಮಯರಾದಿರಿ ಪೂರ್ವಕಾಲದಲಿ (ಕುವ್ಯಾಗ. ೭–೪೧).
[ಕೃತ + ಸಮಯ]

**ಕೃತಸಾಪತ್ನಿಕೆ** (ನಾ). ಎರಡನೆಯ ಮದುವೆಮಾಡಿಕೊಂಡವನಿಗೆ ಇರುವ ಮೊದಲನೆಯ ಹೆಂಡತಿ: "ಕೃತಸಾಪತ್ನಿಕೆ. . . ಅಧಿವಿನ್ನಾಖ್ಯೆ" (ವಸ್ತುಕೋ. ೫೩–೬); "ಕೃತಸಾಪತ್ನಿಕಾ, ಅಧ್ಯೂಢಾ, ಅಧಿವಿನ್ನಾ – ೩ ದೊಡ್ಡ ಹೆಂಡತಿ, ಹಿರೇಹೆಂಡತಿ ಹೆಸರುಗಳು" (ಸಿದ್ಧಾಂತಿ. ೧೪೭). 'ಅಧಿವಿನ್ನೆ' ಪರಾ. [ಸಂ. ಕೃತಸಾಪತ್ನಿಕಾ]

**ಕೃತಸ್ವರ** (ಗು). ಧ್ವನಿಯಿಂದ ತುಂಬಿದ: (ಕ). [ಕೃತ + ಸ್ವರ]

**ಕೃತಹಸ್ತ** (ನಾ). ೧. ನಿಪುಣ; ಚತುರ; ಜಾಣ: "ಚತುರಂ ಪ್ರವೀಣಂ ಕುಶಲನಭಿಜ್ಞಂ . . . ಕೃತಹಸ್ತನೆನಲು ನಿಷ್ಣಾತಂ" (ಮಂಗರಾ. ೬೬–೩). ೨. ಧನುರ್ವಿದ್ಯೆಯಲ್ಲಿ ಪಳಗಿದವನು; ಧನುರ್ವಿದ್ಯಾ ನಿಪುಣ: (ಕ). [ಕೃತ + ಹಸ್ತ]

**ಕೃತಾಂಜಲಿ** (ನಾ). ೧. ಜೋಡಿಸಿದ ಕರ; ಮುಗಿದ ಕೈ: ಇಳಿದು ಗಜಹಯರಥವ ಸುಭಟಾವಳಿ ಕೃತಾಂಜಲಿ ನೊಸಲೊಳಿರೆ ಕೆಲಬಲಕೆ ಸಾರ್ದರು (ಕುವ್ಯಾಗ. ೬–೨); ಸುರಪನೊಳ್ಕಲಹಮಂ ಬಿಡಿಸೆಂದು ಭೂವಲ್ಲಭಂ ಕೃತಾಂಜಲಿಯಿಂದ ಸಂವರ್ತನಂ ಪ್ರಾರ್ಥಿಸಿದೊಡೆ (ಜೈಮಿಭಾ. ೫–೪೪). ೨. ಕೈಗಳನ್ನು ಜೋಡಿಸಿದವನು; ಕೈ ಮುಗಿದ ವ್ಯಕ್ತಿ: ಅಚ್ಯುತನಭಿಮುಖದೊಳ್ ನಿಂದು ಕೃತಾಂಜಲಿಗಳಾಗಿ ಕಾಳಿಯ ಸತಿಯರ್ (ಜಗವಿ. ೩–೧೦೨). ೩. ಮುಟ್ಟಿದರೆ ಎಲೆಗಳು ಮುರುಟುವ ಗಿಡ; ಮುಟ್ಟಿದರೆ ಮುನಿ: ರಜನಿ ಕೃತಾಂಜಲಿ ಕಳವಿಗೆ ಬಜೆ ಗಂಧಕ ಪೂವಮೆಂಬಿವಂ ತವೆ ತಿಲತೈಲ ಜಳಾನ್ವಿತ ಘೃತದಿಂದಂಬುಜಾಕ್ಷಿಯರ್ಗೆಜಿಯೆ ನಸ್ಯಮಂ ಮೊಲೆ ಬರ್ಕುಂ (ಲೋಕೋಪ. ೯–೧೭೦).
[ಕೃತ + ಅಂಜಲಿ]

**ಕೃತಾಂಜಲಿಪುಟ** (ನಾ). ಕೈಗಳನ್ನು ಜೋಡಿಸಿದವನು; ಕೈ ಮುಗಿದವನು: ಎದ್ದಾ ನೃಪಂ ಕೃತಾಂಜಲಿಪುಟಾವನತನಾಗಿದ್ದಾಗ ಭೀಮನಂ ನೋಡಿ (ಜೈಮಿಭಾ. ೫–೯). [ಕೃತ + ಅಂಜಲಿಪುಟ]

**ಕೃತಾಂತ** (ಗು). ೧. ತುದಿಯನ್ನು ಮುಟ್ಟಿದ; ಕೊನೆಗಾಣಿಸಲ್ಪಟ್ಟ; ಅಂತ್ಯಗೊಳಿಸಲ್ಪಟ್ಟ. (ನಾ). ೨. ಸಿದ್ಧಾಂತ; ನಿರ್ಣಯ; ತೀರ್ಮಾನ: "ಕೃತಾಂತಃ, ರಾದ್ಧಾಂತಃ, ಸಿದ್ಧಾಂತಃ, ಸಮಯಃ – ಈ ೪ ಸಿದ್ಧಾಂತದ ಪೆಸರ್" (ಹಲಾಯು. ೩–೧೦). ೩. ಕರ್ಮಫಲ; ಅದೃಷ್ಟ; ವಿಧಿ: (ಕ). ೪. ಮರಣದ ಅಧಿದೇವತೆ; ಯಮ: "ಶಮನಃ, ಸಮವರ್ತೀ . . . ಕೃತಾಂತಃ . . . – ಈ ೧೬ ಜವನ ಪೆಸರ್" (ಹಲಾಯು. ೧೩–೭೧); ಕೃತಾಂತನಂತಾಕಾರಮಾಗಿ ತಟಿತಟಿಸಿ ಪೊಳೆವ ಕತ್ತಿಗೆಯುಂಬೆರಸು ಪೊಜಮಟ್ಟು ಕೀರ್ತಿಗೆಯೆಂಬುಗ್ರದೇವತೆ (ಪಂಪಭಾ. ೮–೪೨ ವ). ೫. ಪಾಪಕ್ರಿಯೆ; ಅಮಂಗಳ ಕಾರ್ಯ. ೬. ಶನಿಗ್ರಹ. ೭. ಶನಿವಾರ. ೮. ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಎರಡನೆಯದು; ಭರಣಿ. [ಕೃತ + ಅಂತ₂]

**ಕೃತಾಂತಕ** (ನಾ). ಮೃತ್ಯುದೇವತೆ; ಯಮ: ಅತಿಶಯದ ಜೀವಾತ್ಮನಾಗಿ ವಿಗತ ಕೃತಾಂತಕ ಮೃತ್ಯುಭಯಯುತಮಿೞಿಯೊಳ್ (ಬಸಪು. ೪೭–೬೬). [ಸಂ.]

**ಕೃತಾಂತಗೇಹ** (ನಾ). ಯಮನ ಮನೆ; ಮೃತ್ಯುದೇವತೆಯ ವಾಸಸ್ಥಾನ: ನಾನಾ ವಿಧ ದುರ್ಗಂಧಸ್ಥಾನಂ ಸಪ್ತವಿಧಧಾತುಗೆಂದುಂ ಜನ್ಮಸ್ಥಾನಂ ಕೃತಾಂತಗೇಹಮಿದೇನಶುಚಿಯೊ ಮಾಯ್ದ ದೇಹಮಾರಯ್ವಾಗಳ್ (ಸುಕುಮಾ. ೧೨–೩೧). [ಕೃತಾಂತ + ಗೇಹ]

**ಕೃತಾಂತಜ** (ನಾ). ಯಮನ ಮಗ; ಧರ್ಮರಾಯ: ಎಲೆ ಕೃತಾಂತಜ ವೈರಿ ಭೂಮಿಪಕುಲ ಕೃತಾಂತ ಸರಾಗನಹೆ ನಿರ್ಮಳಿನಧರ್ಮದಲಿ (ಕುವ್ಯಾಉ. ೬–೮). [ಸಂ.]

**ಕೃತಾಂತಭವನ** (ನಾ). = ಕೃತಾಂತಗೇಹ: ಅನಂತನಂತಕನಂತೆ ಮುಳಿದು ದಿವಿಜಾಂತಕನಂ ಕೃತಾಂತಭವನಮಂ ಪುಗಿಸಿದಂ (ಪಂಚತಂ. ೨೩೭–೧೮). [ಕೃತಾಂತ + ಭವನ]

**ಕೃತಾಂತಮರ್ದಕ** (ನಾ). ಯಮನನ್ನು ಮರ್ದಿಸಿದವನು; ಶಿವ: ಪ್ರಕಟ ಕೃತಾಂತಮರ್ದಕನೊಳಲ್ಪ ಧನುರ್ವಿಶಿಖಂಗಳಿಂ ಜಯೋತ್ಸುಕತೆಯೊಳೆಚ್ಚು ಗೆಲ್ವಬಗೆಯಾಂತೆಂ (ಶಬಶಂ. ೪–೧೨೮). [ಕೃತಾಂತ + ಮರ್ದಕ]

**ಕೃತಾಂತರೂಪ** (ನಾ). ೧. ಯಮನ ಸ್ವರೂಪ, – ಆಕೃತಿ. ೨. ಕೊನೆಯನ್ನು ಮುಟ್ಟಿದ ರೂಪವುಳ್ಳದ್ದು; ಅಂತ್ಯವುಳ್ಳದ್ದು; ಕೊನೆಯುಳ್ಳದ್ದು. ೧, ೨: ಆ ಮಹಾವನಂ . . . ನಿರಂತರಚ್ಛಾಯಾಶೇಷಮಾಗಿಯುಂ ಕೃತಾಂತರೂಪಮಲ್ತು (ಚಂದ್ರಪು. ೫–೫೨ ವ).
[ಕೃತಾಂತ + ರೂಪ; ಕೃತ + ಅಂತ₂ + ರೂಪ]

**ಕೃತಾಂತಹರ** (ನಾ). = ಕೃತಾಂತಮರ್ದಕ: ವ್ಯೋಮಕೇಶ ಕೃತಾಂತಹರ ನಿಸ್ಸೀಮ . . . ಕರುಣಿಸುವುದೆಂದ (ಕುವ್ಯಾಅ. ೬–೯೦). [ಸಂ.]

**ಕೃತಾಂತಾಲಯ** (ನಾ). = ಕೃತಾಂತಗೇಹ: ಎರಡು ಬಲ ಕೈಲಾಗ ನೀಕ್ಷಿಸುತಿರೆ ಕೃತಾಂತಾಲಯಕೆ ವಾಹಿನಿ ಸರಿವುದೆಂಬಂದದಲಿ ಕೈವೀಸಿದರು ಭೂಭುಜರು (ಕುವ್ಯಾಭೀ. ೪–೨). [ಕೃತಾಂತ + ಆಲಯ]

**ಕೃತಾನುಶಯ** (ನಾ). ಪಶ್ಚಾತ್ತಾಪಗೊಂಡವನು; ಹಿಂದೆ ಮಾಡಿದ ದುಷ್ಕರ್ಮಕ್ಕಾಗಿ ಸಂತಾಪಪಡುವವನು: ಬೞಿಯಂ ತನ್ನ ನಿಸ್ತ್ರಿಂಶಕರ್ಮಕ್ಕೆ ತಾನೇ ಕೊಕ್ಕರಿಸಿ ಕೃತಾನುಶಯಂ ತತ್ಕಾಲೋಚಿತ ಪ್ರಾಯಶ್ಚಿತ್ತನಿರತಂ (ಶಾಂತಿಪು. ೪–೫೯ ವ). [ಕೃತ + ಅನುಶಯ]

**ಕೃತಾಪರಾಧ** (ನಾ). ೧. ಮಾಡಿದ ಅಪರಾಧ. ೨. ಅಪರಾಧ ಮಾಡಿದವನು; ತಪ್ಪು ಮಾಡಿದವನು: ಕೃತಾಪರಾಧರು ಕೌರವರು ನಿರ್ನಾಮರಹರೆಂದ (ಕುವ್ಯಾಅ. ೧೫–೮೮). [ಕೃತ + ಅಪರಾಧ]

**ಕೃತಾಭಿಷೇಕ** (ನಾ). ೧. ಪಟ್ಟಾಭಿಷಿಕ್ತನಾದವನು. ೨. ಸ್ನಾನ ಮಾಡಿದವನು. [ಕೃತ + ಅಭಿಷೇಕ]

**ಕೃತಾರ್ಥ** (ನಾ). ಮಾಡಬೇಕಾದ ಕೆಲಸವನ್ನು ಮಾಡಿ ಸಫಲತೆಯನ್ನು ಹೊಂದಿದವನು; ಕೃತಕೃತ್ಯ; ಧನ್ಯ: ಮ್ಲೇಚ್ಛರಾಜರಂ ರಾಜರಾಜಾನುಜೀವಾನುವೃತ್ತದಿಂ ಕೃತಾರ್ಥಮಾಡಿ (ಶಾಂತಿಪು. ೧೧–೭೧ ವ); ಅಮತ್ಸರಂ ವಾಕ್ಶ್ರೀಯುತನಾದೊಡೆ ಕೃತಾರ್ಥರಾಗರೆ ಕವಿಗಳ್ (ಗದಾಯು. ೧–೪೯). [ಕೃತ + ಅರ್ಥ]

**ಕೃತಾರ್ಥತೆ** (ನಾ). ಮಾಡಬೇಕಾದುದನ್ನು ಮಾಡಿ ಮುಗಿಸಿರುವಿಕೆ; ಕೃತಕೃತ್ಯತೆ; ಸಾರ್ಥಕತೆ: ನಿಮ್ಮಡಿಗಳರ್ತಿಯಿಂ ಕರುಣದಿಂ ಬರುತಿರಲು ಎಮ್ಮಯ ಕೃತಾರ್ಥತೆಯನೇನೆಂಬೆನಿಂತಿರಲು (ನಂಬಿರ. ೧೩–೧೦).
[ಸಂ. ಕೃತಾರ್ಥತಾ]

**ಕೃತಾರ್ಥವೃತ್ತಿ** (ನಾ). ೧. ಕೃತಾರ್ಥನ ಸ್ವಭಾವ. ೨. ಸಾರ್ಥಕ ಪ್ರಯೋಗ; ಅರ್ಥವುಳ್ಳ ಪ್ರಯೋಗ: ನಿರುತಂ ಪ್ರಕೃತಿಪ್ರತ್ಯಯ ಮೆರಡುಂ ಕೂಡಿಯೆ ಕೃತಾರ್ಥವೃತ್ತಿಯನಾಂಪಂತಿರೆ (ಚಂದ್ರಪು.೧೩-೪೩). [ಕೃತ + ಅರ್ಥ + ವೃತ್ತಿ]

**ಕೃತಾರ್ಥಾತ್ಮ** (ನಾ). ಧನ್ಯತೆಯಿಂದ ಕೂಡಿದ ಮನಸ್ಸುಳ್ಳವನು; ಧನ್ಯಾತ್ಮ: ಅಂಘ್ರಿಪದ್ಮಕ್ಕಮರ್ದು ಮಣಿದು ಬಾಳ್ದಿಂ ಕೃತಾರ್ಥಾತ್ಮ ನಾದೆಂ (ರಾಜಶೇ. ೩-೧೧೩). [ಸಂ. ಕೃತಾರ್ಥಾತ್ಮನ್]

**ಕೃತಾರ್ಥೀಕೃತ** (ಗು). ಕೃತಾರ್ಥನಾಗಿ ಮಾಡಲ್ಪಟ್ಟ; ಧನ್ಯನಾಗು ವಂತೆ ಮಾಡಿದ: ಕೃತಾರ್ಥೀಕೃತವಂದಿವರ್ಗನುಂ (ಚಂದ್ರಪು.೪-೨೮ವ). [ಸಂ.]

**ಕೃತಾವದಾನ** (ನಾ). ಶೌರ್ಯದ ಕೆಲಸವನ್ನು ಮಾಡಿದವನು; ಮಹತ್ಕಾರ್ಯವನ್ನು ನೆರವೇರಿಸಿದವನು: ಎಂತಾನುಂ ಕೃತಾವದಾನ ರಾಗಿ ಪೆಜಗಿರ್ದ ತನ್ನಾಳ್ದನುಮನುಜದೆ ಮುಂದಿರ್ದ ಪಾಪೇಭಕಂಠೀ ರವನುಮಂ ಬಗೆದು ತೆಗೆದಿಸುವುದುಂ (ಶಾಂತಿಪು. ೪-೧೧ ವ). [ಕೃತ + ಅವದಾನ]

**ಕೃತಾಸ್ತ್ರ** (ನಾ). ಅಸ್ತ್ರವಿದ್ಯೆಯನ್ನು ಚೆನ್ನಾಗಿ ಅಭ್ಯಾಸಮಾಡಿ ದವನು; ಅಸ್ತ್ರವಿದ್ಯಾಪರಿಣತ: ಬಗೆಯೊಳ್ ತನಗಹಿತಮನಾರ್ ಬಗೆದೊಡಮಾಗಳ್ ಕೃತಾಸ್ತ್ರಮನವರಿದಿರೊಳ್ ತೊಟ್ಟಗೆ ನಿಂದು ಕೆಡಿಸುಗುಂ (ಶಾಂತಿಪು. ೫-೧೨೩). [ಕೃತ + ಅಸ್ತ್ರ]

**ಕೃತಿ$_1$** (ನಾ). ೧. ಮಾಡುವುದು; ಕೆಲಸ; ಕ್ರಿಯೆ; ಕರ್ಮ: ಹಿತ ವೆನಿಸಿದನಿತೆಸಗು; ದೈವಕುಳಿದುದನು ಬಿಡು; ಕೃತಿಯಿರಲಿ ದೈವಕಂ (ಮಂಕುಕ. ೩೪೯). ೨. ಕಾವ್ಯ; ಗ್ರಂಥ: ಕೃತಿ ನೆಗಟ್ದ ಗದಾಯುದ್ಧಂ ಕೃತಿಗೀಶ್ವರ ಚಕ್ರವರ್ತಿ ಸಾಹಸಭೀಮಂ ಕೃತಿಯಂ ವಿರಚಿಸಿದನಲಂ ಕೃತಿಯಂ ಕವಿರತ್ನಂ (ಗದಾಯು. ೧-೩೨); ಬುಧರಿನಮತ್ಸರರಿಂ ಕೃತಿ ಕೃತಾರ್ಥಮಕ್ಕುಂ (ಜಗವಿ. ೧-೧೧). ೩. ನೆರವೇರಿಸಿದ ಕಾರ್ಯ; ಪೂರ್ತಿಗೊಳಿಸಿದ ಕೆಲಸ: "ಕಡೆಗಂಡಕಾರ್ಯಮಂ ಕೃತಿಯೆಂಬುದು" (ಮಂಗರಾ. ೧೩೮-೨). ೪. ಚಿತ್ರ ಮೊದಲಾದ ಕುಶಲಕಲೆಗೆ ಸಂಬಂಧಿಸಿದ ರಚನೆ; ಕಲಾಕೃತಿ. ೫. [ಛಂದ] ಪ್ರತಿಚರಣದಲ್ಲಿ ಇಪ್ಪತ್ತು ಅಕ್ಷರಗಳಿರುವ ಒಂದು ಛಂದಸ್ಸಿನ ಹೆಸರು: "ಉಕ್ತೆ, ಅತ್ಯುಕ್ತೆ ... ಕೃತಿ, ಪ್ರಕೃತಿ ... ಅತಿಕೃತಿ, ಉತ್ಕೃತಿ–ಎಂದಿಪ್ಪತ್ತಾಜುಂ ಛಂದಗಳಕ್ಕುಂ" (ಛಂದೋಂಬು. ೧-೫೫ ವ). ೬. [ಗಣಿತ] ವರ್ಗಮಾಡುವುದು: "ವರ್ಗಮೆಂದುಂ ಕೃತಿಯೆಂದುಂ ವರ್ಗಂಗೊಂಬುದರ್ಕೆ ಹೆಸರು" (ವ್ಯವಹಾ. ೧೧-೧೨ ವ). ೭. [ಸಂಗೀತ] ಹಾಡು; ರಚನೆ: ಸಂಗೀತದ ಕೃತಿಕಾರರ ಕೀರ್ತನೆಗಳ ಮತ್ತು ಕೃತಿ ಗಳ ಸಂಕಲನಗಳೂ ಪ್ರಕಟವಾಗಿವೆ (ಸಂಗೀತ. V ಮುನ್ನುಡಿ). [ಸಂ.]

**ಕೃತಿ$_2$** (ನಾ). ವಿದ್ವಾಂಸ; ಪಂಡಿತ: "ಧೀರಂ ಕೃತಿ ಕೃಷ್ಟಿ ... ಸಭಾಸದಂ ವಿದ್ವಾಂಸಂ" (ವಸ್ತುಕೋ. ೯೮-೪); "ವಿದ್ವಾನ್, ವಿಪಶ್ಚಿತ್ ... ಕೃತೀ ಕೃಷ್ಟಿಃ ... ವಿಚಕ್ಷಣಂ–೨೦ ವಿದ್ವಾಂಸನ ಹೆಸರುಗಳು" (ಸಿದ್ಧಾಂತಿ. ೧೮೪). [ಸಂ. ಕೃತಿನ್]

**ಕೃತಿಕರ್ತೃ** (ನಾ). ಕಾವ್ಯವನ್ನು ರಚಿಸುವವನು; ಕವಿ: ದೇಶಂ ವರ ರಾಷ್ಟ್ರಾದಿ ನಿವೇಶಾಂತಂ ತದ್ವಿರುದ್ಧವಚನಂ ಮಿಗೆ ಸಂಕ್ಲೇಶಕರಂ ಕೃತಿ ಕರ್ತೃಗೆ ಕೌಶಲಮಂ ಪಡೆಯದುಕ್ತದೇಶವಿರುದ್ಧಂ (ಕವಿರಾ.೧-೧೦೯); ನಡು ವಣ ಆಳಿಯಂದಿರೀ ಕೃತಿಕರ್ತೃವೆ (ಇಂಚಾಪ.೭೫-೬೪). [ಕೃತಿ$_1$ + ಕರ್ತೃ]

**ಕೃತಿಕಾರ** (ನಾ). = ಕೃತಿಕರ್ತೃ: ಶ್ರೇಷ್ಠ ಕೃತಿಕಾರರ ಎಲ್ಲ ರಚನೆಗಳನ್ನು ಮಕ್ಕಳಿಗೆ ಕೂಡ ಚಿಕ್ಕಂದಿನಿಂದಲೇ ಕಲಿಸುವ ಪದ್ಧತಿಯಿದೆ (ಸಂಗೀತ. IV ಮುನ್ನುಡಿ). [ಸಂ.]

**ಕೃತಿಗೆಯ್** (ಕ್ರಿ). ೧. ಕಾರ್ಯವನ್ನು ಸಾಧಿಸು: ಗೊಗ್ಗರಸನನ ಬಿಡಿಸಿ ಕೃತಿಗೆಯ್ದುಕೊಂಡು ಹೊಗಿ ನಡೆಪಿದೊಂ (ಎಕ. VII, ಶಿವಮೊ. ೨೩-೬; 1115). ೨. ಕಾವ್ಯವನ್ನು ರಚಿಸು. [ಕೃತಿ$_1$ + ಕೆಯ್$_1$]

**ಕೃತಿಚೌರ್ಯ** (ನಾ). ಬೇರೆಯವರ ಕೃತಿಯಿಂದ ಅಪಹರಿಸುವುದು, —ಕದಿಯುವುದು: ಶಾಂತಿಪುರಾಣವನ್ನು ಅವಲೋಕಿಸಿದರೆ, ಕಾಳಿ ದಾಸನಿಂದಲೇ ಬಂಡಿಗಟ್ಟಲೆ ಕೃತಿಚೌರ್ಯವನ್ನು ಮಾಡಿ ಇಂಥ ಪ್ರಶಂಸೆ ಯನ್ನು ಮಾಡಿಕೊಂಡ ಕವಿಯ ಬಗೆಗೆ ತಿರಸ್ಕಾರವನ್ನು ತಾಳುವುದು ಸ್ವಾಭಾವಿಕ (ವಿಮರ್ಶೆ. ೪೬). [ಸಂ.]

**ಕೃತಿತ್ವ** (ನಾ). ಗ್ರಂಥರಚನಾ ಶಕ್ತಿ; ಪಾಂಡಿತ್ಯ: ಡಾ. ನಾಗೇಂದ್ರ ರವರ ಕೃತಿತ್ವ ಮತ್ತು ವ್ಯಕ್ತಿತ್ವವನ್ನು ಏಕಕಾಲದಲ್ಲಿ ಪರಿಚಯಿಸಿಕೊಡುವ ಈ ಪ್ರಬಂಧ ಸಂಕಲನ (ಶ್ರೇಷ್ಠಪ್ರ. XI ಮುನ್ನುಡಿ). [ಸಂ.]

**ಕೃತಿದೋಷ** (ನಾ). ಕೃತಿಗಳಲ್ಲಿರುವ ದೋಷ; ಕಾವ್ಯ ದೋಷ: ಕೃತಕೃತ್ಯಮಲ್ಲವಲ್ಲಭಮತದಿಂ ನಾಲ್ಕಕ್ಕುಮಿಲ್ಲಿ ಕೃತಿದೋಷಂಗಳ್ (ಕವಿರಾ. ೧-೬೧). [ಕೃತಿ$_1$ + ದೋಷ]

**ಕೃತಿನಾಯಕ** (ನಾ). ಕಾವ್ಯದ ನಾಯಕ; ಕಥೆಯ ಮುಖ್ಯವ್ಯಕ್ತಿ: ಕವಿ ಕವಿಚಕ್ರವರ್ತಿ ಕೃತಿನಾಯಕನಾ ಜಿನಚಂದ್ರದೇವಂ (ಶಾಂತಿಪು. ೧-೩೭). [ಕೃತಿ$_1$ + ನಾಯಕ]

**ಕೃತಿನಿಂದಿತ** (ನಾ). ಕಾವ್ಯದಲ್ಲಿ ನಿಂದೆಗೆ ಪಾತ್ರವಾದುದು; ದೋಷ ಯುಕ್ತವಾದುದು: ಛಂದಕ್ಕೆ ಬಾರದೆಂದಜಿದೊಂದೊಂದಜಿಕೊಳೊಂದಿ ಬಂದು ನಿಂದಕ್ಕರವಂ ಸಂಧಿಸದೆ ಪೇಟ್ದೊಡದು ಕೃತಿನಿಂದಿತಮೆಂದು ವಿಸಂಧಿಯೆಂಬುದು ದೋಷಂ (ಕವಿರಾ. ೧-೯೪). [ಕೃತಿ$_1$ + ನಿಂದಿತ]

**ಕೃತಿಪತಿ** (ನಾ). = ಕೃತಿಕರ್ತೃ: "ಜಲಂ ಭಾರ್ಗವ ವಿದ್ವಾಂಸಂ ಖಲೀನಂ ಕೃತಿಪತಿ ಕವಿಶಬ್ದಂ" (ನಾನಾರ. ೬೦). [ಕೃತಿ$_1$ + ಪತಿ$_2$]

**ಕೃತಿಭರ್ತ** (ನಾ). ಕಾವ್ಯದ ಪೋಷಕ; ಕವಿಯ ಆಶ್ರಯದಾತ: ತಮಗಿಷ್ಟು ಆಶ್ರಯವನ್ನು ಕೊಟ್ಟು ಪೋಷಿಸಿದ ಕೃತಿಭರ್ತರ ಹೆಸರನ್ನು ಶಾಶ್ವತವಾಗಿ ಮಾಡಲು ಕೃತಿಕರ್ತರು ... ಹೊಸದಾದ ಅಂಕಿತ ಪದ್ಧತಿ ಯೊಂದನ್ನು ನೆಲೆಗೊಳಿಸಿದರು (ಸಾಹಿಜೀ. ೧೨೪). [ಕೃತಿ$_1$ + ಭರ್ತ]

**ಕೃತಿಮತ** (ಗು). ವಿದ್ವಾಂಸರಿಂದ ಅಂಗೀಕೃತವಾದ; ಕಾವ್ಯ ಸಮ್ಮತವಾದ: ಕೃತಿಮತ ಸಪ್ತಧಾತುಗಳೊಳು ... ಧಾತುಮೆನಿಕ್ಕು (ನಾನಾರ. ೮೩). [ಕೃತಿ$_2$ + ಮತ]

**ಕೃತಿಯುಕ್ತ** (ನಾ). ಕೃತಿಗೆ ಯೋಗ್ಯವಾದುದು; ಕಾವ್ಯಸಮ್ಮತ ವಾದುದು: ಕೃತಿಯುಕ್ತ ಷಷ್ಠಿಯೊಳಂ ದ್ವಿತೀಯೆಯೊಳಮಾ ಚತುರ್ಥಿ (ಶಮುದ. ೧೩೬). [ಕೃತಿ$_1$ + ಯುಕ್ತ]

**ಕೃತಿಯುಗ** (ನಾ). ಕೃತಿಗಳ ಜೊತೆ; ಎರಡು ಕಾವ್ಯಗಳು: ಪ್ರಕಟಂ ಲೋಕೋತ್ತರ ಲೌಕಿಕ ಪರಿಣತಿ ಪುನ್ನಿಗಂಗೆ ಶಾಂತೀಶ್ವರ ರಾಮಕಥಾ ಪ್ರಶಸ್ತಿಯಿಂದಾದ ಕೃತಿಗಳಿಂ ಕೃತಿಯುಗಂಗಳನ್ನವುಮೊಳವೇ (ಶಾಂತಿಪು. ೧೨-೬೫). [ಕೃತಿ$_1$ + ಯುಗ]

**ಕೃತಿಲೋಕ** (ನಾ). ವಿದ್ವಾಂಸರ ಸಮೂಹ; ಪಂಡಿತಸ್ತೋಮ: ಸ್ತುತಿಗೆಯ್ವಂ ... ಕೃತಿಲೋಕ ಶ್ರುತಿಪೂರಕಲ್ಪ ಕವಿತಾ ಗೀರ್ಬಾಣನಂ ಬಾಣನಂ (ಜಗವಿ. ೧-೮). [ಕೃತಿ$_2$ + ಲೋಕ]

**ಕೃತಿವಂತ** (ನಾ). ಉದ್ಯೋಗಶೀಲ; ಕಾರ್ಯಾಸಕ್ತ. 'ಕೃತಿವಂತಿಕೆ' ಪರಾ. [ಕೃತಿ$_1$ + –ವಂತ]

**ಕೃತಿವಂತಿಕೆ** (ನಾ). ಉದ್ಯೋಗಶೀಲತೆ; ಕಾರ್ಯಾಸಕ್ತಿ: ಕೃತಿ ಮತೆಯು ಕೃತಿವಂತಿಕೆಯಲ್ಲಿ ಲೀನವಾಗುವುದು (ವಿಚಾಮಂ. ೧೨೯). [ಕೃತಿವಂತ + –ಇಕೆ]

**ಕೃತಿವೇಳು** 'ಕೃತಿವೇಟು' ನೋ.

**ಕೃತಿವೇೞ್**, ಕೃತಿವೇಳು (ಕ್ರಿ). ಕೃತಿಯನ್ನು ನಿರೂಪಿಸು; ಗ್ರಂಥವನ್ನು ರಚಿಸು: ಜೀಯೆನೆ ಬಲ್ಲವರ್ ನೆಱೆಯೆ ಸತ್ಕೃತಿವೇೞಿದೆ(ಚಂದ್ರಪ್ರ. ೧-೪೮); ಕೃತಿವೇೞ್ದಂ ಸುಕವಿ ರುದ್ರಂ (ಜಗವಿ.೧-೨೧). **ಕೃತಿವೇಳು**: ದೇವದೇವಾಧಿಪನ ಹೊರೆಯಿಲ್ಲದೆ ಕೂರ್ತು ಕೃತಿವೇಳು ಖಂಡಶರ್ಕರೆಯಂತೆ ಸವಿವಾತುವೆರಸಿ (ಮೋಹತ. ೧೬-೧). [ಕೃತಿ₁ + ಪೇೞ್]

**ಕೃತಿಸಮರ್ಥ** (ನಾ). ೧. ಕೆಲಸದಲ್ಲಿ ಸಾಮರ್ಥ್ಯವುಳ್ಳವನು; ಕಾರ್ಯದಕ್ಷ. ೨. ಕಾವ್ಯರಚನಾಶಕ್ತಿಯುಳ್ಳವನು; ಕಾವ್ಯಸಮರ್ಥ: ಕವಿಯು ಕೃತಿಸಮರ್ಥ(ಸಾಹಿವಿ.೨೮).[ಕೃತಿ₁ + ಸಮರ್ಥ]

**ಕೃತಿಸ್ವಾಮ್ಯ** (ನಾ).ಒಂದು ಕೆಲಸದ ಮೇಲಿನ ಅಧಿಕಾರ,—ಹಕ್ಕು: ಏಕಸ್ವಗಳು ನವನಿರ್ಮಿತಿಗಳು ಮತ್ತು ನಕ್ಷೆಗಳು; ಕೃತಿಸ್ವಾಮ್ಯ; ವ್ಯಾಪಾರ ಚಿಹ್ನೆಗಳು (ಭಾಧಾನ. ೨೮). [ಕೃತಿ₁ + ಸ್ವಾಮ್ಯ]

**ಕೃತಿಸು** (ಕ್ರಿ). ನಿರ್ಮಾಣಮಾಡು; ಸೃಷ್ಟಿಸು: ದಿವ್ಯ ಮಾಯಾಶಿಲ್ಪಿ ಕಲ್ಪನಾದೇವಿಯಂ ಕಲ್ಲಸೆರೆಯಿಂ ಬಿಡಿಸಿ ಕೃತಿಸಿದನೆನಲ್ . . . ನಿಂದುದೋರ್ವ ತಪಸ್ವಿನೀವಿಗ್ರಹಂ (ಶ್ರೀರಾಮಾ.೩೮-೨೮೬).[ಕೃತಿ₁+-ಇಸು₁]

**ಕೃತ್ತ** (ಗು). ಕತ್ತರಿಸಲ್ಪಟ್ಟ; ಛೇದಿಸಲ್ಪಟ್ಟ. 'ಕೃತ್ತಕ್ಲೇಶ' ಪರಾ. [ಸಂ.]

**ಕೃತ್ತಕ್ಲೇಶ** (ನಾ). ೧. ಕಷ್ಟವನ್ನು ಪರಿಹರಿಸಿದವನು; ವಿಪತ್ತನ್ನು ತೊಲಗಿಸಿದವನು: ಈತನೆನಗೆ ಕೃತ[ತ್ತ]ಕ್ಲೇಶನಪ್ಪುದಱಿಂದೀಯವಸರದೊಳೆ ಸಂತಸಂಬಡಿಸಲ್ವೇೞ್ಕುಮೆಂದಿಂತೆಂದಂ (ಪಂಚತಂ. ೫೭-೨೨). ೨. ಕಷ್ಟ ಪರಿಹಾರವಾದವನು; ವಿಪತ್ತು ಇಲ್ಲದವನು. [ಕೃತ್ತ + ಕ್ಲೇಶ]

**ಕೃತ್ತಿ** (ನಾ). ೧. ಚರ್ಮ; ತೊಗಲು: "ಅಸೃಗ್ಧರಃ, ಅಜಿನಂ, ಚರ್ಮ, ಕೃತ್ತಿಃ, ತ್ವಕ್ –ಈ ೫ ತೊವಲ್" (ಹಲಾಯು. ೧೦೪-೮). 'ಕೃತ್ತಿವಾಸ' ಪರಾ. ೨. ಭುಜಪತ್ರೆಗಿಡ; ಭೂರ್ಜವೃಕ್ಷ. [ಸಂ.]

**ಕೃತ್ತಿಕಂಠಿಕೆ** (ನಾ). ಒಂದು ಜಾತಿಯ ಗಿಡ: "ಕೃ[ಪಾಠಾಂ. ಬ್ರ]ತ್ತಿಕಂಠಿಕೆ[ಪಾಠಾಂ. ಟಿಕೆ]ಪಾಂಸು ಪರ್ಪಟಕವಕ್ಕು" (ಮಂಗರಾ. ೪೨-೩೮). [ಸಂ. ಕೃತ್ತಿಕಂಠಿಕಾ]

**ಕೃತ್ತಿಕಾಕೃತಿ** (ನಾ). ಕೃತ್ತಿಕಾ ನಕ್ಷತ್ರದ ಆಕಾರ, —ರೂಪ: ಆ ಸಾಧ್ವಿ ಒಯ್ಯನೆ ತೆಗೆದಳ್ . . . ಚೂಡಾಮಣಿಯ ಕೃತ್ತಿಕಾಕೃತಿಯ ಚೆಲ್ವಂ (ಶ್ರೀರಾಮಾ. ೫೨೨-೬೦೩). [ಸಂ. (ಕೃತ್ತಿಕಾ + ಆಕೃತಿ)]

**ಕೃತ್ತಿಕಾಪುಂಜ** (ನಾ). ಕೃತ್ತಿಕೆಯೆಂಬ ಹೆಸರಿನ ಆರು ನಕ್ಷತ್ರಗಳ ಗುಂಪು: ವೃಷಭದ ಭುಜದ ಮೇಲೆ ಸ್ಥಿತವಾಗಿರುವ ಅತ್ಯಂತ ಶೋಭಾಯಮಾನವಾದ ಕೃತ್ತಿಕಾಪುಂಜವು ಸಿಕ್ಕುತ್ತದೆ (ಜ್ಯೋತಿರ್ವಿ. ೯-೩೨). [ಸಂ. (ಕೃತ್ತಿಕಾ + ಪುಂಜ)]

**ಕೃತ್ತಿಕೆ** (ನಾ). ೧. ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಮೂರನೆಯದು; ಆರುತಾರೆಗಳನ್ನೊಳಗೊಂಡ ಒಂದು ನಕ್ಷತ್ರಪುಂಜ: "ಕೃತ್ತಿಕಾಃ, ಬಹುಲಾಃ –ಈ ೨ ಕೃತ್ತಿಕೆ" (ಹಲಾಯು. ೯-೫೦); "ಅಜಹವು ಮೂಲ ಶ್ಲೇಷೆ ಕೃತ್ತಿಕೆ [ಪಾಠಾಂ. ಗೆ]ಯೊಳಾ ತಾರೆ" (ಮಂಗರಾ. ೧೯-೩); ಕೃತ್ತಿಕೆ ನಾಯಿಂದನ ಕತ್ತಿ ಆಕಾರ (ಭಾಸ್ಕರ. ೬೦-೧). ೨. ಕೃತ್ತಿಕಾ ನಕ್ಷತ್ರದಲ್ಲಿ ಬರುವ ಮಳೆ: ಕೃತ್ತಿಕೆಯಲ್ಲಿ ಬಿತ್ತಿದರೆ ಕುರಿತಷ್ಟು ಎಳ್ಳು (ಗಾದೆ). ೩. ವಾಹನ; ಗಾಡಿ. ೪. ಒಂದು ಬಗೆಯ ಪಾತ್ರೆ, —ಪರಡೆ: "ಆವರಣಿಯೆನೆ ಜಂತ್ರಮಕ್ಕು ಕೃತ್ತಿಕೆ[ಪಾಠಾಂ. ಗೆ]ಯೆನಲ್ ಬೀವಕ್ಕು ಹಂಚಿ ಪರ್ಣಿಯಕ್ಕು ಕರಪಾತ್ರೆ ಕೈಪಟ್ಟಲಕ್ಕು" (ಮಂಗರಾ. ೬೧-೨೦). ೫. ಚರ್ಮ; ತೊಗಲು. ೧, ೫: ನಕ್ಷತ್ರಚಕ್ರದಂತೆ ನಾನಾ ಮೃಗ ಕೃತ್ತಿಕಾಶ್ಲೇಷೋಪಶೋಭಿತನುಂ . . . ಎನಿಸಿದ ಮುನಿಕುಮಾರಂ (ಕಾದಂಪೂ. ೨೦೮). [ಸಂ. ಕೃತ್ತಿಕಾ]

**ಕೃತ್ತಿಧರ** (ನಾ). ಚರ್ಮವನ್ನೇ ಬಟ್ಟೆಯಾಗಿ ಧರಿಸಿರುವವನು; ಶಿವ: ಕೃತ್ತಿಧರನಾಕೃತಿಯ ಕೈಗಿದು ಉತ್ತಮಾಂಗವಿದಾಯಿತಾದೊಡೆ ಮೆತ್ತಗಾಗಿರಬೇಡವೇ (ಬಸಪು. ೩೮-೩೫). [ಸಂ.]

**ಕೃತ್ತಿಮ** (ನಾ). ೧. ಕಪಟ; ಕೃತಕವಾದುದು; ವೇಷ ಮರೆಸಿದುದು: ಪೊದರ್ಪೊಕ್ಕು ಪುಲಿವುದುಗಿ ಕುಳಿತು . . . ಮೇಲ್ವರಿದು ಬರಲೋರ್ವ ಬಾಯೊಳು ಕಠಾರಿಯ ಸಾರ್ಚಿ ತಲೆಯರಿದನೀಶ ಕೃತ್ತಿಮದ ವ್ಯಾಘ್ರನ ನರಿದೊಲು (ನವಮೋ. ೧೬-೨೮). ೨. ಮಾಟ; ಕೈಮುಸಕು: ಎದೆನೋವು, ಕೃತ್ತಿಮ ಮೊದಲಾದ ಸಕಲ ವಿಷದೋಷಂಗಳೂ, ಭ್ರಮೆ, ದಾಹ, ಜ್ವರಗಳೂ ಶಮನವಾಗುವುವು (ಸಕವೈ. ೨೫). [< ಸಂ. ಕೃತ್ರಿಮ]

**ಕೃತ್ತಿವಸನ** (ನಾ). = ಕೃತ್ತಿವಾಸ ೨: ಜಯ . . . ಭಾಸ್ವತ್ಕೃತ್ತಿವಸನ [ಪಾಠಾಂ. ವಾಸ] ಕೃತ ವಿಲಯಾಟ್ಟಹಾಸ ಕೈಲಾಸವಾಸ (ಉದ್ಭದೇ. ೬-೨೮). [ಕೃತ್ತಿ + ವಸನ]

**ಕೃತ್ತಿವಸ್ತ್ರ** (ನಾ). = ಕೃತ್ತಿವಾಸ ೧: ಉಲ್ಲಸತ್ಫಣಿಪಕುಂಡಲಮಾಯತಬಾಹು ಕೃ[ಪಾಠಾಂ. ವೃ]ತ್ತಿವಸ್ತ್ರಂ ಬಗೆಗೊಳ್ವ ನುಣ್ಣಱೆ . . . ವಿರಾಜಿಸೆ ರಂಜಿಸಿದಂ ಮಹೇಶ್ವರಂ (ಶಬಶಂ. ೧-೬೪). [ಕೃತ್ತಿ + ವಸ್ತ್ರ]

**ಕೃತ್ತಿವಾಸ** (ನಾ). ೧. ಚರ್ಮದ ಬಟ್ಟೆ: ನಡುವಿನೊಳುಟ್ಟ ವಲ್ಕಲಂ ತೊವಲುಡೆಯನ ಕೃತ್ತಿವಾಸಂಬೊಲ್ ಮನೋಜ್ಞಮಾಗಿರೆ (ರಾಮಾಶ್ವ. ೪೦-೨೯). ೨. ಹುಲಿಯ ಚರ್ಮವನ್ನು ಹೊದೆದವನು; ಶಿವ: ಹಿಮಕರ ವೈದ್ಯ ವಾಸುಕಿ ಸುರಾಸುರರಂಬುಧಿ ಕೃತ್ತಿವಾಸನುಂ ಅಮೃತಕರಾಭಿಧಾನ (ನಾನಾರ.೩೬); ಕೃತ್ತಿವಾಸಂಗಾ ಪ್ರಮುಥರಿಗೆ ಮತ್ತೆ ವಂದಿಸುತಿಬ್ಬರುಂ ಮುದವೆತ್ತು (ಬಸಪು. ೩೭-೫೬). [ಸಂ. ಕೃತ್ತಿವಾಸನ್ (ಕೃತ್ತಿ + ವಾಸನ್)]

**ಕೃತ್ತು** (ನಾ). ೧. ಧಾತುವಿನ ಮುಂದೆ ಬರುವ ಆಖ್ಯಾತ ಭಿನ್ನ ಪ್ರತ್ಯಯ; ಧಾತುವಿಗೆ ಸೇರುವ ನಾಮವಾಚಕ ಪ್ರತ್ಯಯ; ಕೃತ್ಪ್ರತ್ಯಯ. ೨. ಕೃದಂತ: ಕೃತ್ತಿರದೆಯುಮುತ್ವಾತ್ವಾಯತ್ತಮಿನುಸ್ವಾರಂ (ಶಮದ. ೧೭೨); "ಕೃತ್ತು = ಕೃತ್ಪದಂ" (ಶಮದ. ೧೭೨ ಟೀಕೆ). [< ಸಂ. ಕೃತ್]

**ಕೃತ್ಪ್ರವಿಷ್ಟಲಿಂಗ** (ನಾ). [ವ್ಯಾಕ] ಕೃದಂತವನ್ನೊಳಗೊಂಡ ಲಿಂಗ, —ಪ್ರಕೃತಿ: 'ಆದವಿಷ್ಣು' ಎಂಬ ಕನ್ನಡದ ಗಮಕ ಸಮಾಸಮುಂ 'ಪಿರಿದೀವಂ' ಎಂಬ (ಕನ್ನಡದ) ಕ್ರಿಯಾಸಮಾಸಮುಂ ಕೃತ್ಪ್ರವಿಷ್ಟಲಿಂಗಂಗಳ್ (ಶಮದ. ೬೨ ಪ್ರಯೋ). [ಸಂ. (ಕೃತ್ + ಪ್ರವಿಷ್ಟ + ಲಿಂಗ)]

**ಕೃತ್ಯ₁** (ನಾ). ಅನ್ಯರಿಗೆ ಕೇಡನ್ನೆಣಿಸಿ ಮಾಡುವ ದುಷ್ಟ ದೇವತೆಯ ಉಪಾಸನೆ; ಅಭಿಚಾರಕ್ರಿಯೆ; ಮಾಟ: ಕನಕ ಮಾಡಿದ ಕೃತ್ಯ ಕನಕನ ಕನಲಿ ನುಂಗಿದ ಗಾದೆಯಾಯಿತು (ಕೌಶಿರಾ. ೧೧-೨೯). [< ಸಂ. ಕೃತ್ಯಾ]

**ಕೃತ್ಯ₂** (ಗು). ೧. ಮಾಡತಕ್ಕ; ಮಾಡಲು ಯೋಗ್ಯವಾದ. (ನಾ). ೨. ಕರ್ಮ; ಕೆಲಸ; ಕಾರ್ಯ; ಕರ್ತವ್ಯ: ಭಕ್ತಿಯುಳ್ಳವಂಗೆ ಕೃತ್ಯಕ್ಕೆ ಸಿಕ್ಕಿ ಸುಚಿತ್ತವನಜಸಲೇಕೆ (ಮೋಳಿಮಾ. ೩೧-೧೩೦); ಇನನ ಕೃತ್ಯದೊಳಾಕುಲೆಯಾಗುತಾವಗಂ (ಶಾಕುಂತ. ೫೭-೧೩). ೩. ನಿಷ್ಠೆ: ಜಂಗಮಕ್ಕೆ ಇಕ್ಕಿದಲ್ಲದೆ ಒಲ್ಲೆನೆಂಬ ಕೃತ್ಯದ ಭಕ್ತರು ಕೇಳಿರೋ (ಮೋಳಿಮಾ. ೩೦-೧೨೬). ೪. ಲಂಚಕ್ಕೊಳಗಾಗುವವನು; ವಿಶ್ವಾಸಘಾತಕ; ದ್ರೋಹಿ. [ಸಂ.]

**ಕೃತ್ಯಶೇಷ** (ನಾ). ಇನ್ನೂ ಮಾಡಬೇಕಾಗಿರುವ ಕಾರ್ಯಭಾಗ: ಎಣಿಪಾಗಳ್ ಕೃತ್ಯಶೇಷಂ ಪರಮಮುನಿಮನಸ್ಸ್ಪರ್ಶನಂ (ಚಂದ್ರಪ್ರ.೨-೬೧). [ಕೃತ್ಯ + ಶೇಷ]

**ಕೃತ್ಯಾಕೃತ್ಯ** (ನಾ). ಮಾಡಬೇಕಾದ ಮತ್ತು ಮಾಡಬಾರದ ಕೆಲಸ: ಬಲವಪ್ರಾಜಿತ ರಾಜಕ ಪ್ರಭೃತಿ ಕೃತ್ಯಾಕೃತ್ಯ ಪಕ್ಷಕ್ಕಮಾತ್ಮಲಸನ್ಮಂಡಲ ಮಂತ್ರವಂ ತೆಗೆ (ಶಾಂತಿಪು. ೧೧–೧೧೪); ನಿಜೆಯೆ ಕೃತ್ಯಾಕೃತ್ಯ ಭಾವವ ಮರೆತಿದು ಕಳೆದನು (ಕುವ್ಯಾ.ಉ. ೮–೧೩). [ಕೃತ್ಯ + ಅಕೃತ್ಯ]

**ಕೃತ್ಯಾವಿಗ್ರಹ** (ನಾ). ಅಭಿಚಾರಕ್ಕೆ ಸಂಬಂಧಿಸಿದ ಒಂದು ದುಷ್ಟ ದೇವತೆಯ ಮೂರ್ತಿ; ಮಾಟಕ್ಕಾಗಿ ಮಾಡಿದ ಬೊಂಬೆ: ಅಥರ್ವ ವೇದದಲ್ಲಿ ಕೃತ್ಯಾವಿಗ್ರಹಗಳನ್ನು ಮಾಡುವ ವಿಧಾನವು ಕಂಡುಬರುತ್ತದೆ (ಸೌಂದಸ. ೧೧೬). [ಸಂ. (ಕೃತ್ಯಾ + ವಿಗ್ರಹ)]

**ಕೃತ್ಯೆ**$_1$ (ನಾ). ೧. ಕೆಲಸ; ಕಾರ್ಯ. [< ಸಂ. ಕೃತ್ಯ]

**ಕೃತ್ಯೆ**$_2$ (ನಾ). ೧. ಮಾಟ ಮೊದಲಾದ ಅಭಿಚಾರಿಕ ಕ್ರಿಯೆಯ ಅಧಿದೇವತೆ; ದುಷ್ಟದೇವತೆ. 'ಕೃತ್ಯಾವಿಗ್ರಹ' ಪರಾ. ೨. ಮಾಟ: ಅವರು ಕೃತ್ಯೆ ಮಾಡಿಸಿದ್ದಾರೆ (ರೂಢಿ). [ಸಂ. ಕೃತ್ಯಾ]

**ಕೃತ್ಯೋದಾರ** (ನಾ). ಉದಾರಕೃತ್ಯ; ಶ್ರೇಷ್ಠವಾದ ಕರ್ಮಾಚರಣೆ; ಯಜ್ಞಯಾಗಾದಿ ರೂಪವಾದ ಧರ್ಮಕಾರ್ಯದ ಅನುಷ್ಠಾನ: ಸುತನಂ ಕಂಡುರ್ಬಿ ತಾಯ್ತಂದೆಗಳ್ ಕೃತ್ಯೋದಾರದೊಳಿತ್ತರಂದು ಸಕಲರ್ಗಾನಂದದಿಂ ವಸ್ತುವಂ (ಹವ್ಮಾ.ರ. ೨–೨೪). [ಕೃತ್ಯ + ಉದಾರ]

**ಕೃತ್ರಿಮ** (ಗು). ೧. ಸಹಜವಲ್ಲದ; ತಯಾರಿಸಿದ; ಕೃತಕವಾದ. (ನಾ). ೨. ಕಪಟ; ಮೋಸ; ಸುಳ್ಳು; ಮಾಯೆ: ಅವನನಿರ ವೇಟ್ಟು ಕೃತ್ರಿಮದಿಂದಂ (ಸುಕುಮಾ. ೭–೨೮); ತಾವು ಹೇಗೆ ನಮ್ಮ ರಾಜರ ಜಾತಕವನ್ನು ತರಿಸಿಕೊಂಡಿರಿ? ಅದರಲ್ಲಿಯೇ ಕೃತ್ರಿಮವು ಅಡಗಿರುವುದೆಂದು ಕಾಣುವುದಿಲ್ಲವೆ? (ಶ್ರೀರಾಯ. ೭೮). ೩. ಮೋಸಗಾರ; ಕಪಟಿ: ಮಿತ್ರನುರು ಮಧ್ಯಸ್ಥ ಪುರುಷನಮಿತ್ರನೌದಾಸೀನನೊಬ್ಬನು ಕೃತ್ರಿಮನು ಸಹಜೀವಿಯಂತಿವರು (ಕುವ್ಯಾ.ಉ. ೩–೬೮). ೪. ಮಾಟ; ಶೂನ್ಯ: ಔಷಧ, ಮಂತ್ರ, ತಂತ್ರ ಕೃತ್ರಿಮಗಳಿಂದ ಬಂದ ಜ್ವರವು ಆಗಂತುಕಜ್ವರವೆನಿಸಿಕೊಳ್ಳುವುದು (ಸಕವೈ. ೯೭). ೫. ಧರ್ಮಶಾಸ್ತ್ರದಲ್ಲಿ ಹೇಳಿದ ಹನ್ನೆರಡು ವಿಧದ ಪುತ್ರರಲ್ಲೊಬ್ಬ; ಬೆಳೆದ ಹುಡುಗನಾಗಿದ್ದು ಹೆತ್ತತಾಯ್ತಂದೆಗಳ ಅನುಮತಿಯಿಲ್ಲದೆ ದತ್ತು ತೆಗೆದುಕೊಳ್ಳಲ್ಪಟ್ಟವನು; ದತ್ತುಮಗ. 'ಕೃತಕಪುತ್ರ' ಪರಾ. ೬. ಕಾಚುಲವಣ. [ಸಂ.]

**ಕೃತ್ರಿಮಗ್ರಹಣಿ** (ನಾ). [ವೈದ್ಯ] ಗ್ರಹಣಿರೋಗದಲ್ಲಿ ಒಂದು ಪ್ರಭೇದ: ಶೋಕಗ್ರಹಣಿ, ಅಭಿಘಾತಗ್ರಹಣಿ, ಕೃತ್ರಿಮಗ್ರಹಣಿ, ವಿಷೂಚಿ, ಅತಿಸಾರ . . . ಮುಂತಾದ ಸಕಲರೋಗಗಳೂ ಗುಣಮಕ್ಕುಂ (ಸಕವೈ. ೩೪೦). [ಕೃತ್ರಿಮ + ಗ್ರಹಣಿ]

**ಕೃತ್ರಿಮತೆ** (ನಾ). ೧. ಅಸ್ವಾಭಾವಿಕತೆ: ಇದನ್ನು ಅನ್ಯಭಾಷೆಯಿಂದ ಸ್ವಭಾಷೆಗೆ ತಂದುಕೊಳ್ಳುವಾಗ ಕೃತ್ರಿಮತೆಗಳ ಕೋಟಲೆಗೆ ಕಾಲ ತೊಡಕದೆ, ಅಕ್ಕನ ಮನೆಯಿಂದ ತಂಗಿಯ ಮನೆಗೆ ಬಂದಂತಿದೆ (ವೀರಯೋ. VI ಮುನ್ನುಡಿ). ೨. ಕಪಟ; ಮೋಸ; ಕೃತಕತೆ. [ಸಂ. ಕೃತ್ರಿಮತಾ]

**ಕೃತ್ರಿಮತ್ರಿಶಂಕು** (ನಾ). [ಜ್ಯೋತಿ] ತ್ರಿಕೋಣಾಕಾರದ ಒಂದು ನಕ್ಷತ್ರಪುಂಜದ ಹೆಸರು: ದೇವನೌಕೆಯ ಎರಡು ನಕ್ಷತ್ರಗಳು, ನೌಕಾಪಟದ ಎರಡು ನಕ್ಷತ್ರಗಳು ಸೇರಿ ತ್ರಿಶಂಕುವೆಂದು ಭ್ರಮಿಸಲು ಸಾಧ್ಯವಾಗಿದೆಯಾದ್ದರಿಂದ ಇದಕ್ಕೆ ಕೃತ್ರಿಮತ್ರಿಶಂಕು (ಕೃತ್ರಿ)ವೆಂದು ನಾಮಕರಣವಾಗಿದೆ (ನಕ್ಷತ್ರ. ೭೫). [ಕೃತ್ರಿಮ + ತ್ರಿಶಂಕು]

**ಕೃತ್ರಿಮಧೂಪಕ** (ನಾ). ಅನೇಕ ಪರಿಮಳದ್ರವ್ಯಗಳನ್ನು ಸೇರಿಸಿ ತಯಾರುಮಾಡಿದ ಧೂಪ: (೬). [ಸಂ.]

**ಕೃತ್ರಿಮವಿಷ** (ನಾ). ಬೇರೆ ಬೇರೆ ವಸ್ತುಗಳ ಸಂಪರ್ಕದಿಂದ ಉಂಟಾದ ವಿಷ: ವಿಷ ಮೂರು ತೆರ–ಸ್ಥಾವರವಿಷ, ಜಂಗಮವಿಷ, ಕೃತ್ರಿಮ ವಿಷವೆಂದು (ವೈದ್ಯಸಾ. II, ೧೭೫). [ಕೃತ್ರಿಮ + ವಿಷ]

**ಕೃತ್ರಿಮಿ** (ನಾ). ಮೋಸಗಾರ; ಕಪಟಿ: ಅವನು ಶಕುನಿಯಂತೆ ಕೃತ್ರಿಮಿ ಅವನ ಮಾತನ್ನು ನಂಬಬಾರದು (ರೂಢಿ). [ಸಂ. ಕೃತ್ರಿಮಿನ್]

**ಕೃತ್ಸ್ನ** (ನಾ). ೧. ಪೂರ್ತಿಯಾಗಿರುವಿಕೆ; ಸಂಪೂರ್ಣ: "ಅಖಿಳಂ ನಿಖಿಳಂ ವಿಶ್ವಮಶೇಷಂ ಕೃತ್ಸ್ನಮವಿಕಳಂ [ಪೂರ್ಣಂ]" (ವಸ್ತುಕೋ. ೧೧೭–೫೭). ೨. ನೀರು. ೩. ಹೊಟ್ಟೆ; ಉದರ. [ಸಂ.]

**ಕೃತ್ಸ್ನಕರ್ಮ** (ನಾ). ೧. ಪೂರ್ತಿ ಕೆಲಸ; ಎಲ್ಲಾ ಕೆಲಸಗಳು: ಕೃತ್ಸ್ನಕರ್ಮವಿಯೋಗಲಕ್ಷಣಂ ಮೋಕ್ಷಂ (ತತ್ತ್ವಪ್ರ. ೮). [ಕೃತ್ಸ್ನ + ಕರ್ಮ]

**ಕೃತ್ಸ್ನಸುಖ** (ನಾ). ಸಂಪೂರ್ಣಸುಖ; ಪೂರ್ತಿಸುಖ: ಜಿನರಾಜಪೂಜೆಯಂ ಮುಂ ನೆಗಟ್ಚಿವೇಟ್ಟುಮದು ಕೃತ್ಸ್ನಸುಖಪ್ರಭವೈಕಕಾರಣಂ (ಚಂದ್ರಪು. ೪–೬೭). [ಕೃತ್ಸ್ನ + ಸುಖ]

**ಕೃದಂತ** (ನಾ). [ವ್ಯಾಕ] 'ಕೃತ್' ಪ್ರತ್ಯಯದಿಂದ ಕೊನೆಗೊಳ್ಳುವ ಶಬ್ದ: ಗದಬಜಕಾರಮವಿದಿರೆ ಮೊದಲ ಪದಂ ತಾಂ ಕೃದಂತಮಾಗಿರೆ ದೊರೆಕೊಳ್ಳದನುಸ್ವಾರಮುದಂತದೊಳ್ (ಶಮದ. ೧೭೦); ಧಾತುಗಳ ಮೇಲೆ ಸೇರುವ ಕೆಲವು ಪ್ರತ್ಯಯಗಳಿಗೆ ಕೃತ್ ಪ್ರತ್ಯಯಗಳೆಂದೂ, ಇವುಗಳಿಂದ ನಿಷ್ಪನ್ನವಾದ ಶಬ್ದಗಳಿಗೆ ಕೃದಂತಗಳೆಂದೂ . . . ಹೆಸರು (ಕೈಪಿಡಿ. ೧೫). [ಸಂ. (ಕೃತ್ + ಅಂತ)]

**ಕೃದಂತನಾಮ** (ನಾ). [ವ್ಯಾಕ] "ಧಾತುಗಳಿಂದ ಹುಟ್ಟಿದರೂ ಕ್ರಿಯಾಪದಗಳಾಗಿ ನಿಲ್ಲದೆ ಕ್ರಿಯೆಗೆ ಸಂಬಂಧಪಟ್ಟವರ ಹೆಸರುಗಳಾಗಿ ನಿಲ್ಲತಕ್ಕ ಶಬ್ದಗಳಿಗೆ ಕೃದಂತನಾಮಗಳೆಂದು ಹೆಸರು" (ಮಧ್ಯಮ. ೧೧೯). [ಕೃದಂತ + ನಾಮ]

**ಕೃದಂತನಾಮಪದ** (ನಾ). = ಕೃದಂತನಾಮ: ಡೊಂಬರ ಆಟವನ್ನು ನೋಡುತ್ತಾ ನಿಂತವನು ಮನೆಗೇ ಹೋಗಲಿಲ್ಲ – ಇಲ್ಲಿ . . . ನಿಂತವನು ಎಂಬುದು ಕ್ರಿಯಾಪದವಲ್ಲ ಕ್ರಿಯೆಯನ್ನು ಮಾಡುವವನನ್ನು ತಿಳಿಸುವ ನಾಮಪದ. ಇದಕ್ಕೆ ಕೃದಂತನಾಮಪದವೆಂದು ಹೆಸರು" (ಮಧ್ಯಮ. ೧೦೭ ಅಡಿಟ). [ಕೃದಂತ + ನಾಮಪದ]

**ಕೃದಂತಭಾವನಾಮ** (ನಾ). [ವ್ಯಾಕ] ಭಾವವಾಚಕವಾದ ಕೃತ್ಪ್ರತ್ಯಯವು ಸೇರಿ ಸಿದ್ಧವಾಗುವ ನಾಮಪದ: "ಭಾವನಾಮಗಳಲ್ಲಿ ಧಾತುಗಳಿಂದ ಹುಟ್ಟತಕ್ಕವುಗಳಿಗೆ ಕೃದಂತಭಾವನಾಮಗಳೆಂದೂ ನಾಮಪ್ರಕೃತಿಗಳಿಂದ ಹುಟ್ಟತಕ್ಕವುಗಳಿಗೆ ತದ್ಧಿತಾಂತಭಾವನಾಮಗಳೆಂದೂ ಹೆಸರು" (ಮಧ್ಯಮ. ೧೪೯). [ಕೃದಂತ + ಭಾವನಾಮ]

**ಕೃದಂತವಿಶೇಷಣ** (ನಾ). [ವ್ಯಾಕ] ವಿಶೇಷಣರೂಪವಾಗಿ ಬರುವ ಕೃದಂತ: ಧಾತುಗಳಿಗೆ ದ, ವ, ಎಂಬ ಕಾಲವಾಚಕಪ್ರತ್ಯಯಗಳೂ ನಿಷೇಧಾರ್ಥದ ಅದ ಎಂಬ ಪ್ರತ್ಯಯವೂ ಸೇರಿ ಕೃದಂತವಿಶೇಷಣಗಳಾಗುವುವು (ಕೈಪಿಡಿ. ೧೬). [ಕೃದಂತ + ವಿಶೇಷಣ]

**ಕೃದಂತಾವ್ಯಯ** (ನಾ). [ವ್ಯಾಕ] ಧಾತುವಿನ ಕೊನೆಯಲ್ಲಿ ಸೇರಿ ನಿಷ್ಪನ್ನವಾಗುವ ಕೃದಂತರೂಪವಾದ ಅವ್ಯಯ. ಅಲ್, ಉತುಂ, ದು ಮೊದಲಾದುವು: ಕೃದಂತಾವ್ಯಯಗಳು – ಇವು ಅಸಂಪೂರ್ಣ ಕ್ರಿಯೆಗಳು (ಕೈಪಿಡಿ. ೫೨). [ಕೃದಂತ + ಅವ್ಯಯ]

**ಕೃದರ** (ನಾ). ಉಗ್ರಾಣ; ಕಣಜ. [ಸಂ.]

**ಕೃಪಣ** (ಗು). ೧. ತುಚ್ಛವಾದ; ಹೀನವಾದ; ದುಷ್ಟವಾದ; ಕ್ಷುದ್ರವಾದ. ೨. ವಿವೇಕಶೂನ್ಯವಾದ; ತಿಳುವಳಿಕೆಯಿಲ್ಲದ; ಜ್ಞಾನವಿಲ್ಲದ. 'ಕೃಪಣಮತಿ' ಪರಾ. (ನಾ). ೩. ದೈನ್ಯದಿಂದ ಕೂಡಿದುದು: ಅದೃಷ್ಟಪೂರ್ವಂಗಳುಮತಿಕೃಪಣಂಗಳುಮಪ್ಪ ಚಾಟುಸಹಸ್ರಂಗಳೊದವೆ ಕಣ್ಣೀರಪೂರದಿಂ ತೇಂಕಾಡುತ್ತಂ (ಕಾದಂಪೂ. ೯೨೭). ೪. ದುಷ್ಟನಾದವನು; ಕ್ಷುದ್ರನಾದವನು; ನೀಚ; ಅಲ್ಪ: "ಕೃಪಣಃ, ಕ್ಷುಲ್ಲಕಃ, ಕ್ಲೀಬಃ, ಕ್ಷುದ್ರಃ –ಈ ೪ ಕ್ಷುದ್ರಂ" (ಹಲಾಯು. ೫೭–೯೨). ೫. ಜಿಪುಣ; ಲೋಭಿ: "ಕೃಪಣ ಲೋಭಿಯು" (ಭಾರನಿ. ೧೦); ನಿಲೆ ಕುಜನಂಗನಾ ಮಿಥುನದೊಳ್ . . . ಮಿತ್ರರಹಿತಂ ಕೃಪಣಂ ಕೃತವೇದಿ ಯಾಚಕಂ (ಜಾತಕ. ೧೭–೯). ೬. ಬಡವ; ದರಿದ್ರ: ದ್ರುಪದನಂದನೆ ನಡೆ ವಿಳಾಸಿನಿಯರ ವಿಧಾನದಲಿ ಕೃಪಣನೇ ಕುರುರಾಯ . . . ರಾಯನ ವಿಪುಳ ವಿಭವವ ನನುಭವಿಸು (ಕುವ್ಯಾಸ. ೧೪–೮೨). [ಸಂ.]

**ಕೃಪಣತನ** (ನಾ). = ಕೃಪಣತೆ: ಪಕ್ಷಿಗಳುಪಮೆಯಲಿ ಕೊಂಡೊಯ್ಯೆ ವಸನವ ಕೃಪಣತನದಲಿ ತನ್ನ ಸೀರೆಯೊಳೊಯ್ದನರ್ಥವನು (ನಳಚ. ೮–೨). [ಕೃಪಣ + –ತನ]

**ಕೃಪಣತೆ** (ನಾ). ೧. ಜಿಪುಣತನ; ಲೋಭ; ಕಾರ್ಪಣ್ಯ: ತಿಂಗಳಾರರ ಮುಡಿತ ಚೆಂಗುಲಾಬಿಯ ಬೆಳೆತ ಕಂಗೊಳಿಪುದದರ ಸಿರಿಯರೆಗಳಿಗೆಯಲ ರೊಳ್ ಪೊಂಗುವಾನಂದವದನನುಭವಿಸಿದವನ್ ಅಜನ ಹಂಗಿಪನೆ ಕೃಪಣತೆಗೆ (ಮಂಕುಕ. ೪೪೩). ೨. ಕೆಟ್ಟತನ; ನೀಚತನ: ಕಪಟದಲಿ ಜೂಜಾಡಿ ರಾಜ್ಯವನಪಹರಿಸಿದಡೆ ಧರ್ಮ ನಿಮ್ಮದು ಕೃಪಣತೆಯ ನಾನೇನ ಹೇಳುವೆನಾ ಸುಯೋಧನನ (ಕುವ್ಯಾಗ. ೧೧–೬೧). ೩. ದೈನ್ಯ; ದುಃಖದಿಂದ ಬೆಂಡಾಗಿರುವಿಕೆ; ಅಸಹಾಯಕತೆ: ಮತ್ತಿನ್ನುಳಿದರ ಮುಖಮಂಡಳ ಕೃಪಣತೆ ಬಳಸಿದವಸ್ಥೆಯೊಳದೆಂತು ಪೇಳ್ನೋಡುವುದೇ (ಮಾಧವಾ. ೧–೮೪). [ಸಂ. ಕೃಪಣತಾ]

**ಕೃಪಣತ್ವ** (ನಾ). = ಕೃಪಣತೆ. [ಸಂ.]

**ಕೃಪಣಮತಿ** (ನಾ). ಅವಿವೇಕಿಯಾದವನು; ಅಲ್ಪಬುದ್ಧಿಯವನು: ಚಪಳೆ ಫಡ ಹೋಗೆನುತ ಹಾಯ್ದನು ಕೃಪಣಮತಿ ಮುಂಗೈಯಲನಿಲ ಜನಪರಭಾಗಕೆ ಹಾಯ್ದು ಹಿಡಿದನು ಕೀಚಕನ ತುರುಬ (ಕುವ್ಯಾವಿ. ೩–೮೮). [ಕೃಪಣ + ಮತಿ]

**ಕೃಪಣೆ** (ನಾ). ೧. ಕ್ಷುದ್ರಳಾದ ಹೆಂಗಸು; ನೀಚೆ; ದುಷ್ಟೆ: ಅಪಸರಿಯರುಜಂಕಿ ಕುಲಗೆಡಿಕೆಯರು ಕೃಪಣೆಯರು ಚೋರಕರ ತಾಯ್ಗಳು (ಬಸವು. ೪೦–೫೪). ೨. ಲೋಭಿಯಾದ ಹೆಂಗಸು; ಜಿಪುಣೆ. [ಸಂ. ಕೃಪಣಾ]

**ಕೃಪಾಂಗ** (ನಾ). ಕರುಣೆಯೇ ಮೂರ್ತಿವೆತ್ತಂತಿರುವವನು; ದಯಾಮಯ: ಅಮಿತ ಕೃಪಾಂಗಂ ಸಾಮಜಹರನಾನತಜನತಾ ಮರತರು (ಶಬಶಂ. ೩–೧). [ಸಂ. (ಕೃಪಾ + ಅಂಗ)]

**ಕೃಪಾಕಟಾಕ್ಷ** (ನಾ). ಕೃಪೆಯಿಂದ ಕೂಡಿದ ಕುಡಿನೋಟ; ದಯಾದೃಷ್ಟಿ: ಪ್ರಾಣದಾನವನರ್ಥಿಸುತ್ತ ಕೃಪಾಕಟಾಕ್ಷ ಸಮರ್ಥತೆಯ ನೋರಂತೆ ಬಯಸುತಮಿರ್ಪ ಸಮಯದಲಿ (ಬಸವು. ೪೬–೪೯). [ಸಂ. (ಕೃಪಾ + ಕಟಾಕ್ಷ)]

**ಕೃಪಾಕರ** (ನಾ). ಕೃಪೆಗೆ ಆಕರನಾದವನು; ದಯಾನಿಧಿ: ಪರಮ ಕೃಪಾಕರನೆಮಗೀಗೆ ಸೌಖ್ಯಮಂ(ಶಬಶಂ.೪–೧). [ಸಂ.(ಕೃಪಾ+ಆಕರ)]

**ಕೃಪಾಣ** (ನಾ). ಕತ್ತಿ; ಖಡ್ಗ: ವಿಜಯಶ್ರೀ ಬಾಹುದುರ್ಗ್ಗಮಲ್ಲನಿಳಾ ಬಹುವಿಧ(ರ)ಕ್ಷಣ ಪ್ರವೀಣ ಕೃಪಾಣಂ (ಪಂಪಭಾ. ೧–೩೦); ಕೃಪಾಣ ವೊಂದು ನಡದಲ್ಲಿ ನೇತಾಡುತ್ತಿದೆ (ನೂರಜ. ೧೮). [ಸಂ.]

**ಕೃಪಾಣಪಾಣಿ** (ನಾ). ಕೃಪಾಣವನ್ನು ಕೈಯಲ್ಲಿ ಉಳ್ಳವನು: ಕತ್ತಿಯನ್ನು ಹಿಡಿದವನು: ಕೃಪಾಣಪಾಣಿ ವಿರಾಟರಾಯನ ರಾಣಿಯರ ಮನೆಗೈದಿದನು (ಕುವ್ಯಾವಿ. ೨–೩೯). [ಕೃಪಾಣ + ಪಾಣಿ]

**ಕೃಪಾಣಿ** (ನಾ). ೧. ಕತ್ತರಿ. ೨. ಕಠಾರಿ; ಬಾಕು; ಕತ್ತಿ: "ವೈತಂಸಿಕಂ ಕೌಳಿಕಂ ಕಟಗನೆನಿಸಿಕ್ಕು . . . ಅವಂಗೋತ ಕತ್ತಿ ಕೃಪಾಣಿಯಕ್ಕು" (ಮಂಗರಾ. ೧೧೧–೪); ದುರಿತವ್ರಾತಲತಾಕೃಪಾಣಿ (ಚಂದ್ರಪು. ೧–೧೨); ವಾಣಿ ಜಗತ್ಪಿತಾಮಹರಾಣಿ . . . ವಿಕರ್ಮವಲ್ಲರಿ ಕೃಪಾಣಿ (ನಾನಾರ. ೨); ಕೃಪಾಣಿ ಪರಿಘಗಳನೆತ್ತಿಪೋರೋರ್ವರಲ್ಲಿ . . . ಇರಿದು (ಮುಲ್ಲಾಶಾ. ೫–೨೨). [ಸಂ. ಕೃಪಾಣೀ]

**ಕೃಪಾದೃಷ್ಟಿ** (ನಾ). ದಯೆಯಿಂದ ಕೂಡಿದ ದೃಷ್ಟಿ: ಅದಕ್ಕಾಗುವಷ್ಟೆ ಸಂತೋಷ ದೊಡ್ಡವರು ಕೃಪಾದೃಷ್ಟಿ ಬೀರಿದಾಗಲೆಲ್ಲ ಅವನಿಗಾಗುತ್ತಿತ್ತು (ಪುನರು. ೨೪೭). [ಸಂ. (ಕೃಪಾ + ದೃಷ್ಟಿ)]

**ಕೃಪಾನಿಧಿ** (ನಾ). ಕೃಪೆಗೆ ಗಣಿಯಂತಿರುವವನು; ಕರುಣಾಕರ: ಬಾಯಳಿವನಂ ನೋಳ್ಪುದೆನ್ನಂ ಕೃಪಾನಿಧಿ [ಪಾಠಾಂ. ಜಲನಿಧಿ]ಯೆ (ನಂಬಿರ. ೧೫–೨೮). [ಸಂ. (ಕೃಪಾ + ನಿಧಿ)]

**ಕೃಪಾಪಾಂಗ** (ನಾ). ಕರುಣೆ ತುಂಬಿದ ಕಡೆಗಣ್ಣು; ಕೃಪಾ ಕಟಾಕ್ಷ: ಶೃಂಗಾರವೀರದಗ್ಗಳದಿಂದೆ ಸತ್ಕೃಪಾಪಾಂಗದಿಂ ರೌದ್ರಾ ಕ್ಷಿಯಿಂ ಜಗದ್ರಕ್ಷತಾ ಸಂಗಕದೆ ದುಷ್ಟ ಸಂಹರತೆಯಿಂ . . . ಕಂಗೊಳಿಪ (ವೀಶೈಪು. ೩–೧೨–೨). [ಸಂ. (ಕೃಪಾ + ಅಪಾಂಗ)]

**ಕೃಪಾಲು, ಕೃಪಾಳು** (ನಾ). ಕೃಪೆಯಿಂದ ಕೂಡಿದವನು; ದಯಾಳು; ಕರುಣಿ: (ಕ). **ಕೃಪಾಳು**: ಕೇಳಿದನು ಧೃತರಾಷ್ಟ್ರನಾಗ ಕೃಪಾಳುವಿನ ಗಮನವನು (ಕುವ್ಯಾಉ. ೭–೧೭). [ಸಂ.]

**ಕೃಪಾಲೋಕ** (ನಾ). = ಕೃಪಾದೃಷ್ಟಿ: ಪೇಳಲೇನಿವಳ ಬಾಳುವೆ ನಿನ್ನ ಕೃಪಾಲೋಕದೊಳಿಹುದಾಲೋಚಿಸು ನೀಂ (ಶಾಕುಂತ. ೩೯ ಅಡಿಟ). [ಸಂ. (ಕೃಪಾ + ಆಲೋಕ)]

**ಕೃಪಾವತಿ** (ನಾ). ದಯೆಯುಳ್ಳವಳು; ಕರುಣೆಯುಳ್ಳವಳು: ಪಾರ್ವತಿಯಂ ಕೃಪಾವತಿಯನಾಗಳ್ಬಣ್ಣಿಪೆಂ (ರಾಜಶೇ. ೧–೪). [ಸಂ. ಕೃಪಾವತೀ]

**ಕೃಪಾವಲೋಕನ** (ನಾ). = ಕೃಪಾದೃಷ್ಟಿ: ದೇವ ನಿಮ್ಮ ಕೃಪಾವ ಲೋಕನ ಕಾವುದೆಮ್ಮನು (ಕೌಶಿರಾ. ೩೪–೧೧). [ಸಂ. (ಕೃಪಾ + ಅವಲೋಕನ)]

**ಕೃಪಾಶ್ರಯ** (ನಾ). ಕರುಣೆಯ ಆಸರೆ; ದಯೆಯ ಅವಲಂಬನ: ಯಾವ ಮತದ ಕೃಪಾಶ್ರಯವಿಲ್ಲದೆ ಮಾನವ ಕಲ್ಯಾಣಾಭಿವೃದ್ಧಿಗೆ ಸಾಧಕವಾದ ಸೇವಾಕಾರ್ಯವನ್ನು ಮಾಡಲು ಸಾಧ್ಯವಾಗುತ್ತಿರಲಿಲ್ಲವೋ ಅಂಥ ಸಾಂಪ್ರದಾಯಿಕ ಮತದ (ಪುನರು. ೩೭೩). [ಸಂ. (ಕೃಪಾ + ಆಶ್ರಯ)]

**ಕೃಪಾಹೀನ** (ನಾ). ಕರುಣೆಯಿಲ್ಲದವನು; ನಿರ್ದಯಿ; ನಿಷ್ಕರುಣಿ. [ಸಂ. (ಕೃಪಾ + ಹೀನ)]

**ಕೃಪಾಳು** 'ಕೃಪಾಲು' ನೋ.

**ಕೃಪಾಳುತನ** (ನಾ). ಕರುಣೆಯಿಂದ ಕೂಡಿರುವಿಕೆ; ದಯಾಳು ಸ್ವಭಾವ: ಕಾವಂ ಕಂಡವರಂ ಕೃಪಾಳುತನದಿಂದಾರ್ವ್ವೆಡಿ ಕೈಯಾಂತ ವರ್ಗ್ಗೀವಂ (ಎಕ. XI, ಚಿತ್ರದು. ೧೨–೬; 1286). [ಕೃಪಾಳು (= ಕೃಪಾಲು) + –ತನ]

**ಕೃಪಾಳುತೆ** (ನಾ). = ಕೃಪಾಳುತನ: (ಕೃಪಾಳುತೆಯಿಂದ) ಬನ್ನಿ, ಪುರೋಹಿತರೆ – ಆ ದೊಡ್ಡ ಹಳವಿಗೆಯ ಭಾರವನ್ನಿತ್ತ ಇಲ್ಲಿ ಕೊಡಿ (ಬೆಟ್ಟಅ. ೬೯–೮). [ಸಂ. ಕೃಪಾಲುತಾ]

**ಕೃಪೀಟ** (ನಾ). ೧. ಹೊಟ್ಟೆ; ಉದರ. ೨. ಗರ್ಭ ನಿಂತಿರುವ ಹೊಟ್ಟೆ; ಬಸಿರು. ೩. ನೀರು: ಕೃಪೀಟ ಚಮುರವ್ಯಾಳ ಪ್ರಚ್ಛಕ ಸಹಸ್ರಭಯಮಪಹರಿಪುದೀ ಮಂತ್ರವು (ಲಿಂಗಪು. ೧೪-೨೫). ೪. ಸೌದೆ; ಕಟ್ಟಿಗೆ. 'ಕೃಪೀಟಯೋನಿ' ಪರಾ. ೫. ಕಾಡು; ವನ. ೬. ಕಂಚು. ೭. ಬರಗಾಲ: "ನಿಂದ ಬಸಿಱೊಳು ದಾರಿಯೊಳು ಕೃಪೀಟಮೆನಿಕ್ಕು" (ಮಂಗರಾ. ೧೪೩-೨೦); "ಸೌರಾಷ್ಟ್ರಕ ವಾರಿ ನಿಂದ ಬಸುಱುಂ ಬಱನಿಂತು ಕೃಪೀಟವಾಚಕಂ" (ನಾನಾರ. ೮೬). [ಸಂ.]

**ಕೃಪೀಟಯೋನಿ** (ನಾ). ಬೆಂಕಿ; ಅಗ್ನಿ: "ಸಪ್ತಾರ್ಚಿಃ . . . ಕೃಪೀಟಯೋನಿಃ . . . ಲೋಹಿತಾಶ್ವಃ, ಹುತಾಶನಃ – ೪೦ ಕಿಚ್ಚಿನ ಪೆಸರ್" (ಹಲಾಯು. ೧೨-೬೩). [ಕೃಪೀಟ + ಯೋನಿ]

**ಕೃಪೆ** (ನಾ). ದಯೆ; ಕರುಣೆ: ಕೃಪೆಯಿಂದಂ ನಡೆತಂದು (ನಂಬಿರ. ೮-೧ ಸೂಚನೆ); ಶಿಷ್ಯಂಗೆ ನೀಂ ಕೃಪೆಯ ಮಾಡುವುದು (ಹಚಕಾ. ೮-೧೧). [ಸಂ. ಕೃಪಾ]

**ಕೃಪೆವಡೆ** (ಕ್ರಿ). ೧. ದಯೆಯನ್ನು ಪಡೆ; ಅನುಗ್ರಹವನ್ನು ಹೊಂದು: ನಿಮ್ಮಡಿಯ ಕೃಪೆವಡೆದು ಬದುಕಿದಪೆಂ (ಬಸಪು. ೨೭-೪೪). ೨. ಕೃಪೆಯಿಂದ ಕೂಡಿರು: ಜನಪದ ಕುಲದೇವತೆ ರಣಜಯವಿತ್ತು ಘನಕೃಪೆವಡೆದಿಹಳಂತೆ (ಕಂಸವಿ. ೧೧-೭೫). [ಕೃಪೆ + ಪಡೆ$_1$]

**ಕೃಪೆವೆರಸು** (ಕ್ರಿ). ದಯೆಯಿಂದ ಕೂಡಿಕೊಳ್ಳು; ಕರುಣೆಯುಳ್ಳವನಾಗು: ಪುರಾಂತಕರಂ ನೀಂ ಕರೆಯಲೋ ಎನುತಿರ್ದನತಿ ಕೃಪೆವೆರಸಿ ಹೋ ಎನಲುಡುಗಿದನು (ಬಸಪು. ೨೮-೬೪). [ಕೃಪೆ + ಬೆರಸು$_1$]

**ಕೃಮಿ** (ನಾ). ೧. ಹುಳು; ಜಂತು; ಕೀಟ: ತೊಡೆಗಳೆರಡನು ವಜ್ರಮುಖವೆಂಬ ಕೃಮಿಯೊಂದು ಬಂದು ಕೊರೆಯಲು (ಭಾಸನಾ. ೮೭). ೨. ಜೇಡರಹುಳು. ೩. ರೇಷ್ಮೆ ಹುಳು. ೪. ಅರಗು. [ಸಂ.]

**ಕೃಮಿಕೋಶೋತ್ಥ** (ನಾ). ರೇಷ್ಮೆಹುಳದ ಗೂಡಿನಿಂದ ಹುಟ್ಟಿದುದು; ರೇಷ್ಮೆ: "ಕೌಶೇಯಂ ಕೃಮಿಕೋಶೋತ್ಥಂ – ರೇಷ್ಮೆಹುಳು ಮುಂತಾದುವುಗಳಿಂದ ರಾಟಿಸಿ ಎಳೇ ತೆಗಿಯತಕ್ಕ ಪಟ್ಟೆ ಮಡಿ, ಮಗಟ ಮುಂತಾದುವುಗಳ ಹೆಸರು" (ಸಿದ್ಧಾಂತಿ. ೧೮೫). [ಸಂ.]

**ಕೃಮಿಘ್ನ** (ನಾ). ಹುಳುಗಳನ್ನು ಕೊಲ್ಲುವ ಒಂದು ಔಷಧಿ; ಮುಖ್ಯವಾಗಿ ಜಂತುಹುಳುವನ್ನು ಕೊಲ್ಲುವ ಔಷಧಿಗಿಡದ ಹೆಸರು; ವಾಯುವಿಳಂಗ: "ವೆಲ್ಲಂ ಅಮೋಘಾ ಚಿತ್ರತಂಡುಲಾ ತಂಡುಲಃ ಕೃ[ಪಾಠಾಂ. ಕ್ರಿ] ಮಿಘ್ನಃ ವಿಡಂಗಂ – ೭ ವಾಯುವಿಳಂಗದ ಹೆಸರು" (ಸಿದ್ಧಾಂತಿ. ೧೧೯). [ಸಂ.]

**ಕೃಮಿಜ** (ನಾ). ಬಿಳಿಯ ಅಗರು; ಅಗಿಲುಗಂಧ: "ವಂಶಕಂ, ಅಗುರು, ರಾಜಾರ್ಹಂ, ಲೋಹಂ ಕೃ[ಪಾಠಾಂ. ಕ್ರಿ] ಮಿಜಂ, ಜೋಗಕಂ –೬ ಅಗರು ಗಂಧ, ಶ್ವೇತಾಗರು" (ಸಿದ್ಧಾಂತಿ. ೧೬೯). [ಸಂ.]

**ಕೃಮಿರೋಗ** (ನಾ). ಕರುಳಿನಲ್ಲಿ ಕ್ರಿಮಿಗಳು ಉಂಟಾಗುವ ಒಂದು ರೋಗ; ಜಂತುರೋಗ. [ಕೃಮಿ + ರೋಗ]

**ಕೃಲ್ಲಿಂಗೆ** (ನಾ). ಭೂತ ಅಥವಾ ಭವಿಷ್ಯತ್ಕಾಲದ ಕ್ರಿಯಾಪದಗಳಲ್ಲಿ ಆಖ್ಯಾತವಿಭಕ್ತಿ ಪ್ರತ್ಯಯವನ್ನು ಮಾತ್ರ ಕಳೆದು ಮಿಕ್ಕ ಭಾಗದ ಹೆಸರು: "ಭೂತಕಾಲ ಕ್ರಿಯೆಯುಂ ಭವಿಷ್ಯಂತಿಯ ಕ್ರಿಯೆಯುಂ ತಮ್ಮ ತಮ್ಮಂತರ್ಗತಾಗಮಂಗಳಂ ಬೆರಸಿರ್ದು, ವಿಭಕ್ತಿಮಾತ್ರಮಂ ಕಳೆಯೇ ಕೃಲ್ಲಿಂಗಮಪ್ಪುವು" (ಶಮುದ. ೬೩ ವೃತ್ತಿ); "ವಿನುತ ಕ್ರಿಯಾತ್ಮಕಂಗಳುಮೆನಿಸುವ ಸಂಸ್ಕೃತದ ಭಾವವಚನಂಗಳನಾಯ್ದು ನಿತರ್ಕಮಿಸು ಪ್ರತ್ಯಯವನೆ ಪತ್ತಿಸಿ ನಿಜಿಸೆ ಬಕುರ್ಮಾ ಕೃಲ್ಲಿಂಗಂ" ಇಸು ಪ್ರತ್ಯಯಮಂ ಪತ್ತಿಸಿ ಕೃಲ್ಲಿಂಗಮಂ ಮಾಳ್ಪುದು . . . ಭಾವಿಸಿದಂ, ಭಂಗಿಸಿದಂ (ಶಮುದ. ೭೪ ಪ್ರಯೋ). [ಸಂ. (ಕೃತ್ + ಲಿಂಗ)]

**ಕೃವಿ** (ನಾ). ನೂಲಿನಿಂದ ಬಟ್ಟೆಯನ್ನು ನೇಯುವ ಯಂತ್ರ; ಮಗ್ಗ: (ಕ). [ಸಂ.]

**ಕೃಶ** (ಗು). ೧. ತೆಳುವಾದ; ಬಡವಾದ; ಕ್ಷೀಣವಾದ: "ಕ್ಷಾಮಂ ಕೃಶಂ ಪೇಲವಂ ಕ್ಷೀಣಮೆನಲಸಿದು" (ಮಂಗರಾ. ೧೨೯-೧೪); ವಾತಾಧಿಕ್ಯದಿಂದ ದೇಹ ಕೃಶ . . . ಶ್ಲೇಷ್ಮಾಧಿಕ್ಯದಿಂದ ದೇಹವು ಸ್ಥೂಲವಾಗಿರುವುದು (ಸಕವೈ. ೧೯). ೨. ಅಲ್ಪವಾದ; ಸಣ್ಣದಾದ. 'ಕೃಶಮಧ್ಯೆ' ಪರಾ. (ನಾ). ೩. ತೆಳ್ಳಗಿರುವಿಕೆ; ಕ್ಷೀಣತೆ; ಬಡವು. 'ಕೃಶರೋಗ' ಪರಾ. [ಸಂ.]

**ಕೃಶಕಾಯೆ** (ನಾ.) ತೆಳ್ಳಗಿನ ಶರೀರದವಳು: ಕೃಶಕಾಯೆ ಮೇಘಜಲ ತೊಯ್ಯುಸಿರೆ ತಳಿರುಗಳ ಕಣ್ಣೀರಿನಿಂ ತುಟಿಯು ತೊಳೆಯುವಂತಿಹಳು (ಧ್ವನ್ಯಾಲೋ. ೬೭). [ಸಂ. ಕೃಶಕಾಯಾ (ಕೃಶ + ಕಾಯ + –)]

**ಕೃಶಗಾತ್ರ** (ನಾ). ೧. ತೆಳ್ಳಗಿರುವ ಶರೀರ; ಬಡಕಲು ಮೈ: ಕೃಶಗಾತ್ರದ ತೆಳುಗಡ್ಡದ ಖೈದಿಯೊಡನೆ ಮತ್ತೊಬ್ಬ ಸಾರ್ಜಂಟ್ ಪ್ರವೇಶಿಸಿದನು (ಪುನರು. ೫೩೮). ೨. ತೆಳ್ಳಗಿರುವವನು; ಬಡಕಲು ಮೈಯವನು. [ಕೃಶ + ಗಾತ್ರ]

**ಕೃಶಗೈ** (ಕ್ರಿ). ಬಡಕಲಾಗುವಂತೆ ಮಾಡು; ತೆಳ್ಳಗಾಗಿಸು: ಯತ್ನಪೂರ್ವಕವಾಗಿ ಕೃಶಗೈದು ತನುವನು ನೇಮದೊಳಿರ್ದನುದಿನವು (ಇಂಚಾಪ. ೧೮೨-೯೭). [ಕೃಶ + ಗೈ (< ಕೆಯ್$_1$)]

**ಕೃಶಮಧ್ಯೆ** (ನಾ). ಸಣ್ಣನಡುವುಳ್ಳವಳು; ತೆಳುವಾದ ಸೊಂಟವುಳ್ಳವಳು: ಕೃಶಮಧ್ಯೆ . . . ಷೋಡಶಮಂ ಸ್ವಪ್ನಮನಂತಾ ನಿಶಾಂತದೊಳ್ ಬರೆ ನಿಶಾಂತಯಾಮಮಂ ಕಂಡಳ್ (ಚಂದ್ರಪು. ೧೨-೧೨). [ಸಂ. ಕೃಶಮಧ್ಯಾ (ಕೃಶ + ಮಧ್ಯ + –)]

**ಕೃಶರ** (ನಾ). ೧. ಆರುವಿಧವಾದ ಅನ್ನಗಳಲ್ಲಿ ಒಂದು; ಎಳ್ಳು ಅಕ್ಕಿಗಳನ್ನು ಹಾಲಿನೊಡನೆ ಸೇರಿಸಿ ಬೇಯಿಸಿ ಮಾಡಿದ ಒಂದು ಬಗೆಯ ಅಡಿಗೆ, —ಭೋಜ್ಯವಸ್ತು. 'ಕೃಶರಾನ್ನ' ಪರಾ. ೨. ಅಕ್ಕಿ ಮತ್ತು ಬಟಾಣಿಕಾಳುಗಳನ್ನು ಕೆಲವು ಮಸಾಲೆ ವಸ್ತುಗಳೊಡನೆ ಬೇಯಿಸಿ ಮಾಡಿದ ಒಂದು ಭಕ್ಷ್ಯ; ಕಿಚಡಿ. [ಸಂ.]

**ಕೃಶರಾಗ** (ನಾ). ಪ್ರೀತಿ ಕಡಮೆಯಾದವನು: ಕೃಶರಾಗಂ ವಿಗತ ಮನಃಪ್ರಸರತೆಯಿಂ ಕಣ್ಣ ನೀರ್ಗಳಂ ತೀವಿ (ಶಾಂತಿಪು. ೧-೯೪). [ಕೃಶ + ರಾಗ]

**ಕೃಶರಾನ್ನ** (ನಾ). = ಕೃಶರ ೧: ಪರಮಾನ್ನವೆಂದಾ ಹರಿದ್ರಾನ್ನವೆಂದು ಭೂಸುರದ ದಧ್ಯನ್ನ ಕೃಶರಾ [ಪಾಠಾಂ. ಷರ]ನ್ನವೆಂದುಂ ಮನೋಹರ ಗುಡಾನ್ನಂ ವಿಮಲ ಮುದ್ಗಾನ್ನಮಿವು ಷಡ್ವಿಧಾನ್ನ ನೈವೇದ್ಯ ಶಿವಗೆ (ಗುರುಚಾ. ೬-೫೫). [ಕೃಶರ + ಅನ್ನ]

**ಕೃಶರೋಗ** (ನಾ). ಶರೀರವನ್ನು ಬಡಕಲಾಗಿಸುವ ಒಂದು ರೋಗ: ಕೃಶರೋಗದವರೂ ಗಾಯದಿಂದಾದ ಕ್ಷಯರೋಗದವರೂ ಬಾಯಿಯಲ್ಲಿ ಮೂಗಿನಲ್ಲಿ ರಕ್ತಬೀಳುವ ರೋಗದವರೂ . . . ಹಸಿವಿನಿಂದ ಕಂಗೆಟ್ಟಿರುವವರೂ ತಾಂಬೂಲವನ್ನುಪಯೋಗಿಸಬಾರದೆಂದರಿವುದು (ಸಕವೈ. ೫೩). [ಕೃಶ + ರೋಗ]

**ಕೃಶಶರ** (ನಾ). ಅಲ್ಪವಾದ ಬಾಣವನ್ನುಳ್ಳವನು; ದುರ್ಬಲವಾದ ಬಾಣವನ್ನುಳ್ಳವನು: ಗಿರಿಧನ್ವನೊಳಲ್ಪಧನುರ್ಧರನಾಂ ಸೆಣಸಲ್ ಸಮರ್ಥನೇ ಹರಿಶರನೊಳ್ ಪರಿಗತ ಕೃಶಶರಂ (ಶಬಶಂ. ೪-೧೨೨). [ಕೃಶ + ಶರ]

**ಕೃಶಾಂಗ** (ನಾ). ಬಡವಾದ ದೇಹ; ದುರ್ಬಲ ಶರೀರ: "ವಾರಿ ಕೃಶಾಂಗ ಪಾರ್ಥಿವ ವಿಭೇದಲವಂಗಳು ಶಲ್ಯಶಬ್ದಂ" (ನಾನಾರ. ೧೫೮). [ಕೃಶ + ಅಂಗ$_2$]

**ಕೃಶಾನು** (ನಾ). ೧. ಬೆಂಕಿ; ಅಗ್ನಿ: "ದಹನಂ ಕೃಶಾನು ದಮನಂ ... ಅಗ್ನಿಯಕ್ಕು" (ಮಂಗರಾ. ೧೪–೭); ಇಂದು ಖಾಂಡವಮಂ ಕೃಶಾನು ತಗುಳ್ದು ನಾನಾವಿಧಂ ಸುಡೆ (ಪಂಪಭಾ. ೫–೯೪). ೨. ಚಿತ್ರಮೂಲದ ಗಿಡ. ೩. [ಛಂದ] ಅಕ್ಷರಗಣಗಳಲ್ಲೊಂದು; ಮಧ್ಯ ಲಘುವುಳ್ಳ ಗಣ; ರಗಣ: ಅ ಧಿ ಕ್ಷ್ಮಾ ಯು ಗ್ಮಾ ಕಾ ಶಾ ಗ್ರ ಂ ಪುರಮಿತ ಸುರಪುರ ಸಹಿತಂ ಕೃಶಾನುಮರಲ್ಲಗಂ ... ಭುಜಂಗ ವಿಜೃಂಭಿತಂ (ಛಂದೋಂಬು. ೨–೧೪೭). [ಸಂ.]

**ಕೃಶಾನುಗಣ್ಣು** (ನಾ). ಬೆಂಕಿಯ ಕಣ್ಣು; ಅಗ್ನಿನೇತ್ರ: ಕಲ್ಪಾಂತ ಹರನ ಕೃಶಾನುಗಣ್ಣಿನ ಕಿಚ್ಚೋ (ನಿಘಾಗ. ೧–೪–೩೩). [ಕೃಶಾನು + ಕಣ್ಣು (<ಕಣ್)]

**ಕೃಶಾನುನೇತ್ರ** (ನಾ). ೧. = ಕೃಶಾನುಗಣ್ಣು. ೨. ಬೆಂಕಿಯ ಕಣ್ಣುಳ್ಳವನು; ಶಿವ: ಕರ್ಣನನಾನುವಡೆ ಫಲುಗುಣನ ಪಾಡೆ ಕೃಶಾನು ನೇತ್ರನೊ ಕೈಟಭಾರಿಯೊ ಕಮಲಸಂಭವನೊ (ಕುಮಾ್ಯಕ. ೨೨–೩೮). [ಕೃಶಾನು + ನೇತ್ರ]

**ಕೃಶಾನುಪೃಷತ್ಕ** (ನಾ). ಅಗ್ನಿಯು ಅಧಿದೇವತೆಯಾಗಿರುವ ಬಾಣ; ಬೆಂಕಿಯನ್ನುಗುಳುವ ಬಾಣ; ಅಗ್ನಿಶರ: ವಿಯಚ್ಚರಾಧಿಪತಿಯೆಚ್ಚ ಕೃಶಾನುಪೃಷತ್ಕಮಂ ಇರದೆಚ್ಚು ತೂಳ್ದಿದಂ (ಚಂದ್ರಪ್ರ. ೬–೫೯). [ಕೃಶಾನು + ಪೃಷತ್ಕ]

**ಕೃಶಾನುರೇತ** (ನಾ). ಅಗ್ನಿಯಲ್ಲಿ ರೇತಸ್ಸನ್ನು ಇರಿಸಿದವನು; ಶಿವ; ಮಹಾದೇವ: "ಶಂಭುಃ, ಈಶಃ ... ಕೃಶಾನುರೇತಾಃ ... ರುದ್ರಃ, ಉಮಾಪತಿಃ – ೪೮ ಶಿವನ ಹೆಸರುಗಳು" (ಸಿದ್ಧಾಂತಿ. ೧೮). [ಸಂ. ಕೃಶಾನುರೇತಸ್ (ಕೃಶಾನು + ರೇತಸ್)]

**ಕೃಶಾನುಶಿಖೆ** (ನಾ). ಬೆಂಕಿಯ ಜ್ವಾಲೆ: ಪೊದಟ್ಟಿಸೆ ದಿರೆ ಕೃಶಾನುಶಿಖೆ ದೆಸೆದೆಸೆಯೊಳ್ ಜಿನಪತಿಯ ಜನನಿ ಪರಿವೀಕ್ಷಿಸಿದಳ್ (ಶಾಂತಿಪು. ೯–೨೦೮). [ಸಂ. ಕೃಶಾನುಶಿಖಾ (ಕೃಶಾನು + ಶಿಖಾ)]

**ಕೃಶಾಶ್ವ** (ನಾ). ೧. ತೆಳ್ಳಗಿರುವ ಕುದುರೆ. ೨. ತೆಳ್ಳಗಿರುವ ಕುದುರೆಯುಳ್ಳವನು. ೩. ನಟಸೂತ್ರಗಳನ್ನು ಬರೆದ ದುಂದುಮಾರ ವಂಶದ ಒಬ್ಬ ರಾಜನ ಹೆಸರು. ೪. ಒಬ್ಬ ಮಹರ್ಷಿಯ ಹೆಸರು. [ಕೃಶ + ಅಶ್ವ]

**ಕೃಶಾಶ್ವಿ** (ನಾ). ೧. ನಟ; ನರ್ತಕ; ಅಭಿನಯ ಮಾಡುವವನು. ೨. ಕೃಶಾಶ್ವನ ಶಿಷ್ಯ. [ಸಂ. ಕೃಶಾಶ್ವಿನ್]

**ಕೃಶಿಸು** (ಕ್ರಿ). ಬಡವಾಗು; ನವೆ; ಸೊರಗು: ತನು ಕೃಷಿ[ಶಿ]ಸು ವಂದದಿ ನಿರಾಹಾರಮಡಸಿ (ವೆಂಕಾರಾ. ೧–೧೮–೬೪). [ಕೃಶ + -ಇಸು$_3$]

**ಕೃಶೀಕರಣ** (ನಾ). ತೆಳ್ಳಗೆ ಮಾಡುವುದು; ಕೀಸುವುದು; ಕೆತ್ತುವುದು: "ಕೀಸು – ಕೃಶೀಕರಣೇ (ಸಣ್ಣಗೆ ಮಾಡು)" (ಶಮುಧಾ). [ಸಂ.]

**ಕೃಶೋದರ** (ಗು). ೧. ಸಣ್ಣ ಹೊಟ್ಟೆಯುಳ್ಳ; ತೆಳುವಾದ ಹೊಟ್ಟೆಯ: ಕೃಶೋದರ ಖಚರೀ ಸಂಚರಣರಣಿತ ನೂಪುರರಶನಾಪ್ರಚುರರವವಹನ ರುಚಿರಪ್ರಚುರಂ ... ಉಪವನಂ ಸೊಗಯಿಸುಗುಂ (ಆದಿಪು. ೧೦–೩೨). (ನಾ). ೨. ಸಣ್ಣ ಹೊಟ್ಟೆ; ತೆಳುವಾದ ಹೊಟ್ಟೆ: ಮೇದಶ್ಛೇದನದಿಂದೆ ಕೃಶೋದರಮೊಂದೆನಿಸಿದೊಡಲಿದು (ಶಾಕುಂತ. ೨೨–೧೯). ೩. ಸಣ್ಣ ಹೊಟ್ಟೆಯುಳ್ಳವನು. [ಕೃಶ + ಉದರ]

**ಕೃಶೋದರಿ** (ನಾ). ತೆಳುವಾದ ಹೊಟ್ಟೆಯುಳ್ಳವಳು. [ಸಂ. ಕೃಶೋದರೀ]

**ಕೃಷಿ** (ನಾ). ೧. ಸಾಗುವಳಿ; ಬೇಸಾಯ; ಆರಂಬ: "ಬವಸಮೆನ್ನಲದು ಕೃಷಿಯೊಳ್" (ಕವಿಕಂ. ೨೦೨); ಕೃಷೀವಲ ಕುಲೋಚಿತಮಪ್ಪ ಕೃಷಿಯುಮಂ (ಆದಿಪು. ೮–೬೪ವ). ೨. ಉದ್ಯಮ; ಪ್ರಯತ್ನ; ವ್ಯವಸಾಯ; ಪರಿಶ್ರಮ: ವಾಣಿಜ್ಯಮುಂತಾದ ಕೃಷಿಯ ಮಾಡುವಾಗ ಪಶುಪತಿಗೆಂದೇ ಪ್ರಮಾಣಿಸಿ (ಮೋಳಿಮಾ. ೧೫–೫೭); ಶಬ್ದಾರ್ಥಗಳ ಮಹತ್ವವನ್ನರಿತು ಕೂಡಿಸಿ ಸ್ವಾರಸ್ಯವಾಗಿ ಭಾವನೆಗಳನ್ನು ಚಿತ್ರಿಸುವ ಕಲೆಯಲ್ಲಿ ಕೃಷಿ ಬೇಕು (ಕರ್ಣಾಕ. ೨). [ಸಂ.]

**ಕೃಷಿಕ** (ನಾ). ೧. ಒಕ್ಕಲಿಗ; ರೈತ; ಬೇಸಾಯಗಾರ: ಹೊಲಗದ್ದೆಗಳಲ್ಲಿ ಉಲ್ಲಾಸವಾಗಿ ಹಾಡಿಕೊಂಡು ಕೆಲಸ ಮಾಡುತ್ತಿದ್ದ ಕೃಷಿಕರನ್ನೂ (ಶಾಂತಲಾ. ೨೯೫). ೨. ನೇಗಿಲ ಗುಳ: (ಶ). [ಸಂ.]

**ಕೃಷಿಕರ್ಮ** (ನಾ). ಬೇಸಾಯದ ಕೆಲಸ; ಒಕ್ಕಲುತನ: ಹರಿಯುವ ಹೊಳೆಗೊಂದು ಕಟ್ಟೆಯ ವಿರಚಿಸಿಕೊಂಡರೆ ಕೃಷಿಕರ್ಮ ಹುಲುಸು (ಇಂಚಾಪ. ೧೭೮–೭೭). [ಕೃಷಿ + ಕರ್ಮ]

**ಕೃಷಿಗೈ** (ಕ್ರಿ). ೧. ಬೇಸಾಯ ಮಾಡು; ಒಕ್ಕಲುತನ ಮಾಡು. ೨. ಸಾಕು; ಬೆಳಸು; ಸಾಕಿ ವೃದ್ಧಿಗೊಳಿಸು: ಲಾಫ್ಲರ್ ಈ ರೋಗಾಣುಗಳನ್ನು ಪ್ರತ್ಯೇಕವಾಗಿ ಕೃಷಿಗೈದು (Culture) ಗುರುತಿಸಿ ಕೊಟ್ಟನು (ಕಲರೋ. ೧೩). [ಕೃಷಿ + ಗೈ (<ಕೆಯ್$_1$)]

**ಕೃಷಿನಿರತ** (ನಾ). ಬೇಸಾಯದಲ್ಲಿ ಆಸಕ್ತನಾದವನು: ಕೃಷಿನಿರತನಂತೆ ರಾಶಿಯಂ ನಿಲಿಸಿ (ಸುಕುಮಾ. ೩–೬೭ವ). [ಕೃಷಿ + ನಿರತ]

**ಕೃಷಿವಿಹೀನ** (ನಾ). ಕೃಷಿಯಿಲ್ಲದವನು; ವ್ಯವಸಾಯವಿಲ್ಲದವನು: ಕೃಷಿ ಮೊದಲು ಸರ್ವಕ್ಕೆ ಕೃಷಿಯಿಂ ಪಸರಿಸುವುದಾ ಕೃಷಿಯನುದ್ಯೋಗಿಸುವ ಜನವನು ಪಾಲಿಸುವುದು ... ಕೃಷಿವಿಹೀನನ ದೇಶವದು ದುರ್ದೇಶ (ಕುಮಾ್ಯಸ. ೧–೬೪). [ಕೃಷಿ + ವಿಹೀನ]

**ಕೃಷೀವಲ** (ನಾ). = ಕೃಷಿಕ: ಕೃಷೀವಲ ಕುಲೋಚಿತಮಪ್ಪ ಕೃಷಿಯುಮಂ (ಆದಿಪು. ೮–೬೪ವ). [ಸಂ.]

**ಕೃಷ್ಟ$_1$** (ನಾ). = ಕೃಷ್ಣ: ದುಷ್ಟನ ಮದವಿಳುಹಿದನು ಶ್ರೀಕೃಷ್ಟನವನ ನುಳುಹಿದನು (ಪ್ರಸಭಾ. ೨೮–೨೮). [< ಸಂ. ಕೃಷ್ಣ]

**ಕೃಷ್ಟ$_2$** (ಗು). ೧. ಎಳೆಯಲ್ಪಟ್ಟ; ಸೆಳೆಯಲ್ಪಟ್ಟ; ಕಿತ್ತ; ಜಗ್ಗಿದ. 'ಆಕರ್ಣಕೃಷ್ಟ' ಪರಾ. ೨. ಉಳುಮೆಯಾದ; ಉತ್ತ; ಕೃಷಿ ಮಾಡಿದ; ಹದಮಾಡಲ್ಪಟ್ಟ. 'ಅಕೃಷ್ಟಪಚ್ಯ' ಪರಾ. [ಸಂ.]

**ಕೃಷ್ಟಪಾಕ** (ನಾ). ನರಕದ ದುಃಖ: ಅಪತ್ತುವೆರಸು ಮೃಗಯಾ ವ್ಯಾಪಾರದೆ ಮಱಗುವವನಿಪತಿಯರ್ ಕುಂಭೀಪಾಕಕ್ಕೆ ಕೃಷ್ಟಪಾಕ ವ್ಯಾಪನ್ನರ್ ಮಱುಗುವರ್ ನಿರಂತರಮುಮಜಳೊಳ್ (ಶಾಂತಿಪು. ೭–೧೦೨). [ಸಂ.]

**ಕೃಷ್ಟಿ** (ನಾ). ೧. ಎಳೆಯುವುದು; ಸೆಳೆತ; ಆಕರ್ಷಣೆ. ೨. ಬೇಸಾಯ; ಉಳುಮೆ. ೩. ಪಂಡಿತ; ವಿದ್ವಾಂಸ: "ಧೀರಂ ಕೃತಿ ಕೃಷ್ಟಿ ... ಸಭಾಸದಂ ವಿದ್ವಾಂಸಂ" (ವಸ್ತುಕೋ. ೯೮–೪). [ಸಂ.]

**ಕೃಷ್ಟಿಕ್ರಿಯೆ** (ನಾ). [ಜೈನ] ನರಕದ ದುಃಖವನ್ನುಂಟುಮಾಡುವ ಕ್ರಿಯೆ (?): ಪ್ರತಿಕ್ಷಣಂ ಪ್ರವರ್ತಮಾನಾನುಭಾಗಾಪಕರ್ಷ ಕರಣ ಪೂರ್ವಸ್ಪರ್ಧಕಮರ್ದನದಿನಂತರ್ಮುಹೂರ್ತಮಂ ಕಳಿಪಿ ಬಱಿಯ ಮುಚಿತ ಕೃಷ್ಟಿಕ್ರಿಯೆಯಿಂ ... ದ್ವಾದಶಸಂಗ್ರಹ ಕೃಷ್ಟಿಗಳಂ ಮಾಡುತ್ತಂ (ಚಂದ್ರಪ್ರ. ೧೪–೭೧ವ). [ಕೃಷ್ಟಿ + ಕ್ರಿಯೆ]

**ಕೃಷ್ಣ** (ಗು). ೧. ಕಪ್ಪಾದ; ಕರಿಬಣ್ಣದ: "ಅಸಿತಂ, ಶಿತಿಃ, ಕೃಷ್ಣಂ ಕಾಳಂ, ನೀಳಂ, ಮೇಚಕಂ – ಈ ೬ ಕರಿದು" (ಹಲಾಯು. ೧೨೧–೪೯); ಉತ್ಕೃಷ್ಟ ಕೃಷ್ಣನೀಲ ಕಪೋತಲೇಶ್ಯಾನುಬಂಧ ರೌದ್ರ ಪರಿಣಾಮ ಪರಿಣತರುಂ (ಸುಕುಮಾ. ೧೧–೪೧ವ). ೨. ಕೆಟ್ಟ; ದುಷ್ಟ. (ನಾ). ೩. ಕಪ್ಪುಬಣ್ಣ; ಅಸಿತವರ್ಣ: "ಶಿತಿ ಕೃಷ್ಣಮಸಿತಂ ಮೇಚಕಂ ಕಾಳಮೆನೆ ಕಪ್ಪಿಗಕ್ಕುಂ" (ಮಂಗರಾ. ೧೩೧–೨೧); ಶುಕ್ಲ ರಕ್ತ ಪೀತ ಕೃಷ್ಣ ಎಂಬ ನಾಲ್ಕು ಬಣ್ಣಗಳಿಂದ (ಹಿಂದಸಾ. ೧೫೬).

೪. ಪಾಪದಿಂದ ಮೇಲಕ್ಕೆ ಉದ್ಧರಿಸುವವನು, —ಎಳೆಯುವವನು; ಪಾಪವಿಮೋಚಕ: ಹರಿಯೆಂಬಂತೆಯೆ ಕೃಷ್ಣನದಾವನೋ ಚತುರಾತ್ಮನು ಸಲೆ ನಿಷ್ಕ್ರಿಯನು (ಧ್ವನ್ಯಾಲೋ. ೯೬). ೫. ಮಹಾವಿಷ್ಣು; ನಾರಾಯಣ: "ವಿಷ್ಣುಃ, ಕೃಷ್ಣಃ, ಕೇಶವಃ . . . ಗದಾಧರಃ – ಈ ೪೫ ನಾರಾಯಣನ ಪೆಸರ್" (ಹಲಾಯು. ೫–೨೨); ಮಂಡಲ ಶೇಷೋತ್ಸಂಗ ಶಯನೀಯದೊಳೆ ಕೃಷ್ಣಾಂಗದ್ಯುತಿಯಂತಿರೆಸೆದುದಿಂದುಕಳಂಕಂ (ಜಗವಿ. ೧೬–೧೦೮). ೬. ಮಹಾವಿಷ್ಣುವಿನ ಎಂಟನೆಯ ಅವತಾರ; ವಸುದೇವನ ಮಗ: ಕೃಷ್ಣ ನಿನ್ನವೊಲ್ ಶ್ವೇತಕೃಷ್ಣಕಾರಕರೊಳರೇ (ಗದಾಯು. ೭–೫೩); ದಾನವಾಂತಕನಾಯುಗದೊಳೇ ತಾನೊಗೆಯನೇ ಕೃಷ್ಣನೆಂಬಭಿಧಾನದಲಿ (ಬಸವು. ೫೪–೩೩). ೭. ಕಾಗೆ; ವಾಯಸ. ೮. ಹಿಪ್ಪಲಿ; ಮಾಗಧ. ೯. ಮೈಮೇಲೆ ಚುಕ್ಕೆಗಳಿರುವ ಕರಿಯ ಬಣ್ಣದ ಜಿಂಕೆ. ೧೦. ಇಂದ್ರ. ೧೧. ಬೆಂಕಿ; ಅಗ್ನಿ. ೧೨. ವ್ಯಾಸ ಋಷಿ; ಬಾದರಾಯಣ. ೧೩. ನೀರು; ಜಲ. ೧೪. ಆಕಾಶ; ಬಾನು. ೧೫. ನದಿ; ಕೃಷ್ಣಾನದಿ. ೧೬. ಕಿರೀಟ. ೧೭. ಅರ್ಜುನ. ೧೮. ಶೂದ್ರ. ೧೯. ಕೃಷ್ಣಪಕ್ಷ. ೨೦. ಕಲಿಯುಗ. ೨೧. ಕೋಗಿಲೆ. ೨೨. ಕಬ್ಬಿಣ. 'ಕೃಷ್ಣಶಲಾಕೆ' ಪರಾ. "ನದಿಯೊಳು ಕಿರೀಟದೊಳು ವಾರಿಯೊಳು ವ್ಯಾಸದೊ[ನೊ]ಳು ಮದನಪಿತನೊಳು ಪಿಪ್ಪಲಿಯೊಳೆರಳೆಯೊಳು ನಭದೊಳೊದವಿರ್ದ ಕಪ್ಪಿನೊಳು ಕೃಷ್ಣವಕ್ಕು" (ಮಂಗರಾ. ೧೫೧–೫೫); "ಜೀವನ ಗಗನಾಗ್ನಿ ಮೌಳಿವೃಷಲಾಸಿತ ಮಾಗಧ ಬಾದರಾಯಣಂಧುನಿ ವನಮಾಲಿ ಕಾಲ ಶಚಿವಲ್ಲಭರೆಂಬಿವು ಕೃಷ್ಣವಾಚಕಂ" (ನಾನಾರ. ೪೮). [ಸಂ.]

**ಕೃಷ್ಣಕ** (ಗು). ಸೆಳೆಯುವ; ಆಕರ್ಷಿಸುವ. [ಸಂ.]

**ಕೃಷ್ಣಕಂಟಕ** (ನಾ). (?): ಲೋಕದಲ್ಲಿರುತಿಹವು ರಸನೆಗೆ ಗೋಚರಿಸುವಾಹಾರದಿಂದಲಿ ಸೂಚಿಸಿದ ಮೊದಲಾಗಿರ್ಪ ರೋಗಗಳೊಡನೆ ತೋರಿದರೆ ಆಚರಿಸುವುದು ಕೃಷ್ಣಕಂಟಕ ರೋಚಕೇತರರು ಚಿಲವಣಮಾಮ್ಲಾಚಮನಮುಪಜಿಂಹ್ವಿಕಾದಿ ಗದಂಗಳೊಡನೊಡನೆ (ವಿವೇಚ. ೩–೪೬).
[ಕೃಷ್ಣ + ಕಂಟಕ]

**ಕೃಷ್ಣಕಥೆ** (ನಾ). ಕೃಷ್ಣನ ಕಥೆ, —ಚರಿತ್ರೆ: ರುದ್ರ ಕೃಷ್ಣಕಥೆವೇಟಿನೆ . . . ಪೇಟಲೊಡರ್ಚಿದೆನೀ ಪ್ರಬಂಧಮಂ (ಜಗವಿ. ೧–೧೭).
[ಕೃಷ್ಣ + ಕಥೆ]

**ಕೃಷ್ಣಕರ್ಮ** (ನಾ). ಕೆಟ್ಟಕೆಲಸ; ಪಾಪಕಾರ್ಯ; ಕಳಂಕದ ಕೆಲಸ. 'ಅಕೃಷ್ಣಕರ್ಮ' ಪರಾ. [ಕೃಷ್ಣ + ಕರ್ಮ]

**ಕೃಷ್ಣಕಾಕ** (ನಾ). ಕಾಗೆ ಜಾತಿಯ ಒಂದು ಹಕ್ಕಿ; ಡೊಂಬ ಕಾಗೆ; ದ್ರೋಣಕಾಕ: (ಕಿ). [ಕೃಷ್ಣ + ಕಾಕ$_2$]

**ಕೃಷ್ಣಕಾರಸ್ತಾನ** 'ಕೃಷ್ಣಕಾರಸ್ಥಾನ' ನೋ.

**ಕೃಷ್ಣಕಾರಸ್ಥಾನ,** ಕೃಷ್ಣಕಾರಸ್ತಾನ (ನಾ). ಮೋಸದ ಕಾರುಭಾರ; ಗುಪ್ತವಾದ ಕಾರಸ್ಥಾನ, —ದ್ರೋಹ: ತನ್ನ ಕೃಷ್ಣಕಾರಸ್ಥಾನವನ್ನು ಸಾಧಿಸಲಾಗದ್ದಕ್ಕೆ ಅವಳ ಮೇಲೆ ಆತ ಸೇಡುತೀರಿಸಿಕೊಳ್ಳುವವನಿದ್ದನು (ಕಮನೆ. ೧೯೧). **ಕೃಷ್ಣಕಾರಸ್ತಾನ**: ಇವರ ಕೃಷ್ಣಕಾರಸ್ತಾನವನ್ನು ನಾನು ಸಂಪೂರ್ಣ ತಿಳಿಯಬಲ್ಲೆ (ಸಂಜೀವಿ. ೨೦೨). [ಕೃಷ್ಣ + ಕಾರಸ್ಥಾನ]

**ಕೃಷ್ಣಕೀರ್ತಿ** (ನಾ). ಕಪ್ಪಾದ ಕೀರ್ತಿ; ಅಪಖ್ಯಾತಿ: ರಜಪೂತ ಕೃಷ್ಣಕೀರ್ತಿಯನೊಮ್ಮೆ ಕಣ್ದಣಿಯೆ ನೋಡುತ್ತ (ಕೃಷ್ಣಾಕು. ೪–೬).
[ಕೃಷ್ಣ + ಕೀರ್ತಿ]

**ಕೃಷ್ಣಗಳ** (ನಾ). ೧. ಕರಿಗೊರಳು; ನೀಲಗ್ರೀವ. ೨. ಕರಿಯ ಕೊರಳನ್ನುಳ್ಳವನು; ವಿಷಕಂಠ; ಶಿವ. 'ಕೃಷ್ಣಗಳ ತೇಜ' ಪರಾ.
[ಕೃಷ್ಣ + ಗಳ$_3$ (= ಗಲ)]

**ಕೃಷ್ಣಗಳತೇಜ** (ನಾ). ಕಪ್ಪಾದ ಕೊರಳಿನ ಶೋಭೆಯುಳ್ಳವನು; ವಿಷಕಂಠ; ಶಿವ: ಜಯ ಜಯ ಗಿರೀಶಜಯ ಜಯ ಕೃಷ್ಣಗಳ ತೇಜ (ಭಾವಚಿಂ. ೯–೫೨). [ಕೃಷ್ಣಗಳ + ತೇಜ]

**ಕೃಷ್ಣಚತುರ್ದಶಿ** (ನಾ). ಕೃಷ್ಣಪಕ್ಷದ ಹದಿನಾಲ್ಕನೆಯ ತಿಥಿ: ದೊರೆಕೊಂಡ ಮಾಘಮಾಸಂ ಬರೆ ಕೃಷ್ಣಚತುರ್ದಶೀ ದಿನಂ ಸಮನಿಸೆ (ಆದಿಪು. ೧೬–೫೧). [ಸಂ. ಕೃಷ್ಣಚತುರ್ದಶೀ (ಕೃಷ್ಣ + ಚತುರ್ದಶೀ)]

**ಕೃಷ್ಣಜನ್ಮಸ್ಥಾನ** (ನಾ). ೧. ಶ್ರೀಕೃಷ್ಣನು ಹುಟ್ಟಿದ ಸ್ಥಳ. ೨. (ಆಲಂ) ಸೆರೆಮನೆ; ಬಂದೀಖಾನೆ; ಜೈಲು: ಯಾಕಯ್ಯ ನಿನ್ನನ್ನು ಈ ಕೃಷ್ಣಜನ್ಮಸ್ಥಾನಕ್ಕೆ ತಂದು ಹಾಕಿದರು? (ನಾಡಿಗೇ. ೨೨೫).
[ಕೃಷ್ಣ + ಜನ್ಮಸ್ಥಾನ]

**ಕೃಷ್ಣಜಯಂತಿ** (ನಾ). ಶ್ರಾವಣಮಾಸದ ಕೃಷ್ಣಪಕ್ಷದಲ್ಲಿ ನಡೆಯುವ ಶ್ರೀಕೃಷ್ಣನ ಹುಟ್ಟು ಹಬ್ಬದ ದಿನ; ಆದಿನ ಆಚರಿಸುವ ಉತ್ಸವ.
[ಕೃಷ್ಣ + ಜಯಂತಿ]

**ಕೃಷ್ಣಜಿಹ್ವಕ** (ನಾ). ಏಳು ವಿಧವಾದ ಸನ್ನಿದೋಷಗಳಲ್ಲೊಂದು; ನಾಲಗೆ ಕಪ್ಪಾಗುವುದು: ನಾಲಗೆ ಕಪ್ಪಾಗಿ ಬಿರುಸಾಗಿ ಮುಳ್ಳುಗಳುಂಟಾಗಿ ಜ್ವರವು, ಭ್ರಮೆಯು, ಶ್ವಾಸವು . . . ಇವು ಮುಖ್ಯವಾದ ನಿದಾನಗಳೊಡನೆ ಕೂಡಿಕೊಂಡಿರ್ಪುದೆ ಕೃಷ್ಣಜಿಹ್ವಕ ಸನ್ನಿದೋಷವೆಂದಱಿವುದು (ಸಕವೈ. ೧೭೧). [ಕೃಷ್ಣ + ಜಿಹ್ವಕ]

**ಕೃಷ್ಣಜೀರಿಗೆ** (ನಾ). ಕರಿಜೀರಿಗೆ. (ವೈಔಗಿ. ೫೬–೧೧೩೩).
[ಕೃಷ್ಣ + ಜೀರಿಗೆ (< ಜೀರಗೆ)]

**ಕೃಷ್ಣಜೇನು** (ನಾ). ಜೇನಿನಲ್ಲಿ ಒಂದು ಬಗೆ; ಕರಿಯಜೇನು: ಕೃಷ್ಣಜೇನುವೆರಸಿ ಸೇವಿಸೆ ಪೈತ್ಯದಿಂದುಂಟಾದ ಮೂತ್ರರೋಗ ಪರಿಹಾರ (ಸಕವೈ. ೩೮೯). [ಕೃಷ್ಣ + ಜೇನು (< ಜೇನ್)]

**ಕೃಷ್ಣತೆ** (ನಾ). ೧. ಕಪ್ಪಾಗಿರುವಿಕೆ; ಕಪ್ಪುಬಣ್ಣ. ೨. (ಆಲಂ) ಕಪಟ; ಮೋಸ; ದುಷ್ಟತನ. ೧, ೨: ಮೇಲೆ ಕರ್ದಮಜಾತೆ ಮಾಜುವ ಳೆದೆಯೊಳಿರ್ದ ಕೃಷ್ಣತೆಯನು (ಜೈಮಿಭಾ. ೭–೯). [ಸಂ. ಕೃಷ್ಣತಾ]

**ಕೃಷ್ಣತ್ವ** (ನಾ). = ಕೃಷ್ಣತೆ: (ಕಿ). [ಸಂ.]

**ಕೃಷ್ಣದ್ರಾಕ್ಷೆ** (ನಾ). ಕರಿಯದ್ರಾಕ್ಷೆ: "ಜಂಬುಕಾ – ಕೃಷ್ಣದ್ರಾಕ್ಷೆ" (ಔಷಧಿ. ೬೦). [ಕೃಷ್ಣ + ದ್ರಾಕ್ಷೆ]

**ಕೃಷ್ಣದ್ವೈಪಾಯನ** (ನಾ). ಕಪ್ಪು ಮೈಬಣ್ಣದವನೂ ದ್ವೀಪದಲ್ಲಿ ಹುಟ್ಟಿದವನೂ ಆದ ಮುನಿ; ವ್ಯಾಸಮಹರ್ಷಿ: ನಿಶ್ಚಿತಮಂತ್ರರಾಗಿ ಕೃಷ್ಣದ್ವೈಪಾಯನನಂ ನೆನೆದು ಬರಿಸಿದೊಡೆ (ಪಂಪಭಾ. ೧–೮೪ ವ).
[ಕೃಷ್ಣ + ದ್ವೈಪಾಯನ]

**ಕೃಷ್ಣನವಮಿ** (ನಾ). ಕೃಷ್ಣಪಕ್ಷದ ನವಮಿ: ಫಾಲ್ಗುಣಮಾಸ ಕೃಷ್ಣನವಮೀರಾತ್ರ್ಯಂತದೊಳ್ (ಪುಷ್ಪಪು. ೯–೧೧೩).
[ಸಂ. ಕೃಷ್ಣನವಮೀ (ಕೃಷ್ಣ + ನವಮೀ)]

**ಕೃಷ್ಣನೆಲ್ಲಿ** (ನಾ). ಒಂದು ಔಷಧಿ ಗಿಡ; ಕಪ್ಪುನೆಲ್ಲಿ ಗಿಡ: ಕೃಷ್ಣನೆಲ್ಲಿ, ಸಣ್ಣಕಾಗೆಸೊಪ್ಪು (ವೈಔಗಿ. ೬೧–೧೨೪೦). [ಕೃಷ್ಣ + ನೆಲ್ಲಿ]

**ಕೃಷ್ಣಪಕ್ಷ** (ನಾ). ಪೌರ್ಣಿಮೆಯ ಮಾರನೆಯ ದಿನದಿಂದ ಅಮಾವಾಸ್ಯೆಯವರೆಗಿನ ಅವಧಿ; ಬಹುಳ: ಬರೆ ಚೈತ್ರಂ ಕೃಷ್ಣಪಕ್ಷಂ ದೊರೆಕೊಳೆ . . . ಪುತ್ರನಂ ಪೆತ್ತಳಾಗಳ್ (ಆದಿಪು. ೭–೩೯); ಒಂದು ದಿವಸಂ ಕೃಷ್ಣಪಕ್ಷದಿರುಳ್ ಮಣಿಮಾಡದೊಳಿರ್ದು (ಪಂರಾಮಾ. ೧೬–೪೨ ವ).
[ಕೃಷ್ಣ + ಪಕ್ಷ]

**ಕೃಷ್ಣಪಶು** (ನಾ). ಕೃಷ್ಣಮೃಗ; ಕಪ್ಪುಬಣ್ಣದ ಜಿಂಕೆ, —ಎರಲೆ: ದೋಷಿಯಲ್ಲವೆ ರುದ್ರ . . . ದೇಶವಱಿಯಲು ಕೃಷ್ಣಪಶುವ ಮಹಾಶರದೊಳೆಚ್ಚಂ (ಶಂಕದಾ. ೧೧–೭೧). [ಕೃಷ್ಣ + ಪಶು]

**ಕೃಷ್ಣಪಾಂಡುರ** (ಗು). ೧. ಕಪ್ಪುಮಿಶ್ರವಾದ ಬಿಳಿಯಬಣ್ಣದ. (ನಾ). ೨. ಕಪ್ಪು ಮಿಶ್ರವಾದ ಬಿಳುಪು. [ಕೃಷ್ಣ + ಪಾಂಡುರ]

**ಕೃಷ್ಣಪಾಕಫಲ** (ನಾ). ಕಮರಿಕೆ ಗಿಡ, ಕರಮರ್ದ: "ಕೃಷ್ಣಪಾಕಫಲಃ, ಅವಿಗ್ನಃ, ಸುಷೇಣಃ, ಕರಮರ್ದಕಃ – ೪ ಕಮರಿಕೆ ಹಣ್ಣಿನ ಗಿಡ" (ಸಿದ್ಧಾಂತಿ. ೧೧೧). [ಸಂ.]

**ಕೃಷ್ಣಪಾಡ್ಯ** (ನಾ). ಕೃಷ್ಣಪಕ್ಷದ ಮೊದಲನೆಯ ದಿನ: (ಕ). [ಕೃಷ್ಣ + ಪಾಡ್ಯ (< ಪಾಡಿವ)]

**ಕೃಷ್ಣಫಣಿ** (ನಾ). ಕರಿಯಹಾವು; ಕೃಷ್ಣಸರ್ಪ. 'ಕೃಷ್ಣಫಣಿವೇಣಿ' ಪರಾ. [ಸಂ. ಕೃಷ್ಣಫಣಿನ್]

**ಕೃಷ್ಣಫಣಿವೇಣಿ**(ನಾ). ಕೃಷ್ಣಸರ್ಪದಂತಿರುವ ಜಡೆಯುಳ್ಳವಳು: ಶಾರದೆಯೆ . . . ತ್ರೈಲೋಕ್ಯಚಕ್ಷುವೆ ಕೃಷ್ಣಫಣಿವೇಣೀ (ಬಿಜ್ಜಪು.೩–೧೧). 'ನಾಗವೇಣಿ' ಪರಾ. [ಕೃಷ್ಣಫಣಿ + ವೇಣಿ]

**ಕೃಷ್ಣಭುಜಗ** (ನಾ). = ಕೃಷ್ಣಫಣಿ: ಇದು ತಮವೆಂಬ ಕೃಷ್ಣಭುಜಗವ್ರಜಮಂ ತವೆ ಕೊಲ್ವ ತಾರ್ಕ್ಷ್ಯಮೋ (ರಾಜಶೇ. ೧೧–೪೫). [ಕೃಷ್ಣ + ಭುಜಗ]

**ಕೃಷ್ಣಭೂಮ** (ಗು). ೧. ಕಪ್ಪುಮಣ್ಣಿನಿಂದ ಕೂಡಿದ. (ನಾ). ೨. ಕಪ್ಪುಭೂಮಿ. [ಸಂ.]

**ಕೃಷ್ಣಭೂಮಿ** (ನಾ). ಕಪ್ಪುನೆಲ; ಎರೆಮಣ್ಣಿನ ಪ್ರದೇಶ: "ಎರೆಯ ಭೂಮಿಯಂ ಕೃಷ್ಣಭೂಮಿ [ಪಾಠಾಂ. ಮ]ಯೆಂಬರು" (ಹಲಾಯು. ೨೭–೫). [ಕೃಷ್ಣ + ಭೂಮಿ]

**ಕೃಷ್ಣಭೇದಿ** (ನಾ). ಕಟುಕರೋಹಿಣಿ: "ಕಟುಃ, ಕಟುಂಭರಾ . . . ಕೃಷ್ಣಭೇದೀ, ವಕ್ರಾಂಗೀ, ಶಕುಲಾದನೀ – ೯ ಕಟುಕರೋಹಿಣೀ ಹೆಸರುಗಳು. ಅಶೋಕರೋಹಿಣೀ ಎಂದು ಕೆಲವರೆನ್ನುವರು. ಇದು ಭೇದಿಯಾಗುವ ಗ್ರಂಥಿಕದ್ರವ್ಯ" (ಸಿದ್ಧಾಂತಿ. ೧೧೫). [ಸಂ. ಕೃಷ್ಣಭೇದೀ]

**ಕೃಷ್ಣಮತಿ** (ನಾ). ಮಲಿನ ಬುದ್ಧಿಯುಳ್ಳವನು; ದುಷ್ಟಬುದ್ಧಿಯವನು: ಪಶುವಧೆಗೆಯ್ದು ಸ್ವರ್ಗಕ್ಕೆ ಪೋದಡೆ ಧರ್ಮಂಗೆಯ್ದರೆಲ್ಲಿಗೆ ಪೋದರಾ ಪಾಪಿಗಳಿನಗ್ಗಳಂ ಮಲಿನಚರಿತರುಂ ಕೃಷ್ಣಮತಿಗಳುಮಿಲ್ಲ (ಚಾವುಂಪು. ೨೪೭). [ಕೃಷ್ಣ + ಮತಿ]

**ಕೃಷ್ಣಮಾರ್ಗ** (ನಾ). ಪಿತೃಗಳು ಚಂದ್ರಲೋಕಕ್ಕೆ ಹೋಗುವ ದಾರಿ: ಇಷ್ಟಾಪೂರ್ತಗಳನ್ನು ಮಾಡಿದವರ ಪಿತೃಯಾಣ (ಇದಕ್ಕೆ ಕೃಷ್ಣಮಾರ್ಗವೆಂದೂ ಧೂಮಮಾರ್ಗವೆಂದೂ ಹೆಸರು) (ಅಮೃತ. ೭–೨೨ ಟೀ). [ಕೃಷ್ಣ + ಮಾರ್ಗ]

**ಕೃಷ್ಣಮುಖ** (ನಾ). ಕಪ್ಪಾದ ಬಾಯಿ; ಕರಾಳವಾದ ಮುಖ: ಕೃಷ್ಣಪಕ್ಷದ ಕೃಷ್ಣತರ ರಾತ್ರಿಯೇ . . . ಈ ಕೃಷ್ಣೆಯಂ ನುಂಗಿನ್ನು ಕೃಷ್ಣಮುಖಮಂ ತೆರೆದು (ಕೃಷ್ಣಾಕು. ೪–೭). [ಕೃಷ್ಣ + ಮುಖ]

**ಕೃಷ್ಣಮುನಿ** (ನಾ). ವ್ಯಾಸಮುನಿ: ಕೃಷ್ಣಮುನಿ ಸಹಿತ ನೃಪನುತ್ಸವದೊಳು ಮೆಱೆವ ನಿಜ ನಗರ ಪ್ರವೇಶಮಂ ಮಾಡುತ (ಜೈಮಿಭಾ. ೫–೭೩). [ಕೃಷ್ಣ + ಮುನಿ$_2$]

**ಕೃಷ್ಣಮೃಗ** (ನಾ). ೧. ಕಪ್ಪುಬಣ್ಣದ ಜಿಂಕೆ: ಮೃಗಯಾವ್ಯಸನದಿಂದೆ ಕಾನನಕೆ ತಾಂ ಕೃಷ್ಣಮೃಗದ ಕೂಡೈದಿದೊಡೆ (ಜೈಮಿಭಾ.೨೮–೫೮). ೨. ಶ್ರೀಕೃಷ್ಣನನ್ನು ಹುಡುಕುವುದು, —ಧ್ಯಾನಿಸುವುದು: ದೊರೆಕೊಂಡನೀ ಕೃಷ್ಣಮೃಗಭಾವದರ್ಭಕಂ (ಜೈಮಿಭಾ. ೨೮–೫೮). [ಕೃಷ್ಣ + ಮೃಗ]

**ಕೃಷ್ಣಮೃತ್ತಿಕೆ** (ನಾ). ಕರಿಯ ಮಣ್ಣು. [ಕೃಷ್ಣ + ಮೃತ್ತಿಕೆ]

**ಕೃಷ್ಣರಸನ** (ನಾ). ಕಪ್ಪುನಾಲಗೆಯುಳ್ಳದು: ಕಾಕವ್ಯಾಘ್ರಜಿನಮಂಡೂಕೋರಗ ಕೃಷ್ಣರಸನ ತಾಲುಕಶಿರನುಂ ಕಾಕಮುಖನುಂ × × × ಅಂತಾಕಸ್ಮಿಕ ಶೋಕ ದುಃಖನುಂ ಮರಣಕರಂ (ಅಶ್ವಶಾ. ೪–೪೪). [ಸಂ. ಕೃಷ್ಣರಸನಾ (ಕೃಷ್ಣ + ರಸನಾ)]

**ಕೃಷ್ಣರುಚಿತ್ವ** (ನಾ). ೧. ಶ್ರೀಕೃಷ್ಣನಲ್ಲಿ ಪ್ರೀತಿಯಿಂದ ಕೂಡಿರುವಿಕೆ. ೨. ಕಪ್ಪುಬಣ್ಣವನ್ನು ಹೊಂದಿರುವಿಕೆ. ೧, ೨: ಪ್ರಣವೋತ್ಥಶ್ರುತಿಮಧುರ ಕ್ವಣಿತಂ ದ್ವಿಜಮುಖ್ಯವೃತ್ತಿ ಕೃಷ್ಣರುಚಿತ್ವಂ ಪೆಣೆದಿರೆ ಪುರೋಹಿತಬ್ರಾಹ್ಮಣರೆನಿಸಿದುದತನುನೃಪತಿಗೀ ಪರಪುಷ್ಟಂ(ಚಂದ್ರಪು.೭–೮೮).[ಸಂ.]

**ಕೃಷ್ಣಲಾಂಗಲಿ** (ನಾ). ಒಂದು ಜಾತಿಯ ಔಷಧಿ ಗಿಡ: "ವತ್ಸತರುಃ – ಕೃಷ್ಣಲಾಂಗಲಿ" (ಓಷಧಿ. ೧೪೮). [ಸಂ. ಕೃಷ್ಣಲಾಂಗಲೀ]

**ಕೃಷ್ಣಲೆ** (ನಾ). ಗುಲಗಂಜಿ ಬಳ್ಳಿ: "ಆ ಕೃಷ್ಣಲಾ ಗುಂಜಿಯೆನಲು ಗುರುಗುಂಜಿ" (ಮಂಗರಾ. ೩೮–೨೫); "ಕಾಕಚಿಂಚೀ, ಗುಂಜಾ, ಕೃಷ್ಣಲಾ – ೩ ಮಣಿಗಳ ಗುಳಿಗಂಜೀಬಳ್ಳಿ, ಗುಳಿಗಂಜೀ ಮಣಿ" (ಸಿದ್ಧಾಂತಿ. ೧೧೮). [ಸಂ. ಕೃಷ್ಣಲಾ]

**ಕೃಷ್ಣಲೇಶ್ಯೆ** (ನಾ). [ಜೈನ] ಆರು ವಿಧವಾದ ಲೇಶ್ಯೆಗಳಲ್ಲೊಂದು; ಕ್ರೋಧ, ವೈರ, ಜಗಳ, ಅಧರ್ಮ ಹಾಗೂ ಕ್ರೂರತೆ ಇವುಗಳಿಂದ ಕೂಡಿರುವುದು: ದೊರೆಕೊಂಡ ಕೃಷ್ಣಲೇಶ್ಯಾ ಪರಿಣಾಮಮೆ ಕೃಷ್ಣವರ್ಣಮಂ ಪುಟ್ಟಿಸಿದಂತಿರೆ ಕರಿಯಲ್ (ಆದಿಪು.೫–೯೧); ತೆರ್ಪತ್ತು ಬಿಟ್ಟು ನಮೆಯುತ್ತಿರ್ಪರ್ ನಾರಕರವಂದಿರೊಡಲುಂ ಮನಮುಂ ಕರ್ಪಿಡಿದು ಕೃಷ್ಣಲೇಶ್ಯೆಯಡರ್ಪಿರ್ಪಂತಿರ್ಪುವನಿತಪುಣ್ಯರುಮೊಳರೇ (ಶಾಂತಿಪು. ೭–೯೯); ಕ್ರೂರ ಮತ್ತು ಕ್ರೂರತಮ ವಿಚಾರವುಳ್ಳದು ಕೃಷ್ಣಲೇಶ್ಯೆಯಲ್ಲಿ ಮತ್ತು ಶುಭ ಶುಭತರ ವಿಚಾರವುಳ್ಳದು ಶುಕ್ಲಲೇಶ್ಯೆಯಲ್ಲಿ ಗಣಿಸಲಾಗುವುದು (ಜೈನಪ. ೫೪೦). 'ಶುಕ್ಲಲೇಶ್ಯೆ' ಪರಾ. [ಕೃಷ್ಣ + ಲೇಶ್ಯೆ]

**ಕೃಷ್ಣಲೋಹ** (ನಾ). ಕರಿಯಲೋಹ; ಕಬ್ಬಿಣ: ಅತಿ ಕುಯೋನಿಗಳೊಳ್ ಜೀವಂ ತಿಱ್ಱನೆ ತಿಱಿವುದಯಸ್ಕಾಂತದ ಬಱಿವಿಡಿದ ಕೃಷ್ಣಲೋಹದ ತೆಱದಿಂ (ಚಂದ್ರಪ್ರ. ೭–೨೦). [ಕೃಷ್ಣ + ಲೋಹ]

**ಕೃಷ್ಣಲೋಹಿತ** (ಗು). ಕಡುಗೆಂಪು ಬಣ್ಣದ; ಕರ್ಗೆಂಪು ಬಣ್ಣದ; ಕನ್ನೀಲಿಯ. [ಸಂ.]

**ಕೃಷ್ಣವಕ್ತ್ರ** (ಗು). ೧. ಕಪ್ಪುಮುಖವುಳ್ಳ. (ನಾ). ೨. ಕಪ್ಪುಮುಖ; ಶ್ಯಾಮುವದನ. ೩. ಕಪ್ಪುಮೋರೆಯ ಕೋತಿ; ಮುಸು: "ಗೋಲಾಂಗೂಲಮಾ ಕೃಷ್ಣವಕ್ತ್ರನೆನೆ ಮುಸುವಕ್ಕು" (ಮಂಗರಾ.೪೮–೯). [ಕೃಷ್ಣ + ವಕ್ತ್ರ]

**ಕೃಷ್ಣವರ್ಣ** (ನಾ). ೧. ಕರಿಯಬಣ್ಣ; ಕಪ್ಪುಬಣ್ಣ. ೨. ಕಪ್ಪುಬಣ್ಣದವನು: ಆ ನಾರಕರೆಲ್ಲಂ ಹುಂಡಮುಂಡಸಂಸ್ಥಾನರುಮತಿವಿರೂಕ್ಷ ಕೃಷ್ಣವರ್ಣರುಮತಿದುರ್ಗಂಧರುಂ (ಸುಕುಮಾ. ೧೧–೪೮ ವ). [ಕೃಷ್ಣ + ವರ್ಣ]

**ಕೃಷ್ಣವರ್ತ್ಮ**(ನಾ). ೧. ಕಪ್ಪುದಾರಿಯವನು; ಅಗ್ನಿ: "ಸಪ್ತಾರ್ಚಿಃ . . . ಕೃಷ್ಣವರ್ತ್ಮಾ . . . ಹುತಾಶನಃ – ಈ ೪೦ ಕಿಚ್ಚಿನ ಪೆಸರ್" (ಹಲಾಯು. ೧೨–೬೩); ಮಿಸುಪ ವಜ್ರದ ಲಿಂಗ ಮದನಗೆ ಕುಸುಮಲಿಂಗಂ ಕೃಷ್ಣವರ್ತ್ಮಂಗೆಸೆದಿಹುದು (ಶಂಕದಾ. ೩–೮೫). ೨. ರಾಹು. ೩. ಕೆಟ್ಟದಾರಿಯವನು; ಹೊಲಸು ನಡತೆಯವನು; ಅಧಮ; ನೀಚ. [ಸಂ. ಕೃಷ್ಣವರ್ತ್ಮನ್ (ಕೃಷ್ಣ + ವರ್ತ್ಮನ್)]

**ಕೃಷ್ಣವೃಂತೆ** (ನಾ). ಒಂದು ಜಾತಿಯ ಹೂವಿನ ಗಿಡ; ಹಸಿರು ಪಾದರಿಗಿಡ: "ಪಾಟಲಿಃ, ಪಾಟಲಾ . . . ಕೃಷ್ಣವೃಂತಾ, ಕುಬೇರಾಕ್ಷೀ– ಹಸುರು ಪಾದರೀಗಿಡದ ಹೆಸರು; ಇದಕ್ಕೆ ಹೆಗ್ಗಜ್ಜುಗವೆಂದು ಕೆಲವರು ಅರ್ಥಹೇಳುವರು" (ಸಿದ್ಧಾಂತಿ. ೧೧೯). [ಸಂ. ಕೃಷ್ಣವೃಂತಾ]

**ಕೃಷ್ಣವೇಣಿ** (ನಾ). ೧. ಕಪ್ಪಾದ ಜಡೆಯನ್ನುಳ್ಳವಳು. ೨. ಒಂದು ನದಿ; ಕೃಷ್ಣಾನದಿ: ಕೃಷ್ಣವೇಣಿ ನುತವಿಶಾಲಿ ಸೇವಿತಮಲಪ್ರಹರಿ ಸ್ಫುಟವೇಣಿ ರಾಜಿಕುಂ (ಹವ್ಯಾರ. ೧-೫೫). [ಕೃಷ್ಣ + ವೇಣಿ]

**ಕೃಷ್ಣವೇಣೀರಾಶಿ** (ನಾ). ಎರಡು ನಕ್ಷತ್ರಗಳನ್ನೊಳಗೊಂಡ ಒಂದು ವಿಶಿಷ್ಟರಾಶಿಯ ಹೆಸರು: ಕನ್ಯಾರಾಶಿಯಿಂದ ಎಡಕ್ಕೆ, ಸ್ವಾತೀನಕ್ಷತ್ರದ ಮೇಲೆ ಚತುರ್ಥವರ್ಗದ ಎರಡು ನಕ್ಷತ್ರಗಳನ್ನು ಕೃಷ್ಣವೇಣೀರಾಶಿಗೆ ಗುರುತಾಗಿ ನಕ್ಷೆಯಲ್ಲಿ ತೋರಿಸಿದೆ (ನಕ್ಷತ್ರ. ೭೦). [ಸಂ. (ಕೃಷ್ಣವೇಣೀ + ರಾಶಿ)]

**ಕೃಷ್ಣಶಲಾಕೆ** (ನಾ). ಕಬ್ಬಿಣದ ಸಲಾಕೆ: ಅಂಜನವಿಮಿಶ್ರಿತಾಶ್ರುಧಾರೆ ಯಿದು ತೆಳ್ಗದಂಪಿನೊಳ್ ರನ್ನ ಗನ್ನಡಿಗೆ ಜೀವರೇಖೆಯೆನೆ ಬರೆದ ನೀಲರೇಖೆಯ ಪಾಂಗಿನೊಳೊಪ್ಪಿಯುಮನ್ನೆರ್ದೆಗೊಂದು ಕೃಷ್ಣಶಲಾಕೆ ಯೆಂಬೊಲ್ ಪರಿಣಮಿಕುಂ (ರಾಮಾಶ್ವ.೧೯-೨೭). [ಸಂ. ಕೃಷ್ಣಶಲಾಕಾ]

**ಕೃಷ್ಣಸನ್ನಿ** (ನಾ). ನಾಲಗೆಯನ್ನು ಕಪ್ಪುಗೊಳಿಸುವ ಅಪಾಯ ಸೂಚಕವಾದ ಒಂದು ಬಗೆಯ ಸನ್ನಿಪಾತರೋಗ: (ಕಿ). 'ಕೃಷ್ಣ ಜಿಹ್ವಕ' ಪರಾ. [ಕೃಷ್ಣ + ಸನ್ನಿ]

**ಕೃಷ್ಣಸರ್ಪ** (ನಾ). ಕರಿಯಹಾವು; ಕೃಷ್ಣಫಣಿ; ಕಾಳಸರ್ಪ: ಕಾಗೆತಂದ ಕನಕಸೂತ್ರದಿಂ ಕೃಷ್ಣಸರ್ಪನೆಹಗೆ ಮರಣಮನೆಯ್ದಿತ್ತಹಗೆ (ಪಂಚತಂ. ೬೧-೨೨). [ಕೃಷ್ಣ + ಸರ್ಪ]

**ಕೃಷ್ಣಸರ್ಪಶಿಶು** (ನಾ). ಕರಿಯ ಹಾವಿನಮರಿ; ಕೃಷ್ಣಸರ್ಪದ ಮರಿ: ಚಂದನತರುವಂ ಕೃಷ್ಣಸರ್ಪಶಿಶುವೊಲ್ ಕಿಡಿಪ್ಪೆ (ಶಾಕುಂತ. ೧೦೫-೧೪೧). [ಕೃಷ್ಣಸರ್ಪ + ಶಿಶು]

**ಕೃಷ್ಣಸಾರ** (ನಾ). ೧. ಕರಿಯಬಣ್ಣದ ಜಿಂಕೆ; ಮೈಮೇಲೆ ಚುಕ್ಕೆ ಗಳಿರುವ ಚಿಗರೆ; ಸಾರಂಗ. ೨. ಶ್ರೀಕೃಷ್ಣನ ಬಲ, —ಶಕ್ತಿ. ೧, ೨: ಮತ್ತಮಾವನಂ . . . ವಸುದೇವಭವನದಂತನಿರುದ್ಧ ಬಲ ಕೃಷ್ಣಸಾರಸಮಂಚಿತಮುಂ (ರಾಜಶೇ. ೫-೭೪ ವ). [ಸಂ.]

**ಕೃಷ್ಣಹೃದಯ** (ನಾ). ೧. ಕಪಟಹೃದಯ; ಪಾಪಭಾವನೆಯಿಂದ ಕೂಡಿದ ಮನಸ್ಸು. ೨. ಕಪಟ ಹೃದಯದವನು; ಪಾಪಭಾವನೆ ಯಿಂದ ಕೂಡಿದವನು: ಅವರು ನನ್ನನ್ನು ಕೃಷ್ಣಹೃದಯನೆಂದು ತ್ಯಜಿಸಲಿ, ಸೇವಕನೆಂದು ಅಂಗೀಕರಿಸಲಿ, ನಾನು ಮಾತ್ರ ರಾಮಪಾದುಕೆ ಗಳಿಗೆ ಶರಣುಹೋಗುವವನು (ತುಳಸಿ. ೧೪೩). [ಕೃಷ್ಣ + ಹೃದಯ]

**ಕೃಷ್ಣಾಂಕ** (ನಾ). ೧. ಕಪ್ಪುಗುರುತು, —ಚಿಹ್ನೆ. ೨. ಕೃಷ್ಣನ ಹೆಸರು; ಕೃಷ್ಣನ ನಾಮೋಚ್ಚಾರಣೆ. ೧, ೨: ಕೃಷ್ಣಾಂಕಮಿಲ್ಲದ ವದನಮುನ್ನಿಸಲ್ ಬಿಲಕೆ ಸರಿ (ಜೈಮಿಭಾ.೧೦-೫೧). [ಕೃಷ್ಣ + ಅಂಕ]

**ಕೃಷ್ಣಾಂಗ** (ನಾ). ಕಪ್ಪು ಶರೀರ; ಕರಿಯ ಮೈ: ನಿಜ ಕೃಷ್ಣಾಂಗದೊಳ್ ಪುಟ್ಟಿ ಕೀರ್ತ್ಯಂಗನೆ ಶುಭ್ರಚ್ಛಾಯೆಯಾದಳ್ (ಗದಾಯು. ೧೦-೧೧). [ಕೃಷ್ಣ + ಅಂಗ]

**ಕೃಷ್ಣಾಂಗಿ** (ನಾ). ಕರಿಯ ದೇಹವುಳ್ಳವಳು; ಕಾಳಿ: "ಕೃಷ್ಣಾಂಗಿ ಯೆನಲು ಮಾಯಾರಾಣಿಯಕ್ಕು" (ಮಂಗರಾ. ೫-೧೫). [ಸಂ. ಕೃಷ್ಣಾಂಗೀ]

**ಕೃಷ್ಣಾಂಜನ** 'ಕೃಷ್ಣಾಂಜಿನ' ನೋ.

**ಕೃಷ್ಣಾಂಜಿನ,** ಕೃಷ್ಣಾಂಜನ (ನಾ). = ಕೃಷ್ಣಾಜಿನ: ಹಜಾರ ದಲ್ಲೊಂದು ಕಡೆ ನಾರಾಯಣ ಶಾಸ್ತ್ರಿಗಳು ಒಂದು ಕೃಷ್ಣಾಂಜಿನದ ಮೇಲೆ ಕುಳಿತಿದ್ದರು (ಕಳಹು. ೩೩). **ಕೃಷ್ಣಾಂಜನ:** "ಅಜಿನಂ, ಚರ್ಮನ್, ಕೃತ್ತಿಃ – ಈ ೩ ಕೃಷ್ಣಾಂಜನದ ಪೆಸರ್" (ನಾಚಿರಾ. ೧೨೪). [< ಸಂ. ಕೃಷ್ಣಾಜಿನ]

**ಕೃಷ್ಣಾಂಬರ**$_1$ (ನಾ). ಕರಿಯ ಬಟ್ಟೆ. [ಕೃಷ್ಣ + ಅಂಬರ]

**ಕೃಷ್ಣಾಂಬರ**$_2$ (ನಾ). ಕೃಷ್ಣೆಯ ವಸ್ತ್ರ; ದ್ರೌಪದಿಯ ಸೀರೆ: ದ್ರೋಣ ಭೀಷ್ಮೋಚಿತ ವಾಕ್ಯದ್ವೇಷಿ ಕೃಷ್ಣಾಂಬರ ಕಬರಿಹರಂ (ಗದಾಯು. ೬-೩೦); ಕೃಷ್ಣಾಂಬರ ಕೇಶಾಕೃಷ್ಟಿಯಂ ಮಾಡಿಸಿದ ಮದಮುದೆಲ್ಲಿತ್ತೊ (ಗದಾಯು. ೭-೧೪). [ಸಂ. (ಕೃಷ್ಣಾ + ಅಂಬರ)]

**ಕೃಷ್ಣಾಗರು** (ನಾ). ಕರಿಯ ಬಣ್ಣದ ಅಗರು; ಕಾಲಾಗರು; ಕಪ್ಪುಬಣ್ಣದ ಚಂದನ; ಕರಿಯ ಚಂದನ: "ತೈಲಾಗರುಂ – ಕೃಷ್ಣಾ ಗರು" (ಓಷಧಿ. ೬೨); ಮಂಗಳ್ಯಂ . . . ಮಲ್ಲಿಗೆಹೂವಿನ ವಾಸನೆ ಯುಳ್ಳ ಕೃಷ್ಣಾಗರು ಹೆಸರು (ಸಿದ್ಧಾಂತಿ. ೧೪೦); ವರ್ಷಾಕಾಲದಲ್ಲಿ ಕೃಷ್ಣಾಗರು, ಕುಂಕುಮಾಗರು, ಕಸ್ತೂರಿ ಮುಂತಾದವುಗಳಿಂದ ಕೂಡಿ ತೇದ ಪರಿಮಳ ದ್ರವ್ಯಗಳಿಂದಲೂ (ಸಕವ್ಯ. ೪೧). [ಕೃಷ್ಣ + ಅಗರು]

**ಕೃಷ್ಣಾಗರುಗಂಧ** (ನಾ). ಕೃಷ್ಣಾಗರುವಿನ ಗಂಧ: "ಕಾಲಾಗರುಃ, ಅಗರುಃ – ೨ ಕೃಷ್ಣಾಗರುಗಂಧ" (ಸಿದ್ಧಾಂತಿ. ೧೭೯). [ಕೃಷ್ಣಾಗರು + ಗಂಧ]

**ಕೃಷ್ಣಾಗರುಚಂದನ** (ನಾ). ಕೃಷ್ಣಾಗರು ಮಿಶ್ರಿತವಾದ ಚಂದನ: (ಕಿ). [ಕೃಷ್ಣಾಗರು + ಚಂದನ]

**ಕೃಷ್ಣಾಗರುಧೂಪ** (ನಾ). ಕಾಲಾಗರುವಿನ ಧೂಪ; ಧೂಪಕ್ಕೆ ಬಳಸುವ ಒಂದು ಪರಿಮಳ ದ್ರವ್ಯ; ಗುಗ್ಗುಳ: ಉತ್ತಮ ಕೃಷ್ಣಾ ಗರುಧೂಪಧೂಮ ಪಟಳೀ ಸೌಗಂಧ್ಯಮಂದೀಕೃತಭ್ರಮರಂ ತೆಕ್ಕನೆ ತೀವೆ (ಪುಷ್ಪಪು. ೧೦-೯೦). [ಕೃಷ್ಣಾಗರು + ಧೂಪ]

**ಕೃಷ್ಣಾಚರಣ** (ನಾ). ಕೆಟ್ಟನಡತೆ; ದೋಷಯುಕ್ತವಾದ ವರ್ತನೆ: ಉತ್ತಮ ಪುರುಷರ ತೇಜೋಮಧ್ಯದಲ್ಲಿ ಕೃಷ್ಣಾಚರಣಮೇಂ ಘಟಿಪುದೆ (ಪದ್ಮರಾ. ೮-೭೨). [ಕೃಷ್ಣ + ಆಚರಣ]

**ಕೃಷ್ಣಾಜಿನ** (ನಾ). ಕೃಷ್ಣಮೃಗದ ಚರ್ಮ; ಕರಿಯ ಜಿಂಕೆಯ ಚರ್ಮ: ಕೃಷ್ಣಾಜಿನ ಪರೀವೃತಂ . . . ಸಿಂಹಮಧ್ಯಮದ್ರೇಕ್ಕಾಣಂ (ಜಾತತಿ. ೧೯-೧೪). [ಕೃಷ್ಣ + ಅಜಿನ]

**ಕೃಷ್ಣಾಜಿನಾಸೀನ** (ನಾ). ೧. ಕೃಷ್ಣಾಜಿನದ ಮೇಲೆ ಕುಳಿತು ಕೊಂಡವನು. ೨. ಕೃಷ್ಣಾಜಿನದ ಆಸನ: ಜ್ಞಾನಸಿದ್ಧಿಯದಪ್ಪು ದಯ್ಯ ಕೃಷ್ಣಾಜಿನಾಸೀನದೊಳು ಮೋಕ್ಷನಾ ವ್ಯಾಘ್ರ ಚರ್ಮಾಸನದೆ (ವೀಶೈವ. ೭-೭-೩೬). [ಕೃಷ್ಣಾಜಿನ + ಆಸೀನ]

**ಕೃಷ್ಣಾರ್ಪಣ** (ನಾ). ೧. ಮಹಾವಿಷ್ಣುವಿಗೆ ಸಮರ್ಪಿಸುವುದು; ಒಂದು ವಸ್ತುವನ್ನು ಧಾರೆಯೆರೆದು ಕೊಡುವಾಗ ದಾನಕೊಡು ವವನು ಹೇಳುವ ಮಾತು: ಕರ್ಣನು . . . ತನ್ನ ಕರ್ಣಕುಂಡಲ ವನ್ನು ಆ ಕಪಟ ಬ್ರಾಹ್ಮಣನಿಗೆ ಧಾರೆಯೆರೆದು 'ಕೃಷ್ಣಾರ್ಪಣ' ಎಂದನು (ನೀತಿಚಿಂ. XIV, ೧೩). ೨. (ಆಲಂ) ಕೈ ಬಿಟ್ಟು ಹೋದುದು; ಕಳೆದು ಹೋದುದು: ಆಸ್ತಿಯೆಲ್ಲಾ ಕೃಷ್ಣಾರ್ಪಣವಾಯಿತು (ರೂಢಿ). [ಕೃಷ್ಣ + ಅರ್ಪಣ]

**ಕೃಷ್ಣಾವತಾರ** (ನಾ). ಶ್ರೀಕೃಷ್ಣನ ಅವತಾರ: ಹರಿ ತನ್ನ ಕೃಷ್ಣಾವ ತಾರದೊಳ್ಮೀಜಿ ಧರೆಯಂ ಪೊರೆದ ಪುಣ್ಯಮಂ (ಜೈಮಿಭಾ. ೧೩-೩೯). [ಕೃಷ್ಣ + ಅವತಾರ]

**ಕೃಷ್ಣಾಹಿ** (ನಾ). = ಕೃಷ್ಣಸರ್ಪ: ಕೃಷ್ಣಾಹಿ ಶಂಕಾತುರ ಗೃಹಶಿಖಿ ಚೋಚುಂಬ್ಯಮಾನೇಂದ್ರ ಲೀಲಾಂಶು ವಿಶೇಷಂ . . . ಸೊಗಯಿಸುಗುಂ ಕಾಯಮಾನಂ ಸಮಾನಂ (ಚಂದ್ರಪು. ೧-೧೪೫). [ಕೃಷ್ಣ + ಅಹಿ]

**ಕೃಷ್ಣಿಕೆ** (ನಾ). ೧. ಕರಿಯಸಾಸಿವೆ; ರಾಜಸಾಸಿವೆ. ೨. ಕಪ್ಪುಕಲೆ: ಪೊಳೆವ ಸುಲಿಪಲ್ಲ ನುಣ್ಪೆಳಗೆಳಸಿದ ತಾಂಬೂಲಬದ್ಧ ಕೃಷ್ಣಿಕೆಯಿಂ ಕಣ್ಗೊಳಿಪ ನಿಜಾಧರಮಂ (ಕಾದಂಬ. ೧೭೧). [ಸಂ. ಕೃಷ್ಣಿಕಾ]

**ಕೃಷ್ಣೆ** (ನಾ). ೧. ಅಗ್ನಿಯ ಏಳು ನಾಲಗೆಗಳಲ್ಲೊಂದು. ೨. ಉದ್ದವಾದ ಕರಿಮೆಣಸು; ಹಿಪ್ಪಲಿ. ೩. ದ್ರೌಪದಿ: ಕೃಷ್ಣೆಯ ಕಚಪ್ರಾರಂಭವಂ ಬಾಹುವಿಕ್ರಮಿ ದುಶ್ಶಾಸನ ನಿನ್ನ ಮುಂದೆ ತೆಗೆವಂದೆಲ್ಲಿರ್ದೆ (ಗದಾಯು. ೬-೩೨). ೪. ಕೃಷ್ಣಾನದಿ: ಪಾವನೆಯರಾ ಕೃಷ್ಣೆ ಭೀಮೆಯರ ತಾಯ್ನಾಡು (ಕನ್ನಬಾ. ೧೧೧). ೫. ದುರ್ಗೆ. ೬. ಕಪ್ಪುದ್ರಾಕ್ಷೆ. [ಸಂ. ಕೃಷ್ಣಾ]

**ಕೃಷ್ಣೋರಗ** (ನಾ). = ಕೃಷ್ಣಸರ್ಪ: ಕೊಂಡುದು ಕೃಷ್ಣೋರಗನಾ ಮತಂಗಶಿಶುವಂ (ಸುಕುಮಾ. ೫-೪೫). [ಕೃಷ್ಣ + ಉರಗ]

**ಕೃಷ್ಯ** (ಗು). ೧. (ಮೇಲಕ್ಕೆ) ಎಳೆಯಲು ಸಾಧ್ಯವಾದ. ೨. ಉಳಬೇಕಾದ; ಉಳಲುಸಾಧ್ಯವಾದ. (ನಾ). ೩. ಸಾಗುವಳಿಗೆ ಯೋಗ್ಯವಾದ ಭೂಮಿ; ಸಾಗುವಳಿಯ ನೆಲ: ಹಿರಣ್ಯ ಧನ ಧಾನ್ಯ ಕೃಷ್ಯಫಲವೃಷ್ಟಿ ಸಂಪೂರ್ಣಮಂ ಧರಾವಳಯಮಂ . . . ಅಲ್ದಿದಂ (ಮಲ್ಲಿಪು. ೩-೧೨); ಸಲಿಲಾಶ್ರಯವನಾಶ್ರಯಿಸದ ಕೃಷ್ಯದಂತಖಿಳ ಬಾಂಧವರೊಡನೆ ಬದುಕದ ಮನುಷ್ಯಸಂಸಾರದಿಂದೇನು (ಜೈಮಿಭಾ. ೨-೧೮). [ಸಂ.]

**ಕೃಸರ** (ನಾ). = ಕೃಶರ. 'ಕೃಸರಾನ್ನ' ಪರಾ. [ಸಂ.]

**ಕೃಸರಾನ್ನ** (ನಾ). = ಕೃಶರಾನ್ನ: ಹರಿದ್ರಾನ್ನ, ಪರಮಾನ್ನ, ಮುದ್ಗಾನ್ನ, ಕೃಸರಾನ್ನ . . . ಎಂಬ ಅಷ್ಟವಿಧಾನ್ನಂಗಳಂ (ವಿವೇಕ. ೧೦೫). [ಕೃಸರ + ಅನ್ನ]

**ಕೃಸರಿ** (ನಾ). = ಕೃಶರ: ಕೃಸ[ಪಾಠಾಂ. ಸು]ರಿ ಕಜ್ಜಡಿ ಪಾಲ್ಕೊಸಗರ್ಳಿವು ಬಗೆಗೊಳಿಸಿ ಪೊಸತೆನಿಸಿರಲ್ (ಜೈಮಿಭಾ. ೬-೪೪). [ಸಂ. ಕೃಸರ]

**ಕ್ಲಪ್ತ** (ಗು). ೧. ಏರ್ಪಡಿಸಿದ; ಅಣಿಮಾಡಿದ; ವ್ಯವಸ್ಥೆಮಾಡಿದ; ಸಿದ್ಧವಾದ; ಸರಿಯಾದ. ೨. ಕಲ್ಪಿಸಿದ; ನೆರವೇರಿಸಿದ. ೩. ನಿರ್ಧರಿಸಿದ; ನಿರ್ಣಯಿಸಿದ; ಗೊತ್ತುಮಾಡಿದ; ನಿಗದಿಮಾಡಿದ. ೪. ಕತ್ತರಿಸಿದ; ಕೊಯ್ದ. (ನಾ). ೫. ಬೆಲೆ; ಮೌಲ್ಯ: "ವೃತ್ತಿಕ್ಲ[ಪಾಠಾಂ. ಕ್ಲಿ]ಪ್ತಂ ಭೃತಿ ವೇತನಂ ಮೌಲ್ಯಮೆನೆ ಹೊತ್ತಬೆಲೆ" (ಮಂಗರಾ. ೧೦೨-೨). [ಸಂ.]

**ಕ್ಲಪ್ತಿ** (ನಾ). ೧. ಅಣಿ; ಏರ್ಪಾಟು. ೨. ರಚನೆ; ನಿರ್ಮಾಣ. ೩. ನಿಗದಿ; ಗೊತ್ತುಪಾಟು. ೪. ವರ್ಣನೆ; ವಿವರಣೆ. [ಸಂ.]

**ಕ್ಲಪ್ತಿಕ** (ನಾ). ಬೆಲೆ; ಮೌಲ್ಯ: "ಪ್ರಕ್ರಯಃ ಕ್ಲಪ್ತಿಕ[ಪಾಠಾಂ. ಕ್ಲಿಪ್ತಕಃ] – ಈ ೨ ಬೆಲೆ (ಹಲಾಯು. ೯೪-೪೧೯). [ಸಂ.]

❋

# ಕೆ



**-ಕೆ** (ಪ್ರ). ಒಂದು ಕೃದಂತ ಭಾವ ಸೂಚಕ ಪ್ರತ್ಯಯ: ತನವಿಕೆಯುಮೆಂಬಿವುಂ ಚೇತನ ಭಾವದೊಳಕ್ಕುಮುಱದ ಭಾವಾರ್ಥದೊಳಂತ ನಿತಱೊಳಂ ಪು ಕೆ ಎಂಬಿವು ಜನಿಯಿಕುಂ (ಕಾವ್ಯಾವ. ೩೪೩); ಸೇಣಂಗೆ ಅರಸಾಳ್ಕೆ ಸ್ವಸ್ತಿ (ಎಇ. XIV, ೧-೪೫; 725); ವರ ಶಬ್ದಾಲಂಕಾರದ ವಿರಚನೆಗಳ್ ನೋಟ್ಕೊಡೊಂದೆ ತೋರ್ಕೆಗಳ್ (ಕವಿರಾ. ೨-೪೬); ಕೆಕಾರಕ್ಕೆ ಮಡಿಕೆ, ಹಱಿಕೆ, ಕಾಣ್ಕೆ, ಪೂಣ್ಕೆ, ತೆರಳ್ಕೆ, ನಿವಿರ್ಕೆ (ಶಮದ. ೨೧೧ ಪ್ರಯೊ.).

**ಕೆಇ** 'ಕೆಯ್‌4' ನೋ.

**ಕೆಇಗೊಡು** (ಕ್ರಿ). ನೆಲವನ್ನು ಕೊಡು; ನೆಲವನ್ನು ಕೊಡು; ಭೂಮಿಯನ್ನು (ದಾನವಾಗಿ) ಕೊಡು: ರಾಜಾಶ್ರಯ ವಿಣ್ಣಗರ ದೇವರ್ಗ್ಗೆ ತನ್ನ ಪಡುವಣ ತೋಂಟ ಕಟಿನಿಯಲ್ ಎಣ್ಗೊಳಗಟ್ಟಿಗೆ ನೆಲನುಂ ಚಂದ್ರನು ಉಳ್ಳನ್ನೆಗಂ ತೆಱಿ ಇಲ್ಲದನ್ನಾಗಿ ಮಾಹಾನ ಕೆಇಗೊಟ್ಟು (ಎಕ.XIV, ಮಳವ. ೧೨೫-೧; 1014). [ಕೆಇ (< ಕೆಯ್‌4) + ಕೊಡು1]

**ಕೆಂ** (ನಾ). ಕೆಚ್ಚನೆ ಎಂಬ ಶಬ್ದಕ್ಕೆ ಸಮಾಸದಲ್ಲಿ ಆದೇಶವಾಗಿ ಬರುವ ರೂಪ. 'ಕೆಂಗಣ್', 'ಕೆಂಪು' ಪರಾ. [ದೇ. ‖ ತಮಿ. ಚೆವ್, ಚೆಯ್; ಮಲ. ಚೆ, ಚೆಮ್; ತುಳು. ಕೆಮ್; ಕೊಡ. ಕೆಂ; ತೆಲು. ಚೆವ್]

**ಕೆಂಕ** (ನಾ). ಕೆಂಪು ಬಣ್ಣ; ಕೆಂಪು: "ಕೆಂಕಮೆಂದುಂ . . . ಕೇಸೆಂದುಂ –ಈ ೪ ಅರುಣವರ್ಣಂ" (ಕಶಸಾ. ೧೧-೨೧೮); ಕುಂಕುಮದ ಕದಡಿನೊಳ್ ಕೆಂಕಮಾಗಿರ್ದ ನೀರಂ ತಳಿದಂ (ಆದಿಪು. ೧೧-೧೪೮); ದಿಕ್ಕಾಮಿನೀ ಮುಖ ಕುಂಕುಮದಂತೆ ಕೆಂಕಮಾಗಿ ಪಡುವಣ ಸಂಜೆ ರಂಜಿಸೆ (ಲೀಲಾವ. ೫-೧೬); ಬಿಸಿಲೆಲ್ಲಂ ಕೆಂಕಮಾಗಲ್ (ಜಗವಿ. ೧೫-೬೩); ಉರುಕೋಪದ ಕೆಂಕೆಮಿದಲ್ತು ನಿಶ್ಚಯಂ (ರಸರ. ೧-೬೦ ಪರಿ.). [ಕೆಂ + -ಕ್ಕ3]

**ಕೆಂಕನೆ** (ಅ). ಚೆನ್ನಾಗಿ; "ಇಂಪಾಗಿ, ಮಧುರವಾಗಿ" (ಪ್ರಭಣ್ಣ): ನೆಗೞ್ದ ನುಡಿ ನೋಟಗಳಂ ಬಗೆಗೊಂಡ ಭಾವದಿಂದೊಡರಿಸಿ ಮೀಱಿ ಪಿಳ್ಳುವುದು ಕೆಂಕನೆ ಪಾಡುವುದಂಕಮಾಲೆಯಂ (ಚಿಕವಿ. ೬-೧೬೦). [?]

**ಕೆಂಕಂಬಡೆ** (ಕ್ರಿ). ಕೆಂಪುಬಣ್ಣವನ್ನು ಹೊಂದು; ಕೆಂಪಾಗು: ಮಿಱುಗುವ ಮಾಣಿಕದೊಡವಿಂ ಮುಡಿಯೊಳ್ ತುಱುಬಿದ ಚೆಂಗಣಗಿಲೆಯೊಳ್ಪರಲಿಂ . . . ಪೂಸಿದ ಕುಂಕುಮದಣ್ಪಂ ಮೆಱೆದಳ್ಕೆಂಕಂ ಬಡೆದೊಸೆದಾ ರತಿಯೆಱಿಯಂ ಪೂಜಿಪ ಕೆಂಗಲ್ಗರುವಿನ ತೆಱನೆನೆ ಯುವತಿ ಕಲಾವತಿ (ಜಯುಕಾ. ೨-೪೮). [ಕೆಂಕ + ಪಡೆ1]

**ಕೆಂಕರಿಕೆ** (ನಾ). ಕೂಗು; "ಕೇಕೆ, ಕೂಗಾಟ" (ಪ್ರಭಣ್ಣ): ಕೆಂಜುಟ್ಟುವಕ್ಕಿಯ ಕೆಂಕರಿಕೆಗೆ ಬೆರ್ಚುತೇಂ ಜಾಱದವುದಿರುಳೆನುತ ಮುಂಜಾವಗೆಯ್ಮೆಗೆ ಮೋಹರಿಸುತ ಮಂಜು ಮಂಜುರವವ ಮಸಗುವುದು (ಚಿಕವಿ. ೬-೧೫೭ ಸಾಂಗತ್ಯ. ೮೧). [ಕೆಂಕರಿಸು1 + -ಇಕೆ]

**ಕೆಂಕರಿಸು1** (ಕ್ರಿ). ಉಬ್ಬು: ತನ್ನೊಳ್ ತಾ ಭೋಂಕನೆ ಕೆಂಕರಿಸಿ ಬಿಱುಬಿಱನೆ ನಗುತ್ತೆ (ಚಿಕವಿ. ೬-೧೫೪ವ); ಬಱಿದೆ ತಂತಮ್ಮವರೊಳ್ ಪಱಿವಣಿಸಿ ಪೊಯ್ಸಿ ತಲೆಯಂ ಕೆಳದಿಯರ್ ಗೆಲ್ಲವಾಂತವೋಲ್ ಕೆಂಕರಿಪರ್ (ಅಪ್ರತಿ. ೧೦೩-೧೨); "ಕೇಕೆಹಾಕು" (ಪ್ರಭಣ್ಣ). [?]

**ಕೆಂಕರಿಸು2** (ಕ್ರಿ). ಕೆಂಗಲಿಸು; ಕೆಂಪಾಗು: ಕಣ್ಗಳ ಬಱಂ ತಿಳಿಯಲ್ ಪೊಸನೋಟದಿಂದೆ ಕೆಂಕರಿಸುವೆನೆಂದೊ (ಪಂಪಾಶ. ೪); ಹೂಂಕರಿಸು ತುಸುರಿಕ್ಕಲಾಱದಸುವೋಗಿರೆ ಪೋಗಿ ಕೆಂಕರಿಸಿ ತೆರಸಂದು ನೆಱಿ ಹಮ್ಮುದಂಬೋಗಿ (ಪಿಂಡೋರ. ೨-೧೩). [?./ ತಮಿ. ಚೆಙ್ಗಾರಿ]

**ಕೆಂಕಲ್** (ನಾ). ಒಂದು ಜಾತಿಯ ಮಾನು: ಕುಚ್ಚಲತಿಗಂ ಕಾಗೆಂಡೆ ಕೆಂಕಲ್ಸರಿತ್‌ಕೊಱವಂ ಚೇಳ್ಪಸಿಗಂ (ರಾಜಶೇ. ೫-೧೧೫). [?]

**ಕೆಂಕಲಿ** (ನಾ). ಅಶೋಕ ವೃಕ್ಷ; ಕಂಕೆಲ್ಲಿ: (ಕ). [< ಸಂ. ಕಂಕೇಲಿ]

**ಕೆಂಕವಣಿ** (ನಾ). ಕೆಂಪುಮಣಿ, —ರತ್ನ; ಮಾಣಿಕ್ಯ; ಪದ್ಮರಾಗ: ಕೆಂಕವಣಿ ತೆತ್ತಿಸಿದ ತಾಳಿ ಪದಕಂಗಳ್ ಸೋಂಕಲೆರ್ದೆಗೊಂಡು (ಚಕವಿ. ೫-೧೦). [ಕೆಂಕ + ಮಣಿ₂]

**ಕೆಂಕು** (ನಾ). ಕೆಂಬಣ್ಣ: ಚರಣಾಂಭೋರುಹದ ಕೆಂ[ಪಾಠಾಂ. ಕೇ]ಕಿಗೆ ಸರೋಜಾಂಬಕಗೆ ಪೂಸರಗೆ ಏರು ಮುಡಿಗಿರಿದಿಕ್ಕು ಮುಡಿಗೆಂಬೀರವಂ ಪಿರಿದಾದುದು (ಮದೇಪು. ೨-೬೪). [< ಕೆಂಕ?]

**ಕೆಂಕೆಲ್ಲಿ, ಕೆಂಕೇಲ್ಲಿ** (ನಾ). = ಕೆಂಕಲಿ: ಇಂದ್ರಗೋಪದ ಗೂಡಾರದಂತೆ ಕಾಂತಮಾದ ಕೆಂದಳಿರ್ ತೀವಿದ ಕೆಂಕೆ[ಪಾಠಾಂ. ಕಂಕೆ, ಕಂಕೇ, ಕೆಂಕೇ]ಲ್ಲಿಯುಂ (ಶಬಶಂ. ೨-೪೨ ವ). **ಕೆಂಕೇಲ್ಲಿ.** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [< ಸಂ. ಕಂಕೇಲ್ಲಿ]

**ಕೆಂಕೇಲ್ಲಿ** 'ಕೆಂಕೆಲ್ಲಿ' ನೋ.

**ಕೆಂಗಡಿ** (ನಾ). (?): ಗಂಗೆ ಮಧ್ಯದಲ್ಲಿ ಹರಗೋಲ ಘನ ತರಂಗ ದೊಳಿದ್ದಂತೆ ಮುಂಗಾಣದೆ ಕೆಂಗಡಿಯಿಂದ ದಿಕ್ಕಂಗಳನು ಕಾಣದ ಕಂಗಳನಂತೆ ಅಗಿ (ಮೋಕ್ಷದೀ. ೨೧೯). [?]

**ಕೆಂಗಣ್, ಕೆಂಗಣ್ಣು** (ನಾ). ಕೆಂಪಾದ ಕಣ್ಣು; ಕಿಸುಗಣ್ಣು; ರೇಗಿದ ಕಣ್ಣು: ಕಟ್ಟೆದಿರೊಳ್ ನಿಟ್ಟಾಲಿಯಾಗಿ ಕೆಂಗಣ್ಮಸಗಿ ಬಂದೊಂದೀಂದ ಪಸು ತನ್ಮನಿಪತಿಯನಿಱಿವುದುಂ (ಶಾಂತಿಪು. ೬-೫೫ ವ); ನಿಟ್ಟಿಸುವ ಕೆಂಗಣ್ಣ ಕಡೆಯಿಂದ ದಳ್ಳುರಿ ಸೂಸೆ (ಹಚಕಾ. ೬-೨೭). **ಕೆಂಗಣ್ಣು**: ಕೊರ್ಬಿದೊಡಲು ಕೆದಱಿದ ಮೀಸೆ ಕೆಂಗಣ್ಣು ಪೆರ್ಬುಲಿ ಟೆಕ್ಕೆಯುವೆಸೆಯೆ (ಭರಚ. ೨೨-೫೫); ಕೆದಱಿದಲೆ ಕೆಮ್ಮೀಸೆ ಕೆಂಗಣ್ಣು (ಸಾಳ್ವಭಾ. ೧೮-೧೭); ಮುರಿದ ಮೀಸೆಗಳ ಕೆಂಗಣ್ಣುಗಳ (ಚಬಪು. ೭-೫). [ಕೆಂ + ಕಣ್]

**ಕೆಂಗಣಿಗಿಲು**, ಕೆಂಗಣಿಗಿಲೆ, ಕೆಂಗಣಿಜಿಲು (ನಾ). ಕೆಂಪುಬಣ್ಣದ ಕಣಿಗಿಲು: "ರಕ್ತಪ್ರಸವಃ—ಕೆಂಗೋರಟೆ, ಕೆಂಗಣಿಗಿಲು" (ಓಷಧಿ. ೧೩೫). **ಕೆಂಗಣಿಗಿಲೆ**: ಅಮಳ ಕಮಲವನ್ನು ಕೆಂಗಣಿಗಿಲೆಯ ಹೂಗಳೊಡನೆ ಬೆರಸಿ (ಬಟ್ಟಆ. ೧೩-೨೦). **ಕೆಂಗಣಿಜಿಲು**: "ವರ್ಷಾಭವಃ – ಕೆಂಗಣಿಜಿಲು" (ಓಷಧಿ. ೧೪೮). [ಕೆಂ + ಕಣಿಗಿಲು (< ಕಣಗಿಲೆ₁)]

**ಕೆಂಗಣಿಗಿಲೆ** 'ಕೆಂಗಣಿಗಿಲು' ನೋ.

**ಕೆಂಗಣಿಜಿಲು** 'ಕೆಂಗಣಿಗಿಲು' ನೋ.

**ಕೆಂಗಣ್ಣ** (ನಾ). ೧. ಕೆಂಪಾದ ಕಣ್ಣುಳ್ಳವನು: ಬಲ್ಲಿದೆಯುಂ . . . ಬಟ್ಟದೊಡೆಯುವಂ ಕೆಂಗಣ್ಣಂ ನೀಲ್ದ ಕಿವಿಯಾತಂ (ಕಾವ್ಯಾವ. ೨೫೬). ೨. ಕೆಂಪಾದ ಕಣ್ಣುಗಳುಳ್ಳ ಪಕ್ಷಿ; ಕೋಗಿಲೆ: "ಕೆಂಗಣ್ಣಲರ್ವಕ್ಕಿ ಪಿಕಂ" (ಕಶಸಾ. ೧೦-೨೫). ಕಾರಂಡಂ ಕೆಂಗಣ್ಣಂ ಭೇರುಂಡಂ ಪೊಱಸು ಕಾಗೆ (ಕಾವ್ಯಸಾ. ೧೦೪೦ ಶೂದ್ರಕ); ಮುಳಿದು ನೋಳ್ಪನಂತೆ ಕೆಂಗಣ್ಣ ಜಲಗಾಜನಂತೆ ಮಿಾಂಗುಲಿ . . . ಪಕ್ಷಿ ಜಾತಿಗಳಿಂ (ಬಂಹರಿ. ೨-೩೮ ವ). [ಕೆಂಗಣ್ + -ಅ₇]

**ಕೆಂಗಣ್ಣಪಕ್ಕಿ** 'ಕೆಂಗಣ್ಣಕ್ಕಿ' ನೋ.

**ಕೆಂಗಣ್ಣವಕ್ಕಿ** 'ಕೆಂಗಣ್ಣಕ್ಕಿ' ನೋ.

**ಕೆಂಗಣ್ಣು** 'ಕೆಂಗಣ್' ನೋ.

**ಕೆಂಗಣ್ಣಕ್ಕಿ**, ಕೆಂಗಣ್ಣಪಕ್ಕಿ, ಕೆಂಗಣ್ಣವಕ್ಕಿ (ನಾ). ಕೆಂಪು ಕಣ್ಣಿನ ಪಕ್ಷಿ; ಕೋಗಿಲೆ: ಬನಂಗಳೊಳ್ ತಾಣಂದರಮಾಗಿರ್ಪ ಕೆಂಗಣ್ಣಕ್ಕಿ (ಕಬ್ಬಿಕಾ. ೧೯೬); ಕೆಂಗಣ್ಣಕ್ಕಿಯ ಸರಮೆಂಬ ಪೊಸಗಂಟೆಯನಲುಗಿಸೆ (ಜಯಕಾ. ೧-೫೦); ಓದುವ ಗಿಳಿ ನರ್ತಿಸುವ ನವಿಲಿರದುನ್ಮಾದಿಪ ಕೆಂಗಣ್ಣಕ್ಕಿ (ಕುರಾಸಾಂ. ೪-೪೪); ಬಳಸಿ ಬಂದು ಬಗ್ಗಿಪ ಕೆಂಗಣ್ಣಕ್ಕಿಗಳ್ಗೆ ಕಾಯ್ದಂತೆ ಕಡೆಗಣ್ ಕಡುಗೆಂಪುವಡೆಯೆ (ರಾಜಶೇ. ೭-೯೨ ವ).

**ಕೆಂಗಣ್ಣಪಕ್ಕಿ**: "ಕೆಂಗಣ್ಣಪಕ್ಕಿ ಕೋಗಿಲೆ" (ಕರ್ಣಾನಿ. ೨೪). **ಕೆಂಗಣ್ಣವಕ್ಕಿ**: "ಕೆಂಗಣ್ಣವಕ್ಕಿಯೆನೆ ಪಿಕಮಕ್ಕುಂ" (ಕವಿಕಂ. ೬೬). [ಕೆಂಗಣ್ + ಪಕ್ಕಿ₁]

**ಕೆಂಗದಿರ್** (ನಾ). ಕೆಂಪುಬಣ್ಣದ ಕಿರಣ; ಕೆಂಗಿರಣ: ಇನಮಂಡಲ ಸಮುದಯದಿಂದೆ ನಿಮಿರ್ವ ಕೆಂಗದಿರ್ಗಳೆಸಕಮಂ (ಕಾದಂಪೂ. ೫೫); ಕೆಂಗದಿರನುಗುಳ್ವ ಕಣ್ಗಳೊಳಂ (ವರ್ಧಪು. ೧೦-೫ ವ); ಪಗಲ ಬಲ್ಲಹನ ಕೆಂಗದಿರ್ದೊರ್ಂಗಲಿನಿಸು ಪುಗದೆ ಗಭೀರಮಾಗಿ ಕಳ್ತಲಿಸಿದ (ಪದ್ಮರಾ. ೮-೨೭); ಉದಯಿಸುವಿಂದುಮಂಡಲದಿಂ ಕೆದರ್ವ ಕೆಂಗದಿರ್ಗಳ್ ಒಪ್ಪಿದುವು (ಶ್ರೀಪಾಲ. ೬-೧೮). [ಕೆಂ + ಕದಿರ್₁]

**ಕೆಂಗದಿರ** (ನಾ). ಕೆಂಪು ಕಿರಣಗಳನ್ನುಳ್ಳವನು; ಸೂರ್ಯ: "ಬಿಸಗದಿರನಿಸಿವಗೆಯು ಕೆಂಗದಿರ ಪೋಳ್ತು ಸಾಸಿರಗಯ್ಯನು . . . ಎಂದು ಸಪ್ತಾಶ್ವಂಗೆ ನಾಮಮಕ್ಕುಂ" (ಕಬ್ಬಿಕೈ. ೪೪); "ರವಿ ಕೆಂಗದಿರಂ" (ಕರ್ಣಾನಿ. ೩೯); ಕೆಂಗದಿರನ ಮರಕಿಸಲಯ ಸಂಗದಿನಾರಕ್ತಮಾದ ಕೆಂದಾವರೆಗಳ್ (ಸೂಕ್ತಿಸು. ೯-೪೩). [ಕೆಂಗದಿರ್ + -ಅ₇]

**ಕೆಂಗದಿರ್ಮಣಿ** (ನಾ). ಕೆಂಪಾದ ಕಿರಣಗಳನ್ನು ಬೀರುವ ರತ್ನ; ಮಾಣಿಕ್ಯ: ಹರಿಯು ತಲೆಯನುಱಿ ಸೀಳ್ದು ಕೆಂಗದಿರ್ಮಣಿಯನು ತಂದೆನ್ನ ಕರದೊಳಿಟ್ಟು (ಭಾವಚಿಂ. ೫-೧೪). [ಕೆಂಗದಿರ್ + ಮಣಿ₅]

**ಕೆಂಗಪ್ಪೆ** (ನಾ). ಕೆಂಪುಬಣ್ಣದ ಕಪ್ಪೆ (?): "ಮಹಾಮಂಡೂಕಃ—ಕೆಂಗಪ್ಪೆ" (ಓಷಧಿ. ೧೨೨); "ರಾಜಮಂಡೂಕಃ—ಕೆಂಗಪ್ಪೆ" (ಓಷಧಿ. ೧೩೮). [ಕೆಂ + ಕಪ್ಪೆ]

**ಕೆಂಗಬ್ಬು** (ನಾ). ಕೆಂಪು ಕಬ್ಬು: "ರಕ್ತೇಕ್ಷುಃ—ಕೆಂಗಬ್ಬು" (ಓಷಧಿ. ೧೩೪); ಲೋಹಿತೇಕ್ಷುಃ—ಕೆಂಗಬ್ಬು" (ಓಷಧಿ. ೧೪೪). [ಕೆಂ + ಕಬ್ಬು (< ಕರ್ಬು)]

**ಕೆಂಗಯ್** (ನಾ). ಕೆಂಪಾದ ಕೈ: ಹೇಸಿರಲು ಈ ಜೀವ ಅಸಿ ಹುಟ್ಟಿಸುತ್ತಿತ್ತು ಮಿಾಸಿ ಮೇಲೆಳೆದ ಕಿರಿಬೆರಳು ಕೆಂಗಯ್ಯ ಬೀಸಿ ಕರೆದಾನ ನನಗಂತ (ಮೂರ್ತಿಕಾ. ೪೧-೧೧). [ಕೆಂ + ಕಯ್₂ (< ಕೆಯ್₂)]

**ಕೆಂಗರುಳು** (ನಾ). ಕೆಂಪಾದ ಕರುಳು: ಜೋಲುವ ಕೆಂಗರುಳುಗಳ ಕೊಕ್ಕಲಿ ಕಚ್ಚಿ ಕೀಳುತ ಸವಿಸವಿದೊಡನೆ . . . ಕೌಶಿಕ ಕುಲಜಾಲ ಮೊಪ್ಪಿದುವು (ಕಂಸವಿ. ೧೫-೬೯). [ಕೆಂ + ಕರುಳು (< ಕರುಳ್)]

**ಕೆಂಗಲ್**₁ (ನಾ). ಕೆಂಪುಕಲ್ಲು; ಮಾಣಿಕ್ಯ: ಕಲ್ಲೊಳಿರ್ದೊಡೆ ಭೋಗಿಜನ ಭೋಗಯೋಗ್ಯವಾವಲ್ಲೆಂಬು ಕನಕಾದ್ರಿಯನು ಒಲ್ಲದೆಳ್ತಂದವೆಂಬಂತೆಸೆ ದವು ಕೆಂಗಲ್ಲ ಪಸರದಱೊಳಗೆ (ಕುರಾಸಾಂ. ೩-೭೭). [ಕೆಂ + ಕಲ್₃]

**ಕೆಂಗಲ್**₂, ಕೆಂಗಲು (ನಾ). ಕೆಂಪಾಗಿರುವಿಕೆ; ಕೆಂಪುಬಣ್ಣ: "ಕೆಂಕಮೆಂದುಂ ಕೆಂಗಲ್ಲೆಂದುಂ, ಕಿಸುಮೆಂದುಂ, ಕೇಸೆಂದುಂ – ಈ ೪ ಅರುಣವರ್ಣಂ" (ಕಶಸಾ. ೧೧-೨೧೮). **ಕೆಂಗಲು**: "ಕೆಂಗಲು . . . ಕೆಂದಮೆನಲಾರುಣ್ಯಂ" (ಕವಿಕಂ. ೧೦೩). [ಕೆಂ + -ಕಲ್₄]

**ಕೆಂಗಲಿಸು** (ಕ್ರಿ). ಕೆಂಪಾಗು; ಕೆಚ್ಚಗಾಗು: ಕಾರೊಡಲು ಮೇಗಡರ್ದ ಮೆಯ್ಮಣಿರು ಕೆಂಗಲಿಪ ತೋರಗಣು (ಹಚಕಾ. ೫-೨); ಕಡುಗಾಯ್ದು ಕೆಂಗಲಿಸಿದ ಲೋಹದ ಬಟ್ಟನುಯ್ದು (ವರ್ಧಪು. ೧೧-೩ ವ); ಕೆದಱಿದ ನಿಱಿದಲೆ ಕೆಂಗಲಿಪಲರ್ಗಣ್ಣು (ಉದ್ಭದೇ. ೪-೩೩); ಕೆಂಗಲಿಪ ಕಟಾಕ್ಷದಿಂದೆ (ಶಬಶಂ. ೪-೧೨). [ಕೆಂಗಲ್₂ + -ಇಸು₃]

**ಕೆಂಗಲು** 'ಕೆಂಗಲ್₂' ನೋ.

**ಕೆಂಗಲೆ** (ನಾ). ಕೆಂಪಾದ ಗುರುತು, —ಕಲೆ: ಬೆರಲೊಳ್ ಬೀಣೆಯ ತಂತಿಗಳೊರಸಿದ ಕೆಂಗಲೆಗಳ್ (ಪಂಪಭಾ. ೬-೧೦); ಬರ್ದರ ಮೆಯ್ಯ ಪುಣ್ಣ ಕೆಂಗಲೆ (ಬಂಹರಿ. ೯-೫೪); ಮಸೆದುಗುರ್ವೊಯ್ಲ ಕೆಂಗಲೆ . . . ರಂಜಿಸಿದುವು (ಶ್ರೀಪಾಲ. ೯-೩೫). [ಕೆಂ + ಕಲೆ₃]

**ಕೆಂಗಲೆಗಟ್ಟು** (ಕ್ರಿ). ಕೆಂಪಾದ ಗುರುತುಂಟಾಗು, —ಕರೆಗಟ್ಟು: ತೀವ್ರ ಕರಾಭಿಘಾತದಿಂದವನಿಯ ಬೆಂದ ಪುಣ್ಣಲೆಗಳೊಯ್ಯನೆ ಕೆಂಗಲೆ ಗಟ್ಟಿದಂದಮಂ [ಪಾಠಾಂ. ಕೆಂಗಲೆಕಟ್ಟಿತೆಂಬಿನಂ] (ಅನಂಪು. ೭–೬೦). [ಕೆಂಗಲೆ + ಕಟ್ಟು$_1$]

**ಕೆಂಗಲೆವಡೆ** (ಕ್ರಿ). ಕೆಂಪು ಗುರುತನ್ನು ಹೊಂದು; ಕೆಂಪು ಗುರುತಾಗು: ಅಪರಸ್ಥಾನದೊಳ್ ಕೆಂಗಲೆವಡೆದು ಭೋಗನಾಥನ ಪಿಂದುರುಳಲೊಡಂ ಕೆಂಗಲೆ ತಳ್ತ ಶಿಲಾರಮಣನ ಶೀರ್ಷದಂತೆಯುಂ (ನೃಪವಿ. ೨೬–೬೧ ವ). [ಕೆಂಗಲೆ + ಪಡೆ$_1$]

**ಕೆಂಗಲ್ಗರು** (ನಾ). ಕೆಂಪು ಕಲ್ಲಿನ ಮೂರ್ತಿ; ಮಾಣಿಕ್ಯದ ವಿಗ್ರಹ: ಮೆಱೆದಳ್ಕಿಂಕಂಬಡೆದೊಸೆದಾ ರತಿಯೆಱೆಯಂ ಪೂಜಿಪ ಕೆಂಗಲ್ಗರುವಿನ ತೆಱನೆನೆ ಯುವತಿ ಕಲಾವತಿ (ಜಯುಕಾ. ೨–೪೮). [ಕೆಂಗಲ್ + ಕರು$_3$]

**ಕೆಂಗಲ್ಮಸಗು** (ಕ್ರಿ). ೧. (ಕಣ್ಣು) ಕೆಂಪೇರು. ೨. (ಅಲಂ) ರೇಗು; ಕ್ರೋಧಗೊಳ್ಳು: ಆ ಮದಕಳ ಕ್ರೂರ ಶೂರ ಸೌರಭೇಯಂಗಳೊಂದು ದಿವಸಮೊಂದೊಂದಱ ಕೆಲಹಂ ಕೇಳ್ದು ಕೆಳರ್ದು ಕೆಂಗಲ್ಮಸಗಿ (ಅರ್ಧನೇ. ೪–೧೨೩ ವ); ದಾಡೆಯ ಕೊನೆಯಿಂದಂಕುರಿಸೆ ಮಿಂಚು ಪೆಱ ನುರಿಯಿಂ ಕೆಂಗಲ್ಮಸಗೆ ಕಾದಿದರ್ ಭೇತಾಳರ್ (ಮಹಾನೇ. ೪–೩೦); ಅದಂ ಕೇಳಿ ಕೆಂಗಲ್ಮಸಗಿ ಭೂಪಾಲನು (ಸಮ್ಯಕೌ. ೪–೪೯). [ಕೆಂಗಲ್$_3$ + ಮಸಗು$_1$]

**ಕೆಂಗವಸಣಿ** (ನಾ). ಕೆಂಪುಬಣ್ಣದ ಹೊದಿಕೆ: ಆ ವೇದಿಕೆಯ ಮೇಗಣ ಕೆಂಗವಸಣಿಯ ಕೀಳ್ಮೊಲೆಯನ್ನು ಹಿಡಿದೆತ್ತಿ (ಬಟ್ಟಅ. ೧೦೭–೨೩). [ಕೆಂ+ ಗವಸಣಿ]

**ಕೆಂಗವಸಣಿಗೆ** (ನಾ). = ಕೆಂಗವಸಣಿ: ಘುಸೃಣರಸದಿಂದಮೆಸೆದಳ್ . . . ಕೆಂಗವಸಣಿಗೆಯಿನಸಮಾಯುಧ ಚಾಪಲೇಖೆಯೆಸೆವಂತೆ (ಜಗವಿ. ೧೦–೧೦೫); ಸೊಗಯಿಸಿದುದು ಶಶಿ ಮಂಡಲ ಸಂಜೆಗೆಂಪಗಲೆ ಕೆಂಗವಸಣಿಗೆಯನು ಉಗಿದಂಗಜನ ಚಕ್ರರತ್ನದ ಚೆಲ್ವಿನೊಗುಮಿಗೆಯಂತೆ (ಕುರಾಸಾಂ. ೨೭–೧೨೩); ನಳಿನಬಾಣಕೆ ರತಿ ಕೆಂಗವಸಣಿಗೆಯ ಕಳೆದಿತ್ತ ವಜ್ರಖೇಟಕವ (ಚಂಪ್ರಸಾಂ. ೧೪–೫೦); ವೇದಿಕೆಯ ಮೇಲೆ ಕೆಂಗವಸಣಿಗೆ ಯೊಳಗಣದನ್ನು ಕಂಡು (ಬಟ್ಟಅ. ೧೦೭–೧೯). [ಕೆಂ + ಗವಸಣಿಗೆ]

**ಕೆಂಗಳವೆ** 'ಕೆಂಗಟಿವೆ' ನೋ.

**ಕೆಂಗಱಿ$_1$** (ನಾ). ಕೆಂಪುಬಣ್ಣದ ಗರಿ: ಕೆಂಗಱಿಯ ಮೊನೆಯಂಬು ಗಳ್ ಕಣ್ದೆಱೆಯಿಸಿದುವು (ಪಂಪಭಾ. ೧೦–೭೩); ಕೆಂಗಱಿಮೂಡಿದ ಭೃಂಗಮಾಲೆ ನೀಳ್ದತ್ತೆನೆ ನೋಡಿದಂ (ಪಂರಾಮಾ. ೧೪–೧೦೬); ಕೆಂಗಱಿಯ ಮಱಿದುಂಬಿ ತಾವರೆಗಂಗವಿಸುವವೊಲು (ಕುವ್ಯಾಭೀ. ೬–೨೫); ಪುಲ್ಲಶರನ ಪಲ್ಲವಶರಕ್ಕೆ ಕೆಂಗಱಿಗಟ್ಟಿದಂತೆ ಕೆಂಬೆಳಗಂ ಕಱಿವ (ರಾಜಶೇ. ೧೩–೫೯ ವ). [ಕೆಂ + ಗಱಿ]

**ಕೆಂಗಱಿ$_2$** (ನಾ). ಒಂದು ಜಾತಿಯ ಮೀನು: ಗಱಿಮೆಱೆವ ಕಾಗೆಂಡೆಯುಯ್ಯರೆಗ ದೊಂಡಿ ಕೆಂಗಱಿ ಹರಳು ಹಾರುವಂ . . . ಪರಿಪರಿಯ ಮೀನ್ಗಳಂ ಗುದಿಗೆಯ್ದರು (ಹಚಕಾ. ೫–೪೫). [← ತಮಿ. ಚೆಙ್ಗರಾ, ಚೆಙ್ಗಾರೈ]

**ಕೆಂಗಱಿಗಣ್** (ನಾ). ಕೆಂಪಾದ ಎವೆಗೂದಲುಳ್ಳ ಕಣ್ಣು: ಕುರುಳು ಜುಂಜುಜುತಲೆಯ ತಗ್ಗಿನ ಕೊರಳ ಕೆಂಗಱಿಗಣ್ಣ ಮೋಱೆಯ ಹರಕು ಗಡ್ಡದ ಕರಿಯೊಡಲ ಕಲಿಮಲಿನ ವಸನದಲಿ (ನಳಚ. ೪–೪). [ಕೆಂಗಱಿ$_1$ + ಕಣ್]

**ಕೆಂಗಱಿಗೋಲ್**, ಕೆಂಗಱಿಗೋಲು (ನಾ). ಕೆಂಪುಗರಿಯುಳ್ಳ ಬಾಣ: ನೆಲನ ಮುಟ್ಟದ ಜಾಳಿಗೆಯ ಹೊಗರೊಗುವ ಕೆಂಗಱಿಗೋಲ ನುಂಡದ ಮೇಲೆ ರಣದಲಿ ಭೀಷ್ಮ ಪವಡಿಸಿದ (ಕುವ್ಯಾಭೀ. ೧೦–೧೧); ಮಿಕ್ಕ ಕೆಂಗಱಿಗೋಲ್ಗಳೊಡಲ ಹೊಕ್ಕ ಮಾತ್ರದಿ ಹೊಱಟಿದೆಯಲ್ಲಿ ರಕುತವ ಮುಕ್ಕುಳಿಸಿತು (ಮೋಹತ. ೩೫–೩೭); ಪಿಡಿದಶೋಕೆಯ ಬಿಲ್ಲು ಚೆಂದಳಿರುಡಿಗೆ ಕೆಂಗಱಿಗೋಲ ಹೊದೆ (ಸಾಳ್ವಭಾ. ೫–೯). **ಕೆಂಗಱಿಗೋಲು**: ಕೆಱೆಯ ತಡಿಯಲೊಂದು ಹುಲ್ಲೆ ಅದ ಕೆಂಗಱಿ ಗೋಲಿನಲಚ್ಚವ ಜಾಣ (ಅವಚಂ. ೨೯೮–೧೩೧೩); ಹೊಳೆವ ಕೆಂಗಱಿ ಗೋಲು ಪುಷ್ಪರತ್ನಗಳು ಚೆಂದಳಿರ್ಗಂಧ ನಿಟಿಲಾಂತರದೆ ಬಲರಾಮನಿಂದೆ ಪೂಜೆಯಕೊಂಡು ಸಮರಸ್ಥಳದೆ ವಿಘ್ನೇಶನಾಡಿದನು (ಮೋಹತ. ೩೮–೫೭); ನರನೆಚ್ಚ ಕೆಂಗಱಿಗೋಲ ಬಚ್ಚಳೆಯ ಪೊಸಮಸೆಯ . . . ನಿಡುಸರಳ್ ಹೆಚ್ಚಿದವು (ಜೈಮಿಭಾ. ೧೩–೧೮). [ಕೆಂಗಱಿ$_1$ + ಕೋಲ್$_1$]

**ಕೆಂಗಱಿಗೋಲು** 'ಕೆಂಗಱಿಗೋಲ್' ನೋ.

**ಕೆಂಗಱೆ** (ನಾ). ಕೆಂಪು ಗುರುತು, —ಕಲೆ: ಕೆಂಗಾಱೆ, ಕೆಂಗಱಿ, ಕೆಂಜೆಡೆ, ಕೆಂಗೊಡೆ, ಕೆಂದಳಿರ್, ಕೆಂಬಸಿಲ್ (ಶಮುದ. ೧೪೨ ಪ್ರಯೋ). [ಕೆಂ + ಕಱೆ$_2$]

**ಕೆಂಗಟಿವೆ**, ಕೆಂಗಳವೆ (ನಾ). ಕೆಂಪು ಅಕ್ಕಿ; ಒಂದು ಬಗೆಯ ನೆಲ್ಲು: ತುಱುಗಕ್ಕೆ ಕಟ್ಟೆಯಂ ಲೋಕದ ನೆಲ್ಗೆ ಕೆಂಗಟಿವೆಯಂ . . . ಪ್ರತಿ ಮಾಡಿದನೋರ್ವ ಜೀಯನೆಂದೇಕೆಯೊ ಮೂಢರೊಳ್ವರ್ (ಸಮಪ. ೧೦–೧೧೭). **ಕೆಂಗಳವೆ**: "ಸಿತ ಶಾಲಿ ಕೆಂಗಳವೆ ಕೆಂಬತ್ತಿ ರಾಜಾನ್ನಮವು ಬೈಲಮೆಂದಿವು ನೆಲ್ಲಭೇದಂಗಳಕ್ಕು" (ಮಂಗರಾ. ೧೧೦–೪). [ಕೆಂ + ಕಟವೆ]

**ಕೆಂಗಾಂಚಾಳ** (ನಾ). ಕೆಂಪು ಕಾಂಚಿವಾಳ; ಕೋವಿದಾರ ವೃಕ್ಷ: "ಕೋವಿದಾರ, ಚಮರಿಕಂ, ಕುದ್ದಾಲಃ, ಯುಗಪತ್ರ –ಅ ಕೆಂಪು ಕಾಂಚಿ ವಾಳದ ಗಿಡ, ಕೆಂಗಾಂಚಾಳ ಹುವ್ವಿನ ಗಿಡ" (ಸಿದ್ಧಾಂತಿ. ೧೧೨). [ಕೆಂ + ಕಾಂಚಾಳ]

**ಕೆಂಗಾಗೆ** (ನಾ). ಕೆಂಪುಕಾಗೆ: ಕರಿಕಾಗೆ ಕಾವ್ಗುಡಲು ಕೆಂಗಾಗೆ ಗೂಗಿಡುವ ನೋಟ (ಸಪೀಗೀ. ೫೮–೧). [ಕೆಂ + ಕಾಗೆ]

**ಕೆಂಗಾಡು** (ನಾ). ೧. ಕೆಂಪಾದ ಅರಣ್ಯಭೂಮಿ; ಕೆಂಪು ಕಾಡು ಭೂಮಿ: ಕರಿಯ ಕುದುರೆನೇರಿ ಕರಿಯವ್ ಸವಾರಿ ಹೊರಟೊ . . . ಅಂತರಗಟ್ಟೆ ಕೆಂಗಾಡಾಗಿಳಿದೊ ಕುದುರೆಯ (ನಾಪದ. ೨೧). ೨. ಕೆಂಪು ನೆಲ, —ಭೂಮಿ: ಯೆರೆಯ ಮತ್ತರು ೪ ಹೊಂಗೆ ೪ ಕೆಂಗಾಡು ೪ ಅನ್ತು ಮತ್ತರು ೧೨ (ಸೌಇಇ. IX–i, ೫೫೧–೪; 1082); ಚಿಕ್ಕ ಸಾವಿ ಯಣ್ಣಂ ಕೆಂಗಾಡು ಗುಣಿಗನ ಮತ್ತರ್ ೫ (ಸೌಇಇ. IX–i, ೧೬೫–೫೨; 1099); ಶ್ರೀ ಕಲಿದೇವಸ್ವಾಮಿಗೆ ಧಾರಾಪೂರ್ವಕಂ ಮಾಡಿಬಿಟ್ಟ ಎ[ರೆ]ಭೂಮಿ ಕೆಂಗಾಡು ಮತ್ತರು (ಸೌಇಇ. XI–ii, ೧೭೪–೫೪; 1127); ಊರಿಂತೆಂಕ ಕರಗೆಯ ದಾರಿಯಿಂ ಬಡಗಕೆಂಗಾಡು ಕಂಬ ೭೦ (ಎಇ. XIX, ೧೯೭–೩೬; 1210). 'ಕೆಸುಕಾಡು' ಪರಾ. [ಕೆಂ+ ಕಾಡು$_2$]

**ಕೆಂಗಾವಿ** (ನಾ). ಕೆಂಪುಬಣ್ಣದ ಮಣ್ಣು: ಕತ್ತೆ ಕೆಂಗಾವಿಯಲಿ ಎಷ್ಟು ಹೊತ್ತುರುಳಿದರೆ ಉತ್ತಮೋತ್ತಮ ಅಶ್ವವಾಗುವುದು ಹೇಳಯ್ಯ (ಕೋಗಿಲೆ. ೬೭–೫). [ಕೆಂ + ಕಾವಿ]

**ಕೆಂಗಾಱೆ** (ನಾ). ಕೆಂಪಿನ ಆಭರಣ (?): ಕೆಂಗಾಱೆ, ಕೆಂಗಱಿ, ಕೆಂಜೆಡೆ, ಕೆಂಗೊಡೆ, ಕೆಂದಳಿರ್ (ಶಮುದ. ೧೪೨ ಪ್ರಯೋ). [ಕೆಂ + ಕಾಱೆ ?]

**ಕೆಂಗಿ** (ನಾ). (ಪಗಡೆಯ) ಕೆಂಪುಕಾಯಿ (?): ದುಗವನೆಸೆ ಭಾರೆಗಳ ನಿಡುಯಿಡು ನೆಗೆದು ಹೊಯ್ಬಾಣಂತಿ ಕಾಯ್ಗಳ ಚಿಗುಟೆ ಬಿಡು ಹಸುರೇರಿತದರಸು ಕೊಲೆಗೆ ಕೆಂಗಿಗಳ ವಿಗಡದ ರುತುಪರ್ಣಕನ ಬೋಸಟೆ ನಗೆಗೆ ಕುಂದದಿರು (ಅಂಬಿಕಾ. ೪೮–೬೧). [?]

**ಕೆಂಗಿಡಿ** (ನಾ). ಕೆಂಪುಕಿಡಿ : ರೌದ್ರಮಪ್ಪ ಕೆಯ್ದುಗಳಿನಗುರ್ವಿನದ್ಭುತ ದಿನುರ್ವಿದ ಕೆಂಗಿಡಿಗಳ್ ಪಳಂಚಿ (ಪಂಪಭಾ. ೧೦-೩೫); ಕಂಗಳಲಿ ಕೆಂಗಿಡಿ ಸುರಿಯೆ ವೀರಾವೇಶದಲಿ ಮಸಗಿದನು ಕಲಿಭೀಮ (ಕುವ್ಯಾಕ. ೧೨-೧೦); ಕಡಿದಾಡುವ ಖಡ್ಗಧಾರೆಯಿಂದುದಿರ್ವ ಕೆಂಗಿಡಿಗಳ ನೋಡುತ (ಮೋಹತ. ೨೯-೧೩); ಮೂಡಿದವು ಕೆಂಗಿಡಿಯ ಕಾರ್ಬೊಗೆಗೂಡಿ ಹೊಳೆವಾ ಖಡ್ಗಘಾತದಿ (ಅಂಬಿಕಾ. ೯-೩೧). [ಕೆಂ + ಕಿಡಿ]

**ಕೆಂಗಿಡಿಗಣ್** (ನಾ). ಕೆಂಪಾದ ಕಿಡಿಕಾರುವ ಕಣ್ಣು ; ಕೆಂಗಣ್ಣು ; ಉರಿಗಣ್ಣು : ಭೋಗಿಭೂಷಣ ಕೋಪವ ತಾಳಿ ಕಿಡಿಕಿಡಿಯೋಗಿ ಕೆಂಗಿಡಿಗಣ್ಣ ತೆಱೆದ (ಮೋಹತ. ೭-೩೪); ಕೆಂಗಿಡಿಗಣ್ಣ ಕೇಸರಿಯ ಮಸ್ತಕವ ಬಾಣಂಗಳಿಂದಿಳುಹಿ ತಾಳ್ದವರು ಕೆಂಗೊಳಿಸಿದರು ಕಾಂತಾರದೆ (ಮೋಹತ. ೧೯-೩೦). [ಕೆಂಗಿಡಿ + ಕಣ್]

**ಕೆಂಗಿಡಿಗಱೆ** (ಕ್ರಿ). ಕೆಂಗಿಡಿಗಳನ್ನು ಸುರಿಸು ; ಕೆಂಡವನ್ನು ಕಾರು : ಕೆಂಗಿಡಿಗಱೆಯುತ್ತ ಪರಿತಂದು ಮದನನ ನುಂಗಿ ನೀಗುರ್ಡಿದಿಡುದೆಂದೆನಲು ಇಂಗಿತವಱಿದು ಶ್ರೀಕೃಷ್ಣಚಕ್ರದೊಳಿಟ್ಟು ಭಂಗಿಸಿದನು ಮಹಾಯುಧವ (ಮೋಹತ. ೩೮-೨೦). [ಕೆಂಗಿಡಿ$_1$ + ಕಱೆ$_1$]

**ಕೆಂಗಿಡಿಗೋಲ್** (ನಾ). ಕೆಂಗಿಡಿಗಳನ್ನು ಕಾರುವ ಬಾಣ : ಹಿಡಿಯೆನ್ನ ವರ ವ್ಯರ್ಥವಾಗದೆಂದೆನುತೆ ಕೆಂಗಿಡಿಗೋಲ್ಗಳಿಂದೆ ಹೇಱಿದನು (ಮೋಹತ. ೩೮-೪೬). [ಕೆಂಗಿಡಿ + ಕೋಲ್$_1$]

**ಕೆಂಗಿಡಿಯ** (ನಾ). ಕೆಂಗಿಡಿಗಳನ್ನುಳ್ಳವನು ; ಅಗ್ನಿ : "ಕೆಂಗಿಡಿಯನ ಮರ್ದ ಮರಗೂಳ ಕಾರ್ಬಟ್ಟಿಯವನಂಗವಿಸಲಗಿನೆನೆ ಕಿಚ್ಚು" (ಕಬ್ಬಕೈ. ೨೦); "ಕೆಂಗಿಡಿಯನೆಲರ್ಗೆಳೆಯ ತಗರ್ದೇರ ಪೊಗೆವಳಯಿಗೆಯನು ಕಾರ್ವಟ್ಟೆಗನಿವ್ವೆದೆಯನಲನ ನಾಮವು" (ಶಬ್ದಮಂ. ೧೨). [ಕೆಂಗಿಡಿ + -ಅ$_7$]

**ಕೆಂಗು** (ಕ್ರಿ). (?) : ತೆಂಗು ಕೊಂಗು ಕಾದಲರಲರಂಚೆಗಳ್ ಕೆಂಗುವ ಕೊಂಚೆಬೆಂಚೆಗಳಿಂ ಭೃಂಗ ಕುರಂಗ ಪುರುಳಿಗಿಳಿನಳಿನಮುನಂಗೊಳಲೊಪ್ಪಿಹವಲ್ಲಿ (ಅನಂಚ. ೧-೧೯). [?]

**ಕೆಂಗುಡಿ** (ನಾ). ೧. ಕೆಂಪಾದ ಕುಡಿ, —ಚಿಗುರು : ಸುಕವಿಜನಮನಃಪದ್ಮಿನೀ ರಾಜಹಂಸನ ಕೀರ್ತಿಲತೆಯ ಕೆಂಗುಡಿಯೆಂಬಂತಾನುಂ (ಧರ್ಮಾಮೃ. ೮-೨೦೬ ಅಡಿಟ). ೨. ಕೆಂಪು ಧ್ವಜ : ನರಸಿಂಗಂ ತಳ್ತಿಱಿಯೆ ನೆಗಟ್ಟ ನೆತ್ತರ್ ನಭದೊಳ್ ಕೆಂಗುಡಿ ಕವಿದಂತಾದುದು (ಪಂಪಭಾ. ೧-೩೪); ಮನ್ಮಥನ ಬೀಡಿನ ಕೆಂಗುಡಿಯೆಂಬ ಚೆಲ್ವಿನಿಂ ಸೊಗಯಿಪ ಪಲ್ಲವ ಪ್ರಕರದಿಂ (ಧರ್ಮಾಮೃ. ೨-೧೪೩); ತೊನೆಯುತ್ತ ಮೊಪ್ಪು[ಗುಮೆ] ಕೆಂಗುಡಿಗಳ್ ಮಣಿಹರ್ಮ್ಯದೊಳ್ (ಶಾಂತೀಶ್ವ. ೧೩-೧೫೫); ಪಂದಳಿರ ತೋರಣಂ ತಳ್ತೊಂದಿದ ಕೆಂಗುಡಿಯ ಪು[ಪಾಠಾಂ. ಮ]ಡಿಯ ಮುತ್ತಿನ ಕೊಡೆ (ಶಮುದ. ೧೮೨ ಪ್ರಯೋ). ೨. ಹವಳ : (ಕ). [ಕೆಂ + ಕುಡಿ$_2$]

**ಕೆಂಗುರಿ** 'ಕೆಂಗುಱಿ' ನೋ.

**ಕೆಂಗುರುಳ್**, ಕೆಂಗುರುಳು (ನಾ). ಕೆಂಪುಕೂದಲು ; ಕೆಂಗೂದಲು : ಕೆಂಗುರುಳ್ಗಳೊಲೆವ ಮುಂದಲೆಯ ಕಂಪನಾಘ್ರಾಣಿಸಿ (ಜೈಮಿಭಾ. ೧೮-೨೦). **ಕೆಂಗುರುಳು** : ಕೆದರ್ದ ಕೆಂಗುರುಳುಗಳ (ವೆಂಕಾರಾ. ೫-೩-೫). [ಕೆಂ + ಕುರುಳ್]

**ಕೆಂಗುರುಳು** 'ಕೆಂಗುರುಳ್' ನೋ.

**ಕೆಂಗುಱಿ**, ಕೆಂಗುರಿ (ನಾ). ಕುರಿಗಳಲ್ಲಿ ಒಂದು ಜಾತಿ; ಕೆಂಪುಕುರಿ: "ಅವಿಕಂ ಕೆಂಗುಱಿ (ಒಷಧಿ. ೧೧). **ಕೆಂಗುರಿ** : ಕುರಿಗಳಲ್ಲಿ ಕೆಂಗುರಿ, ಜವಾರಿ, ಯೆಳಗ ಎಂಬ ಮೂರುಜಾತಿಗಳಿವೆ (ಕಭಾಗ. ೫೯). [ಕೆಂ + ಕುಱಿ$_2$]

**ಕೆಂಗೂದಲ್** (ನಾ). = ಕೆಂಗುರುಳ್ : ಕೆಕ್ಕಳಗಣ್ ಕೆದಱಿದ ಕೆಂಗೂದಲ್ ಮೊಕ್ಕನೊಸಲ್ ನಿಡುಕುಂಗೋಱ್ (ಜಯಕಾ. ೭-೨೭); ಕೊರ್ಬಿದ ಶರೀರೆ ಸೂರ್ಕ್ಷ್ಮಾಗೆ ಕೆಂಗೂದಲುರ್ಬುಜವ್ವನೆ ಕಂಪನಸ್ವನೆ (ಚಬಪು. ೧೦-೨೫). [ಕೆಂ + ಕೂದಲ್ (< ಕೂಂದಲ್)]

**ಕೆಂಗೂಳು** (ನಾ). ಕೆಂಪು ಅನ್ನ ; ಬಲಿಕೊಡುವುದಕ್ಕಾಗಿ ಕೆಂಬಣ್ಣ ಬೆರಸಿದ ಅನ್ನ : ಸೂಸಲುಂಡಲಿಗೆ ಪಾಲೌಗು ಪಾಯಸ ಬೆಣ್ಣೆಗಾಸಿದ ತುಪ್ಪ ಕೆಂಗೂಳರಾಸಿ ರಂಜಿಸಲು (ಕುರಾಸಾಂ. ೨೬-೨); ಚಿಗುರೆಲೆ ಕೆಂಗೂಳು ಪಚ್ಚಾಯ ಮದೆಯಿಂದ ದಿಗುಬಲಿಗೊಟ್ಟರ್ದುದಲ್ಲಿ (ಭರಚ. ೨೦-೧೩೦); ಮರಣವಡೆದರಿಗೆ ಬಲಿಗೊಟ್ಟ ಕೆಂಗೂಳು ಹರಹಿರೆ ಕೆಂಪಿನ ಹೂವು (ಜೀವಂಸಾಂ. ೬-೬). [ಕೆಂ + ಕೂಳು$_1$ (< ಕೂೞ್$_1$)]

**ಕೆಂಗೆಂಡ** (ನಾ). ಕೆಂಪುಕೆಂಡ ; ನಿಗಿನಿಗಿ ಕೆಂಡ : ಉರಿವ ವೆಂಕೆಯ ಕಡೆಯೊಳುಳಿದ ಕೆಂಗೆಂಡಮೆನೆ ತರಣಿಮಂಡಲಮೆಸೆದುದು (ಜೈಮಿಭಾ. ೧೭-೨೦); ಕೋಪದಿಂದ ಕಣ್ಣುಗಳಲ್ಲಿ ಕೆಂಗೆಂಡ ಕಿಡಿಗಳು ಕಾರುತ್ತಿರಲು (ನನ್ನೂರು. ೩೧೦). [ಕೆಂ + ಕೆಂಡ]

**ಕೆಂಗೆಂಪು** (ನಾ). ಅತಿಶಯವಾದ ಕೆಂಪು : ಹೊಳೆವ ಕೆಂಗೆಂಪುಗಳ ಪರೌಳಿಯ ಲಲಿತ ರತ್ನದ ರೋಚಿಗಳ ಗಜಗಲಿಸುವಂಬಿನ ವಾಯಿಧಾರೆಯ ಕಿಡಿಯ ಕಾಂತಿಗಳ (ಕುವ್ಯಾದ್ರೋ. ಓರಿಇ. ಪರಿ. ೨೯೪). [ಕೆಂ + ಕೆಂಪು$_1$]

**ಕೆಂಗೊಡಲಿ** (ನಾ). (ರಕ್ತದಿಂದ) ಕೆಂಪಾದ ಕೊಡಲಿ : ಭೀಷ್ಮತೆವೆತ್ತು ರಂಜಿಸಿತು ಹಗಲಿನೊಳು ಕೆಂಗೊಡಲಿ (ಶ್ರೀರಾಮಾ. ೫೨-೬೬೫). [ಕೆಂ + ಕೊಡಲಿ]

**ಕೆಂಗೊಡೆ** (ನಾ). ಕೆಂಬಣ್ಣದ ಕೊಡೆ : ಕೆಂದಾವರೆಗಳ್ ಕೆಂಗೊಡೆಗಳಂದಮುಂ ಪಡೆವಿನಂ (ಕಬ್ಬಿಕಾ. ೨೧೦). [ಕೆಂ + ಕೊಡೆ$_2$]

**ಕೆಂಗೊನರ್** (ನಾ). ಕೆಂಪು ಚಿಗುರು : ನನೆದೋಱಿತ್ತ ದಿರ್ಗಂತಿ ಮುಂತೆ ಪನೆಗಳ್ ತೋರ್ಪಂತೆ ತೆಂಗಾಳಿ ಕೆಂಗೊನರೊಳ್ ದಟ್ಟಡಿಯಿಟ್ಟುದು (ಅನಂಪು. ೬-೭೨). [ಕೆಂ + ಕೊನರ್$_2$]

**ಕೆಂಗೊಲೆ** (ನಾ). ಕೆಂಪಾದ ಗೊನೆ : ಪೊದಟ್ಟ ಪೊಸನೆಯ್ದಿಲ ಕಂಪನೆ ಬೀಱಿ ಕಾಯ್ತ ಕೆಂಗೊಲೆಯೊಳೆ ಜೋಲ್ವ ಶಾಳಿ (ಪಂಪಭಾ. ೧-೫೨). [ಕೆಂ + ಗೊಲ್$_2$]

**ಕೆಂಗೋಡಗ** (ನಾ). ಕೆಂಪುಕೋತಿ : ಕೆಂಗೋಡಗದ ತೆರದಿ ಕೆದರಿ ಮುಖದೇಶದೊಳಗಿಂಗಳಗಳಂತೆಸೆವ ನೇತ್ರದಿಂ (ವೆಂಕಾರಾ. ೫-೧೦-೬). [ಕೆಂ + ಕೋಡಗ]

**ಕೆಂಗೋರಟೆ** (ನಾ). ಕೆಂಪು ಗೋರಂಟೆ : "ಕುರವಕಃ – ಕೆಂಗೋರಟೆ" (ಓಷಧಿ. ೩೬). [ಕೆಂ + ಗೋರಟೆ (< ಗೋರಂಟೆ)]

**ಕೆಂಗೋಲ್**$_1$, ಕೆಂಗೋಲು (ನಾ). ಕೆಂಪುಗರಿಯನ್ನುಳ್ಳ ಬಾಣ(?). **ಕೆಂಗೋಲು** : ತುಳುಕಿದನು ಕೆಂಗೋಲನಿನಮಂಡಲಕೆ (ಕುವ್ಯಾಅ. ೨೧-೨೯); ಷಡುರಥರು ತನತನಗೆ ಕೆಂಗೋಲಿನಲೆ ಮುಮ್ಮೊನೆಯ ಬೋಳೆಯ ಸರಳಿನಲಿ ಸಾಧನಸಮಗ್ರರು ಶಿಶುವನೆಚ್ಚರು (ಕುವ್ಯಾದ್ರೋ. ೬-೧೧). [ಕೆಂ + ಕೋಲ್$_1$]

**ಕೆಂಗೋಲ್**$_2$ (ನಾ). ಕೆರಳುವಿಕೆ; ಉದ್ರೇಕ. 'ಕೆಂಗೋಲ್ಕೊಳ್', 'ಕೆಂಗೋಲ್ಸಗು' ಪರಾ. [?]

**ಕೆಂಗೋಲು** 'ಕೆಂಗೋಲ್$_1$' ನೋ.

**ಕೆಂಗೋಲ್ಕೊಳ್** (ಕ್ರಿ). ಕೆರಳು ; ಉದ್ರೇಕಗೊಳ್ಳು : ಪೊಂಗುವುದು ಗಡತಿಕೋಪದೆ ಕೆಂಗೋಲ್ಕೊಳ್ವುದು ಗಡಿಂದ್ರಜಾಲದ ಸಿಂಗಂ ತಾಂ ಗಡ ಪರಿಗುಂ ಗಡ (ಪಂಚತಂ. ೨೫೨-೨೨); ಕವಿತರ್ಪ ನೆರವಿಯಂ ಕನಲವೋರಿಗಳ್ಕಂಡು ಬೆರ್ಚಿ ಕೆಂಗೋಲ್ಕೊಂಡೋಡುವುದುಂ (ಸುಕುಮಾ. ೬-೨). [ಕೆಂಗೋಲ್$_2$ + ಕೊಳ್$_1$]

**ಕೆಂಗೋಲ್ಮಸಗಿಸು** (ಕ್ರಿ). ಕೆರಳಿಸು; ಉದ್ರೇಕಗೊಳಿಸು (?): ಕೆಲಬರ್ ಮಾರ್ತಳಂ ಬೊಯ್ವಾರುತ್ತುಂ ವೃಷಭಂಗಳಂ ಕೆಂಗೋಲ್ಮಸಗಿಸುತ್ತುಂ ಬರೆ (ಜಗವಿ. ೪–೮೦ವ).
[ಕೆಂಗೋಲ್ಮಸಗು + –ಇಸು$_3$]

**ಕೆಂಗೋಲ್ಮಸಗು** (ಕ್ರಿ). ಕೆರಳು; ಕೋಪಗೊಳ್ಳು; ಉದ್ರಿಕ್ತವಾಗು: ವಿರಳವಾದ ರೂಪಮಂ ಕಂಡು ಕೆಂಗೋಲ್ಮಸಗಿದ ಪಯನಾವು ಪರಿದೆಯ್ವುದುಮಲ್ಲಿನೊಂದು ಬಿದ್ದಿರ್ದ ಮುನಿಯಂ ಕಂಡು (ಚಾವುಂಪು. ೨೬–೧೨); ಪಲವು ದಿವಸಮಾಹಾರಂಬಡೆಯದೆ ಕೆಂಗೋಲ್ಮಸಗಿದ ಸಿಂಹಕ್ಕೆ ಪೂಣಿಗತನದಿಂದೇನಾನುಮೊಂದಂ ನುಡಿದೆನಪ್ಪೊಡೆ (ಪಂಚತಂ. ೧೬೫–೨೧); ಸಿಂಹನಂತೆ ಕಂಗನೆ ಕನಲ್ದು ಕೆಂಗೋಲ್ಮಸಗಿ ಪೋಲೆತ್ತಿ ನೂಂಕಲನುಗೆಯ್ದು ಬರಲ್ (ಶಾಂತೀಶ್ವ. ೮–೯೨ವ). 'ಕೆಂಗಲ್ಮಸಗು' ಪರಾ.
[ಕೆಂಗೋಲ್$_2$ + ಮಸಗು$_1$]

**ಕೆಂಚ$_1$**, ಕೆಂಜ (ನಾ). ೧. ಕೆಂಪಾದುದು; ಕೆಂಪುಬಣ್ಣವುಳ್ಳದು. 'ಕೆಂಚದಲೆಯ' ಪರಾ. ೨. ಕೆಂಪು ಮೈ ಬಣ್ಣದವನು; ಕೆಂಪಾಗಿರುವವನು; ಕೆಂಪ: ಒಬ್ಬ ಕೆಂಚನೊಬ್ಬ ಕರಿಕನೊಬ್ಬ ಶುದ್ಧಧವಳಿತನೆಂತಯ್ಯಾ (ಬಸವ. ೫೪೩); ಕರಿಕಂ ದ್ವಿಜರೊಳ್ ಕೆಂಚಂ ಪರಜಾತಿಯೊಳಾಗೆ ತಲೆಯನೂಜುವರ್ (ಅನಂಪು. ೧೩–೧೬); ನಿಡಿಯಂ, ಗುಜ್ಜಂ, ಕೆಂಚಂ, ಕರಿಯಂ (ಶಮದ. ೧೨೬ಪ್ರಯೋ); ರೂಪಂ ನೋಡಿ ಕೆಂಚಂ ಕರಿಕಂ ಶ್ಯಾಮಾಂಗನೆಂದಿವು ಮೊದಲಾದುವನೆಂಬುದು ರೂಪಿನೊಳಪ್ಪ ಸತ್ಯಮೆಂಬುದು (ಪಸಾರ. ೧೫೬–೧೦); "ಬ್ರಹ್ಮ" (ಬಸವ-ಕೋಶ). ೨. ಚೆಲುವ; ಸುಂದರ: "ಕೆಂಚ – ಚೆಲುವ" (ಜಾನಕೋ. ೪೦); ಜರದ ರುಮಾಲವನ್ನು ಸುತ್ತದ ಬೆಳುವಲದ ಕೆಂಚ (ಚೆಲುವ) ಇಲ್ಲವೆಂದರೆ ಅತಿಶಯೋಕ್ತಿಯಾಗದು (ಕನ್ನಜಾ. ೧೬೮). ೩. "ಅಶಿಕ್ಷಿತ ಮನುಷ್ಯ; ಅಸಂಸ್ಕೃತ ವ್ಯಕ್ತಿ" (ಕಸ್ತೂಕೋ. ೨೫೪). **ಕೆಂಜ**: ೧. ಬಣ್ಣದಲ್ಲಿಯೂ ಅವನು ಅಷ್ಟು ಬಿಳಿಯನೂ ಅಲ್ಲ, ಅಷ್ಟು ಕೆಂಜನೂ ಅಲ್ಲ (ಜಗತ್ತು. ೧೫೪).
[ಕೆಂಚು + –ಅ$_7$]

**ಕೆಂಚ$_2$** (ನಾ). ಒಬ್ಬಾತನ ಹೆಸರು: ಬಿದಿರ್ಗಕದ ಏಚಗಾವುಣ್ಡನ ತಮ್ಮ ಕೆಞ್ಚ (ಎಕ. XV, ಹೊಳೆನ. ೧೨೯–೫; 970); ಆತನನ್ವಯದೊಳ್ ಸಂಗ್ರಾಮಜಯಿ ಕೆಂಚನೆಂಬೊನಿಳಾಮಹಿತಂ (ಸೌಇಇ. XI–I, ೪೫–೨; 980).
[?]

**ಕೆಂಚಗಾವುಂಡ** (ನಾ). ಒಬ್ಬಾತನ ಹೆಸರು: ಮರ್ಡ್ಡಲಿಯ ಕೆಂಚಗಾವುಣ್ಡನ ಮಕ್ಕಳು (ಎಕ. VII, ಶಿವಮೊ. ೧೦–೩೧; 1085).
[ಕೆಂಚ$_2$ + ಗಾವುಂಡ(< ಗಾಮುಂಡ)]

**ಕೆಂಚಗೆ** (ಅ). ಕೆಂಪಗೆ; ಕೆಚ್ಚಗೆ: ಅಂಗೈ ಕೆಂಚಗಾಗುವಷ್ಟು ಕೈಚಪ್ಪಾಳೆ ಬೇರೆ (ಚೆಂಗೂಲಿ. ೪೮).
[ಕೆಂಚು + –ಅಗೆ$_3$]

**ಕೆಂಚಣಿಲು** (ನಾ). ಕೆಂಪುಬಣ್ಣದ ಅಳಿಲು: ಆಸಡಿಯಂ ಲಕ್ಷ್ಮಿಯುಮಂ ಲೇಸೆನಿಸಿದ ವಿಷ್ಣುಕ್ರಾಂತೆಯುಂ ಸಮನಾಗಲ್ಕೋಸರಿಸದೆ ಕಟುಯಂ ಕುಡೆ ಸಾಸದೆ ಕೆಂಚ [ಪಾಠಾಂ. ದ, ಬ]ಣಿಲು ತಿಂದ ವಿಷಮಂ ಕಳೆಗುಂ (ಖಮುದ. ೧೩–೮೨).
[ಕೆಂಚು + ಅಣಿಲು$_1$ (< ಅಣಿಲ್)]

**ಕೆಂಚದಲೆ** (ನಾ). ಕೆಂಪುತಲೆ. 'ಕೆಂಚದಲೆಯ' ಪರಾ.
[ಕೆಂಚು + ತಲೆ$_1$]

**ಕೆಂಚದಲೆಯ** (ನಾ). ಕೆಂಚುಬಣ್ಣದ ತಲೆಯುಳ್ಳವನು: ನಸು ಕೆಂಚದಲೆಯನಕ್ಕುಂ ಜೀವಂ (ಜಾತತಿ. ೨–೨೪).
[ಕೆಂಚದಲೆ + –ಅ$_7$]

**ಕೆಂಚನೆ** (ಅ). = ಕೆಂಚಗೆ: ಒಂದಕ್ಕೊಂಬತ್ತು ನುಡಿದು ಕಣ್ಣ ಕೆಂಚನೆ ಮಾಡಿ ಗಂಡುಗೆದಱಿ (ಬಸವ. ೪೪೬).
[ಕೆಂಚು + –ಅನೆ$_2$(< –ಅನೆಯ$_2$)]

**ಕೆಂಚಲು** 'ಕೆಚ್ಚಲ್' ನೋ.

**ಕೆಂಚಿ$_1$** (ನಾ). ೧. ಕೆಂಪಗೆ ಇರುವವಳು; ಚೆಲುವೆ: ಕುರುಡಿ, ಕಿವುಡಿ, ಗುಜ್ಜಿ, ಕೆಂಚಿ (ಭಾಷಾಭೂ. ೧೯೧ ಅಡಿಟ). ೨. "ಅಸಂಸ್ಕೃತೆ": (ಕಸ್ತೂಕೋ. ೨೫೪).
[ಕೆಂಚು + –ಇ$_2$]

**ಕೆಂಚಿಗ** 'ಕೆಂಜಿಗೆ$_1$' ನೋ.

**ಕೆಂಚಿಗಣ್ಯ** (ನಾ). ಒಬ್ಬಾತನ ಹೆಸರು: ಕುಪ್ಪೆಸೆಯ ಮನವಸೆಯರ ಪೊರಿವಯ್ಯ × × ಕೇಸಿಮಾಣಿ ಕೆಂಚಿಗಂಣ್ಯಗಾಳು ಮದಟನಾಗಿ (ಎಕ. VIII, ಸೊರಬ. ೮೮–೬; 912).
[?]

**ಕೆಂಚಿಗೆ** 'ಕೆಂಜಿಗೆ$_1$' ನೋ.

**ಕೆಂಚು** (ನಾ). ೧. ಕೆಂಪುಬಣ್ಣ: ಕೆಂಚು, ಗುಜ್ಜು, ಬೆಜ್ಜು (ಶಮದ. ೨೧೧ ಪ್ರಯೋ); "ರಕ್ತಿ, ರಕ್ತಿಮಾ, ರಾಗಃ – ಈ ೩ ಕೆಂಚುಂ, ಪ್ರೀತಿಯುಂ" (ಕಾಶಕ್ಯ. ೧೫೯). ೨. (ಕರಾ) ಗರ್ವ; ಅಹಂಕಾರ.
[ಕೆಂ + –ಚು]

**ಕೆಂಚುದಲೆ** (ನಾ). = ಕೆಂಚದಲೆ: ಪಟ್ವಿಕ ಮೂಗಿನ ಮರವ್ರಲಿ ವೊಟ್ಟೆಯ ಕುಸಿಗೊರಲ ಕೆಂಚುದಲೆ [ಪಾಠಾಂ. ಕೆಂದಲೆಯ] ನವಿರ ಕರಂ (ಕಾವ್ಯಾವ. ೨೧೦).
[ಕೆಂಚು + ತಲೆ$_1$]

**ಕೆಂಚುಮಿಾಸೆ** (ನಾ). ಕೆಂಪುಮಿಾಸೆ: ಕೆಂಗಂಗಣ್ಣ ಮೋಱೆಯ ಹರಕುಗಡ್ಡದ ಕೆಂಚುಮಿಾಸೆಯ [ಪಾಠಾಂ. ಕರಿಯೊಡಲ]ಕಲಿ ಮಲಿನ ವಸನದಲಿ (ನಳಚ. ೪–೪).
[ಕೆಂಚು + ಮಿಾಸೆ]

**ಕೆಂಚೂಚು** (ನಾ). ಕೆಂಪುಕೊಕ್ಕು, —ಚುಂಚು: ಮೈ ಹಸಿರು ಕೆಂಚೂಚು ಕರಿಯ ಕೊರಳು ಪಚ್ಚೆ, ಮಾಣಿಕ, ಕೆಚ್ಚನೀಲ ಹರಳು (ಗಂಗಾತ. ೨೮–೧೧).
[ಕೆಂ + ಚೂಚು (< ಚುಂಚು)]

**ಕೆಂಚೆ** (ನಾ). ಕೆಂಪಾಗಿರುವವಳು; ಚೆಲುವೆ: ಕೆಂಚೆ ಕೇಳಧಿಕ ಕೇವಲ ಜಾಣೆ (ಮೋಹತ. ೧೯–೨); ಅಂಚುಗುಪ್ಪಟ್ಟೆ ಸೆರಗಿನ ಸೀರೇ ನುಟ್ಟೆ ಕೆಂಚೇರ ಸೋಬನಕೆ ಕರಸವ್ವ (ನಾಪದ. ೧೧೪); ಕೆಂಚೇರು ಮೊಸರ ಕಡಿದಾರೋ (ಕನ್ನಜಾ. ೩೩೬).
[ಕೆಂಚು + – ಎ$_2$]

**ಕೆಂಜ** 'ಕೆಂಚ' ನೋ.

**ಕೆಂಜಂಜೆ** (ನಾ). ಕೆಂಪು ಸಂಜೆ: ಕೆಂಜಂಜೆ, ಚೆಂಜಂಜೆ (ಶಬ್ದಾನು. ೩೪೩ ಪ್ರಯೋ).
[ಕೆಂ + ಸಂಜೆ]

**ಕೆಂಜಗ$_1$** 'ಕೆಂಜಿಗೆ$_1$' ನೋ.

**ಕೆಂಜಗ$_2$** 'ಕೆಂಜಿಗೆ$_2$' ನೋ.

**ಕೆಂಜಡೆ**, ಕೆಂಜೆಡೆ (ನಾ). ಕೆಂಪುಜಡೆ; ಕೆಂಪು ಕೂದಲಿನ ಜಡೆ: ಚಿನ್ನಪೂಗಳೊಳ್ ತುಱುಗಿದ ಚೆನ್ನಕೆಂಜಡೆ (ಸುಕುಮಾ. ೯–೯೯); ಸುಲಿಪಲ್ ಕೆಂಜಡೆ ನಾರಸೀರೆಯುಜಿನಂ ಯಜ್ಞೋಪವೀತಂ (ಗಿರಿಕ. ೧–೬೮); ಭರಿತ ಪರಿಮಳದಂಗವಟ್ಟದ ಜಡಿದ ಕೆಂಜಡೆಯ (ಕುವ್ಯಾಕ. ೬–೧೬). **ಕೆಂಜೆಡೆ**: ಮಿಸುಗುವ ಕೆಂಜೆಡೆಗಳ್ ರಂಜಿಸುತಿರ್ದುದು (ಕಾದಂಪೂ. ೬೩೦); ಕೆಂಜೆಡೆಯೊಳ್ತಗುಳ್ದ ಪಲವಂದದ ಚೆಂದದ ಚಿನ್ನಪೂಗಳ್ (ಸುಕುಮಾ. ೧೦–೩೮); ಹೊಳೆವ ಕೆಂಜೆಡೆಗಳ ಮಣಿಮುಕುಟದ ಒಪ್ಪುವ ಸುಲಿಪಲ್ಲ ನಗೆಮೊಗದ (ಮಹಾದೇ. ಬ. ೩೨–೬೮); ಕೆಂಜೆಡೆಯ ಚಂದ್ರಕಳೆಯರಸನೊಪ್ಪುತ್ತಿರಲು (ಬಸರ. ೧–೫).
[ಕೆಂ + ಜಡೆ]

**ಕೆಂಜರಿ** (ನಾ). (?): ಮಂಜಿಷ್ಟ ಕೆಂಜರಿ ಮಂಜಷ್ಟ ಸ್ರೋಗಿತ ಪಂಚಾ (ದೇವಾಂಪು. ೪–೧೬೧).
[?]

**ಕೆಂಜರಿಗಣ್ಣ** (ನಾ). ಒಂದು ಬಗೆಯ ಪಕ್ಷಿ: ಬೆಳುವ ಬೆಂಚಗ ಬೆಕ್ಕುಬಕ ಮಿಾನ್ಪುಲಿಗ ಕೆಂಜ [ಪಾಠಾಂ. ಮಂಜು]ರಿಗಣ್ಣ ಶಿಖಿ ಮಡಗೊಳಲೆ ಮುಖ್ಯ ವಿಹಂಗವಿವೆ ವೈದೇಹಿ ನೋಡೆಂದ (ತೊರರಾ. ೩–೧–೩೩).
[ಕೆಂಜರಿ + ಕಣ್ + –ಅ$_7$]

**ಕೆಂಜಲ, ಕೆಂಜಳ** (ನಾ). ೧. ಕೆಂಪು ನೀರು : ಇಱಿದಾಡಿ ನೆತ್ತರವು ಹೂಡೆಯಿಂ ಬೀಳ್ವ ಕೆಂಜಲದಂತೆ ಸುರಿವುತ್ತ (ಪ್ರಾಭರಾ. ೧೪-೩೫). **ಕೆಂಜಳ** : ೨. ನೆತ್ತರು ; ರಕ್ತ : ವರ ವಜ್ರದುಂಬಿಯ ಬಳಗ ಕೊಱೆ ವಂದದಲಿ ಮೊಗದವು ಬಗಲ ಕೆಂಜಳವ (ಅಂಬಿಕಾ.೧೮-೩೫).[ಕೆಂ+ಜಲ$_1$]

**ಕೆಂಜಳ** 'ಕೆಂಜಲ' ನೋ.

**ಕೆಂಜಾಜಿ** (ನಾ). ಕೆಂಪು ಜಾಜಿ : ಕೆಂಜಾಜಿಯರಲ ಪಸೆಯೊಳ್ (ಉದ್ಭಟ. ೬-೫೨) ; ಕೆಂಜಾಜಿ ನಾಗಸಂಪಗೆ ಬಂದುಗೆ . . . ಮಂಜರಿಗಳಿನರ್ಚಿಸಿದರು (ಶ್ರೀಪಾಲ. ೧೨-೩೦) ; ಬಿರಿದ ಕೆಂಜಾಜಿಯೆಂಬುವ ಪುಷ್ಪದಂಗಡಿ ಪರುಠವಿಸಿರ್ದುದು (ಮೋಹತ. ೩-೧೫) ; ಬಾಲೆ ಬಂದೊರ್ವಳರಸಗೆ ಕೆಂಜಾಜಿ ಸರಗೊಡುವಾಗ ಕೆಂಜಾಜಿ ಜಗುಳಿತು (ಭರತ. ೫-೩೭). [ಕೆಂ + ಜಾಜಿ (< ಜಾದಿ)]

**ಕೆಂಜಾಯ** (ನಾ). ಕೆಂಪು ಛಾಯೆ ; ಕೆಂಪು ಬಣ್ಣ (?) : ಬಿಳಿದು ಕೆಂಜಾಯ ಪೊಂಬಟ್ಟೆ ಮೇಲ್ವಸರು (ಹನುದ್ವಿ. ೮೨). [ಕೆಂ + ಜಾಯ ?]

**ಕೆಂಜಾಲ** (ನಾ). ಕೆಂಪು ಜಾಲಿ ಮರ : ಈಂತಾಱಿಯ ಹಡಿಲಿಂ ಮೂಡ ಅವೆಯ ಕುಂಟೆ ಕೆಂಜಾಲದ ಮೊರಡಿ ಕಿಟ್ಟದ ಹಾಳಊರ ಮುಂದಣ ಹಳ್ಳದಿಂ (ಎಕ. XII, ಗುಬ್ಬಿ. ೩೦-೬೮ ; 1221). [ಕೆಂ + ಜಾಲ$_6$]

**ಕೆಂಜಿಗ$_1$** 'ಕೆಂಜಿಗೆ$_1$' ನೋ.

**ಕೆಂಜಿಗ$_2$** 'ಕೆಂಜಿಗೆ$_2$' ನೋ.

**ಕೆಂಜಿಗುರ್** (ನಾ). ಕೆಂಪಾದ ಚಿಗುರು : ಕೆಂಜಿಗುರೊತ್ತೆ ಸರ್ವಕುಜಮಾಜಿಡಿಗಳ್ಮಲವೇಱೆ (ಉದ್ಭಟ. ೯-೩). [ಕೆಂ + ಚಿಗುರ್$_2$]

**ಕೆಂಜಿಗೆ$_1$, ಕೆಂಚಿಗ, ಕೆಂಚಿಗೆ, ಕೆಂಜಗ$_1$, ಕೆಂಜಿಗ$_1$, ಕೆಂಜುಗ** (ನಾ). ಒಂದು ಜಾತಿಯ ಸಸ್ಯ : "ಕುಸುಮೆ ಕೆಂಜಿಗೆಯಕ್ಕು" (ಮಂಗರಾ. ೪೪-೪೭); "ಖದಿರವಲ್ಲಿ-ಕೆಂಜಿಗೆ" (ಓಷಧಿ. ೪೪). **ಕೆಂಚಿಗ** : ಕೆಂಚಿಗನ ಹೂವಿನ ವರ್ಣವಾಯಿಗಿರುವ ವಜ್ರಗಳಿಗೆ ವರುಣನು ದೇವತೆ (ಸೌಗಂಧಿ. ೩೩೪-೩). **ಕೆಂಚಿಗೆ** : (೯). **ಕೆಂಜಗ$_1$** : ಕೆಂಜಗದ ಹೂವು ನಿಜಗೆಂಪು ಅದರೆ ಅಂಚಿನಲ್ಲೀದೆ ಕಿರಿಕಿಹಿ (ಹಳ್ಳಿಯ. ೮೩). **ಕೆಂಜಿಗ$_1$** : "ತನುಲೋಹಿತ - ಕೆಂಜಿಗನಗಿಡ" (ಅಕಾನಿ. ೧೧-೨೩) ; "ಕಟಂಕಟಃ - ಕೆಂಜಿಗ" (ಓಷಧಿ. ೨೩). **ಕೆಂಜುಗ** : "ಭದ್ರದ್ರುಮಃ - ಕೆಂಜುಗ" (ಓಷಧಿ. ೧೧೦). [?]

**ಕೆಂಜಿಗೆ$_2$, ಕೆಂಜಗ$_2$, ಕೆಂಜಿಗ$_2$, ಕೆಂಜುಗೆ** (ನಾ). ೧. ಒಂದು ಜಾತಿಯ ಕೆಂಪು ಬಣ್ಣದ ದೊಡ್ಡ ಇರುವೆ ; ಕೆಂಪುಗೊದ್ದ : "ಅರುಣಾಂಗ ಮೆನಲು ಕೆಂಜಿ[ಪಾಠಾಂ. ಜು]ಗೆಯಕ್ಕುಂ" (ಮಂಗರಾ. ೪೯-೧೩) ; ನಿರ್ವ್ಯಾಜಂ ಪೊಸದನೆ ಕೆಂಜಿಗೆಯ ವಿಷಮುಱಿಗುಂ (ಖಮುದ. ೧೩-೧೨೩); ಕಡದು ಜುವಿನು ಬ್ಬರದ ಕೆಂಜಿಗೆಗೊಡನ ತೊನಸೆಯ ಹರವಿಗಳ (ತೊರರಾ. ೬-೭-೧೧). **ಕೆಂಜಗ$_2$** : ೧. ಅವರ ಕರುಳಿಗೆ ಏಕಕಾಲಕ್ಕೆ ಸಾವಿರ ಕೆಂಜಗ ಕಚ್ಚಿದ ಸಂಕಟವಾಯಿತು (ದೀಪಹ. II, ೧೫೮). ೨. (ಆಲಂ) ಕೆಂಪು : ನೀರದೆಯ ಮುಖ ಕೆಂಜಗವಾಗಿದೆ (ಕಪ್ಪುಹು. ೨೦). **ಕೆಂಜಿಗ$_2$** : ೧. ಮುಸುಕಿದ ಕೆಂಜಿಗಗೊಡುಹುತೆ ಪೊಸ ಪಣ್ಣು ಮುದದೊಳಲು ಸವಿವಂತೆ (ಕವಿಕಂ. ೧೩) ; ಜಿಗುಳೆ ಕೆಂಜಿಗೆ ಕಟ್ಟಿರುಹೆ ಯೋತಿಯುಗೊದ್ದ (ಕಂನವಿ. ೧೮-೪೦) ; ಇಮ್ಮಾವಂ ಮುಸುಕಿದ ಕೆಂಜಿಗಗಳಂತೆ ವಸುಧಾಧಿಪರಂ ಪಿಸುಣರ್ ಮುಸುಕಿರೆ (ನೀತಿವಾ. ೩೪೭). **ಕೆಂಜುಗೆ** : "ಅರುಣಾಂಗಮೆನಲು ಕೆಂಜು[ಪಾಠಾಂ.ಜಿ]ಗೆಯಕ್ಕು" (ಮಂಗರಾ. ೪೯-೧೩). [?]

**ಕೆಂಜಿಗೆಮೊಱಡಿ** (ನಾ). ಒಂದು ಪ್ರದೇಶದ ಹೆಸರು : ಪೂರ್ಬ್ಬದ ಸ್ಯಾಂದಿಸಿ ಕೆಜ್ಜಿಗೆಮೊಱಡಿಎ (ಎಕ. I, ೧-೨೨ ; 466). [ಕೆಂಜಿಗೆ$_1$ + ಮೊಱಡಿ (< ಮೊರಡಿ)]

**ಕೆಂಜುಗ** 'ಕೆಂಜಿಗೆ$_1$' ನೋ.

**ಕೆಂಜುಗೆ** 'ಕೆಂಜಿಗೆ$_2$' ನೋ.

**ಕೆಂಜುಟ್ಟು** (ನಾ). ಕೆಂಪುಬಣ್ಣದ ಜುಟ್ಟು. 'ಕೆಂಜುಟ್ಟುವಕ್ಕಿ' ಪರಾ. [ಕೆಂ + ಜುಟ್ಟು]

**ಕೆಂಜುಟ್ಟುವಕ್ಕಿ** (ನಾ). ಕೆಂಪು ಜುಟ್ಟನ್ನುಳ್ಳ ಪಕ್ಷಿ; ಹುಂಜ ; ತಾಮ್ರಚೂಡ: ಕೆಂಜುಟ್ಟುವಕ್ಕಿಯ ಕೆಂಕರಿಕೆಗೆ ಬೆರ್ಚುತೇಂ ಜಾಱಿದ ಪುದಿರುಳ್ (ಚಕವಿ. ೬-೧೫೭ ಸಾಂಗತ್ಯ). [ಕೆಂಜುಟ್ಟು + ಪಕ್ಕಿ$_1$]

**ಕೆಂಜುರಿ** (ನಾ). ಕೆಂಪು ಉರಿ ; ಕೆಂಬಣ್ಣದ ಉರಿ : ಕೋರೆದಾಡೆಯ ಜುಂಜುದಲೆಗಳ ಪೇರುರದ ಕೆಂಜುರಿಯ ಪುಂಜವ ಮಿಱುತಿಹ ಕೆಂಗಣ್ಣುಗಳ ಕೆದಱಿದೆಯ ರೋಮಂಗಳ (ಮದೇಪು. ೩-೪೭). [< ಕೆಂಚು + ಉರಿ$_2$]

**ಕೆಂಜುರಿಗಣ್** (ನಾ). ಕೆಂಪಾದ ಉರಿಯನ್ನು ಉಗುಳುವ ಕಣ್ಣು ; ಕೆಂಗಣ್ಣು : ಕೆಂಜುರಿಗಣ್ಗಳಂ ಬಿಡುತೆ ಕರಭೀಕರದಿ ಬಂದು (ನವಮೋ. ೨೭-೧೬). [ಕೆಂಜುರಿ + ಕಣ್]

**ಕೆಂಜೂಳ** (ನಾ). ಒಂದು ಜಾತಿಯ ಮರ; ಚಳ್ಳೆಮರ : "ಉದ್ದಾಲಿಕ-ಕೆಂಜೂಳ" (ಅಕಾನಿ. ೪-೫). [?]

**ಕೆಂಜೆಡೆ** 'ಕೆಂಜಡೆ' ನೋ.

**ಕೆಂಜೆಡೆದುಱುಗಲ್** (ನಾ). ಕೆಂಪು ಜಡೆಗಳ ಸಮೂಹ: ಕಣ್ಗೊಳಿಪುವು ಮುನಿವರನ ಮಿಸುಪ ಕೆಂಜೆಡೆದುಱುಗಲ್ (ಕಾದಂಪೂ. ೨೦೩). [ಕೆಂಜೆಡೆ (< ಕೆಂಜಡೆ) + ತುಱುಗಲ್]

**ಕೆಂಜೆರೆ** (ನಾ). ಕೆಂಪುನರ, —ರಕ್ತನಾಳ: ಮಿಸೆ ಬಾಹುರಿ ಕೆಂಜೆರೆ ಮುಖ ಕೊಳೆ ಹಲ್ಲು ರಾಸಿಯಾಹಾರಗಳ ಭಕ್ಷಿಸುತಾ (ಸೌಂದಕಾ. ೫-೯). [ಕೆಂ + ಸೆರೆ$_4$]

**ಕೆಂಜೆರೆಗಣ್** (ನಾ). ಕೆಂಪುನರಗಳುಳ್ಳ ಕಣ್ಣು ; ಕೆಂಪಾದ ಕಣ್ಣು: ಕೆಂಜೆರೆಗಣ್ ಕೆದರ್ದೊಪ್ಪುವ ಕಂಠಿಕೆ . . . ರಂಜಿಸೆ ರತ್ಯಂತ ಶ್ರಮ ಜಲಮಂ ಮುಂಜೆಜಗಿನ ಮೆಲ್ಲಲರಿಂದಾಱಿಸುತೊಪ್ಪಿದಳಾ ತರುಣಿ (ಜಯಕಾ. ೮-೬೫). [ಕೆಂಜೆರೆ + ಕಣ್]

**ಕೆಂಜೇಲು** 'ಕೆಂದೇಟಿಲ್' ನೋ.

**ಕೆಂಜೊಡರ್** (ನಾ). ಕೆಂಪುದೀಪ, —ಪ್ರಕಾಶ: ಬಂದಳು ಮಯನ ಸುತೆ ಮಣಿಭೂಷಣದ ಕೆಳದಿಯರ ಕರ್ಪುರದಾರತಿಯ ಕೆಂಜೊಡರ ಸೊಂಪಿನಲಿ (ತೊರರಾ. ೬-೪೭-೩೦) ; ಕೆಂಜೊಡರ್ಗಳೆಸೆಯೆ (ರೇವಣ. ೭೪-೧೬). [ಕೆಂ + ಸೊಡರ್]

**ಕೆಂಜೋಳ** (ನಾ). ಕೆಂಪುಜೋಳ : ಕೆಂಜೋಳ ಕೊಡಮೂಕನ ಜೋಳ . . . ಈ ಎಂಟು ಜಾತಿ ಜೋಳಗಳನ್ನು (ಕಭಾಗ. ೨೭೧) ; ಹಾಳು ನೆಲದ ಮಡಿಯ ಭೂಮಿಗಳಲ್ಲಿ ಉಳ್ಳಿಗಡ್ಡೆ ಮೆಣಸಿನಗಿಡ ನವಣೆ ಕೆಂಜೋಳಗಳು ವಿಶೇಷ ಬೆಳೆಯುತ್ತವೆ (ಕೃಷಿಪ್ರ. ೮೯). [ಕೆಂ + ಜೋಳ]

**ಕೆಂಟಿ** (ನಾ). (?) : ಲಂಬೋಷ್ಠ ದೀರ್ಘದಂತವು ಕೆಂಚುಮಿಸೆಯು ಕೆಂಟಸೇತು ಕೊಚೆ ಗೆಡ್ಡೆಗಳು ಅಂಬರಖಾನ ಕಾಸಿಂಕನಾತನಂಬು ಸಿಂಗಾಡಿಗಿದಿರಿಲ್ಲವೆನುತ (ಸೌಂದಕಾ. ೫-೧೩). [?]

**ಕೆಂಡ** (ನಾ). ಉರಿಯುತ್ತಿರುವ ಇದ್ದಿಲು ; ಇಂಗಳ : "ಇಂಗಳಂ ದಲೆನೆ ಕೆಂಡಂ" (ಚತುನಿ. II, ೧೧೨) ; ಕೆಂಡಗಳನೊಂದು ಕೆಲಂ ಸಾರ್ಚಿ (ವಡ್ಡಾರಾ. ೧೧೪-೧೩) ; ನೆತ್ತರ ತೊಱೆಗಳ್ ಪರಿಯೆ ಕೆಂಡದ ತೊಱೆಯಂತೆ (ಪಂಪಭಾ. ೧೧-೭೨ ವ) ; ನೀರ್ ಮುಟ್ಟಿದ ಕೆಂಡದಂತೆ (ಧರ್ಮಾಮೃ. ೫-೧೨೫) ; ಒಲೆಯೊಳಡಗಿದ ಕೆಂಡವಿವರಗ್ಗಳಿಕೆ (ಕುವ್ಯಾಸ. ೧೫-೩೦) ; ಬಿಸಿಯ ಕೆಂಡವ ತಂದು ತಿನಿಸುವರಲ್ಲಿ (ಪುರಂದ. ೨-೩೯-೪) ; ಕೆಂಡದ್ದನ್ನಾಡಿದರೆ ಕೆಂಡದಂಥ ಕೋಪ (ಗಾದೆ).

**ಕೆಂಡದರ್ಶನೆ** = ಅಗ್ನಿ ಕೊಂಡವನ್ನು ಹಾಯುವ ಸೇವೆ; ಅಗ್ನಿ ತುಳಿಯುವ ಸೇವೆ (?) : ಶ್ರೀ ವೀರಭದ್ರನೆಸೆವಡಿಪಾವರೆಯಂ ಪರಮ ಭಕ್ತಿಯಿಂ ಪೂಜಿಸಿ ತದ್ದೇವರದೇವಂಗವನಿಪದೇವಂ ತಾಂ ಕೆಂಡದರ್ಶನೆಯನರ್ಪಿಸಿದಂ (ಕೆಳನೃ. ೧೦-೮೫). **ಕೆಂಡದ ದೇವ** = ಬೆಂಕಿಯ ದೇವತೆ; ಕಿಚ್ಚುಕಾರುವ ದೇವತೆ: ಕಿಚ್ಚಿನ ದೇವನು ಕೆಂಡದ ದೇವನು . . . ಎಂದು ಅಲ್ಲಲ್ಲಿ ಒಂದೊಂದನಾಡುತ್ತಿಪ್ಪರಯ್ಯ (ಅವಚಂ. ೧೨೦-೫೪೫). **ಕೆಂಡವಾಗು** = ೧. ಸುಟ್ಟು ಹೋಗು ; ಉರಿದು ಹೋಗು : ಕೆಂಡವಾಗಲಿ ಲೋಕ ದಿವಿಜರ ಹೆಂಡಿರೋಲೆಯು ಕಳೆದು ಹೋಗಲಿ ದಿಂಡುಗಡೆಯಲಿ ಮೇರು (ಕುವ್ಯಾಭೀ. ೬-೨೭) ೨. (ಆಲಂ) ರೇಗು ; ಕೋಪಾವಿಷ್ಟನಾಗು ; ಕ್ರುದ್ಧನಾಗು : ತನ್ನ ಮೇಲೆ ಹೊರಿಸಿದ ಆರೋಪವನ್ನು ಕೇಳಿ ಅಧಿಕಾರಿಯು ಕೆಂಡವಾದನು (ರೂಢಿ).
[ದೇ. ‖ ತುಳು. ಕೆಂಡ; ಗೆಂಡ]

**ಕೆಂಡಕಾರು** (ಕ್ರಿ). ೧. ಕೆಂಡವನ್ನು ಉಗುಳು, —ಸುರಿಸು. ೨. (ಆಲಂ) ಕ್ರೋಧಗೊಳ್ಳು; ರೇಗು : ತಂದೆಯವರು ರೇಗಿ ಬಿಟ್ಟಿದ್ದರು, ಕಣ್ಣು ಕೆಂಡಕಾರುತ್ತಿದ್ದುವು (ಸುಪಸಂ. ೧೩). ನಮ್ಮ ಮಾವನವರಿಗೆ ನನ್ನ ಮೇಲೆ ತಾತ್ಸಾರ, ದ್ವೇಷ ನನ್ನನ್ನು ಕಂಡರೆ ಅವರು ಕೆಂಡಕಾರುತ್ತಿದ್ದರು (ವಿಧಿವ್ಯ. ೧೭೬).
[ಕೆಂಡ + ಕಾರು$_1$ (< ಕಾಱ್)]

**ಕೆಂಡಕೆದಱು** 'ಕೆಂಡಗೆದಱು' ನೋ.

**ಕೆಂಡಗಣ್**, ಕೆಂಡಗಣ್ಣು (ನಾ). ಕೆಂಡಕಾರುವ ಕಣ್ಣು ; ಬೆಂಕಿಗಣ್ಣು ; ಕೆಂಗಣ್ಣು : ಕಾರೊಡಲ ಕೆಮ್ಮೀಸೆಗಳ ಕೆಂಡಗಣ್ಣ ಹೆಮ್ಮಾರಿ ಮೊಗಗಳ (ಚಿಬಪು. ೪೭-೧೪) ; ಕೆಂಡಗಣ್ಗಳಿಂದ ಸುತ್ತಲೂ ನೋಡಿ (ಸುಗುಗುಂ. ೪೨-೧೬). **ಕೆಂಡಗಣ್ಣು** : ಕೆಂಡಗಣ್ಣು ನೊಸಲೊಳಗಿಟ್ಟು ನಮ್ಮ ಶಿವ ಕೆಂಡವ ಸೋಕಲು ಅಳುವ್ಯಲ್ಲೋ ನೋಡಿ (ಪುರಂದ. ೧-೧೮೭-೪) ; ಕೆಳೆಯ ನೊಡಲ ಕೆಂಡಗಣ್ಣ ಕೇಸುರಿ ಸುತ್ತೆ (ಕುರಾಸಾಂ. ೬-೯) ; ಹೆಂಡತಿಯ ಕಡೆ ಕೆಂಡಗಣ್ಣು ಬಿಟ್ಟು ಕ್ರೂರವಾಗಿ ದಿಟ್ಟಿಸಿ ಹೇಳಿದರು (ಮರಳಿ. ೧೫೮). [ಕೆಂಡ + ಕಣ್]

**ಕೆಂಡಗಣ್ಣ** (ನಾ). ಬೆಂಕಿಯ ಕಣ್ಣನ್ನುಳ್ಳವನು ; ಶಿವ : ಉಚ್ಚರಿಸಿದಳು ಕೆಂಡಗಣ್ಣನ ಮಂತ್ರಮಯುವ (ಮೋಹತ. ೨೯-೪೯).
[ಕೆಂಡಗಣ್ + –ಅ$_7$]

**ಕೆಂಡಗಣ್ಣು** 'ಕೆಂಡಗಣ್' ನೋ.

**ಕೆಂಡಗೆಂಪು** (ಗು). ೧. ಕೆಂಡದಂತೆ ಕೆಂಪಾದ ; ಕೆಂಬಣ್ಣದ : ತೀರ ಕೊನೆಯ ಅಲೆಯಮೇಲೆ ಕೆಂಡಗೆಂಪು ಸೂರ್ಯನು ತೇಲುತ್ತಿದ್ದ (ದೂರಸ. ೧೪೧). (ನಾ). ೨. ಕಡುಗೆಂಪು. [ಕೆಂಡ + ಕೆಂಪು$_1$]

**ಕೆಂಡಗೆದಱು**, ಕೆಂಡಕೆದಱು (ಕ್ರಿ). ಬೆಂಕಿಯನ್ನು ಹರಡು, —ಸೂಸು: ಸಮರವ್ಯತಿಕರದಲಾಗ್ನೇಯ ಶರ ಚಿಮ್ಮಿತು ಛಡಾಳಿಸಿ ಕೆಂಡಗೆ[ಪಾಠಾಂ. ಕೆ]ದಱಲು ಕರ್ಣ ಬೆಱಗಾದ (ಕುವ್ಯಾಆ. ಓರಿಇ. ೨೦-೪೨). **ಕೆಂಡಕೆದಱು** : ಹೊಡೆದಳಿಸಿಯಿಂದಾ ವಿಮಾನವನೊಡೆದು ರನ್ನದ ಕೆಂಡ ಕೆದಱಲು (ಸಾಳ್ವಭಾ. ೬-೩೬). [ಕೆಂಡ + ಕೆದಱು$_1$ (< ಕೆದಱ್$_1$)]

**ಕೆಂಡಮಂಡಳ** (ನಾ). ಕೆಂಡದ ವರ್ತುಳ; ಬೆಂಕಿಯ ಮಂಡಲ: ಅತ್ತಲಾ ಇನನ ಬಿಂಬದ ಕೆಂಡಮಂಡಳಮುರುಳೆ ನೀರ್ಗೆ (ಶ್ರೀರಾಮಾ. ೭೩೨-೮೧). **ಕೆಂಡಮಂಡಳವಾಗು** = ಜ್ವರಬಂದು ಮೈ ಕೆಂಪಾಗು : ಅವನಿಗೆ ಕೆಂಡಮಂಡಳವಾಗಿದೆ (ರೂಢಿ).
[ಕೆಂಡ + ಮಂಡಳ (= ಮಂಡಲ)]

**ಕೆಂಡರೊಟ್ಟಿ** (ನಾ). ಕೆಂಡದಮೇಲೆ ಸುಟ್ಟ ರೊಟ್ಟಿ : (ಕ).
[ಕೆಂಡ + ರೊಟ್ಟಿ]

**ಕೆಂಡಲ** (ನಾ). ಒಂದು ಬಗೆಯ ಆಯುಧ : ಹಲಗೆ ತೋಮರ ಸೆಲ್ಯ ಕರವಾಳು ಕೆಂಡಲೆಯು ಆಲಗು ಡೊಂಕಣಿ ಕೌಮೋದಿಕವೂ (ದೇವಾಂಪು. ೩-೨೦೧). [?]

**ಕೆಂಡವಕ್ಕಿ** (ನಾ). ಒಂದು ಜಾತಿಯ ಪಕ್ಷಿ: ಲೊಕ್ಕಿಗನು ಹುಡಿಕೀಲುಗನು ಹಾಲ್ವಕ್ಕಿ ಕೋಗಿಲೆ ತೋಟದೇವನ ಕುಕ್ಕುವಾಯಿಯ ಕೆಂಡವಕ್ಕಿಗಳವಱೊಳೊಪ್ಪಿದುದು (ಸಾಳ್ವಭಾ. ೫-೨೨). [ಕೆಂಡ$_0$+ ಪಕ್ಕಿ$_1$]

**ಕೆಂಡವೞೆ** (ನಾ). ಬೆಂಕಿಯ ಮಳೆ; ಅಗ್ನಿವೃಷ್ಟಿ: ಖೇಚರಿ ಮೊೞಗಂ ಸಿಡಿಲಂ ಕೆದಱುವ ಕಲ್ಪದ ಕಡೆಗಾಲದ ಕೆಂಡವೞೆಯ ಮುಗಿಲವೊಲಿರ್ದಳ್ (ಪಂರಾಮಾ. ೯-೩೨). [ಕೆಂಡ + ಮೞೆ]

**ಕೆಂಡಸಂಪಗೆ**, ಕೆಂಡಸಂಪಿಗೆ (ನಾ). ಸಂಪಿಗೆಯಲ್ಲಿ ಒಂದು ಪ್ರಕಾರ; ಕೆಂಪು ಬಣ್ಣದ ಸಂಪಿಗೆ: ವಿಕಸಿತ ಕೆಂಡಸಂಪಗೆಯ ಸುವರ್ಣ ಸಾಯಕದಿಂದೆ ಸಮತಳಿಸಿದನು (ಮೋಹತ. ೩೫-೨೦). **ಕೆಂಡಸಂಪಿಗೆ :** ಕೆಳದಿ ಪಿಡಿದ ಕೆಂಡಸಂಪಿಗೆಯ ಬಿರಿಮುಗುಳಾಲವಟ್ಟಂ (ರಾಜಶೇ. ೪-೧೪ವ) ; ಮಂಡೆಯನು ಮುಡಿಗಟ್ಟಿ ದುಂಡುಮಲ್ಲಿಗೆಯು ಕೆಂಡಸಂಪಿಗೆಯನ್ನು ಚೆಲ್ಲಿ ನಿಂದಿರಿಸಿ (ಯನಳ. ೩೨). [ಕೆಂಡ + ಸಂಪಗೆ]

**ಕೆಂಡಸಂಪಿಗೆ** 'ಕೆಂಡಸಂಪಗೆ' ನೋ.

**ಕೆಂಡಸೇವೆ** (ನಾ). ಕೆಂಡದ ಮೇಲೆ ನಡೆದು ಹೋಗುವುದು ; ದೇವರ ಒಂದು ಸೇವೆ : (ಕ). [ಕೆಂಡ + ಸೇವೆ]

**ಕೆಂಡಾಳಿ** (ನಾ). ಒಂದು ಬಗೆಯ ಮರ : ದಿಂಡಲ, ಜಂಬಿ, ಅತ್ತಿ, ಬಣದುರ್ದಿ, ಕೆಂಡಾಳಿ, ಕಕ್ಕಿ, —ಕಣ್ಣಿಗೆ ಬೀಳುವ ವೃಕ್ಷಜಾತಿಗಳು (ಕಭಾಗೆ. ೫೫). [?]

**ಕೆಂಡುಕೂರು** (ನಾ). ಒಂದು ಊರಿನ ಹೆಸರು : ಅಪರಂ(ರ) ದಿಶಿಕೆ(ಕ ?)ಣ್ಡುಕೂರ ಗ್ರಾಮಸ್ಯ ಸೀಮಾವಧಿಃ (ಇಆ. V, ೫೧-೧೯; 5ನೆಯ ಶತ). [?]

**ಕೆಂತಱಿಂಬು** (ನಾ). ಕೆಂಪು ಮಣ್ಣಿನ ಕಟ್ಟೆ (?) : ಇಸಾನದ ಬದಣ ಗುಪ್ಪೆಯ ದಾಸನೂಱ ಪೊೞ್ಪ್ರದ ತ್ರಿಸನ್ಧಿಯ ತಟಾಕಮ ಕೊಡಿಗಟ್ಟ ಚಿಞ್ಚ ವೃಕ್ಷಮ ಕೆನ್ತಱಿಮ್ಬಿನ ದಿಣೆಇಂ ಪೂರ್ಬದ ಕೂಡಿತ್ತು ಸೀಮಾನ್ತರಂ (ಎಕ. I, ೧-೩೧ ; 466). [ಕೆಂ + ತಱಿಂಬು]

**ಕೆಂದ$_1$** (ನಾ). ಕೆಂಪು ಬಣ್ಣದ ಹೋರಿ : ಚೆಲುವ ಮೈಲ್ಹೋರಿ ಪುಟನೆಗೆವ ಕೆಂದನು ಪಱಿವ ಕಾರಿ (ಸಿಂಗಿರಾ. ೩೫-೭) ; ಹಂಡ ಕೆಂದಗಳಿಲ್ಲ ಹುಂಡಿ ಕಾರಿಗಳಿಲ್ಲ (ಸರ್ವಜ್ಞ. ೧೯೨೬). [ಕೆಂದು + –ಅ$_7$]

**ಕೆಂದ$_2$** (ನಾ). ಕೆಂಪು ಮಣ್ಣಿನ ಪ್ರದೇಶ (?) : ತೆಂಕಲು ಪೊಲದ ಕೋಟಿಗೆ ಬಡಗಲು ದಾರಿ ಕೆಂದ ಪಡುವಲು ಆದಿಯಬುಮಿ (ಎಕ. XIV, ಮಳವ. ೧೧೧-೧೨ ; 1604). [?]

**ಕೆಂದ$_3$** 'ಕೇ' ಪರಾ.

**ಕೆಂದಟ್ಟಿ** (ನಾ). ಕೆಂಪು ಬಣ್ಣದ ವಸ್ತ್ರ, —ದಟ್ಟಿ : ಪಚ್ಚೆಯ ಪರಿಣೆಯ ಪಸರದ ಪಾರಿಯದೊಯ್ಯಾರದ ಕೆಂದಟ್ಟಿಯ ಪಂತಿಯ (ಗಿರಿಕ. ೭-೫೫ವ); ಕೆಂದಟ್ಟಿ ಪೊಂಗುಪ್ಪಸಂದೊಟ್ಟು (ರಾಜಶೇ. ೧೩-೭೦). [ಕೆಂ + ದಟ್ಟಿ]

**ಕೆಂದಣಿಲು** (ನಾ).= ಕೆಂಚಣಿಲು: ಸಾಸದೆ ಕೆಂದ[ಪಾಠಾಂ. ಚ, ಬ]ಣಿಲು ತಂದ ವಿಷಮುಂ ಕಳೆಗುಂ (ಖಮದ. ೧೩-೮೨).
[ಕೆಂದು$_3$ + ಅಣಿಲು (< ಅಣಿಲ್)]

**ಕೆಂದನ** (ನಾ). ಕೆಂಪುದನ ; ಕೆಂಬಣ್ಣದ ರಾಸು : (ಕ).
[ಕೆಂ + ದನ]

**ಕೆಂದನಹಳ್ಳಿ** (ನಾ). ಒಂದು ಊರಿನ ಹೆಸರು : ವಿಕ್ರಮ ಸಂವತ್ಸರದ × × × ಶು ೨ ಲು ಕೆಂದನ ಹಳ್ಳಿ ಅಡ್ಡಕುಂಟಿನ ಹೊಲನ ಗೇಕೆಳಗ (ಎಕ. X, ಚಿಂತಾಮ. ೧೦೪-೨ ; ?). [?]

**ಕೆಂದಲೆ** (ನಾ). ೧. ಕೆಂಪುತಲೆ. ೨. ಒಂದು ಬಗೆಯ ಹುಳು: "ವರ್ತಕಂ – ಕೆಂದುರೆಯಕಾಲ ಗೊರಸು ಅಪಿ ಶಬ್ದದಿಂದ ಕೆ[ಪಾಠಾಂ. ಕ]ಂದಲೆ, ವ್ಯಾಪಾರದ ಹುಳು" (ಸಿದ್ಧಾಂತಿ. ೩೨೨). [ಕೆಂ + ತಲೆ$_1$]

**ಕೆಂದಲೆಗ** (ನಾ). ಒಂದು ಬಗೆಯ ಪಕ್ಷಿ: "ವರ್ತಕಃ, ವರ್ತಕಾ – ಈ ೨ ಕೆಂದಲೆಗ" (ನಾಚಿರಾ. ೧೧೫).

**ಕೆಂದಲೆಗನ ಹಕ್ಕಿ**: "ವರ್ತಕ – ಕೆಂದಲೆಗನಹಕ್ಕಿ" (ಒಷಧಿ. ೧೪೬). [ಕೆಂದಲೆ + –ಗ$_3$]

**ಕೆಂದಲೆಯ** (ನಾ). ಕೆಂಪು ತಲೆಯುಳ್ಳವನು: ನುಚ್ಚಕ್ಕಿವಲ್ಲಂ, ಕೆಂದಲೆಯಂ, ಮೆಲ್ಲಡಿಯಂ (ಭಾಷಾಭೂ. ೧೩೧ ಉದಾ). [ಕೆಂದಲೆ + –ಅ$_7$]

**ಕೆಂದಳ$_1$** (ನಾ). ಕೆಂಪಾದ ಕೈ, —ಅಂಗೈ: ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ (ಆದಿಪು. ೪–೪೬); ನಡುಗುವ ಕೆಂದಳಮಂ ಚಿನ್ನೈದಿಲ್ಗೆತ್ತಿಜಗುವ ಮಱಿದುಂಬಿಯ ಬಂಬಲಿಂ (ಕಾದಂಉ. ೯೦); ನಿಱಿಯ ಸೆಱಂಗನೋಸರಿಸಿ ಕೆಂದಳದಿಂದಮೆ (ಅರ್ಧನೇ. ೧–೧೦೦); ಹೊಳೆ ಹೊಳೆವ ಕೆಂದಳದ ಸೆಳ್ಳುಗುರು (ಉವ್ಯಾಅ. ೮–೪೧); ಬಳಿಕಲಾ ಪರಮೇಶ್ವರನ ಕೆಂದಳಗಳಿಂ ತೆಗೆದೆತ್ತಿಕೊಂಡಳು (ಸಾಳ್ವಭಾ. ೨೧–೨೩). ೨. ಕೆಂಪಾದ ಅಂಗಾಲು: ನಾಡೆ ಕೆಂದಳಿರ ನೋವದೆ ಕೆಂದಳಮಿಕ್ಕಿ ಮೆಟ್ಟಿ (ಕಬ್ಬಿಕಾ. ೧೧೨). [ಕೆಂ + ತಳ (= ತಲ)]

**ಕೆಂದಳ$_2$** (ನಾ). ಕೆಂಪಾದ ಎಸಳು; ಕೆಂಪುದಳ, —ರೇಕು: ಉತ್ಕಲಿಕೆಗಳನೊಳಕೊಯ್ದುವವರ ರಣರಣ ಕಾವಸ್ಥೆಗಳುಂ ಕೆಂದಳಂಗಳು ಮೊಡನೊಡನೆ ವಿಜೃಂಭಿಸಿದುವು (ಕಾದಂಉ. ೫೩೧); ತಳದೊಳೊಪ್ಪುವ ಪಸುರೆಸಳ ರೋಚಿಯಿಂ ನಡುವೆ ತೊಳಪ ಕೆಂದಳದ ದೀಧಿತಿಯಿಂದೆ ಮೇಲೆ ಕಂಗೊಳಿಪ ಹೊಂಗೇಸರದ ಕಾಂತಿಯಿಂದೆಱಗುವ ಸಿತಾಳಿಯ ಮರೀಚಿ (ಜೈಮಿಭಾ. ೧೫–೧೦). [ಕೆಂ + ದಳ (= ದಲ)]

**ಕೆಂದಳಗ** (ನಾ). ಒಂದು ಬಗೆಯ ಬತ್ತ; ಕೆಂಪು ಬತ್ತ; ಕೆಂಬೂತಿ (?): ಹೊಳೆಯುವ ಕೆಂದಳಗ ಕಸ್ತೂರಿ ವರ್ಣದೊಳು ಪರಿಮಳವಾಂತು ಮೆಱೆವ ಕಳಮೆಯ ತೆನೆಗಳು ಪರಿಶೋಭಿಸುತ (ಕಂನವಿ. ೫–೭೧). [?]

**ಕೆಂದಳಿರ್**, ಕೆಂದಳಿರು (ನಾ). ಕೆಂಪು ಚಿಗುರು, —ತಳಿರು: ನನೆಯನೆ ಪೇಱಿ ಕೆಂದಳಿರೊಳೆಯ್ದೆ ಬಟಲ್ದೆಳಮಾವು (ಆದಿಪು. ೧–೬೫); ಬನಮಂ ಕೆಂದಳಿರಿಂದೆ ಬಾಸಣಿಸುತಂ (ಕಾದಂಉ. ೭೪೧); ಅಡಿದಳದ ಬಲ್ಸೊಂಪು ಕೆಂದಳಿರ ಪೆಂಪವಗಡಿಸಿ ಮಱನೇಱಿಸೆ (ಪದ್ಮರಾ. ೩–೨೭); ಒದೆದು ಪದದಲಿ ಕೆಂದಳಿರ ತೋಱಿದೆವಶೋಕೆಗೆ (ಉವ್ಯಾಅ. ೧೮–೧೩); ಮಾವಿನ ಕೆಂದಳಿರ್ಗೆದಱಿದಂತೆಸೆದುದು ಹಾವುಗೆಪಜ್ಜೆಯ ಕೆಂಪು (ಭರಚ. ೩–೧೬). **ಕೆಂದಳಿರು**: ನಳಿನವಿಲ್ಲದ ಕೊಳನು ನವಶಾದ್ವಲಗಳಿಲ್ಲದ ನೆಲನು ಹೊಸ ಕೆಂದಳಿರುದೋಱದ ಮರನು (ತೊರರಾ. ೧–೫–೪೧); ಕೆಂದಳಿರ ನಖ ಶಶಿಬಿಂಬ ಪದಪದ್ಮ ಅಂದುಗೆ ಇಟ್ಟವನಾರೆ ಪೇಳಮ್ಮ (ಪುರಂದ. ೨–೭೦–೧); ತೀವಿದ ಕೆಂದಳಿರುಗಳ ಕೆನ್ನೀರ್ಮುತ್ತ ಭಾವಕಿಯರು ತಳೆದಿಹರು (ಕಂನವಿ. ೨೪–೨೦). [ಕೆಂ + ತಳಿರ್$_2$]

**ಕೆಂದಳಿರು** 'ಕೆಂದಳಿರ್' ನೋ.

**ಕೆಂದಳಿರ್ಮಾವು** (ನಾ). ಕೆಂಪು ಚಿಗುರಿನಿಂದ ಕೂಡಿದ ಮಾವು; ಒಂದು ಜಾತಿಯ ಮಾವು: ತೀವಿರ್ದತ್ತು ತಳಿರ್ ಮೊದಲ್ ಪಣೆ ಕವಲ್ಗೊಂಬೆಂಬುವೀ ಕೆಂದಳಿರ್ಮಾವಿಂಗಲ್ಲದೆ ಮಾವುಗಳ್ಗೆ ಪೆಱವಕ್ಕಿಂತೇಂ ಬೆಡಂಗಕ್ಕುಮೋ (ಆದಿಪು. ೧೧–೯೭). [ಕೆಂದಳಿರ್ + ಮಾವು]

**ಕೆಂದಳಿರ್ವಸೆ** (ನಾ). = ಕೆಂದಳಿರ್ವಾಸು: ಉಳಿರ್ವೆಳಲತೆವನೆಗಂ ಕೆಂದಳಿರ್ವಸೆ[ಪಾಠಾಂ. ನೆ]ಗಂ ಸೂಸುವಾಲಿನೀರ್ವನಿಗಳ್ಗಂ . . . ಕಾಂತೆ ಕರಮೆ ಹಂಗಿಗೆಯಾದಳ್ (ಚಂದ್ರಪು. ೫–೧೩೨). [ಕೆಂದಳಿರ್ + ಪಸೆ$_3$]

**ಕೆಂದಳಿರ್ವಾಸು** (ನಾ). ಕೆಂಪಾದ ಚಿಗುರಿನ ಹಾಸಿಗೆ: ಕೆಂದಳಿರ್ವಾಸು ಸೇಕದ ತೊವಲ್ಗೆಣೆಯಾಯ್ತು (ಪಂಪಭಾ. ೫–೭); ಕೆಂದಳಿರ್ವಾಸಿನೊಳು ಪರವೆವೆರಸಿಯೊಡ್ಡೋಲಗಂಗೊಟ್ಟಿರ್ದನು (ಸೌಂದಪು. ೧೦–೨೭). [ಕೆಂದಳಿರ್ + ಪಾಸು$_2$]

**ಕೆಂದಱಿ** (ನಾ). ಒಂದು ಬಗೆಯ ಮರ; ಕೆಂಪು ತರೆಯದ ಮರ: ತಡಸು ಕೆಂದಱಿ ತೆಂಗು ಸಂಗು ಕೇದಗೆ ಕದಳಿ (ಹಚಕಾ. ೫–೧೬). [ಕೆಂ + ತಱಿ$_4$]

**ಕೆಂದಱಿಗಪೆರ್ಗಂಗ** (ನಾ). ಒಬ್ಬಾತನ ಹೆಸರು; ಒಂದು ಬಿರುದು (?): ಸೊಟಮ್ಬನವಣ್ನ ಪುಲಿನಾಡೊಮೇಗೆಟ್ಟಿರೆ ವಾಣರಸರ್ ಕೆನ್ದಱಿಗಪೆರ್ಗ್ಗಂಗಂ ಅವರ ಮಗಂ ದೇವೆಯನಂ ಬೆಸಗೊ[ಟೆ] (ಸೌಇಇ. IX–i, ೪–೬; ?). [?]

**ಕೆಂದಾಮರೆ**, ಕೆಂದಾವರೆ (ನಾ). ಕೆಂಪು ಕಮಲ; ರಕ್ತೋತ್ಪಲ: ವಾಮಂ ಕರತಳಮದು ಕೆಂದಾಮರೆಯರಲೆನಿಪುದು (ಆದಿಪು. ೫–೬೯). **ಕೆಂದಾವರೆ**: ಕೆಂದಾವರೆಯ ಬಣ್ಣದಂತಪ್ಪ ತಳಮುಮಂ ಕಂಡು (ವಡ್ಡಾರಾ. ೧೪೮–೧೭); ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗಳೊಳ್ ಪುದಿದುಯ್ವಂತುಯ್ದು (ಆದಿಪು. ೨–೩೯ವ); ಕೆಂದಾವರೆಗಳ್ ಮಧುಕರವೃಂದವನೊಳಕೊಂಡು ಮುಗಿಯೆ (ಕಾದಂಪೂ. ೮೧೯); ಮಱಿದುಂಬಿ ಕೆಂದಾವರೆಗೆ ಕವಿವಂತೆ (ಕುವ್ಯಾದ್ರೋ. ೫–೫೪); ಕೆಂದಾವರೆಯಿದೆ ಕೊಳನಿಲ್ಲ ಸೌರಭ್ಯ ಬಂಧೂಕವಿದೆ ಬನವಿಲ್ಲ (ಕಂನವಿ. ೯–೯೨). [ಕೆಂ + ತಾವರೆ]

**ಕೆಂದಾರೆ$_1$** (ನಾ). ಕೆಂಪು ನಕ್ಷತ್ರ: ಪಡುಗೆಂಪು ಚಂದ್ರಗಾವಿಯ ಸೀರೆ ಕೆಂಬಲ್ಲಿ ಗಡಣ ಕೆಂದಾರೆಗಳಾಗೆ (ಕನಂವಿ. ೬–೧೦೦). [ಕೆಂ + ತಾರೆ]

**ಕೆಂದಾರೆ$_2$** (ನಾ). ಕೆನ್ನೆ; ಗಂಡಸ್ಥಲ: (೬). [< ಸಂ.ಕೇನಾರ]

**ಕೆಂದಾವರೆ** 'ಕೆಂದಾಮರೆ' ನೋ.

**ಕೆಂದಾವರೆಗೊಳ** (ನಾ). ಕೆಂಪು ಕಮಲಗಳನ್ನುಳ್ಳ ಸರೋವರ: ಆ ಲಾವಣ್ಯವತಿಯರಾತಪಕ್ಕೆತ್ತಿದ ಕೆಂದಳಂಗಳ ಸಂದಣಿಯಂ ದಿಕ್ಚಕ್ರಮೆಲ್ಲಂ ಕೆಂದಾವರೆಗೊಳನಲರ್ದಂತೆಯಯ್ಯಂ (ಕಾದಂಪೂ. ೪೭೪). [ಕೆಂದಾವರೆ (< ಕೆಂದಾಮರೆ) + ಕೊಳ$_2$]

**ಕೆಂದಾವರೆವೂ** (ನಾ). ಕೆಂಪು ತಾವರೆಯ ಹೂ: ಮೃದುವಾದ ತಳಂಗಳ ಕೆಂಪು ಕೂಡೆ ಕೆಂದಾವರೆವೂಗಳಂ ಕೆದಱುವಂತಿರೆ (ಪಂರಾಮಾ. ೫–೯೩); ಕುಂಕುಮದಿಂದೊಂದಿದ ಕೆಂದಾವರೆವೂಗಳಂ ತಳೆದು (ಕಬ್ಬಿಕಾ. ೩೦). [ಕೆಂದಾವರೆ (< ಕೆಂದಾಮರೆ) + ಪೂ$_2$]

**ಕೆಂದಾಳಿ**, ಗೆಂದಾಳಿ, ಗೆಂಧಾಳಿ (ನಾ). (ಕರಾ) ಕೆಂಪಾದ ತೆಂಗು; ಕೆಂದೆಂಗು: ಗುರುಗಳನ್ನು ನೋಡಲು ಹೋಗುವಾಗ ಎರಡು ಕೆಂದಾಳಿ ತೆಗೆದುಕೊಂಡು ಹೋಗು (ರೂಢಿ). **ಗೆಂದಾಳಿ**: ಚಿಂಗನು ತನ್ನ ನೈಪುಣ್ಯವನ್ನೆಲ್ಲ ಉಪಯೋಗಿಸಿ ಒಂದು ಒಳ್ಳೆಯ ಗೆಂದಾಳಿ ಎಳನೀರನ್ನು ಆರಿಸಿ ಬಹಳ ಜಾಗ್ರತೆಯಿಂದ ಕೆತ್ತಿ (ಕಂಬಹು. ೩). **ಗೆಂಧಾಳಿ**: ಗೆಂಧಾಳಿಗೆ ಮೊಳಕೆ ಒಡೆಯಲು ಮನೆಯ ಮುಳಿ ಹುಲ್ಲಿನಲ್ಲಿ ಮರೆಸಿಟ್ಟರು (ಬಾಳಿಗಿ. ೧೦೪). [← ತುಳು. ಗೆಂದಳಿ, ಗೆಂದಾಳಿ]

**ಕೆಂದಾಳು** (ನಾ). ಒಂದು ಜಾತಿಯ ಮರ; ಹೊಂಗೆಮರ; ತಮಾಲವೃಕ್ಷ: "ಕಾಲಸ್ಕಂದಃ, ತಮಾಲಃ, ಐಂದಃ – ಈ ೩ ತಮಾಲ ವೃಕ್ಷಃ, ಕೆಂದಾಳೆಂದುಯೆಂಬರು" (ನಾಚಿರಾ. ೧೦೪). [ಕೆಂ + ತಾಳು$_3$ (= ತಾಲ್$_2$)]

**ಕೆಂದಿ** (ನಾ). ೧. ಕೆಂಪು ಬಣ್ಣವುಳ್ಳದು. ೨. ಕೆಂಪುಬಣ್ಣದ ಹಸು; ಕೆಂದುಹಸು: ತಂಗಿಯು ಕರೆಕೊಂಡು ಕೆಂದಿಯನ್ ಹೊಡಕೊಂಡು (ನಾಪದ. ೬೬). [ಕೆಂದ$_1$ + –ಇ$_2$]

**ಕೆಂದಿಸು** (ಕ್ರಿ). ಕೂಡಿಸು ; ಸೇರಿಸು : ಕಾದುವೆ ನಗಿಸುವೆ ಕಥೆವೇಳ್ವೆ ಮುನಿದಿರ್ದ ಕಾದಲರನು ಕೆಂದಿಸುವೆನು ಆದರಿಸಕ್ಕೆ ಕೇಳ್ ಬೆಲೆಗೊಟ್ಟು ಕೊಳ್ಳೆಂದೋವಿ ತೋಱುತ್ತ (ಸೂಬಸೂ. ೧೮-೩೦). [ಕೆಂದು$_2$ + -ಇಸು$_3$]

**ಕೆಂದು$_1$** (ಕ್ರಿ). ೧. ಆತುಕೊಳ್ಳು; ಒರಗು ; ಆಶ್ರಯಿಸು : ಬಂದನಲ್ಲಿಗೆ ವಿವಿಧ ಶಿಷ್ಯರ ಸಂದಣಿಯೊಳು ಸನತ್ಕುಮಾರನು ಕೆಂದಿದತಿ ತಮದೆಡೆಗೆ ಭಾಸ್ಕರನುದಯಮಾದಂತೇ (ಅನಂರಾ. ೧-೮-೧). ೨. ಮಲಗು ; ನಿದ್ರಿಸು ; ನಿಶ್ಚಲವಾಗು : ಧ್ಯಾನದೊಳಭವಂ ನೆಱೆದಿನಿಸಾನುಮುನರೆ ಮುಚ್ಚಿ ಕಣ್ಗಳಂ ನಿಶ್ಚಳಿತಂ ತಾನಿರ್ದು ಮಱೆದು ಕೆಂದಿದ ಮೀಸಂ ತ[ಳ್ತ್ರು]ಡದಿರ್ದ ಮಡುವಂ ಪೋಲ್ತಂ (ಪಂಪಭಾ. ೮-೧೩). ೩. ಒಗ್ಗು ; ಅಂಟು ; ಪರಿಣಾಮಕಾರಿಯಾಗು : ಔಷಧ ಕೆಂದಲಿಲ್ಲ (ರೂಢಿ). [< ಕೇ ?]

**ಕೆಂದು$_2$** (ನಾ). ಬೇಟ ; ರತಿ ; ಅನುರಾಗ : ಬೇಡಿಸುವವುಗಳ್ಗೊರೆವ ಲಲ್ಲೆಯ ಮೆಲ್ನುಡಿಗಳ್ಗೆ ಕೂಡೆ ನಾಣೂಡಿದ ಕೆಂದುಗಳ್ಗೆ ಬಗೆಗೊಂಡು (ಪಂಪಭಾ. ೩-೮೩); ಕೆಂದನೀಕೆ ಕನ್ನಡಿಪಳೊ ಪಾಡಿದೀ ನೆವದಿನೆಂಬಿನೆಗಂ . . . ಮೇನಕೆ ಮುಂದೆ ಪಾಡಿದಳ್ (ಪಂಪಭಾ. ೭-೮೯). [< ಕೆಂದು ?]

**ಕೆಂದು$_3$** (ನಾ). ಕೆಂಪು; ಕೆಂಬಣ್ಣ : ಹಸು ಎರಡು ಕರು ಹಾಕಿತ್ತು. ಒಂದು ಕೆಂದು, ಇನ್ನೊಂದು ಬಿಳಿ (ರೂಢಿ). 'ಕೆಂದೆತ್ತು' ಪರಾ. [ಕೆಂ + -ದು]

**ಕೆಂದು$_4$** 'ಕೇ' ಪರಾ.

**ಕೆಂದುಟಿ** (ನಾ). ಕೆಂಪಾದ ತುಟಿ ; ಕೆಂಬಣ್ಣದ ತುಟಿ; ಚೆಂದುಟಿ; ಮುಂದಲೆಯ ಕಂಪನಾಘ್ರಾಣಿಸಿ ತೊರೆದ ಜೊಲ್ಲ ಕೆಂ[ಪಾಠಾಂ. ಚೆಂ] ದುಟಿಯ ಬಾಯ್ದೆಱೆಯನ್ನೆದೆ ಚುಂಬಿಸಿ (ಜೈಮಿಭಾ. ೧೮-೨೦) ; ಎಸೆವ ದಂತದ ಕಾಂತಿಯೊಡಗೂಡಿ ಕೆಂದುಟಿ ಬಾಲಚಂದ್ರನಂತೆ ಭಾಸಮಾನ ಮಾಗೆ (ಸೌಗಂಧಿ. ೩೯-೨). [ಕೆಂ + ತುಟಿ]

**ಕೆಂದೂಳ್**, ಕೆಂದೂಳಿ, ಕೆಂದೂಳು, ಕೆಂಧೂಳ್ (ನಾ). ಕೆಂಪು ಧೂಳು ; ಕೆಂಪು ಹುಡಿ : ಕೆಂದೂಳ್ಮುಸುಕಲೆಣ್ದೆಸೆಗಳಂ (ಜೈಮಿಭಾ. ೪-೩೦) ; ಚತುರಂಗದ ಪದಹತಿಯಲಿ ಮುಱಿದೇಳ್ವ ಕೆಂದೂಳ್ಗಳ್ (ಕಂನವಿ. ೧೭-೨೮). **ಕೆಂದೂಳಿ** : ಮುಂದ್ಯೆಸಿ ಕೆಂದೂಳಿಯೊಳ್ ಕೆಸರ್ಮಸಗಿದ ಜಲದುರ್ಗ ಮೆಲ್ಲಂ ನೆಲದೊಳೋರಂತಾಗೆ (ಅಜಿಪು. ೯-೧೭ ವ) ; ಗಗನದೊಳಚ್ಚರಿಯೆನೆ ನೆಗೆದೊಗೆದುದು ಕೆಂದೂಳಿ (ವರ್ಧಪು. ೫-೨೫) ; ಕೆಂದೂಳಿಯನೊಟ್ಟಿ ಕೊಳಲೆಂದು (ಕಬ್ಬಿಕಾ. ೪೪) ; ಉರವಣಿಸಿ ಕೆಂದೂಳಿ ನಭಕುಪ್ಪರಿಸೆ ಹೊಯ್ದಾಡಿದರು(ಕುವ್ಯಾಭೀ. ೪-೭). **ಕೆಂದೂಳು** : ಅನಿಲಂ ಬೀಸಿದನು ಕೆಂದೂಳು ಮಸಗಿತ್ತು (ಬಸಪು. ೩೧-೧೧) ; ಭಾಸ್ಕರನ ರಥಚಯಖುರಹತಿಯೊಳುದ್ಭವಿಸಿದ ಪರಾಚಳದಕೆಂದೂಳೊ . . . ಎನಲಾವರಿಸಿದುದು ಸಂಧ್ಯಾರುಣವು (ಜೀವಂಚ. ೪-೧೫) ; ದಾಳಿಯ ಕುದುರೆಯಬ್ಬರದ ಕಾಲ್ದುಳಿಯ ಕೆಂದೂಳುಗಳಭ್ರ ಕುಪ್ಪರಿಸೆ (ಕಂನವಿ. ೧೨-೯). **ಕೆಂಧೂಳ್** : ರವಿಯವೊಲು ಶತಪತ್ರ ಸಂಘಾತವನು ಪಾದದಲಱದು ಕೆಂಧೂಳವಗಡಿಸೆ ಕುರುಸೇನೆ ಕೈಕೊಂಡುದು ರಣಾಂಗಣವ (ಕುವ್ಯಾಭೀ. ೮-೧೨) ; ಪಾದಾಗ್ರಹತಿಗೇಳ್ವ ಕೆಂಧೂಳ್ ಬತ್ತಿಸಿತು ಗಗನಗಂಗಾನದೀ ಜಲವನು (ಚೆಬಪು. ೪೪-೧೦). [ಕೆಂ + ದೂಳ್]

**ಕೆಂದೂಳಿ** 'ಕೆಂದೂಳ್' ನೋ.

**ಕೆಂದೂಳು** 'ಕೆಂದೂಳ್' ನೋ.

**ಕೆಂದೆಂಗು** (ನಾ). = ಕೆಂದಾಳಿ : "ಅಸಿಫಲಃ - ಕೆಂದೆಂಗು" (ಒಷಧಿ. ೫) ; ಕೆಚ್ಚನೆ ತೆಂಗು, ಕೆಂದೆಂಗು (ಶಬ್ದಾನು. ೩೪೧ ಪ್ರಯೋ) ; ಬನದೊಳಿರ್ದ ತೆಂಗೆಲ್ಲ ಕೆಂದೆಂಗಾದವು (ಗುಭಚ. ೨-೨೩) ; ಕೆಂದೆಂಗಿನ ಮರ ಘನ ಫಲಸಹಿತವೊಪ್ಪಿಹುವು (ಕಂನವಿ. ೫-೭೮). [ಕೆಂ + ತೆಂಗು$_2$]

**ಕೆಂದೆತ್ತು** (ನಾ). ಕೆಂಬಣ್ಣದ ಎತ್ತು : ಕೆಂದೆತ್ತು ಕೈಯಲ್ಲಿ ಕೆಂಪಂಗಿ ಮೈಯಲ್ಲಿ ಚಂದರು ಬಾವಲಿ ಕಿವಿಯಲ್ಲಿ ಇಕ್ಕೊಂಡು ಅಣ್ಣಾ ಬಂದಾ ತಂಗೀ ಕರೆಯೋಕೆ (ಜಗೀತ. ೨೯). [ಕೆಂದು$_3$ + ಎತ್ತು$_2$ (< ಎಬ್ಬು$_1$)]

**ಕೆಂದೇಱ್**, ಕೆಂಜೇಳು (ನಾ). ಕೆಂಪು ಚೇಳು : ತಡೆಯದೆ ಕೆಂದೇಱೆಂಬುದು ಮಿಡಿದ ವಿಷಂ ಪವನನಿದರ ಸೊಡರಂತಕ್ಕುಂ (ಖಮದ. ೧೧-೩೯). **ಕೆಂಜೇಳು** : ಜಿಗುಳೆ ಕೆಂಜಿಗ ಕಟ್ಟಿರುಹೆ ಯೋತಿಯು ಗೊದ್ದ ನೆಗೆವ ಹಾವರಣೆ ಕೆಂಜೇಳು (ಕಂನವಿ. ೧೮-೪೦). [ಕೆಂ + ತೇಱ್]

**ಕೆಂದೊಱೆ** (ನಾ). ಕೆಂಪಾದ ತೊರೆ ; ರಕ್ತದ ಹೊಳೆ : ಅಱೆಯಟ್ಟಿ ಖಳರ ಖಂಡಿಸಿ ಬಿಸಿರಕುತ ಕೆಂದೊಱೆಯೊಳು ತೊಳೆದ ಚಕ್ರವನು ಒಱೆಯೊಳು ಕೃಷ್ಣ ಬೈತಿಡುವಂತೆ (ನೋಹತ. ೧೫-೩). [ಕೆಂ + ತೊಱೆ$_2$]

**ಕೆಂದೋರ** (ನಾ). ಒಂದು ಊರಿನ ಹೆಸರು : ವ್ರೀಹಿಮುಖಗ್ರಾಮ ಕೆಸುವೊಳಲ ಕೆನ್ದೋರ ಮಾನ್ಯ ನನ್ದಿಗ್ರಾಮ ಪ್ರಭೃತಿ ದಶಗ್ರಾಮ ಪರಿಭೋಗೇನ (ಇಆ. XIX, ೧೮-೧೪ ; 602). [?]

**ಕೆಂಧೂಲಿ**, ಕೆಂಧೂಳಿ (ನಾ).= ಕೆಂದೂಳ್ : ಕೆಂಧೂಲಿ [ಪಾಠಾಂ. ಳಿ] ಯಿಂದಾಗಸಂ ಕೆಂಪಾದುದಾಗಿ (ಶಮುದ. ೧೫೫ ಪ್ರಯೋ). **ಕೆಂಧೂಳಿ** : ಕೆಂಧೂಳಿಮಣಿಸಿತನಿಮಿಷತ್ವವನಮರ ಸಂತತಿಯ (ಕುವ್ಯಾಕ. ೯-೨೯) ; ಪಾದಗಟ್ಟನೆಯಿಂದ ಹುಟ್ಟಿದ ಕೆಂಧೂಳಿಗಳು ಎಲ್ಲಾ ಕಡೆಯಲ್ಲೂ ಮುಚ್ಚಿಕೊಂಡವು (ಕೃವಾಭೀ. ೯೬). [ಕೆಂ + ಧೂಲಿ]

**ಕೆಂಧೂಳ್** 'ಕೆಂದೂಳ್' ನೋ.

**ಕೆಂಧೂಳಿ** 'ಕೆಂಧೂಲಿ' ನೋ.

**ಕೆಂಧೂಳಿಡು** (ಕ್ರಿ). ಕೆಂಪು ದೂಳನ್ನು ತುಂಬು, —ಕವಿಸು : ಕವಿದು ಕೆಂಧೂಳಿಡುವ ಸೇನಾಟವಿಯ ನೋಡುತ (ಕುವ್ಯಾಕ. ೧೪-೩೪). [ಕೆಂಧೂಳ್ (< ಕೆಂದೂಳ್) + ಇಡು$_1$]

**ಕೆಂಪ** (ನಾ). ೧. ಕೆಂಪಗೆ ಇರುವವನು ; ಕೆಂಬಣ್ಣದವನು : ಕೆಂಪನಿವಾ ಹಳದಿಯವಾ ಅಂದ ಚೆಂದವಣ್ಣಾ (ಸೂರ್ಯಪಾ. ೧೦೬-೭). 'ಕೆಂಚ$_1$' ಪರಾ. ೨. ಒಬ್ಬಾತನ ಹೆಸರು. 'ಕೆಂಪಯ' ಪರಾ. [ಕೆಂಪು$_1$ + -ಅ$_7$]

**ಕೆಂಪಗೆ** (ಅ). ಕೆಂಬಣ್ಣದಿಂದ ಕೂಡಿ ; ಕೆಚ್ಚನಾಗಿ ; ಕೆಚ್ಚಗೆ : ಕೆಂಪಗೆ ಕಾದ ಕುಡವು (ಮುಂಬಯಿ. ೨-೧೨) ; ಹೊಲ ಹಚ್ಚಗಾಯಿತು ; ಒಡೆಯನ ಕಣ್ಣು ಕೆಂಪಗಾದವು (ಗಾದೆ). [ಕೆಂಪು$_1$ + -ಅಗೆ$_3$]

**ಕೆಂಪಡರ್**, ಕೆಂಪಡರು (ಕ್ರಿ). ಕೆಂಪಗಾಗು ; ಕೆಂಪೇರು ; ಕೆಂಚಗಾಗು : ಕುಂಕುಮದೊಳಿರ್ದಿದ ಬಾಳೆಗಳನ್ನವಾಗಿ ಕೆಂಪಡರ್ದಲರ್ಗಣ್ಣಿಂದ (ಆದಿಪು. ೧೨-೨೫) ; ಪಸರಿಸಿ ನೀಳ್ದ ಕೆಂಪಡರ್ದ ಶಾಳಿ ತೆಜದಿಂ (ಎಕ. VIII, ಸಾಗರ. ೧೧೯-೫೫ ; 1042) ; ಆ ಕಿಚ್ಚಿನ ನಾಲಗೆಯಂತೆ ಕೆಂಪಡರ್ದ ಕಣ್ಗಳುಂ (ಕುವ್ಯಾದ್ರೋ. ೧೫-೪೪). **ಕೆಂಪಡರು** : ಕೆಂಪಡರಿದೋಗರ ಸಹಿತ ಭೂತಕೆ ಬಡಿಸಿದರು ಮಾಂತ್ರಿಕರು (ಕುವ್ಯಾದ್ರೋ. ೯-೩). [ಕೆಂಪು$_1$ + ಅಡರ್]

**ಕೆಂಪಡರು** 'ಕೆಂಪಡರ್' ನೋ.

**ಕೆಂಪಡಸು** (ಕ್ರಿ). = ಕೆಂಪಡರ್ : ಅಧರಂ ಬೆಳ್ಪೀಱದೂರುದ್ವಯಂ ಪೊಡರ್ದಾರ್ಕಂಪಿಸದಕ್ಷಿ ಕೆಂಪಡಸದೊರ್ವಂಗೋತು ನೀನನ್ಯರೊಳ್ ಕೊಡಗೂಸಿರ್ಪವೊಲಿರ್ಪೆ (ಜಗವಿ. ೧೬-೧೨೬). [ಕೆಂಪು$_1$ + ಅಡಸು]

**ಕೆಂಪನೆ** (ಅ). = ಕೆಂಪಗೆ : (ಕಿ). [ಕೆಂಪು$_1$ + -ಅನೆ$_2$ (< -ಅನೆಯ$_2$)]

**ಕೆಂಪಯ** (ನಾ). ಒಬ್ಬಾತನ ಹೆಸರು : ಸೂರಪಗೌಡನ ಮಗ ಕೆಂಪಯನು ನಿಲಿಸಿದ ಗರುಡಗಂಭ (ಮೈಆರಿ. ೧೯೨೩, ೩೦-೪ ; ?). [ಕೆಂಪ + ಅಯ$_1$ (< ಅಯ್ಯ$_1$)]

**ಕೆಂಪರಗು** (ನಾ). ಕೆಂಪು ಬಣ್ಣದ ಅರಗು: "ಲಾಕ್ಷಾ, ರಾಕ್ಷಾ, ಜತು, ಯಾವಃ, ಅಲಕ್ತಃ, ದ್ರುಮಾಮಯಃ – ೬ ಅರಗಿನ ಹೆಸರುಗಳು ಕೆಂಪರಗು, ಬಣ್ಣದ ಅರಗು" (ಸಿದ್ಧಾಂತಿ. ೧೭೯). [ಕೆಂಪು$_1$ + ಅರಗು$_3$]

**ಕೆಂಪಿ** (ನಾ). ಕೆಂಪಾಗಿರುವವಳು; ಕೆಂಪು ಮೈಬಣ್ಣದವಳು: ಕೆಂಪಿಯೊರ್ವಳು ಬಂದು ರಾಯನ ಹಸ್ತಕೆ ಸಂಪಗೆ ಹೂಗಳ ನೀಡಿ (ಭರತೇ. ೫-೩೨). [ಕೆಂಪು$_1$ + -ಇ$_3$]

**ಕೆಂಪಿಡಿ** (ಕ್ರಿ). ಕೆಂಪುಬಣ್ಣ ತುಂಬು; ಕೆಂಪಾಗು: ಸೊಡರ್ಗುಡಿಯು ಕೆಂಪಿನೊಳ್ ಕೆಂಪಿಡಿದರೆ . . . ಎಸೆದಿರ್ದುವರಿಗನಸ್ತ್ರಚಯಂಗಳ್ (ಪಂಪಭಾ. ೧೦-೪೮). [ಕೆಂಪು$_1$ + ಇಡಿ$_2$]

**ಕೆಂಪಿಸು** (ಕ್ರಿ). ಕೆಂಪಾಗು; ಕೆಂಪುಬಣ್ಣವನ್ನು ತಾಳು: ಹೊಂಚಿತ್ತಾಳಿಯು ಕೆಂಪಿಸಿದಂತೆ (ಚನ್ನವ. ೬೪-೫). [ಕೆಂಪು$_1$ + -ಇಸು$_3$]

**ಕೆಂಪು$_1$** (ನಾ). ೧. ಕೆಂಪುಬಣ್ಣ; ರಕ್ತವರ್ಣ; ತಾಮ್ರವರ್ಣ: "ಅರುಣಃ, ಶೋಣಃ, ರಕ್ತಃ, ಮಾಂಜಿಷ್ಠಃ, ಪಾಟಳಃ, (ಅ) ತಾಮ್ರಃ, ಲೋಹಿತಃ – ೭ ಕೆಂಪು" (ಹಲಾಯು. ೧೨೧-೪೮); ಕೆಂಪುಮ್ಮಳಿಸಿಂದ ವಾಂತುವೆನೆ . . . ಅಕ್ಷಿಗಳ್ಗೆ ರಾಗಮ್ಮಧುಸೇವೆಯಿಂ ನೆಗಟ್ಟೆ (ಕಾವ್ಯಸಾ. ೬೬೫ ಶೂದ್ರಕ); ಮುನಿಸಿನೊಳ್ ಕೆಚ್ಚನಾದ ಕಣ್ ದೆಸೆಗೆ ಕೆಂಪನೊದವಿಸಿದುದು (ಆದಿಪು. ೧೪-೨೩); ಉದಯದ ಕೆಂಪಿನಿಂಪುದಿದೊಂದಿನ ಬಿಂಬಮೊ (ಕಾದಂಪೂ. ೪೧೪); ಸುಣ್ಣದಿಂದರಿಸಿನದಿಂ ಕೆಂಪಪ್ಪುದು (ಧರ್ಮಾಮೃ. ೬-೧೦೮); ಕೋಲ ತೆಗಹಿನ ಕಿವಿಗಡಿಯ ಕಣ್ಣಾಲಿಗಳ ಕೆಂಪುಗಳ ಹೊಗರು ಛಡಾಳಿಸಲು (ಕುಮ್ಮಾಭೀ. ೮-೪೦); ಹವಳದ ಸಲ್ಲತೆಗೆ ಕೆಂಪಾರಿತ್ತರು ಸವಿಮಾತಿನ ಗಿಳಿಗೆ ಹಸುರ್ಕ್ಕಾರು ಬರೆದರು (ಪುರಂದ. ೨-೪೯-೫). ೨. ತಾಮ್ರ: "ಸುಲುವೆಂದು ಕಿಸುವೆಂದುಂ ಕೆಂಪೆಂದುಂ ತಾಮ್ರಂ" (ಶಶಸಾ. ೫-೬೩); "ಕೆಂಪು ಕಿಸು ಸುಲ್ಲೆನಲ್ಕಿವು ಪೆಂಪಿಂ ತಾಮ್ರಕ್ಕೆ ನಾಮ" (ಕವಿಕಂ. ೫೪). ೩. ಕೆಂಪುಬಣ್ಣದ ಹರಳು; ಮಾಣಿಕ್ಯ: "ಶೋಣರತ್ನಂ ಲೋಹಿತಕಃ ಪದ್ಮರಾಗಃ – ೩ ಕೆಂಪುಗಳು" (ಸಿದ್ಧಾಂತಿ. ೨೬೦); ಕೆಂಪು ಹವಳ ಪುಷ್ಯರಾಗ ಯಿಾ ಮೂರು ರತ್ನಗಳು (ಸಾಗಂಧಿ. ೩೬೩-೨೧). ೪. (ಕರಾ) ಒಂದು ಚರ್ಮರೋಗ. [ಕೆಂ + -ಪು$_2$]

**ಕೆಂಪು$_2$** (ನಾ). ಎಕ್ಕಡ; ಮೆಟ್ಟು: ತಿದಿಯುಂ ಸಂಬಳಿಗೋಲುಂ ಕೆಂಪುಂ ಪೊಸಮಿಳಿಯುಂ ಬೆರಸುತೆ ಬಂದು ಪೊಳಲಂ ಪೊಕ್ಕರ್ (ಬಂಹರಿ. ೯-೯೧). [< ಕೆರ್ಪು]

**ಕೆಂಪುಕಲ್ಲು** (ನಾ). ಕೆಂಬಣ್ಣದ ಕಲ್ಲು; ಮಾಣಿಕ್ಯ; ಪದ್ಮರಾಗ: "ಶೋಣರತ್ನಂ, ಲೋಹಿತಕಃ, ಪದ್ಮರಾಗಃ – ೩ ಕೆಂಪುಗಳು, ಕೆಂಪು ಕಲ್ಲುಗಳು" (ಸಿದ್ಧಾಂತಿ. ೨೬೦). [ಕೆಂಪು$_1$ + ಕಲ್ಲು (< ಕಲ್$_3$)]

**ಕೆಂಪುಗಣಜಿಲೆ** (ನಾ). ಕೆಂಪು ಬಣ್ಣದ ಗಣಜಿಲೆ: (ಸಿ). [ಕೆಂಪು$_1$ + ಗಣಜಿಲೆ]

**ಕೆಂಪುಗದಡು** (ಕ್ರಿ). ಕೆಂಪುಬಣ್ಣ; ಕದಡಿಹೋಗು, —ಕುಗ್ಗು: ಪರಿದನುಲೇಪನದ ತೊಡಕಿದ ಗಳದ ಹಾರದ ಕೆಂಪುಗದಡಿದಧರದ (ಜೈಮಿಭಾ. ೧೦-೫೦). [ಕೆಂಪು$_1$ + ಕದಡು$_1$]

**ಕೆಂಪುಗೂಡು** (ಕ್ರಿ). ಕೆಂಪುಬಣ್ಣದಿಂದ ಕೂಡಿರು: ಭೂಲಲನೆಗಾಕಳಮೆ ಪ್ರಸವೋತ್ಸವಕ್ಕೆ ಸಮ್ಮೇಳಿಸಿದ ಕೆಂಪುಗೂಡಿದ ಹಸುರು ಪಟ್ಟೆಯ ವಿಶಾಲವಸನದ ಮುಸುಕಿದೆಂಬಿನಂ ಕಣ್ಗೆಸೆದುದು (ಚಿಬಪು. ೧೧-೯). [ಕೆಂಪು$_1$ + ಕೂಡು$_1$]

**ಕೆಂಪುಗೊದ್ದ** (ನಾ). ಇರುವೆ; ಗೊದ್ದದಲ್ಲಿ ಒಂದು ಬಗೆ: ಕೆಂಪು ಗೊದ್ದ ಕಡಿದರೆ ಬಹಳ ನೋವು (ರೂಢಿ). [ಕೆಂಪು$_1$ + ಗೊದ್ದ$_1$]

**ಕೆಂಪುಗೋರಂಟೆ, ಕೆಂಪುಗೋರಟೆ** (ನಾ). ಕೆಂಪು ಬಣ್ಣದ ಗೋರಂಟೆ: "ಪೀತಮಾ ಸಹಚರಿಯು ಕೆಂಪುಗೋರಂಟೆ [ಪಾಠಾಂ. ಗೋರಟೆ]" (ಮಂಗರಾ. ೩೭-೨೨). **ಕೆಂಪುಗೋರಟೆ.** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕೆಂಪು$_1$ + ಗೋರಂಟೆ]

**ಕೆಂಪುಗೋರಟೆ** 'ಕೆಂಪುಗೋರಂಟೆ' ನೋ.

**ಕೆಂಪುಜನ** (ನಾ). ಕೆಂಪುಬಣ್ಣದ ಜನ; ಫಿರಂಗಿ ಜನ: ಈಚೆಗೆ ಜರ್ಮನಿ ಯುದ್ಧವಾದಾಗ ಯಾರೋ ಕೆಂಪುಜನರು ಬಂದು ಒಳ್ಳೆ ಹೋರಿಗಳನ್ನೆಲ್ಲಾ ಕೊಂಡುಕೊಂಡು ಹೋಗಿಬಿಟ್ಟರು (ಹುಟ್ಟಿಹ. ೫೯). [ಕೆಂಪು$_1$ + ಜನ]

**ಕೆಂಪುದುಂಬಿ** (ನಾ). (ಉಕ). ಕಡಜದ ಹುಳು; ಕಣಜದ ಹುಳು; ಕಡಜೀರಿಗೆ: "ಗಂಡೋಲಿ, ಗಂಧೋಲೀ ವರಟಾ –೨ ಕೆಂಪು ದುಂಬೀ ಹೆಸರು; ಕಣಜದ ಹುಳಕ್ಕೂ ಹೆಸರು" (ಸಿದ್ಧಾಂತಿ. ೧೪೧). [ಕೆಂಪು$_1$ + ತುಂಬಿ$_1$]

**ಕೆಂಪುದಳಿರ್** (ನಾ).= ಕೆಂದಳಿರ್: ಗಿಳಿನುಡಿಯ ಪೂರ್ಣಪರ್ಕ್ಕಿಮೊಲೆಗಳ ಕೆಂಪುದಳಿರಡಿಯ (ಸಾಳ್ವಭಾ. ೨-೨). [ಕೆಂಪು$_1$ + ತಳಿರ್$_2$]

**ಕೆಂಪುದಾವರೆ** (ನಾ). = ಕೆಂದಾಮರೆ: "ಅರುಣಾಬಮೆನೆ ಕೋಕನದ ಮೆನಲ್ ಕೆಂಪುದಾವರೆಯಕ್ಕು" (ಮಂಗರಾ. ೧೨೪-೧೬). [ಕೆಂಪು$_1$ + ತಾವರೆ (< ತಾಮರೆ)]

**ಕೆಂಪುದೋಱು** (ಕ್ರಿ). ಕೆಂಪುಬಣ್ಣವನ್ನು ತೋರು; ಕೆಂಪಾಗಿ ಕಾಣು: ಕಾಲ್ಮೊಗಂ ಕೆಂಪುದೋಱೆ ರಾಜಮರಾಳಂ (ಮಂಗರಾ. ೫೧-೭). [ಕೆಂಪು$_1$ + ತೋಱು$_1$ (< ತೋಱ್)]

**ಕೆಂಪುನೆಲ್ಲು** (ನಾ). ಕೆಂಪುಭತ್ತ; ಒಂದು ಜಾತಿಯ ನೆಲ್ಲು: "ಆಶುಃ, ವ್ರೀಹಿಃ, ಪಾಟಲಃ – ೩ ಕೆಂಬಾರದ ಭತ್ತ, ಕೆಂಪುನೆಲ್ಲು" (ಸಿದ್ಧಾಂತಿ. ೨೪೯). [ಕೆಂಪು$_1$ + ನೆಲ್ಲು (< ನೆಲ್)]

**ಕೆಂಪುಮಲೆ** (ನಾ). ಪಶ್ಚಿಮಘಟ್ಟದಲ್ಲಿಯ ಒಂದು ಬೆಟ್ಟ: (ಸಿ). 'ನೀಲಮಲೆ' ಪರಾ. [ಕೆಂಪು$_1$ + ಮಲೆ$_2$]

**ಕೆಂಪುಮಿಾನು** (ನಾ). ಕೆಂಪುಬಣ್ಣದ ಮಿಾನು; ಕೆಮ್ಮಿಾನು: "ರೋಹಿತಃ – ಕೆಂಪುಮಿಾನು" (ಸಿದ್ಧಾಂತಿ. ೬೩). [ಕೆಂಪು$_1$ + ಮಿಾನು$_2$ (< ಮಿಾನ್$_3$)]

**ಕೆಂಪುರತ್ನ** (ನಾ). ಕೆಂಬಣ್ಣದ ರತ್ನ; ಮಾಣಿಕ್ಯ; ಪದ್ಮರಾಗ: "ಮಾಣಿಕ್ಯ – ಕೆಂಪುರತ್ನ" (ಗಂಗಾಪು. ೨೫೪). [ಕೆಂಪು$_1$ + ರತ್ನ]

**ಕೆಂಪುಲಾವಗ** (ನಾ). ಕೆಂಬಣ್ಣದ ಲಾವಗೆ ಹಕ್ಕಿ: (ಸಿ). [ಕೆಂಪು$_1$ + ಲಾವಗ (< ಲಾವಗೆ)]

**ಕೆಂಪುವಾಸು** (ಕ್ರಿ). ಕೆಂಪುಬಣ್ಣವನ್ನು ಹಾಸು; ಕೆಂಪು ಹೊದಿಕೆಯನ್ನು ತೊಡಿಸು: ಘಳಿಯಿಸಿ ಕೆಂಪುವಾಸಿದವೊಲಿರ್ದುವು ಮಾಮರಗಳ್ ಬಸಂತದೊಳ್ (ಪಂಪಭಾ. ೫-೩೨). [ಕೆಂಪು$_1$ + ಪಾಸು$_1$]

**ಕೆಂಪುವೀಱು** (ಕ್ರಿ). ಕೆಂಪುಬಣ್ಣವನ್ನು ಬೀರು, —ಹರಡು: ಲೋಚನಂ ಕೆಂಪುವೀಱೆ ಪಾಂಡಿಮುಮಧರಕ್ಕಳವಡೆ (ಜಗವಿ. ೮-೨೬). [ಕೆಂಪು$_1$ + ಬೀಱು]

**ಕೆಂಪೆಸೆ** (ಕ್ರಿ). ಕೆಂಪನ್ನು ಬೀರು; ಕೆಂಪಗೆ ಹೊಳೆ: ಇಲಿಯ ಬಿಲದ್ವಾರಂಗಳ ಕೆಲದೊಳ್ ಕೆಂಪೆಸೆದು ಮಿಸುಪ ಕನಕದ ರಜಮಂ ಲಲಿತಾಂಗಿ ಕಂಡು (ಪಂಚತಂ. ೧೫೫-೧೫). [ಕೆಂಪು$_1$ + ಎಸೆ$_1$]

**ಕೆಂಪೆಳಸು** (ನಾ). ಕೆಂಪಗಾಗು; ಕೆಂಪೇರು: ಅಳವಿಲ್ಲದಳುತ್ತಿರೆ ಕೆಂಪೆಳಸಿದ ಬಾಷ್ಪಾಂಬುಪೂರ್ಣ ಲೋಚನಮುಂ ತಜ್ಜಳದಿಂದೆ ಕರ್ಚಿ (ಕಾದಂಪೂ. ೭೦೨). [ಕೆಂಪು$_1$ + ಎಳಸು$_1$]

**ಕೆಂಪೆಳ್ಳು** (ನಾ). ೧. ಕೆಂಬಣ್ಣದ ಎಳ್ಳು : ಎಳ್ಳು ಮೂರು ಪ್ರಕಾರದ್ದು . . . ಬಿಳೀಎಳ್ಳು ಕರಿಯೆಳ್ಳು ಮತ್ತು ಕೆಂಪೆಳ್ಳು (ಮುಂಬವ್ಯಾ. ೩೫). ೨. ಮೈಯ ಚರ್ಮದ ಮೇಲೆ ಇರುವ ಕೆಂಪುಬಣ್ಣದ ಚುಕ್ಕೆ: ರೋಹಿಣಿಯು ಎದೆಯ ಕೆಂಪೆಳ್ಳು ಗೆಳತಿ ಅವನವಳು (ನಾದಲೀ. ೭೩–೨೧). 'ಕರಿಯೆಳ್ಳು', 'ಕಾರೆಳ್ಳು' ಪರಾ. [ಕೆಂಪು$_1$ + ಎಳ್ಳು (< ಎಳ್)]

**ಕೆಂಪೇಱು** (ಕ್ರಿ). ಕೆಂಪುಬಣ್ಣವನ್ನು ತಾಳು; ಕೆಂಪಾಗು : ಕೆಂಪೇಱಿದ ಕಣ್ಗಳುಂ ಬೆಳ್ಪೇಱಿದ ಬಾಯ್ದೆಱೆಗಳುಂ (ಪಂಪಭಾ. ೫–೬೭ ವ); ಕೆಂಪೇಱಿದಕ್ಷಿಯುಲೆರಡುಕೋಡಿಯುಲೊಗುತಲದೆ ಕಿಡಿಗಳ ತುಷಾರಚಯ (ಕುವ್ಯಾಕ. ೧೨–೧೫); ಕೆಂಪೇಱಿದಕ್ಷಿಯ ಕುಣಿವ ಮೀಸೆಯ ಕಾಹುರದ ಮನದ (ತೊರರಾ. ೪–೬–೧೮).
[ಕೆಂಪು$_1$ + ಏಱು$_1$ (< ಏಱ್$_1$)]

**ಕೆಂಪೊಗೆ** (ಕ್ರಿ). ಕೆಂಪುಬಣ್ಣವನ್ನು ಚೆಲ್ಲು, —ಬೀರು : ಪರಿಮಳಿತ ಪೂಗೊಂಚಲಿನ ಕೆಂಪೊಗೆ [ಪಾಠಾಂ. ರೆ]ದ ಕಿಸಲಯವಲ್ಲರಿಯ (ತೊರರಾ. ೫–೧–೪೧). [ಕೆಂಪು$_1$ + ಒಗೆ$_1$]

**ಕೆಂಪೊಡರಿಸು** (ಕ್ರಿ). ಕೆಂಪಾಗು : ಬಸವಲ್ಲದೆಱ್ಱು ಕೆಂಪೊಡರಿಸೆ ತೀವಿರೆ ಬಾಷ್ಪಸಲಿಲಂ . . . ಎಸೆವ ಕಣ್ಗಳಿಂದೀಕ್ಷಿಸಿದಂ (ಕಾದಂಪೂ. ೪೮೩).
[ಕೆಂಪು$_1$ + ಒಡರಿಸು]

**ಕೆಂಪೊತ್ತು** (ಕ್ರಿ). ಕೆಂಬಣ್ಣವನ್ನು ತಾಳು ; ಕೆಂಪಾಗು : ಇತ್ತ ರವಿ ರಶ್ಮಿಗಳು ನೆಱೆ ಕೆಂಪೊತ್ತಿದವು (ಕುವ್ಯಾದ್ರೋ. ೧೪–೨೫).
[ಕೆಂಪು$_1$ + ಒತ್ತು$_1$]

**ಕೆಂಪೊದವು** (ಕ್ರಿ). =ಕೆಂಪೊಡರಿಸು : ಕೆಂಪೊದವಿದ ಪಡುವಣ ದೆಸೆಗೆಯ್ದಿದನರುಣರುಚಿಪ್ರಕಾಶನಪ್ಪ ದಿನೇಶಂ (ಕಾದಂಪೂ. ೮೦೮).
[ಕೆಂಪು$_1$ + ಒದವು$_1$]

**ಕೆಂಪೊರೆ** (ಕ್ರಿ). = ಕೆಂಪೊಗೆ : ಕಟ್ಟಿಸಕ ಕೆಂಪೊರೆವ ಹೂವೆಸಳಿನೇರ್ಗಳಂ ಬಿಟ್ಟ ಕಣ್ಣಿಂ ಕಾಳು ಕಂಡನೆದೆ ಕರಗಿ (ಕಾಲೂರ. ೧೧೦–೨೨೫).
[ಕೆಂಪು$_1$ + ಒರೆ$_1$ (< ಒಱೆ$_1$)]

**ಕೆಂಪೋಲೆ** (ನಾ). ಕೆಂಪು ಹರಳು ಕೂಡಿಸಿದ ಓಲೆ; ಮಾಣಿಕ್ಯದ ಓಲೆ : (ಕ). [ಕೆಂಪು$_1$ + ಓಲೆ]

**ಕೆಂಬಕ** (ನಾ). ಒಂದು ಮೂಲಿಕೆ (?) : "ಮಹಾಗಂಡು – ಕೆಂಬಕ" (ಓಷಧಿ. ೧೧೭). [?]

**ಕೆಂಬಜ್ಜೆ** (ನಾ). ಕೆಂಪಾದ ಪಾದ; ಕೆಂಪಾಗಿರುವ ಹೆಜ್ಜೆ : ತಜ್ಜಲಜಾಕರದೊಳು ಪೊಕ್ಕು ತನ್ನ ಕೆಂಬಜ್ಜೆದೊಳೆದು ಕೈಗರ್ಚಿ (ಶ್ರೀಪಾಲ. ೬–೬೦); ಕೆಂಬಜ್ಜೆಗಳ ಸೋಂಕಿನಿಂದ ಭೂಮಿಯೊಳರುಣಾಂಬುಜಗಳ ಪಸರಿಸುತ (ಭರಚ. ೩–೧೭); ಆದರೆ ಸುತ್ತುಮುತ್ತಲೂ ಧೂಳಿಯ ಕೆಂಬಜ್ಜೆ (ಕೋದಂಡ ೧೬). [ಕೆಂ + ಪಜ್ಜೆ]

**ಕೆಂಬಟಿಕೆ** (ನಾ). ಒಂದು ಬಗೆಯ ಸಸ್ಯ ; ತೊಗರಿ (?) : "ತುವರೀ – ತೊಗರಿ, ತೊವರಮಣ್ಣು, ಕೆಂಬಟಿಕೆ" (ಓಷಧಿ. ೭೧). [?]

**ಕೆಂಬಟ್ಟೆ$_1$** (ನಾ). ಕೆಂಬಣ್ಣದ ದಾರಿ; ಕೆಂದೂಳು ; ಕೆಂಪುಮಣ್ಣು : ಕೆಳಗೇ ಕೆಂಬಟ್ಟೇ ಮೇಲೆ ಚಿತ್ತೇ ಬಿಸಿಲು ಕಾಲುನಡೆಗೇಲೀ ಬರಲಾರೇ (ಹುಟ್ಟಿಹ. ೮೯). [ಕೆಂ + ಬಟ್ಟೆ$_1$]

**ಕೆಂಬಟ್ಟೆ$_2$** (ನಾ). ಕೆಂಪುವಸ್ತ್ರ ; ಕೆಂಬಣ್ಣದ ಬಟ್ಟೆ : ನಸುಗಂದಿರ್ದ ಕೆಂಬಟ್ಟೆಯಿಂ ಗಂಟೆಗಳಿಂ ಮಾಯೂರ ಕಂಠಾವಳಿಯಿನೆಸೆದಿರಲ್ ತೋರಣಂ (ಕಾದಂಉ. ೨೬೦); ಸೂರ್ಯನಸ್ತಾಚಳದೊಳ್ ಕೆಂಬಟ್ಟೆಯೊಂದಡ್ಡಣದೊಳೆ ಮಗುಟ್ದಂತೆಡ್ಡಮಾಯ್ತರ್ಕಬಿಂಬಂ (ಸೂಕ್ತಿಸು. ೮–೯); ಕೆಂಬಟ್ಟೆಯ ಮೃದುತಲ್ಪದೊಳೊಱಗಿ ತೆಱಂಬೊಳೆದೊಪ್ಪುವ ರತಿಯೆನೆ (ಜಯಕಾ. ೩–೮). [ಕೆಂ + ಬಟ್ಟೆ$_2$]

**ಕೆಂಬಣ್ಣ** (ನಾ). ಕೆಂಪುಬಣ್ಣ : ಕೆಂಬಣ್ಣದ ಕುದುರೆಗಳೊಳೊಡಂಬಡೆ (ಪಂಪಭಾ. ೧೦–೫೯); ಸುರಹೊನ್ನೆಯ ಪೊಂಬಣ್ಣದ ಬೆಳರ್ವಣ್ಣದ ಕೆಂಬಣ್ಣದ ಕೇಸರಮುಮೆಸಳ್ಗಳುಂ ಕರ್ಣಿಕೆಯುಂ (ಮಲ್ಲಿಪು. ೫–೧೮); ಉಡುವಸನಂಗಳು ತೋಯ್ದು ಕೆಂಬಣ್ಣಕಿಮ್ಮಡಿ ರುಚಿದೋಱುತಲಿರಲು (ಮೋಹತ. ೧೪–೯೧). [ಕೆಂ + ಬಣ್ಣ]

**ಕೆಂಬತ್ತಿ$_1$** (ನಾ). ಕೆಂಪು ಹೂವಾಗುವ ಹತ್ತಿ ಗಿಡ : (ಕ).
[ಕೆಂ + ಪತ್ತಿ$_1$ (< ಪಱ್ತಿ)]

**ಕೆಂಬತ್ತಿ$_2$** 'ಕೆಂಬೂತಿ$_1$' ನೋ.

**ಕೆಂಬರ** 'ಕೆಂಬರವು' ನೋ.

**ಕೆಂಬರಲ್**, ಕೆಂಬರಲು, ಕೆಂಬರಳು (ನಾ). ಕೆಂಪು ಹರಳು ; ಮಾಣಿಕ್ಯ ; ಪದ್ಮರಾಗ : "ಕಿಸುಗಲ್, ಕೆಂಬರಲ್, ರನ್ನಂ – ಈ ೩ ಕುರುವಿಂದಂ" (ಕಶಸಾ. ೪–೫೭); ಕೆಂಬರಲ ರುಚಿ ನೀಲರುಚಿಯೊಳ್ ಬೆರಸಿರ್ಪುದು (ಅರ್ಜನೇ. ೨–೪೪); ಗುರುಗುಂಜಿಯಂ ನೋಡಿ ಕೆಂಬರಲೆಂದು ಬಗೆದು (ಕಬ್ಬಿಕಾ. ೨೩೪); ಅರೆಗಿಳಿವಸುಳೆಯೆಂದದಿ ಕುವರನು ಕೆಂಬರಲ ತೊಟ್ಟಿಲೊಳೊಪ್ಪಿದನು (ಚಂಪ್ರಸಾಂ. ೪–೭೨); ಮಿಱುಗುವ ಸಾಲಸೆಜ್ಜೆಯಲಿ ಕೆತ್ತಿಸಿದ ಕೆಂಬರಲ್ಗಳ ದೀಧಿತಿಯೆಸೆಯೆ (ಕಂನವಿ. ೭–೪). **ಕೆಂಬರಲು** : "ಕೆಂಬರಲು ರನ್ನ ಕಿಸುಗಲ್ಲೆಂಬಿವು ರತ್ನಾಭಿಧಾನಂ" (ಕವಿಕಂ. ೫೩). **ಕೆಂಬರಳು** : ಕುರುಳಿಂದ್ರನೀಲ ಕಣ್ಗಡೆ ಶುಭ್ರಮೌಕ್ತಿಕ ಮಿಱುಗುವ ರದನ ಕೆಂಬರಳು (ಕಂನವಿ. ೬–೯೮). [ಕೆಂ + ಪರಲ್]

**ಕೆಂಬರಲು** 'ಕೆಂಬರಲ್' ನೋ.

**ಕೆಂಬರಲೋಲೆ** (ನಾ). ಕೆಂಪು ಹರಳಿನ ಓಲೆ; ಮಾಣಿಕ್ಯದ ಓಲೆ : ಮಿಳಿರ್ವ ಕೆಂಬರಲೋಲೆಯಿಂ ಕಿವಿಗೆ ಸಾರ್ಚಿ (ಪದ್ಮರಾ. ೩–೪೭); ಕೆಂಬರಲೋಲೆ ಕೇತಕಿಯ ಸೋರ್ಮುಡಿ (ರಾಜಶೇ. ೭–೫); ಮುತ್ತಿನ ಗೊಂಡೆವಾವುಲಿ ತೊಂಗಲ್ದೊಂಗೆ ಕೆಂಬರಲೋಲೆ ಮಿಱುಗೆ (ರಾಮಾಶ್ವ. ೧೦೩–೪). [ಕೆಂಬರಲ್ + ಓಲೆ]

**ಕೆಂಬರಲ್ತಿಂಗಣಿ**, ಕೆಂಬರಲ್ದಿಂಗಣಿ (ನಾ). ಮಾಣಿಕ್ಯದ ಸೂಸಕ : ಕೆಂಬರಲ್ತಿಂಗಣಿಗಟ್ಟಿದಂತು (ಕಾವ್ಯಸಾ. ೯೩೫). **ಕೆಂಬರಲ್ದಿಂಗಣಿ** : ಹೊಂದಿಟ್ಟಿಲ ಮೇಲೆ ಕಟ್ಟಿರುವ ಈ ಕೆಂಬರಲ್ದಿಂಗಣಿಗೆ ಛತ್ತೀಸಗೊಂಡೆ ಗುಚ್ಛುಗಳನ್ನುಳ್ಳ ಸೀಮುರ್ತಿನ ಪುಟ್ಟಿರ್ಝುಲ್ಲಿಯನ್ನಳವಡಿಸಿ ಕುಡಬೇಕೆಂದು (ಮಂತ್ರಶ. ೧೪೪–೭). [ಕೆಂಬರಲ್ + ತಿಂಗಣಿ]

**ಕೆಂಬರಲ್ದಿಂಗಣಿ** 'ಕೆಂಬರಲ್ತಿಂಗಣಿ' ನೋ.

**ಕೆಂಬರವು**, ಕೆಂಬರ, ಕೆಂಬಾರ$_2$ (ನಾ). ೧. ಕೆಂಪಾಗಿ ಹರಡುವಿಕೆ : (ಕ). ೨. ಕೆಂಪು ಚೇಳು ; ಕೆಂಜೇಳು : (ಕ). ೩. ಉಷ್ಣದೋಷದಿಂದಮಗುವಿನ ಮೈಮೇಲೆ ಮೂಡುವ ಚೇಳಿನ ಆಕಾರದ ಮಚ್ಚೆ : (ಕ). **ಕೆಂಬರ** : (ಕ). **ಕೆಂಬಾರ$_2$** : (ಕ).
[ಕೆಂ + ಪರವು (< ಪರೆವು)]

**ಕೆಂಬರಳು** 'ಕೆಂಬರಲ್' ನೋ.

**ಕೆಂಬರಿಗೆ** (ನಾ). ಕೆಂಪು ಬಣ್ಣದ ಗುರಾಣಿ : ಕಡಲೊಡೆಯನುಂ ಸುರಪನುಂ ಕಾದಲಿಬ್ಬರ ಪಿಡಿದ ಕೆಂಬರಿಗೆಗಳೊ (ಹಚಕಾ. ೩–೭೮).
[ಕೆಂ + ಪರಿಗೆ]

**ಕೆಂಬರು** 'ಕೆಂಬಾರ$_1$' ನೋ.

**ಕೆಂಬರುಗಣ್ಣು** (ನಾ). ಕೆಂಪುಕಣ್ಣು ; ಕೆಂಗಣ್ಣು : ಸಂದಿಯ ಮನೆಗೆ ಬಂಧಿಸಿ ಬೀಗ ಹಾಕಿ ಕೆಂಬರುಗಣ್ಣಿನ ತುರುಕರ ಕಾವಲಿಟ್ಟು ರಂಬೇರು ನೀವ್ ಹೊರಡಿ ಮದುವೆಗೆ (ನಾಪದ. ೧೨೦).
[ಕೆಂಬರು (< ಕೆಂಬಾರ$_1$) + ಕಣ್ಣು (< ಕಣ್)]

**ಕೆಂಬರುಹೆ** 'ಕೆಂಬಱುಹೆ' ನೋ.

**ಕೆಂಬರೆ$_1$** (ನಾ). ಒಂದು ಚರ್ಮವಾದ್ಯ; ಕೆಂಪು ತಮಟೆ: ಸ್ಮರನೀಱ ಪಿಡಿದ ಕೆಂಪಿನ ಗುಂಬದಡಿಯೋ ಅರುಣಮಣಿಯೋ ಕೆಂಬರೆಯೋ ತರುಣ ಪಲ್ಲವವೊ ಬಿಂಬವೊ ಬಂದುಗೆಯೋ ತರುಣಿಮಣಿಯ ಚೆಂದುಟಿಯೋ (ನೇಮಿಸಂ. ೨೩-೧೯೮). [ಕೆಂ + ಪರೆ$_3$ (< ಪಱೆ$_1$)]

**ಕೆಂಬರೆ$_2$** (ನಾ). ಕೆಂಪು ಬಂಡೆ (?): ಬೆಲುಹುರದ ಹಲುಹಾಡಿಯ ದ್ವೆಸನ್ಧಿಸಿಮಾತು ಕೆಂಬ್ಬರೆಯ ಸ್ರೋತ (ಇಆ. VIII, ೯೫-೪೪೪; ಕೃಶಾ); ಮೂಡ ಕೆಂಬರೆಯ ಹಳ್ಳಮಲ್ಲಿಂ ತೆಂಕಮಟ್ಟಱೆ (ಎಕ. II, ೩೨೭-೭೫; 1181); ವಾಯುವ್ಯಭಾಗದ ಕಿಬ್ಬೆಯ ಕೆಂಬರೆ ಮುಡುಕಿನಲ್ಲಿ (ಎಕ. III, ತಿರುಮ. ೬೨-೧೯೫; 1622). [ಕೆಂಪು$_1$ + ಅರೆ$_2$ (< ಅಱೆ$_4$)]

**ಕೆಂಬಲ್, ಕೆಂಬಲು$_2$, ಕೆಂಬಲ್ಲು** (ನಾ). ಕೆಂಪಾದ ಹಲ್ಲು, —ಕೆಂಬಣ್ಣದ ಹಲ್ಲು: ಕಿಱಿಕ್ಕಿದ ಕೆಂಬಲ್ಗಳಿಂ ದಾಳಿಂಬದ ಬಿತ್ತಂ ರಾಸಿಗೆಯ್ದಂತಾಗೆ (ಅರ್ಧನೇ. ೫-೨ ವ); ತೊಂಡೆವಾಯಿ ಕೆಂಬಲ್ ಪೊಳೆವ ಕದಂಪುವೊಪ್ಪಿಡಿನಡು (ಶ್ರೀಪಾಲ. ೩-೨೪); ದಾಡಿಮ ಬೀಜಂಗಳ ತೆಱದಿಂ ಮೆಱೆದುವವಳ ಮೊನೆ ಕೆಂಬಲ್ಗಳ್ (ಶಬ್ದಾನು. ೧೪೦ ವ್ಯಾಖ್ಯಾ). **ಕೆಂಬಲು$_2$:** ಸೊಬಗಿನ ಕೆಂಬಲರ ಮೈವಚ್ಚಿ ಕೆಂಬಲು ತುಂಬುಗುಂಕುಮ ತಿವಿರು ಚೆಂದುಟಿಯುಟ್ಟರುಣವಸನ (ಸಾಳ್ವಭಾ. ೩-೩೬). **ಕೆಂಬಲ್ಲು:** ಕೆಂಬಲ್ಲ ಸತ್ಕಾಂತಿ ಪೊಳೆಯಲವಳೊರೆದಳಿಂತು (ಜೀವಂಸಾಂ. ೧೫-೧೧); ದಾಳಿಂಬದ ಬಿತ್ತಿನಂತೆಸೆವ ಕೆಂಬಲ್ಲ ರುಚಿದೋಱೆ ಬಿನ್ನವಿಸಿದಳು (ಮೋಹತ. ೧೩-೨೯). [ಕೆಂ + ಪಲ್]

**ಕೆಂಬಲಗೆ** (ನಾ). ೧. ಕೆಂಪು ಗುರಾಣಿ: ಕೆಂಬಲಗೆಯ ಪೊಳಪಿಂ ಸಂಧ್ಯಾಂಬುದಮಂ ಪಡೆದು ಜಡಿದು ಕಡಿತಲೆದೂಗುತ್ತುಂ (ಪಂರಾಮಾ. ೧೩-೫೪). ೨. ಕೆಂಪಾದ ತಮಟೆ. [ಕೆಂ + ಪಲಗೆ]

**ಕೆಂಬಲರ್** (ನಾ). ಕೆಂಪು ಹೂ: ಕೈಗೆಯ್ದ ಸೊಬಗಿನ ಕೆಂಬಲರ ಮೈವಚ್ಚಿ (ಸಾಳ್ವಭಾ. ೩-೩೬); ಕೆಂಬಲರ್ಗಳಿಗೆ ಹೂ ಕುಡಿಯೆ ಬಂದೆರಗು ತಿರ್ದ ಕನ್ನಡವಕ್ಕಿ ಕಾಜಾಣಗಳ್ (ಶ್ರೀರಾಮಾ. ೪೮೮-೫೧). [ಕೆಂಪು$_1$ + ಅಲರ್$_2$]

**ಕೆಂಬಲು$_1$** 'ಕೆಮ್ಮಲು' ನೋ.

**ಕೆಂಬಲು$_2$** 'ಕೆಂಬಲ್' ನೋ.

**ಕೆಂಬಲ್ದುದಿ** (ನಾ). ಕೆಂಪಾದ ಹಲ್ಲಿನ ಮೊನೆ, —ತುದಿ: ಮಡಿಸಿ ದೆಲೆಗಳಿಗೆಯ ಕೆಂಬಲ್ದುದಿಗಡಸಿ (ಕಂನವಿ. ೯-೧೨೫). [ಕೆಂಬಲ್ + ತುದಿ]

**ಕೆಂಬಲ್ಲು** 'ಕೆಂಬಲ್' ನೋ.

**ಕೆಂಬಲ್ವೆಳಗು** (ನಾ). ಕೆಂಪುಹಲ್ಲಿನ ಹೊಳಪು, —ಕಾಂತಿ: ಬಾಯ್ದೆಱೆದನಿಂತಮುಮ ಕೆಂಬಲ್ವೆಳಗು ಮೂಡುವೆಳನೇಸರ್ಗದಿರನಣಕಿಸೆ (ಪದ್ಮರಾ. ೬-೧೦೧). [ಕೆಂಬಲ್ + ಬೆಳಗು$_2$]

**ಕೆಂಬವಳ**(ನಾ). ಕೆಂಪುಹವಳ: ಕೆಂಬವಳದ ಲತೆಯಿಂದ ಮುತ್ತುಗಳುಱೆ ತುಂಬಿದ ಶುಕ್ತಿಗಳಿಂದ (ಕುರಾಸಾಂ. ೨-೨); ತಪ್ಪದೊಳಗಣ ರನ್ನವೆಳಗಲ್ಲದಿವು ತೊಡರ್ದಿಪ್ಪ ಕೆಂಬವಳಮಲ್ಲಿವು (ಜೈಮಿಭಾ. ೬-೬). 'ಚೆಂಬವಳ' ಪರಾ. [ಕೆಂ + ಪವಳ]

**ಕೆಂಬವಳವಳ್ಳಿ** (ನಾ). ಕೆಂಪುಹವಳದಬಳ್ಳಿ: ಪುಳುಕಿಸಿ ಮುತ್ತುಗಳಿಂ ರಾಗಿಸಿ ಕೆಂಬವಳವಳ್ಳಿಯಿಂ [ಪಾಠಾಂ. ಕೆಂಬವಳದಿಂ ಮಿಗೆ] ನೊರೆಯಿಂ ನಕ್ಕು (ಸೊಬಸೋ ೧೫-೩೩; ಕವಿಚ. II, ೪). [ಕೆಂಬವಳ + ಬಳ್ಳಿ]

**ಕೆಂಬಸದನ** (ನಾ). ಕೆಂಬಣ್ಣದ ವೇಷಭೂಷಣ, —ಪ್ರಸಾಧನ: ಕೆಂಬಸದನವಿಟ್ಟು ಹರಿಕೇತುವೆಂಬೊರ್ವನಂಬರಚರನೃಪವರನು (ನೇಮಿಸಂ. ೧೦-೨೯೭). [ಕೆಂ + ಪಸದನ]

**ಕೆಂಬಸುರ್** (ನಾ). ಕೆಂಪು ಮತ್ತು ಹಸುರು ಬಣ್ಣ: "ಕೆಂಬಸು ರೆಸೆದಿರೆ ಪಿಂಜರಮೆಂಬುದು ವರ್ಣಾಂತರಂ ಸಿತಾಸಿತಮಿಶ್ರಂ" (ವಸ್ತುಕೋ. ೧೦೯-೬೬). [ಕೆಂ + ಪಸುರ್ (< ಪಸಿರ್ ?)]

**ಕೆಂಬಳಯಿಗೆ** 'ಕೆಂಬಟಿವಿಗೆ' ನೋ.

**ಕೆಂಬಳಿ** (ಕ್ರಿ). ಕೆಂಪು ಬಣ್ಣವನ್ನು ಬಳಿ, —ಲೇಪಿಸು: ಮಸಿಯೆಂದಾದರೂ ಬೆಳ್ಪಾದುದುಂಟೇ? ಅಂಬರ ಮಾಸಿದರೆ ತೊಳೆದರೆ ಬಿಳಿದಪ್ಪುದಲ್ಲದೆ ಕೆಂಬಳಿದ ಸೀರೆಯ ಮಾಡಿ ತೊಳೆದರೆ ಬಿಳಿದಾಗಬಲ್ಲುದೇ (ಸಿದ್ಧೇವ. ೫೯). [ಕೆಂ + ಬಳಿ$_1$ (< ಬಱಿ$_1$)]

**ಕೆಂಬಱುಹೆ, ಕೆಂಬರುಹೆ** (ನಾ). ಕೆಂಪು ಹರಿವೆ ಸೊಪ್ಪು: ಬರಿವಡಣೆಯ ಕೆಂಬಱುಹೆಯ ಕರಮೊಪ್ಪುವ ಮೂಲದೆಸೆವ ಕರಿಯಂ ಸುಣ್ಣಂ ಬೆರಸಿರದಿಕ್ಕಲ್ (ಖಮದ. ೧೩-೧೯); ಮೂಲಗೆಬಳ್ಳಿ ಕೆಂಬಱುಹೆ ಮೊದಲಾದ ನಾಳಮುನುಳ್ಳೆಲ್ಲಾ ಎಲೆವಾದುರಂಗಳು (ಪಸಾರ. ೬೩೪-೨೦). **ಕೆಂಬರುಹೆ:** "ಜೀವಂತಕಃ – ಕೆಂಬರುಹೆ" (ಓಷಧಿ. ೬೩). [ಕೆಂ + ಪಱುಹೆ (< ಹಱಿವೆ ?)]

**ಕೆಂಬಟಿವಿಗೆ, ಕೆಂಬಳಯಿಗೆ** (ನಾ). ಕೆಂಪು ಬಾವುಟ: ಕಡುನೆಗೆದೊಪ್ಪಿದುವು ಮಿಳಿರ್ವ ಕೆಂಬಟಿವಿಗೆಗಳ್ (ಕಬ್ಬಕಾ. ೨೬೦). **ಕೆಂಬಳಯಿಗೆ:** ಕೆಂಬಳಯಿಗೆ ಬಾನೊಳ್ ಮಿಳಿರೆ (ಉದ್ಭದೇ. ೨-೩೨); ಕೆಂಬಳಯಿಗೆ ಲಂಬಿಸೆ (ರಾಜಶೇ. ೧೩-೭೫). [ಕೆಂ + ಪಟಿವಿಗೆ]

**ಕೆಂಬಾಯ್** (ನಾ). ಕೆಂಪಾದ ಬಾಯಿ: ಕೆಂಬಾಯ್ತೆಳ್ಗದಂಪೆನಲ್ಕೆ ತಾಮಿವುಪಸರ್ಗಂಗಳ್ (ಕವಿಕಂ. ೧೮೪); ಕೆಂಬಾಯ ಮೊಳೆವಲ್ಲು ಮಿಸುಗೆ ನಗುವ (ಜೀವಂಸಾಂ. ೭-೪); ತೆಗೆದು ಕೆಂಬಾಯ್ಗಿಟ್ಟುಕೊಂಡಳಾ ಕೆಂಬಾಯ ಮಗುಳೆ ಮಗುಳೆ ಚುಂಬಿಸಿದನು (ಭರಚ. ೪೨-೪೬). [ಕೆಂ + ಬಾಯ್]

**ಕೆಂಬಾರ$_1$, ಕೆಂಬರು, ಕೆಂಬಾರೆ** (ನಾ). ೧. ಸಂಜೆಯ ಮುಗಿಲಬಣ್ಣ: "ಧೂಮ್ರಃ, ಧೂಮಲಃ, ಕೃಷ್ಣಲೋಹಿತಃ – ೩ ಕಪ್ಪು ಕೆಂಪುಬೆರೆತ ಬಣ್ಣದ ಹೆಸರು. ಅಂದರೆ ಕಾರ್ಮುಗಿಲ ಕೆಂಬಾರದ ಬಣ್ಣ" (ಸಿದ್ಧಾಂತಿ. ೪೫). **ಕೆಂಬರು:** ೧. 'ಕೆಂಬರುಗಣ್ಣು' ಪರಾ. **ಕೆಂಬಾರೆ:** ೨. ಕೆಂಪುನೆಲ್ಲು: (*). [?]

**ಕೆಂಬಾರ$_2$** 'ಕೆಂಬರವು' ನೋ.

**ಕೆಂಬಾರೆ** 'ಕೆಂಬಾರ$_1$' ನೋ.

**ಕೆಂಬಾಸುಳ್** (ನಾ). ಕೆಂಪು ಬಾಸುಂಡೆ: ತಂತಮ್ಮ ಕೆಂಬಾಸುಳ್ಗಳನ್ನು ಮುಟ್ಟಿ ಮುಟ್ಟಿ ಎಳವಿ ಎಳವಿ ನೋಡಿಕೊಳ್ಳುತ್ತಿರುವವರು (ಮಂತ್ರಶ. ೫೧-೧೫). [ಕೆಂ + ಬಾಸುಳ್ (< ಬಾಸುಱ್)]

**ಕೆಂಬಾಸುಳೇಱು** (ನಾ). ಕೆಂಪು ಬಾಸುಂಡೆಯೆದ್ದ ಗಾಯ: ಪುಳಕದವಯವದ ಕೆಂಬಾಸುಳೇಱುಗಳ ಪರೆದನುಲೇಪನದ (ಜೈಮಿಭಾ. ೧೦-೫೦). [ಕೆಂಬಾಸುಳ್ + ಏಱು$_4$ (< ಏಱ್$_4$)]

**ಕೆಂಬಿತ್ತು** 'ಕೆಂಬಿಟ್ತು' ನೋ.

**ಕೆಂಬಿಸಿಲ್** (ನಾ). ಕೆಂಬಣ್ಣದ ಬಿಸಿಲು: ದೆಸೆದೆಸೆಯೊಳ್ ಪಸರಿಸುತಿರೆ ಪೊಸತೊಂಡೆಯ ಪಣ್ಣಬಣ್ಣಮಂ ಮುಸುಳಿಪ ಕೆಂಬಿಸಿಲ ಮಿಸುಪು (ಕಾವಂಲು. ೨೬೭); ಪಡುನೇಸಱ ಕೆಂಬಿಸಿಲೆಸೆದತ್ತು (ಜಗವಿ. ೬-೧೧); ಖೇಡೆಯದ ಕೆಂಬಿಸಿಲುರವಣಿಗೆ ನಿಡುವಾಳ ಮಿಂಚಿಗೆ ಖಚರನೆದೆಗೆಟ್ಟ (ಸಾಳ್ವಭಾ. ೬-೩೪). [ಕೆಂ + ಬಿಸಿಲ್]

**ಕೆಂಬಿಟ್ತು, ಕೆಂಬಿತ್ತು** (ನಾ). ಕೆಂಪುಬೀಜ: ದಾಳಿಂಬದ ಕೆಂಬಿಟ್ತಿನ ರನ್ನದ ತೋಳಬಂದಿ (ಕಬ್ಬಿಕಾ. ೧೪೧). **ಕೆಂಬಿತ್ತು:** ಕೆಂಬಿತ್ತನುಗಿಯುತಂ ದಾಡಿಂಬದ ಬೀಡೆಯೊಳೆ ಸಿಲ್ಕಿ ತುಂಡಂ ಕೀಲ್ ಕೀರೆಂಬ ಮಱಿಗಿಳಿಗಳೊಳ್ (ವರ್ಧಪು. ೨-೪). [ಕೆಂ + ಬಿಟ್ತು]

**ಕೆಂಬುತ್ತಿ** 'ಕೆಂಬೂತಿ$_1$' ನೋ.

**ಕೆಂಬುತ್ತಿರಾಜಾನ್ನ** (ನಾ). = ಕೆಂಬೂತಿ$_1$ : "ತೂರ್ಣಕಃ – ಕೆಂಬುತ್ತಿ ರಾಜಾನ್ನ" (ಓಷಧಿ. ೭೧). [ಕೆಂಬುತ್ತಿ (< ಕೆಂಬೂತಿ$_1$) + ರಾಜಾನ್ನ ?]

**ಕೆಂಬುರಿ** (ನಾ). ಕೆಂಪು ಉರಿ : ಕೆಂಬುರಿಗಳಂ ಕೆದರುತೆಣ್ದಿಶಾ ಮಂಡಲವ ಚುಂಬಿಸುತತ್ವಳಿಸಿ (ಪರಶು. ೩೦–೧೬). [< ಕೆಂಪು$_1$+ ಉರಿ$_2$]

**ಕೆಂಬುಬು** (ನಾ). ಕೆಂಪು ಹುಳು; ಇಂದ್ರಗೋಪ : "ಕೆಂಬುಬುವೆಂದಿಂದ್ರಗೋಪಂ" (ಕಶಸಾ. ೮–೧೫೫); "ತಾನಿಂದ್ರಗೋಪ ಕೆಂಬುಬು ವಕ್ಕು" (ಕವಿಕಂ. ೯೫). [ಕೆಂ + ಪುಬು$_1$]

**ಕೆಂಬೂತ** 'ಕೆಂಬೋತ' ನೋ.

**ಕೆಂಬೂತಿ$_1$**, ಕೆಂಬತ್ತಿ$_2$, ಕೆಂಬುತ್ತಿ (ನಾ). ಭತ್ತದಲ್ಲಿ ಒಂದು ಬಗೆ; ಕೆಂಪುನೆಲ್ಲು : ಸೋವು ಶಾಲಿಯ ಬಿಳುಮಲ್ಲಿಗೆ ಕೆಂಬೂತಿ ಹೇಮ ವರ್ಣದ ಕೊನೆವಾಳೆ . . . ಸನಾಮದ ತೆನೆಗಳೊಪ್ಪಿದವು (ಕಂಸವಿ. ೫–೬೯). **ಕೆಂಬತ್ತಿ$_2$** : "ಸಿತಶಾಲಿ ಕೆಂಗಳವೆ ಕೆಂಬತ್ತಿ ರಾಜಾನ್ನಮವು ಬೈಲ ಮೊಂದಿವು ನೆಲ್ಲಭೇದಂಗಳಕ್ಕು" (ಮಂಗರಾ. ೧೧೦–೪); ಬಸವನ ಕಟ್ಟಿದವರಿಗೆ ಬೊಗಸೇಲಿ ಹೊನ್ನುಂಟು ಕೆಸರು ಕೆಂಬತ್ತಿ ಬಯಲುಂಟು (ಹಳ್ಳಿಬಾ. ೩೩–೧೪). **ಕೆಂಬುತ್ತಿ** : "ಲೋಧ್ರಶೂಕಃ – ಕೆಂಬುತ್ತಿ, ರಾಜಾನ್ನ" (ಓಷಧಿ. ೧೪೪). [?]

**ಕೆಂಬೂತಿ$_2$** 'ಕೆಂಬೋತ' ನೋ.

**ಕೆಂಬೂರ** (ನಾ). ಒಂದು ಜಾತಿಯ ಮರ : ಪೊಂಬಾಟೆಯ ಪೊಸ ಗಂಬಗಳಿಂದಂ ಕೆಂಬೂರದ ಕಿಱುಗಂಬಗಳಿಂದಂ (ಉದ್ಭಟ. ೫–೧೯). [ಕೆಂ + ಬೂರ]]

**ಕೆಂಬೆರಲ್** (ನಾ). ಕೆಂಪಾದ ಬೆರಳು : ಕೆಂಬೆರಲುಂಗುರದಿನೊಗೆವರುಣ ರುಚಿಮಂಜರಿ (ಚಂದ್ರಪು. ೬–೬೧); ಸರಳ ಗಾಯವನಾಂತು ಕೋಯೆಂದು ಹೊಡೆದ ಕೆಂಬೆರಲ ಕಂಧರಮಾಲೆ ಜರಿಯೆ (ಮೋಹಹತ. ೩೪–೩೧). [ಕೆಂ + ಬೆರಲ್]

**ಕೆಂಬೆಱು** (ಕ್ರಿ). ಕೆಂಪುಬಣ್ಣವನ್ನು ಹೊಂದು, —ತಾಳು : ಕೆಂಬೆತ್ತಸಿದಲೆ ತನಗಿರೆ (ನೇಮಿಪು. ೭–೧೭೬). [ಕೆಂ + ಪೆಱು$_1$]

**ಕೆಂಬೆಱೆ** (ನಾ). ಕೆಂಪಾದ ಚಂದ್ರ; ಕೆಂಬಣ್ಣದ ಚಂದ್ರ : ಪಸುಳೆದಳಿರೊ ಕೆಂಬೆಱೆಯೊ ಮಾಣಿಕ್ಯವೊ (ಚಂಪ್ರಸಾಂ. ೩–೪); ಸುರರೆಲ್ಲರೆಂಜಲಿಸಿದ ಕೆಂಬೆಱೆಯನು ಸರಿಯೆಂದರೆ ದೋಷವಲ್ಲೆ (ಚಂಪ್ರಸಾಂ. ೨೩–೭೮). [ಕೆಂ + ಪೆಱೆ]

**ಕೆಂಬೆಳಕು** 'ಕೆಂಬೆಳಗು' ನೋ.

**ಕೆಂಬೆಳಗನಹುರುಳಿ** (ನಾ). ಒಂದು ಬಗೆಯ ಸಸ್ಯ : "ಚಕ್ಷುಷ್ಯ – ಕೆಂಬೆಳಗನ ಹುರುಳಿ" (ಓಷಧಿ. ೫೩). [ಕೆಂಬೆಳಗ$_0$ + ಹುರುಳಿ]

**ಕೆಂಬೆಳಗು**, ಕೆಂಬೆಳಕು (ನಾ). ಕೆಂಪಾದ ಬೆಳಕು; ಕೆಂಪು ಪ್ರಕಾಶ : ಮೆಲ್ಲಡಿಗಳ್ . . . ಕೆದಱಿದುವು ಕೆಂಬೆಳಗಂ (ಕಾದಂಬ. ೫); ಗಿರಿಯಾ ನಿತಂಬದೊಳ್ ಕೆಂಬೆಳಗಂ ಕೆದಱುತ್ತುಮಿರ್ಪ ರತ್ನದ ಪಿರಿದೊಂದು ಪಾಸಱೆ (ಕುಸುಮಾ. ೭–೧೪); ಬಲದ ಸುತ್ತಲು ಕಟ್ಟಿತುರಿ ಕೆಂಬೆಳಗು ಕುಡಿದವು ಕರ್ಬೊಗೆಗಳ (ಕುವ್ಯಾದ್ರೊ. ೯. ೧೯–೩೫); ಕೆಂಬೆಳಗನಿಂಬಿಡುವುನ್ನತದ ಮಾಣಿಕದ ಕಳಸಾಳಿಯಂ (ಸಾಳ್ವಭಾ. ೪–೪೦). **ಕೆಂಬೆಳಕು** : ನಾನಲೆಯುತ್ತಿದ್ದೆನೋ ಬಗೆಯ ಬಾನ ಕೆಂಬೆಳಕು ನಸುಕಿನಲ್ಲಿ (ಹೃದಸ. ೪–೧); ಕೆಂಬೆಳಕಿನಾ ಮಾಯೆ ತಳಿದ ಮಂಕಿಂದೊಯ್ಯನೆಳ್ಚತ್ತು (ಶ್ರೀರಾಮಾ. ೪೫೮–೩೫೪). [ಕೆಂ + ಬೆಳಗು$_2$]

**ಕೆಂಬೆಳಗುಗುಡು** (ಕ್ರಿ). ಕೆಂಪು ಬೆಳಕನ್ನು ಬೀರು : ಕೆಂಬಳಗುಗುಡೆ ರಾಗಸಿರಿ ನನೆಯಂಬುವಿಡಿದಂಜಿಸುವ ಬೆಡಗಿನ ತುಂಬುಜವ್ವನೆ (ಸಾಳ್ವಭಾ. ೩–೩೬). [ಕೆಂಬೆಳಗು + ಕುಡು$_1$ (< ಕೊಡು$_1$)]

**ಕೆಂಬೊಗರ್** (ನಾ). = ಕೆಂಬೆಳಗು : ಕೆಂಬೊಗರಿನ ಜಡೆ ಮುಡಿಯರ ಮನೆಯೊಳಗಂಬು ನಿತಂಬಿನಿಯಾಳ್ವನೆಯತ್ವತ ಕಂತು ಕದಂಬಕ ರೂಪನೆ (ರಾಮಚ. ೭೨–೧). [ಕೆಂ + ಪೊಗರ್]

**ಕೆಂಬೊಗೆ** (ನಾ). ಕೆಂಪು ಹೊಗೆ : ಛಿಟಛಿಟಲು ಭುಗಿಭುಗಿಲೆನುತ ಕೆಂಬೊಗೆ ನೆಗೆವುತಿರಲು (ಬಸವು. ೫೮–೧೯). [ಕೆಂ + ಪೊಗೆ$_2$]

**ಕೆಂಬೊಟ್ಟು** (ನಾ). ೧. ಕೆಂಪು ಬೊಟ್ಟು. ೨. ಶುಕ್ರನಕ್ಷತ್ರ; ಬೆಳ್ಳಿ ಚುಕ್ಕಿ : ರೂಢಿಯೊಳದಿತಿಯ ಪುತ್ರನಂಬುಜಮಿತ್ರ ನೋಡಲು ಗುಟ್ಟು ಕೆಂಬೊಟ್ಟು ಬೇಡಿದನೀವ ಮಾದೇವ ಪೂರ್ವಾದ್ರಿಯೊಳ್ ಮೂಡಿದ ಸ್ತುತ್ಯನಾದಿತ್ಯ (ಮೋಹಹತ. ೧೬–೭೨). [ಕೆಂ + ಬೊಟ್ಟು$_2$ (< ಬಟ್ಟು$_1$)]

**ಕೆಂಬೊನ್** (ನಾ). ೧. ಕೆಂಪು ಮೆರುಗಿನ ಚಿನ್ನ; ಉತ್ತಮವಾದ ಚಿನ್ನ; ಅಪರಂಜಿ : ಪಿಡಿದ ಕೆಂಬೊನ್ನ ತಳಿಗೆಯೊಳ್ ತಕ್ಕನೆ ತೀವಿದ ಬಿಡುಮುತ್ತಿನ ಸೇಸೆಯುಂ ಬೆರಸು (ಪಂಪಭಾ. ೪–೩೪ ವ); ಕೆಮ್ಮುಗಿಲಂ ಪತ್ತಿದ ಕೆಂಬೊನ್ನ ಬೆಟ್ಟದಂತೆ (ನೇಮಿಪು. ೧೨–೧೫೦ ವ); ಕೆಂಬೊನ್ನಿಂದಳವಡಿಸಿದ ಕಳಶದ ಚಂದ್ರಮನಾಂತಂ ದಿನೇಶನುದಯಿಪ ಪದದೊಳ್ (ಪುಣ್ಯಾಸ್ರ. ೩–೫೭). ೨. ತಾಮ್ರ. 'ಚಂಬು' ಪರಾ. [ಕೆಂ + ಪೊನ್. / ತಮಿ. ಚೆಮ್ಪೊನ್]

**ಕೆಂಬೊನಲ್** (ನಾ). ಕೆಂಪು ಹೊಳೆ; ಕೆಂಬಣ್ಣದ ನದಿ : ಗಿರಿಯೊಳಿರದಿಳಿವ ಕೆಂಬೊನಲ್ಗಳ ತೆಜದೊಳೆಸೆದುವು ರಕ್ತಧಾರೆಗಳ್ (ಜೈಮಿಭಾ. ೨೩–೩೬); ಮೊಲೆಗೆಲದ ಕುಂಕುಮದ ಕದಡರುಣ ಗಿರಿತಟದ ಕೆಂಬೊನಲ್ಗಳವೊಲಾಗೆ (ಜೈಮಿಭಾ. ೩೦–೮). [ಕೆಂ + ಪೊನಲ್]

**ಕೆಂಬೊಳಪು** (ನಾ). ಕೆಂಪಾದ ಹೊಳಪು; ಕೆಂಪು ಕಾಂತಿ : ತಪ್ತ ತಪನೀಯಮಯಮೆನಿಪ ನಿಷಧನಗದ ನೆಗೆದ ಕೆಂಬೊಳಪಿನೊಳ್ ಪಳಂಚಿ ರಂಜಿಸಿದ ಸಂಜೆ ಪರಿಯೆ (ಪಂರಾಮಾ. ೧–೭೧ ವ); ಬಿಂಬಾಧರದ ಕೆಂಬೊಳಪಂ ತಳೆದು ಕೆಂಬರಲಂತೆ ತೊಳತೊಳಪ ನಾಸಾಭರಣ ಮೌಕ್ತಿಕಂ (ರಾಜಶೇ. ೭–೧೭ ವ). [ಕೆಂ + ಪೊಳಪು (< ಪೊಳೆಪು)]

**ಕೆಂಬೊಱು** (ಕ್ರಿ). ಕೆಂಪಾಗು : ಮಿಗೆ ಕಾಸಿಸಿದ ಕೆಂಬೊತ್ತ ಲೋಹದ ನಿಶಿತ ಶೂಲಾಗ್ರಂಗಳಲಿ ತೆಗಸು (ಬಸವು. ೫೦–೩೯). [ಕೆಂ + ಪೊಱು]

**ಕೆಂಬೊಟಿಲ್** (ನಾ). ಒಂದು ಊರಿನ ಹೆಸರು : ಬಲ್ಲಹನ ದಣ್ಡಿಕೆಮ್ಬೊಟಿಲ್ಗೆ ವರೆ (ಎಕ. XIV, ನಾಗಮಂ. ೧೭೬–೭; 900). 'ಕಿಸುವೊಟಿಲ್' ಪರಾ. [ಕೆಂ + ಪೊಟಿಲ್]

**ಕೆಂಬೋತ**, ಕೆಂಬೂತ, ಕೆಂಬೂತಿ$_2$ (ನಾ). ಕೆಂಪುಕಾಗೆ; ಸಂಬಾರಗಾಗೆ : ನವಿಲಾಡಿತೆಂದು ಕೆಂಬೋತ ಪುಕ್ಕವ ತೆರಕೊಂಡಂತೆ (ಸಿದ್ಧೇವ. ೨೧೯). 'ಚೆಂಬೋತ ಪರಾ. **ಕೆಂಬೂತ** : ನವಿಲು ಜಾಗರವಾಡಿತು ಅಂತ ಕೆಂಬೂತ ಪುಕ್ಕ ತೆರೆದುಕೊಂಡಿತು (ಗಾದೆ). **ಕೆಂಬೂತಿ$_2$** : ನವಿಲನ್ನು ನೋಡಿ ಕೆಂಬೂತಿ ಪುಕ್ಕ ತೆರಕಂತು (ಹುಟ್ಟಿಹ. ೧೧೫). [ದೇ. ‖ ತಮಿ. ಮಲ. ಚೆಮ್ಪೋತು]

**ಕೆಂಬೋತನಹಕ್ಕಿ** (ನಾ). = ಕೆಂಬೋತ : "ಉತ್ಪುಚ್ಛಃ – ಕೆಂಬೋತನ ಹಕ್ಕಿ" (ಓಷಧಿ. ೧೫). [ಕೆಂಬೋತ + ಹಕ್ಕಿ (< ಪಕ್ಕಿ$_1$)]

**ಕೆಕುಳ್ಳ** (ನಾ). ಒಂದು ಬಗೆಯ ಭಕ್ಷ್ಯ : ಹೊರೆ ಚಕುಲೆ ಚಿಗುಳಿಯು ಕೆಕುಳ್ಳ ಮುದ್ದಿಯು ತರಗು ಮುರುಂಗು ಲಡ್ಡುಗೆಯೂ (ದೇವಾಂಪು. ೫–೨೨೫). [?]

**ಕೆಕ್ಕನೆ**, ಕೆಕ್ಕಾನೆ (ಅ). ಚಕ್ಕನೆ; ಕೂಡಲೆ : ಹರಿಗೆ ಕತ್ತಿಯ ಹಿಡಿದವರು ಕೆಕ್ಕನೆ ಕೆಲದೊಲದು ರಂಗದೊಳು ನಿಂದಿಹರು (ಸೌಂದಕಾ. ೭–೧೦೬). **ಕೆಕ್ಕಾನೆ** : ಕೆಕ್ಕಾನೆ ಕೆಲದು ಕೋಯೆಂದು ಕೂಗುತಲಿ ಧಿಂಮಿಕ್ಕಿ ಬಂದಿವರ ಮುತ್ತಿದರೂ (ಸೌಂದಕಾ. ೭–೧೧೯). [?]

**ಕೆಕ್ಕರ$_1$** (ನಾ). ಒಂದು ಬಗೆಯ ಹಣ್ಣುಬಿಡುವ ಬಳ್ಳಿ; ಪುಟ್ಟಿ ಹಣ್ಣಿನ ಬಳ್ಳಿ : (ಕಿ). [?]

**ಕೆಕ್ಕರ$_2$** 'ಕೆಕ್ಕಳ' ನೋ.

**ಕೆಕ್ಕರಹಣ್ಣು** (ನಾ). ಸೌತೆಜಾತಿಗೆ ಸೇರಿದ ಒಂದು ಬಗೆಯ ಹಣ್ಣು; ಪುಟ್ಟಿಹಣ್ಣು; ಕೆಕ್ಕರಿಕೆ : ನಕ್ಕು ನಕ್ಕು ಕೆಕ್ಕರ ಹಣ್ಣಿನಾಂಗ ಪಕ್ಕಡಿ ಬಿರಿತು (ಹುಚ್ಚಾಟ. ೧೦೭).

[ಕೆಕ್ಕರ$_1$ + ಹಣ್ಣು$_3$ (< ಪಣ್$_3$)]

**ಕೆಕ್ಕರಿಕೆ** (ನಾ). = ಕೆಕ್ಕರಹಣ್ಣು : (ಕಿ); "ಚಿಬಿಟಮೆಕ್ಕೆ ಕೆಕ್ಕರಿಕೆ" (ಅಕಾನಿ. ೧೦-೩೩); ಕಾರ್ಗಯ್ಯು ಮೇರೆಯೊಳಿಟ್ಟ ಕೆಕ್ಕರಿಕೆ ಬಿರಿವಂತೆ (ಶಾಂತಿಪು. ೭-೬೨); ಪನ್ನೀರಲೆ ಕೆಕ್ಕರಿಕೆ ಮಿಣಿಕೆ ಚಕ್ಕೊತ್ತ . . . ಮುಂತಾದ ಮಧುರಫಲಂಗಳ್ (ಸೌಗಂಧಿ. ೩೭-೩); ಕೈಯಲ್ಲಿ ಕೆಕ್ಕರಿಕೆ ಹಣ್ಣೆರಡ ಕೊಂಡು (ಶನಿಮಾ. ೨೪).

[?. / ತುಳು. ಚಕ್ಕರ್ಪೆ]

**ಕೆಕ್ಕರಿಸು$_1$** 'ಕೆಕ್ಕಳಿಸು' ನೋ.

**ಕೆಕ್ಕರಿಸು$_2$** (ಕ್ರಿ). ಕೇಕೆಹಾಕು (?) : ಮುಗು ನಗೆಧೋಙಿ ಕೆಕ್ಕರಿಸೆ ಘೋಂಕನೆ ತಾಂ ಕವಿತಂದು ಗೋಪಿ . . . ಮಿಗೆ ಮುದ್ದಿಸುವಳ್ (ಚಿಕವಿ. ೩-೪೭); ಕೆಲದೊಳ್ ಕೆಕ್ಕರಿಸುತೆ ಪಲಪಲವುಂ ಪಸಗೆಯ್ಯೆ ವಾತುಗೊಂಬವೊಲಲ್ತು (ಚಿಕವಿ. ೬-೧೩೧).

[ಕೆಕ್ಕರ ? + -ಇಸು$_3$. / ತಮಿ. ಕೆಕ್ಕರಿ]

**ಕೆಕ್ಕರಿಸು$_3$** 'ಕೇಂಕರಿಸು' ನೋ.

**ಕೆಕ್ಕಲಗೆಲೆ** (ಕ್ರಿ). ಗೇಲಿಮಾಡು : "ಸಿಕ್ಕಿದಹಾಗೆ ಬೈ; ಮನಸ್ವೀಬೈ" (ಪ್ರಭಣ್ಣ) : ತೊಲ ತೊಲಗೆಲವೋ ಕೈವಿಡು ಪೊಲನಲ್ಲಿದು ಪಾಜುತನಕೆ ಪೋ ಪೋಗಿಂತೇಂ ಮಲೆಪ್ಪೆ ಜಕ್ಕಂದೊಟಲಿಯೆ ಕೆಲಸಾರಲ್ಲದೊಡೆ ಜಡಿದು ಕೆಕ್ಕಲಗೆಲೆವೆಂ (ಚಿಕವಿ. ೬-೨೭೪); ಕಲೆಯಜಿತುರವಣಿಸಿ ಬಿರುದು ಬೊಜಗರ ಬಿಂಕಂ ತೊಲಗೆ ದುಡುಕೆಸಗಿ ಕೆಕ್ಕಲಗೆಲೆವನಂದಮನಿಂದು ಸವಿಯಲೆಂದೇಟ್ಟುಂದೆಂ (ಚಿಕವಿ. ೬-೨೭೭). [< ಕೆಕ್ಕಸಗೆಲೆ ?]

**ಕೆಕ್ಕಸ** (ನಾ). ನಿಂದೆ; ಬೈಗುಳು. 'ಕೆಕ್ಕಸಗೆಲೆ' ಪರಾ. [?]

**ಕೆಕ್ಕಸಕೆಲೆ** 'ಕೆಕ್ಕಸಗೆಲೆ' ನೋ.

**ಕೆಕ್ಕಸಗೆಲೆ, ಕೆಕ್ಕಸಕೆಲೆ** (ಕ್ರಿ). ಗೇಲಿಮಾಡು; ಅಪಹಾಸ್ಯಮಾಡು : ನಲಿವ ಮರುಳ್ ಕೆಕ್ಕಸಗೆಲೆವ ಮರುಳ್ ಕೈಪಜಿಗುಟ್ಟುವ ಮರುಳ್ (ಜಯಕಾ. ೬-೨೬); ವನಜವದನೆ ಬೇಗದೊಳು ಮನಕೆ ಬಂದಂತೆ ಕೆಕ್ಕಸಗೆಲೆದಳು ಗಿರಿತನುಜೆಯೊಡನೆ ಪಾರ್ಥನನು (ಕುರಾಸಾಂ. ೬-೧೦೪). **ಕೆಕ್ಕಸಕೆಲೆ** : ಒಕ್ಕಣಿಸುವ ಬಾಲ ಭಾಷೆಯ ಕೆಳೆಯರೊಳ್ ಕೆಕ್ಕಸಕೆಲೆದಾಡಿ ನಗುತ (ಮೋಹತ. ೧೭-೬೫); ಉತ್ತಮೋತ್ತಮರೊಕ್ಕಲಿಗೆ ನೀರೆಳೆವನಕಟಾ ಮಕ್ಕಳಾಟಿಕೆಯಂತೆ ಕೆಕ್ಕಸ [ಪಾಠಾಂ. ನೆ] ಕೆಲೆವನವನೆಂದ (ಅಮೃತ. ೨-೫೨). [ಕೆಕ್ಕಸ + ಕೆಲೆ$_1$]

**ಕೆಕ್ಕಳ, ಕೆಕ್ಕರ$_2$** (ನಾ). ೧. ಕೆಂಪು; ಕೆಂಪುಬಣ್ಣ. 'ಕೆಕ್ಕಳಿಸು' ಪರಾ. ೨. ಕೋಪ. 'ಕೆಕ್ಕಳಿಸು' ಪರಾ. **ಕೆಕ್ಕರ$_2$**. 'ಕೆಕ್ಕರಿಸು' ಪರಾ. [← ತಮಿ. ಚೆಕ್ಕರ್; ಚೆಕ್ಕಲ್]

**ಕೆಕ್ಕಳಂಗೆದಱು** (ಕ್ರಿ). = ಕೆಕ್ಕಳಗೆಳರ್ : ಎನಲೊದರಿ ಕೆಕ್ಕಳಂಗೆದಱಿ ಗದ್ದುಗೆವೊಯ್ದು ಕೊನೆಮಿಸಾಗಡಿದು (ಸಮ್ಯಕ್ತ್ವ. ೨-೮).

[ಕೆಕ್ಕಳ + ಕೆದಱು$_1$(< ಕೆದಜ್$_1$)]

**ಕೆಕ್ಕಳಗಣ್** (ನಾ). ಕೆಂಪೇರಿದ ಕಣ್ಣು; ಕೆಂಗಣ್ಣು : ಕೆಕ್ಕಳಗಣ್ ಕೆದಱಿದ ಕೆಂಗೂದಲ್ ಮೊಕ್ಕನೊಸಲ್ . . . ಪೊದಮಯ್ಯೊಳಿಸೆವ ಪಲ ರಕ್ಕಸಿಯರ ತಂಡಂ (ಜಯಕಾ. ೬-೨೭). [ಕೆಕ್ಕಳ + ಕಣ್]

**ಕೆಕ್ಕಳಗೆರಳು** 'ಕೆಕ್ಕಳಗೆಳರ್' ನೋ.

**ಕೆಕ್ಕಳಗೆಳರ್, ಕೆಕ್ಕಳಗೆರಳು, ಕೆಕ್ಕಳಗೆಳಲ್, ಕೆಕ್ಕಳಗೆಳಲು** (ಕ್ರಿ). ಕನಲಿ ಕೆಂಡವಾಗು; ಬಹಳವಾಗಿ ಕೋಪಿಸು; ಕ್ರೋಧಾವಿಷ್ಟನಾಗು : ಆ ಪರದರಿರ್ವರುಮುಡವಿಯೊಳ್ ಮುಡಗಿದೊಡವೆಯಂ ಕಾಣದೆ ಕಾಚಿಕ್ರೋಣಂಗಳಂತೆ ಕೆಕ್ಕಳಗೆಳದುರ್ (ಅರ್ಧನೇ. ೪-೧೧೪ವ); ಪಂಚಾಸ್ಯಂ ಪಸುಳೆವಿಡಿಯ ಪಿಂಡಂ ಕೆಕ್ಕಳಗೆಳದಿರ್ದರದೆ ಹುಗುವಂತೆ (ಜಯಕಾ. ೬-೭೯); ಕೆಡಹಿ ಕೆಕ್ಕಳಗೆಳರ್ದೆದೆಗೆ ಅಡಿಯಿಟ್ಟು (ಶ್ರೀಪಾಲ. ೮-೫೯). **ಕೆಕ್ಕಳಗೆರಳು** : ಅದಟನಂಬುಧಿವಿಜಯಂಗಲ್ಲದಾಗದೆಂಬುದ ಕೇಳಿ ಕೆಕ್ಕಳಗೆರಳಿ (ನೇಮಿಸಂ. ೧೨-೮೫); ಕಡೆಗಣ್ಣೊಳು ಕಡುಗೆಂಪನು ತಳೆದು ಕೆಕ್ಕಳಗೆರಳಿದನು (ಚಂಪ್ರಸಾಂ. ೮-೯೦). **ಕೆಕ್ಕಳಗೆಳಲ್** : ಕೆಕ್ಕಳಗೆಳಲ್ದು [ಪಾಠಾಂ. ರಳ್ದು] ದ್ರೋಹಿಯಂ ತಂದು ಸೀಳಿ ತೋರಣಗಟ್ಟರೆನುತ (ಸಮ್ಯಕ್ತ್ವ. ೪-೪೨). **ಕೆಕ್ಕಳಗೆಳಲು** : ಆ ವಾರ್ತೆಯ ಕೇಳಿ ಮತ್ಸ್ಯಮಹೀನಾಥ ಕೆಕ್ಕಳಗೆಳಲಿ (ನೇಮಿಸಂ. ೨೫-೧೩೧); ಕಾಲಾಂತಕಂ . . . ಮನುಜರೂಪಂ ತಳೆದನೋ ಎಂಬ ತೆಱದಿ ಕೆಕ್ಕಳಗೆಳಲಿ [ಪಾಠಾಂ. ರಳಿ] (ಸಮ್ಯಕ್ತ್ವ. ೮-೪೭).

[ಕೆಕ್ಕಳ + ಕೆಳರ್]

**ಕೆಕ್ಕಳಗೆಳಲ್** 'ಕೆಕ್ಕಳಗೆಳರ್' ನೋ.

**ಕೆಕ್ಕಳಗೆಳಲು** 'ಕೆಕ್ಕಳಗೆಳರ್' ನೋ.

**ಕೆಕ್ಕಳಿಸು, ಕೆಕ್ಕರಿಸು$_1$** (ಕ್ರಿ). ೧. ಕೆಂಪಾಗು; ಕೆಂಪೇರು : ಕತ್ತರಿ ಮೊನೆಗೊಂಡ ಕಿವಿಯಿಂ ಕೆಕ್ಕಳಿಸುವ ದೃಷ್ಟಿಯಿಂ ಕಂಗನೆ ಕನಲ್ದು (ಗಿರಿಕ. ೨-೧೦೫ವ); ದಿಟ್ಟಿ ಸೂಟಿಕ್ಕಿ ಕೆಕ್ಕಳಿಪನ್ನಂ (ಜಗವಿ. ೩-೭೦). ೨. ಕ್ರೋಧಗೊಳ್ಳು; ಕೋಪಗೊಳ್ಳು : ಮಸಗಿ ಮೊರೆಯುತುಂ ಸುತ್ತಿ ಕೆಕ್ಕಳಿಸುತುಂ ಹೊತ್ತಿ ಹೊಗೆವುತುಂ (ಬಾಹುಬ. ೧೪೧-೪); ಬೆಳ್ನೊರೆ ಸುರಿಸುತ್ತೆ ಕೆಕ್ಕಳಿಪ ಸೂಕರಂ (ಸೂಕ್ತಿಸು. ೩-೧೯೯); ರೌದ್ರಾಟೋಪದಲಿ ಕೆಕ್ಕಳಿಸಿದೆಕ್ಕಲ [ಪಾಠಾಂ. ದಿಕ್ಕಲ] ನೋಡುತಿರ್ದುದು (ಕುವ್ಯಾಅ. ೬-೪೨); ಬಾರದು ಕೂಡೆ ರಾಣಿಯರೆಲ್ಲರು ಕೆದಱಿ ಕೆಕ್ಕಳಿಸಿ ತಮ್ಮೊಳಗೆ (ಭರತ. ೧೪-೭೦). ೩. ಬೆದರು; ಗಾಬರಿಯಾಗು : "ಕೆಕ್ಕಳಿಸಿದುದೆಂದುಂ ಸೀತಟಿಂದುಂ ಭಯವಿಕಾರಂ" (ಕಶಸಾ. ೧೧-೨೨೪); ಕೈಮುಜಿದು ಕೆಕ್ಕಳಿಸದಿರ್ (ರಾಮಾಶ್ವ. ೯೨-೨೧); ಕೆಕ್ಕಳಿಸಿದುದು ಧೃತಿ (ಉತ್ತರಾ. ೫-೫೫). ೪. ನಿಮಿರಿಸು; ನೆಟ್ಟಗೆ ಮಾಡು : ಕೊಡಕೆಗಳು ಕೆಕ್ಕಳಿಸಿ ನಿಂದಡಿಗಡಿಗೆ ನೆಗೆದಬ್ಬರಿಸಿ (ಪ್ರಹ್ಲಾಚ. ೩-೨೦); ಕಂಠವನೆತ್ತಿ ಕಿವಿಗಳಂ ಕೆಕ್ಕಳಿಸಿಕೊಂಡು ವಿಕಟವಾದ ದೃಷ್ಟಿಯಿಂದ ನೋಡುತ್ತಾ (ಶುಕಸ. ೧೧೭). **ಕೆಕ್ಕರಿಸು$_1$** : ೧. ಕೆಕ್ಕರಿಸಿದ ಕಣ್ ತರಂಬುದಲೆ ಪಾವಸೆವಲ್ಕಿಗೆ ಗಂಟುಪುರ್ಬುಗಳ್(ವೃಷವಿ.೧೧-೬೧); ಕೆಕ್ಕರಿಸಿದ ನೋಟಮೊಂದಿನಿಸು ಕೊಂಕಿದ ಸಂಕುಗೊರಲ್ (ಅಪ್ರತಿ. ೨೩-೭). ೨. ಅಲ್ಲಮನ ಮಾತಿಗೆ ಕೆಕ್ಕರಿಸಿ ಕೋಪಾಟೋಪವಾವರಿಸಿ (ಪ್ರಭುಲೀ. ೧೩-೧೦). ೩. ಕಿಱುಮುಱಿಗಾಣದೊಱಲಿ ಕೆಕ್ಕರಿ [ಪಾಠಾಂ. ಳಿ]ಸಿ ಕೊರಳೆತ್ತಿ ಹೂಂಕರಿಸಿ (ಹಚಕಾ. ೫-೪೮). ೪. ಕೆಂಪುಗೊಳಿಸು; ಕೆಂಪಾಗಿಸು : ನರ್ಸಿ ನಗಲಿಲ್ಲ, ಕಣ್ಣು ಕೆಕ್ಕರಿಸಿದಳು (ಒಡ್ಡಿಉ. ೪೯); ಇನ್‌ಸ್ಪೆಕ್ಟರು ಕಣ್ಣು ಕೆಕ್ಕರಿಸಿಕೊಂಡು ಕುಳಿತಿದ್ದರು (ಮರಳಿ. ೧೫೨). ೫. ಕೋಪದಿಂದ ದುರುಗುಟ್ಟಿಕೊಂಡು ನೋಡು : ಕಕ್ಕಸದ ಕಲಿಭಟರನಿದಿರಲಿ ಕೆಕ್ಕರಿಸಿ ಕವಿದೇರಿಯವರನು ಹೊಕ್ಕು ಕವಿದನು(ಶರಲೀ.೫೫೫-೮); ಮುಕ್ಕುರಿಪ ನಾಯ್ಗಳಂ ಕೆಕ್ಕರಿಸಿ ದುರುಗುಟ್ಟಿ (ಕಾಲೂರ. ೯೩-೧೮೨). ೬. ಬಹಳ ಬಿಗಿಯಾಗು : ಘನತರವಾದ ಸೀರೆಯನುಟ್ಟು ಕುಪ್ಪಸ ತನು ಕೆಕ್ಕರಿಸುವಂತೆ ತೊಟ್ಟು (ಶ್ರೀಕೃಪಾ. ೫೨).

[ಕೆಕ್ಕಳ + -ಇಸು$_3$]

**ಕೆಕ್ಕಾನೆ** 'ಕೆಕ್ಕನೆ' ನೋ.

**ಕೆಕ್ಕು₁** (ಕ್ರಿ). ಹಸುಗಳನ್ನು (ಕಾಯುವಾಗ) ಕೂಗು, —ಕೇಕೆಹಾಕು: "ಕೆಕ್ಕ – ಗೋಶಿಕ್ಷಾಧ್ವನೌ" (ಶಮಧಾ); ಕೋಲಂ ಬೀಸುತೆ ಶೀಳಿಡುತಾಲಿಸುತ್ತಿತ್ತ ಮೀಕ್ಷಿಸುತೆ ಕೆಕ್ಕುತೆ ಪೆರ್ಗಾಲಡ್ಡವೊಡ್ಡಿ ನಿಲುತಂ ಕೌಲೇಯಮನಲ್ಲಿ ಕರೆವುತಂ ನಡೆತಂದಂ (ವೃಷವಿ. ೧೧-೬೩); ಆತನನ್ನು ನಮಗೆ ಕಾಣ್ಕೆಯಾಗದಂತೆ ಅಡ್ಡಗಟ್ಟಿ ಕೆಕ್ಕಿ ಪರದಾಡಿಸುತ್ತಿರುವರು (ಬೆಟ್ಟಲ. ೧೫೨-೬). [?]

**ಕೆಕ್ಕು₂** (ಕ್ರಿ). ಕೇಕರಿಸು: ಪಿರಿದುಂ ಕೆಕ್ಕುತೆ ಕೆಮ್ಮುತೆ ನೆರೆ ಕುಂಟುತ್ತೆಯ್ದೆ ವಂದನೋರ್ವಂ ಶಬರಂ (ಚಂದ್ರಪ್ರಭು. ೬-೯೯). [?]

**ಕೆಕ್ಕೆ** (ನಾ). ಕೆನ್ನೆ; ಕದಪು; ಕಪೋಲ: "ಕೆಕ್ಕೆ ಕೆನ್ನೆಯೆ" (ಕರ್ಣಾನಿ. ೬೨); "ಕೆಕ್ಕೆಯೆಂದು ಕೆನ್ನೆ" (ಕಶಸಾ. ೨೧-೪೨೮); ಪುರ್ವಳ್ಪೆ ಪಲ್ ಕೆಕ್ಕೆ ಕಾಲಡಿಯೆಂದಿಂತಿವನು ಚರ್ಪೋದು ವಿಸೆ (ಶಾಂತಿಪು. ೪-೧೬); ಎಡೆವಿಡದುಣ್ಮೆ ಕೆಕ್ಕೆಗಿೞಿದಶ್ರುಕಣಾವಳಿಯಂ (ಕುಸುಮಾ. ೧೩-೫೯); ಕೆಕ್ಕೆಯಂ ಕರತಲದೊಳೂಱಿಯುಂ (ರಾಮಾಶ್ವ. ೨೬-೪). [ದೇ. ‖ ತೆಲು. ಚೆಕ್ಕು, ಚೆಕ್ಕಿಲಿ]

**ಕೆಕ್ಕೊರಸು** (ನಾ). (?): ನಿಯತ ದ್ವಿತ್ವಕ್ಕೆ – ಪಪ್ಪುಕಂ . . . ಬಕ್ಕಸಿ, ರಕ್ಕಸಿ, ಕೆಕ್ಕೊರಸು (ಶಮದ. ೩೬ ಪ್ರಯೋ). [?]

**ಕೆಗಹು** (ನಾ). ರೇಗು; ಕನಲು: ಕೆಂಗಣ್ಣ ಕೆಗಹುಗಳ ಬಿಗಿದ ಬತ್ತಳಿಕೆಗಳ ಹಿಳುಕುಗಳ ತೆಗವ ಹೂಡುವ ಬಗೆಯ ಭಟರು . . . ಪೊಯಿದಾಡಿತು (ತುರಂಗ. ೪೬-೨೫). [← ತಮಿ. ಚಿಗಪ್ಪು]

**ಕೆಚ್ಚ** (ನಾ). ಕಾಡುಮಲ್ಲಿಗೆ (?): "ಚಂಚಿಸಾರಃ – ಹುಣಿಸೆ, ಕೆಚ್ಚ, ಆಕಾಯಿ" (ಓಷಧಿ. ೫೬). [? . / ತಮಿ. ಕೆಚ್ಚವರ್]

**ಕೆಚ್ಚಕ್ಕಿ** (ನಾ). ಕೆಂಪು ಅಕ್ಕಿ; ಕೇಸಕ್ಕಿ: ಕೆನ್ನುರಿ, ಕೆಚ್ಚುರಿ, ಕೆನ್ನಕ್ಕಿ, ಕೆಚ್ಚಕ್ಕಿ, ಬೆನ್ನುರಿ, ಬೆಚ್ಚುರಿ (ಶಬ್ದಾನು. ೩೪೩ ಪ್ರಯೋ). [ಕೆಚ್ಚು₃ + ಅಕ್ಕಿ₁]

**ಕೆಚ್ಚಗೆ** (ಅ). ಕೆಂಪಾಗಿ; ಕೆಂಪಗೆ; ಕೆಂಪನೆ: ಕೆಂಬೆಳಗಿದ ನೋಡಿ ಕೆಚ್ಚಗಾದುದೆ ನಮ್ಮ ಹೊಂಬಣ್ಣದೊಡಲಣ್ಣಗೆಂದಾ (ಭರಚ. ೪೮-೩೬). [ಕೆಚ್ಚು₃ + -ಅಗೆ₃]

**ಕೆಚ್ಚನೆ** (ಅ). = ಕೆಚ್ಚಗೆ: ಕೆಚ್ಚನಾಗಿರ್ದ [ಪಾಠಾಂ. ಳ್ದ] ಸಿಲೆಯಂ ಕಂಡು (ವಡ್ಡಾರಾ. ೧೧೪-೧೩); ಬಳೆದ ಮುನಿಸಿನೊಳ್ ಕೆಚ್ಚನಾದ ಕಣ್ (ಆದಿಪು. ೧೪-೨೩); ಕ್ರೋಧಾನಲದಿನೆನ್ನನುರಿಪುವಂತು ಕೆಚ್ಚನಾಗೆ ಬಿಚ್ಚನೆ ಬಿಟ್ಟ ದಿಟ್ಟಿಗಳಿಂ ನೋಡಿ (ಕಾದಂಉ. ೬೧೪); ಬಸವರಾಜನ ಮೊಗಮನೀಕ್ಷಿಸಿ ಮುಸುಡು ಕೆಚ್ಚನೆ ಮಾಡಿ (ಬಸಪು. ೨೧-೧೮). [ಕೆಚ್ಚು₃ + -ಅನೆ₂ (< -ಅನೆಯ₂)]

**ಕೆಚ್ಚಲ್**, ಕೆಂಚಲು, ಕೆಚ್ಚಲ, ಕೆಚ್ಚಲು (ನಾ). ಹಸು, ಎಮ್ಮೆ ಮೊದಲಾದ ಪ್ರಾಣಿಗಳ ಮೊಲೆಯ ಮೇಲ್ಭಾಗ: "ಕೆಚ್ಚಲೂಧ ಪಾಪೀನಂ" (ವಸ್ತುಕೋ. ೯೦-೯); ಇಱುಂಕಿದ ಕೆಚ್ಚಲೆತ್ತಮೆತ್ತಿದ ಕುಡಿ ಪಾಲಮಂದೆಸೆಯೆ ಕರ್ಬಸುಗಳ್ ಪರಿಗೊಂಡುವು (ಪಂಪಭಾ. ೮-೧೦೪); ಕೆಚ್ಚಲಿಲ್ಲದಾವಿನಂತೆ ನೀರಿಲ್ಲದ ಬೆಳಸಿನಂತೆ (ಧರ್ಮಾಮೃ. ೧೪-೧೬೦); ಪಾವನಕ್ಷೀರಮಂ ಕೊಡುವ ಕೆಚ್ಚಲ ಮಾಂಸವಾವಲೇಸು (ಹಚಕಾ. ೬-೧೬). **ಕೆಂಚಲು**: ಉಚ್ಚಾಯ ದಿನದಲ್ಲಿ ದಿಡ್ಡಿಯ ಉಡುಗೂಸಿ ಉಪ್ಪ ಅಂಬೀಲ ಕರಿಯುಬೇವನೆ ತರಿಸಿ ಕೆಂಚಲವ್ಯಾಲ ಇಳಿವ್ಯಾರ (ಮಲ್ಲಿಗೆ. ೩೧-೮). **ಕೆಚ್ಚಲ**: ಬಲ್ಗೆಚ್ಚಲದ ಪಲತೆಱದ ಬಣ್ಣದ ಎಳದುಱುಗಳ ಬಳಗಂ (ಕವಿಚ. III, ೨೦೯ ಸರಸ್ವತೀಪ್ರಬಂಧ). **ಕೆಚ್ಚಲು**: ಮಾನದ ತೋರಿಹ ಆವಿಂಗೆ ಕೊಳಗದ ತೋರಿಹ ಕೆಚ್ಚಲು (ಅವಚಂ. ೧೨-೪೮).

[ದೇ. ‖ ತಮಿ. ಚಿರುತ್ತಲ್; ಮಲ. ಚಿರನ್ನಲ್, ಚುರನ್ನಲ್, ಚೊರುನ್ನಲ್; ತುಳು. ಕೆಂಜಿಲ್, ಕೆನ್ಡೆಲ್]

**ಕೆಚ್ಚಲ** 'ಕೆಚ್ಚಲ್' ನೋ.

**ಕೆಚ್ಚಲು** 'ಕೆಚ್ಚಲ್' ನೋ.

**ಕೆಚ್ಚಱಿ** (ಕ್ರಿ). ಶಕ್ತಿಗುಂದು, —ಕುಗ್ಗು: ಬಟಲದು ಜವ್ವನಂ ತವದು ಮೆಯ್ಸಿರಿ ಖಂಡಿಸದಾಯು ಮೆಚ್ಚು ಕೆಚ್ಚಱಿಯದು (ಸೂಕ್ತಿಸು. ೪-೧೨೮). [ಕೆಚ್ಚು₄ (< ಕೆರ್ಚು) + ಅಱಿ₁]

**ಕೆಚ್ಚಾಟ** (ನಾ). ದಾರದ ಎಳೆಗಳನ್ನು ಬೆರಳಿಂದ ಹೊಸೆದು ಕೂಡಿಸುವಿಕೆ: (ಶ). [ಕೆಚ್ಚು₁ + ಆಟ]

**ಕೆಚ್ಚಾನೆ** (ನಾ). ಕೆಂಬಣ್ಣದ ಆನೆ: ಕೆಚ್ಚಾನೆ, ಬೆಚ್ಚಗುಱುಲ್ (ಶಬ್ದಾನು. ೩೪೩ ಪ್ರಯೋ). [ಕೆಚ್ಚು₃ + ಆನೆ₁]

**ಕೆಚ್ಚಿಡಿ** (ಕ್ರಿ). ಕೆಚ್ಚು ತುಂಬಿರು; ಶಕ್ತಿ ಹೆಚ್ಚಾಗಿರು: ಕೆಚ್ಚಿಡಿದ ಕೋವಿಗಳ್ ಬಾಯ್ತೆರೆಯೆ ಹಿಂದೆ (ಕಾಲೂರ. ೯೨-೧೬೯). [ಕೆಚ್ಚು₄ (< ಕೆರ್ಚು) + ಇಡಿ₁]

**ಕೆಚ್ಚಿಸು** (ಕ್ರಿ). ಕೂಡಿಸು; ಸೇರಿಸು; ಹೊಂದಿಸು: ಭೂದಿವಗಳ ಕೆಚ್ಚಿಪಂದದ ಕೆಂದೂಳ ಹಾದಿಯ ತೆರಪುಗಾಣಿಸದೆ (ಕಂಸವಿ. ೧೮-೮೦). [ಕೆಚ್ಚು₂ + -ಇಸು₃]

**ಕೆಚ್ಚು₁** (ಕ್ರಿ). ೧. ದಾರದ ಅಥವಾ ಎಳೆಯ ಎರಡು ತುದಿಗಳನ್ನು ಹೊಸೆದು ಕೂಡಿಸು: "ಕೆಚ್ಚು – ತಂತುವಾಯಕ್ರಿಯಾಯಾಂ (ನೇಯ್ಗೆಯ ಕೆಲಸ) ತರುಸಾರೇ ಚ (ಚೇಗು)" (ಶಮಧಾ). ೨. ಸೇರಿಸು; ಹೊಂದಿಸು: ಪರಮ ಪರಿಮಳದಿಂದ ಕೂಡಿರ್ದ ರಲುಗಳ ಕೆಚ್ಚಿರ್ದವೇಣಿಯ ಕುರುಲುಗಳು (ರಘುವಂ. ೮೩). ೩. ಕುಂದಣಿಸು; ಕೀಲಿಸು: ಹರಳು ಕೆಚ್ಚಿರ್ದುಂಗುರಂಗಳ ಬೆರಲಿನಲಿ ಧರಿಸಿ (ರಘುವಂ. ೯೬). [< ಸಂ. ಖಚ್ ?]

**ಕೆಚ್ಚು₂** (ನಾ). ೧. ಹೊಸೆದು ಮಾಡಿದ ಗಂಟು: (ಶ). ೨. ಕೂಡುವುದು; ಬೆಸಗೆ. 'ಕೆಚ್ಚುವೀೞ್' ಪರಾ. [< ಕೆಚ್ಚು₁]

**ಕೆಚ್ಚು₃** (ನಾ). ಕೆಂಪು; ಕೆಂಬಣ್ಣ: "ಕಿಸುವಣ್ಣ ಕೊರ್ಬುಗಳೊಳಂ ಮರದ ಸಾರದೊಳ್ನಿಸದದಿಂ ತಂತುಕ್ರಿಯೆಯೊಳು ಕೆಚ್ಚೆಂದಕ್ಕು" (ಶಬ್ದಮಂ. ೮೮); ಕೆಚ್ಚನಾಗಿರ್ದ [ಪಾಠಾಂ. ಗಿಳ್ದ] ಸಿಲೆಯಂ ಕಂಡು (ವಡ್ಡಾರಾ. ೧೧೪-೧೩). [< ಕೆಂಚು ?]

**ಕೆಚ್ಚು₄** 'ಕೆರ್ಚು' ನೋ.

**ಕೆಚ್ಚುಗಟ್ಟು** (ಕ್ರಿ). ಗಟ್ಟಿಗೊಳ್ಳು; ಬಲಿತುಗೊಳ್ಳು; ಧೃಢವಾಗು: ಭೂತಳದೊಳ್ ಬಿಳ್ದು ಕೆಚ್ಚುಗಟ್ಟದಳಲಿಂ ಮುಚ್ಚೆಹೋಗಿ (೧೦ಕ. ೮-೬೬ವ); ಬೆಚ್ಚುವೊಚ್ಚೆಯವಿಲ್ಲದಚ್ಯುತ್ತಿದಂತಾಯ್ತು ಕೆಚ್ಚುಗಟ್ಟಿತ್ತುಭಯ ಸಂಗ ವಿಸ್ಮಯವಾಯ್ತು (ದೀಕ್ಷಾಬೋ. ೧೪೩-೨೦); ಸಂಸಾರ ಸುಖಂ ಫಲಂಬಡೆದುದಂ ಚಿತ್ತೋತ್ಸವಂ ಕೆಚ್ಚುಗಟ್ಟಿದುದಂ (ದಶಕು. ೪-೬೯). [ಕೆಚ್ಚು₄ (< ಕೆರ್ಚು) + ಕಟ್ಟು₁]

**ಕೆಚ್ಚುಗೆಂಪು** (ನಾ). ಕಡುಗೆಂಪು; ಅಚ್ಚಗೆಂಪು: ಕೆಚ್ಚುಗೆಂಪಿನ ಬಿಸುನೆತ್ತರನ್ನು ಬಸಿದು (ಮಂತ್ರಶ. ೧೨-೨೨). [ಕೆಚ್ಚು₃ + ಕೆಂಪು₁]

**ಕೆಚ್ಚುಗೊಳ್** (ನಾ). ೧. ಗಟ್ಟಿಯಾಗು; ಬಲಿಷ್ಠವಾಗು: ನಿಚ್ಚಟದ ನಿಷ್ಠೆ ದೃಢ ಕೆಚ್ಚುಗೊಂಡಿರಬೇಕು (ದೀಕ್ಷಾಬೋ. ೮೯-೯). ೨. ಬಲಿತುಕೊಳು; ಸೊಕ್ಕು: ಇದು ನನ್ನದೆಂದು ನೆಚ್ಚಿ, ಮೆಚ್ಚಿ, ಹೆಚ್ಚಿ, ಕೆಚ್ಚುಗೊಂಡು ಒಚ್ಚತವೋದ ಎನ್ನ ಮನಕ್ಕೆ ಇನ್ನಾವುದು ಗತಿಯೊ (ಆದವ. ೩೪). [ಕೆಚ್ಚು₄ (< ಕೆರ್ಚು) + ಕೊಳ್₁]

**ಕೆಚ್ಚುದಿನ್** (ಕ್ರಿ). ಗಸಿಯನ್ನು ತಿನ್ನು; ಚರಟವನ್ನು ತಿನ್ನು (?): ತೀವಿದ ತಿಂಗಳೊಪ್ಪವಿರುಳಂ ಕಟಿದಕ್ಕ ವಿಯೋಗವಹ್ನಿಯಿಂ ಬೇವುದು ಬುದ್ಧಿಯಲ್ತು ಕೆನೆಯಂ ಕಳೆದಕ್ಕಟ ಕೆ[ಪಾಠಾಂ. ಕಿ]ಚ್ಚುದಿಂಬುದೇ (ಲೀಲಾವ. ೧೪-೩೯). [ಕೆಚ್ಚು₀ + ತಿನ್₁]

**ಕೆಚ್ಚುಮನ** (ನಾ). ಗಟ್ಟಿಯಾದ ಮನಸ್ಸು; ದೃಢಚಿತ್ತ; ಧೈರ್ಯ: ಕೊಲೆಗಡಿಗನಿದಿರಲಿ ಕೆಚ್ಚುಮನದವರಾರು (ಕುವ್ಯಾದ್ರೋ. ೨-೭೬). [ಕೆಚ್ಚು$_4$ (< ಕೆರ್ಚು) + ಮನ$_1$]

**ಕೆಚ್ಚುರಿ** (ನಾ). ಕೆಂಪಾದ ಉರಿ, —ಜ್ವಾಲೆ: ಕೆಸ್ನುರಿ, ಕೆಚ್ಚುರಿ, ಕೆನ್ನಕ್ಕಿ, ಕೆಚ್ಚಕ್ಕಿ (ಶಬ್ದಾನು. ೩೪೩ ಪ್ರಯೋ). [ಕೆಚ್ಚು$_3$ + ಉರಿ$_2$]

**ಕೆಚ್ಚುವೀೞ್** (ಕ್ರಿ). ೧. ಕೂಡಿಕೊಂಡಿರು; ಹೆಣೆದುಕೊಂಡಿರು: ಕೆಚ್ಚುವಿರ್ದ[ಬ್ದ]ಮಚ್ಚುಮನುರ್ಚಿಪೋದ ಮೇಳಮುಮನಳವಿಗಟಿ ದಲಂಪುಮಂ (ಆದಿಪು. ೪-೫೨ವ); ಕೆಚ್ಚುವಿರ್ದ[ಬ್ದ]ಕೂರ್ಮೆ ಗಳೆರ್ದೆಯಂ (ಪಂಪಭಾ.೨-೯೭). ೨. ಸೊಕ್ಕಿಗೆ ಬರು; ಗರ್ವಿಸು: (ಕ). [ಕೆಚ್ಚು$_2$ + ಬೀೞ್$_1$]

**ಕೆಚ್ಚುಱುಬು** (ಕ್ರಿ). ಶಕ್ತಿಯನ್ನು ತೋರು; ಪರಾಕ್ರಮವನ್ನು ತೋರು: ಬವರದೊಳ್ಕೆಚ್ಚುಱುಬಿ ಸತ್ತೊ[ೞ] (ಮೈಅರಿ. ೧೯೩೧; ೪೯-೪; 886). [ಕೆಚ್ಚು$_4$ (< ಕೆರ್ಚು) + ಉಱುಬು (< ಉಱುಂಬು$_1$)]

**ಕೆಚ್ಚೆದೆ** 'ಕೆಚ್ಚೆರ್ದೆ' ನೋ.

**ಕೆಚ್ಚೆರ್ದೆ, ಕೆಚ್ಚೆದೆ** (ನಾ). ಗಟ್ಟಿಯಾದ ಎದೆ; ದಿಟ್ಟಮನಸ್ಸು; ಎದೆಗಾರಿಕೆ: ಬಲ್ಕೆಚ್ಚೆರ್ದೆಯ ಖಳನ ರಥದಚ್ಚು ನೊಗಗಾಲಿಯಂ ನುಚ್ಚುಗಡಿದು (ಮೋಹತ. ೪೯-೨೮). **ಕೆಚ್ಚೆದೆ**: ಕಚ್ಚೆಗಟ್ಟದೆ ಕೈದು ವಿಡಿಯದೆ ಕೆಚ್ಚೆದೆಯ ಮನಸಿಜನ ತಪಸಿನ ಕಿಚ್ಚನಿಂದುರುಪಿದೆ (ಸಾಳ್ವಭಾ. ೩-೫); ನೀಂ ಪಸುಳೆಯಾಗಿರ್ದೊಡೇನು ಕೆಚ್ಚೆದೆಯ ಭಟನಪ್ಪೆ (ಜೈಮಿಭಾ. ೪-೪೦); ಬೆಚ್ಚ ಬಿಡು ನೆಚ್ಚ ನೆಡು ಕೆಚ್ಚೆದೆಯ ಗುಡಿಯಲ್ಲಿ (ಪಾಂಚಜ. ೫). [ಕೆಚ್ಚು$_4$ (< ಕೆರ್ಚು) + ಎರ್ದೆ]

**ಕೆಚ್ಚೇಱಿಸು** (ಕ್ರಿ). ವೃದ್ಧಿಗೊಳಿಸು; ಬಲಗೊಳಿಸು: ಅಂಬುಧಿಯಂ ಕಡಂಗಿ ನೀರೇಱಿಸುತುಂ ಲಸತ್ಕುಮುದವಕ್ತ್ರವಿಕಾಸದ ಪೆರ್ಚನೆಯ್ದೆ ಕೆಚ್ಚೇಱಿ [ಪಾಠಾಂ. ಕಚ್ಚರಿ]ಸುತಂ . . . ಪೊಳಪೇಱಿತು ಚಂದ್ರಿಕೆ (ಕುಸುಮಾ. ೧೪-೧೭). [ಕೆಚ್ಚೇಱು + -ಇಸು$_3$]

**ಕೆಚ್ಚೇಱು** (ಕ್ರಿ). ಹೆಚ್ಚಾಗು; ಅಧಿಕವಾಗು: ಕೆಚ್ಚೇ[ಪಾಠಾಂ. ರ್ಚೆ]ಱಿದ ಕೋಪದಿಂ (ಪಂರಾಮಾ. ೧೪-೧೭೦ವ). [ಕೆಚ್ಚು$_4$ (< ಕೆರ್ಚು) + ಏಱು$_1$ (< ಏಱ್$_1$)]

**ಕೆಚ್ಚೋಲೆ** (ನಾ). = ಕೆಂಬರಲೋಲೆ: ಕೆಚ್ಚೋಲೆ, ಪಚ್ಚಡಕೆ, ಬೆಚ್ಚೋಡು (ಶಬ್ದಾನು. ೩೪೧ ಪ್ರಯೋ). [ಕೆಚ್ಚು$_3$ + ಓಲೆ]

**ಕೆಟ್ಟ$_1$** (ಗು). ೧. ಒಳ್ಳೆಯದಲ್ಲದ; ಕೆಡುಕಿನ; ಅನಿಷ್ಟಕಾರಕ: ಕಂಡೆನು ಬಲು ಕೆಟ್ಟ ಕನಸು (ಮೋಹತ. ೪-೯). ೨. ಉಗ್ರವಾದ; ಪ್ರಚಂಡವಾದ: ಈ ಕೆಟ್ಟ ಬಿಸಿಲಲ್ಲಿ ಏಕೆ ಬಂದೆ, ಮಗು? (ರೂಢಿ). (ನಾ). ೩. ಕೆಡಕುಮಾಡುವುದು; ಒಳ್ಳೆಯದಲ್ಲದುದು: ಹುಡುಗನ ಕಾಲುಗುಣ ಕೆಟ್ಟ ಎಂದು ಯಾರೋ ಅಂದಿದ್ದರು (ನಿರಾಥ. ೪೪). [< ಕೆಡು$_1$]

**ಕೆಟ್ಟ$_2$** 'ಕೆಡು$_1$' ಪರಾ.

**ಕೆಟ್ಟದಾರಿ** (ನಾ). ಒಳ್ಳೆಯದಲ್ಲದ ಹಾದಿ; ದುಷ್ಟಮಾರ್ಗ: (ಕ). [ಕೆಟ್ಟ$_1$ + ದಾರಿ$_1$]

**ಕೆಟ್ಟನುಡಿ** (ನಾ). ದುಷ್ಟಮಾತು; ಹೀನಮಾತು: ಕೆಟ್ಟನುಡಿಗಳ ನಾಡದಿರಿ (ಬಸಪು. ೫೮-೩೯). [ಕೆಟ್ಟ$_1$ + ನುಡಿ$_2$]

**ಕೆಟ್ಟಹಾವು** (ನಾ). ದುಷ್ಟಹಾವು; ಕೆಡುಕು ಮಾಡುವ ಹಾವು; ವಿಷದ ಹಾವು: ಕೆಟ್ಟಹಾವನ್ನು ಮಡಿಲಲ್ಲಿಟ್ಟುಕೊಂಡಂತಾಯಿತು (ಚಿಕ್ಕದೇ. ೧೨೯). [ಕೆಟ್ಟ$_1$ + ಹಾವು (< ಪಾವು$_1$)]

**ಕೆಟ್ಟತನ** (ನಾ). ದುಷ್ಟತನ: ಕೆಟ್ಟತನಕ್ಕೆ ಒಪ್ಪಿದವ ಕೆಟ್ಟನ್ನಕ್ಕೂ ಒಪ್ಪಬೇಕು (ಗಾದೆ). [ಕೆಟ್ಟ$_1$ + -ತನ]

**ಕೆಟ್ಟಾಡಿತ** (ನಾ). ದೋಷಾರೋಪಣೆ; ನಿಂದೆ: ಎನ್ನ ರಾಜಋಷಿ ಯೆಂದು ಕೆಟ್ಟಾಡಿತಕ್ಕಾ ಹರಿಶ್ಚಂದ್ರನ ನಸತ್ಯನಂ ಮಾಡಿಸುವೆಂ (ಹಚಕಾ. ೨-೩೪). [ಕೆಟ್ಟ$_1$ + ಆಡಿತ]

**ಕೆಟ್ಟಾಡು** (ಕ್ರಿ). ಕೆಟ್ಟತನದಿಂದ ವರ್ತಿಸು (?): ಮತಿಗೆಟ್ಟು ದುಷ್ಟ ಸಂಗತಿಯಿಂದಂ ಮಱೆದು ಗುಣಮೆಲ್ಲಮುಂ ಮೆಯ್ಮಱಿಯದೆ ಕೆಟ್ಟಾಡಿದೆಂ ಮಹಾಪಾತಕನೆಂ (ಧರ್ಮಾಮೃ. ೨-೧೫೩); ಕೆಟ್ಟಾಡಿ ಹೊಟ್ಟೇ ಹೊರೆಯುವವನಿಗೆ ಕೊಟ್ಟ ಸಾಲ ಬರುವುದಿಲ್ಲ (ಗಾದೆ). [ಕೆಟ್ಟ$_1$ + ಆಡು$_1$]

**ಕೆಟ್ಟಾಶೆ** (ನಾ). ದುರಾಶೆ: ಬಂದಿಹೊಗದಾಸಱು ವಿತಾಳಿಸಿ ನಿಂದಿರದು ನೆಲೆಗೊಳ್ಳದಾ ಜನವೃಂದದಲಿ ಕೆಟ್ಟಾಶೆ [ಪಾಠಾಂ. ಕಟ್ಟಾಸೆ] (ತೊರರಾ. ೧-೩-೨೯). [ಕೆಟ್ಟ$_1$ + ಆಶೆ]

**ಕೆಟ್ಟಾಸೆ** (ನಾ). = ಕೆಟ್ಟಾಶೆ. 'ಕೆಟ್ಟಾಸೆ ಬೀಡು' ಪರಾ. [ಕೆಟ್ಟ$_1$ + ಆಸೆ$_1$]

**ಕೆಟ್ಟಾಸೆಬೀಡು** (ನಾ). ದುರಾಸೆಯ ನೆಲೆ; ಕೆಟ್ಟ ಆಶೆಯ ಆಶ್ರಯ: ಆದೆ ಇಂದು ಸೂಡಿನೊಳ್ ಕೆಟ್ಟಾಸೆಬೀಡಿನೊಳ್ ಬಾಳ್ಗನಸುಗಳೆಗೆಲ್ಲ ಕೊನೆಯ ಸುಡುಗಾಡಿನೊಳ್ ಕಾಣುತಿರೆ (ಶ್ರೀರಾಮಾ. ೧೧೯-೧೯೧). [ಕೆಟ್ಟಾಸೆ + ಬೀಡು$_2$]

**ಕೆಟ್ಟು** 'ಕೆಡು$_1$' ಪರಾ.

**ಕೆಟ್ಟೆ** (ನಾ). ಕೇಡು; ದುರದೃಷ್ಟ; ನಾಶ: (ಕ). [ದೇ. ‖ ತೆಲು. ಚೆಟ್ಟ]

**ಕೆಟ್ಟೆಣಿಸು** (ಕ್ರಿ). ಕೇಡನ್ನು ಬಗೆ; ಕೆಟ್ಟದ್ದನ್ನು ಯೋಚಿಸು: ಉನ್ನತಪುಪ್ಪೀ ಬಾಳ್ಕೆ . . . ಹೋಹುದಿಂತಿದ ನೆನದೊಡೆಂದೆನ್ನದೆ ಕೆಟ್ಟೆಣಿಸದಳು (ಪ್ರಭಂಜ. ೨-೩೧); ದಕ್ಷಂ ಬಳಿಕ ಕೆಟ್ಟೆಣಿಸಿ ಯಜ್ಞವಂ ಮಾಡುವೆನೆನುತ್ತ (ವೀಶೈಪು. ೩-೨-೧೫); ಸೂನುಸಹಿತೀದುಷ್ಟಬುದ್ಧಿಗಿಲ್ಲಿ ಕೆಟ್ಟೆಣಿಸಿದವರಾರೊ ಶಿವಶಿವಾ (ಜೈಮಿಭಾ. ೩೧-೭೪); ಕೆಟ್ಟೆಣಿಸದಿನ್ನು ಮನವಂ ತಿಳಿಸಿಕೊಳ್ಳಯ್ಯ (ಹಬ್ಬರ. ೨೧-೧೨). [ಕೆಟ್ಟ$_1$ + ಎಣಿಸು]

**ಕೆಟ್ಟೊಡಲ್** (ನಾ). ಕೆಟ್ಟ ಶರೀರ; ಹೀನವಾದ ದೇಹ: ಸುಡಿಯ ಲೇನಕಟಕುದ್ದದ ಮಡಿಲೆನಿಪ ಕೆಟ್ಟೊಡಲಾಂತು ಕರ್ಮಭೋಗಂಗೆಯ್ದು (ಪದ್ಮರಾ. ೧-೪೭). [ಕೆಟ್ಟ$_1$ + ಒಡಲ್]

**ಕೆಟ್ಟೋಡು** (ಕ್ರಿ). ಕೆಟ್ಟು ಓಡಿಹೋಗು; ವಿಮುಖವಾಗು; ಪಲಾಯನ ಮಾಡು: ಮಾರ್ತಾಂಡ ಸುತಾಂಶದೊಳ್ ಪಸಿ ಯೊಳರ್ದಂತಾಕೆ ಕೆಟ್ಟೋ[ಪಾಠಾಂ. ಟ್ಟಾ]ಡುಗುಂ (ಎತತಿ. ೨೨-೭); ರಣಭೀತಿಯಲಿ ಕೆಟ್ಟೋಡಿದುದು ನೆರೆದರಸುಗಳ ಸುತರು (ಸಾಳ್ವಭಾ. ೮-೭೨). [ಕೆಟ್ಟು (< ಕೆಡು$_1$) + ಓಡು$_1$]

**ಕೆಡಂಪು** 'ಕೆಡಪು' ನೋ.

**ಕೆಡಕು** 'ಕೆಡುಕು' ನೋ.

**ಕೆಡಕುತನ** 'ಕೆಡುಕತನ' ನೋ.

**ಕೆಡಕುಹುಳು** (ನಾ). ಕೆಟ್ಟಹುಳು: ಕೆಡಕು [ಪಾಠಾಂ. ಕೆಡಿಕ] ಹುಳು ಕಚ್ಚಿತ್ತು ಮಗನ (ಬಸಪು. ೪೮-೯). [ಕೆಡಕು (< ಕೆಡುಕು) + ಹುಳು$_2$ (< ಪುೞು$_1$)]

**ಕೆಡಕೆನಿಸು** (ಕ್ರಿ). ವ್ಯಥೆಯಾಗು; ಮನಸ್ಸಿಗೆ ನೋವಾಗು: ಚೌಡಪ್ಪ ನವರ ಮೂರ್ಖತನಕ್ಕೊ ಅಥವಾ ನನ್ನ ಮರುಳತನಕ್ಕೋ ಬಹಳ ಕೆಡಕೆನಿಸುತ್ತದೆ (ಹಳ್ಳಿಹಾ. ೧೧). [ಕೆಡಕು (< ಕೆಡುಕು) + ಎನಿಸು$_1$]

**ಕೆಡಗನಸು** (ನಾ). ಕೆಟ್ಟ ಕನಸು: ವನಿತೆ ಜೀವಂಜಸೆಯು ಕಡುಗೆಡ ಗನಸುಗಂಡಳವಳಿದು (ಸಾಳ್ವಭಾ. ೧೧-೩೭). [(< ಕೆಡು$_1$ + ಕನಸು)]

**ಕೆಡಗೆಯ್** (ನಾ). ಕೆಳಗಿನ ಗದ್ದೆ: ಹೊದಲೇರಿಯ ಕೆಡಗೆಯ ಬನವಿಂದಂ ಮೂಡ (ಎಕ. VI, ಕಡೂರು. ೩೫-೭೧; 1136). [?]

**ಕೆಡಪ** (ನಾ). (ಕರಾ) ಒಂದು ನೀಚ ಜಾತಿಯ ಹಾವು. [?]

**ಕೆಡಪಿಸು,** ಕೆಡವಿಸು, ಕೆಡಹಿಸು (ಕ್ರಿ). ಕೆಡವು; ಬೀಳಿಸು : ಮೋಹ ಮುಳ್ಳೊಡೆ ತಪ್ತ ತೈಲಪೂರಿತ ಘನಕಟಾಹದೊಳ್ಕೆಡಪಿಸುವನೇ ತಂದೆ ತನಯನಂ (ಜೈಮಿಭಾ. ೧೩-೫೬). **ಕೆಡವಿಸು :** ಕಟ್ಟಡ ಬಹಳ ಜೀರ್ಣವಾಗಿತ್ತು ; ಆದನ್ನು ಕೆಡವಿಸಿ ಹೊಸತಾಗಿ ಕಟ್ಟಿಸಬೇಕಾಯ್ತು (ರೂಢಿ). **ಕೆಡಹಿಸು :** ಕಿರೀಟಿಯ ಕೈಲಿ ಸೈಂಧವನ ಶಿರವ ಕೆಡಹಿಸಿ ಆವನ ತಂದೆಯ ಕರತಳಕೆ ನೀಡಿಸದೆ (ಹರಿಸಾ. ೩೪); ಹಂಸಧ್ವಜಂ ನಂದನನನೆಣ್ಣೆಗಾಯ್ದಿರ್ದ ಕೊಪ್ಪರಿಗೆಯೊಳ್ತಂದು ಕೆಡಹಿಸಲ್ (ಜೈಮಿಭಾ. ೧೧ ಸೂಚನೆ). [ಕೆಡಪು + -ಇಸು$_3$]

**ಕೆಡಪು,** ಕೆಡಂಪು, ಕೆಡವು, ಕೆಡಹು (ಕ್ರಿ). ೧. ಕೆಳಕ್ಕೆ ಬೀಳಿಸು, —ಉರುಳಿಸು : "ಕೆಡಪು – ಪತನೇ" (ಶಮುಧಾ) ; ಮುಸಗಿ ಭರದಿಂದ ಸುರರಮುರರಂ ಕೆಡಪುತ್ತೆ ದೆಸೆಗಳಂ ದಹಿಸುತ್ತೆ (ನಂಬಿರ. ೧-೧೧) ; ನಮ್ಮುಮಂ ಕೆಡಪಿದತ್ತಿದು ತಾರ್ಕ್ಷ್ಯನ ಪಕ್ಷಸಂಭವಾನಿಳಂ (ಜಗವಿ. ೮-೮೪) ; ಅಹಂಮಮಭಾವಂ ಕೆಡಪದೆ ಬಿಡುಗುಮೆ ಸಂಸ್ಕೃತಿ ಜಡಧಿಯ ಕಡಿದಪ್ಪಸುೞಿಯ ಕುೞಿಯೊಳ್ ಖಳನಂ (ವರ್ಧಪು.೧೪-೯೧); ೨. ಬೀಳು ; ಕೆಡೆ : ಸೂಳೋಸರಿಸದೆ ಕೆಡಪಿದ ಜವಳಿಜಂತ್ರದ ಬೊಂಬೆಯೆನಲಿರ್ವರು ಮಱಿದರೊಡಲ (ಸಾಳ್ವಭಾ. ೮-೭೭). **ಕೆಡಂಪು :** ೧. ಹರನ ಚಿತ್ತಮಂ ಗಿರಿಜೆ ತನ್ನ ಚರಣದೊಳ್ ಕೆಡಂಪುವೆನೆಂದು ಭಾಷೆಗುಡುವಂತೆ (ಗಿರಿಕ. ೫-೭೬ ವ). **ಕೆಡವು :** ೧. ಮದನಂ . . . ಇರುಬಿನೊಳ್ಕೆಡವುತಿಹನಲ್ಲಿ ವಿಟರಕ್ಷಿಮೃಗಕುಲವನು (ಜೈಮಿಭಾ. ೬-೧೭); ತಳವನ್ನಗಿದು ಗೋಡೆಯನ್ನು ಮೇಲೆ ಕೆಡವಿಕೊಳ್ಳುವವನ ಹಾಗೆ (ಕಥಾಮಂ. IV, ೯೬). **ಕೆಡಹು :** ೧. ನೀ ಕಟ್ಟಿ ಕೆಡಹಿದ ಬಂಧನವೇ ನಿರ್ಬಂಧನವೆಂದಿಪ್ಪೆನು (ಮಹಾದೇ. ೩೬-೪) ; ಬಿಡದೆ ಜಿತೇಂದ್ರಿಯ ನಿಕರವ ಮಿಗೆ ಕಟ್ಟಿ ಕೆಡಹುವ ಸ್ಮರಪಾಶದಂತೆ (ಕಂನವಿ. ೯-೩೦). ೩. ನೂಕು ; ತಳ್ಳು : ಅಳಲ ಕಡಲೊಳು ಕೆಡಹಿದನು ನಿಜಗೋತ್ರ ಬಾಂಧವರ (ಕುವ್ಯಾದ್ರೋ. ಓಂಇ. ಪರಿ. ೨೭೮). ೪. ಕೊಲ್ಲು ; ನಾಶಮಾಡು : ದಳಪತಿ ಬಳನಂ ವಜ್ರವೀರ್ಯಂ ಕೆಡಹಿ ಸಮಸ್ತ ಬಲಮುಂ ಕೊಂದಂ (ಪುಣ್ಯಾಸ್ರ. ೬-೯ವ) ; ಜಗವ ಕೆಡಹಲು ಜಲಜವಿಶಿಖನು ಬಿಗಿದ ಬಲೆಯಿವಳಲ್ಲವೇ (ಕುವ್ಯಾವಿ. ೨-೯) ; ಆನೆಯ ಮಡುಹಿದ ಅಗಸನ ಕೆಡಹಿದ (ಪುರಂದ. ೨-೭೬-೧೧); ಅಡಗುವ ಶಾರ್ದೂಲ ಹಾಱುವ ಹರಿಣನ ಕೆಡಹಿ ರೋಹಿತವನೀಂಟುವುದು (ಮೋಹತ. ೪೦-೩೧).

[ಕೆಡೆ$_1$ + -ಪು$_1$]

**ಕೆಡಮೆಟ್ಟು** 'ಕೆಡೆಮೆಟ್ಟು' ನೋ.

**ಕೆಡವಿಸು** 'ಕೆಡಪಿಸು' ನೋ.

**ಕೆಡವು** 'ಕೆಡಪು' ನೋ.

**ಕೆಡಸು** 'ಕೆಡಿಸು$_1$' ನೋ.

**ಕೆಡಸೂರ್** (ನಾ). ಒಂದು ಊರಿನ ಹೆಸರು : ಕೆಡಸೂರ್ ಪೂರ್ಬಸ್ಯಾನ್ದಿಶಿ (ಮೈಆರಿ. ೧೯೧೯, ೧೦-೬೬ ; 900). [ಕೆಡಸು ? + ಊರ್]

**ಕೆಡಹಿಸು** 'ಕೆಡಪಿಸು' ನೋ.

**ಕೆಡಹು** 'ಕೆಡಪು' ನೋ.

**ಕೆಡಿಕ** (ನಾ). = ಕೆಡುಕ : ಬಡಬಡಾದುದು ನಿನ್ನಂಗವಲ್ಲರಿಯಾ ಕೆಡಿಕ ಪಾವಿನ ಪೊರಟೆಯಿಂ (ಶ್ರೀಪಾಲ. ೧೧-೯೦). [ಕೆಡು$_1$ + -ಇಕ]

**ಕೆಡಿಕಿ** (ನಾ). ಕೆಡುಕಿ : ಮೊರೆಗಳನಜಸದೇಜಗುವ ಕೆಡಿಕಿ [ಪಾಠಾಂ. ಕೆ] ಗಳನಿಷ್ಟಪುಷ್ಟಿಗಳು (ಬಸಪು. ೪೦-೫೮). [ಕೆಡಿಕ + -ಇ$_3$]

**ಕೆಡಿಕೆ** (ನಾ). ದುಷ್ಟ ಹೆಂಗಸು ; ಕೆಡುಕೆ : ಅಡ್ಡನಿಂದು ಕಾಡಿದೊಡಾ ಕೆಡಿಕೆಯೊಳಿಂತಾಡಿದರು (ನೇಮಿಸಂ. ೧೪-೧೬). [ಕೆಡಿಕ + -ಎ$_2$]

**ಕೆಡಿಸು$_1$,** ಕಿಡಿಸು, ಕೆಡಸು (ಕ್ರಿ). ೧. ಹಾಳುಮಾಡು ; ನಾಶಪಡಿಸು : ಕೆಡಿಪುವೊನು ಕೊಳ್ವೊನು ಪಞ್ಚಮಹಾ ಪಾತಕನಕ್ಕೆ (ಮೈಆರಿ. ೧೯೩೦, ೩೬-೯ ; 800) ; ಆತನುಂ ಮುಳಿದು ನಂದನಂ ಕೆಡಿಸಿ ನಂದನ ರಾಜ್ಯಸ್ಥಾನದೊಳ್ ಪೆಱನೊರ್ವನಂ ಚಂದ್ರಗುಪ್ತನೆಂಬೊನಂ ನಿಱಿಸಿದೊಡೆ (ವಡ್ಡಾರಾ. ೭೫-೮) ; ಸಾಧುತ್ವಮಂ ಕೆಡಿಸಿ ನಡೆಸುವ ದುರಾಚಾರೆ (ಕಾದಂಪೂ. ೫೫೩) ; ವೃದ್ಧ ಮಾಹೇಶ್ವರಂ ಬಂದು ಮದುವೆಯಂ ಕೆಡಿಸಿ (ನಂಬಿರ. ೬-೧೫೫) ; ಮಾಡಲಿದ್ದುದು ಬಹಳ ಪೌರುಷವಾದಿ ಕೆಡಿಸಲದೇಕೆ ಕೌರವರಾಡಿ ಕೆಡಿಸಲಿ ಮಾಡಿ ಕೆಡಿಸಲಿ ಚಿಂತೆ ನಮಗೇಕೆ (ಕುವ್ಯಾಭೀ. ೧-೬೧) ; ಮೋಸದಲಿ ಜೀವನವ ಮುನಿದು ಕೆಡಿಸುವ ಹೊಲೆಯ (ಪುರಂದ. ೧-೧೭೮-೧೨). ೨. ನಂದಿಸು ; ಆರಿಸು : ದೀಪ ಕೆಡಿಸುತ್ತಿದ್ದರು (ಇಣಿನೋ. ೩೧). ೩. ಪಾವಿತ್ರ್ಯ ಭಂಗಮಾಡು ; ಶೀಲಭಂಗಮಾಡು : ಪರಾಶರ ಮುನೀಶ್ವರಂ ಕೊಡಗೂಸಂ ಕೆಡಿಸಿ [ಪಾಠಾಂ. ಕಿಡಿಸಿ]ದೊಡೊಗೆದಂ ವ್ಯಾಸಂ (ಸಮುಪ. ೧೧-೧೫೦) ; ಮಗಳನು ಕೆಡಿಸಿದನಿಗೆ ರಹವಱಿಯದೆ ದೃಗುಯುಗದೊಳು ಕಿಡಿಯೇಕೆ (ಮೋಹತ. ೩೩-೨೫) ; ಎನ್ನ ರೂಪಿಂಗೆ ಅಳಿಪಿ ಕೆಡಿಸುವೆನೆಂದು ಪಕ್ರಮಿಸೆ (ಪುಣ್ಯಾಸ್ರ. ೩-೭೨) ; ಕೆಡಿಸಿ ಪತಿವ್ರತೆಯರ ಗೋವುಗಳ ಸದೆಬಡಿದರು (ಕಂನವಿ. ೧೧-೬). ೪. ಹೋಗಲಾಡಿಸು ; ಕಳೆ ; ನಿವಾರಿಸು : ಎನ್ನ ದೇಹಜ್ವರವನೀಗಳೆ ಕೆಡಿಸು ಸದ್ಗುರುವೆ (ಬಸಪು. ೫೦-೨೯) ; ಅಂಧಕಾರಂಗಳಂ ಕೆ[ಪಾಠಾಂ. ಕಿ]ಡಿಸಿದುವು ರತ್ನಾಭರಣಕಾಂತಿಗಳ್ (ಜೈಮಿಭಾ. ೨೨-೫). **ಕಿಡಿಸು :** ೧. ಆರಾರ್ ಇದಾ[ನ್]ಕಿಡಿಪ್ಪೋರ್ ಅವರ್ತೇ ಪಾಪ[ಂ] (ಇಅ. XI, ೭೦-೨೦ ; 567) ; ಇದಕಿಡಿಪ್ಪೊನ್ಗೆ ಶ್ರೀ ಪರ್ವ್ವತ ಮನ್ಕೆಱಗು ಮೇಗಿಕ್ಕಿದ ಪಾಪಮಕ್ಕೆ (ಎಕ. X (S), ಚಿಕ್ಕಬ. ೬೬-೨೩ ; 850 ಕೃಶಾ) ; ಕಿಡಿಪಂ ಬಾರಗೇ ಮೆಯ್ಯಂ ಕಿಡಿಪಂ ಕಿಡಿಪಂತೆ ಮುಂ ಕಿಡಿಪಂ ಪೋಕುಮೇ (ಕವಿರಾ. ೨-೧೨೩) ; ಏೞು ಭವಂಗಳೊಳಗೆ ಅಷ್ಟವಿಧ ಕರ್ಮಂಗಳಂ ಕಿಡಿಪಿ (ವಡ್ಡಾರಾ. ೯೮-೨೫) ; ನಿನ್ನ ಯಶಮುಂ ಕಿಡಿಸಿದೆವಿನ್ ಕೊಂದೊಡೇವಂದಪುದು (ಪಂಪಭಾ. ೭-೩೨ ವ) ; ಈ ಕುಮಾರರಂ . . . ವಿದ್ಯಾಭ್ಯಾಸಂಗೆಯಿಸದೆ ಸ್ವೇಚ್ಛಾ ವಿಹಾರಿಗಳಂ ಮಾಡಿ ಕಿಡಿಸಿದೆಂ (ಪಂಚತಂ. ೧೬-೧೦). ೨. ಗಾಳಿಮುಸಗಿ ಸೊಡರಂ ಕಿಡಿಸುವವೊಲ್ ಕಿರ್ಚನೇಕೆ ಕಿಡಿಸದೊ (ಧರ್ಮಾಮೃ. ೬-೨೨೬). ೪. ಮುನ್ನಮೆ ಮುಟ್ಟಿ ನುಡಿಯದೆ ಪೊಜಪೊಱಗನೆ ಬಳಸಿ ಕನ್ನೆಯ ಶಂಕೆಯುಂ ಕಿಡಿಸಿ(ಪಂಪಭಾ. ೪-೬೮ ವ) ; ಚಿತ್ತದೊಂದು ಕಳಂಕಂ ಕಿಡಿಸಲ್ ಸಮಾಧಿ ಶತಯೋಗ ಗ್ರಂಥಮಂ ಪೇೞ್ದು (ಸಮುಪ. ೧-೭) ; ದಿನೇಶನ ಘನ ತೀವ್ರರಶ್ಮಿ ನಿಚಯಂಗಳಿನಾದಮೆ ಬೆಂದ ತನ್ನಭೋಂಗ ನೆಯತಿತಾಪಮಂ ಕಿಡಿಸಲೆಂದು (ವರ್ಧಪು. ೧-೫೬). **ಕೆಡಸು :** ೧. ಇದ ಕೆಡಸಿದರೆ ವೀರಭಾದ್ರದೇವರ ಪದಕೆ ತಪಿದ ಹಾಗೆ(ಎಕ.VII, ಶಿವಮೊ.೯೩-೩೬ ; ?) ; ಅರಸುಗಳ ಶೌರ್ಯವನ್ನು ಕೆಡಸಿ (ಕೃವಾಸ. ೪೩). [ಕೆಡು$_1$ + -ಇಸು$_3$]

**ಕೆಡಿಸು$_2$** (ನಾ). ಕೇಡು ; ನಾಶ : ತಮ್ಮ ಕೆಡಿಸಿಂಗೆ ತಾಮೇ ಎಣಿಕೆ ಮಾಡದವರು [ಪಾಠಾಂ. ತಮ್ಮ ಬದುಕಿಗೆ ತಾಮೆ ಕೇಡ ಕಡೆಗೆಣಿಸಿದವರು] (ಸಮ್ಯಕೌ. ೧೦-೧೬). [< ಕೆಡಿಸು$_1$]

**ಕೆಡು$_1$,** ಕಿಡು (ಕ್ರಿ). ಕೆಟ್ಟ$_2$(ಭೂತಕೃ), ಕೆಟ್ಟು(ಭೂತನ್ಯೂ). ೧. ಅಳಿ; ನಾಶವಾಗು; ಹಾಳಾಗು: ವಿತ್ತಿದಲ್ಲಿ ವೆಳೆಯಾದೆ ಕೆಡುಗೆ (ಇಅ. XIX, ೧೪೫-೧೬; 680); ತನ್ನೊಕ್ಕಲುಳ್ ಪೊತ್ತಿ ಮುಕ್ಕಳ್ಪಟ್ಟದೆ ಕೆಡುಗ(ಎಕ.III, ಮೈಸೂರು. ೫೫-೨೧ ; ಸು. 740) ; ಏನುಂ ನೆವಮಿಲ್ಲದೆ ಕಸವರಮೆಲ್ಲಂ ಕೆಟ್ಟತ್ತು(ವಡ್ಡಾರಾ. ೭೬-೧೦) ; ಒಡಲೊಡಮೆಯೆಂಬಿ ವೆರಡುಂ ಕೆಡಲಿರ್ಪುವು ಕೆಡದ ಕಸವರಂ ಜಸಂ (ಗದಾಯು. ೨-೪) ; ತೋಱಿ ಕೆಡುವೀ ತನುವಿನಭಿರಂಜನೆಯ ಸೌಖ್ಯಕೆ ಮಾಱದಿರು ಮನವ (ಕುವ್ಯಾದ್ರೋ. ೭-೨೫).

೨. ಇಲ್ಲವಾಗು; ಲೋಪವಾಗು; ಅಳಿಸಿ ಹೋಗು: ಈ ವಧೆಯಿಂದಿಹ ಪರವೆರಡುಮೆನಗೆ ಕೆಡುವುದು ಪುಸಿಯೇ (ಧರ್ಮಾಮೃ. ೨-೨೧೦); ಹದಿನಾಜಂಗುಲದುದ್ದ ಸರ್ಪನ ವಿಷ ಕೆಟ್ಟು (ಆದವ. ೩೦); ಬಾಯ್ ಸಲೆ ಪುಣ್ಣಾಗೆ ಜಿಹ್ವೆಯೊಡೆವುತ್ತಿರೆ ಕೆಟ್ಟರೆ ಸಿದ್ರೆ (ಕಲ್ಯಾಕಾ. ೩-೧೩); ಹೊಸ ಪಾಪಗಂಧ ಕಾಳಕೆ ಕೆಡಲು ಭವಿಲೋಹ ವಿಸರಮುಂ ಕಳೆದು (ಸಿದ್ಧರಾ. ೧-೧೧); ಪರಕ್ಷೇತ್ರ ಕೃತಮಘಂ ಪುಣ್ಯಸ್ಥಲಾತಿಶಯದಿಂ ಕೆಡುಗುಂ (ಪದ್ಮರಾ. ೨-೫೫); ಕಮಳದ ಬಿಗುಹು ಬಿಟ್ಟುದು ಚಕ್ರವಾಕದ ತಗಹು ಕೆಟ್ಟುದು (ಕುವ್ಯಾದ್ರೋ. ೧೫-೩೪). ೩. ನಿವಾರಣೆಯಾಗು; ಪರಿಹಾರವಾಗು; ಗುಣಹೊಂದು; ವಾಸಿಯಾಗು: ಆ ಮರ್ದಿನ ಬಾವಿಯ ನೀರಂ ಮಿಂದೊರ್ಗೆಲ್ಲಂ ಕುತ್ತಂಗಳ್ ಕೆಡುವುವು (ವಡ್ಡಾರಾ. ೭೦-೧೦); ಅತ್ಯುಗ್ರ ಗ್ರಹಾನೇಕ ಸರ್ಪರುಜಾಪೀಡೆಗಳಾಗಳಂತೆ ಕೆಡುಗುಂ (ಸಮುಪ.೧-೨೭); ತಾಪಿಸುವ ತಪಸೆನಗೆಂದು ಕೆಡುವುದು ತಪಸಿಯೇ ಹೇಳಾ (ಬಸಪು. ೪೫-೩೬); ನಿಮ್ಮ ಕಥನಾಮೃತವನಾಲಿಸಿ ಕೇಳ್ದರಘ ಕೆಡಲಿ (ಕುವ್ಯಾಆ. ೬-೧೦೯). ೪. ದುರ್ಗತಿಗೆ ಈಡಾಗು; ದುರ್ದಶೆಯನ್ನು ಹೊಂದು; ಹಾಳಾಗು: ತೊಂಡಿನೊಳುರ್ಕಿ ಕೆಟ್ಟ ದಶಕಂಠನನಕ್ಕಟ ಕೊಂಡ ಪೆರ್ಮರುಳ್ ಕೊಂಡುದೆ ತನ್ನುಮಂ (ಪಂಪಭಾ. ೬-೩೩); ಸವಣರ ಮಾತಂ ನಿಕರಕ್ಕೆ ನಂಬಿ ಶಕ್ಕಿಂಗೆ ಕರಂ ಮತಿಗೆಟ್ಟು ಗತಿಯನಱಿಯದೆ ಕೆಟ್ಟಂ (ಧರ್ಮಾಮೃ. ೧-೧೦೩); ಗಂಗೆಯೊಡನಾಡಿದ ಗಟ್ಟಬೆಟ್ಟಂಗಳು ಕೆಟ್ಟ ಕೇಡ ನೋಡಯ್ಯಾ (ಮಹಾದೇ. ೩೭-೧); ಪರೋಪಕಾರಿ ಕೆಟ್ಟೆಡೆಯುಂಟೇ (ಲೀಲಾವ. ೫-೨೬); ದೇವದೇವ ಸಂಗ ಕಂಡ್ಯೆ ಕೆಟ್ಟೆ ಕೆಟ್ಟೆಂ (ಬಸರ. ೪-೨೭); ಹೆಮ್ಮೆಯಲಿ ಹಿರಿದಾಗಿ ಕೆಡುವರು (ಸಂಭಪ. ೩-೧೨). ೫. ಚದರು; ಚಲ್ಲಾಪಿಲ್ಲಿಯಾಗು: ಉೞಿದರೆಲ್ಲ ಮೋಡಿ ಕೆಟ್ಟೊಡೆ (ವಡ್ಡಾರಾ. ೭೬-೧೪). ೬. ಸೋಲು; ಸೋತು ಹೋಗು: ಆಟ್ಟೆಹೊಯ್ದನು ದಂತಿಗಳ . . . ಮಿಗೆ ಕಾಲಾಳನಸಿಯರೆದ ಕೆಟ್ಟು ಬಿಟ್ಟೋಡಿದುದು ಭಟನಱಿಯಟ್ಟಿದನು (ಕುವ್ಯಾದ್ರೋ. ೬-೪೫). ೭. ನಿರ್ಗತಿಕನಾಗು; ದರಿದ್ರನಾಗು; ಇದ್ದುದನ್ನೆಲ್ಲ ಕಳೆದುಕೊಳ್ಳು; ನಷ್ಟವನ್ನು ಅನುಭವಿಸು: ಪೂರ್ವಮಾಹೇಶ್ವರರಿರ್ದೊರ್ವರ್ಂ ಮಾಹೇಶ್ವರಂಗೆ ಕೆಟ್ಟೆಡೆಗಾಗರ್ (ಸಮುಪ. ೪-೮೧); ಕೆಟ್ಟೊಕ್ಕಲಂತೆ ನಿಲಲಾಱದೆ ನಡುಗುವರ್ (ಧರ್ಮಾಮೃ. ೩-೮೧); ಕೆಟ್ಟು ಪಟ್ಟಣ ಸೇರು (ಗಾದೆ). ೮. ಮೀರು; ಬಿಡು: ಬ್ರಾಹ್ಮಣಂ ನಾಯಂ ಮುಟ್ಟಲಾಗದೆಂಬರದು ಕೆಟ್ಟು ಪೊತ್ತುಕೊಂಡು ಪೋದಪೆ (ಪಂಚತಂ. ೧೪೬-೧೮); ಸಾಮ್ರಾಜ್ಯಲಕ್ಷ್ಮಿಯನೊಲ್ದೀವುದುಗೆಟ್ಟು ತಂದೆ ಯುವರಾಜ ಶ್ರೀಯನೇನೀಯನೇ (ಮಲ್ಲಿಪು. ೪-೧೪೫). ೯. ಕಳೆದು ಹೋಗು; ಕೈತಪ್ಪಿಹೋಗು; ಹೋಗು: ಅಜೀವನೆಡೆವಱಿದು ಕೆಟ್ಟುದನಱಸಲ್ ಪೋಪಂತೆ ಮುಚ್ಚೆವೋಪುದುಂ (ಶಾಂತಿಪು. ೪-೯೯); ಬದ್ಧ ಲಕ್ಷದೃಷ್ಟಿಯಿನೇನಾನುಂ ಕೆಟ್ಟುದನಱಸುವಂತೆನ್ನ ನೋಡುತ್ತ ಮೆಯ್ದೆವಂದು (ಕಾದಂಉ. ೫೪೮); ಇದು ಮುನ್ನಂ ನಿನ್ನ ಕೆಟ್ಟುಂಗುರದೆಡೆಯುನದಂ ಪೇೞ್ದ ಸದ್ವಿದ್ಯೆ (ಸುಕುಮಾ. ೪-೨); ತನ್ನರ್ಥಂ ಕೆಟ್ಟೊಡೆ ಕೇಳೆನ್ನರ್ಥಂ ಕೆಟ್ಟುದೆಂದು ಬಾಯ್ವಿಟ್ಟೆೞುವರ್ (ಧರ್ಮಾಮೃ. ೧೨-೨೩೭); ಸುರಪತಿಯ ಕೆಟ್ಟ ಸಂಪದಮುಂ ತರಲ್ಕೆಂದು ಉರವಣಿಸಿ ತೊಡಗಿದರು ಕಡಲ ಕಡೆಯಲ್ಕೆಂದು (ನಂಬಿರ. ೧-೩). ೧೦. ಕೀಳಾಗು; ದುಷ್ಟನಾಗು; ನೀಚನಾಗು: ದುಃಖದೊಳಕ್ಕನಿರಲ್ಕೆ ಲಜ್ಜೆಗಾಯೆನೆ ಗುರುಗಳ್ಗೆ ಬೆಳ್ಕಱಿನೆ . . . ಕೆಟ್ಟನೇನನಿರದಿಂತುಟು ವಿಭ್ರಮದಿಂದೊಡರ್ಚಿದೆಂ (ಕಾದಂಉ. ೭೬); ಆರುಂ ದುರ್ಜನರ ಕೂಟದಿಂದಂ ಕೆಡರೇ (ಧರ್ಮಾಮೃ. ೨-೭೭); ಕುಹಕತಂತ್ರದ ಹೊಱಗೆವಾಳನ ಸಂಗದಲಿ ನೀವ್ ಕೆಟ್ಟರಕಟೆಂದ (ಕುವ್ಯಾದ್ರೋ. ೧೪-೧೬).

೧೧. ಮಾಸಲು ಅಳಿ; ಭಂಗವಾಗು; ಅಶುದ್ಧವಾಗು: ಕನ್ನಿಕೆಯಮುಟ್ಟಿದನು ಮುನ್ನಿನ ಕನ್ನೆತನ ಕೆಡದಿರಲಿಯೆನುತವೆ ತನ್ನ ರಥವಿದ್ದೆಡೆಗೆ ರವಿ ತಿರುಗಿದನು ವಹಿಲದಲಿ (ಕುವ್ಯಾಆ. ೩-೧೯). ೧೨. ಶೀಲವನ್ನು ಕಳೆದುಕೊಳ್ಳು; ಅಪವಿತ್ರವಾಗು; ದಾರಿತಪ್ಪು: ದಮಿತಾರಿ ನಾಣ್ಚೆ ಸಭೆಯೊಳ್ ತಲೆಯಂ ಬಾಗಿ ಮದೀಯ ಕುಲಕ್ಕಿನಿತಾಗಳವಳ್ ಕೆಟ್ಟಳೆನಗೆ ಪುಟ್ಟಿದಳಲ್ಲಳ್ (ಶಾಂತಿಪು. ೩-೮೦); ಸಿತಗರ ಕೂಟದಿಂದೆ ಕೆಡದವರೊಳರೇ (ಧರ್ಮಾಮೃ. ೨-೭೬); ಬಟ್ಟವಕ್ಕಿಗಳಂಜೆಕೊಂಚೆ ಸಂಚರಿಸಿ ಬೊಬ್ಬಿಟ್ಟುದ ಕೇಳಿ ತಾಪಸರು ಕೆಟ್ಟರು (ಮೋಹತ. ೭-೧೮); ಮಾಘ ಓದಿ ಮಗ ಕೆಟ್ಟ (ಗಾದೆ). ೧೩. ಸಾಯು; ಮರಣಹೊಂದು: ಹಡಹಾಳಿ ಸತ್ತ ಮನೆಯಂತೆ ಪ್ರಭು ಕೆಟ್ಟನಾಡಂತೆ (ಧರ್ಮಾಮೃ. ೫-೧೨೫); ಚರವಚಮುಂ ಕೇಳ್ದಿಲ್ಲರ್ ಜರಿದಾಹಾ ಕೆಟ್ಟೆಪೆಲ್ಲಿಯದು ಕೇಳೀ ಭೀಕರ ಮೆಂದವನಂ ಕೇಳಲ್ (ಉದ್ಭಟ. ೪-೬೧); ಕುಡಿ ಕಿರೀಟಿಯ ರಕುತವನು ಹಗೆ ಕೆಡಲಿ ಕೌರವರಾಯನಾಳಲಿ ಪೊಡವಿಯನು (ಕುವ್ಯಾದ್ರೋ. ೩-೫೭). ೧೪. ತೊಂದರೆಯಾಗು; ನಷ್ಟವಾಗು: ಕಟ್ಟಿದ ಸಿಜ್ಜಮನ್ ಕೆಟ್ಟೊದೇನೆಮಗೆನ್ದು ಬಿಟ್ಟವೊಲ್ ಕಲಿಗೆ ವಿಪರೀತಮ್ (ಇಆ. X, ೬೧-೯; ಸು. 700). ೧೫. ಮಸುಳು; ಮಸುಕಾಗು: ಅವಸ್ತು ಭೂತನೆಂದಾದಮೆ ಭೂತಳಂ ಪಱೆಯೆ ತೇಜಮೆ ಕೆಟ್ಟಪುದು (ಪಂಪಭಾ. ೯-೧೮). ೧೬. ಹದಗೆಡು; ಅವ್ಯವಸ್ಥಿತವಾಗು; ಸಮಸ್ಥಿತಿಯನ್ನು ಕಳೆದುಕೊಳ್ಳು: ಒಡಲೆಲ್ಲಂ ಕೆಟ್ಟುಡು ಮೆಯ್‍ಬಡವಾದುದು ಕಾಲ ಕೈಯ ಬೆರಲೆಲ್ಲಂ ತಮ್ಮೆಡೆಯಿಂ ಪೋದುವು (ಧರ್ಮಾಮೃ. ೪-೮೦); ಕರಂ ಕೆಟ್ಟೊಡೆದ ಸರದವಂ ಕಡೆಪಟ್ಟು ಮನಂಗೆಟ್ಟು ನಾಡುನಾಡಂ ತಿರಿಗುಂ (ಕಾವ್ಯಾವ. ೨೧೦); ಗೋಧಿ ಕೆಟ್ಟುದು (ಶಬ್ದಾನು. ೩೨೧ ಪ್ರಯೋ); ಕೆಟ್ಟ ಅಡಿಗೆ ಅಟ್ಟವಳೆ ಜಾಣೆ (ಗಾದೆ); ಆತನಿಗೆ ತಲೆ ಕೆಟ್ಟದೆ (ರೂಢಿ). ೧೭. ವಿಫಲವಾಗು; ವ್ಯರ್ಥವಾಗು: ಕೆಲಸ ಕೆಟ್ಟತು (ರೂಢಿ). ೧೮. ತಪ್ಪು; ವಿಷಮವಾಗು; ಕ್ರಮತಪ್ಪು: ಕಾಲ ಕೆಟ್ಟುಹೋಯಿತು ಕಾಗೆ ರಾಗಿ ತಿಂದಿತು (ಗಾದೆ). 'ಹದಗೆಡು', 'ದಿಕ್ಕುಗೆಡು' ಪರಾ. **ಕಿಡು**: ೧. "ಕಿಡು – ವಿನಾಶೇ" (ಶಮಧಾ); ಧನಮೆಂಬುದು ವಿಭುಗೆ ಯಶೋಧನ ಮದನಿಂತಳಿಪಿ ಕಳಿಪಿ ಕಿಡೆ ಮಾಡಿರ್ದಾತನ ಪಡೆದ ಧನಮದೇತಱ ಧನಂ (ಆದಿಪು. ೧೪-೭೪); ಅನ್ಯರಿಂದರಸರಿಂ ದಾಯಾದರಿಂ ಕಳ್ಳರಿಂ ಪಣಮೆಂತುಂ ಕಿಡಲಿರ್ಪುದು (ಅಜಿಪು. ೧-೯೨); ಅರಸಿನ ಮೇಲರಸಾದೊಡೆ ಮೊದಲಾಗೆ ನಾಡೆಲ್ಲಂ ಕೆಟ್ಟು ಪಾಟಿಪ್ಪುದೆಂದೊಡೆ ಜಗದೊಳಡಕಿಲ ದೈವಮಾದೊಡೆ ಕಿಡದಿರ್ಕುಮೆ (ಧರ್ಮಾಮೃ. ೭-೪೧). ೨. ನೀರೊಳಗಣ ರೇಖೆಯಂತೆ ಕಿಡೆ ಚಾರುವಳಿಶ್ರಿಯಂ (ಕಾವ್ಯಸಾ. ೩೬೦ ಶೂದ್ರಕ); ನಿನ್ನಯ ತಾಯ್ ಸಾತ್ವತಿಯುಂ ನಿನ್ನಂ ತಂದೆನ್ನ ತೊಡೆಯ ಮೇಲಿೞಿಪುವುದುಂ ನಿನ್ನ ಲಲಾಟದ ಕಣ್ಣದು ಮುನ್ನಮೆ ಕಿಡೆ (ಪಂಪಭಾ. ೬-೬೦); ಚಿತಾಗ್ನಿಯೊಳ್ ಕುಮಾರನನಿಕ್ಕುವುದುಂ ತನಗೆ ಸಾಧ್ಯಮಾದ ಮಹೌಷಧಿ ಪ್ರಭಾವದಿಂ ಜ್ವಲನಶಕ್ತಿ ಕಿಡೆ ಪೊಱಮಟ್ಟ ಕುಮಾರನಂ ಕಂಡು (ಚಾವುಂಪು. ೧೦೭-೧); ಇಂತೀ ಧರ್ಮ್ಮಮಂನಾವನೋರ್ವ್ವಂ ಕಿಡಲೀಯದೆ ಪ್ರತಿಪಾಳಿಸಿ ನಿಲಿಸಿದ ಮಹಾಪುಣ್ಯಮಂತಂಗೆ (ಎಕ. VI, ಕಡೂರು. ೧೧೯-೨೧; 1123); ಆಲೆದು ಬೀಸುವ ಗಾಳಿಯಿಂ ಮೇಘದೊಡ್ಡವಣೆ ಸಲೆ ಕಿಡುವವೊಲ್ (ಚಬಪು. ೮-೫). ೩. ಮನದೆ ನೆನೆದವರ ಕಿಡುಗುಂ ಜಿನಾಧಿಪಾ ನಿನ್ನ ಪಾಪನಿಚಯಂ ಗುಣಮುಂ (ಕವಿರಾ. ೧-೯೧); ತಳಿರ್ಗಳ ಪಾಸಿನೊಳ್ ಪೊರಳುತಿರ್ದಬಲಂ ಕಿಡೆ ಸೋಂಕೆ ಸೋಂಕುಗಳ್ ಕಳೆದುವು (ಪಂಪಭಾ. ೫-೨೭); ಆಳುಂಬುಮಾಗಿರ್ದ ಮೂತ್ರಕೃಚ್ಛ್ರಂ ಕಿಡುಗುಂ (ಲೋಕೋಪ. ೯-೧೩೪); ಕಾಗೆಯಡಗಂ ತಡೆಯದೆ ಕುಡಲೊಡಂ ಕಿಡುಗುಮಾ ಕಡಿದಪ್ಪ ರೋಗಂ (ವರ್ಧಪು. ೧೬-೫೭ ವ).

೪. ಈ ಕೂಸುಗಳ್ ಮನಮಿಕ್ಕಿಯುಮೆರ್ದೆಯಿಕ್ಕಿಯುಂ ಕಿಡುವರ್ (ಪಂಪಭಾ. ೨-೨೮ವ); ಮೋಹದಿಂದೆ ಕಿಡದವರೊಳರೇ (ಧರ್ಮಾಮೃ. ೨-೧೬೫); ಕವಿಗಳ್ ಕಱಿದೆಂದೊಡೆ ಕಱಿದವರ್ಗಳ್ ಬಿಳಿದೆಂದೊಡೆ ಬಿಳಿದೇ ಕವರನುಜದೆ ಕಿಡುವರ್ ಕೆಲಬರ್ (ಲೀಲಾವ. ೧-೯); ಕೆಂಗುರುಡನೇಗೈದುವುಂ ಕಾಣದೊಡೆ ಮುಕುರ ಕಿ[ಪಾಠಾಂ. ಕೆ]ಡುವುದೇ (ಹಚಕಾ. ೧-೨೭). ೯. ಕೊಡುವೊಡವೆ ಬರಲಿ ಬಾರದೆ ಕಿ[ಪಾಠಾಂ. ಕೆ]ಡಲಿ (ಹಚಕಾ. ೯-೧೬). ೧೩. ನೀಂ ಕಿಡೆ ಕಿಡಲುಂ ನೀಂ ಬಾಟೆ ಬಾಟಲು ಮಿರ್ದನಾಗಿಯುಂ (ಪಂಚತಂ. ೯೪-೧೨); ೧೪. ಇದಂ ಪಿಡಿದಲ್ಲಿ ಬರ್ಪುದೇಂ ವ್ಯಾಕುಲನಾಗುತಂ ಪಿಡಿಯದಿರ್ದೊಡೆ ಪೇೞ್ಕಿಡುವೊಂದು ವಸ್ತುವೇಂ (ಕಾದಂಪೂ. ೬೨೩). ೧೫. ಪರರಾಜೋದಗ್ರತೇಜಂ ಕಿಡೆ ರಿಪುಕುಮುದಂ ಕುಂದೆ .... ಎಸೆದಂ ಗೋಪಮಾರ್ತಂಡದೇವಂ (ಜಗವಿ. ೧೬-೧೪೦). ೧೬. ಅಕ್ರಂದನದಿಂ ಗಂಟಲೊಡೆದು ದನಿ ಕಿಡೆ (ಕಾದಂಪೂ. ೯೪೯); ಬುದ್ಧಿ ಕಿಡುಗುಂ ಕೇಡೆಯ್ದುವಂದಾರೊಳುಂ (ಜಗವಿ. ೮-೬೫). ೧೭. ರಕ್ಕಸಮಣಿಯ ಕೋಣೆಯಗಂಗನ ಕಾಳೆಗ ದೊಳ್ಪನ್ನಸಾವಂ ನಿಶ್ಚಯ್ಸಿ ಕಾಳೆಗ ಕಿಡೆ ರಕ್ಕಸಮಣಿಯ ಕಱಿಪಿ (ಎಕ. II, ೧೬೮-೫; 940); ಎನ್ನ ದೆವಸಮುಂ ಜವ್ವನಮುಮಡವಿಯೊಳಗೆ ಪೂತ ಪೂವಿನಂತೆ ಕಿಡಲೀಯದೆ (ಪಂಪಭಾ. ೧-೭೬ವ); ಜಲಸ್ತಂಭ ಮಂತ್ರಮೆಲ್ಲಮವಿನೀತನಪ್ಪ ರಾಜಪುತ್ರನೊಳಾಳೋಚಿಸಿದ ಮಂತ್ರದಂತೆ ಪರಿಣಾಮ ರಮಣೀಯಮಾಗದೆ ಕಿಡೆಯುಂ (ಗದಾಯು. ೬-೨೬ವ). ೧೮. ಅಱನೆಯ ತಾಣದೊಳ್ ಲಘು ಕೋಱೊಡೆ ಶ್ಲೋಕಲಕ್ಷಣಂ ಕಿಡದು (ಛಂದೋಂಬು. ೬-೧೮). ೨೦. ನಂದು; ಆರು: ಬೆಳಗುವ ಸೊಡರ್ಗುಡಿ ಕಿಡೆ ಮನೆಯೊಳಗೆ ತಮಂ ಪರ್ಬುವಂತೆ (ಆದಿಪು. ೫-೨೭). ೨೧. ಅಳಿಸು; ಕೆಡಿಸು; ಹಾಳುಮಾಡು: ಇ××××ನ ಕಿಡದೆ ಪ್ರತಿಪಾಳಿಸಿದವರು ವಾರಣಾಸಿ ಕುರುಕ್ಷೇತ್ರದಲು ಸಹಸ್ರಭೋಜನವಂ ಮಾಡಿದ ಸಹಸ್ರ ಕವಿಲೆಯಂ ಕೊಟ್ಟ ಫಲ (ಎಕ. VII, ಶಿವಮೊ. ೧೪-೧೭; 1103). ℙ ಈ ಧಾತು ಹಲವು ಶಬ್ದಗಳ ಜತೆಗೆ ಸೇರಿ ವಿಶಿಷ್ಟವಾದ ಧಾತುವಾಗಿ ವಿವಿಧ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾ: ಕಣ್ಣೆಡು, ಕೆಯ್ಗೆಡು, ಮತಿಗೆಡು, ಮುಂದುಗೆಡು, ಬಗೆಗೆಡು, ಲಜ್ಜೆಗೆಡು ಇತ್ಯಾದಿ.

ಕೆಟ್ಟವಂ = ೧. ಕೆಡುಕ; ದುಷ್ಟ: "ಅಕ್ಷಿಪ್ತಃ, ಹತಕಃ – ಈ ೨ ಕೆಟ್ಟವಂ" (ಹಲಾಯು. ೬೨-೨೨೩). ೨. ಹಾಳಾದವನು; ದುರ್ಗತಿಗೆ ಈಡಾದವನು: ಅರಿಗಾರೂ ಇಲ್ಲ ಕೆಟ್ಟವಂಗೆ ಕೆಳೆಯಿಲ್ಲ (ಬಸವ. ೨೫); ನಂಬಿ ಕೆಟ್ಟವರಿಲ್ಲವೋ ರಂಗಯ್ಯನ ನಂಬದೆ ಕೆಟ್ಟರೆ ಕೆಡಲಿ (ಪುರಂದ. ೨-೧೫೭ ಪಲ್ಲವಿ). ಕೆಟ್ಟವಳ್ = ನೀತಿಗೆಟ್ಟವಳು; ಜಾರೆ: ಕೆಟ್ಟವಳ ತನುಜಂ ಬಂಧುಳನೆನಿಕ್ಕು (ಮಂಗರಾ. ೯೨-೧೦). ಕೆಟ್ಟದು = ಮುರಿದದ್ದು; ಹಾಳಾದದ್ದು; ಭಗ್ನವಾದುದು: "ಭಗ್ನಮೆನೆ ರುಗ್ಣಮೆನೆ ತಿನ್ನಮೆನೆ ವೃಕ್ಣಮೆನೆ ಭಿನ್ನಮೆನೆ ಕೆಟ್ಟು[ಪಾಠಾಂ. ಟ್ಟ]ದು" (ಮಂಗರಾ. ೧೬೨-೨೬). ಕೆಟ್ಟುನುಡಿ = ಕೆಟ್ಟಮಾತನ್ನಾಡು: ಕೆಟ್ಟು ನುಡಿದ ಪೊಳಲಧಿಕಾರಿಯ ಪೆಡಗಟ್ಟನಿಂ ತಂದೊಪ್ಪಿಸಿದರು (ಕುರಾಸಾಂ. ೧೦-೫೨); ಅರೇನ ಕೆಟ್ಟುನುಡಿಯರೆನ್ನ ಮೇಲದನಾರೈವನೆ ರಾಯನೆನಗೆ ನೇರವಾಗಿಹನು (ಕುರಾಸಾಂ. ೨೬-೧೪೬). ಕೆಟ್ಟುಪೋಗು, ಕೆಟ್ಟು ಹೋಗು = ೧. ಬಿಟ್ಟುಹೋಗು; ಇಲ್ಲದಂತೆ ಆಗಿಹೋಗು: ಸಂಸಾರದಿಂ ಕೆಟ್ಟು ಪೋಗಲನುವಾಗಿರ್ದಪಂ (ನಂಬಿರ. ೬-೪). ೨. ಹಾಳಾಗು; ನಾಶವಾಗು: ಕಾಲ ಕೆಟ್ಟು ಹೋಯಿತು ಕಾಗೆ ರಾಗಿ ತಿಂತು (ಗಾದೆ); ಕೆಲಸ ಕೆಟ್ಟು ಹೋಯಿತು (ರೂಢಿ).

೩. ಹೀನಸ್ಥಿತಿಯಲ್ಲಿರು: ನೀನು ಹೇಳಿದಂತೆ ಕೇಳಲು ನಾನೇನು ನಿಕ್ಕ ಆಳು ಕೆಟ್ಟು ಹೋದೆನೆ? (ರೂಢಿ). ಕೆಡಬಗೆ = ಕೆಡಿಸಲು ಬಯಸು; ಕೇಡು ಬಗೆ: ಕಡು ಮುನಿದು ನಾಚಯ್ಯನಿವದಿರು ಕೆಡಬಗೆದರಹಿತರ ನಪಹರಿಸಿದಲ್ಲದಾನಿನ್ನು ಮುದನನಾಶಂಗುಣಬಡಿಸಬಾರದು (ಬಸವು. ೫೧-೬೮).

[ದೇ. ‖ ತಮಿ. ಮಲ. ಕೆಡು; ತುಳು. ಕೆಟ್ಟ್, ಚಿಟ್ಟ್; ಕೊಡ. ಕೇಡ್; ತೆಲು. ಚೆಡು; ಕೋಲಾ. ನಾಯ್ಕಿ. ಕಿಟ್, ಕಿಟಿಪ್]

**ಕೆಡು₂** (ನಾ). (ಕರಾ) ಮಚ್ಚೆ: ಅವನ ಮುಖದಲ್ಲಿ ಕೆಡು ಇದೆ (ರೂಢಿ). [?]

**ಕೆಡುಕ** (ನಾ). ಕೇಡು ಮಾಡುವವನು; ಕೇಡಾಳಿ; ದುಷ್ಟ: ಇಂತೀ ಕೆಡುಕರ ಕಂಡು ಅಂಜಿದೆಯಲ್ಲಾ (ಏಲೇಶ್ವ. ೩೭); ಕೆಡುಕನೊಳು ನಿರ್ಮೋಹಿ (ಸಾನಂಚ. ೭-೪೬); ಕೆಡುಕನಾದನು ನಂದಗೋಪಿಯ ಕಂದನೆನಿಸಿದನು (ಸಾಳ್ವಭಾ. ೧೧-೫೪). [ಕೆಡುಕು + –ಅ₇]

**ಕೆಡುಕತನ, ಕೆಡಕುತನ, ಕೆಡುಕುತನ** (ನಾ). ಕೆಟ್ಟತನ; ದುಷ್ಟತನ: "ವೃಜ್ಞನೀಯಂ, ವೃಜಿತವ್ಯಂ – ಈ ೨ ಕೆಡುಕತನಂ" (ಕಾಶಕ್ಯ. ೨೧೬). **ಕೆಡಕುತನ**: ಕೆಡಕುತನದಿಂ ತಿರಿವುದಂ ಮಾಣಿಸಿದೊಡೇಂ ಭಕ್ತಿ ಕೆಡುವುದೇ (ಬಸವು. ೪೬-೫೫). **ಕೆಡುಕುತನ**: "ಧಾತಾಳಿಕೆ – ಕೆಡುಕುತನ" (ಗಂಗಾಮು. ೧೨೫). [ಕೆಡುಕು + –ತನ]

**ಕೆಡುಕಿ₁** (ನಾ). ಕೆಟ್ಟವ್ಯಕ್ತಿ: ಆವನು ಬಹಳ ಕೆಡುಕಿ (ರೂಢಿ). [ಕೆಡುಕ + –ಇ₃]

**ಕೆಡುಕಿ₂** (ನಾ). ಕೆಟ್ಟವಳು; ಕೆಟ್ಟಹೆಂಗಸು; ಜಾರೆ: ಕೆಡುಕಿ [ಪಾಠಾಂ. ಕಿಡಿಕಿ]ಯನೊಲ್ದು ನೋಡಿದೊಡೊರ್ದಲೊಳ್ (ಸಮುಪ. ೫-೬೩). 'ಕಿಡಿಕಿ₁' ಪರಾ. [ಕೆಡುಕ + –ಇ₂]

**ಕೆಡುಕು, ಕೆಡಕು** (ನಾ). ಕೇಡು; ಕೆಡುವಿಕೆ; ನಾಶ: ಕೆಡುಕಿಗಿಹವು ನೂರು ದಾರಿ ಒಳಿತಿಗೊಂದೆ ದಾರಿ (ಕಲ್ಲೋಲ. ೧೭). **ಕೆಡಕು**: ವಿವಾಹಕ್ಕಿಂತ ಮೊದಲು . . . ಸ್ನೇಹ ಬೆಳೆಸುವುದರಿಂದ ಆಗುವ ಕೆಡಕುಗಳ ಬಗ್ಗೆ ಪಾಶ್ಚಾತ್ಯರೇ ಏನ್ನು ಹೇಳಿಲ್ಲ (ಪ್ರಕಾಪ. ೨೪). [ಕೆಡು₁ + –ಕು]

**ಕೆಡುಕುತನ** 'ಕೆಡುಕತನ' ನೋ.

**ಕೆಡುಕೆ** (ನಾ). = ಕೆಡುಕಿ₂: ಕೆಡುಕೆಯಾಗಮವ ನೋಡಾತಪದಿ ಬರಿಕ್ರಮ ದೊಳಡಿಯಿಡುವ ಭಾವವೆಂತಿಹುದು (ಜೆಸಮು. ೬-೭). [ಕೆಡುಕ + –ಎ₃]

**ಕೆಡುಗ** (ನಾ). ಕೆಡಿಸುವವನು; ಕೇಡಿ; ದುಷ್ಟ: ನಿನ್ನ ಪರಿಯಲಿ ಧರ್ಮಕೆಡುಗರ ನಿನ್ನ ಪರಿಯಂತಱಿಯೆನೀಗಳು ನಿನ್ನ ಧರ್ಮವ ನೀನು ಕೆಡಿಸಿದೆ (ಕುವ್ಯಾಆ. ಓರಿಂ. ಪರಿ. ೩೩೮). [ಕೆಡು₁ + –ಗ₃]

**ಕೆಡುಗುಡಿತನ** (ನಾ). ಕೇಡುಗುಳಿತನ; ಕೆಟ್ಟತನ: ಹೊಳೆಯಲ್ಲಿ ನಿಂದಿರ್ದು ಹಾದಿಯ ಕೇಳಿದಡೆ ತಡಿ ಮಡುವ ಹೇಳಿದಡೆ ಅಂದು ಕೆಡುಗುಡಿತನವೆ (ನಗೆಮಾ. ೨೧). [?]

**ಕೆಡುವಟ್ಟೆ** (ನಾ). ಕೆಡುವ ದಾರಿ; ಕೆಟ್ಟದಾರಿ: ಅಟ್ಟಿ ಸುಡುವ ದವಾನಲನ ನಡೆಗೆಟ್ಟೊಡೌಕುವ ನಾಯಿಗಳು ಕೆಡುವಟ್ಟೆಯಲಿ ಬಳಲಿದಡೆ ಚಮ್ಮಟಿಗೆಯಲಿ ನಡಿಸುವರು (ನಿಭಾಗ. ೬-೧೪-೧೧); ಹುಟ್ಟಿ ಸಾವ ಭವಾಟವಿಯ ಕೆಡುವಟ್ಟೆಯನು ಕಳೆದಚಲ ಪದದಲಿ ನೆಟ್ಟನಚಲಿತನಾಗಿ (ನಿಭಾಗ. ೫-೮-೬೮). [ಕೆಡು₁ + ಬಟ್ಟೆ₁]

**ಕೆಡುವೊಡಲ್** (ನಾ). ನಾಶವಾಗುವ ದೇಹ; ನಶ್ವರವಾದ ಶರೀರ: ಕೆಡವೊಡಲೊಡಮೆಯನೆಂದುಂ ಕೆಡದೆಡಮೆಗೆ ಮಾಱುಗುಡುವುದು (ಗದಾಯು. ೨-೪). [ಕೆಡು₁ + ಒಡಲ್]

**ಕೆಡುವೊಡವೆ** (ನಾ). ನಾಶವಾಗುವ ಒಡವೆ; ನಶ್ವರವಾದ ವಸ್ತು: ತನು ಕೆಡುವೊಡವೆಯೆಂದೆಯೊರ್ವನ ವಿಪತ್ತನ್ನು ತೊಲಗಿಪುದು ಗಡ (ಸಾಳ್ವಭಾ. ೭–೫೫). [ಕೆಡು$_1$ + ಒಡವೆ (< ಒಡಮೆ)]

**ಕೆಡುಸೊಲ್** (ನಾ). ಕೆಟ್ಟಮಾತು: ಒಂದಾದೊಡ್ಡಂ ಕೆಡುಸೊಲ್ ಪುರುಳ್ ಫಲಮುಂಟಾಗೆ ನಲ್ಲದಲ್ಲದುದಾಗಿ ಬಿಡುಗುಂ (ಕುಜಳ್. ೧–೧೩–೮). [ಕೆಡು$_1$ + ಸೊಲ್$_2$]

**ಕೆಡುಹ** (ನಾ). ಹಾಳಾಗುವಿಕೆ; ನಾಶ; ಇಲ್ಲದಾಗುವಿಕೆ: "ವಿನಾಶ, ಅದರ್ಶನ" (ನಾಚಿರಾ. ೬). [ಕೆಡು$_1$ + -ಹ$_2$]

**ಕೆಡೆ$_1$** (ನಾ). ೧. ಬೀಳು; ಕುಸಿ; ಉರುಳು: "ಕೆಡೆ–ಪತನೇ" (ಶಮುಧಾ); ಕೋಲಿಂದಾಡುವ ತಿಗುರಿಯವೋಲಂತಿರೆ ತೋಱುತಿಟ್ಟ ತನು ಕೆಡೆವಿನೆಗಂ (ಕಾವ್ಯಸಾ. ೧೧೧೩ ಶೂದ್ರಕ); ಭೀಮಂ ಪಿಡಿದ ಗದೆವೆರಸು ಭೋಂಕನೆಕೆಡೆದಂ ಗಿರಿಶಿಖರದೊಡನೆ ಕೆಡೆವಂತಾಗಳ್ (ಪಂಪಭಾ.೮–೧೨); ಕುರುಡರ್ ಕುಱಿಯೊಳ್ ಕೆಡೆದೊಡೆ ಕರುಣಿಸಿ ತೆಗೆವವನೆ ನಂಟಂ (ಧರ್ಮಾಮೃ. ೭–೧೨೫); ಬಂಧುಗಳೊಡನೆ ವೈರವ ಮಸೆದು ನರಕಕೆ ಕೆಡೆವೆನೇ (ಕುವ್ಯಾಭೀ. ೩–೩೧); ಬೇರು ಪಱಿದ ವೃಕ್ಷ ತನ್ನ ತಾ ಕೆಡೆವಂತೆ (ಭರಹ. ೧–೧೨೦). ೨. ಒರಗು; ಮಲಗು: ಉಮ್ಮಳದಿ ನುಣ್ಪಡೆಯೊಳುಣ್ಣದೆಯುಂ ಕೆಡೆದೆಡೆಯೊಳ್[ಕೆ]ಡೆಯದೆ ನಿಂದೆಡೆಯೊಳ್ ನಿಲ್ಲದೆಯುಮೋಡಿದಂ ಮಹಿಪಾಲಂ (ಪಂಪಭಾ. ೧–೩೭); ಸೊಕ್ಕಿ ಮೈಯಱಿಯದೆ ಟಕ್ಕನಿಕ್ಕಿದಂತು ಕೆಡೆದು ನಿದ್ರೆಗೆಯ್ವುದುಂ (ಧರ್ಮಾಮೃ. ೧೧–೧೨೭); ಹರಿದ ತಟ್ಟಿಯ ಮೇಲೆ ಹರಿದ ಬೊಂತೆಯ ಹಾಸಿಕೊಂಡು ಕೆಡೆದಿಹಂಗೊಬ್ಬ ಮಗ ಹುಟ್ಟಿ (ಸರ್ವವ. ೧೬೩–೭೭೭); ಕಳವಳಿಗ ಹಾಯೆನುತ ಕೆಡೆದನು ತಳಿರ ಹಾಸಿನಲಿ (ಕುವ್ಯಾವಿ. ೨–೫೨). ೩. ಸಾಯು; ಪ್ರಾಣನೀಗು: ಬೆಡಗಿನ ಕೀಲು ಕಳೆದು ಕೆಡೆದ ಬಳಿಕ ಕಡುಗೂರ್ಪ ಮಡದಿ ತಾ ಮುಟ್ಟಲಮ್ಮಳು (ಬಸವ. ೨೦೧); ಕೆಡೆದು ದನುಜರು ಕೇಣವಿಲ್ಲದೆ ಕೊಡಗಿದಾಹವದೊಳಗೆ ಕೊಂದವ ಕೊಡನ ಮಗನೋ ದೂಱು ಹೊತ್ತುದು ಬಱಿದೆ ಹಗೆಗಳಿಗೆ (ಕುವ್ಯಾದ್ರೋ. ೧೨–೩೩). ೪. ಬೀಳಿಸು; ಕೆಡಹು: ಬೋನಿಗೆ ಕೆಡೆಯಬೇಕೆಂದು ಯೋಚಿಸಿ (ಕುಡಿಕೂ. ೧೮೩).

**ಕೆಡೆಕೆಡೆ** (ದ್ವಿರುಕ್ತಿ): ಹೋಹೋ ಬಾರದಿರು ಕೆಡೆಕೆಡೆಯೆನುತ್ತ (ಬಸಪು. ೨೨–೩೦); ಹೇರುರವನೆಚ್ಚೊಡನೆ ಕೆಡೆಕೆಡೆಯೆನುತ (ತೊರರಾ. ೪–೪–೨೯); ಕೆಡೆಕೆಡೆಯೆಂದಾರ್ದೆಚ್ಚಂ ಘುಡುಘುಡುಪ ಮಹಾ ವರಾಹನಂ ಕೂರ್ಗಣೆಯುಂ (ಶಬಶಂ. ೪–೨೫).

[ದೇ. ॥ ತಮಿ. ಮಲ. ಕಿಡ; ತೆಲು. ಕೆಡಯು]

**ಕೆಡೆ$_2$**, ಗೆಡೆ$_1$ (ಕ್ರಿ). ೧. ಬಾಯಿಗೆ ಬಂದಂತೆ ಮಾತಾಡು; ಗಳಹು; ಹರಟು; ಕೊಚ್ಚು: ಛಂದಮನಱಿಯದನೋದುಂ ಮುಂದಿರ್ದಾ ತಾಳದಳವನಱಿಯದ ಪಾಡುಂ ಬಂದುದ ಕೆಡೆವನ ನುಡಿಯುಂ ಒಂದಕುರ್ಣಂ ಬಾರ್ತೆಯಿಲ್ಲ (ಛಂದೋಂಬು. ೧–೪೯ ಅಡಿಟಿ). 'ಕಾಟ್ಗೆಡೆ', 'ಬೂತುಗೆಡೆ' ಪರಾ. **ಗೆಡೆ$_1$**: ೧. ಅನುತ್ತರಂ ಗೆಡೆ [ಪಾಠಾಂ. ಗೊಡು]ವನಕ್ಕುಂ (ಮಂಗರಾ. ೭೧–೧೯) ; ಪೋಂತಾದೆನಿಲ್ಲಿ ಸಗ್ಗದೊಳೆಂತುಂಡಪೆನುಂಡ ಪಾರ್ವರೊಲಿದುದು ಗೆಡೆವರ್ (ಯಶೋಚ. ೩–೬೦); ನಾಲಗೆಗಳುಂಟೆಂದು ಗೆಡೆವರೆ (ನಿಭಾಗ. ೧೦–೫೫–೧೩). ೨. (ಹಕ್ಕಿಗಳು) ಧ್ವನಿಮಾಡು: ನುಡಿವ ಕನ್ನಡಿವಕ್ಕಿ ಗೆಡೆವ ಕೋಗಿಲೆ ಮಾತನೊಡಸುವ ಗೊರವ (ಶ್ರೀಪಾಲ. ೧೨–೫೩). [?]

**ಕೆಡೆ$_3$**, ಗೆಡೆ$_3$ (ನಾ). ಬೀಳುವಿಕೆ; ಪತನ. **ಗೆಡೆ$_3$**: ಗೆಡೆಯೆಂಬ ನುಡಿ ಜೂದುಗಾಱರೊಳ್ ಕಡೆಯೆಂಬ ಬಿಡುನುಡಿ ದಧಿಮಥನದೊಳು (ಕುರಾಸಾಂ. ೨–೫೮). [< ಕೆಡೆ$_1$]

**ಕೆಡೆ$_4$** (ನಾ). (?): ಬಿಡುವಾಯ್ ಮಿಕ್ಕುದ್ದಮಾಗಿರ್ಪೊಸಡು ಬೆರಳಿವಲ್ ಕೊಂಕುಮೂಗಬ್ದ್ದ ಕಣ್ಣಳ್ ಕೆಡೆಗಳ ಪುರ್ವುಂ[ಸಮಂತಂ]ತಸಿಯ ಕುಱಿನೊಸಲ್ ಕೂಡೆ ನಿರ್ಭಾಗ್ಯೆಯಕ್ಕುಂ (ಲೋಕೋಪ. ೧೧–೫೮); "ಗಂಟಿಕ್ಕಿದ" (ಲೋಕೋಪ. ಅಡಿಟಿ). [?]

**ಕೆಡೆಕಟ್ಟು** (ಕ್ರಿ). ಕೆಡಹಿ ಕಟ್ಟು; ಬಿಗಿಯಾಗಿ ಕಟ್ಟು: ಮುನಿಪನ ಧೇನುವನು ಕೆಡೆಕಟ್ಟಿ ತೆಗೆಯಲು (ಸಂಭಪ. ೨೭–೨೦). [ಕೆಡೆ$_1$ + ಕಟ್ಟು$_1$]

**ಕೆಡೆಗುತ್ತು** (ಕ್ರಿ). ಬೀಳುವಂತೆ ತಿವಿ; ಗುದ್ದು: ಗಜದಾರೋಹಕರ ಕೆಡೆಗುತ್ತಿ ಕೊಂದನು (ನಿಭಾಗ. ೧೦–೩೮–೨೩). [ಕೆಡೆ$_1$ + ಕುತ್ತು$_1$]

**ಕೆಡೆತಿವಿ** (ಕ್ರಿ). = ಕೆಡೆಗುತ್ತು: ಅಸಗನನು ಕೆಡೆತಿವಿದು ಕಂಸನ ವಸನ ವೆಲ್ಲವ ಸೆಳೆದ ಗಡ (ಕುವ್ಯಾಸ. ೧೦–೧೭). [ಕೆಡೆ$_1$ + ತಿವಿ$_1$]

**ಕೆಡೆನುಡಿ$_1$** (ಕ್ರಿ). ಕೆಟ್ಟಮಾತನ್ನಾಡು; ಬಯ್ಯು; ಹೀಯಾಳಿಸು; ನಿಂದಿಸು: ಅವಗುಣದಾ ತಾಣಮನಿನಿಸೆಡೆವೆತ್ತೊಡೆ ಮಾಣದೆ ಪಿಡಿದದನೆ ಕೃತಿಗಳಂ ಕೆಡೆನುಡಿವರ್ (ಕವಿರಾ. ೧–೪೦); ಈ ಕಿಱಿಯವನಱಿಯದೆ ಕೆಡೆನುಡಿದನಪ್ಪೊಡಂ ನೂಱುವರಂ ನೆಱೆ ಸಲಿಸುವುದು (ಪಂಪಭಾ. ೭–೬೧); ನೀಂ ರಾಜರ್ಷಿ ಕೋಪಿಸದೆ ಧಟ್ಟಿಸದೆ ಕೆಡೆನುಡಿಯದೆ ನಿಲಲೆಂತುಬಲ್ಲೆ (ಹಜಕಾ. ೨–೩೨); ಹಗೆಯ ರಕುತವ ಕುಡಿವೆನಲ್ಲದೊಡವನಿಪಾಲನ ಕೆಡೆನುಡಿದ ನಾಲಗೆಯ ಕೀಳುವೆನೆನುತ (ಕುವ್ಯಾಕ. ೧೨–೨೭); ನನಗಿದಿರಾಗಿಯೆನುತ ಕೆಡೆನುಡಿವಂದದಿ ಲಯಕಾಲಾಗ್ನಿಶರಂ ಘುಡುಘುಡುಘುಡಿಸಿದುದು (ಜಯಕಾ. ೭–೪೩). [ಕೆಡೆ$_1$ + ನುಡಿ$_1$]

**ಕೆಡೆನುಡಿ$_2$** (ನಾ). ಕೆಟ್ಟಮಾತು; ಬೈಗುಳು; ನಿಂದೆ: ವೃಥಾ ಕೆಡೆನುಡಿಯ ನುಡಿದರೆ ದಿಟ್ಟನೆಂಬರೆ ವೀರರಾದವರು (ಕುವ್ಯಾದ್ರೋ. ೧೫–೬೬). [< ಕೆಡೆನುಡಿ$_1$]

**ಕೆಡೆನೂಂಕು**, ಕೆಡೆನೂಕು (ಕ್ರಿ). ಕೆಳಗೆ ಬೀಳುವಂತೆ ನೂಕು; ದೂಡು; ತಳ್ಳು: ಈ ಪಾಪಕರ್ಮನಂ ನಂಬಲ್ವೇಡ, ಕೆಡೆನೂಂಕೆಂಬುದುಂ (ಪಂಚತಂ. ೧೧೪–೨); ನೀನೇಱಿಂದಲ್ಲಿಂದಭಿಮಾನಂಗಿಡೆ ಜಡಿದು ಬಡಿದು ಕೆಡೆನೂಂಕುವುದುಂ (ಧರ್ಮಾಮೃ. ೫–೨೦೨); ದನುಜರವದಿರು ಬದುಕಲಱಿಯದೆ ಕನಲಿ ಶ್ವಾಪದ ವಧೆಯ ಮಾಡಲು ದನುಜರನು ಕೆಡೆನೂಂಕಿ (ಸಂಭಪ. ೫–೨೩). **ಕೆಡೆನೂಕು**: ಅಲ್ಲಿರಗೊಡದಾ ಕಲು ಮಾನಸನು ಜರಿಯಲ್ಲಿ ನೂಕುವ ಮಾಳ್ಕೆಯಲಿ ಬಲ್ಲಿದನಾವವನನೊಡನೆಂದು ಭೂತಳದಲ್ಲಿಗೆ ಕೆಡೆನೂಕುವನು (ತ್ರಿಪುವಿ. ೯–೯೬); ಬಿಂಕದಲಿ ಕೆಡೆನೂಕಲಾ ಯಮಕಿಂಕರರು ನಡುಗುತ (ನಿಭಾಗ. ೬–೧–೨೪). [ಕೆಡೆ$_1$ + ನೂಂಕು$_1$]

**ಕೆಡೆನೂಕು** 'ಕೆಡೆನೂಂಕು' ನೋ.

**ಕೆಡೆಬಗೆ** (ಕ್ರಿ). ಕೀಳಾಗಿ ಎಣಿಸು; ಕೇಡುಬಗೆ: ಅಹಂಕರಿಸಿದನು ಕೆಡೆ [ಪಾಠಾಂ. ಡ] ಬಗೆದ ನಮ್ಮನಮ ಭಕ್ತರ ಹವಣಱಿಯಲಾ (ಬಸಪು. ೨೭–೧೫). [ಕೆಡೆ$_1$ + ಬಗೆ$_1$]

**ಕೆಡೆಬಡಿ** (ಕ್ರಿ). ಬೀಳುವಂತೆ ಬಡಿ; ಕೆಡಹಿ ಹೊಡೆ: ಅಡಿಗಡಿಗೆ ಯುಂಡುಟ್ಟವರ್ಗಳ ಕೆಡೆಬಡಿದು ಕೊಳ್ಳಿಮ್ಮಡಿಸಿ ಮುಮ್ಮಡಿಸಿ (ಬಸಪು. ೨೩–೩೭); ಮಿಗೆ ವಿರೋಧಿಯ ಬಸುಱನುಗಿ ಕುನ್ನಿಗಳ ಕೆಡೆಬಡಿ (ಕುವ್ಯಾದ್ರೋ.೧೨–೧೧); ಈ ಬಳದೊಡಲು ಕೊಬ್ಬಿದೆಯಿದನು ಕೆಡೆಬಡಿದು ಚಾರು ಮಾಂಸವ ತೆಗೆವೆನೆಂದು (ತಿಮ್ಮಶಾಂ. ೫–೧೩೭). [ಕೆಡೆ$_1$ + ಬಡಿ$_1$]

**ಕೆಡೆಬಾಟ್** (ಕ್ರಿ). ಕೆಡಲು ಅವಕಾಶಕೊಡು; ಕೆಡಿಸಲು ಎಡೆಗೊಡು (?): ಇದಂ ಕೆಡಿಪೋನುಂ ಕೆಡೆಬಾಟ್ಪೋನುಂ ಪಞ್ಚ ಮಹಾಪಾತಕ ಸಂಯುಕ್ತನಕ್ಕುಂ (ಎಕ. VIII, ಸೊರಬ. ೧೦–೧೯; 800). [ಕೆಡೆ$_1$ + ಬಾಟ್$_1$]

**ಕೆಡೆಬೀಳು** (ಕ್ರಿ). ಕೆಳಕ್ಕೆ ಬೀಳು ; ಉರುಳಿಬೀಳು : ಕುಡಿಯಿಟ್ಟುದಿವ ನಬ್ಬರಕೆ ಕೆಡೆಬೀಳೆನುತ ಶೂಲದಲಿಟ್ಟನಿನಸುತನ (ಕುವ್ಯಾದ್ರೋ. ೧೭-೩೯); ಕೆಡೆಬೀಳೆ ಹೊಯ್ ಕುನ್ನಿಗಳೆನೆಂದ (ಕುವ್ಯಾದ್ರೋ. ೧೯-೩೦).
[ಕೆಡೆ$_1$ + ಬೀಳು$_1$ (< ಬೀೞ್$_1$)]

**ಕೆಡೆಮೆಟ್ಟು**, ಕೆಡವೆಟ್ಟು (ಕ್ರಿ). ಕೆಳಕ್ಕೆ ಹಾಕಿ ತುಳಿ ; ಮೆಟ್ಟಿತುಳಿ : ಎನಗೆ ಪೊಡರ್ಪುದೋರ್ಪುದಿದು ತಾನೆನುತುಂ ಕೆಡೆಮೆಟ್ಟಿ (ನೇಮಿಪು. ೬-೧೧೮); ಕೆಡೆಮೆಟ್ಟಿ ಕರ್ಮಮುಮನೊಡೆಮೆಟ್ಟಿ ಬೊಮ್ಮಮುಮನೆಡೆಗಲಿಸಿ ದಾಂಟಿ ಸಂಸೃತಿ ಜಲಧಿಯಂ (ಸಾನಂಚ. ೧-೪೦); ಕತ್ತಲೆಯನು ಕೆಡೆಮೆಟ್ಟಿ ಪ್ರಕಾಶದ ಮೊತ್ತದೊಳೋಲಗಗೊಟ್ಟು (ಭಕಚ. ೧೪-೧೭೯). **ಕೆಡವೆಟ್ಟು**: ರುದ್ರಾವನೀಶ್ವರನ ಕೇಳಿಸಬೇಕಿದ ಕೆಡವೆಟ್ಟಬೇಕೆಂದು ಪೇಳಿದರವರು ಸಿಂಗಮಗೆ (ಕುರಾಸಾಂ. ೧೪-೯). 'ಕೆಡೆಯೊದೆ' ಪರಾ.
[ಕೆಡೆ$_1$ + ಮೆಟ್ಟು$_1$]

**ಕೆಡೆಯಿಕ್ಕು** (ಕ್ರಿ). = ಕೆಡೆಯಿಸು : ಒನಕೆಯನೆತ್ತಿ ನೆತ್ತಿಯನೆ ಪೊಯ್ವ ಕರಂ ಬಿಸಿದಾಗಿ ಕಾಸಿ ಕಳ್ಳನೆ ಕೆಡೆಯಿಕ್ಕಿ ಬಾಯೊಳಿಱಿವ (ಸಮುಪ. ೧೧-೮೨). [ಕೆಡೆ$_1$ + ಇಕ್ಕು]

**ಕೆಡೆಯಿಸು$_1$** (ಕ್ರಿ). ಬೀಳುವಂತೆ ಮಾಡು ; ಬೀಳಿಸು ; ಕೆಡಹು : ನಡೆವನಂ ನಿಲ್ಲಿಸುವುದುಂ ಕಿಂದಿರ್ದನಂ ಕುಳ್ಳಿರಿಸುವುದುಂ, ಕುಳ್ಳಿರ್ದನಂ ಕೆಡೆಯಿಸುವುದುಂ ನಿದ್ರಾದರ್ಶನಾವರಣೀಯಂ (ತತ್ತ್ವಸೂ. ೨೯೩).
[ಕೆಡೆ$_1$ + -ಇಸು$_3$]

**ಕೆಡೆಯಿಸು$_2$** (ಕ್ರಿ). = ಕೆಡೆಯೆಸು : ಅರುಭಟೆಯಲಿ ಗಜವ ಮುಱಿ ಕೆಡೆಯಿಸು [ಪಾಠಾಂ. ಯೆಸು] ಮಹೀಸುತನ (ಕುವ್ಯಾದ್ರೋ. ೩-೭೩).
[ಕೆಡೆ$_1$ + ಇಸು$_1$]

**ಕೆಡೆಯಿಱಿ** (ಕ್ರಿ). ಬೀಳುವಂತೆ ತಿವಿ; ಕೆಳಕ್ಕೆಹಾಕಿ ಇರಿ : ಹರನು ವಿಷ್ವಕ್ಸೇನನಂ ಕೆಡೆಯಿಱಿದು ಪಿಡಿದೆತ್ತಿ (ಬಸವು. ೫೪-೪೪). [ಕೆಡೆ$_1$ + ಇಱಿ$_1$]

**ಕೆಡೆಯೆಸು** (ಕ್ರಿ). ಬೀಳುವಂತೆ ಹೊಡೆ; ಬಾಣದಿಂದ ಹೊಡೆದು ಕೆಡಹು : ಉಡಿಯೆಚ್ಚಂ ಧನುವಂ ಸಿಡಿಲ್ವಿನೆಗಮೆಚ್ಚರಿಕೇತುವಂ . . . ಅಶ್ವಂಗಳಂ ಕೆಡೆಯೆಚ್ಚಂ (ಪಂಪಾರಾಮಾ.೯-೧೨೮); ರಾವಣಂ ವಿಷ್ಣುವಿನೊಳ್ ಪೊಡೆದಿಱಿದುಂ ಗಡ ತನ್ನಂ ಕೆಡೆಯೆಚ್ಚಡೆ ಸತ್ತಂ (ಸಮುಪ ೧೦-೫೮); ಇತ್ತೆಲಿತ್ತಂಡ ಚೂಣಿಯ ಭಟಾನೀಕವಿರದೊತ್ತರಿಸಿ ಕಡಿದಿಱಿದು ಕೆಡೆಯೆಚ್ಚು ಕಾದುತಿರಲು (ಜೈಬಪು. ೧೬-೧೬); ಒರ್ವನೈತಂದು ನಿನ್ನನುಜನವಗಡಿಸಿ ಕೆಡೆಯೆಚ್ಚು ಬೀಳ್ಚಿದಂ (ಜೈಮಿಭಾ. ೨೦-೩೪). [ಕೆಡೆ$_1$ + ಎಸು$_1$]

**ಕೆಡೆಯೊದೆ** (ಕ್ರಿ). ಒದೆದು ಬೀಳಿಸು, —ತಳ್ಳು ; ನಿವಾರಿಸು : ಸುಖದುನ್ನತಿಯೊಳೆಸೆದನು ಧರಣಿಪತಿ ನಾನಾ ಮಹಾಪಾತಕವ ಕೆಡೆಯೊದೆದು (ಸಂಧಪ. ೧೫-೨೫); ಜನನಿಯ ಶೋಕವನು ಕೆಡೆಯೊದೆಯಲಾತ್ಮ ವಿವೇಕ ಪದವನು ಪೂರ್ಣವೆನೆ ಕರುಣಿಸಿದನಾ ಕಪಿಲ (ನಿಭಾಗ. ೩-೧೨ ಸೂಚನೆ).
[ಕೆಡೆ$_1$ + ಒದೆ$_1$]

**ಕೆಡೆವೊಡೆ**, ಕೆಡೆಹೊಡೆ (ಕ್ರಿ). ಬೀಳುವಂತೆ ಹೊಡೆ; ಹೊಡೆದು ಬೀಳಿಸು : ಕಳಸದೊಳು ನೆಱೆತೀವಿ ಪಾಲಂ ಕೆಡೆವೊಡೆದ ಹಾಂಗೆ (ಬಸವು. ೫೭-೧೫). **ಕೆಡೆಹೊಡೆ** : ಕಯ್ಯ ಸಟ್ಟುಗದಿಂದ ಕೆಡೆಹೊಡೆದು ಕೊಂದು (ಬಸವು. ೫೩-೪೦). [ಕೆಡೆ$_1$ + ಪೊಡೆ$_1$]

**ಕೆಡೆವೊಯ್**, ಕೆಡೆಹೊಯ್ (ಕ್ರಿ). = ಕೆಡೆವೊಡೆ : ಕೆಲವಂ ಬಲಭದ್ರಂ ಲಾಂಗಲದಿಂ ಬರತೆಗೆದು ಮುಸಲದಿಂ ಕೆಡೆವೊಯ್ದಂ (ಜಗವಿ. ೮-೪೧). **ಕೆಡೆಹೊಯ್** : ಕೆಡೆಹೊಯ್ದು [ಪಾಠಾಂ. ಹೊಡೆದು]ನೂಕೆ ನಿಜಗೇಹಕ್ಕೆ ಜಱೆಯುತ್ತ ಕೊಂಡೊಯ್ದನು (ಹಚಕಾ. ೧೧-೧೧); ವಿರೋಧಿಯ ಸೂತನನು ಕೆಡೆಹೊಯ್ದು ಕೊಂದನು ರಥದ ಕುದುರೆಗಳ (ಕುವ್ಯಾದ್ರೋ. ೧೨-೧೭). [ಕೆಡೆ$_1$ + ಪೊಯ್$_1$]

**ಕೆಡೆಹಾಯ್ಕಿಸು** (ಕ್ರಿ). ನೆಲಕ್ಕೆ ಕೆಡವಿ ಹಾಕಿಸು ; ಕೆಡವಿಸು : ಬಸದಿಗಳನ್ನೆಲ್ಲವ ಬೇಗದಿಂ ಹಿರಿಹಿರಿದು ಕೆಡೆಹಾಯ್ಕಿಸುವೆ ನಾನೆನಲು (ಬಸವು ೫೧-೫೨). [ಕೆಡೆ$_1$ + ಹಾಯ್ಕು (< ಪಾಯ್ಕು$_1$) + -ಇಸು$_3$]

**ಕೆಡೆಹೊಡೆ** 'ಕೆಡೆವೊಡೆ' ನೋ.

**ಕೆಡೆಹೊಯ್** 'ಕೆಡೆವೊಯ್' ನೋ.

**ಕೆಡ್ಡಾ**, ಖೆಡ್ಡಾ, ಖೇಡ್ಯ$_2$ (ನಾ). ಕಾಡಾನೆಗಳನ್ನು ಹಿಡಿಯಲು ಮಾಡಿದ ಕಂದಕ, —ಹಳ್ಳ : ಭಾರಿಯ ಕೆಡ್ಡಾ ರಚನೆಗೆ ಏರ್ಪಾಡು ಮಾಡಿದ (ಗಜರಾ. ೩೫). **ಖೆಡ್ಡಾ** : ಕಾರಪುರದ ಖೆಡ್ಡಾ ಕ್ಯಾಂಪು ಎಂದರೆ ಜಗತ್‌ಪ್ರಸಿದ್ಧನಾದುದು . . . ಆ ಕಂದಕವಿರುವ ಜಾಗವೇ ಖೆಡ್ಡಾ (ಮಲ್ಲಿ. ೩೫). **ಖೇಡ್ಯ$_2$** : (೬).
[← ಪ್ರಾ. ಮರಾ. ಖಡ್ಡಾ]

**ಕೆಣಕಾಟ** (ನಾ). ಕೆಣಕುವಿಕೆ; ಕೆರಳಿಸುವಿಕೆ; ರೇಗಿಸುವಿಕೆ : (೬).
[ಕೆಣಕು$_1$ + ಆಟ]

**ಕೆಣಕಿಸು** (ಕ್ರಿ). ಕೆಣಕುವಂತೆ ಮಾಡು ; ರೇಗಿಸು : (೬).
[ಕೆಣಕು$_1$ + -ಇಸು$_3$]

**ಕೆಣಕು$_1$** (ಕ್ರಿ). ೧. ಕೆರಳಿಸು ; ರೇಗಿಸು ; ಪೀಡಿಸು ; ಉದ್ರೇಕಗೊಳಿಸು: "ಕೆಣಕು – ಕದರ್ಥನೇ" (ಶಮುಧಾ) ; ಪಾಂಡವರನಕಾರಣಂ ಕೆಣಕಿದೀ ಪೊಸ ಪೊಟ್ಟಱೊಳಾದ ಕಿರ್ಚು (ಪಂಪಭಾ. ೨-೮೭); ಅಯ್ಯಾ ಭೂತ ಕೆಣಕಿದರಿಲ್ಲ ಮಾತು ಮುಚ್ಚಿದಕಿಲ್ಲ (ಬಸವ. ೯೧೦); ನಿನ್ನಳವ ನಱಿಯದೆ ಹೊಕ್ಕು ಕೆಣಕಿದೆ ಕೆಟ್ಟೆ ಹೋಗು (ಕುವ್ಯಾಸ. ೨-೮೦); ಭೂಪಾಲನ ಕೆಣಕಿ ದುಷ್ಕೀರ್ತಿಬಾಲೆಗೆ ಪತಿಯಾದೆನು (ಕಂನವಿ. ೩-೮೯); ಮಲಗಿರುವ ಹಾವನ್ನು ಕೆಣಕಬೇಡ (ನಾದಲೀ. ೭೫). ೨. ಆಕ್ರಮಿಸು ; ಮುತ್ತು : ಸಾಹಸಮಲ್ಲನುರವಣಿಸೆ ಅರಿಬಲವ ಕೆಣಕಿದನು (ಕುವ್ಯಾದ್ರೋ. ೯-೩೮) ; ರಕ್ಕಸರ ರಣದಲಿ ಕೆಣಕಿ ಹರಣದಲುಳಿದ ಸುಭಟಾಗ್ರಣಿಗಳು (ತೊರರಾ. ೬-೧೯-೩೧). ೩. ಉಂಟುಮಾಡು ; ಪ್ರೇರಿಸು ; ಪ್ರಚೋದಿಸು : ಸಂಗರವ ಕೆಣಕಿದನಿಲಸುತನೊಳು (ಕುವ್ಯಾದ್ರೋ. ೨-೭೫); ಕದನವ ಕೆಣಕಲೈದಿದ ದಂಡೋ (ತೊರರಾ. ೬-೩೭-೩). ೪. ಕೆದರು ; ಕೆದಕು : ಕೆಣಕಿದುರಿಯಂದದಲಿ ದಂಡೆಯೊಳೆಣೆದ ಕಾಳೋರಗನವೊಲು (ಕುವ್ಯಾಕ. ೨೦-೯) ; ನೆಱೆ ಕೆಣಕಿದೆವು ಮುಚ್ಚಿರ್ದ ಕಲ್ಪದ ಕಿಚ್ಚ ನಾವೆಂದ (ತೊರರಾ. ೬-೧೯-೩).
[ದೇ. ‖ ತಮಿ. ತುಳು. ಕೆಣುಕ್ಕು, ಕೆಣಕು ; ತೆಲು. ಚೆಣಕು, ಚೆಣುಕು, ಚೆನಕು, ಚೆನಯು]

**ಕೆಣಕು$_2$** (ನಾ). ಕೆಣಕುವಿಕೆ ; ಕೆರಳಿಸುವಿಕೆ. 'ಕೆಣಕುಗೊಡು' ಪರಾ. [< ಕೆಣಕು$_1$]

**ಕೆಣಕುಕಣ್ಣು** (ನಾ). ಕೆಣಕುವ ಕಣ್ಣು : ಸೂರ್ಕುಜವ್ವನದ ಸೊಬಗನ್ನೊಡ್ಡಿ ಹೀಗೆ ಬೀಸಿರುವ ಕೆಣಕುಕಣ್ಣುಳ್ಳವನನ್ನು(ಬಿಟ್ಟಅ. ೧೦-೧೯).
[ಕೆಣಕು$_1$ + ಕಣ್ಣು (< ಕಣ್)]

**ಕೆಣಕುಗೊಡು** (ಕ್ರಿ). ಕೆರಳಿಸು ; ಉದ್ರೇಕಿಸು : ಬ್ರಹ್ಮಾಂಡವೇ ಕೆಣಕುಗೊಟ್ಟ ಮೂದಲೆಗೆ ಕೆರಳ್ದು (ಬಿಟ್ಟಅ. ೧೧೬-೨೧). [ಕೆಣಕು$_2$ + ಕೊಡು$_1$]

**ಕೆಣಕುನಗೆ** (ನಾ). ಕೆರಳಿಸುವ ನಗೆ; ಉದ್ರೇಕಿಸುವ ನಗು : ಮಾತಿನೊಂದಿಗೆ ಕೆಣಕುನಗೆಯ ವಿಷಾದವೂ ಇದ್ದುವು (ಪ್ರಣಸ. ೬).
[ಕೆಣಕು$_1$ + ನಗೆ]

**ಕೆಣಕುವಡು** (ಕ್ರಿ). ಕೆರಳಿಸು ; ಕೆಣಕಲ್ಪಡು : ಈ ಸಮರ ಸನ್ನದ್ಧತೆಯ ಆಟ್ಟಾಸುರದ ಗಡಾವಣೆಗೆ ನೆರೆವೊರೆಯ ಬಲ್ಲಿದರು ಪೆಳರಿಯೋ ಕೆಣಕುವಟ್ಟೋ ತನಗೆ ನಡೆತಂದು ಕಳನ ಕಾಳೆಗವನ್ನೊಡ್ಡುವಂತೆ ಮಸಗಿಸುತ್ತ (ಮಂತ್ರಶ. ೬೯-೯). [ಕೆಣಕು$_2$ + ಪಡು$_1$]

**ಕೆಣಕುವೇಟೆ** (ನಾ). ಕೆಣಕುವ ಬೇಟ; ಕಾಮಚೇಷ್ಟೆ: ಇಂತಿದು ಈ ಮದನಯಾತ್ರೆಯ ನಿಮ್ಮ ಕಟ್ಟಾಸೆಗಾರಿಕೆಗೆ ಕರೆವಾಟದ ಕೆಣಕುವೇಟದ ಆದಿಮಂಗಳವೇನು (ಮಂತ್ರಶ. ೨೪–೧೩).

[ಕೆಣಕು$_1$ + ಬೇಟ$_2$ (< ಬೇಂಟ)]

**ಕೆತ್ತ** 'ಕಿಱು$_1$' ಪರಾ.

**ಕೆತ್ತಕುಱುವ** (ನಾ). ಉಳುಮೆಗಾಗಿ ಸಿದ್ಧಪಡಿಸಿದ ಹೊಲ: ಕೆತ್ತ ಕುಱುವ ಮಾಡಿದ ಹೊಲ ತಪ್ಪಿಸಿ ಆರ ಹಳ್ಳಿಗಳ ಜೀವದನವನು ಯೆಲಿಯಾಡಿಸುವಡಂ ಬೇಡೆಂದೆನಲಾಗದು (ಎಕ. XII, ತಿಪಟೂ. ೨–೧೬; 1263).

[< ಕೆತ್ತು$_3$ + ಕುಱುವ$_1$]

**ಕೆತ್ತಣ**, ಕೆತ್ತಣೆ, ಕೆತ್ತನೆ (ನಾ). ಕೆತ್ತುವಿಕೆ; ಕುಂದಣ; ಹರಳುಗಳನ್ನು ಚಿನ್ನ ಮೊದಲಾದುವುಗಳಲ್ಲಿ ಕೂಡಿಸುವಿಕೆ; ಕುಸುರಿ ಕೆಲಸ: ತೊಳಗುವ ಮುತ್ತು ಮಾಣಿಕದ ಕೆತ್ತಣಮೊಪ್ಪುವ ಚಿನ್ನ ಹೊನ್ನ ಜೀರ್ಕೋಟವೆಯಂ (ನಳಚಂ. ೧೩೦). **ಕೆತ್ತಣೆ**: ಹೆಂಜರ ಬಡಗಿ ಕೆತ್ತಣೆಯ ದೊಡ ಹಲಗ್ಯೆಯನ ಮಗ (ಸೌಇಇ. IX–ii, ೬೯೨–೧೬; 1603). **ಕೆತ್ತನೆ**: ಅದರ ತುಂಬಾ ಒಳ್ಳೆಯ ಕೆತ್ತನೆಯ ಕೆಲಸ ಇತ್ತು (ಚಂದತೋ. ೩೧).

ಕೆತ್ತನೆಯಓಲೆ = ಹರಳು ಕೂಡಿಸಿದ ಓಲೆ; ಕುಂದಣಿಸಿದ ಓಲೆ: (ಕಿ). ಕೆತ್ತನೆಯಕೆಲಸ = ಕುಂದಣಿಸುವ ಕೆಲಸ: (ಕಿ).

[ಕೆತ್ತು$_2$ + –ಅಣ]

**ಕೆತ್ತಣೆ** 'ಕೆತ್ತಣ' ನೋ.

**ಕೆತ್ತನೆ** 'ಕೆತ್ತಣ' ನೋ.

**ಕೆತ್ತವಾರಿ**, ಕೆತ್ವಾರಿ (ನಾ). ಹುಲ್ಲು ಮೊದಲಾದುವನ್ನು ಕೆತ್ತುವುದಕ್ಕೆ ಬಳಸುವ ಒಂದು ಸಾಧನ, —ಕುರುಪೆ; ಉಜ್ಜುವಾರೆ. **ಕೆತ್ವಾರಿ**: (ಕಿ). [ಕೆತ್ತು$_3$ + ಪಾರಿ$_7$ (< ಪಾರೆ$_1$)]

**ಕೆತ್ತಿಕೆ** (ನಾ). ಕೊರೆಯುವಿಕೆ; ಕಂಡರಿಸುವಿಕೆ; ಕೆತ್ತನೆ: ಸಣ್ಣ ಗುಡಿಯಲ್ಲಿ ಅಂದವಾದ ಕೆತ್ತಿಕೆಯ ಚಿತ್ರಗಳಿರುತ್ತವೆ (ಕಭಾಗ. ೫೧೫); ಇದರೊಳಗಿನ ಕೆತ್ತಿಕೆಯ ಕೆಲಸವು ಅತ್ಯಾಶ್ಚರ್ಯಕರವಾದದ್ದು (ಮುಂಬಯಿ. ೩–೧೦೬). [ಕೆತ್ತು$_3$ + –ಇಕೆ]

**ಕೆತ್ತಿಗೆ** (ನಾ). ಕುಂದಣಿಸುವಿಕೆ: ರತ್ನ ಹರಳ ಕೆತ್ತಿಗೆ ಕುಂಡಲವನು (ಸಮುಮ. ೬).

ಕೆತ್ತಿಗೆಸರಪಣಿ = ಹರಳು ಕೆತ್ತಿದ ಸರಪಣಿ: (ಕಿ).

[ಕೆತ್ತು$_2$ + –ಇಗೆ]

**ಕೆತ್ತಿಸು$_1$** (ಕ್ರಿ). ಕುಂದಣಿಸು; ಹರಳು ಕೂಡಿಸು, —ಕೆಚ್ಚು: ರತ್ನ ಕೆತ್ತಿಸಿದ ಪದಕ ಹಾರಗಳು (ಪುರಂದ. ೧–೨೧೬–೩). [ಕೆತ್ತು$_2$ + –ಇಸು$_3$]

**ಕೆತ್ತಿಸು$_2$** (ಕ್ರಿ). ಕೊರೆಯಿಸು; ಕಂಡರಿಸು: ಮತ್ತೊಮ್ಮೆ ತಱಿಯ ಕೊರಡಂ ಕೆತ್ತಿಸಿ ಮೊಳದನಿತನಟ್ಟೆ (ಪುಣ್ಯಾಸ್ರ. ೩–೩೧); ಭಿತ್ತಿಯೊಳ್ ಕೆತ್ತಿಸಿ ಹಸಂ ಮಾಡಿದ ಪುತ್ಥಳಿಗಳಂತೆ ಕೀಲಿಸಿ (ಸಮ್ಯಕ್ತ್ವ. ೮–೬೦).

[ಕೆತ್ತು$_3$ + –ಇಸು$_3$]

**ಕೆತ್ತು$_1$** (ಕ್ರಿ). ಅದಿರು; ನಡುಗು; ಮಿಡುಕು; (ನರದಂತೆ) ಹಾರು; ಸ್ಪಂದಿಸು: "ಕೆತ್ತು – ಸ್ಪಂದನೇ" (ಶಮಧಾ); ಕೆತ್ತಿತ್ತು ದಲ್ ಬಲಗಣ್ಣುಂ ಬಲದೋಳುಂ (ಪಂಪಭಾ. ೪–೩೩); ನಿಜವದನದೊಳಗ್ಗಳ ವಧರಂ ಕೆತ್ತೆ (ಕಾದಂಉ. ೪೭೮); ಅಂಗ್ಯೆ ತಿಂದುದೆನ್ನ ಕಂಗಳು ಕೆತ್ತುತ್ತಿಹವಯ್ಯ (ಬಸವ. ೩೭೧); ಲವಲವಿಸುವ ನೋಟಂ ಕೆತ್ತುವ ತೋಳ್ ಕಂಪಿಸುವ ಹಸ್ತಂ (ಗಿರಿಕ. ೩–೨೭); ಕೆತ್ತಿದವು ಮೀಸೆಗಳು ಕಂಗಳು ಹೊತ್ತವರುಣಚ್ಛವಿಯ (ಕುವ್ಯಾಸ. ೮–೧೨); ನಿಳಯದಿಂದಡಿಯಿಡುವಾಗ ಬಲದ ತೋಳ್ದೊಡೆ ಕಣ್ಣು ಕೆತ್ತುತಿದ್ದುವು (ಭರಚ. ೨೧–೫೮). [?]

**ಕೆತ್ತು$_2$** (ಕ್ರಿ). ೧. ಹರಳುಗಳನ್ನು ಕೂಡಿಸು; ಕುಂದಣಿಸು; ಕೆಚ್ಚು: ಕೆತ್ತಿದ ರತ್ನಾಭರಣಭೂಷಿತ ಬೋನಗಿತ್ತಿಯರ್ (ಮೋಹತ. ೧೦–೪೨); ಕೆತ್ತಿದ ನಿಖಿಳ ರತ್ನಗಳ ಮೆಯ್ವೆಳಗು ಕೈವರ್ತಿಯ ಸೊಡರ ಕೀಳ್ವಡಿಸಿ (ಮೋಹತ. ೨೭–೨೯). ೨. ಚಿತ್ರ ಮೊದಲಾದುವುಗಳನ್ನು ಕೊರೆ. 'ಕೆತ್ತಿಸು$_2$' ಪರಾ.

[ದೇ. ‖ ತಮಿ. ಚೆಱು; ತುಳು. ಕೆತ್ತು; ತೆಲು. ಚೆಕ್ಕು]

**ಕೆತ್ತು$_3$** (ಕ್ರಿ). ೧. ಕೀಸು; ಮೇಲ್ಭಾಗವನ್ನು ಸುಲಿ; ತೆಳ್ಳಗೆ ಕೊರೆ; ತೆಳುವಾಗಿಸು: "ಕೆತ್ತು ತನೂಕರಣೇ ಸ್ಪಂದನೇ ಚ (ಅದಿರು)" (ಶಮಧಾ) ಕುಪ್ಪಸದಂತೆ ಬೆನ್ನಂ ಪತ್ತಿ ಕೆತ್ತುವರ್ (ಧರ್ಮಾಮೃ. ೩–೭೩); ಬಾಚಿಯೊಳು ಕೆತ್ತುವ (ಸಿದ್ಧರಾ. ೮–೨೮); ಭಕ್ತರ ಕಂಡು ಬಂಧಿಪಳ ನಡುನೆತ್ತಿಯ ಚರ್ಮವ ಕೆತ್ತಬೇಕು (ಪುರಂದ. ೨–೧೪–೪). ೨. ಕತ್ತರಿಸು; ಖಂಡಿಸು; ಸೀಳು: ನಾರು ಬಲಿಯದ ಹುಣಿಸೆ ಕಾಯ ಮಾವಿನ ಕಾಯನಾರ್ಯೆದು ಕೆತ್ತಿ ಕಿರಿದಾಗಿ ಹೋಳಿಸಿ (ಸೂಪಶಾ. ೩–೧೦); ಭೀಮನ ಬರಿಯ ಕೆತ್ತಿದನೆಂಟು ನಾರಾಚದಲಿ (ಕೋಗಯ. ೨೫–೩೧); ಕುತ್ತು ಕೆತ್ತು ಪೊಡೆ ಸೀಳ್ ಕಡಿ ಖಂಡಿಸು (ಅಪ್ರತಿ. ೨೬–೨೦). ೩. ಕಂಡರಿಸು: ಶ್ರೀ ಅಂಚೇಶ್ವರವ ಕೇಶವಣ್ಣ × ಕೆತ್ತಿದ (ಎಕ. X (S), ಚಿಕ್ಕಬ. ೧೦೯–೭; 10ನೆಯ ಶತ); ಗರ್ಭಗೃಹಸ್ಥಿತ ಮಂಟಪ ಶಿಖರ ಶಿಷ್ಟದಿ ಸಹವಾಗಿ ಕೆತ್ತು ಜಲ್ಲಾಂದರವ ಮಾಡಿಸಿ (ಎಕ. III, ಮಳವ. ೬೪–೧೧; 1465); ಮದನಿಕೆಯೊಳ್ ಕೆತ್ತಿದ ಕುಲಿಶದ ಕೇಸರಿಗಳ ಚೆಲ್ವಿತ್ತರಮಂ ಪಡೆದುವು (ಜಯಕಾ. ೮–೫); ಚಾಳೈಸದೆ ಕೆತ್ತಿದನಾರೊ ಕೆಲಸಿ ಎಂದಾಳೋಚಿಸಿದಳು ಕುವರಿ (ಮೋಹತ. ೨೬–೨೯). ೪. ಅಗೆ; ತೋಡು; ಬಗೆ: "ಫಾಲಃ, ಕೃಷಕಃ ... ಉಳುವ ನೇಗಲಂಥಾ ಕೆತ್ತುವ ದೋಕರಿಗೂ ಹೆಸರು" (ಸಿದ್ಧಾಂತಿ. ೨೩೮).

[ದೇ. ‖ ತಮಿ. ಕೆತ್ತು, ಚೆತ್ತು, ಚೆಱು; ಮಲ. ಚೆತ್ತು; ತುಳು. ಕೆತ್ತು; ಕೊಡ. ಕೆತ್]

**ಕೆತ್ತು$_4$** (ನಾ). ನಡುಕ; ಸ್ಪಂದನ. 'ಕೆತ್ತುಗುಂದು' ಪರಾ.

[< ಕೆತ್ತು$_1$]

**ಕೆತ್ತು$_5$** 'ಕಿಱು$_1$' ಪರಾ.

**ಕೆತ್ತುಗ** (ನಾ). ೧. ಕೆತ್ತುವ ಕೆಲಸದವನು: ಅನು ವೇಷಧಾರಿಯಯ್ಯಾ ಕಾಟುಗ ಕೆತ್ತುಗ ಪೋಲುಗನೆಂಬುದು ಎನ್ನ ಹೆಸರು (ಬಸವ. ೩೩೫); "ಕೆತ್ತುವವ – ನಾಶಮಾಡುವವ" (ಬಸವ. ಕೋಶ). ೨. ಕ್ಷೌರಿಕ; ಕೆಲಸಿಗ. [ಕೆತ್ತು$_3$ + –ಗ$_3$]

**ಕೆತ್ತುಗುಂದು** (ಕ್ರಿ). ನಡುಕ ನಿಂತುಹೋಗು; ಸ್ಪಂದನ ಇಲ್ಲದಂತಾಗು: ಇಂಗದ ಬೆಮರ್ ಮಿಡುಕೋಡದ ಪುರ್ವು ಬೀಗಿ ಬೀಯದ ತುಟಿ ಕೆತ್ತುಗುಂದದ ಕುಚಂ ನಡುಕಂಗಿಡದೂರು (ಲೀಲಾವ. ೩–೧೫).

[ಕೆತ್ತು$_4$ + ಕುಂದು$_1$]

**ಕೆತ್ತುಗೆಯ್** (ಕ್ರಿ). ಮುಚ್ಚು; ಮುಚ್ಚಿಕೊಂಡಿರು: ಮಂದಿರದ ಬಾಗಿಲೊಳು ನಿಂದು ನೂಂಕಲು ಕೆತ್ತುಗೆಯ್ದು ಪಡಿಯೊಪ್ಪಿರಲ್ಕೆ (ಸಿದ್ದೇಪು. ೧೬–೧೭). [< ಕಿಱು$_1$ + ಕೆಯ್$_1$]

**ಕೆತ್ತೆ** (ನಾ). ೧. ಕೆತ್ತಿದುದು; ಚಕ್ಕೆ: "ಕತ್ತರಿಸಿ ತೆಗೆದ ಚೂರು" (ಸಿರಿಕೋ. ೧೩೧). ೨. (ಕರಾ) ಹೋಳು ಉಪ್ಪಿನ ಕಾಯಿ.

[ದೇ. ‖ ತಮಿ. ಮಲ. ಚೆತ್ತು; ತುಳು. ಕೆತ್ತೆ]

**ಕೆತ್ತೆಬಜೆ** (ನಾ). (ಉಕ) ಅಧಿಕಪ್ರಸಂಗ; ಅನಾವಶ್ಯಕ ಉಪದ್ವ್ಯಾಪ: ನಿನಗೆ ಈ ಕೆತ್ತೆಬಜೆ ಕಾರಭಾರ ಮಾಡಲು ಯಾರು ಹೇಳಿದರು (ರೂಢಿ). [?]

**ಕೆತ್ವಾರಿ** 'ಕೆತ್ತವಾರಿ' ನೋ.

**ಕೆದಕು** (ಕ್ರಿ). ೧ ಕೆದರು; ಬೆದಕು: ಕೋೞಿಯಂತೆ ಕೆದಕುವರ್ (ಧರ್ಮಾಮೃ. ೩-೬೩); ದ್ರಾವಿಡಭಾಷೆಗಳ ಮೂಲವನ್ನು ಬೆದಕಿ ನಿಜಾಂಶವನ್ನು ಕೆದಕಿ (ದ್ರಾವಿವಿ. ೧೫, ಹಿನ್ನೆಲೆ). ೨. ನೆಲವನ್ನು ಅಗೆದು ಸಡಿಲಗೊಳಿಸು; ಪರೆಡು: (ಶಿ). [ದೇ. ‖ ತೆಲು. ಕೆಲುಕು]

**ಕೆದರಿಗನಗಿಡು** (ನಾ). ಒಂದು ಬಗೆಯ ಸಸ್ಯ: "ಕೋಲಂಗಃ - ಕೆದರಿಗನಗಿಡು" (ಒಷಧಿ. ೯೧). [ಕೆದರಿಗ$_0$ + ಗಿಡು]

**ಕೆದರು** 'ಕೆದಱ್$_1$' ನೋ.

**ಕೆದರ್ಗಿಡಿ** (ನಾ). ಕೆದರಿದ ಕಿಡಿ; ಚೆದರುವ ಕಿಡಿ: ಕೋಪದಿಂದುಗುಳ್ದ ಕಿಚ್ಚಿನ ಕೆದರ್ಗಿಡಿಗಳೆನೆ (ಜೈಮಿಭಾ. ೮-೪೭). [ಕೆದಱ್$_1$ + ಕಿಡಿ]

**ಕೆದರ್ಗೂದಲ್** (ನಾ). ಚೆಲ್ಲಾಪಿಲ್ಲಿಯಾದ ಕೂದಲು; ಕೆದರಿದ ಕೂದಲು: (ಶಿ). [< ಕೆದಱ್$_1$ + ಕೂದಲ್ (< ಕೂಂದಲ್)]

**ಕೆದರ್ಚು** (ಕ್ರಿ). ಚೆದರಿಸು; ಓಡಿಸು: ತಮಮುಮಂ ಜೊನ್ನಮುಮಂ ಕೆದರ್ಚಿ ದಿನಕೃತ್ಯಿಪ್ರಾತಪಂ ನಿಲ್ವ ಸಂಭ್ರಮಮೆಂತಂತೆ ಶಿವೈಕಭಕ್ತಿ ವಿಭವಂ ನಿಲ್ಗುಂ (ಶತಕ. ೧೮೬-೮೫). [< ಕೆದಱ್$_1$ + -ಚು]

**ಕೆದರ್ತಲೆ,** ಕೆದರ್ದಲೆ, ಕೆದಱುದಲೆ (ನಾ). = ಕೆದಱುಮಂಡೆ: ಕೆದರ್ತಲೆ, ಕೆದಱುತಲೆ (ಶಬ್ದಾನು. ೮೩ ಪ್ರಯೋ.). **ಕೆದರ್ದಲೆ:** ಕೆದರ್ದಲೆಯ ಕೆಂಗಣಂಗಳ ಮಹಾಕುಲಿಶದಂಷ್ಟ್ರಂಗಳಿಂದೆಸೆವ (ವೆಂಕಾರಾ. ೫-೮-೧೩). **ಕೆದಱುದಲೆ:** ಕೆದಱುದಲೆ ಕೆಮ್ಮೀಸೆ ರುಂಡ ಮುಂಡಾಭರಣವೊದವಿರ್ದ ವೃಶ್ಚಿಕದ ಮಾಲೆ ಪೇರುರದಲ್ಲಿ (ಸಿದ್ಧರಾ. ೪-೭); ಕೆದಱುದಲೆಗಳ ತೋರಭಾರದ ಮರದ ಮೈಯುಬ್ಬುಗಳ ಭಯ ರಸದದ್ಭುತದ ಖಳರಿದ್ದುದಿದಿರಿನಲಿ (ತೊರರಾ. ೩-೭-೮); ಕೆದಱುದಲೆ ಕೆಮ್ಮೀಸೆ ಕಿಸುಗಣ್ಬೆದಱುನೋಟವು ಕಾರೊಡಲು (ಸಾಳ್ವಭಾ. ೫-೬). [ಕೆದಱ್$_1$ + ತಲೆ$_1$]

**ಕೆದರ್ದಲೆ** 'ಕೆದರ್ತಲೆ' ನೋ.

**ಕೆದರ್ಬಿರ್ಚು** (ಕ್ರಿ). ಚಿದರುವಂತೆ ಬಿಚ್ಚು; ವಿಸ್ತಾರವಾಗುವಂತೆ ಬಿಚ್ಚು: ತಿಪ್ಪುಳ್ಗರಿಗಳಂ ಕೆದರ್ಬಿರ್ಚಿ ಕುಳಿತ ಪಕ್ಕಿಗಳೆದೆಗೆ ಬೆಚ್ಚನೆ ಯೊಲವನೊತ್ತಿ (ಶ್ರೀರಾಮಾ. ೪೮೪-೬). [ಕೆದಱ್$_1$ + ಬಿರ್ಚು]

**ಕೆದಲ** (ನಾ). ಒಂದು ಬಗೆಯ ಸಸ್ಯ (?): ಹಲಸು ಮೆಣಸು ಕೆದಲ ಬಿಳಿಲು ವೊಳಗಾಗಿ (ಎಕ. VIII, ತೀರ್ಥಹ. ೧೨೨-೨೩; 1371). [?]

**ಕೆದಱ್$_1$,** ಕೆದರು, ಕೆದಱು$_1$, ಚದರು$_1$, ಚದಲು, ಚದಱು, ಚದುರು$_1$, ಚೆದಱು, ಚೆದುರು$_1$, ಚೆದುಱು (ಕ್ರಿ). ೧. ಹರಡು; ಪಸರಿಸು; ಚೆದುರಿಸು: ನೀಂ ನನೆಯ ಮುಗುಳಲರ ತುಱುಗಲನ ನಂತಮುಂ ನೆಱೆಯೆ ಕೆದಱುವೆಟ್ ನೃಪತಿಳಕಾ (ಆದಿಪು. ೫-೮); ಕೆದಱುತ್ತುಂ ಮಣಲಂ ಕಪಿಧ್ವಜಂ (ಶಮದ. ೨೩೬ ಪ್ರಯೋ.). **ಕೆದರು:** ೧. ಬಿಸಿಯೆಲ್ಲಮಂ ಕೆದರೆ (ಕಾಲೂರ. ೧೨೬-೨೬೮). ೨. ಉಗುರು ಮೊದಲಾದುವುಗಳಿಂದ ಬಗೆ, —ಕೆರೆ; ಬೆದಕು; ಕೆದಕು: ಕೇಯೂರ ಮತ್ತೊಬ್ಬಳ ಉತ್ತರೀಯಕ್ಕೆ ತಗುಲಿ ಅದನ್ನು ಕೆದರುತ್ತಿತ್ತು (ಬಾಣಆ. ೧೨). **ಕೆದಱು$_1$:** ೧. "ಕೆದಱು - ವಿಕೀರ್ಣೇ" (ಶಮಧಾ); ಸೌಧದೊಳೆ ಕೆದಱಿದ ಕಪ್ಪುರವಳ್ಕುಗಳೆಸೆಯೆ (ಪಂಪಭಾ. ೩-೪೯); ರವಿಯುಂ ನಡುವಗಲೊಳ್ಕಿಂದು ಕೆದಱಿದಂ ಕರತತಿ ಕಿಡಿಗಳನ್ (ಕಾದಂಪೂ. ೧೯೭); ಸುರಾರ್ಚನೆಗೆಂದು ತಂದ ಮಂದಾರದ ಪೂಗಳಂ ಕೆದಱಿ (ಪಂಚತಂ. ೨೬೧-೨); ಕಡೆಗಣ್ಣ ಕಾಂತಿ ಕುಸುಮಾಸ್ತ್ರಮಂ ಕೆದಱಿ (ಗಿರಿಕ. ೨-೧೦೫ವ); ಕಿಡಿಗಳನು ಕಂಗಳಲಿ ಕೆದಱುತ ಪಡೆಗಳನು ಸಾಸಿರವ ಹರಹುತ (ಸಾಳ್ವಭಾ. ೧೨-೨೯). ೨. ತುಱುಗಿ ಕರಂಗಳಿಂ ಕೆದಱಿ (ಪುಷ್ಪಪು. ೩-೬೪); ಮುಂಡಂಗಳಂ ಮಗುಚಿ ನೋಡಿ ಬಿಟ್ಟಾಗಿರ್ದ ಖಂಡಂಗಳಂ ಕೆದಱಿ ನೋಡಿ (ಚೆಬಪು. ೪೦-೨೮). ೩. ಚೆಲ್ಲಾಪಿಲ್ಲಿಯಾಗು; ಬೇರೆಬೇರೆಯಾಗು; ಚೆದರಿಹೋಗು: ಮುತ್ತಿನ ಹಾರ ಹಱಿಯಲು ಕೆದಱಿದವು ದೆಸೆದೆಸೆಗೆ ಮುತ್ತುಗಳು (ಕುವ್ಯಾಭೀ. ೪-೮೭); ಕೆದಱಿತಧ್ವರ್ಯುರ್ಮಾದಿ ಋತ್ವಿಜರದ್ಭುತದ ಭೀತಿಯಲಿ (ತೊರರಾ. ೧-೧೧-೧೨). ೪. ಚೆದರಿಸು; ದಿಕ್ಪಾಪಾಲು ಮಾಡು: ಪಱುಗಿಡದ ತುರುಷ್ಕ ತುರಂಗಗಳುಮಂ ಕೆದಱಿ ಬೆದಱಿ ಬೆಂಕೊಂಡು (ಪಂಪಭಾ. ೧೨-೬೦ವ); ದೇಗುಲದ ಶಿಖರಮನಡರ್ದೀಱಿ ಒಟ್ಟಿರ್ದಿಟ್ಟಿಗೆಯಂ ಕೆದಱಿಯುಂ (ಪಂಚತಂ. ೩೦-೧); ಹೊಗರಂಬು ಕವಿದವು ತುಳುಕಿದವು ತೂಱಿದವು ಕೆದಱಿದವ ಹಿತಬಲದಸುವ (ಕುವ್ಯಾದ್ರೋ. ೫-೧೩). ೫. ಕೊಡವು; ಒದರು: ಎತ್ತಿ ಕಯ್ಯಂ ಕೆದಱುತ್ತಂ ಧೂಳಿಯಂ (ಕಾದಂಪೂ. ೩೫೯). ೬. ಬೀಸು; ಒಲೆದಾಡು; ತೂಗಾಡು; ಚಲಿಸು: ಸುತ್ತ ಕೆದಱುವ ಚಾಮರ ಪ್ರಕೀರ್ಣಮಕ್ಕು (ಮಂಗರಾ. ೭೮-೪); ಬಲಕೆಡಕೆ ಕೆದಱುವ ಸೀಗುರಿಯ (ಕುವ್ಯಾಆ. ೮-೫); ಮುದದ ಮೂಱನೆಯಬ್ಬರಕೆ ಕೆದಱಿದವು ಮೇಲಣ ಜನದ ಜೋಡಿಗಳು (ತೊರರಾ. ೪-೧೨-೨೮). ೭. ಎಸೆ; ಬೀರು; ಚೆಲ್ಲು: ಮಹಾರಥರು ರಿಪು ಮತ್ತದಂತಿಯ ಕೆಣಕಿದರು ಕೆದಱಿದರು ಮಾರ್ಗಣವ (ಕುವ್ಯಾಕ. ೧೩-೩೫); ಕೆದಱಿದನಸ್ತ್ರಸಂತತಿಯ (ಕುವ್ಯಾಕ. ೭೦-೧೨). **ಚದರು$_1$:** ೩. ಕೋಕಂಗಳು ಚದರುತಿರೆ ಜೊನ್ನವಕ್ಕಿಗಳು ನಲವೇರುತಿರೆ (ವೆಂಕಾರಾ. ೫-೬-೫); ಸುದತಿಯನು ಕಂಡೊಡನೆ ಚಿತ್ತವು ಚದರದಲ್ಲಿಯೆ ನೆಲಸೆ (ರಾಮಾಸಂ. ೧-೪-೧೮); ಈ ವರ್ಗದ ವಿದ್ಯಾರ್ಥಿಗಳು ಚದರುವದರಲ್ಲಿದ್ದರು (ರಂಗರೋ. ೧೧); ಅಲ್ಲಿ ನೆರೆದಿದ್ದ ಜನರೆಲ್ಲ ಚದರಿದ ಮೇಲೆ (ತೇನೋಡ. ೨೭). **ಚದಲು:** ೬. ಹೃದಯದೊಳಗೆ ನೀನೆ ಇದ್ದ ಮೇಲೀ ಪರಿ ಚದಲಿ ಪೋಗಲಿಬಹುದೆ ಮನಸು ದುರವೃತ್ತಿಗೆ (ಮೋಕ್ಷದೀ. ೧೫೦); ಅದು ತಾನೇ ಅದು ತಾನೆ ಚದಲದೆ ತುಂಬಿದ ಸದಮಲಬ್ರಹ್ಮ (ಚಿದಾವ. ೮೯-೭); ಚದಲದೀ ಪರಿಯಿಂತು (ಜ್ಞಾನಸಿಂ. ೩೦-೩೯). **ಚದಱು:** ೩. ಸಮರಾಂಗಣದೊಳು ಚದಱದೆ ಕಡುಗಲಿ (ಬೊಂಕಶಾ. ೧೯೩೩, ಹಾವೇರಿ. ೧೬-೬; 1080); ಮುಡಿ ಚದಱಿ ಹುಡಿಯೊಳಗೆ ಹೊರಳುತ್ತೊಡಲನೀಡಾಡಿದಳು ಧರೆಯೊಳಗೆ (ನಳಚ. ೫-೨೫). **ಚದುರು$_1$:** ೩. ಕೂಡಿದ ಜನ ಚದುರಿತು (ಹಬ್ಬಬ. ೪). **ಚೆದಱು:** ೩. ಹೃದಯದೊಳೊದವಿದ ಕತ್ತಲೆ ಚೆದಱುವಿನಂ (ಕಾದಂಪೂ. ೩೫೬); ಬಾಗಿ ಸೆಳೆನಡು ಬಳುಕೆ ಕುಚ ಭಾರದಲಿ ಮೇಲುದು ಜಾರೆ ಮುಡಿ ಚೆದಱಿ (ನಳಚ. ೨-೩೫). **ಚೆದುರು$_1$:** ೩. ಅಲ್ಲಲ್ಲಿ ಚೆದುರಿ ನಿಂತಿರುವ ನನ್ನ ಲೇಖನಗಳನ್ನು ಒಂದೆಡೆಗೆ ತರುವ ಯೋಜನೆ (ಸಾಸಮಾ. III, ಅರಿಕೆ). **ಚೆದುಱು:** ೩. ಜಲಜಭವನೋಲಗದವರ್ ಚೆದುಱೆ (ಚೆಬಪು. ೧೮-೧೪).

[ದೇ. ‖ ತಮಿ. ಚಿದಱು, ಚದರು; ಮಲ. ಚಿದರು, ಚಿನ್ನು; ತೆಲು. ಚಿದರು, ಚಿದುರು; ತುಳು. ಕೆದರ್, ಚದರ್]

**ಕೆದಱ್$_2$,** ಕೆದಱು$_2$ (ನಾ). ಚೆದರುವುದು; ಚೆಲ್ಲಾಪಿಲ್ಲಿಯಾಗುವುದು; ಅಸ್ತವ್ಯಸ್ತವಾಗುವಿಕೆ. 'ಕೆದರ್ತಲೆ' ಪರಾ. **ಕೆದಱು$_2$:** ಬೆದಱುಂ[ಕೆದಱುಂ]ಪೆರ್ಚುಂ ಕುಂದುಮುನಱಿದು ಕಾಣಲುಂ ಕಾಣಿಸಲುಂ (ಪಂಪಭಾ. ೫-೪೩ವ). [< ಕೆದಱ್$_1$]

**ಕೆದಱಿಕೆ** (ನಾ). ಚೆಲ್ಲಾಪಿಲ್ಲಿಯಾಗಿರುವಿಕೆ; ಅಸ್ತವ್ಯಸ್ತವಾಗಿರುವಿಕೆ: ಮುಡಿದಲರ ಕೆದಱಿಕೆಯ ಕೇಶದ ಸಡಿಲಿದುಡಿಗೆಯ (ತೊರರಾ. ೨-೩-೨); ಜಡಿವ ಕೆಮ್ಮೀಸೆಗಳ ಕೆದಱಿಕೆಯ ಬಿಡುದಲೆಯ ನವಶೋಣಿತಾಂಬರದುಡಿಗೆಗಳ ಘನರೌದ್ರಮಯ ದುಗುಡದ ರಕ್ಕಸ ಸೇನೆ ನಿಂದುದು ಖಳನ ತೋಹಿನಲಿ (ತೊರರಾ. ೬-೧೯-೧೬).

[ಕೆದಱ್$_1$ + -ಇಕೆ]

**ಕೆದಱಿಸು**, ಚದರಿಸು, ಚದುರಿಸು$_2$, ಚೆದರಿಸು, ಚೆದುಱಿಸು (ಕ್ರಿ). ೧. ಹರಡಿಸು ; ಚೆಲ್ಲಿಸು ; ಎರಚಿಸು : ಪೊಸತೆ ಮೊಳೆತ ಧಾನ್ಯಂಗಳನಾ ಧರಣೀಶಂ ಕೆದಱಿಸಿದಂ ನಿರಂತರಂ ರಾಜಗೇಹದೊಳಗಂ ಪೊಜಗಂ (ಆದಿಪು. ೧೫-೭) ; ಪೊಬಲ ವೀಧಿಗಳೊಳೆಲ್ಲಂ ನೀರಂ ತಳಿಯಿಸಿ ಫಲ ಪುಷ್ಪಂಗಳಂ ಕೆದಱಿಸಿದೊಡೆ (ಚಾವುಂತು. ೩೫-೨೪). ೨. ಚೆಲ್ಲಾಪಿಲ್ಲಿ ಯಾಗಿಸು ; ಓಡಿಸು : ಸಿಂಧುರದಿಂ ಸೀಳಿಸುತ್ತಂ ಕೇಸುರಿಯಿಂದಂ ಕೆದಱಿಸುತ್ತಂ (ಧರ್ಮಪ. ೧-೭೬ವ) ; ಘಟ್ಟಸು ಕೆದಱಿಸಿದವಾನೆಗಳು (ಕುವ್ಯಾಕ. ೨-೧೪) ; ಅಲ್ಲಿ ಗಲ್ಲಿಗೆ ಗಲ್ಲಗಟ್ಟಿರ್ದ ಪೌಜುಗಳೆಲ್ಲವ ಹೊಯ್ದು ಕೆದಱಿಸಿ (ಕುರಾಸಾಂ. ೨೦-೪೧). ೩. ಕಲಕು ; ಕದಡು ; ಕೆದಕು ; ಕೆರಳಿಸು : ಕೆದಱಿಸದಿರು ನನ್ನ ಚಿತ್ತವನೆಂದು ಕೋಪ ದೊಳಾಡಿದಳು ಭಾವನೊಡನೆ (ಭರತ. ೯-೧೧೯). **ಚದರಿಸು:** ೨. ದೊಂಬಿ ಗಾರರನ್ನು ಚದರಿಸಲು ಪೋಲೀಸರನ್ನು ಕರೆಯಿಸಲಾಯಿತು (ರೂಢಿ). **ಚದುರಿಸು$_2$** : ೨. ಮುಗಿಯೆ ಬಿದ್ದಿನರೊಸಗೆ ಬಂದವರ ಚದುರಿಸಿತು (ಕಾಲೂರ. ೪೪-೫೮). **ಚೆದರಿಸು** : ೨. ಪೋಲೀಸರು ಗುಂಪನ್ನು ಚೆದರಿಸಿ ದರು (ರೂಢಿ). **ಚೆದುಱಿಸು** : ೨. ತದ್ಗುಣಾಂಬೋಧಿಯಂ ಚೆದುಱಿಸಿ ಬಳಿಕ್ಕ ಕಳ್ದೆರಿ (ಸಮ್ಯಕೌ. ೧೧-೬೭). [ಕೆದಱ್$_1$ + -ಇಸು$_3$]

**ಕೆದಱು$_1$** 'ಕೆದಱ್$_1$' ನೋ.

**ಕೆದಱು$_2$** 'ಕೆದಱ್$_2$' ನೋ.

**ಕೆದಱುದಲೆ** 'ಕೆದರ್ತಲೆ' ನೋ.

**ಕೆದಱುಮಂಡೆ** (ನಾ). ಕೂದಲು ಕೆದರಿಕೊಂಡಿರುವ ತಲೆ : ಬಳಲುವ ವದನದುಸುರಿನ ತಳ್ಳಬಾರಿಯ ಕೆದಱುಮಂಡೆಯ ಕಲಿತ ಭಯದ ಸುಮಾಲಿ ನಡೆತಂದು (ತೊರರಾ. ೫-೫-೩). [ಕೆದಱು$_1$ (< ಕೆದಱ್$_1$) + ಮಂಡೆ$_1$]

**ಕೆದಱುಮಿಸೆ** (ನಾ). ಕೆದರಿದ ಮೀಸೆ ; ಗುಂಜು ಮೀಸೆ : ಬೆಱೆತ ಮೋಱೆಯ ಕೆದಱುಮಿಸೆಯ ಬಿಗಿದ ಹುಬ್ಬುಗಳ (ಬಸವು. ೪೬-೫೭) ; ಹಱುಕುಗಡ್ಡದ ಕೆದಱುಮಿಸೆಯ ಕೀಣಿವಲ್ಲುಗಳ (ಬಸವು. ೫೮-೪೯). [ಕೆದಱು$_1$ (< ಕೆದಱ್$_1$) + ಮಿಸೆ]

**ಕೆದಱಿ** (ನಾ). ಒಂದು ಮನೆತನದ ಹೆಸರು (?) : ಇದಕ್ಕೆ ಸಕ್ಷಿ ಮುದಿರೆ ಬೂವಯ್ಯ ಬೆಳ್ಳನ ಕರಕುಡಿ ಬಾರದರೆಱೆಯಮ್ಮ ಕೆದಱಿ ಯರಯ್ಯಪ (ಎಕ. IV, ಹುಣಸೂ. ೯೨-೧೨ ; 920). [?]

**ಕೆದಱೀಟ್** (ಕ್ರಿ). ಚೆದರಿ ಮೇಲಕ್ಕೇಳು, —ಹಾರು : ಕರ್ಪೂರಪಾಂಸು ನಿತಾಂತಂ ಕೆದಱೀಟೆ (ಕುಸುಮಾ. ೫-೫೩). [ಕೆದಱ್$_1$ + ಏಟ್$_1$]

**ಕೆನೆ$_1$** (ಕ್ರಿ). ಕುದುರೆಯಂತೆ ಹೇಕರಿಸು ; ಹೇಷಾರವವನ್ನು ಮಾಡು : ಮೂಗಿಱಿಯುತ್ತುಂ ಕುಡಿವಾಲಮೆತ್ತಿ ಕೆನೆಯುತ್ತಾನಂದದಿಂ ಸುತ್ತಿ (ಧರ್ಮಾಮೃ. ೧೦-೧೪೬) ; ಕುದುರೆ ಮರಿ ಕೆನೆದು ಕುಪ್ಪಳಿಸುತ್ತಿತ್ತು (ಪುನರು. ೨೯೬). [ದೇ. ‖ ತಮಿ. ಕನೈ ; ಮಲ. ಕನೆ ; ತುಳು. ಕೆಲೆ]

**ಕೆನೆ$_2$** (ನಾ). ಚೆಲುವು ; ಸೊಬಗು ; ಚೊಕ್ಕಳಿಕೆ ; ಲಾವಣ್ಯ : "ನಿಗರ, ನೆಟ್ಟೆ, ಕೆನೆ . . . ಕಣ್ಗೊವಂದುದು, ಪರಿವಡೆದುದು –ಈ ೧೪ ಮನೋಹರಂ" (ಶಶಸಾ. ೧೧-೨೧೧) ; "ಕೆನೆ ನೆಱೆನಿಗರಂನೆಟ್ಟು ಜೊಕ್ಕ ಚೊಕ್ಕಳಿಕೆ . . . ಎನೆ ಮನೋಹರಮುಕ್ಕುಂ" (ಕವಿಕಂ. ೪೯). [?]

**ಕೆನೆ$_3$** (ನಾ). ೧. ಹಾಲಿನ ಅಥವಾ ಮೊಸರಿನ ಸಾರವತ್ತಾದ ಭಾಗ ; ಹಾಲನ್ನು ಕಾಯಿಸಿದಾಗ ಮೇಲೆ ನಿಲ್ಲುವ ತಿರುಳು : ಕೆನೆಯ ತೆಗೆದು ಹಾಲನೆಱೆವವಳ ವಿನಯ ತಲೆಯನೊಡೆದು ಲಾಲನೆಯ ಮಾಡುವಳಂತೆ (ಗುಪ್ತಮಂ. ೮೧) ; ಅಧರೀಕೃತ ಶಾರದ ನೀರದ ದ್ಯುತಿಯೆನಿಪ ಕೆನೆಯ ನೊಳಕೆಯ್ದಿರ್ಪ . . . ದಧಿಯಂ (ಶಾಂತೀಶ್ವ. ೧೫-೬೯) ; ಹಾಲಿಗಿಂತ ಕೆನೆ ರುಚಿ (ಗಾದೆ). ೨. ಸಾರ ; ತಿರುಳು : ವರ ಶಿವಾಗಮದ ಕೆನೆ ಸುಕೃತ ದೇಹಿಗಳ ಮನೆ (ನಂದಿಮಾ. ೧೦-೧೨). [?]

**ಕೆನೆಗಟ್ಟು** (ಕ್ರಿ). ಕೆನೆಬರು ; ಕೆನೆಯಿಂದ ಕೂಡಿಕೊಳ್ಳು : ಪಗಲುಷ್ಣ ಕಿರಣ ಪರಿತಾಪದಿಂ ಕಡುಗಾಯ್ದು ಕೆನೆಗಟ್ಟಿ ಪುಟ್ಟಿಕೊಂಡುದೆಂಬಂತೆ (ಬಾಧಪು. ೪-೬೭ವ) ; ಬಟ್ಟಲಂ ಬೆಳಗಿನೊ ಮನವ ನಾನಿಟ್ಟೆ ನೊ ಪಾಲಿಂಗೆ ಪಾಲ್ ಕೆನೆಗಟ್ಟುವೋ (ಬಸವು. ೧೪-೯) ; ಕೆನೆಗಟ್ಟಲಾ ಹಾಲು ಮೊಸರು ಮಜ್ಜಿಗೆ ಬೆಣ್ಣೆಗತಿ ಪಾವನ (ಸೂಪಶಾ. ೨-೧).
[ಕೆನೆ$_3$ + ಕಟ್ಟು$_1$]

**ಕೆನೆಗೊಳ್** (ಕ್ರಿ). = ಕೆನೆಗಟ್ಟು : ಮುನಿಸಂ ಮಾಡಿದರಾತಿನಾಥರದಗಂ ಸುಪ್ಪಳ್ಗೆ ಕೆನ್ನೆತ್ತರಂ ಕೆನೆಗೊಂಡಾಱಿದ ಪಾಳ್ಗೆ ದೊಂಡೆಗರುಳಂ ಕರ್ಬಿಂಗೆ ಲೆಕ್ಕ[ಕ್ಕೆ ತಂ]ದು (ಪಂಪಭಾ. ೧೨-೧೬೦) ; ಅಗುಱೊಂದ ದಂತೆ ತೆಗೆದಾಱಿಸಿದೋಗರದೊಳ್ ಪೊದಟ್ಟು ಕಮ್ಮಗೆ ಕೆನೆಗೊಂಡ ಗೆಡ್ಡೆ ಮೊಸರಂ ಸುರಿದು (ಲೀಲಾವ. ೫-೭೦).
[ಕೆನೆ$_3$ + ಕೊಳ್$_1$]

**ಕೆನೆಮೊಸರ್**, ಕೆನೆಮೊಸರು (ನಾ). ಕೆನೆಗಟ್ಟಿದ ಮೊಸರು ; ಕೆನೆ ಗೂಡಿದ ಮೊಸರು : ಹಪ್ಪಳಂ ಚಿಲುಪಾಲ ಘಟ್ಟಿಗಳನಲ್ಲಲ್ಲಿ ತುಪ್ಪಮಂ ಕೆನೆಮೊಸರ ಸಕ್ಕರೆಯನಲ್ಲಲ್ಲಿ ಬಡಿಸಿ (ಚನ್ನರ. ೮೨-೨೫). **ಕೆನೆಮೊಸರು:** ಬೇಗದಿಂ ಕೆನೆಮೊಸರು ಮಜ್ಜಿಗೆಗಳಂ ಬಡಿಸಿ (ಬಸರ. ೭-೧೧೪) ; ಸಣ್ಣಕ್ಕಿ ಯೋಗರವು ಸೊಗಸಾದ ಕೆನೆಮೊಸರು (ಪುರಂದ. ೧-೪೯-೪) ; ಬೆಲ್ಲದ ಪಾನಕವೆಱೆದು ಅಲ್ಲದ ಕೆನೆಮೊಸರಶನವ ಕರೆಕರೆದೆಲ್ಲರಿಗು ಬಡಿಸುವರು (ಮೋಹತ. ೨-೩೨). [ಕೆನೆ$_3$ + ಮೊಸರ್]

**ಕೆನೆಮೊಸರು** 'ಕೆನೆಮೊಸರ್' ನೋ.

**ಕೆನೆವಾಲ್**, ಕೆನೆವಾಲು, ಕೆನೆಹಾಲು (ನಾ). ಕೆನೆಗಟ್ಟಿದ ಹಾಲು : ಮೇಲೆನಿಪ ಹರುಷಾಂಬುಧಿಯ ಕೆನೆವಾಲ ತಾಯ್ತುಂದೆಗಳಿಗೂಡಿಸಿ (ಸಾಳ್ವಭಾ. ೪-೧) ; ಕೆನೆವಾಲ ಕಡೆದು ನವನೀತಮಂ ತೆಗೆದು (ಜೈಮಿಭಾ. ೧-೭). **ಕೆನೆವಾಲು** : ಬಟ್ಟವಾಲನು ಚಿಲುಪಾಲನು ಕೆನೆವಾಲನೆಟ್ಟವಾಲನು ತನಿವಾಲ (ಭರತ. ೧೦-೩೪). **ಕೆನೆಹಾಲು** : ಜನಕೆ ನಿನ್ನೀ ಹಾಡು ಕೆನೆಹಾಲು ಇದ್ದಂತೆ (ಕನ್ನಜಾ. ೨೦೭).
[ಕೆನೆ$_3$ + ಪಾಲ್$_1$]

**ಕೆನೆವಾಲು** 'ಕೆನೆವಾಲ್' ನೋ.

**ಕೆನೆವೆರಸು** (ಕ್ರಿ). ಕೆನೆಯಿಂದ ಕೂಡು ; ಕೆನೆಸಹಿತವಾಗಿರು : ಚಿಲುಪಾಲು ತಂಬಾಲು ಕೆನೆವೆರಸಿದ ಪಾಲು ಸುಲಲಿತ ಬಟ್ಟವಾಲುಗಳ (ಕಂನವಿ. ೮-೯೧). [ಕೆನೆ$_3$ + ಬೆರಸು$_1$]

**ಕೆನೆಹಾಲು** 'ಕೆನೆವಾಲ್' ನೋ.

**ಕೆನ್ನ$_1$** (ನಾ). ಕೆಂಪಾದುದು ; ಕೆಂಬಣ್ಣ : ಕೆನ್ನನ ಹೊನ್ನನ ಬಣ್ಣ ಬಣ್ಣಗಳ ರೆಕ್ಕೆಗಳೆರಡೂ ಪಕ್ಕದಲುಂಟು (ಗಂ. ೫೬-೮). 'ಚೆನ್ನ' ಪರಾ.
[< ಕೆಂ]

**ಕೆನ್ನ$_2$** (ನಾ). ದುಃಖ ; ಕಷ್ಟ : ವಿಕಳನಲ್ಲಂ ಸದ್ಗುಣಾಚಾರವಂತ ನನ್ನಿಂದೇನು ನಿಮಗೆ ಕೆನ್ನಂ ಪ್ರಕಟವಾಗಱುಹು (ಪ್ರಭುಪು. ೩-೧೧೩). 'ಕೆನ್ನವಿಕ್ಕು' ಪರಾ. [< ಸಂ. ಖಿನ್ನ]

**ಕೆನ್ನ$_3$** 'ಕೆನ್ನಂ' ನೋ.

**ಕೆನ್ನಂ**, ಕೆನ್ನ$_3$ (ಅ). ೧. ಹೆಚ್ಚಾಗಿ ; ಅತಿಶಯವಾಗಿ ; ವೆಗ್ಗಳವಾಗಿ : "ಪಿರಿದುಂ ನೀಡು ಮಿಗೆ ಕೆನ್ನಮೆಲ್ಲಂ . . . ಅಧಿಕಾರ್ಥಂ" (ಶಮುದ. ೩೦೪) ; ಮುಂ ನಿಲೆ ತಾಂ ಮೇಣ್ ವೆಱಂ ಗಡಂಗಳಮಾದಂ ಕೆನ್ನಂ ನಿಲ್ಲೆಂದಿವನೆಂದುಂ ನಿಱಿಸಲ್ಕಿಲ್ಲದೆಡೆಗಳೊಳ್ ಕಲ್ಲದಿರಿಂ (ಕವಿರಾ. ೨-೧೩) ; ಕೆನ್ನಮೆಲ್ಲಿಯುಂ ಮಚ್ಚದೊನಿಲ್ಲ ನಿನ್ನಳವಂ (ಕಾವ್ಯಾವ. ೪೯೪) ; ಅಂತರಂಗದ ಮಳಮಂ ಕೆನ್ನಂ ತೊಲಗಿಸಿ ತೊಳ ಗುವ ರನ್ನದ ದೀವಿಗೆಯ ತೆಱನನುಕರಿಸಿರ್ದಂ (ಪುಣ್ಯಾಸ್ರ. ೧-೧೧೧) ;

ಮನ್ನೆಯರಧಿರಾಜರ್ ಸಾಮಂತರ್ ಕೆನ್ನಂ ಶೋಭೆಯನೀಯೆ ಮಹಾಮಂಡಳಿಕನೆಸೆಯುತಿರ್ದಂ (ಜಯಕಾ. ೩-೨). **೨.** ಸುಮ್ಮನೆ ; ನಿಷ್ಕಾರಣವಾಗಿ ; ವ್ಯರ್ಥವಾಗಿ : ನಿನ್ನಂ ಪಲತೆಱದಿಂ ಕೊಲ್ಲದೊಡೆಂತೆಲೆಗಳ ಪೋದಪುದೆ ಕೋಪವೆನ್ನಿಂ ಕೆನ್ನಂ (ನೇಮಿಪು. ೨-೮೭) ; ಉಪಾತ್ತನೇಂ ಬಿಡುವನೇ ಕೆನ್ನಂ ಮಹಾಸತ್ವಮಂ (ಪುಷ್ಪಪು. ೫-೩೬) ; ಎಳೆವೆಱೆಯಂ ಕೆನ್ನಂ ಪಿಡಿದಿರದೆ ಬಾಱ್ (ಕಬ್ಬಿಕಾ. ೨೯೪). **ಕೆನ್ನ**₃. 'ಕೆನ್ನಘಾತಕಿ' ಪರಾ [?]

**ಕೆನ್ನಕ್ಕಿ** (ನಾ). ಕೆಂಪು ಅಕ್ಕಿ ; ಕೇಸಕ್ಕಿ : ಕೆನ್ನುರಿ, ಕೆಚ್ಚುರಿ, ಕೆನ್ನಕ್ಕಿ, ಕೆಚ್ಚಕ್ಕಿ (ಶಬ್ದಾನು. ೩೪೩. ಪ್ರಯೋ). [ಕೆನ್ನ₁ + ಅಕ್ಕಿ₁]

**ಕೆನ್ನಗಸೆ** (ನಾ). ಕೆಂಪು ಅಗಸೆ : ಒಂದೊಂದೆಡೆಯೊಳ್ ಸಿಂಗದುಗುರ್ಗಳಿನರ್ಚಿಸಿದಂತಿರ್ದ್ದ ಕೆನ್ನಗಸೆಯ ಮುಗುಳ್ಗಳುಮಂ (ಕಾದಂಉ. ೨೬೯). [ಕೆನ್ನ₁ + ಅಗಸೆ₂]

**ಕೆನ್ನಘಾತಕಿ** (ನಾ). ಮಹಾಘಾತಕಿ ; ಅತಿ ನೀಚೆ : ಮಾರ್ಗದಲ್ಲಿ ಕೆನ್ನಘಾತಕಿ ತಾಟಕಿಯ ಕೊಂದು (ಪರಶು. ೨-೩). [ಕೆನ್ನ₃ (< ಕೆನ್ನಂ) + ಘಾತಕಿ]

**ಕೆನ್ನನೆ** (ಅ). ಸುಮ್ಮನೆ : ಉನ್ನತಿಕ್ಕೆಯನಾಗಳುಂ ನೆನೆಯುತ್ತುಮಿರ್ಪುದಿದೇಕೆ ಪೇಱ್ ಕೆನ್ನನೆನ್ನೊಡನೆಂದಿನಂದದೊಳೊಂದಲೊಲ್ಲದೆ ರಾಗದಿಂ (ಧರ್ಮಾಮೃ. ೮-೧೩). 'ಕೆಮ್ಮನೆ' ಪರಾ. [ಕೆನ್ನಂ + -ಅನೆ₁]

**ಕೆನ್ನಲ್ಲಿ** (ನಾ). ಒಂದು ಸ್ಥಳದ ಹೆಸರು (?) : ಗಳಕ್ಕೆಱೆಯ ತೆಙ್ಕಣ ಕಡೆಗೋಡೋಡಂ ನಿಱಿಸಿದ ಕಲ್ಲಿನ್ದಮನ್ತೆ ಪಾಯೆ ಕೆನ್ನಲ್ಲಿಯದ ಕಗ್ಗೆಱೆಯ ಸೀಮೆಯೆ ಸೀಮೆಯಾಗೆ (ಎಕ. XII, ನಂಜನ. ೨೬೯-೯೪ ; 904). [?]

**ಕೆನ್ನವಿಕ್ಕು** (ಕ್ರಿ). ನೋಯಿಸು ; ದುಃಖಕೊಡು : ಬನ್ನವೇಕಿನಿತು ಸುಖದೊಳಗೆ ನೀನಿರುತಿರ್ದು ಕೆನ್ನವಿಕ್ಕುವರೆ ಮಾಯೆಗೆಯಲ್ಲವಾಯೆಂದು ಸಕಳಿ ಚದುರಿಂ ನುಡಿಸುವ (ಪ್ರಭುಪು. ೫-೧೪೪). [ಕೆನ್ನ₃ + ಇಕ್ಕು]

**ಕೆನ್ನವಿರ್** (ನಾ). ಕೆಂಪು ಕೂದಲು ; ಕೆಂಗೂದಲು : ಉರ್ಬಿದ ಪುರ್ಬು ಕೆನ್ನವಿರ್[ಕೆಂಗದಿರ್] ಮಿಕ್ಕು ಮುಗಿಲ್ದ ದಾಡೆ (ವರ್ಧಪು. ೧೫-೩೭) ; ಮುದ್ರಿಸಿತು ಮಂಡೆಯಂ ಕೆನ್ನವಿರ ರಾಶಿ (ಶ್ರೀರಾಮಾ. ೧೩-೩೪೨). [ಕೆನ್ನ₁ + ನವಿರ್]

**ಕೆನ್ನವೀ** (ಕ್ರಿ). = ಕೆನ್ನವಿಕ್ಕು : ಪನ್ನೆರಡು ವರುಷಮಂ ಪಣ್ಣೆಲೆಯ ಕಂದಮೂಲಾದಿಗಳ ಸೇವಿಸಲು ತಣ್ಣಗಮ್ಮಂದಲೆಯ ನಿನ್ನನಿತ್ತುಂ ನಮಗೆ ಕೆನ್ನವಿತ್ತಂ (ಪ್ರಭುಪು. ೩-೧೧೨). [ಕೆನ್ನ₂ + ಈ₂]

**ಕೆನ್ನಾಬಲು** (ನಾ). ಕೆಂಪು ಬಣ್ಣದ ಅವಲು : "ಕುಟ್ಮಲಂ-ಕೆನ್ನಾಬಲು" (ಒಷಧಿ. ೩೫). [ಕೆನ್ನ + ಅಬಲು (< ಅವಲ್₁)]

**ಕೆನ್ನಾಯ್‌ಮೊಱಡಿ** (ನಾ). ಒಂದು ಸ್ಥಳದ ಹೆಸರು : ಅಂತೆ ಬರೆ ಕೆನ್ನಾಯ್‌ಮೊಱಡಿ ಅಂತೆಬರೆ ಮೂಡಣ ದೆಸೆಯೊಳ್ (ಮೈಆರಿ. ೧೯೨೧, ೧೦-೧೮೪ ; 967). [ಕೆನ್ನಾಯ್₀ + ಮೊಱಡಿ (< ಮೊರಡಿ₂)]

**ಕೆನ್ನಾಯಿ** (ನಾ). **೧.** ಕೆಂಪು ನಾಯಿ ; ಒಂದು ಜಾತಿಯ ಕಾಡು ನಾಯಿ : (೬). **೨.** (ಕರಾ) ನಾಯಿಯಂತೆ ಕಾಣುವ ಒಂದು ಹುಲಿ ; ನಾಯಿಹುಲಿ. [ಕೆನ್ನ₁ + ನಾಯಿ (< ನಾಯ್)]

**ಕೆನ್ನಾಲಗೆ, ಕೆನ್ನಾಲಿಗೆ** (ನಾ). ಕೆಂಪು ನಾಲಗೆ : ಹೆಬ್ಬಲ್ಲ ಬಿಡುವಾಯ ಜೊಲ್ಲ ಕೆನ್ನಾಲಗೆಯ ಗಬ್ಬಿನಾಮ್ಸ್ಗಳ ಹಾಸನುಗಿದು ಬಿಡೆ (ಜೈಮಿಭಾ. ೨೮-೪೬). **ಕೆನ್ನಾಲಿಗೆ** : ಕಣ್ಣುಗಳಿಂದಂ ಕಿಡಿಗಳ ಕಾರಿ . . . ಕೆನ್ನಾಲಿಗೆಯಿಂ ರಕ್ತವ ಸೋರಿ (ಪಾಂಚಜ. ೧೯). [ಕೆನ್ನ₁ + ನಾಲಗೆ]

**ಕೆನ್ನಾಲಿಗೆ** 'ಕೆನ್ನಾಲಗೆ' ನೋ.

**ಕೆನ್ನಿಱಿಮುಗಿಲ್** (ನಾ). ಕೆಂಪಾದ, ತೆರೆತೆರೆಯಾದ, ಪದರಪದರವಾದ ಮೋಡ : ಎಱಗುವ ನರೇಂದ್ರನಿಕರದ ಮಿಱುಗುವ ಮಣಿಮೌಳಿ ಮಂಜುಳಪ್ರಭೆ ತನ್ನೊಳ್ಪುಱುಗೆ ನೃಪನಂದನಂ ಕೆನ್ನಿಱಿಮುಗಿಲೊಳ್ಪೊಳೆವ ಚಂದ್ರಮಂಗೆಣೆಯಾದಂ (ಕಾದಂಪೂ. ೪೬೯). [ಕೆಂ+ನಿಱಿ₁+ ಮುಗಿಲ್]

**ಕೆನ್ನೀರ್**₁, **ಕೆನ್ನೀರು**₁ (ನಾ). **೧.** ಕೆಂಪು ನೀರು ; ಕೆಸರು ನೀರು : "ಕಲ್ಮಷಜಲಂ ಕೆನ್ನೀರ್" (ಕರ್ಣಾನಿ. ೬). **೨.** ನೆತ್ತರು ; ರಕ್ತ : "ಕೆನ್ನೀರ್ . . . ಶೋಣಿತಕ್ಕೆ ನಾಮಂ" (ಕವಿಕಂ. ೧೩೦) ; ಕೆನ್ನೀರ್ಗಳ ಕಾಲ್ಬೊನಲ್ ಮಸಗಿ . . . ಘೋರ್ಗರೆದೆತ್ತಲುಂ ಪರಿಯೆ (ಕಬ್ಬಿಕಾ. ೨೭೪) ; ತೇರ್ ತುಮುರ್ತುಮುರಾಗಲೆಚ್ಚು ವಸುಮತಿಗೆ ಕೆನ್ನೀರ್ ತುಳ್ಕೆ ತುಳ್ಕಿಹಂ (ಚಬಪು. ೪೯-೪೧) ; ಗಾಯಗಾಯಕೆ ಕೆನ್ನೀರ್ಗಳು ತುಳುಕೆ ಹೋರಿದರು (ಕಂಸವಿ. ೨೧-೯೨). **ಕೆನ್ನೀರು**₁ : **೧.** ನೀಲಾಚಲಶಿಖರದ ಕಲ್ಲ ಪಡಿಯೊಳಗಿದ್ದ ಕೆನ್ನೀರು ಒಡೆವಾಯ್ತೆಂತೆ ಲೋಹಿತಧಾರೆ ಸುರಿದು ಕಿಗ್ಗಡಲಲ್ಲಿ ವಾಹಿನಿಯಾಯಿತ್ತು (ಮೋಹತ. ೧೨-೬೦) ; ದುರದುರಿಪ ಕೆನ್ನೀರ ತೊಱೆ ಬೆಟ್ಟದಿಂದಿಳಿವ ತೆಱದೊಳ್ ಕಪಾಲದಿಂ ಕಱೆವುತಿರಲು (ಚಬಪು. ೧೯-೧೪). **೨.** ಮದನವಿಯೋಗಿಗಳೆದೆಯ ಘಟ್ಟುಗಿದೆಚ್ಚ ಪದುಮಾಸ್ತ್ರದಲಗಿನಗ್ರದಲಿ ಪುದಿದ ಕೆನ್ನೀರೆನಲಲಿತಿಗೆಯುಗುರ್ಗಳಿಂ ಪದವೆರಳೆಸೆದುವಂಗನೆಯ (ಕಂಸವಿ. ೯-೧೮). [ಕೆನ್ನ₁ + ನೀರ್₁]

**ಕೆನ್ನೀರ್**₂, **ಕೆನ್ನೀರು**₂ (ನಾ). ಕೆಂಪು ಬಣ್ಣದ ಕಾಂತಿ, —ಪ್ರಭೆ. 'ಕೆನ್ನೀರ್ಮುತ್ತು' ಪರಾ. **ಕೆನ್ನೀರು**₂. 'ಕೆನ್ನೀರಮುತ್ತು' ಪರಾ. [ಕೆನ್ನ₁ + ನೀರ್₂]

**ಕೆನ್ನೀರಾಡು** (ಕ್ರಿ). ನೆತ್ತರನ್ನು ಚೆಲ್ಲಾಡು, —ಓಕುಳಿಯಾಡು : ಆನೆಯ ಕೆಡಹಿ ಕೆನ್ನೀರಾಡುತ್ತಿದ್ದಾನೆ (ಮೋಹತ. ೩೫-೩). [ಕೆನ್ನೀರ್₁ + ಆಡು₁]

**ಕೆನ್ನೀರು**₁ 'ಕೆನ್ನೀರ್₁' ನೋ.

**ಕೆನ್ನೀರು**₂ 'ಕೆನ್ನೀರ್₂' ನೋ.

**ಕೆನ್ನೀರ್ಗುಡಿ** (ಕ್ರಿ). ನೆತ್ತರನ್ನು ಕುಡಿ ; ರಕ್ತವನ್ನು ಹೀರು : ವಿರಹಿಗಳೆದೆಯ ಕೆನ್ನೀರ್ಗುಡಿದ ತನುವ ಕರಕೆ ಕಠಾರಿಗಳಾಗಿ ಮೆಱೆದವು ಬಿರುದನೆಂದೆನುತ ಸೌರಭ್ಯದ ಸುರಗಿಯ ಪೂಗಳೊಪ್ಪಿದವು (ಕಂಸವಿ. ೫-೯೪). [ಕೆನ್ನೀರ್₁ + ಕುಡಿ₁]

**ಕೆನ್ನೀರ್ಮುತ್ತು** (ನಾ). ಕೆಂಬಣ್ಣದ ಕಾಂತಿಯುಳ್ಳ ಮುತ್ತು, —ಮೌಕ್ತಿಕ : ಲಾವಣ್ಯಜಲ ಪೂರ್ಣ ಕುಂಭ ರಂಭಾವಳಿ ಕಾವನಂಬಿನ ಬತ್ತಳಿಕೆ ತೀವಿದ ಕೆಂದಳಿರುಗಳ ಕೆನ್ನೀರ್ಮುತ್ತ ಭಾವಕಿಯರು ತಳೆದಿಹರು (ಕಂಸವಿ. ೨೪-೨೦) ; ಬಿಳಿಮುತ್ತು ಕೆನ್ನೀರ್‌ಮುತ್ತು ಕಟ್ಟಾಣಿ ಮುತ್ತಿಳ ವಟ್ಟ ಮೂಕುತಿ ಮುತ್ತು (ಕಂಸವಿ. ೬-೬೬). [ಕೆನ್ನೀರ್₂ + ಮುತ್ತು₂. / ತಮಿ. ಚೆನ್ನೀರ್ಮುತ್ತು]

**ಕೆನ್ನುರಿ** (ನಾ). ಕೆಂಪಾದ ಉರಿ, —ಜ್ವಾಲೆ : ಕೆನ್ನುರಿ, ಕೆಚ್ಚುರಿ (ಶಬ್ದಾನು. ೩೪೩ ಪ್ರಯೋ). [ಕೆನ್ನ₁ + ಉರಿ₂]

**ಕೆನ್ನೆ** (ನಾ). ಕದಪು ; ಗಲ್ಲ ; ಕಪೋಲ : ಕೆನ್ನೆವರಂ ನಿಮಿರ್ದಕ್ಷಿಗಳ್ಗೆ ರಾಗಂ ಮಧುಸೇವೆಯಿಂ ನೆಗಟ್ಟೆ (ಕಾವ್ಯಸಾ. ೯೬೫ ಶೂದ್ರಕ) ; ಕೆನ್ನೆಯಿಂದೊಡೆದೋರೊಂದೊಗೆತಂದುವಂದು ನರೆಗಳ್ ವಿದ್ಯಾಧರಾಧೀಶನಾ (ಆದಿಪು. ೧-೭೯) ; ಕೆನ್ನೆಯಲಿ ಕೈಯಿಟ್ಟು ತಲೆಯೆತ್ತಿ (ಸಿದ್ಧರಾ. ೨-೩೭). ಚಾಪವ ಗೊಲೆಗೇಱಿಸಿ ಕೆನ್ನೆವರ ಬಲಿದು (ಅಂಜಚ. ೧೩-೧೦೦) ; ಸರಳ ಕೆನ್ನೆಗೆ ಸೇದಿದನು (ಕುಮಾರವ್ಯಾ. ೧೪-೧೭) ; ಇನ್‌ಸ್ಪೆಕ್ಟರ್ ಹಲವಾರು ಪ್ರಶ್ನೆಗಳನ್ನು ಕೇಳಿದ . . . ಉತ್ತರವನ್ನು ಕೊಡಲಿಲ್ಲ. ರೋಷಗೊಂಡ ಇನ್ಸ್‌ಪೆಕ್ಟರ್ ಅವನ ಕೆನ್ನೆಗಳಿಗೆ ಬಾರಿಸಿದ (ಆತ್ಮಾರ್ಪ. ೧೧೯).

[ದೇ. ‖ ತಮಿ. ಚೆನ್ನೈ, ಚೆನ್ನಿ ; ಮಲ. ಚೆನ್ನಿ, ಕೆನ್ನಿ, ಕೊನ್ನಿ ; ತುಳು. ಕೆನ್ನೆ, ಕೆನ್ನಿ ; ತೆಲು. ಚೆಕ್ಕು ; ಗೊಂಡಿ. ಕೊರ್ವಿ]

**ಕೆನ್ನೆಗಡಿಯಂಬು** (ನಾ). ಕೆನ್ನೆಯವರೆಗೆ ಸೆಳೆದು ಬಿಟ್ಟ ಬಾಣ: ರವಿಸುತ ಸೆಳೆದು ಮುಷ್ಟಿಯ ಕೆನ್ನೆಗಡಿಯಂಬಿನಲಿ ಬರೆ ಕಂಡು (ಕುವ್ಯಾದ್ರೋ. ೧೩-೪೨). [ಕೆನ್ನೆ + ಗಡಿ$_1$ + ಅಂಬು$_2$]

**ಕೆನ್ನೆಗ್ಗಿಲು** (ನಾ). ಕೆಂಪು ನೆಗ್ಗಿಲು: "ದಹನಾಗಕುಃ – ಕೆನ್ನೆಗ್ಗಿಲು" (ಓಷಧಿ. ೭೪). [ಕೆನ್ನ$_1$ + ನೆಗ್ಗಿಲು (< ನೆಗ್ಗಿಲ್)]

**ಕೆನ್ನೆತ್ತರ್, ಕೆನ್ನೆತ್ತರು** (ನಾ). ಕೆಂಪು ರಕ್ತ: ಕುಡಿವೆಂ ದುಶ್ಶಾಸನೋರಸ್ಥಳಮುನಗಲೆ ಪೋೞ್ದಾರ್ದು ಕೆನ್ನೆತ್ತರಂ (ಪಂಪಭಾ. ೭-೧೩); ದುರಾತ್ಮರ್ ಜುಬ್ಬನೆ ಕೆನ್ನೆತ್ತರೊಗೆಯೆ ತೊಲಗದೆ ಬಡಿದರ್ (ಧರ್ಮಾಮೃ. ೩-೧೯೧); ವಿಪ್ರನೊರ್ವನ ಮೈಯ್ಯುಂ ಸೀಳೆ ಕೆನ್ನೆತ್ತರುಂ ಪುಳುವುಂ ಸುರಿಯಲ್ (ಬಸರ. ೧೦-೬೩). **ಕೆನ್ನೆತ್ತರು**: ಕಾಳಿಜ ಮಿಗೆ ಸುರಿಯೆ ಕೆನ್ನೆತ್ತರುಚ್ಚಳಿಸೆ (ಕುರಾಸಾಂ. ೧೦-೪೪); ಮೊಲೆಯುಂಬಂದದಲಿ ಕೆನ್ನೆತ್ತರನು ಹರಿ ಹೀರೆ (ಸಾಳ್ವಭಾ. ೧೧-೪೧). [ಕೆಂ + ನೆತ್ತರ್]

**ಕೆನ್ನೆತ್ತರು** 'ಕೆನ್ನೆತ್ತರ್' ನೋ.

**ಕೆನ್ನೆದುಱಿಸು** (ಕ್ರಿ). ಕೆನ್ನೆಯನ್ನು ತುರಿಸು: ಕೆನ್ನೆದುಱಿಸಿ ಮೈಯ ಲುಗಿಪನ್ನ ಮಿಡುಕೆ ಪವಮಾನ ಪಥಕೆ ಖುರವನ್ನಿಡುವುದು ಬೇಗಡೊಳು (ಶ್ರೀಪಾಲ. ೪-೮). [ಕೆನ್ನೆ + ತುಱಿಸು]

**ಕೆನ್ನೆಪೂ** (ನಾ). ಕಿವಿಯಲ್ಲಿ ಧರಿಸುವ ಒಂದು ಆಭರಣ: "ಎಲ್ಲಿ? ಆ ಕೆನ್ನೆಪೂ..." ಮಾಲಿಂಗ ಕಿವಿಯ ಆಭರಣವನ್ನು ಎತ್ತಿಕೊಂಡ (ಬಣ್ಣಮಾ. ೯೨). [ಕೆನ್ನೆ + ಪೂ$_2$]

**ಕೆನ್ನೆಯೋರೆ** (ನಾ). ಕೆನ್ನೆಯ ಪಕ್ಕ, —ಪಾರ್ಶ್ವ: ಸರಳ ಮುಷ್ಟಿಯ ಕೆನ್ನೆಯೋರೆಯು ಗುರುಭಡಾಳಿ[ಸೆ] (ಕುವ್ಯಾದ್ರೋ. ೧-೬೧). [ಕೆನ್ನೆ + ಓರೆ$_1$]

**ಕೆನ್ನೆಯ್ದಿಲೆ** (ನಾ). ಕೆಂಪುಬಣ್ಣದ ನೈದಿಲೆ: (ಶ). [ಕೆನ್ನ$_1$ + ನೆಯ್ದಿಲೆ (< ನೆಯ್ದಿಲ್)]

**ಕೆನ್ನೆಲ** (ನಾ). ಕೆಂಪು ಮಣ್ಣು, —ಭೂಮಿ: ಒಂಗೇಣ ಗಡಿಂಬದಿಂ ಕೆಂನೆಲ ಮತ್ತ ೨ (ಸೌಇಇ. IX-i, ೨೫೩-೬೬; 1149); ಭೂಮಿ ಯೆರ್ರೆನೆಲ ಕೆಂನ್ನೆಲ ಕಾಡಾರಂಭ ನೀರಾರಂಭ (ಎಕ. XII, ಶಿರಾ. ೭೪-೨೮; 1621); ಆ ಗ್ರಾಮಕ್ಕೆ ಸಲುವಂತಾ ಯರೆನೆಲ ಕೆಂನೆಲ (ಮೈಆರಿ. ೧೯೩೯, ೭೨-೬೭; 1680). [ಕೆನ್ನ$_1$ + ನೆಲ]

**ಕೆನ್ನೆಲ್ಲೆ** (ನಾ). = ಕೆನ್ನಲ್ಲಿ(?): ತಗಡೂರ ಕುರುಳ ಕೋಗಣ್ಣಿ ಎಡ ತಲೆಯ ಕೊತದ ಪುಳ್ಳಿಗನುಂ ಕೆಂನ್ನೆಲ್ಲೆಯ ಭದ್ರಕ್ಷಿ ಐಯನೂಂ ××× ಸಕ್ಷಿ (ಎಕ. III, ನಂಜನ. ೧೯೯-೧೬; ?). [?]

**ಕೆನ್ನೊಡಲ** (ನಾ). ಕೆಂಪು ಓಡಲ; ಒಂದು ಜಾತಿಯ ಹರಳುಗಿಡ: "ಉರುಬೂಕಃ – ಓಡಲ, ಕೆನ್ನೊಡಲ" (ಓಷಧಿ. ೧೬). [ಕೆನ್ನ$_1$ + ಓಡಲ (< ಅವುಡಲ)]

**ಕೆಪನೆ** (ನಾ). ಕೆನ್ನೆ; ಕಪೋಲ: ಕೆಪನೆಗೆ ಹೊಡದು ಕಿತ್ತುಕೊಂಡು ಹೋದ (ರೂಢಿ). [?]

**ಕೆಪ್ಪ** (ನಾ). ಕಿವಿ ಕೇಳಿಸಲಾರದವನು; ಕಿವುಡ: ಚಪ್ಪರದೊಳಗೊಬ್ಬ ಕೆಪ್ಪನ ನೋಡಿ ತಪ್ಪದೆ ಮಾತಾಡಿದ ಧನಿಗೂಡಿ (ನಾಪದ. ೨೦೪); ಕೆಪ್ಪ ನೆನ್ನುತ ಇವನ ಎಡುರಲಿ ಸದರ ನುಡಿವರು ಹೆಂಗಳು (ಮೂಕಮು. ೭); ನೀನೊಬ್ಬ ಕೆಪ್ಪ (ಹಹಸ. ೧೨). [ಕೆಪ್ಪು$_3$ + -ಅ$_7$]

**ಕೆಪ್ಪಿ$_1$** (ನಾ). ಕಿವಿ ಕೇಳಿಸಲಾರದವಳು; ಕಿವುಡಿ: (ಶ). [ಕೆಪ್ಪ + -ಇ$_2$]

**ಕೆಪ್ಪಿ$_2$** 'ಕೆಪ್ಪೆ$_1$' ನೋ.

**ಕೆಪ್ಪು$_1$** (ಕ್ರಿ). ಕೊಡು; ಸಲ್ಲಿಸು: ವಿಪ್ರರ ವಿವಾಹಮುಮಾಗಪ್ಪಸಿತಜಱೊಳಿಲ್ಲಮೊಸಗೆ ದ್ರಮ್ಮಮುಮ್ಮಾಱಂ ತಪ್ಪಾ[ದೆ]ಮಾಣಿಯೊಳೆರಡಂ ಕೆಪ್ಪಿದರೀ ಶೂದ್ರಗಣದ ಮದುವೆಯೊಳೊನ್ದಂ (ಕಇ. II, ೪-೮; 918). [?]

**ಕೆಪ್ಪು$_2$** 'ಕೆರ್ಪು' ನೋ.

**ಕೆಪ್ಪು$_3$** (ನಾ). ಕಿವಿ ಕೇಳಿಸದಿರುವಿಕೆ; ಕಿವುಡು; ಬಧಿರತೆ. 'ಕೆಪ್ಪು ಗಟ್ಟು' ಪರಾ. [ದೇ. ‖ ತುಳು. ಕೆಪ್ಪು]

**ಕೆಪ್ಪುಗಟ್ಟು** (ಕ್ರಿ). ಕಿವುಡಾಗು; ಗಡಚಿಕ್ಕು: ಭೇರಿ ಶಂಖ ನಗಾರಿ ಬಹು ಕಹಳಾರವಕೆ ಕಿವಿ ಕೆಪ್ಪುಗಟ್ಟಿತು (ದೇವೀಪ್ರ. ೨೬). [ಕೆಪ್ಪು$_3$ + ಕಟ್ಟು$_1$]

**ಕೆಪ್ಪೆ$_1$, ಕೆಪ್ಪಿ$_2$** (ನಾ). ೧. ಕೆನ್ನೆ; ಕಪೋಲ: ಕೆಪ್ಪೆಯ ಕುಟ್ಟೆ ಕೆಲಂಬರನುರೆ ಬಿಗಿಯಪ್ಪ ಕೆಲರ ಕಾಲ್ವಿಡಿದು ಅಪ್ಪಳಿಸುತ (ನೇಮಿಸಂ. ೧೬-೧೩೬); ವಾಮನನ ಕೆಪ್ಪೆಗೆ ಇನ್ನೊಂದು ಅಪ್ಪ ಕೊಡಲಿಕ್ಕಾಗಿ ಕೈಬೀರಿದಾಗ... ಓಡಿದನು (ನೊಮುಗು. ೪೬). ೨. "ಒಂದು ಬಗೆಯ ಮೀನು" (ಪ್ರಭಣ್ಣ). **ಕೆಪ್ಪಿ$_2$**: ೧. ಹಿಪ್ಪೇ ಹೂವಿನ್ಹಂಗೆ ಕೆಪ್ಪೀಗೆ ನೆರಿಬಂದೊ ಮುತ್ತಾಕೆ ಗೌರಿ ತವರಾಸೆ (ಜಗೀತ. ೬೩); ಬಕ್ಕಳಹೂವು ಅವಳ ಕೆಪ್ಪಿಗೂ ಸಾಲದು (ನನ್ನೂರು. ೧೫೬). [ದೇ. ‖ ತುಳು. ಕೆಪ್ಪೆ, ಕೆಬ್ಬು]

**ಕೆಪ್ಪೆ$_2$** (ನಾ). "ಕಿವುಡಿ; ಕೆಪ್ಪಿ" (ಪ್ರಭಣ್ಣ). [ಕೆಪ್ಪ + -ಎ$_2$]

**ಕೆಬ್ಬಱೆ** (ನಾ). ೧. ಕೆಂಪು ಬಂಡೆ. ೨. ಒಂದು ಸ್ಥಳದ ಹೆಸರು (?): ದೇವಸಾಲೆಯುಂ ಕೆಬ್ಬಱೆಏ ಸೊಯಿಎ ಇರ್ಪ್ಪೆಏ ಗಣಿಗೂರಸನ್ಧಿಗಾಲಾನಾಡದರೆ ಪೋಗಿ... ಕೂಡಿತ್ತು (ಎಕ. XVI, ಗುಬ್ಬಿ. ೭೫-೫೦; 733); ರಂಗಸಮುದ್ರ ಕೆರೆಯ ಕೊಬ್ಬಿನ ಕೆಬ್ಬಱೆ ಮೇರೆಯಾಗಿ ನೆಲುಮನೆಯ ಸೀಮೆಯನ್ನೂ (ಎಕ. III, ಶ್ರೀರಂಗ. ೧೩೩-೬೩; 1453). [ಕೆಬ್ಬೆ$_1$ + ಅಱೆ$_4$]

**ಕೆಬ್ಬೆ$_1$** (ನಾ). ಕೆಂಪುಮಣ್ಣಿನ ಭೂಮಿ: ಆದಿಯಾಗೆ ನಾಲ್ಕದು ಕೆಬ್ಬೆಯ ಮಣ್ಣುಮಂ ಸಿನ್ದಕಾಲಾದಿಯಾಗೆ ಎಱೆದು (ಎಕ. III, ಚಾಮರಾ. ೧೮-೧೩; 1000 ?); ಕಾಡಗೆಯ ಮಣ್ಣು ೩೦೦ ಕೆಬ್ಬೆಯ ಹಾಳ ಮಣ್ಣು ೧೦೦ (ಎಕ. IX, ಕಾನಕಾ. ೭೧-೧೩; 1259); ಗೋಪೀನಾಥ ದೇವರಿಗೆ ಕೊಡಗೆಯ ಗದ್ದೆ ಸೊವಂದು ೧ ವಂದು ಹೋಲಕ್ಕೆ ಕೆಬ್ಬೆಯಲು ಸಾವಿರ ಮಂಣು ಕೊಟ್ಟೆ (ಎಕ. XIV, ತಿರುಮ. ೪೨-೬೧; 1523). [ದೇ. ‖ ತಮಿ. ಚೇಪ್ಪು; ಮಲ. ಚವಪ್ಪು; ಚೋಪ್ಪು]

**ಕೆಬ್ಬೆ$_2$** (ನಾ). ಸಿಪ್ಪೆ: ಬೊಚ್ಚುಬಾಯಿ ಅದವನು ಕೆಬ್ಬೆ ಕೆತ್ತಿದ ಕಬ್ಬು ಬಯಸಿದ ಹಾಗೆ (ಗಾದೆ). [?]

**ಕೆಬ್ಬೆತೋಟ** (ನಾ). ಕೆಂಪುಮಣ್ಣಿನ ತೋಟ (?): ಅಲ್ಲಿಂದಂ ಮೂಡಲು ಕೆಬ್ಬೆತೋಟದ ಉಪ್ಪಿನ ಮೋಳೆಯ ಕರಿಯಕಲ್ಲು (ಎಕ. XIV, ಮಂಡ್ಯ. ೧೧೫-೧೦೬; 1516). [ಕೆಬ್ಬೆ$_1$ + ತೋಟ (< ತೋಂಟ)]

**ಕೆಬ್ಬೆರೋಗ** (ನಾ). ಸಸ್ಯಗಳನ್ನು ಹಾಳುಮಾಡುವ ಒಂದು ರೋಗ; ಬೂಷ್ಟು ಹಿಡಿಯುವಿಕೆ: (ಶ). [ಕೆಬ್ಬೆ$_1$ + ರೋಗ]

**ಕೆಬ್ಬೆವಣ್** (ನಾ). ಕೆಂಪುಮಣ್ಣು: ಕೆಬ್ಬೆವಣ್ಣಂ ಕೆದಱಿದಂತೆಸೆವ ಖಿಡಿಖಂಡದೊಬ್ಬುಳಿಯಿನೆಸೆವ ಬಿಸಿಯುರುಣಜಲಗಳ ಕೊಂಡವೆಸೆದವಾ ಧುರ ಧರೆಯೊಳು (ಸಮ್ಯಕಾ. ೬-೫೦). [ಕೆಬ್ಬೆ$_1$ + ಮಣ್]

**ಕೆಬ್ಬೈಕೆಲಬ್ಬೈ** (ನಾ). ಒಂದು ಅನುಕರಣ ಶಬ್ದ. **ಕೆಬ್ಬೈಕೆಲಬ್ಬೈಅನಸು** = ಸಾಕುಸಾಕೆನಿಸು; ಮೊರೆಯೋ ಎನ್ನಿಸು: ಆ ಶ್ರೀಮಂತನ್ನೊಂದು ಕೆಬ್ಬೈಕೆಲಬ್ಬೈಅನಸೂ ತನಕಾ ನನಗೇಕು ಸಮಾಧಾನಇಲ್ಲ (ಮಿಂಚಿಹು. ೮೯). [?]

**ಕೆಮ್ಮ** (ನಾ). = ಕೆಬ್ಬೆ$_1$: ಪಡಿಕ್ಸೊಳಂ ಕಳನಿ ಒಕ್ಕಣ್ಣುಗ ಕೆಮ್ಮ ಕೊಟ್ಟನ್ (ಎಕ. IX, ಬೆಂಗಳೂ. ೪೨-೨; 820). [< ಕೆಮ್ಮಣ್ ?]

**ಕೆಮ್ಮಗೆ** (ಅ). ೧. ಸುಮ್ಮನೆ; ನಿಷ್ಕಾರಣವಾಗಿ; ವ್ಯರ್ಥವಾಗಿ; ಬರಿದೆ: ಗುರುಗಳಂ ಕುಲವೃದ್ಧರನಾಜಿಗುಯ್ದು ಕೆಮ್ಮಗೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ (ಪಂಪಭಾ. ೧೦-೧೬); ಪುಣ್ಯಮೆಂದು ವಿಷವಲ್ಲಿಗೆ ನೀರೆಱೆವೆಗ್ಗನಂತೆ ಕೆಮ್ಮಗೆ ಸುಖವೆಂದಸದ್ವಿಷಯಸೌಖ್ಯದೊಳಿಂತೆಜಗಲ್ಕೆ ತಕ್ಕುದೇ (ಕಾದಂಪೂ. ೮೪೭); ಪರಪ್ರತಿಭೆಯ ಗುಣ್ಪಱಿಯದೆ ತಾಮುಂ ಕೆಮ್ಮಗೆ ಡುಱುಕೆಂಬುವು ಕುಕವಿ ಕೂಪಮಂಡೂಕಂಗಳ್ (ಅನಂಪು. ೧-೪೨). ೨. ಮೌನವಾಗಿ; ನೀರವವಾಗಿ: ನುಡಿಯದೆ ಕೆಮ್ಮಗಿರ್ದೊಡಮಿರಲ್ಕಣಮೀಯದೆ ನಿಮ್ಮೊಳೆನ್ನುಮಂ ನುಡಿಯಿಸಿದಪ್ಪುವಾ ಕುರುಕುಳರ್ಕಳ ಗೆಯ್ದಪರಾಧಕೋಟಿಗಳ್ (ಪಂಪಭಾ. ೭-೪೫); ಮಹೋತ್ಸವುಸತ್ವಂ ವಿಭು ಕೆಮ್ಮಗಿರ್ಪುದು ಮಳುತೊರ್ಂದಂಬಿನಿಂದೆಚ್ಚನಾ ದಮಿತಾರಿ (ಶಾಂತಿಪು. ೪-೪೮); ಕೆಮ್ಮಗಮ್ಮನೆ ಗುಸುಟೀಕೆ ಕನ್ನ ಸುಖಕಲ್ಲದೆ ಕೇಳಿಕೆ ಯಾರ ಬಿಟ್ಟಿಯೋ (ಲೀಲಾವ. ೨-೧೧೪). [?]

**ಕೆಮ್ಮಟ್ಟೆ** (ನಾ). ಕೆಂಪು ಮಟ್ಟೆ; ಕೆಮ್ಮಣ್ಣು: ಜಟ್ಟಿಗಳ ದಟ್ಟಿಗಳಿಂದೆದ್ದ ಕೆಮ್ಮಟ್ಟೆಗಳ ಧೂಳಿಯೆ (ಸೌಗಂಧಿ. ೧೮೫-೧೭).
[ಕೆಂ + ಮಟ್ಟೆ]

**ಕೆಮ್ಮಡ** (ನಾ). ಕೆಂಪಾದ ಹಿಮ್ಮಡಿ: ಪಾದಾಗ್ರದಿಂ ತೇದು ಕಾಯ್ದೊದೆದಳ್ ಕೆಮ್ಮಡದಿಂದವಿಟ್ಟೊರಸಿದೊಳ್ (ಲೀಲಾವ. ೧೪-೩೩).
[ಕೆಂ + ಮಡ$_1$]

**ಕೆಮ್ಮಣ್**, ಕೆಮ್ಮಣ್ಣು (ನಾ). ಕೆಂಪು ಮಣ್ಣು: ಕೆಮ್ಮಣ್, ಕೆಂಮಣ್ (ಶಮುದ. ೧೬೧ ಪ್ರಯೋ); ಗೆಣಸರಿಸಿನಂ ಹತ್ತಿಯ ಹರಳ ರಸಮಂ ಪೂರೈಸಿ ಕಾಸಿ ಕೆಮ್ಮಣ್ಣಳಿಯ ಗುಳುಗ ಬಿಡಲದಱ ನಾತಂ ಕೆಡುವುದು (ಸೂಪಶಾ. ೨-೧೯); ಹಿರಿವೂರಿಂದ ಹೊಸೂರಿಗೆ ಹೋದ ದಾರಿಯವೊಳಗಣ ಕೆಂಮಣ್ಣುಗುಯ ಜಾಲೀಮರ (ಎಕ. XI, ಹೊಳಲ್ಕೆ. ೯೪-೧೦೩; 1511). **ಕೆಮ್ಮಣ್ಣು**: ಗೋಣಿಯ ಪಟ್ಟಿಯಂ ಮುಚ್ಚಿ ಕೆಮ್ಮಣ್ಣು ಬಳಿದುಕೊಂಡು (ಸೂಪಶಾ. ೫-೨೬); ತರುಣಾರ್ಕಗರುಡಿಯ ಕೆಮ್ಮಣ್ಣಿನಿಂದಲೆಯರುಣೋದಯವು ತೋಱಿಸಿತು (ಮೋಹತ. ೧೪-೧೮೮); ಭಲಾ ಜಟ್ಟಿ ಅಂದರೆ ಕೆಮ್ಮಣ್ಣು ಮುಕ್ಕಿದ (ಗಾದೆ). [ಕೆಂ + ಮಣ್]

**ಕೆಮ್ಮಣಿ** (ನಾ). ಕೆಂಪು ಬಣ್ಣದ ಮಣಿ; ಮಾಣಿಕ್ಯ: ನಡುಗಣ್ಣಕಿಡಿಯೆ ಮಾರ್ತಾಪ ಪೇರ್ದೆರೆಯಿಂದೆ ಸಿಡಿದ ಕೆಮ್ಮಣಿಯಾಗೆ (ವೀಶೈಪು. ೫-೧೧-೧). [ಕೆಂ + ಮಣಿ$_3$. / ತಮಿ. ಚಮ್ಮಣಿ]

**ಕೆಮ್ಮಣ್ಣು** 'ಕೆಮ್ಮಣ್' ನೋ.

**ಕೆಮ್ಮತ್ತಿ** (ನಾ). ಕೆಂಪಾದ ಮತ್ತಿ, —ಮಚ್ಚೆ: ಕರದೊಳು ತಾವರೆ ಪಾದದೊಳಂಬುಜ ವರಶಂಖ ಸುಳಿ ಶರೀರದೊಳು ಕರಮೆಸೆದಿಹ ಕೆಮ್ಮತ್ತಿಕಾರೆಳ್ಳುಗಳಿರಲೊಪ್ಪಿತವನ ದಿವ್ಯಾಂಗ (ನಾಗಕು. ೨೫-೪೮).
[ಕೆಂ + ಮತ್ತಿ$_1$]

**ಕೆಮ್ಮನೆ$_1$** (ನಾ). ಬರಿಯ ಮನೆ; ನೆಪಮಾತ್ರಕ್ಕೆ ಮನೆ: ನಿಮ್ಮ ಶರಣರಲ್ಲದವರ ಮನೆ ಕೆಮ್ಮನೆ ಕಂಡಯ್ಯ (ಸಿದ್ಧವ. ಕ. ೮೬೬); ಶಿವ ನಿಮ್ಮನಾರಾಧಿಸದವನ ಮನೆ ಕೆಮ್ಮನೆ (ಗಣಭಾ. ೬೫-೧); ತನುಭವನಿಲ್ಲದ ಮನೆ ಕೆಮ್ಮನೆ (ವೃಷವಿ. ೧೪-೮೭). [? + ಮನೆ]

**ಕೆಮ್ಮನೆ$_2$** (ಅ). = ಕೆಮ್ಮಗೆ: "ಕೆಮ್ಮನೆ ರಿಕ್ಕಟ ಚಿನ್ನನೆಯೆನೆ ಸುಮ್ಮನೆಂಬ ಪರ" (ಕವಿಕಂ. ೧೩೧); ಇಱಿಯದೆ ಕೆಮ್ಮನುಂತೆ ಭುವನಂಗಳಸುಂಗೊಳ್ ತಕ್ಕುದೆ (ಕಾವ್ಯಸಾ. ೮೧೧ ಶೂದ್ರಕ); ಕಡೆಗಣ್ಗಳ್ ಮುನಿಸನಭಿನಯಿಪವೋಲ್ ಕೆಮ್ಮನೆ ರಕ್ತಾಂಭೋಜ ರುಚಿಯನೀಱ್ಕುಳಿಗೊಳ್ಗುಂ (ಕವಿರಾ. ೧-೯೩); ಊರಿಲ್ಲ ಕೇರಿಯುಲ್ಲೆಲ್ಲಿ ಚರಿಗೆವುಗುವಮುಂತು ಕೆಮ್ಮನೇಕೆಮ್ಮ ತಾಂ ಗಿದಪಿರಿ (ವಡ್ಡಾರಾ. ೯೦-೨೯); ಕೃತಾಂತನಿಂತು ನಿರ್ನೆರಮೆಟೆದುಯ್ಯೆ ಜಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ (ಆದಿಪು. ೩-೪); ಚಲದಿಂದೀ ಬಂದಪಂ ಕೆಮ್ಮನಂಡಲೆಯಲ್ ಶ್ರೀ ಗುಣ ಚಂದ್ರದೇವನ್ (ಎಕ. VII, ಶಿವಮೊ. ೫೭-೨೪; 1115); ನಿಮ್ಮನಱಿಯದ ಕಾರಣ ಕೆಮ್ಮನೆ ಕೆಟ್ಟೆನಯ್ಯಾ (ಮಹಾದೇ. ೩-೬); ಅಕ್ಕಟಾ ಕೆಮ್ಮನೀ ಮಿತ್ರನ ತೇಜಕ್ಕಡ್ಡಲಾದೆಂ (ರಾಜಶೇ. ೬-೪). 'ಕೆನ್ನನೆ' ಪರಾ. [?]

**ಕೆಮ್ಮಲು**, ಕೆಂಬಲು$_1$ (ನಾ). ಕೆಮ್ಮು; ಕೆಮ್ಮುವಿಕೆ; ಕಾಸ: (ಕಿ). ಕೆಂಬಲು$_1$. 'ಕುಕ್ಕಲಗೆಂಬಲು' ಪರಾ. [ಕೆಮ್ಮು$_1$ + -ಅಲು (< -ಅಲ್$_2$)]

**ಕೆಮ್ಮಿಂಚು** (ನಾ). ಕೆಂಪು ಮಿಂಚು: ಬಿಱುಮಿಸಿಲ್ಗೆ ಕೆಮ್ಮಿಂಚು (ಶಬ್ದಾನು. ೨೧೮ ಪ್ರಯೋ); ಬಾನ ಬರಸಿಡಿಲಲ್ಲಿ ಕೆಮ್ಮಿಂಚು ಹೊಮ್ಮಿಂಚು (ಸೂರ್ಯಪಾ. ೧೧೧-೧). [ಕೆಂ + ಮಿಂಚು]

**ಕೆಮ್ಮಿಸು** (ಕ್ರಿ). ಕೆಮ್ಮುವಂತೆ ಮಾಡು: (ಕಿ). [ಕೆಮ್ಮು$_1$ + -ಇಸು]

**ಕೆಮ್ಮೀನ್**, ಕೆಮ್ಮೀನು (ನಾ). ಮೀನುಗಳಲ್ಲಿ ಒಂದು ಬಗೆ; ಕೆಂಪು ಮೀನು: ಜಡಗಂಧರಹಿತ ಕೆಮ್ಮೀನ್ಗಳಂದದಿ ಕಿಱುದೊಡೆ ಮೆಱೆದುವು ಕುಮಾರತಿಯ (ಮೋಹತ. ೨೩-೧೫); ಕೆಮ್ಮೀನ್ಗಳೇಂ ಮನಂಗೊಳಿಸಿದುವೋ (ರಾಜಶೇ. ೧-೯೯). **ಕೆಮ್ಮೀನು**: ಕುಱಿದಲೆಗ ಹೆಮ್ಮೀನು ಕೆಮ್ಮೀನು . . . ಗಿಱಿಲುಗಳೆಂಬ ಹೊಳೆವಳಿಯ ಮೀನ್ಗಳಂ (ಹಚಕಾ. ೫-೪೬); ಹರಗೆ ಹೆರಳು ಹದ್ದುತೋಱನೆ ಕೆಮ್ಮೀನು ತೊಱೆಗಡಲೊಳಗುಂಟು ಬಲ್ಲೆ (ಮೋಹತ. ೧೧-೩೫). [ಕೆಂ + ಮೀನ್$_3$]

**ಕೆಮ್ಮೀನು** 'ಕೆಮ್ಮೀನ್' ನೋ.

**ಕೆಮ್ಮೀಸೆ** (ನಾ). ಕೆಂಪುಬಣ್ಣದ ಮೀಸೆ: ಕೆಮ್ಮೀಸೆವಿಟ್ಟು ಗಿಳಿಗಳ್ ತಮ್ಮ ತುಡುಕದವೊಲಾಯುಧಂಬೇಱಿದವೋಲ್ ಕಮ್ಮಗಬನೆಗಳ್ (ಲೀಲಾವ. ೫-೫೫); ತೋರಗಣು ಕೆಮ್ಮೀಸೆ ರುಂಡಾಭರಣಂ ಸರ್ಪಹಾರ ಶೂಲಂ (ಸಿದ್ಧರಾ. ೪-೩); ಕೆದಱುದಲೆ ಕೆಮ್ಮೀಸೆ ಕಿಸುಗಣ್ (ಕುರಾಸಾಂ. ೫-೬); ಪೊಳೆವ ಕೆಮ್ಮೀಸೆಗಳ ಕಾರೊಡಲ ಕೆಂಗಣ್ಣ (ಚಬಪು. ೨೩-೧೨). [ಕೆಂ + ಮೀಸೆ]

**ಕೆಮ್ಮು$_1$** (ಕ್ರಿ). ಕಫದಿಂದಾಗಲಿ, ಗಂಟಲಲ್ಲಿ ಏನಾದರೂ ಸಿಕ್ಕಿಕೊಂಡಾಗಲಿ ಶ್ವಾಸಕ್ರಿಯೆಗೆ ಪ್ರತಿರೋಧವಾದಾಗ ಶಬ್ದದೊಂದಿಗೆ ಉಸಿರುಹೊರಗೆ ಬಿಡು: "ಕೆಮ್ಮು – ಖಾಸೇ" (ಶಮುಧಾ); ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವವಿಯೋಗಮಪ್ಪುದು (ಪಂಪಭಾ. ೪-೧೦೦); ಒಮ್ಮೊಮ್ಮೆ ಕೆಮ್ಮುತೊಮ್ಮೊಮ್ಮೆ ಗೊಹೆಗೊಹೆಗುಟ್ಟುತುಂ (ನಂಬಿರ. ೬-೨೭); ಉಬ್ಬಸಬಡುಗುಂ ಕೆಮ್ಮುಗುಂ ಬೆಚ್ಚುಗುಂ (ಬಾಲಚಿ. ೧೩೨-೧); ಕೇಕರಿಸಿ ಕೆಮ್ಮಿ ಸೀತುಂ (ಚಬಪು. ೯-೧೩).
[ದೇ. ‖ ತಮಿ. ಚಿರುಮು; ಚೆಱುಮು; ಮಲ. ಚುಮ, ಚುಮೆ; ತುಳು. ಕೆಮ್ಮೊ, ಚೆಮ್ಮೊ; ಕೊಡ. ಕೆಮ್; ಪರ್ಜಿ. ಕೊಮ್]

**ಕೆಮ್ಮು$_2$** (ನಾ). ಕೆಮ್ಮುವಿಕೆ; ಕೆಮ್ಮಲು; ಕಾಸ: "ಕಾಸಃ, ಕ್ಷವಥುಃ – ಈ ೨ ಕೆಮ್ಮು" (ನಾಚಿರಾ. ೧೧೯); ಕೆಮ್ಮಿನೊಳು ಕುಮ್ಮಿ (ಆದಿಪು. ೧-೮೧); ಒತ್ತಂಬದಿಂ ಬರ್ಪ ಕೆಮ್ಮಿಂ ಬಿರಿಯಲ್ಪಟ್ಟಂಗಳ್ (ಕಾದಂಪೂ. ೧೭೫); ಕೆಮ್ಮುಳ್ಳರಂತೆ ಮೇಲೆತ್ತುವ ಶ್ವಾಸಮುಂ (ಧರ್ಮಾಮೃ. ೪-೭೫); ಅಜ್ಜನಿಗೆ ಮೊಮ್ಮಗ ಕೆಮ್ಮು ಕಲಿಸಿದ (ಗಾದೆ).
[< ಕೆಮ್ಮು$_1$]

**ಕೆಮ್ಮುಕ** (ನಾ). (?): ಕೆಂಮುಕದಾಳಿ ಪಾದುಕಚಯಂ ಪೇಳವಯ್ಯನಥಂದೆಸೆಂದು ಕಾಳ್ಪಂ ಮನಕಾಳವಕ್ಕಸಿಯ ಹೊಂನನೆ ಹೊಯಿನಿದ ಹೊಂಗನಾಗಳುಂ ತಂಮ ಕೊರಳ್ಗಳೊಳ್ಕೆರೆವಡಂಬಗಿದೊತ್ತಿರೊಳೊಂದಿ ಕೆಟ್ಟವರ್ತ್ತಂ ಮನೆಗಳೆ ಮಾಸಿ ಜಿನಶಾಮಂ ಪಲರೊಕದೂಪ (ಶ್ರಾವಕಾ. ೧೦೫-೧೦). [?]

**ಕೆಮ್ಮುಗಿಲ್** (ನಾ). ಕೆಂಪಾದ ಮೋಡ: ಕೆಮ್ಮುಗಿಲ ತೆರೆಯ ಪೊರೆಯೊಳ್ ನೆಗೆದು ಪೊಱಮಡುವ ವಿದ್ಯಾಧರಿಯಂತೆ (ಪಂಪಭಾ. ೪–೩೯ ವ); ಸುರನದಿ ಕೆಮ್ಮುಗಿಲೊಳಗಣ ನಿರದೊರ್ಮೆಯ ಕವಿವ ತೆಜದಿಂ (ನೇಮಿಪು. ೮–೧೪೨); ಇಳೆಗೆ ಕೆಮ್ಮುಗಿಲ ತಂಡವಿಳಿದು ಮಂಡಳಿಸಿತೋ ಎನೆ ಬಗೆಗೊಂಡುದಾ ಪೊಳಲ ಪೊಂಗೋಂಟೆ (ಕುರಾಸಾಂ. ೩–೬೨). [ಕೆಂ + ಮುಗಿಲ್]

**ಕೆಮ್ಮುಹ** (ನಾ). ಕೆಮ್ಮುವಿಕೆ: "ವಿಕ್ಷಾವ" (ನಾಚಿರಾ. ೬). [ಕೆಮ್ಮು$_1$ + -ಹ$_2$]

**ಕೆಮ್ಮೆಯ್** (ನಾ). ಕೆಂಪು ಮೈ, —ದೇಹ: ಅಕುಲೀನೆಯೊಳೊಗೆದವು ಮೆಯ್ ಬೆಳ್ಪಾಯ್ತು ಕುಲೀನೆಯೊಳೊಗೆದವು ಕೆಮ್ಮೆಯ್ಯಾಯ್ತು (ಉದ್ಭದೇ. ೨–೨೨). [ಕೆಂ + ಮೆಯ್]

**ಕೆಮ್ಮೊಗ** (ನಾ). ೧. ಕೆಂಪಾದ ಮುಖ. ೨. ಕೆಂಪುಮುಖದವನು; ಆಂಗ್ಲ: ಕೆಮ್ಮೊಗರಾಣ್ಮಂ ಬಿಡದಟ್ಟಿದಂ ಪ್ರಬಲ ಸೇನಾಭಾರರಂ ಚಾರರಂ (ಕೆಳನೃ. ೯–೫೯). [ಕೆಂ + ಮೊಗ]

**ಕೆಮ್ಮೊಗೆ** (ನಾ). ಕೆಂಪುಭೂಮಿ: ಮೂವತ್ತರು ಮತ್ತರು ಕೆಂಮೊಗೆಯಂ ನೆರೆಲೋಲಕಾಭರಣ ಚರಣಭಕ್ತಿಯೊಳಿತ್ತರು (ಸೌಇಇ. IX–i, ೩೩೭–೧೧; 1220). [ಕೆಂ + ಮೊಗ್ಗೆ$_3$]

**ಕೆಮ್ಮೋಡ** (ನಾ). = ಕೆಮ್ಮುಗಿಲ್: ಕೆಮ್ಮೋಡ ಬಿಳಿಮೋಡ ಕಾರ್ಮೋಡ ಹಿಂಡುಮೋಡ ಇವಿದ್ದು ಚಿಟ್ಟೆಹುಳ ನೆಲಕಚ್ಚದೆ ಹಾರಾಡಿದರೆ ಮಳೆ ತಕ್ಕೊಳ್ಳಿ ಕುರ್ತೀಟು ಬಂತು (ಹುಟ್ಟಿಹ. ೧೪೩). [ಕೆಂ + ಮೋಡ]

**ಕೆಮ್ಮೋರೆ** (ನಾ). ಕೆಂಪು ಮುಖ: (೬). [ಕೆಂ + ಮೋರೆ (< ಮೋಱೆ)]

**ಕೆಯ್**$_1$, ಕಯ್$_1$, ಕೈ$_1$, ಗೆಯ್, ಗೆಯ್ಯು, ಗೇ, ಗೇಯು, ಗೈ (ಕ್ರಿ). ೧.(ಕೆಲಸ) ಮಾಡು; ನೆರವೇರಿಸು: ಒಳ್ಳಿತ್ತ ಕೆಯ್ವೊರಾರ್ ಪೊಲ್ಲದು ಮದರಂತೆ ಬಲ್ಲಿತ್ತು ಕಲಿಗೆ ವಿಪರೀತಾ (ಇಆ. X, ೬೧–೭; 700); ಸ್ವಸ್ತಿಶ್ರೀಪುರುಷ ರಾಜ್ಯಂಕೆಯೆ (ಎಕ. XVI, ತುಮುಕೂ. ೮೮–೩; 750); ಕರ್ಣರಾಯ ಕೊಱಕ್ಕಿ ... ವಿನ್ನಪ್ಪ ಕೆಯ್ಸಿ ಪ್ರಸಾದ (ಎಕ. X (S), ಮುಳಬಾ. ೧೩೮–೩; 9ನೆಯ ಶತ). **ಕಯ್**$_1$. 'ಕಯ್ಸು' ಪರಾ. **ಕೈ**$_1$: ೧. ಮಳಲಿಂದ ಲಿಂಗಮಂ ಕೈದವಂ ಶಿವನೆಂದು ಪೂಜಿಸಿ (ಮಲ್ಲಹ. ೬–೧). **ಗೆಯ್**: ೧. "ಗೆಯ್ (ಕೆಯ್) – ಶಿಲ್ಪೇ (ಉದ್ಯೋಗಮಾಡು)" (ಶಮಧಾ); ಕುಪ್ಪನುಂ ಮಾದನುಂ ಒಕ್ಕಲ್ತನಂ ಗೆಯ್ಯೆ (ಎಇ. XXVI, ೪–೧೭; 906); ನೆಗಲ್ದ ಪಂಡಿತರ್ಕಳೊಡನೆ ವಾದಂಗೆಯ್ದು ಗೆಲ್ದು (ವಡ್ಡಾರಾ. ೬೮–೧೯); ಮುನ್ನಿಮ್ಮ ಪೇೞ್ದು ಗೆಯ್ಯದೆ ನಿನ್ನೀಪದದಲ್ಲಿ ಪೇೞ್ದು ಗೆಯ್ವಂತುತೇಂ (ಪಂಪಭಾ. ೧೩–೮೭); ಎಲ್ಲಂದದೊಳ್ ಧರ್ಮಂ ಗೆಯ್ಯಲೆ ಬಯಸುಗುಂ (ಸಮಪ. ೭–೪೯). ೨. (ಹೊಲವನ್ನು) ಉಳು; ಸಾಗುಮಾಡು: ಗೆಯ್ಯದ ಭೂಮಿ ಹಿಳಮೆಂಬುದು (ಹಲಾಯು. ೨೬–೩); ಅವನು ಓದು ನಿಲ್ಲಿಸಿ ಹೊಲ ಗೆಯ್ಯಲಾರಂಭಿಸಿದ (ರೂಢಿ). **ಗೆಯ್ಯು**: ೧. ಶೋಕವನು ಗೆಯ್ಯುವರು ಸತಿಸುತರು ಬಾಂಧವರು (ಪುರಂದ. ೧–೧೩೨–೪); ನಿದ್ರೆ ಸೊಗಸಿಂದ ಗೆಯ್ಯುವನಂತೆ (ಕಂಸವಿ. ೭–೯೭). **ಗೇ**: ೧. ಗೇದೂ ಗೇದೂ ತಲೆಕೂದ್ಲೆಲ್ಲ ಉದ್ರೋಹ್ದೊ(ಹುಟ್ಟಿಹ.೧೩೨); ಕಯ್ಯಾರೆ ಗೇದೆ ನಾನ್ (೧೪ವಿಂ.೧೧೯). **ಗೇಯು**: ಗ್ರಾಮತಕ್ಷಃ ... ಅಧೀನನಾಗಿ ಗೇಯುವ ಬಡಿಗೆಯವನ ಪೆಸರು (ಸಿದ್ಧಾಂತಿ. ೨೬೭). **ಗೈ**: ೧. ಎನ್ನಂತೆ ಪುಣ್ಯಗೈದವರುಂಟೆ ಎನ್ನಂತೆ ಭಾಗ್ಯಗೈದವರುಂಟೆ (ಮಹಾದೇ. ೮–೧೦); ಅವರು ಮುನಿಗಭಿವಂದನಂಗೈದು (ತೊರರಾ. ೧–೩–೧೧); ಗಣಪದವಿಯಾ ಪಾಲಿಸೆನಲಂತೆ ಗೈದಪೆನೆಂದು (ಚಿಬಪು. ೫೦–೪೬); ಸದಾಶಿವದೇವ ಮಹಾರಾಯರು ಪೃಥ್ವೀರಾಜ್ಯಂಗೈವಲ್ಲಿ (ಎಕ. XIV, ಚಾಮರಾ. ೧೨೧–೪; 1554); ಬನದೊಳು ಗೈವ ಬರಿಯ ತಪಗಳು ಕುಲವನಿತೆಯರಿರವಿಗೆ ದೊರೆಯೆ (ಹದಿಬ. ೨–೪).

[ದೇ.॥ ತಮಿ. ಮಲ. ಚೆಯ್; ತುಳು. ಗೈ, ಗೆಯಿ; ತೆಲು. ಚೇಯು]

**ಕೆಯ್**$_2$, ಕಯ್$_2$, ಕಯಿ, ಕಯ್ಯಿ, ಕೈ$_3$, ಕೈಯ್, ಕೈಯಿ, ಕೈಯ್ಯಿ (ನಾ). ೧. ಮನುಷ್ಯನ ಅಂಗಗಳಲ್ಲಿ ಒಂದು; ಕರ; ಹಸ್ತ: "ಪಾಣಿ ಶಯಃ ... ಹಸ್ತಃ–ಈ ೪ ಕೆಯ್" (ಹಲಾಯು. ೮೪–೩೫೭); ಕೆಯ್ಯಂ ನೇಣುಮನಳವಿಯೊಳ್ ಕೂಡಿ ನಡೆಯಲ್ವೇೞ್ದು (ಪಂಪಭಾ. ೫–೪೭ವ); ಶಿಶುವಿನ ಕೆಯ್ಯೊಳ್ ಮಸೆದ ಬಾಳಂ ಕೊಟ್ಟಂತೆ (ಧರ್ಮಾಮೃ. ೧–೧೧೮); ಕೆಯ್ಗಳೊಳ್ ಮೆಯ್ಗಳೊಳ್ ಬಾಯ್ಗಳೊಳ್ (ಚಿಬಪು. ೫–೨೬). ೨. ಆನೆಯ ಸೊಂಡಿಲು: ತಳರ್ದುದು ಕರ್ಣತಾಳ ಪವನಾಹತಿಯಿಂ ಜಳರಾಶಿ ಕೆಯ್ಯ ಬಳ್ಳಕೆಗೆ ದಿಗ್ಗಜಂ ದೆಸೆಯಿನತ್ತ ತೆರಳ್ದುವು (ಪಂಪಭಾ. ೧೧–೭೧); ಆನೆಯ ಕೆಯ್ಯ ಕಬ್ಬಿನ ಕೋಲ ಸೆಳೆತಂದು (ಮೋಹತ. ೪೨–೫೪). ೩. ಮರದ ಕೊಂಬೆ; ರೆಂಬೆ: "ಕೊಂಡೆಂದು ಕೆಯ್ಯಂ[ಪಾಠಾಂ. ಕೈ]ದು ತಾ ಮರಗೊಂಬು" (ಕಬ್ಬಿಕೈ. ೧೮); ಕಡುಗೆಸಱೊಳ್ ಸಿಲ್ಕಿ ಬಂದ ಮಾವಿನ ಕೆಯ್ಯಂ ಪಿಡಿದಲ್ಲಿ ಮೆಲ್ಲಮೆಲ್ಲನೆ ನಡೆವುದು ... ಪವನಂ (ಧರ್ಮನಾ. ೫–೩೭). ೪. ಮಾರ್ಗ; ಮುಖಾಂತರ: ಬಂದವರ ಹೋದವರ ಕೆಯ್ಯಿಂದ ನಿನ್ನಾಚಾರ ಸದ್ಗುಣವ್ಪಂದಮಂ ಕೇಳ್ದು (ಬಸವಪು. ೪–೬೧). ೫. ಹಿಡಿತಕ್ಕೆ ಸಿಕ್ಕುವಂಥದು; ಚಿಕ್ಕದು. 'ಕೆಯ್ಗತ್ತಿ' ಪರಾ. ೬. ನೆರವು; ಸಹಾಯ. 'ಕೆಯ್ನೀಡು' ಪರಾ. **ಕಯ್**$_2$: ೧. ಪೊಡವಟ್ಟು ಕಯ್ಗಳಂ ಮುಗಿದು (ಕಾದಂಪೂ. ೫೨೦); ತನ್ನಮ್ಮಯ್ಯನ ಕಯ್ಯಂ ಪಿಡಿದು (ಪಂಚತಂ. ೧೬೨–೧೮); ಕಯ್ಯಲುಂಬುದರಿದೋ ತಳಿಗೆಯಲುಂಬುದರಿದೋ (ಧರ್ಮಾಮೃ. ೭–೮೧); ಆವಳ ಕಯ್ಯ ಪುಸ್ತಕದೊಳಿರ್ಪುವು ಲೋಕದ ಸಾರಸೂಕ್ತಿ (ಸೂಕ್ತಿಸು. ೧–೬). ೨. ಬಲದ ಕುಂಭಂ ಪೆಱಕಿ ಕಯ್ಯೆತ್ತಿ ಗರ್ಜಿಸೆ ಸನ್ನಾಹಮನಿಕ್ಕುವಲ್ಲಿ ಕರದಿಂದಂ ಶೀಕರಂ ಪೊಣ್ಮೆ (ಲೋಕೋಪ. ೧೨–೨೧). ೪. ವಿದ್ಯಾಧರರ ಕಯ್ಯೊಳ್ ಕಪ್ಪಮಂ ಬೇಡೆ ದೂತರಂ ಕಳಿಪಲ್ (ಚಾವುಂಪು. ೩೪–೧೭). ೭. ಕಿರಣ; ರಶ್ಮಿ: ಬಿಸುಗಯ್ಯಂ ತಣ್ಣಸಗಯ್ಯಂ ಪೊಸಕಿಸುಬಿಸುಮಯ್ಯಂ ಕಜ್ಞಾದನ ಮರ್ದುಣಸರೆಱೆಯಂ (ಉದ್ಭದೇ. ೧–೨). **ಕಯಿ**: ೮. ಕೈಯಳತೆ; ಒಂದು ಮಾರಿನ ಅಳತೆ: ಅಹಾರದಾನಕ್ಕೆ ಬಿಟ್ಟ ಕಮ್ಮ ದಿನ್ನೂಱಕ್ಕಂ ಅಱು ಕಯಿ ಮನೆ (ಇಆ. XII, ೧೦೨–೩; 1108). **ಕಯ್ಯಿ**: ೧. ಮುಕ್ತಿಯ ಮಹಾ ಕವಾಟದ ಬೀಯಗದ ಕಯ್ಯೊ (ಭಾವಚಿಂ. ೯–೪೨). **ಕೈ**$_2$: ೧. ಬಂದು ಮುಂದು ನಿಂದು ಕೈಗಳಂ ಮುಗಿದು (ವಡ್ಡಾರಾ. ೭೩–೬); ಇಱಿವೆಡೆಗೈಯ ಕೈಯುಗುರೆ ಸಾಲದೆ ನಚ್ಚಿನ ಕೈದುವೇಟ್ಪುದೇ (ಕಾವ್ಯಸಾ. ೪೧೧ ಶೂದ್ರಕ); ಬೆಳ್ಗಳ ಕೃತಿಬಂಧಮುಂ ಬರೆಪಕಾಱರ ಕೈಗಳ ಕೇಡು (ಪಂಪಭಾ. ೧–೧೨); ಮುಕುರಂ ಕೈಯೊಳಿರಲ್ಕೆ ನೀರ ನೆಳಲೇಕೈ (ಸೋಮೇಶ. ೩); ನಿಮ್ಮರಿಭಟಗೆ ನಾಲ್ಕಿಲ್ಲ ಕೈಕಣ್ಣಿಲ್ಲ ನೊಸಲಲಿ (ಕುವ್ಯಾಕ. ೪–೨೬); ತಲೆ ಮೈ ಕೈ ಕಾಲೊಳು ಗೂಟಗಳು ಮೂಡಿ ಸಲೆ ತೊರೆದರು ಜೀವಗಳನು (ಕಂಸವಿ. ೧೪–೭೧); ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ (ಗಾದೆ). ೨. ನಯನಂ ನೀಲಸರೋಜಮುಂ ಸೆಣಸುಗುಂ ... ಕೈಗಳಾನೆಯ ಕೈಯುಂ ನಖುಮಿಂದುವಂ ನಗುಗುಂ (ಪಂರಾಮಾ. ೧–೬೫); ಧರೆಯಂ ಪೊತ್ತಾನೆಯ ಕೈಗೊರೆಯೆನೆ ಕಡುವಿಟ್ಟಿತಾದ ನಾಲ್ಕುಂ ತೋಳು (ಕಬ್ಬಿಕಾ. ೧೬೫); ಕಾಡೊಳೆ ಬಳೆವ ನೀಳ್ಪಿನ ಕೈಯ ನಿಡುಗೋಡ ಪೇರಾನೆಯ ಕುಂಬ ತಳಮುಂ ತನ್ನೊಂದೆ ಕೈಯ ಪೊಯ್ಲಿಂ ಸೀಳ್ವ ಪೋಟ್ಟ ಪಂಚಾನನ (ರಾಮಾಶ್ವ. ೧೧೧–೧೪). ೩. "ಬಿಡದೆ ಕೈಕೋಡು ಕೊಂಬೆಂದೊಡೆ ಪಾದಪ ಶಾಖೆ" (ಕವಿಕಂ. ೫೬); "ಕೋಡೆಂದು ಕೈಮರಗೊಂಬು" (ಕಬ್ಬಿಕೈ. ೧೮).

೪. ಅದನೊಂದು ಕದಳೀ ಪತ್ರದೊಳ್ ಪುದಿದು ತನ್ನ ನಡಪಿದ ಗಿಳಿಯ ಕೈಯೊಳೋಪಳಲ್ಲಿ ಗಟ್ಟಿದೊಡೆ (ಪಂಪಭಾ. ೧-೬೮ವ); ನುತಿವೆತ್ತ ಬಸವ ಚರಿತ್ರವಂ ಭಕ್ತೋತ್ತಮರ ಕೈಯಿಂದ ಕೇಳಿದ ಮಾಳ್ಕೆಯಿಂದ (ಬಸಪು. ೬೧-೭೬). 'ಕೈದೋಟಿ' ಪರಾ. ೭. ಮುಗಿದುವು ದಿನಕರನ ಕೈಯಂಕೆಂದಾವರೆಗಳ್ (ಮಲ್ಲಿಪು. ೨-೫೨); ರವಿಯ ಕೈಗಳನಸ್ತಗಿರಿಯಾನುವವೊಲಿದೆ (ಕುವ್ಯಾದ್ರೋ. ೧೦-೫೬); ಎಲರಡಿಯಿಡದಲ್ಲಿ ರವಿ ಕೈದುಡುಕಲಮ್ಮನು ಪೇಳ್ವೆನೇನು (ಕುರಾಸಾಂ. ೪-೭); ಪೆಜ್ ನೇಸರ್ಕಳ ಕೈಗಳ್ ನಿಡಿದಾದುವು (ರಾಮಾಶ್ವ. ೮೩-೧೨). ೮. ಊರೊಡೆಯರ್ಗೆ . . . ಇಪ್ಪರ್ತೈಕೈಗೈ ನೀಳದ ನಿವೇಶನಂ (ಎಇ. XX, ೬-೩೩ ; 1012) ; ಒನ್ದೊನ್ದು ಮನೆಗೆ ಪದಿನಾಱು ಕೈಯಗಲಕ್ಕದ ಮನೆ ಮೂಱು (ಸೌಇಇ. XI-i, ೭೮-೫೩ ; 1045); ಮೊದಲ ಕೇರಿಯ ಮನೆಯಗಲಂ ಪದಿನೆಂಟು ಕೈ (ಹೈಆಸಿ. V, ೮-೩೮ ; 1088). ೯. ಅದಟು; ಪರಾಕ್ರಮ : ಕಲಿಗಳ ಮುಖದ ಕೈ ಕಟಕ ಸೂಜಿಕಾಜಿ ಹುಸಿವರ ಸೂಲ ಕಡಿತಲೆಯ ಮಲ್ಲಂ (ಕಇ. I, ೪೦-೬ ; 1415) ; ಸಕಲ ಜನಗಳೂ ಭೂಮಿಯು ಇರುವ ಪರ್ಯಂತವೂ ಹೇಳಿಕೊಳ್ಳುವ ಹಾಗೆ ಯುದ್ಧವನ್ನು ಮಾಡುತಲಿಧೇನೆ. ನಾಳೆ ನನ್ನ ಕೈಯನ್ನು ನೋಡು . . . ಅಂದನು (ಕೃವಾಭೀ. ೧೫೩). ೧೦. (ಸೀರೆಯ) ಅಂಚು; ಸೆರಗು : ಪುಳಕಾಂಕುರವಂ ಮೈಗಗ್ಗಳಿಸದ ಕಾಂತೆಯ ಕೈಗಮದೇಂ ಭೇದಮುಂಟೆ ಸೀರೆಯ ಕೈಗಂ (ಮಲ್ಲಿಪು. ೩-೧೧೫). ಕೈಯ್ : ೧. "ಹಸ್ತಃ=ಕೈಯ್" (ಕಾಶಕ್ಯ. ೨೬೦). ಕೈಯಿ : (ಕ). ಕೈಯ್ಯಿ : (ಕ).

ಕೆಯ್ಗಣ್ಮು, ಕಯ್ಗಣ್ಮು, ಕೈಗಣ್ಮು = ೧. ಕೈಮೀರು ; ಅತಿಕ್ರಮಿಸು : ಗರ್ವಮುಮುಣ್ಮಿ ಪೊಣ್ಮೆ ಮನದೊಳ್ ಕೋಪಾಗ್ನಿ ಕೆಯ್ಗಣ್ಮೆ ಕಣ್ಮಲರೊಳ್ ಬಂದಿರೆ ಪೂಡಿದಂ ಕಲುಷದಿಂ ಗಾಂಡೀವಿ ಗಾಂಡೀವಮಂ (ಪಂಪಭಾ. ೭-೭); ನಾನಾಲೀಲೆ ಕೆಯ್ಗಣ್ಮೆ ಕಿಂಪುರುಷರ್ ಕಿನ್ನರರಚ್ಚರರ್ ಬಿನದಿಪರ್ (ಶಬಶಂ. ೧-೪೮); ಕ್ರೇಂಕಾರ ಕ್ವಣಿತಂ ಕೆಯ್ಗಣ್ಮೆ ನೋಳ್ಪರರಿದೆಂಬಿನೆಗಂ (ವೃಷವಿ. ೨೨-೧೪); "ಕಯ್ಗಣ್ಮು - ಅತಿಕ್ರಮಣೇ (ಕೈಮೀರು)" (ಶಮಧಾ); ಮಗನುದ್ದಾಮತೆ ತಂದೆ ಮೂವಱೊಳಮೇಂ ಕಯ್ಗಣ್ಮೆ ಪೊಣ್ಮಿರ್ದುದೋ (ಶಾಂತಿಪು. ೭-೧೨೩); ಆನಂದಮತಿ ಕೌತುಕಮಂ ಕಯ್ಗಣ್ಮೆ (ಕಾದಂಉ. ೧೮೨); ಕಯ್ಗಣ್ಮಿದ ಪಗೆತನದಿಂ (ಮರಾಜ. ೧೨-೨ ವ); "ಕೈಗಣ್ಮಿತೆಂದು ಅತಿಕ್ರಮಣಂ" (ಕಶಸಾ. ೩೧-೬೫೬); ಪಿರಿದುಂ ಕರುಣಿಸಿ ಕೂರ್ಮೆ ಕೈಗಣ್ಮೆ (ಪಂಚತಂ. ೨೫೬-೧೩); ಉಣ್ಮಿ ಪುಳಕಂ ಕೈಗಣ್ಮೆ ಹರ್ಷಾಶ್ರು (ಪಂರಾಮಾ. ೬-೩೮); ಪ್ರಣಯ ಕಲಹಂ ಕೈಗಣ್ಮೆ ಪಲ್ಲವದಿಂ ಪೊಯ್ದು (ಗಿಂಕ. ೧-೧೨೮ವ); ಘರ್ಮಾಂಬು ಕೈಗಣ್ಮೆ (ರಾಜಶೇ. ೩-೩೪). ೨. ಉಂಟಾಗು : ಕಾರಣಮಿದೇಂ ಚಿತ್ತಕತಿಪ್ರೀತಿ ತೊಟ್ಟನೆ ಕೈಗಣ್ಮುವುದೇಕೆ (ಆದಿಪು. ೫-೪೭).

ಕೆಯ್ಗೆಮಾಡು, ಕಯ್ಗೆಮಾಡು, ಕೈಗೆಮಾಡು=೧. ಕೈಗೆಮಾಡಿಕೊಳ್ಳು; ವಶಪಡಿಸಿಕೊ ; ಸ್ವಾಧೀನಪಡಿಸಿಕೊ : ಇನ್ನಾವ ಮಾಟ್ಕೆಯೊಳ್ ಪಗೆಯಂ ಕೆಯ್ಗೆಮಾಡುವಂ ಪೇೞಿಂ (ಪಂಪಭಾ. ೬-೬೭ ವ); ಮಾಗಧವರತನು ಪ್ರಭಾಸಾಮರರಂ ಕರುಣಿಸಿ ಬಿಟ್ಟಂ ಕುಲಧನಪರಿಕರಮಂ ಕಯ್ಗೆಮಾಡಿ ಮನುಕುಲತಿಲಕಂ (ಆದಿಪು. ೧೪-೫೫); ಜಿನೇಂದ್ರಭಕ್ತ ಸೆಟ್ಟಿಯ ಮನೆಯಂ ಪೊಕ್ಕು ಮೆಲ್ಲನೆ ಮೇಲ್ಪಡಿಸಿ ರತ್ನಮನೆನ್ನ ಕಯ್ಗೆ ಮಾಡುವೆಂ (ಧರ್ಮಾಮೃ. ೬-೨೬). ೨. ಕೈಗೆ ಒಪ್ಪಿಸು ; ವಶಮಾಡು : ತೆರಕಣಾಂಬಿಯ ವೀರವಿಕ್ರಮರಾಯರಿಗೆ ಕಯ್ಗೆಮಾಡಿ ನಿಯೋಗಿಸಿರುವೆವು (ಚಿಟ್ಟಅ. ೧೯೯-೭). ಕೈಗೆಮಾಡು = ೧. ನಿನ್ನ ಚೆರ್ಸು ವಿಷ್ಣು ಚಾಪಮಿದು ನಿನ್ನೀ ಲೋಕಮಂ ಕೈಗೆ ಮಾಡಿದ ಪುಷ್ಪಾಸ್ತ್ರಮಿದಲ್ತೆ (ಆದಿಪು. ೧೧-೧೭); ವೀರಪ್ರಮುಖಂಗೆ ಸೇನಾಧಿಪತ್ಯಾಭಿಷೇಕಮಂ ಮಾಡಿ ಪಗೆಯಂ ಕೈಗೆ ಮಾಳ್ಪುದೆಂಬುದುಂ (ಗದಾಯು. ೩-೫೯ ವ).

ಕಯ್ಗೆವರ್ = ೧. ವಶವಾಗು ; ಅಧೀನವಾಗು : ಪರಚಕ್ರಮೆ ಕಯ್ಗೆವರಲ್ ಕರಚಕ್ರಂ ಪೂಣ್ದುಪೋದ ಬೇಗದೊಳೆ ಪರಂಪರವೋದನಾತ (ಶಾಂತಿಪು. ೭-೫೬). ೨. ಹೂ ಬಿಡು ; ಫಲವಾಗು : ವನಜಪರಾಗದೊಳ್ ಪೊರಳ್ದು ಕಮ್ಮನೆ ಕಮ್ಮನೆ. . .ಕಯ್ಗೆವಂದ ಮಾವಿನ ಸೊನೆದಂದಲೊಳ್ ನೆನೆದು ತಣ್ಣನೆ ತಣ್ಣನೆ ಬಂದುದಂದು . . . ಮಾರುತಂ (ಶಬ್ದಾನು. ೩೯೪ ವ್ಯಾಖ್ಯಾ). ಕೆಯ್ಯದು, ಕಯ್ಯದು, ಕೈಯದು = ಕೈಯಲ್ಲಿರುವುದು ; ಕೈವಶವಾದದ್ದು : ನಿನಗೀವುದನೇಂ ನುಡಿದೆನೆ ಏ ಅದು ಕೆ [ಪಾಠಾಂ. ಕ]ಯ್ಯದು ನುಡಿದುದು ತಪ್ಪುಗುಮೆ ಗಂಗಚೂಡಾಮಣಿಯಾ (ಕಾವ್ಯಾವ. ೪೯ ; ಎಕ. II, ೫೯-೯೮; 974 ನೋ) ; ಪರಲೋಕಮಿಲ್ಲದಂದು ತಲ್ಲೋಕ ಸುಖಾನುಭವಾಪೇಕ್ಷೆಯಿನೈಹಿಕ ಸುಖವಿಮುಖನಾಗಿ ಶರೀರಾರ್ಥವ್ಯಯಂ ಮಾಡುವಾತಂ ಕಯ್ಯದಂ ಬಿಟ್ಟು ಕಾಲದಕ್ಕೆಱಗುವಾತನಂ ಪೋಲ್ಗುಂ (ಆದಿಪು. ೨-೯ ವ) ; ತನ್ನ ತೊಟ್ಟಾಭರಣಮನೆಲ್ಲಮಂ ಕಳೆದೊಪ್ಪಿಸೆಯಾತನಿಂತೆಂದ ನೆನಗೇನೊಂದೆ ಭವಮೆ ನಿನ್ನ ಕೈಯದಂ ಕೊಂಡಾನೇನಾಚಂದ್ರಾರ್ಕ ತಾರಂಬರಂ ಬರ್ದ್ದಪ್ಪೆನೆ (ವಡ್ಡಾರಾ. ೧೭-೩). ಕೈಕೆಸರಾಗು = ದೇಹಶ್ರಮವಾಗು : ಕೈಕೆಸರಾದರೆ ಬಾಯಿ ಮೊಸರು (ಗಾದೆ). ಕೈಕೆಳಗಿನವನು = ಕೆಳಮಟ್ಟದವನು ; ಅಧೀನದಲ್ಲಿ ಕೆಲಸಮಾಡುವವನು ; ಸೇವಕ : ನಮ್ಮ ದೇಶದಲ್ಲಿ ಎಷ್ಟೋಜನ ಯಜಮಾನರು ತಮ್ಮ ಕೈಕೆಳಗಿನವರನ್ನು ಹೊಡೆಯುತ್ತಾರೆ (ಮುಂಬಯಿ. ೪-೭೪). ಕೈಕೆಳಗಿನವಳು = ಇನ್ನೊಬ್ಬರ ಅಧೀನದಲ್ಲಿ ಕೆಲಸಮಾಡುವವಳು ; ಸೇವಕಿ : ಅವಳು ಕಚೇರಿಯಲ್ಲಿ ನನ್ನ ಕೆಳಗಿನವಳು (ರೂಢಿ). ಕೈಕೆಳಗೆ = ೧. ಕೈಯ ಕೆಳಗೆ ; ಅಧೀನದಲ್ಲಿ : ಅವನ ಕೈಕೆಳಗೆ ಹತ್ತು ಜನ ಕೆಲಸ ಮಾಡುತ್ತಾರೆ (ರೂಢಿ). ಕೈಗಿಡ್ಡಮಾಡು = ೧. ಕೈಯನ್ನು ಸಣ್ಣದು ಮಾಡು ; ಶಕ್ತಿ ಕುಗ್ಗಿಸು ; ಕೈಯಲ್ಲಿ ಹಣವಿಲ್ಲದಂತೆ ಮಾಡು : ಆದರೆ ಪರಮಾತ್ಮ ನನ್ನ ಕೈಗಿಡ್ಡಮಾಡಿದ್ದಾನೆ (ತ್ಯಾಗನು. ೭೨). ೨. ಖರ್ಚು ಕಡಮೆಮಾಡು ; ಕೈ ಹಿಡಿತ ಮಾಡು. ಕೈಗೆಬರು = ಕೆಲಸಮಾಡಲು ಯೋಗ್ಯನಾಗು ; ಸಹಾಯಕ್ಕೆ ಬರು ; ನೆರವಾಗು : ಹುಡುಗ ಕೈಗೆ ಬಂದಿದ್ದಾನೆ, ನಿಮಗಿನ್ನೇನು ಚಿಂತೆ ? (ರೂಢಿ). ಕೈತುಂಬ = ಕೈಯಿ ತುಂಬುವಷ್ಟು ; ಸಾಕಷ್ಟು : ಅವರಿಗೆ ಕೈತುಂಬ ಸಂಬಳ ಬರುತ್ತದೆ (ರೂಢಿ). ಕೈದೊಡ್ಡದುಮಾಡು = ಧಾರಾಳವಾಗು ; ಕೈ ಉದ್ದಮಾಡು : ಕೈ ದೊಡ್ಡದುಮಾಡಿ ಖರ್ಚುಮಾಡಿದರು (ರೂಢಿ). ಕೈಯೊಳಗೆ ಇರು = ೧. ಕೈಯಲ್ಲಿ ಇರು. ೨. ಅಧೀನದಲ್ಲಿರು ; ವಶದಲ್ಲಿರು : ಅವರು ತಮ್ಮ ಕಾರ್ಯ ಸಾಧನೆಗೆ ಬಹಳ ಜನವನ್ನು ಕೈಯೊಳಗೆ ಇಟ್ಟುಕೊಂಡಿದ್ದಾರೆ (ರೂಢಿ). ಕೈವಿಡಿದೆತ್ತು = ೧. ಕೈಯನ್ನು ಹಿಡಿದು ಮೇಲಕ್ಕೆ ಎತ್ತು. ೨. (ಆಲಂ) ಆಶ್ರಯ ನೀಡು ; ಉದ್ಧಾರಮಾಡು : ಕುಹಕ ಕರ್ಮದ ಕುಟಿತ ಕಾಯನ ಬಹಳ ಕೃತ ಪಾಪಾನುಗತ ವಿಗ್ರಹನ ಕೈವಿಡಿದೆತ್ತಬೇಕೆಲೆ ದೇವ (ತೊರರಾ. ೪-೪-೫೮). ಕೈಸಡಿಲುಬಿಡು = ಔದಾರ್ಯ ತೋರು ; ಹಿಡಿತಡೆ ಇಲ್ಲದೆ ಧಾರಾಳವಾಗಿ ಖರ್ಚುಮಾಡು : ಓಹೋ ! ಇಷ್ಟು ಕೈಸಡಿಲುಬಿಟ್ಟಿರುವರೇನು ? (ಕುರಿಹಿಂ. ೧೧).

[ದೇ. ॥ ತಮಿ. ತುಳು. ಕೈ ; ಮಲ. ಕಯ್ಯಿ, ಕೈ ; ತೆಲು. ಕಯಿ, ಕಯ್ಯಿ, ಕೈ, ಚೆಟ್ಟು, ಚೆಟ್ಟಿ, ಚೆಯಿ, ಚೆಯ್ಯಿ, ಚೇ, ಚೇಯಿ]

ಕೆಯ್₃, ಕಯ್₃, ಕೈ₃ (ನಾ). ಅಲಂಕಾರ ; ಶೃಂಗಾರ. 'ಕೆಯ್ಗೆಯ್' ಪರಾ. ಕಯ್₃. 'ಕಯ್ಗೆಯ್' ಪರಾ. ಕೈ₃. 'ಕೈಗೆಯ್' ಪರಾ.

[ದೇ ॥ ತಮಿ. ಕೈ ; ತೆಲು. ಕೈ]

**ಕೆಯ್**₄, ಕಯ್₄, ಕೆಇ, ಕೆಯಿ, ಕೆಯ್ಯಿ₃, ಕೈ₄, ಗಯ್ (ನಾ). ೧. ಹೊಲ, ಗದ್ದೆ, ತೋಟ, ಮೊದಲಾದ ಸಾಗುವಳಿ ಭೂಮಿ: "ವಪ್ರಂ, ಕ್ಷೇತ್ರಂ, ಕೇದಾರಂ – ಈ ೩ ಕೆಯ್" (ಹಲಾಯು. ೯೪–೪೨೦); ಇದಾನ್ನೊಳೆ ಈರೆಟ್ಟಿತ್ತುಜುಳಂ ಒಕ್ಕಲ್ಗನಂ ಕೆಯ್ಯೊನಾ ವಿತ್ತಿದಲ್ಲಿ ವೆಳೆಯಾಡದೆ ಕೆಡುಗೆ (ಎಕ. VII, ಶಿಕಾರಿ. ೧೫೪–೧೬ ; 685); ತನ್ನ ಕೆಯ್ಯನುಟಲೆಂದು ಪೋಗಿ (ವಡ್ಡಾರಾ. ೧೪೪–೯); ಬಿಳಿಯ ಕರ್ವಿನ ಕೆಯ್ಗಳೊಳೆರಡುಂ ದೆಸೆಗಳೊಳಂ (ಶಾಂತಿಪು. ೧–೬೨ ವ); ಪಾವನತರ ಶಾಳಿವನ ಕೆಯ್ಗಳು ಅವಕಾಲದೆ ಬೆಳೆದಿಹವು (ಅಂಜಚ. ೨–೩೦); ನವಣೆಯ ಕೆಯ್ಯ ಬಳಿಯೊಳು (ಸಿದ್ಧರಾ. ೨–೨೩). ೨. ಪೈರು; ಬೆಳೆ: ಪಂದಿ ಕೆಯ್ಯಂ ತಿಂದೊಡೆ ಕತ್ತೆಯ ಕಿವಿಯಂ ಕೊಯ್ದರೆಂಬಂತೆ (ಧರ್ಮಾಮೃ. ೭–೬೩); ಕಿಱುಗೆಱೆಯಡಿಯಣ ಕೆಯ್ಯ ಬೆಳಸಿದಂತೆ (ನೀತಿಮಂ. I, ೨೪೩). **ಕೆಯ್**: ೧. ಬೆಳೆದೊಱಗಿದ ಕಟವೆಯ ಕೆಯ್ಗಳಿ ನೊಪ್ಪುವ ತಿಳಿಗೊಳಂಗಳಿಂ (ಪಂಚತಂ. ೨೨೮–೮); ಅವಧರಿಸು ದೇವ ಕಳಮಾದಿಗಳ ಕಯ್ಗಳಿವೆ ಶಿವಭಕ್ತನಂತೆ ತೆನೆಬಾಗಿ ತೂಗಾಡುತಿವೆ (ನಂಬಿರ. ೮–೧೩). **ಕೆಇ**: ೧. ಮುಂದಣ ಕೆಱೆಯ ಹಿಂದೆ ಗದ್ದೆಕೊ ೧೦ ಹಿರೆಯ ತಿಲಮಾಳ ಕೆಇ ೧ ಬೊಂಬಸಮುದ್ರದ ಹಿಂದಣ ಹರೆಳ ಕೆಇ ೧ ಇವೆಲ್ಲ ತೋಱುಮಂಣು (ಎಕ. XVI, ಚಿಕ್ಕನಾ. ೫೮–೨೮; 1161); ಮಾಡುವ ಮಹಾ ಗಣಂಗಳ ಪರ್ಬಕ್ಕೆ ಹಿರಿ . . . ಲು ಕೊಟ್ಟಯೆರೆಯ ಕೆಇ ಗಂಗನಪುತ್ತರೊಂದು (ಎಕ. XI, ದಾವಣ. ೯೪–೧೬; ?). **ಕೆಯಿ**: ೧. ಶ್ರೀಮತು ನೊಳಂಬರ ಕನಕರಸರು ಅರಕೆಱೆಯ ಮಹಾದೇವರಿಂಗೆ ಬಿಟ್ಟ ಕೆಯಿ ಮತ್ತರಾರು (ಸೌಇಇ. IX–i, ೪೩–೮; 1030); ಒಕ್ಕಲ ಕೆಯಿಗಳಿಗೆಱುಗುವ ಪಕ್ಕಿಗಳಂ ಕವಣೆಗೊಂಡು ಕಾಯ್ದುಲೆವೇಡಾ (ಸಮುಪ. ೧೪–೬೬); ಸೇನಬೋವ ವೀರಪ್ಪಂಗೆ ಮೂವತ್ತಾಱು ಮೆಟ್ಟಿನೂರು ಕಂಬ ಕೆಯಿ ಸಲುವುದು (ಎಕ. XI, ಚಿತ್ರದು. ೬–೫೦; 1338); ಪಿಳಿದು ಘೊಮ್ಮನೆ ರಸವುಗುವ ಕಡುಬೆಳೆದ ಕಬ್ಬಿನ ಕೆಯಿಗಳಿಂ ಸೊಗಯಿಸುವುದಾ ವಿಷಯ (ಸಾಳ್ವಭಾ. ೧–೫೮). **ಕೆಯ್ಯಿ**: ೧. ತ್ರಿಭುವನ ನಾರಾಯಣ ಧರ್ಮಶೆಟ್ಟಿಯ ಮಾಡಿಸಿದ ಧರ್ಮೇಶ್ವರಕ್ಕೆ ಬಿಟ್ಟ ಕೆಯ್ಯಿ ಮತ್ತರು (ಸೌಇಇ. XI–i, ೫೮–೩; 1022); ಮಣ್ಣ ಬಿಟ್ಟ ಬಳಿಕ ಅ ಕೆಯ್ಯಿಯನಾರುತ್ತರೇನು (ಮಹಾದೇ. ೩೯–೩). **ಕೈ**₄: ೧. ಮೇರು ಪೊಸಂತಿಲ್ ಕುಡಿತೆಂದು ನೀರಂಬುಧಿ ಗಗನತಳಮೆ ಕೈ ದಿವಿಜಗಣಂ ಕಾರೊಕ್ಕಲೆಂದೊಡುಱಿದವರಾರಾತನ ಮುಸಪ ಮುಸಳದೆಸಕಮನಿೞಿಪರ್ (ಕಾವ್ಯಸಾ. ೨೩೯ ಶೂದ್ರಕ). 'ಕೈಗಂಪು' ಪರಾ. **ಗಯ್**: ೧. ಸಂಗಮೇಶ್ವರದೇವರ ನೈರಿತ್ಯದಲು ಬಿಟ್ಟ ಗಯ್ಯುಲೊಂದು ೧ ತೋಟ (ಸೌಇಇ. IX–i, ೧೩೮–೨೨; 1073).

[ದೇ.‖ತಮಿ. ಚೆಯ್; ಮಲ. ಚೆಯಿ; ತುಳು. ಕೆಯಿ; ತೆಲು. ಚೇನು]

**ಕೆಯಮಂಗಲ** (ನಾ). ಒಂದು ಊರಿನ ಹೆಸರು: ಜೇಬಯ್ಯನ್ ಕೆಯುಮಂಗಲದೂರಱಿವಿನೊಳ್ಕಾದಿ ಸತ್ತಂ (ಎಕ. X, ಚಿಂತಾಮ. ೧೧೮–೪; 1010). [?]

**ಕೆಯಿ** 'ಕೆಯ್₄' ನೋ.

**ಕೆಯಿಗಂಪು** 'ಕೆಯ್ಗಂಪು' ನೋ.

**ಕೆಯಿಮನೆ** 'ಕೆಯ್ಮನೆ' ನೋ.

**ಕೆಯಿಸುಂಕ** (ನಾ). ಗದ್ದೆಯ ಮೇಲಿನ ಸುಂಕ, —ತೆರಿಗೆ: ಎರಡುಂ ಲಖದ ಕೆಯಿ ಸುಂಕವಂ (ಇಎ. ೧೯೪೭, ಹಾನುಗ. ೨೦೭–೩೫; 989).
[ಕೆಯಿ (< ಕೆಯ್₄) + ಸುಂಕ]

**ಕೆಯ್ಕಟ್ಟು** (ನಾ). ಒಂದು ಬಗೆಯ ಬಳೆ, —ಕಡಗ: (ಶ).
[ಕೆಯ್₂ + ಕಟ್ಟು₂]

**ಕೆಯ್ಕುಱಿ** 'ಕೆಯ್ಗುಱಿ' ನೋ.

**ಕೆಯ್ಕುಸುರಿ** (ನಾ). ಕೈ ಚಳಕ; ಹಸ್ತ ಚಾತುರ್ಯ: ಕೆಯ್ಪುಗೆ ಕೆಯ್ಕುಸುರಿ ಸುಸುಳೆಂಬ ಕೇಣದ ಕುಸುರಿಯನಱಿದಿಱಿದು (ಪಂಪಭಾ. ೧೦–೮೧). [ಕೆಯ್₂ + ಕುಸುರಿ₁]

**ಕೆಯ್ಕೊಡು** 'ಕೆಯ್ಗೊಡು' ನೋ.

**ಕೆಯ್ಕೊಳ್**, ಕಯ್ಕೊಳ್, ಕಯ್ಗೊಳ್, ಕೆಯ್ಕೊಳು, ಕೆಯ್ಗೊಳ್, ಕೈಕೊಳ್, ಕೈಕೊಳು, ಕೈಕೋ, ಕೈಗೊಳ್, ಕೈಗೊಳ್ಳು (ಕ್ರಿ). ೧. ಪರಿಗ್ರಹಿಸು; ಸ್ವೀಕರಿಸು; ಅಂಗೀಕರಿಸು: ಸ್ವಯಂಬರದೊಳ್ ತನ್ನ ಭಾಗ್ಯದೊಳ್ ಮೆಚ್ಚಿದವರಂ ಕೆಯ್ಕೊಳ್ಗೆ (ವಡ್ಡಾರಾ. ೪೦–೨೭); ಈಕೆಯುಂ ಕೆಯ್ಕೊಳ್ವುದೆ ಕಜ್ಜಂ (ಪಂಪಭಾ. ೩–೧೮ ವ). ೨. ಪಡೆ; ಹೊಂದು; ತಾಳು; ಧರಿಸು: ವಿಮಳೋದಯ . . . ದುರ್ವಿನೀತಾದಿಗಳೀ ಕ್ರಮದೊಳ್ ನೆಗಟ್ಟಿ ಗದ್ಯಾಶ್ರಮಪದಗುರುತಾಪ್ರತೀತಿಯಂ ಕೆಯ್ಕೊಂಡರ್ (ಕವಿರಾ. ೧–೨೯); ಪರಮೇಶ್ವರ ದೀಕ್ಷೆಯಂ ಸ್ತಿಮಿತಸಾಗರಂ ಕೆಯ್ಕೊಂಡು (ಶಾಂತಿಪು. ೧–೮೫ ವ); ದೀಕ್ಷಾಭರಮಂ ಕೆಯ್ಕೊಂಡು (ಅಜಿಪು. ೨–೧೧೬). ೩. ಒಪ್ಪು; ಒಡಂಬಡು; ಸಮ್ಮತಿಸು: ಶಮುಮನೆ ಕೆಯ್ಕೊಳ್ವೊಡೆ ಬಿಲ್ಲುಮಂಬುಮುಂ ಬಿಸುಟು (ಪಂಪಭಾ. ೭–೫೧); ಇದಂ ನೀಂ ನೃಪ ಕೈಯ್ಕೊಳ್ಳನ್ನ ತಂದೆಯೆಂದುದಂ (ಗದಾಯು. ೪–೮). ೪. ತನ್ನದಾಗಿ ಮಾಡಿಕೊ; ಎತ್ತಿಕೊ; ಪಕ್ಷ ವಹಿಸು: ಎಮ್ಮಮ್ಮಂ ಕೆಯ್ಕೊಂಡು ಗೆಲಿಸಲ್ ವೇೞ್ಕುಂ (ಪಂಪಭಾ. ೯–೧೧ ವ). ೫. ಹಿಡಿದುಕೊ; ಸೆರೆಹಿಡಿ; ಅಧೀನ ಪಡಿಸಿಕೊ: ಈ ಲೋಕಮಂ ಹೈಮನಗಂ ಕೆಯ್ಕೊಂಡುದೆಂಬನ್ನೆಗಂ (ಸುಕುಮಾ. ೪–೧೧). **ಕಯ್ಕೊಳ್**: ೧. "ಕಯ್ಕೊಳ್ – ಸ್ವೀಕಾರೇ" (ಶಮುಧಾ); ಅತಿಥಿ ಪೂಜೆಯಂ ವಿನಯಪುರಸ್ಸರಂ ಕಯ್ಕೊಂಡು (ಕಾದಂಪೂ. ೬೯೩). ೨. ಕಯ್ಕೊಂಡ ಕಳಾಪರಿಣತೆಯೊಳ್ ಪಂಡಿತೆಯಿಂದಾಕೆ ಪರಮ ಪಂಡಿತೆಯಾದಳ್ (ಆದಿಪು. ೩–೨೧); ಸುಳಿವಳಿನಿಕರಂ ಶಾಬಾಕ್ಷರ ನಿಕುರುಂಬಂ ರೂಪಂ ಕಯ್ಕೊಂಡು (ಕಾದಂಪೂ. ೨೩೭). ೩. ಇದಂ ಕಯ್ಕೊಂಣ್ಡು ನಡೆಯಿಸಿದಾತಂಗೆ ಅನಂತಪುಣ್ಯ (ಎಕ. IV, ನಾಗಮಂ. ೫೧–೨೩; 972); ೬. ಕೈಗೆತ್ತಿಕೊಳ್ಳು; ತೊಡಗು; ವಹಿಸು; ಆರಂಭಿಸು: ಸಂಸರಣಾಂಭೋರಾಶಿಯಂ ದಾಂಟುವ ಬಗೆಯನೆ ಕಯ್ಕೊಂಡಂ (ಆದಿಪು. ೪–೮೯). ೭. ಲೆಕ್ಕಿಸು; ಗಮನಿಸು; ಗಣಿಸು: ಶ್ರುತಮಮಂ ಕಯ್ಕೊಳ್ಳಳಾಚಾರಮನವಧರಿಸಳ್ ಸತ್ಯಮಂ ಬಾರ್ತೆಗೆಯ್ಯಳ್ (ಕಾದಂಪೂ. ೫೪೮). ೮. ಹಿಡಿ; ಆಕ್ರಮಿಸು; ಕವಿ: ಏನಾನುಂ ವ್ಯಾಧಿ ಕಯ್ಕೊಂಡಂತಾರೊಳುಂ ನುಡಿಯದೆ (ಕಾದಂಉ. ೨೦೭); ಕಡೆದರೋ ಕರುವಿಟ್ಟರೋ ನಿದ್ದೆಬಂದು ಕಯ್ಕೊಂಡುದೊ (ಕಾದಂಉ. ೪೪೩). ೯. (ಕಿವಿಯಿಂದ) ಕೇಳು; ಗ್ರಹಿಸು: ಪೆಣ್ಬುಯ್ಯಲಂ ಶ್ರುತಿ ಕಯ್ಕೊಂಡುದು ಕೇಳ್ದಿದಂ ತೆವಳೆಗಂಡಂದನ್ನ ವಿಖ್ಯಾತಿ ದೂಷಿತಮಕ್ಕುಂ (ಪಂರಾಮಾ. ೯–೧೪೪). **ಕಯ್ಗೊಳ್**: ೧. ಧರೆಯಂ ತ್ರೈಲೋಕ್ಯ ಮಲ್ಲಕ್ಷಿತಿಪತಿ ಕುಡೆ ಕಯ್ಗೊಣ್ಡು (ಸೌಇಇ. XI–i, ೧೧೬–೭; 1075). ೨. ತಪಮಂ ಪಜ್ಜಳಮಂ ಕಾಶ್ಯಪಮುಸಿಯೆಂತಂತೆ ನಿಚ್ಚಮುಂ ಕಯ್ಗೊಂಡಂ (ಸೌನಂದ. ೧–೨). **ಕೆಯ್ಕೊಳು**. 'ಕೆಯ್ಕೊಳುಹ' ಪರಾ. **ಕೆಯ್ಗೊಳ್**: ೬. ಇಸುಗೆಯಂ ಕೆಯ್ಗೊ [ಪಾಠಾಂ. ಕೈಕೊ]ಂಡು ಸವರಿದಂ ಬಂದ ರಿಪುಮೋಹರವನು (ಜೈಮಿಭಾ. ೧೨–೪೦). **ಕೈಕೊಳ್**: ೧. ವಿದ್ಯಾರ್ಥಿಯಾಗಿ ಬಂದೆನೆನ್ನಂ ಕೈಕೊಳ್ವುದೆನೆ ತಪಸ್ವಿ ಕರಮೊಳ್ಳಿತ್ತೆಂದು ಕೈಕೊಂಡಿರೆ (ಪಂಚತಂ. ೭೦–೧೨); ರಿಪುಕುಲ ಸಂಹರನಪ್ಪ ಪುರುಷನಂ ವಿಜಯಲಕ್ಷ್ಮಿ ಕೈಕೊಳ್ವವೊಲ್ (ಸುಕುಮಾ. ೯–೨); ಸಿರಿಬರೆ ಕೈಕೊಳ್ಳದಿರ್ಪ ಗಾಂಪರುಮೊಳರೆ (ಸಮುಪ. ೩–೫೯);

ಮುಂಡಾಡುಗೆ ಮುದ್ದಿಸುಗೆ ಮರಲ್ದಪ್ಪುಗೆ ಕೈಕೊಂಡೀ ಕಾವ್ಯಮಂ (ಗಿರಿಕ. ೧–೧೦). ೨. ಜಿನದೀಕ್ಷೆಯಂ ಕೈಕೊಂಡು (ವಡ್ಡಾರಾ. ೭೫–೨೯); ತಾಳದ ಲಯಮಂ ನಿಜ ನೀಲಾಳಕಹಾರದ ಪೊದಟ್ದ ಮುತ್ತಿಂಬಿವುಮುಂ ಮೇಳಿಸಿ ಕೈಕೊಂಡುವು (ಆದಿಪು. ೯–೨೪); ಸಾಸಿರ್ಬ್ಬರಿತ್ತ ಪರಕೆಯ ಕೈಕೊಣ್ಡು ಕಲ್ಲ ನಿಱಿಸಿದಂ (ಎಕ. VIII, ಸೊರಬ. ೨೪೮–೩; 950); ಶೀಲವನು ಕೈಕೊಂಡು ನಡೆಸದಾತನೆ ಹೊಲೆಯ (ಪುರಂದ. ೧–೧೭೮–೧). ೩. ನೀನೆಂತುಮೆಮ್ಮ ಪೇೞ್ದುದಂ ಕೈಕೊಳ್ಳದೆ ವೈರಮನೆ ಕೈಕೊಂಡು . . . ಸಂಧಿಯನೊಡಂಬಡೆಯುಪ್ಪಿನಂ (ಗದಾಯು. ೪–೧೩ ವ); ಈತನ ನಿರ್ದೇಶವ ನೇಮದಲಿ ಕೈಕೊಳ್ಳದಾವನು ಹೋಮಿಸುವನು (ಕುವ್ಯಾಅ. ೦೧೩. ೨೫–೫೪). ೪. ಅವನೀಶ್ವರ ಪ್ರತತಿಯಂ ಕೈಕೊಂಡು ಕಾದೆಯ್ದೆ (ಎಇ. XIII, ೩೨೯–೪; 929). ೫. ನಿನ್ನಂತಾರೊಳಪೊಕ್ಕು ಸಾಧಿಸಿದರ್ . . . ಘಟಿಯಂ ಕೈಕೊಂಡರಾರ್ (ಸೂಕ್ತಿಸು. ೧–೨೦); ಸಮಸ್ತವನರಾಷ್ಟ್ರಮಂ ಕೈಕೊಂಡನು (ಜೈಮಿಭಾ. ೮–೩); ಅಂತು ಕೈಕೊಳ್ಳದೆ ಬೆಂಬತ್ತಿ ತೇನತೇನಂ ಮಸಗಿ . . . ಬರ್ಪ (ಕಬ್ಬಿಕಾ. ೨೮೮). ೭. ಕಾಲನು ಹರಿಹರ ಬ್ರಹ್ಮಾದಿಗಳ ಕೈಕೊಂಬನಲ್ಲೆಂದ (ಕುವ್ಯಾದ್ರೋ. ೧೬–೪); ಆರ ಕೈಕೊಂಬುದೀ ಬಿಸಿಲು ವೈಕುಂಠದೆ ನಾರಾಯಣ ನೀರೊಳು ಮಿಡುಕಿ ಮಿಾನಾದ (ಮೋಹತ. ೧೯–೪೮). ೧೦. ಎದುರಿಸು; ಪ್ರತಿಭಟಿಸು; ವಿರೋಧಿಸು : ಕೈಕೊಳ್ಳದಗ್ಗದ ಬೀರರ್ ತೆಗೆದೋಡೆ (ಕಬ್ಬಿಕಾ. ೩೦೪). ೧೧. ಎಸಗು; ಮಾಡು : ಒರ್ವಂ ತನ್ನ ಕಾಂತೆಯೊಳ್ ಕೈಕೊಂಡ ಪೊಲ್ಲಮೆಯುಂ ಕಳೆಯಲ್ಕೆಂದು ನಲ್ಲಳ ಕಾಲ್ಗೆಱಗಿ (ಜಗವಿ. ೧೬–೧೨೦ ವ). ೧೨. ಬೆಳೆ; ವೃದ್ಧಿಯಾಗು : ಕಸವಂ ಕಿೞ್ತಲ್ಲದೆ ಪೊಸಸಸಿಗಳ್ ಕೈಕೊಳ್ವವು (ಲೀಲಾವ. ೧–೨೮). **ಕೈಕೊಳು :** ೧. ದಾನದೊಡವೆಯಂ ಕುಡದೊಡೆಲ್ಲವಂ ಮರಳಿ ಕೈಕೊಳು (ಹಚಕಾ. ೮–೫೪); ಭೀಮನ ಹರಕೆಗಳ ಕೈಕೊಳುತ ನಕುಲಾದ್ಯರಿಗೆ ಪೊಡವಟ್ಟು (ಕುವ್ಯಾದ್ರೋ ೪–೫೧); ಎದುರಿಗೆ ಪೂಜೆ ಕೈಕೊಳುತ್ತಿದ್ದ ದೇವಿಗೆ ಕೈಮುಗಿದು (ಚಕದೇ. ೧೫). **ಕೈಕೋ :** ೧. ಶರಧನುವ ಕೊಳ್ಳೆಳು ಕೈಕೋ ಪರಬಲದ ತೋಟಿಯನು (ಕುವ್ಯಾಭೀ. ೩–೯೨). **ಕೈಗೊಳ್ :** ೧. ಅಜ್ಞಾನ ಪ್ರಾವೃತ ಮಾಯೆಯಿಂದೆ ತಪಮಂ ಕೈಗೊ[ಪಾಠಾಂ. ಕೊ]ಳ್ವದೆತ್ತೀಗಳಜ್ಞಾನಂ ಪಿಂಗಿ (ಸುಕುಮಾ. ೩–೪೨). ೨. ಅಂಬೊಂದೊಂದೆ ಸಹಸ್ರರೂಪಮನೆ ಕೈಗೊಂಡಿರ್ದುವು (ಜಗವಿ. ೭–೭೯). ೪. ಕಾಗೆಯ ಮಱಿಯೆಂದಱಿಯದೆ ಕೋಗಿಲೆ ಕೈಗೊಂಡು ಕೂರ್ಮೆಯಿಂ ನಡಪಿದೊಡಂ (ಧರ್ಮಾಮೃ. ೨–೧೦೪). ೫. ಪ್ರಚುರಂ ಪತ್ತೊಳಗಾಗೆ ರಂಧ್ರವನೆ ಕೈಗೊಂಡೆಂಟ ನೀಗೇಳ ಬಿಟ್ಟು (ಸೋಮೇಶ. ೧೦೧). **ಕೈಗೊಳ್ಳು :** ೬. ಆಗಿನಿಂದ ನಾವು ರಕ್ಷಣಾ ಕ್ರಮಗಳನ್ನು ಕೈಗೊಳ್ಳುತ್ತ ಬಂದಿದೇವೆ (ಚಕ್ಕದೇ. ೧೬೨).

ಕೈಕೊಳಹೇಳು = ಕೈಕೊಳ್ಳುವಂತೆ ಹೇಳು : ಕಾಳುಗೆಡೆದಿರಿ ಕೂಡೆ ಕೈಕೊಳಹೇಳಿ (ಕುವ್ಯಾದ್ರೋ. ೨–೩೨). [ಕೆಯ್$_2$ + ಕೊಳ್$_1$]

**ಕೆಯ್ಕೊಳಿಸು,** ಕಯ್ಕೊಳಿಸು, ಕಯ್ಗೊಳಿಸು, ಕೆಯ್ಗೊಳಿಸು$_1$, ಕೈಕೊಳಿಸು$_1$, ಕೈಗೊಳಿಸು$_1$ (ಕ್ರಿ). ೧. ಕೈಕೊಳ್ಳುವಂತೆ ಮಾಡು; ಸ್ವೀಕರಿಸುವಂತೆ ಮಾಡು; ಕೊಡು; ಒಪ್ಪಿಸು : ನಿಮಗಿನಿತುಂ ಬೆಸಕೆಯ್ವುದೀ ಕುಲಶ್ರೀ ಮತ್ತೆಂತೆನೆಗೆ ಹಿತಂ ಮಾೞ್ಪಳನಿಂತನಿಷ್ಟಮಂ ಕೂರ್ಪರಿಂತು ಕೆಯ್ಕೊಳಿಸುಗುಮೇ (ಶಾಂತಿಪು. ೯–೧೦೫); ಅಂಜದೆ ಪೇೞ್ದ ಸುಭಾಷಿತಮಂ ಕೆಯ್ಕೊ[ಪಾಠಾಂ. ಕೈಕೊ]ಳಿಸುಗುಂ ವಿಭೀಷಣನೆ ವಲಂ (ಪಂರಾಮಾ. ೧೧–೨೧). **ಕಯ್ಕೊಳಿಸು :** ೧. ಅಖಿಲ ವಿದ್ಯಾಕಲಾಪದೊಳ್ ಪರಿಣತನಂ ಮಾಡಿ ಯತಿತ್ವಮಂ ಕಯ್ಕೊಳಿಸೆ (ಕಾದಂಪೂ. ೭೬೫); ಮದಲೇಖೆ ಬಲ್ಲೆ ನೀಂ ಕಯ್ಕೊಳಿಸಲ್ . . . ತೋಱಿದೆ ನೀಂ ನಿನ್ನೊಂದು ವಾಕ್ಕೌಶಲಗುಣಮನಿದಂ (ಕಾದಂಉ. ೧೫೩). **ಕಯ್ಗೊಳಿಸು :** ೧. ತಡೆಯದೆ ಭವ್ಯರನಜದೊಳ್ ತೊಡರ್ಚಿ ಕಯ್ಗೊಳಿಪ ಸರ್ವಯಶರಂ ನೀಂ ಕಂಡಡಿಗೆಱಗಿ ನೋಂಪೆನೆಂದು (ಶಾಂತಿಪು. ೪–೬೬). **ಕೆಯ್ಗೊಳಿಸು$_1$ :** ೨. ಒಡಂಬಡಿಸು; ಒಪ್ಪಿಸು : ತಿಳುಹಿ ನೃಪರಿತ್ತಂಡವನು ಕಯ್ಗೊಳಿಸಿದನು ಕೊಳುಕೊಡಲು ನಿಮ್ಮ ಪೊಲಿಳೆಯೊಳಾರ್ಪೈ ಭಾಗ್ಯವುಳ್ಳವರು (ತೊರರಾ. ೧–೧೬–೩೩). **ಕೈಕೊಳಿಸು$_1$ :** ೧. ಮೋಕ್ಷಕ್ಕೆ ಮುಖ್ಯ ಕಾರಣಮಪ್ಪ ಸಮ್ಯಕ್ತ್ವಮಂ ಕೈಕೊಳಿಸಲ್ ಬಂದಂ (ಚಾವುಂಪು. ೪೦–೮). **ಕೈಗೊಳಿಸು$_1$ :** ೧. ಬ್ರಹ್ಮಶಿರೋಸ್ತ್ರವನು ಕೈಗೊಳಿಸುವುದು ಕೃಪೆಯುಳ್ಳೊಡೆ (ಕುವ್ಯಾಅ. ೬–೯೬); ಭೂಪತಿಗೆ ಕೈಗೊಳಿಸಿದನು ಕಾಮ್ಯಾಧ್ವರವನು (ತೊರರಾ. ೧–೪ ಸೂಚನೆ). ೨. ಸುಜನಪ್ರಕರವನು ಗಾಂಗೇಯ ಧೃತರಾಷ್ಟ್ರರಿಗೆ ಕೈಗೊಳಿಸಿ ಕಾದಿ ಕುಬೇರನನು ಹೊಱವಡಿಸಿದರು (ತೊರರಾ. ೧–೮–೨೮). ೩. ಒದಗಿಸು; ಉಂಟುಮಾಡು : ನಾಣಂ ಪಿಂಗಿಸಿ ಮುಗ್ಧೆಗೆ ಜಾಣಂ ಕೈಗೊಳಿಸುವಂತೆ (ಶಮದ. ೬೯ ಪ್ರಯೋ). ೪. ಆರಂಭಿಸು; ತೊಡಗು; ಉದ್ಯೋಗಿಸು : ನಿರುತ ಪ್ರಸಾದಮಂ ಕೊಳಲೆಂದು ಕೈಗೊಳಿಸಿ ಬಱಿಯಹಂಕಾರದಿಂ ಬಿಡುವವಂ (ಲಶಿಚಂ. ೪೬–೨೦). ೫. ಉಂಟಾಗು; ಒದಗು; ಲಭಿಸು : ಕೈಗೊಳಿಕುಂ ತತ್ಸಾಧನಂಗಳುಂ (ಚಕವಿ. ೪–೭೯). [ಕೆಯ್ಕೊಳ್ + –ಇಸು$_3$]

**ಕೆಯ್ಕೊಳು** 'ಕೆಯ್ಕೊಳ್' ನೋ.

**ಕೆಯ್ಕೊಳುಹ,** ಕೈಕೊಳುಹ (ನಾ). ೧. ಕೈಗೊಳ್ಳುವುದು; ಸ್ವೀಕರಿಸುವುದು; ಪಡೆಯುವುದು. ೨. ಸೆಳೆದುಕೊಳ್ಳುವಿಕೆ; ಬಲಾತ್ಕಾರದಿಂದ ಕಿತ್ತುಕೊಳ್ಳುವಿಕೆ : "ಆಕ್ರಾಂತಮಾಸ್ಥಿತಮೆನಲ್ ಕೆಯ್ಕೊಳುಹಮಕ್ಕುಂ" (ಮಂಗರಾ. ೧೩೫–೩೭). **ಕೈಕೊಳುಹ :** ೧. ಸುತ್ತಲುಮಿರ್ದ ಪುದ್ಗಲಂಗಳಂ ಶರೀರರೂಪದಿಂ ಕೈಕೊಳುಹಮಂ (ತಸೂವೃ. ೪೭). [ಕೆಯ್ಕೊಳು (< ಕೆಯ್ಕೊಳ್) + –ಹ$_2$]

**ಕೆಯ್ಕೋಲು,** ಕಯ್ಕೋಲ್, ಕೈಕೋಲು, ಕೈಗೋಲು (ನಾ). ೧. ಕೈಯಲ್ಲಿ ಹಿಡಿದುಕೊಳ್ಳುವ ಕೋಲು; ಊರೆಗೋಲು : (ಕ). **ಕಯ್ಕೋಲ್ :** ೨. ಕಡೆಗೋಲು : "ಕಯ್ಕೋಲ್ = ಕಡೆಗೋಲ್" (ಶಮದ. ಪರಿ. ೨). **ಕೈಕೋಲು :** ೧. ಕೋಟೆ ಬಾಗಿಲಿಗೆ ಕಟ್ಟಿದ್ದ ದಟ್ಟಿ ಚಲ್ಲಣಗಳನ್ನು ತಮ್ಮ ಆಳಿನ ಕೈಕೋಲಿನಿಂದ ತೆಗಿಸಿ . . . ಪ್ರವೇಶ ಮಾಡಿದರು (ಒಡೆಕ. ೩೫). ೨. "ಕೈಕೋಲ್ಗೆ ಕಡಗೋಲೆನಿಕ್ಕುಂ" (ಕಬ್ಬಿಕೈ. ೮೨). **ಕೈಗೋಲು :** ೧. ಬತ್ತಿದಗಲ್ಲ . . . ನೆಲದೊಳಗೊತ್ತಿ ಹೂಡಿದ ಕೈಗೋಲು (ಕಂನವಿ. ೬–೧೯೦); ಇಂದಿನ ಪಶ್ಚಾತ್ತಾಪ ನಾಳಿನ ನಡತೆಗೆ, ಜೀವನಕ್ಕೆ ಕೈಗೋಲಾಗಲಿ (ಹಂಗೀತೆ. ೮೫).

[ಕೆಯ್$_2$ + ಕೋಲು$_1$ (< ಕೋಲ್$_1$)]

**ಕೆಯ್ಗಂಪು,** ಕೆಯಿಗಂಪು (ನಾ). ಗದ್ದೆಗಳಿಂದ ಬರುವ ಸುಗಂಧ : ಶಾಲಿಗಳ ಕೆಯ್ಗ[ಪಾಠಾಂ. ಕೈಗ]ಂಪ ಪೊಲಗಾವ ಪಾಮರಿಯರೋಳಿಗಳ ಮೈಗಂಪ (ಜೈಮಿಭಾ. ೩–೮). **ಕೆಯಿಗಂಪು :** (ಕ). [ಕೆಯ್$_4$ + ಕಂಪು]

**ಕೆಯ್ಗಟ್ಟಳೆ** (ನಾ). ಕೈಹಿಡಿಯುವಷ್ಟು; ಕೈ ಅಳತೆ : ಒಟ್ಟಿದ ಪೊನ್ನ ಬೆಟ್ಟುಗಳನೀವೆಡೆಗೇವುದೊ ತೂಕಮನ್ನ ಕೆಯ್ಗಟ್ಟಳೆ ಕೊಳ್ಳಿಂ (ಪಂಪಭಾ. ೬–೩೯). [ಕೆಯ್$_2$ + ಕಟ್ಟಳೆ$_1$]

**ಕೆಯ್ಗಟ್ಟೆ,** ಕೆಯ್ಘಟ್ಟೆ, ಕೈಗಟ್ಟೆ$_1$, ಕೈಘಟ್ಟೆ (ನಾ). (ಊಟವಾದ ಬಳಿಕ) ಕೈಗೆ ಸವರಿಕೊಳ್ಳುವ ಸುಗಂಧ, —ಸುಗಂಧಲೇಪ : ಎತ್ತಿದ ಬೋನದೊಳ್ ಕಲ್ಯಾಣಾಮೃತಾಹಾರಮನಾರೋಗಿಸಿ ಬೞಿಯಂ ಯಕ್ಷಕರ್ದಮದ ಕೆಯ್ಗಟ್ಟೆಯೊಳ್ ಕೆಯ್ಯಂ ತಿಮಿರ್ದು ತಂಬುಲಮಂ ಕೊಂಡು (ಪಂಪಭಾ. ೩–೭೯ ವ); ಆರೋಗಣೆಯ ಕಡೆಯೊಳಮರ ವಟುಗಳವಟಯ್ಸಿದ ಕೆಯ್ಗಟ್ಟೆಯೊಳ್ (ಚಂದ್ರಪ್ರ. ೧೩–೨೬ ವ); ಕೊರಡು ಮುಟ್ಟದರದುವೆ ಕೆಯ್ಗಟ್ಟೆಯಾಗುವುದು (ಕಾಲೂರ. ೩೭–೪೧).

**ಕೆಯ್ಘಟ್ಟಿ :** ಉತ್ಪ್ರೇಕ್ಷೆಯಂ ಕೆಯ್ಘಟ್ಟಿ ನೀಡಲುಂ (ಆದಿಪು. ೭-೨೧ ವ). **ಕೈಗಟ್ಟಿ**$_1$ : ರಸರಸಾಯನಾದಿಯಿಂ ಕೈಗಟ್ಟಿಯಿತ್ತು ಕರ್ಪೂರ ತಾಂಬೂಲಮಂ ಸಮರ್ಪಿಸಿ (ವೃಷವಿ. ೧೪-೨೮ ವ) ; ಹರಪ್ರಸಾದ ಸುಧಾಸ್ವಾದನಂಗೆಯ್ದು ಪರಿತುಷ್ಟಿವಡೆದು ಪರಿಮಳಿಪ ಕೈಗಟ್ಟಿಯಂ ಕೊಂಡು (ರಾಜಶೇ. ೪-೧೪ವ). **ಕೈಘಟ್ಟಿ :** ಯಕ್ಷಕರ್ದಮದ ಕೈಘಟ್ಟಿಯೊಳಂ ಗಯ್ಯಂ ತಿಮಿರ್ದು (ಸುಕುಮಾ. ೧೧-೩೨ವ) ; ಅಮೃತಾನ್ನಮನಾರೋಗಿಸಿ ಕೈಘಟ್ಟಿಯಂ ಕೊಂಡು (ಗಿರಿಕ. ೧೦-೯೬ ವ) ; " ಅನುಲೇಪನ " (ಸುಕುಮಾ. ಕೋಶ). [ಕೆಯ್$_2$ + ಗಟ್ಟಿ]

**ಕೆಯ್ಗಟ್ಟಿಗೊಳ್ (ಕ್ರಿ).** ಸುಗಂಧಲೇಪವನ್ನು ತೆಗೆದುಕೊ ; ಸುಗಂಧವನ್ನು ಕೈಗೆ ಲೇಪಿಸಿಕೊಳ್ಳು : ದಿವ್ಯಾಹಾರಂಗಳನಾರೋಗಿಸಿ ಕೆಯ್ಗಟ್ಟಿಗೊಂಡು ತಂಬುಲಂಗೊಂಡು (ಪಂಪಭಾ. ೫-೬೭ ವ). ಆಯಿರ್ವರುಮುಂಡು ಕೆಯ್ಗಟ್ಟಿಗೊಂಡು ಕುಳ್ಳಿರ್ದ ನಂತರಂ (ಜೀವಸಂ. ೧೧೯-೩೪ವ). [ಕೆಯ್ಗಟ್ಟಿ + ಕೊಳ್$_1$]

**ಕೆಯ್ಗಟ್ಟು (ಕ್ರಿ). ೧.** ಕೈಯನ್ನು ಕಟ್ಟು : ಮುಟ್ಟಿವಡೆ ಬಯಲಾದ ಡಾಕೃತಿಗೊಟ್ಟಿರಲು ತೊಡರಿದಡೆ ತಾಂ ಕೆಯ್ಗಟ್ಟಿ [ಪಾಠಾಂ. ಕೈಗಟ್ಟಿ] ಮೃಡನೊಡನಾಡಭಂಜದೆ ಗೆಲಲು (ಬಸಪು. ೮-೫೬). **೨.** ಉಂಟಾಗು ; ಆರಂಭವಾಗು : ಹುದು ನಡೆಯದಿವರೊಡನೆ ನಮ್ಮಲಿ ಕದನವೇ ಕೆಯ್ಗಟ್ಟು [ಪಾಠಾಂ. ಕೈಗಟ್ಟು]ವುದು (ಕುವ್ಯಾಅ. ೮-೬). [ಕೆಯ್$_2$ + ಕಟ್ಟು$_1$]

**ಕೆಯ್ಗಡಿ, ಕಯ್ಗಡಿ (ನಾ).** ಕತ್ತರಿಸಲ್ಪಟ್ಟ ಸೊಂಡಿಲಿನ ತುಂಡು : ಪಡೆದಿರ್ದ ಕೆ[ಪಾಠಾಂ. ಕ]ಯ್ಗಡಿಯ ಸಂದಣಿಯಿಂದರಿವೈನತೇಯ ನಾಂತಿಱಿದಹಿಲೋಕದಂತಿರೆ ಪಡಲ್ವಡಿಪಂ ರಿಪುದಂತಿಯೂಥಮಂ (ವರ್ಧಪು. ೭-೪೯). **ಕಯ್ಗಡಿ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕೆಯ್$_2$ + ಕಡಿ$_2$]

**ಕೆಯ್ಗತ್ತಿ, ಕೈಕತ್ತಿ, ಕೈಗತ್ತಿ (ನಾ).** ಸಣ್ಣಕತ್ತಿ : ನೃಪತಿ ಕಟ್ಟಾಸುರದ ಕೊಯ್ಯಾಳರಂ ಕರೆಸಿ ತೆಗೆಸಿದಂ ಮಸೆದ ಕೆ[ಪಾಠಾಂ. ಕೊ]ಯ್ಗತ್ತಿಗಳನು (ಜೈಮಿಭಾ. ೨೬-೫೧). **ಕೈಕತ್ತಿ :** ಪಿಡಿದ ಸಬಳ ಕೈಕ[ಪಾಠಾಂ. ಗ]ತ್ತಿ . . . ಕಾಸೆಯ ಸಬಳಿಗರು (ಕುರಾಸಾಂ. ೧೧-೩೬) ; ನಿಮ್ಮ ಅಪ್ಪಣೆಯಾದರೆ ನನ್ನ ಕೈಕತ್ತಿಯಿಂದ ಈಗಲೇ ಇದನ್ನು ಕೊಲ್ಲುವೆನು (ನೀತಿಚಂ. IV, ೨೬). **ಕೈಗತ್ತಿ :** ಹೊಳೆವ ಕಠಾರಿ ಕೈಗತ್ತಿ ತೋಮರ ಬಿಲ್ಲುಬಲುದಡಿ ಪಿಡಿಚಕ್ರದಲಿ . . . ತಳವಱರೂರ ಕಾದಿಹರು (ಮೋಹತ. ೧೮-೧೦೩) ; ಕರದಲ್ಲಿ ಪಿಡಿದ ಗುರಾಣಿ ಕೈಗತ್ತಿಯ ಗರುವ ಮನ್ನೆಯರ ಸಂದಣಿಯ ಪರಿವಿಡಿಯಿಂದಲಿ (ಕಂಸವ. ೧೧-೧೪). [ಕೆಯ್$_2$ + ಕತ್ತಿ]

**ಕೆಯ್ಗಳಿ, ಕಯ್ಗಳಿ, ಕಯ್ಗಳಿ, ಕೆಯ್ಕಳಿ, ಕೈಗಳಿ, ಕೈಗಳಿ (ಕ್ರಿ).** ಕೈಮೀರು ; ಅತಿಕ್ರಮಿಸು ; ಹೆಚ್ಚಾಗು : ಕೆಯ್ಗಳಿದ ಮನೆವಾೞ್ತೆಗೆ ಬುದ್ಧಿವೇೞಲೆಡೆಯಿಲ್ಲ (ಪಂಪಭಾ. ೭-೧೬ ವ) ; ಬರೆ ಪೊಸಸುಗ್ಗಿ ಕೆಯ್ಗಳಿಯೆ ಕಣ್ಗೆಸೆದಿರ್ದುವು ನಂದನಾಳಿಗಳ್ (ಶಾಂತಿಪು. ೭-೧೨೪) ; ಒಸಗೆವಾತಂ ಪಂಕದೊಳ್ ತೋಯದೊಳ್ ಕೆಯ್ಗಳಿಯೆ ಜಯಮನೊಳ್ಪಂ ನೋಡಲಾ ಧಾತ್ರಿಯೊಳ್ (ಲೋಕೋಪ. ೧೨-೪೦) ; ರುದ್ರಂ ಕಂಡಲ್ಲಿ ಕಣ್ಬೊಲನಾಗಿ ಕೆಯ್ಗಳಿದ ಮುಳಿಸಿಂ (ಕಾವ್ಯಾವ. ೫೭). **ಕಯ್ಗಳಿ :** ಕಾರ್ಯವು ಮಿಂಚಿಹೋಗಿ ಕಯ್ಗಳಿದ ತರುವಾಯ (ಮಂತ್ರಶ. ೭೪-೧೩). **ಕೆಯ್ಗಳಿ :** "ಕಯ್ಗಳಿ – ಅತಿಕ್ರಮಣೇ " (ಶಮಧಾ). **ಕೆಯ್ಕಳಿ :** "ಕೆಯ್ಕಳಿದುದಸಳಿದುದೆನಿಪ್ಪ ನಾಮುಂ " (ಚತುನಿ. II, ೧೧). **ಕೈಗಳಿ :** ಸಮರಾಂಗಳದೊಳಗೆ ಪೂಣ್ದೋಡಿ ನಿಲೆ ಕೈಗಳಿಯೆ ಮೊಳಗಿತು ಸೂಳಡರಿ ಸನ್ನಾಹ ಪುದುಭೇರಿ (ಸಾಳ್ವಭಾ. ೮-೬೬). **ಕೈಗಳಿ :** ಪಟುಗೆ ಮೇಣ್ ಪೊಗಟ್ಗೆ ಮೇಣ್ ನೆವಮಿಲ್ಲದೊಡಿಂತು ಕೈಗಳಿಯೆ ಬಗ್ಗಿಸುಗೆ ಮೇಣವರೆಲ್ಲರುಂ (ಕವಿರಾ. ೧-೧೩೬) ; ಸನತ್ಕುಮಾರ ಕುಬೇರ ವಿದ್ಯಾಧರ ಕುಮಾರಂ ಕೈಗಳಿಯೆ ಸೊಗಯಿಸಿ (ಶಾಂತಿಪು. ೫-೯೫ ವ) ; ಪಟುಗಳಿದ ಪಾಪಮುಂ ಕೈಗಳಿದ ತಪೋನಳನೆ ಸುಡುಗುಂ (ಅರ್ಧನೇ. ೪-೧೨೯). [ಕೆಯ್$_2$ + ಕಳಿ$_1$]

**ಕೆಯ್ಯಾ**$_1$, **ಕಯ್ಯಾಯ್, ಕೆಯ್ಯಾಯ್, ಕೈಕಾಯು, ಕೈಗಾ**$_1$, **ಕೈಗಾಯ್, ಕೈಗಾಯಿ, ಕೈಗಾಯು (ಕ್ರಿ). ೧.** ನಿಧಾನಿಸು ; ತಡೆದುಕೊಳ್ಳು ; ಕೈ ಎತ್ತದೆ ಇರು : ಅಂತು ಕಿಱಿದು ಪೊೞ್ತು ಕೆಯ್ಯಾದು ಕಾದೆ (ಪಂಪಭಾ. ೧೧-೧೮ ವ). **ಕೆಯ್ಯಾಯ್ : ೧.** ಕನ್ನೆಯ ನೊಯ್ಯನೆ ಮುಱಿಗೊಂಡೆನ್ನಂ ಕಯ್ಯಾಯದೆಚ್ಚಪಂ (ನೀತಿವಂ. ೧-೭೬). **೨.** ಕಾಪಾಡು ; ರಕ್ಷಿಸು : "ಕಯ್ಯಾಯ್ – ಸಂರಕ್ಷಣೇ " (ಶಮಧಾ). **ಕೆಯ್ಯಾಯ್ : ೨.** ಕಱು ಕಱುಗಾಹಿಗಳನತಿ ಕರುಣದಲಿ ಕೆಯ್ಯಾಯ್ದು ನಯನಾಪಾಂಗದಲಿ ನೋಡಿ (ಭಾಗ. ೧೦-೧೩-೧) ; ಕೆಯ್ಯಾ [ಪಾಠಾಂ. ಕೈಗಾ]ಯ್ದುವಲ್ಲೆಮ್ಮ ಬಾಣಂಗಳೀಕ್ಷಿಸು (ಜೈಮಿಭಾ. ೨೫-೨೧). **ಕೈಕಾಯು : ೧.** ನೀವು ನೃಪದ್ರೋಹಿಗಳಾಗಿದ್ದರೂ ಬ್ರಾಹ್ಮಣರೆಂದು ತಿಳಿದು ನಾನು ನಿಮ್ಮನ್ನು ಕೈಕಾದು ಬಿಟ್ಟಿರುವೆನು (ತುಳಸಿ. ೮೫). **೩.** ಬೇರೊಬ್ಬರ ಕೈಯನ್ನು ಕಾದುಕೊಂಡಿರು ; ಅನ್ಯರ ಸಹಾಯವನ್ನು ನಿರೀಕ್ಷಿಸುತ್ತಿರು : ಹೆರರ ಕೈಕಾಯುತ್ತ ಸಾಯದೆಯೆ ಬದುಕದೆಯೆ ಬಾಳ ನೂಕುವೆನು (ಹೊಂಗಳು. ೧೮-೨೫). **ಕೈಗಾ**$_1$ **: ೧.** ತರಳನೆಂದಾನು ಕೈಗಾದು ಬಿಟ್ಟಡೆ ರಣ ಧುರುಳತ್ವ ನಿನಗೆ ಸಿದ್ಧಿಪುದೇ (ಮೋಹತ. ೩೪-೩೧). **೨.** ಅವೆಡೆಯೊಳಂ ಕೈಗಾವ ಮಾಣಿಕ್ಯದೇವ ಪದಾಂಭೋಜಮೆ ಭವ್ಯಕೋಟಿಗೆ ಜಯಂ ಭದ್ರಂ ಶುಭಂ ಮಂಗಳಂ (ಆದಿಪು. ೧೭-೯) ; ಕರುಣಾಕರನೆ ಕೈಗಾವುದೈ (ಕುವ್ಯಾಭ. ೩-೭೫) ; ವೈಯಿಕ್ಕಿದನು ಕೈಗಾವುದೆಂದೆನುತ (ಭಾಗ. ೭-೧೫-೨೦). **ಕೈಗಾಯ್ : ೧.** ದುಡುಕಿದರೆ ಕೈಗಾಯ್ದು (ಕುವ್ಯಾಅ. ೧೫-೨೯) ; ನಂಜರಾಜನಂ ಕೈಸೆಱೆಗೊಂಡು ಕೈಗಾಯ್ದು ಕಳುಪುವಂ (ಚಿಕವಿ. ೫೯-೧೪). **೨.** ಕೃಷ್ಣ ಕರುಣಾಜಲಧಿಯೇ ಕೈಗಾಯಬೇಕೆಂದೊರಲಿದಳು ತರಳೆ (ಕುವ್ಯಾಸ. ೧೪-೧೨೨). **ಕೈಗಾಯಿ : ೧.** ಪುಷ್ಪಬಾಣದರಸೇ ನೀ ಕೈಗಾಯಿ (ಉದ್ಭಟ. ೭-೬೩). **ಕೈಗಾಯು : ೧.** "ಸಹನತಾಳು, ತಡೆಕೊಳ್ಳು " (ಜಾನಕೋ. ೪೧). [ಕೆಯ್$_2$ + ಕಾ$_1$]

**ಕೆಯ್ಯಾ**$_2$, **ಕೈಗಾ**$_2$ **(ಕ್ರಿ).** ಹೊಲವನ್ನು ಕಾಯು, —ಕಾವಲಿರು : ಮುದದಿಂ ಕೆಯ್ಯಾವ ಪಾಮರಿಯರ್ (ಸುಕುಮಾ. ೯-೫೪) ; ಸಂತಂ ಕಿೞ್ಕಿಱಿಗಳೊಳೋರಂತಿರೆ ಕೆಯ್ಯಾವವಳ್ದಿರಂ ನೋೞ್ಪವರಂ (ಕಾವ್ಯಾವ. ೨೧೩). **ಕೈಗಾ**$_2$**:** ಕೈಗಾವ ಪಾಮರಿಯರ್ (ಮೋಹತ. ೨-೪೩). [ಕೆಯ್$_4$ + ಕಾ$_1$]

**ಕೆಯ್ಯಾಣಿಕೆ** 'ಕೆಯ್ಯಾಣ್ಕೆ' ನೋ.

**ಕೆಯ್ಯಾಣ್ಕೆ, ಕಯ್ಯಾಣಿಕೆ, ಕಯ್ಯಾಣ್ಕೆ, ಕೆಯ್ಯಾಣಿಕೆ, ಕೈಗಾಣಿಕೆ (ನಾ).** ಕೈಯಲ್ಲಿ ಕೊಡುವ ಕಾಣಿಕೆ ; ಮುಖತಃ ಕೊಡುವ ಕಾಣಿಕೆ ; ನಜರು. 'ಕೆಯ್ಯಾಣ್ಕೆಗೆಯ್ ' ಪರಾ. **ಕಯ್ಯಾಣಿಕೆ :** ದೇವಿದೇಱಿ ಅಡಿಗರ್ಚು ಕಾಣಿಕೆ ಕಯ್ಯಾಣಿಕೆ ಹಾಲಾವು (ಎಕ. VIII, ತೀರ್ಥಹ. ೧೯೨-೯೬ ; 1103). **ಕಯ್ಯಾಣ್ಕೆ :** ತಾನು ಇಲ್ಲಿಯೇ ಇದ್ದೂ ಅವಗೆ ಕಯ್ಯಾಣ್ಕೆಯನೊಪ್ಪಿಸದೆಯೆ (ವಿಗಡ. ೧೩-೨೪). **ಕೆಯ್ಯಾಣಿಕೆ :** ಬಾಲಕರ ವದನದೊಳ್ ವಾಣಿ ತಾಂ ನೆಲಸಿದಳೊ ಗಾನದೇವತೆಯ ಕೆಯ್ಯಾ [ಪಾಠಾಂ. ಮೈಗಾ]ಣಿಕೆಯೊ (ಜೈಮಿಭಾ. ೨೧-೫೭); ಕೆಯ್ಯಾಣಿಕೆಯನೀವೆ ! ಕೆಯ್ಮೆ ಕಾಣಿಕೆ ಕೇಳಲೇವೆ ? (ಹಬ್ಬಿರ. ೧೮-೪)

**ಕೈಗಾಣಿಕೆ :** ಕ್ರತುಶತದ ಕೈಗಾಣಿಕೆಯ ದೀಕ್ಷಿತರ ಸಿರಿಯಂತಿರವ (ಕುವ್ಯಾ ಆ. ೭-೯) ; ನಿಮ್ಮ ಕೈಗಾಣಿಕೆಯಾಗಿ ತೆಗೆದುಕೊಂಡುದು (ಎಕ. VI, ಕೊಪ್ಪ. ೨೧-೬ ; 1509) ; ಹೆದ್ದೊರೆಗಳು ಕೈಗಾಣಿಕೆಯಿತ್ತದ್ದ ಬಿದ್ದರು ಬಿಂಕವ ಬಿಸುಟು (ಮೋಹತ. ೨೨-೫೪) ; ಜಲಜನಾಭನ ವೈರ ಕೈಗಾಣಿಕೆಯದಾಯ್ತೆಂದ (ಕೋಗಯು. ೬-೩೩). [ಕೆಯ್$_2$ + ಕಾಣ್ಕೆ]

**ಕೆಯ್ಗಾಣ್ಕೆಗೆಯ್** (ಕ್ರಿ). ಕಾಣಿಕೆ ಕೊಡು : ಕೆಯ್ಗಾಣ್ಕೆಗೆಯ್ದಂಘ್ರಿಗೆ ಮಣಿದು (ಶಬಶಂ. ೧-೮೪). [ಕೆಯ್ಗಾಣ್ಕೆ + ಕೆಯ್$_1$]

**ಕೆಯ್ಗಾಯ್$_1$** 'ಕೆಯ್ಗಾ$_1$' ನೋ.

**ಕೆಯ್ಗಾವಲಿ** (ನಾ). ಚಿಕ್ಕ ಕಾವಲಿ, —ತವೆ ; ಸಣ್ಣ ಹೆಂಚು : ಪೇಳ್ ಬೆಳಗುವುದೇ ಕನ್ನಡಿಯಂ ಬೆಳಗುವಂತೆ ಕೆಯ್ಗಾವಲಿಯಂ (ಪುಷ್ಪಪು. ೧೩-೬೯). [ಕೆಯ್$_2$ + ಕಾವಲ್ಗಿ]

**ಕೆಯ್ಗುಡು$_1$** 'ಕೆಯ್ಗೊಡು' ನೋ.

**ಕೆಯ್ಗುಡು$_2$** 'ಕೆಯ್ಗೂಡು' ನೋ.

**ಕೆಯ್ಗುಡುತೆ, ಕೈಗುಡಿತೆ** (ನಾ). ಕುಡುತೆ ಮಾಡಿದ ಅಂಗೈ; ನೇರೆ; ಬೊಗಸೆ : ಅಂಭೋರಾಶಿಯಂ ಕೆಯ್ಗುಡುತೆಯೊಳಗಾಪೋಶನಂ ಗೊಂಬರು (ಶಂಕದಾ. ೯-೬೬). **ಕೈಗುಡಿತೆ :** ಎರಡು ಕೈಗುಡಿತೆಯಲಿ ಧರಿಸಿ (ತೊರರಾ. ೫-೯-೨೮). [ಕೆಯ್$_2$ + ಕುಡುತೆ (< ಕುಡಿತೆ)]

**ಕೆಯ್ಗುರು** (ನಾ). ಒಂದು ಊರಿನ ಹೆಸರು : ಕಜ್ಜುಳ್ ಪಲ್ಲವ ರಾಜನ ತೋಟ್ಟ ಕೆಯ್ಗುರಾನ್...ಅಳಿ (ಎಕ. XII, ಮದ್ದಗಿ. ೯೫-೩; 750). [?]

**ಕೆಯ್ಗೂಡಿಸು, ಕಯ್ಗೂಡಿಸು, ಕೈಗೂಡಿಸು** (ಕ್ರಿ). ೧. ಕೈಗಳನ್ನು ಕೂಡಿಸು ; ಮದುವೆಮಾಡು ; ಪಾಣಿಗ್ರಹಣಮಾಡಿಸು : ಶಂತನಿವಳಂ ಕಂಡು . . . ಚಿಂತಿಸೆ ಭೀಷ್ಮನೀಕೆಯಂ ಕೆಯ್ಗೂಡಿಸೆ ಆಂತವಳ ಗರ್ಭದೊಳ್ ಚಿತ್ರಾಂಗದಂ ಧರಾಕಾಂತಂ ವಿಚಿತ್ರವೀರ್ಯಂ ಜನಿಸಿ (ಚಬಪು. ೫೪-೯). **ಕಯ್ಗೂಡಿಸು :** ೧. ಎಸೆವ ಕನ್ನೆಯನುಮಾವರಾಭಂಗೆ ಕಯ್ಗೂಡಿಸಲೊಡಂ (ಪದ್ಮರಾ. ೩-೭೬). ೨. ನೆರವೇರಿಸು ; ಈಡೇರಿಸು : ಸಕಲ ಕಾರ್ಯಗಳನ್ನೂ . . . ಕಾರ್ಯಾತ್ಮಕವಾದ ಉಪಾಯಗಳಿಂದ ನಾವೇ ಕಯ್ಗೂಡಿಸಿಕೊಳ್ಳುತ್ತ (ಬಿಟ್ಟಅ. ೧೬೫-೨೫). **ಕೈಗೂಡಿಸು :** ೧. ಪೆಣ್ಣಂ ಬಜಿಂದೆ ಬಯಸಿ ಮೊಗಮಂ ಬಾತಣ್ಣಗೆ ರಣಮಂಡಪದೊಳು . . . ಉಣ್ಣದರೊಳಗಣ ದೇವಿಯರಂ ಸುಣ್ಣಿಸಿದಸಿಧಾರಾಪೂರ್ವಕದಿಂ ತಿಣ್ಣನೆ ಕೈಗೂಡಿಸಿ (ಜಯಕಾ. ೬-೯) ; ೩. ಒದಗಿಸು ; ಉಂಟುಮಾಡು : ಭೋಂಕನೆ ಕೈಗೂಡಿಸವಕ್ಕೆ ಸ್ವಪಂ (ಕುಸುಮಾ. ೮-೪) ; ಅತುಳ ಭಕ್ತಿಯನೆನ್ನೊಳಯತ್ನದಿಂದೆ ಕೈಗೂಡಿಸಿ ರಕ್ಷಿಸಯ್ಯ (ಶತಕ. ೧೬೨-೨೯). ೪. ಒಗ್ಗೂಡಿಸು ; ಒಂದುಗೂಡಿಸು: ಎಲ್ಲರನ್ನು ಕೈಗೂಡಿಸಿ ಅವರವರ ವೈರವನ್ನು ಬಿಡಿಸಿ (ಕೃಷಿಪ್ರ. ೨೨). [ಕೆಯ್ಗೂಡು + -ಇಸು$_3$]

**ಕೆಯ್ಗೂಡು, ಕಯ್ಗೂಡು, ಕೆಯ್ಗುಡು$_2$, ಕೈಗೂಡು** (ಕ್ರಿ). ೧. ನೆರವೇರು ; ಸಿದ್ಧಿಸು. ೨. ದೊರಕು ; ಒದಗು ; ಉಂಟಾಗು : ಕಾಡೊಡಮವೇಳೆ ಸಲೆ ಕೆಯ್ಗೂಡಿದುದೆನೆ (ಪಂಪಭಾ. ೫-೪೦). ಕೆಯ್ಗೂಡುಗು ಮೂಱು ತಿಂಗಳೊಳೆ ನಾಲ್ವಡಿ ಲಾಭಮುಂ (ಅಟ್ಟಮ. ೬-೩೧) ; ಪೆಂಪಂ ಸೂಡೆ ಜಸವಂ ಮಾಡೆ ನೆಱೆ ಕೈಗೂಡೆ ಮುಕ್ತಿಸತಿ (ಬಸಪು. ೨೪-೪೫). **ಕಯ್ಗೂಡು :** ೧. ವಿಸಟಂಬರಿದಾಡಿದರಲ್ಲಿ ತಮ್ಮ ಕಯ್ಗೂಡಿದುದೆಂದು (ಹಮ್ಮೀರ. ೪-೨೭) ; ನಿನ್ನ ಕೋರಿಕೆ ಕಯ್ಗೂಡಲಿ (ಶಾಕುಂತ. ೬೫-೧೬). ೨. ದೇವವರ್ಗ್ಗವಣಂ ಕಯ್ಗೂಡಿದಂತಪ್ಪವಳಧರ ಸುಧಾಸಾರಮಂ ತೃಪ್ತಿಪರ್ಯಂತವಲಂಪಿಂ ಪೀರ್ದು (ಕಾದಂಉ. ೫೨೨). **ಕೆಯ್ಗುಡು$_2$ :** ೨. ಬತ್ತಿದ ಬಾಯ್ವೆರಸಲ್ಲಿ ಭೀತಿ ಕೆಯ್ಗುಡೆ ಕಡು ವೇಗದಿಂದೆ ಕೊಣಕಿಟ್ಟುದು ವನ್ಯಮೃಗೀ ಕದಂಬಕಂ (ಶಬಶಂ. ೩-೫೧).

**ಕೈಗೂಡು :** ೧. ತರಹರಿಕೆ ಕೈಗೂಡದವನೀಶ್ವರನು ಕೌಸಲೆ ಸಹಿತ . . . ಕಟ್ಟಳಲಿಕೆಯಲ್ಬೆದಿದನು (ತೊರರಾ. ೨-೩-೫೩) ; ಬೇಡ ಲಲಾಟನೇತ್ರದ ಕೂಡೆ ಕಲಹ ಕೈಗೂಡದೆಂದೊಲಿದು ಪೇಳಿದಳು (ಮೋಹತ. ೬-೮) ; ಆ ಪರಿಕೆ ಕೈಗೂಡಲೊಡನೆ ಸಾನುರಾಗದೊಳುಟ್ಟಿ ಪಸುರುಡುಗೆಯನೆ (ಜೈಮಿಭಾ. ೩-೨೨) ; ನೆನೆದೆಣಿಕೆ ಕೈಗೂಡುವುದು (ಮಲ್ಲಚ. ೧-೧೭). ೨. ಶಂಕರಾಲಯಮಂ ಭೋಂಕನೆ ಕಂಡು ಪೂರ್ವಸ್ಮರಣೆ ಕೈಗೂಡಿ (ಬಸರ. ೨-೫೨) ; ಇವಳಿರದೆ ತಣ್ಣು ಕೈಗೂಡಿದುದು (ಜಗವಿ. ೧೧-೪೩); ಕಷ್ಟ ಕೈಗೂಡಿದರೆ ಮಿಗೆ ವ್ರತಗೆಟ್ಟರೇ ಪಾಂಡವರು (ಕುವ್ಯಾಅ. ೧೬-೪೯). ೩. ನೆರವಾಗು ; ಅನುಕೂಲವಾಗು : ಕಾಲ ಕೈಗೂಡಿದೊಡೆ ಲೇಸಿನ ಮೇಲೆ ಲೇಸುಗಳೊದಗುವುವು (ಕುವ್ಯಾವಿ. ೧೦-೪೨). ೪. ಒಟ್ಟಾಗು ; ಒಗ್ಗೂಡು ; ಒಂದಾಗು : ಇರದೆಂಟುಂ ದಿಗ್ಗಜಂಗಳ್ ನೆಱೆದಿದಿರೊಳ್ ತಾಗೆಯುಂ ಮಂದರಕ್ಷ್ಮಾಧರದೊಳ್ ಕೈಗೂಡಿ ಗೋತ್ರಾದಿಗಳೆ ಗಜಘಟಾರೂಪದಿಂ ತಾಗೆಯುಂ (ಆದಿಪು. ೧೪-೯೧) ; ಭೀಷ್ಮನನು ಕೈಗೂಡಿ ಕವಿಯಲಿ ದ್ರೋಣ ಗುರುಸುತರೆಂದುದಖಿಲಜನ (ಕುವ್ಯಾಭೀ. ೯-೫೧). [ಕೆಯ್$_2$ + ಕೂಡು$_1$]

**ಕೆಯ್ಗೆಯ್, ಕಯ್ಗೆಯ್, ಕೈಗೆಯ್, ಕೈಗೈ** (ಕ್ರಿ). ೧. ಸಿಂಗರಿಸು ; ಅಲಂಕರಿಸು : ಮಂಗಳಾಭರಣದೊಳ್ ನೆಱೆಯೆ ಕೆಯ್ಗೆಯ್ದು (ಪಂಪಭಾ. ೧೦-೨೬ ವ) ; ಪೆಣ್ದರೋಜೆವಿಡಿಯಂ ಕೆಯ್ಗೆಯ್ದು ಬಂದೇಱಿ (ಪಂರಾಮಾ. ೨-೧೧) ; ಅಪೂರ್ವಚ್ಛಾಯೆಯಿಂ ಮಾಳ್ಕಲಕ್ಷ್ಮಿಗೆ ಕೆಯ್ಗೆಯ್ದುದು ಕೇಶಸಂಚಯಂ (ಪುಷ್ಪಪು. ೩-೫೮). **ಕಯ್ಗೆಯ್ :** ೧. "ಕಯ್ಗೆಯ್ – ಭೂಷಣೋದ್ವಹನೇ" (ಶಮುಧಾ) ; ಅಂತು ನೆಱೆಯೆ ಕಯ್ಗೆಯ್ದು ವಧೂವರರಂ . . . ಮುಂದಿಟ್ಟುತಂದು (ಸುಕುಮಾ. ೧೦-೧೦೦ ವ). ೨. ಸಿಂಗರಿಸಿಕೊಳ್ಳು ; ಅಲಂಕರಿಸಿಕೊ : ಬಗೆಗೆವಂದ ಪೂಗಳೊಳ್ ಪೂಡುಡುಗೆಯಂ ಮಾಡಿ ವಸಂತಕಾಂತೆಯರಂತೆ ನೆಱೆಯೆ ಕಯ್ಗೆಯ್ದಾಗಳ್ (ಆದಿಪು. ೧೧-೧೨೮ ವ) ; ಮಹಾಶ್ವೇತೆಯಲ್ಲಿಗೆ ಪೋದಪ್ಪೆನೆಂದು . . . ಕಾದಂಬರಿ ಕಯ್ಗೆಯ್ದು (ಕಾದಂಉ. ೫೮೨) ; ನೀನಿಂತುಕರಂ ಕಯ್ಗೆಯ್ದಾನಂದಮುನಸ್ಕನಾದೊಡೆ (ಪಂಚತಂ. ೭೭-೫). ೩. ಅಣಿಯಾಗು ; ಸಜ್ಜಾಗು ; ಸಿದ್ಧವಾಗು : ಕಾಲವರಂದು ಕಯ್ಗೆಯ್ದು [ಪಾಠಾಂ. ಕಯ್ಗಾಯ್ದು] ಕಟ್ಟಾಳಾಗಿ ಪೊಱಮಟ್ಟರೊಸೆದು (ಕುರಾಸಾಂ. ೧೧-೪೦). **ಕೈಗೆಯ್ :** ೧. ಮಿಂದಳಂಕಾರಮಂದಿರಕ್ಕೆ ವಂದು ನೆಱೆಯೆ ಕೈಗೆಯ್ಯೆ (ಆದಿಪು. ೪-೩೫ ವ). ೨. ಕಂತು ಕೈಗೆಯ್ವಂತೆ ನೆಱೆ ಕೈಗೆಯ್ದು (ಸುಕುಮಾ. ೧೧-೩೨ ವ) ; ಕರಂ ಕೈಗೆಯ್ದೀಗಳ್ ವನವನಿತೆ (ಕುಸುಮಾ. ೫-೨೬) ; ಮಲಯಜಮಿಕ್ಕಿ ಪೂವಮುಡಿದಾ ಲಲನೆ ಕೈಗೆಯ್ದಳಿತ್ತಿಯಲಿ (ಶ್ರೀಪಾಲ. ೨-೫೦). **ಕೈಗೈ :** ೧. ನೃತ್ಯವಾದ್ಯ ಶಿಲ್ಪಪ್ರವೀಣಮತಿ ಶರಧಿ ಧನು ಕವಚಧರಂ ಕೈಗೈದಿರ್ಪವನೆನಿಕುಂ (ಜಾತತಿ. ೧೯-೯). ೨. ರಸದಾಳಿಯ ಬೆಳೆವೊಲನೊಪ್ಪಿದುದಾ ವಸುಧಾಸತಿ ಕೈಗೈಯೆ ವಿರಾಜಿಪ ಪಸುರ್ವಸದನದಂತೆ (ಜಯಕಾ. ೧-೩೮) ; ಕಾಂತಂ ಕಱಿದನೆನಗಿರಲ್ದಕ್ಕುದಲ್ತೆಂದು ಕೈಗೈದೆಳೆಯಳ್ ತನ್ನಂ ಪರಿಚ್ಛೇದಿಸಿ ಬಗೆಯದೆ (ಸೂಕ್ತಿಸು. ೧೫-೭) ; ಅಬಲೆ ಕೈಗೈದು ಬೇಡಿದಳು . . . ಮುನಿಪತಿ ಗಂಡನಾಗೆನಗೆಂದು ಸಹಜಬ್ರಹ್ಮಚಾರಿಯನು (ನಿಭಾಗ. ೪-೧೮-೭). ೩. ಮುಕ್ತಿಲಲನೆಯನೊಲಿಸಲ್ ಕೈಗೈದು ನಿಂದನಜಿತ ಮುನೀಂದ್ರಂ (ಅಜಿಪು. ೭-೪) ; ಯಮಪುರದೊಳಾಲಯಂ ಕೂಡೆ ಕೈಗೈವುತದೆ ನಿನಗೆ (ಚಬಪು. ೪೩-೧೩). ೪. ಅಣಿಗೊಳಿಸು ; ಸಜ್ಜುಗೊಳಿಸು ; ಸಿದ್ಧಪಡಿಸು : ಚರಾಚರಮನಂಬುರುಹಭವನ್ಯೆದೆ ಸೃಜಿಸಿ ನೆಲೆಯಂ ಚತುರ್ದಶ ಭುವನಭವನದೊಳ್ ಕೈಗೈದು (ಚಬಪು. ೧೫ ಸೂಚನೆ). [ಕೆಯ್$_3$ + ಕೆಯ್$_1$]

**ಕೆಯ್ಗೆಯ್ಮೆ** (ನಾ). ಕೈಕೆಲಸ: ಸೆಡೆಯದೆಹ ಹೂಮೋರೆ ನಗೆ ಕಂಪಿನೊಸಗೆ ಒಡಲ ಕೆಯ್ಗೆಯ್ಮೆಯಿಂ ಬಳಗಕ್ಕೆ ಮೆಚ್ಚಾಗೆ (ಕಾಲೂರ. ೪೦–೪೭).
[ಕೆಯ್$_2$ + ಕೆಯ್ಮೆ$_1$]

**ಕೆಯ್ಗೆಯ್ಸು**, ಕಯ್ಗೆಯ್ಸು, ಕೈಗೆಯಿಸು, ಕೈಗೆಯ್ಸು, ಕೈಗೈಸು (ಕ್ರಿ). ೧. ಸಿಂಗರಿಸು; ಅಲಂಕಾರಮಾಡು; ವೇಷಭೂಷಣಗಳನ್ನು ತೊಡಿಸು: ಕೂಸಂ ನೆಱೆ ಕೆಯ್ಗೆಯ್ಸಿಮೆಂದು. . .ಪೇೞ್ವುದುಂ (ಪಂಪಭಾ. ೩–೪೪ವ); ವೈರಿನೃಪಾಲದ್ವಿಪ ಮೌಕ್ತಿಕಾವಳಿಗಳಿಂ ಕೆಯ್ಗೆಯ್ಸುಗುಂ (ಪುಷ್ಪಪು. ೭–೪೮). **ಕಯ್ಗೆಯ್ಸು**: ೧. ಜಿನಪೂಜಾಪುರಸ್ಸರಂ ಕನ್ನೆಯಂ ಕಯ್ಗೆಯ್ಸಿ (ಚಾವುಂಪು. ೬೯–೧೫); ಮಂಗಳಶೋಭೆ ಕಣ್ಗೊಳೆ ಕರಂ ಕಯ್ಗೆಯ್ಸಿ ನಾನಾನಕಸ್ವರಮುಣ್ಮುತ್ತಿರೆ (ಕುಸುಮಾ. ೫–೬). **ಕೈಗೆಯಿಸು**: ೧. ಒರ್ವ ಸೂಳೆಯನಿರ್ವರ್ ಕೈಗೆಯಿಸುತಿರ್ದುದಂ ಕಂಡು (ಚಾವುಂಪು. II, ೬೦); ಆಗಳಾ ಪದ್ಮಪುರಿಯಂ ಕೈಗೆಯಿಸವೇೞ್ದು (ಕುಸುಮಾ. ೧೧–೯೯ ವ); ಅಂಗಜ ಲಕ್ಷ್ಮಿಯನು ಪೂಜಿಸುವವೊಲು ನಲಿದು ಚೆದುರಿನಿಂ ಕೈಗೆಯಿಸಿದರು ಸಮ್ಮದದಿ (ಸಾಳ್ವಭಾ. ೧೮–೭೯). **ಕೈಗೆಯ್ಸು**: ೧. ಕನ್ನೆಯಂ ನೆಱೆಯೆ ಕೈಗೆಯ್ಸಲ್ವೇೞ್ವು (ಶಾಂತಿಪು. ೪–೯೦); ಅಂತು ಕೈಗೈಸ್ಸಿ ರುಕ್ಮಿಣಿಯಂ ಪರಿಣಯ ಭವನದೊಳ್ ಯಥೋಚಿತಾಚಾರದಿ ನಿರಿಸಿ (ಜಗವಿ. ೧೦–೧೨೯ ವ). ೨. ಅಣಿಗೊಳಿಸು; ಸಿದ್ಧಪಡಿಸು: ತಕ್ಕುವಂ ನೆಗಳ್ವಿನಂ ಕೈಗೆಯ್ಸಿದಂ ಪದ್ಮಜಂ (ವಿಷ್ಣುಪು. ೧–೨೪೫); ದಯೆಯಿಂ ಕೈಗೆಯ್ಸಿ ಸದ್ಭಕ್ತಿಯಿಂ (ಚಕವಿ. ೩–೩೦). **ಕೈಗೈಸು**: ೨. ಬಣ್ಣದ ಸೊಡರ್ಗಳಂ ಕೈಗೈಸುವನುಜೆಯಂ (ಜೈವಿಭಾ. ೧೩–೫೭).
[ಕೆಯ್ಗೆಯ್ + -ಸು$_1$]

**ಕೆಯ್ಗೆಯ್ಹ** (ನಾ). ಸಿದ್ಧಪಡಿಸುವಿಕೆ; ಅಣಿಗೊಳಿಸುವಿಕೆ: "ಸರ್ವಾಭಿಸಾರ" (ನಾಚಿರಾ. ೬). [ಕೆಯ್ಗೆಯ್ + -ಹ$_2$]

**ಕೆಯ್ಗೊಡು**, ಕಯ್ಗುಡು, ಕಯ್ಗೊಡು, ಕೆಯ್ಕೊಡು, ಕೆಯ್ಗುಡು$_1$, ಕೈಕೊಡು, ಕೈಗುಡು, ಕೈಗೊಡು (ಕ್ರಿ). ೧. ಕೈನೀಡು; ಕೈಯನ್ನು ಆಸರೆಯಾಗಿ ಕೊಡು; ಗೌರವಾದರಗಳಿಂದ ಕರೆತರುವುದಕ್ಕಾಗಿ ಕೈಹಿಡಿ: ಕೆಯ್ಗೊಟ್ಟು ಚೈತ್ರಂ ನಡೆತರೆ (ಗಂಕ. ೪–೯೬). **ಕಯ್ಗುಡು**: ೧. ಕಯ್ಗುಡಲಿಷ್ಟಮಿತ್ರನೆ ಬರುತ್ತಿರ್ದಂ (ಕಾದಂಉ. ೭೯೪). **ಕಯ್ಗೊಡು**: ೧. ಕಯ್ಗೊಟ್ಟು ತಂದು ಸಿಂಹಾಸನದ ಮೇಲಿರಿಸಿ (ಸೇದಿರ. ೬೨–೧); ಕನಕಮಯ ಸುಖಾಸನದೊಳ್ ಕಯ್ಗೊಟ್ಟು ಮೂರ್ತಿಗೊಳಿಸಿ (ರಾಜಶೇ. ೩–೮೦ವ). **ಕೆಯ್ಕೊಡು**: ೧. (೬). **ಕೆಯ್ಗುಡು$_1$**: ೧. ರತಿ ನೆಲನುಗ್ಗಡಿಸೆಯುರುಂಧತಿ ಕೆಯ್ಗುಡೆ (ಗಂಕ. ೩–೪೫). **ಕೈಕೊಡು**: ೧. ಬೀಳುವ ಹಾಗಾದರೆ ನನ್ನ ಕೈಕೊಟ್ಟು ನಿಲ್ಲಿಸುತ್ತೇನೆ (ದೂಬೆಟ್ಟ. ೧೭೭); ಖಿಳಲಾರದೆ ಹಣೆಗೆ ಕೈಕೊಟ್ಟು ಬೀದಿಯ ಬಾಗಿಲಲ್ಲಿ ಕುಳಿತ ಆ ಹೆಣ್ಣನ್ನು ನೋಡಿ (ಹೊಸಕ್ಷಿ. ೨೨). ೨. ಸಹಾಯಮಾಡು; ನೆರವು ನೀಡು; ಆಶ್ರಯಕೊಡು: ಉಕ್ಕುತಿದೆ ಕಣ್ಣೀರ ಧಾರೆ ಕಂಗೆಟ್ಟು ಬಿಕ್ಕುತಿರೆ ನಿಟ್ಟುಸಿರು ಒಡನೆ ಕೈಕೊಟ್ಟು (ಕಎಷು. ೩೬). ೩. (ಆಲಂ) ಮೋಸಮಾಡು; ವಂಚಿಸು: ಆದರೆ ಅದೃಷ್ಟ ಅವರಿಗೂ ಕೈಕೊಟ್ಟಿತು (ಮರಳಿ. ೯೧). **ಕೈಗುಡು**: ೧. ಅಮಳ್ಗಳ್ ಚಾಮರವಂ ಬೀಸೆ ನಯದೆ ಕೈಗುಡೆ ಪಾರ್ಥಂ (ಜಗವಿ. ೧೬–೭೪); ನರಸಿಂಗಮೊನೆಯರ್ ಕೈಗುಡೆ ತಾಯ್ತಂದೆಗಳ್ ಪರಸೆ (ನಂಬಿರ. ೮–೫೩); ಮೆಲ್ಲನೆ ಕೈಗುಡುವ ಸೊಬಗೆಯರ (ಕಬ್ಬಿಕಾ. ೯೦). **ಕೈಗೊಡು**: ೧. ಕೃತಪುಣ್ಯಗಾದರದಿ ಕೈಗೊಟ್ಟು ಕೆಲ ಕೆಲರ್ (ವರ್ಧಪು. ೧೩–೫೨); ತನ್ನೊಡೆಯನಂ ಕೈಗೊಟ್ಟು ಮನೆಗೊಡಗೊಂಡು ಹೋಹಾಗ (ಬಸಪು. ೧೨–೭); ಕೈಗೊಡುವ ನೃಪತಿಗಳಿಕ್ಕಲಿಸೆ ಹೊಜವಂಟನರಸನು (ಕುವ್ಯಾಉ. ೨–೪). ೨. ಸುಗ್ರೀವಂಗೆ ಕೈಗೊಟ್ಟು . . . ವಾಲಿಯಂ ಮಥಿಸಿ (ಜೈವಿಭಾ. ೧೮–೫). [ಕೆಯ್$_2$ + ಕೊಡು$_1$]

**ಕೆಯ್ಗೊಯ್** (ಕ್ರಿ). ಹೊಲದ ಬೆಳೆಯನ್ನು ಕುಯ್ಯು: ಕೆಯ್ಗೊಯ್ವ ಪೇರೊಕ್ಕಲಿಗನಂತೆ (ಶ್ರೀರಾಮಾ. ೬೪೪–೬೫). [ಕೆಯ್$_4$ + ಕೊಯ್$_1$]

**ಕೆಯ್ಗೊಲೆ** (ನಾ). ೧. ಕೈಯಿಂದ ಮಾಡುವ ಕೊಲೆ. ೨. ಸೊಂಡಿಲಿನಿಂದ ಕೊಲ್ಲುವಿಕೆ: ಕೆಯ್ಗೊಲೆ ಬಾಯ್ಗೊಲೆ ಮೆಯ್ಗೊಲೆ ಕಾಲ್ಗೊಲೆ ಕೋಳ್ಗೊಲೆಯುಂ ಕಲಿಪ ಕಡು ಬಿನ್ನಣಂಬಡೆದು (ರಾಜಶೇ. ೬–೧೧ ವ).
[ಕೆಯ್$_2$ + ಕೊಲೆ]

**ಕೆಯ್ಗೊಳ್** 'ಕೆಯ್ಕೊಳ್' ನೋ.

**ಕೆಯ್ಗೊಳಿಸು$_1$** 'ಕೆಯ್ಕೊಳಿಸು' ನೋ.

**ಕೆಯ್ಗೊಳಿಸು$_2$**, ಕೈಕೊಳಿಸು$_2$, ಕೈಗೊಳಿಸು$_2$ (ಕ್ರಿ). ೧. ಅಲಂಕರಿಸು; ಸಿಂಗರಿಸು: ಸಿಂಗರಮಂ ಕೆಯ್ಗೊಳಿಸುತ್ತಿರ್ದರ್ (ಗಂಕ. ೧೦–೨೯); ಐರಾವತ ಕರಿಕರಾಗ್ರದ ಸಿರಿಯಂ ಕೆಯ್ಗೊಳಿಸಿ ಮುಂಗೆಯ್ಕೊಳ್ಮುತ್ತಿನ ಕಂಕಣಮನಿಕ್ಕಿ (ರಾಜಶೇ. ೧೩–೬೯ ವ). ೨. ಅಣಿಗೊಳಿಸು; ಸಿದ್ಧಪಡಿಸು. **ಕೈಕೊಳಿಸು$_2$**: ೧. ಮತ್ತಂ ಕರ್ಣದೊಳ್ ಕೈಕೊಳಿಸಿ ಮೊತ್ತದೊಳೆಲ್ದು ಬಿತ್ತರಿಸುವುದುತ್ತಮದ ಮುತ್ತಿನ ಕಡುಕುಗಳು (ನಂಬಿರ. ೪–೨೮). ೨. ಅಲರ್ವ ಜಾಜಿಯ ಮಾಲೆಗಳ ಕೈಕೊಳಿಸಿದನು (ಅಕ್ರೂಚ. ೮–೪೦). **ಕೈಗೊಳಿಸು$_2$**: ೨. ಮೊಲ್ಲೆಯ ಮುಗುಳ ಕಂಕಣಮಂ ಕೈ [ಪಾಠಾಂ. ಕೆಯ್]ಗೊಳಿಸಿ (ಗಂಕ. ೫–೭೬ ವ).
[ಕೆಯ್$_3$ + ಕೊಳ್$_1$ + -ಇಸು$_3$]

**ಕೆಯ್ಘಟ್ಟಿ** 'ಕೆಯ್ಗಟ್ಟಿ' ನೋ.

**ಕೆಯ್ಜೋಡಿಸು**, ಕೆಯ್ಜೋಳಿಸು, ಕೈಜೋಡಿಸು (ಕ್ರಿ). ಎರಡು ಕೈಗಳನ್ನು ಒಟ್ಟಿಗೆ ಸೇರಿಸು; ನಮಸ್ಕರಿಸು; ಕೈಮುಗಿ: ಕೆಯ್ಜೋಡಿ[ಪಾಠಾಂ. ಳಿ]ಸಿದ ಮಲ್ಲನಂ (ಗಂಕ. ೨–೧೦೫ ವ). **ಕೆಯ್ಜೋಳಿಸು**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಕೈಜೋಡಿಸು**: ಕೇವಲ ದೇವರ ವಿಗ್ರಹಕ್ಕೆ ಕೈಜೋಡಿಸಿ ಆಗಲಿಲ್ಲ. ಈ ಗುಡಿಗಳನ್ನು ಹಸನು ಮಾಡಬೇಕು (ಹಬ್ಬಬ. ೨೮೧); ನಮಸ್ಕಾರ ಎಂದಿಷ್ಟೇ ಹೇಳಿ ಕೈಜೋಡಿಸಿದಳು (ವಾತ್ಸಲ್ಯ. ೨೨೨).
[ಕೆಯ್$_2$ + ಜೋಡಿಸು]

**ಕೆಯ್ಜೋಳಿಸು** 'ಕೆಯ್ಜೋಡಿಸು' ನೋ.

**ಕೆಯ್ತ$_1$**, ಕೈತ$_1$, ಗೆಯ್ತ, ಗೈತ (ನಾ). ೧. ಮಾಡುವಿಕೆ; ಕೆಲಸ; ಕಾರ್ಯ: ತಳರ್ವ ಚಿನ್ನಪೂಗಳನವಯಪದೊಳೆ ಸಯ್ತುಮಾಡುವ ಕೆಯ್ತಮುಮಂ (ಆದಿಪು. ೪–೯ ವ); ಆಗಳಾ ಮರುಳ ಕೆಯ್ತಕೆ ದುರ್ಯೋಧನಂ ಮುಗುಳ್ನಗೆ ನಕ್ಕು (ಪಂಪಭಾ. ೧೩–೫೫ ವ); ಪದೆಪಂ ಕೆಯ್ತದೊಳುಂಟುಮಾಡಿ (ಸುಕುಮಾ. ೭–೧೧); ಅಂಗನೆಯರ ಕೆಯ್ತಂಗಳನಂಗನೆಯರ ರೂಪಂ . . . ಆದರದೆ ಪೇೞನೆಂತುಂ ಜೈನಂ (ಸಮುಪ. ೬–೬೦); ತನ್ನ ತಂಗೆಯ ಕೆಯ್ತಮನೆತ್ತಿ ನುಡಿದಳ್ ಮತ್ತೊರ್ವಳ್ (ಲೀಲಾವ. ೨–೮೪ ವ). **ಕೈತ$_1$**: ೧. ಪುದಿದ ಜಸಂ ಪೊದಟ್ಟಿಳವೊಂದಿದಳಂಕೃತಿ ಕೈತದೇಸಿಯೆಂಬುದನನೆ ವಸ್ತು ವಿದ್ಯೆಯೆನೆ (ಪಂಪಭಾ. ೧೪–೫೯). **ಗೆಯ್ತ**: ೧. ಈ ಮನುಜರ ಗೆಯ್ತಮಂ ಬಿಸುಟು (ಕಾದಂಪೂ. ೫೬೮); ಇಂತು ಪಾರುಬೊಜಂಗನ ಗೆಯ್ತಮನೊಳಕೊಂಡು ತೀಡೆ (ಕಬ್ಬಿಕಾ. ೫೪); ಆ ಮುದುಕಿ ಇವನು ಪ್ರಬುದ್ಧಮಾಸಕ್ಕೆ ಬಂದು ಗೆಯ್ತಮಾಡುವ ಕನಸು ಕಾಣುತ್ತಿದ್ದಾಳೆ (ಮುಳ್ಳುಹಾ. ೨೯); ಅವನ ಗೆಯ್ತಕೆ ಕಾಡಕೆಲಸ ಹಿಮಗಿರಿಯಾಗಿ . . . ನಿಂತಿಹುದು (ಯಶೋಧ. ೨೦). ೨. ಚೇಷ್ಟೆ: ಪಣ್ಬರಂಕುಸನಾ ಪಾಣ್ಬೆಯರಗೆಯ್ವಗೆಯ್ತಂಗಳುಮಂ ತೋರ್ಪ ಸನ್ನೆಗಳುಮಂ . . . ಕಂಡು (ಪಂಪಭಾ. ೪–೮೩ ವ). **ಗೈತ**: ೩. ಹೊಲದ ಉಳುಮೆ; ಕೃಷಿ: ಮುಂಗಾರು ಬಿದ್ದು ರೈತನ ಗೈತ ಆರಂಭವಾಗಿದೆ (ರೂಢಿ). [ಕೆಯ್$_1$ + -ತ$_2$]

**ಕೆಯ್ತ₂** ಕಯ್ತ, ಕೈತ್ತ₂, ಗೆಯ್ತ₂ (ನಾ). ಮೋಸ; ಕಪಟ; ವಂಚನೆ: (ಕ). **ಕಯ್ತ**: ಮಗನ ದುರುಕ್ತಿಯಂ ಮಗನ ದೂರ್ತ‍ಗಳಂ ಮಗನೊಂದು ಕಯ್ತಮಂ (ಧರ್ಮಾಮೃ. ೨–೧೩). **ಕೈತ್ತ₂**: "ಸಲೆ ಕಪಟದೊಳ್ ಕೈತ ಕೈದವಂ" (ಕಶರ. ೨೮); "ಕೈದವಂ ಕೈತ ಜತ್ತುಕ ಮೆಂದು ಕಪಟಕ್ಕೆಯ್ದಿರ್ಪ ನಾಮ" (ಶಬ್ದಮಂ. ೫೩). **ಗೆಯ್ತ₂**: "ಮೋಸ, ಮಾಟ, ಕೈತವ" (ಕಂನುಹು. ೯೦). [< ಸಂ. ಕೈತವ]

**ಕೆಯ್ತೀವು**, ಕೈತೀವು (ಕ್ರಿ). ಕೈತುಂಬು: ದಿವ್ಯಾಸ್ತ್ರಂಗಳಂ ಪಿಡಿದು ಕೆಯ್ತೀವಿಕೊಂಡಗ್ನಿದೇವನಂ ನೋಡಿ (ಪಂಪಭಾ. ೫–೪೮ವ). **ಕೈತೀವು**: ಅಡಕೆಯ ಪೋಚ್ಚಗಳುಮಂ ಕೈತೀವಿದೆಲೆಯುಮಂ (ವಡ್ಡಾರಾ. ೭೮–೨೪). [ಕೆಯ್₂ + ತೀವು]

**ಕೆಯ್ದರ್** (ಕ್ರಿ). ಕೈನೀಡು; ಕೈಮಾಡು: ತೆಜದಿಂದಮುಟ್ಟುದುವರಂ ಕೆಯ್ದಂದು ದುಶ್ಯಾಸನಂ . . . ತೆಗೆದಂ ಧಮ್ಮಿಲ್ಲಮುಂ ಕೃಷ್ಣೆಯಾ (ಪಂಪಭಾ. ೭–೫). [ಕೆಯ್₂ + ತರ್]

**ಕೆಯ್ದೀವಿಗೆ**, ಕಯ್ದೀವಿಗೆ, ಕೈದೀವಿಗೆ (ನಾ). ಕೈಯಲ್ಲಿ ಹಿಡಿಯುವ ದೀಪ; ಕೈದೀಪ: ನಿಶಾಸಮಯದೊಳ್ ಪತ್ತೆಂಟು ಕೆಯ್ದೀವಿಗೆಗಳ ಬೆಳಗಿನೊಳಂ (ಪಂಪಭಾ. ೧೦–೫ವ); ಬಜಿಯಂ ಪೋಗುತ್ತುಂ ಪೆಜಗು ಬಿಲನನುಚರರ ತೆಜದೆ ಕೆಯ್ದೀವಿಗೆಗಳ್ ಪಟಪಟನೆಸೆದಿರೆ (ಶಾಂತಿಪು. ೮–೬೪); ಹರಿಯ ಭುಜದಳವನೀಕ್ಷಿಪ ಸುರಸಮಿತಿಗೆ ಬೆಳಗಿದಂತೆ ಕೆಯ್ದೀವಿಗೆಯಂ (ಪಂರಾಮಾ. ೧೧–೧೨); ಕೆಯ್ದೀವಿಗೆ ಮುಂದೆ ನೆವಕಿರ್ದುದಾ ಮೆಯ್ದೀವಿಗೆಯೊಳೆ ನಡೆದನು (ಭರಚ. ೧೨–೧೦). **ಕಯ್ದೀವಿಗೆ**: ಕಯ್ದೀವಿಗೆಗಳ ಬೆಳಗಿಂ ಕಾಯ್ದೆಸೆವ ಸಹಸ್ರಕಿರಣನಿಂ ಭೇದಿಸಲೇಗೆಯ್ದುಂ ಬಾರದುದಲ್ತವೆ ಮಾಯ್ದೀಜವ್ವನದೊಳೊಡಲೊಳಿಡಿದಿರ್ದ ತಮಂ (ಕಾದಂಪೂ. ೫೨೪); ಇರುಳ ಕಯ್ದೀವಿಗೆಗಳ ಕಿರಿಯ ಪ್ರಮಾಣಗಳಲ್ಲಿಯೇ . . . ಕರ್ತವ್ಯಗಳನ್ನು ನೆರವೇರಿಸಿಕೊಳ್ಳೋಣ (ಬಟ್ಟಅ. ೭೫–೧೮). **ಕೈದೀವಿಗೆ**: ಬೆಳಗುವ ಕೈದೀವಿಗೆಗಳ ಬೆಳಗುಂ ತರತರದಿನೊಗೆವ ತಾರೆಗಳ ಗೊಂದಳಮುಂ (ಆದಿಪು. ೧೨–೩); ಶ್ರೀವಿಜಯರ ಕವಿಮಾರ್ಗಂ ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕೈದೀವಿಗೆಯುಮಾದುವು (ಪಂಚತಂ. ೫–೨); ಅಲ್ಲಲ್ಲಿ ಕೈದೀವಿಗೆಗಳು ತೆಲ್ಲಯ್ಸೆ (ನಂಬಿರ. ೧೦–೪೯); ಕತ್ತಲೆಯಿಜಿತದಲಿ ಕೈದೀವಿಗೆಯ ಹಂಗೇಕೆ ದಿನಮಣಿಗೆ (ಕುವ್ಯಾಕ. ೧೫–೧೪); ಸಾಲ ಕೈದೀವಿಗೆಯ ಸಂಭ್ರಮದೊಳು (ಜೈಮಿಭಾ. ೨–೪೭). [ಕೆಯ್₂ + ದೀವಿಗೆ]

**ಕೆಯ್ದು**, ಕಯ್ದು, ಕೈದು₁ (ನಾ). ಆಯುಧ; ಶಸ್ತ್ರ: "ಹೇತಿ, ಶಸ್ತ್ರಂ, ಪ್ರಹರಣಂ, ಆಯುಧಂ, ಅಸ್ತ್ರಂ – ಈ ೫ ಕೆಯ್ದು" (ಹಲಾಯು. ೭೬–೩೦೮); ಮದನನ ಕೆಯ್ದುವೆಲ್ಲಿದನನಂಗನ ಕೈಪೊಡೆಯೆಲ್ಲಿದಂ (ಆದಿಪು. ೩–೧೫); ಪಲವುಂ ಕೈಗಳಿನೆ ಕೆಯ್ದುವಂ ಪಿಡಿದಿರ್ದ (ಸಮಪ. ೮–೧೭೩); ಒಳಗೆ ತಳತಳಿಸಿ ಪೊಳೆವ ಕೆಯ್ದುಗಳ ಬಳಗಮುಂ (ಪುಷ್ಪಪು. ೨–೯೧ವ); ಮಸೆದ ಕೆಯ್ದುಗಳ್ ತುಕ್ಕುಗೊಳ್ವುಡಂ (ಜಟ್ಟಮ. ೨–೧). **ಕಯ್ದು**: ಪರಬಳವೆಯ್ದೆ ಕಯ್ದುವೆಡೆಯಾಡುವ ತಾಣದೊಳಲ್ಲಿ ಧೀರಮಂ(ಎಕ.II, ೧೩೪–೩೫; 982); ತಾವಿರ್ವರುಂ ಕಯ್ದುವಂ ಬಿಸುಟರ್ (ಗದಾಯು. ೨–೧೧); ಕಲಿತನಮುಂ ಮಹಾಬಲಮುಳ್ಳನ 'ಕಯ್ದುವೆ ಕಯ್ದುಪಂದೆ ದುರ್ಬಲನೆನಿಸಿರ್ದವಂ ಪಿಡಿದ ಕೈದುವದೇತಜ ಕೈದು (ಪಂರಾಮಾ. ೩–೧೫೦); ಶಸ್ತ್ರೋಪಜೀವನಂ – ಕಯ್ದುವಿನಿಂ ಜೀವಿಸುವುದುಂ (ನೀತಿವಾ. ೭–೯); ಕಯ್ದು ಮುಜಿಯೆ ಕಯ್ಯ ಹರಿಗೆಯ ತೆಗೆದಿಟ್ಟು (ಕುರಾಸಾಂ. ೧೨–೬೮). **ಕೈದು₁**: ಕೈದುಗಳತ್ತ ಕೈಯಂ ನೀಡಲ್ ಬಗೆವನ್ನೆಗಂ (ವಡ್ಡಾರಾ. ೯೯–೧೭); ಇಜಿವೆಡೆಗೈಯ ಕೈಯುಗುರೆ ಸಾಲದೆ ನಚ್ಚಿನ ಕೈದು ವೇಟ್ಪುದೇ (ಕಾವ್ಯಸಾ. ೯೧೧ ಶೂದ್ರಕ); ಪುತ್ರೀಜಿದನಂ ಕೈದುವನಿತ್ತನೆನೇರ್ಪೆತ್ತನಂ ರಣಾಂಗಣದೊಳ್ ಬೆನ್ನಿತ್ತನನಿಜಿಯರ್ (ಪಂಚತಂ. ೨೪೪–೧೩); ಕಲಿಯ ಕೈಯ ಕೈದುವಿನಂತಿರಬೇಕು ಅಯ್ಯಾ (ಬಸವ. ೭೭೩); ನೊರಜ ಕೊಲುವಡೆ ಕೈದುವೇತಕೆ (ಜೀವಂಚ. ೬–೮); ಕೈದು ಮುಜಿದರೆ ಹಗೆಗೆ ತನ್ನಯ ಕೈದು ಕೊಟ್ಟವರುಂಟೆ (ಕುವ್ಯಾಅ. ೨೦–೩೨); ವೀರನಾದೊಡೆ ಕೈದುಮುಟ್ಟಿಗಳ ಘೋರ ಪ್ರಹಾರಮಂ ತೋಜಿಸು (ಜೈಮಿಭಾ. ೪–೩೩). [ದೇ. ‖ ತುಳು. ತೆಲು. ಕೈದು]

**ಕೆಯ್ದುಕಾಜಿ**, ಕಯ್ದುಕಾಜಿ, ಕೈದುಕಾರ, ಕೈದುಕಾಜಿ, ಕೈದುಗಾಜಿ (ನಾ). ಆಯುಧವನ್ನು ಹಿಡಿದವನು; ಶಸ್ತ್ರಧಾರಿ; ಯೋಧ: ಪಗೆಕಾಜನಾಗಿಯುಂ ಕೆಯ್ಮೆಗೆ ತಕ್ಕಂ ಕೆಯ್ದುಕಾಜನೆನಿಸಲ್ಕಾಜಂ (ಕಾವ್ಯಾವ. ೩೨೫). **ಕಯ್ದುಕಾಜಿ**: ಮೆಯ್ದೆಗೆದರಡಯೊಯ್ಲಿನಲಿ ಬಲು ಗಯ್ದು[ಪಾಠಾಂ. ಗೈದು] ಕಾಜರು (ಕುವ್ಯಾಅ. ೭–೩೫); ಕೊಯ್ದ ಕೊರಲಿನ ಕೊಜಿದ ತೋಳಿನ . . . ಕಯ್ದುಕಾಜರು (ಕುರಾಸಾಂ. ೧೪–೬). **ಕೈದುಕಾರ**: ಕೈದುಕಾರರು ಹೊಕ್ಕು ಪಂಥವನ್ನೆದಿ ಕಾದುತ್ತಿರಲು (ದೇವೀಮ. ೩–೧೦); ಪೆರ್ಬಾಗಿಲಂ ಕಾವಲಲೆಯುವ ಕೈದುಕಾರನ ತನುಚ್ಛಾಯೆ (ಶ್ರೀರಾಮಾ. ೪೭೩–೪೯೯). **ಕೈದುಕಾಜಿ**: ಕೈದುಕಾಜಂ ಬಂದಿಕಾಜಂ (ಶಮದ. ೧೯೯ ಪ್ರಯೋ); ಕೈದುಕಾಜರ ಗುರುಭಡಾಳಿಸಿ ಮೈದೆಗೆದು ನಿರ್ಜರರ ನಗರಿಗೆ ಹಾಯ್ದನು (ಕುವ್ಯಾದ್ರೋ. ೧–೩); ತಪದ ಮಾರ್ಗದ ಕೈದುಕಾಜರು ಕಾಣಲಜಿಯರು ವೈದಿಕೋಕ್ತ ವಿಧಾನತತ್ವದಲಾವನಂಘ್ರಿಯನು (ನಿಭಾಗ. ೭–೧–೧೨). **ಕೈದುಗಾಜಿ**: ಕಂಚಗಾಜರು ಕೈದುಗಾಜರು (ಮೋಹತ. ೩–೨೨); ಕೊಂತಗಾಜರ ಹರಿಗೆಕಾಜರ ಕೈದುಗಾಜರ ಪಡೆವೆರಸು (ರಾಮಾಶ್ವ. ೯೩–೨೯). [ಕೆಯ್ದು + -ಕಾಜ]

**ಕೆಯ್ದುಕೆಯ್** 'ಕೆಯ್ದುಗೆಯ್' ನೋ.

**ಕೆಯ್ದುಗೆಯ್**, ಕಯ್ದುಗೆಯ್, ಕೆಯ್ದುಕೆಯ್, ಕೈದುಗೆಯ್, ಕೈದುಗೈ (ಕ್ರಿ). ೧. ಆಯುಧವನ್ನು ಪ್ರಯೋಗಿಸು; ಶಸ್ತ್ರಪ್ರಹಾರಮಾಡು; ಕಾಳೆಗಮಾಡು; ಸೆಣಸು: ನಿಲ್ಲದೆ ತೊಲಗಿದಿರಿಂದಂಕಲ್ಲದೊಡೆಟ್ಟಿದ್ದುರ್ದ ಕೆಯ್ದುಗೆಯ್ ನೀನೀಗಳ್ (ಕವಿರಾ. ೩–೧೯೯). **ಕಯ್ದುಗೆಯ್**: ೧. ಮಾತಿನೊಳೇನೊ ಕಯ್ದುಗೆಯ್ ಬಜಿವನನಾಜಿಶ್ರಾಂತನಂ ಯಶೋಧನನಿಜಿಯಂ (ಶಾಂತಿಪು. ೪–೫೧); ಆರ್ ಮರುತ್ಸೂನುಗೆ ಕಯ್ದುಗೆಯ್ದು ಕಡುಗೆಯ್ದು ಬರ್ದುಂಕುವರಾಜಿರಂಗದೊಳ್ (ಪಂರಾಮಾ. ೧೦–೨೧೮). **ಕೆಯ್ದುಕೆಯ್**: ೨. ಆಯುಧವನ್ನಾಗಿ ಮಾಡಿಕೊಳ್ಳು; ಆಯುಧದಂತೆ ಪ್ರಯೋಗಿಸು: ಮದನನ ಕೆಯ್ದುಕೆಯ್ದ ಕರಶಾಖೆ ಮುರುಂಟಿದುದು (ಅನಂಪು. ೧–೨೪). **ಕೈದುಗೆಯ್**: ೧. ಕಲಹಕ್ಕೆ ವಂದು ನಣ್ಪುದೋರ್ಪೊಡವಸರವಲ್ತು ಕೈದುಗೆಯ್ (ಪಂರಾಮಾ. ೧೦–೧೫೩ವ); ಬಗ್ಗಿಪೀ ಕೋಕಿಳವೆನ್ನೊಳ್ ತಾವೆ ಮಾಟ್ಟುಂ ಭುವನಜಯಮನಾಂ ಕೈದುಗೆಯ್ವನ್ನಮೇನೆಂದು (ಜಗಪಿ. ೧೪–೯೧). **ಕೈದುಗೈ**: ೧. ಕೈದುಗೈದು ಸೋಲ್ವರ್ (ರಾಮಾಶ್ವ. ೮೫–೧೩). [ಕೆಯ್ದು + ಕೆಯ್₁]

**ಕೆಯ್ದುಗೊಳ್**, ಕೈದುಕೊಳ್, ಕೈದುಗೊಳ್ (ಕ್ರಿ). = ಕೆಯ್ದುಗೆಯ್: ೧. ಪವನಸುತಂ ಗದೆಗೊಳೆ ಗಾಂಡಿವಿ ಬಿಲ್ಗೊಳೆ ಕೆಯ್ದುಗೊಳ್ವ ಮಾರ್ಕೊಳ್ವದಟರ್ ಭುವನದೊಳಿಲ್ಲ (ಗದಾಯು. ೩–೧೬); ಕೆಯ್ದುಗೊಳವೇಳ್ ಪದಾತಿಯಂ ಬೇಗಂ (ಗರಿಕ. ೬–೫೫). **ಕೈದುಕೊಳ್**: ೧. ಕಡು ಹೀಹಾಳಿಕಾಜರು ಕೈದುಕೊಂಡರು ಬಾಲಕನ ತಜಬಿದರು (ಕುವ್ಯಾದ್ರೋ. ೫–೮೨). **ಕೈದುಗೊಳ್**: ೧. ಇವರೆಮ್ಮಾಚಾರ್ಯರೆಂದೋವದೇರ್ವೆಸನಂ ಮಾಣದೆ ಕೈದುಗೊಳ್ (ಪಂಪಭಾ. ೧–೭೮);

ಪೊಜಮಡು ನೀಂ 'ಕೈದುಗೊಳ್ (ಗದಾಯು. ೭–೧೩). ೨. ತ್ರಿಪುರಾರಿ ಯುರಿಗಣ್ಣಿಂಗೆ ಸೋಲದ ಕೈದುಕೊಂಡನು (ಕುವ್ಯಾದ್ರೋ. ೩–೫೮).

[ಕೆಯ್ದು + ಕೊಳ್$_1$]

**ಕೆಯ್ದುಡುಕು,** ಕಯ್ತುಡುಕು, ಕೈದುಡುಂಕು, ಕೈದುಡುಕು$_1$ (ಕ್ರಿ). ೧. ಕೈಯಿಂದ ಗಬಕ್ಕನೆ ಹಿಡಿದುಕೊಳ್ಳು; ತುಡುಕು; ಕೈ ತುರುಕು; ಕಿತ್ತುಕೊಳ್ಳು; ಅಪಹರಿಸು: ಇಡಿದಿಂಧನದೊಳ್ ಫಣಿ ವೊಳಗಡಂಗೆ ಮಣಿಗಂಡು ಕೆಂಡವೆಂದೊರ್ವಂ ಕೆಯ್ದುಡುಕೆ (ರಾಜಶೇ. ೯–೨೫). **ಕಯ್ತುಡುಕು:** ೧. ಕತ್ತೆತ್ತಿನೋಡಿ ಕಯ್ತುಡುಕಿ ಬಲ್ಪಿನಿಂದ ಅದನ್ನೆಳೆದು (ಮಂತ್ರಶ. ೧೦–೮). **ಕೈದುಡುಂಕು:** ೧. ಕಿಱಿಯ ಕೃತಿ ಪಿರಿದೆನಿಕ್ಕುಂ ಪೆರರರ್ಥಕೆ ಕೈದುಡುಂಕದಿರೆ ಸತ್ಕವಿಗಂ ಕಿಱಿಯ ಸಿರಿ ಪಿರಿದೆನಿಕುಂ (ರಾಜಶೇ. ೧–೩೨). **ಕೈದುಡುಕು$_1$:** ೧. ರದನಾಗ್ರದ್ವಂದ್ವಮಂ ಕೈದುಡುಕಿ ಪಿಡಿದು (ಜಗವಿ. ೬–೫೫); ವೃಡನ ಭಕ್ತರು ಪರಧನಕೆ ಕೈದುಡುಕುವರೆ (ಬಸವು. ೧೧–೧೨). ೨. ದುಡುಕು; ಮುನ್ನುಗ್ಗು: ವೃಕೋದರನ ವಲ್ಲಭೆಯ ಕಂಡನು ಕೈದುಡುಕಲಂಜಿದನು (ಕುವ್ಯಾವಿ. ೩–೭೪); ಕಂದು ಕಸರಿನ ಕಲಿಮನದ ಕಡುಹಿಂದ ಕೈದುಡುಕಿದರು ಕದನಕೆ ಕಲಿಗಳು (ತೊರರಾ. ೪–೩–೬).

[ಕೆಯ್$_2$ + ತುಡುಕು (< ತುಡುಂಕು)]

**ಕೆಯ್ದುವಿಡಿ,** ಕೈದುವಿಡಿ (ಕ್ರಿ). ಆಯುಧವನ್ನು ಹಿಡಿ; ಯುದ್ಧ ಮಾಡು: ಶಸ್ತ್ರಾಜೀವಃ, ಕಾಂಡಸ್ಪೃಷ್ಟಃ – ಈ ೨ ಕೆಯ್ದುವಿಡಿವವಂ (ಹಲಾಯು. ೬೭–೨೫೧); ಕೆಯ್ದುವಿಡಿವಂ ಶಸ್ತ್ರಜೀವಿ (ಮಂಗರಾ. ೬೫–೭). **ಕೈದುವಿಡಿ:** ಲಾಭದಲಂಪಿಂ ನಡೆಯಲ್ಕೆ ಕೈದುವಿಡಿಯಲ್ಕೆಂ ದಂದಜಂ ಬೇಡಿ ತೋಱಿದೊಡೆ (ಆದಿಪು. ೮–೭೩); ನೀಮುಂ ತಾಮುಮಿರಿದಿರ್ಚಿ ಕೈದುವಿಡಿವನ್ನಂ ನಿಲ್ವ ಸಂಗ್ರಾಮವಿಲ್ಲ (ವರ್ಧಪು. ೭–೫೬); ಕಚ್ಚೆಗಟ್ಟದೆ ಕೈದುವಿಡಿಯದೆ ಕೆಚ್ಚೆದೆಯ ಮನಸಿಜನ ತಪಸಿನ ಕಿಚ್ಚಿನಿಂದುರುಪಿದೆ (ಸಾಳ್ವಭಾ. ೩–೫). [ಕೆಯ್ದು + ಪಿಡಿ$_1$]

**ಕೆಯ್ದುವೊಱು,** ಕೈದುವೊಱು (ಕ್ರಿ). = ಕೆಯ್ದುವಿಡಿ: ವೀರನುದಾರಂ ಶುಚಿ ಗಂಭೀರಂ ನಯಶಾಲಿ ಕೆಯ್ದುವೊತ್ತರ ದೇವಂಗಾರೆಜಗರ್ ನೃಪತುಂಗಂಗೆ (ಶಮದ. ೧೪೦ ಪ್ರಯೋ). **ಕೈದುವೊಱು:** ಇವರೊಳುಂಟೇ ಕೈದುವೊತ್ತವರನಱುವೆನು (ಕುವ್ಯಾದ್ರೋ. ೧೯–೪೨).

[ಕೆಯ್ದು + ಪೊಱು$_1$]

**ಕೆಯ್ದೆಗೆ,** ಕೈತೆಗೆ, ಕೈದೆಗೆ (ಕ್ರಿ). ೧. ಕೈಯನ್ನು ಹಿಂದಕ್ಕೆ ತೆಗೆದುಕೊ: ಅಂತು ಮಱುಗಿ ಕರುಣಾಕರಂ ಕಪರ್ದಿ ಕೆಯ್ದೆಗೆದು ನಿಂದಾಗಳ್ (ಶಬಶಂ. ೪–೮೫ ವ). **ಕೈತೆಗೆ:** ೧. ಒಡನೆ ಕೆನ್ನೆತ್ತರು ಚಿಮ್ಮಿದಂತಾಗಿ ಬೋಳನು ಕೈತೆಗೆದನು (ಕಾಲೂರ. ೯ ಕಥಾಸಾರ). **ಕೈದೆಗೆ:** ೧. ಸವಿನೋಡಿ ಅಂಬಲಿಯ ರುಚಿಯಾಯಿತ್ತೆಂದು ಕೂಡಲ ಸಂಗಮ ದೇವಂಗೆ ಬೇಕೆಂದು ಕೈದೆಗೆದ (ಬಸವ. ೭೯೪); ಅದರದಿ ಹುಳಿಯಂಬಕಳವಂ ಕೈದೆಗೆಯದುಱಿ ಸುಱಿಸುಱಿದು (ಬಸವು. ೧೫–೨೬); ಕಿಱುಬನೊಡನೇನೆಂದು ಕೈದೆಗೆವು ಕಾದಿದೊಡೆ ಬೆಱಿದೊ ಬಹಳ ಗರ್ವದೆ (ಚಿಬವು. ೪೦–೧೨). ೨. ಹಿಂಜರಿ; ಹಿಮ್ಮೆಟ್ಟು; ವಿಮುಖನಾಗು: ಆಕೆಯೊನಿತರ್ಥಮಂ ಬೇಡಿದೊಡನಿತುಮಂ ಪ್ರೀತಿಯಿಂ ಕೈದೆಗೆಯ ದೆರಡುಗೇಳದೆಯನವರತಂ ಕುಡುತ್ತುಮಿರ್ಪುದುಂ (ಧರ್ಮಾಮೃ. ೨–೧೧೪); ೩. ದಿಟಕ್ಕಿಂತೊರ್ವರೊರ್ವರ್ಗೆ ಯೋಧನದೊಳ್ ಕೈದೆಗೆವನ್ನರಿರ್ದಪರೆ (ವರ್ಧಪು. ೭–೫೬); ಕಳವಳಿಸಿದರು ಕಾಯದಲಿ ಕಕ್ಕುಲಿತೆಗಾಱರು ಕೈದೆಗೆದರಗ್ಗಳೆಯನುಱುಬೆಗೆ (ಕುವ್ಯಾದ್ರೋ. ೧೫–೫೧); ಕಾಳಗದೊಳು ಕೈದೆಗೆವ ಖೂಳನೃಪರ (ಕುರಾಸಾಂ. ೧೯–೩೨).

[ಕೆಯ್$_2$ + ತೆಗೆ$_1$]

**ಕೆಯ್ದೊಳೆ,** ಕೈತೊಳೆ, ಕೈದೊಳೆ (ಕ್ರಿ). ಕೈಯನ್ನು ತೊಳೆ, —ಸ್ವಚ್ಛ ಮಾಡು: ಗಂಧೋದಕದಿಂದೆ ಕೆಯ್ದೊಳೆದು ಶ್ರೀಗಂಧದ ಮೆಯ್ಗೂಡಿ ಕೊಂಡು (ಮೋಹತ. ೪೨–೬೮). **ಕೈತೊಳೆ:** ಭೋಜನಾನಂತರದೆ ಕೈತೊಳೆದು (ಕಂಸವಿ. ೮–೯೩). **ಕೈದೊಳೆ:** ನಾನು ಕೈದೊಳೆಯದ ಮುನ್ನವೆ ಜಂಗಮಕ್ಕೆ ಹಸ್ತಪ್ರಕ್ಷಾಳನ ಮಾಡಿಸುವೆ (ಮಹಾದೇ. ೨೭–೧); ವರ ಸಮಾಧಾನದಲಿ ಕೈದೊಳೆದು ರವಣಿಪ ತೇಗಿನ ತರಂಗದ ಪರಬಲಾಂತಕನೆದ್ದು ನಿಂದನು (ಕುವ್ಯಾಆ. ೧೦–೩೪); ಸೊಸ್ತದೊಳೂಟವ ಮಾಡಿ ಕೈದೊಳೆವನ್ನಕಸ್ತಮಿಸಿದ ಕರ್ಮಸಾಕ್ಷಿ (ಮೋಹತ. ೨೨–೩).

ಕೈತೊಳೆದುಕೊ = ಕೆಲಸವನ್ನು ಮಾಡಿ ಪೂರೈಸು; ಕೆಲಸ ಮುಗಿಸಿ ಜವಾಬ್ದಾರಿ ಕಳೆದುಕೊಳ್ಳು: ಅವರು ತಮಗೆ ಒಪ್ಪಿಸಿದ ಕೆಲಸವನ್ನು ಮಾಡಿ ಕೈತೊಳೆದುಕೊಂಡರು (ರೂಢಿ).

[ಕೆಯ್$_2$ + ತೊಳೆ$_1$]

**ಕೆಯ್ದೊಱೆ,** ಕೈದೊಱೆ (ಕ್ರಿ). ೧. ಕೈ ತೆರೆ; ಬಿಚ್ಚುಗೈಯಿಂದ ಕೊಡು; ಧಾರಾಳಿಯಾಗು: ಅಯ್ದಾಱು ಬಾರಿ ತನ್ನರಮನೆಗೆಲ್ಲರ ನೊಯ್ದು ಮಾಡಿಸಿದನೌತಣವಾ ಮೆಯ್ದೊಡಿಗೆಯ ದುಗುಲವನಿತ್ತವನಂತೆ ಕೆಯ್ದೊಱೆವವನಾವನೆನಿಸಿ (ಭರಚ. ೩೮–೫೮). **ಕೈದೊಱೆ:** ೨. ತೊರೆ; ಕೈಬಿಡು; ತ್ಯಜಿಸು: ಎಱೆದಳೋ ಸುರರಿಂಗೆ ಸತಿ ಕೈದೊಱೆದಳೋ ದನುಜರಿಗೆ (ನಿಭಾಗ. ೮–೯–೩೨). [ಕೆಯ್$_2$ + ತೊಱೆ$_1$]

**ಕೆಯ್ನಿಱು,** ಕಯ್ನಿಱು, ಕೈನಿಱು (ಕ್ರಿ). ಕೈನಿಮಿರು, —ಚಾಚು, —ಬೀಸು, —ಎತ್ತು; ಕೈಯನ್ನು ತೂಗು: ಸುರಪತಿ ಕೆಯ್ನಿಱಿದು . . . ಪೊಗಬಲಱಿಯಂ ಸಭೆಯೊಳ್ (ಶಾಂತಿಪು. ೧೦–೭೬). **ಕಯ್ನಿಱು:** ಜಿನಪದಾಂಭೋರುಹದೊಳ್ ನಿಱಿಸಿ ಮತಿಯಂ ಸುರರ್ ಕಯ್ನಿಱಿ ನಿಱಿದೊಡನೊಡನೆ ಪೊಗೞೆ (ಶಾಂತಿಪು. ೭–೩೯). **ಕೈನಿಱು:** ಅಂಘ್ರಿ ವಿನ್ಯಸನದಿನಬ್ಜಮಂ ಕೆದಱುವಂತಿರೆ ಕೈನಿಱಿವೊಂದು ದೇಸೆಯಿಂ ಕಿಸಲಯ ಜಾಲಮಂ ಪರಪುವಂತಿರೆ (ಜಗವಿ. ೫–೧೬); ಭಾರತಿಕನಾಗೆ ಮಂದ ಸಮೀರಂ ಕೈನಿಱಿದುವುತ್ಸವ ಧ್ವಜತತಿಗಳ್ (ಪಂರಾಮಾ. ೪–೨೬); ಮಿಳಿರ್ವ ಪಟಯುಗೆಯ ತುಱುಗಲಿಂ ಕೈನಿಱಿದು ನರ್ತಿಸುವಂತೆ (ಪುಷ್ಪಪು. ೧೩–೪೮ ವ). [ಕೆಯ್$_2$ + ನಿಱು$_1$]

**ಕೆಯ್ನೀಡು,** ಕೈನೀಡು (ಕ್ರಿ). ೧. ಕೈಯೊಡ್ಡು; ಕೈಚಾಚು: ಕೆಯ್ನೀಡಿದ ಬೇಟ್ಪರ ನೆರವಿಗೆ ನೀಡಿಲ್ಲದೆ ಕುಡುವುದಾತ್ತನಾಜಿನಚಂದ್ರಂ (ಶಾಂತಿಪು. ೧–೩೨). ೨. ಕೈಯಿಕ್ಕು; ಕೈಹಾಕು; ತುಡುಕು: ಮುನಿದಮ್ಮಂ ಕೊಲಲೊಡ್ಡಿದಂದಿನ ಶಿಲಾಸ್ತಂಭಕ್ಕೆ ಕೆಯ್ನೀಡಿದಂದಿನ ಕಿಟ್ಟಂದಿನ . . . ಆ ನಿನ್ನ ಗರ್ಜನೆಯುಂ ಬೀರಮುಮೀಗಳಿಂತು ಪುಡಿಯೊಳ್ ಚೀ ಸೀ ಪೊರಳ್ದಿರ್ಪುದೇ (ಶಾಂತಿಪು. ೭–೬೦). **ಕೈನೀಡು:** ೧. ಮುಂಡಾಡಿ ದಣಿಯರು ಬಾಯೆನುತೆ ಕೈನೀಡಿ ದಣಿಯರು (ಸಾಳ್ವಭಾ. ೧೧–೨೭). ೨. ಅಲರಾಯ್ವಪದದೊಳೆರಡನೆಯಲರ್ಗಂ ಕೈನೀಡಿ ಸೇದೆ ವಡೆವರ್ ಸತಿಯರ್ (ಕಾದಂಪೂ. ೧೦೦೫); ಅರಸುಗಾದೆಗಳನುವ ನೀನಱಿದು ಬಿಲ್ಗೆ ಕೈನೀಡುವರೇ (ಕಬ್ಬಿಕಾ. ೨೨೯); ಹರಿಶರಕೆ ಕೈನೀಡಿದನು (ಕುವ್ಯಾದ್ರೋ. ೧೯–೧೩). ೩. ನೆರವಾಗು; ಆಶ್ರಯಕೊಡು: ಪಿಡಿಯ ಬಂದಂಗೆ ಕೈನೀಡಿ ಕೊಟ್ಟರೆಂಬಂತೆ (ಧರ್ಮಾಮೃ. ೨–೧೪೯); ಕುವರಿಯಂ ನೀವು ಕೈನೀಡಿ ಕಾಯಬೇಕು (ಕೃಷ್ಣಾಕು. ೬–೨೩).

[ಕೆಯ್$_2$ + ನೀಡು$_1$]

**ಕೆಯ್ನೀರ್,** ಕಯಿನೀರ್, ಕೈನೀರ್ (ನಾ). ೧. ಕೈಗೆ ಸುರಿದ ನೀರು: ಅಯಸದೊಳಾದೀ ಕಱೆ ಕರ್ಚಿ ಪೋಗದೀ ಕೆಯ್ನೀರೊಳ್ (ಶಾಂತಿಪು. ೪–೭೮); ಅಂಬುವನೆಱೆವಾಗಳ್ ಪ್ರತಿಬಿಂಬಿಸೆ ಕೆಯ್ನೀ ರೊಳವಳ ವದನಂ ಪಥಿಕಂ ನಂಬಿ ನಲಿದೀಂಟದಂ (ಗಿರಿಕ. ೨–೨೬).

**ಕಯಿನೀರ್** : 'ಕಯಿನೀರೆಱೆ' ಪರಾ. **ಕೈನೀರ್** : ೧. ನಿನಗೆನ್ನಂ ಬಿಡದುಣ್ಮಿದೀ ಬೆಮರೆ ಕೈನೀರಾಗಿರಲ್ ತೋರ್ಕೆಗೊಟ್ಟನನಂಗಂ (ಕಾದಂಉ. ೫೯). ೨. ಮದುವೆಯಲ್ಲಿ ಎರೆಯುವ ಧಾರೆಯ ನೀರು : ಭೂಪಂ ತನ್ನ ಸಂತಾನವೃದ್ಧಿಗೆ ಪೊಯ್ನೀರೆಱೆವಂತೆ . . . ಕೈನೀರೆಱೆದಂ ಪಳಂಚೆ ದೆಸೆಯಂ ಮಾಂಗಲ್ಯತೂರ್ಯಸ್ವನಂ (ಪಂರಾಮಾ. ೫–೧೨೯). ೩. ಕೈತೊಳೆಯುವ ನೀರು : ನೈವೇದ್ಯಮನರ್ಪಿಸಿ ವಿಮಲೆಗಿತ್ತು ಕೈನೀರಂ ರಾಗಮಯೊಗೆ ಪರಿಮಳ ತಾಂಬೂಲಮನರ್ಪಿಸಿದಂ (ಉದ್ಭಟ. ೩–೧೨೪). ೪. (ಕರಾ) ಊಟಮಾಡುವಾಗ ಹಾಕುವ ಆಪೋಷಣ ಜಲ ; ಹಸ್ತೋದಕ : ಹತ್ತುಜನಕ್ಕೆ ಕೈನೀರು ಹಾಕಿದರು (ರೂಢಿ). [ಕೆಯ್$_2$ + ನೀರ್$_1$]

**ಕೆಯ್ನೀರೆಱೆ**, ಕಯಿನೀರೆಱೆ, ಕೈನೀರೆಱೆ (ಕ್ರಿ). ಮದುವೆಯಲ್ಲಿ ಧಾರೆಯೆರೆ : ಹುತಹುತವಹ ಸಮಕ್ಷದೊಳ್ ಕೆಯ್ನೀರೆಱೆದು ಪಾಣಿಗ್ರಹಣಂಗೆಯ್ಸಿ (ಪಂಪಭಾ. ೩–೭೪ ವ) ; ಪುರೋಹಿತ ಪುರಸ್ಸರಂ ತಾನೆ ಬಂದು ಕೆಯ್ನೀರೆಱೆಸಿದಂ (ಪುಷ್ಪಪು. ೮–೬೦). **ಕಯಿನೀರೆಱೆ** : ವಧೂವರರಂ . . . ದಳಿಂಬದ ಪಸೆಯೊಳಿರಿಸಿ ಕಯಿನೀರೆಱೆದು ಪಾಣಿಗ್ರಹಣಂಗೆಯ್ಸಿದಾಗಳ್ (ಸುಕುಮಾ. ೧೦–೧೨೬ ವ). **ಕೈನೀರೆಱೆ** : ಎಣ್ಬರ್ ಕನ್ನೆಯರ್ಕಳಂ ಕೈನೀರೆಱೆದು ಕುಮಾರಂಗೆ ಕೊಟ್ಟಂ (ವಡ್ಡಾರಾ. ೫೮–೧೫) ; ಕನಕಕಳಶಮಂ ತಾನೆ ಬಂದೆತ್ತಿ ಕೈನೀರೆಱೆದಂ (ಆದಿಪು. ೪–೪೮) ; ಸುತೆಗಂ ಜಾಮಾತೃಗಂ ಪ್ರೀತಿ ಕೈಮಿಗೆ ಕೈನೀರೆಱೆದಂ (ಚಂದ್ರಪು. ೬–೭೧) ; ಹೊಲೆಯಗೆ ಧಾರುಣೀಶ್ವರ ತನುಜೆಯನು ಕೈನೀರೆಱೆವೆನೆಂಬೀ ದುರಾಗ್ರಹ ಬೇಡ (ಸ್ವಾಳಭಾ. ೮–೬೨). [ಕೆಯ್ನೀರ್ + ಎಱೆ$_1$]

**ಕೆಯ್ನೂತಿ** (ನಾ). ನೂತಿಹುಣ್ಣಿನಲ್ಲಿ ಒಂದು ಬಗೆ; ಗುಹ್ಯರೋಗದಿಂದಾಗಿ ಅಂಗೈಯಲ್ಲಿ ಏಳುವ ಹುಣ್ಣು : (ಕ). [ಕೆಯ್$_3$ + ನೂತಿ]

**ಕೆಯ್ನೆರವು**, ಕೈನೆರವು (ನಾ). ಬೆಂಬಲ; ಸಹಾಯ; ಒತ್ತಾಸೆ: ಸರಸ್ವತಿ ಕ[ಕೆ]ಯ್ನೆರವಾಗೆ ಪೇೞ್ದಪಳ್ (ಶಮದ. ೮೮ ಪ್ರಯೋ). **ಕೈನೆರವು** : ಮದನನೆನಿಪ್ಪ ಸಾಲಕನು ದುರುಳ ಕಾಷ್ಠಾಂಗಾರಕಗೆ ಕೈನೆರವ ಬಂದವ ನುಡಿದ ಮಾತಿಗೆ ಶಿರವ ತೂಗಿಯೆ ಹೊಗಳಿ (ಜೀವಂಚ. ೪–೬೬) ; ಮಗುಳಿವನೊತ್ತಿ ಹೊಕ್ಕರಿ ಕೈನೆರವ ಹಾರುತ್ತ ಮುಱಿದನು (ಕುವ್ಯಾದ್ರೋ. ೧೮–೪೨) ; ಇದಕ್ಕೆ ಕೈನೆರವಾಗಿ ಐದಾರು ಹಳಗನ್ನಡ ಪಾಠಪುಸ್ತಕಗಳನ್ನು ಏರ್ಪಡಿಸುವುದು (ಕಬಸಾ. ೧೫). [ಕೆಯ್$_2$ + ನೆರವು]

**ಕೆಯ್ಪಱೆ**, ಕಯ್ಪರೆ, ಕಯ್ಪಱೆ, ಕೆಯ್ವಱೆ, ಕೈಪರೆ, ಕೈಪಱೆ (ನಾ). ೧. ಕೈಚಪ್ಪಾಳೆ. 'ಕೆಯ್ಪಱೆಗುಟ್ಟು' ಪರಾ. ೨. ಕೈತಮಟೆ : (ಕ). **ಕಯ್ಪರೆ** : ೧. 'ಕಯ್ಪರೆಗುಟ್ಟು' ಪರಾ. **ಕಯ್ಪಱೆ** : ೨. ಪೊಸತೋಟಂ, ಕಯ್ಪಱೆ (ಶಬ್ದಾನು. ೧೧೧ ಪ್ರಯೋ). **ಕೆಯ್ವಱೆ** : ೨. ಕೆಯ್ವಱೆ, ಮೆಯ್ವಸಂ, ತಾಯ್ವನೆ (ಭಾಷಾಭೂ. ೩೧ ಉದಾ). **ಕೈಪರೆ** : ೧. 'ಕೈಪರೆಗುಟ್ಟು' ಪರಾ. **ಕೈಪಱೆ** : ೧. ಸಂಸಾರನಾಟಕಸೂತ್ರಧಾರಿ ಮುರಾರಿ ಕೈಪಱೆಗಾಡಿದಂ (ಜಗವಿ. ೩–೫೩) ; ಇದಿರಾಗಿ ಕೈಪಱೆಯೊಳಾಡುವ ರಕ್ಕಸಿಯರ್ಕಳೊಪ್ಪಿದರ್ (ಕಬ್ಬಿಕಾ. ೨೮೫) ; ಬೇತಾಳಗಣ ಕೈಪಱೆಯ ಬಡಿದುದು (ಕುವ್ಯಾಭೀ. ೫–೩೫) ; ಮನುಮುನಿ ಪ್ರಮಥ ನೆರವಿ ಕೈಪಱೆಯಿಕ್ಕಿತು (ನಂದಿಮಾ. ೨೨–೨೨). ೨. ಕೈಪಱೆಗೆ ಬೆದಱಿ ಪರಿದೋಡುವ ತೆಲುಂಗವಡೆ (ಚಿಕವಂ. ೨೩–೧೩).

**ಕೈಪಱೆಯ ನಂಬುಗೆ** = ಕೈಮೇಲೆ ಕೈ ಹಾಕಿ ಕೊಡುವ ಭಾಷೆ : ಓಪಳನು ಕಳುಹೆನುತ ಭರವಸೆ ಕೈಪಱೆಯನಂಬುಗೆಯೊಳೈದಿದರತ್ತ ನಿಜಪುರಿಗೆ (ಅಂಬಿಕಾ. ೩೪–೪೮). [ಕೆಯ್$_2$ + ಪಱೆ$_1$]

**ಕೆಯ್ಪಱೆಗುಟ್ಟು**, ಕಯ್ಪರೆಗುಟ್ಟು, ಕಯ್ಪಱೆಗುಟ್ಟು, ಕೈಪರೆಗುಟ್ಟು, ಕೈಪಱೆಗುಟ್ಟು (ಕ್ರಿ). ಚಪ್ಪಾಳೆ ಬಡಿ, —ತಟ್ಟು ; ಚಪ್ಪಳೆಯಿಕ್ಕು : ಕೆಯ್ಪ [ಪಾಠಾಂ. ಕೈಪ]ಱೆಗುಟ್ಟಿಯಾಡಿದರ್ (ಶಮದ. ಮ. ೭೭ ಪ್ರಯೋ). **ಕಯ್ಪರೆಗುಟ್ಟು** : ಕಯ್ಪರೆಗುಟ್ಟಿ ಗಹಗಹಿಸಿ ನಗುತಿರ್ದರು (ಕೇಷರಾ. ೮–೮೨) ; ಅನ್ಯೋನ್ಯರನ್ನು ಬೆಂದಟ್ಟಿ ಕಯ್ವೊಯ್ದು ಕಯ್ಪರೆಗುಟ್ಟಿ (ಬಿಟ್ಟಅ. ೬೦–೧೭). **ಕಯ್ಪಱೆಗುಟ್ಟು** : ಕಯ್ಪಱೆಗುಟ್ಟಿ ಪಿಶಾಚಕೋಟಿ ನಿರ್ಭರಮುಲಿದಾಗಳಾಡೆ ರಣರಂಗದೊಳ್ (ನೇಮಿಪು. ೧೧–೧೬೦). **ಕೈಪರೆಗುಟ್ಟು** : ಲತಾಂಗನೆಯರ್ ಕೈಪರೆಗುಟ್ಟುತ ಪಾಡುವವೊಲಳಿಧ್ವನಿ ಮೆರೆಗುಂ (ದಮಸ್ವ. ೧–೮೭). **ಕೈಪಱೆಗುಟ್ಟು** : ಮುದದಿಂ ಕೈಪಱೆಗುಟ್ಟುತ್ತೊದವಿಂದಂ ಮಕ್ಕಳಾಡುತಿರ್ಪನ್ನೆವರಂ (ಧರ್ಮಾಮೃ. ೩–೧೧) ; ತೊನೆದು ಕೈಪಱೆ ಗುಟ್ಟಿ ತೋಳೆತ್ತಿ ಪಾಡುತಂ (ವೀರರ. ೪೬೧) ; ಪಾಂಡವ ಕುರುನೃಪರ ಹರಸಿದುದು ಕೈಪಱೆಗುಟ್ಟಿ ಭೂತಗಣ (ಕುವ್ಯಾಭೀ. ೫–೩೨) ; ಅಬ್ಬೆಗೆ ತೋಱಿ ಕೈಪಱೆಗುಟ್ಟುವ, ಕೈಪಱೆಗುಟ್ಟಿ ಬೆನ್ನೊಳ್ ಮೈಗರೆವ (ರಾಮಾಶ್ವ. ೧೫೧–೭). [ಕೆಯ್ಪಱೆ + ಕುಟ್ಟು$_1$]

**ಕೆಯ್ಪಾವಡ** (ನಾ). ಕೈವಸ್ತ್ರ, —ಚೌಕ : (ಕ). [ಕೆಯ್$_2$ + ಪಾವಡ]

**ಕೆಯ್ಪಿಡಿ**, ಕಯ್ಪಿಡಿ, ಕಯ್ವಿಡಿ$_2$, ಕೈಪಿಡಿ$_2$ (ನಾ). ೧. ಕನ್ನಡಿ ; ದರ್ಪಣ : ವಿರಂಚಿಯ ಕೆಯ್ಪಿಡಿವೊಲಾದುವಾ ನಾಡೂಗರ್ಳ್ (ಪಂಪಭಾ. ೮–೫೧) ; ಬಸಂತದ ಕಡೆಯಾಗೆ ಸುಗ್ಗಿಯೆ ಮನೋಜನ ಕೆಯ್ಪಿಡಿಯಲ್ತೆ ಮಾಮರಂ (ಶಾಂತಿಪು. ೯–೭೫) ; ಪಿಡಿಯನೇಱಿ ಕಾಮನ ಕೆಯ್ಪಿಡಿಯಂತೆ ಬರುತುಂ (ಪಂರಾಮಾ. ೭–೧೦೫ ವ). ೨. ಆಶ್ರಯ ; ಆಧಾರ : ಧರ್ಮಾರ್ಥಿಗಳ್ಗಪ್ಪ ಕೆಯ್ಪಿಡಿಗಳ್ ಜೈನಗೃಹಕ್ಕೆ ನಿಲ್ಪಪಡಿಗಳ್ . . . ಶ್ರೀ ಗುಣಭದ್ರ ದೇವರಡಿಗಳ್ (ಕಾವ್ಯಾವ. ೮೯) ; ದಾನಗುಣಂ ಸಮಸ್ತ ವಿದ್ವನ್ನಿಕರಕ್ಕೆ ಕೆಯ್ಪಿಡಿವೊಲಾದುದು (ಎಕ. VIII, ಸಾಗರ. ೧೫೯–೨೮ ; 1159). **ಕಯ್ಪಿಡಿ**. ೩. ಒಂದು ಬಗೆಯ ಆಯುಧ (?) : ಮನಸಿಜನಂಬು ಮನ್ಮಥನ ಕಯ್ಪಿಡಿ ಕಾಮನ ಕೈದು (ಸುಕುಮಾ. ೫–೫೪). **ಕಯ್ವಿಡಿ$_2$** : ೧. ಬಸಂತರಾಜನ ಕೋಶ ಸಾರಸರ್ವಸ್ವಮುಂ ಕಯ್ವಿಡಿಯುಂ ನಿಕ್ಷೇಪಮುಂ . . . ಪೊಂಪುಱಿವೋಪುದುಂ (ಶಾಂತಿಪು. ೭–೧೪೩ ವ). **ಕೈಪಿಡಿ$_2$** : ೧. "ಕೈಪಿಡಿಯೆ ಕನ್ನಡಿಯೊಳ್" (ಕರ್ಣಾನಿ. ೬೭) ; "ಕೈಪಿಡಿಯೆನ್ನಲ್ ಧರೆಯೊಳ್ ಕನ್ನಡಿಯೆಂಬರ್" (ಕವಿಕಂ. ೨೧೭) ; ಮನೋಜನ ಕೈಪಿಡಿಯೆಂದು ಮಾಣ್ದನಾ ಸುದತಿಯ ರೂಪನಿಂ ಪೆಱತನೆಂದೊಡೆ ಚಿಃ ಕರಮೆಗ್ಗನಾಗೆನೇ (ಆದಿಪು. ೨–೭೪) ; ಕರ್ಣತಾಳಮಂ ಪಸರಿಸಿ ತನ್ನ ಕೈಪಿಡಿಯವೊಲ್ ಪಿಡಿಯಂ ಪಿಡಿದಿರ್ದುದೊಂದಿಭಂ (ಸೂಕ್ತಿಸು. ೩–೫೦) ; ಕರಗ ಕಾಳಾಂಜಿ ಕೈಪಿಡಿ ಬೀಸಣಿಗೆ ಪಾವುಗೆಯ ಪಿಡಿದವಳೊಡನೆಯ್ದಿದರ್ (ಕುರಾಸಾಂ. ೨೧–೪೮). ೨. ಬಲ್ಲಾಳದೇವಂಗೆ ಕೈಪಿಡಿಯುಂ ಕಟ್ಟಿದ ಗೇಣುವೀತನೆ ವಲಂ ದಂಡೇಶ ಲಕ್ಷ್ಮೀಧರಂ (ಎಕ. V, ಬೇಲೂರು. ೧೧೨–೭೮ ; 1220). ೪. ಕೈಯ ಹಿಡಿತ ; ಮುಷ್ಟಿ : ಎಡೆವಿಡದಂಗಭವನ ಕೈಪಿಡಿಯೊಳಡಂಗಿ ಬೆಳೆದ ಕಾರಣದಿ (ಶ್ರೀಪಾಲ. ೪–೮೩). ೫. ಹಿಡಿ ; ಹಿಡಿಕೆ ; ಚುಕ್ಕಾಣಿ : ಜಡಧಿವೊಲಿರೆ ಸುರಸೈನ್ಯಂ ಪಡಗುವೊಲಿರೆ ದಿವಿಜವಾರಣಂ ಜಿನಶಿಶು ಕೈಪಿಡಿವೊಲಿರೆ ಪುಣ್ಯಪಣ್ಯದ ಪಡಗಿನ ಸಾಂಯಾತ್ರಿಕಂಬೊಲಿರ್ದಂ ಶಕ್ರಂ (ಚಂದ್ರಪು. ೧೨–೭೪) ; ಕೈಗಳಿಂದ ಪಕ್ಕದಲ್ಲಿರುವ ಕೈಪಿಡಿಯನ್ನಾಗಲೀ ಗೋಡೆಯನ್ನಾಗಲೀ ಹಿಡಿದು ಹಂತಗಳನ್ನು ಇಳಿಯುವುದು (ಗೃಹವಿ. ೧೨೭). ೬. ಕೈಹೊತ್ತಗೆ ; ಸಣ್ಣಗ್ರಂಥ : ಶಬ್ದಕೋಶ, ಜ್ಞಾನಕೋಶ, ಕೈಪಿಡಿ, ಪತ್ರಿಕೆ ಮೊದಲಾದ. . . ಗ್ರಂಥಗಳು (ಗ್ರಂಥಾಲ. ೧೯) ; ಒಂದು ಕೈಪಿಡಿಯನ್ನು ಬರೆದಿದ್ದಾನೆ (ನನ್ನಜೊ. ೧೦). [ಕೆಯ್$_2$ + ಪಿಡಿ$_2$]

**ಕೆಯ್ಪಿಡಿಗೋಡೆ,** ಕೈಪಿಡಿಗೋಡೆ (ನಾ). ಮೊಗಸಾಲೆಯ ಅಥವಾ ಮಾಳಿಗೆಯ ಸುತ್ತಲೂ ಕಟ್ಟಿರುವ ಎತ್ತರವಿಲ್ಲದ ಗೋಡೆ; ತುಂಡುಗೋಡೆ: (ಕ). **ಕೈಪಿಡಿಗೋಡೆ:** ಕೈಪಿಡಿಗೋಡೆಯನ್ನು ಇಟ್ಟಿಗೆ ಗಾರೆಯಿಂದ ಕಟ್ಟಿರುವರು (ನಿಟ್ಟೂಶಾಂ. ೧೩). [ಕೆಯ್ಪಿಡಿ + ಗೋಡೆ]

**ಕೆಯ್ಪೊಡೆ,** ಕಯ್ಪೊಡೆ, ಕೆಯ್ಪೊಡೆ, ಕೈಪೊಡೆ, ಕೈಹೊಡೆ$_2$ (ನಾ). **೧.** ಬಾಣದ ಗರಿ, —ಪುಂಖ: "ಕೆಯ್ಪೊಡೆಯು ಕಣೆಯ ಪುಂಖಮದಕ್ಕು" (ಶಬ್ದಮಂ. ೪೪); "ಕೆಯ್ಪೊಡೆಯೆ ಸಾಯಕದ ಪುಂಖಂ" (ಕಬ್ಬಿಕೈ. ೩೮); ಕಂದರ್ಪಂ ಪೊಳೆವಸುಕೆಯ ಕೆಂದಳಿರಿಂ ಸವೆದು ತನ್ನ ಕೆಯ್ಪೊಡೆಯುಂ ಪೂರ್ಣೇಂದುಗೆ ಕೈಯೆಡೆಯಂ ಕೊಟ್ಟಂದದಿನಾ ಚಂದ್ರಮುಖಿಯ ಬಾಯ್ದೆಱೆಯೆಸೆಗುಂ (ಲೀಲಾವ. ೩–೩೯). **೨.** ಬಿಲ್ಲಿನ ಹೆದೆ ತಾಗದಂತೆ ಮುಂಗೈಗೆ ಕಟ್ಟುವ ಚರ್ಮದ ಗವುಸು, —ರಕ್ಷಾಕವಚ; ಚರ್ಮದ ಕೈಪಟ್ಟಿ: "ಗುಣ ನಿರ್ಘಾತಪ್ರತಿವಾರಣಮಕ್ಕುಂ ಗೋಧವುದುವೆ ದಲ್ ಕೆಯ್ಪೊಡೆಯುಂ" (ವಸ್ತುಕೋ. ೮೫–೨೦); ಕರ್ಪಿಡಿದ ಪಣೆಗಟ್ಟು ಕೆಯ್ಪೊಡೆ ಬೆಡಂಗನೊಳಕೊಳೆ (ಪಂಪಭಾ. ೧೧–೭೧); ಅಂಬುಜದ ಮೊಗ್ಗೆಯ ಮೂಡಿಗೆ ನೀಳ್ದ ಕೇತಕೀದಳದಲಗಾಪ್ರುದೊಳ್ದಳಿರ ಕೆಯ್ಪೊಡೆ ಕರ್ಬಿನ ಬಿಲ್ (ಚಂದ್ರಪು. ೧–೧೧೧); ಬಿಲ್ಲಂಬು ಬಿಗಿದ ಕೆಯ್ಪೊಡೆ ಪಡಿವೆದೆಯುಡಿ ಝಲ್ಲಿ ಬತ್ತಳಿಕೆ ಕಯ್ಯಂಬು (ಕುರಾಸಾಂ. ೧೯–೧೯). **ಕಯ್ಪೊಡೆ: ೨.** ಕಾಮನ ಕಯ್ಪೊಡೆಯನೆತ್ತುವಂತೆ ಬಣ್ಣದ ಬಾಸಿಗಂಗಳಂ (ಲೀಲಾವ. ೨–೨೮ ವ); ಬಿಲ್ ಕಯ್ಪೊಡೆ . . . ಸೆಂಡು ಕೋಲಸಿ ಚಕ್ರಂ (ಪಾರ್ಶ್ವಪು. ೧೨–೭೫). **ಕೆಯ್ಪೊಡೆ: ೨.** "ಗೋಧೆ, ಕರತಲದಲ್ಲಿ ಜ್ಯಾಘಾತನಿವಾರಣಾರ್ಥವಾಗಿ ಕಟ್ಟಿದ ಚರ್ಮ" (ನಾಚಿರಾ. ಕ). **ಕೈಪೊಡೆ: ೧.** ಮದನನ ಕೈದುವೆಲ್ಲಿದನನಂಗನ ಕೈಪೊಡೆಯೆಲ್ಲಿದಂ (ಆದಿಪು. ೩–೧೫); ಕೆಂಗಱಿ ಕೈಪೊಡೆಯಾಯ್ತು (ಮಲ್ಲಿಪು. ೫–೨೦); ಸರಲ ಕಾಂತಾರ ಕೈಪೊಡೆಯ ಮೊರಡಿ ಕಣ್ಗೆ ಕರಮೆಸೆದುದು ರಣದೊಳಗೆ (ಕುರಾಸಾಂ. ೨೦–೪೭). **೨.** ಮಣಿ ಕಂಕಣ ಮನೊಲ್ಲದೆ ಕೈಪೊಡೆಯಂ ಕಟ್ಟಿ (ಧರ್ಮಾಮೃ. ೭–೬೩); ಕಾಡ ಪೂಗಳ ತಲೆಸುತ್ತು ಮಾಂದಳಿರ ಕೈಪೊಡೆ ರಂಜಿಸೆ (ಅರ್ಧನೇ. ೩–೬೨); ತೊಳಗುವ ನಾರಿಯಿಂ ತಳಿರ ಕೈಪೊಡೆಯಿಂ ಕುಸುಮಾಸ್ತ್ರ ಮಾಲೆಯಿಂದಳವಡೆ ನಿಂದು (೧೧ಕ. ೭–೫೭); ಮಾಂದಳಿರೊಳು ಸವೆದ ಕೈಪೊಡೆಯ (ಚೆಬಪು. ೩೫–೫). **ಕೈಹೊಡೆ$_2$: ೨.** ಕೊಡಲಿ ಕರವತಿಗೆ ಕ್ರೂರುಳೆ ಕವಡೆ ದಂಡೆ ಕೈಹೊಡೆಯಿಟ್ಟ ಗೂಡುಗಳು ಕತ್ತಿ ಬಡಿಕೋಲ್ (ಸೋಮಚ. ೩–೧೪); ಚರಣದಲಿ ಸೀಸಕವ ತೋಳಲಿ ಬರಿಯ ಕವಚವ ಬೆನ್ನಿನಲಿ ಕಟ್ಟಿದರು ಕೈಹೊಡೆಯ (ಕುವ್ಯಾದ್ರೋ. ೮–೪೭). [ಕೆಯ್$_2$ + ಪೊಡೆ$_3$]

**ಕೆಯ್ಪುಗೆ** (ನಾ). ಕದನದ ಒಂದು ಬಗೆ, —ವರಿಸೆ; ಕೈಕೈ ಮಿಲಾಯಿಸುವ ಒಂದು ಪ್ರಕಾರ (?): ಪುಸಿ ನಸುವಂಚನೆ ನೋರ್ಪನುವಸಿದಗಲಿತು ತಕ್ಕು ದಕ್ಕು ಪಗೆ ಕೆಯ್ಪುಗೆ ಕೆಯ್ಸುಕುರಿನುಸುಳೆಂಬ ಕೇಣದ ಕುಸುರಿಯನಱಿದಿಱಿದು ಮೆಱೆದು (ಪಂಪಭಾ. ೧೦–೮೧); "ಕೈಸಂಚಾಲನದ ವಿವಿಧ ರೀತಿ" (ಪಂಪದೀ. ೩೬೮). [?]

**ಕೆಯ್ಮನೆ** 'ಕೆಯ್ವನೆ' ನೋ.

**ಕೆಯ್ಮಸಕ,** ಕೈಮಸಕ, ಕೈಮಸಕು, ಕೈಮಸುಕು (ನಾ). **೧.** ಮಾಟ; ಮಾಯೆ; ಕಪಟ. **೨.** ಇಕ್ಕುಮದ್ದು; ಆರೋಗ್ಯವನ್ನು ಕೆಡಿಸಲು ಆಹಾರದೊಡನೆ ಬೆರಸಿಕೊಡುವ ಒಂದು ಬಗೆಯ ಮಂದವಾದ ವಿಷ; ಕೈಮದ್ದು: ನವನೀತಮುಮಂ ಶುಕತುಂಡವುಮಂ . . . ತೊಳಿಸಿ ಸೇವಿಸುಗೆ ಪಿಂಗುಗುಂ ಕೆಯ್ಮಸಕಂ (ಲೋಕೋಪ. ೯–೩೭); ಬೆರಸುಗೆ ಜಂಬೀರದ ಫಲವೆರಡಱ ರಸಮುಂ ಸಮಂತ್ರಕಂ ಕುಡಿಸೆ ಖಳರ್ ಬೆರಸಿಕ್ಕಿದ ಕೆಯ್ಮಸಕಂ ಪರಿಪಡುಗುಂ (ಖಮದ. ೧೪–೨೨). **ಕೈಮಸಕ: ೧.** ಮುನಿಯು ಕೈಮಸಕದಿಂದೊಗೆದ ಖಗಮೃಗ ನಾಡ ಮೊಱೆಯಿಡಿಸುತಿರ್ದುವು (ಹಚಕಾ. ೩ ಸೂಚನೆ); ಮನಸಿಜನ ಕೈಮಸಕ ಮಿಗೆ ವೇದನಿಸಿ ನೋಯಿಸುತಿರ್ದುವು (ಪ್ರಭುಲೀ. ೭–೧೭); ಮಾಯಾ ಕಾಮಿನಿಯು ಕೈಮಸಕದಲಿ ಮರುಳಾಗದಿರರೆಂದ (ಕುವ್ಯಾಸ. ೯–೭); ಮತಿಗೆ ಮಾಯಾ ಕಾಮಿನಿಯ ಕೈಮಸಕ ತಿಳಿವನು (ನಿಭಾಗ. ೩–೩–೨೩). **ಕೈಮಸಕು: ೧.** ಪೀಡಾ ಪರಿಹಾರಾರ್ಥವಾಗಿ ಮೃತ್ಯುಂಜಯ ಜಪ . . . ಕೈಮಸಕಿನ ಔಷಧಿ, ಶೂನ್ಯವನ್ನು ಹಿಂತಿರುಗಿಸುವ ಪ್ರತೀಕಾರ, ಇವುಗಳೆಲ್ಲವನ್ನೂ ಮಾಡಿ ಮುಗಿಸಿದರು (ಮುಸುಗ. ೧೪೭). **೩.** ಕೈಮೇಲಿನ ಕಪ್ಪುಕಲೆ: (ಕ). **ಕೈಮಸುಕು: ೨.** ಎಂತಹ ಕೈಮಸುಕು ಸಹ ಮಾಣ್ಗುಂ (ವಿವೈವಿ. ೬೮). [ಕೆಯ್$_2$ + ಮಸಕ]

**ಕೆಯ್ಮಱೆ$_1$,** ಕಯ್ಮರೆ$_1$, ಕಯ್ಮಱೆ, ಕೈಮಱೆ$_1$ (ಕ್ರಿ). **೧.** ಬೆರಗಾಗು; ವಿಸ್ಮಯಗೊಳ್ಳು; ದಂಗಾಗು: "ಕೆಯ್ಮಱೆ–ವಿಸ್ಮಯೇ" (ಶಮಧಾ); "ಕೆಯ್ಮಱೆದವನು – ವಿಹಸ್ತ, ವ್ಯಾಕುಲ" (ನಾಚಿರಾ. ಕ); ಕೆಯ್ಮಾಡಿದಂ, ಕೆಯ್ಮಱೆಯಂ (ಭಾಷಾಭೂ. ೩೧ ಉದಾ). **ಕಯ್ಮರೆ$_1$. ೨.** (?): ಜಗದೊಡನಳ್ತು ನಕ್ಕು ವಿಕೃತಕ್ಕೆ ಕಿಸುರ್ವಡದುಗ್ರವೀರಕೆಂದಗಿಯದಣಕ್ಕೆ ಕಯ್ಮರೆಯದಿಂ ಕೃಪೆಯಿಂ ಶುಚಿಯಾಗಿ ಬಾಳ್ವು (ಸಂಸಪ. ೧೦–೨೪). **ಕಯ್ಮಱೆ: ೧.** ಕಯ್ಮಱೆ ಮಱೆಯುದಹೋರಾತ್ರಂ ಕಯ್ಮಱೆದಿಲ್ಲದ ಗುಣಮನಂತೆ ಬಿಡದೇಱಿಸಿ ಪೊಚ್ಚಱಿಸುತ್ತಮಿರ್ಪ (ಕಾದಂಪೂ. ೫೭೧). **ಕೈಮಱೆ$_1$: ೧.** ಪೂಜಿಸುತೆ ಕಂಪಿಸುತೆ ಕೈಮಱೆವವರ್ ಕೆಲರು (ಬಸರ. ೭–೮೮); ಅಡ್ಡವಾಯ್ದು ಗಿಳಿ ಮಲ್ಲಱಿಗೊಂಡೊಳಸಾರೆ ಮಾವು ಕೈಮಱೆಯೆ ತೆರಳ್ದು ರೂವುಗಿಡೆ (ಕಬ್ಬಿಕಾ. ೩೧೧); ನೆಱೆವಣೆಗೆ ಗುಂದಿತ್ತು ಬಲ ಕೈಮಱೆದರದಟರು ಬಿರುದ ಭಟರಿಗೆ ಬೆಱಗು ಬಲಿದುದು (ಕುವ್ಯಾಭೀ. ೭–೭); ನೆಱೆ ತಾಗಿ ತಟ್ಟುರ್ಚಿತೆಂಬ ಶಕ್ತಿಯು ಕೈಮಱೆಯದೆ ಕೃಷ್ಣ ಖಂಡಿಸಿದ (ಮೋಹತ. ೪೦–೭೭). **೩.** ಶಕ್ತಿಗುಂದು; ಹಸ್ತಕೌಶಲವನ್ನು ಕಳೆದುಕೊ: ಅಂಕ ಕಳನೇಱಿ ಕೈಮಱೆದಿರ್ದೊಡೆ ಮಾಱಂಕ ಬಂದಿಱಿವುದ ಮಾಣ್ಬನೆ (ಬಸವ. ೧೭೮); ದೊರೆಗಳಹ ದ್ರೋಣಾದಿಗಳು ಕೈಮಱೆದು ಕಳೆದರು ಪಾರ್ಥತನಯನ ಸರಿಯೊರೆಗೆ ಭಟನಾವನು (ಕುವ್ಯಾದ್ರೋ. ೫–೧೭); ತವಕಮುಡುಗಿ ಪೆಱಪಿಂಗದೆ ವಿಘಾತಿಗಳುಕದೆ ಕೈಮಱೆಯದೆ (ಜೈಮಿಭಾ. ೧೮–೩೨); ಕಳವೇಱಿ ಕೈಮಱೆದಂತಹುದು (ಕಂನವಿ. ೧೧–೭೯). [ಕೆಯ್$_2$ + ಮಱೆ$_1$]

**ಕೆಯ್ಮಱೆ$_2$,** ಕೈಮಱೆ$_2$ (ನಾ). [ನಾಟ್ಯ] ನೃತ್ಯದಲ್ಲಿ ಒಂದು ಭೇದ, —ಭಂಗಿ, —ವಿನ್ಯಾಸ: ರೂಪು ನೇರು ಲಾಗು ಲವಣಿಯ ಡವು ತಿರುಪು ಕೆಯ್ಮ[ಪಾಠಾಂ. ಕೈಮ]ಱೆ ಕಳಾಸ ಕೂಟವಾನಂಗಳಂ (ರಾಜಶೇ. ೫–೧೯ ವ). **ಕೈಮಱೆ$_2$:** ಅನುಗೊಳಿಸಿ ಚಿಂದು ಜಕ್ಕಡಿ ಕೋಲಚಾರಿಗಳ್ ಮೊನೆಗಾಲ್ ಕಳಾಸ ಕೈಮಱೆ ತಿವುಡೆ ಮಡಹುಮುಳ್ಳನಿತು ಭೇದಂಗಳಿಂ ನರ್ತಿಸುವ (ಚೆಬಪು. ೨–೨೯). [?]

**ಕೆಯ್ಮಾಡು,** ಕಯ್ಮಾಡು, ಕೈಮಾಡು (ಕ್ರಿ). **೧.** ಕೈಯಿಂದ ಸನ್ನೆಮಾಡು; ಕೈಸನ್ನೆಯಿಂದ ಸೂಚಿಸು; ಸನ್ನೆಮಾಡಿ ಕರೆ: "ಕೆಯ್ಮಾಡೆನೆ ಬೇಗೆಂಬುದರ್ಥಂ" (ಚತುನಿ. ಕ, ೫೦). **೨.** ಕೈಯೆತ್ತು; ದಾಳಿಮಾಡು; ಮೇಲೆಬೀಳು; ಹೊಡೆ: ಕೆಯ್ಮಾಡಿದಂ, ಕೆಯ್ಮಱೆದಂ (ಭಾಷಾಭೂ. ೩೧ ಉದಾ). **೩.** ಆಯುಧವನ್ನು ಝಳಪಿಸು, —ಅಲುಗಿಸು: "ಕೆ [ಪಾಠಾಂ. ಕ, ಕೈ]ಯ್ಮಾಡು – ಶಸ್ತ್ರ ಸಂಚಾಲನೇ (ಆಯುಧವನ್ನು ತಿರುಗಿಸು); ವ್ಯವಹಾರ ಮೌಲ್ಯ ಸಂಕೇತನೇ ಚ (ಬೆಲೆಯನ್ನು ನಿಷ್ಕರ್ಷಿಸು)" (ಶಮಧಾ). **ಕಯ್ಮಾಡು: ೨.** ನಾನು ಅವರೊಡನಿದ್ದರೆ ಭಾಮನು ಹಾಗೆ ಕಯ್ಮಾಡಲಾಗುವುದಿಲ್ಲ (ಸುಗುಗಂ. ೫–೨೦); ನಾವಿಂದು ಸಮರಾಂಗಣದಲ್ಲಿ ಕಯ್ಮಾಡಬೇಕು (ಸುಗುಗಂ. ೧೧೭–೪).

**ಕೈಮಾಡು :** ೧. ಬೇಡಿ ಕೊಂಡನು ಕೈಟಭನ ಕೈಮಾಡಿ ಕೊಲಿಸಿದ ಮಾಗಧನ (ಕುವ್ಯಾದ್ರೋ. ೧೪–೧೭); ಭೋಗಿಭೂಷನ ಜಯಿಸು ವೊಡುಷಾದೇವಿಯೊಳ್ ಪೋಗಿ ತಾ ಕೈಮಾಡಲೆನುತೆ (ಮೋಹತ. ೨೪–೫೯); ಪ್ರಕೃತಿದೇವಿ ಕೈಮಾಡಿ ಹೇಳುವಂತೆ ತೆಂಗಿನ ಮರಗಳು ಬಾನುದ್ದ ಬೀಸುವುವು (ಮುಂಗಾಪು. ೬೬); ಅಡುತಿಹ ಕುವರರನು ಕೈಮಾಡಿ ಕರೆವೆ (ಪಯಣ. ೫೪–೧೧). ೨. ಸಕಳೇಶ್ವರದೇವ ವಿಮುಖನಾದೊಡೆ ನೆನಹೆಂಬಲಗಿನಿಂದ ಕೈಮಾಡುತ್ತಿಹುದು (ಸಮೂವ. ೧೧); ನಭಕ್ಕೆ ಚಿಮ್ಮಿ ಕುರುಳ್ಚಿ ಕೈಮಾಡುವ ಕೊಂತಗಾಜರ ತಿಂತಿಣಿಯ ನಡುವೆ (ಗಿರಿಕ. ೬–೫೫ ವ); ಬಲುಗಾಳಿಗದೊಳಗೆ ಕೈಮಾಡಿ ನೊಂದಿರಿ (ಕುವ್ಯಾದ್ರೋ. ೪–೫); ಕಾಳಗಕ್ಕಿಳಿದು ಕೈಮಾಡಬೇಕೆಂಬ ಕಟ್ಟಾಸೆ ನಿನಗೆ ಹುಟ್ಟಲಿಲ್ಲವೆ (ಅರ್ಯಾಕ. ೪೪). ೪. ಬೆಲೆಯನ್ನು ನಿಷ್ಕರ್ಷಿಸಿ ಸಂಕೇತದಿಂದ ಸೂಚಿಸು: "ಕೈಮಾಡು – ಶಸ್ತ್ರಸಂಚಾಲನೇ, ವ್ಯವಹಾರಮೌಲ್ಯ, ಸಂಕೇತನೇ ಚ" (ಶಮುಧಾ). [ಕೆಯ್$_2$ + ಮಾಡು$_1$]

**ಕೆಯ್ಮಾಸು** (ಕ್ರಿ). ವೈಲಿಗೆಯಾಗು : ತನಗೆ ನೀಡುವ ಪೂವಂ ತಂದಣ್ಣಂಗೆ ಕುಡಾಂ ಕೆಯ್ಮಾಸಿದೆನೆಂದಳಂ ಲಂಜಿಕಾಭಂಜನನೆಂಬ ನಿಟಿಂ ಕೇಳ್ದು (ಶಾಂತಿಪು. ೮–೮೧ ವ). [ಕೆಯ್$_2$ + ಮಾಸು$_1$]

**ಕೆಯ್ಮಿಗು**, ಕಯ್ಮಿಗು, ಕೈಮಿಗು (ಕ್ರಿ). ಹೆಚ್ಚಾಗು ; ಅಧಿಕವಾಗು ; ಮಿತಿಮೀರು : ಕಾಯ್ಪು ಕೆಯ್ಮಿಗೆ ಬೆನ್ನಂ ಪರಿದು (ಪಂಪಭಾ. ೬–೩೧); ಮನದೊಳ್ ಬಿಗುರ್ತ್ತು ನಗೆ ಕೆಯ್ಮಿಗಲ್ (ಶಾಂತಿಪು. ೪–೨); ಎಸಕಂ ಕೆಯ್ಮಿಗಲಂದು ಸತ್ವಸದನಂಗೊಂಡಿರ್ದ ತತ್ಕಾಂತೆ (ನೇಮಿಪು. ೯–೮೪); ಪಗೆಕಾಜನಾಗಿಯುಂ ಕೆಯ್ಮಿಗೆ ತಕ್ಕಂ ಕೆಯ್ದುಕಾಜನೆನಿಸಲ್ಕಾಜಂ (ಕಾವ್ಯಾವ. ೩೨೫). **ಕೆಯ್ಮಿಗು :** ಆನಂದ ಬಾಷ್ಪಾಂಬುಗಳ್ ಕೆಯ್ಮಿಗಲ್ (ಕಾದಂಪೂ. ೩೬೬); ನಿಮಗತಿಸ್ನೇಹಮುಂ ವ್ಯಾಮೋಹಮುಂ ಕಯ್ಮಿಕ್ಕು ಬಂದುದು (ಸುಕುಮಾ. ೬–೨೧ ವ). **ಕೈಮಿಗು :** ಮಿಗೆ ಮನದ ಪೆಂಪುಮಂ ಕೈಮಿಗೆ ವಿಭವದ ಪೆಂಪುಮಂ ವಿಶೇಷಿಸಿ ಪೇಟಲ್ (ಕವಿರಾ. ೩–೧೭೪); ತೀವ್ರಕೋಪಂ ಪುಟ್ಟೆ ಕೈಮಿಗೆ (ವಡ್ಡಾರಾ. ೧೭೮–೧೧); ಕೈಮಿಕ್ಕಿರ್ದ ರಾಗಂಬೆರಸು ಸುರಿಯೆ (ಆದಿಪು. ೮–೬೯); ಅಳಲು ಕೈಮಿಗಲಾ ವಿರಾಟನ ಲಲನೆ ಸೈರಂಧ್ರಿಯನು ಕರೆಸಿದಳು (ಕುವ್ಯಾವಿ. ೩–೧೦೭); ಶ್ರೀಧರಾಚಾರ್ಯರ ಪ್ರೀತಿ ಕೈಮಿಗೆ ಬಲಗೊಂಬೆ (ನಾಗಕು. ೧–೧೧). [ಕೆಯ್$_2$ + ಮಿಗು]

**ಕೆಯ್ಮೀಱು**, ಕಯ್ಮಾಱು, ಕೈಮೀರು, ಕೈಮೀಱು (ಕ್ರಿ). ೧. ಅಧಿಕವಾಗು ; ಮಿತಿಮೀರು : "ಅಸಕಟಿಱದಂ – ಕೆಯ್ಮೀ [ಪಾಠಾಂ. ಕಯ್ಮಾ, ಕೈಮೀ]ಱಿದಂ" (ಶಮುದ. ಪರಿ. ೧). 'ಕೆಯ್ಮೀಱುಹ' ಪರಾ. **ಕಯ್ಮಾಱು :** ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಕೈಮೀರು :** ೨. ಹಿಡಿತ ತಪ್ಪು; ಹತೋಟಿ ತಪ್ಪು; ಕೈಗೆ ನಿಲುಕದಿರು ; ವಶಪಡಿಸುವುದಕ್ಕೆ ಅಸಾಧ್ಯವಾಗು : ಈಗ ಮಾತ್ರ ಪ್ರಸಂಗ ಕೈಮೀರಿ ಹೋಗಿಬಿಟ್ಟಿದೆ (ರೂಪಸಂ. ೨೯); ಪರಿಸ್ಥಿತಿ ಕೈಮೀರಿ ಹೋಗಿ (ರಂಗರೋ. ೫೨). **ಕೈಮೀಱು :** ೧. "ಕೈಮೀಱ ಲಸಕಟಿಱದುದೆಂದಕ್ಕು" (ಶಬ್ದಮಂ. ೫೧); ಕೈಮೀಱಿದ ಕೈ ಕನಲ್ವ ಕಿಡಿವಣ್ಣದ ಕಣ್ (ಚಂದ್ರಪು. ೯–೯೩); ಕೈಮೀಱಲಱಿಯದೆ ಸಂಧಿಗವನೀಶ್ವರರು ವಶವಾಯ್ತು (ಕುವ್ಯಾಸ. ೪–೮). [ಕೆಯ್$_2$ + ಮೀಱು]

**ಕೆಯ್ಮೀಱುಹ**, ಕೈಮೀಱುಹ (ನಾ). ಹೆಚ್ಚಾಗುವಿಕೆ; ಮಿತಿಮೀರುವಿಕೆ ; ಅತಿರೇಕ : "ಅಸಕಟಿಱಹ[ಪಾಠಾಂ. ದ]ಂ – ಕೆಯ್ಮೀಱುಹಂ [ಪಾಠಾಂ. ಕೈಮೀಱಿದಂ, ಕೈಮೀಱುಹಂ]" (ಶಮುದ. ಪರಿ. ೧). **ಕೈಮೀಱುಹ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕೆಯ್ಮೀಱು + –ಹ$_2$]

**ಕೆಯ್ಮುಗಿ**, ಕಯ್ಮುಗಿ, ಕೈಮುಗಿ (ಕ್ರಿ). (ಗೌರವದಿಂದ) ಕೈಜೋಡಿಸು ; ನಮಸ್ಕರಿಸು : ಸಮಸ್ತ ಧಾತ್ರಿ ಕೆಯ್ಮುಗಿವುದು ನಿಮ್ಮದೊಂದೆ ಪೆಸರ್ಗೇಳ್ದೊಡೆ (ಪಂಪಭಾ. ೧೩–೫೬) ; ದಿನಪಂಗೆ ಕೆಯ್ಮುಗಿವಂದದೆ ಮುಗಿದಿರ್ದುವಲರ್ದ ತಾವರೆಯರಲ್ಗಳ್ (ಅಜಿಪು. ೬–೩೮) ; ದೊರೆವೆಣ್ಣುಗಳು ಮುತ್ತುಮಾಣಿಕದಾರತಿ ಬೆಳಗಿ ಕಾಣಿಕೆಯಿತ್ತು ಕೆಯ್ಮುಗಿದರು (ಮೋಹತ. ೨೪–೧೮) ; ಅತಿಭಕ್ತಿಯಿಂ ಕೆಯ್ಮುಗಿದು ನಂದಿಕೇಶಂ ನುಡಿದನು (ಚಬಪು. ೩–೨೦). **ಕಯ್ಮುಗಿ :** ನಿನಗಾಂ ಕಯ್ಮುಗಿದಪ್ಪೆನೀಯೆಡೆಗೆ ನಿನ್ನಂ ಬೇಡಿ ಕಯ್ಯೊಡ್ಡಿದೆಂ (ಕಾದಂಉ. ೫೦೪); ಎಲ್ಲರ್ಗೆ ಕಯ್ಮುಗಿದು (ಚಂಡೇರ. ೨೪೮–೬). **ಕೈಮುಗಿ :** ಪುರ್ಬನಂಗಜನ ಬಿಲ್ ದಂತಾಳಿಯಂ ಮುತ್ತು ಕೈಮುಗಿದಾರಾಧಿಸಿ ಪೋಲ್ತುವು (ಆದಿಪು. ೬–೮೫); ಪಾಂಡವರುಂ ಕೌರವರುಂ ಕೈಮುಗಿಯೆ (ಗದಾಯು. ೨–೩೦); ಕೈಮುಗಿದು ಬೇಡಿದೆನು (ಕುವ್ಯಾವಿ. ೧–೧೩); ಕೈಮುಗಿಯುತ ಪಲ್ಲಕಿರಿದರ್ (ಕಂಸವಿ. ೧೫–೯೪). [ಕೆಯ್$_2$ + ಮುಗಿ$_1$]

**ಕೆಯ್ಮೋಸ** (ನಾ). ಕೈಯಿಂದ ಮಾಡುವ ತಪ್ಪು: ಇದರೊಳೇನಾನುಂ ಕೆಯ್ಮೋಸ ಬಾಯ್ಮೋಸಂಗಳುಳ್ಳೊಡಮೊಲ್ಮೆಯಿಂ ಸೈರಿಪುದು (ಚಕವಂ. ೨೩–೪). 'ಬಾಯ್ಮೋಸ' ಪರಾ. [ಕೆಯ್$_2$ + ಮೋಸ]

**ಕೆಯ್ಯಳವಿ**, ಕಯ್ಯಳವಿ, ಕೈಯಳವಿ (ನಾ). ೧. ಕೈಯಶಕ್ತಿ ; ಭುಜಬಲ. ೨. ಶಕ್ತಿಸಾಧ್ಯವಾದುದು : ಇಱಿದು ತವಿಸುವೊಡೆ ಪಡೆನಾಡೆಱಿಯರ ಕೆಯ್ಯ[ಪಾಠಾಂ. ಕೈಯ]ಳವಿಯಲ್ತು (ಪಂರಾಮಾ. ೪–೩೬). **ಕೆಯ್ಯಳವಿ :** ೧. ಬಾಯ್ದಾರೆ ನಿಲೆ ಕುಮಾರಂ ಪೊಯ್ದೊಡೆ ಕಯ್ಯ[ಪಾಠಾಂ. ಕೈಯ]ಳವಿದಾರ ಕಯ್ಯ[ಪಾಠಾಂ. ಕೈಯ]ಳವಿಯೆನಲ್ ನೆಯ್ದಿಲ ಕಾವಿನ ಪೊದೆಯಂ ಪೊಯ್ದಂತೊರ್ಮೊದಲೆ ಪಱಿದುದಾ ವಂಶವನಂ (ಪಂರಾಮಾ. ೯–೨೩). **ಕೈಯಳವಿ :** ಮೇಲಿನ ಪ್ರಯೋಗಗಳ ಪಾಠಾಂತರಗಳನ್ನು ನೋಡಿ. [ಕೆಯ್$_2$ + ಅಳವಿ]

**ಕೆಯ್ಯಳವು**, ಕಯ್ಯಳವು, ಕೈಯಳವು (ನಾ). = ಕೆಯ್ಯಳವಿ ೧ : ಜನಕಜೆಯನುಯ್ಯೆ ದಶರಥ ತನೂಜರಿಂ ಮರಣಮಾಗಲೆಂದಿರ್ದಪುದೀತನ ಕೆಯ್ಯ [ಪಾಠಾಂ. ಕಯ್ಯ, ಕೈಯ]ಳವಲ್ತು ಪುರಾತನ ಕರ್ಮಾಯತ್ತ ಮಲ್ತೆ ದೇಹಿಗಳೆಸಕಂ (ಪಂರಾಮಾ. ೯–೯೬). **ಕಯ್ಯಳವು, ಕೈಯಳವು:** ಮೇಲಿನ ಪ್ರಯೋಗದ ಪಾಠಾಂತರಗಳನ್ನು ನೋಡಿ. [ಕೆಯ್$_2$ + ಅಳವು]

**ಕೆಯ್ಯಾನ್**, ಕಯ್ಯಾನ್, ಕೈಯಾನ್, ಕೈಯಾನು (ಕ್ರಿ). ೧. ಕೈಯೊಡ್ಡು ; ಕೈನೀಡು ; ಬೇಡು : ವಜ್ರಿ ವಜ್ರಕವಚಕ್ಕೆ ನಿಜೋಜ್ವಳ ಕುಂಡಳಕ್ಕೆ ಕೆಯ್ಯಾಂತೊಡೆ (ಪಂಪಭಾ. ೯–೬೨). **ಕಯ್ಯಾನ್ :** ೧. ಕಯ್ಯಾನ್ತನ × × × ಪ್ರಜಕ್ಕಾಪ್ಪೆನಿತನನುದಿನಂ ಕೊಟ್ಟು (ಇಆ. XVIII, ೨೭೩–೧೮ ; 994) ; ಕಯ್ಯಾನ್ತ ದೀನಾವಳಿಗಿಂದ್ರೋರ್ವಿಜಂ (ಸೌಇಇ. XX, ೨೧–೩೧ ; 1019) ; ಅಳಿಪಿಂ ಕಯ್ಯಾಂತ ಮರ್ತ್ಯರ್ಗೆ ಭಾಸುರ ಕಲ್ಪದ್ರುಮದನ್ನಂ (ಧರ್ಮಾಮೃ. ೪–೯) ; ಕಯ್ಯಾಂತವರಿಗಿಷ್ಟಾರ್ಥವನು . . . ಪಾಲಿಸುತ (ಸಾಳ್ವಭಾ. ೪–೧೬). ೨. ಪಡೆದುಕೊ ; ಗಳಿಸು : ತಪದಾ ಬಳವಿಯೊಳಂ . . . ಎಯ್ದೆ ಸಿದ್ಧಿಯಂ ಕಯ್ಯಾಂತಂ (ಸೌನಂದ. ೧–೨). **ಕೈಯಾನ್ :** ೧. ಅಂತವನಿಪನಿಕರಂ ಕೈಯಾಂತವನಿಪನಿಕರವೊಂದು ಕೋಟಿಗೆ ಮಿಗಿಲೆಂಬಂತಾದೊಡಂ . . . ಇಱಿಗುಮೀಗುಮಿಱಿವಬೆಡಂಗಂ (ಗದಾಯು. ೧–೧೫) ; ಕೈಯಾಂತವರ್ಗೆತ್ತಂ ಬೇಟ್ಪುದನಿತ್ತು (ಪಂರಾಮಾ. ೧೦–೭೩) ; ಸವಿದೊಗಡಿಸಿದ ಕೊಳ್ಗೆ ಕೈಯಾಂತವಂ (ಹಚಕಾ. ೧–೨೮). **ಕೈಯಾನು :** ೧. ನೀನು ದುರಿಯೋಧನನ ಬಾಯ್ದಂಬುಲಕೆ ಕೈಯಾನುವರೆ ಹೇಳು (ಕುವ್ಯಾಉ. ೧೦–೮). [ಕೆಯ್$_2$ + ಆನ್$_1$]

**ಕೆಯ್ಯಾಸೆ,** ಕೈಯಾಸೆ (ನಾ). ಲಂಚದ ಆಸೆ: ಅಯ್ಯಯ್ಯೊ ನಮ್ಮ ನಾರೆಂದು ಕಂಡಿದ್ದೆಯೊ ಕೆಯ್ಯಾಸೆಯವರೆ ನಾವರಸಾ (ಭರತ. ೧೪-೫೯). **ಕೈಯಾಸೆ:** ಪ್ರಜೆಯಂ ಪಾಲಿಸ ಬಲ್ಲೊಡಾತನರಸಂ ಕೈಯಾಸೆಯಂ ಮಾಡದಂ ನಿಜ ಮಂತ್ರೀಶ್ವರ (ಸೋಮೇಶ. ೯). [ಕೆಯ್$_2$ + ಆಸೆ$_1$]

**ಕೆಯ್ಯಾಳ** (ನಾ). ಒಂದು ಪಂಗಡದ ಹೆಸರು: ಇದಕ್ಕೆ ಸಾಕ್ಷಿ ಮಿಾಕಣೂರರು ಆಯಿರಣ ಕೀಱವರು ಅಣ ಗ ರು ಕಟಿತ್ತಿಯರು ಚಂಗರಸನು ತಲೆಪರಿಯಾ ಕೆಯ್ಯಾಳದೋರ್ ಕವುಳನ್ದೆಯಾರುಂ (ಸೌಇಇ. IX-i, ೪೭-೧೩; ಸು. 8ನೆಯ ಶತ). [?]

**ಕೆಯ್ಯಿ** 'ಕೆಯ್$_4$' ನೋ.

**ಕೆಯ್ಯಿಕ್ಕು,** ಕಯ್ಯಿಕ್ಕು, ಕೈಯಿಕ್ಕು (ಕ್ರಿ). ೧. ಕೈ ಇಡು, —ಹಾಕು, —ನೀಡು; ತುಡುಕು. ೨. ಕೈಬಿಟ್ಟುಕೊಂಡು ಕುಳ್ಳಿರು; ಕದಲದಿರು; ಸುಮ್ಮನಿರು: ಇನನಸ್ತಂಗತನಾಗೆ ತತ್ಸಮಯದೊಳ್ ಕೆಯ್ಯಿಕ್ಕಿ ವಂಶಾವಳೀವನ ಮಧ್ಯಸ್ಥಿತನಾಗಿ ವಾಯುವಶದಿಂ ಕೇಶಂಗಳಂಸುತ್ತಿ (ಸಮುಪ. ೧-೫); ಪುಲಿ ಬಂದು ಗರ್ಜಿಸುತ್ತಿರೆ ಕೆಲದೊಳ್ ಪಾವಡರ್ದು ಕೂಡೆ ಸುತ್ತಲ್ ಮೆಯ್ಯಂ ತೊಲಗದೆ ಕೆಯ್ಯಿಕ್ಕಿರ್ದಂ . . . ವ್ರತತಿಳಕಂ (ನೇಮಿಪು. ೧-೧೫). **ಕಯ್ಯಿಕ್ಕು:** ೧. ಮರುತಜನು ಕಯ್ಯಿಕ್ಕಿ ಹಿಡಿದನು (ಕುವ್ಯಾಅ. ಓರಿಇ. ೧೭-೩೫). ೨. ಮೆಯ್ವತ್ತಿದನಂತ ಕರ್ಮಭಟರಂ ಷಣ್ಮಾಸಂಬರಮಿಕ್ಕುವ ತಕ್ಕಿನಿಂ ಕಯ್ಯಿಕ್ಕಿ ನಿಲ್ವುದುಂ (ವರ್ಧಪು. ೧೦-೪೦ ವ). **ಕೈಯಿಕ್ಕು:** ೧. ಕೈಯಿಕ್ಕಿದತ್ತಲು ಖಂಡಮಯ (ಕುವ್ಯಾದ್ರೋ. ೧೭-೨೬); ಕೋಲಿನ ಕೊನೆಗೆ ಕೈಯಿಕ್ಕಿದನು ದಿವ್ಯಾಮೋಘ ಮಂತ್ರದಲಿ (ತೊರರಾ. ೧-೧೭-೧೫); ಸಿಟ್ಟಿನಿಂದಱೆದು ಕೈಯಿಕ್ಕುವರ್ ಸಿಕ್ಕುವರ್ ಕಾಯದೊಳ್ ಸಾಯಕವನು (ಚಿಬಪು. ೨೬-೧೫). ೨. ಶುಭಚರಿತರ್ ಪೂಣ್ದು ಕೈಯಿಕ್ಕಿ ನಿಂದರ್ (ಪಂರಾಮಾ. ೨-೫೪); ಕೈಯಿಕ್ಕಿ ಪರಮ ಪದವಿಗೆ ಕೈಯಿಕ್ಕಿದನೆಂಬ ತೆಱದಿನಿರ್ದು (ಚಂದ್ರಪು. ೧೪-೨); ಪಱವಗೆ ಗಳಾಱುವುಂ ಗೆಲ್ದಳವಿಂ ಕೈಯಿಕ್ಕಿ ನಿಂದ ಕಲಿ (ಕಬ್ಬಿಕಾ. ೨೩೦). ೩. ಕೈಮಾಡು; ಮುತ್ತು; ದಾಳಿಮಾಡು: ಮಿಕ್ಕು ನೂಕುವ ಕುದುರೆಕಾಱರು ತೆಕ್ಕೆಗೆಡೆದರು ಸಂದಣಿಸಿ ಕೈಯಿಕ್ಕಿದಾನೆಯನೇನನೆಂಬೆನು ಕಾಣೆನಳವಿಯಲಿ (ಕುವ್ಯಾದ್ರೋ. ೫-೩); ಕೈಯಿಕ್ಕಿದನು ಕೃಷ್ಣನನು ಜಡಿದು ಮಹಾತ್ರಿಶೂಲದಲಿ (ನಿಭಾಗ. ೧೦-೬೯-೩೯); ಕದನದಲಿ ಕಾಲಾಳ ಮೇಲೆ ಕೈಯಿಕ್ಕದೆ ಮದಕರಿಗಳನೊಡೆತಿವಿದು (ಕಂನವಿ. ೧೮-೬೦). ೪. ತೊಡಗು; ಕೈಕೊಳ್ಳು: ನಿನಗೆ ಕಾಣಿಕೆಯಾಗಿ ತಹೆಸಾ ವನಿತೆಯನು ತಾನೆಂಬ ಮತಿ ಸಂಜನಿಸಿ ಕೈಯಿಕ್ಕಿದೆನು ಕಪಟದಲಿ (ತೊರರಾ. ೩-೭-೨೦). [ಕೆಯ್$_2$ + ಇಕ್ಕು]

**ಕೆಯ್ಯೆಡೆ,** ಕಯ್ಯೆಡೆ, ಕೈಯೆಡೆ, ಕೈವೆಡೆ (ನಾ). ಕೈಗೆ ಒಪ್ಪಿಸಿದುದು; (ರಕ್ಷಣಾರ್ಥವಾಗಿ ನಂಬುಗೆಯಿಂದ) ಕೈಗೆ ಕೊಟ್ಟದ್ದು; ನ್ಯಾಸ: ಎನ್ನ ಸೂಱಿಂ ನಿನಗಾನೆನಿತಾದೊಡಮಿಾವನೆ ಮತ್ತನಯರ್ ಕೆಯ್ಯೆಡೆ ಪಲುಂಬದಿರ್ ಪೆಱಪೆಱವಂ (ಪಂಪಭಾ. ೨-೨೬); ನಿಮ್ಮಯ ಕೆಯ್ಯೆಡೆಯ ಮಕ್ಕಳಂ ವಿಷ್ಣು ಮುಂತಾದ ಸುರರಟ್ಟಿಕೊಂದರ್ (ಚಿಬಪು. ೨೧-೩೩). **ಕಯ್ಯೆಡೆ:** ಆದರ್ಕಲರ್ಕೆಯೆಂಬುದು ಚಂದ್ರಿಕಾಭಿರಾಮಮಪ್ಪ ರಜನಿಯ ಕಯ್ಯೆಡೆ ವಲಂ (ಕಾದಂಉ. ೩೭೧); ಪೊಸ ಬಸಂತನನಾರ ಕಯ್ಯೆಡೆಯನಿತ್ತೆಯ್ಯೆ ಹಾ ಕಾಂತ ಹಾಯೆಂದಳು (ಚಿಬಪು. ೩೫-೨೮); ದೇವಲೋಕಕ್ಕುಯ್ಯೆ ಕಯ್ಯೆಡೆಯನಿಟ್ಟರ್ ಅಗ್ನಿ ದೇವಂಗೆ ಕೊಟ್ಟರ್ (ಹೊಂಗಳು. ೨೮-೧೪). **ಕೈಯೆಡೆ:** ಈ ಪಟಮುಂ ಪ್ರಾಣಮನೆ ಕೈಯೆಡೆ ಗುಡುವಂತೆನ್ನ ಕೈಯೊಳ್ ಕೊಟ್ಟು (ಆದಿಪು. ೪-೨೧ ವ); ಕುಂತೀ ಸತಿಯೆ ಕೈಯೆಡೆಯ ಕಂದನನೊಪ್ಪುಗೊಳು ನೀನು (ಕುವ್ಯಾಉ. ೧೦-೨೮). **ಕೈವೆಡೆ:** ನರವೇಷ ಕಾಯಮುಂ ನವೆಸಬೇಡೆಂದು ಕೈವೆಡೆಗೊಟ್ಟಳೇಂ ವಿಶೇಷಮೊ ಪುತ್ರಮೋಹಮೀ ಲೋಕದೊಳಗೆ (ಚಿಬಪು. ೫-೩೦).

[ಕೆಯ್$_2$ + ಎಡೆ$_4$]

**ಕೆಯ್ಯೆಣ್ಣೆ,** ಕೈಯೆಣ್ಣೆ$_1$ (ನಾ). ಯಂತ್ರದ ಸಹಾಯವಿಲ್ಲದೆ ಕೈಯಿಂದಲೇ ತಯಾರಿಸಿದ ಎಣ್ಣೆ: (+). **ಕೈಯೆಣ್ಣೆ$_1$:** ಯಂತ್ರದ ಎಣ್ಣೆಗಿಂತ ಕೈಯೆಣ್ಣೆಯೇ ಒಳ್ಳೆಯದು (ರೂಢಿ).

[ಕೆಯ್$_2$ + ಎಣ್ಣೆ]

**ಕೆಯ್ಯೆತ್ತು,** ಕಯ್ಯೆತ್ತು, ಕೈಯೆತ್ತು (ಕ್ರಿ). ೧. ಕೈಯನ್ನು ಮೇಲಕ್ಕೆ ಎತ್ತು: ಕೆಯ್ಯೆತ್ತಿ ನಿಂದಲ್ಲಿಯುಂ ಕೈಯಿಗಳಂ ಮೇಲಕ್ಕೆತ್ತಿ ನಿಲ್ಲುವುದಕ್ಕೂ . . . ಕ್ವಚಿತ್ ಎಂಬ ಹೆಸರು (ನಾನಾರ. ೧೬೪ ಟೀಕೆ); **ಕಯ್ಯೆತ್ತು:** ೨. ಕೈಯನ್ನು ಮೇಲಕ್ಕೆತ್ತಿ ಸಾರು; ಮುಕ್ತಕಂಠದಿಂದ ಹೊಗಳು: ಉತ್ತಮಗುಣತತಿ ವನಿತಾವೃತ್ತಿಯನೊಳಕೊಂಡ್ದೆಂದು ಜಗಮೆಲ್ಲಂ ಕಯ್ಯೆತ್ತುವಿನಮುಮುಳಗುಣ ಸಂಪತ್ತಿಗೆ ಜಗದೊಳಗೆ ಪೋಚಕಬ್ಬೆಯೆ ನೋನ್ತಳ್ (ಎಕ. II, ೬೩-೧೪; 1118). ೩. ಕೈಯಿಂದ ಸನ್ನೆಮಾಡು: (ಹೊರವಾಗಿಲ ಹೊಸತಿಲನ್ನು ದಾಟಿ, ಪರಿಕಿಸಿ, ತಟ್ಟನೆ ಹಿಂಜರಿದು, ತನ್ನವರ್ಗೆ ಕಯ್ಯೆತ್ತುವನು) (ಬೆಟ್ಟಅ. ೧೧-೧೭). **ಕೈಯೆತ್ತು:** ೧. ಕೈಯೆತ್ತಿ ದುರ್ಜನಿಕ್ಕೆಗೆ ಪೊಯ್ಯದೆ ದುರ್ಜನರೊಳಮ್ಮ ಕೂಡಿರವೇಡ (ಧರ್ಮಾಮೃ. ೨-೧೨); ಕೈಯೆತ್ತಿದನಖಿಳಜನಂ ಕೈಯೆತ್ತಿ ನಿರೀಹ ವೃತ್ತಿಯಂ ಪೊಗೞ್ವಿನೆಗಂ (ಚಂದ್ರಪು. ೧೪-೨); ಕೈಯೆತ್ತಿ ಪಲರುಂ ಜತಿಗಳ್ ತವಸಿಂಗೊಳಗಾಗಿ (ಕಬ್ಬಿಕಾ. ೨೨೬). ೪. ಕೈಮಾಡು; ಜಗಳಕ್ಕೆ ನಿಲ್ಲು: ಕೈಯೆತ್ತಿದ ಉದ್ದುರುಟುತನವನ್ನು ನಮ್ಮ ಮೇಲೆ ಹೊರಿಸಬಾರದು (ನಾಡೋಜ. ೩೩೭). ೫. (ಹೊಡೆಯುವುದಕ್ಕೋಸ್ಕರ) ಕೈ ಅಥವಾ ಸೊಂಡಿಲನ್ನು ಮೇಲಕ್ಕೆತ್ತು: ಮತ್ತಗಜನೊಣಗಳಿಗೆ ಥಟ ಕೈಯೆತ್ತುವುದೆ (ನಿಭಾಗ. ೫-೪-೧೦); ಮಕ್ಕಳಮೇಲೆ ಕೈಯೆತ್ತಬಾರದು (ರೂಢಿ). ೬. (ಯಾವುದಾದರೂ ನಿರ್ಣಯ ಮೊದಲಾದುವಕ್ಕೆ) ಸಮ್ಮತಿ ಸೂಚಿಸು: ನಿರ್ಣಯವನ್ನು ಮತಕ್ಕೆ ಹಾಕಿದಾಗ ನಾಲ್ಕು ಸದಸ್ಯರು ಕೈಯೆತ್ತಿದರು (ರೂಢಿ).

[ಕೆಯ್$_2$ + ಎತ್ತು$_1$]

**ಕೆಯ್ಯೊಡ್ಡು,** ಕಯ್ಯೊಡ್ಡು, ಕೈಯೊಡ್ಡು (ಕ್ರಿ). ೧. ಕೈನೀಡು, —ಚಾಚು: ನೀನೆ ಮೇಣರಸುಗೆಯ್ . . . ಇದನಾಂ ಕೆಯ್ಯೊಡ್ಡಿದೆಂ ಬೇಡಿದೆಂ (ಪಂಪಭಾ. ೧೩-೮೫). **ಕಯ್ಯೊಡ್ಡು:** ೧. ನಿನಗಾಂ ಕಯ್ಯಗಿದಪ್ಪೆನೀಯೆಡೆಗೆ ನಿನ್ನಂ ಬೇಡಿ ಕಯ್ಯೊಡ್ಡಿದೆಂ (ಕಾದಂಉ. ೫೦೪); ನಿನ್ನಂ ಕಯ್ಯೊಡ್ಡಿ ಬೇಡಿಕೊಂಡಪೆನಿನ್ನಾದೊಡಮುಸಿರದಿರ್ (ಪಂಚತಂ.೧೨೨-೪). **ಕೈಯೊಡ್ಡು:** ೧. ನಿನ್ನನಾನಿನಿತಂ ಕೈಯೊಡ್ಡಿ ಬೇಡಿದೆ (ಪಂಪಭಾ. ೧-೮೧ ವ); ಮನೆ ಮನೆದಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯ (ಮಹಾದೇ. ೩೪೨); ಮನವೊಲಿದು ಕೈಯೊಡ್ಡಿಯಾ ಅಯ್ಯನ ಪದೋದಕಮುಂ ಪ್ರಸಾದಮನನುಭವಿಸುತಂ (ಬಸಪು. ೨೮-೮); ಅಳಿಕುಳಾಳಕಿ ಬಂದಳೊಬ್ಬಳೆ ಮಳೆಗೆ ಕೈಯೊಡ್ಡಿ (ಕುವ್ಯಾಅ. ೯-೨೫); ಮಳೆನೀರು ಬಿಟ್ಟು ಮಂಜಿನ ನೀರಿಗೆ ಕೈಯೊಡ್ಡಿದ (ಗಾದೆ). ೨. ಯಾಚಿಸು; ಬೇಡು: ಅವನು ಯಾರಲ್ಲಿಯೂ ಕೈಯೊಡ್ಡುವುದಿಲ್ಲ (ರೂಢಿ).

[ಕೆಯ್$_2$ + ಒಡ್ಡು$_1$]

**ಕೆಯ್ವಟ್ಟೆ,** ಕಯ್ವಟ್ಟೆ (ನಾ). ಕರವಸ್ತ್ರ: (+). **ಕಯ್ವಟ್ಟೆ:** ಕಯ್ವಟ್ಟೆದಿಂದ ಕಣ್ಮೊಗಗಳನ್ನೊರಸಿಕೊಳ್ಳುತ್ತ ಹೋಗಿ ಸುಖಾಸನಸ್ಥನಾಗುವನು (ಮಂತ್ರಶ. ೧೯-೧); ಕಯ್ವಟ್ಟೆಗಳಿಂದ ನಗೆಗಳನ್ನು ಮುಚ್ಚಿಕೊಳ್ವರು (ಬೆಟ್ಟಅ. ೬೭-೧೮).

[ಕೆಯ್$_2$ + ಪಟ್ಟೆ]

**ಕೆಯ್ವತ್ತು** (ಕ್ರಿ). ಕೈಹಿಡಿ (?) ; "ಕೈಗೆ ಹತ್ತು" (ಗದಾಸಂ. ಟಿಪ್ಪಣಿ) : ಬರೆ ಗರ್ಭಕ್ಕರಿವಸ್ತುವಾಹನಚಯಂ ಕಯ್ಗೆಯ್ದುವಂದತ್ತು ಪುಟ್ಟೆ ರಣೋತ್ಸಾಹದೆ ಚಕ್ರವರ್ತಿವಿಭವಂ ಪುಟ್ಟಿತ್ತು ಕೆಯ್ವತ್ತಿ ನಿಂದಿರೆ ಪತ್ತಿತ್ತು ಸಮಸ್ತ ಧಾತ್ರೀವಳಯಕ್ಕೆಂದುಂ ದಿಶಾದಂತಿಗಳ್ಪರೆಗಂ ತಂದೆಯ ಕೀರ್ತಿಯೇಂ ಬಳೆದುದೋ (ಗದಾಯು. ೧-೧೨). [ಕೆಯ್$_2$ + ಪತ್ತು$_1$]

**ಕೆಯ್ಮನೆ**, ಕೆಯಿಮನೆ, ಕೆಯ್ಮ್ನೆ (ನಾ). ಹೊಲ ಹಾಗೂ ಮನೆ; ಹೊಲಮನೆ (?) : ಕೆಯ್ಮನೆಗಳ್ ಕೆಱೆತೊಱೆಗಳ್ (ಭಾಷಾಭೂ. ೧೩೦ ಉದಾ). **ಕೆಯಿಮನೆ** : ಆ ಸಿದ್ದೇಶ್ವರ ಗ್ರಾಮೇಶ್ವರ ದೇವರ ಸ್ಥಳದ ಕೆಯಿಮನೆಗಳಲು (ಕಕುಲ. ೫-೮೧ ; 1196). **ಕೆಯ್ಮ್ನೆ** : ಬಾಹ್ಯೋಪಧಿಯೆಂಬುದು ಕೆಯ್ಮ್ನೆ ಚತುಃಪಾದಿಗಳುಂ ದಾಸಿದಾಸಾದಿ ದ್ವಿಪದಿಗಳುಂ ಹೊನ್ನು ಬೆಳ್ಳಿ ಧಾನ್ಯ ಯಾನ ಶಯನಾಶನ ಕುಪ್ಯಭಾಂಡಮೆಂದು . . . ಪತ್ತುಂ ಬಾಹ್ಯೋಪಧಿಗಳಕ್ಕುಂ (ಶಾಸ್ತ್ರಟೀ. ೭೮-೯) ; ಕೆಯ್ಮ್ನೆ ವನ ಮೂರಡವಿ ನದೀತಟಾಕಾದಿ ಪ್ರದೇಶಾದಿಗಳಿಂದತ್ತಲ್ ಪೋಗೆನೆಂದು ಪ್ರಮಾಣಿಸುವುದೆರಡನೆಯ ಗುಣವ್ರತಮಕ್ಕುಂ (ಪಸಾರ. ೬೨೪-೫).

[ಕೆಯ್$_4$ + ಮನೆ]

**ಕೆಯ್ವರ್**, ಕಯ್ವರ್, ಕೈಬರು, ಕೈವರ್ (ಕ್ರಿ). ೧. ಕೈಗೆಬರು : ಕಂದಂಗೆ ರಾಜ್ಯಚಿಹ್ನಮನೊಂದೆರಡುಮನಱಿಸಿ ಮಂದಿಗೆರೆದರ್ಥಮನಾಮಂದಾರಂ ಕೆಯ್ವಂದವೊಲೆಂದಿತ್ತಸಗುವನೊ ನೃಪತಿ ಜನನೋತ್ಸವಮಂ (ಪುಷ್ಪಪು. ೩-೯೦). ೨. ದೊರಕು ; ಲಭಿಸು : (ಕ). **ಕಯ್ವರ್** : ೩. ಚಿಗುರು ; ವೃದ್ಧಿಯಾಗು ; ಫಲಿಸು : ಕಯ್ವಂದುದು ಸಹಕಾರಂ ಕಯ್ವಾರ್ವುದು ಸಮಯಮಲ್ಲದೆಂದು ಮನೋಜಂ ಮುಯ್ವಂ ನೋಡಿ ವಿಯೋಗಿಗೆ ಕಯ್ವಾಸಿದನಾಯ್ತು ಡಾಮರಂ ಮಾಮರದಿಂ (ಮಲ್ಲಿಪು. ೫-೧೦). **ಕೈಬರು** : ೧. ಈವೆನೆನ್ನುವ ಕೊಡುಗೆ ಬೇಡದಿರ್ದೊಡೆಮದುವೆ ಆವ ಕೈಬಂದೊಡಂ ಕೊಡುಗಯ್ಯ ಬಾಳ್ಕೆ (ಚಾಲೂರ. ೭೫-೧೩೬). **ಕೈವರ್** : ೩. ಕಲ್ಪತರು ಕೈವಂದಂತೆ ರೈವೃಷ್ಟಿ ಪಳ್ಕನೆ ಕೊಂಡಂತೆ ಸುರೇಂದ್ರಧೇನು ಕಱೆದಂತೆ (ಪಂಚಾಮಾ. ೩-೧೩೬) ; ಕೈವಂದ ಕದಂಬ ಪುಷ್ಪದ ಪರಂಪರೆಯೊಳ್ (ಜಗವಿ. ೪-೩೪) ; ಕೈವಂದ ಮಾಕಂದ ಸಂದೋಹಮಂ (ಕುಸುಮಾ. ೧೨-೧೩೮ ವ) ; ಮಧುಮಾಸದೊಳ್ ಕೈವಂದ ಮಾಮರನೆಳದಳಿರಂ ಮನಂಬುಗೆ ಸವಿದು (ರಾಮಾಶ್ವ. ೨೩-೧೧).

[ಕೆಯ್$_2$ + ಬರ್$_1$]

**ಕೆಯ್ವರಿ** (ಕ್ರಿ). ಕೈಮೀರು (?): ಅಗಳವನೇಕ ಪಕ್ಷತ್ಯಾಗಂ ಕೆಯ್ವರಿಯೆ ಸುರಿಗೆ ವಿಸುಟಳಲಂಕಂ ಪೋಗದೆ ಕಟ್ಟದ ಸುರಿಗೆಯನಾಗಳ್ ಕಿಱ್ವಂತೆ ಸುಗತಮತಮಂ ಪಿಡಿವಂ (ಶಾಂತಿಪು. ೮-೧೪೨).

[ಕೆಯ್$_2$ + ಪರಿ$_1$ (< ಪಱಿ$_1$)]

**ಕೆಯ್ವಲ**, ಕೈವಲ (ನಾ). ಕೈಯ ಶಕ್ತಿ, ಭುಜಬಲ : ಕಾಯುದು ಪುತ್ರಮಿತ್ರತತಿ ಕಾಯುದು ತಂದೆತಾಯ ಕೆಯ್ವಲಂ ಕಾಯುದು ದೇವತಾಗಣದ ರಕ್ಷಣೆ ಕಾಯುದು ವಜ್ರಪಂಜರಂ (ಪುಷ್ಪಪು. ೧೩-೪೫). **ಕೈವಲ** : ಕೈವಲದಾಂಕೆ ಗೊಟ್ಟೆ ನೀಲದ ಸಲಿಗೆಯಿದೆನೆ (ಅರ್ಧನೇ. ೧-೭೪).

[ಕೆಯ್$_2$ + ಬಲ]

**ಕೆಯ್ವಸ**, ಕೈವಸ (ನಾ). ಕೈವಶ; ಸ್ವಾಧೀನ. 'ಕೆಯ್ವಸಗೊಳ್' ಪರಾ. **ಕೈವಸ** : ನೃಪನ ಜಡಿಪದೆ ನಡುಗುವಳಸಿಕಾಂತೆ ಕೂರ್ಪಿದೇಂ ಕೈವಸಮೋ (ಪುಷ್ಪಪು. ೩-೧೬). [ಕೆಯ್$_2$ + ಬಸ$_1$]

**ಕೆಯ್ವಸಗೊಳ್** (ಕ್ರಿ). ಕೈವಶಪಡಿಸಿಕೊಳ್ಳು; ಸ್ವಾಧೀನಪಡಿಸಿಕೊಳ್ಳು : ಮನಮಂ ಕೆಯ್ವಸಗೊಂಡು ಚೆಲ್ವನೊಳಕೊಂಡೀಱ್ಕೊಂಡು ಮೂಱುಂ ಜಗಜ್ಜನದೊಳ್ಪಂ ಗೆಡೆಗೊಂಡ ಲಕ್ಷ್ಮಿಯುಳವಂ ಮುಂದಿರ್ದುದಂ (ಶಾಂತಿಪು. ೩-೨೮). [ಕೆಯ್ವಸ + ಕೊಳ್$_1$]

**ಕೆಯ್ವಱಿ** 'ಕೆಯ್ಪಱಿ' ನೋ.

**ಕೆಯ್ವಱಿಗ** (ನಾ). ೧. ಕೈ ತಮಟೆ ಬಾರಿಸುವವನು. ೨. ಕೈಯಿಂದ ಬಾರಿಸುವವನು; ಚಪ್ಪಾಳೆ ಹೊಡೆಯುವವನು : "ಪಾಣಿವಾದ, ಪಾಣಿಘ" (ನಾಚಿರಾ. ಕ). [ಕೆಯ್ವಱಿ (< ಕೆಯ್ಪಱಿ) + -ಗ$_3$]

**ಕೆಯ್ವೞಿ**, ಕೈವಳಿ (ನಾ). ಹೊಲಗದ್ದೆಗಳ ಪಕ್ಕದ ಪ್ರದೇಶ; ಅಂಚಿನಲ್ಲಿರುವ ಜಾಗ; "ಗದ್ದೆಯ ಪ್ರದೇಶ" (ಪ್ರಭಣ್ಣ) ; "ಹೊಲಗದ್ದೆಗಳ ಪ್ರದೇಶ" (ಪಂಪನಿ) ; "ಹೊಲದ ದಾರಿ" (ಪಂಪದೀ. ೧೯೩) ; ಮೃಗಂ ಕೆಯ್ವೞಿಗಮೇತದೊಳ್ ತಣಿದಪುವು (ಪಂಪಭಾ. ೫-೩೮). **ಕೈವಳಿ** : ತಳಿತಃ ಬಿಟ್ಟುದು ಸೇನೆ ಪಡುವಣ ಜಲ ನಿಧಿಯ ಕೈ [ಪಾಠಾಂ. ಕರಾ]ವಳಿಗಳಲಿ (ಕುವ್ಯಾಸ. ೬-೭). [ಕೆಯ್$_4$ + ಬೞಿ$_3$]

**ಕೆಯ್ವಾಡ**, ಕಯಿವಾಡ, ಕೈವಾಡ (ನಾ). ೧. ಕುಶಲಕೆಲಸ; ಕೈಗಾರಿಕೆ. ೨. ಕೈಚಳಕ; ಹಸ್ತಕೌಶಲ; ಸಾಮರ್ಥ್ಯ: ಬರೆಯತಕ್ಕ ಸೂಲಷ್ಟೇ ತಪ್ಪಿದೆಯೊ, ಅಲ್ಲ ಕೆಯ್ವಾಡವೂ ಬರಡಾಗಿದೆಯೊ ನೋಡೋಣ (ಹೆಬ್ಬೆರ. V, ಮುನ್ನುಡಿ). **ಕಯಿವಾಡ** : ೧. ಬ್ರಾಹ್ಮಣ ಕ್ಷತ್ರಿ ವೈಸ್ಯ ಸೂದ್ರರೊಳಗಾದ ಹದಿನೆಂಟು ಕಯಿವಾಡ ನೂರೊಂದು ಕುಲಯಿಷ್ಟರೊಳಗೆ ಆವನಾನೊಬನು ಯಿ ಧರ್ಮ್ಮ ಸಾಸ[ನ]ಕ್ಕೆ ಅಳಿಪಿದರೆ (ಎಕ. XI, ಹೊಳಲ್ಕೆ. ೧೧೧-೧೯; 1540). **ಕೈವಾಡ** : ೧. ಕೈವಾಡದವರಿಗೆ ಕೊಟ್ಟ ಶಾಸನ (ಎಕ. XI, ಚಿತ್ರದು. ೮-೧೪ ; 1573) ; ಸಮಸ್ತ ಜನಗಳಿಗೆ ದಾನಧರ್ಮಮಾಡಿ ಕೈವಾಡರಿಗೆ ಗುರುವುಗಳಿಗೆ ಸಹ ಕೊಟ್ಟದು (ಮೈಆರ್. ೧೯೨೯, ೯೭-೧೨ ; 1593) ; ಕೈವಾಡದವರಂ ಕರಸಿ (ತುರಂಗ. ೧-೮). ೨. ಜೋಡಣೆಗೆಯ್ದ ಸುವರ್ಣಮಂಟಪದ ಕೈವಾಡವನೇನ ಬಣ್ಣಿಪೆನು (ಮೋಹತ. ೧೪-೨೮) ; ನೋಡಿನ್ನೆಸೆವೀ ಪೊಸ ಕೈವಾಡವನೆನುತಾರ್ದು (ಕೆಳನೃ. ೩-೪೬). ೩. (ಆಲಂ) ಪ್ರಭಾವ ; ಹಸ್ತಕ್ಷೇಪ: ಇದೆಲ್ಲ ಹರಿದಾಸರ ಕೈವಾಡ (ಕಾವೇರಿ. ೧೨೪); ಇದರಲ್ಲಿ ಬೇರೊಬ್ಬ ಮಹಾವ್ಯಕ್ತಿಯ ಕೈವಾಡ ನನಗೆ ಕಾಣುತ್ತದೆ (ಚಿದೇವ. ೧೧೭). [ಕೆಯ್$_2$ + ವಾಡ ?]

**ಕೆಯ್ವಾರ$_1$**, ಕಯಿವಾರ$_1$, ಕಯ್ವಾರ, ಕೈವಾರ$_1$ (ನಾ). ೧. ಕೊಂಡಾಟ; ಹೊಗಳಿಕೆ; ಸ್ತೋತ್ರ : ಕೆಯ್ವಾರದಿಂದ ಬಕ್ಕುಡಿಗೆಯ್ವರ್ ಪಿರಿದೊಂದು ಸಮಯಮಂ ಸಮತೆಯಿನಾರಯ್ಯರ್ (ಸಮಪ. ೧೧-೨೦೯) ; ಕೆಯ್ವಾರದಿಂ ಬೇಱ್ಪುದಾನವರಂ (ನೇಮಿಪು. ೧೧-೨೫) ; ಹರಿಯೆಂದು ಕೆಯ್ವಾರದಿಂದವೆ ಮಾತನಾಡೆ (ಜಗವಿ. ೩-೫೬); ಕೆಯ್ವಾರಂ ನಿನಗಲ್ಲದನ್ಯರೊಳದೇಂ (ಜೀವಸಂ. ೬೮-೧೦). **ಕಯಿವಾರ$_1$** : ೧. ಸಚ್ಚರಿತಕ್ಕಾಶ್ರಯಮೆಂದು ಲೋಕಮೆನಿತುಂ ಕಯಿವಾರದಿಂ ಬಣ್ಣಿಸುತ್ತಿರೆ (ಕಇಅ. ೫೦-೪೧-೩೩ ; 11ನೆಯ ಶತ) ; ಯಕಾರದ್ವೈತ್ವಕ್ಕೆ : ತೇರಯಿಸಿದಂ-ತೇರೈಸಿದಂ . . . ಕಯಿವಾರಂ [ಪಾಠಾಂ. ಕಯ್ವಾರಂ] - ಕೈವಾರಂ (ಶಮದ. ನ. ೧೬೮ ಪ್ರಯೋ). **ಕಯ್ವಾರ** : ೧. ಕಯ್ವಾರದ ಯಾಚಕಜನ ಮುಯ್ವಂ ನೋಡಲ್ಕೆ ಧನವನವನೀತಳದೊಳ್ ಕಯ್ವಾರದೀವವರೆನಲ್ (ಸೌಇಇ. IX-I, ೧೪೫-೧೫ ; 1079) ; ನಿನ್ನ ಕಯ್ವಾರದ ಪೆಂಡಿರಂ ನಿಲಿಸು (ಧರ್ಮಾಮೃ. ೧೦-೯) ; ಕಯ್ವಾರಂ, ಕೈವಾರಂ (ಶಮದ. ೧೫೭ ಪ್ರಯೋ). ೨. ಮುಕ್ತಹಸ್ತ; ಬಿಚ್ಚುಗೈ; ಧಾರಾಳತನ (?): ದೇವೇಂದ್ರಧಾತ್ರೀರುಹಮನಿಱಿಸಿ ಕಯ್ವಾರದಿಂದೀವ ಸತ್ಯಾಗಿಗಳಿಂ (ಧರ್ಮಾಮೃ. ೧೦-೯). **ಕೈವಾರ$_1$**: ೧. ಸಲೆ ಮೆಲ್ಪು ಬಲ್ಪನಱಿಗುಂ ಕೈವಾರಮುಂ ಕೂಡೆ ಕೂರಿಸುಗುಂ (ಪಂಪಭಾ. ೯-೧೯) ; ಕೈವಾರದೆ ಕೈಮುತದಿಂ ಕೈವಾರದಿ ಗೆಲ್ದ ಲಜ್ಜಿತೆಯಂ (ಮದತಿ. ೧೦-೪೩) ; ಉಗ್ಗಡಿಪ ಕೈವಾರಿಗಳ ಕೈವಾರಮನಾಲಿಸುತ್ತೆ (ಚಿಕವಂ. ೧೦೪-೧೮). ೩. ಕೈಚಳಕ; ಸಾಮರ್ಥ್ಯ; ಬಾಹುಬಲ : ಮಾರುತನ ಕೈವಾರ ಕುಂದಿದುದು ಸುತ್ತೆ (ಕುವ್ಯಾಅ. ೧೨-೪೨) ;

ಭಳಿರೆ ಚಾಗುರೆ ಚಾಗು ಸಹಸಿಗಳು ಕೈವಾರಗಳನು ತೋರಲ್ಬಂದಿರೇ (ತುರಂಗ. ೫೮-೧೩). ೪. ಕೈವಶ; ಅಧೀನ (?): ನೆಱೆಯದ ವಸ್ತು ನೆಱೆವುದು ನೋಡಯ್ಯ ಅರಸು ಪರಿವಾರ ಕೈವಾರ ನೋಡಯ್ಯಾ (ಬಸವ. ೧೬೪). ೫. ವಿಚಾರ; ಗೊಡವೆ (?) : ಧರ್ಮದ ಕಡೆ ಮೊದಲ ಕೈವಾರ ನಿನಗೇಕೆಂದನಾ ಕರ್ಣ (ಕುವ್ಯಾಸ. ೧೪-೯೭); ನಾರಿಗೀ ವಸ್ತ್ರಾಭರಣ ಶೃಂಗಾರವೇಕಿನ್ನಿವನು ತೆಗೆ ಕೈವಾರವೇಕೆನುತೆದ್ದು ಬಂದನು (ಕುವ್ಯಾಸ. ೧೫-೧೦೪); ನಾಲಗೆಯ ಬೇರು ಸಹಿತವೆ ಕೀಳುವೆನು ಕೈವಾರವೇಕೆನುತೆದ್ದು ಬಂದನು (ಪ್ರಭುಲೀ. ೧೩-೨೩). ೬. ಅಭಿಮಾನ; ಮಮತೆ; ಪಕ್ಷಪಾತ: ಕಲಿತನವ ನೀರೊಳು ಕಲಕಿದೈ ಕೈವಾರವಾದುದೆ ಕೌರವೇಂದ್ರನಲಿ (ಕುವ್ಯಾಉ. ೬-೧೯); ಆತನ ಹಗೆಯೆ ಹಗೆ ಕೈವಾರವೇ ಕೈವಾರ (ಕುವ್ಯಾಉ. ೧೦-೧೬). ೭. ಬೆಂಬಲ; ನೆರವು. 'ಕೈವಾರಿಸು' ಪರಾ. [ದೇ. ‖ ತಮಿ. ತೆಲು. ಕೈವಾರ]

**ಕೆಯ್ವಾರ್$_2$**, ಕಯಿವಾರ್$_2$, ಕವೆಯರ, ಕವೆಯಾರ, ಕೈವಾರ್$_2$ (ನಾ). ವೃತ್ತರೇಖೆಯನ್ನೆಳೆಯುವ ಒಂದು ಸಲಕರಣೆ; ವರ್ತುಳವನ್ನು ತೀಡುವ ಉಪಕರಣ; ವೃತ್ತರೇಖಕ; ಕಂಪಾಸು: ಕೆಯ್ವಾ [ಪಾಠಾಂ. ಕೈವಾ]ರಮಂ ಬೀಸಿದಂತೆ ಬಟ್ಟಿತ್ತಾಗಿ ತೋರ್ಪುದು ಸೊನ್ನೆ (ಶಮುದ. ೧೭ ವೃತ್ತಿ). **ಕಯಿವಾರ್$_2$** : (ಕ). **ಕವೆಯರ** : ಧರೆಯ ನಡುವೆ ನಿಂದು ಮಾನುಷೋತ್ತರ ಗಿರಿಗಿರಿಸಿ ತಿರುಗುವ ವಿಷ್ಣುವಿನ ಚರಣಮೊಪ್ಪಿತು ಬಿದಿ ನೆಲನ ನಿರ್ಮಿಸುವಂದು ತಿರುಹುವ ಕವೆಯರದಂತೆ (ನೇಮಿಸಂ. ೧೧-೭೯). **ಕವೆಯಾರ** : ಧರೆ ಕವೆಯಾರದ ಚಕ್ರದಂತೆ ತಿರಿಗಲ್ಕಂಬೋಧಿಗಳ್ ಮೇರೆಯಂ ಪಿರಿದುಂ ದಾಂಟಲೊಡರ್ಚಲ್ . . . ಕೃಷ್ಣನದಟಿಂ ಚಕ್ರಕ್ಕೆ ಕೈ ನೀಡಿದಂ (ಪುಣ್ಯಾಸ್ರ. ೭-೨೭); ಮೇರುಗಿರಿಯ ಸುತ್ತಿ ದೀವಿ ಕಡಲು ಕವೆಯಾರ ಬೀಸಿದ ಬೆಡಗಿನೊಳು ಧಾರಿಣಿಯೊಳು ಹಲವಿಹುವೆಲೆ ಭರತಕುಮಾರ (ಭರತ. ೬೭-೭೬); ವಿವರಿಸಿ ಬಿದಿ ಜಂಬೂದ್ವೀಪಕಿಕ್ಕಿದ ಕವೆಯಾರದೆಸೆವ ರೇಖೆಯೊಳು (ನಾಗಕು. ೨-೪). **ಕೈವಾರ್$_2$** : ಇರ್ಕುಟಿಯ ತಂಡಸದ ಕರ್ತರಿಯ ಸುತ್ತಿಗೆಯ ಕೈವಾರದ ಕಂಬಚ್ಚಿನ . . . ಸೊನ್ನೆಗಾಱರ ಸಾಲೆಯಿಂ (ರಾಮಾಶ್ವ. ೧೦೩-೨೦); ಈ ಮೂರನ್ನು ವೃತ್ತಮಾಪಕ (ಕೈವಾರ Compasses) . . . ರಚಿಸಬೇಕಾಗಿತ್ತು (ಗಣಿತ. ೨೪). [?]

**ಕೆಯ್ವಿಡಿ**, ಕಯ್ಪಿಡಿ$_1$, ಕೈಪಿಡಿ$_1$, ಕೈವಿಡಿ, ಕೈಹಿಡಿ (ಕ್ರಿ). ೧. ಕೈಯಿಂದ ಹಿಡಿ; ಕೈಕೊಳ್ಳು: ನುಡಿದುದೆ ತತ್ವಾರ್ಥಂ ಕೆಯ್ವಿಡಿದುದೆ ಸತ್ಯೈಕಹಿತ ಕರಂ ಕುಂದದೆ ತಾಂ ನಡೆದುದೆ ಸನ್ಮಾರ್ಗಂ (ಪುಷ್ಪಪು. ೧-೧೮). ೨. ಕೈಯನ್ನು ಹಿಡಿ; ಸೊಂಡಿಲನ್ನು ಹಿಡಿ: ಬಾಯ್ಪಿಡುತ್ತೈದಿದ ಮಱಿಯಂ ತಾಯ್ಪಿಡಿ ನಡೆ ನೋಡಿ ಬಾಡಿ ತಾಪಂ ಮೊದಲಿಂದಯ್ಪಿಡಿ ನೆಗಳ್ದಿರೆ ತೆಗೆದೇಂ ಕೆಯ್ವಿಡಿದೂದಿದುದೊ ಸೋಷ್ಣಜಳಮಂ ಬಸಿಱಿಂ (ರಾಜಶೇ. ೫-೪೦). ೩. ಅಂಗೀಕರಿಸು; ಸ್ವೀಕರಿಸು: ಮರಳಿ ಸೀತೆಯನುಕೆಯ್ವಿಡಿದು ರಾಮಂ ತನ್ನ ಪುರಕೆ ಬಂದಂ (ಚಬಪು. ೫೪-೨೨). **ಕಯ್ಪಿಡಿ$_1$** : ೧. ತಲೆದಡವಿ ಕಯ್ಪಿಡಿದೆತ್ತಿ (ಅರಿರ. ೧೧೭). ೪. ಮದುವೆಯಾಗು; ಪಾಣಿಗ್ರಹಣ ಮಾಡು: ನಿನ್ನಯ ಕಯ್ಪಿಡಿಯಲ್ಕೆ ಬೇಡಿ (ಕಾದಂಉ. ೩೩೧); ಉಡುಪತಿಯಂ ರಾಗದಿ ರೋಹಿಣಿ ಕಯ್ಪಿಡಿದಂದದಿ (ಜಯಕಾ. ೨-೧). **ಕೈಪಿಡಿ$_1$** : ೨. ಕೈಪಿಡಿದೈತಹ ಬಿಂಕದ ಮುದ್ದು ಬಾಲಕರು (ಕಂಸವಿ. ೨೧-೨೧). ೪. ಆಯುಧವನುಯೆತ್ತಿದಾತನ ಕೈಪಿಡಿವಳ್ ಹೆಣ್ಣುಬಂದು (ಸೌಗಂಧಿ. ೭೯-೨); ಮಸೆಯೆಂಬ ಹೆಣ್ಣು ಕೈಪಿಡಿಯೆ ಬಾಳಿಗೆ ಕೂರ್ಪ ಬೆಸದ ತೆರನಾಯ್ತು (ಕಾಲೂರ. ೩೧-೨೭). **ಕೈವಿಡಿ** : ೧. ಹೊತ್ತದುಗುಡವ ಹಾಯ್ಕಿ ಕೈವಿಡಿದೆತ್ತಿ ಕರ್ಣನ (ಕುವ್ಯಾಕ. ೮-೬); ಬಾಲೆಯರುಗಳ ಕೈವಿಡಿದುಪ್ಪರಿಗೆಗೆ ಲೋಲಲೋಚನೆಯೈದಿದಳು (ಕಂಸವಿ. ೯-೮೪). ೩. ಸಂಗಶುದ್ಧರಲ್ಲದಾವ್ ದುಸ್ಸಂಗಿಗಳ ಕೈವಿಡಿವವರೆ (ತೊರರಾ. ೪-೪-೪೬). ೪. ಆ ಕನ್ನೆಯ ಕೈವಿಡಿದಂ ಸ್ವೀಕೃತ ಗಂಧರ್ವ ರಾಜ್ಯಮಹಿಮೋದಯನ್ (ಕಾದಂಪೂ. ೯೭೩); ಬಡವರ್ ಮೊದಲಾಗಿರೆ ಕೈವಿಡಿದಾಕೆಯ ನಾವತೆಱದೊಳಂ ಪೊರೆವರ್ (ಧರ್ಮಾಮೃ. ೮-೭೭ ಅಡಿಟಿ); ಕೈವಿಡಿದವಳನರೆವರಿಸಿ ಸೂಳೆವೆಂಡಿರ ಸಂಗದೊಳಗಿರ್ಪ ಧರಣಿಪತಿಯಂ ಹಿಂಗದಿರ್ಪಳೇ ಜಯಲಕ್ಷ್ಮಿ (ಚಬಪು. ೮-೧೮). ೫. ಸೆರೆಹಿಡಿ; ಬಂಧಿಸು: ಕಣ್ಗೊಳಲ್ಕೆ ಕೈವಿಡಿವುದು ಚಿತ್ತಮುಂ (ಅನಂಪು. ೬-೧೯).

**ಕೈಹಿಡಿ** : ೨. ಅವರನ್ನು ಕೈಹಿಡಿದು ಕರೆತಂದರು (ರೂಢಿ). ೪. ಮಹಾಸ್ವಾಮಿಯವರ ಕೈ ಹಿಡಿಯಲು ನನ್ನ ತಂಗಿ ಯೋಗ್ಯಳಾಗುವುದಿಲ್ಲ (ಚದೇವ. ೨೪೬). ೬. ನೆರವಾಗು; ಸಹಾಯವಾಗು; ಕಾಪಾಡು: ಕರುಣಾಳು ಬಾ ಬೆಳಕೆ ಮುಸುಕಿದೀ ಕೈಹಿಡಿದು ನಡೆಸೆನ್ನನು (ಇಂಗೀತೆ. ೯೭); ತಾವು ಈ ಸಮಯದಲ್ಲಿ ನನ್ನ ಕೈಹಿಡಿಯದಿದ್ದರೆ ನಾನು ಜೀವ ಸಹಿತ ಉಳಿಯಲಾರೆ (ರೂಢಿ). ೭. ಕೈಹಿಡಿದು ನಿಲ್ಲಿಸು; ತಡೆಗಟ್ಟು; ನಿರ್ಬಂಧಿಸು: ತಮ್ಮ ಕೈಹಿಡಿಯುವವರಾರೂ ಇಲ್ಲವೆನ್ನುವ ಭಾವನೆಯೂ ಪ್ರಬಲಿಸಿತು (ಬಿಟ್ಟಹೊ. ೩೫); ಶಿಸ್ತಿನ ಮೇಲಧಿಕಾರಿ ಬಂದು ಅವನಿಗೆ ಕೈ ಹಿಡಿದಂತಾಗಿದೆ (ರೂಢಿ). ೮. ಮಿತವ್ಯಯ ಮಾಡು; ಹಿಡಿತವಮಾಡು: ಯಾಕೆ ಹೀಗೆ ಕೈಹಿಡಿಯುವೆ ಧಾರಾಳವಾಗಿಕೊಡು (ರೂಢಿ).

[ಕೆಯ್$_2$ + ಪಿಡಿ$_1$]

**ಕೆಯ್ವಿಡು** (ಕ್ರಿ). ೧. ಕೈಯನ್ನು ಬಿಡು, —ತೆರೆ. ೨. ಬಿಟ್ಟುಬಿಡು; ತೊರೆ; ತ್ಯಜಿಸು. ೩. ಚಿಗುರುಬಿಡು; ತಳಿರುಹೊಂದು: ಮೆಯ್ವಿಟ್ಟು ಕೆಯ್ವಿಟ್ಟಶೋಕೆ ಕರಂ ಪೋಲ್ತುದು ಮಿಂದು ನಿಂದು ಮುಡಿಯಂ ಬಿಟ್ಟಾಱಿಸುತಿರ್ದ ಕಾಮುಕಿಯಂ (ಶಾಂತಿಪು. ೭-೧೩೪).

[ಕೆಯ್$_2$ + ಬಿಡು$_1$]

**ಕೆಯ್ವೀಸು**, ಕಯ್ವೀಸು, ಕೈಬೀಸು, ಕೈವೀಸು (ಕ್ರಿ). ೧. ಕೈಯನ್ನು ಹಿಂದಕ್ಕೆ ಮುಂದಕ್ಕೆ ಅಥವಾ ಪಕ್ಕಕ್ಕೆ ಬೀಸು, —ಚಲಿಸು, —ಆಡಿಸು. ೨. ಯುದ್ಧವನ್ನು ಆರಂಭಿಸುವುದಕ್ಕೆ ಕೈಬೀಸಿ ಸೂಚನೆಕೊಡು: "ಕೆ[ಪಾಠಾಂ. ಕ]ಯ್ವೀಸು – ರಣಾರಂಭ, ಹಸ್ತಸೂಚನಯೋಃ" (ಶಮುಧಾ); ಯುಧಿಷ್ಠಿರಂ ಶಲ್ಯನ ಮೊನೆಗೆ ನೆಱೆದು ನಿಂದು ಕೆಯ್ವೀಸುವಾ ಪ್ರಸ್ತಾವದೊಳ್ (ಪಂಪಭಾ. ೧೦-೫೯ ವ); ತನ್ನ ಸೇನಾಚಕ್ರಮನಾ ತ್ರಿವಿಕ್ರಮನ ಮೇಲೆ ಕೆಯ್ವೀಸುವುದುಂ (ನೇಮಿಪು. ೬-೧೪೬ ವ). ೩. ಕೈಸನ್ನೆಮಾಡು: "ಕೆ[ಪಾಠಾಂ. ಕ]ಯ್ವೀಸು – ರಣಾರಂಭ ಹಸ್ತಸೂಚನಯೋಃ" (ಶಮುಧಾ). **ಕಯ್ವೀಸು** : ೨. ನಿಯೋಗಿಗೆ ಕಯ್ವೀಸಿದನಾಯ್ತು (ಮಲ್ಲಿಪು. ೫-೧೦); ಅದಂ ಕಂಡು ಚಂಡಂ . . . ಕಯ್ವೀಸಿ ರಥಾರೂಢನಾಗಿ (ಹಮ್ಮಿರ. ೩-೪೨).

**ಕೈಬೀಸು** : ೧. ಕಿರುಮನೆಯಿಂದೀಚೆಗೆ ಬಂದು ನನ್ನನ್ನು ಕೈಬೀಸಿ ಕರೆದರು (ಚಿಂಗ್ಳ. ೧೪೩). ೨. ಮತ್ತೆ ಕೈಕೊಳಲೀ ಮಹಾರಥರೆನುತ ಕೈಬೀಸಿದನು ಕುರುರಾಯ (ಕುವ್ಯಾಕ. ೧೩-೬೨). **ಕೈವೀಸು** : ೨. ಅರ್ಕಕೀರ್ತಿಯಂ ಸಂಗ್ರಾಮಭೇರಿಯಂ ಪೊಯ್ಸಿ ಕೈವೀಸಿ ತಾಗಿದಾಗಳ್ (ಚಾವುಂಪು. ೮೦-೭); ಕಟಕಾಚಾರಿಯನು ಕೈವೀಸಿದನು (ಕುವ್ಯಾದ್ರೋ. ೨-೨೩); ಶಿಶುಪಾಲ ಗೋಪಾಲರೆಯ್ದೆ ಕೈವೀಸಲೊಡನೆ (ಸಾಳ್ವಭಾ. ೧೫-೯). ೩. ಕಾಯ್ದು ಕೈವೀಸುವ ಕಾವನಂದಮಿವಳೀಂ ಕುಲನಾರಿಯೊ ವಾರನಾರಿಯೋ (ಪಂಪಭಾ. ೮-೬೨); ರಸವಂ ಸೂಸೆ ಮುಖೇಂದು ಕೈ ಮದನನಂ ಕೈವೀಸೆ ಬೆಳ್ದಿಂಗಳಂ ಪೊಸತಂ ಪುಟ್ಟಿಸೆ ದೃಷ್ಟಿ . . . ಆಡಿಸುವಂ ಪಾಡಿಸುವಂ (ಅರ್ಧನೇ. ೨-೯೬); ಖಾನರ ಕೈವೀಸಿ ಕರೆಯುತಿಂತೆಂದ (ಕಂಸವಿ. ೧೩-೧೮).

ಕೈಬೀಸುತ್ತ ಹೋಗು= ೧. ಕೈಬೀಸಿಕೊಂಡು ಹೋಗು; ಬರಿ ಕೈಯಲ್ಲಿ ಹೋಗು: ಅವಳ ಮದುವೆಗೆ ಸುಮ್ಮನೆ ಕೈಬೀಸುತ್ತ ಹೋಗುವುದಾದರೂ ಹೇಗೆ (ಸ್ಮೃತಿಚಿ. ೭೧). ೨. ಮಾಡಬೇಕಾದ ಕೆಲಸವನ್ನುಮಾಡದೆ ಹೋಗು; ಹೊಣೆ ತಪ್ಪಿಸಿಕೊಂಡು ಸ್ವೇಚ್ಛೆಯಾಗಿ ಹೋಗು: ನನ್ನ ತೋಟದಲ್ಲಿ ನಾನು ಕೈಬೀಸಿಕೊಂಡು ಹೋದರೆ ಯಾರು ಕೇಳುತ್ತಾರೆ (ಗಾದೆ). [ಕೆಯ್$_2$ + ಬೀಸು$_1$]

**ಕೆಯ್ವೀಟ್** (ಕ್ರಿ). ೧. ಕೈಗೆ ಸಿಕ್ಕಿಬೀಳು; ಕೈವಶವಾಗು: ಮಹೋಗ್ರ ರಣದೊಳ್ ನಿಮ್ಮೊಂದು ಕೆಯ್ವೀಟ್ಟ ಭೂತಳಮಂ ಮತ್ತೆ ತರಲ್... ಅನುಮಿೀ ಕೊಳನಂ ಪೊಕ್ಕುದುಮಾವ ದೋಷಂ (ಪಂಪಭಾ. ೧೩-೮೪); ಬಲದ ಮದದ ಬಲ್ಲಾಳ್ಗಳನ್ನ ಕೆಯ್ವಿಟ್ಟ ನಿನ್ನಂ ಕೊಳಲುಮದಿರದೆನ್ನೊಳ್ ಕಾದಲುಂ ಬಂದು (ಶಾಂತಿಪು. ೫-೬೪). ೨. ಕೈಕೆಳಕ್ಕೆ ಬೀಳು; ನೇತಾಡು. [ಕೆಯ್$_2$ + ಬೀೞ್$_1$]

**ಕೆಯ್ಪುಗು**, ಕೈವೊಗು (ಕ್ರಿ). ಕೈಸೇರು; ಲಭಿಸು: ಸಕ್ಕದಮಂ ಮಱೆಗೊಳ್ಳದೆ ಚೊಕ್ಕಳಿಕೆಯಿನಚ್ಚಗನ್ನಡಂ ಬೆಟ್ಟರ ಕೆ[ಪಾಠಾಂ. ಕ] ಯ್ವೊಕ್ಕ ನಿಧಿಯೆನಿಪಭ್ರಂಶಕ್ಕಂ ದೇಶೀಯ ಪದಕಮುಂಟು ಸಮಾಸಂ (ಶಮದ. ೨೪೯). **ಕೈವೊಗು**: ದಿವ್ಯರತ್ನ ನಿಚಯಂ ಕೈವೊಕ್ಕವಂ ನಿಮ್ಮ ನಿಶ್ಚಲ ಭಕ್ತಂ (ಪಾವಶ. ೩೬). [ಕೆಯ್$_2$ + ಪುಗು (< ಪೊಗು)]

**ಕೆಯ್ವೆರಸು**, ಕೈವೆರಸು (ಕ್ರಿ). (ನಮಸ್ಕಾರಮಾಡಲು) ಕೈಗಳನ್ನು ಸೇರಿಸು, —ಜೋಡಿಸು: ಜಂಗಮಕೆ ಶರಣೆಂಬ ಕೆಯ್ವೆ[ಪಾಠಾಂ. ಕೈವೆ]ರಸಿ ನಿರುತದನಿಮಿಷನಾಗಿ ಸೋಲ್ಪೇಶ್ವರನ ಮೇಲಣ ದೃಷ್ಟಿಗಳು... ಎಸೆಯೆ (ಬಸವು. ೧೦-೩೫). **ಕೈವೆರಸು**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕೆಯ್$_2$ + ಬೆರಸು$_1$]

**ಕೆಯ್ವೆಸ**$_1$, ಕೈವೆಸ (ನಾ). ಕೈಚಳಕ; ಹಸ್ತಚೇಷ್ಟೆ (?): ಮೆಯ್ವೆಸದಿಂ ಕೆಯ್ವೆಸದಿಂ ಬಾಯ್ವೆಸದಿಂ ಮಂತ್ರತಂತ್ರದಿಂದಂ ಸುಖಮಂ ಮೆಯ್ವಿಡೆ ವನಿತೆಗೆ ಪಡೆದಾ ಮೆಯ್ವೇಗಕ್ಕೆಳಸಿ ಸೋಲ್ವನೆಟ್ಟುವೊಜಂಗಂ (ಕಾವ್ಯಾವ. ೬೭). **ಕೈವೆಸ**: ಮತ್ತೇಕೆ ಕೆಮ್ಮನೆ ನಿಮ್ಮ ಕೈವೆಸದ ಗಸಣೆ ಎಂದು ತಡೆಯಿಕ್ಕಲೊಡರಿಸುವ ಬಾಳೆಯರ್ (ವರ್ಧಪು. ೭-೩ವ). [ಕೆಯ್$_2$ + ಬೆಸ$_1$]

**ಕೆಯ್ವೆಸ**$_2$ (ನಾ). ಹೊಲ, ಗದ್ದೆಯ ಕೆಲಸ; ಉಳುಮೆ; ಆರಂಬ: ಅನ್ನಿನಾ ತೆಱೆವ ಕೊಳ್ಗಂ ಅನ್ನಿನಾ ಕೆಯ್ವೆಸನೆ ಕೊಳ್ಗ (ಎಕ. IV, ಹಗ್ಗಡ. ೮೭-೭; 700). [ಕೆಯ್$_4$ + ಬೆಸ$_1$]

**ಕೆಯ್ವೇಗ**, ಕೈವೇಗ (ನಾ). (ಬಾಣ ಪ್ರಯೋಗದಲ್ಲಿ) ಕೈಚಳಕ; ಹಸ್ತಕೌಶಲ: ಕೆಯ್ವೇ[ಪಾಠಾಂ. ಕೈವೇ]ಗಮಚ್ಚರಿಯಂ ಪುಟ್ಟಿಸೆ ಶೀವಿ ತೊಟ್ಟಸುವುದುಂ (ಪಂರಾಮಾ. ೧೩-೪೭). **ಕೈವೇಗ**: ಜೃಂಭಣಾಸ್ತ್ರ ದಿನಣಂ ಕೈವೇಗದಿಂದೆಚ್ಚುಮಾಧಿಪನಂ ಸ್ತಂಭಿಸಿ (ಜಗವಿ. ೧೮-೩೨). [ಕೆಯ್$_2$ + ವೇಗ]

**ಕೆಯ್ವೊಯ್**, ಕಯ್ವೊಯ್, ಕಯ್ವೊಯ್, ಕೈವೊಯ್, ಕೈಹೊಯ್ (ಕ್ರಿ). ೧. ಕೈಯನ್ನು ತಟ್ಟು; ಕೈಹೊಡೆ; ಚಪ್ಪಾಳೆಯಿಕ್ಕು. ೨. ಯುದ್ಧಕ್ಕೆ ಕರೆ; ಕಾಳೆಗಕ್ಕೆ ನಿಲ್ಲು: ಪುದುವಾಟಿಂ ತಕ್ಕುಮಿಂತೀ ಗಳಾನಾದೆಂ ಮೇಣವನಾದನೇಕೆ ತಡೆವಿರ್ ಕೆಯ್ವೊಯ್ದೆವಿನ್ನೀಂ ಕರಂ ಸೋದರ್ಯರ್ಕ್ಕೆ ಕನಲ್ದೊಡಿಂತಿನಿಬರುಂ ಕಾದಿಂ ಭರಂಗೆಯ್ದಪೆಂ (ಪಂಪಭಾ. ೧೩-೬೮); ಅಂತು ಧರ್ಮ ಯುದ್ಧಮಂ ಕೆಯ್ವೊಯ್ದಾಗಳ್ (ಗದಾಯು. ೭-೬೪ ವ). **ಕಯ್ವೊಯ್**: ೧. ಕಯ್‌ವೊಯ್ವ ಸನ್ನೆಯುಂ ತೂರ್ಯಮೂಳ್ದುದೆ ತಡಂ... ರಣಭೇರಿ ಮೊಳಗಿದವು (ಶ್ರೀರಾಮಾ. ೭೮೧-೮೨). ೩. ಪ್ರತಿಜ್ಞೆಮಾಡು: "ಕಯ್ವೊಯ್ (ಕಯ್ + ಪೊಯ್) – ಪ್ರತಿಜ್ಞಾಯಾಂ, ಕರತಾಡನೇ ಚ (ಕೈತಟ್ಟು)" (ಶಮಧಾ). **ಕಯ್ವೊಯ್**: ೧. ತಮ್ಮೊಳ್ ಕಯ್ವೊಯ್ದು ನಗುತ್ತಂ (ಕಾದಂಪೂ. ೫೬೭); ಕಯ್ + ಪೊಯ್ದಂ = ಕಯ್ವೊಯ್ದಂ (ಶಬ್ದಾನು. ೯೨ ಪ್ರಯೋ); ಕಿರುದನಿಯಿಂದ ಮಾತಾಡಿಕೊಳ್ಳುತ್ತ ಅನ್ಯೋನ್ಯರನ್ನು ಬೆಂಬಟ್ಟಿ ಕಯ್ವೊಯ್ದು ಕಯ್ಪರೆಗುಟ್ಟಿ (ಬಿಟ್ಟಅ. ೭೦-೧೭). ೨. ಗಿಳಿಯ ಪುರುಳಿಯ ಕೋಗಿಲೆಯ... ಶಾಕಳಿಯೊಡನೆ ಕಯ್ವೊಯ್ವಂತೆ ಮಂಗಳಗೀತಿಕಾ ರವಂಗಳ್ (ಚಂದ್ರಪು. ೧೨-೩೫ ವ). **ಕೈವೊಯ್**: ೧. ಲಲನೆಯರು ಕೈವೊಯ್ದು ನಕ್ಕರು (ಸಾಳ್ವಭಾ. ೧೮-೩೫); ನೋಡುವ ನಗುವ ಕೈವೊಯ್ದರೆ ಚೆಲ್ವ ಮಾತಾಡುವ (ಕಂನವಿ. ೯-೮೩). ೨. ಗಿರಿಜಾಧೀಶಂ ರಮಾಧೀಶನಂ ಗೆಲ್ವಂ ನೋಡಿಮೆನುತ್ತುಮಿರ್ಬರಳವಂ ಕೈವೊಯ್ದು ಸಂಪಾದಿಸಲ್ ಸಲ್ವರ್ (ಜಗವಿ. ೧೮-೨೭); ಮೊಲನ ಮರಿ ಕೈವೊಯ್ದು ನಕ್ಕುದು ಹುಲಿಯೊಡನೆ ಗಡ (ಕುವ್ಯಾಕ. ೭-೨೭). **ಕೈಹೊಯ್**: ೧. ತಮ್ಮೊಳಗೆ ಕೈಹೊಯ್ದು ಮಿಗೆ ನಗುತ (ಕುವ್ಯಾಭೀ. ೬-೪೧); ನಗುವರು ಕೈಹೊಯ್ವರು ಮೈಮೈ ಸೋಂಕಿ ಮಿಗೆ ಪುಳಕೋತ್ಸವದಿಂದ (ಕಂನವಿ. ೧೦-೫೪). [ಕೆಯ್$_2$ + ಪೊಯ್$_1$]

**ಕೆಯ್ವೊಲ**, ಕೈವೊಲ, ಕೈಹೊಲ (ನಾ). ಉಳುಮೆ ಮಾಡಿದ ಗದ್ದೆ; ಸಾಗುಮಾಡಿದ ಹೊಲ: ಬೆಳೆದೆಱಗಿರ್ದ ಕೆಯ್ವೊಲನೆ ಕೆಯ್ವೊಲನಂ ಬಳಸಿರ್ದ ಪೂತ ಪೂಗೊಳಗಳೆ (ಪಂಪಭಾ. ೧-೫೩); ಕೆಯ್ವೊಲಂ ದಿವದಂತೆ ಸಸಿಯಿಂದೆಸೆದತ್ತು (ಭಾಷಾಭೂ. ೧೬ ಉದಾ); ಕಳಮೆಯ ಕೆಯ್ವೊಲಂಗಳಿಂದ (ಎಕ. VIII, ಸೊರಬ. ೧೩೮-೯; 1145); ರಸಭರ ನಮ್ರಕಮ್ರ ಕಣಿಶಾಳಿಯ ಶಾಳಿಯ ಕೆಯ್ವೊಲಂಗಳಿಂ (ಕುಸುಮಾ.೧-೨೬); ಸಲೆ ಸಿರಿಯ ಹೊಯ್ಕಯ್ವಲಂ ಕೆಯ್ವೊಲಂ (ಪದ್ಮರಾ. ೩-೧೮). **ಕೈವೊಲ**: "ಹೊಲ; ಗದ್ದೆ; ತೋಟ; ಕೈವೊಲ" (ಕಂನುಹು. ೯೨); ಕೈವೊಲದ ಯೇರಿಯೊಳ್ ಬರುತಿರ್ಪ ದೊಡ್ಡನಂ . . . ನೋಡಿದಳ್ (ಕಾಲೂರ. ೬೦-೧೦೦). **ಕೈಹೊಲ**: ಹಚ್ಚಗೆ ಹಬ್ಬಿ ಬೆಳೆಯಿಂದ ಬಾಗಿದ ಕೈಹೊಲ (ಕನ್ನಸು. I, ೩೫). [ಕೆಯ್$_4$ + ಪೊಲ]

**ಕೆಯ್ವೊಲಂಗಾ**, ಕೆಯ್ವೊಲಗಾ (ಕ್ರಿ). ಗದ್ದೆಯನ್ನು ಕಾಯು; ಗದ್ದೆಗೆ ಕಾವಲಾಗಿರು: ಕೆಯ್ವೊಲಂಗಾದಂ, ಕೆಯ್ವೊಲಗಾದಂ (ಶಮದ. ೧೬೭ ಪ್ರಯೋ). **ಕೆಯ್ವೊಲಗಾ**: ಬನಮುಂ ಕೆಯ್ವೊಲಗಾವ ಪಾಮರಿಯರಂ (ಸೂಕ್ತಿಸು. ೪-೧). [ಕೆಯ್ವೊಲ + ಕಾ$_1$]

**ಕೆಯ್ವೊಲಗಾ** 'ಕೆಯ್ವೊಲಂಗಾ' ನೋ.

**ಕೆಯ್ವೋಗು**, ಕಯ್ವೋಗು, ಕೈವೋಗು (ಕ್ರಿ). ೧. ಕೈತಪ್ಪು; ಗುರಿತಪ್ಪು: ಅಂಬಿಂ ಸಮೆದುದೆ ನಭಮೆಂಬಂತು . . . ಖಚರಪತಿ ಭರಂಗೆಯ್ದು ಕೆಯ್ವೋಗದೆಚ್ಚಂ (ಶಾಂತಿಪು. ೪-೪೨). **ಕಯ್ವೋಗು**: ೨. ಚಿಗುರು; ಕೊನರು; ಫಲಿಸು: ಸುರತರು ಕಯ್ವೋದುದೆನಲು ಸುರಧೇನುವ ತೊರೆದಭೀಷ್ಟಮಂ ಕಱೆದುದೆನಲು ಧರೆಗಿತ್ತು ವಿತ್ತಮಂ (ಸೌಇಇ. IX-i, ೨೪೯-೩೯; 1147). **ಕೈವೋಗು**: ೧. ಗರ್ವೋದ್ಧತನಂ ಕೈವೋಗದೆಚ್ಚಂ (ಚಂದ್ರಪು. ೭-೬೭); ರಾಮನುಂ ಕೈವೋಗದೆಚ್ಚಂ ದಳವಳಿಯದ ಗಾಂಭೀರ್ಯಧಾಮಂ (ಸೌಇಇ. IV, ೨೬೭-೧೨; 1380). ೨. ಕೈವೋದಸುಕೆ ಕೋಕಿಲಧ್ವನಿ ಮೂದಲೆಯುಲಿಯಾಗೆ ಬಂದುದಂದು ಬಸಂತಂ (ಯಶೋಚ. ೧-೩೬); ಮಾವು ಕೈವೋಗೆ . . . ಛಂದದ ಚೈತ್ರ ಋತು ಪ್ರವೇಶದೊಳ್ (ನಳಚಂ. ೫೩); ಸುರತರು ಕೈವೋದಂತೆ ಚಿಂತಾಮಣಿ ಕರುಣಿಸಿದಂತೆ (ಶ್ರೀಪಾಲ. ೧೦-೧೧೧). [ಕೆಯ್$_2$ + ಪೋಗು$_1$]

**ಕೆಯ್ಸನ್ನೆ**, ಕಯ್ಸನ್ನೆ, ಕೈಸನ್ನೆ (ನಾ). ಕೈಯಿಂದ ಮಾಡುವ ಸೂಚನೆ, —ಸಂಜ್ಞೆ: ಪ್ರತಿಕೂಲಾನಿಲನಿಂ ಪತಾಕೆ ಮಗುಱೆಂಬಂತಾಗೆ ಕೆಯ್ಸ[ಪಾಠಾಂ. ಕೈಸ]ನ್ನೆಯಿಂ (ಪಂರಾಮಾ. ೯-೭೫);

ಕೆಯ್ಸ [ಪಾಠಾಂ. ಕೈಸ]ನ್ನೆಯಲಿ ಕರೆವುತ್ತೊಡೆಯ ನಂಬಿಯನು (ಬಸಪು. ೨೬–೨೫). **ಕಯ್ಸನ್ನೆ** : ಕಯ್ಸನ್ನೆಯಿಂದ ಕಾತರದಿಂದೆ ಪೊಯ್ವನು ಬಾಯ್ಸನ್ನೆಯಿಂದಾನು ಬೈವೆ (ಕುರಾಸಾಂ. ೨೬–೧೪೧) ; ಪೊಯ್ಸ ಘನ ಭೇರಿಯಂ ಭಾರಿಯಂಕಕ್ಕೆ ಮುಟ್ಟಯ್ಸಲಿ ಚತುರ್ಬಲಂ ಸಗ್ಗಲಗ್ಗೆಯೊಳೆಂಬ ಕಯ್ಸನ್ನೆ [ಪಾಠಾಂ. ಕಯಿಸನ್ನೆ]ಯೊಳ್ (ಚಬಪು. ೪೬–೩೨). **ಕೈಸನ್ನೆ** : ಇನ್ನು ಹೇಳುವುದೇನೆನುತ ಕೈಸನ್ನೆಯಲಿ ಮಾತಾಡಿ ಭೂಪತಿ ಬೆನ್ನ ತೆತ್ತನು (ಕುವ್ಯಾದ್ರೋ. ೮–೨೦) ; ಕಳುಹಿದನು ಕೈಸನ್ನೆಯಲಿ ನಿಜ ನಿಳಯಕಾಮಂತ್ರಿಯನು (ತೊರರಾ. ೨–೫–೬).

[ಕೆಯ್$_2$ + ಸನ್ನೆ$_2$]

**ಕೆಯ್ಸನ್ನೆಗೆಯ್**, ಕೈಸನ್ನೆಗೆಯ್ (ಕ್ರಿ). ಕೈಸನ್ನೆಯನ್ನು ಮಾಡು ; ಕೈಯಿಂದ ಸಂಜ್ಞೆಮಾಡು : ಕೆಯ್ಸ [ಪಾಠಾಂ. ಕೈಸ]ನ್ನೆಗೆಯ್ವವೊಲ್ ತಳಿರ ತೊಂಗಲಲುಗಿದುದೆಲರಿಂ (ಪಂರಾಮಾ. ೯–೧೫೧). **ಕೈಸನ್ನೆಗೆಯ್** : ಬೀರಾಂಗನೆ ಸೇಸೆಗೊಂಡ ಪಡೆಯಂ ಕೈಸನ್ನೆಗೆಯ್ದು (ಶಾಂತಿಪು. ೩–೧೦೬) ; ಇತ್ತ ಬನ್ನಿಯೆಂದು ಕೈಸನ್ನೆಗೆಯ್ವಂತೆ (ಮಲ್ಲಿಪು. ೨–೩೪) ; ಉನ್ನತದೆಳೆಗೊನೆಗಳು ಘಾಳಿಯಿಂದ ಕೈಸನ್ನೆಗೈವಂದದಿ ತೂಗೆ (ಭರಚ. ೨೨–೫). [ಕೆಯ್ಸನ್ನೆ + ಕೆಯ್$_1$]

**ಕೆಯ್ಸಾಗು**, ಕೈಸಾಗು (ಕ್ರಿ). ೧. ಕೈಮುಂದಕ್ಕೆ ಹೋಗು, —ನಡೆ ; ಸಾಧ್ಯವಾಗು : ಕೆಯ್ಸಾಗಿದರೆ ಅವರ ಮೇಲೆ ಉಪಕಾರ ಮಾಡುತ್ತಾ ಹೋಗಿರಿ (ಮುಂಬಯಿ. ೪–೧೬). **ಕೈಸಾಗು** : ೨. “ಕೈನಡೆ, ಅಧಿಕಾರನಡೆ” (ಜಾನಕೋ. ೪೧). [ಕೆಯ್$_2$ + ಸಾಗು$_1$]

**ಕೆಯ್ಸಾರ್**, ಕಯ್ಸಾರ್, ಕೈಸಾರ್, ಕೈಸಾರು (ಕ್ರಿ). ಕೈಗೆಬರು ; ದೊರಕು ; ಸಿಕ್ಕು ; ಕೈವಶವಾಗು ; ಈಡೇರು ; ನೆರವೇರು : ಕೆಯ್ಸಾರ್ದುದಸ್ಮನ್ಮನೋರಥಮಿಂದೆಂದು (ಪಂಪಭಾ. ೧೧–೬೬). ಸೇನಾನಿಗೆ ಕೆಯ್ಸಾರೆ ಜಯಲಕ್ಷ್ಮಿ (ಶಾಂತಿಪು. ೧೦–೧೬೪) ; ವೀರಶ್ರೀ ವಿಜಯನ ಕೆಯ್ಸಾರೆ (ಕಾವ್ಯಾವ. ೬೮). **ಕಯ್ಸಾರ್** : ಆ ಬಟ್ಟೆಯೊಳಿನಿತಡಗುಂ ಕಯ್ಸಾರದೆಂದಾತುರಿಸುತ್ತ (ಕಾದಂಪೂ. ೧೬೫) ; ಅಪವರ್ಗಂ ಕಯ್ಸಾರ್ಗುಮೆಂದು ಚಿಂತಿಸುವುದು ಸಂಸಾರಾನುಪ್ರೇಕ್ಷೆಯೆಂಬುದು (ಶಾಸ್ತ್ರಟೀ. ೬೯–೧೦). **ಕೈಸಾರ್** : ಪೆಱತೊಂದಪೂರ್ವರಸಮೇಂ ಕೈಸಾರ್ಗುಮೋ (ಆದಿಪು. ೩–೬೯) ; ಕನಸಿನವೋಲೆನ್ನ ತತ್ಕಾಂಕ್ಷೆ ಕೈಸಾರದುದಂ (ಕಾದಂಉ. ೯೧) ; ದುಃಖಮೆ ಕೈಸಾರ್ಗುಮಲ್ಲದೆ ರತ್ನಂ ಕೈಸಾರಲಱಿಯದು (ಧರ್ಮಾಮೃ. ೬–೧೨೮) ; ವೃತ್ರನ ಕದನದಲಿ ಕೈಸಾರ್ದುದೀಶಂಗಿದು (ಕುವ್ಯಾದ್ರೋ. ೧೦–೪೬) ; ನಮ್ಮ ಮಗಳಿಷ್ಟಾರ್ಥ ಕೈಸಾರ್ದುದು (ಚಬಪು. ೩೬–೨೩). **ಕೈಸಾರು** : ಅಱಸುವ ಬಳ್ಳಿ ಕಾಲ ಸುತ್ತಿತೆಂಬಂತೆ ಬಯಸುವ ಬಯಕೆ ಕೈಸಾರಿದಂ [ಪಾಠಾಂ. ರುವಂ]ತೆ (ಅವಚಂ. ೧೬೬–೭೫೨) ; ಧನವನುಳ್ಳ ಮಹಾತ್ಮನಾವುದ ನೆನೆದೊಡದು ಕೈಸಾರುವುದು (ಕುವ್ಯಾಉ. ೪–೫೫).

[ಕೆಯ್$_2$ + ಸಾರ್$_1$]

**ಕೆಯ್ಸಾಲೆ**, ಕೈಸಾರೆ$_2$, ಕೈಸಾಲೆ (ನಾ). ಮನೆಯ ಹೊರ ಅಂಗಳ ; ವರಾಂಡ ; ಜಗಲಿ : (ಕ). **ಕೈಸಾರೆ$_2$** : ಒಂದು ಮನೆಯ ಕೈಸಾರೆಯಲ್ಲಾಗಲಿ ಮಾಳಿಗೆಯ ಮೇಲಾಗಲಿ ನಡೆಯತಕ್ಕ ಕಳವುಗಳು (ಗ್ರಾಮಾಕ. ೬೧). **ಕೈಸಾಲೆ** : ಮೂರರಲ್ಲಿ ಭಾಗಿಸಲಾಗಿ ಎರಡು ಒಳಗು ನಿಂದಿತ್ತು ಒಂದು ಹೊಱಗಾಗಿ ಕೈಸಾಲೆಯಾಯಿತ್ತು (ಸರ್ವವ. ೧೧೯–೬೧೬) ; ಚದುರ ಕೃಷ್ಣಯ್ಯನೆಂಬರಸು ಮದನ ಕೈಸಾಲೆಯಿಂದಿಳಿದು ಬಂದನು ಆಸ್ಥಾನಕ್ಕೆ (ಸೌಂದಕಾ. ೧–೬೪); ಹೊರಭಾಗದಲ್ಲಿ ಸುತ್ತಲೂ ಇರುವ ಕೈಸಾಲೆಯ ಮೇಲೆ ಚಪ್ಪಟೆಯಾಗಿ ಕಾಣುವ ಸ್ವಲ್ಪ ಇಳಿಜಾರಾದ ಛಾವಣಿ (ಮೈವಾಸ್ತು. ೬೮). [ಕೆಯ್$_2$ + ಸಾಲೆ$_3$]

**ಕೆಯ್ಸು**, ಕಯಿಸು, ಕಯ್ಸು, ಕೈಸು, ಗೆಯಿಸು, ಗೆಯ್ಸು, ಗೇಯಿಸು (ಕ್ರಿ). ೧. ಮಾಡಿಸು ; ನೆರವೇರಿಸು. ‘ಇಂಬುಕೆಯ್ಸು’ ಪರಾ. **ಕಯಿಸು** : ೧. (ಕ). **ಕಯ್ಸು** : ೧. ಮತ್ಪ್ರಾಣದೊಳೊಡಗೂಡಿ ಪೋಗಲಾಗೆಂದೆನ್ನಂ ಮಾಣಿಪವೋಲ್ ಕಯ್ಸು (ಕಾದಂಪೂ. ೯೧೫). **ಕೈಸು** : ೧. ಅವನಂ ಕೆಳವೆರಡೆರಡು ಮೂಮೂರ್ಬಾರೆ ಕೆಡಿಕೆಡಿಸಿ ಕೈಸುತಿರ್ದಂ (ಮಹಾಂತೇ. ೬–೨೮). **ಗೆಯಿಸು** : ೨. ಕೃಷಿಮಾಡಿಸು ; ಬೇಸಾಯ ಮಾಡಿಸು : ಬೀಜವರಿ ಗದೆನು ನೀನು ಗೆಯಿಸಿ ರೂಪ ಮಾಡಿಕೊಂಡು (ಎಕ. VII, ಶಿವಮೊ. ೪೬–೯ ; 1648); ಗೆಯಿಮೆಗೆ ಬಾಹ ಭೂಮಿಯನೂ ಗೆಯಿಸಿಕೊಂಡು ಆದ ಹುಟ್ಟುವಳಿ (ಎಕ. VIII, ತೀರ್ಥಹ. ೯೮–೩೬; 1668). **ಗೆಯ್ಸು** : ೧. ದೇಗುಲವ ಮಾಡಿಸಿ ಲಿಂಗ ಪ್ರತಿಷ್ಠೆಗೆಯ್ಸಿ (ಎಕ. X(S), ಬಾಗೆಪ. ೧೦೦–೧; 10ನೆಯ ಶತ); ಇವರಿಬ್ಬರು ಕಾರಪಕರಾಗಿ ಗೆಯ್ಸಿದರ್ (ಎಕ. IX, ಹೊಸಕೋ. ೧೦–೨೦ ; 1073). ೨. ಹೊಲವನ್ನು ಗೆಯ್ಸುವುದಕ್ಕಾಗಿ ಒಂದು ಆಳು ಬೇಕು (ರೂಢಿ). **ಗೇಯಿಸು** : ೧. ಆ ಮುದುಕಿ ಕೈಲಿ ಗೇಯಿಸಿದ್ರೆ ದೇವರು ಮೆಚ್ಯ್ಯಾನ (ನನ್ನರ. ೯೬).

[ಕೆಯ್$_1$ + -ಸು$_1$]

**ಕೆಯ್ಸುರಿಗೆ**, ಕೈಸುರಗಿ, ಕೈಸುರಿಗೆ (ನಾ). ಕೈಗತ್ತಿ ; ಚಿಕ್ಕ ಕತ್ತಿ : ಯಲರಹಿತಕ್ಕೆ . . . ಕೆಯ್ಸುರಿಗೆ (ಶಮದ. ೬೮ ಪ್ರಯೋ) ; ನೆತ್ತಿಯಗ್ರದೆ ಮೊನೆಯುರ್ಚೆ ಕೆಯ್ಸುರಿಗೆಯಿಂದಿರದಿಕ್ಕಿದನಾ ವನೇಚರಂ (ಶಬಶಂ. ೩–೫೪). **ಕೈಸುರಗಿ** : ಒಱೆಗಳನುಗಿದ ಖಂಡೆಯ ಕೈಸುರಗಿಯ ಸೂರಟಿಯ ಕತ್ತಿ ಬಾಕುಗಳ (ಕಂನವಿ. ೧೧–೧೪೬). **ಕೈಸುರಿಗೆ** : ಜಕ್ಕಿಗನತಿಧವಳ ಯಸಂ ನೆಗಳ್ದ ಕಾಳಿಗನಂ ಕೈಸುರಿಗೆ (ಸೌಇಇ. XX, ೨೪–೨೧ ; 1034). [ಕೆಯ್$_2$ + ಸುರಿಗೆ]

**ಕೆಯ್ಸೂಱೆ**, ಕೈಸೂರೆ, ಕೈಸೂಱೆ (ನಾ). ಕೈಗೆಬಂದಂತೆ ಮಾಡುವ ಸೂರೆ, —ಕೊಳ್ಳೆ, —ಲೂಟಿ : ಅರಮನೆಯ ಗಜಬಜದ ಹದನಱಿದರಸನಪಗತನೆಂದು ಪಾಳಯದಿರುಳು ನಡುಗಿತು ತೊಡಗಿದವು ಕೆಯ್ಸೂ [ಪಾಠಾಂ. ಕೈಸೂ]ಱೆ (ಕುವ್ಯಾದ್ರೋ. ೭–೫). **ಕೈಸೂರೆ** : “ಹಾಳು, ವಿನಾಶ, ಸೂರೆಮಾಡೋಣ” (ರಮಾಕಾಂ. ೧೮೮). **ಕೈಸೂಱೆ** : ಕೈಸೂಱೆಗಿದು ಕರೆಯೆನುತ ತಂದರು ಗೋಪಿಯಿದ್ದೆಡೆಗೆ (ನಿಭಾಗ. ೧೦–೮–೩೪).

[ಕೆಯ್$_2$ + ಸೂಱೆ]

**ಕೆಯ್ಸೂಱೆಗೊಳ್**, ಕೈಸೂಱೆಗೊಳ್ (ಕ್ರಿ). ಕೊಳ್ಳೆಹೊಡೆ ; ಲೂಟಿ ಮಾಡು : ಕುಂತೀಕುಮಾರಕರು ವೈರದಲಿ ಸಪ್ತಾಂಗವನು ಕೈಯ್ಸೂ [ಪಾಠಾಂ. ಕೈಸೂ]ಱೆಗೊಂಬರು (ಕುವ್ಯಾಅ. ೮–೧೯). **ಕೈಸೂಱೆಗೊಳ್** : ನಿದ್ರಾಯದಲಿ ಕೈಸೂಱೆಗೊಂಬುದು ಮುಕುತಿರಾಜ್ಯವನು (ಕುವ್ಯಾಉ. ೪–೧೧). [ಕೆಯ್ಸೂಱೆ + ಕೊಳ್$_1$]

**ಕೆಯ್ಸೆಱೆ**, ಕೈಯ್ಯಿಸೆಱೆ, ಕೈಶೆರೆ, ಕೈಸೆರೆ, ಕೈಸೆಱೆ (ನಾ). ಬಂಧನ; ಕೈದು : ಕೆಯ್ಸೆಱೆಯಂ ಕೊಟ್ಟಳವಟ್ಟ ಸಾರಧನಮಂ ಮೂವಿಟ್ಟಗಂ ಪೂಣ್ದು ಕಾಲ್ಗೆಱಗಿತ್ತು (ಪಂಪಭಾ. ೬–೩೦). **ಕೈಯ್ಯಿಸೆಱೆ** : ಭಾಂಮ್ಮಗಾಉಂಡಂ ನಂಬಿ ನುಡಿದು ಕ್ರಿತಂಗೆಯುದುಂ ಕೈಯ್ಯಿಸೆಱೆಯಂ ಕೊಟು (ಎಕ. VIII, ಸಾಗರ, ೭೧–೧೦ ; 1173 ?). **ಕೈಶೆರೆ** : ಶೀಳಿ ಬಿಸಾಡಿ ಕೈಶೆರೆ ಹಿಡಿದೂ (ಪುರಂದ. ೧–೨೨೪–೪) ; ವೈದಿಕ ನೆರವಿಯಲ್ಲೊಂದಾಗಿ ಕೂಡಿತು ಬಿಟ್ಟೆ ಕೈಶೆರೆಯೊಲ್ (ಬಿಜ್ಜಪು. ೧೧೩–೧೦೦) ; ಹೂಬಸಾಬ ಸೈದಯಾ ಕೂಪ ಸಹಾ ಕೈಶೆರೆ ಶಿಕ್ಕಿದ್ದರಿಂದಾವತ್ತಾ ಅಗಿ ಕರೂರು ಬಳಿಗೆ ಫವುಜು ಹೋಗಿ (ಹೈದರ. ೩೩). **ಕೈಸೆರೆ** : ಮಾಗಡಿ ದುರ್ಗಪತಿಯನೂ ಹೋಗಿ ಕೈಸೆರೆವಿಡಿದು (ಸೌಂದಕಾ. ೪–೪೩) : ದೇವತೆಗಳಂ ಕೈಸೆರೆಗಳಂ ಪಿಡಿದು (ಸೌಗಂಧಿ. ೭೧–೧೬) ; ನಿನ್ನೋರೆ ನೋಟಕೆ ಹಗೆ ತಾನೆ ಕೈಸೆರೆ ಯುದ್ಧವಿಲ್ಲದೆ ಗೆಲುವೆ ಧೀರೆ (ಇಂಚಾಪ. ೮೯–೩೧).

**ಕೈಸೆಱೆ** : ಕಾಮನೊಂದು ಕೈಸೆಱೆಯೆನಿಪಂಗರಾಗಮನಿಳೇಶ್ವರವಲ್ಲಭೆ ಯಟ್ಟಲುಯ್ವೊಡೆ (ಪಂಪಭಾ. ೮–೭೩) ; ಈ ಹೊಳೆಯು ದಾಂಟಿಸಿದ ಕೂಲಿ ಯುನೆನ್ನ ಬೇಡಿದರೆ ಕೂಲಿಯು ಕೊಡಲೇನು ಇಲ್ಲ ಎಂದರೆ ಕೈಸೆಱೆಯಾಗಿ ಎನ್ನ ಎಳೆದೊಯ್ದನಯ್ಯ (ಶೂನ್ಯಸಂ. ೧೨೮–೮); ನಿಶಾಚರಕಾಮುಕನ ಕೈಸೆಱೆಯ ಬಿಡಿಸೆಂದೊಱಲಿದಳು ಸೀತೆ (ತೊರರಾ. ೩–೧೦–೩).

[ಕೆಯ್$_2$ + ಸೆಱೆ$_2$]

**ಕೆಯ್ಸೆಱೆಗೊಳ್**, ಕೈಸೆಱೆಗೊಳ್ (ಕ್ರಿ). ಸೆರೆಹಿಡಿ ; ಕೈದುಮಾಡು; ಬಂಧಿಸು : ತೆಱಪುವಡೆದಂಗಜಂ ಕೆಯ್ಸೆಱೆಗೊಳೆ ನೋಟಕರ ಮನಮಂ (ಪಂಪಭಾ. ೫–೬೭). **ಕೈಸೆಱೆಗೊಳ್** : ದಿವ್ಯಸುವರ್ಣ ರತ್ನಾವಳಿಯ ಕೆಲಸಗತಿ ಕಂಗಳನು ಕೈಸೆಱೆಗೊಳಲು (ನಿಭಾಗ. ೩–೬–೭) ; ಕೌರವನು ಶ್ರೀಕೃಷ್ಣನ ಕೈಸೆಱೆಗೊಳಲೆಳಸಿದನು (ಕೃಷ್ಣವೃ. ೮–೩೬).

[ಕೆಯ್ಸೆಱೆ + ಕೊಳ್$_1$]

**ಕೆಯ್ಸೆಱೆವಿಡಿ**, ಕೈಸೆಱೆವಿಡಿ (ಕ್ರಿ). ಸೆರೆಹಿಡಿ ; ಬಂಧಿಸು ; ಬಂದಿ ಯನ್ನಾಗಿ ಮಾಡು : ಬಡಿದು ಭಲ್ಲುಕನ ಕಾಡವೆಯ ಕೆಯ್ಸೆ[ಪಾಠಾಂ. ಕೈಸೆ]ಱೆವಿಡಿದು (ರಾ ಘ ಚ. ೧೭–೭೪). **ಕೈಸೆಱೆವಿಡಿ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕೆಯ್ಸೆಱೆ + ಪಿಡಿ$_1$]

**ಕೆಯ್ಸೇರ್**, ಕೈಸೇರು (ಕ್ರಿ). ಕೈಗೆಬಂದು ಸೇರು ; ಪ್ರಾಪ್ತವಾಗು; ಲಭಿಸು : (ಕ). **ಕೈಸೇರು** : ಕೈಸೇರಿದೊಡವೆಯೆನುತೆ ಕೊಡಬೇಕೆಂದು ಪೈಸರಗೊಡಬೇಡ ಮನದಿ (ಮೋಹತ. ೨೬–೩೪) ; ಘನವಾದೊಡವೆ ಕೈಸೇರುವ ಪರಿಯಂತ ಮನೆದೇವರೆಂದುಪಚರಿಸು (ಕಂನವಿ. ೬–೧೫೦) ; ಅರ್ಕೈದು ತಿಳಿದಾಚರಿಪುದೊಡನೆ ಕೈಸೇರುವುದಿಷ್ಟಸಿದ್ಧಿಗಳು (ಹದಿಬ. ೪–೪೮); ನಿಮ್ಮ ಪತ್ರವು ಕೈಸೇರಿತು (ಹುಚ್ಚುಹು. ೭೩). [ಕೆಯ್$_2$ + ಸೇರ್$_1$]

**ಕೆಯ್ಯೊಡೆ** 'ಕಯ್ಪೊಡೆ' ನೋ.

**ಕೆರ** 'ಕೆರ್ಪು' ನೋ.

**ಕೆರಂಕು$_1$** (ಕ್ರಿ). ಉಗುರಿನಿಂದ ಕೆರೆ; ಕೆದರು; ಗೀಚು : ಗುಡುಗುಟ್ಟುತ್ತಿಳೆಯುಂ ಕೆರಂಕಿ ಮಿಡುಕಿಂಶಾರ್ದೂಲಮೇಂ ಬಂದುದೋ (ಬೀಳವಂ. ೧–೨೯). [< ಕೆರೆ$_1$]

**ಕೆರಂಕು$_2$**, ಕರಕು$_2$, ಕೆರಕು (ನಾ). ನವೆ; ತುರಿ; ಕಜ್ಜಿ ; ತಿಂಡಿ : ಸಿಂಬುಱು ಕೀವು ಕೆರಂಕು ಸೃಗಂಬು ಮಲಂ ಮೂತ್ರಂ (ಅಜಿಪು. ೬–೫೪); ತುಱಿ ಕೆರಂಕಿನೆಸಕಂ ಮಾಣ್ಗುಂ (ಲೋಕೋಪ. ೯–೧೧೨) ; ಕೆರಂಕುಂ ತುಱಿಯುಮಾಗೆ (ಜೀವಸಂ. ೮೭–೨೮ ವ) ; ನಖದಿಂ ಕೆರಂಕುದುಱಿಸುವ ಸುಖಮಂ (ಪುಷ್ಪಪು. ೧೩–೬೮). **ಕರಕು$_2$** : ಚೂರ್ಣವಂ ಮಾಡಿ ಹಸಿ ಹಾಲಲ್ಲಿ ಅರೆದು ಮೆಯ್ಯಂ ತಿಗುರೆ ಕದ್ರುತಿ ಕರಕು ಮಾಣ್ಗುಂ (ವಿವೈವಿ. ೯೨). **ಕೆರಕು** : "ಪಾಮಾ, ಕಚ್ಛೂಃ, ಖಸಃ – ಈ ೩ ಕೆರಕು (ಕೆಱಂಕು)" (ಹಲಾಯು. ೯೮–೪೪೮); "ಪಾಮುಂ ಖಸಂ ಖುತ್ಸುವೆನೆ ಕೆರಕೆನಿಕ್ಕುಂ" (ಮಂಗರಾ. ೧೧೩–೧) ; "ಕಚ್ಛು = ಕೆರಕುಂ" (ವಡ್ಡಾರಾ. ೫೩–೫); ಕೆರಕಂ ತುಱಿಸುವಂತೆತ್ತಾನುಮೊರ್ಮೆ ರಾಜ್ಯ ಲೀಲೆ ಯೊಳಿರ್ದುಂ (ಧರ್ಮಾಮೃ. ೬–೧೭೫); ಕೆರಕುಂ ತುಱಿ ಖರ್ಜಿ ಯೆಂಬಿವಿನಿತುಂ ಕಿಡುಗುಂ (ಲೋಕೋಪ. ೯–೧೧೩) ; ಕೆರಕುಂ ತುಱಿ ಕುಷ್ಠ ಗುಲ್ಮಂ ಪಿರಿದಕ್ಕುಂ ಪೆರ್ಚಿದಾಮದಿಂ (ಕಲ್ಯಾಕಾ. ೪–೯).

[< ಕೆರೆ$_1$ + –ಕು. / ತಮಿ. ಚಿರಙ್ಗು ; ಮಲ. ಚಿರನ್ನು]

**ಕೆರಂಕುಗಲ್ಲು**, ಕೆರಕುಗಲ್ಲು (ನಾ). ಉರುಟಾದ ಕಲ್ಲು : ಬಡಗಣ ದೆಸೆಗಾ ಪೆಬ್ಬಳ್ಳದಾ ದೆಸೆಯ ಕೆರಂಕುಗಲ್ಲು (ಎಇ. XV, ೮೯–೪೦ ; 1060). **ಕೆರಕುಗಲ್ಲು** : ತಳತಳಿಸದು, ಹೊಳೆಹೊಳೆಯದು, ಕೆರಕು [ಪಾಠಾಂ. ಕೆತ]ಗಲ್ಲಿನಂತಿಪ್ಪುದಯ್ಯಾ ಪರುಷವು (ಚನ್ನವ. ೨೪೪).

[ಕೆರಂಕು$_2$ + ಕಲ್ಲು (< ಕಲ್$_3$)]

**ಕೆರಂಟು**, ಕೆರಟು (ಕ್ರಿ). ಉಗುರಿನಿಂದ ಗೀಚು, —ಕೆರೆ ; ಕೆದಕು : "ಕೆರಂಟು – ನಖ ಖನನೇ" (ಶಮಧಾ). **ಕೆರಟು** : ಕೀರಿಯೊಳ್ತಮತಮಗೆ ಬೆರಟುತಂ ಕೆರಟುತಂ (ಷಶಿಲ. ೩–೬೮) ; ಎಳವಿ ತಡವಿ ಬೆರಟ ಕೆರಟಿ ಔಕಿ ಹಿಂಸೆಮಾಡಿ (ಬಟ್ಟಅ. ೧೧೮–೧೬).

[ದೇ. ‖ ತಮಿ. ಚುರಣ್ಡು, ಚುಱಣ್ಡು ; ಮಲ. ಚಿರಣ್ಡು, ಚುರಣ್ಡು ; ತುಳು. ಕೆರಂಡು]

**ಕೆರಕ$_1$** (ನಾ). ೧. ಕೆರಕಲು ಆಹಾರವನ್ನು ತಿನ್ನುವವನು ; ಜಿಪುಣ ; ಕೃಪಣ. ೨. ತಿರುಕ ; ಭಿಕ್ಷುಕ : (ಕ). [< ಕೆರೆ$_1$ + –ಕ]

**ಕೆರಕ$_2$** (ನಾ). ದೀಪಾವಳಿ ಹಬ್ಬದಲ್ಲಿ ಚೆಂಡು, ಹುಚ್ಚೆಳ್ಳು ಹೂಗಳಿಂದ ಅಲಂಕರಿಸಿ ಪೂಜಿಸುವ ಸಗಣಿಯ ಬೆನಕ : ಇಂದು ಕೆರಕನ ಹಬ್ಬ (ರೂಢಿ). [?]

**ಕೆರಕಲನ್ನ** (ನಾ). ಸೀದುಹೋಗಿ ಪಾತ್ರೆಯ ತಳಕ್ಕೆ ಅಂಟಿಕೊಂಡ ಅನ್ನ; ಕೆರೆದು ತೆಗೆದ ಅನ್ನ; ಸೀಕಲು : (ಕ).

[ಕೆರಕಲು + ಅನ್ನ$_3$]

**ಕೆರಕಲು** (ನಾ). ಪಾತ್ರೆಯ ತಳಕ್ಕೆ ಅಂಟಿಕೊಂಡದ್ದನ್ನು ಕೆರೆದು ತೆಗೆದದ್ದು. 'ಕೆರಕಲನ್ನ' ಪರಾ.

[ಕೆರಕು (< ಕೆರಂಕು$_2$) + –ಅಲು (< –ಅಲ್$_2$)]

**ಕೆರಕು** 'ಕೆರಂಕು$_2$' ನೋ.

**ಕೆರಕುಗಲ್ಲು** 'ಕೆರಂಕುಗಲ್ಲು' ನೋ.

**ಕೆರಗ** (ನಾ). = ಕೆರಗಾಱ : ಬಡಗಿ ಮಾರಾಚಾರಿ ಜಲನಾಗಂ ಕೆರಗಾ ಬಿಟಗನು ಮಿಸಗರ ಬೀಮನುಂ (ಎಕ. III. ನಂಜನ. ೧೯೯–೨೫ ; ?).

[ಕೆರ (< ಕೆರ್ಪು) + –ಗ$_3$]

**ಕೆರಗಾಱ** (ನಾ). ಕೆರಮಾಡುವವನು ; ಮೋಚಿ; ಸಮಗಾರ : ಕೆತ[ಪಾಠಾಂ. ಕರೆ]ಗಾಱನೋರ್ವಂಗೆ ಲಿಂಗವ ಧರಿಸಿ ಸಲೆ ಭಕ್ತನಂ ಮಾಡಿ (ಗುರುಚಾ. ೧೧–೯). [ಕೆರ (< ಕೆರ್ಪು) + –ಕಾಱ]

**ಕೆರಗು** (ಕ್ರಿ). ಹೊರಳಾಡು (?) : ಏಱಲಱಿಯದವ ಮರನೇಱಿ ಬಿದ್ದು ಸಾವಂತೆ ನೀರ ಮೀನಗಳು ಕೆರಗುವಂತೆ (ವಾದಿಕೀ. ೧–೧೫೩–೧೩).

[← ತಮಿ. ಚಿರುಗು]

**ಕೆರಟು** 'ಕೆರಂಟು' ನೋ.

**ಕೆರಟೆಗೊಳ್** (ಕ್ರಿ). ಕೆದಕಿಕೊಳ್ಳು ; ಎರಚಾಡು (?) : ಒಂದಿನಿಸು ಒದವಿದ ದೋಷವನು ಜನಜನಿತವ ಮಾಡಿ ಕೆತ್ತಿ ಕೆರಟೆಗೊಂಡು ಕೊನೆಯದಿಹರೆ ಸವತಿಯರು (ನೇಮಿಸಂ. ೧೯–೪೬).

[< ಕೆರಂಟು + ಕೊಳ್$_1$]

**ಕೆರನೂರ್** (ನಾ). ಒಂದು ಊರಿನ ಹೆಸರು : ಕೆರನೂರ ಮಹಾಜನಂ ಅಯ್ವದಿಂಬಗರ್ಾಂ ಇಪ್ಪತ್ತು ಗದ್ಯಾಣ (ಎಕ. X, ಕೋಲಾರ. ೫೭–೧೦ ; 975). [?]

**ಕೆರಪು** 'ಕೆರ್ಪು' ನೋ.

**ಕೆರವು** 'ಕೆರ್ಪು' ನೋ.

**ಕೆರವುಗಳೆ** 'ಕೆರ್ಪುಗಳೆ' ನೋ.

**ಕೆರಸಿ**, ಕೆರಸೆ, ಗರೆಸೆ, ಗೆರಸಿ, ಗೆರಸೆ, ಗೆರಿಸೆ, ಗೆರೆಸೆ (ನಾ). ೧. ಚಚ್ಚೌಕಾರದ ಅಗಲವಾದ ಬಾಯುಳ್ಳ ಬಿದಿರಿನ ಕುಕ್ಕೆ, —ಬುಟ್ಟಿ: ಕೆರಸಿಯ ಬಾಯಂ ತಾಂ ಮುಚ್ಚಲಾರ್ಗುಮೇಂ ಬಂದಪುದೇ (ಅರ್ಧನೇ. ೫–೪೩). **ಕೆರಸೆ** : ಕೆಂದಾವರೆ ಪುಷ್ಪಾ ಕನಕಾ ಕೆರಸೆಯಲ್ಲಿ ತಂದಿಟ್ಟು (ಶ್ರೀಕೃಪಾ. ೨೫) ; ಕೆರಸೆಗಿಂತ ಅಗಲವಾದ ಬಾಸಿಂಗ (ಸುವಸಂ. ೫೨). ೨. (ಕರಾ) ಕೇರುವ ಸಾಧನ ; ಮೊರ : ಕೆರಸಿಯಲ್ಲಿ ಅಕ್ಕಿಯನ್ನು ಕೇರಿ ಸ್ವಚ್ಛಮಾಡು (ರೂಢಿ). **ಗರೆಸೆ** : ೧. (ಕ).

**ಗೆರಸಿ** : ೧. ಹಡಗೆ ಹಾರ ಮೊರಹಾರ ಗೆರಸಿಹಾರ ಮಡಕೆಹಾರ ದೆಸೆದೆಸೆಯಲ್ಲಿ ತಂದು ನೀಡುತ್ತಿರಲು (ಶೂನ್ಯಸಂ. ೩೩೩-೫); ಗೆರಸಿಯಲ್ಲಿ ಮಚ್ಚಿಗೆಮೆಣಸಿನಕಾಯಿ ಹರಡಿತ್ತು (ಕಾನೂರು. ೧೫೫); ಊರು ಬಾಯಿ ಮುಚ್ಚೀಯೇ ಗೆರಸಿ ಬಾಯಿ ಮುಚ್ಚೀಯೆ (ಗಾದೆ). **ಗೆರಸೆ** : ೧. ತನ್ನಿರ್ಕೆ ಮರಗೂಡೆ ಗೆರಸೆಯೊಳು ಮೊಗವುತ್ತಲುಂ (ಪ್ರಭುಪು. ೯-೫೭); ಮಾತಿನೊಳವಂ ಹಿಡಿವ ಗೆರಸೆಯಲ್ಲದೆ ಬಿಡುವ ಜರಡೆಯಲೀ ಫೋರ (ಹಟ್ಟಿರ. ೭-೧೧೧); ಕುಕ್ಕೆಯನ್ನೋ ಗೆರಸೆಯನ್ನೋ ತಂದು (ನನ್ನೂರು. ೧೪೫). **ಗೆರಿಸೆ** : ೧. (೩). **ಗೆರೆಸೆ** : ೧. (೩).

**ಕೆರಸೆಬಾಯಿಯವನು, ಗೆರಸೆಬಾಯಿಯವನು** = ಯಾವಾಗಲೂ ಬಾಯಿ ತೆರೆದುಕೊಂಡೇ ಇರುವವನು; ವಾಚಾಳ; ಗುಟ್ಟುರಟ್ಟು ಮಾಡುವವನು : (೩). ಗೆರಸೆಬಾವಿ = ಬಿದಿರಿನ ವರ್ತುಳಗಳನ್ನು ಬಾಯಿಗೆ ಹೊಂದಿಸಿ ಕಟ್ಟಿದ ಬಾವಿ : (೩).

[ದೇ. ‖ ತಮಿ. ಕರಚ್ಚೈ, ಕರಿಚ್ಚೈ; ತೆಲು. ಗರಿಸೆ]

**ಕೆರಸಿಗ** (ನಾ). ಒಬ್ಬಾತನ ಹೆಸರು : ಶ್ರೀಕೆರಸಿಗಂ ನನ್ನಿಯ ಸಿನ್ದಂ . . . ಕನ್ದರ್ಪನ್ದಿಪ್ಪೋಡೆಗಣ್ಡಂ (ಎಕ. XI, ಹೊಳಲ್ಕೆ. ೨೩-೪೦; 968). [?]

**ಕೆರಸು, ಕೆರಿಸು** (ಕ್ರಿ). ಕ್ಷೌರಮಾಡಿಸು; ಕೆತ್ತಿಸು : ಚೌರ ಬೆಳೆದಿದೆ ತಲೆ ಕೆರಸು (ರೂಢಿ). **ಕೆರಿಸು** : ಕೆರಿಸಬೇಕು ಮಂಡೆಯನೇಳು ಪಟ್ಟಿಯ ಮಾಡಿ (ಗಣಭಾ. ೩೨೬-೩). [< ಕೆರೆ$_1$ + -ಸು$_1$. / ತುಳು. ಕೆರೆಪು]

**ಕೆರಸೆ** 'ಕೆರಸಿ' ನೋ.

**ಕೆರಹು** 'ಕೆರ್ಪು' ನೋ.

**ಕೆರಹುಗಳೆ** 'ಕೆರ್ಪುಗಳೆ' ನೋ.

**ಕೆರಹುಗಾಲ್** 'ಕೆರ್ಪುಗಾಲ್' ನೋ.

**ಕೆರಹುಗಾಲು** 'ಕೆರ್ಪುಗಾಲ್' ನೋ.

**ಕೆರಳ್** 'ಕೆಳರ್' ನೋ.

**ಕೆರಳಿಕೆ** (ನಾ). ರೇಗುವಿಕೆ; ಉದ್ರೇಕ; ರಭಸ : ಧರಧುರದಿ ಹೊಳೆಹೊಳೆವ ಶಸ್ತ್ರದ ಕೆರಳಿಕೆಗಳೊದವಿದವು (ಕುವ್ಯಾದ್ರೋ. ಓರಿಇ. ಪರಿ. ೨೮೫).

[ಕೆರಳ್ (< ಕೆಳರ್) + -ಇಕೆ]

**ಕೆರಳಿಚು** 'ಕೆಳರ್ಚು' ನೋ.

**ಕೆರಳಿಸು** (ಕ್ರಿ). ಕೆಣಕು; ರೇಗಿಸು; ಉದ್ರೇಕಿಸು : ಈಶ್ವರಶಿರದಲಿ ಸೃಷ್ಟಿಯ ಕೆರಳಿಪ ರಾಮರಸಾಯನ ನಾನು (ಪಾಂಚಜ. ೧೭); ಚಕ್ರೇಶ್ವರನನ್ನು ಕೆರಳಿಸಬೇಕು ಎಂಬ ಹಟವು ಮನಸ್ಸಿನಲ್ಲಿ ಬಿಗಿಯುತ್ತಿದ್ದಿತು (ಶ್ರೀರಾಮ. ೧೭೯); ವಿಷಯವು ತರುಣ ವಿದ್ಯಾರ್ಥಿವಿದ್ಯಾರ್ಥಿನಿಯರ ಯೋಚನೆಯ ಸರಣಿಯನ್ನು ಕೆರಳಿಸುವಂತಹುದು (ದೂರಸ. ೪೩). [ಕೆರಳ್ (< ಕೆಳರ್) + -ಇಸು$_3$]

**ಕೆರಳು** 'ಕೆಳರ್' ನೋ.

**ಕೆರಳ್ಚಿಸು** (ಕ್ರಿ). ಕೆರಳುವಂತೆ ಮಾಡು; ಕೆಣಕು; ಕೆರಳಿಸು : ಜೊತ್ತುಗಾಱರಿಂದಿದಿರವರಂ ಕೆರಳ್ಚಿಸುವ (ದಶಕು. ೭-೭೯).

[ಕೆರಳ್ಚು (< ಕೆಳರ್ಚು) + -ಇಸು$_3$]

**ಕೆರಳ್ಚು** 'ಕೆಳರ್ಚು' ನೋ.

**ಕೆರಿಸು** 'ಕೆರಸು' ನೋ.

**ಕೆರೆ$_1$** (ಕ್ರಿ). ೧. ಉಗುರಿನಿಂದ ಗೀರು, —ಗೀಚು; ಕೆದರು; ಕೆತ್ತು : "ಕೆರೆ – ನಖಕ್ರಿಯಾಯಾಂ" (ಶಮಧಾ); ಕೆರೆಕೆರೆದು ಮೊಗೆಯೆ ಮಾಣಿಕವರಲೆಲ್ಲಂ ಬೆದಱಿ ತಾಯ ಬಸಿಱಂ ಪುಗುವಂತಿರೆ ಪೊಕ್ಕುವು (ಅನಂಪು. ೫-೭೪); ಕಿಸು ಕೊರೆ ಕೆರೆ ಕುಸುರಿದಱಿ (ಸಿದ್ಧರಾ. ೮-೨೭); ನರಸಿಂಹ ನಖದಲಿ ಕೆರೆದಡೆಯು ಸೈರಿಸುವೆನು (ಕುವ್ಯಾಭೀ. ೧೦-೭); ದೂಳಚೆಲ್ಲುತ ಗುಟುರಿಕ್ಕುತ ಕೆರೆವುತ ಗೂಳಿ ಬಂದುದು (ಭರಚ. ೨೧-೪೫). ೨. ಕತ್ತರಿಸು; ತುಂಡರಿಸು : ಲಸತ್ ಖಡ್ಗದಿ ತನ್ನ ಗೋಣ್ಕೆ[ಪಾಠಾಂ. ಕೊ]ರೆಯೆ ಕೂರ್ಪಿಂ ಮೆಚ್ಚಿದಂ ಶಂಕರಂ (ವೃಷವಿ. ೯-೬೩). ೩. ತುರಿಸು; ತಿಕ್ಕು : ನವೆ ತಡೆಯಲಾರದೆ ಅವನು ಮೈಯೆಲ್ಲ ಕೆರೆದುಕೊಳ್ಳತೊಡಗಿದನು (ರೂಢಿ). ೪. ಕ್ಷೌರಮಾಡು; ಕೆತ್ತು; ಬೋಳಿಸು : ತಿರಿದಿಹರೆ ಕೂಳಕ್ಕು, ಕೆರೆದಿಹರೆ ಬೋಳಕ್ಕು (ಸರ್ವಜ್ಞ. ೪೦೩).

[ದೇ. ‖ ತಮಿ. ಚಿರೈ; ಮಲ. ಚಿರ; ತುಳು. ಕಿರೆಪು; ಕೋಲಾ. ಕೆರ್ಗ್; ಮಲ್ತೊ. ಕರೆ, ಕೆರ್ಜೆ]

**ಕೆರೆ$_2$** 'ಕೆಱೆ' ನೋ.

**ಕೆರೆ$_3$** (ನಾ). ದನಗಳ ಹಿಂಡು; "ಗೋಸಮೂಹ" (ಕಾಲೂರ.ಅಡಿಟ) : ಕೊಂದು ಕೆರೆಗಳನಳ್ಕಿಸುವುದೆಂಬ ಗುಮಿತ ಬರಲೊಂದಾಗಿ ತರುವಲಿಗಳೆದ್ದರುರೆ ಮುಳಿದು (ಕಾಲೂರ. ೯೦-೧೭೬). [?]

**ಕೆರೆಕಟ್ಟೆ** (ನಾ). ೧. ಕೆರೆ ಮತ್ತು ಕಟ್ಟೆ. ೨. ಕೆರೆಯಕಟ್ಟೆ, —ದಂಡೆ : ಕೆರೆಕಟ್ಟೆಯ ಮೇಲೆ ಅವರು ಹೋಗುತ್ತಿದ್ದರು (ರೂಢಿ).

[ಕೆರೆ$_2$ (< ಕೆಱೆ) + ಕಟ್ಟೆ$_1$]

**ಕೆರೆತ** (ನಾ). ಕೆರೆಯುವಿಕೆ; ಗೀರುವಿಕೆ : "ಖಿಲ – ವಿಲೇಖನೇ, ಕೆರೆತದೊಳ್" (ಕಾಶಕ್ಯ. ೨೨೭). [ಕೆರೆ$_1$ + -ತ$_2$]

**ಕೆರೆಯೊಡಲು** (ನಾ). ಕೆರೆಯ ಒಳಭಾಗ, —ಅಂಗಳ : (೩).

[ಕೆರೆ$_2$ (< ಕೆಱೆ) + ಒಡಲು (< ಒಡಲ್)]

**ಕೆರೆಯೊಡೆ** (ಕ್ರಿ). ೧. ಕೆರೆ ಒಡೆದು ಹೋಗು. ೨. ಕೆರೆಯನ್ನು ಹೊಡೆ : ಕೆರೆಯೊಡೆದವನ ಕೈಯಿಂದ ಕಂಬಳಿ ಕಿತ್ತುಕೊಂಡ (ಗಾದೆ).

[ಕೆರೆ$_2$ (< ಕೆಱೆ) + ಒಡೆ$_1$]

**ಕೆರೆಹಳ್ಳಿ** 'ಕೆಱೆಪಳ್ಳಿ' ನೋ.

**ಕೆರ್ಗಟ್ಟು** 'ಕೇರ್ಗಟ್ಟು$_2$' ನೋ.

**ಕೆರ್ಚು, ಕೆಚ್ಚು$_4$** (ನಾ). ೧. ಮರದ ಒಳಗಿನ ಗಟ್ಟಿಯಾದ ಭಾಗ; ಚೇಗು; ದಿಂಡು; ತಿರುಳು; ಸಾರ : ಆ ಕಲಿವೃಕ್ಷದ ಕೆರ್ಚಿಂ ಶ್ರೀಕರವೆನಿಪಕ್ಷಯುಗಳವಂ ಮಾಡಿ ಧರಿತ್ರೀಕಾಂತಂ ಪರಸಿತ್ತಂ ಸ್ವೀಕರಿಸಿವನೆಂದು ಬಾಹುಕಂಗೆ (ನಳಚಂ. ೬೯೪). **ಕೆಚ್ಚು$_4$** : ೧. "ಸಾರಃ, ಮಜ್ಜನ್ – ಈ ೨ ಕೆಚ್ಚು" (ನಾಚಿರಾ. ೧೬೫); ಅರವಿಂದಪ್ರಿಯನಿಂದೆ ಕೆಚ್ಚು ಶಶಿಯಿಂ ಸ್ನಿಗ್ಧಂ ಸದುಗ್ಧದ್ರುಮಂ (ಜಾತತಿ. ೫-೧೧); ಮುಂದುರದೊಳ್ ನಟ್ಟ ಕೆಚ್ಚಿನ ಮುಂಡಿಗೆ ಮುಱಿಯೆ (ಗಿರಿಕ. ೨-೧೦೫ ವ); ಧೈರ್ಯದ ಕೆಚ್ಚಿನೆದೆ ಕರಗಿತ್ತು (ಕುವ್ಯಾದ್ರೋ. ೮-೩೧); ಕೆಚ್ಚು ಕದಳಿಯೊಳುಳ್ಳಡದು ತಾ ಜಗಕೆ ಚಿತ್ರವಲ (ತೊರರಾ. ೩-೬-೧೮). ೨. ಧೈರ್ಯ; ಸಾಹಸ; ಶಕ್ತಿ : ಈಸು ನಮ್ಮಲಿ ತಾಗಿ ನಿಂದವರಾರು ಕೆಚ್ಚುಳ್ಳವರು ಕಲಿತನದ (ಕುವ್ಯಾದ್ರೋ. ೧೫-೬೫); ಬಲುಗೈಗಳೆದೆಗಳ ಕೆಚ್ಚು ಕರಗಿತಲಾ (ಕುವ್ಯಾಗ. ೧-೩೦); ಇದನ್ನು ಅಚ್ಚುಮಾಡಿಸುವ ಕೆಚ್ಚು ತೋರಲಾಗಿದೆ (ದ್ರಾವಿವಿ. XII ಮೊದಲಮಾತು). ೩. ಸೊಕ್ಕು; ದರ್ಪ : ಅವರಿವರೆನ್ನದೆ ಚರಣಕ್ಕೆಱಗಲು ಅಯ್ಯತನವೇಱಿ ಬೆಬ್ಬನೆ ಬೆಱೆವೆ ನಾನು ಕೆಚ್ಚು ಬೆಳೆಯಿತ್ತಯ್ಯಾ. ಆ ಕೆಚ್ಚಿಂಗೆ ಕಿಚ್ಚನಿಕ್ಕಿ ಸುಟ್ಟು . . . ಬೆಳುಗಾರದಂತೆ ಮಾಡು (ಬಸವ. ೨೫೩); ಬಿಗಿದ ತಿಮಿರದ ಕೆಚ್ಚು ಸೂರ್ಯನ ಸೊಗಡು ಹೊಯ್ದರೆ ಮುಱಿಯದೇ (ಕುವ್ಯಾಕ. ೧-೨೨).

[?]

**ಕೆರ್ಚುವೀೞ್** (ಕ್ರಿ). ದಡ್ಡುಗಟ್ಟು; ಗಟ್ಟಿಯಾಗು : ಭವಭವದೊಳ್ ಪೆರ್ಚಿದ ಕೆರ್ಚುವಿಟ್ಟ [ಪಾಠಾಂ. ದರ್ಪ] ಮಿಥ್ಯಾತ್ವದವರ್ಗೆ ಜಿನಧರ್ಮಕಥಾಶ್ರವಣಂ . . . ಕಯ್ಪೆ ವಲಂ (ಅಜಿಪು. ೨-೯೨).

[ಕೆರ್ಚು + ಬೀೞ್$_1$]

**ಕೆರ್ಚೇಱು** (ಕ್ರಿ). ಗಟ್ಟಿಗೊಳ್ಳು; ತಿರುಳು ಹೊಂದು; ಹುರಿಗೊಳ್ಳು: ಕೆರ್ಚೇಱಿದ ವೈರಾಗ್ಯದ ಪೆರ್ಚಿಂ (ಪಂರಾಮಾ. ೮-೩೫).
[ಕೆರ್ಚು + ಏಱು$_1$ (< ಏಱ್$_1$)]

**ಕೆರ್ಪು, ಕೆಪ್ಪು$_2$, ಕೆರ, ಕೆರಪು, ಕೆರವು, ಕೆರಹು** (ನಾ). ಮೆಟ್ಟು; ಎಕ್ಕಡ; ಪಾದರಕ್ಷೆ: "ಕೆರ್ಪು ಪಾದುಕೆಯೊಳ್ ತಳೆದಿರ್ಕುಂ" (ಕರ್ಣಾನಿ. ೭); ಅವರುಂ ತಂತಮ್ಮ ಕೆರ್ಪುಗಳೊಳ್ ತಗುಱ್ಚಿದರ್ (ವಡ್ಡಾರಾ. ೨೫-೨೮); ತತ್ಕ್ಷಾಳದೆ ಕೆರ್ಪಿಂ ಮುಚ್ಚಿ ಸಮಾಳೋಕ ದೊಳಿಂದ್ರನಾಕೆಯುಂ ಬೆಸಗೊಂಡಂ (ಎಇ. XVI, ೫-೬೨; 978); ಮುಳ್ ಕಾರಣಮಾಗಿ ಕೆರ್ಪಂ ಸೂಳೆ ಕಾರಣಮಾಗಿ ಕುಂಟಣಿಯಂ . . . ಕೊಂಡಾಡುವಂತೆ (ಧರ್ಮಾಮೃ. ೧೪-೧೩೪); ನಿಮ್ಮಡಿಗಳ ಕೆರ್ಪಂ ಪಿಡಿ ದವನ ಚರಣವಾರ ಮಕುಟದೊಳ್ ಬೀಳದು (ಬಸರ. ೬-೧೦೩); ಕಟ್ಟಿದ ಸುವ್ರತಸೂತ್ರಂ ಮೆಟ್ಟಿದ ಕೆರ್ಪುಟ್ಟಿವಲ್ಕಲಂ (ಅನಂಪು. ೧೦-೫೬); ಭಜಕನಾ ಗುಡಿಯನೊಯ್ಯನೆ ಕೆರ್ಪಂ ತಾಳ್ದ ಕಾಲ್ಗಳಿಂದೊಳಪೊಕ್ಕಂ (ವೃಷವಿ. ೩೪-೮). **ಕೆಪ್ಪು$_2$**: ಪತ್ರಿಯಂ ಬರುತೆ ಕೆಪ್ಪಿನ ಕಾಲೊಳೆ ನೂಂಕಿ (ಸಮಪು. ೧೦-೭೮); ಸತಿಯರ್ವ್ವರೆ ಕೆಪ್ಪಂ ಕಟ್ಟಿ (ಸೌಇಇ. IX-i, ೧೧೮-೪೩; 1057); ಎಡಗಾಲ ಕೆಪ್ಪಿನಂ ದೆಸೆಮುಸಿಯಾಗಿ ಮುಚ್ಚಿದಳ್ (ಧರ್ಮಾಮೃ. ೧೧-೧೮೨ ಅಡಿಟಿ); ಕಟ್ಟಾನೆಯಂ ಕೆಪ್ಪನಳ ವಡಿಸುವಂತೆ ಮಡದೊಳಮುಂಗುಟದೊಳಳವಡಿಸಿದ . . . ಬಲ್ಪಿಂಗಂ (ಅರ್ಧನೇ. ೫-೧೧೩ ವ). **ಕೆರ**: "ಪಾದತ್ರಿ – ಕೆರದ" (ಬಾಹಟೀ. ೨-೧-೨೧ ವ); ಒತ್ತುವ ಕೆರ ಹೊಲ್ಲದ ಸತಿ ಮುತ್ತಿಗೆಗೊಳಗಪ್ಪ ದುರ್ಗ ವಧಮನ ಕೆಳೆ (ನೀತಿಸಾ. ೫೦೨); ಕಾಲಿನಲ್ಲಿ ಕೆರ ಇದ್ದರೆ ಅದರಲ್ಲೇ ಬಾರಿಸುತ್ತಿದ್ದ (ನನ್ನೂರು. ೨೦೧); ಕೆರದ ಅಳತೆಗೆ ಕಾಲು ಕೊಯಿ ಸಿದಹಾಗೆ (ಗಾದೆ). **ಕೆರಪು**: ಕೆರಪಂ ತಲೆಗೇಱಿಸಿಕೊಳ್ವರೆ ಕೂರ್ತೊಡೆ (ಧರ್ಮಾಮೃ. ೮-೨೧೦); ಕಾಲ್ಗೆ ಕೆರಪು ಪಸಿವಿಂಗೆ ಕೂಱ್ (ಧರ್ಮಾಮೃ. ೯-೧೦೮). **ಕೆರವು**: "ಪಾದುಕಮುಪಾನತಿಯೆನಲ್ ಕೆರವು" (ಮಂಗರಾ. ೬೧-೧೮); ಸೂಳೆ ಕಾಲಿಗೆ ಕೆರವಾದ (ಕನ್ನಜಾ. ೧೨೭); ತಗೆಬಗೆಯೊಳೋಡಾಡಿ ಕೆರವೊಂದು ಸವೆಯದಿರೆ (ಕಾಲೂರ. ೭೩-೧೩೨). **ಕೆರಹು**: ಹಾಗದ ಕೆರಹ ಹೊಱಗೆ ಕಳೆದು ದೇಗುಲಕ್ಕೆ ಹೋಗಿ ನಮಸ್ಕಾರ ಮಾಡುವನಂತೆ (ಬಸವ. ೧೯೯); ಕೆರಹಿಂದ ಮುಚ್ಚಿದಂ ಭವಿ ಕಾಣದಂತಲ್ಲಿ (ಸಾಮರ. ೨೧೧-೨೫); ಕೆರಹಂ ಸೂರೆಯಂ ತಂದೈ (ಪಾರ್ಶ್ವಪು. ४-೨೪); ಕಾಲ ಕೆರಹಿಂದಿಕ್ಕಿ ನೂಂಕುವ ಭಕ್ತಿಯುಂಟೆ ಯಿದಾರು ಮೆಚ್ಚುವರು (ಬಸಪು. ೧೮-೨೬).

[ದೇ. ‖ ತಮಿ. ಚೆರುಪ್ಪು; ಮಲ. ಚೆರಿಪ್ಪು; ಕೋಟ. ಕೆರ್ವ್; ತೊದ. ಕೆರ್ಪ್; ಕೋಲಾ. ಕೆಪ್ರಿ; ಪರ್ಜಿ. ಚೆರುಪ್, ಚೆರ್ಪು; ಗೊಂಡಿ. ಸರ್ಪುವರ್; ಕುವಿ. ಸೆಪ್ಪೂ]

**ಕೆರ್ಪುಗಳೆ, ಕೆರವುಗಳೆ, ಕೆರಹುಗಳೆ** (ಕ್ರಿ). ಮೆಟ್ಟುಗಳನ್ನು ಕಳಚು, —ಬಿಚ್ಚು: ಉಪಾನತ್ ಪರಿತಜನಮಿವ – ಕೆರ್ಪು [ಪಾಠಾಂ. ಕೆರವು] ಗಳೆವುದೆಂತಂತೆ (ನೀತಿವಾ. ೨೯-೧೦); ತೊಱೆಗಾಣದೆ ಕೆರ್ಪುಗಳೆದು ನಗಿಸುವೆಗ್ಗನಂತೆ (ಧರ್ಮಾಮೃ. ೬-೮೬). **ಕೆರವುಗಳೆ**: ಮೇಲಿನ 'ನೀತಿವಾ' ಪ್ರಯೋಗದ ಪಾಠಾಂತರವನ್ನು ನೋಡಿ. **ಕೆರಹುಗಳೆ**: ವೃದ್ಧಮಾಹೇಶ್ವರಂ ಶಿವಾಲಯದೊಳಗೆ ಕೆರಹುಗಳೆಯದೆ ಪುಗಲು (ನಂಬಿರ. ೭-೧೦೪). [ಕೆರ್ಪು + ಕಳೆ$_1$]

**ಕೆರ್ಪುಗಾಲ್, ಕೆರಹುಗಾಲ್, ಕೆರಹುಗಾಲು** (ನಾ). ಚಪ್ಪಲಿಹಾಕಿದ ಕಾಲು; ಮೆಟ್ಟಿನಕಾಲು: ಈಯೆಡೆಯೊಳ್ ಕೆರ್ಪುಗಾಲೊಳಿರ್ದಪೆನೆ (ಧರ್ಮಾಮೃ. ४-೧೦೨). **ಕೆರಹುಗಾಲ್**: ಅರಮನೆಯ ಕೆರಹುಗಾಲ ಬಂಟರು ಬರಸಲ್ಲದು (ಸೌಇಇ. ೧೯೩೦, ಉಡುಪಿ. ೫೯೦-೩೧; 1368); ಪಿನಾಕಿಭವನವನೊಬ್ಬ . . . ಕೆರಹುಗಾಲ್ವೆರಸಿ ನೀಕರಿಸಿ ಪೊಗಲೊಳಗೆ (ಬಸಪು. ೪೯-೮); ಎದೆಯನು ಕೆರಹುಗಾಲಲಿ ಮೆಟ್ಟಿ ನಿಂದು (ನಿಭಾಗ. ೫-೧೧-೩೫); ಕೆರಹುಗಾಲಿಂದೊದೆಯಲೊಲಿದೆ ನೀಂ (ಚೆಬಪು. ೫೬-೪೬); ಪೂಜೆಯಂ ಕೆರಹುಗಾಲಿಂದೆ ಕೆಡಹುತ್ತೆ (ರಾಘಚ. ೬-೧೭). **ಕೆರಹು ಗಾಲು**: ಜೈನನೋರ್ವಂ ಕೆರಹುಗಾಲಿನಿಂದೆ ಪುಗೆ (ಪಾಸೋಪು. ४-೯೦).
[ಕೆರ್ಪು + ಕಾಲ್$_1$]

**ಕೆರ್ಪುದಳೆ** (ಕ್ರಿ). ಪಾದರಕ್ಷೆಯನ್ನು ಹೊಂದು, —ಹಿಡಿ: ನಿಮ್ಮ ಬಾಗಿಲ್ಗಾಪಿನಾಳ್ ನಿಮ್ಮ ಕೋಮಲಾಂಘ್ರಿಯ ಕೆರ್ಪುದಳೆವವಂ (ಪದ್ಮರಾ. ४-೧೭). [ಕೆರ್ಪು + ತಳೆ$_1$]

**ಕೆಲ$_1$** (ನಾ). ೧. ಪಕ್ಕ; ಬದಿ; ಮಗ್ಗುಲು; ನೆರೆ; ಸನಿಹ: "ಕೆಲಂ ಪಾರ್ಶ್ವ ಸಂಜ್ಞಿಕಂ" (ವಸ್ತುಕೋ. ೬೮-೬); "ಕೆಲ ಸನಿಹಂ ಪಕ್ಕಂ ಪೊರೆ ಸಲೆ ಪೊರ್ದುಗೆಯೆನೆ ಸಮೀಪಂ" (ಕವಿಕಂ. ೧೮೬); ಏಬ್ಬಿಗ ಕೊಡಲ ಮೂಡಗ ಕೆಲ ಬನ್ದು (ಇಆ. XII, ೧೬-४; 813); ಮದ ವಾರಣಮಂ ಸೋಂಕಿ ಕೆಲದೊಳೊಯ್ಯನೆ ಪೋದಂ (ಕವಿರಾ. ೩-೯೩); ಒಂದು ಕೆಲದಿಂದೊಂದು ಕೆಲಕ್ಕೆ ಮಗುಟಿದೆ (ವಡ್ಡಾರಾ. ೧೧೧-೧೨); ಸಿರಿಯುಮಾಕೆಯು ಕೆಲದೊಳ್ ನಸು ಮುಸುಳ್ದು ತೋರ್ಪಳ್ (ಪಂಪಭಾ. ೧-೪೦); ಹತ್ತೆ ಕರೆಯುತಿರೆ ಮತ್ತೆ ಕೆಲಕ್ಕೆ ಹೋಗಿ ಶರಣೆಂದು (ಬಸವ. ೨೪೫); ಕೆಲಕೆ ಸರಿವವನಲ್ಲ ಮಲೆವರ ಮಾರಿ ಮಾಗಧನು (ಕುವ್ಯಾಸ. ೨-೧೮); ಕೆಲದೆ ನಿಂದು ನಸು ನಾಣ್ಚುತ (ಹದಿಬ. ೩-೧೬). ೨. ಪ್ರದೇಶ; ಸ್ಥಳ: ಇರ್ದುದು ಮುಸುಳ್ದಿಸಕಂಗೆಟ್ಟು ಬಲದ ಮುಯ್ಪಿನ ಕೆಲದೊಳ್ (ಆದಿಪು. ೧೪-೧೧೭); ತನ್ನ ಮುನ್ನಿನ ಬಯ್ತು ಕೆಲದೊಳ್ ಪುಲಿಯಾಗಿ ಪುಟ್ಟಿದಂ (ಚಾವುಂಪು. ೩೫-೧೭); ಆ ಕೆಲ ದೊಳ್ ಶತಖಂಡಮಾಗಿರ್ದ ಪಾವುಮಂ ಕಂಡು (ಪಂಚತಂ. ೧೮೯-೧೧). ೩. ಹೊರಭಾಗ; ಬಹಿರಂಗ: ಕೆಲಕ್ಕೆ ಶುದ್ಧನಾದೆನಲ್ಲದೆ ಎನ್ನ ಮನಕ್ಕೆ ಶುದ್ಧನಾಗೆನೇಕಯ್ಯಾ (ಬಸವ. ೨೮೩).

**ಕೆಲಂ** = ಪಕ್ಕಕ್ಕೆ; ಬದಿಗೆ; ಪಾರ್ಶ್ವಕ್ಕೆ: ಕೆಂಡಂಗಳನೊಂದು ಕೆಲಂ ಸಾರ್ಚಿಪೋದಂ (ವಡ್ಡಾರಾ. ೧೧೪-೧೨); ನ್ಯಗ್ರೋಧಬೀಜಂ ಕೆಲಂ ಸಿಡಿದುಂ ಪೆರ್ಮರನಾಗದೇ (ಸೋಮೇಶ. ೩೫). **ಕೆಲಸಿರಿಸು** = ಪಕ್ಕಕ್ಕೆ ಸರಿಸು; ಆಚೆಗೆ ತಳ್ಳು: ತನ್ನಯ ಯೋಗನಿಷ್ಠೆ ಸಮಾಧಿ ಯನು ಕೆಲಸಿರಿಸಿ ಮುದದಿಂದ (ಅಂಬಿಕಾ. ೩-೧). **ಕೆಲಕೆಲ, ಕೆಲಗೆಲ** (ದ್ವಿರುಕ್ತಿ): ಅಂಕದಭಿಮನ್ಯುವುಂ ಕೆಲಕೆಲದೊಳೋಲಗಿಸುತ್ತುಂ ಬರೆ (ಪಂಪಭಾ. ೯-೯೫ವ); ನಿಂದುದು ಚತುರ್ಬಲಂ ಕೆಲಕೆಲದೊಳೊಡ್ಡಾಗಿ (ಜೈಮಿಭಾ. ೩೩-೨೩); ಸುಱುವುದಳೆ ಕೆಲಗೆ [ಪಾಠಾಂ. ಕೆ]ಲದೊಳ್ (ಕವಿರಾ. ೩-೧೨೭); ಸಸಿಯ ಕೆಲಗೆಲದೊಳೊದವಿದ ಕಸಮಂ ಕಿೞ್ತು (ಲೋಕೋಪ. ೬-೯); ಕೋಮಲೆ ತದ್ದು ಕೂಲಪಟ್ಟದ ಕೆಲಗೆಲದೊಳ್ ತೊಡೆದಳರುಣ ಚಂದನರಸಮಂ (ಜಗವಿ. ೧೨-೭೯). **ಕೆಲಕೊತ್ತು** = ಪಕ್ಕಕ್ಕೆ ತಳ್ಳು, —ನೂಕು: ಚೈತ್ರರಥಮಂ ಕೆಲ ಕೊತ್ತುವಪೋಲ್ (ಕುಸುಮಾ. ೧೧-೧೭४); ಏಕಾವಳಿಗಳನು ಕೆಲಕೊತ್ತಿ (ಕುವ್ಯಾಅ. ೧೮-೨೨); ಸತಿಯರ ಸಂದಣಿಯ ಕೆಲಕೊತ್ತಿ ನುಡಿದಳು (ನಳಚ. ೩-೩೫). **ಕೆಲದವರ್** = ಪಕ್ಕದಲ್ಲಿರುವವರು: ಎಲ್ಲಿದರ್ಪಳಿಂದು ಕೆಲದವರಂ ಬೆಸಗೊಂಡೊಡೆ (ವಡ್ಡಾರಾ. ೧೧೭-೧೮); ಪರಶಿವನಣುಗ ನಾನೆನಲ್ ಕೆಲದವರ್ ನಗದಿಹರೆ (ಚೆಬಪು. ४೦-೬). **ಕೆಲನ್** = ಪಕ್ಕದ ಜನ; ಮಗ್ಗುಲಲ್ಲಿ ಇರುವ ಜನ: ಅಂಧನೃಪಂ ತನ್ನಯ[ಜ]ನದೊಳ್ ಕೆಲನಱಿಯೆ ಕೃತಕಶೋಕಂಗೆಯ್ದಂ (ಪಂಪಭಾ. ೩-೮).

[ದೇ. ‖ ತಮಿ. ಕಿಲ; ತೆಲು. ಕೆಲಂಗು, ಕೆಲಾಕು, ಕೆಲನು; ಪರ್ಜಿ. ಕೆಲ]

**ಕೆಲ$_2$**, ಕೆಲವು, ಕೆಲು (ಸ). ಕೊಂಚ; ಸ್ವಲ್ಪ: ಸಂಧಿಗಳುಂ ಕೆಲವೆಡೆಯೊಳ್ ಬಂದು (ಕವಿರಾ. ೧-೯೮). ಕೆಲ ಹೇಱುಗಳನುದ್ದಾಮವುತಿ ನೀಂ ಕೊಂಡು ಹೋಗೈ (ಬಸಪು. ೨೩-೩೯); ಕೆಲಹೊತ್ತು ವಿಶ್ರಮಿಸಿಕೊಳ್ಳಿ (ರೂಢಿ). **ಕೆಲವು**: ಬುಧಜನಕ್ಕೆ ಕೆಲವಂ ಪೇೞ್ವೆಂ (ಕವಿರಾ. ೧-೪೭); ತಪಂಬಟ್ಟು ಕೆಲವು ದಿವಸದಿಂದೊಳಗೆ (ವಡ್ಡಾರಾ. ೭೪-೨೨); ನಿಲ್ಲದಲ್ಲಿ ಕುಸುಮುಂ ಕೆಲವಲ್ಲುಗೆ (ಪಂಪಭಾ. ೫-೧೦೩); ಕೆಲವಂ ಬಲ್ಲವರಿಂದ ಕಲ್ತು (ಸೋಮೇಶ. ೧); ಒದೆದು ಕೆಲವನು ಮುಷ್ಟಿಯಲಿ ಮೋದಿದನು ಕೆಲವನು (ಕುವ್ಯಾದ್ರೋ. ೨-೮೦); ರಳಕುಳ ಶಿಥಿಲ ಸಮಾಸ ಮುಂತಾದವಱೊಳಗಿಲ್ಲಿ ಕೆಲವುಳ್ಳರುಂಟು (ಭರತ. ೧-೮). **ಕೆಲು**: ಆ ಬಳಿಕ ಕೆಲು ದಿವಸದ ಮೇಲೆ (ರಾಜೇಂದ್ರ. ೪).

**ಕೆಲಂಬರ್, ಕೆಲಂಬರು, ಕೆಲಬರ್, ಕೆಲಬರು, ಕೆಲರ್, ಕೆಲವರು** = ಕೊಂಚ ಜನ; ಸ್ವಲ್ಪಮಂದಿ: ಕೆಲಂಬರ್ ಕೊಳಲೊಲ್ಲದವರ್ (ವಡ್ಡಾರಾ. ೯೩-೧); ಕೆಲರಂ ಕುಱಿದಱಿದಱಿದಂ ಕೆಲಂಬರಂ ಸಂಧಿ ಸಂಧಿಯುಂ ಪಱಿಯೊಚ್ಚಂ (ಗದಾಯು. ೩-೧೦); ಕೆಲಂಬರ್ ವಿವೇಕಿಗಳಿಂತೆಂದರ್ (ಧರ್ಮಾಮೃ. ೨-೬೧); ಕೆಲಂಬರು ಸಕಲನೆಂಬರು ಕೆಲಂಬರು ನಿಷ್ಕಲನೆಂಬರು (ಮಹಾದೇ. ೨೦-೫); ಮಕ್ಕಳೆಲ್ಲಂ ನೆರೆದು ಕೆಲಂಬರು ಸುತ್ತಿಮುತ್ತಿ ಕೆಲಂಬರು ಬಂಡಿಯ ಮುಂಕಣಿಯಂ ಪಿಡಿದು (ನಂಬಿರ. ೨-೧೮); ಮಾತಱಿವರ್ ಕೆಲಬರ್ (ಕವಿರಾ. ೧-೧೭); ಲಯದಿಂದೆಬಲದೆ ಕುಣಿದರ್ ಕೆಲಬರ್ (ಅಜಿಪು. ೫-೩೨); ವರವಿನೀತರು ಕೆಲರು ಕೆಲಬರು ಧೂರ್ತರಾಗಿಹರು (ಕುವ್ಯಾದ್ರೋ. ೧೩-೯); ಕೆಲಬರು ಕೃಷ್ಣನೆಂಬರು ಕೃಷ್ಣನಲ್ಲೆಂದು ಕೆಲಬರು ಜೂದ ಕಟ್ಟುವರು (ಮೋಹತ. ೧೩-೨೨); ಕೆಲರೊಡವಂದಾದುದಯದೊಳೆ ಸಾರ್ವರ್ (ಕಾವ್ಯಸಾ. ೮೯೯ ಶೂದ್ರಕ); ಗೊಜ್ಜಿಗೆ ಭೂಪಾಳನನೆಯ್ದುವ ಭೂಮಿಪಾಳಕರ್ ಕೆಲರೊಳರೇ (ಎಇ. XIII, ೩೩೦-೧೧; 929); ನೋಡದಂತೆ ನೋಡೆ ಕೆಲರ್ (ಪಂಪಭಾ. ೩-೫೦); ಕೆಲರ್ ವಿವೇಕಿಗಳ್ . . . ಮೆಟ್ಟಿ ಬರಲೊಲ್ಲದೆ (ಚಾವುಂಪು. ೭೩-೧೪). ಹೊಗಳಿ ಕೆಲವರ ಹೊಳ್ಳುಗಳೆವುತ ನಗುತ ಕೆಲವರನು (ಕುವ್ಯಾಕ. ೫-೨). **ಕೆಲಕೆಲಬರ್, ಕೆಲಕೆಲರ್, ಕೆಲಕೆಲರು** (ದ್ವಿರುಕ್ತಿ): ಕರೆವುದು ಕೆಲಕೆಲಬರ ನೆಱೆ ನೆರೆವುದು (ಧರ್ಮಾಮೃ. ೩-೧೩೧); ಧರ್ಮದ ಪೆರ್ಮೆಯಿಂ ಕೆಲಕೆಲರ್ (ಅಜಿಪು. ೧೨-೧೦); ಕೈದು ರಥವನು ಬಿಸುಟು ಕೆಲಕೆಲರು (ಕುವ್ಯಾದ್ರೋ. ೧-೬೯); ಕೆಲಬರೂರ್ಧ್ವಮುಖಾಂಘ್ರಿಯಲಿ ಕೆಲಕೆಲರು ಜನಮಧ್ಯದಲಿ (ತೊರರಾ. ೩-೧-೧೪); ಸನ್ನೆಮಾಡಿದಳೆಂದು ಕೆಲಬರು . . . ಓರೆನೋಟದ ಕಣ್ಣಿನಿಂದೀಕ್ಷಿಸಿದಳೆಂದಾಡಿದರು ಕೆಲಕೆಲರು (ನಳಚ. ೩-೬೦). **ಕೆಲಕೆಲವು** (ದ್ವಿರುಕ್ತಿ): ಅತಿರಹಸ್ಯಂಗಳಪ್ಪ ಕೆಲಕೆಲವು ಅವಿನಾಣಂಗಳ ನಾಣ್ಚೆ ಬಂಚಿಸಿ (ಆದಿಪು. ೩-೪೩ ವ); ಕೆಲಕೆಲವು ನಾಯ್ಗಳುರ್ಕಿಂ ತೊಲಗದೆ ಪಾಯ್ದು (ಧರ್ಮಾಮೃ. ೩-೭೮).

[ದೇ. ‖ ತಮಿ. ಚಿಲ; ಮಲ. ಚಿಲ; ತುಳು. ಕೆಲ; ಕೆಲವು; ತೆಲು. ಚಿಲಿವು, ಚಿಲುವು]

**ಕೆಲಂದೆಗೆ** (ಕ್ರಿ). ಪಕ್ಕಕ್ಕೆ ಸರಿಸು, —ತೆಗೆ: ತನ್ನ ತುರಂಗಮುಂ ಮಹಾಜವದೊಳ್ ಕಂಡು ದಾಂಟಿಸಿ ಕೆಲಂದೆಗೆಯೆಂಬನಿತಕ್ಕೆ ಮುಂಚಿ ಮುನ್ನವೆ ಸಚಿವಾಶ್ವಮೈದೆ (ರಾಜಶೇ. ೧೩-೯೬).

[ಕೆಲ$_1$ + ತೆಗೆ$_1$]

**ಕೆಲಂದೊಲಗು** (ಕ್ರಿ). ಪಕ್ಕಕ್ಕೆ ಹೋಗು; ಆಚೆಗೆ ಹೋಗು: ಪಾಯ್ತರೆ ಮುಸುಡೆತ್ತಿ ಗರ್ಜಿಪ ಕೆಲಂದೊಲಗುತ್ತಿರೆ ದಾಡೆಗುಟ್ಟಿ ನಿರ್ಭರದೆ ಪಳಂಚಲಪ್ಪಳಿಪ (ಶಬಶಂ. ೪-೧೧).

[ಕೆಲ$_1$ + ತೊಲಗು (< ತೊಲಂಗು)]

**ಕೆಲಂದೋಱು** (ಕ್ರಿ). ಪಕ್ಕಕ್ಕೆ ಕಾಣು; ಮಗ್ಗುಲಲ್ಲಿ ತೋರು: ಏಱುಂಜವ್ವನೆ ಮೇಲುದು ಜಾಱಿ ಕೆಲಂದೋಱಿ ತೋರವೊಲೆಗಳ್ (ರಾಜಶೇ. ೨-೨೦). [ಕೆಲ$_1$ + ತೋಱು$_1$ (< ತೋಱ್)]

**ಕೆಲಂಬಿಡಿ** (ಕ್ರಿ). ಪಕ್ಕವನ್ನು ಹಿಡಿ; ಮಗ್ಗುಲಾಗು: ಅವಱ ಕೆಲಂಬಿಡಿದೊಂದೊಂದ ವಿರಳ ನವಧೂಪ ಧೂಮ ಧೂಸರಿತ ನಭೋವಿವರಂ (ಆದಿಪು. ೧೦-೩೦); ಚಂದ್ರಿಕಾಜಾಲದವೊಲ್ ಕೆಲಂಬಿಡಿದು ಭೋರ್ಗರೆಯಲ್ (ಕಾದಂಪೂ. ೬೯೧); ಬರೆ ಬಳಸುಮರ್ಕಕೀರ್ತಿಯುಮೆರಱ್ಕೆಲಂಬಿಡಿದು ಜನಕನುಂ ಮಾವನುಮೆಟ್ಟಿರೆ (ವರ್ಧಪು. ೮-೩೮). [ಕೆಲ$_1$ + ಪಿಡಿ$_1$]

**ಕೆಲಂಬೊಗು** (ಕ್ರಿ). ಒಂದು ಪಕ್ಕಕ್ಕೆ ಹೋಗು: ಗುರುಗಳತ್ತಣಿಂ ಕೆಲಂಬೊಕ್ಕಂ (ಶಬ್ದಾನು. ೨೨೧ ಪ್ರಯೋ). [ಕೆಲ$_1$ + ಪೊಗು]

**ಕೆಲಂಬೊಳ್ತು** (ನಾ). ಕೊಂಚಸಮಯ; ಸ್ವಲ್ಪಹೊತ್ತು: ತಿಳಿಗೊಳದೊಳಗೆಳಸಿ ಮುಳುಂಗಿ ವಿನೋದದಿ ಜಲನಾಡಿದುವು ಕೆಲಂಬೊಳ್ತು (ಜಯಕಾ. ೫-೫೭). [ಕೆಲ$_2$ + ಪೊಳ್ತು (< ಪೊೞ್ತು)]

**ಕೆಲಕಡೆ** (ನಾ). ಪಕ್ಕದ ಪ್ರದೇಶ; ಮಗ್ಗುಲು; ಪಾರ್ಶ್ವ: ಒಡೆಯನಿದಿರಲಿ ಕುಳ್ಳಿರದೆ ಕೆಲಕಡೆಯ ಕೈದೀವಿಗೆಯ ಮಱೆಯಲಿ ಮಿಡುಕದಿರ್ದುದು . . . ಪರಿವಾರ (ಕುವ್ಯಾಕ. ೧-೧೮); ಬಿಡು ತರಳತನವನು ಬಾಯೆನುತ ಕೆಲಕಡೆಗೆ ಕೊಂಡೊಯ್ದು (ತೊರರಾ. ೪-೯-೧೫); ನುಡಿಯ ಕೇಳುತ ನಿಯಮವನು ಕೆಲಕಡೆಯಲಿರಿಸಿದಳಬಲೆ (ನಿಭಾಗ. ೪-೫-೪೭).

[ಕೆಲ$_1$ + ಕಡೆ$_2$]

**ಕೆಲಚಾಚು** (ಕ್ರಿ). ಪಕ್ಕಕ್ಕೆ ಸರಿಸು; ಮಗ್ಗುಲುಮಾಡು; ನಿವಾರಿಸು: ಹಲವು ನಯನೀತಿಯಲಿ ಚಿತ್ತದ ಕಲುಷವನು ಕೆಲಚಾಚಿ ನಗರಕೆ ಕಳುಹಿದನು (ತೊರರಾ. ೨-೬-೩೨). [ಕೆಲ$_1$ + ಚಾಚು$_1$]

**ಕೆಲಚು** (ನಾ). ನೆರವು; ಸಹಾಯ: "ಕೆಲಚೆಂದು ಸಹಾಯಂ" (ಶಮದ. ಪರಿ. ೨); "ಕೆಲಚು ಸಹಾಯದೊಳ್" (ಕರ್ಣಾನಿ. ೫೮); ಯಜ್ಞಕ್ಕಱಿ ಕೆಲಚಿ [ಪಾಠಾಂ. ಜ]ನಿಸಲ್ ಶ್ರೀದಪಾದಂಗಳಂ ತೋಮರದಿಂದಂ ತುಂಡುಗೆಯ್ದಂ (ವೀರವಿ. ೧೧-೮೨); ಪಂಚಾನನಂಗಮೆನಗಂ ಪೆಱರ ಕೆಲಚಕ್ಕುಮೆ? (ರಾಮಾಶ್ವ. ೧೧೧-೧೫). [?]

**ಕೆಲಜಂಕೆ** (ನಾ). ಕಾಳಗದ ಒಂದು ವರಿಸೆ (?): ಪಸುಗೆ ನೆಲಂ ಹಯದೊಡಂಬಡು ವಂಚನೆ ಕೇಣಮಾಸನಂ ಕೊಸೆ ದೆಸೆ ದಿಟ್ಟಿ ಮುಟ್ಟಿ ಕೆಲಜಂಕೆ ನಿವರ್ತನೆ ಕಾಣ್ಕೆ ಪರ್ವಿದೇರ್ವೆಸನದೊಳಾದ ಬಲ್ಮೆಯೊಳೊಡಂಬಡೆ ತಳ್ತಱಿವಲ್ಲಿ (ಪಂಪಭಾ. ೧೦-೭೭); "ಮಗ್ಗುಲನ್ನು ಹದರಿಸುವುದು" (ಪಂಪದೀ. ೩೬೬). [ಕೆಲ$_1$ + ಜಂಕೆ]

**ಕೆಲದ** (ನಾ). ಪಕ್ಕದಲ್ಲಿರುವವನು; ಮಗ್ಗುಲಿಗ: ಕಳ್ವೊಳ್ ಬೊಟ್ಟನಿಟ್ಟುಕೊಂಡು ಕೆಲದರ್ಗೆಲ್ಲಂ ಬೊಟ್ಟಿಟ್ಟು (ಪಂಪಭಾ. ೪-೮೭ ವ); ಕೆಲದನಲ್ಲಿದನಿಲ್ಲಿದನೀಗಳೆಂಬಿನಂ ಮುತ್ತಿದನೊಂದೆ ತೇರೊಳಮರೇಂದ್ರಸುತಂ ಕುರುವೃಂದವೆಲ್ಲವಂ (ಶಮದ. ೧೧೧ ಪ್ರಯೋ). [ಕೆಲ$_1$ + -ದ$_2$]

**ಕೆಲದಟ್ಟೆ** (ನಾ). ಪಕ್ಕದಲ್ಲಿರಿಸಿದ ತಟ್ಟೆ: ಜಳಕಣಕಲಿತದಳಂ ನೀರ್ದಳಿದಿಟ್ಟಿಲೆಯಾಗೆ ನಳಿನಿ ಕೆಳದಟ್ಟೆ [ಪಾಠಾಂ. ಟ್ಟ]ಗಳಿಟ್ಟಳೆನಿಸೆ ವಿಕಚಾಬ್ಜಂಗಳ್ ಕೊಳನೆಸೆದುದು ರಾಜಹಂಸನೌತಣದೆಡೆವೋಲ್ (ರಾಜಶೇ. ೧೨-೨೨). 'ಕೆಲವಟ್ಟಲು' ಪರಾ.

[ಕೆಲ$_1$ + ತಟ್ಟೆ$_1$]

**ಕೆಲದೆಱಪು** (ನಾ). ಪಕ್ಕದ ತೆರವು; ಅವಕಾಶ; ಖಾಲಿಜಾಗ (?): ದುರುದುರಿಪ ಕೆನ್ನೀರ ತೊರೆ ಬೆಟ್ಟದಿಂದಿಳಿವ ತೆಱದೊಳ್ ಕಪಾಲದಿಂ ಕಱಿವುತಿರಲದಱ ಕೆಲದೆಱಪಿಂಗದೊಮ್ಮೆಯುಂ ನೆಱೆಯದಿರೆ (ಚೆಬಪು. ೧೯-೧೪). [ಕೆಲ$_1$ + ತೆಱಪು]

**ಕೆಲಪು** (ನಾ). ಕೆಲೆಯುವಿಕೆ; ಡುರುಕು; ಗುಟುರು: ಆ ಮದಕಳ ಕ್ರೂರ ಶೂರ ಸೌರಭೇಯಂಗಳೊಂದು ದಿವಸಮೊಂದೊಂದಱ ಕೆಲಪಂ ಕೇಳ್ದು ಕೆಳರ್ದು (ಅರ್ಥನೇ. ೧೨೩ ವ). [< ಕೆಲೆ + -ಪ್ಪು]

**ಕೆಲಬಲ** (ನಾ). ಅಕ್ಕಪಕ್ಕ; ಎಡಬಲ; ಮಗ್ಗುಲು: ಸುತ್ತಿಬರಲು ಶ್ರೀಶೈಲ, ಕೆಲಬಲದಲ್ಲಿ ಕೇದಾರ, ಅಲ್ಲಿಂದ ಹೊಱಗೆ ವಾರಣಾಸಿ (ಮಹಾದೇ. ೪೦-೪); ಗಣಪನುಂ ಸ್ವಾಮಿಯುಂ ಕೆಲಬಲದೊಳೊಪ್ಪಿರಲು (ಬಸರ. ೧-೧೫); ಕೆಲಬಲದ ರಾಯರಿಗೆ ದೂತರ ಕಳುಹಿ ನೆರಹಿಸು (ಕುವ್ಯಾಭೀ. ೧-೮); ಜನಪತಿ ಕೆಲಬಲದೊಳು ಕುಳಿತಿರ್ದ ತನುಜರ ವದನವ ನೋಡಿ (ವರ್ಧಸಾಂ. ೪-೩೦).

ಕೆಲಬಲದವರು=ಅಕ್ಕಪಕ್ಕದಲ್ಲಿರುವವರು; ನೆರೆಹೊರೆಯವರು: ಕೆಲಬಲದವರು ಕೊಂಡೆಯರು (ಕುವ್ಯಾವಿ. ೧-೩). [ಕೆಲ$_1$ + ಬಲ]

**ಕೆಲಬಲವರ್** (ಕ್ರಿ). ಪಕ್ಕಕ್ಕೆ ಬರು; ಅಕ್ಕಪಕ್ಕಕ್ಕೆ ಬರು: ನಡೆವರೆಡನ ಕಾಣದೆ ಕೆಲಬಲವರ್ಪ ವುಡುಪತಿ ರವಿ . . . ಗಡಾ (ಶ್ರೀಪಾಲ. ೪-೩೭). [ಕೆಲಬಲ + ಬರ್$_1$]

**ಕೆಲಯಿಸು** (ಕ್ರಿ). ಹತ್ತಿರ ತರು; ಬಳಿಗೆ ಬರುವಂತೆ ಮಾಡು: ವಿರಹನುನಾಗಿಸಿ ಗಂಡಿಗೆ ಬಳಿಕಾಯೆರಡಱ ಮೊಗಗಾಣಿಸಿ ಕೆಲಯಿಸಿ ನವ ಸುರತಂ ಗೆಯಿಸುವಳಂಗನೆಯಾ ಪಾರಿವದವುಳ್ವಕ್ಕಿಯನು (ಜಯಕಾ. ೧೨-೪೦). [ಕೆಲ$_1$ + -ಇಸು$_3$]

**ಕೆಲರ್ಮೆ** (ನಾ). ಕೆಲವುಸಲ; ಹಲವು ಬಾರಿ: ಪಲರ್ಮೆ, ಕೆಲರ್ಮೆ (ಶಬ್ದಾನು. ೪೪೧ ವ್ಯಾಖ್ಯಾ). [< ಕೆಲ$_2$ + -ಮ್ಮೆ$_2$]

**ಕೆಲರ್** 'ಕೆಳರ್' ನೋ.

**ಕೆಲವಟ್ಟಲು** (ನಾ). (ಊಟದ ತಟ್ಟೆಯ) ಪಕ್ಕದಲ್ಲಿಡುವ ಬಟ್ಟಲು; ಎಡೆಬಟ್ಟಲು: ಪಸರಿಸಿದ ಪರಿಯಾಣಗಳು ಕೆಲವಟ್ಟಲೋಳಿಯಲಿ ಬಿಸಿ ಬಿಸಿಯ ಪರಿಪಾಕತೆಯ ಷಡುರಸಮಯಂಗಳ (ಪ್ರಭುಲೀ. ೨೩-೧೪). [ಕೆಲ$_1$ + ಬಟ್ಟಲು (< ಬಟ್ಟಲ್)]

**ಕೆಲವಣಿ** (ನಾ). ಪಕ್ಕದಲ್ಲಿರುವ ಮಣಿ(?); "೧. ಕೆಲದ ಮಣಿ ೨. ಕೆಲವು ಮಣಿ" (ಪ್ರಭಣ್ಣ): ಉಡೆವಣಿ ಪಱಿಯಲೊಡಂ ಪಡಲಿಡೆ ಕೆಲವಣಿ ತೋಳೊಳಿರ್ಪ ಜಯಲಕ್ಷ್ಮಿಗೆ ಮಾರ್ಪಡೆಯಾನೆಯ ಕೆಲವಣಿ ಯಿಂದುಡೆವಣಿಗಟ್ಟಿಸಿದನಾ ನರೇಂದ್ರಕುಮಾರಂ (ಮಲ್ಲಿಪು. ೪-೧೩೭); ಉಡೆವಣಿ, ಕೆಲವಣಿ (ಶಮದ. ೨೯೮ ಪ್ರಯೋ); ಅಣಕಕಗಿದಗಿದು ಬಹು ಹುಲುಸರವಿ ಹೊಸದೊಂದು ತೃಣ ರಜ್ಜುಪುರುಷನಂ ಮಾಡಿ ಮುಂದಿರಿಸಿ ಕೆಲವಣಿಯೆತ್ತಿ ನುಡಿನುಡಿದು (ಸಿಂಗಿರಾ. ೨೭-೩೯). [?]

**ಕೆಲವಣೆ** (ನಾ). ಪಕ್ಕದಲ್ಲಿರುವ ಮಣೆ; ಹತ್ತಿರದಲ್ಲಿರುವ ಮಣೆ(?): ದ್ಯುನದಿ ಫೇನ ಸಮಾನ ಪಟಬಂಧನಿಯೊಳೊಲ್ಲದೆ ಕೆಲವಣೆಯೊಳಿರ್ದನು ವದಿಸಿ ಕೇಳೆಂದಳು (ಸಾಳ್ವಭಾ. ೩-೮). [?]

**ಕೆಲವರಿ** (ಕ್ರಿ). ಪಕ್ಕಕ್ಕೆ ಹರಿ: ಊರ್ಧ್ವದಂಡದಲ್ಲಿ ಉಭಯ ಪಕ್ಷದಲ್ಲಿ ಕೆಲವರಿದ ಸಂದು ಅಱುವತ್ತಾಱು ಅಂತು ಕೀಳು ಮೊದಲಾದ ಸಂದುವರಿ ಇಪ್ಪತ್ತುನಾಲ್ಕು (ಸರ್ವವ. ೨೨-೧೦೧). [ಕೆಲ$_1$ + ಪರಿ$_2$]

**ಕೆಲವಳಿ** (ನಾ). (?): ಆ ಸ್ಥಲ ಸುರಧನುವಿನ ಕೆಲವಳಿಯಂತೆ, ಮರೀಚಿಕಾ ಜಲದ ವಳಿಯಂತೆ (ಮೋಳಿಮಾ. ೧೧೩-೪೪೩); "ಬದಿಯಲ್ಲಿರುವ ಮಣಿ" (ಮೋಳಿಮಾ. ಕೋಶ). [?]

**ಕೆಲವಾೞು** (ನಾ). ನೆರೆಹೊರೆಯ ಜೀವನ (?): ರುಜೆಗಳೊದವಿಂ ದುಃಖವ್ರಾತಂಗಳಿಂ ಪೆಱರೊತ್ತಿನಿಂ ಪ್ರಜೆಯ ಭಯದಿಂ ಪೊನ್ನಿಂ ಶೀತೋಷ್ಣದಿಂ ಕೆಲವಾೞಿನಿಂ ಕುಜನ ನೆರವಿಂ (ಧರ್ಮಾಮೃ. ೭-೯೮). [ಕೆಲ$_1$ + ಬಾೞು$_2$ (< ಬಾೞ್$_2$)]

**ಕೆಲವು** 'ಕೆಲ$_2$' ನೋ.

**ಕೆಲವೊನ್ಮೆ** (ಅ). ಕೆಲವು ಸಲ; ಒಮ್ಮೊಮ್ಮೆ: ಕೆಲವೊಮ್ಮೆ ಅಂಥ ವಿಚಾರಗಳನ್ನು ವಿಸ್ತಾರದ ಭೀತಿಯಿಂದ ಕೈಬಿಡಲಾಗಿದೆ (ದ್ರಾವಿವಿ. ೧೦ ಹಿನ್ನೆಲೆ). [ಕೆಲ$_2$ + ಒಮ್ಮೆ (< ಒರ್ಮೆ)]

**ಕೆಲಸ** (ನಾ). ೧. ಕಾರ್ಯ; ಕಜ್ಜ; ಕರ್ತವ್ಯ; ವ್ಯವಹಾರ: "ಕೆಲಸಮೆನಲ್ ಕಜ್ಜ" (ಕರ್ಣಾನಿ. ೩೩); ಕೆಲಸದ ಕಡೆಯಲ್ಲಿ ದಾಸಪ್ಪಂಗೆ ಪೇೞ್ವುದೆಂಬುದುತ್ತರವಾಕ್ಯಂ (ನೀತಿವಾ. ೧೭-೬೦); ಹೇಳ್ದ ಕೆಲಸವಂ ಸಾಧ್ಯಮಾಡಿ (ಇಆ. XII, ೯೭-೨೪; 1187); ನಷ್ಟ ಮುಷ್ಟ ಕೆಲಸಂ ಕೈಲಾಗದಾರಂಭಮುಂ . . . ಫಲದ ಭ್ರಾಂತಿಯ ತೋರ್ಪುದೈ (ಸೋಮೇಶ. ೨೩); ತನ್ನ ನೃಪನೊಡನೆ ಕೆಲಸವಪಾರವುಂಟೈ (ಬಸವು. ೫೩-೧೨); ಮೃತ್ಯು ನಿಜಸಾಧನ ಸಹಿತ ಕೈಕೊಂಡ ಕೆಲಸವ ನಾಗುಮಾಡುವಳು (ಕುವ್ಯಾದ್ರೋ. ೭-೩೫). ೨. ಉದ್ಯೋಗ; ವೃತ್ತಿ; ಕಸುಬು; ಕಾಯಕ: ಹುಟ್ಟಿದವರೊಂದೊಂದು ಕೆಲಸವ ನೆಟ್ಟನಾಶ್ರಯಿಸಿದರು (ಸಂಭಪು. ೫-೩೧). ೩. ಕುಶಲಕರ್ಮ; ಕಲಾತ್ಮಕವಾದ ಕೃತಿ: "ಲೆಪ್ಪ ಮೊದಲಾಗುಳ್ಳ ಕೆಲಸಮುಂ(ಹ)ಪುಸ್ತಕರ್ಮ ಎಂಬುದು" (ಹಲಾಯು. ೯೭-೪೩೭); ಭಂಗಾರದ ಕೆಲಸ ವಿಸತಾಯನೂ ಮಾಡು ವದಕೆ (ಎಕ. XIV, ಮಳವ. ೧೨೮-೧; 1759); ಕೆಲಸದಲಿ ಶಿಲ್ಪದಲಿ . . . ಸಭೆಯೆಳಿಗಪೂರ್ವವಲಾ (ಕುವ್ಯಾಸ. ೧೩-೨೯); ಕುರುಜೆಲ್ಲಂ ಮಯಣದ ಕೆಲಸಂ ಮಾಡಿದ ರೋಹಣಗಿರಿಯೆಂಬಂದದಿ (ಜಯಕಾ. ೪-೪೯). ೪. ಊಳಿಗ; ಸೇವೆ; ಚಾಕರಿ; ಪರಿಚರ್ಯೆ: "ಸೇವಾ= ಕೆಲಸಂ" (ಕಾಶಕ್ಯ. ೧೧೫); ಕೆಲಸವಂ ಮಾಳ್ಪಾಳು ತಮತಮ ಕೆಲಸಗಳಿಗೇ ಕರ್ತರಲ್ಲದೆ ಫಲಕೆ ಕರ್ತರೆ (ಬಸವು. ೫೪-೧೯). ೫. ಪ್ರಯೋಜನ; ಉಪಯೋಗ: ಕೊಡಗಿನ ದೊರೆಗಳ ಮಾತಿನಿಂದ ತಮಗೆ ಕೆಲಸವಿಲ್ಲಾ (ರಾಜೇಂದ್ರ. ೪೫); ಅಕರಣಃ – ಕೆಲಸಕ್ಕೆ ಬಾರದ ಮೈಗಳ್ಳ ಮುಕ್ಕ (ಸಿದ್ಧಾಂತಿ. ೩೦೭). ೬. ಕ್ಷೌರ. 'ಕೆಲಸಿ', 'ಕೆಲಸಿಗ' ಪರಾ.

ಕೆಲಸಕ್ಕೆ ಬೀಳು = ಕೆಲಸಕ್ಕೆ ಬರು: (೧). ಕೆಲಸಕ್ಕೆವರ್, ಕೆಲಸಕ್ಕೆಬರು = ಕೆಲಸಮಾಡಲು ಬರು: ದಿವದಿಂ ಕೆಲಸಕ್ಕೆವರ್ಪ ದಿವಿಜಾಂಗನೆಯರ್ (ಶಮದ. ೬೭ ಪ್ರಯೋ). ೨. ಪ್ರಯೋಜನವಾಗು: ಕೆಲಸಕ್ಕೆಬರದ ವಸ್ತು ಎಷ್ಟಿದ್ದರೇನು? (ರೂಢಿ). ಕೆಲಸ ತೆಗೆದುಕೊಳ್ಳು = ಒತ್ತಾಯದಿಂದ ಅಥವಾ ಅಧಿಕಾರದಿಂದ ಕೆಲಸಮಾಡಿಸಿಕೊಳ್ಳು; ದುಡಿಸು: (೧). ಕೆಲಸಬೊಗಸೆ = ಕೆಲಸ ಮತ್ತು ಕಾರ್ಯ: ಪ್ರತಿಯೊಂದು ಊರವರು ತಮ್ಮ ಕೆಲಸಬೊಗಸೆಗಳನ್ನು ತಾವೇ ನೋಡಿಕೊಳ್ಳುವರು (ಮುಂಬಯಿ. ೪-೧೩೮). ಕೆಲಸಮಾಡು = ದುಡಿ; ನೌಕರಿ ಮಾಡು: ೧೯೦೭ ರಿಂದ ೧೯೧೨ರ ವರೆಗೆ . . . ಕೈಕೆಳಗೂ ಕೆಲಸ ಮಾಡಿದನು (ಸಸ್ಯಕ. ೭೭).

[ದೇ. || ತಮಿ. ಕಿರಿಚ್ಚಿ; ತುಳು. ತೆಲು. ಕೆಲಸ]

**ಕೆಲಸಂಗೆಯ್** (ಕ್ರಿ). ಕೆಲಸಮಾಡು; ದುಡಿ: ಕರ್ಮಶಾಲಾ, ಅನ್ನಾಸನಂ – ಈ ೨ ಪಂಚಕಾರುಕರುಂ ಕೆಲಸಂಗೆಯ್ವ ಮನೆ (ಹಲಾಯು. ೫೦-೧೪೨); ಪೆಱರ ಬೆಳಸು ನಂಬಿ ಕೆಲಸಂಗೆಯ್ವದೊಕ್ಕಲಿ ಗನುಮುಂ (ಧರ್ಮಾಮೃ. ೮-೫೧); ಬೆಲೆಗೆ ಕೆಲಸಂಗೆಯ್ವ ಬಂಟನು ಕೊಳಬಹುದೆ ರಾಶಿಯ ದವಸಮಂ (ಬಸವು. ೨೯-೧೪).

[ಕೆಲಸ + ಕೆಯ್$_1$]

**ಕೆಲಸಂಗೊಡು**, ಕೆಲಸಕೊಡು (ಕ್ರಿ). ಕೆಲಸವನ್ನು ಕೊಡು: ಕರಸಿ ತನ್ನಯ ಚಾರಕರ್ಗೆ ಕೆಲಸಂಗೊಟ್ಟು ಊರೂರ್ಗೆ ಬೇಱಿ ಬೇಱಕೊಲಿದು ರಾಯಸವಿತ್ತು (ನಂಬಿರ. ೫-೪). **ಕೆಲಸಕೊಡು**: ಅವರ ಅಂಗಡಿಯಲ್ಲೇ ಅವನಿಗೆ ಕೆಲಸಕೊಟ್ಟರು (ರೂಢಿ).

[ಕೆಲಸ + ಕೊಡು$_1$]

**ಕೆಲಸಂಬೊಗು** (ಕ್ರಿ). ಕೆಲಸಕ್ಕೆ ತೊಡಗು; ಕಾರ್ಯೋನ್ಮುಖನಾಗು: ಬಿಜಯುಂಗೈದಂ; ಕೆಲಸಂಬೊಕ್ಕಂ; ಕಗಂಬೊತ್ತಂ (ಶಮದ. ೧೬೭ ಪ್ರಯೋ.). [ಕೆಲಸ + ಪೊಗು]

**ಕೆಲಸಂಬೊಱು** (ಕ್ರಿ). ಕೆಲಸವನ್ನು ವಹಿಸಿಕೊ, —ಕೈಕೊಳ್ಳು: ಮಂಚಣಪಂಡಿತರು ತಮ್ಮತ್ತ ಕರೆಯಲು ಹೇಳ್ದ ಕೆಲಸಂಬೊತ್ತು ಮಾಡಿ ಬದುಂಕುವೆಂ ತಾನೆನುತ ನಡೆತಂದು (ಬಸವು. ೫೩–೬೬). [ಕೆಲಸ + ಪೊಱು]

**ಕೆಲಸಕೊಡು** 'ಕೆಲಸಂಗೊಡು' ನೋ.

**ಕೆಲಸಗತಿ** (ನಾ). ಕಾರ್ಯವಿಧಾನ; ಕೆಲಸದರೀತಿ: ದಿವ್ಯಸುವರ್ಣರತ್ನಾವಳಿಯ ರಚನೆಗಳ ಕೆಲಸಗತಿ ಕಂಗಳನು ಕೈಸೆಱೆಗೊಳಲು (ನಿಘಾಗ. ೩–೬–೭). [ಕೆಲಸ + ಗತಿ]

**ಕೆಲಸಗಳ್ಳ** (ನಾ). ಕೆಲಸ ಮಾಡದವನು; ಸೋಮಾರಿ; ಮೈಗಳ್ಳ: "ಸುಟಿ – ಕೆಲಸಗಳ್ಳಂ, ಸಸಿಯ ಸುಟಿ" (ಶಮದ. ಪರಿ. ೧). [ಕೆಲಸ + ಕಳ್ಳ$_1$]

**ಕೆಲಸಗಳ್ಳತಿ** (ನಾ). ಕೆಲಸ ಮಾಡದವಳು; ಸೋಮಾರಿಯಾದ ಹೆಂಗಸು; ಮೈಗಳ್ಳಿ: ಕೆಲಸಗಳ್ಳತಿಗೆ ಕೂಸು ಹುಟ್ಟಿದ ಹಾಗೆ (ಗಾದೆ). [ಕೆಲಸಗಳ್ಳ + -ಇತಿ (< -ಇತ್ತಿ$_1$)]

**ಕೆಲಸಗಳ್ಳಿ** (ನಾ). = ಕೆಲಸಗಳ್ಳತಿ: ಅವಳೊಬ್ಬಳು ಕೆಲಸಗಳ್ಳಿ ಏನೂ ಕೆಲಸಮಾಡುವುದಿಲ್ಲ (ರೂಢಿ). [ಕೆಲಸ + ಕಳ್ಳಿ$_1$]

**ಕೆಲಸಗಾರ** (ನಾ). ಕೆಲಸಮಾಡುವವನು: ನೀನು ಆ ಕೆಲಸಗಾರನಾಗಬೇಕೆಂದು ಯಾರು ಹೇಳುತ್ತಾರೆ (ಬಾಣಅ. ೧೧೯). [ಕೆಲಸ + -ಕಾರ$_1$ (< -ಕಾಱ)]

**ಕೆಲಸಗಿತ್ತಿ** (ನಾ). ಕೆಲಸದವಳು; ಚಾಕರಿಯವಳು; ಸೇವಕಿ: ಬಾಣಿ[ಣ]ಸದ ಕೆಲಸಗಿತ್ತಿಯರನೆಲ್ಲರ ಕರೆದು (ಚೋರಬ. ೫–೩೫); ಅವರ ಮನೆಯ ಕೆಲಸಗಿತ್ತಿ ನಾನು (ಹೊಸಂಸಾ. ೧೪೬). [ಕೆಲಸ + -ಗಿತ್ತಿ]

**ಕೆಲಸಗೇಡಿ** (ನಾ). ೧. ಕೆಲಸ ಕೆಡಿಸುವವನು. ೨. ಕೆಲಸ ಮಾಡಲಾರದವನು: ಇಂತಹ ಕೆಲಸಗೇಡಿ ಗುಮಾಸ್ತರಿಂದೇನು ಲಾಭ? (ಜಮಾನ್ಸಾ. ೮೬). [ಕೆಲಸಗೇಡು + -ಇ$_2$]

**ಕೆಲಸಗೇಡು** (ನಾ). ಕೆಲಸ ಕೆಟ್ಟು ಹೋಗುವಿಕೆ; ಕೆಲಸವಾಗದಿರುವಿಕೆ: ಮಳೆ ಬಂದು ಕೆಲಸಗೇಡಾಯಿತು (ರೂಢಿ). [ಕೆಲಸ + ಕೇಡು$_1$]

**ಕೆಲಸರಿ** (ಕ್ರಿ). ಪಕ್ಕಕ್ಕೆ ಸರಿ; ಮಗ್ಗುಲಾಗು: ತಲೆಯ ಮುಸುಕಿನ ವೀರಸುಭಟರು ತೊಲಗಿದರು ಬೆಸಗೊಳಲು ನಂದನನಳಿವು ನಿಶ್ಚಯವೆಂಬವೊಲು ಮೌನದಲಿ ಕೆಲಸರಿಯೆ (ಕುವ್ಯಾದ್ರೋ. ಓಂಇ. ೮–೧೦ ಅಡಿಟ). [ಕೆಲ$_1$ + ಸರಿ$_1$]

**ಕೆಲಸಾರ್**, ಕೆಲಸಾರು (ಕ್ರಿ). ಪಕ್ಕಕ್ಕೆ ಸರಿ; ಬದಿಗೆ ಹೋಗು: ಭಸಿತವನಿತ್ತು ಕೆಲಸಾರ್ದು ನಿಂದಿರ್ದೊಡೆ (ಸಿದ್ಧರಾ. ೨–೨೪); ಕೆಲಸಾರ್ ಸಿಂಹಳ ಸಂತಮಿರ್ ಮಗಧ (ಕುಸುಮಾ. ೩–೯೪); ಹರುಷದೆ ದಳವಾಯಿ ಕರಕಮಲವ ಮುಗಿದರಸನ ಕೆಲಸಾರ್ದನಾಗ (ಕಂನವಿ. ೧೧–೧೨೬). **ಕೆಲಸಾರು**: ಸಿಡಿದು ಕೆಲಸಾರಿದನು ಪವನಜನು (ಕುವ್ಯಾದ್ರೋ. ೩–೨೫); ವಾರಣಂ ಪಿರಿದಾದೊಡೆಳಸಿಂಗಮಂಜಿ ಕೆಲಸಾರುವುದೆ (ಜೈಮಿಭಾ. ೪–೩೩). [ಕೆಲ + ಸಾರ್$_1$]

**ಕೆಲಸಾರಿಸು** (ಕ್ರಿ). ಪಕ್ಕಕ್ಕೆ ಸರಿಸು; ತೊಲಗಿಸು; ನಿವಾರಿಸು: ಪ್ರಾರಬುದಫಲಭೋಗವಿದ ಕೆಲಸಾರಿಸಲು ನಿಮ್ಮಳವೆ (ತೊರರಾ. ೨–೧–೩೬). [ಕೆಲಸಾರ್ + -ಇಸು$_3$]

**ಕೆಲಸಾರು** 'ಕೆಲಸಾರ್' ನೋ.

**ಕೆಲಸಾರ್ಚು** (ಕ್ರಿ). = ಕೆಲಸಾರಿಸು: ನಡುವೆ ಹೂವಡ್ಡಮಿರೆ ನಡುಗಿ ಕೆಲಸಾರ್ಚುತಂ (ಬಸರ. ೩–೧೪೨); ಕೈಯೊಡ್ಡಿ ಕೆಲಸಾರ್ಚಿ . . . ಹಿಡಿದೆಳೆದು ಅಪ್ಪುತಿರೆ (ಬಾಸಿಗ. ೩೭). [ಕೆಲಸಾರ್ + -ಚು]

**ಕೆಲಸಿ**, ಕೆಲ್ಲಸಿ (ನಾ). ೧. ಕೆಲಸಮಾಡುವವನು; ಕೆಲಸಗಾರ; ಕುಶಲಕರ್ಮಿ: ಜೋಡು ಸೀಸಕ ಪಕ್ಕರೆ ಮೊಗರಂಬವ ಮಾಡುವ ಕೆಲಸಿಗಳಿಂದ (ಕುರಾಸಾಂ. ೩೭–೬೨); ಚಾಳೈಸದೆ ಕೆತ್ತಿದನಾರೊ ಕೆಲಸಿಯೆಂದಾಳೋಚಿಸಿದಳು ಕುವರಿ (ಮೋಹತ. ೨೬–೨೯). ೨. ಕ್ಷೌರಮಾಡುವವನು; ನಾಯಿಂದ; ಹಜಾಮ: ಕೆಲಸಿ ಮಡಿವಾಳರ ಗೂಳೆಯ ಎರಡುಸಾವಿರ (ಮೈಅರಿ. ೧೯೩೧, ೧–೫೨; 1310); ಕೆಲಸಿಗಳ ಮಕ್ಕಳಾಗಿ ಹುಟ್ಟುವರು (ಎಕ. XI, ಹೊಳಲ್ಕೆ. ೧೧–೩೩; 1546); ಬಿಳಿಚೋಡ ಸೀಮೆಯು ಕೆಲಸಿಗಳಿಗೆ ಬಿಟ್ಟ ಗ್ರಾಮದೆರೆ (ಎಕ. XI, ಚಿತ್ರದು. ೮೦–೧೮; 1606); ಕೆಲಸಿಗಳ ವಾಲಗದಲರೂ ನಾವು ಅಕಸಾಲೆಗಳು ಕೋಮಟಿಗರು ಮುಂತಾದ ಹದಿನೆಂಟು ಬಣ್ಣದಲ್ಲೂ (ಎಕ. XIV, ಶ್ರೀರಂಗ. ೧೮೦–೧೨; 1781). **ಕೆಲ್ಲಸಿ**: ೨. ತೆಕಲನಾಡ ಕೆಲ್ಲಸಿಗಳಿಗೆ . . . ಧರ್ಮವಾಗಿ ಬಿಟ್ಟರು (ಎಕ. X (S), ಮುಳುಬಾ. ೧೯೨–೭; 15ನೆಯ ಶತ). [ಕೆಲಸ + -ಇ$_3$]

**ಕೆಲಸಿಗ** (ನಾ). ೧. ಕೆಲಸಮಾಡುವವನು; ಕೆಲಸಗಾರ: ಕೆಲಸಿಗರು ಶಿಲ್ಪಿಗಳು [ಪಾಠಾಂ. ಕೆಲಸದಲಿ ಶಿಲ್ಪದಲಿ] ರತ್ನಾವಳಿಯ ಘಾಟನವಾಯಿಯಲಿ ಸಭೆಯಿಳೆಗಪೂರ್ವವಲಾ ಮಹಾದೇವ (ಕುವ್ಯಾಸ. ೧೩–೨೯). ೨. ಕ್ಷೌರಿಕ; ನಾಯಿಂದ: ಸಾಣುಗರ್ ಕೆಲಸಿಗರ್ ಮಡಿವಳರ್ ಬಿಸಿನೀರ ಕೇಣಿಗರ್ ಜೂಜುಗಾಱರ್ ಮುಖ್ಯರೊದಗಿ ಬರುತಿರ್ದರ್ (ಚೆಬಪು. ೪೭–೪೧); ಪ್ರಾರಂಭಕ್ಕೆ ಕೆಲಸಿಗನು ಬೇಕಷ್ಟೆ ಮುಂಡನ ಮಾಡಲಿಕ್ಕೆ (ಗೌರಾಂಗ. ೧೫೦). [ಕೆಲಸ + -ಇಗ]

**ಕೆಲಸಿಡಿ** (ಕ್ರಿ). ಪಕ್ಕಕ್ಕೆ ನೆಗೆ; ಮಗ್ಗುಲಿಗೆ ಹೋಗು; ಬದಿಗೆ ಸಾಗು: ತರಹರಿಸಿ ಕೆಲಸಿಡಿದು ರಿಪು ಭಟನುರವನುದರವನೆಡಬಲನ ಕಿಬ್ಬರಿಯನೆಚ್ಚನು ಕರ್ಣ (ಕುವ್ಯಾದ್ರೋ. ೬–೫೩); ನಡೆ ಸುಮಿತ್ರಾಸೂನು ಕೇಳ್ಕೆಲಸಿಡಿ ಸರೋಜಾನನೆ ಸಹಿತ (ತೊರರಾ. ೩–೬–೪); ಅಲಗೋರ್ಯ್ವ ಬೇಳಂಬದಿಂದೆ ಕೆಲಸಿಡಿದು ಬಂದಾ ವಿಷಯೆ . . . ಚಂದ್ರಹಾಸನಂ ಕಂಡು (ಜೈಮಿಭಾ. ೩೦–೧೯). [ಕೆಲ$_1$ + ಸಿಡಿ$_1$]

**ಕೆಲಸು** (ಕ್ರಿ). ಉದ್ರೇಕವಾಗು (?); "ನಿಂದು" (ಲೋಕೋಪ–ಟೀಕೆ): ಬಲದಿನೆಡಕ್ಕೆ ಪೋಗೆ . . . ನಡುವಟ್ಟೆಯೊಳ್ ಕೆಲಸಿ [ಪಾಠಾಂ. ಕೆರಳ್ಕೆಲಸೆ] ಮೂತ್ರಿಸೆ (ಲೋಕೋಪ. ೧೨–೨೩). 'ಕೆಲ್ಲವಿಸು' ಪರಾ. [?]

**ಕೆಲಸೂಸು** (ಕ್ರಿ). ಪಕ್ಕಕ್ಕೆ ಹರಡು; ಸುರಿ; ಚೆಲ್ಲು: ನೋಟವೆಗ್ಗಳಿಸಿ ಕೆಲಸೂಸಿ ಪರಿವೃತ್ತಮಿದೆ (ನಂಬಿರ. ೩–೮೩). [ಕೆಲ$_1$ + ಸೂಸು$_1$]

**ಕೆಲು** 'ಕೆಲ್$_2$' ನೋ.

**ಕೆಲೆ** (ಕ್ರಿ). ೧. ಗುಟುರುಹಾಕು; ಗರ್ಜಿಸು; ಡುರುಕಿಹಾಕು: ತರುಣವೃಷಂ ಕೆಲೆದು ತೊಳಲ್ತರೆ ಕಂಡು (ಆದಿಪು. ೧೫–೪೪); ನೆಲಂ ಬಿರಿಯೆ ಕೆಲೆದುಮಲೆದೊಲೆದು (ಅನಂಪು. ೪–೧೧೧); ತೂಗಿ ಕೆಲೆಕೆಲೆದು ಕುಪ್ಪಿ ಕುಪ್ಪಿಯುರ್ಬಿ ಕೊರ್ಬಿ ನಲಿನಲಿದಾಡುವ ಭಲ್ಲೂಕ ನಿಕಾಯದಿಂ (ಗಿರಿಕ. ೧–೧೨೮ ವ); ಗೂಳಿ ಕೆಲೆವುತ ಹೊಱಲು ಬರೆ (ಸಾಳ್ವಭಾ. ೧೨–೧೪); ಪಸುರ್ವುಲ್ಲಂ ಪಸಿವಡಂಗೆ ಮೇದು ಕೊರ್ಬಿ ಕೆಲೆದು (ರಾಮಾಶ್ವ. ೩–೨೨). ೨. ಉತ್ಸಾಹದಿಂದ ಕೂಗು: "ಕೆಲೆ – ಉತ್ಸಾಹಧ್ವನೌ" (ಶಮಧಾ); ಮಣಿ ಮಣಿದು ಕುಣಿಕುಣಿದು ಕೆಲೆಕೆಲೆದು ನಲಿದಾಡಿ (ಬಸರ. ೩–೧೧); ತನ್ನ ರೂಪಿಂಗೆ ತಾನೆ ಹಾರೈಸಿ ಕೆಲೆಯುತ (ಜೀವಂಚ. ೮–೫೦); ಸಹಕಾರದ ಬರವಂ ಪೇಳ್ವಂತೆ ಕೆಲೆಯೆ ಕೋಗಿಲೆ (ಪಾರ್ಶ್ವಪು. ೯–೫೭); ವಿಹಂಗ ಸಂಕುಲಂ ಕೆಲೆಯೆ (ನಂದಿಮಾ. ೭–೧೨).

೩. ಮನಬಂದಂತೆ ಮಾತಾಡು ; ಹರಟು ; ಗಳಹು ; ಕೂಗಾಡು : ಮುಲಿವ ಕೆಲೆವದಟಲೆವ ಪಳಂಚಲೆವ ಮುಲಿಪರೆಲ್ಲಂ ಮುಱಿದಂ (ಎಕ. VII, ಶಿಕಾರಿ. ೧೩೬–೨೪ ; 1068) ; ಒಂದಕ್ಕೊಂಬತ್ತು ನುಡಿದು . . . ಮುಡು ಹಿಕ್ಕಿ ಕೆಲೆವವರ ಕಂಡಡಂಜುವೆ (ಬಸವ. ೪೪೭) ; ತಚ್ಛಾಸ್ತ್ರವೇ ಶುಭಂ ಕರವೆಂದುಲಿದು ಕೆಲೆದು ಬರಿಯ ಗಡಬಡಗಳಿಂದಜ್ಞರಂ ಕೆಲರನಲೆದು (ಪದ್ಮರಾ. ೯–೧೪) ; ಕೆಲಬಲದವರ ಕೆಣಕುತ ಕೊಯಿಲೆಗಳೊಳು ಕೆಲೆವುತ ಮೊಲೆಯ ಮೇಲುದನು ತೊಲಗಿಸುತ (ಕುರಾಸಾಂ. ೪೧–೬೦) ; ಕಟ್ಟೆಯಲಿ ಕೂತು ಕೆಲೆಯುವವಳು ಹಾದರದ ಕಟ್ಟಾಣಿ (ಸರ್ವಜ್ಞ. ೧೮೩೩).

ಕೆಲೆದಾಡಿಸು = ಕೆಲೆಯುವಂತೆ ಮಾಡು ; ಕೂಗಿಸು : ಕೊರ್ಳರ್ವಕ್ಕಿಯ ಕೆಲೆದಾಡಿಸುವ (ಮೋಹತ. ೫–೩೫). ಕೆಲೆದಾಡು = ಉತ್ಸಾಹದಿಂದ ಮಾತಾಡು : ಪರಿಹಾಸಕರ ಕೂಡಿಕೊಂಡು ಕೆಲೆದಾಡು ವುದಂ ಬಿಟ್ಟು (ಗಣಭಾ. ೨೬೪–೧) ; ಕೆಳೆಯರೊಳ್ ಕೆಕ್ಕಸಕೆಲೆದಾಡಿ ನಗುತ (ಮೋಹತ. ೧೭–೭೫).

[ದೇ. ‖ ತಮಿ. ಚಿಲೈ ; ಮಲ. ಚಿಲ, ಚಿಲೆ ; ಕೋತ. ಕಿಲ್ಚ್ ; ತುಳು. ಕಿಲೆ, ಕೆಲೆ ; ತೆಲು. ಕೆಲ, ಚಿಲಾಗು]

**ಕೆಲೆತ** (ನಾ). ಕೆಲೆಯುವಿಕೆ ; ಗಳಹುವುದು ; ಮನಬಂದಂತೆ ಮಾತನಾಡುವಿಕೆ : "ಪರಿವಾದಃ–ಕೆಲೆತಂ" (ಕಾಶಕ್ಯ. ೧೬೧).

[ಕೆಲೆ + –ತ$_2$]

**ಕೆಲ್ಲ** (ನಾ). ಕೆನ್ನೆ ; ಕಪೋಲ : "ಕದಪು ಕೆಲ್ಲಂ ಕಪೋಳಂ ಗಂಡಸ್ಥಳಂ" (ವಸ್ತುಕೋ. ೬೯–೧೫). [< ಗಲ್ಲ]

**ಕೆಲ್ಲಂಗೆಱೆ** (ನಾ). ಒಂದು ಊರಿನ ಹೆಸರು : ವಸುಮತಿಯೊಳ್ ದಾನಿಗಳನೂನಮಿಲ್ಲದ ಮೋಣಿಗಳಂ ಪೋಗಿ ಪೊಗೞೆ ಕೆಲ್ಲಂಗೆಱೆಯೊಳ್ (ಎಕ. V, ಬೇಲೂರು. ೧೨೩–೨೬ ; 957) ; ಆ ಕೆಲ್ಲಂಗೆಱೆಯಾದಿ ತೀರ್ತ್ಥಮದು ಮುನ್ನಂ ಗಂಗರಿಂ ನಿರ್ಮ್ಮಿತಂ (ಎಕ. II, ೩೪೫–೪೫ ; ಸು. 1159). [ಕೆಲ್ಲ$_0$ + ಕೆಱೆ]

**ಕೆಲ್ಲಂಬು** (ನಾ). ಒಂದು ಬಗೆಯ ಬಾಣ : ಶಲ್ಯನ ಮೊನೆಯೊಳ್ ಧರ್ಮಪುತ್ರಂ ಕಾದಿ ನಾಲ್ಕು ಕೆಲ್ಲಂಬುಗಳಿಂದಾತನ ವರೂಥ ಸೂತ ಕೇತನಂಗಳಂ ಕಡಿದು (ಪಂಪಭಾ. ೧೧–೧೦೬ ವ) ; ಶಂಬರಾರಿ ಶಬರ ಪುಲ್ಲಂಬು ಕೆಲ್ಲಂಬು ಮುದ್ವಿರಹಾವಸ್ಥಿತಿ ಗೋರಿಗೋರೆಗೆಯೆನಿಪ್ಪಂತಾದುದು (ಅನಂಪು. ೧೧–೪೨). [ಕೆಲ್ಲ$_0$ + ಅಂಬು$_2$]

**ಕೆಲ್ಲಗಾವುಂಡ** (ನಾ). ಒಬ್ಬಾತನ ಹೆಸರು : ಸತ್ತ ಕೆಲ್ಲಗಾವುಣ್ಡ ಚಾಮೊನ್ತ ಚೂಡಮಣಿ (ಮೈಅರಿ. ೧೯೩೨, ೩೭–೭ ; 950).

[ಕೆಲ್ಲ$_0$ + ಗಾವುಂಡ (< ಗಾಮುಂಡ)]

**ಕೆಲ್ಲಯಿಸು**, ಕೆಲ್ಲಯ್ಸು, ಕೆಲ್ಲವಿಸು, ಕೆಲ್ಲೈಸು (ಕ್ರಿ). ೧. ವಿಹ್ವಲವಾಗು ; ಬೆದರು : ಕೆಲ್ಲಯಿಸಿ ಕೆಲಕೆ ತೊಲಗುತುಮಲ್ಲಿಗಲ್ಲಿಗೆ ನಿಂದು (ಸುಕುಮಾ. ೧೧–೨೧) ; ಗೋರಿವರಿದುವೆನೆ ಕುನುಂಗಿ ಕೆಲ್ಲಯಿಸಿ ನೋಟ್ಪ ತರಳಲೋಚನದ ಸರಳಾಪಾಂಗಂ ಹರಿಣೀಭಾವಮಂ ಮನಂಗೊಳಿಸಿ (ಅನಂಪು. ೭–೧೬ ವ) ; ಅರಮುಗನಂ ಕೆಲ್ಲಯಿಸುತ ನೋಡುವ ತರುಣಿಯರ ಕೇಕರರುಚಿ (ಜಯಕಾ. ೪–೧೨). ೨. ತುಂಡಾಗು ; ಸೀಳಾಗು : (ಕಿ).

**ಕೆಲ್ಲಯ್ಸು** : ೧. ಆಜಿದ ಚಿತ್ತದಿಂದಡವಿಯಂ ಪೊಕ್ಕಿರ್ದುಕೆ [ಪಾಠಾಂ. ಕ]ಲ್ಲಯ್ಸಿ ಬೆಚ್ಚುಜಿದಿರ್ದೊರ್ಯ್ಯನೆ ಪುಲ್ಲೆಗಳ್ ಪೋಳೆವ ಕಣ್ಣಿಂ ನೋಡೆ (ಜೀವಸಂ. ೧೭೪–೨೩). **ಕೆಲ್ಲವಿಸು** : ೩. ಉದ್ರೇಕಗೊಳ್ಳು ; ಕೆರಳು : ರೋಷವಿರೆಲೆಯಾಯ್ತು ಲಜ್ಜೆಯ ಮೀಸಲಳಿದುದು . . . ಕೆಲ್ಲವಿಸಿತನುತಾಪ (ಕುವ್ಯಾಆ. ೮–೬) ; ಉದ್ದಾಮರನು ಕೆಲ್ಲವಿಸಿ ನೋಡಿದರುಗ್ರನಯನದಲಿ (ನಿಭಾಗ. ೩–೬–೧೩).

**ಕೆಲ್ಲೈಸು** : ೧. ಎಳಸಿ ಕಳವಳಿಸಿ ತಿಳಿವುವ ಮುಳಿವೆಡೆಗೆಡೆಯಿಲ್ಲದಡರೆ ಕೆಲ್ಲೈ [ಪಾಠಾಂ. ಕೇಡೈ]ಸಿ ಕವಲ್ದೊಳಗೊಳಗೆ ಬಳಿದಲಂಪೊಡನಳುರೆ ಪದಂ ಪದದೊಳೊದವೆ ಬೆರಸುತ ನಡೆದರ್ (ಸೂಕ್ತಿಸು. ೮–೧೪೬). ೩. ಮುರಮಥನ ಕೆಲ್ಲೈಸಿ ನೋಡಿದನುರುಭಯಂಕರ ಚಕ್ರವನು (ಕುವ್ಯಾಭೀ. ೬–೩೧). [ಕೆಲ್ಲೆ$_1$ ? + –ಇಸು$_3$]

**ಕೆಲ್ಲಯ್ಸು** 'ಕೆಲ್ಲಯಿಸು' ನೋ.

**ಕೆಲ್ಲವಿಸು** 'ಕೆಲ್ಲಯಿಸು' ನೋ.

**ಕೆಲ್ಲಸಿ** 'ಕೆಲಸಿ' ನೋ.

**ಕೆಲ್ಲಿ** (ನಾ). ಒಂದು ಬಗೆಯ ಮರ : ಇಪ್ಪೆ ವಕುಳಂ ಕರಿಯ ವೀಳೆಚಿಱುಗುಳ್ಳಂ ಕೆಲ್ಲಿ ಜಟಿ ಮುಚ್ಚಿ ಪಿಱು ಮಂದವರಳಿ . . . ಮೊದಲಾದುತ್ಪುಲ್ಲ ತರುಸಂತತಿಗಳಿಂದ (ಉದ್ಭಟ. ೨–೪೨). [?]

**ಕೆಲ್ಲಿಗೊಡಂಗೆ** (ನಾ). ಒಂದು ಸ್ಥಳದ ಹೆಸರು (?) : ನಾಲ್ವೂರು ಮಿಜ್ಜು ನಡೆದ ಕೆಲ್ಲಿಗೊಡಂಗೆಯೊಡ್ಡಿನ ಕೆಱಿಗೆ ಗಾವುಣ್ಡ ಕಾಡಿಯಣ್ಣಜ್ಗೆ ಮೂಗಣ್ಣುಗಜ್ಜಚ್ಚಿ ಪಳ್ಳಿಕಾಱ ಕುವಣ್ಣಜ್ಗೆ ಮೂಗಣ್ಣುಗಜ್ಜಚ್ಚಿ (ಸೌಇಇ. IX–i, ೨೬–೧೨ ; 950). [?]

**ಕೆಲ್ಲಿಪುಸುಗೂರ್** (ನಾ). ಒಂದು ಊರಿನ ಹೆಸರು : ಕೆಲ್ಲಿಪುಸುಗೂರ್ನಾಮ ಗ್ರಾಮೇ (ಮೈಅರಿ. ೧೯೨೫, ೧೦೬–೩೨ ; ಸು. 8ನೆಯ ಶತ).

[ಕೆಲ್ಲಿ ? + ಪುಸುಗೂರ್]

**ಕೆಲ್ಲಿಪುಸೂರ್** (ನಾ). ಒಂದು ಊರಿನ ಹೆಸರು : ಕೊಡುಗೂಸ್ನಾಡಾ ಕೆಲ್ಲಿಪುಸೂರಾ ಚೆಡಿ ಅಕ್ಕೆ . . . ಅದರ್ಕೆ ಸಾಕ್ಷಿ ಕೆಲ್ಲಿಪುಸೂರ್ ಪನ್ನಿರ್ವರುಂ (ಮೈಅರಿ. ೧೯೨೫, ೧೦೬–೧೭ ; ?). [ಕೆಲ್ಲಿ ? + ಪುಸೂರ್]

**ಕೆಲ್ಲೂರು** (ನಾ). ಒಂದು ಊರಿನ ಹೆಸರು : ದಾವರಜ್ಜದೊದಿಪನ್ನಿಗಲಿಯು ಕೆಲ್ಲೂರುಂ ಕಬೂರು ಮೊಳನಿಕೆ (ಎಕ. XII, ತಿಪಟೂ. ೧೦–೪ ; ಸು 930). [ಕೆಲ್ಲು + ಊರು$_3$ (< ಊರ್)]

**ಕೆಲ್ಲೆ$_1$** (ನಾ). ೧. ಸಿಗುರು ; ಚೂರು. ೨. ಅಂಚು, ತುದಿ : ಸಲ್ಲಲಿತ ಬೆಳಗುಟ್ಟ ಸೀರೆಯ ಕೆಲ್ಲೆ ಶಿಖಿ ಸೋಂಕಿದಡೆ ನಿನ್ನಳವಲ್ಲ ಜನಕಂಗಿಳೆಯ ಮಗಳಲ್ಲ (ತೊರರಾ. ೬–೫೩–೯೧).

[ದೇ. ‖ ತಮಿ. ಚಲ್ಲಿ ; ತುಳು. ಕೆಲ್ ; ತೆಲು. ಚಿಲ್ಲ]

**ಕೆಲ್ಲೆ$_2$** (ನಾ). ಪಕ್ಕ ; ಬದಿ ; ಮಗ್ಗುಲು ; ಪಾರ್ಶ್ವ : ಪರಿಕಾಲ್ಗಳ ಪಕ್ಕಂ ಬಿಡಿದು ಕಿಕ್ಕಿರಿನಿಂದು ಪೊಂಗೇದಗೆಯ ಬಾಚ್ಟೀಲಿಗಳ ಕೆಲ್ಲೆಯೊಳಲ್ಲಲ್ಲಿ ಪಲ್ಲವಿಸಿದ ಸುರಹೊನ್ನೆಯ (ಧರ್ಮನಾ. ೨–೨೯ ವ) ; ಕೆಲ್ಲೆಯಲಿ ಭೀಮಾರ್ಜುನರು ಬಲು ಬಿಲ್ಲನೊಪಚಿಸಿ ಕದನ ಚೌಪಟಮಲ್ಲ ತಾನಿದಿರಾಗಿ ನಿಂದನು ಪಾಂಡವರ ರಾಯ (ಕುವ್ಯಾಶ. ೩–೨೯) ; ಬಿಡು ಮನದ ಸಂಶಯವ ಕೆಲ್ಲೆಗೌಕಿ ವಿಲಾಪವನು ಹುಸಿಯಿಲ್ಲ ತನ್ನಲ್ಲಿ ಕಳುಹಿಯೆನೆ (ತೊರರಾ. ೬–೪೧–೬೭). [< ಕೆಲ ?]

**ಕೆಲ್ಲೆ$_3$** (ನಾ). ೧. ತುರಿಸಿಕೊಳ್ಳುವಿಕೆ ; ಕೆರೆತ : "ಕೆಲ್ಲೆಯೆನೆ ಸಿಗುಱು" (ಶಬ್ದಮಂ. ೫೦) ; "ಕೆಲ್ಲೆಯೆನಲಾಗಿ ಸಿಗುಱೆನಲಾಗಿ – ಈ ೨ . . . ಉಗುರು ಮೊದಲಾದುದರಿಂದ ಬೆವರೆಕೊಂಬುದರ ಹೆಸರು" (ಶಬ್ದಮಂ. ೫೦ ಟೀಕೆ). ೨. "ಬೆಮರು" (ಪ್ರಭಣ್ಣ). ೩. "ಜಡ ; ಭಾರ" : (ಪ್ರಭಣ್ಣ). [?. / ತಮಿ. ಕಲ್ಲು, ಕೆಲ್ಲು = ಕೆರೆ, ಕೆರೆದುಹಾಕು]

**ಕೆಲ್ಲೆಗಣ್** (ನಾ). ಓರೆನೋಟದ ಕಣ್ಣು ; ಕಟಾಕ್ಷ : ಗಲ್ಲದಲಿ ಘಾಡಿಸಿದ ಚಿತ್ತದ ಕೆಲ್ಲೆಗಂಗಳ ನಗೆಯ ಚೌಪಟಮಲ್ಲನಿದ್ದನು ರಿಪುಬಲವ ಲೆಕ್ಕಿಸದೆ ಕಲಿ ದ್ರೋಣ (ಕುವ್ಯಾದ್ರೋ. ೧೭–೩೩). [ಕೆಲ್ಲೆ$_2$ + ಕಣ್]

**ಕೆಲ್ಲೆಗೆಡೆ** (ಕ್ರಿ). ಚೂರಾಗು ; ತುಂಡಾಗು : ಕೆಲ್ಲೆಗೆಡೆದವು ಕರಿಗಳಸುಗಳ ಚೆಲ್ಲಿದವು ತೇಜಿ ರಥಕುಳವೆಲ್ಲ ಹುಡಿಹುಡಿ ಪಾಯದಳ ನಿರ್ನಾಮವಾಯ್ತೆಂದ (ಕುವ್ಯಾಭೀ. ೭–೨). [ಕೆಲ್ಲೆ$_1$ + ಕೆಡೆ$_1$]

**ಕೆಲ್ಲಿನೋಟ** (ನಾ). ಓರೆನೋಟ; ಕುಡಿನೋಟ: ಕೆಲ್ಲಿನೋಟ ಮೊಡಗೂಟಮುಗಲ್ಬಿದ ಕೊರ್ನೆ (ದಶಕು. ೮-೨೨); ಕೆಲ್ಲಿನೋಟ ದೊಳೀಕ್ಷಿಸುತೆ ನೇಹಮುರ್ವಿ (ಪದ್ಮರಾ. ೭-೩೧); ಚೆಲ್ಲಿಗಣ್ಣಿಳ ತಮ್ಮ ಕೆಲ್ಲಿನೋಟಗಳನು ಚೆಲ್ಲಿದರತಿ ಚದುರಿಂದ (ಕುರಾಸಾಂ. ೩೧-೧೦). [ಕೆಲ್ಲಿ₂ + ನೋಟ]

**ಕೆಲ್ಲೈಸು** 'ಕೆಲ್ಲಯಿಸು' ನೋ.

**ಕೆಲ್ಲೋಜ** (ನಾ). ಒಬ್ಬಾತನ ಹೆಸರು: ಇದಂ ಬೆಸಗೆಯ್ದಂ ಕೆಲ್ಲೋಜಂ (ಎಕ. XI, ಚಳ್ಳಕೆ. ೭-೯; ಸು. 925). [ಕೆಲ್ಲ₀ + ಓಜ₁ (< ಒವರ್ು)]

**ಕೆವಡಮಲ್ಲಿಗವಡ** (ನಾ). ಒಬ್ಬಾತನ ಹೆಸರು: ಮಳಲ್ಲಿ ಮುಂಡೆ ಗವಡ ಅಂಬಳೆ ಕೆವಡಮಲ್ಲಿಗವಡಯಿವರ ಕುಲದೇವರು ಖಿಟ್ಟರ್ಕೆ ಮಲ್ಲಿಕಾರ್ಜುನ (ಎಕ. XIV, ಗುಂಡ್ಲುಪೇ. ೧೪೮-೫೨; 975 ?). [ಕೆವಡ₀ + ಮಲ್ಲಿ + ಗವಡ₀ (< ಗಾಮುಂಡ)]

**ಕೆವಲ** 'ಕೇವಲ' ನೋ.

**ಕೆವೆಸೆ** (ನಾ). ಒಂದು ಊರಿನ ಹೆಸರು: ಕೆವೆಸೆಯ ಕಾಳಗಾವುಣ್ಣನ ಮಗ ಕಲ್ಲಣ ಬಟ್ಟೆಯ ಪೋಗುತಿರೆ (ಎಕ. VIII, ಸೊರಬ. ೪೪೫-೬; 975 ?). [?]

**ಕೆವ್ವನೆ** (ಅ). ಒಂದು ಅನುಕರಣ ಧ್ವನಿ: (ಕ).

**ಕೆಸ** 'ಕೆಸವು' ನೋ.

**ಕೆಸಂಬಳ** (ನಾ). ಒಂದು ಊರಿನ ಹೆಸರು: ಕೆಸಂಬಳದ ಬಣಕ ಮೆಣ್ಣಗವುಣ್ಣ (ಮೈಆರಿ. ೧೯೪೧, ೧೯-೯; 951). [?]

**ಕೆಸಗಿ** (ನಾ). ಒಬ್ಬ ರಾಕ್ಷಸನ ಹೆಸರು (?): ಉಡಲು ತೊಡಲು ಹೊದಿಯಲೆಂದು ಮಡುಹಿದ ಮೃಡ ಮೂವರನಂದು ತೊಗಲನುಗಿದ ವನಮುಮ, ಕರಿದಾನವ, ಕೆಸಗಿದಾನವ, ಬ್ರಾಹೂದಾನವರ ಸೊಡ್ಡಳ ನಂದು (ಸರ್ವವ. ೧೬೬-೭೯೦). [?]

**ಕೆಸದಿ** (ನಾ). ಒಂದು ಸ್ಥಳದ ಹೆಸರು (?): ಪನೆಕೋಡು ಪಾಡಿ ದೇವಾಳ್ಬನ ಒಡೆಯೊವ್ವಿನದಿಯು ಕೆಸದಿಯುಂ ಪಡೆತ್ತದು . . . ಕೊಡ್ಡ(ಟ್ಟು)ದು . . . ಕೆಸದಿಯು ವಿನದಿಯು ತಮ್ಮ ತಮ್ಮಾನಂದೊರ್ಕ ಕೊಡ್ಡ(ಟ್ಟು)ದು (ಇಆ. XIV, ೨೪೨-೫೧; 9ನೆಯ ಶತ. ಕೃಶಾ). [?]

**ಕೆಸರಂಕ** 'ಕೆಸಱಂಕ' ನೋ.

**ಕೆಸರಕಲ್ಲು** 'ಕೆಸರ್ಗಲ್' ನೋ.

**ಕೆಸರು** 'ಕೆಸಱ್' ನೋ.

**ಕೆಸರುಕಾಪು** (ನಾ). "(ಸವಾರನಿಗೆ ಕೆಸರು ಸಿಡಿಯದಂತೆ ಬೈಸಿಕಲ್, ಮೊ. ಗಳ ಚಕ್ರದ ಮೇಲ್ಗಡೆ ಹಾಕಿರುವ) ಲೋಹದ ತಡೆಪಟ್ಟಿ; ಕೆಸರುಕಾಪು" (Mudguard. ಇಂಕನಿ). [ಕೆಸರು (< ಕೆಸಱ್)+ಕಾಪು]

**ಕೆಸರುತಡೆ** (ನಾ). = ಕೆಸರುಕಾಪು: ಮೋಟಾರು ಕಾರಿನ ಮುಂಭಾಗ ದಲ್ಲಿರುವ ಕೆಸರುತಡೆ (ವಿಜ್ಞಾವಿ. ೧೮). [ಕೆಸರು (< ಕೆಸಱ್) + ತಡೆ₂]

**ಕೆಸರ್ಗಚ್ಚು** (ನಾ). ಕೆಸರು ಮತ್ತು ಗಚ್ಚು; ಕೆಸರಾದ ಗಚ್ಚು: ಕುಂದಣ ಕೆಸರ್ಗಚ್ಚಿನಿಂ ತರತರದೆ ಕೋಂಟೆ ಕೊತ್ತಳವ. . . ಅಮರ್ಚಿ (ನವಮೋ. ೨೨-೧೩). [ಕೆಸಱ್ + ಗಚ್ಚು]

**ಕೆಸರ್ಗಲ್**, ಕೆಸರಕಲ್ಲು, ಕೆಸಱುಕಲ್ಲು, ಕೆಸಱುಗಲ್ಲು (ನಾ). ಅಡಿಗಲ್ಲು; ತಳಪಾಯದ ಕಲ್ಲು; ಅಸ್ತಿಭಾರಶಿಲೆ: ಆ ಪಟ್ಟಣದ ಕೆಸರ್ಗಲ್ಲ ಮುಹೂರ್ತಕಾಲದಲ್ಲಿ (ಕೆಳನೃ. ೧-೬೯ ವ). **ಕೆಸರಕಲ್ಲು**: 'ಕೆಸರಕಲ್ಲು' ಹಾಕುವ ದಿನ ಊರ ಪರವೂರ ಅಧ್ಯರನ್ನೆಲ್ಲ ಕರೆಸಿದ್ದ (ಒಡ್ಡಉ. ೧೩೩). **ಕೆಸಱುಕಲ್ಲು**: ಕೆಸಱುಕಲ್ಲಾದಿಯಾಗಿ ಕಲ್ಲೋಝುರ ಕೆಲಸ-(ಸೌಇಇ. XI-ii, ೧೬೬-೧೦೩; 1124); ದೇಗುಲದ ಕೆಸಱುಕಲ್ಲಾದಿಯಾಗಿ (ಇಎ. ೧೯೪೩, ಹಾಸುಗ. ೨೧೨-೩೮; ?).

**ಕೆಸಱುಗಲ್ಲು**: ತಳಕಂಬ ಕಳಶದ ಮೇಲೆ ಕೆಸಱುಗಲ್ಲು (ಅವಚಂ. ೨೭-೧೧೨); ಕೆಸಱುಗಲ್ಲನಿಕ್ಕಿ ಧರೆ ಮೇರುವ ನೆಲೆಗೊಳಿಸಿ (ಚನ್ನವ. ೪); ಚೈತ್ಯಾಲಯಕ್ಕೆ ಕೆಸಱುಗಲ್ಲನಿಕ್ಕಿ (ಕಇ. I, ೪೧-೧೧; 1417). [ಕೆಸಱ್ + ಕಲ್₃]

**ಕೆಸರ್ಗೂಡು** (ಕ್ರಿ). ಕೆಸರನ್ನು ಕಲಸು: ರಿಪುಶ್ರೇಣಿಯ ತಱಿದ ರೋಹಿತದಿ ಹೂಣಿಸಿ ಕೆಸರ್ಗೂಡಿ ಕೋಟೆಯ ರಚಿಸಲ್ಕೆ ಶೋಣಿತಪುರ ವೆಂಬುದಾಯ್ತು (ಮೋಹತ. ೨೦-೫). [ಕೆಸಱ್ + ಕೂಡು₁]

**ಕೆಸರ್ಗೆಯ್** (ನಾ). ಕೆಸರಾದ ಕೈ; ಕೊಳೆಯಾದ ಕೈ: ಪರಮೇಶ್ವರ ನಡಿಗಳೆಡೆಯೊಳಾ ಪೂವಂ ಕೆಸರ್ಗೆಯ್ಯಿಂದಿರಿಸಿ ಪೋಪುದಿತ್ತಲ್ (ಪುಣ್ಯಾಸ್ರ. ೨-೨೮ ವ). [ಕೆಸಱ್ + ಕೆಯ್₃]

**ಕೆಸತರ್ೂಣ** (ನಾ). ೧. ಕೆಸರಿನಲ್ಲಿ ನೆಟ್ಟಕಂಬ, —ದಡಿ. ೨. (ಆಲಂ) ಚಂಚಲ ಚಿತ್ತ: ಅವನು ಬರೀ ಕೆಸತರ್ೂಣ. ಸ್ಥಿರಬುದ್ಧಿಯವನಲ್ಲ (ರೂಢಿ). [ಕೆಸರು (<ಕೆಸಱ್) + ತೂಣ]

**ಕೆಸರ್ನೀರ್** (ನಾ). ಕೆಸರಾದ ನೀರು; ಬಗ್ಗಡವಾದ ನೀರು; ರಾಡಿ ನೀರು: ಕಿಱಿದಾದ ಕೆಸರ್ನೀರೆಂ ಮಱಿಯಾನೆಯದೊಂದು ಕಂಡು ಕುಡಿವಾತುರದಿಂ (ಬಾಥಪು. ೪-೮೫). [ಕೆಸಱ್ + ನೀರ್₂]

**ಕೆಸರ್ಮಲ್ಲಿಗೆ** (ನಾ). ಕೆಸರಿನಲ್ಲಿ ಹುಟ್ಟುವ ಹೂ; ತಾವರೆ; ಕಮಲ: "ಕೆಸರ್ಮಲ್ಲಿಗೆ ಕಮಲಕ್ಕೆ ಪೆಸರ್" (ಕಶಸಾ. ೮-೧೬೫); ಕೆಸರ್ಮಲ್ಲಿಗೆ, ನೇಸರ್ಮಯಣಂ (ಶಮದ. ೧೮೩ ಪ್ರಯೋ); ಉಳ್ಳಲರ್ದ ಕೆಸರ್ಮಲ್ಲಿಗೆಯ ತಾಯ್ವೇರ್ ತಳದಿಂ ಮುಱಿಯೆ (ರಾಮಾಶ್ವ. ೧೧-೨೧). [ಕೆಸಱ್ + ಮಲ್ಲಿಗೆ]

**ಕೆಸರ್ಮಸಗು** (ಕ್ರಿ). ಕೆಸರು ತುಂಬು; ಕೆಸರಾಗು; ಬಗ್ಗಡವಾಗು; ರಾಡಿಯಾಗು: ಕೆಂದೂಳಿಯೊಳ್ ಕೆಸರ್ಮಸಗಿದ ಜಲದುರ್ಗಮೆಲ್ಲಂ ನೆಲದೊಳೊರಂತಾಗೆಯುಂ (ಅಜಿಪು. ೯-೧೬ ವ); ಪರಿಮಳದ ಕೆಸರ್ಮಸಗಿದ ವನಸ್ಥಳದೊಳ್ ಬಿನದದಿಂ ನಡೆವಲ್ಲಿ (ಗಿರಿಕ. ೨-೭೧ ವ); ಸಾಗರಮಂ . . . ಕದಡಲ್ ಕೆಸರ್ಮಸಗಲ್ (ಜಗವಿ. ೭-೧೮). [ಕೆಸಱ್ + ಮಸಗು₁]

**ಕೆಸರ್ಮಾಡು** (ಕ್ರಿ). ಕೆಸರಾಗುವಂತೆ ಮಾಡು; ಕೆಸರಾಗಿಸು: ಪರಿದ ಪುಡಿಯೆಲ್ಲಮಂ ನೀರ್ ನೆರೆದು ಕೆಸರ್ಮಾಡದನ್ನೆಗಂ (ಕವಿರಾ. ೩-೧೫೦). [ಕೆಸಱ್ + ಮಾಡು₁]

**ಕೆಸವು**, ಕೆಸ, ಕೆಸವೆ, ಕೆಸು₁, ಕೇಸು₂ (ನಾ). ೧. ಅಣಬೆ; ಆಳಂಬೆ; ಛತ್ರಿಕೆ: "ಕೆಸವು ಛತ್ರಿಕೆಯಕ್ಕು" (ಮಂಗರಾ. ೪೪-೪೭); "ಆಳಂ – ಕೆಸವು" (ಒಪಧಿ. ೧೦); ಕೆಮ್ಮನೆ ದಲ್ [ಪಾಠಾಂ. ದರ್ಕೆ] ಕೆಸವಂ ಸೂಲಮ್ಮಾಡಿಯೆ ನುಡಿಯಲಕ್ಕುಮೇ ಪೇಱಿಮಿದಂ (ನೇಮಿಪು. ೧೦-೫). ೨. ಅಗಲವಾದ ಎಲೆಗಳುಳ್ಳ ಹಾಗೂ ದಂಟುಳ್ಳ ಒಂದು ಬಗೆಯ ಸಸ್ಯ; ಸೇಬುದಂಟು; ಶೇಮೆದಂಟು: ಸುರುಚಿರ ಚಕ್ಕೆವತಂ ಚಿವಿಕಿರೆ ರಾಜಗಿರೆ ಕೆಸವುಂ ಕೀರೆಣಗಳೆಯಲೆವಾಮರಮಂ ಬಡಿಸಿದರ್ (ಧರ್ಮಪ. ೨-೫೬); ಕೆಸವಿನ ಸೂರಣದೆಸಕಮನೆಸೆವಾ ವಾಸ್ತುಕದ ರಸಂ (ಖಮುದ. ೨-೧೨೧); ಕೆಸವು ಅಬಲು ನೆಯ್ದಲು ಕಂದಬೀಜಂಗಳು (ಪಸಾರ. ೫೧೨-೧೩). **ಕೆಸ**: ೨. 'ಮರಕೆಸ' ಪರಾ. **ಕೆಸವೆ**: ೨. ಕೆಸವೆ ಪಲ್ಯ ಬಹಳ ರುಚಿಯಾಗಿರುತ್ತದೆ (ರೂಢಿ). **ಕೆಸು₁**: ೨. ಶಿಶು ಹೋಗಿ ಕೆಸು ತಿಂತು ಎಂತ ಮುಖಕ್ಕೆ ಮಸಿಯೊರಸಿಕೊಂಡ (ಗಾದೆ). **ಕೇಸು₂**: ೨. 'ಕೇಸಿನಪಲ್ಯ' ಪರಾ.

ಕೆಸವೆದಂಟು = ಕೆಸವೆ ಸಸ್ಯದ ದಂಟು, —ಕಾಂಡ: ತಿಥಿಯ ದಿನ ಕೆಸವೆದಂಟಿನ ಪಲ್ಯಮಾಡಬೇಕು (ರೂಢಿ).

**ಕೆಸವೂರು** (ನಾ). ಒಂದು ಊರಿನ ಹೆಸರು: ಕೆಸವೂರ ಮಹಾಜನಕ್ಕೆ ಸಾಲೆ ಆಚನ್ದ್ರತಾರಕಂ (ಎಕ. VII, ಶಿಕಾರಿ. ೪೫–೧೫ ; 890 ?).
[ಕೆಸ$_0$ + ಊರು$_3$ (< ಊರ್)]

**ಕೆಸವೆ** 'ಕೆಸವು' ನೋ.

**ಕೆಸಱ್**, ಕೆಸರು, ಕೆಸಱು (ನಾ). ೧. ನೀರಾಗಿ ಕಲಸಿದ ಮಣ್ಣು ; ಬುರುದೆ; ಅರಲು; ರಾಡಿ; ಪಂಕ; ಕರ್ದಮ: ದೆಸೆಗಳ್ ವಿಶಾಲಮಾದುವು ಕೆಸಱಿಂ ಪಿಂಗಿತ್ತು ಧರಣಿ (ಕವಿರಾ. ೨–೬೧) ; ಭೋರೆಂದು ಪೆರ್ಮಳೆ ಕೊಂಡು ಕೆಸಱಾದೊಡೆ (ವಡ್ಡಾರಾ. ೧೫೨–೧೪); ನೆತ್ತರ ಕೆಸಱೊಳ್ ಗಾಲಿಗಳೆತ್ತಂ ತಳರದೆ ಜಿಗಿಲ್ತು ನಿಲೆ (ಪಂಪಭಾ. ೧೦–೯೦) ; ಕೆಸಱಲ್ಲಿ ಬಿದ್ದ ಪಶುವಿನಂತಾನು ದೆಸೆದೆಸೆಗೆ ಬಾಯ ಬಿಡುತ್ತಿದ್ದೇನಯ್ಯಾ (ಬಸವ. ೫೨) ; ನೀರ್ದೆಗೆದು ಬೆಂಚೆಗಳೊಳ್ ಕೆಸಱೂಱೆ (ಕಬ್ಬಿಕಾ. ೫೩) ; ಕಾಡಿಗೆಯ ಕೆಸಱೊಳಗ್ಗದ ನೀಲದ ಸಱಿಗೆ ಸರಿಯಾಯ್ತು (ಕುವ್ಯಾಅ. ೧೭–೧೮) ; ಅಸಮಾಶ್ವಗಳು ಬಾಂದೊಱೆಯ ಕೆಸಱೊಳು ಬಿದ್ದೇಳಲಾಱದಾದುವೊ ಎಂದು (ಮೋಹತ. ೨೭–೧೯). ೨. ಗದ್ದೆ ; ತರಿ ನೆಲ : ಕೆಸಱೊಳ್ ನೆಲ್ ಬೆಳೆಗುಮಲ್ಲದೆ ಜೋಳಂ ಬೆಳೆಯಲಱಿಯದು (ಧರ್ಮಾಮೃ. ೧೧–೯೦). ೩. (ಆಲಂ) ಕಳಂಕ; ಮಾಲಿನ್ಯ : ಪೆಸರೊ ಕೆಸಱಂಟೆ ಶೋಕಂ (ಅಶ್ವತ್ಥಾ. ೩೪೬). **ಕೆಸರು :** ೧. ಆ ಮಂದಿರ . . . ಕೆಸರಿನಲ್ಲಿ ಬಿದ್ದಿರುವುದನ್ನು ನೋಡುವುದು ನನ್ನಿಂದ ಸಾಧ್ಯವಾಗದ ಮಾತು (ಬಾಣಅ. ೨೨) ; ಕೈಕೆಸರಾದರೆ ಬಾಯಿ ಮೊಸರು (ಗಾದೆ). **ಕೆಸಱು :** ೧. "ಪಂಕಃ, ಸಾದಃ, . . . ಅವಕಿಲಃ –ಈ ೬ ಕೆಸಱು (ಹಲಾಯು. ೧೧೨–೫೬); ಪೊಗೆ ನೆಳಲ್ ಕೆಸಱು ತೋಯಂ . . . ತರದಿನಕ್ಕುಮಿವು ಶಾಂತದೀಪ್ತಮ(ದ)ನ್ವರ್ಥಂಗಳ್ (ಲೋಕೋಪ. ೧೨–೧೧) ; ಕಱಗಿ ಕೆಸಱಿನಂತಿರಿರ್ದ ತಾಮ್ರಲೇಪನಂಗಳಕಟ ತೊವಲನೆತ್ತಿ ನೆತ್ತಿವರಲು ಕತ್ತಿಯಿಂದ ಕೀಸಿಯಕಟ (ಸಾನಂಚ. ೬–೧೩); ಸಾರಿಸಿತು ಮುಗಿಲುಗಳು ಸಾದು ಜವ್ವಾದಿ ಕೆಸಱಿನಲಿ (ಸಂಭಪ. ೨೦–೯೯) ; ಕಸ್ತುರಿಯ ಕೆಸಱಿನಲಿ ಸಾರಿಸಿ ಮುತ್ತಿನಲಿ ಕಡೆಯಿಕ್ಕಿ (ಸಾಳ್ವಭಾ. ೨೦–೩೩).

**ಕೆಸರತುಳಿ** = (ಕೆಸರು ಕಲಸುವವರು ತುಳಿಯುವಂತೆ) ತುಳಿದಾಡು : ಹಾಲ್ಬೇಡಿ ಹರಿದತ್ತ ನೀರ್ಬೇಡಿ ನಿಂದತ್ತ ಮೊಸರ್ಬೇಡಿ ಕೆಸರತುಳಿದತ್ತ (ಲೋಕಗೀತೆ); ಹಾಲಬೇಡ್ಯತ್ತಾನ, ಕೋಲು ಬೇಡಿ ಕುಣಿದಾನ, ಮೊಸರಬೇಡಿ ಕೆಸರತುಳಿದಾನ (ಕನ್ನಜಾ. ೪೭). **ಕೆಸಱಕಡಿತ** = (?): ಎರಡು ಮೊಡ್ಡಣಂ ಕಾದಲ್ಕೆಂದೀ ತೆಱದಿನೊಡ್ಡಿ ನಿಂದುವು ಭೂತಳಮಳ್ಳಾಡೆ ಕೆಸಱಕಡಿತದ ತೆಱದಿಂ (ಪಂಪಭಾ. ೧೦–೫೩) ; "ಕೆಸರಿನ ಮೇಲೆ ಹರಡಿರುವ ಕಡತ" (ಪಂಪದೀ. ೩೫೮),. ℙ ಮುಳಿಯ ತಿಮ್ಮಪ್ಪಯ್ಯನವರು ಕೆಸಱಕಡಿತವೆಂದರೆ ಕೆಸರಲ್ಲಿ ನೆನೆಹಾಕಿದ ಚರ್ಮವೆಂದೂ ಕೆಸರಕಡಿತವು ಹೇಗೆ ಅತ್ತಿತ್ತ ಅಲ್ಲಾಡುವುದೋ ಹಾಗೆ ಹೋರಾಟಕ್ಕೆ ದಿಗಿಲಾದ ನೆಲವೆ ಅಲ್ಲಾಡಿತು ಎಂಬ ಅತಿಶಯೋಕ್ತಿ ಎಂದೂ ವಿವರಿಸಿದ್ದಾರೆ (ನಾಡೋಜ. ೨೪೭). **ಕೆಸಱಕಿಚ್ಚಿಡು** = ಕೆಸರಿಗೆ ಕಿಚ್ಚನ್ನು ಇಡು ; ಅಸಾಧ್ಯವಾದದ್ದನ್ನು ಮಾಡು ; ಅದ್ಭುತವನ್ನು ಮಾಡು : ಬ್ರಹ್ಮರಾಕ್ಷಸಂಗೆ ಹೊಱಗೊಡ್ಡ ನೊಡ್ಡುವರುಂ ಕೆಸಱಕಿಚ್ಚಿಡುವರುಂ ದೆಸೆಗೆ ಬೊಬ್ಬಿಱಿವರುಂ (ಎಕ. VIII, ಸೊರಬ. ೨೬೮–೩೫; 1245).

[ದೇ. ‖ ತಮಿ. ಮಲ. ಚೇಱು ; ತುಳು. ಕೇಡು, ಕೆಸರು ./ ಪ್ರಾ. ಕೇಆರ ; ಸಂ. ಕೇದಾರ]

**ಕೆಸಱಂಕೆ**, ಕೆಸರಂಕ (ನಾ). ೧. ಜಟ್ಟಿ; ಮಲ್ಲಯುದ್ಧ ಮಾಡುವವನು; ಪೈಲವಾನ : "ಕೆಸಱಂಕರೆನಲ್ಕೆ ಮಲ್ಲರೊಳ್" (ಕರ್ಣಾನಿ. ೨೭). ೨. ಕೆಸರಾದ ಕಳ (?) : ತಿರಿವುದು ಬೈಕಂಗೊಳ್ಳದು ಮೊರೆವುದು ಮಱಿದುಂಬಿಯಲ್ತು ಕತ್ತರಿಗಾಳಂಬೆರಸಿ ತನುಗೊಂದಿ ದೊರೆಕೊಂಡಿರೆಯುಂ ಕೆಸಱಂಕಮಲ್ಲಿದಾವುದೊ ಪೇೞಿಂ (ಕಾವ್ಯಾವ. ೫೯೫). **ಕೆಸರಂಕ :** ೧. ಇದಿರೊಡ್ಡಿ ಆದಟಲೆಯುತ್ತಿರುವ ನಿನ್ನಳವಿಯ ಕೆಸರಂಕನಿಗೆ ಸ್ವಾಗತಗೀತವಾಗಿ (ಮಂತ್ರಶ. ೬೩–೬).

[ಕೆಸಱ್ + ಅಂಕ$_2$]

**ಕೆಸಱಂಕಕಾಱ** (ನಾ). = ಕೆಸಱಂಕ : ೧. ಹಳಿಗೂಳಿಯಂ ಪೆಳಱುಗೊಳಿಸಿದಡೆ ಕೆಸಱಂಕಕಾಱರನಿಕ್ಕಿದೊಡೆ ಕಂಸನ ಚಾಳಾನೆಯಂ ಕೆಡಹಿದೊಡೆ ಮಹಾದ್ಭುತವಾಯ್ತು (ಸಾಳ್ವಭಾ. ೧೫–೩೧).

[ಕೆಸಱ್ + ಅಂಕಕಾಱ]

**ಕೆಸಱಿಕ್ಕು** (ಕ್ರಿ). ಮಣ್ಣು ಕಲಸಿ ಇಡು ; ಅಡಿಗಲ್ಲು ಹಾಕು : ಮೃಗಲಕ್ಷ್ಮನುದಯದೊಳ್ ನಿಲಿಸುಗೆ ಕಂಭಮನಿಂದುಸುತನ ಲಗ್ನಂಬರೆ ಬೆಟ್ಟುಗೆಡೆಂಕೆಗಳಂ ಕೆಸಱಿಕ್ಕುಗೆ ಭೃಗುಸುತನುದಯಮಾಗೆ ನಿಲ್ಕುಂ ಚಿರಮುಂ (ಲೋಕೋಪ. ೩–೨೬). [ಕೆಸಱ್ + ಇಕ್ಕು]

**ಕೆಸಱಿಗೆ** (ನಾ). ಬಚ್ಚಲು ; ಬಚ್ಚಲಿನ ಹರಿ : "ಕೆಸಱಿಗೆಯೆಂದು ಬಚ್ಚಲ್" (ಕಶಸಾ. ೩೨–೬೭೬) ; "ಬಚ್ಚಲಕ್ಕು ಕೆಸಱಿಗೆಯೆನ್ನಲ್" (ಕವಿಕಂ. ೨೫೦). [< ಕೆಸಱ್]

**ಕೆಸಱಿಡು** (ಕ್ರಿ). ಕೆಸರಾಗು ; ಬಗ್ಗಡವಾಗು : ಖಂಡದ ದೊಂಡೆಗಳು ಕೆಸಱಿಡುವ ಮಿದುಳುಗಳ (ಕುವ್ಯಾಭೀ. ೫–೧) ; ಕೆಸಱಿಡುವ ರಕುತಾಂಬುಗಳ (ಕುವ್ಯಾದ್ರೋ. ೧೩–೪) ; ಚಾರುಚಳೆಯದ ಕೆಸಱಿಡುವ ಕಸ್ತೂರಿಗಳ (ಸಂಭಪ. ೨೮–೧೧). [ಕೆಸಱ್ + ಇಡು$_1$]

**ಕೆಸಱು** 'ಕೆಸಱ್' ನೋ.

**ಕೆಸಱುಕಲ್ಲು** 'ಕೆಸರ್ಗಲ್' ನೋ.

**ಕೆಸಱುಗಲ್ಲು** 'ಕೆಸರ್ಗಲ್' ನೋ.

**ಕೆಸಱುದೋಱು** (ಕ್ರಿ). ಕೆಸರು ಕಾಣಿಸು ; ತಳಕಾಣು : ಕೆಸಱುದೋಱಲು ಜಗುಳೆ ದಾಂಟಿತು ಭರತ ಪರಿವಾರ (ತೊರರಾ. ೨–೬–೧೭) ; ಕೆಸಱುದೋಱಿತು ಕಡಲು ಪಾಂಸುಪ್ರಸರದಲಿ (ತೊರರಾ. ೪–೯–೧).

[ಕೆಸಱು (< ಕೆಸಱ್) + ತೋಱು$_1$ (< ತೋಱ್)]

**ಕೆಸಱುವಣ** (ನಾ). ಒಂದು ಬಗೆಯ ತೆರಿಗೆ ; ಗದ್ದೆಯ ಕಂದಾಯ : ಊರು ಮರಿಯಾದೆಯಲುಳ್ಳ ಕೆಸಱುವಣ ಬಿತ್ತುವಟ್ಟ ಆರುವಣ ಮುಖ್ಯವಾಗಿವುಳ್ಳಂತಹ ಆಯವೆಲ್ಲವೂ ಆ ಧರ್ಮಕ್ಕೆ ಸಲುವುದು (ಎಕ. XV, ಹೊಳೆನ. ೨೦–೩೦; 1277). [ಕೆಸಱು (< ಕೆಸಱ್) + ಪಣ$_1$]

**ಕೆಸಱೇಳು** (ಕ್ರಿ). ಕೆಸರಾಗು : ನೀರೇಱಿದ ಮುಗಿಲ್ಗಳು ಕೆಸಱೆದ್ದುವು . . . ಆ ಸೇನಾ ಪದಧೂಳಿ ಪೂರಿಸೆ ಗಗನಮಾರ್ಗವನು (ಕುರಾಸಾಂ. ೪೧–೮೦). [ಕೆಸಱ್ + ಏಳು$_1$ (< ಏೞ್$_1$)]

**ಕೆಸು$_1$** 'ಕೆಸವು' ನೋ.

**ಕೆಸು$_2$** (ನಾ). ಕೆಂಪು ; ಕೆಂಬಣ್ಣವುಳ್ಳದು. 'ಕೆಸುಕಾಡು' ಪರಾ.

[< ಕಿಸು$_3$]

**ಕೆಸುಕ** (ಕ್ರಿ). ಕೊಳೆ ; ಗರ್ಭಕೋಶದ ಕಸ ; ಸೆತ್ತೆ (?) : ಬಸಿರ ಹಳ್ಳಿಗೆ ಬಂದು ಮಾಸನೂರಲಿ ನಿಂದು. . .ಕೆ[ಪಾಠಾಂ. ಕಿ]ಸುಕದಱಿವೆಯ ಹೊದ್ದು ಮಲಮೂತ್ರದಲಿ ಬಿದ್ದು ವಸುಧೆ ದಿನವನು ಕಳೆದೆಯೋ ಆತ್ಮ (ಕನಕ. ೧೯೯–೧). [← ತಮಿ. ಚೆದುಕ್ಕು, ಚೆದುಗು]

**ಕೆಸುಕಾಡು** (ನಾ). ಕೆಂಪು ಮಣ್ಣಿನ ಭೂಮಿ : ತಲೆಪಱಿಯೊಳು ಐವತ್ತು ಮತ್ತರ್ ಕೆಸುಕಾಡುಂ ಕೀೞ್ಕೆಱೆ ಮೂವತ್ತರ್ಮಡಿಕಾಡುಂ (ಸೌಇಇ. IX–i, ೪೭–೮; 9ನೆಯ ಶತ). 'ಕಿಸುಕಾಡು' ಪರಾ.

[ಕೆಸು$_2$ + ಕಾಡು$_3$]

**ಕೆಸುಗೊಳ** (ನಾ). ಒಂದು ಊರಿನ ಹೆಸರು : ಕೆಸುಗೊಳಮೊಡೆಯ ಬಿನಾಮ್ಮಜ್ಗೆ (ಎಕ. IV, ಹೆಗ್ಗಡ. ೪-೨ ; ಸು. 750) ; ಕೆಸುಗೊಳ ಮೊಡೆಯ ಮಾಜನ ೧ಕ್ಕೆ (ಎಕ. IV, ಹೆಗ್ಗಡ. ೪-೧೯ ; ಸು. 750). 'ಕಿಸುಗೊಳ' ಪರಾ. [ಕೆಸು$_2$ + ಕೊಳ$_3$]

**ಕೆಸುಮಂಗಲ** (ನಾ). ಒಂದು ಊರಿನ ಹೆಸರು : ಕೆಸುಮಂಗಲಂ ಸುಳ್ಯಂ (ಎಇ. IX, ೨೦೪-೬೦ ; 750). 'ಕಿಸುಮಂಗಲ' ಪರಾ. [ಕೆಸು$_2$ + ಮಂಗಲ]

**ಕೆಸುಮಣ್ಣು** (ನಾ). ಕೆಂಪುಮಣ್ಣು ; ಕೆಂಪುಭೂಮಿ. 'ಕೆಸುಮಣ್ಣುನಾಡು' ಪರಾ. [ಕೆಸು$_2$ + ಮಣ್ಣು (< ಮಣ್)]

**ಕೆಸುಮಣ್ಣುನಾಡು** (ನಾ). ೧. ಕೆಂಪುಭೂಮಿಯ ನಾಡು ; ಕೆಸುಕಾಡುನಾಡು. ೨. ಒಂದು ನಾಡಿನ ಹೆಸರು : ಪಿಯಕೆಲ್ಲ ಕೆಸುಮಣ್ಣುನಾಡಾಳೆ (ಎಕ. XVI, ತುಮಕೂ. ೯೫-೧ ; 780). [ಕೆಸುಮಣ್ಣು + ನಾಡು]

**ಕೆಸುವೊಳಲು** (ನಾ). ಒಂದು ಊರಿನ ಹೆಸರು : ವ್ರೀಹಿಮುಖ ಗ್ರಾಮ ಕೆಸುವೊಳಲ ಕೆನ್ನೋರ ಮಾನ್ಯ . . . ಪ್ರಭೃತಿ ದಶಗ್ರಾಮ ಪರಿಭೋಗೇನ (ಇಆ. XIX, ೧೮-೧೪ ; 602). 'ಕಿಸುವೊಬಲ್' ಪರಾ. [ಕೆಸು$_2$ + ಪೊಳಲ್ (< ಪೊಬಲ್)]

**ಕೆಸೆಯಮ್ಮ** (ನಾ). ಒಬ್ಬಾತನ ಹೆಸರು : ಏಚಯ್ಯನು ಗೋನಯ್ಯನು ಕೆಸೆಯಮ್ಮನು (ಸೌಇಇ. IX-i, ೨೯-೪ ; 963). [ಕೆಸ$_0$ + ಅಮ್ಮ$_1$]

**ಕೆಹೆಕಬ್ಬು** (ನಾ). ಒಂದು ಬಗೆಯ ಸಸ್ಯ : "ತೇಜನಕಃ —ಕೆಹೆಕಬ್ಬು, ಗುರುಗ, ಗೇರು, ತಾರೆ" (ಓಷಧಿ. ೬೨). [?]

**ಕೆಳ** 'ಕೆಱ' ನೋ.

**ಕೆಳಂದಲೆ** 'ಕಿಱ್ತಲೆ' ನೋ.

**ಕೆಳಗಡೆ** 'ಕೆಱಗಡೆ' ನೋ.

**ಕೆಳಗಿವಿ** 'ಕೆಱಗಿವಿ' ನೋ.

**ಕೆಳಗು** 'ಕೆಱಗು' ನೋ.

**ಕೆಳಗೆ** 'ಕೆಱಗೆ' ನೋ.

**ಕೆಳತಟ್ಟು** (ನಾ). = ಕೆಳಗಡೆ : (ಕ). [ಕೆಳ (< ಕೆಱ) + ತಟ್ಟು$_2$]

**ಕೆಳದಾಡೆ** (ನಾ). ಕೆಳಭಾಗದ ದವಡೆ : "ಹನುಃ . . . – ಅ ಕೆನ್ನೆಗಳ ಮೇಲ್ಭಾಗಕ್ಕೂ ಹಿಂಭಾಗಕ್ಕೂ ಹೆಸರು, ಕಟವಾಯಿ ಕಣಿತಲೇ ಕೆಳ ದಾಡೆಗೂ ಹೆಸರೆಂದು ಕೆಲವರೆನ್ನುವರು" (ಸಿದ್ಧಾಂತಿ. ೧೭೦). [ಕೆಳ (< ಕೆಱ) + ದಾಡೆ (< ದವಡೆ)]

**ಕೆಳದಿ** (ನಾ). ಗೆಳತಿ ; ಜೊತೆಗಾತಿ ; ಸಖಿ : "ಆಳಿ, ಸಖಿ, ವಯಸ್ಯಾ –ಈ ೩ ಕೆಳದಿ" (ನಾಚಿರಾ. ೧೧೭) ; "ಗೆಳತಿಯೆಂದುಂ, ಕೆಳದಿಯೆಂದುಂ ಸಖಿ" (ಕಶಸಾ. ೧೯-೩೮೫) ; ಕೆಳದಿಯಭಿಮತವನೊರ್ಬುೞಿಗೂಡಿ (ಕವಿರಾ. ೩-೧೩೩) ; ಆಕೆಯ ಕೆಳದಿ ನಾಗಬ್ಬೆ (ವಡ್ಡಾರಾ. ೪೪-೭) ; ಒಡನಾಡಿ ಬಳೆದ ಮೇಳದ ಕೆಳದಿಯರುಂ (ಆದಿಪು. ೩-೨೩ ವ) ; ಬೆಳುದಿಂಗಳು ಬಿಸಿಲಾಯಿತ್ತು ಕೆಳದಿ (ಮಹಾದೇ. ೩೪-೩) ; ಕೆಳದಿಯರ ಕೈಯಿಂದ ಕೊಯ್ಸಿದಳ್ . . . ಬಲುಹುರಿಯ ನೇಣುಗಳ (ಕುವ್ಯಾ ಅ. ೨೧-೬) ; ಕುಮಾರಿ ಹೊಂದೇರಿನಲಿ ಬಂದಳು ಕೆಳದಿಯರುವೆರಸಿ (ಸಾಳ್ವಭಾ. ೮-೪) ; ಹೊರೆಯ ಕೆಳದಿಯ ಕಂಬದ ಮೇಲೆ ಕರಗಳನಿರಿಸುತ (ಕಂನವಿ. ೨-೯೪). [< ಕೆಳ$_2$]

**ಕೆಳಮೆ** (ನಾ). ಕೀಳು ಎಂಬ ಭಾವ ; ಹೀನತೆ : ಭಾರತದ ದಾಸ್ಯವು ಅಚ್ಚೊತ್ತಿದ ಕೆಳಮೆಯ ಭಾವನೆ ಬೇರೆ (ಸಮಜೀ. ೬೧೫). [ಕೆಳ (< ಕೆಱ) + -ಮೆ$_1$]

**ಕೆಳಮೈ** (ನಾ). ೧. ದೇಹದ ಕೆಳಭಾಗ : (ಕ). ೨. ಕುಪ್ಪಸ ; ಕವಚ, ಮೊದಲಾದ ವಸ್ತ್ರಗಳ ಒಳಮೈ : (ಕ). [ಕೆಳ (< ಕೆಱ) + ಮೈ (< ಮೆಯ್)]

**ಕೆಳಯಿಂಕೆ**, ಕೆಳಯಿಕೆ, ಕೆಳಯಿಕ್ಕೆ, ಕೆಳೆಯಿಂಕೆ (ಅ). ಕೆಳಗಡೆಗೆ ; ಬುಡದಲ್ಲಿ : ಓಡಿನೊಳಗಗೆಯ ಹೊಯಿದಂತೆ, ಕೆಳಯಿಂಕೆ ಬೇಱೂಱದು, ಮೇಲೆ ಫಲವಾಗದು (ಬಸವ. ೫೮೩) ; ಅಂದೊಮ್ಮೆ ಧರೆಯಮೇಲೆ ಉದಕವಿಲ್ಲದಂದು ಕೆಳಯಿಂಕೆ ಪಾದವ ನೀಡಿದೆಯಲ್ಲ ಬಸವಣ್ಣ (ಅವಚಂ. ೨೦೨-೯೧೧) ; ಕಡುಗಿ ಕೊರಳಲದಾರೊ ಪಾಶವ ತೊಡಿಸಿ ಕೆಳಯಿಂಕೆಳದ ದಾಡೆಯ ದಡಿಗರು (ನಿಭಾಗ. ೬-೨-೨೭). 'ಒಳಯಿಂಕೆ' ಪರಾ. **ಕೆಳಯಿಕೆ** : ಉಲಿದು ತೊಟ್ಟಿಲಿನಿಂದ ಕೆಳಯಿಕೆ ಘಳಿಲನಿಳಿದನು (ಸಂಭಪ. ೭-೪೬) ; ಮರನೇಱಿ ನಕ್ಕಾಡಿ ಕೆಳಯಿಕೆ ಬೀಳ್ವಂತೆ ಸುರರು ಭೂತಳಕೆ ಬೀಳುವರು (ಭರಚ. ೧೭-೬೮). **ಕೆಳಯಿಕ್ಕೆ** : "ಸಂಡೀನ – ಕೆಳಯಿಕ್ಕೆ ಹಾಱುವ ಪಕ್ಕಿ" (ನಾಚಿರಾ. ಕ). **ಕೆಳೆಯಿಂಕೆ** : ಕೆಱೆಯ ಕೆಳೆಯಿಂಕೆ ಸೀಮೆಯನೂ ಮಾಡಿ (ಎಕ. X, ಮುಳುಬಾ. ೭-೭ ; 1416). [ಕೆಳ (< ಕೆಱ) + ಇಂಕೆ ?]

**ಕೆಳಯಿಕೆ** 'ಕೆಳಯಿಂಕೆ' ನೋ.

**ಕೆಳಯಿಕ್ಕೆ** 'ಕೆಳಯಿಂಕೆ' ನೋ.

**ಕೆಳರ್**, ಕೆರಳ್, ಕೆರಳು, ಕೆಲರ್$_1$, ಕೆಳರು, ಕೆಳಲ್, ಕೆಳಲು (ಕ್ರಿ). ೧. ಬಾಯಿತೆರೆ ; ಬಿರಿ ; ಬಿರುಕು ಬಿಡು : ಪರಿವ ಗಾಲಿಯ ಕೋಳ್ಗೆ ಕೆಳರ್ತುರ್ ಬೆಟ್ಟುಗಳ್ ಕೂಡೆ ಸಡಿಲ್ವಿನಂ (ಕಬ್ಬಿಕಾ. ೨೦೫). ೨. ಅರಳು ; ವಿಕಾಸವಾಗು ; ವ್ಯಾಪಿಸು ; ವಿಸ್ತರಿಸು : "ಕೆಳರ್ – ವಿಜೃಂಭಣೇ (ವಿಸ್ತರಿಸು, ಆಕಳಿಸು)" (ಶಮಧಾ). ೩. ಎಬ್ಬಿಸು ; ಹರಡು ; ಕೆದರು : ಸ್ಫುರದುದ್ಯದ್ಧೂಳಿಯುಂ ಮೇಣ್ಕೆಳರುತುಱಿ ಕಲಂಕುತ್ತವೆತ್ತಂ ತಟಾಕೋತ್ಕರವುಂ (ಉದ್ಭಟ. ೯-೧೩೨). ೪. ರೇಗು ; ಕನಲು ; ಕೋಪಿಸು : ಎಂದು ಕೆಳರ್ದು ನುಡಿದು ಸಯಂಬರಕೆ ನೆರೆದರಸು ಮಕ್ಕಳೆಲ್ಲರನುತ್ಸಾಹಿಸಿ (ಪಂಪಭಾ. ೩-೬೬) ; ಅಳವಿಲ್ಲದೆ ಮುಳಿದು ಕೆಳರ್ದು ಕಿರ್ಚಿದಾರ್ಗಳ್ (ಗದಾಯು. ೮-೪೩) ; ನೆರೆವಾಶಾಧೀಶರಲ್ಲಲ್ಲಿಗೆ ಕೆಳರ್ದು ಸಿಡಿಲ್ದೇೞುತಿರ್ಪಲ್ಲಿ (ಜಗವಿ. ೧೩-೫೭) ; ನಿರ್ವಂಶಮಪ್ಪಂತಿರೆ ತಱಿದು ಮಹಾವಾರ್ಧಿಗುಯ್ದಿಕ್ಕುವೆಂ ಚೆಚ್ಚರಮೆಂಬುದ್ಯೋಗದಿಂದಂ ಕೆಳರ್ದು ನಡೆವ ದೇವೇಂದ್ರನಂ (ಧರ್ಮಾಮೃ. ೮-೧೧೯) ; ಉಣ್ಣದಾಹಾರಮಂ ಮಾಣದುಂಡರು ಎಂದು ಕೆಳರ್ವ ಪಾಪಾತ್ಮರ್ (ಪ್ರಭುಪು. ೬-೭೮). ೫. ಉದ್ರಿಕ್ತವಾಗು ; ಪರಿತಪಿಸು (?) : ಉಟ್ಟುದಂ ಕಳೆಯದಿರಿಂದು ಬೇನೆ ಕೆಳರ್ವಪ್ಪುದು (ಕಾವ್ಯಸಾ. ೯೯೪ ಶೂದ್ರಕ) ; ಕೆಳರೆ ವಿರಹಿವೃಂದಂ ಪುಷ್ಪಿತಾಶೋಕದಿಂದಂ ತಳರೆ ಕುಸುಮಜಾಳಂ . . . ಬಱಿಯೆ ಮದನ ದಾಹಂ ಬೀಸುಗುಂ ಗಂಧವಾಹಂ (ಕಾವ್ಯಾವ. ೫೫೮). ೬. ಕೂಗು ; ಕಿರಿಚು ; ಗರ್ಜಿಸು : ಸಿಕ್ಕದೋಡಿತು ಕಾಡೆ ಕೆಳದೋಡಿದಂತೆ (ಕಾಲೂರ. ೮೩-೧೮೩). ೭. ಕೂಗಾಡು ; ವಿವಾದಮಾಡು (?) : "ಕೆಳರ್ದುದು ವಿವಾದಮೆಲೆ ಚತುರಾಸ್ಯ" (ಚತುನಿ. II, ೪೬). **ಕೆರಳ್** : ೩. ಮರಲ್ವ ಭೂತವ್ರಜದ ಝೋಂಪಿಸಿ ಕೆರಳ್ವ ಭಟರಟ್ಟೆಗಳಲೆಸೆದುದು ಕೂಡೆ ರಣಭೂಮಿ (ಕುವ್ಯಾಕ. ೧೫-೩೩). ೪. ಪಿಂಗಳಕಂ ಕಿನಿಸಿ ಕೆರಳ್ದು ಕಿಡಿಕಿಡಿವೋಗಿ (ಪಂಚತಂ. ೧೦೬-೭ ; ಮಾರಿ ಮೀಱಿದಡೆ ಮ್ರಿತ್ಯು ಕಡಂಗಿ ದೊಡಾದರ್ದು ಭೈರವಂ ಕೆರಳ್ದಡೆ (ಎಕ. XI, ಚಿತ್ರದು. ೧೩-೧೮ ; 1124) ; ಕೈವಿಡಿದೆಳೆವುದುಂ ಕೆರಳ್ದು ಕುಮಾರಂ (ನಂಬಿರ. ೬-೧೩೪) ; ಪಿತ್ತಜ್ವರಿತಂಗೆ ಪಾಲುಶರ್ಕರೆಯುಂ ಕೊಳ್ವುದೆಂದು ಪೇಳ್ದಡಂ ಕೆರಳ್ವನಲ್ಲದೆ ಕೈಕೊಳ್ವನಲ್ಲ (ಧರ್ಮಪ. ೭-೩ವ). **ಕೆರಳು** : ೪. ಕೆರಳಿ ವಾಘೆಯ ಕೊಂಡು ರಥವನು ಧುರಕೆ ದುವ್ವಾಳಿಸಲು (ಕುವ್ಯಾದ್ರೋ. ೧೦-೧೩) ;

ಕೈಕಸೆಯ ಮಗ ಕೆರಳಿದರೆ ಕಲ್ಪದ ಪಶುಪತಿಯ ಪಾಡೇನು (ತೊರರಾ. ೬-೧೦-೧೮); ಕೆರಳಿ ದೂರ್ವಾಸರಿತ್ತುರವಣೆಯ ಶಾಪದಿಂ (ಸಾನಂಚ. ೨-೯೨). ೫. ಮನದೊಳು ಕೆರಳಿ ಕೋಪದೊಳಿರ್ದ (ಭರಚ.೨೫-೫೪); ಈಟಿಗಳ ಪೆಟ್ಟುಗಳಿಂದ ಕೆರಳುತಲ್ಲಿರುವ ಮದ್ದಾನೆಯ ಹಾಗೆ ಕ್ಲೇಶಪಡುತ್ತ (ಕೃವಾಭೀ. ೧೪೬); ಅತ್ಯುರುತರ ದುಃಖ ಭಾವ ದಿನಳಲ್ವ ಬಳಲ್ವ ಕೆರಳ್ವ (ಶತಕ. ೧೫೯-೨೪); ಯೋಚನೆ ನೂರುಸಲ ಮನಸ್ಸಿನಲ್ಲಿ ಕೆರಳುತ್ತಿತ್ತು (ದೂರಸ. ೬೫). ೮. ಕೆರಳಿಸು; ರೇಗಿಸು: ಕೃಷ್ಣ ಪಾರ್ಥನ ಕೆರಳಿದನು (ಕುವ್ಯಾದ್ರೋ. ೯-೪೬). **ಕೆಲರ್$_1$**: ೬. ಕೆಲರುತ್ತಂ ಮುಂದೆ ನಿಂದಿರ್ದಪದಟರನೆಚಿದೀಡಾಡಿ . . . ಸಾರುತಿರ್ಪಂ (ನಳಚಂ. ೮೦). **ಕೆಳರು**: ೪. ವರ್ಮವಜೆಯದೆ ಕೆಳರಿ ನುಡಿಯುಚಿತವಲ್ಲು (ಪ್ರಭುಪು. ೩-೫೪). **ಕೆಳಲ್**: ೪. ಕಲಹಕ್ಕೆ ಕಚ್ಚಿವಾಸುವ ತಲೆವೆತ್ತಿ ಕೆಳಲ್ದು ಜಗಳವಾಡುವ (ಸಮುಪ. ೩-೫೫). **ಕೆಳಲು**: ೪. ಕೆಳಲಿ ಬಳಿಕ ಚಕ್ರೇಶ್ವರನಾದುರಗಲಿಸಿ ಸಿಹ್ಮರಥನೊಳು ಕಾದಿ (ನೇಮಿಸಂ. ೧೩-೧೮); ಸಿಡಿಲ ಕೇಳ್ದ ಹರಿಯಂತೆ ಕೆಳಲಿ (ಸಮ್ಯಕ್ತ್. ೮-೧೯); ಕಳಲದೆ ಕೆಳಲದೆ ಬಳಲದೆ ಹಳಿಯದೆ ಸುಳಿಸುಳಿಗೊಳ್ಳದೆ (ಯೋಗಾಂವಿ. ೬-೨೧); ಕೋಲಿನ ಮೊನೆಯಿಂದಲಿ ಕುಸುರಿದಜೆಯೆ ಕೆಳಲಿದನು (ವರ್ಧಸಾಂ. ೭-೧೬).

[ದೇ. ‖ ತಮಿ. ಕಿಳರ್; ಮಲ. ಕಿಳರು; ತೆಲು. ಕೆರಲು]

**ಕೆಳರಿಚು** 'ಕೆಳರ್ಚು' ನೋ.

**ಕೆಳರು** 'ಕೆಳರ್' ನೋ.

**ಕೆಳರ್ಚು, ಕೆರಳಿಚು, ಕೆಳರಿಚು, ಕೆರಳ್ಚು** (ಕ್ರಿ). ಉದ್ರೇಕಿಸು; ರೇಗಿಸು: ಮನದ ಪಿಶಾಚಕ್ಕೆ ವಚನರಚನಾಧೂಪಮಂ ತೋಜೆ ವಿರಹ ವಿಕಾರಮಂ ಕೆಳರ್ಚೆ (ಅನಂಪು. ೧೧-೩೭ ವ) **ಕೆರಳಿಚು**: ಮರುಳು ಮಗನೇ ಕೃಷ್ಣರಾಯನ ಕೆರಳಿಚುವರೇ (ಕುವ್ಯಾಉ. ೬೦೫ ೧೦-೧೫). **ಕೆಳರಿಚು**: ಹಿಳುಕ ಮುಜೆದೊಡನೆಚ್ಚು ಭೀಮನ ಕೆಳರಿಚಿದರೈ ಕರ್ಣ ನಂದನರು (ಕುವ್ಯಾಕ. ೧೦-೩೮). **ಕೆರಳ್ಚು**: "ಕೆರಳ್ಚು – ಆಸ್ಫೋಟನೇ (ಪ್ರಕಟಕೋಪೋದ್ರೇಕೇ)" (ಶಮಧಾ); ಕಡೆವತ್ತಿದೆನ್ನಯ ಬಾಣದಿಂ ಕಡೆಸಾರ್ ಬಿಡೆಂದು . . . ಪಾರ್ಥನೊತ್ತಿ ಕೆರಳ್ಚಿದಂ (ಶಬಶಂ. ೪-೨೬); ಅರ್ಜುನನ ಮೇಲೆ ತಂತ್ರವನೆಸಗಿ ಶಾಪಮಂ ಕುಡಿಸಿದಲ್ದೇವನದಿಯಂ ಕೆರಳ್ಚಿ (ಜೈಮಿಭಾ. ೯ ಸೂಚನೆ). [ಕೆಳರ್ + –ಚು]

**ಕೆಳಲ್** 'ಕೆಳರ್' ನೋ.

**ಕೆಳಲು** 'ಕೆಳರ್' ನೋ.

**ಕೆಳಲೋಕ** (ನಾ). ಭೂಲೋಕದ ಕೆಳಗಿನ ಲೋಕ; ಅಧೋಲೋಕ: "ತಳವಮತ್ತತಳ ವಿತಳ ಸುತಳಂ ರಸಾತಳ ತಳಾತಳಮು ಪಾತಾಳ ಮೆಂದು ವರ್ತಿಸುವ ಕೆ[ಪಾಠಾಂ. ತ]ಳಲೋಕಮೇಳಕ್ಕು" (ಮಂಗರಾ. ೧೦-೩೨); ಬನ್ನಿ ಕೆಳೆಯರಿರ ತನಿಯೆರೆವೆ ಕೆಳಲೋಕವಾಸಿಗಳಿಗೀ ಸ್ಥಳದೆ (ಪಾರಸಿ. ೨೩-೫೨೭). [ಕೆಳ (< ಕೆಟಿ) + ಲೋಕ]

**ಕೆಳವ** 'ಕೆಟಿವ' ನೋ.

**ಕೆಳವಾಡಿ$_1$** (ನಾ). "ಒಂದು ಬಗೆಯ ಕಬ್ಬು" (ಪಂಪರಾಮಾ ಕೋಶ): ಪಲ್ಲಟಿಸದೆ ಕಣ್ಗಳ್ ನಿಂದಲ್ಲಿಯೆ ನಿಲೆ ತಮ್ಮೊಳಿಳಿಸಿ ನೋಡುವ ಪದದೊಳ್ ಪುಲ್ಲಶರಂ ಕೆಳವಾಡಿಯ ಬಿಲ್ಲಿಂತಿರ್ದೆಸಗದರಲ ಸರಲಂ ಸುರಿದಂ (ಪಂಪರಾಮಾ. ೮-೧೪). [?]

**ಕೆಳವಾಡಿ$_2$** (ನಾ). ಒಂದು ಊರಿನ ಮತ್ತು ನಾಡಿನ ಹೆಸರು: ಕೆಳವಾಡಿ ಮೂನೂಜುಂ (ಸೌಇ. XI–ii, ೧೧೯-೩೮; 948); ಕೆಳವಾಡಿಯ ಕೆಜೆಗೆ ಬಿಟ್ಟ ಕೆಯಿ ೨೦ ಮತ್ತರುಂ (ಎಇ. IV, ೨೩೧-೨೨; 1053); ಕೆಳವಾಡಿ ಮೂನ್ನೂಜುಮಂ (ಇಅ. IX, ೯೮-೨೨; 1169). [?]

**ಕೆಳವು** (ನಾ). ಎಳೆಯುವಿಕೆ; ಆಕರ್ಷಣ: ಕೆಳವು, ತೆರವು, ಎಳವು (ಶಮುದ. ೨೧೦ ಪ್ರಯೋ). [ಕೆಳೆ$_1$ + –ವು]

**ಕೆಳವೆ** 'ಕೆಟಿವೆ' ನೋ.

**ಕೆಳಸಾಗು** (ಕ್ರಿ).= ಕೆಳಸಾರ್: ಉಲ್ಕೆ ಉಳುಕಿದ ಹಾಗೆ ಗಳಕನೆ ಕಳಚುವರೆ ಕೆಳಸಾಗುತ (ಕೃಷ್ಣಾಕು. ೪೯-೬). [ಕೆಳ (< ಕೆಟಿ) + ಸಾಗು$_1$]

**ಕೆಳಸಾರ್** (ಕ್ರಿ). ಕೆಳಕ್ಕೆ ಹೋಗು: ಪೋತಂದಂ, ಕೆಳಸಾರ್ದಂ (ಶಮುದ. ೧೭೬ ಪ್ರಯೋ). [ಕೆಳ (< ಕೆಟಿ) + ಸಾರ್$_1$]

**ಕೆಳಾಮುದ್ದ** (ನಾ). ಒಬ್ಬಾತನ ಹೆಸರು: ಎಳಾ ಅಲಕ್ಕೊವಾಡಿ ತಾಳೆಯೋನ್ ಮೀ × ಜೆಯ್ಯು ಇಕ್ಕಿಸಿ ಸತ್ತಾನ್ ಪೊಟಿನ್ನಾ ಕೆಳಾ ಮುದ್ದನ್ (ಸೌಇ. IX–i, ೨-೧೨; 9ನೆಯ ಶತ). [?]

**ಕೆಳಿ** (ನಾ). ಒಂದು ಬಗೆಯ ಸುಗಂಧ ದ್ರವ್ಯ (?): ಮಣಿಮಯ ಭಾಜನಂಗಳೊಳ್ ತೆಕ್ಕನೆ ತೀವಿದ ಪಂಚರತ್ನದ ಕೆಳಿ [ಪಾಠಾಂ. ಕೇಸರಿ] ಯ ಕತ್ತುರಿಯ ಕೊಳತಳ [ಪಾಠಾಂ. ದ] ಕರ್ಪುರದ ಪಳಿಕಿನ ಬಾಯಿನಂಗಳಂ (ಆದಿಪು. ೪-೩೪ ವ). [< ಚಳೆಯ]

**ಕೆಳೆ$_1$, ಗೆಳೆ$_1$** (ಕ್ರಿ). ಎಳೆ; ಸೆಳೆ; ಆಕರ್ಷಿಸು: "ಕೆಳೆ – ಆಕರ್ಷಣೇ" (ಶಮಧಾ); ಕಟಿಯದಿಹುದೆ ಧರ್ಮ ತನುವ ಕೆಳೆಯದಿಹುದೇ ಸಿದ್ಧಿ ಚಿತ್ತವಲುಗದಿಹುದೆ ಮುಕ್ತಿ (ಕವಿಚ. II, ೭೮ ವೃಷಭಗೀತೆ). **ಗೆಳೆ$_1$**: ಸೆಳೆದೀಡಾಡುರ ತುಂಬಿರ್ದ ಪದಕವ ಕಳೆ ಜಘನದ ಕಾಂಚಿಯನು ಗೆಳೆದು ಬಿಸಾಡುಟ್ಟ ನಿಜೆಯ . . . ತಳುವೇಕೊ ತಕ್ಕೆಯೊಳಿರ್ದು (ಕುರಾಸಾಂ. ೨೬-೫೮); ಅವಳುಟ್ಟ ಮಿಜುಪ ದುಕೂಲದ ಸೀರೆಯ ಗೆ[ಪಾಠಾಂ. ಸೆ]ಳೆದಳು (ಕುರಾಸಾಂ. ೩೩-೯೦).

**ಕೆಳೆ$_2$, ಗೆಣೆ, ಗೆಳೆ$_2$** (ನಾ). ೧. ಸ್ನೇಹ; ಮೈತ್ರಿ; ಸಖ್ಯ: "ಸಖ್ಯಂ . . . ಸಭಾಜನಂ – ಈ ೯ ಕೆಳೆ" (ಹಲಾಯು. ೧೧೭-೨೧); ಶ್ರೀ ಗುಣ್ಡಿಜ್ಜಲಾ ಸಿಯಕೊಲ್ಲ ಅಸಿ ಉನ್ನತನ್ ಎನ್ಬೊನ್ ಕೆಳೆಇನಿತ್ತನ್ (ಎಕ. XVI, ತುಮುಕೂ. ೯೫-೯; 780); ಕೆಳೆ ಸಂಗಳಿಸುಗೆ ನಿಮಗಮೆ ಮಗಮಿಂ (ಆದಿಪು. ೧೧-೧೩೩); ನೀನಿಂದೆನ್ನ ಮನೆಗೆ ಬಾರದಂದು ನಿನ್ನ ಕೆಳೆ ಟಕ್ಕರ ಕೆಳೆಯಂತಕ್ಕುಂ (ಪಂಚತಂ. ೧೨೫-೧೮); ನೀರಿಲ್ಲದೆಡೆಯ ಬೆಳಸುಂ ಕ್ರೂರರ ಕೆಳೆಯುಂ ವಿವೇಕಿಯುಲ್ಲದನರಸುಂ (ಧರ್ಮಾಮೃ. ೭-೪೮); ಅರಿಗಾರೂ ಇಲ್ಲ ಕೆಟ್ಟವಂಗೆ ಕೆಳೆಯಿಲ್ಲಾ (ಬಸವ. ೨೫); ಅನಾಮಿಕರೊಡನೆ ಕೆಳೆ . . . ಸುಳಿದ ಗಾಳಿಗೆ ಮಲೆವ ದೀವಿಗೆಯಂತೆ (ಕುವ್ಯಾಉ. ೩-೭೮). ೨. ಗೆಳೆಯ; ಸ್ನೇಹಿತ; ಮಿತ್ರ: ಕೈಗೊಂಡತ್ತ ಪರಿಮಿತ ರಾಗಮೆರ್ದೆಯಂ ನೃಪತಿ ಸನಾಭಿಗಳಾ ಬಂಧುಜನದಾ ಕೆಳೆಯಾ (ಕವಿರಾ. ೨-೨೨); ಪಗೆಯ ಪಗೆ ಕೆಳೆಯಲ್ತೇ (ಮಲ್ಲಿಪು. ೩-೭೭); ಕೆಳೆಯೇ ಸರ್ವರೊಳುತ್ತಮಂ (ಸೋಮೇಶ. ೧೪); ಕೆಲರ್ಗೆ ಕೆಳೆ ಗಡ ಕೆಲರ್ಗೆ ಹಗೆ ಗಡ ಕೆಲರ್ಗುದಾಸೀನಂ ಗಡ (ಸಾನಂಚ. ೮-೩೧). **ಗೆಣೆ**: ೧. ಹಗೆಯವರ ಗೆಣೆ ಹೊಲ್ಲ (ಸರ್ವಜ್ಞ. ೧೧೫೩). ೨. ಪುರಜನಮಂ ಪರಿಜನಮಂ ಕರಮುಕ್ಕಿಂ ಪಿಡಿದು ತನ್ನ ಗೆಣೆಗಳ್ಗಾನುಂ ಪರಿಭವಿಸಿ ಬಡಿಯಲ್ (ಧರ್ಮಾಮೃ. ೨-೧೪). **ಗೆಳೆ$_2$**: ೨. ಇಜಿವಿಟ್ಟಗೆವಂದ ರಸುಗೆಳೆಗಳಂ ರಣದೊಳ್ ತಳ್ತಟ್ಟೆ (ಮುಂಬರಾ. XI, ೨೪೦-೨೩; 1060).

[ದೇ. ‖ ತಮಿ. ಕೇಳ್; ತುಳು. ಗೆತ್ತ್]

**ಕೆಳೆಗೊಳ್, ಕೆಳೆಗೊಳು, ಗೆಳೆಗೊಳ್** (ಕ್ರಿ). ಸ್ನೇಹಮಾಡು; ಗೆಳೆತನ ಮಾಡು; ಒಡಗೂಡು; ಜೊತೆಗೂಡು: ದೈವವಿದಂಗನೆಯೊಳ್ ಕೆಳೆಗೊಳ್ಳವಂ ಸುಹೃಜ್ಜನದಯಿತಂ (ಜಾತತಿ. ೧೭-೪); ಪೊಲ್ಲರೊಳ್ಕೆಳೆಗೊಳ್ಳದಿರ್ಪುದು ಶಿಷ್ಟರೊಳ್ ವಿನಯಮುಮಂ ಪ್ರತಿಪಾಲಿಸಿರ್ಪುದು (ಧರ್ಮಾಮೃ. ೫-೧೦೦); ಅಡವಿಯನೆ ಕೆಳೆಗೊಂಡು ನೆಲದೊಳಗೆ ಬೈಟಿಟ್ಟು (ಸರ್ವವ. ೧೭-೮೨); ಕಲಾಪ್ರೌಢರಲ್ಲದರ ಕೆಳೆಗೊಳ್ಳದ (ಸೌಂದಪು. ೭-೩೬).

**ಕೆಳೆಗೊಳು** : ಕೆಳೆಗೊಳುವುದು ಸೇವೆಗೈವುದು ನಲ್ಲನ ಬಳಿ ಸಲುವುದು (ಹದಿಬ. ೩-೪೨). **ಗೆಳೆಗೊಳ್** : ಸಸ್ಪೃಹರೆಲ್ಲಂ ಗೆಳೆಗೊಂಡು ಬಣ್ಣಿಸುವರ್ (ಅಜಿಪು. ೧೨-೧೨) ; ಚೆಲ್ವೆರಡು ರೂಪಾಯ್ತೊ ವಿಮಲತೆ ಮಡಲ್ತುದೊ ಗೆಲ್ವ ದೆಸೆ ಗೆಳೆಗೊಂಡಡರ್ದುದೊ (ಜೈಮಿಭಾ. ೧೯-೪೯). [ಕೆಳ್ $_{2}$ + ಕೊಳ್ $_{1}$]

(ಕ್ರಿ). ಜೊತೆಗೂಡಿಸು ; ಸೇರಿಸು : ಕರಕಮಲಮಂ ನೊಸಲ್ವೆಱಗೆ ಕೆಳೆಗೊಳಿಸುತಂ (ನಂಬಿರ. ೯-೧೨೩) ; ಪೇರುರದೊಳ್ ತೋರ [ಪಾಠಾಂ. ತಾರ] ಹಾರಮಂ ಕೆಳೆಗೊಳಿಸಿಯುಂ (ರಾಜಶೇ. ೧೩-೫೯ ವ). [ಕೆಳೆಗೊಳ್ + -ಇಸು $_{3}$]

**ಕೆಳೆಗೊಳು** 'ಕೆಳೆಗೊಳ್' ನೋ.

**ಕೆಳೆತನ**, ಗೆಣೆತನ, ಗೆಳೆತನ (ನಾ). ಸ್ನೇಹ; ಸಖ್ಯ ; ಮೈತ್ರಿ : ಮುನ್ನಿನ ಕೆಳೆತನಂ ಕಾರಣಮಾಗೆ ಲಕ್ಷ್ಮಣನೊಳ್ ಬಂದು ಕೂಡಿದಂ (ಪಂರಾಮಾ. ೧೬-೫೯ ವ) ; ತನ್ನ ಕಿಱಿಯಂದಿನ ಕೆಳೆತನಮುಂ ನೆನೆದು (ಧರ್ಮಾಮೃ. ೪-೧೯೩) ; ಕೆಳೆತನದ ನಂಟು ವಿಷಯದ ಬಂಧುವಾತುಗಳ ಬಲದೊಳ್ (ಹಚಕಾ. ೧-೩೧) ; ಕೈಸನ್ನೆಯಿಂದಾ ಮುಕ್ತಿಬಾಲೆಯಂ ಕೆಳೆತನಕೆ ಕರೆವಂತೆ (ಚಿಬವು. ೫-೩೯) ; ಹಿರಿತನಕೂ ಕೆಳೆತನವೇ ಮಿಗಿಲು (ಗಣೇಶ. ೨-೨೭). **ಗೆಣೆತನ** : ಈಗ ಬಾಪೂ ಒಲ್ಲೆ ಅನ್ನೂದಕ್ಕ ಆ ಪಡದಯ್ಯನ ಗೆಣೆತನ ಕಾರಣ (ಗ್ರಾಮಾಯ. ೬೩). **ಗೆಳೆತನ** : ಅವರಿಬ್ಬರ ಗೆಳೆತನ ದಿನೇದಿನೇ ವೃದ್ಧಿಯಾಗುತ್ತಿದೆ (ರೂಢಿ). [ಕೆಳ್ $_{2}$ + -ತನ]

**ಕೆಳೆನಲ್ಬು** (ನಾ). (?) : ಸ್ವಸ್ತಿ ಶ್ರೀ ಸಿಗುಣೂರರ್ ಕೆಳೆನಲ್ಬು (ಎಕ. X (S), ಮುಳುಬಾ. ೧೧೪-೧ ; 9ನೆಯ ಶತ). [?]

**ಕೆಳೆಯ**, ಗೆಣೆಯ, ಗೆಳೆಯ (ನಾ). ೧. ಜೊತೆಗಾರ; ಸ್ನೇಹಿತ; ಸಖ ; ಮಿತ್ರ : "ಕೆಳೆಯಂ ಮಿತ್ರಂ ವಯಸ್ಯಂ ಸುಹೃದನೆನೆ ಸಹಾಯಂಗೆ ಪರ್ಯಾಯ ನಾಮಂ" (ವಸ್ತುಕೋ. ೧೦೦-೧೧) ; ಎನ್ನ ಕೆಳೆಯನಪ್ಪ ಯಮುದಂಡಂ (ವಡ್ಡಾರಾ. ೧೨೪-೬) ; ಬಗೆವೇೞ್ವೊಡೆನ್ನ ಮೇಳದ ಕೆಳೆಯರ್ಕಳಿಲ್ಲ (ಪಂಪಭಾ. ೪-೭೯) ; ನಿನ್ನ ಕೆಳೆಯಂ ಸುಯೋಧನನ್ನೋಡದೆ ನುಡಿಯದಪ್ಪಿಕೊಳ್ಳದೆ (ಗದಾಯು. ೫-೧೬) ; ನರಕಗತಿಗಿೞಿವ ಜೀವೋತ್ಕರಮನೊಳ್ಗತಿಗೆ ತರ್ಪೊಡಾತನೆ ಕೆಳೆಯಂ (ಧರ್ಮಾಮೃ. ೭-೧೨೫) ; ಹಂತಿಯಲಿ ಕುಡಿದರು ಕೆಳೆಯರಿಗೆ ಸವಿದೋಱ (ಕುಮ್ಮಾಭೀ. ೫-೩೧) ; ಕೆಳೆಯರಿಂ ಬೇಟಂ ಸುಪುತ್ರರಿಂದಿಹಪರಂಗಳಸುಖಂ ಪೆರ್ಚುವಂದದೆ (ಚಿಬವು. ೮-೨೦). **ಗೆಣೆಯ** : ೧. ಹತ್ತಿರಿದ್ದರೆ ಹೆಂಡತಿ, ಒಳಿತಿದ್ದರೆ ಅಕ್ಕ ಒಳಿತು ಕೆಟ್ಟರೆ ಗೆಣೆಯ (ಗಾದೆ). ೨. ವಿಟ ; ಬೇಟದವ : ಗೆಣೆಯರನು ಕಣ್ಣಸ್ನೆಯಲಿ ಮಾತಾಡಿಸುತ್ತಿರುವ (ಕೋಗಯ. ೩-೩೩). **ಗೆಳೆಯ** : ೧. "ಒಂದೇ ಪ್ರಾಯದ ಸಂಗಡಿಗನು ಗೆಳೆಯನೆಂದೆಂಬರು" (ನಾಚಿರಾ. ೧೩೧) ; ಗೆಳೆಯರೆಲ್ಲರ ಕೂಡೆಯಾಡುತ (ಸಂಛಪ. ೮-೬೭).

**ಕೆಳೆಯಳ್** = ಜೊತೆಗಾತಿ ; ಸಖಿ ; ಗೆಳತಿ : ಬೞಿವಿಡಿದೆ ಮುಸುಱುವಳಿಗಳ ಬಳಗಕ್ಕೇವೈಸಿ ಮುಗುದೆ ಕೆಳೆಯಳ್ ಸರದೊಳ್ ಮುಱುಗಿರ್ದು ನೆಗೆದುವಂ ಕಂಡು (ಕುಸುಮಾ. ೫-೧೪೪). [ಕೆಳ್ $_{2}$ + -ಅ $_{7}$]

**ಕೆಳೆಯತನ** (ನಾ). ಗೆಳೆಯನಾಗಿರುವಿಕೆ ; ಗೆಳೆತನ : ದೀವಿಗೆಯ ನೆಸಗಿದ ಖಳಂಗೆ ಕೆಳೆಯತನಮುಮನರ್ಥಕುಳದೊಡೆಯತನವುಮನಗ್ಗಳ ವಿತ್ತುದಂ (ಸಾನಂಚ. ೩-೬೩) ; ಕೆಳೆಯತನಂ, ಸುಖಿತನಂ (ಶಬ್ದಾನು. ೪೩೨ ಪ್ರಯೋ). [ಕೆಳೆಯ + -ತನ]

**ಕೆಳೆಯಬ್ಬೆ** (ನಾ). ಒಬ್ಬಾಕೆಯ ಹೆಸರು : ಕೆಳೆಯಬ್ಬೆಯು ಸಿರಿಕಾವಣ್ಣನು ಬಿ××ಣ್ಣನು ಜಟ್ಟಿಯ ಬಯಲಲರೆದಗ್ಗಿ ನಲ್ಲಣ್ಣುಗ ಕಟ್ಟಿದರು (ಎಕ. IV, ಹುಣಸೂ. ೧೦-೧೧ ; 1020 ?) ; ಕೆಳೆಯಬ್ಬೆಗಂ ಸುಪುತ್ರ (ಎಕ. VII, ಶಿವಮೊ. ೧೧-೩೦ ; 1085 ?). [ಕೆಳೆಯ $_{0}$ + ಅಬ್ಬೆ]

**ಕೆಳೆಯಮ್ಮಗಾವುಂಡ** (ನಾ). ಒಬ್ಬಾತನ ಹೆಸರು : ಕೆಳೆಯಮ್ಮಗಾವುಣ್ಡನ ಮಗಂ ಹೊರವಣ್ಣ(ಂ)ಗಾವುಣ್ಡ (ಎಕ. VIII, ಸೊರಬ. ೬೨-೯ ; 1032). [ಕೆಳೆಯ $_{0}$ + ಅಮ್ಮ $_{1}$ + ಗಾವುಂಡ (< ಗಾಮುಂಡ)]

**ಕೆಳೆಯಿಂಕೆ** 'ಕೆಳಯಿಂಕೆ' ನೋ.

**ಕೆಳೆಸಂಕಲೆ** (ನಾ). (ಇಬ್ಬರ ಕೈಗಳನ್ನು) ಕೂಡಿಸಿ ಕಟ್ಟುವ ಸಂಕೋಲೆ : ಕಳ್ಳಂಗಂ ತಳಾಱಂಗಂ ಕೆಳೆಸಂಕಲೆಯನಿಕ್ಕಿದಾಗಳ್ (ಚಾವುಂಪು. ೯೬-೭). [ಕೆಳ್ $_{2}$ + ಸಂಕಲೆ]

**ಕೆಳ್ಪು** (ನಾ). ಪದರ(?) : ಪರಿವಿಷ್ಟ ಸ್ಪಷ್ಟಕರ್ಮಾಷ್ಟ ಕಮಲದಳದಿಂ ಕೆಳ್ಪುಗಳ್ ಪೋಲ್ದುವಾದಂ ಚರಮಾಂಗ ವ್ಯಕ್ತಿಯಿಂದೊಯ್ಯನೆ ತನುತೆಗೆ ಪಕ್ಕಾಗಿ ಜೀವಸ್ವರೂಪಂ ಪರಿಸಂಬೆತ್ತೊಪ್ಪೆ (ಶಾಂತೀಶ್ವ. ೧-೨). [?]

**ಕೆಱಗಲೂರು** 'ಕೆಱಿಗಾಲೂರ್' ನೋ.

**ಕೆಱಗಾಲ** (ನಾ). ಒಂದು ಊರಿನ ಹೆಸರು : ಕೆಱಗಾಲ ಮತ್ತಲಿಪ್ಪತ್ತು ಗ್ರನ್ತ ಇಪ್ಪತ್ತಾರು ಮತ್ತಲ್‌ಗಟ್ಟಿ (ಎಕ. VII, ಶಿಕಾರಿ. ೧೯೪-೧೩ ; 935). [?]

**ಕೆಱು** (ಕ್ರಿ). ನವೆ ; ನೋಯು : ಈ ಧರ್ಮಕ್ಕೆ ಕಾಯ್ವಾತನಾನರ ಕಾವಾಸದೊಳಾಳ್ದು ಭಾನುವಿಧುವಿಪ್ಪನ್ನಂ ಕೆಱುತ್ತಿಪ್ಪಂ (ಎಇ. XV, ೩೨೪-೯೩ ; 1172). [← ತಮಿ. ಚೆಱು = ದ್ವೇಷಿಸು, ಕನಲು]

**ಕೆಱುವು** (ನಾ). ಹೊಲ ; ನೆಲ ; ಭೂಮಿ : ಮಾದಿಗೋ×××ಳ ಪನ್ನುವತ ಸಹಳ್ಳಿಲ್ಲರಾಳಂ ಕಲ್ಕುನ್ದೊಡ್ಡಜ್ಜವು ಒನ್ದು ಕೆಱುವು ಜ××ಮುಮನೆ ತಾಗಿಮು ಕೊಟ್ಟರ್ (ಎಕ. XIV, ತಿರುನು. ೧೫೧-೬ ; ?). [← ತಮಿ. ಚೆಱುವು]

**ಕೆಱುವೂರ್** (ನಾ). ಒಂದು ಊರಿನ ಹೆಸರು : ಕೆಱುವೂರ ಎಡವೆ ಚೆಟ್ಟಿಸೆಟ್ಟಿ (ಸೌಇಇ. XI-ii, ೧೪೮-೧೭ ; 1099). [?]

**ಕೆಱೂರ್** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀ ಸಿಯಗೆಲ್ಲ ಉರಾಳ್ವಿ ಕೆಱೂರ್ಗೊಳೆ ಅ×ಕುಟ್ಟಬಾಗೆ ಊರೇಱಿಸುಳ್ಪಿಱದು ವಿಟ್ಟಾರ್ (ಎಕ. XVI, ತುಮುಕೂ. ೯೯-೩ ; 780). [?]

**ಕೆಱೆ**, ಕೆರೆ $_{2}$ (ನಾ). ಏರಿ ಹಾಕಿ ನೀರು ನಿಲ್ಲಿಸಿದ ಸ್ಥಳ ; ತಟಾಕ ; ಜಲಾಶಯ : "ಆಧಾರಃ, ತಟಾಕಃ - ಈ ೨ ಕೆಱೆ" (ಹಲಾಯು. ೧೧೧-೫೪) ; ನೀರಿಲ್ಲದ ಕೆಱೆಯ ನಡುವುಮಂ (ವಡ್ಡಾರಾ. ೮೫-೨೩) ; ಜಾದಗೆ ... ಕೆಱೆಯ ತೊಱೆಯುದಕಮನೇನಾದರಿಕುಮೆ (ಆದಿಪು. ೯-೧೦೯) ; ಎರೆಯ ಕೆಱೆಯಂತೆ ಬತ್ತಿರ್ದ ಗಲ್ಲಮುಂ (ಧರ್ಮಾಮೃ. ೪-೭೫) ; ಅಱ [ಪಾಠಾಂ. ಱ]ಲುಗೊಂಡ ಕೆಱೆಗೆ ತೊಱೆ ಬಂದು ಹಾಯ್ದಂತೆ (ಮಹಾದೇ. ೧೩-೨) ; ಬತ್ತಿದ ಕೆಱೆಯೊಳಗೆ ಬಲೆಯೇಕೆ (ಕುಮ್ಮಾದ್ರೌ. ೧-೭). **ಕೆರೆ $_{2}$** : ಅರಿದಾಸಯ್ಯಂಗಳ್ ಲಿಂಗ ಪ್ರತಿಷ್ಠೆಮಾಡಿ ಕೆರೆ ಕೆಳಗೆ (ಸೌಇಇ. XI-I, ೯೪-೮ ; 1039) ; ಕೆರೆಯಂ ಕಟ್ಟಿಸಿ ... ದೇವಿಂಗೆರೆಯ ಬಡಗಣ ಕೋಡಿಯಲಿ (ಮೈಆರ. ೧೯೩೦, ೭೬-೪೪ ; 1080) ; ಅವಳು ಏಳು ಕೆರೆಯ ನೀರು ಕುಡಿದವಳು (ಬಾಣಳ. ೨೧೭) ; ಕೆರೆಯ ಮುಂದೆ ಅರವಟ್ಟಿಗೆಯೇ (ಗಾದೆ).

[ದೇ. ‖ ತಮಿ. ಚೆಱ್ಱೆ ; ಮಲ. ಚಿಱ ; ಕೊಡ. ಕೆರೆ ; ತುಳು. ಕೆರೆ, ಕಿರೆ, ಕೆದು ; ತೆಲು. ಚೆಱು, ಚೆರು ; ಕೋಲಾ. ಪರ್ಜಿ. ಚೆರು]

**ಕೆಱೆಕುಂದ** (ನಾ). ಒಂದು ಪ್ರದೇಶದ ಹೆಸರು : ಶ್ರೀ ಪುರುಷಯ್ಯ ಕೆಱೆಕುನ್ದಾ ಮೂನೂಱುಮಾಳುತ್ತಿರೆ (ಎಕ. IX, ಹೊಸಕೋ. ೮೬-೨ ; 720). [ಕೆಱೆ + ಕುಂದ]

**ಕೆಱೆಕೊಡಗಿ** 'ಕೆಱೆಗೊಡಗೆ' ನೋ.

**ಕೆಱಿಗ** (ನಾ). ಒಬ್ಬಾತನ ಹೆಸರು : ಕಾಯಿಪಿಂದಾಳ್ದು ಪೊರ್ದ್ದಂ ಕೆಱಿಗನೆ (ಎಕ. VIII, ಸಾಗರ. ೧೧೯-೨೩ ; 1042). [?]

**ಕೆಱೆ$^3$ಗಾಲ್** (ನಾ). ಒಂದು ಊರಿನ ಹೆಸರು : ಕೆಱೆ$^3$ಗಾಲೆ ಪುದವ ಮುತ್ತರಸರಮರಪ್ಪನ್ ಪರಮಿಳ್ಳಿ ಎಱಿತು ವೀರಸ್ವರ್ಗಂ ಪೊಕ್ಕಂ (ಎಕ. XII, ಮುದ್ದಗಿ. ೯೬–೨ ; ಸು. 750). [ಕೆಱೆ$^3$ + ಕಾಲ್$_2$]

**ಕೆಱೆ$^3$ಗಾಲೂರ್**, ಕೆಱಗಲೂರು (ನಾ). ಒಂದು ಊರಿನ ಹೆಸರು : ವಳ್ಳಾವಿ ವಿಷಯ ಪಞ್ಚಗ್ರಾಮೇ ಕೆಱೆ$^3$ಗಾಲೂರ್ಪೂರ್ಸವಳ್ಳಿ (ಮೈಆರಿ. ೧೯೩೦, ೩–೧೮ ; 475). **ಕೆಱಗಲೂರು** : ಜಲಗರಮಾನಿ ಗೊಡಗಱವಳಿ ಕೆಱಗಲೂರು ಅತ್ತಿವಳಿಗೆಯ ಮಣಲಿನಾಡ ಮೊರಸು ಹಂನೆರಡು (ಎಕ. V, ಬೇಲೂರು. ೬೧–೨೩೬ ; 1117). [ಕೆಱೆ$^3$ + ಕಾಲೂರ್]

**ಕೆಱೆ$^3$ಗೂಡಲ್** (ನಾ). ಒಂದು ಊರಿನ ಹೆಸರು : ಕೆಱೆ$^3$ಗೂಡಲ ದೋರಗವುಣ್ಡ ಈ ಮೂನೂರ್ಬೊರ ದರ್ಮ್ಮ (ಮೈಆರಿ. ೧೯೧೯, ೧೦–೬೪ ; 900). [ಕೆಱೆ$^3$ + ಕೂಡಲ್]

**ಕೆಱೆ$^3$ಗೊಡಂಗೆ** ಕೆಱೆ$^3$ಗೊಡಗೆ' ನೋ.

**ಕೆಱೆ$^3$ಗೊಡಗಿ** 'ಕೆಱೆ$^3$ಗೊಡಗೆ' ನೋ.

**ಕೆಱೆ$^3$ಗೊಡಗೆ**, ಕೆಱೆ$^3$ಕೊಡಗಿ, ಕೆಱೆ$^3$ಗೊಡಂಗೆ, ಕೆಱೆ$^3$ಗೊಡಗಿ, ಕೆಱೆ$^3$ಗೊಡಿಗೆ (ನಾ). ಕೆರೆಯ ಉಸ್ತುವಾರಿಗಾಗಿ ಕೊಟ್ಟಮಾನ್ಯ; ಕೆರೆಯ ಸಂರಕ್ಷಣೆಗಾಗಿ ಕೊಟ್ಟ ಕೊಡುಗೆ : ಕೆಱೆ$^3$ಗೊಡಗೆಯ್ಯಾ ರಾಜಾಮಾನಂ ಮೂಗಣ್ಣುಗ ಗಱ್ದಿ (ಎಕ. XII, ಮುದ್ದಗಿ. ೧೦೨–೧೫, ಸು. 909) ; ಆ ಕೆಱೆ$^3$ಯ ಕೆಳಗೆ ಕೆಱೆ$^3$ಗೊಡಗೆಯಾಗಿ (ಎಕ. V, ಹಾಸನ. ೧೮೨–೨ ; 1314). **ಕೆಱೆ$^3$ಕೊಡಗಿ** : ಬಿದಿರಕೆಱೆ ಕೆಱೆ$^3$ಕೊಡಗಿಯ ಸಿಲಾಶಾ ××× ಕೊಡಗಿಗದೆಗೆ (ಮೈಆರಿ. ೧೯೩೦, ೧೦೦–೧೫ ; 1524). **ಕೆಱೆ$^3$ಗೊಡಂಗೆ** : ಕೆಱೆ$^3$ಯೂರ ತನ್ನ ಕೆಱೆ$^3$ಯ ಕೆಱೆ$^3$ಗೊಡಂಗೆಯಲು ಭೀಮೇಸ್ವರದೇವರ್ಗ್ಗೆ ಬಿಟ್ಟಗಱ್ದಿ (ಎಕ. XI, ಚಿತ್ರದು. ೮೨–೨೮ ; 1074). **ಕೆಱೆ$^3$ಗೊಡಗಿ** : ಹಿರಿಯಹಳ್ಳಿವಾಚಸಮುದ್ರದ ಕೆಱೆ$^3$ಯ ಕಟ್ಟಿಸಿದಲ್ಲಿಗೆ ಕೆಱೆ$^3$ಗೊಡಗಿ ತೋಟಸ್ಥಳವೊಳಗಾಗಿ (ಎಕ. XIV, ನಾಗಮಂ. ೧೪೦–೬೮ ; 1225). **ಕೆಱೆ$^3$ಗೊಡಿಗೆ** : ಕೆಱೆ$^3$ಗೊಡಿಗೆ ಮಾಂನ್ಯ (ಮೈಆರಿ. ೧೯೨೯, ೧೦೬–೨ ; ?).

[ಕೆಱೆ$^3$ + ಕೊಡಗೆ (< ಕೊಡಂಗೆಯ್$_2$)]

**ಕೆಱೆ$^3$ಗೊಡಿಗೆ** 'ಕೆಱೆ$^3$ಗೊಡಗೆ' ನೋ.

**ಕೆಱೆ$^3$ಗೋಡು** (ನಾ). ಒಂದು ಊರಿನ ಮತ್ತು ನಾಡಿನ ಹೆಸರು : ಕೆಱೆ$^3$ಗೋಡು ವಿಷಯೇ ಕೆಱೆ$^3$ಗೋಡುತ್ತರ ಪಾರ್ಶ್ವ (ಎಕ. III, ಮಂಡ್ಯ. ೧೧೩–೩೫ ; 718). [ಕೆಱೆ$^3$ + ಕೋಡು$_7$]

**ಕೆಱೆ$^3$ಪಳ್ಳಿ**, ಕೆರೆಹಳ್ಳಿ (ನಾ). ಒಂದು ಊರಿನ ಹೆಸರು : ಮುಚ್ಚುಣ್ಡಿ ಬಯಲ ಬಳ್ಳಿಗಾವೆ ಕೆಱೆ$^3$ಪಳ್ಳಿ ಬಂಕ ಸರಿಣ್ಣೆ . . . ಸಿರಿಪ್ಪಳ್ಳಿಯನ್ತೀಳುಂ ಗ್ರಾಮಂ (ಸೌಇಇ. XI–i, ೬೪–೧೨ ; 1008). **ಕೆರೆಹಳ್ಳಿ** : ಕೂಡಲಿಮಠ ಧರ್ಮಕೆ ಬಿಟ್ಟ ಕೆರೆಹಳ್ಳಿ ಗಾವಟೂರಗ್ರಾಮುಗಳು (ಎಕ. VII, ಶಿವಮೊ. ೮೧–೧೬ ; 1668). [ಕೆಱೆ$^3$ + ಪಳ್ಳಿ$_1$]

**ಕೆಱೆ$^3$ಯಮ** (ನಾ). ಒಬ್ಬಾತನ ಹೆಸರು : ನೆಲ್ಲೂರ ಮಲೆಯರ ಕೆಱೆ$^3$ಯಮನ ಮಗ ಅಮ್ಮಣ ಗಾವುಣ್ಡನುಂ (ಎಕ. VIII, ಸೊರಬ. ೪೬೧–೯ ; 1012). [ಕೆಱೆ$^3_0$ + ಅಮ$_0$ (< ಅಮ್ಮ$_1$)]

**ಕೆಱೆ$^3$ಯಹಳ್ಳಿ** (ನಾ). ಒಂದು ಊರಿನ ಹೆಸರು : ಕೆಱೆ$^3$ಯಹಳ್ಳಿಯ ಗುಲುಗಣ್ಣನೆಱೆ$^3$ನೂರಱಿವಿನೊಳ್ಕಾದಿ ಸತ್ತಾ (ಎಕ. VIII, ಸೊರಬ. ೨೧೬–೮ ; 903). [< ಕೆಱೆ$^3$ಪಳ್ಳಿ]

**ಕೆಱೆ$^3$ಯೂರ್** (ನಾ). ಒಂದು ಊರಿನ ಹೆಸರು : ಕೆಱೆ$^3$ಯೂರ ಜಾದಿಯೂರ ಕೊಡಂಗನೂರ ಬಾಡದ ಮಹಾಜನಂ (ಎಕ. XI, ಚಿತ್ರದು. ೬೪–೨೮ ; 968) ; ಕೆಱೆ$^3$ಯೂರ ತಿಮ್ಮನಾಯಕ ನುಗ್ಗೆಹಳ್ಳಿಯ ಹರಿದಾಸ (ಕಂನವಿ. ೩–೯೧). [ಕೆಱೆ$^3$ + ಊರ್]

**ಕೆಱೆ$^3$ವೆಸ** (ನಾ). ಕೆರೆಯನ್ನು ಕಟ್ಟುವ ಕೆಲಸ (?) : [ಮಱೆ$^3$]ವೆಸನೆನ ಗಾಯ್ತಿೀಗಳ್ ಕೆಱೆ$^3$ವೆಸನೇನೊಸೆದು ನಾಗಿಮಯ್ಯ×ದೇವಂ ಕೆಱೆ ಧರ್ಮೇತ×× ವಜನಂ ಮೇಲ್ಕೋಡಿ ನಡೆಯಿಪಂ (ಸೌಇಇ. XI–ii, ೧೬೩–೬೬ ; 1113). [ಕೆಱೆ$^3$ + ಬೆಸ$_1$]

**ಕೆಱೆ$^3$ವೊಗು** (ಕ್ರಿ). ಕೆರೆಯನ್ನು ಹೊಗು, —ಪ್ರವೇಶಿಸು : ಉರಿಯೊಳಳಿದಂ ವ್ಯಾಳಿ ಕೆಱೆ ವೊ[ಪಾಶಾಂ. ಯೊ]ಕ್ಕ ಕೋರಾಂಟ (ಸಿದ್ಧರಾ. ೧–೧೦). [ಕೆಱೆ$^3$ + ಪೊಗು$_1$]

**ಕೆೞ**, ಕೆಳ (ನಾ). 'ಕೆೞಗು' ಎಂಬುದಕ್ಕೆ ಸಮಾಸದಲ್ಲಿ ಬರುವ ಸಂಕ್ಷಿಪ್ತ ರೂಪ : ಕೆಱೆ$^3$ಯ ಕೆಳಗಣ ಕೆೞನುಂ ಮೇಲುಮಕ್ಕಿಯುಮಂ (ಎಕ. VI, ಕಡೂರು. ೨–೧೬ ; ಸು. 1110) ; ನಾೞ, ಕೆೞ, ಗುೞ . . . ಸೂೞ್ ಇತಿ ಅವಗೞಯಾದಯಃ (ಶಬ್ದಾನು. ೧೪೦ ವ್ಯಾಖ್ಯಾ). **ಕೆಳ**. 'ಕೆಳಗಲ್ಲ' ಪರಾ. [< ಕೆೞಗು]

**ಕೆೞಗಡೆ** (ನಾ). ೧. ಕೆಳಗಿನ ನಿಟ್ಟು, —ಭಾಗ; ತಳಭಾಗ : ಸೆಡೆವಂ ನಾಗೇಂದ್ರನತ್ತಲ್ ಕೆೞಗಡೆ ಪೊಡೆವಳ್ ಧಾತ್ರಿ ಮೇಲಿತ್ತಲತ್ತಲ್ (ಜಗವಿ. ೬–೩೦). **ಕೆಳಗಡೆ** : ೨. ಪೂರ್ವದಿಕ್ಕು; ಪೂರ್ವ; ಕೆಳಗಡೆಯ ಸೀಮೆ : (ಶಿ). [ಕೆೞ + ಕಡೆ$_3$]

**ಕೆೞಗಿವಿ**, ಕೆಳಗಿವಿ (ನಾ). ೧. ಕಿವಿಯ ಕೆಳಭಾಗ. **ಕೆಳಗಿವಿ** : ೨. (ಅಲಂ) ಅಲಕ್ಷ್ಯ; ಅನಾದರ : ಆ ವಿಚಾರವನ್ನು ಅವನು ಕೆಳಗಿವಿಯಿಂದಲೆ ಕೇಳಿದನು (ರೂಢಿ). [ಕೆೞ + ಕಿವಿ$_2$]

**ಕೆೞಗಿವಿಗೆಯ್** (ಕ್ರಿ). ಅಲಕ್ಷಿಸು; ಅನಾದರಮಾಡು : ಮಾಳವಿಗರಂ ಕೆೞಗಿವಿಗೆಯ್ಯಲೀಯದಾಟಂದು (ಪಂಪಭಾ. ೬–೨೯ ವ) ; ಆ ಮಾತಂ ಕೆೞಕಿ[ಗಿ]ವಿಗೆಯ್ದು . . . ದುರ್ಯೋಧನನಿಂತೆಂದಂ (ಪಂಪಭಾ. ೧೩–೮೬ ವ). [ಕೆೞಗಿವಿ + ಕೆಯ್$_1$]

**ಕೆೞಗಿವಿಗೇಳ್** (ಕ್ರಿ). ಕಿವಿಯ ಮೇಲೆ ಹಾಕಿಕೊಳ್ಳದೆ ಇರು; ಕೇಳಿದರೂ ಕೇಳದಂತೆ ವರ್ತಿಸು ; ಅಲಕ್ಷಿಸು : ಸುಯೋಧನಂ ಕೆೞಗಿವಿಗೇಳ್ದು ಮರುಳ ಮಾತಿನೊಳ್ ಪುರುಳಿಲ್ಲೆಂದು ಕಿಱಿದೆಡೆಯಂ ಪೋಗೆವೋಗೆ (ಗದಾಯು. ೪–೪೪ ವ) ; ಅತಿಪ್ರಿಯಸಖನ ಮಾತಂ ಕೆೞಗಿವಿಗೇಳುತ್ತುಂ (ಲೀಲಾವ. ೧೪–೫೧ ವ). [ಕೆೞಗಿವಿ + ಕೇಳ್]

**ಕೆೞಗು**, ಕೆಳಗು (ನಾ). ಕೆಳಭಾಗ ; ಅಧೋಭಾಗ : ವೃದ್ಧಂ ಕೆೞಗನೀಕ್ಷಿಸುತ್ತುಂ ನಡೆವಂ (ಬಾಧಪು. ೫–೩೨). **ಕೆಳಗು** : "ಅಧೋಧಸ್ತಾದುಪಮಿಸಲು ಕೆಳಗಕ್ಕು" (ಮಂಗರಾ. ೧೮–೨೦) ; ಕೆಳಗು ಮೇಲಾಗುವರೊಡನೊಡ ನೆಗೆವರು ನಿಂದು ಕಾದುವರು (ಮೋಹತ. ೧೨–೮೬).

**ಕೆೞಗಣ್**, **ಕೆಳಗಣ್** = ಕೆಳಗಿನ ದಿಕ್ಕು; ಕೆಳಗಡೆ : "ಅಧಸ್ತಾತ್, ಅವಾಕ್, ಅಧಃ – ಈ ೩ ಕೆಳಗಣ ಪೆಸರ್" (ಹಲಾಯು. ೧೭–೧೦೨) ; ಕೂಪದಿಂ ಕೆೞಗಣದೊಂದು ತಾಣದೊಳಗಿರ್ದ(ಕಾವ್ಯಸಾ. ೬೧೧ ಶೂದ್ರಕ) ; ಕೆಳಗಣ್ಗೆ ಕಿಱ್ಕಿನೆಂಬಾದೇಶಂ (ಶಮದ. ೧೬೬) ; ತಾಂ ಕೆಳಗಣ್ಗೆ ಪೋಯ್ತು ಲಜ್ಜಾವಹದಿಂದೆ ಭೋಗವತಿ (ಕುಸುಮಾ. ೨–೧೨೯). **ಕೆೞಗಣ**, **ಕೆಳಗಣ** = ಕೆಳಗಿರುವ : ಕೆೞಗಣ ಕೆಂದಳಿರ್ ಪುದಿದ ಮೇಗಣ ಪಂದಳಿರ್ (ಪಂಪಭಾ. ೫–೩೨) ; ಕೆಱೆ$^3$ಯ ಕೆಳಗಣ ಹಿರಿಯ ಗದೆಯ ಬಸದಿಯ (ಮೈಆರಿ. ೧೯೩೩, ೩–೧೧ ; 1160). **ಕೆೞಗಣಂ** = ಕೆಳಗೆ ಇರುವವನು : ಮೇಗಣಂ ಕೆೞಗಣಂ ನಡುವಣಂ (ಶಮದ. ೧೧೧ ಪ್ರಯೋ). **ಕೆೞಗುಮೇಗಿಕ್ಕು** = ಉರುಳಿಸು ; ಬುಡಮೇಲು ಮಾಡು : ಇದ ಕಿಡಿಪ್ಪೊನ್ಗೆ ಶ್ರೀ ಪರ್ವ್ವತಮನ್ ಕೆೞಗು ಮೇಗಿಕ್ಕಿದ ಪಾಪಮಕ್ಕೆ (ಎಕ. X (೩), ಚಿಕ್ಕಬ. ೬೬–೨೪ ; 850).

[ದೇ. ‖ ತಮಿ. ಮಲ. ಕಿೞಕ್ಕು ; ತುಳು. ತಿರ್ತ್; ಕೊಡ. ಕಿ, ಕಿೞ ; ತೆಲು. ಕ್ರೀ, ಕ್ರಿಂದ]

**ಕೆೞಗೆ,** ಕೆಳಗೆ (ಅ). ೧. ಕೆಳಭಾಗದಲ್ಲಿ; ಅಡಿಯಲ್ಲಿ; ತಳಕ್ಕೆ: ಪೆರ್ಗ್ಗೆಱೆಯ ಕೆೞಗೆ ಆಱುಗಣ್ಣುಗಂ (ಎಕ. IV, ನಾಗಮಂ. ೮೫-೬೮; 776); ಮರದ ಕೆೞಗೆ ಪೊನ್ನ ಮಡಕೆಯೊಳ್ ಬೋನಮನೊಡ್ಡಿ (ವಡ್ಡಾರಾ. ೮೯-೧೨); ಒಂದಾಲದ ಮರದ ಕೆೞಗೆ ವಿಶ್ರಮಿಸೆ (ಪಂಪಭಾ. ೮-೩೭ ವ); ಎನಿತು ತಾಳಮರನೇಱಿದೊಡಂ ತಲೆಗೆ ಕಾಲ್ಕೆೞಗೆಂಬಂತೆ (ಧರ್ಮಾಮೃ. ೬-೧೭೩). **ಕೆಳಗೆ:** ೧. ಕೆಳಗೆ ಎಣ್ಬುಮತ್ತಲ್ ಗಱಿ (ಇಆ. XI, ೭೦-೧೯; 567); ಕೆಱೆಯ ಕೆಳಗೆ ಗಱ್ದೆ ಕಮ್ಮ ಮೂವೊತ್ತು (ಎಕ. VII, ಶಿವಮೊ. ೮೯-೨೮; 1111); ಮೇಲೆಯುಂ ಕೆಳಗೆಯುಂ ಆ ತೆಱದಿನಿರೆ ವಿಸರ್ಗಂ (ಶಮದ. ೧೭ ವೃತ್ತಿ). ೨. ಹಿಂದೆ; ಪೂರ್ವದಲ್ಲಿ: ನಾಲ್ಕು ನೂರು ವರ್ಷದ ಕೆಳಗೆ (ಮುಂಬಯಿ ೪-೯೮).

**ಕೆಳಗಿಡು** = ಕೆಳಕ್ಕೆ ಇಡು: ನಿಮ್ಮ ಶಸ್ತ್ರಗಳನ್ನು ಮೊದಲು ಕೆಳಗಿಡಿ (ರೂಢಿ). **ಕೆಳಗಿಳಿ** = ಇಳಿದು ಬರು, —ಹೋಗು: ಅವರು ಬೆಟ್ಟದಿಂದ ಕೆಳಗಿಳಿಯುತ್ತಿದ್ದಾರೆ (ರೂಢಿ). **ಕೆಳಗಿಳಿಸು** = ಕೆಳಗೆ ಬರುವಂತೆ ಮಾಡು, —ಇಳಿಸು: ಧ್ವಜವನ್ನು ಕೆಳಗಿಳಿಸಿದರು (ರೂಢಿ). **ಕೆಳಗೆಮೇಲೆ** = ತಿರುಗುಮುರುಗು; ತಲೆಕೆಳಗು. **ಕೆಳಗೆಮೇಲು ಮಾಡು** = ತಲೆಕೆಳಗೆಮಾಡು: ಕೆಳಗಿನದನ್ನು ಮೇಲಕ್ಕೂ, ಮೇಲಿನದನ್ನು ಕೆಳಕ್ಕೂ ಬರುವಂತೆ ಮಾಡು. **ಕೆೞಕೆೞಗೆ** (ದ್ವಿರುಕ್ತಿ). ಕೆೞಕೆೞಗೆ ಪೋದಂ (ಶಬ್ದಾನು. ೩೯೨ ಪ್ರಯೋ). [< ಕೆೞಗು]

**ಕೆೞದ** (ನಾ). ೧. ಬಡವಾದವನು. ೨. ಅಗಲಿದವನು: "ಕೆೞ [ಪಾಠಾಂ. ತುೞು] ದನೆಂದು ಬಡವಾದನುಂ ಅಗಲ್ದನುಮಕ್ಕುಂ" (ಶಮದ. ಮ. ೨೩ ವೃತ್ತಿ). [?]

**ಕೆೞಲೆ** (ನಾ). ಒಂದು ಊರಿನ ಹೆಸರು: ಕೆೞಲೆ ನಾಮ್ನಾ ಬೆಮ್ಮಿರೀಶ್ವರಸ್ಥಾನಂ (ಎಕ. IX. ದೊಡ್ಡಬ. ೬೮-೪೫; 517 ಕೃಶಾ); ಕೋಲಾಹಲಮಾಗೆ ಸುರಿಗೆಯಿನ್ದಿಱಿದು ಸತ್ತೊನ್ಕೆೞಲೆಯರ್ ನಯಮಲ್ಲನಜ್ಕನ್ತೆಜ ಮಾನಿಯೆಮ್ಬೋನ್ (ಸೌಇಇ. IX–i, ೨೦-೧೧; 9ನೆಯ ಶತ). [?]

**ಕೆೞಲೆನಾಡು** (ನಾ). ಒಂದು ನಾಡಿನ ಹೆಸರು: ಆ ವಾಯು ಕೆೞಲೆ ನಾಡ ಬೆಳತೂರ ಪಡುವಣ ದೆಸೆಯ ಮೊಜಡಿಯೊಳ್ ಪಿರಿಯ ಪನ್ದಿಗೆವಿಟ್ಟೊಡೆ ಪನ್ದಿಯುಂ ನಾಯುಮೊಡಸತ್ತುವು (ಎಕ. III, ಮಂಡ್ಯ. ೪೧-೧೦; 950). [ಕೆೞಲೆ + ನಾಡು]

**ಕೆೞವ,** ಕೆಳವ (ನಾ). ೧. ಮುದುಕ; ವೃದ್ಧ: "ಕೆೞವನೆಂದು ಮುದುಕಂ" (ಶಮದ. ಪರಿ. ೧); ಕೆೞವಂ, ಪೆೞವಂ (ಶಬ್ದಾನು. ೧೪೦ ವ್ಯಾಖ್ಯಾ); ಓ ಕೆೞವ ತೆಂಙ್ರೆಸಿಯ ಸುದ್ದಿಯೇನೀಗಳ್ (ಅಂತಿಗೊ. ೯೧೫). ೨. ಶ್ರೇಷ್ಠ; ಹಿರಿಯ: ಶ್ರೀಕೆೞವರಾಳ್ ಧುಲಿ ಪ್ರಭುದೇವ ಗೊಂಡ (?) ದೆರನಿತ್ತೆ ಎದೋಷೊನ್ (ಇಆ. X, ೧೬೬-೧; 9ನೆಯ ಶತ). **ಕೆಳವ:** ಎಳೆಯರೊಡನೆ ಕೋಲೂರಿ ಕೆಳವರೂ ಹೊರಟರು (ಕಾಲೂರ. ೧೩ ಕಥಾಸಾರ).

[ಕೆೞವೆ + –ಅ$_7$. / ತಮಿ. ಕಿೞವನ್, ಕಿೞವೋನ್, ಮಲ. ಕಿೞವನ್]

**ಕೆೞವಿ** (ನಾ). ಮುದುಕಿ; ವೃದ್ಧೆ: ನಮ್ಮ ಕೆೞವಿ, ಭಾಗ್ಯಹೀನೆ ಭಾರ್ಗವಿ (ಅಶ್ವತ್ಥಾ. ೩೬-೬೯೮).

[ಕೆೞವ + –ಇ$_2$. / ತಮಿ. ಮಲ. ಕಿೞವಿ]

**ಕೆೞವೆ,** ಕೆಳವೆ (ನಾ). ಇಳಿವಯಸ್ಸು; ವೃದ್ಧಾಪ್ಯ; ಮುದಿತನ: ಕೆೞವೆ ಪುಲಿಕರಡಿಗಳಿನಗುರ್ವಿಸಿದ ಕಾರಡವಿಯೊಳಾಯ್ತಲೇ (ರಾಮಾಶ್ವ. ೪೫-೧೭). **ಕೆಳವೆ:** ನನಗೆ? ಈ ಕೆಳವೆಯ ಕಡೆಗಾಲದಲ್ಲಿ (ಮಂತ್ರಶ. ೨೪-೧೬); ಕೆಳವೆಯೆಳವೆಗಳೆರಡ ಬೆಳಬೆಳಗಿ (ಕಾಲೂರ. ೨೬).

[ದೇ. ‖ ತಮಿ. ಕೆೞವೆ]

**ಕೆೞ್ಗಕೆಸವ** (ನಾ). ಒಬ್ಬಾತನ ಹೆಸರು: ಈದಾನಱಿಧೊ ವಾರಣಾಸಿಯುಳ್ ಸಿದ್ದಪರ್ವರ ಕೊನ್ದೋನ ಲೋಕಕೆಸಲ್ಕೆ ಇದಾನ್ನಾದೊನ್ಕಲ್ಕಣ ಭಗಿ ಕೆೞ್ಗಕೆಸವನ ಮಡಿದಾ ಕಲನ್ (ಮೈಆರಿ. ೧೯೪೧, ೨೯-೫; 707).

[ಕೆೞ್ಗ$_0$ + ಕೆಸವ$_0$ (< ಕೇಶವ)]

❋

# ಕೇ

**ಕೇ,** ಕೇಯು (ಕ್ರಿ). ಕೆಂದ$_3$ (ಭೂತಕೃ), ಕೆಂದು$_4$, ಕೇದು (ಭೂತನ್ಯೂ). ೧. ಒರಗು; ಮಲಗು; ಶಯನಮಾಡು: "ಕೇ – ಶಯನೇ, ನಿಧುವನೇ ಚ" (ಶಮುಧಾ); ಆ ದಿವಸಮಲ್ಲಿಯೆ ಕೆಂದು ಮಱುದಿವಸಂ ಪೋಪಾಗಳ್ (ವಡ್ಡಾರಾ. ೮೪-೨೪). ೨. ಸಂಭೋಗ ಮಾಡು; ರತಿಕ್ರೀಡೆ ಮಾಡು: "ಕೇ – ಶಯನೇ, ನಿಧುವನೇ ಚ" (ಶಮುಧಾ). **ಕೇಯು:** ೨. ಗೇಯಕೆ ಗಂಡ, ಕೇಯಕೆ ಮಿಂಡ (ಗಾದೆ).

[ದೇ. ‖ ತಮಿ. ಚೇ; ಮಲ. ಚೇಗು, ಚೇಕ್ಕು; ತುಳು. ಜೆಪ್ಪು; ಕೋಲಾ. ಕೆಪ್ = ಮಗುವನ್ನು ಮಲಗಿಸು]

**ಕೇಂಕರ,** ಕೇಕರ$_1$ (ನಾ). ಗಂಟಲಲ್ಲಿ ಗುರುಗುಟ್ಟುವುದು; ಕೇಕರಿಸುವಿಕೆ. 'ಕೇಂಕರಿಸು' ಪರಾ. **ಕೇಕರ$_1$:** ಕೆಮ್ಮು ಕೇಕರಕಿನಿಸು ಮೂದಲೆಗಳನ್ನು ತೋರಿಸುತ (ರಾಮಾಸಂ. ೨-೧-೨೭). [?]

**ಕೇಂಕರಿಸು,** ಕೆಕ್ಕರಿಸು$_3$, ಕೇಕರಿಸು$_1$, ಖೇಕರಿಸು (ಕ್ರಿ). (ಗಂಟಲಲ್ಲಿ ಕಫ, ಮೊದಲಾದವು ಸಿಕ್ಕಿಕೊಂಡಾಗ ಅದನ್ನು ಹೊರದೂಡುವುದಕ್ಕಾಗಿ) ಗಂಟಲಿಂದ ಬಲವಾಗಿ ಉಸಿರುಬಿಡು; ಗುರುಗುಡು, ಹೇಕರಿಸು: ಕೇಂಕರಿಸಿಯುಗುಳ್ವಡಂ ಬಿಡೆ ಮಾಂಕರಿಪೊಡಂ (ಮದಕ ೮-೪೪). ಗರ್ಜಿಸುವಾನೆಗಳು ಕೇಂಕರಿಸುತಿಹ ವಾಜಿಗಳು (ಪ್ರಭುಲೀ. ೨೨-೨೩); ಎನ್ನ ಮುದ್ದಂಚೆ, ಆಗಳುಮೆನ್ನ . . . ಪಿಂದೆಯೊಳ್ ಕೇಂಕರಿಸುತೆ ಬಱಿವರ್ಪ (ರಾಮಾಶ್ವ. ೪೦-೨). **ಕೆಕ್ಕರಿಸು$_3$:** ನಡುಗದೆ ಕೆಕ್ಕ [ಪಾಠಾಂ. ಕೇಕ] ರಿಸದೆ ಬಾಯ್ ತಡವಾಗದೆ ತೊಡರೊಳೊಂದಿ ತೋಱದೆ ಮತ್ತಂ (ಸೂಕ್ತಿಸು. ೧೬-೩೫). **ಕೇಕರಿಸು$_1$:** ಎತ್ತಿಮುಸುಡಂ ಮುರುಕಿಸುತ ಕೆಲೆವುತ್ತ ಕೇಕರಿಸುತ್ತವುಗುಳುತ್ತ (ಬಸವು. ೩೮-೧೭); ಗಂಟಲೊಳು ಸಿಕ್ಕೆ ಕೇಕರಿಸಿಯುಗಿಯೆ (ವೀಶೈವು. ೩-೨೪-೩೭);

ಕೇಕರಿಸಿ ಕೆವ್ವಿ ಸೀತುಂ (ಚಬಪು. ೯-೧೩); ಆದರೆ ನಡುನಡುವೆ ವಿರಳವಾಗಿ ಕೇಕರಿಸುತ್ತಿದ್ದರು (ಮಹಾತ್ಮಾ. ೧೧೯). **ಖೇಕರಿಸು** : ನಾಲ್ಕಾರು ಸಲ ಖೇಕರಿಸುತ್ತಿದ್ದರು (ರಂಗರೋ. ೨).
[ಕೇಂಕರ + –ಇಸು$_3$. / ತೆಲು. ಕೇಕರಿಂಚು]

**ಕೇಂದ್ರ** (ನಾ). ೧. (ವೃತ್ತದ) ಮಧ್ಯಬಿಂದು; ಮಧ್ಯ ಸ್ಥಳ: ನಾನೆನುವ ಕೇಂದ್ರದಿನೆ ಹೊರಟ ಸತ್ತ್ವದ ಪರಿಧಿ ಬಾನಾಚೆ ಹಬ್ಬಿಹುದೊ (ಮಂಕುಕ. ೧೩೮); ಕಂದನೀತನ ರಕ್ಷೆಯೊಳ್ ಪ್ರಳಯಾಗ್ನಿ ಚಕ್ರಕೇಂದ್ರದೊಳಿರ್ಪ ಸುಧೆಯವೊಲ್ ನಿತ್ಯಂ ಸುರಕ್ಷಿತಂ (ಶ್ರೀರಾಮಾ. ೩೦-೭೩); ಪ್ರತಿಯೊಂದು ಗ್ರಹವೂ ಸೂರ್ಯನೇ ಒಂದು ಕೇಂದ್ರ (Focus)ವಾಗಿ ಉಳ್ಳ ದೀರ್ಘವೃತ್ತಾಕೃತಿಯ ಪಥದಲ್ಲಿ ಸುತ್ತುವುದು (ಭೌತವಿ. ೩೩). ೨. ಮೂಲಸ್ಥಾನ; ಮುಖ್ಯಸ್ಥಳ; ಆಡಳಿತ ಕಚೇರಿಯಿರುವ ಸ್ಥಳ: ಅವನು ಜಿಲ್ಲೆಯ ಕೇಂದ್ರಕ್ಕೆ ಹೋಗಬೇಕಾಗಿದೆ (ಯೋಧಪು. ೨೦). ೩. ಸಂಗ್ರಹಸ್ಥಾನ; ಕೋಶಾಗಾರ: ಸರ್ಕಾರಿಮದ್ದುಗುಂಡುಗಳ ಕೇಂದ್ರದಿಂದ ಅಸಂಖ್ಯಾತ ರೈಫಲ್‌ಗಳು. . .ಮದ್ದುಗುಂಡುಗಳನ್ನು ಅಪಹರಿಸಲಾಯಿತು (ಆತ್ಮಾರ್ಪ. ೧೪೩). ೪. ಕೇಂದ್ರಸರಕಾರ: ರಾಜ್ಯಶಿಕ್ಷಣದಲ್ಲಿ ಕೇಂದ್ರದ ಹೊಣೆಗಾರಿಕೆಯೂ ನಿಯಂತ್ರಣವೂ ಬಲಗೊಳ್ಳುತಿದೆ (ಶಿಕ್ಷದ. VII, ಮುನ್ನುಡಿ). ೫. [ಜ್ಯೋತಿ] ಲಗ್ನಸ್ಥಾನ ಮತ್ತು ಅದರಿಂದ ನಾಲ್ಕನೆಯ, ಏಳನೆಯ ಹಾಗೂ ಹತ್ತನೆಯ ಸ್ಥಾನಗಳು: ಉದಯದಶಾಸ್ತಮಯ ಚತುರ್ಥದೆಡೆಗೆ ಕೇಂದ್ರಂ ಚತುಷ್ಟಯಂ (ಜಾತತಿ. ೧-೩೬). [ಸಂ.]

**ಕೇಂದ್ರಬಿಂದು** (ನಾ). ಮಧ್ಯಬಿಂದು; ಮೂಲಸ್ಥಾನ: ಜೀವಿತದ ಎಲ್ಲ ವ್ಯವಹಾರಗಳಿಗೆ ಪರಮಪುರುಷನೇ ಕೇಂದ್ರಬಿಂದುವಾಗಿದ್ದಾನೆ (ಭಾರದ. ೪೪); ವಿಶ್ವದ ಸಮಸ್ತ ಬೌದ್ಧಿಕ ವ್ಯಾಪಾರಗಳಿಗೆಲ್ಲಾ ಮನುಷ್ಯನೇ ಕೇಂದ್ರಬಿಂದು (ಗ್ರಂಥಾಲ. ೧).
[ಕೇಂದ್ರ + ಬಿಂದು]

**ಕೇಂದ್ರವ್ಯಕ್ತಿ** (ನಾ). ಮುಖ್ಯನಾದವನು; ಪ್ರಧಾನವ್ಯಕ್ತಿ: ಶೂನ್ಯಸಂಪಾದನೆಯಲ್ಲಿ ಅಲ್ಲಮನೇ ಕೇಂದ್ರವ್ಯಕ್ತಿ (ಶೂನ್ಯಕು. ೧೦೪).
[ಕೇಂದ್ರ + ವ್ಯಕ್ತಿ]

**ಕೇಂದ್ರಸರಕಾರ** (ನಾ). ಸಮಗ್ರರಾಷ್ಟ್ರವನ್ನು ಆಳುವುದಕ್ಕಾಗಿ ಕೇಂದ್ರದಲ್ಲಿರುವ ಸರಕಾರ: ಶಕ್ತಿಶಾಲಿಯಾದ ಕೇಂದ್ರಸರಕಾರ ಒಂದು ಇಲ್ಲದ ಕಾರಣ ಸಣ್ಣಪುಟ್ಟ ರಾಜರುಗಳು ಅಲ್ಲಲ್ಲೇ ಹುಟ್ಟಿಕೊಂಡರು (ಭಾರದ. ೪೫೬). [ಕೇಂದ್ರ + ಸರಕಾರ]

**ಕೇಂದ್ರಸ್ಥ** (ನಾ). [ಜ್ಯೋತಿ] ಕೇಂದ್ರದಲ್ಲಿ ಇರುವವನು: ಇನನಿರೆ ವೃಶ್ಚಿಕದೊಳ್ ಶುಭಮೆನಿತುಂ ಕೇಂದ್ರಸ್ಥರಾಗೆ ನಿಜಬಲಸಹಿತಂ . . . ಚೆಲ್ವೆನೆ ಬೆಳೆಗುಂ ಗ್ರೀಷ್ಮಸಸ್ಯಂ (ಜಟ್ಟಮ. ೮-೧೬೯).
[ಸಂ.]

**ಕೇಂದ್ರಾತಿಗ** (ಗು). ಕೇಂದ್ರದಿಂದ ದೂರಹೋಗುವ: ಮಂಥನದ ರಭಸಕ್ಕೆ ಸಿಡಿದು . . . ನಾನಾ ದೆಸೆಗೆ ಪರ್ವಿವಾ ಕೇಂದ್ರಾತಿಗಾಮೃತಂ ಪರ್ವತದ, ಮೇಣ್ ಫಣಿಯ, ಮೇಣಸುರಾಮರಾಕಾರದಿಂ ಪ್ರವಹಿಸಿತೊ (ಶ್ರೀರಾಮಾ. ೧೯೯-೧೩೦). [ಸಂ.]

**ಕೇಂದ್ರಿಕೆ** (ನಾ). = ಕೇಂದ್ರ ೧: ಅವಕ್ಕೆ ನಡುವೆ ಒಂದು ಕೇಂದ್ರಿಕೆ (Nucleus) ಇದ್ದು ಅದರ ಸುತ್ತು ವಿದ್ಯುದಣುಗಳು ಸಂಚರಿಸುತ್ತವೆ (ಬಾಲಪ್ರ. III, ೧೬೫೮). [ಸಂ. ಕೇಂದ್ರಿಕಾ]

**ಕೇಂದ್ರೀಕರಣ** (ನಾ). ೧. ಏಕಾಗ್ರಗೊಳಿಸುವುದು. ೨. ಕೇಂದ್ರದ ಆಡಳಿತಕ್ಕೆ ವಶಪಡಿಸುವುದು; ಕೇಂದ್ರಕ್ಕೆ ಅಧೀನಗೊಳಿಸುವುದು. (Centralisation. ಪತ್ರಿನಿ. ೧೪). [ಸಂ.]

**ಕೇಂದ್ರೀಕರಿಸು** (ಕ್ರಿ). ಒಂದೇ ಸ್ಥಳದಲ್ಲಿ ನಿಲ್ಲಿಸು; ಏಕಾಗ್ರವಾಗುವಂತೆ ಮಾಡು; ಎಲ್ಲವನ್ನೂ ಒಂದೇ ಕೇಂದ್ರಕ್ಕೆ ಒಳಪಡಿಸು: ದೇವತಾಮೂರ್ತಿಗಳು ಭಕ್ತರ ಮನಸ್ಸನ್ನು ಕೇಂದ್ರೀಕರಿಸುವ ಗುರಿಯಾದವು (ಭಾರದ. ೮೧); ಚಿತ್ರಪಟದಲ್ಲಿ ಮನಸ್ಸನ್ನು ಕೇಂದ್ರೀಕರಿಸಿದ್ದನು (ರಂಗರೋ. ೨೦೧); ಭೂತಕನ್ನಡಿ . . . ಕಿರಣಗಳನ್ನು ಕೇಂದ್ರೀಕರಿಸುತ್ತದೆ (ಕಾಲಯಾ. ೮೮). [ಕೇಂದ್ರೀಕರಣ + –ಇಸು$_3$]

**ಕೇಂದ್ರೀಕೃತ** (ಗು). ಕೇಂದ್ರೀಕರಿಸಿದ; ಏಕಾಗ್ರಗೊಳಿಸಿದ: ಒಂದು ವಿಷಯದ ಮೇಲೆ ನಿನ್ನ ಮನಸ್ಸು ಕೇಂದ್ರೀಕೃತವಾಗಬೇಕು (ಶಾಲಿಮ. ೧೯೬); ಮನೆಯ ಅನೇಕ ಚಟುವಟಿಕೆಗಳು ಅಡುಗೆಮನೆಯಲ್ಲಿ ಕೇಂದ್ರೀಕೃತವಾಗಿವೆ ಎನ್ನಬಹುದು (ಅಡುಸಾ. ೧೧). [ಸಂ.]

**ಕೇಂದ್ರೀಯ** (ಗು). ಕೇಂದ್ರಕ್ಕೆ ಸಂಬಂಧಿಸಿದ; ಕೇಂದ್ರದಲ್ಲಿರುವ.
[ಸಂ.]

**ಕೇಕ** (ನಾ). (ಕರಾ) ೧. ಒಪ್ಪಂದ: ದಿನಕ್ಕೆ ಒಂದು ಪಯಣಕ್ಕೆ ಒಮ್ಮೆ ಬೆಳ್ತಂಗಡಿ ಅಥವಾ ಬಂಟ್ವಾಳಕ್ಕೆ ಅಕ್ಕಿ ಸಾಗಿಸಲು ಇಂತಿಷ್ಟು ಎಂದು ಮೊದಲೇ ಕೇಕಮಾಡಿರುವರು (ಕೈಹಕಾ. ೮). ೨. ವರ್ತನೆಯ ಸಾಲ.
[← ತುಳು. ಕೇಕ]

**ಕೇಕಟ** (ನಾ). ನಿಸ್ಸಾರ; ನಿಸ್ಸತ್ವ; ಜೀರ್ಣ: ಕೇಕಟನಹನು ನಿಜಸ್ತ್ರೀವಿಮುಖನು (ಯೋಗಾಂವಿ. ೧-೪೬). [← ಮರಾ. ಖೇಕಡ]

**ಕೇಕಯ** (ನಾ). ೧. ಒಂದು ದೇಶದ ಹೆಸರು: ಕೋಸಲದ ನೃಪಸುತೆಯ ಮಗಧಮಹೀಶ ತನುಜೆಯ ಕೇಕ[ಪಾಠಾಂ. ಕೈಕೆ, ಕೈಕ, ಕೇಕಿ]ಯಕ್ಷ್ಮಾಪಾಲನಂದನೆಯ ಆ ಸುತಂಗುಪನಯವ ಮಾಡಿ (ತೊರರಾ. ೧-೩-೧೬); ೨. ಆ ದೇಶದ ಜನತೆ. ೩. ಆ ದೇಶದ ರಾಜಮನೆತನ: ಕೇಕಯಪಲ್ಲವರಂ ಕಾದೆಱಿದು ಪೆತ್ತ ಜಯನಾ ವಿಜ ಅರಸನ್ಗೆ ಬಾಳ್ಗೞ್ಚಿ . . . ವಿಟ್ಟಾರ್ (ಮೈಆರಿ. ೧೯೩೬, ೧೬-೧೧; 450). [ಸಂ.]

**ಕೇಕರ$_1$** 'ಕೇಂಕರ' ನೋ.

**ಕೇಕರ$_2$** (ಗು). ೧. ಮೆಳ್ಳೆಗಣ್ಣುಳ್ಳ; ಓರೆಗಣ್ಣಿನ. 'ಕೇಕರಿಸು$_2$' ಪರಾ. (ನಾ). ೨. ಮೆಳ್ಳೆಗಣ್ಣಿನವನು: ಸಂತತ ಗರ್ವಿಸಿದವ ಕೇಕರನಹ ಪರಸತಿಯರ ನೆವದಿಂದೀಕ್ಷಿಸಿ ಕಡೆಗಣ್ಣಿಂ (ಯೋಗಾಂವಿ. ೧-೪೬); ಕುಬ್ಜಂ ಕೇಕರಂ ತನುಕಾರ್ಶ್ಯಪೀನತೆಯನನುಕರಿಸಿ ಪುಟ್ಟುವರು (ವೆಂಕಾರಾ. ೨-೩೫-೧೫). ೩. ಓರೆಗಣ್ಣು; ಕಡೆಗಣ್ಣು; ಕಟಾಕ್ಷ: "ಕೇಕರಮಪಾಂಗಮೆನೆ ಕಡೆಗಣ್ಗಳು" (ಮಂಗರಾ. ೯೩-೨); ಆಕೆಯ ಕೇಕರಮನ್ಯರಾಜಕಕ್ಕೆಱಗದೆ ರಾಘವಂಗೆಱಗೆ (ಪಂರಾಮಾ. ೫-೬೧); ಕೇಕರದ ಕಿಚ್ಚಿಂದಿನಿಯನಂ ಮುಸುಕಿ (ಚಬಪು. ೪೬-೧೦); ಕೂರಂಬಿಟ್ಟೆನು ಕೇಕರದೊಳಗೆ (ಅಹಲ್ಯ. ೨೪-೫). [ಸಂ.]

**ಕೇಕರದ್ಯುತಿ** (ನಾ). ಕಡೆಗಣ್ಣಕಾಂತಿ: ನಾನಾಪ್ಸರಃಕೇಕರದ್ಯುತಿ ನಾನಾ ಚಮರೀಜ ವಾಯು ಸಭೆಯಂ ತಳ್ಪೊಯ್ಯಲ್ (ಜಗವಿ. ೧-೨೬).
[ಕೇಕರ$_2$ + ದ್ಯುತಿ]

**ಕೇಕರಮರೀಚಿ** (ನಾ). = ಕೇಕರದ್ಯುತಿ: ಆ ಪುರಮಂ ತರುಣೀಕೇಕರಮರೀಚಿ ನೀರಾಜಿತಾಕ್ಷತಾಗಂ ಪೊಕ್ಕಂ (ಚಂದ್ರಪು. ೬-೪೨).
[ಕೇಕರ$_2$ + ಮರೀಚಿ]

**ಕೇಕರರುಚಿ** (ನಾ). = ಕೇಕರದ್ಯುತಿ: ಲಲಿತಭ್ರೂಕಾರ್ಮುಕಂ ಕೇಕರರುಚಿ ನನೆಗೋಲ್ . . . ಎನೆ ವಿಶಿಖಾರೋಪಿತಾಕರ್ಣಚಾಪಂ ಲಲನಾಯೂಥಂ ಬರಲ್ (ಜಗವಿ. ೨-೩೩). [ಕೇಕರ$_2$ + ರುಚಿ]

**ಕೇಕರಾಲೋಕನ** (ನಾ). ಕಡೆಗಣ್ಣ ನೋಟ; ಓರೆನೋಟ; ಕುಡಿನೋಟ; ಕಟಾಕ್ಷ: ಧರ್ಮವಿಜಯ ಶ್ರೀಕೇಕರಾಲೋಕನ ಕ್ರೀಡಾಮಂಡನಮಾಗೆ (ಪಂರಾಮಾ. ೧೬-೬೮). [ಕೇಕರ$_2$ + ಆಲೋಕನ]

**ಕೇಕರಾಲೋಕ** (ನಾ). = ಕೇಕರಾಲೋಕನ: ನಿಮಿರ್ದುದು ತತ್ಕೇಕರಾಲೋಕ ಪಾತಂ (ಮಲ್ಲಿಪು. ೭–೬೪).
[ಕೇಕರ$_2$ + ಆಲೋಕ (= ಆಲೋಕ)]

**ಕೇಕರಿಕೆ** (ನಾ). ಉಗುಳುವಾಗ ಮಾಡುವ ಶಬ್ದ; ಕೇಕರಿಸುವಿಕೆ; ಉಗುಳುವಿಕೆ: "ನಿಷ್ಠೀವಃ, ನಿಷ್ಠ್ಯೂತಿಃ, ನಿಷ್ಠೀವನಂ, ನಿಷ್ಠೇವನಂ – ಳ ಕೇಕರಿಗೆ[ಕೆ]. ಉಗುಳುವಿಕೆ; ಥೂಕರಿಸುವಿಕೆ" (ಸಿದ್ಧಾಂತಿ. ೩೧೭); "ತಂಜನಂ, ತಂಜನೀಯಂ – ಈ ೨ ಕೇಕರಿಕೆ" (ಶಾಶಕ್ಯ. ೨೪೦).
[ಕೇಕರ$_1$ + –ಇಕೆ]

**ಕೇಕರಿಸು$_1$** 'ಕೇಂಕರಿಸು' ನೋ.

**ಕೇಕರಿಸು$_2$** (ಕ್ರಿ). ಓರೆಗಣ್ಣಿಂದ ನೋಡು: ಒರಸುತ್ತುಂ ಗ್ರಾವು ಕೋಣಂಗಳೊಳವಯವಮಂ ಕಂಡು ಕಾಡಾನೆಯಂ ಕೇಕರಿಸುತ್ತುಂ... ವರಾಹಂ (ಅರ್ಧನೇ. ೩–೭೩). [ಕೇಕರ$_3$ + –ಇಸು$_3$]

**ಕೇಕಜಿ** (ನಾ). ಹೆಗ್ಗಣ: ಮರನಂ ಕೆತ್ತೆ ಕವಲ್ತು ತೋರ್ಪೊಡಿಲಿ ಮುದ್ದಚ್ಛಾಯೆಯಿಂ ಕೇಕಜಿಂ ಕರಿದಾದಂದಹಿ ಪಚ್ಚನಾಗೆ ವಿಹಗಂ... ಸಮನಿಕುಂ (ಲೋಕೋಪ. ೩–೧೧); "ಪೆಸಜ ಬಣ್ಣಂ ತೋಱಿದೊಡೆ ಪೆರ್ಗಣಂ ಪೆರ್ಚುವುವು" (ಲೋಕೋಪ. ಟೀಕೆ). [?]

**ಕೇಕಾನಿನಾದ** (ನಾ). = ಕೇಕಾರವ: ಅನುಕೃತ ಮಯೂರಕೇಕಾನಿನಾದ ಮೃದುಗಾನ ತಾನ ನಿಪುಣರ್ (ಜಗವಿ ೩–೭೬). [ಸಂ. (ಕೇಕಾ + ನಿನಾದ)]

**ಕೇಕಾರವ** (ನಾ). ನವಿಲಿನ ಕೂಗು; ಕೇಕಿಯ ಧ್ವನಿ: ಧವಳಾಪಾಂಗಂ ಕೇಕಾರವಮುಖರಂ ... ಪಯೋದಾಗಮದೊಳ್ (ಕವಿರಾ. ೩–೭).
[ಸಂ. (ಕೇಕಾ + ರವ)]

**ಕೇಕಿ** (ನಾ). ನವಿಲು; ಮಯೂರ: ನರ್ತಿಸುವ ಕೇಕಿಗಳಿಂದ ಕಡುರಯ್ಯಮಪ್ಪ ಹಸ್ತಿನಪುರಮಂ (ಪಂಪಭಾ. ೪–೫); ಸತಿಯ ಮುಡಿ ಕೇಕಿಯಂತಿರಲು (ಭಕ್ತಾಪ. ೩–೩೪); ಉಲಿಯದಿರ್ಪುದು ಕೋಕಿ ನಲಿಯದಿರ್ಪುದು ಕೇಕಿ (ಚಿಬಪು. ೩೫–೨೧). [ಸಂ. ಕೇಕಿನ್]

**ಕೇಕಿತಾಂಡವ** (ನಾ). ನವಿಲಿನ ಕುಣಿತ: ಕುವಲಯ ಪಾಂಡುರಂ ... ಕೇಕಿತಾಂಡವ ರಮಣೀಯ ಕಲ್ಪಲತಿಕಾವನಂ (ಆದಿಪು. ೧೩–೭೦); ಕೇಕಿತಾಂಡವಂ ನಿಮಿರೆ (ಪುಷ್ಪಪು. ೭–೧೪). [ಕೇಕಿ + ತಾಂಡವ]

**ಕೇಕಿನರ್ತನ** (ನಾ). = ಕೇಕಿತಾಂಡವ: ಜಲದಾಗಮದಿಂ ಚಿತ್ತ ಸ್ಖಲಿತಂ ಕೇಕಿನರ್ತನಂ (ಕವಿರಾ. ೨–೧೨೬). [ಕೇಕಿ + ನರ್ತನ]

**ಕೇಕಿಯಂತ್ರ** (ನಾ). (ನೀರು ಮೊದಲಾದವನ್ನು ಎರಚಲು ಮಾಡಿರುವ) ನವಿಲಿನ ಆಕಾರದ ಯಂತ್ರ: ದೇವಸೂತ್ರದ ಕೇಕಿಯಂತ್ರವು ಮೇಲುಕಾವಿನಲಿ ನೆಲಸಿ ರಂಜಿಸಿತು (ಜೀವಂಸಾಂ. ೪–೭೭).
[ಕೇಕಿ + ಯಂತ್ರ]

**ಕೇಕಿವಿಳಾಸ** (ನಾ). = ಕೇಕಿತಾಂಡವ: ವರುಣನ ಕುಂತದುತ್ಕರದ ಕೇತುವ ಕೇಕಿವಿಳಾಸದರ್ಪಕೋದರೆಯ ... ಅಭಿಧಾನಮಂ ತಳೆದ ಭೂರುಹಮೊಪ್ಪುಗುಮಾ ವನಾಂತದೊಳ್ (ರಾಜಶೇ. ೫–೫೭).
[ಕೇಕಿ + ವಿಳಾಸ (= ವಿಲಾಸ)]

**ಕೇಕಿವ್ರಜ** (ನಾ). ನವಿಲುಗಳ ಹಿಂಡು, —ಸಮೂಹ: ಅತ್ಮೀಯ ದಾನಾಂಬುಧಾರಾ ಮುದಿತಾ ಶೇಷಾ[ರ್ಥಿ]ಕೇಕಿವ್ರಜನಮಳ ಯಶೋ ಮೌಕ್ತಿಕಾಳಂಕೃತಾ ಶಾರದಾನೀಂದ್ರಂ (ಕಇಅ. ೫೨–೪೨–೩೪; 1124).
[ಕೇಕಿ + ವ್ರಜ]

**ಕೇಕಿಸು** (ಕ್ರಿ). (ನವಿಲಿನಂತೆ) ಕೂಗು; ಧ್ವನಿಮಾಡು: ಮೈನವಿರ ನವಿಲು ಪ್ರೈಯುಣ್ಣದೇನೆ ಬರಿದೆಂತು ಕೇಕಿಸುವವು (ಹೃದಸ. ೩೯–೮).
[ಕೇಕೆ$_2$ + –ಇಸು$_3$]

**ಕೇಕು** 'ಕೇಗು$_2$' ನೋ.

**ಕೇಕೆ$_1$**, ಕೇಕೇ (ನಾ). ಸಂತೋಷದ ಕೂಗು; ಉತ್ಸಾಹದ ಉಲಿ: ಪರಿಹಾಸದಿಂ ಕರ್ಮರ್ದೈವ ಕೇಕೆಗಳಿಡಲಿ ಸ್ಥಿರಚಿತ್ತ ನಿನಗಿರಲಿ (ಮಂಕುಕ. ೫೯೯); ಮದ್ದಳೆಯ ಬಡಿ, ಹೊಡಿ ಕೇಕೆ (ನೆಲಮು. ೧೬). **ಕೇಕೇ**: (ಕಿ).
**ಕೇಕೆಹಾಕು, ಕೇಕೇಹಾಕು** = ಗಟ್ಟಿಯಾಗಿ ಕೂಗು: ಬೋಕಿಮಯ್ಯ ... ಬಲವಾಗಿ ಕೇಕೆಹಾಕಿದ (ಶಾಂತಲಾ. ೧೪೩); ಜನ, ಪದ ಹೇಳುತ್ತಾ ಕೇಕೆ ಹಾಕುತ್ತ ಕುಳಿತಿದ್ದರು (ಫುನರು. ೩೧೦); ಬದುಕಿದರೆ ಬಡಿದುಕೊಳ್ಳುವರು ಕೆಟ್ಟರೆ ಕೇಕೇಹಾಕುವರು (ಹುಟ್ಟಿಹ ೧೧೬). **ಕೇಕೆಹಾಕಿ ನಗು, ಕೇಕೇಹಾಕಿ ನಗು** = ಅಟ್ಟಹಾಸದಿಂದ ನಗು: ಹಾಸ್ಯ ಪರಿಹಾಸ್ಯ ಮಾಡಿ ಕೇಕೆಹಾಕಿ ನಕ್ಕು ಬಿಡಬಹುದು (ತುಂಗಭ ೨೨); ಆತ ಕೇಕೇಹಾಕಿ ನಗುತ್ತಿದ್ದನು (ರೂಢಿ). 'ಕಾಕು$_4$' ಪರಾ.
[ದೇ. ‖ ತುಳು. ಕೇಕೆ; ತೆಲು. ಕೇಕ]

**ಕೇಕೆ$_2$** (ನಾ). ನವಿಲಿನ ಕೂಗು; ಕೇಕಾರವ: "ನವಿಲ ದನಿ ಕೇಕಾಯೆನಿಸುಗು" (ನಾಚಿರಾ. ೮೧೫); ಗಿರಿಶಿಖರದಿ ಶಿಖಿಯನೆತ್ತಿ ಶಿಖಿಯ ಕೇಕೆ ಕರೆವುದು (ಅರಳು. ೪೦೫). [ಸಂ. ಕೇಕಾ]

**ಕೇಕೇ** 'ಕೇಕೆ$_1$' ನೋ.

**ಕೇಕೊರೆ** (ನಾ). ಒಂದು ಜಾತಿಯ ಪಕ್ಷಿ: ಪುರುಳಿ ಕುಳಿರ್ವಂ ನವಿಲ್ ಕೇಕೊರೆ ಸಣಗಂ ಪಣ್ಬರಸವಲೂರಲ್‌ಪಾವಲ್ (ಸೂಕ್ತಿಸು. ೩–೧೪೬). [?]

**ಕೇಗಿಡು** (ಕ್ರಿ). ಕೂಗು; ಕೇಕೆಹಾಕು: ಕೇಗಿಡು ಸೋಗೆ ಕೂಗು ಸುಕಲಂ ಕುಕಿಲಂ ವಿಕಲಾತ್ಮ ಕೋಕಿಲಾ (ನರಚ. ೮೬–೨೨೭).
[ಕೇಗು$_2$ + ಇಡು$_1$]

**ಕೇಗು$_1$** (ಕ್ರಿ). ೧. = ಕೇಕಿಸು: "ಕೇಗು – ಮಯೂರ ಸ್ವನೇ" (ಶಮುಧಾ); ನವಜಲದ ರುತಿಗೆ ಶಿಖಿ ಕಳಭಮೆ ಕೇಗಿದವುದು (ಶಾಂತಿಪು. ೨–೫೩); ಕೇಗುವ ಸೋಗೆಗಳ ಕಳಕಳಂಗಳಿಂ (ಕಾದಂಉ. ೫೨೬); ಕೇಗುವುವು ಕೇಕಿಗಳು (ಸಾಳ್ವಭಾ. ೨–೧೪). ೨. (ಆಲಂ) ಸಂಭ್ರಮದಿಂದ ಕೂಗು; ಕೇಕೆಹಾಕು: ಕಂಡು ಕೇಗಿದರಸುರರಭ್ರದಲಿ (ಶ್ರೀರಾಮಾ. ೮೦೫–೧೪೧); ಕುಡಿದೆನು ಕೇಗುತ ಜನನಿಯ ಮೊಗದೊಳು ಮಂಗಳ ಮೃದುಹಾಸವ ತರಿಸಿ (ಗಣೇಶ. ೪೬–೧೯). [?]

**ಕೇಗು$_2$**, ಕೇಕು (ನಾ). ನವಿಲಿನ ಕೂಗು; ಕೇಕಾರವ: "ಕೇಗೆನೆ ನವಿಲ ದನಿ" (ಕಶರ. ೨೭); ಉತ್ಕಂಠಿತಗಳಾದ ಸೋಗೆಗಳ ಕೇಗುಂಗಳ್ಗಗಿದು (ಕಾದಂಉ. ೨೦೨); ಒದವಿದ ಕೇಗು ನೀಳ್ದ ಕೊರಲ್ (ಜಗವಿ. ೪–೩೦); ಸೋಗೆಗಳ ಕೇಗುಗಳೆ (ಅಕ್ರೂಚ. ೬–೫). **ಕೇಕು**: (ಕಿ). [< ಕೇಗು$_1$]

**ಕೇಚರ** (ನಾ). ೧. ಆಕಾಶದಲ್ಲಿ ಸಂಚರಿಸುವವನು; ಖೇಚರ: ಅನ್ನು ಕೇಚರಂ ಸಾರ್ಚ ತನ್ನ ವಿಮಾನಮುಂ ಇನ್ದ್ರನವೆಸಾದಿ ಸುರವದು ಅರ್ಕ್ಕಳುವನ್ದರ (ಎಕ. VIII, ಸೊರಬ. ೨೨–೫; ಸು. 800). ೨. ಒಂದು ಕ್ಷುದ್ರದೇವತೆ: ತಿರಿದುಂಬ ಮಾರಯ್ಯ ಬೀರಯ್ಯ ಕೇಚರಗಾವಿಲ ... ಕೇತಯ್ಯಗಳೆಂಬ (ಬಸವ. ೫೫೭). [< ಸಂ. ಖೇಚರ]

**ಕೇಚಿಗ** (ನಾ). ಒಬ್ಬಾತನ ಹೆಸರು: ಆ ಕೇಚಿಗಂ ಸಗಬ್ಬರಸಿ ಅನೆಯ ಕೊಣ್ಡದ ಉತ್ತಯ್ಯಂ ಎಱಿಗಕೊಂತದ ಬಿಜ್ಜಯ್ಯ (ಎಕ. XII, ಶಿರಾ. ೨೬–೯; 980 ?). [?]

**ಕೇಟಕೆ** (ನಾ). ಗುರಾಣಿ; ಹಲಗೆ; ಪರಿಗೆ; ಢಾಲು: ಖಡುಂಗಕೇ[ಪಾಠಾಂ. ಖೇ]ಟಕ ಕುಂತ ಬಿಲು ಕಕ್ಕಡೆ ಕಠಾರಿ (ತೊರರಾ. ೬–೨೦–೯).
[< ಖೇಟಕ]

**ಕೇಟುಭ** (ನಾ). ಮಾಡತಕ್ಕ ಕರ್ಮಗಳ ನಿಯಮವನ್ನು ತಿಳಿಸುವ ಶಾಸ್ತ್ರಭಾಗ: ನಿಘಂಟು ಕೇಟುಭ ಅಕ್ಷರ ಪ್ರಭೇದಗಳು ಮತ್ತು ಐದನೆಯದಾಗಿ ಇತಿಹಾಸದೊಡನೆ ಮೂರುವೇದಗಳಲ್ಲಿ ಪಾರಂಗತನು (ಬುದ್ಧಪ. ೮೮–೫). [?]

**ಕೇಡ** (ನಾ). ಕೆಡುಕನ್ನು ಬಯಸುವವನು; ಕೇಡಿಗ: "ಕೇಡಂ ಕೆಡುಕ" (ಕಶರ. ೨೬); ಸಪ್ತವ್ಯಸನದೊಳು ಮುಳುಗಿ ಕೇಡನಾಗದೆ . . . ಸುನೀತಿಮಾರ್ಗದೆ ನಾಡ ಪಾಲಿಸುವಾತನರಸ (ಜೀವಂಚ. ೫-೭೯).
[ಕೇಡು + -ಅ₇]

**ಕೇಡಾಕುಳಿ, ಕ್ರೀಡಾಕುಳಿ, ಖೇಡಕುಳಿ, ಖೇಡಾಕುಳಿ, ಖೇಡಾಕುೞಿ** (ನಾ). ಜಲಕ್ರೀಡೆಯಾಡಲು ಮಾಡಿದ ಕುಳಿ, —ಕೊಳ, —ಕಲ್ಯಾಣಿ: ಕೋಟಿ ಮೃಗಗಳೀರ್ದಪವವಂ ತಂದೆಲ್ಲಮಂ ಕೊಂದಾ ನೆತ್ತರಿಂ ಕೇಡಾಕುಳಿಯಂ ಮಾಡಿಯಲ್ಲಿ ನೀಡುಪೋಲಾಡೆ ದೇಹದ ದಾಹಂ ಮಾದು ಸುಖಮಕ್ಕುಂ (ಪುಣ್ಯಾಸ್ರ. ೯-೩೫ವ); ಗರುಡಿಯೊಳು ಶ್ರೀಗಂಧದ ಕುಂಕುಮದ ಪನ್ನೀರ ಸಾರ ಕೇಡಾಕುಳಿಗಳ(ಗುಭಚ.೨-೯೯); ಮತಿಗೆ ಮಂಗಲವೀವ ಕೇಡಾಕುಳಿಗಳ ಕ್ಷಿತಿಪತಿ ನೋಡುತ ಲೈದಿದನು (ಜಿನರಾ. ೧೧-೨೩); ಅರಾಮದೊಳಗೆ ಪನ್ನೀರ ಕೇಡಾಕುಳಿಗಳ್ (ಸೌಂದಪು. ೧೦-೩೧). **ಕ್ರೀಡಾಕುಳಿ**: "ಕ್ರೀಡಾಕುಳಿ – ವಾಪಿ, ದೀರ್ಘಿಕೆ" (ನಾಚಿರಾ. ೬); ನೋಡಲು ಕಣ್ಗೆಸೆದುವು ಚಂದ್ರಕಾಂತದ ಕ್ರೀಡಾಕುಳಿಗಳಲ್ಲಲ್ಲಿ (ಮೋಹತ. ೧೪-೨೮). **ಖೇಡಕುಳಿ**: ಖೇಡಕುಳಿಯ ನಿರ್ಮಲಜಲಂ ತುಂಬಿದಲ್ಲಿಗೆ ಬಂದನು (ಹಚಕಾ. ೩-೪೯); ಖೇಡಕುಳಿಯನು ತೆಗೆದನರ್ಜುನನಸಮ ಸಮರದಲಿ (ಕುವ್ಯಾದ್ರೋ. ಪರಿ. ೨೯೦-೨೭); ಚಂದ್ರಕಾಂತದ ಖೇಡಕುಳಿಗಳ (ಮೈರಾಕ. ೨-೨೩). **ಖೇಡಾಕುಳಿ**: ನಾನಾ ಪರಿಯಮಳೋದಕ ಭರಿತ ಖೇಡಾಕುಳಿಗೆ ಬಂದ (ಜೀವಂಚ. ೧೬-೪೨); ತಳಿರ ತೊಂಗಲ ತೂಗುವಣೆಯಲಿ ಖೇಡಾಕುಳಿಯ ಸರೋಜಮಧ್ಯದಲಿ (ಮೋಹತ. ೯-೨೮); ಕೋಟಿ ಯೋಜನದಿಂದೆ ಚಚ್ಚೌಕಮಾಗಿರ್ಪ ವರ ವಸಂತೋತ್ಸವದ ದೊಡ್ಡ ಖೇಡಾಕುಳಿಯನಾಗಿಸಿದನು (ಚಿಬಪು. ೩೭-೬೨). **ಖೇಡಾಕುೞಿ**: ಕಂತುವಿನ ಖೇಡಾಕುೞಿಯುಂತಿರ್ಪ ಕ್ರೀಡಾ ರಸಂಗಳಿಂ (ಅರ್ಧನೇ. ೪-೬೮ ವ).
[< ಸಂ. ಕ್ರೀಡಾಕುಲ್ಯ. / ತೆಲು. ಕೇಳಕುಳಿ, ಕೇಳಕೂಲಿ]

**ಕೇಡಾಡಿ** (ನಾ). ಕೆಡುಕ; ಕೇಡಾಳಿ; ಕೇಡಿಗ: ಈ ಕೇ[ಪಾಠಾಂ. ಬೀ]ಡಾಡಿ ಕೊಡಿದನೆಂದು ಹೊಯ್ದನು ರವಿಸುತನ ಕರವ (ಕುವ್ಯಾ ಉ. ೮-೨೭); ಕೇಡಾಡಿಗಳು ಮುಸುಕಿಕ್ಕಿ ಕೊಂಡೊಯ್ದರು ನಿಜಾಲಯಕೆ (ತೊರರಾ. ೬-೨೬-೪). [ಕೇಡು + -ಆಡಿ₁]

**ಕೇಡಾಳಿ** (ನಾ). ಕೆಡುಕನ್ನು ಮಾಡುವುದೇ ಸ್ವಭಾವವಾಗಿರುವವನು; ಕೇಡಿಗ: ಆ ಬಾಲಕರ್ . . . ಮಾತಾಪಿತೃಗಳ ಮಾತುಗಳಂ ಕೈಗೊಳ್ಳದೆ ಸರ್ವಸ್ವಮಂ ಕೊಂಡು ಕೇಡಾಳಿಗಳಾಗೆ (ಸುಕುಮಾ ೨-೫ ವ); ಯಶೋದೆ ಮೊಲೆಯ ಕೊಡು ನಿನ್ನೀ ಕೇಡಾಳಿ ಕೇಶವಗೆ (ನೇಮಿಸಂ. ೧೫-೯೫); ಕೇಡಾಳಿಯುಂ ಭೂಮಿಪನ ಬಗೆ ತಾಂ ಕೋಳುಹೋಗಿಹುದೆನುತಲೊರೆದನು (ರಾಮಾಸಂ. ೨-೧-೫೯).
[ಕೇಡು + -ಆಳಿ₃]

**ಕೇಡಿ₁** (ನಾ). ೧. = ಕೇಡಾಳಿ: ಇದೆಲ್ಲಾ ರಂಗಣ್ಣನಂತಹ ಕೇಡಿಯ ಕೆಲಸ (ದುಂಬಿಕ. ೧೫೭). ೨. ಕೆಡಿಸುವವನು. 'ಎಡರ್ಗೇಡಿ' ಪರಾ. ೩. ಕೆಡಿಸಿಕೊಳ್ಳುವವನು. 'ಅಂದಗೇಡಿ', 'ಅಭಿಮಾನಗೇಡಿ', 'ಕುಲಗೇಡಿ' ಪರಾ. [ಕೇಡು + -ಇ₃]

**ಕೇಡಿ₂** (ನಾ). ಮೇಲಿಂದ ಮೇಲೆ ಅಪರಾಧಮಾಡಿ ಪೋಲೀಸಿನವರ ಕಡತದಲ್ಲಿ ನಮೂದಾಗಿರುವ ವ್ಯಕ್ತಿ: ಪೋಲೀಸಿನವರೂ ಕೂಡ ಆ ಕೇಡಿಗಳಿಗಾಗಿ ಹುಡುಕುತ್ತಿದ್ದಾರೆ (ದ್ರೋಕನ್ನೆ. ೨೭೧); ಭರವಪ್ಪ ದೊಡ್ಡ ಕೇಡಿ (ನಾಪೋಲೀ. ೨೧೦).
[< ಇಂ. K. D. P Known Delinquent ಎಂಬುದರ ಸಂಕ್ಷಿಪ್ತ ರೂಪ]

**ಕೇಡಿಗ, ಕೀಡಿಗ** (ನಾ). = ಕೇಡಾಳಿ: ಕೇಡಿಗನು ಕೃತ್ರಿಮ ರಚನೆಯಲಿ ಮಾಡಿಸಿದನರಮನೆಯ (ಕುವ್ಯಾಆ. ೮-೬೮); ನೀ ಕೆಟ್ಟಿಲ್ಲ ಕೆಡಿಸುವ ಕೇಡಿಗರ ನಡೆಯಾಯ್ತು (ಬಜ್ಜಪು. ೭೩-೪೩). **ಕೀಡಿಗ**: ನೋಡಿಸಿ ನೋಡುವರ್ ಕರೆದು ಕೀಡಿಗರಂ ಮನೆದೆಯ್ವಮೆಲ್ಲಮಂ ಹಾಡಿಸಿಯುಂ (ಪಸಾರ. ೮೩೯-೧). [ಕೇಡು + -ಇಗ]

**ಕೇಡಿಗತನ** (ನಾ). ಕೆಡುಕುತನ; ದುಷ್ಟತನ: ಲಲಿತಾಂಗನ ಕಥೆಯಲ್ಲಿ ಅವನ ಕೇಡಿಗತನದ ವರ್ಣನೆ ಅದೆಷ್ಟು ಉದ್ದಾನುದ್ದವಾಗಿ ಬೆಳೆದಿದೆ (ತವಪಿ. ೮೯). [ಕೇಡಿಗ + -ತನ]

**ಕೇಡಿತನ** (ನಾ). ೧. ಕೆಡುಕನಾಗಿರುವಿಕೆ. ೨. ಕೆಡುವಿಕೆ; ಕೆಡಿಸುವಿಕೆ. 'ಎಚ್ಚರಗೇಡಿತನ', 'ತಿಳಿಗೇಡಿತನ' ಪರಾ. [ಕೇಡಿ₁ + -ತನ]

**ಕೇಡು** (ನಾ). ೧. ಕೆಡುಕು; ಅಪಾಯ; ಆಪತ್ತು: ಕೇಡಡಸಿದಂದು ಬಗೆಯಂ ಮಾಡದು ಕೂಡಿದುದು ಮುೞಿದು ವಿಪರೀತಮುಮಂ (ಕವಿರಾ. ೧-೬೨); ನಮಗೆ ಸಾವುಂ ಕೇಡುಮಮೋಘಮಕ್ಕುಂ (ವಡ್ಡಾರಾ. ೭೬-೧೯); ಕೇಡಿಂಗಂ [ಬಡತನಕ್ಕಮು]ಪ್ಪ ಪೆಂಡತಿಗೆ ಮನೆವಾರ್ತೆಯಂ ನುಡಿವಂತೆ (ಧರ್ಮಾಮೃ. ೧೦-೫); ಮೂಢ ಬಂದನು ಕೇಡ ಕರೆಯಲು ತನಗೆ ಬೇಗದಲಿ (ಕುವ್ಯಾಆ. ಓರಿ೩. ೨೬-೧೦೧). ೨. ಅಳಿವು; ಸಾವು; ನಾಶ: ಇರ್ತೆಱದ ಕರ್ಮದ ಕೇಡಿನಿಂದಂ ಮೋಕ್ಷಮನೆಯ್ದುವರ್ (ವಡ್ಡಾರಾ. ೯೮-೨೮); ಶರೀರಕ್ಕಲ್ಲದೆ ಶರೀರಿಗೆಲ್ಲಿಯುಂ ಕೇಡಿಲ್ಲ (ಪಂಚತಂ. ೧೪೩-೧೭); ಸುಂಟಿಯುಮುಮರ್ದುವಳ್ಳಿಯುಂ ಪುಷ್ಕರ ಮೂಲಮುಂ ಬರಿವದನೆಯುಂ ಜ್ವರದ ಕೇಡು (ಧರ್ಮಾಮೃ. ೯-೧೦೮); ದೈತ್ಯನ ಕೇಡಿಂಗೆ ತೋಱುತುತ್ಪಾತ (ಮೋಹತ. ೪೦-೮). ೩. ಹಾನಿ; ನಷ್ಟ; ಭಂಗ: ತನ್ನ ನುಡಿದ ನನ್ನಿಯ ಕೇಡಂ ಬಗೆದರೆಂದು ಕಟಾಕ್ಷವಿಕ್ಷೇಪದಿಂ ಬಾರಿಸೆ (ಪಂಪಭಾ. ೭-೮ವ); ಉಳ್ಳ ಗುಣಕೇಂ ಕೇಡುಂಟೆ (ಅಜಿಪು. ೧-೯೧); ಈ ಧರ್ಮಕ್ಕೆ ಕೇಡಂ ಮಾಡಿದವರ್ಗೆ . . . ಮಹಾಪಾತಕ (ಸೌಇಇ. IX-i, ೨೬೭-೬೬; 1160); ಗಂಗೆಯೊಡನಾಡಿದ ಗಟ್ಟಬೆಟ್ಟಗಳು ಕೆಟ್ಟ ಕೇಡ ನೋಡಯ್ಯ (ಮಹಾದೇ. ೩೭-೨); ಕವಚವಿದೆ ಸರ್ವಾಂಗ ನೃಪನವಯವಕೆ ಕೇಡಿಲ್ಲ (ಕುವ್ಯಾದ್ರೋ. ೧೦-೫೬). ೪. ಕದರಿ ಬಿದ್ದಿರುವುದು: "ಚೆಲ್ಲುವಿಕೆ" (ಪಂಪಭಾ. ಕೋಶ); ಲಂಬಣಂ ಪಱಿಯೆ ಮುತ್ತಿನ ಕೇಡನೆ ನೋಡಿ (ಪಂಪಭಾ. ೯-೬೯).

**ಕೇಡಾಗು** = ಕೆಡುಕು ಉಂಟಾಗು; ನಷ್ಟವಾಗು: ಎಲೆ ಕೇಡಾಯ್ತೆ ನ[ಗೋವೊ] (ಕಾದಂಉ. ೫೬೮); ಕೇಡಾದುದೆಂದು ಬೆಚ್ಚದೆ ಬಾಡದೆ ಬೆಂಬೀಱದೆ (ಧರ್ಮಾಮೃ. ೩-೨೦೮).
[< ಕೆಡು. / ತಮಿ. ಮಲ. ಕೇಡು; ಕೊಡ. ಕೇಡಿ; ತುಳು. ಕೇಡು; ತೆಲು. ಚೇಡು]

**ಕೇಡುಗ** (ನಾ). = ಕೇಡಿಗ: ಕೂಡಿಕೊಂಡು ಕುಲಾಪಘಾತದ ಕೇಡು[ಪಾಠಾಂ. ಡಿ]ಗರ ಕಲ್ಪನೆಯ ಕಲುಷದ ಜೋಡಿಯೆನೆ ನಿಶ್ಚೈಸಿ (ಕುವ್ಯಾಸ. ೧೩-೩೬); ಕೇಡುಗರ ಕಡೆಯಿಂದ ಕೆಟ್ಟುದು ನಮ್ಮ ಕುಲವಿಭವ (ನಿಭಾಗ ೩-೧-೧೦); ಕೇಡುಗನ ನೀ ರಾಜ್ಯಕೊಡೆಯನ ಮಾಡಿ (ರಾಮಾಸಂ. ೮-೨-೧೨೩). [ಕೇಡು + -ಗ₃]

**ಕೇಡುಗತನ** (ನಾ). = ಕೇಡಿಗತನ: ಕಣ್ಬಾರ ನೋಡೆಲೆಯರಸ ಕೇಡುಗತನವನುಳಿಯೆಂದ (ತೊರರಾ. ೬-೮-೪೮). [ಕೇಡುಗ + -ತನ]

**ಕೇಡುಗಾಣು** (ಕ್ರಿ). ಕೇಡನ್ನು ಕಾಣು; ನಾಶವಾಗು: ಪುನರಪಿ ಕೇಡುಗಂಡವು ನೂಱು ಭೀಮನ ಗದೆಯ ಘಾತದಲಿ (ಕುವ್ಯಾಗ ೧-೫೯); ಹೇಡಿಯಾದರೆ ಬಲ್ಲಿದರ ಕೈಯಲ್ಲಿ ನಿಮಿಷದಲಿ ಕೇಡುಗಾಣುತ ಬಯಲಲೇ ಮನೆಮಾಡಿಸುತ ದುರ್ಜನ ವಿಟರುಗಳ ನೋಡಲಾಗದು ಬಲ್ಲ ವನಿತೆಯರು (ನಿಭಾಗ. ೧೧-೧೫-೭). [ಕೇಡು + ಕಾಣು (< ಕಾಣ್)]

**ಕೇಡುಗಾಲ** (ನಾ). ಕೇಡು ಉಂಟಾಗುವ ಕಾಲ; ವಿನಾಶ ಕಾಲ: ಕೋಡಗಕೆ ಭಯವುಂಟೆ ಶಿವಶಿವ ಕೇಡುಗಾಲವು ಲಂಕೆಗೆ (ಕಾಶಿರಾ. ೨೦-೧೭); ಅಕಟ ಖಳರಿಗೆ ಕೇಡುಗಾಲವಿದು (ತೊರರಾ. ೫-೭-೧೫); ಏನೋ ಕೇಡುಗಾಲ ಬಂದದ್ದರಿಂದ ಹೀಗೆ ನುಡಿಯುತ್ತಿರುವೆ (ಕೃಪಾಲು. ೧೧೩); ಕೇಡುಗಾಲಕ್ಕೆ ಬುದ್ಧಿಯಿಲ್ಲ ಮರಣಕಾಲಕ್ಕೆ ಮದ್ದು ಇಲ್ಲ (ಗಾದೆ). [ಕೇಡು + ಕಾಲ]

**ಕೇಡುಸುದ್ದಿ** (ನಾ). ಕೆಟ್ಟ ಸಮಾಚಾರ; ಕೆಡುಕಿನ ಸುದ್ದಿ: ಅವರು ಏನು ಕೇಡುಸುದ್ದಿ ಬರುವುದೋ ಎಂದು ಚಡಪಡಿಸಿದರು (ರೂಢಿ).

[ಕೇಡು + ಸುದ್ದಿ]

**ಕೇಡೆಯ್ದಿಸು** (ಕ್ರಿ). ಕೇಡಿಗೆ ಗುರಿಮಾಡು; ಕೆಡಿಸು: ಮಂತ್ರವೈದ್ಯ ದಳಿಪಿಂ ಕೇಡೆಯ್ದಿಪಂ ಧರ್ಮಮಂ (ಧರ್ಮಾಮೃ. ೪-೪೮).

[ಕೇಡು + ಎಯ್ದಿಸು]

**ಕೇಣ$_1$, ಕೀಣ** (ನಾ). ೧. ಹುರುಡು; ಹೊಟ್ಟೆಕಿಚ್ಚು; ಮತ್ಸರ: "ಕೇಣಂ, ಮಚ್ಚರಂ –ಈ ೨ ಮತ್ಸರಂ" (ಕಶಸಾ. ೨೨-೪೫೭); ಕೇಣಮನೊಕ್ಕು ತಕ್ಕನಱಿದುಕ್ಕೆವಮಂ ಪೆಜಗಿಕ್ಕಿ (ಶಾಂತಿಪು. ೩-೧೩); ಕೇಣಮುದಾರದೊಳ್ ಕೊಱತೆ ಸಜ್ಜನ ವೃತ್ತಿಯೊಳೆಗ್ಗು ಶೀಲದೊಳ್ ಕಾಣಬಾರದು (ಎಇ. XVI, ೬೧-೨೨; 1081); ಕೇಣಮಂ ತೊರೆದು ಪುರುಡಿಸುವರಂ ಜರೆದು ಕೇಳ್ವುದು ಸುಜನರು (ಜೈಮಿಭಾ. ೧-೮); ಈ ಯೊಡಲಿಗೆ ಎನ್ನೊಳೇಂ ಕೇಣವಮ್ಮ (ಗೀತಗೋ. ೩೧-೧). ೨. ಕೋಪ; ರೋಷ; ಆವೇಶ; ಉದ್ರೇಕ: ಕೈಚಳಕದೆಸುಗೆಯ ಕೇಣದಳತೆಯನಱಿಯೆ ನಾನೆಂದ (ಕುವ್ಯಾಕ. ೧೨-೨೪); ಕೇಣದಿಂ ಕೆಣಕಿದ ಧೀವರಾಮರರನೆಕ್ಕಲಂ . . . ಸೀಳ್ವುದು (ಶಬಶಂ. ೪-೧೦); ಹುಬ್ಬನು ಕೇಣದಿ ಗಂಟಿಕ್ಕುತಿಹಳು (ಸೌಗಂಪ. ೧-೪೭). ೩. ಲೋಭ; ಅತ್ಯಾಸೆ: ಕೇಣಧಿಂ ಗಳಿಸಿ ಕಡೆಯಲಿ ಕೊಡುವೆನೆನೆ ಪ್ರಾಣ ಶಾಶ್ವತವೆ (ಸರ್ವಜ್ಞ. ೬೯೪). ೪. ಆಲೋಚನೆ; ಪರಾಮರ್ಶೆ; ಚಿಂತನೆ; ವಿಚಾರ: "ಕೇ[ಪಾಠಾಂ. ಕೀ]ಣಮೆನಲ್ಕಾಲೋಚನೆ" (ಭಾರನಿ. ೬೩); ಅಱಿಯಂ ಕೇಣದಿನೇನುವಂ ಮುನಿಕುಮಾರ (ಕಾದಂಪೂ. ೮೬೦); ಸನ್ನೆಯಱಿಯದ ಸರಸವಱಿಯದ ಜಾಣಱಿಯದ ಕೇಣವಱಿಯದ ನಿಲವು ನಿರ್ವಿಕಾರ ಸುಖಮನೀಯೆ (ಗಿಂಕ. ೨-೧೦೫ವ); ಕೇಣವಿಲ್ಲದ ವಿಷಯಲಂಪಟಗೇಕೆ ನಿರ್ವಾಣ (ಅಮೃತ. ೧-೪೦). ೫. ಸಂಕೋಚ; ಭಯ: ಲವಾಂಕುಶರ್ ಚೂಣಿಯೊಳ್ ಕೇಣಮಿಲ್ಲದೆ ಪೊಱಮಟ್ಟು ಕಾಳೆಗಮಂ ಕೊಂಬುದು (ಪುಣ್ಯಾಸ್ರ. ೭-೨೩ವ); ಪ್ರಾಣದಾಸೆಯ ಮಱೆದು ತನ್ನೊಳು ಕೇಣವಿಲ್ಲದೆ ಕಾದೆನುತ (ಕುವ್ಯಾಕ. ೧೩-೩೭); ಮುನಿಸಂಕುಲಂ ಕೇಣಮಿಲ್ಲದೆ ತದ್ವನಾಂತರದೊಳಿರ್ದುದನವರತ (ನಂದಿಮಾ. ೨-೨೦). **ಕೀಣ**: ೪. "ಕೀ[ಪಾಠಾಂ. ಕೇ]ಣಮೆನಲ್ಕಾಲೋಚನೆ" (ಭಾರನಿ. ೬೩); ಜಾಣನ ಭಕ್ತಿ ತನಗೆಂಬ ಮರುಳನ ಕೀ[ಪಾಠಾಂ. ಕೇ]ಣವನು ನೋಡ (ಸರ್ವಜ್ಞ. ೪೩೭).

**ಕೇಣ$_2$** (ನಾ). ಕೊರತೆ; ಊಣೆಯ; ಲೋಪ; ನ್ಯೂನತೆ: ಕೇಣವಿಲ್ಲದೆ ಸಕಲಶಾಸ್ತ್ರ ಪ್ರವೀಣರಾದರು (ಸಂಭಪ. ೧೭-೬೨); ಕೌರವೇಂದ್ರಗೆ ಖೋಡಿಯುಂಟೇ ದ್ರೋಣ ಕೇಣವ ಬಿಟ್ಟು ಕಾದುವರೆ (ಕುವ್ಯಾದ್ರೋ. ೨-೫೮); ಕೇಣವಿಲ್ಲದೆ ಜಂಗಮಕ್ಕೆ ದಾಸೋಹವುಂ ಮಾಡುತಿರಲು (ಲಶಿಚಂ. ೩೮-೧೭೫). [< ಸಂ. ಕ್ಷೀಣ]

**ಕೇಣ$_3$** (ನಾ). ಮುಗ್ಗದ ಹಾಸಿನ ಎಳೆ (?): ಕಟ್ಟಣೆಯೊಳಗಣ ಕಾಂಸ್ಯದಂತೆ, ಅಣೆಯೊಳಗಣ ಕೇಣದಂತೆ, ಚಿನ್ನದೊಳಗಣ ಬಣ್ಣದಂತೆ, ಪಟದೊಳಗಣುತಂತುವಿನಂತೆ, ಎನ್ನಲ್ಲಿ ಭಿನ್ನವಿಲ್ಲದೆ ಇದ್ದೆವಯಲ್ಲಾ ಸೌರಾಷ್ಟ್ರಸೋಮೇಶ್ವರಾ (ಆದವ. ೮). [?]

**ಕೇಣಂಗೊಳ್, ಕೇಣಗೊಳ್** (ಕ್ರಿ). ೧. ಹುರುಡಿಸು; ಹೊಟ್ಟೆಕಿಚ್ಚು ಪಡು; ಮತ್ಸರಿಸು: ನಿನ್ನೊಡನೆ ಬರಿದೆ ಕೇಣಂಗೊಂಡು ಬವರವನೆಸಗಿದಂಥಾ ದುರ್ಜನರಾದ ಶತ್ರುಗಳೊಡನೆ ಮಾರಾಂತು (ಭಾರಶಾಂ. ೧೩೪-೨೦). **ಕೇಣಗೊಳ್**: ೧. ಕೇಣಗೊಂಡವರೆಂತು ಕೆಣಕಿ ನೋಡಲಿ ಮತ್ತೆ ಮಾಣಲಿ ಮಮತೆಯುಳ್ಳವರು (ಹದಿಬ. ೪-೪೨). ೨. ರೋಷಗೊಳ್ಳು; ಉಗ್ರವಾಗು: ಕೇಣಗೊಂಡ ಪುಲಿ ಸಿಂಗಮಂ ಜಾಣನೇಱಿ ಮೆಱೆವಟ್ಟೆಯೇ (ಮೈಸೂಮ ೨-೮೯).

[ಕೇಣ$_1$ + ಕೊಳ್$_1$]

**ಕೇಣಂಬಡೆ** (ಕ್ರಿ). ಮತ್ಸರಿಸು; ಸ್ಪರ್ಧಿಸು; ಹುರುಡಿಸು: ಮಾಣದೆ ಮತ್ತೆಱಗಿದನಾ ಸ್ಥಾಣುವನಬ್ಬರಿಸಿ ಸಿಡಿಲ ಮಾಳ್ಕೆಯೊಳಭವಂ . . . ಕೇಣಂಬಡೆದೊತ್ತಿಮೆಟ್ಟಿದಂ ಗಾಂಡಿವಿಯಂ (ಶಬಶಂ. ೪-೮೭); "ಸಾವಕಾಶವಾಗಿ" (ಶಬಶಂ. ಕೋಶ).

[ಕೇಣ$_1$ + ಪಡೆ$_1$]

**ಕೇಣಕ** (ನಾ). (?): ರಾಜರಾಜನ ಕಣ್ಗಳಂಗಣದೊಳ್ ಬೆಡಂಗು ಭಂಗಿವಡೆವಿನಮೇಱಿ ತೋಱಿ ಪೆಸರಿಟ್ಟು ಪೊಗಟ್ವ ಕುದುರೆಕಾಱರ ಕೇಣಕದನುಮಾನಕಂ [ಪಾಠಾಂ. ಕೇಣದನುಮಾನಕ್ಕಂ] (ಅನಂಪು. ೨-೩೦ವ). [?]

**ಕೇಣಕಾಱ** (ನಾ). ಲೋಭಿ; ಕೃಪಣ; ಜಿಪುಣ: ಪಣಮನೀಯನಂ ಪ್ರಿಯಂ ನುಡಿದೆಂತುಂ ಮಾಣೆ ಮತ್ತವನ ಪಂಬಲನೆಂತುಂ ಕೇಣಕಾಱನನ ದೇಕೆಗ ಕಾಮ್ವೆ ನಾಣಪುತ್ತ ನಗೆಯಂ ನೀಂ ಬಗೆಯ್ಯೆ (ಕಾವ್ಯಾವ. ೪೮೪).

[ಕೇಣ$_1$ + -ಕಾಱ]

**ಕೇಣಗೊಳ್**, 'ಕೇಣಂಗೊಳ್' ನೋ.

**ಕೇಣಸರ, ಕೇಣ್ಸರ** (ನಾ). ೧. ಕರುಬು; ಹೊಟ್ಟೆಕಿಚ್ಚು; ಮಾತ್ಸರ್ಯ: ಆ ಠಾವಿನಲ್ಲಿ ಲಜ್ಜೆ ನಾಚಿಕೆ ಕೇಣಸರ ಅಪಮಾನವಿಲ್ಲದಿರಬೇಕು (ಮೋಳಿಮಾ. ೫೮-೨೪೧); ಬಾಣಗಳಾರ್ಭಟಿಸುತಲೈದಿಯೂರೊಳು ಕೇಣಸರದೊಳಿಹ ಭಟರ ಪ್ರಾಣಗಳನು ನೀಗಿ (ಕಂನವಿ. ೧೬-೭೭). ೨. ಸಂಕೋಚ; ಸಂಶಯ: ಗುರುವಿನ ತನುವವಸರಮಾಡುವಲ್ಲಿ ಕೇಣಸರ ಆತ್ಮತೇಜವಿಲ್ಲದಿರಬೇಕು (ಅಱಿಮಾ. ೪೮). **ಕೇಣ್ಸರ**: ೧. ಬಂಡಾಟ ಬದುಕಿಸಿತು ಕೇಣ್ಸರ ಕೆಡಿಸಿತು (ಗಾದೆ).

[ಕೇಣ$_1$ + ?]

**ಕೇಣಿ$_1$** (ನಾ). ತಾತ್ಕಾಲಿಕವಾಗಿ ನದಿಯ ದಡಗಳಲ್ಲಿ ತೋಡಿದ ಒರತೆಯ ಕುಳಿ, —ಬಾವಿ, —ಕೊಳ: (*).

[ದೇ. ॥ ತಮಿ. ಮಲ. ಕೇಣಿ]

**ಕೇಣಿ$_2$** (ನಾ). ಮೈತ್ರಿ; ಕೆಳೆ: ಮನೋಭವನೃಪಾಲನ ಕೇಣಿಯ ತಾಣವೆಂಬಿನಂ (ದಶಕು. ೬-೬೫). 'ಕೇಣಿಗೊಳ್$_2$' ಪರಾ.

[← ತಮಿ. ಕೇೞಿ]

**ಕೇಣಿ$_3$, ಖೇಣಿ, ಗೇಣಿ, ಗೇನಿ, ಚೇಣಿ$_2$** (ನಾ). ೧. ಕೊಳ್ಳುವುದು, ಹಾಗೂ ಮಾರುವುದು; ಕ್ರಯ ವಿಕ್ರಯ: "ಕ್ರೇಣಿ – ಕೇಣಿ" (ಶಮದ. ೨೬೧ ಪ್ರಯೋ). ೨. ಗುತ್ತಿಗೆ; ಒಪ್ಪಂದ; ಮಿಾಸಲು: ಎಲೆಯಲು ವಡಕೆಯಲು ಕೇಣಿಯಂ ಕೊಂಡವರಲ್ಲಿ ಪೊಂಗದ್ದ (ಸೌಇಇ. IX–i, ೨೦೦-೨೭; 1121); ಪೊಂಗೊಟ್ಟು ಕರ್ಬನಿತುಮಂ ಕೇಣಿಯಂ ಕೊಂಡು (ಬಾಹೂರ. ೧೮೨-೮); ವೃಕೋದರನವಯವವ ಕೇಣಿಯನು ಕೊಟ್ಟವು ಬಾಣತತಿಗೆನುತ (ಕುವ್ಯಾದ್ರೋ. ೧೩-೪೫); ಕಾಲಭಯವನು ಕೇಣಿಯನು ಕೊಂಡಂತೆ ಕಂಸಕ್ಷೋಣಿಪತಿ ಕುಳ್ಳಿರ್ದನು (ನಿಭಾಗ. ೧೦-೩೮-೧೨); ರಾಜವೆಸರು ಮಾವಂದಿರ್ಗೆ ಕೇಣಿಯಾಯ್ತೆಂದು ನಲಿದರು (ಭರಚ. ೫೮-೨೧); ಗೆಲ್ಲವೆಣ್ ನಿನ್ನೊಳ್ ಕೇಣಿಯಕ್ಕೆ (ರಾಮಾಶ್ವ. ೯೨-೨೧).

೩. ಪಾಲು ; ಭಾಗ: ದುರ್ಯೋನನ ಬೆಳಸಿನ ಕೇಣಿಯನು ಕೈಕೊಂಡ (ಕುವ್ಯಾಸ. ೧೨-೫). ೪. ರತ್ನ ಪರೀಕ್ಷೆಯ ಒಂದು ವಿಧ; ಕುಂದಣ: ಒರೆಯಾಣಿ ಕೇಣಿ ನೋಟ ತೂಕಂ ಬಡ್ಡಿ . . . ಭಾಸುರದ ರತ್ನಪರೀಕ್ಷೆಗಳೊಳು ಪರಿಣತನ ಮಾಡಿದನಯ್ಯನಾದಯ್ಯನ (ಸೋಮುಚ. ೧-೯೩); "ತೂಕ" (ಸೋಮುಚ. ಕೋಶ). **ಖೇಣಿ**: ೧. [ಬ]ನವಾಸೆನಾಡ ದವಸಾಯದ[ ಸುಂ]ಕಮಂ[ಖೇ]ಣಿಯಲು ನಡೆವುತ್ತ (ಸೌಇಇ. XX, ೬೦-೧೪ ; 1088). 'ಖೇಣಿಕಾಱ' ಪರಾ. **ಗೇಣಿ**: ೨. ಬಿದೆಕಾರು ಮೂ ೧೭೮ ಗೇಣಿ ಭತ್ತಮೂ ೪೩ (ಸೌಇಇ. ೧೯೩೧, ಮಂಗಳೂ. ೩೩೮ ೧೦ ; 1228); ವರುಷ ೧ಕ್ಕೆ ಬಹ ಗೇಣಿ ಅಂಬಲದ ಹೊನ್ನೊಂದಕ್ಕೆ (ಬೊಂಕಶಾ. ೧೯೪೦, ಕುಮುಟ. ೧೧೩-೨೨ ; 1475) ; ಅಂತು ಇವಕೆ ಗೇಣಿ ೧೪೦ (ಕಇ. I, ೫೧-೨೨ ; 1432) ; ಅವರು ಕೊಂಡ ಜಮೀನು ವಾಯಿದೆ ಗೇಣಿಯದು (ಕುಡಿಕೂ. ೩೨) ; ಗೇಣಿದಾರರು ಗೇಣಿಯನ್ನು . . . ಕೊಡಬೇಕಾಗಿತ್ತು (ಪಂಜಪಂ. ೧೦). **ಗೇನಿ**: ೨. ಸಲುವ ಗೇನಿ ಸಿದ್ಧಾಯ (ಇಆ. V, ೪೧-೧೬ ; 1587). **ಚೇಣಿ₂**: ೨. ಮೊದಲು ಮೊದಲು ಕಬ್ಬು ಅರೆದು ಕೂಲಿ ಪಡೆಯುತ್ತಿದ್ದರು. ಅನಂತರ ಅವರೇ ಚೇಣಿ ಮಾಡಲಾರಂಭಿಸಿದರು (ನನ್ನೂರು. ೧೧೮). [< ಸಂ. ಕ್ರೇಣಿ]

**ಕೇಣಿ₄** 'ಕೇಱು' ನೋ.

**ಕೇಣಿಕ** (ನಾ). ಅಡವು ; ಗಿರವಿ : ಬಡ್ಡಿಯಿಕ್ಕುವಂ ಮೊದಲಂ ಕೊಟ್ಟು ಪತ್ರಮಂ ಸೀಳಿಸುವಂತೆ ಕೇಣಿಕಮಿಕ್ಕುವ ಪರದನೊತ್ತೆಯಂ ಬಿಡಿಸುವಂತೆ (ಧರ್ಮಾಮೃ. ೧೪-೧೦೪). [< ಸಂ. ಕ್ರೇಣಿಕ]

**ಕೇಣಿಕಾಱ₁** 'ಕೇಣಿಗಾಱ' ನೋ.

**ಕೇಣಿಕಾಱ₂** (ನಾ). ವ್ಯಾಪಾರ ಶ್ರೇಣಿಯವನು ; ಬಣಜಿಗ ಸಂಘದವನು : ಕೇಣಿಕಾಱರಧಿಷ್ಠಾಯಕ ನಾಗವರ್ಮಯ್ಯನುಂ (ಎಇ. XVI, ೩೩೯-೧೨ ; 1053). [ಕೇಣಿ₃ + -ಕಾಱ]

**ಕೇಣಿಗ** (ನಾ). ಬಾವಿ ಕೆಲಸದವನು ; ಬಾವಿ ತೋಡುವವನು (?): ಹೂಣಿಗಂ ಹಂದ್ಯೆಯ್ಯನೋವದೆ ಕೇಣಿಗನ ಕೊಂದೆಸೆದ ಸಗರದ ಬೊಮ್ಮಿತಂದೆಗಳುಂ (ಸಾನಂಚ. ೯-೭೫) ; ಮದ್ದಳೆ ಶಿಲ್ಪಿಮೀತಂಗೆ ಮದ್ದಳಿಗಂ, ಏವಂ ಸರವಂದಿಗಂ, ಬೀಣಿಗಂ, ಗಾಣಿಗಂ, ಕೇಣಿಗಂ (ಶಬ್ದಾನು. ೪೦೬ ಪ್ರಯೋ) ; ಸಾಣಿಗರ್ ಕೆಲಸಿಗರ್ ಮಡಿವಳರ್ ಬಿಸಿನೀರ ಕೇಣಿಗರ್ ಜೂಜುಗಾಱರ್ ಮುಖ್ಯರೊದಗಿ ಬರುತಿರ್ದರೇಂ ವಣ್ಣಿಸುವೆನು (ಚಬಪು. ೪೭-೪೧) ; ಮುಚ್ಚಿಗರ ಕೇಣಿಗರ ಚಿಪ್ಪಿಗರ (ಸಿದ್ಧಕಾ. ೧೩-೩೬). [ಕೇಣಿ₁ + -ಇಗ]

**ಕೇಣಿಗಾಱ**, ಕೇಣಿಕಾಱ₁, ಖೇಣಿಕಾಱ, ಗೇಣಿಕಾಱ, ಗೇಣಿಗಾರ (ನಾ). ಗುತ್ತಿಗೆದಾರ : ಈಶ್ವರಾಜ್ಞೆಯ ಕೇಣಿಗಾಱರು ಕರಣಗಳು ತಾ ಸಾಕ್ಷಿಯಾಗಿಹನು (ನಿಭಾಗ. ೧೧-೨೦-೪೩) ; ಕೋಟಿ ಬ್ರಹ್ಮಾಂಡಗಳ ಪ್ರಾಣಿಗಳ ಸೃಜಿಪ ಕರ್ತರ್ ಮಹಾ ಪ್ರೌಢಿಕೆಯ ಕೇಣಿಗಾ[ಪಾಠಾಂ. ಕಾ]ಱರ್ ಚತುರ್ವದನರ್ (ಚಬಪು. ೨೯-೨೦). **ಕೇಣಿಕಾಱ₁** : ಮತ್ತೊರ್ವಂ ಕೇಣಿಕಾಱ ವಿಟನಪ್ಪ ವಣಿಗ್ವಿಟನಿಂತೆಂದಂ (ಶಾಂತಿಪು. ೮-೯೬ವ) ; ಭೀಮಸೇನನನಿತ್ತ ನೋಡೈ ಮಗನೆ ಕುರುಕುಲ ಕೇಣಿಕಾಱನನು (ಕುವ್ಯಾಭೀ. ೨-೧೬). **ಖೇಣಿಕಾಱ**: ವಡ್ಡರಾವುಳದ ಖೇಣಿಕಾಱ ಪೆರ್ಗ್ಗಡೆ ಚಾವಣ್ಣನುಮಿಬ್ಬ (ಎಇ. XIX, ೧೮೮-೧೬; 1079); ಆ ಸುಂಕದ ಖೇಣಿಕಾಱರು (ತೆಲಂಶಾ. ೪೦-೧೮ ; 1125). **ಗೇಣಿಕಾಱ** : ಗುತ್ತಗೆಯ ಗೇಣಿಕಾಱ (ಕೋಲಶಾಂ. ೫೫). **ಗೇಣಿಗಾರ** : ಮೂಲಗಾರರ ಭೂಮಿಯನ್ನು ತೆರಿಗೆಯಿಂದ ಮಾಡುವ ಕುಳಗಳಿಗೆ ಗೇಣಿಗಾರರೆಂದೆನ್ನುತ್ತಾರೆ (ಮುಂಬಯಿ. ೫-೨೧೪). [ಕೇಣಿ₃ + -ಕಾಱ]

**ಕೇಣಿಗೊಡು** (ಕ್ರಿ). ಗುತ್ತಿಗೆಕೊಡು (?) : ಅಂಗುಲಿಗಳರಳಸರಲನ ಬಾಣಂಗಳ ಬಂಧುರತೆಯಂ ಕೇಣಿಗೊಟ್ಟಂತೆ (ಪುಣ್ಯಾಸ್ರ. ೨-೩೨ವ) ; ರತ್ನಗರ್ಭಾಂಗನೆ ನಿಜೋದರದಿಂದೆಱಿದುಳ್ಳ ರತ್ನಾವಳಿಯಂ ಕೇಣಿಗೊಟ್ಟಡೆಯೊ . . . ಎನೆ ವಿವಿಧ ರತ್ನಗರ್ಭಿತಮಾಗಿ ರತ್ನಮಂ ವಿಕ್ರಯಿಪ ಘಟ್ಟಿ ಸಟ್ಟಿಗಳವರ . . . ಅಂಗಡಿಗಳೆಸೆವವು (ಪದ್ಮರಾ. ೮-೭೮). [ಕೇಣಿ₃ + ಕೊಡು₁]

**ಕೇಣಿಗೊಳ್₁** (ಕ್ರಿ). ೧. ಗುತ್ತಿಗೆ ಹಿಡಿ ; ವಶಪಡಿಸಿಕೊಳ್ಳು ; ಸ್ವಾಧೀನ ಮಾಡಿಕೊ : ಭಾಳಾಕ್ಷನರ್ಧತನುವಂ ನಿಜಕೆ ಕೇಣಿಗೊಂಡಾ ಶೈಲೇಂದ್ರ ಕನ್ಯಕೆಯನರ್ಚಿಸಿದಂದು (ಉದ್ಭಟ. ೬-೩೯) ; ಕಾಣಲೊಡನೆ ಕರಣಮನೆಲ್ಲಮನಂದು ಕೇಣಿಗೊಂಡನು ಪಂಚಬಾಣಂ (ಅಂಜಚ. ೮-೮೯); ಕುರುಬಲವನೊಬ್ಬನೆ ಕೇಣಿಗೊಂಡೆನು (ಕುವ್ಯಾಕ. ೧೪-೪೦) ; ಪ್ರಳಯದ ಭಟರ ಜೀವವನಂಬುಗಳು ಕೇಣಿಗೊಂಡವು (ಉತ್ತರಾ. ೩-೪೭). ೨. ತಾಳು ; ಧರಿಸು ; ಹೊಂದು : ಹರನ ಕೋಪವ ಕೇಣಿಗೊಂಡನು ತನ್ನ ಚಿತ್ತದಲಿ (ಕುವ್ಯಾದ್ರೋ. ೮-೧೪) ; ನೊಂದು ಗಾಯದಿಂ ಮಱಿವೆಯಂ ಕೇಣಿಗೊಂಡೊರಗಿ ಶತ್ರುಘ್ನನು . . . ರಾಹುಗ್ರಸ್ತದ ಏಣಧರನಂತಿರಲ್ (ಜೈಮಿಭಾ. ೨೦-೩೮) ; ಕೇಣಿಗೊಂಡಂ ಚತುರ ವಿಟಧರ್ಮವನು (ರೇವಣ ೬೩-೧೪). [ಕೇಣಿ₃ + ಕೊಳ್₁]

**ಕೇಣಿಗೊಳ್₂** (ಕ್ರಿ). ಜೊತೆಯಾಗು ; ಮೇಳಗೂಡು : ನಿಜ ಜಂಗಮಪ್ರಾಣಿ ಬಸವೇಶ್ವರಂ ಕೇಣಿಗೊಂಡೆನ್ನ ಹೃನ್ಮಾಣಿಕ್ಯಗೃಹ ದೊಳಿರ್ಕೆ (ಆರಾಜ. ೧-೧೧). [ಕೇಣಿ₂ + ಕೊಳ್₁]

**ಕೇಣಿಗೊಳ್₃** (ಕ್ರಿ). ಸಾಲುಗೊಳ್ಳು ; ಓಳಿಯಾಗು : ವಿಶ್ವಧಾತ್ರೀ ವಳಯಂ ಪಾತಾಳಮೂಲಂ ಸಕಲ ಭುವನಮೊಂದೊಂದಱೊಳ್ ಕೇಣಿ [ಪಾಠಾಂ. ಳಿ]ಗೊಂಡುಚ್ಚಳಿಸಲ್ (ಪಂಪಭಾ. ೧೦-೮೫) ; ಸುಧನ್ವನ ಕ್ಷೀಣ ವಿಕ್ರಮಶಿಖಿಯ ಜೂಣಿಯ ಮಹಾಜ್ವಾಲೆ ಕೇಣಿಗೊಂಡರಿಬಲ ಶ್ರೇಣಿಯೊಂಬೊಂದಡವಿದಾಣಮಂ ಹೊಕ್ಕಂತಿರೆ (ಜೈಮಿಭಾ. ೧೨-೪೨). [ಕೇಣಿ₄ (< ಕೇಱು) + ಕೊಳ್₁]

**ಕೇಣಿತ್ತಚ್ಚ** (ನಾ). ಒಬ್ಬಾತನ ಹೆಸರು : ಕೇಣಿತ್ತಚ್ಚನ್ಮಗ ನೆಳೆಯೊನ್ಮಾದತ್ತಚ್ಚನ (ಎಕ. X, ಮಾಲೂರು. ೯೩-೪; 750). [?]

**ಕೇಣಿದ** (ನಾ). ಗಿರವಿ ವ್ಯಾಪಾರಿ (?) : ರಾಜವಟ್ಟಿಯೊಳು ಕೇಣಿದ [ಪಾಠಾಂ. ಕೇಣೀಯ, ಕೇಣೀದ]ರಂಗಡಿಯ ಹಾಯ್ಕಲಾ ಚದುರ ಬಣಜಿಗರು ಪಂಚಾಳದಾತ ನಮ್ಮೀ ಚಾರು ಪಱಿಯೊಳು ಸರಿಯಾಗಿ ಯಂಗಡಿಯ ಹಾಯ್ಕಲನುಚಿತ ತೆಗೆಯೆನೆ (ಗುರುಚಾ. ೧೩-೭೭). [< ಕ್ರೇಣಿಕ ?]

**ಕೇಣಿವಿಡಿ** (ಕ್ರಿ). ಸಾಲುಹಿಡಿ (?) : ವಿಭ್ರಮ ಮಾಯಾ ವಿಧಿಯಿಂ ಕೇಣಿವಿಡಿವಾಡಿದಳ್ (ವಿಷ್ಣುಪು. ೨-೧೯೩). [ಕೇಣಿ₄ (< ಕೇಱು) + ಪಿಡಿ₁]

**ಕೇಣು** (ನಾ). ಸ್ಥಳ; ಎಡೆ (?) : [ಕೋಟ]ಯಕ ನಾಯಕಿತ್ತಿ ತಂನ ಮಗ ಮೆರವಣಸೆಟ್ಟಿ ಪಡುವ ಕೇಣಲಿ ಬರಸಿದ ಶಿಲಾ ಶಾಸನದ ಕ್ರಮವೆಂತೆಂದರೆ (ಸೌಇಇ. IX-ii, ೪೫೨-೯ ; 1450). [← ತಮಿ. ಕೇಣ್]

**ಕೇಣ್ಸರ** 'ಕೇಣಸರ' ನೋ.

**ಕೇತ₁** (ನಾ). ೧. ತೊಂದರೆ ; ಕಿರುಕುಳ ; ಕ್ಲೇಶ. ೨. ಒಂದು ಬಗೆಯ ಆಟ ; ಕಿಳ್ಳೆಕೇತರ ಆಟ : ಕೇತ ಯಾಚಕ ಪಗುಡಿ ಪರಿಹಾಸ ಕಂಗಳಿಂದ ಬೇಡಿತಂದು ಗುರುಲಿಂಗ ಜಂಗಮಕ್ಕೆ ಮಾಡಿಹೆನೆನಬಹುದೆ (ಏಲೇಶ್ವ. ೭). [?]

**ಕೇತ₂** (ನಾ). ೧. ಕರೆ ; ಆಹ್ವಾನ : (ಕಿ). ೨. ಜಾಗ ; ಸ್ಥಳ : (ಕಿ). ೩. ಒಂದು ಕ್ಷುದ್ರ ದೇವತೆ : ವರಮೀಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮುಸಣಿಯೆನಿಪ್ಪ ಕೋಳೆದೆಯ್ವಂಗಳ್ (ಸಮುಪ. ೧೦-೧೨೬).

೪. ಒಬ್ಬಾತನ ಹೆಸರು: ಆ ಕೇತ ಪೆಣೆದಿಱಿದು ಸತ್ತೊಡಚ್ಚರ ಗಣಿಕೆಯರೊಡಗೊಣ್ದು ದೇವಲೋಕಕುಯ್ದರ್ (ಸೌಇಇ. XI-i, ೫೧-೩; 1006); ಎಗವುಣ್ಣನ ಆಕ್ಕಸಾಲೆ ಕೇತಂ (ಮೈಆರಿ. ೧೯೪೩, ೧೧-೧೧; 11ನೆಯ ಶತ). [< ಸಂ. ಕ್ಷೇತ್ರ]

**ಕೇತಕೆ** (ನಾ). ಕೇದಗೆ. 'ವೀತಕೇತಕ' ಪರಾ. [ಸಂ.]

**ಕೇತಕಾರ** (ನಾ). ಒಂದು ಜಾತಿಯ ಕುದುರೆ(?): ಮಚ್ಚವರ್ಣನು ಕೇತಕಾರ ಪರದೆಯೆಂಬ ಹೆಚ್ಚಿನ ಕುದುರೆಗಳೊಂದಿಗೆ(ಅಮುಸಾಂ.೨-೪೮). [?]

**ಕೇತಕಿ** (ನಾ). ಕೇದಗೆ; ತಾಳೆಹೂ: "ಗಱಿವೂ ಕೇದಗೆಯೆಂಬುದು ನಿರುತಂ ಕೇತಕಿ" (ಕವಿಕಂ. ೭೩); ಶಿವನ ಕರನಖದಿಂದವಾದ ಕೇತಕಿ (ನಂಬಿರ. ೯-೩೪); ಕರವೀರ ಕೇತಕಿ ಕಪಿತ್ಥ (ರುಕ್ಮಾಂಗ. ೧೨-೨೩). [ಸಂ. ಕೇತಕೀ]

**ಕೇತಕೀಕುಸುಮ** (ನಾ). = ಕೇತಕಿ: "ವರ್ಷಪುಷ್ಪ – ಕೇತಕೀಕುಸುಮು" (ಒಷಧಿ. ೧೪೮). [ಸಂ. (ಕೇತಕೀ + ಕುಸುಮು)]

**ಕೇತಕೀಪುಷ್ಪ** (ನಾ). = ಕೇತಕಿ: ಕೇತಕೀಪುಷ್ಪ ಅಂದರೆ ತಾಳೆ ಹೂವನ್ನು ಧರಿಸಿದಲ್ಲಿ . . . ಪಿತ್ತವನ್ನು ಹೆಚ್ಚಿಸುವುದು (ಸಕವೈ. ೪೪). [ಸಂ. (ಕೇತಕೀ + ಪುಷ್ಪ)]

**ಕೇತನ** (ನಾ). ೧. ಮನೆ; ನಿವಾಸ: ಪ್ರೀತಿಗೊಳಿಸಲ್ಲರನು ಕಳುಹಿಸಿ ಕೇತನಕೆ ನಡೆತಂದು (ಬಜ್ಜಪು. ೭೭-೭). ೨. ಬಾವುಟ; ಧ್ವಜ: ವಿಜಯಂಗೆ ವಿಜಯಮಾಗಿರೆ ನೀಮಾತನ ಕೇತನದೊಳ್ ಫಣಕೇತನ ಬಲಕುತ್ಪಾತಕೇತುವಪ್ಪುದೆ ಸಾಲ್ಗುಂ (ಪಂಪಭಾ. ೮-೩೭); ಮೀನಕೇತನನ ಕೇತನಮಂಗಜಚಕ್ರಿಯ ಚಕ್ರಂ (ಸುಕುಮಾ. ೫-೫೪); ಮಿಳಿರ್ವ ಕೇತನಮೀಗಳದೆತ್ತವೋದುದೋ (ರಾಮಾಶ್ವ. ೨೯-೩). ೩. ಕರೆ; ಆಹ್ವಾನ. ೪. ಚಿಹ್ನೆ; ಲಾಂಛನ. ೫. ತೇಜಸ್ಸು; ಕಾಂತಿ: "ಧ್ವಜ ತೇಜಾಗಾರನಮುಂ ಕೇತನಮೆನಿಕು" (ನಾನಾರ. ೬೩). [ಸಂ.]

**ಕೇತನಮಾಳಿಕೆ** (ನಾ). ಕೇತನಮಾಲೆ; ಧ್ವಜಗಳ ಸಾಲು: ಒದವಿ ಪೊದಟ್ದ ಕೇತನಮಾಳಿಕೆ ವೀರಲಕ್ಷ್ಮಿ ದೂರದ ಭಟರಂ . . . ಕರೆವಂತುಟಾಗೆ (ಪುಷ್ಪಪು. ೨-೬೦). [ಕೇತನ + ಮಾಳಿಕೆ (= ಮಾಲಿಕೆ)]

**ಕೇತಪಗಾವುಂಡ** (ನಾ). = ಒಬ್ಬಾತನ ಹೆಸರು: ಯರಜ್ಜಗವುಣ್ಣನ ಮಗ ಕೇತಪಗಾವುಣ್ಣನುಂ (ಎಕ. IV, ಗುಂಡ್ಲುಪೇ. ೮೩-೫; ಸು. 995). [ಕೇತ$_2$ + ಅಪ (< ಅಪ್ಪ$_1$) + ಗಾವುಂಡ (< ಗಾಮುಂಡ)]

**ಕೇತಪೊಡೆಯ** (ನಾ). ಒಬ್ಬಾತನ ಹೆಸರು: ಮಾಕಯ್ಯನ ಮಹತ್ತು ಕೇತಪೊಡೆಯ × × × ಗಂ ವೆಳ್ಳಿಕಬ್ಬೆ ಪುತ್ರನ್ (ಎಕ. IV, ಗುಂಡ್ಲುಪೇ. ೯೩-೧೧; 1049). [ಕೇತ$_2$ + ಅಪ (< ಅಪ್ಪ$_1$) + ಒಡೆಯ$_1$]

**ಕೇತಬ** (ನಾ). ಒಬ್ಬಾಕೆಯ ಹೆಸರು: ಸೌಭಾಗ್ಯೋನ್ನತಿಯಿಂದೆನೆ ನೆಗಟ್ದ ಸದ್ಗುಣವತಿ ಕೇತಬರಾಣಿ ವಾಣಿ ಚತುರೋಕ್ತಿಗಳೊಳ್ (ಕಇಅ. ೮೫-೧೭-೬೨; 1104). [ಕೇತ$_2$ + ಅಬ$_0$ (< ಅಬ್ಬೆ$_1$)]

**ಕೇತಯ** 'ಕೇತಯ್ಯ' ನೋ.

**ಕೇತಯ್ಯ, ಕೇತಯ** (ನಾ). ೧. ಒಬ್ಬಾತನ ಹೆಸರು: ಬರೆದಂ ಕೇತಯ್ಯ (ಎಕ. XV, ಬೇಲೂರು. ೩೦೪-೯; 971); ಕೇತಯ್ಯನ ಮಗ ಮೂಕಗಾವುಣ್ಣನು (ಸೌಇಇ. XX, ೨೦-೧೭; 1015). ೨. ಒಂದು ಕ್ಷುದ್ರ ದೇವತೆಯ ಹೆಸರು: ಮಾಳಯ್ಯ ದೂಳಯ್ಯ ಕೇತಯ್ಯಗಳೆಂಬ ನೂಱು ಮಡಕೆಗೆ . . . ಸಂಗಮದೇವ ಶರಣೆಂಬುದೊಂದು ದಡಿ ಸಾಲದೆ (ಬಸವ. ೫೫೫). **ಕೇತಯ**: ೧. ಅಗಬೆಯುಂ ಕೇತಯನುಂ ನಿಱಿಸಿದ ಕಲ್ಲು (ಎಕ. VII, ಶಿಕಾರಿ. ೯-೧೨; 1021); ಕೇತಯನ ಕುಱುಮಱಿ ಅಪಸುಬಾಳ ಹೊಲವೇರೆಯ ಸೀಮಕ್ಕೆ (ಸೌಇಇ. IX-i, ೨೮೪-೮; 1190). [ಕೇತ$_2$ + ಅಯ್ಯ$_1$]

**ಕೇತಲದೇವಿ** (ನಾ). ಒಬ್ಬಾಕೆಯ ಹೆಸರು: ಶ್ರೀಮತ್ಕೇತಲದೇವಿಯರ್ (ಇಆ. XIX, ೨೭೩-೩೭; 1054). [ಕೇತಲ$_0$ + ದೇವಿ]

**ಕೇತಾರ** (ನಾ). ೧. ಹಿಮಾಲಯದಲ್ಲಿರುವ ಒಂದು ಕ್ಷೇತ್ರ; ಕೇದಾರ: ಪೂರ್ವದಿ ಹಿಮಾಂಬುವಂ ಕೇತಾರದಲಿ ಸೇವಿಸುವರಂತೆ (ಬಸಪು. ೧೯-೨೩). ೨. [ಸಂಗೀತ] ಒಂದು ರಾಗದ ಹೆಸರು: ಮಾಳವಗೌಳ . . . ಕಾಂಭೋಜಿ ಕೇತಾರಂಗಳ್ ದೇಶಿಯವಾಗಿವೆ (ಹವಿಸ್ಮಾರ. ೨-೯೦ ವ). [< ಸಂ. ಕೇದಾರ]

**ಕೇತಾರಗೌಳ** (ನಾ). = ಕೇದಾರಗೌಳ: ಕೇತಾರಗೌಳ . . . ಮೋಹನಗೌಳಂಗಳೇ ಗೌಳಮಿಶ್ರಂಗಳು (ವಿವೇಕ. ೨೩೫). [< ಕೇದಾರಗೌಳ]

**ಕೇತಿಮಾರಿ** (ನಾ). ಒಂದು ಕ್ಷುದ್ರದೇವತೆ: ಅರುಟ್ಪು ಕಳೆದ ಹೂ ನಿನ್ನ ಬಾಯದು ಕೇತಿಮಾರಿಯೇ ಮೂಸಿಕೊಳ್ಳು (ಹಜಕಾ. ೪-೪೬). [ಕೇತಿ$_0$ + ಮಾರಿ]

**ಕೇತಿಸೆಟ್ಟಿ** (ನಾ). ಒಬ್ಬಸೆಟ್ಟಿಯ ಹೆಸರು: ದೇವಕಾರ್ಯಮಂ ದೂಸಿಗ ಕೇತಿಸೆಟ್ಟಿ ಬಿನ್ನವಿಸೆ (ಕಇ. I, ೧೭-೨೭; 1055); ಧರೆಮಾಣಿಕ ಕೇತಿಸೆಟ್ಟಿಯೊಗೆದಂ ಜಗದೊಳು (ಕಇ. IV, ೧೫-೧೪; 1149). [ಕೇತಿ$_0$ + ಸೆಟ್ಟಿ]

**ಕೇತು** (ನಾ). ೧. ಬೆಳಕಿನ ಕಿರಣ; ಕಾಂತಿ; ಪ್ರಭೆ. ೨. ಉಲ್ಕೆ. ೩. ಧೂಮಕೇತು; ಅನಿಷ್ಟ ಸೂಚಕವಾದ ಬಾಲಚಿಕ್ಕೆ: ಈತನೆ ನಮ್ಮ ಕುಲಕ್ಕಂ ಕೇತು ದಲಾನಱಿವೆನಲ್ಲದಂದೇಕಿನಿತುತ್ಪಾತಂ ತೋರ್ಪುವು (ಪಂಪಭಾ. ೧-೧೩೩); ಗಂಗಾಸೂನು ಮೊದಲಾದ ಪಲರ್ಗಂ ನೀನೊರ್ವನೆ ಕೇತುವಾದೆ ಕುರುಕುಲಕೇತೂ (ಗದಾಯು. ೭-೭). ೪. ನವಗ್ರಹಗಳಲ್ಲಿ ಒಂದು: "ಇನರಿಪು ವಿಧುಂತುದಂ ಸ್ವರ್ಭಾನು ಸಿಂಹಿಕಾತನಯಂ ತಮಂ ಖೇಚರಾಹಿಯೆನೆ ರಾಹು ಶಿಖಿಯೆನೆ ಕೇತು ವಕ್ಕುಂ" (ಮಂಗರಾ. ೧೨-೭). ೫. ಲಾಂಛನ; ಚಿಹ್ನೆ; ಬಾವುಟ; ಧ್ವಜ: "ಕೇತು ಧ್ವಜಂ ಪತಾಕಂ . . . ಹಳವಿಗೆಯೆನಿಕ್ಕುಂ" (ಮಂಗರಾ. ೮೫-೨೬); ಅಮರೇಂದ್ರ ಪುತ್ರನಂ ಕರೆವವೊಲಾದುವಾ ಪುರದ ವಾತ ವಿಧೂತ ವಿನೂತ ಕೇತುಗಳ್ (ಪಂಪಭಾ. ೪-೩೪); ವಾತವಿಧೂತ ವಿನೂತ ಕೇತುಗಳ್ ದಳ್ಳಿಸುಗುಂ (ಸುಕುಮಾ. ೧೦-೪೯). ೬. ಹಿರಿಯ; ಒಡೆಯ; ಮುಂದಾಳು: ಕುರುಕೇತುವೆಲ್ಲಿದಂ (ಗದಾಯು. ೬-೩೧); ಭೀತಿಗೊಂಡನು ದ್ರೋಣ ಸೋಲಕೆ ಕೇತುವಾದನು ಶಲ್ಯನಪಜಯ ಮಾತೃಕಾಕ್ಷರನಾದನಶ್ವತ್ಥಾಮನಿಂದಿನಲಿ (ಕುವ್ಯಾ. ದ್ರೋ. ೧೬-೧೩). ೭. ಕತ್ತಾಳೆ; ರಕ್ಕಸಬಾಳೆ: ವರುಣನ ಕುಂತದುತ್ಕರದ ಕೇತುವ ಕೇಕಿವಿಳಾಸದರ್ಭಕೋದರೆಯ . . . ಅಭಿಧಾನಮುಂ ತಳೆದ ಭೂರುಹ ಮೊಪ್ಪುಗುಮಾ ವನಾಂತದೊಳ್ (ರಾಜಶೇ. ೫-೫೭). ೮. ದೇವತೆಗಳ ಶಿಬಿಕೆ, —ವಿಮಾನ: (ಕಿ). ೯. ರೋಗ. ೧೦. ಶತ್ರು; ವೈರಿ. ೧೧. ಒಂಬತ್ತು ಎಂಬ ಸಂಖ್ಯೆಯ ಸಂಕೇತ: "ನವ . . . ನಳ ಕೇತು ಬುಧ . . . ಇಂತಿನಿತುಂ ೯ಕ್ಕೆ ಪೆಸರು" (ವ್ಯವಹಾ. ೧೧-೪). [ಸಂ.]

**ಕೇತುದಂಡ** (ನಾ). ಧ್ವಜಸ್ತಂಭ: ಕಣ್ ತಿರುಗಿ ಬರೆ ಮಱೆದು ಮೆಯ್ಯಂ ಪರವಶದಿಂ ಕೇತುದಂಡಮುಂ ನೆಮ್ಮಿರಲ್ (ಪಂರಾಮಾ. ೧೬-೧೪); ವೃಷಭಾಂಕಿತದ ಕೇತುದಂಡದ ಸುಭಟನಾವನೋ ಪಾಂಡವರೊಳು (ಜೈಮಿಭಾ. ೧೨-೧೬). [ಕೇತು + ದಂಡ]

**ಕೇತುದರ್ಶಕ** (ನಾ). ಧೂಮಕೇತುವನ್ನು ಕಂಡು ಹಿಡಿಯಲು ಬಳಸುವ ಒಂದು ದೂರದರ್ಶಕ ಸಾಧನ: "ಧೂಮಕೇತುವನ್ನು ಕಂಡು ಹಿಡಿಯುವುದಕ್ಕಾಗಿ ಉಪಯೋಗಿಸುವ, ಅಲ್ಪ ವರ್ಧನಶಕ್ತಿಯೂ ವಿಶಾಲದೃಷ್ಟಿಕ್ಷೇತ್ರವೂ ಉಳ್ಳ, ದೂರದರ್ಶಕ: ಕೇತುದರ್ಶಕ" (Comet-finder. ಇಂಕನಿ). [ಕೇತು + ದರ್ಶಕ]

**ಕೇತುಪಟ** (ನಾ). ಧ್ವಜ ; ಬಾವುಟ : ಗಿರಿವರನ ನೆಗಟ್ಟಿಗೆ ನೇಮಿಸಿದ ಕೇತುಪಟದಂತೆಸೆಯೆ (ಶಬಶಂ. ೩–೩೫ ವ). [ಕೇತು + ಪಟ$_3$]

**ಕೇತೋಜ** (ನಾ). ಒಬ್ಬಾತನ ಹೆಸರು : ಚಿತ್ತಾರಿ ಕೇತೋಜನ ಮಗಂ ಬಡ್ಡಗಿ ಆಯ್ವೋಜಂ (ಮೈಆರಿ. ೧೯೩೧, ೬೪–೬೩ ; 1053). [ಕೇತ$_2$ + ಓಜ$_1$ (< ಒವರ್ಝ)]

**ಕೇದಂಗೆ** 'ಕೇದಗೆ' ನೋ.

**ಕೇದಕೆ** 'ಕೇದಗೆ' ನೋ.

**ಕೇದಗಿ** 'ಕೇದಗೆ' ನೋ.

**ಕೇದಗೆ, ಕೇದಂಗೆ, ಕೇದಕೆ, ಕೇದಗಿ, ಕೇದಿಗೆ** (ನಾ). ೧. = ಕೇತಕಿ: "ಗಜಿಹೂ ಕೇದಗೆಯೆಂಬುದು" (ಕವಿಕಂ. ೬೩) ; ಧಮ್ಮಿಲ್ಲಮಂ ಸೋಗೆ ಸೆಳ್ಳುಗುರಂ ಕೇದಗೆ . . . ಪೋಲ್ತುವು (ಆದಿಪು. ೬–೮೫) ; ಇಂಪಿಲ್ಲದ ಕೇದಗೆಯಂ ಕಂಪಿಲ್ಲದ ಪೂ ಸುಪುತ್ರನಿಲ್ಲದ ಭವನಂ (ಅಜಿಪು. ೬–೯೨) ; ಎಳವೆಣ್ ಸುತ್ತಿದಂತೆ ಮಿಜುಗುತ್ತಿರೆ ಕೇದಗೆಯೋಲೆ (ಕಾದಂಉ. ೧೫೦) ; ಕೇದಗೆಯನೇಱಿದ ಕೋಡಗದಂತೆ (ಪಂಚತಂ. ೨೬೯–೨೧) ; ಅಹಹ ಕೇದಗೆ ನಗೆಯೊ ! ಹೊಡೆಯು ಹಾವಿನ ನಗೆಯೊ ! (ಹೆಬ್ಬೆರ. ೩೨–೨೧). **ಕೇದಂಗೆ:** ೧. ಕೆಂಜಾಜಿ ನಾಗಸಂಪಗೆ ಬಂದುಗೆಯುಪರಂಜಿಗೇದಂಗೆಯೊಳ್ಪರಲಿಂ ಮಂಜರಿಗಳಿನರ್ಚಿಸಿದರು (ಶ್ರೀಪಾಲ. ೧೨–೩೬). **ಕೇದಕೆ:** ೧. ಕೊಳದ ಮೂಡಿಗೆ ಕೇದಕೆಯ ಹಿಂಡಲು ಇಲ್ಲವೇನಮ್ಮ (ಪದ್ಮಸ. ೧೫). **ಕೇದಗಿ** ೧. ದಾಳಿಂಬ ಮುಸ್ತಿ ಗಜಿಕೆ ಕೇದಗಿ (ಸಾಳ್ವಸಾಂ. ೧೪). **ಕೇದಿಗೆ:** ೧. ಸುರಹೊನ್ನೆ ಕೇದಿಗೆ ಮೊದಲಾದ ಕಾಡುಹೂಗಳು (ಕಳಹು. ೨). ೨. ಕೇದಗೆಯ ಆಕಾರದಲ್ಲಿ ಮಾಡಿದ ಒಂದು ಚಿನ್ನದ ಆಭರಣ: ರೇಗಟೆ, ಕೇದಿಗೆ, ಚೌರಿಕೊಟ್ಟು, ಜಡೆಬಂಗಾರ . . . ಮೊದಲಾದ ಆಭರಣಗಳನ್ನು (ಮಲೆಮಂ. ೩೯). [< ಸಂ. ಕೇತಕೀ]

**ಕೇದಗೆಮೊಲೆ** (ನಾ). ಒಂದು ಬಗೆಯ ಮೂಲಿಕೆ: ಕೇದಗೆಮೊಲೆಯ ರಸ . . . ಆಷಾಢೀರಸ ಇವುಗಳಿಂದ ಪ್ರತ್ಯೇಕ ಒಂದೊಂದು ಭಾವನೆಯಂ ಕೊಟ್ಟು (ವಿವೈವಿ. ೨೬). [?]

**ಕೇದಾರ** (ನಾ). ೧. ಗದ್ದೆ: "ವಪ್ರಂ, ಕ್ಷೇತ್ರಂ, ಕೇದಾರಂ–ಈ ೩ ಕೆಯ್ಯ್" (ಹಲಾಯು. ೯೪–೪೨೦) ; ಪಾಮರಿಯರ್ ಜಿತಾಮರಿಯರಿರ್ಪರ್ ಕಾದು ಕೇದಾರವಮಂ (ಮಲ್ಲಿಪು. ೨–೨೦). ೨. ಉಪವನ; ಉದ್ಯಾನ. ೩. ಹಿಮಾಲಯದಲ್ಲಿರುವ ಒಂದು ಶಿವ ದೇವಾಲಯ; ಶಿವಕ್ಷೇತ್ರ. ೪. [ಜ್ಯೋತಿ] ಜಾತಕಯೋಗಗಳಲ್ಲಿ ಒಂದು : ಸಪ್ತಗ್ರಹಂ . . . ಚತುರ್ಗೇಹದೊಳ್ ನಿಲೆ ಕೇದಾರಂ (ಜಾತತಿ. ೧೩–೫). ೫. [ಸಂಗೀತ] ಒಂದು ರಾಗದ ಹೆಸರು: ಕೇದಾರ: ೨೯ನೇ ಮೇಳಕರ್ತ ಧೀರ ಶಂಕರಾಭರಣದಲ್ಲಿ ಜನ್ಯ (ಸಂಗೀಚಂ. ೧೩೬). [ಸಂ.]

**ಕೇದಾರಗೌಳ** (ನಾ). [ಸಂಗೀತ] ಒಂದು ಮಿಶ್ರರಾಗದ ಹೆಸರು: ಗೌರೀಮನೋಹರಿ, ಕೇದಾರಗೌಳ, ಸಾಮ . . . ರಾಗಗಳಲ್ಲಿ ರಚಿಸಿರುವ ಕೃತಿಗಳು ಮನಮೋಹಕವಾಗಿವೆ (ಸಂಗೀತ. ೪೮). [ಕೇದಾರ+ ಗೌಳ]

**ಕೇದಾರವನ** (ನಾ). ಬತ್ತದ ಗದ್ದೆ; ಶಾಲಿವನ: ಪರಿಕಾಲ್ಗಳನುಣ್ಬ ಕೇದಾರವನಂ ಮನಂಗೊಳಿಸುತಿರ್ಪುದು (ಜಗವಿ. ೨–೪). [ಕೇದಾರ + ವನ]

**ಕೇದಾರೇಶ್ವರ** (ನಾ). ಕೇದಾರದಲ್ಲಿರುವ ಶಿವ. ℙ ಭರತಖಂಡದಲ್ಲಿ ಪ್ರಸಿದ್ಧವಾದ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದು. [ಕೇದಾರ + ಈಶ್ವರ]

**ಕೇದಿಗೆ** 'ಕೇದಗೆ' ನೋ.

**ಕೇದಿಗೆಬೀಳು** (ನಾ). ಕೇದಗೆಯ ಬಿಳಿಲು, —ಬೇರು: ಕೇದಿಗೆ ಬೀಳಿನ ರಸದಲ್ಲಿ ನೆಲದಾಳವನ್ನರೆದು ಕುಡಿಯೆ ದಾಹಜ್ವರ ಪರಿಹಾರವಾಗುವದು (ಸಕವೈ. ೬೬). [ಕೇದಿಗೆ (< ಕೇದಗೆ) + ಬೀಳು$_3$ (< ಬೀೞು$_3$)]

**ಕೇದು** 'ಕೇ' ಪರಾ.

**ಕೇನಾರ** (ನಾ). ೧. ಕೆನ್ನೆಯ ಮೇಲ್ಭಾಗ; ಮೆಲುಕು; ಕಣತಲೆ: (ಕ). ೨. ತಲೆ. ೩. ಕೆನ್ನೆ; ಕಪೋಲ. [ಸಂ.]

**ಕೇನಿಪಾತಕ** (ನಾ). ಹಡಗಿನ ಮುಂಭಾಗ, —ಚುಕ್ಕಾಣಿ. [ಸಂ.]

**ಕೇನೆ** (ನಾ). (ಕರಾ) ಸುವರ್ಣಗೆಡ್ಡೆ ; ಶೇನೆಗೆಡ್ಡೆ ; ಸೂರಣಗೆಡ್ಡೆ : ಬಂಕೆಯುನ ಹೆಮ್ಮೆಯ ಕೇನೆಗೆ ಕಲ್ಲಿಟ್ಟಂತಾಗುವುದು (ವೀರಬಂ. ೧೩) ; ಕೇನೆಯ ಮೇಲಿನ ಕಲ್ಲಿನ ತೆರದಲಿ ತಾನಿಹ ಮೇಲಾಳಿನ ಕೈಯೊಳ್ (ಕಎಪು. ೪೯). [ದೇ. ‖ ತಮಿ. ಶೇನ್ಯ ; ಮಲ. ಶೇನ; ತುಳು. ಕೇನೆ]

**ಕೇಪಲ, ಕೆವಲ, ಕೇಪಳ** (ನಾ). ಒಂದು ಬಗೆಯ ಕಡುಗೆಂಪು ಹೂವಿನ ಸಸ್ಯ: ಆಡಿಯಾಲ, ಕೇಪಲ, ಕಿಸುಕಾರ (ಮೈಔಗಿ. ೪೬–೯೨೪). **ಕೆವಲ :** (ಕ). **ಕೇಪಳೆ :** ಒಂದೊಂದು ದಿನ . . . ಅವರು ಕೇಪಳ ಹೂವನ್ನು ತರುವುದುಂಟು (ಬಾಳಿಗಿ. ೧೦೮) ; ದೀಪಾವಳಿಯ ದಿನ . . . ಕೇಪಳಂಬಳಕಾಯಿ ಗುಂಡು ಸರ ತೊಡಿಸಿ ಆ ಪೂಜೆಯಾಗುತಿರೆ (ಕಎಪು. ೪೫). [← ತುಳು. ಕೇಪಳ್, ಕೇಪುಳ]

**ಕೇಪಳೆ** 'ಕೇಪಲ' ನೋ.

**ಕೇಪು$_1$** (ನಾ). ಸರಕು ; ಮಾಲು : ವ್ಯವಹಾರ ಮುಖದಿಂದ ಸೋಪು ಸಕಲಾತಿ [ಪಾಠಾಂ. ಶ್ರೂಪು ಶಕಲಾದಿ, ಶೋಪು ಶಕಲಾತಿ] ನವರತ್ನ ವಾಜಿಯ ಫಲವ ಕೇಪು [ಪಾಠಾಂ. ಕೇಪಿ, ಕೇಪ]ಗಳ ತಂದು ಬೆಲೆಗಿತ್ತು ಬಲು ಹರದನಾಗಿರಲು (ಪ್ರೌಢರಾ. ೧೩–೩) ; ಚನ್ನಪಟ್ಟಣ ಮುಂತಾದ ಸ್ಥಳಗಳಿಗೆ ಕೇಪು ಕಳುಹಿಸಿ . . . ಮಾರಿಸಿ (ಕಥಾಮಂ. IV, ೬೮) ; ದುರ್ಗದೊಳಕ್ಕೆ ಹೊರಗಿನಿಂದ ಯಾವ ಕೇಪು ಕಾಗದ ಪತ್ರಗಳೂ ಬಾರದಂತೆ ನೋಡಿಕೊಳ್ಳಲು (ಚಿತ್ರಪಾ. ೮೨). [← ಮರಾ. ಖೇಪ್]

**ಕೇಪು$_2$** (ನಾ). ೧. ತುಬಾಕಿಯ ಗುಂಡುಗಳಿಗೆ ಹಾಕಿರುವ ಹಿಂಬದಿಯ ಅಣಸು, —ಟೋಪಿ: ಬರೀ ಕೇಪು ಮಸಿ ಹಾಕ್ಕೊಂಡು ಬರ್ತೀನಿ, ಸಮಯ ಬಿದ್ದರೆ ಒಂದು ಹುಸಿಬೆದರು ಈಡು ಹಾರಿಸೋಕೆ (ಮಲೆಮ. ೫೬೨). ೨. ಮಕ್ಕಳ ತುಪಾಕಿಯ ಪಟಾಸ್ ಮದ್ದು.
**ಕೇಪುಹೊಡೆ** = ೧. ಗುಂಡುಹಾರಿಸು ; ಷಿಕಾರಿ ಮಾಡು. ೨. (ಆಲಂ) ಜಯಗಳಿಸು, —ಸಾಧಿಸು : ಇವತ್ತು ನೋಡು ಒಳ್ಳೆಯ ಕೇಪುಹೊಡೆದು ಬಿಟ್ಟೆ (ಮರಳಿ. ೨೯) ; ನೋಡಿದೆಯೇನೆ ನಮ್ಮ ನರಸಿಂಹನ್ನ, ಎಂಥ ಕೇಪುಹೊಡೆದ (ತಾಯಿಕ. ೨೨೧). [← ಇಂ. Cap]

**ಕೇಪುತೊಟ್ಟು** (ನಾ). ತುಬಾಕಿಯಲ್ಲಿ ಕೇಪು ಇಡುವಭಾಗ: "ತುಪಾಕಿಯ ಚಾಪಿನಲ್ಲಿ ಕೇಪು ಇಡುವುದಕ್ಕಾಗಿ ಮಾಡಿರುವ ತೂತುಗಳುಳ್ಳ ಚಾಚುಭಾಗ; ಕೇಪುತೊಟ್ಟು" (Nipple. ಇಂಕನಿ). [ಕೇಪು$_2$ + ತೊಟ್ಟು$_2$]

**ಕೇಬಲ್** (ನಾ). ೧. ನೀರಿನಲ್ಲಿ ಅಥವಾ ನೆಲದಡಿಯಲ್ಲಿ ಹಾಕಿರುವ, ಪರಸ್ಪರ ವಿದ್ಯುತ್ ಸಂಪರ್ಕವಾಗುವಂತೆ ಮಾಡಿರುವ, ತಂತಿಗಳ ಹೊರಜೆ : ಕೇಬಲ್‌ಗಳನ್ನು ಸಮುದ್ರ ಸಾಗರಗಳಲ್ಲಿ ಇಳಿಸುತ್ತಾರೆ (ಬಾಲಪ್ರ. III, ೧೫೨೬). ೨. ಇದರ ಮೂಲಕ ಕಳಿಸುವ ಸಮಾಚಾರ. [← ಇಂ. Cable]

**ಕೇಮು$_1$** (ನಾ). ಗಾಯ ಒಣಗಿದ ನಂತರ ಆ ಸ್ಥಳದಲ್ಲಿ ಉಂಟಾದ ಕಪ್ಪುಬಣ್ಣದ ಕಲೆ : ಹಣೆಯ ಗಾಯವು ಮಾತ್ರ ಒಣಗಿದ್ದರೂ ಒಂದು ದೊಡ್ಡ ಕೇಮುವಾಗಿ ಮೋರೆಯ ಚೆಲ್ವಿಗೆ ಒಂದು ದೊಡ್ಡ ಕೊರತೆಯಾಗಿ ನಿಂತಿತು (ಕಾಲೂರ. ೮ ಕಥಾಸಾರ). [← ತೆಲು. ಕೇಮ]

**ಕೇಮ್ಮು₂**, ಕೇವ, ಸೇವ (ನಾ). ಕ್ಷೇಮ: "ಕೇಮು (ಕೇವ, ಸೇವ) – ಕ್ಷೇಮು" (ತದ್ಭಕೋ. ೮). **ಕೇವ**: ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. **ಸೇವ**: "ಕ್ಷೇಮದೊಳ್ ಸೇವಂ" (ಕರ್ಣಾನಿ. ೩೮); ಮನದೊಳ್ಗೊಳಲುತ್ತಂ ತಾಂ ಮನವೊಲ್ಲದೆ ತನಗೆ ಸೇವಮೆಂದೆನುತೊರೆದಳ್ (ಕಾದಂಉ. ೫೦); ಸೇವದಿಂದರಸುಗೆಯ್ಯುತು ಮಿರ್ಕುಂ (ಮರಾಜ. ೨೧೧–೬೨). [< ಸಂ. ಕ್ಷೇಮ]

**ಕೇಮದ್ರುಮ** (ನಾ). [ಜ್ಯೋತಿ] ಒಂದು ಅನಿಷ್ಟಕಾರಕವಾದ ಯೋಗ: ಇನವರ್ಜ್ಯಂ ಕ್ಷಿತಿಜಾದಿಗಳ್ ಹಿಮಮಯೂಖಂಗೆ . . . ಪಾರ್ಶ್ವಸ್ಥಮನ್ಯನಿವಾಸಸ್ಥಿತಮಾದ ಯೋಗಮದು ದಲ್ ಕೇಮದ್ರುಮಂ ನಾಮದಿಂ (ಜಾತಕ. ೧೪–೧). [ಸಂ.]

**ಕೇಮೆ** (ನಾ). ಕೆಲಸ: ನಿನಗೇನೂ ಕೇಮೆ ಇಲ್ಲವೆ? ಸುಮ್ಮನೆ ಯಾಕೆ ನಿಂತಿದ್ದೀ (ರೂಢಿ). [< ಗೆಯ್ಮೆ]

**ಕೇಯು** 'ಕೇ' ನೋ.

**ಕೇಯೂರ** (ನಾ). ಕಡಗ; ತೋಳುಬಂದಿ: ಕೇಯೂರ ಕಟಕ ಸಮಿತಿಯುಗಾಯತ ಬಾಹುಗಳಿಂ (ಆದಿಪು. ೪–೪೦); ಕೇಯೂರಮಂ ತಳೆವಂದದಿಂ ಪೃಥುಳಭುಜದಿಂ ಪೃಥ್ವೀಶಂ ತಾಳ್ದಿದಂ ನೆಲನೆಲ್ಲಮಂ (ಕಾದಂಪೂ. ೧೬); ವಿವಿಧ ಕರ್ಣಾಭರಣ ಕೇಯೂರವನು ಕಡಿಕಡಿ ದೊಟ್ಟಿದನು ಕಲಿ ಪಾರ್ಥ (ಕುವ್ಯಾಕ. ೪–೨೩). [ಸಂ.]

**ಕೇರ್₁**, ಕೇರು₂ (ನಾ). ಗೋಡೆ; ಭಿತ್ತಿ: "ಕೇರ್ ಭಿತ್ತಿಯೊಳ್" (ಕರ್ಣಾನಿ. ೮೪); "ಕೇರೆಂದುದಯಿಸುಗುಂ ಗೋಡೆವೆಸರು" (ಕವಿಕಂ. ೧೪೫); ಕಂಬದ ಮಱಿಯೊಳ್ ಕೇರಂ ಸಾರ್ದು (ವಡ್ಡಾರಾ. ೩೩–೬); ಜಾಗದ ನೆಲೆವಡಲಗೆಗಳ ಜಾಗಂಗಳ ಪಸುರ್ಗಳೆಸೆಯ ರತ್ನದ ಕೇರ್ಗಳ್ (ಆದಿಪು. ೪–೩೧); ನೀರಿಲ್ಲದೂರುಂ ಕೇರಿಲ್ಲದ ಮನೆಯುಂ (ಧರ್ಮಾಮೃ. ೧–೬೫). **ಕೇರು₂**: "ಕೇರು ಗೋಡೆ" (ಕಶರ. ೨೬). [ದೇ. ‖ ತಮಿ. ಮಲ. ಚುವರ್]

**ಕೇರ್₂**, ಕೇರು₃, ಗೇರ್, ಗೇರು (ನಾ). ೧. ಒಂದು ಜಾತಿಯ ಮರ: ಅರಿದಾಳಂ ಬೆಲ್ಲಂ ಸಜ್ಜರಸಂ ಕಾಸೀಸಮುರಗು ಕೇರ್ಮೆಣಸಿವನೊಂದಿರೆ ತಿಲತೈಲದೊಳಟ್ಟು (ಲೋಕೋಪ. ೯–೨೪೪); ರಸಮೆಂಬೀ ಪೆಸರಿಂಗೆ ಕೇರ ರಸದೊಳ್ ಪೊನ್ನಕ್ಕುಮೇ (ಧರ್ಮಾಮೃ. ೧–೧೯೪); ಕೇರಮರಂ ಫಲಮಾಗೆ ಭೀತಿಯೋಗಡಿಸದು (ಜಟ್ಟಮ. ೪–೧೬). **ಕೇರು₃**: ತಾಳದ ತಡಸದ ಬೇವಿನ ಬೇಲದ . . . ಕೇರಾಲಜಾಳದ (ಕುರಾಸಾಂ. ೨೬–೫೬); ಕೇರು (ಬಿಬ್ಬಾ) – ಬಹಳಯೆತ್ತರವಾಗುವುದಿಲ್ಲ. ಕೇರಿನಯೆಣ್ಣೆ ಔಷಧಕ್ಕೆ ಬರುತ್ತದೆ. (ಕಭಾಗ. ೩೮); ಇದರ ಎಲೆಗಳು ಕಾಯಿಗಳು ಬೀಜಗಳು ಕೇರಗಿಡದಂತೆ ಇರುತ್ತವೆ (ಕೃಷಿಪ್ರ. ೧೫೧). **ಗೇರ್**: ೧. ತುಪ್ಪವೆಂಬ ಪೆಸರಾವಿನ ತುಪ್ಪಕ್ಕಂ ಗೇರ ತುಪ್ಪಕ್ಕಮುಂಟು (ಧರ್ಮಾಮೃ. ೧–೧೯೩); ಪೊದೆಬಾಳಂ ಕುಸೆ ಗೇರ್ ಪ್ಲವಂ ಬಸುರಿ (ಜಟ್ಟಮ. ೧೧–೫೬); ಕೊಸಗುಗೇರ್ ಕಕ್ಕೆ (ಸೂಕ್ತಿಸು. ೩–೨೩). **ಗೇರು**: ೨. ಗೋಡಂಬಿ: ಸಕಲಭೋಗಂಗಳಲ್ಲಿ ಇದ್ದು ಬೆರಸಿ ಮಗ್ನನಾಗದೆ ಗೇರಿನ ಫಲದಂತೆ ಇರು (ಮನುಗುಂ. ೬೬); ಗೇರು ಹಣ್ಣಿನಲ್ಲಿ ಬೀಜ ಸೇರಿದಂತೆ (ಪುರಂದ. ೧–೧೨–೨); ಸಕಳೇಶನ ಮನ ಸನ್ನಿಧಿಯಲ್ಲಿ ಗೇರಫಲದಂತಿಪ್ಪವು (ಸಕಲ. ೩–೩೩).

**ಕೇರುಕಟ್ಟು** = ಕೆಡಿಸು; ಬಾಧಿಸು; ನಾಶಪಡಿಸು: ಕೇರುಕಟ್ಟಿದ ನವರ ತೆರವಿನ ಹಣಕ್ಕೆ (ಮಹಾಂತೇ. ೨೦–೨೦). **ಕೇರುಹಾಕು** = ಕೇರುಕಟ್ಟು: ನಾನು ಗೊತ್ತುಮಾಡಿದ ಕಡೆಯಲ್ಲೆಲ್ಲಾ ದುಷ್ಟರಾದ ಜನರು . . . ಕೇರುಹಾಕಿಸಿ ಬಿಡುವರು (ಸಂಚಿತ್ರ. ೮೨).

[ದೇ. ‖ ತಮಿ. ಮಲ. ಚೇರ್; ತುಳು. ಗೇರು, ಜೇರು; ತೆಲು. ಜೀಡಿ, ಜೇಡಿ]

**ಕೇರ್ವಟ್ಟು** (ಕ್ರಿ). ಗೋಡೆಗೆ ಹಾಕಿದ ಅಲಂಕಾರದ ಬಟ್ಟು (?): ಮಂದಾರದ ಮೊಳೆಸಾಲ್ಗಳಿಂ ಕಂಕೆಲ್ಲಿಯ ಕೇಱು[ರ್]ವಟ್ಟುಗಳಿಂ, ಮಲ್ಲಿಗೆಯ ಮೇಲ್ಗಟ್ಟುಗಳಿಂ . . . ಲತಾಮಂಟಪಂ (ಶಾಂತೀಶ್ವ. ೧೦–೧೧೬ ವ). [ಕೇರ್₁ + ಬಟ್ಟು₁]

**ಕೇರಗಿಡ** (ನಾ). ಗೇರುಮರ: "ಭಲ್ಲಾತಕ, ಭಲ್ಲಾತ = ಕೇರಗಿಡ" (ಗಂಗಾಮ. ೨೪೧). [< ಕೇರ್₂ + ಗಿಡ (< ಗಿಡು)]

**ಕೇರಡಕೆ**, ಕೇರಡಿಕೆ (ನಾ). (ಉಕ) ಕೇರು ಸೇರಿಸಿರುವ ಅಡಕೆ; ಬಾಣಂತಿಯರಿಗೆ ಕೊಡುವ ಅಡಕೆ. **ಕೇರಡಿಕೆ**: ಊಟವಾದ ಮೇಲೆ . . . ಕೇರಡಿಕೆಯ ವೀಳ್ಯವನ್ನು ಹಾಕಿಕೊಂಡೇ ಉಳಿದ ಕೆಲಸ ಮಾಡಬೇಕು (ಸಮಜೀ. ೫೩೫). [ಕೇರ್₂ + ಅಡಕೆ₁]

**ಕೇರಡಿಕೆ** 'ಕೇರಡಕೆ' ನೋ.

**ಕೇರಬೀಜ**, ಕೇರುಬೀಜ, ಗೇರುಬೀಜ (ನಾ). ೧. ಕೇರುಮರದ ಬೀಜ. **ಕೇರುಬೀಜ**: (೩). **ಗೇರುಬೀಜ**: ೧. ಅವನು ಅವಳ ಗೇರುಬೀಜಗಳನ್ನು . . . ತನ್ನ ವಶಪಡಿಸಿಕೊಂಡ (ರಕ್ತರೂ. ೪೪); ಗೇರುಬೀಜದ ಆಕೃತಿಯಲ್ಲಿರುವ ಎರಡು ಪುಟ್ಟ ಅಂಗಗಳು (ಬಾಲಪ್ರ. I, ೩೧೦). ೨. ಗೋಡಂಬಿ ಬೀಜ: ಹಾಲುಕೀರಿಗೆ ದ್ರಾಕ್ಷಿ, ಗೇರುಬೀಜ ಹಾಕುತ್ತಾರೆ (ರೂಢಿ). [< ಕೇರ್₂ + ಬೀಜ]

**ಕೇರಮಂಡಲ** (ನಾ). ಒಂದುಜಾತಿಯ ಹಾವು: ದಾಸರಹಾವು, ಕೇರಮಂಡಲ, ಕೊಳಕುಮಂಡಲ, ನೀರುಹಾವು(ಒಳ್ಳೆ) (ನಮ್ಮನು ೨೪೦). [?]

**ಕೇರಮರ**, ಗೇರುಮರ (ನಾ). = ಕೇರಗಿಡ: (೩). **ಗೇರುಮರ**: ಎರಡು ಮಾವಿನಮರ, ಮೂರು ಗೇರುಮರ (ಅನಾಥ. ೨೨).
[< ಕೇರ್₂ + ಮರ]

**ಕೇರಮಾವು**, ಗೇರುಮಾವು (ನಾ). ಒಂದು ಜಾತಿಯ ಮಾವು: (೩). **ಗೇರುಮಾವು**: (೩). [< ಕೇರ್₂ + ಮಾವು]

**ಕೇರಯಿಸು**, ಕೇರೈಸು (ಕ್ರಿ). ಕೋಳಿಯಂತೆ ಕೂಗು (?): ಕೇರಯಿಸಿದಂ, ಕೇರೈಸಿದಂ (ಭಾಷಾಭೂ. ೧೨೩ ಉದಾ). **ಕೇರೈಸು**: ಮೇಲಿನ 'ಭಾಷಾಭೂ' ಪ್ರಯೋಗವನ್ನು ನೋಡಿ.
[ಕೇರ್₀ (< P ತಮಿ. ಕೇರು) + –ಇಸು₃]

**ಕೇರಲ**, ಕೇರಳ (ನಾ). ೧. ದಕ್ಷಿಣ ಭಾರತದಲ್ಲಿರುವ ಒಂದು ಪ್ರದೇಶ, —ಪ್ರಾಂತ. **ಕೇರಳ**: ೨. ವಿನುತ ಘೂರ್ಜರ ಗೌಳ ಕೇರಳ ಜನಪದಾದಿ ಸಮಸ್ತ ನೃಪರು (ತೊರರಾ. ೧–೬–೧೬). ೨. ಕೇರಳ ದೇಶದವನು: ಕಿಕ್ಕಿಱಿಗಿಱಿದು ಕುಳ್ಳಿರ್ದ ಲಾಳ ಗೌಳ ಚೋಳ ಕೇರಳ ಪಾಂಡ್ಯ ಪಲ್ಲವ (ಗಿರಿಕ. ೨–೧೦೫ ವ); ಇವನು ಕನ್ನಡಿಗನಿವನು ಕೇರಳನು ಮತ್ತಿವನು ಕೊಂಕಣನು (ನೇಮಿಸಂ. ೨೩–೨೫೬). ೩. ತೆಂಗು: ಎಳಗೌಂಗಿಂ ಕೇರಳ ಪನಸಿಮ್ಮೋಹಿಸುವರನೇಱಲಿಂ (ಉದ್ಭದೇ. ೨–೧೮). [ಸಂ.]

**ಕೇರಳ** 'ಕೇರಲ' ನೋ.

**ಕೇರಳಿ** (ನಾ). ಕೇರಳದೇಶದವಳು; ಕೇರಳ ಸ್ತ್ರೀ: ಕರ್ಣಾಟೀ ಕರ್ಣಪೂರಂ ಲಾಟೀಲಲಾಮಂ ಕೇರಳೀಕೇಳೀಕಂದರ್ಪಂ (ಪಂಪಭಾ. ೧–೧೪೮ ವ). [< ಸಂ. ಕೇರಲೀ]

**ಕೇರಾಟ** (ನಾ). ಮೊರದಿಂದ ಕೇರುವಿಕೆ: (೩). 'ತೂರಾಟ' ಪರಾ.
[ಕೇರು₁ (< ಕೇಱು) + ಆಟ]

**ಕೇರಿ**, ಚೇರಿ (ನಾ). ೧. ಬೀದಿ; ಮನೆ ಸಾಲುಗಳ ನಡುವಿನ ಹಾದಿ; ಓಣಿ: ಪುರಿಗೆಱಿಯಾ ಮೂಱಿಱಿಕೇರಿಯಾ (ಎಇ. VI, ೧೬೬–೪; 793); ಊರಿಲ್ಲ ಕೇರಿಯಿಲ್ಲೀ ಯಡವಿಯೊಳೆಲ್ಲಿಗೆ ಚರಿಗೆವುಗುವುದು (ವಡ್ಡಾರಾ. ೮೯–೩); ನೆರೆಹೊರೆಯ ಕೆಲದ ಕೇರಿಯ ಸಕ್ಕಜದ ಮಕ್ಕಳೊಡನೊಕ್ಕಲಿಕ್ಕಿ (ನಂಬಿರ. ೨–೧೩); ಕರ್ಕಶ ಪುಳಿಂದರ ಕೇರಿಯಿರೆ (ಕುವ್ಯಾಆ. ೧೫–೬);

ಕೇರಿಗಳೊಳಗೊಬ್ಬರಾದರು ಮುನಿಗಳು ಬಾರದಿದ್ದುದ ಕಂಡು (ಭರಚ. ೩-೩೬). ೨. ಸಾಲು ; ಶ್ರೇಣಿ : "ಕೇರಿಯೆನೆ ಸಾಲು" (ಕಶರ. ೨೬). ೩. ಪಗಡೆ ಹಾಸಿನಲ್ಲಿರುವ ಪಟ್ಟಿ : ಸೊಲ್ಲಲಿಹಪರವೆಂಬ ಕೇರಿಗಳಲ್ಲಿ ಪಾಪಂ ಪುಣ್ಯವೆಂಬಾನಲ್ಲ ಹಾಸಂಗಿಗಳನೊಯ್ಯನೆ ಹಾಯ್ಕಲು (ಬಸಪು. ೪೩-೪). **ಚೇರಿ** : ೧. ಆ ಚೇರಿಗೆ ಹೋಗಿ "ಇಲ್ಲಿ ಮೀನಾ ಹೆಂಗುಸಿನ ಮನೆಯಾವುದೆಂದು". . . ವಿಚಾರಿಸಿದಾಗ (ಶಾಬಝೂ. ೯೯).

**ಕೇರಿಕೇರಿ, ಕೇರಿಗೇರಿ** (ದ್ವಿರುಕ್ತಿ) : ಕೇರಿಕೇರಿಗಳೊಳ್ ಕೂಗಿಡೆ (ಧರ್ಮಾಮೃ. ೨-೬೮) ; ಊರೂರೊಳ್ಕೇರಿಕೇರಿಯೊಳ್ (ಶಮುದ. ೧೯೫ ಪ್ರಯೋ) ; ಕೇರಿಕೇರಿಗೆ ಕೈದುಕಾಜರು ನೆರೆದು ನಿಂದರು (ಕುವ್ಯಾಕ. ೧-೧೦) ; ಗೃಹೋಪವನಾವಳಿ ಕೇರಿಗೇರಿಯೊಳ್ (ಪುಷ್ಪಪು. ೨-೬೦).

[ದೇ. ‖ ತಮಿ. ಮಲ. ಚೇರಿ ; ತುಳು. ಕೇರಿ ; ತೆಲು. ಗೇರಿ]

**ಕೇರಿಗೊಳ್** (ಕ್ರಿ). ಓಣಿಯಲ್ಲಿ ಹೋಗು ; ಬೀದಿಹಿಡಿದು ಹೋಗು : ಚಂದ್ರಮುಖಿ . . . ಪೊಜಮಟ್ಟು ಕೇರಿಗೊಂಡ್ಯೆದಿದಳ್ ಸಂಕೇತ ಭವನದೊಳ್ ಕಾದಿರ್ದ ಕಾಂತನೆಡೆಗೆ (ಜೈವಿಭಾ. ೨೬-೯).

[ಕೇರಿ + ಕೊಳ್$_1$]

**ಕೇರು$_1$** 'ಕೇಱು' ನೋ.

**ಕೇರು$_2$** 'ಕೇರ್$_1$' ನೋ.

**ಕೇರು$_3$** 'ಕೇರ್$_2$' ನೋ.

**ಕೇರು$_4$** (ನಾ). ಕೇರುವ ಸಾಧನ ; ಮೊರ : ಶೂರ್ಪಕರಣ ಸಾಧನವಾದ ಮೊರಕ್ಕೆ ಕೇರು ಎಂದು ಹೆಸರು (ತುಳುನಾ. ೧೯೫).

[< ಕೇಱು]

**ಕೇರುಬೀಜ** 'ಕೇರಬೀಜ' ನೋ.

**ಕೇರೆ** (ನಾ). ಒಂದು ಜಾತಿಯ ಹಾವು ; ಕೆರೆಹಾವು : ಆ ಬನದೊಳ್ ನಾಗಾಂಗನೆಯೊಳ್ ನೆರೆವ ಕೇರೆಯಂ ಕಂಡು (ಚಾವುಂಪು. ೮೨-೧೫) ; ನೀರಡಸಿದ ಕಾಸರಪತಿ ಕೇರೆಯ ನಗಡೊಸರೆಗೆತ್ತು ನಕ್ಕುವುದು (ಅರ್ಧನೇ. ೩-೪೪) ; ಬೀಟೆಯ ಕಾಲಿಂ ಬಾರೇಟಿ ಬದಿಯನೊದೆದೊಡೆ ಕೇರೆ[ಪಾಠಾಂ. ರು] ಪೊರಳ್ವಂತೆ ಕಾಲಮೇಲೆ ಪೊರಳ್ದಳ್ (ಯಶೋಚ. ೨-೫೦) ; ಇವಕ್ಕೂ ದೊಡ್ಡ ಹಾವುಗಳೆಂದರೆ ಕೇರೆ, ನಾಗರಕನ್ನಡಿ ಹಾವುಗಳು (ಬಾಲಪ್ರ. I, ೧೬).

[ದೇ. ‖ ತಮಿ. ಚಾರೈ, ಚೇರೈ ; ಮಲ. ಚೇರ ; ತುಳು. ಕೇರಿ]

**ಕೇರೆತುಪ್ಪ** (ನಾ). ಕೇರೆಹಾವಿನ ನೆಣ, —ಕೊಬ್ಬು : ಕೇರೆತುಪ್ಪವನ್ನು ಔಷಧಿಗೆ ಉಪಯೋಗಿಸುತ್ತಾರೆ (ರೂಢಿ). [ಕೇರೆ + ತುಪ್ಪ]

**ಕೇರೆಮೀನು** (ನಾ). ಒಂದು ಜಾತಿಯ ಮೀನು ; ಹಾವು ಮೀನು : "ಗ್ರಾಹಃ, ಅವಹಾರಃ – ೨ ಲತಾಕಾರವಾಗಿ ಸುತ್ತಿಕೊಂಡು ಪ್ರಾಣಿಹಿಂಸೆ ಮಾಡುವ ಮಹಾಮತ್ಸ್ಯದ ಹೆಸರುಗಳು, ಅಂದರೆ ಹಾವುಮೀನು, ಬಳ್ಳಿಮೀನು, ಕ್ಯಾರ[ಕೇರೆ]ಮೀನು" (ಸಿದ್ಧಾಂತಿ. ೭೪).

[ಕೇರೆ + ಮೀನು$_2$ (< ಮೀನ್$_3$)]

**ಕೇರೆಹಾವು** (ನಾ). = ಕೇರೆ: "ರಾಜಿಲಃ – ಕೇರೆಹಾವು" (ಓಷಧಿ. ೧೩೭).

[ಕೇರೆ + ಹಾವು (< ಪಾವು$_1$)]

**ಕೇರೈಸು** 'ಕೇರಯಿಸು' ನೋ.

**ಕೇಗರ್ಗಟ್ಟು$_1$** (ಕ್ರಿ). ಗೋಡೆಯನ್ನು ಕಟ್ಟು : ದೆಸೆಯಂ ಸುತ್ತಿ ಶಿಲೀಮುಖಪ್ರಕರದಿಂ ಕೇಗರ್ಗಟ್ಟಿ (ನೇಮಿಪು. ೧೧-೧೫೩); ಅಮರೇಂದ್ರಾತ್ಮಜನೆಚ್ಚು ವಾಯುಪಥದೊಳ್ ಕೇಗರ್ಗಟ್ಟಿದಂತಸ್ತ್ರಜಾಲಮನೊಟ್ಟೈಸಲ್ (ಜಗವಿ. ೧೫-೪) ; ಉರಿಗೊಳ್ಳಿಯ ತಂಡದೆ ಕೇಗರ್ಗಟ್ಟೆ ತೆನಿಸಿ (ಪುಷ್ಪಪು. ೮-೭೫) ; ಆಳುದ್ದಂ ನಿಲೆ ಮಿಂಚುಗನ್ನಡಿಗಳೇ ಕೇಗರ್ಗಟ್ಟಿದಂತೆಲ್ಲಿಯುಂ (ಮೈಸೂಮ. ೩-೩೧). [ಕೇರ್$_1$ + ಕಟ್ಟು$_1$]

**ಕೇಗರ್ಗಟ್ಟು$_2$, ಕೆಗರ್ಗಟ್ಟು** (ನಾ). ಗೋಡೆಕಟ್ಟುವಿಕೆ; ಗೋಡೆಯಂತಹ ರಚನೆ ; ತಡಿಕೆ : ಕೆಂದಾವರೆಯ ಗಂಟಿಗಳೊಳಂ ದವನದ ಕೇಗರ್ಗಟ್ಟಿನೊಳಂ (ಕಾದಂಉ. ೭೮೩) ; ಸಂಪಗೆಯ ಮುಗುಳ ಕೇಗರ್ಗಟ್ಟಿನಂತಿರ್ದ ಮಣಿಭಿತ್ತಿಗಳುಂ (ಚಂದ್ರಪು. ೧೨-೧೧ ವ) ; ನೇವರಿಸಿ ಬಿಗಿದ ಲಾಮಂಚದ ಕೇಗರ್ಗಟ್ಟಿನಿಂ (ನಳಚಂ. ೧೯೫). **ಕೆಗರ್ಗಟ್ಟು** : ಲಾಮಂಚದ ಕೆಗರ್ಗಟ್ಟಿಂ ನೆಮ್ಮಿನಿಂದ ಪಡಿದೆಳೆಯಡಕೆಯ ಸಸಿಗಳ (ಕೇಶಿರ. ೧೧-೨೩) ; ಲೋಹವಾಹಿನಿಯೆಂಬ ಕೆಗರ್ಗಟ್ಟು (ಪುಣ್ಯಾಸ್ರ. ೧೦-೩೨ ವ). [< ಕೇಗರ್ಗಟ್ಟು$_1$]

**ಕೇಪುರ್** (ನಾ). (ಕರಾ) ಬಿದಿರಿನ ಏಣಿ.

[← ತುಳು. ಕೇಪುರ್]

**ಕೇಲ್, ಕೇಲ, ಕೇಲು$_1$** (ನಾ). ಮಣ್ಣಿನಿಂದ ಮಾಡಿದ ಹರವಿ ; ಗುಡಾಣ : ಘೃತಭಾಂಡದೊಳ್ ಬಡತನಂ ಕೇಲೊಳ್ ಬಜಂ ಧಾನ್ಯಸಂಕುಲದೊಳ್ ಧಾನ್ಯದ ಕೇಡು (ಲೋಕೋಪ. ೧೨-೪೨) ; ಕೇಲಂ ಮಾಡುವ ತಿಗುರಿಯ ಕೋಲಂತೆವೋಲಿರ್ದು ದಿಟ್ಟಿ ತನು ಕೆಡೆವಿನೆಗಂ (ಸೂಕ್ತಿಸು. ೩-೧೩೦). ಪಾಲ್, ಕೇಲ್, ಕೋಲ್ (ಶಮುದ. ೪೮ ಪ್ರಯೋ). **ಕೇಲ** : ಒಂದು ಕಡ್ಡಾಯದಲ್ಲಾಗಲಿ ಒಂದು ಕೇಲದಲ್ಲಾಗಲಿ ನೀರು ಹಾಕಿ (ಕೃಷಿಪ್ರ. ೧೯೦) ; ಗುಂಡಯ್ಯನಿಲ್ಲದೆ ನಮ ಕೇಲ ಹೊರಗಿಡೊ (ಲೋಕಗೀ. ೩೮). **ಕೇಲು$_1$** : "ಮಣಿಕಃ, ಅಳಿಂಜರಃ – ಈ ೨ ಕೇಲು" (ಹಲಾಯು. ೫೩-೧೬೨) ; "ಅಳಿಂಜರಃ ಮಣಿಜೆಯೆನೆ ಕೇಲೆ [ಪಾಠಾಂ. ಕಲ್ಲೆ] ನಾಮುಂ" (ಮಂಗರಾ. ೬೨-೨೩) ; ಕೇಲಿನೊಳಲ್ಲಿ ತಾನಂದಿರಿಸೆ ಬಳೆದನು ಕೇಲು ತುಂಬಲಿಕೆ (ಸಂಭಪ. ೪-೪) ; ಕಾಲು ತಂದು ಕೇಲಿನೊಳಗೆ ಅದ್ದಿಹೋದನಮ್ಮ (ಪುರಂದ. ೫-೫೦-೧) ; ನಾಯಿ ಮುಟ್ಟಿದ ಕೇಲು . . . ಪೂಜೆಗೆ ಸುಯೋಗ್ಯವಾಗಲಾರದು (ತುಂಗಭ. ೫೫).

[ದೇ. ‖ ಕೊಡ. ಕೇಲು ; ಕುಣ. ಕೇಡು]

**ಕೇಲ** 'ಕೇಲ್' ನೋ.

**ಕೇಲಿ, ಕೇಳಿ$_3$** (ನಾ). ಆಟ ; ಲೀಲೆ ; ವಿನೋದ ; ಕ್ರೀಡೆ : ಗೋಚರಿಪುದಲ್ಲಿ ಮತ್ಕರ್ರ ಕೃಷಿಯ ಕೇಲಿ (ಕೋಗಿಲೆ. ೨೯-೧೨). ೨. ಶೃಂಗಾರ ಲೀಲೆ. **ಕೇಳಿ$_3$** : ೧. ಲೀಲಾಕೇಳಿಗಳೆ ವಿಲಾಸಕೇಳಿಗಳೆ ನೃಪಸತಿಯಾ (ಅಜಿಪು. ೩-೯) ; ನಂದ ವಧು ತತ್ತನವಯದ್ವಯ ಕೇಳಿಯಿಂದೆ ಸುಖಮಂ ಪಡೆದಳ್ (ಜಗವಿ. ೩-೪೮) ; ಅಪ್ರತಿಮನೆಸೆದನು ಬಕುತಿ ಕೇಳಿಯಲಿ (ಕುವ್ಯಾಉ. ೮-೧೧) ; ಬಾಳು ಪರಚೇತನದ ಕೇಳಿಯೆಂದೆಣಿಸಿ . . . ಬಾಳುತಿರು (ಮಂಕುಕ. ೨೬೪). [ಸಂ.]

**ಕೇಲಿಕಾಗೃಹ** (ನಾ). ಕ್ರೀಡಾಗೃಹ.

[ಸಂ. (ಕೇಲಿಕಾ + ಗೃಹ)]

**ಕೇಲಿಕಿಲ** (ನಾ). ನಾಟಕದಲ್ಲಿ ನಾಯಕನ ಆಪ್ತಮಿತ್ರ ; ವಿದೂಷಕ. [ಸಂ.]

**ಕೇಲಿಕೆ, ಕೇಳಿಕೆ$_2$, ಕೇಳಿಗೆ** (ನಾ). ಆಟ ; ವಿನೋದ ; ನೃತ್ಯ : (ಕ). **ಕೇಳಿಕೆ$_2$** : ಸಹಜದ ಚೆಲ್ವಿನೊಳ್ ರತಿಯ ಸೋಲದ ಕೇಳಿಕೆಯೊಳ್ ಪೊದಳ್ದು (ಪಂಪಭಾ. ೧-೪) ; ದಣಿವಿಲ್ಲದೊಲ್ದು ಕುಣಿವೆಚ್ಚ ಕೇಳಿಕೆಗಳಿಂ (ಉದ್ಭಟ. ೩-೯೮) ; ಒಡರಿಚುವುದೇಂ ಕೇಳಿಕೆಯ ನೀ ನರ್ತನೋಚಿತಕೆ (ಬಸಪು. ೧೨-೪೨) ; ಕೇಳಿಕೆಯ ನವಿಲುಗಳ ತುಂಬಿಯ ಮೇಳವದ (ಕುವ್ಯಾಆ. ೧೦-೧). **ಕೇಳಿಗೆ**. 'ಕೇಳಿಗೆಗೊಳಿಸು' ಪರಾ.

[ಸಂ. ಕೇಲಿಕಾ. / ತಮಿ. ಕೇಳಿಕ್ಕೈ]

**ಕೇಲಿಗೃಹ, ಕೇಳಿಗೃಹ** (ನಾ). = ಕೇಲಿಕಾಗೃಹ : (ಕ). **ಕೇಳಿಗೃಹ** : ಅನುಜೆಯಂ ವಸುದೇವ ಸಮೇತಮುಂದು ಮನ್ಮಂದಿರ ಮಧ್ಯ ಕೇಳಿಗೃಹದೊಳ್ ಸೆಱಗೆಯ್ದು (ಜಗವಿ. ೨-೫೧). [ಕೇಲಿ + ಗೃಹ]

**ಕೇಲಿಮಂದಿರ** (ನಾ). = ಕೇಲಿಕಾಗೃಹ : (ಕ). [ಕೇಲಿ + ಮಂದಿರ]

**ಕೇಲಿಸು, ಕೇಳಿಸು₂** (ಕ್ರಿ). ಆಟವಾಡು; ಕ್ರೀಡಿಸು; ವಿನೋದಪಡು: ಗೀತ ಸರಸದ ತತವಿತತಾದಿ ವಾದ್ಯ ಪ್ರಸರಮೇಳನದಲಿ ಸೊಗಸಲಾಡುತ್ತ ಕೇಲಿ[ಪಾಠಾಂ. ಳಿ]ಸಲು (ಬಸವು. ೩೭-೨). **ಕೇಳಿಸು₂**: ಏೞೆಂಬ ನರಕಮಾವುದೊ ಪೇೞೆಂಬ ದುರಂತ ದುಃಖದೊಳ್ ಕೇಳಿಸಿ ನಿಂದು (ಅಜಿಪು. ೨-೫೪). ಆ ನಾರೀಲೋಕಮಾವುದೀ ಕೇಳಿಸುತಿರ್ದ ಪರಿಜನಮಾರೆಂದು (ಧರ್ಮಾಮೃ. ೧-೨೧೨); ಕೇಳಿಸಿದರಾಹವದ ನಾಟ್ಯಮಂ ರಣರಂಗದೊಳ್ಚಟುಲ ಪಟುರಥಿಕರು (ಜೈಮಿಭಾ. ೨೨-೭).
[ಕೇಲಿ + -ಇಸು₃]

**ಕೇಲೀನಿಲಯ, ಕೇಳೀನಿಲಯ** (ನಾ). = ಕೇಲಿಕಾಗೃಹ: (ಕ). **ಕೇಳೀನಿಲಯ**: ಶ್ರೀಕೇಳೀನಿಲಯಂ ನಿಜಾಂಘ್ರಿಕಮಲಂ (ಪಂರಾಮಾ. ೧-೧). [ಸಂ. (ಕೇಲೀ + ನಿಲಯ)]

**ಕೇಲೀವನ, ಕೇಳೀವನ** (ನಾ). ಕ್ರೀಡಾವನ; ವಿಹಾರಕ್ಕಾಗಿ ಏರ್ಪಡಿಸಿದ ಉಪವನ: (ಕ). **ಕೇಳೀವನ**: ಪರಭೂಪಾಲ ದ್ವೀಪಾಂತರಾಳ ಕೇಳೀವನಂಗಳಂ ಕಿೞ್ತು (ಪಂರಾಮಾ. ೩-೧೦೦); ಕೇಳೀವನದಾಮೋದಮುಂ ಸರೋಜಾಕರದ ಸೌರಭ್ಯಮುಂ (ನಂಬಿರ. ೧೪-೭೧). [ಸಂ. (ಕೇಲೀ + ವನ)]

**ಕೇಲು₁** 'ಕೇಲ್' ನೋ.

**ಕೇಲು₂** (ನಾ). ಖಯಾಲು; ಚಪಲ; ಆತುರ: ಯಾವತ್ತು ದಸರೆ ನೋಡೇನು, ಯಾವತ್ತು ತನ್ನ ಜೀವನ ಸಾರ್ಥಕವಾದೀತು ಅಂತ ಅವನಿಗೆ 'ಕೇಲು' ಹತ್ತಿ ಬಿಟ್ಟಿತ್ತು (ನನ್ನೂರು. ೨೪೧).
[← ಹಿಂ. ಖ್ಯಾಲ್]

**ಕೇವ** 'ಕೇವು₂' ನೋ.

**ಕೇವಟಿ₁** (ನಾ). ಒಂದು ಜಾತಿಯ ಸಸ್ಯ; ಕೊನ್ನಾರಿಗೆಡ್ಡೆ: "ಕೇವಟಯಾದ ಮುಸ್ತಿ-ಕುಟನ್ನಟ, ಗೋನರ್ದ, ಕೈವರ್ತಿ, ಮುಸ್ತ" (ನಾಚಿರಾ. ಕ); "ಕೇವಟ - ಕೈವರ್ತಿ (ರ್ತ)" (ತದ್ಭಕೋ. ೮).
[< ಸಂ. ಕೈವರ್ತೀ]

**ಕೇವಟಿ₂** (ನಾ). (?): ಚಟುಳ ಬಲ ಮತ್ತೊಡನೆ ಗಗನಕೆ ಪುಟನೆಗೆದು ಪೌಲಸ್ತ್ಯಜನ ಕೇವಟ [ಪಾಠಾಂ. ಕೆವತಟಿ, ಕೆಪಸಟಿ, ಕವಚಟಿ]ಯನಪ್ಪಳಿಸಿದನು ಚಪ್ಪರಿಸಿದನು ಭುಜಯುಗವ (ತೊರರಾ. ೬-೨೨-೧೯). [?]

**ಕೇವಟಿಗೆ** (ನಾ). = ಕೇವಟಿ₁: "ಕೇವಟಗೆ - ಕೈವರ್ತಿಕಾ" (ತದ್ಭಕೋ. ೮). [< ಸಂ. ಕೈವರ್ತಿಕಾ]

**ಕೇವಣ** (ನಾ). ೧. (ಹರಳು ಮೊದಲಾದುವನ್ನು) ಕೆಚ್ಚುವುದು; ಕೂಡಿಸುವುದು; ಕುಂದಣ: ಕಡೆಯದಳಂಗಳೆ ವಜ್ರಂ ನಡುವಣ ಕರ್ಣಿಕೆಯೆ ಕೇವಣಂ ಕೇವಣದೊಳ್ ತೊಡರ್ದಳಿ ನೀಲದ ಪರಲ್ (ಗದಾಯು. ೬-೪೨); ಕೇವಣದೊಳ್ ನಾಯಕಮಣಿ ತೀವಿರ್ಪವೋಲ್ (ಕಇಅ. ೮-೩-೨೭೪; 1062); ಪೊನ್ನ ಕೇವಣದೊಳಗಿರ್ಪನರ್ಘ್ಯಮಣಿ ನಾಯಕದಂತೆ (ಪುಷ್ಪಪು. ೯-೨೮); ಪೊಸಪರಿಯ ಕೇವಣದುಂಗುರಂಗಳಂ ಬೆರಲ್ಗಳೊಳ್ ನಿರವಿಸಿಯುಂ (ಚಂದ್ರಪ್ರ. ೬-೬೩ವ); ಹರಳುಗಳ ಕೇವಣದ ಮಂಗಳತರವೆನಿಪ ತೊಡಿಗೆಗಳ (ಕುವ್ಯಾದ್ರೋ. ೧೬-೨೫). ೨. ತಳ್ಳುವುದು; ನೂಕುವುದು: "ಕೇವಣಂ = ನೂಂಕುವುದು" (ಶಮುದ. ೨೬೨ ಅಡಿಟ). [?. / ತಮಿ. ಕೇವಣ. / ಸಂ. ಕ್ಷೇಪಣ]

**ಕೇವಣಿಸು, ಕೇವಳಿಸು** (ಕ್ರಿ). ೧. ಜೋಡಿಸು; ಕೀಲಿಸು; ಕೆಚ್ಚು, —ಖಚಿತಗೊಳಿಸು; ಕುಂದಣಿಸು: ಓರಣಂಗೊಳಿಸಿ ಕೇವಣಿಸಿದವುಳ ನವರತ್ನಂಗಳ (ಹಚಶಾ. ೩-೪೦); ಉಂಗುರದೊಳ್ ಕೇವಣಿಸಿದ ರತ್ನಮಾಯ್ತು ಚಿಂತಾರತ್ನಂ (ಅನಂಪು. ೬-೩೧); ಬಿಲುವಿಡಿದು ಯಂತ್ರದ ಕೋಲುಗಳ ಕೇವಣಿಪುದೆಂದರು (ಕುವ್ಯಾಅ. ೧೫-೧). ೨. ಲೇಪಿಸು; ತೊಡೆ: ಕೇಸಡಿಗಳ ಕೆಂಪಿಂಗೆ ಕೆಂದಳಿರ ಕೆಂಪಂ ಕೇವಣಿಸಿದಂತೆ (ಪುಣ್ಯಾಸ್ರ. ೨-೬೨ವ); ಅಸ್ತ್ರವ್ರಣವ ತೊಳೆದರು ಘಾಯದಲಿ ಕೇವಣಿಸಿದರು ದಿವ್ಯೌಷಧಿಯ ಗಂಧಾನುಲೇಪದಲಿ (ಕುವ್ಯಾಶ. ೩-೪೮). ೩. ತೊಡಿಸು; ಧರಿಸು: ಕಂಚುಕಮಂ ಕುಚಮಂಡಲಕ್ಕೆ ಕೇವಣಿಸಿ (ದಶಕು. ೧೨-೨೭). ೪. ಬೆರಸು; ಸೇರಿಸು: ಮುಖದಲಿ ಕಿಱುನಗೆಯ ಕೇವಣಿಸಿ ನುಡಿದನು (ಕುವ್ಯಾದ್ರೋ. ೬-೩೩); ಪ್ರಹಸ್ತನು ಕಿಱುನಗೆಯ ಕೇವಣಿಸಿ ನುಡಿದನು (ತೊರರಾ. ೫-೭-೪೨); ಕಣ್ಣಿನ ಕೊನೆಯಲ್ಲಿ ಈರ್ಷೆಯ ಕುಸುರು ಕೇವಣಿಸಿತು (ಒಡ್ಡಿಉ. ೮೧). **ಕೇವಳಿಸು**: ೧. ಪಡುವಣ ಜಲಧಿಯ ಕರಾವಳಿಗಳಲಿ ಕೇವಳಿಸಿದರು (ಕುವ್ಯಾಸ. ೬-೭); ಮುತ್ತಾಯ್ದು ಕೇವಳಿಸಿ ಕೊರಲ್ಗಿಟ್ಟು (ಶ್ರೀಪಾಲ. ೧-೮೨).
[ಕೇವಣ + -ಇಸು₃]

**ಕೇವಲ, ಕೇವಳ** (ಗು). ಮಾತ್ರ; ಅಷ್ಟುಮಾತ್ರದ; ಬರಿಯ: ಪೂಜ್ಯರೇ ಇವು ವರಗಳಲ್ಲದೆ ಕೇವಲ ಆಶೀರ್ವಾದಗಳಲ್ಲ (ಶಾಕುಂತ. ೫೨); ಆ ಕಾರ್ಯಕ್ರಮ ಕೇವಲ ಓದು ಬರೆಹ ಲೆಕ್ಕಾಚಾರಗಳಿಗಾಗಲ್ಲ (ಶಿಕ್ಷದ. ೧೨೦); ಅವಕಾಶವೇ ಮುಖ್ಯಕಾರಣವಲ್ಲವೆ . . . ಕೇವಲ ವಿದ್ಯೆಯೆ ಸಾಕೆ (ಇಂಚಾಪ ೮೭-೨೧). ೨. ಸಮಗ್ರ; ಸಂಪೂರ್ಣ; ಸರ್ವ: ಅವುದು ಬಾಗಿದುದುಮಧಿಕಂ ಬಸನಂ ಕೇವಲಮಾಗೆ ನೆಗೆವುದು ಚಿತಾವಯವಂ (ಕವಿರಾ. ೨-೧೫೦); ಶರಣ್ಪೆಱತಾವುದುಮಿಲ್ಲ ಕೇವಲಂ (ಕಾದಂಪೂ. ೮೨೦). ೩. ಶುದ್ಧ; ಅಪ್ಪಟ: ಯಥಾರ್ಥವಾದ ಹೊಳೆಗಳ ದಡದಲ್ಲಿದ್ದ ಭೂಮಿಯಂತು ಕೇವಲ ಚಿನ್ನವೆಂದೆನಿಸಿಕೊಳ್ಳುತ್ತದೆ (ಮುಂಬಯಿ. ೪-೧೯೫). 'ಕೇವಲಪ್ರಮಾಣ' ಪರಾ. ೪. ತೀರ ಸಾಮಾನ್ಯವಾದ; ನಾಡಾಡಿಯಾದ: ಅಚಾಮ್ಲವರ್ಧನಂ ಪುಣ್ಯವರ್ಧನಂ ಕೇವಲಮೇ (ಸುಕುಮಾ. ೯-೧೩); ಜಾತಕತಿಲಕಂ ತ್ರೈಲೋಕ್ಯತಿಲಕಮಿದು ಕೇವಲಮೇಂ (ಜಾತತಿ. ೨೪-೩೮). (ನಾ). ೫. ಪರವಸ್ತು; ಪರಮಾತ್ಮ: ಜೀವಸತ್ತ್ವ ಚಿರ ಭಾವಿಸಾ ಕೇವಲವ (ಮಂಕುಕ. ೪೦೪). ೬. ಮುಕ್ತ; ಕೈವಲ್ಯವನ್ನು ಪಡೆದವನು: ವಿರಕ್ತರಾಗಿ ಮುಕ್ತರಾಗುವರು, ಕೇವಲರಾಗುವರು (ಹಿಂದಸಾ. ೬೮). ೭. ಮೋಕ್ಷ; ಕೈವಲ್ಯ; ಮುಕ್ತಿ: "ಕೈವಲ್ಯಮಪುನರ್ಭವಂ ಬ್ರಹ್ಮಮಕ್ಷರಂ ಕೇವಲಂ ಮುಕ್ತಿ ನಿರ್ವಾಣಂ ಮೋಕ್ಷಕ್ಕೆ ಪೆಸರೆನಿಕ್ಕುಂ" (ಮಂಗರಾ. ೮-೨೬). ೮. [ಯೋಗ] ಕುಂಭಕದ ಎಂಟು ಪ್ರಕಾರಗಳಲ್ಲಿ ಒಂದು: ಸೂರ್ಯಭೇದನ . . . ಕೇವಲವೆಂಬ ಅಷ್ಟ ಕುಂಭಕ ಪ್ರಕಾರಗಳಂ (ವಿವೇಕ. ೧೫೧). 'ಕೇವಲಕುಂಭಕ' ಪರಾ. ೯. [ಜೈನ] ಜ್ಞಾನದ ಐದು ಪ್ರಕಾರಗಳಲ್ಲಿ ಒಂದು: ಒಳ್ಳೆಯ ಜ್ಞಾನವೆಂಬುದು . . . ಮತಿ, ಶ್ರುತ, ಅವಧಿ, ಮನಃಪರ್ಯಯ, ಕೇವಲ ಎಂದು ಐದು ಪ್ರಕಾರ (ಹಿಂದಸಾ. ೮೭). **ಕೇವಳ**: ೧. ಅದಱಿಂ ಕೇವಳಂ ಪಟಿಮೆಯೇ ಪ್ರಯೋಜನಮಿಲ್ಲ (ಪಂಚತಂ. ೧೦೬-೨೧). ೨. ಚಿತ್ರಕ ಮೂಳಮಾಸಡಿ ವಿದಾರೀಕಂದಮೊಂದೊಂದೆ ಕೇವಳಮಾಯುಷ್ಯಕರಂ ಜರಾಮಯಹರಂ (ಲೋಕೋಪ. ೯-೪೩). ೪. ಕೇವಳಮೆ ಧರ್ಮಂಗೆಯ್ದುವರ್ (ವಡ್ಡಾರಾ. ೯೭-೨೩); ಜರಾಸಂಧನನಿಕ್ಕಿ ಕೊಂದ ಬಲ್ಲಾಳ್ ಮರುತ್ಸುತಂ ಕೇವಳಮೋ (ಗದಾಯು. ೨-೪೬); ಪಾವನಚರಿತಂ ಸುಜನರ ದೇವಂ ಕೇವಳವೆ ನೆಗಳ್ದ ಕೇಶವರಾಜಂ (ಸೌಇಇ. IX-i, ೧೯೭-೧೮; 1119); ಅಖಿಳೋರ್ವೀ ವ್ಯಾಪಕಂ ಜಿಹ್ವೆ ಕೇವಳಮಲ್ತು (ಜಗವಿ. ೧-೧೮). [ಸಂ.]

**ಕೇವಲಕುಂಭಕ** (ನಾ). [ಯೋಗ] ಕುಂಭಕದ ಪ್ರಕಾರಗಳಲ್ಲಿ ಒಂದು: ಕೇವಲಕುಂಭಕವೆಂದರೆ ಒಳಗಿರುವ ಗಾಳಿಯನ್ನು ಹೊರಕ್ಕೆ ತಳ್ಳಿ ಶ್ವಾಸಕೋಶಗಳನ್ನು ರಿಕ್ತವಾಗಿಟ್ಟಿರುವಿಕೆ (ಭಾರದ. ೧೬೦).
[ಕೇವಲ + ಕುಂಭಕ]

**ಕೇವಲಜ್ಞಾನ,** ಕೇವಳಜ್ಞಾನ (ನಾ). ಸರ್ವಜ್ಞತ್ವ; ಲೋಕಾಲೋಕಗಳಲ್ಲಿಯ ತ್ರಿಕಾಲಗಳಲ್ಲಿಯ ಸರ್ವವಸ್ತುಗಳ ಸಮಗ್ರ ಜ್ಞಾನ: ಇಂದ್ರವೃಂದ ಕೃತಕಲ್ಯಾಣಾಸ್ಪದಂ ಕೇವಲಜ್ಞಾನಂ ಪುಟ್ಟಿದುದು (ಆದಿಪು. ೧೬–೬೩); ತವಗೆ ತಾ ದೇವಾಗಿ ಪಡೆದನು ಕೇವಲ ಜ್ಞಾನ (ಬಿಜ್ಜಪು. ೧೨–೫೦); ಯೋಗಿಯು . . . ಕೊನೆಯಲ್ಲಿ ಕೇವಲ ಜ್ಞಾನ ಅಥವಾ ಸರ್ವಜ್ಞತ್ವವನ್ನು ಪಡೆಯುತ್ತಾನೆ (ಭಾರದ. ೧೮೪). **ಕೇವಳಜ್ಞಾನ:** ಅಸೀನ ಯಶೋಧರ ಗುರುಗಳ ಕೇವಳಜ್ಞಾನೋತ್ಪತ್ತಿಯೊಸಗೆಗೆ (ಆದಿಪು. ೩–೨೧ ವ); ನಿರತಿಶಯ ಕೇವಳಜ್ಞಾನ (ಸೌಇಇ. XX, ೪೬–೨೪; 1072). [ಕೇವಲ + ಜ್ಞಾನ]

**ಕೇವಲಜ್ಞಾನಾವರಣೀಯ** (ನಾ). [ಜೈನ] ಕೇವಲ ಜ್ಞಾನವನ್ನು ಆವರಿಸುವ ಕರ್ಮ; "ಆವರಣವನ್ನುಂಟುಮಾಡುವ ಕರ್ಮಗಳನ್ನು ಕ್ರಮದಿಂದ ಮನಃಪರ್ಯಯ ಜ್ಞಾನಾವರಣೀಯ ಕೇವಲ ಜ್ಞಾನಾವರಣೀಯಗಳೆಂದು ಹೇಳುತ್ತಾರೆ" (ಜೈನಪ. ೩೬೬): ಮತಿಜ್ಞಾನಾವರಣೀಯ . . . ಕೇವಲ ಜ್ಞಾನಾವರಣೀಯ . . . ಎಂಬೀ ಪ್ರಕಾರದೆ ಪಂಚಪ್ರಕಾರ ಜ್ಞಾನಾವರಣೀಯಮಂ (ಸುಕುಮಾ. ೩–೬೯). [ಕೇವಲಜ್ಞಾನ + ಆವರಣೀಯ]

**ಕೇವಲಜ್ಞಾನಿ,** ಕೇವಳಜ್ಞಾನಿ (ನಾ). ಕೇವಲಜ್ಞಾನವನ್ನು ಪಡೆದವನು: ಯಶೋಧರರೆಂಬ ಕೇವಲಜ್ಞಾನಿಗಳ್ . . . ಚಂಪಾ ನಗರಕ್ಕೆ ಬಂದು (ವಡ್ಡಾರಾ. ೩೫–೧೯); ಕೇವಲಜ್ಞಾನಿ ತತ್ಪರಿಣತನೆಂಬುದು (ತಸೂವ್ಯ. ೭). **ಕೇವಳಜ್ಞಾನಿ:** ಇಪ್ಪತ್ತು ಸಾಸಿರ್ವರ್ ಕೇವಳಜ್ಞಾನಿಗಳುಂ (ಆದಿಪು. ೧೬–೪೦ ವ). [ಸಂ. ಕೇವಲಜ್ಞಾನಿನ್]

**ಕೇವಲತ್ವ** (ನಾ). ತಾನೇತಾನಾಗಿರುವುದು; ಏಕತ್ವ. [ಸಂ.]

**ಕೇವಲದರ್ಶನ** (ನಾ). [ಜೈನ] ದರ್ಶನದ ನಾಲ್ಕು ಪ್ರಕಾರಗಳಲ್ಲಿ ಒಂದು: ಚಕ್ಷುರಚಕ್ಷುರವಧಿ ಕೇವಲ ದರ್ಶನಾವರಣ ಚತುಷ್ಕಮುಮಂ (ಆದಿಪು. ೧೦–೧೪ ವ); ಚಕ್ಷುರಚಕ್ಷುರವಧಿ ಕೇವಲದರ್ಶನ ವಿಕಲ್ಪದಿಂ ದರ್ಶನಂ ಚತುರ್ವಿಧಂ (ತತ್ತ್ವಪ್ರ. ೧೭). [ಕೇವಲ + ದರ್ಶನ]

**ಕೇವಲದರ್ಶನಾವರಣೀಯ** (ನಾ). [ಜೈನ] ಕೇವಲದರ್ಶನಕ್ಕೆ ಆವರಣವನ್ನುಂಟುಮಾಡುವ ಕರ್ಮ: ಚಕ್ಷುರ್ದರ್ಶನಾವರಣೀಯಮಚಕ್ಷುರ್ದರ್ಶನಾವರಣೀಯಮವಧಿದರ್ಶನಾವರಣೀಯಂ ಕೇವಲ ದರ್ಶನಾವರಣೀಯಂ (ಸುಕುಮಾ. ೩–೬೯ ವ). [ಕೇವಲದರ್ಶನ + ಆವರಣೀಯ]

**ಕೇವಲಪುಣ್ಯಾನ್ವಿತ** (ನಾ). ಸಂಪೂರ್ಣವಾಗಿ ಪುಣ್ಯವನ್ನುಳ್ಳವನು; ಅತಿಪುಣ್ಯವಂತ: ಈಗಳೆನ್ನಂತು ಕೇವಲ ಪುಣ್ಯಾನ್ವಿತರಾರುಮಲ್ಲ ಮನುಜರ್ (ಸುಕುಮಾ. ೩–೪೫). [ಕೇವಲ + ಪುಣ್ಯ + ಅನ್ವಿತ]

**ಕೇವಲಪ್ರಮಾಣ** (ನಾ). ಯಥಾರ್ಥಜ್ಞಾನದ ಪ್ರಮಾಣ; ಪ್ರತ್ಯಕ್ಷ ಪ್ರಮಾಣ: ಪ್ರಮಾಣವು ಕೇವಲಪ್ರಮಾಣ, ಅನುಪ್ರಮಾಣವೆಂದು ಎರಡುವಿಧ, ಯಥಾರ್ಥಜ್ಞಾನವೇ ಕೇವಲ (ಹಂದಸಾ. ೨೮೦). [ಕೇವಲ + ಪ್ರಮಾಣ]

**ಕೇವಲಬೋಧ,** ಕೇವಳಬೋಧ (ನಾ). = ಕೇವಲಜ್ಞಾನ: ಗುರುಗೆ ಯಶೋಧರ ಮುನಿಪತಿ ಗುರು ಕೇವಲಬೋಧಂ . . . ಒಡವುಟ್ಟಿ ಪುಟ್ಟಿದೆರಡೊಸಗೆಯೊಳಂ (ಆದಿಪು. ೩–೨೭). **ಕೇವಳಬೋಧ:** ಮಾನಕಷಾಯಂ ಮುನಿಪತಿಗೆ ಪೋಗೆ ಪುಟ್ಟಿದುದನಂತವಸ್ತು ಪ್ರಕಾಶಿ ಕೇವಳಬೋಧಂ (ಆದಿಪು. ೧೪–೧೪೫). [ಕೇವಲ + ಬೋಧ]

**ಕೇವಲಬೋಧೆ** (ನಾ). = ಕೇವಲಜ್ಞಾನ: ಅವನು ಕುಲಹೀನನೇ ಆಗಿದ್ದರೆ ಕೇವಲ ಬೋಧೆಯುಳ್ಳ ಪರಶುರಾಮನು . . . ದಿವ್ಯಬಾಣಾವಳಿಯನ್ನು ಆವನಿಗೆ ಕೊಡುತ್ತಿದ್ದನೆ (ಭಾಮುಣಿ. ೨೫). [< ಕೇವಲಬೋಧ]

**ಕೇವಲಮಿತ್ರ** (ನಾ). ಆಪ್ತಮಿತ್ರ; ಆತ್ಮೀಯ ಗೆಳೆಯ: ಪದ್ಮಲೋಚನನ ಕೇವಲಮಿತ್ರ ಫಣಿಸೂತ್ರ (ನವಮೋ. ೪–೧). [ಕೇವಲ + ಮಿತ್ರ]

**ಕೇವಲಲಬ್ಧಿ** (ನಾ). [ಜೈನ] ಪಂಚಪರಮೇಷ್ಠಿಗಳ ಒಂಬತ್ತು ಲಬ್ಧಿಗಳಲ್ಲಿ ಒಂದು: ವಿಗತಘಾತಿ ಚತುಷ್ಟಯರನಂತಜ್ಞಾನಾದಿ ನವ ಕೇವಲಲಬ್ಧಿವಡೆವುದುಂ (ಪಂರಾಮಾ. ೮–೬೪ವ). [ಕೇವಲ + ಲಬ್ಧಿ]

**ಕೇವಲವಿಭೂತಿ** (ನಾ). = ಕೇವಲಜ್ಞಾನ: ಸುಧರ್ಮಾಚಾರ್ಯರ್ . . . ಘಾತಿಕರ್ಮಂಗಳಂ ಘಾತಿಸಿ ಕೇವಲ ವಿಭೂತಿಯಂ ಪಡೆದು (ಸುಕುಮಾ. ೪–೨ ವ). [ಕೇವಲ + ವಿಭೂತಿ]

**ಕೇವಲಾವಗಮ** (ನಾ). = ಕೇವಲಜ್ಞಾನ: ಸುತ್ತುಚಿಯೆ ಕರ್ಮ ಧ್ಯಾನಬಂಧಂ ಕ್ರಮಕ್ರಮದಿಂದಾದುದು ಕೇವಲಾವಗಮದಿಂ ತ್ರೈಲೋಕ್ಯವಿಕ್ಷೋಭಣಂ (ಶಾಂತಿಪು. ೯–೨೩). [ಕೇವಲ + ಅವಗಮ]

**ಕೇವಲಾವಸ್ಥೆ** (ನಾ). ಏಕಾಕಿಯಾಗಿರುವ ಸ್ಥಿತಿ; ಆತ್ಮಲೀನವಾಗಿರುವ ಅವಸ್ಥೆ: ಶ್ವೇತಾಶ್ವತರ ಶ್ರುತಿಯು . . . ಪ್ರಳಯಕಾಲದಲ್ಲಿ ಪರಮಾತ್ಮನ ಕೇವಲಾವಸ್ಥೆಯನ್ನು ವಿವರಿಸುತ್ತದೆ (ಶಕ್ತಿವಿ. ೨೪); ಮಹಾರಾಜನಿಗೆ ಲೀಲಾವಸ್ಥೆ, ಕೇವಲಾವಸ್ಥೆ ಎಂದು ಎರಡು ಅವಸ್ಥೆಗಳಿರುತ್ತವೆ. ಕೇವಲಾವಸ್ಥೆಯಲ್ಲಿರುವಾಗ ಯಾವ ಕಾರ್ಯಕ್ಕೂ ತೊಡಗದೆ ಶಾಂತನಾಗಿರುತ್ತಾನೆ (ಭಾರದ. ೨೫೨). [ಕೇವಲ + ಅವಸ್ಥೆ]

**ಕೇವಲಿ,** ಕೇವಳಿ$_2$ (ನಾ). ಕೇವಲಜ್ಞಾನವನ್ನು ಪಡೆದವನು: ಇಪ್ಪತ್ತು ಸಾಸಿರ್ವರ್ ಕೇವಲಿಗಳುಂ (ಅಜಿಪು. ೮–೨೫ ವ); ಕೇವಲಿ ಪೂಜೆಗೆ ಬಂದತ್ತು ಚತುರ್ನಿಕಾಯ ದೇವನಿಕಾಯಂ (ಪಂರಾಮಾ. ೮–೫೦); ಕೇವಲಿಯ ವಚವೆಂದಿಗೂ ಸಟೆಯಲ್ಲ (ಬಿಜ್ಜಪು. ೧೧೨–೯೪). **ಕೇವಳಿ$_2$:** ಗುಣಧರ ಕೇವಳಿಗಳ ಪಾದಪದ್ಮಮೂಲದೊಳ್ (ಆದಿಪು. ೧–೮೦ವ); ಶುಕ್ಲಧ್ಯಾನದಿಂ ಘಾತಿಕ್ಷಯಂಗೆಯ್ದು ಕೇವಳಿಯಾಗಿ (ಚಾವುಂಪು. ೧೫–೬). [ಸಂ. ಕೇವಲಿನ್]

**ಕೇವಲಿತ್ವ** (ನಾ). ಕೇವಲಜ್ಞಾನಿಯ ಸ್ಥಿತಿ: ತನ್ನ ಆತ್ಮಕಲ್ಯಾಣದ ಮಾರ್ಗವನ್ನು ಬಾಹ್ಯಜಗತ್ತನ್ನು ಮತ್ತು ಬಾಹ್ಯಜಗತ್ತಿನ ಕೂಡ ತನ್ನ ಸಂಬಂಧವನ್ನು ಸಂಪೂರ್ಣವಾಗಿ ತಿಳಿದುಕೊಳ್ಳುವುದೇ ಕೇವಲಿತ್ವವಾಗಿದೆ, ಸರ್ವಜ್ಞತ್ವವಾಗಿದೆ (ಜೈನಪ. ೫೧). [ಸಂ.]

**ಕೇವಲಿಪೂಜೆ,** ಕೇವಳಿಪೂಜೆ (ನಾ). ಕೇವಲಿತ್ವವನ್ನು ಪಡೆದವನ ಪೂಜೆ: ಅಜಿತಸೇನ ಮುನಿಗಳ್ಗೆ ಕೇವಲಜ್ಞಾನಂ ಪುಟ್ಟೆ ಕೇವಲಿಪೂಜೆಯಂ ಮಾಡಿ ಪೋದನ್ (ಚಾವುಂಪು. ೨೨೦). **ಕೇವಳಿಪೂಜೆ:** ಮುಖ್ಯಮಪ್ಪ ಕೇವಳಿಪೂಜೆಯಂ ವಿರೋಧಿಯಿಂ ಮಾಡಿದೊಡೆ (ಚಾವುಂಪು. ೧೬–೧೦). [ಕೇವಲಿ + ಪೂಜೆ]

**ಕೇವಳ** 'ಕೇವಲ' ನೋ.

**ಕೇವಳಜ್ಞಾನ** 'ಕೇವಲಜ್ಞಾನ' ನೋ.

**ಕೇವಳಜ್ಞಾನಿ** 'ಕೇವಲಜ್ಞಾನಿ' ನೋ.

**ಕೇವಳಬೋಧ** 'ಕೇವಲಬೋಧ' ನೋ.

**ಕೇವಳಲೋಚನ** (ನಾ). = ಕೇವಲದರ್ಶನ: ಕರ್ಮರಿಪು ವಿಜಯದೊಳಾಸಾದಿತ ಕೇವಳಲೋಚನನಾದೇವಂ ಮೋಕ್ಷಲಕ್ಷ್ಮಿಗಧಿಪತಿಯಾದಂ (ಶಾಂತಿಪು. ೭–೫೨). [ಕೇವಳ (= ಕೇವಲ) + ಲೋಚನ]

**ಕೇವಳಿ$_1$** (ನಾ). ಒಬ್ಬಾತನ ಹೆಸರು: ಬಿಸಗೆಯ್ದ ಆ ವನ್ಯದಿ ಕಾಮಸರ ಆಚಾರಿಯ ಮಗ ಕೇವಳಿ (ಎಕ. IX, ಹೊಸಕೋ. ೮೫–೭; 750). [?]

**ಕೇವಳಿ$_2$** 'ಕೇವಲಿ' ನೋ.

**ಕೇವಳಿಪೂಜೆ** 'ಕೇವಲಿಪೂಜೆ' ನೋ.

**ಕೇವಳಿಸು** 'ಕೇವಣಿಸು' ನೋ.

5 10 15 20 25 30 35 40 45

**ಕೇವು** (ನಾ). ಸಂಭೋಗ; ರತಿಕ್ರೀಡೆ: (ಶ). [ಕೇ + -ವು]

**ಕೇವೆ** (ನಾ). ಕೆಂಬಣ್ಣದ ಕಲ್ಲು; ಗೈರಿಕ; ಕಾವಿ: ಪರ್ವತದಿಂದ ಕೇವೆಯ ಪ್ರವಾಹವು ಹರಿದು ಬರುವಂತೆ (ತುಳಸಿ. ೨೨೮); ಆ ಮೂವರೂ ಮೃಗಚರ್ಮ, ದಂಡ, ಕಮಂಡಲು, ಕೇವೆಯ ಬಟ್ಟೆ ಇವನ್ನು ಧರಿಸಿ (ಮಭಾರ. ೩೯); ಕೇವೆಯ ಶಾಟಿಯನ್ನುಟ್ಟು ಕೇವೆಯ ಶಾಟಿಯನ್ನು ಹೊದ್ದುಕೊಂಡ ಬ್ರಹ್ಮಚಾರಿಯು . . . ಪೂರ್ವಾಚಲನಂತೆ ಕಾಣುತ್ತಿದ್ದನು (ಯದುರಾ. ೩೩). [< ಕಾವಿ ?]

**ಕೇಶ** (ನಾ). ೧. ಕೂದಲು; ತಲೆಗೂದಲು: "ಕಚಂ ಶಿರಸಿಜಂ ಕೇಶಮಾವಾಳಮೆನೆ ಕೂಂದಲಕ್ಕು" (ಮಂಗರಾ. ೯೪-೫). ೨. ಒಂದು ಬಗೆಯ ಸುಗಂಧ ದ್ರವ್ಯ; ಮುಡಿವಾಳ; ಲಾಮಂಚ: "ಕುಂತಳಃ - ಮುಡಿವಾಳ, ಕೇಶ" (ಓಷಧಿ. ೩೫). [ಸಂ.]

**ಕೇಶಕಲ್ಯಾಣ** (ನಾ). [ಬೌದ್ಧ] ಕೇಶಸೌಂದರ್ಯ; ಹೆಂಗಸರಿಗೆ ಉಂಟಾಗುವ ಐದು ಕಲ್ಯಾಣಗಳಲ್ಲಿ ಒಂದು: "ಮಹತ್ತಾದ ಪುಣ್ಯ ಮಾಡಿದ ಹೆಂಗಸಿಗೆ ತಲೆಗೂದಲು . . . ಬಿಚ್ಚಿ ಕೆಳಗೆ ಬಿಟ್ಟರೆ ಉಡೆಯ ಅಂಚಿನವರೆಗೂ ಮುಟ್ಟುತ್ತದೆ. ಕೊನೆ ಉಂಗುರವಾಗಿ ಮೇಲಕ್ಕೆ ಸುರುಳಿ ಸುತ್ತಿರುತ್ತದೆ. ಇದು ಕೇಶಕಲ್ಯಾಣ" (ಹತ್ತುಮ. ೨೧). [ಕೇಶ + ಕಲ್ಯಾಣ]

**ಕೇಶಘ್ನ** (ನಾ). ತಲೆಯನ್ನು ಬೋಳಾಗಿಸುವ ರೋಗ; ತಿಗುಳಿ ರೋಗ: "ಕೇಶಘ್ನಮೆನಲು ತೇಮುಳು" (ಮಂಗರಾ. ೧೧೪-೩). [ಸಂ.]

**ಕೇಶಪಕ್ಷ** (ನಾ). ೧. ದಟ್ಟವಾದ ಕೂದಲು: (ಶ). ೨. ದಟ್ಟವಾಗಿ ಕೂದಲುಳ್ಳ ತಲೆ: (ಶ). ೩. ಜುಟ್ಟು; ಕೇಶಗುಚ್ಛ; ಕೇಶಪಾಶ: (ಶ). [ಕೇಶ + ಪಕ್ಷ]

**ಕೇಶಪಾಶ** (ನಾ). ಸಮೃದ್ಧವಾದ ತಲೆಗೂದಲು; ಮುಡಿ; ಕೇಶಹಸ್ತ: ಕರ್ಮದ ತೊಡರಂ ಪಱಿವಂತೆ ಕೇಶಪಾಶಮನಂತಾಗಡೆ ಪಱಿದು (ಆದಿಪು. ೬-೨೪); ಸಾಮಾನ್ಯಮೆ ಬಗೆಯೆ ಭವತ್ಕೇಶಪಾಶಪ್ರಪಂಚಂ (ಪಂಪಭಾ. ೧೨-೧೫೬). [ಕೇಶ + ಪಾಶ]

**ಕೇಶಪ್ರತಿಲಿಂಗ** (ನಾ). [ಜೈನ] ಮುನಿಗಳ ಯೋಗಸಾಧನೆಯ ಒಂದು ವಿಧ; ಒಂದು ಸನ್ಮಾರ್ಗಸಾಧನ: ಸ್ತ್ರೀಲಿಂಗಂ . . . ಕೇಶಪ್ರತಿಲಿಂಗಮೆಂದುಂ ಅಲ್ಲಿ ಜಯಲಿಂಗಮೆಂದುಂ ಚತುರ್ವಿಧಮಕ್ಕುಂ . . . ಕೇಶಪ್ರತಿಲಿಂಗಂ ಸನ್ಮಾರ್ಗಸಾಧನಂ (ಚಾವುಂಪು. ೨೪೧). [?]

**ಕೇಶಬಂಧ** (ನಾ). ೧. ಕೂದಲುಗಳನ್ನು ಕಟ್ಟುವಿಕೆ; ಕೇಶರಚನೆ; ಮುಡಿ: ಲಲಾಟನಿಹಿತ ಕೌಸುಂಭಾಂಶುಕ ಪಟ್ಟಿಕಾ ಪ್ರಾಂತ ನಿಬಿಡ ನಿಬದ್ಧ ಕೇಶಬಂಧಂ (ಆದಿಪು. ೧೩-೪೩ ವ); ಕೀಱುವೀಲಿಯ ಪೆಂಚೆಯದ ಕೇಶಬಂಧದೊಳಂ (ಜಗವಿ. ೪-೮೦). ೨. [ನಾಟ್ಯ] ನೃತ್ಯಹಸ್ತಗಳಲ್ಲಿ ಒಂದು: ಎರಡುಂ ತ್ರಿಪತಾಕಂ ಬೆಚ್ಚರದಿಂ ಬರಿಯಲ್ಲಿ ನಿಂದು ಮುಟ್ಟಿದೆ ಶಿರಕಂ ಪಿರಿದುಂ ಕಟಿಗಂ ತಿರುಗಲ್ ಪರಿಣತಿಯಿಂ ಕೇಶಬಂಧಹಸ್ತಮೆನಿಕ್ಕುಂ (ಲಾಸ್ಯರಂ. ೨-೪೪); ಈ ಕೆಳಗೆ ಹೇಳಿರುವ ಹಸ್ತಗಳು ನೃತ್ಯಹಸ್ತಗಳು: ೧. ಚತುರಸ್ತ . . . ೧೪ ಕೇಶಬಂಧ (ಅಭಾನೃ. ೪೯). [ಕೇಶ + ಬಂಧ]

**ಕೇಶಬಂಧನ** (ನಾ). = ಕೇಶಬಂಧ: (ಶ). [ಕೇಶ + ಬಂಧನ]

**ಕೇಶಬಾರಿ** (ನಾ). ಯಕ್ಷಗಾನದಲ್ಲಿ ಬಳಸುವ ಒಂದು ಬಗೆಯ ಕಿರೀಟ: ಈ ಬಟ್ಟಲು ಕಿರೀಟ ಅಥವಾ 'ಕೇಶಬಾರಿ' ಕಿರೀಟವು ಭೂತದ ಅಣಿಯಷ್ಟು ಅಗಲ ಅಥವಾ ವಿಶಾಲವಲ್ಲದಿದ್ದರೂ ಸಾಮಾನ್ಯವಾಗಿ ಆ ರೂಪದಲ್ಲಿದೆ (ಪಾರ್ತಿಸು. ೪೫). [?]

**ಕೇಶಭೂಷೆ** (ನಾ). ತಲೆಗೂದಲಿನ ಅಲಂಕರಣ: ಮೋಹಿನಿ ಮಧ್ಯಾಹ್ನದ ಕೇಶಭೂಷೆಯಲ್ಲಿ ತೊಡಗಿದಳು (ಕಮನೆ. ೧೨೯). [ಕೇಶ + ಭೂಷೆ]

**ಕೇಶಮಾರ್ಜನ** (ನಾ). ೧. ತಲೆಯನ್ನು ಬಾಚುವಿಕೆ. ೨. ಬಾಚಣಿಗೆ: "ಕಂಕತ(ಂ)ಃ, ಕೇಶಮಾರ್ಜನಂ - ಈ ೨ ಹಣಿಗೆ" (ಹಲಾಯು. ೫೨-೧೫೬). [ಸಂ.]

**ಕೇಶಮಾರ್ಜನಿ** (ನಾ). ಬಾಚುವ ಹಣಿಗೆ: "ಹಣಿಗೆ ಕೇಶಮಾರ್ಜನಿ ಕಂಕತಂ" (ಮಂಗರಾ. ೬೨-೨೧). [ಸಂ. ಕೇಶಮಾರ್ಜನೀ]

**ಕೇಶರ** (ನಾ). ೧. ಕುಂಕುಮ ಕೇಸರಿ: ಸರಸವಾದ ಹಾಲಿಗೆ ಸುಂದರ ರೂಪು ಕೊಡುವ ಕೇಶರ (ನಿರಾಭ. X ಮುನ್ನುಡಿ). ೨. ಕೇಸರಿಬಣ್ಣ: ಕೇಶರದ ಬಣ್ಣವನ್ನು ಕೊಡಬೇಕಾದರೆ . . . ಅದರಮೇಲೆ ಕುಸಂಬಿಯನ್ನು ತೆಳುವಾಗಿ ಯೆದ್ದುವರು (ಕಭಾಗ. ೧೫೩). [ಸಂ.]

**ಕೇಶರಾಜ** (ನಾ). ಗರಗದ ಸೊಪ್ಪು: ಕೇಶರಾಜ, ಗರ್ಗರಿ (ವ್ಯೌಗಿ. ೭೮-೧೬೦೫). [ಸಂ.]

**ಕೇಶವ** (ಗು). ೧. ಸಮೃದ್ಧವಾದ ಹಾಗೂ ಸುಂದರವಾದ ತಲೆಗೂದಲನ್ನುಳ್ಳ: ಕೇಶವಃ - ಕೇಶಿಕಃ - ಕೇಶೀ ೩ ಒಳ್ಳೇ ಮಂಡೆಗೂದಲುಳ್ಳವನು, ಉದ್ದವಾದ ಕಪ್ಪನೇ ಬಹಳ ಜುಟ್ಟುಳ್ಳವನು (ಸಿದ್ಧಾಂತಿ. ೧೫೭). (ನಾ). ೨. ವಿಷ್ಣು; ಕೃಷ್ಣ: ಕೇಶಿಯಂ ಕೊಂದುದಱಿಂ ನೀನಿಂ ಕೇಶವನೆಂಬಭಿಧಾನದೆ ವರ್ತಿಸು ಮುರಾರಿ (ಜಗವಿ. ೫-೫೧). ೩. 'ಶಬ್ದಮಣಿದರ್ಪಣ'ದ ಕರ್ತೃವಾದ ಕೇಶಿರಾಜನೆಂಬ ವೈಯಾಕರಣಿ: ಕವಿ ಸುಮನೋಬಾಣನ . . . ದೌಹಿತ್ರನೆನಾಂ ಕವಿ ಕೇಶವನೆಂ (ಶಮದ. ೨). [ಸಂ.]

**ಕೇಶವಕ್ರವಿಂತ** (ನಾ). ಒಬ್ಬಾತನ ಹೆಸರು: ಕೋಟಿಯಮ್ಮನ ಕೇಶವಕ್ರವಿನ್ತರುಂ ಗಂಗೆಯ ಶಿವಣಕ್ರವಿನ್ತರವಪ್ರ[ರ್]ಮುಖವಾಗಿ ಸಾಸಿರ್ವ್ವರುಂ (ಕಇ. IV, ೩೨-೧೭; 1088). [ಕೇಶವ + ಕ್ರವಿಂತ (< ಕ್ರಮಿತ)]

**ಕೇಶವಪನ** (ನಾ). ಕೂದಲು ಕತ್ತರಿಸುವಿಕೆ; ಚೌಲಕ್ರಿಯೆ: ಕ್ಷೌರಕರ್ಮಂಗೈಸಿ . . . ಪುಣ್ಯಾಹಂ ಬಾಜಿಸಿ ಬಾ[ಚೌ]ಲಕ್ರಿಯೆಯ ಮಾಳ್ಪುದು ಕೇಶವಪನಕ್ರಿಯೆ (ಚಾವುಂಪು. ೨೩೨). [ಕೇಶ + ವಪನ]

**ಕೇಶವಪುತ್ರ** (ನಾ). ೧. ಕೃಷ್ಣನ ಮಗ; ಮನ್ಮಥ. ೨. ಕೇಶವನೆಂಬಾತನ ಮಗ. ೧, ೨: ಯುವತೀವ್ರಾತಮನೋವಿಮೋಹನಕರಂ ಶೃಂಗಾರ ಜನ್ಮಾಕರಂ . . . ಈಸು ಕೇಶವ ಪುತ್ರಂಗೆಸೆವಾಚಿರಾಜ ವಿಭುವಿಂಗೊಪ್ಪುವುದೇಂ ಚೋದ್ಯಮೇ (ಎಕ. VI, ಕಡೂರು. ೬೬-೩೭; 1172). [ಕೇಶವ + ಪುತ್ರ]

**ಕೇಶವಿಧಾನ** (ನಾ). ತಲೆಗೂದಲನ್ನು ಕಟ್ಟುವ ರೀತಿ; ಕೇಶರಚನೆ: ಇಂತಹ ಕೇಶವಿಧಾನ ಸುಮೇರಿಯನ್ ಮತ್ತು ಈಜಿಪ್ಷಿಯನ್ ಸಂಸ್ಕೃತಿಗಳಲ್ಲಿ ಕಂಡುಬರುವುದಿಲ್ಲ (ಭಾರದ. ೧೩). [ಕೇಶ + ವಿಧಾನ]

**ಕೇಶವಿನ್ಯಾಸ** (ನಾ). = ಕೇಶವಿಧಾನ: ಕೇಶವಿನ್ಯಾಸದಲ್ಲಿ ಹೆರಳು ಹಾಕುವುದರಲ್ಲಿ ಶ್ಯಾಮಸುಂದರಿಗೆ ಉಂಟಾಗಿದ್ದ ಕೌಶಲವು ಚೆನ್ನಾಗಿ ವ್ಯಕ್ತವಾಗಿದ್ದಿತು (ಕಪಾಕುಂ. ೯೪). [ಕೇಶ + ವಿನ್ಯಾಸ]

**ಕೇಶವೇಶ** (ನಾ). ಕೇಶರಚನೆ; ಜಡೆ; ತುರುಬು: "ಕಬರೀ - ಕೇಶವೇಶಃ - ೨ ತುರುಬು" (ಸಿದ್ಧಾಂತಿ. ೧೭೧). [ಸಂ.]

**ಕೇಶಹಸ್ತ** (ನಾ). ಕೇಶಕಲಾಪ; ಕೇಶಪಾಶ: ವಿಜಯಶ್ರೀ ಕೇಶಹಸ್ತಶಂಕಾಕಾರಿಶಂಖಿಕೇಳೀ ಮಯೂರ ಶೋಭೆಯೊಳಂ (ಆದಿಪು. ೧೨-೬೧ವ); ಕುರುಕುಲ ಜೀವಾಕರ್ಷಣಪರಿಣತಮಿದು ಕಾಳಹಸ್ತಮಲ್ಲದೆ ಪರಮೇಶ್ವರಿ ಕೇಶಹಸ್ತಮಕ್ಕುಮೆ (ಗದಾಯು. ೧-೬೭). [ಕೇಶ + ಹಸ್ತ]

**ಕೇಶಾಕೇಶಿ** (ನಾ). ಒಬ್ಬನ ಕೂದಲನ್ನು ಇನ್ನೊಬ್ಬನು ಹಿಡಿದು ಎಳೆದಾಡುತ್ತ ಮಾಡುವ ಯುದ್ಧ : ಕೇಶಾಕೇಶಿಯಲಿ ಹಿಡಿದಿಜಿವವನೆ ಕಾಲಾಳು (ಕುವ್ಯಾಸ. ೧-೭೫) ; ಕೆಡಹಿ ಮೆಟ್ಟುತ್ತ ಕೇಶಾಕೇಶಿ ಬಳಿಕ ದಂತಾದಂತಿ (ವೀರ್ಶೈವ. ೩-೮-೧೫) ; ಮುಷ್ಟಾಮುಷ್ಟಿಕೂಡೆ ಕೇಶಾಕೇಶಿ ಪಿರಿದು ಹಾಣಾಹಣಿಯಂತೆ ಹೆಲ್ಲಾಹೆಲ್ಲಿ ಯುದ್ಧಮಾದುದು (ಸಾಳ್ವಭಾ. ೧೫-೧೪) ; ಕೇಶಾಕೇಶಿ ಖಡ್ಗಾಖಡ್ಗಿ ಹೈಹುಯಿ್ ಜಗಳಗಳಾಗಿದ್ದುವು (ನಾಡಿಗೇ. ೨೪೧). [ಸಂ.]

**ಕೇಶಾವಪಾಟನ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು : ಕೇಶಾವಪಾಟನಮುಂ ಲಿಪಿಸಂಖ್ಯಾನ ಸಂಗ್ರಾಹಮುಂ . . . ಅಪ್ಪಯ್ಯುತ್ತು ಮೂಜು ಗರ್ಭಾನ್ವಯ ಕ್ರಿಯೆಗಳೊಳು (ಚಾವುಂಪು. ೨೨೯). [ಕೇಶ + ಅವಪಾಟನ]

**ಕೇಶಾವಾಪ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು : ಕೇಶಾವಾಪ . . . ಎಂಬಯ್ಯುತ್ತಮೂಜು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳಂ (ಆದಿಪು. ೧೫-೧೫ ವ). [ಕೇಶ + ಅವಾಪ]

**ಕೇಶಾಳಿ** (ನಾ). ಕೂದಲುಗಳ ಸಮೂಹ ; ಕೇಶಪಾಶ : ಬೆನ್ನಂ ಮೋದೆ ಕೇಶಾಳಿ (ಕಾವ್ಯಸಾ. ೬೫೭ ಶೂದ್ರಕ) ; ಭ್ರೂಲತೆಯ ಸುರಚಾಪದುರು ಕೇಶಾಳಿಗಳ ಕಾರ್ಮುಗಿಲಪಾಂಗದ ಸಾಲ ಕುಡಿಮಿಂಚುಗಳ (ಕುವ್ಯಾಉ. ೬-೧೭). [ಕೇಶ + ಅಳಿ$_4$ (= ಅಲಿ$_4$)]

**ಕೇಶಿ** (ಗು). ೧. ದಟ್ಟವಾದ ಅಥವಾ ಸೊಗಸಾದ ಕೂದಲನ್ನುಳ್ಳ : ಕೇಶವಃ, ಕೇಶಿಕಃ, ಕೇಶೀ - ಇ ಒಳ್ಳೇ ಮಂಡೆಗೂದಲುಳ್ಳವನು, ಉದ್ದವಾದ ಕಪ್ಪನೇ ಬಹಳ ಜುಟ್ಟುಳ್ಳವನು (ಸಿದ್ಧಾಂತಿ. ೧೫೭). (ನಾ). ೨. ಕೃಷ್ಣನಿಂದ ಕೊಲ್ಲಲ್ಪಟ್ಟ ಒಬ್ಬ ರಾಕ್ಷಸ : ಕೊಪ್ಪರದಿಂ ಪಾಯ್ವುಳವಿಂದೆ ಕೇಶಿ ಪರಿತಂದಂ ಕಂಸನಾದೇಶದಿಂ (ಜಗವಿ. ೫-೪೪). [ಸಂ. ಕೇಶಿನ್]

**ಕೇಶಿಕ** (ನಾ). ಒಳ್ಳೆಯ ಕೂದಲುಳ್ಳವನು ; ಸೊಗಸಾದ ಕೂದಲುಳ್ಳವನು : "ಕೇಶವಃ, ಕೇಶಿಕಃ, ಕೇಶೀ-ಇ ಒಳ್ಳೇ ಮಂಡೆ ಗೂದಲುಳ್ಳವನು" (ಸಿದ್ಧಾಂತಿ. ೧೫೭). [ಸಂ.]

**ಕೇಶಿನಿ** (ನಾ). ೧. ಕಡಿಯಾಲದ ಗಿಡ : "ಶಂಖಿನಿ, ಚೋರಪುಷ್ಪೀ, ಕೇಶಿನೀ - ಇ ಕಡಿಯಾವದಗಿಡದಪೆಸರುಗಳು" (ಸಿದ್ಧಾಂತಿ. ೧೨೩). ೨. ಸಗರಚಕ್ರವರ್ತಿಯ ಹೆಂಡತಿ. [ಸಂ. ಕೇಶಿನೀ]

**ಕೇಶಿಯಣ** (ನಾ). ಒಬ್ಬಾತನ ಹೆಸರು : ಬಮ್ಮೆಯ ಸಾಹಣಿಯ ಅಳಿಯ ಕೇಶಿಯಣಗೊಂಡಯ್ಯ (ಎಕ. VII, ಚನ್ನಗಿ, ೩೨-೬೦: ಸು. 1050). [ಕೇಶಿ + ಅಣ$_0$ (< ಅಣ್ಣ$_1$)]

**ಕೇಶಿಸೂದನ** (ನಾ). ಕೇಶಿಯೆಂಬ ರಾಕ್ಷಸನನ್ನು ಕೊಂದವನು ; ಕೃಷ್ಣ : ಕೇಶವ ಕೇಶಿಸೂದನ ಕಮಲಾಂಬಕ (ಅಕ್ಷಸಾಂ. ೬೧-೩). [ಕೇಶಿ + ಸೂದನ]

**ಕೇಶಿಹರ** (ನಾ). = ಕೇಶಿಸೂದನ. [ಸಂ.]

**ಕೇಶೋತ್ಕರ** (ನಾ). ಕೇಶರಾಶಿ ; ಕೇಶಪಾಶ : ಆಕುಲಮಾಯ್ತೊರ್ತಳದಿಂದೆ ಕಟ್ಟಿದುದರಿಂ ಬಿರ್ಚಿರ್ದ ಕೇಶೋತ್ಕರಂ (ಶಾಕುಂತ. ೧೭-೩೦). [ಕೇಶ + ಉತ್ಕರ]

**ಕೇಶೋತ್ಪಾಟನ** (ನಾ). = ಕೇಶಾವಪಾಟನ : ಕೇಶೋತ್ಪಾಟನದಂದು ಭಾವಿಸೆ ನಮಸ್ಸಿದ್ಧೇಭ್ಯ ಎಂದಾದಿ ತೀರ್ಥೇಶರ್ ವಂದಿಸಿ ದೀಕ್ಷೆಗೆಯ್ದ ರಜರರ್ ಸಿದ್ಧಂ ನಮಾದ್ಯಂ ಜಗಕ್ಕೆ (ಶಾಂತಿಪು. ೧-೨). [ಕೇಶ + ಉತ್ಪಾಟನ]

**ಕೇಸ$_1$** 'ಕೇಸು$_3$' ನೋ.

**ಕೇಸ$_2$** (ನಾ). ತಲೆಗೂದಲು : ಕರ್ಪುವೆತ್ತ ಕೇಸಂ ದಳವಾದ ಕಬ್ಬುಲೆಯ ನೇಬ್ [ಳ]ಸೆ (ಕಬ್ಬಿಕಾ. ೧೩೦) ; ಕೂಸು ನನ ಕಂದಯ್ಯ ಕೇಸ ಬಿಟ್ಟಾಡಾಗ (ಗರತಿ. ೮೬). [< ಸಂ. ಕೇಶ]

**ಕೇಸ$_3$** (ನಾ). ಒಂದು ಬಗೆಯ ವಾದ್ಯ (?) ; ಒಂದು ಬಗೆಯ ತಾಮ್ರದ ತಾಳ (?) : ಭೇರಿ ಜೇಗಟೆ ಕೇಸ ಕಂಚು ಮುಟಗೆ ಮಾಡಿದು ಮುಗುವಿನ ವೊಳಗೆ (ಸೌಇಇ. IX-ii, ೪೭೧-೪೭ ; 1482). [?]

**ಕೇಸಕ್ಕಿ** (ನಾ). ಕೆಂಪು ಅಕ್ಕಿ ; ತೊಳಸದ ಅಕ್ಕಿ : ಉಯ್ ವೆರಸಿರ್ದ ಧಾನ್ಯದಂತೆ ಕೇಸಕ್ಕಿಯಂತೆ (ಧರ್ಮಾಮೃ. ೧೨-೨೪) ; ಕೇಸಡಿ, ಕೇಸುರಿ, ಕೇಸಕ್ಕಿ (ಶಮದ. ೧೪೨ ಪ್ರಯೋ) ; ಕಾಸು ಕಟ್ಟಿಟ್ಟು ಕೇಸಕ್ಕಿ ಉಂಬುವನಾ (ಪುರಂದ. ೧-೧೧೧-೪) ; ಉಯ್ಯಮುನ್ನೊತ್ತಿ ಕೇಸಕ್ಕಿಯ ತಳಿಸುವ ರುಯ್ಯುದ್ದು ಬಿಳಿಯಕ್ಕಿ ಬಿಳುಪು (ಭರತೇ. ೫೪-೨೧) ; ಕರಿಯ ನೆಲದ ಮೇಲೆ ತಾಮ್ರವರ್ಣದ ಕೇಸಕ್ಕಿಯನ್ನದ ರಾಶಿ ಕೆದರಿ ಬಿದ್ದಿತು (ಕಾನೂರು. ೫೭). [ಕೇಸು$_3$ + ಅಕ್ಕಿ$_1$]

**ಕೇಸಡಗು** (ನಾ). ಕೆಂಪಾಗಿರುವ ಮಾಂಸ : ಶಿಶು ಶ್ರೇಣಿಗಳ್ ಪಿಡಿದುಕರ್ಚಿಂ ಪೊಲಗೆಟ್ಟು ಪೊಕ್ಕ ಮೃಗಶಾಬಾನೀಕಮಂ ಕೊಂದು ಕೇಸಡಗಂ ಸೂಡುವರ್ (ಅರ್ಧನೇ. ೩-೫೦). [ಕೇಸು$_3$ + ಅಡಗು$_2$]

**ಕೇಸಡಿ** (ನಾ). ಕೆಂಪಾದ ಅಡಿ ; ಕೆಂಪುವರ್ಣದ ಪಾದ : ಕೇಸಡಿಗಳಂ ಹರಿಚಂದನದಿಂದ ಮೂಡಿ (ಕಾದಂಉ. ೭೮೫) ; ಕೇಸಡಿ ಕೆಂದಾವರೆ ವೂಗಳಂ ಕೆದಜೆ (ಕಬ್ಬಿಕಾ. ೯೩) ; ಅಡಿಯನೂಡದೆ ಕೆಚ್ಚನಿಹ ಕೇಸಡಿಗಳು (ಸಾಳ್ವಭಾ. ೨೦-೧೭). [ಕೇಸು$_3$ + ಅಡಿ$_1$]

**ಕೇಸಡಿಯ** (ನಾ). ಕೆಂಪಾದ ಪಾದಗಳುಳ್ಳವನು : ಬಟ್ಟೆದೊಡೆಯಂ ಕೇಸಡಿಯಂ (ಶಮದ. ೧೪೬ ಪ್ರಯೋ). [ಕೇಸಡಿ + -ಅ$_7$]

**ಕೇಸಡಿವೆಳಗು** (ನಾ). ಕೆಂಪಾದ ಪಾದಗಳ ಕಾಂತಿ : ಬಿಡುಮುತ್ತಿನ ಕಡೆಯಂ ಕೇಸಡಿವೆಳಗಿಂ ಮುಸುಕಿ (ವರ್ಧಪು. ೫-೬) ; ಕೇಸಡಿವೆಳಗು ಸೂಸಿಸುತ್ತಂ ಒಂದು ಮುಖದೊಳ್ ಸ್ವಸ್ಥವಾಗಿ ನಿಲ್ಲದೆ (ಪದ್ಮರಾ. ೮-೯೭). [ಕೇಸಡಿ + ಬೆಳಗು$_2$]

**ಕೇಸಣ್ಣ** (ನಾ). ಒಬ್ಬಾತನ ಹೆಸರು : ಕಪ್ಪುರ ಕೇಸಣ್ಣನ ಮಗಳ್ ಲಚಿಬೆದ ಜವ್ವ (ಎಕ. VII, ಶಿಕಾರಿ. ೪೫-೬ ; ಸು. 890) ; ಸ್ವಸ್ತಿಶ್ರೀ ಅತ್ತೆಯರ ಕೇಸಣ್ಣನ ಮಗನ್ (ಎಕ. VII, ಶಿಕಾರಿ. ೪೫-೬೦ ; ಸು. 890). [ಕೇಸ$_0$ + ಅಣ್ಣ$_1$]

**ಕೇಸಬ್ಬೆ** (ನಾ). ಒಬ್ಬಾಕೆಯ ಹೆಸರು : ಕೇಸಬ್ಬೆಯಿತ್ತ ಕೈಯ್ಯಿ (ಇಅ. XII, ೨೨೩-೧೬ ; 929). [ಕೇಸ$_0$ + ಅಬ್ಬೆ$_1$]

**ಕೇಸರ** (ನಾ). ೧. ಹೂವಿನಲ್ಲಿರುವ ಎಳೆ ; ಪರಾಗತಂತು ; ಕುಸುರು : ರುದ್ರಾಕ್ಷಿಗಳನವಧರಿಸುವಾಗಲು ಮಣಿಯೊರಸಿ ಕೇಸರಗಳುದುರಿದುವೋ (ಶಂಕರದಾ. ೭-೧೦) ; ಮಾದಳದ ಹಣ್ಣಿನ ಕೇಸರದಲ್ಲಿ ಶುಂಠಿ, ಹಿಪ್ಪಲಿ . . . ಕಲಸಿ ಮೆಲ್ಲಲು ಅರೋಚಕ ಪರಿಹರಮಕ್ಕುಂ (ಸಕವೈ. ೨೬೨). ೨. ಹೂವಿನ ಹುಡಿ ; ಬಂಡು ; ಪರಾಗ : "ಅಲರ್ವುಡಿಯೆ ಕೇಸರಂ" (ಕಬ್ಬಕೈ. ೧೩). ೩. ಬಕುಲ ; ವಕುಳದ ವೃಕ್ಷ : 'ಕೇಸರದ್ರುಮ' ಪರಾ. ೪. ಸುರಗಿ ಹೂವು : ಕೇಸರದ ತುಱುಂಬಿನಿಕ್ಕಿ ಸಿರಿಕಂಡಮನೊಯ್ಯನೆ ಪೂಸಿ (ಕಾದಂಉ. ೭೮೫) ; ಕೇಸರ ಕರವೀರ . . . ಕುಸುಮಂಗಳಿಂದೆ (ಹವ್ಯಿ ರ. ೨-೫೧). ೫. ನಾಗಕೇಸರ ; ನಾಗಸಂಪಗೆ. ೬. (ಕೋಳಿ, ಕುದುರೆ ಅಥವಾ ಸಿಂಹದ) ಕತ್ತಿನ ಮೇಲಿರುವ ಕೂದಲು ; ಆಯಾಲ : "ಸ್ಕಂದದ ಮೇಲಣ ವಳಯಕ್ಕೆಂದುಂ ಕೇಸರಮದೆಂಬ ಪೆಸರುಂ" (ಅಶ್ವಶಾ. ೯-೨೮) ; ವಿವಿಧಸಟಾವಳಿ ಕಿಱುಜಡೆ ನವಕೇಸರಕಾಂತಿ ಕೊರಲ ರಕ್ಕೆಯ ರತ್ನಚ್ಛವಿಯಾಗಲ್ (ಜಗವಿ. ೩-೩೫) ; ನಾಯಿಗೆ ಕೇಸರವನು ಕಟ್ಟಿ ನೀ ಸಿಂಹವೆಂದರೆ ಅದು ಸಿಂಹವಹುದೆ (ಇಂಚಾಪ. ೧೭೯-೮೧).

೧, ೬ : ವಿಸರುಹದಂತೆ ಕೇಸರಮನಾಂತುದು (ಯಶೋಚ. ೩-೭೮). ೧, ೩, ೬ : ಕೇಸರ ಸಂಪನ್ನಮಿದು ಹರಿಯನಂಬುಜಮನ್ನೆನೆಯಿಪುದು . . . ಅರಣ್ಯಂ (ಪುಷ್ಪವು. ೫-೭೭). ೭. ಚಿನ್ನ; ಬಂಗಾರ. ೮. ಕುಂಕುಮಕೇಸರಿ : ಸಿತಾಂಬರದಿಂದೆ ಗಾಳಿಸಿಟ್ಟದಜಿಕೊಳಗಿಂಗು ಕೇಸರ ಲವಂಗದಳಂಗಳನಿಕ್ಕಿ (ಲೋಕೋಪ. ೮-೫೩); ಈ ನೆಲದ ಮಣ್ಣುವಗೆ ಕಸ್ತೂರಿ ಕೇಸರವು (ನೆಲಮು. ೫೦). [ಸಂ.]

**ಕೇಸರದ್ರುಮ** (ನಾ). ಬಕುಳ ವೃಕ್ಷ : ಅಶೋಕಮ ವಾಮಪಾದ ದಿಂದೊದೆದುದೋ ಕೇಸರದ್ರುಮಮೆ ನಿನ್ನುಮನಾನನಸಿಂಧುವಿಂದೆ ಪೂಬ್ದುದೋ ಕೃತಮಾವುದಿಂ ಮಜಿವುದೆಮ್ಮ ಮದೋತ್ಕಟ ಚೇಷ್ಟಿತಂ ಗಳಂ (ಆದಿಪು. ೧೧-೧೩೧). [ಕೇಸರ + ದ್ರುಮ]

**ಕೇಸರಫಲ** (ನಾ). ಬಕುಳಫಲ : ಕರತಳಮೊಂದಜಿಕೊಳ್ ಮಣಿ ಕಮಂಡಲು ನಾಳ ಸಮೇತಮಪ್ಪ ಕೇಸರಫಲದಂತಿರಿದ್ದುರ್ದು (ಕಾದಂಪೂ. ೭೩೩). [ಕೇಸರ + ಫಲ]

**ಕೇಸರಭಾತು** (ನಾ). ಸಕ್ಕರೆ ಹಾಗೂ ಕೇಸರಿಗಳನ್ನೂ ಸೇರಿಸಿ ಮಾಡಿದ ಅನ್ನ : ಒಂದು ಮಸಾಲೀ ಖೀರು, ಒಂದು ಕೇಸರಬಾತು ಅಷ್ಟೇ ಸಾಕು (ತಿಡುಗು. ೫೪). [ಕೇಸರ + ಭಾತು]

**ಕೇಸರಮಂಡಲ** (ನಾ). ಹೂವಿನ ನಡುವಿರುವ ಪರಾಗ ತಂತುಗಳ ಮಂಡಲ : ಕೇಸರಮಂಡಲ (Androecium) ಇದು ಪುಷ್ಪದ ಮೂರನೆಯ ಭಾಗ ಇದೇ ಸಸ್ಯದ ಗಂಡು ಜನನಾಂಗ (ಸಸ್ಯಶಾ. ೪೮). [ಕೇಸರ + ಮಂಡಲ]

**ಕೇಸರರಜ** (ನಾ). ಹೂವಿನ ಬಂಡು; ಪುಷ್ಪಪರಾಗ : ಬಾಸಣಿಸಿ ಕಮಲ ಕೆಜಿಗುವ ಕೇಸರರಜದಿಂ ತೊಳಪ್ಪ ಕಾಸಾರಮಂ (ಉದ್ಭಟ. ೬-೭೭). [ಕೇಸರ + ರಜ$_1$]

**ಕೇಸರಲ್**, ಕೇಸಲರ್ (ನಾ). ಕೆಂಪು ಹೂ : ನಿನ್ನನಾ ಕೇಸಲರ ತುರುಬಿಂದ ಕಸುವನ್ನಮೆತ್ತಿದನು (ಗಿಳಿವಿಂ. ೩೭-೮). **ಕೇಸಲರ್** : ಜಪ ರುದ್ರಾದಿಯಾದ ಕೇಲಸರ ನಿಡುದಂಡೆಗಳು (ಮಂತ್ರಶ. ೧೮೯-೯). [ಕೇಸು$_3$ + ಅರಲ್$_2$]

**ಕೇಸರಿ** (ನಾ). ೧. ಆಯಾಲವನ್ನುಳ್ಳದ್ದು. ೨. ಸಿಂಹ : ಹಿಂಡುಗಟ್ಟಿ ಅಡುವ ಮದಗಜವ ಕಂಡೆ. ಕೇಸರಿಯ ಕಂಡು ಮನ ಬೆದಜಿತ್ತು ನೋಡಾ (ಅವಚಂ. ೬೦-೨೬೧); ಇಲಿಯ ಮಾಂಸವ ಬಯಸಿ ಕೇಸರಿ . . . ತಲೆಯ ಸಿಕ್ಕಿಸಿಕೊಂಡ ಗಾದೆಯನೆಲವೊ ಮಾಡದಿರು (ಕೌಶಿರಾ. ೨೩-೯). ೩. ಕುದುರೆ. ೪. ಕೇಸರಿಬಣ್ಣ. ೫. ಕೆಂಪುಭೂಮಿ : ಗುಂಡುಮೊಗೆ ಯೊಮ್ಮತ್ತರ್ ಕೇಸರಿಯೊಮ್ಮತ್ತರ್ (ಎಕ.VII, ಶಿವಮೊ. ೧೧೫-೧೩; ?); ಮಸಾರಿ ಕೇಸರಿ ಮೊರಡಿಯ ಜಮೀನುಗಳಾದರೂ . . . ಬಿಳಿಯ ಎಳ್ಳು ಬಿತ್ತಬೇಕು (ಕೃಷಿಪ್ರ. ೨೭). ೬. ಬಕುಳದ ಹೂ : ಮೊಲ್ಲೆಮಲ್ಲಿಗೆ ಸುರಗಿ ಕುಮುದ ಕೇಸರಿ ದಂಡಿಗೆಯೊಳು (ರುಕ್ಮಾಂಗ. ೩-೨೮). ೭. ಕುಂಕುಮ ಕೇಸರಿ : ಪಚ್ಚಕರ್ಪೂರ, ಕೇಸರಿ, ಶ್ರೀಗಂಧ, ಅಗರು, ಪನ್ನೀರು ಮುಂತಾದ ಸಹಜ ಸುಗಂಧ ದ್ರವ್ಯಗಳಲ್ಲಿ ಮುಳುಗಿ ತೇಲಿದವರು ಆ ಕಾಲದವರು (ಸಾಹಿಜೀ. ೫೨). [ಸಂ. ಕೇಸರಿನ್]

**ಕೇಸರಿಕೆ** (ನಾ). ಒಂದು ಜಾತಿಯ ಮರ : ಅರಳಿ, ಬಸುರಿ, ಕೇಸರಿಕೆ, ನೀರವಂಜಿ, ಸೊಂಟಿ (ನಮ್ಮಸು. ೨೩೮). [?]

**ಕೇಸರಿಕೇತನ** (ನಾ). ೧. ಸಿಂಹದ ಗುರುತುಳ್ಳ ಧ್ವಜ. ೨. ಸಿಂಹದ ಧ್ವಜವುಳ್ಳವನು; ಭೀಮು : ಕೇಸುರಿಯಂತೆ ತಟತಟಿಸಿ ಮಿಳಿರ್ವ ಪವನತನೂಜನ ಕೇಸರಿಕೇತನ [ಪಾಠಾಂ. ಲೋತ್ಕರ]ಮಪ್ಪ ಪಟಿಯಿಗೆಯಂ ಕಂಡು (ಪಂಪಭಾ. ೧೨-೧೨೦೮). [ಕೇಸರಿ + ಕೇತನ]

**ಕೇಸರಿಕೇತು** (ನಾ). ಸಿಂಹದ ಗುರುತುಳ್ಳ ಧ್ವಜ; ಒಂದು ಬಿರುದು : ಸಗರ ಮಾರ್ತ್ತಣ್ಡಂ ಕೇಸರಿಕೇತು ರಾಷ್ಟ್ರಕೂಟಕವರನಾ (ಸೌಇಇ. XX, ೪೭-೧೫); 1074). [ಕೇಸರಿ + ಕೇತು]

**ಕೇಸರಿಣಿ** (ನಾ). ಹೆಣ್ಣು ಸಿಂಹ; ಸಿಂಹಿಣಿ : ಕರಿಪೋತಮವುಂಡುಗರ್ಚಿ ಕೇಸರಿಣಿಯ ಕೆಚ್ಚಲಂ ತುಡುಕುತುಂ ಪರಿದತ್ತು (ಪಂಪಭಾ. ೭-೮೦). [ಸಂ. ಕೇಸರಿಣೀ]

**ಕೇಸರಿದ್ವಿಷ** (ನಾ). ಸಿಂಹದ ಶತ್ರು; ಶರಭ : "ಆ ಕೇಸರಿದ್ವಿಷಂ ಶರಭಂ" (ಮಂಗರಾ. ೪೮-೮). [ಸಂ. (ಕೇಸರಿ+ ದ್ವಿಷ್)]

**ಕೇಸರಿದ್ವಿಷಾರಿ** (ನಾ). ಶರಭನ ಶತ್ರು; ಗಂಡಭೇರುಂಡ : "ಆ ಕೇಸರಿ ದ್ವಿಷಾರಿಯೆನೆ ಗಂಡಭೇರುಂಡನಕ್ಕು" (ಮಂಗರಾ. ೪೮-೮). [ಕೇಸರಿದ್ವಿಷ + ಅರಿ$_6$]

**ಕೇಸರಿಪೀಠ** (ನಾ). ಸಿಂಹಾಸನ : ಪೂಮಜಿ ಕೇಸರಿಪೀಠಂ ಭಾಮಂಡಲ ಮೆಸೆಯೆ ನೆಗಟ್ದನಾದಿ ಜಿನೇಂದ್ರಂ (ಚಾವುಂಪು. ೧-೨); ಚೆಲ್ವಾಯ್ತು ಕೇಸರಿಪೀಠಂ ಪುದಿದಿರ್ದ ಶೋಣಮಣಿಮಾಲಾರಶ್ಮಿಜಾಳಂಗಳಿಂ (ಮಲ್ಲಿಪು. ೮-೧೫). [ಕೇಸರಿ + ಪೀಠ]

**ಕೇಸರಿಬೇಳೆ** (ನಾ). ಒಂದು ಬಗೆಯ ತೊಗರಿ : "ಚಿತ್ಕತೊಗರಿ, ವಿಷತೊಗರಿ, ಕೇಸರಿಬೇಳೆ" (ಮೈಔಗಿ. ೪೯-೯೮೧). [ಕೇಸರಿ + ಬೇಳೆ]

**ಕೇಸರಿಭತ್ತ** (ನಾ). ಕೇಸರಿಬಣ್ಣದ ಭತ್ತ; ಒಂದು ಜಾತಿಯ ಭತ್ತ : (ಶಿ). [ಕೇಸರಿ + ಭತ್ತ$_1$ (< ಬತ್ತ$_1$)]

**ಕೇಸರಿಭಾತು** (ನಾ). ೧. = ಕೇಸರಭಾತು : (ಶಿ). ೨. ಸಕ್ಕರೆ ಮತ್ತು ಕೇಸರಿಗಳನ್ನು ಸೇರಿಸಿ ಮಾಡಿದ ರವೆಯ ಭಾತು : ಕತ್ತೆಗೆ ಕೇಸರಿ ಭಾತಿನ ರುಚಿಯೇಕೆ (ಇಂಚಾಪ. ೧೧೫-೬೨). [ಕೇಸರಿ + ಭಾತು]

**ಕೇಸರಿಮಧ್ಯೆ** (ನಾ). ಸಿಂಹದಂತೆ ತೆಳುವಾದ ಸೊಂಟವುಳ್ಳವಳು : ಎಲೆಗೆ ರಾಮಾಭಿರಾಮೆ, ಸುಗ್ರೀವೆ. . .ಕೇಸರಿಮಧ್ಯೆ (ರಾಮಾಶ್ವ.೧೪೮-೪). [ಸಂ. ಕೇಸರಿಮಧ್ಯಾ (ಕೇಸರಿ + ಮಧ್ಯ + -)]

**ಕೇಸರಿಮೊಗ** (ನಾ). ಸಿಂಹದ ಮುಖ : ಮಿಗುವಲ್ಲ ಮಾನಸರೂಪಲ್ಲ ಕೇಸರಿಮೊಗ (ಮೋಹತ. ೪೦-೨೨). [ಕೇಸರಿ + ಮೊಗ]

**ಕೇಸರಿಶಾಬ** (ನಾ). ಸಿಂಹದ ಮರಿ; ಮರಿಸಿಂಹ : ಬಾಬಾ ಕೇಸರಿಶಾಬಾ (ಶಾಕುಂತ. ೧೦೪ ಅಡಿಟ). [ಕೇಸರಿ + ಶಾಬ]

**ಕೇಸರಿಸು** (ಕ್ರಿ). ಕೆಂಪಗೆ ಮಾಡು : ಕಂಡು ಕಾಡಾನೆಯಂ ಕೇಸ [ಪಾಠಾಂ. ಕ]ರಿಸುತ್ತುಂ ಕಣ್ಗಳಂ (ಅರ್ಧನೇ. ೩-೬೩). [ಕೇಸರಿ + -ಇಸು$_3$]

**ಕೇಸರಿಹೂವು** (ನಾ). ೧. ಕುಂಕುಮ ಕೇಸರಿಯ ಹೂ : (ಶಿ). ೨. ಒಂದು ಜಾತಿಯ ಸಸ್ಯ : (ಶಿ). [ಕೇಸರಿ + ಹೂವು (< ಪೂ$_2$)]

**ಕೇಸಲರ್** 'ಕೇಸರಲ್' ನೋ.

**ಕೇಸವ** (ನಾ). = ಕೇಶವ. 'ಕೇಸವಯ್ಯ' ಪರಾ. [< ಸಂ. ಕೇಶವ]

**ಕೇಸವಯ್ಯ** (ನಾ). ಒಬ್ಬಾತನ ಹೆಸರು : ಒಪ್ಪಭಟರ್ಕಳನ್ನಿರಿದಸುಂ ಗೊಳ್ ಪೊಂದ್ದಿದೆ ಕೇಸವಯ್ಯನನಾರ್ಪೊಗಳರ್ (ಎಕ. III, ನಂಜನ. ೭೮-೧೭; ಸು. 900). [ಕೇಸವ + ಅಯ್ಯ$_1$]

**ಕೇಸಳಗ** (ನಾ). ಬಿಳಿ ಮತ್ತು ಕೆಂಪು ಮಿಶ್ರಣವಾಗಿರುವ ಕುದುರೆ : ಬೆಳ್ಪಿನೊಳರುಣಚ್ಛವಿ ತಾಂ ತಳ್ಪೊಯ್ದೊಳಪೊಕ್ಕು ತೋರ್ಪೊಡದು ಕೇಸಳಗಂ (ಅಶ್ವಶಾ. ೯-೧೬). [ಕೇಸು$_3$ + ಅಳಗ$_1$]

**ಕೇಸಳಲೆ** (ನಾ). ಕೆಂಪುವರ್ಣದ ಅಳಿಲು, —ಇಣಚಿ : (ಶಿ). [ಕೇಸು$_3$ + ಅಳಲೆ$_0$ (< ಅಣಿಲ್)]

**ಕೇಸಾಕೇಸಿ** (ನಾ). = ಕೇಶಾಕೇಶಿ : ಅರ್ಕಾಟನೊಳ್ ಕೇಸಾಕೇಸಿಯ ಬಂಡಣಕ್ಕಗಿಯುತುಂ (ಮೈಸೂಮ. ೪-೩೧). [<ಕೇಶಾಕೇಶಿ]

**ಕೇಸಿ** (ನಾ). (?) : ಸಕ್ಕರೆಯ ರಾಶಿಗೆ ಕೇಸಿಯ ಕೆಲಸುಂಟೇ ? ನಿಶ್ಚಯದ ಲಿಂಗಾಂಗಿಗೆ ಉಭಯದ ತಟ್ಟು ಮುಟ್ಟಿಂಬೀ ಗುಟ್ಟಿನ ಕುಲವಿಲ್ಲ (ಮದೇಮ್ಮ. ೨೭೬-೨೭). [?]

**ಕೇಸಿಗ** (ನಾ). ಒಬ್ಬಾತನ ಹೆಸರು: ಬಾಣನ ಪಳ್ಳಿಯ ಕೊಣ್ಣ ಶ್ರೀಕೇಸಿಗ (ಎಕ. III, ಶ್ರೀರಂಗ. ೧೪೮-೧೨; 904). [?]

**ಕೇಸಿಮಾಣಿ** (ನಾ). ಒಬ್ಬಾತನ ಹೆಸರು: ಕುಮ್ಬೆನೆಯ ಮನವನೆಯರ ಪೊರಿವಯ್ಯ . . . ಕೇಸಿಮಾಣಿ ಕೆಂಚಿಗಣ್ಣಗಾಳುಮಡಟನಾಗಿ (ಎಕ. VIII, ಸೊರಬ. ೮೮-೭; 912). [?]

**ಕೇಸಿರಾಜ** (ನಾ). ಒಬ್ಬಾತನ ಹೆಸರು: ಶ್ರೀಮದ್ದಣ್ಣನಾಯಕಂ ಕೇಸಿರಾಜನುಂ (ಎಕ. VII, ಶಿಕಾರಿ. ೫-೨೭; 1061); ಮಾಣಿಕ್ಯ ಭಂಡಾರದ ಹೆಗ್ಗಡೆ ಕೇಸಿರಾಜನ ಮಹಿಮೆಯೆನ್ತೆಂದಡೆ (ಎಕ. VI, ಚಿಕ್ಕಮ. ೭೮-೨೬; 1186). [< ಕೇಶಿರಾಜ]

**ಕೇಸು**$_1$ (ಕ್ರಿ). = ಕೇಯಿಸು : (ಕ). [ಕೇ + -ಸು$_1$]

**ಕೇಸು**$_2$ 'ಕೆಸವು' ನೋ.

**ಕೇಸು**$_3$, ಕೇಸ್$_1$ (ನಾ). ಕೆಂಪು; ಕೆಂಪುಬಣ್ಣ: "ಕೆಂಕಮೆಂದುಂ, ಕೆಂಗಲ್ಲೆಂದುಂ, ಕಿಸುವೆಂದುಂ, ಕೇಸೆಂದುಂ – ಈ ೪ ಅರುಣವರ್ಣಂ" (ಕಶಸಾ. ೧೧-೨೧೮); ಕೇಸಾದ ದುರ್ಗಂಧವಾಗಿರ್ದ . . . ನೆಲ್ಲಕ್ಕಿಗಳ ವರ್ಜಿಸಲೆಬೇಕುದು (ವೀಕ್ಷ್ಯಶ. ೭-೧೦-೬೬). 'ಕೇಸುಗುರ್', 'ಕೇಸೊಡಲ್' ಪರಾ. ಕೇಸ್$_1$: "ಕೆಂಗಲು ಕೇಸಂ ಕಿಸು ಕವಿಪುಂಗವರಿಂ ಕೆಂಕಮೆನ್ನಲಾರುಣ್ಯ" (ಕವಿಕಂ. ೧೦೩). 'ಕಿಸು' ಪರಾ.
[ದೇ. ‖ ತಮಿ. ಚೆಯ್ಯ; ಮಲ. ಚೇಯು; ಪರ್ಜಿ. ಕೆಯ್; ಕುರುಖ್. ಖೇಸೊ; ಮಲ್ತೊ. ಕೆಸು].

**ಕೇಸು**$_4$ (ನಾ). ತವುಡು; ಹೊಟ್ಟು: "ಕೇಸು = ಅಕ್ಕಿಯ ತವುಡು" (ಜಾನಕೋ. ೪೧). [?]

**ಕೇಸು**$_5$ (ನಾ). ಒಂದು ಪ್ರಕಾರದ ನೂಲಿನ, ಉಣ್ಣೆಯ ಅಥವಾ ರೇಷ್ಮೆಯ ಬಟ್ಟೆ: (ಕ). [← ಮರಾ. ಖೇಸ್; ಹಿಂ. ಕಾಸ್]

**ಕೇಸು**$_6$ (ನಾ). ೧. ದಾವೆ; ಖಟ್ಲೆ; ಮೊಕದ್ದಮೆ: ಖೂನಿ ಕೇಸಿನಲ್ಲಿ ಅಪರಾಧಿಯಾಗಿ ಕೈದಿಯಾಗಿರುವ ನನ್ನನ್ನು ನೋಡಲು ಬಂದಿರಾ (ಪಂಜಪಂ. ೨೪೬); ಆ ಕೇಸಿನಲ್ಲಿ ಮಾಮಲೇದಾರ ಸಾಹೇಬರಿಗೆ ಸ್ವಂತದ ಆಸಕ್ತಿ ಇದ್ದದ್ದು ಗೊತ್ತಿತ್ತು (ಗಂಮಾಯಿ. ೨೪). ೨. ಮುದ್ರಣಾಲಯದಲ್ಲಿ ಅಕ್ಷರಗಳ ಮೊಳೆಗಳನ್ನಿಡುವುದಕ್ಕಾಗಿ ಮಾಡಿದ ಖಾನೆ; ಕೋಶ; ವಿಭಾಗ; ಗೂಡು. ೩. ರೋಗಿ: ತುರ್ತು ಕೇಸೆಂದು ಡಾಕ್ಟರು ಅರ್ಧ ರಾತ್ರಿಯಲ್ಲೇ ಬಂದರು (ರೂಢಿ). ೪. ರೋಗದ ಪಿಡುಗಿನಿಂದ ಆದ ಮರಣ: ಕಾಲರಾ ಪಿಡುಗಿನಿಂದಾದ ಹತ್ತು ಕೇಸುಗಳು ಈಗಾಗಲೆ ವರದಿಯಾಗಿವೆ (ರೂಢಿ). ೫. ವಿಷಯ; ಸಂಗತಿ; ಘಟನೆ; ಸಂದರ್ಭ: ಪರೀಕ್ಷೆಯಲ್ಲಿ ಕಾಪಿ ಮಾಡಿದ ಕೇಸು ಇದು (ರೂಢಿ). ೬. ಆವರಣ; ಪೆಟ್ಟಿಗೆ; ಸಂಪುಟ: ಒಂದು ಕೇಸಿನಲ್ಲಿ ನಾಲ್ವತ್ತೆಂಟು ಸಾಬೂನಿನ ಬಾರುಗಳಿರುತ್ತವೆ (ರೂಢಿ). ೭. [ವೈದ್ಯ] ರೋಗಸ್ಥಿತಿ; ರೋಗ ವಿವರ: ರೋಗಿಯನ್ನು ತಪಾಸಿಸಿ ವೈದ್ಯರು ಕೇಸು ಬರೆದುಕೊಟ್ಟರು (ರೂಢಿ). [← ಇಂ. Case]

**ಕೇಸುಗುರ್** (ನಾ). ಕೆಂಪಾದ ಉಗುರು: ಕೇಸುರಿ, ಕೇಸಡಿ, ಕೇಸಕ್ಕಿ, ಕೇಸುಗುರ್ (ಭಾಷಾಭೂ. ೧೪೭ ಉಪಾ).
[ಕೇಸು$_3$ + ಉಗುರ್$_1$]

**ಕೇಸುಮುಡಿ** (ನಾ). ಕೆಂಪಾದ ಮುಡಿ: ಕೇಸು ಮುಡಿಯ ಕಟ್ಟಿದಳು ಕೈಯಕಾಲ ಮಣ್ಣನೊರಸಿ . . . ವಾಸಿವುಳ್ಳ ಕೃಷ್ಣ ಎನ್ನ ವಹಿಸಿ ಕಾಯಿದಿ ಎಂದು (ಪುರಂದ. ೫-೭೨-೨೨). [ಕೇಸು$_3$ + ಮುಡಿ$_2$]

**ಕೇಸುರಿ** (ನಾ). ಕೆಂಪಾದ ಉರಿ; ಕೆಂಪು ಜ್ವಾಲೆ: ಪೊಸಬೇಟದ ಕೇಸುರಿಯಿಂದಮೆಯ್ದೆ ದಳ್ಳುರಿ ನೆಗೆದು (ಪಂಪಭಾ. ೫-೮); ಕೇಸುರಿ ಕೆಂದಳಿರ್ ತದುರ್ವೀಜಮುದಗ್ರವಹ್ನಿ (ಶಾಂತಿಪು. ೭-೧೩೨); ನೀಳ್ದ ಕೇಸುರಿಯವೋಲ್ ಜಿಹ್ವಾದಳಂ ಪೊಣ್ಮೆ ಬಲ್ ಸಿಡಿಲಂ ದಾಡೆಯ ಕೂರ್ಪ್ಪರ್ದಿಪ್ಪೆ (ಎಕ. XI, ದಾವಣ. ೨೫-೧೮; 1224); ಕಂಗಳು ಕೇಸುರಿಯ ಮುಕ್ಕುಳಿಸಿದುವು (ಕುವ್ಯಾಅ. ೮-೩೬). ಕೆಳೆಯನೊಡಲ ಕೆಂಡಗಣ್ಣ ಕೇಸುರಿಸುತ್ತೆ (ಕುರಾಸಾಂ. ೬-೯). [ಕೇಸು$_3$ + ಉರಿ$_2$]

**ಕೇಸುರಿಗಣ್**, ಕೇಸುರಿಗಣ್ಣು (ನಾ). ಕೆಂಪಾದ ಉರಿಯುಳ್ಳ ಕಣ್ಣು; ಕೆಂಗಣ್ಣು: ಕಟ್ಟಾಸುರ ಮದನಗೋಪಾಲ ಕೇಸುರಿಗಣ್ಣಳ ನರಸಿಂಹ ನೆನಿಸುವ ಭಾಸುರಗಜಗಳ್ಪೆದಿದುವು (ಕಂನವಿ. ೩-೪೦). **ಕೇಸುರಿಗಣ್ಣು**: ಕಾರೊಡಲು ಕೇಸುರಿಗಣ್ಣು . . . ಬಿಲದಂತೆ ಬಾಯ್ದೆರೆದಿದು (ಪ್ರಾಥರಾ. ೧೦-೧೭). ವಿಲಯದ ವಿಪ್ಲವಮೂರ್ತಿಯು ನಾನು . . .ಕೇಸುರಿಗಣ್ಣಾನು (ಪಾಂಚಜ. ೧೫-೧೪). [ಕೇಸುರಿ + ಕಣ್]

**ಕೇಸುರಿಗಣ್ಣು** 'ಕೇಸುರಿಗಣ್' ನೋ.

**ಕೇಸುರಿಗಱೆ** (ಕ್ರಿ). ಕೆಂಪಾದ ಉರಿಯನ್ನು ಸುರಿಸು, —ಚೆಲ್ಲು; ಕೆಂಪು ಉರಿಯನ್ನು ಕಾರು: ಸುರುಸುರುಸುರ್ರೆಂದು ಕೇಸುರಿಗಱೆಯುತ ಮೊಱೆದೇಳ್ವ ಬಾಣಗಳಾಗ ತುಱುಗಿ (ಕಂನವಿ. ೧೪-೧೭).
[ಕೇಸುರಿ + ಕಱೆ$_1$]

**ಕೇಸುರಿವೋಟ** (ನಾ). ಕೆಂಪಾದ ಜ್ವಾಲೆಗಳ ಓಟ; ಬೆಂಕಿಯ ಹಬ್ಬುಗೆ: ನಡೆ ಕಂಡ ತಡೆ ಹಗೆಯ ಮುನ್ನಡೆಯನಾ ಕಾಣ್ಬ ಕೇಸುರಿವೋಟಮಂ (ಶ್ರೀರಾಮಾ. ೭೧೦-೩೧). [ಕೇಸುರಿ + ಓಟ]

**ಕೇಸುಳ್ಳಿ** (ನಾ). ಕೆಂಪು ಈರುಳ್ಳಿ: "ಪಲಾಂಡುಃ, ಸುಕಂದಕಃ – ಕೇಸುಳ್ಳಿ" (ನಾಚಿರಾ. ೧೧೨). [ಕೇಸು$_3$ + ಉಳ್ಳಿ$_1$]

**ಕೇಸೂರ್** (ನಾ). ಒಂದು ಊರಿನ ಹೆಸರು: ಮಣ್ಣಿನಾಡ ಕೇಸೂರ ಬಣ್ಣಿಕರ ಬಲಿವ ಒದುಗ್ಗಯ್ಯಾ ಗಾವುಣ್ಣರ (ಮೈಆರಿ. ೧೯೧೫, ೧೯-೭; 1050). [? + ಊರ್]

**ಕೇಸೆರಂಕೆ** (ನಾ). ಕೆಂಪು ಬಣ್ಣದ ರೆಕ್ಕೆ, —ಪಕ್ಕ: ವಿಮಾನದ ಕೇಸೆರಂಕೆಗಳತ್ತಣ ದೀಪಗಳನ್ನು ಚಿಮ್ಮುಗಿಲ್ಗಳ ಹಲವು ಸಾಲ್ಗಳಹಣತೆಗಳನ್ನೂ ಬೆಳಗಿ (ಮಂತ್ರಶ. ೧೯೯-೧೪). [ಕೇಸು$_3$ + ಎರಕೆ$_1$ (< ಎಱಂಕೆ)]

**ಕೇಸೆವೆ** (ನಾ). ಕೆಂಪು ಬಣ್ಣದ ಎವೆ, —ರೆಪ್ಪೆ: ಉಷೆಯಕಣ್ ಕೇಸೆವೆ ದೆರೆದುದು (ಶ್ರೀರಾಮಾ. ೬೪೧-೩೨). [ಕೇಸು$_3$ + ಎವೆ$_1$ (< ಎವೆ)]

**ಕೇಸೊಡಲ್** (ನಾ). ಕೆಂಪಾದ ದೇಹ. 'ಕೇಸೊಡಲ' ಪರಾ.
[ಕೇಸು$_3$ + ಒಡಲ್]

**ಕೇಸೊಡಲ** (ನಾ). ಕೆಂಪಾದ ದೇಹವುಳ್ಳವನು; ಲೋಹಿತಾಂಗ; ಮಂಗಳಗ್ರಹ: "ಮಂಗಳನ ಪೆಸರು ಕೇಸೊ [ಪಾಠಾಂ. ಕೆಂನೊ]ಡಲ ಪೊಡವಿಜನೆಂದು" (ಶಬ್ದಮಂ. ೧೮). [ಕೇಸೊಡಲ್ + -ಅ$_7$]

**ಕೇಸೊಱಂತೆ** (ನಾ). ಕೆಂಪಾದ ಒರತೆ: ಕಾದಿದೆಡೆ ನೆತ್ತರ ಜೌಗಿನೆ ಕೇಸೊಱಂತೆಯಂ ಪಸರಿಸಿತು (ಎಕ. VII, ಶಿಕಾರಿ. ೧೯೭-೧೯; 1182).
[ಕೇಸು$_3$ + ಒಱಂತೆ]

**ಕೇಳ್**, ಕೇಳು (ಕ್ರಿ). ೧. ಕಿವಿಗೊಡು; ಆಲಿಸು; ಗಮನಿಸು: ಕೇಳೊಯ್ಪಿನ್ (ಎಕ. II, ೨೨-೩; ಸು. 700); ಅದಂ ಕೇಳ್ದಱೆಯಪಂ (ಎಇ. I, ೩೫೦-೫; 900); ಲೋಕಾರ್ಥಮಂ ಬಾಜಿಸಿದೊಡನಿಬರುಂ ಕೇಳ್ದು (ವಡ್ಡಾರಾ ೭ ೫-೧೯); ಸುರಸಿಂಧು ಪ್ರಿಯಪುತ್ರ ಕೇಳ್ ಕಳಶಜಾನೀಂ ಕೇಳ್ (ಪಂಪಭಾ. ೭-೧೫); ಕೇಳ್ದು ಕೇಳ್ದು ಕಿವಿಯೊಡೆದಪುದೆಂಬಂತಾಗೆ ಘೀಳಿಡಲ್ (ಕಾದಂಪೂ. ೧೫೩); ಕೊಱೆವಾವು ಗಾರುಡಮಂ ಕೇಳದಂತೆ ಕೇಳದಿರೆ ಬೇಸತ್ತು (ಧರ್ಮಾಮೃ. ೨-೧೦೨).

೨. ಹೇಳಿದಂತೆ ಮಾಡು; ನಡಸು; ಪಾಲಿಸು; ಅನುಸರಿಸು; ಒಡಂಬಡು; ಒಪ್ಪು: ನೀನೆನ್ನ ಬುದ್ಧಿಯಂ ಕೇಳ್ದು ಸುಖಂ ಬಾೞ್ದೊಡೆ (ಪಂಚತಂ. ೫೪–೧೯); ಪೇೞ್ದನೆಂದೊಡೆ ಕೇಳಳ್ (ರಾಮಾಶ್ವ. ೧೧೮–೬). ೩. ಪ್ರಶ್ನಿಮಾಡು; ವಿಚಾರಿಸು: ಇಂತಿದ ಕೇನನೆಂದಪಳೊ ಕೇಳ್ವೆಂ ಮಾತಂ (ಕಾದಂಪೂ. ೮೬೩). ೪. ಬೇಡು; ಯಾಚಿಸು: ತನ್ನನೆಂದೆಂದುಂ ಮಱೆಯದಿರ್ಪುದೆಂದು ಕೇಳ್ದಳೆಂದು ಕೇಳಯಳ್ (ರಾಮಾಶ್ವ. ೩೮–೧೬). **ಕೇಳು**: ೧. ಎನ್ನಹುಯ್ಯಲ ಕೇಳಯ್ಯಾ (ಬಸವ. ೪೭); ಕೇಳು ಭಾಷೆಯನೆಂದನಭಿಮನ್ಯು (ಕುವ್ಯಾದ್ರೋ. ೪–೫೫); ಹಾಡ ಕೇಳಲು ಕರ್ಣದೊಳಿರ್ದ ಪಾತಕ ಪೋಡುವುದು (ಮೋಹತ. ೪೧–೧೬). ೨. ಬತ್ತಲೆಗರ ಮಾತ ಕೇಳಿದರು (ಆದಿಪು. ೨–೯); ಅಕ್ಕ ನಿನ್ನ ಮಾತ ಕೇಳಿ ಚಿಕ್ಕದೊಂದು ಗಿಳಿಯ ಸಾಕಿ (ಪುರಂದ. ೧–೧೧೨–೧); ದೊರೆ ನಂಜುಂಡರಸರು ಮಡದಿಯ ಮಾತು ಕೇಳದೆ ಹೊಡೆದಾಡಿ ಮಡಿದರು (ಚಂಗಾಳ್ವ. ೩೨೭). ೩. ಪ್ರಶ್ನಃ, ಅನುಯೋಗಃ, ಪೃಚ್ಛಾ – ಇ ಕೇಳುವುದಕ್ಕೆ ಹೆಸರುಗಳು" (ಸಿದ್ಧಾಂತಿ. ೪೮). ೪. ಅವರು ನನ್ನಲ್ಲಿ ದುಡ್ಡು ಕೇಳಲು ಬಂದಿದ್ದರು (ರೂಢಿ). ೫. ಕಿವಿಗೆ ಬೀಳು; ಕೇಳಿಬರು; ಕೇಳಿಸು: ಮಾತು ಸರಿಯಾಗಿ ಕೇಳುತ್ತಿಲ್ಲ. ಏನೋ ಗುಣುಗುಣು ಶಬ್ದವಾಗುತ್ತಿದೆ (ರೂಢಿ).

**ಕೇಳಬರು** = ೧. ಕಿವಿಗೆ ಬೀಳು; ಕೇಳಿಸು: ಪಿರಿಯ ಧ್ವನಿಗಳುಱೆ ಕೇಳಬರುತಿರಲು (ಬಸಪು. ೫೩–೨೫); ಆಗೊಂದು ವಾಕ್ಯವು ಕೇಳಬಂದುದು ಗಗನಮಾರ್ಗದಲಿ (ಕೌಶಿರಾ. ೨೯–೨೨). ೨. ಕೇಳುವುದಕ್ಕಾಗಿ ಬರು: ಕರ್ಣಬೊಮ್ಮನ ಕೇಳಬಂದೆವೆ ನಾವು (ಕುವ್ಯಾದ್ರೋ. ೮–೬೪). **ಕೇಳಿಕೊಳ್**, **ಕೇಳಿಕೊಳ್ಳು** = ೧. ಕೇಳಿತಿಳಿದುಕೊಳ್ಳು: ಹಿಂದುಮುಂದಕೆ ಕೇಳಿಕೋ ನಾವೆಂದ ಮಾತನು ಕುಲವಿಡಿದು ಬಳಿಸಂದ ನಿಮ್ಮಯ ಗುರು ವಸಿಷ್ಠನನೆಂದನಾ ಮುನಿಪ (ತೊರರಾ. ೧–೯–೩೯); ಎಲ್ಲ ಸಂಗತಗಳನ್ನು ಅವನು ಕೆದರಿ ಕೆದರಿ ಕೇಳಿಕೊಳ್ಳತೊಡಗಿದನು (ಇಪ್ಪಠ. ೨೪೭). ೨. ಬೇಡು; ಯಾಚಿಸು: ಅಪ್ಪಣೆ ಕೇಳಿಕೊಂಡು ಪುಯಗೊಂಡಗೌಡನು ಹಂಡೆಗೆ ಕೇಳಿಕೊಂಡನು (ಎಕ. VII, ಶಿವಮೊ. ೧೦೭–೧೩; 1576 ?); ನನ್ನಿಂದ ಏನಾದರೂ ಸಹಾಯ ಬೇಕಿದ್ದರೆ ನಿಃಸಂಕೋಚವಾಗಿ ಕೇಳಿಕೊಳ್ಳಿ (ದಾನಚಿಂ. ೮೯).

[ದೇ. ‖ ತಮಿ. ಕೇಳ್; ಮಲ. ಕೇಳ್ಕ; ಕೊಡ. ಕೇಳ್; ತುಳು. ಕೇಣು]

**ಕೇಳ್$_1$** (ನಾ). ೧. ಸಂಗಡಿಗ; ಜೊತೆಗಾರ; ಗೆಳೆಯ; ಸ್ನೇಹಿತ. 'ಸೂಳೆಕೇಳ' ಪರಾ. ೨. ನರ್ತಕ (?): ಪೊನ್ನಬಣ್ಣದ ನವಕರ್ಣಿಕಾರ ಕುಸುಮಕ್ಕೆಱಗಿರ್ದ ಮದಾಳಿ ಕಂಪುಗಾಣದೆ ಕಳಿದತ್ತು ಪೆಣ್ಣ ಪೊಸರೂಪಿನ ಪಾಪೆಗೆ ಪಾಸಿ ಬಿರ್ದ ಬೞ್ದೊದವಿಸಿದಿಂಪುಗಾಣದೞಲಿಂ ಪೆಱಪಿಂಗುವ ಕೇಳನಂದದಿಂ (ಲೀಲಾವ. ೯–೧೧೮); ಶರದದ ಗೊಟ್ಟಿಗಾಯಳರ ಕೇಳರ ಕೇರಿಯೊಳಿಂದು ಕಾಂತಮಂದಿರದೊಳಗಿರ್ದು (ಅನಂಪು. ೧–೧೧೦); ಆಳಿಸಿದಂ ಪೇಳಿಸಿದಂ ಕೇಳಂ ಜೂದಾಳಿಯುಳಿಲೆ . . . ಇವಾದಿಯಾಗೞೆ ಕುಳನಂ (ಶಮದ. ೨೭). [← ತಮಿ. ಕೇಳನ್]

**ಕೇಳ್$_2$** (ನಾ). ಬಾಳೆ: (ಚಿ). [← ಪ್ರಾ. ಕಯಲ, ಕೇಲ. / ಸಂ. ಕದಲ]

**ಕೇಳಮೇಳ** (ನಾ). ಆಟಕೂಟ; ಸರಸಸಲ್ಲಾಪ; ಸಹವಾಸ: ಆ ಲಲನೆಯರ ಕೇಳಮೇಳದ ಸುಖವ ಮಮತೆಯ ನೆನೆನೆನೆದು (ಭಕ್ತಾಚ. ೩–೩); ಮೂರ್ಖರ ಕೇ [ಪಾಠಾಂ. ಖೇ]ಳಮೇಳದಲಿದ್ದು ಬದುಕುವ ಖೂಳವೃತ್ತಿಯ ಬದುಕು ಕಷ್ಟಕ್ಕೆ ಕಷ್ಟತರವೆಂದ (ತೊರರಾ. ೬–೩–೩೪); ಹಿತಜನದ ಕೇಳಮೇಳದೊಳಿರ್ದಂ (ಚಿಕವಿ. ೪–೩೬). [ಕೇಳ್$_1$ + ಮೇಳ]

**ಕೇಳವಣ** (ನಾ). (ಉಕ) ಮದುವೆ ಅಥವಾ ಉಪನಯನಕ್ಕೆ ಪೂರ್ವಭಾವಿಯಾಗಿ ಮಾಡುವ ಊಟೋಪಚಾರ; ಗಡಿಗೆನೀರು: ಕೇಳವಣವನ್ನು ಭರದಾಸ್ತ ಆಗಿ ಮಾಡದೆ ಬಿಡುವರೆ (ದೀಪಹ. I, ೭೨).

[← ಮರಾ. ಕೇಳವಣ್]

**ಕೇಳಿ$_1$** (ನಾ). ಒಂದು ಬಗೆಯ ತೆಂಗು. 'ಕೇಳಿವಟ್ಟಿಲ್' ಪರಾ.

[← ತಮಿ. ಕೇಳಿ]

**ಕೇಳಿ$_2$** 'ಕೇಲಿ' ನೋ.

**ಕೇಳಿ$_3$** 'ಕೇೞಿ' ನೋ.

**ಕೇಳಿಕೆ$_1$** (ನಾ). ೧. ಕೇಳುವಿಕೆ; ಶ್ರವಣ: "ಶ್ರವಣಂ – ನಕ್ಷತ್ರವುಂ, ಕಿವಿಯುಂ, ಕೇಳಿಕೆಯುಂ" (ಕಾಶಕ್ಯ. ೭೫); ಪದದ ಅರ್ಥ ಕೂಡ ಅವನಿಗೆ ಕೇಳಿಕೆಯಿಂದಲೇ ತಿಳಿದಿತ್ತು (ಗಂಮಾಯಿ. ೨೩). ೨. ಬೇಡಿಕೆ; ಕೋರಿಕೆ; ಯಾಚನೆ; ಪ್ರಾರ್ಥನೆ: ಗುರುಚರಣದಾಸನಿಗೆ ಎಲ್ಲ ಬಯಕೆಗಳೂ ಸರಿ ಎನಿಸಿದವು ಯಾರ ಕೇಳಿಕೆಯೂ ಅಪ್ರಾಸಂಗಿಕವೂ ಅಲ್ಲ (ಚತಸ. ೯೯); ಅವಳ ಕೇಳಿಕೆಯಂತೆ ಹರಿ ಕುಲಿಶನು . . . ಹೋಗಲೇ ಬೇಕಾಯಿತು (ಮಣಿಸ. ೯೭). ೩. ಪ್ರಾರ್ಥನೆ; ಭಜನೆಯ ಮೇಳ: ಹಿಂದೆ ಮಾಹೇಶ್ವರರ ಕೇಳಿಕೆಗಳೊಪ್ಪುತಿರೆ ನಡೆತಂದು (ಬಸರ. ೧೧–೬); ಭಕ್ತರುಂಬೆರಸು ಕೇಳಿಕೆಯುಣ್ಮೆ (ಪದ್ಮರಾ. ೧೩–೨೪); ಭಕ್ತಾಳಿ ಭೈರವ ದೇವನಿದಿರ ಕೇಳಿಕೆಸಹಿತ ಬಂದು (ಭೈರವೇ. ೫–೧೧). [ಕೇಳ್ + –ಇಕೆ]

**ಕೇಳಿಕೆ$_2$** 'ಕೇಲಿಕೆ' ನೋ.

**ಕೇಳಿಕೆವಿಡಿ** (ಕ್ರಿ). ನೃತ್ಯಮಾಡು; ನಾಟ್ಯವಾಡು (?): ಪಂಚಮ ದಿಂಚರಂ ಮಿಗೆ ಸವಿ ಸವೆಯದ ಸಾರಸಂಗೀತಮಂ ಕೇಳಿಪ ಕೇಳಿಕೆ [ಪಾಠಾಂ. ಕಳೆ ಕೇಳಿ]ವಿಡಿದ ಭಾರತಿಯಂ (ಶಬಶಂ. ೧–೭೯ ವ).

[ಕೇಳಿಕೆ$_2$ (< ಕೇಲಿಕೆ) + ಪಿಡಿ$_1$]

**ಕೇಳಿಕೊಟ್ಟು** (ನಾ). ಯಕ್ಷಗಾನ ಅಥವಾ ಕಥಕ್ಕಳಿಯ ಆಟ ಪ್ರಾರಂಭವಾಗುವುದನ್ನು ಸೂಚಿಸಲು, ದೂರಕ್ಕೂ ಕೇಳುವಂತೆ ಚಂಡೆಯನ್ನು ಬಾರಿಸುವಿಕೆ: ಸೂರ್ಯಸ್ತಕಾಲದಲ್ಲಿ ತಮಟೆ ಹೊಡೆದು ಆಟ ನಡೆಯುತ್ತದೆಂದು ಸಾರುತ್ತಾರೆ ಇದಕ್ಕೆ ಕೇಳುಕೊಟ್ಟು ಎಂದು ಹೆಸರು (ಭಾರದ. ೫೫೭). [← ಮಲ. ಕೇಳಿಕೊಟ್ಟು]

**ಕೇಳಿಗೃಹ** 'ಕೇಲಿಗೃಹ' ನೋ.

**ಕೇಳಿಗೆ** 'ಕೇಲಿಕೆ' ನೋ.

**ಕೇಳಿಗೆಗೊಳಿಸು** (ಕ್ರಿ). ಕ್ರೀಡೆಗೊಳಿಸು (?): ಸರಸಕಲಾ ಪ್ರೌಢೆಯ ಸಾರಸಾಕ್ಷಿಯ . . . ಎರವೆತ್ತ ಕೇಳಿಗೆಗೊಳಿಸು ರಂಗಾಯೆಂಬ ತರಳೆಯ ತಕ್ಕೆಯೆಂದಹುದೊ (ಶತಸಾಂ. ೨೫–೨೯).

[ಕೇಳಿಗೆ$_2$ (= ಕೇಲಿಕೆ) + ಕೊಳಿಸು]

**ಕೇಳಿಗೋಪಾಲ** (ನಾ). [ನಾಟ್ಯ] ಒಂದು ಬಗೆಯ ನೃತ್ಯ: ಕೇಳಿಗೋಪಾಲ ನೃತ್ಯದಲ್ಲಿ ಕೃಷ್ಣನು ಬಾಲಕನಾಗಿ ಗೊಲ್ಲರ ಹುಡುಗರೊಂದಿಗೆ ಪ್ರವೇಶಿಸುವುದನ್ನು ನಾವು ಕಾಣುತ್ತೇವೆ (ಭಾರಜಾ. ೨೬).

[ಕೇಳಿ$_2$ (= ಕೇಲಿ) + ಗೋಪಾಲ]

**ಕೇಳಿನಿವಾಸ** (ನಾ). ಕುಣಿತದ ಸ್ಥಳ; ನೃತ್ಯಮಂದಿರ: ಕೇಳಿನಿವಾಸದಲ್ಲಿ ನರ್ತನಮನೊಡರ್ಚೆ (ಪುಷ್ಪಪು. ೧–೭).

[ಕೇಳಿ$_2$ (= ಕೇಲಿ) + ನಿವಾಸ]

**ಕೇಳಿಲೀಲೆ** (ನಾ). ಶೃಂಗಾರಲೀಲೆ: ಕವಿಕುಳಸೇವ್ಯಮಾನ ಕವಿತಾಕಳಹಂಸೆಗೆ ಕೇಳಿಲೀಲೆ (ಚಂದ್ರಪು. ೧–೫೦). [ಕೇಳಿ (= ಕೇಲಿ) + ಲೀಲೆ]

**ಕೇಳಿವಟ್ಟಿಲ್** (ನಾ). ತೆಂಗಿನ ಬಟ್ಟಲು, —ಚಿಪ್ಪು: ಹೃದ್ಯಮಪ್ಪ ಮದ್ಯಮಂ ಕೇಳಿವಟ್ಟಲೊಳೆಱೆದು ಕುಡಿಯಲುಜ್ಜುಗಂಗೈವುದುಂ (ಜಗವಿ. ೪–೩೯ ವ). [ಕೇಳಿ$_1$ + ಬಟ್ಟಲ್]

**ಕೇಳಿವಾತು** (ನಾ). ವಿನೋದದ ಮಾತು; ಸಲ್ಲಾಪ: ನೀವೆಲ್ಲ ನಮ್ಮಸುತ್ತ ಕುಳಿತು ನಿಮ್ಮ ಕೇಳಿವಾತುಗಳಿಂದ ನಮ್ಮ ಬಗೆದಣಿಸಿ (ಸವತಿ. ೨೮೯). [ಕೇಳಿ$_2$ (= ಕೇಲಿ) + ಮಾತು$_1$]

**ಕೇಳಿವೆ** 'ಕೇಳ್ವಿ' ನೋ.

**ಕೇಳಿಶೀಳ** (ನಾ). ಆಟವೇ ಶೀಲವಾಗಿರುವವನು; ಕ್ರೀಡಾಶೀಲ; ಆಟಗುಳಿ: ಮನಃಪ್ರಹ್ಲಾದಮಂ ತಾಳ್ದುವನನವರತಂ ಶ್ರೀಧರಂ ಕೇಳಿ ಶೀಳಂ (ಚಂದ್ರಪು. ೪-೭೬). [ಕೇಳಿ$_2$ (= ಕೇಲಿ) + ಶೀಳ (= ಶೀಲ)]

**ಕೇಳಿಸು$_1$** (ಕ್ರಿ). ೧. ಕೇಳುವಂತೆ ಮಾಡು; ಶ್ರವಣಮಾಡಿಸು; ಹೇಳಿ ತಿಳಿಸು; ವಿವರಿಸು: ಪಾಂಡವರಣಿಕ್ಕಿದೊಸಗೆವಾತನೀಗಳ್ ಕೇಳಿಸುವೆನ್ (ಪಂಪಭಾ. ೧೩-೧೦೫ ವ); ಕೇಳಿಸಿದೆನಾಂ ಮದ್ದುಃಖಮಂ ಮುನ್ನೆ (ಕಾದಂಉ. ೫೪೫); ನಾನು ಸುನಾದಂಗಳ ಕೇಳುಸುದಕ್ಕೆ ಜಂಗಮಕ್ಕೆ ಸುಗೀತವಾದ್ಯಂಗಳ ಕೇಳಿಸುವೆ (ಮಹಾದೇ. ೨೭-೧); ನಿನ್ನವರ ನಿಂದೆಯಂ ಕೇಳಿಸದಿರೆಲೆ ದೇವ (ಇಜಿರ. ೧೦೭). ೨. ಕಿವಿಗೆ ಬೀಳು; ಕೇಳಿಬರು: ಕೇಳಿಸಿದುದಾ ವಿಮಲ ಮನುಕುಲವಾಳಿಗಾ ಡಂಗುರ ಧ್ವನಿ (ತೊರರಾ. ೧-೧೩-೧೩); ಅಜ್ಜಾಜಿಯ ಕೂಗು ಕೇಳಿಸಿತು (ಜಂಗಾಳ್ವ. ೧೭). ೩. ಕೇಳು: ಗೂಗೆಯ ಕಿವಿಗಳು ಚೆನ್ನಾಗಿ ಕೇಳಿ ಸುತ್ತವೆ (ಮುಂಬಯಿ. ೩-೧೨೦). ೪. ವಾದ್ಯಗಳನ್ನು ನುಡಿಸು, —ಬಾರಿಸು; ಸಂಗೀತಮಾಡು; ಹಾಡು: ಜಾಣೆ ಬೀಣೆಯಂ ಕೇಳಿಸುವಳ್ (ಗಿರಿಕ. ೩-೯೮); ನೆರೆದು ಕೇಳಿಸುವ ತುಂಬುರ ರಂಭೆ ಭೃಂಗಿಯುಂ ಪರಿಕಿಸೆ (ಸಿದ್ಧರಾ. ೧-೨೩); ರಾಗದ ಸವಿ ಸಮನಿಸುತಿರೆ ಸುಕಂಠೆ ಕೇಳಿಸುತಿರ್ದಳ್ (ಕುಸುಮಾ. ೧-೩೮); ಒಂದೊಂದು ಕಲೆಯ ವ್ಯೆಯುಬ್ಬುವೊಲು ಕೇಳಿಸಿದರು (ಭರಜ. ೧-೭೧). ೫. ಬೇಡುವಂತೆ ಮಾಡು; ಇನ್ನೊಬ್ಬರಿಂದ ಕೇಳುವಂತೆ ಮಾಡು: ಇಲ್ಲಿಯೇ ಆ ಕೇಡಿಗೆ ಕೊಡಗನು ಮುತ್ತಿನ ಸರವನ್ನು ಕೇಳಿಸಿದ್ದು (ಜಂಗಾಳ್ವ. ೬೩೭).

ಕೇಳಿಸಿಕೊಳ್ಳು = ಮನಸ್ಸುಗೊಟ್ಟು ಕೇಳು; ಕಿವಿಗೆ ಹಾಕಿಕೊ: ಅವಳು ಅವನ ಮಾತು ಕೇಳಿಸಿಕೊಳ್ಳದೆಯೆ (ಪುನರು. ೧೯೫); ಇಲ್ಲಿ ನೀ ಪ್ರಾರ್ಥಿಸಿ ಮೆಲ್ಲನೆ ಬೇಳ್ಪೊಡೆ ಕೇಳಿಸಿಕೊಳ್ಳನೆ ಆ ಒಡೆಯ (ಇಂಚಾಪ. ೧೫೧-೪೪). [ಕೇಳ್ + -ಇಸು$_3$]

**ಕೇಳಿಸು$_2$** 'ಕೇಲಿಸು' ನೋ.

**ಕೇಳೀಕಳಾಪ** (ನಾ). ಆಟಪಾಟಗಳು; ಕ್ರೀಡಾವಿನೋದ: ಮಗುವುತನದಲಿ ಬಾಲಕರ ಕೇಳೀಕಳಾಪದಲಿ (ತೊರರಾ.೧-೮-೭೭). [ಸಂ. ಕೇಲೀಕಲಾಪ (ಕೇಲೀ + ಕಲಾಪ)]

**ಕೇಳೀನಿಲಯ** 'ಕೇಲೀನಿಲಯ' ನೋ.

**ಕೇಳೀಪ್ರಾಸಾದ** (ನಾ). ವಿನೋದಮಂದಿರ; ಕ್ರೀಡಾಮಂದಿರ: ಧನನಾಥಸನಾಥಮಪ್ಪ ದಿಕ್ಪಾಲರ ಕೇಳೀಪ್ರಾಸಾದಂಗಳಿಂ (ಅಜಿಪು. ೭-೨೦ ವ). [ಸಂ. ಕೇಲೀಪ್ರಾಸಾದ (ಕೇಲೀ + ಪ್ರಾಸಾದ)]

**ಕೇಳೀಭೂಧರ** (ನಾ). ಕ್ರೀಡಾಶೈಲ: ಕೇಳೀಭೂಧರ ಮೂರ್ಧದೊಳ್ ಬಹುವಿಧೋದ್ಯಾನಾವಳೀ ಚೂಳದೊಳ್ (ಚಂದ್ರಪು. ೬-೧೮). [ಸಂ. ಕೇಲೀಭೂಧರ (ಕೇಲೀ + ಭೂಧರ)]

**ಕೇಳೀಮರಾಳ** (ನಾ). ೧. ಆಟವಾಡುತ್ತಿರುವ ಹಂಸಪಕ್ಷಿ; ಕ್ರೀಡಾ ಹಂಸ. ೨. ವಿನೋದಕ್ಕಾಗಿ ಸಾಕಿಕೊಂಡಿರುವ ಹಂಸ: ಸತತ ಸವನ ದುಗ್ಧ ಸ್ನಿಗ್ಧ ಕೇಳೀಮರಾಳಾನ್ವಿತ (ಚಂದ್ರಪು. ೬-೧೫೦). [ಸಂ. ಕೇಲೀಮರಾಲ (ಕೇಲೀ + ಮರಾಲ)]

**ಕೇಳೀಲೋಲ** (ನಾ). ವಿನೋದದಲ್ಲಿಯೆ ತೊಡಗಿದವನು; ಕ್ರೀಡಾಲೋಲ: ಕೇಳೀಲೋಲನನುಮತ ರಸಾಳಾಪನನಜೀಯಲೀಯದೆ (ಶಾಂತಿಪು. ೮-೫೦). [ಸಂ. ಕೇಲೀಲೋಲ (ಕೇಲೀ + ಲೋಲ)]

**ಕೇಳೀವನ** 'ಕೇಲೀವನ' ನೋ.

**ಕೇಳೀಶೈಲ** (ನಾ). = ಕೇಳೀಭೂಧರ: ಇತ್ತಲರಸಂ ಕೇಳೀಶೈಲದಿಂದವ ನಿತಳಕ್ಕವತರಿಸಿ (ಕಾದಂಉ. ೧೪೩); ಯೌವನಲಕ್ಷ್ಮೀ ಕೇಳೀಶೈಲೋಪಮ ಭುಜಶಿಖರಂ (ಅಜಿಪು. ೫-೯೪). [ಸಂ. ಕೇಲೀಶೈಲ (ಕೇಲೀ + ಶೈಲ)]

**ಕೇಳೀಸ್ಥಾನ** (ನಾ). ಆಟದ ಸ್ಥಳ; ಕ್ರೀಡಾಸ್ಥಾನ: ಇದು ಶುಭೌಘದ ಗರುಡಿ ಬಹುಸಂಪದದ ನೆಲೆಮನೆ . . . ಮುದದ ಕೇಳೀಸ್ಥಾನ (ಕುವ್ಯಾವಿ. ೧೦-೭೯). [ಸಂ. ಕೇಲೀಸ್ಥಾನ (ಕೇಲೀ + ಸ್ಥಾನ)]

**ಕೇಳು** 'ಕೇಳ್' ನೋ.

**ಕೇಳುಗ** (ನಾ). ಕೇಳುವವನು; ಶ್ರೋತೃ: ರಮ್ಯವಾಗಿ ಹಾಡುವಾಗ ಹುಟ್ಟುವ ರಸದಲ್ಲಿ ಕರಗಿ ಕೇಳುಗನು ಏಕರೂಪವಾಗಿ ಬಿಡುವನು (ಬರಹಾ. ೧೮೮); ಆ ಕಾಲದ ಸಂಗೀತಗಾರರ ಅದ್ಭುತ ಸಾಧನೆಗೆ ಹಿರಿಮೆಗೆ ಅಂದಿನ ಕೇಳುಗರ . . . ರಸಿಕತೆಯೂ ಒಂದು ಮುಖ್ಯಕಾರಣ (ಸಂಗೀತ. vii ಪೀಠಿಕೆ). [ಕೇಳು (< ಕೇಳ್) + -ಗ$_3$]

**ಕೇಳುವೆ** 'ಕೇಳ್ವಿ' ನೋ.

**ಕೇಳುಹ** (ನಾ). ಕೇಳುವಿಕೆ; ಶ್ರವಣ: ತನುಪುಳಕ ತಳಿತು ತನತನಗೆ ಹೊರೆಯೋಜೀ ನಲಿದಣು ಕೇಳುಹಂ (ಶಿವಗೀ. ೬೧); ಕೇಳುಹ ಪರಿ ಮಳಿಸುಹ ನಾಲಿಗೆಯಲ್ಲಿ ಸವಿಹ ಮುಟ್ಟುಹ ಎಂಬಿವು ವಿಷಯಂಗಳು (ನಾಚರಾ. ೩). [ಕೇಳು (< ಕೇಳ್) + -ಹ$_2$]

**ಕೇಳ್ಕು** (ನಾ). ಪೂರ್ವದಿಕ್ಕು (?): ಪೆರಿಯ ಒಡೆಯಾರು ನಮ ಶ್ಶಿವಾಯ ದೇವಸ್ಥಾನದ ಕೋಯಿಲು ಕೇಳ್ಕು ಮೊದ × × × ನಂಜನೆಲ ದಲೂ (ಸೌಇಇ. IX-ii, ೪೬೩-೧೧; 1470). [← ತಮಿ. ಕಿಟಕ್ಕು]

**ಕೇಳ್ಕೆ** (ನಾ). ೧. ಕೇಳುವಿಕೆ; ಶ್ರವಣ: "ಶ್ರವಣೇ ಕೇಳ್ಕೆಯೊಳ್" (ಕಾಶಕ್ಯ. ೬೫). ೨. ಪಾಲಿಸುವಿಕೆ; ಹೇಳಿದಂತೆ ನಡೆಯುವಿಕೆ; ಅನುಸರಿಸುವಿಕೆ: ಬಾಳ್ಕೆಯಲಿ ನೂರೆಂಟು ತೊಡಕು ತಿಣುಕುಗಳುಂಟು ಕೇಳ್ಕೆಮಾಣ್ಕೆಗಳಿಗವು ಜಗ್ಗವೊಂದಿನಿಸುಂ (ಮಂಕುಕ. ೬೪೩). [ಕೇಳ್ + -ಕೆ]

**ಕೇಳ್ದಾಣ** (ನಾ). ಕೇಳಿ ತಿಳಿದುಕೊಳ್ಳುವ ಸ್ಥಳ: "ಶಬ್ದದಿಂದ ಶತ್ರುಗಳ ಚಲನವಲನಗಳನ್ನು ಪತ್ತೆಮಾಡಬಹುದಾದ ಶತ್ರುಸೈನ್ಯದ ಸಮೀಪ ಸ್ಥಾನ; ಕೇಳ್ದಾಣ" (Listening post. ಇಂಕನಿ). [ಕೇಳ್ + ತಾಣ$_2$]

**ಕೇಳ್ಪಿ** (ನಾ). ಕೇಳಿದುದು; ಹೇಳಿದುದು; ಶ್ರುತತ್ವ; ಕೇಳುವಿಕೆ: ತಾಯ್ತ್ ತಂದೆವಿರ ಕೇಳ್ಪಿಯಂ ಗೆಯ್ಯದೆ (ವಡ್ಡಾರಾ. ೨-೧೪). [ಕೇಳ್ + -ಪಿ. / ತಮಿ. ಕೇಳ್ವಿ]

**ಕೇಳ್ಪೆ** (ನಾ). = ಕೇಳ್ಪಿ: ಮತ್ತೊರ್ವಂ ಕೇಳ್ಪೆಯಿಲ್ಲದ ಶ್ರಾವಕಂ ಕಂಡು (ಧರ್ಮಾಮೃ. ೪-೧೦೯); ಬಧಿರನಪ್ಪನ ಕೇಳ್ಪೆಯುಮಾಯಿತಿಕ್ಕೆಯುಂ ಬಿಸುಟನ ಕೀರ್ತಿಯುಂ . . . ಒಪ್ಪಲಾರ್ಪುವೇ (ಧರ್ಮಾಮೃ. ೬-೯೭). [ಕೇಳ್ + -ಪೆ]

**ಕೇಳ್ಮಾತು** (ನಾ). ಕೇಳಿಕೆಯ ಮಾತು; ಕೇಳಿದ ಮಾತು; ವದಂತಿ: ನನ್ನ ತಂಗಿಯ ಕಣ್ಗಳಿಂದ ನಿನ್ನ ಕೇಳ್ಮಾತುಗಳು ಬಸಿಯು ತ್ತಿರುವ ಅಶ್ರುಪ್ರವಾಹಕ್ಕೆ ಪ್ರತಿಯಾಗಿ (ಸುಗುಗಂ. ೭೬-೮); ಕೀಳಿಲಿ ನೊಳಿದ್ದವರ್ ತಳವೆಳಗಿನಿಂ ನುಡಿಯೆ ಕೇಳ್ಮಾತನೊಳಗಿರ್ಪ ಪೆಣ್ಗಳಿರ್ವಗೆ (ಕಾಲೂರ. ೧೦೭-೨೧೮). [ಕೇಳ್ + ಮಾತು$_1$]

**ಕೇಳ್ಮೆ** (ನಾ). = ಕೇಳ್ವಿ: ಕೇಳ್ಮೆ ಹೇಳ್ಮೆಯ ನಿನ್ನ ಲೆಕ್ಕಿಸ ತಾಳ್ಮೆ ಯಿಂತಿರಸಲ್ಲ (ಶರಲೀ. ೨೩೫-೧೩); ಸಂಗೀತ ಕಲಿಯುವ ವಿದ್ಯಾರ್ಥಿ ಗಳಿಗೆ ಶಿಕ್ಷಣ ಎಷ್ಟು ಅಗತ್ಯವೊ ಕೇಳ್ಮೆಯೂ ಅಷ್ಟೇ ಅಗತ್ಯ (ನಾಕಲಾ. ೬೩). [ಕೇಳ್ + -ಮೆ$_1$]

**ಕೇಳ್ವಿ**, ಕೇಳಿವೆ, ಕೇಳುವೆ (ನಾ). ೧. ಕೇಳುವಿಕೆ; ಶ್ರವಣ: ಸ್ತ್ರೀರಾಗ ವಿಷಯಕ್ಕೆ ಕಾರಣಮಪ್ಪ ಕಥೆಗಳ ಕೇಳ್ವಿಯಂ ತೊಱೆವುದುಂ (ತತ್ತ್ವಪ್ರ. ೨೭೦) ; ಶಾಸ್ತ್ರದಿಂ ಕೇಳ್ವಿಯಿಂ ಪರಿಕಿಸುವ ಬಳಕೆಯಿಂ (ಗೋಕುನಿ. ೧೦–೧). ೨. ಪ್ರಶ್ನೆ: ಕೇಳಿಸದವರಂತೆ ನಟಿಸಿ, ಎರಡನೆಯ ಬಾರಿ ಅವರಿಂದ ಕೇಳ್ವಿ ಬಂದನಂತರ . . . ಆ ಮಾತನ್ನೇ ಹಾರಿಸಿಬಿಡುತ್ತಿದ್ದರು (ಜಾಗಿಸ. ೪೬). **ಕೇಳಿವೆ**: ೧. "ಶ್ರುತಂ, ಶ್ರೋತವ್ಯಂ, ಶ್ರಾವ್ಯಂ, ಶ್ರವಣೀಯಂ – ಈ ೪ ಕೇಳಿವೆ" (ಶಾಶಕ್ಯ. ೭೫). **ಕೇಳುವೆ**: ೧. ಅ ಓದು ಗಿಳಿಯೋದಿನಂತೆ, ಕೇಳುವೆ ಮರುಳನ ಕೇಳುವೆಯಂತೆ (ವಚಸಂ. ೨೫೧–೨೬) ; ಕೇಳುವೆಗಳವು ಬೇಱೆ ಚರಿತದ ದಾಳಿ ತಾನದು ಬೇಱಿಲಾ (ಕುವ್ಯಾಸ. ೮–೧೬) ; ನಡುಗಿದರು ಮುನಿವರರು ಕೇಳುವೆಯೆಡೆವಱಿದುದಕಟಕಟ ಭಂಗಂಬಡೆದುದೀ ವ್ರತವೆ ಸುತ (ನಿಭಾಗ. ೧೦–೯೪–೨೬). ೩. ಸ್ತುತಿಪಾಠ (?): ಕವೀಂದ್ರರೋದುವ ಕೇಳುವೆಯನೋದಿಸುವ ತೆಱದಲಿ ಕೋಳಿಗಳು ಕೂಗಿದವು ರವಿಯುದಯಿಸುವ ಸಮಯದಲಿ (ಅಕ್ರೂಚ. ೭–೩). [ಕೇಳ್ + –ವೆ]

**ಕೇಱಿಸು** (ಕ್ರಿ). ಮೊರದಿಂದ ಕೇರುವಂತೆ ಮಾಡು: ತರತರದ ಗುಡ್ಡಲಿಗಳಿಂದವಗೆದಱಿಸುತಂ ಕೇಱಿಸುತೆ ಕೆದಱಿಸುತೆ ವೀರರಂ ನೋಡುತಂ (ಏನಾರ. ದೇ. ೧೧೭–೫). [ಕೇಱು + –ಇಸು₃]

**ಕೇಱು**, ಕೇರು₁ (ಕ್ರಿ). ೧. ಮೊರದಿಂದ ಕಾಳುಕಡ್ಡಿಗಳನ್ನು ತೂರಿ, ಕಾಳನ್ನೂ ಕಸವನ್ನೂ ಬೇರ್ಪಡಿಸು: "ಕೇಱು – ಶೂರ್ಪಕರಣೇ" (ಶಮುಧಾ) ; ನಿನ್ನಕುಲದ ಕುಂದಂ ಕೇಱಿ ತೂಱಿ ಕೋಱಿಸುವೆ ನೆನಲು (ಹಚಕಾ. ೮–೩೪) ; ಮೊರದಿಂದ ಕೇಱಿ ತುಯಿ ತೌಡುಗಳ ಕಳೆದು (ವೀಶೈಪು. ೭–೧೦–೫೯) ; ಎಱಗಿ ಕವಿದಿಡಿದೊತ್ತಿ ಕೆದುಕಿ ಕೀಲಿಸಿ ಕೇಱಿ ತುಂಡಿಸಿ ತುಳುಕಿ ನಾಂಟಿ ಮರುಮೊನೆಗೊಂಡು (ಜೈಮಿಭಾ. ೪–೪೪) ; ಕೇಱಿದರು ಕೆಡೆಹಿದರು ಸತ್ವದಿ (ಕೋಗಯು. ೨೩–೪೮).

**ಕೇರು**: ೧. ಇಡಿದು ಕೇರಿ, ಮುಳ್ಳು ಹೊಟ್ಟು ಹೋಗಲಾಗಿ (ಸಕವೈ. ೩೯೨) ; ಧಾನ್ಯವನ್ನು ಕೇರಿ ಪವಿತ್ರಗೊಳಿಸುವಂತೆ (ಕರ್ಣಾಟ. xii, ಮುನ್ನುಡಿ) ; ಸಿರಿ ಬಿದರೆ ಮುತ್ತ ಕೇರೋಕೆ ಮೊರನಾದೆ (ಹಳ್ಳಿಬಾ. ೧೪) ; ತಂತ್ರಿಯವರ ಹೆಂಡತಿ ಎಲ್ಲವನ್ನೂ ವೆಂಕಮ್ಮನಲ್ಲಿ ಕೇಳಿ ತರುವಾಯ "ಅಕ್ಕಿಗೇರುವುದಿದೆ . . . ಬರುತ್ತೇನೆ" ಎಂದು ಹೊರಟುಹೋದರು (ಪದ್ಮಸ. ೨೫೬) ; ಮೊರದಿಂದ ಅಕ್ಕಿಯನ್ನು ಕೇರಿ ಹಸನು ಮಾಡುತ್ತಾರೆ (ರೂಢಿ). ೨. (ಆಲಂ) ದೋಷಗಳನ್ನು ಹೊರತೆಗೆ: ಆ ಗ್ರಂಥವನ್ನೆಲ್ಲಾ ಕೇರಿ ತೂರಿ ನೋಡಿದರು (ರೂಢಿ). [ದೇ. ‖ ಮಲ. ಚೇಱು; ತೆಲು. ಚೇಯು, ಚೇಟ]

**ಕೇಱಿಗಟ್ಟು** (ಕ್ರಿ). (?) : ಕಳಸದೊಳ್ ತಗುಣಿ ಮೊಱೆಯುತಿರ್ಪೊಡಂ ಸಿಸುಗಳೆಲ್ಲರುಂ [ಪಾಠಾಂ. ಕೊಸೆದು] ಕೇಱಿಗಟ್ಟಿ ನಲಿವೊಡಂ ಜೀವದನಗಳ ನೊಱನೂಱಿ ಕಡಿವೊಡಂ ಇವ ನೋಡಿ ಪೇೞ್ ಮಱೆಯಧಿಕ ತಾನೆಂಬುದಂ (ಜಟ್ಟಮ. ೨–೧). [?]

**ಕೇೞಿ**, ಕೇಣಿ₄, ಕೇಳಿ₃ (ನಾ). ಸಾಲು; ಪಂಕ್ತಿ; ಗುಂಪು; ಹಿಂಡು: "ಕೇೞಿಯೆಂದು ಪಂಕ್ತಿಯೊಳ್ ಱಟಂ" (ಶಮದ. ಪರಿ. ೧) ; ಕೇೞಿ ಪಙ್ಕ್ತಿಗೆ ಱಟಂ ಕ್ರೀಡೆಯೊಳ್ ೞಳಂ" (ಸಂಜೀವ. ೨೩) ; ಮುತ್ತಿನ ಪಚ್ಚೆ ಮಾಣಿಕದ ವಜ್ರದ ಕೇೞಿಯೊಳೊಂದಿ (ಪಂಪಭಾ. ೧೪–೨೦) ; ಕೇೞಿವೆರಸಿರ್ದ ಪವಳಮಂ ನೀಲಮುಮಂ (ಅಜಪು. ೬–೧೨೬); ಅೞಿಯ ಕೇೞಿಯ ನಮ್ಮನ್ನರೀ ಅಳ್ತನಂ ಪುಗುತೆಯಿರ್ಕುಂ (ರಾಮಾಶ್ವ. ೧೧೨–೧೭). **ಕೇಣಿ₄**: ಕುದುರೆಯ ಬಿಲ್ಲ ಬಲ್ಲಣೆಯ ಕೇಣಿಯನಲ್ಲಿ ಕೆಲರ್ ನಿಶಾಟರುಣ್ಮಿದ ನೆತ್ತರೊಳ್ ಮಿದಿದು (ಪಂಪಭಾ. ೧೨–೮) ; ಉರ್ಕಿನ ಕೇಣಿಯ ಚೂಣಿ ಸೊರ್ಕುಂಜಿರ್ಕಾಗಲೊಡಂ (ರಾಮಾಶ್ವ. ೧೪೩–೨೭). **ಕೇಳಿ₃**: ಘುಡುಘುಡಿಸುತೇಳ್ವ ಮತ್ತಾನೆಗಳ ಕೇಳಿಗಳ (ಜೆಬವು. ೨–೪). [< ಸಂ. ಶ್ರೇಣಿ]

❋

# ಕೈ

**ಕೈ₁** 'ಕೆಯ್' ನೋ.
**ಕೈ₂** 'ಕೆಯ್₂' ನೋ.
**ಕೈ₃** 'ಕೆಯ್₃' ನೋ.
**ಕೈ₄** 'ಕೆಯ್₄' ನೋ.

**ಕೈಅಂಬು** (ನಾ). ಕೈನೀರು; ತೀರ್ಥ (?) : ಆ ಮಹಾತ್ಮರು . . . ತಿಮ್ಮಣ್ಣನಾಯನಿಗೆ ದೆಸೆಗಟ್ಟಿನ ದೂಳಿತ, ಸಿದ್ಧಮೂಲಿಕೆ, ಕೈಅಂಬು, ಇವುಗಳನ್ನು ಕೊಟ್ಟು ಸಂಪಿಗೇ ಸಿದ್ದೇಶ್ವರನ ಗುಡಿಗೆ ದೊರೆಯನ್ನ ಕರೆತಂದು ಈ ದೇವರ ವಿಷಯದಲ್ಲಿ ಭಕ್ತಿಯಾಗಿರು ಎಂದು ಬುದ್ಧಿಹೇಳಿ ಹೊರಟು ಹೋದರಂತೆ (ಚಿತ್ರಪಾ. ೭). [ಕೈ₂ (< ಕೆಯ್₂) + ಅಂಬು₃]

**ಕೈಅಕ್ಷರ** (ನಾ). ಕೈಯಿಂದ ಬರೆದ ಅಕ್ಷರ; ಕೈಬರಹ: ಈಗಿನ ಪರ್ಷಿಯನ್ ಉರ್ದುಲಿಪಿಗಳನ್ನು ಅಚ್ಚುಕೂಟಕ್ಕೆ ಹೊಂದಿಸಿದ್ದಾರೆ . . . ಆ ಭಾಷೆಗಳಿಗೆ ಈ ಕೈಅಕ್ಷರಗಳೇ ಸೊಗಸು ಎನ್ನುವುದುಓದುಗರ ಅನುಭವ (ಭಾರದ. ೪೧೪). [ಕೈ₂ (< ಕೆಯ್₂) + ಅಕ್ಷರ]

**ಕೈಅರ್ಜಿ** (ನಾ). ಅಧಿಕಾರಿಗಳಿಗೆ ಸಮಕ್ಷಮವಾಗಿ ಕೈಯಲ್ಲಿಯೆ ಕೊಡುವ ಅರ್ಜಿ; ಮನವಿಪತ್ರ: ಅನ್ಯಾಯ ನೋಡಿಕೊಂಡು ಸುಮ್ಮನಿರುತ್ತೀರಾ? ಒಂದು ಕೈಅರ್ಜಿ ಬರೆದು ಹಾಕಬಾರದೇ? (ಕಾವೇರಿ. ೬೯). [ಕೈ₂ (< ಕೆಯ್₂) + ಅರ್ಜಿ]

**ಕೈಅಳವಿ** (ನಾ). ಕೈಯ ಅಳತೆ; ಕೈಯ ಹತೋಟಿ: ಯಾವುದನ್ನು ಬಿಟ್ಟುಕೊಟ್ಟು ಕೊಳ್ಳಬೇಕಾದ ಕಾರಣವಿಲ್ಲವೋ ಅದು ಒಂದು ವೇಳೆ ತನ್ನಷ್ಟಕ್ಕೆ ತಾನೇ ಕೈಅಳವಿಗೆ ಬಾರದೆ ಹೋದರೆ. . .ಅದು ಇನ್ನೆಲ್ಲಿಯೂ ಸಿಗುವ ಉಪಾಯವಿಲ್ಲ (ಇಪ್ಪಕ. ೨೭೯). [ಕೈ₂ (< ಕೆಯ್₂) + ಅಳವಿ]

**ಕೈಆಳಿಕೆ** (ನಾ). ಹತೋಟಿ; ಅಧಿಕಾರ; ರಕ್ಷಣೆ: ಅಜ್ಞಾಶಕ್ತಿ; ಅಧಿಕಾರ; ಹಿಡಿತ; ಹತೋಟಿ; ವಶ; ಅಂಕೆ; ನಿರ್ಬಂಧ; ಕೈನಡತೆ; ಕೈಆಳಿಕೆ (Control. ಇಂಕನಿ). [ಕೈ₂ (< ಕೆಯ್₂) + ಆಳಿಕೆ (< ಆಳ್)]

**ಕೈಇಡು** 'ಕೆಯ್ಯಿಡು' ನೋ.

**ಕೈಉತ್ತರ** (ನಾ). ಸ್ವತಃ ಕೊಟ್ಟ ಕೊಡಿಗೆ; ಕೈಯಾರೆ ಕೊಟ್ಟ ದಾನ: ಅರಸುಗಳ ಕೈಉತ್ತಾರತ್ತು ಪಾಯಂಣೆ ನಂದಾದೀಪ ಪುದಿವಟ್ಟು ಅಲಂಕಾರ ದೀಪಕೆ ಸಹಾ ನಾಂಣ್ಯ ೩೦ (ಎಕ. XI, ಹೊಳಲ್ಕೆ. ೭-೩೯ ; 1568). [ಕೈ$_2$ (< ಕೆಯ್$_2$) + ಉತ್ತಾರ]

**ಕೈಊರು** 'ಕೈಯೂಱು' ನೋ.

**ಕೈಂಕ** (ನಾ). ಒಂದು ಬಗೆಯ ಔಷಧಿ ಗಿಡ: (ವೈಔಗಿ. ೮-೧೩೪). [?]

**ಕೈಂಕರ್ಯ** (ನಾ). ಕಿಂಕರನ ಸೇವೆ; ಸೇವಕನಾಗಿರುವಿಕೆ: ಪರಮಭಾಗವತೋತ್ತಮರುಗಳು ಪರಿದು ಕೈಂಕರ್ಯಗಳ ಮಾಡಲು (ಗಗತಾ. ೧೯-೫೦) ; ಮದನನೊಡಗೂಡಿ ಮಧು ನೃಪಂ ವಿಧಿವಿಲಾಸಕೆ ತನ್ನ ಕೈಂಕರ್ಯಮಂ ಸಲ್ಲಿಸುವ ಸಿರಿಗಜ್ಜದೊಳ್ ತೊಡಗಿ (ಶ್ರೀರಾಮಾ. ೪೨-೪೦೫) ; ಗರ್ಭಗುಡಿಯಲ್ಲಿ ನಡೆಯುವ ಕೈಂಕರ್ಯಗಳು ಎಲ್ಲರಿಗೂ ಕಾಣಬರುವಂತಿತ್ತು (ಶಾಂತಲಾ. ೧೨೯). [ಸಂ.]

**ಕೈಂಕುಂಯಿ** (ನಾ). ೧. ಒಂದು ಅನುಕರಣ ಶಬ್ದ ; ನಾಯಿ ನೋವಿನಿಂದ ಮಾಡುವ ಶಬ್ದ: ಕಣಕ ಕುಟ್ಟೋ ಒನಕೆಲಿ ಬಡಿದರೆ ಕೈಂಕುಂಯಿರಾಗವ ಮಾಡುವಿರಿ (ಪುರಂದ. ೨-೩೯-೧). ೨. (ಆಲಂ) ಗೊಣಗಾಟ : ಏನು ಇವನ ಕೈಂಕುಂಯಿ ತಪ್ಪಲಿಲ್ಲವೆ ? (ರೂಢಿ).

**ಕೈಕಂಬಿ** 'ಕೈಗಂಬಿ' ನೋ.

**ಕೈಕಟ್ಟು$_1$** 'ಕೈಗಟ್ಟು' ನೋ.

**ಕೈಕಟ್ಟು$_2$** (ನಾ). ಕೈಯಲ್ಲಿ ಧರಿಸುವ ಒಂದು ಆಭರಣ : ತೋಳ ಬಳೆಗಳು ದುಂಡು ಹವಳ ಕೈಕಟ್ಟುಳ್ಳವಳೆ (ಪುರಂದ. ೧-೧೯-೩) ; ಸಣ್ಣಪವಳ ಕೈಕಟ್ಟಿನ ಪವಳಗಣ್ಣಣ್ಣಸರದ ಜಾತಿ ಪವಳ (ಕಂನವಿ. ೬-೬೭); ಕಾಲಂದುಗೆಯ ಕಾಮಿನಿಯ ಕೈಕಟ್ಟಿನ ಬಾಲೆಯ ಪಿಲ್ಲಿ ಮಂಟಿಕೆಯ (ಶತಸಾಂ. ೨೭-೩೯). [ಕೈ$_2$ (< ಕೆಯ್$_2$) + ಕಟ್ಟು$_2$]

**ಕೈಕಡ** 'ಕೈಗಡ' ನೋ.

**ಕೈಕಡಗ** (ನಾ). ಕೈಯಲ್ಲಿ ಧರಿಸಿಕೊಳ್ಳುವ ಕಡಗ, —ಬಳೆ: ಕಬ್ಬಿಣ ಕೈಕಡಗ ಕುಣಿಕೋಲು ಕೂದಲುಕಂಬಳಿ ಹೊದ್ದಾವ ಬಂದಾನ (ಸೂರ್ಯಪಾ. ೯೪-೧). [ಕೈ$_2$ (< ಕೆಯ್$_2$) + ಕಡಗ$_1$]

**ಕೈಕಡ್ಡಿ** (ನಾ). ಅತ್ಯಂತ ನೀಚೆ; ಅತಿದುಷ್ಟೆ (?): ಎಲೆ ದುರಿತವೆ ನೀಯನ್ನ ಎಳಿಲ ಮಾಡದೆ ಸಾಗಿನ್ನೆ . . . ಪರುಸ ಮುಟ್ಟಿದ ಲೋಹ ಚಿನ್ನ ಸಿರಿ ಅರಸನ ಭಟನೇ ಮಾನ್ಯ ಇನ್ನೊರದೆ ನೋಡೆಲೆ ಬಡುವೆಡ್ಡೆ ನಮ್ಮ ಸರಿಸವ ಬಿಡು ಕೈಕಡ್ಡಿ (ಪ್ರಸಕೀ. ೩೬-೨). [?]

**ಕೈಕತ್ತಿ** 'ಕೆಯ್ಗತ್ತಿ' ನೋ.

**ಕೈಕರಣ, ಕೈಕರಣೆ** (ನಾ). ೧. ಎಲ್ಲರಿಗೂ ತಿಳಿದಿರುವ, ಜನಜನಿತವಾದ ವೈದ್ಯಕೀಯ ಚಿಕಿತ್ಸೆ : (ಕ). ೨. ಕೈಯ ಸಂಜ್ಞೆ : ಮೂಕರ ಹಾಗೆ ಕೈಕರಣ ಮಾಡಿದರೆ ಸಾಕಲ್ಲ ಈ ಹರಕು ಕನ್ನಡವೋ ಇಂಗ್ಲೀಷೋ (ಯಮದೂ. ೮೬). ೩. ಕೈಚಳಕ; ಹಸ್ತಕೌಶಲ; ಕರನ್ಯಾಸ : ದಿಟ್ಟಿಸಿದರೆವೆ ಸೀವುದಂಗೈ ಮುಟ್ಟದರೆ ಹುಗುಳಹುದು ಬಳಿಕವನಟ್ಟ ಕೈಕರಣದ ಸುವಾರದ ವಿದ್ಯವೇನರಿದೊ (ಕುವ್ಯಾಅ. ೬-೧೪). **ಕೈಕರಣೆ** : ೩. ಪಿತೃಪಿತಾಮಹ ಸೂಪಶಾಸ್ತ್ರಾಯುತನ ಕೈಕರಣೆಗಳಲಧಿಕನತಿಶುಚಿಯ ಸಾಧನಕ್ರೋಧಿಯನು . . . ಪತಿಕರಿಸುವುದು ಸೂಪಕಾರತೆಗೆ (ಕುವ್ಯಾಉ. ೩-೯೨) ; ಅರರೆ ಕಲಿಕರ್ಣ ನಾವೀಸುದಿನ ನಿನ್ನ ಕೈಕರಣೆಯಂ ತಿಳಿಯವೆಲೆ (ತುರಂಗ. ೬೨-೨೪).
[ಕೈ$_2$ (< ಕೆಯ್$_2$) + ಕರಣ]

**ಕೈಕರಣೆ** 'ಕೈಕರಣ' ನೋ.

**ಕೈಕಲ್** 'ಕೈಗಲ್' ನೋ.

**ಕೈಕಲೆ** (ಕ್ರಿ). ಸಹಾಯಕ್ಕೋಸ್ಕರ ಬಂದು ಸೇರಿಕೊ; ನೆರವಿಗಾಗಿ ಕೂಡಿಕೊ : ಇದುವರೆಗೂ ರಾಜಪುತ್ರರ ಪರಾಕ್ರಮವು ಮೇಲುಗೈಯಾಗಿತ್ತು . . . ದೂರದೂರದಲ್ಲಿದ್ದ ಶತ್ರುಸೈನಿಕರು ಬಂದು ಕೈಕಲೆತ ಹಾಗೆಲ್ಲಾ ಕುಗ್ಗಲಾರಂಭಿಸಿದರು (ಭಾರವೀ. ೨೦).
[ಕೈ$_2$ (< ಕೆಯ್$_2$) + ಕಲೆ$_1$]

**ಕೈಕಷ್ಟ** (ನಾ). ದೈಹಿಕ ಶ್ರಮದ ಕೆಲಸ : (ಕ).
[ಕೈ$_2$ (< ಕೆಯ್$_2$) + ಕಷ್ಟ]

**ಕೈಕಸ** (ನಾ). ಕೈಯೊಳಗಿನ ಕಸ, —ಅಲ್ಪವಸ್ತು; ಕ್ಷುದ್ರಪದಾರ್ಥ: ಕಾಯಿದೆ ! ಏನು ಕಾಯಿದೆ ! ಇವು ನನ್ನ ಕೈಕಸ ಇದ್ದಂತೆ (ಹೊಸಂಸಾ. ೫).
[ಕೈ$_2$ (< ಕೆಯ್$_2$) + ಕಸ]

**ಕೈಕಸಬು, ಕೈಕಸುಬು** (ನಾ). ೧. ಕೈಯಿಂದ ಮಾಡುವ ಉದ್ಯೋಗ, —ಕೆಲಸ : "ಕೈಚಾತುರ್ಯ, ಕೈಜಾಣ್ಮೆ, ಹಸ್ತಕೌಶಲ, ಕೈಕಲೆ, ಕೈಕಸಬು" (Handicraft. ಇಂಕನಿ). 'ಕೈಕಸಬುಗಾರ' ಪರಾ. ೨. ಸಣ್ಣಪುಟ್ಟ ಕೆಲಸ. **ಕೈಕಸುಬು** : ೧. ಕೈಕಸುಬುಗಳಿಂದ ಜೀವಿಸುತ್ತಿದ್ದ ಕೆಲವು ಒಕ್ಕಲುಗಳೂ ಕಳಸಾಪುರದಲ್ಲಿದ್ದವು (ಕಳಹು. ೯೩). [ಕೈ$_2$ (< ಕೆಯ್$_2$) + ಕಸಬು]

**ಕೈಕಸಬುಗಾರ** (ನಾ). ಕೈಕಸಬನ್ನು ವೃತ್ತಿಯನ್ನಾಗಿ ಇಟ್ಟುಕೊಂಡಿರುವವನು ; ಕೈಕಸಬಿನಿಂದ ಜೀವಿಸುವವನು : ಕೈಕಸಬುಗಾರರು ತಮ್ಮ ಬಿಡಿಹೋರೆಗಳನ್ನು ಬಿಟ್ಟು ಕಾರಖಾನೆ, ಗಿರಣಿ, ಮುಂತಾದ ಪ್ರಚಂಡ ಸಂಘಟನೆಯ ಒಳಕೀಲಗಳಾಗಿ ದುಡಿಯತೊಡಗುವರು (ಮಾವಾದ. ೧೦೦). [ಕೈಕಸಬು + -ಗಾರ (< -ಕಾಱ)]

**ಕೈಕಸುಬು** 'ಕೈಕಸಬು' ನೋ.

**ಕೈಕಾಗದ** (ನಾ). ೧. = ಕೈಚೀಟು. ೨. ಕರಾರುಪತ್ರ (ವೈಗಜೆ. IV, ೭೬೪). [ಕೈ$_2$ (< ಕೆಯ್$_2$) + ಕಾಗದ]

**ಕೈಕಾಯು** 'ಕೆಯ್ಗ$_1$' ನೋ.

**ಕೈಕಾಲ್, ಕೈಕಾಲು** (ನಾ). ಕೈ ಮತ್ತು ಕಾಲು : ಕೈಕಾಲುಳ್ಳರೆಲ್ಲಂ ಚಕ್ರವರ್ತಿಗಳೇ ಮರನಾದುವೆಲ್ಲಂ ಶ್ರೀಖಂಡಮೇ (ಧರ್ಮಾಮೃ. ೫-೨೩೯); ಕೈಕಾಲ್ ಮೂಡಿತೊ ನಭಕೆ (ಕುವ್ಯಾದ್ರೋ. ೩-೯) ; ಕಂದರ್ಪನೆದ್ದು ಕೈಕಾಲ್ಗಳ ತೊಳೆದು (ಮೋಹತ. ೧೬-೫೦). **ಕೈಕಾಲು** : ಅಲುಗುವ ತಲೆಯ ಕೈಕಾಲುಗಳ ಕಂಪನದೆ (ತೊರರಾ. ೧-೧೧-೧೨).

**ಕೈಕಾಲಾಗಿ ಬರು** = ಹೇಳಿದ ಹಾಗೆ ಕೇಳು : ದಮ್ಮಯ್ಯ ಅನ್ನು, ಅವನೇ ಕೈಕಾಲಾಗಿ ಬರುತ್ತಾನೆ (ರೂಢಿ). **ಕೈಕಾಲಿಗೆ ಆಗು** = ಮಲಮೂತ್ರ ವಿಸರ್ಜನೆಯಾಗು : ಎರಡು ದಿನ ಕೈಕಾಲಿಗೇ ಆಗಲಿಲ್ಲ (ಗಂಗಾಸಾ. ೪). **ಕೈಕಾಲು ಆಡಿಸು** = ಕೈಕಾಲುಗಳನ್ನು ಚಾಚು ; ಮೈಚಾಚು : ಅಲ್ಲಾದರೂ ಕೈಕಾಲು ಆಡಿಸುವಷ್ಟು ಜಾಗ ಬೇಡವೆ (ಯೋಧಪು. ೨೮). **ಕೈಕಾಲುಕಟ್ಟಿಕೊಳ್ಳು** = ಅತಿ ದೈನ್ಯದಿಂದ ಕೈಮುಗಿದು, ಕಾಲು ಮುಟ್ಟಿ ನಮಸ್ಕರಿಸು ; ದೈನ್ಯದಿಂದ ಬೇಡು ; ಶರಣಾಗತನಾಗು : ಅಡ್ಡಬಿದ್ದು ಕೈಕಾಲುಕಟ್ಟಿಗೋತೀನಿ (ದೀಪಹ. II, ೬೬). **ಕೈಕಾಲು ಕೆಡು, ಕೈಕಾಲುಗೆಡು** = ಎದೆಗುಂದು ; ಧೈರ್ಯ ಕಳೆದುಕೊ ; ಕಂಗಾಲಾಗು : ನೀನು ಕ್ಷತ್ರಿಯನಾಗಿದ್ದು ಶತ್ರುಮಧ್ಯದಲ್ಲಿ ಹೀಗೆ ಕೈಕಾಲುಗೆಡಬಹುದೆ (ವಚಭಾ. ೨೦೮) ; ಕ್ಷುದ್ರಮನಸ್ಸಿನವರಂತೆ ಹೀಗೇಕೆ ಕೈಕಾಲುಗೆಡುವಿರಿ (ತುಳಸಿ. ೧೧೦). **ಕೈಕಾಲುತೊಳೆ** = ೧. ಕೈ ಮತ್ತು ಕಾಲನ್ನು ತೊಳೆದು ಚೊಕ್ಕಟ ಮಾಡು. ೨. ನೀರುಕಡೆ ಹೋಗು ; ಮಲಮೂತ್ರ ವಿಸರ್ಜನೆಮಾಡು : ಕೈಕಾಲು ತೊಳೆದು ಬರುತ್ತೇನೆ (ರೂಢಿ). **ಕೈಕಾಲುಗೆಡಿಸು** = ಎದೆಗುಂದಿಸು ; ಅಧೈರ್ಯಪಡಿಸು : ನೀ ಅತ್ತು ಆ ಕೂಸಿನ ಕೈಕಾಲುಗೆಡಿಸಬೇಡ (ಬೀಳತೆ. ೪೧).

**ಕೈಕಾಲು ಬಿಡು** = ಕೈಕಾಲುಗೆಡು : ಕೈಕಾಲು ಬಿಟ್ಟು ಹೀಗೆ ಶೋಕಿಸುತ್ತ ಕುಳಿತರೆ ಪ್ರಯೋಜನವೇನು (ಮಂಜುಕ. ೯೯). **ಕೈಕಾಲು ಬೀಳು** = ೧. ಸತ್ವಉಡುಗು; ನಿತ್ರಾಣನಾಗು : ಆ ಸುದ್ದಿ ಕೇಳಿ ಕೈಕಾಲು ಬಿದ್ದುಹೋದವು (ರೂಢಿ). ೨. ದೈನ್ಯದಿಂದ ಬೇಡಿಕೊ : ಕಂಡವರಿಗೆಲ್ಲ ಕೈಕಾಲು ಬಿದ್ದರೂ ಅವನ ಕೆಲಸವೇನೂ ಆಗಲಿಲ್ಲ (ರೂಢಿ). **ಕೈಕಾಲುಮೆಟ್ಟು** = ತೊತ್ತುಗೆಲಸ; ಗುಲಾಮಚಾಕರಿ : ಸೂಳೆಬಂಟಕೆಯ ಜಗಳದ ಬಂಟರು ಕೈಕಾಲುಮೆಟ್ಟಿನ ತೋಟಿಯವರು (ಕುರಾಸಾಂ. ೧೨-೪೨). **ಕೈಕಾಲುಹಿಡಿ** = ಕಾಲಿಗೆ ಬಿದ್ದು ಅಂಗಲಾಚು, —ಬೇಡಿಕೊಳ್ಳು : ಅಂಗಲಾಚಿ ಕೈಕಾಲು ಹಿಡಿದುಕೊಂಡು ಬಿಡಿಸಿಕೊಂಡು ಬಂದೆವು (ನಡೆದಾ. II, ೧೧೬೧). **ಕೈಕಾಲ್ಪಡೆ, ಕೆಯ್ಯಾಲ್ಪಡೆ** = ಕೈ ಮತ್ತು ಕಾಲನ್ನು ಪಡೆ, —ಹೊಂದು : ಮುಗಿಲು ಕೈಕಾಲ್ಪಡೆದುವಂಜನನಗವು ನಡೆಗಲ್ತುದೆನಲು (ಸಾಳ್ವಭಾ. ೬-೧೧); ನಡೆವ ನೀಲಾದ್ರಿಗಳೊ ಕೆಯ್ಯಾಲ್ಪಡೆದ ಕಜ್ಜಳಗಿರಿಗಳೋ (ಬಸವು. ೫೮-೪೮). **ಕೈಕಾಲುಹೋಗು** = ೧. ಶಕ್ತಿಗುಂದು. ೨. ಬಹಳವಾಗಿ ಅಧೈರ್ಯಪಡು; ದುಃಖ, ಭಯ ಮೊದಲಾದವುಗಳಿಂದ ತಬ್ಬಿಬ್ಬಾಗು : ಆ ದೊಡ್ಡ ಗಂಡಾಂತರದಿಂದ ಅವನ ಕೈಕಾಲೇ ಹೋದವು (ರೂಢಿ).

[ಕೈ$_2$ (< ಕೆಯ್$_2$) + ಕಾಲ್$_1$]

**ಕೈಕಾಲು** 'ಕೈಕಾಲ್' ನೋ.

**ಕೈಕಾಲುಗೆಡು** (ಕ್ರಿ). ಧೈರ್ಯಗೆಡು; ದಿಕ್ಕುತೋರದಿರು; ಗಾಬರಿಗೊಳ್ಳು : ಜ್ವರಬಂದರೆ ನಾವೆಲ್ಲಾ ಇಷ್ಟೊಂದು ಕೈಕಾಲುಗೆಡುತ್ತೇವೆ (ವೈನಿ. ೭೯). [ಕೈಕಾಲು (< ಕೈಕಾಲ್) + ಕೆಡು$_1$]

**ಕೈಕಾಳಗ** (ನಾ). ಕೈ ಕೈ ಯುದ್ಧ; ಮುಷ್ಟಾಮುಷ್ಟಿ; ದ್ವಂದ್ವಯುದ್ಧ : ಮಲ್ಲಯುದ್ಧ, ಜಟ್ಟಿಗರ ಕುಸ್ತಿ, ಕೈಕಾಳಗ, ಮುಷ್ಟಾಮುಷ್ಟಿ (ಸಿದ್ಧಾಂತಿ. ೨೩೧). [ಕೈ$_2$ (< ಕೆಯ್$_2$) + ಕಾಳಗ]

**ಕೈಕುಂಚಿಗೆ** (ನಾ). ಸಣ್ಣ ಕುಂಚ : (ಕಿ).

[ಕೈ$_2$ (< ಕೆಯ್$_2$) + ಕುಂಚಿಗೆ]

**ಕೈಕುಂಟು** (ಕ್ರಿ). ೧. ಕೈಕುಳ್ಳಾಗು; ಕೈ ಊನವಾಗು. ೨. ಬರವಣಿಗೆಯಲ್ಲಿ ಎಡವು, —ತಪ್ಪುಮಾಡು : ಇದು ಯಥಾವತ್ತಾದ ಪ್ರತಿಯಾಗುವಂತೆ ಕಣ್ಣಲ್ಲಿ ಕಣ್ಣಿಟ್ಟು, ಕೈಕುಂಟದೆ, ತಿದ್ದಿತಿದ್ದಿ ಮುದ್ದಾಗಿ ಮಸಿಯಲ್ಲಿ ಮೂರ್ತಿಗೊಳಿಸಿರುವ (ಬಿಟ್ಟಅ. ೪ ಅರಿಕೆ).

[ಕೈ$_2$ (< ಕೆಯ್$_2$) + ಕುಂಟು$_1$ (< ಕೂಂಟು$_1$)]

**ಕೈಕುತ್ತು** 'ಕೈಗುತ್ತು' ನೋ.

**ಕೈಕುಪ್ಪಸ** (ನಾ). ಕೈಗೆ ತೊಡಿಸುವ ಗವಸಣಿಕೆ, —ಹೊದಿಕೆ : ಒಳ್ಳೆಯ ವಿನೋದದ ಪ್ರಜ್ಞೆಯಿದ್ದ ಕೈಕುಪ್ಪಸದ ವರ್ತಕ (ಸಮಜೀ. ೪೮ ಪೀಠಿಕೆ). [ಕೈ$_2$ (< ಕೆಯ್$_2$) + ಕುಪ್ಪಸ]

**ಕೈಕುಲುಕಾಟ** (ನಾ). ಇನ್ನೊಬ್ಬರ ಕೈಯನ್ನು ಮೃದುವಾಗಿ ಅದುಮಿ ಅಲುಗಾಡಿಸುವುದು : ಆರಂಭದ ಉದ್ವೇಗ, ಧನ್ಯವಾದ ಸಮರ್ಪಣೆ, ಮಿತ್ರರ ಕೈಕುಲುಕಾಟ ಇವೆಲ್ಲ ಮುಗಿಯುವಲ್ಲೇ ತಾಸೆರಡು ತಾಸು ಕಳೆದು ಹೋದವು (ವಾತ್ಸಲ್ಯ. ೩೪೬).

[ಕೈ$_2$ (< ಕೆಯ್$_2$) + ಕುಲುಕಾಟ]

**ಕೈಕುಲುಕಿಸು** (ಕ್ರಿ). = ಕೈಕುಲುಕು : ಜನತೆಯ ಉದ್ಧಾರ ಮಾರ್ಗದಲ್ಲಿ . . . ರಾಜಕಾರಣಿಗಳು ಕೈ ಕುಲುಕಿಸಬಹುದು (ಸಾಸಮಾ. ೩೬).

[ಕೈಕುಲುಕು + -ಇಸು$_3$]

**ಕೈಕುಲುಕು** (ಕ್ರಿ). ಇನ್ನೊಬ್ಬರ ಕೈಯನ್ನು ಮೃದುವಾಗಿ ಒತ್ತಿ ಅಲುಗಿಸು : ನೆಕ್ಲುದೋವ್ ಪ್ರತಿಯೊಬ್ಬರ ಬಳಿಸಾರಿ ಕೈಕುಲುಕಿದನು (ಪುನರು. ೧೧೬). [ಕೈ$_2$ (< ಕೆಯ್$_2$) + ಕುಲುಕು$_1$]

**ಕೈಕೂಡಿಸು** (ಕ್ರಿ). ಕೈಗಳನ್ನು ಜೋಡಿಸು; ನಮಸ್ಕಾರಮಾಡು : "ನೀವು ಬಂದು ಎಷ್ಟು ಹೊತ್ತಾಯಿತು?" ಕೈಕೂಡಿಸುತ್ತ ಎಂದ (ಜಮಾನ್ನಾ. ೧೫೨). [ಕೈ$_2$ (< ಕೆಯ್$_2$) + ಕೂಡಿಸು]

**ಕೈಕೂಲಿ, ಕೈಗೂಲಿ** (ನಾ). ೧. ದಿನಗೂಲಿ ಕೆಲಸ; ಜೆಂಗೂಲಿ. 'ಕೈಕೂಲಿಕಾಜಿ' ಪರಾ. ೨. ದಿನಗೂಲಿಯಿಂದ ಬರುವ ಹಣ : ಮಾಡಿದ ಭಕ್ತಿಗೆ ಕೈಲಾಸಕ್ಕೆ ಹೋದಿಹೆನೆಂಬುದು ಕೈಕೂಲಿ (ಸೋಳಿಮಾ. ೨೮೩-೫೪); ಮೇಲುಪಾಯವದಿಲ್ಲದಿರೆ ಕುಡುಗೋಲನೊಂದುವನಳಡಿಸಿ ಕೈಕೂಲಿಯಂ . . . ಲೀಲೆಯಿಂ ಮಾಡುತ್ತ (ಬಸವು. ೨೭-೧೬). **ಕೈಗೂಲಿ** : ೨. ಭಕ್ತಿ ಕೈಗೂಲಿಯೇ ಬೇಡುವವ ಭಕ್ತನೇ (ಸೋಮಚ. ೧-೬೬). [ಕೈ$_2$ (< ಕೆಯ್$_2$) + ಕೂಲಿ]

**ಕೈಕೂಲಿಕಾಜಿ** (ನಾ). ಕೈಕೂಲಿಯನ್ನು ಸಂಪಾದಿಸುವವನು; ದೇಹಶ್ರಮಮಾಡಿ ದುಡಿಯುವವನು; ದಿನಗೂಲಿಯ ಕೆಲಸಗಾರ : ಅನಂತಶೀಲರ ಕಂಡಡೆ ಕೈಕೂಲಿಕಾಜಿರೆಂಬೆ (ಅವಚಂ. ೧೧೪-೫೧೩); ಕೈಕೂಲಿಕಾಜನಂತೆ ಮಾಡುವ ಅರ್ಚನೆಯು ಪೂಜೆಯು ಆಯಸವೇಕೋ (ಚೆನ್ನವ. ೫೦-೧೦); ಉಸುರದಿರುಸುರದಿರು ಭೂಭಾಗದೊಳು ಕೈಕೂಲಿಕಾಜನೆನ್ನ ಮುಂದಿಂತು (ಬಸವು. ೨೯-೧೩). [ಕೈಕೂಲಿ + -ಕಾಜಿ]

**ಕೈಕೂಲಿತನ** (ನಾ). ಕೈಕೂಲಿಯನ್ನು ಮಾಡುವಿಕೆ : ತಾನಿದ್ದೆಡೆಯಲ್ಲಿ ಸುಳಿದು ಮಾಡುವ ಶೀಲ ಕೊಟ್ಟು ಪೂಜಿಸುವ ಕೈಕೂಲಿತನವಿಲ್ಲ (ವಚಶಾ.II, ೪೨೩). [ಕೈಕೂಲಿ + -ತನ]

**ಕೈಕೂಸು, ಕೈಗೂಸು** (ನಾ). ೧. ಕೈಯಲ್ಲಿ ಎತ್ತಿಕೊಳ್ಳಬಹುದಾದ ಮಗು; ಚಿಕ್ಕಮಗು : ದಾಂಪತ್ಯಕ್ಕೆ ಕಾಲಿಟ್ಟ ಮೇಲೆ ಪರಮೇಶ್ವರಿಗೆ ಕೈಕೂಸು ತಪ್ಪಿದ್ದಲ್ಲ (ಹೊಸಕ್ಷಿ. ೨೯). ೨. (ಅಲಂ) ಕೈಗೊಂಬೆಯಂತಿರುವುದು; ಸ್ವತಂತ್ರವಲ್ಲದ, ಆಡಿಸಿದವರ ಕೈಯಲ್ಲಿ ಆಡುವ ವ್ಯಕ್ತಿ, ಸಂಸ್ಥೆ, ಮೊದಲಾದವು. **ಕೈಗೂಸು** : ೨. ಪರಿಸ್ಥಿತಿಯ ಕೈಗೂಸಾಗಿ ಕಳೆಗೊಂಡು ದಿನ ನನ್ನನ್ನು ಮರೆತುಬಿಡಿ ಎಂದು ಹೊರಟು ಹೋದಳು ಅವಳು (ಹೊಸಕ್ಷಿ. ೮೫); ರಂಗಭೂಮಿಯು ಪ್ರಚಾರದ ಕೈಕೂಸಾಗುವಂತಹ ಆಶ್ರಯವನ್ನು ಪಡೆಯುವುದಕ್ಕಿಂತ (ಭಾರದ. ೫೬೫). [ಕೈ$_2$ (< ಕೆಯ್$_2$) + ಕೂಸು]

**ಕೈಕೆಲಸ, ಕೈಗೆಲಸ** (ನಾ). ೧. ತನ್ನ ಸ್ವಂತ ಕೈಯಿಂದಲೇ ಮಾಡಿದ ಕೆಲಸ : ಇದು ಮಗನ ಕೈಕೆಲಸವೇ ಸಂಶಯವಿಲ್ಲ (ರೂಢಿ). ೨. ಕೈಯಿಂದ ಮಾಡುವ ಕೆಲಸ; ಕೈದುಡಿಮೆ : ತನಗೆ ತನುಜಾತರಿಲ್ಲೆಂದು ತನ್ನ ಹಾಳುಮನೆಯ ಕೈಕೆಲಸಕ್ಕಾಗಿ ನನಗೆ ಬೋಸರಿಗತನಮಂ ನುಡಿದು (ಸಮ್ಮಕೌ. ೫-೨೫). ೩. ಸಣ್ಣಪುಟ್ಟ ಕೆಲಸ; ಸುತ್ತುಗೆಲಸ. ೪. ಕೈಯಿಂದ ತಯಾರಿಸಿದ ವಸ್ತು, —ಪದಾರ್ಥ : ದಾರದ ಬಟ್ಟೆಗಳು, ನೀಲಿ, ಸಕ್ಕರೆ, ಹಿತ್ತಾಳೆ, ತಾಮ್ರ, ಮಣ್ಣುಪಾತ್ರೆಗಳೂ ಮುಖ್ಯವಾದ ಕೈಕೆಲಸಗಳು (ಭೂಗೋಳ. ೭೯). **ಕೈಗೆಲಸ** : ೩. ಮುಂದಣ ಕೈಗೆಲಸವನಸವಸದಿಂದಂ ತೀರಿಪ (ಜಯಕಾ. ೧೩-೬೫); ಕೈಗೆಲಸಗಳಿಂದೆ ಚೊಕ್ಕಟಗೊಳಿಸಿ (ಮೋಹತ. ೧೧-೪೮).

**ಕೈಕೆಲಸದವ** = ಕೈಕೆಲಸಕ್ಕೆಂದು ನಿಯಮಿಸಲ್ಪಟ್ಟವನು; ಕೆಲಸದಾಳು : (ಕಿ). [ಕೈ$_2$ (< ಕೆಯ್$_2$) + ಕೆಲಸ]

**ಕೈಕೆಳಗು** (ನಾ). ಅಧೀನತೆ; ವಶ : ಕೈಕೆಳಗಿನ ಆಳುಮಕ್ಕಳು (ಮುಂಬಯಿ. ೪-೩೪).

**ಕೈಕೆಳಗಿನವ**=ಸೇವಕ; ಆಳು; ಕೆಲಸದವನು : ಎಷ್ಟೋ ಯಜಮಾನರು ತಮ್ಮ ಕೈಕೆಳಗಿನವರನ್ನು ಹೊಡೆಯುತ್ತಾರೆ (ಮುಂಬಯಿ. ೪-೭೪). **ಕೈಕೆಳಗಿರು**= ಅಧೀನದಲ್ಲಿರು : ಅವರ ಕೈಕೆಳಗಿರುವ ದೊರೆಗಳು ಯಿಂನು ನಾವು (ಯನಳ. ೩೬). [ಕೈ$_2$ (< ಕೆಯ್$_2$) + ಕೆಳಗು (< ಕೆಟಗು)]

**ಕೈಕೊಕ್ಕರಿಸು** (ಕ್ರಿ). ಕೈಮುದುರು; ಹಿಂಜರಿ; ಹಿಂದೆಗೆ: ಉಳಿದು ಬಳಿದುದನ್ನು ಕೈಕೊಕ್ಕರಿಸದೆ ಖರ್ಚುಮಾಡಿ ಕೇಳಿದವರಿಗೆಲ್ಲ ಹಂಚಿ ಬಿಟ್ಟಳು (ಖನರು. ೯). [ಕೈ$_2$ (< ಕೆಯ್$_2$) + ಕೊಕ್ಕರಿಸು]

**ಕೈಕೊಡಹು** 'ಕೈಗೊಡಹು' ನೋ.

**ಕೈಕೊಡು** 'ಕೆಯ್ಗೊಡು' ನೋ.

**ಕೈಕೊದ್ದು** (ಕ್ರಿ). ಕೈಯನ್ನು ಅಮುಕು, —ಒತ್ತಿಹಿಡಿ; ಗಟ್ಟಿಯಾಗಿ ಹಿಡಿ (?): ಜಡಮತಿಗಳಂ ಸಾಮಭೇದದಿಂದಾ ವಶಗೊಳಿಸಲಳವೆ ಕೈಕೊದ್ದಿ ಪಿಡಿದುಂ ಗುದ್ದಿ ಹಸನೆನಿಸವೇಳ್ಕುಂ (ವೆಂಕಾರಾ. ೬-೭-೧೪). [ಕೈ$_2$ (< ಕೆಯ್$_2$) + ಕೊದ್ದು ?]

**ಕೈಕೊಸರು** (ಕ್ರಿ). ಕೈಯನ್ನು ಎಳೆದುಕೊ, —ಕೊಡಹು, —ಹಿಡಿತದಿಂದ ತಪ್ಪಿಸಿಕೊ: ಮಾಲಿಯ ಹಿಡಿತದಿಂದ ಕೈಕೊಸರಿಕೊಂಡು ನಗೆಯ ನೋಟ ಚೆಲ್ಲಿ ಸುಂದರಿ ಅಲ್ಲಿಂದ ಓಡಿದಳು (ಮುರಳಿ. ೧೩೩); ನಾನವರ ಕೈಕೊಸರಿ ಒಗೆದೆ (ಸ್ಮೃತಿಚಿ. ೧೧೬). [ಕೈ$_2$ (< ಕೆಯ್$_2$) + ಕೊಸರು$_1$ (< ಕೊಸರ್)]

**ಕೈಕೊಳ್** 'ಕೆಯ್ಕೊಳ್' ನೋ.

**ಕೈಕೊಳಿಸು$_1$** 'ಕೆಯ್ಕೊಳಿಸು' ನೋ.

**ಕೈಕೊಳಿಸು$_2$** 'ಕೆಯ್ಗೊಳಿಸು$_2$' ನೋ.

**ಕೈಕೊಳು** 'ಕೆಯ್ಕೊಳ್' ನೋ.

**ಕೈಕೊಳುಹ** 'ಕೆಯ್ಕೊಳುಹ' ನೋ.

**ಕೈಕೋ** 'ಕೈಯ್ಕೊಳ್' ನೋ.

**ಕೈಕೋಚು** (ನಾ). ತೊಂದರೆ; ಇಕ್ಕಟ್ಟು; ಕೈಕಟ್ಟು: ಅಯ್ಯಾ, ತೀರ ಕೈಕೋಚಾಯಿತಲ್ಲ. ಎಲೆ ಉಂಟು, ಅದರೆ ಅಡಿಕೆ ಇಲ್ಲ (ಚಿಟ್ಟಜೀ. ೫೪). [ಕೈ$_2$ (< ಕೆಯ್$_2$) + ಕೋಚು]

**ಕೈಕೋಲ್** 'ಕೆಯ್ಕೋಲ್' ನೋ.

**ಕೈಕೋಲು** 'ಕೆಯ್ಕೋಲು' ನೋ.

**ಕೈಕೋಳ$_1$**, ಕಯ್ಕೋಳ$_2$, ಕೈಕ್ಕೋಳ (ನಾ). ೧. ನೇಕಾರ; ನೆಯ್ಗೆಯವನು. ೨. ಒಂದು ಬಗೆಯ ಸೈನ್ಯ: ತರತರದೆ ನಿಂದಿರ್ದ ತುರಗಸಂದೋಹದಿಂ ಉರವಣಿಸುತುಂ ಮೆಱೆವ ಕೈಕೋಳರೊ [ಪಾಠಾಂ. ಕೊಳ್ಳರೆ, ಗುಡಿಗಳೊ]ಪ್ಪದಿಂ (ನಂಬಿರ. ೧೧-೧೪೯). ೩. ದೇವಾಲಯದ ಸೇವಕ. **ಕೆಯ್ಕೋಳ$_2$**: ೧. ಕಯ್ಕೋಳರ ಹಾದಿಗಳೊಂದೆಸೆಯೊಳ್ (ತಿರುನಾ. ೨೨೨-೧೯). **ಕೈಕ್ಕೋಳ**: ೨. ಪಾರ್ಥಿವ ಶೇಖರ ತೆಂನ್ದಕೈಕ್ಕೋಳರ್ (ಎಪಿ.ಕ. ೧೯೩೧, ೫೩; ?). [← ತಮಿ. ಮಲ. ಕೈಕ್ಕೋಳನ್]

**ಕೈಕೋಳ$_2$**, ಕಯ್ಕೋಳ$_1$, ಕೈಗೋಳ (ನಾ). (ಅಪರಾಧಿಯ) ಕೈಗೆ ತೊಡಿಸುವ ಬೇಡಿ, —ಸಂಕೋಲೆ: ಅವರಿಗೆಲ್ಲ ಕೈಕೋಳ ಹಾಕಿಸಿ (ಚಂದತೋ. ೧೫೩). **ಕಯ್ಕೋಳ$_1$**: ಮುಟ್ಟಲಿದು ಹೆಬ್ಬಯಕೆಯಹುದು ಕಯ್ಕೋಳಂ (ಕಾಲೂರ. ೧೨೯-೨೭೪). **ಕೈಗೋಳ**: ಭವಗೋಟಲೆಯ ಕೈಗೋಳ ಕಳಚಿದ ಕಲಿ ವಿಭೀಷಣಜೀವ ನಿರ್ಗಮವ (ತೊರರಾ. ೬-೩-೧). [ಕೈ$_2$ (< ಕೆಯ್$_2$) + ಕೋಳ$_1$]

**ಕೈಕ್ಕೋಳ** 'ಕೈಕೋಳ$_1$' ನೋ.

**ಕೈಖರ್ಚು** (ನಾ). ೧. ಸಣ್ಣಪುಟ್ಟ ಖರ್ಚು; ಚಿಲ್ಲರೆ ಖರ್ಚು: ಗುಂಡಪ್ಪನಿಗೆ ಬೇಕಾಗುವ ಒಳ್ಳೊಳ್ಳೆ ಬಟ್ಟೆ ಕೈಖರ್ಚಿಗಾಗಿ ಹಣಕಾಸು ತಾನೇ ಕೊಡುತ್ತಿದ್ದಳಂತೆ (ಬಾಗಿನ. ೨೯). ೨. ಯಾವ ಆದಾಯವೂ ಇಲ್ಲದೆ ಇದ್ದ ಹಣದಲ್ಲಿಯೆ ಮಾಡುವ ವೆಚ್ಚ: ಕೈಖರ್ಚಿನಿಂದ ಉಪಜೀವಿಸುತ್ತ (ಮಂಜುಕ. ೬೨). [ಕೈ$_2$ (< ಕೆಯ್$_2$) + ಖರ್ಚು]

**ಕೈಗಂಟು** (ನಾ). ೧. ತನ್ನ ಕೈಯಲ್ಲಿರುವ ಗಂಟು, —ಹಣದ ಗಂಟು: "ಕೈಗಂಟು = ಕೂಡಿಹಾಕಿದ ಹಣ" (ಗಂಗಾಮ. ೯೯); ಭುಜಗವೇಣಿ ಭುಜಂಗನಿಹೆ ಭೇದಮೇನುಂಟು ಕೈಗಂಟ ನೋಡೆಂದನು (ವೆಂಕಾರಾ. ೫-೬-೫೬); ತಮ್ಮ ಅನುವು ಅಪತ್ತಿಗೆ ಬಹಳವಲ್ಲವಾದರೂ ಸ್ವಲ್ಪ ಕೈಗಂಟು ಇರಬೇಕೆಂದು . . . ತೆಗೆದಿಟ್ಟಿದ್ದರು (ಸ್ಮೃತಿಚಿ. ೩೭). ೨. (ಉಕ) ತಾನಾಗಿ ಸೇರಿಸಿದ ಮಾತು; ಮೂಲದಲ್ಲಿ ಇಲ್ಲದುದು: ಚಾಣಾಕ್ಷತೆಯಿಂದ ನಮ್ಮ ಅವ್ವನ, ಕಾಕಾನ ಹೆಸರುಗಳನ್ನು ಹಾಡಿನಲ್ಲಿ ಕೈಗಂಟಿನಿಂದ ಸೇರಿಸಿಬಿಟ್ಟುದರಿಂದ (ನೈನಿ. ೨೩); ಅದು ಗಂಟಲ್ಲ ಬರೀ ಕೈಗಂಟು (ಹೊಸಂಸಾ. ೧೬೭). ೩. ಗುಪ್ತವಾಗಿ ಕೂಡಿಟ್ಟ ಹಣ.

ಕೈಗಂಟುಹಾಕು = ತನ್ನ ಬುದ್ಧಿಬಲದಿಂದ ಸೃಷ್ಟಿಮಾಡು; ಸೇರಿಸಿ ಹೇಳು; ಕಲ್ಪಿಸು; ಕತೆಕಟ್ಟು: ಹಣ ಕಳುಹಿಸುತ್ತೇನೆಂದು ಅಣ್ಣ ಬರೆದಿದ್ದಾನೆಂದು ಕೈಗಂಟು ಹಾಕಿ ಹೇಳಿದೆ (ಪ್ರತಿಬಿಂ. ೪೮); "ಈ ಮನೆಯ ಜಗಳವು ನಿಮ್ಮಿಂದಲೇ ಆಗಿದೆಯೆಂದು ನಾನು ತಿಳಿಯುತ್ತೇನೆ" ರೂಪಚಂದನು ಕೈಗಂಟು ಹಾಕಿದ (ಜವಾನಾಪ್ಪಾ. ೧೪೪). [ಕೈ$_2$ (< ಕೆಯ್$_2$) + ಗಂಟು]

**ಕೈಗಂಟೆ, ಕೈಘಂಟೆ** (ನಾ). ಕೈಯಿಂದ ಬಾರಿಸುವ ಘಂಟೆ; ಸಣ್ಣ ಗಂಟೆ: ಪೂಜಾರಿ ಕೈಗಂಟೆ ಬಾರಿಸಿದ (ರೂಢಿ). **ಕೈಘಂಟೆ**: ಕೈಘಂಟೆಯಾಕಾಶ ಭಾಗದೊಳು ಘಣಘಣರವಂ ಮಿಗೆ ಹೋಗುತ್ತಿದ್ದ ಹನೀತಂ (ಬಸವು. ೪೩-೪೧). [ಕೈ$_2$ (< ಕೆಯ್$_2$) + ಗಂಟೆ$_2$]

**ಕೈಗಂದುಗ** (ನಾ). ಕೈಚೆಂಡು: ನಿನ್ನೀ ರುಂಡಂ ಮರುಳ್ವಡೆವೆರಸು ಮುಂಡಳಿಸಿ ಸೆಂಡನಾಡುವ ಮಾಕಾಳಿಯ ಕೈಗಂದುಗಮಕ್ಕುಂ (ರಾಮಾಶ್ವ. ೮೬-೨೨). [ಕೈ$_2$ (< ಕೆಯ್$_2$) + ಕಂದುಗ (< ಕಂದುಕ)]

**ಕೈಗಂಬ** (ನಾ). ದಾರಿಯನ್ನು ಸೂಚಿಸುವುದಕ್ಕೋಸ್ಕರ ಮೇಲು ಭಾಗದಲ್ಲಿ ಫಲಕವನ್ನು ಜೋಡಿಸಿರುವ ಕಂಬ; ಕೈಮರ: ತತ್ತ್ವದರ್ಶನವೊಂದೆ ಜೀವನದ ಸರ್ವಸ್ವವಲ್ಲ . . . ಅದು ಕಾಣದ ಊರೊಂದಕ್ಕೆ ದಾರಿತೋರುವ ಕೈಗಂಬ (ಶಿಕ್ಷದ. ೭೭೬); ಸಣ್ಣಕತೆಯ ರಾಜಮಾರ್ಗದೊಳಗಿನ ಒಂದು ಕೈಗಂಬ (ಸಾಹಿವಿ. ೧೧೦). [ಕೈ$_2$ (< ಕೆಯ್$_2$) + ಕಂಬ$_1$ (< ಕಂಭ)]

**ಕೈಗಂಬರಿ** (ನಾ). ಚಿಕ್ಕಕಂಬಳಿ (?): ನೆಗಪಿದ ಕುಂಚಂ ಕಿಜುಗೆಜ್ಜೆಗಳುಡುದೊವಲೆಸೆವ ಪಸುರ ಕುಪ್ಪಸ [ಪಾಠಾಂ. ತುಪ್ಪಸೆ] ಮುಂದೊಪ್ಪಿಗೆಯುಂ ಕೈಗಂಬರಿಯುಂ ಸೊಗಯಿಸಿ ನಗರಧರನ ಸಭೆಗೆ ಪರಿತರಲು ಚರಂ (ಮಹಾನೀ. ೧೧-೧೫೩). [?]

**ಕೈಗಂಬಿ, ಕೈಕಂಬಿ** (ನಾ). ಕೈಯಲ್ಲಿ ಹಿಡಿದಿರುವ ಬೆತ್ತ, —ಕೋಲು: ಮುಂದೆ ಜೀಯವಧಾರು ಧಿರು ಭಾಪೆಂದು ಕೈಗಂಬಿಗಳಲುಗ್ಘಡದಿಂದ . . . ಕೆಲಸಾರಿದರು (ತೊರರಾ. ೬-೫೫-೧೨). **ಕೈಕಂಬಿ**: ಮುಂದೆ ಬರಿ ಕೈಕಂಬಿಯುವರು (ನಳಚ. ೩-೫೪). [ಕೈ$_2$ (< ಕೆಯ್$_2$) + ಕಂಬಿ$_1$]

**ಕೈಗಟ್ಟಿ** 'ಕೆಯ್ಗಟ್ಟಿ' ನೋ.

**ಕೈಗಟ್ಟಿಗೆ** (ನಾ). ಒಂದು ಬಗೆಯ ಆಯುಧ: ಜಾಯಿಲಮೆಸಿಪ ಜಾತ್ಯಶ್ವಂಗಳನೇಱಿ ಕೈಗಳೊಳವರ್ದ ಕರವಾಳ ಕೈಗಟ್ಟಿಗೆಯ ಕಕ್ಕಡೆಯ ಮುಸುಂಡಿಯ (ಮಹಾನೀ. ೧೨-೨೩ ವ). [ಕೈ$_2$ (< ಕೆಯ್$_2$) + ಕಟ್ಟಿಗೆ]

**ಕೈಗಟ್ಟು, ಕೈಕಟ್ಟು$_1$** (ನಾ). ೧. ಕೈಗೆ ಕೈಹಚ್ಚು; ಸೆಣಸು; ಹೊಡೆದಾಡು: ಇಟ್ಟರಿಟ್ಟಯಲೆತ್ತಿದರು ಕೈಗಟ್ಟೆ ಕುಂತದಲುರುಬಿ ತಿವಿದರು (ತೊರರಾ. ೫-೪-೨೦). ೨. ಆಗು; ಒದಗು; ಸಂಭವಿಸು; ಉಂಟಾಗು: ಹುದುನಡೆಯದಿವರೊಡನೆ ನಮ್ಮಲಿ ಕದನವೇ ಕೈಗಟ್ಟುವುದು (ಕುವ್ಯಾಳ. ೮-೬); ಕದನವೇ ಕೈಗಟ್ಟುವಂತೆ ತೋರಿಬಂದು (ಪ್ರಮಹ. ೮೦); ಉಗ್ರಕಾಳಗ ಕೈಗಟ್ಟಿತು (ಆಲೌಕ. ೨೯).

೩. ಎರಡು ಕೈಗಳನ್ನೂ ಮಡಿಸಿ (ಒಂದರ ಮೇಲೆ ಇನ್ನೊಂದು ಬರುವಂತೆ ಎದೆಯ ಮೇಲೆ) ಇಟ್ಟುಕೊ: ನಿರಂತರವು ಕೈಗಟ್ಟಿನಾ ದೂಳಿಗವನೆಸಗಲು (ಗಗತಾ. ೧೨-೭೮). ೪. ಶರಣಾಗು; ಸೋಲು: ಕಷ್ಟವೇ ಕೈಗಟ್ಟಿತಲ್ಲದೆ ಕಟ್ಟಿರೇ ಪಾಂಡವರು (ಕುವ್ಯಾಅ. ೧೬-೪೯); ಏತರ ಬೀರಂ? ತಾನೆ ಕೈಗಟ್ಟಿದಂ (ರಾಮಾಶ್ವ. ೭೨-೪). ೫. ಕೈಗಳಿಗೆ ಕಟ್ಟು, —ತೊಡಿಸು: ಕಟ್ಟುವರ್‌ನಿಜೀಕೆಯ ನೀವಿಯೊಳಗೆ ಕೈಗಟ್ಟುವರ್ ಕಂಕಣಗಳನು (ಮೋಹತ. ೨-೨೩). **ಕೈಕಟ್ಟು**$_1$: ೩. ಗುರುರಾಜ ರಾಯರು ಎದೆಯ ಮೇಲೆ ಕೈಕಟ್ಟಿ ನಡುಮನೆಯಲ್ಲಿ ಶತಪಥ ಹಾಕ ತೊಡಗಿದರು. (ಮರಳಿ. ೩). ೬. ಕೈ ನಡೆಯದಾಗು; ಕೈನಿಂತು ಹೋಗು; ತುಂಬ ಅಡಚಣೆಯಾಗು: ನನ್ನ ಕೈಕಟ್ಟಿದೆ; ಈ ಕೆಲಸ ಅರ್ಧಕ್ಕೇ ನಿಲ್ಲುವ ಪರಿಸ್ಥಿತಿ ಇದೆ (ರೂಢಿ).

**ಕೈಕಟ್ಟಿಕೊ** = ೧. ಎರಡು ಕೈಗಳನ್ನೂ ಒಂದರಮೇಲೆ ಇನ್ನೊಂದು ಬರುವಂತೆ ಇಟ್ಟುಕೊ: ಸುಮ್ಮನೆ ಗಲಾಟೆಮಾಡದೆ ದೇವರ ಮುಂದೆಕೈಕಟ್ಟಿಕೊಂಡು ಕುಳಿತುಕೊಳ್ಳಿ (ರೂಢಿ). ೨. ಕೆಲಸ ವನ್ನು ಮಾಡದಿರು: ಅವರು ಕೈಕಟ್ಟಿಕೊಂಡು ಸ್ವಸ್ಥವಾಗಿ ಕುಳಿತು ಬಿಟ್ಟರು (ಸ್ಮೃತಿಚಿ. ೩೧೨). **ಕೈಕಟ್ಟಿ ಕುಳಿತುಕೊ** = ಕೆಲಸವನ್ನು ಮಾಡದೆ ಸುಮ್ಮನೆ ಕುಳಿತುಕೊ; ಸುಮ್ಮನಿರು; ನಿಷ್ಕ್ರಿಯನಾಗು: ಹಣ ಸಂಪೂರ್ಣವಾಗಿ ದೊರಕುವ ವರೆಗೂ ಕೈಕಟ್ಟಿ ಕುಳಿತುಕೊಳ್ಳಲು ಅವನಿಗೆ ಸರಿತೋರಲಿಲ್ಲ (ನಿಶೀಲು. ೧೩೪). **ಕೈಕಟ್ಟಿನಿಲ್ಲು** = ಸಜ್ಜಾಗು; ಸಿದ್ಧವಾಗು; ತಯಾರಾಗು: ಭಗವಾನ್ ಮಹಾವೀರಸ್ವಾಮಿಯ ಕಾಲಕ್ಕೆ ಹದಿನೆಂಟು ಮಂದಿ ಗಣರಾಜರು ಈ ಭಗವಂತನ ಸೇವೆಗೆ ಕೈಕಟ್ಟಿ ನಿಂತಿದ್ದರು (ಭಾರದ. ೧೭೫). [ಕೈ$_2$ (< ಕೆಯ್$_2$) + ಕಟ್ಟು$_1$]

**ಕೈಗಡ**, ಕೈಕಡ (ನಾ). ಕಾಗದ ಪತ್ರಗಳನ್ನು ಬರೆದುಕೊಡದೆ ಅಲ್ಪಾವಧಿಯ ಸಾಲವಾಗಿ ತೆಗೆದುಕೊಳ್ಳುವ ಬಡ್ಡಿಯಿಲ್ಲದ ಎರವಲು ಹಣ ಅಥವಾ ವಸ್ತು; ಕೈಸಾಲ; "ಬಡ್ಡಿಯಿಲ್ಲದೆ ಕೊಟ್ಟ ಹಣ" (ಪ್ರಭಣ್ಣ): ಕೈಗಡವನ್ನು ದೊರಕಿಸಲು ಕಲಕತ್ತೆಯಲ್ಲಿ ಪರಿಚಯದವರು ಯಾರೂ ಇಲ್ಲ (ಎರಸೇ. ೭೮); ನೆರೆಮನೆಯಿಂದ ಕೈಗಡವಾಗಿ ತಂದಿದ್ದ ತೊಗರಿಬೇಳೆ (ಕಾವೇರಿ. ೨೬). ೨. (ಆಲಂ) ಸ್ವತಂತ್ರವಲ್ಲದ್ದು; ಅನುಕರಣ; ಎರವಲು: ಕೈಗಡವಲ್ಲದ ಕನ್ನಡ ಜನಜೀವನ . . . ಗುಣಗಳು ಬೆಳಕು ಕಂಡುವು (ವಿಚಾಮಂ. ೧೩೩). **ಕೈಕಡ**: ಸ್ವಲ್ಪ ಹೊಗಳಿ . . . ಅದೂ ಇದೂ ಹಣಕಾಸಿನವರೆಗೆ ಕೈಕಡಕೊಳ್ಳಲಾರಂಭ (ರೂಪಸಂ. ೧೩); ಹಾಳೂರಲ್ಲಿ ಕೈಕಡವೂ ಹುಟ್ಟುವುದಿಲ್ಲ (ರೂಢಿ). [ಕೈ$_2$ (< ಕೆಯ್$_2$) + ಕಡ$_1$]

**ಕೈಗಡಿ**$_1$ (ಕ್ರಿ). ಕೈಯನ್ನು ಕಡಿ; ತುಂಡುಮಾಡು: ಛೀಕು ಗಳಾಗಿಯುಂ ತಕ್ತಿಸಮನಾಗಿಯುಂ ಕೈಗಡಿ(ಚಿ)ಯೆ ಮಡಿವರಂ ಬಿಡದೆ ತಳ್ತಾದೊಡಂ (ಜಟ್ಟಮ. ೩-೨). [ಕೈ$_2$ (< ಕೆಯ್$_2$) + ಕಡಿ$_1$]

**ಕೈಗಡಿ**$_2$ (ನಾ). ಕೈಬಲ್ಮೆ; ಕೈಚಳಕ: ಕಡಿದು ಬಿಸುಡದೆ ಕರುಣಿಸಿ ದಡವಗಡಿಸಿದನೆ ತಪ್ಪೇನೆನುತ ಕೈಗಡಿಯ ಪವನಜನೆಚ್ಚು ಕರ್ಣನ ಧನುವ ಖಂಡಿಸಿದ (ಕುವ್ಯಾದ್ರೋ. ೧೩-೨೬); ಕೈಗಡಿಯ ಬಿಲ್ಲಾಳುಗಳುಬಿಗಿದರು ಸರಳಲಂಬರವ (ಕುವ್ಯಾದ್ರೋ. ೧೪-೩೧). [ಕೈ$_2$ (< ಕೆಯ್$_2$) + ಕಡಿ$_0$]

**ಕೈಗಡಿಕಿ** (ನಾ). ಕೈ ಕತ್ತರಿಸಿ ಹೋದವಳು; ಕೈತುಂಡಾದವಳು: ಕದ್ದವರು ಕೈಗಡಿಕಿ [ಪಾಠಾಂ. ಕೆ]ಯರು ಮೊಲೆಬಿದ್ದವರು ಮುದಿ ಗುಂಟಣಿಗಳವಳಿದ್ದೆಸೆಯ ಕಟ್ಟೋಲಗದ ಸೋಂಕುಗಳ ಸೊಗಸಿನಲಿ (ತೊರರಾ. ೫-೨-೩೪). [ಕೈ$_2$ (< ಕೆಯ್$_2$) + ಕಡಿಕ$_2$ + -ಇ$_2$]

**ಕೈಗಡಿಗೆ** (ನಾ). ಮಣ್ಣಿನ ಸಣ್ಣ ಪಾತ್ರೆ; ಚಿಕ್ಕ ಗಡಿಗೆ: "ಕರಗಳಂತಿಗೆ ಯೆನಲು ಕೈಗಡಿಗೆ" (ಮಂಗರಾ. ೭೨-೨೪). [ಕೈ$_2$(< ಕೆಯ್$_2$)+ಗಡಿಗೆ]

**ಕೈಗಡಿಯ** (ನಾ). ಕೈಚಳಕವುಳ್ಳವನು; ಶೂರ: ಒಡನೊಡನೆ ಕೈಮಾಡಿದನು ಕೈಗಡಿಯನಂಚಿನ ಧಾರೆ ದಳ್ಳಿಸಿ ಕಿಡಿಗೆದಱದವು (ಕುವ್ಯಾಶ. ೨-೮೭); ಇಡಿದುದಂಬರವಂಬಿನಲಿ ಕೈಗಡಿಯನಂಬಿನ ಲಕ್ಷ್ಯ ಭೇದವ ನುಡಿಯ ಬಲ್ಲವನಾರು (ಕುವ್ಯಾಶ. ೩-೧೩). [ಕೈಗಡಿ$_2$ + -ಅ$_7$]

**ಕೈಗಡೆ** (ಕ್ರಿ). ಕೈಯಿಂದ ಕಡೆ, —ಮಥಿಸು: ರಸಾಲಾ, ಮಾರ್ಜಿಕಾ —೨ ಮೊಸರು ಕೈಗಡೆದು ಮಾಡಿದ ಮಜ್ಜಿಗೆ (ಸಿದ್ಧಾಂತಿ. ೨೪೬). [ಕೈ$_2$ (< ಕೆಯ್$_2$) + ಕಡೆ$_1$]

**ಕೈಗಣ್ಣಿ** (ನಾ). ಕೈಯಲ್ಲಿ ಹಿಡಿದಿರುವ ಕಣ್ಣಿ, —ಹಗ್ಗ; ಚಿಕ್ಕಹಗ್ಗ: ಕೈಗಣ್ಣಿಯಲಿ ಕರಿಯ ತುರಿಸಿ ಕಟ್ಟಲುಬಹುದೆ ಮುನಿಪನ ಬರಿಸಲೆನ್ನಳ ವಹುದೆ (ಕೌಶಿರಾ. ೧-೧-೪೧). [ಕೈ$_2$ (< ಕೆಯ್$_2$) + ಕಣ್ಣಿ]

**ಕೈಗತ್ತಿ** 'ಕೆಯ್ಗತ್ತಿ' ನೋ.

**ಕೈಗದಕ** (ನಾ). ಚಿಕ್ಕಪುಟ್ಟ ಕಳವು ಮಾಡುವವನು; ಸಣ್ಣ ಕಳ್ಳ: "ಕೈಗದಕ – ತುಡುಗ (ಕೈಗಡಕ)" (ಜಾನಕೋ. ೪೧). [ಕೈ$_2$ (< ಕೆಯ್$_2$) + ಕದಕ$_1$]

**ಕೈಗದಕತನ** (ನಾ). ಚಿಕ್ಕಪುಟ್ಟ ಕಳ್ಳತನ; ಎಗರಿಸುವುದು: (ಕ). [ಕೈಗದಕ + -ತನ]

**ಕೈಗನ್ನಡಿ** (ನಾ). ಕೈಯಲ್ಲಿ ಹಿಡಿದುಕೊಳ್ಳಬಹುದಾದ ಕನ್ನಡಿ; ಸಣ್ಣ ಕನ್ನಡಿ: ದೇವೇಂದ್ರನ ವಜ್ರಮುಮಿಂದ್ರಾಣಿಯ ಕೈಗನ್ನಡಿಯುಂ (ಪಂಪಭಾ. ೬-೩೨ವ); ಎಸೆದಳ್ ಕನ್ನೆ ತೊಳಗಿ ಕೈಗನ್ನಡಿಯೊಲ್ (ವರ್ಧಪು. ೬-೧೨); ಪೊಡವಿಯೊಳೆಲ್ಲರ ಕೈಗನ್ನಡಿ ಶಾಶ್ವತ ಸೌಕು ಮಾರ್ಯ ಸಂಪದ (ನಳಚಂ. ೪೨-೧). [ಕೈ$_2$ (< ಕೆಯ್$_2$) + ಕನ್ನಡಿ$_1$]

**ಕೈಗರಡಿಗೆ** (ನಾ). ಕೈಯ ಕರಡಿಗೆ, —ಸಣ್ಣಪೆಟ್ಟಿಗೆ; ಸಂಪುಟ; ಹಸ್ತಕರಂಡಕ: ಕೈಗರಡಿಗೆಯ ಕರ್ಗಲ್ಲಂ ಕರ್ಚಿ ತೀರ್ಥಮನಾತನ ಬಜಿತ ಬಾಯೊಳೆಜೀದಂ (ರಾಮಾಶ್ವ. ೭೯-೨೯). [ಕೈ$_2$ (< ಕೆಯ್$_2$) + ಕರಡಿಗೆ (< ಕರಂಡಿಗೆ)]

**ಕೈಗರ್ಚು** (ಕ್ರಿ). ಕೈಯನ್ನು ತೊಳೆ: ಚಂಪ್ರಾನನೆ ಕೈಗರ್ಚಲೆಱೆವ ಜಲಧಾರೆಯುಮಂ ಕಂಡು (ಚಾವುಂಪು. ೨-೭); ಕೈಗರ್ಚಿದೊಟದಂತೆ ಗೆಲ್ಲಂಗೊಂಡ ಕಾಳಿಗದಂತೆ (ಧರ್ಮಾಮೃ. ೧೦-೫); ತಜ್ಜಲಜಾಕರದೊಳು ಪೊಕ್ಕು ತನ್ನ ಕೆಂಬಜ್ಜೆದೊಳೆದು ಕೈಗರ್ಚಿ (ಶ್ರೀಪಾಲ. ೬-೬೦). [ಕೈ$_2$ (< ಕೆಯ್$_2$) + ಕರ್ಚು$_2$ (< ಕಬ್ಬು)]

**ಕೈಗಲ್**, ಕೈಕಲ್, ಕೈಗಲ್ಲು (ನಾ). ಕೈಯಿಂದ ಎಸೆಯುವ ಕಲ್ಲು; ಶತ್ರುಗಳ ಮೇಲೆ ಬೀಸಿ ಎಸೆಯಲು ಉಪಯೋಗಿಸುವ ಕಲ್ಲು: ಬಿಜೀ ಬಡಿಗೆ ಕುಠಾರಂ ಕೈಗಲ್ ಖೇಟಗ ಫಳಕಂಬಿಡಿದಮರರ್ ನೆಜೀದುದು (ವೀರೇಚ. ೨-೩೧); ಕವಣೆಕಲ್ಗಳುಂ ಕೆಯ್ಗಲ್ಲುಂ . . . ಕಲ್ಮಟಿಯನನು ಕರಿಸಿಕರ್ಮಂ (ಪಾರ್ಶ್ವಪು. ೩-೧೩೮). **ಕೈಕಲ್**: ಅಗ ಯುದ್ಧರಂಗದಲ್ಲಿ ಬಳಸುತ್ತಿದ್ದ ಸಾಮಾನು ಸರಕುಗಳಲ್ಲಿ ಮತ್ತು ಆಯುಧಗಳಲ್ಲಿ . . . ಗುದಿಗೆ, ದಡಿ, ದಸಿ, ಕವಣೆ, ಕೈಕಲ್ (ನಂಜುಂಡ. ೧೩೧). **ಕೈಗಲ್ಲು**: ಖಗಜಂಬುಳೌಘವನಿಡುವ ಕೈಗಲ್ಲುಗಳ ನೃಪತಿಯ ಕಂಡರಿವರಂದು (ಕುವ್ಯಾಗ. ೮-೫೬); ಕೈಗಲ್ಲ ಗಾಯಂಗಳಿಂದಾವ ರೆಕ್ಕೆಮುಱಿದುದೊ (ಚಿಬವು. ೪೬-೫). [ಕೈ$_2$ (< ಕೆಯ್$_2$) + ಕಲ್$_3$]

**ಕೈಗಲಸು**, ಕೈಗಳಸು (ಕ್ರಿ). ಕೈ ಕೈ ಬೆರಸು; ಕೈಗೆ ಕೈ ಹತ್ತು; ಕಲಹಕ್ಕೆ ತೊಡಗು: ಭೂರಿ ಭುಜಬಲರೊಡನೆ ಕೈಗಲಸಿ ಬಾಳ್ವರಂ ನಾನೊಬ್ಬರಂ ಕಾಣೆ (ತುರಂಗ. ೬೦-೧೮); ಇಂತು ತಮ್ಮೊಳಗೆ ಮೂದಲಿಸುತ್ತ ಬಲು ಪಂಥ ಪೌರುಷದಿ ಕೈಗಲಸುತ್ತಾ (ಕೃಅಕಾ. ೪೯). **ಕೈಗಳಸು**: ಅತಿರಥ ಮಹಾರಥರು ಕೈಗಳಸೆ ಗುರುತನುಜ ದ್ರುಪದನಂ ಕೆಣಕಿದನು (ತುರಂಗ. ೪೬-೨೪) [ಕೈ$_2$ (< ಕೆಯ್$_2$) + ಕಲಸು$_1$]

**ಕೈಗಲಿ** (ನಾ). "ಶೂರ; ಪರಾಕ್ರಮಿ; ಭುಜಬಲಶಾಲಿ" (ಪ್ರಭಣ್ಣ).
[ಕೈ$_2$ < ಕೆಯ್$_2$) + ಕಲಿ$_2$]

**ಕೈಗಲ್ಲು** 'ಕೈಗಲ್' ನೋ.

**ಕೈಗವಸ** 'ಕೈಗವಸು' ನೋ.

**ಕೈಗವಸು**, ಕೈಗವಸ (ನಾ). (ಚಳಿಯಿಂದ ರಕ್ಷಣೆಹೊಂದಲು) ಕೈಯನ್ನು ಮುಚ್ಚಿಕೊಳ್ಳುವುದಕ್ಕೋಸ್ಕರ ಉಪಯೋಗಿಸುವ ಚೀಲ, —ಗವಸಣಿಗೆ; ಹಸ್ತಕವಚ: "ತೊಗಲು, ಹತ್ತಿ, ರೇಷ್ಮೆ, ಉಣ್ಣೆ . . . ಇದರಿಂದ ಮಾಡಿದ, ಸಾಮಾನ್ಯವಾಗಿ ಬೆರಳುಗಳು ಬಿಂಗಡ ವಾಗಿರುವ ಕೈಗವಸು, ಕೈಚೀಲ" (Glove. ಇಂಕನಿ). **ಕೈಗವಸ:** ನಾನು ನನ್ನ ಕೈಗವಸಗಳನ್ನು ಮರೆತಿದ್ದೆ (ಶಾಲೆಮು. ೧೬೫).
[ಕೈ$_2$ (< ಕೆಯ್$_2$) + ಗವಸು]

**ಕೈಗಳಸ** (ನಾ). ೧. ಕೈಯಲ್ಲಿ ಹಿಡಿದಿರುವ ಕಲಶ. ೨. (ಆಲಂ) ಅತ್ಯಂತ ಪ್ರೀತ್ಯಾದರಗಳಿಗೆ ಪಾತ್ರವಾದ ವಸ್ತು: ಎನ್ನ ಕೈಗಳಸಮ ಇಂತುಮೆಂಬರೆ, ಶ್ರೀರಾಮಂ ಕಲ್ಲೆರ್ದೆಯನೆ (ರಾಮಾಶ್ವ. ೪೪-೧೭).
[ಕೈ$_2$ (< ಕೆಯ್$_2$) + ಕಳಸ$_1$ (= ಕಲಸ)]

**ಕೈಗಳಸು** 'ಕೈಗಲಸು' ನೋ.

**ಕೈಗಳಿ** 'ಕೆಯ್ಗಳಿ' ನೋ.

**ಕೈಗಟಿ** 'ಕೆಯ್ಗಟಿ' ನೋ.

**ಕೈಗಟಿವು** (ನಾ). ಕೈಮೀರುವಿಕೆ; ಅತಿಶಯ: ನೀಂ ಪೃಥಾಸುತರಂ ನೋಯಿಸಲಾಗದೆಂದು ನುಡಿದೇನಾಮಾರ್ತೆಮೋ ನಿನ್ನೊರಂಟುತನಂ ಕೈಗಟಿವಾಯ್ತು (ಪಂಪಭಾ. ೧೧-೧೦); ಸೈಪು ಕಣ್ದೆಱೆದುದೆಂದಾನಂದ ಬಾಷ್ಪಾಂಬು ಕಣ್ಮಲರಿಂ ಕೈಗಟಿವಾಗಿ ಪೊಣ್ಮೆ (ಪಂರಾಮಾ. ೬-೪೫).
[ಕೈಗಟಿ (< ಕೆಯ್ಗಟಿ) + -ವು]

**ಕೈಗಾ$_1$** 'ಕೆಯ್ಗಾ$_1$' ನೋ.

**ಕೈಗಾ$_2$** 'ಕೆಯ್ಗಾ$_2$' ನೋ.

**ಕೈಗಾಡ** (ನಾ). ಕೈಚಳಕ; ಸಾಮರ್ಥ್ಯ; ಹಸ್ತಕೌಶಲ: ಈ ಪುರುಷನ ನಿರ್ಮಿಸಿದಜನ ಕೈಗಾಡದ ಬಗೆಯಿನ್ನೆಂತೊ (ಕಂನವಿ. ೯-೧೦೩).
[ಕೈ$_2$ (< ಕೆಯ್$_2$) + ಗಾಡ$_2$]

**ಕೈಗಾಡಿ** (ನಾ). ಕೈಯಿಂದ ತಳ್ಳುವ ಗಾಡಿ; ಸಣ್ಣಗಾಡಿ: ಬೀದಿಗಳಲ್ಲಿ ತಿರುಗಾಡುವ ಎಲ್ಲ ಕೈಗಾಡಿಗಳಲ್ಲಿಯೂ ತಿಂಡಿಗಳು ತುಂಬಿರುತ್ತವೆ (ಮಹಾತ್ಮ. ೩೯). [ಕೈ$_2$ (< ಕೆಯ್$_2$) + ಗಾಡಿ$_2$]

**ಕೈಗಾಢಿಕೆ** (ನಾ). ಕೈಚಳಕ; ಹಸ್ತಕೌಶಲ: ಅಡಲೇನಾ ರಾಘವನ ಕೈಗಾಢಿ[ಪಾಠಾಂ. ಡಿ; ಗೂಡಿ]ಕೆಯ ಕಣೆಕತ್ತಲೆಯ ಕಟ್ಟಾಡಿಕೆಯ ಖಳನವಯುವವ ಬಗಿದುಗಿದುದಗಲದಲಿ (ತೊರರಾ. ೬-೨೮-೨೨).
[ಕೈ$_2$ (< ಕೆಯ್$_2$) + ಗಾಢಿಕೆ]

**ಕೈಗಾಣ್**, ಕೈಗಾಣು (ಕ್ರಿ). (ಫಲವನ್ನು ಕೊಡುವ ವಿಷಯದಲ್ಲಿ) ದಿಟವಾಗು; ಅನುಭವಕ್ಕೆ ಬರು; ಚೆನ್ನಾಗಿ ತಿಳಿದಿರು: ಬಜೆಯ ಭಸ್ಮಮಂ ಜೇನುತುಪ್ಪದಿಂ ಕೊಳ್ಳಲು ಕೆಮ್ಮು ಬಿಡುಗಡೆಯಾಹುದು ಇವು ಮೂರು ಕೈಗಂಡ ಸಿದ್ಧಿ ಪ್ರಯೋಗ (ಸಕವೈ. ೨೦೭). **ಕೈಗಾಣು:** ಕೈಗಂಡ ಕಳ್ಳ ಜೈಲಿಗೇ ಕಳಿಸಬೇಕು (ಪಕಿ. ೩೦); "ಕೈಗಂಡ ಕೆಲಸ = ಅಭ್ಯಾಸವಾದ ಕೆಲಸ" (ಗಂಗಾಮು. ೯೯). [ಕೈ$_2$(< ಕೆಯ್$_2$) + ಕಾಣ್]

**ಕೈಗಾಣ**, ಕಯ್ಗಾಣ, ಕಯ್ಯಿಗಾಣ (ನಾ). ಕೈಯಿಂದ ನಡೆಯಿಸುವ ಗಾಣ: ಎತ್ತುಗಾಣ ೧ ಕೈಗಾಣ ೧ (ಸೌಇಇ. IX-i, ೧೦೭-೨೫; 1050); ದೇವರ್ಗ್ಗೂರ್ವ್ವರ್ಗ್ಗದೊಳೆ ನಡೆವೆತ್ತುಗಾಣವೊನ್ದು ಕೈಗಾಣವೊನ್ದು (ಎಕ. XI, ದಾವಣ. ೧೩೩-೨೫; 1071); ದೇವರ ನಂದಾದೀವಿಗೆಗೆ ಕೈಗಾಣ ೧ (ಎಕ. VI, ಕಡೂರು ೧೬-೭೬; 1203). **ಕಯ್ಗಾಣ:** ಎತ್ತಿನಗಾಣಮುಂ ೧೨ ಮನೆಯ ಸಾವ್ಯಮುಂ ೧ ಕಯ್ಗಾಣಮುಂ (ಎಕ. XI, ದಾವಣ. ೨೦-೨೧; 1045). **ಕಯ್ಯಿಗಾಣ:** ಕಯ್ಯಿಗಾಣ ಯೆತ್ತುಗಾಣ ಎತ್ತು ತೊತ್ತು ಬಂಡಿ ಕುದುರೆಯ ಕುಳಿ (ಎಕ. IX (S), ಬೆಂಗಳೂ. ೧೬೨-೪; 1408). [ಕೈ$_2$ (< ಕೆಯ್$_2$) + ಗಾಣ$_1$]

**ಕೈಗಾಣಿಕೆ** 'ಕೆಯ್ಗಾಣ್ಕೆ' ನೋ.

**ಕೈಗಾಣಿಕೆಯಿಕ್ಕು** (ಕ್ರಿ). ಕೈಗಾಣಿಕೆಯನ್ನು ಕೊಡು: ಕಂಡು ಕೈಗಾಣಿಕೆಯಿಕ್ಕಿ ರಾಯನ ಪದ ಪುಂಡರೀಕವನು ಮತ್ತವನು ಕಂಡನು (ಕುರಾಸಾಂ. ೪೩-೫). [ಕೈಗಾಣಿಕೆ (< ಕೆಯ್ಗಾಣ್ಕೆ) + ಇಕ್ಕು]

**ಕೈಗಾಣು** 'ಕೈಗಾಣ್' ನೋ.

**ಕೈಗಾಯ್** 'ಕೆಯ್ಗಾ$_1$' ನೋ.

**ಕೈಗಾಯಿ** 'ಕೆಯ್ಗಾ$_1$' ನೋ.

**ಕೈಗಾಯು** 'ಕೆಯ್ಗಾ$_1$' ನೋ.

**ಕೈಗಾರ** (ನಾ). ಕೈಚಳಕವುಳ್ಳವನು; ಹಸ್ತಕೌಶಲವುಳ್ಳವನು; ಜಾಣ: ಕೈಗಾರನಾದ ಛತ್ರೇಜಂಗನು . . . ತನ್ನ ಖಡ್ಗದಿಂದ ಶತ್ರುವನ್ನು ಬಲವಾಗಿ ಪ್ರಹರಿಸಿದನು (ಭಾರವಿ. ೮೮).
[ಕೈ$_2$ (< ಕೆಯ್$_2$) + -ಕಾರ$_1$ (< -ಕಾಜ)]

**ಕೈಗಾರಿಕೆ** (ನಾ). ೧. ಕೈಕೆಲಸ; ಹಸ್ತಕೌಶಲದ ಕೆಲಸ: ಎಷ್ಟೋ ಗವಿಗಳಲ್ಲಿ ಕೌಶಲ್ಯದ ಕೈಗಾರಿಕೆಯನ್ನು ನೋಡಿ ಬಹು ಆಶ್ಚರ್ಯ ವಾಗುತ್ತದೆ (ಮುಂಬಯಿ. ೫-೧೦೭). ೨. ಕೈಕೆಲಸದಿಂದ ಅಥವಾ ಯಂತ್ರ ಮೊದಲಾದವುಗಳಿಂದ ನಡಸುವ ಉತ್ಪಾದನೋದ್ಯಮ: ಪ್ರಸ್ತುತ ಕೈಗಾರಿಕೆಗಳಲ್ಲಿ . . . ಕಲ್ಲಿದ್ದಿಲಿನ ಮಹತ್ವ ಮತ್ತು ಆವಶ್ಯಕತೆ ಇದ್ದೇ ಇರುತ್ತದೆ (ಸಸ್ಯಕ. ೧೩೨). ೩. ತೋಳ್ಬಲ; ಬಾಹುಶಕ್ತಿ: ರಾಯನ ಪಿಡಿವ ಕೈಗಾರಿಕೆಯ ಸಾಹಸವದೆಲ್ಲಿ (ತುರಂಗ. ೪೯-೧೭).
[ಕೈಗಾರ + -ಇಕೆ]

**ಕೈಗಾರಿಕೋದ್ಯಮಿ** (ನಾ). ಕೈಗಾರಿಕೆಯ ಕಸುಬಿನವನು; ಕೈಗಾರಿಕೆಯೇ ಉದ್ಯೋಗವಾಗಿ ಉಳ್ಳವನು: ಶ್ರೀ ಸುಬ್ಬರಾಯ ನೆನುವವರು . . . ಕೈಗಾರಿಕೋದ್ಯಮಿಯವರು (ಇಂಚಾಪ. ೩೫-೬೩).
[☞ ಈ ರೂಪ ವ್ಯಾಕರಣ ಶುದ್ಧವಲ್ಲ]

**ಕೈಗಾವಲು** (ನಾ). ೧. (ಮುಂದಿನ ಪ್ರಯೋಜನಕ್ಕಾಗಿ) ಕಾದಿರಿಸಿದುದು: ಉಳಿದ ಸುಮಾರು ಒಂದು ಸಾವಿರ ಮಂದಿಯನ್ನು ಕೈಗಾವಲಾಗಿ ಇಟ್ಟಿರುತ್ತಿತ್ತು (ಸೋಕ್ರಮು. ೧೩). ೨. ಬಳಿಯಲ್ಲೇ ಇರುವವನು; ಅಂಗರಕ್ಷಕ ಅಥವಾ ರಕ್ಷಣೆಗಾಗಿ ಯಾವಾಗಲೂ ಬಳಿಯಲ್ಲೇ ಇಟ್ಟುಕೊಂಡಿರುವ ವಸ್ತು: (ಕಷ್ಟಕ್ಕೆ, ಸಮಯಕ್ಕೆ ಆದಾನು, ಆದೀತು ಎಂದು) ಒಬ್ಬನು ನೆಚ್ಚಿರುವ ವ್ಯಕ್ತಿ, ವಸ್ತು: ಅವಲಂಬ, ಕೈಗಾವಲು, ಸಹಾಯಕ, ಪಕ್ಷೀಯ (Stand by ಇಂಕನಿ). ೩. ಮಾಸಲು ಪಡೆ. [ಕೈ$_2$ (< ಕೆಯ್$_2$) + ಕಾವಲು (< ಕಾವಲ್$_1$)]

**ಕೈಗಾವಲು ಆಟಗಾರ** (ನಾ). "(ಪಂದ್ಯದಾಟಗಳಲ್ಲಿ) ಬದಲಿ ಬೇಕಾದಾಗ ಆಟಕ್ಕೆ ತೆಗೆದುಕೊಳ್ಳಲು ಆರಿಸಿಟ್ಟುಕೊಂಡಿರುವ ಹೆಚ್ಚಿಗೆಯ ಆಟಗಾರ" (Reservist ಇಂಕನಿ).
[ಕೈಗಾವಲು + ಆಟಗಾರ]

**ಕೈಗಾವಲುಚಕ್ರ** (ನಾ). "(ಆಪತ್ಕಾಲಕ್ಕಾಗಿ ಮೋಟಾರು ಗಾಡಿಗಳಲ್ಲಿ) ಗಾಳಿತುಂಬಿ ಸಿದ್ಧವಾಗಿಟ್ಟುಕೊಂಡಿರುವ, ಆರೆಕಾಲುಗಳಿಲ್ಲದ, ಹೆಚ್ಚಿನ ಚಕ್ರ" (Stepney ಇಂಕನಿ). [ಕೈಗಾವಲು + ಚಕ್ರ]

**ಕೈಗಾವಲು ದಾಸ್ತಾನು** (ನಾ). ಕಷ್ಟಸಂದರ್ಭಗಳಲ್ಲಿ ಉಪಯೋಗಿಸಿಕೊಳ್ಳಲು ಮಾಸಲಿಟ್ಟ ವಸ್ತುಸಂಗ್ರಹ (Buffer Stock ಪತ್ರಿನಿ. ೧೨).
[ಕೈಗಾವಲು + ದಾಸ್ತಾನು]

**ಕೈಗಾವಲು ಮೊಬಲಗು** (ನಾ). ೧. ಮುಂದೆ ಒದಗಬಹುದಾದ ಖರ್ಚಿಗಾಗಿ ಪ್ರತ್ಯೇಕವಾಗಿ ತೆಗೆದಿರಿಸಿದ ಹಣದ ಮೊತ್ತ; ಸಂಪತ್ತು: ಭಾರತದ 'ಆಕಸ್ಮಿಕತಾ ನಿಧಿ' ಎಂದು ಕರೆಯಲಾಗುವ ಕೈಗಾವಲು ಮೊಬಲಗಿನ ಸ್ವಭಾವದ ಒಂದು ಆಕಸ್ಮಿಕತಾ ನಿಧಿಯನ್ನು ವಿಧಿದ್ವಾರಾ ಏರ್ಪಡಿಸಬಹುದು (ಭಾಧಾನ. ೧೫೧). ೨. ಸರ್ಕಾರಿ ಕೆಲಸದ ಖರ್ಚಿಗಾಗಿ ಒಬ್ಬ ವ್ಯಕ್ತಿಗೆ ಮುಂಗಡವಾಗಿ ಕೊಟ್ಟ ಕೈಹಣ (Imprest ಪತ್ರಿನಿ. ೪೪). [ಕೈಗಾವಲು + ಮೊಬಲಗು]

**ಕೈಗಾವಲುವಸ್ತು** (ನಾ). "ಉಪಯೋಗಿಸಿಕೊಳ್ಳದೆ ಇಟ್ಟಿರುವ ಆದರೆ ಬೇಕಾದಾಗ ಉಪಯೋಗಕ್ಕೆ ಒದಗುವ ವಸ್ತು, ಮೊತ್ತ" (Reserve. ಇಂಕನಿ). [ಕೈಗಾವಲು + ವಸ್ತು]

**ಕೈಗಾವಲು ಸೈನ್ಯ** (ನಾ). "ಯುದ್ಧ ಕಾರ್ಯದಲ್ಲಿ ಆಗಲೇ ತೊಡಗಗೊಡದೆ, ಬೆಂಬಲಕ್ಕಾಗಿ ಅಥವಾ ಹಿಮ್ಮೆಟ್ಟುವ ತಮ್ಮ ಸೈನ್ಯದ ರಕ್ಷಣೆಗಾಗಿ ಕಾಯ್ದಿಟ್ಟಿರುವ ಸೈನ್ಯ; ಆಪತ್ತಿನ ಅಥವಾ ಜರೂರಿನ ಸಂದರ್ಭಗಳಲ್ಲಿ ಕರಸಬಹುದಾದ ಕ್ರಮವಾದ ಭೂ ಮತ್ತು ನಾವಿಕ ಸೈನ್ಯಗಳಿಂದ ಬೇರೆಯಾದ, ಸೈನ್ಯ" (Reserve. ಇಂಕನಿ). [ಕೈಗಾವಲು + ಸೈನ್ಯ]

**ಕೈಗಾವಲುಹಣ** (ನಾ). ಮುಂದಿನ ಅನಿರೀಕ್ಷಿತ ಸಂದರ್ಭಗಳಿಗಾಗಿ ಕಾದಿರಿಸಿದ ಹಣ; ಆಪದ್ಧನ: (ಆಕಸ್ಮಾತ್ತಾಗಿ ಬರಬಹುದಾದ ತಗಾದೆಗಳಿಗೆ ಅಥವಾ ಕೋರಿಕೆಗಳಿಗೆ ಹಣ ಪಾವತಿ ಮಾಡುವುದಕ್ಕಾಗಿರುವ) ಬ್ಯಾಂಕಿನ ದಣಿಯ ಕೈಗಾವಲು ಹಣ (Reserve. ಇಂಕನಿ). [ಕೈಗಾವಲು + ಹಣ (< ಪಣ$_1$)]

**ಕೈಗಾಹು** (ನಾ). ೧. ರಕ್ಷಣೆ. ೨. ಕೈಸೆರೆ; ಬಂಧನ: ರಕ್ಕಸರ ಕೈಗಾಹಿನೊಳಗಾಂ ಸಿಕ್ಕಿದೆನು ಕರುಣಾಳು ರಕ್ಷಿಸು (ಕೌಶಿರಾ. ೩೭–೧೬). [ಕೈ$_2$ (< ಕೆಯ್$_2$) + ಕಾಹು$_1$ (< ಕಾಪು)]

**ಕೈಗಿಡು** 'ಕೈಗೆಡು' ನೋ.

**ಕೈಗುಂಟೆ** (ನಾ). ಕೈಯಿಂದ ಎಳೆಯುವ ಮರದ ಹಲಗೆಯನ್ನುಳ್ಳ ಸಾಧನ; ಸಣ್ಣ ಕುಂಟೆ: ಆ ಮೇಲೆ ಸಣ್ಣಗುದ್ದಲಿ, ಕೈಗುಂಟೆಗಳಿಂದ ನೆಲವನ್ನು ಹಳ್ಳತಿಟ್ಟುಗಳಿಲ್ಲದಂತೆ ಒಂದೇ ಮಟ್ಟವಾಗಿ ಮಾಡಬೇಕು (ತರಬೆ. ೬೭). [ಕೈ$_2$ (< ಕೆಯ್$_2$) + ಕುಂಟೆ$_1$]

**ಕೈಗುಂಡಿಗೆ** (ನಾ). ಕೈಯಲ್ಲಿ ಹಿಡಿದುಕೊಳ್ಳುವ ಕಮಂಡಲು; ಜಲಪಾತ್ರೆ; ಹಸ್ತಕಮಂಡಲು: ಅತ್ರಿಪುತ್ರನ ಕೈಗುಂಡಿಗೆಯಂ ಕೀಱ್ಮಾಡುವೊಂದು ಪಳಿಕಿನ ಕರವತಿಗೆಯಿಂ (ರಾಮಾಶ್ವ. ೭೫–೨೨). [ಕೈ$_2$ (< ಕೆಯ್$_2$) + ಗುಂಡಿಗೆ$_2$]

**ಕೈಗುಂಡು** (ನಾ). ೧. ಕೈಯಿಂದ ಎಸೆಯುವ ಗುಂಡು; ಒಂದು ಯುದ್ಧೋಪಕರಣ: ಉಗಿವ ಸರಿನೇಣುಗಳ ಕೈಗುಂಡುಗಳ ಕವಣೆಯ ಲೌಡಿ ಕರವಾಳುಗಳ ಜೋಡಿಸಿ ಜೋದರಡರಿದರು (ಕುವ್ಯಾದ್ರೋ. ೩–೫); ಭಾರಿದೊಲೆಯ ಒಂದಿ ಸೇರಿಸಿದ ದಸಿ ಕೈಗುಂಡು ಪಟಲುಗಳ ಸಂದಣಿಯ ತಡವ ಹುಲಿಮುಖವಂಕದಾರಗಳ (ಲಶಿಚಂ. ೩೧–೬). ೨. (ಉಕ). ಮಕ್ಕಳ ಮುಂಗೈಗೆ ತೊಡಿಸುವ ಚಿನ್ನದ ಗುಂಡುಗಳ ಒಂದು ಆಭರಣ. [ಕೈ$_2$ (< ಕೆಯ್$_2$) + ಗುಂಡು$_2$]

**ಕೈಗುಂದಿಸು** (ಕ್ರಿ). ಕಡಮೆ ಮಾಡು; ತಗ್ಗಿಸು; ಕುಗ್ಗಿಸು: ಆರ್ತಿಯಂ ಪೊಂಗಿಸುತ್ತುಂ ಬಲಮಂ ಕೈಗುಂದಿಸುತ್ತುಂ (ರಕ್ಷಾಶ. ೨೭). [ಕೈಗುಂದು$_1$ + –ಇಸು$_3$]

**ಕೈಗುಂದು$_1$** (ಕ್ರಿ). ಕೈಯ ಶಕ್ತಿ ಕುಂದಿಹೋಗು; ಬಲ ಕುಗ್ಗು: ಪೊಡೆವಾಶಂ ಜೋಲ್ದು ಕೈಗುಂದೆ ಕಂಡಾರುತ್ತುಂ ಮುಳಿದೊತ್ತಿ ನೂಂಕಿ (ಕಬ್ಬಿಕಾ. ೨೭೭); ಕೈಗುಂದಿ ನೋಡುತ ದೆಸೆದೆಸೆಯಂ (ಬಸವು. ೨೬–೩೦); ಜವನ ಪರಿಗಿಂದಿಲ್ಲ ಕೊಂಡೊಯ್ವರು ಕೈಗುಂದಿದರು (ಕುವ್ಯಾಭೀ. ೯–೨೨); ಅನುಜ ಕೈಗುಂದಿದನು ನಿಮಿಷದಲಿ (ಕೌಶಿರಾ. ೩೬–೬೭); ಅನಿಮಿತ್ತ ಮಾಕೆಯಂ ಪಳಿದ ಕಾರಣದಿಂದೆ ನಿನಗೆ ಕೈಗುಂದುತಿದೆ (ಜೈಮಿಭಾ. ೨೩–೪೧). [ಕೈ$_2$ (< ಕೆಯ್$_2$) + ಕುಂದು$_1$]

**ಕೈಗುಂದು$_2$** (ನಾ). ಕೈಯಶಕ್ತಿ ಕುಗ್ಗುವಿಕೆ: ಕೈಗುಂದಿನೂಱಿಗದೊಳಿರೆ ನೀನಲ್ಲದಾವಂ ಮೇಣೀ ಕಜ್ಜದೊಳ್ ಸಾಲ್ವಂ (ರಾಮಾಶ್ವ. ೪೭–೧೧). [ಕೈ$_2$ (< ಕೆಯ್$_2$) + ಕುಂದು$_2$]

**ಕೈಗುಕ್ಕು** (ನಾ). = ಕೈತುತ್ತು: (ಕ). [ಕೈ$_2$ (< ಕೆಯ್$_2$) + ಗುಕ್ಕು$_3$]

**ಕೈಗುಟಕ** (ನಾ). ಜೊತೆಗಾರ; ಸಹಾಯಕ: "ಅನುಬಂಧ = ಕೆಲಸಕ್ಕೆ ಕೈಗುಟಕಾಗೋಣ" (ಗಂಗಾಮ. ೯). [ಕೈ$_3$ [< ಕೆಯ್$_2$) + ಗುಟಕ$_0$ (< ಕೂಡುಗ)]

**ಕೈಗುಟಿಕ, ಕಯ್ಗುಟಿಗ** (ನಾ). ಕೈಚಪ್ಪಾಳೆ ಹೊಡೆಯುವವನು: "ಹಸ್ತತಾಡಕ" (ಪ್ರಭಣ್ಣ). **ಕಯ್ಗುಟಿಗ**: ಕಯ್ಗುಟಿಗಂ, ಹಸ್ತತಾಡಕಃ (ಶಬ್ದಾನು. ೫೪೮ ವ್ಯಾಖ್ಯಾ). [ಕೈ$_2$ (< ಕೆಯ್$_2$) + ಕುಟಿಕ]

**ಕೈಗುಟ್ಟು** (ಕ್ರಿ). ಕೈಗಳನ್ನು ಕುಟ್ಟು; ಚಪ್ಪಾಳೆ ಹೊಡೆ: ಇರುಳಿದೇನತಿಶಯಂ ಬೆರಸಿ ತಂದೀಕ್ಷಿಸಲು ತರುಣಿಯರು ಕೈಗು[ಪಾಠಾಂ. ತ]ಟ್ಟಿ ದರಹಾಸದಿಂ ನೋಡೆ (ವೆಂಕರಾ. ೧–೫–೫೧). [ಕೈ$_2$ (< ಕೆಯ್$_2$) + ಕುಟ್ಟು$_1$]

**ಕೈಗುಡಿ$_1$** (ನಾ). ಕೈಯಲ್ಲಿ ಹಿಡಿಯುವ ಬಾವುಟ; ಸಣ್ಣ ಬಾವುಟ, —ಪತಾಕೆ: ತಳಿತ ಕೈಗುಡಿಗಳ ಪಿಡಿದ ವೃಷಭಧ್ವಜಂಗಳ ಹಲವು ಕೇಳಿಕೆಯ ಸಡಗರದ ಸಂಭ್ರಮದ ಸೌರಂಬದಿಂ ಮಿಾಱಿ (ಸಿದ್ಧರಾ. ೬–೨೧); ಕೈಗುಡಿಗಳಲಿ ಕುಣಿದರು ಸುರರು ಸುಮನ್ಮಾನದ ಸಗಾಢದಲಿ (ನಿಭಾಗ. ೩–೯–೩೭). [ಕೈ$_2$ (< ಕೆಯ್$_2$) + ಗುಡಿ$_3$]

**ಕೈಗುಡಿ$_2$** (ನಾ). ಮುಗಿದ ಕೈ: ನುಡಿಯಲಮ್ಮದೆ ಕಾಂತೆಯಿರೆ ಕೈಗುಡಿಯ ಕಿಂಕರಭಾವದಲಿ ಕಪಿ ನುಡಿದನು (ತೊರರಾ. ೫–೩–೮೩). [ಕೈ$_2$ (< ಕೆಯ್$_2$) + ಕುಡಿ$_2$]

**ಕೈಗುಡಿತೆ** 'ಕೆಯ್ಗುಡುತೆ' ನೋ.

**ಕೈಗುಡು** 'ಕೆಯ್ಗೊಡು' ನೋ.

**ಕೈಗುಣ** (ನಾ). ೧. ಕೈಯ ಶಕ್ತಿ, —ಸಾಮರ್ಥ್ಯ; ಹಸ್ತಕೌಶಲ: ತೋಱುವೆನು ಕೈಗುಣವನೆನುತ್ತೈದಾಱು ಶರದಲಿ ಕರ್ಣನೆದೆಯನು ಡೋಱುಗಳೆಯಲು (ಕುವ್ಯಾದ್ರೋ. ೫–೨೮); ಅವರಿಱಿತಕಂಗೈಸಿದರೆ ತೋಱುವೆನೆನ್ನ ಕೈಗುಣವ (ತೊರರಾ. ೫–೪–೨); ಸೃಷ್ಟಿಗೆ ಮೈಸೂರ ಬೆಟ್ಟದ ಚಾಮನ ಪಟ್ಟದಾನೆಗಳ ಕೈಗುಣವ ನಿಟ್ಟಿಸಿ ನೀವೆಂದು (ಕಂನವಿ. ೩–೬೭); ಮಿಾಂಬಱಿಯಿಗೆಯಂ ... ತನ್ನೈದುಂ ಕಣೆ ಕಾದಿ ಗೆಲ್ವ ಕೈಗುಣಕ್ಕೆ ನೆರಂ ಬಾರದೆಂದು ತಱಿಸಂದು (ರಾಮಾಶ್ವ. ೧೧೨–೨೪). ೨. (ಹಿಡಿದ ಕಾರ್ಯವನ್ನು ಸಫಲಗೊಳಿಸುವ) ಕೈಯ ಮಹತ್ವ, —ಪ್ರಭಾವ; ಹಸ್ತಗುಣ: ವರಮುಖಿ ನಿನ್ನ ಕೈಗುಣದಿನಾದ ಸುಗಂಧ ವಿಲೇಪನಂಗಳೀ ದೊರೆಯವಿವಾಗಿರ್ಪ ಯೋಗ್ಯಮೆನೆ ಯೋಗ್ಯನೆ ನೀನೆನುತಂತರಾತ್ಮನಂ ಬರೆತೆಗೆದು (ಜಗವಿ. ೬–೨೦); ಹಳ್ಳಿಗಳ ಮಟ್ಟಿಗೆ ರೋಗ ನಿಧಾನ, ಚಿಕಿತ್ಸೆಗಳಿಗಿಂತ ಕೈಗುಣ ಮುಖ್ಯ (ಜಾರುದಾ. ೨೭); ಬಂದ ಕೆಲವೇ ದಿನಗಳಲ್ಲಿ ಅವರ ಕೈಗುಣ ತುಂಬ ಒಳ್ಳೆಯದೆಂದು ಪ್ರಸಿದ್ಧಿಯಾಯಿತು (ದೀಪದ. ೯೮). ೩. ಕೈಯ ಅಭ್ಯಾಸ, —ರೂಢಿ; ಬಳಕೆ; ಪರಿಪಾಠ: "ಕೈಗುಣ – ಕೈಪರಿಪಾಠ" (ಜಾನಕೋ. ೪೧). [ಕೈ$_2$ (< ಕೆಯ್$_2$) + ಗುಣ$_2$]

**ಕೈಗುತ್ತು, ಕಯ್ಗುತ್ತು, ಕೈಕುತ್ತು** (ನಾ). ೧. ಕೈಯಿಂದ ಕುತ್ತು, —ತಿವಿ, —ಗುದ್ದು: ಕೆಡೆದ ಮದಾಂಧಗಂಧ ಸಿಂಧು ರಂಗಳಡಿಯೊಳಡಂಗಿದನೆ ಗೆತ್ತು ಕೈಗುತ್ತಿನೋಡಿಯುಂ (ಗದಾಯು. ೬-೨೮೪); ನೀರ್ಗೆತ್ತು ಬೆಳ್ತನದಿಂ ಕತ್ತರಿವಾಣಿಯುಂ ಜಡಜನಂ ಕೈಗುತ್ತಲೇಟ್ಟರ್ಪವೋಲ್ (ಪಂರಾಮಾ. ೩-೪೮); ಇತ್ತ ಭೂರಿಶ್ರವನು ಭಾರಿಯ ಹತ್ತು ಸಾವಿರ ರಥಸಹಿತ ಕೈಗುತ್ತಿದನು ರಣವಿಜಯಲಕ್ಷ್ಮಿಯ ಲಲಿತ ಕಬರಿಯಲಿ (ಕುವ್ಯಾದ್ರೋ. ೧೪-೧); ಕೈಗುತ್ತಿದವರನು ಕಡಿಕಡಿದು ಹೆಣಗುತ್ತರಿಯನೊಟ್ಟಿದರು (ತೊರರಾ. ೬-೧೩-೩೯). **ಕಯ್ಗುತ್ತು**: ೧. ಮಹಾರಾಜನ ಕಣ್ಣಲಿಮೊಗಕ್ಕೆ ಕಯ್ಗುತ್ತಲು ಉರವಣಿಸುವನು (ಬಿಟ್ಟಅ. ೯೦-೧೮). **ಕೈಕುತ್ತು**: ೨. (ಕರಾ) ಊಟಕ್ಕೆ ತೊಡಗು.

**ಕೈಗುತ್ತಿಕೊಳ್** = ಕೈಯಿಂದ ಬಲಾತ್ಕಾರವಾಗಿ ಹಿಡಿ; ತುಡುಕು; ಕಿತ್ತುಕೊಳ್ಳು: ಕೈಗುತ್ತಿಕೊಂಡುಂಡಾರು ಜೀವಿಸಿದರ್ (ಸಿದ್ಧರಾ. ೫-೧೩); ಕೈಗುತ್ತಿಕೊಂಡಳು ಖಳನ ಕೈಯ ಕರಾಳ ಖಡ್ಗವನು ಎತ್ತಿ ಹೊಡೆದಳು ತಲೆಯನಾ ದುರ್ವೃತ್ತರದಿ ನಾಯಕನ ಮೊದಲಲಿತುತ್ತು ಗೊಂಬುದೆನುತ್ತ (ನಿಭಾಗ. ೫-೬-೩೨). [ಕೈ$_{2}$ (< ಕೆಯ್$_{2}$) + ಕುತ್ತು$_{1}$]

**ಕೈಗುದಿಗೆ** (ನಾ). ಕೈಯಲ್ಲಿರುವ ದೊಣ್ಣೆ: ಹೋಗಹೇಳವನೇಕೆ ಬಂದನು ಬಾಗಿಲಲಿ ಹೊಗಲೀಸದಿರಿಯೆನೆ ಕೈಗುದಿಗೆಗಳ ಖಳರು ತರುಬಿದರಾ ವಿಭೀಷಣನ (ತೊರರಾ. ೬-೨-೫೪); ಧರೆಯೊಳು ಕಂಠೀರವ ನರಸೇಂದ್ರನ ಬಿರುದಿನ ಮನ್ನೆಯ ಭಟರು ತುರುಕರ ಕದನವೆಂದೊಡೆ ಕೈಗುದಿಗೆಯೊಳಟ್ಟಿಯಟ್ಟಿ ಕೊಲುತಿಹರ್ (ಕಂನವಿ. ೧೯-೪).

[ಕೈ$_{2}$ (< ಕೆಯ್$_{2}$) + ಗುದಿಗೆ]

**ಕೈಗುದುರೆ** (ನಾ). (ಚದುರಂಗದಾಟದಲ್ಲಿ) ಕೈಯಲ್ಲಿರುವ ಕುದುರೆ, —ಕಾಯಿ: ಎನ್ನ ಮನೆಯೊಳ್ಪೋದುದಕಟಕಟ ನಿನ್ನ ಕೈಗುದುರೆ (ಜೈಮಿಭಾ. ೬-೩೦). [ಕೈ$_{2}$ (< ಕೆಯ್$_{2}$) + ಕುದುರೆ]

**ಕೈಗುದ್ದಲಿ** (ನಾ). ಸಣ್ಣಗುದ್ದಲಿ, —ಮಮ್ಮಟಿ: ತೋಟದ ಕೆಲಸಕ್ಕೆ ಕೈಗುದ್ದಲಿ ಬೇಕು (ರೂಢಿ). [ಕೈ$_{2}$ (< ಕೈಯ್$_{2}$) + ಗುದ್ದಲಿ]

**ಕೈಗುದ್ದು** (ನಾ). ಕೈಯನ್ನು ಮುಷ್ಟಿಮಾಡಿ ಹೊಡೆಯುವುದು; ಗುದ್ದುವುದು: ಕೆಲವರು ಆಯುಧಗಳು ಬಿದ್ದರೂ ಹಿಮ್ಮೆಟ್ಟದೆ . . . ಕೈಗುದ್ದುಗಳಿಂದ ನೋಯಿಸಿ (ಕೃವಾಭೀ. ೧೫೦).

[ಕೈ$_{2}$ (< ಕೆಯ್$_{2}$) + ಗುದ್ದು$_{2}$ (< ಗುದುರ್$_{2}$)]

**ಕೈಗುರುತು** (ನಾ). ರುಜು; ಸಹಿ; ದಸ್ಕತ್ತು: ಪತ್ರಕ್ಕೆ ಕೈಗುರುತು ಹಾಕು (ರೂಢಿ). [ಕೈ$_{2}$ (< ಕೆಯ್$_{2}$) + ಗುರುತು (< ಗುಱುತು)]

**ಕೈಗೂಟ$_{1}$** (ನಾ). ೧. ನೇಕಾರರು ನೇಯ್ಗೆಗಾಗಿ ಉಪಯೋಗಿಸುವ ಸಣ್ಣ ಗೂಟ: (ಕಿ). ೨. ಸಣ್ಣ ದೊಣ್ಣೆ.

[ಕೈ$_{2}$ (< ಕೆಯ್$_{2}$) + ಗೂಟ (< ಗೂಂಟ$_{1}$)]

**ಕೈಗೂಟ$_{2}$, ಕಯ್ಗೂಟ** (ನಾ). ಸೇರುವಿಕೆ; ಹೊಂದಿಕೆ: ಸಹಗಮನದಲಿ ಸೂರ್ಯಾನ್ವಯನ ಕೈಗೂಟದಲಿ ಕಾಬೆನು ನಮ್ಮ ಪೂರ್ವದ ನೃಪ ಪುರಂಧ್ರಿಯರ (ತೊರರಾ. ೬-೧೬-೧೪). **ಕಯ್ಗೂಟ**: ಊಟದಿನಾಟದಿನೊಪ್ಪುವ ಪಾಟದಿನಾಱಿಸುವ ತೀಟದಿಂ ಕಂಪಿನ ಕಯ್ಗೂಟದಿನಪ್ಪ ಸುಖಂಗಳೆ ಪಾಟಿಸಿದ ಸುಖಂಗಳೆಂದ್ರಿಯಂಗಳ ದೆಸೆಯಿಂ (ಅಜಿಪು. ೨-೮೧). [< ಕೆಯ್ಗೂಡು]

**ಕೈಗೂಟ$_{3}$** (ನಾ). ವಂಚನೆ; ಮೋಸ; ಒಳಸಂಚು: ನೋಟಕರು ನಿರ್ಭಯರು ಕೊನಬಿಗಳಾಟವಿಕ ದುರುದುಂಬಿಗರು ಕೈಗೂಟದವರು (ತೊರರಾ. ೫-೫-೧೫). [ಕೈ$_{2}$ (< ಕೆಯ್$_{2}$) + ಕೂಟ$_{4}$]

**ಕೈಗೂಡಿಕೆ** (ನಾ). ನೆರವೇರಿಕೆ; ಸಿದ್ಧಿ: "ಸಿದ್ಧಿ – ಕೈಗೂಡಿಕೆ" (ಗಂಗಾಮ. ೩೨೯). [ಕೈಗೂಡು (< ಕೆಯ್ಗೂಡು) + -ಇಕೆ]

**ಕೈಗೂಡಿಸು** 'ಕೆಯ್ಗೂಡಿಸು' ನೋ.

**ಕೈಗೂಡು** 'ಕೆಯ್ಗೂಡು' ನೋ.

**ಕೈಗೂಲಿ** 'ಕೈಕೂಲಿ' ನೋ.

**ಕೈಗೂಸು** 'ಕೈಕೂಸು' ನೋ.

**ಕೈಗೆಡು, ಕೈಗಿಡು** (ಕ್ರಿ). ಕೈಯ ಶಕ್ತಿ ಉಡುಗಿ ಹೋಗು; ಶಕ್ತಿ ಗುಂದು; ಸೋಲು: ಅಚ್ಯುತಂ ಮುಳಿದು ನಾಲ್ಕೈದು ಸಾವಿರಬ್ದಂ ಕಾದಿ ಕೈಗೆಟ್ಟು ಮೆಯ್ಗುಂದಿ (ಲಶಿಚಂ. ೧೪-೧೬); ಅಸಮಬಲ ಕಾದಿದನು ಕಟ್ಟಾಳುಗಳು ಕೈಗೆಡಲು (ಕುವ್ಯಾದ್ರೋ. ಓರಿಇ. ಪರಿ ೨೯೨); ಕೈಗೆಡೆದೆ ಕರ್ಣಾತ್ಮಜಂ ವಾರಣಾಸ್ತ್ರ ಪ್ರಯೋಗದೊಳದಂ ಕಂಪಿಸಿದನು (ಜೈಮಿಭಾ. ೪-೩೬); ಭಾಸ್ಕರ . . . ಕೈಗೆಟ್ಟು ದೆಸೆಗೆಟ್ಟು ಕುಂಪದಿನೋಡಿ (ರಾಮಾಶ್ವ. ೧೧೫-೧೦). **ಕೈಗಿಡು**: ಲೋಗರ ಮಾತಿಂಗೆ ಕೈಗಿಡುವ ನೆಂದೆಣಿಸದಾದೆಂ (ರಾಮಾಶ್ವ. ೨೫-೧).

[ಕೈ$_{2}$ (< ಕೆಯ್$_{2}$) + ಕೆಡು$_{1}$]

**ಕೈಗೆಣ್ಣು** (ನಾ). ಕೈಯ ಮೂಳೆಗಳ ಸಂಧಿ, —ಪರ್ವ: ಅವನು . . . ಬೀಳಲು ಕೈಗೆಣ್ಣುಗಳೆರಡೂ ಮುರಿದು ಹೋದುವು (ಬಂಕಿಮ. ೧೫೯).

[ಕೈ$_{2}$ (< ಕೆಯ್$_{2}$) + ಗೆಣ್ಣು]

**ಕೈಗೆಮಾಡು** 'ಕೆಯ್ಗೆಮಾಡು' ನೋ.

**ಕೈಗೆಯ್** 'ಕೆಯ್ಗೆಯ್' ನೋ.

**ಕೈಗೆಯಿಸು** 'ಕೆಯ್ಗೆಯ್ಸು' ನೋ.

**ಕೈಗೆಯ್ಸು** 'ಕೆಯ್ಗೆಯ್ಸು' ನೋ.

**ಕೈಗೆಲ್** (ಕ್ರಿ). ಬಲಾತ್ಕಾರದಿಂದ ಕೈಯನ್ನು ಹಿಡಿದುಕೊಳ್ಳು: ಕಣ್ಸೋಲದಿಂ ಕೀಚಕಂ ಬಂದುಱದೆನ್ನಂ ಕಾಡಿ ಕೈಗೆಲ್ದು[ಗಿ]ದನದನ ದೊಂದುರ್ಕನೇವೇೞ್ವೆನ್ (ಪಂಪಭಾ. ೮-೭೧).

[ಕೈ$_{2}$ (< ಕೆಯ್$_{2}$) + ಗೆಲ್]

**ಕೈಗೆಲಸ** 'ಕೈಕೆಲಸ' ನೋ.

**ಕೈಗೇಣ್, ಕಯ್ಗೇಣು** (ನಾ). ಕೈಯಕತ್ತಿ; ಖಡ್ಗ; ಕೈಗತ್ತಿ: ಕಣ್ಗೆಟ್ಟಂ ಮತಿಗೆಟ್ಟಂ ನಾಣ್ಗೆಟ್ಟಂ ಭೀತಿಗೆಟ್ಟನಸಮಾಸ್ತ್ರನ ಕೈಗೇಣ್ಗೆಯೆ ರಾಕಾದನವಂ (ವೀರವಿ. ೬-೪೬); ಬಳ್ಳಿಮಿಂಚು ಬೀಸುವ ಕೈಗೇಣ ವ್ಯೆಸಿರಿಯಂತೆ ಕಣ್ಗಡ್ಡಮಾದುದು (ರಾಮಾಶ್ವ. ೩-೩). **ಕೆಯ್ಗೇಣು**: ಕಯ್ಗೇಣನ್ನು ಸಿದ್ಧತೆಗೆ ಬಲ್ಪಡಿಗೊಂಡಿರುವಳು (ಬಿಟ್ಟಅ. ೬೦-೫).

[ಕೈ$_{2}$ (< ಕೆಯ್$_{2}$) + ಗೇಣ್$_{2}$]

**ಕೈಗೈ** 'ಕೆಯ್ಗೆಯ್' ನೋ.

**ಕೈಗೈಮೆ** (ನಾ). ೧. ಕೈಸಾಧನೆ; ಕೈಕೆಲಸ; ಕೈಚಳಕ; ಹಸ್ತ ಚಮತ್ಕಾರ. ೨. "ಅಲಂಕರಿಸುವ ಕಾರ್ಯ" (ಪ್ರಭಣ್ಣ). 'ಕೆಗೈ' ಪರಾ. [ಕೈ$_{2}$ (< ಕೆಯ್$_{2}$) + ಗೈಮೆ (< ಕೈಮೆ$_{1}$)]

**ಕೈಗೈವೞಿ** (ನಾ). ಕೈಯ ಅತಿ ಸಮೀಪ; ಕೈಕೆಳಗು: ನಿನ್ನ ಕೈಗೈವೞಿಯೊಳ್ ಕಲ್ತಾತನಲ್ತೆಂ[ಪಾಠಾಂ. ಲ್ಲೆಂ] ಕುಡು ಸಮಯ ಮನೆಂದಂಕದಾಸಾರರಿರ್ದರ್ (ಅನಂಪು. ೨-೩೦).

[ಕೈ$_{2}$ (< ಕೆಯ್$_{2}$) + ಬೞಿ$_{2}$]

**ಕೈಗೈಸು** 'ಕೆಯ್ಗೆಯ್ಸು' ನೋ.

**ಕೈಗೊಂಬಾಳ** (ನಾ). ಕೈಚಪ್ಪಾಳೆ ಹೊಡೆದು ಕುಣಿಯುವುದು: ಮೈಗಲಿ ಪೊಕ್ಕಿತ್ತಿದೊಡೊಡ್ಡಿದೊಡ್ಡಣದ ಕೈಗೊಂಬಾಳದಿಂ ಪೋದ ಮೆಯ್ವಲಗಂಬೆತ್ತಿರೆ ಬಾಹು ಪೋರಗದೆ ಪೊಯ್ದು ಭೂಪನಾ ವೀರನಂ (ಅನಂಪು. ೧೧-೬೨). [?]

**ಕೈಗೊಂಬೆ** (ನಾ). ೧. ಕೈಯಲ್ಲಿ ಹಿಡಿದುಕೊಳ್ಳುವ ಕೊಂಬೆ; ಸಣ್ಣ ಬೊಂಬೆ: ಮಗುವಿಗೆ ಆಡಲು ಒಂದ ಕೈಗೊಂಬೆ ಕೊಡಿಸಿದರು (ರೂಢಿ).

೨. (ಆಲಂ) ಕೈಯ ಅಧೀನವಾಗಿರುವ ವ್ಯಕ್ತಿ; ಆಡಿಸಿದಂತೆ ಆಡುವವನು; ಹೇಳಿದಂತೆ ಕೇಳುವ ವ್ಯಕ್ತಿ: ನೆರೆಹೊರೆಯವರಿಗೆ ಉಪಕಾರಿ; ಆದರೆ ಮನೆಯಲ್ಲಿ ಮಾತ್ರ ಹೆಂಡತಿಯ ಕೈಗೊಂಬೆ (ಯೋಧವು. ೬೩); ಅವರೂ ಸುದ್ದಿಗಾರರ ಕೈಗೊಂಬೆಯಾಗಬೇಕಾಗುತ್ತದೆ (ಪತ್ರಿಕಾ. ೫೩). [ಕೈ₂ (< ಕೆಯ್‌₂) + ಗೊಂಬೆ]

**ಕೈಗೊಡತಿ** (ನಾ). ಸಣ್ಣದಾದ ಮರದ ಸುತ್ತಿಗೆ; ಸಣ್ಣಕೊಡತಿ: ಕೈಗೊಡತಿಗಳಲಪ್ಪಳಿಸಿದರು (ತೊರರಾ. ೬-೨೩-೨೮). [ಕೈ₂ (< ಕೆಯ್‌₂) + ಕೊಡತಿ (< ಕೊಡಂತಿ)]

**ಕೈಗೊಡಲಿ** (ನಾ). ಚಿಕ್ಕ ಕೊಡಲಿ; ಸಣ್ಣ ಕೊಡಲಿ: ಪೊಣ್ಮೆಕನಲ್ಕೆ ಕೈಗೊಡಲಿಯಿಂದವನಂ ಪೊಡೆದಿಕ್ಕಿ ಮಿಳ್ಕ್ಕ (ರಾಜಶೇ. ೩-೧೦೨). [ಕೈ₂ (< ಕೆಯ್‌₂) + ಕೊಡಲಿ]

**ಕೈಗೊಡಹು, ಕೈಕೊಡಹು** (ಕ್ರಿ). ೧. ಕೈಯನ್ನು ಝಾಡಿಸು, —ಒದರು: ಕೈಗೊಡಹುತ್ತಿರ್ಪಬ್ಜಪತ್ರಾಕ್ಷಿಯ ನವರತಿಸರ್ವಸ್ವ ಬಿಂಬೋಷ್ಠಮಂ ಮುದ್ದಿಡುವ್ವೆ ರೋಲಂಬ ನೀನೇ ಕೃತಿ ನಿಜವರಸು ತ್ತಾವಣಂ ಕೆಟ್ಟೆವಲ್ತೇ (ಶಾಕುಂತ. ೧೧-೨೪). **ಕೈಕೊಡಹು**: ೨. (ಆಲಂ) ಜವಾಬ್ದಾರಿ ಕಳೆದುಕೊಳ್ಳು, ಹೊಣೆನೀಗು: "ನಿನ್ನ ಹಣೆಯಲ್ಲಿ ಬರೆದದ್ದೇ ಅಷ್ಟು!" ಎಂದು ಹಿತವಂದಿಗರು ಕೈಕೊಡಹುತ್ತಿದ್ದರು (ಮಸಕೂ. ೮). [ಕೈ₂ (< ಕೆಯ್‌₂) + ಕೊಡಹು₁ (< ಕೊಡಪು)]

**ಕೈಗೊಡು** 'ಕೆಯ್ಗೊಡು' ನೋ.

**ಕೈಗೊಪ್ಪೆ** (ನಾ). ೧. (ಚಳಿಯಿಂದ ರಕ್ಷಿಸಿಕೊಳ್ಳಲು) ಕೈಗಳಿಗೆ ಹಾಕಿಕೊಳ್ಳುವ ಗೊಪ್ಪೆ, —ಗವುಸು: (ಕ). ೨. ಕೈಗಳನ್ನು ಗೊಪ್ಪೆಯಾಕಾರದಲ್ಲಿ ಸೇರಿಸಿಕೊಳ್ಳುವುದು: ಹುದಿದ ಕೈಗೊಪ್ಪೆಗಳ ನಡುಕದ ಮೈಯ ಕಡುಸೀಡುಗಳ ಶೀತದ ಸಕಲಜನ ಹುದುಗಿದು ದರಣ್ಯದಲಿ (ಕುವ್ಯಾಅ. ೯-೨೪). [ಕೈ₂ (< ಕೆಯ್‌₂) + ಕೊಪ್ಪೆ]

**ಕೈಗೊಳ್** 'ಕೆಯ್ಕೊಳ್' ನೋ.

**ಕೈಗೊಳಿಸು₁** 'ಕೆಯ್ಕೊಳಿಸು' ನೋ.

**ಕೈಗೊಳಿಸು₂** 'ಕೆಯ್ಗೊಳಿಸು₂' ನೋ.

**ಕೈಗೊಳ್ಳಿ** (ನಾ). ಕೈಯಲ್ಲಿ ಹಿಡಿದಿರುವ ಕೊಳ್ಳಿ: ಕಾರ್ಮುಗಿಲು ಕವಿದ ಕತ್ತಲೆಯೊಳಂ ಕೈಗೊಳ್ಳಿಯಂ ಬೀಸಿದಂತೆ (ಪುಣ್ಯಾಸ್ರ. ೩-೩೬ ವ); ಕೈಗೊಳ್ಳಿಯಲಿ ಕೌರಿಡಲು ಸುಟ್ಟರು ಮೋಜಿಗಳನು (ತೊರರಾ. ೬-೧೧-೯); ದವಾಗ್ನಿಗಿದಿರಗ್ನಿಯಂ ಪಡಿವೊತ್ತಿಸಲ್ ಮನದಂದು ನಡೆವುದು ಪಳ್ಳಿ ಕೈಗೊಳ್ಳಿಗಳನಾಂತು . . . ಸಿರಿಯ ತಪ್ಪಲಿಗೆ (ಶ್ರೀರಾಮಾ. ೭೧೩-೧೦೨). [ಕೈ₂ (< ಕೆಯ್‌₂) + ಕೊಳ್ಳಿ]

**ಕೈಗೊಳ್ಳು** 'ಕೆಯ್ಕೊಳ್' ನೋ.

**ಕೈಗೋಲು** 'ಕೆಯ್ಕೋಲು' ನೋ.

**ಕೈಗೋವಿ** (ನಾ). ಚಿಕ್ಕ ಬಂದೂಕು; ಸಣ್ಣಕೋವಿ: ಚೋರಕುಡಿಗಳಂಬುಕಂಡಿಗಳೊಳು ಗುರಿಯೇಜಿಸಿ ಮೆಜಿವ ಕೈಗೋವಿ (ಕಂನವಿ. ೧೧-೧೩೭). [ಕೈ₂ (< ಕೆಯ್‌₂) + ಕೋವಿ]

**ಕೈಗೋಳೆ** 'ಕೈಕೋಳ' ನೋ.

**ಕೈಘಂಟೆ** 'ಕೈಗಂಟೆ' ನೋ.

**ಕೈಘಟ್ಟೆ** 'ಕೆಯ್ಗಟ್ಟೆ' ನೋ.

**ಕೈಘಟ್ಟಿಗ** (ನಾ). ಬಾಹು ಬಲವುಳ್ಳವನು; ಒಂದು ಬಿರುದು: ಅಳವಿಂತೆಂದೆತ್ತಿ ಬೊಟ್ಟಿಟ್ಟು ಮಾಣ್ಬನೆ ಮಾಣಂ ವಿಳಯಾನ್ತಕಂಗೆ ಕುಡುಗಂ ಕೈಘಟ್ಟಿಗಂ ಬಿಟ್ಟಿಗಂ (ಎಕ. VI, ತರೀಕೆ. ೪೫-೨೪; 1196). [ಕೈ₂ (< ಕೆಯ್‌₂) + ಘಟ್ಟಿಗ]

**ಕೈಚಪ್ಪರ** (ನಾ). ದೇವರ ಮೆರವಣಿಗೆಯಲ್ಲಿ ಕೈಗಳಲ್ಲಿ ಹಿಡಿದು ಸಾಗಿಸುವ, ವಿಗ್ರಹಗಳನ್ನೊಳಗೊಂಡ, ಸಣ್ಣ ಗುಡಿಯಂತಹ ಚಪ್ಪರ: ಕೈಚಪ್ಪರದಲ್ಲಿ ದೇವರನ್ನು ಕೂರಿಸಿ ಮೆರವಣಿಗೆ ಮಾಡುತ್ತಿದ್ದಾರೆ (ರೂಢಿ). [ಕೈ₂ (< ಕೆಯ್‌₂) + ಚಪ್ಪರ]

**ಕೈಚಪ್ಪಳೆ, ಕೈಚಪ್ಪಾಳೆ, ಕೈತಪಾಳೆ, ಕೈತಪ್ಪಳೆ** (ನಾ). ಎರಡು ಕೈಗಳನ್ನೂ ಒಂದಕ್ಕೊಂದು ತಟ್ಟಿ ಮಾಡುವ ಶಬ್ದ; ಕರತಾಡನ: ಕೈಚಪ್ಪಳೆಯಲೊದರಿದನಾ ವಸಂತನು ಮುನಿಪನಿದಿರಿನಲಿ (ತೊರರಾ. ೧-೫-೫೫); ಚಪ್ಪ ಕೋ ಕುಡಿಯೆಂದು ಕುಡಿಸಿ ತಾ ಕುಡಿದು ಕೈಚಪ್ಪಳೆ ಗೊಲಿದಾಡುತಿಹರು (ಮೋಹತ. ೧೮-೮೮). **ಕೈಚಪ್ಪಾಳೆ**: "ಕೈತಟ್ಟುವಿಕೆ, ಕರತಾಡನ" (ಸಂಕೋ). **ಕೈತಪಾಳೆ**: ಕೈತಪಾಳೆಯಿಡುವುದು (ಸೌಗಂಧಿ. ೫೪೪-೨೧). **ಕೈತಪ್ಪಳೆ**: ಕೇಳ್ದು ಪಕಪಕನೆ ನಕ್ಕು ಕೈತಪ್ಪಳೆಯನ್ನಿಟ್ಟು (ಮಿತ್ರಗೋ. ೨೬); ಅಲ್ಲಿದ್ದವರೆಲ್ಲರೂ ಕೈತಪ್ಪಳೆಯನ್ನಿಟ್ಟು ನಕ್ಕರು (ಕವಿಕಾ. ೨೬). [ಕೈ₂ (< ಕೆಯ್‌₂) + ಚಪ್ಪಳೆ]

**ಕೈಚಪ್ಪಳೆಯಿಕ್ಕು** (ಕ್ರಿ). ಕೈಯನ್ನು ತಟ್ಟು; ಕರತಾಡನ ಮಾಡು: ಉಲಿದೈತಹ ಗಿಳಿವಿಂಡ ಎಳೆವೆಣ್ಣುಗಳು ನಸುನಗುತಾಗ ಕೈಚಪ್ಪಳೆಯಿಕ್ಕಿ ಪಾರಿಸುತಿಹರು (ಕಂನವಿ. ೨-೫೨). [ಕೈಚಪ್ಪಳೆ + ಇಕ್ಕು]

**ಕೈಚಪ್ಪಾಳೆ** 'ಕೈಚಪ್ಪಳೆ' ನೋ.

**ಕೈಚಮತ** 'ಕೈಚಮತು' ನೋ.

**ಕೈಚಮತು, ಕೈಚಮತ** (ನಾ). ಕೈಚಳಕ; ಕೈಚಲಾಕಿ; ಹಸ್ತಚಾತುರ್ಯ: ಅದು ಕೈಚಮತು. ಅದೊಂದು ಕಲೆಯೇ ಇದೆ (ಕೃತಕೃ. ೧೬೭). **ಕೈಚಮತ**: ನಾನು ಕೈಚಮತದಿಂದ ಆ ವ್ಯಾಘ್ರದ ಹಣೆ, ಎದೆ, ಬಾಯಿಗಳಲ್ಲಿ ಅನೇಕ ಬಾಣಗಳನ್ನು ನಡೆಸಿದೆನು (ಪದ್ಮಸ. ೫೩). [ಕೈ₂ (< ಕೆಯ್‌₂) + ಚಮತು]

**ಕೈಚಲ್ಲು** 'ಕೈಚೆಲ್ಲು' ನೋ.

**ಕೈಚಳಕ, ಕೈಚಳಕು₁** (ನಾ). ಕೈಯ ಚಮತ್ಕಾರ; ಹಸ್ತಕೌಶಲ; ಹಸ್ತಚಾತುರ್ಯ: "ಕೈಮೆಯೆ ಕೈಚಳಕಂ" (ಭಾರನಿ. ೨೮); ಕೈಚಳಕ ಮಿಗೆ ಚೆಂದಮೆನಲ್ (ದಶಕು. ೮-೮೮); ನಿಲುವಿನಲಿ ಸ್ವಸ್ಥಾನದಲಿ ಕೈಚಳಕದಲಿ . . . ಶಸ್ತ್ರಾವಳಿಯ ಸಾಂಗೋಪಾಂಗ ಶ್ರಮವನು ತೋಱದನು ಪಾರ್ಥ (ಕುವ್ಯಾಅ. ೭-೪೧); ಹಿಳುಕ ಮಂತ್ರಿಸಿ ತಿರುವಿಗೆ ಹೂಡಿ ಬಹಳ ಕೈಚಳಕದಿಂದೆಚ್ಚು ಬೊಬ್ಬಿಱಯೆ (ಮೋಹತ. ೩೪-೧೮); ಕೈಚಳಕ ಬಾಯ್ಬಳಕಗಳಿಂದ ಸಮಾಜದ ದುಡ್ಡನ್ನು ಹೀರಿ (ಯಕ್ಷಪ್ರ. ೧೩೯). **ಕೈಚಳಕು₁**: "ಕೈಯ ನೈಪುಣ್ಯತೆ" (ಜಾನಕೋ. ೪೧). [ಕೈ₂ (< ಕೈಯ್‌₂) + ಚಳಕ]

**ಕೈಚಳಕಗಾಱ** (ನಾ). ಕೈಚಳಕವನ್ನುಳ್ಳವನು; ಹಸ್ತಚಾತುರ್ಯವನ್ನು ಹೊಂದಿರುವವನು: ಕಲುಮರದ ಕೋಲಾಹಳದ ಕೈಚಳಕಗಾಱರು ಕವಿವು ಹಳಚಿದರಿಳೆ ಬಳುಕೆ (ತೊರರಾ. ೬-೨೭-೨೬). [ಕೈಚಳಕ + -ಕಾಱ]

**ಕೈಚಳಕಿಗ** (ನಾ). = ಕೈಚಳಕಗಾಱ: ಕಡುಮುನಿದ ಕೈಚಳಕಿಗರು ಪೂರಾಯಚಾಪದ ಬೆರಳ ಕಿವಿಗಡಿಯ ಬಲುಸರಳ ಸರಿವಳೆಯ ಸಾಹಸಿಗಳು (ಕುವ್ಯಾದ್ರೋ. ೧೩-೨೮). [ಕೈಚಳಕ + -ಇಗ]

**ಕೈಚಳಕು₁** 'ಕೈಚಳಕ' ನೋ.

**ಕೈಚಳಕು₂** (ನಾ). ಕೈಯ ಅಥವಾ ತೋಳಿನ ಸ್ನಾಯುಗಳು ಬಿಗಿಯುವುದು, —ಸೆಡೆಯುವುದು; ಕೈ ಸೆಡೆತ: ಕೈಚಳಕು ಹಿಡಿದು ಬರವಣಿಗೆ ಸಾಗಲಿಲ್ಲ (ರೂಢಿ). [ಕೈ₂ (< ಕೈಯ್‌₂) + ಚಳಕು₁]

**ಕೈಚಾಚು** (ಕ್ರಿ). ೧. ಕೈಯನ್ನು ನೀಡು, —ನೆಟ್ಟಗೆಮಾಡು, —ಜೋಡಿಸು : ಹಡೆಗೆ ಕೈಚಾಚಿ ಗಣಕೂಟಕ್ಕೆ ಬಿನ್ನಯ್ಸಿದಸು (ಬಸವು. ೩೭–೧೪). ೨. (ಅಲಂ) ಕೈಯೊಡ್ಡು; ಬೇಡು : ಆತ ಬಡತನದಲ್ಲೂ ಮತ್ತೊಬ್ಬರಲ್ಲಿ ಕೈಚಾಚಿದವನಲ್ಲ (ರೂಢಿ).
[ಕೈ$_2$ (< ಕೆಯ್$_2$) + ಚಾಚು$_1$]

**ಕೈಚಿಟಿಕೆ** 'ಕೈಚಿಟುಂಕೆ' ನೋ.

**ಕೈಚಿಟುಂಕೆ**, ಕೈಚಿಟಿಕೆ, ಕೈಚಿಟುಕು (ನಾ). ಕೈಬೆರಳುಗಳನ್ನು ಮಿಡಿದು ಮಾಡುವ ಶಬ್ದ. 'ಕೈ ಚಿಟುಂಕೆಗೆಯ್' ಪರಾ. **ಕೈಚಿಟಿಕೆ** : "ಬೆರಳಿಂದ ಬಾರಿಸುವುದು" (ಜಾನಕೋ. ೪೧). **ಕೈಚಿಟುಕು** : (ಶಿ). [ಕೈ$_2$ (< ಕೆಯ್$_2$) + ಚಿಟುಂಕೆ]

**ಕೈಚಿಟುಂಕೆಗೆಯ್** (ಕ್ರಿ). ಕೈಯಿಂದ ಚಿಟಿಕೆಯನ್ನು ಹೊಡೆ : ಅಗಳೊರ್ವ ಪುಳಿಂದಂ . . . ಮೈದಡವಿ ಕೈಚಿಟುಂಕೆಗೆಯ್ದು ಪುಲ್ಲೆಯಂ ತೋಱಿಬಿಡಲ್ (ರಾಜಶೇ. ೫–೮೫ ವ). [ಕೈಚಿಟುಂಕೆ + ಕೆಯ್$_1$]

**ಕೈಚಿಟುಕು** 'ಕೈಚಿಟುಂಕೆ' ನೋ.

**ಕೈಚೀಟು** (ನಾ). ಕೈಯಲ್ಲಿ ಕೊಡುವ ಕಾಗದ; ಸಣ್ಣಪತ್ರ : ಆತನ ಕೈಯಲ್ಲಿ ಕೈಚೀಟೊಂದನ್ನು ಕಳುಹಿಸಿದ್ದರು (ರೂಢಿ).
[ಕೈ$_2$ (< ಕೆಯ್$_2$) + ಚೀಟು]

**ಕೈಚೀಲ** (ನಾ). ೧. ಕೈಯ ರಕ್ಷಣೆಗಾಗಿ ಹಾಕಿಕೊಳ್ಳುವ ಚೀಲ; ಕೈಗವಸು: ಮಗುವಿಗೆ ಕಾಲುಚೀಲ, ಕೈಚೀಲಗಳನ್ನು ಹೆಣೆಯುತ್ತಿದ್ದಾಳೆ (ರೂಢಿ). ೨. ಕೈಯಲ್ಲಿ ಹಿಡಿದುಕೊಳ್ಳುವ ಚೀಲ; ಸಣ್ಣ ಚೀಲ : ಕೈಯಲ್ಲಿ ಕೈಚೀಲವಿರಲಿಲ್ಲ (ರೂಢಿ). [ಕೈ$_2$ (< ಕೆಯ್$_2$) + ಚೀಲ]

**ಕೈಚೀಲಗಾರ** (ನಾ). "ಕೈಚೀಲಗಳನ್ನು ಮಾಡುವವನು, —ಮಾರುವವನು" (Glover. ೩೦೪೩).
[ಕೈಚೀಲ + -ಗಾರ (< -ಕಾಱ)]

**ಕೈಚೂರಿ** (ನಾ). ಸಣ್ಣ ಚೂರಿ; ಚಾಕು : ಕಠಾರಿ ಕೈಚೂರಿಗಳಿಂದ ವಾಲಗದಿ ನಿಂದಿಹರು (ಸೌಂದಕಾ. ೩–೧೧೯.) [ಕೈ$_2$ (< ಕೆಯ್$_2$) + ಚೂರಿ]

**ಕೈಚೆಲ್ಲು**, ಕೈಚಲ್ಲು (ಕ್ರಿ). ೧. ಕೈಯನ್ನು ಚಾಚು, —ನೀಡು : ರೋಗಿ – (ಕೈಚಲ್ಲಿ) ಹಾಗಿದ್ದರೆ ಹೇಳಿರಬೇಕು ಇಂತಹ ವೀರರಸಪ್ರಧಾನ ಕಥೆಯನ್ನು (ಉದವೈ. ೫). ೨. (ಅಲಂ) (ಅಸಹಾಯಕತೆಯಿಂದ, ಸೋತ ಮನೋಭಾವದಿಂದ) ಕೆಲಸದಿಂದ ವಿಮುಖನಾಗು; ನಿಷ್ಕ್ರಿಯನಾಗು : ಅವನ ಉದ್ದೇಶವನ್ನು ಅಳಿವುದಾಗಲಿ ತೂಗುವುದಾಗಲಿ ನಮಗೆ ಹೇಗೆ ಸಂದೀತು ಎಂದು ವಿಮರ್ಶಕರು ಕೈಚೆಲ್ಲುತ್ತಾರೆ (ಕಸಾಚ. ೨೫೪). **ಕೈಚಲ್ಲು** : ೨. ಸ್ವಚ್ಛ ಕೈಚಲ್ಲಿ ಕೂತು ಬಿಟ್ಟೇನಿ ನೋಡಿರಿ (ಅಶ್ವಮೇ. ೧೧); ಉಳಿದವರು ಉದಾಸೀನತೆಯಿಂದ ಕೈಚಲ್ಲಿದರು (ಗ್ರಾಮಾಯ. ೪೩); ನಿರುಪಾಯನಾಗಿ ನಿರಾಶೆಯ ನಿಟ್ಟುಸಿರಿನಿಂದ ಕೈಚಲ್ಲಿ ಕುಳಿತುಬಿಟ್ಟ (ಮುಂಗಾಪು. ೬೩). [ಕೈ$_2$ (< ಕೆಯ್$_2$) + ಚೆಲ್ಲು$_1$]

**ಕೈಚೌಕ** (ನಾ). ಮುಖ, ಕೈ ಒರಸಿಕೊಳ್ಳುವುದಕ್ಕಾಗಿ ಇರುವ ಸಣ್ಣ ವಸ್ತ್ರ; ಕರವಸ್ತ್ರ : ಕೈಚೌಕದಿಂದ ಮುಖ ಒರಸಿಕೊಂಡನು (ರೂಢಿ).
[ಕೈ$_2$ (< ಕೆಯ್$_2$) + ಚೌಕ]

**ಕೈಜಡಿ** (ಕ್ರಿ). ಕೈಯಿಂದ ಜಡಿ; ಬಲವಾಗಿ ಹೊಡೆ: ಕಾದಿದರ್ ಕೈಜಡಿಯೆ ಕಂಡೆಯುದ ಬಿಣ್ಪಿನಿಂ ಪಟುಭಟರುಭಯಬಲದೊಳು (ಚಿಬವು. ೧೬–೧೪). [ಕೈ$_2$ (< ಕೆಯ್$_2$) + ಜಡಿ$_1$]

**ಕೈಜಾಡಿಸು**, ಕೈಝಾಡಿಸು (ಕ್ರಿ). ಕೈಯನ್ನು ಕೊಡವು, —ಒದರು : ಅವನು ಕೈ ಜಾಡಿಸಿದಾಗ ಉಂಗುರ ಕಳಚಿ ಬಿತ್ತು (ರೂಢಿ). **ಕೈಝಾಡಿಸು** : ಬಿಚ್ಚುಗತ್ತಿಯ ಝುಳದ ಕೈ ಝಾಡಿಸಿದಿರೊ (ಇಂಗೀತ. ೧೬–೧೬). [ಕೈ$_2$ (< ಕೆಯ್$_2$) + ಜಾಡಿಸು]

**ಕೈಜೀತ** (ನಾ). ೧. ಒಬ್ಬರ ಕೈಕೆಳಗಿನ ಸೇವೆ. ೨. ಕೈಗೆಲಸಕ್ಕಾಗಿ ಕೊಡುವ ಸಂಬಳ : ನುಡಿನುಡಿಗಾನಂದಬಾಷ್ಪ ರೋಮಾಂಚನ ಮುಡುಪಿನೊಳಗೆ ಇಟ್ಟ ಕೈಜೀತವು (ಪುರಂದ. ೩–೧೫–೪); ಮೇಣವಂ ಲಾವಣಿಗೆಯೊಳ್ ತಪ್ಪದೀವ ಕೈಜೀತದೊಳಂ ಕಿಱುವೆಚ್ಚನೊಳ್ಕುಡುವುದುಗೊಂಡೆ (ಚಕವಂ. ೧೪–೧೯). [ಕೈ$_2$ (< ಕೆಯ್$_2$) + ಜೀತ]

**ಕೈಜೀತಗಾರ** (ನಾ). ಸಣ್ಣಪುಟ್ಟ ಸೇವೆಯನ್ನು ಮಾಡುವುದಕ್ಕಾಗಿ ಸದಾ ಬಳಿಯಲ್ಲೇ ಇರುವವನು; ಕೈಯ ಬಳಿಯಲ್ಲೇ ಇರುವ ಸೇವಕ : ಟಕ್ಕಿನ ಜಳ್ಳು ಮೆರೆತವಾಗಿ, ಒದೆವವರ ಕಾಲ ಕಂಡುಕವಾಗಿ, ಪತಿತವಾಗಬೇಕೆಂಬ ಉತ್ಕಟಾಭಿಲಾಷೆಯೇನು, ಮಹಿಶೂರ ಮಹಾ ಸೈನ್ಯಗಳ ಕೈಜೀತಗಾರರಿಗೆ? (ಬಿಟ್ಟ ಅ. ೭೪); ದಳವಾಯಿವೆಸರ ಕೈಜೀತಗಾರನೇ (ಮಂತ್ರಶ. ೭೦–೧೧). [ಕೈಜೀತ + -ಕಾರ$_1$ (< -ಕಾಱ)]

**ಕೈಜೋಡಿಸು** 'ಕೆಯ್ಜೋಡಿಸು' ನೋ.

**ಕೈಜೋಲ್** (ಕ್ರಿ). ಕೈಸಡಿಲಾಗಿ ಕೆಳಗೆ ಜೋತಾಡು, —ನೇಲು: (ಶಿ).
[ಕೈ$_2$ (< ಕೆಯ್$_2$) + ಜೋಲ್]

**ಕೈಝಾಡಿಸು** 'ಕೈಜಾಡಿಸು' ನೋ.

**ಕೈಟಭಾರಾತಿ** (ನಾ). ಕೈಟಭನೆಂಬ ರಾಕ್ಷಸನ ಶತ್ರು; ವಿಷ್ಣು : ಅಂತು ಸೊಗಯಿಸುವ ಕುರುರಾಜಾಂಗಣ ವಿಷಯಕ್ಕೆ . . . ಕೈಟಭಾರಾತಿಯ ವಿಶಾಲೋರಸ್ಥಳಕ್ಕೆ ಕೌಸ್ತುಭವಿರ್ಪಂತೆ ಸೊಗಯಿಸುತಿರ್ಪುದು ಹಸ್ತಿನಪುರಮೆಂಬುದು ಪೊಲಲ್ (ಪಂಪಭಾ. ೧–೫೭ ವ).
[ಕೈಟಭ$_0$ + ಅರಾತಿ]

**ಕೈಟಭಾರಿ** (ನಾ). = ಕೈಟಭಾರಾತಿ : ಕರ್ಣನನಾನುವಡೆ ಫಲುಗುಣನ ಪಾಡೆ ಕೃಶಾನುನೇತ್ರನೊ ಕೈಟಭಾರಿಯೊ (ಕುವ್ಯಾಕ. ೨೨–೩೮).
[ಕೈಟಭ$_0$ + ಅರಿ$_6$]

**ಕೈಟರ್ಯ** (ನಾ). ಔಷಧಿಗೆ ಉಪಯೋಗವಾಗುವ ಒಂದು ಗಿಡ; ಕಟ್ಫಲ : (ಶಿ). [ಸಂ.]

**ಕೈತ**$_1$ 'ಕೆಯ್ತ$_1$' ನೋ.

**ಕೈತ**$_2$ 'ಕೆಯ್ತ$_2$' ನೋ.

**ಕೈತಕ** (ನಾ). ಕೇದಿಗೆ; ಕೇತಕಿ ಪುಷ್ಪ : ಉದ್ಭ್ರಮರಸ್ವನಂ ಸೊಗಯಿಸಿತ್ತು ತಾಣದೊಳ್ ಕೈತಕಂ (ರಾಜಶೇ. ೨–೫೭). [ಸಂ.]

**ಕೈತಕದಳ** (ನಾ). ಕೇದಿಗೆ ಹೂವಿನ, —ಎಸಳು : ಎಳದಳಿರಂಬಿದು ಮರುಮೊನೆಗೊಳಲಾಱದು ಧೀರರೆರ್ದೆಯನೆಂದತನುವದಕ್ಕಳವಡಿಸಿದನೆನೆ ಕೈತಕದಳಮಂ ತುದಿಗೊಂಡು ಕರಜಮೊಪ್ಪಿದುದವಳ (ರಾಜಶೇ. ೬–೪೩).
[ಕೈತಕ + ದಳ (= ದಲ)]

**ಕೈತಕಧೂಳಿ** (ನಾ). ಕೇದಗೆಯ ಧೂಳಿ, —ಪರಾಗ : ಚಟುಲ ಮುರಲಾನಿಲೋದ್ಧತ ಪಟು ಕೈತಕಧೂಳಿ ಪಡೆದುದುರ್ವೀಶ ಚಮೂಭಟ ಕೃತ್ರಿಮ ಕಂಚುಕಪಟವಾಸ ವಿಳಾಸಮಂ (ಶಾಂತಿಪು. ೧೧–೧೭).
[ಕೈತಕ + ಧೂಳಿ (= ಧೂಲಿ)]

**ಕೈತಟ್ಟು** 'ಕೈದಟ್ಟು' ನೋ.

**ಕೈತಡವು** (ನಾ). ಕೈಯಿಂದ ತಡವುವುದು, —ಸವರುವುದು; ನೇವರಿಸುವುದು : ತವುತರೆ ತನ್ನ ತೇರೊಳಗೆ ಮುನ್ನಱಿ ತೀವಿದನೇಕ ಶಸ್ತ್ರಮಿಟ್ಟು ಪಱಿದು ಮೆಚ್ಚು ಕೈತಡವಿನೊಳ್ ತೊಡರ್ದಂದಮಂದು ಕಂಡು (ಮಹಾನೇ. ೧೨–೧೨೪). (ಕೈ$_2$ (< ಕೆಯ್$_2$) + ತಡವು$_4$)]

**ಕೈತಡೆ** (ಕ್ರಿ). ೧. ತಡೆದುಕೊಳ್ಳು; ಸಹಿಸಿಕೊಳ್ಳು: (ಶಿ). ೨. ಮತ್ತೊಬ್ಬನನ್ನು ತಡೆ: ಅಡ್ಡಿಪಡಿಸು : ನಿಮ್ಮವರು ಕರ್ವಿಗಳ್ ಕೈತಡೆದರೆಮ್ಮವರು (ತುರಂಗ. ೨೫–೧೯). [ಕೈ$_2$ (< ಕೆಯ್$_2$) + ತಡೆ$_1$]

**ಕೈತಪಾಳಿ** 'ಕೈಚಪ್ಪಳೆ' ನೋ.

**ಕೈತಪ್ಪಳೆ** 'ಕೈಚಪ್ಪಳೆ' ನೋ.

**ಕೈತಪ್ಪಳೆಗುಟ್ಟು** (ಕ್ರಿ). ಕೈಚಪ್ಪಾಳೆಯನ್ನು ಹೊಡೆ: ಬಂದರವದು ನಗುತ ಕೈತ[ಪಾಠಾಂ. ಚ]ಪ್ಪಳೆಗುಟ್ಟೆ ಸಖಿಯರು (ಕುರಾಸಾಂ. ೪೭-೩೭). [ಕೈತಪ್ಪಳೆ (< ಕೈಚಪ್ಪಳೆ) + ಕುಟ್ಟು$_1$]

**ಕೈತಪ್ಪು$_1$** (ಕ್ರಿ). ಕೈಯಿಂದ ತಪ್ಪಿಹೋಗು, —ನುಣುಚಿಕೊಳ್ಳು: ಇಂಥ ಪರಿಸ್ಥಿತಿಯಲ್ಲಿ ರಾಜ್ಯಸೂತ್ರಗಳು ಕೆಂಪುದೇವಯ್ಯನ ಕೈತಪ್ಪಿ ಅಪ್ಪಾಜಿಯ ಕೈಸೇರಬೇಕು (ಚಿಕ್ಕದೇ. ೧೪೫); ಮಡಕೆ ಕೈತಪ್ಪಿಬಿದ್ದು ಒಡೆದುಹೋಯಿತು (ರೂಢಿ). [ಕೈ$_2$ (< ಕೆಯ್$_2$) + ತಪ್ಪು$_1$]

**ಕೈತಪ್ಪು$_2$** (ನಾ). ೧. ಕೈಯಿಂದ ಆಗುವ ತಪ್ಪು, —ಅಪರಾಧ: ಅಹಹ ಕೈತಪ್ಪಾಯ್ತು ರಾಯನ ಸಹಭವನು ನೊಂದನು (ಕುವ್ಯಾದ್ರೋ. ೫-೫೧); ರಘುಪತಿನಿಲಿಸಿದನು ಕೈತಪ್ಪಮಾಡದಿರೆಂದು ಲಕ್ಷ್ಮಣನ (ತೊರರಾ. ೩-೪-೨೬). ೨. ಅಜಾಗರೂಕತೆಯಿಂದ ಬರವಣಿಗೆಯಲ್ಲಾಗುವ ತಪ್ಪು; ಸ್ಖಾಲಿತ್ಯ: ಕೈತಪ್ಪಿನಿಂದಾಗಿ ಅನೇಕ ಸ್ಖಾಲಿತ್ಯಗಳು ನಕಲಿನಲ್ಲಿ ಮೈದೋರುತ್ತವೆ (ಗ್ರಂಥಸಂ. ೭೬). [ಕೈ$_2$ (< ಕೆಯ್$_2$) + ತಪ್ಪು$_2$]

**ಕೈತವ** (ನಾ). ೧. ಕಪಟ; ವಂಚನೆ: "ಜತ್ತಕವೆಂದೆನೆ ಕೈತವ" (ಕವಿಕಂ. ೨೨೯); ಬರೆಪದೊಳರ್ಥದೊಳಿವ್ಮಡಿಪರಿವಂತಿರೆ ಪರದ ನೊಡನೆ ಕೈತವದಿಂದಂ ದೊರೆಕೊಂಡು ತಿಂದು (ಮದತಿ. ೧೦-೬೪). ೨. ವ್ಯಾಜ; ನೆಪ; ಮೋಸ: "ಕೈತವಂ, ಕಪಟಂ . . . ನಿರ್ದಿಷ್ಟಂ, ವ್ಯಪದೇಶಃ – ಈ ೧೦ ನೆವಂ" (ಹಲಾಯು. ೧೧೭-೨೪); ಕುಸುಮ ನಿಕಾಯಮಂ ತಿಱಿವ ಕೈತವದಿಂದೆ (ಉದ್ಭಟ. ೭-೨೨); ನುಡಿವೊಡೆ ಲಲ್ಲೆಯೆಂಗುಮೆರ್ದೆವೆಟ್ಟೊಡೆ ಕೈತವಮೆಂಗುಂ (ಆದಿಪು. ೧೨-೩೩); ವಿಧಿಯ ಕೈತವಕ್ಕೆ ನೀವೂ ಬಲಿಯೆ (ದುರಂನಾ. ೪೭). ೩. ಜೂಜು; ಪಂದ್ಯ; ದ್ಯೂತ. ೪. ಜೂಜಿನ ಮನೆ: "ಜೂಜುಳ್ಳ ಮನೆ ಕೈತವ ಮೆನಿಕ್ಕು" (ಮಂಗರಾ. ೫೯-೧೧). [ಸಂ.]

**ಕೈತವಕ$_1$** (ನಾ). ಕೈಚಳಕ, —ಚಾಲೋಕು; ಹಸ್ತಕೌಶಲ: ಕೈತವಕದಿಂದೆಚ್ಚನನುಸಾಲ್ವನಂ ನೂಱುಬಾಣದಿಂ ಪಾರ್ಥಸೂನು (ಜೈಮಿಭಾ. ೨೨-೧೦). [ಕೈ$_2$ (< ಕೆಯ್$_2$) + ತವಕ]

**ಕೈತವಕ$_2$** (ನಾ). ಮೋಸ; ಕಪಟ; ಕೈತವಕದಲಿ ಕಲಿಯಿಂದ ನೊಂದೆನು (ನಳಚ. ೮-೬೩). [ಸಂ.]

**ಕೈತವಕಿಗ** (ನಾ). ಕೈಯ ತವಕವುಳ್ಳವನು; ಆತುರದವನು: ದೂತರೈದಿದರಿವರ ಸೂರೆಯ ಕೈತವಕಿಗರು (ಕುವ್ಯಾಸ. ೧-೨). [ಕೈತವಕ$_1$ + -ಇಗ]

**ಕೈತವೆ** (ನಾ). = ಕೈತವ: ಪದನಱಿತಿಂಬುಗೆಯ್ದು ಮಗುಳ್ದಂ ರತಿಯಂ ಪಡೆದು ದಳದುಳಿಕೆಯಿಂದಮಾ ಕೈತವೆಯಿಂ [ಪಾಠಾಂ. ಕೆತವೆಯುಂ] (ಮದತಿ. ೧೧-೬೧). [< ಸಂ. ಕೈತವ]

**ಕೈತಳ, ಕೈದಳ** (ನಾ). ಕೈಯ ತಳ; ಅಂಗೈ: ಕೈತಳ ಮಗುಚ ಲಮ್ಮದು ವಾಘೆಯಲಿ (ಕುವ್ಯಾಗ. ೨-೧೩); ಕೈತಳದಿನಾನುಂ ಪುಡುಂಕು ವೆನ್ (ಸಂಸಪ. ೨೬-೧೫). **ಕೈದಳ**: ಕೈದಳದೊಳೆಸೆವ ತಲೆಯಂ ನಾಸಿ ಕಾಗ್ರದೆಡೆಗೊಯ್ದು ಮುರಮಥನನಾಘ್ರಾಣಿಸಿದನು (ಜೈಮಿಭಾ. ೧೩-೫೨); ಮೈದಡವಿ ಮೆಲ್ಲನೆ ಕೈದಳದಿಂದ ಬಿಡಲು ಪಕ್ಕಿಗಳ (ಕುರಾಸಾಂ. ೧೫-೨೯). [ಕೈ$_2$ (< ಕೆಯ್$_2$) + ತಳ$_2$ (= ತಲ$_1$)]

**ಕೈತಳುಕು, ಕೈತಳ್ಕು** (ಕ್ರಿ). ಕೈಗಳ ಕೂಡಿಕೆ; ಕೈಕೈ ಹೆಣೆದಿರುವಿಕೆ, —ಹಿಡಿದುಕೊಂಡಿರುವಿಕೆ: ಭೀಮಬಾರೆಂದು ಕೈತಳುಕಿನೊಳ್ಪಿಗಿಯಪ್ಪಿದಂ (ತುರಂಗ. ೭೭-೨೪). **ಕೈತಳ್ಕು**: ಚೆಂಗಡೆ ಬಹ ಕೆಳದಿಯರು ಕೈತಳ್ಕಿನ ಸಂಗಾತಿಗಳು ಸಾಧ್ವಿಯರು (ಕಂನವಿ. ೨೧-೨೨). [ಕೈ$_2$ (< ಕೆಯ್$_2$) + ತಳುಕು (< ತಳ್ಕೆ)]

**ಕೈತಳ್ಕು** 'ಕೈತಳುಕು' ನೋ.

**ಕೈತಾಂಗು** (ನಾ). ಸೇತುವೆಗಳ ಪಕ್ಕಗಳಲ್ಲಿರುವ ಕಟಕಟೆ: ಚಿಕ್ಕಸೇತುವೆಗಳ ಪಕ್ಕದಲ್ಲಿ ಕೈತಾಂಗುಗಳನ್ನು ಕಟ್ಟುತ್ತಾರೆ (ನಾಡೋಜ. ೧೧೨). [ಕೈ$_2$ (< ಕೆಯ್$_2$) + ತಾಂಗು$_2$]

**ಕೈತಾಯಿ** (ನಾ). ಒಂದು ಬಗೆಯ ಹರಳುಗಿಡ: ಪೂತ ಕೈತಾಯಿಗಂ [ಪಾಠಾಂ. ಐರಾವತದ] ಪೊಳಲೆನಿಪ ದಿಕ್ಕಿನೊಳ್ ಜಾತಾನುರಾಗದಿಂದುದಿಸೆ (ವೆಂಕಾರಾ. ೧-೨೦-೩೦). [← ತಮಿ. ಕೈತ್ತಾ]

**ಕೈತಾಳ, ಕಯ್ತಾಳ, ಕೈದಾಳ** (ನಾ). ೧. ಕೈಚಪ್ಪಳೆ: ಮುಳಿದುಬ್ಬರಿಸಿ ಕೈತಾಳಂಗಳಂ ಹೊಯ್ದನು ಹಲಾಯುಧನು (ಬಸಪು. ೨೫-೩೨); ವಿಟರು ಕೈತಾಳಮೊತ್ತುವರು (ಕಂನವಿ. ೨-೯೨). ೨. ಕೈಯಿಂದ ಹಾಕುವ ತಾಳ: ಕೈತಾಳದಿಂ ಪಾಡಿದಂ ಭಕ್ತಿಯಿಂದಲಾ ನಂದಿಯಾಗ (ನಂದಿಮಾ. ೧೭-೫೪). ೩. ಕಂಚು ಅಥವಾ ಹಿತ್ತಾಳೆಯಿಂದ ಮಾಡಿದ ತಾಳ: (+). **ಕಯ್ತಾಳ**: ೨. (ಕಯ್ತಾಳದ ಮುದ್ದುವಾಡಿನ ಯುವರಾಜನ ಪ್ರವೇಶ) (ಬಟ್ಟಲ. ೧೦೬-೧೯). **ಕೈದಾಳ**: ೨. ಸತ್ಯ ಸತ್ಕೀರ್ತಿವಧು ಕೈದಾಳವಿಡಿದು ಸಾರುತ್ತಿಹಳು (ನವಮೋ. ೫-೧೩). ೪. ಒಂದು ಊರಿನ ಹೆಸರು: ಹುಟ್ಟೂರು ಕೈದಾಳವನು ಸಾರಿ (ನವರಾ. ೩-೨೩). [ಕೈ$_2$ (< ಕೆಯ್$_2$) + ತಾಳ$_1$]

**ಕೈತಾಳು$_1$** (ಕ್ರಿ). ತಡೆದುಕೊಳ್ಳು; ಸಹನೆಯಿಂದಿರು; ಪ್ರತೀಕಾರ ಮಾಡದಿರು: (+). [ಕೈ$_2$ (< ಕೆಯ್$_2$) + ತಾಳು$_1$ (< ತಾಳ್$_1$)]

**ಕೈತಾಳು$_2$** (ನಾ). ಬಾಗಿಲ ಅಗುಳಿಯನ್ನು ಹಾಕಲು ಅಥವಾ ತೆಗೆಯಲು ಉಪಯೋಗಿಸುವ ಸಾಧನ: (+). [ಕೈ$_2$ (< ಕೆಯ್$_2$) + ತಾಳು$_3$ (< ತಾೞ್)]

**ಕೈತಾಳೆ** (ನಾ). ಒಂದು ಔಷಧಿಗಿಡದ ಹೆಸರು: "ಬಿಳಿದಾಳೆ, ಮುಸ್ಸಿ, ಶಾವಿಗೆ, ಸಾವಯ, ಕೈತಾಳೆ" (ವೈಔಗ. ೭೨-೧೪೭೫). [?]

**ಕೈತಿವಿ** (ಕ್ರಿ). ೧. ಕೈಯಿಂದ ತಿವಿ; ಗುದ್ದು. ೨. ಕೈಮಾಡು, —ತೋರು: ಇಂಥವಳು ಇದ್ದರೆಷ್ಟು? ಸತ್ತರೆಷ್ಟು? ಎಂದು ಬಿದ್ದವಳತ್ತ ಕೈತಿವಿದು (ಹೊಸಕ್ಷಿ. ೨೩). [ಕೈ$_2$ (< ಕೆಯ್$_2$) + ತಿವಿ$_1$]

**ಕೈತೀವು** 'ಕೆಯ್ತೀವು' ನೋ.

**ಕೈತುಂಬು** (ಕ್ರಿ). ಕೈಯನ್ನು ತುಂಬು; ಕೈಯನ್ನು ಭರ್ತಿಮಾಡು: ಮಲ್ಲಿಗೆಯರಳಕತ್ತುರಿಯೊಳಗದ್ದಿ ಕೈತುಂಬಿ ಕೊಡಲು (ಕಂನವಿ. ೨-೮೪). [ಕೈ$_2$ (< ಕೆಯ್$_2$) + ತುಂಬು$_1$]

**ಕೈತುತ್ತು** (ನಾ). ೧. ಬಾಯಿಗೆ ಹಾಕಲು ಕೈಯಿಂದ ಒಮ್ಮೆ ಎತ್ತಿಕೊಳ್ಳುವ ಆಹಾರ, —ಗ್ರಾಸ, —ಕವಳ: ಕಾಲಪವನಾಶನನ ಕೈತುತ್ತಾದನಲ್ಲಾ (ಬಸಪು. ೪೬-೩೭). ೨. ಒಬ್ಬೊಬ್ಬರ ಕೈಗೂ ಹಾಕುವ ಕಲಸಿದ ಅನ್ನದ ತುತ್ತು: ಅಜ್ಜಿ ಮಕ್ಕಳಿಗೆ ಕೈತುತ್ತು ಹಾಕಿದಳು (ರೂಢಿ). [ಕೈ$_2$ (< ಕೆಯ್$_2$) + ತುತ್ತು$_2$]

**ಕೈತೂಕ** (ನಾ). ಭಾರವನ್ನರಿಯಲು ಕೈಯಿಂದ ಎತ್ತುವುದು; ಅಂದಾಜು ತೂಕ: ಎರಡು ಚಿಂತೆಯನಗಿದು ಸಮವಿಟ್ಟರಡು ಕೈತೂಕದಲಿ ತೂಗಿದು (ತೊರರಾ. ೩-೯-೧೪); ಕೈತೂಕ ಬಾಯಿ ಬಣ್ಣ (ಗಾದೆ). [ಕೈ$_2$ (< ಕೆಯ್$_2$) + ತೂಕ]

**ಕೈತೆಗೆ** 'ಕೆಯ್ದೆಗೆ' ನೋ.

**ಕೈತೆರೆ** (ಕ್ರಿ). ಕೈಯನ್ನು ತೆರೆ, —ಬಿಚ್ಚು: ಒಲವ ಕೊಳೆ ಕೈತೆರೆಯುತ (ಮಲೆದೇ. ೯-೭). [ಕೈ$_2$ (< ಕೆಯ್$_2$) + ತೆರೆ$_1$]

**ಕೈತೇರು** (ನಾ). ಕೈಯಿಂದ ಎಳೆದುಕೊಂಡು ಹೋಗುವ ತೇರು; ಸಣ್ಣರಥ: ರಾಟಾಳತೇರು ಕೈತೇರು ಗೊಂಬೆತೇರು ಹರಿದೂ ನಂಜಯ್ನ ಎಡಬಲಕೆ (ಹಳ್ಳಿಯ. ೩೭). [ಕೈ$_2$ (< ಕೆಯ್$_2$) + ತೇರು$_2$ (< ತೇರ್$_2$)]

**ಕೈಕೊಡಪು** (ನಾ). ಕೈಗೆ ತೊಡಿಸುವ ಗವಸಣಿಗೆ; ಕೈಕವಚ (?) : ಭೀಷ್ಮನು ಕವಚವನ್ನೂ ಕೈಕೊಡಪುಗಳನ್ನೂ ಕೊಟ್ಟು (ಕೃನಾವಿ. ೮೯). [ಕೈ$_2$ (< ಕೆಯ್$_2$) + ತೊಡಪು]

**ಕೈಕೊರೆ** (ಕ್ರಿ). ೧. ಕೈಯನ್ನು ಬಿಡು. ೨. ಮುಕ್ತಹಸ್ತವಾಗಿರು; ಉದಾರತೆಯನ್ನು ಹೊಂದಿರು : ಸಿರಿವಂತರು ಕೈಕೊರೆಯದೀಯದಿರೆ (ವಿಜಿಗೀ. ೭೮). [ಕೈ$_2$ (< ಕೆಯ್$_2$) + ತೊರೆ$_1$ (< ತೊಱೆ$_1$)]

**ಕೈಕೊಳೆ** 'ಕೆಯ್ದೊಳೆ' ನೋ.

**ಕೈತೋಟ** 'ಕೈದೋಟ' ನೋ.

**ಕೈತೋರಿಸು** 'ಕೈದೋಱಿಸು' ನೋ.

**ಕೈತೋರು** 'ಕೈದೋಱು' ನೋ.

**ಕೈದಂಡ** (ನಾ). "ಬೈಸಿಕಲ್, ಮೊದಲಾದವುಗಳಲ್ಲಿ ಅವನ್ನು ಬೇಕಾದ ಕಡೆಗೆ ತಿರುಗಿಸಲು ಸಾಧನವಾದ, ಎರಡು ತುದಿಗಳಲ್ಲೂ ಹಿಡಿಯಿರುವ, ದಂಡ" (Handle-bar. ಇಂಕನ್ನ). [ಕೈ$_2$(< ಕೆಯ್$_2$) + ದಂಡ]

**ಕೈದಂಡೆ** (ನಾ). ೧. ಕೈಯಲ್ಲಿ ಹಿಡಿದುಕೊಳ್ಳುವ ಸಣ್ಣ ದೊಣ್ಣೆ; ಕೈಕೋಲು : ಮೆಱೆವ ಹಜ್ಜೆಯ ದಂಡೆವಲಗೆಯ ಮಱೆಯ ಕೈದಂಡೆಗಳ ಜುಣುಗಿಸಿ ತಱುಬಿ ನಿಂದರು (ಕುವ್ಯಾಭೀ. ೪-೩೪). ೨. ಕೈಯಾಸರೆ: ಕಂಡು ದಂಡೆಗೆ ಕರೆದು ಮುಂಡೆಯಂ ನೀವಿ ಕೈದಂಡೆಯಂಗೊಂಡು (ಸೌಗಂಧಿ. ೪೦-೪). [ಕೈ$_2$ (< ಕೆಯ್$_2$) + ದಂಡೆ$_2$]

**ಕೈದಂಡೆಕೊಡು** (ಕ್ರಿ). ಕೈಯನ್ನು ಆಸರೆಕೊಡು; ಕರಾವಲಂಬನ ಕೊಡು : ನಂದಿ ಕೈದಂಡೆಕೊಡೆ ನಡೆದು ಸಂತಸವಾಂತು ನಿಂದು (ರಾಘಚಾ. ೭-೮೨). [ಕೈದಂಡೆ + ಕೊಡು$_1$]

**ಕೈದಟ್ಟು**, ಕೈತಟ್ಟು (ಕ್ರಿ). ೧. ಚಪ್ಪಾಳೆ ಹೊಡೆ; ಕರತಾಡನ ಮಾಡು : ದಟ್ಟವಿಸಿ ಕವಿದ ಕತ್ತಲೆಯ ಮೊತ್ತದೊಳು ಕೈದಟ್ಟಲೆನುತಂ (ನಂದಿವಾ. ೨೨-೪೪). ೨. ಮತ್ತೊಬ್ಬನ ಕೈಯನ್ನು ತಟ್ಟು : (ಕ). ೩. ಕೈಯನ್ನು ತಟ್ಟಿ ರಹಸ್ಯವಾದ ಸಂಜ್ಞೆಯನ್ನು ಕೊಡು : (ಕ). ೪. ಒದಗು; ಸಂಭವಿಸು; ಪ್ರಾಪ್ತವಾಗು : ಕೆಟ್ಟಿಂ ಪ್ರಯಾಸವೇ ಕೈದಟ್ಟಿತೆಂದೊಱಲುತ (ಪದ್ಮರಾ. ೧೩-೫); ಜನ್ಮಾಂತರದ ಸುಕೃತ ಫಲವೆಮಗೆ ಕೈದಟ್ಟಿದುದು (ತುರಂಗ. ೩೩-೭). ೫. ಕೈಯಿಂದ ಹೊಡೆ; ಜಗಳವಾಡು; ಹೋರು : ಕೈದಟ್ಟುವ ಠಾವಿನಲ್ಲಿ ಕಾಳಗವಲ್ಲದೆ ಕೈದಟ್ಟದ ಠಾವಿನಲ್ಲಿ ಕಾಳಗವುಂಟೇ ಅಯ್ಯಾ (ಮೋಳಿಮಾ. ೧೦೪-೪೮೯). ೬. (ನಾಣ್ಯದಂತೆ) ಕೈಯಿಂದ ಕೈಗೆ ಸಾಗು : (ಕ). **ಕೈತಟ್ಟು** : ೧. ಆನಂದ ಹಿಂದಕ್ಕೆ ತಿರುಗಿ ಪ್ರಕಾಶನನ್ನು ಕೈತಟ್ಟಿ ಕರೆದ (ಮುರಳಿ. ೧೪೬); ಮಾಧವರಸ ಕೈತಟ್ಟುತ್ತ ಹೇಳಿದ – ಹೌದು ಹೌದು ಹಾಗೆ ಮಾಡಬೇಕು (ಆಶ್ರಮು. ೯೮). [ಕೈ$_2$ (< ಕೆಯ್$_2$) + ತಟ್ಟು$_1$]

**ಕೈದಣಿ** (ಕ್ರಿ). ಕೈಗೆ ದಣಿವಾಗು; ಕೈ ಸೋತುಹೋಗು : ಕೈದಣಿಯೆ ಹೊಯ್ದರಿಯ ಸೀಳಿದು ಬಾಯ್ದಣಿಯೆ ಮೂದಲಿಸಿ (ಕುವ್ಯಾಕ. ೮-೪೧); ವಿಷಾದ ಭರದಲಿ ಮುಂದುಗಾಣದೆ ಕೈದಣಿಯಲಪ್ಪಳಿಸಿದನು ಕಲಿಭೀಮ ಕುರುಪತಿಯ (ಕುವ್ಯಾಗ. ೭-೨೬). ಕೈದಣಿವನಕ ನಾನಾ ಪುಷ್ಪಂಗಳ ಕೊಯ್ದು ಪೊಟ್ಟಣವ ಕಟ್ಟಿದರು (ಮೋಹತ. ೪-೫೯). [ಕೈ$_2$ (< ಕೆಯ್$_2$) + ತಣಿ$_1$]

**ಕೈದಣ್ಣಲರ್** (ನಾ). ಒಂದು ಬಗೆಯ ಭಕ್ಷ್ಯ : ಸಣ್ಣಕ್ಕಿಯಶನ ಸದ್ಘೃತದೊಳೆ × × × ಕೈದಣ್ಣಲರ್ ದಧಿಪತ್ರಮಾಲೆ ತಣ್ಣೈಸದೆ ಪದಾರ್ಥಂಗಳ ರುಚಿಯ ಮುಕ್ಕಣ್ಣಗರ್ಪಿತವ ಮಾಡಿದರು (ಮೋಹತ. ೨೭-೯). [?]

**ಕೈದಪ್ಪಣೆ** (ನಾ). ಕೈಚಪ್ಪಾಳೆ : ಶಿಶುವೆ ನೀ ಬಾರೆಂದು ಕೈದಪ್ಪಣೆಗಳಿಂ ಪೊಸಜವ್ವನೆಯರು ಕರೆಯೆ (ಜೀವಂಸಾಂ. ೭-೬). [ಕೈ$_2$ (< ಕೈಯ್$_2$) + ತಪ್ಪಣೆ (< ಚಪ್ಪಳೆ)]

**ಕೈದವ**, ಕಯ್ದವ (ನಾ). ಮೋಸ; ಕಪಟ; ವಂಚನೆ : "ಸಲೆ ಕಪಟದೊಳ್ ಕೈತ ಕೈದವಂ" (ಕಶರ. ೨೮); "ಕೈದವವೆ ಕೈತವವೆ" (ಕರ್ಣಾನಿ. ೬೦); ಕೈದವಮಿಲ್ಲದ ನಲ್ಮೆಯಂ ನಾಲಗೆಯ ತುದಿಗೆ ತಂದು ನುಡಿದಳ್ (ಪಂಪಭಾ. ೧೦-೪೫ ವ). **ಕಯ್ದವ** : ಕಯ್ದವಮಿಲ್ಲದೊಲ್ದೊಲಿಸಿದೋಪನುಮೋಪಳುಮೆಯ್ದೆ ತಬ್ಬಿ ತಳ್ಪೊಯ್ದಿರೆ (ಶಾಂತಿಪು. ೮-೮೬). [< ಸಂ. ಕೈತವ]

**ಕೈದಸ್ತು$_1$** (ನಾ). ೧. ಇಸ್ಪೀಟಾಟದಲ್ಲಿ ಎಲೆಗಳನ್ನು ಹಂಚಿದಾಗ ಒಬ್ಬೊಬ್ಬರಿಗೂ ಬಂದ ಎಲೆಗಳ ಮೊತ್ತ, —ಕಟ್ಟು. ೨. ಆಟದಲ್ಲಿ ಒಬ್ಬ ಆಟಗಾರನಿಗೆ ಬಂದ ಪಟ್ಟು. [ಕೈ$_2$ (< ಕೈಯ್$_2$) + ದಸ್ತು$_1$]

**ಕೈದಸ್ತು$_2$** (ನಾ). ಒಂದು ಬಗೆಯ ಕೈಪಾತ್ರೆ : ಕಾಲ್ತೊಳೆವ ಕೈದಸ್ತು ಕೈಗಿಂಡಿ ಕಾಳಂಜಿ ಈ ವೇಳ್ಯ ವೈಪರ್ಯ ಆಹುದಮ್ಮಾ (ಶ್ರೀಕೃಪಾ. ೨೨). [ಕೈ$_2$ (< ಕೆಯ್$_2$) + ದಸ್ತು$_2$]

**ಕೈದಳ** 'ಕೈತಳ' ನೋ.

**ಕೈದಳವಸುಱ್** (ನಾ). ಅಂಗೈಯಿಂದ ಹಿಡಿಯಲು ಸಾಧ್ಯವಾಗುವಷ್ಟು ತೆಳ್ಳಗಿರುವ ಹೊಟ್ಟೆ : ತೆಳ್ಪಸುಱ ಸುಳಿವಾಳೆವಸುಱ ಕೈದಳವಸುಱ ಕೋಮಳೆಯರು (ಚಿಬಪು. ೩೭-೮೨). [ಕೈದಳ (< ಕೈತಳ) + ಬಸುಱ್ (< ಬಸಿಱ್)]

**ಕೈದಾಗಿಸು** (ಕ್ರಿ). ೧. ಕೈಯನ್ನು ತಾಗಿಸು; ಹೊಡೆ; ಬಡಿ : ರಿಪು ಕೈದಾಗಿಸಿದನರಸನನು (ಕುವ್ಯಾಗ. ೬-೩೨). ೨. ಕೈಯಿಂದ ತೋರು, —ಪ್ರಕಟಿಸು (?) : ಕೈದಾಗಿಸಿದನನಿಬರಲಿ ಗಂಡುಗತನದ ಗಾಡಿಕೆಯ (ಕುವ್ಯಾಅ. ೧೦-೫೧). [ಕೈದಾಗು$_1$ + -ಇಸು$_3$]

**ಕೈದಾಗು$_1$** (ಕ್ರಿ). ಕೈತಗಲು, —ತಾಕು, —ಘಟ್ಟಿಸು. 'ಕೈದಾಗಿಸು' ಪರಾ. [ಕೈ$_2$ (< ಕೈಯ್$_2$) + ತಾಗು$_1$ (< ತಾಗು$_1$)]

**ಕೈದಾಗು$_2$** (ನಾ). ೧. ಕೈಯ ತಗಲುವಿಕೆ; ಹಸ್ತಸ್ಪರ್ಶ. ೨. ಕೈಕೆಲಸ; ಹಸ್ತ ಚಾತುರ್ಯ : ರಂಗವಲ್ಲಿಯಂ ಕಂಡು ವಿಸ್ಮಯಂಬಟ್ಟವೆಲ್ಲಮಕ್ಕನ ಕೈದಾಗೆಂದು ಮನದೊಳ್ ಬಗೆಯುತ್ತುಂ (ಧರ್ಮಾಮೃ. ೬-೨೩೭). [ಕೈ$_2$ (< ಕೈಯ್$_2$) + ತಾಗು$_2$(< ತಾಂಗು$_2$)]

**ಕೈದಾಟಿಸು** (ಕ್ರಿ). ಕೈಯಿಂದ ಕೈಗೆ ಸಾಗಿಸು; ತನಗೆ ಬೇಡವಾದ ವಸ್ತುವನ್ನಾಗಲಿ, ಹೊರೆಯನ್ನಾಗಲಿ ಇನ್ನೊಬ್ಬನಮೇಲೇರಿಸಿ ಪಾರಾಗು : ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಕೈದಾಟಿಸಿ ಕೀರ್ತಿಹೊಡೆದು ಬಿಡುತ್ತೀಯ (ಬೆತಂಬಾ. ೧೭೬); ಅವನು ತನ್ನಲ್ಲಿದ್ದ ಖೋಟಾ ನೋಟನ್ನು ಸಂತೆಯಲ್ಲಿ ಹೇಗೋ ಕೈದಾಟಿಸಿದ (ರೂಢಿ). [ಕೈ$_2$ (< ಕೆಯ್$_2$) + ದಾಟಿಸು]

**ಕೈದಾರ$_1$** (ನಾ). ಕೈಗೆ ಕಟ್ಟಿಕೊಳ್ಳುವ ಮಂಗಳಕರವಾದ ದಾರ : ಕಂಕಣ ಕೈದಾರ ಸ್ಥಿರ ಸೇಸೆಯನಿಕ್ಕಿ ಚನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯ ಮಾಡಿದರು (ಮಹಾದೇ. ೩೫-೭೬). [ಕೈ$_2$ (< ಕೆಯ್$_2$) + ದಾರ$_1$]

**ಕೈದಾರ$_2$** (ಗು). ಕೆಸರಿಗೆ ಸಂಬಂಧಿಸಿದ; ಗದ್ದೆಯ ಸಂಬಂಧವಾದ. [ಸಂ.]

**ಕೈದಾರಕ** (ನಾ). ಗದ್ದೆಗಳ ಸಾಲು. [ಸಂ.]

**ಕೈದಾರಿಕ** (ನಾ). = ಕೈದಾರಕ. [ಸಂ.]

**ಕೈದಾರೆ** 'ಕೈಧಾರೆ' ನೋ.

**ಕೈದಾರ್ಯ** (ನಾ). = ಕೈದಾರಕ. [ಸಂ.]

**ಕೈದಾಳ** 'ಕೈತಾಳ' ನೋ.

**ಕೈದಾಳು** (ನಾ). ಆಯುಧವನ್ನು ಧರಿಸಿದ ಆಳು; ಆಯುಧ ಧಾರಿಯಾದ ಭಟ: ಭಾಳದ ಚಂದ್ರದ ಚಿತ್ರದ ಮೊಗರಂಬದ ಕೈದಾಳಿನ ಕಾಲ್ಗಾಪಿಂ ಹಡೆಯಂ ಹಣ್ಣಿದ ಕರಿಘಟೆನೆರೆದುವು (ವೀರೇಚ. ೨-೨೮). [ಕೈದು$_1$ (< ಕೆಯ್ದು) + ಆಳು$_3$ (< ಆಳ್$_3$)]

**ಕೈದಿ, ಖೈದಿ** (ನಾ). ಬಂದಿ; ಸೆರೆಯಾಳು: ಒಡನೆಯೇ ಅವರು ಕೈದಿ ಗಳಿಬ್ಬರನ್ನು ಮುನ್ನಿನ ಸ್ಥಳದಲ್ಲಿ ಭದ್ರವಾಗಿರಿಸಿ ಬಂದು ಒಡೆಯನನ್ನು ಉಪಚರಿಸಹತ್ತಿದರು (ತುಬ್ಬಣ್ಣ. ೧೬೪). **ಖೈದಿ**: ದಿನದಿನವೂ ಹಾಗೆ ಕೆಲಸದಲ್ಲಿ ತೊಡಗಿದ ಖೈದಿಗಳನ್ನು ನೋಡಿ ಬರುವುದು ಅವರ ಪದ್ಧತಿ (ಮಗಮಾಂ. ೮೪); ಖೈದಿಗಳು ತಿಂಡಿಗಾಗಿ ಪರಿತಪಿಸುತ್ತಾರೆ (ಜೀವಾತ್ಮ. ೨೦೬). [← ಅರ. ಮರಾ. ಕೈದೀ]

**ಕೈದೀಪ** (ನಾ). ೧. (ಕೈಯಲ್ಲಿ ಹಿಡಿದುಕೊಳ್ಳಲು) ಹಿಡಿಯಿರುವ ದೀಪ; ಸಣ್ಣದೀಪ: ಮಾಸ್ತರು ಕೈದೀಪ ಹಚ್ಚಿ ಗೋಡೆಯಲ್ಲಿಟ್ಟರು (ಕಾವೇರಿ. ೨೦೪). ೨. ಮಾರ್ಗವನ್ನು ತೋರಿಸುವ ದೀಪ; ದಾರಿ ದೀಪ: ಅವನ ನಡೆನುಡಿ ನನಗೆ ಕತ್ತಲೆಯಲಾಯಿತು ಕೈದೀಪವು (ಸಖೀಗೀ. ೪೩-೮೮೨). [ಕೈ$_2$ (< ಕೆಯ್$_2$) + ದೀಪ]

**ಕೈದೀವಿಗೆ** 'ಕೆಯ್ದೀವಿಗೆ' ನೋ.

**ಕೈದು$_1$** 'ಕೆಯ್ದು' ನೋ.

**ಕೈದು$_2$, ಖೈದು** (ನಾ). ೧. ಸೆರೆಮನೆ; ಬಂದೀಖಾನೆ; ಕಾರಾಗೃಹ: ಈ ಚೇಲೇರನ್ನು ಕೈದಿನಲ್ಲಿ ಜೀವಸಹಿತ ಮಡಗಿದರೆ ಟೀಪುಸುಲ್ತಾನರು ಫಿರಿಯಾದಿ ಮಾಡಿದಾಗ್ಗೆ ಶಾಯಿದಿ ಕೊಡಬಹುದು (ರಾಜೇಂದ್ರ. ೫೯); ಮಂತ್ರಿಯನ್ನು ಕರೆಸಿ ಕೈದಿನಲ್ಲಿಟ್ಟರೆ ರಾಯನನ್ನು ಜಯಿಸಬಹುದು (ಕಥಾಮಂ. IV, ೫೬). ೨. ಕೈಸೆರೆ; ದಸ್ತಗಿರಿ; ಬಂಧನ: ಕೈದಿನ ಮೂಲಕವಾಗಿ ಶಿಕ್ಷೆಯಾಗತಕ್ಕ ತಕ್ಸೀರು ಮಾಡುವ ಬಗ್ಗೆ ರಾತ್ರಿಯಲ್ಲಿ ಹೊಂಚು ಹಾಕಿ ಮನೆಗೆ ಅತಿಕ್ರಮ ಪ್ರವೇಶ ಮಾಡೋಣ(ಗ್ರಾಮಾಕ. ೪೯). **ಖೈದು**: ೨. ಒಬ್ಬ ಮನುಷ್ಯನನ್ನು ಖೈದಿಗೆ ಗುರಿಮಾಡುವುದಕ್ಕೆ ಅವನು ಕೀಳುಜಾತಿಯವನಾಗಿರಬೇಕು (ಗ್ರಾಮಾಕ. ೬೧).

ಕೈದುಮಾಡು = ೧. ಸೆರೆಹಿಡಿ; ಬಂಧಿಸು: ಕೋಟೆವಳಕ್ಕೆ ಕರೆದು ಕೊಂಡು ಹೋಗಿ ಕೈದುಮಾಡಿ ಇಟ್ಟರು (ಹೈದರ. ೧೦೪). ೨. ನಿಲ್ಲಿಸು: ಕೆಲಸ ಕೈದುಮಾಡು (ರೂಢಿ). ೩. ಮುಗಿಸು: ಲೆಕ್ಕ ಕೈದುಮಾಡು (ರೂಢಿ). [← ಅರ. ಕೈದ್]

**ಕೈದುಕಾರ** 'ಕೆಯ್ದುಕಾಱ' ನೋ.

**ಕೈದುಕಾಱ** 'ಕೆಯ್ದುಕಾಱ' ನೋ.

**ಕೈದುಕಾಱತನ, ಕೈದುಗಾಱತನ** (ನಾ). ಆಯುಧ ಪ್ರಯೋಗ ದಲ್ಲಿರುವ ಜಾಣ್ಮೆ; ಶಸ್ತ್ರಾಸ್ತ್ರಕೌಶಲ್ಯ: ಕಾಮನ ಕೈದುಕಾಱ ತನಕ್ಕೆ ಕೋಡದೆ ಕಂದದಿಹರಾರು (ಕುವ್ಯಾವಿ. ಓರಿಇ. ೬-೩೯). **ಕೈದುಗಾಱತನ**: ಕೈದುಗಾಱತನದ ಬಲ್ಮೆಯೊಳ್ ಮಾಱುಕೊಡ್ಡಿ ಮೊನೆಗಾಂತ ದಮನನನಿದಿರ್ಚಿ (ರಾಮಾಶ್ವ. ೯೦-೩೦). [ಕೈದುಕಾಱ (< ಕೆಯ್ದುಕಾಱ) + -ತನ]

**ಕೈದುಕೊಳ್** 'ಕೆಯ್ದುಗೊಳ್' ನೋ.

**ಕೈದುಖಾನೆ** (ನಾ). ಕಾರಾಗೃಹ; ಸೆರೆಮನೆ. [← ಅರ. ಹಿಂ. ಕೈದ್‌ಖಾನಾ]

**ಕೈದುಗಾಱ** 'ಕೆಯ್ದುಕಾಱ' ನೋ.

**ಕೈದುಗಾಱತನ** 'ಕೈದುಕಾಱತನ' ನೋ.

**ಕೈದುಗುತ್ತು** (ಕ್ರಿ). ಆಯುಧವನ್ನು ಚುಚ್ಚು, —ತಿವಿ: ನೆಣನ ಬಣಬೆಗಳೊಳ್ ಕೈದುಗುತ್ತಿ ನೋಡಿಯುಂ (ಗದಾಯು. ೬-೨೮೮). [ಕೈದು$_1$ (< ಕೆಯ್ದು) + ಕುತ್ತು$_1$]

**ಕೈದುಗೆಯ್** 'ಕೆಯ್ದುಗೆಯ್' ನೋ.

**ಕೈದುಗೆಯ್ಮೆ** (ನಾ). ಆಯುಧವನ್ನು ಪ್ರಯೋಗಿಸುವುದರಲ್ಲಿರುವ ಜಾಣ್ಮೆ, —ಕೌಶಲ: ಬಿಲ್ಕತ್ತಿ ಮೊದಲಾದ ಪಲವುಂ ಕೈದುಗೆಯ್ಮೆ ಯೊಳಂ (ಚಿಕವಂ. ೧೬೩-೧೬). [ಕೈದು$_1$ (< ಕೆಯ್ದು) + ಕೆಯ್ಮೆ]

**ಕೈದುಗೈ** 'ಕೆಯ್ದುಗೆಯ್' ನೋ.

**ಕೈದುಗೊಳ್** 'ಕೆಯ್ದುಗೊಳ್' ನೋ.

**ಕೈದುಡುಂಕು** 'ಕೆಯ್ದುಡುಕು' ನೋ.

**ಕೈದುಡುಕು$_1$** 'ಕೆಯ್ದುಡುಕು' ನೋ.

**ಕೈದುಡುಕು$_2$** (ನಾ). ೧. ಕೈಯಿಂದ ಸೆಳೆದುಕೊಳ್ಳುವುದು; ಬಲಾತ್ಕಾರವಾಗಿ ಕಿತ್ತುಕೊಳ್ಳುವುದು; ಅಪಹರಿಸುವುದು: ಒಳಗೆ ಸುಧೆಯನೇ ಮಡಗಿ ಪೆರರಿಂದೆ ಕೈದುಡುಕಾಗದಂದದಿಂದೊಡರಿಸುತೆ (ಸಿದ್ದೇಪು. ೨-೧೧); ಕಟ್ಟುಕೈವಾಲೆ ಸಮಯಂ ಕಟ್ಟನ ವೆಱಿವಣಿಗೆ ಪೊಮ್ಮು ಕೈದುಡುಕುಗಳಂ ಪುಟ್ಟಿಸಿ ಪೊಣರ್ವ ಸೆಟ್ಟಿಗಳಿಟ್ಟುಳಿಯಂ ನಿಲಿಸಿ ಸುಂಕಮಂ ಬಾಳಿಸಿದಂ (ಕೆಳನೃ. ೬-೩೧). ೨. ಹಿಂದು ಮುಂದು ವಿಚಾರಿಸದೆ ಕೈಮಾಡುವಿಕೆ, —ಜಗಳಕ್ಕೆ ತೊಡಗುವಿಕೆ: ಕೈದುಡುಕು ಲೇಸಲ್ಲ ಖಳಕುಲಸೂದನನ ಕೂಡೆ (ತೊರರಾ. ೬-೧೨-೧೦); ನೀವು ಅವರ ಮೇಲೆ ಕೈದುಡುಕು ಮಾಡ ಕೆಲಸವಿಲ್ಲಾ (ರಾಜೇಂದ್ರ. ೪೮). [ಕೈ$_2$ (< ಕೆಯ್$_2$) + ತುಡುಕು$_2$]

**ಕೈದುದಿ** (ನಾ). ಕೈಯ ತುದಿ; ಹಸ್ತದ ಅಗ್ರಭಾಗ; ಹಸ್ತಾಗ್ರ: ಕಾಯ್ದುತ್ತಬ್ಬೆಯರ ಕೈದುದಿಗಳನು ಹಿಡಿದೆಳೆದು (ತೊರರಾ. ೫-೮-೬೯). [ಕೈ$_2$ (< ಕೆಯ್$_2$) + ತುದಿ]

**ಕೈದುವಲಿ** (ನಾ). ಆಯುಧಕ್ಕೆ ಬಲಿ, —ಆಹುತಿ: ಗಂಡನಳಿದನ್ ಗಂಡುಗಲಿ ರಾವಣನ ಕೈಯ ಕೈದುವಲಿಯಾಗಿ (ಶ್ರೀರಾಮಾ. ೨೦೬-೩೪೫). [ಕೈದು$_1$ (< ಕೆಯ್ದು) + ಬಲಿ$_5$]

**ಕೈದುವಿಕ್ಕು** (ಕ್ರಿ). ಆಯುಧವನ್ನು ಕೆಳಗೆಹಾಕು; ಸೋಲನ್ನು ಒಪ್ಪಿಕೊಳ್ಳು: ಕಾಮನ ದಳದ ಚೂಣಿಯ ಸೊಗಸು ಹೊಯ್ದರೆ ಕೈದುವಿಕ್ಕಿತು ವಿಗಡ ಮುನಿಜನವು (ಕುವ್ಯಾಆ. ೫-೧೦). [ಕೈದು$_1$ (< ಕೆಯ್ದು) + ಇಕ್ಕು]

**ಕೈದುವಿಡಿ** 'ಕೆಯ್ದುವಿಡಿ' ನೋ.

**ಕೈದುವೊಱು** 'ಕೆಯ್ದುವೊಱು' ನೋ.

**ಕೈದೆಗೆ** 'ಕೆಯ್ದೆಗೆ' ನೋ.

**ಕೈದೆತ್ತು** (ಕ್ರಿ). ಆಯುಧವನ್ನು ಮೇಲಕ್ಕೆತ್ತು: ನರಸೇಂದ್ರ ಬಲವಿಂದ ಕೈದೆತ್ತಿ ಕೂಶ್ಮಾಂಡಫಲವನು ಸಲೆ ಖಂಡಿಸಿದನರ್ತಿಯಲಿ (ಕಂನವಿ. ೨೨-೬೯). [ಕೈದು$_1$ (< ಕೆಯ್ದು) + ಎತ್ತು$_1$]

**ಕೈದೆರವು** 'ಕೈದೆರಹು' ನೋ.

**ಕೈದೆರಹು, ಕೈದೆರವು** (ನಾ). ಕೈಗೆ ಬಿಡುವು, —ಅವಕಾಶ; ವ್ಯವಧಾನ; ತೆರಪು: ಬಲ್ಲವಿಕೆಯ ಮಾತು ಬೇಡವೆಂದೈನೂಱು ಬಿಲ್ಲ ನಾರಿಯ ಭೋರ್ಗರೆಸೆ ತಲ್ಲಣಿಸಿದುವು ಶತ್ರುಗಳೆದೆ ಕೈದೆರಹಿಲ್ಲದೆ ಕಱಿದ ಕೊರ್ಗಣೆಯ (ಮೋಹತ. ೪೦-೩೨). **ಕೈದೆರವು**: ಸೋಲವೆ ಸುಭಟರ್ಗೆ ಬಿಲ್ವಿದೆ ಪರಿದ ತತ್ಕಾಲದೆ ಕೈದೆರವಿಂಗೆ ಶೂಲವೊಂದಿದೆ ನೋಡು (ಮೋಹತ. ೩೮-೧೯). [ಕೈ$_2$ (< ಕೆಯ್$_2$) + ತೆರಹು$_2$ (< ತೆಱಪು)]

**ಕೈದೊಡಿಗೆ** (ನಾ). ಕೈಯ ಆಭರಣ: (ಕ).
[ಕೈ$_2$ (< ಕೆಯ್$_2$) + ತೊಡಿಗೆ (< ತೊಡುಗೆ)]

**ಕೈದೊಡಿಸು** (ಕ್ರಿ). ಕೈಗೆ (ಬಳೆ ಮೊದಲಾದ ಆಭರಣಗಳನ್ನು) ತೊಡಿಸು: ಎಳೆವೆರಲ್ಗಳ ಚಿಟುಕೊತ್ತಿ ಕೈದೊಡಿಸುವ ಬಳೆಗಾಱರಿರ್ದರಿ ಕ್ಕೆಲದಿ (ಮೋಹತ. ೩-೨೩). [ಕೈ$_2$ (< ಕೆಯ್$_2$) + ತೊಡಿಸು]

**ಕೈದೊಳಸು**$_1$ (ಕ್ರಿ). ೧. ಕೈಯಾಡಿಸು; ಕೈಯಿಂದ ಕಲಕು, —ತೊಳಸು: ಸುಳಿಯಲನಿಲಂಗಿಲ್ಲ ಪಥ ಕೈದೊಳಸ [ಪಾಠಾಂ. ಹೊಳಕ] ಬಾರದು ರವಿಗೆ (ಕುವ್ಯಾವಿ. ೪–೩೨). ೨. ಬಲಾತ್ಕಾರದಿಂದ ಸೆಳೆ; ಆಕ್ರಮಿಸು: ಉಱುಬಿ ಘಟ್ಟಾವಳಿಯ ಪುರಗಳಲಱಸಿ ಪಡುವಣ ಕಡಲ ನಡುವಣ ಕುಱುವಗಳ ಕೈದೊಳಸಿ ತಿರುಗಿತು ಸೇನೆ ಕೊಂಕಣಕೆ (ತೊರರಾ. ೪–೧೦–೩).

[ಕೈ$_2$ (< ಕೆಯ್$_2$) + ತೊಳಸು$_1$]

**ಕೈದೊಳಸು**$_2$ (ನಾ). ೧. ಕೈಯಿಂದ ಮಾಡುವ ಕಲಹ; ಮುಷ್ಟಿಯುದ್ಧ: (ಕ). ೨. ತೊಳಸುವಿಕೆ; ಕದಡುವಿಕೆ: ಬೀದಿಗಲಹದ ಕದಡು ಬೀಡಿನಲ್ಲೆಡೆ ಹಬ್ಬಿತು ಬೀಡುಗಲಹದ ಕೈದೊಳಸುಕೊಂಡೆಸಗಿ ನಟಸಿತು ನಾಡುನಾಡಿನಲಿ (ಕುವ್ಯಾಅ. ೮–೨). ೩. ಕೈವಶ; ಅಧೀನ: ಉಱುಬಿತಪದೆಸೆ ರಾಜ್ಯಲಕ್ಷ್ಮಿಯ ತುಱುಬು ಕೈದೊಳಸಾಯ್ತು ಹಗೆಗೆ (ಕುವ್ಯಾಸ. ೧೫–೨೮). ೪. ಕೈಯಿಂದ ಕಲಕುವಿಕೆ; ಬಲಾತ್ಕಾರದಿಂದ ಸೆಳೆಯುವಿಕೆ: ವಾಯುಜನ ಕೈದೊಳಸಿನಲಿ ಕುರುರಾಜ್ಯ ಶ್ರೀಯ ಮುಂದಲೆ ಹೋಯಿತು (ಕುವ್ಯಾಕ. ೧೨–೨೮).

[ಕೈ$_2$ (< ಕೆಯ್$_2$) + ತೊಳಸು$_2$]

**ಕೈದೊಳಸುಕಾಱ** (ನಾ). ಕೈಯಿಂದ ಹೋರಾಡುವವನು; ಮುಷ್ಟಿಯುದ್ಧ ಮಾಡುವವನು: ಬಳಿಕ ಬೊಬ್ಬಿರಿದಬ್ಬರಿಸಿ ಕೈದೊಳಸುಕಾಱರು ಹೊಕ್ಕು ಹೊಯ್ದರು (ತೊರರಾ. ೬–೩೭–೬); ಬಲು ಪಾತಿಯಲಿ ಕೈದೊಳಸುಕಾಱರು ಹೊಕ್ಕರುರವಣಿಸಿ (ತೊರರಾ. ೬–೨೮–೨೩). [ಕೈದೊಳಸು$_2$ + –ಕಾಱ]

**ಕೈದೊಳಸುಗೊಳ್** (ಕ್ರಿ). ೧. ಮುಷ್ಟಿಯುದ್ಧವನ್ನು ಆರಂಭಿಸು; ಮುಷ್ಟಿಕಾಳಗಮಾಡು. ೨. ಅಧೀನವಾಗು; ಕೈವಶವಾಗು: ಅಳುಪ ಕಾಣೆವು ಚಿತ್ತವೃತ್ತಿಯ ನೆಲೆ ನಿಜೇಶನ ಮೇಲೆ ಘನ ಕೈದೊಳಸುಗೊ [ಪಾಠಾಂ. ಕೊ]ಳ್ಳದು ನುಡಿಸಿ ನೋಡುವುದೆಂದಳಾ ಸರಮೆ (ತೊರರಾ. ೫–೩–೪೫). [ಕೈದೊಳಸು$_2$ + ಕೊಳ್$_1$]

**ಕೈದೊಳೆ** 'ಕೆಯ್ದೊಳೆ' ನೋ.

**ಕೈದೊಱೆ** 'ಕೆಯ್ದೊಱೆ' ನೋ.

**ಕೈದೋಟ**, ಕೈತೋಟ (ನಾ). (ಮನೆಯ ಆವರಣದಲ್ಲಿ ಇರುವ) ತೋಟ; ಸಣ್ಣತೋಟ: ಮನೆ ಚೊಕ್ಕಟವಾಗಿದೆ. ಮುಂದೊಂದು ಚೆಂದವಾದ ಕೈದೋಟ (ಹುಚ್ಚುಹು. ೬೮). **ಕೈತೋಟ**: ನಾನೇನು ನಿಮ್ಮ ಕೈತೋಟದಲ್ಲಿ ಬೆಳೆದ ಬದನೆಕಾಯಿಯೇ (ಇಪ್ಪಕ. ೨೧೫); ಅಲ್ಲಿ ಇಲ್ಲಿ ಕೆಲವು ಭಾಗಗಳಲ್ಲಿ ಹಚ್ಚಗೆ ಕೈತೋಟ ಮಾಡುತ್ತಿರಬಹುದು (ಆಕಾಶ. ೩೦).

[ಕೈ$_2$ (< ಕೆಯ್$_2$) + ತೋಟ (< ತೋಂಟ)]

**ಕೈದೋಟಿ** (ನಾ). (ಹೂ, ಕಾಯಿ ಮೊದಲಾದುವನ್ನು ಕೊಯ್ಯಲು ಉಪಯೋಗಿಸುವ) ದೋಟಿ; ಸಣ್ಣದೋಟಿ: ಇಂದ್ರಿಯಾತೀತವನು ಪಿಡಿಯಲಿಂದ್ರಿಯಕಳವೆ ಇಂದ್ರಧನು ಕೈದೋಟಿ ಕೊಂಕಿಗೆಟಕುವುದೇ (ಮಂಕುಕ. ೬೯೩). [ಕೈ$_2$ (< ಕೆಯ್$_2$) + ದೋಟಿ]

**ಕೈದೋರ್ಪು** (ನಾ). ಕೈಯ ಬಲವನ್ನು ತೋರಿಸುವುದು; ಬಾಹುಶಕ್ತಿಯ ಪ್ರದರ್ಶನ: ತೋಱಿಸು ನಿನ್ನ ಕಡುಪನೆಲೆ ವಾಮನ ವಿರೂಪಾಕ್ಷ ಕೈದೋರ್ಪು ಲೋಮ ಬಲ್ಪೇನಾದುದು (ಚೆಬವು. ೨೪–೧೪).

[ಕೈ$_2$ (< ಕೆಯ್$_2$) + ತೋರ್ಪು]

**ಕೈದೋಱಿಕೆ** (ನಾ). ೧. ಕೈಯಿಂದ ತೋರಿಸುವುದು; ಪ್ರದರ್ಶಿಸುವುದು: ತುರಗದ ಘಟ್ಟು ಬಳಿಸಲಿಸೆ ಏಱುದುವು ಪಡಿಮುಖದೊಳುಬ್ಬಿದ ಕಾಱುಗಿಡಿಗಳ ಬಂಡೆಯದ ಕೈದೋಱಿಕೆಯಲಿ (ತೊರರಾ. ೬–೩೦–೧೩). ೨. ಕೈಯಿಂದ ದಾರಿತೋರಿಸುವುದು; ದಿಗ್ದರ್ಶನ: ವಸ್ತುವಿನ ಸಾಕ್ಷಾತ್ಕಾರವಮಾದೊಡೆ ಶಾಸ್ತ್ರೋಪದೇಶದಿಂದವು ಕೈದೋಱಿಕೆಯಿಂದವು ಶ್ರೀಗುರುಮುಖದಿಂದವು ಅಪ್ಪುದಾಗಿ (ಪರಮಾ. ೧೮).

[ಕೈ$_2$ (< ಕೆಯ್$_2$) + ತೋಱಿಕೆ]

**ಕೈದೋಱಿಸು**, ಕೈತೋರಿಸು (ಕ್ರಿ). ೧. ಕೈಯ ಶಕ್ತಿಯನ್ನು ತೋರಿಸು, —ಪ್ರದರ್ಶಿಸು: ವಿವಿಧಾಯುಧದ ಕಾಲಾಳೊದಗಿ ಕೈದೋಱಿಸಿದರನಿಬರ ಸದೆದನೊಬ್ಬನೆ ಕರ್ಣ (ಕುವ್ಯಾಕ. ೧೧–೮); ಆವ ಕೈದೋಱಿಸಲ್ಕಹೆಗಳಾಗಸದೊಳು ಸೇತುಗಟ್ಟಿದವೊಲಿಟ್ಟಣಿಸುತಿರಲ್ (ಜೈಮಿಭಾ. ೪–೩೮); ದೂಷಕ ಬಲರಾಮ ಕೈದೋಱಿಸೆಂದು ವಿಘ್ನೇಶನು ಕರೆದಾಱಿದನು (ಮೋಹತ. ೩೮–೪೪). **ಕೈತೋರಿಸು**: ೧. ಕೈತೋರಿಸದಿದ್ದರೆ ನಾನು ಕಾಜಿಯೇ ಅಲ್ಲ (ಕೊತಕಾ. ೫೩). ೨. (ಹಸ್ತಸಾಮುದ್ರಿಕನಿಗೆ) ಕೈಯನ್ನು ತೋರಿಸು: ಕೈ ತೋರಿಸಿ ಅವಲಕ್ಷಣ ಎನಿಸಿಕೊಂಡ (ರೂಢಿ).

[ಕೈದೋಱು + –ಇಸು$_3$]

**ಕೈದೋಱು**, ಕೈತೋರು (ಕ್ರಿ). ೧. ಕೈಯ ಶಕ್ತಿಯನ್ನು ತೋರಿಸು; ಸಾಮರ್ಥ್ಯವನ್ನು ಪ್ರದರ್ಶಿಸು: ಮಾಱಾನೆಯ ಕುಂಬತಳಕ ಪಾಯಲವಿಂ ಕೈದೋಱಿ (ಕಬ್ಬಿಕಾ. ೨೮೩); ಕಡುಪುಳ್ಳರ್ ಬಂದು ಕೈದೋಱದೆ ಮುಱಿದಿರೆವೆಂದಿದೋರ್ಗಡಂ (ದಕಕು. ೭–೭೦); ಫಡ ಕೇಣವೇಕಿನ್ನೆನುತ ಕೈದೋಱಿತು ಭಟಸ್ತೋಮ (ಕುವ್ಯಾಕ. ೨೪–೪೨); ಪಟು ಭಟರ್ ಕೈದೋಱುತಿರ್ದರ್ (ಜೈಮಿಭಾ. ೮–೩೩). **ಕೈತೋರು**: ೧. ಮೊದಲು ನೀರುಕುಡಿದು ಬಳಿಕ ತಮ್ಮಂದಿರನ್ನು ಕೊಂದವನಿಗೆ ಕೈತೋರುವೆನು (ಯಕ್ಷಪ್ರ. ೨). ೨. ಕೈಯನ್ನು ತೋರು: ಬೇಟಿಯಲ್ಲಿ ಹುಲಿಯಿದ್ದ ಕಡೆಗೆ ಕೈತೋರಬಾರದು (ರೂಢಿ).

[ಕೈ$_2$ (< ಕೆಯ್$_2$) + ತೋಱು$_1$ (< ತೋಱ್)]

**ಕೈಧಾರೆ**, ಕಯಿಧಾರೆ, ಕೈದಾರೆ (ನಾ). ೧. ಕೈಯಮೇಲೆ ಎರೆಯುವ ಧಾರೆ: ಬೆಳಗುಗಣನಿಸಿನ ಹೃದ್ಯಸಂವೇದನೆಯು ಸುತ್ತು ರಸಬಂದು ಒಂದರೊಳಗೊಂದು ಕೈಧಾರೆ, ಕಂಕಣಸಾಲು, ನಾಮೇಲು – ನೀಮೇಲು (ಅರಳು. ೨೫೭). ೨. ಧಾರಾಪೂರ್ವಕವಾಗಿ ಮಾಡುವ ಕನ್ಯಾದಾನ; ಶಾಸ್ತ್ರೋಕ್ತವಾದ ಮದುವೆ: ಹಾಲಾಗೊಳದಲ್ಲಿ ಕೈಧಾರೆ ಆದಾದೆಂದು ಸುತ್ತೇಳು ಪರ್ಸೇ ಮೆರೆದಾವೋ (ಹುಟ್ಟಹ. ೯೭). **ಕಯಿಧಾರೆ**: ೧. ಇನಿತುಂ ಧರ್ಮ್ಮಮುಮಂ ನೀವೆ ನೋಡಿ ಪಾಲಿಸುವುದೆಂದು ನಗರಕೆಲ್ಲಂ ಮನದೊ[ಲ]ವಿಂ ಕಯಿಧಾರೆಯನುನಯದಿಂ ಕೊಟ್ಟು ನಿಲಿಸಿದಂ ಚಾವುಣ್ಣ (ಹೈಆಸಿ. ೪೭–೧೪೩; 1093). ೩. ವಿವಾಹದಲ್ಲಿ ವಧೂವರರ ಕೈಗಳ ಮೇಲೆ ಎರೆಯುವ ನೀರಿನ ಧಾರೆ: ಕಯಿಧಾರೆಯ ಮದುವೆಗೆ ಮ ೧೦ (ಕೊಲ್ಹಾಶಾ. ೨೧–೨೧; 1378). ೪. ದಾನಕೊಡುವಾಗ ಮಂತ್ರೋಕ್ತವಾಗಿ ಎರೆಯುವ ಧಾರೆ. **ಕೈದಾರೆ**: ೧. ಭರದೆ ಸುರಿತಪ್ಪ ಕೈದಾರೆಗಳ ನಿಕರದಿಂ (ಜ್ಞಾನಸಿಂ. ೧–೧೩). ೨. ಆಂ ಕೈದಾರೆಯ ಪೆಂಡಿತಿಯಿರಲ್ ಓಪಂ ಪರನಾರಿಯೊಳಾಗಳುಂ ಮೆರೆಯುತಿರ್ಪುದೆನೆ ತಾನಿರ್ದು ಪಾಡೇ (ಅದ್ಭುತ. ೩೦–೨೫); ಸ್ವಾಮಿ ಮಲ್ಲಯ್ಯಗೂ ಬಾಲೆ ಗಿರಿಜಮ್ಮನಿಗೂ ಹಾಲಾಕೊಳದಲ್ಲಿ ಕೈದಾರೆ (ಹಳ್ಳಿಬಾ. ೨೪). ೩. ಕರಣಂಗಳ ಸುವಾಸಿನಿಯರಾಗೆ ಸಕಳೇಂದ್ರಿಯಂಗಳಾರತಿಯನೆತ್ತೆ ಭಕ್ತಿರಸಂ ಕೈದಾರೆಯಾಗೆ (ಬಸರ. ೪–೧೧೧).

**ಕೈಧಾರೆಎಱೆ** = ದಾನಕೊಡುವಾಗ ಮಂತ್ರೋಕ್ತವಾಗಿ ಕೈಯಿಂದ ನೀರುಹಾಕು: ಕಾಲಂತೊಳೆದು ಕೈಧಾರೆ ಎಱೆದುಕೊಟ್ಟು (ಎಕ. VIII (S), ಸೊರಬ. ೫೮೬–೬೯; 1301).

[ಕೈ$_2$ (< ಕೆಯ್$_2$) + ಧಾರೆ]

**ಕೈನಂಬುಗೆ** (ನಾ). ಕೈಮೇಲೆ ಕೈ ಇಟ್ಟು ಭರವಸೆ ಕೊಡುವುದು; ಭಾಷೆ: ವೀರಕೆ ಬೆಗಡು ಹುದುವನೆಯಾಯ್ತು ಕೈನಂಬುಗೆಗೆ ಮರಳಿದ ರೊಬ್ಬರು ರಾಯರಾವುತರು (ಕುವ್ಯಾಗ. ೨–೧೩).

[ಕೈ$_2$ (< ಕೆಯ್$_2$) + ನಂಬುಗೆ]

**ಕೈನಡುಗು** (ಕ್ರಿ). ೧. ಕೈ ಅಲ್ಲಾಡು, —ಅದುರು, —ಕಂಪಿಸು. ೨. ಕೈಯನ್ನು ಅಲ್ಲಾಡಿಸು, —ಅದುರಿಸು: ಮುದುಕನಂತೆ ಕೈನಡುಗುವರ್ (ಧರ್ಮಾಮೃ. ೩–೮೧ ಅಡಿಟ). [ಕೈ$_2$ (< ಕೆಯ್$_2$) + ನಡುಗು$_1$]

**ಕೈನಡೆ** (ಕ್ರಿ). ಕೈಸಾಗು; ಶಕ್ತಿಯಿರು; ಸಾಮರ್ಥ್ಯವನ್ನು ಹೊಂದಿರು: ಅಲ್ಲಿ ನನಗೆ ಇನ್ನು ಕೈನಡೆಯುವುದಿಲ್ಲ (ರೂಢಿ).

[ಕೈ$_2$ (< ಕೆಯ್$_2$) + ನಡೆ$_1$]

**ಕೈನಾಣ್ಯ** (ನಾ). ನಗದುಹಣ; ರೋಖುಹಣ: ಸೆಟ್ಟಿಯರು ಸಕಲ ದೇಶದೊಳಿರ್ಪ ಫಲ ಸರಕ ನೆಟ್ಟನೇ ತಂದು ಪೊಟ್ಟಲನೊಟ್ಟಿ ಕೈನಾಣ್ಯದಿಂದ ವ್ಯವಹರಿಪರಬಲೇ (ನವಮೋ. ೨–೪೮).

[ಕೈ$_2$ (< ಕೆಯ್$_2$) + ನಾಣ್ಯ]

**ಕೈನಿಲುಕು** 'ಕೈನಿಳ್ಕು' ನೋ.

**ಕೈನಿಲ್ಲು** (ಕ್ರಿ). ಕೈಕಟ್ಟಿಹೋಗು; ಕೈಸಾಗದಿರು: ಏನೂ ಕೆಲಸವಿಲ್ಲದೆ ಕೈನಿಂತ ಜನರು (ನಿರಾಭ. ೧೬೮).

[ಕೈ$_2$ (< ಕೆಯ್$_2$) + ನಿಲ್ಲು (< ನಿಲ್)]

**ಕೈನಿಳ್ಕು, ಕೈನಿಲುಕು** (ಕ್ರಿ). ೧. ಕೈಗೆಸಿಕ್ಕು, —ಎಟಕು: ತುದಿಮರ ನೋಳಹ ಪಣ್ಣಿಗೆ . . . ಕೈನಿಳ್ಕಿ (ಶ್ರೀರಾಮಾ. ೧–೪). **ಕೈನಿಲುಕು**: ೧. ಧೂರ್ತ ಅಧಿಕಾರಿಯನ್ನು ತೃಪ್ತಿಪಡಿಸುವುದೆಂದರೆ ಅದು ಕೈನಿಲುಕದ ಗಂಟು (ರೂಢಿ). ೨. ಕೈಯನ್ನು ಮುಂದಕ್ಕೆ ಚಾಚು; ಕೈಯನ್ನು ನೀಡು: ರಾವುತರು ಕೈನಿಲುಕಿದರು ಮುತ್ತಿದರು ಪರಿಮಂಡಳಿಸಿ ಬೊಬ್ಬಿಱಿದಾರಿದರು ಸಿಕ್ಕಿದರು ಹಗೆಯೆನುತ (ಕುವ್ಯಾದ್ರೋ. ೧೮–೪೨).

[ಕೈ$_2$ (< ಕೆಯ್$_2$) + ನಿಳ್ಕು]

**ಕೈನಿಱಿ** 'ಕೆಯ್ನಿಱಿ' ನೋ.

**ಕೈನೀಡು** 'ಕೆಯ್ನೀಡು' ನೋ.

**ಕೈನೀರ್** 'ಕೆಯ್ನೀರ್' ನೋ.

**ಕೈನೀರೆಱೆ** 'ಕೆಯ್ನೀರೆಱೆ' ನೋ.

**ಕೈನುಣ್ಚು** (ಕ್ರಿ). ಕೈಯಿಂದ ತಪ್ಪಿಸಿಕೊಳ್ಳು, —ಪಾರಾಗು: ಆ ಪಾಂಡವರ್ ಪ್ರಾಣಮೆಂದಿರ್ದನೇ ಅವನ ಗತಿ ಏನಾಯ್ತು? ಕೈನುಣ್ಚಿಕೊಂಡನೋ (ಅಶ್ವತ್ಥಾ. ೫–೮೮). [ಕೈ$_2$ (< ಕೆಯ್$_2$) + ನುಣ್ಚು]

**ಕೈನೆ, ಕಯ್ನೆ, ಗೈನೆ** (ನಾ). ೧. ದಾಸಿ; ಪರಿಚಾರಿಕೆ: ನಗುವ ಕೈನೆ [ಪಾಠಾಂ. ಕನ್ನೆ]ಯ ತುಱುಬ ಕೊಯ್ಯುವೆನೆನುತ ಕಲಿ ಶಿಶುಪಾಲ ನೈತಂದ (ಕುವ್ಯಾಆ. ೧೪–೧೩); ಬಸಿವ ನೆತ್ತರ ಮುಸುಡತೋಱದೆ ಕೈನೆ ಹೋಗೆನಲು (ಕೌಶಿರಾ. ೫–೧೯). ೨. ಕ್ಷುದ್ರ ಹೆಂಗಸು; ದುಷ್ಟೆ: ನೂಳದದೊಂದು ದಂದುಗಕ್ಕೆ ಕೈಗಮರ್ದ ಚಿಂತಾಮಣಿಯನೊತ್ತೆಯಿಟ್ಟು ಬಾಟ್ವ ಕೈನೆಯ ಕೈಮೆಗೊಳಗಾದೆನಕ್ಕಟ (ರಾ ಮಾ ಶ್ವ. ೬೮–೬); ಅವಕ್ಕೆ ಕೇಡನ್ನು ಬಯಸುವ ಕೈನೆಯಾದೇವೆ ನಾವು (ಸವಕಿ. ೨೩೯). **ಕಯ್ನೆ**: ೨. ನೀನು ನನ್ನಯ ಕುಮಾರನಾಗಿ ಜನ್ಮಿಸಬಾರದಾಗಿದ್ದಿತೆ, ಕಂಡೀರವ? ನಾನು ಅಂತಹ ಕಯ್ನೆಯೆ (ಬಟ್ಟಆ. ೧೨೦–೪). **ಗೈನೆ**: ೨. ಹಾಳು ಮಾಡುವ ಗರತಿಯಲ್ಲ ಬೀಳುಮಾಡುವ ಗೈನೆಯಲ್ಲ (ಗೋಹಾಡು. ೬೦). [← ತುಳು. ಕೈನೆ]

**ಕೈನೆಗಪು, ಕೈನೆಗಹು$_1$** (ಕ್ರಿ). ಕೈಯನ್ನು ಎತ್ತು, —ಮೇಲಕ್ಕೆ ಹಿಡಿ: ವನಜಮುಖಿ ಕಡುಮುಳಿದು ಕೈನೆಗಪನುವರದೊಳಿಳೆ ನಾರಿಯರ ಕೈಯಿಂದೆನುತೆ ಶಾಪವನಿತ್ತು ಹಾಯ್ದಳು (ಅಂಬಿಕಾ. ೮–೩೨). **ಕೈನೆಗಹು$_1$**: ಅಂಜದಿರಿ ಹೋಹೋ ಎನುತ ಕೈನೆಗಹಿ (ಕುವ್ಯಾಸ. ೨–೪೬); ಕಂಡರು ಮಹಾ ಸಭೆಯೊಳಗೆ ಹೊಕ್ಕರು ನಿಂದು ಕೈನೆಗಹಿ (ನಳಚ. ೮–೧೪). [ಕೈ$_2$ (< ಕೆಯ್$_2$) + ನೆಗಪು$_1$]

**ಕೈನೆಗಹು$_1$** 'ಕೈನೆಗಪು' ನೋ.

**ಕೈನೆಗಹು$_2$** (ನಾ). ೧. ಕೈಯನ್ನು ಮೇಲಕ್ಕೆ ಎತ್ತುವುದು: ಕೈನೆಗಹುಗಳ ರಕ್ಕಸರನೀಕ್ಷಿಸಿ ನುಡಿದನಸುರೇಂದ್ರ (ತೊರರಾ. ೬–೧೩–೬). ೨. ಕೈಯಿಂದ (ಒಂದು ವಸ್ತುವನ್ನು) ಎತ್ತಿಕೊಳ್ಳುವುದು; ಅಪಹರಿಸುವುದು: ಜಾನಕಿಯ ಕಪಟದಲಿ ಕಳವಿನ ಕೈನೆಗಹಿನಲಿ ಕೊಂಡುಹೋದ ಸುಮಾನವೆಲ್ಲಿ (ತೊರರಾ. ೬–೨೨–೧೪).

[ಕೈ$_2$ (< ಕೆಯ್$_2$) + ನೆಗಹು$_2$ (< ನೆಗಪು$_2$)]

**ಕೈನೆರವು** 'ಕೆಯ್ನೆರವು' ನೋ.

**ಕೈನೆಲಹು** (ನಾ). ಆಶ್ರಯ; ನೆಲೆ: ಖತಿಗೆ ಕೈನೆಲಹಾದುದೀ ರಾಜಸದಮನವಿದು (ನಿಭಾಗ. ೪–೬–೪೪); ಬೇಡ ನೀ ಹೋಗೆನುತ ತೆಗೆದೀಡಾಡಿದನು ಸಾಗರಕೆ ಪಾಶದ ಕೂಡೆ ಕೈನೆಲಹಾದನಭ್ರಸ್ಥಾಯಿಯಲಿ ವರುಣ (ನಿಭಾಗ. ೧೦–೭೧–೧೮).

[ಕೈ$_2$ (< ಕೆಯ್$_2$) + ನೆಲಹು]

**ಕೈನೆಲೆ** (ನಾ). ಕೈಯ ಸ್ಥಿರತೆ (?): ನಿಲಿಸಲಾ ಸತಿಯುಡಕವಿಲ್ಲದಲುಲಿಧ ಗುಣವತಿ ಸುತನು ಕೈನೆಲೆ ಚಲಿತ ಪರಿಯಂತಿಹುದು ಎನೆ ಬುದ್ಧಿಯನಲಾಕೆ (ಬಿಜ್ಜಪು. ೮೯–೬೧). [ಕೈ$_2$ (< ಕೆಯ್$_2$) + ನೆಲೆ]

**ಕೈನೆಲ್ಲಿ** (ನಾ). ೧. ಅಂಗೈಯ ಮೇಲಿರುವ ನೆಲ್ಲಿಕಾಯಿ. ೨. (ಆಲಂ) ಅತ್ಯಂತ ಸ್ಪಷ್ಟವಾದ ವಿಷಯ; ಸುಲಭಗ್ರಾಹ್ಯವಾದುದು; ಕರತಲಾಮಲಕ: ಒಂದಿಷ್ಟು ಹಳಬರಾದವರಿಗೆ ಅದು ಕೈನೆಲ್ಲಿಯೇ ಆಗಿದೆ (ಕನ್ನಇ. ೪೫). [ಕೈ$_2$ (< ಕೆಯ್$_2$ + ನೆಲ್ಲಿ)]

**ಕೈನೆಱವೇಱು** (ಕ್ರಿ). ಕೈಗೂಡು; ನೆರವೇರು; ಪೂರ್ತಿಯಾಗು; ಸಫಲವಾಗು: ಕರೆದು ಕುಳ್ಳಿರಿಸಿಯುಪಚರಿಸಿ ನೆನೆದೆಣಿಕೆ ಕೈನೆಱವೇರ್ದುದೆಂದು ಮನಸಂದು (ನಂದಿಮಾ. ೨–೩೧).

[ಕೈ$_2$ (< ಕೆಯ್$_2$) + ನೆಱವೇಱು]

**ಕೈನೇಜ** (ನಾ). ಕೈಯಲ್ಲಿ ಹಿಡಿದಿರುವ ಬರ್ಜಿ, —ಈಟಿ, —ಭಲ್ಲೆ: ಆ ವನದೊತ್ತಿಲಿ ಪುಂಡ್ರೇಕ್ಷು ರಸದಾಳಿ ಕಾವನ ಕೈನೇಜದಂತೆ . . . , ರಾಜಿಪುದು (ಜ್ಞಾನಚ. ೧–೧೦೨).

[ಕೈ$_2$ (< ಕೆಯ್$_2$) + ನೇಜ (< ನೇಜಯ)]

**ಕೈಪ** 'ಕೌಪ' ನೋ.

**ಕೈಪಂಜು** (ನಾ). ಕೈಯಲ್ಲಿ ಹಿಡಿದಿರುವ ಪಂಜು; ಕೈದೀವಟಿಗೆ: ಶತಕೋಟಿ ಕೈಪಂಜುಗಳ ಬೆಳಗಿನಿಂ (ನವಮೋ. ೨೬–೨೦); ಹಿಂದೂ ಧರ್ಮವನ್ನು ಮತ್ತೆ ಎತ್ತಿ ಮೆರೆಸಬೇಕೆಂದು ಬಯಸುವವರಿಗೆಲ್ಲ ಅಶೋಕನ ಈ ಶಾಸನ ಹಿರಿಯ ಕೈಪಂಜು (ರಾಮರಾ. ೬೩).

[ಕೈ$_2$ (< ಕೆಯ್$_2$) + ಪಂಜು]

**ಕೈಪಟ್ಟಿ** (ನಾ). (ಅಂಗಿ ಮೊದಲಾದ ಉಡುಪಿನ) ತೋಳಿನಲ್ಲಿ ಮುಂಗೈಗೆ ಬರುವಂತೆ ಅಳವಡಿಸಿರುವ ಪಟ್ಟಿ. 'ಕೊರಳಪಟ್ಟಿ' ಪರಾ. [ಕೈ$_2$ (< ಕೆಯ್$_2$) + ಪಟ್ಟಿ$_2$]

**ಕೈಪಟ್ಟು** (ನಾ). ಕೈಯ ಬಿಗಿಯಾದ ಹಿಡಿತ; ಕೈಯಿಂದ ಭದ್ರವಾಗಿ ಹಿಡಿಯುವುದು: ಕೈಪಟ್ಟು ತಟ್ಟಿತು (ರೂಢಿ).

**ಕೈಪಟ್ಟಾಗಿ ಹಿಡಿ** = ಕೈಯಿಂದ ಭದ್ರವಾಗಿ ಹಿಡಿ; ಬಿಗಿಯಾಗಿ ಹಿಡಿ: ಸಿಂಹದ ಮರಿಯು ಮೃಗವನ್ನು ನುಂಗುವುದಕ್ಕೆ ಯತ್ನಿಸುವಂತೆ ಆತನನ್ನು ಕೈಪಟ್ಟಾಗಿ ಹಿಡಿದು ಕೊಂಬುವುದಕ್ಕೆ ಎಣಿಸಿ (ಕೃವಾವಿ. ೮೬).

[ಕೈ$_2$ (< ಕೆಯ್$_2$) + ಪಟ್ಟು$_2$]

**ಕೈಪಟ್ಟೆಯ** (ನಾ). ಆನೆಯ ಅಲಂಕಾರಗಳಲ್ಲೊಂದು; ತಲೆಯಿಂದ ಸೊಂಡಿಲವರೆಗೆ ಇಳಿಬಿಡುವ ಅಲಂಕಾರದ ಪಟ್ಟೆವಸ್ತ್ರ: ತಳಸಂಕಲೆ ಪಂಚಘಂಟಿ ತೊಡರು ಬೆನ್ನಮಿಳಿ ಕೈಪಟ್ಟೆಯವೆಸೆಯೆ ತಳುವದಾನೆಗಳ ನೂಕಿದರಾರ್ದು ಜೋದರು (ಕುರಾಸಾಂ. ೧೬-೪೭).
[ಕೈ₂ (< ಕೆಯ್₂) + ಪಟ್ಟೆಯ]

**ಕೈಪಡು** (ಕ್ರಿ). ಕೈವಶವಾಗು; ಹಸ್ತಗತವಾಗು; ಸಿಕ್ಕು: ಈ ಮಹಾ ಸಂಕಲ್ಪದಿಂ ಸಂಕಲ್ಪಜನ್ಮನಪ್ಪ ಕಂದರ್ಪಂ ಕೈಪಟ್ಟಂ (ಚಿಕವಿ. ೬-೧೩೩ ವ). [ಕೈ₂ (< ಕೆಯ್₂) + ಪಡು₁]

**ಕೈಪತ್ರ** (ನಾ). ನಿಶ್ಚಯಿಸಿದ ಹಣವನ್ನು ಒಂದು ನಿರ್ದಿಷ್ಟ ಅವಧಿಯಲ್ಲಿ ಕೊಡುವುದಾಗಿ ಬರೆದುಕೊಟ್ಟ ಕೈಕಾಗದ: "(ಒಂದು ಗೊತ್ತಾದ ಅವಧಿಯಲ್ಲಿ ನಮೂದಾದ ಹಣವನ್ನು ಕೊಡುವುದಾಗಿ ಬರೆದು ಕೊಟ್ಟ) ಕೈಪತ್ರ" (Note. ೩೦೫೨). [ಕೈ₂ (< ಕೆಯ್₂) + ಪತ್ರ]

**ಕೈಪರೆ** 'ಕೆಯ್ಪಱೆ' ನೋ.

**ಕೈಪರೆಗುಟ್ಟು** 'ಕೆಯ್ಪಱೆಗುಟ್ಟು' ನೋ.

**ಕೈಪಲಗೆ** (ನಾ). ಬರೆಯುವ ಚಿಕ್ಕಹಲಗೆ; ಕಪ್ಪು ಹಲಗೆ: ಚಂಗಳವೈಸುತನೋದುವ ಮಂಕಕ್ಕೆ ಬಂದುದಂ ಕಂಡು ಚೀಲಾಳಂ ಕೈಪಲಗೆಯಿಂದ ಪಾದಕ್ಕೆಜಗಲ್ (ಭೈರಸೂ. ೨೧೨).
[ಕೈ₂ (< ಕೆಯ್₂) + ಪಲಗೆ₁]

**ಕೈಪಳಗಿಸು** (ಕ್ರಿ). ಕೈಯನ್ನು ಅಭ್ಯಾಸ ಹೊಂದುವಂತೆ ಮಾಡು: ಹಸ್ತಕೌಶಲವನ್ನು ಪಡೆ: ಈ ಬಗೆಯ ರಚನಾಪ್ರಣಾಲಿಯನ್ನು ಅನುಕರಣಮಾಡಿ ಕೈಪಳಗಿಸಿಕೊಂಡು ಸಫಲತೆ ಹೊಂದಿದರೆ ಮಾತ್ರ ಅಮಲನ ಮೇಳದವರಿಗೆ ಮುಕ್ತಿ ಉಂಟು (ಇಪ್ಪಕ. ೨೫೪).
[ಕೈ₂ (< ಕೆಯ್₂) + ಪಳಗಿಸು]

**ಕೈಪಱಿ** (ಕ್ರಿ). ಸೊಂಡಿಲು ಕತ್ತರಿಸಿಹೋಗು: ಕೈಪಱಿದ ಗಜೇಂದ್ರನಂತೆ ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೧೧೧೨); ಕೈಪಱಿದ ದಂತಿ ಕಾಡೊಳ್ ಪೊಕ್ಕಂತೆ . . . ಹೆಕ್ಕಳದಿಂ ಕೆಕ್ಕಳಿಸಿ ನೋಡುವೆಕ್ಕಲಂಗಳುಮಂ (ನಂಬಿರ. ೧೮-೧೪).
[ಕೈ₂ (< ಕೆಯ್₂) + ಪಱಿ₁]

**ಕೈಪಱೆ** 'ಕೆಯ್ಪಱೆ' ನೋ.

**ಕೈಪಱೆಗುಟ್ಟು** 'ಕೆಯ್ಪಱೆಗುಟ್ಟು' ನೋ.

**ಕೈಪಱೆವೊಯ್** (ಕ್ರಿ). ಚಪ್ಪಾಳೆ ಹೊಡೆ, —ತಟ್ಟು: ಕುಣಿವಟ್ಟೆ [ಪಾಠಾಂ. ಕೂಣಟ್ಟ] ಕೂಗುವ ತಲೆ ಕೈಪಱೆವೊಯ್ವ ಪೆಣವಾ ಪೆಣಗಳ ನಡಸಿ ನೊಣೆವ ರಾಕ್ಷಸ ಭೂತ ಬೇತಾಳ ಪ್ರೇತಗಣದಿಂದತಿ ರೌದ್ರಮಯ ಮಾಯ್ತು (ಶ್ರೀಪಾಲ. ೮-೨೯).
[ಕೈಪಱೆ (< ಕೆಯ್ಪಱೆ) + ಪೊಯ್₁]

**ಕೈಪಾಡು** (ನಾ). ಕೈಯ ಹಿಡಿತಕ್ಕೆ ಸಿಕ್ಕುವಷ್ಟು ಹತ್ತಿರ; ಕೈಯ ಅಳತೆ: ಕೈಪಾಡಿಗೊದಗಿದುರು ಕೈವಲ್ಯಮಂ ಕಳೆದ ಪಾಪಿಗಳ ಮಾಳ್ಕೆಯಿಂ (ಪರಶು. ೪೧-೭); ಕೊಡೆ ಕಡುಗೋಪದಿಂ ಹೂಂಕರಿಸಿ ಕೈಪಾಡಿನೊಳ್ ಬಾಣವಂ ಧರಿಸಿ (ತುರಂಗ. ೭೬-೩೭); ಅವನ ಕೈಪಾಡಿನಲ್ಲಿಯೆ ಹಣದ ಪೆಟ್ಟಿಗೆ ಮತ್ತು ಬಿಡಿರೊಕ್ಕವನ್ನೂ ಪುಡಿಕಾಸನ್ನೂ ಹಾಕಿದ ತಬಕವೊಂದು (ತಕ್ಕಡಿ. ೧೭). [ಕೈ₂ (< ಕೆಯ್₂) + ಪಾಡು₃]

**ಕೈಪಾತ್ರೆ** (ನಾ). ಕೈಯಿಂದ ಎತ್ತಿಕೊಂಡು ಹೋಗಲು ಅನುಕೂಲವಾಗುವಂತೆ ಹಿಡಿಯನ್ನುಳ್ಳ ಪಾತ್ರೆ; ಊಟದ ಪದಾರ್ಥಗಳನ್ನು ಒಯ್ಯಲು ಉಪಯೋಗಿಸುವ ಪಾತ್ರೆ: ಮಧ್ಯಾಹ್ನದ ಊಟಕ್ಕೇನು ಮಾಡುತ್ತೀರಿ? ಕೈಪಾತ್ರೆಯಲ್ಲಿ ತರುತ್ತೇನೆ (ಕಾವೇರಿ. ೭).
[ಕೈ₂ (< ಕೆಯ್₂) + ಪಾತ್ರೆ]

**ಕೈಪಾರ್** (ಕ್ರಿ). ಹತ್ತಿರ ಬರಲು ಅಪೇಕ್ಷಿಸು: ಈ ತೆಱದೆ ಮೆಱೆವ ಮಿಱಿಪಿಗರ ಮುಱುಕಮಾಡೊರಿಯ ಭರದ ಜವ್ವನಿಗೆಯುವೆಮ್ಮ ಕೈಪಾರಲೈತರ್ಪುದೆ [ಪಾಠಾಂ. ಕೆಯ್ಯೂರವಿತ್ತಪ್ಪುದೆ] ಪಿರಿದುಮೆಂದು ಮಱುಗಿ ಮನದೊಳ್ ಮುನಿದು (ವರ್ಧಪು. ೯-೩೬ವ).
[ಕೈ₂ (< ಕೆಯ್₂) + ಪಾರ್₁]

**ಕೈಪಾಱಿ** (ನಾ). ಕೈಯ ಹಾರೆ; ಸಣ್ಣ ಹಾರೆ(?): ಕೊಡಲಿ ಗುದ್ದಲಿ ಮಚ್ಚುದಬ್ಬುಳ ಕೈಪಾಱಿ ಕುಡು[ಪಾಠಾಂ. ಡಿ]ಗೋಲು ಮುರುಳುಕೈಗಳನು ಕಡಿಕೆಯ್ದು ಮಾಡುವ ಕಮ್ಮಾಱರಿಂ ಕಣ್ಣೆ ಕಡುರಯ್ಯಮಾದುದಾ ದುರ್ಗ (ಕುರಾಸಾಂ. ೩೭-೫೯). [ಕೈ₂ (< ಕೆಯ್₂) + ಪಾಱಿ ?]

**ಕೈಪಿಡಿ₁** 'ಕೆಯ್ಪಿಡಿ' ನೋ.

**ಕೈಪಿಡಿ₂** 'ಕೆಯ್ಪಿಡಿ' ನೋ.

**ಕೈಪಿಡಿಗೋಡೆ** 'ಕೆಯ್ಪಿಡಿಗೋಡೆ' ನೋ.

**ಕೈಪಿಡಿದಾಣ** (ನಾ). ಕೈಗನ್ನಡಿಯ ಪ್ರದೇಶ; ದರ್ಪಣತಳ: ಕಾಣಬಾರದ ವದನ ಕೈಪಿಡಿದಾಣವಂ ಕಂದೆಱೆದು ನೋಡಲು ಕಾಣಬಪ್ಪಂತೆ (ಶಂಕರದಾ. ೪-೬೫). [ಕೈಪಿಡಿ₂ (ಕೆಯ್ಪಿಡಿ) + ತಾಣ₂]

**ಕೈಪು** 'ಕೌಪ' ನೋ.

**ಕೈಪುರುಳ್** (ನಾ). ಕೈಯಲ್ಲಿರುವ ದ್ರವ್ಯ, —ವಸ್ತು, —ಸಂಪತ್ತು: ಅಱಿಯಮೆ ಸಂಪತ್ತಿಗಾವುದೆನಲಳಿಪಮೆ ಪೆಱನ್ ಬೇಟ್ಪ ಕೈಪುರುಳನ್ (ಕುಱಳ್. ೧-೧೮-೮); ಅಗು ವಿಧಿಯಿಂದಕ್ಕು ಮಲಸಿಲ್ಲಮೆ ಕೈಪುರುಳ್ ಪೋಗುವಿಧಿಯಿಂದಕ್ಕು ಮಲಸು (ಕುಱಳ್. ೧-೩೮-೧).
[ಕೈ₂ (< ಕೆಯ್₂) + ಪುರುಳ್]

**ಕೈಪುಸ್ತಕ** (ನಾ). (ಕಂಡ ಅಥವಾ ಕೇಳಿದ) ವಿಷಯಗಳನ್ನು ಚುಟುಕಾಗಿ ಬರೆದಿಟ್ಟುಕೊಳ್ಳಲು ಉಪಯೋಗಿಸುವ ಸಣ್ಣ ಪುಸ್ತಕ, —ಟಿಪ್ಪಣಿ ಪುಸ್ತಕ: ತಪ್ಪನ್ನು ಹಿಡಿಯುವುದಕ್ಕೆ ಕೈಪುಸ್ತಕ ಸೀಸದ ಕಡ್ಡಿಗಳೊಡನೆ ಯಾರಾದರೊಬ್ಬರು ಕಾದೇ ಇರುತ್ತಿದ್ದರು (ನಂಟರು. ೨೮). [ಕೈ₂ (< ಕೆಯ್₂) + ಪುಸ್ತಕ]

**ಕೈಪೆ** 'ಕಯ್ಪೆ' ನೋ.

**ಕೈಪೆಟ್ಟಿಗೆ** (ನಾ). (ಕೈಯಲ್ಲಿ ಎತ್ತಿಕೊಳ್ಳಬಹುದಾದ) ಸಣ್ಣ ಪೆಟ್ಟಿಗೆ: ಕೈಪೆಟ್ಟಿಗೆ ಮರೆತು ಬಂದ (ರೂಢಿ). [ಕೈ₂ (< ಕೆಯ್₂) + ಪೆಟ್ಟಿಗೆ]

**ಕೈಪೆದೊಂಡೆ** (ನಾ). ಒಂದು ಬಗೆಯ ತೊಂಡೆ; ಕಹಿ ತೊಂಡೆ: ಕುದಿಯಿಸುಗೆ ಸುಣ್ಣದಿಂದ ಕೈಪೆದೊಂಡೆಯಂ . . . ಅವಱ ಕೈಪೆಗಳಱಿಗುಂ (ಲೋಕೋಪ. ೮-೩೦). [ಕೈಪೆ (< ಕಯ್ಪೆ) + ತೊಂಡೆ₃]

**ಕೈಪೆಮಾಡು** (ಕ್ರಿ). ಕಹಿಮಾಡು; ಕಹಿರುಚಿಯನ್ನು ಉಂಟುಮಾಡು: ಭಾವೆಯ ಕುಡುವುರ್ವುಗಳಿಗೆಣೆಯೆಂದು ಗರ್ವಿಸೆ ಕೈಪೆಮಾಡಿದನಾ ವಿಧಿ ಸಿಂಬಪಲ್ಲವಕೆ (ಶ್ರೀಪಾಲ. ೩-೬೩). [ಕೈಪೆ (< ಕಯ್ಪೆ) + ಮಾಡು₁]

**ಕೈಪೆವಾತು** (ನಾ). ಕಹಿಮಾತು; ಅಪ್ರಿಯವಾದ ನುಡಿ: ಕಪಿಲನ ಕೈಪೆವಾತು ಕಿವಿಗೆಯ್ದೆ ಜಾನಕಿ ಪೋಗಿ ಬಿಚ್ಚತಂ ವಿಪಿನಧೊಳರ್ಪಮಿಪಾಗೃಹದೊಳಿರ್ಪುದಱಿಂದೆನೆ (ಪಂರಾಮಾ. ೭-೧೨೬).
[ಕೈಪೆ (< ಕಯ್ಪೆ) + ಮಾತು₁]

**ಕೈಪೆವೀರೆ** (ನಾ). ಒಂದು ಬಗೆಯ ಹೀರೆ; ಕಹಿ ಹೀರೆ: ಜಂಬೂರಸಮಂ ಕುಡು ಕಟುತುಂಬಿಯ ಫಲದಲದೊಕೊಗೆದ ಪಟುತರವೆನಿಪಾಡಂಬರದ ವಿಷಮನಱಿಗುಮುದಂಬುಧರಂ ಕೈಪೆವೀರೆಗುಪಷಮುಮಕ್ಕುಂ (ಖಮುದ. ೨-೪೩). [ಕೈಪೆ (< ಕಯ್ಪೆ) + ಪೀರೆ]

**ಕೈಪೆವೆಮುರ್** (ನಾ). ಕಹಿಯಾದ ಬೆವರು: ಬಂದನದೊರ್ವ ಪಾರ್ವನಲ್ಲೊಕ್ಕಿಱಿತರ್ಪ ಕೈಪೆವೆಮುರಂ ತುದಿನಾಲಗೆಯಿಂದೆ ನಕ್ಕುತುಂ (ಲೀಲಾವ. ೬-೩೮). [ಕೈಪೆ (< ಕಯ್ಪೆ) + ಬೆಮುರ್₂]

**ಕೈಪೆಸರ** (ನಾ). ಕಹಿಯಾದ ಸ್ವರ; ಕರ್ಕಶವಾದ ಧ್ವನಿ; ಕಠಿಣೋಕ್ತಿ: ದುರ್ಯೋಧನಂ ಕೈಪೆಸರಮಂ ಕೇಳ್ದು ಕಾರ್ಯದಿಂ ಸ್ವೈರಿಸಿರ್ಪನಂ (ನೇಮಿಪು. ೧೦–೩೧ ವ); ದುರ್ಯೋಧನನಾ ಕೈಪೆಸರವನು ಮನಗೊಳದಿರೆ ಕಾರ್ಯವಶದಿ (ನೇಮಿಸಂ. ೨೪–೩೩). 'ಕಯ್ಪೆಸರ' ಪರಾ. [ಕೈಪೆ (< ಕಯ್ಪು) + ಸರ್‌]

**ಕೈಪೆಸೊರೆ** 'ಕಯ್ಪೆಸೊರೆ' ನೋ.

**ಕೈಪೆಸೋರೆ** 'ಕಯ್ಪೆಸೊರೆ' ನೋ.

**ಕೈಪೇತು** 'ಕೈಫಿಯತ್ತು' ನೋ.

**ಕೈಪೊಡೆ** 'ಕೆಯ್ಪೊಡೆ' ನೋ.

**ಕೈಫಿಯತ್ತು**, ಕೈಪೇತು, ಕೈಫೀತು, ಕೈಫೀಯತ್ತು, ಕೈಯಫಿಯತ್ತು (ನಾ). ೧. (ಸ್ಪಷ್ಟವಾದ) ಹೇಳಿಕೆ; ನಿರೂಪಣೆ; ವರ್ಣನೆ; ವಿವರಣೆ; ತಪಸೀಲು: ಲಡಾಯದ ಕೈಫಿಯತ್ತು ತಮಾಮು ಬರೆಯುವ ಬಗ್ಗೆ ನಾವು ವಕೀಲರಾಗಿ ದೊರೆಗಳ ಬಳಿಯೆ ಇದ್ದೇವು (ರಾಜೇಂದ್ರ. ೧೧೯); ದುರ್ಯೋಧನನು ತನ್ನ ಚಾರಿತ್ರ್ಯದ ಕೈಫಿಯತ್ತನ್ನು ಕೊಟ್ಟಿರುವನು (ಸಾಹಿವಿ. ೬೧); ಇತರರ ಕೈಫಿಯತ್ತಿನಿಂದಲೂ ಗೊತ್ತಾಯಿತು (ಕಲನಿ. ೩೭೧); ಅತಿಶಯೋಕ್ತಿಯು ಅದೆಷ್ಟೇ ಅತಿಶಯವಾಗಿದ್ದರೂ ಯಾವ ಲೆಕ್ಕಿಗನ ಎದುರಿಗೂ ಅದರ ಸಲುವಾಗಿ ಕೈಫಿಯತ್ತು ಕೊಡುವ ಕಾರಣವಿಲ್ಲ (ಇಪ್ಪಕ. ೪೦೪); ಇವೆಲ್ಲ ಕಾರ್ಯಗಳ ಕೈಫಿಯತ್ತು ಅವನು ಕೊಡುವನೋ? (ಪಂಚೇ. ೭೩). ೨. ಬರಹದ ಮೂಲಕ ಕೊಟ್ಟ ಅಪ್ಪಣೆ; ಆಜ್ಞಾಪತ್ರ; ತಿಳಿವಳಿಕೆಯ ಪತ್ರ: ಅದು ಭೀಮರಾಯರ ಮೇಲೆ ಕೈಫಿಯತ್ತು ಜಾರಿಯಾದ ಕಾಗದವಾಗಿತ್ತು (ಕುರುಕಾ. ೪೨). ೩. ವ್ಯಾಜ್ಯದಲ್ಲಿ ಒಂದು ಪಕ್ಷದವರು ಮಾಡಿದ ಆರೋಪಗಳಿಗೆ ವಿರುದ್ಧ ಪಕ್ಷದವರು ಮೊದಲ ಬಾರಿಗೆ ಬರೆಹದ ಮೂಲಕ ಕೊಡುವ ಉತ್ತರ: ಅವರು ತನಗೇನೂ ತಿಳಿಯದೆಂದೂ ಪಿಛಲ್ ಖಾನನು ಹೊಡೆದು ಹೆದರಿಸಿ ಹಾಗೆ ಹೇಳಿಸಿದ್ದನೆಂದೂ ಕೈಫಿಯತ್ತು ಕೊಟ್ಟರು (ಬಂಕಿಮ. ೬೩). ೪. (ಒಂದು ಸ್ಥಳದ ಅಥವಾ ವಂಶದ) ವಿವರಗಳನ್ನೊಳಗೊಂಡ ದಾಖಲೆ; ವಾಸ್ತವಿಕ ವಿಷಯಗಳ ಲಿಖಿತ ಸಂಗ್ರಹದ ಕಡತ; ಲಿಖಾವಟ್ಟು: ಅರ್ಕಾಡು ಸಂಸ್ಥಾನದ ಕೈಫಿಯತ್ತಿನ ಪ್ರಕಾರ ಕನ್ನಡಕ್ಕೆ ಈ ಭೀಮೆಯ ಪುಣ್ಯವೂ ಹೋಗಿ ಕೃಷ್ಣೆಯ ಕೆಳಗಿಳಿಯಿತು (ಭಾಷಾಶಾ. ೨೦೩); ದೊರೆತ ಅನೇಕ ಕೈಫಿಯತ್ತು, ಬಖೈರುಗಳ ಆಧಾರಗಳಿಂದ ನಿರ್ಧರಿಸಬಹುದಾಗಿದೆ (ಕಸಾಪ. ೧೯೩೭–೬೪). ೫. [ನ್ಯಾಯ]: ಪ್ರಮಾಣ ಮಾಡಿಕೊಟ್ಟ ವಾಙ್ಮೂಲ, ಹೇಳಿಕೆ, ಪ್ರಮಾಣ, ದೃಢವಚನ (Testimony. ಇಂಕನಿ); ದೂರದಿಂ ಬಂದಿರ್ಪ ಸಾಕ್ಷಿಗಳ್ ಕೈಫಿಯತ್ತಾಗಿರ್ದಡದನು ಬೇಗ ತಾರದೇಕಿರ್ಪರು (ಅಜಾರ್ವಿ. ೩೧–೩೯). **ಕೈಪೇತು**: ೩. ಕೈಪೇತು ಉದಾಹರಣೆಗೆ ಬರೆಸುವುದು; ಸಾಕ್ಷಿ; ಛತ್ತೆ ಹಾಕುವುದು; ರಿಕಾರ್ಡು ದಾಖಲು ಮಾಡುವುದು ಮೊದಲಾದ ಕೆಲಸ ಸೂಲಿಸಿಟರರಿಗೆ ಸೇರಿದೆ (ಪ್ರವಾಸಿ. ೫೦). **ಕೈಫೀತು**: ೧. ಅಲ್ಲಿ ಕೈಫೀತು ತೆಗೆದು ಕೊಳ್ಳುತ್ತಿದ್ದ ಇನ್‌ಸ್ಪೆಕ್ಟರು (ಉಡುಗೊ. ೧೪೩). **ಕೈಫೀಯತ್ತು**: ೫. ಆರೋಪಣೆಯನ್ನು ಸಮರ್ಥಿಸುವ ವಿಷಯಗಳ ಲಿಖಿತವಾಙ್ಮೂಲ, ಕೈಫೀಯತ್ತು (Process-Verbal. ಇಂಕನಿ). **ಕೈಯಫಿಯತ್ತು**: ೫. ಗ್ರಾಮಾಧಿಪತಿಯು ಯಾವ ಅಪರಾಧಿಯ ಕೈಯಫಿಯತ್ತಿಗೂ ಅಪರಾಧಿಯು ತಪ್ಪು ಒಪ್ಪಿಕೊಳ್ಳುವ ಕಾಗದಕ್ಕೂ ಅಪರಾಧಿಯ ದಸ್ತಖತ್ತನ್ನು ತೆಗೆದುಕೊಳ್ಳಲು ಖಂಡಿತವಾಗಿಯೂ ನಿರೋಧಿಸಲ್ಪಟ್ಟಿರುತ್ತಾನೆ (ಗ್ರಾಮಾಕ. ೫೩).

[← ಅರ. ಕೈಫೀಯತ್; ಹಿಂ. ಮರಾ. ಕೈಫೀಯತ್; ಕೈಫತ್, ಕೈಫಯತ್, ಕೈಫೇತ್]

**ಕೈಫೀತು** 'ಕೈಫಿಯತ್ತು' ನೋ.

**ಕೈಫೀಯತ್ತು** 'ಕೈಫಿಯತ್ತು' ನೋ.

**ಕೈಬಂಡಿ** (ನಾ). ೧. (ಸಾಮಾನುಗಳನ್ನು ಸಾಗಿಸಲು ಉಪಯೋಗಿಸುವ) ಕೈಗಳಿಂದ ಎಳೆದುಕೊಂಡು ಅಥವಾ ದೂಡಿಕೊಂಡು ಹೋಗುವ ಗಾಡಿ: (ಕೈಯಿಂದ ತಳ್ಳಿಕೊಂಡು ಹೋಗುವ) ಕೈಬಂಡಿ (Hand–barrow. ಇಂಕನಿ). ೨. ಮಕ್ಕಳು ಎಳೆದಾಡುವ ಆಟದ ಬಂಡಿ: ಪುಟ್ಟಾರಿಗೆ ಎಳೆದುಕೊಂಡು ಆಡುವುದಕ್ಕೆ ಅವನ ತಂದೆ ಒಂದು ಕೈಬಂಡಿಯನ್ನು ತಂದುಕೊಟ್ಟಿದ್ದರು (ಕಿಂಕಥೆ. ೧೯೬).

[ಕೈ$_2$ (< ಕೆಯ್$_2$) + ಬಂಡಿ]

**ಕೈಬಂದಿಗೆ** (ನಾ). ಹಿಡಿ; ಹಿಡಿಕೆ (?): ಅಡಸಿ ಕಿಡಿಗಳ ಕಾಜಿ ಲೋಹದ ಕಡಿಳು ಸಿಡಿಲುಗ್ಗಡದಲಡ್ಡಣವೊಡೆದು ಕೈಬಂದಿಗೆಯನೆತ್ತಿದ ಡಿಕ್ಕಲಿಸಿ ಬೀಳೆ (ಕುಮ್ಯಾಭಾ. ೪–೨೯). [ಕೈ$_2$ (< ಕೆಯ್$_2$) + ಬಂದಿಗೆ]

**ಕೈಬಟ್ಟಲು** 'ಕೈವಟ್ಟಲ್' ನೋ.

**ಕೈಬಣ್ಣ** (ನಾ). ೧. ಕೈಯ ಬಣ್ಣ, —ವರ್ಣ. ೨. (ಆಲಂ) ಕೈಗುಣ; ಹಸ್ತಗುಣ: ಕೈಬಣ್ಣ ನೋಡಿದರೆ ಮೈಬಣ್ಣ ಗೊತ್ತಾಗೋಲ್ವೇಂತ . . . ಒಳಗಿನ ಹುಳುಕೆಲ್ಲ ನಿಮಿಷಕ್ಕೆ ಊಹಿಸಿದೆ ನಾನು (ದುರಂನಾ. ೭೪). ೩. ಬಣ್ಣಗಾರರ ಮೇಲೆ ಹಾಕುವ ಒಂದು ತೆರಿಗೆ: ಮುಗ್ಗದೆಜಿ ಹೊಗೆದೆಜಿ ಲವಣ ಪಂಚಕಾರುಕಕಳು ಕೈಬಂಣ ನೂಲು ಕರ್ಬುನ ದಳಮಿಳಿಹೆಸೆಯ ಕುಳ ಮುಖ್ಯವಾದ ಸರ್ವ ಆಯವನೂ ಆ ಚೂಡನಾಥದೇವರಿಗೆ ಸರ್ಬಮಾನ್ಯಂ ಮಾಡಿ (ಎಕ. IX, ಚನ್ನಪ. ೭೬–೧೯; 1288). [ಕೈ$_2$ (< ಕೆಯ್$_2$) + ಬಣ್ಣ]

**ಕೈಬತ್ತಿ** (ನಾ). ೧. ಕೈಯಲ್ಲಿರುವ ಬತ್ತಿ; ಸಣ್ಣ ದೀಪ: ಕತ್ತಲೆಯಲಿಹ ವಸ್ತುವನು ಕೈಬತ್ತಿಯಲಿ ಕಾಣುತ್ತ (ಅಮೃತ. ೧೦–೬೪). ೨. ಕೈಯಿಂದ ಹೊಸೆದ ಬತ್ತಿ: ದೇವರಿಗೆ ಕೈಬತ್ತಿಯ ದೀಪ ಹತ್ತಿಸಿದು (ರೂಢಿ). [ಕೈ$_2$ (< ಕೆಯ್$_2$) + ಬತ್ತಿ]

**ಕೈಬದಲು** (ನಾ). (ಹಣವನ್ನು) ಸಾಲಕೊಡುವುದು; ಸಾಲ: (ಕಿ). [ಕೈ$_2$ (< ಕೆಯ್$_2$) + ಬದಲು]

**ಕೈಬರು** 'ಕೆಯ್ವರ್' ನೋ.

**ಕೈಬರೆಹ** (ನಾ). ಕೈಯಿಂದ ಬರೆದುದು; ಕೈಯ ಬರವಣಿಗೆ: ಹಣಬರೆಹಮೊರೆಯುವುದಿರ್ಕೆ ಸಾರುತಿದೆ ಕೈಬರೆಹಮುಂ (ಶ್ರೀರಾಮಾ. ೫೫೦–೨೭೩). [ಕೈ$_2$(< ಕೆಯ್$_2$) + ಬರೆಹ]

**ಕೈಬರ್ದುಕು**, ಕಯ್ಬರ್ದುಕು (ಕ್ರಿ). ಕೈಯಿಂದ ನುಣುಚು; ಕೈತಪ್ಪು: ಸ್ಮರನಲರಂಬು ಕೈಬರ್ದುಕಿ ಬರ್ಪವೊಲೊಯ್ಯನೆ ಬಂದು ನಿಂದ ಸುಂದರಿಯನೊಜಲ್ದು (ಪಂಪಭಾ. ೮–೬೪). **ಕಯ್ಬರ್ದುಕು**: ಮುದದರ್ಚಿಪ ಜಿನಬಿಂಬಂ ನದಿಯೊಳ್ಕಯ್ಬರ್ದುಕಿಬಿಟ್ಟೊಡದು ಬಪ್ಪಿನ ಮುಣ್ಬುದನುಳಿದಿರಲೆಂಟು ದಿನಕ್ಕದು ಬಂದುದು ಕಯ್ಗೆ ದಾನಚಿಂತಾಮಣಿಯ (ಸೌಇಇ. XI-i, ೫೨–೨೨; 1007).

[ಕೈ$_2$ (< ಕೆಯ್$_2$) + ಬರ್ದುಕು$_1$ (< ಬರ್ದುಂಕು)]

**ಕೈಬಸ** (ನಾ). ಕೈವಶ; ಅಧೀನ.

ಕೈಬಸಮಾಗಿಸು = ಕೈವಶಗೊಳಿಸು; ಅಧೀನಗೊಳಿಸು: ಪಗೆಯಂ ಕೈಬಸಮಾಗಿಪೊಂದು ಬಗೆಯಂ ತಾಳ್ದಲ್ಲಿ ಕಾಸಾರವಾರಿಗತಂ ತಾನೆನಿಸಿರ್ದು ಮಾಡಿ ತಪಮಂ (ರಾಜಶೇ. ೧–೧೩೨). ಕೈಬಸವಾಗು = ಕೈವಶವಾಗು; ಅಧೀನವಾಗು: ಎನಗೆ ಹತವೆನುತ ನಿಶ್ಚೈಸಿ ಚಿಂತಾಸತಿಗೆ ಕೈಬಸವಾಗಿ (ಜೀವಂಚ. ೪–೩೯). [ಕೈ$_2$ (< ಕೆಯ್$_2$) + ಬಸ$_1$]

**ಕೈಬಳಕೆ** (ನಾ). ೧. ಕೈಯ ಅಭ್ಯಾಸ: ನನಗೆ ಕೈಬಳಕೆ ತಪ್ಪಿಹೋಗಿದೆ (ರೂಢಿ). ೨. ಸ್ವಂತವಾದ ಚಿಲ್ಲರೆಖರ್ಚು; ಕೈವೆಚ್ಚ.

ಕೈಬಳಕೆಯ ಧನ = ಸ್ವಂತ ಚಿಲ್ಲರೆ ಖರ್ಚಿಗಾಗಿ ಇಟ್ಟಿರುವ ಹಣ; ಕೈವೆಚ್ಚದ ಹಣ: ಮೊದಲಿನ ಸಂಕಲ್ಪವಿತ್ತು, ಚಾರು ತನ್ನ ತಿಂಗಳ ಕೈಬಳಕೆಯ ಧನದಲ್ಲಿಯೇ ಕ್ರಮಕ್ರಮವಾಗಿ ಉದ್ಯಾನವನ್ನು ಸಿದ್ಧಗೊಳಿಸಬೇಕೆಂದು (ಇಪ್ಪಕ. ೨೨೯). [ಕೈ₂ (< ಕೆಯ್₂) + ಬಳಕೆ]

**ಕೈಬಳಿಚು** (ಕ್ರಿ). = ಕೈಬರ್ದುಕು: ಇಳಿದ ಕುದುರೆಗೆ ಬಿಸುಟ ರಥಸಂಕುಳಕೆ ಹಾಯ್ಕಿದ ಟಿಕ್ಕೆಯಕೆ ಕೈಬಳಿಚಿದಾಯುಧತತಿಗೆ ನೂಕಿದ ಜೋಡು ಸೀಸಕಕೆ (ಕುಮ್ಮಾದ್ರೋ. ೧೬-೧೬).
[ಕೈ₂ (< ಕೆಯ್₂) + ಬಳಿಚು]

**ಕೈಬಳೆ, ಕಯ್ಪಳೆ** (ನಾ). ಕೈಯಲ್ಲಿ ಧರಿಸುವ ಬಳೆ; ಕಡಗ; ಕಂಕಣ: ಕೈಬಳೆ ನೋಡಲಿಕ್ಕೆ ಕನ್ನಡಿಯಾಕೆ? (ಮೂರುದಾ. ೪೬). **ಕೆಯ್ಪಳೆ**: ಕಯ್ಪಳೆಯಿಂದಲೂ ದೊಡ್ಡನು ಆಕರ್ಷಣೀಯ ಮದುಮಗನಾಗಿದ್ದನು (ಕಾಲೂರ. ೧೩ ಕಥಾಸಾರ). [ಕೈ₂ (< ಕೆಯ್₂) + ಬಳೆ₃]

**ಕೈಬಾಂಬು** (ನಾ). ಕೈಯಿಂದ ಎಸೆಯುವ ಬಾಂಬು; ಸಣ್ಣ ಬಾಂಬು: ಕೈಬಾಂಬುಗಳಿಗೆ ಅವರು ಬೊಂಬೆಗಳೆಂದು ಕರೆಯುತ್ತಿದ್ದರು (ಮಾಡಿಮ. ೧೦೦); ಅಬ್ಬಾ ಮಹಾತ್ಮರಿಗೆ ಕೈಬಾಂಬು ಎಸೆಯುವುದೇ? (ಅಮಗಾಂ. ೧೫); ಗಂಟೆಯನಂತರ ಸಿಡಿಯುವಂತಿರಿಸಿದ ಕೈಬಾಂಬು ಸಿಡಿಸಿತು ಉರಿಯ (ಇಂಚಾಪ. ೩೯-೮೪).
[ಕೈ₂ (< ಕೆಯ್₂) + ಬಾಂಬು]

**ಕೈಬಾಕು** (ನಾ). ಸಣ್ಣ ಬಾಕು; ಕೈಚೂರಿ: ಕಠಾರಿಯವರೂ ಕೈಬಾಕಿನವರೂ ಗುಪ್ತಿಯವರೂ . . . ಸಿದ್ಧವಾಗಲಿ (ಪೀಟಿಮಾ. ೨).
[ಕೈ₂ (< ಕೆಯ್₂) + ಬಾಕು₂]

**ಕೈಬಾಚಿ** (ನಾ). ಸಣ್ಣ ಬಾಚಿ: ಕತ್ತಿಗೆ ಕೈಬಾಚಿಯೊಳಂ ಕಿಱಿಕಿಱಿದು ತಱಿತಱಿದು ಕೊಱೆಕೊಱೆದವರ ಬಾಯೊಳಗೆ ಅವರ ಖಂಡಂಗಳನಡಸಿಗಿಡಿಯುತ್ತುಂ (ಅಜಿಪು. ೧೧-೧೦ ವ); ಕೈಬಾ [ಪಾಠಾಂ. ವಾ]ಚಿ ಚೀಲಣದುಳಿಯ ಕೆಲಸದ ಬಡಗಿಯರ . . . ಕಳಕಳದಿ ಬರುತಿರ್ದುದಸುರರಥ (ತೊರರಾ. ೫-೭-೧೨). [ಕೈ₂ (< ಕೆಯ್₂) + ಬಾಚಿ]

**ಕೈಬಾಯಿ** (ನಾ). ಕೈ ಮತ್ತು ಬಾಯಿ: ಕೈಬಾಯಿ ಶುದ್ಧವಿರಬೇಕು (ರೂಢಿ).

**ಕೈಬಾಯಿಗೆ ಬರು** = ಬೇರೆಯವರ ನಿಂದೆಗೆ ಗುರಿಯಾಗು: ನಾನಾರ ಕೈಬಾಯಿಗೆ ಬಂದಬಲೆಯಲ್ಲ (ಶ್ರೀಕೃಪಾ. ೩೧-೨). **ಕೈಬಾಯಿ ಸುಟ್ಟುಕೊ** = (ಅನುಭವವಿಲ್ಲದ ವ್ಯಕ್ತಿ) ಅಡಿಗೆ ಮಾಡುವ ಕಷ್ಟವನ್ನನುಭವಿಸು: ಮನೆಗೆ ಸೊಸೆ ಬಂದಳು ಅವರು ಕೈಬಾಯಿ ಸುಟ್ಟುಕೊಳ್ಳೋದು ತಪ್ಪಿದಂತಾಯಿತು (ರೂಢಿ). **ಕೈಬಾಯೊಳಗಿನ ಕೆಲಸ** = ಚಿಕ್ಕಪುಟ್ಟ ಕೆಲಸ: ದೊಡ್ಡವ್ವನ ಕೈಬಾಯೊಳಗಿನ ಕೆಲಸ ಮಾಡುವುದು ಅವನಿಗೆ ಮೊದಮೊದಲು ಹಿಗ್ಗಿನ ಮಾತಾಗಿದ್ದರೂ, ಬರಬರುತ್ತ ಅದು ಅನಿವಾರ್ಯವಾಗಿ ಬಿಟ್ಟಿತು (ಬಿಟ್ಟಹೊ. ೨೧). [ಕೈ₂ (< ಕೆಯ್₂) + ಬಾಯಿ₁ (< ಬಾಯ್)]

**ಕೈಬಿಗಿ** (ಕ್ರಿ). ೧. ಕೈಯನ್ನು ಬಿಗಿಹಿಡಿ; ಬೆರಳುಗಳನ್ನು ಮಡಿಸಿ ಮುಷ್ಟಿಹಿಡಿ: ಅವನು ಸಿಟ್ಟುಗೊಂಡು ಎದುರಾಳಿಯ ಬೆನ್ನಿಗೆ ಗುದ್ದು ಕೊಡಲು ಕೈಬಿಗಿದನು (ರೂಢಿ). ೨. ಬೇರೊಬ್ಬನ ಕೈಯನ್ನು ಬಿಗಿ, —ಕಟ್ಟು; ಬಂಧಿಸು: ಚಳಿಯು ಕೆಲಸಗಾರನನ್ನು ಕೈಬಿಗಿದು ಕಂಬಳಿಯನ್ನು ಕಟ್ಟಿ ಅಗ್ಗಿಷ್ಟಕೆಯ ಕಾವಲಿನಿಂದ ಬಿಸಿಲಲ್ಲಿ ನಿಲ್ಲಿಸಿ ವಿಚಾರಿಸುವಂತೆ ತೋರುತ್ತಿತ್ತು (ಕಾಲೂರ. ೫ ಕಥಾಸಾರ). **ಕೈಬಿಗಿದುಹಿಡಿ** = ಯಾರಿಗೂ ಏನನ್ನೂ ಕೊಡದಿರು; ಜಿಪುಣತನ ಮಾಡು: ಆಟಾ ನೋಟಾ ಮೋಜು ಅಂದರ, ಅವರೇನು ಎಂದೂ ಕೈಬಿಗಿದುಹಿಡಿಯುವವರಲ್ಲ (ಜನಜೀ. ೧೩೬). [ಕೈ₂ (< ಕೆಯ್₂) + ಬಿಗಿ₁]

**ಕೈಬಿಚ್ಚು** (ಕ್ರಿ). ೧. ಮುಷ್ಟಿಯನ್ನು ಬಿಚ್ಚು, —ವಿಸ್ತರಿಸು, —ಅಗಲಿಸು. ೨. (ಆಲಂ) ಉದಾರಿಯಾಗು; ಧಾರಾಳಿಯಾಗು; ಜಿಪುಣತನವನ್ನು ತೊರೆ: ಕೈಬಿಚ್ಚಿ ದುಡ್ಡು ಖರ್ಚುಮಾಡಿ (ಮನಬಿ. ೧೬); ಕೈಬಿಚ್ಚಿ ತೋರಿಸು ಮನಮೆಚ್ಚಿ ಕೊಡುವನು ದೇವನು (ಇಂಚಾಪ. ೨೩೮-೭೯). [ಕೈ₂ (< ಕೆಯ್₂) + ಬಿಚ್ಚು₁ (< ಬಿಚ್ಚು)]

**ಕೈಬಿಡು** (ಕ್ರಿ). ೧. ಕೈಯನ್ನು ಬಿಡು; ಕೈಯಲ್ಲಿರುವುದನ್ನು ಬಿಡು: ಮರಮೇರಿ ಕೈಬಿಟ್ಟಹಾಗೆ (ಗಾದೆ). ೨. (ಆಲಂ) ತ್ಯಜಿಸು; ನೆರವು ತಪ್ಪಿಸು; ನಿಲ್ಲಿಸು: ಕಂಡು ಕಂಡು ನೀ ಎನ್ನ ಕೈಬಿಡುವರೆ (ಪುರಂದ. ೧-೯೩ ಪಲ್ಲವಿ.); ಕೇವಲ ಎರಡು ಮಾತುಗಳನ್ನು ಬರೆದು ಈ ವಿಷಯವನ್ನು ಇಲ್ಲಿಗೆ ಕೈಬಿಡುತ್ತೇವೆ (ಭಾರದ. ೪೨). ೩. (ಆಲಂ) ಕಳೆದುಹೋಗು; ಇಲ್ಲದಂತೆ ಆಗು: ಹೊಲ ಕೈಬಿಟ್ಟ ಸಂತಾಪದಿಂದ (ಮಣ್ಣುಹೆ. ೧೫). 'ಕೆಯ್ವಿಡು' ಪರಾ.

**ಕೈಬಿಟ್ಟುಹೋಗು** = ದೂರಹೋಗು: ಬೆಳೆದ ಮಗ ಕೈಬಿಟ್ಟುಹೋದ (ರೂಢಿ). [ಕೈ₂ (< ಕೆಯ್₂) + ಬಿಡು₁]

**ಕೈಬಿರಿ** (ನಾ). ಮೋಟಾರು ಮುಂತಾದ ವಾಹನಗಳ ವೇಗವನ್ನು ತಡೆಹಿಡಿಯಲು ಚಾಲಕನು ಕೈಯಿಂದ ಉಪಯೋಗಿಸುವ ಸಲಕರಣೆ; ತಡೆ; ಬಿರಿ: ಮೋಟಾರಿನ ವೇಗವನ್ನು ಬೇಕಾದಂತೆ ಬದಲಿಸಲಿಕ್ಕೆ ಕೈಬಿರಿ, ಬಂಡಿಯನ್ನು ಬೇಕಾದಲ್ಲಿ ನಿಲ್ಲಿಸಲಿಕ್ಕೆ ಕಾಲ್ಬಿರಿ ಇವೆರಡು ಮೋಟರುಬಂಡಿಯ ಮೇಲೆ ಮುಖ್ಯ ಅಂಗಗಳಾಗಿವೆ (ವಿಜ್ಞಾವಿ. ೫೯). [ಕೈ₂ (< ಕೆಯ್₂) + ಬಿರಿ₃ (< ಬಿಱ್)]

**ಕೈಬಿಸಿ** (ನಾ). ೧. ಕೈಯ ಬಿಸಿ, —ಉಷ್ಣ. ೨. (ಆಲಂ) ಶಕ್ತಿ; ಸಾಮರ್ಥ್ಯ; ಶೌರ್ಯ: ಆದರೆ ನನ್ನಂತವನ ಕೈಬಿಸಿ ನಿಮಗೆ ತಿಳಿಯದು (ಕಾವೇರಿ. ೮೮). ೩. (ಆಲಂ) ಲಂಚ: ಕೈಬಿಸಿ ಇಲ್ಲದೆ ಆ ಗುಮಾಸ್ತ ಅರ್ಜಿಯನ್ನು ಮೇಲೆ ಕಳುಹಿಸಲಾರ (ರೂಢಿ).

**ಕೈಬಿಸಿಮಾಡು** = ಲಂಚಕೊಡು: ಅವನ ಬಳಿ ಮೆಲ್ಲನೆ ಸರಿದು ಮೂರು ರೂಬಲ್ ತೆಗೆದು ಅವನ ಕೈಬಿಸಿಮಾಡಿದನು (ಪುನರು. ೫೩೮).
[ಕೈ₂ (< ಕೆಯ್₂) + ಬಿಸಿ]

**ಕೈಬಿಸಿಯಾಟ** (ನಾ). ಕೈಯನ್ನು ಬೆಚ್ಚಗೆ ಮಾಡುವುದು; ಲಂಚಕೊಡುವುದು: ಪಾನನಿರ್ಬಂಧ ಬಂಧಿತರ ಕೈಬಿಸಿಯಾಟ (ಸೂರ್ಯಪಾ. ೫೦-೮). [ಕೈಬಿಸಿ + ಆಟ]

**ಕೈಬೀಸು** 'ಕೆಯ್ವೀಸು' ನೋ.

**ಕೈಬುದ್ದಲಿ** (ನಾ). ಚರ್ಮದಿಂದ ಮಾಡಿದ ಚಿಕ್ಕ ಸೀಸೆ; ಎಣ್ಣೆ ಇಡುವ ಬುರುಡೆ: ಕುತುಪಃ – ಅಲ್ಪಾ ಸ್ನೈವ; ಚಿಕ್ಕದಾದ ಚರ್ಮದ ಸಿದ್ದಿಗೆ ಬುರುಡೆ, ಕೈಬುದ್ದಲಿ (ಸಿದ್ಧಾಂತಿ. ೨೪೩). [ಕೈ₂ (< ಕೆಯ್₂) + ಬುದ್ದಲಿ]

**ಕೈಬೆಟ್ಟು** (ನಾ). ಕೈಬೆರಳು: ಸಾಮ್ರಾಟನಾದ ಅಕಬರನು ಮಂತ್ರಿಗಳೊಡನೆ ಮಾತನಾಡುತ್ತಿದ್ದಾಗ ತನ್ನ ಸಿಂಹಾಸನದ ಕಡೆ ಕೈಬೆಟ್ಟನ್ನು ತೋರಿಸುತ್ತ . . . ಹೀಗೆಂದು ಹೇಳಿದನು (ಕೋಹಿನೂ. ೫).
[ಕೈ₂ (< ಕೆಯ್₂) + ಬೆಟ್ಟು₃ (< ಬೊಟ್ಟು₁)]

**ಕೈಬೆತ್ತ** (ನಾ). ಕೈಯಲ್ಲಿ ಹಿಡಿಯುವ ಬೆತ್ತ: ಮುಂದಿನ ಕುರ್ಚಿಯಲ್ಲಿ ಕುಳಿತಿದ್ದ ಸೇಠರು ಮೆಲ್ಲಗೆ ಕೈಬೆತ್ತದಿಂದ ಕುರ್ಚಿಯನ್ನು ಹಿಂದಕ್ಕೆ ಸರಿಸಿಕೊಂಡರು (ಗೋಪುರ. ೧೧೧). [ಕೈ₂ (< ಕೆಯ್₂) + ಬೆತ್ತ]

**ಕೈಬೆಸ** (ನಾ). ಕೈಕೆಳಗಿನ ಕೆಲಸ, —ಸೇವೆ; ಕೈಂಕರ್ಯ: ಧಾರ್ಮಿಕರು, ವೈಜ್ಞಾನಿಕರು, ದಾರ್ಶನಿಕರು ತಮ್ಮ ತಮ್ಮ ರೀತಿಯಲ್ಲಿ ಸತ್ಯದರ್ಶನವನ್ನು ಮಾಡಿಸಿಕೊಡುತ್ತಿರುವರು, ಕವಿಯು ಒಮ್ಮೊಮ್ಮೆ ಅವರ ಕೈಯಾಳಿನಂತೆ ಕೈಬೆಸಮಾಡುವನು (ಸಾಹಿವಿ. ೩೬).
[ಕೈ₂ (< ಕೆಯ್₂) + ಬೆಸ₁]

**ಕೈಬೇಟೆ** (ನಾ). ಕೈಯಿಂದ ಆಡುವ ಬೇಟೆ; ಚಿಕ್ಕಬೇಟೆ (?): ಅಲ್ಲಿ ಆ ರಾಯಗುವರರನ್ ನಿಲಿಸಿದನ್ ನಮ್ಮೊಡೆಯನಾ ಗಡ್ಡೆಗವಿಯೆ ಕೆಟ್ಟುಳಿದ ಹೆಲನರೈತರೆ ಕೊಲಲು ಕೈಬೇಟೆ ನಮ್ಮುವರು ಬರಲು ನೆರವಪ್ಪುದೆಂಬೊಂದು ನೆನಹಿನಲಿ, ಮುಂದಪ್ಪುದನ್ ತಪ್ಪುಗಂಡನ್ (ಪಾರಸಿ. ೧೭–೩೯೬).

[ಕೈ₂ (< ಕೆಯ್ಯ್₂) + ಬೇಟೆ (< ಬೇಂಟೆ)]

**ಕೈಬೇಡಿ** (ನಾ). ಕೈಗೆ ಹಾಕುವ ಸಂಕಲೆ; ಕೈಕೋಳ: ಗಡ್ಡೆಗೆ ಹೋಗಿ ಮುಟ್ಟಿದ ಬಳಿಕ ತುರ್ಕರು ಆ ಮಂದಿಗೆ ಕೈಬೇಡಿ ಹಾಕಿ ಸಂತೆ ಯೊಳಗೆ ಮಾರಲಿಕ್ಕೆ ತಂದರು (ಮುಂಬಯಿ. ೫–೧೩೩); ಇದನ್ನು ಕೇಳಿ ಫಕೀರನು . . . ಅವನ ಕೈಬೇಡಿ ತೆಗೆಸಿದನು (ಬಂಕಿಮ. ೩೦೨).

[ಕೈ₂ (< ಕೆಯ್ಯ್₂) + ಬೇಡಿ]

**ಕೈಬೋನ** (ನಾ). ಕೈಯ ಅನ್ನ, —ಆಹಾರ; ಕೈತುತ್ತು: ಲಯಮೆಯ್ದಿ ಯದುಬಲಂ ಪಕ್ಕಿಯ ಗೋಸನೆಗುಡುಕು ಜವನ ಕೈಬೋನಂ . . . ಎನಿಸಿದೆ ಗದೆಗೆ ನೀಡೆ ದನುಜಂ ಕರಮಂ (ಜಗವಿ. ೯–೬೨); ಎನಿತುಂ ಕೃಷ್ಣನ ಗಂಧಸಿಂಧುರಮಹಾಕಾಳಂಗೆ ಕೈಬೋನ ಮಪ್ಪಿನೆಗಂ ಮಾರ್ಪಡೆ ಕಂಡು (ಅನಂಪು. ೧೯–೧೨).

[ಕೈ₂ (< ಕೆಯ್ಯ್₂) + ಬೋನ₁]

**ಕೈಭಂಟಿಕೆ** (ನಾ). ಕೈಯ ಶೌರ್ಯ, —ಪರಾಕ್ರಮ, —ಸಾಹಸ: ಉಂಟು ನೀನುಲಿವಾಕು ಯಮ ಕೈಭಂಟಿಕೆಯ ನೀನರಿಯೆ (ಜರಾಮಾ. ೬೭–೪೭).

[ಕೈ₂ (< ಕೆಯ್ಯ್₂) + ಭಂಟಿಕೆ)]

**ಕೈಮ** (ನಾ). ಮಾಂಸದಿಂದ ತಯಾರಿಸಿದ ಒಂದು ಬಗೆಯ ಭಕ್ಷ್ಯ: ಕೋಳಿಕರಿ, ಕೈಮ, ನೆಯ್ಕೂಳು, ಕಡುಂಬುಟ್ಟು ಮತ್ತು ಪಾಯಸ ಗಳನ್ನು ಮಾಡಿದ್ದರು (ನಡೆದಾ. II, ೧೧೩೨).

[← ಅರ. ಕೀಮಾ; ಮರಾ. ಖೀಮಾ]

**ಕೈಮಗುಚು** (ಕ್ರಿ). ೧. ಕೈತಿರುಗಿಸು, —ಬೀಸು; ಕೈಯಶಕ್ತಿ ಸಾಮರ್ಥ್ಯಗಳನ್ನು ತೋರಿಸು; ಬಲಪ್ರದರ್ಶನಮಾಡು: ಹೊಗೆದುದ್ದೆ ಹೆಜ್ಜಾಳುಗಳ ನಗೆಮೊಗವು ಮೋಡಾನೋಡಿಯಲಿ ಕೈಮಗುಚಿ ಕಳೆದನು ನಿಮಿಷದಲಿ ಹೇರಾಳರಾಶಿಗಳ (ಕುವ್ಯಾದ್ರೋ. ೧೬–೫); ವಿಗಡತನವನು ವಹಿಲದಲಿ ಕೈಮಗುಚಿ ಕಳೆದರು . . . ಇವರ ವಿಡಾಯಿಗಳ ನಂಬುಗೆಯ ಕೇವಣ ಪಾಡುಕಾಜಿರ ಕರ್ಣ ನೋಡೆಂದ (ಕುವ್ಯಾದ್ರೋ. ೧೬–೨೫). ೨. ಕತ್ತರಿಸು; ತುಂಡರಿಸು; ಕಳೆ: ಚಿಗುರುವವು ತುದಿಗಜಿಗಳವ ಕೈಮಗುಚುವನು ಖಡ್ಗದಲಿ (ತೊರರಾ. ೩–೧೧–೧೯). ೩. (ಕೈಯಿಂದ) ಎಸೆ; ಬೀಸಾಡು; ಪ್ರಯೋಗಿಸು: ಕೈಮಗುಚಿದನು ಹೊರೆಯೆಂಬನೀತನ ಮೇಲೆ ನಿಮಿಷದಲಿ (ಕುವ್ಯಾಕ. ೨೦–೧೪); ಕೈಮಗುಚಿ, ತೋರಭಲ್ಲೆಯದಿಂದ ಹೊಡೆದ ಹೊಮ್ಮಿಗವ (ಮೋಹತ. ೧೯–೪೦); ದುಗುಡದೊಳ್ ತಜಿದರಿಶರಂಗಳಂ ಶಕುನಿ ಕೈಮಗುಚಿದಂ ಮರಳಿ ಪೊಸಕಣೆಗಳಂ (ತುರಂಗ. ೭೩–೩೦). ೪. ಕೈಮಾರಿ ಹೋಗು; ಕೈತಪ್ಪಿ ಹೋಗು; ಹಸ್ತಾಂತರವನ್ನು ಹೊಂದು; ಇನ್ನೊಬ್ಬನ ಕೈಗೆ ಸೇರು: ಕೈಮಗುಚದೇ ವಿಭವವಿದು ನಿರ್ನಾಮರಾರೋ ಬಿತ್ತಿದರು ಕುರುಭೂಮಿಯಲಿ ವಿಷಬೀಜವನು (ಕುವ್ಯಾಸ. ೧೨–೬೭). ೫. ಕರ್ಮಗಳನ್ನು ಆಚರಿಸು; ಕರ್ಮಕಲಾಪ ಗಳನ್ನು ಮಾಡು: ಹೊಗಳಿ ಕಾಣವು ವೇದವಾವನ ಬಗೆದು ಕಾಣರು ಯೋಗಿಗಳು ಕೈಮಗುಚಿ ಕಾಣರು ಕರ್ಮಿಗಳು ಶಿವ ಶಿವ (ನಿಭಾಗ. ೩–೨–೧೯). ೬. ಇಲ್ಲವೆನ್ನು: ಸಾಲ ಕೇಳಿದೆ; ಆದರೆ ಅವನು ಕೈಮಗುಚಿ ದನು (ರೂಢಿ). ೭. ಕೈಯಾಡಿಸು; ಕೈಯಿಂದ ತಿರುವಿಹಾಕು; ಅಡಿಮೇಲು ಮಾಡು: ರೊಟ್ಟಿ ಸೀಯದಂತೆ ಕೈಮಗುಚಬೇಕು (ರೂಢಿ). ೮. (ಕರಾ) (ಹಣಕಾಸಿನ ವಿಚಾರದಲ್ಲಿ) ವ್ಯವಹಾರ ನಡೆಸು: ಹಣದ ಮುಗ್ಗಟ್ಟಿನಿಂದ ಕೈಮಗುಚುವುದು ಕಷ್ಟವಾಗಿದೆ (ರೂಢಿ). ೯. (ಇಸ್ಪೀಟಾಟದಲ್ಲಿ) ಕೈಯಲ್ಲಿಯ ಎಲೆಗಳನ್ನು ತೆಗೆದುತೋರಿಸು.

[ಕೈ₂ (< ಕೆಯ್ಯ್₂) + ಮಗುಚು (< ಮಗುಚ್ಚು)]

**ಕೈಮಗ್ಗ** (ನಾ). ಕೈಯಿಂದ ನಡೆಸುವ ಮಗ್ಗ; ಸಣ್ಣಮಗ್ಗ: ಈ ಬಟ್ಟೆಗಳೆಲ್ಲವೂ ಕೈಮಗ್ಗದವು (ಕಳಹು. ೧); ಬಟ್ಟೆಗಳನ್ನು ತಯಾರಿಸುವ ಮಿಲ್ಲುಗಳು ಹೆಚ್ಚಾದಷ್ಟು ಕೈಮಗ್ಗದ ಕೆಲಸದವರಿಗೆ ತೊಡಕಾಗುತ್ತದೆ (ರೂಢಿ).

[ಕೈ₂ (< ಕೆಯ್ಯ್₂) + ಮಗ್ಗ]

**ಕೈಮಚ್ಚು** (ನಾ). ಕೈಯಲ್ಲಿ ಹಿಡಿದುಕೊಳ್ಳುವ ಸಣ್ಣ ಮಚ್ಚು: ಕೊಡಲಿ ಕೈಮಚ್ಚು ಗುದ್ದಲಿ ಮೊನೆಹಾರೆಗಳ್ ಪಿಡಿದ ಕರದ ಕುಡುಗೋಲು (ಕಂಸವಿ. ೧೧–೪೦).

[ಕೈ₂ (< ಕೆಯ್ಯ್₂) + ಮಚ್ಚು₆]

**ಕೈಮಡಗು** (ಕ್ರಿ). ಕೈಯನ್ನಿಡು; ಕೈಗೆ ವಿಶ್ರಾಂತಿ ಕೊಡು; ಸಾವಕಾಶಮಾಡು; ತಡಮಾಡು; ತಳುವು: ನಡಪಿದನನುವರ ದೊಳ್ ಕೈಮಡಗದೆ ತಳ್ಳಿಱಿದು ಪೊಗಟೆ (ಎಕ. VIII, ಸೊರಬ. ೧೬–೭೨; 1015); ತೊಱಿದೆಮ್ಮನಾಜಡಿಗೊಂಡು ಕೈಮಡಗದೇಳಿದರಂತೆ ಘುಮ್ಮನೆ ಪೊರ್ದಿದ್ದೈ ಜಿನದೀಕ್ಷೆಯಂ (ಧರ್ಮಾಮೃ. ೮–೬೬); ಇತ್ತಲರಸಂ ಬೇಡುವರ್ಗೆ ಬೇಡಿದುದಂ ಬೇಡಿದಾಗಳೆ ಕೈಮಡಗದೆ ಕೊಟ್ಟು (ಬಾಧಪು. ೪–೩೯ ವ).

[ಕೈ₂ (< ಕೆಯ್ಯ್₂) + ಮಡಗು (< ಮಡಂಗು)]

**ಕೈಮಡು** (ಕ್ರಿ). ಕೈಗಳನ್ನು ಒತ್ತಾಗಿ ಸೇರಿಸು; ಬೊಗಸೆಯೊಡ್ಡು: ಬಿಸಿಲಿಂ ಬೆಂಡಾದವರ್ ತತ್ತೃಷೆಗೆ ಪರಿದು ನೀರಟ್ಟಿಯಿಂ ನೀರ್ಗೆ ಕೈಮಟ್ಟುಸಿರಂ ನುಂಗಿರ್ದ ನಾಸಾಪುಟಮರಳೆ ಬೆಮರ್ ಚುಮ್ಮೆನುತ್ತುಣ್ಮೆ (ದಶಕು. ೬–೭).

[ಕೈ₂ + (< ಕೆಯ್ಯ್₂) + ಮಡು₁]

**ಕೈಮಣೆ** (ನಾ). ಕರಪೀಠ; ಸಣ್ಣಮಣೆ: ಲೈನೋಯಂತ್ರ. . . ಇದರಲ್ಲಿ ಪರಸ್ಪರ ಹೊಂದಿಕೆಯಿಂದ ಕೆಲಸಮಾಡುವ ಮೂರು ಭಾಗ ಗಳಿವೆ. ಕೈಮಣೆ, ಎರಕಹೊಯ್ಯುವ ಸಲಕರಣೆ ಹಾಗೂ ಮಾತೃಕೆ (ಮುದ್ರಕ. ೪೯).

[ಕೈ₂ (< ಕೆಯ್ಯ್₂) + ಮಣೆ]

**ಕೈಮಣೆಗೊಳ್** (ಕ್ರಿ). ಕೈಮಣೆಯನ್ನು ಹಿಡಿದುಕೊಳ್ಳು: ಕೈಮಣೆ ಗೊಂಡ ಪೆಟವನಂತೆ ಕುಕ್ಕರಿಸಿ ಪೊಕ್ಕು (ಅನಂಪು. ೨–೩೦ವ).

[ಕೈಮಣೆ + ಕೊಳ್₁]

**ಕೈಮತ** (ನಾ). (?): ಕೈವಾರದೆ ಕೈಮತದಿಂ ಕೈವಾರದಿ ಗೆಲ್ದ ಲಜ್ಜಿತೆಯನೆಂತೆನೆ ಕೇಳ್ ದೈವಕರ್ಮಾಡಿದೊಡೆತ್ತಂ ದೈವಂ ಮರುಳಾದು ದೆಂಬುದಂ ಕೇಳ್ದಱಿಯಾ (ಮದಕಿ. ೧೦–೪೩).

[?]

**ಕೈಮದ್ದು** (ನಾ). ೧. ಹಾಲು ಮೊದಲಾದ ಆಹಾರ ವಸ್ತುಗಳೊಡನೆ ಕಾಣದಂತೆ ಬೆರಸಿಕೊಡುವ ಒಂದು ಬಗೆಯ ಮದ್ದು; ಕೈಮುಸಕು: ಕೈಮದ್ದು ಬಿದ್ದ ಈ ಎರಡು ತಿಂಗಳಿಂದ ಆತನ ದೇಹವು ಸೊರಗುತ್ತ ಬಂದಿದೆ (ರೂಢಿ). ೨. ವಶೀಕರಣದ ಮದ್ದು. 'ಕೈಮಾಂಸ' ಪರಾ.

[ಕೈ₂ (< ಕೆಯ್ಯ್₂) + ಮದ್ದು₁ (< ಮರ್ದು)]

**ಕೈಮರ** (ನಾ). (ದಾರಿಯನ್ನು ತೋರಿಸುವ) ಕೈಯ ಆಕಾರದ ಮರ; ಮಾರ್ಗದರ್ಶಕ ಸ್ತಂಭ: ದೂರದಿಂದ ನೋಡಿದರೆ ಬೆಟ್ಟದ ಮೇಲಿರುವ ದೇವಸ್ಥಾನವು ಸ್ವರ್ಗಮಾರ್ಗದ ಕೈಮರದಂತೆ ಕಾಣುವುದು (ಹುಟ್ಟಿಹ. ೭೦); ಊರಿಗೆ ಹೋಗಲು ರಸ್ತೆಯೂ ಇಲ್ಲ; ಕೈಮರವೂ ಇಲ್ಲ; ದಾರಿತೋರಿಸುವುದಕ್ಕೆ ಜನಸಂಚಾರವೇ ಇಲ್ಲ (ಮುಸುಗ. ೯೮); ಅದೇ ನಮ್ಮೂರಿನ ಕೈಮರ (ನಮ್ಮೂರ. ೧).

[ಕೈ₂ (< ಕೆಯ್ಯ್₂) + ಮರ₁]

**ಕೈಮಚ್ಚಲು** (ನಾ). ಕೈಗೆ ಮೆಚ್ಚಿಗೆಯಾದದ್ದು (?): ಅರ್ಚಿಸದಾಯಲಾಗ ಪೊಸಪೂಗಳನಂದಿವೆ ಚಂದನಚ್ಛಟಾ ಚರ್ಚೆಗಳೆಂಬವೋಲಡಸಿ ನೋಡಿ ನಖಾಂಕುರ ಕಾಂತಿದಾಮದಿಂದರ್ಚಿಸುವಂತೆ ನೀಡಿ ನಳಿತೋಳನಲಂಪಿನೊಳಾಯ್ದು ಕೊಯ್ದು ಕೈಮಚ್ಚಲ [ಪಾಠಾಂ. ಚ್ಚರ] ಕೋರಮಲ್ಲಿಗೆಗಳಂ ತಳಿರ್ವಟ್ಟಲೊಳೊರ್ವಳೊಟ್ಟಿದಳ್ (ಲೀಲಾವ. ೧೩–೬೬). [ಕೈಮಚ್ಚು + –ಅಲು (< –ಅಲ್$_{2}$)]

**ಕೈಮಚ್ಚು** (ನಾ). ಕೈಗೆ ಮೆಚ್ಚಿಕೆಯಾದುದು, —ಪ್ರಿಯವಾದುದು: ಎನ್ನ ಕೈಮಚ್ಚಿನ ಗೆಡೆಯಾಟದ ಮುತ್ತಿನ ಸೆಂಡೆ (ರಾಮಾಶ್ವ. ೭೧–೨೦).
[ಕೈ$_{2}$ (< ಕೈಯ್$_{2}$) + ಮಚ್ಚು$_{2}$]

**ಕೈಮಸಕ** 'ಕೆಯ್ಮಸಕ' ನೋ.

**ಕೈಮಸಕು** 'ಕೆಯ್ಮಸಕ' ನೋ.

**ಕೈಮಸುಕು** 'ಕೆಯ್ಮಸಕ' ನೋ.

**ಕೈಮಳೆ** (ನಾ). ಹಿಡಿಯುಳ್ಳ ಒಂದು ಬಗೆಯ ಪಾತ್ರೆ (?): ತಳಿಗೆ ಕನ್ನಡಿ ಸಿಪ್ಪು ಕಂಚಿನ ಸಟ್ಟುಗಂ ತೆಱುವಟ್ಟಲಗ್ಗಳದ ಕೈಮಳೆ ತಾಳ ಮೊಪ್ಪುವ ಗಿಣ್ಣಲೆಂಬಿವನಾವಗಂ ಕಳೆದುಕೊಂಡೊಡನಿರ್ದ ಧೂರ್ತಜನಕ್ಕೆ ಜೀವಿತಮೆಂದು . . . ನಿಚ್ಚಲುಂ ಕುಡುವಂ ನೃಪಾತ್ಮಜಂ (ಧರ್ಮಾಮೃ. ೨–೨೬). [ಕೈ$_{2}$ (< ಕೆಯ್$_{2}$) + ಮಳೆ ?]

**ಕೈಮಱಿ$_{1}$** 'ಕೆಯ್ಮಱಿ$_{1}$' ನೋ.

**ಕೈಮಱಿ$_{2}$** 'ಕೆಯ್ಮಱಿ$_{2}$' ನೋ.

**ಕೈಮಾಂಸ** (ನಾ). = ಕೈಮದ್ದು : ಎಂಥ ಕಠೋರ ಮನಸ್ಸು ನಿನ್ನದು ! ಇಡೀ ಮನೆಯ ಜನರನ್ನೆಲ್ಲ ಕೈಮಾಂಸ ಹಾಕಿ ಕೆಡಿಸಬೇಕೆಂದು ನಿನ್ನ ಆಸೆಯಲ್ಲವೇ ? (ಕೈಮಾಂಸ. ೧೨).
[ಕೈ$_{2}$ (< ಕೆಯ್$_{2}$) + ಮಾಂಸ. / ತುಳು. ಕೈಮಾಸ]

**ಕೈಮಾಟ** (ನಾ). ೧. (ಪರದರು) ಕೈಯಿಂದ ಮಾಡುವ ಭಾವಾಭಿನಯ, —ಸೂಚನೆ, —ಸಂಜ್ಞೆ : "ಕೈಮಾಟ ಸಂಜ್ಞೆಯಕ್ಕುಂ" (ಮಂಗರಾ. ೧೦೩–೭). ೨. ಕೈಕೆಲಸದ ಜಾಣ್ಮೆ; ಕೈಚಳಕ; ಹಸ್ತಕೌಶಲ: ಎಮ್ಮಯ ಚೆಲ್ವೆ ಸಾಕು ಕೈಮಾಟದ ಕೋಟಲೆ ಬೇಡ (ತ್ರಿಭುತಿ. ೨೨–೧೫); ಕಾಳೆಗದ ಕೈಮಾಟ ಕಂಗೆಡಿಸಿತು ಜಗತ್ರಯವ (ಸಭಾಗ. ೧೦–೬೯–೨೮); ಮೆಲ್ಲನೆ ಸರಿಪಡಿಸಿಕೊಳ್ಳುವ ರತ್ನಳ ಕೈಮಾಟವೂ ಸುಂದರ (ಕುಸುಸಂ. ೧೩೩). ೩. ಬಲಾತ್ಕಾರದಿಂದ ತೆಗೆದುಕೊಳ್ಳುವಿಕೆ; ಅಪಹರಣ: ಬೇಟವೇ ಪರವಧುವಿನಲಿ ಕೈಮಾಟವೇ ಪರವಿತ್ತದಲಿ (ಕುವ್ಯಾವಿ. ೨–೪೪). ೪. ಕೈಯಿಂದ ಮಾಡುವ ಕೈಂಕರ್ಯ, —ಸೇವೆ: ನೋಟಕಚ್ಚರಿಯಾದ ಪರಮ ಸುಂದರಿಯ ಕೈಮಾಟದಿಂದುಪಚಾರವಡೆದು (ಮೋಹತ. ೪–೩೦). ೫. ಕೈಮಸಕ; ಮೋಸ; ವಂಚನೆ.

ಕೈಮಾಟಕೆಬರು = ಅಧೀನವಾಗು ; ವಶವಾಗು ; ಪ್ರಭಾವಕ್ಕೆ ಒಳಗಾಗು : ಕ್ಷೀಣ ಕರ್ಮಗಳ ಕೈಮಾಟಕೆ ಬಂದು ನಿತ್ರಾಣಿಯಾಗಿರುತಿಹನಾತ್ಮ (ಭರಚ. ೬೮–೧೧೧). [ಕೈ$_{2}$ (< ಕೆಯ್$_{2}$) + ಮಾಟ$_{1}$]

**ಕೈಮಾಟಗ, ಕೈಮಾಟಿಗ** (ನಾ). ಕೈ ಕೆಲಸ ಮಾಡುವವನು; ಊಳಿಗದವನು : ಪೋಗಿ ಕೈಮಾಟಗರ ಕರೆಸಿಯಗಣಿತ ನೆರೆಹೆ ಬೇಗದಿಂದೆಲ್ಲ ಸಾರಣೆ ಕಾರಣೆಯ ಮಾಡಿ (ನವಮೋ. ೧೩–೩೧). **ಕೈಮಾಟಿಗ** : ಪೊರಮಟ್ಟು ಕಲ್ಲುಕುಟಿಗರ ಭಂಡಿಕಾರರಂ ಕರೆಸಿದನು ಕುದ್ದಾಲಯೆಲಿ ಗೋಲ ಕೈಮಾಟಿಗರ ಕೋಟಾಕೋಟಿಯಂ ನೆರಹಿ (ನವಮೋ. ೨೧–೧೩).
[ಕೈಮಾಟ + –ಇಗ]

**ಕೈಮಾಟಿಗ** 'ಕೈಮಾಟಗ' ನೋ.

**ಕೈಮಾಡು** 'ಕೆಯ್ಮಾಡು' ನೋ.

**ಕೈಮಾರಾಟ** (ನಾ). ೧. ಮನೆಯ ಬಾಗಿಲಿಗೆ ತಂದು ವಸ್ತುಗಳನ್ನು ಮಾರುವುದು : (ಕ). ೨. ಮಾರಾಟದ ಮೂಲಕ ಕೈಯಿಂದ ಕೈಗೆ ಆಸ್ತಿ ಬದಲಾಗುವಿಕೆ : (ಕ).
[ಕೈ$_{2}$ (< ಕೆಯ್$_{2}$) + ಮಾರಾಟ (< ಮಾಱಾಟ)]

**ಕೈಮಾರು$_{1}$** (ನಾ). ಚಾಚಿದ ಒಂದು ಕೈಯ ತುದಿಯಿಂದ ಆಚೆಗೆ ಚಾಚಿದ ಕೈಯ ಇನ್ನೊಂದು ತುದಿಯವರೆಗಿನ ದೂರ; ಒಂದು ಮಾರು ; ನಾಲ್ಕು ಮೊಳ: (ಕ). [ಕೈ$_{2}$ (< ಕೆಯ್$_{2}$) + ಮಾರು$_{3}$]

**ಕೈಮಾರು$_{2}$** (ನಾ). ೧. ಮನೆಯ ಬಾಗಿಲಿಗೇ ವಸ್ತುಗಳನ್ನು ತಂದು ಮಾರುವುದು : (ಕ). ೨. ಒಬ್ಬರ ಕೈಯಿಂದ ಇನ್ನೊಬ್ಬರ ಕೈಗೆ ಬದಲಿಸುವುದು ; ಕೈಬದಲಿ: ಆ ಹೊಲ ಬಹಳ ಕೈಮಾರಾಗಿದೆ (ರೂಢಿ). [ಕೈ$_{2}$ (< ಕೆಯ್$_{2}$) + ಮಾರು$_{2}$ (< ಮಾಱು$_{2}$)]

**ಕೈಮಿಂಚು** (ಕ್ರಿ). ೧. ಕೈಗಳ ಸಾಮರ್ಥ್ಯ ಹೆಚ್ಚಾಗು, —ಮೇಲಾಗು: ಹರಿಯುದರ ಕೈಮಿಂ[ಪಾಠಾಂ. ಮುಂ]ಚುವುದು ವರಸಂಗರಂಜಿತವಹುದು (ಜೈಮಿಭಾ. ೧೦–೫೨). ೨. ಒಂದು ಕೈಯಿಂದ ಇನ್ನೊಂದು ಕೈಗೆ ದಾಟಿಹೋಗು : ಹೊಲದ ಪುರುಳೆಲ್ಲೆಲ್ಲೊ ಮನೆಮನೆಯ ಕೈಮಿಂಚಿ (ಕಾಲೂರ. ೧೨೧–೨೫೫). ೩. ಕೈಮೀರು : ನಾನು ನಿಜವಾಗಿಯೂ ಅವಿಧೇಯಳು ಎಂದುಕೊಂಡೆ. ಆದರೇನು ಮಾಡುವುದು? ಕೈಮಿಂಚಿ ಹೋಗಿದೆ (ಸುವಸಂ. ೨೦).
[ಕೈ$_{2}$ (< ಕೆಯ್$_{2}$) + ಮಿಂಚು$_{2}$)]

**ಕೈಮಿಗು** 'ಕೆಯ್ಮಿಗು' ನೋ.

**ಕೈಮೀರು** 'ಕೆಯ್ಮೀಱು' ನೋ.

**ಕೈಮೀಱು** 'ಕೆಯ್ಮೀಱು' ನೋ.

**ಕೈಮೀಱುಹ** 'ಕೆಯ್ಮೀಱುಹ' ನೋ.

**ಕೈಮುಂಚು** (ಕ್ರಿ). ೧. ಕೈಮುಂದಾಗು, —ಮೇಲಾಗು : ಹರಿಯುದರ ಕೈಮುಂ[ಪಾಠಾಂ. ಮಿಂ]ಚುವುದು ವರಸಂಗರಂಜಿತವಹುದು (ಜೈಮಿಭಾ. ೧೦–೫೨). ೨. ಮೊದಲೇ ಹೋಗು ; ಮುಂಚಿತವಾಗಿ ಹೋಗು : ಕೈಮುಂಚಲೆಂದು ಮೈಸೂರ ಪಠಾಣರು ಬೈದು ಬೊಬ್ಬಿರಿದು ಸಮರದಿ (ಸೌಂದಕಾ. ೭–೧೧೩). [ಕೈ$_{2}$ (< ಕೆಯ್$_{2}$) + ಮುಂಚು$_{1}$]

**ಕೈಮುಗಿ** 'ಕೆಯ್ಮುಗಿ' ನೋ.

**ಕೈಮುಗಿಯಿಸು** (ಕ್ರಿ). ಕೈಮುಗಿಯುವಂತೆ ಮಾಡು ; ನಮಸ್ಕರಿಸುವಂತೆ ಮಾಡು: ಪಲರಿಂದಂ ಪಾಪಾಂತಕನೆನಿಸಿ ನೆಱೆಯೆ ಕೈಮುಗಿಯಿಸಿದಂ (ಧರ್ಮಾಮೃ. ೬–೧೦೫).
[ಕೈಮುಗಿ (< ಕೆಯ್ಮುಗಿ) + –ಇಸು$_{3}$]

**ಕೈಮುಗಿಹ** (ನಾ). ಕೈಮುಗಿಯುವಿಕೆ; ನಮಸ್ಕಾರ ಮಾಡುವಿಕೆ: ಓ ನೋಡು ಬಾರಾ ಗಿಡದ ಕೈಮುಗಿಹ ಮೊಗ್ಗಾಗಿ ಮೈದೋರುತಿದೆ (ಅನಿಕೇ. ೨೨–೨). [ಕೈ$_{2}$ (< ಕೆಯ್$_{2}$) + ಮುಗಿಹ]

**ಕೈಮುಚ್ಚು** (ಕ್ರಿ). ೧. (ಬಟ್ಟೆ ಮೊದಲಾದವುಗಳಿಂದ) ಕೈಯನ್ನು ಮುಚ್ಚು, —ಮರೆಸು : ಬೋಳನು ಕೈಮುಚ್ಚಿ ಉಡುಗೊರೆ ಕೊಡಲು ಮುಗುಳುನಗುತ್ತ ಕೋಲ್ಕಾರರು ಹೀಗೆಂದರು (ಕಾಲೂರ. ೧೦ ಕಥಾಸಾರ). ೨. ಸುಮ್ಮನೆ ಕೈಕಟ್ಟಿಕೊಂಡು ಕುಳಿತುಕೊಳ್ಳು: ಸ್ವಸ್ಥ ಕೈಮುಚ್ಚಿಕೊಂಡು ಕೂಡ್ರುವದು (ಮುಂಬಯಿ. ೪–೭೨).
[ಕೈ$_{2}$ (< ಕೆಯ್$_{2}$) + ಮುಚ್ಚು$_{1}$]

**ಕೈಮುಟ್ಟೆ** (ಅ). ಕೈಯ್ಯಾರೆ; ತನ್ನ ಕೈಯಿಂದಲೇ; ಸ್ವತಃ : ನಾವಿಬ್ಬರೂ ಕೂಡಿ ನಾವೇ ಕೈಮುಟ್ಟೆ ಉದ್ಯಾನ ರಚಿಸಿಬಿಡೋಣ (ಇಪ್ಪಕ. ೩೫೫); ಅವರನ್ನು ನನ್ನ ಕೈಮುಟ್ಟೆ ಸಂಹರಿಸುವೆನು (ತುಳಸಿ. ೨೫೭). [ಕೈ$_{2}$ (< ಕೆಯ್$_{2}$) + ಮುಟ್ಟೆ$_{2}$ (< ಮುಟ್ಟಂ)]

**ಕೈಮುಟ್ಟೆ** (ನಾ). (ಕರಾ) ಸಣ್ಣಮುಟ್ಟೆ; ಅಂಗಳದ ಏರುಪೇರುಗಳನ್ನು ಸಮತಲಮಾಡಲು ಉಪಯೋಗಿಸುವ, ಮರದಿಂದ ಮಾಡಿದ ಒಂದು ಬಗೆಯ ಸಾಧನ; ಧಮ್ಮಸ್ಸು ಮರ: ಅವನು ಕೈಮುಟ್ಟೆಯಿಂದ ಅಂಗಳವನ್ನು ಸರಿಪಡಿಸುತ್ತಾನೆ (ರೂಢಿ).
[ಕೈ$_2$ (< ಕೆಯ್$_2$) + ಮುಟ್ಟೆ$_1$]

**ಕೈಮುಟ್ಟು$_1$** (ಕ್ರಿ). ೧. ಕೈಯಿಂದ ಮುಟ್ಟು; ಹಸ್ತದಿಂದ ಸ್ಪರ್ಶಿಸು: ಹಣ ಬಂಗಾರ ವಸ್ತ್ರ ಕಪ್ಪಡ ಬಟ್ಟೆಯಲ್ಲಿ ನೆಟ್ಟನೆ ಬಿದ್ದಿರಲು ಕಂಡು ಕಾತರಿಸಿ ಕೈಮುಟ್ಟೆ ಎತ್ತದ ಭಾಷೆ (ಅದವ. ೫೨); ಹಲವು ಸೂಳ್ ಕೈಮುಟ್ಟೆ ನಮಿಸುತ (ಬಸವು. ೫೮–೨೩). ೨. ಕೈಯನ್ನು ಸೇರು; ಕೈಗೆ ಬರು; ತಲುಪು: ಕಾಗದ ಬಂದು ಕೈಮುಟ್ಟಿತು (ರೂಢಿ). ೩. ಸೊಂಡಿಲಿನಿಂದ ಮುಟ್ಟು,—ಸ್ಪರ್ಶಿಸು: ಬೆಟ್ಟಬೀಳಲುವರಿದವನೆ ಕೈಮುಟ್ಟೆ ಮಹಿಯನು ದಂತಿಘಟೆ ಸಾಲಿಟ್ಟುದು (ಕುವ್ಯಾಕ. ೧೦–೪). ೪. (ಶಪಥ ಅಥವಾ ಆಣೆಗಾಗಿ) ಇನ್ನೊಬ್ಬರ ಕೈಯನ್ನು ಮುಟ್ಟು; ಕೈಮೇಲೆ ಕೈಯಿಡು: ಸುಳ್ಳು ಹೇಳುತ್ತಿಲ್ಲವೆಂದು ನನ್ನ ಕೈಮುಟ್ಟಿ ಹೇಳು (ರೂಢಿ). [ಕೈ$_2$ (< ಕೆಯ್$_2$) + ಮುಟ್ಟು$_1$]

**ಕೈಮುಟ್ಟು$_2$** (ನಾ). ಕೈಕೆಲಸಕ್ಕೆ ಉಪಯೋಗವಾಗುವ ಉಪಕರಣ,—ಆಯುಧ: ಬಡಗಿ ಕಮ್ಮಾರರ ಕೈಕೆಲಸದ ಕೈಮುಟ್ಟುಗಳೂ ಅವರ ಬಳಿಯಿದ್ದವು (ಮೊಮುಗು. ೫೮). 'ಮರಮುಟ್ಟು' ಪರಾ.
[ಕೈ$_2$ (< ಕೆಯ್) + ಮುಟ್ಟು$_2$]

**ಕೈಮುದ್ದೆ** (ನಾ). ಕೈಯಲ್ಲಿ ತೆಗೆದುಕೊಂಡ ಉಂಡೆ,—ತುತ್ತು: ಕೈಮುದ್ದೆಯ ಕೆಡಹಿನಲ್ಲಿ ಬಾಯ್ಗೆ ಬಯಲು (ಶೂನ್ಯಸಂ. ೨೪೩–೨೪); ಗೋವಳರ ಮೇಳದ ಕಲ್ಲಿಗೂಳ ಕೈಮುದ್ದೆಯಂ ಕೆಗೆದುಂಡು (ಜೈಮಿಭಾ. ೬–೪೭). [ಕೈ$_2$ (< ಕೈಯ್$_2$) + ಮುದ್ದೆ$_1$]

**ಕೈಮುದ್ದೆಗೊಳ್** (ಕ್ರಿ). ಕೈಯಲ್ಲಿ ಮುದ್ದೆಯನ್ನು ತೆಗೆದುಕೊಳ್ಳು; ಕೈತುತ್ತುಮಾಡಿಕೊಳ್ಳು: ಬಿದ್ದವಗಣಿತ ತುರಗದಳ ಕೈಮುದ್ದೆಗೊಂಡನು ಕಾಲನು (ಕುವ್ಯಾಕ. ೩–೫). [ಕೈಮುದ್ದೆ + ಕೊಳ್$_1$]

**ಕೈಮುರಿ$_1$** 'ಕೈಮುಱಿ' ನೋ.

**ಕೈಮುರಿ$_2$** (ನಾ). ಕೈಯಲ್ಲಿ ಧರಿಸುವ ಒಂದು ಬಗೆಯ ಆಭರಣ; ಬಳೆ: (ಶ). [ಕೈ$_2$ (< ಕೆಯ್$_2$) + ಮುರಿ$_2$]

**ಕೈಮುರಿಗೆ** (ನಾ). ಕೈಯ ಸುತ್ತಲೂ ಸುತ್ತಿದ ಹುಲ್ಲು ಅಥವಾ ಬಟ್ಟೆ: ದಂಡೆಯಂ ಕೊಂಡು ನಿಂದಿದಿರೊಳ್ ಪಾಯ್ದದ ಕಿತ್ತು ಕೈಮುರಿಗೆಯಂ ಕೈಗಣ್ಮ ... ಮಾಱಿ ತಿವಿದಂ (ರಾಜಶೇ. ೫–೯೯).
[ಕೈ$_2$ (< ಕೆಯ್$_2$) + ಮುರಿಗೆ]

**ಕೈಮುಱಿ, ಕೈಮುರಿ$_1$** (ಕ್ರಿ). ಕೈತುಂಡಾಗು, —ಕತ್ತರಿಸಿಹೋಗು: ಕೇಳಿಲೆ ಮರುಳೆ ಸೂತಜ ಕೈಮುಱಿಯೆ ಸಂಗರದ ಸಿರಿ ಹಿಂಗುವಳೆ ತನ್ನನೆನ್ನುತ್ತ ಗರ್ಜಿಸಿದ (ಕುವ್ಯಾದ್ರೋ. ೬–೫೪). **ಕೈಮುರಿ$_1$**: ಆಯುಧವಿಲ್ಲದೆ ಕೈಮುರಿದಂತಾಗಿದೆ (ರೂಢಿ).
[ಕೈ$_2$ (< ಕೆಯ್$_2$) + ಮುಱಿ$_1$]

**ಕೈಮೂಲ** (ನಾ). ಕೈಯಿಂದ ಬರೆದ ಅಥವಾ ಕಂಡರಿಸಿದ ಮೂಲಪ್ರತಿ: ಇದಕ್ಕೆ ಸಾಕ್ಷಿಗಳು ಸೂರ್ಯಚಂದ್ರಾದಿಗಳು ಯಿದಕ್ಕೆ ಕೈಮೂಲ ಶಿಲಾಪ್ರತಿ (ಎಕ. XII, ಮದ್ದಗಿ. ೫೬–೨೮; 1738).
[ಕೈ$_2$ (< ಕೆಯ್$_2$) + ಮೂಲ]

**ಕೈಮೂಳಿ** (ನಾ). ೧. ಕೈಯಿಲ್ಲದವಳು, —ಅಂಗಹೀನೆ: ಆ ಕೈಮೂಳಿ ಯಾವ ಕಾರ್ಯವನ್ನೂ ಮಾಡಲಾರಳು (ರೂಢಿ). ೨. ಯಾವ ಆಭರಣವನ್ನೂ ಧರಿಸದ ಕೈ; ಬೋಳುಗೈ: (ಶ).
[ಕೈ$_2$ (< ಕೆಯ್$_2$) + ಮೂಳಿ$_1$ (< ಮೂಱು$_1$)]

**ಕೈಮೆ$_1$**, ಕಯ್ಮೆ, ಕೈವ್ಮೆ$_2$, ಗೆಯ್ಮೆ, ಗೇಮೆ, ಗೈಮೆ (ನಾ). ೧. ಮಾಡುವಿಕೆ; ಕೆಲಸ; ಕಾರ್ಯ: "ಕೈಮೆಯೆನೆ ಮಾಟಂ" (ಚತುನಿ. II, ೮೪); ಆ ಮಾಯಾಮಾಧವನೆಳಮೆಯ ಕೈಮೆಗಳಂ ಕಿವಿಸೊಗಯಿಸೆ ಕೇಳ್ದು (ಚಕವಿ. ೩–೪೨); ಕೆಯ್ಗುಮರ್ದ ಚಿಂತಾಮಣಿಯ ನೊತ್ತೆಯಿಟ್ಟು ಬಾಚ್ಚಿ ಕೈನೆಯ ಕೈಮೆಗೊಳಗಾದೆನಕ್ಕಟ (ರಾಮಾಶ್ವ. ೬೮–೬). ೨. ಕೈಚಳಕ; ಹಸ್ತಕೌಶಲ; ನೈಪುಣ್ಯ; ಜಾಣ್ಮೆ: "ಕೈಮೆಯೆ ಕೈಚಳಕಂ" (ಭಾರನಿ. ೨೮); ಆ ಸಭೆಯ ನೋಡುವವು ಶಿಲ್ಪದ ದೇಸೆಗಾಱರ ಕೈಮೆಗಳು ಲೇಸೈಸಲೇ (ಕುವ್ಯಾಸ. ೧೩–೨೪); ಬಿಲ್ಲಿಡಿದು ಜೀಗೈದು ನಿಂದು ಛಿಡುಗಣೆಗಳಂ ತೆಗೆದೆಚ್ಚು ಕರ್ಣಜನ ಕೈಮೆಗಿಂ ಮಿಗಿಲಾಗಲು (ಜೈಮಿಭಾ. ೧೨–೨೩); ಅಡಿಯಲ್ಲಿ ಬೆರಳು ಮುಡಿಯಲ್ಲಿ ಕುರುಳು ತೀಡಿಹುದು ಒಂದೆ ಕೈಮೆ (ಸೂರ್ಯಪಾ. ೫೯–೬). ೩. ಕಪಟ; ಮೋಸ; ತಂತ್ರ: ಕಳವುಗಳ ಕೈಮೆಗಳ ಮೋಡಾಮೋಡಿಯುಬ್ಬಣದ . . . ಚದುರ ಭಟರಧ್ವಳಿಸಿ ಹೊಯ್ದಾಡಿದರು (ಕುವ್ಯಾದ್ರೋ. ೧೪–೮); ಕಡುಹಿನಲಿ ಕೈಮೆಯಲಿ ಮಾಯಾಮೋಹನಂಗಳಲಿ ತೊಡಚಿಕೊಂಬ . . . ಮುಗ್ಧೆಯರು (ತೊರರಾ. ೧–೫–೩೦). **ಕಯ್ಮೆ**: ೨. ಕಯ್ಮೆಯೆನೆ ಮುನ್ನಡಿದು ಬೆಳ್ಳಿ ಮುಂದಿರೆ ನೋಡಿ ಬಾಯ್ಮಸೆಯ ಕುಡುಗೋಲ ಕಯ್ಪಿಡಿದು ಸೆಳೆದಂ (ಕಾಲೂರ. ೧೩೦–೨೭). **ಕೈವ್ಮೆ$_2$**: ೨. ಕೈವ್ಮೆ ತೋಱಿದನೆ ಕಲಿಕರ್ಣ ನಿನ್ನೊಡನೆಂದನಾ ಭೂಪ (ಕುವ್ಯಾಕ. ೧೭–೧೩). **ಗೆಯ್ಮೆ**: ೧. ಹಗೆಗಳ ಮನೆ ಮುರುಕುತನದ ಗೆಯ್ಮೆಯಲ್ಲಿ ಅಕಬರನೆ ಅವನಿಗೆ ಶರಣೆಂದು ತೋರಿರಬೇಕು (ನೂರಜ. ೪). ೪. ಒಕ್ಕಲುತನ; ಬೇಸಾಯ; ಕೃಷಿ: ದುಂತವನಂ ಬೆಳೆವುದಕೆ ಹೊಲಂ . . . ಪರಿಕಾಲುದಕಮದಕೆ ಕಳವನ್ಯಸ್ತ್ರೀರತಮೇ ಗೆಯ್ಮೆ (ಜಯಕಾ. ೧೦–೧೭). **ಗೇಮೆ**: ೪. ಗೆಬ್ಬಿಸೆಂದು ಗೇಮೆ (ಶಮದ. ಮ. ೩೩ ವೃತ್ತಿ); ಸಕಾಲದಲ್ಲಿ ಮಳೆಬರದೆ ಗೇಮೆಯೆಲ್ಲಾ ಹಾಳಾಯಿತು (ರೂಢಿ). **ಗೈಮೆ**: ೧. ಪಲವೋದುಗಳಿಂದ ಪಲವು ಗೈಮೆಗಳಿಂದ (ಹದಿಬ. ೧–೩೩); ಈ ಹೊಲಸು ಗೈಮೆಗೆ ಏನು ಹೇಳಬೇಕೋ ನನಗೆ ತಿಳಿಯದು (ಹಾಹುತ್ತ. ೯೪). ೪. ಗಿಡುವ ಕಡಿಯದೆ ಗೈಮೆಗೆ ಬಾಹಂಥಾ ಭೂಮಿಸು ಸಾಗಮಾಡಿಕೊಂಡು (ಎಕ. VIII, ತೀರ್ಥಹ. ೭೩–೨೭; 1674); ಸ್ವಂತಗೈಮೆ ಮಾಡಲಾರದ ಭೂಮಿಯಿಂದ ಬರುವ ವರಮಾನ ಸಾಲದಾಗಿತ್ತು (ಜಾರುದಾ. ೪).
[ಕೈ$_1$ (< ಕೆಯ್$_1$) + -ಮೆ$_1$]

**ಕೈಮೆ$_2$** (ನಾ). ಕೆಟ್ಟತನ; ದುರುಳತನ; ದುಷ್ಟತನ: ಕಗ್ಗೊಲೆಯ ಕಾಮನ ಕೈಮೆಯನು ಕಳಲಿಸು ಕಟಾಕ್ಷದ ಕರುಣಭಾವದಲಿ (ತೊರರಾ. ೩–೪–೧೭). [← ತಮಿ. ಕಯಮ್ಮೈ, ಕಯಂ]

**ಕೈಮೆಗಾಱ** (ನಾ). ಕೈ ಚಳಕವನ್ನು ತೋರಿಸುವವನು; ಸಾಹಸಿ; ಪರಾಕ್ರಮಿ: ಕಡು ಚಳಕದ ಕೈಮೆಗಾಱರೊಳ್ ಬಿರುದಾಂತಂ (ಚಕವಿ. ೪–೧೪೪); ನಡುಗರುಡಿಯ ಪೂಜೆಯ ಬಿರುದಿನ ಕೈಮೆಗಾಱನೊರ್ವಂ ತನ್ನೊಡಲ ಪೆರ್ಮೆಯಂ ಕೈಮೆಯ ಬಲ್ಪಂ ನಂಬಿ (ಚಕವಂ. ೧೭೪). [ಕೈಮೆ$_1$ + -ಕಾಱ]

**ಕೈಮೇಲು** (ನಾ). ಅತಿಶಯ; ಉತ್ತಮಿಕೆ; ಶ್ರೇಷ್ಠತೆ; ಆಧಿಕ್ಯ. 'ಕೈಮೇಲಾಗು' ಪರಾ. [ಕೈ$_2$ (< ಕೆಯ್$_2$) + ಮೇಲು]

**ಕೈಮೇಲಾಗು** (ಕ್ರಿ). ಶ್ರೇಷ್ಠನಾಗು; ಕೊಡುಗೈಯಾಗು: ಶ್ರೀಲಕುಳೀಶ ಪದಪ್ರಕ್ಷಾಳನಮಂ ಮಾಡಿ ಕೊಟ್ಟನೀ ಸ್ಥಾನಮನೀ ಭೂಲೋಕಮುಱಿಯೆ ತಾಂ ಕೈಮೇಲಾಗಿರೆ ಧಾರೆಯೆಱೆದು ಸಲೆ ಶಿವರಾಜಂ (ಕೊಲ್ಹಾಶಾ. ೮–೯೯; 1147).
[ಕೈ$_2$ (< ಕೆಯ್$_2$) + ಮೇಲು + ಆಗು$_1$]

**ಕೈಮೇಳ** (ನಾ). ಹೋರಾಟ (?) : ಅರಿಯ ರಾವುತರು ಕೈಮೇಳದ ಕನ್ನೋಜಗಳು ಗೌಳರಾವುತರು ಬಂದರು (ಕುರಾಸಾಂ. ೧೧-೨೪).
[ಕೈ₂ (< ಕೆಯ್₂) + ಮೇಳ]

**ಕೈಮೇಳವಿಸು** (ಕ್ರಿ). ೧. ಜೊತೆಗೂಡು; ಒಟ್ಟಾಗು; ಸೇರು; ಕೂಡು: ದಿಗುವಳೆಯದಲಿ ಕೈಮೇಳವಿಸಿದವು ತಂಬಟಧ್ವನಿ ಜಡಿವ ಕಹಳೆಗಳು (ಕುವ್ಯಾದ್ರೋ. ೧೨-೬); ಒಳಗೆ ಕಾಮನ ಕೂಡೆ ಕಸ್ತೂರಿ ಗಂಧಿ ಕೈಮೇಳವಿಸಿದಳು (ಮೋಹತ. ೧೬-೩೦). ೨. ಹೋರಾಡು; ಸೆಣಸು; ಯುದ್ಧಮಾಡು: ಕಾಲಗತಿಯೋ ಮೇಣ್ ಕಪರ್ದಿಯ ಕೀಲಕವೊ ರವಿಯೊಡನೆ ತಮ ಕೈಮೇಳವಿಸಿತೇ ಶಿವಶಿವಾಯೆನುತಸುರ ಹಲುಮೊರೆದ (ಕುವ್ಯಾಅ. ೧೨-೨೬). ೩. ಕೈಗೂಡು; ನೆರವೇರು; ಸಿದ್ಧಿಸು; ಸಫಲವಾಗು: ಬಾಲೆ ಸ್ವೈರಿಸು ಕಾರ್ಯಗತಿ ಕೈಮೇಳವಿಸುವುದು ಘಳಿಗೆಯೆರಡನು ಬೀಳುಗೊಟ್ಟರೆ (ನಿಭಾಗ. ೩-೫-೭). ೪. ಕೈಗೂಡಿಸು; ಒಪ್ಪಿಸು; ಸಮರ್ಪಿಸು: ಲಕ್ಷ್ಮೀಲೋಲನಲಿ ಸಲೆ ತನ್ನನೇ ಕೈಮೇಳವಿಸುವುದು ತಂದೆ ತದ್ಗತಭಾವಭಕುತಿಯಲಿ (ನಿಭಾಗ. ೭-೪-೨೦). ೫. ಸಂಭವಿಸು; ಒದಗು; ಉಂಟಾಗು: ಕಾಲ ವಿಷಮವು ಕೌರವ ಕ್ಷಿತಿಪಾಲ ಪಾಂಡುಕುಮಾರರಲಿ ಕೈಮೇಳವಿಸುವುದು ಕದನ (ಕುವ್ಯಾಅ. ೫-೩೧). ೬. ಕೈಗೆ ಅಳವಡು; ಒಪ್ಪು; ಸರಿಹೋಗು: ಹೇಳುಸಾರಥಿ ಬಿಲ್ಲಿದಾವನ ತೋಳಿಗಳವಡುವುದು ಮಹಾ ಶರಜಾಲ ಬೆಸಗೈದಪವಿದಾರಿಗೆ ... ಮೇಲುಗೈದುಗಳಾರಿಗಿವು ಕೈಮೇಳವಿಸುವವು ಮನದ ಸಂಶಯ ಹಿಂಗೆ ಹೇಳೆಂದ (ಕುವ್ಯಾವಿ. ೬-೩೯).
[ಕೈ₂ (< ಕೆಯ್₂) + ಮೇಳವಿಸು]

**ಕೈಮೈ₁** (ನಾ). ೧. ಕೈ ಮತ್ತು ದೇಹ: ಹಿಳುಕು ಕವಿದವು ಭಟನ ಕೈಮೈಗಳಲಿ (ಕುವ್ಯಾದ್ರೋ. ೫-೫೬).
[ಕೈ₂ (< ಕೆಯ್₂) + ಮೈ (< ಮೆಯ್)]

**ಕೈಮೈ₂** 'ಕೈಮೆ₁' ನೋ.

**ಕೈಮೈತನ** (ನಾ). ಕಲಿತನ; ಬಂಟತನ; ಶೌರ್ಯ: ವಿನಯ ವೇಕಿದು ನಿಮ್ಮ ಭುಜಬಲದನುವ ಬಲ್ಲೆನು ನಿಮ್ಮ ಕೈಮೈತನದ ಹವಣನು ಕಾಬೆನು (ಕುವ್ಯಾದ್ರೋ. ೬-೧೫). [ಕೈಮೈ₂ (< ಕೈಮೆ₁) + -ತನ]

**ಕೈಮೊಕ್ಕು** (ಕ್ರಿ). ಕೈಮುಗಿ; ವಂದಿಸು: ದಾರೀಲಿ ಹನುಮಂತ ರಾಯನಿಗೆ ಕಾಯಿ ಒಡೆದು ಕೈಮೊಕ್ಕಿಹೋಗಿ (ಸಣ್ಣಕ. ೨೨).
[ಕೈ₂ (< ಕೆಯ್₂) + ಮೊಕ್ಕು (< ಮೊಟ್ಟು₁)]

**ಕೈಮೊಗ** (ನಾ). ಅಂಗೈ; ಹಸ್ತತಲ (?): ಗಡಣದೆ ಮಾಡೇವಿಯ ಬಗೆಯೊಡೆಯನ ನೊಸಲೊಳ್ ಕದಂಪಿನೊಳ್ ಕೈ [ಪಾಠಾಂ. ಮುಂ] ಮೊಗದೊಳ್ ತೊಡೆಯೆಡೆಯೊಳ್ ತೋಳೆಡೆಯೊಳ್ ಬಿಡೆ ನಟ್ಟುವು ಕಾವ ನಂಬುಗಳ್ ತಾವೈದುಂ (ಕಬ್ಬಿಕಾ. ೩೦೭). [ಕೈ₂ (< ಕೆಯ್₂) + ಮೊಗ]

**ಕೈಮೊಱೆ** (ನಾ). ಕೈಯನ್ನೆತ್ತಿಕೊಂಡು ಮೊರೆಯಿಡುವುದು, —ಕೂಗುವುದು: ನಿರ್ದ್ರವದ ತಾಳಿಯಲಿ ಕೈಮೊ[ಪಾಠಾಂ. ನೊ, ಸೊ] ಱೆಯ ಕಂಬಟಿಗೋಳ ಕಲ್ಲಿಯ ಜೋಳಿಗಳ ಗೋಪಾಳಕರು ಬಂದೆಱಗಿ ಬಿನ್ನೈಸಿದರು (ಜೀವಂಚ. ೬-೫). [ಕೈ₂ (< ಕೆಯ್₂) + ಮೊಱೆ₂]

**ಕೈಯಂಗಿ** (ನಾ). ಕೈಯ ಕವಚ; ಕೈಗವಸು: ಲಕ್ಷ್ಮಣನು ಉಕ್ಕಿನ ಅಂಗಿಯನ್ನು ತೊಟ್ಟು ಉಡುಪಿನ ಚರ್ಮದ ಕೈಯಂಗಿಯನ್ನು ಹಾಕಿಕೊಂಡು (ಮುಂಬಯಿ. ೬-೨೮೭). 'ಕೆಯ್ಪೊಡೆ' ಪರಾ.
[ಕೈ₂ (< ಕೆಯ್₂) + ಅಂಗಿ₂]

**ಕೈಯಂಡೆ** (ನಾ). ಕೈಯಲ್ಲಿ ಹಿಡಿಯುವ ಅಂಡೆ; ಜೀರ್ಕೊಳವೆ: ಅಂಡೆಯ ನೆಗಹಿ ಕುಂಕುಮರಸದುಂಬಿ ಕೈಯಂಡೆಯ ಕೊಳವೆಯ ಬಿಗಿದು (ಮೋಹತ. ೧೪-೬೫). [ಕೈ₂ (< ಕೆಯ್₂) + ಅಂಡೆ₂]

**ಕೈಯಂತ್ರ** (ನಾ). ಕೈಯಿಂದಲೇ ತಿರುಗಿಸಬಹುದಾದ ಯಂತ್ರ ಸಣ್ಣಯಂತ್ರ: ಕಾಫಿ ಹುಡಿಮಾಡುವ ಸಣ್ಣ ಕೈಯಂತ್ರವನ್ನಿಟ್ಟು ಕೊಳ್ಳುವುದು ಒಳ್ಳೆಯದು (ಅಡುಸಾ. ೫೩).
[ಕೈ₂ (< ಕೆಯ್₂) + ಯಂತ್ರ]

**ಕೈಯಂಬು, ಕಯ್ಯಂಬು** (ನಾ). ಕೈಯ ಬಾಣ: ತರುಣಿಯೊರ್ವಳು ನವರತ್ನದ ಕೈಯಂಬ ಧರಿಸಿದಳವನೀಶ್ವರಗೆ (ಕಂನವಿ. ೨೪-೬೭).
**ಕಯ್ಯಂಬು**: ಪ್ರಮಾಥಿಕುಮಾರನ ಕಯ್ಯಂಬುಗಳೆರಡುಱಿಯೆಮತ್ತೆಲ್ಲಂ ತವುವುದುಂ (ಧರ್ಮಾಮೃ. ೧೩-೧೫೪); ಬತ್ತಳಿಕೆ ಕಯ್ಯಂಬು ನಿಲ್ಲದೆಸೆಯೆ ಪೊಜಮಟ್ಟರು (ಕುರಾಸಾಂ. ೧೯-೧೯).
[ಕೈ₂ (< ಕೆಯ್₂) + ಅಂಬು₂]

**ಕೈಯಕ್ಕಿ** (ನಾ). (ಭಿಕ್ಷಾಟನೆಯಲ್ಲಿ ಸಂಗ್ರಹಿಸುವ) ಹಿಡಿ ಅಕ್ಕಿ; ಮುಷ್ಟಿ ಅಕ್ಕಿ: ಬಸ್ತಿಯಲ್ಲಿಹ ತಪಸ್ವಿಗಳ ತಂಡ ಳಕ್ಕೆ ಸೀತ ನಿವಾರಣೆಯ ಹಚ್ಚಡ ಅಕ್ಕೆ ಕೈಯಕ್ಕಿಯ ತುಂಬುವ ಸೂಸುವ ಹಚ್ಚಡಕ್ಕಂ (ಎಇ. VIII, ೧೩೩-೪೧; 1586). [ಕೈ₂ (< ಕೆಯ್₂) + ಅಕ್ಕಿ₁]

**ಕೈಯಕ್ಷರ** (ನಾ). ೧. ಕೈಯಿಂದ ಬರೆದುದು: (ಕಿ). ೨. ರುಜು; ಸಹಿ; ದಸ್ಕತ್ತು: (ಕಿ). [ಕೈ₂ (< ಕೆಯ್₂) + ಅಕ್ಷರ]

**ಕೈಯಡಕ** (ನಾ). ಮೋಸಗಾರಿಕೆ; ಕುಹಕ; ಕೃತ್ರಿಮ: ಕೂರ್ಮೆ ಕೈಯಡಕಂ ವಂಚನೆ ಮಿಕ್ಕ ಮಾನಸಿಕೆ ಮುಂಚಂ ಮುಂಚಲಂ (ಲೀಲಾವ. ೨-೯೬); ಕುಹಕ ಕೈಯಡಕ ಮೊದಲಾಗೊಡೆಯ ಕುಟಿಳ ವಿದ್ಯೆಗಳುಮಂ (ನೀತಿವಾ. ೨೪-೭೭).
[ಕೈ₂ (< ಕೆಯ್₂) + ಅಡಕ₁ ?]

**ಕೈಯಡಿಗೆ** (ನಾ). ತನ್ನ ಕೈಯಿಂದಲೇ ಮಾಡುವ ಅಡಿಗೆ; ಸ್ವಯಂ ಪಾಕ: ನನಗಾರು ಇಲ್ಲ, ಕೈಯಡಿಗೆಯ ಬಡವನು ಎಂದು ಮೊರೆ ಯಿಟ್ಟನು (ಕಾಲೂರ. ೧೦ ಕಥಾಸಾರ).
[ಕೈ₂ [< ಕೆಯ್₂) + ಅಡಿಗೆ (< ಅಡುಗೆ)]

**ಕೈಯಡ್ಡೆ** (ನಾ). ಪಾಲಕಿಯನ್ನು ನಿಲ್ಲಿಸಿದಾಗ ಆಧಾರವಾಗಿ ಕೊಡುವ ಅಡ್ಡೆ: ದೇವರೂಳಿಗದ ದೀವಟಿಗೆಯ ದಾಸಿಮನಿಗೆ, ನಿತ್ಯೋತ್ಸವದ ಕೈಯಡ್ಡೆಗೆ ಹೆಗಲನ್ನಾನಿಸುವ ಬೋಯಿಗಳಿಗೆ, ದೇವಾಲಯದ ಒಂದು ಪಾಲು ಸಂದಾಯವಾಗಬೇಕು (ಸವತಿ. ೧೬೬).
[ಕೈ₂ (< ಕೆಯ್₂) + ಅಡ್ಡೆ₁]

**ಕೈಯಘಿಯತ್ತು** 'ಕೈಫಿಯತ್ತು' ನೋ.

**ಕೈಯರ** (ನಾ). (ಕೈಯ) ವೇಗ; ಚುರುಕು; ಶೀಘ್ರತೆ (?): ದಿವಿಜರೊರಲ್ದು ಕೊಟ್ಟ ಪೊಸ ಕಾಣ್ಕೆಯ ರಯ್ಯಮಣಿಪ್ಪ ದಿವ್ಯವಸ್ತು ವನಿರದಾಂತು ಕೈಯರದೊಳೀಶ್ವರನಿರ್ದೆಡೆಗೊಲ್ದು ಬಂದು (ವೀರರವಿ. ೭-೫೦). [ಕೈ₂ (< ಕೆಯ್₂) + ಅರ₉]

**ಕೈಯಳವಿ** 'ಕೆಯ್ಯಳವಿ' ನೋ.

**ಕೈಯಳವು** 'ಕೆಯ್ಯಳವು' ನೋ.

**ಕೈಯಳೆ, ಕಯ್ಯಳೆ** (ನಾ). ಮಜ್ಜಿಗೆ: "ಮಥಿತಂ – ಮಜ್ಜಿಗೆ, ಕೈಯಳೆ" (ಓಷಧಿ. ೧೧೭); "ರಸಾಢ್ಯ – ಕೈಯಳೆ, ರಾಸ್ಮೆ" (ಓಷಧಿ. ೧೩೩)
**ಕಯ್ಯಳೆ**: "ದಧಿಮುಂಥಮೆನಲು ಕಯ್ಯಳೆ [ಪಾಠಾಂ. ಕೈಯಳೆ] ಯಕ್ಕು" (ಮಂಗರಾ. ೬೫-೬). [ಕೈ₂ (< ಕೆಯ್₂) + ಅಳೆ₂]

**ಕೈಯಾಡಿಸು** (ಕ್ರಿ). ೧. ಕೈ ಚಲಿಸುವಂತೆ ಮಾಡು; ಕೈಯನ್ನು ಅಲ್ಲಾಡಿಸು. 'ಕಾಲಾಡಿಸು' ಪರಾ. ೨. (ಪ್ರೀತಿಯಿಂದ ಅಥವಾ ದಯೆಯಿಂದ) ಕೈಯಿಂದ ನೇವರಿಸು; ಮೆಲ್ಲನೆ ಸವರು: ದನಗಳ ಮೇಲೆ ಕೈಯಾಡಿಸಿ (ಮುಂಬಯಿ. ೪-೪೩). ೩. ಕೈಯಿಂದ ತೆಗೆದು ಮತ್ತೆ ಜೋಡಿಸು; ಹೊಂದಿಸು: ಮನೆಯ ಹಂಚನ್ನು ಕೈಯಾಡಿಸು (ರೂಢಿ).

೪. (ಒಣಗು ಹಾಕಿದ ಧಾನ್ಯ ಮೊದಲಾದುವನ್ನು) ಮಗುಚಿ ಹಾಕು; ತಿರುವಿಹಾಕು: ಚಾಪೆಯಲ್ಲಿನ ಬತ್ತವನ್ನು ಕೈಯಾಡಿಸು (ರೂಢಿ). ೫. ಕಳೆ ಕೀಳು; ಹಸನುಮಾಡು: ಗದ್ದೆ ಕೈಯಾಡಿಸಬೇಕು (ರೂಢಿ). ೬. (ಅಲಂ) ಪ್ರವೇಶಿಸು; ಕೈಹಾಕು: ಅವನು ಈಗೀಗ ಎಲ್ಲದರಲ್ಲೂ ಕೈಯಾಡಿಸುತ್ತಿದ್ದಾನೆ (ರೂಢಿ). [ಕೈ$_2$ (< ಕೆಯ್$_2$) + ಆಡಿಸು]

**ಕೈಯಾಡು** (ಕ್ರಿ). ೧. ಕೈ ಚಲಿಸು, —ಅಲ್ಲಾಡು: ಶಿವಶಿವಾ ಎಮಗೆಂತು ಕೈಯಾಡುವುದು ಹೇಳಾರೋಗಿಪೊಡೆ (ಬಸವು. ೨೬–೬೨). ೨. ಮಗುಚು; ತಿರುಗಿಸು: ಒಣಹಾಕಿದ ಬತ್ತವನ್ನು ಕೈಯಾಡು (ರೂಢಿ). ೪. ಕೈಯಿಂದ ಕೆಲಸನಡೆ, ಕೆಲಸವಾಗು: ಬಾಯಾಡಿದರೆ ಕೈಯಾಡೀತು (ಗಾದೆ). [ಕೈ$_2$ (< ಕೆಯ್$_2$) + ಆಡು$_1$]

**ಕೈಯಾಣೆ** (ನಾ). ಕೈಯ ಮೇಲೆ ಕೈಯಿಟ್ಟು ಭಾಷೆಮಾಡುವುದು; ಪ್ರತಿಜ್ಞೆ ಮಾಡುವುದು. 'ಕೈಯಾಣೆಯಿಡು' ಪರಾ. [ಕೈ$_2$ (< ಕೆಯ್$_2$) + ಆಣೆ$_3$]

**ಕೈಯಾಣೆಯಿಡು** (ಕ್ರಿ). ಭಾಷೆಕೊಡು; ಪ್ರತಿಜ್ಞೆಮಾಡು: ಬಿರುದಂ ಮೇಳಯದೊಳ್ಪೊರ್ಡರ್ಚಿ ಬಿರುದಂಕಂ ಮೆಚ್ಚುತುಂ ಸಾರ್ಚಿಮಚ್ಚರದಂಕಂ ಕಳದಲ್ಲಿನೋಡು ಬಯಲೊಳ್ಪೇಡೆಂದು ಕೈಯಾಣೆಯಿಟ್ಟ[ಪಾಠಾಂ. ಟ್ಟಿ] ರಸಂಕಂ ಪಚಿಗುಟ್ಟೆ ಮಾಸವಳದಂಕಂ ಹಾಸೆಯಂ ಸಾಜಿ (ಅನಂಪು. ೨–೨೯). [ಕೈಯಾಣೆ + ಇಡು$_1$]

**ಕೈಯಾನ್** 'ಕೆಯ್ಯಾನ್' ನೋ.

**ಕೈಯಾನು** 'ಕೆಯ್ಯಾನ್' ನೋ.

**ಕೈಯಾರ್** (ಕ್ರಿ). ಕೈತುಂಬು; ಪೂರ್ಣವಾಗು: ಉರದೊಳು ಕೈಯಾರಲಪ್ಪುವನು (ಬಸವು. ೪೭–೨೯).

**ಕೈಯಾರ, ಕಯ್ಯಾರ** ೧. = ಕೈತುಂಬುವಂತೆ. ೨. ತನ್ನ ಕೈಯಿಂದಲೇ: ಕೆಟ್ಟಕಾಯದ ಸುಖಕಳುಪಿ ಒಡಹುಟ್ಟಿದರ ಕೈಯಾರ ಕೊಂದರೆ ಮುಟ್ಟದೇ ಕಡುಪಾಪ (ಕುಮಾ.ಭೀ. ೬–೨೬); ರಕ್ಕಸ ನೀನು ಕುವರನ ಕೈಯಾರ ಕೊಲ್ಲದೆ ಕಡಲೊಳು ಬಿಸುಟಿ (ಮೋಹತ. ೧೨–೬). ಕಯ್ಯಾರ ನಾಮ ಕೊಂಡಸಗಿ ಕಣ್ಣಾರ ನೋಡುವಟಿಗೆಯ್ಮೆ (ಅಶ್ವತ್ಥಾ. ೨೨೮). **ಕೈಯಾರೆ, ಕಯ್ಯಾರೆ, ಕೈಯ್ಯಾರೆ** = ಕೈಯಾರ: ೨. ಕುಠಾರದಿಂ ಕೈಯಾರೆ ಕಡಿಕಡಿದೊಟ್ಟಿ (ಬಸವು. ೩೦–೪); ಕೈಯಾರೆ ಭಿಕ್ಷವ ನೀಡಿ (ಚೆಬಪು. ೨೦–೧೭); ಈವಂಗೆ ದೇವಂಗೆ ಅವುದಂತರವಯ್ಯ? ದೇವನು ಜಗಕೆ ಕೊಡುತಿಹನು ಕೈಯಾರೆ ಈವನೇ ದೇವ (ಸರ್ವಜ್ಞ. ೫೯೮). ೨. ವಾರಿನಿಧಿ ಮುನಿ ಕುಡಿದ ಕಪಿ ಕಯ್ಯಾರೆ ಕಟ್ಟಿದ ಕುಂದುಗಳೆ ಪೊಡೆ ಸೇರಿತೀಪುರಸಿರಿಯೆನೆ (ಸಾಳ್ವಭಾ. ೨–೬). ೨. ಶೋಣಿತನಿವಹದಲ್ಲಿ ಕೈಯ್ಯಾರೆ ಮುಳುಗಿಸಿ (ಸಂಭಪ. ೯–೨೫). [ಕೈ$_2$ (< ಕೆಯ್$_2$) + ಆರ್$_2$]

**ಕೈಯಾರು** (ಕ್ರಿ). ಕೈ ಬತ್ತಿಹೋಗು; ಕೈಯಲ್ಲಿ ಹಣವಿಲ್ಲದಾಗು: ಕಾಣಿಕೆಯನ್ನರ್ಪಿಸಲಿಕ್ಕೂ ಕೈಯಾರಿದ ಬಚ್ಚಬಡವರೂ (ನಾಡೋಜ. ೨೮೯). [ಕೈ$_2$ (< ಕೆಯ್$_2$) + ಆರು$_4$ (< ಆಱು$_2$)]

**ಕೈಯಾರೈಕೆ** (ನಾ). ಕೈಯಿಂದ ಮಾಡುವ ಆರೈಕೆ, —ಶುಶ್ರೂಷೆ: ಪಶುಗಳಿಗೆ ಹುಲ್ಲುನೀರುಗಳಿಗಿಂತಲೂ ಹೆಚ್ಚು ಸೌಖ್ಯವಾದದ್ದು ಕೈಯಾರೈಕೆಯು (ಕೃಷಿಪ್ರ. ೧೯). [ಕೈ$_2$ (< ಕೆಯ್$_2$) + ಆರೈಕೆ (< ಆರಯ್ಕೆ)]

**ಕೈಯಾಸೆ** 'ಕೆಯ್ಯಾಸೆ' ನೋ.

**ಕೈಯಾಳು** (ನಾ). ಸಣ್ಣಪುಟ್ಟ ಕೆಲಸಗಳನ್ನು ಮಾಡುವವನು; ಅಂಗಸೇವಕ: ಕೈಯಾಳಿನಂತೆ ಕೈಬೆಸಮಾಡುವನು (ಸಾಹಿವಿ.೩೬); ಕೈಯಾಳನ್ನು ಕರೆಯಬೇಕಾದರೆ ಒಂದು ಸಾರಿಯೂ ... ಗಂಟೆ ಬಾರಿಸುತ್ತೇನೆ (ರಾಜಾಮ. ೨೪೫). [ಕೈ$_2$ (< ಕೆಯ್$_2$) + ಆಳು$_3$ (< ಆಳ್$_3$)]

**ಕೈಯಿ** 'ಕೆಯ್' ನೋ.

**ಕೈಯಿಂಡೆ** (ನಾ). ಕೈಯ ಮಾಲೆ, —ಹಾರ: ಎಳಲ್ವ ಜೆಡೆಯಿಂದಿಳಿವ ಕಣ್ಣನೀರಿಂದಚಿತ ವಿಭೂತಿಯ ತಿಲಕದಿಂದರೆಯರೆಗಟ್ಟುವ ಕೈಯಿಂಡೆಯಿಂ ಸಡಿಲ್ವ ರುದ್ರಾಕ್ಷಿಯ ಮಾಲೆಯಿಂ (ನಂಬಿರ. ೨–೫೩). [ಕೈ$_2$ (< ಕೆಯ್$_2$) + ಇಂಡೆ$_2$]

**ಕೈಯಿಕ್ಕಿಸು** (ಕ್ರಿ). ೧. ಕೈಯನ್ನು ಊರುವಂತೆ ಮಾಡು. ೨. ಸೊಂಡಿಲನ್ನು ಕೆಳಕ್ಕೆ ಊರುವಂತೆ ಮಾಡು: ಸೊಕ್ಕಿದಾನೆಗಳನಲ್ಲಲ್ಲಿ ಕೈಯಿಕ್ಕಿಸುತೆ ಇಂತು ಮುದದಿಂ ನಲಿವುತರಸುಮಗನೆಯ್ದಿದಂ (ನಂಬಿರ. ೫–೧೧೨). [ಕೈಯಿಕ್ಕು (< ಕೆಯ್ಯಿಕ್ಕು) + -ಇಸು$_3$]

**ಕೈಯಿಕ್ಕು** 'ಕೆಯ್ಯಿಕ್ಕು' ನೋ.

**ಕೈಯಿಚ್ಛೆ** (ನಾ). ಕೈಯ ಸ್ವಾಧೀನತೆ, —ಹಿಡಿತ, —ಹತೋಟಿ; ಸ್ವಂತ ಇಚ್ಛೆ; ಸ್ವಾಧೀನತೆ. 'ಕೈಯಿಚ್ಛೆಗೆಡು' ಪರಾ. [ಕೈ$_2$ (< ಕೆಯ್$_2$) + ಇಚ್ಛೆ]

**ಕೈಯಿಚ್ಛೆಗೆಡು** (ಕ್ರಿ). ಕೈಯ ಹಿಡಿತ ತಪ್ಪು; ಕೈ ಮೀರಿಹೋಗು; ಹತೋಟಿ ಇಲ್ಲದಾಗು: ಸೊಕ್ಕಿದ ಕುಂಭಾಂಡ ರಣದೊಳು ರಕುತವ ಕಕ್ಕಿದ ಕೈಯಿಚ್ಛೆಗೆಟ್ಟು ಸಿಕ್ಕಿದ ಸಿಕ್ಕಿದನೆನಲಾಗಿ (ಮೋಹತ. ೪೦–೬೨). [ಕೈಯಿಚ್ಛೆ + ಕೆಡು$_1$]

**ಕೈಯಿಟ್ಟಿ** (ನಾ). ಚಿಕ್ಕ ಈಟಿ: ಕುರಿತ ನೇಜೆಯ ಕೈಯಿಟ್ಟಿಯಾಯುಧಗಳನಂತರಿಕ್ಷಗಳಿಗಿಟ್ಟಾಗ ಪಂಥದಿಂದಾನುವ ಕಾಲಾಳ (ಕಂನವಿ. ೧೧–೨೧); ಅಲ್ಲದೆ ಮೈಸೂರಿನ ಮಹಾವೀರರು ಕೈಯಿಟ್ಟಿಗಳಿಂದ (ಕರ್ಣಾಜ. ೧೪೭). [ಕೈ$_2$ (< ಕೆಯ್$_2$) + ಇಟ್ಟಿ$_2$]

**ಕೈಯಿಡು, ಕಯ್ಯಿಡು, ಕೈಇಡು** (ಕ್ರಿ). ೧. ಕೈಯನ್ನು ಇಡು; ಕೈಹಾಕು: ಬಟ್ಟಲೊಳಗಿದ್ದ ಹುಗ್ಗಿಯಂ ಕೈಯಿಟ್ಟು ಕೊಳ್ಳೆ (ಬಸವು. ೩೩–೧೮); ಮಿಂಗೆ ಕತ್ತಲೆಗೆ ಕೈಯಿಟ್ಟರು (ಕಂನವಿ. ೬–೧೮೯); ನಮ್ಮ ತಂದೆಯವರು ನೇಗಿಲ ಮೇಲೆ ಎಂದೂ ಕೈಯಿಟ್ಟವರಲ್ಲವಾದರೂ ವ್ಯವಸಾಯದಲ್ಲಿ ನಿಪುಣರು (ಜಂಗಾಳ್ವ. ೧). ೨. ಕಾರ್ಯದಲ್ಲಿ ತೊಡಗು, —ಪ್ರವರ್ತಿಸು; ಉದ್ಯೋಗಿಸು: ಇನ್ನುಮೇಲೆ ಇಂಥ ಸಾಹಸಕ್ಕೆ ಕೈಯಿಡಬೇಡಿರಪ್ಪ (ವಚಭಾ. ೧೭೨). **ಕಯ್ಯಿಡು**: ೧. ಏಕೆ ಕಯ್ಯಿಟ್ಟನೋ ಇಂತಪ್ಪ ಘೋರದೊಳ್ (ಅಶ್ವತ್ಥಾ. ೨೫). **ಕೈಇಡು**: ೨. ನೀನೋ ಶೂರ . . . ಮೂರು ಹೊತ್ತೂ ಶಸ್ತ್ರಗಳಲ್ಲಿಯೇ ಕೈಇಟ್ಟು ಕೊಂಡಿರುವವನು (ವಚಭಾ. ೩). [ಕೈ$_2$ (< ಕೆಯ್$_2$) + ಇಡು$_1$]

**ಕೈಯಿಮಾ** (ಕ್ರಿ). ೧. ಕೈಯನ್ನು ಕೊಡು; ಹಸ್ತಲಾಘವವನ್ನು ನೀಡು: ಸೊರಗಿ ನೆಲಕೊರಗಿದರಸನ ನೋಡಿ . . . ತುರಗಪತಿಯಾತ್ಮಭವೆ ಕೈಯಿಮಾಯಲುಪಚರಿಸುತಂ ಬರೆ ಸುಮಿತ್ರೆ (ವೆಂಕಾರಾ. ೨–೧೭–೬೫). ೨. ಕೈಯನ್ನು ಊರೆಯಾಗಿ ಕೊಡು, —ಆಧಾರವಾಗಿ ಕೊಡು: ತಲೆಗೆಲದೊಳು ಕೈಯಿಮುತ್ತವಳ್ಮೌನವ ತಳೆದಿದರ್ಳೀನ ಬಣ್ಣಿಸುವೆ (ಕಂನವಿ. ೯–೧೬೩). [ಕೈ$_2$ (< ಕೆಯ್$_2$) + ಈ$_2$]

**ಕೈಯುಗುರ್, ಕಯ್ಯುಗುರು** (ನಾ). ಕೈಬೆರಳಿನ ಉಗುರು: ಕೈಯುಗುರ ಕೆಲಸಕ್ಕೆ ಕೊಡಲಿ ತಂದಂತೆ (ಚಂದ್ರಸ. ೨೨). **ಕಯ್ಯುಗುರು**: ಗಂಟಲನಡಸಿ ಪಿಡಿದ ಜವನ ಕಯ್ಯುಗುರಿನಂತೆ ಸಾವು ಮುಟ್ಟಿವಂದುದು (ಧರ್ಮಾಮೃ. ೧೩–೧೮೭). [ಕೈ$_2$ (< ಕೆಯ್$_2$) + ಉಗುರ್$_1$]

**ಕೈಯುದ್ದ** (ನಾ). ಒಂದು ತೋಳಿನ ಉದ್ದ; ಸುಮಾರು ಎರಡೂವರೆ ಅಡಿ: ಊರ್ಧ್ವವಿಸ್ತೃತ . . . ಮೇಲಕ್ಕೆಯೆತ್ತಿ ಚಾಚಲ್ಪಟ್ಟ ಕೈಯುಳ್ಳ ಮನುಷ್ಯನ ಅಳತೆ, ಆಳು ಕೈಯುದ್ದ (ಸಿದ್ಧಾಂತಿ. ೧೬೯). [ಕೈ$_2$ (< ಕೆಯ್$_2$) + ಉದ್ದ]

**ಕೈಯುಳಿ** (ನಾ). ಸಣ್ಣ ಉಳಿ : ಕೈಯುಳಿ ಕತ್ತಿ ಅಡ್‘ಗಂಟ್’ (ಗೂಟ) ಕ್ಕಡಿಯಾಗಬೇಡ, ಅಱಿನಿಜಾತ್ಮರಾಮರಾಮನ (ಸರ್ವ. ೧೦೨-೫೫೪).
[ಕೈ$_2$ (< ಕೆಯ್$_2$) + ಉಳಿ$_5$]

**ಕೈಯೂರು** ‘ಕೈಯೂಱು’ ನೋ.

**ಕೈಯೂಱು,** ಕಯ್ಯೂಱು, ಕೈಊರು, ಕೈಯೂರು (ಕ್ರಿ). ೧. ನೆಲ ಮೊದಲಾದವುಗಳ ಮೇಲೆ ಕೈಯನ್ನು ಇಡು, —ಇರಿಸು : ತಳರಲ್ಕೆಂದಡಿಯಿಟ್ಟು ಜಾಱಿ ಜವದಿಂ ಕೈಯೂಱಿ ಬಿಳ್ದೇಳ್ದು (ರಾಜಶೇ. ೮-೧೨೪). ೨. ಕೈಯನ್ನು ಊರೆಯಾಗಿರಿಸು ; ಆಧಾರವಾಗಿರಿಸು : ಗಲ್ಲದಲಿ ಕೈಯೂಱಿ ಕೆಡೆದಳು ಹಾಸಿಗೆಯ ಮೇಲೆ (ಬಸಪು. ೩-೧೭). **ಕಯ್ಯೂಱು :** ೧. ಕಯ್ಯೂಱಿ ಮೆಲ್ಲನೇಳ್ವನಿತಱಲ್ಲಿ (ರಾಜಶೇ. ೧೩-೯೫ ವ). **ಕೈಊರು :** ೩. (ಅಲಂ) ಅಯತ್ನನಾಗು ; ನಿಸ್ಸಹಾಯನಾಗು ; ಸೋಲು : ಆ ಭಾವಿಗಳೂ ನನಗೆ ಸರಿಬೀಳಲಿಲ್ಲ. ಆಯಿತು—ನಾನು ಕೈಊರಿದೆ (ನಿರಾಭ. ೧೪೪) ; ವನಮಾಲಿಗೆ ತರ್ಕದಲ್ಲಿ ಕೈಊರುವ ಪ್ರಸಂಗ ಬರಲು . . . ಬಯ್ಯತೊಡಗಿದನು (ಇಪ್ಪಕ. ೪೦೭). **ಕೈಯೂರು :** ೪. ಕೈಯನ್ನು ಭದ್ರವಾಗಿ ನಿಲ್ಲಿಸು; ನಾಟು; ನೆಡು : ಭೀಕರತೆಯ ಛಾಯೆ ಜಯಂತನ ಮನದ ಮೇಲೆ ಇನ್ನೂ ಕೈಯೂರಿ ಕಾಲೂರಿ ಕುಳಿತಿದ್ದಿತು (ಜಯಂತ. ೨೭೪).
[ಕೈ$_2$ (< ಕೆಯ್$_2$) + ಊರು$_1$]

**ಕೈಯಿಡೆ** ‘ಕೆಯ್ಯೆಡೆ’ ನೋ.

**ಕೈಯಿಡೆಗುಡು** ‘ಕೈಯೆಡೆಗೊಡು’ ನೋ.

**ಕೈಯೆಡೆಗೊಡು,** ಕಯ್ಯೆಡೆಗುಡು, ಕಯ್ಯೆಡೆಗೊಡು, ಕೈಯೆಡೆಗುಡು, ಕೈವೆಡೆಗೊಡು (ಕ್ರಿ). ೧. ಕೈಗೆ ಒಪ್ಪಿಸು; ಸಮರ್ಪಿಸು : ದ್ರುಮವಿಕರ್ಣ ಸುಷೇಣ . . . ಕುಂಡದಾರುಕನ ಯಮನ ಕೈಯೆಡೆಗೊಟ್ಟು ಘನವಿಕ್ರಮದ ಸಿರಿ ಹೊದಱೀಳೆ (ಕುವ್ಯಾದ್ರೋ. ೧೩-೪೮). ೨. ಕೈಯನ್ನ ನೀಡು; ಹಸ್ತಲಾಘವವನ್ನು ಕೊಡು : ಮುರಹರನ ಮುದ್ದು ರುಕ್ಮಿಣಿಗೆ ಕೈಯೆಡೆಗೊಟ್ಟು (ಮೋಹತ. ೧೩-೭೫). ೩. ಕೈಯ ಆಸರೆಕೊಡು; ಸಹಾಯ ಮಾಡು; ನೆರವಾಗು : ಕಳಲ್ಪಂದಂಗೆ ಕೈಯೆಡೆಗೊಟ್ಟರೆಂಬಂತೆ (ಧರ್ಮಾಮೃ. ೨-೧೪೯). **ಕಯ್ಯೆಡೆಗುಡು :** ೧. ಪರಮೇಶ್ವರನಂ . . . ತಂದಿಂದ್ರಾಣಿ ಸೌಧರ್ಮೇಂದ್ರನ ಕಯ್ಯೊಳ್ ಸಕಲ ಜಗದಮೂಲ್ಯ ರತ್ನಮಂ ಕಯ್ಯೆಡೆಗುಡುವಂತೆ ಕುಡುವುದುಂ (ಅಜಿಪು. ೪-೧೩ ವ). **ಕಯ್ಯೆಡೆಗೊಡು :** ೩. ದುರಿತಾರಾತಿಯ ನೊಲ್ಲದೆ ತಿರಿತರುತಂ ಬೆಂದ ಬಸಿಱುಮಂ ವೃಂದಮುಮಂ ಪೊರೆಯಲ್ಕೆ ಮಱುಗುವಾತಂ ನರಕಕ್ಕಿಳಿವಂದದಾರ್ಗೆ ಕಯ್ಯೆ [ಪಾಠಾಂ. ಕೈಯೆ]ಡೆಗೊ [ಪಾಠಾಂ. ಗು]ಡುವಂ (ಸಮುಪ. ೫-೧೪೪). **ಕೈಯೆಡೆಗುಡು :** ೧. ಈ ಪಟಮಂ ಪ್ರಾಣಮನೆ ಕೈಯೆಡೆಗುಡುವಂತೆನ್ನ ಕೈಯೊಳ್ಕೊಟ್ಟು ಮದೀಯ ಪ್ರಾಣವಲ್ಲಭನನೆಲ್ಲಿ ಪೊಕ್ಕು ಮೆಲ್ಲಂದೊಳಮಱಸೆಂದಟ್ಟಿದೊಡೆ (ಆದಿಪು. ೪-೨೧ ವ). **ಕೈವೆಡೆಗೊಡು :** ೧. ಮಜ್ಜನ ಭೋಜನಾದಿ ನಾನಾ ಕ್ರಿಯೆಗಳೊಂದಱೊಳ್ ನರವೇಷಕಾಯಮಂ ನವೆಸಬೇಡೆಂದು ಕೈವೆಡೆಗೊಟ್ಟಳೇಂ ವಿಶೇಷಮೊ ಪುತ್ರಮೋಹಮೀ ಲೋಕದೊಳಗೆ (ಚಬಪು. ೫-೩೦). [ಕೈಯೆಡೆ (< ಕೆಯ್ಯೆಡೆ)+ಕೊಡು$_1$]

**ಕೈಯೆಡೆಮಾಡು** (ಕ್ರಿ). ಬಿಡುವುಮಾಡು ; ಪುರುಸತ್ತುಮಾಡು : ಕೆಲಸದ ಮಧ್ಯೆ ನನಗೆ ಕೈಯೆಡೆಮಾಡಿಕೊಡು ಬಾ (ರೂಢಿ).
[ಕೈಯೆಡೆ (< ಕೆಯ್ಯೆಡೆ) + ಮಾಡು$_1$]

**ಕೈಯೆಣ್ಣೆ$_1$** ‘ಕೆಯ್ಯೆಣೆ’ ನೋ.

**ಕೈಯೆಣ್ಣೆ$_2$** ‘ಕಹಿಎಣ್ಣೆ’ ನೋ.

**ಕೈಯೆತ್ತು** ‘ಕೆಯ್ಯೆತ್ತು’ ನೋ.

**ಕೈಯೇಱು** (ನಾ). ಕೈಯಿಂದುಂಟಾದ ಗಾಯ; ಕೈಗಾಯ : ಮೇಲ್ವಾಯ್ದು ಪೊಯ್ದತ್ತು ಕೈಯೇಱಿಡೆಯಿಂ ಬಾಯೇಱ ಬಾಯಿಂದೊಡನೆ ರುಧಿರಮುಂ ಕಂಡಮುಂ ಸೂಸುವನ್ನಂ ಸಿಡಿಲೆಂಬಾಶಂಕೆಯಂ ಪೆಣ್ಬುಲಿ ಪಡೆದು (ಪಂರಾಮಾ. ೨-೫೫). [ಕೈ$_2$(< ಕೆಯ್$_2$)+ಏಱು$_4$(< ಏಱ್$_4$)]

**ಕೈಯೊಡನೆ,** ಕಯ್ಯೊಡನೆ (ಅ) ಕೂಡಲೇ; ತತ್ಕ್ಷಣ : ಅಸುರಪತಿ ಕೈಹಾರವುಕ್ಕುಡವಾಗೆ ಕೈಯೊಡನುಬ್ಬಿ ಬೊಬ್ಬಿಱಿದ (ತೊರರಾ. ೬-೪೯-೩೩) ; ಅಂತಾಗೆ ಮಂತ್ರಲಕ್ಷಕನಾಮವಾದುದಂ ಕೈಯೊಡನೆ ತೋರ್ಪಂ (ಭಾವಚಿಂ. ೯-೨೫) ; ಸೋದರಮಾವಂದಿರು ಸೊಸೆಯರಿಗೆ ಬೇಕಾದ ವಸ್ತುವ ಕೈಯೊಡನೆ ಆದರದಿಂದಳವಡಿಪುದು (ಹದಿಬ. ೫-೪೭). **ಕಯ್ಯೊಡನೆ :** ಪತಿಗಂತರಂಗೆಯರಪ್ಪ ಕಾಂತೆಯರಿಗೆ ಕಯ್ಯೊಡನೆ ಸಂತಾನ ಸೌಭಾಗ್ಯ ಸಂಪತ್ತುಗಳನು ಶ್ರೀಕಾಂತನು ಕೈಸೇರಿಸುವನು (ಹದಿಬ. ೩-೫೦). [ಕೈ$_2$ (< ಕೆಯ್$_2$) + ಒಡನೆ]

**ಕೈಯೊಡಮೆ,** ಕೈಯೊಡವೆ (ನಾ). ಕೈಯಲ್ಲಿರುವ ಒಡವೆ, —ಆಭರಣ : ಧಾತುವಾದಮಂ ನಂಬಿ ಕೈಯೊಡಮೆಯುಂ ಬೀಯಂ ಮಾಳ್ಪ ಹೀನಿಯುಮಂ (ಧರ್ಮಾಮೃ. ೮-೫೧). **ಕೈಯೊಡವೆ :** ಕದಿಯಹೋಗಿ ಕೈಯೊಡವೆಯನ್ನೂ ಕಳೆದುಕೊಂಡಂತೆ (ರೂಢಿ).
[ಕೈ$_2$ (< ಕೆಯ್$_2$) + ಒಡಮೆ]

**ಕೈಯೊಡವೆ** ‘ಕೈಯೊಡಮೆ’ ನೋ.

**ಕೈಯೊಡ್ಡು** ‘ಕೆಯ್ಯೊಡ್ಡು’ ನೋ.

**ಕೈಯೋಗರ** (ನಾ). ಕೈಅನ್ನ ; ಕೈತುತ್ತು : ಭಿಕ್ಷಾನ್ನಕ್ಕೆ ಪಡಿಯಾಗಿ ಕೈಯೋಗರವಂ ತಾನೆ ತಂದೀವಂ (ಅದ್ಭುತ. ೧೬-೨೧).
[ಕೈ$_2$ (< ಕೆಯ್$_2$) + ಓಗರ]

**ಕೈರ$_1$** ‘ಕಯ್ರ’ ನೋ.

**ಕೈರ$_2$** ‘ಕಯಿರ$_1$’ ನೋ.

**ಕೈರಂತಱಿ** ‘ಕೈರಂದಱಿ’ ನೋ.

**ಕೈರಂದಱಿ,** ಕೈರಂತಱಿ, ಖೈರಂದಱಿ (ಕ್ರಿ). ಖದಿರದ ಮರವನ್ನು ಕತ್ತರಿಸುವಂತೆ ತುಂಡುಮಾಡು,—ಛೇದಿಸು: ಸಂದಣಿಯಾಗಿ ನೇಲ್ವ ಪೆಣನೊಂದಿರೆ ನಿಂದುರಿಯುಯ್ಯಲೇಱಿ ಕೈರಂದಱಿಯಲ್ಕೆ ಮಾಡಿದಡೆ ಮಂಚಿಕೆ ಮಿಂಚಿದುದಾ ಶ್ಮಶಾನದೊಳ್ (ಕಾವ್ಯಾವ. ೫೬). **ಕೈರಂತಱಿ :** ಕಿಱಿಕಿಱಿದಾಗಿರೆ ಕೈರಂತಱಿದದನರಿದರಿದು ಕೊಳ್ಳಿಯಿಂದಂ ಮೊಗಮಂ ನೆಱೆ ಚುರ್ಚುತ್ತುಂ (ಧರ್ಮಾಮೃ. ೬-೧೯೧). **ಖೈರಂದಱಿ :** ಇಱಿವ ಬಲಿಗುಡುವ ಖೈರಂದಱಿವುದರ್ಕಂ ಸೀಳ್ವ ಪೋಳ್ವ ಪರಪುವ (ಶಾಂತಿಪು. ೭-೯೦). [ಕೈರ$_1$ (< ಕಯ್ರ) + ತಱಿ$_1$]

**ಕೈರಂಪಣಿ** (ನಾ). (ಕರಾ) (ಮೀನು ಹಿಡಿಯುವ) ಚಿಕ್ಕ ಜಾಳಿಗೆ : ನಸುಕಿನಲ್ಲಿ ಹಿಂದಿನ ರಾತ್ರಿ ಸಿಕ್ಕಿದ ಕೈರಂಪಣಿಯ ಮೀನನ್ನು ಕುಕ್ಕೆಯಲ್ಲಿ ಹಾಕಿಕೊಂಡು ಮನೆ ಬಿಟ್ಟವಳು (ಹೊಸಕ್ಷಿ. ೪೮).
[ಕೈ$_2$ (< ಕೆಯ್$_2$) + ರಂಪಣಿ]

**ಕೈರಗುಳಿಗೆ** ‘ಕಯ್ರಗುಳಿಗೆ’ ನೋ.

**ಕೈರದಂಬುಲ** ‘ಕಯ್ರದಂಬುಲ’ ನೋ.

**ಕೈರವ** (ನಾ). ಬಿಳಿಯ ನೆಯ್ದಿಲೆ : “ಕೈರವಂ ಕುಮುದಂ –ಈ ೨ ಬಿಳಿನೆಯ್ದಿಲ್” (ಹಲಾಯು. ೧೧೨-೫೯) ; “ಕೈರವಂ ಕುಮುದಮೆನಲ್ ಬಿಳಿಯನೈದಿಲದು” (ಮಂಗರಾ. ೧೨೪-೧೭) ; ದೇವಾಂಗನಾಪಾಂಗ ಕೈರವಚಂದ್ರಂ (ಸುಕುಮಾ. ೯-೩೫) ; ಪೆಣ್ಗಡಣಮದಲ್ಲಿ ಪಾಱಿದುದು ಕೈರವದಿಂದಿಡುತಂ ಶುಕಾಳಿಯಂ (ರಾಜಶೇ. ೨-೧೬). [ಸಂ.]

**ಕೈರವಗಂಧಿ** (ನಾ). ಬಿಳಿಯ ನೆಯ್ದಿಲೆಹೂವಿನ ಪರಿಮಳವುಳ್ಳವಳು : ಭೃಂಗಕುಂತಳೆಯರ್ ಕೈರವಗಂಧಿಯರ್ (ಪುಷ್ಪಪು. ೧೨-೧೧೨). [ಸಂ.]

**ಕೈರವಬಾಂಧವ**(ನಾ). ನೆಯ್ದಿಲೆಗಳ ಬಂಧು; ಚಂದ್ರ: ಕೈರವಬಾಂಧವಂ ಪ್ರಾಙ್ಮುಖದೊಳುದಯಿಸಿದ (ಬಸವು. ೧೨–೩೬). [ಕೈರವ + ಬಾಂಧವ]

**ಕೈರವಮಿತ್ರ** (ನಾ). = ಕೈರವಬಾಂಧವ : ದಿವಸಕರಾದರ್ಶನ ಬದ್ಧ ವಿವರ ನವವನಜದೊಳೆಡೆವಡೆಯದ ವರಕ್ಕೈರವಮಿತ್ರ ಕಿರಣದಂತವಳ ವಚನಮೊಳಪುಗದೆ ತನ್ನನಃಪದ್ಮಿನಿಯೊಳ್ (ಶಾಂತಿಪು. ೫–೧೪೫). ಕೈರವ ಮಿತ್ರಂಗೆತ್ತಲುಂ ಕಾಂತಿಯೊಳುರಗವರಂಗೆತ್ತಲುಂ ಭೋಗದೊಳ್ . . . ಅಧಿಕನೆನುತ್ತಿರ್ಪನಂ ಸಂದಂ (ಸುಕುಮಾ. ೧೧–೩೬). [ಕೈರವ + ಮಿತ್ರ]

**ಕೈರವಿಣಿ** (ನಾ). ೧. ಬಿಳಿಯ ನೈದಿಲೆಗಳ ಕೊಳ : "ಕುಮುದ್ವತೀ, ಕುಮುದಿನೀ, ಕೈರವ[ವಿ]ಣೀ –ಈ ೩ ನೆಯ್ದಿಲ್ಗೊಳಂ" (ಹಲಾಯು. ೧೧೩–೬೧) ; "ಕೈರವ[ವಿ]ಣಿ ಕುಮುದಿನಿಯೆನಲ್ಕೆ ನೈದಿಲ್ಗೊಳಂ" (ಮಂಗರಾ. ೧೨೪–೧೬). ೨. ಬಿಳಿ ನೈದಿಲೆಗಳ ಸಮೂಹ : (ಕ).
[ಸಂ. ಕೈರವಿಣೀ]

**ಕೈರಾಟೆ** (ನಾ). ಸಣ್ಣ ರಾಟೆ, —ಚಕ್ರ : ಮೇಗೆರೆಗೆತ್ತಿದುದುಮ್ರಾಗ್ಗಿ ರಾದ್ರ ಕೈರಾಟೆಗೆ ತಲೆಯೊಳು (ನಂದಿಮಾ. ೧೯–೧೨).
[ಕೈ$_2$ (< ಕೆಯ್$_2$) + ರಾಟೆ]

**ಕೈರಾತ** (ಗು). ಕಿರಾತರಿಗೆ ಸಂಬಂಧಪಟ್ಟ, —ಸೇರಿದ : ದಸ್ಯು ಕೈರಾತ ಘೋಷವೊ (ಶ್ರೀರಾಮಾ. ೧೫೭–೧೩೪). [ಸಂ.]

**ಕೈರಾಶಿ** (ನಾ). (ಕರಾ) ಕೈಗುಣ ; ಹಸ್ತಗುಣ : ಆ ವೈದ್ಯರಿಗೆ ಒಳ್ಳೆಯ ಕೈರಾಶಿ ಇದೆ (ರೂಢಿ). [ಕೈ$_2$ (< ಕೆಯ್$_2$) + ರಾಶಿ]

**ಕೈಲ** (ನಾ). (ಕರಾ) (ಸಟ್ಟುಗದ) ಹಿಡಿ, —ಕಡ್ಡಿ : ಸಟ್ಟುಗದ ಕೈಲದ ಹಾಗಿಲ್ಲ. ಪೋರನ ಸಿಟ್ಟು ನೋಡಿದರೆ ಹೇಳತೀರದು (ರೂಢಿ).
[← ತುಳು. ಕೈಲ್]

**ಕೈಲಾಗ** 'ಕೈಲಾಗು' ನೋ.

**ಕೈಲಾಗು,** ಕೈಲಾಗ (ನಾ). ೧. ಕೈಚಳಕ ; ಕೈಯವೇಗ ; ಹಸ್ತ ಚಾತುರ್ಯ : ಕೈಲಾಗು ಮಿಗೆ ಸರಳ್ವೆದಜಿಂದೆಚ್ಚನು ಜಯದ್ರಥನ (ಕುಮ್ಮಾದ್ರೋ. ಓರಿಇ. ಪರಿ. ೨೪೦) ; ಹೊಡೆದ ಕೈಲಾಗಿನೊಳ್ ಸಿಡಿಲಂತೆ ಘರ್ಜಿಸುತ (ತುರಂಗ. ೬೫–೩೯). ೨. ಗೌರವಕ್ಕಾಗಿ ಅಥವಾ ಆಸರೆ ಕೊಡುವುದಕ್ಕಾಗಿ ಕೈ ನೀಡುವುದು : ಬಾಗಿ ಬಿದ್ದನು ಸಾರಥಿಯ ಕೈಲಾಗಿನಲಿ ತಿರುಗಿದನು ನಕುಳನು ರಾಜಮೋಹರಕೆ (ಕುಮ್ಮಾಕ. ४–೧೫); ಬಾಲೆಯು ಕೈಲಾಗೊಳು ಬಾಣ ಮಜ್ಜನಸಾಲೆಯ ಸಾರ್ದನಳ್ತಿಯಲಿ (ಮೋಹತ. ೨೧–೨) ; ನಾರಿಯರು ಭರದೆ ಕೈಲಾಗೀಯೆ ನವರತ್ನ ಪೀಠದೊಳರಸನೊಪ್ಪಿರ್ದನತಿರ್ಯಲಿ (ಕಂಸವಿ. ೮–೭೨) ; ಮುರಾರಿಗೆ ನಮಸ್ಕರಿಸಿ ಕೈಲಾಗನಿತ್ತು (ಲಕ್ಷ್ಮೀಭಾ. ೫–೩–೨೬) ; ಭೋಜರಾಜನು . . . ಚಿತ್ರಶರ್ಮನ ಕೈಲಾಗಿನಲ್ಲಿ ಓಲಗಶಾಲೆಗೆ ಬಂದು (ಬತ್ತೀಸ. ೧೯). **ಕೈಲಾಗ :** ಕಾಂತೆಯೋರ್ವಳು ಕೈಲಾಗವ ಕೊಡಲು ಸೀಮಂತಿನಿಯರ ಕೂಡಿಕೊಂಡು (ಜ್ಞಾನಚ. ೨೬–೭) ; ರಾಜಕಾಂತೆಯರು ರಾಣಿಯಂ ಬಳಸಿ ಕೆಲಬಲದೊಳ್ ಕೈಲಾಗಮಂ ಕೊಟ್ಟು (ಸೌಗಂಧಿ. ೩೧–೧೦).
[ಕೈ$_2$ (< ಕೆಯ್$_2$) + ಲಾಗು$_1$]

**ಕೈಲಾಗುಕೊಡು** 'ಕೈಲಾಗುಗೊಡು' ನೋ.

**ಕೈಲಾಗುಗೊಡು,** ಕೈಲಾಗುಕೊಡು (ಕ್ರಿ). ಆಸರೆಗಾಗಿ ಕೈನೀಡು; ಕೈಯ ನೆರವು ನೀಡು : ತಗ್ಗು ಸೋಪಾನದೊಳಿಳಿವಾಗ ಮುನಿಗಳ್ಗೆ ಬೊಗ್ಗನೆ ಕೈಲಾಗುಗೊಡುವ (ಭರಚ. ೩–೬೪) ; ದಳಪತಿ ಕೈಲಾಗು ಗೊಡೆ ನರಸಿಂಹನ ನಿಳಯವ ಬಲವಂದು (ಕಂಸವಿ. ೨೬–೨೨). **ಕೈಲಾಗುಕೊಡು :** ಇನ್ನಿಬ್ಬರು ಪಕ್ಕಗಳಲ್ಲಿದ್ದು ಗುರುಗಳ ಕಾಲುಗಳನ್ನು ಕೈಲಾಗುಕೊಟ್ಟು ಒಂದು ಕೈಯಲ್ಲಿ ಆತುಕೊಂಡು (ನಗೆಗ. ೫೨). [ಕೈಲಾಗು + ಕೊಡು$_1$]

**ಕೈಲಾಗುವಿಡಿ** (ಕ್ರಿ). (ಬೇರೆಯವರ) ಕೈನೆರವನ್ನು ಹೊಂದು : ಸುಳಿಗುರುಳಬಲೆಯ ಕೈಲಾಗುವಿಡಿದು ಮಾಂದಳಿರಡಿಯಿಟ್ಟು ಕಂಪಿಸುತೆ (ಮೋಹತ. ೨೪–೭). [ಕೈಲಾಗು + ಪಿಡಿ$_1$]

**ಕೈಲಾಘುವ** (ನಾ). = ಕೈಲಾಗು : ಮೂಲಶರೀರ ಪದ್ಮಿನಿಯ ಕೈಲಾಘುವದ ಆಲಂಬನದಿಂದ ನಡೆಯಿತು (ಮಾಮಲ್ಲಿ. ೧೧೬).
[ಕೈ$_2$ (< ಕೆಯ್$_2$) + ಲಾಘುವ]

**ಕೈಲಾಸ,** ಕೈಳಾಸ (ನಾ). ೧. ಹಿಮಾಲಯದ ಪರ್ವತ ಶ್ರೇಣಿಯಲ್ಲಿರುವ ಒಂದು ಬೆಟ್ಟ ; ಬೆಳ್ಳಿವೆಟ್ಟ ; ಶಿವನ ಆವಾಸ : "ಧನದನಿರ್ಪಾಲಯಂ ಕೈಲಾಸಮುಕ್ಕುಂ" (ಮಂಗರಾ. ೧೬–೧೬) ; ಎಳೆವಿಸಿಲ ಮುಜಿಗಳಿಂ ಕಣ್ಗೊಳಿಸುವ ಕೈಲಾಸದಂತೆ ಕೀರ್ತಿವಿಲಾಸಂ (ಕಾದಂಪೂ. ೨೯) ; ಕೈಲಾಸವದಕೆ ಹುರುಡಿಸುತಲಿರ್ಪುದು ನೋಡ (ಶಿರುರ. ೩–೨೦). ೨. (ಆಲಂ) ಸಾವು ; ಮರಣ : ಅಮ್ಮನವರಿಗೆ ಪ್ರಾಯಬಂದಾಗ ಅಯ್ಯನವರಿಗೆ ಕೈಲಾಸ (ಗಾದೆ). ೩. (ಆಲಂ) ಸುಖ ; ಆನಂದ : ಕಾಸಿದ್ದರೆ ಕೈಲಾಸ (ರೂಢಿ). **ಕೈಳಾಸ.** 'ಕೈಲಾಸಶೈಲ' ಪರಾ. [ಸಂ.]

**ಕೈಲಾಸಪುರಿ** (ನಾ). ಕೈಲಾಸಪಟ್ಟಣ ; ಶಿವನ ರಾಜಧಾನಿ : ಆಯತಾಮಳ ಭಕ್ತಿಗೊಲಿದು ಹಲಾಯುಧನ ನವಪುರ ಸಹಿತ ಶೂಲಾಯುಧನು ಕೊಂಡೊಯ್ದನಾ ಕೈಲಾಸಪುರಿಗಂದು (ಬಸವು. ೨೫ ಸೂಚನೆ).
[ಸಂ. ಕೈಲಾಸಪುರೀ]

**ಕೈಲಾಸವಸ್ತ್ರ** (ನಾ). [ವೀಶೈ] "ವೀರಶೈವರು ಸಮಾಧಿಯಲ್ಲಿ ಶವದ ಮೇಲೆ ಹಾಕುವ ನೂತನವಸ್ತ್ರ" (ಶರಸಾ. ೨೪–೭).
[ಕೈಲಾಸ + ವಸ್ತ್ರ]

**ಕೈಲಾಸವಾಸಿ** (ನಾ). ೧. ಕೈಲಾಸದಲ್ಲಿ ವಾಸಿಸುವವನು; ಶಿವ. ೨. (ಆಲಂ) ದಿವಂಗತ ; ತೀರಿಕೊಂಡವನು : ಶ್ರೀಯುತರು ಕೈಲಾಸವಾಸಿಯಾದರು (ರೂಢಿ).
[ಸಂ. ಕೈಲಾಸವಾಸಿನ್]

**ಕೈಲಾಸವೀಣೆ** (ನಾ). ಒಂದು ಬಗೆಯ ವೀಣೆ : ಕಿನ್ನರಿವೀಣೆ ಕೈಲಾಸ ವೀಣೆ, ಮೊದಲಾದ ತಂತಿಕಟ್ಟಿ ನುಡಿವ ವಾದ್ಯವನಜಿವುದು ಪ್ರಸಾದ ಲಿಂಗದಲ್ಲಿಯ ಗುರುಲಿಂಗ (ಆದವ. ೩೧) ; ಕೈಲಾಸವೀಣೆ, ಗೌರೀವೀಣೆ . . . ಪಿನಾಕಿವೀಣೆ ಮೊದಲಾದ ಮೂವತ್ತೆರಡು ವೀಣೆಗಳನ್ನೂ (ಶರಚ. ೨೮೫). [ಕೈಲಾಸ + ವೀಣೆ]

**ಕೈಲಾಸಸಮಾರಾಧನೆ** (ನಾ). [ವೀಶೈ] "ಶರಣರು ಐಕ್ಯರಾದ ಹನ್ನೊಂದನೆಯ ದಿನದಲ್ಲಿ ಮಾಡುವ ಸಮಾರಂಭ (ತಿಥಿ)" (ಶರಸಾ. ೨೪–೮). 'ವೈಕುಂಠ ಸಮಾರಾಧನೆ' ಪರಾ.
[ಕೈಲಾಸ + ಸಮಾರಾಧನೆ]

**ಕೈಲಾಸೇಂದ್ರ** (ನಾ). ಕೈಲಾಸಪರ್ವತದ ಒಡೆಯ, —ಅಧಿಪತಿ ; ಶಿವ : ಹರನು ಗೌರೀನಾಥ ವೃಷಭಾಧರನು ಕೈಲಾಸೇಂದ್ರ ಢಮರುಗ ಧರ ತ್ರಿಶೂಲಿಯು ದಿಕ್ಪಾಲಕನೆನಲು ಈಶಾನ (ಬಿಜ್ಜಪು. ೭೩–೪೭).
[ಕೈಲಾಸ + ಇಂದ್ರ]

**ಕೈಲು** (ನಾ). (ಕರಾ) ಅಡಿಕೆ, ತೆಂಗು, ಬಾಳೆ ಮೊದಲಾದುವುಗಳ ಗೊನೆ ಅಥವಾ ಗೊಂಚಲು. [← ತುಳು. ಕೈಲ್]

**ಕೈಲುಳಿ,** ಕಯ್ಲುಳಿ (ನಾ). ಕೈಚಳಕ ; ಹಸ್ತಚಾತುರ್ಯ : ಕಲಿತ ಶರಸಂಧಾನದಲಿ ಕೈಲುಳಿಯಲೆಚ್ಚನು ವೀರವೃಷ್ಣಿವನೂರ್ಮಿಳಾಪತಿಯ (ತೊರರಾ. ೬–೩೪–೭೫). **ಕಯ್ಲುಳಿ :** ಹೊಯ್ಲು ಹೊದಜಿದ್ದವು ವಿಘಾತದ ಕಯ್ಲುಳಿಯ ಕಡುಘಾಯಕೆ ಮೆಯ್ಲುವಣೆ ಲಂಬಿಸಿತು (ಕುಮ್ಮಾಸ. ೨–೧೦೪). [ಕೈ$_2$ (< ಕೆಯ್$_2$) + ಉಳಿ]

**ಕೈಲುಳಿದೋಱು** (ಕ್ರಿ). ಕೈಚಳಕವನ್ನು ತೋರು; ಹಸ್ತಕೌಶಲವನ್ನು ಪ್ರದರ್ಶಿಸು: ಇವನಿಂತುಟೆಂದು ಕೈಲುಳಿದೋಱ್ವುದದಕೆ ಮೆಚ್ಚುವ ನಗುವನು ಸಾರ್ವಭೌಮ (ಭರತ. ೫೨–೯೧).
[ಕೈಲುಳಿ + ತೋಱು$_1$ (< ತೋಱ್$_1$)]

**ಕೈಲೇಸು** (ನಾ). ಕೈಯಿಂದಾದ ಒಳ್ಳಿತು; ಹಸ್ತದಿಂದಾದ ಶ್ರೇಯಸ್ಸು; ಹಸ್ತಗುಣ: ಆದಿಜಿನನ ಕೈಲೇಸಿನಿಂದ ದೀಕ್ಷೆಯ ಕೊಂಬೆವೆನುತಾಗ ಮೈಲಾಗಿನಿಂದೆದ್ದರವರು (ಭರತ. ೬೫–೪೪).
[ಕೈ$_2$ (< ಕೆಯ್$_2$) + ಲೇಸು]

**ಕೈವಟ್ಟಲ್**, ಕೈಬಟ್ಟಲು, ಕೈವಟ್ಟಿಲ್ (ನಾ). ೧. ಕೈಯಲ್ಲಿ ಹಿಡಿಯುವ ಬಟ್ಟಲು, —ಸಣ್ಣ ಬಟ್ಟಲು: "ಕೈವಟ್ಟಲಿಟ್ಟುಗೆ" (ರನ್ನಕಂ. ೧೦); "ಕರಪಾತ್ರೆ ಕೈವಟ್ಟಲಕ್ಕು" (ಮಂಗರಾ. ೬೧–೨೦). ೨. (ಹೆಚ್ಚಾಗಿ ಮರದಿಂದ ತಯಾರಿಸುವ) ಗೋರಿಗೆ; ತೋಡುಕ್ಕೈ; ಉದ್ದವಾದ ಸೌಟು: (+). **ಕೈಬಟ್ಟಲು**: ೨. ಕೈಬಟ್ಟಲಿನಿಂದ ಅನ್ನ ಹಾಕು (ರೂಢಿ). ೩. ಹಿಡಿಯುಳ್ಳ ಬಟ್ಟಲು: ಕೈಬಟ್ಟಲಿನಿಂದ ತೋಡಿಕೊಂಡು ಅನ್ನ ಹಾಕು (ರೂಢಿ). **ಕೈವಟ್ಟಿಲ್**: ೩. ರನ್ನದ ಕೈವಟ್ಟಿಲೊಳ್ ತಂದು ಬಡಿಸುತ್ತಿರೆ (ಅಪ್ರಕಿ. ೧೫೫–೧೨).
[ಕೈ$_2$ (< ಕೆಯ್$_2$) + ಬಟ್ಟಿಲ್$_1$]

**ಕೈವಟ್ಟಿಲ್** 'ಕೈವಟ್ಟಲ್' ನೋ.

**ಕೈವಡ** (ನಾ). ಕಸಬುದಾರರ ಪಂಗಡ, —ಸಂಘ (?): ತಿಂಮ್ಮಪ ಆ ಮುಗುರ ಬಸವ ನೈಮುರಿ ಉಜಪ ಸಿಮೊಗೆ ಯಿರಂಣ ಹಂನ್ನರಡು ಕೈವಡ ಮುಂತಗಿ ಸೀಮೆಗೆ ಉಡಿಕೆಮುಂತಗಿ (ಎಕ. VII, ಶಿವಮೊ. ೧೦೮–೪೬; 1558 ?); ಹನ್ನರಡು ಕೈವಡ ಮುಂತಗಿ ಸುಳಿಕೆರೆ ಸೀಮೆಗಾ ಉಡರು ಮುಂತಗಿ (ಎಕ. VII, ಶಿವಮೊ. ೧೦೮–೪೬ ; 1576).
[< ಕೆಯ್ವಾಡ ?]

**ಕೈವಡಗಾರ** (ನಾ). ಕಸಬುದಾರರ ಪಂಗಡದವನು, —ಸಂಘದವನು: ಸ್ಥಳದ ಗಉಡಗಳು ಸ್ಥಳದ ಕೈವಡಗಾರರು ಸಹ ಸರ್ವಜನ ಸಮ್ಮತವಾಗಿಯೂ (ಎಕ. XII, ಶಿರಾ. ೯೬–೧೮ ; ?).
[ಕೈವಡ + -ಗಾರ (< -ಕಾಱ)]

**ಕೈವತ್ತಿಸು** 'ಕೈವರ್ತಿಸು' ನೋ.

**ಕೈವತ್ತೆಗೆ** (ನಾ). ಕೈಚೀಲ; ತಿತ್ತಿ: ಬಿತ್ತರದಿ ಬಿಗಿದವಳತೆಗೆ ಬಜ್ಜರಾಂಬಳಿಯ ಜೊತ್ತಗೆಯ ಕೈವತ್ತೆಗೆಯ ಮುಂಡಿಗೆಯ ಲೌಡಿಯಲಗುಕುಣಪಾಣಿ ಕಱೆಯ (ಲಕ್ಷ್ಮಿಭಾ. ೭–೩–೭). [ಕೈ$_2$ (< ಕೆಯ್$_2$) + ವತ್ತೆಗೆ]

**ಕೈವರ್** 'ಕೆಯ್ವರ್' ನೋ.

**ಕೈವರ** (ನಾ). ಒಂದು ಊರಿನ ಹೆಸರು. ℙ ಈಗಿನ ಕೈವಾರ: ಕೈವರದೊಳೊನ್ದು ಮಾನ್ಯಂ ಮಣ್ಣುಮುಂ ಮೂಗಣ್ಣುಗಂ . . . ಇದಂ ಪಡೆದೊರೀಶ್ವರದಾಸರ್ (ಎಕ. X (S), ಚಿಕ್ಕಬ. ೧೦೬–೭೨; 850). [?]

**ಕೈವರ್ತ** (ನಾ). ಮೀನುಗಾರ; ಅಂಬಿಗ; ಬೆಸ್ತ: "ಕೈವರ್ತಃ, ಧೀವರಃ, ದಾಶಃ, ಮತ್ಸ್ಯಬಂಧೀ, ಜಾಳಿಕಃ —ಈ ೫ ಜಾಲಗಾಱಂ" (ಹಲಾಯು. ೯೭–೪೪೦); "ಜಾಲಿಕಂ ಧೀವರಂ ಕೈವರ್ತನೆಂದೆನಲು ಜಾಲಗಾಱಂ" (ಮಂಗರಾ. ೧೧೧–೩); ಬ್ರಾಹ್ಮಣರ ಹುಡುಗನು ಕೈವರ್ತ ಜಾತಿಯವಳನ್ನು ಮದುವೆ ಮಾಡಿಕೊಳ್ಳುವನೇ? (ದೇವೀಚಾ. ೧೧೭). [ಸಂ.]

**ಕೈವರ್ತಿ** (ನಾ). ಕೈಬತ್ತಿ; ಕೈದೀಪ: ಕೆತ್ತಿದ ನಿಖಿಳರತ್ನಗಳ ಮೆಯ್ವೆಳಗು ಕೈವರ್ತಿಯ ಸೊಡರ ಕೀಳ್ಪಡಿಸಿ ಅತ್ಯಂತ ರಮ್ಯವಡೆದ ಹರ್ಮ್ಯವ ನೋಡಿ ಹತ್ತಿದಳರಸಂಚಿಗೆಮನೆ (ಮೋಹತ. ೨೭–೨೯).
[ಕೈ$_2$ (< ಕೆಯ್$_2$) + ವರ್ತಿ]

**ಕೈವರ್ತಿಕೆ$_1$** (ನಾ). ೧. "ಕೈಬತ್ತಿ; ಕೈದೀವಿಗೆ" (ಕಸ್ತೂಕೋ).
[ಕೈ$_2$ (< ಕೆಯ್$_2$) + ವರ್ತಿಕೆ]

**ಕೈವರ್ತಿಕೆ$_2$** (ನಾ). ಒಂದು ಮೂಲಿಕೆ: "ದ್ರುಮವಲ್ಲೀ–ಕೈವರ್ತಿಕೆ" (ಒಷಧಿ. ೭೮). [ಸಂ. ಕೈವರ್ತಿಕಾ]

**ಕೈವರ್ತಿಸು**, ಕೈವತ್ತಿಸು (ನಾ). ೧. ಕೈಗೆ ಸೇರಿಸು; ಅಧೀನಗೊಳಿಸು; ವಶಕ್ಕೆ ಕೊಡು; ಒಪ್ಪಿಸು: ಅವಳು ರಾಜಮಂಜರಿಯಂ ಕುಲಸ್ತ್ರೀ ರೂಪದಿಂ ಕೈವರ್ತಿಸಲ್ (ದಶಕು. ೮–೧೭೪ವ); ಅಕಟಕಟ ಧರ್ಮಜನನೀ ಕಂಟಕಕೆ ಕೈವರ್ತಿಸಿದರೇ ಪಾತಕರು (ಕುವ್ಯಾಶ. ೩–೫೯); ಆ ಎನ್ನ ಮುದ್ದಿನೆಳಗಱುವಂ ಬಡವಾಗದಂತು ಪೇೞ್ದು ನಿನ್ನಬ್ಬೆಗೆ ಕೈವರ್ತಿಸೈ (ರಾಮಾಶ್ವ. ೩೮–೨೬). ೨. ಎಸೆ; ಹೊಡೆ; ಪ್ರಯೋಗಿಸು: ಕೈವರ್ತಿಸಿದರೋ ಪರುಷವನು ಹಾ ಜಲಧಿಮಧ್ಯದಲಿ (ಕುವ್ಯಾಕ. ೨೭–೨೮); ಕೈವರ್ತಿಸಿದನೀರೆಂಟು ಶರವನು ತುರಗದೇಹದಲಿ (ಕುವ್ಯಾಕ. ೨೭–೫); ದೈವಾಧೀನದಿ ವಜ್ರ ಮೈನಾಕನ ಕೈವರ್ತಿಸಿ ಕೊಲಲೆಂದು ವೈವಸ್ವತನೊಲು ಬರ್ಪ[ಹ]ನೆಂದು ಕಡಲಳ್ಳೆ ಹೊಯ್ಸುಂಡದಿ ಕಂಪಿಸಿತು (ಮೋಹತ. ೨–೭). ೩. ವಶವಾಗು; ಅಧೀನವಾಗು: ಪಶುಪತಿಯು ಹಿಡಿವಂಬು ಕೈವರ್ತಿಸಿತು ಗಡ ಪಾರ್ಥಂಗೆ (ಕುವ್ಯಾಅ. ೧೫–೯). ೪. ಒದಗು; ಪ್ರಾಪ್ತವಾಗು: ಇತ್ತಲೀ ಸಂಗ್ರಾಮಮಹಿಯೊಳು ಮೃತ್ಯುವಿನ ಭಾಗ್ಯೋದಯವು ಕೈವರ್ತಿಸಿತು (ಕುವ್ಯಾಭೀ. ೫–೨೯); ಕೃತ್ರಿಮವ ನಿರ್ಮಿಸಿದ ಫಲ ಕೈವರ್ತಿಸಿತೆ ನೀವರೆಗುಮನೆಯಲಿ ಹೊತ್ತಿಸಿದ ಫಲ ಬಂದುದೇ (ಕುವ್ಯಾಗ. ೮–೧೦). **ಕೈವತ್ತಿಸು**: ೧. ಮದಾಳಿವ್ರಜಕ್ಕಾದಮೊಳ್ಗಂಪುಗಳಂ ಕೈವತ್ತಿಸುತ್ತಂ (ಕುಸುಮಾ. ೧–೧೦೪). [ಕೈ$_2$ (< ಕೆಯ್$_2$) + ವರ್ತಿಸು]

**ಕೈವಲ** 'ಕೆಯ್ವಲ' ನೋ.

**ಕೈವಲೆ** (ನಾ). ಕೈಯಿಂದ ಬೀಸುವ ಬಲೆ; ಸಣ್ಣ ಬಲೆ: ಈಸಿಕೊಂಡುಳಿ ಬಳಹ ಕೊಂಡು ಮುಸಿಗಪ್ಪಡದಿ ಸೋಸುಗಟ್ಟಿಗೆ ಕನ್ನಗತ್ತಿ ಕೈವಲೆಯಲಗು ಮಾಸಿದುಡುಪಿನ ಹತ್ತಳವ ಹವಣಿಸುತ (ಸಿಂಗಿರಾ. ೧೭–೬).
[ಕೈ$_2$ (< ಕೆಯ್$_2$) + ಬಲೆ$_1$]

**ಕೈವಲ್ಯ** (ನಾ). ೧. ಸಂಪೂರ್ಣ ಏಕಾಂತ. ೨. ನಿರ್ವಾಣ; ಮೋಕ್ಷ: "ಕೈವಲ್ಯಂ, ನಿರ್ವಾಣಂ, ನಿಶ್ರೇಯಸಂ . . . ಮೋಕ್ಷಂ, ಮಹಾನಂದಃ— ಈ ೧೧ ಮೋಕ್ಷದ ಪೆಸರ್" (ಹಲಾಯು. ೧–೧೧); "ಕೈವಲ್ಯಮಪುನರ್ಭವಂ . . . ಮಹಾನಂದಮೆನೆ ಮೋಕ್ಷಕ್ಕೆ ಪೆಸರೆನಿಕ್ಕುಂ" (ಮಂಗರಾ. ೮–೨೬); ಕೈವಲ್ಯಮೊಗೆಗು ಬಳಿಯಂ ಕಡೆ ಬಂಧಹೇತು ನಿರ್ಜರೆ ಕಡೆಯೊಯಿದಘಾತಿವಿಪ್ರಮೋಕ್ಷಂ ಮೋಕ್ಷಂ (ಶ್ರಾವಕಾ. ೬೯–೧೨); ಅಱಿದು ಕೇಳಲಿ ಮಱಿದು ಕೇಳಲಿ . . . ಕೊಡದೆ ಕೈವಲ್ಯವನು ಹರಿನಾಮ (ಕೌಶಿರಾ. ೧–೧೧); ಕೈವಲ್ಯ ಪ್ರಕೃತಿಯಿಂದ ಆಗಮಿಸುವುದು; ಇದು ಶಾಶ್ವತವಾದರೆ ಮೋಕ್ಷ (ಹಿಂದಸಾ. ೭೮). ೩. ಶತೋಪನಿಷತ್ತುಗಳಲ್ಲೊಂದು: ಜಾಬಾಲ ಕೈವಲ್ಯಾದಿ ಶಾಖೆಗಳೊಳ್ (ಬಸವಪು. ೪೬–೭೫); ಬಳಿಕ ಶ್ರೀರುದ್ರ, ಬೃಹದಾರಣ್ಯಕ, ಶ್ವೇತಾಶ್ವತರ, ಕೈವಲ . . . ಮುದ್ಗಲ, ಮುಂಡಕವೆಂಬಿವು ಮೊದಲಾದುವೇಶತೋಪನಿಷತ್ತುಗಳು (ವಿವೇಕ. ೪). ೪. ಮುಖ್ಯವಾದ ಸ್ಥಾನ. ೫. ನಿರ್ಮಲತೆ: "ವಿಮುಖ್ಯಾಸ್ಪದಂ ನಿರ್ಮಲಮೇಕಾಂತಂ ಸಮೋಕ್ಷಂಗಳುಮೆನಿಕು ಚತುರ್ವಾಕ್ಯ ಕೈವಲ್ಯಮಕ್ಕುಂ" (ನಾನಾರ. ೧೬೬). [ಸಂ.]

**ಕೈವಲ್ಯದಾಯಿನಿ** (ನಾ). ಮೋಕ್ಷವನ್ನು ಕೊಡುವ ದೇವತೆ: ಸುಖದುಃಖವಿದಾಯಿನಿಯಾದ ಕೈವಲ್ಯದಾಯಿನಿಯಾದ ಭೈರವಿಯು ಸ್ವಪ್ನದಲ್ಲಿ ಅವಳ ಪ್ರಾಣವನ್ನು ಸಮರ್ಪಣೆ ಮಾಡಲು ಅಪ್ಪಣೆಯನ್ನು ಕೊಟ್ಟಿರಲಾಗಿ (ಕಪಾಕುಂ. ೧೨೪). [ಸಂ. ಕೈವಲ್ಯದಾಯಿನೀ]

**ಕೈವಲ್ಯಪತಿ** (ನಾ). ೧. ಮೋಕ್ಷಕ್ಕೆ ಒಡೆಯನಾದವನು; ದೇವರು: ಮತಿಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು (ಹಂಸಾ. ೪೯). ೨. [ಜೈನ] ಕೇವಲಜ್ಞಾನವನ್ನು ಪಡೆದು ಭಾವ ಮುಕ್ತಿಯನ್ನು ಹೊಂದಿದವನು: ಈ ಪ್ರಕಾರ ಕೈವಲ್ಯಪತಿ ಭಗವಾನ್ ವೃಷಭದೇವನು ನಿರಂತರ ಪರಮಾನಂದವನ್ನು ಅನುಭವಿಸುತ್ತ (ಭಾರದ. ೧೬೪).
[ಕೈವಲ್ಯ + ಪತಿ]

**ಕೈವಲ್ಯಬೋಧ** (ನಾ). [ಜೈನ] ಕೈವಲ್ಯದ ಅರಿವು; ಮೋಕ್ಷ ಜ್ಞಾನ: ಅಜಿತತೀರ್ಥೇಶನೊಳ್ . . . ಪುಟ್ಟಿತ್ತಗಾಧಂ ತ್ರಿಭುವನ ಜನಮಾಂಗಲ್ಯ ಕೈವಲ್ಯಬೋಧಂ (ಅಜಿಪು. ೭-೧೩); ಕೈವಲ್ಯಬೋಧ ರಮಾವಶೌಕ್ತಿಕ ಹಾರಯಷ್ಟಿ (ಪಂಶಾಮಾ. ೧-೬).
[ಕೈವಲ್ಯ + ಬೋಧ]

**ಕೈವಶ** (ನಾ). ಕರಗತವಾದುದು; ಸ್ವಾಧೀನ: ಚನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೇ ಶರಣು (ಮಹಾದೇ. ೮-೨); ಕಾದುವೆನು ನಮ್ಮವರು ಕಳಚಿದ ಕೈದುವನು ಕೈವಶವ ಮಾಡಿ (ಕುವ್ಯಾದ್ರೋ. ೧೩-೨೦); ಚಿತ್ತವನನುಗೊಳಿಸಿ ಕೈವಶಕೆ ತಂದರು (ತೊರರಾ. ೧-೫-೫೦).

**ಕೈವಶವಾಗು** = ಕೈಗೆ ಸಿಕ್ಕು; ಅಧೀನವಾಗು: ಬವರದಲಿ ಸುತನಳಿದನೋ ಕೌರವರ ಕೇವಶವಾದನೋ (ಕುವ್ಯಾದ್ರೋ. ೭-೨); ಶಾರ್ಙ್ಗದ ಕಡಲು ಕೈವಶವಾಯ್ತು (ತೊರರಾ. ೧-೮-೩೪).
[ಕೈ$_2$ (< ಕೆಯ್$_2$) + ವಶ]

**ಕೈವಸ** 'ಕೆಯ್ವಸ' ನೋ.

**ಕೈವಸ್ತ್ರ** (ನಾ). ಕೈಯಚೌಕ; ಸಣ್ಣ ಚೌಕ; ಕರವಸ್ತ್ರ: (ಜೇಬಿನಿಂದ ಕೈವಸ್ತ್ರವನ್ನು ತೆಗೆದು ಮುಖ ಒರಸಿಕೊಂಡು . . . ಸದ್ದುಮಾಡುತ್ತ) (ವೀರಯೋ. ೨೫); ತನ್ನ ಕೈವಸ್ತ್ರದಿಂದ ಟಾಮಿಯ ಗಾಯವನ್ನು ಸುತ್ತಿದನು (ಕಪಪು. ೩-೩೬). [ಕೈ$_2$ (< ಕೆಯ್$_2$) + ವಸ್ತ್ರ]

**ಕೈವಳಸು** (ಕ್ರಿ). ಪ್ರತಿನಿತ್ಯ ಉಪಯೋಗಿಸು; ಬಳಸು: ಶಿಲೆಯ ರೂಹನು ಮೂಢರುಗಳಗ್ನಿಯ ಪಾವಕನನು ಮಹೀಸುರರಿಳೆಯೊಳಗೆ ಪರಮಾತ್ಮನೇ ಪರದೈವ ತಾನೆಂದು ಒಲಿದು ಪೂಜಿಸುತಿಹರು . . . ವರಯೋಗಿಗಳು ಕೈವಳಸುವುದು ಜನವೀ ಪ್ರಕಾರದೊಳರಸ ಕೇಳೆಂದ (ಕುವ್ಯಾಉ. ೪-೨೩). [ಕೈ$_2$ (< ಕೆಯ್$_2$) + ಬಳಸು$_2$]

**ಕೈವಳಿ** 'ಕೆಯ್ವಟಿ' ನೋ.

**ಕೈವಳಿಸು** (ಕ್ರಿ). ಕೈಯಿಂದ ಬಾಚು, —ಬಳಿಸು: ಮೇರುವಿನ ಸುತ್ತಣವಳಯದರ್ಥವನಾಕರಿಸಿ ಕೈವಳಿ [ಪಾಠಾಂ. ಳ]ಸಿ ಬಿಟ್ಟನು ಹೊಕ್ಕಿಳಾವೃತವರುಷಸೀಮೆಯಲಿ (ಕುವ್ಯಾಸ. ೩-೪೫); ಅವ ವಸ್ತುವ ನರಸನೊಡ್ಡುವನಾವ ವಹಿಲದಲಾತ ಸೋಲಿಸಿ ಕೈವಳಿಸಿದನೊ ಬಲ್ಲನಾವವ ನೆಂದನಾ ಮುನಿಪ (ಕುವ್ಯಾಸ. ೧೩-೬೧); ನಿನ್ನ ದಳ ಥಟ್ಟೈಸಿ ಮುತ್ತಿದರೆ ಅಳುಕುವನೆ ಕಲಿಭೀಮನೆಡದಲಿ ಕಲಕಿದನು ಬಲವಂಕದಲಿ ಕೈವ [ಪಾಠಾಂ. ಕುಪ್ಪ]ಳಿಸಿ ಕೊಂದನು ವರ ಪುರೋಭಾಗವ ವಿಭಾಡಿಸಿದ (ಕುವ್ಯಾಕ. ೧೩-೧೪). [ಕೈ$_2$ (< ಕೆಯ್$_2$) + ಬಳಿಸು]

**ಕೈವಜಿ** (ನಾ). (?): ಸಧೃತಿ ಸಲ್ಲಕ್ಷಣಾದಿಗಳ ಬಿಡದಿಹ ಸ್ವರ್ಣ ವಿದ್ಯೆಯ ವಿಧಾನವಿಡಿದಾ ವಿಧದಿ ತಿಳಿಪುವ ಜಗದ್ಗುರು ಸ್ವಕಾಯಕದ ಕೈವಜಿಯೊಳುಪದೇಶ ಕಲ್ಪದ್ರುಮದೊಲಿರ್ಪನು(ಸಿಂಗಿರಾ. ೧೨-೪). [?]

**ಕೈವಾಕು** (ನಾ). ಚಿಕ್ಕ ಮಕ್ಕಳಿಗೆ ತೊಡಿಸುವ ಕೈಬಳೆ; ಕಪ್ಪ: ಅರಳೆಲೆ ಕೈವಾಕು ರನ್ನದುಂಗುರಗಳು ಕರಶೋಭಿಪ ದೃಷ್ಟಿಮಣಿಯು ಮುರುಕದಿಂದಿವು ಮುಂತಾದ ಬಾಲ್ದೊಡವಿಟ್ಟು ಮೆಜಿದನಾ ರಾಜಕುವರನು (ಜ್ಞಾನಸಚ. ೩-೧೬೬). [ಕೈ$_2$ (< ಕೆಯ್$_2$) + ವಾಕು$_1$]

**ಕೈವಾಗು** (ನಾ). (ಕೊಡುವಾಗ) ಕೈಯನ್ನು ಬಗ್ಗಿಸುವುದು, —ಕೆಳಕ್ಕೆ ಮಾಡುವುದು: ಪರಿಷದ್ರಾಜಕದಂಬಮಂಬರ ವಿಭೂಷಾಶ್ಚರ್ಯ ಸೌಂದರ್ಯದಿಂ ಪಿರಿದುಂ ಭೇದಿಸಲಾರ್ತುದಿಲ್ಲಱಿದುದಾಗಳ್ ವೇದಿಕಾಭ್ಯರ್ಣದೊಳ್, ಸುರಕಾಂತಾವಲಿಗೀವ ಬಾಯಿನದೆ ಕೈವಾಗಿಂದ ಮಿಂದ್ರಾಣಿಯಂ ನರನಾರೀತತಿಗೀವ ಬಾಯಿನದೆ ಕೈವಾಗಿಂ [ಪಾಠಾಂ. ರಿಂ]ಜಯಶ್ಯಾಮೆಯಂ (ಅನಂಪು. ೬-೬೨).
[ಕೈ$_2$ (< ಕೆಯ್$_2$) + ಬಾಗು$_1$]

**ಕೈವಾಡ** 'ಕೆಯ್ವಾಡ' ನೋ.

**ಕೈವಾರ್**, ಕಯ್ವಾರ್ (ಕ್ರಿ). ೧. ಸಹಾಯವನ್ನು ಬಯಸು: ಅನಿಮಿತ್ತಂ ಕೊಲುತಿರ್ಪ ಮಿಟ್ಟು ನರರಂ ಶೀತಾತಪಾನ್ನಾಂಬು ಚಿಂತಾಯಾಸ ಚೌರ್ಯಪ್ರವರ್ತನ ದೋಷಾದಿಗಳಂ ನೆರಂಬಡೆದವಂ ಮತ್ತೀಕೆ ಕೈವಾ[ಪಾಠಾಂ. ಕಯ್ವಾ]ರ್ದಪಂ (ಚಂದ್ರಪು. ೨-೩೩). **ಕೆಯ್ವಾರ್**: ೧. ಬೆಸನೇನೆಂನದ ವೀರರಿಲ್ಲ . . . ಪೇಳ್ದ ಬೆಸನಂ ಮಾಕ್ರೊರ್ಗಂಡು ಕಯ್ವಾರ್ದ್ದ ಬಾಳ್ವ ಸಮುಗ್ರಾರಿಗಳಿಲ್ಲೆನಲ್ (ಎಕ. XI, ದಾವಣ. ೩೨-೨೩; 1117). ೨. ತಡೆ; ತಡಮಾಡು: ಕಯ್ವಂದುದು ಸಹಕಾರಂ ಕಯ್ವಾರ್ವುದು ಸಮಯಮಲ್ಲದೆಂದು ಮನೋಜಂ ಮುಯ್ವಂ ನೋಡಿ ವಿಯೋಗಿಗೆ ಕಯ್ವಾಸಿದನಾಯ್ತು ಡಾಮರಂ ಮಾಮರದಿಂ (ಮಲ್ಲಿಪು. ೫-೧೦). [ಕೈ$_2$ (< ಕೆಯ್$_2$) + ಪಾರ್$_1$]

**ಕೈವಾರ$_1$** 'ಕೆಯ್ವಾರ$_1$' ನೋ.

**ಕೈವಾರ$_2$** 'ಕೆಯ್ವಾರ$_2$' ನೋ.

**ಕೈವಾರಂಗೊಳ್**, ಕಯ್ವಾರಂಗೊಳ್ (ಕ್ರಿ). ಮೆಚ್ಚು; ಹೊಗಳು; ಕೊಂಡಾಡು: ತಪಂಗೆಯ್ವರ್ಗೆ ಕೈವಾರಂಗೊಳ್ವಂತೆ ದುಷ್ಟರ್ಗೇಕೆ ಕೈವಾರಂಗೊಳರ್ (ಧರ್ಮಾಮೃ. ೭-೪೩). **ಕಯ್ವಾರಂಗೊಳ್**: ಸಮುತೆವೆರಸು ಕರ್ಮರಾಜನಂ ಕಯ್ವಾರಂಗೊಂಡು ಮೋಹರಾಜನಟ್ಟಿದ ತಂತ್ರಮೆನಿಸುವ [ಮೂವತ್ತೆರಡುಂ ದೋಷಂಗಳಂ ಪತ್ತುವಿಟ್ಟು] (ಧರ್ಮಾಮೃ. ೫-೧೩೬). [ಕೈವಾರ$_2$ (<ಕೆಯ್ವಾರ$_2$) + ಕೊಳ್$_1$]

**ಕೈವಾರವಿಷಯ** (ನಾ). ಕೈವಾರವೆಂಬ ದೇಶ: ಕೈವಾರ ವಿಷಯ (ಯಾ)ನ್ತರ್ಗ್ಗತಾ ಕನ್ದಮಙ್ಗಲೋ (ಅ) ನಾಮಧೇಯ ಪ್ರತಿಪಾದಿತೇ (ಮೈಆರಿ. ೧೯೧೪, ೧೩-೩೫; 806).
[ಕೈವಾರ$_0$ + ವಿಷಯ]

**ಕೈವಾರವೀರ** (ನಾ). ಹೊಗಳಿಕೆಯ ವೀರ; ಬಹಳಪ್ರಶಸ್ತಿಯನ್ನು ಪಡೆದ ವೀರ (?): ನಳಸಂವತ್ಸರದ ಕಾರ್ತಿಕಶು ೫ ಲ್ಲು ಕೈವಾರವೀರು ಕೈವಾರ ಕರಾ ನಿಶ್ಶಂಕಮಲ್ಲು (ಎಕ. IX, ಮಾಗಡಿ. ೩೮-೬; 1316).
[ಕೈವಾರ$_2$ (< ಕೆಯ್ವಾರ$_2$) + ವೀರ]

**ಕೈವಾರಿ** (ನಾ). ೧. ಹೊಗಳುವವನು; ಹೊಗಳುಭಟ್ಟ; ವಂದಿ; ಸ್ತುತಿಪಾಠಕ: ಕೈವಾರಿಗಳ ಕೋಳಾಹಳದಿಂ ನಡೆತಂದು (ನಂಬಿರ. ೨-೪೬); ವೈರಿದೂತನ ಕಳುಹಿದನು ಕೈವಾರಿಗಳು ಜಯಜಯವೆನಲು (ಕುವ್ಯಾಭೀ. ೧-೬೨); ಕೊಂಡಾಡುವರೆ ಕೈವಾರಿಗಳೆ ನಾವು (ತೊರರಾ. ೬-೫೪-೨೫); ಗುಜಿವಾನಿಸರ್ಪೆಸಗೊಂಡು ಉಗ್ಗಡಿಪ ಕೈವಾರಿಗಳ ಕೈವಾರಮನಾಲಿಸುತ್ತೆ (ಚಿಕವಂ. ೧೦೪-೧೮). ೨. ಬಾಹುಬಲವುಳ್ಳವನು; ಕೈಚಳಕವುಳ್ಳವನು; ಶೂರ; ಪರಾಕ್ರಮಿ: ಕಳಂಬೊಕ್ಕು ಸತ್ತಂಗೆ ಕೈವಾರಿಗಳ್ ಕೈದುಗೆಯ್ವುದು ಪಂಥಮಲ್ಲೆಂದು ತನ್ಮಂತ್ರಿಗಳಂ ಸಂತಯ್ಸಿ (ಮಹಾನೇ. ೧೦-೯೩ ವ). ೩. ಮಮತೆಯುಳ್ಳವನು; ಬೆಂಬಲಿಗ; ಪಕ್ಷಪಾತಿ; ಅಭಿಮಾನಿ: ದೇವರು ಏಕನಿಷ್ಠರ ಕೈವಾರಿಯೆಂಬುದು ಸುಳ್ಳಲ್ಲ (ಕುಮುದಿ. ೧೧೪); ಅಕಬರನಿವನು ಹಿಂದುಗಳ ಕೈವಾರಿಯೆಂದು ಚಿಕ್ಕಂದಿನಲ್ಲಿ ಶಾಲೆಯಲ್ಲಿ ಕಲಿಸುವರು (ಮಾತೃಭೂ. ೧೨);

ಸತ್ಕದ ಕೈವಾರಿ ದೇವರಿದ್ದಾನೆ (ಸ್ವೃತಿಚಿ. ೨೩೨); ಅದು ಮೊದಲು ಅಂಡಯ್ಯ ಎಂದೇ ಇದ್ದು . . . ಕನ್ನಡದ ಕೈವಾರಿಯಾದ ಕವಿ ಅದನ್ನು ಅಂಡಯ್ಯ ಎಂದು ಮಾಡಿಕೊಂಡಿರಬಹುದು (ತವನಿ. ೧೨೧).
[ಕೈವಾರ್$_2$ (< ಕೆಯ್ವಾರ್$_2$) + -ಇ$_3$]

**ಕೈವಾರಿಸು** (ಕ್ರಿ). ೧. ಹೊಗಳು; ಸ್ತುತಿಸು; ಕೊಂಡಾಡು: ನಿನ್ನ ವರ ಕೀರ್ತಿಯಂ ಕೈವಾರಿಸುತೆ ಬರುತೆ (ಪುಷ್ಪರ. ೯-೯); ಬಸವರಸನಂ ನಯದಿಂದೆ ಮಂಗಳ ಪಾಠಕರು ಕೈವಾರಿಸುವರೊಸೆದು (ಬಸವು. ೫-೩೪); ಕಳನೊಳು ಕಾದಿ ಗೆಲಿದತಿಬಳರ ಕೈವಾರಿಸುವ ಧ್ವನಿಯಿಂದೆ (ಪ್ರಭುಲೀ. ೩-೫); ಕೈ ನೆಗಹಿ ಕೈವಾರಿಸುವ ಗಮಕಿಗಳು (ಕುವ್ಯಾದ್ರೋ. ೪-೫೨). ೨. ಬೆಂಬಲಿಸು; ನೆರವು ನೀಡು: ಮನದೊಳ್ ಪಿರಿದುಂ ದೂರಿಸಲದೇಕೆ ಬಿದಿ ಕೈವಾರಿಸಿದೊಡೆ ತೀರದಿರ್ಪುದಾವುದುಮುಂಟೇ (ಚಂದ್ರಪು. ೩-೬೬). [ಕೈವಾರ್$_1$ (< ಕೆಯ್ವಾರ್$_1$) + -ಇಸು$_3$]

**ಕೈವಾರು** (ಕ್ರಿ). ಹೊಗಳು; ಪ್ರಶಂಸೆಮಾಡು: ಬಡವನೊಳ್ಳೆಯ ಮಾತ ನುಡಿದರಲ್ಲೆಂಬುವರು ಪೊಡವೀಶ ಪೊಳ್ಳುಗೆಡೆದರೂ ಕೈವಾರಿ ಕಡು ನಗುತಲಿಹರು (ಸರ್ವಜ್ಞ. ೧೨೬೬). [< ಕೆಯ್ವಾರ ?]

**ಕೈವಾಳ್** (ನಾ). ಕರವಾಳ; ಕೈಗತ್ತಿ; ಖಡ್ಗ: ಮಂತ್ರಿ ಜೆ ಕರೆಸಿದಳು ಕೈವಾಳ ಸತ್ಪರಿಘದಿಂದೆಸೆವ ಕಾಳರಕ್ಕಸವಿಂಡು ಬಂದುದು (ಮೋಹತ. ೩೨-೨). [ಕೈ$_2$ (< ಕೆಯ್$_2$) + ಬಾಳ್$_3$]

**ಕೈವಿಡಿ** 'ಕೆಯ್ವಿಡಿ' ನೋ.

**ಕೈವಿಡಿತೆ,** ಕೈಹಿಡಿತೆ (ನಾ). ಕೈಯ್ಯ ಹಿಡಿತ; ಕೈಯಿಂದ ವಶಪಡಿಸಿಕೊಳ್ಳುವಿಕೆ: ಅಬಲಾಶ್ರಯದೊಳಿರೆ ಮೇರು ಮಾನವನ ಕೈವಿಡಿತೆಗೊಳಗಪ್ಪುದೆಲೆ ಮರುಳೆ ನೀನಱಿದುದಿಲ್ಲೆಂದಳು (ಜೈಮಿಭಾ. ೬-೨೮). **ಕೈಹಿಡಿತೆ:** ಅವಗಡೆಯ ಮುನಿಯ ಕೈಹಿಡಿತೆಯೊಳಗಾಗಿ ಭಂಗವನಾಂತೆನೆಂದು . . . ಭೋರ್ಗರೆವುತಿರ್ದುದಂಭೋನಿಧಾನಂ (ಪಾಸೋಪು. ೧-೨೩).
[ಕೈ$_2$ (< ಕೆಯ್$_2$) + ಪಿಡಿತೆ$_2$]

**ಕೈವಿಡಿಸು,** ಕೈಹಿಡಿಸು (ಕ್ರಿ). ಕೈಹಿಡಿಯುವಂತೆ ಮಾಡು; ಪಾಣಿಗ್ರಹಣ ಮಾಡಿಸು; ಮದುವೆಮಾಡು: ಅರಸುಕುವರಿಯನೆನ್ನ ಮದನಂಗೆ ಕೈವಿಡಿಸಿ ಪಟ್ಟಗಟ್ಟುವೆನವಗೆ (ಚಂದ್ರಸ. ೧೦). **ಕೈಹಿಡಿಸು:** ಪರಸ್ಪರ ಪ್ರೀತಿಸುತ್ತಿದ್ದರೆ ಅವರೀರ್ವರ ಕೈಹಿಡಿಸಿ ತನ್ನ ಬಾಳುವೆಯ ಕೊನೆಯ ಹೊಣೆಯನ್ನು ನಿರ್ವಹಿಸಿ . . . ಆಲೋಚಿಸತೊಡಗಿದ (ಹಾಹುತ್ತ. ೬೬). [ಕೈವಿಡಿ (< ಕೆಯ್ವಿಡಿ) + -ಇಸು$_3$]

**ಕೈವೀಣ** (ನಾ). ಒಂದು ಬಗೆಯ ಆಯುಧ: ಬಲದೊಳ್ ಪತ್ತಿದ ಚಮ್ಮಟಿಗೆ ಕೈವೀಣಂ ಬೆಡಂಗಾಗೆ (ಅನಂಪು. ೧೧-೬೨). [?]

**ಕೈವೀಸು** 'ಕೆಯ್ವೀಸು' ನೋ.

**ಕೈವೀಳೆಯ,** ಕೈವೀಳ್ಯ (ನಾ). ಕೆಲಸವನ್ನು ನಿರ್ವಹಿಸಲು ಅನುಮತಿಯನ್ನು ಸೂಚಿಸುವುದಕ್ಕಾಗಿ ರಾಜನು ತಾನೇ ಕೊಡುವ ತಾಂಬೂಲ: ಆಗಳ್ ಯಜಮಾನಂ . . . ಎನ್ನೀ ಕೈವೀಳೆಯಮಂ ಕೈಕೊಳ್ಳಿಂ ಎಂಬುದುಂ (ರಾಮಾಶ್ವ. ೪೭-೫). **ಕೈವೀಳ್ಯ:** ಅದನ್ನು ನೀವು ಸಹಸ್ರಕಾಲಾವಧಿ ಅನುಭವಿಸಿಕೊಂಡು ಬಂದು ಬೀಡಿನ ಮರ್ಯಾದೆಯನ್ನು ಕಾಪಾಡುವಂಥವರಾಗಬೇಕು ಎಂದು ಹೇಳಿ ಕೈವೀಳ್ಯವನ್ನು ಕೊಟ್ಟನು (ಕಗದ್ಯ. ೭೦).
[ಕೈ$_2$ (< ಕೆಯ್$_2$) + ವೀಳೆಯ]

**ಕೈವೀಳ್ಯ** 'ಕೈವೀಳೆಯ' ನೋ.

**ಕೈವುರುಳ್** (ನಾ). ಕೈಯ ಹುರುಳು, —ಸಂಪತ್ತು: ನಲ್ಮೆಯಿಂ ನೆಲವಣ್ಣು ನೀಡುವಳ್ ಕಣ್ಮುಚ್ಚಿ ನಿಲ್ಲದಾ ಕೈವುರುಳ್ ಹೊಳಲ ಬಾಯಲ್ಲಿ (ಕಾಲೂರ. ೨೭-೧೬). [ಕೈ$_2$ (< ಕೆಯ್$_2$) + ಪುರುಳ್]

**ಕೈವೆಚ್ಚ** (ನಾ). = ಕೈಖರ್ಚು: ಅದರೆ ಲೆಕ್ಕದ ಮೊತ್ತ ಆದೆಷ್ಟು ಹತ್ತಿಟ್ಟು ಬಿಗಿ ಹಿಡಿದರೂ ಚಾರುಲತೆಯ ಕೈವೆಚ್ಚದ ಸೊತ್ತಿನಲ್ಲಿ ಹಿಡಿಸಲೊಲ್ಲದು (ಇಪ್ಪಕ. ೨೩೦). [ಕೈ$_2$ (< ಕೆಯ್$_2$) + ವೆಚ್ಚ]

**ಕೈವೆಡೆ** 'ಕೆಯ್ಯೆಡೆ' ನೋ.

**ಕೈವೆಡೆಗೊಡು** 'ಕೈಯೆಡೆಗೊಡು' ನೋ.

**ಕೈವೆರಲ್,** ಕೈವೆರಳ್ (ನಾ). ಕೈಯ ಬೆರಳು, —ಬೊಟ್ಟು; ಅಂಗುಲಿ: ಕೋಮಲ ಕೈವೆರಲಿಂದೆ ತಂತ್ರಿಯ ಮುಟ್ಟಿ ರಾಮಕ್ರಿಯೆಯ ಬಾಜಿಸಿದಳು (ಮೋಹತ. ೨೭-೧೩). **ಕೈವೆರಳ್:** ಮೈತ್ರದಿಂ ಕೈವೆರಳೊಳಿಂ ಸಿತಗಾತ್ರನಂಬಕದೆವೆಗಳಂ ಸತ್ಪಾತ್ರನೊತ್ತುತರವೆ ಸಿಲುಕಿತೆಂದುಡುಗದೂದುವನು (ಬಸವು. ೧೮-೫೯); ರುದಿತದಿಂ ಕೈವೆರಳ್ಗಳ ನೊತ್ತಿಕೊಳುತೆ ನಿಜಸದನಮಂ ಪೊಱಮಟ್ಟು ಹಲುಬಿದಳ್ (ಜೈಮಿಭಾ. ೨೦-೧೯). [ಕೈ$_2$ (< ಕೆಯ್$_2$) + ಬೆರಳ್ (< ಬೆರಲ್)]

**ಕೈವೆರಸು** (ಕ್ರಿ). (ನಮಸ್ಕಾರಮಾಡಲು) ಕೈಗಳನ್ನು ಸೇರಿಸು, —ಜೋಡಿಸು: ಜಂಗಮಕೆ ಶರಣೆಂಬ ಕೈವೆರಸಿ ನಿರುತದನಿಮಿಷನಾಗಿ ನೋಳ್ಪೀಶ್ವರನ ಮೇಲಣ ದೃಷ್ಟಿಗಳು . . . ಎಸೆಯೆ (ಬಸವು. ೧೦-೩೫).
[ಕೈ$_2$ (< ಕೆಯ್$_2$) + ಬೆರಸು$_1$]

**ಕೈವೆರಳ್,** 'ಕೈವೆರಲ್' ನೋ.

**ಕೈವೆಸ** 'ಕೆಯ್ವೆಸ$_1$' ನೋ.

**ಕೈವೇಗ** 'ಕೆಯ್ವೇಗ' ನೋ.

**ಕೈವೊಗು** 'ಕೆಯ್ವುಗು' ನೋ.

**ಕೈವೊಣರ್** (ನಾ). (?): ಕೈವೊಣರಿಂದೇನುಮಂ ನೆಮ್ಮದೆ ನಿಂದಿರ್ದು ಚರಿಗೆಯ ಮಾಳ್ಪುದು ಇಪ್ಪತ್ತಾಱನೆಯ ಗುಣಂ (ಶ್ರಾವಕಾ. ೮೩-೧). [?]

**ಕೈವೊಯ್** 'ಕೆಯ್ವೊಯ್' ನೋ.

**ಕೈವೊಲ** 'ಕೆಯ್ವೊಲ' ನೋ.

**ಕೈವೋಕ** (ನಾ). ೧. ಮೊಳೆತ ಚಿಗುರು ಮತ್ತು ಮಿಡಿಗಳಿಂದ ಕೂಡಿದುದು. ೨. ದುಷ್ಟ; ಹಿಂಸಕ. ೧, ೨: ಅಳಿಗಳ್ ಪಿಂ ಮಧುಪಂಗಳಿಂದು ಮಳಿನಾತ್ಮಂ ಮಾವು ಕೈವೋಕನೀ ಕಳಕಂಠಾಳಿ ವಿಜಾತಿ . . . ಎನುತ್ತು ಮವನಾಗಳ್ ಬಿಟ್ಟುಗೆಲ್ವೆಂ ಜಗಂಗಳನೀ ಪೌದನರಾಜನಂದನೆಯ ನಾನೆಂದಂಗಜಂ ಪೊಂಗುವಂ (ಶಾಂತೀಶ್ವ. ೪-೧೪೪). [ಕೈವೋಕು + -ಅ$_7$]

**ಕೈವೋಕು** (ನಾ). ೧. ರೆಂಬೆ ಮತ್ತು ಎಲೆ ಚಿಗುರುವಿಕೆ; ಕಾಯಿ ಬಿಡುವಿಕೆ. ೨. ಇತರರ ಮೇಲೆ ಅನ್ಯಾಯವಾಗಿ ಕೈತೋರಿಸುವಿಕೆ; ದುಷ್ಟತನ. 'ಕೈವೋಕ' ಪರಾ.
[ಕೈ$_2$ (< ಕೆಯ್$_2$) + ಪೋಕು]

**ಕೈವೋಗು** 'ಕೆಯ್ವೋಗು' ನೋ.

**ಕೈಶಿಕ** (ನಾ). ೧. ತಲೆಗೂದಲಿನ ಸಮೂಹ; ಕೇಶರಾಶಿ; ಕೇಶಪಾಶ. ೨. ಪ್ರಣಯ; ಕಾಮ. ೩. [ಸಂಗೀತ] ಒಂದು ರಾಗದ ಹೆಸರು: ಉದ್ಗೀಯಮಾನ ಮಂಗಳ ಕೈಶಿಕ ನಾಪಾಕರ್ಣನೋತ್ಕಾಸ್ಯೈಕ ಕರ್ಣ ಸ್ಪಂದಿತಾಂಗ ಗೃಹಕುರಂಗಶಾಬ ಸಂದೋಹಮುಂ (ಚಂದ್ರಪು. ೩-೯೬ ವ). [ಸಂ.]

**ಕೈಶಿಕಿ**(ನಾ).೧. [ಕಾವ್ಯಮೀ]ನಾಲ್ಕುಬಗೆಯ ವೃತ್ತಿಗಳಲ್ಲಿ ಒಂದು. ⓟ ಧೀರಲಲಿತ ನಾಯಕನಿಗೆ ಅನುಗುಣವಾದ ವೃತ್ತಿ; ಶೃಂಗಾರ ರಸಕ್ಕೆ ತಕ್ಕುದಾದ ನಾಯಕನ ವ್ಯಾಪಾರ: ಭಾರತಿ, ಸಾತ್ವತಿ, ಕೈಶಿಕಿ [ಕಿ] ಯಾರಭಟಿಯುಮೆಂಬ ವೃತ್ತಿಯೊಳ್ ರಸಮಂ ಸಂಚಾರಿಸುವ ಭಾವಮಂ ವಿಸ್ತರಿಸುವ ಬೆಡಂಗು ಬೇಱೆ ನೀಲಾಂಜನೆಯಾ(ಆದಿಪು.೯-೨೬);

ನಾಯಕನ ಪ್ರವೃತ್ತಿ ರೂಪವಾದ ಕಾರ್ಯವಿಶೇಷಗಳ ಸ್ವಭಾವವು 'ವೃತ್ತಿ' ಕೈಶಿಕೀ, ಸಾತ್ತ್ವತೀ, ಆರಭಟೀ, ಭಾರತೀ ಭೇದಗಳಿಂದ ವೃತ್ತಿಯು ನಾಲ್ಕು ವಿಧವಾಗಿದೆ. ಅವುಗಳಲ್ಲಿ ಕೈಶಿಕೀವೃತ್ತಿಯು ಗೀತ ನೃತ್ಯ ವಿಲಾಸ ಕಾಮೋಪಭೋಗ ಮೊದಲಾದುವುಗಳಿಂದ ಕೂಡಿರುವ ಶೃಂಗಾರ ವ್ಯಾಪಾರವಾಗಿರುತ್ತದೆ (ದಶರೂ. ೨-೪೭ ವ್ಯಾಖ್ಯೆ); ಕೈಶಿಕಿಯು ಗೀತ ನೃತ್ಯವಿಲಾಸಾದಿ ಶೃಂಗಾರಚೇಷ್ಟೆಗಳಿಂದ ಕೂಡಿವ್ವುದುವಾಗಿ ಇರುವುದು (ಕೈಪಿಡಿ. ೨೧೧). ೨. [ಸಂಗೀತ] ಒಂದು ರಾಗದ ಹೆಸರು: ಕೈಶಿಕಿಯೊಳ್ ವರಾಳಿವರ್ಣಂ ಶೋಭಿಸುಗುಂ (ಹಮ್ಮೀರ. ೨-೯೦ ವ). ೩. [ಸಂಗೀತ] ಒಂದು ಸ್ವರ ಸ್ಥಾನ: ಶುದ್ಧ ಮತ್ತು ವಿಕೃತಿ ಸ್ವರಸಮೂಹದಲ್ಲಿ ಈ ಕೆಳಗೆ ಕಾಣಿಸಿರುವ ಸ್ವರಗಳು ಒಂದೇ ಧ್ವನಿ ಹೊಂದಿವೆ. ಚತುಶ್ರುತಿ ಋಷಭ . . . ಕೈಶಿಕಿ ನಿಷಾದ (ಸಂಗೀಚಂ. ೧೭).
[ಸಂ. ಕೈಶಿಕೀ]

**ಕೈಶಿಕೀವೃತ್ತಿ** (ನಾ). = ಕೈಶಿಕಿ ೧: ಅಂತು ಕೈಶಿಕೀವೃತ್ತಿನರ್ತನೋಪೇತಮುಂ . . . ಅಪ್ಪಲಾಸ್ಯಮಂ (ಶಾಂತಿಪು. ೭-೩೨ ವ).
[ಸಂ. (ಕೈಶಿಕೀ + ವೃತ್ತಿ)]

**ಕೈಶಿಲ್ಕು** 'ಕೈಸಿಲ್ಕು' ನೋ.

**ಕೈಶೆರೆ** 'ಕೆಯ್ಸೆಱೆ' ನೋ.

**ಕೈಶ್ಯ** (ನಾ). ತಲೆಗೂದಲಿನ ಸಮೂಹ; ಕೇಶಪಾಶ. [ಸಂ.]

**ಕೈಸಂಚಿ** (ನಾ). ಕೈಯಲ್ಲಿರುವ ಸಂಚಯ, —ಸಂಗ್ರಹಿಸಿದ ವಸ್ತುಗಳ ಸಮೂಹ, —ಸಾಮಗ್ರಿ (?): ಮುಂಚುವ ಮಂತ್ರದಿಂ ಪೂಜಾ ವಿಧಿಯ ಕೈಸಂಚದಿಂ ನಿರ್ವಾಣಧೊಳು ಕಾಂಚಿಯ ಕಾಮಾಕ್ಷಿಯ ನರ್ಚಿಸಿದಳ್ (ಕುರಾಸಾಂ. ೨೭-೫). [ಕೈ$_2$ (< ಕೆಯ್$_2$) + ಸಂಚ$_3$]

**ಕೈಸಂಬು** (ನಾ). ಕೈಚಂಬು,—ಕಲಶ (?): ರನ್ನದ ಕೈಸಂಬನು ಹಸ್ತದೊಳಗಿಟ್ಟು ಹೊನ್ನೊರೆ ಬಾಕನು ಪಿಡಿದು ಗನ್ನಕಾಜನು ಸಿಂಗರವಾಗಿ ಎಸೆದನು ಹೊನ್ನ ಪರ್ವತದ ಮಾಳ್ಕೆಯೊಳು (ಜ್ಞಾನಚ. ೮-೩೭),
[ಕೈ$_2$ (< ಕೆಯ್$_2$) + ಸಂಬು ?)]

**ಕೈಸಟ್ಟಿ** (ನಾ). ಮಣ್ಣಿನ ಚಿಕ್ಕಚಟ್ಟಿ; ಕೈತಟ್ಟೆ: ಮಗನಾದ ಪುತ್ತಣನಿಗೆ ಒಂದು ಸಣ್ಣ ತಪ್ಪು ಮಾಡಿದರೆ ಸಾಕು, ಕೂಡಲೇ ತಲೆಯ ಮೇಲೆ ಒಂದು ಬುಟ್ಟಿ ಇಟ್ಟು ಕೈಯಲ್ಲೊಂದು 'ಕೈಸಟ್ಟಿ' ಕೊಟ್ಟು ಸೆಗಣಿ ಹೆಕ್ಕಲು ಮಧ್ಯಾಹ್ನ ಬಿಸಿಲಿಗೆ ಗುಡ್ಡಕ್ಕೆ ಕಳುಹಿಸುತ್ತಿದ್ದರು (ಕೈಮಾಂಸ. ೫). [ಕೈ$_2$ (< ಕೆಯ್$_2$) + ಸಟ್ಟಿ (< ಚಟ್ಟಿ$_1$)]

**ಕೈಸಟ್ಟುಗ** (ನಾ). ೧. ಸಣ್ಣಸಟ್ಟುಗ; ಚಿಕ್ಕಸೌಟು. ೨. ಒಂದು ಬಗೆಯ ಆಯುಧ (?): ಬಟ್ಟೆಯೊಳಗೆ ಮೈಮುಚಿದ್ದೆದುವರ ಕೈಸಟ್ಟುಗ ಚೂರಿ ಬಾಕಿನಲ್ಲಿ ಮೆಟ್ಟಿ ಮೂಗರಿದಡಗುವರಂತೆ ನೀವತಿ ಕಟ್ಟೆಚ್ಚ್ಚಜರೊಳೈದಿರೆಂದ (ಕಂಸವಿ. ೧೧-೧೯).
[ಕೈ$_2$ (< ಕೆಯ್$_2$) + ಸಟ್ಟುಗ./ ತುಳು. ಕೈಸಟ್ಟಿ]

**ಕೈಸದರ** (ನಾ). ಕೈಯಲ್ಲಿರುವುದು; ಕೈಕೆಳಗಿನದು; ಕೈವಶವಾದುದು. ಕೈಸದರದವನು = ಕೈಗೆ ಸಿಕ್ಕಿದವನು; ಕೈವಶವಾದ ವ್ಯಕ್ತಿ: ಹೃದಯ ಕರಗುವ ಮಾತನೆಂದುದು ಮದಕರಿಗೆ ನೊಜಜಂತರವೆ ಕೈಸದರದವರನು ಕೊಲುವುದುಚಿತವೆಯೆಂದುದಾ ಪಕ್ಷಿ (ನಳಚ. ೨-೧೭).
[ಕೈ$_2$ (< ಕೆಯ್$_2$) + ಸದರ]

**ಕೈಸದ್ದಕ** (ನಾ). ಹತ್ತಿರದಲ್ಲಿ ಸದಾ ಇರುವ ಸೇವಕ, —ಪರಿಚಾರಕ: ಉಳಿದ ಇಬ್ಬರು ಕೈಸದ್ದಕದ ಅಂಗರಕ್ಷಕರು, ಅವರು ಮೂರು ಜನರೂ . . . ಒಳಕ್ಕೆ ಬಂದು ನಿಂತುಕೊಂಡರು (ಪೇಟಿಮಾ. ೩೫); ಈ ಕೈಸದ್ದಕದ ಜನರಿಗೆ ಅರಮನೆಯಲ್ಲಿ ಬೇರೆ ಇಲಾಖೆಯೇ ಇದೆ (ಮುಸುಗ. ೫೪).
[ಕೈ$_2$ (< ಕೆಯ್$_2$) + ಸದ್ದಕ ?]

**ಕೈಸನ್ನಿಸು** (ಕ್ರಿ). ಕೈಸನ್ನೆಯನ್ನು ಮಾಡು: ನೀಲ ಪ್ರಹಸ್ತ ರಣಕ್ಕೆತಂದು ಕೈಸನ್ನಿಸಲು ಸೇನೆಗೆ (ಜಿರಾಮಾ. ೬೧-೨೧).
[ಕೈಸನ್ನೆ (< ಕೆಯ್ಸನ್ನೆ) + - ಇಸು$_3$]

**ಕೈಸನ್ನೆ** 'ಕೆಯ್ಸನ್ನೆ' ನೋ.

**ಕೈಸನ್ನೆಗೆಯ್** 'ಕೆಯ್ಸನ್ನೆಗೆಯ್' ನೋ.

**ಕೈಸನ್ನೆಮಾಡು** (ಕ್ರಿ). ಕೈಯಿಂದ ಸನ್ನೆಮಾಡು, —ಸೂಚನೆ ಕೊಡು: ಕೂಡಲೊಲ್ಲದೊಡೆ ನಿಂದು ಮಾತಾಡಲಾಗದೆ ಮಾತನಾಡದೊಡೆ ಕೈಸನ್ನೆಮಾಡಲಾಗದೆ (ಚಿಬಪು. ೧೯-೩೮).
[ಕೈಸನ್ನೆ (< ಕೆಯ್ಸನ್ನೆ) + ಮಾಡು$_1$]

**ಕೈಸರ** (ನಾ). ೧. ಕೈಯಲ್ಲಿರುವ ಸರ, —ಮಾಲೆ. ೨. ಮದುವಣಗಿತ್ತಿಯ ಕೊರಳಿನಲ್ಲಿ ಮದುವಣಿಗನು ಹಾಕುವ ಹೂಮಾಲೆ; ವರಣಮಾಲಿಕೆ: ಏಕೆ ಡೊಂಬನೆ ನಿಲ್ಲಿಸಾಟವ ಈಕೆಯಲಿ ಮನ ಸೋತುದು ಸಾಕು! ಬಂಗರು ನಾನೆ! ಕೈಸರ ಹಾಕುವೀಕೆಯ ಕೊರಳಲಿ (ಕಎಪು. ೩೯-೧೯).
[ಕೈ$_2$ (< ಕೆಯ್$_2$) + ಸರ$_1$]

**ಕೈಸರಿಸ** (ನಾ). ಕೈಯ ಬಳಿ, —ಸಮೀಪ: ಕೈಸರಿಸಕಿರಿಸಿಹ ಹಸುಳೆಯೋರ್ವಗೆ ಅರಗನವ (ಬಜ್ಜಪು. ೧೧೧-೪೭).
[ಕೈ$_2$ (< ಕೆಯ್$_2$) + ಸರಿಸ]

**ಕೈಸರಿಹೊತ್ತು** (ನಾ). ಸರಿಯಾದ ಹೊತ್ತು; ಸಕಾಲ: ಅರ್ಜುನ ಅರಿಯದ ಹಾಗೆ ತಾಪಸ ಪುತ್ರನೆನಿಸಿರ್ದೀಗ ಕೈಸರಿಹೊತ್ತಿನಲಿ ನಿಜಕುಲವ ಪ್ರಕಟಿಸಿದರಸ ಚಿತ್ತೈಸು (ಪಶುಭಾ. ೨೨-೫).
[ಕೈ$_2$ (< ಕೆಯ್$_2$) + ಸರಿ$_1$ + ಹೊತ್ತು$_2$ (< ಪೊೞ್ತು)]

**ಕೈಸವರಿಸು** (ಕ್ರಿ). ಸಿದ್ಧಪಡಿಸಿಕೊಳ್ಳು; ಅಣಿಮಾಡಿಕೊಳ್ಳು: ತಿರಿಚಿನಾಪಳ್ಳಿಗೆ ತಿರಿದುಂಬೋದಕ್ಕೆ ಇಲ್ಲಿಂದ ಕೈಸವರಿಸಬೇಕೇ (ಗಾದೆ).
[ಕೈ$_2$ (< ಕೆಯ್$_2$) + ಸವರಿಸು$_2$ (< ಸಂವರಿಸು)]

**ಕೈಸಾಗು** 'ಕೆಯ್ಸಾಗು' ನೋ.

**ಕೈಸಾಣೆ** (ನಾ). ೧. ಚಿಕ್ಕ ಸಾಣೆಕಲ್ಲು, —ಮಸೆಗಲ್ಲು: ಚಾಣಾಕ್ಯನ ತಂದೆ ಕೇಳ್ದು ಕೈಸಾಣೆಗಳಿಂ [ಪಾಠಾಂ. ಯಿಂ]ದಂ ನಾಲ್ಕುಂ ದಾಡೆಗಳ ನುರ್ದಿಸಿ ಕಳೆದು (ವಡ್ಡಾರಾ. ೧೮೩-೧೩); ಮುಟ್ಟಿದ ಚಮ್ಮಾರುಲಿಯ ಪೆಟಿನೊಸಲೊಳಗಿಟ್ಟ ಕತ್ತುರಿಯ ತಿಲಕದ ಮುಟ್ಟಿ ಪಿಡಿದ ಕೈಸಾಣೆಯ ಕೊನಬುಗಳಿಟ್ಟಣಿಸಿಹವು ಬೀದಿಯಲಿ (ಕಂಸವಿ. ೬-೧೯೫). ೨. ಕೈಯಿಂದ ತಿಕ್ಕುವುದು, —ಉಜ್ಜುವುದು: ಗರಡಿಯೊಳಗೆ ಸಾಧನಗೈದು ದೇಹದೊಳಿರುವ ಜಲವ ಮೇಲೆ ಧರಿಸಿ ಮಿಱುಪ ಕುಂಕುಮ ವಸನದ ಕೈಸಾಣೆಯ ದೊರೆಗಳ ಕುವರರೈದಿಹರು (ಕಂಸವಿ. ೭-೧೭).
[ಕೈ$_2$ (< ಕೆಯ್$_2$) + ಸಾಣೆ]

**ಕೈಸಾರ್** 'ಕೆಯ್ಸಾರ್' ನೋ.

**ಕೈಸಾರಿಸು** (ಕ್ರಿ). ಕೈಗೆಬಂದು ಸೇರುವಂತೆ ಮಾಡು; ಕೈವಶವಾಗಿಸು: ಸನ್ಮತಿಯ ಕೈಸಾರಿಸುತೆ ಪೊರೆಯೆನುತ್ತಡಿದಾವರೆಗೆ ಭಕ್ತಿಯಿಂದ್ಯೆದೆ ವಂದಿಸುವೆನು (ಪರಶು. ೧-೫).
[ಕೈಸಾರು (< ಕೆಯ್ಸಾರ್) + -ಇಸು$_3$]

**ಕೈಸಾರು** 'ಕೆಯ್ಸಾರ್' ನೋ.

**ಕೈಸಾರೆ$_1$** (ನಾ). ಕೈಗೆ ಎಟಕುವಷ್ಟು ಹತ್ತಿರ, —ಸಮೀಪ: ಕಾಲ್ಗಳನಿಂಬಿಂ ಪರಿಕಾಲೊಳಿಟ್ಟತಿಮುದಂ ಕೈಸಾರೆ ಕೈಸಾರೆಯೊಳ್ ಬಳೆದಿಮ್ಮಾವಿನ ಬಾಚಿಯೊಳಗಳ ಪಣ್ಣಿಂ ಪಣ್ಣನೋರೊರ್ಮೆ ಮೆಲ್ದು (ಜಗವಿ. ೯-೮೮). [ಕೈ$_2$ (< ಕೆಯ್$_2$) + ಸಾರೆ$_1$]

**ಕೈಸಾರೆ$_2$** 'ಕೆಯ್ಸಾರೆ' ನೋ.

**ಕೈಸಾರ್ಚು** (ಕ್ರಿ). ಕೈಗೆ ಸಿಗುವಂತೆ ಮಾಡು; ಕೈಗೆ ನೀಡು; ಕೈಸೇರಿಸು: ಪೊಳೆವ ಕೈಮಾಲೆಯಾ ಲೀಲೆಯಿಂ ತೆಗೆತೆಗೆದು ಕೆಲದವರ್ ಕೈಸಾರ್ಚೆ (ಚೆಬಪು. ೧೧–೪೭). [ಕೈ$_2$ (< ಕೆಯ್$_2$) + ಸಾರ್ಚು]

**ಕೈಸಾಲ** (ನಾ). ಸಾಲಪತ್ರವಿಲ್ಲದೆ, ನಂಬಿಕೆಯ ಮೇಲೆ ಕೊಡುವ ಸಾಲ; ಕೈಗಡ: ಸಂಬಳ ಬಾರದೆ ಆರುದಿಂಗಳಾಯಿತು ಕೈಸಾಲವೇರಿತು ಮುಂದೆ (ಇಂಚಾಪ. ೨೦–೯೦). [ಕೈ$_2$ (< ಕೆಯ್$_2$) + ಸಾಲ$_1$]

**ಕೈಸಾಲೆ** 'ಕೆಯ್ಸಾಲೆ' ನೋ.

**ಕೈಸಾಲೆಮಾರು** (ನಾ). (?): ಅಕ್ಷರದಲೂ ಯಿಂನೂಱು ವರಹ ಕೈಸಾಲೆ ಮಾರ್ರಾಗಿ ತ್ರಿವಾಚ ಊನ××ಲೊಪ್ಪಿ ಕೊಟ್ಟೆಉ (ಎಕ. XI, ಚಿತ್ರದು. ೪೮–೨೦; 1581). [?]

**ಕೈಸಿಕ್ಕು** (ಕ್ರಿ). ೧. ಕೈಸಿಕ್ಕಿಕೊಳ್ಳು, —ತಗುಲಿಕೊಳ್ಳು: ಮೃಡನಱಿದು ನಗುತ್ತೊತ್ತಲಾ ಗಿರಿಯಡಿಯಲೇ ಕೈ ಸಿಕ್ಕಿ ಅಜ ನಡನಡುಗಲೊದರಿದನವನು (ತೊರರಾ. ೧–೮–೩೨). ೨. ಕೈಗೆ ಸಿಕ್ಕು; ದೊರಕು; ಲಭಿಸು: ನಿನಗೆ ಕೈಸಿಕ್ಕಿದೀ ಮಂತ್ರಿಯಿಂ ಕವಡು ಬೀಳ್ವುದು (ಚೆಬಪು. ೧೦–೪೭); ರಕ್ಕಸನ ಕೈಸಿಕ್ಕಿಯತಿ ಘಾಸಿಗೊಂಡೆದೆಯೊಡೆದು ಜೀವಿಪನೆ ಮಗನೆ (ನವಮೋ. ೨೯–೪೭). [ಕೈ$_2$(< ಕೆಯ್$_2$)+ಸಿಕ್ಕು$_1$ (<ಸಿಲ್ಕು$_1$)]

**ಕೈಸಿಲ್ಕು**, ಕೈಶಿಲ್ಕು (ನಾ). ಕೈಯಲ್ಲಿರುವ ಉಳಿಕೆ; (ಆಯ-ವ್ಯಯಗಳ ವ್ಯತ್ಯಾಸದಲ್ಲಿ) ಕೈಯಲ್ಲಿ ಉಳಿಯುವುದು, —ಉಳಿಕೆ; ಶೇಷ: ಕೈಸಿಲ್ಕು (Balance in hand. ಇಂಕನಿ). **ಕೈಶಿಲ್ಕು**: (ಪಾರಿನಿ. ೮). [ಕೈ$_2$ (< ಕೆಯ್$_2$) + ಸಿಲ್ಕು$_4$]

**ಕೈಸು** 'ಕೆಯ್ಸು' ನೋ.

**ಕೈಸುಡು** (ಕ್ರಿ). ೧. ಕೈಯನ್ನು ಸುಡು: ಕಡುತಣ್ಪಗೆಟ್ಟು ಕಿಚ್ಚಿನೊಳೊಡಗೂಡಿದ ನೀರ್ ಬಱಿಕ್ಕೆ ತೀವ್ರತೆಯಿಂ ಕೈಸುಡುವಂ[ಪಾಠಾಂ. ಇಡಬಾರದಂ]ತೆ (ಧರ್ಮಾಮೃ. ೨–೭೮). ೨. (ಅಲಂ) (ನಷ್ಟಪಟ್ಟು) ಅನುಭವಕ್ಕೆ ಬಂದಿರು: ಆ ವ್ಯಾಪಾರದಿಂದ ಆಗಲೆ ಕೈಸುಟ್ಟಿದೆ (ರೂಢಿ). [ಕೈ$_2$ (< ಕೆಯ್$_2$) + ಸುಡು$_1$]

**ಕೈಸುರಗಿ** 'ಕೆಯ್ಸುರಿಗೆ' ನೋ.

**ಕೈಸುರಿಗೆ** 'ಕೆಯ್ಸುರಿಗೆ' ನೋ.

**ಕೈಸೂಟಿ** (ನಾ). ಕೈಯ ಚಾಲಾಕಿ; ಕೈಚಳಕ: ಅನೇಕ ಮೊದಲಗಿತ್ತಿಯರು ತಲೆಯನ್ನು ಪೂರ್ತಿ ತಗ್ಗಿಸಿಕೊಂಡೇ ಇರುತ್ತಾರೆ. ಅದು ಹೇಗೆ ನೋಡುವರೋ ಏನು ತಾನೋ? ಕೈಸೂಟಿಯೋ? ಸೀದ ಸ್ವಲ್ಪವೂ ತಪ್ಪದಂತೆ, ವರನ ತಲೆಯ ಮೇಲೆಯೇ ಸುರಿಯುತ್ತಾರೆ (ಸುವಸಂ. ೫೪). [ಕೈ$_2$ (< ಕೆಯ್$_2$) + ಸೂಟಿ$_1$]

**ಕೈಸೂರೆ** 'ಕೆಯ್ಸೂಱೆ' ನೋ.

**ಕೈಸೂಱಿ** (ನಾ). ಸೂರೆಮಾಡುವವಳು; ಲೂಟಿಮಾಡುವವಳು: ನಾರಿ ನಲ್ಲನ ಮನೋಹಾರಿ ಪತಿ ಚಿತ್ತ ಕೈಸೂಱಿ ಮಿಗೆ ಸುಂದರಶರೀರಿ (ನವಮೋ. ೩–೧೭). [ಕೈಸೂಱೆ (< ಕೆಯ್ಸೂಱೆ) + -ಇ$_2$]

**ಕೈಸೂಱೆ** 'ಕೆಯ್ಸೂಱೆ' ನೋ.

**ಕೈಸೂಱೆಗಾಱ** (ನಾ). ಕೊಳ್ಳೆಹೊಡೆಯುವವನು; ಲೂಟಿಮಾಡುವವನು: ಕಡುಮುನದ ಕೈಸೂಱೆಗಾಱರನಡಗೆಡಹಿದನು (ಕುವ್ಯಾಭೀ. ೫–೨೩). [ಕೈಸೂಱೆ (< ಕೆಯ್ಸೂಱೆ) + -ಕಾಱ]

**ಕೈಸೂಱೆಗೊಡು** (ಕ್ರಿ). ಕೊಳ್ಳೆಹೊಡೆಯಲು ಎಡೆಗೊಡು; ಲೂಟಿ ಮಾಡಲು ಅವಕಾಶಕೊಡು: ಮೋಹಾಂಧಕಾರಕೆ ಕರಣವನು ಕೈಸೂಱೆಗೊಟ್ಟನು ನಿಜದೊಳೆಚ್ಚಱದೆ (ಕುವ್ಯಾದ್ರೋ. ೭–೯). [ಕೈಸೂಱೆ (< ಕೆಯ್ಸೂಱೆ) + ಕೊಡು$_1$]

**ಕೈಸೂಱೆಗೊಳ್** 'ಕೆಯ್ಸೂಱೆಗೊಳ್' ನೋ.

**ಕೈಸೂಱೆವೋಗು** (ಕ್ರಿ). ಕೊಳ್ಳೆಹೋಗು; ಲೂಟಿಯಾಗು: ಕಾಮುರಾಜವಿಜಯಂ ಕೈಸೂಱೆವೋಯ್ತು (ದಶಕು. ೪–೫೦). [ಕೈಸೂಱೆ (< ಕೆಯ್ಸೂಱೆ) + ಪೋಗು$_1$]

**ಕೈಸೆಕೆ** (ನಾ). ೧. ಕಿರಣದ ಶಾಖ, —ಉಷ್ಣತೆ. ೨. (ಅಲಂ) ಪ್ರಭಾವ; ಪರಾಕ್ರಮ: ಪದೆ ಮೋಹಿಕೊಂಡಿರೆ ಮುದ್ರೆಯಿಟ್ಟ ರಾಜಂಗೆ ಕೈಸೆಕೆಯ ತೋಱುವೆನೆನುತ್ತೆ (ಭಾವಚಿಂ. ೬–೩೪). 'ಕೈಬಿಸಿ' ಪರಾ. [ಕೈ$_2$ (< ಕೆಯ್$_2$) + ಸೆಕೆ]

**ಕೈಸೆರೆ** 'ಕೆಯ್ಸೆಱೆ' ನೋ.

**ಕೈಸೆರೆಗೈ** (ಕ್ರಿ). ಸೆರೆಹಿಡಿ; ಬಂಧಿಸು; ದಸ್ತಗಿರಿಮಾಡು: ಪ್ರತಿಯಾಗಿ ಕೈಸೆರೆಗೈದರಾಳರಸರು ನಾಯಕರೆಲ್ಲರ (ಇಂಚಾಪ. ೩೮–೮೦). [ಕೈಸೆರೆ (< ಕೆಯ್ಸೆಱೆ) + ಗೈ (< ಕೆಯ್$_1$)]

**ಕೈಸೆರೆಯಾಗು** (ಕ್ರಿ). ಬಂಧಿತನಾಗು; ಕೈದಿಯಾಗು: ಅವಳಲ್ಲಿ ಕೈಸೆರೆಯಾಗಿ ಕಠಿಣ ಶಿಕ್ಷೆಗೆ ಗುರಿಯಾದಳು (ಪುನರು. ೪೯೩). [ಕೈಸೆರೆ (< ಕೆಯ್ಸೆಱೆ) + ಆಗು$_1$]

**ಕೈಸೆಳವೆ** (ನಾ). ಕೈಯಲ್ಲಿ ಹಿಡಿದುಕೊಳ್ಳುವ ಬೆತ್ತ, —ಕೋಲು: ಮುಂದಲೆ ಜುಂಗಡಿ ಸುತ್ತಿದ ಹಚ್ಚಡ ಹೊಂದೊಡವಾಂತ ಕೈಸೆಳವೆ ಬಂದು ಭೂವರಗೆ ಸಾಷ್ಟಾಂಗವೆಱಗಿಯೆದ್ದು ನಿಂದು ಬಿನ್ನವಿಸಿದನಿಂತು (ಭರಚ. ೧೨–೫೧). [ಕೈ$_2$ (< ಕೆಯ್$_2$) + ಸೆಳವೆ]

**ಕೈಸೆಱೆ** 'ಕೆಯ್ಸೆಱೆ' ನೋ.

**ಕೈಸೆಱೆಗೊಳ್** 'ಕೆಯ್ಸೆಱೆಗೊಳ್' ನೋ.

**ಕೈಸೆಱೆವಿಡಿ** 'ಕೆಯ್ಸೆಱೆವಿಡಿ' ನೋ.

**ಕೈಸೇರಿಸು** (ಕ್ರಿ). ಕೈಗೆ ಸೇರುವಂತೆ ಮಾಡು; ದೊರಕಿಸಿಕೊಡು: ಸಂತಾನ ಸೌಭಾಗ್ಯ ಸಂಪತ್ತುಗಳನು ಶ್ರೀಕಾಂತನು ಕೈಸೇರಿಸುವನು (ಹದಿಬ. ೩–೫೦). [ಕೈಸೇರು (< ಕೆಯ್ಸೇರ್) + -ಇಸು$_3$]

**ಕೈಸೇರು** 'ಕೆಯ್ಸೇರ್' ನೋ.

**ಕೈಸೇವಗೆ** (ನಾ). ಕೈಯಿಂದ ಮಾಡಿದ ಸೇವಿಗೆ: ಕುಂಬಳದ ಕಾಯ ಕೈಸೇವಗೆಯ ಸಮವಾಗಿ ಸಂಬಳಿಸಿಕೊಂಡೊಣಗಲಿಕ್ಕಿ (ಸೂಪಶಾ. ೧–೫೩). [ಕೈ$_2$ (< ಕೆಯ್$_2$) + ಸೇವಗೆ]

**ಕೈಸೇವೆ** (ನಾ). ೧. ಕೈಯಿಂದ ಮಾಡುವ ಉಪಚಾರ; ಕೈಂಕರ್ಯ. 'ಕೈಸೇವೆಗೊಳ್' ಪರಾ. ೨. (ಅಲಂ) ಏಟು; ಪೆಟ್ಟು: ಗಲಾಟೆ ಮಾಡಿದರೆ ಕೈಸೇವೆ ಬೀಳುತ್ತದೆ. (ರೂಢಿ). [ಕೈ$_2$ (< ಕೆಯ್$_2$) + ಸೇವೆ$_1$]

**ಕೈಸೇವೆಗೊಳ್** (ಕ್ರಿ). ಕೈಸೇವೆಯನ್ನು ಸ್ವೀಕರಿಸು; ಕೈಂಕರ್ಯವನ್ನು ಅಂಗೀಕರಿಸಿಕೊ: ಕಾಲ ಕಾಲಗಳಲ್ಲಿ ಎಱ್ಡಸೆ ಪಾಲಕರ ಕೈಸೇವೆಗೊಳುತ ಕೃಪಾಳು ಅವರಭಿಲಾಷೆಗಳ ಪೂರಯಿಸಿ ಕೊಡುತಿಪ್ಪ (ಜಗದಾ. ೨೧೬). [ಕೈಸೇವೆ + ಕೊಳ್$_1$]

**ಕೈಸೊಡರ್**, ಕೈಸೊಡರು (ನಾ). ಕೈದೀಪ; ಸಣ್ಣ ದೀಪ: ಸಮಸ್ತ ಜನಜಂಗುಳಿ ಕೈಸೊಡರ್ಗಳ ಸಾಲ ಸಂದಣಿಯ (ಜೈಮಿಭಾ. ೩೧–೧೪). **ಕೈಸೊಡರು**: ಕೈಯಲ್ಲಿ ಹೊನ್ನೆ ಎಣ್ಣೆಯ ದೊಡ್ಡ ಕೈಸೊಡರನ್ನು ಹಿಡಿದುಕೊಂಡು ಹೊರಗೆ ಬಂದರು (ಕಂಬಹು. ೬೬). [ಕೈ$_2$ (< ಕೆಯ್$_2$) + ಸೊಡರ್$_1$]

**ಕೈಸೊಡರು** 'ಕೈಸೊಡರ್' ನೋ.

**ಕೈಸೊರೆ** (ನಾ). ಕಹಿಯಾದ ಸೋರೆ: ಕಲಿಮನವು ಕೈಸೊರೆಯೆ ಸುಭಟರ್ಗೆಂದನಸುರಾರಿ (ಕೋಗಯ. ೨೫–೭೮); ಅಮೂರ್ತಬಳ್ಳಿ ಸೊಪ್ಪಿನಲ್ಲಿ ಇಂಬಿಹುಳಿಯೊಳಗೆ ಲೇಪಹಾಕುವುದು. ಇಷ್ಟರಿಂದ ಮಾರಿದರೆ ಕೈಸೊರೆಯ ಸೊಪ್ಪುತಂದು ಕಟ್ಟುವುದು (ವಾತಾಚಿ. ೪–೩). 'ಕಯ್ಸೊರೆ' ಪರಾ. [< ಕಯ್$_6$ + ಸೊರೆ$_2$]

**ಕೈಸೋಂಕು** (ನಾ). ಕೈಯಿಂದ ಮುಟ್ಟುವಿಕೆ; ಹಸ್ತಸ್ಪರ್ಶ: ಅತ್ತೆಮ್ಮ . . . ತುಸು ಸಲುಗೆಯಿಂದ ಮೈದಡವಲು ಪ್ರಯತ್ನಿಸಿದಳು. ಆ ಹುಡಿಗೆಯೋ ಅದನ್ನು ತನ್ನ ಮೈಯಿಂದ ಕೊಡಹಿಕೊಂಡಂತೆ ಮಾಡಿ, ಒರೆಸಿ ಆವಳ ಕೈಸೋಂಕು ಜಾಡಿಸಿಬಿಟ್ಟಳು (ಇಪ್ಪಕ. ೨೧೫).
[ಕೈ$_2$ (< ಕೆಯ್$_2$) + ಸೋಂಕು$_2$]

**ಕೈಸೋದಿಸು** (ಕ್ರಿ). ಕೈಯಿಂದ ಹುಡುಕು: ಶ್ರಾವಕಿ ಭರ್ಗ ಯಗೊಂಡಲ್ಲಿಂದಿತ್ತ ರಾತ್ರಿಯೊಳನ್ನಮಂ ಬೇಡಿಕೊಂಡು ಸ್ರಾವೆಯೊಳು ಬಸದಿಯೊಳಿಟ್ಟೆರ್ದು ಬಾಗಿಲಂ ಮುಚ್ಚಿ ಬೆಳಗಾದಾಗಳು ಗವಾಕ್ಷದ ಬೆಳಗಿನೊಳೊರ್ವರ್ಗೊರ್ವರ್ ಕೈ ಸೋದಿಸಿಕೊಂಬುದು ಪಗಲು ಪೊರಮಡಲಾಗದೆಂಬುದುಂ (ಕಗವಿ. ೧೧೧ ರಾಜಾವಳೀಕಥೆ).
[ಕೈ$_2$ (< ಕೆಯ್$_2$) + ಸೋದಿಸು]

**ಕೈಸೋಲ್, ಕೈಸೋಲು** (ಕ್ರಿ). (ಆಲಂ) ಆಯಾಸಗೊಳ್ಳು; ಬಳಲು; ಶಕ್ತಿಗುಂದು; ಸುಸ್ತಾಗು: ಬಲ್ಲಿದರೊಳು ಕಾದಿ ಕೈಸೋತು ಕನಲುವದುಕ್ಕವಂತಿರಲಿ (ಮೋಹತ. ೫–೪೭); ಅಖಿಳ ಪ್ರಾಣಿಗಳಾಯು ರಾಶಿಯಂ ನವನವಕವೆನಲಳಿದು ಕೈಸೋತು ಚರಮಗಿರಿಯಗ್ರದಿಂ ಬೀಸಿಡಲ್ಕೆ (ವೆಂಕಾರಾ. ೫–೨–೨೧). **ಕೈಸೋಲು**: ಈ ಮದುವೆ ಮಾಡಿ ನಾನು ಕೈಸೋತಿದ್ದೇನೆ (ರೂಢಿ). [ಕೈ$_2$ (< ಕೆಯ್$_2$) + ಸೋಲ್$_1$]

**ಕೈಸೋಲು** 'ಕೈಸೋಲ್' ನೋ.

**ಕೈಹಂಚು, ಕೈಹೆಂಚು** (ನಾ). ಕೈಯಿಂದ ಮಾಡಿದ ಸಣ್ಣ ಹಂಚು; ನಾಡ ಹಂಚು; ಓಡು: ಇದರಾಚೆ ಕೈಹಂಚು ಹೊದಿಸಿದ ಮೂರು ಮನೆಗಳು (ಮೂರುದಾ. ೨೦೩). **ಕೈಹೆಂಚು**: ಮಣ್ಣಿನ ಗೋಡೆ ಎಬ್ಬಿಸಿ ಕೈಹೆಂಚು ಹೊದಿಸಿದ್ದರು (ಮಲೆಮ. ೩೨೮).
[ಕೈ$_2$ (< ಕೆಯ್$_2$) + ಹಂಚು$_2$]

**ಕೈಹಂದು** (ಕ್ರಿ). ಕೈ ಅಲುಗಾಡು, —ಕದಲು: ಕೈಹಂದಿ ಕರೆಯುತ್ತಿದ್ದ ಹಾಲಿನ ಧಾರೆಯೊಂದು ನೆಲದ ಪಾಲಾಯಿತು (ಪ್ರಶ್ನೆ. ೫೪).
[ಕೈ$_2$ (< ಕೆಯ್$_2$) + ಹಂದು]

**ಕೈಹಚ್ಚು** (ಕ್ರಿ). ೧. ತೊಡಗು; ಆರಂಭಿಸು: ಅವಳನ್ನು ಹುಡುಕುವ ಕೆಲಸಕ್ಕೆ ಕೈಹಚ್ಚಿದನು (ಮಣಿಸ. ೮೦); ಇಬ್ಬರೂ ಮಾತಾಡುತ್ತ ಇಸ್ಪೇಟಿಗೆ ಕೈಹಚ್ಚಿದರು (ಮರಳಿ. ೨). ೨. (ಆಲಂ) ತರಾಟೆಗೆ ತೆಗೆದುಕೊಳ್ಳು; ಬಯ್ಯು: "ನೀನು ಬಂದು ನನ್ನ ಮನೆ ಹಾಳುಮಾಡಿದೆ . . . ನನ್ನ ಮಕ್ಕಳನ್ನು ತಿಂದು ತೇಗಿದೆ" ಎಂದು ಹಗಲಿರುಳು ಸೊಸೆಗೆ ಕೈಹಚ್ಚುತ್ತಿದ್ದಳು (ಜವಿಾನ್ದಾ. ೨೯). [ಕೈ$_2$ (< ಕೆಯ್$_2$) + ಹಚ್ಚು$_1$]

**ಕೈಹಣ** (ನಾ). "ಸರ್ಕಾರಿ ಕೆಲಸದ ಖರ್ಚಿಗಾಗಿ (ಒಬ್ಬನಿಗೆ) ಮುಂಗಡವಾಗಿ ಕೊಟ್ಟ ಹಣ: ಕೈಹಣ" (imprest. ಇಂಕನಿ).
[ಕೈ$_2$ (< ಕೆಯ್$_2$) + ಹಣ (< ಪಣ$_4$)]

**ಕೈಹತ್ತು** (ಕ್ರಿ). ೧. ಕೈಸೇರು; ದೊರಕು; ಸಿಗು; ಲಭಿಸು: ಅದರ ಒಂದಿಷ್ಟು ರಸವನ್ನು ಹಿಂಡಿ . . . ತಾಮ್ರದ ತಗಡು ಚಿನ್ನವಾಗುತ್ತದೆಂದು ಈ ಗ್ರಂಥದಲ್ಲಿದೆ. ಅದು ಇನ್ನೂ ಕೈಹತ್ತಲಿಲ್ಲ (ನಿಷ್ಕಾಮ. ೩೨). ೨. ಕೈಗೆ ಅಂಟಿಕೊಳ್ಳು: ಹಳೆಯ ಬೆಲ್ಲದ ಪಾಕು, ಕಾಯಲಿಟ್ಟು . . . ಕೈಹತ್ತದಂತೆ ತುಪ್ಪವ ತೊಡೆದುಕೊಂಡು (ಸಕವೈ. ೨೨೬). ೩. (ಆಲಂ) ವಶವಾಗು; ದಕ್ಕು: ಅನ್ಯಾಯದ ಹಣ ಕೈಹತ್ತುವುದಿಲ್ಲ (ರೂಢಿ).
[ಕೈ$_2$ (< ಕೆಯ್$_2$) + ಹತ್ತು$_1$ (< ಪತ್ತು$_1$)]

**ಕೈಹತ್ತುಗೆ** (ನಾ). ಕೈಗೆ ತಗುಲಿಕೊಂಡಿರುವಿಕೆ, —ಹೊಂದಿರುವಿಕೆ; ಕೈಯಾಸರೆ: ಹೊತ್ತ ಮೋನದ . . . ಕೈಹತ್ತುಗೆಯ ಮೋಜಿಯ ಮಹೀಪತಿ ಹೊಕ್ಕನರಮನೆಯ (ಕುವ್ಯಾದ್ರೋ. ೧–೧೧).
[ಕೈ$_2$ (< ಕೆಯ್$_2$) + ಹತ್ತುಗೆ (< ಪತ್ತುಗೆ)]

**ಕೈಹದ** (ನಾ). ೧. ಕೈಚಳಕ: ಹೇಳು ಸಾಕಾರಾದಡಾಗಳಿ ಮೇಲಣಾಹವದೊಳಗೆ ಕೈಹದ [ಪಾಠಾಂ. ಸ]ದೇಳಿಗೆಯು ಕೌತುಕವನೆನುತಲೆ ಖಂಡೆಯವ ಝಡಿದ (ತೊರರಾ. ೩–೫–೫). ೨. ಕೈತಡೆಯು ವಷ್ಟು; ಕೈಗೆ ಹಿತವಾಗುವಷ್ಟು: ನೀರು ಕೈಹದವಾಗಿ ಕಾದಿದೆ (ರೂಢಿ). ೩. ಅಭ್ಯಾಸದಿಂದ ಬರುವ ಕೈಚೂಟಿ; ನೈಪುಣ್ಯ: ಹಲವು ವರ್ಷಗಳ ಅಭ್ಯಾಸದಿಂದ ಅವನಿಗೆ ಕೈಹದ ಬಂದಿದೆ (ರೂಢಿ).
[ಕೈ$_2$ (< ಕೆಯ್$_2$) + ಹದ (< ಪದ$_1$)]

**ಕೈಹವ** (ನಾ). ಹತ್ತಿರದವರು; ಪಕ್ಷದವರು: ವೈಯಿಶ್ಯರು ಅವರಿಗೆ ಶಾಪಯಿಟರು ಆಮೇಲೆ ಕೈಹವರು ಬಂದು ಅಪ್ಪ ಅಪ ಯೇಳಿ ಬಂನಿಯಂದರು (ಎಕ. XVI, ಗುಬ್ಬಿ. ೭೦–೮; ? ಕೃಶಾ). [?]

**ಕೈಹಸ** (ನಾ). ಕೈಯ ಆರ್ಪು, —ಸಾಮರ್ಥ್ಯ, —ಪರಾಕ್ರಮ (?): ಬೆಸವುದಳಿವುದು ಚಾಚುವುದು ಜಾಳಿಸುವು ದೊತ್ತಂಬರಿಸುವುದು ಕೈಹಸದ ಮೈಹಸದಬ್ಬರದ ಸಮರಂಗದುಬ್ಬರದ ರಸವನೇವೊಗಳುವೆನು (ತೊರರಾ. ೩–೧೩–೩೬). [ಕೈ$_2$ (< ಕೆಯ್$_2$) + ಹಸ ?]

**ಕೈಹಾಕು** (ಕ್ರಿ). ೧. ಕೈಯನ್ನಿರಿಸು; ಕೈನೀಡು; ಕೈಹಚ್ಚು: ಚೇಳಿನ ಮಂತ್ರವರಿಯದವ ಹಾವಿನ ಹುತ್ತಕ್ಕೆ ಕೈಹಾಕಿದ ಹಾಗೆ (ಗಾದೆ). ೨. ತೊಡಗು; ಪ್ರಾರಂಭಿಸು: ಸರ್ವ ಕಾರ್ಯವನ್ನೂ ಮುಗಿಸಿ ಹೋಗಬೇಕೆಂದು ಈ ರೂಮಿಗೆ ಬಂದು ಕಾರ್ಯಕ್ಕೆ ಕೈಹಾಕಿದಳು (ಪರಿಣೀ. ೨೧); ಅಂತರಂಗ ಪರೀಕ್ಷೆಗೆ ಕೈಹಾಕಿದಳು (ನಿಷ್ಕಾಮ. ೨೦).
[ಕೈ$_2$ (< ಕೆಯ್$_2$) + ಹಾಕು (< ಪಾಯ್ಕು$_1$)]

**ಕೈಹಾರ** (ನಾ). ೧. ಸೌಲಭ್ಯ; ಸೌಕರ್ಯ; ಅನುಕೂಲತೆ: ತುದಿಗೆ ಗೆಲವೀ ರಾಘವಂಗಿಲ್ಲದಿರೆ ಕೈಹಾರದಲಿ ನಮ್ಮನು ಸದೆಯದಿರನೆಂದಳ್ಳೆವಾಜಿಸಿತು ಸಕಲಸುರನಿಕರ (ತೊರರಾ. ೬–೫೧–೧೪). ೨. ಹೆಗಲಮೇಲೆ ಹೊರುವ ಭಾರವನ್ನು ಆಯಾಸ ಪರಿಹಾರಕ್ಕಾಗಿ ಸ್ವಲ್ಪ ಕೆಳಗೆ ಇಳಿಸಿ ತೋಳುಗಳ ಮೇಲೆ ಇರಿಸುವುದು: (ಕ). ೩. "ಕತ್ತಿ" (ಪ್ರಭಣ್ಣ); ಪೂರಾಯಗಾಯದಿಂದನಿಬರ ತಲೆಯ ಕೈಹಾರದಿ ಹಾಜಲಿಕ್ಕಿದನು (ಮೋಹತ. ೩೪–೨೭). [?]

**ಕೈಹಾರೆ** (ನಾ). ಸಣ್ಣ ಹಾರೆ: ಕಮಲದಳ ಕೊಡತಿಗಳ ಕೈಹಾರೆಗಳ ನಳವಡಿಸಿದರು ವಹಿಲದಲಿ (ಕುವ್ಯಾದ್ರೋ. ೩–೩).
[ಕೈ$_2$ (< ಕೆಯ್$_2$) + ಹಾರೆ (< ಪಾರೆ$_1$)]

**ಕೈಹಾಳೆ, ಕಯಿಹಾಳೆ** (ನಾ). ೧. ಕೈಯಲ್ಲಿ ಇಟ್ಟುಕೊಂಡಿರುವ ಹಾಳೆ, —ಕಾಗದ (?): ಚೀಟು ನಿಮ್ಮ ಕೈಹಾಳೆಯಲ್ಲಿ ಅದೆ (ಸುಂಕಬಂ. ೩). **ಕಯಿಹಾಳೆ**: ೨. ಚಿಕ್ಕಪುಸ್ತಕ; ಕೈಹೊತ್ತಗೆ: "ಕವಳಿಕಂ ಕಯಿ [ಪಾಠಾಂ. ಕೈ] ಹಾಳೆ" (ಮಂಗರಾ. ೧೦೫–೧೪).
[ಕೈ$_2$ (< ಕೆಯ್$_2$) + ಹಾಳೆ$_1$ (< ಪಾಳೆ$_1$)]

**ಕೈಹಿ** 'ಕಯ್ಪಿ' ನೋ.

**ಕೈಹಿಡಿ** 'ಕೆಯ್ಪಿಡಿ' ನೋ.

**ಕೈಹಿಡಿತ** (ನಾ). ಕೈಯ ಅಂಕೆ; ಹತೋಟಿ; ವಶ: ಮನೆಯ ಕೆಲಸ ತನ್ನ ಕೈಹಿಡಿತ ತಪ್ಪಿಸಿಕೊಂಡು ಸ್ವೇಚ್ಛೆಯಾಗಿ ಬೆಳೆಯುವುದಕ್ಕೆ ಮೊದಲಾಯಿತು (ಯೋಧಪು. ೩೦). [ಕೈ$_2$ (< ಕೆಯ್$_2$) + ಹಿಡಿತ]

**ಕೈಹಿಡಿತೆ** 'ಕೆಯ್ಪಿಡಿತೆ' ನೋ.

**ಕೈಹಿಡಿಸು** 'ಕೈವಿಡಿಸು' ನೋ.

**ಕೈಹಿಸೋರೆ** 'ಕಯ್ಪಿಸೊರೆ' ನೋ.

**ಕೈಹೊಡೆ$_1$** (ಕ್ರಿ). ೧. ಚಪ್ಪಾಳೆ ತಟ್ಟು. ೨. ತಿರಸ್ಕಾರ ತೋರಿಸು: ಒಡಲೊಳಗೆ ತನ್ಮನುವ ಸೇರಿಸಿ ಕಡುವಿಷಯು ಕರುಣಾಬ್ಧಿಗಳು ಕೈಹೊಡೆದು (ಶರೀಫ. ೧೧). [ಕೈ$_2$ (< ಕೆಯ್$_2$) + ಹೊಡೆ$_1$ (< ಪೊಡೆ$_1$)]

**ಕೈಹೊಡ್ಕೆ$_2$** 'ಕೆಯ್ಪೊಡೆ' ನೋ.

**ಕೈಹೊತ್ತಗೆ** (ನಾ). ಕೈಯಲ್ಲಿ ಹಿಡಿದುಕೊಳ್ಳುವ ಹೊತ್ತಗೆ; ಕಿರು ಹೊತ್ತಗೆ; ಸಣ್ಣ ಪುಸ್ತಕ: ಅರುನೂರೆಂಟು ಷಟ್ಪದದ ಕೈಹೊತ್ತಗೆಯೊಳಾ ರಸದ ಪನಿ ಮೂರನಳವಡಿಸಲಾಗದಾ ಕಾರಣದಿ ಪರಿಣತರು ಮನ್ನಿಪ್ಪುದು (ಭರಭ. ೯ ಕಡೆನುಡಿ).

**ಕೈಹೊಯ್** 'ಕೆಯ್ಪೊಯ್' ನೋ.

**ಕೈಹೊಯ್ಲು** (ನಾ). ಕೈಗಳ ಹೊಡೆತ; ಕೈಚಪ್ಪಾಳೆ: ಹೊಕ್ಕುಱಿಯ ಲಾಜದೆ ಮುಱಿದು ಬರ್ಪವಂ ರಾಣಿಯರ ನಗೆಯ ಕೈಹೊಯ್ಲ ವಾದ್ಯದ ಗತಿಯ ನರ್ತಕಂ (ಚಬಪು. ೮-೧೧).

[ಕೈ$_2$ (< ಕೆಯ್ತ್$_2$) + ಹೊಯ್ಲು (< ಪೊಯ್ಲು)]

**ಕೈಹೊಲ** 'ಕೆಯ್ಪೊಲ' ನೋ.

**ಕೈಹೊಲಸುಗಾಱ** (ನಾ). (ಯುದ್ಧದಲ್ಲಿ ಶತ್ರುಗಳ ರಕ್ತದಿಂದ) ಕೈಯನ್ನು ಹೊಲಸುಮಾಡಿಕೊಳ್ಳುವವನು; ಶತ್ರುಗಳನ್ನು ಸದೆಬಡಿಯುವವನು; ಮಹಾ ಪರಾಕ್ರಮಿ (?): ಕೆಲಬಲದ ಮನ್ನೆಯರ ಹೊಯ್ಲುಗ್ಗಳಿಕೆ ಕೊಂಬುದೆ ಭೀಮನಲಿ ಕೈಹೊಲಸುಗಾಱನು ಹಿಂಡಿದನು ಕೌರವ ಸಹೋದರರ (ಕುವ್ಯಾದ್ರೋ. ೧೩-೪೭).

[ಕೈ$_2$ (< ಕೆಯ್$_2$) + ಹೊಲಸು (< ಪೊಲಸು) + -ಗಾಱ (< -ಕಾಱ)]

**ಕೈಹೊಸಕು** (ಕ್ರಿ). ಕೈಯನ್ನು ಉಜ್ಜು, —ತಿಕ್ಕು.

ಕೈಹೊಸಕಿಕೊಳ್ಳು=ಕೈಯನ್ನು ಉಜ್ಜಿಕೊಳ್ಳು, —ತಿಕ್ಕಿಕೊಳ್ಳು: ಸೆಟ್ಟು ಜೋಲುಮುಖ ತೋರಿ 'ಹೌದು' ಎಂಬ ಭಾವಕ್ಕೆ ಸರಿಯಾಗಿ ಕೈಹೊಸಕಿಕೊಂಡರು (ಒಡ್ಡಿಉ. ೧೦).

[ಕೈ$_2$ (< ಕೆಯ್ತ್$_2$) + ಹೊಸಕು]

**ಕೈಳಾಸಶೈಲ** (ನಾ). ಕೈಲಾಸಪರ್ವತ: ಕೈಳಾಸಶೈಲಕ್ಕೆ ಪೋಗಿ ತದಗ್ರಸ್ಥಿತ ಚೈತ್ಯಾಲಯಂಗಳನನೇಕವಿಧಾರ್ಚನೆಗಳಿಂದಮರ್ಚಿಸಿ (ಆದಿಪು. ೧೬-೬೨ ವ). [ಕೈಳಾಸ (= ಕೈಲಾಸ) + ಶೈಲ]

**ಕೈಳಾಸಾಚಳ** (ನಾ). = ಕೈಳಾಸಶೈಲ: ಎಂದು ಕೈಳಾಸಾಚಳಮನೇಱಿ ಧೂಳೀಶಾಲದಿಂ ತಗುಳ್ದು (ಆದಿಪು. ೧೩-೮೨ ವ).

[ಕೈಳಾಸ (= ಕೈಲಾಸ) + ಅಚಳ (= ಅಚಲ)]

**ಕೈಳಿ** (ನಾ). (?): ಜಲವಿಲ್ಲದ ತಟಾಕದ ಕೈಳಿಯಲ್ಲಿ ಬೆಳೆಯ ಬಿತ್ತಿದಂತಿರಬೇಕು (ಶಿವಮಂ. ೬೨). [?]

**ಕೈಱಾಟಣ**, **ಕೈಱಾಟಳ** (ನಾ). ಕೈಯಿಂದ ತಿರುಗಿಸುವ ರಾಟೆ, —ಚಕ್ರ: ಪಕ್ಕಲೆಯ ಪನ್ನೀರುಗಳು ಹಿಡಿದವು ಹೊಳೆವ ಕೈಱಾಟಣದ ಕಾಂಚನಮಯದ ದೋಣಿಗಳ (ಕುವ್ಯಾಆ. ೧೨-೧೭). **ಕೈಱಾಟಳ**: ಹೆಗಲ ಪಕ್ಕಲೆಗಳಲಿ ಕವಿದುದು ವಿಗಡ ಪೂತನಿವೃಂದ ಜೀರ್ಕೊಳವಿಗಳ ಕೈಱಾಟಳದೊಳ್ಕೈದಿತು ಶಾಕಿನೀ ನಿಕರ (ಕುವ್ಯಾಭೀ. ೫-೩೦).

[ಕೈ$_2$ (< ಕೆಯ್$_2$) + ಱಾಟಣ]

**ಕೈಱಾಟಳ** 'ಕೈಱಾಟಣ' ನೋ.

❋

# ಕೊ

**ಕೊ$_1$** 'ಕೊಳ್' ಪರಾ.

**ಕೊ$_2$** (ನಾ). 'ಕೊಳಗ' ಎಂಬುದರ ಸಂಕ್ಷಿಪ್ತರೂಪ: ಮೂಲಸ್ಥಾನಕೆ ಸ ೨ ಕೊ ೧೦ ಮಾಚ ಸಮುದ್ರದ ಮೂಡಣ ೧ ಬಸದಿಗೆ ಕೊ ೧೦ ಪಡುವಣ ಕೋಡಿಯಲ್ಲಿ ಕೊ ೧೦ (ಎಕ. XIV, ನಾಗಮಂ. ೧೪೦-೭೪ ; 1225). [< ಕೊಳಗ]

**ಕೊಂಕ$_1$** 'ಕೊಂಕು$_2$' ನೋ.

**ಕೊಂಕ$_2$** 'ಕೊಂಗ$_1$' ನೋ.

**ಕೊಂಕ$_3$** (ನಾ). ಕೊಂಕು ಉಳ್ಳವನು; ವಕ್ರ: ಇಲ್ಲಿ ಕೊಂಕನಾಗಿ ಪುಟ್ಟಿ ಪಾಪಂಗೆಯ್ದು ಸತ್ತು (ವಡ್ಡಾರಾ. ೧೭೮-೨೬); ತಾಳಕಾಯ ಮೋಳಿಗೆಯೊಂದಂದದ ಮುರುಡನಷ್ಟವಂಕಂ ಮೊದಲೊಱಗಿದ್ದ ಕೂನ ಗೊಱಡಿನಂದದ ಕೊಂಕಂ (ಯಶೋಚ. ೨-೪೦). [ಕೊಂಕು$_2$ + -ಅ$_7$]

**ಕೊಂಕ$_4$** (ನಾ). ಕಾಡಿನಲ್ಲಿರುವ ಒಂದು ಪ್ರಾಣಿ: ಬಸವಂ ಕೋಗಿಲೆ ಕೊಂಚೆಯುಂಚೆ ಕಪಿ ಸಾರಂಗಂ ನವಿಲ್ ಕೋಡಗಂ ಮುಸು ಕೊಂಕಂ ಪುಲಿ ಬಳ್ಳು (ಲೋಕೋಪ. ೧೨-೧೪); ಬಲೆವಱಿದ ಕೊಂಕನಂತೆ ಮನೆಯೆ ಗುಱಿಯಾಗಿರ್ಪುದುಂ (ಧರ್ಮಾಮೃ. ೭-೧೬೮); ಶಾಲ್ಮಲಿ ಸಂತತಿ ಕೊಂಕ ಪೆರ್ಮೊರ್ಲಂ (ದಶಕು. ೨-೧೨೦); ನರಿ ಭುಜಂಗನಿಲಿ ಕೊಂಕನೋತಿಯುಂ . . . ಪುಲಿಯಕ್ಕಲು ಕುಕ್ಕರಿಸಿ ನಲಿವೊಡಂ (ಅಟ್ಟಮ. ೨-೧). [?]

**ಕೊಂಕಡಿ** (ನಾ). ಸೊಟ್ಟ ಅಡಿ; ತಪ್ಪು ಹೆಜ್ಜೆ: ಕಟಿಯಲುಗುತ್ತಿರಲಡ್ಡಂ ಮೆಟ್ಟುತೆ ಕುಂಟನವೊಲ್ ಕೊಂಕಡಿಗಳನಿಡುತಂ [ಪಾಠಾಂ. ಕೊಂಕಾಡಿ ನಿಲುತ್ತಂ] (ಭೃಂಗೀರ. ೧೪-೨೭).

[ಕೊಂಕು$_2$ + ಅಡಿ$_1$]

**ಕೊಂಕಣ**, **ಕೊಂಗಣ** (ನಾ). **೧.** ಭಾರತದ ಪಶ್ಚಿಮ ತೀರದಲ್ಲಿರುವ ಒಂದು ಪ್ರದೇಶದ ಹೆಸರು, —ಒಂದು ದೇಶ: ಸಮಗ್ರ ಕೊಂಕಣ ಭುವಂ (ಇಆ. V, ೨೭೮-೬; 1026); ಕೊಂಕಣ ವಿಷಯ ಸಾಧನ ನಿಮಿತ್ತಂ (ಎಕ. VII, ಶಿವಮೊ. ೪-೩೫; 1122); ಮಾಳವ ಮಗಧ . . . ಕೊಂಕಣ ಸಿಂಧು ಹಮ್ಮೀರ (ಚಬಪು. ೬-೪೯); ಬೀಸುತ ಬಂತೈ ತೆಂಕಣ ಗಾಳಿಯು ಕೊಂಕಣ ಸೀಮೆಗೆ (ಕಎಪು. ೨೯-೨); ಕೊಂಕಣ ಸುತ್ತಿ ಮೈಲಾರಕ್ಕೆ ಹೋದಹಾಗೆ (ಗಾದೆ). **೨.** ಕೊಂಕಣ ದೇಶದವನು: ಕೊಂಕಣನ ಕೊಡೆ ನೋಡೆ [ಪಾಠಾಂ. ನಾಡೆ] ನೋಡೆ ಹಾಱಿದುದಲ್ಲಿ (ತಿರುರ. ೩-೧೬); ತೆಲುಗ ತಿಗುಳ ಕೊಂಕಣ ಮಲೆಯಾಳರು ಸುಲಲಿತ ಕರ್ಣಾಟಕ ಜನರು (ಕಂನವಿ. ೨೩-೭೫); ತೆಂಕಣದೇಶಕ್ಕೆ ಹೋಗಿ ಕೊಂಕಣ ಕೆಟ್ಟ (ಗಾದೆ). **ಕೊಂಗಣ**: **೧.** ವಾರಿಧಿಯ ತಡಿವಿಡಿದು ನಡೆದುದು ಭೂರಿಬಲ ಕೊಂಗ[ಪಾಠಾಂ. ಕ]ಣದ ಕೋಹುಗಳೋರಣದ ಕರವ[ಪಾಠಾಂ. ವಿ]ಳಿಯಲಾ ಹಿಮದವನಿಮಂಡಲವ (ತೊರರಾ. ೪-೯-೪).

[< ಸಂ. ಕೋಂಕಣ]

**ಕೊಂಕಣದಲ್ಲಳ** (ನಾ). ಕೊಂಕಣ ದೇಶದವರಿಗೆ ಭಯವನ್ನುಂಟು ಮಾಡುವವನು; ಒಂದು ಬಿರುದು: ಪ್ರತ್ಯಕ್ಷ ವಿಕ್ರಮಾದಿತ್ಯಂ ಗಣ್ಡಕಾಳಾನಳಂ ಕೊಂಕಣದಲ್ಲಳಂ ಗಣ್ಡರ ಮೇರು (ಎಕ. VII, ಶಿಕಾ. ೧೫೧–೧೪ ; 1047) ; (ಕಇ. IV, ೪೧–೫ ; 11ನೆಯ ಶತ ನೋ).
[ಕೊಂಕಣ + ತಲ್ಲಳ (< ತಲ್ಲಟ)]

**ಕೊಂಕಣದೇವ** (ನಾ). ಒಬ್ಬಾತನ ಹೆಸರು : ಅನ್ತಾ ವಸುಧಾಧಿಪಂಗೆ ತನಯಂ ಕಲಿ ಕೊಂಕಣದೇವ (ಎಕ. XI, ಚಿತ್ರದು. ೭೪–೭ ; 968).
[ಕೊಂಕಣ + ದೇವ]

**ಕೊಂಕಣಭಯಂಕರ** (ನಾ). = ಕೊಂಕಣದಲ್ಲಳ : ಕರಹಾಟ ವಜ್ರಕವಾಟ ಕೊಂಕಣ ಭಯಂಕರಂ (ಸೌಇಇ. XX, ೧೯–೩೦ ; 1015).
[ಕೊಂಕಣ + ಭಯಂಕರ]

**ಕೊಂಕಣಸ್ಥ** (ನಾ). ಕೊಂಕಣದೇಶದವನು : ಗೌಡ ಸಾರಸ್ವತರು ಕೊಂಕಣಕ್ಕೆ ವಸಾಹತು ಬಂದು ನೆಲೆಸಿದ್ದರಿಂದ ಕೊಂಕಣರು, ಕೊಂಕಣಸ್ಥರು, ಕೊಂಕಣಿಗರು ಎಂಬ ಹೆಸರನ್ನು ಪಡೆದರು (ತುಳುನಾ. ೧೬೦).
[< ಸಂ. ಕೋಂಕಣಸ್ಥ]

**ಕೊಂಕಣಿ** (ನಾ). ೧. = ಕೊಂಕಣಸ್ಥ : ತೋಟ ಸೊಕ್ಕಿದರೆ ಅಡನಿರಿಸು, ನಾಡು ಸೊಕ್ಕಿದರೆ ಕೊಂಕಣಿಯನಿರಿಸು (ಗಾದೆ). ೨. ಕೊಂಕಣಸ್ಥರ ಭಾಷೆ. [← ಮರಾ. ಕೋಂಕಣೀ]

**ಕೊಂಕಣಿಕೆ** (ನಾ). ಕೊಂಕಣಸ್ಥನ ನಡವಳಿಕೆ : ಲಂಕೆಗೆ ಹೋದರೂ ಕೊಂಕಣಿಕೆ ಬಿಡಲಿಲ್ಲ (ಗಾದೆ). [ಕೊಂಕಣ + –ಇಕೆ]

**ಕೊಂಕಣಿಗ** (ನಾ). = ಕೊಂಕಣಸ್ಥ : ಉಭಯತಟವರ್ತಿಗಳಪ್ಪ ಕೊಂಕಣಿಗ ಸಿಂಗಣಿಕ ಶಬರ ಚಾಂಡಾಲ ಪ್ರಭೃತಿಗಳೆಲ್ಲಂ (ಪಸಾರ. ೯೨೩–೧೬) ; ಕೊಂಕುಳಲ್ಲಿ ಕುರು ಸಲ್ಲ, ಕೊಂಕಣಿಗರ ನೆರೆ ಸಲ್ಲ (ಗಾದೆ).
[ಕೊಂಕಣ + –ಇಗ]

**ಕೊಂಕಣಿಗಿತಿ** (ನಾ). ಕೊಂಕಣದೇಶದವಳು; ಕೊಂಕಣದ ಹೆಣ್ಣು : ಅಸಗಿತಿ, ಕನ್ನಡಿಗಿತಿ, ಕೊಂಕಣಿಗಿತಿ (ಶಬ್ದಾನು. ೧೯೦ ಪ್ರಯೋ).
[ಕೊಂಕಣಿಗ + –ಇತಿ$_1$ (< –ಇತ್ತಿ)]

**ಕೊಂಕಣೆ** (ನಾ). ಒಂದು ಬಗೆಯ ಆಯುಧ : ಡೆಂಕಣೆಗಳಲಿ ಕೊಂಕಣೆಗಳಲಿ ಪರಿಘಗಳಲಿ ಮುಸುಂಡಿಯಲಿ (ತೊರರಾ. ೬–೩೫–೨೪) ; ಮಾಳಿಗತ್ತಿ ಕೊಲ್ಗತ್ತಿ ಕೊಂಕಣ[ಣೆ] ಬಿಡೆಗತ್ತಿ ಸೆಳೆಗತ್ತಿ (ದೇವಾಂಪು. ೩–೨೦೧). [< ಸಂ. ಕೊಲಂಕಣ]

**ಕೊಂಕಸ** (ನಾ). ಮಲ್ಲಯುದ್ಧದಲ್ಲಿ ಒಂದು ವರಿಸೆ : ವೀರ ಚಿಕದೇವಂ ನೋಟಕರ್ ಮೆಚ್ಚೆ ಮೆಲ್ಪಗೆಯೊಳ್ ಡೊಕ್ಕರಿಯೊಂಟೆ ಮುಂಡಿಕರಲಂ ಸೀಸಂ ಕರಂ ಕೊಂಕಸಂ ಮುಗುಟ್ದಿಂತೀ ಗತಿಭೇದದಿಂ ತೊಡಕಿ ತೋರ್ಕುಂ ಸಾಧಕ ಪ್ರೌಢಿಯಂ (ಚಿಕವಿ. ೪–೧೪೬). [?]

**ಕೊಂಕಾಟ** (ನಾ). ವಕ್ರವಾದ ನಡತೆ, —ಚೇಷ್ಟೆ : ಈ ಜನರ ಹಣಬರಹ . . . ಮಂತ್ರಿಯ ಒಲವು ಕೊಂಕಾಟ ಬಿಡುವುಗಳನ್ನವಲಂಬಿಸಿತ್ತು (ಪುನರು. ೫೦೦). [ಕೊಂಕು$_2$ + ಆಟ]

**ಕೊಂಕಾಡು** (ಕ್ರಿ). ೧. ವಕ್ರೋಕ್ತಿಗಳನ್ನು ಆಡು; ಚಮತ್ಕಾರವಾದ ಮಾತನ್ನಾಡು : ಪಾಡುವಾಡುವ ಕೊಂಕಾಡುವ ಮಾಡುವೊಂದು ದಿವಸಂಗಳ್ಗಟ್ಟದಂ ದೇವ ವಾರವಧೂ ವರ್ಗಮಂ (ಅನಂಪು. ೪–೭೧). ೨. ಅಪಹಾಸ್ಯಮಾಡು ; ಚುಚ್ಚುಮಾತನಾಡು : ಇಂತೆನೆ ವಿಘ್ನೇಶಂ ನಗೆಗೂಡಿ ಮರು ಕೊಂಕಾಡಲು ನನ್ನನು ದೂಡಿ (ಗಣೇಶ. ೫–೧೧೨).
[ಕೊಂಕು$_2$ + ಆಡು$_1$]

**ಕೊಂಕಾನ್** (ಕ್ರಿ). ಡೊಂಕಾಗು; ಬಾಗಿರು : ತರಳಾಪಾಂಗಂ . . . ಕೊಂಕಾಂತ ಪುರ್ಬೊಂದಿರೆ (ಶಬಶಂ. ೩–೭). [ಕೊಂಕು$_2$ + ಆನ್$_1$]

**ಕೊಂಕಿ$_1$** (ನಾ). ಕೊಕ್ಕೆ; ಕೊಂಡಿ : ಮುರಹರನ ನಿಟ್ಟೆಲುವೆ ಕಟ್ಟಿಗೆ ಉರಗರಾಜನೆ ನೇಣು ನರಕೇಸರಿಯ ನಖವೇ ಕೊಂಕಿಯಾದಿವರಾಹ ನೆರೆಯಾಗೆ . . . ಪಿರಿಯ ಗಾಳವನಿಕ್ಕುವಾ ಬಲೆಗಾಜನಂ ತಾನೆ (ಬಸಪು. ೨೧–೨೮). [? / ತುಳು. ಕೊಂಕಿ]

**ಕೊಂಕಿ$_2$** (ನಾ). ಕೊಂಕುತನವುಳ್ಳವನು; ವಕ್ರಸ್ವಭಾವದವನು; ಕೊಂಗಿ. [ಕೊಂಕು$_2$ + –ಇ$_3$]

**ಕೊಂಕಿಗ** (ನಾ). ಕೊಂಕು ಸ್ವಭಾವದವನು ; ಹಿಂಸ್ರನಡತೆಯುಳ್ಳವನು : ಬಿರುದರನೊತ್ತಿ ಬೀರರನಡಂಗಿಸಿ ಕೊಂಕಿಗರಂ ಕಟಲ್ಚಿ (ಪಂಪಭಾ. ೬–೧೮). [ಕೊಂಕು$_2$ + –ಇಗ]

**ಕೊಂಕಿಡು** (ಕ್ರಿ). ವಕ್ರತೆಯನ್ನು ಆರೋಪಿಸು ; ದೋಷಾರೋಪಣೆ ಮಾಡು : ಕವಿತಾನೀತಿಗೆ ಬಾಳ್ವೆವೆಂದೆ ಮನುಜರ್ ಕೊಂಕಿಟ್ಟರಿಂತೆಂದು ಸುರ್ಕುವನಾ ಬ್ರಹ್ಮನ ತಿಟ್ಟಿ × × × ಸಿಗ್ಗಿನೊಳೆ ಸಾವತ್ತಲ್ಕನಂ ಮಾಡುವಂ (ಸಂಸಪ. ೧೫–೧೨).
[ಕೊಂಕು$_2$ + ಇಡು$_1$]

**ಕೊಂಕಿಸು,** ಕೊಂಗಿಸು (ಕ್ರಿ). ೧. ಓರೆಮಾಡು ; ಬಾಗಿಸು ; ವಕ್ರವಾಗಿಸು : ತಲೆಯ ನಿವಾಳಿಸಿ ತಳನಂ ಬಾಗಿಸಿ [ಪಾಠಾಂ. ಕರವಂ ಬಾರಿಸಿ] ನಿಲವಂ ಕೊಂಕಿಸಿ ಬೆರಳಂ ಕೊಂ[ಪಾಠಾಂ. ಬಂ]ಕಿಸಿ (ಭೃಂಗೀರ. ೧೫–೨) ; ಕೊಂಕಿಸಿ ಗೋಣ್ಗಳನೊಯ್ಯನೆ (ಉದ್ಭಟ. ೪–೩೩); ಅವಳ ಕತ್ತು ಕೊಂಕಿಸುವ ರೀತಿ ಅನಂದನಿಗೆ ಹಿತವಾಗಿತ್ತು (ಮರಳಿ. ೧೪೬). ೨. ಬಾಧಿಸು ; ಪೀಡಿಸು ; ತೊಂದರೆಪಡಿಸು : ಕಾಲೋಚಿತವನರಿಯದಿರ್ದೊಡೆ ಮನುಜಗೆ ಮೂಲೋಕವನಿತ್ತ ಫಲವು ಮೇಲೆ ಯೆಡೆಯಾಡಿಸಿ ಕೊಂಕಿಸಿ ಕೊಟ್ಟಡಾ ಕೂಲಿಗೆ ಸರಿ ರಂಗೇಶ (ನೀತಿಸಾ. ೪೬–೨೭). **ಕೊಂಗಿಸು :** ೧. ತಂಗಿಸಿ ಮಣಿಯುತ ಲಂಘಿಸಿ ಹಾರಿ ಕೊಂಗಿಸಿ ಕುಣಿಯುತ (ಹಮುಚ. ೨೨).
[ಕೊಂಕು$_1$ + –ಇಸು$_3$]

**ಕೊಂಕು$_1$** (ಕ್ರಿ). ೧. ಡೊಂಕಾಗು ; ವಕ್ರವಾಗು ; ಬಾಗು ; ಬಳುಕು : ಕೊಂಕಿ ಪಜಿಯುತ್ತಿರವಿಂದೆ . . . ಪೋಲ್ತುದು ಮಹಾನದಿ ರುಂದ್ರ ಫಣೀಂದ್ರರಾಜನಂ (ಕಾವ್ಯಸಾ. ೭೪೭ ಶೂದ್ರಕ) ; ತಿರುಪಿನ ಮೀಸೆ ಕೊಂಕಿದ ಪಟಂ (ಪಂಪಭಾ. ೧೨–೭) ; ಅಯ್ಯನ ಕೊರಳು ಕೊಂಕದು ಬಾಳ್ಲಿಕನ ಮನನೋಯದಿನ್ನೆಬರ (ಕುವ್ಯಾಸ. ೧೩–೭೬); ಸೋಮರ್ಮುಡಿಯ ಭಾರಕೆ ಕೊರಳು ಕೊಂಕಲು (ನಳಚ. ೫–೫೩). ೨. ಕದಲು ; ಹಿಂದೆಗೆ ; ಹಿಂಜರಿ : ಶಂಕೆಯನೆ ಬಿಟ್ಟು ಮನದೊಳ್ ಕೊಂಕದೆ ವಿಖ್ಯಾತ್ಯತ್ವಮೆಂಬ ಪೆರ್ಬುಲಿವಿಂದಂ ಸೋಂಕದೆ (ಧರ್ಮಾಮೃ. ೨–೫) ; ಕೋಡಿದನೆ ಕೊಂಕಿದನೆ ಕಂದಿದನೆ ಕುಂದಿದನೆ (ಬಸರ. ೭–೭೫) ; ಕೊಜಗಿ ಕೊಂಕಿದೊಡಲ್ಲ ಭಕ್ತನು (ಸಂಭಪ. ೮–೪೫) ; ಚಪಳೆಯರ ನಗೆಯಡಗಿದವು ಭೂಮಿಪರ ಭುಜಬಲ ಮಾನಹಾನಿಯ ಕೋಪ ಕೊಂಕಿದವು (ತೊರರಾ. ೧–೧೫–೧೭). ೩. ಉದ್ವೇಗಗೊಳ್ಳು ; ರೇಗು : ಮುತ್ತ್ರಯನ ಕಿಜಿಯಯ್ಯನಯ್ಯನ ಚಿತ್ತ ಕೊಂಕಿತು ಸಾಕು ನಿಂದೆಗೆನುತ್ತಲಗ್ರಜ ಸಹಿತಲೋಲಗದಿಂದ ಹೊಜವಂಟ (ಕುವ್ಯಾಉ. ೯–೩೯) ; ಸೀತೆಯಂ ಬಿಟ್ಟನೆಂದು ಕೊಂಕದಿರು ಸೈರಿಸುವುದು (ಜೈಮಿಭಾ. ೨೧–೧೦). ೪. ಬಾಧೆಯಾಗು ; ನೋವಾಗು : ಕುವರನ ಕೂದಲು ಕೊಂಕದಿರಲಿ ಎಂದು ಬೇಡು (ಶಾಂತಲಾ. ೧೬೮). ೫. ಚುಚ್ಚು ; ನೋಯಿಸು ; ಬಾಧಿಸು : ಮೊಗದೊಳಗೆ ನಸುನಗೆಯು ಗಳದಿ ಕೊಂಕುವ ಮಾತು (ವೆಂಕಾರಾ. ೫–೬–೩೬). ೬. ಕೊರತೆ ಬೀಳು ; ಕಡಮೆಯಾಗು ; ಊನವಾಗು : ಕುಂಕುಮ ಪಲನಾಲ್ಕಕಂ ಬಿಂಕದಿಂ ಪಣಮೈದು ಪಾಗಲು ಮತ್ತಾ ಕೊಂಕದ ತೊಲೆಯೆಂಟಕ್ಕುಂ (ಭಾಸ್ಕರ. ೮೫–೨). [?]

**ಕೊಂಕು$_2$**, ಕೊಂಕ$_1$, ಕೊಂಗು$_2$ (ನಾ). ೧. ಡೊಂಕು; ವಕ್ರತೆ; ಬಾಗು: "ಕುಡು ಕೊಂಕು" (ಕರ್ಣಾನಿ. ೬೭); "ಕೊಂಕೆನೆ ವಕ್ರ" (ಕಶರ. ೨೯); ಕರ್ಬಿನ ಬಿಲ್ಲ ಕೊಂಕಿನಂತೆ ಕೊಂಕಿಯುಂ (ಪಂಪಭಾ. ೨-೩೯ ವ); ಇಱಿವಬೆಡಂಗನ ಕೊರಲೊಳ್ ಕೊಂಕುಂಟೆ ನುಡಿಯೊಳೇಂ ತೊದಳುಂಟೆ (ಗದಾಯು. ೨-೬); ನಾಯುಬಾಲಮಂ ಕಾಸಿ ತಿರ್ದಿದೊಡಂ ಕೊಂಕು ಮಾಣದಹಗೆ (ಪಂಚತಂ. ೧೦೫-೨); ಪುಳ್ಳಿಯ ಕೊಂಕಂ ಕಿರ್ಚು ತಿರ್ದುವಂತೆ (ಪಾರ್ಶ್ವಪು. ೨-೭೯). **೨.** ವ್ಯಂಗ್ಯದಿಂದ ಕೂಡಿದ ಮಾತು; ವಕ್ರೋಕ್ತಿ: ಬಲ್ಕಣಿಯ್ಯೆ ನಯದೊಳ್ ನುಡಿಯಲ್ ಕೊಂಕಂ ಕಲ್ವುದಲ್ತೆ ನಿನ್ನೊಂದಿಗರೊಳ್ (ಶಾಂತಿಪು. ೩-೯೧); ಜಾಣೊಡಂಬಡೆ ಪೊಸತಾಯ್ತು ಕೊಂಕು ಪೊಸತಾಯ್ತು ರಸಂ ಪೊಸತಾಯ್ತು (ಪಾರ್ಶ್ವಪು. ೧-೭೩); ಒಪ್ಪಂಬೂಸಿದವೊಲ್ ತೆಱಂಬೊಳೆವ ಕೊಂಕುಂ (ಕಬ್ಬಿಕಾ. ೫). **೩.** ಚುಚ್ಚು ಮಾತು; ಕಟಕಿ: ನಯಮಂ ನುಡಿದೊಡಮದು ಕೊಂಕಕ್ಕುಂ (ಧರ್ಮಾಮೃ. ೬-೧೮೨); ಕೊಂಕು ಬಡಕೆಂಬ ನುಡಿಯಾ ನಾಡ ಮಡದಿಯುರವಯವಗಳೊಳಲ್ಲದೆ ಬಿಱುನುಡಿಯಿಲ್ಲವೇನ ಬಣ್ಣಿಸುವೆ (ಕಂನವಿ. ೨-೧೪); **೪.** ಅಳುಕು; ಅಂಜಿಕೆ: ತಲ್ಲಣಿಸದ ಗಂಡಂ ಕೊಂಕಿಲ್ಲದ ಕಲಿ ಕುಸಿಯದದಟನೂರ್ಜಿತತೇಜಂ (ಧರ್ಮಾಮೃ. ೧೩-೯೯). **೫.** ಬಾಧೆ; ತೊಂದರೆ: ಸೈನ್ಯಗಳಿಂದ ಚೋಳರಾಜ್ಯದ ಒಂದು ಹುಲ್ಲುಕಡ್ಡಿಗಾದರೂ ಕೊಂಕುಂಟಾಗಿರಲಿಲ್ಲ (ಶ್ರೀರಾಯ. ೩೩೨). **೬.** ಶಸ್ತ್ರ ಪ್ರಯೋಗದಲ್ಲಿ ಒಂದು ರೀತಿ, —ಕ್ರಮ: ಗಮಕಂ ಕೊಂಕಾಂಕೆಝುಂಕಾಳತೆ ವಳಿ ಲುಳಿ ಲಾಗಾರ್ಪು ಕೊಪಾರ್ಂತ ಬಿಂಕಂ . . . ಬೆಡಂಗೆಂದೆನಿಪನಿತಱ ವೈಚಿತ್ರ್ಯದಿಂ ತಾನೆ ಶಸ್ತ್ರಾಗಮ ಶಿಕ್ಷಾಚಾರ್ಯನೆಂಬೊಂದೆಸಕದಿನೆಸೆದಂ ನಾಡೆ ಕಂದರ್ಪದೇವಂ (ಕುಸುಮಾ. ೭-೬೪). **೭.** ಕುಂದು; ದೋಷ. 'ಕೊಂಕುಕೊಸರು' ಪರಾ. **೮.** [ಸಂಗೀತ] ಹಾಡುವುದರಲ್ಲಿ ಒಂದು ರೀತಿ, —ಭಂಗಿ: ಪದ ಕೊರಲಿಂಪನಪ್ಪು ಕೆಯ್[ಕೊಂಕುನ]ಯಂ ಗಮಕಗಳಿಂ . . . ಸಮನಾಗಿರೆ (ಪಂಪಭಾ. ೭-೮೮); ಕಾಳಸಿ ಬೈಸಿಕೆ ಪಟ್ಟಕಾಂತಿ ಕೊಂಕಣುಕನುಜಾಯಿ . . . ಎಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮಂ (ಜಗವಿ. ೫-೩). **೯.** [ಛಂದ] ಗುರು ಅಕ್ಷರವನ್ನು ಸೂಚಿಸುವ ಸಂಜ್ಞೆ: "ಕೊಂಕೆಂದು ಗುರು" (ಕಶಸಾ. ೨೫-೫೨೦); "ಗುರು ಕೊಂಕು ಸೈತು ಲಘುವೆಂದುಱಿಪೇಟ್ವರ್' (ಕವಿಕಂ. ೨೦೯). **ಕೊಂಕ$_1$**: **೧.** ಕಮನೀಯಂ ಸ್ಮರಧನುಕೊಂಕಮನೀಯಂದದೊಳೆ ಪಡೆಯದೆನೆ ನಿಡುಪುರ್ಪು . . . ಸೊಗಯಿಸುಗುಂ (ಜಗವಿ. ೧೦-೪೨). **ಕೊಂಗು$_2$**: **೧.** ಕೊಂಗು ನಗೆಗಳ ನಗಿಸಿಯಾಡುವ ಭೃಂಗಿನಾಟ್ಯವ (ಶರಲೀ. ೫೮೩-೧೦).

ಕೊಂಕೊಂಕು (ದ್ವಿರುಕ್ತಿ): ನೀ ಇವತ್ತ ಯಾಕೋ ಕೊಂಕೊಂಕಾಡಿ ಅಡ್ಡಗಟ್ಟತೀ (ಹೊಸಂಸಾ. ೧೨೬). **ಕೊಂಕುಮಾಡು** = ಉದ್ಧಟತನದಿಂದ ವರ್ತಿಸು: ಕಾಗೆ ತಾನು ಯಾರೆಂಬ ಎಚ್ಚರ ಮರೆತು . . . ಕೊಂಕು ಮಾಡುತ್ತ (ಮುಂಬಯಿ. ೩-೧೨). [< ಕೊಂಕು$_1$]

**ಕೊಂಕುಂಡಾಣೆ**, ಕೊಂಕುಡಾಣೆ (ನಾ). ಬಾಗಿದ ಬಡಿಗೆ, —ದೊಣ್ಣೆ; ಒಂದು ಬಗೆಯ ಆಯುಧ: ಕೊಂಕುಂಡಾಣೆ, ಕೊಂಕುಡಾಣೆ (ಶಬ್ದಾನು. ೩೭೯ ಪ್ರಯೋ). **ಕೊಂಕುಡಾಣೆ**: ಮೇಲಿನ ಪ್ರಯೋಗವನ್ನು ನೋಡಿ.

[ಕೊಂಕು$_2$ + ಡಾಣೆ$_1$]

**ಕೊಂಕುಂಬನೆ** (ನಾ). ಬಾಗಿದ ಹಲ್ಲು; ಡೊಂಕುಹಲ್ಲು: ಕೋಱಿ ದಾಡೆಯ ಕೊಂಕುಂಬನೆಯ ಕುಟಿಗಣ್ಣ ಕೆಮ್ಮೀಸೆಯ . . . ಅಱಗುಲಿ (ರಾಮಾಶ್ವ. ೭೯-೧೮). [ಕೊಂಕು$_1$ + ಪನೆ]

**ಕೊಂಕುಕೊಸರು**, ಕೊಂಕೊಸರು (ನಾ). = ಕೊಂಕುಕೊಱತೆ: ಎನಿತು ದುರ್ನುಡಿಗಳ್ಪೆತರೆ ಕೊಂಕುಕೊಸರುಗಳ ಕಿನಿಸೆಂಬ ತಗುಲುಗಳ ಸೋಂಕದಿಹ ಭೃತ್ಯತ್ವವನಘ (ವೆಂಕಾರಾ. ೬-೬೨-೩೫); ಜನಕಸುತೆಯಾ ಹೃದಯದೊಳ್ ಕೊಂಕುಕೊಸರಿಲ್ಲದೆ ನಿರಾತಂಕ ಪದಮೆಂಬೊಲ್ (ವೆಂಕಾರಾ. ೬-೬೩-೫೧). **ಕೊಂಕೊಸರು**: ಎಮ್ಮ ಸಾಂಪ್ರತದಾರ್ಯರೊಳಗೇನಾನು ಕೊಂಕೊಸರುಂಟೆ ಈವರಿಗೂ (ಜರಾಮಾ. ೨೧೪-೫೫).

[ಕೊಂಕು$_2$ + ಕೊಸರು$_3$]

**ಕೊಂಕುಕೊಱತೆ** (ನಾ). ಓರೆಕೋರೆ; ಕುಂದುಕೊರತೆ; ಲೋಪದೋಷ: ಅಲ್ಲಿಯೆ ತಿದ್ದಿಕೊಂಬುದು ನಿಮ್ಮ ಕಾರ್ಯದ ಕೊಂಕು ಕೊಱತೆ [ಪಾಠಾಂ. ಕುಂದುಕೊಱತೆ, ಕೊಂಕು ಕೊಸಱು]ಗಳ (ತೊರರಾ. ೪-೧೦-೨೩); ನಿಮ್ಮಯ ಶರೀರದ ಕೊಂಕುಕೊಱತೆಗಳ್ ಪೋಗಿ ಮಡಿದ ತಿಂತಿಣಿಯ ಬಲಮೇಳ್ವುದು (ಚೆಬಪು. ೩೨-೫೦); ಖೋಡಿಗಳೆದು ವಹಮಾನದೊಳ್ ಸಂಧಿಸರಲೇ ಕೊಂಕುಕೊಱತೆಗಳನೆಂದವನನಸುರಾರಿ ಬೆಸಗೊಂಡನು (ಜೈಮಿಭಾ. ೧೮-೪೨).

[ಕೊಂಕು$_2$ + ಕೊಱತೆ (< ಕೊಱಂತೆ)]

**ಕೊಂಕುಕೋಡು** (ನಾ). ಡೊಂಕಾದ ಕೊಂಬು; ವಕ್ರವಾದ ಕೋಡು: ಕೆಲದಿನದಿ ಕಾಡುಕೋಣದ ಕೊಂಕುಕೋಡಂತೆ ಧೂಮಕೇತು ಕವಲ್ತು ಬಾನೊಳಗೆ ಬೆಳರುತಿದೆ (ಹಬ್ಬರ. ೨೧-೯೯).

[ಕೊಂಕು$_2$ + ಕೋಡು$_2$]

**ಕೊಂಕುಗಲಿ** (ಕ್ರಿ). ವಕ್ರತೆಯನ್ನು ಕಲಿತುಕೊಳ್ಳು: ಕೊಂಕುಗಲಿವ ನೋಟ ಕುಣಿಯಲೆಳಸುವ ಪುರ್ಬಂಕೆಗೆ ನಿಲದಭಿಲಾಷೆ (ಹದಿಬ. ೬-೧೮).

[ಕೊಂಕು$_2$ + ಕಲಿ$_1$ (< ಕಲ್$_1$)]

**ಕೊಂಕುಗುರ್** (ನಾ). ವಕ್ರವಾದ ನಖ; ಬಾಗಿದ ಉಗುರು: ಕೊಂಕುಗುರ ಮಡಿಗಿವಿಯ ಕಿಡಿಗಣ್ಗಳ ಹಾಸನುಗಿದು ಬಿಡೆ (ಜೈಮಿಭಾ. ೨೮-೪೬). [ಕೊಂಕು$_2$ + ಉಗುರ್]

**ಕೊಂಕುಗುರುಳು** (ನಾ). ಗುಂಗುರುಗೂದಲು; ಸುಳಿಗೂದಲು; ಕುಟಿಲಕುಂತಳ: ಕೊಂಕುಗುರುಳಿನ ರಂಭೆ ಕಂಕಣವು ಕಟಸೂತ್ರ ಪಂಕಜಮುಖಿಯು ಎನಬೇಡ ತಾನೊಲಿದ ಮಂಕೆ ಮಾಣಿಕವು (ಸರ್ವಜ್ಞ. ೧೭೧೦). [ಕೊಂಕು$_2$ + ಕುರುಳು$_1$ (< ಕುರುಳ್$_1$)]

**ಕೊಂಕುಗೂದಲ್** (ನಾ). = ಕೊಂಕುಗುರುಳು: "ಕೊಂಕುಗೂದಲಳಕಮೆನಿಕ್ಕು" (ಮಂಗರಾ. ೯೫-೬).

[ಕೊಂಕು$_2$ + ಕೂದಲ್ (< ಕೂಂದಲ್)]

**ಕೊಂಕುಗೆಯ್** (ಕ್ರಿ). **೧.** ಕೊಂಕಿಸು; ಬಾಗಿಸು; ಓರೆಯಾಗಿಸು: ಕೊರಲಂ ತಾಂ ಕೊಂಕುಗೆಯ್ಯುತ್ತಡಿಗಡಿಗೊಡನೈತರ್ಪ ತೇರಲ್ಲಣಂ ನಟ್ಟರೆ ನೋಟಂ (ಶಾಕುಂತ. ೩-೭). **೨.** ಅಪಹಾಸ್ಯಮಾಡು; ಹೀಯಾಳಿಸು: ಚಂಚಲಾಕ್ಷಿಗಳ ಡಾಳಂ ಬಳ್ಳಿಮಿಂಚಂ ಪಳಂಚಲೆಯೆ ಕಿವಿಗಳಾ ಶ್ರೀಕಾರದಾಕಾರಮಂ ಚುನ್ನವಾಡೆ ಕುಡುಪುರ್ಪು ಕರ್ಬಿನ ಬಿಲ್ಲ ಬಿಂಕಮಂ ಕೊಂಕುಗೆಯ್ಯೆ (ಪದ್ಮರಾ. ೩-೩೦).

[ಕೊಂಕು$_2$ + ಕೆಯ್$_1$]

**ಕೊಂಕುಗೆರೆ** (ನಾ). ಡೊಂಕಾದ ರೇಖೆ; ವಕ್ರರೇಖೆ: ಗುರು ಕೊಂಕುಗೆರೆಯಕ್ಕು ಲಘು ನಿಂದ ಗೆರೆಯಕ್ಕು (ಮಂಗರಾ. ೧೦೭-೨೦).

[ಕೊಂಕು$_2$ + ಗೆರೆ]

**ಕೊಂಕುಗೊಂಬು** (ನಾ). ಬಾಗಿದ ಕೊಂಬು; ಡೊಂಕಾದ ರೆಂಬೆ: ಭಯದಿಂದೋಡುತ್ತಿರೆ ಕಾಡೊಳೊಂದು ಮರದ ಕೊಂಕುಗೊಂಬಾತನ ತುಱುಂಬಂ ಪಿಡಿದು ತಡೆಯೆ (ಧರ್ಮಾಮೃ. ೨-೫೭).

[ಕೊಂಕು$_1$ + ಕೊಂಬು$_2$]

**ಕೊಂಕುಗೊರಲ್** (ನಾ). ಬಾಗಿದ ಕೊರಳು; ಕೊಂಕಿಸಿದ ಕತ್ತು: ಆ ಮಿಗಂ ಕೊಂಕುಗೊರಲಿಂ ಪಿಂತಿರುಗಿ ಹಾರುತಿದೆ (ಚಂದ್ರಸ. ೩೩). [ಕೊಂಕು$_1$ + ಕೊರಲ್]

**ಕೊಂಕುಡಾಣೆ** 'ಕೊಂಕುಂಡಾಣೆ' ನೋ.

**ಕೊಂಕುನಗೆ** (ನಾ). ಅಪಹಾಸ್ಯದ ನಗೆ; ವ್ಯಂಗ್ಯವನ್ನು ಸೂಚಿಸುವ ನಗು: ಆನಂದ ಕೊಂಕುನಗೆ ನಕ್ಕು ಹೇಳಿದ (ಮರಳಿ. ೫೦). [ಕೊಂಕು$_2$ + ನಗೆ]

**ಕೊಂಕುನುಡಿ** (ನಾ). ಚುಚ್ಚುಮಾತು; ಕಟಕಿ; ಕಾಕು: "ಅತಿ ಕೊಂಕುನುಡಿ ಕಾಕೆನಿಕ್ಕು" (ಮಂಗರಾ. ೨೬-೩); ಕೊಂಕುನುಡಿಗಳಂ ಕೊನರಿಸಿದಳ್ (ಗೀತಗೋ. ೯೩-೪೪); ಚಿತ್ರಾಂಗದೆ ಮಗನಿಗೆ ಕೊಂಕುನುಡಿ ನುಡಿದಳು (ಬದುರಿ. ೮೪). [ಕೊಂಕು$_2$ + ನುಡಿ$_2$]

**ಕೊಂಕುನೋಟ** (ನಾ). ಓರೆನೋಟ; ಕಡೆಗಣ್ಣ ನೋಟ: ಕೊಂಕು ನೋಟದೊಳೆನ್ನನೀತಕೆ ಕೊಲ್ಲುವೆ ಬಿನ್ನಾಣಿ (ಇಂಚಾಪ. ೧೮೬-೧೭). [ಕೊಂಕು$_2$ + ನೋಟ]

**ಕೊಂಕುಪ್ರಶ್ನೆ** (ನಾ). ವಕ್ರಪ್ರಶ್ನೆ; ವ್ಯಂಗ್ಯಪೂರ್ಣವಾದ ಪ್ರಶ್ನೆ: ಅಪಸವ್ಯ ಅರುಣಾಚಲಯ್ಯರ್ ಅವರು ಒಂದು ಕೊಂಕುಪ್ರಶ್ನೆಯನ್ನು ಹಾಕಿ, ರಸಿಕಪ್ರಿಯರಾಗವನ್ನು ಹಾಡಬಲ್ಲಿರಾ? ಎಂದು ಕೇಳಿದರು (ಸಂಗೀತ. ೮). [ಕೊಂಕು$_2$ + ಪ್ರಶ್ನೆ]

**ಕೊಂಕುಮಾತು** (ನಾ). = ಕೊಂಕುನುಡಿ: ಈ ಮೃಗಾಂಕನೊಳ್ ಕಳಂಕಮಿರುವುದೇನೆಂದು ನಿಶ್ಶಂಕನಾಗಿ ಕೊಂಕುಮಾತುಗಳಿಂದ ಕೇಳಿದ ಕಲವಿಂಕನಂ ಕುರಿತು (ಸೌಗಂಧಿ. ೧೮೮-೭). [ಕೊಂಕು$_2$ + ಮಾತು$_1$]

**ಕೊಂಕುವಂಕು** (ನಾ). ಅಂಕುಡೊಂಕು; ಓರೆಕೋರೆ: ಮಾನುಷ್ಯ ಸ್ವಭಾವದ ಇನ್ನೊಂದು ಭಾಗದ ಕೊಂಕುವಂಕುಗಳು ಆ ಕ್ರಮಕ್ಕೆ ಅಡ್ಡಿ ತಂದು, ಅದನ್ನು ಅಷ್ಟಾವಕ್ರ ಮಾಡುತ್ತಿರುತ್ತವೆ (ರಾಜ್ಯಶಾ. ೩೭೦). [ಕೊಂಕು$_2$ + ವಂಕು$_0$]

**ಕೊಂಕುವರಿ** (ಕ್ರಿ). ಅಂಕುಡೊಂಕಾಗಿ ಹರಿ; ವಕ್ರವಕ್ರವಾಗಿ ಸಾಗು: ನೆಟ್ಟಾನೆ ಬಾಳ್ವೆಯಲಿ ನಟ್ಟಾನೆ ನಡಿ, ನೇರ ನೀರಲಿ ಜಿಗುಳೆಯಂತೆ ಕೊಂಕುವರಿಯದಿರಣ್ಣ (ಹೆಬ್ಬೆರ. ೪-೪೮). [ಕೊಂಕು$_2$ + ಪರಿ$_1$]

**ಕೊಂಕುವಿಲ್** (ನಾ). ಬಾಗಿದ ಬಿಲ್ಲು; ವಕ್ರವಾದ ಬಿಲ್ಲು. 'ಕೊಂಕುವಿಲ್ಲ' ಪರಾ. [ಕೊಂಕು$_2$ + ಬಿಲ್$_2$]

**ಕೊಂಕುವಿಲ್ಲ** (ನಾ). (ಯಾವಾಗಲೂ) ಬಾಗಿದ ಬಿಲ್ಲನ್ನುಳ್ಳವನು; ಮನ್ಮಥ: "ಬಗೆಯೊಳೊಗೆದವ ಕಾಮ ಕೊಂಕುವಿಲ್ಲಂ" (ಶಬ್ದಮಂ. ೮); ಕುಡುವಿಲ್ಲಂ, ಕೊಂಕುವಿಲ್ಲಂ (ಶಬ್ದಾನು. ೩೭೨ ಪ್ರಯೋ). 'ಕುಡುವಿಲ್ಲ' ಪರಾ. [ಕೊಂಕುವಿಲ್ + -ಅ$_7$]

**ಕೊಂಕುವುರ್ಬು** (ನಾ). ಬಾಗಿದ ಹುಬ್ಬು; ಕೊಂಕಿದ ಹುಬ್ಬು: ಕುಡುವುರ್ಬು, ಕೊಂಕುವುರ್ಬು (ಶಬ್ದಾನು. ೩೭೨ ಪ್ರಯೋ). [ಕೊಂಕು$_2$ + ಪುರ್ಬು]

**ಕೊಂಕುವೆರಸು** (ಕ್ರಿ). ವಕ್ರೋಕ್ತಿಯಿಂದ ಕೂಡಿರು; ವ್ಯಂಗ್ಯದಿಂದ ಕೂಡಿರು: ಕೊಂಕುವೆರಸಿದ ನುಡಿ ಉಲ್ಲಾಪಮೆಂಬುದು (ಹಲಾಯು. ೨೪-೧೪೯). [ಕೊಂಕು$_2$ + ಬೆರಸು$_1$]

**ಕೊಂಕುವೆರೆ** (ಕ್ರಿ). = ಕೊಂಕುವೆರಸು: ಕಿಱಿಯರಸಿಯರ ಕೊಂಕುವೆರೆದ ಬಿಂಕವಾತನಾಲಿಸಿ (ನರಚ. ೫-೧೮ ವ). [ಕೊಂಕು$_2$ + ಬೆರೆ$_1$]

**ಕೊಂಕುವೆಱು** (ಕ್ರಿ). ೧. ಬಾಗಿರು; ವಕ್ರವಾಗಿರು: ಪೊಳೆವಂಕುಶ ದಂತಿರೆ ಕೊಂಕುವೆತ್ತ ಕೂರುಗುರ್ಗಳೊಳ್ ... ಕೊಳ್ಬರ್ (ಕಾದಂಪೂ. ೯೯). ೨. ವಕ್ರೋಕ್ತಿಯಿಂದ ಕೂಡಿರು; ಧ್ವನಿಪೂರ್ಣವಾಗಿರು: ಕಿವಿಯಿಂ ಬಗೆವುಗುವೊಡೆ ಕೊಂಕುವೆತ್ತ ಪೊಸ ನುಡಿಯೆ ಪುಗುಗುಂ (ಆದಿಪು. ೧-೧೮). [ಕೊಂಕು$_2$ + ಪೆಱು$_1$]

**ಕೊಂಕುಳು** 'ಕವುಂಕುಳ್' ನೋ.

**ಕೊಂಕೊಸರು** 'ಕೊಂಕುಕೊಸರು' ನೋ.

**ಕೊಂಕೊಳಲೆ** (ನಾ). ಒಂದು ಜಾತಿಯ ನೀರಹಕ್ಕಿ (?): ಕೊಂಕೊಳಲೆಗಳಡಿಯಿಟ್ಟು ಕುಱುಂಕಿದ ನಱುಗೆಱೆಯ ಮಾನುಮಂ ಮಿಡಿಚಿಯುಮಂ ಸಂಕಮೆನೆ ಕಾಯ್ದು ಕೊಳ್ಪೆಳ್ಪಂಕಿಗಳಂ ಪೊತ್ತುವದಱ ತಟರುಹತತಿಗಳ್ (ಲೀಲಾವ. ೯-೧೧); ಕೋಕೊಳಲೆ ಕೊಳಲೆ ನಡೆಯ ಲೊಡಂ ಕೆಸಱಿನಿಸುಱಿಯೆ ಸುಱಿಯೆ ನೀರ್ಮುಳುಗಿದ ಮಾನಂ ಕಳಲೆ ಕಳಲೆ ಚಂಚುಪುಟಂ ಕರ್ದುಕಿದ ಜಗುಳೆ ಜಗುಳೆ ಸಾರ್ದತ್ತು ಬಕಂ (ಲೀಲಾವ. ೯-೧೨). [?]

**ಕೊಂಕೋಜ** (ನಾ). ೧. ಒಬ್ಬಾತನ ಹೆಸರು: ಕೊಂಕೋಜನ ಮಗ ××× ಎಂಕೋಜನು ನಿಲಿಸಿದ ತೋರಣ (ಎಕ. X, ಶಿಡ್ಲ ಘ. ೨೯-೧೦; ?). [? + ಓಜ$_1$ (ಒವರ್ಜು)]

**ಕೊಂಗ$_1$**, ಕೊಂಕ$_3$, ಕೊಂಗು$_1$ (ನಾ). ೧. ಒಂದು ದೇಶದ ಹೆಸರು. ℙ ಈಗಿನ ಕೊಯಮುತ್ತೂರು ಪ್ರದೇಶ: ಅಂಗ ವಂಗ ಕಳಿಂಗ ಕೊಂಗ ಕೊಂಕಣ ಗೊಲ್ಲ ಕಾಂಭೋಜ ... ನಾನಾದ್ವೀಪ ದೇಶಾಧೀಶ್ವರರುಂ (ಪಂಪಭಾ. ೯-೯೫ ವ); ಕೊಂಗ ... ಮರುಪ್ರಭೃತಿ ಭೂಪಾಲಕರಿಂ (ಜಗವಿ. ೨-೩೯ ವ); ಕೊಡಗು ಕೊಂಕಣ ಕೊಂಗ ಮಲೆಯಾಳ ರಾಜ್ಯದ ಬಡಹೋರಿಗಳು (ಕಂಠವಿ. ೬-೩೨). ೨. ಕೊಂಗದೇಶಕ್ಕೆ ಸೇರಿದ ವ್ಯಕ್ತಿ: ಬೆಂಕೊಂಡು ದೋರ್ಬ್ಬಲದಿಂ ಕೊಂಗರನೊತ್ತಿ ವೈರಿ ನೃಪರಂ ಬೆನ್ನಟ್ಟಿ (ಎಕ. II, ೩೮೪-೩೧; ಸು. 1135); ತುರುಕರು ತಿರುಕರಾದರು ಕೊಂಗರ ಬಲ ಸುರಚಾಪದ ಸಿರಿಯಾಯ್ತು (ಕಂಠವಿ. ೧೮-೨೪); ಎಂದಿನ ಕೊಂಗರೈಸೆ ಬಡಿವೋರಿಗಳ್ (ಚಿಕವಿ. ೫-೫೫).

**ಕೊಂಕ$_3$**: ೧. ಮಲೆನಾಡು ಮುಂದೆ ಸಾಗರ ಬಿದ್ದು ಅಪ್ಪುವುದು ತುಳು ಕೊಂಕ ಮತ್ತೆ ಗೋಕರ್ಣ ಗೋವೆ (ಅರಳು. ೩೦೬); ವೃಷಭದೇವನು ಸಂಚಾರಮಾಡುತ್ತ ಕೊಂಕ, ವೆಂಕ, ಕುಟಕ, ದಕ್ಷಿಣ ಕರ್ಣಾಟಕದ ದೇಶಗಳಲ್ಲಿ ತನ್ನ ಇಚ್ಛೆಯಿಂದ ಬಂದನು (ಭಾರದ. ೧೩೮).

**ಕೊಂಗು$_1$**: ೧. ಅಪರಾಸೆಗಂಬುನಿಧಿ ಚೇರಮನಿಪ್ಪೆಡೆ ತೆಂಕ ಕೊಂಗ ಮುತ್ತಿತ್ತೊಳಗುಳ್ಳ ವೈರಿಗಳನಿಕ್ಕಿ (ಎಕ. VII, ಶಿವಮೊ. ೪-೩೪; 1122); ಮಾಳವ ಚೋಳ ಕೊಂಗು ಮಲಯಾಳ (ಸಿದ್ಧರಾ. ೮-೫೮); ಕೊಂಗಿನ ಸೀಮೆಯಲಿ ಪುಂಮುತ್ತೂರ ನಂಜರಾಯ ಕೊಟ್ಟದು (ಎಕ. XIV, ಗುಂಡ್ಲುಪೇ. ೧೨೯-೯೬; 1521). [ದೇ. ‖ ತಮಿ. ಕೊಙ್ಗು; ಮಲ. ಕೊನ್ನು; ತುಳು. ಕೊಂಗ]

**ಕೊಂಗ$_2$** (ನಾ). ಕೋತಿ; ಮಂಗ; ಕಪಿ: ಪಿಂಗಳಕಣ್ಣಿನ ಕೊಂಗ [ಪಾಠಾಂ. ಸಿಂಗ]ಗಳ ಕೂಡಿ ಭಂಗನೆ ಲಂಕೆಗೆ ಪೋದಾನ್ಯಾ (ಕನಕ. ೧೨೦-೭). [← ತಮಿ. ಕುರಙ್ಗು]

**ಕೊಂಗ$_3$** (ನಾ). ಒಂದು ಜಾತಿಯ ಕುದುರೆ: ತನ್ನಿ ಬೊಲ್ಲನ ಕೂಡೆ ಮಂಗಳನನ್ನಿರದೆ ಕೊಂಗನನಸಮನಂ ತನ್ನಿ ಬೋರನ ನಿರಿಸದಿರಿ ವಾಹಕರಿರಾ ನೀವು (ಬಸವು. ೫೯-೪೦); ಕೊಂಗ ಕತ್ತಳ ಮುಂಜ ಮೊದಲಾದ ವರ್ಣಶುದ್ಧಾಂಗದಶ್ವಗಳು ಮೆಱೆದವು (ಭರತ. ೨೦-೫೪). [< ಕೊಂಗ$_1$]

**ಕೊಂಗ$_4$** (ನಾ). ಕಾಳು ತೂರಲು ಬಳಸುವ ಒಂದು ಸಾಧನ; ಕುಕ್ಕೆ; ಬುಟ್ಟಿ: ಭಕ್ತಿಜ್ಞಾನ ವೈರಾಗ್ಯವೆಂಬ ಎತ್ತಿನ ಕೈಯಲ್ಲಿ ತುಳಿಸಿ ತೂಱಿದೆ ಕೊಂಗವನೆತ್ತಿ (ಮೋಳಿಮಾ. ೨೧೭-೭೭೧); ತಲೆಯಲ್ಲಿ ಹೊತ್ತ ಕೊಂಗವ ನಿಳುಹುವರಿಲ್ಲ ಕೊಂಗಕ್ಕೆ ಎರಡು ಗೋಟು ತೂಱುವರು ಮೂವರು (ಕಲ್ಯಾಶಾಂ. ೩೦); ಕೊಂಗಗಳದಲ್ಲಿ ಗುಂಗು ತುಂಬಿಸಿದ ರಾಗಿಯನ್ನು ಕೈಗಳಮೇಲೆ ಎತ್ತಿಕೊಂಡು ನಾಲ್ಕಾರು ಆಳುಗಳು ಕೂಗಿಕೊಳ್ಳುತ್ತಾರೆ (ಮೂಲಾನ. ೫೯). [ದೇ. ‖ ತಮಿ. ಕೊಙ್ಗಣಿ, ಕೊಙ್ಙಾಣಿ]

**ಕೊಂಗಗಾಲು** (ನಾ). ಮಂಡಿಯೂರಿದ ಕಾಲು (?): "ನನ್ನ ಪರುಷ ದಿಂದಾದ ಹೊನ್ನರಾಶಿಯ ನೀನು ಕೊಂಡು ಪೋಗು ವಡೆಯರೆ" ಎಂದು ಕೊಂಗಗಾಲಿಲಾ ವೋಜದಲ್ಲಿ ತುಂಬಿ ಮುಂದೆ ಮಡಗಲು (ಭೈರಸೂ. ೩೫೪). [ಕೊಂಗ$_0$ + ಕಾಲು$_1$ (< ಕಾಲ್$_1$)]

**ಕೊಂಗಣ** 'ಕೊಂಕಣ' ನೋ.

**ಕೊಂಗಣಿ** 'ಕೊಂಗುಣಿ' ನೋ.

**ಕೊಂಗಣಿಗಾವುಂಡ** 'ಕೊಂಗುಣಿಗಾವುಂಡ' ನೋ.

**ಕೊಂಗಣಿವರ್ಮ** 'ಕೊಂಗುಣಿವರ್ಮ' ನೋ.

**ಕೊಂಗತ್ತಿ** (ನಾ). ಒಂದು ಬಗೆಯ ಖಡ್ಗ; ಕೊಂಕಿದ ಕತ್ತಿ (?): ಡೊಣೆಗತ್ತಿ ಕೊಂಗತ್ತಿ ಧರಿಸಿ ವಾಲಗದಿ ನಿಂದಿಹರು (ಸೌಂದಕಾ. ೩–೧೧೧). [< ಕೊಂಕು$_2$ + ಕತ್ತಿ]

**ಕೊಂಗನಾಡು** (ನಾ). ಒಂದು ನಾಡಿನ ಹೆಸರು; ಕೊಂಗದೇಶ: ಕೊಂಗನಾಡೆಪ್ಪತ್ತುಂ ದಯೆಗೆಯ್ದನ್ (ಎಕ. XIV, ಎಡತೊ. ೩೧–೯; 900); ಕೊಂಗನಾಡಿಂದೆರಡು ಗಿಳಿ ಬಂದು ಹೇಳ್ಯಾವ (ಲೋಕಗೀ. ೨೦). [ಕೊಂಗ$_1$ + ನಾಡು]

**ಕೊಂಗಮಂಗ** (ನಾ). ಕೋತಿಯಂತಹ ಸ್ವಭಾವದವನು; ವಿದೂಷಕ; ಕಪಿಚೇಷ್ಟೆ ಮಾಡುವವನು: ಅವನ ನಡೆವಳಿಕೆಯೇ ಚೆನ್ನಿಲ್ಲ ಅವನೊಬ್ಬ ಕೊಂಗಮಂಗ (ರೂಢಿ). [ಕೊಂಗ$_1$ + ಮಂಗ]

**ಕೊಂಗಮಂಗತನ** (ನಾ). ಕೋತಿಯಂತಹ ಸ್ವಭಾವ; ಮಂಗ ಚೇಷ್ಟೆ; ವಿದೂಷಕತನ: ಅವನಿಗೆ ಇಷ್ಟು ವಯಸ್ಸು ಆದರೂ ಕೊಂಗ ಮಂಗತನವನ್ನು ಬಿಟ್ಟಿಲ್ಲ (ರೂಢಿ). [ಕೊಂಗಮಂಗ + -ತನ]

**ಕೊಂಗಮಂಗಲ** (ನಾ). ಒಂದು ಊರಿನ ಹೆಸರು: ಪೊಕ್ಕುಂನ್ದದ ಕುಱುಗೋಳೆ ಕೊಙ್ಗಮಂಗಲದ ಮೇದಯ್ಯ ಕಾದಿ ಸತ್ತು (ಎಕ. X, ಬಾಂಗ. ೪೦–೨; ಸು. 950). [ಕೊಂಗ$_1$ + ಮಂಗಲ]

**ಕೊಂಗಮನ್ನೆಯ** (ನಾ). ಕೊಂಗದೇಶದ ಮಾಂಡಲಿಕ: ಸಹಜ ಮನೋಜ ಹಯವತ್ಸರಾಜ ಕೊಂಗಮನ್ನೆಯ ಬಂಗಾಜ ಮಾವನಂಕ ಕಾಜ (ಸೌಇಇ. XI–i, ೯೭–೨೦; 1062). [ಕೊಂಗ$_1$ + ಮನ್ನೆಯ]

**ಕೊಂಗರಿ** (ನಾ). ಕೊಂಕಿದುದು; ವಕ್ರವಾದುದು. 'ಕೊಂಗರಿಗೀಟು' ಪರಾ. [< ಕೊಕ್ಕರಿ]

**ಕೊಂಗರಿಗೀಟು** (ನಾ). ಡೊಂಕಾದ ಗೆರೆ; ಅಡ್ಡತಿಡ್ಡ ರೇಖೆ: ಅರಮನೆ ಚಿತ್ರವನ್ನು ಕೆಡಿಸಿ . . ಕೋತಿಗೀಟುಗಳು ಕೊಂಗರಿಗೀಟುಗಳು ಬರೆದಿಟ್ಟಿದೆಯಲ್ಲಾ (ಕಥಾಮಂ. IV, ೧೧೬). [ಕೊಂಗರಿ + ಗೀಟು$_2$]

**ಕೊಂಗರಿಬಿಂಗರಿ**, ಕೊಂಗರಿಮಂಗರಿ (ನಾ). ಅಡ್ಡತಿಡ್ಡವಾದುದು; ಕೊಕ್ಕರಿ ಬಿಕ್ಕರಿ: (ಕ). **ಕೊಂಗರಿಮಂಗರಿ**: (ಕ). [ಕೊಂಗರಿ + ಬಿಂಗರಿ./ ತೆಲು. ಕೊಂಕರೆವಂಕರೆ]

**ಕೊಂಗರಿಮಂಗರಿ** 'ಕೊಂಗರಿಬಿಂಗರಿ' ನೋ.

**ಕೊಂಗಲಿ**, ಕೊಂಗಳಿ$_1$, ಕೊಂಗಾಳಿ (ನಾ). ಒಂದು ಊರಿನ ಹೆಸರು: ಭಟವೃತ್ತರ್ ಕೊಙ್ಗಲಿಯ ವರಕೈಕ್ಕೆನ್ನೆಯಧಿರಕ್ಕೆ ತಮ್ಮುತೆರೊಸೆ × × ಗಙ್ಕೆ × × ವಿಕವಿಡುವೊರು (ಎಕ. XVI, ತುಮಕೂ. ೮೧–೧೩; 904). **ಕೊಂಗಳಿ$_1$**: ಕೋಳಾಲಂ ತೆರೆಯೂರು ಕೊಯತೂರು ಕೊಂಗಳಿ ಯುಚ್ಚಂಗಿ ತಲೆಯೂರು ಪೊಂಬುರ್ಚ್ಚ (ಎಕ. II. ೧೩೨–೨೭; 1123). **ಕೊಂಗಾಳಿ**: ಹಾರುನಾಡ ಕಯಿಮರ ಒದರೆ ಕೊಂಗಾಳಿಯ ಬೆಟನ ಬಯಲಿನ ಚತುಸ್ಸೀಮೆಯ ವಿವರ (ಸೌಇಇ. IX–ii, ೪೪೯–10; 1444). [?]

**ಕೊಂಗಲ್ನಾಡು**, ಕೊಂಗಳ್ನಾಡು (ನಾ). ಒಂದು ಸೀಮೆಯ ಹೆಸರು. ℙ. ಈಗಿನ ಕೊಯಮುತ್ತೂರು: ಕೊಂಗಲ್‌ನಾಡೊ [ಬಾಟ್ಟ]ಟ್ಟುಗೊಟ್ಟರ್ ಮಂಗಳ (ಮೈಆರಿ. ೧೯೨೪, ೧೧೮–೫; 866); ಕೊಂಗಲ್ನಾಡೆಚ್ಚಾಸಿರಮುನಿಜಿಕ್ಕೆಯಪ್ಪನಾಳುತ್ತಿರೆ (ಎಕ. IV, ಹುಣಸೂ. ೯೨–೩; ಸು. 920). **ಕೊಂಗಳ್ನಾಡು**: ಬೂತರಸ ಯುವರಾಜ ಪದದುಳ್ ನಿನ್ದು ಕೊಙ್ಗಳ್ನಾಡು ಪೂನಾಡಮನಾಳುತಿಟ್ಟು (ಎಕ. III, ನಂಜನ. ೭೫–೫; 870); ಕೊಙ್ಗಳ್ನಾಡಿಚ್ಚಾಸಿರಮು[ಂ]ಮಲೆಸಾಸಿರಮುಂ ಆಳೆ (ಇಆ. XIV, ೨೩೨–೫೦; 9ನೆಯ ಶತ). [ಕೊಂಗಲ್ ? + ನಾಡು]

**ಕೊಂಗವ್ವೆ** (ನಾ). ಒಬ್ಬಾಕೆಯ ಹೆಸರು: ಕೊಙ್ಗವ್ವೆಯ ಮಾಯಿದೇವ ಕಾದಿ (ಮೈಆರಿ. ೧೯೩೦, ೮–೩; 943). [ಕೊಂಗ$_3$ + ಅವ್ವೆ]

**ಕೊಂಗಳಗಾವುಂಡ** (ನಾ). ಒಬ್ಬಾತನ ಹೆಸರು: ಕೊಂಗಳಗಾವುಣ್ಡ ಬಸದಿ (ಎಕ. V, ಅರಕ. ೭೫–೩; 1026 ?). [ಕೊಂಗಳ ? + ಗಾವುಂಡ (< ಗಾಮುಂಡ)]

**ಕೊಂಗಳಾಚಾರಿ** (ನಾ). ಒಬ್ಬಾತನ ಹೆಸರು: ಪೆನ್ನಲೂರ ಕೊಂಗಳಾ ಚಾರಿಯ ಮಗಂ ಜಾಕವ ಸತ್ತಂ (ಎಕ. V, ಅರಕ. ೭೬–೫; 1026). [ಕೊಂಗಳ ? + ಆಚಾರಿ]

**ಕೊಂಗಳಿ$_1$** 'ಕೊಂಗಲಿ' ನೋ.

**ಕೊಂಗಳಿ$_2$** 'ಕೋಗಳಿ' ನೋ.

**ಕೊಂಗಳ್ನಾಡು** 'ಕೊಂಗಲ್ನಾಡು' ನೋ.

**ಕೊಂಗಾಟ** (ನಾ). ವಕ್ರಚೇಷ್ಟೆ; ಮಂಗಾಟ: (ಕ). [ಕೊಂಗ$_2$ + ಆಟ]

**ಕೊಂಗಾಣಿ** (ನಾ). ಹಗ್ಗದ ಕಟ್ಟನ್ನು ಬಿಗಿಗೊಳಿಸುವುದಕ್ಕಾಗಿ, ಅದರ ನಡುವೆ ಇಟ್ಟು ತಿರುಗಿಸುವ ಕೊಂಕುಬೆಣೆ; ಬಿರಿ. (ಎಸವೈ. XV. ೨೮). [ಕೊಂಗು ? + ಆಣಿ$_3$]

**ಕೊಂಗಾಳಿ** 'ಕೊಂಗಲಿ' ನೋ.

**ಕೊಂಗಿ$_1$** (ನಾ). ವಕ್ರಸ್ವಭಾವವುಳ್ಳವನು; ಕೊಂಗತನದವನು: ಮಹಾ ಕೊಂಗಿ ಮನುಷ್ಯ. ಸಿಕ್ಕಿದ ಹಾಗೆ ಬಯ್ಯುತ್ತಾನೆ (ನಟಸಾ. ೭೨). [ಕೊಂಗು$_2$ (< ಕೊಂಕು$_2$) + – ಇ$_3$]

**ಕೊಂಗಿ$_2$** (ನಾ). ಒಬ್ಬಾತನ ಹೆಸರು: ಶ್ರೀಕುನ್ದಮ್ಮ ಶಿರಾಭಿನಂ ಪೂಲಿಯೂ ಕೊಙ್ಗಿಯೂ ಕಾಲಿಯಮ್ಮನೂ ಇಟ್ಟುಕೊಟ್ಟರ್ (ಎಕ. VIII, ಸೊರಬ. ೨೨–೧೧; ಸು. 800). [?]

**ಕೊಂಗಿತಿ** 'ಕೊಂಗಿತ್ತಿ' ನೋ.

**ಕೊಂಗಿತ್ತಿ**, ಕೊಂಗಿತಿ (ನಾ). ಕೊಂಗರ ಹೆಂಗಸು; ಕೊಂಗರವಳು: ಗವರಿಗನ ಕಟ್ವಿಗೀಶಾನ್ಯ ಮೆಣಸಿನ ಕೊಂಗಿತ್ತೀ ಹೊಲದ ಮೂಡ (ಎಕ. III, ತಿರುಮ. ೩೩–೯೦೨; 1748). **ಕೊಂಗಿತಿ**: ಅಂಗಡಿಯ ಬೀದಿಯಲ್ಲಿ ಕೊಂಗಿತಿ ಕುಳಿತು ಭಂಗವ ಮಾಡುತಿಪ್ಪಳು ನೋಡಾ (ಸಿದ್ಧವ. ೩೪೨). [ಕೊಂಗ$_1$ + – ಇತ್ತಿ]

**ಕೊಂಗಿಸು** 'ಕೊಂಕಿಸು' ನೋ.

**ಕೊಂಗು$_1$** 'ಕೊಂಗ$_1$' ನೋ.

**ಕೊಂಗು$_2$** 'ಕೊಂಕು$_2$' ನೋ.

**ಕೊಂಗು$_3$** (ನಾ). ಅಡಕೆ; ಪೂಗ: ಸಾಸಿರದಯ್ನೂಱು ಕೊಂಗಿನ ಮರದವಟ್ಟಿಗೆಯ ಬಾವಿಯ (ಸೌಇಇ. XX, ೩೧–೯೭, 1044); ಫಳಿತ ಮಾದ ತೆಂಗಿಂ ಕೊಂಗಿಂ (ಎಕ. XV, ಅರಸೀ. ೨೧೬–೩೪; 1195); ತೆಂಗು ಕೊಂಗು ಜಂಬುರಸ ಮಾದುಫಲಂ (ಕಇ. I, ೩೦–೮; 1222). 'ಕವುಂಗು' ಪರಾ. [< ಕವುಂಗು]

**ಕೊಂಗು$_4$** (ನಾ). ಒಂದು ಬಗೆಯ ಸಸ್ಯ : (ವೈದ್ಯಸಾಂಗ. ೫೪-೧೦೮೫). [?]

**ಕೊಂಗು$_5$** (ನಾ). ಒಂದು ಬಗೆಯ ಧಾನ್ಯ; ನವಣೆ: ನವಣೆ, ಕೊಂಗು, ಪ್ರಿಯಂಗುತೆನೆ (ವೈದ್ಯಸಾಂಗ. ೬೯-೧೪೨೨). [?]

**ಕೊಂಗುಗೊಳ್** (ಕ್ರಿ). ಕೊಂಗದೇಶವನ್ನು ಗೆದ್ದು ಕೊಳ್ಳು, —ಕೈವಶಪಡಿಸಿಕೊಳ್ಳು: ಮಗವೀತಂ ಕೊಂಗುಗೊಳ್ವಂ ಗಡ ಗಜಘಟೆಯಂ ತರ್ಪನೀತಂ ಗಡ ಪೊನಗೆಯಿಂಬುದ್ದಂಡರು ತಪಿಸೆ ಪರನೃಪರಂ ಕಾದಿ ಬೆಂಕೊಂಡು ಕೊಂಗಂ ಜಗಮುತ್ಕೋಚಂಗೊಳಲು ಸಾಧಿಸಿ (ಎಕ. V, ಬೇಲೂರು. ೧೭-೪೭; 1136).

[ಕೊಂಗು$_1$ (< ಕೊಂಗ$_1$) + ಕೊಳ್$_1$]

**ಕೊಂಗುಣಿ,** ಕೊಂಗಣಿ, ಕೊಂಗುನಿ, ಕೊಂಗುಳಿ, ಕೊಂಗೂಣಿ, ಕೊಂಗೊಣಿ, ಕೊಂಗೊಣಿ (ನಾ). ಒಬ್ಬಾತನ ಹೆಸರು: ಶ್ರೀಮತ್ ಕೊಙ್ಗುಣಿ ಮುತ್ತರಸರಾ ಬೆಸದೆ ಕಾಡುವಟ್ಟಿ ದಣ್ಡಱದು (ಎಕ. IX, ಹೊಸಕೋ. ೨೧-೨; ಸು. 750); ಸ್ವಸ್ತಿ ಶ್ರೀ ಕೊಂಗುಣಿ ಮಹಾರಾಜ ಶ್ರೀಪುರುಷ ಪೃಥುವೀರಾಜ್ಯ ವಿಜಯವತ್ಸರ (ಎಕ. X, ಕೋಲಾರ. ೬-೧; 753). **ಕೊಂಗಣಿ**: ಕೊಂಗಣಿ ಪೆಂಡತ್ತಾರೀಣೀದೆಂ ತಾಂಬ್ರ ಶಾಸನಂ ಲಿಖಿತವರ್ (ಮೈಆರಿ. ೧೯೧೬, ೧೨-೪೦; 540). **ಕೊಂಗುನಿ**: ಮಗ್ಗೆಯ ಪೆಲ್ವಾವ್ವ ಊಯ್ಯಮ್ಮ ನಾಡು ಸೆಟ್ಟಿ ಕೊಂಗುನಿಯ × × ಗೆ ಬನ್ದು (ಎಕ. IV, ಹೆಗ್ಗಡ. ೭೩-೧೭; 1027 ?). **ಕೊಂಗುಳಿ.** 'ಕೊಂಗುಳಿವರ್ಮ' ಪರಾ. **ಕೊಂಗೂಣಿ.** 'ಕೊಂಗೂಣಿ ಗಾವುಂಡ' ಪರಾ. **ಕೊಂಗೊಣಿ**: ಶ್ರೀಮತ್ ಕೊಂಗೊಣಿ ಮಹಾಧಿರಾಜೋ ಭುವೋ ವಿಭೂತಯೇ ಭವತ್ (ಮೈಆರಿ. ೧೯೩೦, ೩-೩; 475). **ಕೊಂಗೊಣಿ**: ಶ್ರೀ ಕೊಂಗೊಣಿ ಎಱೆಯನ್ ಪ್ರಿಥುವೀರಾಜ್ಯಂ ಕೆಯೆ (ಎಕ. IV, ಹೆಗ್ಗಡ. ೮೬-೧; ಸು. 915). [?]

**ಕೊಂಗುಣಿಗಾವುಂಡ,** ಕೊಂಗಣಿಗಾವುಂಡ, ಕೊಂಗೂಣಿಗಾವುಂಡ (ನಾ). ಒಬ್ಬಾತನ ಹೆಸರು: ಪೆರ್ಮ್ಮಾಡಿಗವುಣ್ಡಂ ಏಚಗಾವುಣ್ಡನ್ಕೊಂಗುಣಿಗಾವುಣ್ಡನ್ (ಎಕ. IV, ಹೆಗ್ಗಡ. ೧೦೪-೧೩; 1037). **ಕೊಂಗಣಿಗಾವುಂಡ**: ಪೊಱನಾಡ ಎಳನ್ದೆವಾಡಿಯ ಕೊಂಗಣಿ ಗಾವುಣ್ಡನ ಮಮ್ಮ ಮಾರವಡೆಯನ ಮಗಂ ರಾಚಮ್ಮ (ಎಕ. IV, ಗುಂಡ್ಲುಪೇ. ೯೩-೨೮; 1049). **ಕೊಂಗೂಣಿಗಾವುಂಡ**: ಮಣಲಯ ಕೊಂಗೂಣಿಗಾವುಣ್ಡಂ ಮೂನೂಱು ಮಾನಿಸರ ವರಿಸಿ ತಾಮರಿಕೊಳಾನ ಕೂಡಿ ಇಱಿಯ ಬನ್ದಡೆ (ಎಕ. IV, ಹೆಗ್ಗಡ. ೭೩-೯; 1007 ?).

[ಕೊಂಗುಣಿ + ಗಾವುಂಡ (< ಗಾಮುಂಡ)]

**ಕೊಂಗುಣಿವರ್ಮ,** ಕೊಂಗಣಿವರ್ಮ, ಕೊಂಗುಳಿವರ್ಮ (ನಾ). ಒಬ್ಬಾತನ ಹೆಸರು: ಶ್ರೀ ಸತ್ಯವಾಕ್ಯ ಕೊಂಗುಣಿವರ್ಮ (ಎಕ. I, ೩-೧; ಸು. 890); ಸ್ವಸ್ತಿಶ್ರೀ ನೀತಿಮಾರ್ಗ ಕೊಂಗುಣಿವರ್ಮ ಧರ್ಮ್ಮಮಹಾರಾಜಾಧಿರಾಜ (ಎಇ. VIII, ೫೮-೧; 1000). **ಕೊಂಗಣಿವರ್ಮ**: ಶ್ರೀಮತ್ ಕೊಂಗಣಿವರ್ಮ್ಮ ಧರ್ಮ್ಮಮಹಾಧಿರಾಜಸ್ಯ (ಇಆ. V, ೧೩೬-೧; 454. ಕೃಶಾ). **ಕೊಂಗುಳಿವರ್ಮ**: ತನ್ನಯ ಹಯಮುಮಂ ಪರಿಯಿಸಿ ಕೊಂಗುಳಿವರ್ಮಂ ಕರಾಸಿಯಿಂದಿಱಿದು ತವಿಸಿದಂ ಹಯಬಲಮಂ (ಕಾವ್ಯಾವ. ೨೮೫); ಸ್ವಸ್ತಿ ಸತ್ಯವಾಕ್ಯ ಕೊಂಗುಳಿವರ್ಮ್ಮ ಧರ್ಮ್ಮಮಹಾರಾಜಾಧಿರಾಜ ಪರಮೇಶ್ವರಂ (ಎಕ. VII, ಶಿವಮೊ. ೪-೮೭; 1177).

[ಕೊಂಗುಣಿ + ವರ್ಮ$_2$]

**ಕೊಂಗುಣಿಸಾಮಿ** (ನಾ). ಒಬ್ಬಾತನ ಹೆಸರು: ಪುತ್ತೂರ ಕೊಙ್ಗುಣಿ ಸಾಮಿಯಗೆ ಬೆಲಮ್ಪಳ್ಳಿಯೊಳ್ ರಾಜಮಾನ ಮೂಗಣ್ಣುಗಂ (ಎಕ. X, ಮುಳಬಾ. ೧೦೨-೫; ಸು. 880). [ಕೊಂಗುಣಿ + ಸಾಮಿ]

**ಕೊಂಗುಧರೆ** (ನಾ). ಕೊಂಗದೇಶ: ಯತಿರಾಜರ್ ಬಱಿಕೆತ್ತ ಕೊಂಗುಧರೆಯಂ ಸಾರ್ದೊಂದರಣ್ಯಕ್ಕೆ ಬಂದು (ದಿವ್ಯಚ. ೧೪-೨೫).

[ಕೊಂಗು$_1$ (< ಕೊಂಗ$_1$) + ಧರೆ]

**ಕೊಂಗುನಿ** 'ಕೊಂಗುಣಿ' ನೋ.

**ಕೊಂಗುಮನ** (ನಾ). ವಕ್ರವಾದ ಮನಸ್ಸು: ಮಂಗಳಾತ್ಮ ಷಡಕ್ಷರಿಯ ಲಿಂಗ ನಿಮ್ಮ ನೆನೆಯದಿರ್ಪ ಕೊಂಗಮನವ ಶಿಕ್ಷಿಸೆನ್ನ ಅಳಲು ಪೋಗಲಿ (ಸುಸಾರ. ೮೨-೩). [ಕೊಂಗು$_2$ (< ಕೊಂಕು$_2$) + ಮನ$_1$]

**ಕೊಂಗುಳಿ** 'ಕೊಂಗುಣಿ' ನೋ.

**ಕೊಂಗುಳಿವರ್ಮ** 'ಕೊಂಗುಣಿವರ್ಮ' ನೋ.

**ಕೊಂಗೂಣಿ** 'ಕೊಂಗುಣಿ' ನೋ.

**ಕೊಂಗೂಣಿಗಾವುಂಡ** 'ಕೊಂಗುಣಿಗಾವುಂಡ' ನೋ.

**ಕೊಂಗೆ$_1$** (ನಾ). ಮರದ ಶಾಖೆ; ರೆಂಬೆ; ಕೊಂಬೆ: ಬೀಜವದು ಹೂ ಕಾಯಿ ಕೊಂಗೆಯು (ಜ್ಞಾನಸಿಂ. ೯-೫೪); ಒಂದೆ ವೃಕ್ಷಕೊಂಗೆಯಲಿ ಹೂವು ಕಾಯಿಯೆಲ್ಲವಾಗೆ (ಚಿದಾವ. ೧೨೫-೬).

[ದೇ. ‖ ತಮಿ. ಕೊಙ್ಗೈ$_1$]

**ಕೊಂಗೆ$_2$** (ನಾ). ಕಿವಿಯೊಳಗಿನ ಮಲ; ಗುಗ್ಗೆ; ಕೂಕಣಿ: ಬೆಟ್ಟದರು ಸಬಳಗಳ ಕಿವಿಗಳಲಿಟ್ಟಣಿಸಿ ಹದ್ದುಗಳ ಗಱಿಗಳ ಕಟ್ಟಿ ಸೆಳೆಗಡ್ಡಿಯಲಿ ಕಿವಿಗಳ ಕೊಂಗೆತೆ [ಪಾಠಾಂ. ಕೊಗ್ಗಿದೆ, ಕುಡಿತೆ]ಗೆದಂತೆ (ತೊರವ. ೬-೨೬-೩೭). [?]

**ಕೊಂಗೆಱೆಯ** (ನಾ). ಒಬ್ಬಾತನ ಹೆಸರು (?): ಕೊಙ್ಗೆಱೆಯರವ ××× ಗವುಣ್ಡನ ಮಗ . . . ಸ್ವರ್ಗಾಲಯಂ ಪೊಕ್ಕನ್ (ಎಕ. X, ಚಿಂತಾಮ. ೩೬-೩; ಸು. 885). [ಕೊಂಗು ? + ಎಱೆಯ]

**ಕೊಂಗೇಳು** (ನಾ). ಕೊಂಗನಾಡಿಗೆ ಸೇರಿದ ಏಳು ಪ್ರಾಂತಗಳು: ಕೊಂಗೇಳುಂ ಮಲೆಯೇಳುಮನಂಗಯ್ಯುಳವಡಿಸಿ ಲೊಕ್ಕಿಗುಂಡಿವರಂ ದೇಶಂಗಳನಿಳ್ಕುಳಿಗೊಂಡ ನೃಸಿಂಗಂ (ಎಕ. II, ೩೮೪-೯; ಸು. 1135).

[ಕೊಂಗ$_1$ + ಏಳು$_2$ (< ಏೞ್$_2$)]

**ಕೊಂಗೊಣಿ** 'ಕೊಂಗುಣಿ' ನೋ.

**ಕೊಂಗೊಣಿ** 'ಕೊಂಗುಣಿ' ನೋ.

**ಕೊಂಚ,** ಕೊಂಚೆ$_1$ (ಗು). ನಸು; ತುಸು; ಸ್ವಲ್ಪ: ಪಿರಿದು ಆಳಿಯರಿರದೆ ಕೊಂಚದೊಳಿರುವರಿತ್ತಾಸಿರದ ಸ್ತ್ರೀಯರ ನೆರವಿ ಬಳಸಿತು (ಜಿನಭಾ. ೧೯-೧೬); ಮೂರ್ತಿ ಕೊಂಚಮಾದರೂ ಕೀರ್ತಿ ದೊಡ್ಡದು (ಸೌಗಂಧಿ. ೧೯೧-೧೪); ಕೊಂಚ ಹೊತ್ತಾಯ್ತು (ಮುನಿಮಾ. ೧). **ಕೊಂಚೆ$_1$**: "ಪಕ್ಷಿಯ ಭೇದದೊಳಗಲ್ಪದೊಳು ಕೊಂಚೆ" (ಶಬ್ದಮಂ. ೮೬). **ಕೊಂಚದವನು** = ಅಲ್ಪಮನುಷ್ಯ; ತುಚ್ಛವ್ಯಕ್ತಿ: (ಕಿ).

[ದೇ. ‖ ತಮಿ. ಮಲ. ಕೊಞ್ಚ; ತೆಲು. ಕೊಂಚೆ]

**ಕೊಂಚಗಾತಿ** (ನಾ). ಅಲ್ಪಳು; ಸಾಮಾನ್ಯಳು: ನೀವೆಲ್ಲರೂ ಕೊಂಚಗಾತಿಯರ ಕಾಲವಂ ಕಂಡು ಬಂದವರು (ಸೌಗಂಧಿ. ೫೧೯-೨).

[ಕೊಂಚ + -ಕಾತಿ$_5$]

**ಕೊಂಚಗಾಱ** (ನಾ). ಕ್ಷುದ್ರನಾದವನು; ಸಾಮಾನ್ಯ; ನಾಡಾಡಿ: ಕೊಂಚಗಾಱರು ಅಱುಮಂದಿ . . . ಹಿಂಚುಮುಂಚಿಲ್ಲದೆ ಎಳೆಯುತಾರೆ (ಪುರಂದ. ४-೨೫-೨); ಪ್ರಪಂಚವೆಲ್ಲಕೆ ತಪ್ಪಿದವನೀ ಕೊಂಚಗಾಱನೆ ಕೃಷ ರಕ್ಷಿಸು (ಹರಿಸಾ. ೫೮). [ಕೊಂಚ + -ಕಾಱ]

**ಕೊಂಚರು,** ಕೊಂಚಲು (ನಾ). ಹಳ್ಳ: ಪೂರ್ವಕಾಲದಲ್ಲಿ ಕೊಂಚರುಗಳಲ್ಲಿ ಆದಿರನ್ನು ಅರಿಸಿ ತಂದು ಕಬ್ಬಿಣಮಾಡಿಕೊಳ್ಳುತ್ತಿದ್ದರು (ರೂಢಿ). **ಕೊಂಚಲು**: ಕಣಿವೆ ಇಳಿದೆ ಮರಳು ಹರಡಿದ್ದ ಒಂದು ಸಣ್ಣ ಕೊಂಚಲು ಸಿಕ್ಕಿತು (ಮಗನಮಾಂ. ೩೪). [?]

**ಕೊಂಚಲು** 'ಕೊಂಚರು' ನೋ.

**ಕೊಂಚಿಸು** (ಕ್ರಿ). ಕೊಚ್ಚಿಹಾಕು; ಕತ್ತರಿಸಿಹಾಕು: ವಂಚನೆಯ ಮಾಡುವೆಯ ಸಂಚಿನೊಳು ಮಾನವನೆ ಕೊಂಚಿಸುವೆ ನೋಡಿಂದು ಕಂಚುಕಾಧಮನೆ (ಹಮುಚ. ೮೬). [< ಕೊಚ್ಚು$_1$ + -ಇಸು$_3$]

**ಕೊಂಚೆ$_1$** 'ಕೊಂಚ' ನೋ.

**ಕೊಂಚೆ$_2$** (ನಾ). ದಿಣ್ಣೆಯ ಮೇಲೆ ಕಟ್ಟಿದ ಪ್ರಾಕಾರ; ಕೋಟೆಯ ಗೋಡೆ: "ಪ್ರಾಕಾರ, ವರಣ, ಶಾಲ" (ನಾಚಿರಾ. ೬). [?]

**ಕೊಂಚೆ$_3$** (ನಾ). ಕುಂಡೆ; ಪಿರ್ರೆ; ನಿತಂಬ: "ಪೂಜಮಾಜು" (ಚತುನಿ. ೬. I, ೬೨). [?]

**ಕೊಂಚೆ$_4$** (ನಾ). ೧. ಒಂದು ಬಗೆಯ ಪಕ್ಷಿ; ಕ್ರೌಂಚ: "ಕೊಂಚೆಯದಕ್ಕುಂ ಪೆಸರಿಂ ಕ್ರೌಂಚಂ" (ವಸ್ತುಕೋ. ೪೩-೧೮); "ಕೊಂಚೆಯೆ ಕ್ರೌಂಚಾಹ್ವಯಂ" (ಕವಿಕಂ. ೬೪); ಕೋಗಿಲೆ ಚಾದಗೆ ಪೋದಗೆ ಮೂಗಿಗಲಿಂಜಂಚೆ ಕೊಂಚೆ (ಕಾವ್ಯಸಾ. ೧೦೪೪ ಶೂದ್ರಕ); ಗಿಳಿಯಕೋಗಿಲೆಯ ಕೊಂಚೆಯಂಚೆಯ ಕುಂತಳಿಕೆಯ ಮಾಚ್ಕಿಯ ಸಿಪ್ಪುಗಳೊಳ್ ತೀವಿ (ಪಂಪಭಾ. ೪-೭೭ವ); ಕೊಂಚೆಗಳಿಂಚರ ದನಿ ನೀಲ ಕಲಕಂಠಗಳಿಂಚರ (ಮೋಹತ. ೫-೩೩); ಕೊಳರ್ವಕ್ಕಿಯ ಕಳರವದಾ ಕೊಂಚೆಯೊಂದಿಂಚರಂ (ಚಿಕವಿ. ೬-೧೬೪). ೨. ಒಂದು ಬೆಟ್ಟದ ಹೆಸರು. 'ಕೊಂಚೆವೆಟ್ಟು' ಪರಾ. [< ಸಂ. ಕ್ರೌಂಚ]

**ಕೊಂಚೆಗಟ್ಟು** (ನಾ). ಕ್ರೌಂಚಪಕ್ಷಿಯ ಆಕಾರದಲ್ಲಿ ನಿಲ್ಲಿಸಿದ ಸೈನ್ಯ; ಕ್ರೌಂಚವ್ಯೂಹ: ತನ್ನ ಪಡೆಯಂ ಕೊಂಚೆಗಟ್ಟಿನ ಕೋಂಟೆಯಂತೆ ಸಮೆದು (ರಾಮಾಶ್ವ. ೯೪-೨೭). [ಕೊಂಚೆ$_4$ + ಕಟ್ಟು$_2$]

**ಕೊಂಚೆಗುಲಿ** (ನಾ). ಕ್ರೌಂಚಪಕ್ಷಿಯನ್ನು ಕೊಂದವನು: ಕುರಿತು ಮರುಗಿದನಿಂತು ಕೊಂಚೆಗುಲಿ ಬಿಯದಂಗೆ (ಶ್ರೀರಾಮಾ. ೨-೩೫). 'ಮಿಗಂಗುಲಿ' ಪರಾ. [ಕೊಂಚೆ$_4$ + -ಕುಲಿ$_1$]

**ಕೊಂಚೆಯ** (ನಾ). ಮಂಟಪ; ಬಳ್ಳಿಮಾಡ; ಹಂದರ: ನವ ಮಾಲಿಕಾಲತೆಯಿಬುಂಬುಗಳೊಳಂ ತಮಾಳಲತೆಯ ಕೊಂಚೆಯಂಗಳೊಳಂ [ಪಾಠಾಂ. ಗೊಂಚಲ್ಗಳೊಳಂ] (ಆದಿಪು. ೪-೯೨ವ); ಮಜ್ಜನದ ದೇಹಾರದ ರಂಚೆಯ ಕೊಂಚೆಯದ ಕೂರವದ ಕೊಟ್ಟಗೆಯ ಗುಡಿಯ ಜಳಗುಡಿಯಾ ಗೊಲ್ಲಣಿಗೆಯ ಮಂಡವಿಗೆಯ ವಿಳಾಸನಿವಾಸಂಗಳಿಂದಂ (ಶಾಂತಿಪು. ೧೦-೧೪೭ವ). [?]

**ಕೊಂಚೆವಕ್ಕಿ** (ನಾ). ಕ್ರೌಂಚಪಕ್ಷಿ: "ಕೃಜ್, ಕ್ರೌಂಚ – ಈ ೨ ಕೊಂಚೆವಕ್ಕಿ" (ನಾಚಿರಾ. ೧೧೪); ಕೊಂಚೆವಕ್ಕಿಯ ಮೆಯ್ಯಿನಾ ಬಾಣಮಂ ಬಿಡಿಸಿ (ಶ್ರೀರಾಮಾ. ೨-೪೫). [ಕೊಂಚೆ$_4$ + ಪಕ್ಕಿ$_1$]

**ಕೊಂಚೆವಿಂಡು** (ನಾ). ಕ್ರೌಂಚಪಕ್ಷಿಗಳ ಸಮೂಹ: ಕೊಂಚೆವಿಂಡು ಪಲವಡ್ಡಣದೊಡ್ಡು (ಕಬ್ಬಿಕಾ. ೨೦೧). [ಕೊಂಚೆ$_4$ + ಪಿಂಡು$_2$]

**ಕೊಂಚೆವೆಟ್ಟು** (ನಾ). ಕ್ರೌಂಚಪರ್ವತ:

ಕೊಂಚೆವೆಟ್ಟಂದಳೆದಂ = ಕ್ರೌಂಚಪರ್ವತವನ್ನು ತಳೆದವನು; ಕುಮಾರಸ್ವಾಮಿ; ಷಣ್ಮುಖ: "ಮಿಗೆ ನವಿಲ್ದೇರ . . . ಕುವರ ಕೊಂಚೆವೆಟ್ಟಂದಳೆದನೆಂಬ ನಾಮು ಗುಹಂಗೆ" (ಕಬ್ಬಿಕೈ. ೬); "ಕೊಂಚೆವೆಟ್ಟಂದಳೆದನಱುಮುಗನೆನಲು ಗುಹನ ಪೆಸರಪ್ಪುದು" (ಶಬ್ದಮಂ. ೫). [ಕೊಂಚೆ$_4$ + ಬೆಟ್ಟು$_2$]

**ಕೊಂಜ** (ನಾ). ಕ್ಷುದ್ರವ್ಯಕ್ತಿ: "ಅಂಜುಪುರುಕ" (ಜಾನಕೋ. ೫೧). [← ತಮಿ. ಕೊಙ್ಜನ್]

**ಕೊಂಜಾರಿ** (ನಾ). ಒಂದು ಪ್ರದೇಶದ ಹೆಸರು: ಅನ್ತೆಬನ್ದು ಬೆಳ್ಳೊಜದೆ ತೆಂಕಾಯ್ಕೋಡಿಂ ಕೊಞ್ಜಾರಿ ಪುಣುಸೆವ (ಎಕ. IV, ಶ್ರೀರಂಗ. ೧೬೦-೨೪; 800). [?]

**ಕೊಂಜು** (ಕ್ರಿ). ಮೃದುವಾಗಿ ಮಾತಾಡು; ಲಲ್ಲೈಸು; ಮಕ್ಕಳಂತೆ ತೊದಲು ನುಡಿ: ಭ್ರಮರ ಎಲ್ಲರಿಗೂ ಮುಂಚೆ ರತ್ನಾ ಅತ್ತೆ ಹೇಗಿದ್ದಾಳಮ್ಮ? ಎಂದು ಕೊಂಜಿದಳು (ಸುಖಿವಿ. ೨೪).

[ದೇ. ॥ ತಮಿ. ಮಲ. ಕೊಞ್ಜು; ತುಳು. ಕೊಞ್ಜು]

**ಕೊಂಟೆ** (ನಾ). ತುಂಟ; ಒರಟ (?): ಕುಂಟರು ಕುರುಡರು ಗಂಟೆಯ ಚೋರರು ಕೊಂಟರು ಕೊನ್ನರು ತುಡುಗರು ಗಂಟುಕಳ್ಳರು ಕೂಡಿ (ಕವಿಚ. II, ೪೯೮ ಬಿಜ್ಜಳರಾಯ ಚರಿತೆ). [ಕೊಂಟ + -ಅ$_7$]

**ಕೊಂಟೆ** (ಗು). ತುಂಟ; ತೊಂಡು; ಒರಟು: ಕೊಂಟ ಕುದುರೆದು ಅದಕೆ ದಾಣೆಯ ಅಂಟು ಅದ್ದನ ಹಾಕೆ ಅದು ತಾ ಕೊಂಟತನವದು ಹೋಗಿ ಬಳಕದು ಸಾಧುವಾದಂತೆ (ಜ್ಞಾನಸಿಂ. ೧೯-೮೮).

[ದೇ. ॥ ತಮಿ. ಕೊಣ್ಡಿ; ಮಲ. ಕೊಣ್ಡಿ; ತುಳು. ಕೊಂಡ; ತೆಲು. ಕೊಂಡೆ]

**ಕೊಂಟೆಸುದ್ದಿ** (ನಾ). ಚಾಡಿಸುದ್ದಿ: ನೆಂಟರಿಪ್ಪರು ಬಯಲು ಕಟ್ಟುವ ಗಂಟು ಮೂಟದು ಬಯಲು ನುಡಿವಾ ಕೊಂಟಸುದ್ದಿಯು ಬಯಲು ತೊಟ್ಟೆಯು ತೊಡಲು ಅದು ಬಯಲು (ಜ್ಞಾನಸಿಂ. ೯-೧೨). [ಕೊಂಟ + ಸುದ್ದಿ]

**ಕೊಂಟು** (ನಾ). ಮರದ ಕೊರಡು; ತುಂಡು: ಒಂದು ಕೊಂಟನಿಟ್ಟು ಅದಕ್ಕೆ ಒಂದು ಕಂಬಳಿಯನ್ನು ಹೊದಿಸಿ ಮನುಷ್ಯರ ಆಕೃತಿಯಲ್ಲಿ ಕಾಣುವಂತೆ ಮಾಡಿ (ಬೈಸರ್ವ. ೩೭): ಆವನಿಗೆ ಕೊಂಟುಗಳನ್ನು ಕಟ್ಟಿಸಿ ಸುಡಿಸಿದನು (ಪಂಚಾಮೃ. ೫೧). [< ಕೊರಡು]

**ಕೊಂಡ$_1$** (ನಾ). ಬೆಟ್ಟ; ದಿಣ್ಣೆ: ಅದಱ ತದನಾನ್ತರ ಮಟ್ಟಱಿಯ ಕುರಚಿಗೊಣ್ಡ ಅದಱ ತದನಾನ್ತರ ಕಮ್ಮಾಱ ಕಣುವೆ (ಸೌಇಇ. IX-i, ೪೧-೨೫; 11ನೆಯ ಶತ). 'ಕುಂದ' ಪರಾ.

[ದೇ. ॥ ತೆಲು. ಕೊಂಡ]

**ಕೊಂಡ$_2$** (ನಾ). ೧. ನೀರು ನಿಲ್ಲುವುದಕ್ಕಾಗಿ ಅಗೆದ ಕುಂಡ; ಕೆರೆ; ಹೊಂಡ: ದೇಗುಲಂಗಳುಮಂ ಸಮಯಿಸಿ ಕೊಣ್ಡಗಳುಮಂ ಕಟ್ಟಿಸಿದರ್ (ಎಕ. X, ಮೊಳಕಾ. ೨೭-೪; 962); ಕೊಂಡದೊಳರ್ದಡೆ ಸಾಲಂಗೊಂಡ ರಿಣಂ ಪೋಕುಮಪ್ಪಡೆ (ಸಮಪು. ೧೨-೨೫); ಕೊಂಡದೊಳು ಮುಳುಗಿಯೀ ನೆರೆದವರ ಮುಂಚೆ ಸೂರುಳಿತಡದು ಸಾಲ್ಗು (ತಿರುರ. ೨೦-೧); ನೂರೆ ನೆತ್ತರಿನ ಕೊಂಡಂಗಳಂ ಮುಳುಗಿ ನೋಡಿದರ್ (ಚೆಬಪು. ೪೦-೨೮). ೨. ಹೋಮ ಮಾಡುವುದಕ್ಕಾಗಿ ರಚಿಸಿದ ಬೆಂಕಿಯ ಕುಳಿ; ಅಗ್ನಿಕುಂಡ: ಜಯನಾಗನ್ . . . ಕೊಣ್ಡದೊಳ್ ಕಿಚ್ಚಂ ಪುಗುವೆನೆನ್ದು (ಸೌಇಇ. IX-i, ೯-೬; 9ನೆಯ ಶತ); ಬೇಳ್ವೆಯ ಕೊಂಡದ ಮೊದಲ್ಗೆ ವಂದು (ಪಂಪಭಾ. ೩-೭೫ವ); ಕೊಂಡದ ಕಿರ್ಚಿನಂತಿರ್ದ ಕೋಪದೊಳ್ (ಅರ್ಧನೇ. ೭-೭೮ವ); ಒರೆದು ಬುದ್ಧಿಯ ಸೊಸೆಯರ ಬೀಳ್ಕೊಟ್ಟಳಾ ಹರಿಹರ ದೇವಿ ಕೊ[ಪಾಠಾಂ. ಕುಂಡ]ಕ್ಕೆ (ಕುರಾಸಾಂ. ೩೬-೧೬೧). ೩. ವೀರಭದ್ರ. 'ಕೊಂಡಹಬ್ಬ' ಪರಾ. ೪. ಭೂತವೇತಾಳಗಳಲ್ಲಿ ಒಂದರ ಹೆಸರು: ಎಲರುಣಿವೆದೆಯಂ ಬೀರಂ ಬಿಗುರ್ವರಿಜಂ ಹಳಿಗಂ ಕೊಂಡಂ ಗುಳಿಕಂ ಮುಂತಪ್ಪ ಭೂತವೇತಾಳಂಗಳ ಮರುಳ್ಪಡೆವೆರಸು (ರಾಮಾಶ್ವ. ೧೩೧-೧೭); "ವೀರಭದ್ರ" (ರಾಮಾಶ್ವ. ಕೋಶ). [< ಸಂ. ಕುಂಡ]

**ಕೊಂಡ$_3$** 'ಕೊಳ್$_1$' ಪರಾ.

**ಕೊಂಡಕೋತಿ** (ನಾ). = ಕೊಂಡಮುಸು: ದೊಡ್ಡ ಕೊಂಡಕೋತಿಯಂತೆ ಕುಣಿಸ್ಯಾಳಣ್ಣ (ಪುರಂದ. ೧-೧೮೨-೪). [ಕೊಂಡ$_1$ + ಕೋತಿ]

**ಕೊಂಡಗ** (ನಾ). (?): ಮಂಡೆಬೋಳಿನ ಮಲ್ಲಿ ಕೊಂಡಗದ ಕೊಣಿಯೀ ಭಂಡನನು ನೋಡಿ (ಕರಿಕ. ೯೫-೪). [?]

**ಕೊಂಡಗಣಲೆ** (ನಾ). ಒಂದು ಊರಿನ ಹೆಸರು : ಕೊಂಡಗಣಲೆಯ ಚಿಕ್ಕಗಲುಡ ಮಾಡಿಸಿ (ಎಕ. VIII, ಸೊರಬ. ೫೫೭-೧ ; 1049). [?]

**ಕೊಂಡಗುರಿ** 'ಕೊಂಡಗುಱಿ' ನೋ.

**ಕೊಂಡಗುಱಿ**, ಕೊಂಡಗುರಿ, ಕೊಂಡಗೊಱಿ, ಕೊಂಡುಗುಱಿ (ನಾ). ೧. ನಾಲ್ಕು ಕೊಂಬುಗಳುಳ್ಳ ಸಾರಂಗಜಾತಿಯ ಜಿಂಕೆ : "ರೌಹಿಷ – ಕೊಂಡಗು [ಪಾಠಾಂ. ಗೊ]ಱಿ" (ನಾಚಿರಾ. ೬) ; ಬೆಳ್ಪರಳೆ ಕಜುತ್ತ ಕೊಂ [ಪಾಠಾಂ. ಕೋ]ಡಗುಱಿ . . . ಬೆಳೆದ ಕೆಯ್ಗಳ ನಂತಿರಲೀಯವು (ನಳಚಂ. ೬೫) ; ದಣಿದಿರ್ದ ಕೊಂಡಗುಱಿಗೀ ತೊಗರೆಂ . . . ಮಾರಿಯಲೆ ಭೂಪತಿ (ದಶಕು. ೨-೧೯೯). ೨. ಅಡವಿಯ ಕುರಿ ; ಕಾಡುಕುರಿ : "ಕೊಂಡಗುಱಿ ವನೋರಣಮಟವ್ಯವಿಯೆಣಿಕ್ಕು" (ಮಂಗರಾ. ೪೮-೮); ಪುರುಷಮೃಗ ಶರಭ ಸಾರಗ ಕೊಂಡಗುಱಿಗಳಿಂ ನರಿ ಶಶಕ ವೃಕ . . . ಸಮೂಹಗಳಿಂದ (ಪುರುಚ. ೧-೨೮). **ಕೊಂಡಗುರಿ**: ೧. ಟಗರೆ, ಹುಲ್ಲೆ, ಕೊಂಡಗುರಿ, ಶಂಕಹುಲ್ಲೆ (ನಮ್ಮನು. ೨೩೪). **ಕೊಂಡಗೊಱಿ** : ೧. "ರೌಹಿಷ – ಕೊಂಡಗೊಱಿ [ಪಾಠಾಂ. ಕೊಂಡಗುಱಿ]" (ನಾಚಿರಾ. ೬). **ಕೊಂಡುಗುಱಿ** : ೧. ಕಡವಳೆ ಬಳ್ಪು ಕೊಂಡುಗುಱಿ ಕೂರೆಗೆಯೆಂಬಿವನ್ನೆದೆ ಕಾಸಿನೊಳ್ ಗಡಣದೆ ಪೊತ್ತು ಬೇಡವಡೆ ಬಂದುದು (ಸೂಕ್ತಿಸು. ೩-೧೬೪).

[ಕೊಂಡ₁ + ಕುಱಿ₂. / ತೆಲು. ಕೊಂಡಗೊಱ್ಱೆ]

**ಕೊಂಡಗುಱಿದುಪ್ಪುಳ್** (ನಾ). ಕೊಂಡಗುರಿಯ ತುಪ್ಪಟ : ಇದು ನರಿಯ ಗುರ್ದಿದುಂ ಕೊಂಡಗುಱಿದುಪ್ಪುಳಿಂತಿದುದೆಂದು ತಮ್ಮೊಳಗೆ ತಾವೆ ಮಾತಾಡುತ್ತೆ . . . ಬೇಡವಡೆ ನಗೆದುದು (ರಾಘಚ. ೧೭-೩೮).

[ಕೊಂಡಗುಱಿ + ತುಪ್ಪುಳ್]

**ಕೊಂಡಗೊಱಿ** 'ಕೊಂಡಗುಱಿ' ನೋ.

**ಕೊಂಡಣ** (ನಾ). ಒಬ್ಬಾತನ ಹೆಸರು : ಇ ಸಾಸನವುನಗಟ್ಟಿ ಕೊಣ್ಡಣಗೆ ಪನ್ನಿರ್ಮ್ಮರ್ತ್ತರ್ ಸರ್ವಪಾಪ ಪರಿಹಾರ (ಸೌಇಇ. IX-i, ೫೪-೧೩ ; 9ನೆಯ ಶತ). [ಕೊಂಡ₀ + ಅಣ₀ (< ಅಣ್ಣ₁)]

**ಕೊಂಡಬಂಡಿ** (ನಾ). ಕೊಂಡದ ಹಬ್ಬದಲ್ಲಿ ನಡೆಯುವ ಬಂಡಿಯ ಉತ್ಸವ, —ರಥೋತ್ಸವ : (೬).

[ಕೊಂಡ₂ + ಬಂಡಿ]

**ಕೊಂಡಮಾವು** (ನಾ). ಒಂದು ಜಾತಿಯಮರ: (ವೃಜಗಿ. ೨೮-೪೪೧); "ಮಯೂರವಿದಳಃ – ಕೊಂಡಮಾವು" (ಒಷಧಿ. ೧೨೨); ಒಂದು ಮಲ್ಲಿಗೆಯ ಬಳ್ಳಿ ಕೊಂಡಮಾವಿನ ಮರಕ್ಕೆ ಸುತ್ತಿಕೊಂಡು . . . ನಿಂತಿತ್ತು (ವಂಶವೃ. ೧೯೫). [ಕೊಂಡ₁ + ಮಾವು]

**ಕೊಂಡಮಾಱು** (ನಾ). (?) : ಜಂಗಮಮುಖದಿ ನಿಂದೆ ಬಂದಡೆ ಕೊಂಡಮಾಱಿಂಗೆ ಹೋಹುದು ತಪ್ಪುದು (ಬಸವ. ೧೦೬) ; ಭಕ್ತಿಯ ನಱಿಯರು ಮುಕ್ತಿಯನಱಿಯರು ಯುಕ್ತಿಯನಱಿಯರು ಮತ್ತು ವಾದಿಗಳೆಸುವರಃ ಹೋದರು, ಗುಹೇಶ್ವರ, ಸಲೆ ಕೊಂಡಮಾಱಿಂಗೆ (ಅವಚಂ. ೧೭-೬೯) ; "ಕೊಂಡಮಾರಿಗೆ ಹೋಗು = ಲಾಭವಿಲ್ಲದೆ ಹೋಗು ; ವ್ಯರ್ಥವಾಗಿ ಹೋಗು" (ಅವಚಂ. ಕೋಶ). [?]

**ಕೊಂಡಮುರುವುದು** (ನಾ). ಒಂದು ಊರಿನ ಹೆಸರು : ತತಃ ಅಪರದಿಶಂ ಗತ್ವಾ ಕೊಣ್ಡಮುರುವುದು(ಡು ?) ಗ್ರಾಮಸ್ಯ ಸೀಮಾನ್ತ ಮವಧಿಃ (ಇಆ. V, ೫೨-೨೫ ; 5ನೆಯ ಶತ). [?]

**ಕೊಂಡಮುಸು**, ಕೊಂಡಮುಸುಕು, ಕೊಂಡಮುಸುವ, ಕೊಂಡಮುಸುವು (ನಾ). ಕಪ್ಪುಮುಖದ ಕೋತಿ ; ಬೆಟ್ಟದ ಮುಸುವ ; ಕೋಡಗ: ತಂಡ ಪುಟ್ಟಿತು ವ್ಯಾಳ ವೃಶ್ಚಿಕ ಕೊಂಡಮುಸು ಕೇಸರಿಯುಮಿರುಹೆಯು ವ್ಯಾಘ್ರ ಕೋಳಗಳು (ಸಂಭಪ. ೬-೨೫). **ಕೊಂಡಮುಸುಕು** : ಕೋತಿಗಳಲ್ಲಿ ಒಂದು ಜಾತಿ : ಸಿಂಗಳೀಕ . . . ಮುಸುಕು, ಕೊಂಡಮುಸುಕು, ಕೊಂಡಮುಸುವ (ನಮ್ಮನು. ೨೩೯). **ಕೊಂಡಮುಸುವ** : (೬). **ಕೊಂಡಮುಸುವು** : ಹರಿ ಎಂದವಳಿಗೆ ಶಿಂಗಳೀಕಗಳು ಕಪಿಗಳು ಕೊಂಡ ಮುಸುವುಗಳು ಹುಟ್ಟಿದವು (ಕೃವಾಆ. ೧೦೮). [ಕೊಂಡ₁ + ಮುಸು]

**ಕೊಂಡಮುಸುಕು** 'ಕೊಂಡಮುಸು' ನೋ.

**ಕೊಂಡಮುಸುಡಿ** (ನಾ). = ಕೊಂಡಮುಸು : (೬).

[ಕೊಂಡ₁ + ಮುಸುಡಿ]

**ಕೊಂಡಮುಸುವ** 'ಕೊಂಡಮುಸು' ನೋ.

**ಕೊಂಡಮುಸುವು** 'ಕೊಂಡಮುಸು' ನೋ.

**ಕೊಂಡಯ್ಯ** (ನಾ). ಒಬ್ಬಾತನ ಹೆಸರು : ತೊಪ್ಪುಪ್ಪೋಯನ ಮಕ್ಕಳ್ ನಾಗಯ್ಯನು ಕೊಣ್ಡಯ್ಯನು (ಎಕ. X, ಕೋಲಾರ. ೯-೫ ; ಸು. 925) ; ಶ್ರೀಮನ್ಮಾಹಾಮಂಡಲೇಶ್ವರಕೊಂಡಯ್ಯದೇವಚೋಳಮಹಾಅರಸುಗಳು (ಎಕ. XIV, ಗುಂಡ್ಲುಪೇ. ೧೩೨-೫ ; 1540). [ಕೊಂಡ₀ + ಅಯ್ಯ₁]

**ಕೊಂಡರಟೆ**, ಕೊಂಡರಟ್ಟೆ (ನಾ). ಒಂದು ಊರಿನ ಹೆಸರು : ಸೊರಬದ ಹುಲಿಯ ಜಂಗುಳಿ ಬೀರಣನ ಮಗ ಮೂವಡಿ ಕೊಂಡರಟೆಗೆ ಥಾಳಿಯಂ ಹರಿದಲ್ಲಿ (ಎಕ. VIII, ಸೊರಬ. ೪೬-೫ ; 1018). **ಕೊಂಡರಟ್ಟೆ** : ಕೊಂಟರಟ್ಟೆ ಎಪ್ಪತ್ತಱೊಳಗಣ . . . ಕಲಿದೇವೇಶ್ವರ ದೇವರ (ಕಕುಲ. ೧೧-೪೦ ; ?). [?]

**ಕೊಂಡರಟ್ಟೆ** 'ಕೊಂಡರಟೆ' ನೋ.

**ಕೊಂಡಲಗಾಮುಂಡ** (ನಾ). ಒಬ್ಬಾತನ ಹೆಸರು : ಶ್ರೀ ಕೊಣ್ಡಲ ಗಾಮುಣ್ಡರ ಮಗಳ್ ಅನ್ನಾರಿಯರ್ ಕಾಡೆಮಗಾಮುಣ್ಡಙ್ಗೆ ಕೊಟ್ಟರ್ (ಎಕ. X, ಶ್ರೀನಿವಾ. ೨೫-೨ ; ಸು. 950). [ಕೊಂಡಲ₀ + ಗಾಮುಂಡ]

**ಕೊಂಡಲಿಗೆಱೆ** (ನಾ). ಒಂದು ಕೆರೆಯ ಹೆಸರು : ಸಮುದ್ರದನ್ತೆ ಕೊಣ್ಡಲಿಗೆಱೆಯೊಪ್ಪಿ ತೋಱುವುದು (ಎಇ. XIII, ೩೩೧-೩೪ ; 929).

[ಕೊಂಡಲಿ ? + ಕೆಱೆ]

**ಕೊಂಡಲು** (ನಾ). ಕಿವಿಯ ಆಭರಣ ; ಕುಂಡಲ : ಮಗುವಿಗೆ ಕಿವಿ ಚುಚ್ಚಿ ಬಂಗಾರದ ಕೊಂಡಲಿಟ್ಟರು (ರೂಢಿ). [< ಸಂ. ಕುಂಡಲ]

**ಕೊಂಡವಾಡ**, ಕೊಂಡವಾಡೆ (ನಾ). ತುಡುಗು ಮೇಯುವ ಅಥವಾ ಪೋಲಿ ದನಗಳನ್ನು ಹಿಡಿದು ಕೂಡುವ ಸರಕಾರೀ ದೊಡ್ಡಿ ; ಪೌಂಡಿಮನೆ : ಹಿಡಿದು ಕೊಂಡವಾಡಕ್ಕೆ ಹಾಕಬಾರದು (ಬಾಬಲ. ೪೦). **ಕೊಂಡವಾಡೆ** : ಕೊಂಡವಾಡೆಯಲ್ಲಿ ದನಗಳನ್ನು ಬಿಡುವಂತೆ ಆ ದಬ್ಬಿಯ ಜನರೆಲ್ಲರನ್ನೂ ಆ ವ್ಯೂಹದಲ್ಲಿ ಬಿಡುವರು (ಸ್ಮೃತಿಚ. ೨೪೦) ; ಕೊಂಡವಾಡೆಯಿಂದ ಹೊರಬೀಳುವ ದನಕರುಗಳಂತೆ ಈ ಮಕ್ಕಳು ಸಂಜೆ ಶಾಲೆಯಿಂದ ಹೊರಬೀಳುತ್ತಾರೆ (ರೂಢಿ).

[<— ಮರಾ. ಕೋಂಡವಾಡ, ಕೋಂಡವಾಡಾ]

**ಕೊಂಡವಾಡೆ** 'ಕೊಂಡವಾಡ' ನೋ.

**ಕೊಂಡಾಟ** 'ಕೊಳ್₁' ಪರಾ.

**ಕೊಂಡಾಡಿಸು** 'ಕೊಳ್₁' ಪರಾ.

**ಕೊಂಡಸು** (ನಾ). ಒಂದು ಬಗೆಯ ಮರ : "ಕೊಂಡಸು ಸೂಪತಾಳಿರಕಿ [ಪಾಠಾಂ. ಸುಪರಾಕಿ] ಸೂಪಕಾರತಿಯೆನಿಕು" (ಮಂಗರಾ. ೩೭-೧೯) ; ಕೊಡಸಿಗೆ ಬಾಗೆ ಬೇಲರಳೆ ತಂಡಸು ಕೊಂಡಸು ಜಾಲವಾಲದಿಂದಿಡಿ ಕಿಱಿದಿರ್ದ ಪೇರಡವಿಯೊಳ್ (ಧರ್ಮಪ. ೩-೪೭). [?]

**ಕೊಂಡಹಬ್ಬ** (ನಾ). (ವೀರಭದ್ರನ ಮೂರ್ತಿಯನ್ನು ಹೊತ್ತುಕೊಂಡು) ಅಗ್ನಿಕುಂಡವನ್ನು ಹಾಯುವ ಒಂದು ಹಬ್ಬ : (೬).

[ಕೊಂಡ₂ + ಹಬ್ಬ (< ಪರ್ಬ)]

**ಕೊಂಡಾಡು** 'ಕೊಳ್$_1$' ಪರಾ.

**ಕೊಂಡಿ$_1$**, ಕೊಂಡೆ$_3$ (ನಾ). ೧. ಕೊಕ್ಕೆ; ಬಾಗುಳ್ಳ ಮೊಳೆ: ಮಧ್ಯದಲ್ಲಿ ಇಪ್ಪತ್ತೈದು ಮಹಾಮೇರುವೆ ಹದಿನಾಱು ವರ್ತನದ ಕೊಂಡಿ(ಮೋಳಮಾ. ೨೩೧-೭೮೪); ಬೀಯಗದ ಕೊಂಡಿಯಂ ಕಳಚಿ (ಸಿದ್ಧರಾ. ೯-೧೪); ಗುಳನ ಜಿಂಚಿಯ ಗಡಣಿಸುವ ಹಕ್ಕರಿಕೆಗಳನಾಯ್ದುಡಸಿ ಹೊಲಿಸುವ ಕಬ್ಬಿಗಳ ಕೊಂಡಿಗಳ ಮಿಗೆ ಬಲಿವ (ಕುವ್ಯಾಭೀ. ೫-೩೭); ಒಂದೊಂದು ಸರಪಣಿಯಲ್ಲಿಯೂ ೧೬ ಕೊಂಡಿಗಳಿರುತ್ತವೆ. ಪ್ರತಿಯೊಂದು ಕೊಂಡಿಗೂ ಅಹೆಯೆಂದು ಹೇಳಲ್ಪಡುವುದು (ಭೂಮಿಅ. ೪). ೨. (ಕುಟುಕುವ) ಮೊನೆಯಾದ ಮುಳ್ಳು, —ತುದಿ: ವೃಶ್ಚಿಕದ ಕೊಂಡಿಗಳಿಂದ ಯೆಲೆಗಳಂ ಬಳ್ಳಿಗಳಂ ಚುಚ್ಚಿ (ಸೌಗಂಧಿ. ೬೩೪-೧೨); ಚೇಳಿಗೆಯು ಕೊಂಡಿಯಲಿ ಇಹುದು ವಿಷ (ಜ್ಞಾನಸಿಂ. ೪೨-೬೨); ಚೇಳಿಗೆ ಗರಳವು ಹನಿಮಾತ್ರವಿದ್ದರು ಕೊಂಡಿಯನೆತ್ತಿದೆಯಲ್ಲ (ಇಂಚಾಪ. ೧೧೬-೬೦). ೩. ತಿರುವು; ಬಾಗು: ಕುದುರೆಗಳೆರಡೂ ನಿಲ್ಲದೆ . . . ದಕ್ಷಿಣದಿಕ್ಕಿನ ಕೊಂಡಿಯಲ್ಲಿ ಮತ್ತೊಮ್ಮೆ ಹೊರಳಿದವು (ಇಪ್ಪಕ. ೨೯೭). ೪. ಹೊಲ, ಗದ್ದೆಗಳ ಕೊನೆಗೆ ಸಂಪರ್ಕ ಕಲ್ಪಿಸುವುದಕ್ಕಾಗಿ ಜೋಡಿಸಿಕೊಂಡ ಸಣ್ಣ ಭಾಗ: ಹಿರಿಯಹಳ್ಳದ ತೆವರ ಒತಿನ ಕೊಂಡಿಯಲು ಗದೆಯ ಬೀಜವರಿ ಖಂಡುಗವುಭಯಂ ಗದ್ದೆ ಮೂಖಂಡುಗ (ಸೌಇಇ. IX–ii, ೪೪೦-೪೨; 1419). **ಕೊಂಡೆ$_3$**: ೧. ಕಿವಿಯ ಕೀಳಿನ ವಾರುವದ ಬಲುವಿಲ್ಲ ನಾರದ ಸೂತ್ರಕೆಯ ಕೊಂಡೆಯ ವಿವಿಧ ಕಡಿವಾಣಗಳ (ಕುಮುರಾ. ೩-೨೯); ತಳ ಸಂಕಲೆಯ ತೊಡರಂ ಕಣಿಯ ಕೊಂಡೆಯ ಪಕ್ಕಗಂಟೆಗಳ (ಕುವ್ಯಾದ್ರೋ. ೩-೨); ಸರಿಗೆ ಕೊಂಡೆಯ ಹಾಗೆ ತಿರುಗಿ ಬಂದಿವೆ ಮೀಸೆ (ಕರ್ಣಾಪೂ. ೧೨೯).

**ಕೊಂಡಿಯಕಲ್ಲು** = ತಲೆಗಲ್ಲು: ಹನಸೋಗೆಯ ಹಿರಿಯ ಬಸದಿಯ ಕೊಂಡಿಯಕಲ್ಲ ಬರಸೆಯ ಬೊಮ್ಮಿಸೆಟ್ಟಿಯರು ಇಕ್ಕಿಸಿದರು (ಮೈಆರ. ೧೯೩೯, ೬೭-೭; 1500). [ದೇ. ‖ ತಮಿ. ಕೊಣ್ಡಿ; ತುಳು. ಕೊಂಡಿ]

**ಕೊಂಡಿ$_2$**, ಕೊಂಡೆ$_2$ (ನಾ). ಒಂದು ಬಗೆಯ ಔಷಧಿ ಸಸ್ಯ: ದನಗಳಿಗೆ ನೊರೆಪಾಲು ಕೊಂಡಿಯ ರಸ ಜಾಜಿ ಉಕ್ತ(ರಣರ)ಸ, ಇಷ್ಟನ್ನು ಅರೆದು ಹಚ್ಚಲು ಕಣ್ಣುಹೂವು ಮಾಣ್ಣುಂ (ವಿವೈವಿ. ೭೯). **ಕೊಂಡೆ$_2$**: "ಕದಳ, ಕೊಂಡೆ" (ಅಕಾದಿ. ೫-೧೩). [?]

**ಕೊಂಡಿ$_3$** 'ಕೊಂಡೆಯ' ನೋ.

**ಕೊಂಡಿಂದ** (ನಾ). ೧. ಒಂದು ಪ್ರದೇಶದ ಹೆಸರು. ೨. ಆ ಪ್ರದೇಶದವನು (?): ಇದರ್ಕೆ ಸಾಕ್ಷಿ ಅಗ್ಗಿ ಸರ್ನ್ನವ್ವಯಗ್ಗೊರ್ಡುಮಕ್ಕೊರ್ಣ್ಡನ್ದರ್ ಒಮುಜಾರ್ ಎನೆ (ಎಕ. XI, ಚಳ್ಳಕೆ. ೩೩-೪೭; 815). [?]

**ಕೊಂಡಿಂದಗೆಱೆ** (ನಾ). ಒಂದು ಕೆರೆಯ ಹೆಸರು: ಸಾಲತ್ತ ಕಾಡೇಱಿನ ಪೇರೊಬ್ಬೆ ಎ ಪಗನ್ತೆ ವಂಳಮೆ ಗೋಸನ್ತನೆ ಕೊಣ್ಡನ್ದಗೆಱೆವ (ಎಕ. IV, ಎಡತೊ. ೬೦-೭೫; ಸು. 890). [ಕೊಂಡಿಂದ ? + ಕೆಱೆ]

**ಕೊಂಡಿಗಾರ** (ನಾ). = ಕೊಂಡೆಗ ೧: ಬಂಡರಾಡುವ ಮಾತಿದಲ್ಲವು ಕೊಂಡಿಗಾರರ ಕಥೆಯಿದಲ್ಲವು (ಯಚೋರ. ೧೨).

[ಕೊಂಡಿ$_3$ (< ಕೊಂಡೆಯ) + -ಕಾರ$_1$ (< -ಕಾಱ)]

**ಕೊಂಡಿಗೆ** (ನಾ). ದನಕರುಗಳನ್ನು ಮೇಯಲು ಬಿಟ್ಟಾಗ ಓಡಿಹೋಗಬಾರದೆಂದು ಕೊರಳಿಗೆ ಕಟ್ಟಿ ಮುಂಗಾಲುಗಳ ನಡುವಿರುವಂತೆ ನೇತುಬಿಟ್ಟಿರುವ ಮರದ ತುಂಡು; ಗುದಿಗೆ; ತೊಂಡಿ; ಕುಂಟೆ. [?]

**ಕೊಂಡಿಲು** (ನಾ). ೧. = ಕೊಂಡಿ$_1$: ದೊಡ್ಡಮಿಾನು ಬಂತು . . . ಅದರ ಮೂಗಿನಲ್ಲಿ ಒಂದು ಚಿನ್ನದ ಕೊಂಡಿಲಿತ್ತು (ಜಂಗಾಳ್ವ. ೫೦೪). ೨. ಹರಳುಗಿಡಕ್ಕೆ ಬೀಳುವ ಒಂದು ಬಗೆಯ ಹುಳು: ಕೊಂಡಿಲು ಬಿದ್ದು ಹರಳುಗಿಡವೆಲ್ಲಾ ಹಾಳಾಗಿವೆ (ರೂಢಿ). [< ಕೊಂಡಿ$_1$]

**ಕೊಂಡಿಶುಲ** (ನಾ). ಒಂದು ಮನೆತನದ ಹೆಸರು (?): ಇದಱ ಮುನ್ದೆ ಕೊಣ್ಡಿಶುಲರ ಕುಪ್ಪ ಕೀರ್ತ್ತಿವರ್ಮ್ಮ ಗೋಸಾಸಿಯ ನಿಱಿಸಿದಾ ಕೀರ್ತ್ತನಂ (ಸೌಇಇ. XI–i, ೫-೧೦; 751). [?]

**ಕೊಂಡಿಸು** (ಕ್ರಿ). ಚಾಡಿಹೇಳು; ಕುತ್ಸಿತವಾಗಿ ಆಡು; ಪಿಸುಣಿಸು: ಬಸವರಾಜನಾವನುಂ ಕೊಂಡಿಸಿದೊಡಿನ್ನಾ ಚಂಡಿಗುನ್ನಿಯ ರಸನೆಯಂ ತವೆ ಕೊಯ್ವುದು (ಬಸಪು. ೧೧-೧೯); ಕಸವನುಡುಗಿದಳೆನುತ್ತ ಕೊಂಡಿಸಿದರಾಗ (ಗುರುಚಾ. ೫-೧೮); ಪರಿಯನೆಲ್ಲವನವಳ ರಮಣಂಗೆ ಕೋಪ ಮುಬ್ಬುರಿಪಂತೆ ಕೊಂಡಿಸಿದರು (ಕೊಟ್ಟೂಬ. ೯-೮).

[ಕೊಂಡಿ$_3$ (< ಕೊಂಡೆಯ) + -ಇಸು$_3$]

**ಕೊಂಡಿಱುವ** (ನಾ). ಒಂದು ಬಿರುದು (?): ಶ್ರೀನಾಲ್ವತ್ತು ಬಾಡದ ಕೊಂಡಿಱುವ ಗೋಮುರಸ ಅವರ ಹೆರ್ಗ್ಗಡೆ ಪಶಾಇತ ದುರ್ಗಿಮಯನ ಅದ್ಧಂಗ ಲಕ್ಕ್ವಿ ಬಲಿಕವೆ (ಸೌಇಇ. XI–i, ೭೮-೯; 1033). [?]

**ಕೊಂಡು** (ನಾ). (?): ಬಾಯಿಲ್ಲದ ಪಶು ಬಿತ್ತದ ಹೊಲನ ಹೊಕ್ಕು ಹುಟ್ಟಿದ ಸಸಿಯ ಮೇದು ವಡೆಯನಿಲ್ಲದ ಪುರವ ಕೊಂಡ ಕೂಡಿದಕೊಂಡಿನ ಹಟ್ಟಿಯ ಬಾಗಿಲೊಂದು ಬಿಗಿವೊಂಬತ್ತು (ಕಲ್ಯಾಶಾಂ. ೧೦೦-೧). [?]

**ಕೊಂಡುಗುಱಿ** 'ಕೊಂಡಗುಱಿ' ನೋ.

**ಕೊಂಡುಗೆಳೆತನ** (ನಾ). ಒರಟು ಗೆಳೆತನ; ಕಾಡುಸ್ನೇಹ (?): ಕಂಡು ಕಜ್ಜಾರೆಯುಂ ನುಡಿಯದಿರ್ಪ ಕೊಂಡುಗೆಳೆತನಕಿಂದೆ ನಮೋ ನಮಃ (ಸುಗುಗಂ. ೨೫-೨). [ಕೊಂಡಿ$_0$ (< ಕೊಂಟ) + ಗೆಳೆತನ]

**ಕೊಂಡೆ$_1$** 'ಕೊಂಡೆಯ' ನೋ.

**ಕೊಂಡೆ$_2$** 'ಕೊಂಡಿ$_2$' ನೋ.

**ಕೊಂಡೆ$_3$** 'ಕೊಂಡಿ$_1$' ನೋ.

**ಕೊಂಡೆ$_4$**, ಗೊಂಡ$_3$, ಗೊಂಡು$_3$, ಗೊಂಡೆ (ನಾ). ೧. ತುರುಬು ಕಟ್ಟಲು ಉಪಯೋಗಿಸುವ ಸಿಂಬೆಯಂಥ ಸಾಧನ. ೨. ಒಂದು ಬಗೆಯ ಆಭರಣ, —ಕುಚ್ಚು; ಗೊಂಚಲು: (+). ೩. (ಉಕ) ಗುನಿ ತೆಗೆಯದ ಕಾಳು. **ಗೊಂಡ$_3$**: ೩. ಜೋಳದ ಗೊಂಡಿಯನ್ನು ಥಳಸಬೇಕು (ರೂಢಿ). **ಗೊಂಡು$_3$**: ೨. ಕೂದಲನ್ನು ಅಂದವಾಗಿ ಕತ್ತರಿಸಿದ್ದರಿಂದ ಗೊಂಡು ಗೊಂಡಾಗಿ ಅವು ಹೆಗಲ ಮೇಲೆ ಲೋಲಾಡುತ್ತಿದ್ದುವು (ಹೇಮಂತ. ೧೯೪). **ಗೊಂಡೆ**: ೨. ಮೌಕ್ತಿಕದ ಗೊಂಡೆಗಳ ರತ್ನಚಯದುಂಡೆಗಳ (ಪತಿಲ. ೪-೬೨); ದೊಡ್ಡಮ್ಮ ನಿನ್‌ಗೊಂಡೆಯ ಸೆರಗಾ ಮರೆಮಾಡೆ (ಹುಟ್ಟಿಹ. ೫೭); ಸ್ವಪ್ನದಲ್ಲಿ ದಂಡಿಗೆ ಏರಿ ಗೊಂಡೆ ಹಿಡಿದ ಹಾಗೆ (ಗಾದೆ).

[ದೇ. ‖ ತಮಿ. ಕೊಣ್ಡೈ; ಮಲ. ಕೊಣ್ಡ; ತುಳು. ಗೊಂಡೆ; ತೆಲು. ಕೊಂಡೆ]

**ಕೊಂಡೆಗ** (ನಾ). ೧. ಚಾಡಿಕೋರ; ಪಿಸುಣ: ಬಿಡದೆ ಕೊಂಡೆಗರಿಂದ ಕೋಪವ ತಾಳಿದ ಪೊಡವಿಪ (ಕಂನವಿ. ೩-೧೦); ಕೊಂಡೆಗರ ವಿತಥ ವಾಕ್ಯವ ಕೇಳಿ (ಕಂನವಿ. ೩-೫೦). ೨. ಚಾಡಿ; ನಿಂದೆ: ಎಲ್ಲರ್ ಮೇಳಂಗೊಂಡು ಕೊಂಡೆಗಕ್ಕೆ ನಾಲಗೆ ತಿಂತೆ ಮಸಗೆ(ವೃಷವಿ. ೮-೩ ವ).

[ಕೊಂಡೆ$_1$ (< ಕೊಂಡೆಯ) + -ಗ$_3$]

**ಕೊಂಡೆಗಾರತಿ** (ನಾ). ಚಾಡಿಹೇಳುವವಳು; ಪಿಸುಣೆ: ಕೃಷ್ಣ ಕೊಂಡೆಗಾರತಿ ಮಾತ ಕೇಳಿದಾನೊ (ಶ್ರೀಕೃಪಾ. ೧೨).

[ಕೊಂಡೆಗಾರ$_0$ + -ತಿ$_1$ (< -ಇತ್ತಿ)]

**ಕೊಂಡೆಗಿತ್ತಿ** (ನಾ). = ಕೊಂಡೆಗಾರತಿ: ಅಧಮೆಯರು. . .ಬಂಡಿತಿಯರಾಗಳು ಕೊಂಡೆಗಿತ್ತಿಯರು (ಬಸಪು. ೪೦-೫೨).

[ಕೊಂಡೆಗ + -ಇತ್ತಿ]

**ಕೊಂಡೆತನ** 'ಕೊಂಡೆಯತನ$_1$' ನೋ.

**ಕೊಂಡೆನಾಲಗೆ** (ನಾ). ಚಾಡಿಹೇಳುವ ನಾಲಗೆ: ಕೊಂಡೆನಾಲಗೆ ಸುಟ್ಟಿತು ಹುಸಿಯ ಕೆಡವಿತು ಕುಟ್ಟಿತು (ನಾದಲೀ. ೪೦–೧೧).
[ಕೊಂಡೆ$_1$ (< ಕೊಂಡೆಯ) + ನಾಲಗೆ]

**ಕೊಂಡೆಮಲ್ಲೆ** (ನಾ). ಒಂದು ಜಾತಿಯ ಸಸ್ಯ: (ಮೈಔಗಿ. ೬೩–೧೨೮೪). [?]

**ಕೊಂಡೆಮಾತು** (ನಾ). ಚಾಡಿಯ ಮಾತು; ಪಿಸುಣು: ಕೊಂಡೆ ಮಾತನು ಕೇಳಿ ಕುಣಿವವನು ಮೂರ್ಖ (ಪುರಂದ. ೧–೬೨–೪).
[ಕೊಂಡೆ$_1$ (< ಕೊಂಡೆಯ) + ಮಾತು$_1$]

**ಕೊಂಡೆಯ**, ಕೊಂಡ್ಮಿ$_3$, ಕೊಂಡೆ$_1$ (ನಾ). ೧. ಚಾಡಿಯ ಮಾತು; ಪಿಸುಣು: "ಪಿಶುನಭಾವಃ – ಪಿಸುಣಾಡುಹಂ, ಕೊಂಡೆಯ" (ನೀತಿವಾ. ೨೬–೧೮); "ಚಪಡಂ ತ್ರಿಯಕ್ಷರಂ ಕೊಂಡೆಯಂ" (ಮಂಗರಾ. ೭೨–೨೩); ಧೂರ್ತವರ್ಗಮಂ ಕೂಡಿಕೊಂಡು ಪೇಟ್ದ ಕೊಂಡೆಯಮಂ ಕೇಳಲ್ (ದಶಕು. ೯–೬೩ ವ); ವಿದುರಾದಿಗಳ ಕೊಂಡೆಯಕೆ ಕಿವಿಗೊಡದೆ (ಕುವ್ಯಾಸ. ೧೬–೨೨); ನಾರದನಂತೆ ಕಂಡವರ ಕೊಂಡೆಯ ಮಾತ ನಾಡಲಿಲ್ಲ (ಪುರಂದ. ೧–೪೧–೨). ೨. ಚಾಡಿಕೋರ; ಪಿಸುಣ: ಮೃದುವಹ ಮನುಷ್ಯರ ಚಿತ್ತಂಗಳ್ ಕೊಂಡೆಯರಿಂ ಕಿಡುವುದು (ಪಂಚತಂ. ೧೪೯–೮); ಕೊಂಡೆಯ ಕುಳ ಕಾಳದಂಡ ಕೂಡಿ ತಪ್ಪುವರ ಗಂಡ (ಸೌಇಇ. XI–ii, ೧೫೭–೬ ; 1108); ಕಲಹಂ ಮಾಟ್ಪ ಕೊಂಡೆಯನಂತೆ (ಧರ್ಮಾಮೃ. ೯–೨೩); ಅವನಿಪಾಲರು . . . ಕಂಡುದನವರು ನಂಬರು ಕೊಂಡೆಯರ ನುಡಿಗೇಳ್ದು ನಂಬುವರು (ಕುವ್ಯಾದ್ರೋ.೧೮–೨); ಈ ಲೋಕಕ್ಕೆ ಕೊಂಡೆಯನೆ ಭಾರ (ಸರ್ವಜ್ಞ. ೧೪೫೧). **ಕೊಂಡ್ಮಿ$_3$:** ೧. ಕಂಡ ಸ್ತ್ರೀಯರ ನೋಡಿ ಕಣ್ಣುಗಳು ಸವೆದವು ಕೊಂಡಿಯನು ಕೇಳಿ ಕಿವಿಗಳು ಸವೆದವು (ಮೋಕ್ಷದೀ. ೪೬–೧). **ಕೊಂಡೆ$_1$:** ೧. ಮಾಡಿದುಪಕಾರವನು ಮಱೆವ ದ್ರೋಹಿ ಚಾಡಿ ಕೊಂಡೆಗಳಾಡಿ ತಿರುಗುವನೆ ದ್ರೋಹಿ (ಕನಕ. ೭೯–೧); ಉಂಡುಟ್ಟು ಸುಖಪಟ್ಟು ಪಾರತ್ರಯವ ಮಱೆದು ಕೊಂಡೆಯಲಿ ನಿಪುಣನಾಗಿ ತೂಗಿ (ವಿವಾಕ್ಯ. ೫೪–೬).
[ದೇ. ॥ ತಮಿ. ಕುಣ್ಣಯು, ಕೊಣ್ಣ, ಕೊಣ್ಣಿಯು; ಮಲ. ಕುಣ್ಣಣಿ; ತೆಲು. ಕೊಂಡೆ]

**ಕೊಂಡೆಯತನ$_1$**, ಕೊಂಡೆತನ (ನಾ). ಚಾಡಿಕೋರ ಸ್ವಭಾವ; ಪಿಸುಣತನ: ಅಹಂಕೃತಿ ಕಳವು ಹಾದರ ಕೋಟಿಕೆ ಕೊಂಡೆಯತನವು ಪರವಿತ್ತಾಪಹಾರಗಳು (ಅಂಬಿಕಾ. ೪೮–೯೦). **ಕೊಂಡೆತನ:** (ಕಿ).
[ಕೊಂಡೆಯ + –ತನ]

**ಕೊಂಡೆಯತನ$_2$** (ನಾ). ದರ್ಪ; ಔದ್ಧತ್ಯ; ಉದ್ಧಟತ: ಇವನ ವಿಮಳ ಕ್ಷಾತ್ರ ವಿಕ್ರಮ ವಿವನ [ಪಾಠಾಂ. ರ] ಕೊಂಡೆ [ಪಾಠಾಂ. ಡ]ಯತನವಿವೇ ಸಾಕಿವನು ಘಾಟದ ವೀರನೆಂದರು ವೀರರರ್ಜುನನ (ಕುವ್ಯಾಆ ೧೫–೨೫). [← ತಮಿ. ಕೊಣ್ಣಕ್ಕತನವ್]

**ಕೊಂಡೇಸರ** (ನಾ). ಒಂದು ಮನೆತನದ ಹೆಸರು: ಉತ್ತರಣಿಯ ಗವುಣ್ಣ ಕೊಣ್ಡೇಸರ ಬೂತಗೋಸಿಗೆ ಮೂಱುಭಾಗಂ ಕೊಣ್ಡೇಸರ ಜೋಗಯ್ಯಂಗೆ ಒಂನ್ದು ಭಾಗಂ (ಎಕ. VII, ಶಿಕಾರಿ. ೭೧–೧೪ ; 1029). [?]

**ಕೊಂತ$_1$** (ನಾ). ಒಂದು ಬಗೆಯ ಆಯುಧ; ಸಬಳ; ಭರ್ಜಿ: "ಕೊಂತಂ, ಡೊಂಕಣಿ–ಈ ೨ ಸಬಳಂ" (ಕಕಸಾ. ೧೪–೨೬೬); "ಕೊಂತ ಸಬಳವೆನಿಕ್ಕುಂ" (ಕವಿಕಂ. ೧೨೭); ಕೊಂತಂಗಳಿಂದಮಿಟ್ಟಿಗಳಿಂದಂ . . . ಕುತ್ತುವುದುಂ (ವಡ್ಡಾರಾ.೯೬–೨೮); ಸಂತವಿದ್ದ ಮನೆಗೆ ಕೊಂತವ ತಂದಂತೆ (ಬಸವ. ೧೦೦); ಹಿಂದೆ ಮರಳುವಡೆ ಕೃತಾಂತನ ಕೊಂತವರಸನ ಮೂದಲೆಯ ವಚನ (ಕುವ್ಯಾದ್ರೋ. ೬–೨೫); ಸಂತೆ ಸಾಲಕೆ ಹೊಲ್ಲ ಕೊಂತ ಜೊಂಕಲು ಹೊಲ್ಲ (ಸರ್ವಜ್ಞ. ೧೧೫೩). [< ಪ್ರಾ. ಕೋಂತ./ಸಂ. ಕುಂತ]

**ಕೊಂತ$_2$** (ನಾ). ೧. ಒತ್ತೊರಳಿನಲ್ಲಿ ಒಳಗಿಟ್ಟು ಒತ್ತುವಷ್ಟು ಭಾಗ, —ದಿಂಡು. ೨. ಪಂಪು ಮೊದಲಾದ ಸಾಧನಗಳಲ್ಲಿ ಹವೆಯನ್ನಾಗಲಿ, ದ್ರವವನ್ನಾಗಲಿ ಕೊಳವೆಯಲ್ಲಿ ಒತ್ತುವುದಕ್ಕಾಗಿ ಜೋಡಿಸಿದ ಬೆಣೆ, —ಅದುಬೆಣೆ: ಕೊಳವೆಯಲ್ಲಿ ಈ ಅನಿಲವು ಒಂದು ಕೊಂತದಿಂದ ಅದುಮಲ್ಪಟ್ಟು ನಿಂತಿದೆ (ಭೌತವಿ. ೨೫೧). ೩. ತೂಬಿನ ಕಂಡಿಯನ್ನು ಮುಚ್ಚುವ ಸಾಧನ. ೪. ಸೇವಗೆ ಒರಳಿನಿಂದ ಒಂದು ಸಲ ಒತ್ತಿ ತೆಗೆದ ಸೇವಗೆಯ ಪ್ರಮಾಣ; ಒಬ್ಬೆ. [?]

**ಕೊಂತಂಗೊಳ್** (ಕ್ರಿ). ೧. ಕೊಂತವನ್ನು ಹಿಡಿ, —ಪ್ರಯೋಗಿಸು. ೨. ಕೊಂತದಿಂದ ಗಾಯ ಹೊಂದು: ಕೊಂತಂಗೊಂಡವನಂತೆ ಜೋಲ್ದು (ಧರ್ಮಾಮೃ. ೧೩–೧೦೬). [ಕೊಂತ$_1$ + ಕೊಳ್$_1$]

**ಕೊಂತಕಾಱ** 'ಕೊಂತಗಾಱ' ನೋ.

**ಕೊಂತಗಯ್** (ನಾ). ಕೊಂತ ಹಿಡಿದ ಕೈ: ರಂಗನ ಕೊಂತಗಯ್ಯನ್ನು ತುಡುಕಿ ಸಂಗ್ರಾಹಗೊಂಡು (ಮಂತ್ರಕ. ೫೧–೨೩).
[ಕೊಂತ$_1$ + ಕಯ್$_2$ (< ಕೆಯ್$_2$)]

**ಕೊಂತಗಾಱ**, ಕೊಂತಕಾಱ (ನಾ). ಸಬಳವನ್ನು ಹಿಡಿದು ಯುದ್ಧ ಮಾಡುವವನು; ಕುಂತಹಸ್ತ: ಸಭಕ್ಕೆ ಚಿಮ್ಮಿ ಕುರುಳ್ಳಿ ಕೈಮಾಡುವ ಕೊಂತಗಾಱರ ತಿಂತಿಣಿಯ ನಡುವೆ (ಗಿರಿಕ. ೬–೫೫ ವ); ಮೆಯ್ಸೆರಸುವ ಕೊಂತಗಾಱರ . . . ಪಡೆವೆರಸು (ರಾಮಾಶ್ವ. ೯೩–೨೮). **ಕೊಂತಕಾಱ:** "ಕೌಂತಿಕ, ಪ್ರಾಸಿಕ" (ನಾಚಿರಾ. ಕಿ); ನೂಂಕುವ ಕೊಂತಕಾಱರು (ಕುಸುಮಾ. ೧೧–೫೯). [ಕೊಂತ$_1$ + –ಕಾಱ]

**ಕೊಂತಗೆಯ್ಯ**, ಕೊಂತಗೈಯ (ನಾ). ೧. ಕೈಯಲ್ಲಿ ಕೊಂತವನ್ನು ಹಿಡಿದವನು. ೨. ನೈರುತ್ಯದಿಕ್ಕಿನ ಅಧಿಪತಿ; ನಿರುತಿ: (ಕಿ). **ಕೊಂತಗೈಯ:** ೨. "ಮಾನಿಸದೇರ ಕೊಂತಗೈಯಂ ಪಿಚ್ಚವುಣಿಸನೆನಲು ನಿರುತಿವೆಸರಕ್ಕು" (ಶಬ್ದಮಂ. ೧೪); "ಕೊಂತಗೈಯಂ ನಿರುತಿ" (ಕಶರ. ೨೮). [ಕೊಂತ$_1$ + ಕೆಯ್$_2$ + –ಅ$_7$]

**ಕೊಂತಗೈಯ** 'ಕೊಂತಗೆಯ್ಯ' ನೋ.

**ಕೊಂತಪಣಿ** (ನಾ). ಈಟಿಯನ್ನು ಹಿಡಿದು ಯುದ್ಧಮಾಡುವ ಪಡೆ (?): ಬಿಲ್ಲಹಯಂ ಕೊನ್ತಪಣಿಯ ಮಱಲಿಕ್ಕಿ ಸುತ್ತ ದಣಿಯ ಕುದುರೆಯದಳದ ಮೇಲಿಕ್ಕಿ (ಎಕ. VIII, ಸೊರಬ. ೧೪೯–೧೨ ; 1173). [?]

**ಕೊಂತಮಾರ**, ಕೊಂತಮಾರಿ (ನಾ). (?): ಕೊಂತಮಾರಿಯು ಲಾಟಕಾಕೋಡಂತೆ ವುತ್ತರ ಡೊಕ್ಕರವು ನೆಱೆ ಕೊಂತಮಾರವು ಲಾಟ ಡೊಕ್ಕರ ಪೋಗು ಬಾಣಗಳು (ಸಾಳ್ವಭಾ ೧೨–೭೨). **ಕೊಂತಮಾರಿ:** ಮೇಲಿನ ಪ್ರಯೋಗವನ್ನು ನೋಡಿ. [?]

**ಕೊಂತಮಾರಿ** 'ಕೊಂತಮಾರ' ನೋ.

**ಕೊಂತವಿದ್ಯಾಧರ** (ನಾ). ಒಂದು ಬಿರುದು; ಸಬಳದಿಂದ ಯುದ್ಧ ಮಾಡುವುದರಲ್ಲಿ ಪ್ರವೀಣ: ಸಾಮನ್ತಗರುಡಂ ಕೊನ್ತವಿದ್ಯಾಧರಂ (ಸೌಇಇ. IX–i, ೧೧೫–೧೮ ; 1054). [ಕೊಂತ$_1$ + ವಿದ್ಯಾಧರ]

**ಕೊಂತಿ$_1$** (ನಾ). (ಕರಾ) ಒಂದು ಜಾತಿಯ ಮೀನು: ನಿಮಗೆ ಬೇಕಾದ ಹೊಳೆಯ ಮೀನು, ಮುಡಾವು, ಅಬ್ರೋಣಿ, ಕೂಸೆ, ಕಲ್ಲೂರು, ಕೊಂತಿ ಯಾವುದೂ ಇಲ್ಲ (ಹೊಸಕ್ಷಿ. ೫೪).
[← ತುಳು. ಕೊಂತಿ]

**ಕೊಂತಿ$_2$** (ಉಕ) ಸಣ್ಣ ಬೆಲ್ಲದ ಅಚ್ಚು: ಪೆಂಟಿ ಬೆಲ್ಲಕ್ಕಿಂತ ಕೊಂತಿಗೆ ವ್ಯಾಪಾರ ಈಗ ಹೆಚ್ಚು (ರೂಢಿ). [?]

**ಕೊಂದ** 'ಕೊಲ್' ಪರಾ.

**ಕೊಂದದಿ** (ನಾ). ಒಬ್ಬಾತನ ಹೆಸರು: ದಿಣ್ಣಗೆ ನಾಡಿಯರುಂ ಕೊಂದದಿಯುಂ ಹೆಗ್ಗಡೆತ್ತನಂಗೆಯೆ (ಮೈಆರಿ. ೧೯೨೭, ೧೧೮–೪೪ ; 726). [?]

**ಕೊಂದಳ್ಮೊಱಡಿ** (ನಾ). ಒಂದು ಪ್ರದೇಶದ ಹೆಸರು ; ಕೊಂದಳ್ ಮೊಱಡಿ ತೆಂಕಾಯ್ತ್ ಪೊಲ ಎಲ್ಲೆ (ಮೈಆರಿ. ೧೯೨೪, ೪೦-೧೧೯ ; 799). [ಕೊಂದಳ್ ? + ಮೊಱಡಿ (< ಮೊರಡ್ಡಿ)]

**ಕೊಂದಾಱು** (ನಾ). ಒಂದು ಊರಿನ ಹೆಸರು : ಕೊನ್ದಾಱು ಬೋಯಸ್ಯ ಕಾಶ್ಯಾ(ಶ್ಯ)ಪ ಗೋತ್ರ ಕುಣ್ಡಿಶರ್ಮ್ಮಣ (ಇಆ. VII, ೧೮೪-೪೫ ; 688). [?]

**ಕೊಂದಿ**(ನಾ). ಒಂದು ಬಗೆಯ ದುಪ್ಪಟಿ: ಆನಂದರಸ ದೇವಗಿರಿ ಕೊಂದಿ [ಪಾಠಾಂ. ಡಿ] ಬಿಳಿದಿನದೇನವಣ್ಣಿಪೆದು ಪಾಟಗಳ (ಅಮುಸಾಂ. ೪-೧೭).[?]

**ಕೊಂದು** 'ಕೊಲ್' ಪರಾ.

**ಕೊಂದೆ** (ನಾ). ಒಂದು ಬಗೆಯ ಮರ : (+). [←ತಮಿ. ಕೊನ್ಱೈ]

**ಕೊಂದೆವಡಿ** (ನಾ). ಒಂದು ಪ್ರದೇಶದ ಹೆಸರು : ಅನ್ತೆ ಬನ್ದು ಕೊನ್ದೆವಡಿಎ (ಮೈಆರಿ. ೧೯೨೬, ೫೩-೨೮ ; 550). [?]

**ಕೊಂಪೆ** (ನಾ). ೧. ಕಸಕಡ್ಡಿಗಳ ಕಂತೆ ; ಕುಪ್ಪೆ : ಬೀಡು ತೊಲಗಿದ ಬಳಿಕಲಾ ಸುಡುಗಾಡಿನಲಿ ಬೆಂದುರಿವ ಕೊಂಪೆಯ ನೋಡಿ ನಂಬಿರ ಬಹುದೆ (ಹರಿಸಾ. ೮೫) ; ಮನುಷ್ಯ ಸಮಾಜ ಸುಳ್ಳು ಅತ್ಯಾಚಾರಗಳ ಕೊಂಪೆ (ಚಿಗುಬ. ೩೫). ೨. ಚಿಕ್ಕಹಳ್ಳಿ ; ಕುಗ್ರಾಮ : ಹಂಪೆಗೆ ಹೋಗುವುದಕ್ಕಿಂತ ಕೊಂಪೆಯಲ್ಲಿರುವುದೇ ಲೇಸು (ಬೆಟ್ಟಹೊ. ೬೯) ; ಈ ಕೊಂಪೇಲಿ ಇರೋದೇ ನಾಲ್ಕು ಬ್ರಾಹ್ಮಣ್ರು (ಮರಳಿ. ೯೮) ; ಇಂದಿನ ಕಳಸಾಪುರವೆಂದರೆ ಕೊಳಕಿನ ಕೊಂಪೆ (ಕಳಹು. ೧೦೩). ೩. ಗುಡಿಸಿಲು ; ಜೋಪಡಿ : "೧. ಗುಡಸಲು. ೨. ಮನೆ. ೩. ದೇಹ. ೪. ಸಣ್ಣಹಳ್ಳಿ" (ಗಂಗಾಮು. ೧೧೧).

[ದೇ. ‖ ತಮಿ. ಕುಪ್ಪವ್ಮ್ ; ತುಳು. ಕೊಪ್ಪ ; ತೆಲು. ಕುಪ್ಪ, ಕೊಂಪ]

**ಕೊಂಬ** 'ಕೊಳ್$_1$' ಪರಾ.

**ಕೊಂಬಣಸು** (ನಾ). ಎತ್ತಿನ ಕೋಡಿಗೆ ಅಲಂಕಾರಕ್ಕಾಗಿ ತೊಡಿಸುವ ಹಿತ್ತಾಳೆ ಅಥವಾ ಕಂಚಿನ ಅಣಸು ; ಕೋಡಣಸು : ಕೊಂಬಿ ಗ್ಹಾಕೀದನವ್ವ ಕೊಂಬಣಸು ಹುರುಗೆಜ್ಜಿ ಬಾಲಾಕ್ಹಾಕಿದ ಬೀಸಣಿಕಿ (ಲೋಕಗೀ. ೧೨೩-೧). [ಕೊಂಬು$_1$ + ಅಣಸು$_3$]

**ಕೊಂಬಳೆ** (ನಾ). ರೆಂಬೆ ; ಕೊಂಬೆ ; ಶಾಖೆ (?) : ಅಳಿವೃತಮಪ್ಪ ಕೊಂಬಳೆಯೆ ಸಂಬುಳಿಗೋಲ್ ವಸನಂ ಮಿಸುರ್ವ ಕೆಂದಳಿರ್ (ಶಾಂತಿಪು. ೭-೧೩೬). [?]

**ಕೊಂಬಾಟ** (ನಾ). ಕೊಂಬಿನ ಆಟ ; ಕೋರೆಗಳನ್ನು ಅಲ್ಲಾಡಿಸುವಿಕೆ : ಸೊನೆಯಿಂ ದಾನಜಲೌಘಮುಂ ತೊನೆಪದಿಂ ಕೊಂಬಾಟಮಂ ಕೋಕಿಲಸ್ವನದಿಂ ಬೃಂಹಿತನಾದಮುಂ ಮಿಸುಪ ಕೊಂಬಿಂ ಕೊಂಬನಾಟಂದು (ಜಗವಿ. ೧೪-೬೪). [ಕೊಂಬು$_1$ + ಆಟ]

**ಕೊಂಬಾಳೆ** (ನಾ). ಒಂದು ಊರಿನ ಹೆಸರು : ಶ್ರೀಮತ್ ರಾಚಮಲ್ಲ ಪೆರ್ಮ್ಮಾನಡಿಗಳ್ ಕೊಮ್ಬಾಳೆಯೊಳ್ ಸ್ವರ್ಗಮೇಱಿದೊಡೆ (ಎಕ. V, ಅರಕ. ೫-೩ ; ಸು. 915). [?]

**ಕೊಂಬು**$_1$, ಕುಂಬು$_5$ (ನಾ). ೧. ಪ್ರಾಣಿಗಳ ಕೋಡು, —ಶೃಂಗ: "ವಿಷಾಣಂ, ಶೃಂಗಂ – ಈ ೨ ಕೊಂಬು" (ಹಲಾಯು. ೪೫-೧೧೩) ; ಪಶುವೆಂದೆನ್ನ . . . ಕೊಂಬ ಹಿಡಿದೆತ್ತುವನ್ನಕ್ಕ (ಬಸವ. ೫೨) ; ಶೂಲದಂತೆಸೆವ ಕೊಂಬುಗಳಿಂದೆ ತಿವಿದುದು (ಮೋಹತ. ೩೮-೩೧) ; ಕವಾಡದ ಝುಲ್ಲಿಯ ಕೊಂಬಿನೆತ್ತುಗಳನಿಲ್ಲದೆ ತಿರುಹಿಕೊಂಡು (ಕಂಸವಿ. ೩-೭೨). ೨. ಆನೆಯ ಕೋರೆ ; ದಂತ : "ರದನಂ ವಿಷಾಣಮೆನೆ ಕೊಂಬೆಸಿಕ್ಕುಂ" (ಮಂಗರಾ. ೪೭-೯) ; ಸೊಕ್ಕಾನೆ ಮೇಲ್ವೊಯ್ದು . . . ಅಲುಗಿ ಕೊಂಬಂ ಕಿತ್ತು (ರಾಘಪ. ೧೭-೭೦). 'ಕೊಂಬುಗತ್ತಿ' ಪರಾ. ೩. ದ್ರವ ಪದಾರ್ಥಗಳನ್ನು ತುಂಬಿಡಲು ಪ್ರಾಣಿಗಳ ಕೋಡಿನಿಂದ ಮಾಡಿದ ಕೊಳವೆ, —ಪಾತ್ರೆ : ಸಾದಿನ ಪೆಟ್ಟಿಗೆಗಳ ಮೃಗಮದದ ಕೊಂಬುಗಳ ಕರ್ಪೂರ ಕರಂಡಕ ನಿಕರದ (ಗಿರಿಕ. ೧೦-೨೨ವ) ; ಕಾಂತನಿಗೆ ಹೆಚ್ಚಳಪಡಿಸಲ್ಕೆ ಕೊಂಬು ಜೀರ್ಕೊಳವೆಯೊಳೆಜ್ಜಾಡುತಿರ್ದರ್ (ಮೋಹತ. ೧೪-೬೪). ೪. ಕೊಂಬಿನ ಆಕಾರದಲ್ಲಿ ಮಾಡಿದ ಊದುವ ವಾದ್ಯ ; ಕಹಳೆಯಂತೆ ಧ್ವನಿಮಾಡುವ ಸಾಧನ : ಚಂದ್ರಶಿಲೆಯ ಮೆಟ್ಟಿಕೊಂಡು ಕೊಂಬ ಬಾರಿಸುತ (ಮಹಾದೇ. ೩೬-೯) ; ಬಾರಿಸುವ ಕೊಂಬು ಮದ್ದಳೆ (ಸಿದ್ಧರಾ. ೮-೪೯) ; ತಂಬಟದ ಕೊಂಬಿನ ಗಾಳುಗಜಱಿನ ಕಹಳೆಗಳ (ಕುವ್ಯಾಭೀ. ೬-೯) ; ಚೀರುವ ಕಹಳೆ ಕೊಂಬಿನೊಳಿದ್ದ ರೈವತ್ತಾಱು ದೇಶದ ಧರಣಿಪರು (ಭರಚ. ೨೨-೯) ; ಚಪ್ಪಾಳೆಗಳ ರವ ಕೊಂಬು ಕೊಳಲು ಹೊನ್ನ ತಪ್ಪಟೆಗಳ ದನಿ (ಕಂಸವಿ. ೨೫-೧೧೧). ೫. ಮರದ ಶಾಖೆ ; ಟೊಂಗೆ ; ಕೊಂಬೆ : "ವಿಟಪಮೆನೆ ಕೊಂಬಕ್ಕುಂ" (ಮಂಗರಾ. ೩೨-೨) ; "ಕೈಕೋಡು ಕೊಂಬೆಂದೊಡೆ ಪಾದಪ ಶಾಖೆ" (ಕವಿಕಂ. ೫೬) ; ಮರದೊಣಗಿದ ಕೊಂಬುಗಳೆಳೊಳ್ (ವಡ್ಡಾರಾ. ೧೪೮-೧೩) ; ಕೊಂಬುಗಳೊಳ್ ಪಣ್ಬಲಮುಂಟು (ಪಂಪಭಾ. ೭-೩೦) ; ಕೋಡಗಗದೆರ್ದೆ ಕೊಂಬಿನ ಮೇಲೆ ಎಂಬುದು ಪ್ರಸಿದ್ಧಂ (ಪಂಚತಂ. ೨೮೦-೭) ; ಅಂಗದ ಕೊನೆಯ ಮೇಲಣ ಕೋಡಗ ಕೊಂಬಿಂಗೆ ಹಾಱಿತ್ತು ಅಯ್ಯ (ಅವಚಂ. ೮-೩೧) ; ಕರತಳದ ತಳಿರೆಲೆಯ ಕಡಿದೋಳುಗಳ ಕೊಂಬುಗಳ . . . ರಣವನವೆಸೆದುದು ಖಡ್ಗಚೈತ್ರದಲಿ (ಕುವ್ಯಾಕ. ೬-೪೨). ೬. ನೆತ್ತಿ ; ಶೃಂಗ ; ಕೋಡುಗಲ್ಲು : ಇಂಬಪ್ಪ ಗಿರಿಯಲ್ಲಿ ಕೊಂಬೆರಡನೆ ಕಂಡು ಶಂಭುನಾರಿಯ ನೋಡಿ ಮಾತನಾಡೆ (ಶಿವಗೀ. ೭೮೩) ; ಪಡುವೆಟ್ಟಿನ ಕೊಂಬಿನ ಗುಹೆಯಂ ಸಾರ್ದು (ರಾಮಾಶ್ವ. ೧೧೫-೧೧). ೭. ಕೋಡಿ : ಅನ್ದುವದೇರಿಯ ಪಡುವಣ ಕಡೆಗೊಂಬು (ಎಇ. X, ೬೬-೭೦; 892). ೮. (ಆಲಂ) ಹೆಚ್ಚುಗಾರಿಕೆ ; ಹೆಮ್ಮೆ : ನಂಬದೆ ನಚ್ಚದೆ ಬಱಿದೆ ಕರೆವರ ಕೊಂಬ ಮೆಟ್ಟಿ ಕೂಗೆಂದ (ಬಸವ. ೧೧೭). ೯. ಆಶ್ರಯ. 'ಕೊಂಬುಗೊಡು' ಪರಾ. ೧೦. [ವ್ಯಾಕ] ಉಕಾರವನ್ನು ಸೂಚಿಸುವ ಕಾಗುಣಿತ ಚಿಹ್ನೆ (ು) : 'ಕ'ಕ್ಕೆ ಕೊಂಬು ಕೊಟ್ಟರೆ 'ಕು' ಆಗುತ್ತದೆ. (ರೂಢಿ). **ಕುಂಬು$_5$** : ೮. ಜಗತ್ ಶ್ರೇಷ್ಠನಹ ಅಜನ ಕುಂಬು ಮುಱಿಯಿತ್ತು ಧರೆಯ ಚಂದ್ರ ಸೂರ್ಯರಿಬ್ಬರೂ ನೆಲಕ್ಕೆ ಬಿದ್ದರಲ್ಲಾ (ಪದಗೋ. ೨೨೯).

**ಕೊಂಬುಬರು** = (ಆಲಂ) ಅಹಂಕಾರಬರು ; ಕೋಡುಮೂಡು: ಫೌಜುದಾರಿಕೆ ಸಿಕ್ಕಸ್ವಕ್ಕೆ ಕೊಂಬುಬಂದಿದೆ ಮಗನಿಗೆ (ನಾಪೋಲಿ. ೨೬೦).

[ದೇ. ‖ ತಮಿ. ಮಲ. ಕೊಮ್ಪು ; ತುಳು. ಕೊಂಬು ; ತೆಲು. ಕೊಮ್ಮು]

**ಕೊಂಬು$_2$** (ನಾ). ಗೊತ್ತುಪಡಿಸಿದ ಪ್ರದೇಶ ; ಸಂಕೇತಸ್ಥಳ : "ಕೊಂಬು – ಸಂಕೇತಸ್ಥಳಂ" (ಶಮುದ. ಪರಿ. ೨) ; "ಕೊಂಬೆನಲ್ ಸಂಕೇತ ಭೂಮಿ" (ಕಬ್ಬಿಕ್ಕೈ. ೩೮) ; "ಕೊಂಬೆಂದು ಸಂಕೇತ ಸ್ಥಳಕಕ್ಕು ನಾಮಂ" (ಶಬ್ದಮಂ. ೫೮) ; ಜಾಣನಾಗಿ ಮೂಱು ಕೊಂಬುಮನಾಱು ನಾಣ್ಪೋಗುವವನ್ . . . ಬಲ್ಲನಾಗಿ (ಪಂಪಭಾ. ೫-೪೩ ವ) ; ಬೆಳತಿಗೆ ಗಣ್ಣ ಪೆಣ್ಣ ನನೆಯಂಬಿನ ಕೊಂಬಿನ ನಾಡೆ (ರಾಮಾಶ್ವ. ೧೨೦-೧೮). [?]

**ಕೊಂಬುಕಹಳೆ** 'ಕೊಂಬುಗಹಳೆ' ನೋ.

**ಕೊಂಬುಕಾಳೆ** 'ಕೊಂಬುಗಹಳೆ' ನೋ.

**ಕೊಂಬುಗತ್ತಿ** (ನಾ). (ಆನೆಯ) ಕೋರೆಗಳಿಗೆ ಕಟ್ಟಿದ ಕತ್ತಿ : ಕಟ್ಟಿದ ಕೊಂಬುಗತ್ತಿಯ ಸುಂಡಿಲೊಳಗಳವಟ್ಟಿಹ ಬೀಸುಗಂಡೆಯದ (ಕಂಸವಿ. ೩-೪೩) ; ಆನೆಗಳನು ಕೊಂಬುಗತ್ತಿ ಸಹಿತ ತಂದಾನಿಸಿ ಕೆಡಹಿ ಬಾಗಿಲನು (ಕಂಸವಿ. ೧೪-೧೬೦). [ಕೊಂಬು$_1$ + ಕತ್ತಿ]

**ಕೊಂಬುಗಲ್ಲು** (ನಾ). "ಸುಲಭವಾಗಿ ಒಡೆದು ಹೋಗುವ ಮರಳು ಗಲ್ಲು; ಕೊಂಬುಗಲ್ಲು" (Hornstone. ಇಂಕನಿ).
[ಕೊಂಬು$_1$ + ಕಲ್ಲು (< ಕಲ್$_3$)]

**ಕೊಂಬುಗಹಳೆ,** ಕೊಂಬುಕಹಳೆ, ಕೊಂಬುಕಾಳೆ, ಕೊಂಬುಗಾಳೆ (ನಾ). ೧. ಕೊಂಬಿನಂತೆ ಬಾಗಿದ ಕಹಳೆ; ಕೊಂಬಿನಾಕಾರದ ಕಾಳೆ: ಕೊಂಬುಗಹಳೆ ವೊಂಗಹಳೆಯುತ್ಕಟ ತಾಳ ಮದ್ದಳೆಗಳು (ಚಬಪು. ೫-೭). **ಕೊಂಬುಕಹಳೆ:** ೨. ಕೊಂಬು ಮತ್ತು ಕಹಳೆ: ಕೊಂಬುಕಹಳೆಗಳು ಬಂಧುಗಳನ್ನು ಕರೆಯುವಂತೆ ಮೊಳಗತೊಡಗಿದವು (ಕಾಲೂರ. ೧೩ ಕಥಾಸಾರ). **ಕೊಂಬುಕಾಳೆ:** ೨. ಕೊಂಬುಕಾಳೆಗಳಿಂದ ರಂಭೇರ ಒಡಗೂಡಿ ಛಂದದಲಿ ಮದಿವಿ ಮಾಡಿದರು (ಕರ್ಣಾಕ. ೨೫೦).
**ಕೊಂಬುಗಾಳೆ:** (ಕ). [ಕೊಂಬು$_1$ + ಕಹಳೆ]

**ಕೊಂಬುಗಾಳೆ** 'ಕೊಂಬುಗಹಳೆ' ನೋ.

**ಕೊಂಬುಗೊಡು** (ಕ್ರಿ). ಆಶ್ರಯ ಕೊಡು; ಆಸರೆ ನೀಡು: ಹಿಮಕ್ಕೆ ಕೊಂಬುಗೊಟ್ಟಾಲಮನಗ್ರಪಲ್ಲವ ಕರಾಗ್ರನಿರುದ್ಧ ಮರುತ್ತರಂಗಿಣೀ ಕೂಲಮನೆಯ್ದಿದರ್ (ಪಂರಾಮಾ. ೭-೧೨೭).
[ಕೊಂಬು$_1$ + ಕೊಡು$_1$]

**ಕೊಂಬುಗೊಳ್** (ಕ್ರಿ). ಆಶ್ರಯವನ್ನು ಪಡೆ; ಆಸರೆಯನ್ನು ಹೊಂದು: ಕಣ್ಗೆವಂದಿರ್ದುವನಿವನೆ ವಲಂ ಕೊಂಬುಗೊಂಡಂಗಜಂ ಮೆಲ್ಲಗೆ ಪಾರ್ದಾರ್ದಾರ್ಗಳುಂ . . . ನಲ್ಲಂಬುಗಳಿನೆಚ್ಚೆಚ್ಚು (ಪಂಪಭಾ. ೪-೨೩); ಮದನಂ ಕೊಂಬುಗೊಳಲ್ಕೆ ನಚ್ಚುವ ನವಾಮ್ರಂ (ಚಂದ್ರಪ್ರ. ೧-೧೦೪); ಬನದ ಕುಂಜದೊಳ್ ಕೊಂಬುಗೊಂಡ ಕಟ್ಟಲೆಯ ಪೊಟ್ಟಿನ ಬಲದಿಂ (ವರ್ಧಪು. ೬-೨೩ ವ); ಎಱಗುವ ತುಂಬಿವಿಂಡಗಿಯೆ ಬಗ್ಗಿಪ ಕೋಗಿಲೆ ಕೊಂಬುಗೊಂಡು ಬಟ್ಟುಱಿ (ಕಬ್ಬಿಕಾ. ೩೧೧).
[ಕೊಂಬು$_1$ + ಕೊಳ್$_1$]

**ಕೊಂಬುಚೀರು** (ನಾ). = ಕೊಂಬಣಸು: ಬೆಳ್ಳಿ ಬಂಗಾರದ ಕೊಂಬು ಚೀರುಗಳನ್ನು ಜರತಾರಿಯ ಜೂಲಗಳನ್ನೂ ರೈತರ ಎತ್ತುಗಳು ಕಾಣುವಂತಾಯಿತು (ಗ್ರಾಮಾಯ. ೩೧೭).
[ಕೊಂಬು$_1$ + ಚೀರು ?]

**ಕೊಂಬುವಲೆ** (ನಾ). ಒಂದು ಬಗೆಯ ಬಲೆ: ಕೀಸುವಲೆ, ಕೊಂಬುವಲೆ, ಹಿಡಿಗಣ್ಣವಲೆ (ರುಕ್ಮಾಂಗ. ೧೧-೧೯)
[ಕೊಂಬು$_1$ + ಬಲೆ$_1$]

**ಕೊಂಬುವಿಲ್ಲು** (ನಾ). ಒಂದು ಬಗೆಯ ಬಿಲ್ಲು (?): ಆ ಕೊಂಬು ವಿಲ್ಲಿನ ಖಡ್ಗದ ಬಲ್ಲೆಯದಾ ಕಡುಸತ್ವದೇಳ್ಗೆಯನು . . . ಆ ರಾಮನೇ ಕಾಂತದೊಳು ತೋರಿಸಿದನು (ಕುರಾಸಾಂ. ೯-೧೧೫).
[ಕೊಂಬು$_1$ + ಬಿಲ್ಲು (< ಬಿಲ್$_2$)]

**ಕೊಂಬುವೆರೆ** (ನಾ). ೧. (ಕೊಂಬಿನಂತೆ) ಡೊಂಕಾದ ಚಂದ್ರ; ಅರ್ಧಚಂದ್ರ. ೨. ಹೆಬ್ಬೆರಳು ತೋರುಬೆರಳುಗಳ ನಡುವಣ ಪ್ರದೇಶ: ನಿನ್ನ ಕುತ್ತಿಗೆಗವಂ ಕೊಂಬುವೆರೆಯೊತ್ತದಿರೆ ತನ್ನ ಹೆಸರಂ ಮಗಚು (ಹೆಬ್ಬೆರ. ೪-೬೨). [ಕೊಂಬು$_1$ + ಪೆರೆ (< ಪೆಱೆ)]

**ಕೊಂಬುಸ್ತಳ** (ನಾ). (?): ಚಂನಬಸಪನ ಮಗ ತೊಠಪ ಯಡೆಉರ ಸಿಧೇಸ್ವರಮಿಯವರ ಪದಕೆ ವಪಿಸಿದ ಸತ್ತಿಗೆ ಕೊಂಬುಸ್ತಳ ೨ (ಎಕ. XVI, ಕುಣಿಗ. ೭೯-೧; ?). [?]

**ಕೊಂಬುೞಿ** (ಕ್ರಿ). ಕೊಂಬೆಯನ್ನು ಬಿಡು; ಆಶ್ರಯತಪ್ಪಿ ಹೋಗು: ಜಸಮುೞಿದೋಜೆಗೆಟ್ಟು ಭಯದಿಂ ನಿಜವಾಹಿನಿಯಂ ಬಿಸುಟ್ಟು ಸಾಹಸ ಮತಿಗೆಟ್ಟು ಕೊಂಬುೞಿದ ಕೋಡಗದಂತೆ ಕಣ್ಗೆಟ್ಟುಂ (ಪುಣ್ಯಾಸ್ರ. ೫-೩೫).
[ಕೊಂಬು$_1$ + ಉೞಿ$_1$]

**ಕೊಂಬೆ$_1$** (ನಾ). ಮರದ ಟೊಂಗೆ; ರೆಂಬೆ; ಶಾಖೆ: ಮರವನೇಱಿದ ಮರ್ಕಟನಂತೆ ಹಲವು ಕೊಂಬೆಗೆ ಹಾಯುತಲಿದೆ ಬೆಂದ ಮನವ ನಾನೆಂತು ನಂಬುವೆನಯ್ಯಾ (ಬಸವ. ೩೩); ಮಹಾವೃಕ್ಷದಲ್ಲಿ . . . ಹಸಿಕೊಂಬೆ ಯೊಂದು ಮಾತ್ರ ಉಳಿದಿದೆ (ಆರ್ಯಕ. ೬೭).
**ಕೊಂಬೆಬಾಳೆಗಿಡ** = ರೆಂಬೆಯಾಗಿ ಕವಲೊಡೆಯುವ ಬಂಗಾಲ ದೇಶದ ಬಾಳೆ: (ಕ). [< ಕೊಂಬು$_1$]

**ಕೊಂಬೆ$_2$** (ನಾ). ಒಂದು ಬಗೆಯ ಸಸ್ಯ: ಕೊಮ್ಮೆ . . . ಕೊಂಬೆ, ನಲ್ಲಗನ್ನೆ (ವೈಔಗಿ. ೧೮-೨೭೧). [?]

**ಕೊಂಬೆಗಲ್ಲು** (ನಾ). ಕವಲುಗಲ್ಲು; ಚೂಪುಗಲ್ಲು (?): ಕೊಂಬೆಗಲ್ಲಿಂ ತೆಂಕಲು ಕಿಸುನೆಲ ಉ ಮತ್ತರು ೧ (ಸೌಇಇ. IX-i; ೩೬೭-೨೬; 1229).
[ಕೊಂಬೆ$_1$ + ಕಲ್ಲು (< ಕಲ್$_3$)]

**ಕೊಂಬೆಗಾರೊಡ** (ನಾ). (?): ಕೊಳಗುಪ್ಪೆ ಪೆಟ್ಟವಸಿ ಅರ್ಧಂ ಕಾನಸೊಪ್ಪಿನರ್ಧಂ ವಾರಲರ್ಧಂ ಕರ್ಸಪಿಣ್ಡಂ ನೂಱಿಪ್ಪತ್ತೆಣ್ಟು ಕೊಂಬೆಗಾರೊಡಂ ಪಡೆಯಂ ಮೆಣ್ಬು ಮೂಡೆ ಜಮಳಿ ಒಸ್ದು (ಎಇ. XXI, ೧೭೮-೧೫; 8ನೆಯ ಶತ). [?]

**ಕೊಂಬೆಯಬಳ್ಳಿ** (ನಾ). ಒಂದು ಬಗೆಯ ಬಳ್ಳಿ: "ಖಡ್ಗಸಿಂಬಿ - ಕೊಂಬೆಯ ಬಳ್ಳಿ" (ಒಷಧಿ. ೪೩). [ಕೊಂಬೆ$_0$ + ಬಳ್ಳಿ]

**ಕೊಂಬೆಯೊಡೆ** (ಕ್ರಿ). ಕವಲು ಬಿಡು; ಚಿಗುರು: ಹಿತ್ತಲಿನಲ್ಲಿ ಹಾಕಿದ್ದ ಸಸಿ ಕೊಂಬೆಯೊಡೆದಿದೆ (ರೂಢಿ). [ಕೊಂಬೆ$_1$ + ಒಡೆ$_1$]

**ಕೊಂಬೇರಿಕೂಗುವನಗೆಡ್ಡೆ** (ನಾ). ಒಂದು ಬಗೆಯ ಗೆಡ್ಡೆ: ಕೊಂಬೇರಿಕೂಗುವನಗೆಡ್ಡೆಯನಾದಿವಾರ ತಂದು ಹಸುವಿನ ಹಾಲೊಳರೆದು ಶರ್ಕರೆವೆರಸಿ ಮೂರುದಿನ ಕೊಳ್ಳಲು ಪ್ರಮೇಹದ ಕಲ್ಲೊಡೆದು ಬೀಳು ವುದು (ಸಕವ್ನೆ. ೩೭೮). [? + ಗೆಡ್ಡೆ (< ಗಡ್ಡೆ)]

**ಕೊಂಬೇಳು** (ನಾ). = ಕೊಂಗೇಳು (?): ಧಾಳಿಯುನಿಟ್ಟು ಕೊಂಕಣಮ ನಂಕಣಯೊಕ್ಕಿದ ಪಂತಗುಳ್ದು ಕೊಂಬೇಳುಮನಟ್ಟಿ ಮುಟ್ಟಿ ಮಲೆಯೇಳುಮನಾಗೆ ಮುಚ್ಚಿರ್ ಮುಕ್ಕಿ ನಿರ್ಮೂಳಿಸಿದಪ್ಪಂ (ಎಕ. VII, ಶಿಕಾರಿ. ೧೩೬-೨೫; 1068).
[ಕೊಂಬು$_1$ + ಏಳು$_2$ (< ಏೞ್$_2$)]

**ಕೊಂಬೇಱು** (ಕ್ರಿ). ಕೊಂಬೆಯನ್ನು ಏರು; ರೆಂಬೆಹತ್ತು: ಆಲದ ಮರನ ಕೊಂಬೇಱಿ ಧುಮ್ಮಿಕ್ಕಲಾಗಿ (ಭಾವಚಿ. ೬-೮).
[ಕೊಂಬು$_2$ + ಏಱು$_1$ (< ಏಱ್$_1$)]

**ಕೊಂಬೊತ್ತು** (ಕ್ರಿ). ಕೊಂಬೆಗಳನ್ನು ಚಾಚು; ಶಾಖೆಗಳನ್ನು ವಿಸ್ತರಿಸು: ಹಿಮಸೇತು ಮನ್ದರಮುಮಂ ಕೊಂಬೊತ್ತಿ ಸುತ್ತಿಱ್ದುವಾ ಸುರಲೋಕಂಗಳಿನತ್ತಜಾಣ್ಡಕಟದೊಳ್ಕೀರ್ತಿರ್ಲ್ಲತಾವಲ್ಲಿ ವಿಸ್ತರದಿಂ ಪರ್ವ್ವಿದೀ ಕಾಳಿದಾಸನೇಂ ಮಹಾಸತ್ತ್ವಂ (ಸೌಇಇ. IX-i, ೧೦೨-೩೬; 1046). [ಕೊಂಬು$_1$ + ಒತ್ತು$_1$]

**ಕೊಂಬೊಳು** (ನಾ). = ಕೊಂಗೇಳು (?): ನೊಳಂಬದೇವ . . . ಸಂತೋಸದಿಂದಂ ಕೊಂಬೊಳು ಮಲೆಯೇಳುಮನಂ ಬಿಲಗುಡಿಸಾದರ್ ತಿಟ್ಟನುದಯಾದಿತ್ಯ (ಸೌಇಇ. XX, ೪೯-೨೭; 1076). [?]

**ಕೊಂಯಿಕ್** (ನಾ). ಒಂದು ಅನುಕರಣ ಶಬ್ದ. 'ಕೊಂಯಿಕಿಡು' ಪರಾ.

**ಕೊಂಯಿಕಿಡು** (ಕ್ರಿ). ಕೊಂಯ್ ಎಂದು ಶಬ್ದಮಾಡು: ಕಾಡು ಕೋಣಗಳು ಕೊಂಯಿಕಿಡುತ್ತ ಓಡಿದವು (ಕಎಪು. ೭-೧೧೨).
[ಕೊಂಯಿಕ್ + ಇಡು$_1$]

**ಕೊಕ್** (ನಾ). ೧. ಒಂದು ಅನುಕರಣ ಶಬ್ದ. ೨. ಕೊಕ್ಕೋ ಆಟ ದಲ್ಲಿ ಹೇಳುವ ಒಂದು ಶಬ್ದ.

ಕೊಕ್ಕೊಡು = ೧. ಕೊರ್ ಎಂದು ಕೂಗಿ ಆಟಗಾರನನ್ನು ಎಬ್ಬಿಸು. ೨. ಒಬ್ಬನ ಸ್ಥಾನಕ್ಕೆ ವರ್ಗವಾಗಿ ಬಂದು ಕುಳಿತುಕೊ. 'ಖೋ' ಪರಾ.

**ಕೊಕಂದಿ** (ನಾ). ಒಂದು ಪ್ರದೇಶದ ಹೆಸರು: ಪಲ್ಲವೆಳಾಡಸರ್ ಪೊಯ್ದಾರ್ ಕೊಕನ್ದಿಯುಂ ಮಯಿಲುರಗಯುಮ್ ಮೇಲ್ಪಾಳುವರ್ ಪಾದಿಗಾಲು ಕೊಲಿಗಂ ಕೆಱೆಕ್ಕಾಲು (ಮೈಆರ್. ೧೯೨೫, ೧೦೬–೧೯ ; ?). [?]

**ಕೊಕಾಱಿನ** (ನಾ). ಒಬ್ಬಾತನ ಹೆಸರು: ಎಱೆಅಂಗ ಪೋಲುಕೇಸಿಯ ಬೂದಿಗನ ಕಾಳೆಗದೊಳ್ ಪೋಲುಕೇಸಿಯೊಡತಿಹದು ಕೊಕಾಱಿನ ಕೊನುಸತ್ತ (ಎಕ. III, ಮೈಸೂರು. ೪೪–೧೧ ; ಸು. 990). [?]

**ಕೊಕೇನ್** (ನಾ). ೧. ಒಂದು ಜಾತಿಯ ಔಷಧಿ ಗಿಡ: (ಮೈಔಗಿ. ೩೫–೬೮೨). ೨. ಶರೀರಕ್ಕೆ ಶಸ್ತ್ರಚಿಕಿತ್ಸೆ ಮಾಡುವ ಮುನ್ನ ನರಮಂಡಲಗಳನ್ನು ನಿಶ್ಚೇಷ್ಟಗೊಳಿಸುವುದಕ್ಕಾಗಿ ಕೊಡುವ ಒಂದು ಔಷಧಿ ದ್ರವ. [← ಇಂ. Cocaine]

**ಕೊಕ್ಕ** (ನಾ). ಕೋಳಿ: ಉರಗಿಯನೆಯ್ತ್ ಪಿಡಿದೊಡದಂ ಕುರಂಗರಿಪು ಬೆಕ್ಕು ಕೊಕ್ಕನಂ ತವೆ ಪಿಡಿವಂತಿರೆ ಪಿಡಿದುದು (ಯಶೋಚ. ೩–೫೩). [< ಸಂ. ಕುಕ್ಕುಟ]

**ಕೊಕ್ಕಂಗೆಱೆ** (ನಾ). ಒಂದು ಊರಿನ ಹೆಸರು: ಕೊಕ್ಕಂಗೆಱೆಯ ದಕ್ಷಿಣ ಶೃಂಖ(ಗ)ಮೆ ಒಱೆಕೋಡಿನ ಹಂಚಿಯದ ಹುತ್ತೂರ ತ್ರಿಸಂಧಿ (ಇಆ. VIII, ೨೧೩–೩೨ ; 10ನೆಯ ಶತ). [ಕೊಕ್ಕ ? + ಕೆಱೆ]

**ಕೊಕ್ಕರ₁** (ನಾ). ಅಸಹ್ಯ; ಜುಗುಪ್ಸೆ; ಹೇವರಿಕೆ: ಅಪ್ಪಳ, ಕೊಕ್ಕರ, ಬೆಕ್ಕರ, ಡೊಕ್ಕರ, ಚೆಕ್ಕರ (ಶಬ್ದಾನು. ೫೪೫ ಪ್ರಯೋ). 'ಕೊಕ್ಕರಗೆಯ್' ಪರಾ. [?]

**ಕೊಕ್ಕರ₂** 'ಕುಕ್ಕುರ₂' ನೋ.

**ಕೊಕ್ಕರಗೆಯ್** (ಕ್ರಿ). ಜುಗುಪ್ಸೆಹೊಂದು; ಅಸಹ್ಯಪಡು; ಹೇವರಿಸು: ತರುಣೀಜನವೆಸಗುವ ಕಾಪಟ್ಯಕೆ ಪಿರಿದು ಕೊಕ್ಕರಗೆಯ್ವುತ (ಪ್ರಭುಂಜ. ೩–೫೪). [ಕೊಕ್ಕರ₁ + ಕೆಯ್₁]

**ಕೊಕ್ಕರತೆ** (ನಾ). ಜುಗುಪ್ಸೆ; ಅಸಹ್ಯ: ಚಿಮಿಚಿಮಿಸುತಿರ್ಪ ಕೋಳ್ಮಿದುಳಿಂ ಸಂಗರರಂಗಮಾವಗಂ ಕೊಕ್ಕರತೆ[ಪಾಠಾಂ. ರಿಕೆ] ಯನೊಡರಿಸದದಾರ ಕಣ್ಣಿಂ ಮನಕಂ (ರಸರ. ೨–೧೧೬); (ಶೃಂಗಾರ. ೧–೪೯ ನೋ). [< ಕೊಕ್ಕರ₁]

**ಕೊಕ್ಕರಿ** (ನಾ). ಡೊಂಕು; ವಕ್ರತೆ: ಅಕ್ಕರಿ ಕೊಕ್ಕರಿ ಕೊಕ್ಕಂ ಮೀಸೆಗಳಳಿದಾವು (ಎಬಕಾ. ೧೩೩–೩).

ಕೊಕ್ಕರಿಬಿಕ್ಕರಿ = ಅಂಕುಡೊಂಕುತನ; ವಕ್ರತೆ: (ಶ).

[ದೇ. ‖ ತಮಿ. ಕೊಕ್ಕರ್ಯೆ; ಮಲ. ಕೊಕ್ಕರ; ತೆಲು. ಕೊಂಕರ; ಪರ್ಜಿ. ಕೊಂಕೊರ್; ಕುಇ. ಕೊಂಗೊಂ]

**ಕೊಕ್ಕರಿಕೆ, ಕೊಕ್ಕರಿಕ್ಕೆ** (ನಾ). ಹೇಸಿಕೆ; ಜುಗುಪ್ಸೆ; ಅಸಹ್ಯಭಾವ; ಓಕರಿಕೆ: ಇನಿತಂ ನಿಮ್ಮ ಮನಕ್ಕೆ ಕೊಕ್ಕರಿಕೆಯುಂ ಮಾಡಿರ್ದ ಸಾಮ್ರಾಜ್ಯ ಮೆಂತೆನಗೊಳ್ಪಂ ಪಡೆದಪ್ಪುದು (ಆದಿಪು. ೪–೭೯); ದುರಿಂದ್ರಿಯ ಸುಖಕ್ಕೆ ಕೊಕ್ಕರಿಕೆ ಪುಟ್ಟೆ ನಿರ್ವೇಗದಿಂ (ಸುಕುಮಾ. ೧೦–೩೧); ರಣದಲ್ಲಿ ಮಾರಿಗೆಯರೋಚಕಮಾಗುತಿರೆ ದಣಿವುಂಡು ಕಾಲಂಗೆ ಕೊಕ್ಕರಿಕೆ ಪುಟ್ಟುತಿರೆ ದಕ್ಷಾರ. ೧೮–೪); ಪೆಳವನ ವಿಕ್ರಮುಮುಂ ಬೆಂದ ಸೀರೆ ಸಲ್ಲದ ಧರ್ಮಂ ಪಕ್ಕಲೆಯ ನೀರು ಮನಕಂ ಕೊಕ್ಕರಿಕೆಯ ತಾರದಿಹುದೆ (ನೀತಿಸಾ. ೩೮). **ಕೊಕ್ಕರಿಕ್ಕೆ**: ನಿಮ್ಮ ಮನಕ್ಕೆ ಕೊಕ್ಕರಿಕ್ಕೆಯಾಗಿಯುಂ ಪಾಱಿಗೆ ಗೆಂಟಾಗಿಯುಂ ನೆಗಟ್ಟುಮಲ್ಲ (ಪಂಪಭಾ. ೬–೨೧ಎ). [ಕೊಕ್ಕರ₁ + –ಇಕೆ]

**ಕೊಕ್ಕರಿಕೆವೆಱು** (ಕ್ರಿ). = ಕೊಕ್ಕರಿಸು₁: ಅತನಂ ಪ್ರತಿಬೋಧಿಸೆ ತಿಳಿದು ಕೊಕ್ಕರಿಕೆವೆತ್ತುದಱಿಂ (ನೇಮಿಪು. ೬–೫೭ಎ). [ಕೊಕ್ಕರಿಕೆ + ಪೆಱು₁]

**ಕೊಕ್ಕರಿಕ್ಕೆ** 'ಕೊಕ್ಕರಿಕೆ' ನೋ.

**ಕೊಕ್ಕರಿಸು₁** (ಕ್ರಿ). ೧. ಅಸಹ್ಯಪಡು; ಜುಗುಪ್ಸೆತಾಳು; ಹೇಸು; ಹೇವರಿಸು: ಮನಂ ಕೊಕ್ಕರಿಸದೆ ಬಗಸಿರೆಯಿನಳುರ್ಕೆಯೆ ಮೊಗೆಮೊಗೆದು ನೆತ್ತರಂ ಪವನಸುತಂ ನೆತ್ತಿಯೊಳೆಱೆದು (ಪಂಪಭಾ. ೧೨–೧೫೩); ತನ್ನ ನಿಸ್ತ್ರಿಂಶಕರ್ಮಕ್ಕೆ ತಾನೇ ಕೊಕ್ಕರಿಸಿ (ಶಾಂತಿಪು. ೪–೫೯ಎ); ಪಸಿದಾಗಳ್ ಕೊಕ್ಕರಿಸದೆ ಪೆಣನಂ ತಿಂದುಂ (ಸಮಪ. ೧೦–೧೧೪); ಹೊಲಸಿನಟ್ಟುಳಿಗೆ ಕೊಕ್ಕರಿಸದಿಹೆ (ಹಚಕಾ. ೧೧–೩೩); ಕುಲಕೊಲೆಗೆ ಕೊಕ್ಕರಿಸಿದೆನು (ಕುವ್ಯಾಭೀ. ೩–೩೦); ಕೊಕ್ಕರಿಸುವವನಲ್ಲಿವನು ಕೊಲೆಗೆ (ತೊರರಾ. ೬–೫೧–೨೬). ೨. ಬೆದರು; ಹೆದರು; ಅಂಜು: ಮರವಾಯ್ದ ಪೊಣರ್ವ ವಿಸಟಂಬರಿವಕರೇಣುಗಳನೆರೆವಹರಿವಿರುತಿಗೆ ಕೊಕ್ಕರಿಸುವನಿಪ್ಪೆರೆ[ಪಾಠಾಂ. ನೀರ್ಪೆರೆ]ಗೆಯ್ವಿಭ ಪರಿಕರವೆಸೆಗುಂ (ಜಗವಿ. ೪–೯೩). ೩. ಮುದುಡಿ ಕೊಳ್ಳು; ಕುಗ್ಗು: ಪರವಧುಗೋತು ಕೂಡಲೆಡೆಯಿಲ್ಲದೆ ನೋಡಿ ಕನಲ್ದು ಜೋಲ್ದು ಕೊಕ್ಕರಿಸಿ ಪೆಱಗ್ಗೆ ಬೆಚ್ಚಿ (ಧರ್ಮಾಮೃ. ೧೩–೧೩೯); ಜ್ವರಕ್ಕೆ ಪೂರ್ವ . . . ಮೈ ಕೊಕ್ಕ [ಪಾಠಾಂ. ಕ್ಕ]ರಿಸಿಕೊಂಡು (ವೈದ್ಯಸಾ. II, ೩೮೬ ಟೀಕು); ಚಳಲಿಕೆಯುಂಟಾಗಿ ಶರೀರವು ಕೊಕ್ಕರಿಸಿಕೊಂಬ ರೀತಿ ಯನ್ನೇಹೆಚ್ಚಾಗಿ ಉಂಟುಮಾಡುತ್ತ . . . ಇರುವುದೇ ಜ್ವರವೆನಿಸಿಕೊಂಬುದು (ಸಕವೈ. ೬೨). ೪. ಅಸಮಾಧಾನಗೊಳ್ಳು; ಕೋಪಗೊಳ್ಳು: ಅಲ್ಲ ಮನ ಮಾತಿಗೆ ಕೊಕ್ಕರಿಸಿ ಕೆಕ್ಕರಿಸಿ ಕೋಪಾಟೋಪವಾವರಿಸಿ (ಪ್ರಭುಲೀ. ೧೩–೧೦); ದುಷ್ಕೃತವನೆಸಗುವರು ಫಲದೊಳು ಕೊಕ್ಕರಿ [ಪಾಠಾಂ. ಕಕ್ಕುಲಿ]ಸುವರು ಸುಕೃತವೆಂಬುವ ಲೆಕ್ಕಿಸರು (ಕುವ್ಯಾಉ. ೪–೯೬). ೫. ತಿರಸ್ಕಾರದಿಂದ ನಗು; ಪರಿಹಾಸಮಾಡು: (ಶ). ೬. ಬೆದರಿಸು; ಹೆದರಿಸು; ಅಂಜಿಸು: "ಕೊಕ್ಕರಿಸು – ವಿಭರ್ತ್ಸನೇ (ನಿರ್ಭರ್ತ್ಸನೇ) ಬೆದರಿಸು" (ಶಮುಧಾ); ಘೂರ್ಮಿಸುತುಂ ಕೊಕ್ಕರಿಸುತಿದಿರಾಂತು ವಿಸಟಂ ಬರಿದುದು. . . ಘೋರವರಾಹಂ (ಶಬಶಂ. ೪–೧೩). [ಕೊಕ್ಕರ₁ + –ಇಸು₃]

**ಕೊಕ್ಕರಿಸು₂** (ಕ್ರಿ). ಕೋರೈಸು; ಕುಕ್ಕು; ಚುಚ್ಚು: ಕೊಕ್ಕರಿಸು ತುಗುವ ತನಿಗೆಂಡಗಳ ಸಲೆ ಮುಕ್ಕುಳಿಸಿ ಮೊಗೆವ ಪೆರ್ಗಿಚ್ಚುಗಳ ವೆಂಕೆ (ಜೈಮಿಭಾ. ೧೩–೧೨); ಕಿಣ್ಣವಡೆದ ಪವಳದ ಪಸರಗಳಾಗ ಕಣ್ಣ ಕೊಕ್ಕರಿಸುತೊಪ್ಪಿದುವು (ಕಂನವಿ. ೬–೬೭); ಬಜಸಿಡಿಲ ಬಿಜುಸರವುಂ ಕೇಳ್ದು ಕೊಡಕೆ ನಿಮಿರೆ ನವಿರ್ಕೊಕ್ಕರಿಸೆ ತಳರ್ನೋಟದಿಂ ನೋಟ್ಟು ಹರಿಣಸಂದೋಹದಿಂದೆಯುಂ (ರಾಮಾಶ್ವ. ೩–೨೮); ಹೊರಚೆಲ್ಲಿದ ಬೆಳಕು ಇವನ ಕಣ್ಣನ್ನು ಕೊಕ್ಕರಿಸಿತು (ಘಾಟೀಮು. ೩೭). [?]

**ಕೊಕ್ಕರಿಸು₃** (ಕ್ರಿ). ಕೂಗು; ಗಟ್ಟಿಯಾಗಿ ಅರಚು: (ಶ).

[ದೇ. ‖ ತಮಿ. ಕೊಕ್ಕರಿ; ತೆಲು. ಕೊಕ್ಕರಿಂಚು]

**ಕೊಕ್ಕರೆ₁** (ನಾ). ೧. ನೀಳವಾದ ಕತ್ತು ಉಳ್ಳ ಒಂದು ಬಗೆಯ ನೀರು ಹಕ್ಕಿ; ಬಕ: ಗಿಳಿಯ ಗೂಗೆಯ ಕೊಕ್ಕರೆಯ ಕ್ರೌಂಚಗಳ (ವೀಶೈಪು. ೩–೧೯–೭); ಕಂಕ ಕೊಕ್ಕರೆ ಶುಕಂ (ಯಾದವ. ೪–೫೩); ಕೊಕ್ಕರೆಗೆ ಒಂದೇ ಕೆರೆಯೆ (ಚೆಂಗೂಲಿ. ೧೨೦). ೨. ಒಂದು ಬಗೆಯ ಸಸ್ಯರೋಗ. 'ಕೊಕ್ಕರೆರೋಗ' ಪರಾ. ೩. (ಕರಾ) ಒಂದು ಬಗೆಯ ಮೀನು.

[ದೇ. ‖ ತುಳು. ಕೊರ್ಂಗ್; ತೆಲು. ಕೊಕ್ಕೆರ, ಕೊಕ್ಕೆರಾಯಿ]

**ಕೊಕ್ಕರೆ₂, ಕೊಕ್ಕಲೆ** (ನಾ). ಒಂದು ಜಾತಿಯ ಮರ: ದೊಡ್ಡ ಜಾಪಾಲಜಪ್ಲೆ, . . . ಕೊಕ್ಕರೆ (ಮೈಔಗಿ. ೬೯–೧೪೦೩). **ಕೊಕ್ಕಲೆ**: ಅಗಳದ ಹಿಂದಣ ಕಾಡವಳಗೆ ಮೂರು ವೇಳ್ಯ ಕೊಕ್ಕಲೆ ಕಟ್ಟೆ ಮಟ್ಟುವ ಶಬ್ದ ಕೇಳಿದ್ದೇ ಹೊರ್ತು (ರಾಜೇಂದ್ರ. ೧೪೧); ಕಾಡಲ್ಲಿ ಕೊಕ್ಕಲೆ ಮುಚ್ಚಿ ಮಡಗಿ ಬಂದರು (ರಾಜೇಂದ್ರ. ೧೪೬). [← ತುಳು. ಕೊಕ್ಕರೆ]

**ಕೊಕ್ಕರೆಕಾಲು** (ನಾ). ಒಂದು ಬಗೆಯ ರೋಗ: ನಾಯಿಕೆಮ್ಮು, ಹಕ್ಕಿರೋಗ, ಜಂತು ಹುಳುಗಳು, ಕೊಕ್ಕರೆಕಾಲು, ಹುಲಿಹುಣ್ಣು – ಖಾಸ್‌ಬಂಗಲೆ ಖಾಯಿಲೆಗಳೆಲ್ಲಾ ನಮ್ಮ ಮನೇಲೆ (ತುಟಮೀ. ೨೯).
[ಕೊಕ್ಕರೆ$_1$ + ಕಾಲು$_1$ (< ಕಾಲ್$_1$)]

**ಕೊಕ್ಕರೆರೋಗ** (ನಾ). ಭತ್ತದ ಬೆಳೆಗೆ ಬರುವ ಒಂದು ಬಗೆಯ ರೋಗ: ಗದ್ದೆಗೆ ಕೊಕ್ಕರೆರೋಗ ಬಂದು ಬೆಳೆಯೆಲ್ಲಾ ಹಾಳಾಯಿತು (ರೂಢಿ). [ಕೊಕ್ಕರೆ$_1$ + ರೋಗ]

**ಕೊಕ್ಕರೇಹುವ್ವಿನಗಿಡ** (ನಾ). ಒಂದು ಬಗೆಯ ಸಸ್ಯ; ಬಕಪುಷ್ಪ: "ಶಿವಮಲ್ಲೀ, ಪಾಶುಪತಃ, ಏಕಾಷ್ಠೀಲಃ, ಬಕಃ, ವಸುಃ – ೫ ಬಕಪುಷ್ಪದ ಹೆಸರು, ಕೊಕ್ಕರೇಹುವ್ವಿನಗಿಡ" (ಸಿದ್ಧಾಂತಿ. ೧೧೫).
[ಕೊಕ್ಕರೆ$_1$ + ಹುವ್ವು (< ಪೂ$_2$) + ಗಿಡ (< ಗಿಡು)]

**ಕೊಕ್ಕಲಿ** 'ಕೊಕ್ಕರೈ' ನೋ.

**ಕೊಕ್ಕಸ** (ನಾ). ಬಲಿಷ್ಠನಾದವನು; ಕಠಿನನಾದವನು; ಗಟ್ಟಿಗ: ಮೆಱೆದುದು ರಕ್ಕಸರ ನುಂಗುವ ಕೊಕ್ಕಸರ ಗಾದೆ (ಕೌಶಿರಾ. ೨೧–೨೭); ಖಳ ಸಿಕ್ಕಿದನು ಹಿಡಿ ಹಿಡಿಯೊ ಹಿಡಿಯೆನೆ ರಕ್ಕಸರ ನೆರೆ ತಿಂಬ ಕೊಕ್ಕಸರಾಯ್ತು ಮರ್ಕಟರು (ಕೌಶಿರಾ. ೨೨–೩). 'ಕಕ್ಕಸ' ಪರಾ.
[ಸಂ. ಕರ್ಕಶ]

**ಕೊಕ್ಕಳಗೊಳ್** (ಕ್ರಿ). ಕುದಿಗೊಳ್ಳು; ಸಂತಾಪಹೊಂದು; ಸಂಕಟಪಡು: ಅಳುಕಿ ನೆಲವಕ್ಕಿ ಕನುಕಿಸುಗುಳನಾಗಿ ಕನಲ್ದುಕ್ಕಿ ಕಿಡುಕಿ ಕೊಕ್ಕಳಗೋಳಿವಂ ಕಕ್ಕಳಗಳಲ್ದು ಮೆಯ್ಯಲೆ ಕುಕ್ಕುಳಗಂದಿ ಪೊಂದೆ ಚಿತ್ತಮಾ ತುಂಬಿಗೆಯಾ (ಬಂಹರಿ. ೧೩–೩೪). [< ಕುಕ್ಕುಳ + ಕೊಳ್$_1$]

**ಕೊಕ್ಕಱ** (ನಾ). "ಬೆಕ್ಕು" (ಅವಚಂ. ಟೀಕೆ): ಕೋಳಿಯ ಅರ್ಕಜದ ಅಱಿವನಱಿದ ಆರು ಹಿರಿಯರ . . . ಕೋಳಿಯ ಕೊಕ್ಕಱನ ಕಪಿಯ ಭಾವದಲಱಿಯದಿದ್ದ ಕಾರಣ ಕೆದಱಿದ ಚರಣ ಉಡುಗಿ . . . ಈ ವರ್ಮವನಱಿದಾತನೆ ಲಿಂಗೈಕ್ಯ ತಾನೆ ಪ್ರಾಣಪುರುಷ (ಅವಚಂ. ೬೨–೩೭೧).
[?]

**ಕೊಕ್ಕಟಗುದಿ** 'ಕುಕ್ಕುಟಿಂಗುದಿ' ನೋ.

**ಕೊಕ್ಕಾಟ** (ನಾ). ಖೋಖೋ ಆಟ: ಹುಡುಗರು ಕೊಕ್ಕಾಟವಾಡುತ್ತಿದ್ದಾರೆ (ರೂಢಿ). [ಕೊಕ್ + ಆಟ]

**ಕೊಕ್ಕಾಡು** (ಕ್ರಿ). ಕೊಕ್ಕನ್ನು ಆಡಿಸು; ಚುಂಚಿನಿಂದ ಕುಕ್ಕು: ಕೆಲವು ಕೆಸರು ಕೆದರಿದುವು; ಕೆಲವು ಕಸದ ರಾಶಿಯಲ್ಲಿ ಕೊಕ್ಕಾಡಿದುವು (ಮಲೆಮ. ೫೨). [ಕೊಕ್ಕು$_2$ + ಆಡು$_1$]

**ಕೊಕ್ಕಿ** (ನಾ). ಕೊಕ್ಕಿನಂತೆ ಬಾಗಿರುವ ಮರದ ಕೊಂಬೆ: (ಕ).
[< ಕೊಕ್ಕೆ$_1$ ?]

**ಕೊಕ್ಕಿಸು** (ಕ್ರಿ). ಮಣಿಸು; ಬಾಗಿಸು; ಕೊಂಕಿಸು: ಕೊಕ್ಕಿಸದಿರು ದೇಹವ ಹೊಱಹೊಟ್ಟೆಯನಕ್ಕುಳಿಸದಿರು (ಯೋಗಾಂವಿ. ೫–೨೨); ದಿಕ್ಕರಿ ಫೀಳಿಟ್ಟುವು ಫಲಸಿರಗಳ ಕೊಕ್ಕಿಸಿದುದು ಫಣಿ (ರಾಮವಿ. ೧೭–೧೦೩).

**ಕೊಕ್ಕಿಸಿಕೊಳ್** = ಕೊಂಕಿಸಿಕೊಳ್ಳು; ಬಾಗಿಸಿಕೊಳ್ಳು; ಮುದುರಿಕೊಳ್ಳು: ಮಂತ್ರಿಮಿತ್ರರು ಸುಕ್ಕಿದಂಗುಲಿಯ ಮುಟ್ಟದರೆ ಠಕ್ಕಿಗಾನೃಪಜಿನಪತಿಯೆಂಬ ಮೋಱಿಯ ಕೊಕ್ಕಿಸಿಕೊಂಡು ಕೈದೆಗೆವ (ಭರಚ. ೯೯–೯೨); ತನ್ನ ದೇಹದ ಕಟ್ಟು ಕೊಱಿಯೆ ಕೊಕ್ಕಿಸಿಕೊಳುತ್ತಂ ನೆಟ್ಟನುತ್ತಮಾಂಗವ ಬಗ್ಗಿಸಲ್ (ಪಾಸೋಪು. ೩–೮೫).
[ಕೊಕ್ಕೆ$_1$ + -ಇಸು$_3$]

**ಕೊಕ್ಕು$_1$** (ಕ್ರಿ). ಅಸಹ್ಯಪಡು; ಕೊಕ್ಕರಿಸು: ಮಕ್ಕಳಾಧೀನದಿ ಸಿಕ್ಕಿದೆ ದೈನ್ಯದಿ ಕಕ್ಕುಲತೆ ಬುದ್ಧಿ ಕೊಕ್ಕದಿಟ್ಟು ನೋದದಿ (ಪುರಂದ. ೩–೧೧–೪).
[?]

**ಕೊಕ್ಕು$_2$** (ನಾ). ಪಕ್ಷಿಯ ಚಂಚು; ಹಕ್ಕಿಯ ಮೂತಿ: ಅದಱೊಳಗೆರಡು ತಲೆ ಮಱಿದು ಒಂದು ತಲೆಯೆಚ್ಚತ್ತು ಹದ್ದಿನ ಕೊಕ್ಕ ತಪ್ಪಿ ಕಾಲುಗುರ ಗಾಯವು ತಪ್ಪಿ (ಅಱಿಮಾ. ೨೦–೫೮); ಉಕ್ಕಿನಿಂದ ಸವೆದ ಕೊಕ್ಕನುಳ್ಳ ಕಾಗೆಗೂಡಿ ಎಯ್ದಿ ತನುವನಱಿದು ತೂಂತುಗೊಱೆದು (ಸಾನಂಚ. ೬–೧೯); ಜೋಲುವ ಕೆಂಗರುಳುಗಳ ಕೊಕ್ಕಲಿ ಕಚ್ಚಿ ಕೀಳುತ (ಕಂಸವ. ೧೫–೬೯); ಕೊಕ್ಕಿನಲಿ ಕೊಕ್ಕು ರೆಕ್ಕೆಯಲಿ ರೆಕ್ಕೆ . . . ಹುದುಗೊಳಿಸಿರುವ ಹಕ್ಕಿಯೆರಡು (ಉಯ್ಯಾಲೆ. ೩–೧); ಪಂಜರದ ಗಿಣಿ ಕೊಕ್ಕು ಚಾಚಿ ಅರಚುತ್ತಿತ್ತು (ಎಮುಕ. ೩೮). 'ಕೊಕ್ಕೆ' ಪರಾ.
[? . / ತುಳು. ಕೋಕಾಯಿ]

**ಕೊಕ್ಕು$_3$**, **ಕುಕ್ಕು$_6$**, **ಕುರ್ಕು**, **ಕೊರ್ಕು** (ನಾ). = ಕೊಕ್ಕರೆ$_1$ ೧: ಅಲ್ಲಿಂ ತಳರ್ದುಪೋಗಿ ಕೊಕ್ಕುಂ ನೀರ್ಗಾಗೆಯುಂ ಬೆಸಗೊಳ್ಳುಂ (ಜೀವಸಂ. ೧೬೩–೩೦ ವ); ಕೊಕ್ಕಿನಾಟವ ಮುಕುಳಿತ ಹಸ್ತವನು ಕೊಕ್ಕಿಗಿಕ್ಕಿ ತೋರ್ಪರು ಕುಶಲದೊಳು (ಭರಚ. ೧೩–೧೨೭). **ಕುಕ್ಕು$_6$**: "ಕುಕ್ಕು–ವಸ್ತ್ರ ಸ್ವಲ್ಪಘಾತನೇ ಪಕ್ಷಿಭೇದೇ ಚ" (ಶಮಧಾ); "ನೀರ್ವಕ್ಕಿ ಕುಕ್ಕು" (ಕರ್ಣಾಸ. ೧೧); ಕುಕ್ಕಿನೋಳಿ ಚೆಲ್ವಿದಿರ್ಗೊಳೆ ಬರ್ಪ ಸೊನ್ನಲಿಗೆಯಾಗೆ (ಅದಿಪು. ೬–೭೧); ಪಿಕ್ಕುಳಿಗ ಚೆಂಬೂತಿ ಗೀಜಗ ಕುಕ್ಕು ಕೋಗಿಲೆ (ಸಾಳ್ವಭಾ. ೫–೨೨). **ಕುರ್ಕು**: ಕಾಗೆ ಗೂಗೆ ಪರ್ದು ಚಕೋರಂ ಹಂಸೆ ಕು[ಪಾಠಾಂ. ಕೊ]ರ್ಕು ಗಿಳಿ ಪುರಳಿ . . . ಮೊದಲಾಗೊಡೆಯ ಗಗನಚರಂ (ವಡ್ಡಾರಾ. ೭೭–೮). **ಕೊರ್ಕು**: ಮೇಲಿನ 'ವಡ್ಡಾರಾ' ಪ್ರಯೋಗದ ಪಾಠಾಂತರವನ್ನು ನೋಡಿ.
[ದೇ. ‖ ತಮಿ. ಮಲ. ಕೊಕ್ಕು. / ಪ್ರಾ. ಕೊಕ್ಕೈ]

**ಕೊಕ್ಕು$_4$** (ಗು). ಅಂಕುಡೊಂಕಾದ; ವಕ್ರವಾದ: ಕಾಳಗಕೆ ಹೋಗುವಾಗ ಹಾವಿನಂತೆ ಕೊಕ್ಕುಕೊಕ್ಕಾದ ನಡೆಗಳಿಂದ ನಡೆವುತ (ಅಶ್ವಟೀ. ೨೩–೫).
[< ಕೊಂಕು$_1$ ?]

**ಕೊಕ್ಕುದೆಱೆ** (ಕ್ರಿ). ಕೊಕ್ಕನ್ನು ತೆರೆ; ಬಾಯಿಬಿಡು: ಕೊಕ್ಕುದೆಱೆ [ಪಾಠಾಂ. ತೆಱಂದೆಱ]ದೋದುವವಂ ಕಳಕಂಠವಾಚಕಂ (ಸೂ ಕ್ತಿ ಸು. ೪–೬೨). [ಕೊಕ್ಕು$_2$ + ತೆಱೆ$_1$]

**ಕೊಕ್ಕುಳಂಗುದಿ** 'ಕುಕ್ಕುಟಿಂಗುದಿ' ನೋ.

**ಕೊಕ್ಕುಳಮೀನು** (ನಾ). ಒಂದು ಜಾತಿಯ ಮೀನು: "ರತ್ನಾನಕಃ – ಕೊಕ್ಕುಳಮೀನು" (ಒಷಧಿ. ೧೩೬).
[ಕೊಕ್ಕುಳ$_0$ + ಮೀನು$_2$ (< ಮೀನ್$_3$)]

**ಕೊಕ್ಕೆ$_1$** (ನಾ). ೧. ವಕ್ರತೆ; ಅಂಕುಡೊಂಕುತನ. 'ಕೊಕ್ಕೆಮಾತು' ಪರಾ. ೨. ಕೊಂಡಿ; ಬಾಗಿದ ಮೊಳೆಯಂತಹ ಸಾಧನ: "ಶಂಕುನಾ – ಕೊಕ್ಕೆಯಿಂದ" (ಬಾಹಟೀ. ೨–೨–೩೬ ವ); ಕೋಡಿನ ಕೊಕ್ಕೆಯಿಂದ ಕುಲಾದ್ರಿಗಳ ತೆಗೆದಿಕ್ಕಿ (ದೇವಿಮ. ೪–೧೧); ಎರಡನ್ನೂ ಕೂಡಿಸಲು ಹೊರಗೆ ಕೊಕ್ಕೆಗಳು (ದಿಲ್ಲಿಪ. ೧೧೩). ೩. ಕುಣಿಕೆ; ತಳುಕು: ಈರ್ವರ ಕೊರಳಿಗೆ ಕೊಕ್ಕೆಗಳನಿಕ್ಕಿ (ಸೌಗಂಧಿ. ೫೩೮–೧೪); ಬಾವಿಯ ಹಗ್ಗಕ್ಕೆ ಕೊಕ್ಕೆಯ ಬಿಗಿದು (ಕಪವು. ೩–೧೦). ೪. ಪಕ್ಷಿಯ ಕೊಕ್ಕು: ಚಂಚು: ಬೆಕ್ಕು ರಕ್ಕಸನಂತೆರ್ದು ಎರಡಱ ಕೊಕ್ಕೆಗಳಂ ಮುಱಿಯೆ (ಪುಣ್ಯಾಸ್ರ. ೬–೪೪ ವ); ಪಕ್ಕವಿಲ್ಲದ್ದಕ್ಕೆ ಕೊಕ್ಕೆ ಇದ್ದರೆ ಪ್ರಯೋಜನವೇನು? (ಗಾದೆ). ೫. ಆಕ್ಷೇಪಣೆ; ಅಡ್ಡಿ. ೬. (ಕರಾ) ಕೊಕ್ಕೆಕೋಲು; ದೋಟಿ: ಕೊಕ್ಕೆಯಿಂದ ಮಾವಿನಕಾಯಿ ಇಳಿಸುತ್ತಿದ್ದಾರೆ (ರೂಢಿ).

**ಕೊಕ್ಕೆಹಾಕು** = ತಡೆಹಾಕು; ಅಡ್ಡಿಮಾಡು: ನನ್ನ ಬಡ್ತಿಗೆ ಕೊಕ್ಕೆಹಾಕಿದರು (ರೂಢಿ).
[ದೇ. ‖ ತಮಿ. ಕೊಕ್ಕಿ; ಮಲ. ಕೊಕ್ಕ; ತುಳು. ಕೊಕ್ಕೆ; ತೆಲು. ಕೊಕ್ಕಿ]

**ಕೊಕ್ಕೆ₂** (ನಾ). ಸುವಾಸನೆಯ ಬಿಳಿ ಹೂ ಬಿಡುವ ಒಂದು ಸಸ್ಯ: (ಕ). [← ತುಳು. ಕೊಕ್ಕೆ]

**ಕೊಕ್ಕೆಕೋಲು** (ನಾ). ೧. ತುದಿಯಲ್ಲಿ ಕೊಕ್ಕೆ ಇರುವ ಕೋಲು; ದೋಟಿ. ೨. ಅಂಕುಶ: "ಅಂಕುಶಃ, . . . ಸೃಣಿಃ – ೭ ಅಂಕುಶದ ಹೆಸರುಗಳು, ಕೊಕ್ಕೆಕೋಲು, ದೋಟಿಕೋಲು" (ಸಿದ್ಧಾಂತಿ. ೨೧೩). [ಕೊಕ್ಕೆ₁ + ಕೋಲು₁ (< ಕೋಲ್₁)]

**ಕೊಕ್ಕೆಚಿಕ್ಕ** (ನಾ). ವಿದೂಷಕ; ಕೋಡಂಗಿ: ಕೋಡಂಗಿಯನ್ನು ವಿದೂಷಕ, ಹನುಮನಾಯಕ, ಮಾಧವಿ, ಕೊಕ್ಕೆಚಿಕ್ಕ ಮೊದಲಾದ ಬೇರೆ ಬೇರೆ ಹೆಸರುಗಳಿಂದ ಕರೆಯುವ ಸಂಪ್ರದಾಯವಿದೆ (ಯಕ್ಷಗಾ. ೨೦). [ಕೊಕ್ಕೆ₁ + ಚಿಕ್ಕ₁]

**ಕೊಕ್ಕೆತಾತಿ** (ನಾ). ಕೊಕ್ಕೆ ಆಕಾರದಲ್ಲಿ ಕೊರಳಲ್ಲಿ ಧರಿಸುವ ಒಂದು ಆಭರಣ: ಆಕೆಯ ಕೊರಳಿಗೆ ಕೊಕ್ಕೆತಾತಿ, ಸರಪಣಿ, ಕರಿಮಣಿ ಸರ ಮತ್ತು ಜೋಮಾಲೆ ಸರಗಳನ್ನು ಸೂಡಿದಳು (ಹುಲಿಹಾ. ೨೦೦). [ಕೊಕ್ಕೆ₁ + ತಾತಿ₁ (< ತಾಯಿತಿ)]

**ಕೊಕ್ಕೆಮನುಷ್ಯ** (ನಾ). ವಕ್ರಸ್ವಭಾವದ ಮನುಷ್ಯ; ಅಡ್ಡಿ ಮಾಡುವ ವ್ಯಕ್ತಿ: (ಕ). [ಕೊಕ್ಕೆ₁ + ಮನುಷ್ಯ]

**ಕೊಕ್ಕೆಮಾತು** (ನಾ). ೧. ವಕ್ರವಾದ ಮಾತು; ಕೊಂಕುಮಾತು; ವ್ಯಂಗ್ಯೋಕ್ತಿ: ಕೈಕೇಯಿಯ ಈ ಕೊಕ್ಕೆಮಾತಿನಿಂದ ಅರಸನಿಗೆ ಹಿಂದಿನ ವರಗಳು ಸ್ಮರಣವಾಗಿ (ತುಳಸಿ. ೧೧೩). ೨. ಅಡ್ಡಿಯ ಮಾತು; ಆಕ್ಷೇಪಣೆ: ನಿನ್ನ ಕೊಕ್ಕೆ ಮಾತು ನನಗೆ ತೊಂದರೆಯನ್ನುಂಟುಮಾಡಿತು (ರೂಢಿ). [ಕೊಕ್ಕೆ₁ + ಮಾತು₁]

**ಕೊಕ್ಕೆಮೂಗು** (ನಾ). ಕೊಕ್ಕೆಯಂತೆ ಬಾಗಿದ ಮೂಗು; ವಕ್ರನಾಸಿಕ: "ಖುರಣಾಃ, ಖುರಣಸಃ – ೨ ಬುರುಡೆ ಮೂಗುಳ್ಳವನು, ಪೀನಸಿ ಮೂಗನು, ಕೊಕ್ಕೆ ಮೂಗಿನವರಿಗೂ ಹೆಸರು" (ಸಿದ್ಧಾಂತಿ. ೧೫೮). [ಕೊಕ್ಕೆ₁ + ಮೂಗು]

**ಕೊಕ್ಕೆಮೊಳೆ** (ನಾ). ತುದಿಯಲ್ಲಿ ಕೊಕ್ಕೆಯಿರುವ ಮೊಳೆ: (ಕ). [ಕೊಕ್ಕೆ₁ + ಮೊಳೆ₂]

**ಕೊಕ್ಕೆಯೆತ್ತಿಗೆ** (ನಾ). "ಲೋಹದ ಕೊಂಡಿ, —ಕೊಕ್ಕೆ; ಭಾರವೆತ್ತುವ ಕಬ್ಬಿಣದ ಕೊಕ್ಕೆ. ಕೊಕ್ಕೆಯೆತ್ತಿಗೆ (Crampon. ಇಂಕನ್ನ). [ಕೊಕ್ಕೆ₁ + ಎತ್ತು₁ + -ಗೆ]

**ಕೊಕ್ಕೆಹುಳು** (ನಾ). ಮುಂಭಾಗದಲ್ಲಿ ಕೊಕ್ಕೆಯಿರುವ ಒಂದು ಬಗೆಯ ಹುಳು: ಮುಂಭಾಗವು ಸ್ವಲ್ಪ ಕೊಕ್ಕೆಯಂತೆ ಬಾಗಿರುವುದರಿಂದ ಇದನ್ನು ಕೊಕ್ಕೆಹುಳು ಎನ್ನುತ್ತಾರೆ (ಪರಜೀ. ೫೪). [ಕೊಕ್ಕೆ₁ + ಹುಳು (< ಪುೞು)]

**ಕೊಕ್ಕೋಕಶಾಸ್ತ್ರ** 'ಕಕ್ಕೋಕಶಾಸ್ತ್ರ' ನೋ.

**ಕೊಗಳಿ** 'ಕೋಗಳಿ' ನೋ.

**ಕೊಗಳು, ಕೊಬಳು** (ನಾ). (ಕರಾ) ಇಪ್ಪಾರು ಗುಡಿಸಲು: ಕೊಪ್ಪವೆಂದರೆ ನೂರಾರು ಮನೆಗಳಲ್ಲ; ಒಂದೇ ಒಂದು ಮನೆ . . . ಮನೆಯಲ್ಲ ಕೊಗಳು, ಗುಡಿಸಲು (ಚೋಮದು. ೬). **ಕೊಬಳು**: ಅವನು ಕೊಬಳಿಗೆ ಮುಳಿಹುಲ್ಲನ್ನು ಹೊದಿಸುತ್ತಿದ್ದಾನೆ (ರೂಢಿ). [? . / ತುಳು. ಕುಬಲ್]

**ಕೊಗಳೆ** 'ಕೋಗಳಿ' ನೋ.

**ಕೊಗಱಿ** 'ಕೋಗಳಿ' ನೋ.

**ಕೊಗಿ** (ನಾ). ಒಂದು ಔಷಧಿ ಗಿಡ (?): "ಚಿಲ್ಲಿ, ಕೊಗಿ" (ಅಕಾನಿ. ೧೦–೩೪). [?]

**ಕೊಗುಳಿ** 'ಕೋಗಳಿ' ನೋ.

**ಕೊಗುಱುದೇಶ** (ನಾ). ಒಂದು ದೇಶದ ಹೆಸರು: ತಸ್ಯಪೂರ್ವತಃ ಕೊಗುಱುದೇಶಪ್ರತಿಬದ್ಧಃ ಅರಿಸಿನವುರನಾಮಗ್ರಾಮ (ಮೈಆರಿ. ೧೯೩೫, ೪೦–೬೮; 951). [ಕೊಗುಱು₀ (< ಕೋಗಳಿ) + ದೇಶ]

**ಕೊಗೆ** (ಕ್ರಿ). ಬಣ್ಣಿಸು; ವರ್ಣಿಸು: "ಕೊಗೆದನೆನಲ್ ಬಣ್ಣಿಸಿದನ್" (ಕರ್ಣಾನಿ. ೨೫). [?]

**ಕೊಗ್ಗ** (ನಾ). ೧. ವಕ್ರತೆ; ಡೊಂಕುತನ. ೨. ಅಸಹ್ಯ ಧ್ವನಿಯುಳ್ಳ ಮನುಷ್ಯ: "ಕೊಗ್ಗ ಮಾಸ್ತರನೇ ಅದರ ತಲೆಗೆ ಹೊಡೆದರೆ ನಾಲ್ಕು ಮಗ್ಗಿ ಉದುರುವುದಿಲ್ಲ" ಎನ್ನುತ್ತಾರೆ (ಸ್ವಪ್ನಹೂ. ೩೪). 'ಕೊಗ್ಗದನಿ' ಪರಾ. [?]

**ಕೊಗ್ಗಡಿ** (ನಾ). ಒಂದು ಸ್ಥಳದ ಹೆಸರು: ಕೊಗ್ಗಡಿ ಮೊಱಗರನಟ್ಟಿ ಇಱಿದು ಸತ್ತು (ಎಕ. X, ಶ್ರೀನಿವಾ. ೮೫–೬; ಸು. 900). [?]

**ಕೊಗ್ಗದನಿ** (ನಾ). ಅಸಹ್ಯವಾದ ಧ್ವನಿ: (ಕ). [ಕೊಗ್ಗ + ದನಿ₂]

**ಕೊಗ್ಗನೆ** (ಅ). = ಕಗ್ಗನೆ: ತಱಿದಿಕ್ಕಿದ ತಳಿರಂತೆ ಕೊಗ್ಗನೆ ಕರಗಿ (ಸುಕುಮಾ. ೧೨–೨೪). [< ಕಗ್ಗನೆ?]

**ಕೊಗ್ಗಿ₁ ಕೊಗ್ಗೆ** (ನಾ). ಒಂದು ಔಷಧಿ ಸಸ್ಯ: "ಶರಪುಂಖೀ – ಕೊಗ್ಗಿ" (ಔಷಧಿ. ೧೬೦); ನಯದಿಂದೆ ಕೊಗ್ಗಿ [ಪಾಠಾಂ. ಪುಗ್ಗಿ] ಪಿಟಿಗೆಜ್ಜೆಯ ಸುಪ್ಪಂ ಬೆರಸು ಕರ್ಣಶೂಲ ವ್ಯಥೆಗೆಕ್ಕೆಯ ಮೂಲಗೆಯಾವುಂಡಲಗೆಯ ಮದವಸಲೆಗಳ ದೆಳಡೊಳೊಂದಂ ಕಿವಿಯೊಳ್ (ಲೋಕೋಪ. ೯–೬೫); ದಾನ ಚತುಷ್ಟಯಂ . . . ಮಾಡದಳಿಪಿಂ ಸುಖಮಂ ಪೀನರ್ ಬಯಸುತುಮಿರ್ಪಂತೇನಾ ಸುಖಮಿದಿರೊಳಿರ್ದ ಕೊಗ್ಗಿಯ ಜೇನೇಂ (ಧರ್ಮಾಮೃ. ೬–೧೪೮); ಅವರೆ ನೆಲ್ಲಿಯಷ್ಟಿಮಧುಕಂ ಶಿಲವಾಸಡಿಕೊಗ್ಗಿಗೋಷ್ಪಯ [ಪಾಠಾಂ. ತಗ್ಗಿಗೋಟ್ಟ್ರಯ]ಂ (ಖಮುದ. ೨–೫೩); ಕಲ್ಲುಪ್ಪು ಕೊಗ್ಗಿ ವೊಸರಿವನೆಲ್ಲಮನೊಡಗೂಡಿಕೊಂಡು (ಅಶ್ವಶಾ. ೬೭–೫೩). **ಕೊಗ್ಗೆ**: "ಕಾಡಪುಂಖ – ಕೊಗ್ಗೆ" (ಔಷಧಿ. ೩೧). [?]

**ಕೊಗ್ಗಿ₂, ಕುಗ್ಗಿ, ಕುಗ್ಗು₃, ಕುಗ್ಗೆ, ಕೊಗ್ಗು, ಗುಗ್ಗೆ** (ನಾ). ೧. ಕಿವಿಯೊಳಗಿನ ಮೇಣದಂತಹ ಕಿಟ್ಟ; ಕರ್ಣಮಲ; ಕೂಗಣಿ: ತಾಂ ಬಗೆವಂದ ಕಿಳ್ಳಮಡು ಕರ್ ಕಿವಿ ಕೊಗ್ಗಿಯ ಪುತ್ತು (ಧರ್ಮಾಮೃ. ೫–೨೮); ವೈಕುಂಠನ ಕಿವಿಯ ಕೊಗ್ಗಿಯಿಂದೊಗೆತಂದಾ ಕೈಟಭಮಧುವನೆನೆ (ಜಗವಿ. ೭–೧೯); ಮೆಲ್ಕಿಱಿವ ಕೋಣನೊಪ್ಪುವ ಕಿವಿಯೊಳ್ ಪೊರೆದಿರ್ಪ ಕೊ[ಪಾಠಾಂ. ಕು]ಗ್ಗಿಯಂ ತಂದಿರದಿಕ್ಕುಗೆ ಪುಣ್ಣೆ ಮುಳ್ಳು ಬೀಟ್ಟುಮವಶ್ಯಂ (ಖಮುದ. ೨–೨೦೩). ೨. ಒಂದು ಸುಗಂಧ ದ್ರವ್ಯ (?): ಎಱಗಿದ ಮಱಿದುಂಬಿಯಂತೆ ಸೊಗಯಿಸೆ ತೀವಿದ ಕೊಗ್ಗಿಯ ಕತ್ತುರಿಯುಂ (ಆದಿಪು. ೪–೪೧ ವ); ಕರ್ಣಾವತಂಸದೊಳ್ ಕೀಲಿಸಿದ ನೀಲದುಸ್ಮುಖಮಯೂಖ ಸಂಕುಳಂ ಕೊಡಂಕೆಯೊಳ್ ತಿಂಬಿತೆಂಬಂತೆ ಕೊಗ್ಗಿಯ ಕತ್ತುರಿಯಂ ಪತ್ತಿಸಿಯುಂ (ಚಂದ್ರಪು. ೬–೬೩ ವ); ಕೊಗ್ಗಿಯೊಳಿಡಿದ ಕತ್ತುರಿಯ ಪರಿಮಳಕ್ಕೆಳಸಿ ಕರ್ಣಪೂರದೊಳ್ ಬಳಸುವಳಿಗಳೊಳ್ (ವರ್ಧಪು. ೭–೯ ವ). **ಕುಗ್ಗಿ**: ೧. ನೊಸಲಷ್ಟಮಿಯ ಚಂದ್ರನೆಂದು ಕುಗ್ಗಿಯ ಕಿವಿಯನಸಮ ಕಿಱುಗಿವಿಯೆಂದು (ಷಟಿಲ. ೨–೫೫). **ಕುಗ್ಗು₃**: ೧. ಮೂಗು ಸಿಂಬುಳ ನಾಳಿ ಉಗುಳಾಗ ಬಾಯ್ಗೆ ಕುಗ್ಗಿನ ಹುತ್ತು ಕಿವಿಗಳು (ದ್ವಾದಶಾ. ೧೯–೪೨೦). **ಕುಗ್ಗೆ**: ೧. (ಕರಾ) ಅವನು ಕಿವಿಯ ಕುಗ್ಗೆಯನ್ನು ತೆಗೆಸಿಕೊಳ್ಳುತ್ತಿದ್ದ (ರೂಢಿ). **ಕೊಗ್ಗು**: ೧. "ಕಿಟ್ಟಂ, ಮಲಃ–೨ ಶರೀರದ ಕೊಳಕಿನ ಹೆಸರು . . . ಕಿವಿಯ ಕೊಗ್ಗಿಗೂ ಸಿಂಬಳಕ್ಕೂ ಶ್ಲೇಷ್ಮಕ್ಕೂ ಕಣ್ಣುನೀರಿಗೂ ಕಣ್ಣ ಗೀಜಿಗೂ ಬೆವರಿಗೂ ಹೆಸರು" (ಸಿದ್ಧಾಂತಿ. ೧೬೩). **ಗುಗ್ಗೆ**: ೧. ಕಿವಿಯಲ್ಲಿ ಗುಗ್ಗೆ ಕಣ್ಣಿನಲ್ಲಿ ಜಾರು (ಸಿದ್ಧೇವ. ೧೪೨); ಕಿವಿಯೊಳಗಣ ಗುಗ್ಗೆ (ಬಾಹಟೀ. ೨–೩–೫೩ ವ). [? . / ತುಳು. ಗುಗ್ಗೆ]

**ಕೊಗ್ಗಡಿ** 'ಕೊಗ್ಗಿಲ' ನೋ.

**ಕೊಗ್ಗಿಲ**, ಕೊಗ್ಗಡಿ, ಕೊಗ್ಗಿಲಿ (ನಾ). = ಕೊಗ್ಗಿ$_{1}$ : ಸೆಣಬಿನ ಬೀಜ, ಕಾಚು, ಕು(ಕೊ)ಗ್ಗಿಲ ವರ ಛತ್ರಕಂಗಳನೆ ಮತ್ತೆ ಕುಜಂಟಗೆಯೊಳ್ಳಿದಪ್ಪ ಸದ್ದಲ ರಸದಿಂದೆ ಮರ್ದಿಸಿರಲ್ (ಖಮುದ. ೮-೪೫). **ಕೊಗ್ಗಡಿ**: ಎದ್ದೇಳಲಾರದ ಬಡ್ಡ ಕೊಗ್ಗಡಿ ಗಿಡ ತಂದಾಳೋ (ಗಾದೆ). **ಕೊಗ್ಗಿಲಿ**: ಕೊಗ್ಗಿಲಿ . . . ಕೊಳಂಜಿ, ವಜ್ರನೀಲಿ (ವ್ಯೆಔಗ. ೭೪-೧೫೦೭). [?]

**ಕೊಗ್ಗಿಲಿ** 'ಕೊಗ್ಗಿಲ' ನೋ.

**ಕೊಗ್ಗು** 'ಕೊಗ್ಗಿ$_{2}$' ನೋ.

**ಕೊಗ್ಗುದಿ** 'ಕೋಳ್ಗುದಿ' ನೋ.

**ಕೊಗ್ಗುದಿಗೊಳ್** 'ಕೋಳ್ಗುದಿಗೊಳ್' ನೋ.

**ಕೊಗ್ಗೆ** 'ಕೊಗ್ಗಿ$_{1}$' ನೋ.

**ಕೊಗ್ಗೆಸರು** 'ಕೊಟಗ್ಗೆಸಱ್$_{2}$' ನೋ.

**ಕೊಗ್ಗೆಸಱ್** 'ಕೋಟಗ್ಗೆಸಱ್$_{1}$' ನೋ.

**ಕೊಗ್ಗೆಸಱು** 'ಕೊಟಗ್ಗೆಸಱ್$_{2}$' ನೋ.

**ಕೊಗ್ಗೆಸೆ** (ಕ್ರಿ). (?): ಇರಿದು ಸವದವು ಕೈದುಂಗಳ್ ಬಲವ ನೆತ್ತರಂ ಪರಿಸಿದರು ಧರಣಿಗೆನೆ ಕೊಗ್ಗೆಸೆದು ಗಜಘಟೆಗಳೊರಲಿ ಕೆಡೆದವು (ತುರಂಗ. ೬೨-೨೨). [?]

**ಕೊಚವಕ್ಕಿ** (ನಾ). = ಕೊಂಚೆ$_{4}$ : ಬೆಳ್ಳಕ್ಕಿ, ಕೊಚವಕ್ಕಿ, ಜಕ್ಕವಕ್ಕಿ . . . ಇವು ಮೊದಲಾದ ಜಲಪಕ್ಷಿಗಳಿಂದಲೂ (ಕೃವಾಸ. ೫೧).

[< ಸಂ. ಕ್ರೌಂಚಪಕ್ಷಿ]

**ಕೊಚಿತ** (ನಾ). ಕೊಂಚ; ತೀರಕಡಮೆ, —ಸ್ವಲ್ಪ: ರಚನೆಗೆ ಪೇಳದ ವಚನವೆಂದೆನಬೇಡ ಕೊಚಿತವು ನಾನು ಪೇಳಿದುದು (ಜಿನರಾ. ೭-೮೮).

[< ಸಂ. ಕ್ವಚಿತ್]

**ಕೊಚೆ** (ನಾ). (?): ಕೆಂಟ ಸೇತ ಕೊಚೆ ಗಡ್ಡ (ಸೌಂದಕಾ. ೫-೧೩). [?]

**ಕೊಚ್ಚಕ್ಕಿ** (ನಾ). ಮೊರದಿಂದ ಕೊಚ್ಚಿ ತೆಗೆದ ಅಕ್ಕಿ; ಹಸನಾದ ಅಕ್ಕಿ: ಬೆಣ್ಣೆ ಅಂತ ಮೈಯೋಳೆ ಎಣ್ಣೆ ತುರುಬೋಳೆ ಕೊಚ್ಚಕ್ಕಿ ಅಂತಾ ಸುಲಿಹಲ್ಲಿನೋಳೆ (ಗೌರಪ. ೭-೧೭). [ಕೊಚ್ಚು$_{2}$ + ಅಕ್ಕಿ$_{1}$]

**ಕೊಚ್ಚರಟೆ** (ನಾ). ತೊದಲುವುದು; ಅಸ್ಪಷ್ಟವಾದ ಮಾತು: ಉಚ್ಚಾರಣೆಗೆ ಕೊಚ್ಚರಟೆಯೆನಿಸುವುದೆಂದು ಮೇಲೆ ಕೊಟ್ಟ ಉದಾಹರಣೆ ದಿಂದ ಗೊತ್ತಾಗುವುದು (ಸಂಶೋಧ. ೫೦). [?]

**ಕೊಚ್ಚಲು** (ನಾ). (ಕರಾ) ತುಂಡು; ಹೋಳು; ತುಣುಕು: ಹಂಚಿದವನಿಗೆ ಕೊಚ್ಚಲು (ಗಾದೆ).

[ಕೊಚ್ಚು$_{3}$ (< ಕೊಚರ್ಚು$_{1}$) + -ಅಲು (< -ಅಲ್$_{2}$)]

**ಕೊಚ್ಚು$_{1}$**, ಕೊಚರ್ಚು$_{2}$ (ಕ್ರಿ). ತನ್ನನ್ನು ಹೊಗಳಿಕೊಂಡು ಮಾತಾಡು; ಜಂಬದ ಮಾತಾಡು; ಅಧಿಕವಾಗಿ ಮಾತಾಡು: ಚಲುವೆಯೆಂದು ಹೆಮ್ಮೆಕೊಚ್ಚುವಳು (ದೇವೀಚಾ. ೧೬); ತಲೆಯೆಲ್ಲ ಹರಟೆ ಕೊಚ್ಚಬೇಡ (ಮೇದಿವು. ೮); ನಿಮ್ಮಪ್ಪ ಎಷ್ಟೆಲ್ಲ ಕಷ್ಟಪಟ್ಟು ನಿಮಗೆ ಕಲಿಸಿದರೆಂದು ಕೊಚ್ಚಿಕೊಳ್ಳುತ್ತಿದ್ದಿರಿ (ವಾತ್ಸಲ್ಯ. ೨೪). **ಕೊಚರ್ಚು$_{2}$**: "ಅತಿವಾಕ್ಯಮಂ ನುಡಿವಲ್ಲಿ . . . ಕೊಚರ್ಚು" (ಶಬ್ದಮಂ. ೮೭); ದೇವರಂತೊಲಿದರ್ ನಿಜರೂಪದೋಱಿದರ್ . . . ಎಂದೆನುತೆ ಕೊಚರ್ಚುವ ದುರ್ವಚನಂ (ಶತಕ. ೭೨-೬೯).

[ದೇ. ‖ ತಮಿ. ಮಲ. ಕೊಞ್ಚು; ತುಳು. ಕೊಜ್ಚು]

**ಕೊಚ್ಚು$_{2}$** (ಕ್ರಿ). ಕಾಳು ಮೊದಲಾದುವನ್ನು ಮೊರದಲ್ಲಿ ಹಾಕಿ ಕುಲುಕಿ ಕಸಕಡ್ಡಿ, ನುಚ್ಚು ತೌಡುಗಳನ್ನು ಬೇರ್ಪಡಿಸು: ಬೂರಗದ ಮರದ ಒಳಚಕ್ಕೆಯನ್ನು ಬೆಳತಿಗೆಯಕ್ಕಿಯನ್ನೂ ಕೂಡ ಇಡಿದು ಕೊಚ್ಚಿಕೊಂಡು (ಸಕವೈ. ೨೦೪). 'ಕೇರು' ಪರಾ.

[ದೇ. ‖ ತೆಲು. ಕೋಡು; ಕೋಲಾ. ಗೊಂಜಿಪ್; ಗೊಂಡಿ. ಕೊಸ್ಸಾನಾ; ಕುವಿ. ಕೊರ್ಸಲಿ, ಕ್ರೋಸ್]

**ಕೊಚ್ಚು$_{3}$** 'ಕೊಚರ್ಚು$_{1}$' ನೋ.

**ಕೊಚ್ಚು$_{4}$**, ಕೊಚರ್ಚು$_{3}$, ಗೊಚ್ಚು (ನಾ). ಉಚ್ಚೆಯ ನಾತ: (ಕ). **ಕೊಚರ್ಚು$_{3}$**: "ಮೂತ್ರಗಂಧದೊಳು. . .ಕೊಚರ್ಚು" (ಶಬ್ದಮಂ. ೮೭). **ಗೊಚ್ಚು**: ಉಚ್ಚೆಯ ಗೊಚ್ಚು (ರೂಢಿ).

[ದೇ. ‖ ತುಳು. ಕುಜರು; ತೆಲು. ಕಚ್ಚು; ಗಚ್ಚು]

**ಕೊಚ್ಚು$_{5}$** (ನಾ). ೧. ಕತ್ತರಿಸುವ ಸಾಧನ; ಕತ್ತರಿ: ಮಚ್ಚರಿಸುವರ ಬಿಚ್ಚು ಕುಜನರ ಬೆಚ್ಚು ಶಾಂತಿಯ ಹೆಚ್ಚು ಧೂರ್ತರ ಕೊಚ್ಚು ಕಲಿತನ ದಚ್ಚು ಸುಖಕಣಿಮುಚ್ಚುವಂಜಿಯಿಲ್ಲ (ಬಸವು. ೨೮-೪೭); ಕಲ್ಲಿನ ಮೇಲೆ ನಿಶಿತವಾದ ಕೊಚ್ಚನ್ನು ಇಡಲಾಗಿತ್ತು (ಹಬ್ಬಬ. ೭೪). ೨. ಕತ್ತರಿಸಲ್ಪಟ್ಟುದು; ಪುಡಿ; ಹುಡಿ: "ಕೊಚ್ಚೆಂದು ಪುಡಿ" (ಕಶಸಾ. ೩೧-೬೬೭). ೩. ಕೊಚ್ಚುವ ಕ್ರಿಯೆ; ಕತ್ತರಿಸಲ್ಪಡುವಿಕೆ: (ಕ).

[< ಕೊಚರ್ಚು$_{1}$]

**ಕೊಚ್ಚು$_{6}$** (ನಾ). ೧. ಧಾನ್ಯರೂಪದಲ್ಲಿ ಕೊಡುವ ಕೂಲಿ; ಪಡಿ: ಅವರಿಗೆ ಎರಡು ದಿವಸದ ಕೊಚ್ಚು ಕೊಡುವ ಭರವಸೆಯಿಂದ (ಮರವು. ೬೦); ಕೊಚ್ಚು ಕೊಡಲು ಅಕ್ಕಿ ಬೇಕಾಗುತ್ತದೆ (ಸ್ವಪ್ನಹೊ. ೧೮೨). ೨. ಪಡಿತರ; ನಿರ್ದಿಷ್ಟಪಡಿಸಿದ ಆಹಾರ: ಶೃಂಖಳ ಬಂಧನೆಯಂ ಮಾಡಿ ತಲೆವಾಗಿಲ ಕೆಲಸ ಪುಲುಮನೆಯೊಳಿರಿಸಿ ಕೊಚ್ಚ[ಪಾಠಾಂ. ಕೊಲಿಚ, ಕೊಜಿಚ] ನಿಕ್ಕಿ ನಡುಸುತ್ತುಮಿರ್ದಳ್ (ವರ್ಧಪು. ೧೫-೫೪ ವ).

[< ಕೊಚ್ಚು$_{2}$ ?]

**ಕೊಚ್ಚು$_{7}$**, ಕೊಚರ್ಚು$_{4}$ (ನಾ). ಗೊಂಚಲು; ಗುಚ್ಛ; ಕುಚ್ಚು: "ಕೊಚ್ಚು, ಕೊಚರ್ಚು = ಗೊಂಚಲು" (ಗಂಗಾಮ. ೧೦೧). **ಕೊಚರ್ಚು$_{4}$**: ಮೇಲಿನ ಪ್ರಯೋಗವನ್ನು ನೋಡಿ. [< ಕುಚ್ಚು$_{4}$ ?]

**ಕೊಚ್ಚುಗೊಲ್ಪಿ** (ನಾ). ಕತ್ತರಿಸುವ ಕತ್ತಿ; ಕೊಚ್ಚುಗತ್ತಿ: ಬೆಂಕಿಗಾಗಿ ಕಟ್ಟಿಗೆ ತಂದೊಟ್ಟುವುದು, ಎಲುಬು ಕತ್ತರಿಸಲು 'ಕೊಚರ್ಚುಗೊಲ್ಪಿ'ಗಳನ್ನು ತಯಾರಿಸುವುದು (ಕಾನೂರು. ೨೪೭).

[ಕೊಚ್ಚು$_{3}$ (< ಕೊಚರ್ಚು$_{1}$) + ಗೊಲ್ಪಿ]

**ಕೊಚ್ಚುದಱ** (ಕ್ರಿ). ಚೂರು ಚೂರಾಗಿ ಕತ್ತರಿಸು: ಎನಿತ್ತೆನಿತ್ತಂ ಲಕ್ಷ್ಮಣನಿಸುವನನಿತ್ತನಿತ್ತಂ ಕೊಚ್ಚುದಱವಂ ಲವಂ (ರಾಮಾಶ್ವ. ೧೫೯-೨೪). [ಕೊಚ್ಚು$_{3}$ (< ಕೊಚರ್ಚು$_{1}$) + ತಱ$_{1}$]

**ಕೊಚ್ಚುಬಲೆ** (ನಾ). ಸಮುದ್ರದ ತೆರೆ ಕೊಚ್ಚಿಕೊಂಡು ಹೋಗುವಂತೆ ಬಿಟ್ಟ ಮೀನುಬಲೆ: "ಹೆರಿಂಗ್ ಮೊ. ಮೀನುಗಳನ್ನು ಹಿಡಿಯುವುದಕ್ಕಾಗಿ ಸಮುದ್ರದ ಉಬ್ಬರವಿಳಿತಗಳು ಹೊಡೆದುಕೊಂಡು ಹೋಗುವಂತೆ ಬಿಟ್ಟ ದೊಡ್ಡ ಬಲೆ; ಕೊಚ್ಚುಬಲೆ" (Drift net. ಇಂಕಪ).

[ಕೊಚ್ಚು$_{3}$ (< ಕೊಚರ್ಚು$_{1}$) + ಬಲೆ$_{1}$]

**ಕೊಚ್ಚೆ**, ಗೊಚ್ಚೆ, ಗೊಜ್ಜೆ$_{1}$ (ನಾ). ಕೆಸರು; ಕೊಳಚೆ; ರಾಡಿ; ರೊಚ್ಚು: ಉಚ್ಚೆಯ ಬಚ್ಚಲ ಕೊಚ್ಚೆಯ ಮಚ್ಚಿ (ನಗೆಮಾ. ೮೧); ಇಷ್ಟಾದರೂ ಇವಳ ಕಾಲಿನ ಕೊಚ್ಚೆ ಚೆನ್ನಾಗಿ ಹೋಗಲಿಲ್ಲಾ (ನೀತಿಚಿಂ. IX, ೩೨); ಮಳೆಯಿಲ್ಲದಿರೆ ಕೊಚ್ಚೆಯುಂಟೆ (ಇಂಚಾಪ. ೨೦೭-೨೩). **ಗೊಚ್ಚೆ**: "ಕೆಸರು; ರಾಡಿ" (ಜಾನಕೋ. ೫೧). **ಗೊಜ್ಜೆ$_{1}$**: ವೈ ಆಳದ ಗೊಜ್ಜೆಯಲ್ಲಿ ಬಿದ್ದಾಗ ಪಿಚಕ್ಕನೆ ಗೊಜ್ಜೆ ಚಿಮ್ಮಿ ಸೊಂಟದವರೆಗೆ ಹೂತು ಹೋದ (ನಡೆದಾ. II, ೧೨೩೩).

[< ಕೊಚಿಚೆ ?]

**ಕೊಜಕು** (ನಾ). (ಕರಾ) ಸಣ್ಣ ಪುಡಿ; ಹರಳು; ಹಳುಕು.

[← ತುಳು. ಕೊಜಕ್]

**ಕೊಜ್ಜೆ, ಕೊಜ್ಜೆ, ಖೊಜ್ಜೆ, ಖೋಜಾ, ಖೋಜೆ, ಖ್ವಾಜಾ** (ನಾ). (ವೇಶ್ಯೆಯ ಬಾಗಿಲು ಕಾಯುವ) ನಪುಂಸಕ ದಾಸ; ರಾಣಿವಾಸದ ದ್ವಾರಪಾಲಕ: ಸ್ಥೂಲ ದೇಹವ ತಾಳ್ದ ಕೊಜ್ಜೆಯರ್ ಬಹಳವ ಕೋಲ ಗೋಲ್ವಾಳ ಚಿತ್ತೈಸು (ಮೋಹತ. ೨೦-೬೦); ಅಜ್ಜಿಯಿಲ್ಲದ ಮನೆಯು ಮಜ್ಜಿಗಿಲ್ಲದ ಊಟ ಕೊಜ್ಜೆಯರಿಲ್ಲದರಮನೆಯು ಇವು ಮೂರು ಲಜ್ಜೆಗೇಡೆಂದ (ಸರ್ವಜ್ಞ. ೭೯೦); ಮರುಳ ಕೊಜ್ಜೆಯ ದೈತ್ಯರಂ ಕಾವಲಂ ಗೊಟ್ಟು (ನವಮೋ. ೨೩-೩೮). **ಕೊಜ್ಜೆ**: "ಷಂಡಃ, ವರ್ಷಧರಃ – ಈ ೨ ರಾಣಿವಾಸದ ಕವಲೆ ಕೊಜ್ಜೆಯನು" (ನಾಚಿರಾ. ೧೩೧). **ಖೊಜ್ಜೆ**: ಬಂದುಸಿರ್ದರ್ಳು ಬಾಗಿಲೊಳಿಪ್ಪ ಖೊಜ್ಜೆಯ ದೈತ್ಯರಿಗೆ (ಮೋಹತ. ೨೩-೭); ಸವಿವಾತಿನಲಿ ನಾರಿಯರ ಉಪಚರಿಸಿ ಖೊಜ್ಜೆಯರ ಕರಿಸಿ (ಶ್ರೀಕೃಪಾ. ೧೭). **ಖೋಜಾ**: ಪಶ್ಚಿಮ ದೇಶಗಳಿಂದ ಖೋಜಾಗಳನ್ನೂ, ದಾಸದಾಸಿಯರನ್ನೂ, ರೇಷ್ಮೆಯನ್ನೂ . . . ತೆಗೆದುಕೊಂಡು (ಪ್ರವಾಇ. I, ೨೯೯); ನರ್ತಕಿಯರ ಪಕ್ಕವಾದ್ಯದವರಾದ ಖೋಜಾಗಳಿಬ್ಬರು ಒಳಕ್ಕೆ ಬಂದು . . . ಸಲಾಂ ಮಾಡಿದರು (ರಾಜಯೋ. ೧೩೦); ಸ್ತ್ರೀ ಪಾತ್ರವನ್ನು 'ಖೋಜಾ' ಜನರು ವಹಿಸತಕ್ಕದ್ದು (ಮುಂಗಾಪು. ೫). **ಖೋಜೆ**: ಖೋಜೆಗೆ ಈ ಸಮಸ್ಯೆ ಇಲ್ಲ; ಕಲ್ಲಿಗೆ, ಗೋಡೆಗೆ ಇಲ್ಲ (ಬಂಕಿಮ. ೨೧೧). **ಖ್ವಾಜಾ**: ಖ್ವಾಜಾಗಳನ್ನು ಬಿಟ್ಟರೆ ಬೇರೆ ಗಂಡಸರಿಗೆ ಇವರ ಅಂತಃಪುರಕ್ಕೆ ಪ್ರವೇಶವಿಲ್ಲ (ಪ್ರವಾಇ. II, ೩೬೩).
[← ಹಿಂ. ಮರಾ. ಖೋಜಾ; ಪಾರ. ಖ್ವಾಜಾ]

**ಕೊಜ್ಜೆ** 'ಕೊಜ್ಜೆ' ನೋ.

**ಕೊಟಕ₁** (ನಾ). ಒಂದು ಬಗೆಯ ಸುಂಕ: ಅತಃ ಪರಂ ಪ್ರಾಕೃತ ಭಾಷಯಾ ವರ್ಣ್ಯತೇತಾನಿ ದತ್ತಾನಿ ಸುಜ್ಞಾ[ನಿ]ವ್ರಿಜ್ತಿ . . . ಇಪ್ಪರ್ಲಂ ಪೆಜಿ [ಸೋ]ಳಿಪ್ಪರ್[ಲಐ]ಯ್ದಡೆ ಕೊ[ಟಕಾ] ಇಪ್ಪರ್ತ್ತೈದಂ ಉಜಿಲ್ಲಾಗೆ ಸಾಲೆ ಒಳರೇ ವ[ರ್ಣ್ಣ]ಸಿಗೆಯಿಯದು (ಕಇ. I, ೨-೧೩; 621). [?]

**ಕೊಟಕ₂** (ನಾ). (?): ಕುರುಭೂಮಿಯೆ ಖಡ್ಗಡಿಗಳ್ ಸುಟಿಯೆಗಳ ಜ್ಯೋದರಾ ಗಿಳಿಗಳ್ ಕೊಟಕರಾಗಿರೆ ಮುಂಬುಗಳೆದು ಕಾದಿದರರಿಬಿರುದರ್ ಕಾದುವಂತೆ ಕುರು ಪಾಂಡುಸುತರ್ (ಗದಾಯು. ೮-೧೪). [?]

**ಕೊಟಕಿಡು** (ಕ್ರಿ). ನೆಗೆದಾಡು; ಜಿಗಿದಾಡು: ಮೇದು ತಣಿದು ಕೊಟಕಿಟ್ಟಾಡುವ ಮೃಗಂಗಳೊಳ್ (ಅನಂಪು. ೧೧-೩೯ ವ). ℙ 'ಕೊಣಕಿಡು' ಎಂಬುದರ ಅಪಲಿಖಿತವಿರಬಹುದು.

**ಕೊಟಗ** (ನಾ). ಒಬ್ಬಾತನ ಹೆಸರು: ಸಾನ್ತಯ್ಯ ಕೊಟಗನ್ನಮ್ಮನ್ನು ತುಜುವ ಕೊಣ್ಣು ಪೋಪಾಗದಟ್ಟ ಬನ್ನಾಂಡಿ ತುಜುವ ಮಗುಬ್ಬು ಸುರಸತಿಗೆ ಸನ್ದ (ಮೈಆರಿ. ೧೯೪೧, ೨೫-೧೪; 1030). [?]

**ಕೊಟಗಾಜಿ** 'ಕೊಟ್ಟಗಾಜಿ' ನೋ.

**ಕೊಟಡಿ, ಕೊಟ್ಟಡಿ, ಕೊಠಡಿ** (ನಾ). ಚಿಕ್ಕಮನೆ; ಕೋಣೆ: ಇವನಿಗಾಗಿ ಬೇರೆ ಕೊಟಡಿಯನ್ನು ಬಿಡಿಸಿದರು (ನೀತಿಚಿಂ. II, ೭); ಕೊಟಡಿ ಅಚ್ಚುಕಟ್ಟಾಗಿದ್ದಿತು (ರಂಗಕ. ೧೧); ನೆಕ್ಲುದೊವ್ ಸುಮಾರು ಐದು ನಿಮಿಷ ಆ ಕೊಟಡಿಯಲ್ಲಿದ್ದನು (ಪುನರು. ೧೮೭). **ಕೊಟ್ಟಡಿ**: ಕೊಟ್ಟಡಿಯ ಬಾಗಿಲನ್ನು ಇಡರೆತ್ತಿದರು (ನೀತಿಚಿಂ. II, ೭). **ಕೊಠಡಿ**: ಕೊಠಡಿಯ ಬಾಗಿಲನ್ನು ತೆರೆದು ಒಳಗೆ ಹೋಗಿ (ಸುಂದರಿ. ೬೫); ಸ್ನಾನ ಊಟ ಉಪಚಾರ ಸ್ವಾಗತಾದಿಗಳಿಗೆ ಬೇರೆಬೇರೆ ಕೊಠಡಿಗಳಿರಬೇಕು (ಜೀವಾತ್ಮ. ೧೭೨). [← ಹಿಂ. ಮರಾ. ಕೋಠಡೀ, ಕೋಠರೀ]

**ಕೊಟಾಯಿಸು, ಕುಟಾಯಿಸು, ಗುಟಾಯಿಸು, ಗೊಟಾಯಿಸು** (ಕ್ರಿ). ತಿರುವು; ಬೆರಸು: ಔಷಧಿಯನ್ನು ಕೊಟಾಯಿಸಿ ನುಣ್ಣಗೆ ಮಾಡಬೇಕು (ರೂಢಿ). **ಕುಟಾಯಿಸು**: (ಕ). **ಗುಟಾಯಿಸು**: (ಕ). **ಗೊಟಾಯಿಸು**: ಗೊಟಾಯಿಸಿದ ಔಷಧಿ (ರೂಢಿ). [< ಕೂಟು ? + -ಇಸು₃]

**ಕೊಟಾರ** 'ಕೊಟ್ಟಾರ₁' ನೋ.

**ಕೊಟಾರಿಕೆ, ಕೊಠಾರಿಕೆ** (ನಾ). ಉಗ್ರಾಣದ ಮೇಲ್ವಿಚಾರಣೆ; ಕಣಜವನ್ನು ನೋಡಿಕೊಳ್ಳುವ ಅಧಿಕಾರ: ಕುಮಾರನ ಕುಮಾರಿಕೆಗೆ ಸತತಂ ಕುಬೇರನನು ನಚ್ಚಿನ ಕೊಟಾರಿಕೆಗೆ ಪರುಟವಿಸಿ ಕೊಂಡಾಂ ಬರುತ್ತೊಡಗೊಂಡು ಬಹೆನೆಂದನು (ಸೋಮಚ. ೧-೫೩). **ಕೊಠಾರಿಕೆ**: ಆ ದೇವರ ಕೊಠಾರಿಕೆ ಅಂತು ನಿಯೋಗವೆರಡಕ್ಕಂ ಜೀವಿತಗದ್ಯಾಣಂ (ಎಕ. XII, ಚಿಕ್ಕನಾ. ೨-೩೧; 1261). [ಕೊಟಾರ(<ಕೊಟ್ಟಾರ₁)+ -ಇಕೆ]

**ಕೊಟಿಗೆ** 'ಕೊಟ್ಟಿಗೆ' ನೋ.

**ಕೊಟುಂಬ** (ನಾ). = ಕುಟುಂಬ: ಸುತ್ತಿದ ಕೊಟುಂಬ ಸಹಿತಂ . . . ರವುರವಕೆ ಗಳಗಳನಿಳಿಗುಂ (ಎಕ. VII, ಶಿವಮೊ. ೭೮-೩೭; 1291).
[< ಸಂ. ಕುಟುಂಬ]

**ಕೊಟೆಗಾರ** (ನಾ). ಒಂದು ಜಾತಿಯ ಹೆಸರು: ಕೊಟೆಗಾರರು ಅಥವಾ ಮೆಕ್ರಿಗಳು ಸಿಂದಿಯ ಬುಟ್ಟಿಗಳನ್ನು ಹೆಣೆದು ಮಾರುವವರು; ಸೌದೆ ಮಾರುವವರು, ಭಿಕ್ಷೆ ದೀವಟಿಗೆ ಹಿಡಿವರು (ಕಭಾಗ. ೨೨೧). [?]

**ಕೊಟ್ಟೆ₁, ಗೊಟ್ಟೆ₁** (ನಾ). ದನಕರುಗಳಿಗೆ ಔಷಧಿ, ಆಹಾರ ಮುಂತಾದುವನ್ನು ಹಾಕಲು ಬಳಸುವ ಬಿದಿರಿನ ಕೊಳವೆ: ನಗರೆಯೆಲೆ ಕನಕಪತ್ರಮು ಮೊಗನಿಯ ತಿಗುಡಿಂತಿವೆಲ್ಲಮಂ ಕೊಟ್ಟೆದೊಳಿಕ್ಕುಗೆ ವಾಜಿಗೆ ತದ್ರಸಮಂ (ಅಶ್ವಶಾ. ೧೧-೪೪). **ಗೊಟ್ಟೆ₁**: ಕಾಳಾಯಸ ರಸಮನೊಟ್ಟಯಿಸಿ ಗೊಟ್ಟಂಗುಡಿಯಿಸುತ್ತೆ (ಅಜಿಪು. ೧೧-೧೦ವ); ರಾಗಿ ಅಂಬಲಿ ಮಾಡಿ ಗೊಟ್ಟದಲುಯ್ಯ (ನನ್ನೂರು. ೨೮೮). [ದೇ. ‖ ತಮಿ. ಕೊಟ್ಟ; ತುಳು. ತೆಲು. ಗೊಟ್ಟ]

**ಕೊಟ್ಟೆ₂, ಕೊಟ್ಟೆ₃** (ನಾ). ೧. ಜಂಬ; ದರ್ಪ. ೨. ತುಂಟತನ; ಪುಂಡಾಟ. ೩. ತುಂಟ; ಪುಂಡ: ಬಂದರಿಳೆ ಬೆಸಲಾದವೊಲು ತಟ್ಟುಗಳ ಕೊಟ್ಟಗಳು ಗುಂಡಿಗೆಯ ಬಂಡರು (ಸಿದ್ಧೇಪು. ೭-೬). **ಕೊಟ್ಟೆ₃**: ೧. ಶ್ರೀನಿವಾಸನ ಕೊಟ್ಟೆಯನ್ನು ಇಳಿಸುವುದೂ ಅನೇಕರ ಇಚ್ಛೆಯಾಗಿತ್ತು (ಶಿವರಾ. ೫೧). [ದೇ. ‖ ತಮಿ. ಕೊಟ್ಟ; ತೆಲು. ಗೊಟ್ಟು]

**ಕೊಟ್ಟೆ₃** (ನಾ). ಒಂದು ಮುಳ್ಳು ಪೊದೆ: (ಕ).
[ದೇ. ‖ ತಮಿ. ಕೊಟ್ಟೈ, ಕೊಣ್ಣೈ]

**ಕೊಟ್ಟೆ₄** 'ಕೋಂಟೆ' ನೋ.

**ಕೊಟ್ಟೆ₅** 'ಕೋಡು₃' ನೋ.

**ಕೊಟ್ಟೆ₆, ಗೊಟ್ಟೆ₅** (ನಾ). ೧. ನೆಲೆಮನೆ; ಬೀಡು; ವಾಸಸ್ಥಾನ: ಕಳ್ಳರ ಕೊಟ್ಟಮಿದೆಂದೊಡೆ ಬಲ್ಲಿದರುಂ ನಡುಗುತಿರ್ಪರ್ (ಧರ್ಮಾಮೃ. ೧೨-೨೩೬); ಎಂಟಡಿಯ ಹೊಳಲ್ ಕಾಟಿಯ ಕೊಟ್ಟಂ ಖಗ್ಗಿಯ ಪಳ್ಳಿ (ಜಯಕಾ. ೧೫-೨೩); ಕೊಳರ್ವಕ್ಕಿಗಳ ಕೊಟ್ಟ[ಪಾಠಾಂ. ಟ್ಟೆ]ತುಂಬಿಯ ತುಜುಪಟ್ಟೆ ಕಳಹಂಸೆಗಳ ಕಾಳೆಗದ ಕಳ (ಕುರಾಸಾಂ. ೨-೯೨); ಬೆಳ್ಳಿಯ ಬೆಟ್ಟವಘುಕುಲಂ ಪೊಗದ ಕೊಟ್ಟಂ (ಕೊಟ್ಟೂಬ. ೧-೫೪). ೨. ರಾಜ್ಯದ ಸಣ್ಣ ವಿಭಾಗ; ಜಿಲ್ಲೆ: ಮಲೆಯ ನಾಯಕ ಮುಖ್ಯವಾದ ಹದಿನೆಂಟು ಕೊಟ್ಟದಾಳು ಬಂದು (ಮೈಆರಿ. ೧೯೩೮, ೩-೭; 1299); ಅಲ್ಲಿಗಲ್ಲಿಗೆ ಮನ್ನೆಯ ಕಾಣಿಸಿಕೊಳುತಲ್ಲಿಗಲ್ಲಿಗೆ ಕೊಟ್ಟ[ಪಾಠಾಂ. ಡ]ದವರಾ (ಕುರಾಸಾಂ. ೪೧-೭೩); ಆ ದೇಶದೊಳಗಲ್ಲಲ್ಲಿ ಕೊಟ್ಟಂಗಳಾಗಿರ್ಪುವು (ಚಬಪು. ೬೩-೬೩); ವಿರೂಪಾಕ್ಷ ಕೆಟ್ಟು ಮೂವತ್ತೆರಡು ಕೊಟ್ಟವಾದಾವು (ಕಾಲಸಂ. ೨೫೧); ಕುರ್ರಂ ಅಥವಾ ಕೊಟ್ಟಂ ಎಂದರೆ ಜಿಲ್ಲೆಗಳಾಗಿ ಊರ್ ಅಥವಾ ಗ್ರಾಮ ಎಂದರೆ ಹಳ್ಳಿಗಳಾಗಿ ವಿಭಾಗಿಸಲ್ಪಟ್ಟಿದ್ದುವು (ದಭಾಇ. ೧೦೩). **ಗೊಟ್ಟೆ₅**: ೧. ಶಿವನೆಂಬ ದುಟ್ಟಗೊರವಂ ಮಂಜುವೆಟ್ಟವುಂ ಗೊಟ್ಟಂಮಾಡಿ . . . ಮೆಯ್ಯಜಿಯದಿರ್ಪಂ (ಕಬ್ಬಿಕಾ. ೧೪೫). [< ಸಂ. ಕೋಷ್ಠ]

**ಕೊಟ್ಟ$_7$**, ಗೊಟ್ಟ$_6$, ಗೊಟ್ಟ$_2$ (ನಾ). ದನಕರುಗಳ ಹಟ್ಟಿ ; ಕೊಟ್ಟಿಗೆ: "ಕೊಟ್ಟ – ಕೋಷ್ಠ, ಗೋಷ್ಠ" (ತದ್ಭ ಕೋ. ೯) ; "ಗೋಸ್ಥಾನಕ – ಆಕಳುಗಳು ಇರುವ ಕೊಟ್ಟವು" (ಸಿದ್ಧಾಂತ. ೧೦೩) ; ನಿವೇಶನಂ ಕೊಟ್ಟ ಇಕ್ಕುವವರ್ಗೆ ಗಾಮುಣ್ಡುಗರ್ಗ್ಗಂ ಕೀಱ್ಜಾತಿಯ ಮುಕ್ಕರ್ಗ್ಗಂ ಪ್ರತ್ಯೇಕಂ ಮನೆಯೊನ್ದು (ಎಇ. XX, ೬೮–೪೩ ; 1012). **ಗೊಟ್ಟ$_6$**: "ಗೊಟ್ಟ, ಗೋಟ್ಟ (ಕೊಟ್ಟ) – ಗೋಷ್ಠ" (ತದ್ಭ ಕೋ. ೧೧). **ಗೊಟ್ಟ$_2$**: ಗೊಟ್ಟಿಯ ನಡುವೊಳು ಕೊಬ್ಬಿದ ಹೋರಿಯ ಕೊಂಬಿನ ಕೊನೆಯೊಳು ಗೋವು (ಗಾಥಾಸ. ೫–೬೦).

[ದೇ. ‖ ತಮಿ. ಕೊಟ್ಟ ; ಮಲ. ಕೊಟ್ಟಿಲ್ ; ತುಳು. ಕೊಟ್ಯ. / ಸಂ. ಗೋಷ್ಠ]

**ಕೊಟ್ಟ$_8$**, ಕೋಠ, ಕೋಷ್ಟ, ಕೋಷ್ಟಿ (ನಾ). ೧. ಕುಷ್ಠರೋಗ ; ತೊನ್ನು: "ಕೊಟ್ಟ (ಕುಟ್ಟ) – ಕುಷ್ಠ = ತೊನ್ನು" (ತದ್ಭಕೋ. ೯). **ಕೋಠ**: ೧. ದುಂಡು ಮಚ್ಚೆಯನ್ನುಳ್ಳ ಬಿಳಿಯ ತೊನ್ನು ; ಶ್ವೇತಕುಷ್ಠ. ೨. ಹುಳುಕಡ್ಡಿ ; ಗಜಕರ್ಣ: (ಕಿ). **ಕೋಷ್ಟ**: ೧. ಈದನಾವನೊರ್ಬ್ಬನಿಲ್ಲೆಂದನ ಬಾಯಲು ಕೋಷ್ಟಂ ಮೂಡುಗು (ಸೌಇಇ. XI–i, ೨೨೫–೧೫; 1151) ; ಈದನವಿತಥಮೆಂದವನ ಬಾಯಲು ಕೋಷ್ಟಮೂಡುಗುಂ (ಸೌಇಇ. IX–i, ೩೨೩–೯ ; 1195). ೩. ಚಂಗಲ ಕೋಷ್ಟವೆಂಬ ಮೂಲಿಕೆ: "ವ್ಯಾಧಿಃ, ಕುಷ್ಟಂ, ಪಾರಿಭಾವ್ಯಂ, ವಾಪ್ಯಂ, ಪಾಕಲಂ, ಉತ್ಪಲಂ – ಈ ೬ ಕೋಷ್ಟಂ" (ನಾಚಿರಾ. ೧೪೧). **ಕೋಷ್ಟಿ**: ೧. ಇದನಾವನಿಲ್ಲೆಂದನ ಬಾಯಿ ಕೋಷ್ಟಿ ಮೂಡುಗು (ಸೌಇಇ. IX–i, ೨೩೫–೧೯ ; 1141). [< ಸಂ. ಕುಷ್ಠ]

**ಕೊಟ್ಟ$_9$** 'ಕೊಡು$_1$' ಪರಾ.

**ಕೊಟ್ಟಗಾಱ**, ಕೊಟಗಾಱ (ನಾ). ಕೋಟೆಯ ಕಾವಲಿನವನು ; ದುರ್ಗದ ಸೈನಿಕ: ಇಟ್ಟ ಕಬ್ಬುನ ಕೋಲುಗಳ ಪಿಡಿದಿಟ್ಟಣಿಸಿ ಬಹ ಕೊಟ್ಟಗಾಱರ ನೆಟ್ಟನೇಕಾಂಗಿಗಳನೆಲ್ಲರನೊಟ್ಟಯಿಸಿ ನಡೆದು (ಬಸವು. ೬೧–೨೬). **ಕೊಟಗಾಱ**: ಕೊಟಗಾಱರ ಪೌಜು ಹೊಕ್ಕು ತಿವಿದು ಪಟುಭಟರನಿರದೆ ಕೆಡಪಿದರು (ಕುರಾಸಾಂ. ೧೩–೨೬).

[ಕೊಟ್ಟ$_4$ (< ಕೋಂಟೆ) + –ಕಾಱ]

**ಕೊಟ್ಟಗೆ**, ಕೊಟಗೆ, ಕೊಟ್ಟಗೆ$_1$ (ನಾ). ೧. ಮನೆಯ ಹೊರಭಾಗದಲ್ಲಿ ಕಟ್ಟಿದ ಚಿಕ್ಕ ಕೊಠಡಿ: ಕೊಟ್ಟಗೆಯ ಗುಡಿಯ ಜಳಗುಡಿಯ ಗೊಲ್ಲಣಿಗೆಯ ಮಂಡವಿಗೆಯು ವಿಳಾಸನಿವಾಸಂಗಳಿಂದಂ (ಶಾಂತಿಪು. ೧೧–೧೪೬ ವ) ; ಮನೆ ಕೊಟ್ಟಗೆ ದಾವಣಿ ತೋಟ ಮೊದಲಾದುವನರ್ಚಿಸಲೆಂದು (ಶ್ರಾವಕಾ. ೧೨೨–೧೩) ; ನಾಡು ಬೀಡಗರವಾರದೆ ಕೊಟ್ಟಗೆ ದೇಗುಲಂಗಳಂ (ಚಿಕವಿ. ೨–೪೧). ೨. ದನಕರುಗಳನ್ನು ಕಟ್ಟಲು ಏರ್ಪಡಿಸಿದ ಮನೆಯ ಭಾಗ ; ಹಟ್ಟಿ ; ಹಕ್ಕೆ: ಮುಕ್ಕಣ್ಣಂಗನೆಯ ಕೊಟ್ಟಗೆಯಲ್ಲಿ ಮೂಱು ಎತ್ತು ಕಟ್ಟವವು (ಸುಂಕಬಂ. ೯೧). **ಕೊಟಗೆ**: ೨. ಪಶು ಅಶ್ವಗಳು ಕಟ್ಟಿದ ಕೊಟಗೆಯಲ್ಲಿ ನಿಲ್ಲುವುದು (ತತ್ವಚಿಂ. ೧೪–೫) ; ಎತ್ತು ಈಯಿತು ಎಂದರೆ ಕೊಟಗೆಯಲ್ಲಿ ಕಟ್ಟು (ಗಾದೆ). ೩. ನೀರು ಶೇಖರಿಸುವ ಸ್ಥಳ (?): ಕೆಱೆ ತುಂಬದೆಯಿದರೆ ಕೊಟಗೆ ನೀರು ಸರಿದೆಯಲೂ (ಸೌಇಎ. ೧೯೩೪, ಪುಂಗನೂ. ೧೫೬–೧೮ ; 1419). **ಕೊಟ್ಟಗೆ$_1$**: ೧. ಕಾಲಗೆ ಕೊಟ್ಟಗೆಯಲಾ[ಪಾಠಾಂ. ಕಟ್ಟಿಱವೆಯಾ] ಯ್ತೆನಲು ಕಡಿದಿಕ್ಕಿದನು ಖಳಬಲವ (ತೊರರಾ. ೩–೬–೪೨) ; ಹೀಗೆ ಹೇಳಿ ಕೊಟ್ಟಗೆಯಲ್ಲಿದ್ದ ಕಾಳನನ್ನು ಕೂಗಿದರು (ಚಿಂಗಾಳ್ವ. ೧೫). ೨. ಕಟ್ಟಿದ ಕೊಟ್ಟಗೆಯಲ್ಲಿ ಗುಬ್ಬಿ ಗೂಡನಿಕ್ಕದೆ (ಸರ್ವವ. ೨೬–೧೨೩) ; ಹಸುಗಳು ಕೊಟ್ಟಗೆಯನ್ನು ಸೇರುವಂತೆ (ಪುಕ್ಸಾರ. ೧೪೨) ; ಇಕ್ಕುವವಳು ನಮ್ಮವಳಾದರೆ ಕೊಟ್ಟಗೆಯಲ್ಲಾದರೂ ಉಂಡೇನು (ಗಾದೆ). ೪. ಕೊಟ್ಟಿಗೆಯವನು ; ಕೊಟ್ಟಿಗೆ ಕೆಲಸವಮಾಡುವ ವ್ಯಕ್ತಿ: ಕೊಟ್ಟಿಗೆ ಕಾಮಾಟಿ ಕ್ರಮುಕ ಚೆಳ್ಳಿಲೆಗರು ಜಟ್ಟಿಗ ಗೀತಪಾಠಕರು (ಮೋಹತ. ೩೬–೪೩).

**ಕೊಟ್ಟಿಗೆಯವ** = ಕೊಟ್ಟಿಗೆಯ ಕೆಲಸ ಮಾಡುವ ಆಳು: ಬಳ್ಳೇಶ್ವರನ ಮಲ್ಲಯ್ಯ ಕೊಟ್ಟಗೆಯವನು (ಬಸವು. ೮–೪೬) ; ದೀವಟಿಗರು ಕೊಟ್ಟಿಗೆಯರು ವರತುರುಗಾವಳಿಗಳ ನೆರೆ ಪಿಡಿವ ಕೋವಿದನಿವಹ (ಕಂಠವಿ. ೬–೫೭).

[ದೇ. ‖ ತಮಿ. ಕೊಟ್ಟಗೈ ; ಮಲ. ಕೊಟ್ಟಿಲ್ ; ತುಳು. ಕೊಟ್ಯ ; ತೆಲು. ಕೊಟ್ಟಾಯಿ]

**ಕೊಟ್ಟಜ** (ನಾ). ಕಪ್ಪ ; ಕಾಣಿಕೆ: "ಕೊಟ್ಟಜಮೆಂದು ಕಪ್ಪದೊಳ್" (ಕರ್ಣಾನಿ. ೨೯) ; "ಕೊಟ್ಟಜಮೆಂದು ಕಪ್ಪಂ" (ಶಮುದ. ಪರಿ. ೨) ; ತುಂಗ ತುರಂಗಮ ಭೂಯಿಷ್ಠಂಗಳ್ ಕೊಟ್ಟಜದ ಕೊಟ್ಟ ಕಪ್ಪದ ಭಂಡಾರಂಗಳ್ ನಿಂದುವು (ಶಾಂತಿಪು. ೧೧–೨೮) ; ಕೊಟ್ಟಜಮನೀಯಲೆಂದಾ ದಿಟ್ಟಂ ಕುಂತಳದ ಮಾರ್ಗದೊಳ್ (ಚಂದ್ರಪ್ರಭು. ೧೩–೪೫) ; ನೆರಂಗೂಡುವ ನಾಡೆಱೆಯರ ಕೊಟ್ಟಜಮನೊಟ್ಟಯಿಸಿಯುಂ (ರಾಮಾಶ್ವ. ೪೭–೨). [?]

**ಕೊಟ್ಟಜಂಗೊಡು** (ಕ್ರಿ). ಕಪ್ಪವನ್ನು ಕೊಡು ; ಕಾಣಿಕೆಯನ್ನು ಕೊಡು: ವರುಣನೆ ಕೊಟ್ಟಜಂಗೊಟ್ಟಂತೆ ಪುಂಜಿಸಿರ್ದ ಪಂಚರತ್ನ ರಾಶಿಗಳುಮಂ ತೋಱುತ್ತುಂ (ಶಾಂತಿಪು. ೩–೧೫ ವ). [ಕೊಟ್ಟಜ + ಕೊಡು$_1$]

**ಕೊಟ್ಟಡಿ** 'ಕೊಟಡಿ' ನೋ.

**ಕೊಟ್ಟಣ$_1$** (ನಾ). ೧. (ಬತ್ತ ಮೊದಲಾದುವನ್ನು) ಕುಟ್ಟುವಿಕೆ: ವೇದಶಾಸ್ತ್ರ ಪುರಾಣಾಗಮಂಗಳೆಲ್ಲ ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣ ಭೋ (ಮಹಾದೇ. ೧೯–೩) ; ಮಿಕ್ಕ ದೇವರ ಮನೆಯ ಭತ್ತಮಂ ಕೊಟ್ಟಣಕ್ಕಿಕ್ಕ ಬರುತಿರೆ (ಸಿದ್ಧರಾ. ೬ ೧೨) ; ಮನೆಮನೆಗೆ ಕೊಟ್ಟಣವ ಹಾಯ್ಕುಸುತ (ಲಕಿಚಂ. ೩೬–೨೫) ; ಕೊಡನೀರ ಕೊಟ್ಟಣದವರ್ ಕಸಂಗಳನಿರದೆ ಗುಡಿಪ ಕೂಲಿಗಳವರ್ (ಚಿಬಪು. ೪೬–೪೨) ; ಕೊಟ್ಟಣದ ಅಕ್ಕಿಯಲ್ಲಿ ತವುಡು ವಿಶೇಷವಾಗಿ ನಷ್ಟವಾಗುವುದಿಲ್ಲ (ಆಡುಸೌ. ೬೪). ೨. ಬತ್ತ ಕುಟ್ಟುವ ಒರಳು: ಬೀಡಲಿದ್ದವರೆಲ್ಲರಕ್ಕಿಯ ಮಾಡಿ ಬೇಗಡೊಳೆನುತೆ ಕೊಟ್ಟಣವೀಯುತ (ಶಂಕದಾ. ೯–೪೦) ; ಕೊಟ್ಟಣದಲ್ಲಿ ಜಳ್ಳು ಕುಟ್ಟುವ ಸದ್ದು (ಚಂಡೆಮು. ೧೮). ೩. ಕುಟ್ಟುವ ಸಾಧನ ; ಕುಟ್ಟಾಣಿ: ಮುದುಕರು ತುಂಬಿದ ಚಂಚಿಯೊಂದಿಗೆ ಕೊಟ್ಟಣವನ್ನೂ ಇಟ್ಟುಕೊಂಡು ಕುಳಿತರು (ಬೆಳುಮು. ೨೧೯). ೪. ಕುಟ್ಟುವ ಕೆಲಸ, —ವೃತ್ತಿ: ಶ್ರೀ ವೈಷ್ಣವ ಬ್ರಾಹ್ಮಣರ ಪಾತ್ರ ಪಾಗುಡದ ವಿದ್ಯಾವಂತರ ಮಾಲಗಾಱರಾರತಿ ಕೊಟ್ಟಣವೊಳಗಾದ ಸಮಸ್ತ ವೂಳಿಗದ ಜೀವಿತ ವರ್ಗ್ಗಕವಾಗಿ (ಎಕ. V, ಬೇಲೂರು. ೫೮–೮೧ ; 1117) ; ಕೊಟ್ಟಣದ ಸೋಮುವ್ವನಿಂತೆಂದಳದಕೆ ಪದಗೆಟ್ಟು (ಮದೇಪು. ೨೮–೩೨). ೫. ಬತ್ತ ಕುಟ್ಟುವವರ ಮೇಲಿನ ತೆರಿಗೆ: ಸೆಟ್ಟಿಯರ್ಗ್ಗಂ ಪನ್ನಸಿಗರ್ಗ್ಗಂ ಗಾವುಣ್ಡುಗಳ್ಗಂ ಬಿಟ್ಟಿ ಕೊಟ್ಟಣಂ ಬೀಡು ಬೆಳಂ ಪೊಱಗು (ಸೌಇಇ. IX–i, ೬೭–೨೬ ; 992) ; ಹೊದಕೆ ಹದಿಕೆ ಕಾಣಿಕೆ ಕಡ್ಡಾಯ ಬಿಟ್ಟಿ ಕೊಟ್ಟಣ ಅಳಿವಂನ್ಯಾಯ ಸುಂಕ (ಎಕ. XI, ಚಿತ್ರದು. ೨–೨೩ ; 1355) ; ಬಿಟ್ಟಿ ಬೀಡಾರಂ ಹೊಱಗೆ ತೆಱೆ ಕೊಟ್ಟಣಂ ಕಾಣಿಕೆಯು ಸೊಲ್ಲಗೆ ವಟ್ಟವಾಸೆಯು ಸುಂಕನೋದಿಗೆ ಖಾಣ ಖಿಡ್ಡಾಯ (ಬಸವು. ೨೭–೫೨).

[ದೇ. ‖ ತಮಿ. ಮಲ. ತುಳು. ಕೊಟ್ಟಣ]

**ಕೊಟ್ಟಣ$_3$** (ನಾ). ಆಶ್ರಯಸ್ಥಾನ ; ನೆಲೆ: ತ್ರಿಣಯನಾರಾಧನೆಗಳಿಂದೆ ಕಲ್ಯಾಣ ಪಟ್ಟಣ ಶಿವನ ಧರ್ಮ ಕೊಟ್ಟಣ ಸಕಲ ಶುಭದ ಪೊಟ್ಟಣ ಮೆಱೆದುದೇವಣ್ಣಿಪಂ (ಪತಿಲ. ೪–೩೯). [?]

**ಕೊಟ್ಟಣಂಗುಟ್ಟು** (ಕ್ರಿ). ಬತ್ತವನ್ನು ಕುಟ್ಟಿ ಅಕ್ಕಿಮಾಡು: ಮಾರಿ ಕೊಟ್ಟಣಂಗುಟ್ಟಯುಂ ಮೈಲಾರ ಕೊಡೆವಿಡಿದುಂ ಬರ್ದುಂಕಿದರ್ (ಸಾನಂಚ. ೯–೩೬); ಪೊರೆವರಿಲ್ಲದೆ ಕೊಟ್ಟಣಂಗುಟ್ಟಿ ಕೊಡನೀರೆನಿರದೆ ತಂದು (ಪದ್ಮರಾ. ೧೩–೪); ಬಳಹರಿ ಮಾರಿ ಭತ್ತವ ಕೊಟ್ಟಣಂಗುಟ್ಟು ವಳ್ (ಪಾಸೋಪು. ೪–೫೬). [ಕೊಟ್ಟಣ₁ + ಕುಟ್ಟು₁]

**ಕೊಟ್ಟಣಗಿತ್ತಿ** (ನಾ). ಕೊಟ್ಟಣಕುಟ್ಟುವವಳು: (ದಕ. ಕ). [ಕೊಟ್ಟಣ₁ + -ಗಿತ್ತಿ]

**ಕೊಟ್ಟಣಗೇರಿ** (ನಾ). ಕೊಟ್ಟಣದವರು ವಾಸಮಾಡುವ ಬೀದಿ, —ಕೇರಿ: (ಕ). [ಕೊಟ್ಟಣ₁ + ಕೇರಿ]

**ಕೊಟ್ಟತನ** (ನಾ). ತುಂಟತನ; ಪುಂಡಾಟ: ಮುಟ್ಟಿ ಇಟ್ಟರೂ ಕೊಟ್ಟತನ ಹೋಗಲಿಲ್ಲ (ಗಾದೆ). [ಕೊಟ್ಟ₂ + -ತನ]

**ಕೊಟ್ಟರ**₁ (ನಾ). ಒಂದು ಊರಿನ ಹೆಸರು: ಶ್ರೀ ಅಗಟಿಯ ಮೋನಿ ಗುರುವರ ಶಿಷ್ಯ ಕೊಟ್ಟರದ ಗುಣಸೇನ ಗುರವನ್ಗೋನ್ತು ಮುಡಿಪ್ಪಿದಾರ್ (ಎಕ. II, ೮–೨; ಸು. 700). [?]

**ಕೊಟ್ಟರ**₂ 'ಕೊಟ್ಟಾರ' ನೋ.

**ಕೊಟ್ಟವಳ**₁ 'ಕೊತವಾಲ' ನೋ.

**ಕೊಟ್ಟವಳ**₂ (ನಾ). ಉಗ್ರಾಣದ ಅಧಿಕಾರಿ; ಕೊಟ್ಟಾರಿ: "ಕೊಟ್ಟವಳ ನೆನಲು ಕೊಟ್ಟಾರಿಗೆ ಪೆಸರು" (ಕಶಠ. ೨೯). [< ಸಂ. ಕೋಷ್ಠಪಾಲ]

**ಕೊಟ್ಟವಳ್ಳಿಪಾದಿ** (ನಾ). ಒಬ್ಬಾತನ ಹೆಸರು: ಕಂಗಪಾದಿ ಕೊಟ್ಟ ವಳ್ಳಿಪಾದಿ ವಲ್ಲಭಪಾದಿಯು ಮೂಱು ಪಾದಿ ವಲವರ್ಮ್ಮನಾ ಮೇಕೆ . . . ಕೆಯ್ದುನ್ದು (ಎಕ. XII, ಮದ್ದಗಿ. ೯೩–೨; ಸು. 750). [?]

**ಕೊಟ್ಟಸ, ಕೊಡಸ** (ನಾ). ಸುಟ್ಟ ಮಾಂಸ; ಬೇಯಿಸಿದ ಬಾಡು: "ಸುಂಟಿಗೆ ಕೊಟ್ಟಸ ಸುಡುಬಾಡುಂಟವು ತಾಂ ತಪ್ತ ಮಾಂಸಂ" (ಕವಿಕಂ. ೮೪); ಎಚ್ಚುತಂದು ನೆಱೆ ಕೊಟ್ಟಸಂ ಮಾಡಿ (ಪಾಸೋಪು. ೪–೪೦); ನೆತ್ತರಂ ನಂಜಿ ಕೊಟ್ಟಸಮನಗಿದು ಕರುಳಂ ನುಂಗಿ (ರಾಮಾಶ್ವ. ೧೧೨–೧೧). **ಕೊಡಸ**: ಬಂಡಿಯ ಹಬ್ಬಕ್ಕೆ ಕುರಿ ಕಡಿದರೆ ಊರ ಗಾಂವಕರರಿಗೆ ಕೊಡಸ ಕೊಡಬೇಕು (ರೂಢಿ). [?]

**ಕೊಟ್ಟಾಂಗಚ್ಚಿ** (ನಾ). ತೆಂಗಿನ ಕರಟ, —ಚಿಪ್ಪು: ಮನೆಯಲ್ಲೆಲ್ಲಾ ಅಂಡೆ, ಕೊಟ್ಟಾಂಗಚ್ಚಿ, ಸುವರ್ಣಪಾತ್ರೆ – ಇವೇ ಉಪಯೋಗದಲ್ಲಿರ ತಕ್ಕವು (ಅದುಟ. ೩೮). [← ತಮಿ. ಕೊಟ್ಟಾಙ್ಗಚ್ಚಿ, ಕೊಟ್ಟಙ್ಗಾಯ್ಚು]

**ಕೊಟ್ಟಾರ**₁, ಕೊಟಾರ, ಕೊಟ್ಟರ₂, ಕೊಟ್ಠಾರ, ಕೊಠಾರ, ಕೋಟಾರ, ಕೋಠಾರ₁ (ನಾ). ೧. ಕಣಜ; ಧಾನ್ಯಾಗಾರ; ಉಗ್ರಾಣ; ಭಂಡಾರ: "ಕೋಷ್ಠಾಗಾರ – ಕೊಟ್ಟಾರ" (ಶಮದ. ೨೯೫ ಪ್ರಯೋ); ಉಗ್ರಸೇನನೆಂಬ ಮಗಂ . . . ಕೊಟ್ಟಾರದ ಕರಣಂಗಳಂ ಬಂಚಿಸಿ ಕಳ್ದು ದ್ರವ್ಯಮಂ ಸೂಳೆಗೆ ಕೊಟ್ಟೊಡೆ (ಚಾವುಂಪು. ೩೬–೧೬). **ಕೊಟಾರ**: ೧. ಭಂಡಿ ಕೊಟಾರ ಕೊಪ್ಪರಿಗೆ ಸರಕುಸರ್ವಸ್ವಗಳು (ಕುಮ್ಯಾಸ. ೧೬–೬೧). ೨. ಒಂದು ಬಗೆಯ ತೆರಿಗೆ; ಉಗ್ರಾಣದ ಮೇಲೆ ಹಾಕುವ ಸುಂಕ: ತೋಟ ತುಡುಕೆ ಅಡುಮನೆ ಕಳಕೊಟಾರ ಸುಂಕ (ಎಕ. III, ತಿರುಮ. ೪೯–೧೧; 1526). **ಕೊಟ್ಠಾರ**: ೧. ಅಕ್ಕರಗೊಟ್ಟಯುಲ್ಲದಿರೆ ನಾಡಕೋಟಲೆಯ ಕೊಟ್ಟ ರವದು ಸೂಳೆವನೆಯುಲ್ತು (ಲೀಲಾವ. ೨–೩೫). **ಕೊಟಾರ**: ೧. ಸಜ್ಜೆ ಯಸ್ತ್ರದಾರೋಗಿಪ ಕೊಟ್ಠಾರದ ಭಂಡಾರದ ದೇಹಾರದ ಮನೆ (ಸೂಕ್ತಿಸು. ೪–೧೫೨). **ಕೊಠಾರ**: ೧. ಕೊಠಾರವ ಎಲ್ಲವ ಸುತ್ತಿ ಬಳಸಿ ಬಹನ್ನಕ್ಕ ಯಾಚಕಂಗೆ ಗ್ರಾಸವಿಲ್ಲದ ವಿಧಿಯೆನಗಾಯಿತು (ಮನುಗುಂ. ೧೮); ಕೊಠಾರಂಗಳಿವೆ ಹಲವಂಗನ ಅರಮನೆಗಳಿವೆ (ಹಚಕಾ. ೧೪–೨೮); ಸಕಲ ಸುಕೃತಂಗಳ ಬೆಳೆಯ ಪೊಸ ಕೊಠಾರಮೋ (ಚಿಬಪು. ೩೦–೫).

**ಕೋಟಾರ**: ೧. ಕ್ರಿಮಿಯ ಸಮೂಹ ಕೀಟಕದ ಕೋಟಾರ ಶುಕ್ಲದ ಕೋಶ (ಆದವ. ೩೪). **ಕೋಠಾರ**₁: ೧. ಕೋಟಾ(ಠಾ)ರದ ಸೋಮಣ್ಣಗಳ ವಚನ (ಸರ್ವವ. ೧೮೧–೮೩೪).

[← ಪ್ರಾ. ಕೋಠ್ಠಾರ. < ಸಂ. ಕೋಷ್ಠಾಗಾರ]

**ಕೊಟ್ಟಾರ**₂ (ನಾ). ಒಂದು ಊರಿನ ಹೆಸರು: ಕೊವರಪೆಯ ಚಿಂಪಯ್ಯನುಂ ಲೋಕಯ್ಯನುಂ ಕೊಟ್ಟಾರದ ಮಾರಪುಲಿಯುಂ (ಎಕ. XII, ಶಿರಾ. ೨೮–೫೨; 943); ಸ್ವಸ್ತಿಶ್ರೀ ಕೊಟ್ಟಾರದ ಹೆಗಡೆ ಮಾಚಮಯ್ಯನ ಹೊಲ್ಲವೆಯ ಪುತ್ರಂ (ಎಕ. IX (S), ನೆಲಮಂ. ೧೧೬–೧; 13ನೆಯ ಶತ). [?]

**ಕೊಟ್ಟಾರಿ, ಕೋಟ್ಟಾರಿ** (ನಾ). ಉಗ್ರಾಣದ ಅಧಿಕಾರಿ: "ಕೊಟ್ಟವಳ ನೆನಲು ಕೊಟ್ಟಾರಿಗೆ ಪೆಸರ್" (ಕಶಠ. ೨೯); "ಕೊಟ್ಟಾರಿ – ಕೋಷ್ಠಾಗಾರಿ=ಕೋಶಾಧಿಕಾರಿ" (ತದ್ಭಕೋ. ೯); ಭರತಜ್ಞರಿಗೆ ಗಾಯಕಕುಲಕೆ ಕೊಟ್ಟಾರಿಗಳಿಗೆಯು ಭಂಡಾರಿಗಳಿಗೆಱಿದು (ಬಸಪು. ೬೦–೨೯); ಮಠಗಳ ಕೊಟ್ಟಾರಿ ಭಂಡಾರಿಗಳಿಂದ ಹಿಡಿದು ಸ್ವಾಮಿಗಳವರೆಗಿನ ದೆವ್ವ ದೇವರುಗಳ ದೃಷ್ಟಿ ಬಿದ್ದೀತೆಂದು ಅಂಜಿ ಅವರು ಹೋಗಲಿಲ್ಲ (ಬಾಳಿಗಿ. ೯೮). **ಕೋಟ್ಟಾರಿ**: ಉಗ್ರಾಣದ ಕೋಟ್ಟಾರಿಗೂ ಅಡುಗೆಯವನಿಗೂ ಸದಾ ಜಗಳ (ಹಸಿವು. ೩೪). [< ಸಂ. ಕೋಷ್ಠಾಗಾರಿನ್]

**ಕೊಟ್ಟಾರಿಗ** (ನಾ). = ಕೊಟ್ಟಾರಿ: ಭಂಡಾರಿಗಂ, ಬಾಣಸಿಗಂ, ಕೊಟ್ಟಾರಿಗಂ (ಭಾಷಾಭೂ. ೧೬೬ ಉದಾ). [ಕೊಟ್ಟಾರ₁ + -ಇಗ]

**ಕೊಟ್ಟಿ**₁ (ನಾ). ಕೋಣೆ; ಕೊಠಡಿ; ಕೊಟ್ಟಿಗೆ: ಕೊಟ್ಟ[ಪಾಠಾಂ. ಕೊಟ್ಟಿಗೆ]ಯೊಳಗೆ ಎಂಟು ಆನೆಯ ಕಂಡೆ ಮನೆಯ ಒಳಗೆ ಏಳು ಕುದುರೆಯ ಕಂಡೆ (ಪುರಂದ. ೨–೧೨–೧); ಪಟ್ಟಣಂ ಕೆಟ್ಟು ತದ್ರಾಜ್ಯದೊಳಗೆಲ್ಲಿಯುಂ ಹಟ್ಟಿಕೊಟ್ಟಿಗಳಾಗಿ (ಚಿಬಪು. ೬೩–೬೨). [< ಕೊಟ್ಟಿಗೆ]

**ಕೊಟ್ಟಿ**₂, **ಖೊಟ್ಟಿ** (ನಾ). ೧. ಕೆಟ್ಟವ್ಯಕ್ತಿ; ಅಶ್ಲೀಲ ವ್ಯಕ್ತಿ; ನಾಚಿಕೆಗೇಡಿ: ಆ ದಿಟ್ಟೆ . . . ಪಟ್ಟಣಿಗರಿಟ್ಟೆಡೆಯ ಬಟ್ಟೆಯಂ ಮೆಟ್ಟಿಬರೆ ದಿಟ್ಟೆಗೆಡೆಗೊಟ್ಟು ಪಿಂದಟ್ಟೊರ್ವಳಟ್ಟಿಸದಿ ಕೊಟ್ಟಿ ಪೊರಮಟ್ಟಳಾಗ (ಶ್ರೀರಾಮು. ೪–೯). ೨. ಸಲ್ಲದುದು; ನಿಜವಲ್ಲದುದು; ಮೋಸವುಳ್ಳುದು; ಕಪಟತನವುಳ್ಳುದು. ೩. ಮೋಸದ ನಾಣ್ಯ; ಖೋಟಾನಾಣ್ಯ: "ಸೂಕಳಿಯೊಳು ಭಂಡನೊಕ್ಕೊಟ್ಟಿ" (ಶಬ್ದಮಂ. ೯೦). **ಖೊಟ್ಟಿ**: ೧. ಇಷ್ಟಲಿಂಗ ಕೊಡಲಱಿಯದೆಂದು ನಟ್ಟಿದ್ದ ಲಿಂಗ ಕೊಟ್ಟೀತೆಂಬ ಖೊಟ್ಟಿ ಖೊಟ್ಟಿಗಳ ನೋಡಿ ಹೊಟ್ಟೆ ಹುಣ್ಣಾದಂತೆ ನಗುತಿದ್ದೆನಯ್ಯ (ಸಿದ್ಧೇವ. ೨೬೬). ೨. ಸಂಸಾರ ಬಲು ಖೊಟ್ಟಿ ಅದರೊಳು ಬಿದ್ದಿದ್ದಿ ಕಾಲ್ಕಟ್ಟಿ (ಪುರಂದ. ೨–೫೨–೩); ಆ ಪತ್ರವು ಖೊಟ್ಟಿ ಇರುತ್ತದೆ (ಮೋಹಿನಿ. ೧೨೧); ನತ್ತಿನ ಮುತ್ತುಗಳೆಲ್ಲ ಖೊಟ್ಟಿಯಾಗಿದ್ದುದನ್ನು ಅವರು . . . ಒಪ್ಪಿಕೊಂಡರು (ಸ್ಮೃತಿಚಿ. ೬೮); ೩. ಟೊಕ್ಕನೆ ಖೊಟ್ಟಿ ಹುರುಳಿಲ್ಲದ ಬರಿ ಶಬ್ದವು ಹುಟ್ಟಿ (ಅರಳು. ೬೫. ೮). (ಗು). ೪. ಒರಟಾದ; ಮೊಂಡಾದ: ಆ ಖೊಟ್ಟಿ ಕುದುರೆಯು ಅಂಕಿತಕ್ಕೆ ಬಾರದೆ ಹೋಗಲು (ಮಾಧವ. I, ೩೧೨).

ಖೊಟ್ಟಿಕತಬಿ = ಕಳ್ಳಕಾಗದ; ನಕಲಿ ಪತ್ರ: ಖೊಟ್ಟಿಕತಬಿಗಳ ವ್ಯಾಜ್ಯಗಳನ್ನು ತೀರಿಸುವುದರಲ್ಲಿ ನ್ಯಾಯಾಧೀಶರು ಬೇಸತ್ತು ಹೋಗುತ್ತಾರೆ (ಮುಂಬಯಿ. ೬–೧೧೨). ಕೊಟ್ಟಿದನ = ತುಂಟುದನ; ತೊಂಡುದನ: ಕೊಟ್ಟಿದನವ ದೊಡ್ಡ ವೃಕ್ಷಕ್ಕೆ ಕಟ್ಟಿದಂತೆ (ಜನ್ನವ. ೬೨೬). ಕೊಟ್ಟಿರೂಪಾಯಿ = ಖೋಟಾ ರೂಪಾಯಿ: (ಕ).

[← ಹಿಂ. ಮರಾ. ಖೋಟಾ]

**ಕೊಟ್ಟಿ**₃ (ನಾ). ಹಿಂಸೆ; ಕೊಲೆ: "ಕೊಲೆ ಕೊಟ್ಟಿಯೆನೆ ಹಿಂಸೆ" (ಕಶಠ. ೨೮). [?]

**ಕೊಟ್ಟಂಬ** (ನಾ). ಒಂದು ಊರಿನ ಹೆಸರು: ಮೂನ್ಕ ವಿಷಯೇ ಕೊಟ್ಟಂಬನಾಮ ಗ್ರಾಮವರ್ (ಮೈಆರಿ. ೧೯೨೪; ೮೦–೯೬; 799). [?]

**ಕೊಟ್ಟಗದೇವ, ಖೊಟ್ಟಿಗದೇವ** (ನಾ). ಒಬ್ಬಾತನ ಹೆಸರು: ಚಲದಂಕಕಾರಂ ಶ್ರೀಮತ್ ಕೊಟ್ಟಿಗದೇವನ (ಎಕ. XI, ಚಿತ್ರದು. ೭೪–೨; 968); ಶ್ರೀಮತ್ ಕೊಟ್ಟಿಗದೇವ (ಸೌಇಇ. XI–i, ४೧–೨; 969). **ಖೊಟ್ಟಿಗದೇವ**: ಅಮೋಘ ವರ್ಷ ನೃಪಾಜ್ಞಾತಃ ಖೊಟ್ಟಿಗದೇವಃ (ಇಆ. II, ೨೬೫–೨೫; 972). [ಕೊಟ್ಟಿಗ? + ದೇವ]

**ಕೊಟ್ಟಗೆ$_1$** 'ಕೊಟ್ಟಿಗೆ' ನೋ.

**ಕೊಟ್ಟಗೆ$_2$** (ನಾ). ಹೊರೆಹೊರುವ ಎತ್ತು; ಹೇರೆತ್ತು: ಕೊಟ್ಟಿಗೆಯೆತ್ತಿನ ಪಟ್ಟಿಗಳೊಳಂ (ಧರ್ಮಾಮೃ. ೬-೧೦೪); ಬೆಟ್ಟದಂತಿರ್ದ ಸಾರ ದ್ರವ್ಯಸಂಚಯಕ್ಕೆ ಭಂಡಿಯುಂ ಕೊಟ್ಟಿಗೆಯುಂ (ಪುಷ್ಪಪು. ೩–೧೨೯ ವ); ಗಜರಥ ತುರಗ ಕೊಟ್ಟಿಗೆಯೆತ್ತು ಭಂಡಿ ಕೊಟಾರ ಕೊಪ್ಪರಿಗೆ (ಕುವ್ಯಾಸ. ೧–೭೧); ಹಲವು ಕೊಟ್ಟಿಗೆ ಭಂಡಿನೆಲ ಕೊಂಬಳಕತೆಯಲಿ ನಡೆ [ಪಾಠಾಂ. ನೆಲೆ] ಗೊಂಡವು (ತೊರರಾ. ೧–೧೬–೧೧); ಕೊಟ್ಟಿಗೆ ಕೊಲ್ಲಾರದ ಭಂಡಿಟೆಂಕೆಯ ಪಟ್ಟಿಗೆ ಗುಡಿಗಳ ಹೊಱುವ (ಕುರಾಸಾಂ. ೧೯–೯); ಕೊಟ್ಟಿಗೆಯ ಕೊಲ್ಲಾರ ಬಂಡಿಗಳ ಮೇಲೆ ಸರಕಿಟ್ಟಣಿಸಿ ನೂಕಿದುದು (ಜೈಮಿಭಾ. ೭–೫). [? ./ ತಮಿ. ಕೊಟ್ಟಿಯ]

**ಕೊಟ್ಟಗೆಣಸು** (ನಾ). ಒಂದು ಬಗೆಯ ಮೂಲಿಕೆ: "ಶೃಂಗಾಟಕೀ – ಕೊಟ್ಟಿಗೆಣಸು" (ಓಷಧಿ. ೧೭೦). [?]

**ಕೊಟ್ಟಗೆಮನೆ** (ನಾ). ೧. ಉಗ್ರಾಣ; ಕಣಜವಿರುವ ಮನೆ; ಧಾನ್ಯಾಗಾರ: ಕಾಳು ಹಾಕುವ ಕೊಟ್ಟಿಗೆ ಮನೆ (ಗಂಗಾಮ. ೧೦೪). ೨. ನೀರುಮನೆ; ಸ್ನಾನ ಗೃಹವಿರುವ ಮನೆಯ ವಿಭಾಗ. ೩. ದನಕರುಗಳನ್ನು ಕಟ್ಟುವ ಮನೆ: ವಾಸದ ಮನೆಯ ಹತ್ತಿರ ಕೊಟ್ಟಿಗೆಮನೆಯಿರಬಾರದು (ರೂಢಿ).

[ಕೊಟ್ಟಗೆ$_1$ (< ಕೊಟ್ಟಿಗೆ) + ಮನೆ]

**ಕೊಟ್ಟತನ, ಖೊಟ್ಟಿತನ** (ನಾ). ಮೋಸಗಾರಿಕೆ; ವಂಚಕತನ: ಪಿಟ್ಟವ್ವಗಾಗಿ ಬಿಟ್ಟಿಯ ಹೊತ್ತ ತಲೆನೋವೋ ಕೊಟ್ಟಿತನವ ಮಾಡಲಾಗಿ (ಅಮುಸಾಂ. ೬–೨೧). **ಖೊಟ್ಟಿತನ**: ಈ ಪ್ರಕಾರದ ಖೊಟ್ಟಿತನಕ್ಕೆ ಲೆಖ್ಖವೇ ಇಲ್ಲ (ಮುಂಬಯಿ. ೬–೧೦೨).

[ಕೊಟ್ಟ$_2$ + –ತನ]

**ಕೊಟ್ಟಲಗೆ** (ನಾ). ಒಂದು ಊರಿನ ಹೆಸರು; ℙ. ಬೆಳಗಾವಿ ಜಿಲ್ಲೆಯ ಈಗಿನ 'ಕೊಟ್ಟಲಗಿ': ಕೊಟ್ಟಲಗೆಯ ಮೂಲಿಗ ನಾಗಲಾವಿಯ ... ಸತ್ರಕ್ಕೆ ಬಿಟ್ಟ ಕೆಯಿ (ಕಇ. II, ೬–೫; 1077). [?]

**ಕೊಟ್ಟು$_1$** (ನಾ). ೧. ಮೊಲೆಯ ತೊಟ್ಟು; ಚೂಚುಕ: "ಕುಚಮುಖಂ, ಚೂಚುಕಂ, ವೃಂತಂ, ಶಿಖಾ – ಈ ४ ಮೊಲೆಯ ಕೊ (ತೊ) ಟ್ಟು" (ಹಲಾಯು. ೮೭–೩೭೨); ಜೋಲ್ವ ಮೇಗೊತ್ತಿದ್ದ ಕೊಟ್ಟಡಂಗಿದ ಕುಚಂಬಡೆದಂದಶುಭಂ (ಲೋಕೋಪ. ೧೧-೫೫). ೨. ನವಿಲು, ಕೋಳಿ ಮೊದಲಾದ ಪಕ್ಷಿಗಳ ತಲೆಯ ಮೇಲಿರುವ ಜುಟ್ಟು; ಶಿಖೆ; ತುರಾಯಿ: "ಶಿಖಾ, ಚೂಡಾ – ಈ ೨ ನವಿಲ ಕೊಟ್ಟು" (ಹಲಾಯು. ४೧–೮೯); ನವಿಲ ಕೊಟ್ಟು ಕರಿಂಜ (ದ) ಪುಷ್ಪಫಳಂ ಘೃತಂ ಮಧುಬೇವು ಸಾಸಿವೆಗಳೆಂಬಿವನಕ್ಕೆ (ಲೋಕೋಪ. ೧೦–೨೨); ವಿಸರುಹದಂತೆ ಕೇಸರಮನಾಂತುದು . . . ಚಾಗಿಯಂತೆ ನೆಱೆ ಕೊಟ್ಟಿಸೆದೊಪ್ಪಿತು (ಯಶೋಚ. ೩–೭೮); ಕೊಟ್ಟಲ್ಗೆ ಕೇಸರಮುಬ್ಬಲ್ ಕೊರಲೆತ್ತಿ . . . ಕೋಳಿ ನಲವಿಂ ಕೂಗಿತ್ತು (ತ್ರಿಪುವಿ. ೨४–೨೧೮); ಹಲವು ಮಕ್ಕಳ ತಂದೆ ತಲೆಯಲ್ಲಿ ಕೊ[ಪಾಠಾಂ. ಜು]ಟ್ಟವಗೆ ಸಲೆ ಗಳಿಗೆ ಜಾವವಱವನ ಹೆಂಡತಿಗೆ ಮೊಲೆಯಿಲ್ಲ (ಸರ್ವಜ್ಞ. ೨೦೩೯). ೩. (ಹಾವಿನ) ಹೆಡೆ, —ತಲೆ: ನಿಟ್ಟಿಸಳ್ಗಣ್ಣ ನಿಶಾಟ ನಿತಂಬಿನಿಯಿಟ್ಟಣಿಸಿದ ನೆಲೆಮೊಲೆಗಳ ಮಧ್ಯದೊಳಿಟ್ಟುರಗನ ಕೊಟ್ಟನ ಮಣಿಹಾರಂ ಕಣ್ಗೆ ವಿಶಂಕೆಯನು ಪುಟ್ಟಿಸಿದುದು (ಜಯಕಾ. ೧೫–೭೭). ४. (ಕರಾ) ಅಕ್ಷರಗಳ ತಲೆಕಟ್ಟು.

[ದೇ. ‖ ತಮಿ. ಕೊಟ್ಟು; ಮಲ. ಕೊಡಿ, ಕೊಟ್ಟು; ತುಳು. ಕೊಟ್ಟು; ತೆಲು. ಕೊಡಿ]

**ಕೊಟ್ಟು$_2$** (ನಾ). ಸ್ತ್ರೀಯರು ಜಡೆಯಲ್ಲಿ ಧರಿಸುವ ಒಂದು ಆಭರಣ: (ಕ).

[ದೇ. ‖ ತಮಿ. ಕೊಟ್ಟು; ಮಲ. ಕೊಟ್ಟ; ತುಳು. ತೆಲು. ಕೊಟ್ಟೆ]

**ಕೊಟ್ಟು$_3$, ಕೋಟ್ಟ$_2$** (ನಾ). ಒಂದು ಬಗೆಯ ಪಕ್ಷಿ; ಶಕುನದ ಪಕ್ಷಿ; ಹಂಗನಹಕ್ಕಿ; "ಕಿರೀಟೀ (ಕಿಕೀದಿವಿಃ), ಚಾಷಃ – ಈ ೨ ಕೊಟ್ಟು" (ಹಲಾಯು. ४೧–೯४); "ಕಿರೀಟ ಚಾಷಂ ಕೊಟ್ಟು [ಪಾಠಾಂ. ಕೋಟ] ಮಕ್ಕು" (ಮಂಗರಾ. ೫೧–४); ಕೊಟ್ಟು ಕೂಗಿತ್ತು ಹಾಲುವಕ್ಕಿ ಬಳಿಯಿತ್ತು ಹಂಗ ಕಟ್ಟಿತ್ತು ಅವನ ಅವಳ ಮದುವೆ ನಿಂದಿತ್ತು (ಅಱವಾ. ೩೨–೬४); ಹರಡೆ ಚಿಲುಮಿಲಿಗಾನು ಕಮ್ಮರಸಸಗ ಕೊಟ್ಟುಳಿ ಹೊಱಸು . . . ಎಂಬ ಪಕ್ಕಿಗಳು (ಸಾಳ್ವಭಾ. ೫–೨೧). **ಕೋಟ್ಟ$_2$**: "ಕಿರೀಟ ಚಾಷಂ ಕೋಟ[ಪಾಠಾಂ. ಕೊಟ್ಟು]ಮಕ್ಕು" (ಮಂಗರಾ. ೫೧–४). [ದೇ. ‖ ತುಳು. ಕೊಟ್ಟುಕಡತ್ತಲೆ]

**ಕೊಟ್ಟು$_4$** (ನಾ). ೧. ಒಂದು ಬಗೆಯ ವಾದ್ಯ; ತಮಟೆ; ಹರೆ: ಎಳೆಯ ಹುಡುಗನಾಗಿದ್ದಾಗ ಚೆಂಗುಮಣಿ ಕೇಳಿದ ನರಿಮಂಗಲದ ಕೊಂಬು ಕೊಟ್ಟುಗಳ ಸದ್ದು (ಹುಲಿಹಾ. ೨೧). ೨. ಮಣ್ಣನ್ನು ಅಗೆಯುವ ಸಾಧನ; ಗುದ್ದಲಿ: ಮಣ್ಣನ್ನು ಕಡಿದು ಮೊಗಚುವ ಉಪಕರಣವಾದ 'ಹಾರೆ' ಗೂ 'ಕೊಟ್ಟು' ಎನ್ನುವರು (ಸಂಶೋಧ. ೧೯).

[ದೇ ‖ ತಮಿ. ಮಲ. ತುಳು. ತೆಲು. ಕೊಟ್ಟು]

**ಕೊಟ್ಟು$_5$** 'ಕೊಡು$_1$' ಪರಾ.

**ಕೊಟ್ಟುಕ, ಕೊಟ್ಟುಗ** (ನಾ). ತಲೆಯ ಮೇಲೆ ಜುಟ್ಟು ಉಳ್ಳ ಒಂದು ಬಗೆಯ ಪಕ್ಷಿ: "ಕೋಯಷ್ಟಿಕಃ ಶಿಖರೀಯೆನೆ ಕೊಟ್ಟುಕಂ" (ಮಂಗರಾ. ೫೧–೬); ದ್ರುಪದಪುತ್ರನಂತೆ ಶಿಖಂಡಿ ಕೂಸುಗಳ ಕೈಯ ಪಾಸೆಯಂತೆ ಕೊಟ್ಟುಕನೆಂದಿಂತುಮನೇಕ ಪಕ್ಷಿಜಾತಿಗಳಿಂ (ಬಂಹರಿ. ೨–೩೮ ವ). **ಕೊಟ್ಟುಗ**: ಮರಕುಟಿಗ ಕಬ್ಬಕ್ಕಿ ಕೊಟ್ಟುಗವರಲ್ ಕೊಂಚೆ . . . ಮೊದಲಾದಖಿಳ ಖಗಕುಲ ಬಿದ್ದುದುರಿಯೊಳಗೆ (ಕುವ್ಯಾಆ. ೨೦–೫೩). [< ಸಂ. ಕೋಯಷ್ಟಿಕ]

**ಕೊಟ್ಟುಗ** 'ಕೊಟ್ಟುಕ' ನೋ.

**ಕೊಟ್ಟುಗೂಡಲ್** (ನಾ). ಒಂದು ಸ್ಥಳದ ಹೆಸರು: ಅನ್ತೆಬನ್ದು ಉತ್ತರಸ್ಯಾನ್ದಿಶಿ ಕೊಟ್ಟುಗೂಡಲೆ (ಮೈಆರಿ. ೧೯೩೬, ೫೩–೨೭; 550). [?]

**ಕೊಟ್ಟೂರ್** (ನಾ). ಒಂದು ಊರಿನ ಹೆಸರು: ವಟಗಯ್ ಕಡೆ ಕೊಟ್ಟು ಮೂಡಾಯ್ ದಿಸೆಯದು ಕಡೆ ಕೊಟ್ಟೂರ್ ನಾಮ ಗ್ರಾಮವ್ (ಮೈಆರಿ. ೧೯೧४, ೯–೧೨; ?); ಮೊರೆಯ್ಕ ಕೊಟ್ಟೂರ ತುಱುಗೊಳಲಪ್ಪೆ ಸತ್ತ (ಎಕ. XI, ಚಳ್ಳಕೆ. ४–೫; 974).

[? + ಊರ್]

**ಕೊಟ್ಟೆ$_1$, ಗೊಟ್ಟ$_2$, ಗೊಟ್ಟು$_3$, ಗೊಟ್ಟೆ$_1$** (ನಾ). ೧. ಹಣ್ಣು ಅಥವಾ ಕಾಯಿಗಳ ಒಳಗಿನ ಗಟ್ಟಿಯಾದ ಬೀಜ; ಗೊರಟೆ; ಓಟೆ: ಒಳ್ಳಿಹ ಮುಸ್ತೆಯಿಪ್ಪೆ ಕೇಡಿಲ್ಲದ ಚಿಲ್ಲಗೊಟ್ಟೆ ಪೊಸಪೀರೆಯ ಬಿತ್ತಿನೊಳಾದ ಬೂದಿಯಂ ನಿಲ್ಲದೆ ಬಾವಿಯೊಳ್ ಕಲಸಲ್ . . . ಬಾವಿಗಳ ನೀರಮೃತೋಪಮಮೆಂಗೆ (ಜಟ್ಟಮ. ೧೧–೬೩); ಪುಲಿಗಿಲ ಕೊಟ್ಟೆ ಕಬ್ಬಿನ ರಸಂ ಬಜೆ ಪಿಪ್ಪಲಿ ಮೂಲಂ . . . ಇಂತಿವವಟ್ಟು (ಅಶ್ವಶಾ. ೧೧೬–೧४).

**ಗೊಟ್ಟೆ**$_3$ : ೧. ಓರ್ವ ಬಾಲಕನು ಮಾವಿನಗೊಟ್ಟೆವನ್ನು ಭೂಮಿಯಲ್ಲಿ ಹುಗಿಯುವನು (ಭಾರಸಂ. ೧೨೩). **ಗೊಟ್ಟು**$_3$ : ೧. ಬೆಲ್ಲದ ಗೊಟ್ಟು ಕಲ್ಲ ಬೀಜವಾದಡೆ ಸಿಹಿ ಕುಗ್ಗುವುದೇ (ಮೋಳಿವಾ. ೪೧–೧೬೯). **ಗೊಟ್ಟೆ**$_1$ : ೨. ಬೀಜ; ಕಾಳು : ಬೇವಿನ ಗೊಟ್ಟೆಯೊಳಿನಿದನರ್ಕನೊಳ್ ತಂಪಂ . . . ಅಱಸಿ ತೊಳಲುವಾತನೆ ಗಾಂಪಂ (ಧರ್ಮಾಮೃ. ೫–೧೭೦); ಸಜ್ಜರಸಮಂ. . .ಕೇರ ಗೊಟ್ಟೆ ಘನಮೆಂಬಿವನೊಪ್ಪಿರೆ ಕೂಡಿ ಧೂಪಮಂ ಪ್ರತಿಮಮೆನಲ್ಕೆ ತದ್ಗೃಹದೊಳೆರ್ಕೆ (ಖಮುದ. ೧೬–೪೯); ಉದಿರ್ದ ಮುತ್ತದ ಕಾಯ್ಗಳಂ ಸುಲಿದಾಗಳೆರಡು ಗೊಟ್ಟೆಗಳಕ್ಕುಂ (ಜಟ್ಟಮ. ೪–೧೮). ೩. ಆಟದ ಬಿಲ್ಲೆ (?) : ಒಂದು ದಿವಸಂ ಭದ್ರಬಾಹು ಒಡನೆಯರ ಮಾಣಿಯರಂ ಕೂಡಿಕೊಂಡು ಪುರದ ಪೊಱವಳಲೊಳ್ ಗೊಟ್ಟೆಗಳನಾಡಲ್ ಪೋಗಿ ಭದ್ರಬಾಹು ಗೊಟ್ಟೆಯ ಮೇಲೆ ಗೊಟ್ಟೆಯ ನಡಕಿಲಿಟ್ಟಾಡುವಲ್ಲಿ ಪದಿಮೂಱು ಗೊಟ್ಟೆಯನೊಂದೊಂದಱ ಮೇಲೆ ನಿಲಿಸುವ ಸಮಯದೊಳ್ (ಪುಣ್ಯಾಸ್ರ. ೯–೨ ವ).

[ದೇ. ‖ ತಮಿ. ಕೊಟ್ಟೈ; ಮಲ. ಕೊಟ್ಟ, ಕುಱಟ್ಟ; ತುಳು. ಕೊಟ್ಟೆ; ತೆಲು. ಕುಂಡಿ]

**ಕೊಟ್ಟೆ**$_2$, ಕೋಟ್ಟ$_2$ (ನಾ). ೧. (ಅಡಕೆಯ ಹಾಳೆಯಿಂದ ಮಾಡಿದ) ದೊನ್ನೆ, —ಪಟ್ಟೆ : ಹಾಳೆಯ ಕೊಟ್ಟೆ ಮಾಡಿ ತರಲೇನು? (ಬಾಳಿನೈ. ೪೩). ೨. ಗೂಡು : ತನ್ನನ್ನು . . . ಮರಕ್ಕೆ ಕಟ್ಟಿಹಾಕಿ ತಲೆಯ ಮೇಲೆ ಕೆಂಪು ಇರುವೆಗಳ ಕೊಟ್ಟೆ (ಎಲೆಗಳ ಗೂಡು) ಕೆಡವಿದ (ಹೊಸಕ್ಷಿ. ೧೬೮). ೩. ಅಡಕೆ ಮರಗಳಿಗೆ ಕೊಳೆರೋಗ ತಾಗದಂತೆ ಗೊನೆಗೆ ಕಟ್ಟುವ ಹಾಳೆಯ ಮುಸುಕು : ಅಡಕೆಯ ತೋಟದಲ್ಲಿ ಕೊಳೆರೋಗಕ್ಕಾಗಿ ಎಳೆಗೊನೆಗಳಿಗೆ ಹಾಳೆಯ ಕೊಟ್ಟೆಗಳನ್ನು ಕಟ್ಟ ಬೇಕಾಗಿತ್ತು (ಪಂಜಪಂ. ೧೯). ೪. ದೊನ್ನೆಯಲ್ಲಿ ಇಟ್ಟು ಆವಿಯಲ್ಲಿ ಬೇಯಿಸಿದ ಕಡುಬು : ಹರಿದಿನ ಹಗರಣ ಗುಮಟೆಯ ಪಾಗಿನ ಒಡೆ ಕೊಟ್ಟೆ ಪಾಯಸ ರಸದೂಟಕೆ (ಕ್ರಾಂಚಧ್ವ. ೩). **ಕೋಟ್ಟ**$_2$. 'ಕೋಟೆ ವೊಕ್ಕಲಿಗ' ಪರಾ. [← ತುಳು. ಕೊಟ್ಟೆ]

**ಕೊಟ್ಟೆ**$_3$ 'ಕೊಟ್ಟ$_2$' ನೋ.

**ಕೊಟ್ಟೆ**$_4$ (ನಾ). ಒಂದು ಬಗೆಯ ಸಸ್ಯ; ಕವಟೆ : ಸೂಕ್ಷ್ಮ ಚೂರ್ಣವಂ ಮಾಡಿ ಕೊಟ್ಟೆಯ ಕಾಯ ಒಳಗೆ . . . ತುಂಬಿ ಅದಂ ಗಡಿಗೆಯಲ್ಲಿರಿಸಿ (ವಿನೈವಿ. ೬೭); ಹಿಪ್ಪಲಿ, ಮೂಲ, ಕೊಟ್ಟೆಬೇರು, ಓವು . . . ಜೇನು ತುಪ್ಪದಿಂ ಕೊಡಲು ಉದಾವರ್ತರೋಗಂ ಗುಣಮಕ್ಕು (ಸಕವೈ. ೩೦೪). [?]

**ಕೊಟ್ಟೆ**$_5$ (ನಾ). ಈಱುಬುರುಡೆಯಾಗಿ ಉಪಯೋಗಿಸುವ ಒಣಗಿದ ತೆಂಗಿನಕಾಯಿ : ಎಂಟು ಗಿರಿಗಳೆಂಟುಗಜವೇಳು ಶರಧಿಯು ಎಂಟಾರು ಲೋಕಲೋಕಗಳು ಕುಂಟಿಗೆ ಸರಿಯಿಲ್ಲವೆನುತ ಕೊಟ್ಟೆ [ಪಾಠಾಂ. ಪ್ಪೆ]ಯ ಹಾಕಿ ದಾಂಟ ಪ್ರಮಾಣ ಮಾಡಿದನು (ಅಮುಸಾಂ. ೫–೧೦೨). [?]

**ಕೊಟ್ಟೆಕಟ್ಟು**$_1$ (ಕ್ರಿ). ದೊನ್ನೆಕಟ್ಟು; ಪಟ್ಟೆಮಾಡು : ಗೌಡರ ಅಡಕೆತೋಟಕ್ಕೆ ಕೊಟ್ಟೆಕಟ್ಟಲು ಹೋಗಿ (ಮಲೆಮ. ೬೮೮).

[ಕೊಟ್ಟೆ$_2$ + ಕಟ್ಟು$_1$]

**ಕೊಟ್ಟೆಕಟ್ಟು**$_2$ (ಕ್ರಿ). ಮರಗಟ್ಟು; ಸೆಡೆತುಕೊಳ್ಳು : ಘಟ್ಟಕ್ಕೆ ಹೋದ ಭಾವನು ಅಲ್ಲೇ ಕೊಟ್ಟೆಕಟ್ಟಲಿ, ಅವನು ಸತ್ತೇ ಹೋಗಲಿ (ಜಾನಗೀ. ೧೦೫). [< ಕೋಡು$_2$ + ಕಟ್ಟು$_1$]

**ಕೊಟ್ಟೆಕಡ್ಡಿ** (ನಾ). ದೊನ್ನೆ ಹಚ್ಚಲು ಉಪಯೋಗಿಸುವ ಕಡ್ಡಿ : ನಾಲ್ಕು ಸಿಗುರುಗಳನ್ನಾದರೂ ಮಾಡೋಣ – ಕೊಟ್ಟೆ ಕಡ್ಡಿಗಳಿಗಾದಾವು (ಮೂರುದಾ. ೫೫); ಕಂಬಳಿ ಹಾಕಿಕೊಂಡು ಅದರ ಮೇಲೆ ಕೂತು ಕೊಟ್ಟೆಕಡ್ಡಿ ಹೆರೆಯುತ್ತಿದ್ದನು (ಮಲೆಮ. ೨೭೮). [ಕೊಟ್ಟೆ$_2$ + ಕಡ್ಡಿ]

**ಕೊಟ್ಟೆದೊನ್ನೆ** (ನಾ). ಅಡಕೆ ಹಾಳೆಯ ದೊನ್ನೆ, —ಪಟ್ಟೆ : ಕೊಟ್ಟೆ ದೊನ್ನೆಯಲ್ಲಿ ಹೆಂಡವನ್ನು ತಂದು ಕೊಟ್ಟಳು (ಮಲೆಮ. ೬೩).

[ಕೊಟ್ಟೆ$_2$ + ದೊನ್ನೆ]

**ಕೊಟ್ಟೆಮಣೆ** (ನಾ). ಮರಹತ್ತಲು ಉಪಯೋಗಿಸುವ ಮಣೆ : ಗೌಡರ ಅಡಕೆ ತೋಟಕ್ಕೆ ಕೊಟ್ಟೆ ಕಟ್ಟಲು ಹೋಗಿ ಕೊಟ್ಟೆಮಣೆ, ಕೊಟ್ಟೆ ಹೊರೆ ಸಹಿತವಾಗಿ ಅಡಕೆ ಮರದ ನೆತ್ತಿಗೇರಿ (ಮಲೆಮ. ೬೮೮). [ಕೊಟ್ಟೆ$_2$ + ಮಣೆ]

**ಕೊಟ್ಟಾರ** 'ಕೊಟ್ಟಾರ$_1$' ನೋ.

**ಕೊಟ್ಟ** (ನಾ). (?) : ಪರದುಗೈದು ಜೀವನಂಬೆತ್ತಿರ್ಪುದಂ ಕೊಟ್ಟಮುಂ ಪಾದರಮುಂ ಪಾರ್ವರಾದವರ್ಗೆ ನಿಂದಿತಕರ್ಮಂಗಳಾಗಿರ್ಪುವು (ಭಾರಶಾಂ. ೬೪–೩೯೮). [?]

**ಕೊಠಡಿ** 'ಕೊಟಡಿ' ನೋ.

**ಕೊಠಾರ** 'ಕೊಟ್ಟಾರ$_1$' ನೋ.

**ಕೊಠಾರಿಕೆ** 'ಕೊಟಾರಿಕೆ' ನೋ.

**ಕೊಡ**$_1$ (ನಾ). ಎಳೆಯದಾಗಿರುವಿಕೆ; ಎಳೆಯ ವಯಸ್ಸು. 'ಕೊಡಗೂಸು' ಪರಾ.

[ದೇ. ‖ ತಮಿ. ಕುೞ; ಮಲ. ಕೊೞುನ್ನು, ಕೊೞುನ್ನು = ಎಳೆಯ ರೆಂಬೆ; ತೆಲು. ಕೊಡಮ]

**ಕೊಡ**$_2$ (ನಾ). ೧. ಮಣ್ಣು ಅಥವಾ ಲೋಹದಿಂದ ಮಾಡಿದ, ಬಾಯಿ ಕಿರಿದಾದ ಪಾತ್ರೆ; ಗಡಿಗೆ; ಕುಂಭ : "ಕಳಶಃ, ಕುಟಃ, ಕುಂಭಃ, ನಿಘಃ– ಈ ಳ ಕೊಡಂ" (ಹಲಾಯು. ೫೩–೧೬೧); ಕಿಚ್ಚುಮೆಣ್ಣೆಯ ಕೊಡನುಂ ಬೆಂಟೆಯುಮಂ ಕೊಂಡು (ವಡ್ಡಾರಾ. ೧೫೩–೧೧); ಪಱಿಕಿನ ಕೊಡದೊಳ್ ಸೊಡರ್ಗುಡಿ ಬೆಳಗುವವೊಲ್ (ಆದಿಪು. ೬–೩೩); ತುಪ್ಪದ ಕೊಡನ ಮೇಗಣಿಲಿಯಾತಂ (ಧರ್ಮಾಮೃ. ೨–೬೨); ಹಾವಿನ ಕೊಡನು ದೋಷಿಗೆ ಸುಲಭವೇ (ಕುಮ್ಯಾದ್ರೋ. ೩–೨೮); ಕೊಡನವನಂಧಕ ಪೊತ್ತು ನಡೆದಂತೆ ಅಧಿಕಾರ ಕಡೆ ಹೊಲ್ಲದೆಚ್ಚರಿಕೆ (ಪುರಂದ. ೪–೪೫–೧); ತುಂಬಿದ ಕೊಡ ತುಳುಕುವುದಿಲ್ಲ (ಗಾದೆ). ೨. ತಕ್ಕಡಿಯ ಪರಡಿ, —ಬಟ್ಟಲು : ತ್ರಾಸಿನ ಕೊಡನೊಂದು ಬಿರ್ದೊಡೊಂದುಱಿದಪುದೇ (ಧರ್ಮಾಮೃ. ೫–೧೦೭). ೩. ಜೇನುಗೂಡು; ಜೇನಿನ ಹುಟ್ಟು : "ಭಾಂಡದೊಳು ಜೇನೊಳು ಕೊಡಂ" (ಶಬ್ದಮಂ. ೯೪); ರಸದಾಳಿಯಂತೆ ರಮಣಿಯರ ಚೆಂದುಟಿಯಂತೆ ಪೊಸಜೇನ ಕೊಡದಂತೆ (ಸೂಪಶಾ. ೧–೭); ಕೊಡದೊಳ್ ತುಂಬಿರೆ ಜೇನು (ಸೋಮೇಶ. ೬೫).

ಕೊಡನಕುಮಾರ, ಕೊಡನಕುಮಾರಕ = ಕೊಡನ ಮಗ : ಕೊಡನ ಕುಮಾರನಾಣತಿಯಿಂ (ಗೀತಗೋ. ೪೧–೩); ಕೊಡನಕುಮಾರಕನ ಬಳಿಗಾ ಮುನೀಂದ್ರಂಗಿತ್ತನಾ ಧನುವ (ತೊರರಾ. ೩–೧–೨೧). ಕೊಡನ ಮಗ = ೧. ಕುಂಭದಲ್ಲಿ ಹುಟ್ಟಿದವನು; ದ್ರೋಣಾಚಾರ್ಯ : ಕೊಡನಮಗನ ಕುತಂತ್ರದೊಡ್ಡಿನ ಕಡಿತಕಾನಂಜುವನೆ (ಕುಮ್ಯಾದ್ರೋ. ೪–೩೮). ೨. ಅಗಸ್ತ್ಯ : ಕೊಡನಮಗನಂದದಲಿ ಕಡಲನು [ಪಾಠಾಂ. ಜಲಧಿಯ] ಕುಡಿದು (ತೊರರಾ. ೬–೪–೭).

[ತಮಿ. ಮಲ. ಕುಡ; ತುಳು. ಕುಡ್ಯ. / ಸಂ. ಕುಟ]

**ಕೊಡ**$_3$ 'ಕೊಡಗ$_1$' ನೋ.

**ಕೊಡಂಕೆ**, ಕೊಡಕೆ (ನಾ). ಕಿವಿ; ಶ್ರವಣೇಂದ್ರಿಯ : "ಕೊಡಂಕೆಯೆಂದು ಕಿವಿ" (ಕಶಸಾ. ೨೧–೪೨೭); "ಕೊಡಂಕೆಯೆ ಕಿವಿಯಕ್ಕು" (ಕವಿಕಂ. ೧೮೫); ಬಿಲ್ಲ ಕೊಪ್ಪು ಕೊಡಂಕೆಯ ಕೊಪ್ಪಿನ ವೊಲಮರೆ (ಶಾಂತಿಪು. ೪–೪೩); ಕುರುಳ್ಗಳಂ ಕೊಡಂಕೆಗೆ ತೆಗೆದೇಱಿ ನೂಂಕಿ ಮಣಿಕಂಕಣಮಂ (ಚಂದ್ರಪು. ೧೨–೩); ಕೊಡಂಕೆಯೊಳ್ ಪೊಳೆವ ಚೌರಿಯ ಗಾಳಿಯ ಕೋಳ್ಗೆ ಬೆಟ್ಟುಗಳ್ ತಳರೆ (ಕಬ್ಬಿಗಕಾ. ೨೦೪);

ಕಂಗೊಳಿಪ ಶಿರೀಷವೃಂತಮನೊಡರ್ಚದುದಿಲ್ಲ ಕೊಡಂಕೆಯಲ್ಲಿ (ಶಾಕುಂತ. ೯೦-೧೪೯). **ಕೊಡಕೆ**: "ಕೊಡಕೆಯೆನೆ ಕಿವಿಯಕ್ಕು" (ಕಶರ. ೩೦); ಕೊಡಕೆಯುದಬಿಂದು ಕೊಪ್ಪಿನ ಬೆಡಂಗನವಗಯ್ಸೆ (ಶಾಂತಿಪು. ೮-೪೨); ಕೊಡಕೆಗೆ ಸಾರ್ಚಿ ಕೆನ್ನೆಯಳಕಂಗಳಂ (ಶಾಂತೀಶ್ವ. ೧೪-೬); ಕೊಡಕೆ ವರಂ ನಿಮಿರ್ದು ಪೊಳೆವ ತುಜುಗೆ ಮೆಗಣ್ಗಳ್ (ಕಬ್ಬಿಕಾ. ೩೨೮); ಕೊಡಂಕೆ, ಕೊಡಕೆ (ಶಮದ. ೩೬ ಪ್ರಯೋ); ತೊಡಿಸಿದಳು ತಂದೊಬ್ಬಳಾಕೆಯು ಕೊಡಕೆಯಲಿ ಹೊಸತಪ್ಪ ಮುತ್ತಿನ ತೊಡಿಗೆಯನು (ಪ್ರಭುಲೀ. ೪-೧೫). [?]

**ಕೊಡಂಗಗೆಯಿ** 'ಕೊಡಂಗೆಯ್$_2$' ನೋ.

**ಕೊಡಂಗನೂರ್**, ಕೊಡಗನೂರ್ (ನಾ). ಒಂದು ಊರಿನ ಹೆಸರು: ಕೆಱೆಯೂರ ಜಾದಿಯೂರ ಕೊಡಂಗನೂರ ಬಾಡದ ಮಹಾಜನವುಂ (ಎಕ. XI, ಚಿತ್ರದು. ೭೪-೨೮; 968). **ಕೊಡಗನೂರ್**: ಕೊಡಗನೂರ ಮಹಾಜನಕ್ಕೆ ಕಾಲಂ ಕರ್ಚಿ ಕಯ್ಯ ಧಾರೆಯನೆಱದು (ಎಕ. XI, ದಾವಣ. ೧೫೨-೩೨; 980). [ಕೊಡಂಗ ? + ಊರ್]

**ಕೊಡಂಗವಳ್ಳಿ** (ನಾ). ಒಂದು ಊರಿನ ಹೆಸರು: ಕುಕವಾಡಿ ತ್ರಿಶತಾಭ್ಯನ್ತರೇ ಕೊಡಂಗವಳ್ಳಿ ನಾಮ ಸ್ವಮಾತೃನಾಮಾಂಕಿತಶ್ಚಸ್ನಿಯಬ್ಬೆ ಮಂಗಳೀ (ಮೈಆರಿ. ೧೯೩೫, ೪೦-೫೭; 951).

[ಕೊಡಂಗ ? + ಪಳ್ಳಿ]

**ಕೊಡಂಗಿ** 'ಕೊಡಂಗೆಯ್$_2$' ನೋ.

**ಕೊಡಂಗೆ$_1$** 'ಕೊಡಂಗೆಯ್$_2$' ನೋ.

**ಕೊಡಂಗೆ$_2$** (ನಾ). ಕಿವಿಯ ಒಂದು ಆಭರಣ: ಬಣ್ಣ ಹಚ್ಚಡ ಹೊದೆದ ರನ್ನಕೊಡಂಗೆಯ ನೀಲ್ದ ಚಿನ್ನದುಂಗುರವ ಬೆರಳ್ಗಿಟ್ಟ (ಜಾನಗೀ. ೨೮).

[← ತುಳು. ಕೊಡಂಗೆ]

**ಕೊಡಂಗೆಗೊಡು** (ಕ್ರಿ). ಕೊಡಗೆಯಾಗಿ ಕೊಡು; ದಾನಮಾಡು: ವಾಣಿಗೆ ಪದಿರ್ಕುಳ . . . ಕೊಡಂಗೆಗೊಟ್ಟಂ (ಎಕ. X, ಮುಳಬಾ. ೮೬-೯; 767); ಅಕ್ಕರಂಬೊಯ್ದ ಕೊವರಾಚಾರಿಯ ಮಗಂ ಮಾಣಿಕಾಚಾರಿಗೆ ಕಣ್ಡುಗಗಟ್ಟಿ ಕೊಡಂಗೆಗೊಟ್ಟರ್ (ಎಕ. IX, ಹೊಸಕೋ. ೧೧೧-೧೦; 997). [ಕೊಡಂಗೆ$_1$ (< ಕೊಡಂಗೆಯ್$_2$) + ಕೊಡು$_1$]

**ಕೊಡಂಗೆಡೆ** (ಕ್ರಿ). ಹೊರಳಿಬೀಳು; ಕುಸಿಬೀಳು (?): ಕೋಟಿಯ ಕೊತ್ತಳದೊಳೆ ಪರಿವ ತೇರ್ ಕೊ[ಪಾಠಾಂ. ಕ]ಡಂಗೆಡೆದೊಡೆ ಕೈಗುತ್ತಿ ಮುರಲ್ದು ರಥಾಂಗಮೆಗೆತ್ತರುಣಂ ತೆನೆಯನೆತ್ತಿ ನಗಿಸುವನಿನನಂ (ಅನಂಪು. ೧-೧೧೧). [P ಇದು 'ತಡಂಗೆಡೆ' ಇರಬಹುದು]

**ಕೊಡಂಗೆಯ್$_1$** (ಕ್ರಿ). ದಾನಮಾಡು; ಕೊಡುಗೆಯಾಗಿ ಬಿಡು (?): ಧಾರೆಯನೆಱೆಯಿಸಿ ಕೆಱೆಗೊಡಂಗೆಯ್ದು ಸವಂಧವಂ ಕೊಣ್ಡ ಕೆರೆಗಳಂ ಪಡಿ ಸಲಿಸುವರ್ (ಸೌಇಇ. IX-i, ೮೦-೨೬; 1018).

[< ಕೊಡಂಗೆ$_1$ + ಕೆಯ್$_1$]

**ಕೊಡಂಗೆಯ್$_2$**, ಕೊಡಂಗಗೆಯಿ, ಕೊಡಂಗಿ, ಕೊಡಂಗೆ$_1$ ಕೊಡಂಗೆಯಿ, ಕೊಡಗಿ, ಕೊಡಗೆ, ಕೊಡಗೆಯ್, ಕೊಡಿಗಿ, ಕೊಡಿಗೆ, ಕೊಡುಗೆ$_1$ (ನಾ). ದಾನವಾಗಿ ಬಿಟ್ಟ ಭೂಮಿ; ಉಂಬಳಿ: ಸನ್ನಿಗರ ಕುಡಿವುಳ್ದಂ ಕೊಡಂಗೆಯೂರ್ಗೆ ಪೆರ್ಗ್ಗಡೆತನಂ ಗೆಯ್ಯುತಿರೆ (ಎಕ. VII, ಶಿಕಾರಿ. ೨೧೯-೧೩; 918); ನಾಳ್ಗಾವುಣ್ಡಂ ಕೊಱಲಗುನ್ದಂ ತನ್ನ ಕೊಡಂಗೆಯ್ಯೆರಡು ತೋಂಟಕಂ ದ್ರವ್ಯಪೂರ್ವ್ವಕಂ ಗೊಣ್ಡು (ಸೌಇಇ. XI-i, ೪೭-೧೪; 995); ಮಾಳದಾಲೂರಲ್ ಕೊಡಂಗೆಯ್ಯ ತೆವರಲೆರಡುಂ ಸ್ಥಳವಾ × × × ಬಿಟ್ಟ ಮತ್ತರ್ ನೂಱು (ಸೌಇಇ. XI-i, ೧೧೧-೨೮; 1068). **ಕೊಡಂಗಗೆಯಿ**: ಬ್ರಹ್ಮತಿ ಪಟ್ಟದ ಕೊಡಂಗಗೆಯೀ ಪಡೆದ ಗಟ್ಟಿಯ ಮಾಡಿಸಿದ (ಎಕ. VI, ಚಿಕ್ಕಮ. ೧೫-೧೮; 1074). **ಕೊಡಂಗಿ**: ಮರನಾನು ಪೊಕುಳಿಯಾನು ಕೊಡಂಗಿಯಾನು ಪೊಱಗಾಗಲೆ ಸಲೆವುಗೆಯ ಭಾಗಂ (ಎಕ. VIII, ಸೊರಬ. ೫೭೧-೩೦; 692); ತಿಮ್ಮೋಜನ ಮಕ್ಕಳಿಂ ಕೊಡಂಗಿ ಒಳಗಾಗಿ ತೋಟದಲು ಬಾಳು ನಷ್ಟವಾಗಿ (ಸೌಇಇ. IX-ii, ೪೦೫-೮; 1357); ಶ್ರೀಮದಶೇಷ ಮಹಾಜನಂಗಳು ಮಲನ ಕೊಡಂಗಿ ಕೊಟ್ಟ ಮಾನವ (ಎಕ. XIV, ತಿರುಮ. ೧೫೨-೩; ?). **ಕೊಡಂಗೆ$_1$**: ಗಾಟ್ಟಿಯ ವೇಳ್ಗವಗ ಕೊಡಙ್ಗೆ (ಎಕ. VIII. ಸೊರಬ, ೨೨-೧೨; 800); ಕಟ್ಟಿಸಿದ ಕೆಱೆಗೆ ಮೆಚ್ಚಿಬಿಟ್ಟ ಕೊಡಂಗೆ ಮೂಲಿಗ ಜಾರಂ (ಎಕ. III, ಶ್ರೀರಂಗ. ೧೧೯-೮; 1108); ಮೂಡಣ ಹೆಗ್ಗದ್ದೆ ಆದಜ ಮೇಗಣ ಕೊಡಂಗೆ ಎರಡಜಲ್ಲಿಯೂ ಮೂಡೆ (ಎಇ. XXVII, ೨೮-೪೮; 1256). **ಕೊಡಂಗೆಯಿ**: ಮತ್ತಂ ಕೊಡಂಗೆಯಿ ದೇವಭೋಗ ಮಾನ್ಯ (ಇಎ. ೧೯೪೬, ಹಾನುಗ. ೨೫೦-೩೪; 993). **ಕೊಡಗಿ**: ನಾಲ್ಗಣ್ಡಗ ಕೊಡಗಿ ಆಚನ್ದ್ರತಾರಂಬರಂ ಸಲ್ವುಂ (ಎಕ. III, ನಂಜನ. ೧೯೨-೧೨; 968); ದಂಣ್ಣಾಯಕರಿಗೆ ಯಜಮಾನಪ್ರಾಪ್ತಿಗೆ ಕೊಡಗಿಯಾಗಿ ಕಲ್ಲ ನಟ್ಟ ಕ್ಷೇತ್ರವು (ಎಕ. XI, ಚಿತ್ರದು. ೩೨-೪೩; 1286); ಸಂಗಮದೇವನ ಕೊಡಗಿಯ ಮನೆ (ಎಕ. II, ೩೮೧-೨; ಸು. 1500); ಕೊಡಗಿ ಹಾಕಿ ಕೊಟ್ಟ ಕ್ರಮವೆಂತೆಂದರೆ (ಎಕ. XI, ಹೊಳಲ್ಕೆ. ೧೨೬-೪; 1692). **ಕೊಡಗೆ**: "ಉಂಬಳಿಯೆಂದು ಕೊಡಗೆ" (ಶಮದ. ಪರಿ. ೧); ಇಪಗೊಣ್ಡನ ಒರೆಯ್ಗೆ ಮೆಚ್ಚಿ ಕಟ್ಟದ ಕೊಡಗೆ ಪಳ್ಳಗಟ್ಟಿ ನಾಲ್ಗಣ್ಡಗ (ಎಕ. IV, ಹುಣಸೂ ೧೧-೯; 1020); ಇವಂಗೆ ಕೊಡಗೆ ಕಣ್ಡುಗ ಸಲ್ವುದೂ (ಎಕ. X, ಚಿಂತಾಮ. ೩೧-೩; ಸು. 1050); ಅಕ್ಕಸಾಲೆ ಕಾಳಜೀಗೆ ಕೊಟ್ಟ ಕೊಡಗೆ (ಎಕ. XIV, ಮಳವ. ೧೨೮-೧; 1259); ದಾಱು ಮಾದಳಿಕ ಕೊಡಂಗೆ ಬೆಲೆಕಾರ ಕೊಡಗೆ (ಕಇ. I, ೫೧-೧೩; 1432). **ಕೊಡಗೆಯ್**: ಮಗುನ್ದದ ಕೊಡಗೆಯ್ಯೊಳಗೆ (ಸೌಇಇ. XI-i, ೭೮-೪೮; 1045); ಊರಿಂ ಬಡಗ ಗಾವುಣ್ಡನ ಕೊಡಗೆಯ್ದೋಂಟದಿಂ ಬಡಗ (ಸೌಇಇ. XI-i, ೬೫-೪೬; 1078). **ಕೊಡಿಗಿ**: 'ಕೊಡಿಗಿ ಇನಾಮ್' ಪರಾ. **ಕೊಡಿಗೆ**: ಸುಖದಲಿ ಯಿಹಿರಿ ಎಂದು ಕೊಟ್ಟ ಕೊಡಿಗೆಯ ಶಾಸನ (ಮೈಆರಿ. ೧೯೪೬, ೨-೧೯; 1554); ಗುದವಿದ ಮೇಧ್ಯದ ಹೆಡಗೆ ಕಿವಿಯು ಕಜ್ಜೋಳಿಯು ಖೀಜಿನ ಕೊಡಿಗೆಯ ಹೊಲಸಹುದು (ಕೈಕವ. ೨-೬-೨). **ಕೊಡುಗೆ$_1$**: ಗವುಡಂಗೆ ಕೊಡುಗೆಯಂ ಮಾಡಿ (ಮೈಆರಿ. ೧೯೩೮, ೩೭-೫; 1175).

[< ಕೊಡು$_1$ + ಕೆಯ್$_4$]

**ಕೊಡಂಗೆಯಿ** 'ಕೊಡಂಗೆಯ್$_2$' ನೋ.

**ಕೊಡಂಚಿ**, ಕೊಡಚಿ, ಗೊಡಚಿ$_1$ (ನಾ). ಒಂದು ಜಾತಿಯ ಮುಳ್ಳುಗಿಡ, —ಪೊದೆ: ಕಂಟಕಿತ ಪ್ರಸೂನ ಬಲಿಯೊಳ್ ನಡೆವಲ್ಲಿ ಮುನೀಂದ್ರರೆಂಬಿನಂ ಗೆಂಟಱೊಳೊಪ್ಪಿ ತೋರ್ಪ ಮಣಿಕುಟ್ಟಿಮದೊಳ್ ಪೊಳೆಯಲ್ ಕೊಡಂಚಿಗಳ್ ಗಂಟೊಡೆದುಣ್ಮಿ ಪೊಣ್ಮುವ ನವಪ್ರಸವಾಳಿ ಮಡಲ್ತ ಮಾಧವೀ ಮಂಟಪಮೇಂ ಮನಂಗೊಳಿಸಿತೋ (ಧರ್ಮನಾ. ೨-೯೨). **ಕೊಡಚಿ**: ಪಾರ್ವಾಲಿ, ಕೊಡಚಿ, ಗೊಟ್ಟ (ಮೈಔಗಿ ೭೯-೧೬೩೩). **ಗೊಡಚಿ$_1$**: (ಕಿ).

[ದೇ. ‖ ತಮಿ. ಕೊಣ್ಡೈ; ತುಳು. ಕೊಟ್ಟೆಮುಳ್ಳು]

**ಕೊಡಂತಿ**, ಕೊಡತಿ, ಕೊಡತೆ, ಕೊಣಚಿ (ನಾ). ಮರದ ಸುತ್ತಿಗೆ; ಗುದಿಗೆ: ಉಳಿಯನೂಱು ಕೊಡಂತಿಯೊಳೆ ಬೆಟ್ಟದಂತೆ (ಪಂಪಭಾ. ೧-೧೦೪ವ); ನಿತ್ಯಬಿಂದುಗೆ-ಬೆಡಂಗು, ಕಡಂಗು, ಅಡಂಗು, . . ಕೊಡಂತಿ, ಪಡಂಗು (ಶಮದ. ೩೬ ಪ್ರಯೋ); ಪೇರಂಕುಶದ ನೆತ್ತಿಗಟ್ಟಿಗೆಯ ಬಗೆಬಗೆ ಕೊಡಂತಿಗಳ ಸಾಲೊತ್ತರಿಸೆ ನಾನಾ ವಿಚಿತ್ರ ಸಂವರಣೆಯಂ ಸಿಂಗರಿಸಿದರ್ ದಂತಿಗೆ (ಲಕ್ಷ್ಮಭಾ. ೮-೩-೬).

**ಕೊಡತಿ** : "ಕೊಡತಿ ಕೀಲಕವೆನಿಕ್ಕು ಸತ್ತಿಗೆ ಲೋಹದ ಟಂಕಮಕ್ಕು" (ಮಂಗರಾ. ೧೧೩-೮); ಇಂತಿವ ಮೀಜು ವೇಧಿಸಿ ಭೇದಿಸಿಹೆವೆಂಬುವರೆಲ್ಲಾ ಎನ್ನ ಕೊಡತಿಯ ದಡಿಯಲ್ಲಿ ಬಡಿಯಿಸಿಕೊಂಬ ಬಡಿಹೋರಿಗಳು (ಸರ್ವವ. ೧೨೧-೬೨೩); ಕವುಳದಳ ಕೊಡತಿಗಳ ಕೈಹಾರೆಗಳನಳವಡಿಸಿದರು ವಹಿಲದಲಿ (ಕುವ್ಯಾದ್ರೋ. ೩-೩); ಬಡಿವ ಬಲ್ಗದೆಯೆ ಕೊಡತಿಯಾಗಲಾ ಭೀಮ ಮಡಿವಳನಂತೊಪ್ಪಿದನು (ಸೀಮಿಸಂ. ೨೯-೨೬); ಬಟ್ಟೆಗಳನ್ನು ಗಟ್ಟಿಸುವ ಕೊಡತಿಯಿಂದ ಆ ಕತ್ತೆಯ ಮೈಮುರಿಯ ಹೊಡೆದನು (ಕಥಾಮಂ. IV, ೯೬); ಮಾತು ಕೊಡತಿಯೇಟನಂತೆ ಬೀಳುತ್ತಿತ್ತು (ಅನಾಥೆ. ೧೨೫). **ಕೊಡತೆ** : ಸುಜ್ಞಾನವೆಂಬ ಕೊಡತೆಯಿಂದ ಆ ಮಡಕೆಯುಂ ಕಟ್ಟುವ ಧ್ವನಿ (ಭೈರಸೂ. ೨೫೪); ಅವನೆಂಥ ಮನುಷ್ಯನಪ್ಪಾ ಆತನು ಕೊಡತೆಗೂ ಕೂಡ ಸಾಯಲಾರನು (ಪವನ. ೧೪).
**ಕೊಣಚಿ**. 'ಕಾಮಕೊಣಚಿ' ಪರಾ.
[ದೇ. ‖ ತಮಿ. ಕೊಟ್ಟಾನ್; ಮಲ. ಕೊಟ್ಟಿ; ತುಳು. ಕುದಂಟಿ, ಕೊದಂಟಿ]

**ಕೊಡಂದೆ** (ನಾ). = ಕೊಡಂಗೆ$_1$ : ಅಲದಾವುನ ಹೆಂಡತಿ ಅಳ್ವಬ್ಬೆ ಕಟ್ಟಿಸಿದ ಕೆಱೆಯು × × × ಸಿದ ಅರಸಿನ ಕೊಡನ್ದೆಯು ಕೆಱೆಗೆ ಸಲ್ವು (ಎಕ. X, ಚಿಕ್ಕಬ. ೩-೯ ; 953). [?]

**ಕೊಡಂಬೆ**, ಕೊಡಮೆ, ಕೊಡವೆ (ನಾ). ಮೀನು ಹಿಡಿಯುವುದಕ್ಕಾಗಿ ಏರ್ಪಡಿಸಿದ ಜೋಡುಬುಟ್ಟಿ: ನಿತ್ಯಬಿಂದುಗೆ - ಕೊಡಂಬೆ, ಬಣಂಬೆ (ಶಮದ. ೩೬ ಪ್ರಯೋ); ಕಿಱುಗೂಳಿ ಪೆರ್ಗೂಳಿ ಕೊಡಂಬೆಯಿಡಿರ್ಗಿಱು ಗಟ್ಟಿಗೆಯರೆಮಡ್ಡಿ ಸೂಸುಗೂಳ್ಗಳೆಂಬಿವಂ ಕೊಂಡು (ರಾಜಶೇ. ೫-೧೧೪ವ). **ಕೊಡಮೆ** : (ಕ). **ಕೊಡವೆ** : ಬೆಸ್ತರು ಸುಮಾರು ಇಪ್ಪತ್ತು ಕೊಡವೆಗಳನ್ನು ಒಡ್ಡಿದರು (ರೂಢಿ).
[← ತೆಲು. ಕೊಡಮು]

**ಕೊಡಕನಿ** (ನಾ). ಒಂದು ಊರಿನ ಹೆಸರು : ಪರಮೇಶ್ವರ ಭಟ್ಟಾರಕ ಕೊರ್ಡಕನಿಯ ಮಹಾಜನಕ್ಕೆ ಸರ್ವ್ವಬಾಧಾಪರಿಹಾರ ಬಿಟ್ಟ (ಎಕ. VIII, ಸೊರಬ. ೧೮-೩ ; 690). [?]

**ಕೊಡಕು** (ನಾ). ಡೊಂಕುತನ ; ವಕ್ರತೆ ; ಕೊಂಕು : (ಕ).
ಕೊಡಕುಬೀಳು = (ಬಂಡಿ) ಓಗ್ಗಾಲಿಯಾಗಿ ಕೊರಕಲಿಗೆ ಬೀಳು : (ಕ). [?]

**ಕೊಡಕೆ** 'ಕೊಡಂಕೆ' ನೋ.

**ಕೊಡಕ್ಕೆ** 'ಕೋಡಕೆಯ್' ನೋ.

**ಕೊಡಕೊಳು** 'ಕೊಡುಕೊಳೆ' ನೋ.

**ಕೊಡಗ$_1$** 'ಕೋಡಗ' ನೋ.

**ಕೊಡಗ$_2$** (ನಾ). ೧. ಕೊಡಗು ದೇಶದವನು ; ಕೊಡವ: ತೆಲುಗಮನ್ನೆಯ ಸಾಲಿದೆ ತಿರುಕೊಂಕಣ ಸಲೆ ಕೊಂಗ ತಿಗುಳ ಕೊಡಗರು (ಕಂನವಿ. ೮-೩೦); ಇಲ್ಲಿ ವಾಸಿಸುವ ಜನರನ್ನು ಕುಡುವರು ಕೊಡಗರು ಎಂದು ಕರೆಯುವುದು ವಾಡಿಕೆ (ಮೈವಾಸ್ತು. ೧೬೬). ೨. ಮ್ಲೇಚ್ಛ : "ಮ್ಲೇಚ್ಛರೆನೆ ಕೊಡವ ಕೊಡಗರು" (ಮಂಗರಾ. ೧೧೨-೪).
[ಕೊಡಗು + -ಅ$_7$]

**ಕೊಡಗ$_3$**, ಕೊಡ$_3$ (ನಾ). ಪಶ್ಚಿಮ ; ಪಡುವಲು : ಕುಪ್ಪೆಯಿಂ ಕೆಳಗೆ ಮೊದಲೂರ ಬಟ್ಟೆಯಿಂ ಕೊದಗಡ ಕೆಯಿ ಕಾಳಿಕವೆಯಾಲ (ಕಇ. I, ೩೦-೬೨ ; 1177). **ಕೊಡ$_3$** : ಸಲಬೆನ್ನಿಯರ ಕೊಡಗ್ಗೆ ಎಱೆ ಹಂಬಾಳಿಂ ಆನೆಯರ ಕೊಡಗ್ಗಿಂ ಕೊಡಕೆ ಎಡೆ ನಟ್ಟ ಕಲ್ಲಂ (ಎಕ. III, ನಂಜನ. ೧೯೯-೧೭ ; ?. ಕೃಶಾ.).
[ದೇ. ‖ ತಮಿ. ಕುಡಗ ; ಮಲ. ಕುಡಕೆ]

**ಕೊಡಗಂಬೊಲ** (ನಾ). ಪಶ್ಚಿಮ ದಿಕ್ಕಿನಲ್ಲಿರುವ ಹೊಲ: ನಾವಿದಿಗೆಯ ತಮ್ಮ ಕೊಡಗಂಬೊಲದ ಮಾಣಿಕೇಸ್ವರದ ಕೋಲ ನೂಱಯ್ವತು ಮತ್ತರ್ಕ್ಕಯ್ಯುವಂ ಆ ಕೋಲಲೊಂದು ಮತ್ತರ್ತೋಂಟವೊಂದು ಮತ್ತರ್ಗ್ಗದ್ದೆ (ಸೌಇಇ. XX, ೧೧-೫೧ ; 1140). [ಕೊಡಗ$_3$ + ಪೊಲ]

**ಕೊಡಗತ್ತಿ** (ನಾ). ಕುಡುಗೋಲು : ನಡುವಿನೊಳ್ ಕೊಡಗತ್ತಿ ಕಟ್ಟಿ (ಸೌಗಂಧಿ. ೫೧-೫). [← ತುಳು. ಕೊಡಂಕತ್ತಿ]

**ಕೊಡಗನೂರ್** 'ಕೊಡಂಗನೂರ್' ನೋ.

**ಕೊಡಗಸಾಲೆಗಿಡ** (ನಾ). ಒಂದು ಸಸ್ಯ : (ಮೈಔಗಿ. ೬೬-೧೩೬೫).
[ಕೊಡ$_0$ + ಕಸಾಲೆ$_1$ (< ಕುಸಾಲೆ) + ಗಿಡ (< ಗಿಡು)]

**ಕೊಡಗಿ** 'ಕೊಡಂಗೆಯ್$_2$' ನೋ.

**ಕೊಡಗಿಗದ್ದೆ** (ನಾ). ಉಂಬಳಿಯಾಗಿ ಕೊಟ್ಟ ಗದ್ದೆ : ಆ ಬೆನಕಗಉ⁻⁻ಂಗೆ ಕೊಡಗಿಗದ್ದೆ ಸಲಗೆವೊಂದು (ಎಕ. XI, ಚಿತ್ರದು. ೧೨-೨೬ ; 1286). [ಕೊಡಗಿ (< ಕೊಡಂಗೆಯ್$_2$) + ಗದ್ದೆ (< ಗೞ್ದೆ)]

**ಕೊಡಗಿತಿ** (ನಾ). ಕೊಡಗು ದೇಶದವಳು ; ಕೊಡಗಿನ ಹೆಣ್ಣು : ಬಡನಡುವಿನ ಬಟ್ಟಕುಚದ ಸೌಂದರಿಯದ ಕೊಡಗಿತಿಯರು ರಾಜಿಸಿದರು (ಕಂನವಿ. ೨೧-೮೬). [ಕೊಡಗ + -ಇತಿ$_1$ (< -ಇತ್ತಿ)]

**ಕೊಡಗಿಗೆಱೆ**, ಕೊಡಗೆಕೆಱೆ, ಕೊಡಿಗೆಕೆರೆ (ನಾ). ಉಂಬಳಿಯಾಗಿ ಬಿಟ್ಟ ಕೆರೆ ; ಕೊಡಗೆಯಾಗಿ ಕೊಟ್ಟ ಕೆರೆ (?) : ಚಿಕ್ಕಗವುಣ್ಡನ ಕೊಡಗಿಗೆಱೆಯಲಿಂ ಮೆಯ್ಯ ಕೋಡಿಯಿಂದೊಳಗಾದ (ಎಕ. V, ಹಾಸನ. ೫೩-೬೦ ; 1170). **ಕೊಡಗೆಕೆಱೆ** : ನಾಉ ಆ ಕೊಡಗೆ ಕೆಱೆಯನು ಬರುವ ಅವನೊಬ ತಿರಿಗಿ (ಎಕ. XIV, ಗುಂಡ್ಲುಪೇ. ೧೦೩-೧೯ ; 1553). **ಕೊಡಿಗೆಕೆರೆ** : ಸರಕಾರದಕೆರೆಗಳಿಗೂ ಕೊಡಿಗೆಕೆರೆಗಳಿಗೂ ಮರಮ್ಮತ್ತು ಮಾಡಿಸತಕ್ಕದ್ದು (ಮಹಾವಂ. II, ೭೪).
[ಕೊಡಗಿ (< ಕೊಡಂಗೆಯ್$_2$) + ಕೆಱೆ]

**ಕೊಡಗಿದಾರ**, ಕೊಡಿಗೆದಾರ (ನಾ). ಕೊಡುಗೆಯನ್ನು ಪಡೆದವನು; ಇನಾಮುದಾರ : (ಕೈಸ್‌ಗ. ೫೫೩). **ಕೊಡಿಗೆದಾರ** : ಕೊಡಿಗೆದಾರರ ಪೈಕಿ ಒಂದಾನೊಂದು ಕೊಡಿಗೆದಾರನಿಗೆ . . . ಆಧಾರವಿಲ್ಲದೆ ಇದ್ದರೆ (ಮಹಾವಂ. II, ೭೪). [ಕೊಡಗಿ (< ಕೊಡಂಗೆಯ್$_2$) + -ದಾರ$_4$]

**ಕೊಡಗಿಮಾನು** 'ಕೊಡಗಿಮಾನ್ಯ' ನೋ.

**ಕೊಡಗಿಮಾನ್ಯ**, ಕೊಡಗಿಮಾನು, ಕೊಡಗೆಮಾನ್ಯ, ಕೊಡಿಗೆಮಾನ್ಯ (ನಾ). ಉಂಬಳಿಯಾಗಿ ಬಂದ ಭೂಮಿ : ತನಗೆ ಕೊಡಗಿಮಾನ್ಯವಾಗಿ ನಡೆವ ಗದ್ದೆ (ಎಕ. VI, ಕಡೂರು. ೨೪-೨೫ ; 1148). **ಕೊಡಗಿಮಾನು** : ಸಂದಕರಿಯ . . . ಕೊಡಗಿಮಾನಿನಲ್ಲಿ (ಎಕ. VI, ಶೃಂಗೇರಿ. ೨೯-೧೫; 1416). **ಕೊಡಗೆಮಾನ್ಯ** : ತಮಪ್ಪಗೌಡನಿಗೆ ಬಿಟ್ಟು ಕೊಟ್ಟ ಕೊಡಗೆಮಾನ್ಯ (ಎಕ. X (S), ಬಾಗೇಪ. ೯೨-೩ ; 17ನೆಯ ಶತ). **ಕೊಡಿಗೆಮಾನ್ಯ** : (ಕ). [ಕೊಡಗಿ (< ಕೊಡಂಗೆಯ್$_2$) + ಮಾನ್ಯ]

**ಕೊಡಗಿವಿ** (ನಾ). ಕೊಡದಂತಿರುವ ಕಿವಿ :
ಕೊಡಗಿವಿಯವನು : ಕೊಡದಂತೆ ಕಿವಿಗಳುಳ್ಳವನು ; ಕುಂಭಕರ್ಣ : ಕೊಡಗಿವಿಯವನೆ ನಿದ್ರಾತರುಣಿಪರಿರಂಭಣದೆ ನಿನ್ನದು ಬರಿದೆ ಅವಸರದಪ್ಪಿ ದಶಕಂಧರನು ಜಾಗರಿಸಿ (ರಘುವಂ. ೧೨-೮೧).
[ಕೊಡ$_2$ + ಕಿವಿ$_2$]

**ಕೊಡಗು** (ನಾ). ಒಂದು ಪ್ರದೇಶದ ಹೆಸರು : ಮಲೆಯಾಳ ಕೊಡಗು ಬಾಹ್ಲಿಕಾ ಮಲೆಯ ಮಧು ಚೋಳದೇಶದ ರಾಯರು ಬಲದೋಱಿದರು ಚಕ್ರಧರಗೆ (ಭರಚ. ೨೨-೫೬) ; ಕೊಡಗು ಕೊಂಕಣ ಕೊಂಗ ಮಲೆಯಾಳ ರಾಜ್ಯದ ಬಡಿಹೋರಿಗಳು ಮನ ನಡುಗಿ (ಕಂನವಿ. ೬-೩೨).
[ದೇ. ‖ ತಮಿ. ಮಲ. ಕುಡಗ]

**ಕೊಡಗುಕತ್ತಿ** (ನಾ). ಕೊಡಗರು ಉಪಯೋಗಿಸುವ ಅಗಲವಾದ ಹಾಗೂ ತುದಿಯಲ್ಲಿ ಕೊಕ್ಕಿನಂತೆ ಬಾಗಿರುವ ಖಡ್ಗ : (ಕ).
[ಕೊಡಗು + ಕತ್ತಿ]

**ಕೊಡಗುಮಲೆ** (ನಾ). ಕೊಡಗು ದೇಶದ ಬೆಟ್ಟ : ಅಕ್ಕಿ ಹುಡಿ ಹಿಟ್ಟುಗಳ ತುಂಬಿ ಕೊಡಗುಮಲೆಯ ಸಾರಿದರು (ಕಂನವಿ. ೧೧–೪೬).
[ಕೊಡಗು + ಮಲೆ$_2$]

**ಕೊಡಗೂಸು**, ಕುಡಗೂಸು, ಕುಡುಗೂಸು, ಕೊಡುಗೂಸು (ನಾ). ಎಳೆಯ ವಯಸ್ಸಿನವಳು ; ಮದುವೆಯಾಗದ ಹುಡುಗಿ; ಕನ್ಯೆ ; ಕುಮಾರಿ : "ಕುಮಾರೀ, ಕನ್ಯಾ – ಈ ೨ ಕೊ(ಡು)ಡಗೂಸು" (ಹಲಾಯು. ೭೯–೩೨೯); "ಕೊಡಗೂಸು ಕನ್ನೆ ಕೊಟ್ವಾಕೂಸು ವರ್ಯೆ" (ಮಂಗರಾ. ೮೯–೨) ; ಅಱುವರುಂ ಕೊಡಗೂಸುಗಳುಪವಾಸಂಗೆಯ್ದು (ವಡ್ಡಾರಾ. ೧೧೫–೧೭) ; ಕೊಡಗೂಸೆಂಬುದು ಪೆಱರೊಡವೆ (ಪಂಪಭಾ. ೩–೨೫ ವ) ; ಕೊಡಗೂಸಿನೊಳಗಣ ಮೊಲೆ ಮುಡಿಯ ಪಡೆದ ತಾಯಿ ತಂದೆಗಳೆಂದಡೆ ಕಾಣಿಸಿಕೊಡಬಲ್ಲರೆ (ದೇದಾಪ್ರ. ೧೦೦–೪) ; ಕಾಸಿ ಚಿನಿಪಾಲಂ ಕೊಡುವವಳು ನಿಮಗೆ ಕೊಡಗೂಸು (ಬಸಪು. ೯–೩೮) ; ಕೊಡಗೂಸುಗಳು ಬಂದು ಹೊಕ್ಕರಾ ಮನೆಗಳು ತಡೆಯದೆ ಪ್ರಾಯ ವೇಱುವುವು (ಭರಚ. ೧೫–೩೧). **ಕುಡಗೂಸು** : "ಕನ್ಯಾ=ಕುಡಗೂಸು" (ಕಾಶಕ್ಯ. ೩೮). **ಕುಡುಗೂಸು** : ನಾಂ ಕುಡುಗೂಸಪ್ಪಿನದು ಕಾರಣದಿನೆಮ್ಮ ತಾಯಲ್ಲಿಗೆ ಪೋಗಿ ಬೇಡಾ (ಪಂರಾಮಾ. ೮–೬೧ ವ). **ಕೊಡುಗೂಸು** : ಅಮೂಲ್ಯ ಮಣಿಗಣಭೂಷಿತೆಯಾಗಿ ನಡುವಿರುಳ್ ಬರ್ಪ ಕೊಡುಗೂಸಂ ಜಡಿದು ಪಿಡಿತಂದೊಪ್ಪಿಸದೆ ಕಳಿಪಿ (ಸುಕುಮಾ. ೭–೨೭); ಕೊಡುಗೂಸು ಮದುವೆಯಂ ಬೆಳಸುಳ್ಳಂ ಮಱೆಯಂ ನೆನೆವಂತು (ಧರ್ಮಾಮೃ. ೩–೧೯೦) ; ಆನ್ಯಾಯಂ ಕೊಡುಗೂಸಿನೊಳ್ ಕುಡದ ಮುನ್ನಂ ಬಂದು ಕೂಡಿರ್ಪುದು (ಜಗವಿ. ೧೭–೧೨೩)

ಕೊಡಗೂಸಾಗಿಸು = ಹೆಣ್ಣಾಗಿಸು ; ನಿರ್ವೀರ್ಯವಾಗಿಸು (?) : ಕೊಡಗೂಸಾಗಿಸಿದತ್ತು ನಿನ್ನತುಳ ಬಾಹಾಸಾಹಸಂ ಸಿಂಗಮಂ ಸಿಡಿಲಂ ಮಾರ್ಪೊಡಮೆಮ್ಮನಿಂದುವರೆಗುಂ ಮಾಱಾಂಪರಿಲ್ಲೆಂದು ಮಾರ್ನುಡಿಯಾಯ್ತು (ಅನಂಪು. ೧೩–೮೦). [ಕೊಡ$_1$ + ಕೂಸು]

**ಕೊಡಗೂಸುತನ**, ಕೊಡುಗೂಸುತನ (ನಾ). ಕನ್ನೆತನ; ಕನ್ನೆಯಾಗಿರುವಿಕೆ: ಕೊಡಗೂಸುತನದ ಭಯದಿಂ ನಡುಗುವ ಕನ್ನಿಕೆಯ (ಪಂಪಭಾ. ೧–೯೨) ; ಎಸೆದುದು ನಿಸದಮಳ ಕೊಡಗೂಸುತನಂ (ವರ್ಧಪು. ೯–೧೯). **ಕೊಡುಗೂಸುತನ** : ಮಾಸರಮಾಯ್ತು ವಳೊ ಳೊಗೆದ ಕೊಡುಗೂಸುತನಂ (ರಸರ. ೧–೨೬). [ಕೊಡಗೂಸು + -ತನ]

**ಕೊಡಗೂಸುವೆಣ್** (ನಾ). = ಕೊಡಗೂಸು : ಕಳಸ ಕನ್ನಡಿವಿಡಿದು ಕೊಡಗೂಸುವೆಣ್ಗಳುಜ್ವಲ ಮಂಗಳಾನಕಂ ಸಹಿತಿದಿರುವಂದು (ಸೌಂದಪು. ೫–೯೫). [ಕೊಡಗೂಸು + ಪೆಣ್]

**ಕೊಡಗೆ** 'ಕೊಡಂಗೆಯ್$_2$' ನೋ.

**ಕೊಡಗೆಕೆಱೆ** 'ಕೊಡಗಿಗೆಱೆ' ನೋ.

**ಕೊಡಗೆಚ್ಚಲ್** (ನಾ). ಕೊಡದಂತೆ ದೊಡ್ಡದಾಗಿರುವ ಕೆಚ್ಚಲು : ಕಾಮಧೇನುವಿನ ಕೊಡಗೆಚ್ಚಲಂ ಪಾಲ್ಗರೆದು ಗೆಯ್ದ ಪಾಯಸಂ (ಶ್ರೀರಾಮಾ. ೧೪–೨೫೫). [ಕೊಡ$_2$ + ಕೆಚ್ಚಲ್]

**ಕೊಡಗೆದೆಱೆ** (ನಾ). ಕೊಡಗೆಯ ಮೇಲೆ ಹಾಕುವ ಕಂದಾಯ : ಕೊಡಗೆದೆಱೆಯ ಕ್ರಮವೆಂತೆಂದರೆ . . . ಖ ೨೦ನೆಯ ಕೊಡಗೆದೆಱೆನು (ಎಕ. XIV, ಗುಂಡ್ಲುಪೇ. ೧೦೩–೧೫ ; 1553).
[ಕೊಡಗೆ (< ಕೊಡಂಗೆಯ್$_2$) + ತೆಱೆ$_3$]

**ಕೊಡಗೆಮಾನ್ಯ** 'ಕೊಡಗಿಮಾನ್ಯ' ನೋ.

**ಕೊಡಗೆಯ್** 'ಕೊಡಂಗೆಯ್$_2$' ನೋ.

**ಕೊಡಗೆಯ್ದೋಂಟ** (ನಾ). ಉಂಬಳಿಯಾಗಿ ಪಡೆದತೋಟ: ಗಾವುಣ್ಡನ ಕೊಡಗೆಯ್ದೋಂಟದಾ ಬಡಗ ಕೆರೆಯ ಕೆಲಸಕ್ಕೆಂದು (ಸೌಇಇ. XI–i, ೬೫–೪೭ ; 1029). [ಕೊಡಗೆಯ್ (< ಕೊಡಂಗೆಯ್$_2$) + ತೋಂಟ]

**ಕೊಡಗೆಹೊಲ** (ನಾ). ಉಂಬಳಿಯಾಗಿ ಪಡೆದ ಭೂಮಿ : ಬಯಿಚಪಗಉಡನು ತಿಂಮಣಗೆ ಕೊಟ್ಟತರ ಕೊಡಗೆ ಹೊಲ (ಎಕ. X (S), ಕೋಲಾರ. ೩೦೮–೪ ; 16ನೆಯ ಶತ).
[ಕೊಡಗೆ (< ಕೊಡಂಗೆಯ್$_2$) + ಹೊಲ (< ಪೊಲ)]

**ಕೊಡಗೈ** 'ಕೊಡುಗೈ' ನೋ.

**ಕೊಡಗೊಳ್** (ಕ್ರಿ). ಕೊಡವನ್ನು ತೆಗೆದುಕೊಳ್ಳು : ಬೆಲಗಸೆ ತೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತಿರ್ದಿ ಬಚ್ಚಲ ನೆಲೆದೋಂಟದೊಳ್ ಪರಿಯಿಸಲ್ (ಅಜಿಪು. ೬–೪೫). [ಕೊಡ$_2$ + ಕೊಳ್$_1$]

**ಕೊಡಚಗ** (ನಾ). ಒಂದು ಬಗೆಯಸಸ್ಯ : ಕೊಡಚಗ, ಕೊರಸಿಗನ . . . ಕುರ್ಚಿ (ವೈಶಿಗಿ. ೪೪–೮೬೬). [?]

**ಕೊಡಚಿ** 'ಕೊಡಂಚಿ' ನೋ.

**ಕೊಡಚು** (ಕ್ರಿ). ೧. ಕಿವಿಯೊಳಗಿನ ಗುಗ್ಗೆಯನ್ನು ಬೆರಳಿನಿಂದಾಗಲಿ, ಕಡ್ಡಿಯಿಂದಾಗಲಿ ಹೊರಗೆ ತೆಗೆ. ೨. ಪಾತ್ರೆಗಳೊಳಗಿನ ಕೊಳೆಯನ್ನು ಉಜ್ಜಿ ಹೋಗಲಾಡಿಸು : (ಕ). [< ಕೊಡ$_1$ + -ಚು]

**ಕೊಡಚೆ** (ನಾ). ಒಂದು ಬಗೆಯ ಪಕ್ಷಿ: ಭ್ರಮರಂಚೆ ಕೊಡಚೆ ಶುಕವಿನುತ ಕೋಗಿಲೆ ಮುಖ್ಯಯುಖಿಳಾಂಡಜಾತಾಂಡ ಧ್ವನಿಗೈಯೆ (ನವಮೋ. ೬–೨೨).
[ಈ ಶಬ್ದವು 'ಕೊಂಚೆ' ಎಂಬುದರ ಅಪಲಿಖಿತವಿರಬಹುದು]

**ಕೊಡತ$_1$** 'ಕೊಡೆತ' ನೋ.

**ಕೊಡತ$_2$** 'ಕೋಡು$_3$' ನೋ.

**ಕೊಡತ$_3$** (ನಾ). ಓಟಕ್ಕೆ ತಡೆಯಾಗುವಂತೆ ಪ್ರಾಣಿಯ ಕೊರಳಲ್ಲಿ ಕಟ್ಟುವ ಕೋಲು, —ಹಾಸುಗೋಲು : "ಛಳಿ ಹಾಸುಗೋಲು ಪುಙ್ಖೋವುಗಳೊಳಂ ಕೊಡ [ಪಾಠಾಂ. ಡೆ]ತ" (ಶಬ್ದಮಂ. ೯೮) ; ಕೋಡಗವ ಹಿಡಿದು ಕೊಡತಕ್ಕೆ ಹಾಕಿಹೆನೆಂದು ಹೋದರೆ ಊರನೆಲ್ಲಾ ನುಂಗಿತ್ತು (ಸಿದ್ಧೇವ. ೩೪೩). [ದೇ. ‖ ತೆಲು. ಕೊಣತ]

**ಕೊಡತಿ** 'ಕೊಡಂತಿ' ನೋ.

**ಕೊಡತಿಮನ್ಯ** (ನಾ). ಬಡಗಿ, ಕಮ್ಮಾರ, ಮೊದಲಾದ ಕೊಡತಿ ಕೆಲಸ ಮಾಡುವವರಿಗಾಗಿ ಉಂಬಳಿ ಹಾಕಿಕೊಟ್ಟ ಭೂಮಿ : ಚೆಂನಯಗಉಡರು ಬಳಿಯದೆ ಮಡಿವಳತಂಮದ ತಿಂಮನಿಗೆ ಕೊಡತಿಮನ್ಯ (ಎಕ. IX (S), ಬೆಂಗಳೂ. ೧೭೮–೯ ; 1700).
[ಕೊಡತಿ (< ಕೊಡಂತಿ) + ಮನ್ಯ (< ಮಾನ್ಯ)]

**ಕೊಡತಿಮೀನು** (ನಾ). (ಕರಾ) ಒಂದು ಜಾತಿಯ ಮೀನು : ಕೊಡತಿಮೀನೆಂಬ ಒಂದು ಜಾತಿಯ ಹುಲಿಮೀನು ನಮ್ಮ ಸಾಗರದಲ್ಲಿ ಇರುವುದು (ಬಾಲಪ್ರ. II, ೯೬೧). [ಕೊಡತಿ + ಮೀನು$_2$ (< ಮೀನ್$_3$)]

**ಕೊಡತಿವಣ** (ನಾ). ಕೊಡತಿ ಕೆಲಸಮಾಡುವವರ ಮೇಲೆ ಹಾಕಿದ ತೆರಿಗೆ : ಬೀರವಣ ಕೊಡತಿವಣ ಕತ್ತರಿವಣ ಅಡೆಕಲುವಣ . . . ಕುಂಬಱಬಿಟ್ಟಿ ಕಂಮಱವಿಟ್ಟಿ ಯಿವೊಳಗಾಗಿ (ವೈಆರಿ. ೧೯೩೨, ೧೬–೩೧ ; 1069) ; ಕುಮಾರಗಾಣಿಕೆ ವಿಜಯ ಬೀರವಣ ಕೊಡತಿವಣ ಖಾಣ . . . ಪೂರ್ವಾಯ ಮತ್ತಂ ಅಪೂರ್ವಾಯ ವೊಳಗಾಗಿ (ವೈಆರಿ. ೧೯೪೦, ೩–೨೬ ; 1206) ; ವಿಜಯ ವೀರವಣ ಘ ೧ ಕೊಡತಿವಣ ಪ ೨ ಅಂತು ಗ ಲ೫ ಪ ೯ ಖಾಣಸಲಗೆ (ಎಕ. V, ಹಾಸನ. ೮೪–೩೬ ; 1230). [ಕೊಡತಿ (< ಕೊಡಂತಿ) + ಪಣ$_1$]

**ಕೊಡತಿವಲೆ** (ನಾ). ಒಂದು ಬಗೆಯ ಬಲೆ: ತಡಿಕೆವಲೆ ತಟ್ಟವಲೆ ಹಾಸುವಲೆ ಬೀಸುವಲೆ ಕೊಡತಿವಲೆ ಕೋಲುವಲೆ ತಳ್ಳಿವಲೆ . . . ಹೊಱಗಳ ಬೇಡವಡೆ ನೆರೆದುದು (ಹಜಕಾ. ೫-೮). [ಕೊಡತಿ$_0$ + ಬಲೆ$_1$]

**ಕೊಡತಿವುೞು** (ನಾ). ಒಂದು ಬಗೆಯ ಹುಳು: ಗಾಳಿ ಸುೞಿದು ಸುಟ್ಟುೞಿಗಳೊಗೆವೊಡಂ ಕೊಡತಿವುೞುಗಳ(ೞಿ)ೞಿದಾಡುತಿರ್ಪೊಡಂ. . . ಇವ ನೋಡಿ ಪೇೞ್ ಮಱಿಯಧಿಕ ತಾನೆಂಬುದಂ (ಜಟ್ಟಮ. ೨-೧).
[ಕೊಡತಿ (< ಕೊಡಂತಿ) + ಪುೞು]

**ಕೊಡತೆ** 'ಕೊಡಂತಿ' ನೋ.

**ಕೊಡನಾಡು** (ನಾ). ಒಂದು ಸೀಮೆಯ ಹೆಸರು : ಸಾಂತಳಿಗೆ ಸಾಸಿರದ ಬಳಿಯ ಕೊಡನಾಡು ಮೂವತ್ತರೊಳಗಣ ಕುಡಿಗೆರಿಯ ಮನ್ನೆಯ ವೊಳಗಾಗಿ (ಎಕ. VII, ಶಿಕಾರಿ. ೫೩-೨೬ ; 1027).
[ಕೊಡ$_0$ + ನಾಡು]

**ಕೊಡನಾರಿ**, ಕೊನ್ನಾರಿ, ಕೊರನಾರಿ (ನಾ). ಒಂದು ಬಗೆಯ ಮೂಲಿಕೆ; ಭದ್ರ ಮುಸ್ತೆ: "ಮುಸ್ತಾ = ಕೊಡನಾರಿ (ಕೊನ್ನಾರಿ)" (ಕಾಶಕ್ಯ. ೨೬೦); ಕೊಡನಾರಿ ಗೆಡ್ಡೆ . . . ಶುಂಠಿ ಇವರ ಕಷಾಯ ವನಾದರೂ ಕೊಡಿಸಲು ವಾತಜ್ವರ ಹರ (ವೈದ್ಯಸಾ. I, ೫೮); ಗಂಡು ಕುರುಚೀಬೇರು, ಅಮರದವಳ್ಳಿ, ಕೊಡನಾರಿ ಗೆಡ್ಡೆ, ಇವಂ ಕಷಾಯವಿಕ್ಕಿ ಸೇವಿಸಿದರೆ ವಾತಜ್ವರಂ ಕೆಡುಗುಂ (ಸಕವೈ. ೬೬), **ಕೊನ್ನಾರಿ**: ತುಂಗೆಹುಲ್ಲು, ಕೊನ್ನಾರಿಗೆಡ್ಡೆ (ವೈಔಗ ೨೮-೫೩೬); ಅಳಲೆ ಕಾಯಿ, ಪರ್ಪಾಟಕ, ಕೊನ್ನಾರಿ . . . ಅಷ್ಟಾವಶೇಷವಾಗಿ ಕಾಸಿ ಪಾನವ ಮಾಡಿಸಲು ರುಗ್ಣಾಹಸನ್ನಿ ಶಮನವಹುದು (ಸಕವೈ. ೧೫೫). **ಕೊರನಾರಿ** : (+). [?]

**ಕೊಡಪಾನ**, ಕೊಡಪಾನೆ (ನಾ). = ಕೊಡ : ತಾಮ್ರದ ಭಾಂಡತತಿ ಪೊಂಬೆಳ್ಳಿಗೊಪ್ಪರಿಗೆ ಕೊಡಪಾನ ಗಿಂಡಿ ಪರಿಯಣ ಪಡಿಗ (ಚಬಪು. ೪೭-೪೦) ; ಗುಡಿ ದೂಸ ಕೊಪ್ಪರಿಗೆ ಕೊಡಪಾನವನ್ನಿತ್ತು (ಲಿಂಗಪು. ೩೭-೨೪) ; ನೀರು ತುಂಬಿದ ಕೊಡಪಾನವನ್ನು ಸೊಂಟದ ಮೇಲಿಟ್ಟು (ಮಲೆಮ. ೧೬) ; ಕೊಡಪಾನ ಬಾವಿಗಿಳಿಸಿ ಮಿಾಯಲು ಮುಂದಾದೆ (ನಾಚಕೆ. ೪೫). **ಕೊಡಪಾನೆ**: (+).
[ಕೊಡ$_2$ + ಪಾನ]

**ಕೊಡಪಾನೆ** 'ಕೊಡಪಾನ' ನೋ.

**ಕೊಡಪಿಸು**, ಕೊಡವಿಸು (ಕ್ರಿ). ಒದರು ; ಕೊಡವಿಹಾಕು; ತೆಗೆದು ಹಾಕು : ಕಡೆಯಾಣಿ ಬೊಂಬೆಗೆ ಕವಿದಿರ್ದ ದೂಳಿಯ ಕೊಡಪಿಸಿ ಪೊಳಪಿಕ್ಕಿದಂತೆ(ಕವಿಚ. III, ೧೪೩, ಗೋಮಟೇಶ್ವರ ಚರಿತೆ). **ಕೊಡವಿಸು**: ಮನೆಯ ಧೂಳು ಕೊಡವಿಸಬೇಕು (ರೂಢಿ). [ಕೊಡಪು + -ಇಸು$_3$]

**ಕೊಡಪು**, ಕೊಡವು, ಕೊಡಹು$_1$ (ಕ್ರಿ). ೧. ಒದರು ; ಜಾಡಿಸು ; ಅಲ್ಲಾಡಿಸು : "ಕೊಡಪು- ಕರ ವಿಕೀರ್ಣೇ" (ಶಮಧಾ) ; ಮುತ್ತಿದರ್ ಕೆಡಪಿದರ್ ಕೊಡಪಿದರ್ ಮಡಪಿದರ್ (ಚಬಪು. ೩೧-೪೩) ; ಕೊಡಂಕಿ ತುಡುಂಕಿದ ಗೋವಳನಂ ಕೊಡಪಿ ಕೆಡಪಿ (ರಾಜಶೇ. ೬-೧೧ ವ) ; ಹಯಂ ಕೊಡಪೆ ಬೆನ್ನಿಂದಂ ಪಡಲ್ವಟ್ಟರಂ ಕಳಿದು (ಚಕವಿ.೫-೨೩); ಹೆಜ್ಜಳವನುಂ ಕೇಳಿ ಸಂಭ್ರಮಂಗೊಳುತಮಿರೆ ಕೊಡಪಿ ಕಿವಿಗಳನು ನಿಮಿರೆ (ವೆಂಕಾರಾ. ೫-೧-೧೫). **ಕೊಡವು**: ೧. ತಡವರಿಸುತೇಳುತ್ತ ಬೀಳುತ ಕೊಡವು ಕೊಬ್ಬರನೊಬ್ಬರು (ಕುವ್ಯಾವಿ. ಒರಿಇ. ೪-೭೩) ; ಕೊಡವುತ್ತುಂ ನಿಜ ಕೇಸರಪ್ರತತಿಯಂ (ವಿಷ್ಣುಪು. ೫-೨೪೭) ; ಹಾಸಿಗೆಯನ್ನು ಮರಳಿ ಎಂದೂ ಕೊಡವಿ ಸುತ್ತಿ ಕಟ್ಟಿಟ್ಟ ಹಾಗೆಯೇ ಕಾಣುವುದಿಲ್ಲ (ಸಾಹಿಜೀ. ೮೬). ೨. ಬಿಟ್ಟುಬಿಡು ; ಕಳಚು ; ವಿಸರ್ಜಿಸು : ಸುನಂದ ಯೋಚನೆಗಳನ್ನು ಕೊಡವಿ ಕೆಳಗಿಳಿದು ಬಂದಳು (ದೂಬೆಟ್ಟ. ೭೦).

**ಕೊಡಹು$_1$** : ೧. ಗಡಣದೊಳುಂಬವರೆಲ್ಲಂ ಹಡಿಕೆಯ ನಾತಕ್ಕೆ ಪೇಸಿ ಯೋಗಡಿಸಿ ಮೂಗಂ ಪಿಡಿದುಣಿಸಂ ತೊಱದಿರೆ ತಲೆಗೊಡಹದೆ ಬಹು ಧನಿಯುಣಲ್ಕೆ ಕಂಡು (ಧರ್ಮಪ. ೨-೫೯) ; ಏನಿದದ್ಭುತವೆನುತ ತಲೆಯನು ತಾನೆ ಕೊಡಹಿದನು(ಕುವ್ಯಾದ್ರೋ ೧೪-೪೪) ; ಹತ್ತಿದಮೆಯಿಯ್ದುಳ ಕೊಡಹಿ ಕರವ ಹಿಡಿದೆತ್ತಿದಳಬುಜಾಯತಾಕ್ಷಿ (ನೋಹತ. ೮-೨೬) ; ಹಲ್ಲೆಲ್ಲ ಕವಡೆಯ ಚೀಲವ ಕೊಡಹಿದಂತುದಿರ್ದುವು ಧರೆಗೆ (ಭರಚ. ೩೬-೮೮). ೩. ಕಡೆ; ಮಥಿಸು : ಭದ್ರಮುಸ್ತೆ . . . ಧಾತಕೀ ಕುಸುಮ ಇಷ್ಟನು ಕೈಯಲ್ಲಿ ಕೊಡಹಿದ ಮಜ್ಜಿಗೆಯಲ್ಲರೆದು ಕೊಡಲು (ವೈದ್ಯಸಾ. I, ೨೧೩).
[ದೇ. ‖ ಮಲ. ಕುಡಯು ; ಕೊಡ. ಕೊಡಂಸ್ ; ತುಳು. ಕುಡುಪು]

**ಕೊಡಬೀಸ** 'ಕೊಡವೀಸ' ನೋ.

**ಕೊಡಮಳೆ** (ನಾ). ಕೊಡದಿಂದ ಸುರಿದಂತೆ ಬೀಳುವ ಮಳೆ; ಕುಂಭ ದ್ರೋಣ ಮಳೆ : ಕೊಡಮ[ಪಾಠಾಂ. ವ]ಳೆಯನು ಕಟ್ಟಬಲ್ಲನ ಮಳೆಯ ವಗಡಿಸಬಲ್ಲುದೆ (ಕುರಾಸಾಂ. ೨೦-೧೫). [ಕೊಡ$_4$ + ಮಳೆ (< ಮೞೆ)]

**ಕೊಡಮಾವು** (ನಾ). ಒಂದು ಬಗೆಯ ಸಸ್ಯ (?) : "ಜಂತುನಾಶನಃ - ಕೊಡಮಾವು" (ಒಷಧಿ. ೬೧). [?]

**ಕೊಡಮುರುಕ** (ನಾ). ಒಂದು ಜಾತಿಯ ಸಸ್ಯ : ಕೊಡಜಗ, ಕೊರಸಿಗನ ಗಿಡ, ಕೊಡಮುರುಕ . . . ಕುರ್ಚ (ವೈಔಗ. ೪೪-೮೬೬). [?]

**ಕೊಡಮುರ್ಕ** (ನಾ). ಒಂದು ಜಾತಿಯ ಸಸ್ಯ : ಬೆಪ್ಪಾಲೆ. . . ಕೊಡಮುರ್ಕ (ವೈಔಗ. ೭೮-೧೬೧೩). [?]

**ಕೊಡಮೂಕ** (ನಾ). ಜೋಳದ ಎಂಟು ಪ್ರಕಾರಗಳಲ್ಲಿ ಒಂದು : ಕೆಂಜೋಳ, ಕೊಡಮೂಕನ ಜೋಳ . . . ಈ ಎಂಟು ಜಾತಿ (ಜೋಳ) ಗಳನ್ನು (ಕಭಾಗಿ. ೨೭೧). [?]

**ಕೊಡಮೆ** 'ಕೊಡಂಬೆ' ನೋ.

**ಕೊಡರು** (ನಾ). ಒಂದು ಅನುಕರಣ ಪದ; ಪಕ್ಷಿಗಳ ಧ್ವನಿ ಯನ್ನು ಅನುಕರಿಸುವ ಪದ. 'ಕೊಡರುಕೊಂಚೆ' ಪರಾ. [?]

**ಕೊಡರುಕೊಂಚೆ** (ನಾ). ಕೊಡರು ಕೊಡರೆಂದು ಶಬ್ದಮಾಡುವ ಒಂದು ಜಾತಿಯ ಪಕ್ಷಿ : ಹಾಳುಮನೆಗಳೊಳಗಿಂದ ಕೊಡರುಕೊಂಚೆಗಳ ಕೂಗುಕರ್ಕಶವಾಗಿ ಕೇಳಬರುತ್ತಿದೆ (ಜನಜೀ. ೬೬). [ಕೊಡರು + ಕೊಂಚೆ]

**ಕೊಡರೆ** (ನಾ). ಒಂದು ಬಗೆಯ ತೆರಿಗೆ : ಸುಂಕ ಸೋದಿಗೆ ಕೊಡರೆ ಕೊತ್ತಕೊಡರೆ ಎತ್ತುದರೆ ಕೊತ್ತಮ × × ದರ ಸುಂಕರಿಗೆ ಬರಲುದು (ಎಕ. XIV, ಮಳವ. ೧೪೫-೩೫ ; ?). [?]

**ಕೊಡಲ**, ಕೊಡಲು$_1$ (ನಾ). ೧. ಪಡುವಲು ; ಪಶ್ಚಿಮ (?) : ಎಟ್ಟಗ ಕೊಡಲ ಮೂಡಗಕೆಲ ಒಂದು (ಇಆ. XII, ೧೬-೪ ; 815). ೨. ಒಂದು ಪ್ರದೇಶದ ಹೆಸರು (?) : ಶ್ರೀ ಕೊಡಲರಾ ನಾಗಂಣನಾ ಕೃತಮಿದಂ (ಮೈಆರಿ. ೧೯೩೦, ೩-೩೪ ; 500) ; ಶ್ರೀ ಕೊಡಲರಾ ಜಕ್ಕರ ಪೊಲೆಯಮ್ಮನಾ ಶಾಲೆ ಪದಿನೇೞು ಧರಣ (ಎಕ. VII, ಶಿಕಾರಿ. ೪೫-೫೭ ; 890) ; ನಾಡ ಕೆಳಭಾಗೆಯ ಕೊಡಲ ಅಗ್ರರಕ್ಕೆ (ಎಕ. VIII, ತೀರ್ಥಹ. ೧೪೭-೧೧ ; 1384). **ಕೊಡಲು$_1$** : ತೆಂಕಲು ಹಲಸಿನಮಾನಿ ಕೂಲಂಬಿಕೊಡಲು ಅಱಯ ಮಾಲಿಂದ ಬಡಗಲು (ಸೌಇಇ. IX-ii, ೪೭೦-೩೦ ; 1482). [?]

**ಕೊಡಲಗದ್ದೆ**, ಕೊಡಲಿಗದ್ದೆ(ನಾ). ಒಂದು ಬಗೆಯ ಗದ್ದೆ: ಗಡೆಮುಡೆ ೬ ಕೊಡಲಗದ್ದೆ ಕಂನಡ ಹೞದಿಂ ಪಡುವಲು (ಸೌಇಎ. ೧೯೩೦, ಮಂಗಳೂ. ೫೩೪-೧೫ ; 1278). **ಕೊಡಲಿಗದ್ದೆ** : ಗಂಗಾಧರಭಟ್ಟರಿಂಗೆ . . . ಮುಂಡಗೆಱ ಕೊಡಲಿಗದ್ದೆ ಸಹಿತವಾಗಿ ಮೂಡೆ ೧೦ (ಎಇ. XXVII, ೧೬೧-೩೬; 1256). 'ಕೊದುಲು' ಪರಾ. [ಕೊಡಲ್$_0$+ಗದ್ದೆ (< ಗೞ್ದೆ)]

**ಕೊಡಲತೀರ್ಥ** (ನಾ). ಒಂದು ತೀರ್ಥದ ಹೆಸರು: ಉತ್ತರಾಯಣ ಸಂಕ್ರಾನ್ತಿಯನ್ದು ಕೊಡಲತೀರ್ಥಮಂ ಮಿನ್ದು (ಎಕ. VII, ಶಿಕಾರಿ. ೩೦–೨೨ ; 1031). [< ಕೊಡಲ + ತೀರ್ಥ]

**ಕೊಡಲಸೆಟ್ಟಿ** (ನಾ). ಒಬ್ಬಾತನ ಹೆಸರು: ಕೊಡಲಸೆಟ್ಟಿಯರಾ ಮಾದಮ್ಮನೆ (ಎಇ. IX, ೨೩–೧೨ ; 500). [ಕೊಡಲ + ಸೆಟ್ಟಿ]

**ಕೊಡಲಿ**, ಕೊಡಲೆ$_1$ (ನಾ). ಮರ ಮೊದಲಾದುವುಗಳನ್ನು ಕಡಿಯುವುದಕ್ಕೆ ಬಳಸುವ ಒಂದು ಬಗೆಯ ಆಯುಧ; ಪರಶು: ಕಾವಿಲ್ಲದೆ ಕೊಡಲಿಯೊಳ್ ಮರನಂ ಕಡಿವೆನೆಂಬ . . . ಪೆರ್ಗಾವಿಲನಂತೆ ಪೋಲ್ಕುಂ (ಧರ್ಮಾಮೃ. ೫–೧೦೬) ; ಕೊಡಲಿಯೊಳ್ ಕಡಿದಂ (ಭಾಷಾಭೂ. ೮೮ ಉದಾ) ; ಅಸಹಾಯಸೂರನಾಗಿ ಕೊಡಲಿಯಲ್ಲಿ ಕಳ್ಳರ ಹುಯ್ದು ಕೆಡಹಿ (ಸೌಇಇ. IX–ii, ೪೨೦–೪ ; 1386) ; ಕೊಡಲಿಯ ಮಸೆದುಕೊಂಡವನ ಸಾಸಿರ ತೋಳ್ಗಳಡವಿಯ ಕಡಿದಾತನೀತ (ಮೋಹತ. ೭೭–೨೮) ; ಕುಲಕ್ಕೆ ಮೃತ್ಯು ಕೊಡಲಿಯ ಕಾವು (ಗಾದೆ) ; ಉಗುರಲ್ಲಿ ಹೋಗುವುದಕ್ಕೆ ಕೊಡಲಿ ತೆಗೆದುಕೊಂಡ ಹಾಗೆ (ಗಾದೆ). **ಕೊಡಲೆ$_1$**: ಹಸಿವು ತೃಷೆ ವಿಷಯವೆಂಬ ಕರ್ಮಂಗಳನೇ ಕಂಡು ಪರಿಣಾಮವೆಂಬ ಕೊಡಲೆಯಲ್ಲಿ ತತ್ತರದಱಿದು (ಶೂನ್ಯಸಂ. ೨೩೮–೨೧) ; ಸಾಹಿತ್ಯದ ಸರ್ವಾಧಿಕಾರಿತ್ವಕ್ಕೆ ಕೊಡಲೆಪೆಟ್ಟೆ ತ್ರಿಷಷ್ಟಿವಾದದ ಗುಟ್ಟು (ಮುಂಗಾಪು. ೫).

**ಕೊಡಲಿಯವಂ** = ಕೊಡಲಿಯನ್ನೇ ಆಯುಧವಾಗಿ ಹಿಡಿದು ಯುದ್ಧಮಾಡುವವನು ; ಪರಶುರಾಮ : ಕೊಡಲಿಯವಂ ದರ್ಪದಿಂ . . . ಎಂದಂ (ಅದ್ಭುತ. ೩೨–೧೮). **ಕೊಡಲಿರಾಮ, ಕೊಡಲಿಯರಾಮ** = ಪರಶುರಾಮ : ಕೊಡಲಿರಾಮನ ಸಿಡಿಲಿಗಳುಕಿ ಹಿಂದೋಡಿ ಕಡಲಾರೆ (ಕಎಪು. ೩೧–೯) ; ಕೊಡಲಿರಾಮನು ಎರೆದ ಕೆನ್ನೀರ ಜಳಕಕ್ಕೆ ಕೂದಲು ನನೆಯಲಿಲ್ಲೆನುತಿಹೆ (ನಾದಲೀ. ೪೧) ; ಕೆಂಜೆಡೆಯ ಕೊಡಲಿಯ ರಾಮ ನಿಂದಿದಿರಾಗಿ ನಡೆತರಲಿ (ಕುವ್ಯಾದ್ರೋ. ಓರಿಇ. ಪರಿ. ೨೭೭).

[ದೇ. ‖ ತಮಿ. ಮಲ. ಕೊಡಾಲಿ ; ತುಳು. ಕೊಡರಿ, ಕುಡರಿ ; ತೆಲು. ಗೊಡ್ಡಲಿ. / ಸಂ. ಕುಠಾರ]

**ಕೊಡಲಿಕಜ್ಜಾಯ** (ನಾ). ಮಾಂಸದಿಂದ ಮಾಡಿದ ಅಡುಗೆ; ಮಾಂಸದ ಭಕ್ಷ್ಯ : ಈ ಹಬ್ಬಗಳಾದ ಮಾರನೆಯ ದಿನವೇ ಕೊಡಲಿ ಕಜ್ಜಾಯ, ಅರ್ಥಾತ್ ಲಾಲ್ ತರಕಾರಿ ಅರ್ಥಾತ್ ಬಾಡಿನ ಊಟ ಮಾಡಿಯೇ ಮಾಡುತ್ತಾರೆ (ನನ್ನೂರು. ೩೩). [ಕೊಡಲಿ + ಕಜ್ಜಾಯ]

**ಕೊಡಲಿಕಡಿತ** 'ಕೊಡಲಿಗಡಿತ' ನೋ.

**ಕೊಡಲಿಕಾವು** 'ಕೊಡಲಿಗಾವು' ನೋ.

**ಕೊಡಲಿಕಾಱ** (ನಾ). ಕೊಡಲಿಯನ್ನೇ ಆಯುಧವಾಗಿ ಉಳ್ಳವನು ; ಪರಶುರಾಮ : ಮಹೀಶವಂಶವ ತಡೆಗಡಿದನೀ ಕೊಡಲಿಕಾಱನ ತೋಟ ಬೇಡೆಂದ (ಕುವ್ಯಾಸ. ೯–೪೮) ; ನಿಲ್ಲು ನಿಲ್ಲೆಲೆ ಕೊಡಲಿಕಾಱನೆ ಹಾರುವನ ವಧೆ ಸುಡಲಿ (ನಿಭಾಗ. ೯–೧೪–೩೨). [ಕೊಡಲಿ + –ಕಾಱ]

**ಕೊಡಲಿಗಡಿ** (ಕ್ರಿ). ಕೊಡಲಿಯಿಂದ ಕಡಿ, —ಕತ್ತರಿಸು : ಇಂತು ಸೀಳಿ ಹೋಳಿ ಚಾಳಿಸಲ್ಕೆ ಹರಣವಳಿಯದಿಹದೆ ಪಿಡಿದು ಖಂಡವರಿಯಲಯ್ಯೊ ಕೊಡಲಿಗಡಿಯಲಳಿಯವಯ್ಯೊ (ಸಾನಂಚ. ೬–೫೪) ; ಕೊಡಲಿಗಡಿದಂ (ಶಬ್ದಾನು. ೨೯೭ ಪ್ರಯೋ). [ಕೊಡಲಿ + ಕಡಿ$_1$]

**ಕೊಡಲಿಗಡಿತ**, ಕೊಡಲಿಕಡಿತ (ನಾ). ಕೊಡಲಿಯಿಂದ ಕತ್ತರಿಸುವಿಕೆ : ಎಲವೊ ನಿನಗಿಪ್ಪತ್ತು ಕೈಗಳು ಸಲೆ ಸಹಸ್ರವು ಕಾರ್ತವೀರ್ಯಗೆ ಬೆಳೆದ ತೋಳ್ಗಳ ರಾಮ ಕಡಿಯನೆ ಕೊಡಲಿಗಡಿತದಲಿ (ಕಾಶಿರಾ. ೩೭–೪೩). **ಕೊಡಲಿಕಡಿತ** : ಪರಶುರಾಮನ ಕೊಡಲಿಕಡಿತವ ಧರಿಸಲಾಪೆನು (ಕುವ್ಯಾಭೀ. ೧೦–೬). [ಕೊಡಲಿ + ಕಡಿತ$_2$]

**ಕೊಡಲಿಗದ್ದೆ** 'ಕೊಡಲಗದ್ದೆ' ನೋ.

**ಕೊಡಲಿಗಾವು**, ಕೊಡಲಿಕಾವು (ನಾ). ೧. ಕೊಡಲಿಯ ಹಿಡಿ, —ಹಿಡಿಕೆ. ೨. (ಆಲಂ) ತನ್ನ ವಂಶವನ್ನೆ ಹಾಳುಮಾಡುವವನು ; ಕುಲನಾಶಕ : ದನುಜಕುಲಕಿವ ಕೊಡಲಿಗಾವಾದನು ಮಹಾದೇವ (ಕೌಶಿರಾ. ೨೨–೩೪). **ಕೊಡಲಿಕಾವು** : ೧. ಕೊಡಲಿಕಾವು ಮರವಾಗಿ ಕಾಣಿಸಿಕೊಂಡು ಕೊಡಲಿಗೆ ನೆರವಾಯಿತಂತೆ (ಚಕರಾ. ೨೨೮).

[ಕೊಡಲಿ + ಕಾವು$_3$]

**ಕೊಡಲಿಗೊರವ** (ನಾ). ಕೊಡಲಿಯನ್ನು ಹಿಡಿದುಕೊಂಡ ಗೊರವ ; ಪರಶುರಾಮ : ಶ್ರೀರಾಮನೊರ್ವನೆಯೆ ತನ್ನೊಸಗೆದೇರಿಳಿದು ನಡೆದಂ . . . ಕೊಡಲಿಗೊರವನ ಕಡುಪಿನೆಡೆಗೆ (ಶ್ರೀರಾಮಾ. ೫೨–೭೭೦).

[ಕೊಡಲಿ + ಗೊರವ]

**ಕೊಡಲಿಗೊಳ್** (ಕ್ರಿ). ಕೊಡಲಿಯನ್ನು ತೆಗೆದುಕೊಳ್ಳು: ಉಗುರೊಳ್ ಚಿವುಂಟುವೆಂ ಕೊಡಲಿಗೊ [ಪಾಠಾಂ. ಕೊ]ಳಲ್ ಬಸಮಲ್ಲದು ಬೆಳೆದೊಡೆ (ಜಗವಿ. ೩–೨೨). [ಕೊಡಲಿ + ಕೊಳ್$_1$]

**ಕೊಡಲಿಮರ** (ನಾ). ಒಂದು ಜಾತಿಯ ಮರ: ದೊಡ್ಡಜಾಪಾಲ ಜಪ್ಲೆ, ಅಡಿಕೆಜಪ್ಲೆ, ಕೊಡಲಿಮರ, ಕೊಕ್ಕರೆ (ಮೈಔಗಿ. ೭೯–೧೪೦೩).

[ಕೊಡಲಿ$_0$ + ಮರ$_1$]

**ಕೊಡಲಿಮುರ್ಕಮರ** (ನಾ). ಒಂದು ಜಾತಿಯ ಮರ: (ಮೈಔಗಿ. ೩೨–೭೨೬). [? + ಮರ$_1$]

**ಕೊಡಲಿಯ** (ನಾ). ಕೊಡಲಿಯಿಂದ ಕೆಲಸಮಾಡುವವನು ; ಮರ ಕಡಿಯುವವನು : ಕಡೆಕೊಳಂದ ಮಣ್ಣಿಗ ಪೊಂಜ್ಞಲಂ ಕೊಡಲಿಯಂ ಬಲ್ಲಸಿಯ ಕಮ್ಮಱಂ ಮುಟ್ಟಗೆರಿಯೊಡೆಯೊಂ ಓದಲ ಪೋಲೆಯಂ (ಮೈಆರಿ. ೧೯೩೪, ೩೮–೨೨ ; 11ನೆಯ ಶತ). [ಕೊಡಲಿ + –ಅ$_7$]

**ಕೊಡಲು$_1$** 'ಕೊಡಲ' ನೋ.

**ಕೊಡಲು$_2$** (ನಾ). = ಕೊದುಲು (?) : ಭತ್ತ ನಾಲ್ವಂಡೆಯಲೂ ಮುಡಿ ಆಯಿವತ್ತು ಮತ್ತಂ ರಾಮನ ಕೊಡಲು ಸಹ ಅ(ಂ)ನ್ತುಯೀ ಮೂಱು ಬಗೆಯ ಬಾಳಿಗೆ ಗೇಣಿಯ ಅಕ್ಕಿ ಮುಡಿ ೭೦ (ಸೌಇಇ. IX–ii, ೪೬೪–೨೨ ; 1472). [?]

**ಕೊಡಲೆ$_1$** 'ಕೊಡಲಿ' ನೋ.

**ಕೊಡಲೆ$_2$** (ನಾ). ಕರುಳು, ಅಂತ್ರ: [ನಡುನೆತ್ತಿಯು]ದರ ದೇಹದೊಳೆಡೆಯೆಡೆಯಣ ಸಂಧಿ ಕೊಡಲೆ [ಪಾಠಾಂ. ಕೊರ(ಲು)ಳು] ನಾಲಗೆ ಗುದಮುಂ ನಡುಬೆನ್ನೆಂಬಿವನೀಕ್ಷಿಸಿ ಪಿಡಿಯಲ್ಕರಿದದರಗರಳಮಾ ಖಗಪತಿಗಂ (ಖಮದ. ೩–೪೩).

[ದೇ. ‖ ತಮಿ. ಕುಡರ್, ಕುಡಲ್, ಕುಡಲೈ ; ಮಲ. ಕುಡರ್, ಕುಡಲ್]

**ಕೊಡವ** (ನಾ). = ಕೊಡಗ : ಕಳ್ಳನ್ನು ಕಂಡ ಕೊಡವೆ ಸಾಲ ಮಾಡಿಯಾನು ಎಂಬ ಮಾತಿದೆಯಲ್ಲ (ನಡೆದಾ. II, ೧೧೩೭).

[< ಕೊಡಗ]

**ಕೊಡವತಿ** (ನಾ). ಕೊಡವರ ಹೆಣ್ಣು ; ಕೊಡಗುದೇಶದ ಹೆಂಗಸು : ಪೂವಿ, ನೀನು ಅಂಜುಗುಳಿ ಹೆಣ್ಣು ; ಕೊಡವತಿಯಂತೆ ಕೆಚ್ಚಿನ ಮಾತಾಡುವುದಿಲ್ಲ (ನಡೆದಾ. II, 1140). [ಕೊಡವ + –ತಿ$_1$ (< –ಇತ್ತಿ)]

**ಕೊಡವಳಿಗೆ** (ನಾ). ಕೊಡುಗೆ ; ದತ್ತಿ (?) : ಅಂತು ಕೊಡವಳಿಗೆ ಭೂಮಿ ೫೬ (ಎಕ. VI, ಶೃಂಗೇರಿ. ೧೧–೮೫ ; 1652). [?]

**ಕೊಡವಾರು** (ನಾ). (?) : ಹೊಲ ಮನೆಯ ಸಾಗಿಸಿಕೊಂಡು ಅಲ್ಲಿಯ ಕೊಡವಾರು ಮುಂತಾದದನೂ ಮಾಡಿಸಿಕೊಂಡು (ಸೌಇಇ. XV, ೬೭೨–೨೪ ; 15ನೆಯ ಶತ). [?]

**ಕೊಡವಾಲ್**, ಕೊಡವಾಲು (ನಾ). ಕೊಡ ತುಂಬುವಷ್ಟು ಹಾಲು; ಹೆಚ್ಚು ಹಾಲು: ದ್ರೋಣದುಗ್ಧಾ, ಪ್ರಚುರದುಗ್ಧಾ – ಈ ೨ ಕೊಡವಾಲ್ ಕಱೆವಾವು (ಹಲಾಯು. ೪೫-೧೧೬); ಎಲ್ಲೆಡೆಯೊಳುಂ ಬಱಡುಗಳ್ ಕೊಡವಾಲ್ಗಳಂ ಕಱೆಯ ತೊಡಗಿದವು (ಚೆಬಪು. ೪-೩೪); ಬಿಡದೆ ಕೊಡವಾಲಂ ಕಱೆದುವಾಕಳು (ಜೈಮಿಭಾ. ೨೯-೨). **ಕೊಡವಾಲು**: ಕೊಡವಾಲ ಕೆಡಿಸುವೊಡಾವ್ಲುವೆನಿತಾಗಬೇಕು (ಹಚಕಾ. ೭-೨೨); ಕೊಡವಾಲು ಪುಳಿವೆರೆದಳಿವುದಲ್ಲದೆ ಪಾಲ್ಗಡಲು ನಾಶವನ್ಯೆದುವುದೆ (ಮೋಹತ. ೧-೩೦); ಸತ್ಪಾತ್ರ ಜಂಗಮಕ್ಕೆ ಇತ್ತ ಪುಣ್ಯವು ಸಾವಿರ ಕೊಡವಾಲು ದಾನದ ಫಲವು (ಅಖಂಡೇ. ೬೦-೧೦). [ಕೊಡ$_{4}$ + ಪಾಲ್$_{1}$]

**ಕೊಡವಾಲು** 'ಕೊಡವಾಲ್' ನೋ.

**ಕೊಡವಾಲ್ಗಱೆ** (ಕ್ರಿ). ಕೊಡದ ತುಂಬ ಹಾಲು ಕರೆ; ಹೆಚ್ಚು ಹಾಲು ಕರೆ: ಕೊಡವಾಲ್ಗಱೆವೊಂದೆಮ್ಮೆಗೆಱಗಿದೊಡೆ ಪಶುವಿಂನೂರ್ಮಡಿ ಫಲಮಿಪ್ಪುದು (ಸಮುಪ. ೯-೬೭); ಗೋಧನಾಳಿ ಕೊಡವಾಲ್ಗಱೆಗೆ (ಜಗವಿ. ೧೮-೧೧೩); ಬಿಣ್ಗೆಚ್ಚಲಿಕ್ಕಿ ಕೊಡವಾಲ್ಗಱೆಯದಾವಿಲ್ಲ . . . ರಾಮರಾಜ್ಯದೊಳ್ (ಜೈಮಿಭಾ. ೧೮-೧೩).
[ಕೊಡವಾಲ್ + ಕಱೆ$_{1}$]

**ಕೊಡವಿ** (ನಾ). ಇನ್ನೂ ಮದುವೆಯಾಗದಿರುವ ಹೆಣ್ಣು; ಕುಮಾರಿ; ಕನ್ಯೆ: ಕವಿತರ್ಪ ನೆರವಿಯುಂ ಕನಲವೋರಿಗಳ್ಕಂಡು ಬೆರ್ಚಿ ಕೆಂಗೋಲ್ಗೊಂಡೋಡುವುದನಿದೇನೆಂದಾ ಕೊಡವಿ ಬೆಸಗೊಳೆ (ಸುಕುಮಾ. ೭-೨); ಹರಿವ ಜಲಧಿಯ ನಡುವೆ ಬರುತಿರೆ ತೊಱೆಯೊಳಗೆ ಸುರಗಿಗಳು ಅರಿತವು ಭರದ ಪ್ರಾಯದ ಕೊಡವಿಯಾದವು ಆರತಿಯ ಹಿಡಿದು (ರೇವಣ. ೬-೫); ಕಡಗವ ಇಡಸ್ಯಾರ ಕಡೆಗಣ್ಣಲಿ ನೋಡ್ಯಾರ ಕೊಡವೀಗಿ ತಮಗವರನೆಂದ (ಮಲ್ಲಿಗೆ. ೭೯). [< ಕೊಡ$_{1}$. / ತಮಿ. ಕುಟವಿ]

**ಕೊಡವಿಸು** 'ಕೊಡಪಿಸು' ನೋ.

**ಕೊಡವೀಸ**, ಕೊಡಬೀಸ (ನಾ). ಒಂದು ಬಗೆಯ ತೆರಿಗೆ: ಪುನರ್ದತ್ತಿಯಾಗಿ ನಾಲ್ಕುಂ ಸುಂಕದೊಳವೆರಡೊಲ್ದುಱೆ ಕೊಡವೀಸವ ಸಹಿತಮಾಗಿ ಬಿಟ್ಟ ಉಪ್ಪಿನ ಪೆಂಟೆ (ಸೌಇಇ. IX–i, ೨೨೩-೪೮; 1127); ಹೆರ್ಜುಂಕ ವಡ್ಡರಾವುಳಂ ಮೂವತ್ತುಂ ಕೊಡವೀಸಂ ಕುದುರೆಯ ಸುಂಕಂ (ಬೊಂಕಶಾ. ೧೯೩೦, ಬಾಗೆವಾ. ೧೧೧-೧೯; 1165); ಮೇಲುವೀಸ ಕೊಡವೀಸ ಸಹ ವರ್ತಕರಿಗೆ (ಎಕ. VIII, ಸೊರಬ. ೨೬೫-೧೯; 1165). **ಕೊಡಬೀಸ**: ಬಿಕ್ಕಲ್ದೆಱೆ ಕೊಡಬೀಸವುಮಂ (ಎಕ. VIII, ಸೊರಬ. ೨೯೯-೩೨; 1074). [?]

**ಕೊಡವು** 'ಕೊಡಪು' ನೋ.

**ಕೊಡವೆ** 'ಕೊಡಂಬೆ' ನೋ.

**ಕೊಡಸ** 'ಕೊಟ್ಟಸ' ನೋ.

**ಕೊಡಸಗ** (ನಾ). ಒಂದು ಜಾತಿಯ ಮರ: ಅಲ್ಲಿಂದಂ ಪಡುವಲು ಕೊಡಸಗನ ಮರನ ಪೊತ್ತಿನಲು (ಎಕ. VIII, ತೀರ್ಥಹ. ೧೨೯-೪೩; 1404). [< ಕೊಡಸಿಗ]

**ಕೊಡಸಾರಿ** (ನಾ). ೧. "ವ್ರಣರೋಗ – ವಾಂತಿಭೇದಿಗಳಿಗೆ ಕೊಡುವ ಮೂಲಿಕೆ; ಚಕ್ರಾಣಿಕೆ" (ನಾಡೋಜ. ೨೪೯). ೨. "ಪಣವನ್ನೆದುರಾಳಿಗೆ ಕೊಡದೆ ತನಗೆ ಕೊಡುವಂತೆ ಸಗುವ ಸಾರಿ" (ನಾಡೋಜ. ೨೪೯); "ಕೊಡಸಾರಿಯುಂ – ಕೊಡದ ಸಾರಿಯುಂ, ಎಂದರೆ ಕೊಡದ ಪಗಡೆಕಾಯನ್ನು; ಕೊಡಸಾರಿ (ನಾರಿ) ಎಂಬ ಮೂಲಿಕೆಯನ್ನು" (ಪಂಪದೀ. ೨೩೭). ೧, ೨: ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದುಂ ವ್ರಣವೈದ್ಯನಂತೆ ಕೊಡಸಾರಿಯುಂ ಪಿಡಿದುಂ (ಪಂಪಭಾ. ೬-೬೨ ವ). [?]

**ಕೊಡಸಾಲೆ** (ನಾ). ಒಂದು ಬಗೆಯ ಹುಲ್ಲು; ಕಾಶ: "ಇಕ್ಷ್ವುರ ಕರ್ದಕಃ– ಕೊಡಸಾಲೆ" (ಓಷಧಿ. ३೭). [?]

**ಕೊಡಸಿಕೆ** 'ಕೊಡಸಿಗೆ' ನೋ.

**ಕೊಡಸಿಗ** 'ಕೊಡಸಿಗೆ' ನೋ.

**ಕೊಡಸಿಗೆ**, ಕೊಡಸಿಕೆ, ಕೊಡಸಿಗ, ಕೊಡ್ಸೀಗೆ (ನಾ). ಒಂದು ಬಗೆಯ ಸಸ್ಯ; ಬೆಟ್ಟಮಲ್ಲಿಗೆ; ಗಿರಿಮಲ್ಲಿಗೆ: "ಅಂಗಾರವಲ್ಲಿ ಕೊಡಸಿಗೆ" (ವಸ್ತುಕೋ. ೩೭-೨೭); "ಕುಟುಜಃ ಶಕ್ರ ವತ್ಸಕಃ ಗಿರಿಮಲ್ಲಿಕಾ ಕುಟಜವೆನಲು ಕೊಡಸಿಗೆಯಕ್ಕು" (ಮಂಗರಾ. ೩೪-೧೧); ಕೊಡಸಿಗೆ ಚಿತ್ರಂ ಪಿಪ್ಪಲಿ ಒಡನತಿಬಜೆ ಶುಂಠಿ ಹಿಂಗು ಮುಸ್ತೆಗಳಂ ಕೂಡಿಡಿದಿಟ್ಟದಱ ಕಷಾಯಂ ಕುಡಿದೊಡೆ ವಾತಾತಿಸಾರಮಂ ಪಿಂಗಿಸುಗುಂ (ಕಲ್ಯಾಕಾ. ೪-೧೦); ಕೊಡಸಿಗೆಯಿಂದ ಕುತ್ತುಮಲಿಗುಂ (ಜಟ್ಟಮ. ೪-೧೭). **ಕೊಡಸಿಕೆ**: ಅಂಕೊಲೆಯ ತದುಕಿನ ಕೊಡಸಿಕೆಯ ನೇರಿಲ . . . ಮರಗಳೆಸೆದಿಹವು (ತಿಮ್ಮಆ. ೭-೧೯). **ಕೊಡಸಿಗ**: "ಅಗ್ನಿವಲ್ಲೀ, ಅಂಗಾರವಲ್ಲಿಕಾ – ಗಿರಿಕರ್ಣಿಕೆ, ಕೊಡಸಿಗ" (ಓಷಧಿ. ೯); ಕೊಡಸಿಗ [ಪಾಠಾಂ. ಕಱಜಿಗ]ನೆಸರಂತೆ ಪುಳಿಯಂತೆ (ಮೋಹತ. ೧೨-೨೧); ಹಲಸು ಕೊಡಸಿಗ ಮಾವು . . . ಹಾದರಿಯ ಮರ ಮೊದಲಾದುವುರ್ವಿಹವು (ಸಾಳ್ವಭಾ. ೫-೩). **ಕೊಡ್ಸೀಗೆ**: ಬೆಪ್ಪಾಲೆ, ಕುಡು, ಕೊಡ್ಸೀಗೆ . . . ಕೊಡಮುರ್ಕ್ಕ (ಮೈಔಗ. ೭೮-೧೬೧೩). [< ಸಂ. ಕುಟಜಕ]

**ಕೊಡಸು$_{1}$** (ನಾ). = ಕೊಡಚು: (೬). [ಕೊಡೆ + ಚು]

**ಕೊಡಸು$_{2}$** (ನಾ). = ಕೊಡಸಿಗೆ: "ಕುಟಜಃ, ಗಿರಿಮಲ್ಲಿಕಾ – ಈ ೨ ಕೊಡಸು (ಬೆಟ್ಟಮಲ್ಲಿಗೆ)" (ಹಲಾಯು. ೩೩-೪೦). [< ಸಂ. ಕುಟಜ]

**ಕೊಡಸೂನು** (ನಾ). ಅಗಸ್ತ್ಯ: ಎಡರೆಂಬ ಲವಣಾಬ್ಧಿಯನೀಂಟುವ ನೆಱೆ ಕೊಡಸೂನು ಕೃಷ್ಣನಂಘ್ರಿಗಳ ಬಿಡದುಚ್ಚರಿಸಿ (ಮೋಹತ. ೧೭-೪೬).
[ಕೊಡ$_{4}$ + ಸೂನು]

**ಕೊಡಸೋಗೆ** (ನಾ). ಒಂದು ಬಗೆಯ ಸಸ್ಯ (?): ಕಾರೆ ಹೊಲದಿಂ ಬಡಗಲು ಕೊಡಸೋಗೆಯ ವೊಬೆಯಿಂದಂ ತೆಂಕಲು (ಎಕ. XIV, ಗುಂಡ್ಲುಪೇ. ೧೨೬-೨೯; ?). [?]

**ಕೊಡಹು$_{1}$** 'ಕೊಡಪು' ನೋ.

**ಕೊಡಹು$_{2}$** (ನಾ). ೧. ಒದರುವಿಕೆ; ಝಾಡಿಸುವಿಕೆ. ೨. ಸಿಂಚನ; ಚೆಲ್ಲುವಿಕೆ: ಮೊಲೆಯ ಸೋಂಕಿಗೆ ತರುಣಿಯರ ತಂಬುಲದ ಕೊ[ಪಾಠಾಂ. ತೊ]ಡಹಿಗೆ ತೋಳ ಬಿಗುಹಿಗೆ ಬೆಳೆವ ಭೂಜವ್ರಜವ (ತೊರರಾ. ೫-೪-೯). ೩. (?): ಮೃತ್ಯುಲೋಕ ಪಟ್ಟಣದೊಳು ಮನೆ ಬಾಗಿಲನೆ ಮಾಡಿ ಹೀಗಿದೆಯೆಂದು ತಿಳಿದುಕೊಂಡು ಭವಗಡಲ ಕಡೆಗಾಣದೆ ಕೊಡಹಿನಲ್ಲಿ ಕಡೆತೋಱಿಸೊ ಎನ್ನನು (ಪುರಂದ. ೩-೧೫-೩).
[< ಕೊಡಪು]

**ಕೊಡಱು** (ಕ್ರಿ). ೧. ನಾಶಮಾಡು; ಘಾತಿಸು. ೨. ಜಂಬಕೊಚ್ಚು; ಗಳಹು (?): ಮದಹಸ್ತಿ ಗಂಧವಾರಣ ಗಂಡಗೋಪಾಳ ತುರಕರೇವಂತ ಕದನಪ್ರಚಂಡ ಗಂಡಮಾರ್ತ್ತಂಡ . . . ಮಱೆವೊಕ್ಕರ ಕಾವ ತನಗಿದರ ಅಱೆಯಱ ತಲೆಯ ಚೆಂಡಾಡುವ ಕುದುರೆವೆಂಡಳಿವ ಕೊಡಱುವರ ಬಱಸಿಡಿಲು ಧನ್ನಯ್ಯ ರಾಹುತನ ಕುಮಾರ (ಸೌಇಇ. IX–i, ೩೬೭-೧೨; 1225).
[P 'ತೊಡರು' ಎಂಬುದರ ಅಪಲಿಖಿತವಿರಬಹುದು.]

**ಕೊಡಿ$_{1}$** 'ಕುಡಿ$_{2}$' ನೋ.

**ಕೊಡಿ$_{2}$** (ನಾ). ೧. ಧ್ವಜ; ಗುಡಿ. ೨. ದೇವಸ್ಥಾನದ ಮುಂಭಾಗದಲ್ಲಿ ಕಂಬಕ್ಕೆ ಏರಿಸಿದ ಬಾವುಟ, —ಪತಾಕೆ. 'ಕೊಡಿಮರ' ಪರಾ. [ದೇ. ‖ ತಮಿ. ತುಳು. ಕೊಡಿ]

**ಕೊಡಿ**₃ (ನಾ). ಗಟ್ಟಿತನ; ಶಕ್ತಿ: 'ಕೊಡಿ ಅರಿವೆ' ಪರಾ.
[← ತಮಿ. ಕೋಡಿ = ಬಟ್ಟೆ, ಹೊಸಬಟ್ಟೆ]

**ಕೊಡಿ**₄ (ನಾ). (ಕರಾ) ಕಾರ್ತಿಕಮಾಸ: ಪಾರೋತಿಗೆ ಇದೇ ಸಲುವ ಕೊಡಿ ತಿಂಗಳಿಗೆ ಇಪ್ಪತ್ತು ನಾಲ್ಕು ವರ್ಷಗಳು ತುಂಬಿ ಮಾರ್ಗಶಿರಕ್ಕೆ ಇಪ್ಪತ್ತೈದು ಹಿಡಿಯುತ್ತದೆ (ಮರಮ. ೧); ಕೊಡಿ ತಿಂಗಳಿನಿಂದ ಮುಂಗಾರು ಮಳೆ (ಸ್ವಪ್ನಹೊ. ೪೪).

**ಕೊಡಿಹಬ್ಬ** = ಕಾರ್ತಿಕ ಮಾಸದ ಶುಕ್ಲಪಕ್ಷ ದ್ವಾದಶೀ; ಉತ್ಥಾನ ದ್ವಾದಶಿಯಂದು ನಡೆಯುವ ತುಳಸಿಪೂಜೆ. [?]

**ಕೊಡಿ**₅ (ನಾ). ೧. ಮೂಲೆಯ ನೆಲ,—ಜಮೀನು(?): ಜಾವುಟೂರಿಂ ದಕ್ಷಿಣ ಕಡವಿನ ಕೊಡಿವುಂ ಇಪ್ಪಯ ಬಾಗು ನೈರಿತ್ಯದೊಳು ಬಿದಿರ ಪಳವುಂ ಪಲ್ಮಕುಡಿವುಂ ಪಡುವ ಪೂವಿನಕೆಱೆಯುಂ (ಸೌ ಇ ಇ. IX–i, ೧೨೧–೪೪; 1057). ೨. (ಕರಾ) ಕೊನೆ; ಅಗ್ರ.
[← ತುಳು. ಕೊಡಿ]

**ಕೊಡಿಅರಿವೆ** (ನಾ). ಗಟ್ಟಿಯಾದ ಬಟ್ಟೆ: ಬಳಿಕ ಮತ್ತೊಬ್ಬನು ಒಂದು ತರದ ಕೊಡಿಅರಿವೆಯ ಮೇಲೆ ಕುರುಂದದ ಕಲ್ಲಿನ ಪುಡಿಯನ್ನು ಹಾಕಿ (ಮುಂಬಯಿ. ೪–೧೫೪). [ಕೊಡಿ₃ + ಅರಿವೆ (< ಅಱುವೆ)]

**ಕೊಡಿಕಲ್ಲು** (ನಾ). ೧. ಗಟ್ಟಿಮುಟ್ಟಾದ ಕಲ್ಲು; ಕಗ್ಗಲ್ಲು: (ಕಿ). ೨. "ಕಾಲಜ್ಞಾನ ಹೇಳುವ ಊರಿನ ಹೆಸರು" (ಜಾನಕೋ. ೪೨).
[ಕೊಡಿ₃ + ಕಲ್ಲು (< ಕಲ್₃)]

**ಕೊಡಿಗಿ** 'ಕೊಡಂಗೆಯ್₂' ನೋ.

**ಕೊಡಿಗಿ ಇನಾಂ** (ನಾ). ಕೆರೆಯ ಉಸ್ತುವಾರಿಗೆಂದು ಉಂಬಳಿಯಾಗಿ ಕೊಟ್ಟ ಭೂಮಿ (ಮೈಗಜೆ. V, ೭೭೭).
[ಕೊಡಿಗಿ (< ಕೊಡಂಗೆಯ್₂) + ಇನಾಂ]

**ಕೊಡಿಗೆ** 'ಕೊಡಂಗೆಯ್₂' ನೋ.

**ಕೊಡಿಗೆಕೆರೆ** 'ಕೊಡಗಿಗೆಱೆ' ನೋ.

**ಕೊಡಿಗೆದಾರ** 'ಕೊಡಗಿದಾರ' ನೋ.

**ಕೊಡಿಗೆಮಾನ್ಯ** 'ಕೊಡಗಿಮಾನ್ಯ' ನೋ.

**ಕೊಡಿತನ** (ನಾ). ದುಷ್ಟತನ; ಕೆಡುಕುತನ: ಕಡುದುಃಖದಿಂದ ನಾ ಒಲೆಯ ಮುಂದೆ ಕುಳಿತರೆ ಕೊಡಿತನದಿ ಬಂದು ಒದ್ದಳಯ್ಯಯ್ಯೊ (ಶಿವಗೀ. ೭೭೪); "ವಕ್ರಬುದ್ಧಿ" (ಶಿವಗೀ. ಕೋಶ).
[< ಖೋಡಿತನ ?]

**ಕೊಡಿತೆ** (ನಾ). (?): ರಾಟಣಪೂವಿನ್ನಿಪ್ಪತ್ತಯ್ಗಣ್ದಾಗಂ ವತ್ತಿಱುವೊದು ಪಾರ್ವನ ಮಣ್ಗಲ್ಲ ಕೊಡಿತೆ ಕಾಯ ಬಿಟ್ಟಣ್ಣುಂ ಅರಸಣ್ಣುಂ ಅಯ್ದೊನ್ದಿಂ ಒತ್ತೆಮಣ್ಣತ್ತು (ಎಕ. XIV, ತಿರುಮ. ೨೫೩–೭; 800).
[?]

**ಕೊಡಿಮರ** (ನಾ). ದೇವಾಲಯದ ಮುಂದಿನ ಕಂಬ; ಧ್ವಜಸ್ತಂಭ: ಅಮೃತಗಳಿಗೆಯಲ್ಲಿ ಶ್ರೀರಾಮನ ಮುಂದೆ ಇರುವ ಕೊಡಿಮರದ (ಧ್ವಜಕಂಬ) ಮೇಲೆ ಕೊಡಿ ಏರಿಸಲ್ಪಡುವುದು (ಪರಾವ. ೪೦).
[ಕೊಡಿ₂ + ಮರ₁. / ತಮಿ. ಕೊಡಿಮರಂ]

**ಕೊಡಿಮರಹುಲ್ಲು** (ನಾ). ಒಂದು ಜಾತಿಯ ಹುಲ್ಲು; ನೆಟ್ಟಗೆ ಬೆಳೆಯುವ ಒಂದು ಹುಲ್ಲು ಜಾತಿ: ಕೊಡಿಮರಹುಲ್ಲು ಗೊಡುರ ಹುಲ್ಲು, ಜರಿಹುಲ್ಲು ನೊಸೆಹುಲ್ಲು (ಮೈಔಗಿ. ೩೪–೭೫೪).
[ಕೊಡಿಮರ₀ + ಹುಲ್ಲು (< ಪುಲ್)]

**ಕೊಡಿಮೆನೂರ್** (ನಾ). ಒಂದು ಊರಿನ ಹೆಸರು: ಪೊನ್ನಿಂದಳೆ ಅಱಿದಂತಟ್ಟರ ಕೊಡಿಮೆನೂರುವರ್ ಆಳ್ವ ಅರಸನು ಮಾಡಿಸುವೋರ್ (ಎಕ. X, ಕೋಲಾರ. ೬–೩; 753). [?]

**ಕೊಡಿಯ** (ನಾ). ಬಲ್ಲಿದ; ಬಲಶಾಲಿ; ಸಮರ್ಥ (?): ರಾಮದೇವರ್ಕಳಿಂ ಕೊಡಿಯನೆಂಬರು ಕಣಾ (ತುರಂಗ. ೧೫–೧೫).
[ಕೊಡಿ₃ + –ಅ₇. / ತಮಿ. ಕೊಡಿಯನ್]

**ಕೊಡಿಯೆಲೆ** (ನಾ). ಕುಡಿಯೆಲೆ; ಚಿಗುರೆಲೆ: ಬಿದ್ದಯ್ಯ ತಟ್ಟಿಯಿಂದ ಕೊಡಿಯೆಲೆಯೊಂದನ್ನು ತೆಗೆದು ಸುಣ್ಣ ಹಚ್ಚುತ್ತ ಉಸುರಿದ (ಹುಲಿಹಾ. ೧೭೧). [ಕೊಡಿ₁ (< ಕುಡಿ₂) + ಎಲೆ₁]

**ಕೊಡಿಸು** (ಕ್ರಿ). ಕೊಡುವ ಹಾಗೆ ಮಾಡು: ಕೊಡಿಸಿದೋನು ××× ಕದುವೆಡಿಲೊನುಡಿ ತೆನ್ನೆ (ಎಕ. III, ಮೈಸೂರು. ೨೫–೭; 750); ಈ ಕುಮಾರಂಗೆ ಆ ಕನ್ನೆಯಂ ಮುಂ ಕೊಡಿಸುವೆಂ (ಶಾಂತಿಪು. ೨–೮೦); ವರದತ್ತ ಮುನೀಶ್ವರರಿಂದೆ ಬ್ರಹ್ಮಚರ್ಯಮನನುರಾಗದಿಂ ಕೊಡಿಸಿದರ್ (ಧರ್ಮಾಮೃ. ೩–೨೫೫); ನಿಮಗೀ ಹುಗ್ಗಿಗರು ಹುರಿಗೂಡಿ ಗೆಲಿದನ್ನಿಳೆಯ ಕೊಡಿಸುವರೆ (ಕುಮ್ಹಾಭೀ. ೧–೫೮).
[ಕೊಡು₁ + –ಇಸು₃]

**ಕೊಡು**₁, ಕುಡು₁ (ಕ್ರಿ). ಕೊಟ್ಟ₅ (ಭೂತಕೃ). ೧. ಒಪ್ಪಿಸು; ಸಮರ್ಪಿಸು; ದಾನಮಾಡು: ಇದನ್ನೆಱಿಸೊರ್ವ್ವನ್ಕೊಲ್ವೊನುಂ ಕೊಡುವೊನುಂ ಪಞ್ಚಾಪಾತಕನಕ್ಕುಂ (ಎಕ. VI, ಕೊಪ್ಪ. ೩೭–೧೧; 675); ಕಾರ್ತಿಕಮಾಸದೊಳ್ ಕೊಡುವದು (ಎಇ. XIV, ೧೯–೨೨; 725); ಪೆರ್ಮಡಕೆಯೊಳಿಕ್ಕಿ ಕೊಟ್ಟ ಪೊಸಬೆಣ್ಣೆವೊಲಿರ್ದುದು ಚಂದ್ರಮಂಡಲಂ (ಕಾವ್ಯಸಾ. ೯೩೮ ಶೂದ್ರಕ); ತಿಲಪಾತ್ರ ಪ್ರಕರಗಳಂ ಕೊಡುವರ್ (ಕಾದಂಪೂ. ೩೭೭); ಶಶಿಧರನ ಸಿರಿಮುಡಿಗೆ ಬೇಕೆಂದು ತಂದೊರ್ವ ಮಾಲೆಗಾಱಂ ಭರದಿ ಕೊಡಲ್ (ಬಸರ. ೧–೩೯). ೨. ಮದುವೆಮಾಡಿಕೊಡು; ಲಗ್ನಮಾಡು: ಕೊಡಗೂಸು ಕನ್ನೆ ಕೊಟ್ಟಾಕೂಸು ವರ್ಯೆ (ಮಂಗರಾ. ೬೯–೨); ಒಕ್ಕಿದ ಕೊಂಬಿನವರ ಕೂಸ ಕೊಡುವೆ (ಬಸವ. ೭೧೭); ಕೊಡಬೇಕುತ್ತಮನಾದವಂಗೆ ಮಗಳಂ (ಸೋಮೇಶ. ೭೯); ಆ ಮುನೀಂದ್ರನನುರುತರೋತ್ಸವದಿಂದಲಾಪುರದರಸ ನಿದಿಗೊಂಡೊಯ್ದು ಕೊಟ್ಟನು ತನ್ನ ನಂದನೆಯ (ತೊರರಾ. ೧–೫–೫೯); ತಾಯೊಂದೆಸೆ ಮಕ್ಕಳೊಂದೆಸೆ ಕೊಟ್ಟಹ ಬೀಯಗರೊಂದೆಸೆಯಾಗಿ (ಕಂಠವಿ. ೧೧–೯೭); ಕೊಟ್ಟ ಹೆಣ್ಣು ಕುಲಕ್ಕೆ ಹೊರಗು (ಗಾದೆ). ೩. ದಯಪಾಲಿಸು; ಅನುಗ್ರಹಿಸು: ಭುಜಗಭೂಷಣನರಸಿ ಕೊಡು ಕಾರುಣ್ಯದಲಿ ಮತಿಯ (ಕುಮ್ಹಾಅ. ೧–೮); ಕೊಟ್ಟ ವರವ ಪ್ರತ್ಯಕ್ಷವ ತೋಱುತ ... ಬೆಟ್ಟದ ಚಾಮುಂಡಿಯಿಹಳು (ಕಂಠವಿ. ೨–೩೮); ದೇವರು ಕೊಟ್ಟರೂ ಪೂಜಾರಿ ಕೊಡ (ಗಾದೆ). ೪. ಫಲಿಸು; ಸಫಲವಾಗು: ಇಷ್ಟೆಲ್ಲಾ ಕಷ್ಟ ಪಟ್ಟಿದ್ದಕ್ಕೆ ಅದು ನನಗೆ ಏನು ಕೊಟ್ಟಿತು (ರೂಢಿ). ೫. ಅಪ್ಪಣೆಕೊಡು; ಅನುಮತಿಕೊಡು: ನೀವು ಕೊಟ್ಟರೆ ಈ ಕೆಲಸವನ್ನು ನಾನು ಇಂದೇ ಮುಗಿಸುತ್ತೇನೆ (ರೂಢಿ). ೬. "ಸಲ್ಲಿಸು; ಪಾವತಿಮಾಡು" (ಪತ್ರಿನಿ. ೬೧): (ಸಾಲ, ಸಂಬಳ, ಸರಕಿನಬೆಲೆ ಮೊ. ವನ್ನು) ತೀರಿಸು, ಪಾವತಿಮಾಡು; ಬಟವಾಡೆಮಾಡು; ಸಲ್ಲಿಸು; ಕೊಡು (Pay. ಇಂಕನಿ). ೭. (ಭಿಕ್ಷೆ, ಅನ್ನ, ಹಾಲು ಮೊದಲಾದುವನ್ನು) ಹಾಕು; ಇಕ್ಕು; ನೀಡು: "ನೀಡು, ಹಾಕು, ಬಡಿಸು, ಕೊಡು, ಇಕ್ಕು" (ಕಂನುಹು. ೮೭); ಮಗುವಿಗೆ ಕುಡಿಯಲು ಹಾಲು ಕೊಡು (ರೂಢಿ). ೮. ಈ; ಹಡೆ; ಪಡೆ: "ಈ (ಈನ್), ಹಡೆ, ಕೊಡು" (ಕಂನುಹು. ೭೯); ನಮ್ಮ ನಾಯಿ ನಿನ್ನೆ ನಾಲ್ಕು ಮರಿ ಕೊಟ್ಟಿತು (ರೂಢಿ). ೯. (ದಂಡ ಮೊದಲಾದುವನ್ನು) ತೆರು; ಕಟ್ಟು: "ತೆತ್ತು, ಕೊಡು, ಕಟ್ಟು, ತೆರು" (ಕಂನುಹು. ೮೫); ಅವನು ತನ್ನ ತಪ್ಪಿಗಾಗಿ ಕೊಡಬೇಕಾದ ಬೆಲೆ ಅಪಾರ (ರೂಢಿ). ೧೦. ಮಾರು; ವಿಕ್ರಯಿಸು: ನಮ್ಮ ಮನೆಯನ್ನು ಹತ್ತು ಸಾವಿರಕ್ಕೆ ಕೊಟ್ಟುಬಿಟ್ಟೆ (ರೂಢಿ).

೧೧. [ಗಣಿತ] ಭಾಗಿಸು: "ಭಾಗಂ ಎಂಬುದಕ್ಕೆ ಪೆಸರು-ಕಲಿಸು, ಭಾಗಿಸು, ಉಗಿ, ಎತ್ತು, ಕೊಡು, ಕೊಳು" (ವ್ಯವಹಾ. ೧೨-೧೨). ೧೨. (ಆಲಂ) ಏಟುಕೊಡು; ಪೆಟ್ಟುಕೊಡು: ಆ ಘಟಂಗನಿಗೆ ನಾಲ್ಕು ಕೊಡು, ಬುದ್ಧಿ ಬರಲಿ (ರೂಢಿ). **ಕುಡು**$_1$: ೧. "ಕುಡು-ಪ್ರದಾನೇ ವಕ್ರೇ ಚ (ಡೊಂಕಾದ)" (ಶಮಧಾ); ದೇಶಾಧಿಪತಿಗಳ ಪ್ಪೊರ್ಗೆ ಕುಡುವ ತೆಜಿ (ಎಇ. XIX, ೧೯೦-೧೩; 725); ಕುಡು ಚಪಳೆ ಜಪದ ಮಣಿಯಂ ಕುಡದಿನ್ನೊಂದಡಿಯನಪ್ಪೊಡಂ ಪೋಗದಿರ್ (ಕಾದಂಪೂ. ೬೮೧); ಜಗದ ಮಾನಿಸರ್ಪೊಲ್ಲದಂ ಕುಡುವರೆ ಕೂರ್ಪರ್ವರ್ಗೆ ಕುಡರೆಂದುಂ (ಧರ್ಮಾಮೃ. ೫-೩೫). ೨. ಕುಡಲಿರ್ಪಂ ಬಲದೇವನೆನ್ನನುಜೆಯಂ ದುರ್ಯೋಧನಂಗೆ (ಪಂಪಭಾ. ೫-೨೦); ನಿಮ್ಮಳಿಯಂಗೆ ಶ್ರೀಮತಿಯಂ ಕುಡುವುದೆನೆ (ಚಾವುಂಪು. ೩೩-೧೪). ೩. ಕುಡು ರಿಪುತಂತ್ರಕ್ಷಯಕರನನೆನಗೆ ಹಿತನಂ ಸುತನಂ (ಪಂಪಭಾ. ೧-೧೨೪); ಗುರು ಕಾಶಿಯ ವಿಶ್ವನಾಥ ಕುಡೆನಗೆ ಸನ್ಮತಿಯ (ಮೋಹತ. ೧-೮); ಮುಕ್ತಿಯಂ ಕುಡುವನಗಜಾರಮಣನು (ಭಾವಚಿಂ. ೯-೫೯); ಸುಪ್ರಮೋದಂ ಕುಡುಗೆಮಗತುಳ ಶ್ರೀಯಮಂ ಶೈಲಜೇಶಂ (ರಾಜಶೇ. ೧-೨). ೧೩. ಹೊರಸೂಸು; ವ್ಯಕ್ತಪಡಿಸು; ಹೇಳು: ಕೊಡು ಮಂತ್ರಮನೆಲೆ ಬೇಗಂ ಕುಡದಿರ್ದೊಡೆ ನಿನ್ನನಿಲ್ಲಿ ದೆಸೆವಲಿಗೆಯ್ವೆಂ (ಧರ್ಮಾಮೃ. ೨-೧೩೬). ℙ ಈ ಧಾತು ಹಲವು ಶಬ್ದಗಳ ಜತೆಗೆ ಸೇರಿ ವಿಶಿಷ್ಟವಾದ ಧಾತುಗಳಾಗಿ ವಿವಿಧವಾದ ಅರ್ಥಗಳಲ್ಲಿ ಬಳಕೆಯಾಗುತ್ತವೆ. ಉದಾ: ಅಳವಿಗೊಡು, ಒಕ್ಕೊಡು, ಓಲಗಂಗೊಡು, ಕಾಣಿಕೆಗೊಡು, ಕಾಳಗಗೊಡು, ಕೆಯ್ಗೊಡು, ಜತಿಗುಡು, ಧ್ವನಿಗೊಡು, ಬಡ್ಡಿಗುಡು, ಬೆಂಗುಡು, ಮೆಯ್ಗುಡು, ಸೂಱೆಗುಡು ಇತ್ಯಾದಿ.

**ಕೊಟ್ಟಾಡು** = ೧. ಮತ್ತೆ ಮತ್ತೆ ಕೊಡು: ಬಡ್ಡಿಯ ಕೊಟ್ಟಾಡಿ ಬದುಕುವವನು (ನಾಚಿರಾ. ೬). ೨. ಪರಸ್ಪರ ಕೊಟ್ಟು ತೆಗೆದುಕೊ: (೬). **ಕೊಟ್ಟುಂಡನ್** = (ಇನ್ನೊಬ್ಬರಿಗೆ) ಕೊಟ್ಟು ಊಟ ಮಾಡುವವನು; ಭೋಗಿಸುವವನು; ಒಂದು ಬಿರುದು: ಪರಬಳ ಕೇಸರಿ ಕೂಟನ್ ಕೊಟ್ಟುಣ್ಡನಭಿಮಾನಸಳ್ಯಂ (ಎಕ. XI, ಹೊಳಲ್ಕೆ. ೩೩-೮; 965). **ಕೊಟ್ಟುವಱು** = (ಇನ್ನೊಬ್ಬರಿಗೆ) ಕೊಟ್ಟುತಿಳಿ; ದಾನಮಾಡಿ ತಿಳಿ: ಕೊಟ್ಟುವಱಿಯೆ ಬುಧರ್ಗೆ ಕಾಣಿಯಂ (ಬಸವು. ೪೧-೮). **ಕೊಡಮಾಡಿಸು**, **ಕೊಡಮಾಡು** = ಕೊಡುವಂತೆ ಮಾಡು: ವರ್ಷಂಪ್ರತಿ ೬ ಸಾವಿರ ರೂ.ಗಳಷ್ಟು ನಿಧಿಯನ್ನು ವಿಶ್ವವಿದ್ಯಾಲಯದಿಂದ ಕೊಡಮಾಡಿಸಿದರು (ಸಸ್ಯಕ. ೯೮); ಬೇರೆ ಆಟಿಗೆಯನ್ನು ಕೊಡಮಾಡಿದರು (ಕಾಕಥೆ. ೧೩೪); ಅವರಿಗೆ ಉಳಿದ ಉಡುಗೊರೆಗಳೆಂದರೆ ರೈತರ ಸಿದ್ದಪ್ಪನು ಕೊಡಮಾಡಿದ ಎರಡು ಹಿಂಡುವ ಆಕಳುಗಳು (ಹಬ್ಬಿಬ. ೨೬). **ಕೊಡವೇಳ್**, **ಕುಡವೇೞ್**, **ಕೊಡಹೇಳು** = 'ಕೊಡು' ಎಂದು ಹೇಳು; ಕೊಡಲಿಕ್ಕೆ ಹೇಳು: ಶಂಬರಾರಿಯ ಕುಮಾರಂಗೆ ಮತ್ಸುತೆ ಹೊನ್ನಬೊಂಬೆಯ ಕೊಡವೇಳ್ದನಂತೆ (ಮೋಹತ. ೩೩-೧೯); ಕುಡವೇೞ್ವನ ಕುಡುವನ ಕುಡೆಪಡೆವನ ಪೆಂಪೇಂ ನೆಗೞ್ತೆವಡೆಗುಮೊ (ಪಂಪಭಾ. ೬-೪೯); ಈತನನು ಕೊಡಹೇಳಿ ಕೊಟ್ಟನು ಸೀತೆಯರಸನು (ತೊರರಾ. ೪-೮-೧೫).

[ದೇ. ‖ ತಮಿ. ಮಲ. ಕೊಡು; ತುಳು. ಕೊರು]

**ಕೊಡು$_2$** 'ಕೋಡು$_3$' ನೋ.

**ಕೊಡುಂಜೆಱುವು** (ನಾ). ಒಂದು ಊರಿನ ಹೆಸರು: ಪುದಲ್ನಾಡರಾಷ್ಟ್ರೇ ಕೊಡುಞ್ಜಱುವುನಾಮ ಗ್ರಾಮಃ (ಮೈಆರಿ. ೧೯೧೨, ೨-೩೨; 550).

[?]

**ಕೊಡುಕಿಸು** (ಕ್ರಿ). ಗುಟುಕು ಕೊಡು (?): ಪಿಡಿ ಮೊಲೆಯೂಡಿ ಪಲ್ಲಮುಱಿಯಂ ಕರಪುಷ್ಕರದಿಂ ಕಪೋಲಮಂ ಕೊಡೆದು ಲವಂಗಪಲ್ಲವಮನಿತ್ತು ತಮಾಲದ ಮೂಲವಿಂಡಿಯೊಳ್ಕೊಡುಕಿಸಿ ನೀಳ್ದರೋದಕಮನೂಡಿಸಿ ಚಿತ್ತದೊಳಾದ ಮೋಹಮಚ್ಚಿಡದಿರೆ ದಿಙ್ಮತಂ ಕಱಿಪಲಾಜದೆ ನಿಂದುದದೊಂದು ತಾಣದೊಳ್ (ಸೂಕ್ತಿಸು. ೩-೫೯).

[ಕೊಡುಕು$_0$ (< ಕುಟುಕು$_2$) + -ಇಸು$_3$]

**ಕೊಡುಕೊಳೆ**, ಕೊಡಕೊಳು, ಕೊಡುಕೊಳ್ಳಿ (ನಾ). ಕೊಟ್ಟು ತೆಗೆದುಕೊಳ್ಳುವುದು; ಪರಸ್ಪರ ಕೊಟ್ಟು ಕೊಳ್ಳುವ ಸಂಬಂಧ; ವ್ಯವಹಾರ: ಬಾಂಧವರನೆಲ್ಲರ ಕೆಡಹಿದಾತನ ಕೂಡೆ ಸಲೆ ಕೊಡುಕೊಳೆಯ ಬಯಸುವರುಂಟೆ (ತಿಮ್ಮಶಾಂ. ೨-೫); ಅಂತೆಗಂತೆ ಕೂಡಿ ಸಂತೆ ಕೊಡುಕೊಳೆ ನಡೆದಂತೆವೋಲ್ (ಸೂರ್ಯಪಾ. ೬೦-೫); ಕೊಡುಕೊಳೆಯ ಮಾಡೆ ನೀನೊಬ್ಬ ನೆಂಟ ಬಹುರೂಪಿಯಾಗಿ ನಿಂತೆ (ಅರಳು. ೧೦೦-೧೦). **ಕೊಡಕೊಳು**: (ಜಾನಕೋ. ೪೨). **ಕೊಡುಕೊಳ್ಳಿ**: ಸಾಕು ಸಾಕು ನಿನ್ನ ಕೂಡ ಕೊಡುಕೊಳ್ಳಿಯು (ಕಗದ್ಯ. ೩೮). 'ಕೊಳ್ಕೊಡೆ' ಪರಾ. [ಕೊಡು$_1$ + ಕೊಳೆ$_2$]

**ಕೊಡುಕೊಳ್ಳಿ** 'ಕೊಡುಕೊಳೆ' ನೋ.

**ಕೊಡುಕೊಳ್ಳು** (ಕ್ರಿ). ಕೊಡುಕೊಳೆಯ ವ್ಯವಹಾರಮಾಡು: ಕೊಡುಕೊಳ್ಳುವ ವ್ಯಾಪ್ಯಗಳು (ಮುಂಬಯಿ. ೪-೧೪೨); ಪದಾರ್ಥವು ಜನರಿಗೆ ಕೊಡುಕೊಳ್ಳುವುದಕ್ಕೆ ಬರಬೇಕು (ಮುಂಬಯಿ. ೫-೬೬).

[ಕೊಡು$_1$ + ಕೊಳ್ಳು$_1$ (< ಕೊಳ್$_1$)]

**ಕೊಡುಗಯ್** 'ಕೊಡುಗೈ' ನೋ.

**ಕೊಡುಗೂರ್**, ಕೊಡುಗೂರು (ನಾ). ಒಂದು ಸೀಮೆಯ ಹೆಸರು: ಕೊಡುಗೂರ್ ವಿಷಯೇ ಕೆಲ್ಲಿಪುಸುಗೂರ್ ನಾಮ ಗ್ರಾಮೇ (ಮೈಆರಿ. ೧೯೨೫, ೧೦೬-೩೩; ?). **ಕೊಡುಗೂರು**: ಈ ಕಲ್ನಾಡ ನಱಿದೊಡು ಕೊಜ್ಞಾಳರ ಕೊಡುಗೂರರ ಬಜ್ಜಮಕ್ಕನ್ತೆ ಅಜುಗೆ (ಎಕ. IV, ಹೆಗ್ಗಡ. ೧೦೩-೧೫; 910). [?]

**ಕೊಡುಗೂರು** 'ಕೊಡುಗೂರ್' ನೋ.

**ಕೊಡುಗೂಸು** 'ಕೊಡಗೂಸು' ನೋ.

**ಕೊಡುಗೂಸುತನ** 'ಕೊಡಗೂಸುತನ' ನೋ.

**ಕೊಡುಗೆ$_1$** 'ಕೊಡಂಗೆಯ್$_2$' ನೋ.

**ಕೊಡುಗೆ$_2$** (ನಾ). ೧. ಕೊಡುವಿಕೆ; ನೀಡುವಿಕೆ: ಕೊಡುಗೆಯಲ್ಲಿ ಕೊಳುವೆಯಿದೆ (ಸೂರ್ಯಪಾ. ೬೬-೧೧); ಮುಖ್ಯ ಬೇಕಾದದ್ದು ಜೀವಂತ ಗತಿ ಹೊಸನೆತ್ತರಿನ ಕೊಡುಗೆ (ನೆಲಮು. ೩೩). ೨. ಕೊಟ್ಟವಸ್ತು; ಕಾಣಿಕೆ: ಹಣಕ್ಕಾಗಿ ತಮ್ಮ ವಿದ್ಯೆಯನ್ನು ಅವರು ಎಂದೂ ಮಾರಿಕೊಳ್ಳದಿದ್ದರೂ ಗೌರವದ ವಿಶ್ವಾಸದ ಕೊಡುಗೆಯನ್ನವರು ಒಪ್ಪಿಕೊಳ್ಳಬೇಕಾಗುತ್ತಿತ್ತು (ಹೊಸಕ್ಷಿ. ೪೨); ಸಸ್ಯಶಾಸ್ತ್ರಕ್ಕೆ ಗೊಬೆಲ್‌ನ ಕೊಡುಗೆ (ಸಸ್ಯಕ. ೪೫); ಕುಟುಂಬದ ಆರೋಗ್ಯ . . . ಸುಖಸಂತೋಷಗಳ ಕಡೆಗೆ ಅದರ ಕೊಡುಗೆ ಕಡಿಮೆ ಮಹತ್ವದ್ದಲ್ಲ (ಅಡುಸಾ. ೨೦).

[ಕೊಡು$_1$ + -ಗೆ$_1$]

**ಕೊಡುಗೈ**, ಕೊಡುಗಯ್ (ನಾ). ಧಾರಾಳವಾಗಿ ದಾನ ಮಾಡುವ ಕೈ; ಕೊಡುವ ಕೈ: ಕೊಡುಗೈ ವೇಶ್ಯೆಯ ವಶ್ಯವೈ (ಸೋಮೇಶ. ೬೧); ಕೊಡುಗೈಯ ಕರ್ಣನನೆ ಮಿಾರಿ ಹಳು ದಾನದಲಿ ನಮ್ಮ ವಿಷಯೆ (ಚಂದ್ರಸ. ೧೨); ಅವರ ಕೊಡುಗೈ ಸಹಾಯವನ್ನು ಕೇಳಿ ಪಡೆಯದವರೇ ಇಲ್ಲ (ರಂಗನಾ. ೨೩೧). **ಕೊಡುಗಯ್**: ಆವ ಕೈ ಬಂದೊಡಂ ಕೊಡುಗಯ್ಯ ಬಾಳ್ಕೆ (ಕಾಲೂರ. ೬೫-೧೩೬).

[ಕೊಡು$_1$ + ಕೈ$_2$ (< ಕೆಯ್$_2$)]

**ಕೊಡುಗೈತನ** (ನಾ). ಧಾರಾಳತನ: ಕಲಿತನದಲ್ಲಾಗಲಿ ಕೊಡುಗೈತನದಲ್ಲಾಗಲಿ ಕರ್ಣನಲ್ಲದೆ ಮತ್ತಾರು ತಾನೆ ಪರಮಾವಧಿಯನ್ನು ಮುಟ್ಟಿರುವವರು (ಭಾಮಣಿ. ೨೫). [ಕೊಡುಗೈ + -ತನ]

**ಕೊಡುಗೈವೀರ** (ನಾ). ದಾನಶೂರ: ನೀನು . . . ದೀನದಲಿತರಿಗೆ ಕೊಡುಗೈವೀರನಾಗಿ ವಿಶ್ವಾನುಕಂಪ ತೋರಿರುವೆ (ದಾನಚಿಂ. ೨೧). [ಕೊಡುಗೈ + ವೀರ]

**ಕೊಡುವಳಿ** (ನಾ). ೧. ಕೊಡುವಿಕೆ. ೨. ಇನ್ನೊಂದು ಮನೆತನಕ್ಕೆ ಹೆಣ್ಣನ್ನು ಕೊಡುವುದು: ಒಂದು ವಟಾರದಿಂದ ಇನ್ನೊಂದು ವಟಾರಕ್ಕೆ ಕೊಡುವಳಿ ತರುವಳಿ (ಹೆಣ್ಣು ಕೊಡುವುದು ತರುವುದು) ಉಂಟು (ಹುಟ್ಟಿಹ. ೨೩); ಅಂತಹ ಮನೆಗಳಿಗೆ 'ಕೊಡುವಳಿ ತರುವಳಿ' ಕೂಡದು (ಬೆಳುಮು. ೨೯). 'ತರುವಳಿ' ಪರಾ. [ಕೊಡು$_1$ + -ವಳಿ$_1$]

**ಕೊಡುವಾಯಿ** (ನಾ). (ಕರಾ) ತೋರವಾದ ಹಾಗು ಉದ್ದವಾದ ಒಂದು ಬಗೆಯ ಮೀನು. [← ತುಳು. ಕೊಡುವಾಯಿ]

**ಕೊಡುಹ** (ನಾ). ಕೊಡುವಿಕೆ; ಕೊಡುವ ಕ್ರಿಯೆ: ವೃದ್ಧಿಜೀವಿಕೆ-ಬಡ್ಡಿಯ ಕೊಡುಹ (ನಾಚಿರಾ. ೬). [ಕೊಡು$_1$ + -ಹ$_2$]

**ಕೊಡೆ$_1$** (ಕ್ರಿ). ೧. ಮೊನಚಾದ ಆಯುಧದಿಂದ ಚುಚ್ಚಿ ಗುಳಿ ಮಾಡು. ೨. ಕೊರೆ; ಕಂಡರಿಸು: ದೇವಿಯರೆ, ಕೊಡೆಯುತಿಹ ಮೂರ್ತಿ ಉಳಿದವರಿಗೇನೋ ಕಲ್ಲೆ (ನವರಾ. III, ೧೯). ೩. ತೆಂಗಿನೊಳಗಿನ ಕೊಬ್ಬರಿಯಂತೆ ಹೆರೆದು ತೆಗೆ; ಕೆರೆದು ತೆಗೆ. ೪. (ಕೀಟದಂತೆ) ಕೊರೆದು ನೋವುಂಟಾಗು; ಯಾತನೆಹೊಂದು; ನೋವಾಗು. ೫. ಬಡವಾಗು; ಕೃಶವಾಗು: ತಡೆಯಲ್ಕೆ ಸಮರ್ಥನೆಯೆನುತುಂ ನಡನಡುಗುವವೋಲ್ ನಡು ಕೊಡೆದುದು (ಜಯಕಾ. ೨-೪೦); ಕೊಡೆದುದು ನಡು ಕೂಡೆ ಮಡದಿಯ ಪೊಡೆಯೊಳು ಮಡುಗೊಂಡೆಸೆವನುರಾಗ (ಚಂಪ್ರಸಾಂ. ೪-೨೭). [ದೇ. ‖ ತಮಿ. ಕುಡೈ; ತುಳು. ಕುಡೆ]

**ಕೊಡೆ$_2$** (ನಾ). ೧. ಮಳೆ, ಬಿಸಿಲುಗಳಿಗೆ ಮರೆಯಾಗುವಂತೆ ಹಿಡಿದು ಕೊಳ್ಳುವ ಒಂದು ಸಾಧನ; ಸತ್ತಿಗೆ; ಛತ್ರಿ; ಆತಪತ್ರ: "ತಟಿ, ಕೊಡೆ, ಮೇಘಡಂಬರಂ – ಈ ೩ ಆತಪತ್ರ" (ಕಶಸಾ. ೧೭-೩೨೭); "ತಟಿ ಕೊಡೆಯು ಛತ್ರಮಕ್ಕನವರತಂ" (ಕವಿಕಂ. ೧೪೯); ಸೀಗುರಿಗಳುಮಂ ಕೊಡೆಗಳುಮಂ ಪಿಡಿಯಿಸಿ (ವಡ್ಡಾರಾ. ೭೪-೧೧); ಪಂಚರತ್ನದ ಕೊಡೆಯಂ ಪಿಡಿದಂ (ಆದಿಪು. ೭-೫); ಏಳುಕುದುರೆ ಕೊಡೆ ಆಳಪಣ್ಣುವಕೆ . . . ರಾಜಚಿನ್ನವ ಕೊಟ್ಟು (ಸೌಇಇ. IX-i, ೪೧-೧೪; 11ನೆಯ ಶತ); ಜಡೆಯ ಚಂದ್ರಕಳೆ ಕೊಡೆಯಾಗೆ ಪಿಡಿದ ತ್ರಿಶೂಲಂ ಕೊಡೆಯ ಕಾವಾಗೆ (ನಂಬಿರ. ೬-೧೬); ಸಿಡಿಲು ಹೊಡೆವಡೆ ಹಿಡಿದ ಕೊಡೆ ಕಾವುದೇ (ಹಜಕಾ. ೨-೩೧); ಕೊಡೆಯೆಂಬರಾತಪತ್ರವನು (ಮೋಹತ. ೨-೨೦); ಮರವೇ ಪರಿಮಳ ಪರಿವೇಷವನಾಂತಿಹ ಹೂವಿನ ಕೊಡೆಯಾಗಿತ್ತು (ಅನಿಕೇ. ೨೬); ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧರಾತ್ರಿಯಲ್ಲಿ ಕೊಡೆ ಹಿಡಿಸಿಕೊಂಡ (ಗಾದೆ). ೨. (ಕರಾ) ಚಂದ್ರ ಮತ್ತು ಸೂರ್ಯರ ಸುತ್ತಲೂ ಕಂಡುಬರುವ ಪ್ರಭಾವಳಿ,—ವರ್ತುಲ, —ಪರಿವೇಷ: ಚಂದ್ರನ ಬೆಳಕನ್ನು ಅವು ಪ್ರತಿಫಲಿಸುವುವು, ಇದರಿಂದ ಅವನ ಸುತ್ತು ವರ್ತುಲಾಕೃತಿಯ ಒಂದು ಪ್ರಭಾವಳಿಯುಂಟಾಗುವುದು ಇದನ್ನೆ ಕೊಡೆಯೆಂದು ಕರೆಯುವರು (ಬಾಲಪ್ರ. I, ೬೩).

ಕೊಡೆಯಭೋಗ = ದೇವಸ್ಥಾನದ ಒಂದು ಸೇವೆ; ಛತ್ರಿಸೇವೆ (?): ಗುತ್ತಿಗೆ ಖ ೭ ಕೊಡೆಯ ಭೋಗ ೧ ಕೆ ಗದೆ ಖ ೧ಕೆ (ಸೌಇಎ. ೧೯೩೪, ಪುಂಗನೂರು. ೧೫೭-೭; 1426).

[ದೇ. ‖ ತಮಿ. ಕುಡೈ; ಮಲ. ಕುಡ; ಕೊಡ. ತುಳು. ಕೊಡೆ; ತೆಲು. ಗೊಡಗು]

**ಕೊಡೆ$_3$** (ನಾ). ಕೊಡುವಿಕೆ; ಕೊಡುಗೆ: ನಿಮ್ಮೊಳಗೆ ನಮ್ಮೊಳಗೆ ಕೊಳ್ಳುಕೊಡೆಯೇ ಬಯಲ ಹಮ್ಮನಾಡಲದೇತಕೆ (ಸಮ್ಯಕಾ. ೮-೧೬); ನಿನಗೂ . . . ನೆನಪಿರುವಂಥ ಕೊಡೆ ಕೊಡ್ತೀನಿ (ಪುನರು. ೫೧೧). 'ಕೊಳುಕೊಡೆ' ಪರಾ. [< ಕೊಡು$_1$]

**ಕೊಡೆಗರಿ** (ನಾ). ಕೊಡೆಯ ಗರಿ: ಸಡಲಿಸಿ ಮಡದಿಯರುಡಿಯನು ಮುಡಿಯನು ಬಡ ಮುದುಕರ ಕೊಡೆಗರಿ ಹರಿದಾಡಿಸಿ (ಕಎಪು. ೨೮-೭). [ಕೊಡೆ$_2$ + ಗರಿ$_1$ (< ಗಱಿ)]

**ಕೊಡೆಗೆದರು** (ಕ್ರಿ). ಕೊಡೆಯಂತೆ ಹರಡು, —ಬಿಚ್ಚು: ಮೂಡಿದುವು ರೆಂಕೆ ಸಾರಣನ ಭುಜಕೆ; ಕೊಡಗೆದರಿ ಹಾರುತ್ತಿಳಿದನಾ ಕದನ ಮೇದಿನಿಗೆ (ಶ್ರೀರಾಮಾ. ೬೫೦-೨೩೨). [ಕೊಡೆ$_2$ + ಕೆದರು (< ಕೆದಱು)]

**ಕೊಡೆತ**, ಕೊಡತ (ನಾ). (ಸಂದುಗಳಲ್ಲಿ) ನರಗಳ ಹೊಡೆತ, —ಸಿಡಿತ, —ನೋವು: ಸಂದುಗಳ ಕೊಡೆತ ನಿದ್ರಾಭಂಗ . . . ಉಂಟಾಗಿಹವು (ವೈದ್ಯಸಾ. I, ೪೧). **ಕೊಡತ**: "ಛಳಿ ಹಾಸುಗೋಲು ಪುಣ್ಣೋವುಗಳೊಳಂ ಕೊಡ [ಪಾಠಾಂ. ಡೆ]ತ" (ಶಬ್ದಮಂ. ೯೮); ಸಂದುಗಳ ಎಲುವುಗಳ ಕೊಡತ . . . ಇವುಗಳೆಲ್ಲವೂ ಅಂತರ್ಗತ ಜ್ವರ ಲಕ್ಷಣಗಳು (ಸಕವೈ. ೯೮). [ಕೊಡೆ$_1$ + -ತ$_2$]

**ಕೊಡೆನೆಗೆ** (ಕ್ರಿ). ಪುಟನೆಗೆ; ಉಟಹಾರು: ನಡೆಗಲ್ಲಿಂದುಂ ಬಿಣ್ಪಿಂ ಕೊಡೆನೆಗೆದಪುದುರ್ವಿಯೆಂದು ವಾಸುಗಿ ಪಲವುಂ ಪೆಡೆಯಂ ಶಿಶು ನಡೆವೆಡೆಯೊಳ್ ಪಡೆದಾಂತು ಸಹಸ್ರಫಣನೆನಲ್ ಪೆಸರ್ವಡೆದಂ (ಪಂರಾಮಾ. ೩-೧೨೯); "ಒಂದು ಕಡೆಯ ಭಾರದಿಂದ ಮತ್ತೊಂದು ಕಡೆ ಮೇಲಕ್ಕೆ ಏಳು" (ಪಂರಾಮಾ. ಕೋಶ); ಒಡೆದು ನಾನಾಥಟ್ಟುಗಳ ಮೈವಿಡಿದು ವಾರಿಡುವರುಣಜಲದಲಿ ಕಡಿಕುಗಳು ಬೆಂಡೇಳೆ ದಂತಿಗಳಟ್ಟೆ ಕೊಡೆನೆಗೆಯೆ (ಕುವ್ಯಾಭೀ. ೪-೮); ಕೊಡೆನೆಗೆದವಟ್ಟೆಗಳು ರಕುತವ ಕಡಲೊಳರೆಜೀವದ ಭಟರು ಬಾಯ್ವಿಡುತ ತೇಕಾಡಿದರು (ಕುವ್ಯಾದ್ರೋ. ೫-೧೧). [ಕೊಡೆ$_0$ + ನೆಗೆ]

**ಕೊಡೆಮರ** (ನಾ). ತಾಳೆಜಾತಿಯ ಒಂದು ಮರ: ಶ್ರೀತಾಳೆ, ಕೊಡೆಮರ . . . ಓಲೆಗರಿಮರ (ಮೈಔಗಿ. ೨೫-೪೫೮). [ಕೊಡೆ$_0$ + ಮರ$_1$]

**ಕೊಡೆಮುಳ್ಳುಜಾಲಿ** (ನಾ). ಒಂದು ಜಾತಿಯ ಮುಳ್ಳುಗಿಡ: ಬುಡ್ಡೆಜಾಲಿ, ಕೊಡೆಮುಳ್ಳು ಜಾಲಿ, ಹೊಡೆ ಜಾಲಿ (ಮೈಔಗಿ. ೨-೧೮). [ಕೊಡೆ$_0$ + ಮುಳ್ಳು (< ಮುಳ್$_2$) + ಜಾಲಿ$_1$]

**ಕೊಡೆಯಾಳಿ** (ನಾ). ಒಂದು ಪ್ರದೇಶದ ಹೆಸರು (?): ಪಳ್ಳದೊಳಗಣ ಉಳಿಯಳರಿಯೇ ಕೊಡೆಯಾಳಿ ಬೆಳನೆ ಸಯ್ಯನೆ ಬನ್ದು (ಇಆ. XII, ೧೬-೪; 735). [?]

**ಕೊಡೆಯೆತ್ತು** (ಕ್ರಿ). ಕೊಡೆಯನ್ನು ಮೇಲಕ್ಕೆ ಎತ್ತು, —ಹಿಡಿ: ತೆರೆ ಬಂದು ಬಂದೆದ್ದು ಹಡೆಯೆತ್ತಿ ಕಾರಿ ಹೊರಳುವೆಡೆ, ಕೊಡೆಯೆತ್ತಿ, ಗದ್ದುಗೆಯನೇರಿ (ಪಾರಸಿ. ೫-೧೦೨). [ಕೊಡೆ$_2$ + ಎತ್ತು$_1$]

**ಕೊಡೆಯೆಲೆ** (ನಾ). ಕೊಡೆಯಂತೆ ಹರವಾಗಿರುವ ಎಲೆ; ಅಗಲವಾದ ಎಲೆ: ಜಳದೇವತೆಗೆತ್ತಿದ ಪಚ್ಚೆಯ ಸತ್ತಿಗೆಗಳ ಪುದುವೆನಿಪುವು ವನಜವನದ ಕೊಡೆಯೆಲೆ ಪಲವುಂ (ಆದಿಪು. ೧೧-೬೫); ನಳಿನಿಯೊಡವೆಳೆದು ರಜಂಬೊರೆದು ಕೊಡೆಯೆಲೆಯ ಕೆಳಗಿರ್ದ ರಾಜಹಂಸಿಯ ವಿಳಾಸಮಂ ನೆನೆಯಿಸಿದಳ್ (ಶಾಂತಿಪು. ೯-೧೭೮); ಅಲ್ಲಲ್ಲಿಗೆ ತಾವರೆಯ ಕೊಡೆಯೆಲೆಗಳಿಂ ಮುಚ್ಚಿದ ಪಚ್ಚೆಯ . . . ತಣ್ಣಾಳಸಂಗಳುಮಂ (ಕಾದಂಉ. ೨೧೬); ಮೇಗೆ ನೆಗೆದಿಸುವ ಪಾವಸೆಗೊಂಡ ಪೇರಾವೆಯುಂ ತಾವರೆಯ ಕೊಡೆಯೆಲೆ ಗೆತ್ತು (ಚಂದ್ರಪು. ೫-೪೦ ವ). [ಕೊಡೆ$_2$ + ಎಲೆ$_1$]

**ಕೊಡೆಯೊಡೆಯ** (ನಾ). ಕೊಡೆಯ ಅಧಿಪತಿ; ರಾಜ: ಒಡೆಯ ಪ್ರತ್ಯಯಕ್ಕೆ – ಪೆರ್ಮೆ ಯೊಡೆಯಂ . . . ಕೊಡೆಯೊಡೆಯಂ (ಶಮದ. ೨೦೬ ಪ್ರಯೋ). [ಕೊಡೆ$_2$ + ಒಡೆಯ$_1$]

**ಕೊಡೆವಣ** (ನಾ). ಒಂದು ಬಗೆಯ ತೆರಿಗೆ: ಮನೆದೆಱೆಯುಮಂ ಕೊಡೆವಣಮುಮಂ ಬಿಟ(ಟ್ಟ)ರು (ಇಅ. X, ೨೫೩–೪೪ ; 1108). [ಕೊಡೆ ? + ಪಣ$_1$]

**ಕೊಡೆವರ** (ನಾ). ಕೊಡೆಯಂತೆ ಹರಡಿಕೊಂಡಿರುವ ಮರ: ಕೈಗೊಟ್ಟು ಮೆಲ್ಲನೊಬ್ಬೊಬ್ಬರಂ ನಡೆಸಿ ತಂದಾರವೆಯ ಕೊಡೆವರನ ತಡಿ ನೆಳಲ ತಂಪಿನೊಳು ಕುಳ್ಳಿರಿಸಿದ (ಸೋಮುಚ. ೨–೮೬). [ಕೊಡೆ$_2$ + ಮರ$_1$]

**ಕೊಡೆವಿಡಿ** (ಕ್ರಿ). ಕೊಡೆಯನ್ನು ಹಿಡಿ: ಪರಮಜಿನಜನನಿಗೊರ್ವರ್ಳ್ ಸುರವಧು ಕೊಡೆವಿಡಿದು (ಶಾಂತಿಪು. ೯–೧೭೮); ಒರ್ವರ್ಳ್ ಕೊಡೆವಿಡಿವುದು ಮತ್ತೊರ್ವರ್ಳ್ ಚಮರವನಿಕ್ಕುತಿರ್ಪುದು (ಗದಾಯು. ೯–೩೧); ಕಾವಿಲ್ಲದೆ ಕೊಡೆವಿಡಿವನೆಂಬಂತೆ (ಧರ್ಮಾಮೃ. ೪–೫೦); ವಿಪ್ರೋತ್ತಮನು ಕೊಡೆವಿಡಿದಲ್ಲಿಗೈತಂದು (ಸಂಭಪ. ೧೦–೧೫). [ಕೊಡೆ$_2$ + ಪಿಡಿ$_1$]

**ಕೊಡೆಹುಲ್ಲು** (ನಾ). ನಾಯಿಕೊಡೆ; ಅಣಬೆ: "ಛತ್ರಾ, ಅತಿಛತ್ರಃ, ಪಾಲಘ್ನಃ – ಕೊಡೆಹುಲ್ಲಿನ ಹೆಸರುಗಳು" (ಸಿದ್ಧಾಂತಿ. ೧೩೨). [ಕೊಡೆ$_2$ + ಹುಲ್ಲು (< ಪುಲ್)]

**ಕೊಡ್ಸೀಗೆ** 'ಕೊಡಸಿಗೆ' ನೋ.

**ಕೊಣ** 'ಕೊಳ್ಳ$_2$' ನೋ.

**ಕೊಣಕ** (ನಾ). ಒಂದು ಬಗೆಯ ಪಕ್ಷಿ: ಅರೆ ಹೊಜಿಸು ಟಿಟ್ಟವನು ಮಣಿಗನು ಗರುಡ ಕೊಣಕನು ಮೇಣು ಟೀವನು ಗರಗೆ ತೊಂಡಲು ಗಜಿಗ (ಸಾಳ್ವಭಾ. ೫–೨೩). [?]

**ಕೊಣಕಿಡು** (ಕ್ರಿ). ನೆಗೆದಾಡು; ಎಗರು; ಕುಪ್ಪಳಿಸು: ಕುಱಿವಿಂಡು ನೀರುಣಲ್ ಬಗೆದು ಬಂದಲ್ಲಿ ಕೊಣಕಿಟ್ಟು (ಪಂಚತಂ. ೭೨–೧೩); ಕೊಣಕಿಡುವ ಕೊಣಸುಗಳಂ ಪಿಡಿದು (ಅರ್ಧನೇ. ೧–೯೨ ವ); ಕಾಡ ಕೋಣಂ. . .ಕೊಣಕಿಡುತ್ತಂ ಬಪ್ಪುದಂ ಕಂಡು (ಪುಣ್ಯಾಸ್ರ. ೪–೨೭ ವ). [ಕೊಣಕು$_2$ + ಇಡು$_1$]

**ಕೊಣಕು$_1$** (ಕ್ರಿ). ನೆಗೆ; ಕುಪ್ಪಳಿಸು: "ಕೊಣಕು – ಮೃಗಲಂಘನೇ" (ಶಮುಧಾ); ಸುಣಿಸೊಕ್ಕೆ ಕೊಣಕುತುಂ ಪಾಱಿ (ಪಂಚತಂ. ೪೬–೩); ದರಿಗೊಂಡಿಱಿದಾಡುತುಂ ಕೊಣಕುತುಂ (ಜಗವಿ. ೪–೨೫); ಕೊಣಕುವ ಸಬುದಮನಾರಯ್ದು (ರಾಮಾಶ್ವ. ೮೪–೩); ಕರು ಕೊಣಕೆ ಕಂಬದಾ ಕೆಳಗಂತೆ (ಹಬ್ಬಿರ. ೪–೪೪). [?]

**ಕೊಣಕು$_2$** (ನಾ). ನೆಗೆತ; ಜಿಗಿತ; ಹಾರಿಕೆ. 'ಕೊಣಕಿಡು' ಪರಾ. [< ಕೊಣಕು$_1$]

**ಕೊಣಕೋಲ್** (ನಾ). ಬಗ್ಗಿದ ಕೋಲು; ವಕ್ರವಾದ ಕೋಲು (?): ಕೊಣಕೋಲಂತಪ್ಪ ಬಾಲಮುಂಬೆರಸು ಬಿಲದೊಳ್ ಪೊಕ್ಕು ಪುಲಿಯಂತೆ ಗರ್ಜಿಸುತ್ತುಮಿರ್ಪುದು (ಪಂಚತಂ. ೩೦೪–೨). [ಕೊಣ$_0$ + ಕೋಲ್$_1$]

**ಕೊಣಗು** 'ಕೊಳಗು' ನೋ.

**ಕೊಣತ** (ನಾ). ವ್ಯಾಯಾಮಕ್ಕಾಗಿ ಕೈಯಲ್ಲಿ ಹಿಡಿದುಕೊಂಡು ಬೀಸುವ ಮರದ ಅಥವಾ ಲೋಹದ ಗದೆಯಂತಹ ಸಾಧನ; ಲೋಡು: ಪರತತ್ತ್ವ ವಿವರದ ಬಸಿಗೆಗಳನೆ ಹಾಕುತಱೆವೆಂಬ ಕೊಣತವ ನೊತ್ತಿಕಟ್ಟಿ (ಕೈಕವ. ೪–೧೫–೧).

**ಕೊಣತಕಟ್ಟು** = ಕೊಣತಕ್ಕೆ ಕಟ್ಟಿದ ಹಗ್ಗವನ್ನು ಹಿಡಿದು ಏರು: (ಕ). [?]

**ಕೊಣದಪ್ಪಲೆ** 'ಕೊಳಗದಪ್ಪಲೆ' ನೋ.

**ಕೊಣಪ** (ನಾ). ದನುಜ, ರಾಕ್ಷಸ: ಪ್ರಕಟಮಾಗೆಸೆವುತಿರ್ಪೆಮ್ಮ ಮಾಬಲಕೆ ಜೋಕೆಯಿಂದೊರ್ವ ಸೇನಾನಿಯಂ ವಿರಚಿಪೊಡೆಯಿಾ ಕೊಣಪರೊಳಾವವಂ ಯೋಗ್ಯನಹನಂತದಂ ತಿಳುಪು (ಭೋರಾಸು. ೪೬–೨೧). [< ಸಂ. ಕೋಣಪ]

**ಕೊಣಪಿ** (ನಾ). ಕಾಳನ್ನು ಉದುರಿಸುವ ಬಡಿಗೋಲು: (ಕ). [? . / ತೆಲು. ಕುದುಪ]

**ಕೊಣಬಿಗ** (ನಾ). ಬೆಡಗುಳ್ಳವನು; ಒನಪುಗಾರ; ಸೊಗಸುಗಾರ: ಕೊಬ್ಬಿದ ಕೋಣನ ಮೇಲೆ ಗೊಬ್ರವ ಹೇರ್‍ಯಾನೆ ಕೊಬ್ಬಿದೇನೆಲಾ ಕೊಣಬಿಗಾ ನಿನ ಬಾಕ್ಲಿಗೆ ಕಬ್ಬಿಯ ಮುಳ್ಳ ಎಳಸೇನು (ನಾಪದ. ೨೧). [ಕೊಣಬು$_1$ (< ಕೊನಬು) + –ಇಗ]

**ಕೊಣಬಿಗೆ, ಕೊಣಮಿಗೆ, ಕೊಣವಿಗೆ** (ನಾ). ಕಣಿಕವನ್ನು ನಾದುವುದಕ್ಕಾಗಿ ಬಳಸುವ ಅಗಲವಾದ ಮರದ ಮರಿಗೆ; ಹರಿವಾಣ: "ಕೊಣಬಿಗೆ (ಕೊಣಮಿಗೆ) – ಕಟ್ಟಿಗೆಯ ಅಗಲ ಪಾತ್ರೆ" (ಜಾನಕೋ. ೪೨). **ಕೊಣಮಿಗೆ**: ಮೇಲಿನ ಪ್ರಯೋಗವನ್ನು ನೋಡಿ. **ಕೊಣವಿಗೆ**: (ಕ). [?]

**ಕೊಣಬು$_1$** 'ಕೊನಬು' ನೋ.

**ಕೊಣಬು$_2$** (ನಾ). ಕಾಯಿಪಲ್ಯ ಬೆರಸಿ ಮಾಡಿದ ಹುಳಿ; ಒಂದು ಬಗೆಯ ಸಾಂಬಾರು: ಉತ್ತಮದ ಸಂಭಾರಮಿಕ್ಕಿ ನಾಲ್ಕೆಂಟು ರುಚಿವೆತ್ತ ಕೊಣಬಂ ಕಾಸಿಕೊಂಡು (ಸೂಪಶಾ. ೪–೩೨); ಹಲಸಿನ ಕಾಯ ಮೃದುವಾಗಿ ಕುಕ್ಕಿ . . . ಮೊಸರು ಉಪ್ಪು ಹುಳಿ ಸಂಭಾರಂಗಳ ಅರೆದು ಕದಡಿ ಆ ಕೊಣಬನು ದರ್ವೀಲೇಪದ ಪವಣಿನಲಿಳುಹಿ (ಭೀಮುಸೂ. ೪೫). [ದೇ. ‖ ತಮಿ. ಮಲ. ಕುಟಮ್ಪು]

**ಕೊಣಬುಗಾಸು** (ಕ್ರಿ). ಕೊಣಬನ್ನು ಕಾಯಿಸು, —ತಯಾರಿಸು: ಬಿಳಿಯುಪ್ಪು ಹುಳಿ ಶುಂಠಿ ಜೀರಿಗೆ ಮೆಣಸನರೆದುದಂ ಕೊಣಬುಗಾಸಿ (ಸೂಪಶಾ. ೪–೪೦). [ಕೊಣಬು$_2$ + ಕಾಸು$_1$]

**ಕೊಣಬೆ** (ನಾ). ಬಣಬೆ; ಮೆದೆ: ಅವನ ಹುಲ್ಲು ಕೊಣಬೆಯ ಸಮಿಾಪದಲ್ಲಿ ಗೋದಿನಾಗರ ಹಾವು ಹೆಡೆಯಾಡಿಸುತ್ತ ಮಲಗಿದ್ದಿತು (ಗರುಡಾ. ೧೨೭). [?]

**ಕೊಣಮಿಗೆ** 'ಕೊಣಬಿಗೆ' ನೋ.

**ಕೊಣಮಿರುಂಗ** (ನಾ). ಒಂದು ಪ್ರದೇಶದ ಹೆಸರು: ಕೂರಾಳಿಗದ ಆಳರೊಳೆ ಕೊಣಮಿರುಗಙ್ಗ ದುರದುಳ್ ದುಗ್ಗಮಾರರ ಪಡೆ ಒಟ್ಟೆಱಿದು ಬಿಟ್ಟ (ಎಕ. IX, ದೇವನ. ೬೭–೩ ; 780). [?]

**ಕೊಣಲು** (ನಾ). ಬಾಗು; ತಿರುವು: ಮೂಡಲು ಹೊಸಗೆರೆಯ ಪಡುವಣ ಬಡಗಣ ಕೊಣಲು ಮತ್ತರೊಂದು ಕೋಡಿವರ ಪಗಲೂಟದ ಕೈಯಿಂದಂ (ಕಕುಲ. ೨೦–೭; ?). [? . / ತಮಿ. ಕುಣುಗು = ಬಾಗಿರು, ವಕ್ರವಾಗಿರು]

**ಕೊಣವಿಗೆ** 'ಕೊಣಬಿಗೆ' ನೋ.

**ಕೊಣಸು$_1$** (ನಾ). ಜಿಂಕೆಯ ಮರಿ; ಮರಿಹುಲ್ಲೆ: "ಕೊಣಸೆಂದು ಮೃಗಶಿಶು" (ಕಶಸಾ. ೬–೧೧೧); "ಕೊಣಸೆನೆ ಮೃಗಪೋತಂ" (ಕವಿಕಂ. ೫೮); ದೀವದ ಪುಲ್ಲೆಯ ಕೊಣಸುಗಳ್ಗೆ ಪುಲ್ಲೆಸಟಿಂ ಸೆಟಿದು ನೀಡುತುಂ (ಲೀಲಾವ. ೪–೧೮ ವ); ತೊರೆದ ಕುಚಂಗಳಿಂದೆ ಕೊಣಸಂ ನಸೆಯಿಂ ಮೃಗ ಕುರಂಗಿ ಸಾರ್ತರಲ್ (ಜಗವಿ. ೧೬–೨೨); ಪುಲ್ಲೆಯ ಕೊಣಸಂ ಪುಲಿಯೇಱಿದಂತಿರೇಱಲುಪೇಂದ್ರಂ (ಮಹಾನೇ. ೬–೧೦೦); ನೀನಿಲ್ಲು ಕೊಣಸಿಂಗೆ ಮೊಲೆಗೊಟ್ಟು ಬಂದಪೆ (ಪಾಸೋಪು. ೧೦–೧೧೩).

**ಕೊಣಸು$_2$** (ನಾ). ಗೊಣಸು; ಗೊಲಸು: ಮದ್ದಲೆಯ ಮೇಲೆ ಕೊಣಸು ಬಾವುಲಿಯ ಬೊಂಬೆಯ ಕಟ್ಟಿ (ಪ್ರಭುಷ. ೫-೨೬). [< ಗೊಟಸು]

**ಕೊಣಸುಮಣಿ** (ನಾ). = ಕೊಣಸು$_1$: ಬಿಮ್ಮನಿಂ ಕೊಣಸುಮಣಿಗಳಿಗೆ ಸುಣ್ಣಾತ ಕಲಿಸುವುವು ಕನ್ನಡವಕ್ಕಿಯು (ಪ್ರಭುಷ. ೬–೨೦). [ಕೊಣಸು$_1$ + ಮಣಿ]

**ಕೊಣಿಕಲ್** (ನಾ). ಒಂದು ನಾಡಿನ ಹೆಸರು: ಬ್ರಾಹ್ಮಣೇಭ್ಯಃ ಕೊಣಿಕಲ್ ವಿಷಯೇ ಸ್ವಭಾಷಯಾ ಪೆರಿಯಾಳನಾಮಗ್ರಾಮನ್ನದತ್ತಮ್ (ಇಅ. VIII, ೯೬–iib ; 7ನೆಯ ಶತ). [?]

**ಕೊಣು** 'ಕೊಳ್$_1$' ನೋ.

**ಕೊಣ್ಗ** (ನಾ). (?) : ಹು[ಪಾಠಾಂ. ಪ]ದಿದ ಕಾಂಡಪಟಂಗಳೊಳಂ ಮೇಲ್ಕಟ್ಟನೊಳಟ್ಟದ ಕೊಣ್ಗದೊಳ್ ಬಿದಿರ ಪೊಳೆಯೊಳಂ (ಮದಶಿ. ೮–೨೩). [?]

**ಕೊಣ್ಣಂದ** (ನಾ). ಒಂದು ಊರಿನ ಹೆಸರು(?): ಕೊರಕೋಡ ಕೊಣ್ಣಂದರ ಕೆಱೆ ಧಾತು ಸರ್ವ್ವಂ ಯಿತ್ತರ್ (ಎಕ. VIII, ಸೊರಬ. ೧–೪; 797). [?]

**ಕೊಣ್ಣಂದಗಾಲ್** (ನಾ). ಒಂದು ಊರಿನ ಹೆಸರು : ಅನ್ತೆಬನ್ದು ನೆಱೆಲ್ಲಾಲೆ ಅನ್ತೆಬಂದು ಕೊಣ್ಣನ್ದಗಾಲೆ (ಮೈಅರಿ. ೧೯೩೬, ೫೩–೨೫; 550). [?]

**ಕೊತ** (ನಾ). ಒಂದು ಊರಿನ ಹೆಸರು : ತಗಡೂರ ಕುರುಳ ಕೋಗೂಣ್ಣ ಎಡತಲೆಯ ಕೊತದ ಪುಳ್ಳಿಗನುಂ ಕೆನ್ನಿಳ್ಳೆಯ ಬದ್ರಷೆ ಐಯನೂಂ (ಎಕ. III, ನಂಜನ. ೧೯೯–೧೫; ?). [?]

**ಕೊತಂಬರಿ** 'ಕೊತ್ತುಂಬರಿ' ನೋ.

**ಕೊತಕೊತ** (ನಾ). ಒಂದು ಅನುಕರಣ ಶಬ್ದ; ದ್ರವ ಪದಾರ್ಥ ಕುದಿಯುವಾಗ ಉಂಟಾಗುವ ಶಬ್ದ: ಸಾರು ಕೊತಕೊತ ಕುದಿಯುತ್ತಿತ್ತು (ರೂಢಿ). [?]

**ಕೊತಮರಿ** 'ಕೊತ್ತುಂಬರಿ' ನೋ.

**ಕೊತಲಿಕುದುರೆ** (ನಾ). ಮೆರವಣಿಗೆಯ ಕುದುರೆ (?) : ಮುತ್ತಿನ ತುರಾಯಿಗಳು, ಕಡಗ ಕಂಠಮಾಲೆ ಐದು ಕೊತಲಿಕುದುರೆಗಳು ಮುಂತಾದುವನ್ನು ಅಲಿ ಆದಿಲ್‌ಷಾಹಿಗೆ ಬಹುಮಾನವಾಗಿ ಕೊಟ್ಟು ಬಾರೆಂದು ಅರಸರು ಅಜ್ಞೆ ಮಾಡಿದರು (ಬಖೈರು. ೮). [← ಹಿಂ. ಮರಾ. ಕೋತಲ]

**ಕೊತವಾಲ**, ಕೊಟ್ಟವಳ$_1$, ಕೊತ್ತವಾಲ, ಕೊತ್ವಾಲ್, ಕೊತ್ವಾಲ, ಕೋಟ್ಟವಳ (ನಾ). ೧. ಕೋಟೆಯ ಕಾವಲುಗಾರ; ದುರ್ಗರಕ್ಷಕ: ಬಾದಶಹನು ಆದೇ ಕ್ಷಣ ಕೊತವಾಲನನ್ನು ಕರೆತರಿಸಿ (ಮುಂಬಯಿ. ೪–೨೦); ರಾಣೀನಗರದ ಕೊತವಾಲನೂ ಕೋಟೆಯೊಳಗೆ ಕುಳಿತುಕೊಂಡು (ಕೊತಕಾ. ೧). **ಕೊಟ್ಟವಳ$_1$**: ೧. "ಪೊಡವಿಯೊಳಡಂಗಾಯ್ತರಾಕುಱುಂಬರೆನಿಪ್ಪ ನುಡಿ ಕೊಟ್ಟವಳರ್ಗೆ" (ಶಬ್ದಮಂ. ೪೬); "ಅಡಂಗಾಯ್ತರ್ಕುಱುಂಬರೆನೆ ಕೊಟ್ಟವಳರು" (ಕಬ್ಬಕೈ. ೩೬). **ಕೊತ್ತವಾಲ**: ೨. ಪ್ರವಾಸಿ ಮಂದಿರದ ಮೇಲ್ವಿಚಾರಣೆ ಮಾಡುವ ಅಧಿಕಾರಿ: (*). **ಕೊತ್ವಾಲ್**: ೧. ಕೊತ್ವಾಲ್ ಚಾವಡಿ ಮೊದಲಾದ ಹಲವು ಚಾವಡಿಗಳು (ಮಹಾವಂ. I, ೪೨). **ಕೊತ್ವಾಲ**: ೧. ಕಿಲ್ಲೆದಾರರುಂ ಕೊತ್ವಾಲರುಂ (ಅರ್ಚಾವಿ. ೩೧–೩೯); ಅಧಿಕಾರಿಗಳು ಮಾಣಿಕಪರಿವಾರದಲ್ಲಿದ್ದವರನ್ನೆಲ್ಲಾ ಕೊತ್ವಾಲನ ಬಳಿಗೆ ಹಿಡಿದುಕೊಂಡು ಹೋದರು (ಬಂಕಿಮ. ೨೨೧); ನಮ್ಮನ್ನು ದಿಲ್ಲಿಗೆ ರವಾನೆಮಾಡಲು ಸುಲ್ತಾನನ ಸ್ವಂತ ಅಧಿಕಾರಿಯೂ ಕೊತ್ವಾಲನೂ ಅಲ್ಲಿಗೆ ಬಂದರು (ಪ್ರವಾಇ. II, ೭೪). **ಕೋಟ್ಟವಳ**: ೧. ಕುಱುಂಬ ಪದಕ್ಕೆ 'ಅಡಂಗಾಯ್ತ', 'ಕೋಟ್ಟವಳ' . . . ಇತ್ಯಾದಿಯಾಗಿ ಕೋಶಗಳಲ್ಲಿ ದೊರೆವ ಅರ್ಥಗಳು (ಕರ್ಣಾಟ. ೩೨).
[← ಪ್ರಾ. ಕೋಟ್ಟಪಾಲ < ಸಂ. ಕೋಷ್ಠಪಾಲ. / ಪಾರ. ಕೋತ್ವಾಲ್]

**ಕೊತುಂಬರಿ** 'ಕೊತ್ತುಂಬರಿ' ನೋ.

**ಕೊತ್ತಂಗೆಱೆ** (ನಾ). ಒಂದು ಊರಿನ ಹೆಸರು: ಸುತ್ತಿಱಿದು ಪರಿವ ಪರಿಕಾಲುತ್ತಮವೆನೆ ಬೆಳೆದ ಗಂಧಶಾಳಿ (ಯ) ತೆನೆಯಿಂದೆತ್ತಲು . . . ಕೊತ್ತಂಗೆಱೆಯಿಂದ್ರಪುರವನನುಕರಿಸಿತ್ತು (ಎಕ. XII, ಕುಣಿಗ. ೧–೨೧ ; 1157). [?]

**ಕೊತ್ತಂಡೆಕೆಱೆ** 'ಕೊತ್ತಂದೆಕೆಱೆ' ನೋ.

**ಕೊತ್ತಂದೆಕೆಱೆ**, ಕೊತ್ತಂಡೆಕೆಱೆ (ನಾ). ಒಂದು ಸ್ಥಳದ ಹೆಸರು: ಪಡುವ ಮಾಲೆ ತಾಯನ್ದೆ ಕೆಱೆಯೆ ವಡಗಾಯ್ನಡುಗಲ್ಲೆ ಕೊತ್ತನ್ದೆ ಕೆಱೆಯೆ (ಎಕ. X (S), ಚಿಕ್ಕಬ. ೧೦೬–೬೫ ; 850). **ಕೊತ್ತಂಡೆಕೆಱೆ** : ತಾಯಂದೆಕೆಱೆಯ ವಡಗಾಯ್ ನಡುಗಲ್ಲೆ ಕೊತ್ತಂಡೆಕೆಱೆಯ (ಮೈಅರಿ. ೧೯೧೪, ೧೩–೬೫ ; 806). [ಕೊತ್ತಂಡ$_0$ + ಕೆಱೆ]

**ಕೊತ್ತಂಬರಿ** 'ಕೊತ್ತುಂಬರಿ' ನೋ.

**ಕೊತ್ತಕೊಡರೆ** (ನಾ). ಒಂದು ಬಗೆಯ ತೆರಿಗೆ (?) : ಸುಂಕಸೋಡಿಗೆ ಕೊಡರೆ ಕೊತ್ತಕೊಡರೆ ಎತ್ತುದರೆ ಕೊತ್ತಮ × × ದರೆ ಸುಂಕ (ಎಕ. XIV, ಮಳವ. ೧೪೫–೩೫ ; ?). [?]

**ಕೊತ್ತಕ್ಕೆಯೂರ್** (ನಾ). ಒಂದು ಊರಿನ ಹೆಸರು: ಕೊತ್ತಕ್ಕೆಯೂರ ಪೂರ್ವದ ಬೆಸಮಕ್ಕಳಾವರುಂ (ಎಕ. III, ನಂಜನ. ೧೬೯–೧೦ ; 915). [? + ಊರ್]

**ಕೊತ್ತಣ** 'ಕೊತ್ತಳ$_1$' ನೋ.

**ಕೊತ್ತಣಿ** 'ಕೊತ್ತಟಿ' ನೋ.

**ಕೊತ್ತದಿಕಾವಲ** (ನಾ). ಒಂದು ಊರಿನ ಹೆಸರು : ಕುಪ್ಪೆ ಒಡೆಯ ಕೊಸಿಗ ಕೊತ್ತದಿ ಕಾವಲ ಎನಾದಿಪೆರುರಾದರು ಸಮಣರು ಮರುದೂರ ಮಾರಂದೆಯರ್ . . . ಎನೆತ್ತರು ಸಾಕ್ಷಿ (ಇಅ. XIV, ೨೩೨–೫೬ ; 9ನೆಯ ಶತ). [?]

**ಕೊತ್ತನಗೊರಜಿ** (ನಾ). ಒಂದು ಬಗೆಯ ಸೊಪ್ಪು : ಸೊಪ್ಪುಗಳು : ಅಗಸೆ . . . ತುಟ್ಟಿ, ಕೊತ್ತನ ಗೊರಜಿ, ಕೊತ್ತಂಬರಿ, ಪೂಂಡಿ (ನಮ್ಮಸು. ೨೩೬). [? + ಗೊರಜಿ (< ಗೊರಜಿ$_1$)]

**ಕೊತ್ತಮಂಗಲ** (ನಾ). ಒಂದು ಊರಿನ ಹೆಸರು : ಬಯಲ್ನಾಡಂ ಬನ್ದು ಕೊತ್ತಮಙ್ಗಲಮನಿಱಿದು ತುಱುವಂ ಕೊಂಡು ಪೋಗುತ್ತಿರೆ (ಎಕ. IV, ಹೆಗ್ಗಡ. ೧೦೩–೭ ; 910) ; ಕೊತ್ತಮಙ್ಗಲದ ದುಗ್ಗಯ್ಯ ಬರೆದ (ಎಕ. V, ಚನ್ನರಾ. ೬೩೨–೨೬ ; 971) ; ಕೊತ್ತಮಙ್ಗಲದ ಮಹಾಜನರ ಒಡಮ್‌ಬಡಿಕೆಯಿಂದ (ಮೈಅರಿ. ೧೯೨೩, ೩೭–೪; ?). [ಕೊತ್ತ$_0$ + ಮಂಗಲ]

**ಕೊತ್ತಮಲ್ಲಿ** (ನಾ). = ಕೊತ್ತುಂಬರಿ: ಕೊತ್ತಮಲ್ಲಿ, ಓಮ, ಸಾಸಿವೆ, ಸೈಂಧವಲವಣ . . . ಬಿಡುಲವಣ ಇಷ್ಟನ್ನೂ ಸಮಭಾಗ ಚೂರ್ಣಮಾಡಿ (ವಿವ್ಯೆವಿ. ೪೬). [ತಮಿ. ತೆಲು. ಕೊತ್ತಮಲ್ಲಿ]

**ಕೊತ್ತಮ್ಮ** (ನಾ). ಒಬ್ಬಾತನ ಹೆಸರು : ದ್ವಿವೇದಿ ಕೊತ್ತಮ್ಮಶರ್ಮಣೇ (ಮೈಅರಿ. ೧೯೩೬, ೫೩–೨೨ ; 550) ; ಕಾಳೆಗದೊಳ್ ಅಣ್ಣೆಗೆರೆಯಣ್ಣಗೆರೆ ಕೊತ್ತಮ್ಮಂಗೆ ಅಭ್ಯಂತರ ಸಿದ್ಧಿ ಮಂಗಳ ಶ್ರೀ (ಮೈಅರಿ. ೧೯೨೩, ೩–೪; 962). [ಕೊತ್ತ$_0$ + ಅಮ್ಮ$_1$]

**ಕೊತ್ತಲ** 'ಕೊತ್ತಳ$_1$' ನೋ.

**ಕೊತ್ತಲು** 'ಕೊತ್ತಳ$_1$' ನೋ.

**ಕೊತ್ತಲೆ** (ನಾ). ಕೊತ್ತಲ (?) : ಪುಂಮತ್ತೂರು ಯಲ್ಲೆಯಿಂದಂ ಮೂಡಲು ಅಗ್ರಹಾರಕ್ಕೆ ಹೋಗುವ ದಾರ್‍ರಿಯಿಂದ ಬಡಗಲು ಕೊತ್ತಲೆ ಮತ್ತಂ ಪೋಣೆಯಿಂದಂ ಮೂಡಲು ಪುಂಮ್ಮತ್ತೂರು ಕೆಱೆಕೋಡಿ ಅಡ್ಡ ಹಳ್ಳದಿಂ ಪಡವಲು (ಎಕ. XIV, ಚಾಮರಾ. ೨೬೮–೨೨ ; 1397). [?]

**ಕೊತ್ತವಾಲ** 'ಕೊತವಾಲ' ನೋ.

**ಕೊತ್ತಸಿ** (ನಾ). ಒಂದು ಬಗೆಯ ಕೈಂಕರ್ಯ, —ಸೇವೆ (?) : ಮಹಾದೇವರಿಗೆ ಅಂಕನಾಥವೆಸರಿಂ ಅಂಕವಲ ತಳವರ್ತಿ ಕೊತ್ತಸಿ ಕುಱುವನಿಗೆ ಈ ಹಳ್ಳಿ ಮಾಂಧಾಂತ ಚಕ್ರವರ್ತಿ ಬಿಟ್ಟಧರ್ಮ (ಎಇ. XXI, ೨-೫೫; 1260); ಮಲ್ಲೇಶ್ವರಕೆ ಕುಱುವನಿಗೆ ಸಂಗಮೇಶ್ವರಕೆ ಪಾರಣೆಯ ಜಂಗಮಾರಾಧನೆಗೆ ಕೊತ್ತಸಿಗೆ ಈ ಧರ್ಮಕ್ಕೆ ಇದು ವಿವರ (ಎಇ. XXI, ೨-೭೫; 1260). [?]

**ಕೊತ್ತಳ₁**, ಕೊತ್ತಣ, ಕೊತ್ತಲ, ಕೊತ್ತಲು (ನಾ). ಕೋಟೆಯ ಬುರುಜು; ಕೋಟೆಯ ಗೋಡೆಯ ಮೇಲೆ (ಅಡಗಿನಿಂತು ಶತ್ರುಗಳನ್ನು ಹೊಡೆಯುವುದಕ್ಕೆ) ಕಟ್ಟಿದ ಮರೆ: ಸುತ್ತುಂ ಪರಿವಡೆಮಿಡುದು ಪುರಜನಮಾಳ್ವರಿಗಳ ಕೊತ್ತಳದ ಮದಿಲ ಮಾಡದ ಮೇಲಂ (ವರ್ಧಪು. ೫-೫೨); ಗೊಂಟುಗೊಂಟನೊಳ್ ಬಳಸಿದ ಕೊತ್ತಳಂ ಸೊಗಯಿಪಾಳ್ವೇರಿ (ಗಿರಿಕ. ೨-೭೯); ಕೊತ್ತಳವೊ ಗಗನದೊಳು . . . ಖಚರರು ಸಾರಲೆಂದಿಟ್ಟ ಭದ್ರಂಗಳೋ (ಹಚಕಾ. ೧-೩೭); ಥರಥರದ ಕೊತ್ತಳದ ಕಾಹಿನ ಸುರಭಟರು ಸುಖನಿದ್ರೆಗೈಯ್ಯಲಿ (ಕುವ್ಯಾ ಅ. ೧೨-೫೬); ಈ ಕೋಟೆಗೆ ಇನ್ನೂರು ಮೊಳಕ್ಕೊಂದರಂತೆ ಕೊತ್ತಳಗಳುಂಟು (ಮುಂಬಯಿ. ೪-೧೪೨). **ಕೊತ್ತಣ** : ಅಲ್ಲಿಗಲ್ಲಿಗೆ ಹುಲಿಮುಖವಂಬುಖಂಡಿಗಳೆಲ್ಲೆಡೆಯೊಳು ಕೊತ್ತಣಗಳು (ಅಂಜಚ. ३-೧೬); ಅಗಳುಗಳಾಳುವೇರಿಗಳು ಡೆಂಕಣಿ ಅಟ್ಟಳೆ ಕೊತ್ತಣ [ಪಾಠಾಂ. ಳ] ಗಳೊಡ್ಡುಗಳೊಡ್ಡುಗಳೊಳು ಕೋಂಟೆಯೆಂದೆನಿಸಿಕೊಂಡಿಹ ಕೋಂಟೆಯ ನೇನ ಬಣ್ಣಿಸಲ್ (ಎಕ. XI, ಚಿತ್ರದು. ೨-೧೫; 1355). **ಕೊತ್ತಲ** : ದಿಗ್ಗಜದಂತೆ ನಿಂತ ಕೊತ್ತಲಗಳೊಪ್ಪಿದವು (ಮೋಹತ. ೨೦-೬); ಪಿರಿದು ವಜ್ರದ ಕರಂಡಗಳೆನೆ ಕೊತ್ತಲ ಮೆಱೆದುವು ಚೌದೆಸೆಯೊಳಗೆ (ಕಂಸವಿ. ೬-೬); ಫಿರಂಗಿಗಳನ್ನು ಕೊತ್ತಲಗಳಲ್ಲಿ ಇರಿಸಿದರು (ಮಹಾವಂ. I, ೮೦); ಗೋಪುರ, ಕೊತ್ತಲ ಮುಂತಾದವುಗಳ ನೆಲಸು ಬಿಡಗುಗಳನ್ನು ನೋಡಬೇಕು (ಪಂಯಾತ್ರ. ೬೯). **ಕೊತ್ತಲು** : ಗಗನವ ಸೋಂಕುವ ಕೋಟೆಕೊತ್ತಲುಗಳು (ಸೌಗಂಪ. ೧-೭).

[ದೇ. ‖ ತಮಿ. ಮಲ. ಕೊತ್ತಳ; ತುಳು. ಕೊತ್ತಳ, ಕೊತ್ತಲ; ತೆಲು. ಕೊತ್ತಳ, ಕೊತ್ತಡ]

**ಕೊತ್ತಳ₂** 'ಕೊತ್ತಱು' ನೋ.

**ಕೊತ್ತಳದುಱುಬು** (ನಾ). ಒಂದು ಬಗೆಯ ತುರುಬು : ಕೋಲಾರಿ ದುಱುಬು ಕೊಂಕದ ಕೊನೆದುಱುಬಿನ ಮಲ್ಲಿದುಱುಬು ಸುರತದಲಿ ಸಿಲ್ಲದದುಱುಬು ಕೊತ್ತಳದುಱುಬಿನ ಚೆಲ್ವ ಲಲಿತಾಂಗಿಯರೊಪ್ಪುತಿಹರು (ಅಬ್ಬಲೂ. ३-೧೦೮).

[ಕೊತ್ತಳ₁ + ತುಱುಬು₂ (< ತುಱುಂಬು₂)]

**ಕೊತ್ತಳಿ** 'ಕೊತ್ತಱು' ನೋ.

**ಕೊತ್ತಳಿಕೆ**, ಕೊತ್ತಳಿಗೆ (ನಾ). (ಕರಾ) ಗರಿಗಳನ್ನೆಲ್ಲ ಸವರಿ ಉಳಿದ ತೆಂಗಿನ ಅಥವಾ ಅಡಕೆಯ ಸೋಗೆಯ ದಿಂಡು; ಗೊದಮಟ್ಟೆ; ಹೆಡೆಮಟ್ಟೆ : ಬೇಸರ ಬಂದರೆ ತೆಂಗಿನ ಕೊತ್ತಳಿಕೆಯನ್ನು ವಾಹನವಾಗಿ ಬಳಸಿ ಆಡುತ್ತಾರೆ (ಜಾರುದಾ. ೪೧). **ಕೊತ್ತಳಿಗೆ** : ಗುಡಾಣದ ಒಲೆಗೆ . . . ಸೋಗೆಯ ದಿಂಡಿನ ಒಣಗಿದ ಕೊತ್ತಳಿಗೆಗಳನ್ನೂ ತುರುಕಿದರು (ಬಾಳಿಗಿ. ೧೪೭). [← ತುಳು. ಕೊತ್ತಳಿಗೆ]

**ಕೊತ್ತಳಿಗೆ** 'ಕೊತ್ತಳಿಕೆ' ನೋ.

**ಕೊತ್ತಳಿವ** (ನಾ). ಒಬ್ಬಾತನ ಹೆಸರು (?): ವನಜೋದ್ಭವ ವಂಶಜರ್ಕ್ಕಳೊಳ್ ಮನುಚರಿತ [ಪ್ರತೀ] ಕರೆನೆ ಕೊತ್ತಳಿವನ್ನೆಗಱ್ದೊಳ್ಗುಲಕ್ಕೆ ವಿಕ್ಕನುಪವದಾನಿ (ಎಇ. XIX, ೨೨೪-೬; 1033). [?]

**ಕೊತ್ತಱು**, ಕೊತ್ತಣಿ, ಕೊತ್ತಳ₂, ಕೊತ್ತಳಿ, ಕೊತ್ಥಳಿ, ಕೊಳ್ತಳಿ, ಕೊಟ್ಟಲೆ, ಕೊಟ್ಟಱು (ನಾ). ೧. ಕಾಗೆಗಳ ಗುಂಪು, —ಸಮೂಹ : "ಕೊತ್ತಱುಯೆಂದು ಕಾಗೆಯ ಮೊತ್ತಮುಂ ಬೆಸದವರ ನೆರವಿಯುಮುಕ್ಕುಂ" (ಶಮದ. ಪರಿ. ೧); "ಕೊತ್ತಱುಯೆನಲ್ಕೆ ಕಾಕ ಸಮೂಹಂ" (ಕವಿಕಂ. ೬೮); ಕೋಗಿಲೆವಱು ಮಾಮರದೊಳ್ ಕಾಗೆಯ ಕೊತ್ತ[ಪಾಠಾಂ. ಟ್ಟ]ಱುಯೊಳೆಟ್ಟುಪೋಗಲುಮಿರಲುಂ . . . ಏಗೆಯ್ಯಲುಮಾರ್ತರ್ದಿಲ್ಲ ಬನದೊಳ್ ಪೆಳಱುಂ (ಶಬ್ದಾನು. ೫೬ ಪ್ರಯೋ.); ಕಳಕಂಠಂ ಕೊತ್ತಱುಯೆಡೆಯೊಳಿರ್ದೊಡಂ ಕಾಗೆಯಂತಿರೇಂ ಕೂಗುಗುಮೇ (ನೀತಿಮಂ. I, ३೭೧). ೨. ಬೇರೆಬೇರೆ ಕಸಬಿನವರ ಸಂಘ; ಉದ್ಯೋಗಸ್ಥರ ಸಮೂಹ : "ಕೊತ್ತಱುಗಳೆನಲ್ ಗುಂಕಂ ಮೊತ್ತಗಳಲ್ಲಿಯೆ" (ಕರ್ಣಾನಿ. ೭೭); ಚಲಭೂಷಣನ್ ಎಟ್ಟು ಪರಾಕ್ರಮನ ಪುದಿದ ಕಲ್ಲು ಕೊತ್ತಱುಸುದ್ದಂ ಪಡೆಯರ್ಮಂ ಮಂಗಳಂ (ಎಕ. X, ಶಿಡ್ಲಘ. ೧೨-೪; 800); ಅತನನಾಳಿಸಿದರಸರುಂ ನಾಡು ಮೂರು ಕೊತ್ತಱುಯುಮಯ್ದುಂ (ಎಕ. XII. ಶಿರಾ. ३೮-೫೫; 878); ನಡೆಪಿದ ನನುವರದೊಳ್ ಕೈಮಡಗದೆ ತಳ್ತಿಱಿದು ಪೊಗೞ ಕೊತ್ತಱು ದಿವ್ಯಂ ಬಿಡಿದು ಕಱುವಂತೆ ಕಱುದನ ಪಡೆದ ಯಶಂ ಗೆಲ್ಲದಿನ್ನುಮುಗ್ಗಳಿಪಲ್ತೇ (ಎಕ. VIII, ಸೊರಬ. ೧೬-೮; 1075). **ಕೊತ್ತಣಿ** : ೧. "ಕೊತ್ತಣಿಯೆಂದು ಕಾಗೆಗಳ ಮೊತ್ತಂ" (ಶಮದ. ಪರಿ. ೨). **ಕೊತ್ತಳ₂** : ೧. "ಕಾಗೆಪಿಂಡಿಗೆ ಕೊತ್ತಳಮೆನಿಕ್ಕು" (ಕಶಿರ. ೧೨೧); ಕಾಗೆಗಳ ಕೊತ್ತಳಂ ಕುಕ್ಕುವೆಳೆಕುಕಿಲಂತೆ (ಗೂಲ್ಲೊಥಾ. ೯-೨೫೨). **ಕೊತ್ತಳಿ** : ೧. "ಕೊತ್ತಳಿಯೆಂದು ಕಾಕಸಮೂಹಂ" (ಕಶಸಾ. ೬-೧೧೨); ಅಣ್ಣೆವಾಲರಸಂಚಿಯುಂಬಂತೆ ಕೊತ್ತಳಿಗಳುಣ್ಣ ಬಲ್ಲುವೆ (ರಾಘಚ. ೧-೧೯); ಕೂಳಂಗಂಡ ಕೊತ್ತಳಿಯಂತೆ ಕಳಕಳಂಗೆಯ್ದು (ವೃಷವಿ. ३೫-೫೫ ವ); ಕಾಗೆಯಂ ಕೆಡಹೆ ಕೊತ್ತಳಿಯೆ ಒಂದಾಗಿ ಕಾಕಾ ಎಂದು ಹಾರಾಡುವಂತೆ (ಹಬ್ಬೆರ. ೧३-೧೯). ೨. ಕೊತ್ತಳಿಯುಂ ಸ್ಥಾನಗುರುಗಳುಂ ಮಾಡಿದುದಂ (ಸೌಇಇ. IX-i, ೧೧೭-೪೦; 1055); ಗಾಣದ ಕೊತ್ತಳಿಗಳು. . .ಎಣ್ಣೆಯುಂ ಬಿಟ್ಟ ದತ್ತಿ (ಸೌಇಇ. IX-i, ೧३३-३೮; 1068); ಈ ಧರ್ಮಕ್ಕೆ ಬಂಟ ಸಾಸಿರ್ವರ ಕೊತ್ತಳಿಯೊಡೆಯರಾಗಿ ಪೂಜೆಪುನಸ್ಕಾರಮಂ ಮಾಡುವರು (ಕಇ. II, ೨೨೦-೧೮; 1131); ತೆಲ್ಲಿಗರ ಕೊತ್ತಳಿಗಳು ಗಾಣಕ್ಕೆ ಹಳಿಗೆ ಪೊಂದುಬಿಟ್ಟರು (ಕೊಲ್ಹಾಶಾ. ೧೪-೫३; 1176). **ಕೊತ್ಥಳಿ** : ೨. ಇಂತಿ ನಿಕುಮಂ ನಡಸಲೊಲ್ಲದವರ್ ಕೊತ್ಥಳಿಗೆಱಗೆ (ಸೌಇಇ. XX, ೪೫-೪೪; 1071). **ಕೊಳ್ತಳಿ** : ೧. ಒಗರದ ರಾಶಿಯಂ ಕಂಡ ಕೊಳ್ತಳಿಯ ಕುತ್ತುಱು (ಮದೇಪು. ೧-೭). **ಕೊಟ್ಟಲೆ** : ೨. ಕರ್ಗ್ಗಲ್ಲಾಜದೆ ಅನೆಗಲ್ಲ ಕಮ್ಮಾರ್ ಕೊಟ್ಟಲೆಯ ಮುದುವುಣಸೆ ಮಾಳ್ದಯುಳ್ (ಎಕ. XVI, ಗುಬ್ಬಿ. ೭೫-೫३; 773). **ಕೊಟ್ಟಱು** : ೧. ಕಾಗೆಯ ಕೊಟ್ಟಱು [ಪಾಠಾಂ. ಕೊತ್ತಱು] (ಶಬ್ದಾನು. ೬೬ ಪ್ರಯೋ.). 'ಕೊತ್ತು₂' ಪರಾ.

[ದೇ. ‖ ತಮಿ. ಕೊತ್ತಳ]

**ಕೊತ್ತಿ₁** (ನಾ). ಬೆಕ್ಕು; ಮಾರ್ಜಾಲ : ಕಾಯಿಮಾರಿ ಕೊತ್ತಿಕೊಂಬ ಪಾಮರನಂತೆ (ವಾದಿಕೀ. I, ೧३೭-೪); ಕೊತ್ತಿ ಮಿಾಸಲಹಾಲ ಮತ್ತೆ ತಾ ಬಿಡುವುದೇ (ಸರ್ವಜ್ಞ. ೮೪೦); ಕೊತ್ತಿಗೇತಕೆ ಮನೆಯ ಹಿರಿತನ (ಜ್ಞಾನಸಿಂ. ೧-೪೦); ಕಿತ್ತಿಲಿಯ ನಱುಯುಟ್ಟುವ . . . ಕೊತ್ತಿಗೆ ತಡೆಯ ಹಡಲಿಗೆಯೇಂ ಬಲ್ವೆಟ್ಟೆ? (ರಾಮಾಶ್ವ. ೯೭-೨೯); ಅತ್ತೆಯ ಮೇಲಿನ ಕೋಪ ಕೊತ್ತಿಯ ಮೇಲೆ (ಗಾದೆ).

[ದೇ. ‖ ಮಲ. ಕೊಜ್ಜು, ಕುಱು; ತುಳು. ಕುತ್ತುರಿ]

**ಕೊತ್ತಿ₂** (ನಾ). ಬಂದೂಕಿನ ಕುದುರೆ : ಇನ್ನೇನು ಕೊತ್ತಿಯನ್ನು ಎಳೆದು ಗುಂಡುಹಾರಿಸಬೇಕು (ಹುಲಿಹಾ. ೪೦). [?]

**ಕೊತ್ತಿಗಡ್ಡೆ**, ಕೊತ್ತಿಗೆಂಡೆ, ಕೊತ್ತಿಗೆಡ್ಡೆ, ಕೊತ್ತಿಯಗೆಡ್ಡೆ (ನಾ). ಒಂದು ಬಗೆಯ ಗೆಡ್ಡೆ: ಕಸೇರುಕ,ಕೊತ್ತಿಗಡ್ಡೆ, ಕಲೋಡ್ಕೆ ಇವು ರುಕ್ಷ ಸ್ತಂಬಕ (ಅಷ್ಟಾಂಗ. ೧೩೮–೪೦). **ಕೊತ್ತಿಗೆಂಡೆ**: "ಷಣ್ಣಾನಿಶೀ ಕೊತ್ತಿಗೆಂಡೆ,ಆದಿತ್ಯಭಕ್ತ . . . ಕಾಸಿ ಹದದಲ್ಲಿಳುಹಿ (ಸಕವೈ. ೩೮೨). **ಕೊತ್ತಿಗೆಡ್ಡೆ**: "ಕಶೇರುಕಃ ಅನೇರುಕಃ:— ಕೊತ್ತಿಗೆಡ್ಡೆ" (ಒಷಧಿ. ೫); ಕೊತ್ತಿಗೆಡ್ಡೆ, ನೆಗ್ಗಿಲಬೇರು . . . ಹಾಕಿ ಕಷಾಯವೆತ್ತಿ (ವೈದ್ಯಸಾ. I,೪೬೬). **ಕೊತ್ತಿಯಗೆಡ್ಡೆ**: "ಬಕಪುಷ್ಪ ಕೊತ್ತಿಯಗೆಡ್ಡೆ (ಒಷಧಿ. ೧೦೬).
[ಕೊತ್ತಿ$_0$ + ಗಡ್ಡೆ]

**ಕೊತ್ತಿಗೆಂಡೆ** 'ಕೊತ್ತಿಗಡ್ಡೆ' ನೋ.

**ಕೊತ್ತಿಗೆಡ್ಡೆ** 'ಕೊತ್ತಿಗಡ್ಡೆ' ನೋ.

**ಕೊತ್ತಿಬೀಜ** (ನಾ). ಒಂದು ಜಾತಿಯ ಸಸ್ಯ: ಕೊತ್ತಿಬೀಜ, ಅಶ್ರು ಬೀಜ, ಕಲ್ಮುತ್ತುಬೀಜ (ಮೈಡಿಗಿ. ೨೩–೪೩೧). [?]

**ಕೊತ್ತಿಯಗೆಡ್ಡೆ** 'ಕೊತ್ತಿಗಡ್ಡೆ' ನೋ.

**ಕೊತ್ತಿಯಮ್ಮೆ** (?). (?) : ಮಾಲೆಯುವರು ಐದಕ್ಕಂ ಗದ್ಯಾಣಂ ಇಪ್ಪತ್ತು ದವಸಿಗರು ಆಳು ಹತ್ತಕ್ಕಂ ಗದ್ಯಾಣಂ ನಾಲ್ವತ್ತು ಕೊತ್ತಿಯಂಮೇಗೆ ಗದ್ಯಾಣಂ ಹಣವೆರಡು (ಎಕ. III, ತಿರುಮ. ೯೭–೮೫; 1276). [?]

**ಕೊತ್ತು**$_1$ (ಕ್ರಿ). ೧. ಕುಕ್ಕು; ಅಗೆ; ಅಗತೆಮಾಡು. ೨. ಕೊಚ್ಚು; ಚೂರುಮಾಡು: ಅಣಿದುದು ಕೊತ್ತಿನೂಂಕಿದುದು ಪೊಕ್ಕೊಡ ಸಿಕ್ಕಿದುದು . . . ಅದೊಂದು ಮನ್ನಣೆವಡೆದಾನೆ (ಕಬ್ಬಿಗಕಾ. ೨೯೪); ಹೆಂಗಳನು ಮುದುಕರನು ಹೊಯ್ಯುವರು ಕೊತ್ತುವರು (ದ್ರಾಕ್ಷಿದಾ. ೧೨). 'ಕುತ್ತು$_1$' ಪರಾ.
[ದೇ. ‖ ತಮಿ. ಮಲ. ಕೊತ್ತು]

**ಕೊತ್ತು**$_2$ (ನಾ). ಗೊಂಚಲು; ಗೊನೆ: (*).
[ದೇ. ‖ ತಮಿ. ಮಲ. ಕೊತ್ತು; ತೆಲು. ಗುತ್ತಿ, ಗೊತ್ತು]

**ಕೊತ್ತು**$_3$ (ನಾ). (?) : ಸಡುದರುಸನವೊಳಗಾದವರುಂ × × × ಕೊತ್ತುಯೆತ್ತುತೊತ್ತು ಕುದುರೆ ಕೊಂಡಡೂ ಮಾಜಿದಡೂ ಸರ್ವಮಾನ್ಯ (ಎಕ. X, ಬೌರಿಂಗ್. ೬೨–೧೮; 1430). [?]

**ಕೊತ್ತುಂಬರಿ**,ಕೊತಂಬರಿ, ಕೊತಮರಿ,ಕೊತುಂಬರಿ, ಕೊತ್ತಂಬರಿ, ಕೊತ್ತುಂಬುರಿ, ಕೊತ್ತುಮರಿ, ಕೊತ್ತುಮಿರಿ, ಕೋತಂಬರಿ (ನಾ). ಸಂಭಾರದ ಬೀಜ; ಧನಿಯ; ಹವೀಜ: "ಕೊತ್ತುಂಬರಿ ಕುಸ್ತುಂಭರ" (ಕವಿಕಂ. ೨೬೧); ರಾಜಾನ್ನದಕ್ಕಿ ಜೀರಿಗೆ ಕೊತ್ತುಂಬರಿ ಶುಂಠಿ ಲಂಬಿವೊಡಗೂಡಿರೆ ಕಾಸಿದ ಗಂಜಿ ಕೆಡಿಕುಮೆತ್ತಿದ ತೃಷೆಯಂ (ಕಲ್ಯಾಕಾ. ೩–೨೫); ಅಂಬೆ ಹಳದಿ ಕಾರ್ಗೆಣಸು ನೀರುಳ್ಳಿ ಕೊತ್ತುಂಬರಿ ಕರಿಬೇವು ಸಹಿತ (ಮೋಹತ. ೪–೬೦); ಕೊತ್ತುಂಬರಿ ಮೆಣಸು ಜೀರಿಗೆಯ ತರಿತರಿಸಿ (ಸಿದ್ಧಕಾ. ೧೦–೬). **ಕೊತಂಬರಿ**: (*). **ಕೊತಮರಿ**: ಕೊತ ಮರಿ ಸೊಪ್ಪು, ಊವಾ ಬೇಕೇನ್ರವ್ವಾ (ಏಕಾಂಗಿ. ೧೯). **ಕೊತುಂಬರಿ**: "ಗುಡಿಕ ಕೊತುಂಬರಿ" (ಅಕಾನಿ. ೯–೨೩). **ಕೊತ್ತಂಬರಿ**: ಕೋಸಂಬರಿಗೆ ಕೊತ್ತಂಬರಿ, ಹಸೀಮೆಣಸಿನಕಾಯಿ ಇದ್ದರೆ ಚೆನ್ನು (ರೂಢಿ). **ಕೊತ್ತುಂಬುರಿ**: ಮೆಣಸುಳ್ಳಿ ಕೊತ್ತುಂಬುರಿ [ಪಾಠಾಂ. ಬರಿ]ಯನದಜೊಳಗೆ ಹಾಕಿ (ಸೂಪಶಾ. ೧–೬೮). **ಕೊತ್ತುಮರಿ**: "ಕುಸ್ತುಂಬರಿ – ಕೊತ್ತುಮರಿ" (ಕಾಶಕ್ಯ. ೩೩). **ಕೊತ್ತುಮಿರಿ**: (*). **ಕೋತಂಬರಿ**: ಹೀರಿ, ಬೆಂಡಿ, ಚವಳಿ, ಸವತಿ, ಕೋತಂಬರಿ, ಸಾಸಿವೆ – ಮುಂತಾದತೋಟಗಳಲ್ಲಿ ಬೆಳೆಯುವ ಪಲ್ಲೆ ಕಾಯಿಗಳು (ಕಭಾಗೆ. ೪೫೬).

ಕೊತ್ತುಂಬರಿಬೀಜ=ಧನಿಯದ ಕಾಳು: ಕೊತ್ತುಂಬರಿಬೀಜ, ಶುಂಠಿ . . . ಇವಂ ಸಮಾನಂಗೊಂಡು (ವಿವೈವಿ. ೧೫). **ಕೊತ್ತುಂಬರಿಸೊಪ್ಪು**= ಸಂಭಾರದ ಸೊಪ್ಪು: ಕೊತ್ತುಂಬರಿಸೊಪ್ಪು, ಕಹಿ, ಮಧುರ, ಮೂತ್ರರೇಚಕ (ಅಷ್ಟಾಂಗ. ೧೪೨–೧೦೭ ಟೀಕು).
[< ಸಂ. ಕುಸ್ತುಂಬರೀ, ಕುಸ್ತುಂಬುರು]

**ಕೊತ್ತುಂಬುರಿ** 'ಕೊತ್ತುಂಬರಿ' ನೋ.

**ಕೊತ್ತುಮರಿ** 'ಕೊತ್ತುಂಬರಿ' ನೋ.

**ಕೊತ್ತುಮಿರಿ** 'ಕೊತ್ತುಂಬರಿ' ನೋ.

**ಕೊತ್ತುರು** (ನಾ). ಕುತ್ತುರು; ಪೊದೆ: ಕಾರಿಯ ಕೊತ್ತುರ ಹೊರಿಯಣ ಕವಿಲೆಯ ಕಲ್ (ಶಾಸಪ. ೭೫). [< ಕುತ್ತುಜ್]

**ಕೊತ್ಥಳಿ** 'ಕೊತ್ತಟಿ' ನೋ.

**ಕೊತ್ವಾಲ್** 'ಕೊತವಾಲ' ನೋ.

**ಕೊತ್ವಾಲ** 'ಕೊತವಾಲ' ನೋ.

**ಕೊತ್ವಾಲಿ** (ನಾ). ಕೊತವಾಲನ ಕಚೇರಿ, —ಚಾವಡಿ: ಕೊತ್ವಾಲಿಯನ್ನು ಸೇರುತ್ತಲೇ ಆಂಗ್ಲೇಯ ಸೈನ್ಯ ಮೊಖಾಬಿಲೆಯಾಯಿತು (ಝಾರಾಣಿ. ೪೦೭). [← ಮರಾ. ಕೋತ್‌ವಾಲೀ]

**ಕೊದಂಟಿ**, ಕೋದಂಟಿ (ನಾ). ೧. (ಕರಾ) ದನಕರುಗಳು ಓಡಿ ಹೋಗದಂತೆ ಮುಂಗಾಲುಗಳ ನಡುವೆ ನೇತುಬೀಳುವಂತೆ ಕೊರಳಿಗೆ ಕಟ್ಟಿದ ಮರದ ತುಂಡು; ಕೊಂಡಿಗೆ; ಗುದ್ದಿಗೆ: ಸುಮ್ಮನೆ ಸಂಸಾರವೆಂಬೊಂದು ಕೊದಂಟಿ ಕೊರಳಿಗೆ ಕಟ್ಟಿಕೊಂಡರೆ ಸ್ವಾತಂತ್ರ್ಯಕ್ಕೊಂದು ತಡೆ (ಸರಸ.೯೨); ಕಳ್ಳಎತ್ತಿಗೆ ಕೊದಂಟಿ, ಹಾರುವ ಹುಡುಗರಿಗೊಂದು ಹೆಂಡತಿ ಕಟ್ಟಿದರೆ ಸರಿಹೋಗುತ್ತದೆ (ತ್ಯಾಗಮ. ೬). **ಕೋದಂಟಿ**: ೨. ಕೊಡತಿ: ಮೂಡೆಯನ್ನು ಕಟ್ಟುವಾಗ ಒಂದು ಮುಡಿ ಕಟ್ಟುವ ಕೋದಂಟಿಯೂ ಬಿದ್ದಿತ್ತು (ಪರಾವ. ೮೩).
[← ತುಳು. ಕುದಂಟ, ಕೊದಂಟ]

**ಕೊದಮೂಕು** (ನಾ). ಒಂದು ಊರಿನ ಹೆಸರು: ಕೊದಮೂಕು ನಾಮಗ್ರಾಮಂ (ಇಅ. XVIII, ೩೬೭–೧೪; 8ನೆಯ ಶತ). [?]

**ಕೊದಲು**$_1$, ಕೊದಳ್$_1$ (ಕ್ರಿ). ಮಾತನಾಡುವಾಗ ತಡವರಿಸು; ಉಗ್ಗು; ತೊದಲು: (*). **ಕೊದಳ್**$_1$: ಅನುವದಿಸಿದಪುದು ನುಡಿನುಡಿದನಿತುಮನೆನೆ ಕೊದಳೆ [ಪಾಠಾಂ. ತೊದಳ] ತೊದಳ ದೆಸೆಯಿಲ್ಲೆನೆ ಮಾತಿನ ಪಸುಗೆ ಪಸುಗೆವಡೆದತ್ತೆನೆ ನುಡಿದಂ (ಆದಿಪು. ೨–೧೦). 'ತೊದಲ್$_1$' ಪರಾ.
[ದೇ. ‖ ತಮಿ. ಕುದಲೈ; ತುಳು. ಕೊದ್ದೆ, ಗೊದ್ದೆ; ತೆಲು. ಕೊತುಕು, ಕೊದುಕು]

**ಕೊದಲು**$_2$, ಕೊದಳ್$_2$ (ನಾ). ೧. ಮಾತನಾಡುವಾಗ ತಡವರಿಸುವಿಕೆ; ತೊದಲುವಿಕೆ; ತೊದಲುಮಾತು: (*). **ಕೊದಳ್**$_2$: ೧. ಕರೆವಕೊದಳ್ಗಳುಂ ಪರಿವ ಕಣ್ಗಳ ಕೆಂಪು ಪಯೋಲವಂ ಕರಂಬೆರಸಿದ ಮೆಯ್ಯುಗಳುಂ . . . ಮನಮುನಿಬ್ಬುಳಿಗೊಂಡಿರೆ (ಸೂಕ್ತಿಸು. ೧೨–೮೮). ೨. ಮೃದುವಾದ ಮಾತು; ಮಂಜುಳವಾದ ನುಡಿ: ಕೊಂಕುನಯಂಗಮಕಂಗಳಿಂ ಕೊದ[ಕೊ]ೞ[ಪಾಠಾಂ. ತೊೞ]ದಳೆಟಿದಿಕ್ಕಿದಂತೆ (ಪಂಪಭಾ. ೭–೮೮); ರಸಮೊಸರ್ವನ್ನೆಗಂ ಮಿಱುಗು ಕಿತ್ತು ಪೊಗರ್ ಗಮಕಂ ಕೊದಳ್ ಪೊದಟ್ಟಿಸಿವನಯಂ ಬೆಡಂಗು . . . ಏನೆಸೆದುವೊ ಪೇೞಿಮೆಂಬಿನೆಗಮಿಂಗೊರಲೊಳ್ಕೂಡಿ ಪಾಡಿಯಾಡಿ (ಅಜಿಪು. ೫–೪೦).
[< ಕೊದಲು$_1$]

**ಕೊದಳ್**$_1$ 'ಕೊದಲು$_1$' ನೋ.

**ಕೊದಳ್**$_2$ 'ಕೊದಲು$_2$' ನೋ.

**ಕೊದಳಿ** (ನಾ). ಎಳ್ಳು ತೆಗೆದ ಮೇಲೆ ಉಳಿಯುವ ಎಳ್ಳು ಗಿಡದ ಸಿಪ್ಪೆ, —ಬುರುಡೆ: ಬೆಳೆದೆಳ್ಳಂ ಬಿರ್ಚಿರಾಶಿಸ್ಥಿತಿಯನಿರಿಸಿ ತದ್ರಾಶಿಯಂ ಮತ್ತಮೋರಂತಳವಟ್ಟಿರ್ದಂದದಿಂದಾ ಕೊದಳಿಯ ಮಣಿಯೊಳ್ ತೀವುತಿರ್ಪಾಗಳ್ (ಸುಕುಮಾ. ೫-೩೪); ರಸಂ ಬಂದೊಡೆ ತಂಬುಲಮಂ ಎಳ್ ಬಂದೊಡೆ ಕೊದಳಿಯಂ . . . ಬಿಡುವಂತೆ (ಧರ್ಮಾಮೃ. ೧೪-೧೩೪); ನೋಟಿಸ್ಪೊಡೆಳ್ಳಂ ಕೊದಳಿವೆರಸು ತಿಂಬಂತೆ (ಶಮದ. ನ. ೭೯ ಪ್ರಯೋ). [?]

**ಕೊದಿಲು,** ಕೊದ್ದೆಲ್ (ನಾ). (ಕರಾ) ಅನ್ನಕ್ಕೆ ಬೆರಸಿ ಉಣ್ಣುವ ಹುಳಿ ಅಥವಾ ಸಂಬಾರು: ಬಟ್ಟಲಲ್ಲಿ ಅನ್ನ . . . ಹುಳಿ, ಸಾಸಿವೆ, ಕೊದಿಲು, ನಾಲ್ಕಾರು ಬಗೆಯ ಪಾಯಸ (ಈಕಥೆ. ೧೨೪); ತಂಬುಳಿ, ತುಪ್ಪದನ್ನ, ತೋವೆ, ಪಲ್ಯ, ಸಾರು ಇವನ್ನು ಉಂಡನಂತರ ಕೊದಿಲನ್ನು ಬಳಸುವುದು ಹವಿಕರ ರೂಢಿ (ಸಂಶೋಧ. ೧೮೦). **ಕೊದ್ದೆಲ್:** ಕೊದ್ದೆಲ್ ತಿನ್ನುವ ಚರಣರಿಗೇನು? ಒಂದು ಸಾರಿ ತಿಂದರೆ ಮತ್ತೆ ಕದ್ದು ತಿಂದಾರು (ಮೊಮಗು. ೩೯). [← ತುಳು. ಕೊದ್ದೆಲ್]

**ಕೊದುಲು** (ನಾ). ಒಂದು ಬಗೆಯ ಭೂಮಿ (?): ತೋಟ ತುಡಿಕೆ ಕುಮ್ಮರಿ ಕೊದುಲು ಕಾಡಾರಂಭ ಸರಹು ಮನೆ ಹೊಲ ಯಿಂತೀ ಚತುಸ್ಸೀಮೆವೊಳಗಣ (ಎಕ. VIII, ತೀರ್ಥಹ. ೧೪೬-೧೯; 1397). [?]

**ಕೊದೆ$_1$** (ನಾ). ೧. (ಕರಾ) ಕವೆ; ಕವಲು: ಮದುವೆಯ ಚಪ್ಪರಕ್ಕೊಂದು ನಾಲ್ಕು ಕೊದೆಯಿದ್ದ ಕಂಬ ತಂದಿರಿಸಲಾಯಿತು (ರೂಢಿ). ೨. ಮರದ ದೊಡ್ಡ ಕೊರಡು, —ದಿಮ್ಮಿ. [ದೇ. ॥ ತಮಿ. ಕುದೈ; ಮಲ. ಕದ]

**ಕೊದೆ$_2$** (ನಾ). ಬೆದೆ; ನಸೆ: ಕೊದೆ ಹೆಚ್ಚಿ ಕೊರಮನನ್ನು ತಬ್ಬಿದಳು (ಗಾದೆ). [?]

**ಕೊದ್ದಸಿ** (ನಾ). ಒಂದು ಊರಿನ ಹೆಸರು: ಕೊದ್ದಸೀನಾಮ ಗ್ರಾಮೋ ದತ್ತಃ (ಇಆ. XVI, ೨೪-೫; 1009). [?]

**ಕೊದ್ದು** (ಕ್ರಿ). ಅಮುಕು; ಒತ್ತಿಹಿಡಿ; ಗಟ್ಟಿಯಾಗಿ ಹಿಡಿ. 'ಕೈಕೊದ್ದು' ಪರಾ. [?]

**ಕೊದ್ದೆಲ್** 'ಕೊದಿಲು' ನೋ.

**ಕೊನಕಾಱ** 'ಕೊನೆಕಾಱ' ನೋ.

**ಕೊನಬ** (ನಾ). ೧. ಬೆಡಗುಗಾರ; ಒನಪುಗಾರ; ಸೊಗಸುಗಾರ. ೨. ಲಂಡ; ಪೋಕರಿ: ಉಬ್ಬಿ ಕೊಬ್ಬಿ ಬೆಳೆದು ಕೂಲಿಗರ ಕೊನಬರೊಡನನವರತ ಬಿಡದಾಡಿದೀ ಲಂಡತನವ ಬಿಡದಾದೆಯಲ್ಲಾಯೆಂದು (ಸಮ್ಯಕೌ. ೧೨-೧೦). [ಕೊನಬು + -ಅ$_7$]

**ಕೊನಬು,** ಕೊಣಬು$_1$, ಕೊನವು (ನಾ). ೧. ಬೆಡಗು; ಒನಪು: ಕೊನಬಾದೊಡಮೇನು ಕೂರ್ಮೆಯಾದೊಡಮೇನು ಬಿನದಮಾದೊಡಮೇನು ಬೇಱ ಇನಿಯನೇಕಾಂತದೊಳೆಸಗಿದುದನು ತನ್ನ ಮನದೊಳೆ ಮಱೆಮಾಱುವುದು (ಹದಿಬ. ೩-೩೮); "ಕೋಪ, ಮುನಿಸು" (ಹದಿಬ. ಕೋಶ); ಕೊನಬೆನಿಸೆ ರಾಮಚಂದ್ರಂ ಬಿನದಂಗಳನುಳಿದು ಕೃಷ್ಣನೊಪ್ಪದೊಳಿರೆಯುಂ (ಅಪ್ರತಿ. ೧೦೮-೭); ಕೋವಿದಾರ ಧ್ವಜದ ಕೊನಬ ನಿಟ್ಟಿಸಿ ಭರತನೀ ವಸುಧೆಗೈತಂದನತ್ಯಾಸೆಯಿಂದ (ವೆಂಕಾರಾ. ೨-೩೦-೫). ೨. = ಕೊನಬ ೧: ಬಗೆಗಾರ್ತಿಯೊರ್ವಳೆಸೆದಳ್ ಕೊನಬುಗಳ ಮನವನಲರ್ಗಣೆಗೆ ಗುಱಿಮಾಡುತೆ (ಪದ್ಮರಾ. ೮-೮೯); ಕಂಡ ಕೊನಬುಗಳ ಕುಸುಮಕೋದಂಡಗೆ ಕೈಸೆಱೆಗೊಡುತಾ (ಕುರಾಸಾಂ. ೪೧-೫೭); ಕಾಮಶಾಸ್ತ್ರಕೆ ಟೀಕೆ ಬರೆವ ಸುಜಾಣನು ಕೋಮಲಾಂಗದ ಕೊನಬವನು (ನಾಗಕು. ೨೫-೫೭); ಮುಟ್ಟಿಪಿಡಿದ ಕೈಸಾಣೆಯ ಕೊನಬುಗಳಿಟ್ಟಣಿಸಿಹರು ಬೀದಿಯಲಿ (ಕಂನವಿ. ೬-೧೯೫). ೩. ಲಂಡತನ; ತುಂಟತನ. 'ಕೊನಬ' ಪರಾ. **ಕೊಣಬು$_1$.** ೧. 'ಕೊಣಬಿಗ' ಪರಾ. **ಕೊನವು:** ೧. ನೆರೆ ಬಂದ ಮೇಲೆ ಕೊನವ್ಯಾಕೊ (ಬೈಸರ್ವ. ೧೩೩). [?]

**ಕೊನಬುಗಾತಿ** 'ಕೊನಬುಗಾರ್ತಿ' ನೋ.

**ಕೊನಬುಗಾರ** 'ಕೊನಬುಗಾಱ' ನೋ.

**ಕೊನಬುಗಾರಿಕೆ** (ನಾ). ಬೆಡಗು; ಒನಪು: ಬಾಲೆಯರ್ ಶೃಂಗಾರದೊಡಿಗೆಯಿಂ ತೊಡಿಗೆಯಿಂ ಲೋಲೆಯರು ತಮತಮಗೆ ನುಡಿಗಳಿಂ ನಡೆಗಳಿಂ ಬಾಲೆಯರ ಕೊನಬುಗಾರಿಕೆ ಸುಳುಹು ತಾಪಸರಿಗಂ ತ್ರಾಣ ಗುಂದಿರ್ದುದು (ತುರಂಗ. ೮೦-೪೦). [ಕೊನಬುಗಾರ (< ಕೊನಬುಗಾಱ) + -ಇಕೆ]

**ಕೊನಬುಗಾರ್ತಿ,** ಕೊನಬುಗಾತಿ (ನಾ). ಬೆಡಗುಗಾತಿ; ಒನಪುಗಾತಿ: ಬಡನಡು ಬಲ್ಮೊಲೆ ನಿಡುಗಣ್ ಕುಡುವುರ್ವಿಂದೆಸೆವ ಕೊನಬುಗಾರ್ತಿಯ ಸೊಗಸಂ ಪಡೆಗುಂ ಕೃತಿಯುಂ . . . ತಕ್ಕ ತಕ್ಕ ಬಣ್ಣಗೆ ಬವಣಿಂ (ಚಕವಿ. ೧-೧೬). **ಕೊನಬುಗಾತಿ:** ತನು ಮಧ್ಯೆಯ . . . ಕೊನಬುಗಾತಿಯಳ ಕೊಸರಿ ರಂಗಾಯೆಂಬ ವನಿತೆ ತಾ ವಶವಪ್ಪಳೆಂದೊ (ಶತಸಾಂ. ೨೨-೧೦). [ಕೊನಬುಗಾಱ + -ತಿ$_1$ (< -ಇತ್ತಿ)]

**ಕೊನಬುಗಾಱ,** ಕೊನಬುಗಾರ (ನಾ). = ಕೊನಬ ೧: ಯುವತಿಯರೊಳೊಡಗೂಡಿ ಮಚ್ಚಿಸುವ ಕೊನಬುಗಾಱರ ನೋಡುತರಸ ನಡೆದಂ (ಚೇರಮ. ೮-೧೬); ಪಂಚೇಂದ್ರಿಯಂಗಳ ಕೋಳಕ್ಕೆ ತಗಲ್ದಾಕೆ ಕೊನಬು [ಪಾಠಾಂ. ಲು] ಗಾಱನಾಗಿ (ಪುರಂದ. ೩-೨೧೨-೧); ತನುಕಾಂತಿ ಇನನ ಕಿರಣವ ಮಱೆಸುತಿರೆ . . . ಕೊನಬುಗಾಱನು ಮೆತ್ತಮೆತ್ತನೆ ನಡೆತಂದು (ಜ್ಞಾನಚ. ೧೯-೨೩). **ಕೊನಬುಗಾರ:** ನೀರರೆನಿಸುವ ಕೊನಬುಗಾರ ನಿನ್ನಗ್ಗಿಂಗುವದೆ ಮಮ ದ್ವಾರಾ (ಪ್ರಸಕೀ. ೧೭-೬). [ಕೊನಬು + -ಕಾಱ]

**ಕೊನಬುಗೋವಳ** (ನಾ). ಬೆಡಗುಗಾರನಾದ ಗೋವಳ; ಒನಪಿನ ಗೋಪಾಲ; ಕೃಷ್ಣ: ಕೊಳಲಿಗಿಂದುಟಿಯ ಸವಿದೋಱೆಯೊಳು ದನಿಗೊಳುವ ಕೊನಬುಗೋವಳನ ತೋಱ ನೀಱೇ (ಗೀತಗೋ. ೬೭-೪). [ಕೊನಬು + ಗೋವಳ]

**ಕೊನಬುತನ** (ನಾ). ಸೊಗಸುಗಾರಿಕೆ: ವನಿತೆ . . . ಮನದೊಳಾನಂದಿಸಿದಳು ಕರ್ನಾಟದ ಕೊನಬುತನದ ಕೋಱೆಯನು (ಕುರಾಸಾಂ. ೪೧-೯೮). [ಕೊನಬು + -ತನ]

**ಕೊನಬುದೋಱು** (ಕ್ರಿ). ಒನಪು ತೋರು; ಬೆಡಗನ್ನು ತೋರು: ಮನಸಿಜ ನರರೂಪ ತಾಳಿ ತನುವಿಡಿದೈತರುವಂದದೊಳಾಕ್ಷಣ ಕೊನಬುದೋಱುತಲೈತಂದ (ಕಂನವಿ. ೯-೯೭). [ಕೊನಬು + ತೋಱು$_1$ (< ತೋಱ್)]

**ಕೊನಬೆ** (ನಾ). ಕೊಂಬೆ; ರೆಂಬೆ: ಕೊಳವ ತಾನಂಚೆ ಕೋಗಿಲೆ ಮಾಂದಳಿರ ಪೂದಳೆದಿರ್ದ ಕೊನಬೆಯ ತುಂಬಿ ಎಳಸಿಯೇಳಗೆವಡುವಂತೆ (ಶತಸಾಂ. ೧೭-೯೬). [< ಕೊಂಬೆ]

**ಕೊನಮರ** (ನಾ). ಒಂದು ಜಾತಿಯ ಮರ: "ಅಕ್ಷೋಟಃ -ಕೊ(ಗೋ)ನಮರನು" (ಓಷಧಿ. ೧೧). [?]

**ಕೊನಮಾಮಾ** (ನಾ). ಒಬ್ಬಾತನ ಹೆಸರು: ಮನೆವಗತಿ ತಕಣಱಿಯ ಕೊನೆಮಾಮಾ ಎಱೆಅಂಗದೊಲು ಕೇಸಿಯ ಬೂದಿಗನ ಕಾಳೆಗದೊಳ್ (ಎಕ. III, ಮೈಸೂರು. ೪೪-೫; 990). [?]

**ಕೊನರ್$_1$,** ಕೊನರು$_1$ (ಕ್ರಿ). ೧. ಚಿಗುರು, ಪಲ್ಲವಿಸು; ಅಂಕುರಿಸು: "ಕೊನರ್-ಪಲ್ಲವೋತ್ಪತ್ತೌ (ಚಿಗುರು)" (ಶಮಧಾ); ದೂದರ ಸೀಯ ನಪ್ಪ ಮಾತಿನ ರಸದೊಳ್ ಕೊನರ್ವುದು ತಳಿರ್ವುದು ಪೂವುದು ಕಾಯ್ಪುದಂತು. . .ತೊದಳಿಲ್ಲದ ನಲ್ಮೆಯೆಂಬ ನಂದನವನಂ (ಪಂಪಭಾ. ೪-೧೦೨); ಕಂಪನಂ ಕೊನರ್ತರೆ (೧೦ಕ. ೩-೨೮). ೨. (ಅಲಂ) ಏಳಿಗೆ ಹೊಂದು; ಅಭಿವೃದ್ಧಿಯಾಗು: ಗದೆಯುಮೀ ಭುಜದಂಡಮುಮುಳ್ಳಿನಂ ಕೊನರ್ತಪ್ಪುದೆ ಪೇಱಿಮೆನ್ನ ಪಗೆ (ಪಂಪಭಾ. ೧೩-೧೯).

**ಕೊನರು$_1$**: ೧. ನೀನೊಲಿದರೆ ಕೊರಡು ಕೊನರುವುದಯ್ಯಾ (ಬಸವ. ೬೬); ಕೊರಡುಗಳು ಕೊನರಿದವು ಕಱಿಯದ ಬರಡುಗಳು ಹಯನಾದುವು (ಪ್ರಭುಲೀ. ೬-೨೫); ಗಂಡಸ್ಥಲವನ್ನೆ ಕೊನರುವ ಕರ್ಮಿೞಸೆ (ಮೋಹತ. ೧೮-೬೩); ಅಂದವಳ ನುಡಿಯ ಕೇಳಿ ಕಿವಿವೇಟ ಕೊನರಿ ಕೋಮಲಿಸೆ ಬೇಗದಲಿ (ಕಂನವಿ. ೯-೫೪). [?]

**ಕೊನರ್$_2$, ಕೊನರು$_2$** (ನಾ). ಚಿಗುರು; ಪಲ್ಲವ; ಕುಡಿ: ಬೇಟದ ಕೊನರ್ ತಲೆದೋರ್ಪವೊಲಾಗೆ (ಪಂಪಭಾ. ೪-೩೭); ತಳ್ತ ಮಲ್ಲಿಕಾ ಸುಳಳಿತ ಕುಟ್ಮಳಾಳಿ ಪೊಸಮುತ್ತು ಕೊನರ್ ಪವಳಂ ಪೊದಳ್ದು (ಶಬಶಂ. ೨-೪೩). **ಕೊನರು$_2$**: ಮಿಸುಪಂಕುರಂ ಕೊನರು ಪಲ್ಲವಂ ಹಸುರೆಲೆ . . . ಕಂಗೆಸೆದುದು (ಹಚಕಾ. ೩-೩೪); ಕುಸುಮದ ಸುವಾಸನೆ ತನ್ನಯ ತೊಟ್ಟು ಎಲೆ ಕೊನರು ಬೇರುವನೇಕೆ ವೇಧಿಸದು (ಮದೇಮ್ಮ. ೨೮೫-೬೦). [< ಕೊನರ್$_1$]

**ಕೊನರಿಡಿಸು** (ಕ್ರಿ). ಚಿಗುರಿಸು; ಕುಡಿಯಿಡಿಸು; ವಿಸ್ತರಿಸು: ನಲ್ಲನೊಳಡಕವಾಗಿರ್ದೆಮ್ಮ ಕುಲದೇಳ್ಗೆಯ ಕೊನರಿಡಿಸು (ಹದಿಬ. ೫-೩೭). [ಕೊನರಿಡು + -ಇಸು$_3$]

**ಕೊನರಿಡು**(ಕ್ರಿ). ೧. ಚಿಗುರಿಡು; ಕುಡಿಯಿಡು; ಪಲ್ಲವಿಸು: ಕೋಪದಲಿ ಕೊನರಿಡುವ ಮನದನುತಾಪದಲಿ (ತೊರರಾ. ೬-೩೨-೪೬); ಕುಲಸತಿಯರ ಧರ್ಮ ಕೊನರಿಡೆ ನೇಹವ ನೆಲೆಗಾಣಿಸಿ ನೆಗಳುವುದು (ಹದಿಬ. ೩-೧೦). ೨. (ಅಲಂ) ಸಂತೋಷಪಡು; ಹಿಗ್ಗು: ಚಿತ್ತಂ ಕೊನರಿಡುತೆ ತಂದ ವಸ್ತುಗಳಿಂದಂ ಬಿತ್ತರದ ನುಡಿಗಳಿಂ ಪೊಣ್ಮುತ್ತ (ಶ್ರೀಮಹಾ. ೧೧-೬). [ಕೊನರ್$_2$ + ಇಡು$_1$]

**ಕೊನರಿಸು** (ಕ್ರಿ). = ಕೊನರಿಡಿಸು: ನಾಲಗೆಯಂ ಕೊಯ್ದುರ್ಚಿಸೆ ನೀಲಗಳಂ ಮತ್ತೆ ಕೊನರಿಪಂ ಗಡ (ಸಮುಪ. ೯-೪೬); ಕಾಷ್ಠಮಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್ (ಲೀಲಾವ. ೧-೧೩); ಮಹೇಶ್ವರನಂತರಂಗವನೊಳವೊಕ್ಕು ಸಂತಾಪವ ಕೊನರಿಪೆನೆಂದು ಸ್ಮರಗೆ ವಸಂತ ಬಿನ್ನಹವ ಮಾಡಿದನು (ಮೋಹತ. ೬-೨೨); ಹೊನ್ನಹಳ್ಳಿಯ ರಾಜ ವಂಶವನ್ನು ಕೊನರಿಸಲೆಂದು ಜನ್ಮವೆತ್ತಿದ ಮಗುವನ್ನು (ಹಾಹುತ್ತ. ೫೨). [ಕೊನರ್$_2$ + -ಇಸು$_3$]

**ಕೊನರು$_1$** 'ಕೊನರ್$_1$' ನೋ.

**ಕೊನರು$_2$** 'ಕೊನರ್$_2$' ನೋ.

**ಕೊನರೆಣಿಕೆ** (ನಾ). "ಬೇರೆ ಯೋಚನೆ; ಮತ್ತೊಂದು ವಿಚಾರ" (ಕಾಲೂರ. ಕೋಶ); ಕೊನರೆಣಿಕೆ ಬೇಡವಳ್ಗೆ ಅಗಿಲ್ಲ ಮಾತು (ಕಾಲೂರ. ೫೪-೮೫); ಕೊನರೆಣಿಕೆಯೇಂ ಪೋಕೆ ಮದುವೆಗೆಡರಿರದು (ಕಾಲೂರ. ೧೪೫-೩೧೬) [ಕೊನರ್$_1$ + ಎಣಿಕೆ]

**ಕೊನರೇಱು** (ಕ್ರಿ).=ಕೊನರಿಡು: ಕಂದರ್ಪದರ್ಪಲತಾಗ್ರಂ ಕೊನರೇಱಿ ಕೋಕಕುಳಹೃತ್ಕಾಮಾಗ್ನಿ ಕಾಯ್ಪೇಱಿ (ಕುಸುಮಾ. ೪-೪೭); ಕೂಡೆ ಕೊನರೇಱುವ (ಚಿಕವಿ. ೪-೧೨೩). [ಕೊನರ್$_2$ + ಏಱು$_1$ (< ಏಱ್$_1$)]

**ಕೊನರೊಡೆ** (ಕ್ರಿ). = ಕೊನರಿಡು: ನರೇಂದ್ರಕ್ಕೆ ಬಂದಾಗ ಮತ್ತೆ ಅದು ಕೊನರೊಡೆಯಿತು (ಗಳಗ. ೨೨). [ಕೊನರ್$_2$ + ಒಡೆ$_1$]

**ಕೊನರ್ಮಿೞಸೆ** (ನಾ). ಚಿಗುರುಮೀಸೆ; ಕುಡಿಯಿಡುತ್ತಿರುವ ಮೀಸೆ; ಮೊಗಮೀಸೆ: ಎಱಗಿದ ಮಱಿದುಂಬಿವೊಲಿರೆ ಮಿಱುಪ ಕೊನರ್ಮಿೞಸೆ (ವರ್ಧಪು. ೪-೨೩). [ಕೊನರ್$_1$ + ಮೀಸೆ]

**ಕೊನರ್ವೆರ್ಚಿಸು** (ಕ್ರಿ). ಚಿಗುರು ಹೆಚ್ಚುವಂತೆ ಮಾಡು; ವೃದ್ಧಿಗೊಳಿಸು: ವೈಭವಮಂ ತಣ್ಪೇರಿಸುತ್ತುರ್ವಿಯನೆಸೆವ ಕೊನರ್ವೆರ್ಚಿಸುತ್ತುಂ . . . ಎಟ್ಟಿಂದುದು ಜಲಧರಕಾಲಂ (ಕುಸುಮಾ. ೬-೭). [ಕೊನರ್ವೆರ್ಚು + -ಇಸು$_3$]

**ಕೊನರ್ವೆರ್ಚು** (ಕ್ರಿ). ಚಿಗುರು ಹೆಚ್ಚುವಂತೆ ಮಾಡು. 'ಕೊನರ್ವೆರ್ಚಿಸು' ಪರಾ. [ಕೊನರ್$_2$ + ಪೆರ್ಚು$_1$]

**ಕೊನಲ್ಲಿ** (ನಾ). ಒಂದು ಊರಿನ ಹೆಸರು: ಕೊನಲ್ಲಿಯ ಮಹಾಜನಕೆ ಗೋಸಾಸಮಿಟ್ಟು (ಎಕ. VIII, ಸಾಗರ. ೧೦೦-೯; 986). [?]

**ಕೊನವು** 'ಕೊನಬು' ನೋ.

**ಕೊನಷ್ಟೈ** (ನಾ). ಕೊಂಗಿತನ; ಮಂಗತನ; ಕುಚೇಷ್ಟೆ: ಕೊನಷ್ಟೈ ಮಾತುಗಳನ್ನೆಲ್ಲಾ ಯಾವ ಶಾಲೆಯಲ್ಲಿ ಕಲಿತುಕೊಂಡಿರಿ? (ಕೊನಷ್ಟೈ. ೩). [← ತಮಿ. ಕುನಷ್ಟೈ]

**ಕೊನಾಳಿಗೆ** (ನಾ). ಹರಿನಾಳಿಗೆ; ದೋಣಿ: "ಕೊನಾಳಿಗೆ - ಹರನಾಳಿಗೆ" (ಜಾನಕೋ. ೪೨). [?]

**ಕೊನಿಗಾರ** (ನಾ). = ಕೊನೆಕಾಱ (?): ಮಧುಸೂದನ ಭಟರ ಮಗ ವಿಷ್ಣುಭಟ್ಟೋಪಾಧ್ಯಾಯರಿಗೆ ಕೊನಿಗಾರ ಗದ್ದೆಯೊಳಗೆ ದಡಿಗ ಮೂಡೆ ಪಲ್ಲಜ್ಜನ ಕಡಹು ಮೂಡೆ ೧ (ಎಇ. XXVII, ೨೮-೪೫; 1256). [< ಕೊನೆಕಾಱ ?]

**ಕೊನಿವಾರ** (ನಾ). ಒಂದು ಉಪಕರಣ (?): ಹರಿತೆಗೆಯೊ ಸೂಜಿಯೊ ಕೊಳವಿಗೆಯೊ ಚವುಕುಳಿಯೊ ಅರನೊ ಪಟ್ಟಣೆಯೊ ಭಿತ್ತಿಯೊರವೆಯೊ ಪುರುವೊ ಕಿರಿಕಣ್ಣೊ ಸಪುರವೊ ಕೊನಿವಾರವೊ ರಟ್ಟಗೆಯೊ ನಾಳವೊ ಪನ್ನಾಳವೊ (ಕುಮುರಾ. ೧೩-೨೯). [?]

**ಕೊನೆ$_1$, ಗೊನೆ$_1$** (ಕ್ರಿ). ೧. ಕೊನರು; ವೃದ್ಧಿಗೊಳಿಸು: "ಕೊನೆ-ಸ್ವೀಕೃತಾರ್ಥ ವರ್ಧನೇ ಅಗ್ರೇ ಚ" (ಶಮಧಾ). ೨. ಕೊಂಡಾಡು; ಹೊಗಳು; ಸ್ತೋತ್ರ ಮಾಡು: ಅದಱಿಂ ಬಾಯ್ಗೆವಂದಂತೆ ಕೊನೆದುದ್ದವೇಱಿ ಫಲವನೆನ್ನ ಮುಂದೆ ಗಟಪದುಸಿರದಿರೆಂಬುದುಂ (ಧರ್ಮಾಮೃ. ೯-೪೪); ಖಡ್ಗವಿದ್ಯೆ ತವೊಳ್ಳೆ ನೆಲಸಿತ್ತೆನಲ್ ಕೊನೆದು ಕಾಳಗದಿಂ ಶಿಶುಪಾಲ ದೈತ್ಯನೊಳ್ ಬಲಿರಿಪು ಕಾದಿದಂ (ಜಗವಿ. ೭-೯೮). ೩. ಸಂತೋಷಪಡು; ಹರ್ಷಿಸು: ನಱುಗಂಪಂ ತಣಿದುಂಡು ಕೊನೆಯುತುಂ ಪರಮೆವಱಿಗಳಾಡುತಿರೆ ಜಿನುಗುತುಂ (ಉದ್ಭಟ. ೧-೫೧); ಪೊಗೞ್ದಾನೆನ್ನ ಪುರುಳ್ಗಳಂ ಕೊನೆದೊಡೇಂ ಪೆಂಪಕ್ಕುಮೇ (ಚಿಕವಿ. ೬-೪೯); ಕೊಂಡಾಡಿದರು ರಾಜನಂ ಕೊನೆದು ದೇವರ್ಕಳಂ (ಶ್ರೀರಾಮಾ. ೧೬-೪೨೮); ಧರ್ಮರಾಯನನ್ನು ಜಗತ್ತೇ ಕೊನೆದು ಕೊಂಡಾಡುತ್ತಿತ್ತು (ಬದುರಿ. ೧). ೪. ಪೀಡಿಸು (?): ಎನ್ನಂ ಕೊನೆಗುಂ ಕ್ಷುದ್ಬಾಧೆ ತಾನೀ ವಿಪಿನದೊಳನಿಶಂ ವರ್ತಿಪೆಂ (ಕಮಮಾ. ೧೩೩). ೫. ಹೆಮ್ಮೆಪಡು; ಬಿಂಕಗೊಳ್ಳು; ಗರ್ವಿಸು: ಕೊನೆದು ಕೊಣಕಿಟ್ಟು ಕೋಣನನೇಱಿದ ಭಗವತಿಯಂತೆ ಬಿಜ್ಜನೆ ಬೀಗಿ (ಅರ್ಧನೇ. ೩-೧೮ವ). ೬. ಕೆಲಸದಲ್ಲಿ ಉತ್ತೀರ್ಣನಾಗು: (ಕಿ). ೭. ಚಿಗುರು; ಹುಟ್ಟು: ರಾತ್ರಿ ಕಳೆದು ಮುಂಜಾವು ಕೊನೆಯುವಷ್ಟರಲ್ಲಿ (ಸಮುಜೀ. ೪೧೬). ೮. ಪೂರ್ಣವಾಗು; ತೃಪ್ತಿಹೊಂದು: ಭೂಮಿಪ್ರೇಮಗಳನೊಂದಾಗಿಸಿ ನೆಲದಣುಗರ ಹೊಂದಿಸಿ ಕೊನೆಯುವುದು (ಪಯಣ. ೧೯-೬); ಕೊನೆದ ಹೆಬ್ಬಯಕೆಯೆನೆ ಬಾಳಿಮ್ಮದಲ್ತೆ (ಕಾಲೂರ. ೧೦೦-೨೦೦). **ಗೊನೆ$_1$**: ೫. 'ಗೊನೆಹಕಾತಿ' ಪರಾ.

**ಕೊನೆದಾಟ** = ಕೊಂಡಾಟ: ಗೃಹಸ್ಥರ ಪೌರುಷವೆಲ್ಲ ಲೋಭದ ಕೊನೆದಾಟವಲ್ಲವೇ? (ನಿರಾಭ. ೧೭೩). **ಕೊನೆದಾಡು** = ೧. ಕೊಂಡಾಡು; ಹೊಗಳು: ತೆಲುಗರು ತಮ್ಮ ಸಾಹಿತ್ಯದ ಅಷ್ಟದಿಗ್ಗಜಗಳ ವೈಭವವು ತಮ್ಮದೆಂದುಕೊಂಡು ಕೊನೆದಾಡುವರು (ವಿಚಾಮಂ. ೪); ಗಾಯಿತ್ರಿಯ ವ್ಯಾಖ್ಯಾನವನ್ನು ನಾಡೆಲ್ಲ ಮೆಚ್ಚಿ ಕೊನೆದಾಡಿತು (ಪ್ರೇಮಾಶ್ರ. ೧೬೯). ೨. ನಲಿದಾಡು: ಮಲ್ಲಿಕಾಲತೆಗಳೊಳ್ ಮಂಡಳಿಸಿ ಕೊನೆದಾಡಿ (ಉದ್ಭಟ. ೧೦-೧೨೦).

**ಕೊನ್ನೆ**$_2$, ಗೊನ್ನೆ$_2$ (ನಾ). ತುದಿ; ಕಡೆ; ಅಗ್ರಭಾಗ: "ಕೊನೆ- ಸ್ವೀಕೃತಾರ್ಥವರ್ಧನೇ, ಅಗ್ರೇ ಚ" (ಶಮಧಾ); ಅವಳಲರ್ಗಣ್ಗಳ ಕೊನೆ ಸಾಲ್ವುದಿಲ್ಲ ಕರ್ಬಿನ ಬಿಲ್ಲೊಳ್ (ಮಲ್ಲಿಪು. ೩-೭೮); ಮನದಲಲ್ಲೆ ಕಣ್ಗಳ ಕೊನೆಯೊಳ್ ಕರುವಿಟ್ಟು ಕೊನರುತ್ತಿರೆ (ನಂಬರ. ೧೪-೩೨); ಮೋಱೆಯಲಿಳಿವ ಬೆಮರನು ಕೊರಳ ಕೊನೆಯಲಿ ಬಳಿದು (ಕುವ್ಯಾದ್ರೋ. ೧೩-೫೧); ಕೊನೆವಾಳೆ ಕುಸುಮಮಂಜರಿ ಮುಖ್ಯ ಶಾಲಿಯ ಕೊನೆಗಳನಗಿವ ಕೀರಗಳು (ನೋಹತ. ೨-೪೪). **೨.** ಕುಡಿ; ಕೊನರು; ಚಿಗುರು: ನನೆಯ ಕೊನೆಯ ತಳಿರ ನಿಱಿದಳಿರ ಮುಗುಳ ಬಿರಿಮುಗುಳ (ಪಂಪಭಾ. ೫-೫೮); ಕೊನೆ ನನೆ ಪೂ ಮಿಡಿ ಕಾಯ್ ಪಣ್ ತನಿವಣ್ಣೆಂಬಿವನೆ ಪುದಿದು (ಲೋಕೋಪ. ೬-೧೬); ಹತ್ತಿಗಿಡದ ಕೊನೆ ಹಗೆಯಾಗಿ ಬಿಡದ ಮೇಲಿನ್ನೇನಿನ್ನೇನು (ಪುರಂದ. ೨-೩೭-೧); ಪೂವಳ್ಳಿಗಳ್ ನನೆ ಕೊನೆ ಮುಗುಳರಿಮುಗುಳ್ ಬಿರಿಮುಗುಳ್ (ರಾಮಾಶ್ವ. ೧೭-೧). **೩.** ಕೊಂಬೆ; ರೆಂಬೆ: ಸತ್ತ ಕೋಗಿಲೆದ್ದು ಕೊನೆಯನೇಱಿ ಕರೆಯ ಕಂಡೆನು (ಅವಚಂ. ೨೪೮-೧೩೧೪). **೪.** ಬೇರು: ಶುಂಠಿ ಕೊನೆ ಮೂರು, ಹಿಪ್ಪಲಿ ಮೂರು . . . ಆ ಕಷಾಯದಲ್ಲಿ ಕದಡಿ (ಸಕವೈ. ೭೫); ಅರಿಸಿನದ ಕೊನೆ (ರೂಢಿ). **೫.** ಮುಕ್ತಾಯ; ಅಂತ್ಯ: ಹನುಮಂತನ ಬಾಲದ ಹಾಗೆ ಅದಕ್ಕೆ ಕೊನೆಯೇ ಇಲ್ಲ (ರಾಯಚ. ೧೦೫); ವರುಷದ ಕೊನೆಯಲ್ಲಿ ಒಟ್ಟು ಪಟ್ಟಿ ತಯಾರಿಸುವಾಗ (ಮುಂಬವ್ಯಾ. ೫). **೬.** ಮೂಲೆ: ಹಿಡಿಯುವುದಕ್ಕೆ ಪಟ್ಟಿಲ್ಲ, ನಿಲ್ಲುವುದಕ್ಕೆ ಕೊನೆಯಿಲ್ಲ(ಗಾದೆ).

**ಗೊನ್ನೆ**$_2$: **೧.** ಕಣ್ಣಿನ ಕಿರಣಗಳು ಮೂಗಿನ ಗೊನೆಗೆ ಕೂಡಿ (ನಿರಾಥ. ೩೧).

**ಕೊನೆಗೊನೆ** (ದ್ವಿರುಕ್ತಿ) = ಸಂಪೂರ್ಣನಾಶ: ಲತೆಗಳ ಕೊನೆ ಗೊನೆಯನೆ ದಹನನಳುರ್ದು ಕೊನೆಗೊನೆಗೊಂಡಂ (ಪಂಪಭಾ. ೫ ೭೭).

**ಕೊನೆಮಾಡು** = ಮುಗಿಸು; ಅಂತ್ಯಗೊಳಿಸು: ಅವರಿವರನು ಕಂಡು ಹುಚ್ಚಾಗದಿರು ಜೋಕೆ ಕೊನೆಮಾಡು ಬಿಡು ಸಾಕು ಕುಹಕ (ಇಂಚಾಪ. ೧೦೭-೨೩). **ಕೊನೆಮಿಾರು** = ಕೈಮಿಾರು; ಮೇರೆಮಿಾರು: ಅವಳಿಗೆ ಅಳಿಯನ ಮಾತಿನ ಆಘಾತವೆಂಬುದು ತೀಕ್ಷ್ಣವಾಗಿಯೇ ನಾಟಿತು. ಆದರಿಂದ ಎಲ್ಲವೂ ಕೊನೆಮಿಾರುತ್ತಿರಬೇಕೆಂದು ಭಾವನೆಯಾಯಿತು (ಒಂಟಿದ. ೨೧೩). **ಕೊಟ್ಟಕೊನೆ** (ದ್ವಿರುಕ್ತಿ): ಕೂಗಿಟ್ಟು ಕೊಟ್ಟಕೊನೆಗೆ ಶಾಪಂ, ಕೊಟ್ಟಕೊನೆಮುಟ್ಟಿ ನೆರವೇರಿದವುದು (ಬದ್ಧಪ್ರ. ೪೮-೧೦೪೭).

[ದೇ ‖ ತಮಿ. ಕುನ್ನೈ, ಕೊನ್ನೈ; ತುಳು. ಕೊನೆ; ತೆಲು. ಕೊನ]

**ಕೊನ್ನೆ**$_3$ 'ಗೊಲ್ನೆ' ನೋ.

**ಕೊನೆಕಾಱ**, ಕೊನಕಾಱ (ನಾ). ಅಡಕೆ, ತೆಂಗು ಮೊದಲಾದ ಮರಗಳಲ್ಲಿ ಗೊನೆ ಇಳಿಸುವವನು: ಸಮಸ್ತ ತೋಟಿಗರುಂ ಕೊನೆ ಕಾಱರುಂ ವುಳಿಯ ಮೂನೂರ್ಬರುಮಿರ್ದು . . . ಬಿಟ್ಟ ಧರ್ಮವಪ್ಪುದು (ಸೌಇಇ. IX–i, ೧೪೧-೩೩; 1136); ಗದ್ದೆಗೆ ಪರಿವರ್ತನೆಯಿಂ ಕೊಟ್ಟ ಕಂ ೨೦ ಕೊನೆಕಾಱರುಂ ಅಡಕೆಯ ಸುಲಿದ ಮೊತ್ತಮುಂ (ಎಕ. VI, ಕಡೂರು. ೨೪೫-೬೭; 1224). **ಕೊನಕಾಱ**: ಚಂದ್ರಾರ್ಕತಾರಂ ಬರಂ ಬಿಟ್ಟರ್ ಕೊನಕಾಱಱು ಅಳಲೆರಡು ಪಣವಂ (ಇಎ. ೧೪೪೭, ಹಾನುಗ. ೨೫೦-೩೮; 933). [ಕೊನ್ನೆ$_3$ (< ಗೊಲ್ನೆ$_2$) + -ಕಾಱ]

**ಕೊನೆಗಣ್** (ನಾ). ಕಣ್ಣಿನ ತುದಿ; ಕಡೆಗಣ್ಣು; ಅಪಾಂಗ: ಕೊನೆಗಣ್ಣ ಪಾಮರಿಯರ ದಿಟ್ಟಿಗಣ್ಣುರುಳ್ಗೊನೆಯೆಂದು ಕೊನೆಗೆ ಪಾಱಿದುವು (ನೋಹತ. ೨-೪೪); ಕೊನೆಗಣ್ಣ ಬಾಳಿರಿಯುತಿಹುದು ಬಿಗಿದೊಳವಂ (ಕಾಲೂರ. ೪೬-೬೪). [ಕೊನ್ನೆ$_2$ + ಕಣ್]

**ಕೊನೆಗಣ್ಣು** (ಕ್ರಿ). ಕಣ್ಣಿನ ತುದಿಯಿಂದ ನೋಡು; ಕಡೆಗಣ್ಣಿನಿಂದ ನೋಡು: ಅನ್ತರ್ದ್ವಾರದತ್ತ ಕೊನೆಗಣ್ಣಿ (ಮುಂತ್ರಶ. ೯೭-೬). [ಕೊನೆಗಣ್ + -ಉ]

**ಕೊನೆಗತ್ತಿ** (ನಾ). ದೋಟಿಯ ತುದಿಗೆ ಜೋಡಿಸಿದ ಕತ್ತಿ, —ಕುಡುಗೋಲು: ತೆಂಗು ಕೀಳಲು ಕೊನೆಗತ್ತಿ ಬೇಕು (ರೂಢಿ). [ಕೊನ್ನೆ$_2$ + ಕತ್ತಿ]

**ಕೊನೆಗರ್ಚು** (ಕ್ರಿ). ತುದಿಯನ್ನು ಕಚ್ಚು, —ಹಿಡಿದುಕೊಳ್ಳು: ತತ್ತೃಣರಾಜಿಯು ಕೊನೆಗರ್ಚಿದ ಹರಿನೀಲದ ಪರಲೆನೆ ನನೆವಿಲ್ಲನ ಪಸುರ್ಗಾವಿನ ಪಿಂಗಸೊಕ್ಕಿನ ಪೊಸಮಿಂಟಿಯೆನೆ (ಜಯುಕಾ. ೧-೩೯). [ಕೊನ್ನೆ$_2$ + ಕರ್ಚು$_1$]

**ಕೊನೆಗಱಿ** (ನಾ). ಗರಿಯ ತುದಿ; ತುದಿಗರಿ: ವಿಹಗೋತ್ಕರದ ಕೊನೆಗಱಿಗಳುಱೆ ಸೀಕರಿವೋದುವಿದೇನಳುಂಬಮೋ ಬಿಸಿಲೆಸಕಂ (ಕುಸುಮಾ. ೮-೧೧೮). [ಕೊನ್ನೆ$_2$ + ಗಱಿ]

**ಕೊನೆಗಾಣ್**, ಕೊನೆಗಾಣು (ಕ್ರಿ). ಮುಗಿ; ತೀರು; ಪೂರೈಸು: ನಿನ್ನೊಳಾದೊಡೆ ಕೊನೆಗಂಡುದ್ದೈ ಪ್ರಜೆಯ ಬಾಂಧವಕೃತ್ಯಂ (ಶಾಕುಂತ. ೬೩-೧೦೮); ಪಿರಿತಿನಿಯ ನಾಲಗೆಗೆಲ್ಲಿ ಕೊನೆಗಂಡ ಮೆಚ್ಚು (ಕಾಲೂರ. ೧೮೫-೪೨೦). **ಕೊನೆಗಾಣು**: ಲಕ್ಷ್ಯ ಭೇದಿಸಿದ ಈತನನ್ನು ನೋಡಿ ನನಗೆ ಕೊನೆಗಾಣದಷ್ಟು ಹರ್ಷವುಂಟಾಗಿದೆ (ವಚಭಾ. ೫೭); ಕೊನೆ ಗಾಣದಿರುವುದೇ ಈ ಕಾಳರಾತ್ರಿ (ಪಾಂಚಜ. ೫೨). [ಕೊನ್ನೆ$_2$ + ಕಾಣ್]

**ಕೊನೆಗಾಣಿಸು** (ಕ್ರಿ). **೧.** ಮುಗಿಸು; ತೀರಿಸು. **೨.** ಕೈಗೂಡಿಸು; ಈಡೇರಿಸು: ಸುಖರೂಪವಾಗಿ ಹೋಗಬೇಕೆಂದು ನಮ್ಮೆಲ್ಲರ ಅಪೇಕ್ಷೆಯುಂಟು. ಆದರೆ ಅದನ್ನು ಕೊನೆಗಾಣಿಸುವುದು ದೇವರ ಕೃಪೆಯೊಳಗಿನ ಮಾತು (ಮುಂಬಯಿ. ೪-೪೨). **೩.** ಕೊಲ್ಲು; ನಾಶ ಮಾಡು: ಅವನ ಬಾಹುಬಲದಿಂದಲೇ ನಾವು ಪುರೋಚನನನ್ನು ಕೊನೆಗಾಣಿಸಿ ಅರಗಿನ ಅರಮನೆಯಿಂದ ತಪ್ಪಿಸಿಕೊಂಡು ಬಂದದ್ದು (ವಚಭಾ. ೪೬); ಶ್ರೀರಂಗಪಟ್ಟಣದ ಅಧಿಕಾರಿಗಳು . . . ರಾಜ ಒಡೆಯರನ್ನು ಕೊನೆಗಾಣಿಸಬೇಕೆಂದು ಯೋಚಿಸಿದರು (ಒಡೆಕ. ೨೩). [ಕೊನೆಗಾಣ್ + -ಇಸು$_3$]

**ಕೊನೆಗಾಣು** 'ಕೊನೆಗಾಣ್' ನೋ.

**ಕೊನೆಗಾಲ** (ನಾ). ಕಡೆಗಾಲ; ಅಂತ್ಯಕಾಲ: ಕೊನೆಗಾಲವು ಪ್ರಳಯಕಾಲದಲ್ಲಿ ಪರ್ಯವಸಾನವಾಗುತ್ತದೆ (ಭಾರದ. ೧೭೫); ರಾಮನ ಕೊನೆಗಾಲದಲ್ಲಿಯೂ ಈ ಸಮಸ್ಯೆ ಬಗೆಹರಿದಿಲ್ಲ (ಸ್ವದರ್ಶಿ. ೩೧). [ಕೊನ್ನೆ$_2$ + ಕಾಲ]

**ಕೊನೆಗೊಡಂಕೆ** (ನಾ). ಕಿವಿಯತುದಿ, —ಅಂಚು: ಕೋಡಮೊನೆ ಯೊಳ್ ತಗುಳ್ಚಿದ ಸೂನಗಿಗತ್ತಿಯ ಕೊನೆಗೊಡಂಕೆಯೊಳ್ಕೊನೆವ ಕೋರ ಮುತ್ತಿನ ಬಾವುಲಿಯಂ ಕೊನೆಗೊಡಂಕೆಯೊಳ್ ತೊಡರ್ಚಿಯುಂ (ವೃಷವಿ. ೫-೧೪ ವ). [ಕೊನ್ನೆ$_2$ + ಕೊಡಂಕೆ]

**ಕೊನೆಗೊನರು** (ಕ್ರಿ). ಚಿಗುರಿಡು; ಬೆಳೆ: ಸಕ್ಕಸಮನೆಯೆನಿಸಿ ಕೊನೆಗೊ[ಪಾಠಾಂ. ಕೊ]ನರಿ ತವೆ ಬೆರಸಿ (ಬಸವು. ೧೮-೮೩). [ಕೊನ್ನೆ$_2$ + ಕೊನರು$_1$ (< ಕೊನರ್$_1$)]

**ಕೊನೆಗೊಳಿಸು** (ಕ್ರಿ). **೧.** ಮುಗಿಸು; ಕೊನೆಗಾಣಿಸು: ಕೆಲಸವನ್ನು ಕೊನೆಗೊಳಿಸಿದರು (ರೂಢಿ). **೨.** ಕೊಲ್ಲು; ನಾಶಮಾಡು: ಇರುವೆಗೆ ರೆಕ್ಕೆಗಳೆರಡನು ಕೊಡುವನು ಕೊನೆಗೊಳಿಸುವೊಡದನವನು (ಇಂಚಾಪ. ೧೯೭-೭೨); ಅವರು ಬಂದುದು ಈ ಸುಖದ ಕಲ್ಪನೆಯನ್ನು ಈ ಸವಿನೆನಹನ್ನು ಕೊನೆಗೊಳಿಸಿತು (ಪ್ರೇಮಾಶ್ರ. ೮೨). **೩.** ಈಡೇರಿಸು; ನೆರವೇರಿಸು: ಈ ವೃದ್ಧಪಿತನ ಮಾತನ್ನು ದೇವರು ನಿಶ್ಚಯವಾಗಿ ಕೊನೆಗೊಳಿಸುವನು (ಜಯಂತ. ೪೧೧). [ಕೊನ್ನೆ$_2$ + ಕೊಳ್$_1$ + -ಇಸು$_3$]

**ಕೊನೆಗೊಳ್ಳು** (ಕ್ರಿ). ೧. ಮುಗಿ; ತೀರು; ಅಂತ್ಯವಾಗು: ಈತನೊಂದಿಗೆ ಸಾಳ್ವಸಂತತಿಯೂ ಕೊನೆಗೊಂಡಿತು (ಕೃದೇವ. ೫); ಚಿತ್ರಕ ಎಂಬ ಹೆಸರಿನಿಂದ ಕೊನೆಗೊಳ್ಳುವ . . . ಕೌರವರ ಚರಿತ್ರೆಯೂ ಸಹ ವರ್ಣಿಸಲ್ಪಟ್ಟಿದೆ (ಭಾರದ. ೨೮). ೨. ಈಡೇರು; ನೆರವೇರು: ಅವರ ಬಯಕೆ ಕೊನೆಗೊಂಡಿತು (ರೂಢಿ).
[ಕೊನೆ$_2$ + ಕೊಳ್ಳು$_1$ (< ಕೊಳ್$_1$)]

**ಕೊನೆಗೋಲು** (ನಾ). ಬಾಯಿಯಲ್ಲಿ ವಾದ್ಯದಂತೆ ಧ್ವನಿ ಹೊರಡಿಸುವಿಕೆ: ಆಕಾಶವಾಣಿಯ ತಾಳವಾದ್ಯ ಕಚೇರಿಯಲ್ಲಿ ಕೊನೆಗೋಲನ್ನು ಬಾರಿಸಿದರು (ರೂಢಿ). [← ತಮಿ. ಕೊನ್ನೈಕ್ಕೋಲ್]

**ಕೊನೆಗೌಡ** (ನಾ). ಒಬ್ಬಾತನ ಹೆಸರು (?): ಕೊನೆಗೌಡ ಬಿದಿಯಣ್ಣ ಬಿನಾ × × × ವರ್ ಏಳುತ್ತ ಇಡೆ (ಎಕ. VIII, ಸೊರಬ. ೪೫೭–೫; 972).
[ಕೊನೆ$_0$ + ಗೌಡ (< ಗಾಮುಂಡ)]

**ಕೊನೆಚಪ್ಪರ** (ನಾ). ಚಪ್ಪರದ ತುದಿ, —ಅಂಚು: ನೊನೆನೋಟದಿಂ ಚುಚ್ಚಿ ಬೆಳ್ಳಿ ನೋಡುವಳೊಡನೆ ಕೊನೆಚಪ್ಪರವ ಮಿಂಚಿ ಜುಣುಗುವಳ್ ಹೆಚ್ಚಿ (ಕಾಲೂರ. ೪೨–೫೪). [ಕೊನೆ$_2$ + ಚಪ್ಪರ]

**ಕೊನೆದುಱುಬು** (ನಾ). ಒಂದು ಬಗೆಯ ತುರುಬು, —ಮುಡಿ: ಕೋಲಾರಿದುಱುಬು ಕೊಂಕಿದದುಱುಬು ಕೊನೆದುಱುಬಿನ ಮಲ್ಲಿದುಱುಬು . . . ಕೊತ್ತಳದುಱುಬಿನ ಚೆಲ್ವ ಲಲಿತಾಂಗಿಯರೊಪ್ಪುತಿಹರು (ಅಬ್ಬಲೂ.೨–೧೦೮). [ಕೊನೆ$_2$ + ತುಱುಬು$_2$ (< ತುಱುಂಬು$_2$)]

**ಕೊನೆದೆಱೆ** (ನಾ). ಒಂದು ಬಗೆಯ ತೆರಿಗೆ; ಗೊನೆಯ ಮೇಲೆ ಹಾಕುವ ತೆರಿಗೆ: ಜೆಟ್ಟಿದೆಱೆ ಕೊನೆದೆಱೆ ಖಾಣ (ಎಕ. VI, ಕಡೂರು. ೪೯–೪೨; 1291). [ಕೊನೆ$_3$ (< ಗೊಲೆ$_2$) + ತೆಱೆ$_3$]

**ಕೊನೆದೋಱು** (ಕ್ರಿ). ಚಿಗುರೊಡೆ; ಕುಡಿಯಿಡು; ಪಲ್ಲವಿಸು: ಕೊನರ್ಗಳ್ ಕೊನೆದೋಱೆ ಮದನನಲಗಿನ ಮೊನೆದೋಱಿದನೊಡನೆ ಬಿರಯಿಗೆಳಮಾವುಗಳೊಳ್ (ಮಲ್ಲಿಪು. ೫–೧೧).
[ಕೊನೆ$_2$ + ತೋಱು$_1$ (< ತೋಱ್)]

**ಕೊನೆನಾಲಿಗೆ** (ನಾ). ೧. ನಾಲಗೆಯ ತುದಿ; ತುದಿನಾಲಗೆ: ಆ ಮಹಾರಥಿಕನು ಕೋಪೋದ್ದೀಪಿತನಾಗಿ ಕೊನೆನಾಲಿಗೆ ತುಟಿ ಬಾಯಿಗಳನ್ನು ನೆಕ್ಕುತ (ಕೃವಾಭೀ. ೯೬). ೨. ಚುರುಕಾದ ನಾಲಗೆ: ಪೊಸಪೂರಿನೆಡೆಯವಂ ಕೊನೆನಾಲಿಗೆಯ ಬಿದ್ದಿನಂ ನುಡಿದನಿಂತು (ಕಾಲೂರ. ೫೪–೮೫). [ಕೊನೆ$_2$ + ನಾಲಿಗೆ (< ನಾಲಗೆ)]

**ಕೊನೆನೋಟ** (ನಾ). ಓರೆನೋಟ; ಕುಡಿನೋಟ: ಕೊನೆನೋಟ ಮೋರೆಗಳ ಮಿಂಚಿ ಬರೆದೋದಿದುವು ಮೊನೆಯ ನಗೆ ಬಾಯ್ದೆರೆಯ ಸೊಂಪ ಬೀರಿದುವು (ಕಾಲೂರ. ೬೯–೨೧).
[ಕೊನೆ$_2$ + ನೋಟ]

**ಕೊನೆಬಾಳು** (ಕ್ರಿ). ಕೊನೆಯವರೆಗೆ ಬಾಳು; ಬಹುಕಾಲ ಬಾಳು: ಇಲ್ಲಿ ಎತ್ತರದೊಡನೆ ಕೊನೆಬಾಳುವ ಘನತೆ ಇದೆ (ಕಸಾಚ. ೫೧).
[ಕೊನೆ$_2$ + ಬಾಳು$_1$ (< ಬಾೞ್$_1$)]

**ಕೊನೆಬಿಕ್ಕು** (ನಾ). ಕೊನೆಗಾಲದ ಬಿಕ್ಕಳಿಕೆ; ಅಂತ್ಯ ಕಾಲದ ಬಿಕ್ಕು: ಕೊನೆಬಿಕ್ಕು ಬಂದಾಗ ಇಡುಗಂಗೆ ತಂದಾಗ ಹನಿಯೊಂದು ಕುಡಿಸಿದರೆ ಏನು ತಣಿವು (ಗರಿ. ೮೬–೭).
[ಕೊನೆ$_2$ + ಬಿಕ್ಕು$_3$]

**ಕೊನೆಮಟ್ಟೆ** (ನಾ). ತೆಂಗಿನ ಸೋಗೆಯ ದಿಂಡು; ಹೆಡೆಮಟ್ಟೆ: ಮೂಲೆಯಲ್ಲಿ ಜಿಗ್ಗಿನೊಡನೆ ರಾಶಿಹಾಕಿದ್ದ ಕೊನೆಮಟ್ಟೆಗಳಡಿ ಅವನ್ನೆಲ್ಲ ಮುಚ್ಚಿಟ್ಟನು (ಮಲೆಮ. ೬೨೬).
[ಕೊನೆ$_2$ + ಮಟ್ಟೆ$_1$]

**ಕೊನೆಮೀಸೆ** (ನಾ). ೧. ಚಿಗುರುಮೀಸೆ; ಕುಡಿಮೀಸೆ: ಕೊಂಡು ಪೋದರಚ್ಚರಸಿಯರಣ್ಣಿ ಸತ್ತಭಟರಂ ಕೊನೆಮೀಸೆಯ ಚಿನ್ನಗಂಡರಂ (ಗದಾಯು. ೪–೨೨); ಕತ್ತರಿಸಿದ ಪನ್ನೆಯೊತ್ತಿದ ಕೊನೆಮೀಸೆ ಸುತ್ತಿದ ಚಿಮ್ಮುರಿ (ಕುರಾಸಾಂ. ೪೧–೯೨); ಪೊದಜಾಂತ ಕೊನೆಮೀಸೆಯೆಲ್ಲಿ ಪವಳದ ಪೋಲ್ವಧರವದೆಲ್ಲಿ (ಮೋಹತ. ೮–೧೧); ನಗೆಮೊಗ ಕೆಂಬಲ್ಲೆಸೆವ ತಳಿರ್ದುಟಿ ಸೊಗಸುವ ಕೊನೆಮೀಸೆ (ಜೀವಂಸಾಂ. ೧೬–೨೦). ೨. ಮೀಸೆಯ ತುದಿ; ತುದಿಮೀಸೆ: ಭುಗಿಲ್ ಭುಗಿಲೆನುತೆ ಸೌಂದರಂ ಕೊನೆಮೀಸೆಕೆತ್ತೆ ಸಿಡಿಲೇಳ್ಗೆಯೊದ್ದಂ ಕರಂ (ನಂಬಿರ. ೧೬–೧೭೦); ಕೋಪದಿಂ ಕೊನೆಮೀಸೆ ಕೆತ್ತೆ (ತಿರುರ. ೧೮–೨೦).
[ಕೊನೆ$_2$ + ಮೀಸೆ]

**ಕೊನೆಮುಟ್ಟ** (ಅ). ಕಡೆಯತನಕ; ಕೊನೆಯವರೆಗೆ: ಎಲ್ಲವನ್ನೂ ಕೊನೆಮುಟ್ಟ ಶೋಧಿಸಿ (ಕಬಸಾ. ೧೪).
[ಕೊನೆ$_2$ + ಮುಟ್ಟ$_2$ (< ಮುಟ್ಟಂ)]

**ಕೊನೆಮುಟ್ಟಿಸು** (ಕ್ರಿ). = ಕೊನೆಗೊಳಿಸು: ಆ ಕಾರ್ಯಗಳನ್ನು ಕೈಕೊಂಡು ಕೊನೆಮುಟ್ಟಿಸುವವರೆಗಿನ ಬೆಳವಣಿಗೆಯನ್ನೆಲ್ಲಾ ಬರೆದಿಡಬೇಕೆಂದೂ . . . ಹೇಳಿದ್ದರು (ರಾಯುಕ. ೫).
[ಕೊನೆಮುಟ್ಟು + –ಇಸು$_3$]

**ಕೊನೆಮುಟ್ಟು** (ಕ್ರಿ). ತುದಿಯನ್ನು ಮುಟ್ಟು; ಕಡೆಸೇರು; ಮುಗಿ: ಒಂದೊಂದಾಗಲೆ ವನಿತಾಮಣಿಯೆಣಿಪುದೆನ್ನ ನಾಮಾಕ್ಷರಮಂ ಕೊನೆಮುಟ್ಟುವನಿತರೊಳ್ ನಿನ್ನನು ಕರೆಯಿಪೆ (ಶಾಕುಂತ. ೪೪ ಅಡಿಟ); ದ್ವಿತೀಯ ಮಹಾಯುದ್ಧವು ಕೊನೆಮುಟ್ಟುತ್ತ ಬರುತ್ತಿದ್ದ ಸಮಯ (ಒಡ್ಡಿಉ. ೪). [ಕೊನೆ$_2$ + ಮುಟ್ಟು$_1$]

**ಕೊನೆಮುಳ್** (ನಾ). ಮುಳ್ಳಿನ ತುದಿ; ಮುಳ್ಳುಮೊನೆ: ಕೊನೆಮುಳ್ಗಳಂತಾಗೆ ಹಿಂದುಮುಂದುಗಳೆಲ್ಲ ಕೊನೆದುಬಾಡಿದ ನಿರತೆಯಂ ಮಾಲಿಸುವಳು (ಕಾಲೂರ. ೧೧೩–೨೩೫). [ಕೊನೆ$_2$ + ಮುಳ್$_2$]

**ಕೊನೆಯಚ್ಚು** (ನಾ). ಪತ್ರಿಕೆಯ ಮುದ್ರಣ ಮುಗಿಯುವ ಹೊತ್ತಿನಲ್ಲಿ ಬಂದ ತೀರ ತಾಜಾಸುದ್ದಿ: ಆ ಮಹತ್ವದ ವಿಷಯ ನಿನ್ನೆ ಪತ್ರಿಕೆಯ ಕೊನೆಯಚ್ಚಿನಲ್ಲೇ ಪ್ರಕಟವಾಗಿತ್ತು (ರೂಢಿ).
[ಕೊನೆ$_2$ + ಅಚ್ಚು$_3$]

**ಕೊನೆಯುಸಿರು** (ನಾ). ಜೀವನದ ಕೊನೆಯ ಶ್ವಾಸ:
ಕೊನೆಯುಸಿರೆಳೆ = ಸಾಯು: ಅವರು ಕರಗಿ ಕಣ್ಣೀರಿಡುತ್ತಾ ಕೊನೆಯುಸಿರೆಳೆದರೆ ನಿನಗೆ ತಾನೇ ಒಳ್ಳೆಯದಾದೀತೇ (ಹಂಗೀತ. ೮೨).
[ಕೊನೆ$_2$ + ಉಸಿರು$_2$ (< ಉಸಿರ್$_2$)]

**ಕೊನೆವಣ್** (ನಾ). ರೆಂಬೆಯ ತುದಿಯಲ್ಲಿರುವ ಹಣ್ಣು: ಜಂಭಾರಿಪುರಕಡರುವ ರತ್ನದಂತೆ ದಾಳಿಂಬದ ಕೊನೆವಣ್ಗಳಿಹವು (ಮೋಹತ. ೨೪–೫೧).
[ಕೊನೆ$_2$ + ಪಣ್$_2$]

**ಕೊನೆವರಿ** (ಕ್ರಿ). ೧. ಕೊನರು; ಚಿಗುರುಬಿಡು: ಧರೆಯ ಮೇಲೊಡೆದಂಕುರಿಸಿ ಕೊನೆವರಿ[ಪಾಠಾಂ. ರೆ]ದೊಡನೆ ಪಲ್ಲವಿಸಿ ಬೆಳೆದುದು (ಬಸವು. ೫೧–೭೯). 'ಕುಡಿವರಿ' ಪರಾ. ೨. ಹಬ್ಬು; ಪಸರಿಸು: ಕೋಪಾಗ್ನಿ ಕೊನೆವರಿವುತಿರಲು (ಸೋಮುಚ. ೫–೭). ೩. ಕೊನೆಗೊಳ್ಳು; ಮುಗಿ: ಜಂಕಿಸಿತಿಂತುಡುಸಂಕುಳ ಹೊಂಚುವ ಮಿಂಚುಹುಳಂಗಳ ಬೇಸಗೆ ಕೊನೆವರಿಯೆ (೧೪ವಿಂ. ೯೩–೭). [ಕೊನೆ$_2$ + ಪರಿ$_1$]

**ಕೊನೆವಲ್**, ಕೊನೆಹಲ್ಲು (ನಾ). ೧. ಹಲ್ಲಿನ ಕೊನೆ, —ತುದಿ. ೨. ಬಾಯ ಕಡೆಯಲ್ಲಿರುವ ಹಲ್ಲು; ಕೋರೆಹಲ್ಲು. 'ಕೊನೆವಲ್ಲ' ಪರಾ. **ಕೊನೆಹಲ್ಲು**: ೧. ಈ ಕಾಷ್ಠಗಳನ್ನು ಕೊನೆಹಲ್ಲಿನಲ್ಲಿ ಜಗಿದು ದಂತಧಾವನವಂ ಮಾಡಿ (ಸಕವೈ. ೨೯). [ಕೊನೆ$_2$ + ಪಲ್]

**ಕೊನೆವಲ್ಲ** (ನಾ). ಕೋರೆ ಹಲ್ಲುಳ್ಳವನು : ಕುಸಿಗೊರಲಂ, ಕೊನೆವಲ್ಲಂ, ಕಾರೊಡಲಂ (ಭಾಷಾಭೂ. ೧೫೦ ಉದಾ). [ಕೊನೆವಲ್ + -ಅ$_7$]

**ಕೊನೆವಾಡು** (ನಾ). ಕೊನೆಯಹಾಡು ; ಅಂತ್ಯಗೀತೆ : ಕೊನೆವಾಡು (ಬದ್ಧಪ್ರ. ೪೭-೧೦೩೧). [ಕೊನೆ$_2$ + ಪಾಡು$_2$]

**ಕೊನೆವಾಲ** (ನಾ). ಬಾಲದ ತುದಿ : ಲೋಲಕರ್ಣವನೆತ್ತಿ ತಿತ್ತಿರಿಗಾಳೆಗಳ ನಿಂದಾಲಿಸುತ ಕೊನೆವಾಲದಿಂ ತೊಡೆದಂಗವನು . . . ಐತಹ ಗೋವುಗಳ ಸುಕುಮಾರನೀಕ್ಷಿಸಿದ (ಜೀವಂಚ. ೬-೨೬). [ಕೊನೆ$_2$ + ಬಾಲ$_1$]

**ಕೊನೆವಾಸೆ** (ನಾ). ಕಿಬ್ಬೊಟ್ಟೆಯಿಂದ ಎದೆಯವರೆಗೆ ಹರಡಿದ ನವಿರಾದ ಕೂದಲು ಸಾಲಿನ ತುದಿ ; ಬಾಸೆಯ ತುದಿ : ಪೆಜ಼ ನೊಸಲುಂ ಬಟ್ಟದೊಡೆಯುಂ ಸೆಳ್ಳುಗುರುಗಳುಂ ಕಿಱುದೊಡೆ ಕೊನೆವಾಸೆಯುಂ ಮುಂಬರೆಯುಂ ತಂಬೆಲರುಂ ನೊರ್ಕುಗೋಗಿಲೆಯೆಂದುಂ (ಕವಿಕಂ. ೧೮೩). [ಕೊನೆ$_2$ + ಬಾಸೆ$_1$]

**ಕೊನೆವಾಳೆ** (ನಾ). ಒಂದು ಜಾತಿಯ ಬತ್ತ : ಕೊಟ್ಟಸಲೆಗಡ್ಡೆ ಕೊನೆವಾಳೆ ಸೇವ (ಎಕ. VI, ಕಡೂರು. ೪-೬೯; 1173) ; ಸೋಮಶಾಲಿಯ ಬಿಳುಮಲ್ಲಿಗೆ ಕೆಂಬೂತಿ ಹೇಮವರ್ಣದ ಕೊನೆವಾಳೆ ರಾಮಣೀಯಕವಾದ ಪುಷ್ಪಮಂಜರಿಯ ಸನಾಮದ ತೆನೆಗಳೊಪ್ಪಿಹುವು (ಕಂಸವಿ. ೫-೬೯). [?]

**ಕೊನೆವಿಡಿ** (ಕ್ರಿ). ರೆಂಬೆಯನ್ನು ಹಿಡಿದುಕೊಳ್ಳು : ಜತನದಪ್ಪದೆ ಕೊನೆವಿಡಿದು ನೇಲುವ ಚರ್ಮರಯತನವಕ್ಕಿಯ ಕಂಡು ನಗುತೆ (ಮೋಹತ. ೨೪-೬೨). [ಕೊನೆ$_2$ + ಪಿಡಿ$_1$]

**ಕೊನೆವುಗುರ್** (ನಾ). ಉಗುರಿನ ತುದಿ : ಕುಂಭಶಿರಃಪ್ರದೇಶಮಂ ಕೊನೆವುಗುರಿಂದೆ ಸೀಳ್ದು (ರಾಜಶೇ. ೫—೧೧೬). [ಕೊನೆ$_2$ + ಉಗುರ್]

**ಕೊನೆವೆರಲು**, ಕೊನೆವೆರಳ್, ಕೊನೆವೆರಳು (ನಾ). ೧. ಬೆರಳಿನ ತುದಿ ; ತುದಿಬೆರಳು : ಬಿನದದಿಂ ಮೊಲೆಯುಣುವ ತಾಯಾನನವ ಕಿಗ್ಗಣ್ಣಿಂದ ನೋಡುತ ಕೊನೆವೆರಲಿನಿಂದೊಂದು ಕುಚಚೂಚುಕವ ಪೊಸೆದೊರ್ಮೆ (ಸಾಳ್ವಭಾ. ೧೭-೩೭). **ಕೊನೆವೆರಳ್** : ೧. ತನ್ನೆಡಗೈಯ ಕೊನೆವೆರಳಿಂ ಬಲದ ಮೊಲೆದುದಿಯವುಂಕಿ (ಸಾಳ್ವಭಾ. ೩-೧೩). **ಕೊನೆವೆರಳು** : ೨. ಕಿರಿ ಬೆಟ್ಟು : ಕೊನೆವೆರಳನುಪ್ಪರಿಸಿ ಕೊಂಡಾಡಿದನು ವಾಲಿಜನ (ತೊರರಾ. ೪-೧೨-೧೧). [ಕೊನೆ$_2$ + ಬೆರಲು (< ಬೆರಲ್)]

**ಕೊನೆವೆರಳ್** 'ಕೊನೆವೆರಲು' ನೋ.

**ಕೊನೆವೆರಳು** 'ಕೊನೆವೆರಲು' ನೋ.

**ಕೊನೆವೆರ್ಚು** (ನಾ). ೧. ಹಬ್ಬುಗೆ. ೨. (ಆಲಂ) ಹಿಗ್ಗು ; ಸಂತೋಷ (?) : ನುಡಿಗಬ್ಬದ ಗಬ್ಬದುಬ್ಬರದಿಂ ನನೆಕೊನೆವೋಗಿ ಕೊನೆವೆರ್ಚಿನ ಪುರ್ಚಿನ ಪೊಳ್ಳು ಬಳ್ಳು ಮುದ್ದಣಂ (ರಾಮಾಶ್ವ. ೧೫೨-೬). [ಕೊನೆ$_2$ + ಪೆರ್ಚು$_2$]

**ಕೊನೆವೆಳಗು** (ನಾ). ಚಿಗುರಿನ ಕಾಂತಿ (?) : ನನೆಗೆಜಪ ತುಂಬಿ ಗಜಱಿಯೆನೆ ಕೊನೆವೆಳಗಿಂ ನಿವಿರ್ದ ಬಳ್ಳಿವೆಳಗುರ್ದಿದ ಕಾಲೆನೆ [ಪಾಠಾಂ. ಉರ್ಬಿದ ಕೋಲೆನೆ] ಗಜಱಿಗಟ್ಟುವುದತನುಗೆ ನನೆಗಟ್ಟುವ ನೆವದೆ ಪುಷ್ಪಲಾವೀನಿವಹಂ (ವರ್ಧಪು. ೧-೬೩). [ಕೊನೆ$_2$ + ಬೆಳಗು$_2$]

**ಕೊನೆವೆಱು** (ಕ್ರಿ). ರೆಂಬೆಯನ್ನು ಹೊಂದಿರು, —ಹಿಡಿದಿರು : ಸೊಂಡಿಲೊಳ್ ಕೊನೆವೆತ್ತ ಮದಹಸ್ತಿಗಳ ಕಚ್ಚಿಕೊಂಡಿರ್ದ ಕೇಸರಿಗಳನು ತುಂಡದೊಳೆರಡು ಕಾಲ್ಗಳೊಳೆರಡಾಂತ ಭೇರುಂಡನ ಬೀಳಲಿಕ್ಕಿದನು (ಮೋಹತ. ೧೯-೩೬). [ಕೊನೆ$_2$ + ಪೆಱು$_1$]

**ಕೊನೆಸಾಗು** (ಕ್ರಿ). ಕೊನೆಮುಟ್ಟು ; ಈಡೇರು : ಕಾಮವೆಂಬ ನಿಮಿತ್ತದಿಂದ ಕೊನೆಸಾಗದಿದ್ದರೆ ಆ ಕಾಮವೇ ಕ್ರೋಧವಾಗಿ ಪರಿಣಮಿಸಬಹುದು (ಕೃವಾಭೀ. ೩೮). [ಕೊನೆ$_2$ + ಸಾಗು$_1$]

**ಕೊನೆಸಾರ್** (ಕ್ರಿ). = ಕೊನೆಮುಟ್ಟು : ಅನುದಿನಮೊಂದೊಂದಾ ಗೆಣಸಿನಿಯಳೆ ಮಸ್ಸಾವುದಕ್ಷರಂಗಳ ಕೊನೆಸಾರ್ವನಿತರೊಳರ್ಕುಂ ನಿನ್ನಯ ಸನಿಯುದೊಳೆನ್ನಂತವುರವನೊಂದಿಪ್ಪ ಜನಂ (ಶಾಕುಂತ. ೮೭-೧೮೩). [ಕೊನೆ$_2$ + ಸಾರ್$_1$]

**ಕೊನೆಸೊಕ್ಕು** (ಕ್ರಿ). ಅತಿಯಾಗಿ ಸೊಕ್ಕು ; ಮಿತಿಮೀರಿ ಸೊಕ್ಕು : ಗೋಪಾಲಯ್ಯ ನಗುತ್ತ "ತೀರ ಕೊನೆಸೊಕ್ಕಿದ ಮಕ್ಕಳು ನೀವು" ಎಂದು . . . ಹೊರಟರು (ಬೆಟ್ಟಜೀ. ೩೮). [ಕೊನೆ$_2$ + ಸೊಕ್ಕು$_1$ (< ಸೊರ್ಕು$_1$)]

**ಕೊನೆಹಲ್ಲು** 'ಕೊನೆವಲ್' ನೋ.

**ಕೊನೆಹಾಳೆ** (ನಾ). (ಕರಾ) ತೆಂಗಿನ ಹೂವಿಗಿರುವ ಹೊರ ಆವರಣ, —ಮೇಲು ಪದರ ; ಹೊಂಬಾಳೆ ಮೇಲಿರುವ ಹೊದಿಕೆ ; ಕುರುಂಬಳೆ ; ಚಪ್ಪರಿಗೆ. [ಕೊನೆ$_2$ + ಹಾಳೆ]

**ಕೊನ್ನ** (ನಾ). ಪಾಪಿಷ್ಠ ; ಪಾಪಿ : ಕುಂಟರು ಕುರುಡರು ಗಂಟಿಯ ಕೋ[ಪಾಠಾಂ. ಚೋ]ರರು ಕೊಂಟರು ಕೊನ್ನರು ತುಡುಗರು ಗಂಟು ಕಳ್ಳರು ಕೂಡಿ ಹಣವಿನಾಸೆಗೆ ತಮ್ಮ ಕಂಠದಿ ಲಿಂಗಕಟ್ಟಿದರು (ಬಿಜ್ಜರಾ. ೨-೬೨). [← ತಮಿ. ಕೊನ್ನಾಳನ್]

**ಕೊನ್ನವಾಡ** (ನಾ). (?) : ಹೊಳೆಯುತಿರ್ಪ ಸೂರ್ಯಕಾಂತದಂಗಜ ಹಸ್ತಂಗಳಿಂ ನೀಲದ ನೆಲೆಗಟ್ಟುಗಳಿಂದಚ್ಚುಗಳ್ಸಂದ ಕೊನ್ನವಾಡಂಗಳ ಸಾಲ್ಗಳಿಂದ (ಶೂನ್ಯಸಂ. ೩೦೬—೧೩). [?]

**ಕೊನ್ನಾರ**$_1$ (ನಾ). ಗೂಡು ; ಮಾಡ : "ಗೂಡುಃ-ಕೊನ್ನಾರಂ" (ಕಾಶಕ್ಕ. ೨೭) ; ಗುಡಿಯೇನು ಅಷ್ಟು ದೊಡ್ಡದಿದ್ದಿಲ್ಲ, ಅದಕ್ಕೆ ಬಾಗಿಲು ಬಂಕಗಳಿದ್ದಿಲ್ಲ, ಕಿಡಿಕಿ ಕೊನ್ನಾರಗಳಿದ್ದಿಲ್ಲ (ಕುಮುದಿ. ೧೪). [?]

**ಕೊನ್ನಾರ**$_2$ (ನಾ). ಕೊಳ್ಳ ; ದರಿ : "ಕೊನ್ನಾರ-ದೊಡ್ಡಕೆಗ್ಗು, ಕೊಳ್ಳ" (ಜಾನಕೋ. ೪೨). 'ಕೊಳ್ಳಾರ' ಪರಾ. [?]

**ಕೊನ್ನಾರಿ** 'ಕೊಡನಾರಿ' ನೋ.

**ಕೊನ್ನಿಗ** (ನಾ). ಬಲಿಷ್ಠ ; ದೃಢಕಾಯ (?) : ಚೆನ್ನಿಗನಂ ಯೌವನನಂ ಕೊನ್ನಿಗನಂ ಪೊಂಬನಂ ಕರಂ ತೊಂಬನುಮಂ ತನ್ನಯ ಸುದತಿಗೆ ಕಾಪಿಟ್ಟನ್ನಲ್ಲಳೆ ತನ್ನ ಮನೆಯೊಳಿಟ್ಟಂ ಕಿಚ್ಚಂ (ಮುದತಿ. ೮-೩೬) ; ಬಿಲ್ಜೇವಡಂಗೆಯ್ದು ಕಾವತಲೆ ಬಿಲ್ಗೊಂಡಿಸಲ್ಜಲಕ್ಕನೆ ಚೆನ್ನಿಗರ ಕೊನ್ನಿಗರ [ಪಾಠಾಂ. ಸನ್ನುತರ] (ಉದ್ಭದೇ. ೫-೨೬). "ಪ್ರಿಯತಮ" (ಉದ್ಭದೇ. ಕೋಶ). [← ತಮಿ. ಕೊನ್ = ಬಲ, ಶಕ್ತಿ]

**ಕೊಪಣ**, ಕೊಪ್ಪಣ (ನಾ). ಒಂದು ಊರಿನ ಹೆಸರು. ℙ ಈಗಿನ ರಾಯಚೂರು ಜಿಲ್ಲೆಯ ಕೊಪ್ಪಳ : ಪರಮೇಶ್ವರ ಭಟಾರಕ ಪೃಥಿವೀ ರಾಜ್ಯದನ್ದು ಕೊಪಣದಾ ಮೂಜುಪತೀಯಂ ಗುತ್ತಿಯೊಡೆಯ[ನುಮ್] (ಕಇಆ. ೭೦-೧-೪ ; 8ನೆಯ ಶತ) ; ಅದಱೊಳಗಂ ಕಿಸುವೊಲಲಾ ವಿದಿತ ಮಹಾ ಕೊಪಣ ನಗರದಾವುಲಿಗೆಱೆಯಾ ಸದಭಿಸ್ತುತಮಪ್ಪೊಂಕುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೧-೩೭) ; ಗಂಗವಾಡಿ ತೊಂಬತ್ತಱುಸಾಸಿರಂ ಕೊಪಣಮಾದುದು ಗಂಗಣ ದಂಡನಾಥನಿಂ (ಎಕ. II, ೧೨೭-೧೬೦ ; 1113) ; ಮಾಡಿಸಿದಂ ಜಿನೇಂದ್ರಭವನಗಳನಾ ಕೊಪಣಾದಿತೀರ್ಥFದಲು (ಎಕ. II, ೩೮೪-೨೭ ; 1135). **ಕೊಪ್ಪಣ** : ನಾಯಕಿರಂಗು ಕೊಪ್ಪಣದ ಬಣ್ಣವನುಟ್ಟು (ಸೌಂದಕಾ. ೩-೭೧). [?]

**ಕೊಪಣಪುರ**, ಕುಪಣಪುರ (ನಾ). = ಕೊಪಣ : ಮಂಗಳವಾರ ಕೊಪಣಪುರದ (ಎಕ. II, ೧೯೧-೨ ; 1536). **ಕುಪಣಪುರ** : ಶ್ರೀಮಾನ ಧಾಮರಾಜಿತ ರಾಮಾವಳಿ ಕುಪಣಪುರ ವಿನಿರ್ಗತಭಯಂ (ಎಇ. IV, ೬೩-೨ ; 945). [ಕೊಪಣ + ಪುರ]

**ಕೊಪರಿ** 'ಕೊಬ್ಬರಿ$_2$' ನೋ.

**ಕೊಪಲ** 'ಕೊಪ್ಪಲ್' ನೋ.

**ಕೊಪಾಳಿಪಿಳ್ಗಿ** (ನಾ). ಒಂದು ಸ್ಥಳದ ಹೆಸರು: ಉತ್ತರಸ್ಯಾನ್ದಿಶಿ ಬಾಜಿಶೊಬ್ಬೆ ಅರೆಯಾಳ ತೆಙ್ಕ ಕೊಪಾಳಿಪಿಳ್ಗಿ (ಮೈಆರ. ೧೯೨೪, ೮೦-೯೮; 799). [?]

**ಕೊಪುಳವೂರ್** (ನಾ). ಒಂದು ಊರಿನ ಹೆಸರು: ಬಾಗೆಯೂರ ಬಲ್ಲಹನೇಱನೊಳ್ಪಿಯಾನ್ ವೈರಾಳ್ ಸಮಪದರುಳ್ ಕೊಪುಳವೂರ ಬಾಳಿಯೊಳ್ಪೊಣ್ಣದಿಕ್ಕಿಙ್ಗಿಯ ತಮ್ಮುಳೆ ಪಡೆಯುಳೆಱಿದು ಸತ್ತನ್ (ಎಕ. XVI, ತುಮಕೂ. ೯೨-೧೦; 780). [?]

**ಕೊಪ್ಪ**, ಕುಪ್ಪ$_1$ (ನಾ). ೧. ಚಿಕ್ಕಹಳ್ಳಿ; ಕಾಲೂರು: ತೊಱೆಯ ಕಡಿಯ ಕೊಪ್ಪದಲು (ಮೈಆರ. ೧೯೨೮, ೩೧-೨; 1056); ನಗರ ಪಟ್ಟಣಾಗ್ರಹಾರ ಪುರಪಲ್ಲೀ ಕೊಪ್ಪ ಸರ್ವಜನ ಪದಾದಿ ಸರ್ವದೇಶ ಮಠಸ್ಥಾನ (ಎಕ. VII, ಶಿವಮೊ. ೮೦-೪೨; 1235); ಕುಸುಮಶರನ ಕೊಪ್ಪದಂತಿರ್ದ ಕುಸುಮಾಕರೋದ್ಯಾನಮಂ ಪೊಕ್ಕು (ಲೀಲಾವ. ೬-೩೪ವ); ಊರಿನ ಇನ್ನೊಂದು ತುದಿಯಲ್ಲಿ ಆದಿಕರ್ಣಾಟಕರ ಕೊಪ್ಪ (ಹೊಸೂಹ. ೧೬). ೨. ಕೆಲವು ಊರುಗಳ ಹೆಸರಿನ ಕೊನೆಗೆ ಸೇರುವ ಶಬ್ದ. ಉದಾ: ಶುಂಠಿಕೊಪ್ಪ, ಸೊಂಡೆಕೊಪ್ಪ. **ಕುಪ್ಪ$_1$**: ೧. ಪಂಚರಾಸಂಗಮದ ಕುಪ್ಪರೊಳ್ (ಸೌಇಇ. IX-i, ೨೨೬-೬; 1132); ಎರಂಬರಗೆಯ ಕುಪ್ಪ (ಎಕ. III, ತಿರುಮ. ೩೧-೨೧; 1196). [ದೇ. ‖ ತಮಿ. ಕುಪ್ಪ; ತುಳು. ತೆಲು. ಕೊಪ್ಪ]

**ಕೊಪ್ಪಣ** 'ಕೊಪಣ' ನೋ.

**ಕೊಪ್ಪರ$_1$** (ನಾ). ಒಂದು ಸೀಮೆಯ ಹೆಸರು: ಕೊಪ್ಪರ ಪಂಚಶತ ಭುಕ್ತನನ್ತರ್ಗತ (ಇಆ. XI, ೧೧೨-೩೨; 753). [?]

**ಕೊಪ್ಪರ$_2$**, ಖೊಪ್ಪರ$_1$ (ನಾ). ೧. ಮೊಳಕೈ. ೨. ಮೊಳಕಾಲು: "ಕೊಪ್ಪರ – ಕೂರ್ಪರ = ಮೊಣಕಾಲು" (ತದ್ಭಕೋ. ೫೦). ೩. ಮಲ್ಲ ಯುದ್ಧದಲ್ಲಿ ಒಂದು ವರಿಸೆ: ಕಡುಪಿಂ ಕೆಡಪಿ ಕೊಪ್ಪರದೊಳ್ ಕುಮ್ಮಿ ಮಂಡಿಯೊಳ್ ಮಿದಿದು (೧ರಿಕ. ೨-೧೦೫ವ); ಕರವಳಯ ಭುಜಂಗ ಬಂದ ತಳ ಕೊಪ್ಪರ ಡೊಕ್ಕರ (ತ್ರಿಪುವಿ. ೨೬-೧೯). **ಖೊಪ್ಪರ$_1$**: ೨. "ಖೊ[ಪಾಠಾಂ. ಕೊ]ಪ್ಪರ ದಂಡೆಡೋಳಕ್ಕುಕ [ಪಾಠಾಂ. ಡಾಳಕಾ] ಳಾಸ ಚಾಳೆಯ ಮಂಡಿಸೀರಣಂ ಹಜ್ಜೆಯಕ್ಕುಂ" (ಮಂಗರಾ. ೮೮-೩೮). [← ಪ್ರಾ. ಕೋಪ್ಪರ. / ಸಂ. ಕೂರ್ಪರ]

**ಕೊಪ್ಪರ$_3$**, ಖೊಪ್ಪರ$_2$ (ನಾ). ೧. ಕೊಪ್ಪರಿಗೆ; ದೊಡ್ಡ ಪಾತ್ರೆ: "ಕೊಪ್ಪರ (ಕಪ್ಪರ) – ಕರ್ಪರ = ದೊಡ್ಡ ಪಾತ್ರೆ" (ತದ್ಭಕೋ. ೯). **ಖೊಪ್ಪರ$_2$**: ಅಖ್ಖಂಡಂ (ಅಖ್ಖಣ್ಣಂ) ಖೊಪ್ಪರಂ, ಖಾಣಂ (ಶಮದ. ೧೫ ವೃತ್ತಿ). [ದೇ. ‖ ತಮಿ. ಕೊಪ್ಪರೈ; ಮಲ. ಕೊಪ್ಪರೆ]

**ಕೊಪ್ಪರ$_4$** (ನಾ). ದುಷ್ಟ; ದೂರ್ತ. 'ಕೊಪ್ಪರ ಕೇಸರಿ' ಪರಾ. [< ಸಂ. ಖರ್ಪರ]

**ಕೊಪ್ಪರಕೇಸರಿ** (ನಾ). ದುಷ್ಟರಿಗೆ ಸಿಂಹದಂತಿರುವ ರಾಜ; ಒಂದು ಬಿರುದು: ಪೂರ್ವದೇಶಮುಂ ಗಂಗೆಯುಂ ಕೊಣ್ಡ ಕೊಪ್ಪರ ಕೇಸರಿ ಪರ್ಮರಾನ ಒಡೆಯಾರ್ ಶ್ರೀ ರಾಜೇನ್ದ್ರಚೋೞ ದೇವರ್ (ಮೈಆರ. ೧೯೪೬, ೨೮-೧; 1032); ಕೊಪ್ಪರಕೇಸರಿಪನ್ಮರಾನ ಒಡೆಯಾರ್ ಶ್ರೀರಾಜೇಂದ್ರ ದೇವರ್ (ಮೈಆರ. ೧೯೨೦, ೩೧-೪; 1056). [ಕೊಪ್ಪರ$_4$ + ಕೇಸರಿ]

**ಕೊಪ್ಪರಗೇಶರಿವರ್ಮ** (ನಾ). ಒಬ್ಬಾತನ ಹೆಸರು: ಮದಿರಗೊಣ್ಡ ಕೊಪ್ಪರಗೇಶರಿವರ್ಮಂಗೆ ವರಿಷಮಿಪ್ಪತ್ತೊಮ್ಬತ್ತಱೊಳ್ (ಎಕ. X, ಮುಳಬಾ. ೨೦೩-೧; 934). [ಕೊಪ್ಪರಕೇಸರಿ + ವರ್ಮ]

**ಕೊಪ್ಪರಿ** 'ಕೊಬ್ಬರಿ$_2$' ನೋ.

**ಕೊಪ್ಪರಿಕೆ**, ಕೊಪ್ಪರಿಗೆ (ನಾ). ಅಗಲವಾದ ಬಾಯಿಯುಳ್ಳ ಲೋಹದ ಪಾತ್ರೆ; ಕಡಾಯಿ; ಕಟಾಹ: ಬ್ರಹ್ಮಾಂಡಮೆಂಬ ಕೊಪ್ಪರಿಕೆಯ ಮಧ್ಯದಲ್ಲಿ ಸೂರ್ಯನೆಂಬಗ್ನಿಯಿಂ (ಪಂಚತಂ. ೬೫-೫); ದರಿವಿನೊಳಗೊಂದು ಕೊಪ್ಪರಿಕೆ ಹೊನ್ನಿರಲ್ (ಒಹಿರ. ೧೫೪-೨೬); ಭರದಿಂ ಕಮ್ಮೆಣ್ಣೆಯ ಕೊಪ್ಪರಿಕೆ ಕುಂಕುಮಾಂಬುವಿಂ ತೀವಿದ ಕೊಪ್ಪರಿಕೆಗಳಂ ಗಂಧದ ಕೊಪ್ಪರಿಕೆಗಳಂ ಪಂಕ್ತಿಗೊಳಿಸಿದರ್ (ನಳಚಂ. ೪೩೧). **ಕೊಪ್ಪರಿಗೆ**: "ಕಟಾಹಃ, ಕರ್ಪರಃ – ಈ ೨ ಕೊಪ್ಪರಿಗೆ" (ಹಲಾಯು. ೫೨-೧೬೦); "ಕಟಾಹವಾ ಖರ್ಪರವದು ಕೊಪ್ಪರಿಗೆಯಕ್ಕು" (ಮಂಗರಾ. ೬೨-೨೨); ಕೊಪ್ಪರಿಗೆಯಲ್ಲಿ ನೀರಹೊಯಿದು (ಏಲೇಶ್ವ. ೬೩); ಹಾಲು ತುಪ್ಪದ ಕೋಟಿ ಕೊಪ್ಪರಿಗೆಯಂತಲ್ಲಿ (ಬಸರ. ೭-೧೬); ನವ ಕರ್ಪೂರದ ಕಸ್ತುರಿಕುಂಕುಮದ ಕೊಪ್ಪರಿಗೆಗಳ ಸಾಲೆಸೆದುದಂ (ತೊರರಾ. ೧-೧೬-೫೧); ಸಾವಿರಕೋಟಿ ಕೊಪ್ಪರಿಗೆಯ ಪನ್ನೀರ ತೀವಿ ಬಿಟ್ಟತು ತೊಱೆಯಾಗಿ (ಭರಚ. ೧೬-೧೦೮). [< ಸಂ. ಖರ್ಪರಿಕಾ]

**ಕೊಪ್ಪರಿಗೆ** 'ಕೊಪ್ಪರಿಕೆ' ನೋ.

**ಕೊಪ್ಪರಿಸು$_1$**, ಖೊಪ್ಪರಿಸು$_1$ (ಕ್ರಿ). ೧. ತಿವಿ; ಹೊಡೆ; ಬಡಿ: ಖಳರ ಕೊಪ್ಪರಿಸಿದರೆ ಸುಜನರ ತಲೆಗೆ ವೇದನೆಯೇನು (ಕುವ್ಯಾಅ. ೨೦-೩೧). ೨. ಮೀರು; ಹೆಚ್ಚಾಗು; ಅಧಿಕವಾಗು: ಭುವನನೆಱೆ ಹೊಗೆಮದು ಹೆಚ್ಚಿನ ಶಿವನ ಖರೆ ಮೈದೋಱಿತೆನೆ ರಿಪುನಿವಹದಲಿ ನೆಲೆಗೊಂಡುದೀತನ ಖಾತಿ ಕೊಪ್ಪರಿಸಿ (ಕುವ್ಯಾಭೀ. ೯-೨೨). ೩. ಗರ್ವಿಸು; ದರ್ಪತೋರು (?): ಇನ್ನಾದರೆಯು ಕೌತೇಯರನು ಕರೆದಾದರಿಸಿ ಕೊಂಡು ಧರೆಯನೆನೆ ಕೊ[ಪಾಠಾಂ. ಜೊ]ಪ್ಪರಿಸಿ (ಕುವ್ಯಾಅ. ೧೪-೩). **ಖೊಪ್ಪರಿಸು$_1$**: ೧. ಖೋಡಿಯ ಖೂಳರನು ಖೊಪ್ಪರಿಸಿ ಚೂಣಿಯ ಚರರ ಚಪ್ಪರಿಸಿ (ಕುವ್ಯಾಕ. ೧೬-೨೧); ಬೆರಸಿ ಧಾಳಾಧೂಳಿನಲಿ ಖೊಪ್ಪರಿಸಿ ಖಾಡಾಖಾಡಿಯಲಿ (ತೊರರಾ. ೬-೩೮-೩). ೨. ವಾರಿಧಿ ಸಮೂಹದೊಳುಣ್ಮುವ ಘೋರಘೋಷಮಂ ಖೊಪ್ಪರಿಸುತ್ತ ಮತ್ತೆ ಪೆಚಿತೇನದು ವಿಕ್ರಮ ಸಿಂಹಗರ್ಜಿತಂ (ಸೂಕ್ತಿಸು. ೧೮-೬). [ಕೊಪ್ಪರ$_2$ + -ಇಸು$_3$]

**ಕೊಪ್ಪರಿಸು$_2$** 'ಕುಪ್ಪರಿಸು' ನೋ.

**ಕೊಪ್ಪಲ್**, ಕೊಪಲ, ಕೊಪ್ಪಲು, ಕೊಪ್ಪಳ (ನಾ). ೧. ಕುಪ್ಪೆ; ರಾಶಿ. ೨. ಚಿಕ್ಕಹಳ್ಳಿ; ಉಪಗ್ರಾಮ: ಕಳಸವಳ್ಳಿಗೇರಿಯ ಬಡಗಣ ಕೊಪ್ಪಲ ಹಿತ್ತಿಲಲು ಹರದವನೆಯಿಂ ಮೂಡಲು (ಎಇ. XVIII, ೨೧೦-೪೨; 1167); ಕೊಪ್ಪಲ್, ಕೊಪ್ಪಂ, ಕೊಪ್ಪು (ಶಮದ. ೪೬ ಪ್ರಯೋ); ಎಲ್ಲಿ ನೋಡಿ ದಡಲ್ಲಿ ರನ್ನಗಳ ತಪ್ಪಲಿಂ ಸುರಧೇನುವಿನ ಕೊಪ್ಪಲಿಂ (ಭಕ್ತಾಚ. ೧-೧೭); ಆದಱೊತ್ತಿನೊಳೊಂದು ಕೊಪ್ಪಲೊಳೊರ್ವಂ ... ತಪಮನಾಚರಿಸುತಿರಲೊಡಂ (ರಾಮಾಶ್ವ. ೧೩೭-೯). ೩. ಗಿಡಗಳ ಗುಂಪು; ತೋಪು. **ಕೊಪಲ**: ೩. ಆಡಿಗಳಿಗೆ ಅಭಿಶೇಖ ಮಾಡುವ ಬಗೆ ಸಹ ಪ್ರಸಾದ ಹೊರತ್ತಾಗಿಗ ದೇವರ ಕೊಪಲ ಮಾಡಿಕೊಂಡು ರಾಜಾಂಗಳ ಗುಡಿಸುವ ಬಗೆ ಸಹ ಜನ ೧ಕೆ ಗ ಖ ಉಭಯಂಗ,೧೧ (ಎಕ. VIII, ತೀರ್ಥಹ. ೧೭೮-೭೮; 1678); ದೇವಾಲಿ ಕೊಪ್ಪದಲಿ ಮಠದ ಸಮೀಪದಲ್ಲಿ ರೇಖೆಗೆ ಹೊರಗಾದ ಭೂಮಿಯಿಂದ ಕೊಪಲ ಮಾಡಿಕೊಂಬ ಬಗೆ ಉತ್ತಾರ ಕೂಟ ಸ್ಥಳಕೆ ಮಾಡಿಕೊಟ್ಟ ಸಿಸ್ತು (ಎಕ. VIII, ತೀರ್ಥಹ. ೮೭-೪೪; 1773). **ಕೊಪ್ಪಲು**: ೨. ಚಿಕ್ಕಹಳ್ಳಿಗಳು ಉಪಗ್ರಾಮಗಳು (ರೈಸ್‌ಗೆ. ೫೫೮); ಚಿನ್ನನ ಹಳಿಯುಂ ಕೊಪ್ಪಲುಗಳ್ ವೆರಸು ಕಸಬೆ ಬೆಳುಗುಳ ಸಮೇತಂ (ಎಕ. II, ೨೪೯-೨೨; 1773); ಗಿಡಾ ಕಡಿಸಿ ಸಾಗುವಳಿ ಮಾಡಿದ ಕೊಪ್ಪಲ ಭೂಮಿಯಂನು (ಮೈಆರ. ೧೯೨೯, ೯೪-೨೨; 1813); ಕಾಡು ಕುರುಬರ ಕೊಪ್ಪಲು ಇದ್ದಿತು (ಕರ್ಣಾಸಂ. ೯೭); ಈ ಜಹಗೀರಿನಲ್ಲಿ ನೂರಾರು ಗ್ರಾಮಗಳೂ ಸಾವಿರಾರು ಕೊಪ್ಪಲುಗಳೂ (ಬೆನ್ನಬೇ. ೭೭).

೩. ಆ ಗುಡ್ಡಗಳ ಮೇಲೆ. . .ತರುಣ ವೃಕ್ಷಗಳ ದಟ್ಟವಾದ ಕೊಪ್ಪಲುಗಳು ಒಪ್ಪುತ್ತವೆ (ಉರಾಜ. ೩೭). ೪. ಅಂತ್ಯಜರ ಕೊಪ್ಪಲಿನ ದೀಪದೊಲು ಪರಮಾತ್ಮನಿಂತಹಂ ಎಲುನರದ ಪಂಜರದ ಗಿಳಿಯಾಗಿ (ಪರಶು. ೯–೮); ಅಪ್ಪಣೆಯಾದರೆ ಕೊಪ್ಪಲು ಉಪ್ಪರಿಗೆಯಾಗುವುದು(ಸೌಗಂಧಿ.೧೩೬–೧೮); ದೊಡ್ಡ ಶಿಂಗಯನದು ಒಂದು ಕೊಪ್ಪಲು (ಚಂಗೂಲಿ. ೯). ೫. ಕೆಲವು ಊರುಗಳ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ. ಉದಾ: ಅಂಚೆ ಕೊಪ್ಪಲು, ಒಂಟಿಕೊಪ್ಪಲು. **ಕೊಪ್ಪಳ**: (ಕ).

[ದೇ. ॥ ತಮಿ. ಕುಪ್ಪಲ್]

**ಕೊಪ್ಪಲು** 'ಕೊಪ್ಪಲ್' ನೋ.

**ಕೊಪ್ಪಳ** 'ಕೊಪ್ಪಲ್' ನೋ.

**ಕೊಪ್ಪಾರಿ** (ನಾ). ಕಿವಿಯ ಒಂದು ಆಭರಣ; ಕೊಪ್ಪು: ಮಕ್ಕಳು ಮನೆತುಂಬ ಕೊಪ್ಪಾರಿ ಕಿವಿತುಂಬ ಲಕ್ಷಣದ ತಾಲಿ ಕೊರಳ್ತುಂಬ (ಹಳ್ಳಿಯ. ೧೩೩). [< ಕೊಪ್ಪು$_2$]

**ಕೊಪ್ಪು$_1$**, ಕೋಪು$_3$ (ನಾ). ೧. ಬಿಲ್ಲಿನ ತುದಿ; ಗೊಲೆ: "ಕಾರ್ಮುಕ ಕೋಟಿಃ, ಅಟನಿಃ – ಈ ೨ ಬಿಲ್ಲಿನ ಕೊಪ್ಪು" (ಹಲಾಯು. ೭೬–೩೧೧); ಜಯದ್ರಥನಂ ಕೋಡಗಗಟ್ಟುಗಟ್ಟಿ ಬೆನ್ನಂ ಬಿಲ್ಲಕೊಪ್ಪಿನೊಳಿಱಿದು ನಡೆಯೆಂದು ನಡೆಯಿಸಿ (ಪಂಪಭಾ. ೭–೩೧ ವ); ಬಿಲ್ಲ ಕೊಪ್ಪು ತಾಳಿಗೆಯಂ ಚುರ್ಚಿ ನೆತ್ತಿಯೊಳ್ ಮೂಡುವುದುಂ (ಪಂಚತಂ. ೩೦೨–೧೮); ನಾರಿಯ ನೀವಿ ಮಿಡಿದು ಬಾಗಿದ ಕೊಪ್ಪಿನಿದ್ದೆಸೆಯನಾರೈದು (ಹಚಕಾ. ೬–೨೮); ಬಿಲ್ಲ ಕೊಪ್ಪಿನಲಾತ ಕದಪಿನ ಮುಕುಟದೊಲವಿನ ಬೆರಳ ಬಿಜುದನಿಯ (ಕುವ್ಯಾಅ. ೪–೧೬); ಕೆತ್ತುವ ಮುಯ್ವನೊತ್ತಿ ಬಿಲ್ಗೆ ಕೊಪ್ಪನೇಱಿಸಿ (ರಾಮಾಶ್ವ. ೯೦–೧೫). ೨. ತುದಿ; ಮೊನೆ; ಅಗ್ರಭಾಗ: ಕೋಪಾಟೋಪದಿಂದಂ ಕುಲಕುಧರ ಮಹಾಶೃಂಗಮಂ ಕೋಡ ಕೊಪ್ಪಿಂ ತೊಸೆದೀಡಾಡುತ್ತೆ (ಸೂಕ್ತಿಸು. ೩–೩೪). **ಕೋಪು$_3$**: ೧. ಮೃಗರೆಡು ಕುಳಿತಿಕ್ಷು ವಿಶಿಖಾಸನಕ್ಕೆಯಳಿಯೌಘ ಪರ್ೌವಿಯ ವುಭಯ ಕೋಪಿಂಗೆಯುಳವಡಿಸಿ (ನವಮೋ. ೬–೪೮). ೨. ನೊಗದ ಒಂದು ಕೋಪು ತುಳಿದರೆ ಮುಕ್ಕಣ್ಣ ತಾನಾಗಿಯೇ ಬಂದು ಹೆಗಲು ಕೊಡುತಿತ್ತು (ನದೀಪ. ೨೬). [ದೇ. ॥ ತೆಲು. ಕೊಪ್ಪು, ಕೋಪು]

**ಕೊಪ್ಪು$_2$** (ನಾ). ೧. ಹೆಂಗಸರು ಕಿವಿಯ ಮೇಲುಭಾಗದಲ್ಲಿ ತೊಡುವ ಒಂದು ಬಗೆಯ ಆಭರಣ: ಮಕುಟಂ ಕೇಯೂರಂ ಕರ್ಣಕುಂಡಲಂ ಕೊಪ್ಪು ಸರಿಗೆ . . . ಎಂಬ ಭೂಷಾನಿಕರಮಂ (ಆದಿಪು. ೫–೩೩); ಕಿವಿಯ ಕೊಪ್ಪಂ ನೀಂ ಕೊಳ್ವಡೆ ನೋಯದಂತೆ ತೆಗೆ (ಧರ್ಮಪ. ೯–೨೧); ಹೊಳೆವ ಮುತ್ತಿನ ಕೊಪ್ಪುಗಳ ಕರ್ಣಾಭರಣ ವೆಸೆಯೆ (ಬಸವು. ೪–೩೯); ಶ್ರವಣನಾಳವ ಮುಟ್ಟುವಂದದೆ ಕೊಪ್ಪನಿಕ್ಕಿದರು ಕರ್ಣದಲಿ (ಮೋಹತ. ೨೩–೩೭). ೨. ಒಂದು ಕಂಠಾಭರಣ; ಸರ: ಕತ್ತಿನ ಕೆಳಗೆ ಕಪ್ಪಿನ ಕೊಪ್ಪಿನವಳು (ಪುರಂದ. ೧–೫೯–೧); ಉಟ್ಟ ಸಾಲಿಯ ಸೀರೆ ಕೊಪ್ಪು ಪೇರುರದಲ್ಲಿ (ಮೋಹತ. ೧೪–೭೭).

[ದೇ. ॥ ತಮಿ. ಮಲ. ತುಳು. ಕೊಪ್ಪು; ಕೊಡ. ಕೊಪ್ಪುಂದಿ]

**ಕೊಪ್ಪು$_3$** (ನಾ). ೧. ಸುರುಳಿಯಾಗಿ ಎತ್ತಿ ಕಟ್ಟಿದ ತಲೆಯ ತುರುಬು; ಮುಡಿಗಂಟು. ೨. ತುರುಬಿನಲ್ಲಿ ಧರಿಸುವ ಒಂದು ಬಗೆಯ ಚಿನ್ನದ ಒಡವೆ; ಜಡೆಬಿಲ್ಲೆ. 'ಚವರಿ ಕೊಪ್ಪು' ಪರಾ.

**ಕೊಪ್ಪುದಲೆ** = ಕೊಪ್ಪು ಧರಿಸಿದ ತಲೆ (?) : ಇಟ್ಟಳಮಾದ ಕೀರ್ತಿ ಮುಖದ ಕೊಪ್ಪುದಲೆಯ ಪಂಚವರ್ಣಗೆಯುಪ್ಪರವಟ್ಟವಾಡಂಬರವ ಉಂಬಮಾಗೆ (ಮಹಾನೇ. ೧೨–೫೭ ವ).

[ದೇ. ॥ ತಮಿ. ತೆಲು. ಕೊಪ್ಪು; ಕುರುಖ್. ಖೊಪಾ, ಖೊಪ್ಪಾ./ ಪ್ರಾ. ಗೋಪ]

**ಕೊಪ್ಪು$_4$** (ನಾ). ಅಂದ; ಚೆಂದ: ಹಾವಭಾವ ವಿಲಾಸ ವಿಭ್ರಮಂಗಳ ನೆಲ್ಲ ತೀವಿ . . . ಅಭಿನಯದ ಕೊಪ್ಪುಗಳ [ಪಾಠಾಂ. ಅಭಿನಯಂಗಳಂ] ತೋಱಿಸುತ (ಪ್ರಾಭರಾ. ೯–೧೫). [← ತಮಿ. ಕೋಪ್ಪು]

**ಕೊಪ್ಪುರ** (ನಾ). ದಿಣ್ಣೆ; ಮೇಡು (?) : ಕಬ್ಬು ಕಾಲ್ವೆಯ ಪಡುವಣ ಉಱುಗ ಗದ್ದೆಯೊಳಗಾಗಿ ಮೂಡಣ ಕೊಪ್ಪುರದಲಿ ಗದ್ದೆ ಖಂಳ (ಸೌಇಇ. IX–i, ೨೭೦–೬೪ ; 1169).

[ದೇ. ॥ ತಮಿ. ಕುಪ್ಪಲ್ ; ತೆಲು. ಕೊಪ್ಪರ]

**ಕೊಪ್ಪೆ**, ಕುಪ್ಪೆ$_2$, ಗೊಪ್ಪೆ$_1$ (ನಾ). ಮಳೆಗಾಲದಲ್ಲಿ ಕಂಬಳಿ ಮೊದಲಾದವುಗಳಿಂದ ತಲೆಗೆ ಮಾಡಿಕೊಳ್ಳುವ ಗವುಸು; ಗೊರಗು: ಕೊಪ್ಪೆಯಿಂದಮುಲ್ಲಸಿತ ಕಾಷಾಯ ಕಂಥಾ ವೇತ್ರಕೌಪೀನ ಪಾದುಕೆಗಳಿಂದ . . . ಶೋಭಿಸುತಿರ್ದ (ಮಹಾಂತೇ. ೬–೧೨). **ಕುಪ್ಪೆ$_2$**: ಕುಪ್ಪೆ ಉಂಟು, ಮಳೆ ಬಂದರೂ ಚಿಂತೆಯಿಲ್ಲ (ರೂಢಿ). **ಗೊಪ್ಪೆ$_1$**: ಮೂಱುಲೋಕವೆಲ್ಲವು ಎನ್ನ ಕಂಬಳಿಯ ಗೊಪ್ಪೆಯಲ್ಲಿ ತುಂಬಿದೆನೆಂದು (ಕಲ್ಯಾಶಾಂ. ೩೭); ತಲೆಯನ್ನೂ ಕತ್ತನ್ನೂ ಮುಚ್ಚುವ ಒಂದು ಗವುಸು (ನಿಲುವಂಗಿ, ಮೊದಲಾದವುಗಳ ಭಾಗವಾಗಾಗಲಿ ಪ್ರತ್ಯೇಕವಾಗಾಗಲಿ ಇರಬಹುದು) ಗೊಂಗಡಿ; ಗೊಪ್ಪೆ; ಕುಂಚಿಗೆ (Hood. ಇಂಕನಿ).

[ದೇ. ॥ ತಮಿ. ಕುಪ್ಪೈ; ಮಲ. ಕುಪ್ಪ; ತುಳು. ಕುಪ್ಪೆ; ತೆಲು. ಪರ್ಜಿ. ಕುಪ್ಪ]

**ಕೊಬರಿ** 'ಕೊಬ್ಬರಿ$_2$' ನೋ.

**ಕೊಬಳು** 'ಕೊಗಳು' ನೋ.

**ಕೊಬಿರಿ** 'ಕೊಬ್ಬರಿ$_2$' ನೋ.

**ಕೊಬ್ಬಟ್ಟು** (ನಾ). ಭತ್ತವನ್ನು ಕುಟ್ಟಿ ತೆಗೆದ ಹೊಟ್ಟು, —ತೌಡು; "ಕೊಬ್ಬಟ್ಟು = ಭತ್ತದ ಗೊಳಲಿ" (ಗಂಗಾಮು. ೧೦೨). [?]

**ಕೊಬ್ಬರಿ$_1$** (ಕ್ರಿ). ಕೊಬ್ಬಿ ನುಗ್ಗು; ಗರ್ವದಿಂದ ನುಗ್ಗು (?) : ಕೂಗಿ ಕೊಬ್ಬರಿವುತ್ತ ಕದಳಿವೃಂದಂಗಳಂ ನಾಗನಿಕರಂ ಪೊಕ್ಕು ಮುರಿವಂತೆ (ತುರಂಗ. ೪೯–೨೮). [ಕೊಬ್ಬು$_1$ (< ಕೊರ್ವು$_1$) + ಪರಿ$_1$]

**ಕೊಬ್ಬರಿ$_2$**, ಕೊಪರಿ, ಕೊಪ್ಪರಿ, ಕೊಬರಿ, ಕೊಬಿರಿ, ಖೊಬರಿ (ನಾ). ತೆಂಗಿನಕಾಯಿಯ ಒಳಗೆ ಗಟ್ಟಿಗೊಂಡ ತಿರುಳು; ಒಣಗಿದ ಕಾಯಿ: ಕೊಬ್ಬರಿಯು ಕಾಯವೊಳಗಿಲ್ಲಾಯ್ತು (ಗುರುಚಾ. ೧೩–೯೦); ಅವು ಚಿಪ್ಪುಗಟ್ಟಿದ ಬಳಿಕ ಒಳಗೆ ಕೊಬ್ಬರಿಯಾಗುತ್ತದೆ (ಮುಂಬಯಿ. ೨–೫೧); ಅವರಿಗೆ ಕೊಬ್ಬರಿ ಬೆಲ್ಲ ಭತ್ತವನ್ನು ಕೊಟ್ಟು ಕಳುಹಿಸುತ್ತಿದ್ದರು (ಹುಟ್ಟಹ. ೯); ಕೊಬ್ಬರಿಗೆ ಸಲ್ಲಬೇಕಾದ ಗಮನವನ್ನು ಕರಟಕ್ಕೆ ಸಲ್ಲಿಸಬೇಕಾಗಿದೆ (ಸಾಹಿಶ. ೫೫); ಎಳ್ಳು ಕೊಬ್ಬರಿ ಬೆಲ್ಲ ಕಬ್ಬು ಬಾಳೆಯ ಹಣ್ಣು (ಇಂಚಾಪ. ೧೧೬–೩೮). **ಕೊಪರಿ**: ಹುರಿಗಡಲೆ ಕೊಪರಿ ಮೊದಲಾದ ವಸ್ತುಗಳು (ಸೌಗಂಧಿ. ೪೩–೧೮); ಹಸನಾದ ಕಡಲೆ ಕೊಪರಿ ಬೆಲ್ಲ ಬಿಳಿಯಲೆ ರಸದಾಳಿಗಬ್ಬಡಕೆಗಳಾ (ಚಂಪ್ರಸಾಂ. ೧೫–೧೧೦). **ಕೊಪ್ಪರಿ**: (ಸಿರಿಕೋ. ೧೩೮). **ಕೊಬರಿ**: ತಿಪಟೂರು ಕೊಬರಿ (ರೂಢಿ). **ಕೊಬಿರಿ**: ಮೆಣಸು ಝುಲ್ಲಿ ಪಟ್ಟೆ ಕೊಬಿರಿ ಕವಾಡ ಮುಂತಾದ (ಎಕ. VIII, ಸಾಗರ. ೫೩–೩೧ ; 1674). **ಖೊಬರಿ**: ಅಡಕೆ ಝುಲ್ಲಿ ಪಟೆ ಖೊಬರಿ ಕವಾಡ ಅಕ್ಕಿ . . . ಜವಳಿ ಮುಂತಾಗಿ (ಎಕ. VII, ಶಿವಮೊ. ೨೮–೧೫ ; 1670).

**ಕೊಬ್ಬರಿಚಟ್ನಿ** = ಕೊಬ್ಬರಿಯ ತುರಿಯನ್ನು ಸೇರಿಸಿ ರುಬ್ಬಿದ ಚಟ್ನಿಣಿ; ಕಾಯಿಚಟ್ನಿ: (ಕ). **ಕೊಬ್ಬರಿತುಪ್ಪ** = ಕೊಬ್ಬರಿಯೆಣ್ಣೆ: (ಕ). **ಕೊಬ್ಬರಿದೋಸೆ** = ಕೊಬ್ಬರಿ ತುರಿಯನ್ನು ಅರೆದು ಹಿಟ್ಟಿನಲ್ಲಿ ಬೆರಸಿ ಮಾಡಿದ ದೋಸೆ: (ಕ). **ಕೊಬ್ಬರಿಬಟ್ಟಲು** = ೧. ತೆಂಗಿನ ಕಾಯನ್ನು ಒಡೆದಾಗ ಆಗುವ (ಎರಡು) ಹೋಳು. ೨. ಒಣಗಿದ ಕೊಬ್ಬರಿಗಿಟುಕಿನ ಹೋಳು: ಎರಡು ಕೊಬ್ಬರಿಬಟ್ಟಲು ಕೊಡು (ರೂಢಿ).

**ಕೊಬ್ಬರಿಯೆಣ್ಣೆ**, **ಖೊಬ್ಬರಿಯೆಣ್ಣೆ** = ಕೊಬ್ಬರಿಯನ್ನು (ಗಾಣದಲ್ಲಿ) ಹಿಂಡಿ ತೆಗೆದ ಎಣ್ಣೆ: (+); ಖೊಬ್ಬರಿಯೆಣ್ಣೆಯ ಡಬ್ಬಿಗಳನ್ನು . . . ತರಿಸಿಕೊಳ್ಳುವವರಿಗೆನೆ (ಮುಂಬವ್ಯಾ. ೧೭ ಪ್ರಸ್ತಾವನೆ). **ಕೊಬ್ಬರಿಸರ** = (ಹೋಳಿಹಬ್ಬದಲ್ಲಿ ಕೊಡುವ) ಕೊಬ್ಬರಿ ಬಟ್ಟಲುಗಳ ಸರ: (+). **ಕೊಬ್ಬರಿಹಿಂಡಿ** = ಕೊಬ್ಬರಿಯಿಂದ ಎಣ್ಣೆ ತೆಗೆದ ಮೇಲೆ ಉಳಿಯುವ ಚರಟ: ಕೊಬ್ಬರಿಹಿಂಡಿಯನ್ನು ದನಗಳಿಗೆ ಹಾಕುತ್ತಾರೆ (ರೂಢಿ).

[ದೇ. ‖ ತಮಿ. ಕೊಪ್ಪರೈ, ಕೊಪ್ಪರಿ; ಮಲ. ಕೊಪ್ಪರ; ತುಳು. ಕೊಪ್ಪರ, ಕೊಪ್ಪರಿ, ಕೊಬರಿ; ತೆಲು. ಕೊಬ್ಬರಿ, ಕೊಬ್ಬೆರ. / ಹಿಂ. ಖೋಪ್ರಾ; ಇಂ. Copra]

**ಕೊಬ್ಬಾಟ** (ನಾ). ಸೊಕ್ಕಿನಿಂದ ವರ್ತಿಸುವಿಕೆ; ಅಹಂಕಾರ: (+)

[ಕೊಬ್ಬು$_{2}$ (< ಕೊರ್ವು$_{2}$) + ಆಟ]

**ಕೊಬ್ಬಿಗ** (ನಾ). ಸೊಕ್ಕಿನ ಮನುಷ್ಯ; ಅಹಂಕಾರಿ: (+).

[ಕೊಬ್ಬು$_{2}$ (< ಕೊರ್ವು$_{2}$) + -ಇಗ]

**ಕೊಬ್ಬಿಲ** (ನಾ). ಕೀಳುಮನುಷ್ಯ; ಗಾವಿಲ: ದೇಸಿಗನೆಡಗ ನಾಡಾಡಿ ಕೊಬ್ಬಿಲಂ ಬೇಳ್ಪ ತಿರಿಕುಳಿ (ಸಂಸಪ. ೨೪-೧೦).

[ಕೊಬ್ಬು$_{2}$ (< ಕೊರ್ವು$_{2}$) + -ಇಲ]

**ಕೊಬ್ಬಿಸು** 'ಕೊರ್ವಿಸು' ನೋ.

**ಕೊಬ್ಬು$_{1}$** 'ಕೊರ್ವು$_{1}$' ನೋ.

**ಕೊಬ್ಬು$_{2}$** 'ಕೊರ್ವು$_{2}$' ನೋ.

**ಕೊಬ್ಬುಜವ್ವನ** (ನಾ). ತುಂಬು ಹರಯ; ಏರುಂಜವ್ವನ. 'ಕೊಬ್ಬುಜವ್ವನೆ' ಪರಾ. [ಕೊಬ್ಬು$_{1}$ (< ಕೊರ್ವು$_{1}$) + ಜವ್ವನ]

**ಕೊಬ್ಬುಜವ್ವನೆ** (ನಾ). ತುಂಬು ಹರಯದವಳು; ಏರುಂಜವ್ವನೆ: ಕೊಬ್ಬುಜವ್ವನೆಯರ ಕೋಮಲಾಂಗವ ರಾಯ ತಬ್ಬಲಾಕ್ಷಣ ಸುಖದಿಂದ (ಭರಚ. ೩೧-೧೨೦). [ಕೊಬ್ಬುಜವ್ವನ + -ಎ$_{2}$]

**ಕೊಬ್ಬುದೆಕ್ಕೆ** (ನಾ). ನೆಣದ ತೆಕ್ಕೆ, —ರಾಶಿ: ಮೂಳೆ ಬಿಕ್ಕುಗಳ ಸಂದಣಿ ಕೊಬ್ಬುದೆಕ್ಕೆ ಕಾಳಿಜಗಳೆಕ್ಕೆಕ್ಕೆ ತದ್ರಣರಂಗದೆಲ್ಲೆಡೆಯೊಳುಂ ತೀವೆ (ಚಬಪು. ೪೮-೫೬). [ಕೊಬ್ಬು$_{2}$ (< ಕೊರ್ವು$_{2}$) + ತೆಕ್ಕೆ$_{2}$]

**ಕೊಬ್ಬೆಯಯ್ಯ** (ನಾ). ಒಬ್ಬಾತನ ಹೆಸರು: ಬಲ್ಲದ ತುಱುಗೊಳ್ದೋಡೆ ಕೊಬ್ಬೆಯಯ್ಯಱಿದುಂ ಬಲಿಸಯ್ಯಂ ತುಱುವನಿಕ್ಕಿ ಪಿದಲ್ಲಿ (ಎಕ. X, ಮುಳಬಾ. ೩೨-೨; 950). [ಕೊಬ್ಬೆ ? + ಅಯ್ಯ$_{1}$]

**ಕೊಬ್ಬೇರು** (ಕ್ರಿ). ೧. ದಪ್ಪವಾಗು; ಸಮೃದ್ಧವಾಗು: (+). ೨. ಒರಟಾಗು; ಬಿರುಸಾಗು: ಎಣ್ಣೆ ಹೆಚ್ಚಾಗಿ ಉಪ್ಪಿನಕಾಯಿ ಕೊಬ್ಬೇರಿವೆ (ರೂಢಿ). [ಕೊಬ್ಬು$_{2}$ (< ಕೊರ್ವು$_{2}$) + ಏರು$_{1}$ (< ಏಱ್$_{1}$)]

**ಕೊಮ** (ನಾ). ದಿಬ್ಬ; ಪ್ರದೇಶ: ಮೂಡಗರೆಲ್ ಬನ್ದು ಇಪ್ಪೆಯ ಕೊಮಡೆ ಪಳ್ಳದೊಳಗಣ ಉಲಿ ಅಳರಿಯೆ (ಎಕ. XII, ಗುಬ್ಬಿ. ೩೧-೮೯; 812). [← ತಮಿ. ಕೊಮ್ಮೈ]

**ಕೊಮಟಿ** 'ಕೋಮಟಿ' ನೋ.

**ಕೊಮಟಿಗ** 'ಕೋಮಟಿಗ' ನೋ.

**ಕೊಮರ** 'ಕುವರ$_{2}$' ನೋ.

**ಕೊಮರಂಗುಂದು** (ನಾ). ಒಂದು ಊರಿನ ಹೆಸರು: ನಲ್ಲೂರು ಕೊಮರಙ್ಗುನ್ದು ಇಗ್ಗಲೂರು (ಎಕ. IX, ಬೆಂಗಳೂ. ೮೩-೭; 890). [?]

**ಕೊಮರಕ** (ನಾ). ಒಂದು ಜಾತಿಯ ಗಿಡ: ಬೂತಾಳೆ, ನೆಗಿಲು ಕೊಮರಕ, ಹಾವು ನಂಜಿನಗಿಡ (ನಮ್ಮನು. ೨೩೮). [?]

**ಕೊಮರಗದ್ಯಾಣ** 'ಕುಮಾರಗದ್ಯಾಣ' ನೋ.

**ಕೊಮರಗುಂಟೆ** (ನಾ). ಒಂದು ಊರಿನ ಹೆಸರು: ಕೊಮರಗುಣ್ಟೆ (ಎಇ. I, ೩೫೦-೭; 900). [?]

**ಕೊಮರಮಂಗಲ** 'ಕೊಮಾರಮಂಗಲ' ನೋ.

**ಕೊಮರಬೆಡಂಗ** (ನಾ). ಬೆಡಗನ್ನುಂಟುಮಾಡುವ ಕುಮಾರ; ಒಂದು ಬಿರುದು: ಜಯದಂಕಕಾಱ ಕೊಮರಬೆಡಂಗಂ ಶ್ರೀಮದ್ವೈರ್ವರ್ನಡಿಗಳ್ (ಎಕ. IV, ಚಾಮರಾ. ೧೦-೬; 999).

[ಕೊಮಾರ (< ಕುವರ$_{2}$) + ಬೆಡಂಗ]

**ಕೊಮರಿ$_{1}$** 'ಕುವರಿ' ನೋ.

**ಕೊಮರಿ$_{2}$** (ನಾ). ಒಂದು ಬಗೆಯ ಧಾನ್ಯ (?): ಗೇರ ಹರಳು, ಓವು, ಎಳ್ಳು, ಕೊಮರಿ, ಹಳೆಬೆಲ್ಲ ಇವಂ ಖಲ್ವದಲ್ಲಿ ಮರ್ದಿಸಿ ಎಲಚಿಕಾಯ ಪ್ರಮಾಣ ಗುಳಿಗೆಯಂ ಮಾಡಿ . . . ನಿತ್ಯವೂ ಸೇವಿಸಲ್ ಬಹುಮೂತ್ರ ಪರಿಹಾರಮಕ್ಕುಂ (ಸಕವೈ. ೩೯೧). [?]

**ಕೊಮರುಲಪಱ್ರು** (ನಾ). ಒಂದು ಪ್ರದೇಶದ ಹೆಸರು (?): ಪಡುವಣದೆಸೆ ಪೋತುಂಗಲ್ಲು ಕೊಮರುಲಪಱ್ರು ಕಾಮ್ಮುರ್ಗಿಲ ಪುಣಸೆ (ಎಕ. XII, ಶಿರಾ. ೩೮-೩೩; 878). [?]

**ಕೊಮಾರ$_{1}$** 'ಕುವರ$_{2}$' ನೋ.

**ಕೊಮಾರ$_{2}$** (ನಾ). ಒಬ್ಬಾತನ ಹೆಸರು: ಸಿಯಗೆಲ್ಲರ್ಕಾಗಿ ಕೊಮಾರನ್ ಕ್ಕೈಕೊರ್ಳತ್ತು ಒಗಬಳ್ಳಿಯುಳಿಱಿದು ವಿಟ್ಟೊಂ (ಎಕ. XVI, ತುಮಕೂ. ೯೧-೧೧; 775). [< ಸಂ. ಕುಮಾರ]

**ಕೊಮಾರ$_{3}$** (ನಾ). ಮನೆಯ ಸೂರಿಗೆ ಆಧಾರವಾಗಿ ತೊಲೆಗಳ ಮೇಲೆ ನಿಲ್ಲಿಸಿದ ಮರದ ಗುಜ್ಜು: ಮಾಳಿಗೆಗೆ ಹರಹರುವ ಜಂತಿ ದಿಗಿ ತೊಲೆಗಳು ಕೊಮಾರ ಹಂಜರ ನೆಲವು ಕದ ಬಾಗಿಲ ಮೊರ ವಸಳೆ ಮೊದಲಾದವರೊಳನೇಕವಾದರುಂ (ಭಕ್ತಿಸ. ೩೭-೩). [?]

**ಕೊಮಾರತಿ** 'ಕುಮಾರಿತಿ' ನೋ.

**ಕೊಮಾರತ್ತಿ** 'ಕುಮಾರಿತಿ' ನೋ.

**ಕೊಮಾರಪೈಕ** (ನಾ). ಹೆಂಡ ಇಳಿಸುವವರಲ್ಲಿ ಒಂದು ಜಾತಿ: ಸಿಂಧೀ ತೆಗೆಯುವ ಜಾತಿಗಳ ಪಟ್ಟಿ . . . ೪ ಕೊಮಾರಪೈಕರು: ಕೊಮಾರಪೈಕರೆಂದರೆ ಕಲಾದಗಿಯ ಕೊಮಾರಸ್ವಾಮಿಯ ಶಿಷ್ಯರೆಂಬ ಅರ್ಥವಿರುತ್ತದೆಂದು ಹೇಳುತ್ತಾರೆ (ಕಭಾಗ. ೧೭೮).

[ಕೊಮಾರ$_{1}$ (< ಕುವರ$_{2}$) + ಪೈಕ]

**ಕೊಮಾರಮಂಗಲ**, **ಕೊಮರಮಂಗಲ** (ನಾ). ಒಂದು ಊರಿನ ಹೆಸರು: ಕೊಮಾರಮಂಗಲದೊಡೆಯ ನಾಗಮಯ್ಯನ ಮಗಂ ಕಣ್ಣಯ್ಯನುಂ (ಎಕ. X, ಚಿಂತಾಮ. ೪೩-೧೨; 960). **ಕೊಮರಮಂಗಲ**: (ಇಆ. VIII, ೨೧೩-೨೩; 950 ನೋ.) [?]

**ಕೊಮಾರಯ್ಯ** (ನಾ). ಒಬ್ಬಾತನ ಹೆಸರು: ಪಿರಿಯ ಮುಗುಳಿಯ ಕೊಮಾರಯ್ಯನುಂ ಪಲ್ಮಾಡಿಯ ಮೆನ್ದಮ್ಮೆ (ಎಕ. VI, ಚಿಕ್ಕಮ. ೩-೧೩; 899). [ಕೊಮಾರ$_{2}$ + ಅಯ್ಯ$_{1}$]

**ಕೊಮಾರಸೇನ** (ನಾ). ಒಬ್ಬಾತನ ಹೆಸರು: ಕೊಮಾರಸೇನ ಭಟಾರರ್ ಪಡೆದ ಸ್ಥಿತಿ (ಎಕ. III, ಶ್ರೀರಂಗ. ೧೪೭-೧೨; 960). [?]

**ಕೊಮಾಲ** (ನಾ). ಒಬ್ಬಾತನ ಹೆಸರು: ಕಬ್ಬುಲಿಗೆ ಪಡೆವೋದಲ್ಲಿ ಕೊಮಾಲರಾ ಮಗನ್ಪಾಣ್ಡಪ್ಪನ್ ಕಾಳೆಗದುಳ್ ಸತ್ತಲ್ಲಿ (ಎಕ. X, ಮುಳಬಾ. ೨೫೫-೭; 750). [?]

**ಕೊಮೆ$_{1}$** (ಕ್ರಿ). ಹೊಗೆಯಾಡು; ಗೆಮೆ: ಕುರುಕುವರರೊಳೆ ಮೊಳೆತಕಟಸೂಯೆ . . . ದ್ವೈಧ್ಯದ ತೃಣಾಗ್ನಿ ಕೊಮೆಕೊಮೆದು ಸಿಮಿಸಿಮಿಸುತಿದೆ (ಹಬ್ಬೆರ. ೨೪-೧೭). 'ಕುಮುಲು' ಪರಾ.

[? . / ತಮಿ. ಕುಮ್ಮೈ]

**ಕೊಮೆ$_{2}$** (ಕ್ರಿ). ನಿತ್ತರಿಸು; ಸಾಧಿಸು: ಯಾರನ್ನು ಕಳಿಸಿದರೂ ಅವರು ಕೊಮೆಯುವುದು ಅಷ್ಟರಲ್ಲಿಯೇ ಇದೆ (ರೂಢಿ). [?]

**ಕೊಮ್ಮೆ**$_3$ (ನಾ). ಒಂದು ಜಾತಿಯ ಸಸ್ಯ : ಜೇನುಕಡ್ಡಿ ಜೂರು, ಕೊಮೆ (ಮೈಔಗ. ೩೦-೫೭೭). [?]

**ಕೊಮ್ಮ** (ನಾ). ಒಬ್ಬಾತನ ಹೆಸರು: ವಾನಸವಂಶ ಕೂಮ್ಮಾರ್ನಿಭಕೊಮ್ಮ ಜಗದ್ವಿನುತಾತ್ತಕಾಂಬಿಕಾಸೂನುಃ (ಇಆ. XIX, ೨೬೨-೧೧; 1054). [?]

**ಕೊಮ್ಮಗುಜಿಯಮ್ಮ** (ನಾ). ಒಬ್ಬಾತನ ಹೆಸರು: ಈ ಕಲ್ಲ ಶ್ರೀ ಬುತೇಂದ್ರಗಾವುಣ್ಡಂ ಕೊಮ್ಮಗುಜಿಯಮ್ಮಂ ನಿಱಿಸಿದೋರ್ (ಸೌಇಇ. XI-i, ೧೯-೪; 883). [?]

**ಕೊಮ್ಮಣ** (ನಾ). ಒಂದು ಸೀಮೆಯ ಹೆಸರು : ಕೊಮ್ಮಣ ವಿಷಯೇ . . . ಕುಣ್ಡವಾರ್ಕ ಗ್ರಾಮೋದತ್ತಃ (ಇಆ. VII, ೧೬೨-೧೭; 500). [?]

**ಕೊಮ್ಮದಿಚೆಱು** (ನಾ). ಒಂದು ಕೆರೆಯ ಹೆಸರು: ಪೂರ್ವ್ವದಿಶಾ ಭಾಗದೊಳ್ ಕಲ್ಮಡುವುಂ ಕೊಂಮದಿಚೆಱುವುಂ ಆಗ್ನೇಯದೊಳೆಱೆಯ ಬಾಗುಂ (ಸೌಇಇ. IX-i, ೧೨೧-೪೨; 1057).

[ಕೊಮ್ಮದಿ ? + ಚೆಱು]

**ಕೊಮ್ಮೆ**$_1$ (ನಾ). ಕಾಳುಕಡ್ಡಿಗಳನ್ನು ಶೇಖರಿಸಿ ಇಡುವುದಕ್ಕಾಗಿ ಬಿದಿರು ಅಥವಾ ಮಣ್ಣಿನಿಂದ ಮಾಡಿದ ಗಳಗೆ; ಸಣ್ಣ ಓಡೆ: ನಿನ್ನನಱಿತು ಅಱಿದೆನೆಂದಡೆ ನಾ ಕುತ್ತದ ಕೊಮ್ಮೆ ನೀ ಮದ್ದಿನ ಗುಳಿಗೆ (ಮೋಳಿಮಾ. ೧೦೦-೩೯೮); ಭತ್ತ ತುಂಬುವ ಕೊಮ್ಮೆಗಳನ್ನು . . . ತರುತ್ತಿದ್ದರು (ಹುಟ್ಟಿಹ. ೨೮); ಜೋಳದ ಕೊಮ್ಮೆಯೊಳಗಿದ್ದ ಇಲಿ ಕೆಳಗೆ ನೆಗೆದು ಬಿಲವನ್ನು ಸೇರಿತು (ಧೂಮದು. ೫೭); ಕೊಮ್ಮೆಯ ತಳದಲ್ಲಿ ನಾಲ್ಕು ಸೇರು ಅಕ್ಕಿ ಇತ್ತು (ಹುಲಿಹಾ. ೩೦೪); ನಿಮ್ಮನೆ ಎಮ್ಮೆ ಇದ್ದರೆ ನಮ್ಮನೆ ಕೊಮ್ಮೆ ಇದೆ (ಗಾದೆ).

[ದೇ. ‖ ತಮಿ. ಕೊಮ್ಮೈ; ಮಲ. ಕೊಮ್ಮ; ಕೊಡ. ಕೊಮ್ಮೆ]

**ಕೊಮ್ಮೆ**$_2$ (ನಾ). ೧. ಒಂದು ಬಗೆಯ ಮೂಲಿಕೆ; ಗಣಜಿಲು : ಚಿತ್ತಮೂಲ ಕೊಮ್ಮೆ . . . ಇಷ್ಟನೂ ಹುರಿದು ಪುಳ್ಳಂಪುರಚಿ ರಸದಲ್ಲಿ ಅರೆದು (ವೈದ್ಯಸಾ. I, ೨೧೮); ಕೊಮ್ಮೆಬೇರಂ ನೀರ್ದಲ್ಲಿ ಅರೆದು ಕುಡಿಯೆ ಮಾಸು ಬೀಳ್ಗುಂ (ವಿವೈವಿ. ೧೦೭). ೨. ಒಂದು ಪಂಗಡ, —ಕುಲ : ಕೊಮ್ಮೆಯರುಂ ಆರುಮಲೈಯುರ್ ಸಿರಾಮ ದೇವರ್ (ಮೈಆಂ. ೧೯೩೯, ೬೮-೧೨; 1249); ವಿಚಾರಿಸುವಲ್ಲಿ ಕೋವೆಯರು ಕೊಮ್ಮೆಯರು ಸವಿಸರು ಮೊದಲಾದ ಪ್ರಭುಗಳ ಮುಂದಿಟ್ಟು (ಎಕ. III, ನಂಜಕ. ೧೧೮-೧೪; 1491). [?]

**ಕೊಮ್ಮೆ**$_3$ (ನಾ). (ಕರಾ). ಕೊಬ್ಬು; ಅಹಂಕಾರ: ಅವನಿಗೆ ತುಂಬಾ ಕೊಮ್ಮೆ ಬಂದಿದೆ (ರೂಢಿ). [← ತುಳು. ಕೊಮ್ಮೆ]

**ಕೊಯ್, ಕುಯ್, ಕುಯಿ**$_1$**, ಕೊಯಿ, ಕೊಯ್ಯು** (ಕ್ರಿ). ೧. ಕತ್ತರಿಸು; ಸೀಳು; ಹೋಳುಮಾಡು : "ಕೊಯ್ - ಲವನೇ" (ಶಮಧಾ); ಶಾಡ್ವಲ ತೃಣತತಿ ಖಡ್ಗದಿನಿಳಾಧಿಪಂ ಕೊಯ್ದು ನಿರ್ದಯದಿಂ ಪಿಡಿಸಿ (ಸುಕುಮಾ. ೭-೨೯); ಪೊಲೆಯರಂತೆ ಕೊಯ್ಯುತ್ತಂ (ಧರ್ಮಾವ್ಯ. ೨-೬೧); ಭಕ್ತಿಯೆಂಬುದು ಮಾಡಬಾರದು ಕರಗಸದಂತೆ ಹೋಗುತ್ತ ಕೊಯ್ವ[ಪಾಠಾಂ. ಕೊಱೆಯುವು]ದು ಬರುತ್ತ ಕೊಯ್ವುದು (ಬಸವ. ೨೧೨); ಕಳ್ಳರ ನಿವಹದಲ್ಲಿ ಕಂಡವನ ತೊಡೆಯ ಕೊಯ್ದು ಕತ್ತಿಯಲಿ (ಸಂಭಪ. ೨೫-೧೫). ೨. ಗಿಡದಿಂದ ಹೂವು, ಹಣ್ಣು ಮೊದಲಾದುವನ್ನು ಎತ್ತು, —ಬಿಡಿಸು; ಕೀಳು: ಅಶೋಕದ ಕುಸುಮ ಸಮಿತಿಯನಾ ಮರಗಳೊಳಾಯ್ದು ಕೊಯ್ದುಮಿಲ್ಲಿಗೆ ಬರ್ಪೆಂ (ಕವಿರಾ. ೩-೧೩೩); ವನಕುಸುಮಂಗಳಂ ಬಗೆಗೆವಂದುವನಟ್ಟಿಯೊಳಾಯ್ದು ಕೊಯ್ದು (ಪಂಪಭಾ. ೨-೧೬); ಕೈದಣಿವನಕ ನಾನಾ ಪುಷ್ಪಂಗಳ ಕೊಯ್ದು ಪೊಟ್ಟಣವ ಕಟ್ಟಿದರು (ಮೋಹತ. ೪-೫೬). **ಕುಯ್** : ೧. ಕರಗಸದ ನಡು ಬಡವಾದರೆಯು ಕುಯ್ದಿಕ್ಕದೇ ತರುವ (ಕುಮ್ಯಾಆ. ೮-೨೮); ಪುಯ್ಯಲ್ಲುವನೆದೆಗರುಳಾ ಕುಯ್ಯಲೆಣಿಸುವುದು ಮಳವೆಯಿಂದಾ ಬಲುಗೈಯ್ಯನ ನುಡಿಗೇಳದುದು (ಶ್ರೀಪಾಲ. ೮-೩೮). ೨. ಪುಷ್ಪಕರಂಡಕಂಗಳಂ ಕೊಂಡು ಪೂದೋಟಕ್ಕೆ ಪೋಗಿ ನಿಚ್ಚಲುಂ ಪೂಗಳಂ ಕೊಯ್ದುಕೊಂಡು (ಪುಣ್ಯಾಸ್ರ. ೧-೪೨). ೩. (ಆಲಂ) ಪಿಟೀಲು ಮೊದಲಾದ ವಾದ್ಯವನ್ನು ಬಾರಿಸು, —ನುಡಿಸು : ಅವನ ಹಿಂದೆ ನೇಪಥ್ಯದ ಎರಡುಕಡೆ ಇಬ್ಬರು ಪಿಟೀಲುವಾದ್ಯಗಾರರು ನಿಂತು ಕುಯ್ಯುತ್ತಿದ್ದರು (ನಟಸಾ. ೧೨). **ಕುಯಿ**$_1$ : ೧. ರಸಗಳಂ ಬೇಱೆ ಬೇಱಿಕ್ಕಿಯಿವ ಸುರುಳಿ ಕುಯಿದಿಕ್ಕಲವು ತಾನದಱ ಹೆಸರ ಮುಂದಗೆ ಯುರುಳಿ ಪೆಸರಾದುದು (ಸೂಪಶಾ. ೧-೩೮); ಅವಳ ಗಂಡನು ಇದನ್ನು ಕಂಡು ಹೆಂಡತಿಯ ಮೂಗನ್ನು ಕುಯಿದನು (ನೀತಿಚಿಂ. ೧೧-೬). **ಕೊಯಿ** : ೧. ಮಾಡುವಲ್ಲಿ ನೀಡುವಲ್ಲಿ ಶುದ್ಧವಿಲ್ಲದಿರ್ದಡೆ ನೀನಂದೆ ಮೂಗ ಕೊಯಿ (ಬಸವ. ೫೪). ೨. ಕುಸುಮ ಪತ್ರೆಗಳಂ ಕೊಯಿದು (ಬಸಪು. ೩೧-೨೧). **ಕೊಯ್ಯು** : ೧. ತೆಂಗಿನಮರ ಯಾಕೆ ಹತ್ತುತ್ತಿ ಅಂದರೆ ಬೆಕ್ಕಿಗೆ ಹುಲ್ಲು ಕೊಯ್ಯೋದಕ್ಕೆ ಅಂದಹಾಗೆ (ಗಾದೆ). ೨. ತಳಿರುಗಳ ಚಿವುಟುತ್ತ ಹೊಸ ಹೂಗಳನು ಕೊಯ್ಯುತ . . . ವಿಹರಿಸುತಲಿರುತಿಹರು (ತಿಮ್ಮಆ. ೩-೧೪).

[ದೇ. ‖ ತಮಿ. ಮಲ. ಕೊಯ್; ತುಳು. ಕೊಯಿ; ತೆಲು. ಕೋಯು; ಕುವಿ. ಕೋಯಿ; ಕುಇ. ಕೋವ]

**ಕೊಯಕ** 'ಕುಯಕ' ನೋ.

**ಕೊಯತ** 'ಕೊಯ್ತ' ನೋ.

**ಕೊಯತೂರು** (ನಾ). ಒಂದು ಊರಿನ ಹೆಸರು: ಪಡ್ಡಾಗೆ ಕೊಯತೂರು ಪನ್ನಿಚ್ಛಾರ್ಸಿರ ಭೂಮಿಯನ್ ಆಳೆ (ಮೈಆಂ. ೧೯೧೪, ೧೨-೧೪; 810); ನೀಲಗಿರಿ ಕೊಂಗುನಂಗಲಿ ಕೋಳಾಲಂ ತೆರೆಯೂರು ಕೊಯತೂರು ಕೊಂಗಳಿಯುಚ್ಚಂಗಿ ತಲೆಯೂರು (ಎಕ. II, ೧೩೨-೨೭; 1173). [?]

**ಕೊಯಲಾಳಿ** 'ಕೊಯ್ಲಾಳಿ' ನೋ.

**ಕೊಯಲು** 'ಕೊಯ್ಲು' ನೋ.

**ಕೊಯಳಭೂಮಿ** (ನಾ). ಸಾಗುವಳಿ ಭೂಮಿ (?): ಅಲಗುವಳಿಯ ಗ್ರಾಮದಲು ಪ್ರತಿಷ್ಟೆಯ ಮಾಡಿದಕೆ ಕಲಶಾಸನದ ಭೂಮಿ ಕೊಯಳ ಭೂಮಿಗೆ ಪ್ರತಿಷ್ಟೆಯ ಮಾಡಿದ ಶಿಲಾಶಾಸನದ ಭೂಮಿ ಸಹವಾಗಿ (ಎಕ. VIII, ತೀರ್ಥಹ. ೧೩೧-೭೬; 1408).

[ಕೊಯಳ ? + ಭೂಮಿ]

**ಕೊಯಿ** 'ಕೊಯ್' ನೋ.

**ಕೊಯಿಕ** 'ಕೊಯ್ಕ' ನೋ.

**ಕೊಯಿಕತನ** 'ಕೊಯ್ಕತನ' ನೋ.

**ಕೊಯಿಕೀರೆ, ಕುಯಿಕೀರೆ, ಕೊಯಿಗೀರೆ** (ನಾ). ಒಂದು ಬಗೆಯ ಸೊಪ್ಪು; ಕೀರೆಸೊಪ್ಪು: "ಚಿಲ್ಲೀ - ಭೃಂಗವಲ್ಲೀ ಚಾಲಿಕೆ ಕೊಯಿಕೀರೆ, ಸಿಪಾರೆ ? " (ಒಷಧ. ೫೭). **ಕುಯಿಕೀರೆ**: ಮತ್ತಾಳಿದ ತುಪ್ಪೋಗರಕ್ಕೆ ನಱುವಲು ಚಕ್ಕವತ್ತ ಕುಯಿಕೀರೆ ಕೆಂಪಿನ ಹಱಿವೆಯಾದಿಯಾಗಿ (ಸೂಪಶಾ. ೩-೧೮). **ಕೊಯಿಗೀರೆ**: "ಲಘುಪತ್ರಾ—ಕೊಯಿಗೀರೆ" (ಒಷಧ. ೧೪೨). [?]

**ಕೊಯಿಗೀರೆ** 'ಕೊಯಿಕೀರೆ' ನೋ.

**ಕೊಯಿಗುಱಿ** 'ಕೊಯ್ಗುಱಿ' ನೋ.

**ಕೊಯಿತ** 'ಕೊಯ್ತ' ನೋ.

**ಕೊಯಿಲ್** 'ಕೊಯ್ಲು' ನೋ.

**ಕೊಯಿಲಾಳಿ** 'ಕೊಯ್ಲಾಳಿ' ನೋ.

**ಕೊಯಿಲಾಳು**, ಕುಯಿಲಾಳು (ನಾ). = ಕೊಯ್ಲಾಳು : ಕೊಯಿಲಾಳುಗಳು ಬಿಟ್ಟ ಧರ್ಮ್ಮ ಹೇಱಿಂಗೆ ವೀಸ (ಸೌಇಇ. XX, ೨೨-೨೨ ಅಡಿಟ; 1034). **ಕುಯಿಲಾಳು :** ಈ ಗದ್ದೆಯಲ್ಲಿ ಹನ್ನೆರಡು ಕುಯಿಲಾಳುಗಳು ದುಡಿಯುತ್ತಿದ್ದಾರೆ (ರೂಢಿ).
[ಕೊಯಿಲು (< ಕೊಯ್ಲು) + ಆಳು$_3$ (< ಆಳ್$_3$)]

**ಕೊಯಿಲಿ** 'ಕೊಯ್ಲು' ನೋ.

**ಕೊಯಿಲು** 'ಕೊಯ್ಲು' ನೋ.

**ಕೊಯಿಲೆ$_1$** (ನಾ). ಕೊಯ್ಯುವ ಆಯುಧ : ಜಗವೆಲ್ಲ ಕಾಂಬ ಕಣ್ಣು ತನ್ನ ಕೊಂಬ ಕೊಯಿಲೆ [ಪಾಠಾಂ. ಲಿಗೆ]ಯ ಕಾಣಲಱಿಯದು (ಬಸವ. ೧೨೩); ಇರ್ವಲದೊಳಗಿಱಿದಾಡಿ ಮಡಿದರಂದು ಕೊರ್ವಿದ ಕೊಯಿಲೆ ರಾವುತರು (ಕುರಾಸಾಂ. ೧೨-೯೭). [< ಕೊಯ್ಲು]

**ಕೊಯಿಲೆ$_2$** 'ಕೊಯ್ಲೆ' ನೋ.

**ಕೊಯಿಲೆಮಿಂಡ** 'ಕೊಯ್ಲೆಮಿಂಡ' ನೋ.

**ಕೊಯಿಲ್ಬಸದಿ** (ನಾ). ಒಂದು ಬಸದಿಯ ಹೆಸರು (?) : ದುಗ್ಗಮಾರ ಕೊಯಿಲ್ಬಸದಿಗೆ ಅಱುಗಣ್ಣಗ ಬ್ಬಿಪೆ ಪುಲ್ಕೊಟ್ಟರ್ (ಮೈಅರಿ. ೧೯೩೨, ೫೮-೨ ; 875). [ಕೊಯಿಲ್ ? + ಬಸದಿ]

**ಕೊಯಿಸು** 'ಕೊಯ್ಸು' ನೋ.

**ಕೊಯ್ಕ$_1$** (ನಾ). ಒಂದು ಬಗೆಯ ಪಕ್ಷಿ : ಭೇರುಂಡಂ ಪೊಱಸು ಕಾಗೆ ಗಂಬೊಂದುರಿಗಂ ಕಾಱಿ ಕಿಱುವೀಳೆ ಕೊಯ್ಕಂ ಕೀರಂಜಂ ಹರೆಡೆ ಸುರಗಿಗಿಡಿ ಪೆರ್ಗಿಡುಗಂ (ಕಾವ್ಯಸಾ. ೧೦೯೩ ಕೂದ್ರಪ್ಪ). [?]

**ಕೊಯ್ಕ$_2$**, ಕೊಯಿಕ (ನಾ). ೧. ಕೊಯ್ಯುವವನು; ಕತ್ತರಿಸುವವನು. 'ಎದೆಗೊಯ್ಕ', 'ಕೊರಳುಗೊಯ್ಕ' ಪರಾ. **ಕೊಯಿಕ.** 'ಎದೆಗೊಯಿಕ' ಪರಾ. [ಕೊಯ್ + -ಕ$_3$]

**ಕೊಯ್ಕ$_3$** 'ಕುಯಕ' ನೋ.

**ಕೊಯ್ಕತನ**, ಕೊಯಿಕತನ (ನಾ). ಮೋಸ; ವಂಚನೆ; ಕುಹಕತನ: ಮೂಕೊಱೆಯರ್ಗೆ ರಕ್ಕಸರು ನಿಮಗೇಕೆಲವೊ ರಣವಕಟ ಕಂಡೆಯ ಕೊಯ್ಕತನವನು ಕಾಣುಕಂಗೆಸುವರೆ ಸಂಗರಕೆ (ತೊರರಾ. ೬-೩೯-೬). **ಕೊಯಿಕತನ.** 'ಎದೆಗೊಯಿಕತನ' ಪರಾ.
[ಕೊಯ್ಕ$_3$ (< ಕುಯಕ) + -ತನ]

**ಕೊಯ್ಕಿ** (ನಾ). (ಮೂಗು, ಕಿವಿ ಮೊದಲಾದುದನ್ನು) ಕೊಯಿಸಿಕೊಂಡವಳು, —ಕತ್ತರಿಸಲ್ಪಟ್ಟವಳು. 'ಕಿವಿಗೊಯ್ಕಿ' ಪರಾ.
[ಕೊಯ್ಕ$_2$ + -ಇ$_2$]

**ಕೊಯ್ಕೆ** (ನಾ). ಕೊಯ್ಯುವವಳು ; ಕತ್ತರಿಸುವವಳು. 'ಗಂಟುಗೊಯ್ಕೆ', 'ಗೋಣುಗೊಯ್ಕೆ' ಪರಾ. [ಕೊಯ್ಕ$_2$ + -ಎ$_2$]

**ಕೊಯ್ಕೊರಳು** 'ಕೊಯ್ಗೊರಳು' ನೋ.

**ಕೊಯ್ಗತ್ತಿ** (ನಾ). ೧. ಕೊಯ್ಯುವ ಕತ್ತಿ : ನೃಪತಿ ಕಟ್ಟಾಸುರದ ಕೊಯ್ಗಾಱರಂ ಕರೆಸಿ ತೆಗೆಸಿದಂ ಮಸೆವ ಕೊಯ್ಗತ್ತಿಗಳನು (ಜೈಮಿಭಾ. ೨೬-೫೧). ೨. ಈಳಿಗೆ : "ಈಟಿಗೆ ಕೊಯ್ಗತ್ತಿಯಳ್ಕು ಬುಧರಿಂ" (ಶಬ್ದಮಂ. ೨೦೮). [ಕೊಯ್ + ಕತ್ತಿ]

**ಕೊಯ್ಗಾಱ** (ನಾ). ಕೊಯ್ಯುವವನು; ಕೊಯ್ಯುವ ಕೆಲಸ ಮಾಡುವವನು : ನೃಪತಿ ಕಟ್ಟಾಸುರದ ಕೊಯ್ಗಾಱರಂ ಕರೆಸಿ ತೆಗೆಸಿದಂ ಮಸೆದ ಕೊಯ್ಗತ್ತಿಗಳನು (ಜೈಮಿಭಾ. ೨೬-೫೧).
[ಕೊಯ್ + -ಕಾಱ]

**ಕೊಯ್ಗುಗಿರಿ** 'ಕೊಯ್ಗುಱಿ' ನೋ.

**ಕೊಯ್ಗುಱಿ**, ಕುಯ್ಗುಗಿರಿ, ಕುಯ್ಗುಱಿ, ಕೊಯಿಗುಱಿ, ಕೊಯ್ಗುಗಿರಿ (ನಾ). ೧. ಕೊಯ್ಯಲೆಂದು ತಂದ ಕುರಿ ; ಬಲಿಕೊಡುವ ಕುರಿ. ೨. (ಅಲಂ) ಮೂಢ; ತಿಳಿಗೇಡಿ : ಕೊಯ್ಗುಱಿಗಳಿರ ಕೇಳಿ ಶಂಕರನ ಪರಮೈಶ್ವರ್ಯದುನ್ನತಿಯ (ಕೊಟ್ಟೂಬ. ೩-೯೦). **ಕುಯ್ಗುಗಿರಿ :** ೧. ಕುಯ್ಗುಗಿರಿಯನೆಂತಂತೆ ಸಾವು ಬದುಕಿನ ನಡುವೆ ಕರುಣೆ ಗರಗಸದಿಂದೆ ಸೀಳುವರು ಬೆಲೆಗೆ (ಕೋಗಿಲೆ. ೧೫-೧೫). **ಕುಯ್ಗುಱಿ :** ೧. ತನ್ನ ಸೇನೆಯನು ಪರಬಲಕೆ ಕುಯ್ಗುಱಿಮಾಡಿ ನಾಡುಬೀಡಂ ಕೆಡಸಿಕೊಂಡನಲ್ಲಾ ನಮ್ಮ ನೃಪತಿ (ಸನ್ಮಕು. ೮-೫೪). **ಕೊಯಿಗುಱಿ :** ೧. ನಾಡಬಂ ಪೊರೆವ ಕೊಯಿಗುಱಿಯೊ . . . ಪೇಳೆನೆ ಮೆಱೆದುದರರೆ ಬಹುಬಂಧು ಭೂಪರಿವೃತಮಾದ ಸಿಂಧು (ಜೀರಮ. ೧-೨೬). **ಕೊಯ್ಗುಗಿರಿ :** ೧. ಕೊಯ್ಗುಗಿರಿಯ ಹಿಂದಂತೆ ನಡೆದರು ವೈಗೊಡು ತಲೇ (ದೇವೀಪ್ರ. ೬೨). [ಕೊಯ್ + ಕುಱಿ$_2$]

**ಕೊಯ್ಗೊರಳು**, ಕೊಯ್ಕೊರಳು (ನಾ). ಕೊಯ್ದ ಕೊರಳು; ಕತ್ತರಿಸಿದ ಕತ್ತು : ನೂಕಿ ಕೊಯ್ಗೊ[ಪಾಠಾಂ. ಯ್ಕೊ]ರಳುಗಳು ಮುಂಡದ ಮೂಕಿನಲಿ ನೆಗೆದೊಗುವ ನೆತ್ತರು ನಾಳವನು ನಾದಿದುದೆನಲು ಸವಱಿದನು ಪರಬಲವ (ಕುವ್ಯಾದ್ರೋ. ೬-೪೪). **ಕೊಯ್ಕೊರಳು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ಕೊಯ್ + ಕೊರಳು (< ಕೊರಲ್)]

**ಕೊಯ್ತ**, ಕೊಯತ, ಕೊಯಿತ (ನಾ). ೧. ಕೊಯ್ಯುವಿಕೆ; ಕತ್ತರಿಸುವಿಕೆ; ಕಟಾವು; ಕೊಯ್ಲು : ಬಳ್ಳಿಗಳು . . . ೧೮ ತಿಂಗಳುಗಳಲ್ಲಿ ಕೊಯ್ತಕ್ಕೆ ಬರುತ್ತವೆ (ಮುಂಬಯಿ. ೫-೨೧೮). ೨. ಕೊಯ್ಯುವ ಸಾಧನ; ಕತ್ತಿ : ಕಟುಕನೊಬ್ಬ ಕೊಯ್ತವನ್ನು ಹದನವಾಗಿ ಮಸೆಯುತ್ತಿದ್ದ (ಕನಪ. ೪). **ಕೊಯತ :** ೨. ಮಲ್ಲನು ಕೊಯತ, ಹಗ್ಗ ಹೆಗಲಿಗೆ ಹೇರಿಕೊಂಡು ಮುಳ್ಳು ಬಡಿಯಲು ಹೊರಟನು (ವಾಸಸಾ. ೬೨). **ಕೊಯಿತ :** (೬). [ಕೊಯ್ + -ತ$_2$]

**ಕೊಯ್ತರ್** (ಕ್ರಿ). ಕೊಯ್ದು ತರು; ಕತ್ತರಿಸಿ ತರು : ಬಿಲ್ವಪತ್ರೆಯನಾಗ ಕೊಯ್ತಂದು (ಬಸವು. ೧೪-೩೦) ; ಇಳೆ ಹೊರದಂತು ದಯಿಸಿದ ದೇಹಿಗಳ ಬಳ್ವೆಳೆಗೊಯ್ತಂದು ಕೃತಾಂತ ತಳುವದೊಕ್ಕುವ ಕಳನಂತೆ . . . ಒಪ್ಪಿಕಾ ರುದ್ರಭೂಮಿ (ಶ್ರೀಪಾಲ. ೮-೯).
[ಕೊಯ್ + ತರ್]

**ಕೊಯ್ತಲೆ** 'ಕೊಯ್ದಲೆ' ನೋ.

**ಕೊಯ್ತಿನ್** (ಕ್ರಿ). ಕೊಯ್ದುಕೊಂಡು ತಿನ್ನು; ಕತ್ತರಿಸಿ ತಿನ್ನು : ತನ್ನೆದೆಯಡಗನೆ ಕೊಯ್ತಿಂಬ ದೇವರ್ಕಳಟ್ಟುಳಿಯಿಂದೆ ಸಾವುದೆ ಸುಖವೆಂದು (ಮೋಹತ. ೧೮-೧೦೬). [ಕೊಯ್ + ತಿನ್$_1$]

**ಕೊಯ್ತೆ** (ನಾ). = ಕೊಯ್ತ. 'ಕೊಯ್ತೆವೋಗು' ಪರಾ.
[ಕೊಯ್ + -ತೆ$_1$]

**ಕೊಯ್ತೆವೋಗು** (ಕ್ರಿ). ಕೊಯ್ತಕ್ಕೆ ಈಡಾಗು ; ಕತ್ತರಿಸಿಹೋಗು : ಕಿಱುಧೊಡೆ ಕೊಯ್ತೆವೋಗೆ ಕಡೆವಾಯ್ ಕಡಿವೋಗೆ ಕೊರಲ್ ಬಳೆವೋಗೆ ಮೋಱೆ ಮುಳ್ಕುವೋಗೆ (ಲೀಲಾವ. ೬-೧೫).
[ಕೊಯ್ತೆ + ಪೋಗು$_1$]

**ಕೊಯ್ದಲೆ**, ಕೊಯ್ತಲೆ (ನಾ). ಕತ್ತರಿಸಿದ ತಲೆ; ಕೊಯ್ದು ಬೇರ್ಪಡಿಸಿದ ರುಂಡ : ನೀಗಿದರಸುವ ನಸೆಮಸೆಗಕ್ಕುಡಿಸಿದವರು ಬಿದಿರಿದರು ಕೊಯ್ದಲೆಗಳನು (ಕುವ್ಯಾದ್ರೋ. ೧೬-೨೧). **ಕೊಯ್ತಲೆ :** ಕೊಯ್ತಲೆಯಧಮಾ ನೀಚಾ ಸ್ವಾಮಿಯನಿಂತೆಂಬಾ (ವಡ್ಡಾರಾ. ೭-೨೧).
[ಕೊಯ್ + ತಲೆ$_1$]

**ಕೊಯ್ವಾಳು** (ನಾ). (?) : ಕಳ್ಳು ಯಾ ಮೇಗೆ ಪಡೆಗೆಯ್ವಾ ಕೊಯ್ವಾಳು ಕಾದು . . . ಬಲಮೇಗೆ ಎಟ್ಟನ್ದವು (ಎಕ. X (s), ಬಾಗೆಪ. ೫೬-೫ ; 820). [?]

**ಕೊಯ್ಯಾಳಿ** (ನಾ). = ಕೊಯ್ಯಾಳ್ (?) : ಗಾತ್ರದಲೊಸ್ತು ಪೇಜಂ ಕೊಯ್ಯಾಳಿ ಬೋಜಂಗ ಸಹಿತಮಾಗಿ (ಬೊಂಕಶಾ. ೧೯೬೩, ಹಾವೇರಿ. ೧೨೨–೨೬ ; 956). [?]

**ಕೊಯ್ಯ** (ನಾ). ಒಂದು ವಂಶದ ಹೆಸರು : ಕೊಯ್ಯರ ಅಜಯಪಾಲ್ಲ ಗೊರವ ಕೊಳಸೂಡಿದ ಕದವು ಪರಿವಲ್ಲಿ ಮುನ್ನಾಗಿ ಬನ್ದು (ಎಕ. IX, ಹೊಸಕೋ. ೧೧೧–೨ ; 900). [?]

**ಕೊಯ್ಯಂಗೊಟ್ಟ** (ನಾ). ಒಂದು ಬಗೆಯ ಆಟ : ಮನೆಗಳಲ್ಲಿ ಚೌಕ ಬಾರ, ಕೊಯ್ಯಂಗೊಟ್ಟ, ಹುಲಿಕುರಿ ಆಟ, ಚತುರಂಗ ಇತ್ಯಾದಿಗಳಿಂದ ಕಾಲಕ್ಷೇಪ ಮಾಡುತ್ತಿದ್ದರು (ಭಾರದ. ೧೩). [?]

**ಕೊಯ್ಯಕೊಱುನಾಡು** 'ಕೊಯ್ಯಕೊಱಿನಾಡು' ನೋ.

**ಕೊಯ್ಯಕೊಱಿನಾಡು**, ಕೊಯ್ಯಕೊಱುನಾಡು (ನಾ). ಒಂದು ಸೀಮೆಯ ಹೆಸರು : ರಾಜೇಂದ್ರ ಚೋಳ ಪೊಂಪಲ ಮಾರಾಯರ ಕೊಯ್ಯಕೊಱಿನಾಡ ಮಿಣ್ಣುಗಲ್ಲಲ್ ಪಲ್ಲವ ಕಚ್ಚಿನ್ದು ಹೊಸಕೆಱೆಯ ಕಟ್ಟಿಸಿ (ಎಕ X, ಚಿಂತಾಮ. ೩೦–೯; 1047). **ಕೊಯ್ಯಕೊಱುನಾಡು** : ಮಹಾರಾಜವಾಡಿ × × ಱು ಸಾಸಿರದ ಬಳಿಂ ಕೊಯ್ಯಕೊಱುನಾಡು ಮುನ್ನೂಱ ××× ಕೊಱಿ ಗಾವುಣ್ಡ (ಎಕ. X, ಶಿಡ್ಲಘ. ೭೩–೬; 1053).

[ಕೊಯ್ಯಕೊಱಿ ? + ನಾಡು]

**ಕೊಯ್ಯಲ್** 'ಕೊಯ್ಲು' ನೋ.

**ಕೊಯ್ಯಾಳ್** (ನಾ). ಕೊಯ್ಯುವ ಆಳು; ಇರಿಯುವ ಆಳು; ಯೋಧ : ಪರಮೇಷ್ಠಿಪ್ರಮುಖವಿಪ್ರತತಿಗಳಿನಿಳಾಪ್ರಮುಖ ಶೂದ್ರಾಳಿಯಿಂ ಬೇಚರ ಕಾನ್ತಪ್ರಮುಖರಪ್ಪಾ ವಣಜರಿನಿನಜಪ್ರಮುಖ ಕೊಯ್ಯಾಳ್ಗಳಿಂ . . . ಅರಸಿಯಕೆಱೆ ಭೂಭಾಗದೊಳ್ ಶೋಭಿಸಿರ್ಕುಂ (ಮೈಆರಿ. ೧೯೨೮, ೧೧–೪೪; 1159). [ಕೊಯ್ + ಆಳ್]

**ಕೊಯ್ಯಿಸು** 'ಕೊಯ್ಸು' ನೋ.

**ಕೊಯ್ಯು** 'ಕೊಯ್' ನೋ.

**ಕೊಯ್ಯುಕೊರೆ** (ಕ್ರಿ). ಕೊಯ್ದು ಕತ್ತರಿಸು; ಕಟಾವು ಮಾಡು : ಕೊಯ್ಯುಕೊರೆಯುವ ಸುಗ್ಗಿ ದಿವಸದೊಳಗೆ ತುಸು ಹೆಚ್ಚು ಕೂಲಿ ಸಿಗುತ್ತದೆ (ಮುಂಬಯಿ. ೫–೧೬೫).

[ಕೊಯ್ಯು (< ಕೊಯ್) + ಕೊರೆ$_1$ (< ಕೊಱೆ$_1$)]

**ಕೊಯ್ಯುರುಳೆ** (ನಾ). ಕತ್ತರಿಸುವ ಸಾಧನ; ಕತ್ತರಿ : "ತಗಡನ್ನು ಪಟ್ಟಿಗಳಾಗಿ ಕೊಯ್ಯುವ ಸಲಕರಣೆ; ಸೀಳುರುಳೆ, ಕೊಯ್ಯುರುಳೆ" (Slitting Rollers. ಇಂಕಪ).

[ಕೊಯ್ + ಉರುಳೆ (< ಉರುಳಿ$_1$)]

**ಕೊಯ್ಲಾಳಿ**, ಕೊಯಲಾಳಿ, ಕೊಯಿಲಾಳಿ (ನಾ). ಅಡಕೆ, ಎಲೆ ಮೊದಲಾದುವನ್ನು ಕೊಯ್ಯುವವನು : ಕೊಯ್ಲಾಳಿಗಳದರಿಸಿನದ ಪಾಗಂ ದೇವಗೊಳಗಂ ಪೊನ್ದು (ಸೌಇಇ. IX–i, ೧೦೭–೧೮ ; 1050) ; ಕೊಯ್ಲಾಳಿಗಳ್ ತಮ್ಮ ದರ್ಶನಮಂ ಬಿಟ್ಟರ್ ಪೊಸ ಕೊಯ್ಲಾಳಿಗೆ ಪಣವಯ್ದುದರ್ಶನಂ (ಎಇ. XVI, ೩೩೧–೨೨ ; 1077) ; ಹೊಸಬರಪ್ಪ ಕೊಯ್ಲಾಳಿಗಳು ಬನ್ದೀಯೂರೊಳ್ ಕೊಯ್ವರಪ್ಪೊಡೆ ದೇವರ್ಗೆ ದರಿಸಿನಮನೆರೆಡು ಪಣಮಂ ಕೊಟ್ಟು ಕೊಯ್ವರ್ (ಸೌಇಇ. IX–ii, ೧೪೧–೨೧; 1094). **ಕೊಯಲಾಳಿ** : ಅಱುವತ್ತೊಕ್ಕಲು ಕೊಟ್ಟ ತಾಱಿನ ಕಂಡೆಗೆಯೆಲೆ ಕೊಯಲಾಳಿ ಕೊಯ್ದು ಕುಡುವರು ಯೆಲೆಯ ಬೊಜಗರಿಂ [ದೂ]ಡುವರು (ಕಇ. I, ೩೦–೪೮ ; 1777). **ಕೊಯಿಲಾಳಿ** : ಕೊಯಿಲಾಳಿ ಕೊಯ್ದು ಕುಡುವರ್ ಯೆಲೆಯ ಬೊಜಗರಿಂದು ಕುಡುವರ್ (ಮುಂಬರಾ. XII, ೧೫–೪೮ ; 1223).

[ಕೊಯ್ಲು + -ಆಳ್$_3$]

**ಕೊಯ್ಲು**, ಕುಯಲು, ಕುಯಿಲು, ಕುಯ್ಯಲ್, ಕುಯ್ಲು, ಕೊಯಲು, ಕೊಯಿಲ್, ಕೊಯಿಲಿ, ಕೊಯಿಲು, ಕೊಯ್ಯಲ್ (ನಾ). ೧. (ಬೆಳೆಯನ್ನು) ಕೊಯ್ಯುವಿಕೆ; ಕಟಾವು : "ಲೂನಂ ಕೊಯ್ಲು" (ಮಂಗರಾ. ೧೯೯–೨) ; ಪನ್ನೆರಡು ತೋಂಟಕ್ಕೆ ಕೊಯ್ಲೊಳ್ ಪೊಂಗೆ ಪತ್ತು ವೀಸವನುಣ್ಬರ್ (ಸೌಇಇ. XI–i, ೯೭–೧೮ ; 995) ; ಊರೊಳೆನಿತು ತೋಂಟವೊಳವನಿತಱೊಳಂ ಕೊಯ್ಲೊಳಿಲ್ಲಂ ನನ್ದಾದೀವಿಗೆಗೆ ಬಿಟ್ಟ ಒಗಸ ಹಾಗ ೧ (ಸೌಇಇ.XI–ii, ೧೫೨–೩೯; 1103); ಕೆಯ್ಯಂತೆ ಕೆಯ್ಯುಬುಮೆಯುಂತೆ . . . ಬಿತ್ತಣದಂತೆ ಸಸಿಯಂತೆ ಪೊಡೆಯಂತೆ ಪಾಲ್ದೆನೆಯಂತೆ ಕೊಯ್ಲಾದಂತೆ ಸೂಡಿನಂತೆ (ಧರ್ಮಾಮೃ. ೧೨–೨೪) ; ದೊಡಾರಿಸುವ ಸಾಲಗೆಯ ಕೊಯ್ಲುಗೆ [ಪಾಠಾಂ. ಶೂಲಿಗೆ] ಶಸ್ತ್ರವಿವೆಯೆನುತ (ಕುವ್ಯಾಕ. ೪–೧೧) ; ಕೊಯ್ಲಿನ ಕಾಲಕ್ಕೆ . . . ಉದುರಿದ ಕಾಳನ್ನು ಬುಟ್ಟಿಯಲ್ಲಿ ಆರಿಸಿಕೊಂಡು ಬಂದುದೂ ಇದೆ (ಬಾಳಿ. ೨೫) ; ಕೆಲವು ಜಾತಿಗಳು ಮೂರು ತಿಂಗಳಿಗೇ ಕೊಯ್ಲಿಗೆ ಬರುತ್ತವೆ (ವ್ಯವಮ. ೪೮). ೨. ಕೊಯ್ದ ಗಾಯ : ಹೆಗಲ ಕೊಯ್ಲಿನ ತಗ್ಗಿನಲಿ ಸೈನೆಗೆದ ರೋಮದ ವಿಕ್ರಮಾಗ್ನಿಯ ತಗಹು (ಕುವ್ಯಾದ್ರೋ. ೬–೬೨). **ಕುಯಲು**. 'ಕುಯಲುಗಾರ' ಪರಾ. **ಕುಯಿಲು** : ೧. ದುಡಿದಷ್ಟಿದೆ ಬಲ, ಪಡೆದಷ್ಟಿದೆ ಫಲ, ಪಯಿರಿಗೆ ತಕ್ಕಷ್ಟಿದೆ ಕುಯಿಲು (ಅರಳು. ೪೯೨). ೩. ಒಂದು ಮರದ ತುಂಡಿನಲ್ಲಿ ತೋಡಿರುವ ಕುಳಿಯಲ್ಲಿ ಸರಿಯಾಗಿ ಕೂರಿಸಲಾಗುವಂತೆ ಅಳವಡಿಸಿದ ತುದಿಯುಳ್ಳ ಮತ್ತೊಂದು ಮರದ ತುಂಡು; ಕೂರು ; ಕೂಲು : (೬). ೪. ಹೆರಿಗೆಯಾದ ಹತ್ತನೆಯ ದಿವಸ ಕೂಸಿನ ಹುರಿ ಕೊಯ್ದ ಕತ್ತಿಯನ್ನು ಪೂಜೆಮಾಡುವ ಶಾಸ್ತ್ರ : ಎಂದು ಪೆತ್ತಪೆನೊ ನೋಡುವೆನೊ ವನಿತೆಯರು ನೆರೆದುಯುರಿಸಿನ ಪೂಸಿ ನೀರೆರೆದು ವಿನಯದಿಂ ಕುಯಲ ಪೊಗಿಸುವರೊ (ನವಮೋ. ೧೧–೪೮). **ಕುಯ್ಯಲ್** : ೪. ಗಂಡುಗೂಸಂ ಪಡೆದು ಪೊಕ್ಕುಳಂ ಕೊಯ್ದದಂ ಪೂಳ್ವೆಡೆಯೊಳು ರತ್ನಕೊಪ್ಪರಿಗೆಯಂ ಕಂಡು ಮತ್ತಮಾ ಕೂಸಿಂಗೆ ಕುಯ್ಯಲಿನಗಳ್ವಲ್ಲಿಯೊಂದು ಕಡವರಮಂ ಕಂಡು (ಪುಣ್ಯಾಸ್ರ. ೧೨–೧೩ ವ). **ಕುಯ್ಲು** : 'ಕುಯ್ಲುಗಾರ' ಪರಾ. **ಕೊಯಲು** : ೧. ಅಣುಗರ ನೆನೆಯಿಸಿ ಕರುಳನ್ ಕೊರೆವಯ್! ಬೇಡ, ಬೇಡ, ಎದೆ ಏಕಿಂತಿರಿವಯ್ ಕೊಯಲಾದರ್ (ಪಾರಸಿ. ೩೮–೩). ೫. ಕುತ್ತಿಗೆ ಕೊಯ್ಯುತನ : ಬೇರೆ ಏನೋ ಹುಚ್ಚರ ಬೇಕು ಇಲ್ಲ. ಬಸವನದೇನೋ ಕೊಯಲು (ಚಕರಾ. ೨೦೧). **ಕೊಯಿಲ್** : ೧. "ಪಲ – ಲವನಪವ ನಯೋಃ, ಕೊಯಿಲೊಳಂ, ಹಾರಿಕೆಯೊಳಂ : . . . ಪಲಾಯನಂ = ಕೊಯಿಲುಂ, ಪಾರಿಕೆಯುಂ" (ಕಾಶಕ್ಯ. ೨೮೪). **ಕೊಯಿಲಿ** : ೧. ಆ ಹೊಲದ ಸದಿಯನ್ನು ಕಾಡ ಕುರುಳನ್ನು ಕೊಯಿಲಿಯನ್ನು . . . ಕೊಯಿಸಿ (ಕೃಷಿಪ್ರ. ೪೫). **ಕೊಯಿಲು** : ೧. ಎಳದೋಟ್ಟೊಡಕೆ ಪಡಿಥ ಬಟಿಕೆ ಎರಡು ಕೊಯಿಲು ಪರಿಯಾರಂ ಗೊಟೋರ್ (ಸೌಇಇ.XI–i, ೧೨–೨೦; 868); ನೋಡುವವರಿಗೆ ದೊಡ್ಡಜೈಲು; ಮಾಡುವವರಿಗೊ ಬರಲಿರುವ ಸೊಗಕೆ ಸುಗ್ಗಿ ಕೊಯಿಲು (ಕೋಗಿಲ. ೧–೨೧). ೬. ಕೂಳೆ ; ಕೋಲಿ. **ಕೊಯ್ಯಲ್**. 'ಕಡುಗೊಯ್ಯಲ್' ಪರಾ.

[ಕೊಯ್ + -ಅಲು (< -ಅಲ್$_2$)]

**ಕೊಯ್ಲೆ**, ಕೊಯಿಲ್ದೆ (ನಾ). ಶೃಂಗಾರ ಚೇಷ್ಟೆ; ಒಯ್ಯಾರ; ಬೆಡಗು (?) : ಕೆಲಬಲದವರ ಕೆಣಕುತ ಕೊಯ್ಲೆ [ಪಾಠಾಂ. ಕೊಲೆ] ಗಳೊಳು ಕೆಲೆವುತ ಮೊಲೆಯ ಮೇಲುದನು ತೊಲಗಿಸುತೊಯ್ಯನೆ ನಡೆದುದು ನಲವಿಂದ ಕಲಹಟಿಯರು ದಂಡಿನೊಳಗೆ (ಕುರಾಸಾಂ. ೪೧–೬೦).

**ಕೊಯಿಲ್ದೆ**. 'ಕೊಯಿಲೆಮಿಂಡ' ಪರಾ. [?]

**ಕೊಯ್ಲೆವಿಂಡ**, ಕೊಯಿಲೆಮಿಂಡ (ನಾ). ಬೆಡಗಿನ ಮಿಂಡ (?): ಪುದಿದ ಚತುರಂಗದತ್ತ ಚದುರಂ ಪೊದೆಯಿಸುತೆ ಕೊಯ್ಲೆ [ಪಾಠಾಂ. ಯ್ಗೆ]ವಿಂಡರಂ ಪಣಿದದಿಂ ಮಣಯಿಸುತ್ತೆ . . . ಬಿನದಿಸುತ್ತೆಸೆದುದೆಬಲ್ಲಾಜನಂ (ಪದ್ಮರಾ. ೮–೮೪). **ಕೊಯಿಲೆಮಿಂಡ:** ಲೇಸುಮಾಡಿದ ಕೊಯಿಲೆಮಿಂಡರ ರತಿಸುಖಕಾಸೆಮಾಡದೆ ಮನದೊಳಗೆ (ಕುರಾಸಾಂ. ೩೧–೨೪); "ತುಂಟ ವಿಟಪುರುಷ" (ಪ್ರಭಣ್ಣ).
[ಕೊಯ್ಲೆ + ಮಿಂಡ]

**ಕೊಯ್ವು** (ನಾ). ಕೊಯ್ತ; ಕಡಿತ (?): ಅಡಸುವ ಕುತ್ತವೊತ್ತರಿಪ ಮಿತ್ತು ಕಡಂಗುವ ಮಾರಿ ಕೊಯ್ವಿನಿಂ ಕೊಡರ್ವ ವಿರೋಧಿ ಪಾಯ್ವ ಪುಲಿ ಪೊಯ್ವ ಸಿಡಿಲ್ . . . ಕಡೆಗಣ್ಬುವುದೆಂದೊಡೆ ತೇರಿದಾಳದೀ ಕಡುಗಲಿಗೊಂಕ ಭೂಪತಿಯ ಭವ್ಯತೆ ಕೇವಳವೋ ನಿರೀಕ್ಷಿಸಲ್ (ಇಅ. XIV, ೧೫; 1123; ಶಾಸಮಂ. ೩೩೯). [ಕೊಯ್ + -ವು]

**ಕೊಯ್ಸು**, ಕುಯಿಸು, ಕುಯ್ಯಿಸು, ಕೊಯಿಸು, ಕೊಯ್ಯಿಸು (ಕ್ರಿ). ಕೊಯ್ಯುವಂತೆಮಾಡು; ಕತ್ತರಿಸು; ಕಟಾವುಮಾಡಿಸು: ನಿನ್ನ ವಧುಗಳ ತುಱುಬ ಕೊಯ್ಸುವೆನವರ ತೊತ್ತಿರ ಮಾಡುವೆನು ತನಗೆ (ಕುವ್ಯಾಅ. ೫–೨೨); ಕೆಳದಿಯರ ಕೈಯಿಂದೆ ಕೊಯ್ಸಿದಳುೞಿದ ಕೌರವನನುಜವರ್ಗದ ಬಲುಹುರಿಯ ನೇಣುಗಳನು (ಕುವ್ಯಾಅ. ೨೧–೬). **ಕುಯಿಸು:** ರಾಜಸಭೆಯಲ್ಲದೆ ಮತ್ತೊಂದು ಕಡೆಯಲ್ಲಾದರೆ ನಿನ್ನ ನಾಲಗೆಯಂ ಕುಯಿಸಿ ಕಳುಹಿಸಿರುವೆನು (ಸೌಗಂಧಿ. ೨೯೪–೧೩); ತಿಮ್ಮನಾಯಕನು . . . ತಮ್ಮನ ಕಿವಿಮೂಗುಗಳನ್ನು ಕುಯಿಸಿದನು (ನೀತಿಚಿಂ. XI, ೭). **ಕುಯ್ಯಿಸು:** ಕುರಿಕೋೞಿ ಕುಯ್ಯಿಸಿ ತಿಂದು ಮಾರ್ಜಾಲನ್ಯಾಯ ಮಾಡಿ ಹೋಗುತ್ತಾರೆ (ನನ್ನೂರು. ೩೦). **ಕೊಯಿಸು:** ಕೊಯರ್ ಕೊಯರ್ ಎಂದು ಕೊಯಿಸಿದರ್ (ಭಾಷಾಭೂ. ೨೧೭ ಉದಾ); ಕೆರದ ಅಳತೆಗೆ ಕಾಲ ಕೊಯಿಸಿದ ಹಾಗೆ (ಗಾದೆ). **ಕೊಯ್ಯಿಸು:** ಮರ ಕೊಯ್ಯಿಸಬೇಕು (ರೂಢಿ).

ಕೊಯ್ಸಿಕೊಳ್ = ಕತ್ತರಿಸಿಕೊಳ್ಳು: ಇನ್ನುೞಿದ ಮೂಗಂ ಕೊಯ್ಸಿಕೊಳಲೆಂದೀಗ ಬಂದೆಯಲ (ಬಸಪು. ೫೦–೨೪). [ಕೊಯ್ + -ಸು]

**ಕೊರ$_1$** (ನಾ). ಒಂದು ಅನುಕರಣ ಶಬ್ದ; ಗಂಟಲಿನಿಂದ ಹೊರಡುವ ಒಂದು ಬಗೆಯ ಧ್ವನಿ.

**ಕೊರ$_2$** (ನಾ). ಒಂದು ಜಾತಿಯ ಸಸ್ಯ: ಕೊರ . . . ಲಿಂಬಾರ (ವೈಔಗಿ. ೪೩–೮೪೭). [?]

**ಕೊರಂಗಲ** (ನಾ). ಒಂದು ಜಾತಿಯ ಸಸ್ಯ: ಅವರ ಇವರ ಹಾಂಗೆ ನಾವು ಮಡ್ಲೆ ತೆಪ್ಪೆ, ಕಾರೆಚಕ್ಕೆ ಕೊರಂಗಲ ತೆಪ್ಪೆ, ಸುಡುಗಾಡ್ ಸುಂಟಕೊಂಬು, ಅಮ್ಲು ಬರೂಕೆ ಅಂತ ಹಾಕೂದಿಲ್ಲ (ಪಂಜಪಂ. ೫೮). [?]

**ಕೊರಂಗಿ** 'ಕುರಂಗು' ನೋ.

**ಕೊರಂಗು**, ಕೊರಗು$_1$ (ಕ್ರಿ). ೧. ಸವೆ; ಸೊರಗು; ಬಡವಾಗು; ಕ್ಷೀಣವಾಗು: ತಿರಿಪಲೊಡಂ ತ್ರಿಖಂಡ ಧರಣೀಪತಿ ಚಕ್ರದ ಭೀಷ್ಮರಶ್ಮಿಯಿಂ . . . ಯಾದವರ ಸೇನೆ ಕರಿಂಕಜಿಯಟ್ಟೆ ಕಾನನಂ ಕೊರೆಗುವವೊಲ್ ಕೊರಂಗಿದುದು (ಮಹಾನೇ. ೧೩–೭೯). ೨. ಕಳವಳಿಸು; ಪರಿತಪಿಸು; ವ್ಯಥೆಪಡು: ಅಂತಸ್ತಾಪದೆ ಕರಂ ಕೊರಂಗಿ . . . ರೂಪ ಶೃಂಖಲೆಯಾದಂ (ದಶಕು. ೭–೯೧). **ಕೊರಗು$_1$:** ೧. ಕಂದದು ಕುಂದದು ಕರಗದು ಕೊರಗದು ಎನ್ನ ನಿರ್ಭಾವಾರ್ಚನೆ (ಆದವ. ೫೧–೧೫೧); ಕೊರಗಿರ್ದನಿಯಳ ನಮುರ್ದಪ್ಪಿಕೊಳುತಂ (ಕುಸುಮಾ. ೧೧–೧೧೪); ಕೊರಗುತಲಿರುವ ಪ್ರಾಣಗಳೊಡನೆ ಕೂಡಿರುವ ಶತ್ರುಗಳನ್ನು ಖಂಡಿಸುತ್ತ (ಕೃಪಾಕ. ೨೫). ೨. ಮಾದ್ರಿ ತನಗೆ ಮಕ್ಕಳಿಲ್ಲದುದರ್ಕೆ . . . ಕರಂ ಕೊರಗಿ (ಪಂಪಭಾ. ೨–೨ ವ); ಬಂದಹನೆಂದು ಬಟ್ಟೆಯ ನೋಡಿ ಬಾರದಿರ್ದೊಡೆ ಕರಗಿ ಕೊರಗಿದೆನವ್ವಾ (ಮಹಾದೇ. ೩೫–೧೦); ಮುಂದುಗೆಟ್ಟು ಕೊರಗುವ ಸೌಂದರವತಿಯಂ ಕಂಡು (ಉದ್ಭಟ. ೭–೩೩ ವ); ಭಕ್ತನಿರವಂ ನೋಡಿ ಕರಗಿ (ಬಸರ. ೪–೪೫). ೩. ಬಾಡು; ಬತ್ತು; ಒಣಗು; ಕಂದು: "ಕೊರಗು – ರಸವಿಹೀನೇ (ನಿಸ್ಸಾರವಾಗು)" (ಶಮುಧಾ); ವಿರಹಾನಳನಿಂ ಬೆಂದು ಕರಗಿ ಕೊರಗಿ (ಪದ್ಮಾರಾ. ೬೦–೧೭); ಸರೋಜಿನೀ ವನಮಾದಂ ಕೊರಗುತ್ತೆ ಮುಗಿಗುಂ (ಕವಿಕಾ. ೩–೩೧); ಸುಯ್ಯ ಬೆಂಕೆಗಳೊಳ್ ಪೊಕ್ಕ ನಂಪನವನಂ ಕೊರಗಿರ್ಪವು (ಶಾಂತಿಪು. ೮–೯೫); ದುಯ್ಯ ತಾಪದಿಂ ಕುರವಕಮೆಯ್ದೆ ಸೀದಪುದಿದೆಂದು ಕರಂ ತಿಳಕಾವನೀಜಮಂ ಕೊರಗುಗುವೆಂದು (ಅರ್ಧನೇ. ೩–೧೦೮); ಉರಿಗದಿರಿಂದ ಕಿಮುಳ್ಳಿದ ತಳಿರೆನೆ ಕೊರಗಿ (ಜಯುಕಾ. ೪–೪೫). [ದೇ. ॥ ತಮಿ. ಕುರೆಙ್ಗು]

**ಕೊರಂಟು**, ಕೊರಟು (ನಾ). ೧. ಒಣಗಿದ ಮರ; ಕೊರಡು: ಅಲ್ಲಿದನಿಲ್ಲಿದಂ ಶಿವನೆನುತ್ತಡೆಯಾಡಲದೇಕೆ . . . ನಟ್ಟ ಕಲ್ಲಲ್ಲಿ ಪೊದಳ್ದ ಪುತ್ತದೆಡೆಯಲ್ಲಿ ಕಳಲ್ದ ಕೊರಂಟನಲ್ಲಿ ನೀನಲ್ಲದೆ ಮತ್ತೆ ಬೇಡಿದುದನಿತ್ತಪರಾರ್ (ಶಂಕಶ. ೮೭); ಕೊರಂಟಿನ ಬಿಲ್ವದಳಂಗಳಂ ಪ್ರಸೂತಿ ರಹಿತ ಗೋಪಯೋರಸಮನೀಯುಭವಾರ್ಚನೆಗೆಂದನಾ ಚರಂ (ವೃಷವಿ. ೭–೨೩); ಕಱುವಿಲ್ಲದ ಪಶು ಪಾಲಂ ಕಱೆದುದಳುಂಬಂ ಕೊರಂಟು ಬಿಲ್ವದಳಂಗಳ್ ತುಱುಗೆ ಚಿಗುರ್ತುದು (ವೃಷವಿ. ೭–೨೪). **ಕೊರಟು:** ೨. ಒಣಗಿ ಉರುಟಾದುದು; ಕರಟಾದುದು: ಕೊರಟಾದುರಿಗೇಶದೊಳಿರ್ದ ಪೇನ್ಗಳಂ (ನೇಮಿಪು. ೩–೧೧೨); ಉರಿವ ಬೆಂಕಿಗೆ ತಂಪು ತುಪ್ಪ ತಿಲ ಮೊದಲಾದ ಕುಲವಂ ಹಾಕಿ, ಅನಲನ ಕೆಡಿಸಿಹೆನೆಂಬ ಕಲಿಕೆಯ ಮಾತಿನ ನೆರೆ ಬಾಲಕರ ಕಂಡು ಇವರಿಗೆ ಅರಿಕೆ, ಎನಗದು ಕೊರಟನಿರಿಸಿದಂತೆ (ಮೋೞಮಾ. ೫೭–೨೩೯); ಆ ವನವು ಆನೆಯ ಮದೋದಕದಿಂದ ಬೆಳೆದು ತಾಕಲಾಟದಿಂದ ಸೊಪ್ಪು ಸೊಪ್ಪಾಗಿ ವಜ್ರಕ್ರದಿಂದ ಕೊರಟಾಗಿ (ಸಾಹಿಸಂ. ೩೩). 'ಕೊಱಂಡು' ಪಠಾ.

ಕೊರಟುಬೀಳು = ಬೆಳವಣಿಗೆ ನಿಂತುಹೋಗು: (ರ). [?]

**ಕೊರಂಟುದಲೆ**, ಕೊರಟುತಲೆ, ಕೊರಟುದಲೆ (ನಾ). ಕರಟಾದ ತಲೆ; ಒಣಗಿ ಜಡೆಗಟ್ಟಿ ಕೊರಡಿನಂತಾದ ತಲೆ: ಕುೞಿಗಣ್ ಕುರ್ಗಿದ ನಾಸಿಕಂ ಬಿರಿಕೆವಲ್ . . . ಪಿಳಿಗಿರ್ದಂಘ್ರಿತಲಂ ಕೊರಂಟುದಲೆ (ಮಹಾನೇ ೩–೧೫೩). **ಕೊರಟುತಲೆ:** ಕೊರಟುತಲೆ ಹೊರಹಲ್ಲು ಕೆಂಪು (ಕರಿಕ. ೨೦–೨). **ಕೊರಟುದಲೆ:** ಕೊರಟುದಲೆಯ ಕೊಳೆನಾಱುವ ಕಬ್ಬಾಯ ಸುರುಟುಕಿವಿಯ ಸುಂಠಿವೆರಲ (ನೇಮಿಸಂ. ೭–೧೦೩).
[ಕೊರಂಟು + ತಲೆ$_1$]

**ಕೊರಂತಿ** (ನಾ). ಒಬ್ಬಾತನ ಹೆಸರು: ನಿನ್ದಿಯ ಕೊರನ್ತಿಯರಸರ ಮಕ್ಕಳ್ನಾಲ್ವಾಲ್ವರು ನೆಲದಬಿದಿನೊಳ್ಕಾದಿ (ಎಕ. IV, ಹೆಗ್ಗಡ. ೧೧೬–೯; 930). [?]

**ಕೊರಂಬೆ** (ನಾ). ಮರದ ಎಲೆಗಳಿಂದ ಮಾಡಿದ ಗೊರಗು: ನೆತ್ತಿಯ ಮೇಲೆ ಕೊರಂಬೆ ಕೊಡೆಯನ್ನೇರಿಸುತ್ತಾ ಮಡದಿಗೆ ಉಸುರಿದ (ನಡದಾ. II, ೧೧೨೬). [← ತುಳು. ಕೊರಂಬು]

**ಕೊರಕ$_1$** (ನಾ). ೧. ಕೊರೆಯುವವನು; ರೇಖಿಸುವವನು: ಚುಕ್ಕಿ ಕೊರಕ, ಚಿತ್ರಕ (Stippler. ಇಂಕನಿ). ೨. ಕೊರೆಯುವ ಸಾಧನ: ಮೇವುಕೊರಕವನ್ನು ತೆಗೆದುಕೊಂಡು ಮೇವು ಕೊರೆಯ ಹತ್ತಿದನು (ಬಾಬಲ. ೭೭). [< ಕೊಱೆ$_1$ + -ಕ$_3$]

**ಕೊರಕ$_2$** (ನಾ). ಒರಟಾದದು; ಒರಟು: ದಿವ್ಯವಸನವ ಮುರುಕದಿಂದುಡುವಂಗದೊಳು ಕೊರಕದ ನಾರಿನ ಸೀರೆಯನುಡುವುದು ದೊರಕಿತೇ ನಿಮಗೆಂದಳುವರು (ಜ್ಞಾನಜ. ೪೩–೪೫). [?]

**ಕೊರಕಂಚಿ** (ನಾ). ಬೇಲಿಗಳಲ್ಲಿ ಬೆಳೆಯುವ ಒಂದು ಜಾತಿಯ ಹಂಬು, —ಬಳ್ಳಿ; ಕೊರಕಂಚಿಬಳ್ಳಿ: (ಕ). [?]

**ಕೊರಕಂಚೆ** (ನಾ). ಕ್ರೌಂಚಪಕ್ಷಿ: (ಕ). [< ಸಂ. ಕ್ರೌಂಚ]

**ಕೊರಕಲ್**, ಕೊರಕಲ, ಕೊರಕಲು (ನಾ). ಪ್ರವಾಹ, ಬಂಡಿಯ ಗಾಲಿ ಮೊದಲಾದುವುಗಳಿಂದ ಕೊರೆದು, ಹರಿಗಡಿದ ಭೂಮಿ, —ತಗ್ಗು: "ಗುಂಡಾರ-ಕೊರಕಲ್" (ಶಾಶಕ್ಯ. ೨೭).

**ಕೊರಕಲ**: (ಕ). **ಕೊರಕಲು**: ತಂಕ ನಡದು ಹೂಲಹ ಕೊರಕಲಿಗೆ ಮೂತಿ ತಿಟ್ಟನಲ್ಲಿ ಪಡುವ ಮುಖವಾಗಿ (ಎಕ. III, ತಿರುಮ. ೬೩-೨೮೪; 1784); ಹಳ್ಳ ತಿಟ್ಟು ಕೊರಕಲುಗಳಿಂ ಕೂಡಿದ ಪರ್ವತಪ್ರಾಂತ (ಮುದ್ರಾಮಂ. ೮೭). [?]

**ಕೊರಕಲ** 'ಕೊರಕಲ್' ನೋ.

**ಕೊರಕಲು** 'ಕೊರಕಲ್' ನೋ.

**ಕೊರಕಲ್ಲು** (ನಾ). ಕೊರೆಯುವ ಕಲ್ಲು; ಬಿರುಸಾದ, ಮೊನೆಯಾದ, ಏಣುಗಳುಳ್ಳ ಕಲ್ಲು: (ಕ). [< ಕೊಱ$_1$ + ಕಲ್ಲು (< ಕಲ್$_3$)]

**ಕೊರಕಾಪುಳಿ** (ನಾ). ಒಂದು ಜಾತಿಯ ಗಿಡ: ಸೀಮೆ ಹುಣಸೆ, ಕೊರಕಾಪುಳಿ, ಕೊಟ್ಟಾಂಪುಳಿ (ವೈಔಗಿ. ೬೨-೧೨೬೩). [?]

**ಕೊರಕು** 'ಕುಱುಂಕು' ನೋ.

**ಕೊರಕೆ** (ನಾ). ಒಂದು ಜಾತಿಯ ಸಸ್ಯ: ಕೊರಕೆ ಸೊಪ್ಪಿನರಸ, ಬೆಲ್ಲವತ್ತದ ಸೊಪ್ಪಿನ ರಸ... ಈ ೬೨ ಬಗೆಯ ಸ್ವರಸಂಗಳಂ ಪ್ರತ್ಯೇಕ ಒಂದು ಮಾನವ ಹನಿಸಿ (ಸಕವೈ. ೨೧೭). [?]

**ಕೊರಕೊಂಚಿ** (ನಾ). ಒಂದು ಬಗೆಯ ಪಕ್ಷಿ: "ಸುಲಿಗಾಯಿ ತಿನ್ನುವ ಹಕ್ಕಿ" (ಜಾನಕೋ. ೪೨). [?]

**ಕೊರಕೊರೆ** (ನಾ). ಒಂದು ಪ್ರದೇಶದ ಹೆಸರು (?): ಅಣ್ತಿಟನ್ನು ತಾಯೂರ ಪಡುವಣ ದೆಸೆಯ ಕೊರಕೊರೆಯ ಪಳ್ಳ (ಎಕ. III, ನಂಜನ. ೧೫೯-೧೨; 915). [?]

**ಕೊರಕೊಳ್ಳಿ** (ನಾ). ಉರಿ ಆರುತ್ತಿರುವ ಕೊಳ್ಳಿ: (ಕ). [< ಕೊಱ$_3$ + ಕೊಳ್ಳಿ$_1$]

**ಕೊರಕೋಡು** (ನಾ). ಒಂದು ಊರಿನ ಹೆಸರು: ಕೊರಕೋಡ ಕೊಣ್ಣನ್ದರ ಕೆಱೆ ಧಾತು ಸರ್ವ್ವಂಯಿತ್ತರ್ (ಎಕ. VIII, ಸೊರಬ. ೧-೪; 797 ?). [?]

**ಕೊರಗ** (ನಾ). ೧. (ಕರಾ) ಹೊಲೆಯರಲ್ಲಿ ಒಂದು ಪಂಗಡ: ಮೊನ್ನೆ ತನಕ ನಾವು ಹೊಲೆಯ ಕೊರಗರೆಂದು ಕರೆಯುತ್ತಿದ್ದ ಹರಿಜನದ ಹಿರಿಯರು ಇಲ್ಲಿಯ ಮೂಲನಿವಾಸಿಗಳು (ತುಳುನಾ. ೫೪); ಮಾರಿ ಕೊರಗ ಎಂದು ಹಲವಾರು ಒಳಪಂಗಡಗಳ ಹೊಲೆಯರು ಬೆಂಗಳೂರಲ್ಲಿ ಇದ್ದಾರೆ (ದಂಬನಾ. ೧೯); ಅದಕ್ಕೆ ನಮ್ಮ ನೀರಿನ ಋಣ ಮುಗಿಯಿತು ಸತ್ತಿತು ಅದು... ಕೊರಗರನ್ನು ಬರಲಿಕ್ಕೆ ಹೇಳುತ್ತೇನೆ ಎಂದು ಅವಸರದಿಂದ ಕೊರಗರ ಕೊಪ್ಪಕ್ಕೆ ಹೋದಳು (ಮರಮ. ೯೫). ೨. ಓಲಗ ಬಾರಿಸುವವನು; ವಾದ್ಯಗಾರ. ೩. ಬುಟ್ಟಿ, ಚಾಪೆ ಮೊದಲಾದುವುಗಳನ್ನು ಹೆಣೆಯುವವನು; ಮೇದ. [← ತುಳು. ಕೊರಗ]

**ಕೊರಗಣೆ** (ನಾ). ಕೊರಗುವಿಕೆ; ಚಿಂತೆ; ಕಳವಳ: ಉಕ್ಕುವತಿ ದುಗುಡದಲಿ ಕರೆಸುತ್ತೊಕ್ಕಣಿಸಿದನು ಗುರು ವಸಿಷ್ಠನೊಳಕ್ಕುವೀ ಕೊರಗಣೆಗೆ ಪರಿಹಾರವನು ಬೆಸಸೆಂದು (ರಾಮಾಸಂ. ೧-೨-೩); ಮಗಳ ಮದ್ವೇದೊಂದೆ ಕೊರಗಣೆ ಹಿಡಿದು ಬಿಟ್ಟದೆ ಅವಳಿಗೆ (ಸರ್ವಮಂ. ೧೬೧). [ಕೊರಗು$_1$ (< ಕೊರಂಗು) + -ಅಣೆ$_4$]

**ಕೊರಗತಿ** (ನಾ). ಕೊರಗರ ಹೆಂಗಸು: ಮೂವರು ಕೊರಗರು, ಒಬ್ಬಳು ಕೊರಗತಿಯೂ ಬಂದರು (ಮರಮ. ೪೫). [ಕೊರಗ + -ತಿ$_1$(< -ಇತ್ತಿ)]

**ಕೊರಗಿಲು** (ನಾ). ಒಂದು ಬಗೆಯ ಮರ: "ಪಿಚ್ಚಿಲಃ-ರಾಜಾಹ್ವ, ತ್ರಿಶೂಲಿ, ಎಲವ, ಕೊರಗಿಲು, ಲಪಂಗ" (ಓಷಧಿ. ೯೭). [?]

**ಕೊರಗಿಸು** (ಕ್ರಿ). ೧. ಕುಗ್ಗಿಸು; ಸೊರಗಿಸು; ಬಡವಾಗಿಸು: ನಿನ್ನ ತನುವಂ ಕೊರಗಿಪುದೆ ಲತಾಂಗಿ ಘೋರತರ ತಪದಿಂದಂ (ಕಾದಂಉ. ೫೫೧). ೨. ಬಾಡಿಸು; ಬತ್ತಿಸು; ಕಂದಿಸು: ನಿನ್ನ ಮೆಯ್ಯೆಂಕೆಯಿಂದೆಮಗಾ ಹಾರಮುಪ್ಪಿಲ್ಲಿಯ ಮೃಣಾಳಂಗಳೆಲ್ಲಮಂ ಕೊರಗಿಸದಿರ್ (ಕಾದಂಉ. ೩೩೪); ತರಂಗಾಳಿಯುಂ ನಂಜಿನ ಗಾಳಿಯೆನಿಸಿ ವನಕುಸುಮ ಕಿಸಲಯ ಪ್ರಕರಮುಂ ಕೊರಗಿಸಿದಪುದು (ವರ್ಧಪು. ೪-೫೮); ಇದು ದುಷ್ಕರ್ಮಾಬ್ಜ ಷಂಡಂಗಳನುಱೆ ಕೊರಗಿಪ್ಪೊಂದು ನೀಹಾರಮೆಂಬಂದದೆ ಹೋಮಸ್ತೋಮ ಧೂಮಂ ನೆಗೆದುದು (ಗಿರಿಕ. ೧-೬೭). ೩. ಸೋಲಿಸು; ಮೀರು: ನೈದಿಲನೆಯ್ದೆ ಕಣ್ಮಲರ್ ಕೊರಗಿಸೆ (ಕಬ್ಬಿಕಾ. ೨೩). [ಕೊರಗು$_1$ (< ಕೊರಂಗು) + -ಇಸು$_3$]

**ಕೊರಗು**$_1$ 'ಕೊರಂಗು' ನೋ.

**ಕೊರಗು**$_2$ (ನಾ). ಕಳವಳ; ವ್ಯಥೆ; ಚಿಂತೆ: ಆವನಿಗೆ... ತುಂಬ ಕೊರಗುಂಟಾಯಿತು (ವಚಭಾ. ೨೮೪); ನನ್ನ ಹೃದಯದಲ್ಲೂ ಕೊರಗು ಇತ್ತು (ರಾಯುಕ. ೨೭); ಅದೇ ಕೊರಗಿನಲ್ಲಿ ಆ ಸಾಧ್ವಿ ಆ ಮರುವರ್ಷವೇ ಗತಿಸಿದ್ದಳು (ಹೊಸಕ್ಷ. ೨೭). [< ಕೊರಂಗು]

**ಕೊರಗು**$_3$ (ನಾ). ಒಂದು ಬಗೆಯ ವಾದ್ಯ (?): ಮುರಳಿಯ ತಿವಳಿಯ ತಿಸರಿಯ ಕರಡೆಯ ಮದ್ದಳೆಯ ಕೊಟಲ ಪಳವದ ಪಲವುಂ ಗಿರುಗಟಿಯ ಸಿವುರ ಸಿಪ್ಪಿನ ಕೊರಗಿನ ಕಿನ್ನರಿದ ಸರವೆ ಸರಮಾ ಪೊಬಿಲೊಳ್ (ಸೂಕ್ತಿಸು. ೪-೧೦೪). [?]

**ಕೊರಗುಟ್ಟು** (ಕ್ರಿ). ಕೊರಕೊರ ಶಬ್ದಮಾಡು: ಆ ಮರಿನಾಯಿ ಇನ್ನೂ ಹೆಚ್ಚಾಗಿ ಕೊರಗುಟ್ಟುತ್ತಾ ಹೊರಟಿತು (ಪಕ್ಷಾಕ್ಷಿ. ೧೦೨). [ಕೊರ$_1$ + ಕುಟ್ಟು$_1$]

**ಕೊರಚ** (ನಾ). ಬಾಚಣಿಗೆ ಮೊದಲಾದ ಸಾಮಾನುಗಳನ್ನು ಮಾರುತ್ತಾ ಊರೂರು ಅಲೆಯುವ ಗುಡ್ಡಗಾಡು ಜನ: ಕೊರಚರು – ಇವರಲ್ಲಿ ಬೀಡಕೊರಚರು, ಡಬಲೀಕೊರಚರು (ಕಭಾಗೆ. ೧೮೮). [ದೇ. ‖ ತಮಿ. ಕುರುಞ್ಞ; ಮಲ. ಕುಱುಚ್ಚ; ತೆಲು. ಕೊರಚ]

**ಕೊರಚಾಟ** 'ಕೊಱಚಾಟ' ನೋ.

**ಕೊರಚಾಡು** 'ಕೊಱಚಾಡು' ನೋ.

**ಕೊರಚಿ** (ನಾ). ಕೊರಚಜಾತಿಯ ಹೆಂಗಸು; ಕೊರವಂಜಿ: ವಿಹರಿಸುತ ಕಂದರ್ಪನು ಕೊರಚಿಯಾದುದ ಚಂದದಿ ಲಾಲಿಸುವುದು (ಕಂದಕೊ. ೧೯೦-೧). [ಕೊರಚ + -ಇ$_2$]

**ಕೊರಚು** 'ಕೊಱಚು$_1$' ನೋ.

**ಕೊರಟಿಗೆ** 'ಕುರಂಟಿಗೆ' ನೋ.

**ಕೊರಟು** 'ಕೊರಂಟು' ನೋ.

**ಕೊರಟುತಲೆ** 'ಕೊರಂಟುದಲೆ' ನೋ.

**ಕೊರಟುದಲೆ** 'ಕೊರಂಟುದಲೆ' ನೋ.

**ಕೊರಟೆ** (ನಾ). ಗಡ್ಡೆ; ಗರಣೆ (?): ಕೇಕರಿಸಿಯುಗುಳ್ದರೆ ಕೊರಟೆ ಕೊರಟೆಯಾಗಿ ಬಾಯಲ್ಲಿ ರಕ್ತಬೀಳುತ... ಗಂಡೆಗಳೇಳುವುದೀ ಲಕ್ಷಣಮುಳ್ಳೊಡೆ ರಕ್ತಷ್ಠವಿ ಸನ್ನಿಪಾತಮೆನಿಸಿಕೊಂಬುದು (ಸಕವೈ. ೧೬೩). [?]

**ಕೊರಡ** 'ಕೊರಡೆ$_1$' ನೋ.

**ಕೊರಡಗೆ** (ನಾ). ಗುದ್ದೆ; ಕೊರಡು (?): ಕಟ್ಟಿದ ಕೈಪೊಡೆಯ ತೊಳಗುವ ತೋಳ ಕಡೆಯುದ ತೋಲ ಕೈಯ ಕೊರಡಗೆ ನಿಗಳದ ಕೊರಳೊಳ್ ಕಾಂತಿಯುಂ ಬೀರುವ ಕಂಠವಳಯದ (ಮಹಾನೇ. ೧೨-೨೭ ವ). [?]

**ಕೊರಡು**$_1$ 'ಕೊಱಂಡು' ನೋ.

**ಕೊರಡು**$_2$ (ನಾ). ನೆಟ್ಟಗೆ ಇರುವ ಕಾಮನ ಬಿಲ್ಲು; ಮಳೆಯ ಬಿಲ್ಲು: "ಇಂದ್ರಚಾಪ ಸಸಿನೆ ಮೂಡಿದಡೆ ರೋಹಿತ ಎನಿಸುಗು, ಅದು ಕೊರಡು" (ನಾಚಿರಾ. ೭); ಮೇಲಲೆವ ಮುಗಿಲ ಹೊದಱಿನ ಮೂಲೆಗಳಂ ನೆಗೆದ ಕೊರಡು ಕೊಂಡವೊಲೆತ್ತಂ (ಅನಂಪು. ೯-೮); ಪಶ್ಚಿಮಾಶೆಯಲ್ಲಿ(ಯೊಳ್)ಕೊರಡು ಮೂಡುವೊಡಂ (ಜಟ್ಟಮ. ೨-೧).
[?. / ತೆಲು. ಕೊರಡು]

**ಕೊರಡು**$_3$ (ನಾ). (?): ತ್ರಿಸಂಧಿಯ ಸತ್ತಿ ಕೊರಡು (ಎಕ. I, ೧-೨೩; 466). [?]

**ಕೊರಡೆ**$_1$, ಕೊರಡ, ಕೋರಡಿ$_3$, ಕೋರಡೆ (ನಾ). ೧. ಬಾರುಕೋಲು; ಚಬುಕ; ಚಾಟಿ; ಚಾವಟಿ: ಕೊರಡೆಯಂ ಬಡಿಸಿವನ ಬಿಡಿಸಿದಡೆ ಸಾಲದೇ? (ಗೊಲ್ಲೊಥಾ. ೬-೧೫೪). ೨. ಚಾಟಿಯ ಏಟು, —ಹೊಡೆತ: ಇವನಿಗೆ ನೂರಿಪ್ಪತ್ತು ಕೊರಡೆ ಹೊಡಿ (ಕಥಾಮಂ. IV, ೬೭). **ಕೊರಡ:** ೧. "ಚಾವಟ, ಚಬುಕು, ಕೊರಡ, ಬಾರುಗೋಲು" (Whip. ಇಂಕನಿ); ಕಂಕುಳಲ್ಲಿದ್ದ ಕೊರಡವನ್ನು ತೆಗೆದುಕೊಂಡು . . . ಹೊಡೆದುಕೊಳ್ಳಬಾರಂಭಿಸಿದಳು (ಮಗಮಾಂ. ೨೨). **ಕೋರಡಿ**$_3$**:** (೭). **ಕೋರಡೆ:** (೭).
[← ಹಿಂ. ಮರಾ. ಕೋಡಾರ್. / ಪೋರ್ಚು. Corda]

**ಕೊರಡೆ**$_2$ (ನಾ). ಕೊರಡಿನಂಥವಳು; ಒರಟಾದವಳು: ಕೋಡು ಗೊರಕೆಯೊ ಮೇಣ್ ಮೂಢೆಯೋ ಕೊರಡೆಯೋ ಮೂರ್ಖಿಯೊ ಮುಗುದೆಯೋ (ಮದೇಪು. ೬-೨೧).
[ಕೊರಡು$_1$ (< ಕೊಱಂಡು) + -ಎ$_2$]

**ಕೊರತೆ** 'ಕೊಱಂತೆ' ನೋ.

**ಕೊರತೆಪಡು** (ಕ್ರಿ). ಕಳವಳಿಸು; ಚಿಂತಿಸು: ಕನ್ನಡ ಕವಿತೆಯಲ್ಲಿ ಹೊಸದೇನೂ ಹುಟ್ಟಿಲ್ಲವೆಂದು ಈಗ ಯಾರೂ ಕೊರತೆಪಟ್ಟುಕೊಳ್ಳುವ ಹಾಗಿಲ್ಲ. (ಸಾಹಿಶ. ೩೧). [ಕೊರತೆ (< ಕೊಱಂತೆ) + ಪಡು$_1$]

**ಕೊರನಾರಿ** 'ಕೊಡನಾರಿ' ನೋ.

**ಕೊರಪು**$_1$, ಗೊರಪ (ನಾ). ಕುದುರೆಯ ಮೈಯನ್ನು ಉಜ್ಜುವ ಹಣಿಗೆ; ಖರಾರಿ: (೭). **ಗೊರಪ:** (೭).
[ದೇ. ‖ ತಮಿ. ಮಲ. ಕುರಪ್ಪ; ತೆಲು. ಕೊರಪ, ಗೊಱಪ. / ಪ್ರಾ. ಖುರಪ್ಪ]

**ಕೊರಪು**$_2$ (ನಾ). ಕೊರೆದ ಅಡಕೆಯ ಭಾಗ: ಹಸಿಯ ಅಡಕೆಗಳಲ್ಲಿ ಮಧ್ಯೆ ಎಳಕು ಮತ್ತು ಬಹಳ ಎಳಕಾದ ಅಡಿಕೆಗಳನ್ನು ಸಣ್ಣಾಗಿ ಕೊರೆದು ಚೂರುಮಾಡಿ ಕುದಿಸುತ್ತಾರೆ. ಅದರಲ್ಲಿ ಚತುರ್ಭಾಗ ಕೊರಪ, ಲವಂಗ ಚೂರು, ಮೋಡಿ, ಅಣ್ಣಾವಾರ, ದೇಶಾವಾರ ಎಂದು ಬೇರೆ ಬೇರೆ ರಾಶಿಗಳನ್ನು ಮಾಡುತ್ತಾರೆ (ಕೃಷಿಪ್ರ. ೧೫೨). [< ಕೊಱೆ$_1$ + -ಪು$_2$]

**ಕೊರಪಣೆ** (ನಾ). = ಕೊರೆತ: ಅಂದು ಸೆಪ್ಟಂಬರ್ ತಿಂಗಳ ಕೊರಪಣೆಯ ಮುಂಜಾನೆ ಚಳಿಗಾಳಿ ರಪರಪನೆ ಹೊಡೆಯುತ್ತಿತ್ತು (ಪುನರು. ೪೮೬).
[< ಕೊಱೆ$_1$ + -ಅಣೆ$_4$]

**ಕೊರಪುಳ್ಳಿ** (ನಾ). ಕೊರಡಿನಂತಹ ಪುಳ್ಳೆ: ಕೂರ್ಮಂ . . . ಸುಚ್ಚುನುಱಿಯಾಗೆ ಬಿರ್ದುದಂ ಮಾಂಸಾಹಾರಿಗಳ್ ಕಂಡು ಕೊರಪುಳ್ಳಿಯೊಳ್ ಮೋದಿ ಕೊಂದರ್ (ಪಂಚತಂ. ೧೫೮-೪). [< ಕೊಱಡು + ಪುಳ್ಳಿ]

**ಕೊರಪೆ**, ಗೊರಪೆ (ನಾ). ಬೆಣಚುಕಲ್ಲಿನಂತೆ ಚೂಪಾದ ಅಂಚುಳ್ಳದ್ದು. **ಗೊರಪೆ:** ನಡೆದು ನಡೆದು ಆಕೆಯ ಕಾಲುಗಳಿಗೆ ಗುಳ್ಳೆ ಬಂದಿದ್ದವು. ಒಂದು ಚೂಪಾದ ಗೊರಪೆ ನೆಟ್ಟು ನೆತ್ತರವೂ ಬಂದಿತ್ತು (ಮಾಲತೀ. ೮೫). [< ಕೊಱೆ$_1$ + -ಪೆ]

**ಕೊರಬ** 'ಕೊಱವ$_1$' ನೋ.

**ಕೊರಬು** 'ಕೊಱವ$_1$' ನೋ.

**ಕೊರಮ** 'ಕೊಱವ$_1$' ನೋ.

**ಕೊರಮಗೂಡೆ** (ನಾ). ಕೊರವರ ಗೂಡೆ, —ಕುಕ್ಕೆ: ಮಣಿ ಮುತ್ತಿನ ಕೊರಮಗೂಡೆಯ ನೆತ್ತಿಯಲಿ ಹರಿ ಪೊತ್ತು ಮೆರೆದನು (ಅರ್ಜಾವಿ. ೧೭-೨೮). [ಕೊರಮ (< ಕೊಱವ$_1$) + ಗೂಡೆ]

**ಕೊರಮಿ** 'ಕೊಱವಿ' ನೋ.

**ಕೊರಮುಟ್ಟು** (ನಾ). ಕೊರೆಯುವ ಉಪಕರಣ; ಉಳಿ, ಬಾಚಿ ಮೊದಲಾದ ಸಾಧನ: "ಕೊರಮುಟ್ಟು ಶಸ್ತ್ರ" (ಗಂಗಾಮ. ೧೦೨).
[< ಕೊಱೆ$_1$ + ಮುಟ್ಟು. / ತೆಲು. ಕೊಱಮುಟ್ಟು]

**ಕೊರಲ್**, ಕೊರಲು, ಕೊರಳ್, ಕೊರಳು (ನಾ). ೧. ಕತ್ತು; ಕುತ್ತಿಗೆ; ಕಂಠ: "ಗ್ರೀವಾ . . . ಕಂಧರಃ, ಗಳಃ, ಕಂಠಃ —ಈ ೭ ಕೊರಲ್" (ಹಲಾಯು. ೮೫-೩೬೨); ಚರಣಾಲಕ್ತಕ ಲಾಂಛನಂ ನಿಟಿಲದೊಳ್ ಕೇಯೂರ ಮುದ್ರಾಂಕಿತಂ ಕೊರಲೊಳ್ (ಕಾವ್ಯಸಾ. ೬೫೫ ಶೂದ್ರಕ); ಬಳ್ಳಿಯಂ ಕೊರಲೊಳ್ ತಗುಳ್ಚಿ (ಪದ್ಮಾರಾ. ೧೨೦-೧೬); ಅಟ್ಟಱಿಂದಂ ಕೊರಲಂ ಬಂದಪ್ಪಿರ್ದಳೊ (ಕಾದಂಪೂ. ೪೮); ಕಪಿಯ ಕೊರಲೊಳ್ ಪೂಮಾಲೆಯಿಕ್ಕಿದಂತೆ (ಧರ್ಮಾಮೃ. ೧-೧೧೮); ಗುಬ್ಬಿಯ ಕೊರಲ್ಗೆ ಗೋಧಿಯ ಕಲ್ಲ ಕಟ್ಟಿದೊಡುಬ್ಬಿಯಾಗಸಕೆ ಪಾಱುವುದೇ (ಮೋಹತ. ೧-೨೨). ೨. ಧ್ವನಿ; ಕಂಠ; ಸ್ವರ: ಅಂತೊಂದೆ ಕೊರಲೊಳ್ ಕೊಳೆ ಪಾಡುವ ಬರ್ಬರ ಕಿರಾತೆಯರಿಂಗೊರಲೊಳೊದವಿ ಬಂದು (ಶಾಂತಿಪು. ೨-೨೨೪). ೩. ಮಾತು; ನುಡಿ: ಇಱಿವಬೆಡಂಗನ ಕೊರಲೊಳ್ಕೊಂಕುಂಟಿ ನುಡಿಯೊಳೇಂ ತೊದಳುಂಟೆ (ಗದಾಯು. ೨-೬); ನಾಡೆಲ್ಲಮೊಂದೆ ಕೊರಲೊಳ್ ಪೊಗೞೆ (ಧರ್ಮಾಮೃ. ೬-೪೫). **ಕೊರಲು:** ೧. ಭಾಳ ಕೊರಲು ಭುಜ ಉರ ನಾಭಿಯೊಳಂತೇಳು ಪರಮುಷ್ಟಮ ಸ್ಥಾನಂಗಳಂ (ದೀಕ್ಷಾಬೋ. ೧೧೩-೪); ಬಾಲೆಯ ಕೊರಲು ಹೊನ್ನೊರಲು ಸುಸ್ವರ ಕಹಿ (ಮೋಹತ. ೨-೫೦). **ಕೊರಳ್:** ೧. ಕೊರಳೊಳಮರ್ದಿರ್ಕ್ಕೆ ಕಂಠಾಭರಣಂ (ಶಾಂತಿಪು. ೨-೭೩); ಗಾಳಿಗೊಡ್ಡಿದ ಸೊಡರಂತೆ ನಡುಗಿ ಸೂಳೆಯ ಕೊರಳಂತೆ ಕಗ್ಗಿ (ಧರ್ಮಾಮೃ. ೧-೧೬೮); ತೋರಹಾರಮಂ ಕೊರಳೊಳಿಕ್ಕಿ (ನಂಬಿರ. ೧೦-೪೪); ನಸು ಮುರಿದ ಕೊರಳ್ಗಳ ಬಿಗಿದ ನರಗಳ (ಬಸಪು. ೪೬-೫೬); ಸುರಗಿರಿಯನಾನುವ ಕೊರಳ ಸತ್ವವೆ (ಕುವ್ಯಾಕ. ೨೦-೩೩). **ಕೊರಳು:** ೧. ಆ ಸೂಳೆಯ ಕೊರಳಲ್ಲಿ ಏಳನೂಱಿಪ್ಪತ್ತಾನೆ ನೇಱಿತ್ತಕಂಡೆ (ಅವಚಂ. ೧೦-೩೮); ಇದಱ ಕೊರಳಲಿ ನೇಣನಿಕ್ಕಿದೊಡೆ (ಬಸಪು. ೨೮-೪೩); ಗಿರಿಯ ಕೊರಳಿಗೆ ವಜ್ರಮಣಿಯಾಭರಣವೇ (ಕುವ್ಯಾದ್ರೋ. ೨-೬೩); ಸೋಮರ್ಮುಡಿಯ ಭಾರಕೆ ಕೊರಳು ಕೊಂಕಲು (ನಳಚ. ೫-೫೩). ೨. ಇಂಪಾದ ಕೊರಳಿನಿಂದ ಬಂದರೆ ಆದು ಸಂಗೀತ (ಭಾರದ. ೪೦೫). ೩. ಪರದನನೊಂದೆ ಕೊರಳೊಳು ಜನವು ಪೊಗಳಲು (ಸಾಳ್ವಭಾ. ೭-೫೨). ೪. ಕಾಳಿನ ತೆನೆ, —ಗೊಂಚಲು: ಗಿಳಿಗಳ ಹಸಿರುಹಿಂಡುಗಳು . . . ಬೆಳೆಯ ಮೇಲೆ ಎರಗಿ ಭತ್ತದ ಕೊರಳುಗಳನ್ನು ಕೊಕ್ಕಿನಿಂದ ಕೊಯ್ದು (ಪರಾವ. ೨೦೦); ಬತ್ತದ ಸೂಡಿ ಹೊರುವ ದಿನ ಅವರ ಮಕ್ಕಳು ಉದುರಿದ ಕೊರಳನ್ನು ಬುಟ್ಟಿಯಲ್ಲಿ ಆರಿಸಿಕೊಂಡು ಬಂದುದೂ ಇದೆ (ಬಾಳಿಗ. ೨೬).

ಕೊರಳನೂಲು = ಮಂಗಳಸೂತ್ರ: ಆ ಬಡವಿಗೆ ಇರುವ ಆಭರಣವೆಂದರೆ ಕೊರಳನೂಲು ಮಾತ್ರ (ರೂಢಿ). ಕೊರಳಿಗೆಕಟ್ಟು = ಮದುವೆಮಾಡು; ಗಂಟುಹಾಕು: ಜಾತಕದ ಬೆನ್ನುಹತ್ತಿ ಈ ಸೊಡಲೆಸಿದ್ದನ ಕೊರಳಿಗೆ ಕಟ್ಟಿದರು (ಮೂರುದಾ. ೬೫); ಗುಲ್ಲೇಳುವ ಮೊದಲೇಯಾರಾದರೂ ಕೊರಳಿಗೆಕಟ್ಟಿಬಿಡೋಣ (ಮೂರುದಾ. ೧೫೫).

ಕೊರಳಿಗೆಬರು = ಮದುವೆಯ ಮಾಂಗಲ್ಯ ಕೊರಳಿಗೆ ಬರು; ಮದುವೆಯಾಗು: ಅವರಲ್ಲನೇಕರಿಗೆ ಇನ್ನೂ ಕೊರಳಿಗೆ ಬಂದಿರಲಿಲ್ಲ (ಸುವಸ್ವ. ೫೬). ಕೊರಳುಒಡೆ = ಧ್ವನಿ ಗಡುಸಾಗು; ವಯಸ್ಸು ಬಲಿತುದಕ್ಕೆ ಗುರುತಾಗಿ ಧ್ವನಿ ಗೊಗ್ಗರವಾಗು: ಹಾಲುಹಲ್ಲು ಉದುರಿಲ್ಲ, ಕೊರಳು ಒಡೆದಿಲ್ಲ (ರೂಢಿ). ಕೊರಳುಕಟ್ಟಿಕೊಳ್ಳು = ೧. ಕಂಠ ಗದ್ಗದಿತವಾಗು; ಎದೆಯು ಉಬ್ಬಿ ಇಳಿಯಿತು, ಕೊರಳು ಕಟ್ಟಿಕೊಂಡಿತು (ಮುನಿಮಾ. ೧೯). ೨. ಬಾಚಿ ತಬ್ಬಿಕೊಳ್ಳು; ಅಪ್ಪಿಕೊಳ್ಳು: ಅಪ್ಪ ಸತ್ತ ಆರು ತಿಂಗಳಿಗೆ ಹುಚ್ಚುಮಾವ ಬಂದು ಕೊರಳು ಕಟ್ಟಿಕೊಂಡು ಅತ್ತ (ಗಾದ). ಕೊರಳುಕಟ್ಟು=ಬಂಡಿ ಅಥವಾ ನೇಗಿಲಿಗೆ ಎತ್ತುಗಳನ್ನು ಹೂಡು; ಬಂಡಿಹೂಡು: ನಸುಕಿನಲ್ಲಿಯೆ ಕೊರಳು ಕಟ್ಟಿದರೆ ಬಿಸಿಲೇರುವುದರಲ್ಲಿ ಊರು ಮುಟ್ಟಬಹುದು (ರೂಢಿ). ಕೊರಳುಬಿಚ್ಚು, ಕೊರಳುಬಿಡು, ಕೊರಳುಹರಿ = ಎತ್ತುಗಳ ಕೊರಳ ಮೇಲಿಂದ ನೊಗವನ್ನು ಇಳಿಸು; ಗಾಡಿಬಿಡು: ಗಾಡಿಯ ಬಳಿಗೆ ಬಂದು ಕೊರಳುಬಿಚ್ಚಿ ಎತ್ತಿಗೆ ಹುಲ್ಲು ಹಾಕಿ (ಮುನಿಮಾ. ೬); ಕೆರೆಯ ಬಳಿ ಗಾಡಿ ಕೊರಳುಬಿಡು (ರೂಢಿ); ಇನ್ನು ತಮ್ಮ ಕೊರಳುಹರಿಯುವುದೆಂಬ ನಂಬಿಕೆಯಿಂದಲೋ ಏನೋ ಎತ್ತುಗಳು . . . ಓಡುತ್ತಿದ್ದವು (ರಕ್ತಧ್ವ. ೧೩).

[ದೇ. ‖ ತಮಿ. ಕುರಲ್; ಮಲ. ಕುರಲ್, ಕುರಳ್; ತುಳು. ಕುರೆಲು]

**ಕೊರಲಿೞಿವು** (ನಾ). ದನಿ ಬಿದ್ದುಹೋಗಿರುವುದು; ಧ್ವನಿ ತಗ್ಗಿರುವುದು: ಗಟಗಟ ಸುರಿವಶ್ರುವ ಕೊರಲಿೞಿವಿಗ ಮುಗಿಮುಟ್ಟಿದಟ್ಟುಮೊೞಗಿಂಗಂ . . . ಇಂದ್ರನುಮುಪೇಂದ್ರನುಂ ಪದನಾದರ್ (ಶಾಂತಿಪು. ೬–೮೯). [ಕೊರಲ್ + ಇೞಿವು]

**ಕೊರಲು** 'ಕೊರಲ್' ನೋ.

**ಕೊರಲುದ್ದ**, ಕೊರಳುದ್ದ$_1$ (ಗು). ಕುತ್ತಿಗೆಗೆ ಬರುವಷ್ಟು ಆಳವಾದ; ಆಕಂಠಪ್ರಮಾಣವಾದ: ಬಿಳಿಯ ಕರ್ಬಿನ ಕೋಲ್ಗೆ ಕೊರಲುದ್ದ ಮಾದೆಳನೀರ ಪೊನಲ . . . ಚೆಲ್ವನೋಳಕೊಂಡಿರ್ಪುದು (ಕಬ್ಬಿಕಾ. ೧೮); ತೊಡೆಯೆರ್ದೆ ಕೊರಲುದ್ದ ಸಲಿಲವಾವೆಡೆಯೆಂದು ಬಿಡಯವಿಲ್ಲದೆ ನೀರ್ಗುಡಿದು (ಮೋಹತ. ೧೯–೫೪). **ಕೊರಳುದ್ದ$_1$**: ಚಳಿಗಾಲವೆಲ್ಲಂ ನಿರುತದಿಂ ಕೊರಳುದ್ದ ನೀರೊಳು ನಿಂದು (ಬಸಪು. ೨–೧೨).

[ಕೊರಲ್ + ಉದ್ದ]

**ಕೊರಲುದ್ದಂ**, ಕೊರಳುದ್ದ$_2$ (ಅ). ಕೊರಳು ತುಂಬುವವರೆಗೆ; ಕಂಠಪೂರ್ತಿ: ಬಿರಿದೊಳ್ದಾವರೆಗಂಪಂ ಕೊರಲುದ್ದಂ ಪೀರ್ದ ತುಂಬಿಯೆನೆ . . . ಇಚ್ಚೆಗಾರ್ತಿಯ ಕಣ್ಗಳ್ (ಕಬ್ಬಿಕಾ. ೩೨೯). **ಕೊರಳುದ್ದ$_2$**: ಗುಳುಗುಳಕ್ಕನೆ ನುಂಗುತಂ ಮದಿಸುತ್ತ ಕೊರಳುದ್ದಕ್ಕೆ ಈಂಟುತ (ಬಸಪು. ೫೯–೨೪). [ಕೊರಲ್ + ಉದ್ದಂ]

**ಕೊರಲುಬ್ಬಸ**, ಕೊರಳುಬ್ಬಸ (ನಾ). ೧. ಕೊರಳು ಬಿಗಿದು ಉಸಿರಾಟ ಕಷ್ಟವಾಗುವಿಕೆ; ತೊಂದರೆ. ೨. ಕಷ್ಟವನ್ನುಂಟುಮಾಡುವವನು: ಇಂತಪ್ಪ ಸಭೆಗೆ ಕೊರಲುಬ್ಬಸವಿವರು ನೋಡ (ತಿರುರ. ೧೬–೧೭). **ಕೊರಳುಬ್ಬಸ**: ೧. ನಿನಗಿನಿತು ಘನವೆನ್ನನಾರ್ಬಲ್ಲರೆಂದೆನುತೆ ನಿನಗಿನಿತು ಕೊರಳುಬ್ಬಸವಿದಾನೆನಿತಜವನೆನುತೆ (ಮೆಜಿರ. ೭೭–೧೦). [ಕೊರಲ್ + ಉಬ್ಬಸ]

**ಕೊರಲುಲಿ**, ಕೊರಳುಲಿ (ನಾ). ಕೊರಳಧ್ವನಿ; ಕಂಠಸ್ವರ: ಬಿಜ್ಜೋದರಿಯರ ಕೊರಲುಲಿಗಳಿಂದಂ (ಕಬ್ಬಿಕಾ. ೨೩೬). **ಕೊರಳುಲಿ**: ವರ ಪುಳಕಾಂಬುಸೇಚನದೆ ಕೊರಳುಲಿ ಮಂತ್ರದೆ (ಕಂನವಿ. ೬–೧೭೨).

[ಕೊರಲ್ + ಉಲಿ$_2$]

**ಕೊರಲುಲುಹು** (ನಾ). = ಕೊರಲುಲಿ: ಗೌಜು ಕರ್ಕಟ . . . ಕಲುಕುಟಿಕಾದಿ ತೋಟದ ಪಕ್ಕಿಗಳ ಕೊರಲುಲುಹಾದುದಾ ತಪೋವನದಿ (ಮೋಹತ. ೭–೧೭). [ಕೊರಲ್ + ಉಲುಹು (< ಉಲಿವು)]

**ಕೊರಲೆ** 'ಕೊಜಲೆ' ನೋ.

**ಕೊರಲೆಹುಲ್ಲು** (ನಾ). ಕೊರಲೆಯ ಹುಲ್ಲು: (ವೈಶಾಗಿ. ೬೯–೧೪೨೩).

[ಕೊರಲೆ (< ಕೊಜಲೆ) + ಹುಲ್ಲು (< ಪುಲ್)]

**ಕೊರಲೌಂಕು** (ಕ್ರಿ). ಕೊರಳನ್ನು ಅದುಮು, —ಹಿಸುಕು: ಒಂದು ಕುದುರೆಯನೆ ಕೊರಲೌಂಕಿ ಕೊಱಿದನ್ (ಅಶ್ವಶಾ. ೩–೫೦); ಕಾಡ ಕಟ್ಟಳೆ ನಾಡ ಬೇಂಟೆಯಂ ಕೊರಲೌಂಕೆ (ಕಾಲೂರ. ೪೯–೭೨).

[ಕೊರಲ್ + ಔಂಕು (< ಅವುಂಕು)]

**ಕೊರಲ್ಗಳಿ** (ಕ್ರಿ). ಕೊರಳನ್ನು ಕೆಡಹು, —ಬೀಳಿಸು: ಹಚ್ಚಿ ಹರಿದೊಟ್ಟುತ್ತೆ ಕೊಚ್ಚಿ ಕೊರಲ್ಗಳಿವುತ್ತೆ (ನವಮೋ. ೩೩–೩೧).

[ಕೊರಲ್ + ಕಳಿ$_1$ (< ಕೞಿ$_1$)]

**ಕೊರಲ್ಗಱಿ** (ನಾ). ಕೊರಳಲ್ಲಿಯ ಕಪ್ಪು: ಬಾನೊಳ್ ಪೊಱಿ ಬಾಂಬೊಱಿ ಏವಂ ಬಾಂದೊಱಿ ಪಱೆಗಱ್, ಕೊರಲ್ಗಱಿ (ಶಬ್ದಾನು. ೩೦೫ ಪ್ರಯೋ). [ಕೊರಲ್ + ಕಱಿ$_2$]

**ಕೊರಲ್ಗೊಲೆ** (ನಾ). ಕೊರಳು ಕತ್ತರಿಸಿ ಮಾಡುವ ಕೊಲೆ: ಚಾಪಟದೇಜೂಟದೊಳ್ ಚದುರಂ ತೋರ್ಪ ಕೈಗೊಲೆ ಬಾಯ್ಗೊಲೆ ಮೈಗೊಲೆ ಕಾಲ್ಗೊಲೆ ಕೊರಲ್ಗೊಲೆ [ಪಾಠಾಂ. ಕೋಳ್ಗೊಲೆ]ಯಂ ಕಲಿಪ ಕಡು ಬಿನ್ನಣಂಬಡೆದು (ರಾಜಶೇ. ೬–೧೧ ವ). [ಕೊರಲ್ + ಕೊಲೆ$_2$]

**ಕೊರಲ್ಗೊಳ್** (ಕ್ರಿ). ಕಂಠಕ್ಕೆ ಸೇರು, —ಒಪ್ಪು: ಎಂತಪ್ಪಂಗಂ ಪೊಸಮುತ್ತಿನೆಕ್ಕಸರದಂತೆಂದುಂ ಕೊರಲ್ಗೊಳ್ಪದೇ (ಕಬ್ಬಿಕಾ. ೫).

[ಕೊರಲ್ + ಕೊಳ್$_1$]

**ಕೊರಲ್ಗೊಱಿ** (ಕ್ರಿ). ಕೊರಳನ್ನು ಕತ್ತರಿಸು: ಪಱಿದಿರ್ದ ಕಂಠಸರಮಂ ಪಡೆವ ಗುಣಿ ಕೊರಲ್ಗೊಱಿಯುತಿರೆ (ಭಾವಚಿಂ. ೯–೪೪).

[ಕೊರಲ್ + ಕೊಱಿ$_1$]

**ಕೊರಲ್ಚು** (ಕ್ರಿ). ಹುಯ್ಯಲಿಡು; ಆಕ್ರೋಶಮಾಡು: "ಕೊರಲ್ಚು–ಆಕ್ರೋಶಧ್ವನೌ" (ಶಮಧಾ); ಗೋಪಗೋಪಿಯರಾಕ್ಷಣಂ ಕೊರಲ್ಚಿದರ್ (ವಿಷ್ಣುಪು. ೫–೩–೧೮೨); ತಮಿಳಲ್ಲಿ ಮುಖರಭಾಷೆಯಿಂದ ಕೊರಲ್ಚಿಯೊಳರಿಕೊಳ್ಳುತ್ತಿದ್ದು (ಮಂತ್ರಶ. ೧೨೨–೫). [ಕೊರಲ್ + –ಚು]

**ಕೊರಲ್ದಂಡೆ** (ನಾ). ಕೊರಳಲ್ಲಿ ಧರಿಸುವ ದಂಡೆ; ಕಂಠಸರ: ಪಾಂಡುರ ಶಂಖ ಪ್ರವಾಳ ದುಂಡು ಮುತ್ತುಗಳಿಂದೆ ಮೇರೆಯಬ್ಧಿಯ ಕೊರಲ್ದಂಡೆಯಂತಿರ್ದುದು (ಮೋಹತ. ೨–೬). [ಕೊರಲ್ + ದಂಡೆ]

**ಕೊರಲ್ವಲೆ** (ನಾ). ಒಂದು ಬಗೆಯ ಬಲೆ; ಕೊರಳಿಗೆ ಬೀಳುವ ಬಲೆ: ಪಿಡಿವಲೆ ಸೆಳೆವಲೆ ಕಾಲ್ವಲೆ ಕೊರಲ್ವಲೆ ನಿಡಿವಲೆ ಪಾಱಿ ಬೆಳ್ಳಾರ ಬಡಿವಲೆ ಬಲುವಲೆಗಾಱರು ಕೂಗಿ ಬೊಬ್ಬಿಡುತ್ತೈದಿದರು (ಮೋಹತ. ೧೯–೧೬).

[ಕೊರಲ್ + ಬಲೆ$_1$]

**ಕೊರಲ್ವಾಗು** (ಕ್ರಿ). ಕೊರಳನ್ನು ಬಾಗಿಸು; ತಲೆತಗ್ಗಿಸು: ಕಿಕ್ಕಿಱಿದ ಫಲಭಾರದಿಂ ಕೊರಲ್ವಾಗಿ ಕಱ್ಗೊಳಿಸಿರ್ದ ಶಾಲಿಗಳ್ (ಚಬಪು. ೧೧–೧೦); ಮೊಗಗೆಂಪೇರಿ ಕೊರಲ್ವಾಗುವಳು (ಬಿಟ್ಟಅ. ೫–೧೮).

[ಕೊರಲ್ + ಬಾಗು$_1$]

**ಕೊರವ$_1$** (ನಾ). ಒಂದು ಜಾತಿಯ ಮೀನು: ಸೀಗಡಿ ಕೊರವಂ ಬಂಪು ಬಸೇಗಂ . . . ಅಗಣಿತ ಶಫರಾಳಿಗಳನೆ ತೆಗೆದರ್ ಬೇಡರ್ (ತ್ರಿಪುವಿ. ೨೭–೯೧); ಕೊರವಂ ಗೋಜಳೆ ಸಣ್ಣಗಣ್ಣ ನೊರವಂ ಪಂದಿಗನೆಂಬ ಮೀನ್ದೆಗೆದನಾ ಭಕ್ತಂ (ತ್ರಿಪುವಿ. ೫೭–೮); ಕೊರವನ ಬಾಳೆಯ ಗೆಂಡೆಯ ಮೀನಿನ ಕೊರಗು ಪಡಿಯನ್ನೈದಲ್ಪಹುದು (ಭಕ್ತಿಸ. IV, ೧೨–೧೪). [?]

**ಕೊರವ್ವ$_2$** 'ಕೊಱವ್ವ$_1$' ನೋ.
**ಕೊರವಂಜಿ** 'ಕೊಱವಂಜಿ' ನೋ.
**ಕೊರವಿ** 'ಕೊಱವಿ' ನೋ.
**ಕೊರವಿತ್ತಿ** (ನಾ). = ಕೊರವಂಜಿ ೧: ಸೂಳೆ ಮುಪ್ಪಾಗಿ ಕೊರವಿತ್ತಿ ಯಾದಳು (ಗಾದೆ). [ಕೊಱವ್ವ$_2$ (< ಕೊಱವ$_1$) + -ಇತ್ತಿ]
**ಕೊರವುಕಾರ** (ನಾ). "ಕುಟುಂಬದ ಯಜಮಾನ" (ಹುಲಿಹಾ. ಕೋಶ); ನಾಯಿಗಳ ಬಗುಳು ಮನೆಯ ಕೊರವುಕಾರರನ್ನು ಎಚ್ಚರಿಸಿತು (ಹುಲಿಹಾ. ೮೦). [ಕೊರವು ? + -ಕಾರ$_1$ (< -ಕಾಱ)]
**ಕೊರವೆ** 'ಕೊಱವ್ವ$_1$' ನೋ.
**ಕೊರಸಾಟ** 'ಕೊಱಚಾಟ' ನೋ.
**ಕೊರಸಿಗನಗಿಡ** (ನಾ). ಒಂದು ಬಗೆಯ ಗಿಡ: ಕೊರಚಗ, ಕೊರಸಿಗನ ಗಿಡ . . . ಕುರ್ಚಿ (ಮೈಔಗಿ. ೪೪-೪೬೬). [?]
**ಕೊರಸು$_2$** (ನಾ). ಒಂದು ಜಾತಿಯ ಹಕ್ಕಿ: ನಿನ್ನ ಭರ್ತಾರಂ ಬೇಂಟೆ ಮಾಡಿ ಪಲವುಂ ಲಾವುಗೆಯುಂಕೆ ಕೊರಸುಂ ಮೊದಲಾಗೊಡೆಯ ಪಕ್ಷಿ ಜಾತಿಗಳಂ ಬಲೆಯನೊಡ್ಡಿ ಹಿಡಿದು ಕಟ್ಟಿ (ವಡ್ಡಾರಾ. ೧೫೧-೩). [?]
**ಕೊರಳ್** 'ಕೊರಲ್' ನೋ.
**ಕೊರಳಾರ** (ನಾ). ಕೊರಳ ಹಾರ; ಕತ್ತಿನ ಸರ: ಕೊರಳಹಾರ ಎಂಬ ಕೊಡಿಗೆಯ ಹೆಸರೇ ರೂಪಾಂತರಗೊಂಡು ಹೀಗೆ ಕೊರಳಾರ ಎಂದಾಗಿದೆ (ಪಾರ್ತಿಸು. ೪೬). [ಕೊರಳ್ (< ಕೊರಲ್) + ಆರ$_2$]
**ಕೊರಳಿ** (ನಾ). ಒಂದು ಬಗೆಯ ಧಾನ್ಯ (?): ಪಡವಿನೆಡೆಯೊಳ್ ಕೊರಳಿ [ಪಾಠಾಂ. ಕಾಯ್ದೆರಲೆ, ಪಡಪಿನರಳೆಗಳೊಳ್ ಕೊಯ್ದರಲೆ] ಗಳುಂ ನಾಂದುವ ಬೇವಿನ ಸರಳಿಗೆಗಳುಂ . . . ಚಂದ್ರಲೇಖೆ ಚಂದ್ರಿಕೆಯಂ ಪಡೆಯೆ ಪರಿಕಲ್ಪಬ್ಧಮಾದ ಪಯೋಧಿಯಂತೆ ಪಿರಿದುಂ ಕಳಕಳಮನಪ್ಪುಕೆಯ್ದು ಪ್ರಸೂತಿಕಾ ಸದನಕ್ಕೆ ಶೃಂಗಾರಶೇಖರಂ ಬಂದು (ಲೀಲಾವ. ೬-೬೮ ವ). [?]
**ಕೊರಳಿಸು** (ಕ್ರಿ). ಕೊರಳಿಗೆ ತೊಡಿಸು, —ಹಾಕು: ಹುರುಳಿನ ಅರಳರಳಿಸಿ ಮಾಲೆಮಾಡಿ ಕೊರಳಿಸಿ ಹೃದಯ ವೀಣೆ ಬೆರಳಿಸಿ (ಅರಳು. ೧೯-೨೦). [ಕೊರಳ್ (< ಕೊರಲ್) + -ಇಸು$_3$]
**ಕೊರಳು** 'ಕೊರಲ್' ನೋ.
**ಕೊರಳುಕೊಯ್ಕ** 'ಕೊರಳುಗೊಯ್ಕ' ನೋ.
**ಕೊರಳುಗಟ್ಟು** (ಕ್ರಿ). ೧. ಕತ್ತು ಹಿಡಿದು ನಿಲ್ಲಿಸು; ಒತ್ತಾಯದಿಂದ ತಡೆ: (ಕ). ೨. ಧ್ವನಿ ಹೊರಡದಂತಾಗು; ಗಂಟಲು ಕಟ್ಟು: ಅವರಿಗೆ ದುಃಖದಿಂದ ಕೊರಳುಗಟ್ಟಿತು (ರೂಢಿ). [ಕೊರಳು (< ಕೊರಲ್) + ಕಟ್ಟು$_1$]
**ಕೊರಳುಗೊಯಿಕ** 'ಕೊರಳುಗೊಯ್ಕ' ನೋ.
**ಕೊರಳುಗೊಯ್ಕ**, ಕೊರಳುಕೊಯ್ಕ, ಕೊರಳುಗೊಯಿಕ (ನಾ). ಕೊರಳು ಕತ್ತರಿಸುವವನು; ಕೊಲೆಗಡಿಕ: ಅಪರಿಂಗಜೀದಿದನು ರಕ್ಷಿಸಲು ಬಂದೈ ಕೊರಳುಗೊಯ್ಕನೆ ಸುಡಲಿ ಧನುವನು ಹಿಡಿಯಲೇಕೆಂದ (ನಿಭಾಗ. ೧೦-೯೯-೩೪). **ಕೊರಳುಕೊಯ್ಕ**: "ಕೊರಳುಕೊಯ್ಕ; ಕೊಲೆಗೇಡಿ; ಕೊಲೆಗಡಿಕ; ಘಾತುಕ" (Cut-throat. ಇಂಕನ). **ಕೊರಳುಗೊಯಿಕ**: (ಕ). [ಕೊರಳು (< ಕೊರಲ್) + ಕೊಯ್ಕ$_2$]
**ಕೊರಳುಗೊಯ್ಕೆ** (ನಾ). ಕೊರಳು ಕತ್ತರಿಸುವವಳು; ಕೊಲೆಗಡಿಕೆ: ಕೊರಳುಗೊಯ್ಕೆಯ ಕಾಟದಲಿ ನೆರೆ ಕರುಣಿ ಪರಮಾತ್ಮನನು ಕಾಣದೆ ಬಳಲುತಿಹರೆಂದ (ನಿಭಾಗ. ೫-೮-೨೧). [ಕೊರಳುಗೊಯ್ಕ + -ಎ$_2$]
**ಕೊರಳುಗೊಳಿಸು** (ಕ್ರಿ). ಅಂಕೆಯಲ್ಲಿಡು; ತಡೆಹಿಡಿ; ನಿಯಂತ್ರಿಸು: ಚಿತ್ತವ ತಿರುಹಿ ಹಿಡಿದನು ಮನಕೆ ಬುದ್ಧಿಯ ಹಮ್ಮು ಹಮ್ಮಿಗೆಯ ಕೊರಳುಗೊಳಿಸಿ ಪರಿಬವಣೆಗೆಯ ಪಾಡಿನಲಿ ಕಾತರಿಸುತವನಿಗೆ ಮೈಯ ನಿತ್ತನು ನೀಡಿ ಭುಜಯುಗವ (ಕುವ್ಯಾಅ. ೬-೭೯); ಕದಳೀವನವನಂಕೆಗೆ ಬರಿಸಿ . . . ಸುರಗಿಯನು ಸಂವರಿಸಿ ಭಂಗಕೆ ಬರಿಸಿ ಬಳುಕುವ ಕೋಣಿ ದಾರವ ಕೊರಳುಗೊಳಿಸಿದನಧಟನಂತಕಪುರಕೆ ಪಡಿಸಲಿಸಿ (ನಿಭಾಗ. ೮-೨-೧೪). [ಕೊರಳು (< ಕೊರಲ್) + ಕೊಳ್$_1$ + -ಇಸು$_3$]
**ಕೊರಳುಚೌಕ** (ನಾ). ಕತ್ತಿಗೆ ಸುತ್ತಿಕೊಳ್ಳುವ ಚೌಕ, —ವಸ್ತ್ರ: ಅವರು ನಾಲ್ಕು ಘಂಟೆಯವರೆಗೆ ಉಣ್ಣೆಯ ಕೊರಳುಚೌಕವನ್ನು ಹೆಣೆಯುತ್ತಾ ಇರಬೇಕೆ (ನಿಬಂಧ. II, ೪೦೮). [ಕೊರಳು (< ಕೊರಲ್) + ಚೌಕ]
**ಕೊರಳುದ್ದ$_1$** 'ಕೊರಲುದ್ದ' ನೋ.
**ಕೊರಳುದ್ದ$_2$** 'ಕೊರಲುದ್ದಂ' ನೋ.
**ಕೊರಳುಪಟ್ಟಿ** (ನಾ). ೧. ಕತ್ತಿಗೆ ಹೊಂದಿಕೊಳ್ಳುವ ಅಂಗಿಯ ಭಾಗ; ಕಾಲರು: ತನ್ನ ಸಮವಸ್ತ್ರದ ಕೊರಳುಪಟ್ಟಿಯ ಮೇಲೆ . . . ಸವರುತ್ತಿದ್ದನು (ಪುನರು. ೨೭). ೨. ಕತ್ತಿಗೆ ಸುತ್ತಿಕಟ್ಟುವ ಬಟ್ಟೆ: (ಕ). ೩. ನಾಯಿ ಮುಂತಾದ ಪ್ರಾಣಿಗಳನ್ನು ಕಟ್ಟುವುದಕ್ಕಾಗಿ ಅವುಗಳ ಕತ್ತಿಗೆ ಹಾಕಿದ ತೊಗಲಿನ ಪಟ್ಟಿ; ಕುತ್ತಿಗೆಪಟ್ಟಿ. [ಕೊರಳು (< ಕೊರಲ್) + ಪಟ್ಟಿ$_2$]
**ಕೊರಳುಬ್ಬಸ** 'ಕೊರಲುಬ್ಬಸ' ನೋ.
**ಕೊರಳುಲಿ** 'ಕೊರಲುಲಿ' ನೋ.
**ಕೊರಳುವಿಡಿ** (ನಾ). ಕೊರಳನ್ನು ಹಿಡಿಯುವುದು; ಕಂಠಗ್ರಾಹ; ಆಪತ್ತು (?): ತಾ ಹಿಡಿದ ಸೀಮೆಗೆ ಕಲೆವಿಡಿ ಕೊರಳುವಿಡಿ ಬಾರದೆ ವ್ರತಮೆ ಘಟವಾಗಿ ಸನ್ಮಾರ್ಗವೆ ಆತ್ಮನಾಗಿ (ಏಲೇಶ್ವ. ೧೬೦). [ಕೊರಳು (< ಕೊರಲ್) + ಪಿಡಿ$_2$]
**ಕೊರಳೇರು** (ಕ್ರಿ). ಧ್ವನಿಹುಟ್ಟು; ಕೂಗು: ಹೂ ಕೆಂದಳಿರುಗಳನ್ನು ಸವಿದು ಮೌನವ್ರತವನ್ನುಳಿದು ಕೊರಳೇರಿದ ತುಂಬಿ ಕೋಗಿಲೆಗಳು (ನಾಡೋಜ. ೨೩೪). [ಕೊರಳು (< ಕೊರಲ್) + ಏರು$_1$ (< ಏಱು$_1$)]
**ಕೊರಳೋಳಿ** (ನಾ). ಕೊರಳುಗಳ ಸಾಲು; ಕಂಠಗಳ ಸಮೂಹ: ಕೋದಂಡವನು ಜೀವೊಡೆಯೆ ಮೇಲು ಜಗವಲ್ಲಾಡಿದವು ಕೊರಳೋಳಿ ಕೆದಱಿತು ಕುಸಿದನಹಿ (ಕುವ್ಯಾದ್ರೋ. ೪-೫೭). [ಕೊರಳು (< ಕೊರಲ್) + ಓಳಿ]
**ಕೊರಳ್ಕಾಪು** (ನಾ). ಕೊರಳಿಗೆ ರಕ್ಷೆಯಾಗಿರುವ ಕವಚ: "ಕೊರಳ್ಕಾಪು, ಕಂಠತ್ರಾಣ" (Gorget. ಇಂಕನ). [ಕೊರಳ್ (< ಕೊರಲ್) + ಕಾಪು]
**ಕೊರಳ್ವೊಮ್ಮಿಸು** (ಕ್ರಿ). ಕೊರಳನ್ನು ಒಡ್ಡು; ಕುತ್ತಿಗೆ ನೀಡು (?): ಎಮ್ಮಯ ವಂಶ ದಿಕ್ಕರಿಗಳೆಂಟುಮಿಳಾತಳಭಾರಮಂ ಕೊರಳ್ವೊಮ್ಮಿಸಿ ಪೊತ್ತು ನಿತ್ತರಿಸುತಿರ್ದೊಡಂ (ಬಾಧಪು. ೪-೮೩). [ಕೊರಳ್ (< ಕೊರಲ್) + ಕೊಮ್ಮಿಸು ?]
**ಕೊರಿ** (ನಾ). ತುಂಡಾದುದು; ಮುಳ್ಳುಕಂಟೆಯಿಂದ ಕಡಿದು ತಂದ ದೊಡ್ಡ ಶಾಖೆ: (ಕ). [< ಕೊಱು$_1$]
**ಕೊರಿಕುಂದ** 'ಕೊಱುಕುಂದ' ನೋ.
**ಕೊರಿಗೊರಿ** (ನಾ). ಒಂದು ಬಗೆಯ ಮೂಲಿಕೆ: "ಕೋಕಿಲಃ – ಕೋಗಿಲು, ಕೊರಿಗೊರಿಯಸೊಪ್ಪು" (ಔಷಧಿ. ೪೦). [?]
**ಕೊರಿಪಿಡಿ** (ನಾ). ತೊಂದರೆ; ಪೀಡೆ; ಹಿಂಸೆ: (ಕ). [← ಮರಾ. ಗುರಪಟಾ, ಗುರಫಟಾ ?]

**ಕೊರಿಪೋಗು** (ಕ್ರಿ). ಕತ್ತರಿಸಿಹೋಗು; ನಿಂತುಹೋಗು: ಅಱಿತ್ತೋನ್ ಪಞ್ಚ ಮಹಾಪಾಕ್ಕು ಒಕ್ಕಲ್ಕೊರಿಪೋಗುಗೆ (ಎಕ. XIV, ತಿರುಮ. ೧೫೧-೯; 7). [< ಕೊಱೆ$_5$ + ಪೋಗು$_1$]

**ಕೊರಿಯಿಸು** 'ಕೊಱಿಸು' ನೋ.

**ಕೊರಿವಿ** 'ಕೊಱವಿ' ನೋ.

**ಕೊರುಮೆಲ್ಲಿ** (ನಾ). ಒಂದು ಊರಿನ ಹೆಸರು: ಅಗ್ರಹಾರೀಕೃತಃ ಕೊರುಮೆಲ್ಲಿನಾಮಾ ಗ್ರಾಮಃ (ಇಆ. XIV, ೫೪-೧೦೩; 944). [?]

**ಕೊರುಱು** (ನಾ). (?): ಮಹಾದೇವರ ದೇವದೂವಿನಲ್ಕಾಪತ್ತರ ಲೊಂದು ಕೊರುಱು ಊರಲೊಕ್ಕಲಲೊನ್ದು ಪೊಱೆಯುಂ ಪತ್ತು ಕೊಳಗ ಭತ್ತಮುಂ (ಮೈಆರಿ. ೧೯೪೭, ೨೮-೧೭; 1032). [?]

**ಕೊರೆ$_1$** 'ಕೊಱೆ$_1$' ನೋ.

**ಕೊರೆ$_2$, ಗೊರೆ$_1$** (ಕ್ರಿ). ಗೊರಕೆ ಹೊಡೆ: "ಕೊರೆ – ನಿದ್ರಾಂಗ ಧ್ವನೌ" (ಗೊರಕೆಹೊಡೆ)" (ಶಮುಧಾ); ಕೊರೆವೊಡೆ ಬೆಟ್ಟುಗಳ್ ಬಿರಿವುವುಣ್ಮುವ ಲಾಳೆಯ ಲೋಳೆಗಳ್ ಪೊನಲ್ಪರಿವುವು (ಪಂಪಭಾ. ೪-೧೦೦); ಕೊರೆದುಂ ಸುಯ್ದುಂ . . . ನಿದ್ರೆಯನೆ ಕೆಡಿಪ (ಧರ್ಮಾಮೃ. ೨-೫೪). **ಗೊರೆ$_1$**: ಕೋಟ ಡಿಂಡಿಮುಗಳನು ಬಾರಿಸೆ ಗೋಟು ತುಂಬಿತು ಜಗದ ಕಿವಿಗಳ ಪಾಟ ಹೊಟ್ಟಿತು ಕೇಳನಾ ಖಳಗೊರೆದು ತೆಕ್ಕುತಿರೆ (ಕಾಶಿರಾ. ೨೪-೪); ಸರಿಯಾದ ಜೋಡಿಯೆ ಈ ಗಂಡಹೆಂಡಿರು . . . ಅಹುದಹುದೆಂದನು ಗೊರೆಯುವನೀತನು ಈಕೆಯೊ ಶತಕೆಪ್ಪಿಯಂತೆ (ಇಂಚಾಪ.೧೨೭-೨೫); ನಾನಾಸಾಹೇಬ ಸ್ವಲ್ಪದೂರದಲ್ಲಿ ಮಲಗಿಕೊಂಡು ಸೂರು ಹಾರಿಹೋಗುವ ಹಾಗೆ ಗೊರೆಯುತ್ತಿದ್ದ (ಬದುಜ. ೧೭೧). [?]

**ಕೊರೆ$_3$** 'ಕೊಱೆ$_4$' ನೋ.

**ಕೊರೆ$_4$** 'ಕೊಱೆ$_5$' ನೋ.

**ಕೊರೆ$_5$** 'ಕೊಱೆ$_6$' ನೋ.

**ಕೊರೆ$_6$** 'ಕೂಱೆ' ನೋ.

**ಕೊರೆ$_7$** (ನಾ). ದಂಡೆ; ತೀರ; ತಟ: ಸರ್ವರೂ ಗೊಬ್ಬರವನ್ನು ಕೂಡಿಸಿ ತಮ್ಮ ಹೊಲಗಳಿಗೂ ತೋಟಗಳಿಗೂ ಕೆರೆ ಕೊರೆಗಳಿಗೂ. . . ಹಾಕಬೇಕು (ಕೃಷಿಪ್ರ. ೪೭); ಗರಸಿನ ಕೊರೆಯ ಮೇಲೆ ಒಂದೆರಡು ಸಲ ಅವರಕಾಲು ಜಾರುವಂತಿತ್ತು (ರಕ್ತಧ್ವ. ೧೫೨). [< ಕೋರೆ?]

**ಕೊರೆಕಂಬಿ** (ನಾ). ಕೊರೆಯುವ ಸಾಧನ: "ತೆಳುವಾದ ಮೊನೆ ಸಲ ಕರಣೆ; ಕೊರೆಕಂಬಿ" (Stylet. ಇಂಕನಿ).
[ಕೊರೆ$_1$ (< ಕೊಱೆ$_1$) + ಕಂಬಿ$_1$]

**ಕೊರೆಕರೆ** (ನಾ). ಕೊರೆಯುವ ಅಂಚು; ಮೊನಚಾದ ತುದಿ (?): ಅಲ್ಲಿ ಬಯಕೆ ಸಲಾಕೆ ಮೇಲೆ ತೇಲುವ ಹೆಣ್ಣ ಕಣ್ಣ ಕೊರೆಕರೆ ಮಾಯೆಗನ್ನಡಿಯಲಿ ತೆರೆತೆರೆವ ಸರಿವ ಹೊಸ ಹೊಸ ಲೋಕಲಾಳಿಯಲಿ ಇಂದ್ರಜಾಲದ ಮಿಂಚುದಾರಗಳಲಿ (ನಡಬಂ. ೪೦-೬).
[ಕೊರೆ$_1$ (< ಕೊಱೆ$_1$) + ಕರೆ$_4$]

**ಕೊರೆತ** 'ಕೊಱೆತ' ನೋ.

**ಕೊರೆದಿನ** (ನಾ). (ಕೆಲಸಗಾರನು) ಕೆಲಸಕ್ಕೆ ಬಾರದೆ ತಪ್ಪಿಸಿಕೊಂಡದಿನ, —ಉಳಿದ ದಿನ: (ಕ).
[ಕೊರೆ$_3$ (< ಕೊಱೆ$_4$) + ದಿನ]

**ಕೊರೆನೋಟ** (ನಾ). ತೀಕ್ಷ್ಣವಾದ ನೋಟ; ಹರಿತವಾದ ದೃಷ್ಟಿ: ಸಾಣೆಯೊಳ್ ತೀಡಿದ ಮಾರನ ತೀರಿನಂತಿರುವ ಕೊರೆನೋಟ (ಸೌಗಂಧಿ. ೨೨೪-೬). [ಕೊರೆ$_1$ (< ಕೊಱೆ$_1$) + ನೋಟ]

**ಕೊರೆಪ್ರಾಣ** (ನಾ). ಕುಗ್ಗುತ್ತಿರುವ ಜೀವ; ಹೋಗುತ್ತಿರುವ ಪ್ರಾಣ: (ಕ). [ಕೊರೆ$_3$ (< ಕೊಱೆ$_4$) + ಪ್ರಾಣ]

**ಕೊರೆಬೀಳು** (ಕ್ರಿ). ಕೊರತೆಬೀಳು; ಕಡಮೆಯಾಗು: ರಾಮಾಯಣ ಮಹಾಭಾರತಗಳು ಕೊರೆಬೀಳದ ಗಣಿಗಳ ಹಾಗೆ (ಅಹಲ್ಯೆ. ೩ ಪ್ರಸ್ತಾವನೆ).
[ಕೊರೆ$_3$ (< ಕೊಱೆ$_4$) + ಬೀಳು$_1$ (< ಬೀೞ್$_1$)]

**ಕೊರೆಮೂಗಿ** (ನಾ). ಕೊರೆಯಾದ ಮೂಗುಳ್ಳವಳು: ಅಣ್ಣ ನಿನ್ನಾ ಹೆಂಡ್ತಿ ಅರೆಮೂಗಿ ಕೊರೆಮೂಗಿ (ಹಳ್ಳಿಯ. ೧೦೫).
[ಕೊರೆ$_3$ (< ಕೊಱೆ$_4$) + ಮೂಗು + -ಇ$_2$]

**ಕೊರೆಯ** (ನಾ). ಕೊರತೆಯುಳ್ಳವನು: ಅಳವಿನುಂ ತಿಳಿವಿನುಂ ಕೊರೆಯನಾಂ ನಲ್ಲೆಯಂ ಕಾಣದಳವಳಿದನೆನೆ ಕೇಳ್ವುದೇನಂ (ಸೌನಂದ. ೬-೪೭). [ಕೊರೆ$_3$ (< ಕೊಱೆ$_4$) + -ಅ$_7$]

**ಕೊರೆಯಕ್ಕಿ** (ನಾ). ಅಳೆಯುವಾಗ ಕೊರತೆ ಬಿದ್ದ ಅಕ್ಕಿ; ಅಳತೆಗೆ ಕಡಿಮೆಯಾದ ಅಕ್ಕಿ: (ಕ). [ಕೊರೆ$_3$ (< ಕೊಱೆ$_4$) + ಅಕ್ಕಿ$_1$]

**ಕೊರೆಯಿಸು** 'ಕೊಱೆಯಿಸು' ನೋ.

**ಕೊರೆಯುಳಿ** (ನಾ). ಕೊರೆಯುವ ಕೆಲಸಕ್ಕಾಗಿ ಬಳಸುವ ಸೂಕ್ಷ್ಮವಾದ ಉಳಿ: "ಕೆತ್ತನೆಗಾರನ ಕೊರೆಯುವ ಉಳಿ; ಕೊರೆಯುಳಿ" (Scooper. ಇಂಕನಿ). [ಕೊರೆ$_1$ (< ಕೊಱೆ$_1$) + ಉಳಿ$_5$]

**ಕೊರೆಸಂಬಳ** (ನಾ). ಸಂಬಳದಲ್ಲಿ ಕೊಡದೆ ಉಳಿದುದು; ಸಂಬಳದಲ್ಲಿ ಬಾಕಿ: (ಕ). [ಕೊರೆ$_3$ (< ಕೊಱೆ$_4$) + ಸಂಬಳ]

**ಕೊರೆಸು** 'ಕೊಱೆಯಿಸು' ನೋ.

**ಕೊರೆಸೂಜಿ** (ನಾ). ಕೆತ್ತನೆಯ ಕೆಲಸಕ್ಕಾಗಿ ಬಳಸುವ ಮೊನೆಯಾದ ಸೂಜಿ: "ಕೊರೆಸೂಜಿ, ಕೆತ್ತುವುಳಿ" (Etching-needle ಇಂಕನಿ).
[ಕೊರೆ$_1$ (< ಕೊಱೆ$_1$) + ಸೂಜಿ]

**ಕೊರ್ಕು** 'ಕೊಕ್ಕು$_3$' ನೋ.

**ಕೊರ್ಚು$_1$, ಕೊಚ್ಚು$_3$** (ಕ್ರಿ). ಕತ್ತರಿಸಿ ಹಾಕು; ತರಿದುಬಿಡು; ತುಂಡುಮಾಡು: ಖಂಡಿಸಿ ಕೊರ್ಚಿಕೆಡಿಱಿದಟ್ಟಿ ಮುಟ್ಟಿ (ದಿವ್ಯಸೂ. ೯-೩೨); ಮೃದುಳಪದ ಕಾನನದ ವಿನ್ಯಾಸದ ವಿರಳದ ಕಾಷ್ಠಕೊ[ಪಾಠಾಂ. ಕಷ್ಟಕೋ]ರ್ಚುವದೆಂತು ಸುಕುಮಾರಿ ನಡೆವಳೆಂತು (ವೆಂಕಾರಾ.೨-೧೨-೩). **ಕೊಚ್ಚು$_3$**: ಹೆಚ್ಚಿದ ಹರುಷವ ಕೊಚ್ಚಿದೆಮಗನೆ (ಹಚಕಾ. ೧೨-೩೭ ರಗಳೆ); ದಾನವಕುಳವೆಲ್ಲವ ಕೊಚ್ಚಿ (ಅಂಜಚ.೧೪-೧೦); ಕಿಚ್ಚುಗಿಡಿಗೆದಱುವ ಶಿಲೀಮುಖ ಕೊಚ್ಚಲಿ ಭಟವಯವವನು (ಕುಮಾದ್ರೋ. ೧೨-೨೧); ಕಚ್ಚ ಬಂದ ಕಾಳಿಂಗನ ಕೊಚ್ಚಲು ಮಡುವ ಧುಮುಕಿದನಂತೆ (ಪುರಂದ. ೨-೧೯-೩). [ಕೊರೆ$_1$ (< ಕೊಱೆ$_1$) + -ಚು]

**ಕೊರ್ಚು$_2$** 'ಕೊಚ್ಚು$_1$' ನೋ.

**ಕೊರ್ಚು$_3$** 'ಕೊಚ್ಚು$_4$' ನೋ.

**ಕೊರ್ಚು$_4$** 'ಕೊಚ್ಚು$_7$' ನೋ.

**ಕೊರ್ಜು** (ನಾ). ಒಂದು ಬಗೆಯ ಸಸ್ಯ: ಕೊಡಚಗ . . . ಕೊರ್ಜು, ಕಹಿಕೊಡ್ಸೀಗೆ ಗಿಡ (ವೈಬಿಗಿ. ೪೪-೮೩೭). [?]

**ಕೊರ್ಪು** (ನಾ). ಶಸ್ತ್ರವಿದ್ಯೆಯ ವರಿಸೆಗಳಲ್ಲಿ ಒಂದು (?): ಗಮಕಂ ಕೊಂಕಾಂಕೆ ಝುಂಕಾಳ ತೆವಳಿ ಉಳಿಲಾಗಾರ್ಪು ಕೊರ್ಪಾಂತ ದಿಂಕಂ . . . ಎಂದೆನಿಪನಿತಱ ವೈಚಿತ್ರ್ಯದಿಂ ತಾನೆ ಶಸ್ತ್ರಾಗಮ ಶಿಕ್ಷಾಚಾರ್ಯ ನೆಂಬೊಂದೆಸಕದಿನೆಸೆದಂ (ಕುಸುಮಾ. ೭-೩೪). [?]

**ಕೊರ್ಬಿಸು** 'ಕೊರ್ವಿಸು' ನೋ.

**ಕೊರ್ಬು$_1$** 'ಕೊರ್ವು$_1$' ನೋ.

**ಕೊರ್ಬು$_2$** 'ಕೊರ್ವು$_2$' ನೋ.

**ಕೊರ್ಬುಗಳೆ** (ಕ್ರಿ). ಕೊಬ್ಬನ್ನು ಕಳೆ; ಸೊಕ್ಕುಮುರಿ: ನಿಬ್ಬರದೆ ಬರ್ಪ ಹಯಬಲದಬ್ಬರಣೆಗೆ ಕೊರ್ಬುಗಳೆದುದಿರ್ಕೆರಿಗೆ (ಚಿಕವಿ. ೨-೯೭).
[ಕೊರ್ಬು$_2$ (< ಕೊರ್ವು$_2$) + ಕಳೆ$_1$]

**ಕೊರ್ಬುಗುಡು** (ಕ್ರಿ). ಕೊಬ್ಬಿಸು ; ಸೊಕ್ಕಿಸು : ತಮಮಂ ಸೆರ್ಜಿಗೆಯ್ದು ಹಿಮಕ್ಕೆ ಕೊರ್ಬು[ಪಾಠಾಂ. ಕೊಂಬು]ಗೊಟ್ಟಾಲಮಂ (ಪಂರಾಮಾ ೭-೧೨೭).[ಕೊರ್ಬು$_2$(<ಕೊರ್ವು$_2$)+ಕುಡು$_1$(<ಕೊಡು$_1$)]

**ಕೊರ್ಬುವಡೆ** 'ಕೊರ್ವುವಡೆ' ನೋ.

**ಕೊರ್ಮಾತಿ** 'ಕೊಱವತಿ' ನೋ.

**ಕೊರ್ಲೆ** 'ಕೊಱಲೆ' ನೋ.

**ಕೊರ್ವಿಸು**, ಕೊಬ್ಬಿಸು, ಕೊರ್ಬಿಸು (ಕ್ರಿ). ೧. ಹೆಚ್ಚಿಸು ; ವೃದ್ಧಿಪಡಿಸು ; ಬಲಿಸು : ಶ್ರೀಯಂ ಕೂರಿಸಲಾಜ್ಞೆಯಂ ಪಸರಿಸಲ್ ಶಕ್ತಿಕೀರ್ತಿಯಂ ಕೊರ್ವಿಸಲ್ (ಲೀಲಾವ.೩-೪೬) ; ಅನೇಕೋಲ್ಕಾಂಶುಗಳ್ ಶಸ್ತ್ರದೀಪ್ತಿಗಳಂ ಕೊರ್ವಿಸೆ (ವರ್ಧಪು. ೮-೪೧); ನಸುನಗೆಯ ಬಾಯ್ಗುಪರ್ದ ಸೊಂಪು ಸೊಂಪಂ ಕೊರ್ವಿಸಲ್ (ಚಬಪು. ೧೧-೪೧). ೨. ಹೆಚ್ಚಾಗು ; ಬಲಿ ; ಅಧಿಕವಾಗು : ಬಳಿಕವಳ ಕಾಮಾಗ್ನಿ ಕೊರ್ವಿಸೆ (ಸಾಳ್ವಭಾ. ೧೭-೧೯). **ಕೊಬ್ಬಿಸು** : ೧. ಅವರ ಮನೆಯ ಹೋರಿಯನ್ನು ಚೆನ್ನಾಗಿ ಕೊಬ್ಬಿಸಿ ಬೆಳೆಸಿದ್ದಾರೆ (ರೂಢಿ). **ಕೊರ್ಬಿಸು** : ೧. ಮರಾಳಂಗಳಂ ಪದ್ಮಷಂಡಂ ನಳಿನೀ ಕಾಂಡಂಗಳಿಂ ಕೊರ್ಬಿಸೆ (ಮಲ್ಲಿಪು. ೨-೩೪).

[ಕೊರ್ವು$_1$ + -ಇಸು$_3$]

**ಕೊರ್ವು$_1$**, ಕುರ್ವು, ಕೊಬ್ಬು$_1$, ಕೊರ್ಬು$_1$ (ಕ್ರಿ). ೧. ಹೆಚ್ಚಾಗು ; ಅಧಿಕವಾಗು : ದ್ರುಪದನಂ ತಱಿದೊಟ್ಟಿದೆ ಕೆಮ್ಮಗಾನಿದಂ ಕಡೆಗಣಿಸಿರ್ದೊಡೆನ್ನ ಕಡುಗೊರ್ವಿದ ತೋಳ್ಗಳ ಕೊರ್ವದೇವುದೋ (ಪಂಪಭಾ. ೩-೬೬) ; ಪರ್ವಿ ಕೊರ್ವಿ ಸುರ್ವುಗೊಂಡ ಮಾಧವಿಯ ಪೊದೆಱೊಳ್ (ಪಂಚತಂ. ೨೩೧-೬) ; ದರಹಾಸಜ್ಯೋತ್ಸ್ನೆಯಿಂ ದರ್ಪಕ ವಿಶದಯಶಂ ಕೊರ್ವೆ (ಜಗವಿ. ೧೦-೧೭). ೨. ದಪ್ಪನಾಗು ; ತೋರವಾಗು ; ಬಲಿ : ಬಳೆವ ಮೊಲೆಯಂತೆ ಕೊರ್ವಿ (ಧರ್ಮಾಮೃ. ೨-೧೦೫) ; ನಿಶ್ಚ ಕೊರ್ವಿದ ಕುಚಂಗಳ್ಗೆ ಪೊಣರ್ವಕ್ಕಿ ಗವಸಣಿಗೆ (ನಂಬಿರ. ೧೪-೧೫) ; ಉರ್ವಿದ ಮುಯ್ಯು ಕೊರ್ವಿದ ಪೆಗಲ್ (ಪುಷ್ಪಪು. ೩-೧೫) ; ನಾಡೆ ಕೊರ್ವಿ ತಿಂತಿಣಿವಣ್ಣಳಾಂತ ಕದಳಂ (ಚಬಪು. ೧೧-೨೨). ೩. ಉಬ್ಬು ; ಉತ್ಸಾಹಿಸು : ಕುಣಿವುತಂ ಕುಕಿಲಿಱುವುತಂ ಪರ್ವಿ ಕೊರ್ವುತಂ (ಬಸರ. ೧-೩೭); ಘನಹರ್ಷದಿಂದುರ್ವಿ ಕೊರ್ವಿ ಗುರುಚರಣದೊಳ್ಬೀಳ್ದು (ಪದ್ಮರಾ. ೧೨-೫೧). ೪. ಸೊಕ್ಕು ; ಅಹಂಕಾರಪಡು ; ಮದವೇರು : ಅಂತಳವಿಗಱಿಯೆ ಕೊರ್ವಿದ ಕೀಚಕವನಮೆಲ್ಲಮೊಂದಿರುಳೊಳ್ ಸಾಹಸಭೀಮನುದ್ದಾಮ ಕೋಪದವದಹನ ಜ್ವಾಲಾಸಹಸ್ರಂಗಳಿನಟ್ಟಿ ಮೆಟ್ಟಿದಂ ತಪ್ಪುದು (ಪಂಪಭಾ. ೮-೮೦ ವ) ; ನೀನಱಿಯದೆ ಕೊರ್ವಿ ಚಪಳತನದಿಂದೆನ್ನಂ ಮಾನಿಸಿಯೆಗೆತ್ತು ನುಡಿದೈ (ಧರ್ಮಾಮೃ. ೩-೧೧೨) ; ಅವಯವ ಮಂತ್ರವನೆ ನೆರ್ಮಿ ಕೊರ್ವದಿರು ವೈಭಾಷಿಕಾ (ಪದ್ಮರಾ. ೧೧-೧೯೭) ; ಹುಟ್ಟು ದರಿದ್ರಗೆ ಬಹಳ ಸಂಪದವರೆ ನೆಟ್ಟನೆ ಕೊರ್ವು ಪಂದವದಲಿ (ಮೋಹತ. ೧೭-೫). **ಕುರ್ವು** : ೧. ಉರ್ವಿದನೆ ಕುರ್ವಿದನೆ ಜಗದೊಳು ಜರ್ವಿದನೆ (ಸಾನಂಚ. ೮-೮೮). **ಕೊಬ್ಬು$_1$** : ೧. ರಿಪುಸರ್ವದಳ . . . ಕಲ್ಪಮೇಘದ ಸರಿವಳೆಗೆ ಸಿಗುರೆದ್ದು ಕೊಬ್ಬಿದ ಕದಳಿನಂದದದಲಿ (ಕುಮ್ವಾಕ. ೧೨-೬). ೨. ನಸಿದು ಬೆಳೆಯದೆ ಕೊಬ್ಬಿದೊಡ್ಡಿತಹ ತೆನೆಗಳೊಳು (ಸಿದ್ಧರಾ. ೨-೨೯) ; ಗರುಡನೆತ್ತಲು ಕೊಬ್ಬಿದೊಳ್ಳೆಯಮಱಿಯದೆತ್ತಲು (ಕುಮ್ವಾಕ. ೯-೭) ; ಕೊಬ್ಬಿದ ಭುಜಯುಗಳದಿ ವೀರರಸದಿಂದುಬ್ಬಿದ ನಿಡುದೋಳ್ಗಳೆಡೆಯ (ಮೋಹತ. ೩೩-೫೭) ; ಕೊಬ್ಬಿದ ಪೊಱವಾಱು ಪಿಡಿನಡು ಕೊಂಕಿದ ಹುಬ್ಬಿನ ಪೆಣ್ಣೊಂದು (ಭರಜ. ೨-೪೮). ೩. ಕೂಡಲಸಂಗನ ಶರಣರು ಬಂದರೆ ಉಬ್ಬಿ ಕೊಬ್ಬಿ ಹರುಷದಲೋಲಾಡುವೆ (ಬಸವ. ೩೭೭) ; ಕಲಿತನದ ಮುಸಕದಿಂದುಬ್ಬುವರ್ ಕೊಬ್ಬುವರ್ (ಚಬಪು. ೩೯-೨೪). ೪. ಎಲವೊ ಅಥವಾ ಕೊಬ್ಬಿದೆಯಲಾ (ಬಸಪು. ೨೨-೫೪) ; ಕೊಬ್ಬಿನರಿ ಹೆಬ್ಬುಲಿಯ ಕೂಸನು ಬೇಡುವಂದದಿ (ಕುಮ್ವಾದ್ರೋ. ೫-೪೨) ; ಮಾಹಿಷ್ಮತೀಪುರದೊಡೆಯ ತಾನುಸದಿ ಕೊಬ್ಬಿರಲು . . . ಅವರ ಸಾಸಿರ ತೋಳ್ಗಳಡವಿಯ ಕಡಿದಾತನೀತ (ಮೋಹತ. ೩೭-೨೭). **ಕೊರ್ಬು$_1$** : ೧. "ಕೊರ್ಬು – ಸಮೃದ್ಧೌ" (ಶಮಧಾ) ; "ಕೊರ್ಬಿದುದೆಂದು ಪೆರ್ಚುಗೆಯ ನಾಮಮದೊಳಂ" (ಕರ್ಣಾನಿ. ೨೦) ; ಎಡೆವೊತ್ತಿ ಪೊಕ್ಕು ಕೆಲನಂಕೊರ್ಬುತ್ತೆಸೆದು ಬಿದಿರ್ದಾರ್ದು (ಕವಿರಾ.೧-೬೬). ೨. ಅನವರತಂ ಮೃಗಮಾಂಸಾಶನದಿಂದಮೆ ಕೊರ್ಬಿದ . . . ಈ ತನುವೆಂದಡಿಗಡಿಗೆ ಪೇಸುತಿರ್ದುದು ಮನದೊಳ್ (ವರ್ಧಪು. ೧೨-೩೦). ೩. ಕೊರ್ಬಿಯಾಡುವ ಡುಂಡುಭಂಗಳಂ ಕಂಡು (ಪಂಚತಂ. ೧೨೩-೨೧) ; ತಾಂ ಸಾಷ್ಟಾಂಗದಿಂ ತುಳಿಲ್ಗೆಯ್ದುರ್ಬುತಂ ಕೊರ್ಬುತಂ (ಪದ್ಮರಾ. ೫-೫೩). ೪. "ಜಂಭತಿ – ಕೊರ್ಬಿದಪಂ" (ಕಾಶಕ್ಕ. ೭೭) ; ಮದ್ಯಮಂ ಸಲೆ ಕುಡಿದು ಕೊರ್ಬನೆಯವಂ (ಪದ್ಮರಾ. ೧೧-೬೪).

[ದೇ.॥ತಮಿ.ಕೊಱುಪ್ಪು ; ತುಳು.ಕೊಬ್ಬು ; ತೆಲು.ಕ್ರೊವ್ವು,ಕೊವ್ವು]

**ಕೊರ್ವು$_2$**, ಕೊಬ್ಬು$_2$, ಕೊರ್ಬು$_2$, ಗೊಬ್ಬು$_2$ (ನಾ). ೧. ಹೆಚ್ಚಳ, ಆಧಿಕ್ಯ ; ಸಮೃದ್ಧಿ : ಪುರ್ವಿನ ಕೊರ್ವು ಕರ್ವುವಿಲ್ಲಂ ಕೀಳ್ಮಾಡೆ (ಗಿರಿಕ. ೨-೧೦೫ ವ) ; ಪೂರ್ವಕರ್ಮಾರ್ಜಿತ ಭವಂಗಳ ಕೊರ್ವನಡಗಿಪ ಮಗನೆ ಬಾರಾ (ಬಸಪು. ೨೪-೩೭) ; ಮೊಳೆಯಿಡುವನಗೆಯ ನೆಡುವ ನೀರೂಡುವ ಕಳೆಗೀಳ್ವ ಕೊಬ್ಬನಗ್ಗಿಸುವ ಬೆಳೆಗಾಯ್ವ . . . ಪಾಮರೀಜನ (ಶ್ರೀಪಾಲ. ೧-೪೮) ; ತೋಳ್ವಲದ ಕೊರ್ವಿನುರ್ವಿಂದೆಯುಂ (ಮುರಾಜ. ೨೮-೧). ೨. ಸೊಕ್ಕು ; ಅಹಂಕಾರ ; ಮದ : ಬಲ್ಲಾಳಪ್ಪನ ಕೊರ್ವುಂ ಜಡಿದಾಳಾಪಂಗೆಯ್ದು ಕೆಡಿಸಿದಂ ನೃಪಸುತನೇ (ಧರ್ಮಾಮೃ. ೨-೮೮) ; ತಾರಕ ದನುಜನ ಕೊರ್ವು ಪರ್ವಿತುರ್ವೀತಳಮಂ (ಗಿರಿಕ. ೬-೨) ; ವಾದಮುಖದಿಂ ಸೋಲ್ತವಂ ಕೊರ್ವನುಳಿದಾತ್ಮಮತದಾಚರಣಮಂ ಬಿಸುಟ್ಟು (ಪದ್ಮರಾ. ೯-೩). **ಕೊಬ್ಬು$_2$** : ೧. ಕೊಬ್ಬಿನಾಳೆಚ್ಚಾಡಿ ತಿಕ್ಕಿದ ಮಂಡಿ ಚಂಡಿಸದೆ (ಕುಮ್ವಾಭೀ. ೪-೧೨) ; ತಂಬೆಲರ ಕೊಬ್ಬು ಬನಬನದ ಸೌಭಾಗ್ಯಂ (ಚಬಪು. ೪೫-೧೬). ೨. ಜ್ಞಾನದ ಉಬ್ಬು ಕೊಬ್ಬಿನಲ್ಲಿ ಉಲಿವುತ್ತಿಪ್ಪವರೆಲ್ಲರು (ಅವಚಂ. ೧೦೬-೪೮೨) ; ಅಳಿಬಲವನಂಜಿಸಿದ ಕೊಬ್ಬುಗಳಕಟ ನಮ್ಮೊಡನೆ (ಕುಮ್ವಾದ್ರೋ.೧೩-೧೦) ; ಕೂಳು ಕೊಬ್ಬಿಲಿ ಉರಿವವಳ ಗಂಡ ಹೇಳಿದ ಮಾತ ಕೇಳದೆ ಮೀಱುವವಳ (ಪುರಂದ. ೧-೧೪-೨) ; ಗಬ್ಬಿತನದೆ ಘನಗರ್ವದಿ ಮಲೆವರಾ ಕೊಬ್ಬ ಮುರಿದು (ಸೌಂದರಾ. ೧-೬೧). ೩. ನೆಣ ; ಮೇದಸ್ಸು ; ಚರ್ಬಿ : ಅಂತು ಕೊಬ್ಬೆಂಬ ಕಿಟ್ಟ ಮುದುರೆ ಪಸುರ್ವಣ್ಣವೆಂಬ ಕಾಳಿಕೆ ಕಟಲೆ ವಿರಹಾಗ್ನಿಯಿಂ ಕಾಯ್ಸಿ (ಲೀಲಾವ. ೧೦-೩೭ ವ) ; ತುಂಡ ಮುಂಡಗಳು ಮಿದುಳು ರೋಹಿತ ಕೊಬ್ಬು ಖಂಡವ ಮನದಣಿ ವನಕ ಉಂಡು (ಮೋಹತ. ೪೦-೭೧). **ಕೊರ್ಬು$_2$** : ೧. ಅಣಂ ಮಟ್ಟದುರಿವ ಮದನಾಗ್ನಿಯ ಕೊರ್ಬು (ಆದಿಪು. ೯-೫೩) ; ಇದು ಶರಣರ ಘನತ್ವಂ ದೇವಯಿದು ಭಕ್ತರ ಮಹತ್ವಂ ದೇವಯಿದು ನಿಮ್ಮವರ ನಿಶ್ಚಿತ್ತದ ಸಿರಿಯ ಕೊರ್ಬು (ಸಾನಂಚ. ೮-೨). ೨. "ಕದಃ – ಕೊರ್ಬು" (ಕಾಶಕ್ಕ. ೨೩). **ಗೊಬ್ಬು$_2$** : ೨. ಎದ್ದು ಹೊಡಿಯುದಕ ಗೊಬ್ಬು ನಿನ್ನಲ್ಲುಂಟು (ಲೋಕಗೀ. ೧೩೫).

[< ಕೊರ್ವು$_1$]

**ಕೊರ್ವುವಡೆ**, ಕೊರ್ಬುವಡೆ (ಕ್ರಿ). ಹೆಚ್ಚಾಗು ; ಕೊಬ್ಬು ; ಬಲಿ : ವಿದೇಹಿಗದೇಂ ಪೃಥು ಕುಚಯುಗದೊಡನೆ ಕೊರ್ವು [ಪಾಠಾಂ. ತೋರ್ಪು]ವಡೆದುದೊ ಮಧ್ಯಂ (ಪಂರಾಮಾ. ೪-೨). **ಕೊರ್ಬುವಡೆ** : ಸೂಕ್ತಿಸುಧಾಪ್ರವಾಹದೊಳ್ ಕೊರ್ಬುವಡೆದು (ಕುಸುಮಾ. ೧೫-೮೯).

[ಕೊರ್ವು$_2$ + ಪಡೆ$_1$]

**ಕೊಲ್**$_1$, ಕುಲ್ಲು$_1$, ಕೊಲು, ಕೊಲ್ಲು (ಕ್ರಿ). ಕೊಂದ (ಭೂತಕೃ). ೧. ಸಾಯಿಸು; ಪ್ರಾಣ ತೆಗೆ; ವಧೆಮಾಡು: ಈ ಧರ್ಮಕ್ಕೆ ಬಕ್ರ ಬಪ್ಪೊಂ ಬಾರಣಾಸಿಯುಳ್ ಸಾಸಿರ್ವ್ವರ್ ಪಾರ್ವ್ವರುಂ ಸಾಸಿರಂ ಕವಿಲೆಯಂ ಕೊನ್ದ ಪಾತಕನಕ್ಕೆ (ಮೈಆರಿ. ೧೯೩೬, ೫೩-೫೫; 550); ಕೊಲ್ಲದುದೆ ಧರ್ಮಮೆಂದಿಂತು ನಂಬಿ (ವಡ್ಡಾರಾ. ೧೧-೨೩); ಕೊಲ್ಲೆಂ ಬಿಸುಡಾ ಯುಧಮಮಂ ಪುಲ್ಲಂ ಕಚರ್ (ಕವಿರಾ. ೩-೨೦೦); ಗರ ಮುಟ್ಟೆ ಕೊಲ್ಲುಮಿದು ನಿಜ ವಿರೋಧಿಯಂ (ಪಂಪಭಾ. ೧-೧೦೩); ಕೊಲಲ್ಬರ್ಪಂಗಿದಿರ್ವೋದ ರೆಂಬಂತೆ (ಧರ್ಮಾಮೃ. ೨-೧೯೯). ೨. ಪೀಡಿಸು; ನೋಯಿಸು; ಹಿಂಸೆಮಾಡು: "ಕೊಲ್ – ಹಿಂಸಾಯಾಂ" (ಶಮಧಾ); ಎಲೆ ಚಂದ್ರಹತಕ ಮದನನ ಬಲದಿಂದಂ ಮೇಲೆವರಿದು ಕೊಂದಿಂತೆನ್ನಂ ನಿಲಲಱಿಯೆ (ಕಾದಂಬ. ೬೧೨); ಅಯಂಗಿಡೆ ಕಾಮಂ ಕೈಗಾಯದೆ ನಿಂದಾರ್ದು ಮುಷ್ಟಿ ಕೊಂದಪನ್ (ಧರ್ಮಾಮೃ. ೩-೧೭೪). **ಕುಲ್ಲು**$_1$: ೧. ಆತ್ಮಜರುಗಳ ಬೇಗೆಯಲಿ ಕುಲ್ಲುತಲಿ ತಾವುನ್ನ ಬದುಕಿದುದೆಲ್ಲವನು ನೆನೆಯುತ್ತ (ಪ್ರಹ್ಲಾಚ. ೮-೫೪); ನಾಚಿಕೆಯನ್ನೂ ಹೊಟ್ಟೆಯುರಿಯನ್ನು ಅನುಭವಿಸಿ ಕುಲ್ಲುವುದು (ಸಾಹಿಜೀ. ೮೩). **ಕೊಲು**: ೧. ಕೊಲುವಂ ಗೆಲುವಂ ಕಲಿ ನರಸಿಂಹಂ (ಮೈಆರಿ. ೧೯೩೦, ೧-೨೮; 1173?); ಕಳಬೇಡ, ಕೊಲಬೇಡ (ಬಸವ. ೨೩೫); ಶಿಶುವನಿಱಿವರೆ ಪಶುವಂ ಕೊಲುವರೆ (ಬಸರ. ೯-೩೬); ಕೊಲುವವ್ವೆ ಕಾಗೆಗಳಕಟ ಕೋಗಿಲೆಯ ಮಱಿಯನು (ಕುವ್ಯಾಸ. ೧೯-೧೨೨); ನಿದ್ರಾಭರದೊಳಿರ್ದರ ಕೊಲುವುದುಚಿತವೆ (ಸಳಚ. ೨-೨೦). ೨. ಕೊಲುವಾ ಕೂಟವು ನಷ್ಟಮಪ್ಪ ಕೆಲಸಂ . . . ಫಲದ ಭ್ರಾಂತಿಯ ಕೋರ್ವುದ್ಯೆ (ಸೋಮೇಶ. ೨೩). ೩. ಹಾಳುಮಾಡು; ವ್ಯರ್ಥವಾಗಿ ಕಳೆ: ಎಲೆ ಯುಧಿಷ್ಠಿರ ಬಿಲ್ಲ ಹಿಡಿ ನರಹುಳುಗಳೆವದಿರ ಕವಿಸಿ ಕಾಲವ ಕೊಲುವುದೇ ಸಾಕಿನ್ನು ಕೈವಶವಾದೆ ನಿಲ್ಲೆನುತ (ಕುವ್ಯಾದ್ರೋ. ೨-೯೩). **ಕೊಲ್ಲು**: ೧. ಕಲ್ಲ ನಾಗರ ಕಂಡರೆ ಹಾಲನೆಱೆಯೆಂಬರು, ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ (ಬಸವ. ೧೯೪); ಚನ್ನಮಲ್ಲಿಕಾರ್ಜುನಯ್ಯ ಕೊಲ್ಲು ಕಾಯಿ ನಿಮ್ಮ ಧರ್ಮ (ಮಹಾದೇ. ೨೨); ಎನ್ನುಮಂ ಪತಿ ಕೊಂಡೊಡಂ ಕೊಲ್ಲಲಿ (ಬಸವು. ೧೩-೨೫); ಆಹವದೊಳು ನಿನ್ನ ಕೊಲ್ಲುವ ಕ್ರೂರಿ ಬಂದಪನು (ನೇಹಚ. ೨೧-೬೮). ೪. ಹೊಡೆ; ಪೆಟ್ಟುಕೊಡು: ಕಾಲು ತಂದು ಕೇಲಿನೊಳಗೆ ಅದ್ದಿ ಪೋದನನ್ನು ಕೋಲ ತಂದು ಕೊಲ್ಲ ಹೋದರೆ ಅಮ್ಮ ಲೀಲೆಯಿಂದ ಓಡಿಪೋದನನ್ನು (ಪುರಂದ. ೫-೫೦-೧); ವಿಶ್ವಾಮಿತ್ರಗಂ ನಾರಿಯರು ಮೊರೆಯಿಡಲ್ ಮಕ್ಕಳಂ ಕೊಂದುದಕೆ ಕ್ರೂರಮುನಿ ಕೋಪಮಂ ತಾಳ್ದು (ಹರಿಶ್ಚಂ. ೩೨-೨೩).

ಕೊಂದಾಟ = ೧. ಕೊಲ್ಲುವಿಕೆ; ಕೊಲೆ: ಕೊಂದಾಟಮಂ ಧೂಮಮುಮಂ ನಿಪುಣರ್ ಕಂಡರೆ ಪೋಗರ್ಪೈ (ಸೋಮೇಶ. ೬೮). ೨. (ಪಗಡೆ ಮೊದಲಾದ ಆಟಗಳಲ್ಲಿ) ಕಾಯಿಯನ್ನು ಹೊಡೆಯುವುದು, —ಕೊಲ್ಲುವುದು: ಕೊಂದಾಟವುಂಟು ಪಗಡೆಯೊಳು (ಶಾಂತೀಚ. ೬-೯). ಕೊಂದಾಡು = ಬಡಿದಾಡು; ಹೊಡೆದಾಡು: ಮುಂದಾದ ವರ್ಣವ ಹಿಂದಾದುದೆಂಬಾಗ ಕೊಂದಾಡದಿಹರೆ ಕರ್ಮಿಗಳು (ಭರಚ. ೬೧-೧೫). ಕೊಂದಿಕ್ಕಿಸು = ಕೊಂದುಹಾಕಿಸು; ಸಾಯಿಸು: ಪೊಹೋ ಕೊಂದಿಕ್ಕಿಪಂ, ಪುಕ್ಕಿಪಂ (ಎಕ. VIII, ಸಾಗರ. ೧೦೯-೩೦; 1049). ಕೊಂದಿಕ್ಕು = ಕೊಂದುಹಾಕು; ಸಾಯಿಸು: ಲಂಪಳರಪ್ಪೆಮ್ಮಂದಿಗರಂ ಬಗೆವಂದದೆ ಕೊಂದಿಕ್ಕವೆ ಸಕಳವಿಷಯ ವಿಷಮ ವಿಷಂಗಳ್ (ಆದಿಪು. ೯-೬೩); ಮುನಿದಿರ್ದ ತ್ತೊಂದು ಸೂಜ್ ಕ್ಷತ್ರಿಯರನಜಿಸಿ ಕೊಂದಿಕ್ಕಿದಾ ರಾಮನಿಂದಿತ್ತ ನರೇಂದ್ರರ್ ಪೊಕ್ಕರಿಲ್ಲೊ ಬರ್ಕರುಂ (ಗದಾಯು. ೧-೨೪); ಪೇಸದೆ ಪಾರ್ವ್ವರಂ ಗೊರವರಂ ಗೋಬ್ರನ್ದಮುಂ ಪೆಣ್ಡಿರಂ ತವೆ ಕೊನ್ದಿಕ್ಕಿದ ಪಾಪಮೆಯ್ದುಗುಂ (ಸೌಇಇ. XI-i, ೮೯-೩೩; 1049). ಕೊಂದುಕೂಗು = ಕೊಂದು ತಿನ್ನು; ತಿಂದುತೇಗು: ಇಟ್ಟಳಮಾಯ್ತೂರ ಚಲ್ಲಿ ಕೊಂದು ಕೂಗಿತು ಕಟಚಲ್ಲಿ (ಕಾವ್ಯಾವ. ೬೧); ನಟ್ಟು ಪರಗುವುದುಂ ಕೊಂದು ಕೂಗುವುದುಂ ತಿಂದುತೇಗುವುದುಂ (ಸುಕುಮಾ. ೧೧-೪೭ ವ); ಅಗ್ಗಳ ಮನೆ ಕೊಂದುಕೂಗುವನರಾತಿಬಳಂ ತಲೆದೋಱೆ ಬಿಮ್ಮಿಗಂ (ಸೌಇಇ. XX, ೭೩-೩೩; 1118); ಮನಸಿಜನ ಮಾಯೆ ವಿಧಿ ವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ (ಯಶೋಚ. ೨-೬೧).

[ದೇ.॥ ತಮಿ. ಕೊಲ್; ಮಲ. ಕೊಲ್ಲು; ತೆಲು. ಕೊಲ್ಲು; ಕೊಡ. ಕೊಲ್ಲ್]

**ಕೊಲ್**$_2$ 'ಕೋಲ್$_3$' ನೋ.

**ಕೊಲ್**$_3$ (ನಾ). ಕೋಲು; ಗಣೆ; ಗಳೆ. 'ಕೊಲ್ಲಟಿಗ' ಪರಾ.

[< ಕೋಲ್$_1$]

**ಕೊಲ**$_1$ (ನಾ). ಒಂದು ಸ್ಥಳದ ಹೆಸರು (?): ಶ್ರೀಮತ್ ಗಂಗೆಗೊಂಡ ರಾಜೇಂದ್ರ ಚೋಳದೇವರ್ ಪ್ರಿಥಿವೀ ರಾಜ್ಯಂಗೆಯ್ಯುತ್ತಿರೆ ಕೊಲದ ಮುನಿವರಾದಿತ್ಯಕಾಯ್ವರಾದಿತ್ಯ ಚೆಲ್ವರೆಸರ ಮಗ (ಎಕ. X, ಚಿಂತಾಮ. ೧೫೩-೩; 1000). [?]

**ಕೊಲ**$_2$ (ನಾ). ೧. ಕುಲ; ವಂಶ: ಆ ಕೊಲದೊಳೊರ್ವ್ವ ಪದ್ಮಿನಿ ಲೋಕೋನ್ನತ ಪುಟ್ಟಿಲಱಿದು (ಕಇ. I, ೨೫-೫೦; 1186); ತೇಕಲ ಸೀಮೆ ವೊಳಗಣ ಉಳ್ಳಿಯರ ಹಳ್ಳಿ × ಜ ಕೊಲದ ತಂಬಿಗೆ ಸರ್ವಮಾನ್ಯದ ಭಟ ವೃತ್ತಿಯಾಗಿ ಕೊಟ್ಟೆವು (ಎಕ. X, ಮಾಲೂರು. ೩೫-೫; 1525). ೨. ಗುಂಪು; ಸಮೂಹ: ಮೃಗಮಾರಣಮಿಲ್ಲದಲ್ಲಿ ಯೆಲ್ವಿನ ಕೊಲ್ಲ ಮಿಲ್ಲದಲ್ಲಿ . . . ಶಬರಂ ಸುಖಮಿರ್ಪಂ (ಅರ್ಧನೇ. ೩-೭೭). [< ಸಂ. ಕುಲ]

**ಕೊಲಂಬಾಬೇರು** (ನಾ). ಒಂದು ಬಗೆಯ ಮೂಲಿಕೆ: (ಮೈಔಗ. ೯೭-೯೪೨). [?]

**ಕೊಲಜ** (ನಾ). ಒಳ್ಳೆಯ ಕುಲದಲ್ಲಿ ಹುಟ್ಟಿದವನು; ವಂಶಜ: ತೈಲನಲ್ಲದೆ ಪೆಜನಾಪೊಂ ಪಿಕ್ಕಿ ನೋಱೊಡಿರ್ತಲೆಗೊಲ [ಪಾತಾಂ. ಗೋ]ಜಂ (ಕಾವ್ಯಾವ. ೨೧೧); ಒಡಿಪೊಡಿಸಿ ಅರೆಮನೆ ಪುಗುವರಾ ಅಪ್ಪೆ ಅಳ್ಮನ್ ಕೊಲಜರ ಮುಗಸುರಿಗೆಯೊಳ್ಳುವನ್ ಸ್ವಾಮಿಭುತಕರ ಬೆನ್ನಮ್ಮೊಱ್ಪೊನ್ (ಸೌಇಇ. IX-i, ೧೩-೨೦; ?).

[< ಸಂ. ಕುಲಜ]

**ಕೊಲಜೆ** (ನಾ). ಒಳ್ಳೆಯ ಕುಲದಲ್ಲಿ ಹುಟ್ಟಿದವಳು; ಕುಲೀನೆ: (ಕ). [< ಕುಲಜೆ]

**ಕೊಲತ್ತೂರ್** (ನಾ). ಒಂದು ಊರಿನ ಹೆಸರು: ತತಕೋತ್ತರೇ ಉತ್ತಗ್ರಾಮಸ್ಯ ಕೊಲತ್ತೂರ್ನಾಮ ಗ್ರಾಮಸ್ಯ (ಎಕ. X, ಮುಳಬಾ. ೧೫೭-೩೮; 338?). 'ಕೊಳತ್ತೂರ್' ಪರಾ. [? + ಊರ್]

**ಕೊಲದುಗದ್ದೆ** (ನಾ). ಒಂದು ಬಗೆಯ ಗದ್ದೆ (?): ಎರೆಗಟ್ಟೆ ಸ್ಥಳದಲು ಮಾನ್ಯವಾಗಿ ಕೊಲದುಗದ್ದೆ ಖ ೧ (ಎಕ. XVI, ಚಿಕ್ಕನಾ. ೧೦೩-೧೨; 1589). [ಕೊಲದು ? + ಗದ್ದೆ (< ಗಟ್ಟೆ)]

**ಕೊಲಾರಿ** 'ಕೊಲ್ಹಾರ' ನೋ.

**ಕೊಲಿಕೆ**, ಕೊಳಿಕೆ (ನಾ). ಕೊಂಡಿ; ಕುಣಿಕೆ: (ಕ). **ಕೊಳಿಕೆ**: ದ್ವಿತೀಯಾಕ್ಷರ ಪ್ರಾಸವೆಂಬುದು ಕೊಳಿಕೆಯುಳ್ಳ ಸರಿಗೆ (ಸಂಶೋಧ ೧೨೩).

[ದೇ.॥ ತಮಿ. ಕೊಳುಕ್ಕಿ; ತುಳು. ಕೊಲಿಕೆ; ತೆಲು. ಕೊಲಿಕಿ, ಕೊಲ್ಕಿ]

**ಕೊಲಿಗನ್** (ನಾ). (?): ಪಟ್ಟ ನನ್ನಿ ಕೊಱಿಯ ಮೂಡ್ಯೆ ಕಡೆಗೋದತ್ತಿ ಬಲಗ್ಯೆ ನಡದು ಕಲ್ಮಲರುಳಿ ಕೊಲಿಗನ್ಮೇಲ ಕಾರಜಿವಿ ಇಟ್ಟಗೆ ಸೂಜಿವಿ (ಎಕ. X (s), ಚಿಕ್ಕಬ. ೬೬-೨೦; 850). [?]

**ಕೊಲಿಗನ್ನೈಚಿಕ್ಕಾಲು** (ನಾ). ಒಂದು ಕ್ಷೇತ್ರದ ಹೆಸರು: ಕೊಕಂದಿಯುಂ ಮಯಿಲುರಗಯುಂ ಮೇಲ್ವಾಳುಂ ಜಾದಿಗಾಲು ಕೊಲಿಗನ್ನೈಚಿಕ್ಕಾಲು ಬನ್ದು ತೋಟ್ಟಮುಂ ಅಱು ಕಳನಿಲುಂ (ಮೈಆರ್. ೧೯೨೫, ೧೦೭–೧೯; ?). [?]

**ಕೊಲಿಗೆ** (ನಾ). ಒಂದು ಬಗೆಯ ಭತ್ತ (?): ಮಳಲಿ ಖಂ ೫ ಮೊರಹಳ್ಳಿ ಖಂ ೧೬ . . . ಕೊಲಿಗೆ ಖಂ (ಎಕ. VIII, ತೀರ್ಥಹ. ೧೯–೧೧೦; 1578). [?]

**ಕೊಲಿಮೆ**, ಕುಲಮೆ, ಕುಲಿಮೆ, ಕುಲುಮೆ, ಕೊಲುಮೆ (ನಾ). ಅಕ್ಕಸಾಲಿಯ ಅಥವಾ ಕಮ್ಮಾರನ ಒಲೆ: ಮದಗಿನ ಮಣ್ಣು ಮೇಗೆ ಬನ್ದು ಕೊಲಿಮೆಗೆ ಒಕ್ಕಂಣ್ಣುಗ ಮಣ್ಣು (ಸೌಇಇ. IX–i, ೧೮–೧೯; 884). **ಕುಲಮೆ**: (೬). **ಕುಲಿಮೆ**: ಗಾಡ ಅನುಭವದ ಕುಲಿಮೆಯಲ್ಲಿ ಕಾಯ್ದು ಬಂದ ಚಿನ್ನದ ಚೂರು (ರೂಪಸಂ. ೫೯). **ಕುಲುಮೆ**: ನಗುತೆಲ್ಲವಂ ತಂದು ಕುಲುಮೆಯಿಕ್ಕಿ (ಗುರುಚಾ. ೧೩–೭೫); ಸರ್ವನಾಶದ ಕುಲುಮೆಯಲ್ಲಿ ಅವಳ ಜ್ಞಾನೇಂದ್ರಿಯಗಳೆಲ್ಲಾ ಸುಟ್ಟುಹೋಗಿ ಬೊಂಬೆ ಮಾತ್ರವಾಗಿದ್ದಳು (ಮಗಮಾಂ. ೧೨೪); ಮತ್ತೆ ಮತ್ತೆ ವಿಚಾರದ ಕುಲುಮೆಗೆ ಹಾಕಿ ಕಾಸಿ ಬಡಿದು (ಕಗದ್ಯ. ೧೫೩). **ಕೊಲುಮೆ**: ಕಬ್ಬಿಣವ ಕೊಲುಮೆಯೊಳು ಇಕ್ಕಿ . . . ಕಾಸಿ (ಜ್ಞಾನಸಿಂ. ೬–೧೨); ಶಂಖವನ್ನು ಕೊಲುಮೆಯಲ್ಲಿ ಮೂರು ಮೂರು ಬಾರಿ ಕಾಸಿ (ವಿನ್ಯವಿ. ೫೦). [ದೇ. ‖ ತುಳು. ಕೊಲಮೆ; ತೆಲು. ಕೊಲಿಮಿ]

**ಕೊಲಿಸು**, ಕೊಲ್ಲಿಸು (ಕ್ರಿ). ೧. ಕೊಲ್ಲುವಂತೆ ಮಾಡು; ಸಾಯಿಸು; ಕೊಲೆಮಾಡಿಸು: ಕಳಿಪಂ ಕಳ್ವನಗುರ್ವು ಪರ್ವ ಕೊಲಿಪಂ ಕೊಲ್ವಂ ಎನಿಪ್ಪ ಪಾಪಿಯುಮ್ (ಆದಿಪು. ೫–೮೧); ಕಳಶಜನನಿಂತು ಕೊಲಿಸಿದ ಖಳನೆಗಡಂ ಧರ್ಮನಂದನಂ (ಗದಾಯು. ೩–೨೩); ಈ ಪಾತಕಿಯ ಮಾತಂ ನಂಬಿದೋಷಿಯಲ್ಲದನಂಕೊಲಿಸುವುದುಧರ್ಮವಲ್ಲ(ಪಂಚತಂ.೬೯–೧೩); ಲಲನೆಗೋಸುಗಹೆತ್ತಮಗನನು ಕೊಲಿಸಿದ್ಯೆ ಹಾ ಪಾಪಿ(ಕೌಶಿರಾ.೩೭–೨); ಕೊಂಡೊಯ್ದು ಕೊಲಿಸು [ಪಾಕಾಂ. ಬಡಿಯು]ವರ ಕೊಂಡಾಡುತಿರಬೇಕು (ತುರಂಧ. ೨–೭೫–೩). **ಕೊಲ್ಲಿಸು**: ೧. ಸಂಪತ್ತಿನಾಸೆಗಾಗಿ ತನ್ನ ಅಣ್ಣತಮ್ಮಂದಿರನ್ನು ಕೊಲ್ಲಿಸುವುದೂ (ಧರ್ಮಸಾ.೨೩). ೨. ಹೊಡೆಯಿಸು; ಬಡಿಯಿಸು; ಹಿಂಸಿಸು: ಸ್ತ್ರೀಯರಾಡಿದಕೆ ಕೋಪಮಂ ತಾಳ್ದು ಕೊಲ್ಲಿಸಿ ಕೊಲೆಯ ಕೂಡೆ ಪೊರವಡಿಸಲು (ತುರಂಗ. ೩೨–೨೨).

**ಕೊಲಿಸಿಕೊಳ್** = ಕೊಲೆಗೆ ಗುರಿಯಾಗು; ಸಾವನ್ನು ತಂದುಕೊಳ್ಳು: ಪಶುಗಳ ಮೆಯ್ಯೊಳೆನಿತು ರೋಮಮುಂಟನಿತು ಬಾರಿ ತಾಂ ಕೊಲಿಸಿಕೊಂಬಂ (ಪಂಚತಂ. ೬೨–೧೬). [ಕೊಲ್$_1$ + –ಇಸು$_3$]

**ಕೊಲು** 'ಕೊಲ್$_1$' ನೋ.

**ಕೊಲುಕುಟಕನಗಿಡ** (ನಾ). ಕೋಳಿಕುಟುಮನ ಬಳ್ಳಿ: (೬). [ಕೊಲುಕುಟಕ + ಗಿಡ$_1$ (< ಗಿಡು)]

**ಕೊಲುಮೆ** 'ಕೊಲಿಮೆ' ನೋ.

**ಕೊಲೆ$_1$** (ಕ್ರಿ). ಕೊಲ್ಲು; ಸಾಯಿಸು; ವಧೆಮಾಡು: ಖರದೂಷಣರ್ ಮೊದಲಾಗೆ ಕೊಲೆದನ್ ಚತುರ್ದಶ ಸಹಸ್ರರಂ (ಶ್ರೀರಾಮಾ. ೫೫೪–೫೯). [< ಕೊಲ್$_2$]

**ಕೊಲೆ$_2$** (ನಾ). ೧. ಕೊಲ್ಲುವಿಕೆ; ವಧೆ: ಇದಾನ್ ಅಱಿತ್ತೊನ್ ಬಾರಣಾಸಿ ಏೞು ಕವಿಲೆ ಕೊನ್ದ ಕೊಲೆಯ್ದುವೊನ್ (ಎಕ. XIV, ತಿರುಮ. ೨೪೪–೯; 8ನೆಯ ಶತ); ಕೊಲೆಯೊಳ್ ಪೊರೆಯಿಲ್ಲದ ಪರಲಲನೆಗೆ ಬಗೆಗುಡದ (ಶಾಂತಿಪು. ೧–೮೮); ಕವರ್ತೆಯ ಮೇಲೆ ಕೊಲೆಯೆಂಬಂತೆ (ಧರ್ಮಾಮೃ. ೮–೧೬೧); ತನ್ನಯ ಕೊಲೆಗೆ ಮಗನಳಿವೊಂದು ಸಾಲದೆ ತನ್ನ ನುಡಿಯೇಕೆ (ಕುಮ್ಮಾದ್ರೌ. ೭–೧೯). ೨. ಹಿಂಸೆ; ಪೀಡೆ; ತೊಂದರೆ: ವಾಸುದೇವನ ತಲೆಯ ಮೇಲೆ ಅದೆಂತಹ ಕೊಲೆ ಬಂದು ಕುಳಿತಿತೋ . . . ತಿಳಿಯಲೇ ಇಲ್ಲ (ಮೂರುದಾ. ೧೨೪). [ದೇ. ‖ ತಮಿ. ಕೊಲೈ; ಮಲ. ಕೊಲ್ಲಿ]

**ಕೊಲೆ$_3$** (ನಾ). (?): ತ್ರಿಸನ್ಧಿಯ ಕೊಲೆ ಚಣ್ಣಗಾಲೆ (ಎಕ. I, ೧–೨೫; 466). [?]

**ಕೊಲೆಕೋಡು** (ನಾ). ಕೊಲ್ಲುವ ಕೋಡು; ಸಾಯಿಸುವ ಕೊಂಬು: ಅವರನ್ನು ನಿನ್ನಾನೆಯ ಕ್ಯೆಯ ಕೊಲೆಕೋಡುಗಳಿಂತ ಕಾಲ್ಗಳ ಬಡಿತಂಗಳಿಂದ ಲಯವನ್ಯೆದಿಸು ಪೋಗೆಂದು (ಕಗವಿ. ೪೮–೧೬; ವಿಷ್ಣುಪು). [ಕೊಲೆ$_1$ + ಕೋಡ್ಕು]

**ಕೊಲೆಕೋಣೆ** (ನಾ). ಕೊಲ್ಲುವ ಕೋಣೆ: "ಯಾತನೆಯಿಲ್ಲದೆ ಪ್ರಾಣಗಳನ್ನು ಕೊಲ್ಲುವ ಕೋಣೆ; ಕೊಲೆಕೋಣೆ" (Lethal Chamber. ಇಂಕನಿ). [ಕೊಲೆ$_1$ + ಕೋಣೆ]

**ಕೊಲೆಗ** (ನಾ). ಕೊಲೆ ಮಾಡುವವನು; ಕೊಲೆಗಡಿಕ: "ಅಂತಕಃ, ಅಂತಮಾನಃ – ಈ ೨ ಕೊಲೆಗಂ" (ಕಾಶಕ್ಯ. ೯೭); ಓ ಕೊಲೆಗ ನಾನಿರೆ ನಿರ್ನೆರಂ ನಿಮ್ಮನೇನೆಂದು ಪಱಿವೆನೋ (ರಾಮಾಶ್ವ. ೨೯–೭). [ಕೊಲೆ$_1$ + –ಗ$_3$]

**ಕೊಲೆಗಡಕ** 'ಕೊಲೆಗಡಿಕ' ನೋ.

**ಕೊಲೆಗಡಿಕ**, ಕೊಲೆಗಡಕ, ಕೊಲೆಗಡಿಗ, ಕೊಲೆಗಡುಕ (ನಾ). = ಕೊಲೆಗ: ಕೊಲೆಗಡಿಕನಿದಿರಲಿ ಕೆಚ್ಚು ಮನದವರಾರು (ಕುಮ್ಮಾದ್ರೌ. ೨–೭೬); ಇಳೆಯ ಪಾರ್ಥಿವರದಟು ಕೊಡಲಿಯ ಕೊಲೆಗಡಿಕಗದು ಸೊಗಸೆ (ತೊರರಾ. ೧–೧೭–೩); ನ್ಯಾಯದಲ್ಲಿ ಕೊಲೆಗಡಿಕರುಪಹತಿಸ್ಗೈವ ಸಮಯದಲಿ (ನಿಭಾಗ. ೧೧–೩–೯). **ಕೊಲೆಗಡಕ**: ಮೂಲ ಕೊಲೆಗಡಕನು ಸಿಗದುದರಿಂದ ಖಟ್ಲೆ ನಿರ್ಜೀವವಾಯಿತು (ಜಮಾನ್ನಾ. ೧೫೯); ಕೊಲೆಗಡಕರನ್ನು ಕರೆಸಿ ಜನಕ ದಶರಥರೀರ್ವರನ್ನು ಕೊಂದು ಬರುವಂತೆ ಆಜ್ಞಾಪಿಸುವನು (ಸಾಹಿಸ. ೮೩). **ಕೊಲೆಗಡಿಗ**: ಕೊಲೆಗಡಿಗ ಕಂದರ್ಪಕನ ಕೂರಲಗೋ (ಕುಮ್ಮಾವಿ. ೨–೯); ಕೊಲೆಗಡಿಗನಿದಿರಾದನಾ ಕುಂಭಾಸುಜನರಣಕೆ (ತೊರರಾ. ೬–೩೯–೨); ಕೊಲೆಗಡಿಗ ಚಂಡಾಲರುಗಿಧ ಕೈದುಗಳಿಂದೆ . . . ಇಱಿದು ಕೆಡಹಿದೊಡೆ (ಜೈವಿಭಾ. ೩೧–೪೭). **ಕೊಲೆಗಡುಕ**: ಎಲೆಲೆ ಬೆಂದುದು ಲೋಕ . . . ನಿಲಿಸು ನಿಲಿಸೀ ಮೂರ್ಖಕಮಲಜನ ಕೊಲೆಗಡುಕಸರವನೆಂದಲ್ಲಲ್ಲಿ ಗುಜುಗುಜಿಸೆ (ಚಬಪು. ೧೬–೨೮). 'ಕೊಲೆಗಡುಕತನ' ಪರಾ. [ಕೊಲೆ$_2$ + ಕಡಿಕ$_2$]

**ಕೊಲೆಗಡಿಗ** 'ಕೊಲೆಗಡಿಕ' ನೋ.

**ಕೊಲೆಗಡುಕ** 'ಕೊಲೆಗಡಿಕ' ನೋ.

**ಕೊಲೆಗಡುಕತನ** (ನಾ). ಕೊಲೆಗಾರನ ಸ್ವಭಾವ, —ವೃತ್ತಿ: ಲಾಲಿಸದೆ ಕುಲಛಲವ ನೀತಿಯ ಪಾಲಿಸದೆ ಕೊಲೆಗಡುಕತನದೊಳು ಮೇಲುಗಾಣದೆ ಬಂಧುಗಳ ಗುರುಗಳ ಸಹೋದರರ ಕೋಲಪೊನೆಯಲಿ ಕೊಂದು (ಕುಮ್ಮಾಭೀ. ೩–೪೨). [ಕೊಲೆಗಡುಕ(<ಕೊಲೆಗಡಿಕ) + –ತನ]

**ಕೊಲೆಗಯ್ಯ** (ನಾ). ೧. ಕೊಲ್ಲುವ ಕೈಗಳನ್ನುಳ್ಳವನು. ೨. ಕೊಲ್ಲುವ ಸೊಂಡಿಲುಳ್ಳದ್ದು: ಅಯ್ಯಯ್ಯೊ ನೃಪನಳಿದನಳಿದ ಕೊಲೆಗಯ್ಯನಪ್ಪಾನೆಯೊಳೆಂದು . . . ಬಿಯದಿಯುರಲ್ಲಿ ಪುಯ್ಯಲನಿಟ್ಟಳಲಿದರು (ಶ್ರೀಪಾಲ. ೭–೫೭). [ಕೊಲೆ$_1$ + ಕಯ್$_2$ (< ಕೆಯ್$_2$) + –ಅ$_7$]

**ಕೊಲೆಗಾರ** 'ಕೊಲೆಗಾಱ' ನೋ.

**ಕೊಲೆಗಾರ್ತಿ** (ನಾ). ಕೊಲೆಮಾಡುವವಳು; ಕೊಲೆಗಡಿಕೆ: "ಶರ್ವಾಣಿ – ಕೊಲೆಗಾರ್ತಿಯುಂ, ಗೌರಿಯುಂ" (ಕಾಶಕ್ಯ. ೨೪೫). [ಕೊಲೆಗಾಱ + –ತಿ$_1$ (< –ಇತ್ತಿ)]

**ಕೊಲೆಗಾಱ**, ಕೊಲೆಗಾರ (ನಾ). = ಕೊಲೆಗ: ಕಾಮನು ಕರುಣಿಯೇ ಕೊಲೆಗಾಱಂಗೆ (ತೊರರಾ. ೬-೧೨-೪). **ಕೊಲೆಗಾರ** : "ಹಿಂಸಕಃ – ಕೊಲೆಗಾರಂ" (ಕಾಶಕ್ಯ. ೨೩೫); ಒಬ್ಬನ ಕೊಂದವನಾದರೆ ಕೊಲೆಗಾರ (ಇಂಚಾಪ ೨೩೫-೬೧). [ಕೊಲ್$_2$ + -ಕಾಱ]

**ಕೊಲೆಗುತ್ತ** (ನಾ). ಸಾವನ್ನುಂಟುಮಾಡುವ ರೋಗ; ಮಾರಕ ವ್ಯಾಧಿ: ಮುಂಚೆ ಬಂದ ಸಂಚಿನ ಪ್ರಪಂಚದ ಕೊಲೆಗುತ್ತದ ಬೇನೆಗೆ ನರಲ್ವರ್, ಅಱುವಗೆಗಳ್ಗೆ ತಮ್ಮಂ ಮಾಱುಗೊಟ್ಟ ಕೊಱ್ತಿರ್ (ರಾಮಾಶ್ವ. ೭೮-೮); "ಕೊಲೆಯ ಅಪಾಯ" (ರಾಮಾಶ್ವ. ಕೋಶ). [ಕೊಲ್$_2$ + ಕುತ್ತ]

**ಕೊಲೆಗೆಲಸ** (ನಾ). ಕೊಲ್ಲುವ ಕೆಲಸ; ವಧೆ: ಜನದ ಕೊಲೆಗೆಲಸದ ನಿರೂಪಕೆ ಮನವ ತಂದಳು ಮೃತ್ಯು (ಕುವ್ಯಾದ್ರೋ. ೬-೩೫); ಮೂಱು ಲೋಕದ ಕೊಲೆಗೆಲಸಕುಬ್ಬೇಱಿದಸಮಾಂಬಕನವೊಲು (ತೊರರಾ. ೪-೬-೧೮); ಸುರಾರಿವಂಶದ ಕೊಲೆಗೆಲಸಕೊಡೆಯನು ನಿರೂಪಿಸೆ (ಶಿಭಾಗ. ೯-೫-೧೦); ಧರೆಯೊಳಾತರ್ದರನ್ನೈದೆ ರಕ್ಷಿಸುವ ಬುದ್ಧಿ ಕೋಮಲೆಯ ಕೊಲೆಗೆಲಸಕಾಯ್ತು (ಜೈಮಿಭಾ. ೧೯-೨). [ಕೊಲ್$_2$ + ಕೆಲಸ]

**ಕೊಲೆಗೇಡಿ** (ನಾ). = ಕೊಲೆಗ: ಮೊಲೆವಾಲನುಣಿಸಿದಾಯಕನ ಪ್ರಾಣವ ಕೊಂದ ಕೊಲೆಗೇಡಿ ಬಲುಹ ಕೋಱನಗೆ (ಮೋಹತ. ೪೦-೨೬). [ಕೊಲ್$_2$ + ಕೇಡಿ]

**ಕೊಲೆಗೈ** (ಕ್ರಿ). ಕೊಲೆಯನ್ನು ಮಾಡು; ವಧಿಸು: ಕೊಲೆಗೈಯೆಂಬುದು ಡೆಂಕಣಿಕುಲದೊಳ್ ಚಲಗಯ್ಯೆಂಬುದು ಜತಿಗಳ ವ್ರತಮಂ ಪಿಡಿವಲ್ಲಿ (ಉದ್ಭದೇ. ೨-೧೩). [ಕೊಲ್$_2$ + ಗೈ (< ಕೆಯ್$_1$)]

**ಕೊಲೆಗೊಳ್**, ಕೊಲೆಗೊಳ್ಳು (ಕ್ರಿ). ೧. ಕೊಲೆಯನ್ನು ಮಾಡು: ಕೊಲೆಗೆ ಕೊಲೆಗೊಂಡಲ್ಲದೋಱಿಗೆ ನಿಲಲಱಿಯದೀ ಮನವು (ತೊರರಾ. ೩-೬-೩೩). **ಕೊಲೆಗೊಳ್ಳು** : ೨. ಕೊಲ್ಲಿಸಿಕೊಳ್ಳು; ಕೊಲೆಯಾಗು. [ಕೊಲ್$_2$ + ಕೊಳ್$_1$]

**ಕೊಲೆಗೊಳ್ಳು** 'ಕೊಲೆಗೊಳ್' ನೋ.

**ಕೊಲೆಪಡು** (ಕ್ರಿ). ಕೊಲೆಮಾಡಲ್ಪಡು; ಕೊಲೆಗೆ ಈಡಾಗು: ಈ ಕೊಲೆಪಡುವಾತನರಸರ ಗೋಮಂಡಳಮಂ ಕಾವೊಂ ವೀರಪೂರ್ಣನೆಂಬೊಂ (ವಡ್ಡಾರಾ. ೨೨-೧). [ಕೊಲ್$_2$ + ಪಡು$_1$]

**ಕೊಲೆಪಾತ** (ನಾ). = ಕೊಲೆಪಾತಕ ೧: ಪ್ರತಿಪಕ್ಷದವಳನ್ನು ನಿಂದಿಸುವುದು ಕೊಲೆಪಾತಕ್ಕೆಳಸುವುದು – ಇದು ಎಲ್ಲ ದೇಶಗಳಲ್ಲಿಯೂ ಎಲ್ಲ ಮತಗಳಲ್ಲಿಯೂ ಕಂಡುಬರುವ ಮಾತು (ಸಾಹಿಸ. ೧೪೭). [ಕೊಲ್$_2$ + ಪಾತ]

**ಕೊಲೆಪಾತಕ** (ನಾ). ೧. ಕೊಲೆಯ ಪಾಪ; ಕೊಂದುದರಿಂದಾಗುವ ಪಾಪ: (ಕ). ೨. ಕೊಲೆಗಾರ; ಕೊಲೆಗಡಿಕ: ಇನ್ನು ಗುಂಡು ತಾಕದಲ್ಲಿ ಕೊಲೆಪಾತಕ ಸ್ಲೋಕದಲ್ಲಿ (ಸೂರ್ಯಪಾ. ೧೧-೫); ಅವರು ಇಡೀ ವಿಶ್ವವನ್ನು ಧ್ವಂಸಮಾಡಿದರೂ ಕೊಲೆಪಾತಕರಲ್ಲ (ಧರ್ಮಸಾ.೧೩೮). [ಕೊಲ್$_2$ + ಪಾತಕ$_2$]

**ಕೊಲೆಪಾತಕಿ** (ನಾ). ೧. = ಕೊಲೆಪಾತಕ ೨: ತಾನು ಕೊಲೆಪಾತಕಿಯಾದೆನಲ್ಲಾ ಈ ಪಾತಕವನ್ನು ಹೇಗೆ ಕಳೆದುಕೊಳ್ಳಲಿ? (ಕಂಬಹು. ೩೪); ಏನು ಕೊಲೆಪಾತಕಿಗೆ ಹೆದರುವುದಿಲ್ಲವೇ? (ದೇಶಧು. ೪೭). ೨. ಕೊಲೆಗಾತಿ; ಕೊಲೆಗಡಿತಿ: ಅವಳು ಕೊಲೆಪಾತಕಿ (ರೂಢಿ). [ಕೊಲ್$_2$ + ಪಾತಕಿ]

**ಕೊಲೆಬಲೆ** (ನಾ). ಕೊಲ್ಲುವ ತಂತ್ರ, —ಜಾಲ: ರಕ್ಕಸರ ಕೈತವದ ಕೊಲೆಬಲೆಗೆ ಸಿಲ್ಕದೋಲೆವ್ಮಮಿತ್ರಂ ನಾನೆ ರಕ್ಷಣಾವ್ಯೂಹವಂ ರಚಿಸಿ ಮೈಗಾವಲಿರ್ಪನ್ (ಶ್ರೀರಾಮಾ. ೬೨೪-೧೮೧). [ಕೊಲ್$_2$ + ಬಲೆ$_1$]

**ಕೊಲೆಬೀೞ್** (ಕ್ರಿ). ಕೊಲೆಯಾಗು: ಶ್ರೀಮುತ್ತರ ಅತಿರಥಗಣ್ಡ ಪೊಸವೆಣ್ಡರಮ್ಮಿ ಬೀಸಿ ತಪ್ಪದೊನ್ . . . ಜಯಕೆನಲ್ಲಾ ಕೊಲೆಬೀೞದೊನ್ (ಎಕ. XV, ಅರಸೀ. ೨೧೫-೫; 890). [ಕೊಲ್$_2$ + ಬೀೞ್$_1$]

**ಕೊಲೆಮನೆ** (ನಾ). ಕೊಲ್ಲುವ ಮನೆ; ಕಟುಕರ ಮನೆ; ಕಸಾಯಿಖಾನೆ (?): ಮುಂದೆ ಅಗೆಯಲು ಒಂದು ಕೊಲೆಮನೆ ಕಾಣಿಸಿತು (ಬುದ್ಧಪ. ೭೨). [ಕೊಲ್$_2$ + ಮನೆ]

**ಕೊಲ್ಗತ್ತಿ** (ನಾ). ಒಂದು ಬಗೆಯ ಖಡ್ಗ: ಮೊಳೆಗತ್ತಿ ಕೊಲ್ಗತ್ತಿ ಕೊಂಕಣ ಬಿಡೆಗತಿ ಸೆಳೆಗತ್ತಿ ಮಾಂಮೊಗತ್ತಿ (ದೇವಾಂಪು. ೩-೨೦೧). [< ಕೊಲ್$_2$ + ಕತ್ತಿ]

**ಕೊಲ್ಚಂದಿಕ್ಕು** (ಕ್ರಿ). ಸರಪಣಿಯಿಂದ ಕಟ್ಟು (?): ದುರದೊಳ್ ಕಾಯ್ದು ಕಡಂಗಿ ಪೊಂಗಿ ಮಲೆದೋರನ್ತಿಱ್ದನೆಯ್ತಂದ ಮಚ್ಛರದಿನ್ದಾನ್ತೊರನನ್ತಕಂಗಿಡದೆ ಕೊಲ್ಚನ್ದಿಕ್ಕಿ ಮಿಕ್ಕೀ ವಸುಂಧರೆಯೊಳ್ ತನ್ನದಟುಂ ಪ್ರತಾಪಮುಮದಾ ರಾಜೋತ್ತಮಂ ಪೆಚ್ಚೆ(ಎಇ.XVIII, ೧೭೨-೬;985). [ಕೊಲ್ಚು + ಇಕ್ಕು ?]

**ಕೊಲ್ಚು** (ನಾ). ೧. ಗೊಲಸು (?): ಮತ್ತರು ೪೦ ಜೀರ್ಣೋದ್ಧಾರದ ಬೆಸಕ್ಕೆ ಕೊಲ್ಚನುಱ್ದು ಮಾಡುವ ಕಲುಕುಟಿಗವೋಱುಗಳು ನಾಲ್ವರ್ಗೆಂ (ಕಇಅ. ೯-೩-೩೧೩; ?). ೨. ಸರಪಣಿ. 'ಕೊಲ್ಚಂದಿಕ್ಕು', 'ಗೊಲಸು' ಪರಾ. [← ತಮಿ. ಕೊಲುಸು, ಕೊಲುಚು]

**ಕೊಲ್ಲ$_1$** (ನಾ). (ಕರಾ) ಕಮ್ಮಾರ: ಈ ಕತ್ತಿಯನ್ನು ನಮ್ಮ ಮನೆಯ ಸಮೀಪದಲ್ಲಿರುವ ಕೊಲ್ಲ ಮಾಡಿದ (ರೂಢಿ). [ದೇ. ‖ ತಮಿ. ಮಲ. ಕೊಲ್ಲ; ತುಳು. ಕೊಲ್ಲೆ]

**ಕೊಲ್ಲ$_2$** (ನಾ). ಕೊಳ್ಳ (?): ಅಲ್ಲಿಂದಂ ಮೂಡಲು ಕೊಲ್ಲದೊಳಗಣ್ಣ ವಾಮನ ಮುದ್ರೆಯ ಕಲ್ಲೇ ಗಡಿ (ಎಕ. VII, ಶಿವಮೊ. ೭೧-೩೫; 1431). [< ಕೊಳ್ಳ ?]

**ಕೊಲ್ಲಗೆಡಹು** (ಕ್ರಿ). ಕೊಂದುಹಾಕು; ಸಾಯಿಸು: ಕಪೋತನ ಕಾಲ ಹೊಯಿದು ಕೃಷ್ಣನ ಕೊಲ್ಲಗೆಡಹಿ ಹೋಗುತ್ತಿರಲಾಗಿ (ನೋಳಮಾ. ೧೭೦-೩೭೪). [< ಕೊಲ್$_1$ + ಕೆಡಹು (< ಕೆಡಪು$_1$)]

**ಕೊಲ್ಲಗೊಲೆ** 'ಕೊಲ್ಲುಗೊಲೆ' ನೋ.

**ಕೊಲ್ಲಟಗಿತ್ತಿ** 'ಕೊಲ್ಲಟಗಿತ್ತಿ' ನೋ.

**ಕೊಲ್ಲಟಿ** (ನಾ). ದೊಂಬ; ಡೊಂಬ: ನೂಲ್ಗಟ್ಟಿ ಪೊಯ್ದು ಪೊಸ ಗುಡಿಸಲ್ಗಳ್ ತವೆ ನಟ್ಟ ಗಳಗಳೇರಿಸಿದದೋಳ್ಗಳ್. . . ಇರಲ್ ಬೀಡೆಸೆದುದು ಕೊಲ್ಲಟಿ ಜನರಾ (ಉದ್ಭಟ. ೫-೧೦೧). [< ಕೊಲ್ಲಟಿಗ ?]

**ಕೊಲ್ಲಟಿಗ** (ನಾ). = ಕೊಲ್ಲಟಿ: "ಕೊಲ್ಲಟಿಗನೆಂದು ಡೊಂಬಂ" (ಕಶಸಾ. ೧೮-೩೫೬); ಗೆಲ್ಲ ಸೋಲದ ಮತ್ಸರ ಕೊಲ್ಲಟಿಗಂಗಲ್ಲದೆ ಶಿವಭಕ್ತರಿಗುಂಟೆ (ಚೆನ್ನವ. ೩೬೦); ಅರಿದಾದೊಡಮೇಂ ಕೊಲ್ಲಟಿಗರಾಟ ದಂತಪರಿಮಿತ ತಪಂ ಬಾರದು ಬಲ್ಲರ ಬಗೆಗೆ (ಪಾರ್ಶ್ವಪು. ೧೫-೨೧); ಕೊಲ್ಲಟಿಗರ ಸೂಳೆಯರ ಚಿತ್ರಕಲೆಗಳ ಬಲ್ಲರ ಕೇರಿಗಳೆಸೆದವು (ಸೊಬಸೋ. ೧-೫೧); ಕೊಲ್ಲಟಿಗರಂಗನೆಗೆ ಮಚ್ಚಿ ತನ್ನಯ ಗುರುವು ಯತಿಮಾರ್ಗ ದೂರನಾಗಿ (ರಾಘಚ. ೫-೩೪). [ಕೊಲ್$_3$ + -ಅಟಿಗ]

**ಕೊಲ್ಲಟಿಗತನ** (ನಾ). ಡೊಂಬತನ; ದೊಂಬವಿದ್ಯೆ: ಕುಲ್ಲರಡೆಯಲ್ಲೋದಿ ಕೊಂಕ ತಿದ್ದುರ್ವವನೆಂದು ಕೊಲ್ಲಟಿಗತನದಿಂದಲಪಶಬ್ದಮಂ ಕೂಡಿ (ಲಿಂಗಪು. ೧-೨೨). [ಕೊಲ್ಲಟಿಗ + -ತನ]

**ಕೊಲ್ಲಟಗಿತ್ತಿ**, ಕೊಲ್ಲಟಗಿತ್ತಿ (ನಾ). ದೊಂಬರವಳು; ಡೊಂಬರ ಹೆಂಗಸು: ತಂತಿಯ ಮೇಲೆ ತುದಿಗಾಲಿಟ್ಟು ನಡೆವ ಕೊಲ್ಲಟಗಿತ್ತಿಯಂತೆ (ಗಾಳಿಪ. ೧೦೫). **ಕೊಲ್ಲಟಗಿತ್ತಿ**: ಮಿಣಿಯಲ್ಲಿ ಮಣಿವ ಕೊಲ್ಲಟಗಿತ್ತಿ ತನ್ನ ಜೋಕೆಯ ತೂಕದಲ್ಲಿ ತೂಗಾಡುವಳು (ಉಯ್ಯಾಲೆ. ೩-೯); ಕಣ್ಣು ಕಟ್ಟಿಕೊಂಡು ಉಯ್ಯಾಲೆಯಿಂದ ಉಯ್ಯಾಲೆಗೆ ಜಿಗಿಯುತ್ತಿರುವ ಕೊಲ್ಲಟಗಿತ್ತಿಯ ಕಾಯಕದಂತೆ (ತುಂಗಭ. ೬೬). [ಕೊಲ್ಲಟಗ + -ಇತ್ತಿ]

**ಕೊಲ್ಲಟಗವೆಣ್** (ನಾ). = ಕೊಲ್ಲಟಗಿತ್ತಿ: ಪ್ರಿಯದಂಡಮಂಬ ಗಳೆದುದಿಯ ಮೇಲಾಡುತಿರ್ಪ ಕೊಲ್ಲಟಗವೆಣ್ಣೊ (ಚಬಪು. ೧೦-೬೨). [ಕೊಲ್ಲಟಗ + ಪೆಣ್]

**ಕೊಲ್ಲಡಿಗೆ** (ನಾ). (?): ಹಾರಿನಿರ್ದತಿ ಬುತ್ತಿಯು ಕಲ್ಲಿಕೊಲ್ಲಡಿಗೆ ಜೂರಿಮಿಡಿ ವಿಲ್ಲುಕಡೆ ಮದ್ದು ಗಂಟಲ್ಗಾಳ ಕೋಲ್ವೇಡತಿಯರೊಡಗೂಡಿ ಶಬರವ್ರಾತಮಾರಣ್ಯಕೇಳ್ತಂದುದು (ನಂದಿಮಾ. ೧೩-೨೫). [?]

**ಕೊಲ್ಲಣ** (ನಾ). ೧. ವಿನೋದ; ಕ್ರೀಡೆ: ಮೆಲ್ಲಮೆಲ್ಲನೆ ಲಲ್ಲೆಗಳೆವ ಬಲ್ಲತನದ ಸೊಲ್ಲಸೊಗದ ಘುಲ್ಲಣೆಯ ಕೊಲ್ಲಣದೊಳೆಸೆದುಂ (ರಾಮಾಶ್ವ. ೬೩-೩). ೨. ಎಡೆಯಾಟ; ಸಂಚಾರ. ೩. ದಟ್ಟಣೆ; ಸಂದಣಿ. 'ಕೊಲ್ಲಣಿಸು' ಪರಾ. [?]

**ಕೊಲ್ಲಣಿಗೆ** (ನಾ). ೧. ಎಡೆಯಾಟ; ಸಂಚಾರ: "ಕೊಲ್ಲಣಿಗೆಯೆಂದು ಎಡೆಯಾಡುವುದು" (ಕಶಸಾ. ೨೩-೪೬೬); "ಕೊಲ್ಲಣಿಗೆಯೆ ಎಡೆಯಾಟಂ" (ಕವಿಕಂ. ೧೯೨); ಕೇವಳಿಸಿದರು ಕೊಲ್ಲಣಿಗೆಯಲಿ ಕೊಂಡರು ಸುವಸ್ತುಗಳ (ಕುವ್ಯಾಸ. ೬-೭). ೨. ದಟ್ಟಣೆ; ಸಂದಣಿ; ನೆರವಿ: ಐರಾವತದ ಕಾಲಾಟಕ್ಕೆಡೆಯಪ್ಪಂತು ಕೊಲ್ಲಣಿಗೆಯೊಳ್ ಬರ್ಪನೇಕ... ವಾಹನಂಗಳಂ ತೆರಳೆ ತೂಳ್ದಿ ತೆಱಪಂ ಮಾಡಿಯುಂ (ಚಂದ್ರಪ್ರ. ೧೨-೮೩ವ); ಕಳಕಳ ರವದ ಕೊಲ್ಲಣಿಗೆಯಾ [ಪಾಠಾಂ. ಘುಲ್ಲಣಿಯ] ಭಟರ ತಿಂತಿಣಿಯೊಳ್ (ಹಚಕಾ. ೧೩-೫); ಕೋಟಲೆಯ ಕೊಲ್ಲಣಿಗೆಯಲಿ ಮೈನೋಟ ಕಲಸದೆ ಬಿಸಲಲಿವರು ಮಹಾಟವಿಯ ಮಧ್ಯವನು ಹೊಕ್ಕರು (ಕುವ್ಯಾಆ. ೮-೯೪); ನಾಟದಾದುದು ಬುದ್ಧಿ ಶುದ್ಧಿಯ ಕೋಟಲೆಯ ಕೊಲ್ಲಣಿಗೆಯಲಿ ಮೇಗೋಟೆಯನು ಹತ್ತಿದನು (ಕೂರರಾ. ೫-೨-೨೩); ದಳ್ಳುರಿಯ ಮುತ್ತಿಗೆಯ ಹದಗದ ಹೊಳ್ಳು ನೆರವಿಯೊ ತತ್ವವಿದ್ಯದ ಕೊಲ್ಲಣಿಗೆಗೊಡ್ಡಿಸಿದ ಮಾಯಾಮಯ ತನುಭ್ರಮೆಯೊ (ನಿಭಾಗ. ೧೦-೩೭-೫೬). ೩. ವೇಷ; ಆಟ: ಪೊಡೆವಟ್ಟಲ್ ಚೋಳಬಾ ಕೊಲ್ಲಣಿಗೆಲೆ ಕಾಳಿಂಗ... ಎನುತೆ ಬೆಸಂಬೇಳ್ವರ್ (ಎಕ. VII, ಶಿವಮೊ. ೫-೧೪; 1218). [?]

**ಕೊಲ್ಲಣಿಗೆವರಿ** (ಕ್ರಿ). ಗುಂಪಾಗಿ ನಡೆ; ಸಂದಣಿಸಿ ಹರಿ: ಒಡಲ ಚೆಲುವುಗಳೊಡನೆ ನೋಟಕರ ದಿಟ್ಟಿಗಳು ಬಿಡದೆ ಕೊಲ್ಲಣಿಗೆವರಿದೆಡೆಯಾಡುತಿರಲಿಂತು (ಹಚಕಾ. ೪-೧೧); ಮರಳುಗಳೊಬ್ಬುಳಿಗೊಂಡು ನರ್ತಿಸುತ್ತ ಕೊಬ್ಬಿ ಕೊಲ್ಲಣಿಗೆವರಿದು ಕುಬುಬೂಯೆಂದು ಬೊಬ್ಬಿಡುತಿಹವು (ಅಂಜಚ. ೬-೧೫೩). [ಕೊಲ್ಲಣಿಗೆ + ಪರಿ₁]

**ಕೊಲ್ಲಣಿಸು** (ಕ್ರಿ). ೧. ಎಡೆಯಾಡು; ಸುಳಿದಾಡು; ಸಂಚರಿಸು (?): ಮೋಱೆಯೊಲೆದು ನೋಡಿ ನೃಪಸುತರಿಗೆ ಹುಬ್ಬು ಹಾಱಿಸುವಳು ನಸುನಗುತ ಹಾಙುವುದೊಡನವರೆದೆ ತನ್ನ ತೋಳೆತ್ತಿ ನೀಱೆ ಕೊಲ್ಲಣಿಸುತ್ತುವಳು (ಭರಚ. ೧೨-೮೦); ಬಲ್ಲರ್ ಬರ್ದೆಯರೀಪರಿ... ಬಂದಲ್ಲಣಿಗೆಗೊಂಡು ಪೊಣ್ಮುತೆ ಕೊಲ್ಲಣಿಸುವರುಱುಬಿ ನುಡಿವರೂಱಿಗವೆಣ್ಗಳ್ (ಚಿಕವಿ. ೪-೩೨). ೨. ಸಂದಣಿಸು; ದಟ್ಟಣೆಗೊಳ್ಳು: ಘಲ್ಲಿಸುವ ಪೂರಜಕೆ ನಿಲ್ಲದೆ ಕೊಲ್ಲಣಿಪ ಮಱಿದುಂಬಿಗಳ ರವವೆಲ್ಲೆಡೆಗಳಲಿ (ಉತ್ತರಾ. ೯-೫); ಎಸೆವಾ ಪುಳಿಂದಿಯರ ತನುಕಾಂತಿ ಕೊಲ್ಲಣಿಸಿ (ನಂದಿಮಾ. ೧೩-೨೭). [ಕೊಲ್ಲಣ + -ಇಸು₃]

**ಕೊಲ್ಲಱ** (ನಾ). (?): ಪೊಂಪಱ... ಮಲ್ಲಱ, ಕೊಲ್ಲಱ, ಉಂಬಱ (ಶಬ್ದಾನು. ೧೪೦ ವ್ಯಾಖ್ಯಾ). [?]

**ಕೊಲ್ಲಾಟಿಕ** (ನಾ). ವೇಷಗಾರ (?): ಅಲ್ಲಿಗಲ್ಲಿಗೆ ಬಲ್ಲರ(ರ)ರಿಯರೆಂದು ಕೊಲ್ಲಾಟಿಕರಂತೆ ಕಥೆ, ಕಾವ್ಯವೆಲ್ಲವ ಹೇಳುವವನಲ್ಲ (ಸರ್ವವ. ೧೨೯-೬೫೩). [?]

**ಕೊಲ್ಲಾಪುರ** (ನಾ). ಒಂದು ಊರಿನ ಹೆಸರು: ಕೊಲ್ಲಾಪುರೇ ಕೋಟಿತೀರ್ಥೇ (ಇಅ. XVI, ೨೪-೬೨; 1009). [?]

**ಕೊಲ್ಲಾಯ್ತ** (ನಾ). ವೇಷಗಾರ; ಆಟಗಾರ (?): ನಚ್ಚಣಿಗರ ಪೊಸ ಪೂವಡಿಗರ ಗರವಟಿಗರ ಕೊಲ್ಲಾಯ್ತರ ನುಡಿಗಾಱರ ಮಾಸ್ವಾರರ ಸಂದಣಿ ಸಲೆ ಸೊಗಯಿಸಿತಾಗ (ಜಯಕಾ. ೧೨-೧೯). [? + -ಆಯ್ತ]

**ಕೊಲ್ಲಾರ**, ಕೊಲಾರಿ, ಕೊಲ್ಲಾರಿ₁, ಕೊಲ್ಲಾರು (ನಾ). ೧. ಸಿಂಗರಿಸಿದ ಕಮಾನು ಬಂಡಿ. ℙ ಪ್ರಯಾಣದಲ್ಲಿ ಸೊಗಸನ್ನುಂಟುಮಾಡುವುದಕ್ಕೆ ಬೇಕಾದ ತಿಂಡಿತೀರ್ಥ ಮೊದಲಾದುವುಗಳನ್ನು ತುಂಬಿದ ಎತ್ತಿನಬಂಡಿ: ಕೇರಾಳಾನೆ ಕುದುರೆ ಕೊಟಗೆ ಕೊಲ್ಲಾರ ಕಾರವು ಮೊದಲಾದ ಧಾರುಣಿ ಹೊರಲಱಿಯದ ಸೇನೆ ಪೊಱಮಟ್ಟು (ಶ್ರೀಪಾಲ. ೧೩-೬೭); ಕೊಲ್ಲಾರ ಕೊಟ್ಟಿಗೆ ಬೊಕ್ಕಸ ಭಂಡಾರವೆಲ್ಲವವರಿಗೊಳಗಾಯ್ತು (ಕುರಾಸಾಂ. ೪೧-೬); ದಂಡಿಗೆ ಪಲ್ಲಕ್ಕಿ ಕುದುರೆ ಕೊಲ್ಲಾರದ ಭಂಡಿಗಳೊಲಿದೇಱಿಕೊಂಡು (ಚಂಪ್ರಸಾಂ. ೧೫-೭೬); ಕೊಟ್ಟಿಗೆ ಕೊಲ್ಲಾರ ಕೀಲಾರ ಹೊರೆಯ ತಾಳ್ದೊಟ್ಟಿಗಳ್ಪಾಸುಮಂಚಗಳು ಪೆಟ್ಟಿಗೆ ಭಂಡಾರ ಬೊಕ್ಕಸ ಸಾಗಿಬಂದು (ಭರಚ. ೨೩-೪೯). **ಕೊಲಾರಿ**: ೧. ಹೊಲ್ಲಿಯ ಭಂಡಿ ಕೊಲಾರಿ ರಥಂಗಳು ಮೇಲಾನೆ ಕುದುರೆ ವೈಯಾಳಿ (ಅಮುಸಾಂ. ೧-೮೧). **ಕೊಲ್ಲಾರಿ₁**: ೧. ಜೂರಿಸುವ ಮೊಗಸೂನಿಗೆಯ ಕೊಲ್ಲಾರಿಗಳ ಶರಬಂಡಿಗಳ ಹೊಂದೇರು ಕವಿದುವು (ಕುವ್ಯಾಕ. ೨-೪೪); ಅಂಗನಾನೀಕದಂದಣಂ ಕೊಲ್ಲಾರಿಗಳ ಕಾವ್ವರಿಯೊಳು ನಡೆದರು ಸೊಗಸಿನಿಂ (ಚೇರಮ. ೫-೨೧). ೨. ಬಂಡಿಯ ಬಿದಿರಿನ ಕಮಾನು: ಮೇಲಿನ ಕೊಲ್ಲಾರಿಗೆ ಗೊಂಡೆಗಳನ್ನು ಕಟ್ಟಿ (ಗಂಗಾಸಾ. ೪೯); ಒಂದು ಎತ್ತಿನ ಬಂಡಿ ಕೊಲ್ಲಾರಿ ಬಿಗಿಸಿಕೊಂಡು ಗುಡಾರ ಹೊದೆಯಿಸಿಕೊಂಡು ನಿಂತಿತ್ತು (ಧೂವಿತಾ. ೬೫). **ಕೊಲ್ಲಾರು**: (ಕ). [? / ತೆಲು. ಕೊಲಾರು, ಕೊಲ್ಲಾರು]

**ಕೊಲ್ಲಾರಬಂಡಿ**, ಕೊಲ್ಲಾರಭಂಡಿ, ಕೊಲ್ಲಾರಿಬಂಡಿ (ನಾ). ಕೊಲ್ಲಾರದ ಬಂಡಿ; ಕಮಾನುಗಾಡಿ: ಕೊಟ್ಟಿಗೆ ಕೊಲ್ಲಾರಬಂಡಿ ಕೀಲಾರವ ನೆಟ್ಟನೆ ನೃಪ ತೆರಳಿಸಿದ (ನಾಗಕು. ೩-೬೦); ಕೊಟ್ಟಿಗೆಯ ಕೊಲ್ಲಾರಬಂಡಿಗಳ ಮೇಲೆ ಸರಕಿಟ್ಟಣಿಸಿ ನೂಕಿದುದು (ಜೈಮಿಭಾ. ೭-೫). ಝುಗಝುಗಿಸುವ ಕಾಂತಿಯಿಂದ ಸೊಗಯಿಸುವ ಕೊಲ್ಲಾರಬಂಡಿಯ ಲೆಕ್ಕವಬಗೆವನಾರಾ ದಂಡಿನೊಳಗೆ (ಕಂನವಿ. ೧೧-೩೩) **ಕೊಲ್ಲಾರಭಂಡಿ**: ಸ್ವಾದು, ಗುಡ, ಶರ್ಕರಾ ಪರಿಪೂರ್ಣವಾಗಿರುವ ಸಾವಿರ ಕೊಲ್ಲಾರ ಭಂಡಿಗಳನ್ನು ತಂದು (ಕೃವಾಸ. ೧೧೯). **ಕೊಲ್ಲಾರಿಬಂಡಿ**: ಕೊಲ್ಲಾರಿ ಬಂಡಿಯೊಳ್ ತನ್ನೆಲ್ಲಾ ಪುಸ್ತಕಮನಿಡಿದುತಂದು (ದಿವ್ಯಸೂ. ೧೩-೮); ನಿಬ್ಬಣಕೆ ಹೊರಟಂತೆ ಹಾಡುಗಬ್ಬಗಳ ಕೊಲ್ಲಾರಿಬಂಡಿ (ನೆಲಮು. ೩೩). [ಕೊಲ್ಲಾರ + ಬಂಡಿ]

**ಕೊಲ್ಲಾರಭಂಡಿ** 'ಕೊಲ್ಲಾರಬಂಡಿ' ನೋ.

**ಕೊಲ್ಲಾರಿ₁** 'ಕೊಲ್ಲಾರ' ನೋ.

**ಕೊಲ್ಲಾರಿ₂** (ನಾ). "ಮುಖಂಡರು, ಹುದ್ದೇದಾರರು, ಪ್ರಮುಖರು" (ಚಿತ್ರಪಾ. ಕೋಶ): ಈ ಮೂರು ಜನ ಅಣ್ಣತಮ್ಮಂದಿರು ... ತುರು, ಕುರಿ, ಕೊಲ್ಲಾರಿ ಮುಂತಾದ ಕಂಪಳವನ್ನು ತೆರಳಿಸಿಕೊಂಡು ದಕ್ಷಿಣ ದೇಶಕ್ಕೆ ಬಂದರು (ಚಿತ್ರಪಾ. ೪). [?]

**ಕೊಲ್ಲಾರಿಚಕ್ಕಡಿ** (ನಾ). = ಕೊಲ್ಲಾರಬಂಡಿ: ಕೊಲ್ಲಾರಿ ಚಕ್ಕಡಿಗೆ ಹೂಡಿರುವ ಎತ್ತುಗಳ ಕೊರಳ ಗೆಜ್ಜೆಯ ಸರವು ಟಂಟಣಿಸಲು (ಭಾವಜೀ. ೫-೯೩). [ಕೊಲ್ಲಾರಿ$_1$ + ಚಕ್ಕಡಿ$_1$]

**ಕೊಲ್ಲಾರಿಬಂಡಿ** 'ಕೊಲ್ಲಾರಬಂಡಿ' ನೋ.

**ಕೊಲ್ಲಾರು** 'ಕೊಲ್ಲಾರ' ನೋ.

**ಕೊಲ್ಲಾಸೆ** (ನಾ). ಕೊಲ್ಲುವ ಆಸೆ: ಬಿಲ್ಲಾಸೆ ಬೇಡಂಗೆ ಕೊಲ್ಲಾಸೆ ಕಟುಗಂಗೆ ಬೆಲ್ಲದ ಆಸೆ ಬಾಲರಿಗೆ (ಸರ್ವಜ್ಞ. ೧೯೦೭). [ಕೊಲ್$_1$ + ಆಸೆ]

**ಕೊಲ್ಲಿ**, ಕೊಲ್ಲೆ$_1$ (ನಾ). ೧. ವಕ್ರವಾದುದು; ಕೊಂಕು; ಓರೆ: "ಕೊಲ್ಲಿ [ಪಾಠಾಂ. ಲ್ಲೆ]ಯೆಂದು ವಕ್ರಂ" (ಶಶಸಾ. ೨೩-೪೭೪); "ಕೊಲ್ಲಿಯೆನಲ್ ವಕ್ರಮಕ್ಕು" (ಕವಿಕಂ. ೧೯೨). 'ಕೊಲ್ಲಿನೋಟ' ಪರಾ. ೨. ಅಗಡು; ತೊಂಡು; ಪೋಲಿ: ಅಗಡನಗಡು ಮಾಡದೆ ಬೇಡಿದುದನಿತ್ತು ತೆಗೆದು ಕಟ್ಟಿದರೆ ಕಟ್ಟಿನಲಿ ಸಿಕ್ಕಿ ಬೆಗಡಗೊಳ್ಳದೆ ಕೊಲ್ಲಿಯಂತೆ ಹೇಳಿದ ಕಡೆಗೆ ಸೂಗಿಸಿನಿಂ ಬಹುದಾಗಲಿ (ಭಕ್ತಸ. III ; ೨೬-೩). 'ಕೊಲ್ಲಿಯಾವು' ಪರಾ. ೩. ಚಿಕ್ಕಪ್ರವಾಹ; ಹಳ್ಳ: ಕೆಱೆ ಕೊಲ್ಲಿಸಹಿತ (ಎಕ. III, ಮಂಡ್ಯ. ೧೧೩-೬೦ ; 713) ; ಮೂಡಾಯ್ದೋಡಿ ನೀರಿಱಿವ ತಾಱಿವ ಪೋಗಿ (ಎಕ. XVI, ಗುಬ್ಬಿ. ೭೫-೫೨; 733); ನಮ್ಮೂರ ಕೊಲ್ಲಿಯ ಹತ್ತಿರದ ಪುರಳನ್ನು ಒಂದರಿಯಾಡಿ . . . ಸೇರು ಕಟ್ಟಿಕೊಂಡು ಬಂದರು (ನಮ್ಮೂರ. ೨೦). ೪. ಭೂಮಿಯೊಳಕ್ಕೆ ನುಗ್ಗಿರುವ ಸಮುದ್ರದ ಭಾಗ: ಕೆಳಗಣ ಕೊಲ್ಲಿಯಲ್ಲಿ ನಿಂತಿರುವ ಎರಡು ಯುದ್ಧನೌಕೆಗಳ ಧ್ವಜಸ್ತಂಭಗಳು ಕಾಣುತಿವೆ (ಆರ್ಯಕ. ೧) ; ಪರ್ಷಿಯಾ ಕೊಲ್ಲಿಯಲ್ಲಿ ದೊರೆಯುವ ಕಪ್ಪುಹವಳವು ಕೆಂಪು ಹವಳಕಿಂತಲೂ ಗಟ್ಟಿ (ಪ್ರಾಣಿಶಾ. ೧೩೧) ; ಬಂಗಾಳ ಕೊಲ್ಲಿ (ರೂಢಿ). ೫. ಒಂದು ಬಗೆಯ ಪಾತ್ರೆ (?): ಮತ್ತೆ ಕಲಸುತ ಪಡಗದಿಂ ಘಟದಿ ಕೊಡಗಳಿಂ ಮತ್ತೆ ಕೊಪ್ಪರಿಗೆಯಿಂ ತಾಂಬ್ರ ಕೊಲ್ಲಿಯಿಂ (ಲಿಂಗಪು. ೩೩-೧೪). **ಕೊಲ್ಲೆ$_1$**: ೧. 'ಕೊಲ್ಲೆನೋಟ' ಪರಾ. ೬. ಮೂಲೆ; ತುದಿ: ಸಭಾಸಾಗರದ ಕಡೆಯ ಕೋಹಿನ ಕೊಲ್ಲೆಯೊಳ್ ನಿಂದು (ಚಬಪು. ೩೦-೧೫).

[ದೇ. ‖ ಮಲ. ತುಳು. ಕೊಡ. ಕೊಲ್ಲಿ ; ತೆಲು. ಗೊಲ್ಲಿ]

**ಕೊಲ್ಲಿಆವು** 'ಕೊಲ್ಲಿಯಾವು' ನೋ.

**ಕೊಲ್ಲಿತನ** (ನಾ). ಒರಟುತನ; ವಕ್ರತೆ; ತುಂಟಾಟ: ಇಂದೀಶ ಕೊರ್ವಿಯ ಕೊಲ್ಲಿತನವನು ತಳೆದು ನನ್ನೊಳು ಸೊಲ್ಲನೊಂದನು ಸೊಲ್ಲಿಸದೆ ಬಿಗಿವಿಡಿದೆ ಮೌನವನು (ಅಂಜಚ. ೩-೪೮). [ಕೊಲ್ಲಿ + -ತನ]

**ಕೊಲ್ಲಿನೋಟ**, ಕೊಲ್ಲೆನೋಟ (ನಾ). ಓರೆನೋಟ; ಕಡೆಗಣ್ಣೋಟ; ಕಟಾಕ್ಷ: ಕವಿರಾಜಮಲ್ಲಂಗೆ ಕೊಲ್ಲಿನೋಟಮಂ ಪಸಾಯಮಿತ್ತು ಲೀಲಾವತಿಯಿಂತೆಂದಳ್ (ಲೀಲಾವ. ೧೩-೫೯ವ); ಸಲ್ಲಲಿತಾಂಗಿಯ ಕೊಲ್ಲಿನೋಟದೆ ಸಿಲ್ಕಿ ತಲ್ಲಣಿಪುದು ವಿಟನಿಕರ (ಅಂಜಚ. ೩-೫೭); ತಮ್ಮ ಚೆಲ್ಲೆಗಂಗಳ ಕೊಲ್ಲಿನೋಟದ ವಿಳಾಸಮಂ ಬೀಱುತ್ತೆ (ನಾಗಕು. ೨-೨೫ವ) ; ಬೆಳುನೋಟವಾವಾಗ ಬಿಱುನೋಟವಾವಾಗ ಸೆಳೆನೋಟವಾವಾಗ ಸೆಳೆನೋಟ ಕೊಲ್ಲಿನೋಟಗಳು . . . ಅವಾಗವೆಂಡೊಳು ನೋಟವೆರಸಿ ಹಾಡಿದಳು (ಭರಚ. ೧೧-೩೧). **ಕೊಲ್ಲೆನೋಟ**: ಹುಲ್ಲೆಗಂಗಳ ಕೊಲ್ಲೆನೋಟದ ವನಿತೆಯರೆಲ್ಲ ನೋಡುತ್ತಲಿರಲವನ (ಜಿನರಾ. ೯-೧೨೧). [ಕೊಲ್ಲಿ + ನೋಟ]

**ಕೊಲ್ಲಿಯಾವು**, ಕೊಲ್ಲಿಆವು (ನಾ). ಅಗಡು ಹಸು; ತೊಂಡು ಆವು: ಕೊಲ್ಲಿಯಾವಿನಲ್ಲಿ ಸಲ್ಲೀಲೆಯನಜಿಸುವಂತೆ (ಮೋಳಮಾ. ೨೦೦-೭೪೬). **ಕೊಲ್ಲಿಆವು**: ಕೊಲ್ಲಿಆವಿಂಗೆ ಕಾಲ ಕಟ್ಟುವರಲ್ಲದೆ ಮೊಲೆಯ ಕಟ್ಟಿದರುಂಟೆ ಅಯ್ಯಾ (ಅಜಿಮಾ. ೨೬೫). [ಕೊಲ್ಲಿ + ಆವು]

**ಕೊಲ್ಲಿವಲೆ** (ನಾ). ಒಂದು ಬಗೆಯ ಬಲೆ: ಗೂಡುವಲೆ ಜಲ್ಲೆವಲೆ ಕೊಲ್ಲಿವಲೆ ಕರಿಯ ಜವಿವಲೆ ಮುಸುಕುವಲೆ ಬಿತ್ತರದ ನೇಣ್ವಲೆ (ಸಾಳ್ವಭಾ. ೫-೧೯). 'ಕೋಲ್ವಲೆ' ಪರಾ. [ಕೊಲ್ಲಿ? + ಬಲೆ$_1$]

**ಕೊಲ್ಲಿಸು** 'ಕೊಲಿಸು' ನೋ.

**ಕೊಲ್ಲು** 'ಕೊಲ್$_1$' ನೋ.

**ಕೊಲ್ಲುಗ** (ನಾ). ಕೊಲ್ಲುವವನು; ಕೊಲೆಗಾರ; ಕಟುಕ: ಕೆತ್ತುಗ ಕಾಟುಗ ಕೊಲ್ಲುಗ [ಪಾಠಾಂ. ಪೋಲುಗ, ಹೊಲ್ಲುಗ, ಹೊನ್ನುಗ, ಹುಲ್ಲುಗ, ಪೋಲಿಗ]ನೆಂಬುದು ಎನ್ನ ಹೆಸರಯ್ಯ (ಬಸವ. ೩೩೫).

[ಕೊಲ್ಲು (< ಕೊಲ್$_1$) + -ಗ$_3$]

**ಕೊಲ್ಲುಗೊಲೆ**, ಕೊಲ್ಲಗೊಲೆ (ನಾ). ಕ್ರೂರವಾದ ಕೊಲೆ; ಕಗ್ಗೊಲೆ: ಚೆಲ್ಲವಾಡುತ ದನುಜಸೇನೆಯ ಕೊಲ್ಲುಗೊಲೆಯನು ಕೊಂದು ಕೂಗುತ (ಕೌಶಿರಾ. ೨೦-೩೯). **ಕೊಲ್ಲಗೊಲೆ**: ಪಾಪಿ ತಕ್ಷಕಂ ವಿಪ್ರನಂ ಮರಳಿಚಿ ಕೊಲ್ಲಗೊಲೆಯಂ ಕೊಂದನಯ್ಯನಂ ವಿಪ್ರಸುತನೆಲ್ಲವನು ಕೊರಳ ಕೊಯ್ದವನೆಂದು ಕಿಡಿಗೆದರಿ ಹಲ್ಲ ಕಡಿದಾಡಿದನು (ತುರಂಗ. ೬-೨೫).

[ಕೊಲ್ಲು (< ಕೊಲ್$_1$) + ಕೊಲೆ$_2$. / ತಮಿ. ಕೊಲ್ಲುಕ್ಕೊಲೈ]

**ಕೊಲ್ಲೆ$_1$** 'ಕೊಲ್ಲಿ' ನೋ.

**ಕೊಲ್ಲೆ$_2$** (ನಾ). ರೆಂಬೆ; ಕೊನೆ; ಕೊಂಬೆ: ಪಣ್ತ ಮಾವುರದ ಕೊಲ್ಲೆಯೊಳು ದಂಪತಿಗಳೆರಡು ಗಿಳಿಗಳು ಫಲವ ಮೆಲ್ಲುತಿರಲು (ಪ್ರೌಢರಾ. ೫-೨೭) ; ಅಗಿಗಳನ್ನು ಇಲ್ಲವೆ ಕೊಲ್ಲೆಗಳು ಅಥವಾ ಅಂಟುಗಳನ್ನು ತರಿಸಿ (ಕೃಷಿಪ್ರ. ೧೪೩).

**ಕೊಲ್ಲೆನೋಟ** 'ಕೊಲ್ಲಿನೋಟ' ನೋ.

**ಕೊಲ್ಲೈಸು** (ಕ್ರಿ). ಓರೆಯಾಗು; ಪಕ್ಕಕ್ಕೆ ಸರಿ; ಹೊರಳು: ಅಲ್ಲಿದ್ದ ಕಂಭವ ತಾಗೆಂದು ಬಿಡೆ ಕಂಭದಲ್ಲಿ ನೆಟ್ಟಿತು ಬಾಣ ಬಂದು ಕೊಲ್ಲೈಸಿ (ಭರಚ. ೨೪-೬೧). [ಕೊಲ್ಲೆ$_1$ (< ಕೊಲ್ಲಿ) + -ಇಸು$_3$]

**ಕೊಲ್ಸೇಡುಗೊಳ್** (ಕ್ರಿ). (?): ನೆವದಿಂ ಕಾಯ್ದು ಕನಲ್ದು ಪೋದಿನಿಯನಂ ಕಣ್ಮುಟ್ಟೆ ನೋಳ್ ಕಂಡು ಕೈರವಪತ್ರಾಯತನೇತ್ರೆ ಕೀಲಿಸಿದವೋಲ್ ಕೊಲ್ಸೇಡುಗೊಂಡಳ್ ಚಳತ್ಪವನಾಪಾತಪತಾಕೆವೋಲ್ ನಡುಗಿದಳ್ (ಅನಂಪು. ೮-೨೨).

[P ಇದು 'ಕೊಳ್ಸೇಡುಗೊಳ್' ಎಂಬುದರ ಅಪಲಿಖಿತವಿರಬಹುದು]

**ಕೊವಯ** (ನಾ). ಒಬ್ಬಾತನ ಹೆಸರು: ಕೊಳವರ ಕೊವಯನ್ ಗೌತಮಸ್ವಾನಕೆ ಕೊಟ್ಟದು ಸೊಡರುಂ ಸಾಲೆಯುಂ (ಎಕ. VII, ಶಿಕಾರಿ. ೪೫-೫೨ ; 890). [?]

**ಕೊವರ$_1$**, ಕುವರ$_1$ (ನಾ). ಕುಂಬಾರ: "ಕೊ[ಪಾಠಾಂ. ಕು]ವರಂ ಬಾಂಬಂ ಕುಂಬಜಂ" (ಚತುನಿ. ೧೦೪). **ಕುವರ$_1$**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [?]

**ಕೊವರ$_2$** 'ಕುವರ$_2$' ನೋ.

**ಕೊವರಪೆ** (ನಾ). ಒಂದು ಸ್ಥಳದ ಹೆಸರು: ಕೊವರಪೆಯ ಚಂಪಯ್ಯನುಂ ಲೋಕಯ್ಯನುಂ ಕೊಟ್ಟಾರದ ಪಾರಪುಲಿಯುಂ (ಎಕ. XII, ಶಿರಾ. ೨೮-೫೦ ; 943). [?]

**ಕೊವರಾಚಾರಿ** (ನಾ). ಒಬ್ಬಾತನ ಹೆಸರು: ಅಕ್ಕರಂಬೊಯ್ದ ಕೊವರಾಚಾರಿಯ ಮಗಂ (ಎಕ. IX, ಹೊಸಕೋ. ೧೧೧-೯ ; 997).

[ಕೊವರ$_2$ (< ಕುವರ$_2$) + ಆಚಾರಿ]

**ಕೊವರಿ** 'ಕುವರಿ' ನೋ.

**ಕೊವರೆಯ** (ನಾ). ಒಬ್ಬಾತನ ಹೆಸರು: ಗವುಣ್ಡನ ಮಗ ಕೊವರೆಯ . . . ಪಲರನಿಱಿದು ಸ್ವರ್ಗಾಲಯ ಪೊಕ್ಕನ್ (ಎಕ. X, ಚಿಂತಾಮ. ೩೬-೩ ; 885). [ಕೊವರ$_2$ (< ಕುವರ$_2$) + ಅಯ$_1$ (< ಅಯ್ಯ$_1$)]

೨. ಬಂಧಿಸಲ್ಪಡು; ಕಟ್ಟುವಡೆ : ಎಡೆಗಿಱಿದಬಲೆಯ ಪೊಲೆಯಿಟ್ಟೆಡೆಯೊಳ್ ಕೊಳಗೊಂಡು ಸಿಂದುವಲ್ಲದೆ ನುಸುಳಲ್ ಪಡೆಯವು ಮದನಾಸ್ತ್ರಂಗಳ್ (ಅರ್ಧನೇ. ೩-೨೩). [ಕೊಳ್$_{2}$ + ಕೊಳ್$_{1}$]

**ಕೊಳಂಜ,** ಕೊಳಂಜು (ನಾ). ಒಂದು ಬಗೆಯ ಮರ; ಗಂಧಮೂಲ: "ಮಂಜಿಷ್ಠ=ಕೊಳಂಜ" (ಗಂಗಾಮು. ೨೪೬) **ಕೊಳಂಜು :** "ಯೋಜನಪರ್ಣಿ, ಯೋಜನವಲ್ಲಿ = ಕೊಳಂಜು" (ಗಂಗಾಮು. ೨೬೮).
[< ಸಂ. ಕುಲಂಜ]

**ಕೊಳಂಜನ** (ನಾ). = ಕೊಳಂಜ: "ಅಷ್ಕ=ಕೊಳಂಜನ" (ಗಂಗಾಮು.೨೫).
[< ಕುಲಂಜನ]

**ಕೊಳಂಜು** 'ಕೊಳಂಜ' ನೋ.

**ಕೊಳಂಬ,** ಕೊಳಂಬು, ಖೊಳಂಬ (ನಾ). ೧. ಕೆಲಸ ನಿಂತು ಹೋಗುವಿಕೆ, —ತಡೆದು ನಿಲ್ಲುವಿಕೆ : "ಮೂರಾಬಟ್ಟೆ; ಕೆಲಸ ಕೆಡುವುದು ; ಕೆಲಸ ಬಂದಾಗುವುದು ; ತೊಂದರೆ" (ಜಾನಕೋ. ೪೨). **ಕೊಳಂಬು :** "ತೊಂದರೆ; ಹರಕತ್ತು" (ಗಂಗಾಮು.೧೦೩). **ಖೊಳಂಬ.** 'ಖೊಳಂಬಿಸು' ಪರಾ. [← ಮರಾ. ಖೋಳಂಬ, ಖೋಳಂಬಾ]

**ಕೊಳಂಬು** 'ಕೊಳಂಬ' ನೋ.

**ಕೊಳಂಬೆ** (ನಾ). (?) : ದೇವ ಮತ್ತಮಾಂಸಮದುೞಿಯ ಪಡಹದ ಪಿಳುಕುೞಿಯ ಕೊಳಂಬೆಯ ಕೂಕಂಬದ ಕೋಡಂಬೆಯ ಮುಡಿಗೆಯ ತಾಣಂಗಳೊಳ್ ಮೇದು ಮಯ್ವೆರ್ಚಿ ಸೊವಡಿಂಗೆ ಸೋಲ್ತು (ಅನಂಪು. ೧೧-೩೯ವ). [?]

**ಕೊಳಕ** 'ಕೊಟಕ' ನೋ.

**ಕೊಳಕಟ್ಟೆಹುಲ್ಲು** (ನಾ). ಒಂದು ಬಗೆಯ ಹುಲ್ಲು: (ವ್ಯೆಔಗ. ೨೦-೩೫೫). [? + ಹುಲ್ಲು (< ಪುಲ್)]

**ಕೊಳಕರಣಿ** 'ಕುಲಕರಣಿ' ನೋ.

**ಕೊಳಕಿ** (ನಾ). ಅಶುಚಿಯಾದ ಹೆಂಗಸು; ಹೇಸಿಯಾದ ಹೆಣ್ಣು : ಆವಳು ಶುದ್ಧ ಕೊಳಕಿ (ರೂಢಿ).
[ಕೊಳಕು (< ಕೊಟಕು) + -ಇ$_{2}$]

**ಕೊಳಕು** 'ಕೊಟಕು' ನೋ.

**ಕೊಳಕುತನ** (ನಾ). ಕೊಳೆಯಾಗಿರುವಿಕೆ ; ಹೇಸಿಗೆ ; ಮಲಿನತೆ : ಹಳ್ಳಿಯ ಜನತೆಯಲ್ಲಿ ಹಬ್ಬಿರುವ ಅಜ್ಞಾನ, ಅಂಧಕಾರ, ಕೊಳಕುತನವನ್ನು ನೀಗಿ (ಚತಸ. ೧೦೬). [ಕೊಳಕು (< ಕೊಟಕು) + -ತನ]

**ಕೊಳಕುನಗೆ** (ನಾ). ಜುಗುಪ್ಸೆಯನ್ನುಂಟುಮಾಡುವ ನಗು ; ಹೇಸಿಗೆಯನ್ನು ಹುಟ್ಟಿಸುವ ನಗೆ : ಜನರನ್ನು ನಗೆಗೀಡು ಮಾಡಲಿಕ್ಕೆ ಕೊಳಕುನಗೆ ನಗುವುದನ್ನು ಅವನರಿಯನು (ನಿರಾಘ ೬೬).
[ಕೊಳಕು (< ಕೊಟಕು) + ನಗೆ]

**ಕೊಳಕುನಾರು** (ನಾ). ಒಂದು ಬಗೆಯ ಸಸ್ಯ : ಸಾಲುಪರ್ಣಿ, ಕೋಳಕುನಾರು (ವ್ಯೆಔಗ ೨೯-೫೬೧). [?]

**ಕೊಳಕುನಾಱು** (ಕ್ರಿ). ಕೆಟ್ಟವಾಸನೆಯುಂಟಾಗು ; ಗಬ್ಬುನಾರು : ಕೊಳಕುನಾಱುವ ದುರ್ವ್ರಣಂಗಳು (ಬಸಪು. ೪೦-೬೯).
[ಕೊಳಕು (< ಕೊಟಕು) + ನಾಱು$_{1}$]

**ಕೊಳಕುನುಡಿ$_{1}$** (ಕ್ರಿ). ಹೊಲಸು ಮಾತನಾಡು ; ಹೀನವಾಗಿ ನುಡಿ: "ಹೇಗೆ ಮಾತನಾಡಿಸುತ್ತದೆ ನೋಡು ನಾಚಿಕಿಲ್ಲದ್ದು !" ಶೀನನು ಕೊಳಕು ನುಡಿದನು (ನಿರಾಘ. ೯೦). [ಕೊಳಕು (< ಕೊಟಕು) + ನುಡಿ$_{1}$]

**ಕೊಳಕುನುಡಿ$_{2}$** (ನಾ). ಹೊಲಸು ಮಾತು ; ಹೀನನುಡಿ : ಅವನ ಕೊಳಕುನುಡಿ ಕೇಳಿ ಬಹಳ ಬೇಸರವಾಯಿತು (ರೂಢಿ).
[ಕೊಳಕು (< ಕೊಟಕು) + ನುಡಿ$_{2}$]

**ಕೊಳಕುಮಂಡಲ** (ನಾ). ಒಂದು ಬಗೆಯ ಹಾವು ℙ ತನ್ನ ವಿಷದಿಂದ ಶರೀರವು ಕೊಳೆತು ಬೀಳುವಂತೆ ಮಾಡುವ ಹಾವು : ಅವರಿಗೆ ಕೊಳಕುಮಂಡಲ ಕಚ್ಚಿದೆ (ರೂಢಿ).
[ಕೊಳಕು (< ಕೊಟಕು) + ಮಂಡಲ]

**ಕೊಳಕುಮಾತು** (ನಾ). = ಕೊಳಕುನುಡಿ$_{2}$ : ಕುಹಕರ ಕೊಂಕು ಕೊಳಕುಮಾತು (ಸಾಹಿವಿ. ೧೧೫).
[ಕೊಳಕು (< ಕೊಟಕು) + ಮಾತು$_{1}$]

**ಕೊಳಕುವೃತ್ತಿ** (ನಾ). = ಕೊಳಕುತನ : ಬಡತನ, ಕೊಳಕುವೃತ್ತಿ, ಅವಿದ್ಯೆ ಇವುಗಳೇ ಅವರು ಜೀತಗಾರರಾಗುವುದಕ್ಕೆ ಕಾರಣ (ಹುಟ್ಟಹ. ೬೬). [ಕೊಳಕು (< ಕೊಟಕು) + ವೃತ್ತಿ]

**ಕೊಳಕೆ,** ಕೊಳ್ಕೆ (ನಾ). (ಕರಾ) ವರ್ಷದಲ್ಲಿ ಭತ್ತದ ಮೂರನೆಯ ಬೆಳೆ : ಸುಗ್ಗಿ ಮೇಲೆ ಕೊಳಕೆ ; ಮಗ್ಗಿ ಮೇಲೆ ಲೆಕ್ಕ (ಗಾದೆ) ; ಕುಪ್ಪನ ನಂಬಿ ಕೊಳಕೆ ಬಿತ್ತಿದೆ ; ಕುಪ್ಪ ಓಡಿಹೋದ, ಕೋಳಕೆ ಹೊತ್ತಿಹೋಯಿತು (ಗಾದೆ). **ಕೊಳ್ಕೆ :** (ಕ). [← ತುಳು. ಕೊಳಕೆ, ಕೊಲಕೆ]

**ಕೊಳಕೊಳಕೆ** 'ಕೊಳಗುಳಿಕೆ' ನೋ.

**ಕೊಳಗ$_{1}$** (ನಾ). ೧. ಒಂದು ಅಳತೆ ; ನಾಲ್ಕು ಬಳ್ಳಗಳ ಪರಿಮಾಣ : "ಬಳ್ಳಮವು ನಾಲ್ಕನಲು ಕೊಳಗಂ" (ಮಂಗರಾ. ೧೦೪-೧೧) ; ಸಲಗೆ ಎರಡು ಕೊಳಗ ಹತ್ತು (ಎಕ. VI, ಕಡೂರು. ೨-೧೮ ; ಸು. 1110) ; ಮಾನದ ತೋರಿಹ ಆವಿಂಗೆ ಕೊಳಗದ [ಪಾಠಾಂ. ಕೊಳದ] ತೋರಿಹ ಕೆಚ್ಚಲು (ಅವಚಂ. ೧೨-೪೮) ; ಬೇಳೆವೊಂಮನರೆಬೆಲ್ಲ ಮೂರು ತುಪ್ಪವೊಂದು ಕೊಳಗ (ಎಕ. XI, ಮೊಳಕಾ. ೩೧-೯ ; 1386) ; ಆಯುಷ್ಯರಾಶಿಯನಳೆವ ಕೊಳಗವು ಸೂರ್ಯನೆಂಬುದ ತಿಳಿದು (ಕುವ್ಯಾಭೀ. ೪-೨೧). ೨. ಲೋಹದ ದೊಡ್ಡ ಪಾತ್ರೆ : ಪಿರಿದೆನಿಸಿದ ಕೊಳಗದಿಂದ ಮುಂ ತಾಂ ಕೊಂಡಂತಿರೆ ಪರರ್ಗೆ ಕುಡಿಸಿ (ಸಮುಪ. ೫-೪೫). 'ಕೊಳಗದಪ್ಪಲೆ' ಪರಾ. ೩. ಲಿಂಗದ ಮೇಲೆ ಮುಚ್ಚುವ ಮುಖವಾಡ : ಒಟ್ಟು ಕಾಜರಿಗೆ ಅಜುವಣ ಪತ್ತರಿಂಗೆ ಹಂನೆರಡು ಹೊಂನ ಮರಿಯಾದೆ ಕೋಲು ಕೊಳಗದೇವರಿಗೆ (ಎಇ. XXIII, ೩೦-೬೦ ; 1256). ೪. ಶಿವಿಯ ಒಂದು ಆಭರಣ (?) : ಅಂಗದ ಜೋಡು ವಜ್ರಾಂಗಿ ಕೊಳಗ ಸೀಸಕ ಭುಜಯುಗದ ರಕ್ಕೆ ಸುಂಡಾಯ್ತು ಕೈದುಗಳ್ ತುಂಬಿ ಬಂಡಿಗಳಗಣಿತಂ ಬಂದುವು (ಜಬಪು. ೪೬-೪೪).
[ದೇ. ‖ ತಮಿ. ಕುಳಗ ; ಮಲ. ತುಳು. ಕೊಳಗ ; ತೆಲು. ಕೊಲ]

**ಕೊಳಗ$_{2}$** 'ಕೊಳಗು' ನೋ.

**ಕೊಳಗೊಳ್** (ಕ್ರಿ). ಕೊಳಗವನ್ನು ತೆಗೆದುಕೊಳ್ಳು, —ಹಿಡಿ : ಕೊಳಗು[ಗ]ಕೊಂಡು ಅಳೆದು ಮೂಗುಳ ಜೋಳಮಂ ಮೆಟ್ಟಗಟ್ಟಿ ತಂದಿಳುಹೆ (ಸಿಂಗಿರಾ. ೯-೮). [ಕೊಳಗ$_{1}$ + ಕೊಳ್$_{1}$]

**ಕೊಳಗದಪ್ಪಲೆ,** ಕೊಣದಪ್ಪಲೆ, ಕೊಳದಪ್ಪಲೆ (ನಾ). ಕೊಳಗದ ಆಕಾರದಲ್ಲಿರುವ ಪಾತ್ರೆ : ಒಂದು ಕೊಳಗದಪ್ಪಲೆಗೆ ಎಣ್ಣೆ ತುಂಬಿ (ನನ್ನೂರು. ೩೦೨) ; ಕೊಳಗದಪ್ಪಲೆಯನ್ನು ಹೊತ್ತ ಬರುಗಾಲಿನ ಹೆಂಗಸರಿಬ್ಬರು . . . ಹೊರಗೆ ಬಂದರು (ಪುನರು. ೬೪). **ಕೊಣದಪ್ಪಲೆ :** ಒಂದು ಸಣ್ಣ ಕೊಣದಪ್ಪಲೆಯನ್ನು ಮೆಲ್ಲಗೆ ಈಚೆಗೆ ತೆಗೆದನು (ನಾಲ್ಕಮ. ೬೦). **ಕೊಳದಪ್ಪಲೆ :** ಅಮ್ಮಯ್ಯ ಒಬ್ಬರೇ ಕೊಳದಪ್ಪಲೆಯಲ್ಲಿ ಹ್ಯಾಗೆ ನೀರು ತಂದಾರು ? (ಚಂಗಾಳ್ವ. ೮).
[ಕೊಳಗ$_{1}$ + ತಪ್ಪಲೆ]

**ಕೊಳಗದಾಯ** (ನಾ). ಒಂದು ಬಗೆಯ ತೆರಿಗೆ ; ವ್ಯಾಪಾರದಲ್ಲಿ ಕೊಳಗದ ಮೇಲೆ ಹಾಕುವ ತೆರಿಗೆ : ಮತ್ತಂ ಕೊಳಗದಾಯ ಮಳಿಯಡಕೆಯುಂ ನಡುವುದು (ಸೌಇಇ. IX-i, ೧೫೩-೬೧ ; 1083) ;

ಹೇಜುಂಗೆ ಕಾಹೋ ದೇಸಿಯ ಹೇಜುಂಗೆ ಅರವನೆ ಕೊಳಗದಾಯ ಕೊಟ್ಟಲ್ಲಿ ಒಂದು ಸೇರೆಕೊಂಡಲ್ಲಿ (ಕಇಅ. ೩೧–೪೨–೨೦ ; 1116) ; ಚಿನ್ತಾಮಣಿ ಪುರದಲ್ಲಿಯೆ ಕೊಳಗದಾಯಮಂ ಸಲೆ ಕೊಟ್ಟಂ (ಕಇಅ. ೧೯–೧–೭೩ ; 1127). [ಕೊಳಗ$_1$ + ದಾಯ]

**ಕೊಳಗವಂತ** (ನಾ). ಒಂದು ಜನಾಂಗದ ಹೆಸರು (?) : ಹಗರೆಯಿಂ ಮೂಡ ಕಂಬ ೨೦೦ ಕೊಳಗವಂತ್ತ ಸೇ[ವೆ]ಸೊಟಗೆ ಹೇಜುಂಗೆ ನೂಜಿಳೆ ಗೊಡ್ಡ ಗೌತಳಗಳು ಬಿಟ್ಟ ಆಯ (ಸೌಇಇ. IX–i, ೩೧೬–೪೫; 1223). [?]

**ಕೊಳಗಾಹಿ** (ನಾ). ಕೊಳವನ್ನು ಕಾಯುವವನು ; ಸರೋವರದ ಕಾವಲುಗಾರ: ಕುಬೇರನ ಬೀಡಿನಗ್ಗದ ಬಂಟರೇ ಕೈಮಾಡಿರ್ಪ್ಪೆಕೊಳಗಾಹಿಗಳು ಘಡ ಹಿಂಗಬೇಡೆನುತ (ಕುವ್ಯಾಅ. ೧೦–೫೨). [ಕೊಳ$_2$ + ಕಾಹಿ]

**ಕೊಳಗು**, ಕೊಣಗು, ಕೊಳಗ$_2$ (ನಾ). (ಪಶುಗಳ) ಗೊರಸು ; ಖುರಪುಟ: "ಖುರಃ, ಶಫಃ – ಈ ೨ ಕೊಳ[ಪಾಠಾಂ. ಣ]ಗು" (ಹಲಾಯು. ೭೨–೨೮೭) ; ಕವಿಲೆಯಾ ಕೋಡುಂ ಕೊಳಗುಮಂ ಪಞ್ಚರತ್ನಂಗಳೊಳ್ಕಟ್ಟಿಸಿ (ಸೌಇಇ. XI–i, ೪೧–೫೨ ; 969) ; ಭೂತಳಮಂ ಕೊಳಗಿಂ ಪರಡುತ್ತುಂ ಮನಂ ವಾಯುಗೆ ಮಿದಿಲ್ದು ಕೆಯ್ಯಿಕ್ಕುವ ಘೋರ್ಕಾಣೆಗಳಂತೆ (ಅರ್ಧನೇ. ೪–೧೨೩ ವ); ಹಸುವಿನ ಕೊಳಗು ಹಸುವಿನ ಕೋಡು ಹಸುವಿನ ಚರ್ಮ ಯಿದಂ ಧೂಪವಿಕ್ಕುವುದು (ಬಾಲಚಿ. ೧೩೩–೪) ; ಕೊಂಬು ಕೊಳಗು ನಿಮಗೆಂಬುತ (ಭೈರಪೇ. ೫–೮೮) ; ಪೊಳೆವ ಕೊಳಗಿನ ಜಾನುಜಂಘೆಯ ತೆಗೆತೆಗೆದಿಡುತೆ ನಲಿದು ನರ್ತಿಸುತೆ (ಶ್ರೀರಾಮಾ. ೨೩೧–೯೫) ; ಕೋಣನ ಮುಂದೆ ಕಿನ್ನರಿ ಬಾರಿಸಿದರೆ ಕೊಳಗು ಯಾವುದು ? ಕೊಂಬು ಯಾವುದು ಎಂದಿತಂತೆ (ಗಾದೆ). **ಕೊಣಗು** : "ಖುರಃ, ಶಫಃ – ಈ ೨ ಕೊಣ[ಪಾಠಾಂ. ಳ]ಗು" (ಹಲಾಯು. ೭೨–೨೮೭). **ಕೊಳಗ$_2$**: ಹೊನ್ನ ಕೋಡಿನ ಕೊಳಗಗಳ . . . ಕಪಿಲೆಗಳನು ಕೊಟ್ಟನು (ನಿಭಾಗ. ೧೦–೮೩–೩೧); ಈ ಧರಿತ್ರಿಯ ಕಾಲು ಕೊಳಗದೊಳ್ಕೊರ್ಕೇಧದಿಂ ಬಗೆದೀಕ್ಷಿಸುವದೆನಲ್ ಹರಿಯು ರಂಜಿಸಿತು (ಅಚಾರ್ವಿ. ೧೬–೧೨) ; ನಡೆಗೆಟ್ಟು ತಡೆವಟ್ಟು ಕೊಟ[ಳ]ಗಂ ಪಟಗದ ನೆರೆಯ ಮಜಿಯುಜಿಯೊಳ್ ತಾಂಟಿದತ್ತು (ರಾಮಾಶ್ವ. ೧೩೫–೨೩) ; ಕುದುರೆಯ ಕೊಳಗಗಳ ಅಸ್ಪಷ್ಟವಾದ ಸಪ್ಪಳವು ಅಕೆಗೆ ಕೇಳತೊಡಗಿತು (ಪದ್ಮಸ. ೧೬).
[ದೇ. ‖ ತಮಿ. ಮಲ. ಕುಳಮ್ಬು ; ಕೊಡ. ಕೊಳ್ಕ]

**ಕೊಳಗುಣಕೆ** 'ಕೊಳಗುಳಿಕೆ' ನೋ.

**ಕೊಳಗುಪ್ಪೆ** (ನಾ). ಒಂದು ಬಗೆಯ ತೆರಿಗೆ: ಕೊಳಗುಪ್ಪೆ ಪೆಚ್ಚವಸಿ ಅರ್ದ್ಧಂ ಕಾನಸೊಪ್ಪಿನರ್ದ್ಧಂ ವಾರಲರ್ದ್ಧಂ ಕರ್ಸಪಿಣ್ಡಂ ನೂಜುಪ್ಪತ್ತೈಣ್ಬು . . . ಇದು ಗೋಪಾಲದೇವರಾ ದತ್ತಿ (ಎಇ. XXI, ೨೯–೧೪ ; 8ನೆಯ ಶತ). [< ಕೊಳಗ$_1$ + ಕುಪ್ಪೆ$_1$]

**ಕೊಳಗುರು** (ನಾ). ಒಂದು ಊರಿನ ಹೆಸರು : ಕೊಳಗುರ ದೇಗುಲಕ್ಕೆ ಕಣ್ಣಪೀಟಪಣೆಯುವಟ್ಟಮಿನಿತುವಂ ಕೊಟ್ಟು ಪ್ರತಿಟ್ಟೆಗೆಯಿಸಿದ (ಸೌಇಇ. XI–i, ೩೫–೧೪ ; 933). [?]

**ಕೊಳಗುಳ** 'ಕೊಳ್ಗುಳ' ನೋ.

**ಕೊಳಗುಳಿಕೆ**, ಕೊಳಕೊಳಕೆ, ಕೊಳಗುಣಕೆ, ಕೊಳಗೊಳಿಕೆ, ಕೊಳವಳಿಕ, ಕೊಳವಳಿಕೆ, ಕೊಳುಗುಳಿಕ, ಕೊಳುಗುಳಿಕೆ, ಕೊಳ್ಕುಳಿ, ಗೊಳಗುಳಿಕೆ, ಗೊಳಗೊಳಕೆ, ಗೊಳಗೊಳಿಕೆ (ನಾ). ಒಂದು ಬಗೆಯ ಮುಳ್ಳುಗಿಡ; ಇಕ್ಷುರ: ನೆಜಿವೊರಸುಗೆ ಕಾವಲಿಯುಂ ಕಿಱುಕುಸಲೆಯ ಬೇರೊಳಕ್ಕೆ ಕೊಳಗುಳಿಕೆಲೆಯೊಳ್ (ಲೋಕೋಪ. ೮–೯); ಕರ್ಪೂರದೊಂಡೆಯ ಕನಕದವೊಪ್ಪುವ ಕೊಳಗುಳಿಕೆಯೆ ಅಹು ಲಿ(ರಿ)ಯ (ಖಮದ. ೧೪–೬೧) ; ಕೊಳಗುಳಿಕೆಯ ಪುಣಸೆಯ . . . ಎತ್ತುನಾಲಗೆ ಯೆಲೆಯ (ಅಶ್ವಶಾ. ೧೨–೧೬). **ಕೊಳಕೊಳಕೆ** : ಕಿರಿನೆಲ್ಲಿಯ ಸೊಪ್ಪು, ಕೊಳಕೊಳಕೆ ಸೊಪ್ಪು, ಹಾಲಂಗೊಳಲೇ ಸೊಪ್ಪು ಇಷ್ಟು ಸೊಪ್ಪನ್ನು ಸಮಾನಂಗೊಂಡು (ವಿವೈವಿ. ೧೦೫). **ಕೊಳಗುಣಕೆ** : "ಇಕ್ಷುಗಂಧಾ, ಕಾಂಡೇಕ್ಷು, ಕೋಕಿಲಾಕ್ಷಃ, ಇಕ್ಷುರಃ, ಕ್ಷುರಃ–ಈ ೫ ಕೊಳಗುಣಕೆ" (ನಾಚಿರಾ.೧೧೦). **ಕೊಳಗೊಳಿಕೆ** : "ಕೊಳಗೊಳಿಕೆಯಿಕ್ಷುರಕ" (ಮಂಗರಾ. ೪೦–೩೦). **ಕೊಳವಳಿಕ** : "ಪಿಕಾಕ್ಷಃ – ಕೊಳವಳಿಕ" (ಒಷಧ. ೯೭) ; ಕೊಳವಳಿಕನ ಕಷಾಯದಲಾಗಲಿ ಮೋಣಳೆಯಿಂದಾಗಲಿ ಮರ್ದಿಸಿ (ಸಾಳ್ವಸಾಂ. ೨೦). **ಕೊಳವಳಿಕೆ** : "ಕೋಕಿಲಾಕ್ಷಃ – ಕೊಳವಳಿಕೆ, ಕರಿಯ ಕಬ್ಬು" (ಒಷಧ. ೪೧) ; ಕೊಳವಳಿಕೆಯ ಕಷಾಯದಿ ಮಧುವಿಂ ಕೊಳ್ಳೆ ಗಳಲನೆ ಧನುರ್ವಾತ ಕೆಡುಗು (ಸಾಳ್ವಸಾಂ. ೨೦) ; ತುಂಬಿವಿಂಡು ಕೊಳವಳಿಗೆ ಕೂತರ್ಜಿಗುವುದೆ (ಗೀತಗೋ. ೬೫–೩). **ಕೊಳುಗುಳಿಕ** : "ಶೃಂಖಲಾ – ಕೊಳು(ವ)ಗುಳಿಕ" (ಒಷಧ. ೧೭೦); **ಕೊಳುಗುಳಿಕೆ** : "ಇಕ್ಷುಗಂಧೆ" (ನಾಚಿರಾ. ೬). **ಕೊಳ್ಕುಳಿ** : ತಗರಂ ಕೊಳ್ಕುಳಿ [ಪಾಠಾಂ. ಕೊಗ್ಗಿಯು] ನುಗ್ಗಿ ಕಗ್ಗೊಜಲೆ ತೊಟ್ಟಲ್ ಸೂರಣಂ (ಲೋಕೋಪ. ೯–೨೪೦). **ಗೊಳಗುಳಿಕೆ** : ನಿಂದೆಯ ನೆಗ್ಗಿಲಮುಳ್ಳು ಸ್ವಪ್ರಶಂಸೆಯ ಗೊಳಗುಳಿಕೆ (ಮಾನಸ. ೭೯–೮). **ಗೊಳಗೊಳಕೆ** : ಮನೆಯ ಮಲ್ಲಿಗೆಗಿಂತ ಕೊಳೆಯಲ್ಲಿರುವ ಗೊಳಗೊಳಕೆಯೆ ಏಕೆ ಮೆಚ್ಚೊ (ಗಾಳಪ. ೨೦೬). **ಗೊಳಗೊಳಿಕೆ** : ಎಳೆಹರೆಯದ ಹುಡುಗಿ ಆಕೆ . . . ಮಲ್ಲಿಗೆ ಹೂವೂ ಅಲ್ಲ, ಗೊಳಗೋಳಕೆಯೂ ಅಲ್ಲ (ಸಮುಜೀ. ೨೪೭).

**ಕೊಳಗೊಳ್** 'ಕೊಳಂಗೊಳ್' ನೋ.

**ಕೊಳಗೊಳಿಕೆ** 'ಕೊಳಗುಳಿಕೆ' ನೋ.

**ಕೊಳಚ** (ನಾ). ಕೊಳಕ; ಹೊಲಸು ಮನುಷ್ಯ (?): ಎಲವೋ ಗೋತ್ರದ್ರೋಹಿ ವಂಶದ ಕೊಳಚ ಕೇಳಸ್ತ್ರಗಳ ಕಳೆದಸಿದಳೆದು ತುಟಿ ಬಾಯ್ಗದನು ಕೊಡುತ (ಪರಶು. ೧೫–೩೩). [ಕೊಳಚೆ (< ಕೊಱಚೆ) + –ಅ$_7$]

**ಕೊಳಚೆ** 'ಕೊಱಚೆ' ನೋ.

**ಕೊಳಚೆನೀರ್**, ಕೊಳಚೆನೀರು (ನಾ). ಕೊಳೆಯಾದ ನೀರು; ಬಗ್ಗಡವಾದ ನೀರು : ಕೊಳಚೆನೀರೊಳಗಾಳುತೇಳುತ (ಕುವ್ಯಾದ್ರೋ. ೫–೪೪); ಅಮರವಾರಿಯೊಳ್ಮುಳುಗದಾ ಕೊಳಚೆನೀರೊಳಗೆ ಮೀವವನಂತೆ (ಚೇರಮ. ೬–೪೯). **ಕೊಳಚೆನೀರು** : ಕೊಳಚೆನೀರಿನ ಬಳಕೆಯಿಂ ಕತ್ತಲೆಯ ದಧ್ಯೋದನದಲಾಯುಷವಿಳಿದು ಹೋಗದೆ (ಕುವ್ಯಾಉ. ೩–೫೬) ; ಕೊಳಚೆನೀರನ್ನು ಒಂದು ಕಡೆ ಸಂಗ್ರಹವಾಗಬಿಡುವುದು ತೀರ ಅಪಾಯಕರ (ಅಡುಸೌ. ೪೧). [ಕೊಳಚೆ (< ಕೊಱಚೆ) + ನೀರ್$_1$]

**ಕೊಳಚೆನೀರು** 'ಕೊಳಚೆನೀರ್' ನೋ.

**ಕೊಳತ** (ನಾ). ಒಂದು ಬಗೆಯ ಕಾಡಿಗೆ (?) : ಮಣಿಮಯ ಭಾಜನಂಗಳೊಳ್ ತೆಕ್ಕನೆ ತೀವಿದ ಪಂಚರತ್ನದ ಕೇಸರಿಯ ಕತ್ತುರಿಯ ಕೊಳತದ ಕಪ್ಪುರದ ಪಳಿಕಿನ ಬಾಯಿನಂಗಳಂ ಬೀಜು (ಆದಿಪು. ೪–೩೪) ; ಪಂಚರತ್ನಮಯಭಾಜನಂಗಳೊಳ್ ತೆಕ್ಕನೆ ತೀವಿದ ಬಿಡುಮುತ್ತಿನ ಪಚ್ಚೆ ಸಾರದ ಕಾಶ್ಮೀರದ ಯಕ್ಷಕರ್ದಮಪಿಂಡದ ಕತ್ತುರಿಯ ಕೊಳತದ ಕರ್ಪೂರವಳಿಕಿನ ಬಾಯಿನಂಗಳನೆ ಬೀಜು (ಸುಕುಮಾ. ೧೦–೮೯ ವ).
[< ಸಂ. ಕುಲತ್ಥ]

**ಕೊಳತ್ತೂರ್**, ಕೊಳಾತ್ತೂರ್ (ನಾ). ಒಂದು ಊರಿನ ಹೆಸರು : ಕೊಳತ್ತೂರ ಉತ್ತನೂರ ಮುಕ್ಕೂಟಲ ಅರುಣೋನ್ನತ ಭೂಮಿ ಸಮೀಪೇ (ಮೈಆರಿ. ೧೯೨೫, ೧೦೫–೩೯ ; 634) ; ಕೊಳತ್ತೂರ ತೊಱುಗೊಳೆ ಸವೆಗ ಮುದುದ ತೊಜುವ ಇಕ್ಕಿಸಿ ಸತ್ತನ್ (ಎಕ. X, ಚಿಂತಾಮ. ೧೦೯–೧; 800). **ಕೊಳಾತ್ತೂರ್** : ಸ್ವಸ್ತಿ ಕೊಳಾತ್ತೂರ್ಸಂಘದ ವಿಶೋಕ ಭಟಾರರ ನಿಸಿಧಿಗೆ (ಎಕ. II, ೯೨–೧ ; ಸು. 700). [ಕೊಳತ್ತು ? + ಊರ್]

**ಕೊಳದಪ್ಪಲೆ** 'ಕೊಳಗದಪ್ಪಲೆ' ನೋ.

**ಕೊಳನಲ್ಲೂರ್**, ಕೊಳನೆಲ್ಲೂರ್ (ನಾ). ಒಂದು ಊರಿನ ಹೆಸರು : ವಳ್ಳಾವಿ ವಿಷಯುವೇ ಕೊಳನಲ್ಲೂರನಾಮ ಗ್ರಾಮೇ(ಎಇ.VI, ೧೮–೧೬; ?). **ಕೊಳನೆಲ್ಲೂರ್** : ಆರೀದಗೋತ್ರಂ ಪರಿಪದಿ ಭಟ್ಟರ್ಗೆ ಕೊಳನೆಲ್ಲೂರ ಬ್ರಹ್ಮದೇಯಂ ಕೊಟ್ಟವರ್ (ಎಕ. IV, ಎಡತೊ. ೬೦–೮೮; ಸು. 890). [?]

**ಕೊಳನೆಲ್ಲೂರ್** 'ಕೊಳನಲ್ಲೂರ್' ನೋ.

**ಕೊಳಪು** (ಕ್ರಿ). ಮಸಗು ; ಕೆರಳು ; ರೇಗು : ನೆಱೆದ ಮಗಳೆಗೊಬ್ಬ ಪತಿಯಾಗಬೇಕೆಂಬ ಮುಱ ಕ ದೊ ಳ ವ ಸೊ ಯ್ದ ನ ವ ನ ಸೆಱೆ ಹೋಗುವಂತಾಕೆ ಹೋದಳು ನೃಪರದನಱೆದಿತ್ತ ಕೊಳಪಿದರೊಡನೆ (ಭರಚ. ೫೬–೧೧). [ದೇ. ‖ ತಮಿ. ಮಲ. ಕುಟಮ್ಪು]

**ಕೊಳಪೆ** (ನಾ). ನೂಲಿನ ಕಂಡಿಕೆಯ ಕೊಳವೆ : ಹಾಸನಿಕ್ಕುವಾತನ ಕೈಯ ತೂತಿನ ಕೊಳಪೆಯ ನೂಲು ನುಂಗಿತ್ತು (ಗುಪ್ತಮಂ. ೪). [< ಕೊಱವೆ ?]

**ಕೊಳಬಿ** 'ಕೊಟವಿ' ನೋ.

**ಕೊಳರ್** (ನಾ). ಲಾಮಂಚ; ಬಾ ಳ ದ ಬೇ ರು : "ಕೊಳರೆನೆ ಲಾಮಂಚವಪ್ಪುದು" (ಚತುನಿ. ಕ. I, ೫೩). [< ಕೊಳವೇರ್ ?]

**ಕೊಳರ್ವಕ್ಕಿ** (ನಾ). ಹಂಸಗಳಲ್ಲಿ ಒಂದು ಜಾತಿ ; ಒಂದು ಬಗೆಯ ಪಕ್ಷಿ ; ಸಾರಸ : ಪುರುಳಿಗಳ ನವಿಲ್ಗಳ ಕೊಳರ್ವಕ್ಕಿಗಳೆಸೆವ ಮನದ ಬಿನದಂ ಬನದೊಳ್ (ಗಿರಿಕ. ೨–೫೧); ಚೀಱಿದವು ಕೊಳರ್ವ[ಪಾಠಾಂ. ವ]ಕ್ಕಿ ದಳದಲಿ (ಕುವ್ಯಾಅ. ೧೦–೫೩); ನಡೆವಕ್ಕಿ ನುಡಿವಕ್ಕಿ ಕೊಳರ್ವಕ್ಕಿ ಪೊಣರ್ವಕ್ಕಿ (ಕುರಾಸಾಂ. ೨–೩೧); ನವಿಲಂಚೆ ಕೋಗಿಲೆ ಕೊಳರ್ವಕ್ಕಿ ಕೊಂಚೆ (ಭರಚ. ೪೭–೨೧); ಪಾರಿವಗಳ ದನಿ ಕೊಳರ್ವಕ್ಕಿಗಳ ಲಲ್ಲೆ ಕೀರವಱಿಗಳ ಬೈದಾಟ (ಕಂನವಿ. ೧೦–೪೩). [ಕೊಳರ್ ? + ಪಕ್ಕಿ$_1$]

**ಕೊಳಲ್** 'ಕೊಟಿಲ್' ನೋ.

**ಕೊಳಲಗುಬ್ಬಿ** (ನಾ). ಒಂದು ಬಗೆಯ ಪಕ್ಷಿ (?) : ಕೊ ಲಗುಬ್ಬಿ ಕರೆಯುತ್ತಿದೆ ಕೋಟಕೆ ಬಾ ಹೊರಗೆ ಬೇವಿನ ಹೂನೆರಳಿನಲ್ಲಿ ಸವಿನೋಟದೊಳದೊ ನೆರೆಗೆ (ಮುಕ್ತಕಂ. ೪೪–೩). [?]

**ಕೊಳಲು** 'ಕೊಟಿಲ್' ನೋ.

**ಕೊಳಲುಗೋಳಿ** (ನಾ). ಒಂದು ಜಾತಿಯ ಕೆಂಪು ಕೋಳಿ : (ಕ). [ಕೊಳಲು ? + ಕೋಳಿ$_1$ (< ಕೋಱಿ$_1$)]

**ಕೊಳಲುವಕ್ಕಿ** (ನಾ). ಒಂದು ಬಗೆಯ ಪಕ್ಷಿ : ಗಿಳಿಯ ತುಂಬಿಯ ಹಂಸೆಗಳ ಕೋಗಿಲೆಯ ಕೊಳರ್ವಕ್ಕಿಗಳ ಕೊಂಚೆಯ ಕೊಳಲುವಕ್ಕಿಯ ಜಕ್ಕವಕ್ಕಿಯ ನವಿಲು ಪಾರಿವದ (ಕುವ್ಯಾಉ. ೭–೨೩). [ಕೊಳಲು ? + ಪಕ್ಕಿ$_1$]

**ಕೊಳವ** (ನಾ). ಒಂದು ಪಂಗಡದ ಅಥವಾ ಒಂದು ವಂಶದ ಹೆಸರು (?): ಸ್ವಸ್ತಿಶ್ರೀ ಗೊಣ್ಣರಸರ್ ಪ್ರಿಥಿವೀರಾಜ್ಯಂಗೆಯ್ಯೆ ಕೊಳವರ ಕೊವಯನ್ ಕೊಟ್ಟದು (ಎಕ. VII, ಶಿಕಾರಿ. ೪೫–೫೨ ; 890). [?]

**ಕೊಳವಂಕೆ** (ನಾ). = ಕೊಳಗುಳಿಕೆ : "ಇಕ್ಷ್ವಗಂಧಾ . . . ಕ್ಷುರಃ . . . ಈ ೫ ಕೊಳವಂಕೇ ಹೆಸರುಗಳು" (ಸಿದ್ಧಾಂಶಿ. ೧೧೯). [< ಕೊಳಗುಳಿಕೆ]

**ಕೊಳವಕ್ಕಿ** (ನಾ). = ಕೊಳರ್ವಕ್ಕಿ : ಚೀಱಿದವು ಕೊಳವ[ಪಾಠಾಂ. ರ್ವ]ಕ್ಕಿ ದಳದಲಿ (ಕುವ್ಯಾಅ. ೧೦–೫೩). [ಕೊಳ$_2$ + ಪಕ್ಕಿ$_1$]

**ಕೊಳವನ** (ನಾ). ಕೊಳವುಳ್ಳ ವನ (?) ; "ಕಮಲವನ" (ಶಿವಗೀ. ಕೋಶ) : ನಾದದ ಕಲ್ಲಕಟ್ಟೆಯುದಱೊಳಗೆ ಭೇದಿಸುವ ಬಿಂದುಜಲವು [ಆಧಾರದ] ಕಳೆವೊಳೆಯೊಳು ಕೊಳವನದ ಆದಿಲಿಂಗನ ಪಾಡುತ (ಶಿವಗೀ. ೮೫೪). [ಕೊಳ$_2$ + ವನ]

**ಕೊಳವರಿ** (ನಾ). ಕೊಳದಿಂದ ಬರುವ ಕಾಲುವೆ (?) : ದೇವರ ಬಡಗಣ ಕೊಳವರಿಯ ಕೆಳಗಣ ಕೆಯಿ (ಎಕ. VII, ಶಿಕಾರಿ. ೨೬೭–೩೫ ; 1147). [ಕೊಳ$_2$ + ಪರಿ$_3$]

**ಕೊಳವಳಿಕ** 'ಕೊಳಗುಳಿಕೆ' ನೋ.

**ಕೊಳವಳಿಕೆ** 'ಕೊಳಗುಳಿಕೆ' ನೋ.

**ಕೊಳವಳಿಕೆಗಾಡು** (ನಾ). ಕೊಳಗುಳಿಕೆಗಳಿಂದ ತುಂಬಿದ ಕಾಡು : ಬಾಯೊಣಗಿಯೊಜಂಕೆಯುಲಂಕಿ ಬಳಸಿ ಬಳೆದ ಕೊಳವಳಿಕೆಗಾಡೊಳ್ಪಡಲ್ವಟ್ಟು (ಚಕವಾ. ೯೦–೧೫). [ಕೊಳವಳಿಕೆ (< ಕೊಳಗುಳಿಕೆ) + ಕಾಡು$_2$]

**ಕೊಳವಳ್ಳಿ** (ನಾ). = ಕೊಳಗುಳಿಕೆ (?) : ಪೂಗಿಡುವೆಂಬ ಪೆಸರಿಂಗೆ ಕೊಳವಳ್ಳಿಯ ಗಿಡುಗಳಂ ನಟ್ಟು ನೀರೆಱೆದು ನಡೆಪೆ ಮಲ್ಲಿಗೆಯ ಪೂವಿನಂತಾಗಲಱಿಯದು (ಧರ್ಮಾಮೃ. ೭–೭೯). [?]

**ಕೊಳವಾಳ** (ನಾ). ಕೆರೆ, ಕೊಳಗಳ ಉಸ್ತುವಾರಿ ನೋಡುವವನು. 'ಕೊಳವಾಳಿಕೆ' ಪರಾ. [ಕೊಳ$_2$ + -ವಾಳ (< -ವಳ)]

**ಕೊಳವಾಳಿಕೆ** (ನಾ). ಕೊಳದ ಪಾಲನೆ ; ಕೆರೆಯ ಉಸ್ತುವಾರಿ (?): ಆ ಕೆಱೆಗಳ ವೇಲಂಕಣ ಮೊದಲಾದ ಎಲ್ಲಾ ಕೆಲಸಂಗಳಿಗೆವೂ ಕೊಳವಾಳಿಕೆ ತೋಟಂಗಳ ತಱವಾಳಿಕೆ ಊರ ತಱವಾಳಿಕೆ ಸೇನಬೋವಿಕೆ ಇಂತಿವೆಲ್ಲವಕ್ಕೆವೂ ಹತ್ತುವ ಹೊನ್ನಿಂಗೆ (ಎಕ. XII, ಚಿಕ್ಕನಾ. ೨–೬೬; 1261). [ಕೊಳವಾಳ + -ಇಕೆ]

**ಕೊಳವಿ** 'ಕೊಟವಿ' ನೋ.

**ಕೊಳವಿಗೆ** (ನಾ). ಕೊಳವೆಯಾಕಾರದ ಪಾತ್ರೆ ; ಕೊಳಗ (?) : ಕಳಧೌತದ ಕೊಳವಿಗೆಗಳೊಳಂ ರೂಪ್ಯದ ಕುಪ್ಪಿಗಳೊಳಂ . . . ಶೀವಿದೆನಿತಾನುಂ ತೆಱದ ಬಂಧುರ ಸುಗಂಧವಸ್ತು ಸಂದೋಹಮುಂ (ಜಗವಿ. ೭–೧೮ ವ). [?]

**ಕೊಳವಿಹೂಟ** (ನಾ). ಬಂಡಿಯ ಮೂಕಿನ ಕೆಳಗಿನ ಮರ : ಅನುಕರ್ಷಃ, ದಾರ್ವಧಸ್ಥಂ – ನೊಗದ ಕೆಳಗಿರುವ ಕೋಳೀಹಲಿಗೆಗೂ, ತೋಳುಮರಕ್ಕೂ ಸಾರಥಿ ಕೂಡುವ ಹಲಿಗೆಗೂ ಕೊಳವಿಹೂಟದ ಮಿಣಿಗೂ ಹೆಸರು (ಸಿದ್ಧಾಂಶಿ. ೨೧೮). [ಕೊಳವಿ (< ಕೊಟವಿ) + ಹೂಟ]

**ಕೊಳವಿಳಿಕ** (ನಾ). = ಕೊಳಗುಳಿಕೆ (?): "ಭುಜಂಗಸಮ್ಮಿತಾ – ಕೊಳವಿಳಿಕ" (ಒಷಧಿ. ೧೧೧). [?]

**ಕೊಳವೆ** 'ಕೊಟವಿ' ನೋ.

**ಕೊಳವೆಬಾವಿ**, ಕೊಳವೆಭಾವಿ (ನಾ). ಕೊಳವೆಗಳನ್ನು ನೆಲದಲ್ಲಿ ಸೇರಿಸಿ ಅವುಗಳ ಮೂಲಕ ನೀರೆತ್ತುವ ಬಾವಿ : ಉತ್ತರ ಪ್ರದೇಶದಲ್ಲಿ ಕೊಳವೆಬಾವಿ ನೀರಾವರಿ (Tubewell irrigation) ವಿಸ್ತರಣೆಗಾಗಿ . . . ಸಹಾಯ ದೊರೆತಿದೆ (ಅಂತಸಂ. ೧೩೧). **ಕೊಳವೆಭಾವಿ** : ಆಳವಾದ ಭಾವಿ ತೋಡಿ (ಇಕ್ಕಟ್ಟಾದ ಕೊಳವೆಭಾವಿಗಳು) ನೀರನ್ನು ಕೊಳವೆಗಳ ಮೂಲಕ ಎತ್ತಬೇಕು (ಭೂವಿವ. ೨೮೫). 'ಓಡೆಬಾವಿ' ಪರಾ. [ಕೊಳವೆ (< ಕೊಟವಿ) + ಬಾವಿ]

**ಕೊಳವೆಭಾವಿ** 'ಕೊಳವೆಬಾವಿ' ನೋ.

**ಕೊಳವೆಹುಳು** (ನಾ). ಒಂದು ಜಾತಿಯ ಹುಳು ; ವಜ್ರಕೀಟ : (ಕ). [ಕೊಳವೆ (< ಕೊಟವಿ) + ಹುಳು (< ಪುೞು)]

**ಕೊಳವೇರ್**, ಕೊಳವೇರು (ನಾ). ಲಾಮಂಚ ; ಬಾಳದಬೇರು : "ಕೊಳವೇರೆಂಡು ಲಾಮಂಚಂ" (ಶಮದ. ಪರಿ. ೨) ; ತಣ್ಪುಱಲ್ಗೆ ತಣ್ಣರಗದ ಸೂಸುನೀರ್ಗೆ ಕೊಳವೇರ್ಗೊಡಲಂ ಗುಱಿಯಾಗೆ ಮಾಡುವರ್ (ಮಲ್ಲಿಪು. ೩–೨೮) ; ತೆಱಂಬೊಳೆವ ತೆಱಪಿನೊಳಳವಟ್ಟ ಕೊಳವೇರ್ಗಳ ಕೇರ್ಗಳೊಳಗೆ (ರಾಜಶೇ. ೧೦–೩೧). **ಕೊಳವೇರು** : "ಕೊಳವೇರು ಲಾವಂಚ" (ಕಶರ. ೨೮). [ಕೊಳ ? + ಬೇರ್]

**ಕೊಳವೇರು** 'ಕೊಳವೇರ್' ನೋ.

**ಕೊಳಸಂಪಿಗೆ** (ನಾ). ಸಂಪಗೆಯಲ್ಲಿ ಒಂದು ಬಗೆ: ಕೊಳಸಂಪಿಗೆ– ತೋಟಗಳಲ್ಲಿ ಹಚ್ಚುವರು. ಹೂ ಬಹಳ ಸುಗಂಧ (ಕಭಾಗ. ೩೮). [ಕೊಳ್$_0$ + ಸಂಪಿಗೆ(< ಸಂಪಗೆ)]

**ಕೊಳಸಿ** (ನಾ). (ಕರಾ) ಒಂದು ಜಾತಿಯ ಮೀನು; ಹಲಗೆ ಜಾತಿಯ ಮೀನು. [← ತುಳು. ಕೊಲೆಜಿ]

**ಕೊಳಹ** 'ಕೊಳಹೆ' ನೋ.

**ಕೊಳಹೆ, ಕೊಳಹ** (ನಾ). ಚಿಕ್ಕ ಹೊಂಡ; ಸಣ್ಣ ಕೊಳ: "ವೇಶಂತಃ, ಪಲ್ವಲಂ, ತಳ್ಪಂ – ಈ ೩ ಕೊಳಹೆ" (ಹಲಾಯು. ೧೧೧–೫೩). **ಕೊಳಹ**: "ಆ ತಳ್ಪಮೆನೆ ಪಲ್ವಲಾಖ್ಯಮೆನೆ ವೇಸಂತಮೆನಲು ಕೊಳ ಹಕ್ಕೆ ನಾಮಂ" (ಮಂಗರಾ. ೧೨೩–೧೪). [< ಕೊಳ್$_2$]

**ಕೊಳಾತ್ತೂರ್** 'ಕೊಳತ್ತೂರ್' ನೋ.

**ಕೊಳಾಯಿ** 'ಕೊಟವಿ' ನೋ.

**ಕೊಳಾಳಪುರ** 'ಕುವಲಾಲಪುರ' ನೋ.

**ಕೊಳಿಂಜಿ** (ನಾ). ಒಂದು ಜಾತಿಯ ಸಸ್ಯ: ಕೊಗ್ಗಿಲಿ, ಮರಳಿ, ಕೊಳಿಂಜಿ, ವಜ್ರನೀಲಿ (ವೈಔಗ. ೭೪–೧೫೦೭). [?]

**ಕೊಳಿಂತೂರ್** (ನಾ). ಒಂದು ಊರಿನ ಹೆಸರು: ಪುದಳ್‌ನಾಡ ರಾಷ್ಟ್ರೇ ಕೊಳಿನ್ತೂರನ್ನಾಮ ಗ್ರಾಮ (ಮೈಆರಿ. ೧೯೧೬, ೧೨–೩೧; 540). [? + ಊರ್]

**ಕೊಳಿಕೆ** 'ಕೊಲಿಕೆ' ನೋ.

**ಕೊಳಿಸು, ಕೊಳ್ಳಿಸು** (ಕ್ರಿ). ೧. ಕಿತ್ತುಕೊಳ್ಳುವಂತೆ ಮಾಡು; ಅಪಹಾರ ಮಾಡಿಸು: ಕೊಲಿಪಂ ಕೊಲ್ವಂ ಪರಸ್ತ್ರೀಯರಂ ಕೊಳಿಪಂ ಕೊಳ್ವನೆನಿಪ್ಪ ಪಾಪಿಯುಂ (ಆದಿಪು. ೫–೮೧); ವಿರಾಟನ ದಾಯಿಗಂ ... ತುಱುವಂ ಕೊಳಿಸಿದಾಗಳ್ (ಪಂಪಭಾ. ೮–೮೯ ವ); ಜೂಜನಾಡಿಸಿ ನಾಡ ಕೊಳಿಸಿದ ಹಿಸುಣನಿವ (ಕುವ್ಯಾಕ. ೨೬–೪೨). ೨. ಕಚ್ಚುವಂತೆ ಮಾಡು; ಕಡಿಯಿಸು: ಪಾವುಗಳಂ ಕೊಳಿಸಿ ಮಹಾಗ್ರಾವಮನುಱದಡಸಿ ಕಟ್ಟಿ ಕೊರಲೊಳ್ (ಪಂಪಭಾ. ೨–೩೨). ೩. ಅಂಟಿಸು; ಹತ್ತಿಸು: ಜ್ವಾಲೆಯಂ ಕೊಳಿಸಿದರ್ ಪಟುಭಟರ್ (ಚಬಪು. ೩೧–೨೫). ೪. ತೂಗು; ಬೀಸು: ಕುದುರೆಯ ಸಾಲುಗಳ್ ಬಲು ತೆರೆ ಬೆಳುಗೊಡೆ ನೊರೆಯು ಕೊಳಿಪ ಚಾಮರ ಶಫರಿಗಳಾಗಲಾ ಪುರ ಜಲರಾಶಿಯಂತೆ ರಾಜಿಸಿತು (ಕಂನವಿ. ೬–೩೩). **ಕೊಳ್ಳಿಸು**: ೧. (ಕ). [ಕೊಳ್$_1$ + –ಇಸು$_3$]

**ಕೊಳು** 'ಕೊಳ್$_1$' ನೋ.

**ಕೊಳುಕ್** (ಅ). ಒಂದು ಅನುಕರಣ ಶಬ್ದ: ಶಂಕಾಕುಳಿತಂ ನೋಡಿ ಮನಂ ಕೊ [ಪಾಠಾಂ. ಕ]ಳುಕೆನೆ ಮುಱುಗಿ ನೆಗೆದ ಹರಿಯಂ ನುಡಿದಂ (ಪಂಪಭಾ. ೧೧–೧೧೨).

**ಕೊಳುಕಂಠ** (ನಾ). ವಿಷಕಂಠ; ಶಿವ: ಸರಸೋತಿ ಸಜ್ಜೋಳೆ ನಗೆ ಮುಖದ ಕಡುಚೆಲುವೆ ಕೊಳುಕಂಠನರಸಿ ಗಿರಿಜಮ್ಮ ಪಾರ್ವತಿದೇವಿ ಕಲಿಸೆ ಕಲ್ಯಾಣ ಪದಸೂರ (ನನ್ನೂರು. ೮೦). [< ಸಂ. ಕಾಲಕಂಠ]

**ಕೊಳುಕುಳಿಗ** (ನಾ). ಯುದ್ಧೋತ್ಸಾಹಿ (?): ಎಲೆ ಕುಶನೆ ಕೇಳೀತ ಹನುಮನು ಕೆಲಸವನು ಭೋರ್ಗರೆದು ಹಾರಿದನನಿಲಪಥದಲಿ ಭುಜವ ನೊದಱಿಸಿ ಲೀಲೆಯುಬ್ಬಿನಲಿ ಕೆಲಕೆ ಕೆದಱಿದವದ್ರಿಗಳು ನೆಲ ಕಳಲಿದುದು ಸಂತೋಷಮುಖದಲಿ ಕೊಳುಕುಳಿಗ ಖಳರಡ್ಡಗಟ್ಟಲು ತೂಳುತಡ ಹಾಯ್ದು (ತೊರರಾ. ೬–೩೬–೬೩). [ಕೊಳುಕುಳ ? (< ಕೊಳ್ಗುಳ) + –ಇಗ]

**ಕೊಳುಕೊಡು** 'ಕೊಳ್ಕೊಡೆ' ನೋ.

**ಕೊಳುಕೊಡೆ** 'ಕೊಳ್ಕೊಡೆ' ನೋ.

**ಕೊಳುಗಿಡಿ** (ನಾ). ಸಿಡಿದು ಬರುವ ಕಿಡಿ; ಹಾರುಗಿಡಿ: ಖಂಡೆಯದ ಧಾರೆಯ ಕೊಳುಗಿಡಿಯೊ ಖದ್ಯೋತರಾಸಿಯೊ (ಕುವ್ಯಾದ್ರೋ. ೧೪–೭); ಜೂಣಿಯ ಕೊಳುಗಿಡಿಯ ಸೆಖೆ ತಾಗಿ ಸುಭಟಾವಳಿಯ ಮೀಸೆಗಳುರಿಯೆ (ಕುವ್ಯಾದ್ರೋ. ೧೯–೩೫). [ಕೊಳು (< ಕೊಳ್$_1$) + ಕಿಡಿ]

**ಕೊಳುಗುಳ** 'ಕೊಳ್ಗುಳ' ನೋ.

**ಕೊಳುಗುಳಿಕೆ** 'ಕೊಳಗುಳಿಕೆ' ನೋ.

**ಕೊಳುಗುಳಿಕೆ** 'ಕೊಳಗುಳಿಕೆ' ನೋ.

**ಕೊಳುಗೊಳ** 'ಕೊಳ್ಗುಳ' ನೋ.

**ಕೊಳುಮಿಗ** 'ಕೋಟ್ಮಿಗ' ನೋ.

**ಕೊಳುವಡೆ** (ನಾ). ಕೊಡುವುದು ಹಾಗೂ ಕೊಳ್ಳುವುದು; ವ್ಯಾಪಾರ: ಪೂಜೆಯ ಮಾಡುವಲ್ಲಿ ಪುಣ್ಯವನಱಿಯದೆ ಮಾಡಬೇಕು ... ಕೊಟ್ಟುಕೊಂಡಿಹೆನೆಂಬ ಕೊಳುವಡೆ ಇಲ್ಲ (ಮೋಳಿಮಾ. ೩೯–೧೬೧). [ಕೊಳು (< ಕೊಳ್$_1$) + ಪಡೆ$_1$]

**ಕೊಳುವೆ** 'ಕೊಳ್ವೆ' ನೋ.

**ಕೊಳುಹ** (ನಾ). ಕೊಳ್ಳುವಿಕೆ; ಸ್ವೀಕಾರ: ಅಪಮಿತ್ಯಕ–ಒಂದಕೊಟ್ಟು ಒಂದ ಕೊಳುಹವು (ನಾಚಿರಾ. ೬). [ಕೊಳು (< ಕೊಳ್$_1$) + –ಹ$_2$]

**ಕೊಳೆ$_1$** 'ಕೊಟೆ$_1$' ನೋ.

**ಕೊಳೆ$_2$** 'ಕೊಟೆ$_2$' ನೋ.

**ಕೊಳೆ$_3$** (ನಾ). ಕೊಳ್ಳುವಿಕೆ; ತೆಗೆದುಕೊಳ್ಳುವಿಕೆ. 'ಕೊಡುಕೊಳೆ' ಪರಾ. [< ಕೊಳ್$_1$]

**ಕೊಳೆಗಡ್ಡೆ** (ನಾ). ಹೊಲಸಾದ ಗಡ್ಡೆ; ಕೊಳಕುಗಡ್ಡೆ: ಕಾಯಿಯೋ ಹುಳಿ ಬೀಳು; ಹಣ್ಣು ಕೊಳೆಯುವ ಹಾಳು, ಬೇರು ಮುದಿನೆಲದ ಕೊಳೆಗಡ್ಡೆ ಕೇಳು (ನಡೆಬಂ. ೭೫). [ಕೊಳೆ$_2$ (< ಕೊಟೆ$_2$) + ಗಡ್ಡೆ]

**ಕೊಳೆಗಣ್ಣು** 'ಕೊಟೆಗಣ್' ನೋ.

**ಕೊಳೆಗೂಡು$_1$** (ಕ್ರಿ). ಹೊಲಸು ಕೂಡಿಕೊಳ್ಳು: ಕೆಲವು ಬೊಬ್ಬುಳಿಯಿಂದ ಅಲೆಗಳತುಲತೆಯಿಂದ ಕೊಳೆಗೂಡಿ, ಜಲಧಿಯೊಲು ತುಳುಕಿ ಮುಳಿದು (ಕಏಪು. ೩೦–೭). [ಕೊಳೆ$_2$ (< ಕೊಟೆ$_2$) + ಕೂಡು$_1$]

**ಕೊಳೆಗೂಡು$_2$** (ನಾ). ಕೊಳೆ ಹಾಕುವುದಕ್ಕಾಗಿ ಮಾಡಿದ ಗೂಡು: ಅವನ್ನು ಎತ್ತಿಕೊಂಡು ಅದಕ್ಕಾಗಿ ಇರಿಸಿದ ಕೊಳೆಗೂಡಿನಲ್ಲಿ ತುಂಬಿಸುವ ರೂಢಿಯು ನಮಗಿಲ್ಲ (ಬಾಲಪ್ರ. I, ೨೯೬). [ಕೊಳೆ$_2$ (< ಕೊಟೆ$_2$) + ಗೂಡು]

**ಕೊಳೆನಾತ** (ನಾ). ಕೊಳೆತ ವಾಸನೆ; ಗಬ್ಬುನಾತ: ಅಲೆಯೆಸೆದು ಕೊಳೆನಾತವಾದರೋವೊ ಮರಿಮೀನ ಬಾಯ್ಗೆ ತುತ್ತಾದರಾಹಾ (ಪಾರಸಿ. ೨೧–೧೭). [ಕೊಳೆ$_2$ (< ಕೊಟೆ$_2$) + ನಾತ]

**ಕೊಳೆನಾರ್** 'ಕೊಟೆನಾಱು' ನೋ.

**ಕೊಳೆನೀರ್** 'ಕೊಟೆನೀರ್' ನೋ.

**ಕೊಳೆಬೀಳು** (ಕ್ರಿ). ೧. ಕೊಳೆತುಹೋಗು: ಕೊಳೆಬಿದ್ದ ಹಣ್ಣು ಒಳ್ಳೆಯದಲ್ಲ (ರೂಢಿ). ೨. (ಆಲಂ) ಪ್ರಗತಿಯಿಲ್ಲದೆ ಒಂದೇ ಕಡೆ ಇರು: ಈ ಕುಂಟಚಾಕರಿಯಲ್ಲಿ ಕೊಳೆಬೀಳುವುದಕ್ಕಿಂತ ಬಂದ ಸಂಧಿಯನ್ನು ಬಿಡಬಾರದು (ದಾಸಹು. ೩೨). [ಕೊಳೆ$_2$ (< ಕೊಟೆ$_2$) + ಬೀಳು$_1$ (< ಬೀೞ್$_1$)]

**ಕೊಳೆಮಚ್ಚೆ ಹುಣ್ಣು** (ನಾ). ವರ್ತುಲಾಕಾರವಾಗಿ ಮಾಂಸವು ಕೊಳೆಯುತ್ತಾ ಬರುವ ಒಂದು ಬಗೆಯ ವ್ರಣ; ಮಂಡಲದ ಹುಣ್ಣು; ರೂಪಾಯಿ ಹುಣ್ಣು (ಕರಾ): "ಕೋಠಃ, ಮಂಡಲಕಂ–೨ ಮಂಡಲಾಕಾರವಾದ ಕುಷ್ಠಕ್ಕೆ ಹೆಸರು, ಕೊಳೆಮಚ್ಚೇ ಹುಣ್ಣು" (ಸಿದ್ಧಾಂತಿ. ೧೬೦). [ಕೊಳೆ$_2$ (< ಕೊಟೆ$_2$) + ಮಚ್ಚೆ + ಹುಣ್ಣು (< ಪುಣ್)]

**ಕೊಳಿಮಾತು** (ನಾ). ಹೊಲಸು ಮಾತು; ಕೀಳು ನುಡಿ: ಒಡನೆ ಕೊಳಿಮಾತುಗಳಿಂದ ಅಶುದ್ಧವಾದ ತನ್ನ ನಾಲಗೆಯನ್ನು ದೇವರ ಅಮೃತ ನಾಮಗಳನ್ನುಚ್ಚರಿಸಿ ತೊಳೆದುಕೊಂಡನು (ಕಾಲೂರ. ೧೧ ಕಥಾಸಾರ). [ಕೊಳ್ಕೆ$_2$ (< ಕೊೞ್ಕೆ$_2$) + ಮಾತು$_1$]

**ಕೊಳೆಯಿಸು** (ಕ್ರಿ). ಕೊಳೆಯುವಂತೆ ಮಾಡು: ಗ್ರಾಮುಸಾರಗಳನ್ನೆಲ್ಲವನ್ನಾಗಲೀ ಅಥವಾ ಕೆಲವನ್ನಾಗಲೀ ಕೂಡಿಹಾಕಿ ಕೊಳೆಯಿಸಿ ಉತ್ಕೃಷ್ಟವಾದ ಗೊಬ್ಬರವನ್ನು ದೊರಕಿಸಿಕೊಳ್ಳಬಹುದು (ತರಜಿ. ೮). [ಕೊಳ್ಕೆ$_2$ (< ಕೊೞ್ಕೆ$_2$) + -ಇಸು$_3$]

**ಕೊಳೆರೋಗ** (ನಾ). ಅಡಕೆಯ ಮರಕ್ಕೆ ತಗಲುವ ಒಂದು ರೋಗ: ಅಡಕೆಯ ತೋಟದಲ್ಲಿ ಕೊಳೆರೋಗಕ್ಕಾಗಿ ಎಳೆಗೊನೆಗಳಿಗೆ ಹಾಳೆಯ ಕೊಟ್ಟೆಗಳನ್ನು ಕಟ್ಟಬೇಕಾಗಿತ್ತು (ಪಂಜಪಂ. ೧೯); ಕೊಳೆರೋಗದಿಂದ ಈ ಸಾರಿ ಅಡಿಕೆ ಫಸಲು ಬಹಳ ಕಡಿಮೆ (ಪ್ರಕ್ಷ್. ೪೨). [ಕೊಳ್ಕೆ$_2$ (< ಕೊೞ್ಕೆ$_2$) + ರೋಗ]

**ಕೊಳೆವುಲ್** (ನಾ). ಕೊಳೆತ ಹುಲ್ಲು; ಕೆಟ್ಟಹುಲ್ಲು: ತಿನುತುಂ ಕಾಷ್ಠಾದಿಗಳಂ ತಿನುತುಂ ನಿಸ್ಸಾರಮಪ್ಪ ಕೊಳೆವುಲ್ಲಂ ದುರ್ಮನನಾಗಿ (ಅಶ್ವಶಾ. ೪-೫೫); ಕಡೆಯಲ್ಲಿ ಭೋಗೋಪಭೋಗಮಂ ಕೊಳೆವುಲ್ಲ ಬಿಡುವಂತೆ ಬಿಸುಟು ದೀಕ್ಷೆಯನಾಂತು (ಸಮ್ಯಕೌ. ೫-೧೨). [ಕೊಳ್ಕೆ$_2$ (< ಕೊೞ್ಕೆ$_2$) + ಪುಲ್]

**ಕೊಳೆಹಾಕು** (ಕ್ರಿ). ೧. ಕೊಳೆಯುವುದಕ್ಕೆ ಬಿಡು; ಕೊಳೆಯುವಂತೆ ಮಾಡು: ಅಗಸೆ ಗಿಡದ ಎಲೆಗಳು ಹಳದಿಬಣ್ಣಕ್ಕೆ ತಿರುಗಿದಾಗ ಕಾಂಡಗಳನ್ನು ನೀರಿನಲ್ಲಿ ನೆನೆಸಿ ಕೊಳೆಹಾಕಿ ನಾರನ್ನು ತೆಗೆಯುವ ವಿಧಾನಕ್ಕೆ ರೆಟ್ಟಿಂಗ್ (Retting) ಎಂದು ಹೆಸರು (ಗೃಹವಿ. ೬೩). ೨. (ಅಲಂ) ಪ್ರಗತಿಯಾಗದಂತೆ ಮಾಡು; ತಡೆದು ನಿಲ್ಲಿಸು: ಪತ್ರವನ್ನು ಮೇಲಕ್ಕೆ ಕಳುಹಿಸದೆ ಕೊಳೆಹಾಕಿದರು (ರೂಢಿ). [ಕೊಳ್ಕೆ$_2$ (< ಕೊೞ್ಕೆ$_2$) + ಹಾಕು (< ಪಾಯ್ಚು$_1$)]

**ಕೊಳೆಹೋಗು** (ಕ್ರಿ). ಕೊಳೆತಕ್ಕೆ ಈಡಾಗು; ಹಾಳಾಗು: ಹೊಲದವರೆಯ ನೆಟ್ಟು... ಬಿತ್ತನೆಟ್ಟಕ್ಕೆ ಮೊದಲೆ ಕೊಳೆಹೋಯಿತ್ತು (ಮೋಳಿಮಾ. ೨೬೫-೮೧೬). [ಕೊಳ್ಕೆ$_2$ (< ಕೊೞ್ಕೆ$_2$) + ಹೋಗು$_1$ (< ಪೋಗು$_1$)]

**ಕೊಳ್ಕ** (ಗು). ಕೊಳಕಾದ; ಕೊಳೆತ: ಕೊಳ್ಕಮತಿ ಬಿಡಿಸಿ ಬಲು ಪುಳ್ಕೋತ್ಸಹದಲಿಯಿಟ್ಟು ಶಿಲ್ಕಿದ ಮಾನವನ್ನ ತಳ್ಳಿಕ್ಸು ಭಕುತಿಯೊಳು (ಮೋಕ್ಷದೀ. ೬೯-೫). [< ಕೊೞಕ]

**ಕೊಳ್ಕುಬಳ್ಕು** (ನಾ). ಒನಪು; ಒಯ್ಯಾರ (?): ಅಡಿಗಳಂ ತಡವಿಟ್ಟು ಕೊಳದಿಂದೆ ಪೊಱಮಟ್ಟು ಕೊಳ್ಕುಬಳ್ಕಿನೆ ನಡೆದು ನೊಸಲ ಬೆಮರಂ ತೊಡೆದು (ಲೀಲಾವ. ೧೧-೧೧); ಕಾಮದೇವನ ಕರವಾಳಂತೆ ಕಣ್ಣೊಳ್ ಪೊಳೆದೆರ್ದೆಯೊಳುಳ್ಕಿ ಕೊಳ್ಕುಬೆ[ಬ]ಳ್ಕುಗೊಳಿಸುವ ವಿಳಾಸದೊಳಂ (ಅನಂಪು. ೧೧-೨೬ ವ). [ಕೊಳ್ಕು$_0$ + ಬಳ್ಕು$_0$ (< ಬಳುಕು)]

**ಕೊಳ್ಕುಳಿ** 'ಕೊಳಗುಳಿಕೆ' ನೋ.

**ಕೊಳ್ಕೆ** 'ಕೊಳಕೆ' ನೋ.

**ಕೊಳ್ಕೊಡೆ**, ಕೊಳುಕೊಡು, ಕೊಳುಕೊಡೆ, ಕೊಳ್ಳುಕೊಡೆ (ನಾ). ೧. ಕೊಡುವ ಮತ್ತು ತೆಗೆದುಕೊಳ್ಳುವ ವ್ಯವಹಾರ; ವಿನಿಮಯ: (ಕಿ). ೨. ಮದುವೆ ಸಂಬಂಧ; ಬಾಂಧವ್ಯ; ನಂಟಸ್ತನ: ಬೆಳ್ಗೊಡೆಯೊಡೆಯಾತನರ್ಥಿವಡೆ ಕೊಳ್ಕೊಡೆಗಾಗಳೆ ವಜ್ರಬಾಹು ದಾಂಗುಡಿವಿಡೆ (ಆದಿಪು. ೪-೫೩); ನಮ್ಮ ಕೊಳ್ಕೊಡೆಗೆ ತಕ್ಕೆಡೆಯಂ ಸಮಕಟ್ಟಿಕೊಟ್ಟನೇಂ ಧನ್ಯನೊ ಧಾತ್ರಂ (ಪಂಠಾಮಾ. ೨-೬); ಇದೆನ್ನ ಕುಲಮಿಂತುಟು ನಿಮ್ಮ ಕೊಳ್ಕೊಡೆಗೆ ತಕ್ಕನಲ್ಲೆಂ (ಬಂಹರಿ. ೫-೨೯ ವ); ಎನ್ನೀ ಕೊಡುಗೂಸಿಂಗೇವೂರ ಕೊಳ್ಕೊಡೆ (ರಾ ಮಾ ಶ್ವ. ೬೭-೧೨).

**ಕೊಳುಕೊಡು**: ೧. ಕ್ರಯವಿಕ್ರಯ ಕೊಳುಕೊಡು ಪೊರೆಕೆರೆ ನೋಡು ನಿಯಮಿಸು ವ್ಯವಹಾರಗಳನು (ಅನಂಚ. ೧-೧೫೧).

**ಕೊಳುಕೊಡೆ**: ೧. ಉಭಯಾಚಾರ ತಾನೆಂದಱಿದ ಪರಮಜ್ಞಾನಿಗೆ ಕೊಳುಕೊಡೆಯಿಲ್ಲ (ವಚಶಾ. II, ೪೩೬). ೨. ಜಾನಕಿಯನಾಂ ಮುನ್ನಮೆ ರಾಮಂಗೆ ಕೊಟ್ಟು ಮಹೋನ್ನತಿಯಿನೀ ನಮ್ಮ ಕೊಳುಕೊಳ್ಗೆ ಗುದಯಿಸುತ್ತಿರಲು (ಕುಮುರಾ. ೨-೧೦೮); ಆಳುಗೆಲಸಕೆ ಕೆಲಬರರಸನ ಬೇಳವೋಳಕೆ ಕೆಲರು ಕೆಲಬರು ಬಾಲೆಯರ ಕೊಳುಕೊಡೆಯ ಬಳಗದ ಬಂಧುಕೃತ್ಯದಲಿ (ಕುವ್ಯಾಭೀ. ೩-೧೪); ವಿಷಮ ಕುಲದಲಿ ಕಾಯದಾಸೆಗೆ ಕೊಳುಕೊಡೆಯ ಕಳವಳಿಸಿ ಮಾಡಿದೊಡೆ (ಪ್ರಭುಲೀ. ೧೦-೮); ವಿಷ್ಣುವರ್ಧನನು . . . ಪಲ್ಲವರೊಡನೆ ತಮ್ಮ ಕೊಳುಕೊಡೆಯ ವಿಷಯವನ್ನು ಚರ್ಚಿಸಿದ್ದನು (ಸವತಿ. ೫೧). **ಕೊಳ್ಳುಕೊಡೆ**: ೨. ತನ್ಮೊಳ್ ಕೊಳ್ಳು [ಪಾಠಾಂ. ಳು]ಕೊಡೆಯಂ ಮಾಡಲುವೇಕೆಂಬ ಭಾಷೆಯಂ ಸಮಕಟ್ಟಿ ಪರ್ನ್ನೆಗಂ (ಪುಣ್ಯಾಸ್ರ. ೩-೫೧ ವ); ಒಳ್ಳಿತೊಳ್ಳಿತು ಮದವಾರಣದೊಳಗಾಡು ಕೊಳ್ಳುಕೊಡೆಯ ಮಾಳ್ಪುದೆಂದು ಪೊಳ್ಳುನುಡಿಯಿದೇಕೆ (ನೇಮಿಸಂ. ೧೬-೧೧೮); ನಿಮ್ಮೊಳಗೆ ನಮ್ಮೊಳಗೆ ಕೊಳ್ಳು [ಪಾಠಾಂ. ಳ್ಳು]ಕೊಡೆಯೇ (ಸಮ್ಯಕೌ. ೮-೧೬). [ಕೊಳ್$_1$ + ಕೊಡ್$_3$]

**ಕೊಳ್ಕೊಳಿಸು** (ಕ್ರಿ). ಕಚ್ಚುವಂತೆ ಮಾಡು; ಕಡಿಯಿಸು: ಮುನಿದಯ್ಯೂಱುಂ ಕುನ್ನಿಗಳನಿತುಮನೊರ್ಮೊದಲೆ ತೋಱಿ ಕೊಳ್ಕೊಳಿಸೆ [ಪಾಠಾಂ. ತೋಱಿ ಕುಕ್ಕುರಿಸಿ] ಮಹಾಮುನಿ ತಳರದೆ ಮೇರುವೊಲಿರೆ (ಯಶೋಚ. ೪-೪೩); "ಕೊಳ್ ಕೊಳ್ ಎಂದು ಛೂ ಬಿಡು" (ಯಶೋಚ. ಸಂ. ಕೋಶ). [ಕೊಳ್$_1$ + ಕೊಳಿಸು]

**ಕೊಳ್ಗಾರ್** (ನಾ). ಒಂದೇ ಸಮನೆ ಸುರಿಯುತ್ತಿರುವ ಮಳೆ; ಧಾರಾಕಾರವಾದ ಮಳೆ: ಸಾಲಿಟ್ಟುವೆರಲವಟ್ಟೆಯೊಳಾಲಿವರಲ್ವೆರಸು ತೋರವನಿ ಕೊಳ್ಗಾರೊಳ್ (ಅನಂಪು. ೯-೮). [ಕೊಳ್$_1$ + ಕಾರ್$_2$]

**ಕೊಳ್ಗುದಿ** 'ಕೋಳ್ಗುದಿ' ನೋ.

**ಕೊಳ್ಗುದಿಗೊಳ್** 'ಕೋಳ್ಗುದಿಗೊಳ್' ನೋ.

**ಕೊಳ್ಗುಳ**, ಕೊಳಗುಳ, ಕೊಳುಗುಳ, ಕೊಳುಗೊಳ, ಕೊಳ್ಗೊಳ$_1$ (ನಾ). ೧. ಕಾಳಗ; ಯುದ್ಧ; ಸಮರ: ಕರ್ಣತಣಿವಿನಮಂದು ನಿಂದಿಱಿದ ಕೊಳ್ಗುಳನಂ ನಡೆ ನೋಟ್ಟಿಹೇಂದ್ರರೊಳ್ (ಪಂಪಭಾ. ೧೧-೪೧); ತನ್ನ ಕೊಂದ ಕೊಳ್ಗುಳಕ್ಕೆ ಬಂದ ಸ್ವಯಂಪ್ರಭೆಗೆ (ಶಾಂತಿಪು. ೫-೬೩ ವ). ೨. ಕಾಳಗದ ಕಣ; ಯುದ್ಧರಂಗ; ರಣಭೂಮಿ: ಸೋಲ್ತು ಕೊಳ್ಗುಳದೊಳಗಿ[ಪಾಠಾಂ. ಕೊಳುಗುಳಂಗಳೊಳ್, ಕೊಳುಗೊಳಂಗಳೊಳ್] ದರ್ಗಗಳ್ (ವಡ್ಡಾರಾ. ೧೮೮-೧೪); ಕವಿಲ್ತಿರ್ದುದು ಕೂಡೆ ಸಂಜೆಗವಿದಂತಾ ದ್ರೋಣನಿಂ ಕೊಳ್ಗುಳಂ (ಪಂಪಭಾ. ೧೨-೫೫); ಕೊಳ್ಗುಳಮಂ ಬಳಸಿ ಚಕ್ರಮಂ ಚಕ್ರವರ್ತಿಶ್ರೀಯುಮಂ ತಮ್ಮನೊಳ್ ನಿಯೋಜಿಸಿದಂ (ಶಾಂತಿಪು. ೪-೫೬ ವ); ನಡಸಿ ಕೊಳ್ಗುಳಕೆ ಪೂಜೆಯನು (ವರ್ಧಚ. ೭-೪೧). **ಕೊಳಗುಳ**: ೧. ಕೊಳಗುಳದೆ ಕೋಟೆಯ ಮಡಿದಡಿಗೆಡದಾಸೆಯು (ಸೌ ಇ ಇ. IX-i, ೨೮೭-೧೬; 1200); ಎತ್ತಣೀ ಕೊಳಗುಳದ ಕಾಲ್ನಡೆಯೆತ್ತಣಾಹವದಭಿಮುಖತೆ (ಕುವ್ಯಾಗ. ೩-೨೨); ಕೊಳಗುಳದೊಳೊಂದಂಬಂ ತೊಟ್ಟೊರ್ವನನಿಸುವಿನಂ (ಅಪ್ರತಿ. ೩೬-೧೬). ೨. ನರಕಬಂಧಂಗಳೆಂಬಿವು ಕೊಳಗುಳಂಗಳೊಳು (ಭಾವಚಿಂ. ೨-೫). **ಕೊಳುಗುಳ**: ೧. ತನ್ನಿಱಿದು ಗೆಲ್ದ ಕೊಳುಗುಳವನ್ನೋಡಲ್ ಚಕ್ರಪಾಣಿಯುಂ ತನ್ನ ಸಹೋತ್ಪನ್ನರುಪೊಡವರೆ ಬಂದು (ಪಂಪಭಾ. ೧೪-೨); ನಿನ್ನೆ ನಮ್ಮ ಕಾದಿದ ಕೊಳುಗುಳದೊಳೇನಾನುಮುೞಿದ ಕಾಕಬಲಮುಮನಿಂದು ನಿರವಶೇಷವಾಗಿ ಕೊಂದು ಬರ್ಪಂ (ಪಂಚತಂ. ೨೩೯-೧೦);

ಸಭೆಯಲಿ ಹಲುಬಿದಳು ಕೊಳುಗುಳಕೆ ಕಂದನ ಕಳುಹಿದವರಿಗೆ ಸಂದುದೇ ಪರಿಣಾಮವೆಂದೆನುತ (ಕುಮಾವ್ಯಾದ್ರೋ. ೬-೧೩) ; ಫಲುಗುಣನಗೆ ಕೊಳುಗುಳದ ಗೀತೆಯೊರೆವಂದು (ಗಿಏಎಂ. ೨೨-೩೯). ೨. ಕೊಳುಗುಳಮಂ ಪೋಲ್ದತ್ತು ಪೂಗೊಳಂ ಕೌರವನಾ (ಗದಾಯು. ೬-೧೩) ; ಕೆರಳ್ದ ತೇಜಿಗಳ ಕಾಲ ದೂಳಿ ನೆಗೆದು ಕೊಳುಗುಳದೊಳ್ ಪಸರಿಸಿ (ಕಬ್ಬಿಗಾ. ೨೮೮); ಒಬ್ಬನೆ ತಿರುಗಿ ಹಾಯ್ದನು ಕೊಳುಗುಳದ ಕೋಳ್ಗುದಿಯ ಕೋಲಾಹಲದ ಕೆಸಱಿನಲಿ (ಕುವ್ಯಾಗ. ೪-೪) ; ಇಳಿದು ಬಳಿಕಸುರೇಂದ್ರನಾ ಕೊಳುಗುಳದ ಮಧ್ಯದಲಿ (ತೊರರಾ. ೬-೨೦-೩೯). **ಕೊಳುಗೊಳ್** : ೧. ಸೋಲ್ತು ಕೊಳುಗೊಳಂಗಳೊಳಿ [ಪಾಠಾಂ. ಕೊಳುಗುಳಂಗಳೊಳಿ, ಕೊಳ್ಗುಳದೊಳಗಿ]ರ್ದಾಗಳ್ (ವಡ್ಡಾರಾ. ೧೮೮-೧೪). **ಕೊಳ್ಗೊಳ್**$_1$ : ೧. ರಣವಿಕ್ರಮನಾನ್ನೆಱತಿಯಡಿಗಾಳ್ವೆಟ್ಟತ್ತು ಸಿಂಭಿಗೆ ಕೊಳ್ಗೊಳದು ಳ್ವೇಟಿ ಎಱದು ಗೆಲ್ದು (ಸೌಇಇ. IX–i, ೪೩-೩ ; 8ನೆಯ ಶತ). [?]

**ಕೊಳ್ಗುಳಂಗೊಳ್**, ಕೊಳ್ಗುಳಗೊಳ್ (ಕ್ರಿ). ೧. ಯುದ್ಧಮಾಡು. ೨. ಕಾಳಗವನ್ನು ಗೆಲ್ಲು : ಪಗೆವರೆಲ್ಲರುಮುಱಿಕ್ಕೆ ಕೊಳ್ಗು [ಪಾಠಾಂ. ಳುಗೊ]ಳಂ ಕೊಳ್ವನಿತು ಪೊೞ್ತಿನಲ್ಲಿ ನಿಲಲಾಱದೆ (ಜೀವಸಂ.೩೪-೧೩ ವ). **ಕೊಳ್ಗುಳಗೊಳ್** : ೨. ತಮ್ಮ ಪಡೆ ಬೞಕ್ಕೆ ಬನ್ದು ಕೊಳ್ಗುಳಗೊಣ್ಡತ್ತು (ಎಕ. X, ಶ್ರೀನಿವಾ. ೬-೯ ; 780). [ಕೊಳ್ಗುಳ + ಕೊಳ್$_1$]

**ಕೊಳ್ಗುಳಗೊಳ್** 'ಕೊಳ್ಗುಳಂಗೊಳ್' ನೋ.

**ಕೊಳ್ಗೆ** (ನಾ). ಕೊಳ್ಳುವಿಕೆ ; ಸ್ವೀಕಾರ : ಪಿರಿಯ ಪಾಲ್ ಅಳ್ಗಳ್ ಕೀೞ್ವೞಿಯ ಕೊಳ್ಗೆಯಿನ್ ತಾಮೆಂದುಮುೞಿಯರ್ (ಅಂತಿಗೊ. ೧೫-೨೯೧) ; ನಿಡಿದುಂ ಕೊಡುಗ್ಗೆಯಲ್ಲದೆ ಕೊಳ್ಗೆಗೆ ಸಡಗರಿಸದ ಕೈಯ ಕಂಡವೀಯೊಂದೆಡೆಯೊಳ್ (ವಸ್ತುನಂ. ೭-೪೮).

[ಕೊಳ್$_1$ + -ಗೆ. / ತಮಿ. ಕೊಳ್ಗೈ]

**ಕೊಳ್ಗೆಸಱ್** 'ಕೊಟ್ಗೆಸಱ್$_2$' ನೋ.

**ಕೊಳ್ಗೊಳ್**$_1$ 'ಕೊಳ್ಗುಳ' ನೋ.

**ಕೊಳ್ಗೊಳ್**$_2$ (ನಾ). ಒಂದು ಪ್ರದೇಶದ ಹೆಸರು (?) : ಆ ಕೆಱೆಯಿನ್ದಂ ತೆಂಕ ಪುಣಸೆಯಿನ್ದಂ ತೆಂಕ ಓಣಿಯ ಮೇರೆಯಾಗಿ ಕೊಳ್ಗೊಳದ ಕೆಯ್ಯ ಬಡಗಣ ಸನ್ದೆ ಮೇರೆಯಾಗಿ (ಸೌಇಇ. IX–i, ೩೩-೨೫ ; 10ನೆಯ ಶತ). [?]

**ಕೊಳ್ತಳಿ** 'ಕೊತ್ತಟಿ' ನೋ.

**ಕೊಳ್ತಿನಿತೊಱೆ** (ನಾ). ಒಂದು ನದಿಯ ಹೆಸರು (?) : ತಸ್ಯ ಸೀಮಾನ್ತರಂ ಕೊಳ್ತಿನಿತೊಱೆಎ ಪೆರಿಪ್ಪೆಎ ವಾಹ್ಣೆಕ್ಕ್ ತುಟ್ಟಿಲುಂ ದೇವಸಾಲೆಯುಂ ಕಬ್ಬರೆಎ ಸೋಮೆಎ (ಎಕ. XVI, ಗುಬ್ಬಿ. ೭೫-೫೦; 733).

[ಕೊಳ್ತಿನ್$_0$ + ತೊಱೆ$_2$]

**ಕೊಳ್ದಪ್ಪು** 'ಕೋಳ್ದಪ್ಪು' ನೋ.

**ಕೊಳ್ಪಡು** 'ಕೋಳ್ಪಡು' ನೋ.

**ಕೊಳ್ಪಳ್ಳಿ** (ನಾ). ಒಂದು ಊರಿನ ಹೆಸರು: ಮರುಕರೆ ವಿಷಯೇ ಕೊಳ್ ಪಳ್ಳಿ ಗ್ರಾಮೇ (ಮೈಆರಿ. ೧೯೧೬, ೧೧-೩೮ ; ?). [ಕೊಳ್$_0$ + ಪಳ್ಳಿ]

**ಕೊಳ್ಪೋಗು** 'ಕೋಳ್ಪೋಗು' ನೋ.

**ಕೊಳ್ಮಗ** (ನಾ). ದತ್ತು ತೆಗೆದುಕೊಂಡ ಮಗ ; ಸಾಕುಮಗ : ಕೊಳ್ಮಗ ಮಾಮುಲಾ ಪೊತ್ತಿ (ಮೈಎಂ. ೧೯೩೨, ೧೯೭ ; ?). 'ಕೊಳ್ಮಗಗೊಳ್' ಪರಾ. [ಕೊಳ್$_1$ + ಮಗ]

**ಕೊಳ್ಮಗಗೊಳ್** (ಕ್ರಿ). ದತ್ತು ತೆಗೆದುಕೊಳ್ಳು ; ದತ್ತುಪುತ್ರನೆಂದು ಸ್ವೀಕರಿಸು : ಅದಿತ್ಯನ ತನುಭವನಂ ಮಾಧವನನಳ್ಕಱಿಂ ಸೋಮಂ ಮೋಹವಶಂ ಕೊಳ್ಮಗಗೊಂಡಂತಪರ್ವರುಮಾತನಿಂದೆ ಮುದಮಂ ಪಡೆದರ್ (ಎಕ. VI, ಕಡೂರು. ೬೬-೨೩ ; 1172). [ಕೊಳ್ಮಗ + ಕೊಳ್$_1$]

**ಕೊಳ್ಮಗಳ್** (ನಾ). ದತ್ತು ತೆಗೆದುಕೊಂಡ ಮಗಳು ; ಸಾಕುಮಗಳು. 'ಕೊಳ್ಮಗಳ್ಗೊಳ್' ಪರಾ. [ಕೊಳ್$_1$ + ಮಗಳ್]

**ಕೊಳ್ಮಗಳ್ಗೊಳ್** (ಕ್ರಿ). ದತ್ತುಮಗಳೆಂದು ಸ್ವೀಕರಿಸು : ಗಂಧರ್ವದತ್ತೆಯ ಗಾಂಧರ್ವಗಂಧಿಯಪ್ಪ ಕಳಾಕೇಳಿಗಂ . . . ಗಾಡಿಗಂ ಬಯಸಿ ಕೊಳ್ಮಗಳ್ಗೊಂಡನ್ (ಅರ್ಧನೇ. ೬-೧೮ ವ).

[ಕೊಳ್ಮಗಳ್ + ಕೊಳ್$_1$]

**ಕೊಳ್ಮಿಗ** 'ಕೋಟ್ಮಿಗ' ನೋ.

**ಕೊಳ್ಮಿದುಳ್** 'ಕೊಟ್ಮಿದುಳ್' ನೋ.

**ಕೊಳ್ಮಿದುಳು** 'ಕೊಟ್ಮಿದುಳ್' ನೋ.

**ಕೊಳ್ವಡೆ** (ಕ್ರಿ). ಸ್ವೀಕರಿಸು ; ಪರಿಗ್ರಹಿಸು (?) : ಉಪವಾಸ ನೀರ್ಗುಡಿಗುಡಿದು ಮಾರ್ಗದಿ ಬಂದೆವ್ವೆ ಕೊಳ್ವಡೆದು ಸಲಹೆಂದತ್ತರವನೀ ಸುರರು ರಾಮನಿಗೆ (ಪಕುಥಾ. ೨೨-೩೦). [?]

**ಕೊಳ್ವು** (ನಾ). ತೆಗೆದುಕೊಳ್ಳುವಿಕೆ ; ಸ್ವೀಕಾರ. 'ಕೊಳ್ವುಕೊಡೆ' ಪರಾ. [ಕೊಳ್$_1$ + -ವು]

**ಕೊಳ್ವುಕೊಡೆ** (ನಾ). = ಕೊಳ್ಕೊಡೆ ೨ : ನಿಮ್ಮೊಳಗೆ ನಮ್ಮೊಳಗೆ ಕೊಳ್ವು[ಪಾಠಾಂ. ಕೊಳ್ಳು]ಕೊಡೆಯೇ ಬಯಲ ಹಮ್ಮನಾಡಲದೇತಕೆ (ಸಮ್ಮಕೌ. ೮-೧೭). [ಕೊಳ್ವು + ಕೊಡ್$_3$]

**ಕೊಳ್ವುಗೆ** (ನಾ). ಒಂದು ಊರಿನ ಹೆಸರು : ಮುಳ್ಗುಂದದ ಶ್ರೀಪಾಳೇಶ್ವರದ ಮಟಮುಮು[೦][ಕೊಳ್ವು]ಗೆಯ ಸಿವಾಲಯಮು ಲೋಕಪಾಳಸಮೇತಂ (ಸೌಇಇ. XI–i, ೧೦೩-೧೮ ; 1070). [?]

**ಕೊಳ್ವೆ**, ಕೊಳುವೆ (ನಾ). = ಕೊಳ್ವು : "ಕಷ, ಚೀವ್ಯ-ಸಂವರಣಾದಾನಯೋಃ, ಕೊಡಪಿನೊಳಂ ಕೊಳ್ವೆಯೊಳಂ" (ಕಾಶಕ್ಯ. ೧೫೪). **ಕೊಳುವೆ** : ಕೊಡುಗೆಯಲ್ಲೆ ಕೊಳುವೆಯಿದೆ ರಚಿಸಬೇಡ ರೌರವ (ಅರಳು. ೪೫೩-೩). [ಕೊಳ್$_1$ + -ವೆ]

**ಕೊಳ್ಳ** (ನಾ). ೧. ತಗ್ಗಾಗಿರುವ ಪ್ರದೇಶ ; ಹಳ್ಳ ; ಕಂದರ : ಪೆರ್ಮರಂ ಪೊದಱು ಪಳ್ಳ ಕೊಳ್ಳಂಗಳೆಂಬಿನಿತೆಡೆಯೊಳಂ ತೊಟಲ್ತು (ಕಾದಂಉ. ೫೪೦) ; ನೆಲನಂ ನೆಱೆ ಶೋಧಿಸಿ ಕೊಳ್ಳನೇಱನಂ [ಪಾಠಾಂ. ಕೊಳನೆಳನಂ] ತದಱೊಳೆ ಬಿತ್ತಿ (ಲೋಕೋಪ. ೬-೩) ; ಗಿರಿಯ ತಪ್ಪಲೊಳಗ್ಗಳಮಪ್ಪ ಕೊಳ್ಳದೊಳ್ (ಧರ್ಮಾಮೃ. ೮-೨೦) ; ಕೊಳ್ಳಂಗಳಂ ಕೊಳಂಗಳನೀಸುತಂ ದಾಂಟಿ (ಇಳರ. ೫೪-೪) ; ಧರೆ ತಗ್ಗಿ ಬಟಾಕ್ಕದು ಕೊಳ್ಳವಾದುದು (ನೇಮಿತು. ೧೧-೫೬) ; ಕೆಱೆಬಾವಿ ಹಳ್ಳ ಕೊಳ್ಳಗಳು ಬೆಂಚೆಗಳು (ಧರಚ. ೩೪-೬೨) ; ಹಾದಿಯಲಿ ಹಳ್ಳವಿದೆ ಮುಳ್ಳಿಡಿದ ಕೊಳ್ಳವಿದೆ (ಪಾಂಚಜ. ೪೬). ೨. ಗಹ್ವರ ; ಗುಹೆ : "ನಿಕುಂಜಂ, ಗಹ್ವರಂ – ಈ ೨ ಕೊಳ್ಳವು" (ಹಲಾಯು. ೨೮-೧೩) ; ಗಹ್ವರದ ಕೊಳ್ಳದ ಕೋಹಿನಲಿ (ಕುವ್ಯಾಸ. ೩-೫೭). 'ಹಳ್ಳಕೊಳ್ಳ' ಪರಾ.

**ಕೊಳ್ಳಕ್ಕೆ** (ನಾ). = ಕೊಳ್ಳ ೧ : ಕೊಳ್ಳಕ್ಕೆಯಲ್ಲಿ ನೀರು ನಿಂತಿದೆ (ರೂಢಿ).

[< ಕೊಳ್ಳ]

**ಕೊಳ್ಳಗ** (ನಾ). ಒಂದು ವಂಶದ ಹೆಸರು (?) : ಕಪಿಗೋತ್ರ ಪ್ರತಿಷ್ಠಿತರು ಕೊಳ್ಳಗರಧಿಷ್ಠಿತರಪ್ಪ ಶ್ರೀಮತು ಸೋವಿಯಣ ಭಟ್ಟರ ಮಗಂ ನಾರಣಭಟ್ಟರ ಮಗಂ (ಎಕ. VII, ಶಿಕಾರಿ. ೧೩-೧೯ ; 1085). [?]

**ಕೊಳ್ಳಮ್ಮಗಾವುಂಡ** (ನಾ). ಒಬ್ಬಾತನ ಹೆಸರು : ಬನ್ದಗಾವುಣ್ಡನುಂ ಕೊಳ್ಳಮ್ಮ ಗಾವುಣ್ಡನುಂ (ಎಕ. XI, ಹೊಳಲ್ಕೆ. ೩೦-೧೧ ; 964).

[ಕೊಳ್ಳಮ್ಮ$_0$ + ಗಾವುಂಡ (< ಗಾಮುಂಡ)]

**ಕೊಳ್ವಾರ** (ನಾ). = ಕೊಳ್ಳ ೨ : ಅಡವಿಯಲ್ಲಿ ಒಂದು ಕೊಳ್ವಾ [ಪಾಠಾಂ. ಳ್ಳ]ರದಲ್ಲಿ ಹುಲ್ಲು ಬೆಳೆದಿರಲಲ್ಲಿ ದನ ಪೋಗಲು (ಭೈರಸೂ. ೨೮೨). 'ಕೊನ್ನಾರ' ಪರಾ. [< ಕೊಳ್ಳ]

**ಕೊಳ್ಳಿ$_1$** (ನಾ). ೧. ಉರಿಯುವ ಕಟ್ಟಿಗೆ: "ಅಲಾತಂ, ಉಲ್ಮುಕಂ - ಈ ೨ ಕೊಳ್ಳಿ" (ಹಲಾಯು. ೧೨-೬೭); ಉರಿವ ಕೊಳ್ಳಿಯಂ ಪಿಡಿದು ಜಗುನೆಯಂ ಪಾಯ್ವಾಗಳ್ (ಪಂಪಭಾ. ೩-೩೩ವ); ತತ್ಪರಿವಾರಮು ನೊಂದೆ ಕೊಳ್ಳಿಯೊಳಿಂದೆ ಸುಟ್ಟಪೆಂ (ಪಂಚತಂ. ೨೬೫-೧೨); ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುಱಿಸುವಂತೆ ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ (ಬಸವ. ೬೬೧); ಉರಿವ ಕೊಳ್ಳಿಯಂ ಕೊಂಡು ಕುಣಿವ ಮರುಳ ಕೈಯ ಕೊಳ್ಳಿಗಳ ಬೆಳಗಿನೊಳ್ (ಬಂಹರಿ. ೨-೧೧ವ); ಕನಲಿ ಫಲುಗುಣನು . . . ಕೊಳ್ಳಿಯೊಳಿಟ್ಟ ನಗ್ನಿಯ ನೆನೆದು (ಕುಮಾವ್ಯಾಆ. ೧೧-೩೩); ಕಡಲೊಳಗೆ ಕೊಳ್ಳಿಯನು ಸುರಿದರೆ ಬಿಡದೆ ಕುದಿವುದೆ (ಕೌಶಿರಾ. ೩೫-೨೭); ಹಳ್ಳಿ ದೇವರಿಗೆ ಕೊಳ್ಳಿ ದೀಪ (ಗಾದೆ). ೨. ಕಪ್ಪುಬಣ್ಣ. 'ಕೊಳ್ಳಿವಣ್ಣ' ಪರಾ.

[ದೇ. ‖ ತಮಿ. ಮಲ. ಕೊಳ್ಳಿ; ತುಳು. ಕೊಲ್ಲಿ, ಕೊಳ್ಳಿ]

**ಕೊಳ್ಳಿ$_2$** (ನಾ). ಒಂದು ಬಗೆಯ ತೆರಿಗೆ (?): ಈನಿತ್ತ ಧರ್ಮ್ಮಮಾನ್ ಕಾದೋರಾ ಕುಲಮ್ ಪೆಟ್ಟುಗೆ ಪಾಲಿವು ಕೊಳ್ಳಿಯುಂ ಅರಮನೆತಾಣದ ಭಾಗಮುಮ್ ಅರ್ಚ್ಚಕಮ್ಮೆನ್ತಿಯಕಿ ಕೊಟ್ಟಾ (ಎಕ. VI, ಕೊಪ್ಪ. ೩೭-೯; 675); ಪರಿಕಿಸದೀ ಧರ್ಮ[ದೊ]ಳರಸರ ಕಾಣಿಕೆ ಕೊಳ್ಳಿಯರುವಣಂ ಕಿಱುಸುಂಕಂ ಪುರಧರ್ಮ್ಮಂ ಬಣ್ಣಿಗೆಯೆಂದರೆವೀಸಮನಳಿಪಿ ಕೊಣ್ಡವಂ ಚಾಣ್ಡಾಳಂ (ಕಇ. II, ೧೨-೫೯; 1114). [?]

**ಕೊಳ್ಳಿಕಳ್ಳ** (ನಾ). ಕೊಳ್ಳಿ ಹಿಡಿದುಕೊಂಡು ಕಳ್ಳತನಮಾಡು ವವನು; ಪಂಜುಗಳ್ಳ: ಇರುಳುಂ ಪಗಲುಂ ಪರಿವ ಕೊಳ್ಳಿಕಳ್ಳನಾದಡಂ ಮನ್ನೆಯ ಮಹಾಮಂಡಲೇಶ್ವರನಾದೊಡಂ (ಎಇ. XXIII, ೩೦-೪೫; 1265); ಧನಧಾನ್ಯಾದಿ ವಿಭವಂಗಳುಂ ರಕ್ಷಕರಲ್ತೆಂಬುದು ದಾಯಿಗರ್ ಪಗೆವರ್ ಕೊಳ್ಳಿಕಳ್ಳರ್ ಪಳ್ಳಂ ಮೊದಲಾದುದೆಱಿಂದಱಿದು ಪೋಪುದಱಿಕೊಳ್ ತಿಳಿದುದು (ಚಕಬ. ೨೬). [ಕೊಳ್ಳಿ$_1$ + ಕಳ್ಳ$_1$]

**ಕೊಳ್ಳಿಕಾಳಗ** (ನಾ). ಬೆಂಕಿಯ ಕಾಳಗ; ಬೆಂಕಿಯುದ್ಧ: ಕೊಳ್ಳಿ ಬಾಲದಿ ಸುಟ್ಟ ಹನುಮನು ಉಳ್ಳುದೆಲ್ಲವ ಹಿಂದೆಯಿದು ಮರಗೊಳ್ಳಿ ಯಾಯಿತು . . . ಕೊಳ್ಳಿಕಾಳಗ ಕಣ್ಗೆ ಕೌತುಕವಾಯ್ತು ಕಾಂಬರಿಗೆ (ಕೌಶಿರಾ. ೩೨-೭). [ಕೊಳ್ಳಿ$_1$ + ಕಾಳಗ (< ಕಾಳೆಗ)]

**ಕೊಳ್ಳಿಕೊಡು** (ಕ್ರಿ). ಬೆಂಕಿಯಿಡು; ಉರಿಹಚ್ಚು: ಊರಿಗೆ ಕೊಳ್ಳಿ ಕೊಟ್ಟು ಬೂದಿ ಮಾಡ್ಯಾರೋ ಹಲಗಲಿ ಸುಟ್ಟು (ಪ್ರಬಂಧ. ೬೬); ಆತ್ಮರಾಜನಾದ ಬಲು ಸಿಟ್ಟಾ ಮೂರು ದಾರಿಗೇ ಕೊಳ್ಳಿ ಕೊಟ್ಟಾ (ಗ್ರಾಮಾಯ. ೫೮೦). [ಕೊಳ್ಳಿ$_1$ + ಕೊಡು$_1$]

**ಕೊಳ್ಳಿಗದೇವ** (ನಾ). ಒಬ್ಬಾತನ ಹೆಸರು: ಶ್ರೀಮತ್ ಕೊಳ್ಳಿಗದೇವಂ ಪ್ರಿಥವೀರಾಜ್ಯಂಗೆಯ್ಯೆ (ಎಕ. VIII, ಸೊರಬ. ೫೩೧-೨; 967).

[ಕೊಳ್ಳಿಗ$_0$ + ದೇವ]

**ಕೊಳ್ಳಿಗೊಳು** (ಕ್ರಿ). ೧. ಬೆಂಕಿ ತಾಗು; ಉರಿಹತ್ತು. ೨. (ಆಲಂ) ಕೋಪಗೊಳ್ಳು; ಉರಿದೇಳು: ಉಳ್ಳುದನಾಡೆ ಕೊಳ್ಳಿಗೊಳುವರ್ (ರತ್ನಾಕ. ೩೨). [ಕೊಳ್ಳಿ$_1$ + ಕೊಳು (< ಕೊಳ್$_1$)]

**ಕೊಳ್ಳಿದೆವ್ವ** (ನಾ). ಕೊಳ್ಳಿಹಿಡಿದು ಓಡುವ ಹಾಗೆ ಕಾಣುವ ದೆವ್ವ, — ಪಿಶಾಚಿ: ಕೊಳ್ಳಿದೆವ್ವಗಳದುರೆ ಮರಹೊದರುಗಳು ಒದರೆ (ಅರಳು. ೪೪೮-೧೫); ಕೊಳ್ಳಿದೆವ್ವಗಳು ಬಳ್ಳಿಗಟ್ಟುವುವು - ಕರಿನೀರ ಕಂದರದಲ್ಲಿ (ಚಿಂತನ. ೨); ಸುತ್ತುಮುತ್ತು ಭಯ; ಸಂಶಯ ಕೊಳ್ಳಿ ದೆವ್ವ ಕುಣಿದಿವೆ (ನೆಲಮು. ೨೪). [ಕೊಳ್ಳಿ$_1$ + ದೆವ್ವ]

**ಕೊಳ್ಳಿಪಿಶಾಚಿ** (ನಾ). = ಕೊಳ್ಳಿದೆವ್ವ: ಆ ಬೆಳಕು ಕೊಳ್ಳಿಪಿಶಾಚಿ ಯಾಗಿರಬಹುದೆ ಎಂಬ ಯೋಚನೆಯು ಹುಟ್ಟುವುದು (ಕಪಾಕುಂ. ೧೩).

[ಕೊಳ್ಳಿ$_1$ + ಪಿಶಾಚಿ]

**ಕೊಳ್ಳಿಪುಳ್ಳಿ** (ನಾ). ಸುಟ್ಟು ಕರಿಕಾದ ಕಡ್ಡಿ: ದಶಕಂಠನ ಕಂಠನಾಳಂ ಗಳಂ ಕೊಳ್ಳಿಪುಳ್ಳಿಯಪ್ಪಿನೆಗಂ ಸದೆದು ಕೊಂದು (ರಾಮಾಶ್ವ. ೧೪೨-೧೧).

[ಕೊಳ್ಳಿ$_1$ + ಪುಳ್ಳಿ]

**ಕೊಳ್ಳಿಬೀಜ** (ನಾ). ಒಂದು ಬಗೆಯ ಸಸ್ಯ, ಗೌರಿಬೀಜ, ಕೊಳ್ಳಿಬೀಜ (ವೈಶಿಗಿ. ೪೬-೯೧೦). [ಕೊಳ್ಳಿ$_0$ + ಬೀಜ]

**ಕೊಳ್ಳಿವಣ್ಣ** (ನಾ). ೧. ಕರಿಬಣ್ಣ. ೨. ಕರಿಯಬಣ್ಣದ ಪ್ರಾಣಿ; ಕರಡಿ: ಇಬ್ಬರನಿಬ್ಬರಿಯನೊಡೆದು ಕೊಳ್ಳಿವಣ್ಣನ ಬಣ್ಣಗೆಡಿಸಿದು ದಳ್ಳಿಱುದುದಾ ಕಾಟವನು . . . ಕೊಳ್ಳದೊಳಗೆಂದುಲಿವ ಬೇಡರ ನೆರವಿ ಸಂಧಿಸಿತು (ಸಾಳ್ವಭಾ. ೫-೩೫). [ಕೊಳ್ಳಿ$_1$ + ಬಣ್ಣ]

**ಕೊಳ್ಳಿವಾಲ** (ನಾ). ಕರಿಮೈ ಹಾಗು ಬಿಳಿ ಬಾಲವುಳ್ಳ ನಾಯಿ: ಕುಡಿವಾಲನ ಕೊಳ್ಳಿ[ಪಾಠಾಂ. ಕೋಳಿ]ವಾಲನ ಬೆಳ್ಳನ ನಿಡುಗಾಲ ಬಲು ಕುಕ್ಕುರನಾ ಮುಡಿಗಿವಿಯಲಗನ ಬಿಡು ತಡೆ ಹಿಡಿಯೆಂದು ನುಡಿವರು ಬಿಯದರು (ರಾಮಾವಿ. ೧೫-೬೮). [← ತಮಿ. ಕೊಳ್ಳಿವಾಲಿ]

**ಕೊಳ್ಳಿವೀಸಿಸು** (ಕ್ರಿ). ಯುದ್ಧವನ್ನು ಆರಂಭಿಸುವುದರ ಸಂಕೇತವಾಗಿ ಉರಿಯುವ ಕೊಳ್ಳಿಯನ್ನು ಬೀಸುವಂತೆ ಮಾಡು: ಬೇಗಮನು ವರಮಂ ಸಾರಲ್ವೇಟ್ಟಿರುಳೊಳ್ ಕೊಳ್ಳಿವಿ[ವೀ]ಸಿಸಿಯುಂ ರವಳಿ ಘೋಷಿಸಿಯುಂ (ಶಾಂತಿಪು. ೫-೯೫ವ); ಆ ರಭಸಕ್ಕೆ ರೌದ್ರಮಾಗೆ ಕೊಳ್ಳಿವೀಸಿಸೆ (ಮಹಾನೇ. ೧೧-೧೩೨ವ).

[ಕೊಳ್ಳಿವೀಸು + -ಇಸು$_3$]

**ಕೊಳ್ಳಿವೀಸು** (ಕ್ರಿ). (ಯುದ್ಧವನ್ನು ಆರಂಭಿಸುವುದರ ಸಂಕೇತವಾಗಿ) ಉರಿಯುವ ಕೊಳ್ಳಿಯನ್ನು ಬೀಸು: ಎರಡುಂ ಬೀಡುಗಳೊಳಂ ಭೋರೆಂದಾರ್ದು ರವಳಿ ಘೋಷಿಸಿ ಕೊಳ್ಳಿವೀಸಿದಾಗಳ್ (ಪಂಪಭಾ. ೧೦-೩೫ವ); ಕೊಳ್ಳಿನೆ ಕೊಳ್ಳಿವೀಸೆ ಪಡೆಯಂದೆರಡುಂ ದಿಗಧೀಶರೋಡಿ ದರ್ (ನೇಮಿಪು. ೧೧-೧೨೩); ಕಾದಲರೊರ್ವರೊರ್ವರೊಳಳುರ್ಕೆಯ ನೀಯೆ ನಿಮಿರ್ಕೆ ಸೊರ್ಕಿನಿಂ ಮೋದಿದ[ದೊಂ]ದು ಮಾಣಿಕದ ಮುದ್ರಿಕೆ ಯೊಪ್ಪದೆ ಕೊಳ್ಳಿವೀಸಿದಂತಾದುದು (ಸೂಕ್ತಿಸು. ೧೪-೧೭). 'ಕೆಯ್ವೀಸು' ಪರಾ. [ಕೊಳ್ಳಿ$_1$ + ಬೀಸು$_1$]

**ಕೊಳ್ಳಿವೆಳಗು** (ನಾ). ಕೊಳ್ಳಿಯ ಬೆಳಕು: ಜಳಜಸಖನಂ ನಿರೀಕ್ಷಿಸೆ ಬಳಹೀನರ್ ಕೊಳ್ಳಿ[ಪಾಠಾಂ. ಳ್ಳ]ವೆಳಗಿನೊಳ್ ಪೆಱುಗುಮವಳ್ (ಜಾತಕ. ೪-೧೧). [ಕೊಳ್ಳಿ$_1$ + ಬೆಳಗು$_2$]

**ಕೊಳ್ಳಿಸು** 'ಕೊಳಿಸು' ನೋ.

**ಕೊಳ್ಳಿಹಾಯು** (ಕ್ರಿ). ಕಪ್ಪಾಗು; ಕರಿಕಾಗು; ನಿಸ್ಸಾರವಾಗು (?): ಅರಿಷಿಣವನ್ನು ಹಗೆಯಲ್ಲಿ ಹಾಕಿದರೆ ಕೊಳ್ಳಿಹಾಯುವವು (ಕೃಷಿಪ್ರ. ೧೮೯).

[ಕೊಳ್ಳಿ$_1$ + ಹಾಯು (< ಪಾಯ್$_1$)]

**ಕೊಳ್ಳಿಹೇದೆ** (ನಾ). = ಕೊಳ್ಳಿದೆವ್ವ: ಕೊಳ್ಳಿಹೇದೆಗಳೆನಲ್ ಸುಡಿಸಿದರ್ ಬಳಿಕವಳ ಮಿಳ್ಳಿಸುವ ಬಾಳ್ವಲೆಯ ಪೊಳ್ತು ಬಳಿವಿಡಿದೆ (ಕಾಲೂರ. ೧೬೯-೩೭೪). [ಕೊಳ್ಳಿ$_1$ + ಹೇದೆ]

**ಕೊಳ್ಳು$_1$** 'ಕೊಳ್$_1$' ನೋ.

**ಕೊಳ್ಳು$_2$** (ನಾ). ಒಂದು ಬಗೆಯ ದ್ವಿದಳಧಾನ್ಯ; ಹುರುಳಿ: "ಅಲಸಂದೆ ರಾಜಮಾಷಂ ಕುಳುತ್ಥಕಂ ಕೊಳ್ಳು" (ವಸ್ತುಕೋ. ೯೫-೧೮).

[ದೇ. ‖ ತಮಿ. ಕೊಳ್; ಮಲ. ಕೊಳ್ಳು; ತುಳು. ಕುಡು; ಪರ್ಜಿ. ಕೊಳ್]

**ಕೊಳ್ಳುಕೊಡುಹ** (ನಾ). ಕೊಳ್ಳುವುದು ಹಾಗು ಕೊಡುವುದು; ಕ್ರಯವಿಕ್ರಯ: "ಕ್ರಯಂ ವಿಕ್ರಯಂ ಕೊಳ್ಳುಕೊಡುಹಂ" (ಮಂಗರಾ. ೧೦೨-೨). [ಕೊಳ್ಳು$_1$ (< ಕೊಳ್$_1$) + ಕೊಡುಹ]

**ಕೊಳ್ಳುಕೊಡೆ** 'ಕೊಳ್ಕೊಡೆ' ನೋ.

**ಕೊಳ್ಳಿ** (ನಾ). ೧. ಸುಲಿಗೆ; ಸೂರೆ; ಲೂಟಿ: ಕೆಮ್ಮಗೆ ಕೊಳ್ಳಿ [ಪಾಠಾಂ. ಳ್ಳ]ಯು ಮನ್ನೆಯರಂ ಪೊಗಟ್ಟಿಂದದೆ (ಸಮಪ. ೮–೩೮); ದೊರೆಗಳನು ಥಟ್ಟಿಸಿ ಸೆಳೆದು ಬಹು ಧನದ ಭಾರಣೆಯ ಮುಂಗುಡಿಯ ಕೊಳ್ಳಿಗಳೋರಣಿಸಿ ತುದಿಗೇಱಿ ಸಿದ್ಧರ ಚಾರಣರ ವಿ ದ್ಯಾ ಧ ರ ರ ಮುತ್ತಿದರು ಮನ್ನಿಸದೆ (ಕುವ್ಯಾಸ. ೩–೬೧); ಕೊಳ್ಳಿನಾಯಕ ಒಂದು ಕೋಟಿ ಕೆಡಹದ ಮುನ್ನ (ವಾದಿಕೀ. ೧೩೬–೧೩); ಕೊಳ್ಳಿಗೆ ಆಸೆಪಡುವ ಹಲವು ನಾಯಕರನ್ನು ಈ ರಾಷ್ಟ್ರಕೂಟರು ಕೂ ಡಿ ಸಿ ದ್ದಾ ರೆ (ಶಾಂತಲಾ. ೧೯೩). ೨. ಕೊಳ್ಳಿಹೊಡೆದ ವಸ್ತು; ಸುಲಿಗೆಯ ದ್ರವ್ಯ: ಹೋಗಿ ತನ್ನ ಕೊಳ್ಳಿಯನ್ನು ಹಿಡಿದು ತಂದೇ ತರುವನು (ಮುಂಗಾಮು. ೫೮); ಕೊಳ್ಳಿ ಎಲ್ಲವನ್ನೂ ಹೊತ್ತುಕೊಂಡು ಊರ ಹೊರಗೆ ಬರುವ ವೇಳೆಗೆ ಮೊದಲನೆಯ ಜಾವದ ಕೋಳಿಯು ಕೂಗಿತ್ತು (ಪ ಂ ಚಾ ವ್ಯ. ೩೫); ಕೊಳ್ಳಿಯವರು ಕೊಳ್ಳಿಗತ್ತರು ಸೂರೆಯವರು ಸೂರೆಗತ್ತರು (ಗಾದೆ).

[ದೇ. ‖ ತಮಿ. ಕೊಳ್ಳೈ; ಮಲ. ಕೊಳ್ಳ; ತೆಲು. ಕೊಲ್ಲ]

**ಕೊಳ್ಳಿಗ** (ನಾ). ಸುಲಿಗೆಗಾರ; ಲೂಟಿಗಾರ; ದರೋಡೆಖೋರ: ಮ ಂ ಡ ಳಿ ಕ ರೂ ರು ಗ ಳ ಬಿಟ್ಟೋಡಿದರು ಕೊಳ್ಳಿಗರ ಕಾಲ್ದೂಳಿಗೆ [ಪಾಠಾಂ. ಮನ್ನೆಯರಾಂಪರೇ ಚತುರಂಗ ಪದಹತಿಗೆ] (ಕುವ್ಯಾಸ. ೫–೩); ಜಳ್ಳುಗರ ಜಾಳುಗರ ಕೂಟದ ಕೊಳ್ಳಿಗರ ಕೊಂ ದು ಬ್ಬಿ ಗಿ ಚ್ಚಿ ನ ಕೊಳ್ಳಿಗಿದೆಲಾ ಕಲ್ಪದಂಭೋರಾಶಿ (ತೊರರಾ. ೬–೩೨–೩೪).

[ಕೊಳ್ಳಿ + -ಗ$_3$]

**ಕೊಳ್ಳಿಗಾರ** (ನಾ). = ಕೊಳ್ಳಿಗ: (ಶಿ).

[ಕೊಳ್ಳಿ + -ಕಾರ$_1$ (<-ಕಾಱ)]

**ಕೊಳ್ಳಿಗೊಳ್** (ಕ್ರಿ). ಸುಲಿಗೆ ಮಾಡು; ಸೂರೆಗೊಳ್ಳು; ಲೂಟಿ ಮಾಡು: ಕಳ್ಳರ್ ಪಟವೊಡವೆಗಳಂ ಕೊ ಳ್ಳಿ ಗೊ ಳು ತ್ತಿ ರೆ ಯು ಂ (ಚಿಕವಿ. ೬–೨೬೬). [ಕೊಳ್ಳಿ + ಕೊಳ್$_1$]

**ಕೊಳ್ಳಿಬಾಕ** (ನಾ). ಕೊ ಳ್ಳಿ ಯಿ ಂ ದ ಜೀವಿಸುವವನು: ಈಗ ಶಿವಾಜಿಯು ಕಡೆಯ ಕೊಳ್ಳಿಬಾಕರ ಕೈಗೆ ಬೀಳದಂತೆ ಕೋಶಿಯನ್ನು ಕಾಪಾಡಿಕೊಳ್ಳುವಾಗ (ಭಾರವೀ. ೧೯೮). [ಕೊಳ್ಳಿ + ಬಾಕ]

**ಕೊಳ್ಳಿಹೊಡೆ** (ಕ್ರಿ). = ಕೊಳ್ಳಿಗೊಳ್: ಆರ್ಯನೆನಗೆ ಒಂದೆ ಬೇಕು ತುಳಿಯಬೇಕು ಕೊಳ್ಳಿಹೊಡೆದ ವಿಧಿಯನು (ಆರ್ಯಕ. ೧೧೨); ಅವನ ಸೈನ್ಯ ಅನೇಕ ವಸ್ತುಗಳನ್ನು ಕೊಳ್ಳಿಹೊಡೆಯಿತು (ಪ್ರವಾಇ. II, ೧೮೫); ಕಾಡು ಬೆಟ್ಟ ಸೇರಿಕೊಂಡು ಸಂದರ್ಭ ಸಿಕ್ಕಿದಾಗಲೆಲ್ಲ ದಾರಿಕಾರರನ್ನು ಹಿಡಿದು ಕೊಳ್ಳಿಹೊಡೆಯುತ್ತ ಜೀವನಸಾಗಿಸಿದ್ದರು (ಅಶ್ರಮು. ೫೦); ದಂಡೆತ್ತಿ ಹೋಗಿ ಕೊಳ್ಳಿಹೊಡೆಯುವ ಕಾಲ (ಷಟ್ಪರ. ೨೮).

[ಕೊಳ್ಳಿ + ಹೊಡೆ$_1$ (< ಪೊಡೆ$_1$)]

**ಕೊಳ್ಳಿಹೋಗು** (ಕ್ರಿ). ಸೂರೆಹೋಗು; ಸುಲಿಗೆಯಾಗು; ಲೂಟಿಯಾಗು: ನಿನ್ನನ್ನು ಕಂಡಮಾತ್ರದಿಂದಲೆ ಮನ್ಮಥಬಾಣಗಳಿಂದ ನನ್ನ ಮನಸ್ಸು ಕೊಳ್ಳಿಹೋಯಿತು (ಕೃವಾಅ. ೧೫೪); ದುಡ್ಡೇನು ಕೊಳ್ಳಿ ಹೋಗುತ್ತಿದೆಯೇ ನಿಮಗೆ? (ಮಹಾಗ. ೩೫೪); ವಿಶ್ವಾಸ ಕೊಳ್ಳಿ ಹೋಗೋದು ಅಪ್ಪರಲ್ಲೇ ಇದೆ (ಚಂದತೋ. ೧೭೧).

[ಕೊಳ್ಳಿ + ಹೋಗು$_1$ (< ಪೋಗು$_1$)]

**ಕೊಱಂಡು**, ಕೊರಡು$_1$, ಕೊಱಡು (ನಾ). ೧. ಒಣಗಿದ ಮರದ ತುಂಡು; ಮೋಟುಮರ; ದಿಮ್ಮಿ: ಸುಱಿಗಾಳಿಗೆ ಸುಱಿಯೆ ನೆಗೆದು ಪಾಱುವ ತಱಗೆಲೆಯ ತುಱುಗಲಂ ಕಿಱುವಕ್ಕಿವಿಂಡೆಂದು ಕೊಱಂಡುಗಳಂ ಮಡು ಮಿಡಿವಿಲ್ಲೊಳೆಸಲೆಸಗಿ ಮಱುಗುವ ತುಱುಗಾವ ಕಿಱುಕುಳದ ಕೆಳೆಯರುಮಂ ನೋ ೞ ದು ತ್ತು ಂ (ಕಬ್ಬಿಕಾ. ೨೩೪). **ಕೊರಡು**$_1$: ೧. ಬುದ್ಧಿಯು ಮರದ ಕೊರಡಾಗಿರಲಿಲ್ಲ (ಮುನಿಮಾ. ೬); ನಿಜಕ್ಕೂ ಆಗ ನನ್ನ ಹೃದಯ ಕೊರಡಿನಂತೆ ಚೇತನಾಶೂನ್ಯವಾಗಿದ್ದಿರ ಬೇಕು (ಬಾಣಅ. ೬೧); ನರಡು ಮನುಷ್ಯ ಕೊರಡಿಗೆ ಸಮಾನ (ಗಾದೆ). ೨. ಹೊಲ, ಗದ್ದೆಗಳಲ್ಲಿ ಮಣ್ಣುಹೆಂಟೆಗಳನ್ನು ಪುಡಿಮಾಡಲು ಬಳಸುವ ಸಾಧನ; ಹಲುಬೆ: ಆ ಮಕ್ಕಿ ಗದ್ದೆಯೂ ಉತ್ತು, ಕೊರಡು ಹೊಡೆದು ನೀರು ಕಟ್ಟಿ ಸಸಿ ನೆಡಿಸಿಕೊಳ್ಳಲು ಸಿದ್ಧವಾಗಿ ನಿಂತಿತ್ತು (ಮಲೆಮ. ೭೫೩). ೩. (ಅಲಂ) ನೀರಸ; ಅರಸಿಕ: ಎಷ್ಟು ದಿನ ಹೀಗೆ ಬ್ರ ಹ್ಮ ಚಾ ರಿ ಕೊರಡಾಗಿರುತ್ತಾನಂತೆ ಅವನು (ಸ್ವಪ್ನಹೊ. ೨೩೦). **ಕೊಱಡು**: ೧. "ಕೊಱಡೆಂದು ಸ್ಥಾಣುವಕ್ಕು" (ಕವಿಕಂ. ೨೪೮); ನಟ್ಟಿರ್ದ ಕೊಱಡಂ ಕಿಟ್ಟು ಕಳೆದು (ಧರ್ಮಾಮೃ. ೧೨–೧೧೧); ನೀನೊಲಿದರೆ ಕೊಱಡು ಕೊನರುವುದಯ್ಯಾ (ಬಸವ. ೬೬); ಮುಱುಡಿರ್ದೊಂದಾಲದ ಕೊಱಡಂ ತಂದು ನಟ್ಟು (ಬಂಹರಿ. ೧೪–೪೯); ಎಡೆಯಣ ಬಡವುಗಳಂ ಗಡ ಕಿಡಿಸುವುದುಂ ಮಾಣ್ದು ಕೆಱೆಯನಗೆಳ್ವಡೆ ಕೊಱಡಂ ಕಡಿಯಲ್ವೇಟ್ಟುಮೆ (ಪಾರ್ಶ್ವಪು. ೮–೯೬); ಕೊಱಡು ಕೊನರಿ ನಿಮಿರ್ದಪೋಲ್ (ಬಸಪು. ೩೮–೪೦); ಕೊಱಡು ಸುರತರುವಾಯ್ತು ಬಱಡು ನೆರೆ ಹಯನಾಯ್ತು (ಸರ್ವಜ್ಞ. ೫೫). ೨. "ಲೋಷ್ಟಭೇದಂ ಕೊಱಡು" (ಮಂಗರಾ. ೧೮೯–೧). ೪. ಒಂದು ಬಗೆಯ ಆಯುಧ: ಹರಿಗೆ ಕೊಱಡು ಸಬಳಗಳಲ್ಲಿ ತಮ್ಮ ಕಿಂಕರರು ಹೋರಿದರೆ ನೋಡಿದರು (ಭರಚ. ೬೩–೬೫).

[ದೇ. ‖ ತಮಿ. ಮಲ. ಕುಱಡು; ತುಳು. ಕೊರಡು; ತೆಲು. ಕೊಱಡು]

**ಕೊಱಂತೆ**, ಕೊರತೆ, ಕೊಱತೆ (ನಾ). ೧. ಅರೆಕೊರೆ; ಕಡಮೆ; ನ್ಯೂನತೆ: ಒಱಂತೆ, ಕೊಱಂತೆ (ಶಮದ. ೩೬ ಪ್ರಯೋ); ಕಾಕರ ನುಡಿಯಿಂ ಕೊಱಂತೆ ಕೃತಿಗಪ್ಪುದೆ (ಹಮ್ಮೀರ. ೧–೧೯). **ಕೊರತೆ**: ೧. ಹಣದ ಕೊರತೆಯಿದ್ದುದರಿಂದ ಎರಡೂ ಅಧಿಕಾರಗಳನ್ನು ಒಬ್ಬನಿಗೇ ಒಪ್ಪಿಸಿಬಿಟ್ಟಿದ್ದಾರೆ (ವೈದ್ಯರಾ. ೬೯). ೨. ಕುಂದು; ದೋಷ; ಕಳಂಕ: ಅದರಿಂದ ಅವನ ಘನತೆಗೇನೂ ಕೊರತೆಯಾಗಲಿಲ್ಲ (ಆರ್ಯಕ. ೧೭); ಇದರಿಂದ ಅವಳ ರೂಪಕ್ಕೆ ಲವಲೇಶವೂ ಕೊರತೆ ಬಂದಿರಲಿಲ್ಲ (ಬಾಣಅ. ೩೫). **ಕೊಱತೆ**: ೧. ಕೊಱತೆ ಸಜ್ಜನವೃತ್ತಿಯೊಳೆಗ್ಗು ಶೀಲದೊಳ್ ಕಾಣಲೆಬಾರದು (ಎಇ. XVI, ೬೧–೨೨; 1081); ಎಲೆ ಮರುಳೆ ಭಾವಿಪೊಡೆನ್ನೊಳಾವ ಕೊಱತೆಯಾಗಿರ್ದುದು (ಧರ್ಮಾಮೃ. ೩–೧೧೭); ಕೆಸಱ ಕೊಱತೆಗೆ ಕತ್ತುರಿಯಂ ಕೊಳುವಂತೆ ಸುಣ್ಣದ ಕೊಱತೆಗೆ ಬೆಣ್ಣೆಯಂ ಬಳಸುವಂತೆ (ಆದರ. ೧೪೮–೨). ೨. ಕೊಟ್ಟೆಡೆ ಯೊಳು ಕೊಱತೆಯು ತಂದ ಬಾಲಕಿ ಇಷ್ಟೆಯೆ ನಮಗಿವಳಿನ್ನು ದುಷ್ಟೆಯ ನೊಳಕೊಳಬೇಡ (ಅಂಜಚ. ೧–೪೪); ಆವ ಶರದಲಿ ಕೊಱತೆ ನಿನ್ನವರಾವ ಬಲದಲಿ ಕುಂದು (ಕುವ್ಯಾದ್ರೋ. ೧೯–೫೬); ಪುಳಿವಿಡಿದು ರಸವನೆ ಕಿಡಿಸಿದೊಡೆ ಕಱಿದ ಸುರಭಿಗಪ್ಪುದೆ ಕೊಱತೆ (ಜೈಮಿಭಾ. ೧–೭); ಇದಱೊಳೆತ್ತಾನುಮೊಂದು ಬಱಿಯೊಳಲಂಕಾರಮಿಲ್ಲದೊಡಂ ಕೊಱತೆ ಯಿಲ್ಲ (ಅಪ್ರತಿ. ೪–೨೧).

[< ಕೊಱ$^3_3$ + -ತೆ$_1$. / ಮಲ. ಕುಱುತು, ಕುಱಿಯತು; ತುಳು. ಕೊರತಿ, ಕೊರತೆ; ತೆಲು. ಕೊಱತ]

**ಕೊಱಕು** (ಕ್ರಿ). = ಕುಱುಂಕು: (ಶಿ). 'ಕೊರಕು' ಪರಾ. [< ಕುಱುಂಕು]

**ಕೊಱಚ** (ನಾ). ನಿಂದಕ; ದೂಷಕ; ಕೀಳುಮಾತನಾಡುವವನು: "ಹಗರಣಿಗ" (ಚತುನಿ. ಶಿ. I, ೯೮). [ಕೊಱಚು$_1$ + -ಅ$_7$]

**ಕೊಱಚಾಟ**, ಕೊರಚಾಟ, ಕೊರಸಾಟ (ನಾ). ಚುಚ್ಚುಮಾತು; ಅಣಕದ ನುಡಿ; ಬೈಗುಳು: "ತೆಗಳ್, ಪಳಿ, ಚುನ್ನಂ, ಕೊಱಚಾಟಂ, ಏಳಿದಂ, ಅಣಕಂ – ಈ ೬ ನಿಂದೆ" (ಶ ಶ ಸಾ. ೧೩–೨೫೬);

"ಅಣಕಕ್ಕೆ ಕೊಱಚಾಟ" (ಶಬ್ದಮಂ. ೪೯); "ಅಣಕವೇಳಿದಂ ಕೊಱಚಾಟಂ" (ಕವಿಕಂ.೧೨೨); ಎನಸುಂ ಭಾವಭವನ ಕೊಱಚಾಟಮುದಾವರಿಸಿ (ಕುಸುಮಾ. ೧೩–೨೨); ಬಿಱುನುಡಿ ಮೂದಲೆ ಕಟಕಿ ಹುರುಡು ಹುಸಿ ಕೊಱಚಾಟ ಹೋರಟೆ ಕಲಹ (ಕುರಾಸಾಂ. ೨೮–೬೯); ನಾನಾಪರಿಯ ಕೊಱಚಾಟದ ತಪವನು ಕೆಡಿಸಲನುಗೈವ ದುರುಳ ಕಾಮಾದಿಗಳ (ನಿಭಾಗ. ೧೧–೮–೧೬); ಕಿಸುಕುಳವು ಕೊಱಚಾಟ ವಿಷಮು ವಿಗಡವು ಕರುಬು (ಸುಸಾರ. ೧೨–೧). **ಕೊರಚಾಟೆ** : ಪರರ ಪಾಪಕ್ಕೆ ಸೈರಿಸಿ ನಿಮ್ಮ ಮನೆಯವರ ಕೊರಚಾಟಕಂ ಮರುಗುವುದು ನಿನಗೆ ಧರ್ಮವೇ (ಮಲ್ಲಚ. ೧೦–೩೮). **ಕೊರಸಾಟೆ** : "ಕೊರಸಾಟ – ಉಪಹಾಸ, ನಕಲಿ" (ಗಂಗಾಮ. ೧೦೩). [ಕೊಱಚು$_1$ + ಆಟ]

**ಕೊಱಚಾಡು**, ಕೊರಚಾಡು (ಕ್ರಿ). ೧. ಚುಚ್ಚುಮಾತನಾಡು; ಅಣಕವಾಡು; ಬೈಯು : "ಕೊಱಚಾಡು (ಕೊಱಚು + ಆಡು) = ಮರ್ಮೋದ್ಘಾಟನ ವಚನೇ (ಮಾತಿನಲ್ಲಿ ಎತ್ತಿಹಾಕು)" (ಶಮುಧಾ); ಆತನನಾಕೆಗಳ್ ಕಾಡಿ ಕೊಱಚಾಡಿ ಕಳೆದರ್ (ಪಂಪಭಾ. ೪–೯೬ ವ); ಧನದನವನೆಂದು ಕೊಱಚಾಡುವ ಕಾಡುವ ತಂಮ ಕಾಂಚನನಿಚಯಂಗಳಿಂ ಮಣಿಗಣಂಗಳ ರಾಸಿಗಳಿಂ . . . ತೋಱ್ಪರ್ ನಚ್ಚಿನ ಪರದರ್ಕ್ಕಳಿಂ (ಕಇ. V ೨೧–೯; 1125); ಇಂದೆಮ್ಮ ನೀಂ ಕೊಱಚಾಡಲೆಂದು ಬೀಡರ ಬಿಟ್ಟೆ (ಹಚಕಾ. ೮–೫); ಕೂಳಂ ಕೊಱಚಾಡೆ ನೀನೊಂದಾಡುವುವೇ (ರಾಮಾಶ್ವ. ೨೫–೨೩). ೨. ಕಾಡು; ಹಿಂಸಿಸು; ಪೀಡಿಸು: ನನೆಕೊನೆವೋಗಿ ಮಾಯೆ ಕೊಱಚಾಡದೆ ಮಾಣ್ಬುದೆ (ಪಂಪಾಶ. ೭೮); ಈಯರಲ್ಗಳಂಬಿನ ತೆಱದಿಂ ಮದೀಯ ತನುವಂ ಕೊಱಚಾಡಿದವು (ನಳಚಂ. ೪೦೬); ಅಂಗಜನು ಕೊಱಚಾಡದಿರನು (ಸೌಂದಪು. ೮–೫೬); ಧೃಷ್ಟ ಈತನ ಸಂಗಮಂ ಬಿಡುಬಿಡುಯೆಂದು . . . ಅರ್ಧಟಿಸಿ ಕೊಱಚಾಡೆ (ಪ್ರಭುಪು. ೩–೫೨). **ಕೊರಚಾಡು** : ೧. ಒಸಗೆಗಳ ಚೆಲ್ಲಾಡಿ ಕಣ್ಮರಿದು ಕಾಡಿ ನಸುನಗೆಯ ಕೊರಚಾಡಿ ತೀಡಿ (ಕಾಲೂರ. ೧೨೫–೨೬೩); "ಇನ್ನಾರಿಗೆ? ದೇವರಿಗೆ" ಎಂದು ಬಂಡಿಗಾರ ಕೊರಚಾಡಿದನು (ಪುನರು. ೫೫೯). [ಕೊಱಚು$_2$ + ಆಡು$_1$]

**ಕೊಱಚು$_1$**, ಕೊರಚು (ಕ್ರಿ). ೧. ಚುಚ್ಚುಮಾತಿನಿಂದ ಅಣಕಿಸು; ಮೂದಲಿಸು : ತಮ್ಮಂಗಸುಖದ ಸಲುವಾಗಿ ಹಂಪೆಯ ಕಂಗಳರ ಹಾಗೆ ಕೂಗುತ್ತ ಕೊಱಚುತ್ತ ಅಱಚುತ್ತ ಸತಿಸುತರೊಳಗೆ ಹೊಡೆದಾಡುತಿಪ್ಪರು (ವಚಸಂ. ೩೨೦–೧೦೬). ೨. ಕಿರಿಚು; ಚೀರು : ಅಯ್ಯಯ್ಯೊ ಮೊಱೆಯೊ ಮೊಱೆಯೊಯೆನುತಾನು ಕೊಱಚಿದೊಡೆನ್ನನು ಬಿಟ್ಟೋಡಿದನಾ ದುರುದುಂಬಿ (ನೇಮಿಸಂ. ೧೯–೧೮); ಕೊಱಚಿ ಬೊಬ್ಬಿಱಿದಾಲಿ ಕೊರಳಂ ಕೊಱೆದು ತಿನುವಂ ಖಡ್ಗದಿಂದಂ ತಱಿದೊಟ್ಟೆ ಭೂತಗಣಗಳಿಗೆಲ್ಲ ದೆಸೆಯಲ್ಲಿ (ಜ್ಞಾನಚಂ. ೩–೬೩). **ಕೊರಚು** : ೧. ಮುಂಚೆ ನಗೆಯೊಳಗೆಂದ ಮಾತುಗಳ ನೆನಪಿಟ್ಟು ಮುಗಿಲಿನೊಳಗಿಂದು ಬಂದು ಮಿಂಚುಗಳ ಬಳಗ ಕಣ್ಣೆವುಟ ಕೊರಚುವುದೆನ್ನ (ಕೃಷ್ಣಾಕು. ೫–೫).

**ಕೊಱಚು$_2$** (ನಾ). ಚುಚ್ಚುಮಾತು; ಅಣಕ; ಮೂದಲಿಕೆ. 'ಕೊಱಚಾಡು' ಪರಾ. [< ಕೊಱಚು$_1$]

**ಕೊಱಟ್ಟೂರ್** (ನಾ). ಒಂದು ಊರಿನ ಹೆಸರು : ಕೃಷ್ಣಕುಳೀನ ಕೊಱಟ್ಟೂರ ವಾಸ್ತವ್ಯ ಭಾರದ್ವಾಜಸಗೋತ್ರಾ ಭ್ಯಾವತ್ (ಮೈಆಂ. ೧೯೧೨, ೨–೩೨; 550). [? + ಊರ್]

**ಕೊಱಡು** 'ಕೊಱಂಡು' ನೋ.

**ಕೊಱಡುಗಿಱು** (ಕ್ರಿ). ಕೊರಡು ಎಂದು ಭ್ರಮಿಸು; ಮರದ ತುಂಡೆಂದು ತಿಳಿ : ಮೆಯ್ಮಲವೇಱಿದ ತಪಸಿಯನೆ ಕೊಱಡುಗೆತ್ತವಯವದಿಂ ಮಾಱುದ್ದಿಕೊಳ್ವ ಮಱಿಯಂ (ಲೀಲಾವ. ೮–೬೪).
[ಕೊಱಡು (< ಕೊಱಂಡು) + ಗಿಱು$_1$]

**ಕೊಱಡುಗೊಳ್** (ಕ್ರಿ). ೧. ಕೊರಡು ಹೊಡೆ; ಹಲುಬೆ ಹೊಡೆ : ಮೇಲೇಟ್ವ [ಪಾಠಾಂ. ಲಲಿದ] ಮುಗಿಲ ಹೇಱ [ಪಾಠಾಂ. ಹೊದಱ]ನ ಮಾಲೆಗಳಂ ನೆಗೆದು [ಪಾಠಾಂ. ದ] ಕೊಱಡುಗೊಂ [ಪಾಠಾಂ. ಕೊ]ಡವೊಲೆತ್ತಂ ಸಾಲಿಟ್ಟು ವೆರಲವಟ್ಟೆಯೊಳಾಲಿವರಲ್ವೆರಸು ಕೋರವನಿಮುಂ [ಪಾಠಾಂ. ಕೊಳ್] ಗಾಱೊಳ್ (ಅನಂಪು. ೯–೮; ಸೂಕ್ತಿಸು. ೧೦–೧೬೫ ನೋ). ೨. ಮರಗಟ್ಟು; ಜಡ್ಡುಗಟ್ಟು : ಕಂಟಣಿಪಿನಮುಲರಿಸಿದಂ ಕುಂಟಣಿಯರ ಕೊಱಡುಗೊಂಡ ಮನಮುಂ ಮದನಂ (ಅರ್ಧನೇ. ೪–೧೪೮).
[ಕೊಱಡು (< ಕೊಱಂಡು) + ಕೊಳ್$_1$]

**ಕೊಱಡೇಱು** (ಕ್ರಿ). = ಕೊರಡುಗೊಳ್ ೨ : ಸಂದ ಪಂಚಪದಮಂತ್ರಂಗಳಂ ಪಠಿಸುತ್ತ ವಂದ ನಾಲಗೆ ಕೊಱಡೇಱೆ . . . ತನುವಂ ತೊಱೆದಂ ಮುನೀಶ್ವರಂ (ಪುಣ್ಯಾಸ್ರ. ೮–೨೯).
[ಕೊಱಡು (< ಕೊಱಂಡು) + ಏಱು$_1$ (< ಏಱ್$_1$)]

**ಕೊಱತಿ** (ನಾ). ಕೊರೆಯಿಸಿಕೊಂಡವಳು; ಕೊಯ್ಸಿಕೊಂಡವಳು. 'ಮೂಕೊಱತಿ' ಪರಾ. [< ಕೊಱೆತ + -ಇ$_2$]

**ಕೊಱತೆ** 'ಕೊಱಂತೆ' ನೋ.

**ಕೊಱಪೊಬಲು** (ನಾ). ಒಂದು ಊರಿನ ಹೆಸರು : ಕಾಸಿಯಗ್ಗ್ರ ಕೊಱಪೊಬಲೋಳು ಕರಿಯ ನೆಲಂ ಮತ್ತರ್ಳ (ಕಇಆ. ೪೯–೫–೪೧; 973).
[ಕೊಱ$_0$ + ಪೊಬಲು (< ಪೊಬಲ್)]

**ಕೊಱಮ** 'ಕೊಱವ$_1$' ನೋ.

**ಕೊಱಲಗುಂದ** (ನಾ). ಒಬ್ಬಾತನ ಹೆಸರು : ಪಗೆವರ ಭೀಮಂ [ಸು]ಭಟರಂಕರಾಮಂ ಮುಳುಗುನ್ದ ವಿದ್ಯಾಧರಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ . . . ಶ್ರೀಮನ್ಮುಳುಗುನ್ದ ಪ(ಂ)ನೆರಡಱ ಮನ್ನೆಯಂ ಕೊಱಲಗುನ್ದಂ (ಸೌಇಇ. XI-i, ೪೭–೧೧; 995); ಪಗೆ[ವ]ರ ಭೀಮಂ ಶ್ರೀಮತ್ಕೊಱಲಗುನ್ದಂ ಪುರಸ್ಸರಮಾಗೆ ತನ್ನಂದನಂ . . . ಶ್ರೀ ಸಿನ್ದರಸಂ (ಸೌಇಇ. XI-i, ೬೫–೨೧; 1029). [?]

**ಕೊಱಲೆ**, ಕೊರಲೆ, ಕೊರ್ಲೆ (ನಾ). ಸಾಮೆಯಂತಹ ಒಂದು ಬಗೆಯ ಧಾನ್ಯ: "ಸೃಗ್ಘತಿ ಕೊಱಲೆನಿಕ್ಕು" (ಮಂಗರಾ. ೩೩–೮) **ಕೊರಲೆ**: ಬರಗು, ನವಣೆ, ಹಾರಕ, ಸಾಮೆ, ಸಜ್ಜೆ, ಕೊರಲೆ (ನಮ್ಮನು. ೨೩೯). **ಕೊರ್ಲೆ** : "ಗಮ್ಮರ್ತ್ ಕೊರ್ಲೆಕಾಳು ಅಂದರೆ ನವಣೇಕಾಳು" (ಸಿದ್ಧಾಂತಿ ೧೩೨).
[ದೇ. ‖ ತಮಿ. ಕುರಲ್; ತೆಲು. ಕೊಱ್ರಾಲು; ಪರ್ಜಿ. ಕೊಯ್ಲ; ಕುಇ. ಕ್ವೆರಿ]

**ಕೊಱವ$_1$**, ಕೊರಬ, ಕೊರಬು, ಕೊರಮ, ಕೊರವ$_2$, ಕೊರವೆ, ಕೊಱಮ (ನಾ). ೧. ಚಾಪೆ, ಬುಟ್ಟಿ ಮೊದಲಾದುವನ್ನು ಮಾಡಿ ಮಾರುವ ಹಾಗೂ ಕಣಿ ಹೇಳುವ ಒಂದು ಜಾತಿಯ ಜನ; ಕೊರಚ. 'ಕೊಱವಿ' ಪರಾ. **ಕೊರಬ** : ೨. (ಆಲಂ) ಕೆಟ್ಟವನು; ಕೆಡುಕ : ನನ್ನಂಥ ಕೊರಬನಿಗೆ 'ಮಂಡೆಮಾರಿ' ಸಹ ಬರುವುದಿಲ್ಲ (ವಾತ್ಸಲ್ಯ. ೫); ನನ್ನಂಥ ಕೊರಬನಿಗೆ ಏನೂ ಆಗುವುದಿಲ್ಲ (ವಾತ್ಸಲ್ಯ. ೩೭೨). **ಕೊರಬು**: ೧. ಕೊರಬುಜನರು ಹಿಂಡು ಹಿಂಡಾಗಿ ಕೂಡಿದ್ದರು (ಗ್ರಾಮಾಯ. ೧೮). **ಕೊರಮ** : ೧. ಮತ್ತೆ ಮುತ್ತಿನ ಕೊರಮ ಗೂಡೆಯ ನೆತ್ತಿಯಲಿ ಹರಿ ಪೊತ್ತು ಮೆರೆದನು (ಅಚಾರ್ವಿ. ೧೭–೨೮); ಕೊರಮರು ಬರುತಾರೆ (ಹುಟ್ಟಿಹ. ೪೩). ೩. (ಆಲಂ) ಆಷಾಢಭೂತಿ; ಘಾಟಿ : ಕಳ್ಳಕೊರಮ ಅವನನ್ನು ನಂಬಬಾರದು (ರೂಢಿ). **ಕೊರವ$_2$** : ೧. ಉಪ್ಪಿನ ಮೋಳೆಯ ಹೊಂದಿದ ಕೊರವರ ಕನಕನ ತೋಟ (ಸೌಇಇ. IX-ii, ೬೧೮–೭; 1545); ಕತ್ತಿಗಳು – ಉತ್ತಮ ಜಾತಿಯವರು ಮುಟ್ಟುವುದಿಲ್ಲ. ಒಡ್ಡರು, ಡೊಂಬರು, ಕೊರವರು . . . ಕಟ್ಟುವರು (ಕಭಾಗೆ. ೫೮); ಇಬ್ಬರೆರಡರ ನಾದ ಏಡಿಯ ಮುಳ್ಳಾದ ಕೋಡಗನಾದ ಕೊರವಾದ (ಗರತಿ. ೭೬).

**ಕೊರವೆ :** ೧. ವಿಚಾರವರಿಯದೆ, ಸತ್ತಿದ್ದು ಬದುಕಿದ್ದು ಕೂಡ ತಿಂಬುವಂಥ ಕುರುಬರು . . . ಕೊರವೆಯರು ಮುಂತಾದವರು ಮಧ್ಯಮರು (ಕೃಷಿಪ್ರ. ೨೭೨). **ಕೊಱಮ :** ೧. ಘೊಳ್ಳನೆಲ್ಲರ ನಗಿಸುವ ಕೊಱಮರ ವೇಷದಲ್ಲಿ ನರ್ತಿಸಿದೆವೆ ನಾವು (ಭರಚ. ೧೪-೫೧).

[ದೇ. ॥ ತಮಿ. ಮಲ. ಕುಱವ ; ತೆಲು. ಕೊಱವ]

**ಕೊಱವ್ವ** (ನಾ). ಒಂದು ಬಗೆಯ ಕಾಡುಪ್ರಾಣಿ (?): ಮರಿ ಮೂಗುರಿ ಕುರಂಗಿಯಳಿಲು ಬೆಕ್ಕರಲೆ ಕೊಱವ ಮುಸು ಸಾರಗ ಸೀರುಡುವೆಕ್ಕಲ ಕಪಿ ಪಂದಿ (ಜಯುಕಾ. ೧೫-೨೯). [?]

**ಕೊಱವಂಜಿ,** ಕುರುವಂಜಿ, ಕೊರವಂಜಿ, ಕೊಱವಜ್ಜಿ (ನಾ). ೧. ಕೊರವರ ಹೆಂಗಸು ; ಕಣಿ ಹೇಳುವವಳು : ಕೊಱವಂಜಿ ಕಟ್ಟಣೆಯನು ಕೇಳಿಸಿದರು ಸ್ವೈವೆಜಗಾಗಿ ಸಭೆ ನಿಲುವಂತೆ (ಭರಚ. ೧೨-೯೦); ಬಱಿದಱಿದೆನಂಬನಱಿತಂ ಕುಱುಬನಕೊಱವಂಜಿಯಱಿತದಂತವನಱಿತಂ (ನೀತಿಸಾ. ೨೫೬). **ಕುರುವಂಜಿ :** ೨. [ನಾಟ್ಯ] ಒಂದು ಬಗೆಯ ನಾಟ್ಯ: ದಕ್ಷಿಣದಲ್ಲಿ ಮೂರು ಬಗೆಯ ಶಾಸ್ತ್ರೀಯ ಸಂಪ್ರದಾಯಗಳಿದ್ದವು : ಸದಿರ್, ಭಾಗವತಮೇಳ ಮತ್ತು ಕುರುವಂಜಿ ನೃತ್ಯನಾಟಕ (ಭಾರದ. ೫೫೫). **ಕೊರವಂಜಿ :** ೧. ಕಂಸವರದ ಕೃಷ್ಣ ಮಾನಿನಿಯ ಮನ ತಿಳಿವುದಕೆ ಧರಿಸಿದನು ಕೊರವಂಜಿ ರೂಪವಾಕ್ಷಣದಿ (ಶ್ರೀಕೃಪಾ. ೫೬) ; ಜೋಗಿಯ ವೇಷ ಕೊರವಂಜಿಯ ವೇಷಗಳೂ ದಾಸಯ್ಯನ ವೇಷವೂ ಬರುತ್ತಿತ್ತು (ಹುಟ್ಟಿಹ. ೨೮). **ಕೊಱವಜ್ಜಿ :** ೧. ಅಂತೆ ಕೊಱವಜ್ಜಿಯ ರೂಪುಗೊಂಡಿರ್ಪರುಂ ನಿಮ್ಮಱಿತಂಬೇಟ್ಟ್ವ ಮೆನುತಂ (ಬಂಹರಿ. ೯-೬೬ ವ); ಕೊಱವಜ್ಜಿಯ ವೇಷಮಂ ಕುಮಾರಿಯ ಸಮಾಪಕ್ಕೆ ಕಳಿಪುವುದುಂ (ಮಹಾನೇ. ೮-೨೮ ವ).

[ದೇ. ॥ ತಮಿ. ಕುಱವಞ್ಞಿ; ತುಳು. ಕೊರವಾಜಿ; ತೆಲು. ಕೊರವಂಜಿ]

**ಕೊಱವಜ್ಜಿ** 'ಕೊಱವಂಜಿ' ನೋ.

**ಕೊಱವಡಿ** 'ಕೊಱವಾಡಿ' ನೋ.

**ಕೊಱವಣಿಯಿಗ** (ನಾ). ಒಂದು ಮನೆತನದ ಹೆಸರು(?): ಸ್ವಸ್ತಿಶ್ರೀ ಕೊಱವಣಿಯಿಗ ನಾಗಪಾರಯ್ಯಂ ಬೆಳ್ವತ್ತದ ಗಾವುಣ್ಡಂ (ಎಕ. XVI, ತಿಪಟೂ. ೧೧-೧ ; 930). [?]

**ಕೊಱವತಿ,** ಕೊರ್ಮಾತಿ (ನಾ). = ಕೊಱವಂಜಿ: (ಕ). **ಕೊರ್ಮಾತಿ :** ಕೋಳೀಯ ತಿನ್ನೋ ಕೊರ್ಮಾತಿ ಮನೆಗೋಗೀ ಕಂದಣ್ಣನಾಜೇ ಇಡಬಹುದೇ (ಹುಟ್ಟಿಹ. ೯೨). [ಕೊಱವ₁ + –ತಿ₁ (< –ಇತ್ತಿ)]

**ಕೊಱವಾಡಿ,** ಕೊಱವಡಿ (ನಾ). ಒಂದು ಸ್ಥಳದ ಹೆಸರು : ನೈರಿತ್ಯ ಕೊಱವಾಡಿಯ ಮಂಗಲುರ ಹಲುಹಾಡಿಯ ಏವ ತ್ರಿಗ್ರಾಮಾ ತ್ರಿಸನ್ಧಿ ಸೀಮಾ ತು (ಇಆ. VIII, ೯೫ ; 444 ಕೃಶಾ). **ಕೊಱವಡಿ :** ಪಡುವ ಮನೆಯ ಹತ್ವಾರನೂ ನ(ಂ)ಮ್ಮ ಆರ ಮನೆಗೆ ತೆಱುವ ಕೊಱವಡಿಯ ಅಧಿವಾಸದ ಒಳಗೆ ತಂನ ಹದಿ ಮೊದಲು ಅಪ್ಪನೆಯ ಬಗೆಯಂ ಕಾಟಗ. ೪೫ (ಸೌಇಇ. IX-ii, ೪೬೧-೧೬ ; 1467). [?]

**ಕೊಱವಿ,** ಕೊರಮಿ, ಕೊರವಿ (ನಾ). ೧. = ಕೊಱವಂಜಿ ೧ : ಕೊಱವಿಯರ ರೂಪಿನಿಂದವರಱಿತಂ ಪೇಟ್ದಪೆವೆನುತ್ತುಮೆಟ್ಟರೆ (ನೇಮಿಪು. ೮-೫೨); ಅಱಿವಿನ ಬಗೆಯಾವುದೆ ಕೊಱವಿ (ಶಿವಗೀ. ೭೯೭ ವ); ತುಱುಗಿ ನೋಡುತ್ತಿರಲಾ ಪುರವರವೆಲ್ಲ ಕೊಱವಿಯರಂದವ ಧರಿಸಿ (ನೇಮಿಸಂ. ೨೧-೫೨); ಎತ್ತಿಕೊಂಡಾ ಕೂಸು ತಲೆಯಲಿ ಪೊತ್ತ ಗೂಡೆ[ಯು]ವುಲಿನ ವಸನದ ಸುತ್ತುಡಿಗೆ ತಲೆ ಜುಂಜು ಸೊಗಯಿಸೆ ಕೊಱವಿಯಾಂ ಬಂದೆ (ಸಾಳ್ವಭಾ. ೧೯-೨೧). **ಕೊರಮಿ :** ೨. (ಆಲಂ) ಕೆಡುಕಿ; ದುಷ್ಟೆ: ಈ ಕಣಿವೆ ಕೆಳಗಿನ ಕೊರಮಿಯಾನೇ ಎಗರಿಸಿ ಬಿಟ್ಟರೆ ಬೆ.ಕು (ನಡೆದಾ. I, ೫೧೩). **ಕೊರವಿ:** ಕೂಳಿಗೆ ಬಂದ ಕೊರವ್ಮೈಲ್ಲ ನಾನು ನಾ ಹೇಳಬಂದೆ (ಚಿದಾವ. ೧೪-೧೧); ಹಾಡುತ್ತ ಬರುವ ಕೊರವೀಯ ಕಂಡರೆ ಹಾದೀಯು ಬಿಟ್ಟು ಮರೆಯಾಗು (ಹಳ್ಳಿಯ. ೮೧) ; ಎದ್ದಾಳೊ ಕೊರವಿ ನದಿಯ ಹತ್ತಿರಕ್ಕೆ ಹೋದಾಳೋ ಕೊರವಿ (ಜಗೀತೆ. ೬೫). [ಕೊಱವ₁ + –ಇ₂]

**ಕೊಱವಿತಿ** (ನಾ). = ಕೊಱವಂಜಿ: (ಕ). 'ಕೊರವಿತಿ' ಪರಾ. [ಕೊಱವ + –ಇತಿ (< –ಇತ್ತಿ)]

**ಕೊಱಿ** 'ಕೊಱೆ₂' ನೋ.

**ಕೊಱಿಕುಂದ,** ಕೊರಿಕುಂದ (ನಾ). ಒಂದು ಸೀಮೆಯ ಹೆಸರು : ಕೊಱಿಕುನ್ದ ವಿಷಯೇ ಪೆಣ್ಣಊರ್ನ್ನಾಮಗ್ರಾಮಃ (ಮೈಆರಿ. ೧೯೪೨, ೬೧-೪೫ ; 610) ; ಶ್ರೀಮತ್ ವಿನಯಾದಿತ್ಯರಸರ್ ಕೊಱಿಕುನ್ದಾಳ್ಕೆ ಮೂನೂಱು ಆಳುತ್ತಿಟ್ದು (ಮೈಆರಿ. ೧೯೧೯, ೧೨-೧೩ ; 700). **ಕೊರಿಕುಂದ :** ಕೊರಿಕುಂದ ಭಾಗೇ ಪುಲ್ಲಿವೂರನ್ನಾಮಗ್ರಾಮೇ (ಮೈಆರಿ. ೧೯೩೮, ೧-೨೫ ; 570). [?]

**ಕೊಱಿಯ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಕೊಱಿಯರ ಮಗಮ್ಪಾಣಗಾವುಣ್ಡನ್ (ಮೈಆರಿ. ೧೯೨೬, ೯೨-೧ ; ?). [?]

**ಕೊಱುಗೊಳಿ** (ನಾ). ಒಂದು ಬಗೆಯ ಸಸ್ಯ : ಕೊಱುಗೊಳಿ ಬಸಲೆ ದೊಗ್ಗಳೆ ಹೆಗ್ಗೊಳಿಯು ಅರೆ ಹೀರೆ ತೊಂಡೆಯಕಾಯಿ (ದ್ವಾದಶಾ. ೬೪-೭೭೮). [?]

**ಕೊಱೆ₁,** ಕೊರೆ₁ (ಕ್ರಿ). ೧. ಕೊಯ್ಯು ; ಕತ್ತರಿಸು ; ಛೇದಿಸು : "ಕೊಱೆ – ಖಂಡನೇ, ಧಾನ್ಯಭೇದೇ ಚ (ಹಾರಕ)" (ಶಮಧಾ); ನಡುವಂ ಕೊ[ಪಾಠಾಂ. ಕಾ]ಱೆ ಕುತ್ತಿ ಕುರುಳ್ಗಳಂ ತೆಗೆ (ವಡ್ಡಾರಾ. ೧೨೭-೧೦) ; ಕಿರೀಟಿಯ ಕಿರೀಟವುಂ ಕೊಱೆದೊಡೆ (ಪಂಪಭಾ. ೧೨-೨೦೧) ; ಕೊಱೆ ಕೊಱೆ ಸೀಳ್ಸೀಳೆನುತ್ತೆ (ಸುಕುಮಾ. ೧೧-೮೧) ; ಸಂದಿ ಸಂದಿಯಂ ಪರಸಿಂದಂ ತಱಿಯೆನೆ ಗರಗಸದಿಂದಂ ಕೊಱೆಯೆನೆ (ಧರ್ಮಾಮೃ. ೬-೧೧೩); ನಿನ್ನ ಕೋಡ ಕೊಱೆಯದೆ ಬಱಿದೆ ಬಿಟ್ಟಪೆನೆ (ಹಚಕಾ. ೮-೨೧) ; ಪರಘಾಯವನು ವಂಚಿಸಿ ಭಟರ ಕೊಱೆದೆತ್ತುವರು (ಕುವ್ಯಾಭೀ. ೪-೪೩) ; ಸುರಿದ ಕರುಳ, ಒಱೆದ ಬಸೆಯ, ಕೊಱೆದ ಸುಂಟಿಗೆಯ (ರಾಮಾಶ್ವ. ೧೬೧-೧೬). ೨. ತೂತುಮಾಡು ; ರಂಧ್ರಬೀಳಿಸು : ಹಾವು ಕನ್ನವ ಕೊಱೆದು ಬದುಕುವುದೇ (ಕುವ್ಯಾವಿ. ೯-೭೨) ; ವಜ್ರದುಂಬಿಗಳು ಹೆಬ್ಬಿದಿರನು ಕೊಱೆವೊಡೆ (ಮೋಹತ. ೬೫-೪೦) ; ಜರಿವ ಜಲ ತಡೆದಿದ್ದ ಗಿರಿಯನೇ ಕೊಱೆಯಿತ್ತು (ಸರ್ವಜ್ಞ. ೫೨೭) ; ಗರುಡನ ಗೃಹದೆ ನಾಗರವುಱಿ ಕನ್ನವ ಕೊಱೆದುಳಿವುದೆ (ಕಂಸವಿ. ೧೫-೧೦೭). ೩. ಕೊರತೆಯಾಗು ; ಕುಗ್ಗು : (ಕ). **ಕೊರೆ₁ :** ೧. ತರಕಾರಿಗಳನ್ನು ಸಣ್ಣಸಣ್ಣ ತುಂಡುಗಳಾಗಿ ಕೊರೆಯುವುದರಲ್ಲಿ ತಮ್ಮ ಶ್ರಮ, ಸಮಯಗಳನ್ನು ವ್ಯಯಿಸುತ್ತಾರೆ (ಅಡುಸಾ. ೮೬). ೨. ಮರವು ಹಣ್ಣುಗಳುದುರಿ ಎಲೆ ಕೆದರಿ ಮುನ್ನ ಕೊರೆಕೊರೆದು ಹುಳುತಿಂದು ಬೇರೊಣಗಿದಂತೆ (ಕಎಷ. ೬೫-೭). ೩. ಇರಿ; ಚುಚ್ಚು: ನಾನು ಅವಳಿಗೆ ತಕ್ಕವನಲ್ಲವೆಂಬುದು ನನಗೆ ಕೊರೆಯುತ್ತಾ ಇದೆ (ಆಲಹೂ. ೧೨೦) ; ಮನಸ್ಸಿನಲ್ಲಿ ಕೊರೆಯುತ್ತಿದ್ದ ಚಿಂತೆ ಮತ್ತೊಂದು (ಪುನರು. ೮೧). ೪. ಕೆತ್ತು ; ಕಂಡರಿಸು : ಅಡುವ, ಹಾಡುವ, ಬರೆಯುವ, ಕೊರೆಯುವ, ಕಟ್ಟುವ ಕಳೆಗಳ ಪೂಡಿಸುವ (ಹೊಂಗಳು. ೧೧-೨೩) ; ಮದನ ಕೈಗೊಂಬೆಯ ಬೇಲೂರು ಗುಡಿಯೊಳು ಕೊರೆದವರಾರು (ಇಂಚಾಪ. ೯೩-೫೪). ೫. ಕುಕ್ಕು ; ಕೋರೈಸು (?) : ಕೊರೆವ ಕಣ್ ಬರೆಹನೆಲದಳಿವುಳಿವ ತಿರ್ದುಗುಂ (ಕಾಲೂರ. ೪೨-೫೩). ೬. ಬೆಂಕಿಕಡ್ಡಿಯನ್ನು ಗೀಚು, —ಹತ್ತಿಸು: ಸಿಗರೇಟನ್ನು ತುಟಿಯಿಂದ ಹಿಡಿದು ಕಡ್ಡಿ ಕೊರೆದು ಹಚ್ಚುತ್ತ (ಸಮಜೀ. ೧೦೪) ; ಬೀಡಿಯನ್ನು ಬಾಯಲ್ಲಿ ಇಟ್ಟು, ಕಡ್ಡಿ ಕೊರೆದು (ಹೊಸಕ್ಷಿ. ೧೪೨).

೭. (ಅಲಂ) ಬೇಸರದಿಂದ ಗೀಚು : ಇಂದು ಬರೆಯುವುದಕ್ಕೆ ವಿಷಯ ಏನೂ ಇಲ್ಲ. ಬರೆಯದೆ ಇದ್ದರೆ ತಪ್ಪು ಹೊರಬೇಕಾದೀತೆಂದು ಕೊರೆಯುತ್ತಿದ್ದೇನೆ (ಸುವಸಂ. ೧೬). ೮. (ಅಲಂ) ಬೇಸರ ಬರುವಂತೆ ಒಂದೇ ಸಮನೆ ಮಾತನಾಡು : ಶಾಸ್ತ್ರಿಗಳು ಮಂಗಳಗೀತೆಯನ್ನು ಹಾಡುವ ಬದಲು ಅಶುಭ ಮಂತ್ರಗಳನ್ನು ಕೊರೆಯಬೇಕಾಯಿತು (ರೂಢಿ).
[ದೇ. ‖ ತಮಿ. ಕುಱೈ ; ಮಲ. ಕುಱ ; ಕುಇ. ಕ್ರಾಪ]

**ಕೊಱೆ$_2$**, ಕೊಱು (ಕ್ರಿ). ಸುತ್ತು ; ತಿರುಗು ; ಭ್ರಮಿಸು : "ಕೊಱೆದುದು – ಗರವಟಿಸಿಡುವುದು" (ಶಮದ. ಪಂ. ೨). **ಕೊಱು** : "ಕೊ[ಪಾಠಾಂ. ತೊ] ಱು [ಪಾಠಾಂ. ಱೆ]ದುದೆನೆ ಗರವರಿಸಿದರ್ಥಮಕ್ಕು" (ಕಬ್ಬಿಕೈ. ೯೦). [?]

**ಕೊಱೆ$_3$**, ಕೊರೆ$_3$ (ನಾ). ೧. ಕಮ್ಮಿಯಾದುದು ; ಕಡಮೆಯಾದುದು. ೨. ಕೊರತೆಯಾದುದು ; ನ್ಯೂನತೆ : ಬಂದರೊಳ್ಕೊಱೆಯಿಲ್ಲದ ಪೆಂಗಳಿರ್ದಱು ಕಂದರ್ಪನೊಡ್ಡೋಲಗದಿ (ಮೋಹತ. ೫-೪೨). ೩. ಉಳಿದುದು ; ಮಿಕ್ಕುದು ; ಬಾಕಿ : (ಕ). **ಕೊರೆ$_3$**: ೨. ಕೊರೆಗಳಂ ತಿದ್ದಿ (ಸೌಗಂಧಿ. ೧೮೬-೧೧) ; ಅಳವಿನುಂ ತಿಳಿವಿನುಂ ಕೊರೆಯನಾಂ ನಲ್ಲೆಯಂ ಕಾಣದಳವಳಿದನೆನೆ ಕೇಳ್ವುದೇನಂ (ಸೌನಂದ. ೭-೪೬) ; ಕೊರೆಯಾವುದಾವೂರ ಸಿರಿಗೆ (ಇಂಚಾಪ. ೭-೨೩).

**ಕೊಱೆ$_4$**, ಕೊರೆ$_4$ (ನಾ). ೧. ಕತ್ತರಿಸುವುದು ; ತುಂಡುಮಾಡುವುದು : (ಕ). ೨. ತುಂಡು ; ಚೂರು: (ಕ). **ಕೊರೆ$_4$**: ೨. ಆ ಕೊರೆ ಸಿಗರೇಟನ್ನು ಹುಡುಕಿ ತಂದು (ಅಂಬಿಕೆ. ೮೪) ; ಬೀಡಿಯ ಕೊರೆಯನ್ನು ನೆಲಕ್ಕೆಸೆದು (ಮಣ್ಣುಹ. ೮೯). ೩. ಭರ್ತಿ ಕಡಮೆಯಾಗಿರುವ ಚೀಲ ; ಅರಕಳಿ : ರಾಗಿ ಕೊರೆ (ರೂಢಿ). [< ಕೊಱೆ$_1$]

**ಕೊಱೆ$_5$**, ಕೊರೆ$_5$ (ನಾ). ೧. ಒಂದು ಬಗೆಯ ಧಾನ್ಯ ; ಹಾರಕ : "ಕೊಱೆ – ಖಂಡನೇ, ಧಾನ್ಯಭೇದೇ ಚ (ಹಾರಕ)" (ಶಮಧಾ) ; ಜವೆ ಜೋಳಂ ಕೊಱೆ ಮೊದಲಾದುವರ್ಕೆ (ಲೋಕೋಪ. ೪-೫೬) ; ಕೊಱೆಯೆಂಬುದುಂಟು ಅಖಿಳ ಧಾನ್ಯಂಗಳ ಒಳಗೆ (ರೇವಣ. ೨೨-೫) ; ಕೊಱೆಯುಂಟು ಧಾನ್ಯದೊಳ್ (ಸಿದ್ಧೇಪು. ೨-೧೭). **ಕೊರೆ$_5$** : ೨. ಒಂದು ಬಗೆಯ ಔಷಧಿ ಸಸ್ಯ : ಬಿಳೀಹೂಲಿ, ಕೊರೆ, ಸಣ್ಣಹೂಲಿ, ನೆಲಮಾಗಳಿ, ಚೋರ (ವೈಔಗಿ. ೩೭-೭೪೬).

**ಕೊಱೆ$_6$** (ನಾ). ತಿರುಗಾಡುವವನು ; ಸುತ್ತುವವನು. 'ತಿಱುಕೊಱೆ' ಪರಾ. [< ಕೊಱೆ$_2$]

**ಕೊಱೆ$_7$** 'ಕೂಱೆ' ನೋ.

**ಕೊಱೆಕೂಲಿ** (ನಾ). ಧಾನ್ಯರೂಪದಲ್ಲಿ ಕೊಡುವ ಕೂಲಿ : ಕರೆಯೋ ಒಡ್ಡರೆಱೆಯನಂ ಕೊಱೆಕೂಲಿಗೊಂಡನೋ ನಾಳೆ ಮಿಕ್ಕುದನಗೆಯ ಬಾರದೇ ಎಂಬನ್ನೆಗಂ (ಸಿದ್ಧರಾ. ೯-೩೯). [ಕೊಱೆ$_5$ + ಕೂಲಿ]

**ಕೊಱೆಕೂಳು** (ನಾ). (ಪಕ್ಷಿಗೆ ಹಾಕುವ) ಕಾಳಿನ ಆಹಾರ ; ಎರೆ ; ಗ್ರಾಸ : ಬ್ರಹ್ಮ ಗಿಳಿಗೆ ಪಂಜರವಾದ ವಿಷ್ಣುವಾ ಗಿಳಿಗೆ ಕೊಱೆಕೂಳಾದ ರುದ್ರನಾ ಗಿಳಿಗೆ ತಾ ಕೋಳಾದ (ಅವಚಂ. ೫-೧೫) ; ಕೊಱೆಕೂಳಿನಾಸೆಗೆ ಮಱೆದು ನೀನೊಱಗಲು ಗಱು ಸಹವಾಗಿ ನುಂಗುವುದು ಕಂಡಾ (ಶಿವಗೀ. ೬೬೩). [ಕೊಱೆ$_5$ + ಕೂಳು$_2$ (< ಕೂೞ್$_1$)]

**ಕೊಱೆಗೊಳ್ಳಿ** (ನಾ). ಉರಿದುಳಿದ ಸೌದೆಯ ತುಂಡು ; ಕರಿಗೊಳ್ಳಿ : ಕಱೆಗೊರಲನ ಕಣ್ಣ ದಳ್ಳುರಿಯಲಿ ಬೆಂದ ಕೊಱೆಗೊಳ್ಳಿ ನಿನಗೇಕೆ ಪಂತ (ಮೋಹತ. ೧೨-೨). [ಕೊಱೆ$_5$ + ಕೊಳ್ಳಿ$_1$]

**ಕೊಱೆತ**, ಕೊರೆತ (ನಾ). ೧. ಕೊರೆಯುವಿಕೆ ; ಕುಯ್ಯುವಿಕೆ : (ಕ). **ಕೊರೆತ** : ೧. ಒಳಗಿನ ಕೊರೆತವು ಅತಿ ತೀಕ್ಷ್ಣವಾಗಿದ್ದು (ಮುನಿಮಾ. ೬) ; ಕೂರುಗುರ್ಗಳ ಕೊರೆತ (ಕಾಲೂರ. ೯೬-೧೯೦). ೨. ಕಂಡರಣೆ ; ಕೆತ್ತನೆ : ಸಾಲಾಗಿ ಒಂದೊಂದು ಬಾಗಿಲುಗಳಿರುವಂತೆ ಕಮಾನು ಕೊರೆತಗಳಿಂದ ಒಪ್ಪುತ್ತಿತ್ತದು (ಕಾಬಝೂ. ೭). ೩. (ಅಲಂ) ನೀರಸವಾದ ಹಾಗು ದೀರ್ಘವಾದ ಮಾತಿನಿಂದ ಉಂಟುಮಾಡುವ ಹಿಂಸೆ : ಅವರ ಮಾತಿನ ಕೊರೆತಕ್ಕೆ ಒಮ್ಮೆ ಸಿಕ್ಕಿಕೊಂಡವರು ಇನ್ನೊಮ್ಮೆ ಸಿಗಲು ಅಂಜುತ್ತಾರೆ. (ಒಂಟಿದ. ೬೭); ನಾ ಹೇಳೋದು ಒಣ ವೇದಾಂತವಾದರೆ ಒಣವೇದಾಂತ ; ಕೊರೆತ ಆದರೆ ಕೊರೆತ (ಹೊಸಕ್ಷಿ. ೧೦೭).
[ಕೊಱೆ$_1$ + -ತ$_2$]

**ಕೊಱೆದಱು** (ಕ್ರಿ). ಸಣ್ಣಾಗಿ ಕತ್ತರಿಸು ; ಚೂರುಚೂರಾಗಿ ಮಾಡು : ತರತರದ ಭುವನದೊಳು ನೆರೆದ ಜೀವರನೆಯ್ದೆ ಕೊಱೆದಱಿದುವುರುಪಿದಾತನ ಪಾತಕಂ ಹರಹರ ವಿರೂಪಾಕ್ಷಚರಣ ಪೂಜನದಿಂದೆ ಹರೆದು ಗಣಪದವೆಂದ (ಸಾನಂಚ. ೩-೭೨). [ಕೊಱೆ$_3$ + ತಱು$_1$]

**ಕೊಱೆಪಲ್** 'ಕೊಱೆವಲ್' ನೋ.

**ಕೊಱೆಮ್ಮೆನವಿರ್** (ನಾ). ಚುಚ್ಚುವ ಮೈಗೂದಲು ; ನಿಗುರಿದ ರೋಮ: ಒಱೆಗಾಲ್ವೆಱೆದಲೆ ಕೊಱೆ[ಪಾಠಾಂ. ಮಱೆಯ]ಮ್ಮೆನವಿರಿಂದ ತುಱುಗಿದ ಮುಸುಮೊಗ ಪೆಣ್ಣಾ ತೆಱನಱಿಯದ ಕೂಟದೆಮ್ಮವನಿವನಿರೆ ಮಱೆವರೆ ಪೆಣ್ಗಳಿದಿರೊಳು (ಕುರಾಸಾಂ. ೪೪-೭).
[ಕೊಱೆ$_1$ + ಮ್ಮೆನವಿರ್ (< ಮೆಯ್ಮವಿರ್)]

**ಕೊಱೆಯ** (ನಾ). ಕೊರೆಯಿಸಿಕೊಂಡವನು; ಕೊರತೆಯುಳ್ಳವನು. 'ಮೂಕೊಱೆಯ' ಪರಾ. [ಕೊಱೆ$_1$ + -ಅ$_7$]

**ಕೊಱೆಯಕ್ಕಿ** (ನಾ). ಕೊರಲೆಯ ಅಕ್ಕಿ ; ನವಣೆಯ ಅಕ್ಕಿ (?) : ಸಿತ ಸರ್ಷಪದೊಳ್ ಕೊಱೆಯಕ್ಕಿ ದಾರ್ವಿಯುಂ ಬೆರಸು (ಖಮದ. ೮-೪); ಕಿಱುದೆಂಗಿನ ಬೇರಂ ತಾಂ ಕೊಱೆ[ಪಾಠಾಂ. ಕಱೆ]ಯಕ್ಕಿಯೊಳಾಡಿ ನಳಿಯೊಳಟ್ಟಂಬಲಿಯಂ ಪುಱೆಯೆ ವರುಷಂಬರಂ ಜನಮಱೆಯಲ್ ವಿಷಮಿಲ್ಲಂ (ಖಮದ. ೧೬-೧೬೨). [ಕೊಱೆ$_5$ + ಅಕ್ಕಿ$_1$]

**ಕೊಱೆವಲ್**, ಕೊಱೆಪಲ್ (ನಾ). ಹರಿತವಾದ ಹಲ್ಲು ; ಮೊನೆಯಾದ ಹಲ್ಲು : ಕೊಱೆವಲ್ ಬತ್ತಿದ ಕಾಲ್ ಪಿಂಬಱಿಗೇಸಂ ನೆಕ್ಕ ಕದಪು ಪೊಕ್ಕಿರ್ದ ಬಸಿಱ್ ತೆಱೆದ ಮುಖಕುಹರವರ್ದಿಸೆ ಪಿಱಿತಿನಿಗಳ ಬಳಗವೆಯ್ದೆ ತಂದುದು ಮುನಿಯಂ(ಕಾವ್ಯಾವ. ೪೫೫). **ಕೊಱೆಪಲ್**: ಕೊಱೆಪಲ್ಲ ಕುಳಿರ ಹೇಮಂತನ್ ಪೊಟ್ಟುಬರೆ ಮುಪ್ಪಾಗಿ ಎಳಚಿಗುರ ಚೈತ್ರಂಗೆ ಬಱುವಿಟ್ಟು ಪೋಕುಂ (ಅಶ್ವತ್ಥಾ. ೨೭-೨೨). [ಕೊಱೆ$_1$+ ಪಲ್]

**ಕೊಱೆವೋಗು** (ಕ್ರಿ). ತುಂಡಾಗು ; ಹೋಳಾಗು : ಶತಖಂಡಮಾಗೆ ನಿಜಶರಹತಿಯಿಂ ಜಾಂಬವ ಶರಂಗಳಂ ಕಡಿದನನಾದ್ಯತನದಱ ಪಿಳ್ಕುಮಲಗುಂ ಕ್ಷಿತಿಯೊಳ್ ಕೊಱೆವೋಗಿ ಕೂಡೆ ಕುಪ್ಪಳಿಸುದಿನಂ (ಮಹಾನೇ. ೭-೩೮). [ಕೊಱೆ$_1$ + ಪೋಗು$_1$]

**ಕೊಱೆಸು** 'ಕೊಱೆಯಿಸು' ನೋ.

**ಕೊಱೆಯಿಸು**, ಕೊರಿಯಿಸು, ಕೊರೆಯಿಸು, ಕೊರೆಸು, ಕೊಱೆಸು (ಕ್ರಿ). ಕೊರೆಯುವಂತೆ ಮಾಡು ; ತುಂಡುಮಾಡು ; ಕತ್ತರಿಸು : (ಕ). **ಕೊರಿಯಿಸು** : (ಕ). **ಕೊರೆಯಿಸು** : (ಕ). **ಕೊರೆಸು** : ಆಯಿಮ್ಮೆ ಕೋಡ ಕೊರೆಸಿರಿ (ಲೋಕಗೀ. ೧೩೭). **ಕೊಱೆಸು** : ಪರಸತಿಯ ಬೇಟದಲಿ ಮಾವನು ಕೊರಳ ಕೊಱೆಸಿದನೆಮ್ಮ ಗಂಡನ( ಕೌಶಿರಾ. ೩೭-೧೧).

**ಕೊಱೆಯಿಸಿಕೊಳ್**, **ಕೊಱಸಿಕೊಳ್**, **ಕೊಱೆಸಿಕೊಳ್** = ಕುಯ್ಯಿಸಿಕೊಳ್ಳು : ತಱಿಸಿಕೊಂಡು ಭಕ್ತರಾದರೆಮ್ಮವರು ; ಕೊಱೆಯಿಸಿಕೊಂಡು ಭಕ್ತರಾದರೆಮ್ಮವರು (ಬಸವ. ೨೫೫) ; ದುರುಳರಾವಣಕೀಚಕಾದಿಗಳಿರದೆ ಪರಸತಿಗಳುಪಿ ಕೊರಳನು ಕೊಱಸಿಕೊಂಡರು (ಅಮೃತ. ೨-೯೩); ಕೊಱೆಸಿಕೊಂಬರು ಕೊರಳನೆಂತಱಿಗುಱಿಗಳಕಟಕಟ (ನಿಭಾಗ. ೫-೧೧-೨).
[ಕೊಱೆ$_1$ + -ಇಸು$_3$]

**ಕೊಟ್** (ಗು). ಕೊಳೆತು ಅಜಿಗಿಜಿಯಾಗಿರುವ; ಅಸಹ್ಯವಾದ; ಕೊಚ್ಚೆಯಾದ. 'ಕೊಟ್ನೀಱ', 'ಕೊಟ್ಮೀದುಳ್' ಪರಾ. [?]

**ಕೊಟಕ**, ಕೊಳಕ (ನಾ). ೧. ಕೊಳೆಯುಳ್ಳವನು. ಹೊಲಸಾದವನು; ಹೇಸಿಗೆಯಾದವನು: ಬೆಳುಕಂ, ತೊಳಕಂ, ಕೊಟಕಂ (ಶಮದ. ೨೫೫ ಪ್ರಯೋ). ೨. ಮಂಡಲದ ಹಾವಿನಲ್ಲಿ ಒಂದು ಜಾತಿ; ಕೊಳಕುಮಂಡಲದ ಹಾವು: ನವಣೆಯ ಪಿಟ್ಟಂ ಕೊಂಡೊಡನೆ ತೊಟಕಿ ತಿನಲಿತಿಮಂಡಿತವುದು ಕೊಟಕನುಗ್ರವಿಷಮಂ ಕಳೆಗುಂ (ಖಮುದ ೧೦-೬೩). **ಕೊಳಕ**: ೧. ಅವರು ಸೋಮಾರಿ, ಹೆಡಿ, ಕೊಳಕ, ಕ್ಯಲಿ ಹುಯಯವವರು ಎಂಬುದು ನೋಡಿದ ಕೂಡಲೆ ಗೊತ್ತಾಗುತ್ತಿದ್ದಿತು (ಬೃಸರ್ವ. ೨೧); ಆವನು ಕೊಳಕ ಆವನ ಮೇಲಿನ ಗಾಳಿ ಬೀಸಬಾರದೆಂಬ ಭಾವನೆಯೂ ಅನೇಕರಿಗಿದೆ (ಹುಟ್ಟಿಹ. ೧೫೭). [ಕೊಟಕು + -ಆ]

**ಕೊಟಕು**, ಕೊಳಕು (ನಾ). ೧. ಕೊಳೆತುದು; ಹೊಲಸು; ಹೇಸಿಗೆ. 'ಕೊಟಕ' ಪರಾ. **ಕೊಳಕು**: ೧. ಕಳೆದ ಬಟ್ಟೆ ತೊಳೆದಂತೆ ಹರಿದು ಹೋಗುವುದು ಮಲಿತ ಕೊಳಕು (ಅರಳು. ೬೯೧); ಇಂದಿನ ಕಳಸಾಪುರವೆಂದರೆ ಕೊಳಕಿನ ಕೊಂಪೆ (ಕಳಹು. ೧೦೩). (ಗು). ೨. ಕೊಳೆಯಾದ; ಹೊಲಸಾದ: ನೀನು ಹೀಗೆ ಕೊಳಕು ಜನರ ಜೊತೆಯಲ್ಲಿ ಬೆರೆಯುವುದು ನನ್ನ ಮನಸ್ಸಿಗೆ ಏನೂ ಸರಿಬರುವುದಿಲ್ಲ (ತೀಮೋಹ. ೩೨). [< ಕೊಟ್₁ + -ಕು?]

**ಕೊಟಚೆ**, ಕೊಳಚೆ (ನಾ). = ಕೊಳಕು: ತೃಷಾವಿಷಾದಮಂ ಕೊಟಚೆಯ ನೀರೊಳೇ ಕಳೆವರೆಂದೊಡೆ (ಚಕವ. ೧-೩೭). **ಕೊಳಚೆ**: ಕೊಳಚೆಯ ನೀರಿನಲ್ಲಿ ಗುಂಪನಜುಸುವರಿ ಮರುಳೆ (ಬಸವ. ೫೭೪); ಜೊಂಡೆದ್ದು ರಕುತದ ಸಾಲುಗೊಳಚೆಯ ಕರುಳ ಕುಸುರಿಯ ಬಸಿವ ನೆಣವಸೆಯ (ಕುವ್ಯಾಭೀ. ೧೧-೧೧); ಸ್ವರ್ಗದಿಯುಂ ಪೂರ್ವಿರ್ಪವರ ಕೊಟ್ಟಳಚೆಯ ಕೊಳೆನೀರ್ಗೊಳ್ವನೇ (ಪಾಪ್ರಾಶ. ೨೯); ಹೊಂಡದ ಕೊಳಚೆಯ ನೀರನು ಕುಡಿದರು ಕಪ್ಪೆಗಡೆಪ್ಪು ಕೇಂಕಾರ (ಇಂಚಾಪ. ೨೧೨-೫೦). [< ಕೊಟ್₂]

**ಕೊಟಲ್**, ಕೊಳಲ್, ಕೊಳಲು (ನಾ). ಬಿದಿರ ಕೊಳವೆಯಿಂದ ಮಾಡಿದ ಊದುವ ವಾದ್ಯ; ವೇಣು: "ಕೊಟಲ್ – ವೇಣುವಾದ್ಯ. (ಕೊಳಲೆಂಬ ಕ್ರಿಯೆಯೊಳ್ ಕುಳಂ)" (ಶಮದ. ಪರಿ. ೨); ಎಕ್ಕ ಮದ್ದಳೆಯ ಕೊಟಲ ಝುಂಕಾರದ ಪಜೆಗಳ್ ಮುಂದೆ ಬಾಜಿಸುತ್ತಂ (ವಡ್ಡಾರಾ. ೪೦-೧೨); ದೆಂಟನೂದುವಂಗೆ ಕೊಟಲ್ ದೊರೆಕೊಂಡುದೆಯುಂತೆ (ಧರ್ಮಾಮೃ. ೧೦-೨೪೦); ಮುರಹರನ ಕೊಟಲ ಸನ್ನೆಯ ವರರವಕನುಸರವಿದೆಂಬಿನಂ (ಜಗವಿ. ೪-೧೧೫); ಕರಡೆಯ ಮದ್ದಳೆಯ ಕೊಟಲ ಪಳವದ . . . ಕಿನ್ನರದ ಸರಮೆ ಸರವೂ ಪೊಟಲೊಳ್ (ಸೂಕ್ತಿಸು. ೪-೧೦೪). **ಕೊಳಲ್**: ತ್ರಿಭಂಗಿಯಿಂದಂ ನಿಂದು ಒಪ್ಪುತಿರ್ಪಂದು ಪೊಸ ಕೊಳಲಂ ಕೊಳುತ್ತಂದು . . . ಅಧರದೊಳ್ತಂದಿರಿಸಿದಂ ಕೊಳಲನೊಪ್ಪದಿಂ (ಅನಾರ. ೧೪೧-೧೪). **ಕೊಳಲು**: ಸನೆಯುದೂದುವ ಕೊಳಲು ಮ್ಯಯ ಕವರದ ಕೊಡಿಗೆ ಎಸೆವುತಿರೆ (ಬಸರ. ೯-೧೦೨); ಕೊಳಲನೂದುತ್ತಾ ಬಂದ ನಮ್ಮ ಗೋಪಿಯ ಕಂದ ಕೊಳಲನೂದುವುದು ಬಲು ಚೆಂದ (ಪುರಂದ. ೧-೧೩೩-೧); ಕೊಳಲಿಗೆ ಪಶು ಮಿಗ ಘಂಟೆಗೆ ಹಸುಳೆ ಜೋಗುಳಿಗೆ ಸರ್ಪ ಸುನಾಗಸರಕೆ (ಭರಚ. ೧-೮೮); ಕೊಂಬು ಕೊಳಲು ನಾಗಸರ ಭೇರಿ ತಂಬಟೆಬೊಂಬುಳಿ ಬುರುಗು ಡಿಂಡಿಮದ (ಕಂನವಿ. ೮-೧೯); ಎಳೆಯ ಮಾವಿನ ಮರದ ಕೆಳಗೆ ಕೊಳಲನೂದುತ ಗೊಲ್ಲಗೌಡನು (ಗೋಹಾಡು. ೩೧); ಕೊಳಲೂದಿದ ತುಟಿಗಳಲ್ಲಿ ಪಾಂಚಜನ್ಯ ಪುಟಿಯಿತು (ನೆಲಮು. ೪೦). [ದೇ. ೬ ತಮಿ. ಮಲ. ತುಳು. ಕುಟಲ್; ತೆಲು. ಕ್ರೋವಿ]

**ಕೊಟವಿ**, ಕೊಳಟಿ, ಕೊಳವಿ, ಕೊಳವೆ, ಕೊಳಾಯಿ, ಕೊಟವೆ (ನಾ). ೧. ಬಿದಿರು ಮೊದಲಾದುವುಗಳ ಪೊಳ್ಳಾದ ಉದ್ದನೆಯ ಸಾಳ, —ನಳಿಕೆ: "ಧಮನಿಯೆನೆ ಕೊಟವಿ" (ಮಂಗರಾ. ೬೧-೨೦); ಕೊಟವಿ, ಉಟುಗು, ಬೆಟಗು, ಮೊಟಗು (ಶಬ್ದಾನು. ೧೪೦ ವ್ಯಾಖ್ಯಾ). **ಕೊಳಟಿ**: ೧. ಇವನ್ನು ಮಳೆದ ಕೊಳಟಿಯಲ್ಲಿ ಇಟ್ಟಿದ್ದಾರೆ (ಚೀನಬಾ. ೧೫). **ಕೊಳವಿ**: ೧. ಇದೌಪಾಸನದ ಕೊಳವಿಯೊ (ಕುವ್ಯಾಅ. ೧೫-೧೭); ಅಬ್ಧಿ ಧಿಂಕಿಟ್ಟು ಗಗನಕೆದ್ದುದು ಕೊಳವಿಯೊಳೂಡ ಬೆಂಕಿ ಸಾಲಗೆ ನೀಡುವಂತೆ (ಭರಚ. ೨೪-೬೫); ಕುಂಡಣದ ಕೊಳವಿಗಳಂ ಕರಗಳಂ ಪಿಡಿದು (ಸೌಗಂಧಿ. ೧೬೧-೧೮). ೨. ಒಂದು ಅಳತೆಯ ಪ್ರಮಾಣ; ಚಟಾಕು: ದರವು ಮಾತ್ರ ರೂಪಾಯಿಗೆ ಐದು ಕೊಳವಿ (ಚಟಾಕು) (ಪ್ರಣಪ. ೬). **ಕೊಳವೆ**: ೧. ಬಿದಿರೊಳಗೆ ಬೆಳ್ಳೆದಡವಿ ಬಳಕದಟ ಮೇಲದಂ ಮತ್ತೆ ಮೆಲ್ಲನೆ ತೆಗೆದು ಕೊಳವೆಯುಂಪದಿ ಮಾಡಿ ಅಲ್ಲಿ ಸಕ್ಕರೆಯಿಕ್ಕಿ (ಸೂಪಶಾ. ೧-೩೭); ಕುಂಕುಮದ ರಸದುಂಬಿ ಕೈಯಂಡೆಯ ಕೊಳವೆಯ ಚಿಗಿದು (ಮೋಹತ. ೧೪-೬೫). 'ಕೊಳವೆ ಬಾವಿ' ಪರಾ. **ಕೊಳಾಯಿ**: ೩. ನೀರಿನ ನಲ್ಲಿ; ನಳ (ಉಕ): ಸರೋಜ ನೀರಿಗಾಗಿ ಕೊಳಾಯಿ ಬದಿಗೆ ಹೋದ ಸಂಜು ನೋಡಿ (ಪತಿ. ೧೪); ನೀರಿನ ಕೊಳಾಯಿಗಳನ್ನು ಕಟ್ಟಿ ನೀರಿನ ಸೌಕರ್ಯ ಒದಗಿಸಿದ್ದಾರೆ (ದಿಲ್ಲಿಪ. ೧೦೬). **ಕೊಟವೆ**: ೧. (ಕಿ).
[ದೇ. ೬ ತಮಿ. ಕುಚ್ಚಿ, ಕುಜಾಯ್; ಮಲ. ಕುಟ; ತುಳು. ಕೊಳವೆ, ಕೊಲವೆ, ಕೊಳಾಯಿ; ತೆಲು. ಕೋಲು, ಕ್ರೋಲು]

**ಕೊಟವಿಮೀಂಟಿ** (ನಾ). ಕೊಳವೆಯ ಮೂಲಕ ಕಲ್ಲು ಹರಳನ್ನು ಹಾರಿಸುವ ಒಂದು ಸಾಧನ: ಮಣಿಗುಬ್ಬಿಯಂ ಕೊಟವಿಮೀಂಟಿಗ ಳಿಂದಿಟ್ಟು ಕೆಡಪಲ್ (ಚಕವಂ. ೮-೩೦). [ಕೊಟವಿ + ಮೀಂಟಿ]

**ಕೊಟವೆ** 'ಕೊಟವಿ' ನೋ.

**ಕೊಟಾಗಾಲ** (ನಾ). ಒಂದು ಊರಿನ ಹೆಸರು: ಬಿಟ್ಟೊಟ ರಾಝುಟ್ಟು ಕೊಟಾಗಾಲ ಗಂಗಯ (ಎಕ. IV, ಹೆಗ್ಗಡೆ. ೧೦೪-೧೫; 1037). [?]

**ಕೊಟುಂಗೆಟಿ** (ನಾ). ಒಂದು ಬಗೆಯ ತೆರಿಗೆ (?): ಕಾಣಿಕೆಯುಂ ಕೊಟುಂಗೆಟಿಯುಮಂ ನ್ನಿ ನಿತುವಂ (ಸೌಇಎ. ೧೯೩೮, ೩೨೭-೪೯; 1075). [?]

**ಕೊಟೂರ್** (ನಾ). ಒಂದು ಊರಿನ ಹೆಸರು: ಜನ್ಮಕ್ಷೇತ್ರಂ ಕೊಟು(ಟೂ)ರ್ ನ್ನಾಮ ಗ್ರಾಮಂ (ಇಆ. XVIII, ೩೩೭-೪; 8ನಯ ಶತ). [? + ಊರ್]

**ಕೋಟಿ₁**, ಕೊಳೆ₁ (ಕ್ರಿ). ೧. ಕೆಟ್ಟು ನಾರು; ಹೊಲಸಾಗು; ಕೊಳೆ ತಾಗು: "ಕೊಟಿ – ಜೀರ್ಣೇ, ಕಾಯಪುಲೇ ಚ" (ಶಮಧಾ); ಕೊಟಿ [ಪಾಠಾಂ. ಕೆ]ದ ಪುಲ್ಲದರ್ಕಂ ತೊಟ್‌ವಂತನಿತುರುಂ ಕೊಟ್‌ದು (ವಡ್ಡಾರಾ. ೪೭-೧೨); ಎನಿತೊಳವು ಕೊಟ್‌ವ ಪದುಳೆಗಳನಿತು ದುರ್ಗಂಧಮುವರೆ ಮೆಯ್ಯು . . . ನಾತಮುಂ (ಶಾಂತಿಪು. ೭-೧೧೦); ಪಿರಿಯು ಸಿರಿಯಂ ಜೆನಾಗಳು ಪರಿಣತಮತಿ ಕೊಟಿ [ಪಾಠಾಂ. ಳೆ]ದ ಪುಲ್ಲದಕ್ಕಂ ಬಗೆವಂತಿರೆ ಬಗೆದು (ಅಜಿಪು. ೨-೧೧೩); ಎಣ್ಣೆ ಮುಟ್ಟದ ಕುಂಬಳಕಾಯಂತೆ ಒಳಗೊಳಗೆ ಕೊಟ್‌ತು (ಧರ್ಮಾಮೃ. ೩-೩೫). **ಕೊಳೆ₁**: ೧. ಕೊಳೆತ ಬೆರಳನು ಛುಕ್ತಶೇಷದೊಳುಳುಹಿದೊಡೆ ಕಂಡೀಕೆ ಚಿತ್ತದೊಳಳುಕದುಪಭೋಗಿಸಿ (ಸಂಧಪ. ೩೩-೨೨); ಒಕ್ಕಲಿಲ್ಲದ ಊರು ಕೊಳೆತು ನಾರುವ ನೀರು (ಕನಕ. ೫೦-೩); ಕುಂಬಳಕಾಯಂತೆ ಮನದೊಳು ಕೊಳೆವುತ ಡಂಬಕಂಥರದು ಪ್ರತಿವೆ (ಭರಚ. ೧೭-೧೪); ಹಳಸದು ಕೊಳೆಯದು ಹುಳಿಗಟ್ಟಿಕೊಳ್ಳದು . . . ಅಮಳ ಸುಭಾಷಿತ ರಸವು (ಇಂಚಾಪ. ೨೨೨-೧೦೦).

೩. (ಆಲಂ) ಪ್ರಗತಿಯಿಲ್ಲದೆ ಇದ್ದ ಸ್ಥಾನದಲ್ಲಿಯೇ ಇರು; ಕೊಳೆ ಬೀಳು: ಜನನಾಯಕನಾದ ಮೋಹನನು ಸೆರೆಮನೆಯಲ್ಲಿ ಕೊಳೆಯುತ್ತಿರುವುದನ್ನು ಜನರು ಸಹಿಸುವಂತಿರಲಿಲ್ಲ (ಪಂಜಪಂ. ೨೦೯); ಅಂಥವರು ಅದೇ ತರಗತಿಯಲ್ಲಿ ಕೊಳೆಯುವುದು ಉಚಿತವಲ್ಲ (ಶಿಕ್ಷದ. ೯೮).

[ದೇ. ‖ ತಮಿ. ಕುಟ್ಕೈ; ಮಲ. ಕುಟಯು, ಕುಟಮ್ಬು; ತುಳು. ಕುರೆ, ಕುರಿ; ತೆಲು. ಕ್ರುಳ್ಳು]

**ಕೊಟಿ್ಕ₂**, ಕೊಳ್ಕೆ (ನಾ). ೧. ಕೊಳೆತುದು; ಹೊಲಸು: "ಕೊಟಿ = ಜರ್ಜೀ, ಕಾಯುಮಲೇ ಚ" (ಶಮುಥಾ); ಕೊಟಿಯುಂ ಬಿಣ್ಪುಂ ಲೋಳೆಯುಮಳವಲ್ಲದ ವಜ್ರಲೇಪದಂತಿರೆ (ಧರ್ಮಾಮೃ. ೬-೧೬೬); ತನುಸೌಖ್ಯಮಕ್ಕುಮಕ್ಕುಮೆಂದೆನಿತೆನಿತಂ ತೊಳೆದೊಡಮದಕ್ಕೆ ಕೊಟಿಸಹಜಂ (ಸಮುಪ. ೬-೩೦); ಕೊಡಲ ಕೊಟಿಯುಂ ಪುಟುಗಳುಂ ಸುರಿಯೆ (ಜೀವಸಂ. ೪೩-೧೧). (ಗು). ೨. ಕೀಳಾದ; ಅಧಮವಾದ. 'ಕೊಟಿಗಬ್ಬ', 'ಕೊಟಿದೆಯ್ವ' ಪರಾ. **ಕೊಳ್ಕೆ**: ೧. ಬಿಲದಿ ಮುಳುಗಲು ಕೊಳೆಯ ಕಾಯದ ಮಲವು ಪೋಗುವುದಾಗಲೇ (ಗಗಶಾ. ೯-೪೫). ೩. ಕೆಸರು; ರಾಡಿ; ಕೊಚ್ಚೆ: ಅತಿವೃಷ್ಟಿಯಾಗೆ ಕೆಯ್ಮೊಲು ನೆರೆಯ ಪಾಲೊ ಅಥವಾ ಕೊಳೆಯ ಪಾಲೊ ತಾನಾಗುವುದು ನಿಶ್ಚಯಂ (ಹಬ್ಬೆರ. ೨೪-೧೦); ಎಮ್ಮೆ ಕೋಣಗಳಾಟ ಕೊಳೆಯಲ್ಲಿ ಕುಂಟಿಯೊಳ್ (ಕಾಲೂರ. ೧೨೧-೨೫೩).

**ಕೊಳೆಹಾಕು** = ಪ್ರಗತಿಯಿಲ್ಲದೆ ಇದ್ದಲ್ಲಿಯೇ ಇರಿಸು: ಅವನನ್ನು ಅದೇ ಕೆಲಸದಲ್ಲಿ ಕೊಳೆಹಾಕಿದ್ದಾರೆ (ರೂಢಿ). [< ಕೊಟಿ್ಕ₁]

**ಕೊಟಿಗಂಪು** (ನಾ). ಕೊಳೆತದ ನಾತ; ಹೊಲಸು ವಾಸನೆ; ದುರ್ಗಂಧ: ಕೊಟಿತೊಸರುತಿರ್ದಾ ಮೆಯ್ಯನ್ ಎಲ್ಲ ಬತ್ತಲೆಗೆಯ್ದು, ನಮುಗದಟ ಕೊಟಿಗಂಪು ಬಡಿವುದನ್ ತಪ್ಪಿಸಿಕೊಳಲ್ . . . ಮೇಡ ಕೋಡಿನ ಮೇಲೆ ಕುಳ್ಳಿರ್ದೆವರ್ (ಅಂತಿಗೂ.೧೯-೩೯೮). [ಕೊಟಿ್ಕ₂ + ಕಂಪು]

**ಕೊಟಿಗಣ್**, ಕೊಳೆಗಣ್ಣು (ನಾ). ಕೊಳೆ ತುಂಬಿದ ಕಣ್ಣು; ಹೊಲಸು ಕಣ್ಣು: ಕೊಟಿಗಣ್ಣುಂ ಬಿಟ್ಟಬಾಯುಂ ಕೂಡಿದಪುರ್ಬುಂ (ಧರ್ಮಾಮೃ. ೭-೨೨೫). **ಕೊಳೆಗಣ್ಣು**: ನೀರುಗಣ್ಣು, ಜಾರುಗಣ್ಣು, ಕೊಳೆಗಣ್ಣು, ಹುಳುಗಣ್ಣು (ಶುಕಸ. ೩.೨೮). [ಕೊಟಿ್ಕ₂ + ಕಣ್]

**ಕೊಟಿಗಬ್ಬ** (ನಾ). ಕೀಳು ತರಗತಿಯ ಕಬ್ಬ; ದೋಷಯುಕ್ತವಾದ ಕಾವ್ಯ: ನಿರರ್ಥಮಪ್ಪ ಕೊಟಿಗಬ್ಬಮನುಬ್ಬರಮಾಟ್ಟಿ ಗರ್ವದಿಂದೆಸೆವನ ನಿಕ್ಕು ಕಿಚ್ಚಿನೊಳಗಿಕ್ಕಿದೊಡಾಗರೆ ಮತ್ತೆ ಕಬ್ಬಿಗರ್ (ಸೂಕ್ತಿಸು. ೧-೭೪). [ಕೊಟಿ್ಕ₂ + ಕಬ್ಬ₁]

**ಕೊಟಿಗಬ್ಬಿಗ** (ನಾ). ಕೀಳು ಕಾವ್ಯಗಳನ್ನು ರಚಿಸುವವನು; ಕೆಟ್ಟಕವಿ: ಮಹಾಕವೀಂದ್ರ ಮಾಧವನನೆಯಪ್ಪೆನೆಂಬ ಕೊಟಿಗಬ್ಬಿಗನಿನ್ನಯ ಗರ್ವಮೆಂತುಟೋ (ಧರ್ಮನಾ.೧-೬೬). [ಕೊಟಿಗಬ್ಬ + -ಇಗ]

**ಕೊಟಿಗೊಳ್** (ಕ್ರಿ). ಕೊಳೆಯಾಗು; ಮಾಸು; ಹೊಲಸಾಗು: ಕುಸುಮಘಟಾನ್ವಿತೆ ಕೊಟಿಗೊಂಡ ಸೀರೆಯಂ ಪೊದೆದು ವಸ್ತ್ರಮಂ ಧನಮನಪೇಕ್ಷಿಸಿ ಗುರುಕುಳಕ್ಕೆ . . . ಪೋಪಳ್ (ಜಾತತಿ. ೧೯-೧೬). [ಕೊಟಿ್ಕ₂ + ಕೊಳ್₁]

**ಕೊಟಿದುಪ್ಪ** (ನಾ). ಕೆಟ್ಟತುಪ್ಪ; ಹೊಲಸು ನಾರುವ ತುಪ್ಪ: ಕುದಿಸಿ ಕೊಟಿದುಪ್ಪಮಂ ಕುದಿದ ದುಗ್ಧದೊಳ್ ಬೆಣ್ಣೆಗೊಂಡು ಕಾಸಿದೊಡಂ ಮೇಣ್ ಸದಗುಪ್ಪೆ ಬೆರೆದದಂ ಕಾಸಿದೊಡಂ ಕತ್ತುರಿಯ ಗಂಧಮಂ ಗೆಲಲಕ್ಕುಂ (ಲೋಕೋಪ. ೮-೪೦). [ಕೊಟಿ್ಕ₂ + ತುಪ್ಪ]

**ಕೊಟಿದೆಯ್ವ** (ನಾ). ಕೀಳಾದ ದೈವ; ಹೀನದೇವತೆ: ಮಾರಿಗೆ ಮಸಣಿಗೆಯನಿಪ್ಪ ಕೊಟಿದೆಯ್ವಂಗಳ್ (ಸಮುಪ. ೯-೧೨೬). [ಕೊಟಿ್ಕ₂ + ದೆಯ್ವ]

**ಕೊಟಿನಾಱು**, ಕೊಳೆನಾಱು (ಕ್ರಿ). ಕೊಳೆತು ಕೆಟ್ಟ ವಾಸನೆ ಬರು; ಗಬ್ಬುನಾರು: ಆಗುರ್ವಿನ ಕೊಟಿನಾರ್ಪ ಕೋಟ್ಕಿಸಟ ಬಾವಿಯೊಳ್ (ಆದಿಪು. ೨-೪೩); ಜಲಧಿಯೊಳು ಕಪ್ಪೆ ಸತ್ತೊಡೆ ಜಲಧಿಯ ನೀರೆಲ್ಲಮಟ್ಟಿ ಕೊಟಿನಾರ್ವುದೆ (ಧರ್ಮಾಮೃ. ೫-೨೪೦); ಇಂದಿನಿರುಳೊಳ್ ಮೂವರ್ಮಂತ್ರಿಗಳ್ ತನ್ನಂ ಕೊಟಿನಾಱುವ ಕೆಸಱುಳ್ಳ ಬಾವಿಯೊಳ್ ಮುಟುಗಿಸಿ (ಪೂರ್ವಪು. ೧೮); ಕಟ್ಟಿದ ಪಲ್ಲಕಟ್ಟಡೆಯ ಕೀಡೆಗಳಿಂ ಕೊಟಿನಾರ್ವ ಬಾಯ್ (ಸೂಕ್ತಿಸು. ೮-೩೮೪). **ಕೊಳೆನಾಱು**: ಪುಳಿತುದು . . . ಪಲವು ದೆವಸಮಿರ್ದುದು ಕೊಳೆನಾರ್ವುದು ರುಚಿಯಲ್ಲದ ಪಿಂಡಂ ಕುದಿರೆಗೆ ತಾಂ ಪೊಲ್ಲದೆನಿಪ ಕವಳಮನಿಪ್ಪಂ (ಅಶ್ವಶಾ. ೭-೪೧). [ಕೊಟಿ್ಕ₂ + ನಾಱು₁]

**ಕೊಟಿನೀರ್**, ಕೊಳೆನೀರ್ (ನಾ). ಕೊಳೆತ ನೀರು; ಮಲಿತ ನೀರು; ಹೊಲಸಾದ ನೀರು: ಹೊಲೆಯಂ ಮೊದಲಾಗಿ . . . ಕುಡಿಯಂ ಕುಲಹೀನನಾಗಿಯುಂ ತೊಗಲ ಕೊಟಿನೀರನೆಂದೊಡಕ್ಕುಮೆ ಕುಡಿಯಲ್ (ಸಮುಪ. ೬-೧೯). **ಕೊಳೆನೀರ್**: ಸ್ವರ್ನದಿಯಂ ಪೊರ್ದಿರ್ಪವಂ ಕಿಲ್ಬೊಳಚೆಯ ಕೊಳೆನೀರ್ಗೊಲ್ವನೇ (ಪಾಪ್ರಾಶ. ೨೯). [ಕೊಟಿ್ಕ₂ + ನೀರ್₁]

**ಕೊಟಿನೆತ್ತರ್** (ನಾ). ಹೊಲಸಾದ ನೆತ್ತರು; ಕೆಟ್ಟ ರಕ್ತ: ಹಡಿಕೆಯ ತಾಣಮೆಯ್ದೆ ಕೊಟಿನೆತ್ತರ ಕೀವಿನ ಭಾಜನಂ (ಬಾಧಪು. ೫-೩೦). [ಕೊಟಿ್ಕ₂ + ನೆತ್ತರ್]

**ಕೊಟಿಯಮ್ಮ** (ನಾ). ಒಬ್ಬಾತನ ಹೆಸರು: ಕೊಟಿಯಮ್ಮನ ಅಳಿಯಂ ಚಪ್ಪಯ್ಯನ ಮಗಂ ಪುನ್ನಿ ಗೋಸಾಸಿ ಕೆಱೆಯಮ್ಮಾಡಿಸಿ (ಎಕ. VIII, ಸೊರಬ. ೧೦೦-೬; 986 ?). [ಕೊಟಿ ? + ಅಮ್ಮ₁]

**ಕೊಟಿವಾವು** (ನಾ). ಕೊಳಕುಮಂಡಲದ ಹಾವು: ವಸು ಜ್ವ(ಜ) ರಯು(ಗಿ)ಸಿದೊಡೆ ಹೊಲೆಯರ ಮಸಣದ ಬೂದಿಯನೆ ಪೂಸುಗಲ್ಲದೊಡು ದ್ಧೂಳಿಸು ತಡೆಯದೆ ಕೊಟಿವಾವಿನ ಭಸಿತಮನನಿತಱೊಳೆ ತಜ್ಜ್ವರಂ ಪ್ರಶಮಿಸುಗುಂ (ಲೋಕೋಪ. ೯-೨೦೬); ಜಳನುತಿಗೆ ಧರ್ಮಮಂ ನಿರ್ಮ್ಮಳಮಪ್ಪಂತಾಗಿ ತಿಳಿಪುತಿರ್ದೊಡಮೆಂತುಂ ತಿಳಿಯದನಂ ತುಟಿತಿಳಿಗುಮೆ ಕೊಟಿವಾವಿಂಗೆನಿತನೋದೆಯುಂ ಗಾರುಡಮಂ (ಸಮುಪ. ೧೩-೭೩); ಕೊಟಿವಾವು ಗಾರುಡಮಂ ಕೇಳದಂತೆ ಕೇಳದಿರೆ ಬೇಸತ್ತು (ಧರ್ಮಾಮೃ. ೨-೧೦೨); ಮತ್ತಮಲ್ಲಿ ಕೊಟಿವಾವಾಗಿ ಪುಟ್ಟಿದೊಡೆ (ಬಂಹರಿ. ೧೩-೩೩ ವ); ಕೊಟಿವಾವಿನ ಕರ್ಯನ ವಿಷಮುಟಿಗುಂ ಗೋರಟಿಯ ಮೂಲಮುಂ ಪೂಸಲೊಡಂ (ಖಮುದ. ೧೦-೭೮). [ಕೊಟಿ್ಕ₂ + ಪಾವು₁]

**ಕೊಟಿಸಕ್ಕದ** (ನಾ). ಬಹಳ ಹಳೆಯ ಸಂಸ್ಕೃತ; ಪ್ರಚಲಿತವಲ್ಲದ ಸಂಸ್ಕೃತ: ಪಟಗನ್ನಡಂ ಪುದುಂಗೊಳೆ ಕೊಟಿಸಕ್ಕದಮಂ ತಗುಳ್ಚಿ ಜಾಣ್ ಕಿಡೆ ಮುತ್ತಂ ಮೆಟಸಂ ಕೋದಂತಿರೆ ಪೇಟ್ವುಟಿಗವಿಗಳ ಕವಿತೆ ಬುಧರನೆರ್ದೆ ಗೊಳಿಸುಗುಮೇ (ಕಾವ್ಯಾವ. ೫೫). [ಕೊಟಿ್ಕ₂ + ಸಕ್ಕದ]

**ಕೊಟಿಸುಸಿಲ್** (ನಾ). ಕೆಟ್ಟ ಸುರತ; ಹೀನವಾದ ರತಿ: ನೀಚ ಶಬರ ಚೇಟಿಚೇಟ ಪರಮ ದರಿದ್ರಾದಿಗಳ್ ನೆಗಟ್ದ ಕೊಟಿಸುಸಿಲೆಲ್ಲಂ ರಸಾಭಾಸಂಗಳೆಂದಱಿವುದು (ರಸರ. ೪-೨೫೯ ವ). [ಕೊಟಿ್ಕ₂ + ಸುಸಿಲ್]

**ಕೊಟ್ಗೆಸಟ್₁** 'ಕೋಟ್ಗೆಸಟ್₁' ನೋ.

**ಕೊಟ್ಗೆಸಟ್₂**, ಕೊಗ್ಗೆಸರು, ಕೊಗ್ಗೆಸಟ್, ಕೊಗ್ಗೆಸಱು, ಕೊಳ್ಗೆಸಟ್, ಕೋಳ್ಕೆಸಟ್, ಕೋಳ್ಗೆಸಟ್, ಕೋಟ್ಕಿಸಟ್₂, ಕೋಟ್ಗೆಸಟ್₂ (ನಾ). ಮಂದವಾದ ಕೆಸರು; ಅಜಿಗಿಜಿಯಾದ ಕೆಸರು; ಬಗ್ಗಡ: ಅಮರ್ದಿನ ಕೊಟ್ಗೆಸಱಾಟಿ ಸರೋವರಂ (ಉದ್ಭಟ.೯-೮೪).

**ಕೊಗ್ಗೆಸರು** : ಹುಬ್ಬುಗಳು ಗಂಟಿಕ್ಕಿ ಹೊಯ್ದಾಡಿದರು ಸಮರದ ಲೀವುದ್ದಿ ಕೊಗ್ಗೆಸರಾಗಿ ರುಧಿರದ ಹಬ್ಬವಾಗಲು (ಮೂಲರಾ. ೩-೪೯) ; ಸಾರ ಪರಿಮಳವಿರಲ್ಕೊಗ್ಗೆಸರ ಮೈಗೆ ಲೇಪಿಸಿ ಕೊಂಬ (ಪತಿಲ. ೧೬-೨೩). **ಕೊಗ್ಗೆಸಱ್** : ಪೌರುಷದೇವನ ಲಲನೆಯ ಪಾಪದ ಕೊಗ್ಗೆಸಱೊಳ್ [ಪಾಠಾಂ. ಕಗ್ಗೆಸರೊಳ್] ಪಂಕಜದಂತಿರೆ ಪುಟ್ಟಿದಳೊಲವಿಂ (ಆದರ. ೧೪೬-೧). **ಕೊಗ್ಗೆಸಱು** : ನಡೆವುತ್ತ ಕೊಗ್ಗೆಸಱಲ್ಲಿ ಕಾಲ್ಗಳು ಜಾಱಿ ನಡನಡುಗಿ (ಬಸವು. ೧೦-೬); ಕೊಗ್ಗೆಸಱು ಕಡಿಖಂಡ ಮಾಂಸದ ನೆಗ್ಗಿದೆಲುಗಳ ಶಸ್ತ್ರನಿಕರ (ನಿಭಾಗ. ೧೦-೫೬-೨೪). **ಕೊಳ್ಗೆಸಱ್** : ಬಂಡೆಂಬ ಕೊಳ್ಗೆಸಱೊಳಗೆ ಸಿಲ್ಕಿ ಜಿನುಗುವ ಮಱಿಗೆ ಸೌರಭ್ಯರಸದ ಕುಟುಕಿತ್ತು ಬಾಣಂತಿ ದುಂಬಿ ಮೆಱೆದವು (ಹಚಕಾ. ೩-೪೧) ; ಸಂಸಾರವೆಂದೆಂಬ ಕೊಳ್ಗೆಸಱ ತೊಳೆದವರು (ಸಿದ್ಧೇಪು. ೨೨-೧೦). **ಕೋೞ್ಕೆಸಱ್** : ಕೋೞ್ಕೆಸರ್ಮೆಱುವಂ ಪಾಲ್ಗಡಲೆಂದು ಕಂಡರಕಟ (ರಕ್ಷಾಶ. ೬೯). **ಕೋೞ್ಗೆಸಱ್** : ಮಿದುಳ ಕೋೞ್ಗೆಸಱ ಹೊನಲಿಡುವ ರಕುತದ (ಹಚಕಾ. ೧೨-೩೪); ಪಟ್ಟದಾನೆಗಳು ಕಣ್ಗೆಸೆದುವು ಮದದಿಂದ ಪುಟ್ಟಿಸುತಲ್ಲಿ ಕೋೞ್ಗೆಸಱ(ಕುರಾಸಾಂ. ೪-೭೧); ಜೊಂಡೇಳ್ದ ಕಾಳ್ಮಿದುಳ ಕೋೞ್ಗೆಸಱಿಂದ (ರಾಜಶೇ. ೫-೧೨೦ ವ). **ಕೋೞ್ಕೆಸಱ್೨** : ಅಗುರ್ವಿನ ಕೊೞೆನಾರ್ಪ ಕೋೞ್ಕೆಸಱ ಬಾವಿಯೊಳರ್ದೆ (ಆದಿಪು. ೨-೪೩); ಮಿದುಳ ಕೋೞ್ಕೆಸರೊಳ್ ಪೊಕ್ಕು ಪೊಕ್ಕು (ಗದಾಯು. ೬-೨೮ ವ). **ಕೋೞ್ಗೆಸಱ್೨** : ಕುಳಿರ್ವಿಂದುವೆಂಬ ತಿಳಿಗೊಳದೊಳಗೊಯ್ಯನೆ ಚಂದ್ರಕಾಂಬುವಂ ಕುಡಿಯಲ್ಕೆಂದೊಳವೊಕ್ಕವು ಮರ್ದಿನ ಕೋೞ್ಗೆಸಱೊಳಬ್ದುದೆನಿಸಿತ್ತು ನಿಭೃತ ಚರಣಂ ಹರಿಣಂ (ಕಾದಂಪೂ. ೨೮೬). [ಕೊೞ್ + ಕೆಸಱ್]

**ಕೊಟ್ರಲಿ** 'ಕೊತ್ತಳಿ' ನೋ.

**ಕೊಟ್ರಲಿಪಳ್ಳಿ** (ನಾ). ಒಂದು ಹಳ್ಳದ ಹೆಸರು : ಅಸ್ತಿ ಬಸ್ದು ಕೊಟ್ರಲಿ ಪಳ್ಳದ ಅಲ ಕಿಱುಕೆಯ ಕರ್ಗಲ್ಲ ಒಳ್ಪೆಯೆ (ಮೈಆರಿ. ೧೯೧೯, ೧೦-೭; 900). [ಕೊಟ್ರಲಿ? + ಪಳ್ಳಿ]

**ಕೊಟ್ರೊಱು** 'ಕೊತ್ತಱು' ನೋ.

**ಕೊಱ್ರಬ** (ನಾ). ಒಬ್ಬಾತನ ಹೆಸರು : ಕೊಱ್ರ[ಬ]ನ ಪೊಲ[ಮನ] ಕಾದುವೆಮೆನ್ದು ಪಂಡ್ಯೇದಿಸಿ ನಡವಾಗಳ್ದೆ ಬಟ್ಟಗೆಱೆನೆಱೆಮ್ಮೆ ಕಲಿಗಳ್ನೆಂಜೋ (ಸೌಇಇ. XI-i, ೨೧-೬; 893). [?]

**ಕೊಱ್ನೆಣ** (ನಾ). ಅಜಗಿಜಿಯಾದ ಕೊಬ್ಬು, —ನೆಣ : ಬಿಸಿಲ ಬೆಣ್ಣೆಯಂತೆ ಕರಗಿ ಕಱಂಪು ನಾಱುವ ಕೊಱ್ನೆಣನುಮಗುರ್ವಂ ಪಡೆಯೆ (ಶಾಂತಿಪು. ೭-೯೫ ವ). [ಕೊೞ್ + ನೆಣ]

**ಕೊಱ್ಪುಯ್ಯಲ್** (ನಾ). ತುರುಗಾಳಗ (?) : ದೋರಬ್ಬೆಯ ಮಗಂ ಮಲ್ಲುಗಂ ಕೊಱ್ಪುಯ್ಯಲ್ಪರಿದು ತುಱುವುಂ ಕೆಱೆಯುಮನಿಕ್ಕಿಸಿ ಕಾದಿ ಸತ್ತಂ (ಎಕ. XII, ತಿಪಟೂ. ೫೫-೨; 889). [< ಕೋೞ್ + ಪುಯ್ಯಲ್]

**ಕೊಱ್ಪೋಕ** (ನಾ). ಒಂದು ವಂಶದ ಹೆಸರು (?) : ಕೊಱ್ಪೋಕರ ಗ[ಂ]×ಯ್ಯನ ಲಿಖಿತಂ (ಸೌಇಇ. XI-i, ೨೪-೧೮ ; 897). [?]

**ಕೊಱ್ಮಿದುಳ್**, ಕೊಳ್ಮಿದುಳ್, ಕೊಳ್ಮಿದುಳು, ಕೋೞ್ಮಿದುಳ್ (ನಾ). ಅಜಗಿಜಿಯಾದ ಮಿದುಳು ; ಜಜ್ಜಿದ ಮಿದುಳು : ಕೋಡ ಕೊಱೊಳಲ್ಲುಗುತರೆ ಕೊ[ಪಾಠಾಂ. ಕೋ]ಱ್ಮಿದುಳ್ಸೊರಸಿ ಮಸ್ತಕ ಪಿಂಡದ ಮೌಕ್ತಿಕೋತ್ಕರಂ (ಪಂರಾಮಾ. ೧೩-೪೪); ನೆತ್ತಿಯಿಂ ಕೊಱ್ಮಿದುಳ್ ಸೂಸೆ (ಜಗವಿ. ೯-೮೩). **ಕೊಳ್ಮಿದುಳ್** : ವೈರಿ ಮನ್ನೆಯರ ಕೊಳ್ಮಿದುಳಿಂ ಪೊಸಗಣ್ಣದಿಣ್ಣೆಯಿಂ (ಎಕ. VIII, ಸೊರಬ. ೧೩೮-೬೯ ; ಸು. 1145). **ಕೊಳ್ಮಿದುಳು** : ಪೊಱಪೊಣ್ಮುವ ಕೊಳ್ಮಿದುಳು ಪೂದಳ್ದಾಸುರೆಮಾಗೆ (ಎಕ. VIII, ಸಾಗರ. ೧೫-೪೭ ; 1218). **ಕೋೞ್ಮಿದುಳ್** : ಕೋೞ್ಮಿದುಳುಂ ಬರ್ಕೆಯ ಕೊಳೆಯುಂ ಸೂಸಿದುವು (ಪಂರಾಮಾ. ೧೧-೨೦); ಪೆಣದ ಬೆಣಂಬೆ ಕೋೞ್ಮಿದುಳ ಕೋೞ್ಕೆಸಱಲ್ವಿನ ಪರ್ವತಂ (ಜಗವಿ. ೭-೮೪); ಮುತ್ತುಗಳ್ವೆರಸು ಸೂಸುವ ಕೋೞ್ಮಿದುಳಿಂ ದಿಶಾಮುಖಂ ತಿಱಿಪೆಣೆದಿರ್ದ ಕೆಯ್ಗಡಿಯ ಸಂದಣಿಯಿಂ (ವರ್ಧಪು. ೭-೪೮) ; ಚಿಮಿಚಿಮಿಸುತಿರ್ಪ ಕೋೞ್ಮಿದುಳಿಂ (ಶೃಂಗಾರ. ೧-೮೯). [ಕೊೞ್ + ಮಿದುಳ್]

# ಕೋ

**ಕೋ೧** (ಕ್ರಿ). ೧. ಮಣಿ ಮೊದಲಾದುವುಗಳನ್ನು ನೂಲಿನಿಂದ ಏರಿಸು ; ಪೋಣಿಸು : "ಕೋ – ಸೂತ್ರಪ್ರವೇಶೇ (ಪೋಣಿಸು)" (ಶಮಧಾ) ; ಇಂದ್ರನೀಲಮಂ ಮುತ್ತುಮನೋಳಿಯೋಳಿಯೊಳ್ ಕೋದೆಬಲಿಕ್ಕಿದ ಮಾಲೆಯಂತೆವೋಲ್ (ಪಂಪಭಾ. ೧೧-೮೧); ಒಪ್ಪಮಂ ತಾಳ್ದಿದ ಮಕರಪತಾಕಾಳಿಯಿಂ ಕೋದು ದೇವಾಯತನಂಗಳ್ . . . ರಂಜಿಸುತ್ತಿರ್ಪುವೆತ್ತಂ (ಕಾದಂಪೂ. ೨೯೬) ; ಮಾಲೆಗೋದವೋಲ್ ಸೊಗಯಿಪ ಪಂಚರತ್ನಘಟಮಾಲೆ ಪಳಂಚಲೆದತ್ತು (ಮಲ್ಲಿಪು ೧೨-೧೩೯); ಮುತ್ತಂ ಮೆಱಸಂ ಕೋದಂತಿರೆ (ಕಾವ್ಯಾವ. ೫೫) ; ರುದ್ರಾಕ್ಷೆಗಳ ಕೋವ ವಿಮಲ ಶಿವಲಿಂಗಕ್ಕೆ ರುದ್ರಾಭಿಷೇಕಮಂ ಮಾಳ್ಪ (ಚಬಸು. ೩೪-೨೫). ೨. ಸಿಕ್ಕಿಸು ; ಸೇರಿಸು : ರಥದ ಕೀಲ್ ಮುಱಿದಾಗಳೆ ಕೈಯನಲ್ಲಿ ಕೋದೆಸಗುವ ಸೂತರ್ (ಪಂಪಭಾ. ೧೧-೬೫) ; ಕೊಲಲೊಲ್ಲದಂಗಪತಿ ಬಿಲ್ಲೊಳೆ ಕೋದೆಳೆವಲ್ಲಿ ಗಂಡನಾಗನೆ (ಗದಾಯು. ೩-೨೭) ; ಪೊಸಪೊಡೆ ಪೆಗಲೊಳ್ ಕೋದ ಕೊಂಬು ಬಡಿಕೋಲ್ . . . ದೇಸಿಯನೊದವಿಸಿ ನಡೆದತ್ತು ಬೇಂಟೆಗಾಱರ ತಂಡಂ (ಸೂಕ್ತಿಸು. ೩-೧೦೨) ; ವಿವಿಧ ವಾದಕರೊಳಗದೊರ್ವನ ಹೆಗಲ ಹಱೆವೊಂದ ತವಕಿಸದೆ ತೆಗೆಕೊಂಡು ತನ್ನೊಳ್ಪುವ ಹೆಗಲಿನೊಳು ಕೋದು (ಸಾಳ್ವಭಾ. ೮-೫೫); ಬಳಿಕ ಬೆನ್ನನು ಕೋದು, ಕೈಕಾಲ್ಗಳನು ಕೀಲಿಸಿ, ಹೊಳೆದಳು ಮಳೆಯಬಿಲ್ಲಿನ ಹಾಗೆ (ಕನಪು. ೩೮-೧೩). ೩. ಚುಚ್ಚು ; ತಿವಿ ; ನಾಟಿಸು : ಅಡೆಯಂ ಕೋದೆ [ಪಾಠಾಂ. ಕೆ]ತ್ತುತುಂ ಮಾರ್ದನಿಗೆ ಮಸಗುತುಂ (ಲೀಲಾವ. ೫-೧೦೨) ; ತನ್ನೊಂದು ಕಾಯ್ಪಿಂದರಿಯಂ ಕೋದೆತ್ತಿ ಕೋಡೊಳ್ ತಳರ್ದುದು (ಸೂಕ್ತಿಸು. ೩-೩೫) ; ಹೊಳೆಹೊಳೆವ ಕೂರಂಬಿ ನಲಿ ಕೋದನು ಗಜ ಮಸ್ತಕವ (ಕುವ್ಯಾದ್ರೋ. ೩-೭೪). ೪. ಕಟ್ಟು ; ಬಂಧಿಸು : ಪರಿಪ ಬಂಡಿಯಂ ಕಾಲಿಂ ಕೋವರು ಮಱಲಂ ಸರವಿ ಪೊಸೆವರು (ಸೌಇಇ. IX-i, ೨೮೬-೧೮ ; 1190) ; ಉನ್ನತದ ಪಾಶ ದಿಂದಂತಕಂ ಕೋದೆಳೆಯೆ(ಚಬಪು. ೫೧-೧೯). ೫. ಸಿಕ್ಕು ; ವಶವಾಗು : ತಳಾಱರ ಕೋಱಿದ ಬಂದಿಯಲ್ಲಿ ಕಾಲ್ ಕೋದುದು (ಕಾವ್ಯಸಾ. ೧೨). ೬. ಸೇರಿಕೊಳ್ಳು ; ಜತೆಗೂಡು : ಅಂತಿಂತುಗಳ್ ಪದಾಪೂರಣದೊಳ್ ಕೋವುವು (ಶಮದ. ೩೧೮).

[ದೇ. ‖ ತಮಿ. ಮಲ. ಕೋ ; ಕೊಡ. ಕೊಯ ; ತೆಲು. ಕೋವ, ಕ್ರೋವ ; ಕೋಲಾ. ನಾಯ್ಕಿ. ಕೊಂಚ್ ; ಪರ್ಜಿ. ಕೋಪ್]

**ಕೋ೨** 'ಕೊಳ್೧' ಪರಾ.

**ಕೋಂಟೆ**, ಕೊಟ್ಟ₄, ಕೋಟೆ₁, ಕೋಟ್ಟ, ಕೋಟ್ಟೆ (ನಾ) ಸೇನೆಯು ಅಥವಾ ಪಟ್ಟಣದ ರಕ್ಷಣೆಗೋಸ್ಕರ ಕಟ್ಟಿದ ಭದ್ರವಾದ ಗೋಡೆಯ ಆವರಣ; ಎತ್ತರವೂ ಬಲವತ್ತರವೂ ಆದ ಸುತ್ತು ಗೋಡೆ; ಪುರಪ್ರಾಕಾರ; ಕಿಲ್ಲೆ; ದುರ್ಗ: ಪೊಬಲ ಪಡುವಣ ದೆಸೆಯು ಕೋಂಟೆಯ ಪೊಣಗಣ ದೆಸೆಯೊಳ್ (ವಡ್ಡಾರಾ. ೧೩೯-೧೬); ಕೋಂಟೆಯ ಚೆಲ್ವು ಪೊಗಬಲಜಾದೆನಿಸಿರೆ ನೆಗೆದುದು ನಭಮಪ್ಪೆಯ್ದಿ ಮಿಳಿರ್ವ ಪತಾಕಾವಳಿ (ಪಂಪಭಾ. ೪-೧೦); ಭಯದಿಂದಂಜನಚೋರಂ ಪದಕಮನೀಡಾಡಿಯಾ ಪುರದ ಕೋಂಟೆಯಂ ಇದ್ಯಾಧರಕರಣದಿಂ ಲಂಘಿಸಿ (ಧರ್ಮಾಮೃ. ೨-೧೨೭); ಮುಗಿಲ ಸಲೆ ವಿಸ್ತಾರದಿಂ ನೋಡಲಾ ನಗರದ ಕೋಂಟೆಯೊಪ್ಪುವುದು (ಜೀವಂಸಾಂ. ೧-೩೪). **ಕೊಟ್ಟ₄**: ಪರಿತಂದು ಪೊಕ್ಕಿಜಸುವೊಡೆನ್ನ ಬೀಡು ಕೊಟ್ಟವುಲ್ಲುದು (ಧರ್ಮಾಮೃ. ೬-೧೧೭); ನೀನೆಮಗೀಗ ಪಟ್ಟವ ಕಟ್ಟಿ ಸಾಗಿದರೆ ಕೊಟ್ಟವ ಮಾಡಿ ನಿಮ್ಮವರು ಬಾಗಿಲ ಹಾಕಿ ಇಟ್ಟು ಕೊಲ್ಲರೆ ಗುಂಡಿನೊಳಗೆ (ಹರಿಸಾಂ. ೨-೧೦೪); ಗಿರಿಕುಹರ ಕೊಟ್ಟ ಗಂಹರಗಳಲಿ ಕೋಹಿನಲಿ ಹಿರಿದು ಸೋಲಿಸಿ ... ಹಿರಣ್ಯಯಕೆ ಬಂದು ಬಿಟ್ಟರು ಪಾಳ್ಯಮಂ (ಕುರಂಗ. ೧೯-೨೨). **ಕೋಟೆ₁**: ಕೊಲ್ಲಿಪಲ್ಲವ ಸೊಬಮ್ಪಂ ಮ್ನೊಬಮ್ನರಾದಿತ್ಯನನ್ನೆಸಸಲಾ ಕಾಕರಾಸರುವೆಬ್ಬು ಪೆರ್ಗುಂಜಿಯ ಕೋಟೆಯಾನ್ ರೋಹಿಸಿಬಿಟ್ಟು (ಎಕ. VIII. ಸೊರಬ. ೧೦-೪; 800); ಇರ್ಕೆಯ ಕೋಟೆಯೊಪ್ಪಿರೆ ನೆಗಟ್ತೆಯ ಸ್ವರ್ಗಂ (ಧರ್ಮಾಮೃ. ೩-೨೩೧); ತ್ರಿಪುರದ ಕೋಟೆ ಬಲ್ಲಿತ್ತೆಂದರೆ ನೊಸಲಕಂಗಳಲುರುಹಿದನವ್ವಾ (ಮಹಾದೇ. ೧೫-೩); ಕೈಮಾಡಿ ಕೊಂಡರು ಸುಡರ ಕೋಟೆಗಳ (ಕುವ್ಯಾದ್ರೋ. ೧-೫೨). 'ಕೋಟೆಗಾಳೆಗ' ಪರಾ. **ಕೋಟ್ಟೆ**: "ಕೋಟೆ (ಕೋಂಟೆ, ಕೊಟ್ಟ) – ಕೋಟ್ಟ, ಕೋಟ" (ತದ್ಭಕೋ. ೯). **ಕೋಟ್ಟೆ**: ಮಹಾರಾಜರುಂ ಬಾಣರಸರುಂ ಸೋರೆಮುಟ್ಟ ಕೋಟ್ಟಂ ಯಿಟ್ಟಲ್ಲಿ (ಎಇ. XXIV, ೨೬-೫; 885).

**ಕೋಂಟೆಕೊತ್ತಲ** = ಕೋಟೆ ಮತ್ತು ಅದರ ಮೇಲಿರುವ ಬುರುಜು: ಕೋಂಟೆಕೊತ್ತಲಗಳನ್ನು ಹೊಸಹೊಸ ಭದ್ರತೆಗಳ ಭ್ರಾಂತಿಯಿಂದ ಜೀರ್ಣೋದ್ಧಾರವಮಾಡಿಕೊಳ್ಳುತ್ತ (ಮಂತ್ರಶ. ೬೯).

[ದೇ. ॥ ತಮಿ. ಕೋಟ್ಟೈ; ಮಲ. ಕೋಟ್ಟ; ತುಳು. ಕೊಡ. ಕೋಟೆ; ತೆಲು. ಕೋಟ. / ಸಂ. ಕೋಟ]

**ಕೋಂಟೆಕಾಳಗ** 'ಕೋಂಟೆ ಗಾಳೆಗ' ನೋ.

**ಕೋಂಟೆಕಾಜ**, ಕೋಟೆಗಾಜ (ನಾ). ಕೋಟೆಯ ರಕ್ಷಕ. 'ದಿಗರಿಗೋಂಟೆಕಾಜ' ಪರಾ. **ಕೋಟೆಗಾಜ**: ಬೇಡ ಕೋಟೆಗಾಜರನು ತೆರಲಾಗದು (ಸೌಇಎ. ೧೯೩೧, ಮುಂಗಳೂರು. ೩೩೬-೯; 1450).

[ಕೋಂಟೆ + -ಕಾಜ]

**ಕೋಂಟೆಕೋಲಾಹಲ**, ಕೋಟೆಕೋಲಾಹಲ, ಕೋಟೆಕೋಳಾಹಳ (ನಾ). ೧. ಶತ್ರುವಿನ ಕೋಟೆಯಲ್ಲಿ ಕೋಲಾಹಲವನ್ನು ಎಬ್ಬಿಸುವವನು; ಒಂದು ಬಿರುದು: ಕೋಂಟೆಕೋಲಾಹಲನೆನಿಪೀ ಬಿರುದ ನಾಂತು ರಾರಾಜಿಸಿದಂ (ಕಳಸ. ೨-೨೨). **ಕೋಟೆಕೋಲಾಹಲ**: ೧. ಪ್ರತ್ಯರ್ಥಿಧರಣೀಪಾಲ ಕೋಟೆಕೋಲಾಹಲಾಭಿಧಃ (ಎಕ. VII, ಶಿವಮೊ. ೨-೩೦; 1641). ೨. ಕಂಠೀರವ ನರಸರಾಜೇಂದ್ರನ ಸೈನ್ಯದಲ್ಲಿದ್ದ ಒಂದು ಕೋವಿಯ ಹೆಸರು: ಕೋಟೆಕೋಲಾಹಲ ಕಲಿವೀರಭದ್ರನು ಲೂಟಿಯ- ರಣಭೈರವನು ನಿನಾಟನ ರಂಗನಾಥನು ವೈರಿಭಟಕುರುಪಟವ ಬಲುಗೋವಿಯಿಹುವು (ಕಂನಛ ೬-೧೯). **ಕೋಟೆಕೋಳಾಹಳ**: ೧. ಶ್ರೀಮದ್ದೊಡವ ಮುರಾರಿ ಕೋಟೆಕೋಳಾಹಳ (ಸ್ವೈಅಂ. ೧೯೪೩, ೩೧೫; ಸು. 1545); ಶ್ರೀಮದ್ದೊಡವ ಮುರಾರಿ ಕೋಟೆಕೋಳಾಹಳ ... ಶಿವಗುರು ಭಕ್ತಿಪಾರಾಯಣ (ಎಕ. VII, ಶಿವಮೊ. ೨೮-೭; 1670).

[ಕೋಂಟೆ + ಕೋಲಾಹಲ]

**ಕೋಂಟೆಗಾವಲ್**, ಕೋಟೆಗಾವಲ್ (ನಾ). ಕೋಟೆಯ ಕಾವಲು, —ಕಾಪು; ದುರ್ಗರಕ್ಷಣೆ: ಪುರತ್ರಯದ ಕೋಂಟೆಗಾವಲ ಪಟುಭಟರ್ ಜತನವೆಂದು ನೇಮಿಸಿ (ಚಬಪು. ೧೨-೯). **ಕೋಟೆಗಾವಲ್**: ಕೋಟೆಗಾವಲ ಭಟರ ವಿವಿಧಾಯುಧಂಗಳ (ಜೈಮಿಭಾ. ೧೭-೯).

[ಕೋಂಟೆ + ಕಾವಲ್₁]

**ಕೋಂಟೆಗಾಳಗ** 'ಕೋಂಟೆಗಾಳೆಗ' ನೋ.

**ಕೋಂಟೆಗಾಳೆಗ**, ಕೋಂಟೆಕಾಳಗ, ಕೋಂಟೆಗಾಳಗ, ಕೋಟೆಗಾಳಗ, ಕೋಟೆಗಾಳೆಗ (ನಾ). ಕೋಟೆಯ ಕಾಳೆಗ, —ಯುದ್ಧ: ಲಗ್ಗೆಯೊಟ್ಟಳದೊಳಟ್ಟಳವಾದುದು ಕೋಂಟೆಗಾಳೆ [ಪಾಠಾಂ. ಳ]ಗಂ (ಚಂದ್ರಪು. ೩-೧೦೫); ಕಂದರಾ ಸಮಯದೊಳ್ ಖಳರು ಗಜಬಜಿಸುವಾ ಖಂಡಲಾದ್ಯರ್ ಕೋಂಟೆ[ಪಾಠಾಂ. ಕೋಟೆ]ಗಾಳೆಗವಳೀಗ ಕೈಕೊಂಡರ್ (ಚಬಪು. ೧೨-೨೫). **ಕೋಂಟೆಕಾಳಗ**: ಅಸುರಮಾದುದು ಕೋಂಟೆಕಾಳಗಂ (ತ್ರಿಷಪು. ೫-೯). **ಕೋಂಟೆಗಾಳಗ**: ಕವಿದಿಸುವಂಬು ವಾರ್ದಿಸುವ ಕಕ್ಕಡೆ ಕುತ್ತುವ ಕೊಂತ ... ಲಗ್ಗೆಮಾಡುವ ಭಟಕೋಟಿ ಕೋಟಲೆಯುಸಾಳ್ದರೆ ನೀಳ್ದುದು ಕೋಂಟೆಗಾಳಗಂ (ಪುಷ್ಪಪು. ೭-೭೪). **ಕೋಟೆಗಾಳಗ**: ಕೋಟೆಗಾಳಗದ ಪ್ರತಿಯೊಂದು ಅಂಗವನ್ನೂ ಕಣ್ಣಿಗೆ ಕಟ್ಟುವಂತೆ ಸಂಪೂರ್ಣವಾಗಿ ಚಿತ್ರಿಸಿದವನೆಂದರೆ ವಿರೂಪಾಕ್ಷ ಪಂಡಿತನು ಒಬ್ಬನೇ ಒಬ್ಬ ಎಂದು ಹೇಳಬಹುದು (ಕರ್ನಾಜ. ೪೬). **ಕೋಟೆಗಾಳೆಗ**: ರಸವಾದಿಯಂತೆ ಕೊಲ್ಲೆನುತ್ತುಂ ... ಕೋಟೆಗಾಳೆಗದಂತೆ ಪತ್ತೆನುತ್ತುಂ (ಧರ್ಮಾಮೃ. ೨-೭೧). [ಕೋಂಟೆ + ಕಾಳೆಗ]

**ಕೋಂಟೆವಜಿ** (ನಾ). ಕೋಟೆಯಲ್ಲಿ ಬಾರಿಸುವ ಒಂದು ಬಗೆಯ ಚರ್ಮವಾದ್ಯ, —ನಗಾರಿ: ಬಿಡದೆ ಕೂಗುವ ಪಹರಿ ತಿರುಗುತಿಹ ಪಂಜುಗಳ್ ಗಡಬಡಿಪ ಕೋಂಟೆವಜಿ ದನಿಗೆಯ್ವ ಪಟಲುಗಳ್ (ಚಬಪು. ೧೨-೧೦). [ಕೋಂಟೆ + ಪಜಿ₁]

**ಕೋಕ₁** (ನಾ). ೧. ಜಕ್ಕವಕ್ಕಿ; ಚಕ್ರವಾಕ: "ಕೋಕಃ, ಚಕ್ರಃ, ಚಕ್ರವಾಕಃ, ರಥಾಂಗಃ – ಈ ೪ ಜಕ್ಕವಕ್ಕಿ" (ಹಲಾಯು. ೪೧-೯೧); ಕೋಕಂ ಶೋಕಂ ಪಡೆಯೆ ... ರಂಜಿಸಿತಿರುಳ್ (ಪುಷ್ಪಪು. ೮-೧೩); ವಿರಹಂ ಕೋಕಂಗಳೊಳ್ (ಡಕಕು. ೬-೪); ಅಲ್ಲಲ್ಲಿ ಕರಂ ನಿಂದು ನೆನೆದು ಮುಯ್ಯುದು ಕೋಕಂ (ರಾಜಶೇ. ೧೧-೧೭). ೨. ಕೋಳ; ಈಹಾಮೃಗ: "ಅರಣ್ಯಶ್ವಾ, ಕೋಕಃ, ಈಹಾಮೃಗಃ, ವೃಕಃ – ಈ ೪ ತೋಳಂ" (ಹಲಾಯು. ೩೮-೭೫); ಬಲೆ ಪಱಿವ ಕೋಕನಂಕೊರ್ವ ವನಪಾಲಕಂ ಪೋಗಿ ದೇವೇಂದ್ರನಂ ಕಂಡು (ಪಂಪಭಾ. ೫-೯೩ ವ). ೩. ಕೋಗಿಲೆ; ಪಿಕ: ಕುಕಿಲ್ವ ನಲಿವ ಕೋಳದಿಂ (ಪಂಪಭಾ. ೧-೫೮). ೪. ಕಪ್ಪೆ; ಭೇಕ. ೫. ಖರ್ಜೂರದ ಮರ. ೬. ಹಲ್ಲಿ; ಗೌಳಿ. ೭. ಮರ; ವೃಕ್ಷ. ೮. ಶ್ರೇಷ್ಠ; ಉತ್ತಮವಾದುದು. ೯. ಕಾಮ ಶಾಸ್ತ್ರವನ್ನು ಬರೆದ ಒಬ್ಬ ಪಂಡಿತನ ಹೆಸರು. 'ಕಕ್ಕೋಕ', 'ಕೋಕಶಾಸ್ತ್ರ' ಪರಾ. "ಕ್ಷಿತಿಜದೊಳು ಖರ್ಜೂರದೊಳು ಕೋಳನೊಳು ಭೇಕತತಿಯೊಳು, ರಥಾಂಗದೊಳು ಜ್ಯೇಷ್ಠೆಯೊಳು ಕೋಕಮಕ್ಕು" (ಮುಂಗರಾ. ೧೫೨-೫೮); "ತರುಖರ್ಜೂರವನಶ್ವ ಚಕ್ರಯುಗಭೇಕಂ ಶ್ರೇಷ್ಠಮುಂ ಕೋಕಮಕ್ಕು" (ನಾನಾರ. ೧೮೯). [ಸಂ.]

(ನಾ). ಒಳಗಿನ ತೆಳು ಪದರ ಅಂಟಿಕೊಂಡಿರುವ ಅಡಕೆ; ಕೇಳುಅಡಕೆ: ಗೋಟಡಿಕೆಗಿಂತ ಕೋಕಕ್ಕೆ ಬೆಲೆ ಕಡಿಮೆ (ರೂಢಿ).

[← ಮರಾ. ಕೋಕಾ, ಪೋಖಾ]

**ಕೋಕಕಟ್ಟಳೆ** (ನಾ). ಕಕ್ಕೋಕಶಾಸ್ತ್ರದ ನಿಯಮ; ಕಾಮಶಾಸ್ತ್ರದ ಸೂತ್ರ: ಎಲ್ಲಿ ನೋಡಲು ಭರತ ಕೋಕಕಟ್ಟಳೆಗಳನು ಸೊಲ್ಲಿಸುವ ಚೆಲೆವೆಣ್ಗಳು (ಪ್ರೌಢರಾ. ೬-೮). [ಕೋಕ$_1$ + ಕಟ್ಟಳೆ]

**ಕೋಕನದ** (ನಾ). ಕೆಂಪುತಾವರೆ; ಕೆಂದಾವರೆ: "ಅರುಣಾಬ್ಜಮೆನೆ ಕೋಕನದಮೆನಲ್ ಕೆಂಪುದಾವರೆಯಕ್ಕು" (ಮಂಗರಾ. ೧೨೪-೧೬); ಆ ಕಾಂತೆಯ ಮೃದುತಳ ಪದ ಕೋಕನದಂ ತನ್ನ ರುಚಿಯಿನೊದವಿಸಿ ರಾಗೋದ್ರೇಕಮಂ (ಮಲ್ಲಿಪು. ೩-೫೭); ರತ್ನರಾಜಿ ಶೋಣಾದ್ರಿಗೆ ಪೂಗೊಳಕ್ಕೆ ನವಕೋಕನದಂ (ಉದ್ಭಟ. ೧-೯೬). [ಸಂ.]

**ಕೋಕನದಗರ್ಭ** (ನಾ). ತಾವರೆಯಲ್ಲಿ ಹುಟ್ಟಿದವನು; ಬ್ರಹ್ಮ: ಕೋಕನದಗರ್ಭನಿಂ ವಾಲ್ಮೀಕಿಯೆ ಕವಿ ಮುನಿನಿಕಾಯದೊಳ್ (ಜಗವಿ. ೧-೭). [ಕೋಕನದ + ಗರ್ಭ]

**ಕೋಕನದಜಠರ** (ನಾ). ಹೊಟ್ಟೆಯ ಮೇಲೆ ತಾವರೆಯನ್ನುಳ್ಳವನು; ವಿಷ್ಣು: ಕೋಕನದಜಠರನಂ ನಿರ್ವ್ಯಾಕುಳಮಿಂತೆಂದು ಧರ್ಮತನಯಂ ನುಡಿದಂ (ಪಂಪಭಾ. ೯-೧೪). [ಕೋಕನದ + ಜಠರ]

**ಕೋಕನದಪ್ರದ್ವಿಷ** (ನಾ).= ಕೋಕನದವೈರಿ ೧: ದಿನನಾಥಾಲಯ ಲಗ್ನದೊಳ್ ಕುಜಬುಧತ್ರಿಂಶಾಂಶಮಾದಂದು ಕೋಕನದ ಪ್ರದ್ವಿಷನಲ್ಲಿ ಕೂಡೆ ಪುರುಷಾಚಾರಾಢ್ಯೆ(ಜಾತಕ.೨೨-೭).[<ಸಂ. ಕೋಕನದಪ್ರದ್ವಿಷ್]

**ಕೋಕನದವೈರಿ** (ನಾ). ೧. ಕೆಂದಾವರೆಯ ಶತ್ರು; ಚಂದ್ರ: (ಕ). ೨. [ಛಂದ] ಒಂದು ಅಕ್ಷರಗಣ; ಭಗಣ: ಕೋಕನದ ವೈರಿ ದಿನಪಂಗಾ ಕಡೆಗೆ ವಾಯು ಬರೆ ಕೇಳಾ ಕಮಲಲೋಚನೆ ಪೆಸರ್ ಸಾಕಿಗನಿನಾದುದುದಯಂ (ಛಂದೋಂಬು. ೨-೫೦) [ಕೋಕನದ + ವೈರಿ]

**ಕೋಕಮು** (ನಾ). ಒಂದು ಬಗೆಯ ಹುಳಿ ಹಣ್ಣು; ಆಮಸೋಲು; ಉಂಡೆಹುಳಿ (ಕರಾ): ಮುಂಬಯಿ ೨೮ ಮಣದ ಖಂಡಗದ . . . ಜೀನಸುಗಳು ೧. ಆಮಸೂಲ (ಕೋಕಮ); ೨ ಕವಡಿ (ಮುಂಬವ್ಯಾ. ೧೨೧). [← ಮರಾ. ಕೋಕಮ್]

**ಕೋಕರ** (ನಾ). ಒಬ್ಬಾತನ ಹೆಸರು: ಬಳಗಾಜರ ಕೋಕರಂ ಪುನುವಲವಳ್ಳಿಯಲಿಬ್ಬು ಪುಯ್ಯಲಂ ಪರಿದು ಮಾರ್ಬ್ಬಲಮಂ ಕಲ್ತಿಜಿದು ಸ್ವರ್ಗ್ಗಾಲಯಕ್ಕೆ ಸನ್ದಂ (ಎಕ. VIII, ಸೊರಬ. ೫೩೦-೫; 979). [?]

**ಕೋಕಶಾಸ್ತ್ರ** (ನಾ). ಕೋಕನೆಂಬ ವಿದ್ವಾಂಸನಿಂದ ರಚಿಸಲ್ಪಟ್ಟುದೆಂದು ನಂಬಲಾದ ಶಾಸ್ತ್ರ; ಕಾಮಶಾಸ್ತ್ರ: (ಕ). [ಕೋಕ$_1$ + ಶಾಸ್ತ್ರ]

**ಕೋಕಿ** (ನಾ). ಹೆಣ್ಣು ಚಕ್ರವಾಕ ಪಕ್ಷಿ: ಹೆಣ್ಣು ಜಕ್ಕವಕ್ಕಿ: ಕುಚೆಯಲೊಲ್ಲವು ನವಿಲ್ ಬೆರೆಯಲೊಲ್ಲವು ಕೋಕಿ (ಜೈಮಿಭಾ. ೧೯-೩೩); ಕೋಗಿಲೆ ಗಿಡಗ ಕೋಕಿಗಳ್ ಕಬ್ಬಾರೆ ಪದ್ದು ಪೆಣ್ಣಂಚೆ (ಸಿದ್ಧಕಾ. ೬-೩೩); ಶಿವನ ಊರುಪಂಡದಿಂದಾದ ಬಾಳೆಗಳು, ಹರನ ಕರನಖದಿಂದಾದ ಕೋಕಿಗಳು (ಶರಚ. ೨೮). [ಸಂ. ಕೋಕೀ]

**ಕೋಕಿಲ, ಕೋಕಿಳ** (ನಾ). ಕೋಗಿಲೆ; ಪರಪುಟ್ಟ; ಪಿಕ: "ಪಡಿಯುಜವಕ್ಕಿಯೆನಲ್ಕೆ ಕೋಕಿಲನಕ್ಕುಂ" (ರನ್ನಕಂ. ೬); ಬಿರಯಿಯಂ ಮತ್ತಾಳನೀ ಕೋಕಿಲ ಧ್ವನಿಯಿಂದಂಜಿಸುತುಂ (ಕಾದಂಬ. ೭೮೧); ವಿಯೋಗಿಗಳೆಂಬ ಮೃಗಂಗಳಂ ಭಯಂಗೊಳಿಸಿದುದುತ್ಕಕೀರ ಮದಕೋಕಿಲ ಗರ್ಜಿತ ತರ್ಜಿತಂಗಳಿಂ (ಅಜಿಪು. ೬-೨೩); ಕೋಕಿಲಂ ಕೊನರಂ ಕರ್ಚಿ ತೊಪಳ್ ಸರಂಗೆಡೆದುದು (ಅನಂಪು. ೬-೭೨); ಕೋಕಿಲಂಗಳ್ ಕೊರಲ್ದೆಜಪು ಮಾಡೆ (ಭಾವಚಂ. ೪-೧೭). ಕೋಕಿಳ: "ಪಿಕಂ ಕೋಕಿಳಂ ಕಳಕಂಠಮನ್ಯಭೃತಪುಸ್ಕಪುಷ್ಟಂ ಕೋಗಿಲೆಯದೆನಿಕ್ಕುಂ" (ಮುಂಗರಾ. ೫೦-೩); ವಕ್ರವಾಕ್ಯಂ ಕೋಕಿಳಂಗಳೊಳಲ್ಲದೆ . . . ಜನಂಗಳೊಳಿಲ್ಲ (ಜಗವಿ. ೨-೧ ವ). [ಸಂ.]

**ಕೋಕಿಲತಂತ್ರ** (ನಾ). (ಕೋಕಿಲೆಯಂತೆ) ತನ್ನ ವಸ್ತುವನ್ನು ಹೆರವರು ಕಾಪಿಡುವಂತೆ ಮಾಡುವ ಯುಕ್ತಿ, —ಚಮತ್ಕಾರ: ಶ್ರೀನಿವಾಸಮೂರ್ತಿಗಳು ಗ್ರಂಥಲೇಖನಕ್ಕೆ ಮೊದಲು ಮಾಡಿದ ಕಾಲದಲ್ಲಿ ಕೋಕಿಲತಂತ್ರ ಕನ್ನಡ ಸಾಹಿತ್ಯ ಲೋಕದಲ್ಲಿ ಇನ್ನೂ ಮೊದಲಾಗಿರಲಿಲ್ಲ (ಮಹಾಗ. i, ಪ್ರಸ್ತಾವನೆ.). [ಕೋಕಿಲ + ತಂತ್ರ]

**ಕೋಕಿಲನಿನದ** (ನಾ). ಕೋಗಿಲೆಯ ಧ್ವನಿ, —ಇಂಚರ: "ಪುಗಿಲ್ ಪುಗಿಲೆನಪಾರಾವರ ಕೋಕಿಲನಿನದಂ" (ಚತುನಿ. ೯೫). [ಕೋಕಿಲ + ನಿನದ]

**ಕೋಕಿಲಪ್ರಿಯ** (ನಾ). [ಸಂಗೀತ] ಒಂದು ತಾಳದ ಹೆಸರು: ಅವುಗಳೊಳು ಚಂಚತ್ಪುಟ . . . ಕೋಕಿಲಪ್ರಿಯ . . . ಜಯಾಳವೆಂದಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೫). [ಕೋಕಿಲ + ಪ್ರಿಯ]

**ಕೋಕಿಲಸ್ವನ** (ನಾ). = ಕೋಕಿಲನಿನದ: ಅನುಲೇಪಾತಿಶಯ ಪ್ರಭಾವದಿನತಾಂಗೋಪಾಂಗಮುಕ್ಕೋಕಿಲಸ್ವನ ಲೀಲಾ ಲಲಿತೋರು ಚಾರುನಿನದಂ (ಸುಕುಮಾ. ೫-೩೬). [ಕೋಕಿಲ + ಸ್ವನ]

**ಕೋಕಿಲಾಕ್ಷ** (ನಾ). ಕೊಳಗುಳಿಕೆ ಗಿಡ; ಇಕ್ಷುಗಂಧೆ: "ಇಕ್ಷುಗಂಧಾ, ಕಾಂಡೇಕ್ಷುಃ, ಕೋಕಿಲಾಕ್ಷಃ, ಇಕ್ಷುರಃ, ಕ್ಷುರಃ —ಈ ೫ ಕೊಳವಂಕೆ ಹೆಸರುಗಳು." (ಸಿದ್ಧಾಂತಿ. ೧೧೯). [ಸಂ.]

**ಕೋಕಿಲಾರವ** (ನಾ).= ಕೋಕಿಲನಿನದ: ಕೋಕಿಲಾರವಮದು ಬೀರ ಮದ್ದಳೆಯ ನಿಸ್ವನಮಾಗಿರೆ (ಚಂದ್ರಪ್ರ. ೭-೪೨). [ಕೋಕಿಲ + ಆರವ]

**ಕೋಕಿಲಾಸನ** (ನಾ). [ಯೋಗ] ಆಸನಗಳಲ್ಲೊಂದು: ಮುಖ್ಯವಾದ ಕೆಲವು ಆಸನಗಳು — ೧. ಉತ್ತಾನಾಸನ . . . ೪೬. ಕೋಕಿಲಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಭಾರದ. ೧೬೭). [ಕೋಕಿಲ + ಆಸನ]

**ಕೋಕಿಲೆ** (ನಾ). = ಕೋಕಿಲ: "ವನಪ್ರಿಯಃ, ಪರಭೃತಃ, ಕೋಕಿಲಃ, ಪಿಕಃ —ಈ ೪ ಕೋಕಿಲೆ" (ನಾಚಿರಾ. ೧೧೪). [ಸಂ. ಕೋಕಿಲ]

**ಕೋಕಿಳ** 'ಕೋಕಿಲ' ನೋ.

**ಕೋಕಿಹಾರಿಕೆ** (ನಾ). (?) : ಕೈಯಣ ಗಿಂಡಿಯು ಕೊಂಕುಳ ಪೆಟ್ಟಿಗೆ ಕಲ್ಲಿಯಿಹುದು ತಲೆಕಟ್ಟು ಬಯ್ಯಗಳೆಂಬವು ಪರಿಪರಿ ನೋಡಲು ಕೋಕಿಹಾರಿಕೆ ಅಳವಟ್ಟು ಜ್ಞಾನವು ಇಲ್ಲವು ಪ್ರಸ್ತದ ಮನೆಯೊಳು ಹೋಳಿಗೆ ತುಪ್ಪವು ಗಬಕು ಧ್ಯಾನವಿಲ್ಲವು ಮೌನವಿಲ್ಲವು ಯಮನ ಕೈಯಿಂದಾ ದುಃಖಕು (ಚಿದಾಕೋ. ೪೨-೪). [?]

**ಕೋಕೋ** (ನಾ). ೧. ಪಾನೀಯ ಮೊದಲಾದುವುಗಳಿಗೆ ಉಪಯೋಗವಾಗುವ ಬೀಜಗಳನ್ನು ಕೊಡುವ ಒಂದು ಜಾತಿಯ ಗಿಡ. ೨. ಕೋಕೋ ಬೀಜದಿಂದ ಮಾಡಿದ ಪಾನೀಯ: ಕಾಫಿಗೆ ಬದಲು ಕೋಕೋ ತಂದರು (ರೂಢಿ). [← ಇಂ. Cocoa]

**ಕೋಗಳಿ, ಕೊಂಗಳಿ$_2$, ಕೊಗಳಿ, ಕೊಗಳೆ, ಕೊಗೆಟು, ಕೊಗುಳಿ** (ನಾ). ಒಂದು ಸೀಮೆಯ ಹೆಸರು. ಈಗಿನ ಬಳ್ಳಾರಿ ಜಿಲ್ಲೆಯ ಕೋಗಳಿ: ಶ್ರೀಮತ್[ಕೇ] × [ಕ]ಜ್ಜಂ ಬಲ್ಲಹನ ದಯೆ[ಯಿಂ] [ಕೋಗ]ಳಿಯಾಯ್ನೂಱುಮಂ ಮಾಸಿಯವಾಡಿ[ನೂಱ]ನಾಲ್ವತ್ತುಮನಾಳುತ್ತಮಿರ್ದು (ಸೌಇಇ. XI-i, ೨೨-೭; 897); ಸ್ವಸ್ತಿ ಶ್ರೀಮತು ನಾಲ್ಕು ಯುಗದ ಪೊಳಲು ಕೋಗಳಿಯ ಚಿತ್ರಕಾ × × × (ಸೌಇಇ. XI-i, ೮೬-೫೦; 1050); ನೊಳಂಬವಾಡಿ ಮೂವತ್ತಿರ್ಚ್ಛಾಸಿರಕ್ಕಂ ಸಿಖಾಮಣಿಯೆನ್ನಿಯುಂ ಕೋಗಳಿಯಯ್ನೂಱಕಂ ಮೊದಲೆನ್ನಿಸೆಗಬ್ದ ರಾಜಧಾನಿ ಪಟ್ಟಣಂಗಳ ಚಕ್ರವರ್ತ್ತಿ ಕೋಗಳಿಯ ಪೆರ್ಮ್ಮೆಯೆಂತೆಂದಡೆ (ಸೌಇಇ. IX-i, ೩೧೭-೨೭; 13ನೆಯ ಶತ).

**ಕೊಂಗಳ್ಳಿ₂ :** ಕೊಂಗಳಿಯಯ್ಯ್ನೂಱುಂ ಕದಂಬಳಿಗೆ ಸಾಸಿರಮುಂ ಬಲ್ಲಕುನ್ದಮೂನೂಱುಂ (ಎಕ. XI, ದಾವಣ. ೨೦–೪; 1045). **ಕೊಗಳಿ :** ಕೊಗ[ಪಾ ಕಾ ೦ . ಗು]ಳ್ಳಿಯನಾಳ್ವ ಕ್ರೌಂಚನೆಂಬರಸಂಗೆ (ವಡ್ಡಾ ರಾ. ೧೧೬–೧೫); ಇರ್ಮ್ಮಡಿ ನೊಳಂಬಂ ಬಲ್ಲಕುಂದೆ ೩೦೦ ಕೊಗಳಿ ೫೦೦ ಕದಂಬಳಿಂಗೆ ಸಾಸಿರವುಮನಾಳುತ್ತವಿರೆ (ಎಕ. XI, ದಾವಣ. ೧೯–೪; 1043). **ಕೊಗಳಿ :** ಈಶಾನ್ಯ ಕೊಗಳಿಯ ಹಾಳ ಹೊಲವೇರಿಯ ಹಳ್ಳದಿಂ(ಸೌಇಇ. IX–i, ೨೨೮–೧೫; 1133). **ಕೊಗೞಿ :** ಪಡೆವೋಗಿ ಕೊಯತ್ತೂರಿಱದಲ್ಲಿ ಕೊಗೞಿಯ ಒಕ್ಕಲ್ ಶ್ರೀಎರ್ಮ್ಮೆಯರ ಮಗ ಬೊಳ್ಳಗಂಗ ಗಾಮುಣ್ಡ ಸಿಱದು ಬಿಟ್ಟನ್ (ಎಕ. X, ಬಾಂಗ್. ೧೩–೪; 890). **ಕೊಗುಳಿ :** ಮೇಲಿನ 'ವಡ್ಡಾರಾ.' ಪ್ರಯೋಗದ ಪಾಠಾಂತರವನ್ನು ನೋಡಿ.

**ಕೋಗಳಿ ಗಡಿಂಬ** = ಕೋಗಳಿಯ ಸುತ್ತಮುತ್ತ ಪ್ರಚಾರದಲ್ಲಿದ್ದ ಒಂದು ಅಳತೆಗೋಲು : ಬಡಗಲು ಕೋಗಳಿಗಡಿಂಬದ ಉಕ್ಕ್ರಿಷ್ಟವಪ್ಪೆರಿಯ (ಸೌಇಇ. IX–i, ೨೪೮–೨೪; 1147). [?]

**ಕೋಗಿಯೂರ್** (ನಾ). ಒಂದು ಊರಿನ ಹೆಸರು : ಕೋಗಿಯೂರ ಬಯಲೊಳ್ಪಾಳ್ಗಿಟ್ಟು ಕೊಡ್ಡಿಯ್ದಿದಂ (ಎಕ. XIV, ಎಡತೊ. ೩೧–೮; 908). [ಕೋಗಿ ? + ಊರ್]

**ಕೋಗಿರು** 'ಕೋಗೀರು' ನೋ.

**ಕೋಗಿಲು** 'ಕೋಗಿಲೆ' ನೋ.

**ಕೋಗಿಲೆ, ಕೋಗಿಲು** (ನಾ). ೧. = ಕೋಕಿಲ : "ತಾಮ್ರಾಕ್ಷಃ – ಕೋಗಿಲೆ" (ಒಷಧಿ. ೩೭); ಕೋಗಿಲೆ ಚಾದಗೆ ಪೋದಗೆ ಮೂಗಿಗಲಿಂ ಜಂಬೆಕೊಂಚೆ . . . ಬಲಾಕೆ ಲಾವುಗೆ ಸೇನಂ (ಕಾವ್ಯಸಾ.೧೦೪೪ ಶೂದ್ರಕ); ಮಾವಿನಂಕುರಮನೆ ಕರ್ಚಿ ಬಿಜ್ಜಱಿಪ ಕೋಗಿಲೆ (ಪಂಪಭಾ. ೫–೧೧); ಪುರುಡಿಪ ಕಾಗೆಯುಂ ನಲಿವ ಕೋಗಿಲೆಯುಂ ಕೊಱೆದಿಯ್ದೆ ವೈರಮಂ (ಧರ್ಮಾಮೃ. ೩–೯೦); ಗಳಹುವರಗಿಳಿವಿಂಡಿನಲಿ ಹೆಕ್ಕಳಿಪ ಕೋಗಿಲೆಗಳಲಿ (ತೊರರಾ. ೧–೯–೧೧); ಕಾಗೆ ಕರಿದಾದರೆ ಕೋಗಿಲೆ ಅದೀತೆ (ಗಾದೆ). ೨. ಒಂದು ಜಾತಿಯ ಹುಳು : ಕಱಿಯ ಬಾಚುಳಮುಮನುಜ್ಜ್ವಳ ಲವಣಸಮೇತಮಿಕ್ಕು ಸುಂಠಿಯನರೆದಾಗಳೆ ನಸ್ಯಾಂಜನವಿಧಿಯಿಂದಲೆಗುಂ ಕೋಗಿಲೆಯನಡಸಿ ಮೆಲ್ದಾ ವಿಷಮಂ (ಅಶ್ವಶಾ. ೧೧–೩೪); ಕೋಗಿಲೆಯಂ ತಿಂದ ಕುದುರೆ ನೋಲುಸುರನಿಕ್ಕುವುದು (ಅಶ್ವವೈ. ೧೨–೨೦ ಟೀಕು). ೩. ಜಾನುವಾರುಗಳಿಗೆ ಬರುವ ಒಂದು ಬಗೆಯ ರೋಗ : ನೆರೆ ಪಟ್ಟುಯುತುಪ್ಪಮು ಮಂತರದಿಕ್ಕುಗೆಪಱದುಪೋಕುಮಾ ಕೋಗಿಲೆಯುಂ (ಲೋಕೋಪ. ೯–೨೧೧). ೪. = ಕೋಗಿಲೆಬಾಳೆ. 'ಕೋಗಿಲೆಯೆಲೆ' ಪರಾ. ೫. (ಕರಾ) ಮಾವಿನ ಹಣ್ಣಿನ ಓಟೆಯ ಒಳಗಿನ ತಿರುಳು.

**ಕೋಗಿಲು :** ೧. "ಮತಃ – ಕೋಗಿಲು, ಆನೆಮಱಿ, ಕೋಣ, ಮಗ್ಗಿ" (ಒಷಧಿ. ೯೭–೧೧೪). [< ಸಂ. ಕೋಕಿಲ]

**ಕೋಗಿಲೆಗಿಡ** (ನಾ). = ಕೋಗಿಲೆಬಾಳೆ : (೬). [ಕೋಗಿಲೆ + ಗಿಡ (< ಗಿಡು)]

**ಕೋಗಿಲೆಪುಳು** (ನಾ). = ಕೋಗಿಲೆ ೨ : ಕೋಗಿಲೆಪುಳು ತಿಂದ ರೋಗ (ಅಶ್ವಶಾ. ೧೧–೩೩). [ಕೋಗಿಲೆ + ಪುಳು₁ (< ಪುಟು)]

**ಕೋಗಿಲೆಬಾಳೆ** (ನಾ). ಅಲಂಕಾರಕ್ಕಾಗಿ ಹೂದೋಟ ಮೊದಲಾದ ಕಡೆಗಳಲ್ಲಿ ಬೆಳೆಯಿಸುವ, ಬಣ್ಣಬಣ್ಣದ ಹೂಗಳನ್ನು ಬಿಡುವ ಪುಟ್ಟ ಬಾಳೆಗಿಡಗಳನ್ನು ಹೋಲುವ ಗಿಡ ; ಕಾಬಾಳೆ (ಉಕ). [ಕೋಗಿಲೆ + ಬಾಳೆ₁ (< ಬಾೞೆ)]

**ಕೋಗಿಲೆಯೆಲೆ** (ನಾ). ಕೋಗಿಲೆ ಗಿಡದ ಎಲೆ ; ಕುವ್ವೆಯೆಲೆ : (೬). [ಕೋಗಿಲೆ + ಎಲೆ₁]

**ಕೋಗಿಲೆವಱಿ** (ನಾ). ಕೋಗಿಲೆಯ ಮರಿ ; ಮರಿ ಕೋಗಿಲೆ : ಕೋಗಿಲೆವಱಿ ಮಾಮರದೊಳ್ (ಶಬ್ದಾನು. ೫೩ ವ್ಯಾಖ್ಯಾ). [ಕೋಗಿಲೆ + ಮಱಿ]

**ಕೋಗಿಲೆವೆಣ್** (ನಾ). ಹೆಣ್ಣು ಕೋಗಿಲೆ : ಮದೋತ್ಸವದೆ ಕೋಗಿಲೆವೆಣ್ ಗಳಪಂ ನೆಗಟ್ಟುವಂತೆ (ಜಗವಿ. ೧೩–೧೧೭); ಸಲಹಿ ಪುದಲೆ ಮರಿಯಂ ಕೋಗಿಲೆವೆಣ್ ಕಾಕಂಗಳಿಂದೆ ಪಾರುವವರೆಗಂ (ಶಾಕುಂತ. ೭೦–೧೨೨). [ಕೋಗಿಲೆ + ಪೆಣ್]

**ಕೋಗೀರು, ಕೋಗಿರು, ಖೋಗೀರು** (ನಾ). ೧. ಜೀನು ; ಕುದುರೆಯ ಬೆನ್ನಮೇಲೆ ಹಾಕುವ ತಡಿ, —ದಟ್ಟವಾದ ಮೆತ್ತೆ ; ಥಡಿ : ಬಸವನೂ ತನ್ನ ಕುದುರೆಯನ್ನು ನಿಲ್ಲಿಸಿ ಕೋಗೀರು ಸೆಳೆದು ಹಿಂದಕ್ಕೆ ಸರಿಸಿದನು (ಚಿಕರಾ. ೩೪೭); ಕುದುರೆಯ ಮಾತಂತೂ ಆಯಿತು. ಇದರ ಕೋಗೀರು ತಂಗು ಮುಂತಾದ ಸಾಮಾನುಗಳನ್ನು ನೀವು ಹೊರಬೇಕೋ ನಾನು ಹೊರಬೇಕೋ . . . ಅಂದನು (ಕಥಾಮಂ. IV, ೯೫). ೨. (ಆಲಂ) ಸವಾರಿ ಮಾಡುವುದು ; ಅಧಿಕಾರ ನಡೆಸುವುದು : ಸೋದರಸಂಬಂಧ . . . ಹೇಳಿದಹಾಗೆ ಕೇಳಿಕೊಂಡಿರುತ್ತೆ ಅಂತ ಮೆಚ್ಚಿ ಮೆಚ್ಚಿ ಇವಳನ್ನು ತಂದರೆ ನನ್ನಮೇಲೇ ಕೋಗೀರು (ಶ್ರೀಕಥೆ. ೧೫೦). **ಕೋಗಿರು :** ೧. ಕೋಗಿರು ಕೆಳಗಣ ಸಂಣ ಪಟ್ಟೆ (ಎಕ. XIV, ಸಂಜನ. ೨೪೯–೨; 1847). ೨. ಅತ್ತೆಯ ಮೇಲೆ ಕೋಗಿರು ಥರ್ತಿಮಾಡುವುದೇ ತನ್ನ ಕೆಲಸವೆಂದು ಅವರು ತಿಳಿದಿರಲಿಲ್ಲ (ಸಂಧ್ಯಾರಾ. ೧೩). **ಖೋಗೀರು :** ೧. ತಾವು ನಿಶಿರಾತ್ರಿಯಲ್ಲಿ ಎದ್ದು ಕುದುರೆಗೆ ತಾವೇ ಖೋಗೀರು ಹಾಕಿಕೊಂಡು ಹೊರಟಾಗ ಪೂರ್ತ ಮಂದಟ್ಟಾಯಿತು (ಸಕತ. ೭೦). [← ಪಾರ. ಮರಾ. ಹಿಂ. ಖೋಗೀರ]

**ಕೋಗು** 'ಕೋಃಹು₁' ನೋ.

**ಕೋಗುಂಟಿ** (ನಾ). (?) : ಹನುಮಾನೆಂಬೋನು ಚಿಕ್ಕೋನು ದೊಡ್ಡೋನು ಕೋಗುಂಟಿ ಮೇಲೆ ಕೊನೆನಾಮ ಇಕ್ಕೊಂಡು ಚುಕ್ಕಿ ಬೆಳ್ಕಾಲ್ಲೀ ಹೊರಟಾನು (ಹುಟ್ಟಜ. ೩೩). [?]

**ಕೋಗುಂಡೆ** (ನಾ). ಒಂದು ಸ್ಥಳದ ಹೆಸರು (?) : ತಣಗೆರೆನಾಯಕರು ಕೋಗುಂಡೆ ಬಸವಪ ದೇವರಿಗೆ ಕೊಟ್ಟ ಹೊಂನು (ಎಕ. VII, ಚನ್ನಗಿ. ೧೪–೪ ; ?). [?]

**ಕೋಗುರಿವಾಜು** (ನಾ). ಗೇಣಿದಾರನು ಪ್ರತಿ ವರ್ಷ ಒಡೆಯನಿಗೆ ತೆರುವ ಗೇಣಿಯ ಕ್ರಮ, —ಪದ್ಧತಿ : ಎಲ್ಲಾವಕ್ಕೂ ಕೊಟ್ಟಾಗೆ ಕೋಗುರಿವಾಜು ಪ್ರಕಾರ ಗೇಣಿ ಕೊಡೂಕೆ ನಿಂಗಿಷ್ಟ ಇದ್ರೆ ಜಮಾನು ಇಟ್ಗ (ಪಂಜಪಂ. ೬೨). [ಕೋಗು (< ಕೋಹು₁) + ರಿವಾಜು]

**ಕೋಗೋಡು** (ನಾ). ಒಂದು ಊರಿನ ಹೆಸರು : ಕೋಗೋಡ ನೊಕ್ಕಲ್ತಗೆನಾಡ ಕೂಡಿಬ್ದಲ್ಲಿ (ಮೈಆರಿ. ೧೯೩೯, ೩೩–೧ ; 1034); ಕೋಗೋಡಿನ ಸಕಳಗಾವುಣ್ಡುಗಳುವರ್ (ಮೈಆರಿ. ೧೯೨೪, ೧೮–೨ ; ?). [?]

**ಕೋಚ್** 'ಕೋಚು₃' ನೋ.

**ಕೋಚ₁** 'ಕೋಸು₂' ನೋ.

**ಕೋಚ₂** (ನಾ). ೧. ಒಣಗುವುದು ; ಶುಷ್ಕವಾಗುವುದು ; ಇಂಗುವುದು. ೨. ಸಂಕೋಚ ಹೊಂದುವಿಕೆ ; ಕುಗ್ಗುವಿಕೆ. ೩. ವಕ್ರವಾಗುವಿಕೆ ; ಬಗ್ಗಿಸುವಿಕೆ. ೪. ಕದಿಯುವಿಕೆ. [ಸಂ.]

**ಕೋಚನ** (ನಾ). ಮುಚ್ಚುವಿಕೆ ; ಸಂಕೋಚಗೊಳಿಸುವಿಕೆ ; ಮುದುರುವಿಕೆ : (೬). [< ಕೋಚ₂]

**ಕೋಚಿ₁** 'ಕೋಸು₂' ನೋ.

**ಕೋಚ್ಚಿ$_2$** (ನಾ). ಕುಟಿಲಸ್ವಭಾವದವನು; ಕುಹಕಿ; ಕಪಟಿ (?): ಆ ಸಚರಾಚರಾತ್ಮಕನವದಿರೆಚ್ಚಂಬುಗಳನಂಬರದ ಆಚೆಯಲಿ ನೆಲಕು ದುರಬಿಡದೆ ವಿಲೋಚನದ ಕಿಡಿಗಳಲಿ ಸುಟ್ಟಾ ಕೋಚಿಗಳ ಕುಣಿದಾಡಿ ಸುತಲಿರ್ದನು ಮುರಧ್ವಂಸಿ (ಪ್ರಹ್ಲಾಚ. ೧೫–೨೬).
[ಕೋಚು$_1$ (< ಕೋಸು$_2$) + -ಇ$_3$]

**ಕೋಚಿಮಾಡು**, ಕೋಚುಮಾಡು (ಕ್ರಿ). ತುಂಡು ಮಾಡು; ಕತ್ತರಿಸು: ಪವನಜಂ ಕೂರ್ಗಣೆಯು ಜಳ್ಕುಲಿಸಿ ಜಡಿದು ಬಿಡಲರಿ ಧನುವ ಸಾರಥಿಯು ತುರಗಮುಂ ಹೊಂದೇರನು ಕೋಚಿಮಾಡಿದನೆರಡು ಸರಳನೊಳ್ (ತುರಂಗ. ೮೫–೫೫). **ಕೋಚುಮಾಡು**: ಕಟುವಾದ ಮಾತಿನಿಂದ ಅವನನ್ನು ಕೋಚುಮಾಡಿದರು (ರೂಢಿ). [ಕೋಚ್ಚಿ$_0$ + ಮಾಡು$_1$]

**ಕೋಚು$_1$** 'ಕೋಸು$_2$' ನೋ.

**ಕೋಚು$_2$** (ನಾ). ಕದ; ಬಾಗಿಲಿನ ರೆಕ್ಕೆ: "ಕೋಚೆಂದು ಪೇೞಲ್ ಪಡಿಗಕ್ಕುಂ ಪೆಸರ್" (ಕವಿಕಂ. ೨೪೨). [?]

**ಕೋಚು$_3$**, ಕೋಚ್ (ನಾ). ನಾಲ್ಕು ಗಾಲಿಯ ಕುದುರೆಗಾಡಿ; ಸಾರೋಟು: ಕೋಚುಗಾಡಿಗಳು ಈಗ ಹೆಚ್ಚು ಉಪಯೋಗದಲ್ಲಿಲ್ಲ (ರೂಢಿ). **ಕೋಚ್**: ಕೋಚ್ ಒಂದಕ್ಕೆ ಬೆಳಗ್ಗೆ ಎರಡು ಕುದುರೆ, ಸಂಜೆಗೆ ಎರಡು (ಚಂಗೂಲಿ. ೭೫). [← ಇಂ. Coach]

**ಕೋಚು$_4$** (ನಾ). ೧. "ತುದಿ" (ಜಾನಕೋ. ೪೨). ೨. "ಏರುದನಿ" (ಜಾನಕೋ. ೪೨). 'ಕೋಚೆತ್ತು' ಪರಾ. [?]

**ಕೋಚುಬಂಡೆ** (ನಾ). ಓರೆಕೋರೆಯಾಗಿ ಚಾಚಿಕೊಂಡಿರುವ ಬಂಡೆ; ವಕ್ರಶಿಲೆ: ನದಿಯಲ್ಲಾಗಲಿ, ಸಮುದ್ರದಲ್ಲಾಗಲಿ ಹೂತು ಕೊಂಡು ಸಂಚಾರಕ್ಕೆ ಅಡಚಣೆಯುಂಟು ಮಾಡುವ ಮರದ ತುಂಡು, ಕೋಚುಬಂಡೆ ಮೊದಲಾದುವು (Snag. ಇಂಕನಿ).
[ಕೋಚು$_1$ (< ಕೋಸು$_2$) + ಬಂಡೆ]

**ಕೋಚುಭಟ್ಟ**, ಕೂಚಂಭಟ್ಟ, ಕೂಚಿಭಟ್ಟ, ಕೂಚುಭಟ್ಟ, ಕೂಸಂಭಟ್ಟ (ನಾ). ಬುದ್ಧಿಗೇಡಿ; ಅವಿವೇಕಿ; ಅರೆಮರುಳ: ಓದಿ ಓದಿ ಮರುಳಾದ ಕೋಚುಭಟ್ಟ (ಗಾದೆ). **ಕೂಚಂಭಟ್ಟ**: ಚಂದದ ಗಾಜಿನ ಮನೆಯಲ್ಲಿ ಕೂತು ಕೂಚಂಭಟ್ಟರಾಗಿದ್ದೇವೆ (ಹೊಸಕ್ಷಿ. ೮೫). **ಕೂಚಿಭಟ್ಟ**: ಓದಿ ಮರುಳಾದೆಯೋ ಕೂಚಿಭಟ್ಟರೆ (ಸಿದ್ಧೇವ. ೭೫–೨೧೮). **ಕೂಚುಭಟ್ಟ**: ಓದಿ ಓದಿ ಮರುಳಾದ ಕೂಚುಭಟ್ಟ (ರೂಢಿ). **ಕೂಸಂಭಟ್ಟ**: ಕೂಸಂಭಟ್ಟ (ಓದಿ ಓದಿ ಮರುಳಾದವನು) (ನಮ್ಮನು. ೧೦೮). [ಕೋಚು$_1$ (< ಕೋಸು$_2$) + ಭಟ್ಟ]

**ಕೋಚುಮಾಡು** 'ಕೋಚಿಮಾಡು' ನೋ.

**ಕೋಚೆ** 'ಕೋಸು$_2$' ನೋ.

**ಕೋಚೆತ್ತು** (ಕ್ರಿ). ಏರುದನಿಯಿಂದ ಕೂಗು; ಗಟ್ಟಿಯಾಗಿ ಮಾತನಾಡು: "ದನಿಯೆತ್ತು" (ಜಾನಕೋ. ೪೨). [ಕೋಚು$_4$ + ಎತ್ತು$_1$]

**ಕೋಜ** (ನಾ). (?): ಸಣ್ಣಮ್ಮೆದಿಯ ಕಣಿಕ ಬೆಣ್ಣೆಸಕ್ಕರೆ ಕೋಜ ಬಣ್ಣಿಗೆವಡೆದ ಸೋವಿಯಿಂ ಕಲಸಿ ಕೈಗೈವುತಣ್ಣೆವಾಲ್ಗೆನೆವೊಡೆದ ಘಟರಿ ಘೃತ ಮಿಶ್ರದಿಂ ದಣ್ಣನೆ ದಣಿಯ ಪಚವಿಸಿ ತಣ್ಣದೊಷ್ಣಂ ಸಮಾನಂಗೊಳಿಸಿ ತೆಗವುತಂ ಕಣ್ಣಂಜಲಾಗದಂತಿರಿಸಿ ಬಾಳೆಯ ಚೆಲ್ವ ಹಣ್ಣು ಹೆರದುಪ್ಪದಿಂ ಘೂರಿಕೆಯನರ್ಪಿಸಿದೆ ಮಿಣ್ಣಗೆ ಶಿವಾದ್ವಯಿತರು (ಲಿಂಗಪು. ೮–೧೨); ಸೂಜಿ ನಡೆತಂದಯಸ್ಕಾಂತಮುಂ ಪಿಡಿದಿಂದುತೇಜಮುಂ ಶಶಿಕಾಂತ ಪಿಡಿದೊಜಹುಗಂಡತುಳ ವಾಜಿಯ ಧ್ವನಿಗೆ ವಾಹಕ ಪೆಚ್ಚು ಬಲಿದು ನವ ಕೋಜದಿಂ ಪ್ರಣಯವೆತ್ತು ಈ ಜಗದಿ ಮಜವಂತೆ ಭಕ್ತ ಕಾರಣವಾಗಿ ನೀ ಜೀವದಿ ಸುಳಿದು ಸುಲಭತ್ವ ಸಂಭವಿಸೆ ಮಹ ತೇಜ ವಿಖ್ಯಾತರಾದರ್ನಿಖಿಳ ಶರಣ ಭೂಜನ್ಮ ಶೇಷವಳಿದು (ಲಿಂಗಪು. ೨೨–೧೮). [?]

**ಕೋಜದೇವ** (ನಾ). ಒಬ್ಬಾತನ ಹೆಸರು: ಮಲ್ಲಅಯ್ಯಂಗಳ ಮಕ್ಕಳು ಕೋಜದೇವ ಅಗಳು ಬಿಟ್ಟ ಧರ್ಮ್ಮ (ಮೈಆರಿ. ೧೯೪೬, ೧೦–೬; ?).
[ಕೋಜ? + ದೇವ]

**ಕೋಜಯ್ಯ** (ನಾ). ಒಬ್ಬಾತನ ಹೆಸರು: ಸಾಯಿಲರ ಕೋಜಯ್ಯ ಕೊಬಿರರ ಅಳಿಯ ಸಿರಿ ಮೇಚಿ ತುಜುವಾನ್ನಿಕ್ಕಿಸಿ ಕಾದಿ ಸತ್ತ (ಎಕ. X, ಶಿಡ್ಲಘ. ೫೯–೪; 900). [ಕೋಜ? + ಅಯ್ಯ$_1$]

**ಕೋಜು** (ನಾ). ಪತ್ತೆಹಚ್ಚುವುದು; ಶೋಧನೆ; ತಪಾಸಣೆ: ನೀನು ಊರಿಗೆ ತಳವಾರನು, ಊರಿನಲ್ಲಾದ ಕಳ್ಳತನದ ಕೋಜನ್ನು ನೀನೆ ಮಾಡಬೇಕು (ಕಥಾಮಂ. IV, ೨೭).
[← ಹಿಂ. ಮರಾ. ಖೋಜ್]

**ಕೋಜೋತಗವುಣ್ಡ** (ನಾ). ಒಬ್ಬಾತನ ಹೆಸರು: ಕೋಜೋತ ಗವುಣ್ಡರ ಮಗ ಎಚಿಯಮ್ಮ ವೆಳಚಿ ಗವುಣ್ಡರ ಪಟ್ಟದಳ ಪೊನ್ನಚರಿ ಮಾಡಿದಂ (ಎಕ. IX, ಹೊಸಕೋ. ೮೭–೨; 750).
[ಕೋಜೋತ? + ಗವುಂಡ (< ಗಾಮುಂಡ)]

**ಕೋಟ್** 'ಕೋಟು$_2$' ನೋ.

**ಕೋಟೆ$_1$** 'ಕೊಟ್ಟು$_3$' ನೋ.

**ಕೋಟೆ$_2$** 'ಕೊಟ್ಟೆ$_2$' ನೋ.

**ಕೋಟೆ$_3$** (ನಾ). ೧. ವಕ್ರತೆ; ಕುಟಿಲತನ. ೨. ಗುಡಿಸಲು; ಜೋಪಡಿ. ೩. ಕೋಟೆ; ಖಿಲ್ಲೆ. [ಸಂ.]

**ಕೋಟೆ$_4$** (ನಾ). ೧. ಒಂದು ಊರಿನ ಹೆಸರು. ೨. (ಕರಾ) ಬ್ರಾಹ್ಮಣರಲ್ಲಿ ಒಂದು ಪಂಗಡದ ಹೆಸರು; ಆ ಗುಂಪಿಗೆ ಸೇರಿದ ವ್ಯಕ್ತಿ: ಕೋಟರು, ಸಕಳಾಪುರಿ, ಶಿವಳ್ಳಿ ಇವು ಹೈಗರೊಳಗಿನ ಒಳ ಭೇದಗಳು (ಕಥಾಗ. ೮೫). [?]

**ಕೋಟೆ$_5$**, ಕೋಟಾ$_1$ (ನಾ). ಒಟ್ಟು ಮೊತ್ತದಲ್ಲಿ ಒಬ್ಬ ವ್ಯಕ್ತಿ, ಅಥವಾ ಸಂಘವು ಒದಗಿಸಲೇಬೇಕಾದ ಅಥವಾ ಪಡೆಯಲು ಹಕ್ಕುಳ್ಳ ಪಾಲು, —ಭಾಗ, —ಅಂಶ; ಪಸುಗೆ: ವಾರದ ಒಲುಮೆಯ ಕೋಟವು ನಾಳೆಯೆ ಎಂದ ನಲ್ಲೆಯ ನಲ್ಲ ನೋಡಿ (ಚಂದ್ರವೀ. ೧೫೨–೭). **ಕೋಟಾ$_1$**: ಈ ವಾರದ ಕೋಟಾ (ರೂಢಿ).
[← ಇಂ. Quota]

**ಕೋಟೆಗಾಮುಂಡ** (ನಾ). ಒಬ್ಬಾತನ ಹೆಸರು: ಕೋಟಗಾಮುಣ್ಡನುಂ [ಮಾದಿ]ಗಾಮುಣ್ಡನ ಸಹಿತ ದಿರ್ಬಲ್ಲುಮಾದರ[ನುಂ] (ಸೌಇಇ. XI-i, ೭–೨೧; 837). [ಕೋಟ? + ಗಾಮುಂಡ]

**ಕೋಟೆಗಾಱ** (ನಾ). ಕೋಟೆಯ ರಕ್ಷಣೆಯಲ್ಲಿರುವವನು; ದುರ್ಗಪಾಲಕ: ಬಲದೊಡ್ಡುಯೆಡಪಂಕದೊಳು ಸಲೆ ಮೆಱೆದು ಕಡುಗಲಿ ಕೋಟೆ [ಪಾಠಾಂ. ಟೆ] ಗಾಱರ ಬಲು ಫೌಜು ಬಣ್ಣಿಪೆನೇನ (ಕುಠಾಸಾಂ. ೧೨–೩೪). [ಕೋಟೆ$_3$ + -ಕಾಱ]

**ಕೋಟರ** (ನಾ). ೧. ಮರದ ಪೊಟರೆ; ಡೊಗರು; ಟೊಳ್ಳು: "ನಿಷ್ಕುಟಃ, ಕೋಟರಃ—ಈ ೨ ಮರದ ಪೋೞಲ್" (ಹಲಾಯು. ೩೦–೨೮); ಒಂದು ಮಹಾವಟವಿಟಪಿಕೋಟರಮೆ ಕುಲಾಯುಮಾಗಿ ಕಾಕ ಮಿಥುನ ಮಿರ್ಕು೯ಂ (ಪಂಚತಂ. ೮೨–೩); ಅದ್ರಿಕುಜಂಗಳ ಕೋಟರಂಗಳೊಳ್ ಪೋದಗೆ ತತ್ತಿಯಿಕ್ಕಿದುದು (ಜಗವಿ. ೪–೭); ಕೋಟರದೊಳ್ ಪುಗುವ ವಿಹಗಂಗಳಂ (ಗಿರಿಕ. ೪–೭೦). ೨. ಒಳಗಿನ ಭಾಗ; ಬಿಲ; ರಂಧ್ರ: ದುರ್ಜನ ಪ್ರಕಳದ ಕರ್ಣಕೋಟರಮುನೇಕೆಯೊ ಮಾಡಿದನಬ್ಜವಿಷ್ಟರಂ (ಪಂರಾಮಾ. ೧–೩೧); ಅನಿಮಿಷಯ್ಯನ ಜೀವಕಳೆ ಬಂದು ನಾಟಕೀತನ ದಿವ್ಯದೇಹದ ಕೋಟರದೊಳೇನೆಂಬೆನ್ನೈ (ಪ್ರಭುಲೀ. ೧೧–೨೮); ಕರ್ಣದ ಕೋಟರಂಗಳು ಕಿವುಡುಗೊಳೆ (ತೊರರಾ. ೬–೨೭–೪). [ಸಂ.]

**ಕೋಟರಪುಷ್ಪಿ** (ನಾ). ಒಂದು ಬಗೆಯ ಗಿಡ; ಎಮ್ಮೆಬಳ್ಳಿ: "ವ್ಯಾಳ ಕೋಟ[ಪಾಠಾಂ. ಕ]ರಪುಷ್ಪಿಯೆನಲೆಮ್ಮೆವಳ್ಳಿ" (ಮಂಗರಾ. ೪೪-೪೬). [ಕೋಟರ + ಪುಷ್ಪಿ]

**ಕೋಟರಿ** (ನಾ). = ಕೋಟವಿ: (ಶ). [ಸಂ. ಕೋಟರೀ]

**ಕೋಟಲಿಗ** (ನಾ). ಕೋಟಲೆ ಕೊಡುವವನು; ಹಿಂಸೆ ಮಾಡುವವನು; ಪೀಡೆ ಕೊಡುವವನು: (ಶ). [ಕೋಟಲೆ + -ಇಗ]

**ಕೋಟಲೆ** (ನಾ). ತೊಂದರೆ; ಕಷ್ಟ; ಕಾಟ: "ಕೋಟಲೆಯೆನಿಸೊಡವು" (ಧಾರಿನಿ. ೫೫); ಅನುಭವಿಸಿದ ಕೋಟಲೆಗಳನಿನಿಸಂದೆಣಿಸಲ್ಕೆ ನಯಾಕ್ಷಿ ಶಾಕ್ತಾವಳಿಯಂ ವನಜದಳನಯನೆ ಸಮೆದಪಳೆನೆ ಸುರಿದುವು ತರಡೆ ತೋರ ಕಣ್ಬನಿದುಜುಗಲ್ (ಅಚಿಂಲು. ೨೮೫); ಸಲೆ ತಲೆಗೆಟ್ಟೋಡುವ ಕೋಟಲೆ ಗಾಜಿಕೆ ತದ್ವಿರಿಂಪ್ರೆಮಂ ಸಾರ್ದು (ಧರ್ಮಪು. ೧೦-೧೩); ಬೀಟದ ಕೋಟಲೆಯೊಳವನ ಮೈಲ್ಬಾಯ್ತು (ದಶಕು. ೧೨-೭೮); ತಾಟುತ್ತ ಮೈಯು ಬಡಿವಾಗ ಮುದಿಯನ ಕೋಟಲೆಯ ನೋಡ (ಸರ್ವಜ್ಞ. ೧೮೨೧); ಅಟ್ಟುಂಡೋದು ಆರು ಕೋಟಲೆ ತಿರಿದುಂಬೋದು ಪರಮ ಸುಖ (ಗಾದೆ).

[ದೇ. ‖ ತಮಿ. ಕೋಟ್ಪಾಲೈ; ಮಲ. ಕೋಟ; ತುಳು. ಕೋಟಲೆ; ತೆಲು. ಕೋಡಾಡು]

**ಕೋಟಲೆಗುಡು** (ಕ್ರಿ). ಕೋಟಲೆ ಕೊಡು; ತೊಂದರೆಯನ್ನುಂಟು ಮಾಡು; ಕಷ್ಟಕೊಡು; ನೋಯಿಸು: ನಿರಂತರವಾಗಿ ಕೋಟಲೆಗುಡುವ ನಮ್ಮ ಒಂದು ಅಂಗದಲ್ಲಿ (ಸುಗುಣಿ. ೬೪).

[ಕೋಟಲೆ + ಕುಡು$_1$ (< ಕೊಡು$_1$)]

**ಕೋಟಲೆಗೊಳ್** (ಕ್ರಿ). ತೊಂದರೆಪಡು; ಶ್ರಮಪಡು; ಕಷ್ಟಪಡು; ನೋವನ್ನನುಭವಿಸು: ಬಡವ ಕಾಲ್ ಭೂಭಾಗದೊಳ್ ತಂದು ಕಾಟಸುತುಂ ಕೋಟಲೆಗೊಳ್ಳೆ ರತ್ನಮಕುಟದ್ಯೋತೋತ್ಕಮಾಪಿಗಂ (ಶಂಶಪು. ೧೨-೧೫೧); ಆ ತಪೋವನದೊಳ್ಕೋಟಲೆಗೊಂಡು ಮಾಖದೆ ಕೆಪಂಗೆಯ್ವುತ್ತಿರಲ್ (ಶಾಬಂಪು. ೯೫); ಸಂತತಂ ಕುದಿದು ಕೋಟಲೆಗೊಂಡಿನಿಸ್ನೆಗಂ (ವಾಗೀಶ. ೨೬೧); ಕನಿಗುದಿಗುದಿದು ಕೋಟಲೆಗೊಂಡು ದಣಿತೇನೆ (ಉಪ್ಪಾಡ್ಯೋ. ೧೯-೩೬); ಊಟ ನಿದ್ದೆಗಳೊಂದರೊಳು ಸುಖವಿಲ್ಲದೆ ಕೋಟಲೆಗೊಂಡು ಕುಗ್ಗುವರು (ಹದಿಬ. ೬-೭); ಕೋಟ ಮಾಡಿದವನು ಕೋಟಲೆಗೊಳ್ಳ (ಗಾದೆ). [ಕೋಟಲೆ + ಕೊಳ್$_1$]

**ಕೋಟಲೆಗೊಳಿಸು** (ಕ್ರಿ). ಕೋಟಲೆಗೆ ಗುರಿಮಾಡು; ಹಿಂಸೆಪಡಿಸು; ಕಾಡು; ನೋಯಿಸು: ಅಮರತ್ವಮಂ ಪಡೆದಮರಸಮಿತಿಯಂ ಕೋಟಲೆಗೊಳಿಪ ಹಿರಣ್ಯಾಕ್ಷನಂ (ಪಂಚತಂ. ೨೪೮-೧೦); ಕೋಟಲೆಗೊಳಿಪರು ವಿಟವಿದೂಷಕರ ಕಣ್ಪೇಟದಿ ಮರುಳುಮಾಡುವರು (ಮೋಹತ. ೧೮-೪೮); ಬಲು ಮೃಗವು ಮರಪಕ್ಷಿ ಕೀಟಕ ಜಲಚರಾಳಿಧಿ ಜನಿಸಿದೆನು ಕೋಟಲೆಗೊಳಿಸದೇತಕಟ ಮಾನವನಾದ ಬಳಿಕಿನ್ನು (ಹರಿಸಾ. ೫೭).

[ಕೋಟಲೆಗೊಳ್ + -ಇಸು$_3$]

**ಕೋಟಲೆಪಡು** 'ಕೋಟಲೆವಡು' ನೋ.

**ಕೋಟಲೆಬಡಿಸು** 'ಕೋಟಲೆವಡಿಸು' ನೋ.

**ಕೋಟಲೆಬಡು** 'ಕೋಟಲೆವಡು' ನೋ.

**ಕೋಟಲೆವಡಿಸು,** ಕೋಟಲೆಬಡಿಸು (ಕ್ರಿ). ತೊಂದರೆಗೆ ಗುರಿಮಾಡು; ಕಾಟಕೊಡು; ನೋಯಿಸು: ಪಿರಿದುಂ ಕೋಟಲೆವಡಿ[ಪಾಠಾಂ. ಗೊಳಿ]ಸುವ ದುರಿತಾರಾತಿಗಳನಾವಗಂ ಗೆಲ್ವುದಱಿಂದರಹಂತನೆಂಬ ನಾಮಮಂ ಪಡೆಪುಜಿನಂಗೆ (ಸಮಪು. ೪-೨೦೦). **ಕೋಟಲೆಬಡಿಸು:** ಕಣ್ಣೆ ಪಾಪ ಕೈಗೆಡಿಸಿ ಕೋಟಲೆಬಡಿಸುವುದು (ಕರ್ಣಾವ್ಯ. ೧೦-೩೧).

[ಕೋಟಲೆವಡು + -ಇಸು$_3$]

**ಕೋಟಲೆವಡು,** ಕೋಟಲೆಪಡು, ಕೋಟಲೆಬಡು (ಕ್ರಿ). ಕಷ್ಟಪಡು; ತೊಂದರೆಗೊಳಗಾಗು; ಹಿಂಸೆಗೆ ಗುರಿಯಾಗು; ನೋವನ್ನನುಭವಿಸು: ಕೋಟಲೆವಟ್ಟೇ ನಿಷ್ಫಲೋದ್ಯೋಗವನೊಡರಿಪುದೇನ್ (ಪಂರಾಮಾ. ೧೬-೫೫). **ಕೋಟಲೆಪಡು:** ನಿನ್ನನ್ನು ದೊಡ್ಡವನನ್ನಾಗಿ ಮಾಡಲು ನಾನೆಷ್ಟು ಕೋಟಲೆಪಟ್ಟೆ (ರೂಢಿ). **ಕೋಟಲೆಬಡು.** 'ಕೋಟಲೆಬಡಿಸು' ಪರಾ. [ಕೋಟಲೆ + ಪಡು$_1$]

**ಕೋಟವಿ** (ನಾ). ೧. ಬತ್ತಲೆ ಹೆಂಗಸು: "ನಗ್ನಾ, ಕೋಟವೀ- ಈ ೨ ನಗ್ನೆ" (ಹಲಾಯು. ೭೯-೩೨೫). ೨. ದುರ್ಗಾದೇವಿ. 'ಕೋಟವಿಪುರ' ಪರಾ. [ಸಂ. ಕೋಟವೀ]

**ಕೋಟವಿಪುರ** (ನಾ). (ಅಮೃತ ಸಮುದ್ರದ ಮಧ್ಯದಲ್ಲಿರುವ ಮಣಿದ್ವೀಪದಲ್ಲಿ ನೆಲಸಿರುವುದಾಗಿ ಪುರಾಣಗಳಲ್ಲಿ ವರ್ಣಿತವಾದ) ದುರ್ಗಾದೇವಿಯ ಪಟ್ಟಣ: ಸುರಪುರಕೆ ಹರಪುರಕೆ ಹರಿಯಿಹ ಪುರಕೆ ಅಳಕಾಪುರಕೆ ಕೋಟವಿಪುರಕೆ . . . ಬೊಮ್ಮನಪುರಕೆ ನೂರ್ಮಡಿ ಮಿಗಿಲೆನಿಸಿ ತಾ ಕರ ಚೆಲುವಿನಿಂದೆಸೆವುದದು ಪಾತಾಳದೊಳು ಲಂಕೆ (ಕೌಶಿರಾ. ೩೯-೨). [ಕೋಟವಿ + ಪುರ]

**ಕೋಟವೊಕ್ಕಲಿಗ** (ನಾ). ಒಕ್ಕಲಿಗರಲ್ಲಿ ಒಂದು ಪಂಗಡ. ℙ ಅಡಕೆ ಮರಗಳ ಗೊನೆಗಳಿಗೆ ಕೊಟ್ಟೆ ಕಟ್ಟುವ ಕಸುಬಿನ ಒಕ್ಕಲಿಗ: ಕೋಟವೊಕ್ಕಲಿಗರು- ಇವರು ಶಿರಸಿ, ಸಿದ್ದಾಪುರ ತಾಲ್ಲೂಕುಗಳಲ್ಲಿ ಇರುತ್ತಾರೆ. ಅಡಿಕೇಗೊಂಚಲುಗಳಿಗೆ ಚೀಲುಮಾಡಿ ಹಾಕುವ ಹೋರೆಯನ್ನು ಮಾಡುತ್ತಿರುವ ಕಾರಣ ಇವರಿಗೆ ಈ ಹೆಸರು ಬಂದಿದೆ (ಕಭಾಗೆ. ೧೪೪). [ಕೋಟ್ಟ (< ಕೊಟ್ಟೆ$_2$) + ಒಕ್ಕಲಿಗ]

**ಕೋಟಾ$_1$** 'ಕೋಟ್ಟ' ನೋ.

**ಕೋಟಾ$_2$** (ನಾ). ಕರುಳು: (ಶ).

[← ಪ್ರಾ. ಕೋಠಾ. < ಸಂ. ಕೋಷ್ಠ]

**ಕೋಟಾಚಕ್ರ** (ನಾ). ಕೋಟೆಯ ಮಂಡಲ, —ಸುತ್ತು: ಜಳಧಿ ಜಂಬೂದ್ವೀಪಮಂ ಸುತ್ತಿ ಸೌಂದರಮಾಗಿರ್ಪವೋಲಿರ್ಪುದಪ್ರತಿಮ ಕೋಟಾಚಕ್ರಮಂ ಸುತ್ತಿ . . . ನಿರಂತರ ಕಾಂತಂ ಪರಿಖಾಂತರಂ (ಪುಷ್ಪಪು. ೨-೩೨); ಆ ಪೊಜವೊಳಲ ಅಂತರಾಳದೊಳಿರ್ಪುದೊಂದು ಕೋಟಾಚಕ್ರವಂತರಿಕ್ಷವ ಚುಂಬಿಸುತ (ಕುರಾಸಾಂ. ೪-೮೫); ಮೆಜೆವ ಕೋಟಾಚಕ್ರಭವಕಾಂತಿ ಮುಂಬರಿದು ತರಣಿ ಶಶಿ ಸಪ್ತಾರ್ಚಿತೇಜಂಗಳಂ ದಿವದಲಿಂಸಿರ್ಪ ದೀಪಗಳ ದೆಸೆಯನೀವುತಲಿರ್ದುವು (ಪಂಕಾಶಾ.೧-೪-೯).

[< ಸಂ. ಕೋಟಚಕ್ರ]

**ಕೋಟಾಯಂತ್ರ** (ನಾ). ಕೋಟೆಯನ್ನು ಭೇದಿಸುವ ಯಂತ್ರ, —ಉಪಕರಣ: ನೊಣೆಯಲ್ ನುಂಗಲಿಳಾತಳಂ ಮುರಿದು ಮೂರಿಟ್ಟಂತೆ ದುರ್ಗಕ್ಕೆ ನಿಚ್ಚಣಿ ಸಾರ್ಚುದೊಲೆ . . . ಪಡಿಗೋಂಟೆಯೆಂಬ ಬಹು ಕೋಟಾಯಂತ್ರಸಾಮಗ್ರಿ ಕಿಂಕಿಣಿಗೊಂಡಾಂತಿರೆ (ಅನಂಪು. ೧೧-೮೩).

[< ಸಂ. ಕೋಟಯಂತ್ರ]

**ಕೋಟಾರ** 'ಕೊಟ್ಟಾರ$_1$' ನೋ.

**ಕೋಟಾವಲಯ,** ಕೋಟಾವಳಯ (ನಾ). = ಕೋಟಾಚಕ್ರ: ಬರಬರುತ ದರ್ಶನಕಗುರ್ವಿದುದು ಪರ್ವತಂಬೋಲ್ ಬಂಡೆ ಬಂಡೆಯ ಮುಸೆದು ಬೆಸೆದು ಕೋಟಾವಲಯಭಿತ್ತಿ (ಶ್ರೀರಾಮಾ. ೪೩೩-೪೯೪). **ಕೋಟಾವಳಯ:** ನಿಲುವೆವಿಲ್ಲಿ ವಿರೋಧಿ ಸಂತತಿಯುಲುಹನಾಲಿಸ ಬಹುದು ಕೋಟಾವಳಯವಿದೆ ಹತ್ತಿರೆಯೆನುತ ಗುರುಸೂನು ರಥವಿಳಿಯೆ (ಕುಮ್ಯಾಗ. ೯-೨); ಪೊಳಲದಮುರಾವಣಿಗೆ ಪೊಗೆ[ಪಾಠಾಂ. ತೊಲೆ, ಮಿಗೆ] ವೆಗ್ಗಳವೆಸಲು ರಂಜಿಸಿತು ಕೋಟಾವಳಯ ಕೊತ್ತಳದಾಳುವೇರಿಯ ವಿವಿಧ ರಚನೆಯುಲಿ (ಕೂರಶಾ. ೪-೧೦-೧೩). [< ಸಂ. ಕೋಟವಲಯ]

**ಕೋಟಾವಳಯ** 'ಕೋಟಾವಲಯ' ನೋ.

**ಕೋಟಾವಳಿ** (ನಾ). ಕೋಟೆಗಳ ಸಾಲು, —ಪಂಕ್ತಿ: ಧಗಧಗಿಪ ಕೋಟಾವಳಿಯ ಪೊಗರೊಗುವ ಹೇಮದ ಕೊತ್ತಳಂಗಳ (ನಳಚ. ೩-೨೫). [ಕೋಟ$_3$ + ಆವಳಿ$_1$ (= ಆವಲಿ)]

**ಕೋಟಿ$_1$** (ನಾ). ೧. ಕೊನೆ; ತುದಿ; ಅಗ್ರ; ಕೋಡು: ಅತ್ತಂ ಬೆಳಂ ಕೇವಲ ವಿಪುಲ ತುಲಾಕೋಟಿಯಿಂ ತೂಗೆ ತನ್ನರ (ಪಂರಾಮಾ. ೧-೪೨); ಶ್ರೀಕಾಂತಪದ್ವಿಧರ್ ಸ್ವಭ್ರೂಕೋಟಿಯ ಪರ್ಬಿನಿಂದವಪ್ಪರ್ ಕಿಡುವರ್ (ಜಗವಿ. ೪-೧೦೪). ೨. ತರಗತಿ; ವಿಭಾಗ; ವರ್ಗ: ಇವನು ಮನುಷ್ಯ ಕೋಟಿಗೆ ಸೇರಿದವನೇನಲ್ಲ (ರೂಢಿ). ೩. ಆಕ್ಷೇಪಣೆ; ಮೊದಲಿಕೆ: ಭೋಜನ ಮಾಡುತ್ತಿರುವಾಗ ಎರಡೂ ಪಕ್ಷದ ಸ್ತ್ರೀಯರು ಪರಸ್ಪರರ ಮೇಲೆ ಕೋಟಿಗಳನ್ನು ಮಾಡಿ ಧೂಮದ ಹಾಡು ಹಾಡಹತ್ತಿದರು (ತುಳಸಿ. ೩೨). ೪. ಅಸಂಖ್ಯವಾದದ್ದು; ಲೆಕ್ಕವಿಲ್ಲದ್ದು; ಅಪರಿಮಿತವಾದದ್ದು: ಉದಾತ್ತನಾರಾಯಣನಾದ ದೇವನೆಮಗೀಗರಿಕೇಸರಿ ಸೌಖ್ಯಕೋಟಿಯಂ (ಪಂಪಭಾ. ೧-೧); ಹಾಲುತುಪ್ಪದ ಕೋಟಿ ಕೊಪ್ಪರಿಗೆಯಂತಲ್ಲಿ ಸಮೆದು ಶಿವಲಿಂಗಕ್ಕೆ ಕಂಪಿಡುತ್ತಿರೆ ಕಂಡು (ಬಸರ. ೭-೧೬); ಒಡಲೊಳಬುಜ ಭವಾಂಡ ಕೋಟಿಯನಡಗಿಸಿಪ್ಪ ಮಹಾಮಹಿಮಗಾಯ್ತು ಡಕ ತೊಟ್ಟಿಲೊಳ ಮವು ನಿಗಮಾಳಿಗಳು ಬೆಱಗಾಗೆ (ಕೊರರಾ. ೧-೮-೭೩); ಎಲ್ಲಮ್ಮನ ಭಕ್ತ ಕೋಟಿಯೆ ಇದಕ್ಕೆ ಸಾಕ್ಷಿ (ಕರ್ನಾಟ. ೨೩); ಕೋಟಿಭಾಗ್ಯವಿದ್ದವನಾದರೂ ಕಡೆಗೆ ಕಾಡಿನಲ್ಲೇ ಇರಿಸುತ್ತಾರೆ (ಗಾದೆ). ೫. ಮೂಲೆ; ಕೋಣ: "ಅಣಿಃ, ಅಶ್ರಿಃ, ಕೋಟಿಃ, ಅಶ್ರಃ, ಕೋಣಃ – ಕೋನ ಗೋಟು" (ಹಲಾಯು. ೧೨೦-೪೨). ೬. ಕಣ್ಣಿನ ತುದಿ, —ಕೊನೆ: (ಶಿ). ೭. ಕತ್ತಿಯ ಅಲಗು, —ಬಾಯಿ. ೮. ಬಿಲ್ಲಿನ ತುದಿ; ಕೊಪ್ಪು. ೯. ಪ್ರಾಧಾನ್ಯ; ಶ್ರೇಷ್ಠತೆ. ೧೦. ಚಹವೆ; ಅಲಂಕಾರ. ೧೧. ಮನಸ್ಸಿನ ಉಲ್ಲಾಸ; ಸಂತೋಷ. ೧೨. ಮರದ ಪೊಟರೆ; ಬಿಲ. ೧೩. ಕೈಯ ಬಳೆ, —ಕಡಗ. ೧೪. ಸಮರ; ಯುದ್ಧ. ೧೫. ಒಂದು ಸಂಖ್ಯೆ; ನೂರುಲಕ್ಷ: ವೈದಿಕರಪ್ಪ ವೇದವಿತ್ತುಗಳೊಂದು ಕೋಟಿಗೆ ಅನ್ನವನಿಕ್ಕಿದ ಫಲಕ್ಕೆ ಕೋಟಿ ಮಿಗಿಲು ಶಿವಶರಣಂಗೆ ಒಂದು ಭಿಕ್ಷವನಿಕ್ಕಿದ ಫಲ (ಆದವ. ೩೨); ಪತ್ತು ಮೂಱೇ ಕೋಟಿಯಂದು ಕೈವಶಗೆಸಿತು ದಳಪತಿಗೆ (ಕುವ್ಯಾಕ. ೨-೭); ಕೋಟಿವರಹಾ ಕೊಟ್ಟರೂ ಕೋಮಟಿಯ ಸಾಕ್ಷಿ ನಂಬಕೂಡದು (ಗಾದೆ). ೧೬. [ರೇಖಾಗ] ಸಮಕೋನ ತ್ರಿಕೋಣದ ಲಂಬಭುಜ: "ಉತ್ಕರುಷೆಯೊಳು ಧನುಫಿನೊಳು ಸಂಖ್ಯೆಯೊಳು ಕೋಟಿಯಕ್ಕು" (ಮಂಗರಾ. ೧೪೨-೧೬); "ಅಗಣಿತಭೂಷಣಂ ಸುರಗಿ ಸೌಂದರ ಕೋಟಿರ ಚಾಪದಂತ್ಯ ಸಂಯುಗಮನದುತ್ಸವಂ ಗಣನೆಯೆಂಬಿವು ಕೋಟಿ ಸಮಾಹ್ವಯಂ (ನಾನಾರ. ೪೪); "ಗುಹೆ ಬಿಲ್ಲಕೊಪ್ಪು ಲಿಪ್ಸೋತ್ಸಹ ರೂಪು ಕಠಾರಿ ಕರಭೂಷಣ ಸಮರಂಗಳ್ ಸಹಜದೊಳೆಂಟು ಪೆಸರ್ ಬಳೆಕಹುದೈ ಕೇಳ್ ಕೋಟಿಶಬ್ದಮೆನಿಕುಂ ಜಗದೊಳ್" (ನಾನಾಕಂ. ೮೬).

ಕೋಟಾಕೋಟಿ = ಕೋಟಿಗಟ್ಟಲೆ; ಅಸಂಖ್ಯ: ಪುನರ್ಭವಂಗಳು ಕೋಟಾಕೋಟಿಗಳ್ ಪಾಱಿ ಬೀೞ್ವನೆಗಂ ಪಂದಲೆಗಳ್ (ಪಂರಾಮಾ. ೧೪-೧೬೭); ಮೆಱೆದವು ಗುಡಿ ಕೋಟಾ ಕೋಟಿ ಭೂತಳ ನೆಱೆಯದು ಬೀದಿಗೆಂದೆನಲು (ಕುರಾಸಾಂ. ೧೯-೫೩). ಕೋಟಾನುಕೋಟಿ, ಕೋಟ್ಯಾನುಕೋಟಿ = ಕೋಟ್ಯಂತರ; ಅಸಂಖ್ಯ: ಹರಿಯಜೇಂದ್ರಾದಿಗಳು ಕೋಟಾನುಕೋಟಿಗಳು ಮರಣವಪ್ಪರು (ವೀಕೃಪು. ೨-೫-೧೪); ಕೋಟ್ಯಾನುಕೋಟಿ ವಿಷ್ಣು ಬ್ರಹ್ಮೇಂದ್ರಾದಿಗಳು ಕಾಲವು ತುಂಬಿದ ಬಳಿಕ ಮರಣವಾಗುವರು; ನನ್ನಿಂದ ಕೋಟಿ ಚಕ್ರವರ್ತಿಗಳಾದರೂ ಸಾಯುವರು (ವೀಕೃಪು. ೨-೫-೧೪ ಟೀಕೆ) [ಸಂ.]

**ಕೋಟಿ$_2$, ಕೋಠಿ$_2$** (ನಾ). ವಸ್ತುಗಳನ್ನು ಕೂಡಿಡುವ ಸ್ಥಳ; ಉಗ್ರಾಣ; ಧಾನ್ಯಾಗಾರ. 'ಕೋಟಿಖೋಲಿ' ಪರಾ. ೨. ಹಾಯಿ ಹಡಗು; ನಾವೆ: ಜಲಮಾರ್ಗದಿಂದ ಮಚವೆದೊಳಗಿಂದ ಅಥವಾ ಕೋಟಿಯದೊಳಗಿಂದ ಕಳುಹಿಸಲಿಕ್ಕೆ ಬರದರೆ ಅದಕ್ಕೆ ಬೀಳುವ ಅಡತಿ (ಮುಂಬವ್ಯಾ. ೨೬೩). **ಕೋಠಿ$_2$**: ೧. ದಾರೀಲಿ ಕೋಠಿಯಿಂದ ಪರಿಮಳ ಗಂಧದ ತುಂಡು ತಗೊಂಡು ಅಲ್ಲಿಗೇ ಬಂದು ಬಿಡು (ಮಾಂಗಲ್ಯ. ೧೫); ಮಿಕ್ಕ ಎಲ್ಲಾ ಸಾಮಾನುಗಳನ್ನೂ ಸಂಗ್ರಹಿಸಿಟ್ಟ ಅವನ ಕೋಠಿ (ತಕ್ಕಡಿ. ೧೮); ತಮ್ಮ ವ್ಯಾಪಾರಕ್ಕೆ ಅಡ್ಡಿ ಬರುತ್ತಿದ್ದುದನ್ನು ಕಂಡ ಅರಬ್ಬರು ಪೋರ್ಚುಗೀಸರು ತಂಗಿದ್ದ ಮನೆ ಮತ್ತು ಕೋಠಿಯ ಮೇಲೆ ಧಾಳಿ ಮಾಡಿದರು (ಪ್ರವಾಇ. II, ೨೨೫); ಕೋಠೀ ವ್ಯವಸ್ಥಾ ನಿನ್ನ ಕಡಿಗೆ; ನೀ ಬೇಕಾದ್ದು ಮಾಡಿಸಿಬಿಡು ಹೋಗಲಿ (ತಿದುಗು. ೫೫).

[← ಹಿಂ. ಮರಾ. ಕೋಠೀ. / ಪ್ರಾ. ಕೋಟ್ಟ, ಕೋಟ್ಟಯ; < ಸಂ. ಕೋಷ್ಠ]

**ಕೋಟಿಕ** (ಗು). ೧. ತುತ್ತತುದಿಯ. 'ಕೋಟಿಕಶಿಲೆ' ಪರಾ. (ನಾ). ೨. ತುತ್ತ ತುದಿ; ಶಿಖರ. [ಸಂ.]

**ಕೋಟಿಕಶಿಲೆ** (ನಾ). [ಜೈನ] ಸಿದ್ಧಶಿಲೆ: ತಮ್ಮನುಂ ತಾನುಂ ಅನೇಕ ಕುಲರಾಜ ಸಮಾಜಂಬೆರಸು ಆಡುವ ನೆವದೊಳ್ ಪೋಗಿ ಕೋಟಿಕಶಿಲೆಯಂ ತೋಱಿ (ಶಾಂತಿಪು. ೫-೨೫ ವ); ಕೋಟಿಕಶಿಲೆಯನೆತ್ತಿದ ಮಹಾಸತ್ವರ (ಪಂರಾಮಾ. ೧೪-೧೮೮ ವ); ಬರುತ ಬಟ್ಟೆಯೊಳಿರ್ದ ಕೋಟಿಕಶಿಲೆಗಂಡು ನೆರೆದರಸುಗಳೆಂದರು (ವರ್ಧಚ. ೪-೪೮). [ಕೋಟಿಕ + ಶಿಲೆ]

**ಕೋಟಿಖೋಲಿ, ಕೋಠೀಖೋಲಿ** (ನಾ). (ಉಕ) ವಸ್ತುಗಳನ್ನು ಕೂಡಿಟ್ಟ ಕೋಣೆ; ಉಗ್ರಾಣ: ಕೋಟಿಖೋಲಿಯಲ್ಲಿ ಅಕ್ಕನೊಂದಿಗೆ ಚಹಾ ಅವಲಕ್ಕಿಗೆ ಕೂತೆ (ವ್ಯನಿ. ೯). **ಕೋಠೀಖೋಲಿ**: ದಣಿದು ಬಂದು ಎಲ್ಲ್ಯಾ ಜಾಗಾ ಸಿಗದ ನೀವು ಕೋಠೀಖೋಲ್ಯಾಗ ಬಂದು ಮಲಕೊಂಡ್ರಿ (ಸಮುಜೀ. ೨೮೨). [← ಹಿಂ. ಮರಾ. ಕೋಠೀಖೋಲೀ]

**ಕೋಟಿಗಾವುಂಡ** (ನಾ). ಒಬ್ಬಾತನ ಹೆಸರು: ಅವರನ್ವಯತಿಳಕಂ ಲೋಕವಿಶ್ರುತಂ ಪಿರಿಯ [ಕೋ]ಟಿಗಾವುಣ್ಡಂ ಸಂಭಾವಿಸಿದಂ (ಸೌಇಇ. XI–i, ೯೫-೯; 980). [ಕೋಟಿ$_1$ + ಗಾವುಂಡ (< ಗಾವುಂಡ)]

**ಕೋಟಿನಾಳು** (ನಾ). (ಕರಾ) ಹುಟ್ಟಿದ ದಿನದ ವಿವರ ಮತ್ತು ಗ್ರಹಕುಂಡಲಿಯನ್ನು ಒಳಗೊಂಡ ಜಾತಕ; ಜನ್ಮಕುಂಡಲಿ: ಜೋಯಿಸರಿಗೆ ಸಂತಾನವಾಗದಿರಲೇನು ಕಾರಣವೆಂದರಿಯಲು ಕೋಟಿನಾಳು (ಜಾತಕ) ತೋರಿಸಿದರು (ಭ್ರಾಂತಿಸು. ೪). [?]

**ಕೋಟಿಪತ್ರ** (ನಾ). ೧. ದೋಣಿಯನ್ನು ನಡಸುವ ಹುಟ್ಟು: "ಅರಿತ್ರಂ, ಕೋಟಿಪ[ಪಾಠಾಂ. ಪಾ]ತ್ರಂ – ಈ ೨ ನಾವೆಯ ಸೋಗೆ" (ಹಲಾಯು. ೧೧೧-೫೦). ೨. ಹಡಗಿನ ಮುಂಭಾಗ; ಚೂಣಿ: "ಹಡಗಿನ ಮುಖಂ ಕೋಟಿಪತ್ರಮೆನಿಸಿಕ್ಕುಂ" (ಮಂಗರಾ. ೧೨೧-೫). [ಕೋಟಿ$_1$ + ಪತ್ರ]

**ಕೋಟಿಪಾತ್ರ** (ನಾ). = ಕೋಟಿಪತ್ರ ೧: "ಅರಿತ್ರಂ, ಕೋಟಿಪಾ[ಪಾಠಾಂ. ಪ]ತ್ರಂ– ಈ ೨ ನಾವೆಯ ಸೋಗೆ" (ಹಲಾಯು. ೧೧೧-೫೦). [ಕೋಟಿ$_1$ + ಪಾತ್ರ]

**ಕೋಟಿಯೇರಿಸು** (ಕ್ರಿ). ಆಕ್ಷೇಪಿಸು; ಮೊದಲಿಸು; ಪ್ರತಿವಾದಗಳನ್ನು ಒಡ್ಡು; ತರ್ಕಮಾಡು: ರಂಗನಾಥನು ಮುರಾರೀ ಕವಿಯ ಜಾಡನ್ನು ಹಿಡಿದು "ಲಲಿತವಹ ಕನ್ನಡದ ನುಡಿಯಲಿ ತಿಳಿದು ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೆ? ಸಂಸ್ಕೃತದಲಿನ್ನೇನು?" ಎಂದು ಕೋಟಿಯೇರಿಸಿದನು (ಶಮುಹಾಂ. ೯೯). 'ಕೋಠಿ$_1$' ಪರಾ. [ಕೋಟಿ$_1$ + ಏರಿಸು (< ಏಱಿಸು)]

**ಕೋಟವರ್ಷೆ** (ನಾ). ಒಂದು ಔಷಧಿಯ ಹೆಸರು: "ಮರುನ್ಮಾಲಾ, . . . ಕೋಟವರ್ಷಾ, ಲಂಕೋಯಿಕಾ, ಲಂಕಾಸಿಕಾ – ೧೦ ಸ್ಪೃಕ್ಕವೆಂಬ ಗ್ರಂಥ್ಯದ್ರವ್ಯ; ಸಂಕೇಬೇರು" (ಸಿದ್ಧಾಂತಿ. ೧೨೫).
[ಸಂ. ಕೋಟವರ್ಷಾ]

**ಕೋಟಿಶ** (ನಾ). (ಹೊಲಗದ್ದೆಗಳಲ್ಲಿ ಹೆಂಟೆಗಳನ್ನು ಒಡೆಯುವ) ಮರದ ಕೊಡತಿ; ಹಲಬೆ: "ಕೋಟ[ಪಾಠಾಂ. ಟೀ]ಶಂ, ಲೋಷ್ಟಭೇದನಂ – ಈ ೨ ಹಲಿಕೆ" (ಹಲಾಯು. ೯೪-೬೨೨); "ಹರಿಕೆ ಕೋಟಿಶ ಮಕ್ಕು ಲೋಷ್ಟಭೇದಂ" (ಮಂಗರಾ. ೧೦೯-೧). [ಸಂ.]

**ಕೋಟೆಹೊರಿಸು** (ಕ್ರಿ). ಆಪಾದನೆಯನ್ನು ಹೇರು, —ಹೊರಿಸು: ರಾಜನ ಮೇಲೆ ಅವನ ಸ್ನೇಹಿತರು ಕೋಟೆಹೊರಿಸುವುದಕ್ಕೆ ಮೊದಲಾಯಿತು (ನಟಸಾ. ೩೧). [ಕೋಟೆ$_1$ + ಹೊರಿಸು (< ಪೊರಿಸು)]

**ಕೋಟೀರ** (ನಾ). ೧. ಕಿರೀಟ; ಮಕುಟ: "ಕಿರೀಟಂ, ಉಷ್ಣೀಷಂ, ಕೋಟೀರಂ, ಮುಕುಟಂ – ಈ ೪ ಮಕುಟಂ" (ಹಲಾಯು. ೯೩-೪೧೧); ಶ್ರೀರಮಣಂ ಪುಟ್ಟಿರೆ ಕೋಟೀರಾದ್ಯಾಭರಣ ಚಕ್ರಮುಖ್ಯಾಯುಧ ನಾನಾರಶ್ಮಿಯನು ವಿಜೃಂಭಿಸೆ ರಾರಾಜಿಸಿದತ್ತು ಕೌಸ್ತುಭಂ ಪೇರುರದೊಳ್ (ಜಗವಿ. ೩-೧); ತೀರು ಗಮಿಸುವ ವೇಗಕರಸನ ಚಾರುರತ್ನಸ್ಫುರಿತ ಶಿರಕೋಟೀರ ಕೆಡೆದುದು (ಅಂಬಿಕಾ. ೪೮-೩೧). ೨. ಜಡೆ; ಮುಡಿ: ಸೋಮಕೋಟೀರಭಾರನಂ . . . ತ್ರಿಜೇತ್ರನಂ (ಭಕ್ತಾಚ. ೩-೫೯); ಜಯಜಯ ಸುಧಾಕರ ಕಲಾಕಲಿತ ಕೋಟೀರ (ರಾಜಶೇ. ೧೪-೧೬೯ ವ).
[ಸಂ.]

**ಕೋಟೀಶ$_1$** (ನಾ). = ಕೋಟಿಶ: "ಕೋಟೀ[ಪಾಠಾಂ. ಟಿ]ಶಂ, ಲೋಷ್ಟಭೇದನಂ – ೨ ಹಲಿಕೆ" (ಹಲಾಯು. ೯೪-೬೨೨). [ಸಂ.]

**ಕೋಟೀಶ$_2$** (ನಾ). ಕೋಟ್ಯಧೀಶ: ಅವನೊಬ್ಬ ಕೋಟೀಶ (ರೂಢಿ).
[ಕೋಟಿ$_1$ + ಈಶ]

**ಕೋಟು$_1$** (ನಾ). ಮೈಗೆ ತೊಟ್ಟುಕೊಳ್ಳುವ ಒಂದು ಬಗೆಯ ದಪ್ಪವಾದ ಉಡುಪು; ಮೇಲಂಗಿ: ಕೋಟುಗಳೇ ಪ್ರಬಲವಾಗಿ ಮುಂಚಿನ ನಿಲುವಂಗಿಗಳು ಎಲ್ಲಿಯೋ ಅಡಗಿದವು (ಕೋಕಿಮು. ೭೨); ಕಾಲಿಗೆ ಬಿಳಿ ಇಜಾರು; ಉದ್ದವಾದ ಕಪ್ಪುಕೋಟು; ತಲೆಗೊಂದು ಪಾಗೋಟಿ . . . ಧರಿಸಿದ್ದನು (ನಿಷ್ಕಾಮ. ೨). [← ಇಂ. Coat]

**ಕೋಟು$_2$**, ಕೋಟ್ (ನಾ). ಇಸ್ಪೀಟು ಆಟದಲ್ಲಿ ಒಂದು ಬಗೆ. ೪ ಪಕ್ಷ ಕಟ್ಟಿ ಆಡುವಾಗ ಒಂದು ಪಕ್ಷದವನು ತನ್ನ ಪ್ರತಿಪಕ್ಷದವರೊಡನೆ ಎಲ್ಲಾ ಎಲೆಗಳನ್ನೂ ಗೆಲ್ಲುವುದು: ಅವರಿಗೂ ಮೂಕವಾಗಿ ನಡೆದ ಆಟ 'ಕೋಟು' 'ಒಕ್ಕು'ಗಳು ಒಂದರಮೇಲೊಂದು ಒದಗಿದಾಗ ಒಮ್ಮೆಲೇ ಚತುರ್ಮುಖವಾಗಿ, ಷಣ್ಮುಖವಾಗಿ ಕೆಲೆಯ ಹತ್ತಿತು (ಮೂರುದಾ. ೮). **ಕೋಟ್**: ಇವರ ಜೋಡಿದಾರನು 'ಕೋಟ್' ಎಂದು ಒದರಿದಾಗ ವಿರುದ್ಧಪಕ್ಷದವರ ದಿವಾಳಿಯಾಗಿ ಬಿಟ್ಟಿತ್ತು (ಮೂರುದಾ. ೮). [← ಇಂ. Quote]

**ಕೋಟುಗಸ್ತಿ** 'ಕೋಟುಗಸ್ತು' ನೋ.

**ಕೋಟುಗಸ್ತು**, ಕೋಟುಗಸ್ತಿ (ನಾ). ರಾತ್ರಿಯಲ್ಲಿ ವೇಷ ಬದಲಾಯಿಸಿಕೊಂಡು ಗುಟ್ಟಾಗಿ ತಿರುಗಾಡುವುದು; ಗುಪ್ತವಾಗಿ ಸಂಚರಿಸುವುದು; ಪಹರೆ (?): ಆ ಪಟ್ಟಣದ ದೊರೆಯಾದ ವಿರೋಚನನು ರೂಪವನ್ನು ಮರೆಯಿಸಿಕೊಂಡು ಕೋಟುಗಸ್ತಿಗಾಗಿ ಬರುತಾ ಇವನನ್ನು ಕಂಡು – ನೀನು ಯಾರು? . . . ಎಂದನು (ನೀತಿಚಿಂ. V, ೬). **ಕೋಟುಗಸ್ತಿ**: ನಿನ್ನೆ ರಾತ್ರಿ ಕಳ್ಳರನ್ನು ಹಿಡಿಯುವುದಕ್ಕೆ ಹೋಗಿದ್ದ ಠಾಣೇದ ಗುರಿಕಾರನು ಊರಲ್ಲಿ ಕೋಟುಗಸ್ತಿ ತಿರುಗುತ್ತಿರುವಾಗ್ಗೆ (ಪೇಟೇಮಾ. ೩೬). [ಕೋಟು ? + ಗಸ್ತು]

**ಕೋಟುರ** (ನಾ). ನೋವು; ಸಂಕಟ (?): ಪೇಳಾರ ಮನಕ್ಕೆ ಕೋಟುರಮನಾಗಿಸದೀ ಭುವನಾಂತರಾಳದೊಳ್ (ಎಇ. XIII, ೩೦೩-೨೮; 1125). [< ಕೋಟರ ?]

**ಕೋಟೆ$_1$** 'ಕೋಂಟೆ' ನೋ.

**ಕೋಟೆ$_2$** (ನಾ). ಒಂದು ಸೀಮೆಯ ಹೆಸರು: ಕೋಟೆಯ ನೀತಿಮಾರ್ಗ್ಗಣೇಶ್ವರವುಮನಾಳ್ವ ಶ್ರೀಮನ್ಮೂವಡಿ ಚಲ್ಲುಕದೇವ (ಎಕ. IX, ಚನ್ನಪ. ೪೮-೮; 907). [?]

**ಕೋಟೆಕೋಲಾಹಲ** 'ಕೋಂಟೆಕೋಲಾಹಲ' ನೋ.

**ಕೋಟೆಕೋಳಾಹಳ** 'ಕೋಂಟೆಕೋಲಾಹಲ' ನೋ.

**ಕೋಟೆಗಲ್ಲು** (ನಾ). ಕೋಟೆಯ ಗೋಡೆಯ ಕಲ್ಲು; ಪ್ರಾಕಾರದ ಶಿಲೆ: ಮಂಟಪಂ ಬಿರಿಬಿರಿದು ಬಯಲಾಯ್ತು ಬಾಗಿ ಬಿದ್ದುವು ಕೋಟೆಗಲ್ಲುಗಳ್ (ಬಸವ. ೧೬-೫).
[ಕೋಟೆ$_1$ (< ಕೋಂಟೆ) + ಕಲ್ಲು (< ಕಲ್$_3$)]

**ಕೋಟೆಗಾ** (ಕ್ರಿ). ಕೋಟೆಯನ್ನು ರಕ್ಷಿಸು, —ಕಾಪಾಡು: ಎತ್ತಿದ ಪಂಜುಗಳುರಿವೆಳಗೆತ್ತಂ ಮಿಸುಗುವಿನಮೆಳ್ಳಜೆಳ್ಳಜೆನುತ್ತಂ ಬಿತ್ತರದಿನಾರ್ದು ತಿರುಗುತೆ ಸುತ್ತಂ ಸಲೆ ಕೋಟೆಗಾದನಚಳಿತ ಧೀರಂ (ವೃಷವಿ. ೧೧-೧೨). [ಕೋಟೆ$_1$ (< ಕೋಂಟೆ) + ಕಾ$_1$]

**ಕೋಟೆಗಾಜ** 'ಕೋಂಟೆಗಾಜ' ನೋ.

**ಕೋಟೆಗಾವಲ್** 'ಕೋಂಟೆಗಾವಲ್' ನೋ.

**ಕೋಟೆಗಾಳಗ** 'ಕೋಂಟೆಗಾಳಗ' ನೋ.

**ಕೋಟೆಗಾಳೆಗ** 'ಕೋಂಟೆಗಾಳೆಗ' ನೋ.

**ಕೋಟೆತೆನೆ** 'ಕೋಟೆದೆನೆ' ನೋ.

**ಕೋಟೆದೆನೆ**, ಕೋಟೆತೆನೆ (ನಾ). ಕೋಟೆಯ ಅಗ್ರಭಾಗದಲ್ಲಿರುವ ಬುಗುರಿಯ ಆಕಾರದ ಕಂಡಿಯುಳ್ಳ ರಚನೆ,—ಶಿಲ್ಪ: ಬಿಡದೆ ಸಾವಿರ ಸಂಖ್ಯೆಯೂ ನಿಚ್ಚಣಿಗೆಯ ತೊಡಿಸಿ ತೆಂಕಣ ಕೋಟೆದೆನೆಗೆ (ಕಂಸವಿ. ೧೪-೪೧) ಮುಗಿಲುಮುಟ್ಟಿದ ಕೋಟೆದೆನೆಗಳಿಂ ಕೊನೆಗಳಿಂದಗಳು ಜಲಮತಳಮಂ ಭೇದಿಪುದು (ರುಕ್ಮಾಂಗ. ೩-೪). **ಕೋಟೆತೆನೆ**: ಗಗನವ ಸೋಂಕುವ ಕೋಟೆಕೊತ್ತಲುಗಳು ಬುಗುರಿ ಮಾಟದ ಕೋಟೆತೆನೆಯು (ಸೌಗಂಪ. ೧-೭); (ಕಟ್ಟಡಕ್ಕೆ, ಗೋಡೆಗೆ) ಕಂಡಿಗಳುಳ್ಳ ಕೈಪಿಡಿಗೋಡೆ ಹಾಕು, ಕಟ್ಟು; ಕೋಟೆತೆನೆಮಾಡು, ಕಟ್ಟು (Embattle. ಇಂಕನಿ). [ಕೋಟೆ$_1$ (< ಕೋಂಟೆ) + ತೆನೆ$_1$]

**ಕೋಟೆಮನೆ** (ನಾ). ಕೋಟೆಯಿಂದ ಸುತ್ತುವರಿಯಲ್ಪಟ್ಟ ಮನೆ: ಹಿಂದೆ ದುರ್ಗವಾಗಿದ್ದ ಶ್ರೀಮಂತಗೃಹ, ಕೋಟೆಮನೆ (Castle. ಇಂಕನಿ). [ಕೋಟೆ$_1$ (< ಕೋಂಟೆ) + ಮನೆ]

**ಕೋಟೆಮಾನ್ಯ** (ನಾ). ಕೋಟೆಯ ರಕ್ಷಣೆಗಾಗಿ ಕೊಟ್ಟ ಮಾನ್ಯ, —ಭೂಮಿ: ಬಯಿರಗೊಂಡಗೆ ಕೋಟೆಮಾನ್ಯದ ಗದೆ (ಮೈಆರಿ. ೧೯೩೦, ೯೮-೩; 17ನೆಯ ಶತ). [ಕೋಟೆ$_1$ (< ಕೋಂಟೆ) + ಮಾನ್ಯ]

**ಕೋಟೆಮುಗಿಲು** (ನಾ). ಕೋಟೆಯ ಆಕಾರದಲ್ಲಿ ಸುತ್ತುಗಟ್ಟಿದ ಮೋಡ: ಕೋಟೆಮುಗಿಲು, ಕೆಮ್ಮೋಡ, ಬಿಳಿಮೋಡ, ಕಾರ್ಮೋಡ, ಹಿಂಡುಮೋಡ ಇವಿದ್ದು ಚಿಟ್ಟೆಹುಳ ನೆಲ ಕಚ್ಚದೆ ಹಾರಾಡಿದರೆ ಮಳೆ ತಕ್ಕೋಳಿ, ಕುರ್ತೇಟು ಬಂತು (ಹುಟ್ಟಿಹ. ೧೪೩).
[ಕೋಟೆ$_1$ (< ಕೋಂಟೆ) + ಮುಗಿಲು (< ಮುಗಿಲ್)]

**ಕೋಟೆಯಮ್ಮ** (ನಾ). ಒಬ್ಬಾತನ ಹೆಸರು: ಉತ್ತರಾಯಣ ಸಂಕ್ರಾಂತಿಯನ್ದು ಕೋಟಿಗರ ಕೋಟೆಯಮ್ಮಂ ಗೋಸಹಸ್ರಮಾಟ್ದಂ (ಮೈಆರಿ. ೧೯೨೯, ೭೮-೧೨; 964).
[ಕೋಟೆ$_1$ (< ಕೋಂಟೆ) + ಅಮ್ಮ$_1$]

**ಕೋಟೆವಳಿ** (ನಾ). ಕೋಟೆಯ ಹತ್ತಿರದ ನೆಲ; ದುರ್ಗದ ಪ್ರದೇಶ: ಜೆಟ್ಟಿಗರ ವೀರರಸಮುಂ ನೆಟ್ಟನೆ ತೂಗಲ್ಕೆ ದಿಟ್ಟದೊಲೆಯಿಂದದಟರ್ ಕಟ್ಟಿದ ಕಟ್ಟಳೆಯೆನಿಸಿದುದಿಟ್ಟಳಮೆನೆ ಕೋಟೆವಳಿಯ ಸೆಱಗೆಯ್ದಂಗಳ್ (ಪಾರ್ಶ್ವಪು. ೩-೧೩೨). [ಕೋಟೆ₁ (< ಕೋಂಟೆ) + ಬಳಿ₂]

**ಕೋಟೆವಿರಿ** (ನಾ). ಕೋಟೆಯ ಬಿರುಕು, —ಸೀಳು: ನಾಡ ಕೊಳ್ಳಿಗೆ ಹರಿದು ತಲೆ ಹೋಗಾಡಿದಂತವನಲ್ಲ ಮೇಹಿಂಗಾಡ ಬಂದಿಲಿ ಕೋಟೆವಿರಿ [ಪಾಠಾಂ. ಕೋಟೆನಿಱ]ಯಲಿ ಸಿಕ್ಕಿ ಮಡಿವಂತೆ (ಬಸವು. ೫೮-೪೪). [ಕೋಟೆ₁(< ಕೋಂಟೆ) + ಬಿರಿ₂]

**ಕೋಟೇಶ್ವರ** (ನಾ). (ಕರಾ) ೧. ಒಂದು ಊರಿನ ಹೆಸರು. ೨. ಬ್ರಾಹ್ಮಣರ ಒಂದು ಪಂಗಡ; ಆ ಪಂಗಡಕ್ಕೆ ಸೇರಿದವನು: ಕೋಟೇಶ್ವರ ಬ್ರಾಹ್ಮಣರು, ಕುಂದಾಪುರ ತಾಲ್ಲೂಕಿನ ಕೋಟೇಶ್ವರವೆಂಬ ಗ್ರಾಮದಲ್ಲಿ ವಾಸಿಸುವರು (ತುಳುನಾ. ೧೪೫). [ಕೋಟ್ಯ+ ಈಶ್ವರ]

**ಕೋಟ್ಟೆ** 'ಕೋಂಟೆ' ನೋ.

**ಕೋಟ್ವವಳ** 'ಕೊತವಾಲ' ನೋ.

**ಕೋಟ್ವಾರಿ** 'ಕೊಟ್ವಾರಿ' ನೋ.

**ಕೋಟ್ವೆ** 'ಕೋಂಟೆ' ನೋ.

**ಕೋಟ್ವೆಱ** (ನಾ). ಒಬ್ಬಾತನ ಹೆಸರು: ತೋಟ್ಟಮುಂ ಮನೆತ್ತಾನಮುಂ ಚನ್ದ್ರಸೇನಾಚಾರ್ಯರ್ಕೆ ಉದಪೂರ್ವಂ ಕೊಟ್ಟಾರ್ ಆದರ್ಕೆ ಸಾಕ್ಷಿ ಕೋಟ್ವೆಱರುಂ ಕಾರೆಅಱುಕುಂ (ಮೈಆರಿ. ೧೯೨೫, ೧೦೬-೩೬ ; ?). [?]

**ಕೋಟ್ಯಂತರ** (ಗು). ಕೋಟಿಗಟ್ಟಲೆಯ; ಲೆಕ್ಕವಿಲ್ಲದ; ಅಸಂಖ್ಯವಾದ: ಹಿಡಿಮಂದಿಯ ಭೋಗ ವೈಭವಗಳ ರಕ್ಷಣೆಗಾಗಿ ಕೋಟ್ಯಂತರ ಜನರ ರಕ್ತಶೋಷಣೆ ದುಃಖಸಂಕಟಗಳನ್ನು ಜಾಗರೂಕತೆಯಿಂದ ಬಚ್ಚಿಡುತ್ತಿದ್ದ (ಪುನರು. ೩೨೬). [ಕೋಟಿ₁ + ಅಂತರ]

**ಕೋಠ** 'ಕೊಟ್ಟ₈' ನೋ.

**ಕೋಠಾರ** 'ಕೊಟ್ಟಾರ₁' ನೋ.

**ಕೋಠಿ₁** (ನಾ). ಪ್ರಶ್ನೆ; ಸವಾಲು: ಗಾನರಸಕ್ಕೆ ಮಾತ್ರವೇ ಈ ಸಂಬಂಧವನ್ನು ಹೇಳುವುದಕ್ಕೆ ಕಾರಣವೇನು? ಎಂದು ಕೋಠಿಮಾಡಿದರೆ, ಉತ್ತರವನ್ನು ಚೆನ್ನಾಗಿ ಯೋಚಿಸಿ ತಿಳಿದುಕೊಳ್ಳಬೇಕಾಗಿದೆ (ಕಾಂಪೂಚ. ೧೨); ಆದರ ಮೇಲೆ ನೀನು ಇನ್ನಾವ ಕೋಠಿ ಹಾಕುತ್ತೀಯೆ? ಎಂದು ಕೇಳಿದನು (ಕೊನಷ್ಟ್ಯ. ೧೨೨); ದರ್ಭೆಗೇನು ನಮ್ಮ ಮನೆಯಲ್ಲಿ ಬರ ಬಂದಿದೆಯೇನೆ? ಒಂದು ಹಸು ಮೇಯುವಷ್ಟು ಇದೆಯಲ್ಲಾ ... ಎಂದು ವೆಂಕಮ್ಮ ಆದಕ್ಕೂ ಒಂದು ಕೋಠಿಹಾಕಿ ಮಾತಿಗೆ ಮಾತು ಜೋಡಿಸುತ್ತಿದ್ದರು (ರಾಗಿಣಿ. ೩). [< ಸಂ. ಕೋಟಿ]

**ಕೋಠಿ₂** 'ಕೊಟ್ಟ₂' ನೋ.

**ಕೋಠೀಖೋಲಿ** 'ಕೋಟಿಖೋಲಿ' ನೋ.

**ಕೋಡ₁** 'ಕೋಡಗ' ನೋ.

**ಕೋಡ₂** (ನಾ). ಕಾಡುಹಂದಿ; ಸೂಕರ: "ಮಿಗೆಯೆಕ್ಕಲ ಕೋಡ" (ಕವಿಕಂ. ೩೧); ಕೊ[ಕೋ]ಡ ಕೂರಂಗಿ ಮರೆ ಹುಲ್ಲೆ (ಶ್ರೀಪಾಲ. ೭-೧೬). [< ಸಂ. ಕ್ರೋಡ]

**ಕೋಡ₃** (ನಾ). ಕೊಂಕು; ಬಾಗು; ವಕ್ರ. 'ಕೋಡಮೆ' ಪರಾ. [?]

**ಕೋಡಂಗಿ**, ಕೋಡಗಿ, ಕೋಡಿಂಗ, ಕೋಡಿಗ (ನಾ). ೧. ಯಕ್ಷಗಾನ, ಬಯಲಾಟ, ನಾಟಕ ಮತ್ತು ಸರ್ಕಸ್ಸುಗಳಲ್ಲಿ ವಿಕೃತ ವೇಷವನ್ನು ಧರಿಸಿ ಅಭಿನಯಿಸುವ ಹಾಸ್ಯಪಾತ್ರ; ವಿದೂಷಕ; ಹಾಸ್ಯಗಾರ; ನಕಲಿ: ಹಳೆಯವನು ಬಿದ್ದ ಹೊಸಹೊಸಬ ಗೆದ್ದ, ಕೋಡಂಗಿ ನಡುವೆ ಎದ್ದ. ನವೋಸವದ ಬಯಲಾಟ ಭಾರಿ ತಾಂಡವವೆರಾಪ್ಪದುದ್ದ (ಅರಳು. ೪೨೬); ಕೋಡಂಗಿ ಆಗಲೇ ತೆರೆಯಾಚೆ ಬಂದನಯ್ಯ (ಚಂಡಿಮ. ೨೨-೪); ದೇವರಿಗೆತ್ತಿದ ಆರತಿಯೊಂದಿಗೇನೆ ಕೋಡಂಗಿಯರು ಭಾಗವತರೊಡನೆ ಸ್ತುತಿಪಾಠ ಮಾಡುತ್ತ ರಂಗಸ್ಥಳವನ್ನು ಸೇರಬೇಕು (ಯಕ್ಷಬ. ೪೧); ಸರ್ಕಸ್ಸಿನಲ್ಲಿ ಅಂಗಚಲನೆಯ ಚಮತ್ಕಾರ ಸಾಮರ್ಥ್ಯವನ್ನು ತೋರುವ ಕಲಾವಿದನನ್ನು ಅನುಕರಿಸಿ ಮೂರು ಉರುಳಾಗುವ ಕೋಡಂಗಿಯಂತೆ (ಬಂಕಿಮ. ೩೫೦). ೨. ಅವಿವೇಕಿ; ಮೂರ್ಖ: ಕೊಟ್ಟೋನು ಕೋಡಂಗಿ ಇಸ್ಕೊಂಡೋನು ಈರಭದ್ರ (ಗಾದೆ). ೩. ಕುರೂಪಿ: ಈ ಕೋಡಂಗಿಯನ್ನು ಎಲ್ಲಿಂದ ಹುಡುಕಿ ತಂದರೋ ... ಚಂದ್ರಭಾಗಿಗೆ ಶೋಭಿಸುವ ಹುಡುಗನೇ ಅಲ್ಲ (ಮೂರುದಾ. ೩೫). **ಕೋಡಗಿ**: ೧. ಆ ಕೋಡಗಿ ಕಾಡ ಕೂಡಿ ಕುರವಿಯಾಗಿರ್ದುದು (ಪುಣ್ಯಾಸ್ರ. ೪-೫೩ವ). **ಕೋಡಿಂಗ**: ೨. 'ಕೊಟ್ಟವನು ಕೋಡಿಂಗ, ತೆಗೆದುಕೊಂಡವನು ವೀರಭದ್ರ' ಎಂಬ ಗಾದೆಯಂತೆ (ಕಾಸೂರು. ೪೧೨). **ಕೋಡಿಗ**: ೧. ಬೊಂಬೆಗಳಾಟಗಳಲ್ಲಲ್ಲಿ ಪಾತ್ರನಿತಂಬಿನಿಜನಗಳಲ್ಲಲ್ಲಿ ಡೊಂಬರಗಳೆಯ ಸಂಗಡಿಗರು ಕೋಡಿಗರಿಂಬುಗೊಂಡಿರ್ದರೆಲ್ಲಲ್ಲಿ (ಭರಜ.೨೦-೩೫). ೨. ಪುಸ್ತಕವ ಹಿಡಿದುಕೊಂಡು ಪುರಜನವ ಮೆಚ್ಚಿಸುವ ಕೋಡಿಗರಂತೆ (ಛನವ. ೩೪-೭); ರಾಮನಾಥಾರ್ಯಗಳ್ವಾಳ್ವ ಕೋಡಿಗರ ವಿದ್ಯೆಯಂ ಜೋಡಿಸಿದನೆನಲ್ (ಏಕೋಪು. ೯-೩೩); ಗೊಲ್ಲರ ಗೊರವರ ಗೋಪತಿಗಳ ಬಲುಮಲ್ಲರ ಮಾಸಾಳುಗಳ ಕೊಲ್ಲಟಗರ ಕೋಡಿಗರ ಕೇರಿಗಳು ಲೆಕ್ಕವಿಲ್ಲದೆಸೆವವದಱೊಳಗೆ (ರಾಮವಿ. ೩-೪೧); ಕೋಡಿಗನೋ ವಿಡಾಯಗನೋ ಕೋವಿದ ಮುಗ್ಧರ ದೇವನೊ (ಹವ್ಮೀರ. ೬-೫೦).

**ಕೋಡಂಗಿಯಾಟ**= ಹಾಸ್ಯಗಾರನ ಅಭಿನಯ; ಕೋತಿಯಾಟ; ವಕ್ರಚೇಷ್ಟೆ: ಕೋಡಂಗಿಯಾಟವನಾಡಿದ ಭಕ್ತಂಗೆ ಬೇಡಿತ್ತನೀವ ನಮ್ಮ ಕೂಡಲಸಂಗಮದೇವ (ಬಸವ. ೧೮೯).

[ದೇ. ‖ ತಮಿ. ಕೋಣಙ್ಗಿ; ಮಲ. ಕೋಡಙ್ಗಿ; ತುಳು. ಕೊಡಂಗ್ಯೆ; ತೆಲು. ಕೋಣಂಗಿ, ಕೋಡಿಗ]

**ಕೋಡಂಗಿತನ** (ನಾ). ನಕಲಿ; ಕಪಿಚೇಷ್ಟೆ; ಹಾಸ್ಯ: (ಕ). [ಕೋಡಂಗಿ + - ತನ]

**ಕೋಡಂಗುರಿ** (ನಾ).(?) : ಮರೆ ಹಂದಿ ಹುಲ್ಲೆ ಹುಲಿ ಕಡವೆರಳೆಯುಮಾಬೆಕ್ಕು ತೋಳನೆಯ್ದ್ ಸಾರಂಗಂ ಕರಡಿ ಮೊಲಂ ಕೋಡಂಗುರಿ ನರಿದರಿ ಕೂರಂಗಿ ಬೆಕ್ಕು ಹೇರುಡು ಕಾಕಂ (ಸೂಕ್ತಿಸು. ೩-೧೯೪). ℙ. ಇದು ಕೊಂಡಗುಱಿ ಎಂಬುದರ ಅಪಲಿಖಿತವಿರಬಹುದು.

**ಕೋಡಂಬವಳಿ** (ನಾ). ಒಂದು ಊರಿನ ಹೆಸರು (?): ಅತ್ರ ಸಿಂಸಿದಯನ ಬರಹ ಯಿಕ್ಕೆ ನಿಂಮ ಕೋಡಂಬವಳಿಯಿಂದ ಪೊಕ್ಕಲು ಬಂದು (ಎಕ. XIV, ಮಳವ. ೧೪೫-೪೯ ; ?). [?]

**ಕೋಡಂಬೆ** (ನಾ). (?): ಪಡಹದ ಪಿಳುಕುಱಿಯ ಕೊಳಂಬೆಯ ಕುಕಂಬದ ಕೋಡಂಬೆಯ ಮುಡಿಗೆಯ ತಾಣಂಗಳೊಳ್ ಮೇದು ಮೆಯ್ವೆರ್ಚ ... ಕೊಟಕಿಟ್ಟಾಡುವ ಮೃಗಂಗಳೊಳ್ (ಅನಂಪು. ೧೧-೩೯ ವ). [?]

**ಕೋಡಕಯ್** 'ಕೋಡಕೆಯ್' ನೋ.

**ಕೋಡಕೆಯ್**, ಕೊಡಕ್ಕೈ, ಕೋಡಕಯ್, ಕೋಡಕ್ಕೈ (ನಾ). ಒಂದು ಬಗೆಯ ಆಯುಧ (?): ಅಳವನಱಿಯದೆ ಕೆಣಕಿ ತಹ ಮುಂಕೊಳಿಸಿ ಕದನವ ಕೋಡಕೆಯ್ಯ[ಪಾಠಾಂ. ಕೈಯ] ವರಳವಿ ಗೊಟ್ಟರೆ ನೋಡಿ ಸಿಡಿಮಿಡಿಗೊಂಡು (ಕುಮ್ಯಾಭೀ. ೪-೬೫). **ಕೊಡಕ್ಕೈ**: ಕೊಂದನು ಕೊಡಕ್ಕೈಯೊಳು ಬಂದೆಸುವ ಬಿಲ್ಲ ಮಂದಿಯ ಮುಂದೆ ಸಂದಣಿಸಿ (ಕುರಾಸಾಂ. ೪೪-೧೨೦).

**ಕೋಡಕಯ್** : ಕೋಡಕಯ್ಯ[ಪಾಠಾಂ. ಕೈ]ಲಿ ತಿರುಗಿ ಕೃಪ ಕೈಮಾಡಿದನು ಕೃತವರ್ಮನೆಸುಗೆಯ ತೋಡುಬೀಡಿನ ಭರವ ಬಲ್ಲವರಾರು ಸಮರದಲಿ (ಕುವ್ಯಾಗ. ೨-೬). **ಕೋಡಕೈ1** : ಸಬಳಿಗರು ಕೋಡಕೈ [ಪಾಠಾಂ.ಡುಗೈ]ಯೊಳು ನಿಂದರು(ಸೋಮಚ.೫-೨೬); ಇವರು ಕಳುಹಿದ ರುಚಿತದಲಿ ನಿನ್ನವರು ಮಸಗಿದ ಕಡಲವೊಲು ಬಲುದವಕಿಗರು ಕೋಲಳವಿಗೊಂಡರು ಕೋಡಕೈಗಳಲಿ(ಕುವ್ಯಾಕ. ೫-೧೬); ಚಲಿಸಿತರನೆಲೆ ಕೋಡಕೈಯಲಿ ಮೊಳಗಿದವು ನಿಸ್ಸಾಳ (ಕುವ್ಯಾದ್ರೋ. ೧೨-೨೬) ; ಸೆಳೆದ ನಿಷುಧಿಯಲಂಬ ತಿರುವಿಗೆ ತುಳುಕಿ ಕೋಲನು ಕೋಡಕೈಯಿಂದಳವಿಗೊಯ್ಯನೆ ನಿಲುಕಿದನು ನಿಗುರಿದ ಶರೀರದಲಿ(ತೊರರಾ, ೩-೮-೬೯).

[ಕೋಡ$_0$ + ಕಯ್$_2$]

**ಕೋಡಕೈ1** 'ಕೋಡಕೆಯ್' ನೋ.

**ಕೋಡಕೈ2** 'ಕೋಡುಗೈ' ನೋ.

**ಕೋಡಗ, ಕೊಡಗ1, ಕೋಡ, ಕೋಡುಗ** (ನಾ). ೧. ಕೋತಿ ಮಂಗ; ಮರ್ಕಟ: "ವನೌಕಸಂ ಮರ್ಕಟಂ . . . ಹರಿ ಕೀಶಮಾ ಕೋಡಗಕ್ಕೆ ಪೆಸರಕ್ಕು" (ಮಂಗರಾ. ೪೮-೯) ; ವೈದ್ಯಂ . . . ನರ್ಮದಾ ನದೀತೀರದೊಳ್ ಕೋಡಗಮಾಗೆ ಪುಟ್ಟಿದೊಂ (ವಡ್ಡಾರಾ. ೧೬೨-೭) ; ಕರಿಪತಿಯನೇಱಿ ಕೋಡಗಮಿರೆ ಕಂಡುದಱಿಂದೆ (ಆದಿಪು. ೧೫-೩೪); ನಿಲಲಾಱದೆ ಸುಂಟಿದಿಂದ ಕೋಡಗದಂತು ಮ್ಮಳಿಸಿ ಕಳವಳಿಸಿ (ಧರ್ಮಾಮೃ.೧-೧೪೧); ಕೋಡಗಗಳಂತೆ ಪಲುಗಿರಿದು (ಬಸರ. ೮-೧೦೧); ಕೋಡಗದ ಮೊಗಸಿರಿಗೆ ಕಾವಲಿಯೊಡು ಕನ್ನಡಿಯಾಯ್ತು (ಕುವ್ಯಾಕ. ೯-೧೫). ೨. ಕಪಿ ಸ್ವಭಾವದವನು ; ಚಪಲಬುದ್ಧಿಯುಳ್ಳವನು: ಲಂಚಲಂಚನ್ನುಗಳ ನೀಡುತಿರಬೇಕು ಕೋಡಗರಿಗೂ ಕೋಡಂಗಿಗಳಿಗೂ (ಅರಳು. ೩೪೮) ; ಊರಿಗೆಲ್ಲಾ ಒಂದೇ ಬಟ್ಟೆ, ಕೋಡಗನಿಗೆ ಬೇರೆ ಬಟ್ಟೆ (ಗಾದೆ). **ಕೊಡಗ1** : ೧. ಕೊಡಗ ಪಣ್ಣನಿತ್ತಲ್ಲದು ತಿನ್ನದು (ವರ್ಧಚ ೨-೧೧) ; ಕೊಡಗದ ಮೂಳೆಯುಂ ವೃಕ್ಷಗಳ ಬೇರಿನಲ್ಲಿ ಗೂಟದಂತೆ ಬಡಿದರೆ (ಸೌಗಂಧಿ. ೪೩೬-೧೪) ; ಅಲ್ಲೊಂದು ಕೊಡಗನು ಸೇರಿ, ಆ ಪಕ್ಷಿಗಳ ಗೂಡನ್ನು ಕೆಡಿಸಿ, ತತ್ತಿಗಳ ಒಡೆದು ನಾಶಮಾಡುತ್ತಿತ್ತು (ಕಸಾರ. ೧೮). **ಕೋಡ** : ೧. ಕೋಡಂಗಳ ನಗಿಸುವ ರವಮೆನಗದ ನಾಲ್ಕುಂದೆಸೆಯೊಳ್ (ಎಇ. XVI, ೩-೫ ; ೯80) ; ಕೋಡಂಗಳದ್ರಿಯಂ ತಂದೀಡಾಡಿದೊಡೆಯ್ದೆ ಶರಧಿಯಂ ಕಟ್ಟಿದುದಾರೂಢಿಯ ರಾಮಂ ಲಂಕೆಗೆ ಕೋಡಂ[ಪಾಠಾಂ. ಕೋಡಗ]ಗಳುವೆರಸಿ ಪೋಗಿ ಗಡ ಸಾಧಿಸಿದಂ (ಸಮಪ. ೧೦-೧೪೬) ; ಬಿಸಿಲ್ಗಾದುದೊಂದು ಮರದ ಕೋಡೊಳ್ ಕೋಡಂ (ಜಗವಿ. ೧೪-೧೧). ೩. ಹಾಸ್ಯ; ನಕಲಿ; ತಮಾಷೆ : ಸಾಕು ಮಾವ, ಕೋಡ ಮಾಡುತ್ತೀಯಾ (ಶ್ರೀರಾಪ. ೨೨).

**ಕೋಡುಗ1** : ೧. 'ಕೋಡುಗವೊಗ' ಪರಾ.

[ದೇ. ‖ ತಮಿ. ಕೋಟರ ; ತುಳು. ಕೊಡಂಗು, ಕೊಡಂಜ, ಕೊಡಂಜಿ]

**ಕೋಡಗಕಟ್ಟು** 'ಕೋಡಗಗಟ್ಟು' ನೋ.

**ಕೋಡಗಕೆಮ್ಮು** (ನಾ). ಒಂದು ಬಗೆಯ ಕೆಮ್ಮು; ನಾಯಿಕೆಮ್ಮು : ಶಿಶುಗಳಿಗೆ ಕೋಡಗಕೆಮ್ಮು (ಕಾಳರಾ. ೧೨೦). [ಕೋಡಗ + ಕೆಮ್ಮು]

**ಕೋಡಗಗಟ್ಟು, ಕೋಡಗಕಟ್ಟು** (ನಾ). ಸ್ವಲ್ಪವೂ ಅಲ್ಲಾಡಲಾಗದಂತಹ ಬಿಗಿಯಾದ ಬಂಧನ; ಹೆಡಮುರಿಗೆ : ಸಿಂಹಕೀರ್ತಿಯಂ ಗ್ರಾಮಸಿಂಹಮಂ ಕಟ್ಟುವಂತೆ ಕೋಡಗಗಟ್ಟಂ ಕಟ್ಟಿತಂದು (ಧರ್ಮಾಮೃ. ೯-೧೪೩); ಮಲೆವವರಂ ಕೋಡಗಗಟ್ಟಂ ಕಟ್ಟಿತರ್ಪೆವು (ಕಬ್ಬಿಗಾ.೧೩೯). **ಕೋಡಗಕಟ್ಟು** : ದಕ್ಷನಂ ಹಿಡಿದು ಕೋಡಗಕಟ್ಟ ಕಟ್ಟುತಂ (ವೀರರ. ೪೮೯). [ಕೋಡಗ + ಕಟ್ಟು1]

**ಕೋಡಗಗಟ್ಟುಕಟ್ಟು** 'ಕೋಡಗಗಟ್ಟುಗಟ್ಟು' ನೋ.

**ಕೋಡಗಗಟ್ಟುಗಟ್ಟಿಸು** (ಕ್ರಿ). ಕೋಡಗಗಟ್ಟನ್ನು ಕಟ್ಟಿಸು : ಕೋಡಗಗಟ್ಟುಗಟ್ಟಿಸನೆ ವಾರಿಧಿಯೊಳ್ ಪಿಡಿದೊತ್ತಿ ಜೀವಮಲ್ಲಾಡೆ ತೊಡಂಗಿ ನೂಂಕಿಸನೆ . . . ಲೋಕಮಗುರ್ವಿಸಲೆನ್ನ ವಿದ್ಯೆಯಿಂ (ಧರ್ಮಾಮೃ. ೯-೧೪೦). [ಕೋಡಗಗಟ್ಟು + ಕಟ್ಟಿಸು]

**ಕೋಡಗಗಟ್ಟುಗಟ್ಟು, ಕೋಡಗಗಟ್ಟುಕಟ್ಟು** (ಕ್ರಿ). ಕೋಡಗಗಟ್ಟನ್ನು ಕಟ್ಟು; ಹೆಡಮುರಿಗೆ ಬಿಗಿ : ಆ ದ್ರುಪದನಂ ಗಡ ಕೋಡಗಗಟ್ಟುಗಟ್ಟಿ ತಂದಣಿಯುರಮೊಪ್ಪಿಸು (ಪಂಪಭಾ. ೨-೬೧); ಕೋಲ್ವೀಡ ಪಿಡಿದು ಕೋಡಗಗಟ್ಟುಗಟ್ಟಿಕೊಂಡೆನ್ನಲ್ಲಿಗೆ ತನ್ನಿಂ (ಧರ್ಮಾಮೃ. ೧೩-೧೨೨) ; ಕೋಡಗಗಟ್ಟುಗಟ್ಟಿ ಹಲಿ ಕೃಷ್ಣರನಾಳಿಸಿ ತಾಳವಟ್ಟದೊಳ್ ಮೂಡಿದ ಹಾಹೆಯಂತೆಬಲೆ . . . ಬೀರದಬಟ್ಟೆಗೆ ಕೈದುಗಟ್ಟುದೇಂ (ಅನಂಪು. ೧೩-೬೯); ಅಂದು ದ್ರುಪದನನೆಯುದಿ ವಿಕ್ರಮದಿಂದ ಕೋಡಗಗಟ್ಟುಗಟ್ಟಿಯಿತಂದು ಅಗ್ರಜಗೊಪ್ಪಿಸಿದನು(ಸಾಳ್ವಭಾ ೨೨-೨೭). **ಕೋಡಗಗಟ್ಟುಕಟ್ಟು** : ಕೊಲ್ವಂ ಧುರದಲ್ಲಿ ನಿಂದೊಡೊಳಸಾದೊಡೆ ಕೋಡಗಗಟ್ಟು[ಪಾಠಾಂ. ಟ್ಟ]ಕಟ್ಟುವೆಂ (ಪಾರ್ಶ್ವಪು. ೨-೧೮); ವಿಧಿಪಾಶವಾಕ್ಷಣ ಕೋಡಗಗಟ್ಟುಕಟ್ಟಿತು ದಡಿಗ ಕೋಪದಿ ಬಂದು ಗದೆಯಲಿ ಹೊಯ್ದು ಕಿಡಿ ಚೆಲ್ಲೆ (ಕೌಶಿರಾ. ೧೧-೪೦). [ಕೋಡಗಗಟ್ಟು + ಕಟ್ಟು1]

**ಕೋಡಗವಾಡು** (ಕ್ರಿ). ಕೋತಿಯಂತೆ ಆಡು; ಮಂಗಚೇಷ್ಟೆ ಮಾಡು : ಏಳು ಕಡಲಿನ ಮೇಲೆ ಮುಳುಗುವರು ಕೀಲಕಳೆವರು ರವಿಯ ಬಂಡಿಯ ಬೀಳಲಿಡುವರು ಚಂದ್ರಬಿಂಬವ ಬ್ರಹ್ಮನಿದಿರಾಗಿ ಕೀಳುಗೋಡಗವಾಡುತಿರ್ಪರು ಕೀಳುನುಡಿಯಲಿ ಸುರರನೆಲ್ಲರ ಬೀಳುಗುಟ್ಟುವರಿದಿರಬಂದರೆ ಭೂಪ ಕೇಳೆಂದ (ಸಂಭಪ. ೭-೧೮). [ಕೋಡಗ + ಆಡು1]

**ಕೋಡಗಿ** 'ಕೋಡಂಗಿ' ನೋ.

**ಕೋಡಣಸು** (ನಾ). ದನಕರುಗಳ ಕೊಂಬಿಗೆ ಅಳವಡಿಸುವ ಲೋಹದ ಗೊಣಸು, —ಅಣಸು : ಕೋಡಣಸು ಮುಖರಂಥ ಜಂಗು ಘಂಟೆಯು ಗೆಜ್ಜೆ ಜೋಡಿಸಿದ ಝುಲ್ಲಿ ಮುತ್ತಿನಜೌಕ ಶೃಂಗರವ ಮಾಡಿ ನಿಂದಿರ್ದ ಶ್ರೀವೃಷಭರಾಜನನುಯಾರೋಹಣಂಗೆಯ್ಯೆ (ನವಮೋ. ೨೨-೫೦) ; ಹುತ್ತದ ಮಣ್ಣ ತಂದು ಕೆತ್ತಿ ಬಸವನ ಮಾಡಿ ಚಿತ್ರದ ಕೋಡಣಸು. . .ಮುತ್ತಿನ ಬಾಸಿಂಗ ಒಪ್ಪುವದು (ಲೋಕಗೀ. ೧೯೬-೩) ; ಚಿನ್ನದ ಕೋಡಣಸು ಬೆಳ್ಳಿಯ ಕಟ್ಟಿನ ಗೊರಸುಗಳುಳ್ಳ ಸಾವಿರ ಹಸುಗಳನ್ನು . . . ದಾನ ಕೊಡಬೇಕು (ಸಂಕೋತ. ೧೬೦).

[ಕೋಡು$_5$ + ಅಣಸು$_2$]

**ಕೋಡಬಳೆ** 'ಕೋಡುಬಳೆ' ನೋ.

**ಕೋಡಮುರಕಿ** (ನಾ). ಒಂದು ಜಾತಿಯ ಗಿಡ : "ಕೋಡಮುರಕಿ (ಕಾಳಾಕುಡಾ) : ಸಣ್ಣಗಿಡ, ಕಟ್ಟಿಗೆ ಬಿಳಿದು, ಗಟ್ಟಿ" (ಕಥಾಗೆ. ೩೮).

[?]

**ಕೋಡಮುರು** 'ಕೋಡಮುರುಕ' ನೋ.

**ಕೋಡಮುರುಕ, ಕೋಡಮುರು** (ನಾ). ಒಂದು ಬಗೆಯ ಜೋಳ : ಹುಬ್ಬೀ ಮಳೆಯಲ್ಲಿ ಕೋಡಮುರುಕನ ಜೋಳ ಮುಂತಾದ ಜೋಳವನ್ನು ಬಿತ್ತಬೇಕು (ಕೃಷಿಪ್ರ. ೮೦). **ಕೋಡಮುರು** : ಸೂರ್ತಿ ಚವಾಳಾ ಪಣದ ಮೇಲೆ ಕಿಮ್ಮತ್ತು ಇರತಕ್ಕ ಜಿನಸುಗಳು - ೧ ಅಕ್ಕಲಕಾರ, ಹಲಕಿ (ಸಂಬಂಧ) . . . ೫೧ ಕೋಡಮುರು (ಮುಂಬವ್ಯಾ. ೧೨೪). [?]

**ಕೋಡಮೆ** (ನಾ). ಕೊಂಕದಿರುವುದು; ವಕ್ರತೆಯಿಲ್ಲದಿರುವುದು; ಋಜು ಸ್ವಭಾವ : ಕೇಡುಂ ಸಮೃದ್ಧಿಯುಂ ಇಲ್ಲದುವಲ್ಲ ಮನದೊಳ್ ಕೋಡಮೆಯೆ ಸಂಪನ್ನಗೊರ್ಡಮೆ (ಕುಜಳ್. ೧-೧೨-೫).

[ಕೋಡ$_3$ + -ಆಮೆ]

**ಕೋಡವಣಿಗ** (ನಾ). ಒಂದು ಜಾತಿಯ ಹುಳು; ಝುರಿ; ಸಾಧಿಕೆ ಗಾಲಿ: ಒಡಲೊಳರೆ ಕೋಡವಣಿಗಂ ಕಡಿದೊಡೆ ಕಳೆದುೞಿದು ಮುಳ್ಳ ನಾಯುಸದಿಂದಾ ಎಡೆಯುಂ ತಾವಂಗೊಳೆಯುಂ ತೊಡೆಯೆಯುವುಜ್ಜಗೆಯ ರಸಮನಿರದುಪಶಮಿಕುಂ (ಲೋಕೋಪ. ೧೦-೨೯). 'ಕೋಡಹುಱು' ಪರಾ. [?]

**ಕೋಡವೀಸ** 'ಕೋಡುವೀಸ' ನೋ.

**ಕೋಡಹುಱು** (ನಾ). ಒಂದು ಬಗೆಯ ಕೀಟ (?): ಅಂಗುರದ ಮೂಲದೊಳ್ ತಾಂ ಸಂಗತಮಪ್ಪಮದುರ್ವಳ್ಳಿಯುಂ ಪೂಸಲೊಡಂ ಹಿಂಗಿಸುಗುವುದಾಕ್ಷಣದಿಂ ಭಂಗುರಮೆನಿಸಿರ್ದ ಕೋಡಹುಱುವಿನ ವಿಷಮುಂ (ಖಮುದ. ೧೬-೧೨೧). 'ಕೋಡವಣಿಗ' ಪರಾ.

[< ಕೋಡು$_{5}$ + ಹುಱು (< ಪುೞು$_{1}$)]

**ಕೋಡಾಡಿ** (ನಾ). ದಂತವುಳ್ಳ ಪ್ರಾಣಿ; ಆನೆ: ಒತ್ತಿದೊಡೆ ಮಿಸುಕದಿಹ ಕದಳಿ ಮುಳಿದು ಮುಂಕೊಳಿಸಿ ಸೊಂಡಿಲಂ ಸುತ್ತಿ ಹೆಱದೆಗೆದು ಕಡುಪಿಂ ಕಾಯ್ದು ಹೊಯ್ದು ಕೋಡಾಡಿ [ಪಾಠಾಂ. ೪]ಗಳು ಮುಱಿದು. . .ಕೆಡೆದ ವಾನೆಗಳು (ಸೋಮಚ. ೪-೫೮). 'ಕೋಡಾಳಿ' ಪರಾ. [ಕೋಡಾಡು+-ಇ$_{3}$]

**ಕೋಡಾಡಿಸು** (ಕ್ರಿ). ಕೋಡನ್ನು ಆಡಿಸು; ಕೊಂಬನ್ನು ಅಲ್ಲಾಡಿಸು: ಕೊಳದೊಳ್ ನೀರುಣ್ಣದಡ್ಡಂಗೆಡೆದು ಕಲಕುತುಂ ಗಾತ್ರಮಂ ಪೊಯ್ದು. . . ಕೋಡಾಡಿಸುತ್ತಿರ್ಪ ಕೋಣಂಗಳವೋಲ್ (ಜೀವಸಂ. ೧-೪ ಪಂ). [ಕೋಡು$_{5}$ + ಆಡಿಸು]

**ಕೋಡಾಡು** (ಕ್ರಿ). ೧. ಕೋಡಿನಿಂದ ಆಡು, —ತಿವಿ: ಗೂಳಿಯ ದೊಂದು ಕೋಡಾಡಿ ಕೆಮ್ಮಣ್ಣುವುತ್ತಮಂ ಮೆತ್ತಿಕೊಂಡಿದೆ ಮೊಗಕೆ (ಶ್ರೀರಾಮಾ. ೧೩೧-೧೮೦). ೨. ಕೊಂಬು ಅಲುಗಾಡು, —ಅತ್ತಿತ್ತ ಚಲಿಸು. 'ಕೋಡಾಡಿಸು' ಪರಾ. [ಕೋಡು$_{5}$ + ಆಡು$_{1}$]

**ಕೋಡಾನೆ** (ನಾ). ಕೋರೆಗಳುಳ್ಳ ಆನೆ; ಗಂಡಾನೆ; ಸಲಗ: ಬೆಳಸಂ ಪೇಳ್ವಡೆ ಕರ್ಬುಂ ಕಳವೆಯುಮೆಲೆಯಡಕೆ ತೆಂಗು ಮಾಳು ಫಲಂ ಮಾವ್ಹಾ× × × ಮೆಳಸಿವು ಪೆರ್ಬ್ಬೆಳಸಡವಿಯ ಬೆಳಸು ಪಿರಿದು ಕೋಡಾನೆಗಳಾ (ಎಕ. VIII, ಸಾಗರ. ೧೦೯-೪೮; 1043). [ಕೋಡು$_{5}$ + ಆನೆ$_{1}$]

**ಕೋಡಾಲೆ** (ನಾ). ಒಂದು ಬಗೆಯ ಸಸ್ಯ: ಸಪ್ತಪರ್ಣ. . . ಕೋಡಾಲೆ, ಬಂತಲೆ (ವ್ಯಚಿಗ ೫-೮೩). [?]

**ಕೋಡಾಳಿ** (ನಾ). = ಕೋಡಾಡಿ: ಕಡುಪಿ ಕಾಯ್ದು ಹೊಯ್ದು ಕೋಡಾಳಿ[ಪಾಠಾಂ. ೩]ಗಳು ಮುಱಿದು . . . ಕೆಡೆದವಾನೆಗಳು (ಸೋಮಚ. ೪-೫೮). [ಕೋಡು$_{5}$ + -ಆಳಿ$_{3}$]

**ಕೋಡಿ$_{1}$**, ಕೋಱು$_{2}$ (ನಾ). ೧. ಕೆರೆ, ಕಟ್ಟೆಗಳಲ್ಲಿ ಹೆಚ್ಚಿನ ನೀರು ಹರಿದುಹೋಗಲು ಮಾಡಿರುವ ದಾರಿ: "ಉದಕೋಚ್ಛ್ವಾಸಂ ಕೋಡಿ" (ವಸ್ತುಕೋ. ೨೪-೧೬); "ಜಲೋಚ್ಛ್ವಾಸಃ ಪರೀವಾಹಃ - ಈ ೨ ಕೆರೆಯ ಕೋಡಿಯ ಪೆಸರ್" (ನಾಚಿರಾ. ೯೯); "ಕೋಡಿಯೆಸಲ್ ನೀರಬಟ್ಟೆ" (ಭಾರನಿ. ೫); ಮದನಗಾರಸರ್ ಕೊಟ್ಟೋರ್ಮೆವ್ವೆಳ್ವ ಕೆಱೆಯ ತೆಙ್ಕಣ ಕೋಡಿಯ ಗೋಳಿಯ ಕೆಱಗೆ ಕಾಲ್ಗೆ (ಮೈಆರಿ. ೧೯೪೧, ೨೯-೨; 797); ಸಾಗರದ ಗುಣಕೋಡಿಯಿಂದಿಳಿಯಿತ್ತು (ಮೋಳಮಾ. ೧೦೩-೪೧೧); ಕೂಡಿದ ಹುಬ್ಬಿನೋಳೆ ಕೋಡೀಲಿ ನೀರ ಮೊಗಿಯೋಳೆ (ಹುಟ್ಟಪ. ೪೬). ೨. ಉಕ್ಕಿ ಹರಿಯುವ ನೀರು; ಪ್ರವಾಹ: ದುರದುರಿಪ ನೆತ್ತರಿನ ಕೋಡಿಯಿರದೊತ್ತರಿಸಿ ಸುತ್ತುವರಿಯೆ (ಚಬಪು. ೪೪-೪೧); ಮೆಯ್ಯೊಳಿಡಿದಾನಂದಂ ಮರಲ್ಗಣ್ಣ ನೀಳ್ಗಡೆಯೊಳ್ ಕೋಡಿಯು ಕೂಡೆ ಪಾಯೆ (ಚಕವಿ. ೪-೪೧); ಕೋಡಿಯು ಹರಿಯುಸಿ ಕಣ್ಣೀರಿಂದಲಿ (ಕವಿಸೋ. ೫೧-೬); ವಿದುರನ ಮನೆಯ ಬಾಗಿಲಲ್ಲಿ ಕೂಡಲೆ ಹಾಲಿನ ಕೋಡಿಯೇ ಹರಿಯಿತು (ನೀತಿಚಂ. XV, ೩೨). ೩. ಹೊರಸೂಸುವಿಕೆ; ಹೊರಹೊಮ್ಮುವಿಕೆ: ನನ್ನ ಹಾಡಿನ ಕೋಡಿ ನಿನ್ನ ಕೊರಳಿಂದ (ಬಳ್ಳಾಪಿ. ೨೧-೧೯). ಕೋಱು$_{2}$: ೧. "ಕೋಡಿ, ಕೋಱು, ಕಡಲ್, ಕಬಿಲ್" (ಶಮುದ. ೧೯ ಪ್ರಯೋ).

[ದೇ. ॥ ತಮಿ. ಕೋಡಿ; ತೆಲು. ಕೋಡು. / ಸಂ. ಕೋಟ]

**ಕೋಡಿ$_{2}$** (ನಾ). ೧. ಹರಿಜನರಿಂದ ಆರಾಧಿಸಲ್ಪಡುವ ಒಂದು ದೈವ, —ಭೂತ: (ಕ). ೨. ದೇವಾಲಯದ ಎದುರಿನ ಧ್ವಜಸ್ತಂಭಕ್ಕೇರಿಸುವ ಗರುಡಪಟ: (ಕ). 'ಕೊಡಿ$_{2}$' ಪರಾ. [← ತುಳು. ಕೊಡಿ]

**ಕೋಡಿ$_{3}$** (ನಾ). ೧. ಒಂದು ಅಳತೆ; ಖಂಡಿ: ೨೦ ನಗಗಳಿಗೆ ಒಂದು ಕೋಡಿ ಅಸ್ನುತಾರೆ (ಮುಂಬವ್ಯಾ. ೧೪೦). ೨. (ಕರಾ). ಬಡಗಿ ಕೆಲಸಕ್ಕೆ ಉಪಯೋಗಿಸುವ ದಿಮ್ಮಿಯ ಅಥವಾ ಮರದ ಒಂದು ಅಳತೆ: ನೋಡಲಿಕ್ಕೆ ಚಂದಾಗಿದ್ದಾನೆ, ಸಿಗಿದರೆ ಎರಡು ಕೋಡಿ ಮೋಪು ಆಗಬಹುದು. ಆದರೆ ತಲೆ ಎಂಬುದು ಇರಬೇಡವೇ? (ಸ್ವಪ್ನಹೊ. ೩೪).

[?. / ತುಳು. ಕೋಡಿ. / ಮರಾ. ಕೋಡೀ. / ಸಂ. ಕೋಟ]

**ಕೋಡಿ$_{4}$** (ನಾ). ತುದಿ; ಕುಡಿ; ಕೊನೆ; ಮೂಲೆ; ಅಗ್ರಭಾಗ: "ಕೋಡಿ – ಕೋಟ = ತುದಿ" (ತದ್ಭಕೋ. ೯); ಟಕಾರಕ್ಕೆ ಡಕಾರಂ ಕೋಟ – ಕೋಡಿ (ಶಮುದ. ೨೫೫ ಪ್ರಯೋ); ಕೆಂಪೇಱದಕ್ಷಿಯಲೆರಡು ಕೋಡಿಯುಲೊಗುತಲಿದೆ ಕಿಡಿಯ ತುಷಾರಚಯ (ಕ್ರುವ್ಯಾಕ. ೧೨-೧೫); ಕೋಡಿ ಹೊಲದ ಭೂಮಿ ಕಂಬ (ಎಕ. VII, ಶಿಮೊ. ೧೧೨-೧೧; ?).

[< ಸಂ. ಕೋಟ]

**ಕೋಡಿ$_{5}$** 'ಖೋಡಿ' ನೋ.

**ಕೋಡಿಂಗ** 'ಕೋಡಂಗಿ' ನೋ.

**ಕೋಡಿಕಳೆ** 'ಖೋಡಿಗಳೆ' ನೋ.

**ಕೋಡಿಕಾಣು** 'ಖೋಡಿಗಾಣ್' ನೋ.

**ಕೋಡಿಕೆಡಪು** (ಕ್ರಿ). ಕೋಡಿ ಬೀಳಿಸು; ಪ್ರವಾಹವಾಗಿ ಹರಿಯಿಸು: ಪಜಗಳನ್ ಪೊಯ್ದು ನೆತ್ತರನ್ ಕೋಡಿಕೆಡಪಿದಯರ್ (ಅಶ್ವತ್ಥಾ. ೧೫-೧೯). [ಕೋಡಿ$_{1}$ + ಕೆಡಪು]

**ಕೋಡಿಕ್ಕು** (ಕ್ರಿ). ಕೊಂಬಿನಿಂದ ಇರಿ, —ತಿವಿ: ನಿರ್ಭರದೆ ಕೋಡಿಕ್ಕಿ ಮಿಾಂಟಿ ಗಿರಿಗಳನಬ್ಜಗರ್ಭನಾಲಯಕೆ ಸಾಲಿಡುತೆ ವೃಷಭರಾಜಂ (ಚಬಪು. ೪೪-೧೧). [ಕೋಡು$_{5}$ + ಇಕ್ಕು]

**ಕೋಡಿಗ** 'ಕೋಡಂಗಿ' ನೋ.

**ಕೋಡಿಗಟ್ಟು** (ಕ್ರಿ). ಕೋಡಿಬೀಳು: ಅವರ ಕಣ್ಣಿನಲ್ಲಿ ಆನಂದ ಬಾಷ್ಪ ಕೋಡಿಗಟ್ಟಿ ಹರಿಯಿತು (ಅನಾವಿ. ೬೧). [ಕೋಡಿ$_{1}$ + ಕಟ್ಟು$_{1}$]

**ಕೋಡಿಗಳೆ** 'ಖೋಡಿಗಳೆ' ನೋ.

**ಕೋಡಿಗಾಣು** 'ಖೋಡಿಗಾಣ್' ನೋ.

**ಕೋಡಿಗಾಣಿಸು** 'ಖೋಡಿಗಾಣಿಸು' ನೋ.

**ಕೋಡಿಗೆ** (ನಾ). = ಕೋಡಿ$_{3}$: ಕೋಡಿಗೆಯ ನುಡಿದ ಪೊನ್ನಂ ಮಾಡದ ಜವಳಿಗಡುವೆ ಪಣವೆನಿಸಿಕ್ಕುಂ ಕೋಡಿಗೆಯ ಪಣಮ ಪಾಗಂ ಕೋಡಿಗೆಗಳ ಪಾಗಮಿರ್ದುದಾ ಕಾಣಿಗಳುಂ (ವ್ಯವಹಾ. ೮೬-೩೯); ಕೋಡಿಗೆಯ ಜವಳಿ ಸೀರೆಗೆ ನೋಡೈ ಮತ್ತಯ್ದು ಪೊನ್ನುವಿಪ್ಪಣವಡ್ಡಂ ಮಾಡಿದ ಬೆಲೆ ತಾನಕ್ಕುಂ ನೀಡಿಲ್ಲದೆ ಪೇಱ ಜವಳಿಯೊಂದಱ ಬೆಲೆಯುಂ (ವ್ಯವಹಾ. ೮೯-೬೦); ಕೋಡಿಗೆವೊಂದಕ್ಕೊಪ್ಪಿರೆ ನೋಡಿರಿ ಹನ್ನೆರಡು ಹೊನ್ನು ಬೆಲೆ ತಾನಾಗಲೆ ಕೂಡಿಕೊಳ್ವೊಂದು ಸೀರೆಗೆ ನೀಡಿಲ್ಲದೆ ಬರ್ಕುಮೆಂದ ಗಣಿತವಿಲಾಸಾ (ವ್ಯವಹಾ. ೩೧-೬೩). [ಕೋಡಿ$_{3}$ + -ಗೆ]

**ಕೋಡಿಗೊಳ್** (ಕ್ರಿ). ಕೋಡಿಯಾಗು; ಹೊಳೆಯಾಗು: ಸಾದರದಿಂ ಪುಳಕಂ ನೆಗೆವುತ್ತಿರೆ ಆನಂದಜಲಂ ಕೋಡಿಗೊಳುತ್ತಿರೆ (ಉದ್ಭರ. ೧೯೦-೧೩). [ಕೋಡಿ$_{1}$ + ಕೊಳ್$_{1}$]

**ಕೋಡಿಡು** (ಕ್ರಿ). ೧. ಕೊಂಬಿನಿಂದ ತಿವಿ, —ಇರಿ: ನಿಮ್ಮೊಳ್ ಕೊರ್ಬಿ ಕೋಡಿಟ್ಟು ಮೇಲ್ವಾಯ್ದು ಸತ್ತುದು (ಪಂಚತಂ. ೧೮೧-೩); ಕೆಲೆವುತ ಕೋಡಿಟ್ಟು ಪಿಡಲ ಮಾರ್ದೊಡೆವುತ (ನಾಗಕು. ೫-೩೧); ಕೋಡಿಡುವಾನೆಗಳ್ ಪರಿವ ಪುಲ್ಲೆಗಳೊಲ್ದೊಡಗೂಡಿ ಮೇದು (ರಾಜಶೇ. ೫-೬೩); ಕೋಡಿಡುವಾನೆಯ ಗರ್ಜಿಸುವ ಸಿಂಗದ (ರಾಮಾಶ್ವ. ೮೪-೧೦). ೨. ಹುರುಡುಮಾಡು; ಸ್ಪರ್ಧಿಸು: ಕೋಡಿಡೆ ವಾಸುಪೂಜ್ಯ ಮುನಿಯೊಳ್ ಪುರುಳಾದಪೆ ಚಿತ್ತಜನ್ಮ ನೀಂ (ಸಂರಾಮಾ. ೧-೨೩); ಉದ್ದಾಮ ಸಂಗ್ರಾಮದೊಳ್ ಕೋಡಿಟ್ಟಂತು ಬರ್ದುಂಕುವವನ್ನರೊಳರೇ ಬಲ್ಲಾಳಭೂಪಾಳನೊಳು (ಎಕ. V, ಅರಸೀ. ೬೨-೨೮; 1177). ೩. (ಆಲಂ) ಮೀರು; ಅತಿಶಯವಾಗು: ಚಟ್ಟಂ ಪರವನಿತೆಯರಂ ಮುಟ್ಟಂ ವಿತರಣಮನಪರ ಭೂರುಹದೊಳು ಕೋಡಿಟ್ಟಂ ಪಾಪದ ಪಥಮಂ ಮೆಟ್ಟಂ ಸಾಶ್ವತಪದಕ್ಕೆ ಕಳಸಮನಿಟ್ಟಂ (ಎಕ. VIII, ಸೊರಬ. ೩೨೫-೩೨; 1118); ಶೃಂಗಾರಂ ಕೋಡಿಟ್ಟುದೊ ಜಂಗಮಲತೆ ವೃತ್ತಮಾಯ್ತೊ (ಗಿರಿಕ. ೮-೨೫).

[ಕೋಡು$_5$ + ಇಡು$_1$]

**ಕೋಡಿನೀರ್** (ನಾ). ಕೋಡಿಯಿಂದ ಹೊರಬೀಳುವ ನೀರು: ಸೂಡಿಗಂಟು, ಕೋಡಿನೀರ್ (ಶಬ್ದಾನು. ೮೨ ಪ್ರಯೋ).

[ಕೋಡಿ$_1$ + ನೀರ್$_1$]

**ಕೋಡಿಬೀಳು** (ಕ್ರಿ). ಕೆರೆಯ ಹೆಚ್ಚಿನ ನೀರು ಕೋಡಿಯ ಮೂಲಕ ಹೊರಕ್ಕೆ ಬೀಳು, —ಪ್ರವಹಿಸು, —ಹರಿ: ತವ ಕಿವಿಗೊಳನ ಕೋಡಿಬೀಳ್ವಂತೆ ತುಂಬಿಸುವೆನು ಕಡುರುಚಿಮಾಡಿ ಮೋಹನತರಂಗಿಣಿಯ (ಮೋಹತ. ೭-೨); ಕೋಡಿಬಿದ್ದುವು ಸಪ್ತಶರಧಿ (ಮೋಹತ. ೪೨-೭).

[ಕೋಡಿ$_1$ + ಬೀಳು$_1$ (< ಬೀೞ್$_1$)]

**ಕೋಡಿಮನ** (ನಾ). ದುಷ್ಟಮನಸ್ಸು; ಕೆಟ್ಟಮನ: ಸೊಸೆಯ ಮರ್ಗುಳ್ದು ಕೋಡಿಮನದಿಂ ಬಿಡದೆ ಮಲ್ಲಪೂಂಬೆಯ ದೂರನಾಡಿ ತೋರಿದುದರಿಂದ (ಮಲ್ಲಚ. ೧೦-೯). [ಕೋಡಿ$_5$ (< ಪೋಡಿ) + ಮನ$_1$]

**ಕೋಡಿವರಿ** (ಕ್ರಿ). ೧. = ಕೋಡಿಬೀಳು: ಮೞೆಯುಳ್ಳೊಡೆ ಕೞೆ ತೊಱೆಗಳ್ ವಿಳಾಸದಿಂ ತೀವಿ ಕೋಡಿವರಿವಂತೆ (ಧರ್ಮಾಮೃ. ೪-೪೯); ಸರಸಿ ಕರಂ ತೀವಿ ಕೋಡಿವರಿದುದು ಬನದೊಳ್ (ಶಾಂತೀಶ್ವ. ೧೦-೧೦೨). ೨. ತುಂಬಿ ಹೊರಚೆಲ್ಲು; ಪ್ರವಾಹವಾಗಿ ಹರಿ: ನೆರೆ ತೀವಿ ಕೆರೆ ಮುಸುಗುವ ಮುಖರಸದೊಡನೆ ಕಡೆಗಣ್ಣ ಕಾಂತಿ ಕೋಡಿವರಿಯೆ (ಗಿರಿಕ. ೫-೭೬ ವ); ಕೋಡಿವರಿವಶ್ರುಗಳ ನಿರ್ಝರದ (ತೊರರಾ. ೫-೯-೨೪); ಕಣ್ಗೆಗಳಿಡಿಯಲ್ . . . ಅರುಣಾಂಬುಗಳ್ಕೋಡಿವರಿಯೆ (ಜೈಮಿಭಾ. ೨೩-೨೩); ಕಣ್ಣುಗಳಲ್ಲಿ ತುಳುಕಿದ ನೀರು ಕೋಡಿವರಿದು ಕೆನ್ನೆಗಳ ಮೇಲೆ ಜಾರಿದ್ದುವು (ಸವತಿ. ೨೦೪); ನಲ್ಮೆ ಕೋಡಿವರಿಯಲು (ಕವಿಸೋ. ೨೪-೨). ೩. (ಆಲಂ) ಅಧಿಕವಾಗು; ಮಿತಿಮೀರು: ಕೆರಳಿದ ಅಶ್ವತ್ಥಾಮನ ಕ್ರೋಧ . . . ಎಲ್ಲರನ್ನೂ ಕೊಚ್ಚಿ ಕೊಲೆಮಾಡಿ ಕೋಡಿವರಿಯಿತು (ಅಗ್ರಹ. V, ಮುನ್ನುಡಿ). [ಕೋಡಿ$_1$ + ಪರಿ$_1$]

**ಕೋಡಿವರಿಯಿಸು**, ಕೋಡಿಹರಿಸು (ಕ್ರಿ). ಕೋಡಿ ಹರಿಯಿಸು; ಪ್ರವಾಹ ಮೀರಿ ಹರಿಯುವಂತೆ ಮಾಡು. 'ಕಡೆಗೋಡಿವರಿಯಿಸು' ಪರಾ. **ಕೋಡಿಹರಿಸು**: ನಾಡಿನಾಡಿಗಳಲ್ಲಿ ಕಾಡು ಕಾಡುಗಳನ್ನೇ ಕೋಡಿಹರಿಸಿತ್ತು (ಅನಿಕೇ. ೫೩-೧೦). [ಕೋಡಿವರಿ + - ಇಸು$_3$]

**ಕೋಡಿಸು$_1$** (ಕ್ರಿ). ತಣ್ಣಗೆಮಾಡು; ತಂಪಾಗಿಸು: ತಣ್ಪನಿಯೊಳ್ಕೋಡಿಸುತಿರ್ಪ ಬಿಜ್ಜಣಿಗೆಗಂ (ಆದಿಪು. ೧-೭೫); ಕೋಡಿಸುವ ಚಂದ್ರಕಾಂತದ ಕೋಡುಂಗಲ್ಗಳಿನೊಸರ್ವ ರಸದ ಪೊನಲ್ಗಳ್ (ಲೀಲಾವ. ೯-೩೭).

[ಕೋಡು$_1$ + - ಇಸು$_3$]

**ಕೋಡಿಸು$_2$** (ಕ್ರಿ). ಹೆದರಿಸು; ಭಯಪಡಿಸು: ಮೃಗಂಗಳಂ ಕೋಡಿಸುತಂ (ಕುಸುಮಾ. ೧೪-೨೦); ಧುರದೊಳರಿಭೂಭುಜರನಂಜಿಸುವ ನಡುಗಿಸುವ ಕೊರಗಿಸುವ ಕೋಡಿಸುವ ಬಾಡಿಸುವ ಬಳುಕಿಸುವ ಬಿರುದಂಕಮಲ್ಲ ನೀ ನಡುಗಲೇತಕ್ಕೆ (ಹಚಕಾ ೩-೫೪). [ಕೋಡು$_2$ + - ಇಸು$_3$]

**ಕೋಡಿಹರಿಸು** 'ಕೋಡಿವರಿಯಿಸು' ನೋ.

**ಕೋಡೀಶ** (ನಾ). ಒಂದು ಬಗೆಯ ಔಷಧಿ ಸಸ್ಯ: ಕೋಡೀಶಾದಿಲೇಹ್ಯ – ಈ ಲೇಹ್ಯವನ್ನು . . . ತೆಗೆದುಕೊಳ್ಳೆ ಮೂಲವ್ಯಾಧಿ . . . ಕಾಮಾಲೆ ಮುಂತಾದ ವ್ಯಾಧಿಗಳೆಲ್ಲಂ ಗುಣಮಕ್ಕುಂ (ಸಕವೈ. ೨೯೬).

[< ಕೊಡಸಿಗೆ]

**ಕೋಡು$_1$**, ಕೋಳು$_1$ (ಕ್ರಿ). ೧. ತಣ್ಣಗಾಗು; ತಂಪಾಗು: "ಕೋಡು – ಶೈತ್ಯೇ, ಭಯೇ, ಶೃಂಗೇ ಚ" (ಶಮಧಾ); ಸುಗಂಧಮಪ್ಪ ಕೋಡುವ ನೀರನಾತಂಗೆ ಕುಡಿಯಲೆಱೆದು (ವಡ್ಡಾರಾ. ೫೭-೧೪); ಪಾಡುವ ತುಂಬಿ ಕೋಡುವ ಪುಱಿಲ್ (ಪಂಪಭಾ. ೩-೩೭); ಕಾಯ್ದುಱಿಪಿದ ತುಪ್ಪಂ ಕೋಡುವ ಕಱಿಲಲ್ಲದೆ ದಿವ್ಯ ಭೋಜನಂ ಪೆಱತುಂಟೇ (ಕಾವ್ಯಾವ. ೨೪೧); ಕೊಳಗಳೊಳೊರ್ಮೆ ಕೋಡುವೆಳಮಾವಿನ ಜೊಂಪದೊಳೊರ್ಮೆ (ಲೀಲಾವ. ೪-೧೪); ನೃಪನ ವಿರಹಶಿಖಿ ಕೋಡದು (ಕುಸುಮಾ. ೧೦-೩೧); ತಂಪುದೇಹದೊಳೊಲ್ದಾವರಿಸಿ ಕುಳಿರ್ಕೋಡೆ ಸುಖೋತ್ಕರದಿಂ ಕುಳ್ಳಿರ್ದಂ (ದಶಕು. ೪-೩೫). ೨. ಚಳಿಯಿಂದ ನಡುಗು; ಚಳಿಯಾಗು: ರಕ್ಷಣೆ ಪಡೆದ ಪಥಿಕನು ನಗರದೊಳು ಕುಳಿರೊಳು ಸೆಡೆತು ಕೋಡುವನು (ಗಾಥಾಸ. ೧-೭೭). **ಕೋಳು$_1$**. 'ಕುಳಿರುಕೋಳು' ಪರಾ.

[ದೇ. ‖ ತಮಿ. ಕೊಡುಕು; ಮಲ. ಕೋಡುಕ; ತುಳು. ಕೋಡು]

**ಕೋಡು$_2$** (ಕ್ರಿ). ೧. ಭಯಪಡು; ಬೆದರು: "ಕೋಡು – ಶೈತ್ಯೇ ಭಯೇ ಶೃಂಗೇ ಚ" (ಶಮಧಾ); ಕುಸಿಯದೆ ಕೋಡದರ್ಚಿಸದೆ (ಬೊಂಕಶಾ. ೧೯೩೩, ಹಾವೇರಿ. ೫೭-೪೧; 1136); ಕೋಡುತುಂ ಕೊಂಕುತುಂ ಕುಗ್ಗಿ (ಶಿರುರ. ೧೫-೧೯); ಕೋಡದಂಜದೆ ಲೆಕ್ಕಿಸದೆ ಬಂದು (ಹಚಕಾ. ೮-೨೦); ಪೊಡವೀಶರ್ ಭೀತಿಯಿಂದಂ ಸೆಡೆವರಡಗುವರ್ ಕೋಡುವರ್ (ಎಕ. XI, ಚಿತ್ರದು. ೨-೮; 1355); ಕೋಡದಿರು ಕೊಂಕದಿರು ಧೈರ್ಯವ ಮಾಡಿ ಸಾರಥಿಯಾಗು (ಕುವ್ಯಾವಿ. ೭-೩೪); ಕೋಡಿದುದು ಮನವತಿಭ್ರಮೆಯಾಯ್ತು ಬುದ್ಧಿ (ಚಬಪು. ೨೨-೨೬); ಕೋಡಳ್ ಬಾಡಳ್ ಕೊಂಕಳ್ . . . ಜನಕತನೂಜೆ (ರಾಮಾಶ್ವ. ೧೪೯-೨೯). ೨. ಕುಗ್ಗು; ಸೆಡೆ; ಹಿಂಜರಿ: ಕೋಡಿದನೆ ಕೊಂಕಿದನೆ ಕಂದಿದನೆ (ಬಸರ. ೭-೭೫); ವರಸುಖದೊಳ್ ಬಾಡದುದ್ರೇಕದೊಳ್ ಕೋಡದೆ . . . ಬಾಳ್ವಂತೆ (ರಕ್ಷಾಶ. ೭೨). ೩. ನಾಟು; ಚುಚ್ಚು; ತಿವಿ: ಮಾಡು ಸಂಧಿಯನೆಮ್ಮ ವಚನಕೆ ಕೋಡದಿರು (ಕುವ್ಯಾಉ. ೯-೧೮); ನೋಡಿದಳ್ ಕುವರಿ ತನ್ನಯ ಮೊಲೆಗೆಲದಲ್ಲಿ ಮೂಡಿರ್ದ ಮೋಹನಗೆಱೆಯ ಸೂಡಿರ್ದ ನುಣ್ದೋಳ ಮಣಿಗಂಡ ಮಾತ್ರದಿ ಕೋಡಿದುವೆದೆಯ ಪೂಸರಳು (ಮೋಹತ. ೨೮-೧೧).

[ದೇ. ‖ ತಮಿ. ಕೋಟ್ಟು; ಮಲ. ಕೋಟ; ತೆಲು. ಕೋಡಾಡು]

**ಕೋಡು$_3$**, ಕೊಟ್ಟೆ$_5$, ಕೊಡತ$_2$, ಕೊಡು$_2$ (ನಾ). ತಣ್ಣಗಿರುವಿಕೆ; ತಂಪು; ಶೈತ್ಯ: "ಕೋಡು ಕೋಟಮುಂ ತಣ್ಪೆಂದುಂ ಶೈತ್ಯಕ್ಕೆ ನಾಮಮಕ್ಕುಂ" (ಕಬ್ಬಿಕೈ. ೨೨); ಜಲದೊಳ್ಮೆನಿರ್ಪವೊಲ್ನೀಂ ಕೊಳದೊಳೆ ಮುೞುಗಿರ್ದಕ್ಕಟಾ ಕೋಡ ಸೇಡಿಂಗೊಳಗಾದ್ಯೆ (ಗದಾಯು. ೭-೧೩). **ಕೊಟ್ಟೆ$_5$**: "ಕುಳಿರು ತಣ್ಪತು ಕೋಡುಕೊಟ್ಟೆಯೆಂದಿವು ಶೈತ್ಯಕಳವಟ್ಟ ನಾಮಮಕ್ಕು" (ಶಬ್ದಮಂ. ೩೭). **ಕೊಡತ$_2$**: "ಭಳಿ ಹಾಸು ಗೋಲು ಪುಂಜೋವುಗಳೊಳು ಕೊಡತ" (ಶಬ್ದಮಂ. ೯೮). **ಕೊಡು$_2$**: "ಕೊಡು ಕೊಟ್ಟಮೆನೆ ಶೈತ್ಯ" (ಕಶರ. ೨೮). [< ಕೋಡು$_1$]

**ಕೋಡು$_4$** (ನಾ). ಭಯ; ಅಂಜಿಕೆ; ಹೆದರಿಕೆ: "ಕೊಡುವ ಭಾವದೊಳಂ ಭಯ ಶೈತ್ಯ ಶೃಂಗಂಗಳಲ್ಲಿಗನುಮತಂ ಕೋಡುಂ" (ಶಬ್ದಮಂ. ೯೫); "ಕೋಡು ಶೃಂಗ ಭಯಂಗಳೊಳ್" (ಕರ್ಣಾನಿ. ೬೬); ನೋಡೆ ಲೋಕಂ ಮೂಡೆ ವಿಸ್ಮಯಂ . . . ಬುಧರಿದು ಕೋಡೆನುತ ಕೊಂಡಾಡೆ (ಬಸಪು. ೨೪-೪೫). [< ಕೋಡು$_2$]

**ಕೋಡು$_5$**, ಕೋಳು$_3$, ಕೋಟ್$_4$ (ನಾ). ೧. ಪ್ರಾಣಿಗಳ ಕೊಂಬು: "ಕೋಡು – ಶೈತ್ಯೇ, ಭಯೇ, ಶೃಂಗೇ ಚ" (ಶಮಧಾ); ವಾರಣಾಸಿಯೊಳ್ ಸಾಸಿರ ಕವಿಲೆಯಂ ಕೋಡುಂ ಕೊಳಗುಮಂ ಪೊನ್ನೊಳ್ ಕಟ್ಟಿಸಿ ದಾನಂಗೊಟ್ಟ (ಸೌಇಇ. XI-i, ೩೪-೧೯ ; 925) ; ಮುನಿಜನಗಳ್ಗೆ ಕೋಡುಗಳಿಂ ಕಂದಮೂಲ ಫಲಂಗಳನಗುಳ್ದು ಕೊಡುವ ವನ ಹರಿಣಂಗಳಂ (ಕಾದಂಪೂ. ೨೨೨); ಕಾಡೆಮ್ಮೆಯ ಕೋಡು ವರಹದಂತಿಯ ದಾಡೆ (ಮೋಹತ. ೧೯-೭೪). ೨. ಆನೆಯ ದಂತ, —ಕೋರೆ: ಮಾವಿನ ಬಂದ ಕೋಡೆ ಕೋಡಾಗಿರೆ ಕೋಡುಗೊಂಡು ಪರಿದತ್ತು ವಸಂತಗಜಂ ವಿಯೋಗಿಯಂ (ಪಂಪಭಾ. ೨-೧೫) ; ಎಂಟು ದೆಸೆಯಾನೆಯಂ ಪಿಡಿದು ಕೋಡಂ ಕಿತ್ತು (ಕಬ್ಬಿಕಾ. ೨೪೦). ೩. ಏಡಿ, ನಳ್ಳಿ ಮುಂತಾದವುಗಳ ಕೊಂಡಿ: ಬಕ ಕಂಠನಾಳಮಂಭೀಮನೊತ್ತು ವಂದದಿನೊತ್ತಿತ್ತು. . . ಪಿಱಿಯ ಕೋಡಿನೊಳ್ ಕರ್ಕಟಕಂ (ಪಂಚತಂ. ೮೫-೧೫). ೪. (ಮರ ಗಿಡಗಳ) ಕೊಂಬೆ; ರೆಂಬೆ; ಟೊಂಗೆ: "ಕೋಡೆಂದು ತಾ ಮರಗೊಂಬು" (ಕಬ್ಬಿಕೈ. ೧೪); ಏಂ ತುಱುಗಿರ್ದುವೊ ತುದಿಗೋಡೊಳ್ಳಱಿ ಬೆಱಿತಿರೆ ನೋಡಿ ಬಾಡುತಂ ವಿಹಗಂಗಳ್ (ರಾಜಶೇ.೯-೨೮); ಎಲೆಯಿಂದೆ ಕಾಯಿಂದೆ ಕೊನರಿಂದೆ ಕೋಡಿಂದೆ . . . ಜನ್ಮವೆತ್ತಿಹುದು ಸಾರ್ಥಕ(ಕೇಶರಾ.೨೦-೬).೫. ಶಿಖರ; ಬೆಟ್ಟದ ತುದಿ; ಕೂಟ: ಕೋಡೆಂಬುದು ಪರ್ವತಾಗ್ರದೊಳ್ (ಪ್ರಭುಪು. ೩-೧೨) ; ಆ ಗಿರಿಯ ಚೌದೆಸೆಯ ಕೋಡುಗಳೊಳಗೆ ಅಳವಡಿಸಿಯೆ ಪಿರಂಗಿಗಳ(ಕಂನವಿ. ೧೬-೩೭) ; ಪುಷ್ಪಗಿರಿಯಲ್ಲಿ ಎರಡು ಕೋಡು (ಚಿಕರಾ. ೨-೧೯) ; ಅಂದು ಕೋಡು ಕೋಡಿಂದೋಡಿ ಮಲಯಮಂ ಮಱಿಗೊಂಡ ಪವನನು (ರಾಮಾಶ್ವ. ೧೬-೨೧) ; ಅಲ್ಲೊಂದು ಇಲ್ಲೊಂದು ಬೆಟ್ಟದ ಕೋಡುಗಳು ತಲೆ ಎತ್ತಿದಂತೆ ಕಾಣುವುವು (ಬಾಲಪ್ರ. I, ೨೫). ೬. (ಆಲಂ) ಹೆಚ್ಚುಗಾರಿಕೆ; ಅಭಿಮಾನ; ಹೆಮ್ಮೆ: ಪೆತ್ತ ಪರೀಷಹ ಜಯಮೆ ತಪಂ ಬೇರೆ ಕೋಡೆರಡೊಳವೆ (ಯಶೋಚ. ೧-೪೯); ಬಡವನ ಕೋಡು ಬಲ್ಲಿದನ ಸೈರಣೆಯೆಂಬ ಪುರಾತನೋಕ್ತಿಯಿಂ (ಮಹಾನೀ. ೧೧-೧೧೯). **ಕೋಳು$_3$**: ೫. ಮನೆಯ ಕೋಳಿನ ಮೇಲೆ ಹದ್ದು ಸಹ ಹಾರಾಡುವುದಿಲ್ಲ (ರೂಢಿ).

**ಕೋಡಕಾಳೆ** = ಕೊಂಬಿನಿಂದ ಮಾಡಿದ ಕಾಳೆ, —ಕಹಳೆ: ಗೋಪಕದಂಬಕವೊಳ್ಪೊಳಲ್ಗಳಂ ಬಾಜಿಪ ಕೋಡಕಾಳೆಗಳನೂದುವ ಬೊಬ್ಬಿಱಿದಾರ್ವ ಸಂಭ್ರಮಂ (ಜಗವಿ. ೪-೮೨). **ಕೋಡಕೊಱಿ** = ೧. ಕೊಂಬನ್ನು ಕತ್ತರಿಸು; ಕೊಂಬನ್ನು ಇಳಿಸು. ೨. (ಆಲಂ) ಗರ್ವಭಂಗಮಾಡು: ನಿನ್ನ ಕೋಡ ಕೊಱಿಯದೆ ಬಱಿದೆ ಬಿಟ್ಟಪೆನೆ (ಹಜಕಾ. ೮-೨೦). **ಕೋಡುಮೂಡು** = ೧. ಶಾಖೆಗಳು ಹುಟ್ಟು. ೨. (ಆಲಂ) ಅತಿಶಯವಾಗು; ಹೆಮ್ಮೆಬರು: ಕೋಟಲೆಗೆ ಕೋಡುಮೂಡಿದ ತೆಱದಿಂ (ಯಶೋಚ. ೩-೬೪) ; ಆತನ ಸಂತೋಷಕ್ಕೆ ಕೋಡುಮೂಡಿದಂತಾಯಿತು (ಬಿತಂಬಾ. ೧೫೪).

[ದೇ. ‖ ತಮಿ. ಕೋಡು, ಕುವಡು ; ತುಳು. ತೆಲು. ಕೋಡು ; ಪರ್ಜಿ. ಕೋಡ್ ; ಗೊಂಡಿ. ಕೋರ್, ಕೋಟ್ ; ಕುವಿ. ಕೋಱು]

**ಕೋಡು$_6$** (ನಾ). ಕೊಡುವಿಕೆ; ದಾನ: "ಕೊಡುವ ಭಾವದೊಳಂ ಭಯ ಶೈತ್ಯ ಶೃಂಗಂಗಳಲ್ಲಿಗನುಮತಂ ಕೋಡು" (ಶಬ್ದಮಂ. ೯೫); ತನಗೆ ಕೊಟ್ಟ ಕೋಡಿಂಗೊಡಂಬಟ್ಟ ದಿತಿಜಕುಲ ದಾವಾನಲನುಮನ್ (ಪಂಪಭಾ. ೫-೭೭ ವ); ಕೋಡಿಲ್ಲದ ಸಿರಿಯುಂ ನಾಡಿಲ್ಲದರಸುಂ (ಧರ್ಮಾಮೃ. ೧-೭೫) ; ಬಸವ ನಿನ್ನ ಕೋಡಿಂ ಸುರಭಿ ಕರಂ ಮೂಗುವಟ್ಟುದು (ಬಸರ. ೯-೨); ಬೇಡೆ ಧನವಮಂ ನೀಡೆ ಬುಧರಿದು, ಕೋಡೆನುತ ಕೊಂಡಾಡೆ (ಬಸಪು. ೨೪-೪೫) ; ಧನಿಕರ್ಗೆಸಗಿಪ ಕೋಡೇಂ ಗಡ ಚಾಗಮೆನಿಕ್ಕುಮೇ (ನೀತಿಮಂ. ೧-೧೯೪). [< ಕೊಡು$_1$]

**ಕೋಡು$_7$** (ನಾ). ಕೆರೆಯ ಹೆಚ್ಚು ನೀರು ಹರಿದು ಹೋಗುವ ಭಾಗ; ಕೋಡಿ: ನನ್ದಿ ಕೆಱಿಯ ಮೂಡೆ ಕಡೆಗೋಡತ್ತಿ ಬಲಗ್ಗೆ ನಡೆದು ಕಲ್ಮಲರುಳಿ (ಎಕ. X (s), ಚಿಕ್ಕಬ. ೬೬-೧೯; 850) ; ಮಹಾದೇವರ ಕೆಱಿಯ ತೂಬಿನ ನೀರು ಹರಿವ ಕೋಡಿಂಬಂ (ಸೌಇಇ. IX-ii, ೪೬೪-೨೬; 1472). 'ಕಡೆಗೋಡು' ಪರಾ. [< ಕೋಡಿ$_1$]

**ಕೋಡುಬಲೆ** 'ಕೋಡೊಲೆ' ನೋ.

**ಕೋಡುಂಗಲ್**, ಕೋಡುಂಗಲ್ಲು, ಕೋಡುಗಲ್, ಕೋಡುಗಲ್ಲು, ಕೋಡ್ಗಲ್ (ನಾ). ಬೆಟ್ಟದ ತುದಿಯ ಕಲ್ಲು; ಪರ್ವತದ ಶಿಖರದ ಮೇಲಿನ ಕಲ್ಲು; ಶಿಖರ: "ಶೃಂಗಂ, ಶಿಖರಂ, ಕೂಟಂ – ಈ ೩ ಕೋಡುಂಗಲ್" (ಹಲಾಯು. ೨೭-೧೨) ; ಬಡಗ್ಗೆನಿಟ್ಟುರುಳಿವಿ ಕರಡಿಗುಱುಕಿ ಮೇಲ ಕೋಡುಙ್ಗಲ್ ಮೂಡ್ಗೆ ನೋಡಿ ನಡದು (ಎಕ. X (s), ಚಿಕ್ಕಬ. ೬೬-೨೦ ; 850) ; ಗರ್ವಪರ್ವತಾರೂಢನಾಗಿ ಪರ್ವತಮಂ ತಾಗೆ ಬೇಗದೊಳ್ ಕಡಿವ ಕೋಡುಂಗಲ್ಗಳಂ ಕೋಡೊಳಾಂತೀಡಾಡುತುಂ (ಪಂಚತಂ. ೪೬-೧೦) ; ಮೂಡುವೆಟ್ಟಿನ ಕೋಡುಂಗಲ್ ನಡೆದು ಬರ್ಪಂತೆ ಬಂದು (ಅನಂಪು. ೨-೨೯ ವ) ; ಮಿಸುಪ ರನ್ನದ ಕೋಡುಂಗಲ್ಗಳಿಂದಾ ಮಿಸುನಿ ಪೊಂಬೆಟ್ಟ ರಂಜಿಪುದು (ಶ್ರೀಪಾಲ. ೧-೩೫). **ಕೋಡುಂಗಲ್ಲು**: ಮರಣಮುಖದಿ ವೃಷಭಂಗಳು ಸಮ್ಮೇದಗಿರಿಯ ಕೋಡುಂಗಲ್ಲಿನೊಳು ಉರುತರಮಪ್ಪ ಮರ್ಕಟಮಾಗಿ ತಮ್ಮೊಳು ಹಿರಿದು ಹೋರಟೆಯ ಮಾಡಿದವು (ನೇಮಿಸಂ. ೭-೨೩) ; ಕೋಡುಂಗಲ್ಲು ಜಲ ಪಂಚಾಗ್ನಿ ಮಧ್ಯದೊಳು (ತಂಕದಾ. ೧೫-೧೯). **ಕೋಡುಗಲ್**: "ಕೂಟಮಾ ಶಿಖರಮಾ ಶೃಂಗಮೆಂದರೆ ಕೋಡುಗಲ್ಲಕ್ಕು" (ಮಂಗರಾ . ೨೦-೨) ; ಕೋಡುಗಲ್ಗಳ ಲಗ್ಗೆ ಗುಮ್ಮನ ತೋಡು ಗಿರಿಗಳ ಮೇಳೆಯದ ಪ್ಪೆಗೂಡಿಕೆಯ ಪಾಸಱಿಯ (ತೊರರಾ. ೬-೧೧-೬) ; ಮೇರುಗಿರಿಯ ಕೋಡುಗಲ್ಗಳಿಂ ಗಂಗೆಯ ಧಾರೆ ಭೂತಳಕಿಳಿವಂತೆ (ಕಂನವಿ. ೨೩-೯೮) ; ಭಾಸ್ಕರಂ ಬೇಗನುಪ್ಪವಡಿಸಿ ಮೂಡುವೆಟ್ಟಿನ ಕೋಡುಗಲ್ಲನೇಱಿ ನಿಟ್ಟಿಸುತಿರ್ದಂ (ರಾಮಾಶ್ವ. ೨೭-೨). **ಕೋಡುಗಲ್ಲು**: ಕೋಡುಗಲ್ಲಿನ ಮೇಲೆ ಮಾಡುವ ತಪವು ಒಂದು ದಿನದ ಗುರುಸೇವೆಗೆ ಸರಿಯಲ್ಲ (ಚನ್ನವ. ೧೧೦೨) ; ನೋಡು ಮೈಥಿಲಿ ವಿಶ್ವಕರ್ಮನು ಮಾಡಿಹುದ ಲಂಕಾ ತ್ರಿಕೂಟದ ಕೋಡುಗಲ್ಲಿನ ನಡುವೆ ಚೆಲ್ವಿಕೆಯಿಂದ ಮೆಱಿಯವುದ (ಶಾಶಿರಾ. ೪೪-೧೬) ; ಬೆಟ್ಟದ ಆ ಒಂದೊಂದು ಕೋಡುಗಲ್ಲು ಚಿನ್ನದಿಂದ ಮಾಡಿ ನಿಲ್ಲಿಸಿರುವೆಂಬಂತೆ ಕಂಡುವು (ಸವತಿ. ೨೮೩). **ಕೋಡ್ಗಲ್**: ಆದರ ಕೋಡ್ಗಲ್ಗಳೇ ಕೋಡ್ಗಳ್. . . ಪಟ್ಟದ ದಂತಿಯೆನಲ್ ಕನಕಾಚಲಂ ಮೆಱಿದುದು (ಜಿಬಪು. ೨-೮) ; ಗಿರಿವರದ ಕೋಡ್ಗಲ್ಲ ಮೊನೆದಾಂಕಿ ಸಲೆ ಬಿಂದಿಸುವ ಕಾಯಮುಂ (ನಂದಿಮಾ. ೧೭-೭). [ಕೋಡು$_5$ + ಕಲ್$_3$]

**ಕೋಡುಂಗಲ್ಲು** 'ಕೋಡುಂಗಲ್' ನೋ.

**ಕೋಡುಂತಳೆ** (ಕ್ರಿ). ಸುರುಟು; ಸುಕ್ಕು; ಮುದುರು: "ಸವೆ" (ಚತುನಿ. ೬. I, ೪೯). [ಕೋಡು$_2$ + ತಳೆ$_1$]

**ಕೋಡುಕಂಚು** (ನಾ). = ಕೋಡಣಸು: ಚೆನ್ನಾಗಿ ಕೀಸಿ ಸೊಗಸುಗೊಳಿಸಿದ್ದ ಕೋಡುಗಳ ತುದಿಯಲ್ಲಿ ಹೊಳೆಯುತ್ತಿದ್ದ ಹಿತ್ತಾಳೆಯ ಕೋಡುಕಂಚುಗಳು (ಮಲೆಮ. ೪೮೬). [ಕೋಡು$_5$ + ಕಂಚು$_1$]

**ಕೋಡುಕಳ್ಳಿ** (ನಾ). ಒಂದು ಬಗೆಯ ಕಳ್ಳಿಗಿಡ: "ತ್ರಿಕಂಟಕಾ" (ಪಂಡಿತ. ೨೫೧). 'ಕೋಲುಕಳ್ಳಿ' ಪರಾ. [ಕೋಡು$_0$ + ಕಳ್ಳಿ$_1$]

**ಕೋಡುಕಾಯಿ**(ನಾ). "ಬೀಜ ಸುಲಿಯಲು ಬರುವ ಉದ್ದ ಕಾಯಿ" (ಬಾಳಿಗ. ಕೋಶ) : ಕೆಲವಕ್ಕೆ ದನಗಳ ಗೊಬ್ಬರ, ಹಟ್ಟಿಗೊಬ್ಬರ ಹಾಕಿದರೆ ಬಳ್ಳಿಯೇ ಸೊಕ್ಕಿ ಕೋಡುಕಾಯಿಗಳು ಬಿಡದವೂ ಉಂಟು (ಬಾಳಿಗ. ೬೪). [ಕೋಡು$_0$ + ಕಾಯಿ$_4$ (< ಕಾಯ್$_4$)]

**ಕೋಡುಕುಟ್ಟು$_1$** 'ಕೋಟ್ಟುಕುಟ್ಟು$_1$' ನೋ.

**ಕೋಡುಕುಟ್ಟು$_2$** 'ಕೋಟ್ಟುಕುಟ್ಟು$_2$' ನೋ.

**ಕೋಡುಕೊಳಗು** (ನಾ). ಕೋಡು ಮತ್ತು ಕೊಳಗು : ಮಹಾ ಪಾರುವರ್ಗೆ ಸಹಸ್ರ ಕವಿಲೆಯ ಕೋಡುಕೊಳಗಂ ಸುವಂನದಲ್ಲಿ ಕಟಿಸಿ ಗಂಗೆಯ ತಡಿಯ ದಾನ ಮಾಡಿದ ಫಲ (ಎಕ. VI, ಕಡೂರು. ೧೫೪-೬ ; 1206) ; ಸಹಸ್ರ ಗೋವಿಂಗೆ ಸು(ಂ)ವಂರ್ಣ್ನದಲಿ ಕೋಡು ಕೊಳಗು ಸಹಿತ ಸಹಸ್ರಪ್ರಜೆ ಬ್ರಾಹ್ಮಂಗೆ . . . ಕೊಟ್ಟ ಫಲವಕ್ಕ (ಎಕ. XII, ಗುಬ್ಬಿ. ೩೦-೮೬ ; 1331). [ಕೋಡು$_5$ + ಕೊಳಗು]

**ಕೋಡುಗ** 'ಕೋಡಗ' ನೋ.

**ಕೋಡುಗದಿರ** (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : ಕೋಡುಗದಿರನ ಬೆಳಕು (ಸೌಸಂದ. ೧೦-೩೯). 'ತಂಗದಿರ' ಪರಾ. [ಕೋಡು$_3$ + ಕದಿರ್$_2$ + -ಅ$_7$]

**ಕೋಡುಗಮೊಗ** (ನಾ). ೧. ಕಪಿಯ ಮುಖ; ಮಂಗನ ಮೋರೆ: ಭಕ್ತಚೂಡಾಮಣಿಯದಾದ ನಂದಿಗಳಿಶೀಘ್ರದಿಂ ಕೋಡುಗಮೊಗಂಗೊಡುವುದಚ್ಚರಿಯಮೇನೆನಲ್ (ನಂದಿಪಾ. ೨೨-೧೪). ೨. ಕಪಿಯಂತಹ ಮುಖವುಳ್ಳವನು. [ಕೋಡುಗ (< ಕೋಡಗ) + ಮುಖ]

**ಕೋಡುಗಲ್** 'ಕೋಡುಂಗಲ್' ನೋ.

**ಕೋಡುಗಲ್ಲು** 'ಕೋಡುಂಗಲ್' ನೋ.

**ಕೋಡುಗವಣೆ** (ನಾ). ಜೋಡು ಕವಣೆ (?) : ಕೋಡುಗಲ್ಗಳ ಲಗ್ಗೆ ಗುಮ್ಮನ ಕೋಡುಗವಣೆಯ [ಪಾಠಾಂ. ತೋಡುಗಿರಿಗಳ, ಕೋಡು ಗವಣೆಯು, ಕೋಡುಗಲ್ಗಳ] ಮೇಳಯದ ಮೈಗೂಡಿಕೆಯು. . . ಕಪಿಸೇನೆ (ತೊರರಾ. ೬-೧೧-೬). [ಕೋಡು$_5$ + ಕವಣೆ$_1$]

**ಕೋಡುಗುಟ್ಟು$_1$** (ಕ್ರಿ). ಶೈತ್ಯ ಹಿಡಿ; ಚಳಿ ಕೊರೆ: ತಂಪಿನಿಂ ತೆಲ್ಲೈಸಿ ಕೋಡುಗುಟ್ಟುವ ಗಾಳಿ (ಕಾಲೂರ. ೭೫-೧೩೪). [ಕೋಡು$_3$ + ಕುಟ್ಟು$_1$]

**ಕೋಡುಗುಟ್ಟು$_2$** 'ಕೋಟ್ಟುಕುಟ್ಟು$_1$' ನೋ.

**ಕೋಡುಗೈ**, ಕೋಡಕೈ$_2$ (ನಾ). ೧. ಮರದ ಕೊಂಬೆ, —ಶಾಖೆ : "ಕೋಡುಗೈಯೆಂಬು ಮರಗೊಂಬು" (ಶಬ್ದಮಂ. ೨೪); "ಮರಕೊಂಬೆಯೊಳ್ಕೋಡುಗೈಯೆಂದಕ್ಕು" (ಕಶರ. ೩೦). ೨. ಕೊಡುವ ಕೈ; ಉದಾರ ಹಸ್ತ. ೩. ಮರದ ಕೊಂಬೆಯನ್ನಿಟ್ಟುಕೊಂಡಿರುವ ಸೊಂಡಿಲು. ೧,೨,೩ : ಮಾವಿನಂತೆ ಕೋಡುಗೈಯೊಂದಿಯುಂ[ಪಾಠಾಂ. ಕೋಡೊಳ್ ಕೈವಂದುಂ] ಸೊರ್ಕಾನೆಯೆನಿಸಂ (ಕಬ್ಬಿಗಾ. ೫೧). **ಕೋಡಕೈ$_2$**: ೨. ಮಾಡಿ ನೀಡುವವನ ಕಂಡು ನಾಡು ಬೀಡೆಲ್ಲ ನೆರೆದು ಕೋಡಕೈಯಲ್ಲಿ ಕೊಟ್ಟರೆ ತೃಪ್ತರಾಗಿ ಮಾಡುವರ ಹರಸುವರು (ಶೂನ್ಯಸಂ. ೩೫೧-೫೧). [ಕೋಡು$_5$ + ಕೈ$_2$ (< ಕೆಯ್$_2$)]

**ಕೋಡುಗೊಳ್** (ಕ್ರಿ). ಕೋರೆಹಲ್ಲನ್ನು ಪಡೆ, —ಹೊಂದು : ಮಾವಿನ ಬಂದ ಕೋಡೆ ಕೋಡಾಗಿರೆ ಕೋಡುಗೊಂಡು ಪಾದತ್ತು ವಸಂತಗಜಂ ವಿಯೋಗಿಯುಂ (ಪಂಪಭಾ. ೨-೧೫); "ದಂತದಿಂದ ತಿವಿ" (ಪಂಪದೀ. ೩೧). [ಕೋಡು$_6$ + ಕೊಳ್$_1$]

**ಕೋಡುಗೊಳ** (ನಾ). ಒಂದು ಊರಿನ ಹೆಸರು : ದಕ್ಷಿಣಕೋಡುಗೊಳ ಬೆಳ್ಕರೆ ಸಹಿತಂ (ಎಕ. III, ಮಂಡ್ಯ. ೧೧೩-೩೬ ; 713). [ಕೋಡು$_0$ + ಕೊಳ$_3$]

**ಕೋಡುಬಳೆ**, ಕೋಡಬಳೆ (ನಾ). ೧. = ಕೋಡಣಸು. ೨. ಕಡಲೆ ಅಥವಾ ಅಕ್ಕಿಯ ಹಿಟ್ಟನ್ನು ತೆಂಗಿನಕಾಯಿಯ ತುರಿ, ಉಪ್ಪು ಮೊದಲಾದ ಸಂಭಾರಗಳೊಡನೆ ಕಲಸಿ ಬಳೆಯ ಆಕಾರಕ್ಕೆ ಮಾಡಿ ಕರಿದ ಒಂದು ಬಗೆಯ ತಿಂಡಿ : ಕೋಡುಬಳೆ ತಿನ್ನಲು ಹಲ್ಲು ಗಟ್ಟಿಯಿರಬೇಕು (ರೂಢಿ). **ಕೋಡಬಳೆ** : ೧. "ಗಾರಿಗೆ ; ಕೋಡಿಗೆ ಹಾಕುವ ಗಾರಿಗೆ" (ಜಾಪಕೋ. ೪೨). [ಕೋಡು$_5$ + ಬಳೆ / ತೆಲು. ಕೋಡಬಡ]

**ಕೋಡುಮುರುಕಬಳ್ಳಿ** (ನಾ). ಒಂದು ಜಾತಿಯ ಬಳ್ಳಿ : (ಕ). [ಕೋಡು$_5$ + ಮುರುಕ (< ಮುಱುಕ) + ಬಳ್ಳಿ]

**ಕೋಡುವೀಸ**, ಕೋಡವೀಸ (ನಾ). ಒಂದು ಬಗೆಯ ತೆರಿಗೆ; ಎತ್ತಿನ ಹೇರಿನ ದವಸದ ಮೇಲೆ ಹಾಕುವ ತೆರಿಗೆ : (ಕ). **ಕೋಡವೀಸ** : ಪೆರ್ಜುಂಕಂ ಬಿಲ್ಕೊಡೆ ಎರಡೊಕ್ಕಲ್ದೆರೆ ಕೋಡವೀಸವ ಸಹಿತಂ ಮೂಜುಂ ಸುಂಕದೊಳವಾಗಿ ಬಿಟ್ಟ ಉಪ್ಪಿನ ಹೇಱು ಅಯ್ವತ್ತು (ಸೌಇಇ. XX, ೩೪-೨೦ ; 1053). 'ಕೊಡವೀಸ' ಪರಾ. [ಕೋಡು$_0$ + ವೀಸ]

**ಕೋಡುವೆಟ್ಟು** (ನಾ). ಬೆಟ್ಟದ ಶಿಖರ, —ತುದಿ : ಅರೆಜರಿದ ಜಾದಿನ ಕೋಡುವೆಟ್ಟನೊತ್ತುಗೊಂಡು ಸಿಂಧೂರವಿಲಿಪ್ತ ಮದಸಿಂಧುರ ಗಂಡ ಮಂಡಲದೊಂದು ಪಾಂಗಿನಿಂ ತೋರ್ಪ ತಬ್ಬಲಿಂ (ರಾಮಾಶ್ವ. ೬೨-೨೧). [ಕೋಡು$_5$ + ಬೆಟ್ಟು$_2$]

**ಕೋಡೂರ್** (ನಾ). ಒಂದು ಊರಿನ ಹೆಸರು : ತನ್ನಾಳ್ವಮುಳ್ಕನಾಡ ಕೋಡೂರಲ್ಲಿ ಊರ ಮೂಡಣ ಬಸುರಿಯಂ ರಾಜಗೋವಿಂದನು ಧಾರಾಪೂರ್ವಕಂ ಮಾಡಿಕೊಟ್ಟರು (ಸೌಇಇ. IX-i, ೨೬೫-೧೬ ; 1182). [ಕೋಡು$_0$ + ಊರ್]

**ಕೋಡೂಱು** (ಕ್ರಿ). ಕೋಡನ್ನು ನೆಲಕ್ಕೆ ಊರು, —ಚುಚ್ಚು : ಕಳನೊಳಗೆ ಕೋಡೂಱಿ ಮಗ್ಗುಲ ನೆಲಕೆ ಕೀಲಿಸಲಾನೆಯುಂದಿಳೆಗಿಳಿದು ಹಾಯ್ದನು (ಕುವ್ಯಾಗ. ೪-೨೩). [ಕೋಡು$_5$ + ಊಱು$_1$]

**ಕೋಡೆ** (ನಾ). ೧. (ಕರಾ) ಚಳಿಗಾಲದಲ್ಲಿ ಬೀಸುವ ತಂಗಾಳಿ. ೨. ಉಷ್ಣಕಾಲ; ಬೇಸಗೆ. 'ಕೋಡೆತಿರುನಾಳು', 'ಕೋಡೆಗದ್ದೆ' ಪರಾ. [ದೇ. ‖ ತಮಿ. ಕೋಡೈ; ಮಲ. ಕೋಡ]

**ಕೋಡೆಗದ್ದೆ** (ನಾ). ಬೇಸಗೆಯಲ್ಲಿ ಬತ್ತದ ಬೆಳೆ ಬರುವ ತರಿಯ ಜಮೀನು : (ಕ). [ಕೋಡೆ + ಗದ್ದೆ (< ಗಱ್ದೆ)]

**ಕೋಡೆತಿರುನಾಳು** (ನಾ). ಬೇಸಗೆ ಕಾಲದಲ್ಲಿ ನಡೆಯುವ ಉತ್ಸವ : ದಿಡದೊಪ್ಪುವ ಕೋಡೆತಿರುನಾಳು ಮಧುಮಾಸದೊಡೆಯನುತ್ಸವ ತಿರುನಾಳು ಸೊಡಗರದಲಿ ಸಿರಿರಂಗಧಾಮನಿಗೆಸೆವಿಡದೊಪ್ಪಿದುವಾಗ (ಕಂಸವಿ. ೬-೧೧೦). [ಕೋಡೆ + ತಿರುನಾಳು]

**ಕೋಡೆತ್ತು** (ಕ್ರಿ). ೧. ಕೋಡಿನಿಂದ ಚುಚ್ಚಿ ಮೇಲಕ್ಕೆ ಎತ್ತು ; ಕೊಂಬಿನಿಂದ ಇರಿ : ಹಳಚಿದರು ತಗರಂತೆ ಗಜದವೊಲೊಲೆದು ನಿಂದರು ಹಾವಿನಂತಿರೆ ನಿಲುಕಿದರು ಸೂಕರನವೊಲು ಕೋಡೆತ್ತಿ ಹಾಯ್ಕಿದರು (ಕುವ್ಯಾಭೀ. ೪-೩೫). [ಕೋಡು$_3$ + ಎತ್ತು$_1$]

**ಕೋಡೆಮಳೆ** (ನಾ). ಬೇಸಗೆಯಲ್ಲಿ ಬರುವ ಮಳೆ : "ಅಡ್ಡಮಳೆ" (ಜಾನಕೋ. ೪೨). [ಕೋಡೆ + ಮಳೆ (< ಮೞೆ$_1$)]

**ಕೋಡೆಲಿ** (ನಾ). ತಣ್ಣಗಿರುವ ಎಲೆ; ಶೀತಲಪತ್ರ : ತಾವರೆಯ ಕೋಡೆಲೆಯಲ್ಲಿ ಅಶೋಕದ ಕುಡಿ (ಸಾಹಸಂ. ೨೫). [ಕೋಡು$_3$ + ಎಲೆ$_1$]

**ಕೋಡೆಬಂಕೆ** (ನಾ). ೧. ಗರಿಯ ತುದಿ; ತುದಿಗರಿ. ೨. ರೆಕ್ಕೆಯ ತುದಿ; ತುದಿರೆಕ್ಕೆ: ಕುಕ್ಕುಟಂಗಳ ಕೋಡೆಬ[ಬ]ಂಕೆಯ ಕಡೆಯಂ ಪತ್ತಿ ಪೊತ್ತೆತ್ತಿಯುಂ . . . ಸುಪ್ರಭಾತಸಮೀರಣಂ ತೀಡುತ್ತಿರೆ (ಲೀಲಾವ. ೩-೨೦ ವ); ಮದನನ . . . ಬಿಲ್ಲ ಕರ್ವು ನಾಂಟದೆನಸಿದತ್ತು ನಾರಿಬೊಳದುಂಬಿಯ ಮಾಲೆಯ ಕೋಡೆಬಂಕೆ ಸೀದುದಿರ್ದುದು ರಾಮ ಚಂದ್ರಮುನಿನಾಥನ ಶಾಂತಿರಸಾತಿರೇಕದಿಂ (ಅನಂಪು. ೧-೨೪).

[ಕೋಡ್ಕು + ಎಬಂಕೆ]

**ಕೋಡೆಬಗು** (ಕ್ರಿ). = ಕೋಡೆತ್ತು: ಅರಿ ಹಿರಣ್ಯಾಕ್ಷನ ಬಲಕೆ ಕೋಡೆಬಗಿ ನಿಂದ ವರಾಹನಂತಿರೆ ಪರಬಲಾಂತಕ ಭೀಮ (ಕುಮ್ವಾಕ. ೧೫-೮). [ಕೋಡ್ಕು$_5$ + ಎಬಗು$_1$]

**ಕೋಡೇಱು** (ನಾ). ಕೋಡಿನ ತಿವಿತದಿಂದ ಆದ ಗಾಯ; ಕೋರೆ ಯಿಂದಾದ ಗಾಯ: ತವೋಗಜದ ಕೋಡೇಱುಂದಮೇಂ ನೊಂದುದೋ ಹರಿಣಂ ತಾನೆನಿಸಿತ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ(ಪಂಪಭಾ. ೪-೫೦); ಕಾಡಾನೆಗಳ ಕೋಡೇಱುಂದಿಡಿದು ಕಳೆದ ಖರ್ಜೂರದ ಕಡಿ ಗಳಂತೆ ತಡಿದಡಿಯ ತಱುಂಬಿನೊಳ್ ಬಿಸಿಲಂ ಕಾಯ್ದು ಮೊಸಳೆವಿಂಡಿನ ಪಸರಂಗಳೊಳಂ (ಚಂದ್ರಪು. ೫-೪೦ ವ); ಮಹಿಷಿಯ ಕೋಡೇಱುಗಳಿಂ . . . ಉರ್ಚಿದ ಭೂರುಹದಿಂದಮಾದ ವಿವಿಧೋಪಹತಂ ಸದುವ ಕ್ಷತಂಗಳೆಂದಱಿವುದು (ಅಶ್ವಶಾ. ೧೨-೩); ಕೋಡೇಱುಂಗೆ ಕೊಕ್ಕರಿಸುತ ಜೋದರನೀಡಾಡಿ ಕರಿಕಳಭಗಳು ಓಡಿದುವು (ಕುರಾಸಾಂ. ೧೨-೧೧೮).

[ಕೋಡ್ಕು$_5$ + ಏಱು$_4$ (< ಏಱ್$_4$)]

**ಕೋಡೊಲೆ, ಕೋಡುಒಲೆ** (ನಾ). ಒಲೆ ಬಾಯಿಯ ಒಂದು ಅಥವಾ ಎರಡು ಪಕ್ಕದಲ್ಲಿ ಬೇರೆ ಪಾತ್ರೆಯನ್ನು ಉರಿ ತಗಲು ವಂತೆ ಇಡಲು ಅನುಕೂಲಿಸುವ ಒಲೆ: ಕೋಡೊಲೆಯಿದ್ದರೆ ಅಡಿಗೆ ಕೆಲಸ ಜಾಗ್ರತೆ ಮುಗಿಯುತ್ತದೆ (ರೂಢಿ). **ಕೋಡುಒಲೆ**: ಇದರಲ್ಲಿ . . . ಒಂದು ಒಲೆ, ಅದರ ಹಿಂದೆ ಎರಡು ಕೋಡು ಒಲೆಗಳು ಇರುವುವು (ಗೃಹವಿ. ೧೬೩). [ಕೋಡ್ಕು$_5$ + ಒಲೆ$_4$]

**ಕೋಡ್ಗಲ್** 'ಕೋಡುಂಗಲ್' ನೋ.

**ಕೋಣ್, ಕೋಣ್ಮ**$_1$**, ಕೋಣು, ಕೋಣ್ಣೆ, ಕೋನ, ಕೋನಿ** (ನಾ). ೧. ಮೂಲೆ; ಎರಡು ದಿಕ್ಕುಗಳು ಸೇರುವ ಸ್ಥಾನ; ವಿದಿಕ್ಕು: "ಕೋಣ್ (ಸೆ, ಕೋನ) – ಕೋಣ = ಮೂಲೆ" (ತದ್ಭಕೋ. ೯); ಶ್ರೀವುರದಾ ಬಡಗಣ ಪಡುವಣ ಕೋಣುಳ್ಳನ್ದೇವಂಗೇರಿ ಮದಮನೆ (ಎಕ. IV, ನಾಗಮಂ. ೮೫-೬೯; 776); ತೆಂಕಣ ಪಡುವಣ ಕೋಣೊಳ್ ಸುಕೌಶಳವೆಂಬ ವಿಷಯದೊಳ್ (ವಡ್ಡಾರಾ. ೪೨-೨೦); ಪೂರಿತ ರಣ ಶಂಖ ಗಂಭೀರಾರಾವಂ ದೆಸೆಯ ಕೋಣ ಕುಸುಕುಱ ಗಜಘಂಟಾರವ ಮನುಜದೆ ಪೆಱಗಿಡೆ (ಶಾಂತಿಪು. ೩-೯೭); ಆ ದೇವಿಯ ಪುರದಾಗ್ನೇಯದ ಕೋಣಲಿದ್ದೋರ್ಜಿತೆ ಕುಳಿಯ ತೆಂಕಣ ನೀರ್ಗ್ಗಾರಿಗೆಯ ಮೇರೆ (ಎಕ. VII, ಶಿಕಾರಿ. ೩೨೩-೨೯; 1044); ನಾಲ್ಕು ಕೋಣ್ಗಳೊಳೊಪ್ಪಿರ್ಪುವು . . . ಜಿನಪ್ರಜೆಕ್ಕೆ ಸವನಸ್ಥಾನಂಗಳೀ ಕೈಲದೊಳ್ (ಪುಷ್ಪಪು. ೧೦-೫೮). ೨. "ಈಶಾನ್ಯದಿಕ್ಕು" (ಲೋಕೋಪ.ಟೀಕೆ); ಊರಿಂ ಬಡಗಲ್ ನೆಗೆದಂ ದೂರದಿಱಿವುದವೊಲ್ಪನೀಗುಮೆಂತುಂ ಕೋಣೊಳ್ ಕಾರಕರ್ಗಕ್ಕುಂ ನೆಱೆ ಸಂಹಾರಮನದ್ಭುತಮೆನಿಪ್ಪ ಗಂಧರ್ವಪುರಂ (ಲೋಕೋಪ. ೪-೪೧). **ಕೋಣ್ಮ**$_1$: ೧. ಕೂಟಗೋಳನ ಹಿರಿಯ ಕೆಱೆಯ ಹಡುವ × × × ರೆ ಯಾಗಿ ಬಡಗಣ ಮೂಡಣ ಕೋಣೆ ಅಂತು (ಸೌಇಇ. IX–i, ೨೪೭-೪೫; 1147); ಕೋಣೆ(ಕೋಣೆ) – ಮೂಲೆಯಲ್ಲಿರುವ ಸ್ಥಳ (ಜಾಗ) (ತುಳುನಾ. ೪೮). **ಕೋಣು**: ೧. ಸೊಬಕೆಯನ ಕೋಣೆನಲು ಸಾಯರ ಮರದ ಕೋಂಟ (ಎಕ. VII, ಶಿಕಾರಿ. ೨೩೬-೮೨; 1174); ಭತ್ತದ ಗದ್ದೆಯೊಳಗೆ ಬಂಮನ ಹಳ್ಳಿಯ ತೆಂಕಣಪಡುವಣ ಕೋಣೆನೊಳು × × × ಪಂಗಱಿಗೆ (ಕಕುಲ. ೬-೫೩; 1218). **ಕೋಣ್ಣೆ**: ೧. ರಸೆಗಿಱಿ ದನೊ ಮೇಣ್ ನಾಲ್ಕುಂ ದೆಸೆಗಳ ಕೋಣೆಗಳೊಳುಱಿದನೋ (ಗದಾಯು. ೬-೨೦); ಕ್ಷೋಣಿಯೊಳಗಬ್ಬೆಯಱಿಯದ ಕೋಣೆಯುಮಾ ತೂಣನಾಡದೆಡೆಗಳುಮೊಳವೇ (ಲೀಲಾವ. ೧-೪೫); ಕೋಣೆಬಾಗುಗಳೆಲ್ಲ ವನು ಹೊಕ್ಕಱಸಿ (ಕುಮ್ವಾಸ. ೩-೪೭); ಕುಲಧರವನೇಱಿಹರ ಕೋಣೆಯ ನೆಲೆಗಳಲಿ ಗುಹೆಗಳಲಿ ಹೊಕ್ಕಿಹ ಹುಲುನರರ ಗೆಲಿದಿರಲು ಧೀರನೆ ಎನುತ (ಕೋಗಯು. ೨೬-೯). ೩. ಓವರಿ; ಕಿರುಮನೆ; ಕೊಠಡಿ; ಖೋಲಿ: "ಓವರಿಯು ಗಳಂತಿಗೆ ಕೋಣೆಯು" (ಕವಿಕಂ. ೧೧೪); ಪೊನ್ನುಂ ಕುಡುಗೆಗಳುಮಂ . . . ಬಸದಿಯೊಳಗೊಂದು ಕೋಣೆಯೊಳಿಟ್ಟಿರಿಸಿ ಬಂದು (ವಡ್ಡಾರಾ. ೧೬೭-೬); ಪಡುವಳ್ ಕೀಱಲೊಳೆಮ್ಮ ತೊಟ್ಟು ಪಡುವಳ್ ಮುತ್ತಬ್ಬೆಯಾ ಕೋಣೆಯೊಳ್ (ಕಾವ್ಯಾವ. ೬೧೭); ಓರೊರ್ಮೆ ಕಂಕೆಲ್ಲಿ ವಲ್ಲರಿಯ ಕಾವಣದ ಕೋಣೆಯೊಳ್ (ವರ್ಧಪು. ೪-೫೭ ವ); ಕೋಣೆಯೊಳಾನೊಂದ ನುಡಿದಾಡಲದ ತಂದು ಕ್ಷೋಣೀಶಗಱಿಕೆ ಮಾಡಿದಿರಿ (ಭರಚ. ೮-೩೭); ವೇದಗಳ ಕಾಲದ ಮನೆ ಗಳು . . . ಸಾಧಾರಣವಾಗಿ ಒಂದು ಹಜಾರವೂ ಅದರ ಸುತ್ತಲೂ ಕೋಣೆಗಳೂ ಇರುತ್ತಿದ್ದವೆಂದೂ ಊಹಿಸಬಹುದಾಗಿದೆ (ಮೈವಾಸ್ತು. ೨೩). ೪. ಅಡಿಗೆಮನೆ; ಪಾಕಶಾಲೆ. **ಕೋನ**: ೧. "ಮೂಲೆ": (ಸಿರಿಕೋ. ೧೪೨). ೫. ಸಂದು; ಸಂಧಿ (?): ಅಸ್ಥಿ ಮಾಂಸ ಶುಕ್ರ ಶೋಣಿತ ಉಳ್ಳನ್ನಕ್ಕ ಅರಿಗೂ ಅಧಿವ್ಯಾಧಿ ತಾಪತ್ರಯದ ತನುತ್ರಯದ ಕೂಟಸ್ಥ ಬಿಡದು ಕೋನವನಱಿದು ವೈದ್ಯವ ಮಾಡಿಹೆ ನೆಂದಡೆ (ಸರ್ವವ. ೨೧-೯೯). ೬. [ರೇಖಾಗ] ಎರಡು ರೇಖೆಗಳು ಅಥವಾ ಎರಡು ಸಮಕ್ಷೇತ್ರಗಳು ಒಂದನ್ನೊಂದು ಸಂಧಿಸುವ ಸ್ಥಾನ, —ಸ್ಥಳ: "ಒಂದೇ ಸಮರೇಖೆಯಲ್ಲಿರದ ಎರಡು ರೇಖೆಗಳು ಅಥವಾ ಎರಡು ಸಮಕ್ಷೇತ್ರಗಳು, ಸಂಧಿಸಿದಾಗ ಆಗುವ ಕೋನ" (Angle. ಇಂಕನಿ); ಕೋನವು ೫೦ ಡಿಗ್ರಿಗಳಾಗಿದ್ದರೆ . . . ಕಠಿಣ ಸಮಸ್ಯೆಯಾಗುತ್ತಿತ್ತು (ನಕ್ಷತ್ರ. ೪೫). **ಕೋನಿ**: ೧. ನನ್ನಿರುವಿನ ಕೈಲಾಸ ನೀ ನೋಡು ಎಲೆ ಸಿದ್ಧ ಏನು ಲೀಲೆಯದು ತಿಳಕೋಳೊ ಶ್ರೀಗಿರಿಯ ಕೋನಿಕೋನಿಗಳಲ್ಲಿ ಅಲೆದಾಡು (ಸಿದ್ಧಪು. ೬-೮).

**ಕೋಣ್ಗೋಣ್** (ದ್ವಿರುಕ್ತಿ): ಕೋಣಮೂಣ ದೀಪ್ತಿರುಚಿ ಕೋಣ್ಗೋಣೊಳ್ ಪಜ್ಜಳಿಸೆ (ಅಜಿಪು. ೨-೧೯).

[?. / ತಮಿ. ಮಲ. ಕೋಣ್, ಕೋಣ; ತೆಲು. ಕೋಣ, ಕೋನ. / ಸಂ. ಕೋಣ; ಹಿಂ. ಮರಾ. ಕೋಣ, ಕೋನ]

**ಕೋಣ**$_1$ (ನಾ). ೧. ಎಮ್ಮೆಯ ಜಾತಿಯಲ್ಲಿ ಗಂಡು; ಮಹಿಷ: "ಮಹಿಷಃ, ಸೈರಿಭಃ, ರಕ್ತಾಕ್ಷಃ, ಕಾಸರಃ, ಲುಲಾಯಃ – ಈ ೫ ಕೋಣಂ" (ಹಲಾಯು. ೩೮-೭೪); "ಸೈರಿಭಂ ರಕ್ತಾಕ್ಷನಸ್ವಾರಿ ಕೋಣನಕ್ಕು" (ಮಂಗರಾ. ೪೮-೧೦); ಕೋಣಂ ಪೊಕ್ಕ ಮಡುವಿನಂತೆ ಮನದೊಳ್ ಕದಡಿ (ಧರ್ಮಾಮೃ. ೧೦-೩೬); ಕೋಣನೊಂದು ಕುದುರೆಯ ನುಂಗಿತ್ತು (ಆದವ. ೩೯); ಕೋಣನೆರಡುಂ ಹೋರೆ ಗಿಡು ವಿಂಗೆ ಮಿತ್ತು (ಹಚಕಾ. ೩-೧); ಪ್ರಳಯಾಂತಕನ ಕೋಣದ ಕೋಡ ಹೊಯ್ಲುಗಳೊ (ಕುಮ್ವಾದ್ರೋ. ಓರಿಇ. ಪರಿ. ೨೭೬); ಎತ್ತು ಏರಿಗೆ ಎಳೆದರೆ ಕೋಣ ನೀರಿಗೆ ಎಳೆಯಿತು (ಗಾದೆ); ಕೋಣನ ಮುಂದೆ ಕಿನ್ನರಿ ಬಾರಿಸಿದ ಹಾಗೆ (ಗಾದೆ). ೨. (ಅಲಂ) ಬುದ್ಧಿಯಿಲ್ಲದ ವ್ಯಕ್ತಿ; ದಡ್ಡ: ನಿನಗಿನ್ನು ಬುದ್ಧಿಯಿಲ್ಲ ಕೋಣ (ಚದಾವ. ೨೦-೧೨); ಜಾಣನಿಗೆ ಮಾತಿನ ಪೆಟ್ಟು ಕೋಣನಿಗೆ ದೊಣ್ಣೆಪೆಟ್ಟು (ಗಾದೆ).

[ದೇ. ‖ ಮಲ. ಕೂಳ; ತುಳು. ಗೋಣ, ಗೋಣೆ; ತೆಲು. ಗೋಣೆ]

**ಕೋಣ₂** (ನಾ). ೧. ಮೂಲೆ; ಕೊನೆ: ದ್ವಯ ಕಟ್ಟಿ ಮುಂಗಡೆಯೊಳ ಗಾಯ್ತು ಹಿಂದೊಂದು ದ್ವಯಕೋಣ ಸಹತಾಗಿ ಮತ್ತೆ ದ್ವಯ ಕಟಿಯೊಳ ಗೆರಡೆಂದಿಂತು ಪಂಚಕಟ್ಟಿಯು ಧರಿಸಿದನಾ ವಿಪ್ರಾ (ಪೂಜ್ಯಚ. ೯-೪೪). ೨. ತಮಟೆ, ನಗಾರಿ ಮುಂತಾದ ಚರ್ಮವಾದ್ಯಗಳನ್ನು ಬಾರಿಸುವ ಕೋಲು: "ಬಾಜಿಸುವ ಕುಡುಹು ಕೋಣವೆಂಬುದು" (ಹಲಾಯು. ೧೬-೯೮); "ವಾದ್ಯಮಂ ಬಾರಿಸುವ ಕುಡುಹು ಕೋಣಾಖ್ಯಮಂ" (ಮಂಗರಾ. ೨೪-೭); ಭೋರೆನೆ ಪೊಯ್ವುದು ಮಾಜುಂ ಭೇರಿಗಳುಂ ಕನಕ ಕೋಣಹತಿಯಿಂದಂ ಬಂಭಾರವಮೇಂ ನೆಗೆದುದೊ (ಪಂರಾಮಾ. ೧೨-೨೦); ಕೋಣಪ್ರಹತ ಬಹುಳ ಭಾಂಕಾರ-ಭೇರಿ ನಿನಾದಂ (ಜಗನ್ನಿ. ೧೫-೬೩). ೩. ತಂತೀವಾದ್ಯಗಳನ್ನು ಬಾಜಿಸಲು ಉಪಯೋಗಿಸುವ ಸಾಧನ: "ಕೋಣಃ – ವೀಣಾದಿ ವಾದನಂ ವೀಣೆ ಮೊದಲಾದ ವಾದ್ಯಗಳನ್ನು ಬಾರಿಸುವ ನಖ್ಖಿ ಹೆಸರು. ಅಂದರೆ ಬೆರಳ ಕೊನೆಗೆ ತಗಲಿಸಿಕೊಳ್ಳುವ ತಂತಿ ಮುಂತಾದ ಸಾಧನವು" (ಸಿದ್ಧಾಂತಿ. ೫೪). ೪. ಕತ್ತಿಯ ಬಾಯಿ; ಅಸಿಧಾರೆ: "ಅಣಿಃ ... ಕೋಣಃ – ಈ ೫ ಗೋಟು" (ಹಲಾಯು. ೧೨೦-೪೨). ೫. ಕೋಲು; ದೊಣ್ಣೆ; ಬಡಿಗೆ. ೬. ಒಂದು ಬಗೆಯ ವಾದ್ಯ. ೭. [ಜ್ಯೋತಿ] ಶನಿಗ್ರಹ: "ಪಂಗು ಸೌರಿ ಕೋಣ[ಪಾಠಾಂ. ಕ್ರೋಡ]ನರ್ಕಜಂ ಮಂದನಸಿತನೆನಲ್ಕೆ ಶನಿಯೆನಿಕ್ಕು" (ಮಂಗರಾ. ೧೨-೬). ೮. [ಜ್ಯೋತಿ] ಮಂಗಳ ಗ್ರಹ. ೯. [ರೇಖಾಗ] ಎರಡು ಸಮರೇಖೆಗಳು ಅಥವಾ ಸಮಕ್ಷೇತ್ರಗಳು ಒಂದನ್ನೊಂದು ಸಂಧಿಸುವ ಸ್ಥಾನ; ಕೋನ: "ಎರಡು ರೇಖೆಗಳು ಒಂದು ಮೂಲೆಯಲ್ಲಿ ಸಂಧಿಸಿದರೆ ಕೋಣವೆಂದು ಹೇಳುವುದು" (ಭೂಮಿಣ. ೮); ಘನವೆಷ್ಟೆ ಅದರೂ ಅಷ್ಟಕೋಣ (ಅರಳು. ೪೦೧). ೧೦. [ರೇಖಾಗ] ಕೈವಾರದ ನಡುವಣ ಬಿಂದು. [ಸಂ.]

**ಕೋಣಕ್ರಮ** (ನಾ). ಕೋನ ಬರುವಂತೆ ಅಳವಡಿಸಿದ ಮರಗಳ ಎರಡು ಸಾಲು: ನಯನಾಸೇಚನಕಮಾದ ತರುವಾಟಗಳಿಂದೆಸೆವ ನಂದನಾದ್ಯಾರಾಮಂಗಳೊಳು ... ಚಿತ್ರವ್ಯೂಹ, ಕೋಣಕ್ರಮಗಳೆಂಬ ಹನ್ನೊಂದು ವೃಕ್ಷ ಸನ್ನಿವೇಶಂಗಳುಂ ನಂದನೀಯಗಳಾಗಿರ್ಕುಂ (ವಿವೇಕ. ೨೧೧). [ಕೋಣ₂ + ಕ್ರಮ]

**ಕೋಣತ್ರಯ** (ನಾ). = ತ್ರಿಕೋಣ ೪: ಕೋಣತ್ರಯದ ಕುಂಡದಲಿ ... ಸಂಸ್ಥಾಪಿಸಿದನಸ್ತ್ರಾವಳಿ ಪರಿಸ್ತರದಲಿ ಹುತವಹನ (ಕೂರರಾ. ೬-೪೨-೮). [ಕೋಣ₂ + ತ್ರಯ]

**ಕೋಣದಬಕ್ಕರಿ** (ನಾ). = ಕೋಣದ ಬಳ್ಳಿ: (ಕ). [< ಕೋಣ₁ + ಬಕ್ಕರಿ]

**ಕೋಣದಬಳ್ಳಿ** (ನಾ). ಎಲೆಯಿಲ್ಲದೆ ಪೊದರಾಗಿ ಬೆಳೆಯುವ ಒಂದು ಬಗೆಯ ಬಳ್ಳಿ: (ಕ). [< ಕೋಣ₁ + ಬಳ್ಳಿ]

**ಕೋಣನಕೊಂಬುಮರ** (ನಾ). ಒಂದು ಔಷಧಿ ಗಿಡ: ಕೋಣನ ಕೊಂಬು ಮರ, ಲಿಂಗಧಾರಿ, ಅಂಬಾರಿಹೊಡಿ (ವೈಔಗಿ. ೬೫-೧೩೩೪). [< ಕೋಣ₁ + ಕೊಂಬು₁ + ಮರ₁]

**ಕೋಣನತಲೆಹುಲ್ಲು** (ನಾ). ಒಂದು ಜಾತಿಯ ಹುಲ್ಲು: ಕಾಡುರಾಗಿಹುಲ್ಲು, ಕೋಣನತಲೆಹುಲ್ಲು, ಕೋಳೀಕಾಲುಹುಲ್ಲು (ವೈಔಗಿ. ೨೮-೫೪೨). [< ಕೋಣ₁ + ತಲೆ₁ + ಹುಲ್ಲು (< ಪುಲ್)]

**ಕೋಣಪ** (ನಾ). ೧. ದಿಕ್ಪಾಲಕರಲ್ಲಿ ಒಬ್ಬ; ನಿರುತಿ: "ಯಾತುನ ನಿಶಾಚರಂ ರಾಕ್ಷಸಂ ಕೋಣಪಂ [ಪಾಠಾಂ. ಕ್ಷೋಣಿಪಂ, ಕೌಣಪ] ಯಾತುಧಾನಂ ಕೈಕಸೇಯನೆನೆ ನಿರುತಿ" (ಮಂಗರಾ. ೧೫-೧೦). 'ಕೋಣಪದಿಕ್ಕು' ಪಠಾ. ೨. ದನುಜ; ರಾಕ್ಷಸ: ಇದು ಕಡಲಂದದೆ ಕಡುಗಡಿದಿದಜಿಳೊಳಗಾನಿವನನಿಕ್ಕಿ ಕೋಪಮನಾಜಿಪ್ಪುದೆ ಪಂಥಮೆಂದು ಬಂದಂ ತದಗ್ರದೇಶಕ್ಕೆ ಕೋಣಪಂ ವಿಗತಕೃಪಂ (ಚಂದ್ರಪು. ೫-೪೨); ಕಾಮರೂಪಿಯಾ ಕಿತವ ಕಲಿ ಕೋಣಪನ ಕೂಟ ಯಂತ್ರಕ್ಕೆ ಸಿಲ್ಕಿ ಕೋಳುವೋಗಿಹರಾರ್ಯರೆಣಿತೆನಿತೊ (ಶ್ರೀರಾಮಾ. ೨೩೩-೧೫೬). [ಸಂ.]

**ಕೋಣಪದಿಕ್ಕು** (ನಾ). ಕೋಣಪನ ಅಧಿಪತ್ಯಕ್ಕೆ ಒಳಪಟ್ಟ ದಿಕ್ಕು; ನೈಋತ್ಯ: ಆ ನಗರಿಯ ಕೋಣಪದಿಕ್ಕಿನೊಳಿರ್ದ ಕಾನನದೊಳಗೆ (ಜ್ಞಾನಚ. ೨೯-೬). [ಕೋಣಪ + ದಿಕ್ಕು]

**ಕೋಣಬಯಲು** (ನಾ). ಒಂದು ಪ್ರದೇಶದ ಹೆಸರು: ಆ ಪುರದ ನೈಋತ್ಯದ ಸರಡೆಯ ಕೋಣಬಯಲ ಗದ್ದೆ ಕತ್ತವಿಯ ಘಳೆಯೊಳು ಮತ್ತರು ಪನೆರಡುಮನ್ (ಎಕ. VII, ಶಿಕಾ. ೧೨೫-೨೮; 1019). [ಕೋಣ₁ + ಬಯಲು (< ಬಯಲ್)]

**ಕೋಣಿ**₁ 'ಕೋಣ್' ನೋ.

**ಕೋಣಿ**₂ (ನಾ). ನೆಲ; ಭೂಮಿ: "ಕ್ಷೋಣಿ" (ಗಂಗಾಮು. ೧೦೩). [< ಸಂ. ಕ್ಷೋಣಿ]

**ಕೋಣೀಯ** (ಗು). ಕೋನಕ್ಕೆ ಸಂಬಂಧಪಟ್ಟ. [ಸಂ.]

**ಕೋಣು** 'ಕೋಣ್' ನೋ.

**ಕೋಣೆ**₁ (ನಾ). ಮಣ್ಣಿನ ಪಾತ್ರೆ, —ಹೂಜಿ: "ಗಳಂತಿಗೆಯೆಂದು ಕೋಣೆಯಕ್ಕುಂ" (ಕಬ್ಬಿಕೈ. ೪೬). [?]

**ಕೋಣೆ**₂ 'ಕೋಣ್' ನೋ.

**ಕೋಣೆ**₃ (ನಾ). ಒಂದು ವಂಶದ ಹೆಸರು (?): ಕೋಣೆಯ ವಂಶಜನಾ ಯ್ತುವವರ್ಮನುಂ ಕಾರಕ ಹೊಲ್ಲನುಂ ನೆಗರ್ದ್ದ ... ಕೋಣೆಯಾನ್ವಯರ್ (ಸೌಇಇ. XI–ii, ೧೩೩-೪೬; 1087); ಧರೆಗೆಸೆವ ಶಕ್ತಿ ಪರಿರ್ಷೆ(ಷೆ)ದೆ ಕರಮುಗ್ರಣಿಯೆನಿಪ ಪರ್ವತಾವಟ (ಧಿ)ಯೊಳೊಮ್ಮವರ ಕೋಣೆಯ ಸಂತತಿಗಾಭರಣ ಕೇದಾರಶಕ್ತಿಮುನಿಪತಿ ನೆಗಟ್ದ (ಇಆ. V, ೩೪೩-೨೦; 1093). [?]

**ಕೋಣೆವುಗಿಸು** (ಕ್ರಿ). ೧. ಕೊಠಡಿಯನ್ನು ಪ್ರವೇಶಿಸುವಂತೆ ಮಾಡು; ಒಳಮನೆಯನ್ನು ಹೊಗಿಸು: ಮೂದೇವರುಮಂ ಮೂಜು ಕೋಣೆವುಗಿಸುಗುಮಸುರರ್ (ಶಮುದ. ೨೨೭ ಪ್ರಯೋ). ೨. (ಆಲಂ) ಸೆರೆಗೆ ಹಾಕು. ೩. ಶೋಭನ ಪ್ರಸ್ತದಂದು ವಧೂವರರನ್ನು ಶಯ್ಯಾಗೃಹಕ್ಕೆ ಕಳಿಸು. [ಕೋಣೆ₂ (< ಕೋಣ್) + ಪುಗಿಸು]

**ಕೋತ**₁ (ನಾ). ನೀಲಗಿರಿಯಲ್ಲಿ ವಾಸಿಸುವ ಒಂದು ದ್ರಾವಿಡ ಜನಾಂಗ; ಅವರಾಡುವ ಭಾಷೆ: ನೀಲಗಿರಿ ನಾಲ್ಕು ನಾಡಿನ ಕೋತ ಸಿಸು ಮಕಳು (ಮೈಆರಿ. ೧೯೩೦, ೧೯-೧೭; 1704); ಕೋತಭಾಷೆ ದ್ರಾವಿಡವರ್ಗದ ಭಾಷೆಯೆಂಬುದು ನಿರ್ಧಾರವಾಗಿತ್ತು (ದ್ರಾವಿವಿ. ೨೮೦). [?]

**ಕೋತ**₂ 'ಖೋತ' ನೋ.

**ಕೋತ**₃ 'ಕುವತ್ತು' ನೋ.

**ಕೋತಂಬರಿ** 'ಕೊತ್ತುಂಬರಿ' ನೋ.

**ಕೋತಲು** (ನಾ). ೧. ಮೇಲಧಿಕಾರಿಗಾಗಿ ಮೀಸಲಾದ ಕುದುರೆ; ಉತ್ಸವಕ್ಕಾಗಿ ಸಜ್ಜುಗೊಂಡ ಕುದುರೆ. ೨. ಅವಶ್ಯವಾದುದಕ್ಕಿಂತಲೂ ಹೆಚ್ಚಾಗಿರುವ ವಸ್ತು; ಬೇಕಾದಷ್ಟಕ್ಕಿಂತ ಅಧಿಕ ವಾದುದು: (ಕ). ೩. ಉಳಿಕೆ; ಉಳಿತಾಯ: ಸಂಬಳದಲ್ಲಿ ಸ್ವಲ್ಪ ಕೋತಲು ಉಳಿಸಿಕೊಂಡು ಬಂದರೆ ಕಷ್ಟಕಾಲದಲ್ಲಿ ನೆರವಾಗುತ್ತದೆ (ರೂಢಿ). [← ತುರ್ಕಿ. ಕೋತಲ್; ಹಿಂ. ಮರಾ. ಕೋತಲು]

**ಕೋತಳಿ** (ನಾ). ಒಂದು ತೂಕ; ಆರು ಮಣ: ಬಂಗಾಲಿ ಅಕ್ಕಿ–ಮುಂಬಯಿ ೬ ಮಣದ ಕೋತಳಿ (ಮುಂಬವ್ಯಾ. ೧೬೬).
[← ಮರಾ. ಕೋಥಳೀ]

**ಕೋತಿ** (ನಾ). ೧. ಕೋಡಗ; ಮಂಗ; ಕಪಿ: ಕೋತಿಯಂತೇಡಿಸುತ್ತಿನಿಸುಂ ಹೇಸದೆ ಲಜ್ಜೆಯುಳ್ಳದನಿಬರ್ ತಾಂ ಮಾನ್ಯನೆಂದೆನ್ನದಾ ಮನುಜಂ ಸದ್ಗತಿ ಕಾಣನೈ (ಸೋಮೇಶ. ೫೦); ಕೋತಿವೊಲ್ ಕುಣಿಸಿ ನಿಟ್ಟಿಸುತೆ (ಮೋಹತ. ೨೯–೧೬); ಕೋತಿ ಬುತ್ತಿ ತಿಂದು ಮೇಕೆ ಮೂತಿಗೆ ಬಳಿದ ಹಾಗೆ (ಗಾದೆ). ೨. (ಅಲಂ) ಅಂದಗೇಡಿ; ಕುರೂಪಿ: ಆ ಕೋತಿಗೆ ಯಾವನು ಹೆಣ್ಣುಕೊಟ್ಟಾನು? (ರೂಢಿ).
[ದೇ. ‖ ತಮಿ. ಕೋಣ್ಡಿ; ಕುರಙ್ಗು; ಮಲ. ಕುರಙ್ಙು; ತುಳು. ಕೋತಿ; ತೆಲು. ಕೋತಿ, ಕ್ರೋತಿ; ಕೋಲಾ. ಕೊತಿ]

**ಕೋತಿಕುಲಾಧಿಪ** (ನಾ). ಕಪಿಗಳ ವಂಶಕ್ಕೆ ಒಡೆಯ; ವಾನರ ರಾಜ: ಯಾತಕೆ ಮಲಗಿದೆ ಧರೆಯೊಳು ಕೋತಿಕುಲಾಧಿಪನೇಳೈ (ವಾಲಿಕಾ. ೫೧).
[ಕೋತಿ + ಕುಲ + ಅಧಿಪ]

**ಕೋತಿಬುದ್ಧಿ** (ನಾ). ಮಂಗಬುದ್ಧಿ; ವಿವೇಚನೆಯಿಲ್ಲದ ಮತಿ: ಮಾತೇನು ನಮ್ಮ ಭಂಡಾರವ ಕೆಡಿಸಿದೆ ಕೋತಿಬುದ್ಧಿಯವ ನೀನೆ (ಬಜ್ಜರಾ. ೩–೩೫).
[ಕೋತಿ + ಬುದ್ಧಿ]

**ಕೋತಿಮರಿ** (ನಾ). ಕಪಿಯ ಶಿಶು; ಮರಿ ಕೋತಿ: ನೇಯಿಗೆಯ ವನಿಗ್ಯಾಕೆ ಕೋತಿಮರಿ (ಗಾದೆ). [ಕೋತಿ + ಮರಿ (< ಮಱಿ)]

**ಕೋತಿಮುಸುಡು** (ನಾ). ಕೋತಿಯ ಮುಖ; ಕಪಿಮುಖ: ಕೊತ್ತಿಗಣ್ಣಿನ ಕೋತಿಮುಸುಡಿನ ಚಪ್ಪಡೆವೆತ್ತು ನಡೆವ ಹೆಜ್ಜೆಯಿಂದ (ನೇಮಿಸಂ. ೭–೧೦೪).
[ಕೋತಿ + ಮುಸುಡು]

**ಕೋತಿವಡೆ** (ನಾ). ಕಪಿಗಳ ಪಡೆ; ಮಂಗಗಳ ಸೇನೆ: ಎಡಬಲಗಡೆಗಳೊಳ್ ಅಳ್ವದೆ ಕೋತಿವಡೆಗಳನಿಟ್ಟು (ಅದ್ಭುತ. ೪೫).
[ಕೋತಿ + ಪಡೆ₄]

**ಕೋತಿಸುಬುತ್ತಿಹುಲ್ಲು** (ನಾ). ಒಂದು ಬಗೆಯ ಹುಲ್ಲು: ಸಣ್ಣ ಪುರುಳೇಹುಲ್ಲು, ಪತ್ರಿಕೆ ಹುಲ್ಲು, ಕೋತಿಸುಬುತ್ತಿ ಹುಲ್ಲು (ಮೈಔಗಿ. ೩೪–೬೬೦). [ಕೋತಿಸುಬುತ್ತಿ ? + ಹುಲ್ಲು (< ಪುಲ್)]

**ಕೋತು** (ನಾ). ೧. ಉಳುಮೆಮಾಡುವುದು; ಒಕ್ಕಲುತನ; ಬೇಸಾಯ: (೬). ೨. ಜಮೀನು ಅಥವಾ ಮನೆ ಮುಂತಾದುವನ್ನು ಗುತ್ತಿಗೆ ಅಥವಾ ಬಾಡಿಗೆಗೆ ತೆಗೆದುಕೊಳ್ಳುವುದು ಅಥವಾ ಕೊಡುವುದು: (೬). ೩. ಒಪ್ಪಂದ ಮಾಡಿಕೊಳ್ಳುವುದು; ಕರಾರು ಮಾಡಿಕೊಳ್ಳುವುದು: (೬). [?]

**ಕೋತ್ತು** 'ಕುವತ್ತು' ನೋ.

**ಕೋದಂಟಿ** 'ಕೊದಂಟಿ' ನೋ.

**ಕೋದಂಡ₁** (ನಾ). ವಿದ್ಯಾರ್ಥಿಗಳಿಗೆ ಶಿಕ್ಷೆ ಕೊಡಲು ಬಳಸುತ್ತಿದ್ದ ಹಗ್ಗ ಮತ್ತು ಅಂತಹ ಶಿಕ್ಷೆ; ತೂಗುದಂಡಿಗೆ (ಉಕ); "ಒಂದು ಹಗ್ಗಕ್ಕೆ ಕೈಬಿಗಿದು ತೂಗುವಂತೆ ಮಾಡುವ ಶಿಕ್ಷೆ" (ಸಿಂಕೋ. ೫೪೨): ಮೇಷ್ಟ್ರು ಕೊಡುತ್ತಿದ್ದ ಮೆಣಸಿನಕಾಯಿ ಘಾಟು, ಕೋದಂಡ ಮುಂತಾದ ಶಿಕ್ಷೆಗಳನ್ನು ತಡೆಯಲಾರದೆ ಗೌಡರು ಅರ್ಜಿ ಕೊಂಬಲ್ಲನ ಕೈಯಲ್ಲಿ ಬರೆಸಿಕೊಂಡು ಹೋಗುತ್ತಿದ್ದರು (ನನ್ನೂರು. ೨೦೫).

ಕೋದಂಡಕ್ಕೇರಿಸು=ಕೋದಂಡ ಶಿಕ್ಷೆಗೆ ಗುರಿಪಡಿಸು: "ಕೋದಂಡಕ್ಕೇರಿಸುವುದು:—ಇದರಲ್ಲಿ ಮಾಳಿಗೆಯ ತೊಲೆಗೆ ಕಟ್ಟಿದ್ದ ಸರಪಳಿಗೋ ಹಗ್ಗಕ್ಕೋ ತಪ್ಪುಮಾಡಿದಹುಡುಗನನ್ನುಎತ್ತಿ ಹಿಡಿದು ಆ ಸರಪಳಿಯನ್ನೋ ಹಗ್ಗವನ್ನೋ ಎರಡು ಕೈಗಳಿಂದಲೂ ಭದ್ರವಾಗಿ ಹಿಡಿದುಕೊಳ್ಳುವಂತೆ ಅವನಿಗೆ ಹೇಳಿ ನೇತಾಡುವಂತೆ ಅವನನ್ನು ಬಿಡುವುದು (ಗುಣಸಾ.–೪).

ಕೋದಂಡಕ್ಕೆ ಹಾಕು = ಕೋದಂಡಕ್ಕೇರಿಸು: ಹುಡುಗರನ್ನು ಕುರ್ಚಿ ಕೂಡಿಸುವುದು, ಕೋದಂಡಕ್ಕೆ ಹಾಕುವುದು, ಕೈಯನ್ನು ಮುಷ್ಟಿಮಾಡಿಸಿ, ಕಲ್ಲುಹಲಗೆಯಿಂದ ಹೊಡೆಯುವುದು (ನಾಡಿಗೇ. ೧೦೪).
[ದೇ. ‖ ತಮಿ. ಮಲ. ಕೋದಾಣ್ಡ; ತೆಲು. ಕೋದಾಂಡ]

**ಕೋದಂಡ₂** (ನಾ). ಬಿಲ್ಲು; ಧನುಸ್ಸು: "ಅಸ್ತ್ರಂ, ಧನುಃ, ಇಷ್ವಾಸಃ, ಕೋದಂಡಃ . . . ದ್ರುಣಾ – ಈ ೯ ಬಿಲ್ಲು" (ಹಲಾಯು. ೭೬–೩೧೦); "ದ್ರುಣಂ ಕಾರ್ಮುಕಂ ಕೋದಂಡಂ . . . ಚಾಪಮೆನಲು ಬಿಲ್ಲಿಂಗೆ ನಾಮಂ" (ಮಂಗರಾ. ೪೭–೩೨); ಕೋದಂಡಮಂ ಸೆಳೆದು . . . ಮೃತ್ಯುದೇವತೆಗೆ ಬಿದ್ದನಿಕ್ಕುವೆನೆಂದು ವಲ್ಲಭಂ ನುಡಿಯೆ (ಹಚಕಾ. ೬–೨೮); ಅಲಘುಸಾಹಸಿ ರಾಮ ಕೋದಂಡವನು ತುಡುಕಿದನು (ಕೌಶಿರಾ. ೧೯–೨೬); ಸೋದರನ ಕೋದಂಡದಿಂ ಸಿಡಿಲೆಳ್ದ ಸಿಂಜಿನಿಯ ಠಂಕಾರಮಂ ನಿಲಿಸಿ ಸನ್ನೆಗೈಯಿಂದೆ (ಶ್ರೀರಾಮಾ. ೧೫೭–೧೩೦). [ಸಂ.]

**ಕೋದಂಡಕಾಂಡ** (ನಾ). ಬಿಲ್ಲಿನ ದಂಡ,—ಕೋಲು: ಬೞಿಕ ಮಹರಾಜಿತಂ ಕೋದಂಡಕಾಂಡಮಂ ಕೊಳೆ (ಶಾಂತಿಪು. ೪–೩೪ ವ).
[ಕೋದಂಡ₂ + ಕಾಂಡ]

**ಕೋದಂಡಚತುರ್ಭುಜ** (ನಾ). ಒಂದು ಬಿರುದು: ಕೀರ್ತಿ ವಿದ್ಯಾಧರಂ ಕೋದಣ್ಡಚತುರ್ಭುಜಂ ರಾಜೇನ್ದ್ರಚೋಟ ಮದಭಂಜನಂ (ಸೌಇಇ. XX, ೨೧–೯; 1019). [ಕೋದಂಡ₂ + ಚತುರ್ಭುಜ]

**ಕೋದಂಡಪಂಡಿತ** (ನಾ). ಬಿಲ್ಲುವಿದ್ಯೆಯನ್ನು ಚೆನ್ನಾಗಿ ತಿಳಿದವನು; ಧನುರ್ವಿದ್ಯಾಕೋವಿದ: ಸಾರತರ ಕೋದಂಡ ಪಂಡಿತರಾರಯಿಕೆಯಲಿ ತಱುಬಿ ನಿಂದರು (ಕುವ್ಯಾಕ. ೨೧–೨೬).
[ಕೋದಂಡ₂ + ಪಂಡಿತ]

**ಕೋದಂಡಪಾರ್ಥ** (ನಾ). ಬಿಲ್ಲುಗಾರಿಕೆಯಲ್ಲಿ ಅರ್ಜುನನಿಗೆ ಸಮಾನನಾದವನು; ಒಂದು ಬಿರುದು: ವೀರವೃಕೋದರಂ ಕೋದಣ್ಡಪಾರ್ತ್ಥಂ ಸೌಜನ್ಯತೀರ್ತ್ಥಂ (ಸೌಇಇ. XX, ೪೭–೯; 1074).
[ಕೋದಂಡ₂ + ಪಾರ್ಥ]

**ಕೋದಂಡರುದ್ರ** (ನಾ). ಬಿಲ್ಲುಗಾರಿಕೆಯಲ್ಲಿ ಶಿವನಿಗೆ ಸಮಾನನಾದವನು: ಕಡಗಿದರೆ ಕೋದಂಡರುದ್ರನ ತೊಡಕಿ ಬದುಕುವರಾರು (ಕುವ್ಯಾದ್ರೋ. ೧–೫೬). [ಕೋದಂಡ₂ + ರುದ್ರ]

**ಕೋದಂಡವಿದ್ಯಾಧರ** (ನಾ). = ಕೋದಂಡಪಂಡಿತ: ಶ್ರೀ ವೀರನಾರಾಯಣಂ ವಿಸ್ತಾರೋಜ್ಜ್ವಳಕೀರ್ತ್ತಿಸೌರ್ಯನಿಳಯಂ ಕೋದಣ್ಡವಿದ್ಯಾಧರಂ (ಎಕ. VIII, ನಗರ. ೪೮–೪; ಸು. 1060).
[ಕೋದಂಡ + ವಿದ್ಯಾಧರ]

**ಕೋದಂಡಾಗಮ** (ನಾ). ಬಿಲ್ವಿದ್ಯೆ; ಧನುರ್ವಿದ್ಯೆ: ಪೂತು ಕಾರ್ಮುಕಯೋಗಸಿದ್ಧನೆ ಮಝರೆ ಕೋದಂಡಾಗಮ ತ್ರಿಪುರಾರಿಯೆಂದುದು ವಂದಿಸಂದೋಹ (ಕುವ್ಯಾಅ. ೧೫–೨೯).
[ಕೋದಂಡ₂ + ಆಗಮ]

**ಕೋದಂಡಿ** (ನಾ). ಬಿಲ್ಗಾರ; ಧನುರ್ಧರ: ಭೂರಿಕೋದಂಡಿಗಳಿಂ . . . ದಳಂ ಮಂಡಿತಮಂಡಲಾಧಿಪವಿಶಿಷ್ಟರಿನೊಪ್ಪಿತು ರಾಜರಾಜನಾ (ಹಮ್ಮೀರ. ೩–೧೧). [ಸಂ. ಕೋದಂಡಿನ್]

**ಕೋದಾಳೆ** (ನಾ). ಎತ್ತರವಾಗಿ ಬೆಳೆಯುವ ಒಂದು ಬಗೆಯ ಮರ: ಕೋದಾಳೆ (ಸಾತ್ವೀಣ)–ಬಹುಯೆತ್ತರ ನೆಟ್ಟಗೆ ಮೇಲಕ್ಕೆ ಬೆಳೆಯುವುದು (ಕಭಾಗ. ೩೮). [ಕೋ ? + ತಾಳ್₀]

**ಕೋದ್ರವ** (ನಾ). ಒಂದು ಬಗೆಯ ಹುಲ್ಲುಧಾನ್ಯ; ಹಾರಕ; ಬರಗು: "ಉನ್ಮಾಳಮಾ ಕೋದ್ರವಂ ಹಾರಕಂ" (ಮಂಗರಾ. ೧೧೦–೪); ಯಾವನಾಳ ಕಂಗು ಕೋದ್ರವಾದಿ ಸರ್ವೌಷಧಿಗಳುಂ (ಆದಿಪು. ೮–೬೧ ವ);

ಕೋದ್ರವಾಹಾರಮಂ ಸರಾದ ಪಾತ್ರದೊಳಿಕ್ಕಿ ಕುಡೆ (ಚಾವುಂಪು. ೪೦೩–೨೬); ಕೋದ್ರವ (ಹಾರಕ) . . . ರಕ್ತಪಿತ್ತವನ್ನು ನಾಶಮಾಡುವುದು (ಅಷ್ಟಾಂಗ. ೧೧೪). [ಸಂ.]

**ಕೋನ** 'ಕೋಣ್' ನೋ.

**ಕೋನನಿಮಿಷ** (ನಾ). ಒಂದು ಡಿಗ್ರಿಯ ಅರವತ್ತನೆಯ ಒಂದು ಭಾಗ (?): ಏಕೆಂದರೆ ೧ ಡಿಗ್ರಿಗೆ ೬೦ ಕೋನನಿಮಿಷಗಳು (ನಕ್ಷತ್ರ. ೩೮). [ಕೋನ (< ಕೋಣ್) + ನಿಮಿಷ]

**ಕೋನಬ್ಬ** (ನಾ). ಒಂದು ಪಂಗಡದ ಹೆಸರು: ಸಾಕ್ಷಿ ಕೂಡಲೂರ್ ಪೊಜ್ಜುಂಗಲರು ಎಲ್ಕಡಿಯರು ಬದಿರಿಯರುಮ್ ಮದುಗರುಮ್ ಕೋನಬ್ಬರುಮ್ ಸಾಕ್ಷಿ (ಮೈಆರಿ. ೧೯೧೬, ೩೭–೧೦; 726). [ಕೋನ (< ಕೋಣ್) + ಅಬ್ಬ₂]

**ಕೋನಮಾನ** (ನಾ). [ಗಣಿತ] "ಕೋನಾಂಶ (ಸಮಕೋನದ ೯೦ನೆಯ ಭಾಗ); ವರ್ತುಲ ರೇಖಾಖಂಡದ ಮಾನ (ವೃತ್ತ ಪರಿಧಿಯ ೩೬೦ನೆಯ ಭಾಗ)" (Degree. ಇಂಕನಿ). [ಕೋನ (< ಕೋಣ್) + ಮಾನ]

**ಕೋನಶಿಲೆ** (ನಾ). ಅಸ್ತಿಭಾರದ ಶಿಲೆ; ಅಡಿಗಲ್ಲು: ನಿನ್ನ ಧರ್ಮಾಸನವದಾವ ಧೈರ್ಯ ಕೋನಶಿಲೆಯದನಾಗಿಸಲಿ ನನ್ನ ಬಾಳು (ಚಿಂತನ. ೬೬); ಅಂಧೇರಿಯ ಶಾಲೆಯ ಕೋನಶಿಲೆಯನ್ನು ಸ್ಥಾಪಿಸಲು ಶ್ರೀ ನೆಹರೂರನ್ನು ಕರೆಯುವುದೆಂದಾಯಿತು (ಥೇಮ್ಸ್‌ಗಂ. ೧೩೨). [ಕೋನ (< ಕೋಣ್) + ಶಿಲೆ]

**ಕೋನಾಂತರ** (ನಾ). ಕೋನಗಳ ಅಂತರ, —ದೂರ: ಒಂದೊಂದು ಭಾಗವೂ ಒಂದು ಡಿಗ್ರಿಯ ಕೋನಾಂತರವನ್ನು ಸೂಚಿಸುತ್ತದೆ (ನಕ್ಷತ್ರ. ೧೫). [ಕೋನ (< ಕೋಣ್) + ಅಂತರ]

**ಕೋನಾಂಶ** (ನಾ). = ಕೋನಮಾನ. [ಕೋನ (< ಕೋಣ್) + ಅಂಶ]

**ಕೋನಾಶಿ** (ನಾ). ಒಂದು ಬಗೆಯ ಕ್ಷುದ್ರ ದೇವತೆ: ಚೌಡರಿಗಳು :- ಇವರು ಕುಂಬಳ ಪೈಕ . . . ಕೋನಾಶಿ . . . ದೇವತೆಗಳಿಗೆ ನಡಕೊಳ್ಳುತ್ತಾರೆ (ಕಭಾಗೆ. ೧೮೧). [?]

**ಕೋನಿ** 'ಕೋಣ್' ನೋ.

**ಕೋನುಗೋಲು** (ನಾ). [ಸಂಗೀತ] ತಾಳಕ್ಕೆ ಅನುಗುಣವಾಗಿ ಜತಿ ಅಥವಾ ಸ್ವರ ಭಾರದಿಂದ ಕೂಡಿದ ವರ್ಣಗಳನ್ನು ಹೇಳುವ ಒಂದು ವಿಧವಾದ ಕಲೆ: ಅವರ ಕೋನುಗೋಲ ಕಚೇರಿಗಳಲ್ಲಿ ಬರುತ್ತಿದ್ದ ದಿಗ್ಭ್ರಮೆ ಹಿಡಿಸುವಂತಹ ಪ್ರಸಾರಗಳನ್ನೆಲ್ಲ ಸುಲಭವಾಗಿ ಅನಾಯಾಸವಾಗಿ ಅಪ್ಪಾ ಅವರು ಮೃದಂಗದಲ್ಲಿ ನುಡಿಸುತ್ತಿದ್ದರು (ಸಂಗೀತ. ೧೧೩). 'ಕೊನೆಗೋಲು' ಪರಾ. [← ತಮಿ. ಕೋನುಗೋಲ್ ?]

**ಕೋನೇರಿ, ಕೋನೇರು** (ನಾ). ೧. ನಾಲ್ಕು ಕಡೆಯೂ ಮೆಟ್ಟಿಲಿರುವ ಕೆರೆ ಅಥವಾ ಕೊಳ; ಕಲ್ಯಾಣಿ: (೬). ೨. ಒಂದು ತೀರ್ಥಕ್ಷೇತ್ರ: ಅಂಗಜನಯ್ಯ ಕೋನೇರಿ ತಿಮ್ಮ ರಂಗಬಾರೋ (ವಾದಿಕೀ. ೧–೬೫–೧). **ಕೋನೇರು** : (೬). [ಕೋನ (< ಕೋಣ್) + ಏರಿ₁]

**ಕೋನೇರು** 'ಕೋನೇರಿ' ನೋ.

**ಕೋನೇಱಿಲ್** (ನಾ). ಒಂದು ಗ್ರಾಮದ ಹೆಸರು: ತಗರೆನಾಡ ಕೋನೇಱಿಲಂ ಬಲ್ಲಾಳದೇವಂ ಸರ್ವ್ವನಮಸ್ಯಂ ಧಾರಾಪೂರ್ವ್ವಕಂ ಬಿಟ್ಟ (ಮೈಆರಿ. ೧೯೩೪, ೧–೪೨; 1174). [ಕೋನ (< ಕೋಣ್) + ಏಱಿಲ್ ?]

**ಕೋಪ** (ನಾ). ೧. ಸಿಟ್ಟು; ಮುನಿಸು; ರೋಷ: "ಕೋಪಃ, ಕ್ರೋಧಃ, ಅಮರ್ಷಃ, ರೋಷಃ, ಪ್ರತಿಘಃ – ಈ ೫ ಮುನಿಸು" (ಹಲಾಯು. ೫೯–೨೦೭); "ಮುನಿಸು ಸೆಣಸೂರಸೂರಸು ಕಾಯ್ಪು ಕೋಪಂ ಮುಳಿಸು ಕಿನಿಸು ಕಿಸುಗಣ್ಣನೆ ಕನಲ್ಕೆ ಪೆಸರಕ್ಕುಂ" (ಕಬ್ಬಿಕೈ. ೪೨); ಕಣ್ಣನೀರ್ಗಳ ಪೊನಲಿಂದೆ ಕರ್ಚಿ ಕಳೆದಂತಿರೆ ಪೋದುದು ಕೋಪಮೋಪನಾ (ಆದಿಪು. ೧೨–೧೩); ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು (ಮಹಾದೇ.-೧೩೪); ಕೋಪ ತನ್ನನು ಸುಡುವುದು (ಅಮೃತ. ೨–೬೫); ರಾಯರಿಗೆ ಕೋಪ ಎನ್ನುವುದೇ ತಿಳಿಯದು (ರಾಯಕ. ೯೯); ಕೋಪ ಬಂದಾಗ ನೂರೊಂದೆಣಿಸು (ಗಾದೆ). ೨. [ಕಾವ್ಯಮೀ] ಸ್ಥಾಯೀ ಭಾವಗಳಲ್ಲಿ ಒಂದು: ಬಳಿಕ ರತಿ ಹಾಸ ಶೋಕ ಕೋಪ ಉತ್ಸಾಹ ಭಯ ಜುಗುಪ್ಸೆ ವಿಸ್ಮಯಂ ಶಮವೆಂಬ ಕ್ರಮದಿಂ ಶೃಂಗಾರಾದಿ ನವರಸಂಗಳಿಗೆ ಬೀಜ ಭೂತಂಗಳಾದ ಸ್ಥಾಯಿಭಾವಂಗಳು (ವಿವೇಕ. ೨೨೭). [ಸಂ.]

**ಕೋಪಂಗಾ** (ಕ್ರಿ). ಕೋಪವನ್ನು ತಡೆಹಿಡಿದುಕೊಳ್ಳು; ಸಿಟ್ಟು ಮಾಡದಿರು: ಕೋಪಂಗಾದು ಕಲ್ತಡಗಲಾರ್ಪನ ಸಮಯಮುನ್ ಅಜನಿದಿನೋರ್ಟ್ಪುದು ದಾರಿಯೊಳ್ನುಸಿದು (ಕುಜಲ್. ೧–೧೩–೧೦). [ಕೋಪ + ಕಾ₁]

**ಕೋಪಗರ್ಭ** (ಗು). ಕೋಪವನ್ನು ಒಳಗೆ ಇಟ್ಟುಕೊಂಡ: ಬಾಹುಬಲಿಕುಮಾರಂ . . . ಕೋಪಗರ್ಭಸ್ಮಿತಂಬೆರಸು (ಆದಿಪು. ೧೪–೬೩ ವ). [ಕೋಪ + ಗರ್ಭ]

**ಕೋಪಗಾತಿ** (ನಾ). ಕೋಪಗೊಳ್ಳುವ ಅಥವಾ ರೇಗುವ ಸ್ವಭಾವದವಳು; ಕೋಪಿಷ್ಠೆ: "ಕೋಪನಾ, ಭಾಮಿನೀ – ಕೋಪವುಳ್ಳ ಸ್ತ್ರೀಯರ ಹೆಸರುಗಳು, ಕೋಪಗಾತಿ" (ಸಿದ್ಧಾಂತಿ. ೧೪೬). [ಕೋಪ + -ಕಾತಿ₅]

**ಕೋಪಗಾರ** (ನಾ). ಕೋಪಗೊಳ್ಳುವ ಅಥವಾ ರೇಗುವ ಸ್ವಭಾವದವನು; ಕೋಪಿಷ್ಠ: ಅವನು ದುರ್ವಾಸನಂತೆ ಭಲೇ ಕೋಪಗಾರ (ರೂಢಿ). [ಕೋಪ + - ಗಾರ₁ (< -ಕಾಱ)]

**ಕೋಪಗೃಹ** (ನಾ). (ರಾಣಿವಾಸದಲ್ಲಿ) ಕೋಪಗೊಂಡವರು ತಮ್ಮ ಸಿಟ್ಟನ್ನು ಸೂಚಿಸಲು ಮೌನವಾಗಿ ಮಲಗಿಕೊಳ್ಳುತ್ತಿದ್ದ ಗೃಹ, —ಕೋಣೆ: ಬೆಳಗಾಗುತ್ತಲೆ ಸರ್ವಸ್ವದ ಘಾತವಾಗುವುದರಿಂದ ಈ ದಿನ ರಾತ್ರಿಯಲ್ಲಿಯೇ ನೀವು ಕೋಪಗೃಹವನ್ನು . . . ಪ್ರವೇಶಿಸಿ ಕಾರ್ಯವನ್ನು ಸಾಧಿಸಿಕೊಳ್ಳತಕ್ಕದ್ದು (ತುಳಸಿ. ೧೧೧). [ಕೋಪ + ಗೃಹ]

**ಕೋಪಜ** (ಗು). ಕೋಪದಿಂದ ಹುಟ್ಟಿದ, —ಉಂಟಾದ. [ಸಂ.]

**ಕೋಪದಾಳು** (ಕ್ರಿ). ಕೋಪವನ್ನು ಹೊಂದು; ಸಿಟ್ಟುಗೊಳ್ಳು: ಕಿಂಕರವೃತ್ತಿಯಿಂದೆ ಬಿನ್ನೈಸಲಾ ಖಳರಾಯ ಕೇಳಿಯತಿಕೋಪದಾಳಿ (ನವಮೋ. ೧೨–೬೦). [ಕೋಪ + ತಾಳು₁ (< ತಾಳ್₁)]

**ಕೋಪನ** (ಗು). ೧. ಕೋಪಮಾಡುವ; ಸಿಟ್ಟಿನ ಸ್ವಭಾವದ: ಕೋಪನ ಪ್ರತಿಪಕ್ಷಕುಲನಿರ್ವಾಪಣೈಕ ಸಮರ್ಥ ಎನುತಭಿರೂಪನನು ಹೊಗಳಿದರು ವಂದಿಗಳು (ಕುವ್ಯಾಗ. ೭–೨೯). ೨. ರೇಗಿಸುವ; ಸಿಟ್ಟನ್ನುಂಟುಮಾಡುವ. ೩. ಉದ್ರೇಕಗೊಳಿಸುವ; ಕೆರಳಿಸುವ. 'ಪಿತ್ತಕೋಪನ' ಪರಾ. ೪. (ನಾ). ಸಿಟ್ಟಿನಿಂದ ಕೂಡಿದವನು; ಕೋಪಿಷ್ಠ: "ಕೋಪನಃ, ಕ್ರೋಧನಃ, ಕ್ರೋಧೀ, ರೋಷಣಃ, ಅಮರ್ಷಣಃ – ಈ ೫ ಮುನಿವವಂ" (ಹಲಾಯು. ೫೯–೨೦೬); ಭೌಮಗೇಹಾಂಶಮಾ ಕ್ರಮದೊಳ್ ಕೂಡಿರೆ ಕಾಂತೆಗಾದ ಪುರುಷಂ ಸ್ತ್ರೀಲೋಲುಪಂ ಕೋಪನಂ (ಜಾತಕ. ೨೨–೧೭). [ಸಂ.]

**ಕೋಪನಾಳಿ** (ನಾ). ಕೋಪಗಾತಿಯರ ಗುಂಪು, —ಸಮೂಹ: ರೂಪಯೌವನ ವಿಭ್ರಮಾದಿ ಗುಣಂಗಳೆಲ್ಲಂ . . . ವೈಪರೀತ್ಯಮದಾಗಿ ಭಿನ್ನಮನೆಯ್ದಲಂತದು ಲೋಕದೊಳ್ ಕೋಪನಾಳಿಗೆ ವೈಕೃತಂಗಳೆನಿಕ್ಕುಮಂಬುಜಲೋಚನೇ (ಅನುಮು. ೬೭).
[ಸಂ. (ಕೋಪನಾ + ಆಳಿ₄ (= ಆಲಿ₄)]

**ಕೋಪನಿರ್ಭರ** (ನಾ). ಕೋಪದ ಅತಿಶಯ; ಸಿಟ್ಟಿನ ಹೆಚ್ಚಳ: ಆ ಬೆಚ್ಚನೆ ಪಾಯ್ವ ಸುಯ್ಗಳೊದವಾ ಕಣ್ಣೀರ್ಗಳಾ ಕೋಪನಿರ್ಭರವಾ ಕೆತ್ತುವ ಪಲ್ಲವಾಧರಮದೇಂ ಮಚ್ಚಿತ್ತದೊಳ್ನಿಂದುದೋ (ರಾಜಶೇ. ೧೧-೧೩೨). [ಕೋಪ + ನಿರ್ಭರ]

**ಕೋಪಪಾಟಳ** (ಗು). ಕೋಪದಿಂದ ಕೆಂಪಾದ; ಸಿಟ್ಟಿನಿಂದ ಕೆಂಪಾದ: ಅಧಿಕ ಕೋಪಪಾಟಳ ಪರುಷೇಕ್ಷಣರೆನಿಸಿ ದೃಷ್ಟಿಯುದ್ಧಂಗೆಯ್ದರ್ (ಗದಾಯು. ೮-೨). [ಕೋಪ + ಪಾಟಳ (= ಪಾಟಲ)]

**ಕೋಪರಸ** (ನಾ). ರೌದ್ರರಸ: ಪೆರ್ಚಿದ ಶೋಕರಸಮಂ ಕೋಪರಸದ ಮೇಲಿಕ್ಕಿ (ಪಂಪಭಾ. ೧೩-೩೧ ವ). [ಕೋಪ + ರಸ]

**ಕೋಪವಂತ** (ನಾ). ಕೋಪವುಳ್ಳವನು; ಸಿಡುಕ: ಕೋಪವಂತನೂ ಆತುರಸ್ವಭಾವದವನೂ ಆದ ಆ ವೃದ್ಧನು (ಕವಿಕ. ೨೪).
[ಕೋಪ + -ವಂತ]

**ಕೋಪವದನ** (ನಾ). ೧. ಕೋಪದ ಮುಖ; ಸಿಟ್ಟಿನಿಂದ ಕೂಡಿದ ಮುಖ. ೨. ಕೋಪದ ಮುಖವುಳ್ಳವನು; ಸಿಟ್ಟನ್ನು ತೋರಿಸುವ ಮುಖವುಳ್ಳವನು: ಏನು ಮಾಡುವುದೆಂದು ತಿಳಿಯದೆ ಅವನದನ್ನು ಮಡಿಸುತ್ತ ಮುದುರುತ್ತ ಕೋಪವದನನಾಗಿ ನಿಂತಿದ್ದನು (ಪುನರು. ೨೩೭).
[ಕೋಪ + ವದನ]

**ಕೋಪವಿಕಾರ** (ನಾ). ಕೋಪದ ವಿಕಾರ; ಕೋಪೋದ್ರೇಕ: ಒರೆವೆನಿನ್ನೂ ಕೋಪವಿಕಾರಮಂ ಕಿಸುರದೆಂದು (ಕಬ್ಬಕೈ. ೫೧).
[ಕೋಪ + ವಿಕಾರ]

**ಕೋಪಸ್ತಂಭ** (ನಾ). ಕೋಪ ಶಮನ; ಸಿಟ್ಟನ್ನು ಇಳಿಸುವಿಕೆ: ಧರಣಿಸುರರಲಿ ಸುಪ್ರಧಾನರುವೆರಸಿ ಬಂದಗ್ನಿಯ ಪದತ್ರಯಕೆಜಗಿ ಕೋಪಸ್ತಂಭವನು ಮಾಡಿದರು ದೈನ್ಯದಲಿ (ಕುವ್ಯಾಸ. ೫-೧೫).
[ಕೋಪ + ಸ್ತಂಭ]

**ಕೋಪಸ್ಫುರಣ** (ನಾ). = ಕೋಪೋದ್ರೇಕ: ಕುರುಕುಲಾನ್ವಯಜನನಿ ಕೋಪಸ್ಫುರಣದಲಿ ಶಪಿಸೆನಗೆ (ಕುವ್ಯಾಗ. ೧೧-೬೪). [ಕೋಪ + ಸ್ಫುರಣ]

**ಕೋಪಾಗಾರ** (ನಾ). = ಕೋಪಗೃಹ: ಆ ಸುಭಗರೂಪೆ ಕೋಪಾಗಾರಮಂ ಪೊಕ್ಕಿರ್ದುದಂ ಕಂಡು ತತ್ಸಮೀಪಕ್ಕೆ ಬರಲಂಜಿ (ಜಗವಿ. ೧೨-೮೦ ವ); ತೊಡವುಗಳನೆಲ್ಲಮಂ ಪರಿದಿಟ್ಟು ಕಚ್ಚರದ ಉಡಿಗೆಯನ್ನುಟ್ಟು . . . ಕೋಪಾಗಾರಮಂ ತಡೆಯದೊಳಪೊಕ್ಕು (ವೆಂಕಾರಾ. ೨-೫-೨೯). [ಕೋಪ + ಆಗಾರ]

**ಕೋಪಾಟೋಪ** (ನಾ). ಕೋಪದ ಆಡಂಬರ; ಸಿಟ್ಟಿನ ಹೆಚ್ಚಳ; ರೌದ್ರಾವೇಶ: ನಳಿನಸಖನಂಜಿದನು ಕೋಪಾಟೋಪಕಭ್ರದಲಿ (ಕುವ್ಯಾಭೀ. ೪-೮೫); ಪಟು ಕೋಪಾಟೋಪ ಬದ್ಧಭ್ರುಕುಟಿ ವಿಚಲಿತ ಶ್ಮಶ್ರು (ರಾಜಶೇ. ೩-೮೯). [ಕೋಪ + ಆಟೋಪ]

**ಕೋಪಾರಕ್ತ** (ಗು). ಕೋಪದಿಂದ ಕೆಂಪಾದ; ಕಡುಗೆಂಪಾದ: ಕೋಪಾರಕ್ತನೇತ್ರಂ ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ (ಗದಾಯು. ೭-೩೦). [ಕೋಪ + ಆರಕ್ತ]

**ಕೋಪಾರುಣ** (ಗು). = ಕೋಪಾರಕ್ತ: ನಿರ್ಜಿತ ಕಂಠೀರವರವಮಂ ನಿರಸ್ತಘನರವಮಂ ಕೋಪಾರುಣನೇತ್ರಂ ಕೇಳ್ದಾ ನೀರೊಳಗಿರ್ದುಂ ಬೆಮರ್ತನುರಗಪತಾಕಂ (ಗದಾಯು. ೭-೨೨). [ಕೋಪ + ಅರುಣ]

**ಕೋಪಾಲೋಕಿ** (ನಾ). ಕೋಪದಿಂದ ಕೂಡಿದ ನೋಟವುಳ್ಳವನು; ರೋಷದೃಷ್ಟಿಯುಳ್ಳವನು: ಅಖಿಳ ಲೋಕದ ಜನಾವಳಿ ಮೊಱೆಯಿಡುತ್ತಿರಲು ಸಕಲಗಣ ದೇವತತಿ ಸಹಿತ ದಂಡೆತ್ತಿ ಪೋದಂ ವರಪಿನಾಕಿ ಕೋಪಾಲೋಕಿ ವೇತಾಳತತಿಯನೀಕಿ (ವೀಕ್ಷೈಪು. ೩-೧೮-೨೮).
[ಸಂ. ಕೋಪಾಲೋಕಿನ್]

**ಕೋಪಾವಲೇಪ** (ನಾ). = ಕೋಪೋದ್ರೇಕ: ಅದಂ ಕಂಡತಿಪ್ರವೃದ್ಧ ಕೋಪಾವಲೇಪಂ ಪೃಥ್ವೀಪಾಲಭೂಪಾಲಂ (ಚಂದ್ರಪ್ರ. ೧೦-೯೩ ವ).
[ಕೋಪ + ಅವಲೇಪ]

**ಕೋಪಿ** (ನಾ). ಕೋಪಗೊಂಡವನು; ಸಿಟ್ಟಿಗೆದ್ದವನು: "ಲಂಡತೀತಿ – ಕಿನಿಸಿದಪನೆಂಬುದು; ಲಂಡಃ–ಕೋಪಿ" (ಕಾಶಕ್ಯ. ೨೫); ಕೋಪಿ ಮಜ್ಜನಕ್ಕೆಱೆದರೆ ರಕ್ತದ ಧಾರೆ (ಬಸವ. ೬೫೧); ಕೋಪಿಗಜ್ಞಾನಾಯತಂಗುಪಜೀವಕಂಗತಿಕುಟಿಲನಾದಂಗೆ . . . ಭಕ್ತಿವಿಧೇಯನಪ್ಪನೆ (ಬಸಪು. ೬೧-೧೫). [ಸಂ. ಕೋಪಿನ್]

**ಕೋಪಿಗ** (ನಾ). = ಕೋಪಿ: ಬಾಹಿರಮಾಡಬಾರದು ಕರಸೆಂದನು ಮಾಹಾತ್ಮ್ಯನಲ್ಲ ಕೋಪಿಗನು (ಭರಚ. ೩೫-೧೭). [ಕೋಪ + – ಇಗ]

**ಕೋಪಿನಿ** (ನಾ). ಕೋಪದ ಸ್ವಭಾವವುಳ್ಳವಳು; ಕೋಪಿಷ್ಠೆ: "ಲಂಡತೀತಿ ಕಿನಿಸಿದಪನೆಂಬುದು . . . ಲಂಡಾ – ಕೋಪಿನಿ" (ಕಾಶಕ್ಯ. ೨೫). [ಸಂ. ಕೋಪಿನೀ]

**ಕೋಪಿಷ್ಠ** (ನಾ). = ಕೋಪಿಗ. [ಸಂ.]

**ಕೋಪಿಷ್ಠೆ** (ನಾ). = ಕೋಪಿನಿ: ಅವಳ ಅತ್ತೆ ಮಹಾ ಕೋಪಿಷ್ಠೆ (ರೂಢಿ).
[ಸಂ. ಕೋಪಿಷ್ಠಾ]

**ಕೋಪಿಸು** (ಕ್ರಿ). ರೇಗು; ಸಿಟ್ಟಿಗೇಳು: ಪರಮಾರ್ಥಮಪ್ಪುದಂ ಮಚ್ಚರಿಸದೆ ಕೋಪಿಸದೆ ದಂಗೆಗೊಳ್ಳದೆ . . . ಕೇಳ್ವವನೆ ಧರ್ಮದೊಳಗಂ ತಿಳಿಗುಂ (ಧರ್ಮಾಮೃ. ೧-೧೮೧); ಕಾಮಿಪ್ಪ ಕೋಪಿಪ್ಪ ಲೋಭಿಪ್ಪತ್ಯಂತಂ ಗರ್ವಿಪೆನ್ನೀ ಮನಕೆ (ರಕ್ಷಾಶ. ೧೩); ಸಾರಿ ಕೈಗೊಡುವದಟರನು ಕಡ್ಡೋರೆಯಲಿ ಕೋಪಿಸುತ ತನ್ನಯ ತೇರನಿಳಿದನು ಪಾರ್ಥ (ಕುವ್ಯಾದ್ರೋ. ೮-೧೨). [ಕೋಪ + –ಇಸು₃]

**ಕೋಪು₁** (ನಾ). ೧. [ನಾಟ್ಯ] ಅಭಿನಯದಿಂದ ಕೂಡಿದ್ದು; ಭಾವಾಭಿನಯ: "ಭಸ್ತ್ರೀಸದೃಷ್ಟಿ ಚೌಪಕ್ಷಿ ಹಸ್ತಂಗಳಂ ಚಿತ್ರಿಸುವುದು ಕೋಪೆನಿಕ್ಕು" (ಮಂಗರಾ. ೨೫-೯); ರೂಪು ಚೆನ್ನಿವರ ಸಿಂಗರ ಚೆನ್ನ ಮೇಳ ಚೆನ್ನೀ ಪೆಣ್ಗಳೊಲಿದಾಡಿಕೊಂಬ ಕೋಪು ಚಿಂದುಗಳು ಮುಂತಾದುವು ಚೆನ್ನು ನೀನೇ ಪರಿಕಿಸಬೇಕು ರಾಯ (ಭರಚ. ೧೨-೯೮); ಗರುಪಿಕೆಯ ಗಮಕದಿಂ ಪಾದಚಾರಿಗಳ ಲಘು ಚರಣವಿನ್ಯಾಸದಿಂದೆಸೆವ ಕೋಪು ಕಳಾಸ ತಿರುಪುಗಳ ಬೆಡಗು ಬಿನ್ನಣದೆ ನಗಜಾಧವಂ ತೋಱಿದಂ ತಾಂಡವವನು (ಚಬಪು. ೫೦-೫೩); ತರುಣಿಯರತಿ ಹರುಷದಲಿ ಪರಿಪರಿ ಕೋಪು ಕಳಾಸಿಕೆಗಳ ತೋಱಿ ಭರದಲಿ ನಟಿಸಿದರಾಗ (ಕಂನವಿ. ೮-೩೨); ೨. ಓರಣ; ಕ್ರಮ: ನಿಂದರೊಬ್ಬೊಬ್ಬರು ಸಹಸ್ರಕೆ ಒಂದು ಕೋಪಿನಲಿ (ಶರಲೀ. ೫೫೨-೬). ೩. ಸೈನ್ಯದ ಒಡ್ಡು; ವ್ಯೂಹ: ಕೋಡಗವಾಯದಲಿ ನಡೆತಂದು ಕೋಪಿನ ನಾಯಕರ ಕದನದಲಿ ಕೆಡಹಿತು (ಮೈರಾಕಾ. ೪-೨೯).
[ದೇ. ‖ ತಮಿ. ಮಲ. ಕೋಪ್ಪು; ತೆಲು. ಕೋಪು]

**ಕೋಪು₂** (ನಾ). ಒಂದು ಬಗೆಯ ಬೇಟೆ: ಸೋಪಿನ ತೋಪಿನ ಪಳಹದ ಕೋಪಿನ ಪಾಳಿವದ ಗೋರಿವೇಂಟೆಗೆ ಮತ್ತಂ ಚಾಪಪ್ರವೀಣರುದ್ಧತ ಕೋಪರ್ ನಡೆತಂದರಲ್ಲಿ ಮುಂದೆ ಪುಳಿಂದರ್ (ಸೂಕ್ತಿಸು. ೩-೧೦೪). [?]

**ಕೋಪು₃** 'ಕೊಪ್ಪು₁' ನೋ.

**ಕೋಪು₄** 'ಕೌಪ' ನೋ.

**ಕೋಪುಗೊಳ್** (ಕ್ರಿ). ಭಾವಾಭಿನಯದಿಂದ ಕೂಡಿರು: ಕೋಪು ಗೊಂಡು ಕುಣಿತರ್ಪಿ ಕೋರೆನೋಟಂಗಳಂ ಬಸಗೆಯ್ದೊಲ್ವೆನೊ (ಚಿಕದ. ೬-೨೪೬). [ಕೋಪು$_1$ + ಕೊಳ್$_1$]

**ಕೋಪೋದ್ರೇಕ** (ನಾ). ಕೋಪದ ಉದ್ರೇಕ; ಸಿಟ್ಟಿನ ಕೆರಳಿಕೆ: ಸ್ತ್ರೈಣದಿಂ ಪೆರ್ಚಿದ ಕೋಪೋದ್ರೇಕನುನಾಜಲೀಯದೆಯುಂ (ಶಾಂತಿಪು. ೫-೯೯ ವ). [ಕೋಪ + ಉದ್ರೇಕ]

**ಕೋಬಿ** (ನಾ). ಒಂದು ಬಗೆಯ ತರಕಾರಿ; ಕೋಸು: ನಮ್ಮ ಆಹಾರಗಳಲ್ಲಿ ಉಳ್ಳಗಡ್ಡೆ, ಕೋಬೀಗಡ್ಡೆ, ಒಣಗಿದ ಹಣ್ಣುಗಳು (ಮುಂಬಯಿ. ೬-೩೧೪).
[← ಮರಾ. ಕೋಬೀ < ಇಂ. Cabbage; ಪೋರ್ಚು. ಕೋಲುವೆ]

**ಕೋಬೆ** (ನಾ). ಗೂಡು (?): ದೇಹ ರೋಗದ ಕೋಬೆಯಾಗಿದ್ದರೂ ಸರಿಯೆ ಸೌಷ್ಠವ ಶರೀರದ ಮತ್ತೊಂದು ಹೆಣ್ಣು ಕಣ್ಣಿಗೆ ಬಿದ್ದೊಡನೆಯೆ ಚಾಪಲ್ಯ ತಲೆಯೆತ್ತುತ್ತದೆ (ನಂಜುಂಡ. ೧೧೩). [< ಕೋವೆ]

**ಕೋಮಟಿ**, ಕೊಮಟಿ, ಕೋವಟಿ (ನಾ). ೧. (ವ್ಯಾಪಾರವೇ ಮುಖ್ಯ ಕಸುಬಾಗಿವುಳ್ಳ) ಒಂದು ಜನಾಂಗ; ಆ ಜನಾಂಗಕ್ಕೆ ಸೇರಿದವನು; ವೈಶ್ಯ; ಸೆಟ್ಟಿ: ಕೋಮಟಿಯನುಪುತದಿ ಮರುಳಾಗಿ ಶಿವನಂಂ ತನಯನಂ ಕ್ರಾಮಿಸಿ ಕೊಲಿಸಿದನು (ಬಸವು. ೨೫-೨೩); ಕೋಮಟಿ ಮೋಸಹೋಗುವುದಿಲ್ಲ, ಮೋಸ ಹೋದರೆ ಹೇಳುವುದಿಲ್ಲ (ರೂಢಿ). ೨. (ಆಲಂ) ಜಿಪುಣ; ಲೋಭಿ: ಕೋಮಟಿ ಕೊಡ, ಜೀನ ಬಿಡ (ರೂಢಿ). ೩. (ಆಲಂ) ಮೋಸಗಾರ; ವಂಚಕ: ಕೋಟಿ ವರಹ ಕೊಟ್ಟರೂ ಕೋಮಟಿ ಸಾಕ್ಷಿ ನಂಬಕೂಡದು (ರೂಢಿ). **ಕೊಮಟಿ.** 'ಕೊಮಟಿಗ' ಪರಾ. **ಕೋವಟಿ.** 'ಕೋವಟಿಗ' ಪರಾ.
[ದೇ. ‖ ತಮಿ. ಮಲ. ಕೋಮಟ್ಟಿ; ತೆಲು. ಕೋಮಟಿ]

**ಕೋಮಟಿಗ**, ಕೊಮಟಿಗ, ಕೋವಟಿಗ (ನಾ). ೧. = ಕೋಮಟಿ೧: ಬೇಲೂರ ಕೋಮಟಿಗ ಮುಂನಾರಿಸಿದನ ಸೇವಾರ್ಥ (ಎಕ. XV, ಬೇಲೂರು. ೨೭೮-೨; 1219); ಒತ್ತಿ ತಿವಿಯಲು ಕೋಮಟಿಗನಂ (ಬಸವು. ೫೦-೩೦); ಸಿರಿವಂತ ಕೋಮಟಿಗ ಮಲ್ಲಿಶೆಟ್ಟಿಯುವೆಂಬ ಹರದಂಗೆ (ಗುರುಚಾ. ೮-೪೨); ಕೋಮಟಿಗನಾ ಕಪಿಲನಂ ಪಿಡಿದು ಭೂವರಂಗೆ ವೈರವೆರಸೀಯಲ್ (ಕೊಟ್ಟೂರು. ೯-೯೩); ಈತನಿಗೂ ಆ ಪಟ್ಟಣದ ಲಿಂಗಸೆಟ್ಟಿಯೆಂಬ ಒಬ್ಬ ಕೋಮಟಿಗನಿಗೂ ಗೆಳೆತನ ಬಿತ್ತು (ಮುಂಬಯಿ. ೩-೩೩). ೨. ಜಿಪುಣ; ಲೋಭಿ: ಬೇಡಿದುದನು ಕೊಟ್ಟಪೆ ವೆಂದು ಸೇವೆಯ ಮಾಡಿಕೊಂಡು ಭಟರನು ಖೋಡಿಗಳೆವ ಕೋಮಟಿಗ ದೊರೆಗಳ ಬಿಟ್ಟು ಕೂಡಿತು ವೀರರಾಮನಿಗೆ (ಕುರಾಸಾಂ. ೯-೧೩). **ಕೊಮಟಿಗ**: ೧. ನಗರ್ತರು ಕೊಮಟಿಗರು ಕಂಚಗಾಜರು ಗಾಣಿಗರು ... ಮೊದಲಾದ ನಾನಾ ಜಾತಿ (ಸೌಗಂಧಿ. ೧೩೫-೬). **ಕೋವಟಿಗ**: ೧. ಅನಘಸೀತನ ಮಹಿಮೆಯಂ ನೋಡವೇಳ್ಕೆಂದು ವಿನಯದಿಂ ಕೋವಟಿಗನಾಲಯಕೆ ಬಸವೇಶನೊಡಗೊಂಡು ನಡೆತಂದನು (ಗುರುಚಾ. ೮-೫೧). [ಕೋಮಟಿ + -ಗ$_3$]

**ಕೋಮಟಿಗಿತ್ತಿ** (ನಾ). ಕೋಮಟಿಗನ ಹೆಂಗಸು; ವೈಶ್ಯಸ್ತ್ರೀ: (ಕ).
[ಕೋಮಟಿಗ + -ಇತ್ತಿ]

**ಕೋಮಟಿತನ** (ನಾ). ೧. ಕೋಮಟಿಯ ವೃತ್ತಿ; ವ್ಯಾಪಾರ. ೨. (ಆಲಂ) ಲೋಭ; ಜಿಪುಣತನ: (ಕ). [ಕೋಮಟಿ + -ತನ]

**ಕೋಮಣ** 'ಕೋವಣ' ನೋ.

**ಕೋಮನ್** (ನಾ). ಒಬ್ಬಾತನ ಹೆಸರು: ಆ ಪದಿವಚ್ಚರಿಡೆ ಆ ಕೋಮನಗಲೆ ಇವಂಗೆ ಕಲ್ನಾಟು ಕೊಟ್ಟದು ಪನ್ನೆರಡು ಕಟಿನಿ (ಮೈಆರಿ. ೧೯೨೭, ೮೫-೩; ?). [← ತಮಿ. ಮಲ. ಕೋಮನ್]

**ಕೋಮರಂಚಿ** (ನಾ). ಒಂದು ಊರಿನ ಹೆಸರು: ತಸ್ಮಾದ್ದಕ್ಷಿಣಾಭಿ ಮುಖಂ ಗತ್ವಾ ಕೋಮರಂಚಿಗ್ರಾಮಸೀಮ (ಇಆ. VII, ೨೧೩-೩೩; 10ನೆಯ ಶತ). [?]

**ಕೋಮರೆ** (ನಾ). ಕಿರುಮನೆ; ಕೊಠಡಿ; ಕೋಣೆ: ಚಂನವೀರನ ಪುಟ್ಟಿನ ಸಹ ಅವರು ಮಲಗುವ ಕೋಮರೆಗೆ ಕರೆದು ಹೇಳಿದ ಮಾತು (ರಾಜೇಂದ್ರ. ೧೪೮). [← ಕೊಡ. ಕೋಂಬರೆ?]

**ಕೋಮಲ**, ಕೋಮಳ (ಗು). ೧. ಮೃದುವಾದ; ಮೆತ್ತಗಿರುವ. ೨. ಸುಂದರವಾದ; ರಮಣೀಯವಾದ. 'ಕೋಮಲಕಾಯ' ಪರಾ. ೩. ಇಂಪಾದ; ಮಧುರವಾದ. 'ಕೋಮಳಾಳಾಪ' ಪರಾ. (ನಾ). ೪. ನೀರು; ಜಲ: "ಮೇಘಕುಸುಮಮುದಕಂ ಶರಂ ಶಂಬರಂ ಕೋಮಲಂ ವಾರ್ ಕಂ ಪ್ರಪಾಣೀಯಮುಂ ಘನರಸಮೆನಲ್ ನೀರಿಂಗೆ ಪೆಸರಕ್ಕು" (ಮಂಗರಾ. ೧೧೯-೧). ೫. ಮೆತ್ತಗಿರುವಿಕೆ; ಸುಕುಮಾರತೆ: ಆ ಸಾಗರೇಂದ್ರದನ್ನೂವರಂ ತಳ್ತೊಡನೊಡನೆ ಪರ್ವಿ ಬಳೆದುದು ಕುಡಿಯರ ವಲ್ಲಭನ ಕೀರ್ತಿಲತೆ ಕೋಮಲದಿಂ (ಎಇ. VI, ೨೧೩-೧೨; 1057). ೬. ಎಳಗಾಯಿ; ಮಿಡಿ: "ತಿರುಳುದೋರ್ವ ಮಿಡಿಗಾಯಿ ಕೋಮಲಂ [ಪಾಠಾಂ. ೪ಂ]" (ಮಂಗರಾ. ೩೩-೬). ೭. [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲೊಂದು: ಬಳಿಕ ಸ್ಫುರಿತ, ಪ್ರಮಿತ ... ಸಮುಲ್ಲಾಸಿತ ಕೋಮಲವೆಂಬ ಯಿಪ್ಪತ್ತೆರಡೇ ಶ್ರುತಿಗಮಕಂಗಳು (ವಿವೇಕ. ೨೩೨). ೮. [ಛಂದ] ಒಂದು ಬಗೆಯ ಅಕ್ಷರವೃತ್ತ: ಸತಗಂಗಳ್ ಕೂಡಿ ಪದ್ಧತಿಯಿಂ ಸಾಪಾಕ್ಷರಂ ಸತತಂ ಬಂದಿರ್ದೊಡಾಯತ ನೇತ್ರೇ ಕೋಮಲಂ [ಪಾಠಾಂ. ೪ಂ] (ಛಂದೋಂಬು. ೨-೯೧). **ಕೋಮಳ**: ೧. "ಕೋಮಲ ಕೋಮಳಮುಕ್ಕುಂ" (ಕವಿಕಂ. ೨೬೭). ೨. ಎಳಗೆಂಪನುಗುಳ್ವ ಮೃದು ಕೋಮಳ ಪದಕಮಳಂಗಳ್ (ಗಿಂಕ. ೯-೧೦೨). ೫. "ನಳನಳಿಕೆ ಕೋಮಳಂ" (ಶಬ್ದಮಂ. ೨೩). ೬. "ಮಿಡಿಗಾಯಿ ಕೋಮಳಂ [ಪಾಠಾಂ. ಲಂ]" (ಮಂಗರಾ. ೩೩-೬). [ಸಂ.]

**ಕೋಮಲಕಾಯ** (ಗು). ೧. ಮೃದುವಾದ ಶರೀರವುಳ್ಳ; ಸುಕುಮಾರ ದೇಹದ: ಕೋಮಲಕಾಯ ಭಗದತ್ತ ಉರುಳಿದನು ಗಜದಿಂದ (ಕುವ್ಯಾದ್ರೋ. ೩-೭೬). (ನಾ). ೨. ಮೃದುವಾದ ಶರೀರ; ಸುಕುಮಾರ ದೇಹ: ಏನು ಕೋಮಲಕಾಯ ಹೊಳವು ಹೊಸಪ್ರಾಯ (ಇಂಗೀತ. ೬೧). ೩. ಸುಂದರವಾದ ಶರೀರವುಳ್ಳವನು; ಮನೋಹರವಾದ ದೇಹವುಳ್ಳವನು: ನೀಲವರ್ಣವಿಶಾಲ... ಅಗಣಿತಲೀಲ ಕೋಮಲಕಾಯ ರಕ್ಷಿಸು (ಹರಿಸಾ. ೧೪).
[ಕೋಮಲ + ಕಾಯ]

**ಕೋಮಲತೆ**, ಕೋಮಳತೆ (ನಾ). ೧. ಮೆದುವಾಗಿರುವಿಕೆ; ಮೃದುತ್ವ: ಮೊಳೆವ ಪುಳಕಾಂಕುರದ ತನುಕೋಮಲತೆಯಂ ಭಾವಿಸುವನು (ಬಸವು. ೪೨-೨೫). **ಕೋಮಳತೆ**: ೧. ಚೆಂದಳಿರ ಕೋಮಳತೆ ವೆತ್ತೆಸೆದಿರ್ದನೀಲೋತ್ಪಲನಿಭಾಂಗನಂ ಕುಲದೀಪ ಚಂದ್ರನಂ (ಶ್ರೀರಾಮಾ. ೧೬-೪೪೭). ೨. ಮನೋಹರವಾಗಿರುವಿಕೆ; ಸೌಂದರ್ಯ; ಚೆಲುವು: ಉಸಿರ್ವಂತಿರ್ದುದು ರೇಖೆ ಕೋಮಳತೆ [ಪಾಠಾಂ. ೪೬] ಯಂ ತಾಳ್ದಿತ್ತು ವರ್ಣಕ್ರಮಂ (ಆದಿಪು. ೪-೪). [ಸಂ. ಕೋಮಲತಾ]

**ಕೋಮಲತ್ವ** (ನಾ). ೧. = ಕೋಮಲತೆ. ೨. [ಕಾವ್ಯಮೀ] ಅಗ್ನಿ ಪುರಾಣದ ಮೇರೆಗೆ ಅರ್ಥಗುಣಗಳಲ್ಲೊಂದು; ಅಹಿತವಾದ ವಿಷಯವನ್ನು ನಯವಾಗಿ ತಿಳಿಸುವುದು: "ಅಗ್ನಿ ಪುರಾಣದಲ್ಲಿ... ಮಾಧುರ್ಯ, ಸಂವಿಧಾನ, ಕೋಮಲತ್ವ, ಉದಾರತಾ, ಪ್ರೌಢಿ, ಸಾಮಯಿಕತಾ ಇವು ಆರೂ ಅರ್ಥಗುಣಗಳೆಂದೂ... ಹೇಳಿದೆ" (ಕೈಪಿಡಿ. ೨೩೨ ಅಡಿಟ). ℙ ಇದನ್ನು ಸೌಕುಮಾರ್ಯವೆಂದೂ ಹೇಳುತ್ತಾರೆ. [ಸಂ.]

**ಕೋಮಲದೇಹ** (ನಾ). = ಕೋಮಲಕಾಯ: ಭೀಮನ ಕೊಳ್ಳವ ನೇರಿ ರಾವು ಹೊರಟನು ಆಗ ಸ್ವಾಮಿ ಮೆಲ್ಲನೆ ದನಿದೋರೊ ಎನ್ನುತ ಕೋಮಲದೇಹದ ಅರುವಿಲ್ಲ (ಸಿದ್ಧಪು. ೫-೩೧). [ಕೋಮಲ + ದೇಹ]

**ಕೋಮಲವಡೆ** (ಕ್ರಿ). ಕೋಮಲತೆಯನ್ನು ಹೊಂದು; ಮೃದುವಾಗು: ಪ್ರೇಮದಿಂ ಚುಬುಕಾಗ್ರವಿಡಿದು ಕೋಮಲವಡೆದ ಬಂದುಗೆವಾಯ್ಗೆ ಪೋಳ್ದಂದಿಭ್ರಾಮಕವಡೆದು ಚುಂಬಿಸಿದ (ಮೋಹತ. ೧೬-೩೭).
[ಕೋಮಲ + ಪಡೆ$_1$]

**ಕೋಮಲವೃತ್ತಿ** (ನಾ). [ಕಾವ್ಯಮೀ] ವೃತ್ತಿಗಳಲ್ಲಿ ಒಂದು; ಕೋಮಲವಾದ ಪದರಚನೆ: ಮಾಧುರ್ಯ ಓಜಸ್ಸು ಕೋಮಲತೆಗಳನ್ನು ವ್ಯಕ್ತಗೊಳಿಸುವ ವರ್ಣಗಳಿಂದ ಕೂಡಿದ ಪದರಚನೆಗಳನ್ನು ಕಾವ್ಯಪ್ರಕಾಶಕಾರನು ಕ್ರಮವಾಗಿ 'ಉಪನಾಗರಿಕ ವೃತ್ತಿ', 'ಪರುಷ ವೃತ್ತಿ', 'ಕೋಮಲವೃತ್ತಿ'ಗಳೆಂದು ಕರೆದು, ಇವುಗಳನ್ನೇ ವಾಮನಾದಿಗಳು ವೈದರ್ಭೀ, ಗೌಡೀ, ಪಾಂಚಾಲೀ 'ರೀತಿ'ಗಳೆಂದು ಕರೆಯುತ್ತಾರೆಂದು ಹೇಳುತ್ತಾನೆ (ಕೈಪಿಡಿ. ೨೨೩). [ಕೋಮಲ + ವೃತ್ತಿ]

**ಕೋಮಲವೆಱು** (ಕ್ರಿ). = ಕೋಮಲವಡೆ: ಗಾಯವಡೆದ ಕುಮಾರನ ಕೋಮಲವೆತ್ತ ಕಾಯದೊಳರುಣಾಂಬು ಸುರಿಯೆ (ಮೋಹತ. ೩೪-೩೨).
[ಕೋಮಲ + ಪೆಱು$_1$]

**ಕೋಮಲಾಂಕುರ** (ನಾ). ಕೋಮಲವಾದ ಅಂಕುರ,—ಚಿಗುರು: ಮಲಯಾನಿಲನೊಯ್ಕನೆ . . . ವಿಟಪಿಗಳೊಳ್ ವಿಲಸಿತ ಕಳಿಕಾಕುಳ ಕೋಮಲಾಂಕುರಮನಂತೆ ಪಡೆಗುಂ (ಕವಿರಾ. ೩-೫೪).
[ಕೋಮಲ + ಅಂಕುರ]

**ಕೋಮಲಾಂಗ** (ನಾ). ೧. ಕೋಮಲವಾದ ಅಂಗ; ಸುಂದರಾಂಗ: ಮುತ್ತಿನ ತೊಡವುಗಳ ಘನಸಾರದನುಲೇಪನದ ಸಣ್ಣಮಡಿದುಕೂಲದ ಬೆಳ್ಪೊಗಳ್ಕೋಮಲಾಂಗದೊಳ್ಪಡದೆ ಪಸರಿಸೆ ಚಂದ್ರಕಾಂತದಿಂ ನಿರ್ಮಿಸಿದ ಪುತ್ತಳಿವೊಲವಳೆಸೆದಳು (ಜೈಮಿಭಾ. ೧೧-೧೦). ೨. ಸುಕುಮಾರವಾದ ಶರೀರವುಳ್ಳವನು; ಸುಂದರ: ಕಣು ಕೋರವಿಸಿದವು ಕೋಮಲಾಂಗನ ಕಾಯಕಾಂತಿಯಲಿ (ತೊರರಾ. ೩-೪-೨).
[ಕೋಮಲ + ಅಂಗ$_2$]

**ಕೋಮಲಾಂಗಿ**, ಕೋಮಳಾಂಗಿ (ನಾ). ಕೋಮಲವಾದ ಅಂಗವುಳ್ಳವಳು; ಸುಂದರಾಂಗಿ: ಶಶಿಯ ಬಿಂಬವ ಹಳಿವ ಹುರುಡಿಸುವಬುಜಮುಖಿಯರು ಕೋಮಲಾಂಗಿಯರು (ಕುವ್ಯಾಉ. ೮-೪೪). **ಕೋಮಳಾಂಗಿ**: ಲಲಿತ ವಿಳಾಸಿನಿಯಂ ಕೋಮಳಾಂಗಿಯಂ (ಕವಿರಾ. ೩-೧೦); ಮತ್ತೋರ್ವಳ್ ಮಾಳತೀಶ್ಯಾಮಳ ಕೋಮಳಾಂಗಿ [ಪಾಠಾಂ. ಶ್ಯಾಮಳಾಂಗಿ] (ಆದಿಪು. ೧೧-೧೦೮ ವ).
[ಸಂ. ಕೋಮಲಾಂಗೀ (ಕೋಮಲ + ಅಂಗ + -)]

**ಕೋಮಲಿಸು** (ಕ್ರಿ). ಕೋಮಲವಾಗು; ಮೃದುವಾಗು: ಅಂದವಳ ನುಡಿಯ ಕೇಳಿ ಕಿವಿವೇಟ ಕೊನರಿ ಕೋಮಲಿಸೆ ಬೇಗದಲಿ ತನು ನವಿರ್ಗುಡಿಗಟ್ಟೆ ಮದನಮೋಹಿನಿಯಾಗ ವಿನಯದಿಂದುಸಿರ್ದಳಾ ಸಖಿಗೆ (ಶಂನವಿ. ೯-೫೪). [ಕೋಮಲ + -ಇಸು$_3$]

**ಕೋಮಲೆ**, ಕೋಮಳೆ$_2$ (ನಾ). = ಕೋಮಲಾಂಗಿ: ಚವುಡರಾಯನ ಪದಯುಗದಮೇಲೆ ಬಿದ್ದು ಕೋಮಲೆ ವಂದಿಸುತ್ತಿರೆ (ಬಸಪು. ೩೨-೪೫). **ಕೋಮಳೆ$_2$**: ಸುತ್ತಲುಂ ನಿನ್ನನಾ ಕೋಮಳೆಯಂದಂಬೆತ್ತ ಸುತ್ತುಂ ಗುರುಳಳವಡಿಸಲ್ (ಆದಿಪು. ೪-೨೧); ಕಮಳಮಂ ಶಶಿಬಿಂಬಮುಂ ಅಜಂ ಮುನ್ನನೆ ರಚಿಸಿ ಜಾಣಿಮೆ ಮೆಱೆದು ಕೋಮಳೆಯ ಮುಖಮುಂ ಬಳಿಕ ಮಾಡಿದನೊ (ಬಸಪು. ೪-೨೭). [ಸಂ. ಕೋಮಲಾ]

**ಕೋಮಳ** 'ಕೋಮಲ' ನೋ.

**ಕೋಮಳತಳ** (ನಾ). ಕೋಮಲವಾದ ಕರತಳ; ಮೃದುವಾದ ಅಂಗೈ: ಕೋಮಳತಳದಿ ಮೈದಡವಿದನು (ಕುವ್ಯಾದ್ರೋ. ೧-೨೩).
[ಕೋಮಳ (= ಕೋಮಲ) + ತಳ (= ತಲ)]

**ಕೋಮಳತೆ** 'ಕೋಮಲತೆ' ನೋ.

**ಕೋಮಳಾಂಗಿ** 'ಕೋಮಲಾಂಗಿ' ನೋ.

**ಕೋಮಳಾಳಾಪ** (ನಾ). ಮಧುರವಾದ ಮಾತು; ಇಂಪಾದ ಮಾತುಕತೆ: ಕುಲವಿದಿತ ಪದೋದ್ಯತ್ಕೋಮಳಾಳಾಪಶೀಲಂ (ಕವಿರಾ. ೩-೨೧೪). [ಕೋಮಳ (= ಕೋಮಲ) + ಆಳಾಪ (= ಆಲಾಪ)]

**ಕೋಮಳಿಕೆ** (ನಾ). = ಕೋಮಲತೆ: ಕೋಮಳಿಕೆ [ಪಾಠಾಂ. ಳತೆ] ಯಂ ತಾಳ್ದಿತ್ತು ವರ್ಣಕ್ರಮಂ (ಆದಿಪು. ೪-೪); ಕೋಮಳಿಕೆ ತೇರಾಗಿ ಲಲಿತಗವುನಂಗಿಯ್ಯುವದೋ (ಸಂಸಪ. ೨೭-೧೩).
[ಕೋಮಳ (= ಕೋಮಲ) + -ಇಕೆ]

**ಕೋಮಳೆ$_1$** 'ಕೋವಳೆ' ನೋ.

**ಕೋಮಳೆ$_2$** 'ಕೋಮಲೆ' ನೋ.

**ಕೋಮು** (ನಾ). ಜಾತಿ; ಪಂಗಡ: ಅನುಸೂಚಿತ ಜಾತಿಗಳಿಗೆ ಅಥವಾ ಮುಸಲ್ಮಾನ ಅಥವಾ ಸಿಖ್ಖ ಕೋಮಿಗೆ ಸೇರಿದ್ದು (ಭಾಧಾನ. ೨೩೭); ಯಾವ ಕೋಮಿಗೇ ಸೇರಿರಲಿ (ಕನ್ನಸು. II, ೧೮೭).
[← ಹಿಂ. ಅರ. ಕೌಮ್]

**ಕೋಮುವಾದಿ** (ನಾ). ತನ್ನ ಜಾತಿ ಅಥವಾ ಪಂಗಡವನ್ನು ಬೆಂಬಲಿಸುವವನು: ನನಗೊಂದು ಕಾಗದ ಬಂದಿದೆ. ಅದನ್ನು ಯಾರೋ ಕೋಮುವಾದಿಗಳು ಬರೆದಿರುವಂತೆ ತೋರುತ್ತದೆ. (ಪುನರು. ೩೧೪). [ಕೋಮು + ವಾದಿ]

**ಕೋಮುವಾರು** (ಗು). ಒಂದು ಜಾತಿಗೆ ಅಥವಾ ಪಂಗಡಕ್ಕೆ ಸಂಬಂಧಿಸಿದ; ಮತದ: ಆದರ ಬಹುಭಾಗ ಕೋಮುವಾರು ದ್ವೇಷವನ್ನು ಹೆಚ್ಚಿಸತಕ್ಕ . . . ಶುಷ್ಕ ವಿವರಗಳಾಗಿವೆ (ಶಿಕ್ಷದ. ೨೬೭); ಚಿನ್ನದಂಥ ಜನ! ಏನೊಂದು ಕೋಮುವಾರು ಭಾವನೆ ಇಲ್ಲ (ರಂಗಳ. ೧೦೯); ಈ ಕೋಮುವಾರು ವ್ಯಾಧಿಗೆ ನಾಡಿನ ಧಾರ್ಮಿಕ ಜೀವ ಬಲಿಯಾಗುವಂತಹ ಪ್ರಸಂಗ ಬಂದಿತ್ತು (ರಾಜ್ಯೋದ. ೨೨೨).
[ಕೋಮು + -ವಾರು$_2$ (< -ವಾರಿ$_1$)]

**ಕೋಯಂಡ** (ನಾ). = ಕೋದಂಡ: "ಕೋಯಂಡಮೆಂದು ಬಿಲ್" (ಕಶಸಾ. ೭-೧೧೪); "ಕೋಯಂಡ-ಕೋದಂಡ = ಬಿಲ್ಲು" (ತದ್ಭಕೋ. ೯); ಕೋಯಂಡಕೇಱಿದೊಳ್ದಿರು (ಚೇರಮ. ೧೦-೧೯); ಎಲ್ಯೆ ರಾಘವ! ನುಡಿ ಬಿನ್ನಣಂ ಸಾಲ್ಗುಂ ಪಿಡಿ ಎನ್ನೀ ಕೋಯಂಡಮಂ (ಅದ್ಭುತ. ೩೨-೭೫).
[< ಸಂ. ಕೋದಂಡ]

**ಕೋಯಣಿಗೆ** (ನಾ). ಸಾಲು; ಪಂಕ್ತಿ: ದನುಜವೈರಿಯ ತೋಟಿ ಯಮಳಾರ್ಜುನ ವಿಘಾತಿಯ ತೋಟಿ ಬಕಭಂಜನ ಮುರಾರಿಯ ತೋಟಿ ವತ್ಸವಿದಾರಣನ ತೋಟಿ ಕನಲುವಘುಧೇನುಕ ಬಕಾಹಿತವನ ಕೃಶಾನುವ ತೋಟಿ ಬೇಡೆಂದೆನುತ ಕೋಯ[ಪಾಠಾಂ. ಕೊಲ್ಲ]ಣಿಗೆಯಲಿ ನಡೆದರು ವಹಿಸಿ ದಂಡಿಗೆಯ (ನಿಭಾಗ. ೧೦-೧೮-೧೪). [ಕೋ$_1$ + ಅಣಿಗೆ]

**ಕೋಯತೂರ್** 'ಕೋಯಾತ್ತೂರ್' ನೋ.

**ಕೋಯಷ್ಟಿ** (ನಾ). ಒಂದು ಜಾತಿಯ ಹಕ್ಕಿ; ಕೊಟ್ಟುಕ: "ಕೋಯಷ್ಟಿ, ಶಿಖರೀ – ಈ ೨ ಕೊಟ್ಟುಕಂ" (ಹಲಾಯು. ೪೨-೯೩).
[ಸಂ.]

**ಕೋಯಷ್ಟಿಕ** (ನಾ). = ಕೋಯಷ್ಟಿ: "ಕೀಚುಬಾಲದ ಹಕ್ಕಿ" (ಸಿದ್ಧಾಂತಿ ೧೪೩); "ಒಂದು ಜಾತಿಯ ಹಕ್ಕಿ; ಟಿಟ್ಟಿಭ; ಕೋಯಷ್ಟಿಕ" (Lap–wing. ಇಂಕನಿ). [ಸಂ.]

**ಕೋಯಾತ್ತೂರ್**, ಕೋಯತೂರ್ (ನಾ). ಒಂದು ಊರಿನ ಹೆಸರು: ಮಹಾವಲಿ ಬಾಣರಸರ ಮೇಗೆ ಪಡೆವೋಗಿ ಕೋಯಾತ್ತೂರಿಯುದಲ್ಲಿ ಕೊಗಟಿಯ ಒಕ್ಕಲ್ ಶ್ರೀ ಎಮ್ಮೆಯರ ಮಗ ಬೊಲ್ಲಗಂಗ ಗಾಮುಣ್ಡ ನಿಱಿದು ಬಿಟ್ಟನ್ (ಎಕ. X, ಬೌರಿಂಗ್. ೧೩-೩; 890). **ಕೋಯತೂರ್:** ಕಾಡುವೆಟ್ಟಿ ಮುತ್ತರಸನ್ ಕೋಯತೂರ್ಗೆ ಕ್ಲೇಶ ಬಂದಿರೆ ಅವನಾಳ್ಕೆಲೆವಾಜ್ಗೆ ನಾಯಕನಪ್ಪೊನ್ (ಸೌಇಇ. IX-i, ೫-೭; 900); ಎಳೆಗೆಸೆವ ಕೋಯತೂರ್ ತತ್ತಳವನ ಪುರಮಂತೆ ರಾಯ ರಾಯಪುರಂ (ಎಕ. VII, ಶಿವಮೊ. ೬೪-೧೬; 1112). [?]

**ಕೋಯಿಗೇಶ್ವರ** (ನಾ). ಒಂದು ಶಿವಲಿಂಗದ ಅಥವಾ ದೇವಾಲಯದ ಹೆಸರು (?): ಸಂಪೂಜಿತ ಪಾದಾರವಿಂದರಪ್ಪ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ್ × × × ಕದೇವಕೋಯ್[ಯಿ]ಗೇಶ್ವರಮಂ ಮಾಡಿದರ್ (ಸೌಇಇ. XI-i, ೨೨-೫೧; 897).
[ಕೋಯಿಗ ? + ಈಶ್ವರ]

**ಕೋಯಿದ** (ನಾ). = ಕೋವಿದ: ರಾಯ ಕೇಳ್ಕೆ ಮನುಜವರ್ಗದುಪಾಯಕಿದು ಕೃಪೆಯಾಯ್ತು ಸಾಧನ ಕೋಯಿದರು ಮಯವಿಶ್ವಕರ್ಮರು ಜನಿಸೆ ಮೂಜಗಕೆ (ಸಂಭಪ. ೫-೧೦).
[< ಸಂ. ಕೋವಿದ]

**ಕೋಯಿಲ್**, ಕೋಯಿಲು, ಕೋವಿಲ್, ಕೋವಿಲು, ಕೋವಿಲೆ (ನಾ). ಗುಡಿ; ದೇವಸ್ಥಾನ; ದೇಗುಲ: ದೇವರಾ ಕೋಯಿಲ್ಗಳೆಲ್ಲ ಮುನ್ ಪುಗುವೊಪ್ (ಅಂತಿಗೊ. ೮-೧೪೦); ಬೆಳ್ಳಿಯಬೆಟ್ಟದ ಕೋಡಿನ ಬೀಡನ್ ತೆಂಕಣನಾಡಿನ ಕೋಯಿಲಕೋಡಿನ್ (ಅಶ್ವತ್ಥಾ. ೨೮-೫೫೦). **ಕೋಯಿಲು:** ಯಿ ಉಭಯವ ನಡಸುವುದಕ್ಕೆ ಸುತಂತ್ರವಾಗಿ ಪೆರಿಯ ಒಡೆಯಾರು ನಮಸ್ಕಿವಾಯ ದೇವಸ್ತಾನದ ಕೋಯಿಲು ... ಹೊಜಿತಾಗಿ (ಸೌಇಇ. IX-ii, ೪೬೩-೧೧; 1470). **ಕೋವಿಲ್:** ಪೆರುಮಾಳ್ ಕೋವಿಲ್ ತಿರುನಾರಾಯಣಪುರ ಮುಖ್ಯವಾದ ಸಕಳಾಚಾರ್ಯ್ಯರೂ (ಎಕ. II, ೩೪೪-೧೦; 1368); ಈ ವಿಷ್ಣುಪಾದಾಂಕಿತಮಿಲ್ಲದೆ ತಾನೇನ ವಿಗ್ರಹನಾಗಿ ಗದಾಧರನೆಂದು ಪೆಸರುಳ್ಳವನಾಗಿ ಕೋವಿಲೊಳಗಿರಲಾಗಿಯುಂ (ಸಾತ್ವಿವಿ. ೭). **ಕೋವಿಲು:** ಎತಿರಾಜಮಠವನು ಶ್ರೀ ಚೆಲಪಿಳೆರಾಯರ ಕೋವಿಲಿಗೆ ದೇಶಾಂತ್ರಿ ಮುದ್ರೆಯನೂ ಕೊಟ್ಟೆವಾಗಿ (ಎಕ. XIV, ಶ್ರೀರಂಗ. ೨೫೯-೪; 1544); ಗಳುಡು ಪ್ರರ್ಭುಗಳುಂ ವಿದೇಸ್ವರ ದೇವ ಕೋವಿಲನು ಚಿನಂದಾಂವಿಗೆ ಕೊಟ ಸವತದ (ಎಕ. X (S), ಬಾಗೇಪ. ೧೧೩-೬; 16ನೆಯ ಶತ). **ಕೋವಿಲೆ:** ನಿಂಮ ಕೋವಿಲೆಯ ವಾದ್ಯದವರು[ಗಂ]ಡು ಮೇಳ ಹೆಂಣು ಮೇಳಸಹ ... ಯೆಲ್ಲವನೂ ಕಳುಹಿ (ಸೌಇಇ. IX-ii, ೬೬೮-೩; 1559).
[ದೇ. ‖ ತಮಿ. ಮಲ. ಕೋಯಿಲ್, ಕೋವಿಲ್; ತೆಲು. ಕೋಯಿಲ, ಕೋವಿಲ]

**ಕೋಯಿಲಬೋಯ** (ನಾ). ದೇವಸ್ಥಾನದ ಪರಿಚಾರಕ (?): ಕೋಯಿಲಬೋಯಸ್ಯ ಭಾರದ್ವಾಜ ಗೋತ್ರ ಬಾದಿಶಮ್ಮಣ ಮುಯ್ದ್ವಾಂಶಃ (ಇಅ. VII, ೪೨-೨೧; 668).
[< ಕೋಯಿಲ್ + ಬೋಯ]

**ಕೋಯಿಲು** 'ಕೋಯಿಲ್' ನೋ.

**ಕೋಯಿಲ್ಗೊಡ** (ನಾ). ಒಂದು ಸ್ಥಳದ ಹೆಸರು: ಎರೆಪುಲಿಗೆಱಿಯಾ ಕೋಯಿಲ್ಗೊಡಾ ಎಡೆ ಇಪ್ಪತ್ತುಗಣ್ಡುಗುಂ (ಎಕ. IV, ನಾಗಮಂ ೮೫-೬೮; 776). [ಕೋಯಿಲ್ + ಕೊಡ ?]

**ಕೋರ್$_1$** 'ಕುವರ್ನ' ನೋ.

**ಕೋರ್$_2$** 'ಕೋರ್ವಾ' ನೋ.

**-ಕೋರ್$_3$**, -ಖೋರ (ಪ್ರ). ಇದನ್ನು ಮಾಡುವವನು ಅಥವಾ ಇದರಲ್ಲಿ ನಿರತನಾದವನು ಎಂಬ ಅರ್ಥದಲ್ಲಿ ಸೇರುವ ಒಂದು ತದ್ಧಿತಪ್ರತ್ಯಯ: ಕೋರ ಚಾಡಿಯನ್ನು ಹೇಳುವವನು = ಚಾಡಿ ಕೋರ; ಲಂಚವನ್ನು ತೆಗೆದುಕೊಳ್ಳುವವನು = ಲಂಚಕೋರ (ಮಧ್ಯಮ. ೧೩೬). **-ಖೋರ.** 'ಚಾಡಿಖೋರ', 'ದಗಾಖೋರ' ಪರಾ. [← ಅರ. ಪಾರ. ಖೋರ್]

**ಕೋರ್$_4$** 'ಕೋರೆ$_1$' ನೋ.

**ಕೋರಂಗಿ** (ನಾ). ಸಣ್ಣ ಯಾಲಕ್ಕಿ: "ಸೂಕ್ಷ್ಮೈಲಾ, ಉಪಕುಂಚಿಕಾ, ತುತ್ಥಾ, ಕೋರಂಗೀ . . . ತ್ರುಟಿಃ - ಈ ೬ ಕಿಱಿಯೇಲಕ್ಕಿ" (ನಾಚಿರಾ. ೧೧೦); "ಉಪಕುಂಚಿಕಾ, ತುತ್ಥಾ, ಕೋರಂಗೀ, ತ್ರಿಪುಟಾ, ತ್ರುಟಿಃ - ಈ ೫ ಸಣ್ಣ ಯಾಲಕ್ಕೀ ಹೆಸರುಗಳು" (ಸಿದ್ಧಾಂತಿ. ೧೨೩).
[ಸಂ. ಕೋರಂಗೀ]

**ಕೋರಂಟೆ** 'ಗೋರಂಟೆ' ನೋ.

**ಕೋರಂಬ**, ಕೋರಂಬು (ನಾ). ವಿಗ್ರಹಗಳಿಗೆ ಕಿರೀಟದ ಬುಡದಲ್ಲಿ ಕಟ್ಟುವ ಚಿನ್ನದ ಅಥವಾ ಬೆಳ್ಳಿಯ ಮುಖವಾಡ; ಮುಖಸಿರಿ: (ಕ). **ಕೋರಂಬು:** "ದೇವವಿಗ್ರಹಗಳ ಮೈಮುಖಗಳ ಆವರಣ, ವಸ್ತ್ರ" (ಕಸ್ತೂಕೋ. ೨೬೦). [?]

**ಕೋರಂಬು** 'ಕೋರಂಬ' ನೋ.

**ಕೋರಕ** (ನಾ). ಮೊಗ್ಗು; ನನೆ: ತಾರಕಮುದಂಚಿತ ಕೋರಕಮುದ್ಘತೇಂದುಮಂಡಳಮಲರ್ಗೊಂಚಲ್ (ಚಂದ್ರಪ್ರ. ೧೦-೫೯); ಹೃತ್ಕುಪ್ಪದ ಕೋರಕಂಬಿರಿಯೆ (ಜೈಮಿಭಾ. ೧-೧); ಸರೋಜ ಕೋರಕದ ಕೂರ್ಗಣೆಯಂತವೆ ತೊಟ್ಟು (ರಾಜಶೇ. ೭-೬೭). [ಸಂ.]

**ಕೋರಕಗ್ರಂಥಿ** (ನಾ). ಮೊಗ್ಗೆಯ ಗಂಟು: ಲತಾಕೋರಕಗ್ರಂಥಿ ನೀರೇಜಿಱಿದುವು (ಮಲ್ಲಿಶ. ೫-೩). [ಕೋರಕ + ಗ್ರಂಥಿ]

**ಕೋರಕಿತ** (ಗು). ಮೊಗ್ಗು ಬಿಟ್ಟಿರುವ; ನನೆದೋರಿದ: ವಸಂತ ಕಾಲದೊಳ್ ಪಲ್ಲವಿತ ಕೋರಕಿತ ಕುಸುಮಿತ ಫಲಿತಮಪ್ಪ ಮನೋಹರೋದ್ಯಾನಕ್ಕೆ (ವಡ್ಡಾರಾ. ೧೩೬-೧೯); ದಶರಥಮಹೀನಾಥಂ ಸುತಮುಖವೀಕ್ಷಣಭರದಿಂ ಪಾರಿಜಾತಂ ಕೋರಕಿತಮಾದಂತೆ ಪುಲಕಿತ ಶರೀರನಾಗಿ (ಪಂರಾಮಾ. ೩-೧೧೭ ವ). [ಸಂ.]

**ಕೋರಕಿಸು** (ಕ್ರಿ). ಮೊಗ್ಗುಬಿಡು; ನನೆಯಾಗು: ಅಂಕುರಿಸಿ ಪಲ್ಲವಿಸಿ ಕೋರಕಿಸಿ ಕುಸುಮಿಸಲು ಸಹಕಾರ ತರುನಿವಹವಲ್ಲಿ ಕ್ರಮದಿ (ಧ್ವನ್ಯಾಲೋ. ೧೧೯). [ಕೋರಕ + -ಇಸು$_3$]

**ಕೋರಟೆ** (ನಾ). (ಉಕ) ಹುಚ್ಚೆಳ್ಳು; ಗುರೆಳ್ಳು: ಜೋಳದ ದಂಡೆಗೆ ಕೋರಟೆ ಬಿತ್ತಿರಿ (ರೂಢಿ). [?]

**ಕೋರಡಿ$_1$** (ನಾ). ೧. ಒಣಗಿರುವ ಸ್ಥಿತಿ; ಸಾರವಿಲ್ಲದಿರುವಿಕೆ; ಕೊರಡು: (ಕ). [← ಮರಾ. ಕೋರಡಾ]

**ಕೋರಡಿ$_2$** (ನಾ). ೧. "ನಿರ್ಬಂಧ; ಅಡ್ಡಿ" (ಪ್ರಭಣ್ಣ): ಪುರದ ಬಾಹೆಯ ಕೋರಡಿಯ ಸಂಪರಣೆ ತೆಗೆಯಲಿ (ಕುವ್ಯಾಅ. ೧೨-೮೬); ಪಾಳಯವು ಗಜಬಜಿಸಿ ತೊಳಲಿಕೆಯಾಳು ನೆರೆದುದು ಕೋರಡಿಯ ಮುಳುವೇಲಿಗಾಂತರು ಬೀಹ ಹರಿಸಿದರಖಿಳ ದೆಸೆದೆಸೆಗೆ (ಕುವ್ಯಾದ್ರೋ. ೮-೪೪); "ಬೈಲು, ಮೈದಾನ" (ಷಟ್ಪ್ರನಿ). ೨. ರಭಸ; ವೇಗ: ಅಟ್ಟಿಕೊಳ್ಳುವ ಕೋರಡಿಯೊಳು ಬರುತಿರೆ ಬಿಟ್ಟ ಸೂಟಿಯೊಳಗಸೇನೆ (ನಾಗಕು. ೧೫-೫೭). ೩. ಉಪದ್ರವ; ಕೀಟಲೆ; ತುಂಟತನ; ಹಿಂಸೆ: ಆರು ನಿಲಬಹುದವರ ಘಾರಾಘಾರಿಯಲಿ ಘಾಡಿಸುವ ರವಿಜನ ಕೋರಡಿಯ ಕಪಿಭಟರು ಕೆದಱಿತು ಕಂಡ ಮೈಗಳಲಿ (ತೊರರಾ. ೪-೩-೫); "ಕ್ರೂರವಾದ ಪಾದ" (ಷಟ್ಪ್ರನಿ). [?]

**ಕೋರಡ್ಡಿ$_3$** 'ಕೊರಡೆ$_1$' ನೋ.

**ಕೋರಡಿಗ** (ನಾ). ೧. ಮೂರ್ಖ: "ಮೂರ್ಖ–ಕೋರಡಿಗನುಂ" (ನೀತಿವಾ. ೨೫–೨೦); ಬೞುಮೆಚ್ಚಿನೊಳೆನಗೆ ಫಳಮಾಗದೀ ನೀಱಿಯರ ತೊಡೆಯ ಮೇಲೆನ್ನುಮನೇಱಿಸಿದೊಡಾಂ ಮೆಚ್ಚುವೆನೆನೆ ದುಷ್ಟನಾಯಕರಿಂ ಬೞಿಕೆ ನಿನ್ನನಾಕೆಗಳ ಕೂರ್ಪ ಕೋರಡಿಗರೇಱಿಸಲುಯ್ಯಲಾಡುವೆಯೆಂದು ನಗಿಸುತ್ತುಂ ನಡೆಯೆ (ಅನಂಪು. ೮–೭ ವ). ೨. ದುಷ್ಟ; ಹಿಂಸಕ: ಸತಿಸುತವೆರಸಿ ಪೊಡವಟ್ಟೊಡಣಕಿಸಿದನಾಸುರದ ಕೋರಡಿಗನು (ಹಚಕಾ. ೮–೧೯). [ಕೋರಡ್ಡಿ$_0$ + –ಗ$_3$]

**ಕೋರಡಿಗತನ** (ನಾ). ೧. ಹಿಂಸೆಮಾಡುವ ಸ್ವಭಾವ; ಬಾಧೆಕೊಡುವುದು: ಕಾಡಬೇಡಿನಿತು ಚಲ ಬೇಡ ಕೋರಡಿಗತನ ಬೇಡ ಮೂರ್ಖತ್ವಬೇಡೆಂದೆರಡು ಕೈಮುಗಿದು ಬೇಡಿಕೊಂಡೆಂ (ಹಚಕಾ. ೯–೨೩). ೨. ತುಂಟತನ: ನೀಱಿಯರು ನಯನಾಭಿರಾಮನ ಕೋರಡಿಗತನದಿರವನೊಮ್ಮೆಯು ದೂರಲೈತರಲು (ನಿಭಾಗ. ೧೦–೮–೩೪). ೩. ಮೂರ್ಖತನ. [ಕೋರಡಿಗ + –ತನ]

**ಕೋರಡಿಗೆ** (ನಾ). ನೇಗಿಲನ್ನು ಕಟ್ಟುವ ಹಗ್ಗಕ್ಕೆ ಸೇರಿಸುವ ಮರದ ಸಾಧನ: ಉಳೇಹಗ್ಗಕ್ಕೆ ಕೋರಡಿಗೆ ಸೇರಿಸಬೇಕು (ರೂಢಿ). [< ಕೊಱಡು]

**ಕೋರಡೆ** 'ಕೊರಡೆ' ನೋ.

**ಕೋರದೂಷ** (ನಾ). ಹಾರಕವೆಂಬ ಧಾನ್ಯ; ಕೋದ್ರವ: "ಕೋರದೂಷಃ, ಕೋದ್ರವಃ– ಹಾರಕದ ಹೆಸರುಗಳು" (ಸಿದ್ಧಾಂತಿ. ೨೩೯). [ಸಂ.]

**ಕೋರದೂಷಕ** (ನಾ). = ಕೋರದೂಷ: "ಉನ್ಮಾಳಃ, ಕೋದ್ರವಃ, ಕೋರದೂಷಕಃ – ಈ ೩ ಹಾರಕಂ" (ಹಲಾಯು. ೯೫–೪೨೬). [ಸಂ.]

**ಕೋರಮಂಗ** (ನಾ). ಒಂದು ಊರಿನ ಹೆಸರು: ಕೋರಮಂಗಾಶ್ರಿತಾಂ ಮಹೀಂ (ಮೈಆರಿ. ೧೯೩೩, ೧-೧೭; 530?). [?]

**ಕೋರಯಿಸು, ಕೋರಯ್ಸು, ಕೋರವಿಸು, ಕೋರ್ೈಸು** (ಕ್ರಿ). ೧. (ಅತಿಪ್ರಕಾಶದಿಂದ) ಕಣ್ಣು ಕುಕ್ಕು, —ಚುಚ್ಚು: ಕೋರಯಿಸಿದಂ, ಕೋರ್ೈಸಿದಂ (ಶಮದ. ೧೫೭ ಪ್ರಯೋ); ಕೋರಯಿಪಚ್ಚಪೊಚ್ಚ ಪೊಸ ಮಿಂಚುವ ಮಿಂಚಿದೆಂಬಿನಂ (ಉದ್ಭಟ. ೯–೧೧೪). **ಕೋರಯ್ಸು:** ೧. ಮಾಣ್ಗಳಿದರ ಮೆಯ್ವೆಳಗೆನೆ ಕಣ್ಗಳ್ಕೋರಯ್ಸೆ ತೊಳಗಿಬೆಳಗುತ್ತುಂ ಮುಂದಣ್ಗಾಗಿ ನಡೆದು ನೃಪನಂ ಜಾಣ್ಗೊಂಡ ನಿಜಪ್ರಗಲ್ಭವಚನದೆ ನುಡಿದಳ್ (ಕಾದಂಉ. ೭೩೩); ಚಾರಣಯುಗ್ಮಂ ನೆಭದಿಂದೋರಂತೈತರಲು ಕೂಡೆ ನೋಟ್ಬರ ಕಣ್ಗಳ್ ಕೋರಯ್ಸುತ್ತಿರೆ ಮಿಂಚಿನ ಸಾರಮಿದೇನೆಂದು ನಾಡೆ ಬೀಡೆ ಬೆದಱುವಿನಂ (ಪುಣ್ಯಾಸ್ರ. ೧–೯೦). **ಕೋರವಿಸು:** ೧. ಕಣ್ಣು ಕೋರವಿ[ಪಾಠಾಂ. ಯಿ]ಸಿದವು ಕೋಮಲಾಂಗನ ಕಾಯಕಾಂತಿಯಲಿ (ತೊರರಾ. ೩–೪–೨); ಕಂಡವರ ಕಂಗಳು ಕೋರವಿಸೆ ಜನನಿವಹದಲಿ ಜಗದೇಕನಾಥನನಾಂತು ರಂಜಿಸಿದ (ನಿಭಾಗ. ೧೦–೩–೩); ಸೂರ್ಯಚಂದ್ರಾಗ್ನಿ ಕೋಟಿಯುಂ ತುಟ್ಟಿಸಿತು ಧಾರಾಸಹಸ್ರದೊಳ್ಕತ್ತಲೆಯ ದೃಷ್ಟಿಗಳ್ಕೋ[ಪಾಠಾಂ. ಳ್ಕೊ]ರವಿಸಲ್ಕೆ (ತುರಂಗ. ೮೫–೩೮). ೨. "ಹೆಮ್ಮೆದೋರು; ಅಟ್ಟಹಾಸಮಾಡು" (ಪ್ರಭಣ್ಣ); ನೀನಿಂತಿರೆ ಗಡಾವಣೆಯುಂ ಕೋರವಿಸಿ ಗಟ್ಟಿಸಲೇಂ (ರಾಮಾಶ್ವ. ೯೨–೨೨). **ಕೋರ್ೈಸು:** ೩. (ಆಲಂ) ಅಂಜು; ಬೆದರು; ತಲ್ಲಣಿಸು; ದಿಗಿಲುಬೀಳು: ಪುದಿದೆಂಟುಂ ದಿಕ್ತಟಕ್ಕಂ ಧ್ವನಿ ಪಸರಿಸೆ ಕೋರ್ೈಸಿತ್ತೈರಾವತಂ ಕುಂಬಿದುದೆತ್ತಂ ಪುಂಡರೀಕಂ ಸುಗಿದುದು ಕುಮುದಂ (ಚಂದ್ರಪು. ೧೦–೬೦). ೪. (?): ಕೂರೆಲೆಗಳ ಬಾಯ್ದಾರೆಗೆ ಕೋರ್ೈಸಿ ಮುಸುಕಿದಂತೆ ಪರಿಕಾಲ್ಗಳ ಪಂಕೇರುಹ ರಜದೊಳ್ ಪೊರೆದು ಸಮೀರಂ ನವಗಂಧಶಾಳಿವನದೊಳ್ ಸುೞಿಗುಂ (ವರ್ಧಪು. ೧–೪೧). [ಕೋರ್$_0$ + –ಇಸು$_3$. / ತೆಲು. ಕೋರಗಿಂಚು]

**ಕೋರಯ್ಸು** 'ಕೋರಯಿಸು' ನೋ.

**ಕೋರಲು** (ನಾ). ಮುಡಿಪು; ಬಲಿ: ಅದಕ್ಕಾಗಿ ನನ್ನ ಜೀವನವನ್ನೇ 'ಕೋರಲು' (ಬಲಿ) ಕೊಡಲು ಸಿದ್ಧನಾದೆ (ಮರಳಿ. ೧೬೭). [?]

**ಕೋರವ, ಕೋರವಿ** (ನಾ). ಹೂವಿನ ಮೊಗ್ಗೆ; ನನೆ: "ಕಾರವ್ಯಃ, ಕೋರವಂ, ಕಾರವೀ, ಕೋರವಿ, ಕೋರಕಂ – ಈ ೫ ಮೊಗ್ಗೆ" (ಕಾಶಕ್ಯ. ೨೨೪). **ಕೋರವಿ:** "ಕಾರವ್ಯಃ . . . ಕೋರವಿ, ಕೋರಕಂ – ಈ ೫ ಮೊಗ್ಗೆ" (ಕಾಶಕ್ಯ. ೨೨೪). [< ಸಂ. ಕೋರಕ]

**ಕೋರವಂಗಲ** (ನಾ). ಒಂದು ಊರಿನ ಹೆಸರು. ℙ ಈಗಿನ ಹಾಸನ ಜಿಲ್ಲೆಯ ಕೋರಮಂಗಲ: ತನಗೆ ಜನ್ಮಭೂಮಿಯಾದ ಸೀಗೆನಾಡೊಳಗಳಗ್ರಹಾರಂ ಕೋರವಂಗಲದೊಳು (ಎಕ. V, ಹಾಸನ. ೭೨–೫೬; 1160 ?); ಕೋರವಂಗಲದ ಶ್ರೀಬೂಚೇಶ್ವರದೇವರಿಗೆ (ಎಕ. V, ಹಾಸನ. ೭೧–೫೪; 1173 ?). [ಕೋರ$_1$ + ಮಂಗಲ]

**ಕೋರವಿ** 'ಕೋರವ' ನೋ.

**ಕೋರವಿಸು** 'ಕೋರಯಿಸು' ನೋ.

**ಕೋರಾ$_1$** 'ಕೋರಿ$_1$' ನೋ.

**ಕೋರಾ$_2$, ಕೋರ$_2$, ಕೋರೆ$_4$** (ಗು). ೧. ಹೊಚ್ಚಹೊಸತಾದ (ಬಟ್ಟೆ); ಆಗತಾನೇ ತಯಾರಿಸಿದ (ವಸ್ತ್ರ): ಅದರ ಮರುದಿನದಿಂದ ನಾನು ಜೋಡಿಗೆ ಒಂದೂಕಾಲು ರೂಪಾಯಿ ಬೆಲೆ ಬೀಳುವ ಗಿರಣಿಯ ಉರುಟು ಕೋರಾ ಧೋತರ ಉಡಲು ಪ್ರಾರಂಭಿಸಿಬಿಟ್ಟೆನು (ಇಪ್ಪಕ. ೪೩೬). ೨. ಮಡಿಮಾಡದ; ಚಲುವೆ ಮಾಡದ; ಗಂಜಿಹಾಕದ; ರಾಸಾಯನಿಕ ವಸ್ತುಗಳಿಂದ ಶುಭ್ರಗೊಳಿಸದ; ಉಬ್ಬೆಗೆ ಹಾಕಿ ಮಡಿಮಾಡದ: (ಕಿ). "ಕೋರಾ – ಗಂಜಿಯಾಗದ" (ಜಾನಕೋ. ೪೩). ೩. (ಕಾಗದ) ಏನೂ ಬರೆಯದಿರುವ; ಬರಿಯ; ಖಾಲಿ: ಕೆಲವು ಕೋರಾ ಟ್ರಾನ್ಸ್‌ಫರ್ ಫಾರ್ಮಿನ ಮೇಲೆ ಅವರ ಸಹಿಯನ್ನು ತೆಗೆದುಕೊಂಡು ಆ ಫಾರ್ಮುಗಳನ್ನು ಶೇಅರ ಸರ್ಟಿಫಿಕೇಟುಗಳಿಗೆ ಹಚ್ಚಿ ಇಟ್ಟುಕೊಳ್ಳುವರು (ಬ್ಯಾಂಕಕ್ಷೆ. ೧೧೦). **ಕೋರ$_2$:** (ನಾ). ೪. ನುಣುಪಿಲ್ಲದ ಬಟ್ಟೆ; ಒರಟು ಬಟ್ಟೆ. **ಕೋರೆ$_4$:** ೩. 'ಕೋರೆಕಾಗದ' ಪರಾ. [← ಹಿಂ. ಮರಾ. ಕೋರಾ]

**ಕೋರಾಣ** 'ಕೋರಾನ್ನ' ನೋ.

**ಕೋರಾತ್ಯಗಾವುಂಡ** (ನಾ). ಒಬ್ಬಾತನ ಹೆಸರು: ಕೊಚ್ಚಟಕೊತ್ತಗಾವುಣ್ಡನ್ ತತ್ಪುತ್ರ ಕೋರಾತ್ಯಗಾವುಣ್ಡಂ ದುಷ್ಟಸ್ವಾಹಕಮಱೆವೊಕ್ಕ ಕಾವಂತೆ ಬಣ್ಬರ ಭಾವ (ಎಕ. III, ನಂಜನ. ೧೨೨–೧೩; ಕೃಶಾ). [ಕೋರಾತ್ಯ? + ಗಾವುಂಡ (< ಗಾಮುಂಡ)]

**ಕೋರಾನ** 'ಕೋರಾನ್ನ' ನೋ.

**ಕೋರಾನ್ನ, ಕೋರಾಣ, ಕೋರಾನ** (ನಾ). ಬ್ರಾಹ್ಮಣರು, ಜಂಗಮರು ಮುಂತಾದವರಿಗೆ ಭಿಕ್ಷೆಯಾಗಿ ಇಕ್ಕುವ ಸಂಸ್ಕರಿಸದೆ ಇರುವ ಧಾನ್ಯದ ಕಾಳು; ಧಾನ್ಯದ ಭಿಕ್ಷೆ: ಶಿವಭಕ್ತರಾಲಯದಿ ಕೋರಾನ್ನಮಂ ತಂದು ಶಿವಗಣಂಗಳಿಗೆ ದಾಸೋಹಮಂ ಮಾಡೆಂದು ತವೆ ಕಂಥೆಯೊಂದನೀಯಲ್ಕವರನುಜ್ಞೆಯಿಂ ಕೋರಾನ್ನಗಳನು ತಂದು (ಗುರುಚಾ. ೧೬–೧೨); ಶಂಕರದಾಸಯ್ಯಗೆ ಕಾದಿಯ ಹೊಲಿವ ಕಾಯಕ, ಅವರ ಶಿಷ್ಯಗೆ ಕೋರಾನ್ನದ ಕಾಯಕದಿಂದ ಬಡತನ ಹರಿಯದು (ಭೈರಸೂ. ೩೪೮). **ಕೋರಾಣ:** ಹಿಂದಣ ಮನೆಯ ಕೋರಾಣವೂ ಹೋಯಿತು; ಮುಂದಣ ಮನೆಯ ಭಿಕ್ಷೆಯೂ ಹೋಯಿತು ಎನ್ನುವ ಸ್ಥಿತಿಯೊದಗಿತ್ತು (ತಳರು. ೧೦೭). **ಕೋರಾನ:** ಕೋರಾನದ ಪಟ್ಟದ ವಿರುಪಾಕ್ಷಸ್ವಾಮಿಗೆ (ಬೊಂಕಶಾ. ೧೯೪೦, ಸಿರಸಿ. ೩೪–೧; ?). [ಕೋರು$_2$ (< ಕೋಱು$_2$) + ಅನ್ನ$_3$]

**ಕೋರಾನ್ನಭಿಕ್ಷೆ** (ನಾ). ಮನೆಮನೆಯಿಂದ ಬೇಡಿ ತರುವ ಧಾನ್ಯದ ಭಿಕ್ಷೆ: ಶಿವಯೋಗಿಗಳು ಎಂದಿನಂತೆ ಕೋರಾನ್ನಭಿಕ್ಷೆಗೆ ಹೋಗಿದ್ದಾಗ (ಗ್ರಾಮಾಯ. ೫೦೦). [ಕೋರಾನ್ನ + ಭಿಕ್ಷೆ]

**ಕೋರಾಯ** (ನಾ). ಹೊಲದಲ್ಲಿ ಬೆಳೆದ ಧಾನ್ಯದ ಪಾಲಿನ ಆದಾಯ (?) : ಬಂಕದೆರೆ ಸಿದ್ಧಾಯ ಬಿಟ್ಟಕೊಟ್ಟಣವನುಪಸುಂಕ ಮಲವದಿಕೆ ಸೊಲ್ಲಗೆ ಕವಣ ಕಡ್ಡಾಯದಂಕೆ ತಳವರಿಕೆ ಕೋರಾಯ ಗುತ್ತಿಗೆ ಅಪುತ್ರಿಕೆ ದಂಡವುಂಡಿಗೆಗಳು (ಸಿಂಗಿರಾ. ೨೨–೨೬). [ಕೋರು$_2$ (< ಕೋಱು$_2$) + ಆಯ$_7$]

**ಕೋರಾಸಾನಿ** 'ಖುರಾಸಾನಿ' ನೋ.

**ಕೋರಿ$_1$** 'ಕೋಱು$_1$' ನೋ.

**ಕೋರಿ$_2$** 'ಕೋಱು$_2$' ನೋ.

**ಕೋರಿ$_3$** 'ಕುವರಿ' ನೋ.

**ಕೋರಿ$_4$** 'ಗೋರು$_2$' ನೋ.

**ಕೋರಿಂದ** 'ಕೋರಿಂದೆ' ನೋ.

**ಕೋರಿಂದೆ,** ಕೋರಿಂದ (ನಾ). ಸುವಾಸನೆಯುಳ್ಳ ಒಂದು ಜಾತಿಯ ಗಿಡ; ಚಕ್ರವರ್ತೀ ಸೊಪ್ಪು: "ಜನೀ, ಜತೂಕಾ, ಜನನೀ, ಜತುಕೃತ್, ಚಕ್ರವರ್ತಿನೀ, ಕೋರಿಂದೇ ಗಿಡದ ಪೆಸರು; ಚಕ್ರವರ್ತೀಸೊಪ್ಪು (ಸಿದ್ಧಾಂತಿ. ೧೨೯); "ಸಾರಣೆಗಿಡ, ಮುಳ್ಳುಗಸೆ" (ಅಮರ. ಟೀಕೆ). **ಕೋರಿಂದ** : ಚಿತ್ರಮೂಲ, ಇಪ್ಪೆ, ಪಗಡೆ, ಬಿಳೀಉಪ್ಪಿ, ಕೋರಿಂದ, ಕಣಗಿಲೆ (ನಮ್ಮನು. ೨೩೮). [← ತೆಲು. ಕೋರಿಂದೆ, ಗೋರಿಂತೆ]

**ಕೋರಿಕಾಗದ** (ನಾ). ಬಟ್ಟೆಯ ಚಿಂದಿಗಳಿಂದ ತಯಾರುಮಾಡಿದ ಕಾಗದ; ಕತ್ತೆಕಾಗದ : ದಕ್ಷಿಣ ಕರ್ಣಾಟಕದಲ್ಲಿ ಕಾಗದದ ಹಸ್ತಪ್ರತಿಗಳು ಸಾಹಿತ್ಯ ಕೃತಿಗಳಿಗೆ ಸಂಬಂಧಿಸಿದುವು ಹೆಚ್ಚಾಗಿ ದೊರೆಯುತ್ತಿಲ್ಲ. ಉತ್ತರ ಕರ್ಣಾಟಕದಲ್ಲಿ ಆದರೆ ಇವು ಹೇರಳವಾಗಿ ಲಭ್ಯವಾಗಿವೆ. ಇದನ್ನು ಕೋರಿಕಾಗದ ಎಂದು ಕರೆಯುವ ರೂಢಿ ಇದ್ದಿತು (ಕನ್ನಸಂ. ೪೩). [ಕೋರಿ$_1$ (< ಕೋಱು$_1$) + ಕಾಗದ]

**ಕೋರಿಕುಂದ** (ನಾ). ಒಂದು ಸೀಮೆಯ ಹೆಸರು: ಮೂಲಸಂಘೇನಾನುಷ್ಠಿತಾಯ ಉರನೂರಾರ್ಹದಾಯತನಾಯ ಕೋರಿಕುನ್ದ ವಿಷಯೇ (ಎಕ. X, ಮಾಲೂರು. ೭೨–೨೪ ; 425). 'ಕೊಱಿಕುಂದ' ಪಠಾ. [?]

**ಕೋರಿಕೆ** 'ಕೋಱಿಕೆ' ನೋ.

**ಕೋರಿಜವ್ವನ** (ನಾ). ಹೊಸತಾದ ಯೌವನ; ಹೊಸ ಪ್ರಾಯ; ನವಯೌವನ: ಕೊಬ್ಬಿನ ಕೋರಿಜವ್ವನದ ಸೋಂಕಿನ ಮದವುಬ್ಬಿ ಯೊಸರಿ ಹರಿವಂತೆ ಹಬ್ಬಿದ ಚೆಲ್ವಮಿಸೆಗಳ ಸಾಲುಗಳದೊಂದೊಬ್ಬುಳಿ ಸಾಲದೆ ಪತಿಯ (ಭರಜ. ೬–೫೧). [ಕೋರಿ$_3$ (< ಕುವರಿ) + ಜವ್ವನ]

**ಕೋರಿತನ** (ನಾ). ಕುಮಾರಿಯಾಗಿರುವಿಕೆ; ಕನ್ಯಾವಸ್ಥೆ; ಕನ್ನೆತನ: ಕುಂತಿ ಮುನ್ನಾರಾರುಮಱಿಯದಂದದಲಿ ಕೋರಿತನದೊಳೀ ಕುವರನ ಪಡೆದು ಭಾಗೀರಥಿಯೊಳಿಟ್ಟಳು ಗಡಾ (ಕರ್ಣವ್ಯ. ೨–೨೬). [ಕೋರಿ$_3$ (< ಕುವರಿ) + –ತನ]

**ಕೋರಿಭಿಕ್ಷ** (ನಾ). ಮನೆಮನೆಗೆ ಹೋಗಿ ಧಾನ್ಯವನ್ನು ಬೇಡಿ ತರುವ ದಿನಗಟ್ಟಲೆಯ ವೃತ್ತಿ; ಕೋರಾನ್ನದ ಭಿಕ್ಷೆ: ಸುಮ್ಮನಿರದೇ ಏನು? ಪುಗಸಟ್ಟೆ ಕೂಳು, ಕೋರಿಭಿಕ್ಷದ ಸೇವೆ ನಡೆದರೆ ಆಯಿತು (ಮರಳಿ. ೬೮). [< ಕೋರಿ$_2$ (ಕೋಱು$_2$) + ಭಿಕ್ಷ]

**ಕೋರಿಮರ** (ನಾ). ಒಂದು ಜಾತಿಯ ಮರ: ಕೋರಿಮರದ ಎಲೆಗಳನ್ನು ಕುದಿಸಿ ಪಲ್ಲೆಮಾಡಿ (ಬರಗಾಲದಲ್ಲಿ) ತಿನ್ನುವರು. ಇದು ಆರೋಗ್ಯವೆಂದು ಹೇಳುತ್ತಾರೆ. (ಕಭಾಗ. ೧೨ ಪರಿ). [ಕೋರಿ ? + ಮರ$_1$]

**ಕೋರಿಯಂಗಿ** (ನಾ). ಕಂಬಳಿಯಿಂದ ಮಾಡಿದ ಅಂಗಿ; ಒಡ್ಡರು ಧರಿಸುವ ಕಂಬಳಿಯ ಕವಚ : (ಕ). [ಕೋರಿ$_1$ (< ಕೋಱು$_1$] + ಅಂಗಿ$_2$]

**ಕೋರಿವೆಣ್ಣು** (ನಾ). ಎಳೆಯ ಪ್ರಾಯದ ಹೆಣ್ಣು; ಕಿರಿಯ ಹರೆಯದ ಹೆಣ್ಣು : ಕುಂಕುಮ ವರ್ಣದ ಕೋಮಲದೇಹದ ಬಿಂಕದ ಕೋರಿವೆಣ್ಣುಗಳು ಶಂಕೆಯಿಲ್ಲದೆ ತಂದರಾರತಿಗಳ ಮಿನಾಂಕ ಸನ್ನಿಭನೊತ್ತಿಗಾಗಿ (ನಾಗಕು. ೮–೭೮); ಕೋರಿವೆಣ್ಣನು [illegible] ತೆಗೆದಿಡುವಂತೆ (ಜ್ಞಾನಚ. ೧೯–೩೭). [ಕೋರಿ$_3$ (< ಕುವರಿ) + ಪೆಣ್ಣು (< ಪೆಣ್)]

**ಕೋರಿಶೆಟ್ಟಿ** 'ಕೋರಿಸೆಟ್ಟಿ' ನೋ.

**ಕೋರಿಸು$_1$** (ಕ್ರಿ). ಸೀಳುವಂತೆ ಮಾಡು; ನಾಟು; ಇರಿ; ಚುಚ್ಚು (?) : ಗಗನ ಶ್ರೀ ಕುಚಭಾರದೊಳ್ ಪೊಳೆವ ಮುಕ್ತಾಲಂಬನಂ ಧ್ವಾಂತದಂತಿಗೆ ವಾಯ್ದಿಂದುಮ್ಮಗಾರಿ ಕೋರಿಸಿದುಗುರ್ ತಾವೆಂಬಿನಂ (ಅನಂಪು. ೭–೭೮). [ಕೋರು$_0$ (< ಕೊಱೆ$_1$) + –ಇಸು$_3$]

**ಕೋರಿಸು$_2$** (ಕ್ರಿ). (?) : ಅನಾದ್ಯ ಮಂತ್ರಾದೇವಾದೇವಿ ಓಂ ನಮೋ ಮದೋನಿವಿಪ ಪರುಪಿ ಕೋರಿಸಿದ ಜೋನಿಮ (ಎಕ. X, ಚಿಕ್ಕಬ. ೭–೪; 1700). [?]

**ಕೋರಿಸೆಟ್ಟಿ,** ಕೋರಿಶೆಟ್ಟಿ (ನಾ). ೧. ಹೆಗಲಮೇಲೆ ಕಂಬಳಿಯನ್ನು ಹೊದೆದು, ವ್ಯಾಪಾರಕ್ಕಾಗಿ ಕೈಚೀಲದಲ್ಲಿ ಸಾಮಾನುಗಳನ್ನು ತುಂಬಿಕೊಂಡು ಸಂಚರಿಸುವ ಲಿಂಗಾಯತ ವರ್ತಕ : "ಬಣಜಿಗಗಳಿಕೆಯಲ್ಲಿ ದಾಸೋಹಕ್ಕೆ ಕೊಡುವ ವ್ಯಾಪಾರಸ್ಥ" (ಜಾನಕೋ. ೪೩). **ಕೋರಿಶೆಟ್ಟಿ**: ಕೋರಿಶೆಟ್ಟಿಯ ವೇಷ ಧರಿಸುವೆ ನಾನು ಚೋರತನಕೆ ಯೆನಗೆ ಜೊತೆಯಾಗು ನೀನು (ಯುಚೋರ. ೨೮). ೨. ಚಿಲ್ಲರೆ ವ್ಯಾಪಾರಿ : "ತಿರುಗು ವ್ಯಾಪಾರಿ; ಕೋರಿಸೆಟ್ಟಿ" (Hawker. ಇಂಕನಿ). [ಕೋರಿ$_1$ (< ಕೋಱು$_1$) + ಸೆಟ್ಟಿ]

**ಕೋರಿಹಣ್ಣು** (ನಾ). ಉಪ್ಪುನೇರಳೆ ಹಣ್ಣು : (ಕ). [ಕೋರಿ$_1$ (< ಕೋಱು$_1$) + ಹಣ್ಣು (< ಪಣ್)]

**ಕೋರಿಹಲಗೆ** (ನಾ). (ಕರಾ) ಉತ್ತಗದ್ದೆಯಲ್ಲಿ ಬತ್ತದ ಸಸಿಗಳನ್ನು ನೆಡುವುದಕ್ಕೆ ಮುಂಚೆ ಅದನ್ನು ಸಮತಟ್ಟಾಗಿ ಮಾಡಿ ಗೆರೆ ಯೆಳೆಯಲು ಉಪಯೋಗಿಸುವ ಒಂದು ಉಪಕರಣ; ಹಲುಬೆ. [ಕೋರಿ$_4$ (< ಗೋರು$_2$) + ಹಲಗೆ (< ಪಲಗೆ$_1$). / **ತುಳು.** ಕೋರಿ ಪಲಾಯಿ, ಗೋರಪಲಾಯಿ]

**ಕೋರಿಹುಳ** (ನಾ). ಕಂಬಳಿಯಂತಹ ರೋಮಗಳಿಂದ ತುಂಬಿದ ಮೈಯುಳ್ಳ, ಒಂದು ಬಗೆಯ ಚಿಟ್ಟೆಯ ಮರಿಹುಳು; ಕಂಬಳಿ ಹುಳು : ಈ ಪ್ರಪಂಚದಲ್ಲಿ ಎಲ್ಲೆಲ್ಲಿಯೂ . . . ಕೋರೀಹುಳ ಹಾಗೂ ಜೊಂಡಿಂಗ ಇವೇ ತುಂಬಿಹೋಗಿವೆಯೆಂದು ನಮ್ಮಾಕೆಯ ಭಾವನೆ (ಇಪ್ಪಕ. ೩೬). [ಕೋರಿ$_1$ (< ಕೋಱು$_1$) + ಹುಳ (< ಪುೞು)]

**ಕೋರಿಹೊಲ** (ನಾ). ಕೋರಿಗೆ ಕೊಟ್ಟಿರುವ ಹೊಲ; ವಾರದ ಹೊಲ : ಆ ಜಮಿನ್ದಾರನಿಗೆ ಕೋರಿಹೊಲಗಳಿಂದ ಸಾಕಷ್ಟು ದವಸ ಧಾನ್ಯ ಬರುತ್ತದೆ (ರೂಢಿ). [ಕೋರಿ$_2$ (< ಕೋಱು$_2$) + ಹೊಲ (< ಪೊಲ)]

**ಕೋರು$_1$** 'ಕೋಱು$_1$' ನೋ.

**ಕೋರು$_2$** 'ಕೋಱು$_2$' ನೋ.

**ಕೋರು$_3$** (ನಾ). ೧. ಚಿನ್ನ ಅಥವಾ ಬೆಳ್ಳಿಯ ಸರಿಗೆಯ ಜರತಾರಿಯಿಂದ ಕೂಡಿದ ರೇಶ್ಮೆಯ ದಾರ : (ಕ). ೨. ಸಂಸ್ಥಾನ; ಆಧಿಪತ್ಯ : (ಕ) [?]

**ಕೋರುಗಾರ** (ನಾ). ಕೋರಿನಿಂದ ಹೊಲಮಾಡಿಸುವವನು; ಉತ್ಪನ್ನದ ಭಾಗವನ್ನು ಪಡೆಯತಕ್ಕವನು: ಈ ಭಕ್ತಿಯ ದೇಸಾಯಿಗಾರ ಅರಸನಿಗೂ ಕರಕೊಟ್ಟು, ಕೋರುಗಾರರಿಗೂ ಪಾಲು ಕೊಟ್ಟು (ಶರಚ. ೮೭). [ಕೋರು$_2$ (< ಕೋಱು$_2$) + -ಗಾರ (< -ಕಾಱ)]

**ಕೋರುಗುತ್ತಗೆ** (ನಾ). ಕೋರುಪಾಲು: ಯಾ ಕಾಲುವೆಗೆ ಉಂಟಾದ [ಗದೆ]ಗೆಯಿಂದ ಬಂದ ಕೋರುಗುತ್ತಗೆಯಲ್ಲದೆ ಫಲಭೋಗವನೂ ಚಉಂಡೇಶ್ವರಿ ದೇವರ ಅಮೃತಪಡಿ ನಯಿವೇದ್ಯ ದೀಪಾರಾಧನೆಗೆ ಸಲ್ಲಬೇಕು (ಸೌಇಇ. IX–ii, ೬೨೭–೨೮; 1547).
[ಕೋರು$_2$ (< ಕೋಱು$_2$) + ಗುತ್ತಗೆ (< ಗುತ್ತಿಗೆ)]

**ಕೋರುಹುಡುಗ** (ನಾ). ಪ್ರಾಯದ ಹುಡುಗ: ಬಣ್ಣದ ಒಲ್ಲಿ, ಬುಗುಡಿ ಅಂಚಿನ ಪಂಚೆ, ಉಲನ್ ಕೋಟುಗಳು ಆಗ ತಾನೆ ಪಿಟಾರಿಯಿಂದ ಹೊರಬಿದ್ದು ಕೋರುಹುಡುಗರನ್ನು ಅಲಂಕರಿಸಿದ್ದವು (ಸುವಸಂ. ೪೭). [< ಕೋರ$_1$ (< ಕುವರ$_2$) + ಹುಡುಗ]

**ಕೋರೆ$_1$**, ಕೋರ್ೆ$_4$, ಕೋರಾ$_1$ (ನಾ). ೧. ಓರೆ; ಡೊಂಕು; ವಕ್ರತೆ; ಸರಳವಿಲ್ಲದಿರುವುದು: ಓರೆಕೋರೆ ಕೆಂಪಾದವವ್ವಾ (ಸರ್ವವ. ೬೯–೩೭೭); ಓರೆ ಕೋರೆಗಳನ್ನು ತಿದ್ದು (ರೂಢಿ). ೨. ಮೂಲೆ; ಕೊನೆ: ನೀಳ್ದ ಕಣ್ಮಲರ ಕೋರೆಯ ಸುಣ್ಣದಿರೆಂಬ ಜೊನ್ನಮಂ ಸೂಸದೆ (ರಾಜಶೇ. ೧೦–೯೦). ೩. (ಆಲಂ) ವಕ್ರಸ್ವಭಾವ; ತುಂಟತನ; ದುಷ್ಟಸ್ವಭಾವ: (*). (ಗು). ೪. ಓರೆಯಾದ; ವಕ್ರವಾದ; ಸೊಟ್ಟಾದ. 'ಕೋರೆಗೊಂಬು', 'ಕೋರೆನೋಟ' ಪರಾ.
**ಕೋರ್ೆ$_4$**: ೧. ಪ್ರತಿಪದ್ದಿನದಿಂದುವ ಕಳೆ ಕೋರಂ (ಕುಮುರಾ. ೧೪–೪೯).
**ಕೋರಾ$_1$**: ೪. ಅವರು ಕೋರಾ ರುಮಾಲು ಸುತ್ತಿದ್ದಾರೆ (ರೂಢಿ). [?]

**ಕೋರೆ$_2$** 'ಕೋಱೆ$^3$' ನೋ.

**ಕೋರೆ$_3$** (ನಾ). ತೋಟದಲ್ಲಿ ಬೆಳೆಯುವ ಒಂದು ಜಾತಿಯ ಗಿಡ, ಅದರ ಹಣ್ಣು; ಗಣಿಕೆ: ತಾರೆಯ ಕೋರೆಯ ನೇರಿಲ ಪೇರಿಲ ಬೋರೆಯ ಬೆಳವಲ ಫಲವಿಹುದು (ಕರುಶ್ರಾ. ೫೪); ಪೇರಲ ಇದೆ, ಸೀತಾಪೇರಲ ಇದೆ, ಅಪರೂಪಕ್ಕೆ ಕೋರೆ ಇದೆ (ಅಮನಿ. ೩೦). [?]

**ಕೋರೆ$_4$** 'ಕೋರಾ$_2$' ನೋ.

**ಕೋರೆಕಾಗದ** (ನಾ). ಬರೆಯದಿರುವ ಕಾಗದ; ಖಾಲಿ ಕಾಗದ: ಕೋರೆಕಾಗದ, ಎಲ್ಲಾ ಜಾತೀವು (ಬರಿಯದೆ ಇದ್ದ ಕಾಗದ): ರೀಮು-ಗಡ್ಡಿ (ಮುಂಬವ್ಯಾ. ೧೪೮). [ಕೋರೆ$_4$ (< ಕೋರಾ$_2$) + ಕಾಗದ]

**ಕೋರೆಗೊಂಬು** (ನಾ). ಹರಿತವಾದ ಕೊಂಬು; ಮೊನಚಾದ ಕೋಡು, —ದಂತ: ಖಡ್ಗಿಯ ಮುಖಾಗ್ರದೊಳ್ ಕೂರ್ಪಿನಿಂ ನಿವಿರ್ದ್ದೊಂದೆ ಕೋರೆಗೊಂಬಿನ ತೆರದಿ (ಶ್ರೀರಾಮಾ. ೬೧೧–೨೦).
[ಕೋರೆ$_2$ (< ಕೋಱೆ$^3$) + ಕೊಂಬು$_2$]

**ಕೋರೆದಾಡೆ** 'ಕೋಱೆದಾಡೆ' ನೋ.

**ಕೋರೆದಿಂಗಳ್** (ನಾ). ವಕ್ರಚಂದ್ರ; ಬಾಲಚಂದ್ರ: ಸೂರ್ಯಬಿಂಬಂ ಬಡಿದ ರಭಸಕೆ ಮುರಿದ ಕೋಡಿನ ಕೋರೆದಿಂಗಳ್ (ಶ್ರೀರಾಮಾ. ೬೯೬–೫೦೪). [ಕೋರೆ$_1$ + ತಿಂಗಳ್]

**ಕೋರೆನೋಟ** (ನಾ). ಕೊಂಕಾದ ನೋಟ; ಸೊಟ್ಟಾದ ನೋಟ; ವಕ್ರದೃಷ್ಟಿ: ಮತ್ತಮಾ ಮತ್ತಕಾಸಿನಿಯರ್ . . . ದೇಸಿಯ ಕೋರೆನೋಟವ ಕೊನರಿಪುದು (ಚಿಕವಿ. ೬–೧೫೭ ಸಾಂಗತ್ಯ). [ಕೋರೆ$_1$+ ನೋಟ]

**ಕೋರೆಪೇಟೆ** (ನಾ). ಓರೆಯಾಗಿ ಸುತ್ತಿದ ಪೇಟ. [ಕೋರೆ$_1$ + ಪೇಟ]

**ಕೋರೆಮಿಾಸೆ$_1$** (ನಾ). ವಕ್ರವಾದ ಕುಡುಮಿಾಸೆ; ಕೊಂಕುಮಿಾಸೆ; ಓರೆಯಾಗಿ ಹುರಿಗೊಳಿಸಿದ ಮಿಾಸೆ: ಮೋರೆಯ ಗಂಟಿಕ್ಕಿ ಕೋರೆಮಿಾಸೆಯ ತಿಕ್ಕಿ (ಪಲಾಂಡು. ೧೩). [ಕೋರೆ$_1$ + ಮಿಾಸೆ]

**ಕೋರೆಮಿಾಸೆ$_2$** (ನಾ). ಮೊನಚುತುದಿಯುಳ್ಳ ಮಿಾಸೆ; ಕುಡಿಮಿಾಸೆ: "ಕುಡಿಮಿಾಸೆ" (ಜಾನಕೋ. ೪೩). [ಕೋರೆ$_2$ (< ಕೋಱೆ$^3$) + ಮಿಾಸೆ]

**ಕೋರೆರುಮಾಲು** (ನಾ). ೧. ಎದುರಿನಲ್ಲಿ ಕುಡಿಬರುವಂತೆ ಕಟ್ಟಿದ ರುಮಾಲು. ೨. ಹಣೆಯ ಒಕ್ಕಡೆಗೆ ಓರೆಯಾಗಿ ಬರುವಂತೆ ಕಟ್ಟಿದ ರುಮಾಲು, —ಮುಂಡಾಸು: (*). [ಕೋರೆ$_1$ + ರುಮಾಲು]

**ಕೋರೆಹಲ್ಲು** 'ಕೋಱೆವಲ್' ನೋ.

**ಕೋರೈಸು** 'ಕೋರಯಿಸು' ನೋ.

**ಕೋರ್ಗುಡಿಗೊಳ್** (ಕ್ರಿ). ಉದ್ಯೋಗಗೊಳ್ಳು (?): ತಾನುಮತಿತ್ವರಿತಗತಿಯಿನರಮನೆಯಿಂ ಪೊಱಮಟ್ಟು ನಡೆಯುತ್ತುಮಲ್ಲಲ್ಲಿ ನೆರೆದು ಗುಜಿಗುಜಿಗೊಂಡು ಕೋರ್ಗುಡಿ [ಪಾಠಾಂ.$_1$ ಕೊರ್ಗುದಿ]ಗೊಳ್ವ ಪುರಜನಮುಮಂ . . . ಈಕ್ಷಿಸುತ್ತುಂ (ವರ್ಧಪು. ೯–೫೭೭). ℙ ಇದು 'ಕೋಳ್ಗುದಿಗೊಳ್' ಎಂಬುದರ ಅಪಲಿಖಿತವಿರಬಹುದೇ?.

**ಕೋರ್ಜಿ** (ನಾ). (ಕರಾ) ಧಾನ್ಯದ ಒಂದು ಅಳತೆ; ನಲವತ್ತೆರಡು ಮುಡಿ: "೪೨ ಮುಡಿಗೆ ಒಂದು ಕೋರ್ಜಿ" (ಕಭಾಗ. ೨೯೦); ಸ್ವತಃ ಮನೆಯಲ್ಲಿ ಸಾಗುವಳಿ ಮಾಡಿಸಿ ವರುಷಕ್ಕೆ ಒಂದೆರಡು ಕೋರ್ಜಿಗೆ ಕಡಿಮೆಯಾಗದಂತೆ ಅಕ್ಕಿ ತೆಗೆಯುತ್ತಾರೆ (ಪರಾವ. ೧೮); ಒಂದೂವರೆ ಕೋರ್ಜಿ ಅಕ್ಕಿ ದೊರೆಯಬಹುದು (ಹಂಕತ. ೫೮); ನನಗೆ ಅವನು ಹತ್ತು ಕೋರ್ಜಿ ಆಸ್ತಿ ಗಳಿಸಬೇಕೆಂದಿಲ್ಲ (ಸ್ವಪ್ನಹೂ. ೮೧). [← ತುಳು. ಕೋರ್ಜಿ]

**ಕೋರ್ಟು** (ನಾ). ನ್ಯಾಯಾಸ್ಥಾನ; ನ್ಯಾಯಾಲಯ: ಗಂಡಿಗೆ ಸಾಲವೆ ಗಂಡ ಕೋರ್ಟು ತೀರ್ಮಾನವೆ ಸಾಲದ ಗಂಡಸು ಕೋರ್ಟಿಗೆ ಛಂಡನೆ ಗಂಡ (ಇಂಚಾಪ. ೧೭೧–೯೧); ನ್ಯಾಯಾಧಿಕಾರಿಯು ಕೋರ್ಟು ಬರಖಾಸ್ತೆಂದು ಹುಕುಂಮಾಡಿದನು (ಕಥಾಮಂ. IV, ೮೫); ಆ ಬರಹದ ಆಧಾರದ ಮೇಲೆ ಕೋರ್ಟಿನಲ್ಲಿ ವ್ಯಾಜ್ಯಮಾಡಿ ಡಿಕ್ರಿಮಾಡಿ ಸಾಲಿಗನ ಸರ್ವಸ್ವವನ್ನು ಸುಲಿದು ಬಿಡುತ್ತಾರೆ (ಕುರುಕಾ. ೩೪).
[← ಇಂ. Court]

**ಕೋಲ್$_1$**, ಕೋಲು$_1$ (ನಾ). ೧. ದೊಣ್ಣೆ; ಬಡಿಗೆ; ದಂಡ; ಜಲ್ಲೆ: "ವೈಣವಃ, ಲಕುಟಃ, ರಂಭಃ, ದಂಡಃ, ಯಷ್ಟಿಃ – ಈ ೫ ಕೋಲ್" (ಹಲಾಯು. ೧೨೦–೪೦); ಸತ್ತಿಗೆ ಗಗ್ಗರಂ ಕರುಳ ಬಕ್ಕಳೆ . . . ಪಂಚಮಸ್ವನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಕೊಪ್ಪಿದಳ್ (ಕಾವ್ಯಸಾ. ೫೩೩ ಶೂದ್ರಕ); ಕಿಱುಗೂಸು ಕೋಲಂ ಪಿಡಿದು ನಿಮ್ಮಂ ಬಡಿಯಲ್ಕೆಂದು ಬಂದೊಡೆ (ವಡ್ಡಾರಾ. ೯೪–೮); ಕೇಲಂ ಮಾಡುವ ತಿಗುರಿಯ ಕೋಲಂತೆವೊಲ್ ಇದ್ದ ದಿಟ್ಟಜಂತ್ರದ ಕೀಲ್ ತಳೆದಂತಿರಾಯ್ತು (ಶಮುದ. ೩೯ ಪ್ರಯೋ); ಕರ್ವಿನ ಕೋಲೆ ಬಿಲ್ (ಕಬ್ಬಿಕಾ. ೧೭೪); ಸುಂಟಿಗೆಯ ಕೋಲಲಿ ಪೊರ್ಳ್ಳೆ ಕಾಸುತ್ತ (ಬಸವು. ೧೪–೨೯). ೨. ಬಾಣ; ಅಂಬು; ಸರಳು: "ಕಣೆಕೋಲ್ಪುಣುಂಬು ಸರಲೆನಲಂಬು" (ಶಬ್ದಮಂ. ೪೪); "ಕೋಲ್ ಅಂಬಿಗೆ ಪೆಸರ್" (ಕಶಸಾ. ೭–೧೯೯); "ಕೋಲ್ಶರಂ" (ಕರ್ಣಾನಿ. ೭); ರಣಮುಖದುಳ್ಳ ಕೋಲಂ ನೆರಿಯುರ್ಕ್ಕುಮಣಿನ್ದ್ರಗುಣನ್ (ಎಕ. XI, ಚಿತ್ರದು. ೪೩–೨; 500); ಸುಟ್ಟುಪುವೆನೆ ನೆಗೆದುವು ಕೋಲ ಪೊಗೆಯುಮುಂಬಿನ ಕಿಡಿಯುಂ (ಪಂಪಭಾ. ೧೨–೧೮೭); ಅಂತೆಚ್ಚ ಕೋಲಿಂ ಮುನ್ನಮೆ ಸುರುಳ್ದುರುಳ್ದು (ಪಂಚತಂ. ೧೨೮–೮); ಕೋಲ್ಗಳ ಕವಿಸುವಂದವಿದೊಳ್ಳಿತು (ಕುಮ್ಯಾದ್ರೋ. ೧–೬೨). ೩. ಅಳತೆಗಾಗಿ ಬಳಸುವ ಕಡ್ಡಿ; ಅಳತೆಯ ಕಡ್ಡಿ: ಊರ ಈಶಾನ್ಯದ ದೆಸೆಯೊಳಿಟ್ಟಿಗೆ ಬಟ್ಟೆಯಿಂ ಬಡಗಲು ಕುಱಿತ ಕುಂಟಿಯ ಕೋಲೊಳ್ಪನ್ನೆರಡು ಮತ್ತರ್ಕೆಯ್ಯುಂ (ಸೌಇಇ. XI–i, ೮೨–೧೭; 1049); ಪಿರಿದಪ್ಪ ಕೋಲ್ಗಳಿಂದಂ ಪಿರಿದೆನಿಸಿದ ಕೊಳಗದಿಂದ ಮುಂ ತಾಂ ಕೊಂಡಂಕಿರಿ ಪೆರರ್ಗೆ ಕುಡಿಸಿ (ಸಮುಪ. ೫–೪೮);

**ಕೋಲು**₁ : ೧. ಕಿಚ್ಚಿನಲ್ಲಿ ಕೋಲ ಬಯ್ಚಿಟ್ಟಂತಿರಬೇಕು(ಬಸವ.೯೨೮); ಕಬ್ಬಿನ ಕೋಲು ಬಡವೆ (ಮೋಹತ. ೩೫-೯೨); ಹಾವು ಸಾಯಬಾರದು ಕೋಲು ಮುರಿಯಬಾರದು (ಗಾದೆ). ೨. "ಕೋಲುಂ ಸರಲ್ ಪುಣ್ಪು ವೋಜ್ ಕಣೆಯೆನಲ್ಕುಂಬಕ್ಕು" (ಕಬ್ಬಿಗ. ೩೯); ಗಱಿಯ ಕಟ್ಟಿದ ಕೋಲು ಗುರಿಯ ತಾಕಬಲ್ಲುದೆ (ಮುಡಿಮಾ. ೪೪); ಪಾರ್ಥನ ಕೋಲುಗಳ ನೆಱೆ ತಱಿದು ತೀವಿದನಂದಿನಲೆ ನಭವ (ಕುವ್ಯಾಕ. ೧೪-೧೬); ಕೋಲು ಹೆಣನೊಂದಾಗಿ ಬೀಳು (ತೊರವಾ. ೫-೩೫-೩೮). ೩. ಈ ಮಳೆಗೆಯಲಿ ಕೋಲು ಕೊಳಗ ಸಕಲ ಸಾಮ್ಯವೆಲ್ಲವೂ (ಕಇ. I, ೩೦-೬೩ ; 1222).

[ದೇ. ‖ ತಮಿ. ಮಲ. ಕೋಲ್; ತುಳು. ಕೋಲು; ತೆಲು. ಕೋಲ]

**ಕೋಲ್₂**, ಕೋಲು₂, **ಕೂಲ್**₁ (ಗು). ಉದ್ದವಾದ; ನೀಳವಾದ; ದೀರ್ಘವಾದ. 'ಕೋಲ್ವಲೆ' ಪರಾ. **ಕೋಲು₂**: (ಕ). **ಕೂಲ್**₁: (ಕ). [< ಕೋಲ್₁]

**ಕೋಲ್**₃, ಕೊಲ್₄ (ನಾ). ೧. ಸೇರಿಸುವಿಕೆ; ಕೂಡಿಸುವಿಕೆ: (ಕ). ೨. ನೀರನ್ನು ದಾಟುವ ಸಾಧನ; ತೆಪ್ಪ; ತೇಲುವೆ; ದೋಣಿ. 'ಹಱಿಗೋಲ್' ಪರಾ. **ಕೊಲ್₂**. 'ಪಱಿಗೊಲ್', 'ಹಱಿಗೊಲ್' ಪರಾ.

[ದೇ. ‖ ತಮಿ. ಕೋಲ್, ಕೋಲ; ಮಲ. ಕೊಲ; ತೆಲು. ಕೋಲ. / ಸಂ. ಕೋಲ]

**ಕೋಲ**₁ (ನಾ). ೧. ಅಲಂಕಾರ; ಶೃಂಗಾರಮಾಡುವುದು; ರಂಗವಲ್ಲಿಯ ಸಿಂಗಾರ. 'ಕೋಲಕಾರಳೆ' ಪರಾ. ೨. (ಕರಾ) ಭೂತಗಳಿಗೆ ಸಲ್ಲಿಸುವ ಸೇವೆ, —ಹರಕೆ, —ಉತ್ಸವ: ಮಲೆಯ ಕಡವಳ ಬಂದು ಹುಲಿಯಾಗಿ ಕಾಡುವಂ ಸಲಿಸದಿರೆ ಕೋಲಮಂ (ಕಾಲೂರ. ೭೯-೧೪೮); ವರ್ಷ ವರ್ಷ ದೈವಗಳಿಗೆ ಕೋಲವೆಂಬ ಉತ್ಸವ ಮಾಡ್ತಾರು. ಕೋಲಕ್ಕೆ ಗಡಿಗೆ ತುಂಬ ಹೆಂಡ ಕೊಟ್ತಾರು (ತುಳುನಾ. ೫೪); ಮರುದಿನವೆ ಆ ಭೂತಕ್ಕೆ ತಾನು ಹೊತ್ತ ಹರಕೆಯ ಕೋಲವನ್ನು ಮಾಡಿಸುವಂತೆ ಮಾಡಿದ್ದಳು (ಕೈಮಾಂಸ. ೧೧೭); ಅದಕ್ಕಾಗಿ ನಮ್ಮ ಮನೆಯ 'ಕಲ್ಕುಡ, ಕಾಳಮ್ಮ, ಕಲ್ರುಟ್ಟಿ' ಭೂತಗಳಿಗೆ ಒಂದು ಕೋಲ ಕೊಡುತ್ತೇನೆ (ಪರಾವ. ೮೫). ೩. (ಕರಾ) ಭೂತದ ವೇಷವನ್ನು ಕಟ್ಟಿದವನು ಮಾಡುವ ಕುಣಿತ; ಭೂತನರ್ತನ: ಈ ಭೂತಾರಾಧನೆಯು 'ಕೋಲ' (Devil Dance), 'ನೇಮ'ಗಳ ರೂಪದಲ್ಲಿ ಬಹು ವಿಜೃಂಭಣೆಯಲ್ಲಿ ಹಿಂದಕ್ಕೆ ನಡೆಯುತ್ತಿತ್ತು (ತುಳುನಾ. ೨೫೨); ಇತ್ತಣ ಕಡೆಗಳಲ್ಲಿ ಭೂತಗಳ 'ಕೋಲ' ಎಂಬ ನರ್ತನವನ್ನು ಭೂತಭಕ್ತರು ಮಾಡಿಸುತ್ತಾರೆ (ಪಾರ್ತಿಸು. ೪೫); ಅಕೆ ಒಂದು ಭೂತದ ಕೋಲ ನೋಡಲು ಹೋಗಿ, ಅದರ ಫೋಟೋವನ್ನು ತೆಗೆದು ಬಂದಳಂತೆ (ಯಕ್ಷಬ. IV, ಮುನ್ನುಡಿ). ೪. ನಟನೆ; ಸೋಗು; ವೇಷ: ಕಾಲಕ್ಕೆ ತಕ್ಕ ಕೋಲ (ಗಾದೆ). ೫. ಒಂದು ಬಗೆಯ ಸಾರ್ವಜನಿಕ ಮೆರವಣಿಗೆ: (ಕ). ೬. (ಕರಾ) ವಿಚಿತ್ರ ವಾದ ವೇಷ; ಒಯ್ಯಾರ: ಆ ಹೆಣ್ಣಿನ ಕೋಲ ನೋಡಿ ಸಾಕಾಗಿ ಹೋಯಿತು (ರೂಢಿ).

[ದೇ. ‖ ತಮಿ. ಮಲ. ತೆಲು. ಕೋಲ; ತುಳು. ಕೊಲೊ]

**ಕೋಲ**₂, ಕೋಳ₂ (ನಾ). ೧. ಕಾಡುಹಂದಿ; ವರಾಹ: "ವರಾಹಃ, ಸೂಕರಃ, ಘೃಷ್ಟಿಃ, ಕೋಲಃ. . .ಕ್ರೋಡಃ, ಭೂದಾರಃ–೧೨ ಕಾಡುಹಂದಿ" (ಸಿದ್ಧಾಂತಿ.೧೩೪); ಇರೆ ಗುಹಂ ಗಂಗಾತಟಮೊಳೆ ತಕ್ಕೋಲನಂ ಹರಿಸಲದಱಿಂದಲ್ಲಿ ಸೂಕರಾರೋಹಮೆಂಬುರು ತೀರ್ಥಮಿಪ್ಪುದು (ಪದ್ಮರಾ. ೧೦-೧೪೦). ೨. ತೆಪ್ಪ; ಹರಿಗೋಲು: "ಉಡುಪಂ, ಪ್ಲವಃ, ಕೋಲಃ–೩ ತೆಪ್ಪದ ಹೆಸರುಗಳು; ಅಂದರೆ ಹರಿಗೋಲು" (ಸಿದ್ಧಾಂತಿ. ೭೦). ೩. ಒಂದು ಜಾತಿಯ ಮರ, —ಎಲಚಿ: "ಕೋಲಂ ಕರ್ಕಂದು ಬದರಿ ಕೋಲೀನಾಮಂ" (ವಸ್ತುಕೋ. ೩೪-೧೧); "ಎಲಚಿಹಣ್ಣು; ಬೋರೆಹಣ್ಣು" (ಅಮರ. ಟೀಕೆ). ೪. ಕರಿಮೆಣಸು. 'ಕೋಲದಲ' ಪರಾ. **ಕೋಳ₂**: ೧. "ಕೋಳಃ, ಕ್ರೋಡಃ . . . ಘೃಷ್ಟಿಃ, ಕಿರಿಃ –ಈ ೮ ಹಂದಿ" (ಹಲಾಯು. ೩೮-೬೩). ೨. ಕೊರ್ಬಿರ್ದ ಕೋಳನಂ ಕೊಂದ ಸೊಡ್ಡಾಳನಂ ಭಜಿಪ ಭೂಪಾಳನಂ ಸತ್ಕೇಂದ್ರ ಚೋಳನಂ ಪೊಗಳಲಳವೆ (ಭಾವಚಿಂ. ೨-೧೬). [ಸಂ.]

**ಕೋಲಂಬಕ** (ನಾ). ವೀಣೆಯ ತಂತಿ, ಹೆರಳು, ಮೊದಲಾದ ಶರೀರ: "ಕೋಲಂಬಕಃ – ಅಸ್ಥಾಃ, ಕಾಯಃ – ವೀಣೆಯ ತಂತಿ, ಹೆರಳು ಮೊದಲಾದ ಶರೀರದ ಹೆಸರು" (ಸಿದ್ಧಾಂತಿ. ೫೪). [ಸಂ.]

**ಕೋಲಂಬು** (ನಾ). ಬಾಣದ ಪ್ರಭೇದಗಳಲ್ಲೊಂದು; ತುದಿಯಲ್ಲಿ ಕವಲಿಲ್ಲದೆ ದಂಡಾಕಾರದ ಉದ್ದವಾದ ಬಾಣ (?) : ನೊಱಂಬ ವಾಡಿಯಯ್ಯಪ್ಪದೇವನ ಮುಗನಪ್ಪಣ್ಣಗನ್ ಪರಿಬನ್ದು ಪಡುಗಲ್ಲ ಮುತ್ತಿದೊಡೆ [ಕೋ]ಲಂಬು ಪಾಱಿದೊಡೆ (ಸೌಇಇ. IX–i, ೫೮-೯; 10ನೆಯ ಶತ); ಮುಗಿಲ ಬಣ್ಣದ ಪಕ್ಷಿ ಮಗನ ಕೈಯರಗಿಳಿ ಗಗನದ ಕೋಲಂಬಿನಲ್ಲಿ ಸ್ವಪ್ನದ ಸಿಲವನು ತೆಗೆದೆಚ್ಚವನಾರೊ (ಅವಹಂ. ೯-೩೪).

[ಕೋಲ್₁ + ಅಂಬು₂]

**ಕೋಲಕ** (ನಾ). ೧. ಒಂದು ಪರಿಮಳದ್ರವ್ಯ ಅಥವಾ ಆ ಪರಿಮಳ ದ್ರವ್ಯದ ಗಿಡ; ತಕ್ಕೋಲ: "ಕೋಲಕಂ, ತಕ್ಕೋಲಕಂ ಕೋಶ ಫಲಂ – ೩ ತಕ್ಕೋಲದ ಗಿಡ, ತಕ್ಕೋಲದ ಬೊಂಕೆ, ತಕ್ಕೋಲದ ಫಲ, ಪರಿಮಳದ ಚಕ್ಕೆಮರ" (ಸಿದ್ಧಾಂತಿ. ೧೮೦). ೨. ಕರಿಮೆಣಸಿನ ಕಾಳು: "ಕೋಲಕಂ, . . . ಧಾರ್ಮಪತ್ತ್ರನಂ ೭ ಮೆಣಸು ಕಾಳಿನ ಹೆಸರುಗಳು" (ಸಿದ್ಧಾಂತಿ. ೨೪೪). [ಸಂ.]

**ಕೋಲಕಟ್ಟು** 'ಕೋಲಗಟ್ಟು' ನೋ.

**ಕೋಲಕಾರಳೆ** (ನಾ). ಅಲಂಕಾರಕ್ಕಾಗಿ ಹಾಕಿದ ಕಾರಣೆ: ವೈದ್ಯನಾಥ ಧ್ಯಾನಕ್ಕೂ ಓದಿಗೂ ಕುಳಿತುಕೊಳ್ಳುವ ಜಾಗ ಕೋಲಕಾರಳೆ, ರೇಶಿಮೆವಸ್ತ್ರ ಹಾಕಿದ ಮಣೆಗಳಿಂದ ಅಲಂಕಾರವಾಗಿದ್ದವು (ಸುಖವಿ. ೮೮). [ಕೋಲ₁ + ಕಾರಳೆ (< ಕಾರಣೆ)]

**ಕೋಲಗಟ್ಟು**, ಕೋಲಕಟ್ಟು (ಕ್ರಿ). ೧. (ಕರಾ) ಭೂತದ ಉತ್ಸವಕ್ಕೋಸ್ಕರ ಭೂತದ ವೇಷವನ್ನು ಕಟ್ಟು. ೨. (ಆಲಂ) ಸೋಗನ್ನು ಹಾಕಿಕೊಳ್ಳು; ನಟಿಸು; ವೇಷಕಟ್ಟು: ಎರಡರಿಂದಲೂ ಪಂಪನೆಂದರೆ, ಗುರಿಗೊಳ್ಳಲಾರದ ವಸ್ತು ರಚನೆಗಿಳಿದು ಕಾಲ ಬಂದಂತೆ ಕೋಲಗಟ್ಟುತ್ತಿದ್ದವನು ಎಂದೇ ಹೇಳಿದಂತಾಗುವುದು (ನಾಡೋಜ. ೧೯೩). **ಕೋಲಕಟ್ಟು**: ೧. ನೀನು ಮನೆಗೆ ಬಂದಾಗ ಕೋಲಕಟ್ಟಿದ ಮಲೆಯನ ಹಾಗೆ ಕೆಂಪಾಗಿದ್ದೆ (ನಡೆದಾ. II, ೧೧೩೭). [ಕೋಲ₁ + ಕಟ್ಟು₁]

**ಕೊಲಗಾರ** 'ಕೋಲ್ಗಾಱ' ನೋ.

**ಕೋಲಚಾರಿ** (ನಾ). [ನಾಟ್ಯ] ಒಂದು ನೃತ್ಯಭೇದ; ಕುಣಿತದಲ್ಲಿ ಒಂದು ಬಗೆ: ವಡಿ ತಪ್ಪದೆ ಕೋಲಚಾರಿಗಳಿಂದ ಜಕ್ಕಡಿ ಮೆಱೆದುವು ದೇವಾಲಯದಿ (ಮೋಹತ. ೧೮-೭); ಅನುಗೊಳಿಸಿ ಚಿಂದು ಜಕ್ಕಡಿ ಕೋಲಚಾರಿಗಳ್ ಮೊನೆಗಾಲ್ ಕಳಾಸ ಕೈಮುರೆ ತಿವುಡೆ ಮುಡುಹು ಮುಳ್ಳನಿತು ಭೇದಂಗಳಿಂ ನರ್ತಿಸುವ ನೃತ್ಯದಬಲಾಜನಂ ಕಣ್ಗೆಸೆದುದು (ಚಬಪು. ೨-೨೯); ಮೆಱೆವಂಗ ಪ್ರತ್ಯಂಗೋಪಾಂಗ ಬಹುಚಾಳಿವರದೇಸಿ ಕೋಲಚಾರಿಗಳ . . . ಬಿರುದಿನ ನಾಟ್ಯವಾಡಿದರು (ಕಂನವಿ. ೮-೬೩); ಆ ನರ್ತಕಿಯರಿಗೆ . . . ಕೋಲಚಾರಿ, ಅಂಗಹಾರ, ಮಂಡಲ, ಕರಕ್ಷೇತ್ರ ಎಂಬುವೆಲ್ಲ ಚೆನ್ನಾಗಿ ಗೊತ್ತಿದ್ದುವು (ಕರ್ನಾಜ. ೧೭೮).

[ಕೋಲ₁ + ಚಾರಿ₂]

**ಕೋಲಣಿ** (ನಾ). ಅಣ್ಣೆಹೂವು: ಬಾಲೆ ಬೋಳಿಯು ಹೊಲ್ಲ ಮಾಲೆ ಕೋಲಣಿ ಹೊಲ್ಲ ಕಾಲವಾಜರಲಿ ಉಮ್ಮಳಿಪ ಬೇಸಗೆಯ ಕಾಲವೇ ಹೊಲ್ಲ (ಸರ್ವಜ್ಞ. ೧೩೬೭). [ಕೋಲ್$_1$ + ಅಣಿ$_0$ (< ಅಣ್ಣೆ)]

**ಕೋಲಣ್ಣ** (ನಾ). (ಚಾಟಿಯ) ಕೋಲನ್ನು ಕೈಯಲ್ಲಿ ಹಿಡಿದಿರುವ ಹಿರಿಯ; ಮಕ್ಕಳಿಗೆ ವಿದ್ಯೆಯನ್ನು ಕಲಿಸುವ ಗುರು; ಮಾಸ್ತರ; ಶಿಕ್ಷಕ: ಸಣ್ಣವರುಗಳನೋದಿಸುತಿರ್ದ ಕಸೆಯ ಕೋಲಣ್ಣಗಳ್ ಚೌಪದಿಗವಿತೆ ಬಣ್ಣಗಂಬಿಯು ಪುಸ್ತಕ ಲಿಖಿತಜ್ಞರು ಕನ್ನಡಕವ ತಾಳ್ದಹರು (ಮೋಹತ. ೩-೪೧). [ಕೋಲ್$_1$ + ಅಣ್ಣ$_1$]

**ಕೋಲದಲ** (ನಾ). ೧. ಮೆಣಸಿನ ಬಳ್ಳಿಯ ಎಲೆ. ೨. ಒಂದು ಬಗೆಯ ಸುಗಂಧದ್ರವ್ಯ: (ಕ). [ಕೋಲ$_3$ + ದಲ]

**ಕೋಲಪೊನ್ನೆ** (ನಾ). ನರಿಹೊನ್ನೆಗಿಡ: "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ, —೪ ಕೋಲಪೊನ್ನೆ ಎಂಬುವದು, ನರಿ ಹೊನ್ನೇಗಿಡ" (ಸಿದ್ಧಾಂತಿ. ೧೧೭). [ಕೋಲ$_0$ + ಪೊನ್ನೆ]

**ಕೋಲಬಲಿ,** ಕೋಲಬಳಿ (ನಾ). ಸೈನ್ಯದ ಪ್ರಭೇದ; ದಂಡಿನ ಪಂಗಡ: ಅಂಣ ತಂಮಂದಿರು ತಮ್ಮೊಳೆ ತಾಉ ಮಾಗೀಕೊಂಡ ಕದನ ದಲಿ ನಗಿರೆಯ ಎರಡು ಕೋಲಬಲಿ (ಕಇ. I, ೬೧-೯; 1471). ಕೋಲಬಳಿ: [ವೊಡೆ]ಯರ ಎರಡು ಕೋಲಬಳಿ ಸಹ ಹುಗಿಲಿ ಒತ್ತಿದಲಿ ಉಭಯನ[ಹಸ] × ಡವ (ಕಇ. I, ೬೧-೧೩; 1471); ತಮ್ಮ ಸಮಸ್ತ-ಎರಡು ಕೋಲಬಳಿ ವೀರಪರಿವಾರ ಸಹವಾಗಿ ದಂಡೆತ್ತಿ ಹೋದಲ್ಲಿ (ಕಇ. III-i, ೨೮-೭; 1530). [?]

**ಕೋಲಬಳಿ** 'ಕೋಲಬಲಿ' ನೋ.

**ಕೋಲಮಾಡಿಸು** (ಕ್ರಿ). ೧. (ಕರಾ) ಅಲಂಕರಿಸಿಕೊಳ್ಳುವಂತೆ ಮಾಡು; ಸಿಂಗರಿಸುವಂತೆ ಮಾಡು. ೨. ಭೂತೋತ್ಸವವನ್ನು ನಡೆಯಿಸು; ಭೂತದ ವೇಷಧಾರಿಯನ್ನು ಕುಣಿಸು: ಕಲ್ಕುಡನಿಗೆ ವಿಜೃಂಭಣೆಯಿಂದ ಕೋಲಮಾಡಿಸಿ (ಕುಡಿಕೂ. ೪). [ಕೋಲಮಾಡು + -ಇಸು$_3$]

**ಕೋಲಮಾಡು** (ಕ್ರಿ). ೧. (ಕರಾ) ಅಲಂಕಾರಮಾಡು; ಸಿಂಗರಿಸು. ೨. ಭೂತಗಳ ಉತ್ಸವವನ್ನು ಮಾಡು. 'ಕೋಲಮಾಡಿಸು' ಪರಾ. [ಕೋಲ$_1$ + ಮಾಡು$_1$]

**ಕೋಲಮುಕ್ಕ** (ನಾ). ಒಂದು ಮರದ ಹೆಸರು: "ಕೋಲತೀತಿ ಗುದ್ದಲಿಸಿದಪುದೆಂಬುದು . . . ನಿಕೋಲಃ - ಕೋಲಮುಕ್ಕನಮರಂ" (ಕಾಶಕ್ಕೃ. ೪೪). [?]

**ಕೋಲಮುರಕ** 'ಕೋಲುಮುರುಕ' ನೋ.

**ಕೋಲಮುರಕನ ತೋಟಿ** (ನಾ). ಒಂದು ಬಗೆಯ ಔಷಧಿ ಸಸ್ಯ: ಅಮರಬಳ್ಳಿ, ಕೋಲಮುರಕನ ತೋಟಿ . . . ಇವು ಯಾವಾಗಲೂ ಹಸಿಯವೇ ಉಪಯೋಗಿಸಲ್ಪಡಬೇಕು (ಗೃಹವೈ. ೨).

[< ಕೋಲು$_1$ (< ಕೋಲ್$_1$) + ಮುರುಕ$_1$ (< ಮುಱುಕ$_1$) + ತೋಟಿ$_1$]

**ಕೋಲಮೂಗ** (ನಾ). ಹಂದಿಯಂತೆ ಮೂಗುಳ್ಳವನು: ತುರಗಾಕೃತಿ ಕೃಷ್ಣಾಜಿನ ಪರೀವೃತಂ ಕೋಲ [ಪಾಠಾಂ. ಕಾಳ] ಮೂಗನಿಘುಸಹಿತ ಧನುರ್ಧರನುಜ್ಜ್ವಲ ಕುಸುಮಧರಂ ದುರಾಸದಂ ಸಿಂಹಮಧ್ಯಮದ್ರೇಕ್ಕಾಣಂ (ಜಾತಕ. ೧೯-೧೪). [ಕೋಲ$_2$ + ಮೂಗು$_1$ + -ಅ$_7$]

**ಕೋಲರಗು** (ನಾ). ಮುದ್ರೆಹಾಕಲು ಸಿದ್ಧಗೊಳಿಸಿದ ಅರಗಿನ ಕಡ್ಡಿ; ಮುದ್ರೆ ಒತ್ತುವುದಕ್ಕಾಗಿ ಬಳಸುವ ಕಡ್ಡಿ ಅರಗು: (ಕ). 'ಕಡ್ಡಿಯರಗು' ಪರಾ. [< ಕೋಲ್$_1$ + ಅರಗು$_3$]

**ಕೋಲಲಬು** (ನಾ). ಒಂದು ಬಗೆಯ ಜೊಂಡು ಹುಲ್ಲು: (ಕ). [ಕೋಲ್$_1$ + ಅಲಬು$_1$]

**ಕೋಲವ** (ನಾ). ಉದ್ದವಾದ ಕರಿಮೆಣಸು; ಹಿಪ್ಪಲಿ: "ಬಂಗರಳಿಯೆನೆ ಹೀಲವಕ್ಕಂ ಕೋಲೆ ಕೋಲವಂ [ಪಾಠಾಂ. ಕಂ]" (ಮಂಗರಾ. ೩೬-೧೭). [ಸಂ.]

**ಕೋಲವಲ್ಲಿ** (ನಾ). ಗಜಹಿಪ್ಪಲಿ: "ಕರಿಪಿಪ್ಪಲೀ, ಕಪಿವಲ್ಲೀ, ಕೋಲವಲ್ಲೀ, ಶ್ರೇಯಸೀ, ವಸಿರಃ - ೫ ಗಜಹಿಪ್ಪಲೀ ಹೆಸರುಗಳು" (ಸಿದ್ಧಾಂತಿ. ೧೧೭). [ಸಂ. ಕೋಲವಲ್ಲೀ]

**ಕೋಲಸಂಪಿಗೆ** (ನಾ). ಒಂದು ಬಗೆಯ ಸಂಪಿಗೆ; ಉದ್ದವಾದ ಸಂಪಿಗೆ: "ಹೇಮಪುಷ್ಪಕ = ಕೋಲಸಂಪಿಗೆ ಹೂವು" (ಗಂಗಾಮ. ೩೫೩); ಪುಷ್ಪ ವೃಕ್ಷಗಳಲ್ಲಿ ದೊಡ್ಡ ವೃಕ್ಷಗಳಾಗತಕ್ಕ ಸುಂದರ ಪುಷ್ಪಗಿಡಗಳು ಸಂಪಿಗೆ, ವನಸಂಪಿಗೆ, ನಾಗಸಂಪಿಗೆ, ಕೋಲಸಂಪಿಗೆ . . . ಇವುಗಳೆಲ್ಲ ಬೀಜಗಳಾಗಿವೆ (ಕೃಷಿಪ್ರ. ೨೦೦).

[< ಕೋಲ್$_2$ + ಸಂಪಿಗೆ]

**ಕೋಲಳವಿ** (ನಾ). ಬಾಣದ ಸಾಮರ್ಥ್ಯಕ್ಕೆ ಒಳಗಾಗುವಷ್ಟು ದೂರ: ಎಚ್ಚನವರವರೆಚ್ಚ ಬಾಣವ ಕೊಚ್ಚಿದನು ಕೋಲಳವಿಗೊಡ್ಡಿದ ನಿಚ್ಚಟರ ನೀಗಿದನು (ಕುವ್ಯಾಕ. ೧೫-೨೨).

[ಕೋಲ್$_1$ + ಅಳವಿ]

**ಕೋಲಳವಿಗೊಳ್** (ನಾ). ಬಾಣ ಯುದ್ಧಕ್ಕೆ ತೊಡಗು: ನಿನ್ನವರು ಮಸಗಿದ ಕಡಲವೊಲು ಬಲುದವಕಿಗರು ಕೋಲಳವಿಗೊಂಡರು ಕೋಡಕೈಗಳಲಿ (ಕುವ್ಯಾಕ. ೧೫-೧೩). [ಕೋಲಳವಿ + ಕೊಳ್$_1$]

**ಕೋಲಾಕೋಲಿ** (ಕ್ರಿ). ಬಾಣಗಳ ಯುದ್ಧ: ಕೋಲಿಂ ಕೋಲಿಂ ಪೊಯ್ಯುದಾವ ಯುದ್ಧದೊಳದು ಕೋಲಾಕೋಲಿ (ಶಬ್ದಾನು. ೩೧೨ ಪ್ರಯೋ). 'ಕೇಶಾಕೇಶಿ' ಪರಾ.

[ಕೋಲ್$_1$ + ಕೋಲ್$_1$ + -ಇ$_8$]

**ಕೋಲಾಟ** (ನಾ). ೧. ಕೋಲುಗಳನ್ನು ಹೊಯ್ಯುತ್ತ ಸೇರಿ ಮಾಡುವ ಒಂದು ಬಗೆಯ ಆಟ; ಕೋಲುಹಾಕುವ ಆಟ, —ಕುಣಿತ: ಅಂತೆರಡುಂ ಬಲದ ದಟಿಂಗಳ್ ಕೋಲಾಟಮಾಡುವಂತೆ ಕಿಱಿದಾನುಂ ಬೇಗಂ ಕಟ್ಟುವೊಟ್ಟೆಂದು ಕೋಲ್ಕುಟ್ಟಿ . . . ಕಾದಿ (ಪಂಪಭಾ. ೧೦-೮೦ವ); ಕೋಲಾಟವನಾಡಲ್ ಕೆಲರಾಟಂದು ವಿನೋದದೆ ಕನಕದಂಡಮಂ ಪಿಡಿದೆಸೆದರ್ (ಜಗವಿ. ೫-೧೨); ವನಿತೆಯರಧಿಕ ಸಂಭ್ರಮದೆ ಕೋಲಾಟವ ಜನಪನೋಲಗದೊಳಾಡಿದರು (ಕಂನವಿ. ೮-೩೧); ನಮ್ಮ ದೇಶದಲ್ಲಿ ಋತುಸಂಬಂಧವಾದ . . . ಹಲವು ನಾಟ್ಯಪದ್ಧತಿಗಳಿವೆ. ಉದಾಹರಣೆ - ಕುಮ್ಮಿ, ಕೋಲಾಟ, ಸುಗ್ಗಿಯ ಕುಣಿತ ಮುಂತಾದವು ದಕ್ಷಿಣಭಾರತದವು (ಭಾರದ. ೫೬೫). ೨. ಬಾಣಗಳಿಂದ ಮಾಡುವ ಕಾದಾಟ: ಕಣೆಕಣೆಗಳಾಟದಲಿ ಶರ ಖಂಡಣೆಯ ಕೋಲಾಟದಲಿ ಖಣಿಖಣಿಖಣಿಲುಖಣಿಲೆನೆ ಮಸಗಲೆಚ್ಚಾಡಿದರು ಚಳಕದಲಿ (ಕುವ್ಯಾಆ. ೭-೫೦); ಕೋಲಾಟಮನೇವೇಟ್ಟಿಂ (ಅದ್ಭುತ. ೪೯-೧೭). [ಕೋಲ್$_1$ + ಆಟ]

**ಕೋಲಾಟಿಕ** (ನಾ). ೧. ಕೋಲಾಟವನ್ನು ಆಡುವವನು; ಡೊಂಬ. ೨. ಬಿಲ್ಲುಬಾಣಗಳಿಂದ ಯುದ್ಧಮಾಡುವವನು: ಗೆಲ್ಲ ಸೋಲದ ಮತ್ಸರ ಕೋಲಾಟಕರಿ [ಪಾಠಾಂ. ಕೋಲಾಟಜಾರೆ, ಕೋಲಾಟಿಕ, ಕೊಲ್ಲಟಿಗಂ]ಗಲ್ಲದೆ ಶಿವಭಕ್ತರಿಗುಂಟೆ ಆಯ್ಯಾ (ಚನ್ನವ. ೩೬೦).

[ಕೋಲಾಟ + -ಕ$_3$]

**ಕೋಲಾಡು$_1$** (ಕ್ರಿ). ಕೋಲುಗಳಿಂದ ಆಟವಾಡು; ಕೋಲಾಟವನ್ನೆಸಗು: (ಕ). [ಕೋಲು$_1$ (< ಕೋಲ್$_1$) + ಆಡು$_1$]

**ಕೋಲಾಡು$_2$** (ನಾ). ಗಿಡ್ಡ ಆಡು; ಕುಳ್ಳ ಮೇಕೆ: "ಕೋಲಾಡು - ಕುಂಯ್ಯಾಡು" (ಜಾನಕೋ. ೪೩). [ಕೋಲು ? + ಆಡು$_2$]

**ಕೋಲಾರ** (ಗು). ೧. ಕೆಳದರ್ಜೆಯ; ಕೀಳುಮಟ್ಟದ; ಕೀಳು ತರದ: ತಿಗಳನ ಕುದುರೆ ದೇಶದ್ದು ತುರುಕನ ಕುದುರೆ ಕೋಲಾರ (ಕಥಾಮಂ. IV, ೩೪). (ನಾ). ೨. ಕರ್ನಾಟಕದಲ್ಲಿ ಚಿನ್ನದಗಣಿಗಳಿಗೆ ಪ್ರಸಿದ್ಧವಾದ ಒಂದು ಸ್ಥಳ. [?]

**ಕೋಲಾರತಟ್ಟು** (ನಾ). ಕೆಳದರ್ಜೆಯ ಸಣ್ಣ ತಳಿಯ ಕುದುರೆ; ಟಾಕಣ (ಕಿ). [ಕೋಲಾರ + ತಟ್ಟು$_1$]

**ಕೋಲಾರಿ$_1$** (ಗು). ಕೊಂಕಾದ; ವಕ್ರವಾದ(?). 'ಕೋಲಾರಿ ದುಱುಬು' ಪರಾ. [< ಕೊಲ್ಲಾರ]

**ಕೋಲಾರಿ$_2$** (ನಾ). (ಕರಾ) ಕುಂಬಾರ: ಕೋಲಾರಿ ಬಣ್ಣಬಣ್ಣದ ಮಡಕೆಮಾಡುತ್ತಾನೆ (ರೂಢಿ). [← ತುಳು. ಕೋಲಾರಿ]

**ಕೋಲಾರಿದುಱುಬು** (ನಾ). ಓರೆದುರುಬು; ಕೊಂಕಾದ ಜಡೆ: ಕೋಲಾರಿದುಱುಬು ಕೊಂಕಿದ ಕೊನೆದುಱುಬಿನ, ಮಲ್ಲಿದುಱುಬು ಸುರತದಲಿ ನಿಲ್ಲದದುಱುಬು ಕೆತ್ತಳದುಱುಬಿನ ಚೆಲ್ವಲಲಿತಾಂಗಿಯ ರೊಪ್ಪಿಹರು (ಅಬ್ಬಲೂ. ೧೦೮). [ಕೋಲಾರಿ$_1$ + ತುಱುಬು (< ತುಱುಂಬು$_2$)]

**ಕೋಲಾವತಾರ** (ನಾ). ವಿಷ್ಣುವಿನ ಹತ್ತು ಅವತಾರಗಳಲ್ಲಿ ಒಂದು; ವರಾಹಾವತಾರ: ನರಕಾಸುರನ ಕೊಲ್ವ ಭರದೊಳು ವಿಷ್ಣುತೊಟ್ಟ ಕೋಲಾವತಾರವೊ ಎನಿಪ (ಹಚಕಾ. ಪರಿ. ೨೧೪). [ಕೋಲ$_2$ + ಅವತಾರ]

**ಕೋಲಾಹಲ, ಕೋಳಾಹಳ** (ನಾ). ೧. ಕಲಕಲ; ಗಲಭೆ; ಗಜಬಜೆ; ಗಲಾಟೆ: "ಗಜಬಜವೆನೆ ಕೋಲಾಹಲ" (ಧಾರನಿ. ೫೦); "ಕೋಲಾಹಲಃ, ಕಲಕಲಃ – ೨ ಗುಂಪಿನಲ್ಲಿ ಹುಟ್ಟಿದ ದೊಡ್ಡ ಶಬ್ದದ ಹೆಸರುಗಳು – ಅಂದರೆ ಸಂಘುಧ್ವನಿ" (ಸಿದ್ಧಾಂತಿ. ೫೨); ತುರುಕದಾಳಿ ಬರಲವನನು ಮಂತ್ರಿ ಲೀಲೆಯಿಂ ತಂದಾ ಬಲವ ಕೋಲಾಹಲವ ಮಾಡಿಸಿದನು (ಕುರಾಸಾಂ. ೧–೮೯); ಜನದ ಕೋಲಾಹಲಂ, ಗೀತವಾದ್ಯ ಮಧುರಸ್ವನಂ (ಶ್ರೀರಾಮಾ. ೧೦೫–೧೫೪). ೨. ತಳಮಳದ ಕೂಗಾಟ; ಪ್ರಲಾಪ; ಬೊಬ್ಬೆ: ಬಿಸುಡಿವನೂರ ಹೊಱಗೆಂಬಾ ಮುಹೂರ್ತದಲಿ ಮುನಿಪ ವೇದವ್ಯಾಸನಾಕೆಯ ಮನೆಗೆ ಬಂದನು ಕಂದನೀಕಾಮಿನಿಯ ಕೋಲಾಹಲ [ಪಾಠಾಂ. ಕೋಳಾಹಳ]ವಿದೇನೇನೆಂದು ಬೆಸಗೊಂಡ (ಕುವ್ಯಾಆ. ೪–೪೩). ೩. ಯುದ್ಧ; ಕದನ; ಕಾಳಗ: ಅವರಾ ಮುನ್ದೆ ಪಲಬರ್ನಾಯಕರಾ ಕೋಲಾಹಲಮಾಗೆ ಸುರಿಗೆಯಿನ್ದಿಱಿದು ಸತ್ತೊನ್ (ಸೌಇಇ. IX–i, ೨೦–೧೦; 9ನೆಯ ಶತ); ಅಂತಕನ ಆ ಕೋಲಾಹಲಕ್ಕೆ ಅರ್ಜುನ ಬೆಚ್ಚಿ ಬೆರಗಾಗಿ ಮುಂಗೆಟ್ಟ (ಬದುರೆ. ೧೩೬). **ಕೋಳಾಹಳ**: ೧. "ಕಹಳೆಗಳು ಮುತ್ತಿಯುಲಿಯಲ್ಕೆ ಕೋಳಾಹಳಂ" (ಮಂಗರಾ. ೮೫–೨೬); ಜಳವಿಹಗ ಬಹಳ ಕೋಳಾಹಳದಿಂದೆಣ್ದೆಸೆಯೊಳಿರ್ದ ದೆಸೆಯಾನೆಗಳಂ ಜಳಕೇಳಿಗೆ ಕರೆವಂತಿರೆ ಜಳಖಾತಿಕೆ ಬಳಸಿ ಚೆಲ್ವನೊಳಕೊಂಡಿರ್ಕುಂ (ಮಲ್ಲಿಪು. ೨–೫೦); ಪಱತೊಂದೆಡೆಯೊಳ್ ಪುಲಿಯ ಬೇಂಟೆಯ ಕಾಳೆಗದ ಕೋಳಾಹಳದ (೧೦ಕ.೧–೧೨೮ವ); ಧುರದ ಕೋಳಾಹಳದ ಧಗೆ ಡಾವರಿಸಿ ಬಳಲಿ ಧನಂಜಯನು ವರಸರಸಿಯಲಿ ಮುಳುಗಿರಲು (ಕುವ್ಯಾದ್ರೋ. ೮–೩). ೨. "ಕಳಕಳಂ ಕೋಳಾಹಳಂ ತುಮುಳವೆನಲು ವ್ಯಾಕುಳದ ನುಡಿಯಕ್ಕು" (ಮಂಗರಾ. ೨೫–೧); ಪ್ರಳಯರುದ್ರನ ಮಾಳ್ಕೆಯಿಂದತಿ ಕಲುಷವಿಹ್ವಲನಾಗಿ ಕೋಳಾಹಳದ ಸಿಂಹಧ್ವನಿಯನೀಯಲು (ಬಸಪು. ೨೨–೧೪); ಈ ಕಾಮಿನಿಯ ಕೋಳಾಹಳ [ಪಾಠಾಂ. ಕೋಲಾಹಲ]ವಿದೇನೇನೆಂದು ಬೆಸಗೊಂಡ (ಕುವ್ಯಾಆ. ೪–೪೩). ೩. ಭೀಮನ ಕೋಲ ಕೋಳಾಹಳವನೀಕ್ಷಿಸುತಲ್ಲಿ ಗೈತಂದ (ಕುವ್ಯಾದ್ರೋ. ೧೩–೧); ವಾಸವಾದ್ಯಮರರಾಚಾರ್ಯಂಗೆ ನಾನಿತ್ತ ಬಾಸೆಗೆ ತಪ್ಪುವನಲ್ಲ ಈಶನೊಳ್ ಕೋಳಾಹಳವ ಮಾಡುವೆನೆಂದು ಪೊಸರ ನುಡಿದ ಮಾನಿನಿಗೆ (ನೋಹತ. ೬–೯). [ಸಂ.]

**ಕೋಲಾಹಲಿಸು, ಕೋಳಾಹಳಿಸು** (ಕ್ರಿ). ೧. ಕಲಕಲ ಶಬ್ದವನ್ನುಂಟುಮಾಡು; ಗದ್ದಲಮಾಡು; ಗಲಾಟೆಮಾಡು: ಆವನನ್ನು ಸಿಲುಬೆಗೆ ಹಾಕು ಎಂದು ಅವರು ಮರಳಿಯೂ ಕೋಲಾಹಲಿಸಿದರು (ಗೊಲ್ಗೊಥಾ. VII, ಮುನ್ನುಡಿ). ೨. ಗಟ್ಟಿಯಾಗಿ ಎಲ್ಲೆಡೆಯೂ ಕೇಳಿಬರು; ತಾನೇ ತಾನಾಗಿ ಸುತ್ತುಮುತ್ತಲೂ ಕೇಳಿಬರು: ಜರೆ ಸಂಧಿಸಿದಳಾಕಸ್ಮಿಕದ ಸೀಳೆರಡನು ವಿನೋದದಲಿ ಪಸರಿಸಿದುದಸುಮೇಘರವ ಘೂರ್ಮಿಸುವವೋಲ್ ಚೀಱಿದನು ೧೧ಗಳ ಬೆಸುಗೆ ಬಿಡೆ ನಡುವಿರುಳು ಕೋಲಾಹಲಿ [ಪಾಠಾಂ. ಕೋಳಾಹಳಿ]ಸಿತಾ ರಭಸ (ಕುವ್ಯಾಸ. ೨–೪೫). **ಕೋಳಾಹಳಿಸು**: ೧. ಇಳೆ ಹಿಳಿಯೆ ಮಣಿಪುಷ್ಪಕದ ನಿರ್ಮಲ ಸುಘೋಷದೊಳಮುಮ ಕೋಳಾಹಳಿಸಿದುದು ಸಹದೇವನಕುಲರು ಸಮರಕನುವಾಯ್ತು (ಕುವ್ಯಾಭೀ. ೩–೧). ೩. ಕೆಣಕು; ಗದ್ದಲಕ್ಕೆ ಗುರಿಮಾಡು; ಕ್ಷೋಭೆಗೊಳಿಸು: ಎಲೆ ಸುರೇಂದ್ರ ಕುಮಾರ ಕೇಳ್ ನಿನ್ನೊಲುಮೆಯಣುಗನು ರಣದೊಳಗೆ ರಿಪುಬಲವ ಕೋಳಾಹಳಿಸಿ ಕೌರವಸುತರು ನೂರ್ವರನು ತಲೆಯನರಿದನು (ಕುವ್ಯಾದ್ರೋ. ೮–೪). ೪. ಪರಾಕ್ರಮವನ್ನು ತೋರು; ಶೌರ್ಯದಿಂದ ಕಾದಾಡು: ಬಲ್ಲಿದನಿವನು ಕೋಳಾಹಳಿಸಿದನು ಕಪಿಬಲದೊಳಗಲದಲಿ (ತೊರರಾ. ೬–೧೮–೨೨); ತುರುಕರ ಮಾರ್ಬಲವ ಕುಟ್ಟಿ ಕೋಳಾಹಳಿಸುವೆನೆಂದು ನುಡಿದನು ಪಟ್ಟಣದಧಿಕಾರಿಯಾಗ (ಕಂನವಿ. ೧೨–೮೪). [ಕೋಲಾಹಲ + –ಇಸು$_3$]

**ಕೋಲಿ$_1$** (ನಾ). ಕೊಯಿದ ಮೇಲೆ ನೆಲದಲ್ಲಿ ಉಳಿದಿರುವ (ಜೋಳ ಮೊದಲಾದ) ಪೈರಿನ ಕೂಳೆ: ನಿನ್ನ ಪೊಲದೊಳ್ ಮೇಲೆ ಬೆಳೆದೆಲ್ಲ ಬೆಳೆಯು ನಿನಗೆ ಇರಲಿ ಕೋಲಿಯ ಬುಡದೆ ಬೆಳೆದ ಪೈರುವನೆಮಗೆ ಹರುಷದಿಂದಂ ಕೊಡೆಂದಾಜ್ಞಾಪಿಸಲ್ (ಮಹಾಂತೇ. ೨೬–೩೪); ಒಕ್ಕಲ ಮಗನ ಕೋಲಿಯ ಕುಂಟೆ ಹರಗ್ಯಾನ (ಕಜಾಗೀ. ೫೬); ಗೌಡರ ಹೊಲದಲ್ಲಿ ಕೋಲಿಯಾರಿಸುವ ಕೂಲಿ ಹೋಗಿದ್ದ ನನ್ನ ತಾಯಿ ಪೂರ್ತಿಯಾಗಿ ತೋಯಿಸಿಕೊಂಡು ಬಂದಳು (ನಾಪೋಲಿ. ೯) [< ಕೂಳೆ]

**ಕೋಲಿ$_2$** (ನಾ). ಒಂದು ಜಾತಿಯ ಮರ; ಎಲಚಿಮರ; ಬೋರೆ ಮರ: "ಕೋಲಂ ಕರ್ಕಂದು ಬದರಿ ಕೋಲೀನಾಮಂ" (ವಸ್ತುಕೋ. ೩೪–೧೧). [ಸಂ. ಕೋಲೀ]

**ಕೋಲು$_1$** 'ಕೋಲ್$_1$' ನೋ.

**ಕೋಲು$_2$** 'ಕೋಲ್$_2$' ನೋ.

**ಕೋಲುಕಳ್ಳಿ** 'ಕೋಲುಗಳ್ಳಿ' ನೋ.

**ಕೋಲುಕಾರ** 'ಕೋಲ್ಕಾಱ' ನೋ.

**ಕೋಲುಕಾಱ** 'ಕೋಲ್ಕಾಱ' ನೋ.

**ಕೋಲುಕುದುರೆ** (ನಾ). ೧. ಮಕ್ಕಳು ಕಾಲುಗಳ ನಡುವೆ ಕುದುರೆಯಂತೆ ಇಟ್ಟುಕೊಂಡು ಓಡಾಡುವ ಕೋಲು. ೨. (ಸಾಮಾನ್ಯವಾಗಿ ಅಡ್ಡಪಟ್ಟಿಹಾಕಿ ಜೋಡಿಯಾಗಿರುವ) ಕಂಕುಳು ಕೋಲು; ಕುಂಟನ ಊರುಗೋಲು: ಆತನ ಎರಡೂ ಕಾಲುಗಳು ಕಡಿದು ಹೋದುದರಿಂದ ಅವನು ಕೋಲುಕುದುರೆಯನ್ನು ಕಂಕುಳಕ್ಕೆ ಆನಿಸಿಕೊಂಡು ಕುಂಟುತ್ತ ಬರುತ್ತಿದ್ದನು (ಮುಂಬಯಿ. ೩–೧೨೦). [ಕೋಲು$_1$ (< ಕೋಲ್$_1$) + ಕುದುರೆ]

**ಕೋಲುಗಲ್ಲಿ** (ನಾ). ದೊಣ್ಣೆಯ ತುದಿಗೆ ಸಿಕ್ಕಿಸಿಕೊಂಡ ಕಲ್ಲಿಚೀಲ: ಗೋಪಾಲ ಬಾಲವ್ರಾತ ಹೊಱವಂಟುದು ತತುಕ್ಷಣಕೆ ಕೋಲುಗಲ್ಲಿಯ ಕೊಂಬುಕೊಳಲಿನ ಮೇಳವದ (ನಿಭಾಗ. ೧೦–೧೨–೩). [ಕೋಲು$_1$ (< ಕೋಲ್$_1$) + ಕಲ್ಲಿ$_1$]

**ಕೋಲುಗಳ್ಳಿ,** ಕೋಲುಕಳ್ಳಿ (ನಾ). ಎಲೆಗಳಿಲ್ಲದೆ ಎತ್ತರವಾಗಿ ಮತ್ತು ಪೊದೆಯಾಗಿ ಬೆಳೆಯುವ ಒಂದು ಬಗೆಯ ಕಳ್ಳಿ: (*). **ಕೋಲುಕಳ್ಳಿ**: (*). [ಕೋಲು$_1$ (< ಕೋಲ್$_1$) + ಕಳ್ಳಿ$_2$]

**ಕೋಲುಗಿಡ** (ನಾ). ಒಂದು ಜಾತಿಯ ಗಿಡ: (ವ್ಯಔಗ. ೬೫-೧೩೨೨).
[ಕೋಲು$_1$ (< ಕೋಲ್$_1$) + ಗಿಡ (< ಗಿಡು)]

**ಕೋಲುಗುದ್ದಲಿ** (ನಾ). ನೆಲ ಅಗೆಯುವ ಮೊನಚು ತುದಿಯುಳ್ಳ ಗುದ್ದಲಿ; ಪಿಕಾಸಿ: (ಎಸಮ್ಮೆ. XV, ೨೯).
[ಕೋಲು$_1$ (< ಕೋಲ್$_1$) + ಗುದ್ದಲಿ]

**ಕೋಲುಗುರು** (ನಾ). ಬಿಲ್ಲುವಿದ್ಯೆಯನ್ನು ಕಲಿಸುವವನು; ಅಸ್ತ್ರವಿದ್ಯಾಚಾರ್ಯ: ಈ ದೊಡ್ಡ ಕವಿದರೆ ಕೋಲು[ಪಾಠಾಂ. ಲ] ಗುರು ಕಳವಳಿಸುವನೆ (ಕುವ್ಯಾದ್ರೋ. ೧೮-೪೭).
[ಕೋಲು$_1$ (< ಕೋಲ್$_1$) + ಗುರು]

**ಕೋಲುಗೊನೆ** (ನಾ) ಬಾಣದ ಮೊನೆ, —ತುದಿ: ರಾಜಕುಮಾರ ಕರನುನ್ನತ್ತ ಮಾರ್ಗದಲಿ ಕೋಲುಗೊನೆ[ಪಾಠಾಂ. ಕೊಲ್ಲಗೊಲೆ]ಯಲಿ ಕೊಂದ ವಾನರನೆಲ್ಲಿಯೆನುತುರವಣಿಸುತ (ತೊರರಾ. ೫-೬-೧೦).
[ಕೋಲು$_1$ (< ಕೋಲ್$_1$) + ಕೊನೆ]

**ಕೋಲುಗೊಳ್** 'ಕೋಲ್ಗೊಳ್' ನೋ.

**ಕೋಲುಜೇನು** (ನಾ). ಮರದ ಪುಟ್ಟಕೊಂಬೆಯಲ್ಲಿ ಕಟ್ಟುವಜೇನು: ಆಷಾಡಿಗೆಡ್ಡೆ, ನೇರಿಲಹೂ, ಶ್ರೀಗಂಧ, ನಾಗಕೇಸರಿ – ಇವಂ ಬೇರೆ ಬೇರೆ ಸಣ್ಣನಾಗರೆದು ಕೋಲುಜೇನುವೆರಸಿ ಕುಡಿಯಲು ಯೋನಿ ರಕ್ತಂ ಪರಿಹರ (ಸಕವೈ. ೧೯೫). [ಕೋಲು$_1$ (< ಕೋಲ್$_1$) + ಜೇನು$_1$ (< ಜೇನ್$_1$)]

**ಕೋಲುತೇಗ** 'ಕೋಲ್ತೇಗ' ನೋ.

**ಕೋಲುನೆಗೆತ** (ನಾ). ಒಂದು ಬಗೆಯ ಕ್ರೀಡೆ: "ಕೋಲನ್ನು ಕೈಗಳಲ್ಲಿ ಹಿಡಿದು, ಊರಿ, ಅದರ ಬಲದಿಂದ ಮೇಲಕ್ಕೆಗರುವುದು; ಕೋಲುನೆಗೆತ" (Pole-jumping. ಇಂಕನಿ),
[ಕೋಲು$_1$ (< ಕೋಲ್$_1$) + ನೆಗೆತ]

**ಕೋಲುನೇಣು** (ನಾ). ಬಾರುಕೋಲು; ಚಮ್ಮಟಿಗೆ: ಹೊಳೆವ ಹೊಮ್ಮುವ ನಿಲ್ವ ಸೀಳ್ವೇಳ್ವ ಸುತ್ತುವ ದೀಳುವ ಝಾಡಿಸುವಶ್ವಗಳನು ತಳುವದೆ ಕೋಲುನೇಣಿಂ ತಿದ್ದುತಿಹರಲ್ಲಿ ಬಳಿಸಂದು ಬಲುಸಾಣಿಗಳು (ಕುರಾಸಾಂ. ೪-೭೩). [ಕೋಲು$_1$ (< ಕೋಲ್$_1$) + ನೇಣು (< ನೇಣ್)]

**ಕೋಲುಪದ** (ನಾ). ಕೋಲಾಟದ ಹಾಡು: ತಾನೂ ಅವರೊಂದಿಗೆ ಬೆರೆತು ಕೋಲುಪದಗಳನ್ನು ಅನ್ನುವನು (ಬೆಳುಮು. ೩).
[ಕೋಲು$_1$ (< ಕೋಲ್$_1$) + ಪದ$_2$]

**ಕೋಲುಬಲೆ** 'ಕೋಲ್ವಲೆ' ನೋ.

**ಕೋಲುಬೇಲಿ** (ನಾ). (?): ಜಲಧರನು, ಕತ್ತಲೆಯ ಪೋಷಕನು; ನಿನಗೆ ಆದರ ಕೋಲುಬೇಲಿಯೆ ಇಲ್ಲ (ಹಗಲಿ. ೩೪).
[ಕೋಲು$_1$ (< ಕೋಲ್$_1$) + ಬೇಲಿ]

**ಕೋಲುಮಂಚ** (ನಾ). ಬಾಣಗಳಿಂದ ಮಾಡಿದ ಮಂಚ; ಶರಪಂಜರ: ಕೋಲುಮಂಚದ ಮೇಲೆ ಅಲಗಿನ ಸಾಲಲೇ ಪವಡಿಸಲಿ ಬಳಿಕವನೇಳು ಮಾಸಂಗಳಲಿ ದೇಹವ ಬಿಡುವನ್ನೆಯೆಂದ (ಸಂಧಪ. ೧೨-೧೯). [ಕೋಲು$_1$ (< ಕೋಲ್$_1$) + ಮಂಚ]

**ಕೋಲುಮಲ್ಲಿಗೆ** (ನಾ). ಮಲ್ಲಿಗೆಯಲ್ಲಿ ಒಂದು ಜಾತಿ; ಮೊಲ್ಲೆ: "ಮಾಘ್ಯಂ, ಕುಂದಂ – ೨ ಮೊಲ್ಲೆಗಿಡದ ಹೆಸರು. ಇದು ಮಲ್ಲಿಗೇ ಭೇದ, ಕೋಲುಮಲ್ಲಿಗೆ" (ಸಿದ್ಧಾಂತಿ. ೧೧೩); ಕೋಲುಮಲ್ಲಿಗೆ ಹೂವ ಕೋಲುಗಳನೆಸೆಯುತಿಹ ಗಿಡವಲ್ಲಿ (ಭಾವಜೀ. ೨೨-೪೨೯).
[ಕೋಲು$_1$ (< ಕೋಲ್$_1$) + ಮಲ್ಲಿಗೆ]

**ಕೋಲುಮೀನು** (ನಾ). ಒಂದು ಜಾತಿಯ ಮೀನು: "ಗಗರಃ — ಕೋಲುಮೀನು, ಕಬ್ಬೋರಿ, ಕಿಱಿಯೇಲಕ್ಕಿ, ಮುಂಡೀಚಲು" (ಒಷಧಿ. ೪೫).
[ಕೋಲು$_1$ (< ಕೋಲ್$_1$) + ಮೀನು$_2$ (< ಮೀನ್$_3$)]

**ಕೋಲುಮುಕ್ಕ** 'ಕೋಲುಮುರುಕ' ನೋ.

**ಕೋಲುಮುಕ್ಕು** 'ಕೋಲುಮುರುಕ' ನೋ.

**ಕೋಲುಮುತ್ತು** (ನಾ). ಒಂದು ಔಷಧಿ ಗಿಡದ ಹೆಸರು: ಕಟುಕ ರೋಹಿಣಿ, ಶಿವನ್ನಿ ಹಣ್ಣು, ಕೋಲುಮುತ್ತಿನ ಬೀಜ, ಭದ್ರಮುಸ್ತೆ ಇವುಗಳ ಕಷಾಯವನ್ನು ಕಾಯಿಸಿ, ಸಕ್ಕರೆ ಬೆರಸಿ ತೆಗೆದುಕೊಳ್ಳಲು, ಪೈತ್ಯಜ್ವರ ಪರಿಹಾರವಾಗುವುದು (ಸಕವೈ. ೭೮).
[ಕೋಲು$_1$ (< ಕೋಲ್$_1$) + ಮುತ್ತು$_2$]

**ಕೋಲುಮುರಕ** 'ಕೋಲುಮುರುಕ' ನೋ.

**ಕೋಲುಮುರುಕ,** ಕೋಲಮುರಕ, ಕೋಲುಮುಕ್ಕ, ಕೋಲುಮುಕ್ಕು, ಕೋಲುಮುರಕ, ಕೋಲುಮುಲುಕ (ನಾ). ಒಂದು ಔಷಧಿ ಗಿಡ; ತಕ್ಕೋಲ: ಕೋಲುಮುರುಕನ ಚಕ್ಕೆ ಕಷಾಯ, ಹೊನ್ನೆಮರದ ಚಕ್ಕೆ ಕಷಾಯ ಇವಿಷ್ಟನೂ ಪ್ರತ್ಯೇಕ ಒಂದು ಹಲವ ಹನಿಸಿ ಮರ್ದಿಸಿ (ವೈದ್ಯಸಾ. I, ೮೪); ಕೋಲುಮುರುಕನ ಚಕ್ಕೆ, ಮುಡಿವಾಳ . . . ಇಷ್ಟನೂ ಇಡಿದು ನೀರಲ್ಲಿ ಹಾಕಿ, ಕಷಾಯವ ಕಾಸಿ (ವೈದ್ಯಸಾ. I, ೧೪೫). **ಕೋಲಮುರಕ.** 'ಕೋಲಮುರಕನ ತೋಟ' ಪರಾ. **ಕೋಲುಮುಕ್ಕ**: ಕೋಲುಮುಕ್ಕನ ಬೇರಂ ಪುಡಿಮಾಡಿ, ಗೇರುಕರುಕಲು ಕಲಸಿ (ವಿವೈವಿ. ೧೨೩). **ಕೋಲುಮುಕ್ಕು**: "ತಕ್ಕೋಲವೆಂದರೆ ಕೋಲುಮುಕ್ಕು" (ವಿವೈವಿ. ೩೧). **ಕೋಲುಮುರಕ**: ರಾಸ್ನೆ, ಹಿರೇಮದ್ದಿನ ಬೇರು, ಅತಿಬಜೆ, ಕೋಲುಮುರಕನ ಚಕ್ಕೆ . . . ಸಮನಾಗಿ ಶ್ರೀತುಳಸಿ ರಸದಿಂದ ಅರೆದು ಸಕ್ಕರೆ ಬೆರಸಿ ಕೊಡಲು ಶ್ಲೇಷ್ಮಜ್ವರ ಪರಿಹಾರವಾಗುವುದು (ಸಕವೈ. ೮೭). **ಕೋಲುಮುಲುಕ**: ನೆಲಬೇವು, ಭದ್ರಮುಸ್ತೆ, ಶ್ರೀಗಂಧ, ಕೋಲುಮುಲುಕನ ಬೀಜ . . . ಕಷಾಯಂ ಮಾಡಿ ಸೇವಿಸಲು ರಕ್ತಮೂಲವ್ಯಾಧಿ ಪರಿಹರ (ಸಕವೈ. ೨೯೦).
[ಕೋಲು$_1$ (< ಕೋಲ್$_1$) + ಮುರುಕ$_1$ (< ಮುಱುಕ$_1$)]

**ಕೋಲುಮುಲುಕ** 'ಕೋಲುಮುರುಕ' ನೋ.

**ಕೋಲುವರಸೆ** (ನಾ). ದೊಣ್ಣೆಯನ್ನು ವಿವಿಧ ರೀತಿಯಲ್ಲಿ ತಿರುಗಿಸುವ ಒಂದು ಬಗೆಯ ಗತ್ತು, —ಕಸರತ್ತು: ದೊಡ್ಡದೊಂದು ಗುಂಡನ್ನು ಎಷ್ಟು ದೂರ ಎಸೆಯಬಹುದು ಎಂದು ಒಂದು ಪಂದ್ಯ, ಕೋಲುವರಸೆಯ ಒಂದು ಪಂದ್ಯ ನಡೆದವು (ಚಕರಾ. ೨೬೫). 'ದೊಣ್ಣೆವರಸೆ' ಪರಾ.
[ಕೋಲು$_1$ (< ಕೋಲ್$_1$) + ವರಸೆ (< ವರಿಸೆ)]

**ಕೋಲುವಲೆ** 'ಕೋಲ್ವಲೆ' ನೋ.

**ಕೋಲುವಿಡಿ** (ಕ್ರಿ). ೧. ದೊಣ್ಣೆಯನ್ನು ಕೈಯಲ್ಲಿ ಹಿಡಿ; ಬೆತ್ತವನ್ನು ಹಿಡಿದುಕೊಳ್ಳು: ಕೋಲುವಿಡಿದಾಡಿನ ಮಱಗಳಂ ಕಾಂಕುಳೊಳಗಮರ್ಚಿ (ಬಸವು. ೨೦-೧೩). ೨. ಬಾಣವನ್ನು ಹಿಡಿ: ಮೊದಲಲಿ ಕೋಲುವಿಡಿದಭ್ಯಾಸಮಾಡಿಯೆ ಮೇಲೆ ರಣರಂಗದಲಿ ಕೈದುವ ಹಿಡಿದು ಹಗೆಗಳನು ಸೋಲಿಸುವನಂತೆ (ಪ್ರಭುಲೀ. ೧೬-೫೩).
[ಕೋಲು$_1$ (< ಕೋಲ್$_1$) + ಹಿಡಿ$_1$]

**ಕೋಲುಹಾಕು** (ಕ್ರಿ). = ಕೋಲುಹೊಯ್ಯು: ಧಾಟಿಗೆಅನುಸಾರವಾಗಿ ಕೋಲುಹಾಕು (ರೂಢಿ).
[ಕೋಲು$_1$ (< ಕೋಲ್$_1$) + ಹಾಕು (< ಪಾಯ್ಕು$_1$))

**ಕೋಲುಹೊಟ್ಟೆ** (ನಾ). ನೀಳವಾದ ಹೊಟ್ಟೆ; ಉದ್ದಹೊಟ್ಟೆ: ನೀವು ನಾಲ್ಕು ಹೋಳಿಗೆಯಲ್ಲ, ಆರನ್ನೂ ಹಾಕಿಸಿದರೂ ಊಟದಲ್ಲಿ ಅವನ ಕೋಲುಹೊಟ್ಟೆ ಹಿಂದಾದೀತು ಎಂದು ತಿಳಿಯಬೇಡಿ (ಹಹಸ. ೪೮).
[ಕೋಲು$_2$ (< ಕೋಲ್$_2$) + ಹೊಟ್ಟೆ$_1$ (< ಪೊಟ್ಟೆ$_1$)]

**ಕೋಲುಹೊನ್ನೆ** (ನಾ). ಹೊನ್ನೆಮರದಲ್ಲಿ ಒಂದು ಬಗೆ: ಚಿಟ್ಟಾಡಲದ ಬೇರು, ಕೋಲು ಹೊನ್ನೆ, ಶುಂಠಿ . . . ಇವಂ ಸಮನಾಗಿ ಕಷಾಯುವಿಕ್ಕಿ ಸೇವಿಸಿದರೆ ವಾತಜ್ವರಂ ಗುಣಮಕ್ಕುಂ (ಸಕವೈ. ೬೭).
[ಕೋಲು$_1$ (< ಕೋಲ್$_1$) + ಹೊನ್ನೆ (< ಪೊನ್ನೆ)]

**ಕೋಲುಹೊಯ್ಯು** (ಕ್ರಿ). ಕೋಲಿನಿಂದ ಕೋಲನ್ನು ಹೊಡಿ; ಹಾಡಿನ ತಾಳಕ್ಕೆ ಅನುಗುಣವಾಗಿ ಕೋಲುಬಡಿ; ಕೋಲುಹಾಕು: ಕೆಲವರು ಕೋಲುಹೊಯ್ಯುತ್ತಾ ದನಗಳನ್ನು ಮೇಯಿಸುವುದಕ್ಕೆ ಹೋಗ ಹತ್ತಿದ್ದಾರೆ (ಮಂಜುಕ. ೨).
[ಕೋಲು$_1$ (< ಕೋಲ್$_1$) + ಹೊಯ್ಯು$_1$ (< ಪೊಯ್$_1$)]

**ಕೋಲುಳಿ** (ನಾ). ಉದ್ದವಾದ ಉಳಿ; ಮರ ಕೆತ್ತುವ ಮರಗೆಲಸದ ಒಂದು ಉಪಕರಣ: ಅಡಿಗಲ್, ಸುತ್ತಿಗೆ, ಎಳೆಯುಳಿ, ಕೋಲುಳಿ, ಕೀಸುಳಿ . . . ಎಂಬ ಎಣಿಸಿ ಮುಗಿಯದ ಸೊಲ್ಲುಗಳು ನಮ್ಮ ಹಿರಿಯರ ಕೈಗಾರಿಕೆಯನ್ನೂ, ದುಡಿಮೆಯನ್ನೂ ಸಾರುತ್ತವೆ (ಭಾಷಾಶಾ. ೨೫೬). [ಕೋಲು$_1$ (< ಕೋಲ್$_1$) + ಉಳಿ$_5$]

**ಕೋಲುಳಿಯಂಬು** (ನಾ). ಕೋಲುಳಿಯಾಕಾರದ ಒಂದು ಬಗೆಯ ಬಾಣ: ಹಿಳುಕು ಬೊಬ್ಬಿಡೆ ಹೊದಱಡಸಿ ಕಣಗಿಲೆಯ ಕೋಲುಳಿಯಂಬು ಕಲವಂಬಲಗಿನಂಬೀಸಾಡಿದವು ಪರಸೈನ್ಯಸಾಗರವ (ಕುಮ್ಯಾದ್ರೋ. ೧೦–೪). [ಕೋಲುಳಿ + ಅಂಬು$_2$]

**ಕೋಲೂರು** 'ಕೋಲೂಱು' ನೋ.

**ಕೋಲೂಱು**, ಕೋಲೂರು (ಕ್ರಿ). ಕೋಲನ್ನು ಊರು; ದೊಣ್ಣೆಯನ್ನು ನೆಮ್ಮು, —ಆಧರಿಸು: ಕರಂ ಜೋಲ್ದು ಕೋಲೂಱಿನಿಂದುಂ ನಡುಗುತ್ತುಂ ಕೆಮ್ಮಿ (ರಕ್ಷಾಶ. ೩೮). **ಕೋಲೂರು**: ಕೆಳೆವರುಂ ಕೋಲೂರಿ ಪೊರಟರ್ (ಕಾಲೂರ. ೧೪೯–೩೨೬).
[ಕೋಲ್$_1$ + ಊಱು$_1$]

**ಕೋಲೆತ್ತು** (ಕ್ರಿ). (ಬಿಲ್ಲಿನ ಹೆದೆಯಲ್ಲಿ ಹೂಡುವುದಕ್ಕೋಸ್ಕರ) ಬಾಣವನ್ನು ಮೇಲಕ್ಕೆತ್ತು, —ಕೈಯಲ್ಲಿ ತೆಗೆ, —ಹಿಡಿದುಕೊಳ್ಳು: ಇಸಲೆಂದು ಯುವೋನ್ಮೃಗವಂ ಕಱುತ್ತು ಕೋಲೆತ್ತುವ ಬೇಂಟೆಕಾರ್ತಿಯರವೋಲೆಸೆದರ್ ಮಿಗೆ ಮಾಲೆಗಾರ್ತಿಯರ್ (ಗಿರಿಕ. ೨–೮೮). [ಕೋಲ್$_1$ + ಎತ್ತು$_1$]

**ಕೋಲೆಬಸವ** (ನಾ). ೧. = ಕೋಲೆಬಸವಣ್ಣ. ೨. (ಆಲಂ) ಹೇಳಿದ್ದಕ್ಕೆಲ್ಲಾ ತಲೆಹಾಕುವವನು: ಅವನೊಬ್ಬ ಕೋಲೆಬಸವ (ರೂಢಿ). [ಕೋಲೆ$_0$ (< ಕೋಲ$_1$) + ಬಸವ]

**ಕೋಲೆಬಸವಣ್ಣ** (ನಾ). ಕೆಲವು ಸನ್ನೆಗಳಿಗೆ ಅನುಸಾರವಾಗಿ ಆಡುವಂತೆ ಕಲಿಸಿ, ಬೀದಿಬೀದಿಯಲ್ಲಿ ಆಟವಾಡಿಸುವ ಅಲಂಕಾರ ಮಾಡಿದ ಎತ್ತು; ಕೌಲೆತ್ತು; ಗಂಗೆತ್ತು: ಊರೊಳಗೆ ಕೋಲೇ ಬಸವಣ್ಣನಾಟ, ಡೊಂಬರ ಆಟ, ಯಕ್ಷಿಣಿ ಆಟ, ಚಕ್ಕಳಗೊಂಬೆ ಆಟ ಮುಂತಾದುವು ಕಾಯ್ದುಕೊಂಡಿದ್ದವು (ಹುಟ್ಟಿಹ. ೬೪).
[ಕೋಲೆ$_0$ (< ಕೋಲ$_1$) + ಬಸವಣ್ಣ]

**ಕೋಲೊಡ್ಡು** (ಕ್ರಿ). ಬಾಣವನ್ನು ಪ್ರಯೋಗಿಸು; ಬಾಣದಿಂದ ಎದುರಿಸು, —ಪ್ರತಿಭಟಿಸು: ಅದಿರದೆ ಪೆಱದೆಗೆಯದೆ ಬೆಚ್ಚದೆ ಬೆದಱದೆ ಸುಗಿಯದಗಿಯದೆಡೆಯಿಂ ಕೋಲೊಡ್ಡಿದ ಬಿರುದಿನಂಕದಂ ದಿನದೇಂ ಪರಿಚ್ಛೇದಮಾತನೊಳ್ ಕೂಡಿದುದೋ (ಸುಕುಮಾ. ೧೨–೬); ಆ ಕಳದ ಕೆಲದೊಳ್ ಸಾರಿಯುಂ ಕೋಲೊಡ್ಡಿ ಗೆಲ್ವ. . .ತಕ್ಕು ಮಿಕ್ಕುವರೆ ಕಲ್ತ ಬಿನ್ನಣಿಗಳಿರ್ದ (ಪುಷ್ಪಪು. ೨–೬೦ ವ). [ಕೋಲ್$_1$ + ಒಡ್ಡು$_1$]

**ಕೋಲ್ಕಾರ** 'ಕೋಲ್ಗಾಱ' ನೋ.

**ಕೋಲ್ಕಾಱ** 'ಕೋಲ್ಗಾಱ' ನೋ.

**ಕೋಲ್ಕುಟ್ಟು** (ಕ್ರಿ). ಬಾಣದಿಂದ ಹೊಡೆ; ಬಾಣಪ್ರಯೋಗ ಮಾಡು: ಅಂತೆರಡುಂ ಬಲದ ದಱಂಗಳ್ ಕೋ[ಪಾಠಾಂ. ಕಾ]ಲಾಟ ಮಾಡುವಂತೆ ಕಿಱಿದಾನುಂ ಬೇಗಂ ತಟ್ಟುಪೊಟ್ಟೆಂದು ಕೋಲ್ಕುಟ್ಟಿ . . . ಕಾದಿ ಬಸವಱಿದು (ಪಂಪಭಾ. ೧೦–೮೦ ವ).
[ಕೋಲ್$_1$ + ಕುಟ್ಟು$_1$]

**ಕೋಲ್ಗದಿರು** (ನಾ). ಕೋಲಿನಂತೆ ಉದ್ದವಾದ ಕಿರಣ; ಬೆಳಕಿನ ಕೋಲು: ಚಿನ್ನದ ನೇಸರು ಕೋಲ್ಗದಿರಿಂ ಚಿಂಬಿಸಿಲಿನ ರಂಗೋಲಿಯ ನೆಸೆದಿತ್ತು (ಅನಿಕೇ. ೨೬–೮). [ಕೋಲ್$_1$ + ಕದಿರು$_3$ (< ಕದಿರ್$_2$)]

**ಕೋಲ್ಗಱಿ** (ನಾ). ಬಾಣದ ಗರಿ, —ಹಿಳುಕು: ಸಿರಿಯೊಡೆಯ ಕೋಲ್ಗಱಿಯ ಪೆರ್ವಕ್ಕೆಗೆಲರುಣಿಯನಱಸುತಿರೆ (ಭಾವಚಿಂ. ೩–೧೦).
[ಕೋಲ್$_1$ + ಗಱಿ]

**ಕೋಲ್ಗಱೆ** (ಕ್ರಿ). ಬಾಣವನ್ನು ಮಳೆಯಂತೆ ಸುರಿಸು; ನಿರಂತರವಾಗಿ ಬಾಣವನ್ನು ಬಿಡು: ಪಂಚಾಸ್ಯ ನಗುತೆ ಕೋಲ್ಗಱೆದ (ಮೋಹತ. ೩೯–೩೨); ಶೋಕಮುಮನೋಲೈಸಿಸುವೆನೆಲವೊ ನಿನ್ನಬಲೆಯರ್ಗೆ ಪಿಡಿಯಾಳ್ಕೆಸುವೆಂ ನೆರೆದ ನಿನ್ನ ತೆತ್ತಿಗರನೆನುತಾ ಖಳಂ ಕೋಲ್ಗಱೆದನು (ಜೆಬಪು. ೪೯–೨೧). [ಕೋಲ್$_1$ + ಕಱೆ$_1$]

**ಕೋಲ್ಗಾರ** 'ಕೋಲ್ಗಾಱ' ನೋ.

**ಕೋಲ್ಗಾಱ**, ಕೋಲುಕಾರ, ಕೋಲುಕಾಱ, ಕೋಲ್ಕಾರ, ಕೋಲ್ಕಾಱ, ಕೋಲ್ಗಾರ (ನಾ). ಕೋಲನ್ನು ಕೈಯಲ್ಲಿ ಹಿಡಿದಿರುವವನು; ಸುಂಕ, ತೆರಿಗೆ ಮೊದಲಾದುವನ್ನು ವಸೂಲು ಮಾಡುವವನು; ಸೇವಕ; ಊಳಿಗದವನು: ಅಮರ ಪೆರ್ಗ್ಗಡೆ ಚಿಣ್ಣಪಯ್ಯನು ಅವರ ಕೋಲ್ಗಾಱ ಗಣಪತಿಯು (ಎಕ. XI, ದಾವಣ. ೧೪೧–೨೯; 1065). **ಕೋಲುಕಾರ**: ಕೋಲುಕಾರ ಕಪ್ಪನಾಗಿಗೌಡಾ ಪೂಜಾರಿ ಚಿಕೋಡಾ (ಎಕ. XI, ಹೊಳಲ್ಕೆ. ೭೬–೧೭; ?); ತೋಟಿ–ತಳವಾರ, ವೆಟ್ಟಿ, ಬಾರೀಕಿ ಅಥವಾ ಕೋಲುಕಾರನೆಂದು ಹೆಸರುಂಟು (ಗ್ರಾಮಾಕ. ೧); ಹುಟ್ಟು ಕೋಲುಕಾರನದು, ಕಟ್ಟು ಸಾವುಕಾರನದು (ಗಾದೆ). **ಕೋಲುಕಾಱ**: ಪೂರಲ್ಲಿಹ ಕೋಲುಕಾಱಂಗೆ ಜೀವಿತಕ್ಕೆ ಪ ೬ (ಎಕ. XV, ಬೇಲೂರು ೨೫೨–೧೪; 1298); ಸ್ಥಳದಲು ಆವ ಕೋಲುಕಾಱರಿರ್ದೊಡೆನು ಯಿ ಧರ್ಮಕ್ಕೆ ಸಹಾಯವಾಗಿ ಕೊಡುತ ಬಹರು (ಮೈಆರಿ. ೧೯೪೦, ೫–೪; 13ನೆಯ ಶತ); ಕಾಮಲಾಪುರದೂರ ಹಿಂದೆರಡು ವೃತ್ತಿಯುಂಟಾ ಮೇಲೆ ಕಳಶಾಪುರದೊಳಗ್ರಹಾರಮೊಂದೀ ಮಧ್ಯಧರೆ ಕೋಲುಕಾಱ ಮಾರುಗನಿಂದ ಹಾಳಾಯ್ತು (ಚೀರಮ. ೮–೧೪). **ಕೋಲ್ಕಾರ**: ಕಡೆಗೆ ಕೋಲ್ಕಾರರೆಂದರ್ ಕೊರಗನೊಳ್ (ಕಾಲೂರ. ೧೬೦–೩೫೪); ಅವನು ಕೋಲ್ಕಾರರ ಮೂಲಕ ಗ್ರಾಮುತಕ್ಕರಿಗೆಲ್ಲ ದೊರೆಯ ಅಣತಿಯನ್ನು ಅರುಹಿದ (ಹುಲಿಹಾ. ೧೧೫); "ಕೋಲ್ಕಾರರ್ – ಪೋಲೀಸರು" (ಕಾಲೂರ. ಅಡಿಟ); "ಗ್ರಾಮದ ಜವಾನರು" (ಹುಲಿಹಾ. ಕೋಶ). **ಕೋಲ್ಕಾಱ**: ಇನ್ತೀ ಧರ್ಮ್ಮಮಂ ಸ್ಥಳದ ಹನ್ನವಣಿಗರುಂ ಕಡ್ಡಾಯದ ಕೋಲ್ಕಾಱರುಂ ಪುರಸ್ಸರರಾಗಿ ನಡಸುವುದು (ಸೌಇಇ. IX–i, ೧೬೪–೪೪; 1098). **ಕೋಲ್ಗಾರ**: ಬೋಳನು ಕೈಮುಚ್ಚಿ ಉಡುಗೊರೆ ಕೊಡಲು ಮುಗುಳು ನಗುತ್ತ ಕೋಲ್ಗಾರರು ಹೀಗೆಂದರು (ಕಾಲೂರ. ೧೧ ಕಥಾಸಾರ).
[ಕೋಲ್$_1$ + –ಕಾಱ]

**ಕೋಲ್ಗೊಡು** (ಕ್ರಿ). ಕೋಲನ್ನು ಕೊಡು; ಊರುಗೋಲನ್ನು ನೀಡು: ದೇವಾ ಕಣ್ಗೊಡದಿರ್ದೊಡೊಂದು ಕೋಲ್ಗೊ[ಪಾಠಾಂ. ಲ್ಗು]ಡಲಾಗದೆ ಎನ್ನಯ್ಯ (ನಂಬಿರ. ೧೪-೧೦೩.)
[ಕೋಲ್$_1$ + ಕೊಡು$_1$]

**ಕೋಲ್ಗೊಳ್, ಕೋಲುಗೊಳ್** (ಕ್ರಿ). ೧. ಬಾಣವನ್ನು ತೆಗೆದುಕೊಳ್ಳು, —ಹಿಡಿ: (+). ೨. ಅಂಬು ಚುಚ್ಚಿಕೊಳ್ಳು; ಬಾಣ ನಾಟಿಕೊಳ್ಳು: ಬಂದುದು ತಪೋಹಾನಿಯೆಂದಳ್ಕೆಯೊಳ್ ಕೋಲ್ಗೊಂಡ ತೆಱದೊಳುದ್ದಾಲಕಂ ಚಿಂತಿಪಂ ಪ್ರತಿದಿನದೊಳು (ಜೈಮಿಭಾ. ೧೦-೨೪). **ಕೋಲುಗೊಳ್:** ೨. ಸಿರಿಲೋಲನಂಘ್ರಿಸರೋಜ ವಿರಹ ವಿಷಾಪ ಭಾರದಲಿ ಕೋಲು [ಪಾಠಾಂ. ಳು]ಗೊಂಡಂತಾಗಿ . . . ಮಱುಗಿದರು (ನಿಭಾಗ. ೧೦-೩೪-೨೦). [ಕೋಲ್$_1$ + ಕೊಳ್$_1$]

**ಕೋಲ್ತಗಸಿ** (ನಾ). ತಗಸೆಗಿಡದಲ್ಲಿ ಒಂದು ಬಗೆ: "ಕೋಲ್ತಗಸಿ, ದೊಡ್ಡತಗಚೆ; ಆನೆಸೊಗಟೆ" (ವೈಔಗ. ೧೯-೩೩೬).
[ಕೋಲ್$_2$ + ತಗಸಿ (< ತಗಚೆ)]

**ಕೋಲ್ತೇಗ, ಕೋಲುತೇಗ** (ನಾ). ತೇಗದಲ್ಲಿ ಒಂದು ಬಗೆ: ಕೋಲ್ತೇಗ, ಮದತೇಗ, ಕಾಡುಕಣಗಲು (ವೈಔಗ. ೩೦-೫೮೯). **ಕೋಲುತೇಗ:** ಮರಗಳು: . . . ದೇವದಾರು ತೇಗ, ಕೋಲುತೇಗ, ಬಾಗಿ, ಬಿಲ್ವಾರ (ನಮ್ಮನು. ೨೩೬). [ಕೋಲ್$_2$ + ತೇಗ$_1$ (< ತೇಗು$_3$)]

**ಕೋಲ್ತೊಟ್ಟಿ** (ನಾ). "ಗಾರೆ ಮೊದಲಾದುವನ್ನು ಮೇಲೆತ್ತಿಕೊಡುವುದಕ್ಕಾಗಿ ಮಾಡಿರುವ ಕೋಲಿನ ಕಾಲುಳ್ಳ (ಕಟ್ಟಡ ಕಾರನ) ಹಗುರವಾದ ತೆರೆದ ತೊಟ್ಟಿ" (Hod. ಇಂಕನಿ): ಕೆಲವರು ತುಂಬಿದ ಕೋಲ್ತೊಟ್ಟಿ ದಬ್ಬರಿಗಳನ್ನು ಮೇಲೊಯ್ಯುತ್ತಿದ್ದರು (ಪುನರು. ೩೧೬). [ಕೋಲ್$_1$ + ತೊಟ್ಟಿ$_2$]

**ಕೋಲ್ದುಡಿಸು** 'ಕೋಲ್ದೊಡಿಸು' ನೋ.

**ಕೋಲ್ದುದಿ** (ನಾ). ಬಾಣದ ತುದಿ, —ಮೊನೆ: ಆ ಹೂಡಿದರ್ಜುನನ ಮಾರ್ಗಣದ ಮೊದಲೊಳಾವಾಹನಂಗೈದು ಕಮಲಜನಂ ನಿಲಿಸಿ ವೃಷಭವಾಹನನಂ ಕೋಲ್ದುದಿಗೆ ತಂದಿರಿಸಿ ಸಾಯಕದ ನಡುವೆ ತಾನೇ ವ್ಯಾಪಿಸಿ (ಜೈಮಿಭಾ. ೧೩-೪೨); ಕೋಲ್ದುದಿಯವನ ಕಂಠಮಂ ಕೊಚ್ಚಿ ಹಾಯ್ದು (ಜೈಮಿಭಾ. ೧೩-೪೮).
[ಕೋಲ್$_1$ + ತುದಿ]

**ಕೋಲ್ದುಸ** (ನಾ). ಸುಟ್ಟ ಮಾಂಸ; ಸುಂಟಗೆ: "ಕೋಲ್ದುಸ [ಪಾಠಾಂ. ಕೊಟ್ಟುಸ]ಮೆಂದುಂ ಸುಡುಬಾಡು" (ಕಶಸಾ. ೭-೧೨೪).
[ಕೋಲ್ + ತುಸ]

**ಕೋಲ್ದೊಡಿಸು, ಕೋಲ್ದುಡಿಸು** (ಕ್ರಿ). ಬಿಲ್ಲಿಗೆ ಬಾಣವನ್ನು ಹೂಡು; ಶರಸಂಧಾನ ಮಾಡು: ಬಿಲ್ವಿದೆ ಕೋಲ್ದೊ[ಪಾಠಾಂ. ಲ್ದು]ಡಿಸಿ ತೆಗೆದಡುತೆ ರಿಪುಚಾತುರಂಗಮಂ ತಾಗಿದಂ ಪವನಸೂನು (ಜೈಮಿಭಾ. ೭-೧). **ಕೋಲ್ದುಡಿಸು:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕೋಲ್$_1$ + ತೊಡಿಸು$_1$]

**ಕೋಲ್ದೋಣಿ** (ನಾ). ಕೋಲಿನ ಸಹಾಯದಿಂದ ನಡೆಸುವ ದೋಣಿ: ಕಡಲಿನ ಸಂಪತ್ತು ತೀರಕ್ಕೆ ತಂದಿತ್ತು – ಕೋಲ್ದೋಣಿ (ಕ್ರಾಂತಿಧ್ವ. ೫-೧೨). [ಕೋಲ್$_1$ + ದೋಣಿ]

**ಕೋಲ್ಪೆಳೆ** (ನಾ). ನೇರವಾಗಿ ಮೇಲಕ್ಕೆ ಬೆಳೆದ ಬೆಳೆ: ತೋಳಪ ಕುಡುದಾಡೆಗಳ್ ಪೊಳೆವೆಳವೆಱೆಗಳನಣಲೊಳಡಸಿದಂತಿರೆ ತೀಕ್ಷ್ಣತುಳ ಮೂರ್ತಿ ಕೇದಗೆಯ ಕೋಲ್ಪೆಳೆಯಂತಿರೆ ನಿರುತ ನಿರುತಮೇನೆಸೆದಪನೋ (ಲೀಲಾವ. ೪-೧೦೩). [ಕೋಲ್$_1$ + ಬೆಳೆ$_2$]

**ಕೋಲ್ಮಳೆ** 'ಕೋಲ್ವಟಿ' ನೋ.

**ಕೋಲ್ಮಿಂಚು** (ನಾ). ಕೋಲಿನ ಆಕಾರದಲ್ಲಿ ಫಳೀರೆಂದು ಹೊಳೆಯುವ ಮಿಂಚು, —ಸೆಳೆಮಿಂಚು: ಕೋಲ್ಮಿಂಚಿನಲ್ಲಿ ಕಪ್ಪು ಒಡವೆಯೊಂದು ಕೆಳಗೆ ಬಿದ್ದಂತೆ ಕಾಣಿಸಿತು (ಪಾವಕ. ೩೦); ಅಷ್ಟರಲ್ಲಿ ಒಂದು ದೊಡ್ಡ ಕೋಲ್ಮಿಂಚು ಬೆಳಗಲು, ಆ ಗ್ರಾಮದ ಕೆಲಭಾಗವು ಅವಳಿಗೆ ಕಾಣಿಸಿಕೊಂಡಿತು (ಅಂಬಿಕೆ. ೪). 'ಬಳ್ಳಿಮಿಂಚು' ಪರಾ.
[ಕೋಲ್$_1$ + ಮಿಂಚು$_2$]

**ಕೋಲ್ವಲೆ, ಕೋಲುಬಲೆ, ಕೋಲುವಲೆ** (ನಾ). ಉದ್ದವಾದ ಬಲೆ: ಇಡುವಲೆ ಸಿಡಿವಲೆ ಕಿಱುವಲೆ ನಡೆವಲೆ ಪೆರ್ವಲೆ ತೊಡಂಕುವಲೆ ಕೋ[ಪಾಠಾಂ. ಕೊ]ಲ್ವಲೆ ಕಕ್ಕಡವಲೆ (ಶಬಶಂ. ೩-೨೪). **ಕೋಲುಬಲೆ:** (+). **ಕೋಲುವಲೆ:** ಕೋಲು [ಪಾಠಾಂ. ಕೊಳ್ಳು]ವಲೆ ತಳ್ಳಿವಲೆ ಬಳ್ಳಿವಲೆ ತೊಡಕುವಲೆ . . . ಕಾಲುವಲೆಯು (ಹಚಕಾ. ೫-೮); ಕೋಲುವಲೆಗಳ ಸಿಡಿವಲೆಯ ಮಿಡಿವಲೆಯ . . . ಬೇಟೆಗಾಱರು ಬಳಸಿದರು ಶಿವನ (ಕುವ್ಯಾಅ. ೫-೩೩); ಕೋಲುವಲೆ ತೊಡಕುವಲೆ ಬೀಳುವಲೆ ಕಣ್ಣುವಲೆ . . . ಅರೆವಲೆಗಳಿರ್ದುವಾ ಶಬರರಲ್ಲಿ (ಸಿದ್ಧೇಪು. ೮-೬).
[ಕೋಲ್$_2$ + ಬಲೆ$_1$]

**ಕೋಲ್ವಳೆ** 'ಕೋಲ್ವಟಿ' ನೋ.

**ಕೋಲ್ವಟಿ, ಕೋಲ್ಮಳೆ, ಕೋಲ್ವಳೆ** (ನಾ). ಅಂಬಿನ ಸುರಿಮಳೆ; ಬಾಣವರ್ಷ: ಅರಿಬರ್ ಮಹೀಭುಜರ್ ಕಡುಮುಳಿದಾರ್ದು ಕೋಲ್ವಟಿಯನಿರ್ದೆಸೆಯೊಳ್ ಸುರಿಯಲ್ (ನಳಚಂ. ೪೧೫). **ಕೋಲ್ಮಳೆ:** ತೀಲ್ವುದು ರಣಾಗ್ರದಿಂದಲ್ಲದೊಡುಳುಹೆನೆನುತೆ ಕೋಲ್ಮ [ಪಾಠಾಂ. ಲ್ವ]ಳೆಗಱೆದನವಂ (ಜೈಮಿಭಾ. ೧೨-೩೬). **ಕೋಲ್ವಳೆ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ಕೋಲ್$_1$ + ಮಱೆ]

**ಕೋವ** (ನಾ). ಕುಡಿಕೆ ಮಡಕೆಗಳನ್ನು ಮಾಡುವ ಕಸುಬಿನವನು; ಕುಂಬಾರ: "ಕೋವರ್ = ಕುಂಬಱರ್(ಕುಱುಂಬರ್)" (ಶಮದ. ಪರಿ. ೨); "ಬಾಂಬರೆನೆ ಕೋವರ್ [ಪಾಠಾಂ. ರೆನೆ] ಕುಂಬಱರ್" (ಕಬ್ಬಿಕೈ. ೯೧ ೬); ಸಂಜೆಯೊಂದು ಆ ಕೆಳವ ಕೋವನಂಗಡಿಯಲ್ಲಿ ನಿಂದೆ (೧೪ವಿಂ. ೧೨೩-೪೦).

**ಕೋವರಚಕ್ರ** = ಕುಂಬಾರನ ಚಕ್ರ; ತಿಗುರಿ: ಕೋವರ ಚಕ್ರಂ ತಿರಿವಂದದಿಂ ತಿರಿದುದಾ ಚಕ್ರಂ ವಿಯಚ್ಚಕ್ರದೊಳ್ (ಶಾಂತಿಪು. ೪-೫೪); ನೆಗೆದಂಬರಕ್ಕೆ ಗದೆಯಂ ಕ್ರಮದಿಂ ತಿರುಪೆ ಧರಾಚಕ್ರಂ ಕೋವರ [ಪಾಠಾಂ. ಕುರವರ]ಚಕ್ರಂ ತಿಱಿವ ತೆಱದೆ ತಿಱಿದತ್ತೆನಸುಂ ತಿರುಗುವಂತೆ ತಿರುಪಿದ ನೆತ್ತಂ (ಗದಾಯು. ೮-೨೪); ಅರಿಭೂಪಾಳೋಗ್ರವೀರ ಪ್ರಮುಖಮಂ . . . ಕೋವರೆಚಕ್ರ × × × ರದಿಂ ತಿಜ್ಜನೆ ತಿರಿಪಿದಪಂ (ಎಕ. VIII, ಸಾಗರ. ೧೦೯-೨೪; 1042); ಭೂಮಂಡಲಂ ಕೋವರ ಚಕ್ರಾಕಾರದಿಂ ತಿಜ್ಜನೆ ತಿರಿಯೆ (ಜಗವಿ. ೧೮-೨೨);
[ದೇ. ‖ ತಮಿ. ಮಲ. ಕುಯವ, ಕುಶವ; ತುಳು. ಕುಸವೆ]

**ಕೋವಟಿ** 'ಕೋಮಟಿ' ನೋ.

**ಕೋವಟಿಗ** 'ಕೋಮಟಿಗ' ನೋ.

**ಕೋವಣ, ಕೋವಣ$_1$, ಕೋವಳ$_3$** (ನಾ). ಲಂಗೋಟಿ; ಕೌಪೀನ: "ಕೋವಣಮೆಂದು ಕೌಪೀನಂ" (ಕಶಸಾ. ೨೮-೫೯೧); "ಕೋವಣಮೆನೆ ಕೌಪೀನಮಕ್ಕುಂ" (ಕಬ್ಬಿಕೈ. ೬೪); ದೇಸಿಗನಾರುಮಿಲ್ಲದೊಂ ಕೋವಣಕ್ಕಪ್ಪೊಡಂ ಭಾಗಸಮಿಲ್ಲದೊನ್ (ವಡ್ಡಾರಾ. ೪೬-೮); ಅರಿಗನಂ ಪೊಗಬ್ದೊಡಿದನೆಂದು ದಂಡಕಾಷ್ಠದ ತುದಿಯೊಳ್ ಪಳಂಚಲೆಯೆ ಕೋವಣವಂ ಗುಡಿಗಟ್ಟಿ ನಾರದಂ (ಪಂಪಭಾ. ೧೨-೨೧೯); ರಾವಣನಂ ಕೋವಣಮಂ ಸೀಳ್ವಂತೆ ಸೀಳ್ವ (ಧರ್ಮಾಮೃ. ೭-೯೫);

"ಔಕಾರಕ್ಕೆ ಓತ್ವಂ – ಕೌಪೀನ – ಕೋವಣ" (ಶಮುದ.೨೭೦ ಪ್ರಯೋ); ಅವರು ಇವತ್ತು ಮಧ್ಯಾಹ್ನ ಒಂದೇ ಕೋವಣ ಧರಿಸಿ, ಹಗಲಿಗೆ ಒಂದೇ ಅರಿವೆ ಹಾಕಿಕೊಂಡು . . . ಓಡಿದ್ದಾರೆ (ಕೃಮಾಂಸ. ೨೮). **ಕೋಮಣ$_1$**: ಹೆಚ್ಚಾಗಿ ಹಳ್ಳಿಯ ಮಕ್ಕಳು ಕೋಮಣವನ್ನು ಮಾತ್ರ ಉಟ್ಟಿರುತ್ತಾರೆ (ರೂಢಿ). **ಕೋವಳ$_3$**: ಸತಿಗೊಂದು ಕಪ್ಪಡಂ ತನಗೊಂದು ಕೋವಳಂ [ಪಾಠಾಂ. ಣಂ] ಸುತನೆನಿಸಿದಂಗೆ ಮತ್ತಂತೊಂದು ಕೋವಳಂ [ಪಾಠಾಂ. ಣಂ] (ಇಳಿರ. ೫೦–೧೭); ಮುನ್ನ ನಿಮ್ಮ ಕೋವಳ [ಪಾಠಾಂ. ವಾಳ, ಮಳ]ವಾಗಿಪ್ಪನು ನಿಮ್ಮಾಜ್ಞೆಯಿಂದೆ ಹರಿಗೆ ತಲ್ಪವಾಗಿರ್ದನು (ಭೈರಸೂ. ೨೭).

[ದೇ. ॥ ತನಿ. ಕೋವಣ ; ಮಲ. ಕೋಣ, ಕೋವಣ ; ತುಳು. ಕೋಮಣ, ಕೋವಣ ; ತೆಲು. ಗೋಣ, ಗೋವಣ. / ಸಂ. ಕೌಪೀನ]

**ಕೋವಣವೀ** (ಕ್ರಿ) ಲಂಗೋಟಿಯನ್ನು ನೀಡು ; ಕೌಪೀನವನ್ನು ಕೊಡು : ಮುನ್ನೆಲಿವನೆಯೊಳ್ ಮುನಿಗಳ್ ಕುಶೀಲವರ್ಗೆ ಕೋವಣ ವಿತ್ತಂತೆ (ಚಿಕವಿ. ೬–೧೬೮ ವ). [ಕೋವಣ + ಈ$_2$]

**ಕೋವರ** (ನಾ). (?) : ಉತ್ತರದಲಿ ದಂಡುವೊತ್ತಿ ಬಿಡಲು ಗುಡಿಯೆತ್ತಿ ಹೊಯ್ದವು ದೊರೆಗಳಿಗೆ ಸುತ್ತ ಕೋವರದ ಕಾವಲು ಪಾರಿಪಂಜಿನ ಮೊತ್ತವನೇನ ಬಣ್ಣಿಸುವೆ (ಅನುಸಾಂ. ೨–೩೩).

**ಕೋವರಿ** 'ಕವ್ವರೆ' ನೋ.

**ಕೋವಳ$_1$** 'ಕೋವಳೆ' ನೋ.

**ಕೋವಳ$_2$** (ನಾ). ಕೋಮಲತೆ; ಮೃದು : "ಕೋವಳ –ಕೋಮಲ = ಮೃದು" (ತದ್ಭಕೋ.೯); "ನಳನಳಿಕೆಯು ಕೋಮಳಿಕೆಯೆ ಕೋವಳ [ಪಾಠಾಂ. ಮಲ]ಮೆನಿಪ್ಪುದು" (ಚತುಸ. II, ೩೭).

[< ಸಂ. ಕೋಮಲ]

**ಕೋವಳ$_3$** 'ಕೋವಣ' ನೋ.

**ಕೋವಳೆ**, ಕೋಮಳೆ$_1$, ಕೋವಳ$_1$, ಕೋಹಳ, ಕೋಳೆ$_1$ (ನಾ). ನೈದಿಲೆ : "ನೈದಿಲ್ಗಳೊಳುಪ್ಪಳ ಕೋವಳೆಗಳ್" (ಕರ್ಣಾನಿ. ೩೯); "ಕೋವಳೆಯೆನಲ್ ನೈದಿಲೆ" (ಕಶರ. ೧೨೧); ಕೋವಳೆ ಬಣ್ಣಂಗೆಟ್ಟಳ್ ಕಮಲಿನಿ ಬಾಯ್ಬಿಟ್ಟಳ್ (ರಾಮಾಶ್ವ. ೨೬–೨೮); ಸೂರ್ಯೋದಯಕೆ ಚನ್ನ ಕೋವಳೆಯು ನಗಲೇನೊ (ಕವಿಸೋ. ೩೭–೨೨). **ಕೋಮಳೆ$_1$** : "ಕೋಮಳೆ–ನೆಯ್ದಿಲ್ (ನೆಯ್ದಲ್)" (ಶಮುದ. ಪರಿ. ೨). **ಕೋವಳ$_1$** : "ಕೋವಳೆಂದು ನೈದಿಲು" (ಶಬ್ದಮಂ. ೨೭). **ಕೋಹಳ**: ದ್ವಾರಬಂಧ ಕವಾಟ ಕಲ್ಲಿನ ದ್ವಾರ ಗರ್ಭಾಗಾರಯುತ ಕರವೀರ ಜಾತಿ ವಕುಳ ಮುಕುಳ ಕೋಹಳ ವಿಭಾತಿಯಲಿ . . . ಪೂಜಾವಿರಚನಾಲಂಕಾರ ಮಾಗಿರಲು (ಬಸವ. ೧೮–೬೯). **ಕೋಳೆ$_1$** : "ಕೋವಳೆ(ಳ್), ಕೋಳೆ, ಕೋಹಳ್, ಕೋಮಳೆ – ಕುವಲಯ" (ತದ್ಭಕೋ. ೯); ಕೋಳೆ ಹೂವದಳದಳ (ಹೂಹಾದಿ. ೭–೧೫). [< ಸಂ. ಕುವಲಯ]

**ಕೋವಿ$_1$**, ಗೋವಿ$_1$ (ನಾ). ೧. ಕೊಳವೆ ; ಪಿಚಕಾರಿ ; ಜೀರ್ಕೊಳವೆ: ಶ್ರೀ ಕೃಷ್ಣಂ ಕರದಿ ಪೊನ್ನಂಡೆಯುಂವಿಡಿದು ಕಸ್ತುರಿವೆರದ ಪರಿಮಳೋದ ಕವ ತೀವಿ ಬೆಳುಗಂಗಳುಂ ಪೊಳೆಯೆ ದಂತಪಂಕ್ತಿಗಳುವುಜ್ವಳಿಸುತಿರೆ ಭುಜ ಯುಗ್ಮವುಬ್ಬರಿಸೆ ವಾಮಶ್ರೀಲಲಿತಹಸ್ತದಿ ಕೋವಿಯಂ ಪಿಡಿದು . . . ಸರ್ವರಂ ತೋಯಿಸಲು (ನವಮೋ. ೧೦–೬೦). ೨. ಕೊಳಲು ; ವೇಣು. 'ಪಿಳ್ಳಂಗೋವಿ' ಪರಾ. ೩. ಊದುಗೊಳವಿ. ೪. ಸರ ಮುಂತಾದ ಆಭರಣಗಳಲ್ಲಿ ಅಳವಡಿಸುವ ಚಿನ್ನದ ಕೊಳವಿ. ೫. ಗುಂಡು ಹಾರಿಸುವ ಸಾಧನ; ತುಪಾಕಿ: ಸುತ್ತ ಬಳಸಿ ಪಟಲವರು ಕೋವಿಗಳನು ತೆತ್ತಿಸಲವರಾರಭಟಿಯ ವೃತ್ತಿಯಿಂ ತಾರಗೆಗಳ ಗೂಳೆಯವಿರದೆತ್ತಿತು ದ್ರುವಲೋಕದತ್ತ (ಕುರಾಸಾ. ೧೧–೩೫); ಬೊಬ್ಬೆಯಾರ್ಭಟಿ ಬಾಣ ಬಿಡುವ ಕೋವಿಯೊಳುಬ್ಬಿ ತಿವಿದ ಬಲು ಧೂಮ ಉಬ್ಬಲಾಗಸಕಾಗ (ಕಂನವಿ. ೩–೬೩); ಚೂರಿ, ಕವಣೆ, ನೇಗಿಲು, ಕೋವಿ, ಶತಘ್ನಿ ಮೊದಲಾದ ಆಯುಧಗಳನ್ನು (ಕೃವಾಉ. ೨೪೪); ಹದ್ದು ಹಾರಲಿಕ್ಕೂ, ಕೋವಿ ಹೂಡಲಿಕ್ಕೂ ಜೋಡಿ (ಗಾದೆ). 'ಕೊಳವಿ' ಪರಾ. **ಗೋವಿ$_1$** : ೫. ಮಕರದಿಬ್ಬಿ, ರೇಖು ವಿಸರ, ಗೋವಿ, ತುಪಾಕಿ ಮುಂತಾದ ಆಯಸಯಂತ್ರಜಾಲಗಳಿಂದಲೂ (ಕೃವಾಸ. ೮೭). [< ಕೊಟವಿ]

**ಕೋವಿ$_2$** 'ಕೋವೆ$_1$' ನೋ.

**ಕೋವಿಕಾರ** 'ಕೋವಿಕಾಜಿ' ನೋ.

**ಕೋವಿಕಾಜಿ**, ಕೋವಿಕಾರ, ಕೋವಿಗಾರ (ನಾ). ಬಂದೂಕನ್ನು ಆಯುಧವಾಗಿವುಳ್ಳವನು : ಚಿಕ್ಕಗೊಂಡನ ಮಗ ಕೋವಿಕಾಜಿ ದೇವೆಯನಾಯ್ಕ (ಎಕ. VIII, ಸೊರಬ. ೪೮೩–೮; 1388); ಶಾಕಿನಿ ಯರಿಗರಿಗಳನೊಳುಣಿಸಾಗಿಯಾ ಕೋವಿಕಾಜರು ಮಾಡಿ (ಚಂಪ್ರಸಾಂ. ೮–೪೯). **ಕೋವಿಕಾರ** : ಕೋವಿಕಾರರು ಕೋಲಾಹಲದಿ ಕೂಗುತಾ ರಾಯಪೌಜಿಗೆ ರೋಷದೋರಿ (ಸೌಂದಕಾ. ೭–೪೩). **ಕೋವಿಗಾರ** : ಕೋವಿಗಾರನ ಮೇಲೆ ಪಾಯ್ದು ಪೆರ್ಬುಲಿಯಂತೆ (ಶ್ರೀರಾಮಾ. ೬೮೭–೨೬೩). [ಕೋವಿ$_1$ + –ಕಾಜ]

**ಕೋವಿಗಂಡಿ** (ನಾ). "ಕೋಟೆಯ ಮೇಲಿನ ಕೈಪಿಡಿಗೋಡೆಯಲ್ಲಿ ಗುಂಡು ಹಾರಿಸುವುದು ಮೊದಲಾದುವಕ್ಕಾಗಿ ಅಲ್ಲಲ್ಲಿ ಬಿಟ್ಟಿರುವ ಕಂಡಿ" (Crenel. ಇಂಕನಿ). [ಕೋವಿ$_1$ + ಕಂಡಿ$_1$]

**ಕೋವಿಗಾರ** 'ಕೋವಿಕಾಜಿ' ನೋ.

**ಕೋವಿಗೊಳವಿ** (ನಾ). ಬಂದೂಕಿನ ಕೊಳವೆ,—ನಳಿಗೆ : ಪರರವಿಯ ಕೋವಿಗೊಳವಿಯ ಮಾಡಿಯುದರೊಳತ್ಕುರುಕಳಾನಿಧಿ ಮರ್ದ ತುಂಬಿಯಾ ನಾಳಕ್ಕೆ ಸ್ಫುರಿತಾಗ್ನಿಯುಡೆ ಕಿಡಿಗಳುಡುಗಳಂದದಿಯುದುರ್ವ ಘನಚಂದ್ರ ಬಾಣಗೈದು (ಪ್ರಭುಪು. ೨–೧೦). [ಕೋವಿ$_1$ + ಕೊಳವಿ (< ಕೊಟವಿ)]

**ಕೋವಿಚೀಲ** (ನಾ). ಕೋವಿಯ ಉಪಯೋಗಕ್ಕೆ ಅಗತ್ಯವಾದ ಸಿಡಿಮದ್ದು ಮೊದಲಾದುವನ್ನು ತುಂಬಿಕೊಳ್ಳುವ ಚೀಲ : ಅವನು ಕೋವಿ ಮತ್ತು ಕೋವಿಚೀಲಗಳನ್ನು ತೆಗೆದುಕೊಂಡು (ಮಲೆಮ. ೮೧೩). [ಕೋವಿ$_1$ + ಚೀಲ]

**ಕೋವಿತ** (ನಾ). ಒಂದು ಬಗೆಯ ಮರ : ಕೋವಿತ : ಒಣಭೂಮಿ ಯಲ್ಲಿ ಬೆಳೆಯುವುದು ಕಟ್ಟಿಗೆ ಬಿರುಸು (ಕಭಾಗ. ೩೮). [?]

**ಕೋವಿದ** (ನಾ). ತಿಳಿದವನು; ವಿದ್ವಾಂಸ; ಪಂಡಿತ : "ಪಂಡಿತಂ ಪ್ರಾಪ್ತಂ ವಿಶಾರದಂ ಕೋವಿದಂ ಕವಿ . . . ವಿದ್ವಾಂಸನೆನಿಸಿಕ್ಕು" (ಮಂಗರಾ. ೬೬–೨); ಪೇಳುವೆ ನಾಗಕುಮಾರನ ಚರಿತೆಯ ಕೇಳಿರೊ ಸಕಲ ಕೋವಿದರು (ನಾಗಕು. ೧–೧); ಎಲೆ ಮರುಳೆ ಕೋವಿದ ನಾಡೊಡಯ್ಯನೆ ಪರೋಕ್ಷದೊಳ್ಳೀಳಿದುಕೊಳ್ (ಜೈನಿಭಾ. ೪–೪೧). [ಸಂ.]

**ಕೋವಿದಾರ** (ನಾ). ಕಂಚುವಾಳದ ಗಿಡ ; ಕೆಂಗಾಂಚಾಳದ ಗಿಡ : "ಕಾಂಚನಾರಕಮೆನಲ್ ಕೋವಿದಾರಮೆನಲ್ಕೆ ಕಾಂಚಿವಾಳಂ" (ಮಂಗರಾ. ೩೮–೨೩); ಅಮಲಕಾಮ್ರಾತಕ ಕೋವಿದಾರ ಪನಸಾಂಕೋಲಾತಿ ಮುಕ್ತಾಕ್ಷ . . . ಕಣ್ಗೊಪ್ಪಿತಾ ಪರ್ವತಂ (ವೆಂಕಮ. ೩–೫). [ಸಂ.]

**ಕೋವಿದಾರಧ್ವಜ** (ನಾ). ೧. ಕೋವಿದಾರ ಗಿಡದ ಚಿಹ್ನೆಯುಳ್ಳ ಧ್ವಜ, —ಪತಾಕೆ, —ಬಾವುಟ ; ಭರತನ ಬಾವುಟ : ತಡೆ, ತಡೆ, ಆದೇನದಾ ಕೋವಿದಾರಧ್ವಜಂ (ಶ್ರೀರಾಮಾ. ೧೫೮–೧೬೧). ೨. ಅಂಥ ಧ್ವಜವುಳ್ಳವನು. [ಕೋವಿದಾರ + ಧ್ವಜ]

**ಕೋವಿದೆ** (ನಾ). ತಿಳಿದವಳು; ಪಂಡಿತೆ; ನಿಪುಣೆ; ವಿದುಷಿ: ಲಾವಣ್ಯಭೂಷಣದ ಪೆಸ್ಸಾಭರಣಮೇಕೆ ಕೋವಿದೆಯರಲ್ಲ ಸೈರಂಧ್ರಿಯ ರೆನಲ್ಕೆ ವಿಷಯಿಗೆ ಸಿಂಗರಂಗೈದದು (ಜೈಮಿಭಾ. ೩೧–೭); ಗಂಡನ ಘನತೆಯೆಂತಂತು ಪೆರ್ಚಿಯ ಕೈಕೊಂಡೆಸೆವುದು ಕೋವಿದೆಯರು (ಹದಿಬ. ೪–೪೧). [ಸಂ. ಕೋವಿದಾ]

**ಕೋವಿಲ್** ‘ಕೋಯಿಲ್’ ನೋ.

**ಕೋವಿಲು** ‘ಕೋಯಿಲ್’ ನೋ.

**ಕೋವಿಲಿ** ‘ಕೋಯಿಲ್’ ನೋ.

**ಕೋವು**₁ (ಕ್ರಿ). ಕೆಡವು; ಬೀಳಿಸು; ಬಿಸುಡು (?): ಬಿಸುಡು ಮನೆಗಳಂ ಬಿಟ್ಟಳ್ವ ಮಕ್ಕಳ್ಗಳ ಓಪದೆ ಮುನೀಂದ್ರ ಹೋಮಾಜ್ಯ ಚರುಸಮಿತೆಗಳ ಕೋವಿ [ಪಾಠಾಂ. ತೀವ] ಗಂಧಾಕ್ಷತೆಗಳಂ ಬಿಸುಟು ಪರಿತಂದದೇವೇಳ್ವೆನಜ್ಞಾಕ್ಷಿಯರ್ ಮದನಲಕ್ಷ್ಮಿಯರ್ ನಿಟ್ಟಿಸಿದರೀಶ ನಿರವ (ಚಬಸು. ೨೦–೧೮). [?]

**ಕೋವು**₂ ‘ಕೋಹು₁’ ನೋ.

**ಕೋವುಳು** (ನಾ). ಗೆದ್ದಲು; ಇರುವೆ (?) : ಮೂಡಸೀತರು ಗದ್ದುಗೆಯ ಕೆಳಗೆ ಕೋವುಳಿ [ಪಾಠಾಂ. ಮೇಗೆ ಗೂಗೆಯೆ]ವ್ವಾಡಿದುವು ಬಳ್ಳು ಕರೆದವು (ಸೋಮಚ. ೪–೧೦೧); “ಕೋವುಳು – ಕುಂಬಾರ ಹುಳು” (ಪ್ರಭಣ್ಣ). [?]

**ಕೋವೆ**₁, **ಕೋವಿ**₁ (ನಾ). ೧. ಲೋಹಗಳನ್ನು ಕರಗಿಸಲು ಮಾಡಿರುವ ಮೂಸೆ; ಮಣ್ಣಿನ ಮೂಸೆ: ಚಿನ್ನ ಏಶೇಷ ಮಣ್ಣು ಆಧಮವೆಂದಡೆ ಅದು ನಿಂದು ಕರಗುವುದಕ್ಕೆ ಮಣ್ಣಿನ ಕೋವೆಯೆ ಮನೆಯಾಯಿತ್ತು (ಪುಜ್‌ಮಿಂ. ೯೨); ವರಭಾಗ ಸಂಖ್ಯೆಯಂ ಮಿತ್ರಪಂಚಕ ವನಣಿಯುರಮದರೊಳೊಡಗೂಡಿ ಕೋವೆಯೆರಡಂ ಪಿಡಿದು ಪಿರಿದು ರಂಧ್ರಂದೋಜದಂತೆಯ್ದೆ ಮುಚ್ಚಿ (ಅರಾಚ. ೧೩–೧೦); ಘನ ಮೂಲಿಕಾ ಸಾರವೆಜ್‌ದು ಕೋವೆಯೊಳಿಟ್ಟು ತನಿಗಿಚ್ಚಿನಿಂದ ಕಾಸಿದರೆ ತನಗೆ ತಾನೆ ಕಿಟ್ಟಕಾಳಿಕೆ ಜಾರಿ ಧೋಂಕನೆ ಕೀಳು ಚಿನ್ನ ಮೇಲಹುದು (ಭರತೇ. ೬೯–೧೨೦); ಕೆಂಡಗಳ ಕೋವೆಯಲಿ ಕಾವ ಕಾಂಚನದಂತೆ (ಗೊಲ್ಲೊಥಾ. ೯–೨೫೩). ೨. ರಂಧ್ರ; ತೂತು; ಬಿಲ: ಹುತ್ತದ ಕೋವೇಲಿ ಹುಟ್ಟಾಳಿ ಕರಿಯವ್ವ (ನಾಪದ. ೨೦–೧). ೩. (ಉಗುರುಗಳ) ತುದಿ; ಅಗ್ರ: “ನಖಾಗ್ರಾಣಿ – ಉಗುರುಗಳ ಕೋವೆಗಳನ್ನು” (ಬಾಹಟೀ ೨-೫-೧೨೨ ವ). **ಕೋವಿ**₁: ೨. ಈ ಗಣಿಗಳಿರುವ ಪ್ರಾಂತದಲ್ಲಿ ಅಗ್ನಿಪರ್ವತದ ಸಂಬಂಧ ಕಾಣಬರುವ ಬಹಳ ಆಳವಾದ ಕೆಲವು ಕೋವಿಗಳು ನೆಲದಲ್ಲಿರುತ್ತವೆ (ವಿಜ್ಞಾನ. I, ೮೪).

[ದೇ. ‖ ತಮಿ. ಕುವ್ವೈ, ಕುಕ್ಕೈ ; ಮಲ. ಕುವ ; ತುಳು. ಕೋವೆ]

**ಕೋವೆ**₂ (ನಾ). ಹಬ್ಬುವ, ಅಂದವಾದ ಕೆಂಪುಹಣ್ಣು ಬಿಡುವ ಒಂದು ಜಾತಿಯ ಬಳ್ಳಿ : (ಕ).

[ದೇ. ‖ ತಮಿ. ಮಲ. ಕೋವೈ ; ತೆಲು. ಕ್ರೋವಿ ; ಗೋವಿ]

**ಕೋವೆ**₃ (ನಾ). ಅನುಕ್ರಮ ; ಅನುಪೂರ್ವಿ; ಪರಿವಿಡಿ: ಇನಜಗೆಂದಾ ಮಾದ್ರಭೂಪಾಲನೊಪ್ಪಿತಾ ಜನಪ ಕೌರವನ ಮನ್ನಿಸಿದನೆಂಬಾ ಕಥೆಯ ಕೋವೆಯಂ ಶೌನಕರಿಗೆ ವಿನಯದಿಂ ಸೂತನುಸಿರಿದಂ (ಲಕ್ಷ್ಮಭಾ. ೮–೧–೫೦).

[ದೇ. ‖ ತಮಿ. ಕೋವೈ ; ಮಲ. ತೆಲು. ಕೋವ]

**ಕೋವೆ**₄ (ನಾ). ೧. ಒಂದು ಬಗೆಯ ರೋಗ; ಅಗ್ನಿಮಾಂದ್ಯ; ಮಕ್ಕಳ ಭೇದಿ; ವಿರೇಚನ: ನೀ ಉಸುರಿ ಪೇಳ್ ನಿನಗ ಜೀರ್ಣವೊ ಕೋವೆಯೋ ಅಂಗುಳಿಯ ಮುಳ್ಳೋ ಭಾವಿಸಲು ನಾ ಮದ್ದು ಮರನೆಂಬಾವುದು ಮನಜಾಯೆ (ಬಸವ. ೧೪–೨೦). ೨. ಒಂದು ಬಗೆಯ ಕೆಮ್ಮು; ನಾಯಿಕೆಮ್ಮು; ಕೋಡಗ ಕೆಮ್ಮು: ಜನನಿಯೂಟದಪಥ್ಯದಿಂದಲಿ ಘನತರದ ರೋಗಗಳು ಶಿಶುವಿಗೆ ಜನಿಸುವುವು ಮಿಗೆ ಕೋವೆಗಳು ಸುಂಟಿಗೆಗಳುರವಣಿಸಿ ತನತನಗೆ ಕೆಮ್ಮಲುಗಳುಬ್ಬಸವನವರತ ಸಂದಣಿಸಿ ಕವಿಯಲು (ಪ್ರಹ್ಲಾಚ. ೮–೪೧); ಮಕ್ಕಳ ಕೋವೆಗೆ:–ಮಯೂರಶಿಖಿಯನ್ನು ನೀರಲ್ಲಿ ತೇದು ಎರೆಯೆ ಗುಣ (ವಿವೈವಿ. ೧೦೮); ನೆಲ್ಲಿಕಾಯ ರಸಮಂ ಎಣ್ಣೆಯಂ ಬೆರಸಿ ಕುಡಿಯೆ ಕೋವೆ ತೀರ್ಗುಂ (ವಿವೈವಿ. ೯೧). ೩. ವ್ಯಾಧಿ; ರೋಗ: ಬದುಕದೆ ಅವಳಿಗೇನಮ್ಮ ಕೋವೇ? ಬದುಕಿದ್ದೂ ಸತ್ತಂತೆಯೇ ಅವಳು (ನಿಂದನೆ. ೧೮೬). ೪. ಮಕ್ಕಳ ತಲೆಯ ಮೇಲೆ ಏಳುವ ಗುಳ್ಳೆ, —ಕುರು: (ಕ). [?. / ತುಳು. ಕೋವೆ]

**ಕೋವೆ**₅ ‘ಖೋವಾ’ ನೋ.

**ಕೋವೆಲೆ** (ನಾ). ಕೋವೆಯ ಎಲೆ: ಕೋವೆಲೆ, ಅಶ್ವಗಂಧಿಯ ಬೇರು, ಎಳ್ಳು ಇವನ್ನು ಚಿಗಳಿಯಾಗಿ ಕುಟ್ಟಿ ಮೆಲ್ಲಲು ಗೆಡ್ಡೆ ಕರಗಿ ಹೋಗುವುದು (ವಿವೈವಿ ೭೮). [ಕೋವೆ₂ + ಎಲೆ₁]

**ಕೋವೆಹಲ್ಲು** (ನಾ). ಆರ್ಧ ಅಗಿದು ಮೇವನ್ನು ಹೊರಗೆ ಉಗಿವಂತೆ ಮಾಡುವ, ಮೆಲುಕಿಗೆ ತೊಂದರೆಯಾಗುವ ಒಂದು ಬಗೆಯ ದೋಷದಿಂದ ಕೂಡಿದ, ದನಗಳ ದವಡೆ ಹಲ್ಲು: ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ, ದಾವಣಿಸುಳಿ . . . ಕೋರಬಗ್ರಿ, ಕೋವೆಹಲ್ಲು ಇವೆಲ್ಲಾನೂ ಚೆಂದಾಗಿ ನೋಡಿ ಒಳ್ಳೆ ಸುಳಿ ಇರೋದ ತಕ್ತಾರ್ (ಹುಟ್ಟಹ. ೧೩೯). [ಕೋವೆ₄ + ಹಲ್ಲು (< ಪಲ್)]

**ಕೋಶ** (ನಾ). ೧. (ಕತ್ತಿ, ಬಾಕು ಮೊದಲಾದ) ಆಯುಧಗಳನ್ನು ಇಡುವ ಚೀಲ; ಒರೆ: “ಕೋಶಃ, ಪ್ರತ್ಯಾಕಾರಃ, ಖಡ್ಗಪಿಧಾನಂ –ಈ ೩ ಒಜಿ” (ಹಲಾಯು. ೭೮–೩೧೯); “ಪ್ರತ್ಯಾಕರಂ ಕೋಶಮುವ ಜೊಜಿಗಳಕ್ಕುಂ” (ಮಂಗರಾ. ೮೮–೩೭); ಅಕಟ ನೀನಿನ್ನೆವರಮಾಚರಿಸಿದ ತಪಸ್ಸು ಕತ್ತಿ ಮುರಿದಾ ಕೋಶವಾಯ್ತು? (ಹೆದ್ಬರ. ೩೨–೧೪). ೨. ಪಕ್ಷಿಗಳ ತತ್ತಿ; ಮೊಟ್ಟೆ: “ಪೇಶೀ, ಕೋಶಃ, ಅಂಡಂ – ಈ ೩ ಮೊಟ್ಟೆ” (ಹಲಾಯು. ೪೦–೮೭); “ಕೋಶಂ ಪೇಶಿಯುಂಡಮೆನೆ ತತ್ತಿಯಕ್ಕುಂ” (ಮಂಗರಾ. ೫೦–೧). ೩. ವೃಷಣ; ತರಡು; ಬೀಜ: “ಮುಷ್ಕಂ, ಅಂಡಃ, ವೃಷಣಃ, ಕೋಶಃ, ಸಂಗ್ರಾಹಃ, ಮುಷ್ಕಿಃ – ಈ ೬ ಅಂಡಂ” (ಹಲಾಯು. ೮೩–೩೬೯). ೪. ರೇಶ್ಮೆ ಹುಳು ಮೊದಲಾದ ಕೆಲವು ಜೀವಿಗಳ ಪೊರೆಯ ಆವರಣ, —ಗೂಡು: ರೇಶ್ಮೆ ಹುಳುಗಳಿಗೆ ಮೇವನ್ನು ಹಾಕುತ್ತಲೇ ಇರುವರು. ಅವನ್ನು ಅದಷ್ಟು ಚೆನ್ನಾಗಿ ಬೆಳಸಿ ಅವುಗಳ ಕೋಶವು ಕೈಗೆ ಸಿಗುವ ತನಕ ಆತುರ (ಬಾಲಪ್ರ. II, ೯೦೯). ೫. ರಾಜ್ಯದ ಏಳು ಅಂಗಗಳಲ್ಲಿ ಒಂದು; ಭಂಡಾರ; ಬೊಕ್ಕಸ; ಖಜಾನೆ: “ಅರಸಂ ಪೆರ್ಗಡೆ ಜನಪದವರಿದೆನಿಸುವ ಕೋಟೆ ಕೋಶಮಾಯತ್ತಂ ಬಂಧುರವೃತ್ತಮಿತ್ರನೆಂದಿಂತು ರಾಜ್ಯಮಕ್ಕುಂ ವಿಚಾರಿಸಲ್ ಸಪ್ತಾಂಗಂ” (ವಸ್ತುಕೋ. ೩೦–೪೮); ಸಲ್ಲಲಿತ ದೇಶ ಕೋಶವನು ಕಟಕವನವಕ್ಕುಳ್ಳ ಕುಲಕರಣದುರ್ಗಂ ಮುದ್ರೆ ಮೊದಲಾದುವೆಲ್ಲಮಂ ಬಿಡದೊಪ್ಪುಗೊಟ್ಟು ಹೋಗು (ಹಚಕಾ. ೮–೭೭); ಕೋಶವೆಂಬುದು ನಾಲ್ಕನೆಯ ರಾಜ್ಯಾಂಗ . . . ಕೋಶವೆಂದರೆ ಸ್ವಾಮಿಗಧಿಕ ಸಂಗ್ರಹದ ನಿವೇಶನ ಭಾಂಡಾಗಾರ (ಮುನಿವಂ. ೧–೯೦). ೬. “ಕರಗಿಸಿದ, ಕರಗಿಸದೆ ಗಟ್ಟಿಯಾಗಿರುವ, ಈ ಎರಡು ಬಗೆಯ ಚಿನ್ನ ಮತ್ತು ಬೆಳ್ಳಿ” ಅಮರ ಟೀಕೆ. ೭. ಕಾಯಿಯ ಅಥವಾ ದ್ವಿದಳ ಧಾನ್ಯಗಳ ಹೊದಿಕೆ; ಸಿಪ್ಪೆ: (ಕ) ೮. “(ಮೀನು ಮೊದಲಾದ) ಕೆಲವು ಪ್ರಾಣಿಗಳ ದೇಹದ ಗಡುಸಾದ ಹೊರಹೊದಿಕೆ; ಚಿಪ್ಪು; ಶಂಖ; ಮುತ್ತಿನ ಚಿಪ್ಪು”: (ಪತ್ರಿನಿ. ೭೪).

೯. ತಾವರೆ ಹೂವಿನ ಒಳಗಿನ ಗೊಂಡೆ ; ಕರ್ಣಿಕೆ ; ಬೀಜಕೋಶ : ಬಂಡಿನಲರ್ವುಡಿಯಿಂ ಪೊರೆದ ಪರಮೆಮಜಿಯಂ ಕೋಶದೆಳದಿಟ್ಟುಗೆತ್ತು ಕರ್ದುಂಕಲೆಂದವ್ವಳಿಸುವ ಬಾಲಹಂಸಂಗಳಿಂ (ರಾಮಾಶ್ವ. ೫೨-೨೬). ೧೦. ಯಾವ ವಸ್ತುವನ್ನಾದರೂ ಮುಚ್ಚಿ ಭದ್ರಪಡಿಸುವ ಚೀಲ, ಕವಚ, ಪೆಟ್ಟಿಗೆ ಮೊದಲಾದ್ದು. 'ವಿದ್ಯುತ್ಕೋಶ' ಪರಾ. ೧೧. ಕಣಜ ; ಉಗ್ರಾಣ ; ಕೋಠಿ : (ಕ). ೧೨. ಹೂವಿನ ಮೊಗ್ಗೆ ; ಕುಟಲ : (ಕ). ೧೩. ಸ್ತ್ರೀಯರ ಯೋನಿಮುಖ ; ಗರ್ಭಾಶಯ : (ಕ). ೧೪. ಗಂಡಿನ ಜನನಾಂಗ; ಶಿಶ್ನ; ಲಿಂಗ: (ಕ). ೧೫. ನಿಘಂಟು; ಶಬ್ದಾರ್ಥಾಕರ: ಎಡೆಮಡಗದನೇಕಾರ್ಥ ವಸ್ತು ಕಥನಂ ಕೋಶಂ (ಕಾವ್ಯಾವ. ೯೫೧). ೧೬. [ನ್ಯಾಯಶಾ] ದಿವ್ಯಗಳಲ್ಲಿ ಒಂದು : "ಕೋಶಂ ದಿವ್ಯವಿಶೇಷಂ" (ವಸ್ತುಕೋ. ೧೩೪-೧೦೦). 'ಕೋಶಪಾನ' ಪರಾ. ೧೭. [ವೇದಾಂತ] ಜೀವಾತ್ಮನನ್ನು ಆವರಿಸಿಕೊಂಡಿರುವ ಐದು ಬಗೆಯ ಆವರಣ. 'ಕೋಶಪಂಚಕ' ಪರಾ. [ಸಂ.]

**ಕೋಶಗೃಹ** (ನಾ). ಅಮೂಲ್ಯವಾದ ವಸ್ತುಗಳನ್ನಿಡುವ ಮನೆ ; ಖಜಾನೆ ; ಭಂಡಾರ : ಬಲದೇವ ವಾಸುದೇವರ್ . . . ಗುಣಗಣ ಮಣಿಗಣ ಕೋಶಗೃಹದಂತೆಯುಮಾಗಿ (ಶಾಂತಿಪು. ೧-೬೮ ವ) ; ಕೋಶ ಗೃಹದಂತಪ್ಪಾಪದಾಧಿಷ್ಠಿತಂ (ಪುಷ್ಪಪು. ೫-೬೮). [ಕೋಶ + ಗೃಹ]

**ಕೋಶನಾಥ** (ನಾ). ಖಜಾನೆಯ ಮುಖ್ಯಾಧಿಕಾರಿ; ಕೋಶಾಧ್ಯಕ್ಷ : ಭಂಡಾರಿ : ಕುಳ್ಳಿರೆ ತತ್ಕುಮಾರ ಮಂತ್ರನಿಪುಣ ಕೋಶನಾಥ ಕರಣಾಗ್ರಣಿ ಸೂರಿ ಕವೀಂದ್ರ ಮಾನ್ಯ ವೈದ್ಯಸುತಮುಹೂರ್ತವೇದಿ ನಿಚಯಂ ಬಲದಲ್ಲಿರವೇಳ್ಕುಂ (ಲಾಸ್ಯರಂ. ೧-೩೪). [ಕೋಶ + ನಾಥ]

**ಕೋಶಪಂಚಕ** (ನಾ). [ವೇದಾಂತ] ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯವೆಂಬ ಐದು ಕೋಶಗಳು, —ಜೀವನ ಆವರಣ : ಇಲ್ಲಿ ತಿಳಿ ಈ ಕೋಶ ಪಂಚಕವಲ್ಲ ಆತುಮನೆಂಬುದಿದು ನಿಜದಲ್ಲಿ ನೋಡೈ (ಗಗತಾ. ೧೮-೨೧). [ಕೋಶ + ಪಂಚಕ]

**ಕೋಶಪಾನ** (ನಾ). 'ಕೋಶ'ವೆಂಬ ದಿವ್ಯಪರೀಕ್ಷೆಯಲ್ಲಿ ವಾದಿ ಪ್ರತಿವಾದಿಗಳು ತಮ್ಮ ಹೇಳಿಕೆಯನ್ನು ಸ್ಥಾಪಿಸಲು ದೇವತಾ ವಿಗ್ರಹಕ್ಕೆ ಅಭಿಷೇಕ ಮಾಡಿದ ನೀರಿನಲ್ಲಿ ಎರಡು ಅಥವಾ ಮೂರು ಬೊಗಸೆ ನೀರನ್ನು ಕುಡಿಯುವ ವಿಧಾನ : ಶರಣರ ನಿಚ್ಚ ನಿಚ್ಚ ಪೂಜಿಸುವಂಗೆ ಇದಕ್ಕಿದೆ ದೃಷ್ಟ ದೀವಿಗೆ - ಪಾದೋದಕ ಕೋಶಪಾನವಲ್ಲದೆ ಏನೂ ಇಲ್ಲವಯ್ಯ (ಬಸವ. ೬೪೯) ; ಹರನಾಣೆ ಶಿಖಿ ವಿಷಂ ತವಿಸರ ಮಧಿಕ ಘಟಾಹಿ ಕೋಶಪಾನಂದಲುಮೆಂಬುರು ಸಪ್ತದಿವ್ಯಂ (ತ್ರಿಷುವಿ. ೭-೧೦೫). [ಕೋಶ + ಪಾನ]

**ಕೋಶಫಲ** (ನಾ). ಒಂದು ಬಗೆಯ ಗಿಡ ; ತಕ್ಕೋಲ : "ತಕ್ಕೋಲ ವೃಕ್ಷದ ಪರಿಮಳ ದ್ರವ್ಯ" (ಅಮರ-ಟೀಕೆ) ; "ಕೋಲಕಂ, ತಕ್ಕೋಲಕಂ, ಕೋಶಫಲಂ - ೩ ತಕ್ಕೋಲದ ಗಿಡ, ತಕ್ಕೋಲದ ಬೊಂಕೆ, ತಕ್ಕೋಲದ ಫಲ ; ಪರಿಮಳದ ಚಕ್ಕೆಯುರ" (ಸಿದ್ಧಾಂತಿ. ೧೪೦). [ಕೋಶ + ಫಲ]

**ಕೋಶಮಾವು** (ನಾ). ಒಂದು ಬಗೆಯ ಮರ : "ಲಾಕ್ಷಾವೃಕ್ಷಃ - ಲಾಜ, ಕೋಶಮಾವು" (ಓಷಧಿ. ೧೪೩). [ಕೋಶ + ಮಾವು]

**ಕೋಶವಿಭೂತಿ** (ನಾ). ೧. ಬೀಜಕೋಶದ ಸಮೃದ್ಧಿ; (ಹೂವಿನ) ಕರ್ಣಿಕೆಯ ಪುಷ್ಕಳತೆ. ೨. ಖಜಾನೆಯ ಐಶ್ವರ್ಯ ; ಬೊಕ್ಕಸದ ಸಂಪತ್ತು. ೧, ೨ : ಕೋಶವಿಭೂತಿ ವಿಕ್ರಮದ ಸೊಂಪುದ್ಯಾನದೊಳ್ ಪೀನಮೊಪ್ಪುಗುಮುರ್ವೀಶರೊಳೊಪ್ಪದೆಂದೆನಿಸಿದಂ ತನ್ನೇಟಿಗ್ಗಿಯಿಂ ಪದ್ಮಜಂ (ಪುಷ್ಪಪು. ೫-೫೬). [ಕೋಶ + ವಿಭೂತಿ]

**ಕೋಶಾಗಾರ** (ನಾ). = ಕೋಶಗೃಹ : ವಸುಧಾರಕಮೆಂಬ ಕೋಶಾಗಾರಮುಂ (ಆದಿಪು. ೧೫-೩ ವ). [ಕೋಶ + ಆಗಾರ]

**ಕೋಶಾತಕಿ** (ನಾ). ೧. ಒಂದು ಬಗೆಯ ಕುಂಬಳ ಅಥವಾ ಸೋರೆ. ೨. ಪಡವಲ ಬಳ್ಳಿ ಅಥವಾ ಅದರ ಕಾಯಿ : "ಕೋಶಾತಕೀ, ಪಟೋಳೀ - ಈ ೨ ಪಡಲಂ" (ಹಲಾಯು. ೩೪-೪೯) ; "ಹಾಲೆ ಕೋಶಾತಕಿ ಪಟೋಳೀಯಕ್ಕುಂ" (ಮಂಗರಾ. ೩೭-೨೧) ; ಬಾಣಸಿಗಂ ಮುಳಿದು ಪೆರರಜಿಯದಂತು ಸರ್ವಸಂಭಾರ ಸಂಮಿಶ್ರಮಪ್ಪ ಕೋಶಾತಕೀ ಫಲಮಂ ಚರಿಗೆಗೆ ಪೊಕ್ಕ ಸುಧರ್ಮನಿಗಿಕ್ಕಿದೊಡೆ (ಚಾವುಂಪು. ೩೬೬-೧೫). ೩. ಹರಳು ಗಿಡ; ಏರಂಡ : "ಕೋಶಾತಕೀ - ೧. ಪಡವಲಗಿಡ. ೨. ಅವುಡಲಗಿಡ (ಸಿದ್ಧಾಂತಿ ೩೨೧). [ಸಂ. ಕೋಶಾತಕೀ]

**ಕೋಶಾಧ್ಯಕ್ಷ** (ನಾ). = ಕೋಶನಾಥ : ಕೋಶಾಧ್ಯಕ್ಷನಂ ಕರೆದು ಸಕಟಾಳ ಮಂತ್ರಿಯು ಕೇಳಿದಷ್ಟು ದ್ರವ್ಯಮಂ ಕುಡುವುದೆಂದು ಪೇಳೆ (ಕಗವಿ. ೧೦೩-೮). [ಕೋಶ + ಅಧ್ಯಕ್ಷ]

**ಕೋಶಾಲೆ** (ನಾ). ಒಂದು ಬಗೆಯ ಔಷಧಿ ಗಿಡ : "ದೇವಗಂಧ - ಮೆಂಥೆಯ, ಕೋಶಾಲೆ, ಹೆಗ್ಗುರುಟಿಗೆ" (ಓಷಧಿ. ೬೯). [?]

**ಕೋಶಾವಸ್ಥೆ** (ನಾ). ಕೀಟಗಳಲ್ಲಿ ಕೆಲವು ಜೀವಿಗಳು ತತ್ತಿಯ ಒಳಗೆ ಹುದುಗಿಕೊಂಡಿರುವ ಅವಸ್ಥೆ : ಹೆಣ್ಣು ಸೊಳ್ಳೆಗಳು ಹರಿಯದೆ ನಿಂತಿರುವ ನೀರಿನ ಮೇಲೆ ಕುಳಿತು ೩೦೦ - ೪೦೦ ಮೊಟ್ಟೆಗಳನ್ನು ಒಂದಾವರ್ತಿ ಇಟ್ಟು, ಅವು ೨೪ ಗಂಟೆಯೊಳಗಾಗಿ ಮರಿಗಳಾಗಿ ಅನಂತರ ಕೋಶಾವಸ್ಥೆಯನ್ನು ಸೇರಿ ನೀರಿನಲ್ಲಿಯೇ ಈಜುತ್ತಿರುತ್ತವೆ (ಗೃಹವಿ. ೧೮೬) ; ಪುರದ ತುಂಡಿನಂತೆ ಅಲುಗಾಡದೆ ಬಿದ್ದಿರುವ ಈ ಸ್ಥಿತಿಗೆ ಕೋಶಾವಸ್ಥೆ ಎಂದು ಹೆಸರು (ಪ್ರಾಣಿಶಾ. ೨೫೬). [ಕೋಶ + ಅವಸ್ಥೆ]

**ಕೋಶಿ** (ನಾ). ೧. ಬೀಜಾಶಯ; ಬೀಜಕೋಶ. ೨. ಕವಚ ; ಅಂಗಿ. [ಸಂ. ಕೋಶೀ]

**ಕೋಶಿಕೆ** (ನಾ). ಒಂದು ಬಗೆಯ ಕುಡಿಯುವ ಪಾತ್ರೆ ; ಪಾನ ಪಾತ್ರೆ. [ಸಂ. ಕೋಶಿಕಾ]

**ಕೋಶೋದರ** (ನಾ). ಮೊಗ್ಗೆಯ ಒಳಭಾಗ : ಬಲದೇವನ ಮನದೊಳ್ ಸಲೆ ನೆಲಸಿದುವಿವು ವಾಸುದೇವನ ಮನದೊಳ್ ನೆಲಸವೆ ಹಿಮಕರಕಿರಣಂ ನೆಲಸದವೋಲ್ ಜಲಜನಿವಿಡ ಕೋಶೋದರದೊಳ್ (ಶಾಂತಿಪು. ೧-೯೧). [ಕೋಶ + ಉದರ]

**ಕೋಷ** (ನಾ). ೧. = ಕೋಶ. ೨. (?) : ಎಟ್ಟಗ ಕೊಡಲ ಮೂಡಗ ಕೆಳಬಂದು ಇರ್ಪ್ಪೆಯ ಕೋಷದೆ ಪಳ್ಳದೊಳಗಣ ಉಳಿ ಅಳರಿಯೆ (ಇಅ. XII, ೧೬-೪ ; 735). [ಸಂ.]

**ಕೋಷ್ಟ** 'ಕೊಟ್ಟೆ' ನೋ.

**ಕೋಷ್ಟಕ** (ನಾ). ವಸ್ತುಗಳ ಅಳತೆ, ತೂಕ ಮುಂತಾದ ಪ್ರಮಾಣಗಳನ್ನು ತಿಳಿಸುವ ಪಟ್ಟಿಕೆ ; ಅಂಕಣಗಳಲ್ಲಿ ಅಳವಡಿಸಿದ ಅಂಕಿ ಅಂಶಗಳು ಮುಂತಾದುವುಗಳ ವಿವರ ; ತಃಖ್ತೆ : ಕೆಳಗಿನ ಕೋಷ್ಟಕದಲ್ಲಿ ರೂಢಿಯೊಳಗಿನ ಕೆಲವು ಮುಖ್ಯ ಮುಖ್ಯ ಪದಾರ್ಥಗಳು ಕರಗಲಿಕ್ಕೆ ಬೇಕಾಗುವ ಉಷ್ಣತೆಯ ಮಾನವನ್ನು ಕೊಟ್ಟಿದ್ದೇವೆ (ಮುಂಬಯಿ. ೫-೧೨೧) ; ಜನವರಿ ತಿಂಗಳಲ್ಲಿ ತಾವು ರಾಯಪುರಕ್ಕೆ ಎಷ್ಟು ಸಲ ಹೋದದ್ದೆಂಬುದನ್ನು ಟಿಳಕರು ಒಂದು ಕೋಷ್ಟಕ ಹಾಕಿ ಬರೆದಿಟ್ಟಿದ್ದಾರೆ (ಸ್ಮೃತಿಚಿ. ೧೪೯) ; ಮಗ್ಗಿ ಕಂಠಪಾಠಮಾಡುವುದು, ಕೋಷ್ಟಕದ ಅಭ್ಯಾಸ ಮಾಡುವುದು ಇವೇ ಮೊದಲಾದುವು ನಮಗೆ ಸಾಮಾನ್ಯವಾಗಿ ಬೇಸರ ಹುಟ್ಟಿಸುವ ಕೆಲಸ (ಶಿಕ್ಷದ. ೨೪೫). [< ಸಂ. ಕೋಷ್ಟಕ]

**ಕೋಷ್ಠಿ** 'ಕೊಟ್ಟೆ' ನೋ.

**ಕೋಷ್ಠ**$_1$ (ನಾ). ೧. ತೊನ್ನು; ಕುಷ್ಠರೋಗ: ಉರಿಬೆಂಕಿ ಸರ್ವಾಂಗದೊಳುಣ್ಮೆ ಹದಿನೈದು ದೊರೆವೆತ್ತ ದಿವಸಕ್ಕೆ ಕೋಷ್ಠವಾಗಲು ಅವನ ತರುಣಿ ತಾಯ್ಮೊದಲಾಗಿ ಪೇಸುತಂಯಿರಲು (ಪ್ರಭುಪು. ೯–೧೦೨); ಹಿಮಕರಂಗೆ ಕಲಂಕ ರುದ್ರಗೆ ತಮ ಸುರೇಂದ್ರಗೆ ಕೋಷ್ಠ (ಶಂಕದಾ. ೭–೨೯). ೨. ಒಂದು ಬಗೆಯ ಮರ; ಚಂಗಲಕೋಷ್ಠ: "ನೀರಜ ಮೆನಲು ಕೋಷ್ಠಮಕ್ಕುಂ" (ಮಂಗರಾ. ೪೩–೪೧); "ಪೌಷ್ಕರಮೂಲಂ- ಪುಷ್ಕರಮೂಲ, ಕೋಷ್ಠ" (ಓಷಧಿ. ೧೧೩). [< ಸಂ. ಕುಷ್ಠ]

**ಕೋಷ್ಠ**$_2$ (ನಾ). ೧. ಹೊಟ್ಟೆಯ ಒಳಭಾಗ; ಒಳಹೊಟ್ಟೆ: "ಒಡಲೊಳಗೆಯುಂ ಕೋಷ್ಠಮೆಂಬುದು" (ಹಲಾಯು. ೧೩೬–೩೧); "ಉದರದೊಳಗಂ ಪೇಳುವಲ್ಲಿ ಕೋಷ್ಠಮದೆಂಬುದು" (ಮಂಗರಾ. ೧೪೧–೧೫). ೨. ಹೊಟ್ಟೆಯೊಳಗಣ ಅಂಗಗಳು; ಕರುಳು, ಯಕೃತ್ತು, ಗರ್ಭಕೋಶ ಮೊದಲಾದುವು. 'ಕೋಷ್ಠಾಣು' ಪರಾ. ೩. ಮನೆಯ ಒಳಕೊಠಡಿ; ಕೋಣೆ: "ನೃಪಾಲಯಾಂತರ್ಗತ ಕಕ್ಷೆ ಕೋಷ್ಠಂ" (ವಸ್ತುಕೋ. ೪೭–೧೪); ಪದಿನಾಱುಂ ಭಿತ್ತಿಗಳೊಳ್ ನಾಲ್ಕುರ ವೀಧಿಗಳುಱೆಯೆ ನೆಗಱ್ದಾ ಪನ್ನೆರಡುಂ ಕೋಷ್ಠಂಗಳೊಳ್ (ಆದಿಪು. ೧೦–೩೫ವ); ನಾಟ್ಯಶಾಲೆಯ ಕೋಷ್ಠಂಗಳ ರಚನೆಯಿದೆ (ಅಜಿಪು. ೭–೧೯); ಭಗವಂತನ ದರುಶನಾರ್ಥವಾಗಿ ಬಂದು ಸೇರುವುದಕ್ಕೆ ಯೋಗ್ಯಮಾದ ದ್ವಾದಶಕೋಷ್ಠಂಗಳಂ ಮಾಡಿಸಿದನು (ಪುರುಚ. ೧೨೪). ೪. ಕಣಜ; ಉಗ್ರಾಣದ ಮನೆ: "ಅಂತರ್ಗಹಂ ಕುಸೂಲಗೃಹಾಂತರ್ದೇಶಂಗಳೞಗೆ ಕೋಷ್ಠಮದಕ್ಕುಂ" (ವಸ್ತುಕೋ. ೧೩೨–೮೭). ೫. ಕುದುರೆಯ ಗುದಪ್ರದೇಶದಿಂದ ಕೆಳಗಣ ಪಾರ್ಶ್ವ: ಆಸನದಿಂ ಕೆಳಗಣ ಬಿಗಾಸೆನ್ನಂ ಕೋಷ್ಠಮೆಂಬ ಪೆಸರದಕಕ್ಕು (ಅಶ್ವಶಾ. ೯–೪೦). ೬. ಪದರ; ಸ್ತರ: ಹುಚ್ಚುತನದ ಅವಸ್ಥಾವಿಶೇಷಗಳಲ್ಲಿ ಮೆದುಳಿನ ಕೋಷ್ಠಗಳಲ್ಲಿ ವಿಶೇಷ ಪರಿವರ್ತನೆ ಕಂಡುಬರುತ್ತದೆ (ಜೀವಾತ್ಮ. ೫೭). ೭. ಗಣನೆಯ ಕೋಷ್ಟಕದೊಳಗಣ ಚೌಕ, —ಚದರ, —ಅಂಕಣ. ೮. ಪ್ರಾಕಾರದ ಗೋಡೆ; ಸುತ್ತುಗೋಡೆ; ಅಂಗಣ: ಮುನಿಜನ ಮನಿಮಿಷಕಾಂತಾಜನವಾರ್ಯಶ್ರಾವಿಕಾಜನಂ ಪರಿವಿಡಿಯಿಂ ಜಿನವಲ್ಲಭ ಪ್ರದಕ್ಷಿಣಮೆನಿಸಿರ್ಪುದು ಮೊದಲದೆಸೆಯ ಕೋಷ್ಠತ್ರಯದೊಳ್ (ಮಲ್ಲಿಪು. ೧೪–೧೪೦). ೯. ಪೀಠ; ಆಸನ: ಕಿರೀಟಮನೆಡಗೆಯ್ಕೊಂದೋಸರಿ ಸುತ್ತುಮುಚಿತಕೋಷ್ಠದೊಳವರ್ಗಳ್ ಕುಳ್ಳಿರ್ದು (ಚಂದ್ರಪ್ರಪು. ೭–೧೭ವ). [ಸಂ.]

**ಕೋಷ್ಠಕ** (ನಾ). ೧. ಮನೆಯ ಒಳಕೊಠಡಿ; ಕೊಟ್ಟಿಗೆ. ೨. ಕಣಜ; ಧಾನ್ಯದ ಮನೆ; ಉಗ್ರಾಣ. 'ಧಾನ್ಯಕೋಷ್ಠಕ' ಪರಾ. ೩. ಸುತ್ತುಗೋಡೆ. [ಸಂ.]

**ಕೋಷ್ಠಬುದ್ಧಿ** (ನಾ). [ಜೈನ] ಬುದ್ಧಿಯ ಮಹತ್ವಕ್ಕೆ ಸಂಬಂಧಪಟ್ಟ ಹದಿನೆಂಟು ಬಗೆಯ ಋದ್ಧಿಗಳಲ್ಲಿ ಒಂದು: "ಬೇಡಿದವಂಗೆ ಬೇಡಿದುದಂ ಕೊಡುವಂತೆ ಪೆರರುಪದೇಶದಿಂ ಪಲವುಂ ಕಲ್ತು ಬೆಸಗೊಂಡದನೆ ಪೇಳ್ವುದು ಕೋಷ್ಠಬುದ್ಧಿಯೆಂಬುದು" (ಶ್ರಾವಕಾ. ೯೨–೧೭). [ಕೋಷ್ಠ + ಬುದ್ಧಿ]

**ಕೋಷ್ಠಾಗಾರ** (ನಾ). ಉಗ್ರಾಣದ ಕೊಠಡಿ; ಧಾನ್ಯಶೇಖರಣೆಯ ಮನೆ; ಕಣಜ: ಅರಸನ ಕೋಷ್ಠಾಗಾರದ ಕರಣಂಗಳ ಕಾಪನೆಯ್ದೆ ಬಂಟಿಸಿ ಕಳ್ದುಂ (ಆದಿಪು. ೫–೧೫); ವಸುಧಾಧಾರಮೆಂಬ ಕೋಷ್ಠಾಗಾರದಿಂದಂ (ಶಾಂತಿಪು. ೧೧–೭೪ ವ). [ಕೋಷ್ಠ + ಅಗಾರ]

**ಕೋಷ್ಠಾಣು** (ನಾ). ಕೋಷ್ಠದೊಳಗೆ ಸೇರಿದ ಅಣು; ಗರ್ಭಕೋಶದಲ್ಲಿ ಸೇರಿದ ಜೀವಾಣು: ಗರ್ಭಧಾರಣೆಯ ನಂತರ ಒಂದೇ ಕೋಷ್ಠಾಣುವು ಅಸಂಖ್ಯಾತ ಕೋಷ್ಠಾಣುಗಳಾಗಿ ಪರಿಣಮಿಸುತ್ತದೆ (ಜೀವಾತ್ಮ. ೨೨೧). [ಕೋಷ್ಠ + ಅಣು]

**ಕೋಷ್ಠಾಸನ** (ನಾ). ಒಳಮನೆಯಲ್ಲಿ ಸಿದ್ಧಪಡಿಸಿದ ಪೀಠ (?): ಗಣಧರದೇವರ ಗುರುಭಕ್ತಿಪೂರ್ವಕಂ ತನಗೆಡೆಮಾಡಿದ ಕೋಷ್ಠಾಸನದೊಳ್ ಕುಳ್ಳಿರ್ದು (ಶಾಂತಿಪು. ೯–೬೯ ವ). [ಕೋಷ್ಠ + ಆಸನ]

**ಕೋಷ್ಣ** (ಗು). ೧. ಸ್ವಲ್ಪ ಬಿಸಿಯಾಗಿರುವ; ತುಸು ಬೆಚ್ಚಗಿರುವ. (ನಾ). ೨. ಸ್ವಲ್ಪ ಬಿಸಿ. [ಸಂ.]

**ಕೋಸಂಬರಿ** 'ಕೋಸುಂಬರಿ' ನೋ.

**ಕೋಸಿಗ** (ನಾ). ಕೌಶಿಕ ವಂಶದವನು, —ಗೋತ್ರದವನು: ಸಂಕ್ರಾಂತಿಯನ್ದು ಕೋಸಿಗರ ಕೋಟಿಯುಮ್ಮಂ ಗೋಸಹಸ್ರಮಾಱ್ದಂ (ಮೈಆರಿ. ೧೯೨೯, ೭೪–೧೨; 964). [< ಸಂ. ಕೌಶಿಕ]

**ಕೋಸಿಗವಳ್ಳಿ** (ನಾ). ಒಂದು ಊರಿನ ಹೆಸರು: ಕೋಸಿಗವಳ್ಳಿಯ ಕಣ್ಣಮ್ಮಂಗಟಿಱ್ದವಪ್ಪಿಗಂ ಪುಟ್ಟಿದ ಕನ್ನಯ್ಯನೆ (ಎಕ. VIII, ಸೊರಬ. ೪೪–೬; 971). [ಕೋಸಿಗ + ಪಳ್ಳಿ$_1$]

**ಕೋಸು**$_1$ (ಕ್ರಿ). ದಾರವನ್ನು ಸೂಜಿಯ ಕಣ್ಣೊಳಗೆ ತೂರಿಸು; ಪೋಣಿಸು: "ಕೋಸು – ಸೂತ್ರಪ್ರವೇಶೇ (ಪೋಣಿಸು)" (ಶಮಧಾ). [ಕೋ$_1$ + -ಸು$_1$]

**ಕೋಸು**$_2$, ಕೂಚ$_3$, ಕೂಚಿ$_1$, ಕೂಚು$_2$, ಕೋಚ$_1$, ಕೋಚಿ$_1$, ಕೋಚು$_1$, ಕೋಚೆ (ನಾ). ೧. ಓರೆ; ಮೂಲೆ: ನಿವೇಶನವು ಮಟ್ಟವಾಗಿ ಯಾವ ಕೋಸು ಅರೆಕೊರೆ ಇಲ್ಲದೆ ಇರಬೇಕು (ಗೃಹವಿ.೧೫೩). **ಕೂಚ**$_3$: ೨. ವಕ್ರಸ್ವಭಾವ; ಕೊಂಕುತನ. 'ಕೂಚಂಭಟ್ಟ' ಪರಾ. **ಕೂಚಿ**$_1$. ೨. 'ಕೂಚಿಭಟ್ಟ' ಪರಾ. **ಕೂಚು**$_2$: ೨. 'ಕೂಚುಭಟ್ಟ' ಪರಾ. **ಕೋಚ**$_1$. (ಗು). ೩. ವಕ್ರಸ್ವಭಾವದ: ಒಲಿದಿತ್ತು ಪಾಲಿಸಾ ತೇಜವ ನನಗೆಂದು ತೆಲುಗ ಬಣಜಿಗರ ಬೆನ್ನ ಉಲಿಯಲು ಸತ್ಪೆಲಿಗಳ ಮೂಗನರಿವಗೆ ಸಲೆ ಕೋಚ ಬಣಜಿಗಗೇಕೆ . . . ಎಂದು ಬೇಡರ ತಿಪ್ಪ ನುಡಿದ (ಜ್ಞಾನಚ. ೧೩–೨೨). **ಕೋಚಿ**$_1$. ೪. ಮಡಿಲು; ಉಡಿ: ಅವಳು ಅವಸರವಸರವಾಗಿ ಬಕ್ಕರೆಯನ್ನು ಕೋಚಿಯಲ್ಲಿ ತುರುಕಿದಳು (ರಕ್ತಧ್ವ. ೭೭). **ಕೋಚು**$_1$: ೨. 'ಕೋಚುಭಟ್ಟ' ಪರಾ. ೫. ಅಂಚು; ತುದಿ; ಕೊನೆ; ಚುಂಗು: "ಕೋಚು – ತುದಿ, ಏರುದನಿ" (ಜಾನಕೋ. ೪೨); ಮೊಣಕಾಲಿನಿಂದ ಇನಿತೆ ಕೆಳಗಿನವರೆಗೆ ಕೋಚು ಇಳಿಬಿದ್ದಿದ್ದ ಒಂದು ಅರೆಕೊಳಕು ಅಡ್ಡಪಂಚೆಯುಟ್ಟು (ಮಲೆಮ. ೧೩೨); ಈ ಐದು ಮೊಳದ ಪೈಕಿ ನಾಲ್ಕು ಮೊಳವನ್ನು . . . ಸೊಂಟಕ್ಕೆ ಸುತ್ತಿಕೊಂಡು ಉಳಿದ ಒಂದು ಮೊಳವನ್ನು ಕೋಚಾಗಿ ಮುಂಡಿಯವರೆಗೆ ಬರುವಂತೆ ನೇತುಬಿಟ್ಟು ಉಡುತ್ತಾರೆ (ಬೈಸರ್ವೆ. ೪೫). **ಕೋಚೆ**: ೧. ಯೋಚಿಸ್ಸೆ ಈ ತೆಱನ ಪುರುಷರು ನಾಚಿಕೊಳ್ಳುವ ಸತಿಯು ತಾನು ಕೋಚೆಯಾದಡೆ ಹೇಸಿಕಲ್ಲವೆ ರಾಯ ಕೇಳೆಂದ (ಕಕ್ಕೋಕ. ೭–೧೮). ೪. ಕೋಚೆಯೊಳಗಿನ ಬಕ್ಕರೆಯನ್ನು ಬಾಬೂನ ಮುಂದೆ ಇಟ್ಟಳು (ರಕ್ತಧ್ವ. ೭೭). ೬. ಸಂಕೋಚ (?): ನಾಚಿ ಪುಷ್ಕರ ಸಿಂಹಪೀಠವ ಮೋಚಿದವನಂ ತಿಳಿದು ನಿಳಯಕೆ ಕೋಚೆಯಿಂದೈದಿದನು ನಳನೃಪ ನಿಜನಿಕೇತನಕೆ (ಅಂಬಿಕಾ. ೪೮–೭೪). [ದೇ. ‖ ತುಳು. ತೆಲು. ಕೋಸು]

**ಕೋಸು**$_3$ (ನಾ). ಮೂರು ಅಥವಾ ನಾಲ್ಕು ಮೈಲಿಗಳ ದೂರ; ಒಂದು ಹರದಾರಿ; ಕ್ರೋಶ: "ಕೋಸು–ಕ್ರೋಶ" (ತದ್ಭಕೋ. ೯); ಅಲ್ಲಲ್ಲಿ ಮಾವಿನ ಬನಗಳನ್ನು ಬೆಳೆಸಿದ್ದೇನೆ. ಅರ್ಧ ಅರ್ಧ ಕೋಸಿಗೆ ಒಂದರಂತೆ ಬಾವಿಗಳನ್ನು ತೋಡಿಸಿದ್ದೇನೆ (ಪ್ರಾಚೀಹಿಂ. ೧೨೬). [< ಸಂ. ಕ್ರೋಶ]

**ಕೋಸು**$_4$ (ನಾ). ಒಂದು ಬಗೆಯ ತರಕಾರಿ; ಕ್ಯಾಬೇಜು: ಕೋಸು ಬೆಳೆಯಲು ಮರಳು ಮಿಶ್ರವಾದ ಕೆಬ್ಬೆನೆಲ ಉತ್ಕೃಷ್ಟವಾದುದು (ತರಬೆ. ೪೫). 'ಎಲೆಕೋಸು', 'ಹೂಕೋಸು' ಪರಾ. [? / ತಮಿ. ಕೋಸು / ಹಿಂ. ಕೋಸು]

**ಕೋಸುಂಬರಿ**, ಕುಸುಂಬರಿ, ಕೋಸಂಬರಿ (ನಾ). ೧. ಕಡಲೆಬೇಳೆ ಅಥವಾ ಹೆಸರುಬೇಳೆಯನ್ನು ನೀರಲ್ಲಿ ನೆನಸಿ, ಸೌತೆಕಾಯಿ, ತೆಂಗಿನ ತುರಿ, ಹಸಿರು ಮೆಣಸಿನಕಾಯಿ, ಕೊತ್ತಂಬರಿಸೊಪ್ಪು, ನಿಂಬೆಹಣ್ಣಿನ ರಸ, ಉಪ್ಪು ಇವುಗಳನ್ನು ಕೂಡಿಸಿ ಒಗ್ಗರಣೆಹಾಕಿ ತಯಾರಿಸುವ ಒಂದು ಬಗೆಯ ತಿನಿಸು : ಅವಲಕ್ಕಿ, ಬಾದಾಮಿಹಲ್ವ, ಕೋಸುಂಬರಿ . . . ಪಟ್ಟಿ ಉದ್ದಕ್ಕೂ ಸಾಗಿತು (ರೂಪಸಂ. ೧೭); ಕೋಸುಂಬರಿ, ಬಾಳೆಹಣ್ಣಿನ ರಸಾಯನ ಮೊದಲಾದ . . . ಚರ್ವಗಳು (ಕಳಹು. ೨೭). **ಕುಸುಂಬರಿ** : ೨. ಹವಾಗುಣಕ್ಕೆ ಕೆಟ್ಟುಹೋಗದಂತೆ ಜೋಪಾನಮಾಡಿದ ಹಣ್ಣು ಮೊದಲಾದ್ದು: (ಕ). **ಕೋಸಂಬರಿ** : ೧. ಇಂಬಾದ ವಿವಿಧ ಕೋಸಂಬರಿ ಶತವ ಹೊಂಬಟ್ಟಲಿಂದ ಜಗದಂಬೆ ಬಡಿಸಿದಳು (ಕುಚೇಲೋ. ೧೧೩-೧೩); ಚಟ್ನಿ ಕೋಸಂಬರಿ ಕಾಯಿರಸಗಳನ್ನು ಮಾಡುವುದರಲ್ಲಿ (ಮುಂಬಯಿ. ೫-೧೬೭). ೩. ಕೋಸು, ಚಪ್ಪರಬದನೆ, ಸೌತೆ, ಬಾಳೆಕಾಯಿ, ಮೊದಲಾದ ಕೆಲವು ಹಸಿ ತರಕಾರಿಗಳನ್ನು ಸಣ್ಣಗೆ ಹಚ್ಚಿ, ಉಪ್ಪು ಮೊದಲಾದುವನ್ನು ರುಚಿಗೆ ತಕ್ಕಂತೆ ಸೇರಿಸಿ, ಒಗ್ಗರಿಸಿದ ಗೊಜ್ಜು, —ಪಚ್ಚಡಿ; ವ್ಯಂಜನ: ಪ್ರತಿದಿನವೂ ಹಸಿ ತರಕಾರಿಗಳ ಕೋಸಂಬರಿ ಮಾಡಿ ಉಪಯೋಗಿಸಿರಿ (ಅಡುಸಾ. ೭೭); ಬಾಳೆಕಾಯಿ ಕೋಸಂಬರಿ ಎಂದರೆ ನನಗೆ ಬಹಳ ಪ್ರೀತಿ (ಪ್ರತಿಬಂ. ೪೫).

[ದೇ. ॥ ತಮಿ. ಕೋಸುಮ್ಬರಿ; ತುಳು. ಕೋಸುಂಬರಿ, ಕೋಸಂಬ್ರಿ./ ಮರಾ. ಕೋಶಿಂಬರೀ; ಕೋಶಿಂಬೀರ್]

**ಕೋಸುಗಡ್ಡೆ**, ಕೋಸುಗೆಡ್ಡೆ (ನಾ). ಕೋಸು ಎಂಬ ತರಕಾರಿಯ ಗಡ್ಡೆ; ಕ್ಯಾಬೇಜು : ಕೋಸುಗಡ್ಡೆಯನ್ನು ಮುಕ್ಕಾಲುಭಾಗ ಬಲಿತಾಗ ಕತ್ತರಿಸಿ ಉಪಯೋಗಿಸಬೇಕು (ತರಬೆ. ೪೫); ಒಲೆ ಹೊತ್ತಿಸಿ ಕೋಸುಗೆಡ್ಡೆ ಸಾರನ್ನು ಗೋಧಿಯ ಗಂಜಿಯನ್ನು ಮಾಡಿ (ಟಾಕಥೆ. ೫೫). **ಕೋಸುಗೆಡ್ಡೆ** : ಸೊಪ್ಪಿನ ಜಾತಿಗೆ ಸೇರಿದವುಗಳಲ್ಲಿ. . . ಕೋಸುಗೆಡ್ಡೆ, ಕಿತ್ತಳೆ ಮತ್ತು ಮೋಳೆ ಬರಿಸಿದ ಧಾನ್ಯಗಳಲ್ಲಿ "ಸಿ" ಜೀವಾತು ಇದೆ (ಅಡುಸಾ. ೬೪). [ಕೋಸು$_4$ + ಗಡ್ಡೆ]

**ಕೋಸುಗಣ್ಣ** (ನಾ). "ಓರೆಗಣ್ಣಿನವ, ಕಾಗೆನೋಟದವ" (ಸಿಂಕೋ. ೧೪೩). 'ಕೋಸುಗಣ್ಣು' ಪರಾ. [ಕೋಸುಗಣ್ಣು + –ಅ$_7$]

**ಕೋಸುಗಣ್ಣು** (ನಾ). ಓರೆನೋಟದ ಕಣ್ಣು : ಒಬ್ಬನಿಗೆ ಕೋಸುಗಣ್ಣಿದೆ ಎಂದು ತಿಳಿಯುವ (ಬಾಳ್ವೆದೆ ೯೩). [ಕೋಸು$_2$ + ಕಣ್ಣು (< ಕಣ್)]

**ಕೋಸುಗುಲಾಬಿ** (ನಾ). ಗುಲಾಬಿಯಲ್ಲಿ ಒಂದು ಬಗೆ: ಕೋಸಿನ ಆಕಾರದ, ಒತ್ತೆಸಳುಳ್ಳ, ದೊಡ್ಡ ಹೂವು ಬಿಡುವ, ಗುಲಾಬಿಜಾತಿ; ಕೋಸುಗುಲಾಬಿ (Cabbage-Rose ಇಂಕನಿ). [ಕೋಸು$_4$ + ಗುಲಾಬಿ]

**ಕೋಸುಗೆಡ್ಡೆ** 'ಕೋಸುಗಡ್ಡೆ' ನೋ.

**ಕೋಸುಜಾಗ** (ನಾ). ಓರೆಯಾದ ಜಾಗ; ಮೂಲೆ : ನೆರೆಮನೆಯವರ ಒಂದು ಕೋಸುಜಾಗವಿತ್ತು. ಆದಿಸೆಟ್ಟಿಯ ಮಕ್ಕಳು ಆ ಜಾಗವನ್ನು ಸೇರಿಸಿಕೊಂಡು ತಮ್ಮ ಮನೆ ಕಟ್ಟಿದರು (ನೀತಿಚಂ. ೬೩).

[ಕೋಸು$_2$ + ಜಾಗ]

**ಕೋಸುವಲೆ** (ನಾ). ಒಂದು ಬಗೆಯ ಬಲೆ : ಕೋಸುವಲೆ ದೋಂಟವಲೆ ಬಾಣಾಸನವಲಗಂಬು ಕಲ್ಲಿ ಕೈಪೊಡೆ ಗಾಳಂ . . . ನಾಯ್ವೆರಸು ಬನಕೆ ಬೇಡರ್ ನಡೆದರ್ (ಸೂಕ್ತಿಸು. ೩-೧೦೩). [ಕೋಸು$_0$ + ಬಲೆ$_1$]

**ಕೋಹಳ** 'ಕೋವಳ' ನೋ.

**ಕೋಹಳಿಕೆ** (ನಾ).=ಕೋಹಳೆ : ಅಚ್ಚ ಕಪಿಲವರ್ಣದ ಪಶು ಖುರಶೃಂಗ ಬೆಚ್ಚಂತೆ ಸ್ವರ್ಣಕೋಹಳಿಕೆ ವಚ್ಚ ಸಹಿತ ಬಂದಿರೆ (ಮೋಹತ. ೨೩-೩೮).

[ಕೋಹಳೆ + –ಇಕೆ]

**ಕೋಹಳೆ**, ಕೋಹಾಳೆ, ಕೋಳೆ$_2$ (ನಾ). ೧. ಜಾನುವಾರುಗಳ ಕೊಂಬು ಮತ್ತು ಗೊರಸುಗಳಿಗೆ ಅಲಂಕಾರಕ್ಕಾಗಿ ತೊಡಿಸುವ ಚಿನ್ನ ಬೆಳ್ಳಿ ಮುಂತಾದ ಲೋಹಗಳಿಂದ ಮಾಡಿದ ಅಣಸು ಒಡವೆ, —ಆವರಣದ ತೊಡವು. 'ಕೋಹಳಿಕೆ' ಪರಾ. ೨. ಒಂದು ಬಗೆಯ ಹೊದಿಕೆ : ಅನಿಮಿಷಾಂಗದಲುರಗ ಕಾಯದ ಕೋಹಳೆಯ ನುಗಿದು ಜನಪ ನಿನ್ನೊಡಹುಟ್ಟಿದವನ ಕೊಳ್ಳೆನುತ ಹೇಮ ವಿಮಾನದಲಿ . . . ಎಸೆದನು ನಹುಷನಭ್ರದಲಿ (ಕುವ್ಯಾಅ. ೧೩-೬೯) ; ಹೃದಯಾಬ್ಜ ಪೀಠದೊಳಗೆ ಸಲ್ಲಲಿತ ಸತ್ಪ್ರಾಣ ಲಿಂಗಮಂ ಬಯ್ತು ಸತ್ಪ್ರಲ್ಲದ ಶಿರಃ ಕಮಳ ಕೋಹಳೆಯ ಮುಚ್ಚಿದಂತೆಲ್ಲರು ಮಹಾಮಸ್ತಕಂ ಒಡೆಯೆ (ಭಾವಚಿಂ. ೯-೫೦). **ಕೋಹಾಳೆ** : ೨. ಕೊರಳ ಹೊರಜೆ ಕುಂಭಸ್ಥಳ ಕೋಹಾಳೆ ಸರಗಂಟೆ ಪಕ್ಕಗಂಟೆಗಳು (ಕಂನವಿ. ೨೩-೧೦೨). **ಕೋಳೆ$_2$** : ೨. ತ್ರೈಲೋಕತಿಲಕ ಜಿನಪತಿಬಾಲಕ ಜನ್ಮಾಭಿಷವಣ ಯೋಗ್ಯ ಮಿದೆಂದಿಂದ್ರಾಳಿ ಸಮೆಯಿಸಿದ ಬೆಳ್ಳಿಯ ಕೋಳೆಯನಾಂತಂತಿರೆ ಸೆದ್ಯುದಿಂದ್ರನಗೇಂದ್ರಂ (ಶಾಂತಿಪು. ೧೦-೫೦). [?]

**ಕೋಹಳ್ಳಿ** (ನಾ). ಒಂದು ಊರಿನ ಹೆಸರು: ನನ್ನಾಪುರದೊಳ್ ಕೇತೇಶ್ವರಮುಮಂ ಕೋಹಳ್ಳಿಯೊಳ್ ದಾನವಿನೋದ ತ್ರೈಪುರುಷ ದೇವರ ಸಾಲೆಯು (ಸೌಇಇ. XI-i, ೧೦೩-೨೦ ; 1068).

[ಕೋ ? + ಹಳ್ಳಿ (< ಪಳ್ಳಿ$_1$)]

**ಕೋಹಾಳೆ** 'ಕೋಹಳೆ' ನೋ.

**ಕೋಹಿನೂರ್** (ನಾ). ಒಂದು ದೊಡ್ಡ ವಜ್ರದ ಹೆಸರು: ಗೋದಾವರೀ ತೀರದಲ್ಲಿ – ಕೋಹಿನೂರ್ (ಪ್ರಭಾಪರ್ವತ) ಎಂಬ ಒಂದು ರತ್ನವು ಕೆಲವು ವರ್ಷಗಳ ಕೆಳಗೆ ಸಿಕ್ಕಿತು (ಭೂಗೋಳ. ೩೭).

[← ಹಿಂ. ಮರಾ. ಕೋಹನೂರ್]

**ಕೋಹಿಸು** 'ಕೊಹಿಸು' ನೋ.

**ಕೋಹು$_1$**, ಕೋಗು, ಕೋವು$_2$ (ನಾ). ೧. ಮೂಲೆ; ಸಂದು : ಕೋಣೆಯ ಕೋಹಿನಲ್ಲಿ ಮೂಜು ಬಾಗಿಲು ಉಂಟೆಂಬರು ಯೋಗಿಗಳು (ಗುಪ್ತಮಂ. ೬೫) ; ಓಡಿತಮರರು ಬೆನ್ನ ಬದಿಗಳ ತೀಡುತಭ್ರದ ಕೋವು ಕೋಹಿಗೆ ಗಾಢದಲಿ (ಕಾಶಿರಾ. ೨೭-೩೦) ; ಹೋಹೋ ಗಜಬಜ ಬೇಡ ಗಗನದ ಕೋಹು ಕೋಹುಗಳಲ್ಲಿ ಕುಳ್ಳಿರಿ (ನಭಾಗ. ೮-೧೫-೧೨). ೨. ತುಂಡು; ಭಾಗ; ಸೀಳು : ಬಡಗಣ ದೆಸೆಯೊಳ್ ಕಕ್ಕನ ಕೋಹು ಆದಜ ಮೂಡಣ ಬೀರಜ್ಜನ ಕೆಜ$^3$ (ಎಕ. II, ೩೪೫-೬೪ ; ಸು. 1159); ವಾಯುಬ್ಯ ಕೇಶಿಯಂಣನ ಕೆಜ$^3$ಯೊಳ ಕೋಹು ಮಸೆಕಲ್ಲ ಹಳ್ಳ ಕೆಂದಳಿರ ಹಳ್ಳ (ಎಕ. V, ಹಾಸನ. ೬೧-೪೧; 1218). ೩. ಹಳ್ಳ; ಕೊಲ್ಲಿ; ತಗ್ಗು : ಗಹ್ವರದ ಕೊಳ್ಳದ ಕೋಹಿನಲಿ (ಕುವ್ಯಾಸ. ೩-೫೭); ಬೆಳೆದನಾ ನಾಸಿಕದ ನಾಳದ ಕುಳಿಯ ಕುಹರದ ಕೋಹಿನಲಿ ಕೊಂಡೆಳದು ಸೂಸುವ ಸುಯಿಲ ಬಟ್ಟೆಗೆ ಕೀಲಗೊಟ್ಟಂತೆ (ತೊರರಾ. ೫-೨-೪೫). ೪. ಹೊಲ, ಗದ್ದೆ, ತೋಟ, ತುಡಿಕೆ ಮೊದಲಾದ ವ್ಯವಸಾಯದ ಭೂಮಿಗಳಲ್ಲಿ ಒಂದು (?): ಕುಂಮರಿ ಕೋಹು ಸರಕಲ್ಲು ಕೊಡದಿ ಕಿರಕ (ಎಕ. VI, ಕೊಪ್ಪ. ೪೯-೨೨ ; 1392) ; ತೋಟ ತುಡಿಕೆ ಕುಮರಿ ಕೋಹು ಹಲಸು ಮೆಣಸು, ಮಾವು, ಬೆಲ್ಲ, ಅಡಕೆ ಮೊದಲಾದ (ಎಕ. VIII, ತೀರ್ಥಹ. ೧೦೪-೩೬ ; 1404) ; ಹೊಂನ ಹೊಳೆನಾಡ. ವಳಗೆ ಆರ್ಲಕೊದಗಿಯ ಕೋಹಿನಲಿ ನಮ್ಮ ಮಠಕ್ಕೆ ಸಲುವ ಸುಕ್ಷೇತ್ರ ಅಡಕೆಮರ ೯೦೦ (ಮೈಆರಿ. ೧೯೩೪, ೫೧-೩೧ ; 1640). **ಕೋಗು** : ೨. ಎರಡು ತಿಂಗಳ ಹಿಂದೆ ಬೋಳು ಬೆತ್ತಲೆಯಾಗಿ ಒಣಗಿದ್ದ ಗದ್ದೆಯ ಕೋಗುಗಳು ಇಂದು ಬತ್ತದ ಸಸಿಗಳಿಂದಲೂ ಕಟ್ಟಿ ನಿಲ್ಲಿಸಿದ ನೀರಿನಿಂದಲೂ ಕಳಕಳಿಸಿ ನಗುತ್ತಿದ್ದುವು (ಕಾನೂರು ೩೫೭) ;

ಅಲ್ಲಿಯ ಒಂದು ಕೋಗು ಭೂಮಿಯೇ ಇವನದಾಗಿತ್ತು (ಮಲೆಮಂ. ೪); ಲಕ್ಕುಂದದ ಗದ್ದೆಯ ಕೋಗಿಗೆ ಉತ್ತರದಿಕ್ಕಿನ ಗಡಿಯಾಗಿ (ಮಲೆಮ. ೫). **ಕೋವು$_2$**: ೫. (ಕರಾ) ಎರಡು ಗುಡ್ಡಗಳ ನಡುವಿನ ಇಕ್ಕಟ್ಟಾದ ಭೂಮಿ. 'ಕೊಪ್ಪು$_1$' ಪರಾ. [?]

**ಕೋಹು$_2$** (ನಾ). ನಿರೂಪ; ಆಜ್ಞೆ; ನಿಯಮ; ನಿಬಂಧನೆ (?) : ಈ ಕೋಹಿಂಗೆ ತಪ್ಪಿದರೆ ಗಂಗೆಯ ತಡಿಯಲು ಕವಿಲೆಯ ಕೊಂದ ಪಾಪ (ಎಕ. VI, ಚಿಕ್ಕಮ. ೯೩–೧೩ ; 1141). [?]

**ಕೋಹು$_3$** (ನಾ). ೧. ಪೋಣಿಸುವಿಕೆ; ಪೋಣಿಕೆ; ಸರಣಿ: ಚೆಲ್ಲಿ ಹೋಯಿತು ಕೆಲಕೆ ಕೆಲಬರು ಬಿಲ್ಲ ಬೆರುಕೋಲುಗಳ ಬಿಸುಟರು ಗಲ್ಲೆಗೆಡೆದರು ಕೆಲರು ಪಾರ್ಥನ ಕೋಲ ಕೋ[ಪಾಠಾಂ. ತೋ]ಹಿನಲಿ (ಕುವ್ಯಾವಿ. ೭–೪೭). ೨. ಸಾಲು; ಪಂಕ್ತಿ: ಘಟ್ಟಸೊಳೊಸಗೆಯಲಿ ಮೊಳಗಿದವು ಕೋಹಿನ ನಿಸ್ಸಾಳ (ಕುವ್ಯಾಕ. ೨೩–೮); ಅಲ್ಲಿಂದಂ ಬಡಗಲು ಅತ್ತಣಿದ ಕಟ್ಟೆಯ ಕೋಹು (ಎಕ. XIV, ಮಂಡ್ಯ. ೧೧೫–೧೦೫; 1516); ಅತ್ತಲಾದುದು ಬೊಬ್ಬೆ ಕೋಟೆಯ ಕೊತ್ತಳದ ಕೋ[ಪಾಠಾಂ. ತೋ] ಹಿನಲಿ (ತೊರರಾ. ೬–೧೧–೧). [ಕೋ$_1$ + –ಹು$_1$]

**ಕೋಹು$_4$** (ನಾ). ಪೆಟ್ಟು; ಇರಿತ: ಕೊಂಡ ಕೋಲಿನ ಕೋಹಿಗಿನಸುತ ಡೆಂಡಣಿಸಿ ಬಸವಳಿಯೆ (ತೊರರಾ. ೬–೨೧–೩೮).

[< ಕೋಳ್ +–ಹು$_1$]

**ಕೋಳ್**, ಕೋಳು$_2$ (ನಾ). ೧. ಹೊಡೆತ; ಪೆಟ್ಟು; ಏಟು; ತಿವಿತ; ಹಾವಳಿ: ಮನಮೊಲ್ದಾತನ ಗಾಡಿಯಂ ದರವುರಂಗಂಡಾಕೆಗಳ್ ಪೂವಿನಂಬಿನ ಕೋಳ್ಗಂ ತಳಿವಾಲಿನೀರ್ಗಂ ... ಪಕ್ಕಾಗದೇಂ ಪೋಪರೇ (ಆದಿಪು. ೧–೭೫); ಸರಳ ಪೊದಟ್ಟ ಬಲ್ಸರಿಯ ಕೋಳ್ಗಿರಲಾಜದೆ (ಪಂಪಭಾ. ೩–೭೦); ಅಮಿತ ರಯಗಮನ ಖೇಚರವಿಮಾನಕೇತನದ ಕೋಳೊಳಂಬುದ ಮುಕ್ತಾಸಮುದಯಮುದಿದೆರ್ಪಿದುವಬ್ರಮಾರ್ಗದಿಂ ಸುರಿವ ಕರಕವೃಷ್ಟಿವೊಲ್ (ಶಾಂತಿಪು. ೨–೮೪); ಆರಾನುಂ ಪೊಜಗಾಗಲೇ ಕಣೆಯ ಕೋಳೆಂಬಂತು ತನ್ನಂಬು ಸಂಹಾರಂ ಮಾಡೆ (ಪಂರಾಮಾ. ೯–೭೮); ಗಾಳಿಯ ಕೋಳಿಂ ಕಟಿಲ್ದು ಪಳಿಕಿನ ಪಾಸಱೆಯೊಳ್ ಘಟಿಲನೆ ಬಿಟ್ದು (ಲೀಲಾವ. ೬–೭೬ ವ); ಬಿಱುವಿಸಿಲ ಕೋಳ್ಗೆ ಸೈರಿಸಲಱಿಯದೆ (ವೃಷವಿ. ೪–೭೩). ೨. ಕೊಳ್ಳೆಹೊಡೆಯುವುದು; ಲೂಟಿ; ಸೂರೆ: ಜಯನುಂ ಕೋಳ್ಗಳಂ ಕೊಂಡ ಕಂಪನಂಬೆರಸು ರಾಜಧಾನಿಯಂ ಪೊಕ್ಕು (ಚಾವುಂಪು. ೮೦–೨೩); ಮನ್ನೆಯರಾಳಂತೆ ಕೋಳಿಂಗಾಸೆಗೆಯ್ಯದೆ ಬಯಲ ನೀರಂತೆ ಮಾರ್ಗಂ ಬಿಟ್ಟು ನಡೆಯದೆ (ಧರ್ಮಾಮೃ. ೫–೯೯); ಧುರವ ಜಯಿಸಿ ಲೆಕ್ಕವಿಲ್ಲದ ಕೋಳ್ಗಳ ಸರಗಳ ಕಟ್ಟಿ ತಂದಾಗ ಗರುವ ಮನ್ನೆಯ ಮಂಡಲಿಕ ನಾಯಕರ ಮೊತ್ತ ದೊರೆಗೊಪ್ಪಿಸಿದರುಬ್ಬಿನಲಿ (ಕಂನವಿ. ೧೫–೧೧೩). ೩. ಕೈಸೆರೆ; ಬಂಧನ. 'ಕೋಳ್ವಿಡಿ' ಪರಾ. ೪. ದುಷ್ಟಪ್ರಾಣಿಗಳು ಬೇಟೆಯಾಡುವ ಆಹಾರ ಪ್ರಾಣಿ; ಬೇಟೆ. 'ಕೋಳ್ಪಪ್ಪು' ಪರಾ. ೫. ಕಚ್ಚುವುದು; ಕಡಿತ: ಆಱೆಯಟ್ಟಿ ಕೊಳ್ವ ಕುಳಿಕಾಹಿಯ ಕೋಳ ಪೊಡರ್ಪು ಲೋಕಭೀಕರತರ ಕಾಳಕೂಟದ ವಿಗುರ್ವಿಪ ಕೂಟಮೆನಿಪ್ಪುದಾಂತ ದುರ್ಧರ ರಿಪುಸಂಕುಳಕ್ಕೆ ವಿಭುಪೇಯಿಯ ಸಾಹಣಿಯುಗ್ರವಿಕ್ರಮಂ (ಎಇ. XV, ೩೫–೧೬; 1189); ಉಗಿಬಗಿಮಾಟ್ಪ ದಂಶಮಶಕಂಗಳ ಕೋಳ್ಗೆ ... ಇನಿತಬ್ಬದೆ (ವರ್ಧಪು. ೧೨–೩೫). ೬. ಹಿಡಿತ; ವಶಪಡಿಸುವುದು; ತುಡುಕುವುದು: ಒರ್ವನೊರ್ವಂಗೆ ಕೋಳ್ಗಗ್ಗಳಮಾದ ಮನೆಗಂ ತೋಳ್ಗಗ್ಗಳಮಾದ ಬದ್ದಗಂ ಬೇಸತ್ತು (ಶಾಂತಿಪು. ೮–೭೮); ತುಱುಗೋಳೊಳ್ [ಪಾಠಾಂ. ಗಳವೊಳ್; ಗಳೊಳಂ, ಗೊಳ್ಳಲ್] ಪೆಣ್ಬುಯ್ಯಲೊಳೆಱೆವೆಸದೊಳ್ ... ಗಂಡತನಮನೆ ನೆಱಪದವಂ ಗಂಡನಲ್ಲನೆಂತುಂ ಷಂಡಂ (ಗದಾಯು. ೨–೩೪); ಇನಿಸುಂ ಪೊಂಗಾಱೆ ಮೇಲುಚ್ಚಳಿಸಿ ಹಯುಚಯಸ್ಕಂಧಮಂ ತೇರ ಕೋಳಾರ್ವಿನೆಗಂ ಮಾಕೊರ್ಂಡು ನೇಣಂ ಮಲರೆ ತೆಗೆವಿನಂ ಸೂತನಶ್ವವ್ರಜಂ ತೊಟ್ಟನೆ ಕೀಟಂ ಕರ್ಚೆ ಭೋರೆಂದುರುಳೆ (ಸೂಕ್ತಿಸು. ೮–೧೨). 'ಕೋಳ್ಪಾಂಗು' ಪರಾ. ೭. ಆಕರ್ಷಣೆ; ಹಿಡಿತ; ಕಂಗೊಳಿಸುವಿಕೆ: ನಳಿತೋಳ ಕೋ[ಪಾಠಾಂ. ತೋ]ಳಿಸೆಯೆ ಘಟ್ಟಿಮಗುಳ್ಚುವ ಘಟ್ಟಿವಳ್ತಿಯಂ (ಪಂಪಭಾ. ೮–೫೯). ೮. ಹತೋಟಿ; ಸಂಯಮ: ಕೋಳಿಲ್ಲದಿಂದ್ರಿಯದೊಳ್ (ಕುಜೀಕ್. ೧–೧–೯). **ಕೋಳು$_2$**: ೧. ಆಳುಂಟು ಅರಸಿಕೆರೆ ಕೋಳುಂಟು ಕುಣಿಗಾಲು ಸೂಳೆರುಂಟೆಲ್ಲೊ ಶಿವಗಂಗೆ ಊರ್ನ್ಯಂದೆ ಎಂತಾರು ಬಾಯ ಬಿಡುತಾರೆ (ಹಳ್ಳಿಯ. ೪೪). ೨. ಕೋಳುಹೋದ ಮತ್ತೆ ಕಾಳಗದ ಇರವೇಕೆ (ಮೋಳಮಾ. ೯೪–೩೭೨); ಕೋಳು ಮಿಂಚಿದ ಮೇಲೆ ಹಾಳುಹುಯ್ಯಲು ವ್ಯರ್ಥ (ಶ್ರೀಕೃಪಾ. ೯). ೩. ಕಾಳಗದೊಳು ಕಾದಿದವರು ಹಲಬರಲ್ಲಿ ಕೋಳು ಸಿಕ್ಕಿದುದೊಬ್ಬ ಕಲಿಗೆ (ಭರಚ. ೩೪–೯೬); ವೈರಿ ಮಾರ್ಬಲಗಳ ಧೂಳಿಪಟವ ನೆರೆಮಾಡಿ ಕೋಳ ತಂದೊಪ್ಪಿಸುವೆವು (ಕಂನವಿ. ೮–೪೦). ೭. ಗಜನಗರಿಯಲಿ ಕೌರವರಾಳ ಪಾಂಡವರಾಳ ಸೆಣಸಿನ ಕಾಲುಮೆಟ್ಟುಗಳ ಸೂಳು ಮತ್ಸರ ಬಿರುದು ಪಾಡಿನ ಜೋಳಿ ಕಲಹದ ಕದಡು ಜೂಜಿನ ಕೋಳು ಚಲದೊಳ [ಪಾಠಾಂ. ತೋಳು ವಲರೊಳ] ತೊಟ್ಟ ಮಸಗಿತು ದಿವಸ ದಿವಸದಲಿ (ಕುವ್ಯಾಆ. ೮–೧).

**ಕೋಳಂಕೊಳ್ಳು** = ಕೈಸೆರೆಹಿಡಿ; ಬಂಧಿಸು: ಕೋಳಂಕೊಂಬ [ಪಾಠಾಂ. ಕೊರಳಂ ಕೊಯ್ವ] ಸಂಭ್ರಮವನಿರದೆ ಪಡೆಯೆರಡೀಕ್ಷಿಸುತ್ತಿರ್ದುವು (ಚಬಪು. ೨೬–೧೬). **ಕೋಳಂಪಡು** = ವಶವಾಗು; ಅಧೀನವಾಗು: ಮನ್ನೆಯರಾಳಂತೆ ಕಾದಿಯಲಸದೆ ಸೂಳೆಯಂತೆ ಕೋಳಂಪಟ್ಟಟ್ಟೆ [ಪಾಠಾಂ. ಕೋಳಂಪತ್ತು, ಕೋಡಂಪಟ್ಟ, ಕೋಳಂಪಟ್ಟಲೀ]ಸದೆ (ಪಂಪಭಾ. ೫–೪೬ ವ); "ಸುಲಿಗೆಗೆ ಒಳಗಾಗು" (ಪಂಪದೀ. ೧೯೬). **ಕೋಳಕೊಳ್ಳು** = ಕೊಳ್ಳೆಹೊಡೆ; ಸುಲಿಗೆಮಾಡು: ಅಸುರಬಲಜಾಲಮಘವನ ಸಲಿಲದುರ್ಗಂಗಳಂ ಬಿಡದೆ ಕೋಳಕೊಂಡರ್ (ಚಬಪು. ೨೩–೩೨). [< ಕೊಳ್$_1$]

**ಕೋಳ$_1$** (ನಾ). ೧. ಕೈಗೆ ಅಥವಾ ಕಾಲಿಗೆ ತೊಡಿಸುವ ಬೇಡಿ; ಸಂಕೋಲೆ: ಲಾಳನ ಗಂಟಲಂ ಮುರಿದಪೆಂ ... ಕೋಳದೊಳಿಕ್ಕಿಪೆಂ ಮಲೆವ ಪಾಣ್ಡ್ಯನಂ (ಸೌಇಇ. XI–i, ೫೨–೧೫; 1007); ಸೂಲ ಸಂಕಲೆಗಡಿದು ಕನಕದ ಕೋಳವನು ಕಾಲಿಂಗೆ ಕೀಲಿಪ ಕಾಳುಮತಿಯವನಂತೆ (ಪ್ರಭುಲೀ. ೧೩–೫); ಕಾಲಕರ್ಮವೆನಿಪ್ಪ ವಿಲಗದ ಕೋಳವನು ಕೆಡೆಯೊದೆದು (ನಿಭಾಗ. ೪–೧೫–೧೦); ಹೇಳದರೆ ಕೇಳದಲೆ ಕಾಳುಬುದ್ಧಿಯ ಕಲಿತು ಸೂಳೆಯಂತಿಪ್ಪ ಸತಿಯ ಬಾಳುವೆಯಿಂದ ಕೋಳವೇ ಲೇಸು (ಸರ್ವಜ್ಞ. ೧೭೪೯); ನನ್ನ ಕೈಗೂ ಕೋಳ ಹಾಕಿದರು (ಪುನರು. ೨೪೧). ೨. ಕಾಲನ್ನು ತೂತಿಗೆ ಸಿಕ್ಕಿಸಿ ಕೀಲು ಜಡಿದು ಬಂಧಿಸುವ ಮರದ ಒಂದು ಉಪಕರಣ: ಕೋಳಕ್ಕೆ ಕಾಲಂ ನೀಡುವ (ಧರ್ಮಾಮೃ. ೧೩–೧೮೫); ಮಾಟವಿಲ್ಲದವನ ಭಕ್ತಿ ಹಾಳೂರ ಮುಂದಿಟ್ಟಹ ಕೋಳದಲ್ಲಿ ಕಾಲನಿಟ್ಟು ಕೀಲ ಜಡಿಕೊಂಡಂತಾಯಿತ್ತು (ಶೂನ್ಯಸಂ. ೨೨೮–೩೦); ಹಾಳೂರಿನೊಳಗೊಬ್ಬ ಕೋಳಜಂಜೆರಿಯೊಳು ಕಾಲು ಮೊದಲು ಸಿಕ್ಕಿದಂತೆ (ಅಮುಸಾಂ. ೪–೧೩೫); ಉಂಬುವುದಕ್ಕೆ ಉಡುವುದಕ್ಕೆ ಅಕ್ಕನ ಕರೆ. ಕೋಳಕ್ಕೆ ಹೆಟ್ಟೋದಕ್ಕೆ ಭಾವನ ಕರೆ (ಗಾದೆ). ೪. (ಆಲಂ) ನಿರ್ಬಂಧ; ತಡೆ: 'ನನಗೇಕೆ ಈಗಿನಿಂದ ಈ ಕೋಳ? ಇಷ್ಟು ಅವಸರವೇಕೆ?' ಎಂದ ಕುವರ ವಿಷ್ಣುವಿನ ಪ್ರಶ್ನೆಗೆ, 'ನಿನ್ನ ಅಪ್ಪಾಜಿಯವರು ಅವಸರಪಡುತ್ತಾರೆ, ಆಗಬೇಕೆನ್ನುತ್ತಾರೆ, ನಾನೇನು ಮಾಡಲಿ?' (ಶಾಂತಲಾ. ೧೯೧).

**ಕೋಳಹಾಕು** = ಬೇಡಿಹಾಕು; ಬಂಧಿಸು : ಕಳ್ಳನನ್ನು ಪೋಲೀಸರು ಕೋಳಹಾಕಿ ಕರೆದೊಯ್ದರು (ರೂಢಿ). **ಕೋಳಹಿಡಿ** = ೧. ಕೈಸೆರೆ ಹಿಡಿ ; ಬಂಧಿಸು ; ಬಂಧನದಲ್ಲಿರಿಸು : ಹರಿದರಾ ಹಿಮುಚರರು ಠಾಣಾಂತರ ಗಳಿಗೆ ಹಿಡಿದಬುಜಮಿತ್ರನ ಕರವ ಕೊಂಡರು ಕೋಳಹಿಡಿದಂಭೋಜಿನೀ ವಧುವ (ತೊರರಾ. ೩-೨-೨) ; ಅಲ್ಲಿ ಸಾವಿರ ಕೋಳಹಿಡಿದು ವೈರಿಗಳನು ಚೆಲ್ಲಬಡಿದು (ಕಂಸವಿ. ೩-೫೬). ೨. ಬಿಗಿಯಾಗಿ ಹಿಡಿ ; ವಶಪಡಿಸು : ಕೇಳಿದೊಡೆ ಸಾಕವರ ಕಿವಿಯುಮಂ ಮನಮುಮಂ ಕೋಳಹಿಡಿದೊಡನೆ ನಿರ್ಮಲಿನ ನವರಸ ಮಹಾದುಗ್ಧವಾರಾಸಿಯೊಳಗೆ ಆಳಿಸದೆ ಬಿಡದೆನ್ನ ಕೃತಿ (ಚೆಬಪು. ೧-೩೫). [ದೇ. ‖ ತುಳು. ಕೋಳ]

**ಕೋಳ$_2$** 'ಕೋಲ್ಳ$_2$' ನೋ.

**ಕೋಳದಂಡ** (ನಾ). ತುಂಟ ಹುಡುಗರಿಗೆ ಕೊಡುವ ಒಂದು ಬಗೆಯ ಶಿಕ್ಷೆ; ಕೋದಂಡ (?) : ಅವರು ಅವನನ್ನು ಚಿಕ್ಕಂದಿನಿಂದಲೂ ಒದ್ದು, ಹೊಡೆದು . . . ಕೋಳದಂಡ ಹಾಕಿ, ಸಿದ್ದೆಗುಮ್ಮ ಮಾಡಿ . . . ಪಳಗಿಸಲು ಪ್ರಯತ್ನಪಟ್ಟಿದ್ದರು (ಮಲೆಮ. ೩೨೪). [ಕೋಳ$_1$ + ದಂಡ ?]

**ಕೋಳವಿಡಿ** 'ಕೋಳ್ವಿಡಿ' ನೋ.

**ಕೋಳಸುಂದ** (ನಾ). ಒಂದು ಬಗೆಯ ಕಾಡುನಾಯಿ; ಚೆನ್ನನಾಯಿ (ಕರಾ) : ಕಾಡುನಾಯಿ (ಕೋಳಸುಂದ) – ಇವು ಕಾನಡಾ ಜಿಲ್ಲೆಯ ಅಡವಿಯಲ್ಲಿ ಹಿಂಡುಗಟ್ಟಿ ತಿರುಗುತ್ತವೆ. ಈ ಹಿಂಡುಗಳು ಮನುಷ್ಯರನ್ನೂ ಹುಲಿಗಳನ್ನೂ ಕೊಲ್ಲುತ್ತವೆಂದು ಹೇಳುತ್ತಾರೆ (ಕಭಾಗೆ. ೬೨). [← ಮರಾ. ಕೋಳಸಿಂದಾ, ಕೋಳಸುಂದಾ]

**ಕೋಳಾಗು** (ಕ್ರಿ). ಕೈಸೆರೆಯಾಗು ; ಬಂಧಿಯಾಗು : ಬ್ರಹ್ಮನಾಳಿಗೆ ಪಂಜರವಾದ ; ವಿಷ್ಣುವಾಳಿಗೆ ಕೋಟಿಕೂಳಾದ ; ರುದ್ರನಾಳಿಗೆ ತಾ ಕೋಳಾದ (ಅವಜಂ. ೫-೧೫). [ಕೋಳ್$_1$ + ಆಗು$_1$]

**ಕೋಳಾಟ** (ನಾ). ಹಿಂಸೆ ; ಕಾಟ (?) : ಜಂಗಮದ ಗಳಗರ್ಜನೆ ಜಂಗಮದ ಕೋಳಾಟಕೆ [ಪಾಠಾಂ. ಹಳಕ್ಕೆ]ಸೈರಿಸದಿದ್ದರೆ ನೀನಂದೇ ಮೂಗ ಕೊಯಿ (ಬಸವ. ೪೨೪). [ಕೋಳ್$_1$ + ಆಟ]

**ಕೋಳಾಲ** 'ಕುವಲಾಲ' ನೋ.

**ಕೋಳಾಹಲಿತ** (ಗು). ಕ್ಷೋಭೆಗೊಂಡ ; ಕ್ಷುಬ್ಧ : ಮೇಲೆ ಮೇಲೌಕುವ ವಿಪತ್ಕಲ್ಲೋಲ ಕೋಳಾಹಲಿತ ಕಲುಷ ಕರಾಳ ಕಾಲಾಂಬುಧಿಯ ನೀಸಾಡಿದರು (ಕುವ್ಯಾಅ. ೨೨-೧). [< ಸಂ. ಕೋಲಾಹಲಿತ]

**ಕೋಳಾಹಳ** 'ಕೋಲಾಹಲ' ನೋ.

**ಕೋಳಾಹಳಿಕೆ** (ನಾ). ೧. ಗುಂಪಿನ ಗದ್ದಲ, —ಕೂಗಾಟ : ಕಾಣೆನಿದಿರಲಿ ಕವಿವ ಕಾದುವ ಕೌಣಪರ ಕೋಳಾಹಳಿಕೆಗಳ (ತೊರರಾ. ೩-೬-೧೨). ೨. ಕಾಳಗ ; ಕದನ ; ಯುದ್ಧ : ದಶಗ್ರೀವ ಕೋಲ ಕೋಳಾಹಳಿಕೆಯಲಿ ಕವಿವಾಳ ಕೆಡಹುತ (ತೊರರಾ. ೬-೨೪-೧) ; ಕಣೆಯ ಕೋಳಾಹಳಿಕೆಯಂ[ಪಾಠಾಂ. ಳವದೆಂ]ತುಟೊ ಹೇಳಲೇನೆಂದ (ತೊರರಾ. ೬-೩೫-೫೫). [ಕೋಳಾಹಳ (= ಕೋಲಾಹಲ) + -ಇಕೆ]

**ಕೋಳಾಹಳಿಸು** 'ಕೋಲಾಹಲಿಸು' ನೋ.

**ಕೋಳಿ$_1$** 'ಕೋಟಿ$_1$' ನೋ.

**ಕೋಳಿ$_2$** (ನಾ). ಬಲೆಗಾರರಲ್ಲಿ ಒಂದು ಜಾತಿ ; ಬೆಸ್ತರಲ್ಲಿ ಒಂದು ಪ್ರಭೇದ : "ಕೋಳೀಗಳು – ಇವರು ಕಾನಡಾಜಿಲ್ಲೆಯಲ್ಲಿ ಸ್ವಲ್ಪ ಜನರು ಉತ್ತರ ಕೊಂಕಣದಲ್ಲಿಂದ ಬಂದು ವಾಸಿಸುತ್ತಾರೆ. ಕಬ್ಬಲಿಗೇರಿಗೆ ಮರಾಠೀಭಾಷೆಯಲ್ಲಿ "ಕೋಳೀ"ಯೆಂದೆನ್ನುವರು (ಕಭಾಗೆ. ೧೮೫). 'ಕೋಳೀಜನ' ಪರಾ. [?]

**ಕೋಳಿ$_3$, ಗೋಳಿ$_4$** (ನಾ). ಕೆಂಪು ಮತ್ತು ಹಳದಿ ಹೂಗಳನ್ನು ಬಿಡುವ ಒಂದು ಜಾತಿಯ ಅಂದವಾದ ಗಿಡ ; ಕೋಳಿಕುಟುಮ ಬಳ್ಳಿ ; ಕೋಲುಕುಟುಕನ ಗಿಡ : (ಕಿ). **ಗೋಳಿ$_4$**. 'ಗೋಳಿ ಕುಟುಮುನಬಳ್ಳಿ' ಪರಾ. [< ಕೋಟಿ$_2$ ?]

**ಕೋಳಿ ಅಂಕ** (ನಾ). ಕೋಳಿಗಳ ಕಾಳಗ ; ಕೋಳಿ ಜೂಜು : ದೊಡ್ಡದೊಡ್ಡ ನಗರಗಳಲ್ಲಿ ರಾಜರುಗಳೂ ಶ್ರೀಮಂತರೂ ಸೇರಿ 'ಕುದುರೆ ಜೂಜು' ನಡೆಸುವಂತೆ ಗಟ್ಟದ ಮೇಲಕ್ಕೆ ಕೆಲಸದಾಳುಗಳನ್ನು ಕರೆತರುವ ಸೇರೆಗಾರರು ಕೋಳಿಅಂಕಗಳನ್ನು ಹೂಡುವುದು ವಾಡಿಕೆಯಾಗಿತ್ತು (ಕಾನೂರು. ೫೦೬). [ಕೋಳಿ$_1$ (< ಕೋಟಿ$_1$) + ಅಂಕ$_2$]

**ಕೋಳಿಕಟ್ಟ** (ನಾ). (ಕರಾ) = ಕೋಳಿ ಅಂಕ : ಮಳೆಗಾಲದ ಉತ್ಸವಗಳಾದ ಕೋಳಿಕಟ್ಟಗಳೇ ಮೊದಲಾದ . . . ಸಾರ್ವಜನಿಕ ಕಾರ್ಯಕ್ರಮಗಳೆಲ್ಲವೂ ನಡೆಯುವುದಿದ್ದರೆ ಆ ಜಾಗ ಶಾಲಾ ವಠಾರವೇ (ರೂಪಸಂ. ೫೪). [ಕೋಳಿ$_1$ (< ಕೋಟಿ$_1$) + ಕಟ್ಟ ? ./ ತುಳು. ಕೋರಿಕಟ್ಟ]

**ಕೋಳಿಕಟ್ಟು** (ಕ್ರಿ). ಹುಂಜಗಳನ್ನು ಕಾದಲಿಕ್ಕೆ ಬಿಡು ; ಕೋಳಿಗಳನ್ನು ಕಾಳಗಕ್ಕೆ ಹಚ್ಚು : (ಕಿ). [ಕೋಳಿ$_1$ (< ಕೋಟಿ$_1$) + ಕಟ್ಟು$_1$]

**ಕೋಳಿಕರಿ** (ನಾ). ಕೋಳಿಯ ಮಾಂಸದಿಂದ ಮಾಡಿದ ಪಲ್ಯ : ಕೋಳಿಕರಿ ರೊಟ್ಟಿಗಳನ್ನು ತಯಾರಿಸಿದೆವು (ನಡೆದಾ. II, ೧೧೩೧). [ಕೋಳಿ$_1$ (< ಕೋಟಿ$_1$) + ಕರಿ. / ಮಲ. ಕೋಟಿಕ್ಕರಿ]

**ಕೋಳಿಕಳ್ಳ** (ನಾ). ೧. ಕೋಳಿಯನ್ನು ಕದಿಯುವವನು : ಒಬ್ಬನಂತೂ "ಕೋಳಿಕಳ್ಳ" ಎಂದೇ ಕೂಗಿಕೊಂಡ (ಅಲಹೂ. ೯೯). ೨. (ಆಲಂ) ನೀಚ ; ದುಷ್ಟ ; ಕಪಟಿ. [ಕೋಳಿ$_1$ (< ಕೋಟಿ$_1$) + ಕಳ್ಳ$_1$]

**ಕೋಳಿಕಾರ** (ನಾ). ಸಣ್ಣ ಚಿರತೆ : ಕಿರುಚಿರತೆಯನ್ನು "ಕೋಳಿಕಾರ" ಎನ್ನುತ್ತಾರೆ (ನಾಡೋಜ. ೩೧೮). [?]

**ಕೋಳಿಕಾಲಿನಸೊಪ್ಪು** (ನಾ). ಒಂದು ಸೊಪ್ಪಿನ ಹೆಸರು : ಮೇಲೆ ಕಸಕಸಿಯಗಸಿ ಸುಗ್ಗಿಸೊಪ್ಪುಗಳನ್ನು ಕೋಳಿಕಾಲಿನಸೊಪ್ಪು ಗೋಜಿಹ್ವಾ ಶೌನಕ (ಮಹಾವಿ. ೧೧-೩೫). [ಕೋಳಿಕಾಲು ? + ಸೊಪ್ಪು]

**ಕೋಳಿಕಾಲು** (ನಾ). ೧. ಕೋಳಿಯ ಕಾಲು. ೨. ತೆಳ್ಳಗೆ ಉದ್ದವಾಗಿ ಸೊಟ್ಟಾಗಿರುವ ಕಾಲು. [ಕೋಳಿ$_1$ (< ಕೋಟಿ$_1$) + ಕಾಲು (< ಕಾಲ್$_1$)]

**ಕೋಳಿಕಾಳಗ** 'ಕೋಳಿಗಾಳಗ' ನೋ.

**ಕೋಳಿಕಾಳಿಕಾಜಿ** (ನಾ). ಕೋಳಿಯನ್ನು ಹಿಡಿಯುವ ಒಂದು ಬಗೆಯ ಚಿರತೆ (?) : ಪಂದಿವೇಂಟೆಯ ನಾಯೆಂತಪ್ಪುವೆಂದೊಡಸಿಯ ನಡುವುಮುಗಲುರಮುಂ ತಳ್ತು ಕಟ್ಟಿದ ಕಿವಿಯುಂ . . . ಉಳ್ಳುದಾಗಿ ಜಾತ್ಯಶ್ವದಂತೆ ಬೇಗಮಾಗಿ ಕೋಳಿಕಾಳಿಕಾಜಿನಂತೆ ಬಟಿಯಜುವಿಡಿದು (ಪಂಪಭಾ. ೫-೩೬ಒ) ; "ವಾಮಾಚಾರದ ಶಾಕ್ತೇಯ ಮತದ ವಂಚಕನಂತೆ. (ಕೌಳಿಕ + ಅಳಿಕಾಜಿ ಎಂದು ಪಾಠವಿರಬಹುದು)" (ಪಂಪದೀ. ೧೯೬). [?]

**ಕೋಳಿಕುಕ್ಕೆ** (ನಾ). ೧. ಕೋಳಿಗಳ ಮೇಲೆ ಮುಚ್ಚುವ ಬುಟ್ಟಿ. ೨. ಒಂದು ಜಾತಿಯ ಔಷಧಿ ಗಿಡ : (ವೈಔಗಿ. ೧೧-೧೮೮). [ಕೋಳಿ$_1$ (< ಕೋಟಿ$_1$) + ಕುಕ್ಕೆ$_1$ ?]

**ಕೋಳಿಕುಟುಮ** 'ಕೋಟಿಕುಟುಮ' ನೋ.

**ಕೋಳಿಕೂಗು** (ನಾ). ೧. ಕೋಳಿಯ ಕೂಗು : ಆ ರಾತ್ರಿಯೂ ಹಳ್ಳಿಯಲ್ಲಿ ಮತ್ತು ಪಾರುಪತ್ಯಗಾರನ ಅಂಗಳದಲ್ಲಿ ಎಂದಿಗಿಂತ ಮೊದಲೇ ಕೋಳಿಕೂಗು ಮೊದಲಾಯಿತು (ಪುನರು. ೨೯೬). ೨. (ಆಲಂ) ಉದಯಕಾಲ ; ಬೆಳಗಿನ ಜಾವ : ಕೋಳಿಕೂಗಿಗೇ ಎದ್ದು ಹೊರಟರು (ರೂಢಿ). [ಕೋಳಿ$_1$ (< ಕೋಟಿ$_1$) + ಕೂಗು$_2$]

**ಕೋಳಿಗಾಳಿಗ,** ಕೋಳಿಕಾಳಗ (ನಾ). = ಕೋಳಿ ಅಂಕ : **ಕೋಳಿ** ಗಾಳಿಗವ ಕಾದಿಸುವ (ಜೈಮಿಭಾ. ೬-೩೯). **ಕೋಳಿಕಾಳಗ :** ತಗರು ಸಿಪಲೆ **ಕೋಳಿಕಾಳಗ**ಗಳು ನೆಟಿ ಪಗಡೆ ಜೂಜುಗಳ ನೆವದಲಿ . . . ಸೊಗಸುಗಾಱರು ಚರಿಸುವರು (ಕಂನವಿ. ೬-೧೯೭).
[ಕೋಳಿ$_1$ (< ಕೋೞಿ$_1$) + ಕಾಳಿಗ]

**ಕೋಳಿಜುಟ್ಟು** (ನಾ). ಕೋಳಿಯ ತಲೆಯಮೇಲಿನ ಕೊಟ್ಟು: (ಕ).
[ಕೋಳಿ$_1$ (< ಕೋೞಿ$_1$) + ಜುಟ್ಟು]

**ಕೋಳಿಜುಟ್ಟುಗಡ್ಡಿ** (ನಾ). ಒಂದು ಜಾತಿಯ ಔಷಧಿ ಗಿಡ (ವೈಔಗಿ. ೫೮-೧೧೬೦). [ಕೋಳಿಜುಟ್ಟು$_0$ + ಕಡ್ಡಿ]

**ಕೋಳಿಜುಟ್ಟುಸೊಪ್ಪು** (ನಾ). ಒಂದು ಜಾತಿಯ ಗಿಡ. (ವೈಔಗಿ. ೬೭-೧೩೫೭). [ಕೋಳಿಜುಟ್ಟು$_0$ + ಸೊಪ್ಪು]

**ಕೋಳಿಬೆಂಡೆ** (ನಾ). ಒಂದು ಜಾತಿಯ ಗಿಡ : ಬೆಂಡೆಮರ, ಬೆಲ್ಲಕ, ಬೆಳಗು, ಕೋಳಿಬೆಂಡೆ, ನಾಯಿಬೆಂಡೆ (ವೈಔಗಿ. ೪೮-೯೬೮).
[ಕೋಳಿ$_1$ (< ಕೋೞಿ$_1$) + ಬೆಂಡೆ]

**ಕೋಳಿಮೊಟ್ಟೆ** (ನಾ). ಕೋಳಿಯ ತತ್ತಿ : ಅಂಕೋಲೆ ತೈಲದಲ್ಲಿ ನೆನಸಿದ ನೈದಿಲೆಗಡ್ಡೆಯನ್ನು ಗಡಿಗೆಯಲ್ಲಿಟ್ಟು, ಆನೆಕಲ್ಲು ನೀರನ್ನು ಕೋಳಿ ಮೊಟ್ಟೆರಸವಂ ಸಹ ಚುಮುಕಿಸಲು ತಕ್ಷಣದಲ್ಲಿ ಹುಟ್ಟಿ ಪುಷ್ಪವಂ ಧರಿಸುವುದು (ಸೌಗಂಧಿ. ೪೩೮-೨). [ಕೋಳಿ$_1$ (< ಕೋೞಿ$_1$) + ಮೊಟ್ಟೆ]

**ಕೋಳಿವರಿ** (ನಾ). (?) : ಏಣನೇತ್ರೆಯರ ಮನವನಿರ್ಕುಳಿಗೊಂಬ ಜಾಣನಾರೆಂದು ನೋಡಿದರು ಸೋಮನಾದರೆ ಕಂದುಕುಂದಿಲ್ಲ ಮೇಣು ಸುತ್ರಾಮನಾದರೆ ಭಂಗನಾಸ್ತಿ ಕಾಮನಾದರೆ ಕೋಳಿವರಿಯಿಲ್ಲ ಸದ್ಗುಣ ಧಾಮನಾರೆಂದು ನೋಡಿದರು (ಮೋಹತ. ೧೮-೬೧). ℙ ಕಿಳಿವರಿ = ಗಿಳಿಯಮರಿಯ ಅಪಲಿಖಿತವಿರಬಹುದು.

**ಕೋಳಿಹಲಿಗೆ** (ನಾ). ರಥದ ನೊಗದ ಕೆಳಗಡೆಯಲ್ಲಿರುವ ಹಲಗೆ; ಮೂಕಿಯ ಕೆಳಗಿರುವ ಮರ : ಅನುಕರ್ಷಃ – ದಾರ್ವಧಸ್ಥಂ – ಅ ನೊಗದ ಕೆಳಗಿರುವ ಕೋಳಿಹಲಿಗೆಗೂ, ತೋಳುಮರಕ್ಕೂ ಸಾರಥಿ ಕೂಡುವ ಹಲಿಗೆಗೂ, ಕೊಳವಿ ಹೂಟದ ಮಿಣಿಗೂ ಹೆಸರು" (ಸಿದ್ಧಾಂತಿ. ೨೧೮). [ಕೋಳಿ ? + ಹಲಿಗೆ (< ಪಲಗೆ$_1$)]

**ಕೋಳಿಹುಂಜ** (ನಾ). ಗಂಡುಕೋಳಿ; ಹುಂಜ : " ಪದಾಯುಧಂ – ಕೋಳಿಹುಂಜ [ಪಾಠಾಂ. ಕೋಳಿ] " (ನಾನಾರ. ೧೨೨ ಟೀಕೆ).
[ಕೋಳಿ$_1$ (< ಕೋೞಿ$_1$) + ಹುಂಜ (< ಪುಂಜ)]

**ಕೋಳೀಕಾಲುಹುಲ್ಲು** (ನಾ). ಒಂದು ಜಾತಿ ಹುಲ್ಲು : ಕಾಡುರಾಗಿ ಹುಲ್ಲು, ಕೋಣನತಲೆಹುಲ್ಲು, ಕೋಳೀಕಾಲುಹುಲ್ಲು (ವೈಔಗಿ. ೨೮-೫೪೨).
[ಕೋಳೀಕಾಲು$_0$ + ಹುಲ್ಲು (< ಪುಲ್)]

**ಕೋಳೀಜನ** (ನಾ). = ಕೋಳ್ಳಿ$_2$ : ಆಗಲೇ ಕೋಳೀಜನರು ತಮ್ಮ ದೋಣಿ ಗಳನ್ನು ತೆಗೆದುಕೊಂಡು ಬಂದರು (ಸ್ವೃತಿಚಿ. ೪೬೫). [ಕೋಳ್ಳಿ$_2$ + ಜನ]

**ಕೋಳು$_1$** 'ಕೋಡು$_1$' ನೋ.

**ಕೋಳು$_2$** 'ಕೋಳ್' ನೋ.

**ಕೋಳು$_3$** 'ಕೋಡು$_5$' ನೋ.

**ಕೋಳುಕೊಳ್** 'ಕೋಳ್ಗೊಳ್' ನೋ.

**ಕೋಳುಗೊಡು** 'ಕೋಳ್ಗೊಡು' ನೋ.

**ಕೋಳುಗೊಳ್** 'ಕೋಳ್ಗೊಳ್' ನೋ.

**ಕೋಳುಪೋಗು** 'ಕೋಳ್ವೋಗು' ನೋ.

**ಕೋಳುವಿಡಿ** 'ಕೋಳ್ವಿಡಿ' ನೋ.

**ಕೋಳುವೋಗು** 'ಕೋಳ್ವೋಗು' ನೋ.

**ಕೋಳುಹುಯ್** 'ಕೋಳುಹೊಯ್' ನೋ.

**ಕೋಳುಹೊಯ್,** ಕೋಳುಹುಯ್ (ಕ್ರಿ). ಕೊಳ್ಳೆಹೊಡೆ; ಲೂಟಿ ಮಾಡು : ಅಣಿಯ ಬಾಯೊಳು ಕೋಳುಹೊ [ಪಾಠಾಂ. ಹು]ಯ್ದು ತಂದೊಪ್ಪಿಸುವ ರಣರಸಿಕರೊಡ್ಡುವೊಡ್ಡಣವ ಕಂಡು (ಸಮ್ಯಕೌ. ೮-೪೯). **ಕೋಳುಹುಯ್ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕೋಳು$_2$ (< ಕೋಳ್) + ಹೊಯ್ (< ಪೊಯ್)]

**ಕೋಳುಹೋಗು** 'ಕೋಳ್ವೋಗು' ನೋ.

**ಕೋಳೂರು** 'ಕೋಟೂರು' ನೋ.

**ಕೋಳೆ$_1$** 'ಕೋವಳೆ' ನೋ.

**ಕೋಳೆ$_2$** 'ಕೋಹಳೆ' ನೋ.

**ಕೋಳೆ$_3$** (ನಾ). ಕಣ್ಣಿನ ಮೂಲೆ; ಕಡೆಗಣ್ಣು : (ಕ).
[< ಸಂ. ಕೋಣ]

**ಕೋಳೇೞ್** (ಕ್ರಿ). ಏಟನಿಂದ ಸಿಟ್ಟಿಗೇಳು ; ಪೆಟ್ಟು ತಿಂದು ರೊಚ್ಚಿ ಗೇಳು : ಧನಸಂಗ್ರಹನೊಳ್ಕಾಳೆಗಮನೊಡರಿಪನ್ದಂ ಕೋಳೆಟ್ಟಹಿಪತಿಗೆ ಮೆಯ್ಯನೊಡ್ಡುವರನ್ದ (ಸೌಇಇ. XX, ೨೧-೭೫ ; 1019).
[ಕೋಳ್ + ಏೞ್$_1$]

**ಕೋಳೊಡವೆ** (ನಾ). ಕೊಳ್ಳೆ ಹೊಡೆದು ತಂದ ವಸ್ತು ; ಸೂರೆಯಲ್ಲಿ ಸಿಕ್ಕಿದ ವಸ್ತು ; ಲೂಟಿಮಾಡಿ ತಂದ ಪದಾರ್ಥ : ಕೋಳೊಡವೆ ಮುಂತಾಗಿ ತಿರುಗಿದಂ ಫಲುಗುಣಂ ಮೇಲೆ ನಡೆದುದು ಕುದುರೆ ತೆಂಕ ದೆಸೆಗೆ (ಜೈಮಿಭಾ. ೧೬-೪೬). [ಕೋಳು$_2$ (< ಕೋಳ್) + ಒಡವೆ]

**ಕೋಳ್ಕಿಸಜ್** 'ಕೊಟಿಗ್ಗೆಸಜ್$_2$' ನೋ.

**ಕೋಳ್ಗುದಿ,** ಕೊಗ್ಗುದಿ, ಕೊಳ್ಗುದಿ (ನಾ). ೧. ಮನಸ್ಸನ್ನು ತಿವಿಯುವ ವ್ಯಥೆ ; ಮಿತಿಮೀರಿದ ದುಃಖ ; ಅತಿ ಸಂತಾಪ : ನನೆ ಗಣೆಯಿಂ ತೀವಿದ ದೊಣೆಯಾಗೆರ್ದೆ ಕೋಳ್ಗುದಿಗೊಳೆ (ಶಾಂತಿಪು. ೬-೭೫); ಕೈಯ ಗಲ್ಲದ ನಿಬ್ಬರದ ನಿಡುಸುಯ್ಲ ಖೋಡಿಯ ಮನದ ಕೋ [ಪಾಠಾಂ. ಕ]ಳ್ಗುದಿಯ . . . ಖೇದದ ಮಬ್ಬಿನಲಿ ಹಣಗಿದರು ಪವನಜ ಫಲು ಗುಣಾದಿಗಳು (ಕುವ್ಯಾಸ. ೧೬-೫೭). 'ಕೋಳ್ಗುದಿಗೊಳ್' ಪರಾ. ೨. ಅತಿರೇಕದ ಸ್ಥಿತಿಯನ್ನು ಹೊಂದಿರುವಿಕೆ; ಉದ್ರೇಕ : ಒಬ್ಬನೆ ತಿರುಗಿಹಾಯ್ದನು ಕೊಳುಗುಳದ ಕೋಳ್ಗುದಿಯ ಕೋಲಾಹಲದ ಕೆಸಱನಲಿ (ಕುವ್ಯಾಗ. ೪-೪). 'ಕೋಳ್ಗುದಿಗೊಳ್' ಪರಾ. **ಕೊಗ್ಗುದಿ.** 'ಕೊಗ್ಗುದಿಗೊಳ್' ಪರಾ. **ಕೊಳ್ಗುದಿ :** ೧. ಕೊಳ್ಗುದಿ ಮನದಿಂದಮಿಂದು ಪೊಱಮಾಱುಗೆ (ಪಂಪಭಾ. ೫-೧೮). 'ಕೊಟ್ಗುದಿ' ಪರಾ. [ಕೋಳ್ + ಕುದಿ$_2$]

**ಕೋಳ್ಗುದಿಗುದಿ** (ಕ್ರಿ). ಬಹಳ ಸಂಕಟಪಡು; ಮಿತಿಮೀರಿದ ದುಃಖ ವನ್ನನುಭವಿಸು : ಇದನಱಿಯದಜ್ಞಾನಿಗಳು ಕೋಳ್ಗುದಿಗುದಿದು (ನಿಭಾಗ. ೨-೧-೩೦) ; ಹೃದಯದಂತಸ್ತಾಪದಲಿ ಕೋಳ್ಗುದಿಗುದಿವ (ನಿಭಾಗ. ೧೦-೨೫-೩೭). [ಕೋಳ್ಗುದಿ + ಕುದಿ$_1$]

**ಕೋಳ್ಗುದಿಗೊಳ್,** ಕೊಗ್ಗುದಿಗೊಳ್, ಕೊಳ್ಗುದಿಗೊಳ್ (ಕ್ರಿ). ೧. ಪೆಟ್ಟಿನಿಂದಾದ ಸಂಕಟವನ್ನು ಅನುಭವಿಸು ; ಬಹಳ ದುಃಖ ಕ್ಕೊಳಗಾಗು ; ಮಿತಿಮೀರಿ ವ್ಯಥೆಪಡು ; ಪರಿತಪಿಸು : ಸರಳ ಪೊದಟ್ಟ ಬಲ್ಸರಿಯ ಕೋಳ್ಗಿರಲಾಱದೆ ಬಿಲ್ ತೆರಳ್ದು ದುರ್ಧರಹಯ ಮಟಿಗ್ಗೆ ಸಂದಣಿಸಿ ಸಂದಣಿ ಕೋಳ್ಗುದಿಗೊಂಡುದು (ಪಂಪಭಾ. ೩-೭೦) ; ಬೆನ್ನಟ್ಟುವ ಪುರಾಣನಾರಕರೆಟ್ಟರವಿಂಗೆ ಕೋಳ್ಗುದಿಗೊಂಡು ಜಳಾವಗಾ ಹಾಸೆಯಿಂ ವೈತರಣಿಯ ಪಿರಿಯ ದರಿಯಂ ಮೆಟ್ಟಿ (ಶಾಂತಿಪು ೭-೯೧ ವ); ಎಳಮಾವು ಮಲ್ಲಿಗೆಗೆ ಕೋಳ್ಗುದಿಗೊಂಡು ಬಬಲ್ದು [ಪಾಠಾಂ. ಕೋಳ್ಗುದಿ ರೊಳ್ಕುದಿಗೊಂಡು] ಜೋಲ್ವರ್ (ಅನಂಪು. ೧-೯೫) ; ಕೋಳ್ಗುದಿ ಗೊಂಡು ಬೆಂಬೀಳ್ವ ನಂಬಿಯಂ ನೋಡಿ (ಮಱಿರ. ೩೭-೩).

ಕೊಗ್ಗುದಿಗೊಳ್ : ೧. ಅವೆ ಬಂದನೆಲೆಲೆ ಶಿವನಣುಗ ವೀರೇಶ್ವರಂ ಕದನಕೆನೆ ದಕ್ಷನದ ಕೇಳಿ . . . ಬೆದಱಿ ಕೊಗ್ಗುದಿಗೊಂಡು (ಲಶಿಚಿಂ. ೧೮-೨೬). ೨. (ನೀರು ಮೊದಲಾದ ದ್ರವವಸ್ತು) ಅತಿಶಯವಾಗಿ ಕುದಿ; ಮರಳು : ಸುಣ್ಣಕಲ್ಲಿನ ಭಾಂಡದೊಳ್ ನೀರೆಱಿಯೆ ಕೊಗ್ಗುದಿಗೊಂಡು ಕುದಿವೊಲ್ (ಮದೇಪು. ೩-೩೮). **ಕೊಳ್ಗುದಿಗೊಳ್** : ೧. ಪಗಲಿರುಳು ಕೊಳ್ಗುದಿಗೊಳ್ಳುತಿಹನಾರ್ಜನೆಯು ವಾಂಛೆಯೊಳು (ಶಂಕದಾ. ೮-೫೬). 'ಕೊೞ್ಗುದಿಗೊಳ್' ಪರಾ.

ಕೊಳ್ಗುದಿಮಳ್ಗುದಿಗೊಳ್ = ಬಹಳ ಸಂಕಟಪಡು ; ಸಂತಪಿಸು : ಬಾಯ್ಗಳಿಂ ಹುಯ್ಯಲನಿಕ್ಕುವಂ ಕೊಳಱಿ ಕೊಳ್ಗುದಿಮಳ್ಗುದಿಗೊಂಡು ಮಗ್ಗುವರ್ (ಅನಂಪು. ೯-೩೨).

[ಕೋಳ್ಗುದಿ + ಕೊಳ್$_1$]

**ಕೋಳ್ಗಿಸಱ್** 'ಕೊೞ್ಗಿಸಱ್$_2$' ನೋ.

**ಕೋಳ್ಗೊಡು**, ಕೋಳುಗೊಡು (ಕ್ರಿ). ೧. ಸೂರೆಯನ್ನು ಕೊಡು ; ಕೊಳ್ಳೆಯನ್ನು ಒಪ್ಪಿಸು : ಲಾಳಂ ಬಾಳ್ಗೊಟ್ಟು ಕೋಳ್ಗುಟ್ಟುಱಿದಂ (ಎಇ. XV, ೩೨೦-೧೪; 1172) ; ತನ್ನ ಸರ್ವಸ್ವವನ್ನೂ ನಮಗೆ ಕೋಳ್ಗೊಟ್ಟು (ಬಟ್ಟಅ. ೧೨೩-೨೧). **ಕೋಳುಗೊಡು** : ೨. ಸೂರೆಗೆ ಅವಕಾಶಕೊಡು; ಸುಲಿಗೆಗೆ ಗುರಿಮಾಡು; ಲೂಟಿಮಾಡಲು ಬಿಡು : ನೀಲಗಿರಿಯ ಮಱಿಯೆನೆ ಕರಿಘಟೆಗಳು ಸಾಲುವಿಡಿದು ಸರ್ವಪಥಮಂಕೋಳುಗೊಡದೆ ನಡೆದವು (ಅಂಜಚ. ೬-೬೮) ; ಕೋಳುಗೊಡದೆ ಕರವಾಳ ಪಿಡಿದುಕೊಂಡು ಕಾಲಯಮನ ತೆಱನೊಳಗೆ ಭಾಳಲೋಚನನ ಬಲವನೆಲ್ಲವ ಸೀಳಿ ಸಾಲುವಿಡಿದು ಕೆಡಹಿದರು (ತ್ರಿಪುಸಾಂ. ೧೯-೨೧೨) ; ಬಾಲೆಯನು ತಂದಿತ್ತನಾದರೆ ಕೋಳುಗೊಡುವೆನಯೋಧಿನಗರವನಾಳುವವೊಲು (ತೊರರಾ. ೬-೩-೪೧).

[ಕೋಳ್ + ಕೊಡು$_1$]

**ಕೋಳ್ಗೊಲೆ** (ನಾ). ಸೂರೆಗಾಗಿ ಮಾಡುವ ಕೊಲೆ: ಕೈಗೊಲೆ ಬಾಯ್ಗೊಲೆ ಮೈಗೊಲೆ ಕಾಲ್ಗೊಲೆ ಕೋಳ್ಗೊಲೆಯಂ ಕಲಿಪ ಕಡುಬಿನ್ನಣಂಬಡೆದು (ರಾಜಶೇ. ೬-೧೧ ವ).

[ಕೋಳ್ + ಕೊಲೆ$_2$]

**ಕೋಳ್ಗೊಳ್**, ಕೋಳುಕೊಳ್, ಕೋಳುಗೊಳ್ (ಕ್ರಿ). ೧. ಕೊಳ್ಳೆಹೊಡೆ; ಲೂಟಿಮಾಡು; ಅಪಹರಿಸು; ಕೈವಶಪಡಿಸು : ಸುಟ್ಟನೀಶ್ವರನೊಡೆಯುರಿದಿಹ ಕಾಮನ ಪಟ್ಟದ ರಾಣಿ ದುಃಖದಲಿ ನೆಟ್ಟನೆ ದೇಶಾಂತರವೈತರಲಾಗಿ ದಿಟ್ಟಾಗಿ ಕೋಳ್ಗೊಳಬಹುದೆ (ಮೋಹತ. ೧೧-೮) ; ತೋಳ್ಗುಟ್ಟುತಾರ್ದು ಸುಮ್ಮಾನದಿಂ ಪಟುಭಟರ್ ಕೋಳ್ಗೊಂಡು ಕುದಿಯುತಿರ್ದರು (ಜೈಮಿಭಾ. ೧೨-೫). **ಕೋಳುಕೊಳ್** : ೧. ಅಸುರಬಲಜಾಲಮಘವನ ಸಲಿಲದುರ್ಗಂಗಳಂ ಬಿಡದೆ ಕೋಳು[ಪಾಠಾಂ. ಳ]ಕೊಂಡರ್ (ಚೆಬಪು. ೨೩-೩೨). **ಕೋಳುಗೊಳ್** : ೧. ನಾಳೆ ಕರ್ಣನನೆಯ್ದಿ ಸುರಪತಿ ಲೀಲೆಯಲಿ ಕುಂಡಲವ ಕವಚವ ಕೋಳುಗೊಂಡೈತಪ್ಪನೆನೆ ರವಿಯಱಿದು ಮನದೊಳಗೆ (ಕುವ್ಯಾಅ. ಓಲಿಇ. ೨೩-೨) ; ಕಾಲಯಮನೆ ಬಂದಾ ಪಟ್ಟಣವನು ಕೋಳುಗೊಂಡಂತೆಯ್ದಿದನು (ನೇಮಿಸಂ. ೨೫-೫೬) ; ದಾನವೇಶ್ವರನ ಶೋಣಿತಪರದುಗ್ಧಾಬ್ಧಿ ಮಾನದೇವಿಯ ಕೋಳುಗೊಂಡು . . . ಬರ್ಪಾನಂದ ಸೋಜಿಗವಾಯ್ತು (ಮೋಹತ. ೪೧-೪೦). ೨. ಆಕರ್ಷಿಸು; ತನ್ನಬಳಿಗೆ ಎಳೆದುಕೊಳ್ಳು ; ಸೆಳೆದುಕೊಳ್ಳು : ನೀಳರತ್ನದ ಘಟದಿರದೆ ಮುರಿದೇಳೆ ದುಂಬಿಯು ಬಂಬಲನು ಮಿಗೆ ಕೋಳುಗೊಂಡು ಜ್ವಳಿಪ ಕಂಪಿನ ಧೂಪಧೂಮಗಳಿಂ (ಸಾಳ್ವಭಾ. ೩-೨೯).

[ಕೋಳ್ + ಕೊಳ್$_1$]

**ಕೋಳ್ದಪ್ಪು**, ಕೊಳ್ದಪ್ಪು (ಕ್ರಿ). ಹಿಡಿತ ತಪ್ಪಿಹೋಗು; ತನ್ನ ಅಂಕೆಗೆ ಒಳಪಡದಿರು; ಕೈವಶವಾಗದೆ ಹೋಗು; ಕಚ್ಚುವಿಕೆ ತಪ್ಪಿಹೋಗು (?) : ಗರ್ಭೇಶ್ವರಿಯಲ್ಲಿಗೆ ದೂತನನಟ್ಟೆ ಪಸರಂಬಡೆಯದೆ ವೈನತೇಯನ ಚಿತ್ತವೃತ್ತಿಯಂತೆ ಭುಜಗದ್ವೇಷಿಯಾಗಿ ದರ್ಪ(ದ)ನಱಿದುರಗವನಿತೆಯಂತೆ ಕೋಳ್ದಪ್ಪಿ ಮುಳಿದಿರ್ದಳಂ ಪಱಿಗೆ ಮುಳಿದಳೆಂದು ವಿಟವೃಷಭನಾಕೆಯಂ ತಿಳಿಪಲಡಿಗೆಱಗಿ (ಶಾಂತಿಪು. ೮-೮೩ ವ) ; ಪುಲಿ ಮುನ್ನಂ ಕೋಳ್ದಪ್ಪಿದ ಮುನಿಸಿನೊಳಾನೆಯ ಕುಂಭಸ್ಥಳಕ್ಕೆ ಪಾಯ್ದೊಡೆ ಅದನಾನೆ ಪಿಡಿದುಕೊಂಡು ಮೆಟ್ಟಿ ಸೀಳ್ದೀಡಾಡಿ ಪೋದೊಡೆ (ಜೀವಸಂ. ೫೪-೩೧ ವ). **ಕೊಳ್ದಪ್ಪು** : ಮತ್ತಮದಱ ನಡುಪಟ್ಟಕಟ್ಟಣಕದ ವಾದದ ಕಾಯ್ಪಿನೊಳೊಲ್ಲನೊನಲ್ದು ಕಲ್ಲನೆ ಕನಲ್ದು ಸಂತಾಪಕ್ಕೆ ಸೈರಿಸದೆ ಹಿಮಕರಮಂಡಲಕ್ಕೆ ಕೆಯ್ಯನೆತ್ತೆ ಬೆರ್ಚಿದ ಹರಿಣಂ ಮತ್ತೀಂ ಪಾಯ್ದುಕೊಂಡೋಡಿದೊಡೆ ಕೊಳ್ದಪ್ಪಿ ಸುಯ್ದು ಸುಱಿದ ಸೀಕರಾಸಾರದಿಂ ಮುಂಜು ಪಂಜರಿಸಿದಂಜನಾಚಲದಂತಿರ್ಪುದು (ಅನಂಪು. ೧೩-೨೦ ವ). [ಕೋಳ್ + ತಪ್ಪು$_1$]

**ಕೋಳ್ದಾಂಟು** (ನಾ). ದೊಡ್ಡ ಹೆಜ್ಜೆಯಿಂದ ದಾರಿಯನ್ನು ಹಾಯುವುದು, —ಅತಿಕ್ರಮಿಸುವುದು ; ಮಾರುಗಾಲಿನಿಂದ ನಡೆಯುವಿಕೆ: ಪೆಣಂಗಳ ಕಂಪು ನಾಱುವುದರ್ಕೆ ಸೈರಿಸಲಾಱದೆ ಕೋಳ್ದಾಂಟನೊಳ್ ಕೊಳುಗುಳವಂ ಕಱಿದು ಪೋಗಿ (ಪಂಪಭಾ. ೧೩-೬೧ ವ). [ಕೋಳ್ + ದಾಂಟು$_2$]

**ಕೋಳ್ದಿರು** (ಕ್ರಿ). ಕೊಳ್ಳೆ ಮಾಡಿದುದನ್ನು ತೆರು ; ಲೂಟಿ ಹೊಡೆದದನ್ನು ಕೊಡು : ಗೌಡಂದಿರ ಸಂಪಾದನ ಸಂಚಿತಗಳನ್ನು ಸುಲಿಹಗೊಂಡು ಕೋಳ್ದಿರುತ್ತಿರುವನು (ಮಂತ್ರಶ. ೬೯-೧೩).

[ಕೋಳ್ + ತೆರು$_1$ (< ತೆಱು$_1$)]

**ಕೋಳ್ನುಡಿ** (ನಾ). ೧. ಸೂರೆಗೊಳ್ಳುವ ಮಾತು; ಹೆಚ್ಚಾಗಿ ಹಣವನ್ನು ಕೊಳ್ಳೆಹೊಡೆಯುವ ಮಾತು. ೨. ಹಿಂಸೆಯ ಮಾತು ; ಮನಸ್ಸನ್ನು ನೋಯಿಸುವ ಮಾತು. ೧, ೨ : ಬಡತನಮೆಂಬುದು ಸತಿಯರ ನಡುವಿನೊಳಾಲೀಳವಲಗುವಿನ್ನಣದೊಳ್ ಸಂಕಡಿಕುಚದ ಮಧ್ಯದೊಳ್ ಕೋಳ್ನುಡಿ ಕುಟಂಣವದಿಲೊಳಲ್ಲದಿಲ್ಲಾ ನಾಡೊಳ್ (ಧರ್ಮಪ. ೧-೩೭). [ಕೋಳ್ + ನುಡಿ$_2$]

**ಕೋಳ್ಪಟ್ಟಣ** (ನಾ). ಅತಿ ಪೀಡನ (?) : ತಪ್ತಾಯಃಪುತ್ರಿಕಾಲಿಂಗನದೊಳಮತಿವಿಶಾಲಪಟ್ಟ ಕೋಳ್ಪಟ್ಟಣದೊಳಮತಿ ದಾರುಣ ಕ್ರಕಚವಿದಾರಣದೊಳಮತಿ ಕರಾಳ ಶೂಲಾರೋಹಣದೊಳಮತಿ ಭಯಂಕರ . . . ದಂಡನ ಖಂಡನ ತಾಡನ ಪೀಡನ ಗರ್ಜನ ತರ್ಜನಾದಿಗಳನೆಯ್ದಿ (ಅಜಿಪು. ೧೧-೧೦ವ). [?]

**ಕೋಳ್ಪಡು** 'ಕೋಳ್ವಡು' ನೋ.

**ಕೋಳ್ಪಡೆ** (ಕ್ರಿ). ೧. ಸುಲಿಗೆ ಹೊಂದು ; ಕೊಳ್ಳೆಮಾಡಲ್ಪಡು ; ಸೂರೆಗೆ ಗುರಿಯಾಗು. ೨. ಕಡಿತವನ್ನು ಹೊಂದು ; ಕಚ್ಚಲ್ಪಡು : ಕೋಳ್ಪಡೆದೊಂಗೆ [ಪಾಠಾಂ. ಕೇಳ್ಪಡೆದೊಂಗೆ, ಕೊಲ್ವಡವಂಗೆ]ರಟ್ಟುವಂಗಳುಮಱಿದಟ್ಟುಗುಂ ಲಲನೆಯೆಂಬ ವಿಷೋರಗಮೇಂ ಮಹೋಗ್ರಮೋ (ಜೀವಸಂ. ೬೬-೬). [ಕೋಳ್ + ಪಡೆ$_1$]

**ಕೋಳ್ಪಾಂಗು** (ನಾ). ಬೇಟೆ ವಶವಾಗುವ ಬಗೆ: ಬರವಂ ಕಾಡಂ ಬೇಗೆಗೆ ಕರಮಱಿದೆರಡುಂ ಮೃಗಂಗಳು ತಣ್ಪುಱಿಲೊಳ್ ನೆರೆದೊಡವಂದುವು ತಪ್ಪದಿದಱಿಕೇಸರಿ ಕಂಡು ಮೆಚ್ಚುವೈ ಕೋಳ್ಪಾಂಗಂ (ಪಂಪಭಾ. ೫-೩೯). [ಕೋಳ್$_2$ + ಪಾಂಗು]

**ಕೋಳ್ಪಿಡಿ** 'ಕೋಳ್ವಿಡಿ' ನೋ.

**ಕೋಳ್ಪೋಗು** 'ಕೋಳ್ವೋಗು' ನೋ.

**ಕೋಳ್ಕಸಗು** (ಕ್ರಿ). ಬಂಧನದಲ್ಲಿ ಸಿಕ್ಕಿ ಕೆರಳು: ಎಳಸಿ ಬಳಸಿರ್ದ ಮೃಗಸಂಕುಲಂಗಳಂದನಿತುಮೊಡನೆ ಕೋಳ್ಕಸಗಿದೊಡಾ ಕುಳರಾ ದಾರ್ಯಜನಕ್ಕೆ (ಆದಿಪು. ೬-೫೬); ಮಿಡುಮಿಡುಕನೆ ಮಿಡುಕುವ ಸಿಡಿಲೇಟ್ಗಿಯುಮಂ ಕೋಳ್ಕಸಗಿದ ಪುಲಿಯ ಪಿಂಡುಗಳುಮನನುಕರಿಸಿ ನಡೆವಣಿಯ ಸಂದಣಿಯುಮಂ (ಪಂಪಭಾ. ೧೦-೫೧ ವ).

[ಕೋಳ್ + ಮಸಗು]

**ಕೋಳ್ಕಿಗ** 'ಕೋಟ್ಕಿಗ' ನೋ.

**ಕೋಳ್ಕಿಗವೇಂಟೆ** (ನಾ). ದುಷ್ಟಮೃಗಗಳ ಬೇಟೆ, —ಶಿಕಾರಿ: ದಣಿದು ಕೋಳ್ಕಿಗವೇಂಟೆಯೋಳ್ ಮಲೆಯ ತಲೆಯಿಂದೆ ತಳ್ಪಲಿನೆಲೆಯ ಮನೆಗೆ ಬರುತಲಿರ್ದಗ್ರಜಂ (ಶ್ರೀರಾಮಾ. ೧೪೮-೩೪೨).

[ಕೋಳ್ಕಿಗ (< ಕೋಟ್ಕಿಗ) + ಬೇಂಟೆ]

**ಕೋಳ್ಮೃಗ** (ನಾ). = ಕೋಟ್ಮೃಗ: ಈ ಕಾಯ್ದುಕಲ್ಲಮೇಗಿಕ್ಕೆ ಪೋದೊಡೆ ಪಗಲೆಲ್ಲಂ ಬಿಸಿಲೊಳ್ಪಿಂದಿರುಳ್ ಗಾಳಿಯೊಳಂ ಶೀತದೊಳಂ ಬಿರಿದು ಪರ್ದುಂ ಕಾಗೆಯುಮಿರಿಯೆ ಕೋಳ್ಮೃಗಮುಮುಗಿಯೆ ರೌದ್ರ ಪರಿಣಾಮದಿಂ ಸತ್ತು (ಬಂಹರಿ. ೮-೧೩ ವ).

[ಕೋಳ್ + ಮೃಗ]

**ಕೋಳ್ವಗೆ** (ನಾ). ಮನಸ್ಸನ್ನು ಸೂರೆಗೊಳ್ಳುವ ಬಗೆ; ಚಿತ್ತಾಕರ್ಷಕ ರೀತಿ: ಕೋಳ್ವಗೆಯ ಕಯ್ಗಳೆ ಕಾಲೂರನಾಳುತಿರೆ ಬೇಳ್ವ ಬಡತನ ನನ್ನಿಯಿಂ ಬಾಳದಿನ್ನು (ಕಾಲೂರ. ೧೪೪-೩೧೪).

[ಕೋಳ್ + ಬಗೆ₃]

**ಕೋಳ್ವಡು**, ಕೊಳ್ಪಡು, ಕೋಳ್ಪಡು (ಕ್ರಿ). ಸೂರೆಮಾಡಲ್ಪಡು; ಅಪಹರಿಸಲ್ಪಡು; ಸುಲಿಗೆಯಾಗು; ಲೂಟಿಗೆ ಸಿಕ್ಕು: ಅದು ಕಾರಣದಿಂದರ್ಥಮಂ ಕೋಳ್ವಟ್ಟು ಬಂದೆನೆಂದು ಪೇಳ್ವುದುಂ (ಪಂಚತಂ. ೩೦೫-೧೫). **ಕೊಳ್ಪಡು**: ಕೊಳ್ಪಟ್ಟು ಪುಯ್ಯಲಿಡುವರುಮಂ . . . ಕಂಡೊಡಿವರ ಕರ್ಮದ ಫಲಮೆಂಬರ್ (ಧರ್ಮಾಮೃ. ೯-೫೭); ತನ್ನಂ ಕೊಳ್ಪ [ಪಾಠಾಂ. ಕೋಟ್ಪ]ಟ್ಟುದಂ ಡಾಮರಮೆನ್ನದೆಯುಂ (ಜೀವಸಂ. ೭೩-೨೫ ವ). **ಕೋಳ್ಪಡು**: ಅಂ ಬತ್ತಲೆ ಸವಣರಿಂದಂ ಕೋಳ್ಪಟ್ಟಂ (ವಡ್ಡಾರಾ. ೨೩-೫); ಎಳೆಯಂ ಕೋಳ್ಪಟ್ಟುಂ (ಪಂಪಭಾ. ೧೨-೧೭೭); ವಿಶಾಖನಂದಂ ರಾಜ್ಯಮಂ ಕೋಳ್ಪಟ್ಟು (ಚಾವುಂಪು. II. ೬೩-೭); ಪೆಂಡತಿ ಕೋಳ್ಪಟ್ಟು ಮಗುಟ್ ಪುಗುವೆನೆ ಪೊಬಲಂ (ಅನಂಪು. ೧೧-೭೦).

[ಕೋಳ್ + ಪಡು₁]

**ಕೋಳ್ವಾಯ್** (ನಾ). ೧. ಸೂರೆಗಾರರ ಮುಂಭಾಗ; ಆಕ್ರಮಣ ಮಾಡುವ ಪ್ರದೇಶದ ಎದುರುಭಾಗ: ವಿರಾಟಂ ತುಜುವಿನ ಕೋಳ್ವಾಯನೆಯ್ದಿ ಮಿತ್ತುವಿನ ಬಾಯನೆಯ್ದಿದಂತೆ ತಲ್ಲಳಿಸಿಯುಂ (ಬಂಹರಿ. ೧೧-೪೦ ವ). ೨. ಕಾಲುವೆಗೆ ನೀರನ್ನು ಬಿಡುವ ಅಣೆಕಟ್ಟಿನ ಬಾಗಿಲಿನ ಪ್ರದೇಶ; ಕಾಲುವೆಯ ಮೂಲಸ್ಥಾನದ ಬಾಯಿ: ಕೋಳ್ವಾಯಿನಲ್ಲಿಯೇ ನೀರಿಲ್ಲದಿದ್ದರೆ ಮಡವಾಯಲ್ಲಿ ಎಲ್ಲಿ ಬರುತ್ತೆ (ರೂಢಿ). 'ಮಡವಾಯ್' ಪರಾ.

[ಕೋಳ್ + ಬಾಯ್₂]

**ಕೋಳ್ವಿಡಿ**, ಕೋಳವಿಡಿ, ಕೋಳುವಿಡಿ, ಕೋಳ್ಪಿಡಿ (ಕ್ರಿ). ಕೈಸೆರೆ ಹಿಡಿ; ಬಲಾತ್ಕಾರದಿಂದ ಹಿಡಿ; ಬಂದಿಯಾಗಿ ಮಾಡು; ವಶಪಡಿಸು: ನಿಲ್ಲದೆ ರತಿಯ ಕೋಳ್ವಿಡಿದಾತನ ಪಾಣಿಪಲ್ಲವಗಳ ಕಿತ್ತುಬಿಸುಟ ಪುಲ್ಲಶರಗೆ ಮೆಚ್ಚಿ (ಮೋಹತ. ೧೨-೧೫); ತರಿಸಿ ಕೋಳ್ವಿಡಿದ ಹಯಮುಮಂ ಸುವೇಗನ ವಶದೊಳಿರಿಸಿ (ಜೈಮಿಭಾ. ೪-೬೬); ಮಣಿತದಿಂ ಮೆಜೆಸಿವಳ ರಣಿತವ ರಚಿಪಳ ಕುಣಿತದಿಂ ಮನವ ಕೋಳ್ವಿಡಿವ ಅಣಿಯರ ಗಾತಿಯ ಆಳು ರಂಗಾಯೆಂಬಳೆಣೆಕೊಣೆಯೆನಗೆಂಪಾದಪುದೊ (ಶತಸಾಂ. ೩೨-೬೮). **ಕೋಳವಿಡಿ**: ಏಳು ವ್ಯಸನಂಗಳೆನ್ನನೆ ಕೋಳವಿಡಿದೊಡನೆ ಕಾಳು ಸರ್ಪಗಳಂತೆ ಕಚ್ಚಿ ಕೀಳುವುವು (ಕೈಕವ. ೧೬-೫). **ಕೋಳುವಿಡಿ**: ವಾರಸತಿ ತನಗೊಲಿದ ಮಿಂಡ ಜಂಗಮಕೆ ಪೇಳೆ ಕೇಳುತಂ ಘೋರ ನೆಯ್ತಂದು ಅಸುರರಿಪು ಗುರುಪುತ್ರನಿದ್ದಿರವ ಆಲಿಸುತ ಕಾಣದೆ ಕೃತಾಂತನ ಕೋಳುವಿಡಿವೆನೆನುತ್ತ (ನಿಭಾಗ. ೧೦-೪೧-೧೮); ಇನಿವಿಲ್ಲನರ್ಥಾಂಗಿಯ ಕೋಳುವಿಡಿದ ಭೂವನಿತೆಯ ವರನೋಲಗದಿ (ಮೋಹತ. ೧೧-೩); ತಜ್ಜನವಿಯಂ ಕೋಳುವಿಡಿದೆನಿತು ತೆಗೆದನಿ ತಂಬರಂ ಬರಲು (ಲಶಿಚಂ. ೩೨-೫). **ಕೋಳ್ಪಿಡಿ**: ವಿಟಾಘದ ಚಿತ್ತವನು ಕೋಳ್ಪಿಡಿದು (ಅಕ್ರೂಚ. ೬-೫೮).

[ಕೋಳ್ + ಪಿಡಿ₁]

**ಕೋಳ್ಪೋಗು**, ಕೊಳ್ಪೋಗು, ಕೋಳುಪೋಗು, ಕೋಳುವೋಗು, ಕೋಳುಹೋಗು, ಕೋಳ್ಪೋಗು (ಕ್ರಿ). ೧. ಸೂರೆಹೋಗು; ಲೂಟಿಯಾಗು; ಸುಲಿಗೆಹೊಂದು: ಮಾನಿನಿಯ ಸುರತ ರತ್ನನಿಧಾನಂ ಚಾತುರ್ಯದೀಪವರ್ತಿನಿಯಿನದೆಂತಾನುಂ ಕೋಳ್ಪೋಯ್ತು (ಜಗವಿ. ೧೦-೧೪೨); ದುರ್ಗಂಗಳಿರದೆ ಕೋಳ್ಪೋದುವು (ಚಿಬಪು. ೪೨-೪೪); ಕಾಲನಿರ್ವಾಹಕನಾದ ನಾರಾಯಣನೇ ಎನ್ನ ಪ್ರಾಣಾಭಿಮಾನಗಳೊಂದುಂ ಕೋಳ್ಪೋಗದಂತೆ ಪರಿಪಾಲನೆಗೆಯ್ದನು (ಭಾರಶಾ೯. ೧೪-೯೦). ೨. ಸೆರೆ ಸಿಕ್ಕು; ವಶವಾಗು; ಅಧೀನವಾಗು: ತಳ್ವದೆ ತವಕಿಪ ರಾಹುಗೆ ಬಳ್ವಳವಡೆದಿರ್ದ ತಾರೆ ಮುಸುಳ್ದಿರೆ ಚಂದ್ರಂ ಕೋ[ಪಾಠಾಂ. ಕೇ]ಳ್ಪೋದನೆಂದೊಡಿಳೆಯೊಳ್ ಕೇಳ್ವರ್ ಮುರುಳಲ್ತೆ ಚಂದ್ರತಾರಾ ಬಲಮಂ (ಧರ್ಮಸಾ. ೫-೮೨). **ಕೊಳ್ಪೋಗು**: ೨. ಮುನಿದತ್ತ ಮತ್ತೆ ಕೊಳ್ಪೋಗದ ವೈರಿದುರ್ಗ (ಎಕ. VI, ಚಿಕ್ಕಮ. ೧೬೦-೫೦; 1103); ಎನಿತೊಳವು ವಿದ್ಯೆ ಕೇಳೆನ್ನನಿತುಂ ಖಚರರ್ಗಮುಂಟು ಕೊಳ್ಪೋಗವು ಕಾಮಿನಿಯರ್ಗಲ್ಲದೆ ಜಗದೊಳ್ (ಧರ್ಮಾಮೃ. ೮-೧೧೮). **ಕೋಳುಪೋಗು**: ೨. ಕೇಳರಸ ಜೀವಿಗಳು ಸಂಸೃತಿ ಕೋಳದೊಳಗುರೆ ಸಿಲುಕಿ ಮುರುಳಿಗೆ ಕೋಳುಪೋಗುವರೈಸೆ ಸುಖವಿನಿತಿಲ್ಲವರಸಿದೊಡೆ (ತಿಮ್ಮಸ್ತ್ರೀ. ೧-೨೨). **ಕೋಳುವೋಗು**: ೧. ನಳ ನಹುಷ ಭರತ ನೃಪಾಲ ಪಾರಂಪರೆಯಲುದಿಸಿದ ಸೋಮವಂಶದಲಿ ಕೋಳುವೋದುದೆ ಕೀರ್ತಿ (ಕುಮ್ಯಾಅ. ೧೯-೫೭). ೨. ಬ್ರಹ್ಮನಾಗಿಳೆಗೆ ಪಂಜರವಾದ ವಿಷ್ಣುವಾಗಿಳೆಗೆ ಕೊಜೆಕೊಳಾದ ರುದ್ರನಾಗಿಳೆಗೆ ತಾ ಕೋಳುವೋದ [ಪಾಠಾಂ. ಕೋಳಾದ ಕೋಳೋದ, ಕೋಳ್ಪಾದ, ಕೋಲಾದ] (ಅವಚಂ. ೫-೧೫); ಎತ್ತಣ ಕಾಕುಮೂಳಗೆ ಕೋಳುವೋ[ಪಾಠಾಂ. ಹೋ]ದೆನೊ ಕಾಮನೆಂಬವಗೆ (ಕುಮ್ಯಾಅ. ೮-೨೧); ಕೇಳಿ ವೈರೋಚನಿಯ ಗೋಪುರಪಾಲಕತ್ವದ ಲೀಲೆ ತನ್ನದು ಕೋಳುವೋದೆನು ಭಕ್ತರೊಳು ತಾನೆಂದನಸುರಾರಿ (ನಿಭಾಗ. ೮-೧೯-೩೪). ೩. ಬಲಿಯಾಗು; ತುತ್ತಾಗು: ಲಕ್ಷ್ಮಣನೀಗಳೆ ಉಚಿದು ಪೋಪಿನಂ ಕಾಡಿಂಗೆ ಕೋಳುವೋದೆಂ (ರಾಮಾಶ್ವ. ೪೧-೨೯). **ಕೋಳುಹೋಗು**: ೧. ಕೋಟೆ ಕೋಳುಹೋಯಿತ್ತು (ಮೋಳಮಾ. ೨೬೩-೭೮೪); ನಾವಂಜೆವಳುಪಿದ ಬಳಿಕ ಪರಸತಿಗೆ ಕೋಳುಹೋಗಲಿ ಕೀರ್ತಿಬಿಡೆ ನೀ ಬಾಲಕಿಯನು (ತೊರರಾ. ೩-೧೦-೨೩); ಸೂಳೆಯಲಿ ಮಗ ಹುಟ್ಟೆ ಆಳುವನು ಮುನಿಪುರವ ಕಾಳಗವಿಲ್ಲದವ ಮಡಿಯೆ ಪುರವೆಲ್ಲ ಕೋಳುಹೋದೀತು (ಸರ್ವಜ್ಞ. ೧೦೭೬). ೨. ತ್ರಿಭುವನಗಿರಿಯರಸು ತ್ರೈಲೋಕಪಟ್ಟಣಕ್ಕೆ ದಾಳಿಯನಿಕ್ಕಿದರು. ಏಳು ಭೂದುರ್ಗಂಗಳು ಕೋಳುಹೋದುವು (ಸರ್ವವ. ೧೫೩-೭೩೦); ಊಳಿಗದವರನಂಜಿಸ ದೊಯ್ದು ಬಗೆಗೆನ್ನ ಕೇಳದೆಳಸಿ ಮಾತೆಯರಿಗೆ ಆಲೋಚಿಸದೆ ಹೊಜತೆಗೆದ ಬಗೆಗೆ ಚಿತ್ತ ಕೋಳುಹೋಗದೆ ತನಗೆಂದ (ಭರಚ. ೭೧-೬೯); ಸಲೆಯೆನ್ನ ಮನವೀತಗೆ ಕೋಳುಹೋದುದು (ಕಂನವಿ. ೯-೧೦೨).

೪. ನಾಶವಾಗು; ಹಾಳಾಗು; ಅಧೋಗತಿಯನ್ನು ಹೊಂದು; ವ್ಯರ್ಥವಾಗು: ಕೇಳಿದ್ಯೆಯೆಲೆಯಣ್ಣ ಪರವೆಣ್ಣೊಳಿಗದಲಿಂದ್ರಾದಿ ದೇವರು ಕೋಳುಹೋ[ಪಾಠಾಂ. ಪೋ]ದರು (ತೊರರಾ. ೬-೨೬-೬೬); ಹೋಳಿಗಿಲ್ಲದ ಹಬ್ಬ ಮೇಳವಿಲ್ಲದ ಕೂಟ ಆಳಿಲ್ಲದವನ ದೊರೆತನವು ಇವು ಮೂರು ಕೋಳುಹೋದಂತೆ (ಸರ್ವಜ್ಞ. ೧೪೮೬). **ಕೋಳ್ಪೋಗು**: ೧. ದಿವ್ಯಮಹಾನಿಧಾನಮಿದಿರೊಳ್ ಕೋಳ್ಪೋದುದೋ (ಸುಕುಮಾ. ೧೦-೯೩); ಪಲವು ಕಾಲದಿನೀಕ್ಷಿಸಲಾದುದಿಂತು ಕೋಳ್ಪೋಕುಮೆ ಧರ್ಮ ಮೆಂದೊಸೆದು (ಎಇ. XVI, ೬೧-೨೫; 1081). ೨. ಕೋಳ್ಪೋಗದ ಮಂಡಲಂಗಳನೆ ಕೊಂಡು (ಪಂಪಭಾ. ೧-೫೦); ಕಲ್ಪಾರ್ಪರವಗೋರ್ಗರೆ ನಿಬಂಧನ ಟೀಕಾಕಾರಂಗಲ್ಲದೆ ಪೆಱಂಗೆ ಕೋಳ್ಪೋದಪುದೇ (ಶಾಂತಿಪು. ೧೦-೧೮೨); ಜೋಳಂ ಮುಕ್ತಿರೆ ಪನ್ನೆರಬ್ಬಿರಿಸಕಂ ಕೋಳ್ಪೋಯ್ತು ತಾಂ ಪೋದಂ (ಎಕ. V, ಬೇಲೂರು. ೧೭೫-೮; 1186). [ಕೋಳ್ + ಪೋಗು₁]

**ಕೋಱಡಿ** (ನಾ). ಅಗಳಿ; ಕೊರಡು (?): ಪುರದ ಬಾಹೆಯ ಕೋಱಡಿಯ ಸಂವರಣೆ ತೆಗೆಯಲಿ ನಿರ್ಭಯದಿ ಸಂಚರಿಸುವುದು ನಂದನದೊಳಗೆ ನಿಮ್ಮಡಿಯ ರಾಣಿಯರು (ಕುವ್ಯಾಅ. ೧೨-೫೬).

[< ಕೊಱಡು]

**ಕೋಱಯತನ** (ನಾ). (?): ಕೂಡಿದೆರಡು ಬಗೆವವರಲ್ಲ ಕಂಡವರ ಕೊಂಬುವರಲ್ಲ ಬಾಯ್ಬಡಿಕರಲ್ಲ ಸಲೆ ತೋಡುಗೂಳಂಗಾಸೆಬಟ್ಟು ನೆರೆಹೊರೆಗಳಿಂನಿಡಿಸಿಕೊಳುತ ವ್ಯಕ್ಕಳಾ ಕೂಡೆ ಸುಂಠಿಸುವರಲ್ಲಳುಕದಿರ್ಪವರಲ್ಲ ಗಾಡಿಕಕ್ಕದಿ ಕೆಲಬಲದ ಗೃಹಸ್ಥರ ಕಯ್ಯಪಾಡಳಿದು ಬಯಸಿಕೊಂಬವರಲ್ಲ ಕೋಱಯತನಕಿಡಲ್ಲವೆಂದು ನಂಬು (ಲಿಂಗಪು. ೨-೧೮,೧೯). [? + -ತನ]

**ಕೋಱಿ**₁, ಕೋರಿ₁ (ನಾ). ೧. ಹಳೆಯ ಬಟ್ಟೆಯ ಚೂರು; ಹರಕು; ಚಿಂದಿ. ೨. ಹರಕು ಕಂಬಳಿ; ಕಂಬಳಿಯ ಚೂರು. ೧, ೨: ಊರೂರು ಕೇರಿಕೇರಿಯೊಳು ಮನೆಮನೆಗೆ ಜೀರಿಗೆ ಮೆಂತೆಯನಿತ್ತು ಕೋಱಿಗಳನೆ ಕೊಂಡು (ಬಜ್ಜರಾ. ೯-೫೯). **ಕೋರಿ**₁: ೧. ಇಂತು ಮಗನಿಗೆ ಬುದ್ಧಿಯಂ ಪೇಳುತ್ತ ಕೋರಿಯಂ ನಿಂತುಟ್ಟು (ಅರ್ಚಾವಿ ೩೧-೩೬); ಮುಸುಡುಮಂ ಕೋರಿಯಿಂದೊರಸಿಕೊಂಡವಸರದೆ (ಮಲ್ಲಚ. ೨-೨೧); ಕೂಲಿಮಾಡಿದರೇನು ಕೋರಿಹೊತ್ತರೇನು ನಮಗೆ ನಮ್ಮರಾಯ ಒಡವೆ (ಹಳ್ಳಿಬಾ. ೬೪); ಅವುಗಳ ಮೈಯನ್ನು . . . ಆಮೇಲೆ ಕೋರಿಯಿಂದ ತಿಕ್ಕಿ ಒರಸಬೇಕು (ಕೃಷಿಪ್ರ. ೧೯). ೨. ಅಷ್ಟದಿಕ್ಪಾಲಕರ ಅಷ್ಟದಾರೆಗಳ್ಮಾಡಿ ದುಷ್ಟ ಮಲ್ಲಾಸುರನ ಬೆನ್ನೆಲು ದಂಡಿಗೆಯ ಮಾಡಿ ಬಿರುದವನ ಕುಕ್ಷಿ ಹಸುಬೆಯಮಾಡಿ ಕೋರಿಯನು ವರಶ್ರೇಷ್ಠ ಗದ್ದುಗೆಯಮಾಡಿ (ಶರಲೀ. ೧೮೯-೬); ಬಳಿಕ ಹತ್ತಿಯ ಗೊಟ್ಟೆ, ಬಿಳಿಯ ಕಪ್ಪಡ, ಕಂಬಳಿಯ ಕೋರಿ, ಬಿಳಿಯ ಸಾಸಿವೆ . . . ಇವಂ ಧೂಪವಿಕ್ಕುವುದು (ಬಾಲಚಿ. ೧೩೩-೧೩); ಹಿಂಬಡದವರೆಗೆ ಜೋತುಬಿದ್ದ ಉದ್ದನ್ನ ಕೋರಿಯ ಅಂಗಿ (ಗಂಗಾಸಾ. ೩೦). ೩. ಕ್ಷುಲ್ಲಕವಾದುದು; ಪ್ರಯೋಜನವಿಲ್ಲದ ವಸ್ತು: ಲೆಕ್ಕಕ್ಕೆ ನೂರು ಕೋರಿಯಾದರೆ ಪ್ರಯೋಜನವಿಲ್ಲ ಗುಣದಲ್ಲಿ ಕೋಹಿನೂರ್ ರತ್ನಗಳಾಗಬೇಕು (ಮಾರ್ಗದ. ೪೮).

**ಕೋರಿಯಹುಳ** = ಕಂಬಳಿಹುಳು: ಕೋರಿಯಹುಳ ಹಾಗೂ ಮಿಟುಹುಳಗಳು ಪ್ರೌಢಾವಸ್ಥೆಯಲ್ಲಿ ಪತಂಗಗಳಾಗಿ ಹಾರಾಡುವವೆಂದರೆ ಯಾರಿಗೆ ತಾನೇ ಆಶ್ಚರ್ಯವಾಗಲಿಕ್ಕಿಲ್ಲ (ಕೀಟಪ. ೬). **ಕೋಱಿಯ ಕಾಯಕ** = ಬಟ್ಟೆಯನ್ನು ಅಥವಾ ಕಂಬಳಿಯನ್ನು ಹೊಲಿಯುವ ವೃತ್ತಿ, —ಉದ್ಯೋಗ: ಸವನೂಲ ಕಾಯಕದ ದೇಪಣ್ಣ ಸಾಬಾಧೆಯವರು ಗಾಣಿಗದೇವ ಕೋಱಿಯಾ ಕಾಯಕದ ಗವಱಿ ಬಸವಣ್ಣ ಕೌಲಿಗೆಯ ಜಾನಪ್ಪ (ಲಕಿಚಂ. ೩೮-೧೭೨). [< ಕೂಱಿ]

**ಕೋಱಿ**₂ 'ಕೋಱು₂' ನೋ.

**ಕೋಱಿಕೆ**, ಕೋರಿಕೆ (ನಾ). ಅಪೇಕ್ಷೆ; ಬಯಕೆ; ಪ್ರಾರ್ಥನೆ; ಬೇಡಿಕೆ: (ಕಿ). **ಕೋರಿಕೆ**: ಕೋರಿಕೆ ನಿಷ್ಕಾಮನಾದೆನಗೇನು ಕೋರಿಕೆಯಿಲ್ಲ (ಗಗತಾ. ೨-೨೮); ಪೂರೈಸು ಕೊರತೆಯನ್ನು ಕರುಣಿಸೀ ಕೋರಿಕೆಯನು (ಪಯಣ ೬೦-೧೮); ಮಗು, ಸುಧಾಕರ ನನ್ನ ಅಂತಿಮ ಕೋರಿಕೆಯನ್ನು ನೆರವೇರಿಸಿ ಕೊಡುವೆಯಾ (ದೇಶಧು. ೨).

[ಕೋಱು₁ + -ಇಕೆ]

**ಕೋಱಿಡು** (ಕ್ರಿ): ಕೋರಿಕೆಯನ್ನು ಮುಂದಿಡು; ಬಯಕೆಯನ್ನು ಸೂಚಿಸು; ಅಭಿಪ್ರಾಯವನ್ನು ಮಂಡಿಸು: ಕೈರಗುಳಿಗೆ ನೊರೆಯದಕೆ ಮುತ್ತಿನ ಸುಣ್ಣ ನೇರದ ಚವರಿ ಮುಂತಾದ ಭೂರಿಯೊಳೆನಗಿದು ತನಗಿದೆಂದೆಲ್ಲರು ಕೋಱಿಟ್ಟು ವ್ರತವ ಮಾಡಿದರು (ಭರಚ. ೨೧-೩೧).

[ಕೋಱು₁ + ಇಡು₁]

**ಕೋಱಿಸು** (ಕ್ರಿ). ಆಸೆ ಹುಟ್ಟಿಸು; ಬಯಕೆಯನ್ನುಂಟುಮಾಡು; ಇಚ್ಛಿಸುವಂತೆ ಮಾಡು: ನವಯೌವನೋನ್ಮತ್ತ ಸಂಪತ್ತಿಯಂ ಪಡೆದು ಕೋಱಿಸಿಕೊಂಡಳಾ ಸೋಮೆ ಸದ್ಗುಣಗಣಾಭಿರಾಮೆ (ಸಮ್ಯಕೌ. ೬-೯); ವಾರಾಣಸಿಯನಾಳ್ವ ಕಂಪರಾಜನ ಸುಕುಮಾರಿ ಸುಲೋಚನಾದೇವಿ ಕೋಱಿಸಿಕೊಂಬ ಪೆಣ್ (ಭರಚ. ೫೫-೧೪).

[ಕೋಱು₁ + -ಇಸು₃]

**ಕೋಱು**₁, ಕೋರು₁ (ಕ್ರಿ). ಕೇಳಿಕೊಳ್ಳು; ಬೇಡು; ಹಾರೈಸು; ಪ್ರಾರ್ಥಿಸು: ಧೃತರಾಷ್ಟ್ರಾತ್ಮಜ ಪಾಂಡುರಾಜಸುತರಂ ಮುನ್ನಂ ಕೊಲಲ್ಕೋಱಿದ್ದೈ (ಗದಾಯು. ೬-೪೦); ಹರಿಕಾನ್ತೆಯುಮಾಕಾನ್ತೆಯ ದೊರೆಗೆವರಲು ಕೋಱಳೆಂಬ ನಿಮ್ಮದದ ಗುಣೋತ್ಕರಮನೊಳಕೊಣ್ಡು (ಎಕ.VI, ಮೂಡಗೆ. ೨೨-೨೪; 1129); ಸೇರಿದೆ ನಿನ್ನನು ಕೋಱಿದ ವರಗಳ ಬೀರುವೆನೆಂದು ವಿಚಾರ ಬಿಡಿಸೊ ಎನ್ನ (ಪುರಂದ. ೧-೧೬೬-೧). **ಕೋರು**₁: ಕೋರಿದಿಷ್ಟವನೀವ ನೀನೇ ದೂರವಾದೊಡೆ (ಸೀತಾಚ. ೨-೧೯); ಕೌಶಿಕ ಧಾರಿಣೀಶನ ವಂಚಿಸುವುದಕೆ ಕೋರಿ ಮನದೊಳಗೆ (ಹಮುಚ. ೨೧); ಪರರೊಡವೆ ಬಯಸುವರು ಪರವಧುವ ಕೋರುವರು ಲೋಕಕಂಟಕರಿವರು (ಕವಿಸೋ. ೮೨-೬); ನಾವು ಕೋರದೆ ಸುಖವಾಗಲಿ ದುಃಖವಾಗಲಿ ಬರುವದು (ಮುಂಬಯಿ. ೪-೩೩೭).

[ದೇ. ‖ ತಮಿ. ಮಲ. ತೆಲು. ಕೋರು]

**ಕೋಱು**₂, ಕೋರಿ₂, ಕೋರು₂, ಕೋಱಿ₂ (ನಾ). ೧. ಬೆಳೆದ ಬೆಳೆಯಲ್ಲಿ ಭೂಮಿಯ ಯಜಮಾನರಿಗೆ ಮತ್ತು ರಾಜನಿಗೆ ಸಲ್ಲುವ ಧಾನ್ಯದ ಅಂಶ, —ಪಾಲು; ವಾರಪಾಲು: ಕೋಱಿನ ಹೊಲ ಕಮ್ಮತ . . . ಕೂಲಿಗೈಮೆ (ಅಮುಸಾಂ. ೩-೧೨೧); ಬೆಳೆದ ದವಸಮಂ ರಾಜಪಾಲೆಂದು ಕೋಱನಿಕ್ಕಿ ತನಗೆ ಉಳಿದ ದವಸದಲ್ಲಿ ನಿರ್ವಂಚನೆಯಿಂದ ಜಂಗಮಾರ್ಚನೆಯ ಮಾಡಿ (ಭೈರಸೂ. ೩೫೮). **ಕೋರಿ**₂. 'ಕೋರಿಹೊಲ' ಪರಾ. **ಕೋರು**₂: ಗೆಯಲು ಕೋರನಿಕ್ಕಿ ಸುಖದಲ್ಲಿ ಅನುಭವಿಸುವಿರಿ (ಎಕ. X, ಶ್ರೀನಿವಾ. ೧-೧೯; 1569); ಕೋರಿನ ದವಸದಲ್ಲಿ ಸೂಲಿಗೆ ಗುಡ್ಡೆ ಆಯ ಎಂಬವಾಗಿ ರುಸುಂ ಮಾಡಿಕೊಟ್ಟು (ಮಹಾವಂ. II, ೧೧೯); ಒಂದು ಹೊಲವನ್ನು ಕೋರಿನಿಂದ ಅವನಿಗೆ ಕೊಟ್ಟಿದ್ದರು (ಮನೆಚಿ. ೧೧೯). ೨. ವಾರ ಸಾಗುವಳಿ; ಬೆಳೆದ ಬೆಳೆಯಲ್ಲಿ ಸಾಗುವಳಿದಾರನಿಗೆ ಇಷ್ಟು, ಭೂಮಿಯ ಮಾಲೀಕನಿಗೆ ಇಷ್ಟು ಎಂಬ ಒಪ್ಪಂದದ ಮೇಲೆ ಮಾಡುವ ಸಾಗುವಳಿ, —ಕೃಷಿ: ಕೋರಿಗೆ ಕೊಡುವುದಕ್ಕೆ ಹೊಲ ಬೇಕಂತೆ (ಜೀವಮ. ೧೦); ಆ ಹೊಲಗಳು ದೊಡ್ಡವು. ಅವುಗಳನ್ನು ಕೋರಿಗೆಂದು ಕೊಟ್ಟಿರುವರು (ಚಂದ್ರತಾ. ೩೨). ೩. ಧಾನ್ಯದ ಭಿಕ್ಷೆ. 'ಕೋರಾನ್ನ' ಪರಾ.

**ಕೋಱು$_2$** ೪. ಕೋರಾನ್ನದಿಂದ ಜೀವಿಸುವ ವೃತ್ತಿ,—ಕಾಯಕ: ಸತ್ಯದಾಗರವೆನಿಪ ಕಲ್ಯಾಣಪುರದಿ ್ವಿರಕ್ತರಡಿದಾವರೆಯ ಭೃತ್ಯ ಕೋಱಿಯ ಸಂಗನು (ಚೋರಬ. ೪-೨೦).

**ಕೋಱಿಯಭಕ್ತ** = ಕೋರಾನ್ನದಿಂದ ಜೀವನ ನಡೆಸುವ ಭಕ್ತ: ಶ್ರೀರಂಗಪಟ್ಟಣದೊಳೊಬ್ಬಯ್ಯನಂ ದೊರೆಗಳಾಗ್ರಹಿಸಿ ಶೂಲದೊಳು ಹಾಯ್ಕಿಸಲಾಗಿಯೊರ್ವ ಕೋಱಿಯ ಭಕ್ತನು ನೆಱೆ ಕಂಡು ಶಿವನ ಲಾಂಛನವೆಂದು ಮಱುಗುತ್ತ (ಗುರುಚಾ. ೧೪-೯). **ಕೋರುಪಾಲು** = ಕೋರಿನಲ್ಲಿ ಪಾಲು: ಕೋರಪಾಲಿನ ಮಾತು ಮಾಡಿ ಕೊಟ್ಟೆನು ನಿನಗೆ (ನಾದಲೀ. ೧೩-೧೧). [ದೇ ‖ ತಮಿ. ಮಲ. ಕೂಱು ; ತೆಲು. ಕೋರು]

**ಕೋಱೆ**, ಕೋರೆ$_2$ (ನಾ). ೧. ಹರಿತವಾಗಿರುವಿಕೆ; ಮೊನಚು; ತೀಕ್ಷ್ಣತೆ: ಮನದೊಳಾನಂದಿಸಿದಳು ಕರ್ನಾಟದ ಕೊನಬುತನದ ಕೋಱೆಯನು (ಕುರಾಸಾಂ. ೪೧-೯೮). ೨. ಆನೆಯ ಹಲ್ಲು,—ದಂತ: ಆಖುವಾಹನದಿ ಹಾಸ್ಯಂ ಮುಱಿದ ಕೋಱೆಯಿಂ ಬೀಭತ್ಸರಸಮೆಸೆವ ಗಣಪ ಮಾಡೀ ಕೃತಿಗವಿಘ್ನತೆಯನು (ನಂದಿಮಾ. ೧-೧೨). ೩. ಹಂದಿ, ನಾಯಿ, ಹಾವು ಮುಂತಾದ ಮಾಂಸಾಹಾರಿ ಪ್ರಾಣಿಗಳ ಮತ್ತು ರಾಕ್ಷಸರ (ಕಡೆ ದವಡೆಯ) ಉದ್ದವಾದ ಮೊನಚಾದ ಹಲ್ಲು: ಕೋಱೆಯ ಮಸೆವುತ ಕೆಸಱು ಕೊಂಡರು ಬಿಡೆ (ಪುರಂದ. ೧-೨೩-೧). ೪. (ಗು). ಹರಿತವಾದ; ಮೊನಚಾದ; ತೀಕ್ಷ್ಣವಾದ. 'ಕೋಱೆದಾಡೆ' ಪರಾ. **ಕೋರೆ$_2$**: ೨. ಆಫ್ರಿಕ ಖಂಡದೊಳಗಿನ ಆನೆಗಳ ಕೋರೆಗಳು ಏಶಿಯಖಂಡದೊಳಗಿನ ಆನೆಗಳ ಕೋರೆಗಳಿಗಿಂತ ಗಡುತರವೂ ಉದ್ದವೂ ಇರುವುವು (ಮುಂಬಯಿ. ೪-೨೧). ೩. ಆದಕ್ಕೆ ಆದಿವರಾಹನಂತೆ ಕ್ರೂರವಾದ ಕೋರೆಗಳಿದ್ದುವು (ಮಣಿಸ. ೯೦). 'ಕೋರೆಮೀಸೆ' ಪರಾ. [< ಕೊಱೆ$_1$]

**ಕೋಱೆದಾಡೆ**, ಕೋರೆದಾಡೆ (ನಾ). = ಕೋಱೆ ೩: ಕೋಱೆ ದಾಡೆಯ ನಿಱಿಯ ದೇಹದ ವೀರದಾನವರಸುವ ನಿಮಿಷಕೆ ಕಾಱಿದರು (ಕುವ್ಯಾಸ. ಓರಿಇ. ೧೧-೮೨); ಇಳೆಯ ಕದ್ದಸುರನ ಕೋಱೆದಾಡೆಲಿ ಕೊಂದ (ಪುರಂದ. ೨-೩೬-೧); ಕಾರೊಡಲ ಕೆಮ್ಮೀಸೆಗಳ ಕೋಱೆದಾಡೆಗಳ . . . ಘೋರ ರಾಕ್ಷಸರವನ ಕೂಡೆ ಬರುತಿರ್ಪುದಂ ದೂರದೊಳ್ ಕಂಡು (ಚಬಪು. ೪೨-೪೫); ಕುಪಿತವದನದ ಕೋಱೆದಾಡೆಗಳ ಕಾರೊಡಲ ವಿಪರೀತ ವಿಕ್ರಮ ಭಯಂಕರದ ವೀರಭಟರ್ (ಜೈಮಿಭಾ. ೨೬-೨೩). **ಕೋರೆದಾಡೆ**: ಭಾಳನೇತ್ರದ ರಕ್ತಗಂಗಳ ಮೇಳವೆನಿಸುವ ಕೋರೆದಾಡೆಯ . . . ಮಾಕಾಳಿ (ಶಂಕದಾ. ೧೪-೬೮); ಪೌಲೋಮರೂ ನಿವಾತಕವಚರೂ . . . ಕ್ರೂರವಾದ ಕೋರೆದಾಡೆಗಳುಳ್ಳವರಾಗಿಯೂ ಭಯಂಕರರಾಗಿಯೂ . . . ಇರುವರು (ಕೃವಾಉ. ೧೬೬); ಒರ್ಪಂದಿ ಹೂಂಕರಿಸಿ ಕೋರೆದಾಡೆಯ ಮಸೆದು ನುಗ್ಗಿ ಬಂದುದು ಕೊಲಲ್ (ಚಂದ್ರಸ. ೨೯); 'ಉಗ್ರ' ಪ್ರತಿಮೆಗಳು ತೀಕ್ಷ್ಣವಾದ ಮತ್ತು ಉದ್ದವಾದ ಉಗುರು ಮತ್ತು ಕೋರೆದಾಡೆಗಳಿಂದ ಕೂಡಿರುತ್ತವೆ (ಭಾರದ. ೫೧೩). [ಕೋಱೆ + ದಾಡೆ]

**ಕೋಱೆಬಾಯ್** (ನಾ). ಕೋರೆಹಲ್ಲಿನಿಂದ ಕೂಡಿದ ಬಾಯಿ; ಮೊನಚಾದ ದಾಡೆಯಿಂದ ಕೂಡಿದ ಬಾಯಿ: ಮಣ್ಣು ಕೆದಱಿ ಕೋಱೆಬಾಯ ತೆಱದು (ಪುರಂದ. ೧-೧೮೫-೨). [ಕೋಱೆ + ಬಾಯ್]

**ಕೋಱೆವಲ್**, ಕೋರೆಹಲ್ಲು (ನಾ). = ಕೋಱೆ$_2$: "ದ್ರಂಷ್ಟ್ರಾ = ಕೋಱೆವಲ್" (ಕಾಶಕ್ಕ. ೨೮೦). **ಕೋರೆಹಲ್ಲು**: ಸಹಸ್ರದಂಷ್ಟ್ರಃ, ಪಾಠೀನಃ – ೨ ಸಾವಿರ ಕೋರೆಹಲ್ಲುಗಳುಳ್ಳ ಮೀನಿನ ಹೆಸರುಗಳು (ಸಿದ್ಧಾಂಶಿ. ೬೩); ಹುಲಿಯ . . . ಕೋರೆಹಲ್ಲುಗಳು ಬಲು ಭಯಂಕರವಾಗಿ ತೋರುವವು (ಮುಂಬಯಿ. ೪-೩೫). [ಕೋಱೆ + ಪಲ್]

**ಕೋೞ್$_1$** (ನಾ). ಸಮಾಸದಲ್ಲಿ 'ಕೋಡು' ಎಂಬುದಕ್ಕೆ ಬರುವ ಆದೇಶ ರೂಪ. 'ಕೋೞ್ಕುಟ್ಟು' ಪರಾ. [< ಕೋಡು]

**ಕೋೞ್$_2$** (ನಾ). ಚಳಿ; ಶೈತ್ಯ: ಬಿಱುಬಿಂದಂ ಬೀಸೆ ಗದೆಯ ಗಾಳಿಯ ಕೋೞಿಚ್ಚರಿಸಿದುದು ಭೀಮನಂ ಮೆಯ್ಮಱೆದವನಂ (ಗದಾಯು. ೮-೩೨); ಆ ವಿಳಾಸಿನಿಯರ ವಿಲೋಚನ ಚಂದ್ರಿಕೆಯ ಕೋೞಿಂ ಚಂದ್ರಕಾಂತದ ಕಲ್ಗಳೊಸರ್ತುವು (ಲೀಲಾವ. ೪-೧೮ವ). [< ಕೋಡು$_3$]

**ಕೋೞಿ$_1$**, ಕೋಳಿ$_1$ (ನಾ). ಒಂದು ಬಗೆಯ ಪಕ್ಷಿ; ಹೇಂಟೆ; ಕುಕ್ಕುಟ: "ಕುಕ್ಕುಟಂ ತಾಮ್ರಚೂಡಂ ಪದಾಯುಧಂ ಕೃಕವಾಕು ಕೋೞಿಯುಕ್ಕ್ಯಂ" (ಮಂಗರಾ. ೫೧-೫); ಕಿಡಿಗುಟ್ಟಿದ ತೆಱದಿಂ ಕಡಿಗಡಿಯಾಗಿರೆ ಪೋರ್ವುವೆರಡು ಕೋೞಿಗಳಂ ಕಂಡು (ಶಾಂತಿಪು. ೯-೪೫); ಕುಕ್ಕುಕೂ ಎಂದು ಕೋೞಿ ಕೂಗಿದುದಾಗಳ್ (ಕಾವ್ಯಾವ. ೧೧); ಕೋೞಿಗಳೆರಡಂ ಸಡಗರದಿಂ ಕಾದಿಸುತಿರ್ಪೆಡೆಯಂ ಕಂಡು (ದಶಕು. ೧೧-೪೮). **ಕೋಳಿ$_1$**: ಕೋಳಿ ಕೂಗುವ ಮುನ್ನ ಏಳುವುದು (ಸರ್ವಜ್ಞ. ೨೯೬); ಕೋಳಿಗಳನ್ನು ಸಾಕುವುದು – ಇದು ಬಹಳ ಲಾಭಕರವಾದ ಮತ್ತು ಕಷ್ಟವಿಲ್ಲದ ಉಪಕಸುಬು (ವ್ಯವಮ. ೬೮); ಕೋಳಿ ಕದ್ದೋನಿಗೆ ಸಜ; ತಲೆ ಹೊಡೆದೋನಿಗೆ ಮಜ (ಗಾದೆ); ಕೋಳಿ ಕೇಳಿ ಮೆಣಸು ಅರೆಯುತ್ತಾರೋ (ಗಾದೆ).

[ದೇ. ‖ ತಮಿ. ಮಲ. ಕೋೞಿ ; ತುಳು. ಕೋರಿ ; ಕೊಡ. ಕೋಳಿ; ತೆಲು. ಕೋಡಿ]

**ಕೋೞಿ$_2$** 'ಕೋಡಿ$_1$' ನೋ.

**ಕೋೞಿ$_3$** (ನಾ). ಒಂದು ಜಾತಿಯ ಔಷಧಿ ಗಿಡ: "ವಾನೀರಕಃ – ಮೊದೆ, ವಾಯುಸೋಲಿ, ಕೋೞಿ" (ಓಷಧಿ. ೧೫೧). [?]

**ಕೋೞಿಕುಟುಂಬ** 'ಕೋೞಿಕುಟುಮ' ನೋ.

**ಕೋೞಿಕುಟುಮ**, ಕೋಳಿಕುಟುಮ, ಕೋೞಿಕುಟುಂಬ (ನಾ). ಒಂದು ಬಗೆಯ ಗಿಡ; ಅಗ್ನಿಶಿಖೆ: "ಲಾಂಗಲೀ – ತೆಂಗು, ನಸುಕುನ್ನಿ, ಕೋೞಿಕುಟುಮ" (ಓಷಧಿ ೧೪೩). **ಕೋಳಿಕುಟುಮ**: ಕೋಳಿಕುಟುಮನ ಗೆಡ್ಡೆ, ಚಿಲಕೀರೆಬೇರು – ಇವಿಷ್ಟನು ನೀರಿನಿಂದ ಅರೆದು (ವೈದ್ಯಸಾ. II, ೧೫೩ ಟೀಕೆ). **ಕೋೞಿಕುಟುಂಬ**: "ಕೋೞಿ ಕುಟುಂಬಮೆಂದೆನಲ್ಕಸುರೆ ಪಾಲ್ಗಂಚಿ[ಪಾಠಾಂ. ಕೊಳ್ಳಿಕುಯಿಂಬ ಮಿಂದ ನಕ್ಕು ಸುರಪಾಲಂಜಿ]ಯುಕ್ಕ್ಯಂ" (ಮಂಗರಾ. ೪೦-೩೦). [ಕೋೞಿ$_3$ + ಕುಟುಮ ?]

**ಕೋೞಿವಾದ** (ನಾ). ಹುಂಜಗಳ ಜಗಳ; ಕೋಳಿಕಾಳಗ: ಈಗಳು ಕೋೞಿವಾದಮಂ ನೋಡಿದಪ್ಪೆನೆಂದು ಚಾರಣಋಷಿಯಪೇೞೆ (ಚಾವುಂಪು. ೨೨೪). [ಕೋೞಿ$_1$ + ವಾದ]

**ಕೋೞಿವಾಲ** (ನಾ). ಒಂದು ಔಷಧಿಗಿಡದ ಹೆಸರು: "ಷಟ್ಪದೀ – ಕೋೞಿವಾಲ" (ಓಷಧಿ. ೧೬೩). [ಕೋೞಿ$_3$ + ಬಾಲ$_1$]

**ಕೋೞುರ್** 'ಕೋೞೂರು' ನೋ.

**ಕೋೞೂರು**, ಕೋಳೂರು, ಕೋೞುರ್ (ನಾ). ಒಂದು ಊರಿನ ಹೆಸರು: ಬೀರನೊೞಮ್ಬರಾಜ್ಯಂಗೆಯುತ್ತಿರೆ ಕೋೞೂರ ತುಱುಗೋಳೊಳ್ ಸತ್ತ (ಎಕ. XII, ಶಿರಾ. ೫೯-೨; 920). **ಕೋಳೂರು**: ಕನ್ದೂರು ನಾಡ ರಾಜಧಾನಿ ಕೋಳೂರ ನೆಲೆವೀಡಿನೊಳ್ (ಹೈಆಸಿ. ೧೫-೧೮೨ ; 1058); ಸುರಕುಜದಂತಿರಲೊಪ್ಪುತ್ತಿರುಹುದು ತಾಂ ಬಲ್ಲಕುಂದೆನಾಡದಱೊಳು ವಿಸ್ತರದಿಂ ಪಱ್ತೊಳುಗೊಂಬೆನೆ ವರಸಸ್ಯ ಸಮೃದ್ಧ ಫಳದ ಕೋಳೂರೆಸೆಗುಂ (ಸೌಇಇ. IX-i, ೨೪೯-೨೨ ; 1147).

**ಕೋಳೂರ ಕೊಡಗೂಸು** = ಕೋಳೂರಿನ ಕನ್ಯೆ ℙ ಕೋಳೂರಿನ ದೇವಾಲಯದ ಕಲ್ಲಿನಾಥನಲ್ಲಿ ಐಕ್ಯಳಾದ ಪರಮ ಶಿವಭಕ್ತೆ: ಕಲ್ಲಿನಾಥಂ ತನ್ನುದರದೊಳಗಿರಿಸಿದಂ ಕೋಳೂರ ಕೊಡಗೂಸ (ಬಸವು. ೧೪ ಸೂಚನೆ). **ಕೋಟುರ್**: ತೊಣ್ಣೂರು ಮಲ್ಲಪ್ಪರ್ಣನ್ನೆರಡು ಅಮ್ಮವಳ್ಳಿ ಪನ್ನೆರಡು ಕೋಟುಪ್ಪರ್ಣನೆರಡು ಗಜ್ಜವೂರ ಮೂವತ್ತುಮನಾಳೆ (ಎಕ. XI, ಚಳ್ಳಕೆ. ೩೪–೧೬ ; 815).

[ಕೋಟ್ ? + ಊರು$_3$ (< ಊರ್)]

**ಕೋಟ್ಕಂಪು** (ನಾ). ಶೈತ್ಯದಿಂದ ಕೂಡಿದ ಪರಿಮಳ; ತಂಪು ಮತ್ತು ಸುವಾಸನೆ: ಕಿಂಜಲ್ಕದ ಕದಡುತ್ಪಲಪುಂಜದ ಕೋಟ್ಕಂಪಿನೊಳ್ಗಸಜ್ ನವವಿಕಸ [ಪಾಠಾಂ. ಕೋಟ್ಕಂಪಿನೇಟ್ಗೆ ಪರ್ವವವಿಲಸ] ತ್ಕಂಜ ಮಧುವಿಂದ ಮೊಗೆದೊಗೆದೇಂ ಜಲರುಹವನಮುವಾಗಿಯುಂ ಸೊಗಯಿಸಿತೋ (ಲೀಲಾವ. ೬–೯೧).

[ಕೋಟ್$_2$ + ಕಂಪು]

**ಕೋಟ್ಕುಟ್ಟು$_1$**, ಕೋಡುಕುಟ್ಟು$_1$, ಕೋಡುಗುಟ್ಟು$_2$ (ಕ್ರಿ). ಕೊಂಬಿನಿಂದ ತಿವಿ; ಕೋಡಿನಿಂದ ತಾಟಿಸು; ಕೋರೆಯಿಂದ ತಿವಿ: ಕಾಟ್ಕಿಚ್ಚು ತಗುಳೆ ತವ್ಮೊಳ್ ಕೋಟ್ಕುಟ್ಟೆ ವನದ್ವಿಪೇಂದ್ರವುತಿಭಯದಿಂ (ಕಾವ್ಯಾವ. ೨೯೮) ; ಕೋಟ್ಕುಟ್ಟೆ ಪೆರ್ಸೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ಕೀಕರಂ ಸೂಕರಂ (ಚಂದ್ರಪ್ರ. ೫–೬೦) ; ಕೋಪಾಕುಳದಿಂ ಕೋಟ್ಕುಟ್ಟಿ ಕೆಂಡಂಗೆದಱಿತತುಳರೋಮಪ್ರರೋಹಂ ವರಾಹಂ (ಕುಸುಮಾ. ೧೪–೩೮) ; "ಕೋಡುಕುಟ್ಟು–ಕೋಟ್ಕುಟ್ಟು, ಕಾಡುಕಿಚ್ಚು–ಕಾಟ್ಕಿಚ್ಚು" (ಶಮದ. ೧೯ ಪ್ರಯೋ). **ಕೋಡುಕುಟ್ಟು$_1$**: "ಕೋಡುಕುಟ್ಟು – ಕೋಟ್ಕುಟ್ಟು" (ಶಮದ. ೧೯ ಪ್ರಯೋ). **ಕೋಡುಗುಟ್ಟು$_2$**: ಮುಳುಗುಗೆ ಕೋಡುಗುಟ್ಟುತೆ ಜಲಾಶಯ ಮಧ್ಯದೆ ಕಾಡಕೋಣಗಳ್ (ಶಾಕುಂತ. ೨೩–೪೧). [ಕೋಟ್$_1$ + ಕುಟ್ಟು$_1$]

**ಕೋಟ್ಕುಟ್ಟು$_2$**, ಕೋಡುಕುಟ್ಟು$_2$ (ನಾ). ಹೆದರಿಕೆಯಿಂದುಂಟಾದ ಎದೆಯ ಬಡಿತ; ಅತಿಭಯ: "ಕೋಡುಕುಟ್ಟನೆ ಭಯವುದರ್ಕೆ ಕೋಟ್ಕುಟ್ಟನಿಕ್ಕುಂ" (ಸಂಜೀವ. ೨೧). **ಕೋಡುಕುಟ್ಟು$_2$**: ಮೇಲಿನ ಪ್ರಯೋಗವನ್ನು ನೋಡಿ. [ಕೋಟ್$_1$ + ಕುಟ್ಟು$_2$]

**ಕೋಟ್ಕಿಸಜ್$_1$** 'ಕೋಟ್ಗಿಸಜ್$_1$' ನೋ.

**ಕೋಟ್ಕಿಸಜ್$_2$** 'ಕೊಟ್ಗಿಸಜ್$_2$' ನೋ.

**ಕೋಟ್ಗಿಸಜ್$_1$**, ಕೊಟ್ಗಿಸಜ್$_1$, ಕೋಟ್ಕಿಸಜ್$_1$ (ನಾ). ತಂಪಾದ ಕೆಸರು; ತಣ್ಣನೆಯ ಲೇಪನ: ಕತ್ತುರಿಯ ಕೋಟ್ಗಿಸಱೊಳ್ (ಪಂಪಭಾ. ೧೪–೨೦). **ಕೊಟ್ಗಿಸಜ್$_1$**: ತನ್ನ ಮೂವರುಂ ಪೆರ್ಗಡೆಗಳ ನಡಸಿ ಕಟ್ಟೆ ಕೊಟ್ಗಿಸಜ ಬಾವಿಯೊಳಟ್ಟಿ (ಚಾವುಂಪು. ೨೩–೧೭) ; ಗ್ರೀಷ್ಮದೊಳ್ಕೊಟ್ಗಿಸಜನಱಸುತುಂ ಪೋಗುತಿರ್ದತ್ತು . . . ವರಾಹಂ (ಅರ್ಧನೇ. ೩–೬೪) ; ಇನಿತಱಿನಾದ ಕೊಟ್ಗಿಸಱಿನಾಱಿಸಿ ಪಾಂಥರ ಕಂತುತಾಪಮಂ (ಪುಷ್ಪಪು. ೨–೪೦). **ಕೋಟ್ಕಿಸಜ್$_1$**: ತನಿವಣ್ಣರಸಂಗಳ ಸೋನೆ ಸಾಜ ಕೋಟ್ಕಿಸಱಿಳನೀರ ಬೆಂಚೆ (ಮಲ್ಲಿಪು. ೨–೩೫) ; ಮೇಲೆಮೇಲೆ ತಂದೊಟ್ಟಿದ ಸಿರಿಕಂಡದ ಕೋಟ್ಕಿಸಱಿಂ ಪುದಿದು (ಕಬ್ಬಿಗಾ. ೩೧೫). [ಕೋಟ್$_2$ + ಕೆಸಜ್]

**ಕೋಟ್ಗಿಸಜ್$_2$** 'ಕೊಟ್ಗಿಸಜ್$_2$' ನೋ.

**ಕೋಟ್ಮಿಗ**, ಕೊಳುಮಿಗ, ಕೊಳ್ಮಿಗ, ಕೋಳ್ಮಿಗ (ನಾ). ಇತರ ಪ್ರಾಣಿಗಳನ್ನು ಹಿಂಸಿಸುವ ಅಥವಾ ಅವುಗಳ ಮಾಂಸವನ್ನು ತಿಂದು ಬದುಕುವ ಮಾಂಸಾಹಾರಿ ಮೃಗ; ಕ್ರೂರಮೃಗ: "ಚಮೂರುವೃಕಸೂಕರಾದಿ ಕೋಟ್ಮಿಗಮುಕ್ಕುಂ" (ವಸ್ತುಕೋ. ೪೧–೭); "ವಿಷಮಸಿಂಹಂ ವ್ಯಾಘ್ರಸೂಕರಾದಿ ಮೃಗಮೆಯ್ದೆ ಕೋಟ್ಮಿಗಮೆನಿಕ್ಕುಂ" (ಮಂಗರಾ. ೪೯–೧೪) ; ಅಲ್ಲಿ ಕೋಟ್ಮಿಗದ ವನೇಚರಾಧಿಪರ ದಾಯಿಗ ರತ್ತಣಿನಪ್ಪಪಾಯ ಕೋಟಗೆ ಪವಣಿಲ್ಲ (ಪಂಪಭಾ. ೭–೨೧) ; ಸಿಂಹ ವ್ಯಾಘ್ರಾದಿಗಳಪ್ಪ ಕೋಟ್ಮಿಗಂಗಳೆಂಬಿವು (ಚಾವುಂಪು. ೧೩–೨೨); ಅದಟಂ ಕೋಟ್ಮಿಗಮೊಂದನಿಕ್ಕಿದ ಪೊಡರ್ಪಿಂ (ವರ್ಧಪು. ೮–೬೧). **ಕೊಳುಮಿಗ**: ಬಳಸಿದ ಜೈನಜನಗಳ ಪಾಪದ ಕೊಳುಮಿಗವಿಂದೊಡಲೆಂದು ಮೊಳಗಿದನನಲ್ಪಾಂನೆರಡುವರೆ ಕೋಟಿ ದುಂದುಭಿಮೊಳಗು (ವರ್ಧಚ. ೧೨–೮೮). **ಕೊಳ್ಮಿಗ**: ಕರಿಗೆ ಕರಾಗ್ರಮಂ ನೆಗಪಿ ಕೊ[ಪಾಠಾಂ. ಕೋ]ಳ್ಮಿಗ ಕಿರ್ವರಲೆತ್ತಿ . . . ತೋಱಿದ ರೊಯ್ಯನೆ ಸನ್ನೆವೇಂಟೆಯೊಳ್ (ಶಬಶಂ. ೩-೪೭). **ಕೋಳ್ಮಿಗ**: ಅರಿಯಲ್ಕಾಟಸಿದರ್ ನಿಜ ಶರಬಲಮಂ ಸಲಗ ಕೋಳ್ಮಿಗಂಗಳ ಪಿಂಡೊಳ್ (ಸೌನಂದ. ೧–೩೬) ; ಋಷಿಸಂಗ ಮಂಗಲದಿ ತಿಂಗಳೊಂದಂ ನಿಂದು, ಕೋಳ್ಮಿಗಗಳಟ್ಟುಳಿಯ ಕೊಂದು (ಶ್ರೀರಾಮಾ. ೧೮೮–೨೨೩). [< ಕೂಟ್ಮಿಗ]

**ಕೋಟ್ಮುದುಳ್** 'ಕೊಟ್ಮುದಳ್' ನೋ.

**ಕೋಟ್ಮೊಗಗೊಳ್** (ಕ್ರಿ). ೧. ಕೋಡು ಮೂಡಿದಂತಾಗು. ೨. (ಅಲಂ) ಸಂತೋಷಾತಿಶಯದಿಂದ ಕೂಡಿದ ಮುಖವುಳ್ಳದಾಗು: ಬೀರದೇಟ್ಗೆಯೊಳ್ ನೆಗಱೆ ಮಗಂ ಮಗನೆನೆ ಪುಟ್ಟಲೊಡಂ ಕೋ[ಪಾಠಾಂ. ಕೇ]ಟ್ಮೊಗಗೊಂಡುದು ಭುವನ ಭವನಮರಿಕೇಸರಿಯೊಳ್ (ಪಂಪಭಾ. ೧–೪೨). [ಕೋಟ್ಮೊಗ ? + ಕೊಳ್$_1$]

**ಕೋಟ್ಮೊನೆ** (ನಾ). ೧. ಕೊಂಬಿನ ತುದಿ. ೨. ಶಿಖರದ ಅಗ್ರಭಾಗ. ೧, ೨: ಕೋಡುಮೊನೆ – ಕೋಟ್ಮೊನೆ (ಶಬ್ದಾನು. ೮೨ ಪ್ರಯೋ) ; ಕಾಟ್ಕಿಚ್ಚು, ಮಾಟ್ಕಟ್ಟೆ, ಕೋಟ್ಮೊನೆ (ಶಬ್ದಾನು. ೧೪೦ ವ್ಯಾಖ್ಯಾ).

[ಕೋಟ್$_1$ + ಮೊನೆ$_1$]

❋

# ಕೌ

**ಕೌಂಕಲು** (ನಾ). ಅಳಿವು; ನಾಶ; ಹಾನಿ: "ಕೌಂಕಲಿನ್ನಲ್ ಕ್ಷಯಂ" (ಕಶರ. ೩೦). [ಕೌ ? + –ಕಲು$_3$ (< –ಕಲ್$_4$)]

**ಕೌಂಕುಳ್** 'ಕವುಂಕುಟ್' ನೋ.

**ಕೌಂಕುಟ್** 'ಕವುಂಕುಟ್' ನೋ.

**ಕೌಂಗು** 'ಕವುಂಗು' ನೋ.

**ಕೌಂಗುಮರ** (ನಾ). ಅಡಿಕೆಮರ: ಕೆಲವು ಕೌಂಗುಮರದಷ್ಟು ಉದ್ದವಾದರೆ ಇನ್ನು ಹಲವು ತುಂಬೆಗಿಡದಷ್ಟು ಕಿರಿಯವು (ಧೂಮಮು. ೧೧).

[ಕೌಂಗು (< ಕವುಂಗು) + ಮರ$_1$]

**ಕೌಂಚು** 'ಕವಿಚು$_1$' ನೋ.

**ಕೌಂಟರ್** (ನಾ). (ಅಂಗಡಿ, ಹೋಟಲು, ನಾಟಕಶಾಲೆ ಮೊದಲಾದೆಡೆಗಳಲ್ಲಿ ಗಿರಾಕಿಗಳಿಂದ) ದುಡ್ಡನ್ನು ಎಣಿಸಿ ಪಡೆದುಕೊಳ್ಳುವ ಜಾಗ; ಹಣ ಪಡೆದುಕೊಳ್ಳುವ ಮೇಜು: ಹೋಟಲ್ಲಿಗೆ ತಿರುಗಿದಾಗ ಕೆಳಗೆ ಕೌಂಟರಿನ ಬಳಿಯಲ್ಲಿ ನಡೆದ ಘಟನೆಯೊಂದು ನೆನಪಿಗೆ ಬರಹತ್ತಿತು (ಹೊಸಕ್ಷಿ. ೧೬೬); ಕೌಂಟರ್ ಬಳಿ ಹೋಗುವ ಹೊತ್ತಿಗೆ ಟಿಕೇಟುಗಳೆಲ್ಲ ಮಾರಾಟವಾಗಿವೆಯೆಂದು ಬಾಗಿಲು ಹಾಕಿಬಿಡುತ್ತಾರೆ (ನಾಡಿಗೇ. ೩೨ [← ಇಂ. Counter]

**ಕೌಂಡಿಕ** (ನಾ). (?) : ಅಂತಪ್ಪ ದೇಹಮಧ್ಯದಲ್ಲಿ ದ್ವೈತಿ, ಅದ್ವೈತಿ, ಲಕ್ಷ, ಅಂತರ್ಲಕ್ಷ, ಭಕ್ತಿ, ಕೌಂಡಿಕಗಳೆಂಬುದೀಗ ತಾಪತ್ರಯಾಗ್ನಿಯ ನೋಕೊಂಡಿಪ್ಪ ಸಂಸಾರ ವಿಷಯರಸ (ಕಲ್ಯಾಶಾಂ. ೧೮-೧೧೧). [?]

**ಕೌಂಡಿನ್ಯ** (ನಾ). ಒಬ್ಬ ಋಷಿಯ ಹೆಸರು: ಕೌಂಡಿನ್ಯನೆಂಬೊರ್ವ ಮುನಿಪಂ ತನ್ನ ಮನೆಗೆ ಬರಲು (ಜೈಮಿಭಾ. ೧೦-೨೫). [ಸಂ.]

**ಕೌಂಡಿನ್ಯಗೋತ್ರ** (ನಾ). ಕೌಂಡಿನ್ಯನೆಂಬ ಋಷಿಯ ಗೋತ್ರ, —ವಂಶ: ಕೌಂಡಿನ್ಯಗೋತ್ರಕ್ಕೆ ಸೇರಿದವರು ಇವರು (ಸಂಗೀತ. ೨). [ಕೌಂಡಿನ್ಯ + ಗೋತ್ರ]

**ಕೌಂಡೆ** 'ಕವುಂಡೆ' ನೋ.

**ಕೌಂತಲ** (ಗು). ೧. ಕುಂತಲದೇಶಕ್ಕೆ ಸಂಬಂಧಿಸಿದ. (ನಾ). ೨. ಕುಂತಲದೇಶದಲ್ಲಿ ಪ್ರಚಲಿತವಾದ ಭಾಷೆ: ಪ್ರಾಕೃತ ಚಂದ್ರಿಕಾಕಾರನು 'ಕರ್ಣಾಟ', 'ಹೈವ', 'ಕೌಂತಲ' ಭಾಷೆಗಳು ಬೇರೆ ಬೇರೆ ಎನ್ನುತ್ತಾನೆ (ಕರ್ಣಾಟ. ೧೧೭). [ಸಂ.]

**ಕೌಂತಿ** (ನಾ). ಒಂದು ಬಗೆಯ ಸುಗಂಧದ್ರವ್ಯ; ರೇಣುಕೆ: "ದ್ವಿಜಾ, ಹರೇಣುಃ, ರೇಣುಕೆ, ಕಾಂತೀ, ಕಪಿಲಾ, ಭಸ್ಮಗಂಧಿನೀ — ೬ ರೇಣುಕಾ ಎಂಬುವ ಗಂಧದ್ರವ್ಯದ ಹೆಸರು; ತಕ್ಕೋಲಗಿಡ" (ಸಿದ್ಧಾಂತಿ. ೧೨೨). [ಸಂ. ಕೌಂತೀ]

**ಕೌಂತಿಕ** (ನಾ). ಕುಂತವನ್ನು ಆಯುಧವನ್ನಾಗಿ ಉಳ್ಳವನು; ಈಟಿಯನ್ನು ಹಿಡಿದಿರುವ ಯೋಧ. [ಸಂ.]

**ಕೌಂತೇಯ** (ನಾ). ಕುಂತಿಯ ಮಗ; ಪಾಂಡವ: ಕೌಂತೇಯರಂ ಮಚ್ಚರದಿಂ ಕಾಂತಾರದೊಳ್ತಿಜ್ಜನೆ ತಿರಿಪಿದ ಸೂರ್ಕಿಗೆಳೇನಾದುವು (ಗದಾಯು. ೭-೧೪); ಕೌಂತೇಯನಂ ತಜುಬಲಡಹಾಯ್ದು ವೃಷಕೇತು ಬರಲು (ಜೈಮಿಭಾ. ೮-೩೬); ಕೌಂತೇಯಂ ಚಿಂತಾಪಂಕಮಂ ವಿವೇಕ ಜಳದಿಂ ತೊಳೆದು ವಿಮಳಮನಸ್ಕನಾಗಿ (ಶಬಶಂ. ೪-೯೯ವ). [ಸಂ.]

**ಕೌಂದ** (ಗು). ಕುಂದಪುಷ್ಪಕ್ಕೆ ಸಂಬಂಧಿಸಿದ; ಮೊಲ್ಲೆ ಹೂವಿನ. [ಸಂ.]

**ಕೌಂದಿ** 'ಕವುಂದಿ' ನೋ.

**ಕೌಂಸಲ** (ನಾ). ಸಲಹೆ; ಮಂತ್ರಾಲೋಚನೆ. 'ಕೌಂಸಲದಾರ' ಪರಾ. [← ಇಂ. Counsel]

**ಕೌಂಸಲದಾರ** (ನಾ). ಸಲಹೆ ಕೊಡುವವನು; ಮಂತ್ರಾಲೋಚನಾ ಸಭೆಯ ಸದಸ್ಯ: ಮೈಯೊರು ಕೌಂಸಲದಾರರು (ರಾಜೇಂದ್ರ. ೧೩೨). [ಕೌಂಸಲ + -ದಾರ$_4$]

**ಕೌಂಸ್ತುಭ** (ನಾ). = ಕೌಸ್ತುಭಮಣಿಯನ್ನು ಧರಿಸಿದವನು: ಆಕ್ಷಯಾಶ್ರಿತ ಸುಜನಜನ ಸಂರಕ್ಷಣ ಶ್ರೀವತ್ಸ ಕೌಂ [ಪಾಠಾಂ. ಕೌ]ಸ್ತುಭ ಮೋಕ್ಷದಾಯಕ . . . ರಕ್ಷಿಸು ನಮ್ಮ (ಹರಿಸಾ. ೮). [< ಸಂ. ಕೌಸ್ತುಭ]

**ಕೌಕ್ಕುಟಿಕ** (ನಾ). ೧. ಕೋಳಿಗಳನ್ನು ಸಾಕಿ, ಮಾರಿ ಜೀವಿಸುವವನು; ಕುಕ್ಕುಟ ವ್ಯಾಪಾರಿ. ೨. ಪ್ರಾಣಿಗಳು ಕಾಲಿನ ತುಳಿತಕ್ಕೆ ಸಿಲುಕಿ, ಹಿಂಸೆಹೊಂದುವವೆಂಬ ಭಯದಿಂದ ನೆಲದ ಮೇಲೆ ದೃಷ್ಟಿಯನ್ನು ನೆಟ್ಟು ನಡೆಯುವ ಭಿಕ್ಷು, —ಸಂನ್ಯಾಸಿ. ೩. (ಆಲಂ) ಜಂಭದಿಂದ ವರ್ತಿಸುವವನು; ಡಾಂಭಿಕ; ಡಂಭಾಚಾರದವನು. ೪. "ಡಾಂಭಿಕನು ದೂರದವರೆಗೆ ನೋಟವಿಲ್ಲದವನು" (ಅಮರ. ಟೀಕೆ). [ಸಂ.]

**ಕೌಕ್ಷೇಯ** (ಗು). ೧. ಹೊಟ್ಟೆಗೆ ಸಂಬಂಧಿಸಿದ; ಉದರದ. (ನಾ). ೨. ಒರೆಯ ಒಳಗೆ ಇರುವ ಕತ್ತಿ, —ಖಡ್ಗ: ಇಂದ್ರಾಯುಧವನುಗ್ರಾಕ್ಷಕರಕೌಕ್ಷೇಯವರನಂ ತನ್ನಿ ಅತಿಧಾರೇಯನಂ ತನ್ನಿ (ಬಸಪು. ೫೯-೩೯). [ಸಂ.]

**ಕೌಕ್ಷೇಯಕ** (ನಾ). ಕತ್ತಿ; ಖಡ್ಗ: "ನಿಸ್ತ್ರಿಂಶಃ, ಕರವಾಳಃ, ಖಡ್ಗಃ, ಕೌಕ್ಷೇಯಕಃ . . . ಮುಂಡಲಾಗ್ರಂ — ಈ ೧೦ ಅಡಾಯುಧಂ" (ಹಲಾಯು. ೭೮-೩೧೮); ತದೀಯ ಕೌಕ್ಷೇಯಕ ಧಾರಾವಿದಾರಿತ ಶರೀರನುಮಾಗಿ ಬಿಟ್ಟಿರ್ದ ಶರಾಚಾರ್ಯರಂ ಕಂಡು (ಪಂಪಭಾ. ೧೩-೫೬ವ); ಅಕಟ ಗುರುಹತ್ಯಾಮಹಾಪಾತಕಿಯೆ . . . ನಾರಕರೊಳರಮನೆ ನಿನಗೆ ಕೌಕ್ಷೇಯಕದ ಹತಿ ಗಡ ತನಗೆ (ಕುವ್ಯಾಗ ೯-೩೧). [ಸಂ.]

**ಕೌಗುಡಿದ** (ನಾ). (?) : ಬೆಳ್ವಣಿಗೆಯಲೊನ್ದುಮಟವಿಜಿಗ್ಗ [ಕೌ] ಗುಡಿದ ಎವ(೦)ಜ್ಜಲ್ಲಲೊನ್ದು ದೇಗುಲಕೆ ಒನ್ದು ಗದ್ಯಾಣವದಿತ್ಯಜಿಗ್ಗ ಕೊಟ್ಟ ಮತ್ತೊನ್ದು ಈಸ್ವರಲಯಕ್ಕೆ ಕೊಟ್ಟ ಧರಣ (ಸೌಇಇ. XI-i, ೩೫-೮; 933). [?]

**ಕೌಚಿಕ್ಕು** (ಕ್ರಿ). ೧. ಬೋರಲು ಬೀಳುವಂತೆ ಹೊಡೆ; ಮುಖ, ಎದೆ ಕೆಳಗಾಗುವಂತೆ ಬೀಳಿಸು: ತಕ್ಕೆಯಲಿ ಕೃತಕಾದ್ರಿಗಳ ಕೌಚಿಕ್ಕಿದನು (ತೊರರಾ. ೫-೪-೧೫). ೨. ಬೋರಲು ಹಾಕು.

**ಕೌಚಿಕ್ಕೆಡೆ** = ಬೋರಲಾಗಿ ಬೀಳು: ತೊಡೆಮುಱಿದು ಕಡುಗಲಿಯೂ ಕೌರವನಂದು ಕೌಚಿಕ್ಕೆಡೆದನು ಧುರಧರಣಿಯೊಳು (ನೇಮಿಸಂ. ೩೦-೧೨೧). [ಕೌಚು$_1$ (< ಕವಿಚು$_1$) + ಇಕ್ಕು]

**ಕೌಚಿನಕ** (ನಾ). ಒಂದು ಬಗೆಯ ಆಯುಧ (?) : ಖಡುಗ ತೋಮರ ಯಿಟ್ಟಿಬಿಟ್ಟೀರು ಕೊಂತ ಕಕ್ಕಡೆ ಸಬಳ ಸೆಲ್ಲೆಹಂ ಕೌಚಿನಕ [ಪಾಠಾಂ. ಕಾಚಿನಖ]ಸುರಗಿ ದಡಿ (ಸೋಮಚ. ೫-೨೭). [< ಸಂ. ಕೌಕ್ಷೇಯಕ]

**ಕೌಚಿಮ** (ನಾ). ತೊಗಲನ್ನು ಉಜ್ಜಿ ಕೆರೆಯುವ ಅರ: "ಆರಾ ಚರ್ಮಪ್ರಭೇದಿಕಾ . . . ಕೌಚಿಮ ಹೆಸರು, ತೊಗಲನ್ನು ಉಜ್ಜಿ ಕೆರೆಯುವ ಅರ" (ಸಿದ್ಧಾಂತಿ. ೨೬೦). [?]

**ಕೌಚು$_1$** 'ಕವಿಚು$_1$' ನೋ.

**ಕೌಚು$_2$** 'ಕವಿಚು$_2$' ನೋ.

**ಕೌಜಲು** 'ಕವಿಂಜ' ನೋ.

**ಕೌಜು** 'ಕವಿಂಜ' ನೋ.

**ಕೌಟ** (ಗು). ೧. ಮನೆಗೆ ಸಂಬಂಧಿಸಿದ; ಗುಡಿಸಲಿಗೆ ಸೇರಿದ. ೨. ಸ್ವಂತ ಮನೆಯಲ್ಲಿ ವಾಸಮಾಡುವ; ಸ್ವತಂತ್ರನಾದ. [ಸಂ.]

**ಕೌಟತಂತ್ರ** (ನಾ). [ಯೋಗ]ಬಿಂಬಾಗಮದ ಭೇದಗಳಲ್ಲೊಂದು (?) : ಚತುರ್ಮುಖತಂತ್ರ, ಮಲಯತಂತ್ರ . . . ಕೌಟತಂತ್ರ . . . ಸರ್ವಶೇಖರ ಮಹಾವಿದ್ಯೆ, ಮಹಾಸಾರಮೆಂದು ಬಿಂಬಾಗಮದ ಹದಿನೈದು ಭೇದಂಗಳು (ವಿವೇಕ. ೭೧). [ಕೌಟ ? + ತಂತ್ರ]

**ಕೌಟತಕ್ಷ** (ನಾ). ಊರಿನವರಿಗೆ ಅಧೀನನಲ್ಲದೆ ಸ್ವತಂತ್ರವಾಗಿ ಮರಗೆಲಸ ಮಾಡುವ ಬಡಗಿ: "ಕೌಟತಕ್ಷಃ, ಅನಧೀನಕಃ - ಒಬ್ಬನ ಅಧೀನನಾಗದೆ ಕೂಲಿ ಕೆಲಸ ಮಾಡುವ ಬಡಗಿಯವನ ಪೆಸರು" (ಸಿದ್ಧಾಂತಿ. ೨೬೭). [ಸಂ.]

**ಕೌಟಲು** (ನಾ). ಕಿತಾಪತಿ; ಕೊಂಕು (?) : ಕೈಲಿ ಹರಿಯದಿದ್ದರೂ ಕೌಟಲು ಘನ (ಗಾದೆ). [< ಸಂ. ಕೌಟಲ್ಯ]

**ಕೌಟವಿ** (ನಾ). ನಗ್ನಳಾದ ಹೆಂಗಸು ; ಬತ್ತಲೆ ಹೆಣ್ಣು : ಸ್ಕಂದಂಗೆ ಚಕ್ರಂಗೊಳೆ ಹರಿ ಗಿರಿಜಾಕಾಂತೆ ನಗ್ನತ್ವದಿಂ ಕೌಟವಿ ಬಂದಡ್ಡಂ ನಿಲಲ್ ಚೀ ಸುಡುಸುಡು ತೊಲಗೆಂದಾ ಮುರಧ್ವಂಸಿ ಪೇಸುತ್ತವೆ ತಿರ್ಯಗ್ವಕ್ತ್ರನಾಗಿರ್ಪನಂ (ಜಗವಿ. ೧೮–೪೨).

**ಕೌಟವಿಯಾಗು**=೧. ನಗ್ನಳಾಗು; ಬತ್ತಲೆಯಾಗು. ೨. (ಆಲಂ) ಬರಿದಾಗು ; ಶೂನ್ಯವಾಗು : ಆ ಕೀಶಸಂಶೋಧನಾ ಕೋವಿದರ್ ತಡವಿದರಹಸ್ಪತಿಯ ಕದಿರಾಳ್ಗಳಂ ಕೂಡಿ ಪಗಲನೆತ್ತೆತ್ತಲುಂ, ಕೌಟವಿಯಾಗೆ ಕಣ್ಣಟವಿ (ಶ್ರೀರಾಮಾ. ೩೬೬–೧೧೨). [< ಸಂ. ಕೋಟವೀ]

**ಕೌಟವ್ಯ** (ನಾ). ೧. ಬರಿದಾಗಿರುವಿಕೆ; ಶೂನ್ಯತ್ವ. ೨. (ಆಲಂ) ಉಪಯೋಗವಿಲ್ಲದಿರುವಿಕೆ (?) : ಭಾವ್ಯಮೇ ತಾಂ ತಾಯಿತಂದೆಯ ವಶದ ಪೆಣ್ಗೆ ಸೇಹ್ಯಮಲ್ಲಂಜುವೆನೆನಲ್ ಮುನಿಗೆ ತನಗೆ ಕೌಟವ್ಯದ ಕೊರತೆ ಬಪ್ಪದೆನ್ನ ನುಡಿಯಂ ಮೀರಲುಗ್ರಕಿರಣದಲುರುಹುವೆ (ಲಕ್ಷ್ಮೀಭಾ. ೨೪–೪೪). [< ಕೌಟವಿ ?]

**ಕೌಟಿಕ** (ನಾ). ೧. ಪ್ರಾಣಿಗಳನ್ನು ಉರುಳುಹಾಕಿ ಅಥವಾ ಬೋನುಗಳನ್ನಿಟ್ಟು ಹಿಡಿಯುವವನು. ೨. ಪ್ರಾಣಿಗಳನ್ನು ಕೊಂದು, ಅವುಗಳ ಮಾಂಸವನ್ನು ಮಾರಿ ಜೀವಿಸುವವನು ; ಕಸಾಯಿಗಾರ. ೩. ಮೋಸಗಾರ; ಅಪ್ರಾಮಾಣಿಕ; ವಂಚಕ. [ಸಂ.]

**ಕೌಟಿಲ್ಯ** (ನಾ). ೧. ಡೊಂಕಾಗಿರುವಿಕೆ; ವಕ್ರತೆ; ಕೊಂಕು. ೨. ಕೊಂಕುಸ್ವಭಾವ ; ಕಪಟ; ಮೋಸ. ೧, ೨ : ಚಂದ್ರನೊಡನೆ ಪುಟ್ಟಿದುದಜಿಂ ಕೌಟಿಲ್ಯಮುಂ (ಗದಾಯು. ೯–೬೮). ೨. ಅಬ್ಬೆ ಕೌಟಿಲ್ಯದಿಂ ರಾಜ್ಯಮನೀ ರೇಜಬ್ಬಮಂ ಬೇಡಿದಳ್ (ಪಂರಾಮಾ. ೬–೧೪೩); ಅವನನ್ನು ಈ ಸಂದರ್ಭದಲ್ಲಿ ಇನ್ನೂ ಒಂದು ಯುದ್ಧ ಕೌಟಿಲ್ಯಕ್ಕೆ ಒಪ್ಪಿಸಿದ (ಶಾಂತಲಾ. ೨೨೯). ೩. ಕುಟಿಲ ಸ್ವಭಾವದವನು ; ಮೋಸಗಾರ ; ಅಪ್ರಾಮಾಣಿಕ : ಕೌಟಿಲ್ಯರೇಗೆಯ್ಯರೋ (ಜಗವಿ. ೫–೫೯). ೪. ನೀತಿಶಾಸ್ತ್ರವನ್ನು ಬರೆದವನ ಹೆಸರು; ಚಾಣಕ್ಯ. ಕೌಟಿಲ್ಯಾದಿ ನೀತಿಜ್ಞರು ರಾಜರಿಗೆ ಮಾರ್ಗದರ್ಶಿಗಳಾಗಿದ್ದಾರೆ (ಮುಕ್ತಾರ. ೧೦೬ ಪೀಠಿಕೆ). [ಸಂ.]

**ಕೌಟಿಲ್ಯವೃತ್ತಿ** (ನಾ). ೧. ಕೊಂಕಾಗಿರುವಿಕೆ; ವಕ್ರವಾಗಿರುವಿಕೆ. ೨. ಕಪಟದ ನಡತೆ; ಮೋಸದ ವರ್ತನೆ. ೧, ೨ : ದಂತಚ್ಛದಾತಿರಾಗತೆ ಕುಂತಳ ಕೌಟಿಲ್ಯವೃತ್ತಿ ಪಿಂಗಿದುದಬಲಾ ಸಂತತಿಗೆ ಪಯಃ ಕೇಳಿಯೊಳಿಂತುಂ ನಿರ್ಮಲರ ಸಂಗದಿಂದಾಗದುದೇಂ (ಚಂದ್ರಪ್ರ. ೬–೧೪೫). [ಕೌಟಿಲ್ಯ + ವೃತ್ತಿ]

**ಕೌಟುಂಬರ** (ನಾ). ಬೆಲೆಬಾಳುವ ಒಂದು ಬಗೆಯ ವಸ್ತ್ರ : ಅಲ್ಲಿಯ ಅಂಗಡಿಗಳಲ್ಲಿ ಕೌಶಿಕ ಕೌಟುಂಬರ ಮೊದಲಾದ ನಾನಾವಿಧದ ವಸ್ತುಗಳು ತುಂಬಿತ್ತು (ಬುದ್ಧಪ. ೧೬ ಮಿಲಿಂದ.). [?]

**ಕೌಟುಂಬಿಕ** (ಗು). ೧. ಕುಟುಂಬಕ್ಕೆ ಸಂಬಂಧಿಸಿದ, —ಸೇರಿದ : ಹೊಸ ದಂಪತಿಗಳ ಕೌಟುಂಬಿಕ ಸ್ವರ್ಗದಲ್ಲಿ (ವಾತ್ಸಲ್ಯ. ೨೨೩). 'ಕೌಟುಂಬಿಕ ವ್ಯವಹಾರ' ಪರಾ. (ನಾ). ೨. ಗೃಹಸ್ಥ ; ಕುಟುಂಬವನ್ನು ನಡೆಸಿಕೊಂಡು ಬರುವವನು ; ಕುಟುಂಬದ ಯಜಮಾನ : ಕೌಟುಂಬಿಕ. ಮಕ್ಕಳ ಮಾಣಿಕದ ಕಣಿ ಸಿಕ್ಕಿ ನೀ ಚೊಕ್ಕ ಚಿಂತಾಮಣಿ (ಮೂರ್ತಿಕಾ. ೫೧–೬). [ಸಂ]

**ಕೌಟುಂಬಿಕವ್ಯವಹಾರ** (ನಾ). ಕುಟುಂಬಕ್ಕೆ ಸಂಬಂಧಿಸಿದ ವ್ಯವಹಾರ, —ಕೆಲಸ; ಮನವಾರ್ತೆ : ಕೌಟುಂಬಿಕ ವ್ಯವಹಾರಗಳನ್ನು ವ್ಯವಸ್ಥೆಗೊಳಿಸಬೇಕಾದರೆ ಇದೇ ವಿವೇಕಯುತವಾದ ಮಾರ್ಗವೆಂದು ಅವನು ದೃಢವಾಗಿ ನಂಬಿದ್ದನು (ಪುನರು. ೩೪೦). [ಕೌಟುಂಬಿಕ + ವ್ಯವಹಾರ]

**ಕೌಟೆ** 'ಕವಡೆ$_1$' ನೋ.

**ಕೌಡಯಾಲ** (ನಾ). ಒಂದು ಜಾತಿಯ ಔಷಧಿ ಗಿಡ : ಕದಂಬಮರ, ಕಡವಾಲದಮರ, ಕೌಡಯಾಲ . . . ಕಡವಳ (ವೈಜಗಿ. ೬–೧೨೪). [?]

**ಕೌಡಿ** 'ಕವಡು$_1$' ನೋ.

**ಕೌಡಿಕಾರ** (ನಾ). ಮೋಸಗಾರ; ವಂಚಕ ; ಠಕ್ಕ (?) : ಕಿಡಿಗೆದಜಿ ಪುಷ್ಕರನೃಪಾತ್ಮಜನೊಡನೆ ಕಲಿಮುಹವಾತದೆಂಬವ ಜಡಿದು ಕೈದುವನೆಂದ ನುಡಿ ನುಡಿ ಕೌಡಿಕಾರ ನೃಪ (ಅಂಬಿಕಾ. ೪೮–೬೮).
[ಕೌಡಿ (< ಕವಡು$_2$) + -ಕಾರ$_1$ (< -ಕಾಜ)]

**ಕೌಡಿಕೆ** 'ಕವಡಿಕೆ$_2$' ನೋ.

**ಕೌಡೆ$_1$** 'ಕವಡೆ$_1$' ನೋ.

**ಕೌಡೆ$_2$** 'ಕವಡೆ$_2$' ನೋ.

**ಕೌಣ** (ನಾ). ಜೊಂಡು ; ಆಪು. 'ಕೌಣಕಡ್ಡಿ' ಪರಾ.
[← ತೆಲು. ಕೌಣ]

**ಕೌಣಕಡ್ಡಿ** (ನಾ). ಜೊಂಡು ಅಥವಾ ಆಪಿನಕಡ್ಡಿ ; ಲಾಳದಕಡ್ಡಿ : ಬಾನೆಯಂತಾ ಬಾಯಿದೆರೆಯೆ ಬಾಯಿ ತುಟಿಯು ಮೀರಿದ ಹಲ್ಲು ಕೌಣಕಡ್ಡಿಯಂತೆ ಕೈಕಾಲು ಆ ನಳರಾಜ ತಾನು ಯಿಂತಾ ರೂಪೂ ಧರಿಸಿದ (ಯನಳ. ೧೦೧). [ಕೌಣ + ಕಡ್ಡಿ]

**ಕೌಣಪ** (ನಾ). ೧. ಹೆಣವನ್ನು ತಿಂದು ಜೀವಿಸುವವನು; ರಾಕ್ಷಸ : ಚಾರುತರ ಲಿಂಗದಾಕಾರಮಂ ಮನಮೊಸೆದು ದಾರುವಿಂದಂ ರಚಿಸಿ ಕೌಣಪಂ ಭಕ್ತಿಯಿಂ ಮೇರೆ ಮೀಜಿದ ಮನೋರಾಗದೊಡಗೂಡಿ ದೇಹದೊಳೆಯ್ದೆ ತಾಳ್ದು (ಅರಾಚ. ೪–೧೬). ೨. ನೈಋತ್ಯದಿಕ್ಕಿನ ಅಧಿಪತಿ ; ನಿಋತಿ : ಎಮ್ಮರಸಂ ಕಂಸದೇವಂ . . . ಈ ಕೃಪಾಣದಿಂ ಕೌಣಪನನೀ ಪಾಶದಿಂ ಜಲೇಶನಂ . . . ಗೆಲ್ದಂ (ಜಗವಿ. ೬–೨೮೪). 'ಕುಣಪ' ಪರಾ. [ಸಂ.]

**ಕೌತ$_1$** (ನಾ). (ಕರಾ) ಕುಂಟುನೆಪ; ಸೋಗು : ಏನೋ ಹೋಗಲಿ ಅಂತ ಇದ್ದರೆ ಕೌತ ತೆಗೆತಾನೆ (ರೂಢಿ). [?]

**ಕೌತ$_2$** (ನಾ). ಒಂದು ಬಗೆಯ ವಾದ್ಯ : ಮದ್ದಳೆಯ ಚಚ್ಚರಿಯ ಕೌತಂಗಳ ಸದ್ದುಗಳಿಂ (ಮಿತ್ರಗೋ. ೮) ; ಘನ ಕೌತ ಚಿಂದು ಜಕ್ಕಡಿ ಚೌಪದಂಗಳಿಂ (ಲಿಂಗಪು. ೨೩–೪೬). [?]

**ಕೌತುಕ** (ನಾ). ೧. ಆಶ್ಚರ್ಯ ; ಅದ್ಭುತವಾದದ್ದು ; ವಿಸ್ಮಯಕರವಾದದ್ದು; ಕುತೂಹಲಕಾರಿಯಾದದ್ದು : ಶುಕಶಾರಿಕಾದಿವಿಹಗಪ್ರಕರಂ ಮುಂ ಕೇಳ್ದ ವಚನಮಂ ನುಡಿವುದು ಕೌತುಕಮಲ್ಲದು (ಕಾದಂಪೂ. ೬೪); ನೋಡೆ ಕೌತುಕಮಿ ಕೂಸಿನ ಸಾಸಂ (ಜಗವಿ. ೩–೩೦) ; ಪುರದ ತಿರುವೀಥಿಯೊಳೇನಂ ಬಿನ್ನವಿಪೆನದೊಂದಾಶ್ಚರ್ಯವದೊಂದು ಕೌತುಕವದೊಂದು ವಿಪರೀತಂ ಚಿತ್ತೈಸು (ನಂಬಿರ. ೨–೩೯) ; ಆದರೆ ಆ ಮಾತುಗಳು ನಮಗೆ ಅಷ್ಟು ಕೌತುಕವಾಗಿ ತೋರುವುದಿಲ್ಲ (ಮುಂಬಯಿ. ೪–೬೮) ; ಭಗವದ್ಗೀತೆಯೊಂದು ಕೌತುಕದ ಕನ್ನಡಿ (ಧರ್ಮಸಾ. ೧೨೯). ೨. ನೋಡಬೇಕೆಂಬ ಅಥವಾ ತಿಳಿಯಬೇಕೆಂಬ ತೀವ್ರವಾದ ಇಚ್ಛೆ ; ಕುತೂಹಲ : ಸಕಳ ಬ್ರಹ್ಮಾಂಡ ಭಾಂಡೋದರ ಮೊಡೆದುದಿದೆಂತಪ್ಪ ಕೋಳಾಹಳಂ ಕೌತುಕದಿಂದ್ರಂ ಪಾಯ್ದನಕ್ಕುಂ (ಜಗವಿ. ೩–೧೩). ೩. ಅಪೂರ್ವವಾದ ಅಥವಾ ಅತ್ಯದ್ಭುತವಾದ ವಿಷಯ ; ಬಹಳ ಆಶ್ಚರ್ಯಕರವಾದ ಸಂಗತಿ : ಒಲವರವೆ ಕೌತುಕವು ಪಾಲ್ಗಡಲೊಳಗೆ ಮಲಗುವ ವಿಷ್ಣು ವಿದುರನ ನಿಳಯದೊಳ ಗೊಕ್ಕುಡಿತೆಹಾಲಲಿ ಹಸಿವ ನೂಕಿದನು (ಕುವ್ಯಾಉ. ೮–೧೪); ಭೂತಳಾಧಿಪ ಚಿತ್ತವಿಸು ಖಳ ಕೌತುಕದ ಕಾಳಗದಿ ಗೆಲುವನು (ಕೌಶಿರಾ. ೩೬–೨೦) ; ಕೇಳಿರೈ ಕುಶಲವರು ಕಪಿಗಳ ಕಾಳಗದ ಕೌತುಕವ (ತೊರರಾ. ೬–೧೮–೧).

೪. ಉತ್ಸವ; ಹಬ್ಬ: ಕೌತುಕದಿಕ್ಕೆ ಕಾಮದ ನೆಲಂ . . . ದ್ಯೂತದ ಗೊಷ್ಠಿ ನೋಡಲೆಸೆದತ್ತು ಸದಾ ಗಣಿಕಾಪ್ರತೋಳಿ ತಾಂ (ಹವ್ಯಾರ. ೨-೬೨). ೫. ಸಂತೋಷ; ಸುಖ; ಆನಂದ. 'ಕೌತುಕ ಜನಕ' ಪರಾ. ೬. ಆಟ; ಕ್ರೀಡೆ; ವಿನೋದ. 'ಕೌತುಕ ಪರಾಯಣ' ಪರಾ. [ಸಂ.]

**ಕೌತುಕಂಗೊಳ್** (ಕ್ರಿ). ಆಶ್ಚರ್ಯಪಡು; ವಿಸ್ಮಯವನ್ನು ಹೊಂದು: ವಿಷಧರನೆಳ್ಚತ್ತು ಕಣ್ದೆರೆದು ಮುಂದಿರ್ದ ಪಾರ್ವತಿಯಂ ಕಂಡು ಕೌತುಕಂಗೊಂಡು ತಿರುಗಿ ನೋಡಿ (ಗಿರಿಕ. ೨ ಕಥಾಗ); ಮೋಹದ ಮಹಿಮೆಗೆ ಮರವಟ್ಟು ಭಕ್ತಿಯ ಭರಕ್ಕೆ ಕೌತುಕಂಗೊಂಡಗಲಲಾಜದ ಮಗಂಗೆ ಮಿಗೆ ಕರುಣಿಸಿ (ಬಸರ. ೪-೪೬); ಪರಶಿವನ ಕಾರುಣ್ಯದಿರ ವಿನ್ನದೆಂತುಟೋಯೆನುತ ಕೌತುಕಂಗೊಂಡು (ಸೌಂದಪು. ೫-೩೮).
[ಕೌತುಕ + ಕೊಳ್$_1$]

**ಕೌತುಕಂಗೊಳಿಸು** (ಕ್ರಿ). ಆಶ್ಚರ್ಯವನ್ನುಂಟುಮಾಡು; ವಿಸ್ಮಯ ಪಡಿಸು: ತನಗದೃಷ್ಟಪೂರ್ವಮಪ್ಪ ಜಿನಾರ್ಭಕನ ಸರ್ವಾಂಗ ಸೌಂದರ್ಯಮುಂ ಸರ್ವಲಕ್ಷಣ ಸಂಪತ್ತಿಯುಂ ಚಿತ್ತಮಂ ಕೌತುಕಂಗೊಳಿಸೆ (ಪುಷ್ಪಪು. ೧೦-೧೬ ವ).
[ಕೌತುಕಂಗೊಳ್ + -ಇಸು$_3$]

**ಕೌತುಕಂದಾಳ್** (ಕ್ರಿ). ಆಶ್ಚರ್ಯವನ್ನು ಹೊಂದು; ವಿಸ್ಮಯಪಡು: ಇಂತಾರ್ತದಿಂ ಸ್ತೋತ್ರಂಗೆಯ್ಯೆ ಕೇಳ್ದು ಕೌತುಕಂದಾಳ್ದು ಗಿರಿರಾಜನುಂ ಮೇನೆಯುಂ ಇರ್ದು (ಗಿರಿಕ. ೪-೪೮ ವ); ಸೀಳ್ದು ತದೀಯ ಮಸ್ತಕದ ಮಾಣಿಕಮಂ ನಡೆನೋಡಿ ಕೌತುಕಂದಾಳ್ದಿದನರ್ಘ್ಯಮೆಂದು ಬಗೆಯುತ್ತಿರೆ (ರಾಜಶೇ. ೫-೧೨೪). [ಕೌತುಕ + ತಾಳ್$_1$]

**ಕೌತುಕಂಬಡು**, ಕೌತುಕಪಡು (ಕ್ರಿ). = ಕೌತುಕಂದಾಳ್: ಎನ್ನ ಕೊಕ್ಕಿನ ಮಗಂ ಅದಕ್ಕೆ ಪ್ರಮಾಣಪತ್ರಮುಂಟೆಂದಾಪುರಂ ಮಸಗಲಾ ತಾಯ್ತಂದೆಗಳ್ ಕಂಡು ಕೌತುಕಂಬಟ್ಟು (ಸಂಬರ. ೬-೭೧); ಅಂತೊಳ ಪೊಕ್ಕು ಮಹಾಸ್ಥಾನಮುಂ ಕಂಡು ಕೌತುಕಂಬಟ್ಟು (ರಾಜಶೇ. ೫-೨೪ ವ). **ಕೌತುಕಪಡು**: ಈಗ ಅರ್ಥವಾಯಿತು ರತ್ನಳಿಗೆ ಅಷ್ಟೇ ಕೌತುಕವೂ ಆಯಿತು ಆದರೆ ಅದರಲ್ಲಿ ಕೌತುಕಪಡುವಂಥದೇನಿದೆ? (ಕುಸುಸಂ. ೧೩೯); ತಾಲೀಮು ನಡೆಯುತಿದಾಗ ನನ್ನ ವ್ಯಕ್ತಿತ್ವ ಮತ್ತು ಅಭಿನಯಗಳ ಬಗ್ಗೆ ಉಳಿದವರು ಕೌತುಕಪಡುತ್ತಿದ್ದರೆ (ಹೇಮಂತ. ೩೫೪).
[ಕೌತುಕ + ಪಡು$_1$]

**ಕೌತುಕಜನಕ** (ಗು). ೧. ಸಂತೋಷವನ್ನುಂಟುಮಾಡುವ; ಪ್ರೀತಿಜನಕ: ಪ್ರಕಟತರಂ ಶಬ್ದಂ ಶಾಬ್ದಿಕಸಮ್ಮತಮರ್ಥಮರ್ಥದೃಷ್ಟಿಮನಃ ಕೌತುಕಜನಕಂ (ಚಂದ್ರಪು. ೧-೫೮). ೨. ಕುತೂಹಲವನ್ನುಂಟುಮಾಡುವ: ಅದು ಎಲ್ಲರಿಗೂ ಕೌತುಕಜನಕ ಸಂಗತಿಯಾಗಿತ್ತು (ರೂಢಿ). [ಕೌತುಕ + ಜನಕ]

**ಕೌತಕಪಡು** 'ಕೌತುಕಂಬಡು' ನೋ.

**ಕೌತುಕಪರಾಯಣ** (ಗು). ವಿನೋದಪ್ರಿಯ; ವಿಲಾಸಿ: ಈ ಕೌತುಕಪರಾಯಣ ಹಾಸ್ಯಪ್ರಿಯ ಯುವಕನನ್ನು ತಾಯಿ ತುಂಬಾ ಪ್ರೀತಿಸಿ ಸ್ನೇಹವರ್ಷಣ ಮಾಡುತ್ತಿದ್ದಳು (ಇಪ್ಪಕ. ೩೯೨).
[ಕೌತುಕ + ಪರಾಯಣ]

**ಕೌತುಕಪ್ರೇರಿತ** (ಗು). ಕುತೂಹಲದಿಂದ ಪ್ರೇರಣೆ ಹೊಂದಿದ, —(ನೋಡುವಂತೆ ಅಥವಾ ತಿಳಿಯುವಂತೆ) ಒತ್ತಾಯ ಮಾಡಲ್ಪಟ್ಟ: ಪೌರವನಾಂತರಾಳದೊಳಗೊರ್ಮೆ ವಸಂತವಿಲಾಸ ಕೌತುಕಪ್ರೇರಿತಮಾನಸಂ (ಚಂದ್ರಪು. ೩-೬೯).
[ಕೌತುಕ + ಪ್ರೇರಿತ]

**ಕೌತುಕಯುಕ್ತಿ** (ನಾ). ಆಶ್ಚರ್ಯವನ್ನುಂಟುಮಾಡುವ ಉಪಾಯ, —ತಂತ್ರ: ಕುಲಯುತನು ಕೋವಿದನು ಕರುಣಾಜಲಧಿ ಕೌತುಕಯುಕ್ತಿವಿದನೆಂದಿಳೆ ಹೊಗಳುತಿರಲದುವೆ ಕೇಳ್ಪೆ ಸ್ವರ್ಗ (ಕುವ್ಯಾ. ಉ. ೪-೫೦). [ಕೌತುಕ + ಯುಕ್ತಿ]

**ಕೌತುಕಸೃಷ್ಟಿ** (ನಾ). ಆಶ್ಚರ್ಯಜನಕವಾದ ಸೃಷ್ಟಿ; ಅದ್ಭುತವಾದ ನಿರ್ಮಾಣ: ಆ ವಧು . . . ಕಂಜಭವಕೌತುಕಸೃಷ್ಟಿ ಮನೋಜಸಿದ್ಧ ಸಂಜೀವನೆ (ಚಂದ್ರಪು. ೩-೨೬).
[ಕೌತುಕ + ಸೃಷ್ಟಿ]

**ಕೌತೂಹಲ**, ಕೌತೂಹಳ (ನಾ). ೧. (ನೋಡುವ ಅಥವಾ ತಿಳಿಯುವ) ಬಯಕೆ; ಆಸೆ; ಅಪೇಕ್ಷೆ. ೨. ಆಶ್ಚರ್ಯ; ಅದ್ಭುತ. ೩. ಆಶ್ಚರ್ಯದ ದೃಶ್ಯ; ವಿಸ್ಮಯಜನಕವಾದ ವಿಷಯ. **ಕೌತೂಹಳ**: ೪. ಯಾವುದಾದರೊಂದು ವಿಷಮ ಪರಿಸ್ಥಿತಿಯಿಂದುಂಟಾದ ಚಿಂತೆ, —ವ್ಯಥೆ: ಅಂತು ಪಿರಿದುಮುಬ್ಬೆಗದಿಂ ನಿಮುಗಿನಿವಿರಿದು ಕೌತೂಹಳಮಾರಿಂದಾಯ್ತೆಂದು ಬೆಸಗೊಳ್ವುದುಂ (ಸುಕುಮಾ. ೨-೩೧ ವ); ಪುತ್ರಮೋಹ ರಸಾಸ್ವಾದನ ತೃಪ್ತಿಯಿಲ್ಲವೆನುತುಂ ತತ್ಕಾಂಕೆ ಚಿಂತಾಪರಂಪರೆಯಂ ತಾಳ್ದಿದಳಾರ್ಗೆ ಪುಟ್ಟದೊ ಸುತವ್ಯಾಮೋಹ ಕೌತೂಹಳಂ (ಮಲ್ಲಿಪು. ೩-೧೦೭). [ಸಂ.]

**ಕೌತೂಹಳ** 'ಕೌತೂಹಲ' ನೋ.

**ಕೌದ** (ನಾ). ಕೆಳ್ಳಗಿನ ಉಣ್ಣೆಯ ಶಾಲು; ದಾವಳಿ; ಸಕಲಾತಿ: ಕೌದದ ಗುಣ – ಕೌದವೆಂದರೆ ಸಕಲಾತಿ, ಇದನ್ನು ಉಪಯೋಗಿಸಿದಲ್ಲಿ ವಾತಶ್ಲೇಷ್ಮಹರ (ಸಕವೈ. ೩೬). [?]

**ಕೌದಿ** 'ಕವುಂದಿ' ನೋ.

**ಕೌದ್ರವೀಣ** (ನಾ). ಹಾರಕವನ್ನು ಬೆಳೆಯುವ ಹೊಲ; ಹಾರಕವನ್ನು ಬಿತ್ತಿರುವ ಜಮೀನು: "ವ್ರೀಹ್ಯಾದ್ಗೀನಂ, ಕೌದ್ರವೀಣಂ – ಈ ೨ನ್ನು ಆದಿಪದದಿಂದ ಮಾಸೂರೀಣಾದಿ ಶಬ್ದಗಳು . . . ಹಾರಕ, ಮಸೂರಿಗಳು ಮುಂತಾದ ಆಯಾ ಧಾನ್ಯಗಳು ಬೆಳೆಯುವ ನೆಲಕ್ಕೆ ಹೆಸರುಗಳು" (ಸಿದ್ಧಾಂತಿ. ೨೫೬); ಲೀಲೆಯಿನಣ ನೆಲಂ ಪರಿಪಾಲಿಸಿದುವು . . . ಶೈಲೀನಂ ಕೌದ್ರವೀಣಮಹೌಮ್ಯಂಯವ್ಯಂ (ಚಂದ್ರಪು. ೧-೮೯).
[ಸಂ.]

**ಕೌನೆರಲು** 'ಕವಿನೆಳಲು' ನೋ.

**ಕೌನೆಳಲು** 'ಕವಿನೆಳಲು' ನೋ.

**ಕೌಪ**, ಕಯಿಪು, ಕೈಪ, ಕೈಪು, ಕೋಪು$_4$, ಕೌಪು (ನಾ). ಲಂಗೋಟಿ; ಕೌಪೀನ: ಶಿವನತಿಥಿರೂಪದಿಂದಕಳಂಕನೆಡೆಗೆಯ್ದು ಕುಟಿಲ ಕೌಪಂ ಕೊಟ್ಟು (ಲಶಿಚಂ. ೩೫-೬); ಸತೀಪುತ್ರಾದಿ ಸಂಸ್ಕೃತಿ ತ್ಯಾಗಮುಂ ಮಾಡಿ ಕಟಿಸೂತ್ರ ಕೌಪಗಳ ಕೊಲಗಿಸಿ (ಸಿದ್ಧೇಪು. ೭-೧೧); ದಂಡಕೋಲಿನ ತುದಿಗೆ ಹಿಂಡುಕೌಪವ ಕಟ್ಟಿ ಮುಂಡೆಯರ ಕಂಡು ಮಿಡುಕುವ ಯೋಗಿಯ ಮುಂಡೆ ಬೋಳೇಕೆ (ಸರ್ವಜ್ಞ. ೫೭೦). **ಕಯಿಪು**: ಕಟ್ಟಿದ ಕಯಿಪು ಖಟ್ವಾಂಗ . . . ಕಾಶಿಯ ಧೂರ್ಜಟಿ ಬಂದು ನುಡಿದ ಸ್ವಪ್ನದಲಿ (ಅಬ್ಬಲೂ. ೨-೩೦). **ಕೈಪ**: ಪರಿತಂದು ಕೈ[ಪಾಠಾಂ. ಕೌ]ಪವನು ತಡೆಯದೆ ಪಾರೆಂದು ತವಕದಿಂ ಬೇಡುತಿರಲು (ಪ್ರಾಥರಾ. ೧೨-೨೬); ಕೈಪ ಮೂರ್ಮೊಳದೊಳಗೆ ಐಗಳ ಕೂರೆ ತುಂಬಿದೆ ನೋಡೆಯವ್ವ (ಕರಿಕ. ೮೦-೭); ಬಾಯಿಕಟ್ಟಿ, ಕೈಪ ಬಿಗಿದು ಹೆಚ್ಚು ದಿನ ಬಾಳುವುದರಲ್ಲೇನು ಸೊಗಸು? (ದಾಬುತ್ತಿ. ೧೫). **ಕೈಪು**: ಕೈಯ ಕಮುಂಡಲ ಬೋಳಾದ ಮುಂಡೆ ಕಾವಿಯ ಕೈಪು ಪೊದೆದ ಖಂಡವಸನ (ರಾಮವಿ. ೧೨-೧೪). **ಕೋಪು$_4$**: ಮಹಲು ನೋಡಿ ಮನೆ ಹೊಕ್ಕರೆ ಕೋಪು ಕಟ್ಟೆ ಒಲೆಯ ಮುಂದೆ ಕೂತಿದ್ದ (ಗಾದ).

ಕೌಪು : ಕೌಪು ಕಾಷಾಂಬರವ ಕಟ್ಟಿ ಮಂಡೆ ಬೋಳಾದರೇನಯ್ಯ ಮನದಲ್ಲಿ ನಿಜವಿಲ್ಲದನ್ನಕ್ಕರ (ಅವಚಂ. ೧೯೭-೪೯೫) ; ಕಂಬಳಿಯ ಕೌಪ ಕಟ್ಟಿದ ಮತ್ತೆ (ಕಲ್ಯಾಕಾಂ. ೩೪) ; ಕೌಪು ಕೃಷ್ಣಾಜಿನವು ವರ ಯಜ್ಞೋಪವೀತದ ದಂಡಮುಂಜಿಯನಾ ಪವಿತ್ರೋತ್ತಮನು ಕೊಡೆವಿಡಿದಲ್ಲಿಗೈತಂದ (ಸಂಭಪ. ೧೦-೧೫) ; ಮುನಿವರರು ಕೇಳುತ ಕೌಪುಗಳ ಕಿತ್ತು (ವೀಶೈಪು. ೨-೪-೨೯). [< ಸಂ. ಕೌಪೀನ]

ಕೌಪೀನ (ನಾ). ೧. = ಕೌಪ : "ಕಚ್ಚುಟಂ ಕೌಪೀನಮಕ್ಕು" (ಮಂಗರಾ. ೬೬-೯) ; ಘನಧೈರ್ಯಕನಕಾಚಲಮಡರಿ ಸುಜ್ಞಾನನಿರ್ಮಲ ದೇವಗಂಗೆಯಲಿ ಇಳಿದು ಸ್ನಾನಂಗೈದು ಧೃತಿಯಂದಳೆದ ಮನ ಕೌಪೀನಮನೊಲಿದಳವಡಿಸಿ (ಗಗತಾ. ೧೬-೧೯). ೨. ಗುಹ್ಯಾಂಗ ; ಜನನೇಂದ್ರಿಯ ೩. ನೀಚವಾದುದು ; ಅಧಮವಾದುದು ; ಕ್ಷುದ್ರ. ೪. (ಅಲಂ) ತಪ್ಪುಕೆಲಸ ; ಅಯುಕ್ತವಾದ ಕೆಲಸ ; ವಿಹಿತವಾದ ಕಟ್ಟು ಕಟ್ಟಳೆಗಳಿಗೆ ವಿರುದ್ಧವಾದ ಕೆಲಸ: "ಭಿನ್ನಕಾರ್ಯದಲಿ ಗುಹ್ಯದಲಿ ಕೌಪೀನಮೆನಿಕ್ಕು" (ಮಂಗರಾ. ೧೪೩-೨೨) ; "ಅಧಮಂ ಗುಹ್ಯವು ಭಿನ್ನ ಕಾರ್ಯಮಿವು ಕೌಪೀನಾಖ್ಯ" (ನಾನಾರ. ೧೩೫). [ಸಂ.]

ಕೌಪೀನಧಾರಿ (ನಾ). ಕೌಪೀನವನ್ನು ಧರಿಸಿದವನು ; ಸಂನ್ಯಾಸಿ : ಆಗಳವರ್ಗಳಾ ರೂಪಿನೊಳದಂ ನೆಗಬಲಂಜಿ ವಲ್ಕಲವಸನರುಂ ಕೌಪೀನಧಾರಿಗಳುಂ . . . ಪರಿವ್ರಾಜಕರುಮಾಗಿ (ಆದಿಪು. ೯-೯೩ ವ). [ಸಂ. ಕೌಪೀನಧಾರಿನ್]

ಕೌಪು 'ಕೌಪ' ನೋ.

ಕೌಪುಗಟ್ಟು (ಕ್ರಿ). ಕೌಪೀನವನ್ನು ಕಟ್ಟು ; ಲಂಗೋಟಿಯನ್ನು ಧರಿಸು : ತಟ್ಟೆ ಸಜ್ಜಿಸೆ ಸೀಳಿ ಕಿಬಿದನದಜಿಯೊಳು ಕೌಪುಗಟ್ಟಿ (ಸೋಮುಚ. ೫-೫೩). [ಕೌಪು (< ಕೌಪ) + ಕಟ್ಟು$_1$]

ಕೌಪುದಳೆ (ಕ್ರಿ). = ಕೌಪುಗಟ್ಟು : ಕೌಪುದಳೆದುದ್ಧೂಳಿಸಿ ತನುವಿನೊಳು ಭಸಿತಮಂ (ಸೌಂದಪು. ೧೬-೩೪). [ಕೌಪು (< ಕೌಪ) + ತಳೆ$_1$]

ಕೌಬಿನಹುಲ್ಲು (ನಾ). ಒಂದು ಬಗೆಯ ಹುಲ್ಲು : ಮೇಲ್ ಮಾಳಿಗೆ ಹುಲ್ಲು ; ಕೌಬಿನಹುಲ್ಲು (ಮೈಶಿಗಿ. ೨೦-೩೬೦). [ಕೌಬು$_0$ + ಹುಲ್ಲು (< ಪುಲ್)]

ಕೌಬೇರ (ಗು). ೧. ಕುಬೇರನಿಗೆ ಸಂಬಂಧಿಸಿದ ; ಕುಬೇರನಿಗೆ ಸೇರಿದ. (ನಾ). ೨. ಉತ್ತರ ದಿಕ್ಕಿನ ಅಧಿಪತಿ, —ಕುಬೇರ : "ಶಶಿ ಕೌಬೇರ ಸಮೀರ ಕಾಲಮುನಿ . . . ಯಾಗನ್ನಪನುಂ ಸೋಮಾಭಿಧಾನಂ" (ನಾನಾರ. ೨೬) ; ಒಂದು ಹರ ಹಿಡಿವಂಬು ಶಕ್ರನದೊಂದು ಕೌಬೇರಾಗ್ನಿ ವಾಯುವದೊಂದು ಪಾರ್ಥನ ಬತ್ತಳಿಕೆ ದಿವ್ಯಾಸ್ತ್ರ ತುಂಬಿಹವು (ಕುವ್ಯಾದ್ರೋ. ೧೫-೧೫). [ಸಂ.]

ಕೌಬೇರಿ (ನಾ). ಕುಬೇರನ ದಿಕ್ಕು ; ಉತ್ತರ ; ಬಡಗಲು : "ಕೌಬೇರಿ ಯುತ್ತರಮುದೀಚಿಯೆನೆ ಬಡಗಲಕ್ಕುಂ" (ಮಂಗರಾ. ೧೭-೧೯). [ಸಂ. ಕೌಬೇರೀ]

ಕೌಮಾರ (ಗು). ೧. ಕುಮಾರಿ ಅಥವಾ ಕುಮಾರನಿಗೆ ಸಂಬಂಧಪಟ್ಟ ; ಬಾಲ್ಯಾವಸ್ಥೆಯ. ೨. ಕುಮಾರಸ್ವಾಮಿಗೆ ಸೇರಿದ ; ಷಣ್ಮುಖನಿಗೆ ಸಂಬಂಧಿಸಿದ. (ನಾ). ೩. ಶೈಶವ ; ಹುಟ್ಟಿನಿಂದ ಐದನೆಯ ವಯಸ್ಸು ತುಂಬುವವರೆಗಿನ ಕಾಲ. 'ಕೌಮಾರಭೃತ್ಯ' ಪರಾ. ೪. ಕನ್ನೆ ಅಥವಾ ಕುಮಾರನ ಅವಸ್ಥೆ ; ಶೈಶವದಿಂದ ಹದಿನಾರುವರ್ಷ ತುಂಬುವವರೆಗಿನ ವಯಸ್ಸು, —ಕಾಲ ; ಯೌವನಕ್ಕಿಂತ ಮುಂಚಿನ ವಯಸ್ಸು : ಕೌಮಾರ ಯೌವನ ವಾರ್ಧಿಕಂಗಳಳಿ ತನು ವಿಕಾರಿಸುವುದು (ಕುವ್ಯಾಭೀ. ೩-೪೪) ; ಬಾಲ್ಯ ಹರೆಯ ಜರೆ ಕೌಮಾರದಾವಸ್ಥೆಗಳವೈಕಾರಾ (ಗಗತಾ. ೧೦-೩೭) ; ಪೆತ್ತ ತಾಯ್ಗಿರ್ಮಡಿಯೊಲುಮೆವೆತ್ತು ಕೂಸಿಂದೆ ಕೌಮಾರದನ್ನೆಗಂ (ಶ್ರೀರಾಮಾ. ೧೧೩-೩೯). [ಸಂ.]

ಕೌಮಾರತಂತ್ರ (ನಾ). ಲಲಿತಾಗಮದ ನಾಲ್ಕು ಭೇದಗಳಲ್ಲೊಂದು: ಲಲಿತ ಲಲಿತೋತ್ತರ ಕೌಮಾರತಂತ್ರ ವಿಘ್ನೇಶ್ವರಾಗಮವೆಂದು ಲಲಿತಾಗಮದ ನಾಲ್ಕು ಭೇದಂಗಳು (ವಿವೇಕ. ೭೧). [ಕೌಮಾರ + ತಂತ್ರ]

ಕೌಮಾರದೆಸೆ (ನಾ). ಕೌಮಾರಾವಸ್ಥೆ ; ಬಾಲ್ಯಾವಸ್ಥೆ : ಚಾರು ಪೌರುಷ ಸಮರನಿಪ್ಪಳ ತಾರಕರು ನೀವ್ ನಮ್ಮದಿದು ಕೌಮಾರದೆಸೆ ತಾಮುಸವಲೇ ನಿಮಗಾನು ಸಮಬಳನೆ (ಕುವ್ಯಾಕ. ೨೦-೨೭). [ಕೌಮಾರ + ದೆಸೆ$_1$]

ಕೌಮಾರಬ್ರಹ್ಮಚಾರಿಣಿ (ನಾ). ಮದುವೆ ಮಾಡಿಕೊಳ್ಳದೆ ಕೊನೆವರೆಗೆ ಬ್ರಹ್ಮಚರ್ಯದಲ್ಲಿಯೇ ಇರುವವಳು ; ಆಧ್ಯಾತ್ಮ ವಿಚಾರದಲ್ಲಿ ಆಸಕ್ತಳಾದವಳು : ಬ್ರಾಹ್ಮಣ ಕುಲದ ಅನೇಕ ಸಹಸ್ರ ಸ್ತ್ರೀಯರು ಕೌಮಾರಬ್ರಹ್ಮಚಾರಿಣಿಯರಾಗಿದ್ದು ಸಂತತಿ ವೃದ್ಧಿಮಾಡದೆ ಸ್ವರ್ಗಕ್ಕೆ ಹೋಗಿದ್ದಾರೆಂದು ಮನುಸ್ಮೃತಿಯಲ್ಲಿ . . . ಇರುವುದು (ಹಿಂದಸಾ. ೧೫೯). [ಕೌಮಾರ + ಬ್ರಹ್ಮಚಾರಿಣೀ]

ಕೌಮಾರಭೃತ್ಯ (ನಾ). ವೈದ್ಯಶಾಸ್ತ್ರದ ಒಂದು ವಿಭಾಗ; ಶಿಶುವೈದ್ಯ: "ಮಕ್ಕಳಿಗೆ ಸಂಭವಿಸತಕ್ಕ ಸಮಸ್ತರೋಗಗಳನ್ನು ಪರಿಹಾರಮಾಡತಕ್ಕ ವಿಧಾನಗಳನ್ನು ಚೆನ್ನಾಗಿ ತಿಳಿಸುವ ಭಾಗವು ಕೌಮಾರಭೃತ್ಯ" (ಸುಜ್ಞಾಚಂ. ಪ್ರಥಮಕಳಾ). [ಸಂ.]

ಕೌಮಾರಿ (ನಾ). ೧. ಸಪ್ತಮಾತೃಗಳಲ್ಲಿ ಒಬ್ಬಳು : "ಬ್ರಾಹ್ಮಿ ಮಾಹೇಶ್ವರಿ ಕೌಮಾರಿ. . .ಚಾಮುಂಡಿಯೆನೆ ಸಪ್ತಮಾತೃಕೆಯರೆನಿಕ್ಕು" (ಮಂಗರಾ. ೫-೧೪). ೨. ಮದುವೆಯಾಗದವಳು ; ಕನ್ಯೆ : ವೀರ ಪದವಂ ಪಡೆದ ವೀರ ಕೌಮಾರಿಯರೆ . . . ಈ ಕುವರಿಯಂ ನೀವು ಕೈನೀಡಿ ಕಾಯಬೇಕು (ಕೃಷ್ಣಾಕು. ೬-೧೪). ೩. [ಸಂಗೀತ] ಸಪ್ತಸ್ವರಗಳಲ್ಲಿ ಒಂದಾದ ಗಾಂಧಾರವೆಂಬ ಸ್ವರದ ಅಧಿದೇವತೆ: ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಮಾಹೇಂದ್ರಿ, ಚಾಮುಂಡಿಯೆಂಬಿವರೇ ಕ್ರಮದಿಂದಾ ಷಡ್ಜಾದಿ ಸ್ವರಾಧಿದೇವತೆಗಳು (ವಿವೇಕ. ೨೩೧). [ಸಂ. ಕೌಮಾರೀ]

ಕೌಮಾರೋದ್ಧರ (ಗು). ಕುಮಾರಿಯರ ಕುಲವನ್ನು ಮೇಲಕ್ಕೆತ್ತಿ ಹಿಡಿಯುವ, —ಉದ್ಧರಿಸುವ : ವನಿತಾರತ್ನಮಿದೆಂಬಿನಂ ಸೊಗಯಿಸಲು ಕೌಮಾರೋದ್ಧರಮಾಂ ಪ್ರಜೆನಿಕಾಯಕ್ಕೆ ನಿಧಾನಮೆಂಬಿ[ಪೆ]ಟಿದಿಂದಂ ಪುಟ್ಟಿ (ಕಇಅ. ೧೧-೪-೪೪ ; 1093). [ಕೌಮಾರ + ಉದ್ಧರ]

ಕೌಮಾರ್ಯ (ನಾ). ೧. ಆರನೆಯ ವಯಸ್ಸಿನಿಂದ ಹದಿನಾರು ತುಂಬುವವರೆಗಿನ ಕಾಲ ; ಬಾಲ್ಯ ; ಚಿಕ್ಕಂದು : ಎರಡನೆಯ ಜನ್ಮದಲ್ಲಿ ಮಲ್ಲಿನಾಥನಾಗಿ ಹುಟ್ಟಿ ಕೌಮಾರ್ಯದಲ್ಲಿಯೇ ವೈರಾಗ್ಯ ಪಡೆದು . . . ತೀರ್ಥಂಕರನಾದನು (ಕಸಾಚ. ೧೨೫) ; ಎರೆಯಂಗನು . . . ಪ್ರಬುದ್ಧನಲ್ಲದಿದ್ದರೂ ಕೌಮಾರ್ಯವನ್ನು ದಾಟಿ ಯೌವನಕ್ಕೆ ಕಾಲಿಕ್ಕಿರಲೇಬೇಕು (ಸವತಿ. XI, ಪ್ರಸ್ತಾವನೆ). ೨. ಕುಮಾರಿಯಾಗಿರುವಿಕೆ ; ಕನ್ನೆತನ : ಅಮೇರಿಕೆಯಲ್ಲಿಯಂತೆ 'virginity 'ಯ ಕೌಮಾರ್ಯದ ಬಗ್ಗೆ ನಮ್ಮಲ್ಲಿದ್ದ ಅನೈಸರ್ಗಿಕ ಮಹತ್ವ ಕಡಿಮೆಯಾಗುವ ತನಕ, ವ್ಯಕ್ತಿವಿಕಾಸಕ್ಕೆ ಬೇಕಾದ ಅನಿರ್ಬಂಧ ಸ್ವಾತಂತ್ರ್ಯದ ವಾತಾವರಣವನ್ನು ಕಲ್ಪಿಸುವುದು ಶಕ್ಯವಿಲ್ಲ (ಮುಕ್ತಿ. ೪೧) ; ಅವಳ ಕೌಮಾರ್ಯದ ಆವೇಶ ಮಾತ್ರ ಅಳಿವಿಲ್ಲದ್ದು (ಸ್ವಪ್ನಹೊ. ೨೧೦). [ಸಂ.]

**ಕೌಮುದ** (ಗು). ೧. ಕುಮುದಗಳಿಗೆ ಸಂಬಂಧಿಸಿದ; ನೈದಿಲೆಗಳಿಗೆ ಸೇರಿದ. 'ಕೌಮುದೋಜ್ಜ್ವಳ' ಪರಾ. (ನಾ). ೨. ಕುಮುದಗಳ ಸಮೂಹ; ನೈದಿಲೆಗಳ ಗುಂಪು: ಹಿಮಾಂಶು ರುಚಿಯಿಂ ದೇಹಾಂಶುವಿಂ ಭೂಭುಜಂ ಮುದಮಂ ಕೌಮುದಕಿತ್ತಂ (ಪುಷ್ಪಪು. ೧೩–೨೪). [ಸಂ.]

**ಕೌಮುದಿ** (ನಾ). ಚಂದ್ರನ ಬೆಳಕು; ಬೆಳದಿಂಗಳು; ತಿಂಗಳ ಬೆಳಕು: ಕೌಮುದಿಯೊಳಲರ್ದಿದ್ದುದ್ಯನ್ನೀಲೋತ್ಪಲಂಗಳ ಕಂಪಿನೊಳ್ ಪುದಿದು ಪುರದೊಳ್ ತೀವಿತ್ತೆತ್ತಂ ಪ್ರಭಾತಸಮೀರಣಂ (ಅಜಿಪು. ೬–೬೩); -ದೇವಿ, ಹೇಮಂತಮಿಷ್ಟಋತು ತಾನ್ನೆಸೆ! ದೂರಸೂರ್ಯನೆ ಚಂದ್ರನಾತಪಮೆ ಕೌಮುದಿ (ಶ್ರೀರಾಮಾ. ೨೦೧–೧೯೬). [ಸಂ. ಕೌಮುದೀ]

**ಕೌಮುದೀಮಹೋತ್ಸವ** (ನಾ). (ಹುಣ್ಣಿಮೆಯ) ಬೆಳದಿಂಗಳಲ್ಲಿ ಆಚರಿಸುವ ಮಹೋತ್ಸವ: ನಿಜವಿಜಯ ಕಟಕದ ನಾಗರಿಕ ರಮಣ ರಮಣೀಜನಂಗಳ್ ಕೌಮುದೀಮಹೋತ್ಸವೋತ್ಸುಕರಾಗಿ ನೆರೆದು (ಆದಿಪು. ೧೨–೧೧ ವ); ಬಸಂತೋತ್ಸವದ ಕೌಮುದೀಮಹೋತ್ಸವಮಂ ನೋಡುವಟ್ಟಿಯೊಳ್ (ಶಾಂತಿಪು. ೮–೭೨ ವ). [ಸಂ. (ಕೌಮುದೀ + ಮಹೋತ್ಸವ]

**ಕೌಮುದೀವರ್ಣ** (ನಾ). ಬೆಳದಿಂಗಳ ಬಣ್ಣ: ಆ ಮೂರ್ತಿಯಲ್ಲಿದ್ದ ಮೋಹಿನೀಶಕ್ತಿಯನ್ನು ವರ್ಣಿಸಲಸಾಧ್ಯ. ಅರ್ಧ ಚಂದ್ರನಿಂದ ಹೊರಡುವ ಕೌಮುದೀವರ್ಣ; ಘನಕೃಷ್ಣವರ್ಣವುಳ್ಳ ಚಿಕುರಜಾಲ (ಕಪಾಕುಂ.೧೯). [ಸಂ. (ಕೌಮುದೀ + ವರ್ಣ)]

**ಕೌಮುದೋಜ್ಜ್ವಳ** (ನಾ). ಕುಮುದಗಳ ಶೋಭೆ; ಕನ್ನೈದಿಲೆಯ ಕಾಂತಿ: ಕೇತಕೀಕುಸುಮದಿಂ ರುಚಿರತರ ಪರಿಮಳಂ ಶೀತಕರದಿಂ ಸಾಂದ್ರತರ ಕೌಮುದೋಜ್ಜ್ವಳಂ ಪುಟ್ಟುವಂತಿರೆ ಪುಟ್ಟಿದಂ (ಬಸರ. ೧–೧೨೪).

[< ಸಂ. ಕೌಮುದೋಜ್ಜ್ವಲಾ]

**ಕೌಮೋದಕಿ** (ನಾ). ವಿಷ್ಣುವಿನ ಅಥವಾ ಕೃಷ್ಣನ ಗದೆ: ಕೌಮೋದಕಿಯೆಂಬ ಗದೆಯುಮಂ . . . ಕೌಸ್ತುಭಮೆಂಬ ಆಭರಣಮುಮಂ ಪೂಜಿಸಿ ತಾನುಂ ಚಕ್ರವರ್ತಿಪದದೊಳ್ ವಿರಾಜಿಸಿ (ಶಾಂತಿಪು. ೫–೬೪ ವ); ಇವುಗಳಲ್ಲದೆ ವರುಣನು ಶ್ರೀಕೃಷ್ಣನಿಗೆ ಕೌಮೋದಕಿಯೆಂಬ ಗದೆಯನ್ನು ಕೊಟ್ಟನು (ವಚಭಾ. ೬೩). [ಸಂ. ಕೌಮೋದಕೀ]

**ಕೌಮೋದಿಕ** (ನಾ). ಒಂದು ಬಗೆಯ ಆಯುಧ: ಹಲಗೆ ತೋಮರ ಸೆಲ್ಲ ಕರವಾಳು ಕೊಡಲಿಯು ಅಲಗು ಡೊಂಕಣಿ ಕೌಮೋದಿಕವು (ದೇವಾಂಪು. ೩–೨೦೧). [?]

**ಕೌರವ** (ಗು). ೧. ಕುರುವಂಶಕ್ಕೆ ಸೇರಿದ; ಕುರುದೇಶಕ್ಕೆ ಸಂಬಂಧಿಸಿದ. (ನಾ). ೨. ಕುರುವಂಶದಲ್ಲಿ ಹುಟ್ಟಿದವನು; ಧೃತರಾಷ್ಟ್ರನ ಮಗ: "ಕುರುಜಾತನೆನೆ ಕೌರವನಕ್ಕು" (ಮಂಗರಾ. ೭೮–೨); ಪಿಂತೆ ಕೌರವಜಯಂ ತಮಗೆ ಕೈ ಸಾರ್ದ ಸಮನಂತರದೊಳಾದ ಸಾಮ್ರಾಜ್ಯದೊಳ್ (ಜೈಮಿಭಾ. ೨–೩). ೩. ದುರ್ಯೋಧನ: ಕೌರವನು ಮುಂದಜಿಯದವಗಡಿಸಿದನು (ಕುವ್ಯಾಉ. ೧೧–೮). ೪. ಒಂದು ಹಳ್ಳಿಯ ಹೆಸರು: ಮಾಸವಾಡಿ ನೂಱ ನಾಲ್ವತ್ತಕಂ ಶಿರೋಮಣಿಯೆನಿಸಿದ ದಕ್ಷಿಣ ಐಯಾವಳಿ ಎನಿಪ್ಪ ಕೌರವ ಗ್ರಾಮದೂಡೆಯ ಪ್ರಮುಖ್ಯವಾಗಿ (ಸೌಇಇ. IX–i, ೩೭೨–೩; 1262). [ಸಂ.]

**ಕೌರವರೋಷ** (ನಾ). ೧. ಪಾಂಡವರ ಮೇಲೆ ಕೌರವರಿಗೆ ಇದ್ದ ರೋಷ, —ಸಿಟ್ಟು. ೨. (ಆಲಂ) ತಡೆಯಲಾರದ ಕೋಪ; ಅತಿಕೋಪ: ನನಗೆ ಒಂದು ಸಾರಿ ಎಲ್ಲರ ಮೇಲೂ ಕೌರವರೋಷ ಬಂತು (ಹೊಸಕ್ಷಿ. ೧೦೬). [ಕೌರವ + ರೋಷ]

**ಕೌರವ್ಯ** (ನಾ). = ಕೌರವ ೨: ಕೌರವ್ಯರಿಂದಿಳೆ ನೊಂದುದು (ಜೈಮಿಭಾ. ೨–೩೧). [ಸಂ.]

**ಕೌರವ್ಯಕೋಳಾಹಳ** (ನಾ). ಕೌರವರಲ್ಲಿ ತಳಮಳವನ್ನೆಬ್ಬಿಸಿದವನು; ಭೀಮಸೇನ: ಕೊಲಲಾಜದಂದು ತಱಿಸಂದಾನೆನ್ನ ಸಂದಗ್ನಿಗಾಹುತಿ ಮಾಟ್ಪೆಂ ಗಡಮೆಂದು ಪೂಣ್ದೊದಱಿದಂ ಕೌರವ್ಯಕೋಳಾಹಳಂ (ಗದಾಯು. ೬–೨೩).

[ಕೌರವ್ಯ + ಕೋಳಾಹಳ (= ಕೋಲಾಹಲ)]

**ಕೌರಿ** (ನಾ). ಒಂದು ಜಾತಿಯ ಗಿಡ: "ಕೌ[ಪಾಠಾಂ. ಕಾ]ರಿ ಕುರವಿಯಕ್ಕು" (ಮಂಗರಾ. ೩೫–೧೪). [?]

**ಕೌರು₁** 'ಕಮುಱು₁' ನೋ.

**ಕೌರು₂** 'ಕವರು₂' ನೋ.

**ಕೌರು₃** 'ಕಮುಱು₂' ನೋ.

**ಕೌರುಗಂಪು** (ನಾ). ಸುಟ್ಟವಾಸನೆ; ಕಂಟುನಾತ: ಮೂಗುಮುರಿಯಲ್ ಬೀಸಿದುದು ಗಾಳಿ ಕೌರುಗಂಪಂ (ಶ್ರೀರಾಮಾ. ೬೯೯–೨೨).

[ಕೌರು₃ (< ಕಮುಱು₂) + ಕಂಪು]

**ಕೌರುವಾಸನೆ** (ನಾ). = ಕೌರುಗಂಪು: ಇಲಿ ಅಳಲು ಸುಟ್ಟ ಕೌರುವಾಸನೆಯ ಹೊಗೆಯ ನಡುವೆ ಇದ್ದ ಬೈರನ ಕಿವಿಗೂ ಕೇಳಿಸಿತು, . . . ಹೆಗ್ಗಡೆಯ ಅಬ್ಬರದ ಕೂಗು (ಮಲೆಮ. ೧೧೩).

[ಕೌರು₃ (< ಕಮುಱು₂) + ವಾಸನೆ]

**ಕೌರ್ಜಾಱುಗೆಯ್** (ಕ್ರಿ). (?): ಒಂದು ಗದೆಯೊಯ್ಲಿಂಗೆಯೆಂದ ಶತಸಾಸಿರಂ ಸಂದರೆಮಲೋಕಕ್ಕೆ ತುಂಡೆರಡು ಸಮಮಾಗಿ ನಿಂದು ಡಾಟ್ಸಾವಿರಂ ಕೌರ್ಜಾಱುಗೈದನೋ ಕಾವಹರನೆಂಬಂದದಿ ಹಿಂದು ಮುಂದೆಡಬಲದಿ ಕೊಂದನು (ಲಕ್ಷ್ಮೀಭಾ. ೩–೬–೩೦). [?]

**ಕೌರ್ಮ** (ಗು). ೧. ಕೂರ್ಮನಿಗೆ ಸಂಬಂಧಿಸಿದ; ಆಮೆಯ. ೨. ಕೂರ್ಮಾವತಾರಕ್ಕೆ ಸಂಬಂಧಿಸಿದ. 'ಕೌರ್ಮಪುರಾಣ' ಪರಾ. ೩. = ಕೌರ್ಮಪುರಾಣ: ಪರಮ ಶೈವಸ್ಕಂದ ಲೈಂಗ್ಯಾದಿರಳ ನಾರದ ಮತ್ಸ್ಯ ಕೌ[ಪಾಠಾಂ. ಕೂ]ರ್ಮಸ್ಪುರಿತ ವಾಮನಗಾರುಡ ಬ್ರಹ್ಮಾಂಡ ವಾರಾಹ (ಬಸಪು. ೪೩–೭೬). [ಸಂ.]

**ಕೌರ್ಮಪುರಾಣ** (ನಾ). ಹದಿನೆಂಟು ಪುರಾಣಗಳಲ್ಲೊಂದು; ಕೂರ್ಮಪುರಾಣ. [ಕೌರ್ಮ + ಪುರಾಣ]

**ಕೌರ್ಯ** (ನಾ). (?): ಚಿತ್ರರದ ಹಾಸಂಗಿಯಂ ಹಾಯ್ಕಿ ಧರ್ಮಪುತ್ರನ ಬರಿಸಿ ಕೌರ್ಯದಿಂದ ಚಿತ್ತಾವಧಾನದಿಂದಾಡಯ್ಯ ತಾಂ ಗೆಲಿಪೆ ಉತ್ತಮ ಕ್ಷತ್ರಿಯಗೆ ಸೋಕಿಂತು ಪೋಗಲು ದಿನ ಮತ್ತೆ ಕೇಳಿಂದಾಗ ಶಕುನಿ ಬೊಬ್ಬಿಱಿದುಬ್ಬಿಸಿದನು (ಲಕ್ಷ್ಮೀಭಾ. ೨–೩–೪೫). [?]

**ಕೌರ್ವಿಲ್ಲ** 'ಕರ್ವುವಿಲ್ಲ' ನೋ.

**ಕೌಲ್** 'ಕೌಲು₂' ನೋ.

**ಕೌಲ**, ಕೌಳ (ನಾ). ೧. ಶೈವ ವಾಮಾಚಾರಪದ್ಧತಿಯ ಒಂದು ಪಂಗಡ: ಲಕುಲೀಶ – ಪಾಶುಪತರಲ್ಲಿ . . . ಕಾಪಾಲಿಕ, ಕೌಲ ಎಂಬ ಅತಿಮಾರ್ಗಿಗಳಾದ ಎರಡು ಶಾಖೆಗಳಿದ್ದುವು (ಶೂನ್ಯಕು. ೪). ೨. ಕೌಲ ಪಂಗಡಕ್ಕೆ ಸೇರಿದವನು: ಕಾಪಾಲಿಕರನ್ನು ಹೋಲುವ ಮತ್ತೊಂದು ಪಂಗಡ ಕೌಲರದು (ಕಶಾಲ. ೧೫೨). **ಕೌಳ**: ೨. ಅರ್ಪನಿತಂ ಸೇವಿಸಿಯುಂ ದರ್ಪಾಂಧಕವಾಗಿ ಬಸನಮಂ ಪಾಲಿಸಿಯುಂ ಕೂರ್ಪು ವೆರಸಿರ್ಪ ಕೌಳಕರ್ೋರ್ಪರಿ ಸನ್ಮಾರ್ಗದಂಡಮಂ ಜೈನರಪೋಲ್ (ಸಮುಪ. ೧೪–೬೦); ಶೈವರ ಬೀದಿಗೆ ಬಾರದು ವೈಷ್ಣವ ಜೀವರ ಮನೆಯೊಳಗಾಡದು ಕೌಳರನಾವಾಗಲು ಮಾತಾಡಿಸದು ಗಣೇಶಚರರನೀಕ್ಷಿಸದು (ಭಕ್ತಿಸ. IV, ೧೬). [ಸಂ.]

**ಕೌಲಟನೇಯ** (ನಾ). ಪತಿವ್ರತೆಯಾಗಿದ್ದು ಭಿಕ್ಷೆಗಾಗಿ ಮನೆಮನೆಗೆ ತಿರುಗುವವಳ ಮಗ: "ಕೌಲಟನೇಯಃ, ಕೌಲಟೇಯಃ – ೨ . . . ಪತಿವ್ರತೆಯಾಗಿಯೂ ಭಿಕ್ಷಾರ್ಥವಾಗಿ ಉಪಾದಾನ ಬೇಡುವವಳಾಗಿಯೂ ಇರುವವಳ ಮಗನ ಹೆಸರುಗಳು" (ಸಿದ್ಧಾಂತಿ. ೧೫೨). [ಸಂ.]

**ಕೌಲಟೇಯ** (ನಾ).=ಕೌಲಟನೇಯ: "ಕೌಲಟನೇಯಃ, ಕೌಲಟೇಯಃ –೨ ಪತಿವ್ರತೆಯಾಗಿಯೂ ಭಿಕ್ಷಾರ್ಥವಾಗಿ ಉಪಾದಾನ ಬೇಡುವವಳಾಗಿಯೂ ಇರುವವಳ ಮಗನ ಹೆಸರುಗಳು" (ಸಿದ್ಧಾಂತಿ. ೧೫೨). [ಸಂ.]

**ಕೌಲಟೇರ** (ನಾ). ಜಾರೆಯ ಮಗ; ಹಾದರಗಿತ್ತಿಯ ಮಗ; ಸೂಳೆಯ ಮಗ: "ಬಾಂಧಕಿನೇಯಃ, ಬಂಧುಲಃ, ಅಸತೀಸುತಃ, ಕೌಲಟೇಯಃ, ಕೌಲಟೇರಃ – ೫ ಹಾದರಗಿತ್ತಿಯ ಮಗನ ಪೆಸರುಗಳು" (ಸಿದ್ಧಾಂತಿ. ೧೫೨). [ಸಂ.]

**ಕೌಲವ** (ನಾ). [ಜ್ಯೋತಿ] ಏಳು ಚರಕರಣಗಳಲ್ಲೊಂದು: ಬವ, ಬಾಲವ, ಕೌಲವ, ತೈತುಲ, ಗರಜ, ವಣಜ, ಭದ್ರಗಳೆಂಬೇಳು ಚರಕರಣಂಗಳುಂ (ವಿವೇಕ. ೩೨೦). [ಸಂ.]

**ಕೌಲಾಚಾರ** (ನಾ). (ಶಿವಶಕ್ತಿಗಳಲ್ಲಿ ಶಕ್ತಿಗೆ ಪಾರಮ್ಯವನ್ನು ಅಂಗೀಕರಿಸಿ, ಶ್ರೀಚಕ್ರಾದಿಯಂತ್ರಗಳನ್ನು ಸಾಧನಾಕ್ರಮಗಳಿಗೆ ಅನುಸಾರವಾಗಿ ಆರಾಧನೆ ಮಾಡುವ) ಒಂದು ಬಗೆಯ ಶಾಕ್ತ ಸಂಪ್ರದಾಯ: ಈ ಸಂಪ್ರದಾಯದಲ್ಲಿ ಪರಿಪಾಕಾವಸ್ಥೆಯುಂಟಾದಾಗ ಗುರುವು, ಮಂತ್ರ, ಸಾಧಕ ಶಕ್ತಿ–ಇವುಗಳಿಗೆ ಅಭೇದಾನುಸಂಧಾನವುಂಟು. ಪಾರಿಭಾಷಿಕವಾಗಿ ಇದನ್ನು 'ಕೌಲಾಚಾರ' ವೆನ್ನುವರು (ಭಾರದ. ೨೨೭).
[ಕೌಲ + ಆಚಾರ]

**ಕೌಲಿಕ, ಕೌಳಿಕ$_2$** (ಗು). ೧. ಕುಲಕ್ಕೆ ಸಂಬಂಧಿಸಿದ; ವಂಶಪರಂಪರೆಯಿಂದ ಬಂದ. (ನಾ). ೨. ಸೋಗುಗಾರ; ಠಕ್ಕ; ಸಂಪ್ರದಾಯ ಬಾಹಿರ. ೩. ಜನರ ಆಡಿಕೆ; ವದಂತಿ: "ಕೌಲಿಕ [ಪಾಠಾಂ. ಳಿಕ, ಲೀನ]ವೆನೆ ನಾಣ್ನುಡಿಯದು" (ಮಂಗರಾ. ೨೬–೩); ನೇಮಿರಾಜನ ಮರಣದ ಅನುಮಾನದ ಕೌಲಿಕ ಸಿಕ್ಕಿದೊಡನೆ ಭೀಮಾಜಿಯು ವಿಚಾರಣೆ ಮಾಡತೊಡಗಿದನು (ವಾಗ್ದೇವಿ. ೨೩೧). **ಕೌಳಿಕ$_2$**: ೧. ನೀಟ್ಟ ಚಾಟ್ಕ್ರರದವೊಲಪ್ಪೊಡಲ್ ಕಹಕಹಧ್ವನಿ ಕೌಳಿಕನಾದಮಾದಮಾಸುರತರಮಾಗೆ ಬಂದು ಕವಿದತ್ತು ಘಟೋತ್ಕಚ ರೌದ್ರಸಾಧನಂ (ಪಂಪಭಾ.೧೨–೭). ೩. "ಕೌಳಿಕ[ಪಾಠಾಂ. ಲಿಕ, ಲೀನ]ವೆನೆ ನಾಣ್ನುಡಿಯದು" (ಮಂಗರಾ. ೨೬–೩). [ಸಂ.]

**ಕೌಲೀನ** (ಗು). ೧. ಉತ್ತಮಕುಲಕ್ಕೆ ಸೇರಿದ; ಒಳ್ಳೆಯ ವಂಶದ. (ನಾ). ೨. = ಕೌಲಿಕ ೨: "ಕೌಲೀನ[ಪಾಠಾಂ. ಳಿಕ, ಲಿಕ]ವೆನೆ ನಾಣ್ನುಡಿಯದು" (ಮಂಗರಾ. ೨೬–೩). ೩. ಉನ್ನತ ವಂಶ. ೪. ಲೋಕಾಪವಾದ; ಅಪಕೀರ್ತಿ. ೫. ಮೃಗ. ೬. ಚಿನ್ನ; ಸುವರ್ಣ. ೭. ರೋಗಿ. ೮. ಆಕಳು; ಹಸು. ೯. ಕಪ್ಪಾದುದು. ೧೦. ಮೃಗ, ಪಕ್ಷಿ ಮತ್ತು ಹಾವುಗಳ ಕಾಳಗ: "ಮೃಗಂ ಕಾಂಚನವಾದಂ ರೋಗಿ ಶುದ್ಧಾನ್ವಯ ಪಶು ಕರಿದಿಂತೈದೆ ಕೌಲೀನಮಕ್ಕುಂ" (ನಾನಾರ. ೭೭). [ಸಂ.]

**ಕೌಲು$_1$** 'ಕವಲ್$_3$' ನೋ.

**ಕೌಲು$_2$, ಕವಲು$_2$, ಕವುಲು, ಕೌಲ್** (ನಾ). ಒಪ್ಪಂದ; ಕರಾರು; ಒಡಂಬಡಿಕೆ: ಅವರಿಗೆ ವಶವರ್ತಿಯಾಗಿರುವಂತೆ ಒಪ್ಪಿ ಕೌಲು ಮಾಡಿಕೊಂಡನು (ಪಾಳೆಗಾ. ೬); ಔರಂಗಜೇಬನು ಹೇಳಿದ ಕೌಲಿನ ಷರತ್ತುಗಳಿಗೆಲ್ಲ ಒಡಂಬಟ್ಟು ಮೊಗಲ್ ಸಾಮ್ರಾಜ್ಯಕ್ಕೆ ಅಂಕಿತನಾಗುವುದರಲ್ಲಿದ್ದನು (ಛತ್ರಶಿ. ೪೨); ೧೭೯೨ರಲ್ಲಿ ಟಿಪ್ಪುವನ್ನು ಬ್ರಿಟಿಷರು . . . ಸೋಲಿಸಿ, ಶ್ರೀರಂಗಪಟ್ಟಣದಲ್ಲಿ ಒಂದು ಕೌಲನ್ನು ಮಾಡಿಕೊಂಡಿದ್ದರು (ಭಾರದ. ೪೨೫). **ಕವಲು$_2$**: (ಕ). **ಕವುಲು**: ದೇವಂಡನಹಳ್ಳಿ ನಾರಾಯಣಗೌಡನ ಕವುಲಿನ ಮೇಲೆಯುಳಿಶಿ ಬಿಟ್ಟು ಕೊಟದ್ದರಿಂದ (ಹೈದರ. ೩೧). **ಕೌಲ್**: ಅನ್ಯದೇಶೀಯವೆಂದು ಗುರುತಿಸಲಾಗದ ಶಬ್ದಗಳೆಂದರೆ . . . ಇನಾಮ್, ಕೌಲ್, ಬಾಬ್ . . . . ಇತ್ಯಾದಿ (ಭಾಷಾಶಾ. ೧೬೬).

**ಕೌಲುಕಟ್ಟಿಸು** = (ದೇವರಿಗೆ ಅಥವಾ ಭೂತಕ್ಕೆ) ಹರಕೆ ಹೊತ್ತುಕೊಳ್ಳು; ದೈವಚಿತ್ತವನ್ನು ನಿರೀಕ್ಷಿಸು: ಕೃಷ್ಣದೇವರಾಯನು ವಿಜಯನಗರದಲ್ಲಿ ಕಟ್ಟಿಸುತ್ತಿದ್ದ ಕೆರೆಯ ಒಡ್ಡು ಒಡೆದುಹೋಗುತ್ತಿದ್ದುದರಿಂದ ದೇವರಿಗೆ ಕೌಲು ಕಟ್ಟಿಸಿ, ೬೦ ಜನ ಸ್ತ್ರೀಪುರುಷರನ್ನೂ ಕುದುರೆ ಕೋಣಗಳನ್ನೂ ಬಲಿಕೊಟ್ಟನಂತೆ (ವಿಜಸಾ. ೭೯). **ಕೌಲುಬೇಡು** = ಹರಕೆಯನ್ನು ಕೇಳು: ಒಳ್ಳೊಳ್ಳೆ ದೇವರು ಉಳ್ಳಾಡಿ ಹೋಗುವಾಗ ಕಳ್ಳಿ ಒಳಗಿನ ದೇವರು ಕೌಲುಬೇಡಿತು (ಗಾದೆ). [←ಅರ. ಮರಾ. ಕೌಲ್]

**ಕೌಲುಕರಾರು, ಕವುಲುಕರಾರು** (ನಾ). ಒಪ್ಪಂದದ ಪತ್ರ; ಕರಾರುಪತ್ರ: ನಯಭಯದಿಂದ ಕೌಲುಕರಾರುಮಾಡಿ (ರಾಜೇಂದ್ರ. ೧೭). **ಕವುಲುಕರಾರು**: ಅವರಿಗೆ ಕವುಲುಕರಾರಿನಿಂದ ಈ ಕಡೆಗೆ ತಿರುಗಿಸಿಕೊಂಡು (ರಾಜೇಂದ್ರ. ೩೯). [ಕೌಲು$_2$ + ಕರಾರು$_1$ (< ಕರಾರ)]

**ಕೌಲಿ** 'ಕವಿಲ್ಲೆ$_3$' ನೋ.

**ಕೌಲಿತ್ತು** 'ಕವಲಿತ್ತು' ನೋ.

**ಕೌಲೇಯ, ಕೌಳೇಯ** (ಗು). ೧. ಉತ್ತಮಕುಲದಲ್ಲಿ ಜನಿಸಿದ; ಒಳ್ಳೆಯ ವಂಶದಲ್ಲಿ ಹುಟ್ಟಿದ. ೨. ಕುಲಕ್ಕೆ ಸೇರಿದ; ಕುಟುಂಬಕ್ಕೆ ಸಂಬಂಧಪಟ್ಟ. (ನಾ). ೩. ಬೇಟೆಯ ನಾಯಿ: ಕೋಲಂ ಬೀಸುತೆ ಶೀಳಿಡುತಾಲಿಸುತತ್ತಿತ್ತ ಮಿಾಕ್ಷಿಸುತೆ ಕೆಳ್ಕುತೆ ಪೇರ್ಗಾಲಡ್ಡಮೊಡ್ಡಿನಿಲುತಂ ಕೌಲೇಯಮನಲ್ಲಿ ಕರೆಯುತಂ ನಡೆತಂದಂ (ವೃಷವಿ. ೧೧–೬೩). **ಕೌಳೇಯ**. 'ಕೌಳೇಯ ಕುಟುಂಬಿನಿ' ಪರಾ. [ಸಂ.]

**ಕೌಲೇಯಕ, ಕೌಳೇಯಕ** (ಗು). ೧. ಸತ್ಕುಲದಲ್ಲಿ ಹುಟ್ಟಿದ. ೨. ಕುಟುಂಬಕ್ಕೆ ಸಂಬಂಧಪಟ್ಟ. (ನಾ). ೩. ನಾಯಿ; ಶುನಕ: ಘನಶರಭವನು ಕೌಲೇಯಕನು ಕಂಡಿರಲಳುಕಲದ ಶರಭವಾಗಿಯೆ ಮಾಡಿ ಗೆಲಿಸಿದನು (ತಿಮ್ಮಶಾಂ. ೪–೪೬). **ಕೌಳೇಯಕ**: ೩. "ಕೌ[ಪಾಠಾಂ. ಕೋ]ಳೇಯಕಂ ರಾತ್ರಿಜಾಗರಂ . . . ಕುಕ್ಕುರಂ ಭಷಕಮಾ ಶುನಕಮೆಂದೆನಲು ನಾಯೆನಿಕ್ಕುಂ" (ಮಂಗರಾ. ೫೫–೮). 'ಕೌಳೇಯಕ ತತಿ' ಪರಾ. [ಸಂ.]

**ಕೌಲೇಯಕಿ** (ನಾ). ಹೆಣ್ಣುನಾಯಿ: ದೃಪ್ತಕೌಲೇಯಕೀ ಬಾಧಾಕಾರಕಮಾಗಲಾಗದು (ಅಪ್ರಶ. ೫೯). [ಸಂ. ಕೌಲೇಯಕೀ]

**ಕೌಲ್ದಾರ** (ನಾ). "ಪ್ರತ್ಯೇಕ ಕರಾರು ಪತ್ರದ ಮೇಲೆ ಜಮಿಾನನ್ನು ಪಡಕೊಂಡ ರೈತ" (ಮೈಗಜೆ. IV, ೭೭೬).
[ಕೌಲ್ (< ಕೌಲು$_2$) + –ದಾರ$_4$]

**ಕೌವರಿ** 'ಕವ್ವರಿ' ನೋ.

**ಕೌವರೆ** 'ಕವ್ವರೆ' ನೋ.

**ಕೌವರೆಗೊಳ್** 'ಕವ್ವರೆಗೊಳ್' ನೋ.

**ಕೌವುಲಿ** 'ಕವಿಲ್ಲೆ$_3$' ನೋ.

**ಕೌವೇರ** (ಗು). ೧. ಕುಬೇರನಿಗೆ ಸಂಬಂಧಪಟ್ಟ. (ನಾ). ೨. ಒಂದು ಜಾತಿಯ ಗಿಡ; ಪುಷ್ಕರಮೂಲ. [ಸಂ.]

**ಕೌವೇರಿ** (ನಾ). ಕುಬೇರನ ದಿಕ್ಕು; ಉತ್ತರ; ಬಡಗಲು.
[ಸಂ. ಕೌವೇರೀ]

**ಕೌಶಯ** (ನಾ). ದರ್ಭೆಗೆ ಸಂಬಂಧಿಸಿದ್ದು; ದರ್ಭಾಸ್ತ್ರ (?): ಪಾಶುಪತ ಬಾಣ ತಾಕಿ ಸಾಯದವನೀಗ ಕ್ಷುದ್ರ ಕೌಶಯದಿಂ ಸತ್ತನೆಂದಾಡಿದರೇನು (ಭಕ್ತಿಸ. IV, ೪೪). [< ಸಂ. ಕುಶಯ]

**ಕೌಶಲ** (ನಾ). ೧. ಜಾಣತನ; ಚಮರು: ಗಣಿಸುವುದವನರಿವೆಯ ಕೌಶಲಗಳ [ಪಾಠಾಂ. ಮಿಗಿಲೀಲೆಯ] ಗುಣಿಸುವುದವನ ಗುಣಗಳ (ಹದಿಬ. ೩-೪೩); ಧನುರ್ವಿದ್ಯಾಕೌಶಲದಲ್ಲಿಯೂ ಪರಾಕ್ರಮದಲ್ಲಿಯೂ ಅರ್ಜುನನಿಗೆ ಸಮಾನನಾದ ಏಕಲವ್ಯನು (ಕೃವಾಸ. ೬೪). ೨. ಕ್ಷೇಮ; ಸುಖ; ಒಳ್ಳೆಯ ಸ್ಥಿತಿ; ಯೋಗಕ್ಷೇಮ. [ಸಂ.]

**ಕೌಶಲಂದೋಱು** (ಕ್ರಿ). ಜಾಣತನವನ್ನು ತೋರಿಸು; ಚಮತ್ಕಾರವನ್ನು ಪ್ರದರ್ಶಿಸು: ತೋರಹತ್ತಂ ಶಿರೋವಳಯಂ ಬಾಹುತಳಂ ಚಮತ್ಕರಿಸೆ ನಾನಾ ಕೌಶಲಂದೋಱಿದರ್ (ಶಬಶಂ. ೪-೭೫).
[ಕೌಶಲ + ತೋಱು₁ (< ತೋಱ್)]

**ಕೌಶಲಮಯ** (ಗು). ದಕ್ಷತೆಯಿಂದ ಕೂಡಿದ; ಜಾಣತನ ತುಂಬಿದ; ಚಮತ್ಕಾರಯುಕ್ತವಾದ: ಜನರು ಪ್ರಪಂಚದ ರಚನೆಯು ಅಪೂರ್ವವೂ ಕೌಶಲಮಯವೂ ಆದುದೆಂದು ಹೇಳುವರು (ಕವಾಳುಂ. ೧೨೨). [ಸಂ.]

**ಕೌಶಲ್ಯ** (ನಾ). ೧. = ಕೌಶಲ ೧: ಕವಿತ್ವದ ಬಲ್ಲತನದಲ್ಲಿ ಬ್ರಹ್ಮನ ಕರ್ತೃ ಕ್ರಿಯಾ ಕೌಶಲ್ಯವುಳ್ಳವಂ ಸ್ತುತಿಮಾಡಲ್ತಕ್ಕವಂ (ಶಮದ. ಪಿ. ೨೫೧ ಟೀಕೆ); ಪೀಠಿಕೆ ಹಾಕುವಾಗ ಉಪಾಧ್ಯಾಯರ ಕೌಶಲ್ಯ ಬಹುಮಟ್ಟಿಗೆ ಗೊತ್ತಾಗಿ ಹೋಗುತ್ತದೆ (ಶಿಕ್ಷದ. ೨೨೩). ೨. = ಕೌಶಲ ೨: "ಕುಸಲಂ ಕೌಶಲ್ಯಂ" (ಚತುನಿ. II, ೧೧೯). ೩. ಜ್ಞಾನ; ತಿಳುವಳಿಕೆ (?): 'ಯೋಗಃ ಕರ್ಮಸುಕೌಶಲಂ'– ಕರ್ಮಕೌಶಲ್ಯವೇ ಯೋಗ. ಇಲ್ಲಿ ಕೌಶಲ್ಯಶಬ್ದಕ್ಕೆ ಅರ್ಥ ಬೌದ್ಧಿಕವಾದ ಜಾಣತನವೆಂದಲ್ಲ; ಜ್ಞಾನ ಎಂದು (ಭಾರದ. ೧೧೮). [ಸಂ.]

**ಕೌಶಲ್ಯಾರ್ಥಿ** (ನಾ). ಕೆಲಸದಲ್ಲಿ ನಿಪುಣತೆಯನ್ನು ಅಪೇಕ್ಷಿಸುವವನು: "ಒಂದು ಕಸಬಿನಲ್ಲಿ ತನ್ನ ಕಾರ್ಯಕೌಶಲವನ್ನು ಅಭಿವೃದ್ಧಿಪಡಿಸಿಕೊಳ್ಳುವುದಕ್ಕಾಗಿ ಕೂಲಿಯಿಲ್ಲದೆಯೋ ಕಡಿಮೆ ಕೂಲಿಗೋ ಕೆಲಸ ಮಾಡುವವನು; ಕೌಶಲ್ಯಾರ್ಥಿ" (Improver. ಇಂಕನಿ).
[ಸಂ. ಕೌಶಲ್ಯಾರ್ಥಿನ್]

**ಕೌಶಿಕ** (ನಾ). ೧. ಕುಶಿಕವಂಶದವನು; ವಿಶ್ವಾಮಿತ್ರ: ಮನದಲಿ ತನ್ನ ಗುರು ಕೌಶಿಕನ ನೆನೆವುತ . . . ಬಾಣವ ಬಿಟ್ಟ ಸೌಮಿತ್ರಿ (ಕೌಶಿರಾ. ೩೩-೭೩); ಭಾಳನೇತ್ರಂಗೆ ತಾಂ ಸದೃಶನೀ ಕೌಶಿಕಂ (ಶ್ರೀರಾಮಾ. ೩೦-೭೨). ೨. ಗೂಬೆ; ಘೂಕ: "ಕೌಶಿಕಮುಲೂಕಮೆನೆ ಗೂಗೆಯಕ್ಕುಂ" (ಮಂಗರಾ. ೫೦-೪); ಅರಮನೆಯ ಶಿಖರದಲಿ ಕೌಶಿಕ ನೆರೆದು ಕೂಗಲು (ಕೌಶಿರಾ. ೧೪-೪); ನಿಗುರುತಿದೆ ಚಿಗುರುತಿದೆ ನಾಲಗೆ ಪರನಿಂದೆಗೆ ಮಹೇಶ ಭಜನೆಗದೇಕೋ ಹಗಲುಕೌಶಿಕನವೊಲು ಬಾಯ್ದೆಗೆಯದು ನೋಡಾ (ಶಂಕಕಂ. ೫). ೩. ಇಂದ್ರ: "ಸ್ವರಾಡ್ವಾಸವಂ ಬಿಡೌಜಂ ಕೌಶಿಕಂ . . . ಸುತ್ರಾಮನಕ್ಕುಂ" (ಮಂಗರಾ. ೧೨-೧). ೨, ೩: ಗುರುಗೋತ್ರ ಶತ್ರುವಣವಲ್ಲದ ಕೌಶಿಕನಲ್ಲದಿಂದ್ರನೆಂಬುದು . . . ಧರೆ ದುಮ್ಮನನಾಗದೇವನಾ (ಎಕ. V, ಅರಸೀ. ೩೮-೩೦; 12ನೆಯ ಶತ). ೪. ಒಂದು ಬಗೆಯ ಮರ; ಗುಗ್ಗುಳ: "ಗುಗ್ಗುಳಂ ಮಹಿಷಾಕ್ಷಿ ಕೌಶಿಕಾಖ್ಯಂ" (ಮಂಗರಾ. ೪೩-೪೨). ೫. ಹಾವುಗಳನ್ನು ಹಿಡಿದು ಆಡಿಸುವವನು; ಹಾವಾಡಿಗ. ೬. ಅದ್ಭುತ; ಆಶ್ಚರ್ಯ. ೭. ಹಾವಿನ ಮುಖ ಅಥವಾ ಬಾಯಿ. ೮. ರೇಷ್ಮೆ ಬಟ್ಟೆ: ಅಲ್ಲಿಯ ಅಂಗಡಿಗಳಲ್ಲಿ ಕೌಶಿಕ, ಕೌಟುಂಬರ ಮೊದಲಾದ ನಾನಾ ವಿಧದ ವಸ್ತ್ರಗಳು ತುಂಬಿತ್ತು (ಬುದ್ಧಪ. ೧೩ ಮಿಲಿಂದ). ೯. ಚಂದ್ರ; ತಿಂಗಳು: "ಇಂದ್ರನೊಳು ಗೂಗೆಯೊಳು ಗುಗ್ಗುಳದೊಳಾರುಷಿಯೊಳೊಂದಿ ಕೌಶಿಕಮಕ್ಕು" (ಮಂಗರಾ. ೧೪೯-೪೬); "ಚಂದ್ರಂಗಮದ್ಭುತಕೆ ಮುನೀಂದ್ರಂಗಂ ಗುಗ್ಗುಳಕ್ಕೆ ಹಾವಡಿಗಗೆ ನಾಗೇಂದ್ರಮುಖಕ್ಕಾ ಗೂಗೆಗೆ ಇಂದ್ರಂಗೀಯೆಂಟು ನಾಮ ಕೌಶಿಕ ಶಬ್ದಂ" (ನಾನಾಕಂ. ೨೪). [ಸಂ.]

**ಕೌಶಿಕಗುಪ್ತ** (ನಾ). [ಸಂಗೀತ] ಒಂದು ರಾಗದ ಹೆಸರು: ಸೈಂಧವಿ, ಪಂಚಮ, ಷಾಡವ, ದೇವಗುಪ್ತ, ಗಾಂಧಾರಗುಪ್ತ, ಕೌಶಿಕಗುಪ್ತ, ಉಪಾಂಗವೆಂಬೆಂಟುರಾಗಂಗಳುಂ ಷಟ್‌ಸ್ವರ ಜಾತೀಯಂಗಳು (ವಿವೇಕ. ೨೩೩). [ಕೌಶಿಕ + ಗುಪ್ತ]

**ಕೌಶಿಕದರ್ಭೆ** (ನಾ). ದರ್ಭೆಹುಲ್ಲಿನಲ್ಲಿ ಒಂದು ಬಗೆ; ಉದ್ದವಾಗಿ ಬೆಳೆಯುವ ದರ್ಭೆ; ವಿಶ್ವಾಮಿತ್ರ ದರ್ಭೆ: ಲೊಕ್ಕಿಬೇರು, ಔಡಲದ ಬೇರು . . . ಕೌಶಿಕದರ್ಭೆಯ ಬೇರು . . . ಚೂರ್ಣಿಸಿ ಉದಯದಲ್ಲಿ ಸೇವಿಸಿ ಕಲ್ಲುಕಟ್ಟು ಪರಿಹಾರ (ಸಕವೈ. ೩೭೯). [ಕೌಶಿಕ + ದರ್ಭೆ]

**ಕೌಶಿಕಬ್ರಜ** (ನಾ). ಗೂಬೆಗಳ ಗುಂಪು; ಘೂಕಸಮೂಹ: ಜಗತೀಕಂಟಕ ಕೌಶಿಕಬ್ರಜಮುಡಂಗಲ್ . . . ಒಗೆದಂ ತೇಜಮನಪ್ಪುಕೆಯ್ದು ವಿನಯಾದಿತ್ಯಂ (ಎಕ. VII, ಚನ್ನಗಿ. ೭೨-೭; 1220). [ಕೌಶಿಕ + ಬ್ರಜ]

**ಕೌಶಿಕಸಗೋತ್ರ** (ನಾ). ಕೌಶಿಕನು ಮೂಲಪುರುಷನಾಗಿರುವ ಗೋತ್ರ; ವಿಶ್ವಾಮಿತ್ರಗೋತ್ರ: ನನಗೆ ಉತ್ತರ ದಿಕ್ಕಿನಲ್ಲಿ ಉದ್ಯಾಮುಕಗ್ರಾಮದಲ್ಲಿ ವಾಸಮಾಡುವ ಕೌಶಿಕಸಗೋತ್ರದ ಯಜ್ಞ ಬಂಧುವೆಂಬ ಸೋದರಮಾವನಿದ್ದಾನೆ (ಬಾಲಪ್ರ. II, ೯೨೭).
[ಕೌಶಿಕ + ಸಗೋತ್ರ]

**ಕೌಶಿಕಾಧ್ವರ** (ನಾ). ವಿಶ್ವಾಮಿತ್ರನು ಮಾಡಿದ ಯಜ್ಞ, —ಯಾಗ: ಕೌಶಿಕಾಧ್ವರ ರಕ್ಷೆ ಕೌಸ್ತುಭವಕ್ಷ ಲಕ್ಷ್ಮೀಶ ರಕ್ಷಿಪುದನ್ನ ನೊಲಿದು (ಕಕಸಾಂ. ೬೧-೨). [ಕೌಶಿಕ + ಅಧ್ವರ]

**ಕೌಶಿಕಿ** (ನಾ). [ಸಂಗೀತ] ರಾಗದ ಜಾತಿಗಳಲ್ಲೊಂದು: ಅವುಗಳಲ್ಲಿ ಷಡ್ಜಗ್ರಾಮ, ಮಧ್ಯಮಗ್ರಾಮ, ಗೌಡ, ಪಂಚಮಸಾಧಾರಣ, ಕೌಶಿಕಿ, ಮಾಳವಕೌಶಿಕಿಯೆಂಬಾರು ಶುದ್ಧಜಾತಿಯಿಂದಾದ ರಾಗಂಗಳು (ವಿವೇಕ. ೨೩೩). [ಸಂ. ಕೌಶಿಕೀ]

**ಕೌಶಿಕೆ** (ನಾ). ೧. ಕುಡಿಯುವ ಪಾತ್ರೆ; ಪಾನಪಾತ್ರೆ; ಚಷಕ: "ಕಳಸಿಗೆ ಕೌಶಿಕೆ ಮಲ್ಲಿಕೆಯೆನಿಕ್ಕು" (ಮಂಗರಾ. ೬೨-೨೩). ೨. ಒಂದು ನದಿಯ ಹೆಸರು; ಗಂಗಾನದಿಯ ಒಂದು ಉಪನದಿ; ಕೋಸಿನದಿ: ಇಭ ಶರಭ ಶಾರ್ದೂಲ ಹರಿಸೈರಿಭ ಕುರಂಗ ವರಾಹಸೇವಿತದಭಿನವದ ಕಾನನವ ಕಳಿದೈದಿದರು ಕೌಶಿಕೆಯ (ತೊರರಾ. ೧-೧೨-೪). ೩. ಕೋಶದಲ್ಲಿ ನೈಪುಣ್ಯಹೊಂದಿರುವಿಕೆ: ಸಾತ್ವಿಕಿಯೊಳ್ ಸರಸಂ ಬಡೆದು ಕೌಶಿಕೆಯೊಳ್ ಪಜ್ಜಳಂಬೆತ್ತು [ಪಾಠಾಂ. ಸಾತ್ವತಿಯೊಳ್ ಪಜ್ಜಳಂಬೆತ್ತು] ಸಾಮರ್ಥ್ಯಮನೊಳಕೊಂಡು ಕುಳ್ಳಿರ್ದ ಗಮಕಿಗಳ ತಂಡದೊಳಂ (೧೧ಕ. ೨-೧೧೬ ವ). [ಸಂ. ಕೌಶಿಕಾ]

**ಕೌಶೀತಕಿ** (ನಾ). ಋಗ್ವೇದಕ್ಕೆ ಸೇರಿದ ಒಂದು ಉಪನಿಷತ್ತಿನ ಹೆಸರು: ಬೃಹದಾರಣ್ಯಕ . . . ಕೌಶೀತಕೀ, ಮಾಂಡೂಕ್ಯ, ಮುದ್ಗಲ, ಮುಂಡಕ ಮೊದಲಾದುವೇ ಶತೋಪನಿಷತ್ತುಗಳು (ವಿವೇಕ. ೪).
[ಸಂ. ಕೌಶೀತಕೀ]

**ಕೌಶೇಯ** (ನಾ). ೧. ಕೋಶದಿಂದ (ರೇಷ್ಮೆಹುಳುವಿನ ಗೂಡಿನಿಂದ) ಬಂದದ್ದು; ರೇಷ್ಮೆನೂಲು. ೨. ರೇಷ್ಮೆಯ ಬಟ್ಟೆ; ಪೀತಾಂಬರ: ಗಂಗಾಜಳಪವಿತ್ರೀಕೃತಗಾತ್ರಮಂ ಕೌಶೇಯ [ಪಾಠಾಂ. ಕ್ಷೌಮಾಂಬರ] ಪರಿಧಾನನುಮಾಗಿರ್ದ ಮಾನನಿಧಾನನಂ ತಂದು (ಪಂಪಭಾ. ೧೪-೪೭ ವ); ಇವರ ಉಡುಪುಗಳನ್ನು ಕೌಶೇಯ, ಕ್ಷೌಮ, ಕಂಬಳ ಮತ್ತು ಕರಾಳ ಎಂದು ನಾಲ್ಕು ತರಹ ಬಟ್ಟೆಗಳಿಂದ ಮಾಡಿರುತ್ತಾರೆ (ಪ್ರವಾಇ. I, ೧೯೮). [ಸಂ.]

**ಕೌಸಲೇಯ** (ನಾ). ಕೌಸಲ್ಯೆಯ ಮಗ; ರಾಮ: ಈ ಯಮಳರಂ ಪರಿಗ್ರಹಿಸೆಂದೊಡಾ ಕೌಸಲೇಯನತಿ ಧನ್ಯರಾವೆಂದು ವಾಲ್ಮೀಕಿಯಂ ಪ್ರಿಯೋಕ್ತಿಯಿಂದೆ ಕೊಂಡಾಡಿ (ಜೈಮಿಭಾ. ೨೧-೬೦). [ಸಂ.]

**ಕೌಸಲ್ಯ** (ನಾ). ಜಾಣ್ಮೆ; ನೈಪುಣ್ಯ: ಪಾಪಿಯ ಕೂಸಿನಂತೋಪರನು ತಿನುತಿರ್ಪ ಈ ಪರಿಯ ಸತಿಯ ಕೌಸಲ್ಯದೊಳು ಬೀಳ್ವ ಪಾಪಿಗೆಲ್ಲಿಯದು ಸುಕೃತವು (ಗುರುದೋ. ೧೦೪–೧೦). [< ಸಂ. ಕೌಶಲ್ಯ]

**ಕೌಸಾಳೆ** 'ಕಂಸಾಳೆ' ನೋ.

**ಕೌಸಿಕ** (ನಾ). ೧. "ಮಲ್ಲಿಗೆ" ೨. "ಗುಗ್ಗುಳ" (ಸಿಂಕೋ. ೧೪೪). [< ಸಂ. ಕೌಶಿಕ]

**ಕೌಸೀದ್ಯ** (ನಾ). ೧. ಸೋಮಾರಿತನ; ಆಲಸ್ಯ. ೨. ಸಾಲಕೊಟ್ಟು ಬಡ್ಡಿಯನ್ನು ಸಂಪಾದಿಸುವ ವೃತ್ತಿ; ಬಡ್ಡಿಯ ಹಣದಿಂದ ಜೀವನ ನಡೆಸುವುದು. [ಸಂ.]

**ಕೌಸುಂಭ** (ಗು). ೧. ಕುಸುಬೆ ಗಿಡಕ್ಕೆ ಸಂಬಂಧಿಸಿದ. (ನಾ). ೨. ಕುಸುಬೆ ಹೂವು: ರುಚಿರ ತಾಂಬೂಲಾರುಣಾಧರ ಮರೀಚಿಯಿಂ ಕೌಸುಂಭ ಶುಂಭದ್ದುಕೂಲ ಕಲಿತಾಂಗದಿಂ (ಕಾದಂಉ. ೨೬೧); ಆಶಾಂಗನಾ ಕೌಸುಂಭಾರಕ್ತೋತ್ತರೀಯಂ ಮಸಗಿತು . . . ಸಾಂಧ್ಯರುಚಿ (ಚಿಕವಿ. ೬–೮). ೩. ಕುಸುಬೆಹೂವಿನ ಬಣ್ಣ; ಆರಕ್ತವರ್ಣ. 'ಕೌಸುಂಭಾಂಬರ' ಪರಾ. [ಸಂ.]

**ಕೌಸುಂಭರಾಗ** (ನಾ). ಕುಸುಬೆಹೂವಿನ ಕೆಂಪು ಬಣ್ಣ; ಆರಕ್ತ ವರ್ಣ: ಕೌಸುಂಭರಾಗ ರಮಣೀಯಮಾಯ್ತು ಸಂಧ್ಯಾರಾಗಂ (ಆದಿಪು. ೧೨–೪). [ಕೌಸುಂಭ + ರಾಗ]

**ಕೌಸುಂಭಾಂಬರ** (ನಾ). ಕುಸುಬೆ ಹೂವಿನ ಬಣ್ಣದ ಬಟ್ಟೆ: ಗಾಳಿಗೆ ಮಾಜಿಕೊಡ್ಡಿ ಪೋಪ ಪತಾಕೆಯ ಕೌಸುಂಭಾಂಬರದಂತಿರೆ ಮನಂ ಪಿಂದುಟಿಯೆ (ರಾಮಾಶ್ವ. ೩೯–೧೨). [ಕೌಸುಂಭ + ಅಂಬರ]

**ಕೌಸುಮ** (ಗು). ೧. ಕುಸುಮಕ್ಕೆ ಸೇರಿದ; ಹೂವಿಗೆ ಸಂಬಂಧಪಟ್ಟ. ೨. ಪುಷ್ಪಸಮೃದ್ಧವಾದ; ಹೂಗಳಿಂದ ತುಂಬಿದ. ೩. ಹೂವಿನಿಂದ ತಯಾರಿಸಿದ: ಕೌಸುಮ ತಾಲವೃಂತ ಪವನ ವ್ಯಸ್ತಾಳಕಂ . . . ನಿದಾಘದೊಳ್ ಕಣ್ಗಿಂಬಾಯ್ತು ಕಾಂತಾಜನಂ (ರಾಜಶೇ. ೫–೪೬). (ನಾ). ೪. ಹೂವು; ಪುಷ್ಪ: ಗಿರೀಶನ ಪೂಜಿಸುತೊಂದು ವಾಸರೋದಯದರ್ಚನಾಸಮಯದೊಳೊಂದು ಕೌಸುಮ ನಾಸ್ತಿಯಾಗಿ [ಪಾಠಾಂ. ಲೇಸಪ್ಪ ಕುಸುಮ ಕುಂದಿರಲು] ರಲು (ಭೈರವೇ. ೧–೩೧೭). ೫. ಮಕರಂದ; ಬಂಡು: "ಕೌಸುಮಂ – ಬಂಡು" (ಧನಂನಿ. ೧೫೦). [ಸಂ.]

**ಕೌಸೃತಿಕ** (ನಾ). ೧. ಐಂದ್ರಜಾಲಿಕ; ಮಾಯಾವಿ. ೨. ಮೋಸಗಾರ; ವಂಚಕ. [ಸಂ.]

**ಕೌಸ್ತುಭ** (ನಾ). ೧. ವಿಷ್ಣುವಿನ ಎದೆಯನ್ನು ಅಲಂಕರಿಸಿರುವ ಒಂದು ರತ್ನ: ಶ್ರೀತಳ್ಪುರದೊಳ್ ಕೌಸ್ತುಭಜಾತದ್ಯುತಿ ಬಳಸಿ ಕಾಂಡಪಟದಂತಿರೆ (ಕವಿರಾ. ೧–೧); ಶ್ರೀರಮಣಂ ಪುಟ್ಟಿರೆ . . . ರಾರಾಜಿಸಿದತ್ತು ಕೌಸ್ತುಭಂ ಪೇರುರದೊಳ್ (ಜಗವಿ. ೩–೧). ೨. ದೇವಸ್ಥಾನದ ವಿಗ್ರಹಗಳ ಮತ್ತು ಉತ್ಸವಮೂರ್ತಿಗಳ ಎದೆಗೆ ತೊಡಿಸುವ ಒಂದು ವಿಧವಾದ ಆಭರಣ: ಪ್ರತಿಮೆಗಳಿಗೆ ಆಭರಣಗಳೂ ಹೇಳಲ್ಪಟ್ಟಿವೆ. ಮುಖ್ಯವಾದ ಆಭರಣಗಳು – ಕೌಸ್ತುಭ, ಕುಂಡಲ, ಕಿರೀಟ . . . ಮುಂತಾದುವು (ಭಾರದ. ೫೧೬). [ಸಂ.]

**ಕೌಸ್ತುಭದ್ಯುತಿ** (ನಾ). ಕೌಸ್ತುಭ ರತ್ನದ ಕಾಂತಿ, —ಪ್ರಭೆ: ಶ್ರೀರಾಮಾನಟಿ ಕೌಸ್ತುಭದ್ಯುತಿ ಕಿರತ್ಪುಷ್ಪಾಂಜಲಿಕ್ಷೇಪವಕ್ಷೋರಂಗಸ್ಥಿತೆಯಾದ . . . ಕೃಷ್ಣನೆಮಗೀಗಾನಂದಸಂದೋಹಮಂ (ಜಗವಿ. ೧–೧). [ಕೌಸ್ತುಭ + ದ್ಯುತಿ]

**ಕೌಸ್ತುಭಮಣಿ** (ನಾ). ಕೌಸ್ತುಭ ರತ್ನ: ಅಬ್ಜನೇತ್ರಂ . . . ಕ್ಷೀರವಾರಾಶಿಯಿಂ ವಿಶ್ರುತಲಕ್ಷ್ಮೀದೇವಿಯಿಂ ಕೌಸ್ತುಭಮಣಿಸಹಿತಂ ಕೊಂಡಂ (ಪುಷ್ಪಪು. ೧–೭೨). [ಕೌಸ್ತುಭ + ಮಣಿ]

**ಕೌಸ್ತುಭವಕ್ಷ** (ನಾ). ಕೌಸ್ತುಭ ರತ್ನವನ್ನು ಎದೆಯ ಮೇಲೆ ಧರಿಸಿದವನು; ವಿಷ್ಣು: ಕೌಸ್ತುಭವಕ್ಷ ಲಕ್ಷ್ಮೀಶ ರಕ್ಷಿಪುದೆನ್ನಂ (ಶತಸಾಂ. ೬೧–೨). [ಕೌಸ್ತುಭ + ವಕ್ಷ]

**ಕೌಹುರ** (ನಾ). (?): ಆ ಹಿರಣ್ಯಕನುರವ ಬಗಿದಾ ಜೋಹವಳಿಯದ ಮುನ್ನ ವುಗುರಿನ ಕೌಹುರದ ಕಡುಹಾರದಗ್ಗದ ಮಂತ್ರರಾಜನನು ಆಹ ವಾಂಗಣಕ್ಕೆದಿಬರೆ ಕಡು ಕೌಹುರದಿ ಕೈಲಾಸವಾಸಿಯ ದೂಹಿಸದೆ ಕೋಪದಲಿ ಮದನನ ದಹಿಸಿದಂದದಲಿ (ಸಂಧಪ. ೯–೫). [?]

**ಕೌಳ** 'ಕೌಲ' ನೋ.

**ಕೌಳಾಚಾರ್ಯ** (ನಾ). 'ಕೌಲ' ಎಂಬ ಶಾಕ್ತಪಂಥದವರ ಆಚಾರ್ಯ, —ಗುರು: ದೇವರ್ಕಳಾದರೆಲ್ಲಂ ಸೇವಿಸುವರ್ ಮಿಕ್ಕರೀಗ ಕೌಳಾಚಾರ್ಯರ್ ಸೇವಿಪರೆಂದೊಡೆ ಮದ್ಯಮನೇವೊಗಟ್ಟುದೊ ದೂಷಿಸಲ್ಕೆ ಸಲ್ಲದನೆಂಬರ್ (ಸಮುಪ. ೧೪–೫೬). [ಕೌಳ (= ಕೌಲ) + ಆಚಾರ್ಯ]

**ಕೌಳಿ**$_1$ (ನಾ). ಬೇಟೆಯ ನಾಯಿ: ಭಾಳಲೋಚನ ಭಕ್ತರಾಲಯದಿ ಸೇವಿಸದೆ ಕೌಳಿಯಾದುದನೊರೆವೆ (ಪ್ರಾಭರಾ. ೧೯–೧೩). [< ಕೌಳೇಯ]

**ಕೌಳಿ**$_2$ 'ಕಟವೆ' ನೋ.

**ಕೌಳಿಕ**$_1$, **ಕವಳೀಕ** (ನಾ). ೧. ಮಾಂಸದ ವ್ಯಾಪಾರಿ; ಕಟುಕ; ಕಸಾಯಿಗಾರ: "ವೈತಂಸಿಕಂ ಕೌಳಿಕಂ ಕಟಿಗನೆನಿಸಿಕ್ಕು" (ಮಂಗರಾ. ೧೧೧–೪). ೨. ಮೋಸ; ವಂಚನೆ; ಕಪಟ: ಕಣ್ಣನಲ್ಲಿ ನೋಡಿ ಶಾಬರವ ಕಳೆದೆವೆಂದಡೆ ಅದು ಕೌಳಿಕವೆಂದೆ (ಮೋಳಿಮಾ. ೨೬–೧೦೬); ಕೌಳಿಕದಲೀ ಕೌರವರು ಕೊಂಡರೆ ಧರ್ಮಜನ ನೆಲನ (ಕುವ್ಯಾಭಾ. ೨–೩); ಕೌಳಿಕದ ಮಾರೀಚನವನಿಗೆ ಬೀಳುತೊದಱಿದ ಬೆದಱುದನಿ ರಘುಪತಿಯ ದನಿಯಂತೆ (ತೊರರಾ. ೩–೯–೧); ಕುಹಕಿಗಳ ಕೌಳಿಕವ ಹಳಿದೊಡೆ ಸಹಸದಲಿ ಪಗೆಯುಂಟೆ (೧೧ವಿಂ. ೧೦೦–೧೬). ೩. ಮೋಸಗಾರ; ವಂಚಕ; ಕಪಟಿ: "ಕೌಳಿಕ – ಕೌಟಿಕ = ಕುಟಿಲ" (ತದ್ಭಕೋ. ೯). ೪. ಸಂಕಲೆ; ನಿಗಳ; ಬಂಧನ (?): ಆಡಿಯಡಪಾದ ಮೇಲಣ ಕೌಳಿಕವನು ಬಿಡಿಸಿ ಮಾಡಿದ ದ್ವಿಪದಂತೆ ಕಡು ಸೊಗಯಿಸುವ ಪರಂಜ್ಯೋತಿರೂಪನಡಿಗಳಿಗಾನೆಱಗುವೆನು (ಪ್ರಭಂಜ. ೧–೨). **ಕವಳೀಕ**: ೨. ಕಯ್ಯಲ್ಲಿ ಹಿಡಿದರೆ ಕಲ್ಲು ಸಿಕ್ಕಿತ್ತಲ್ಲದೆ ಲಿಂಗವಿಲ್ಲ ಎಂದೆ ಕಣ್ಣಿನಲ್ಲಿ ನೋಡಿ ಕವಳೀಕರಿಸಿದೆನೆಂದಡೆ ಅದು ಕವಳೀಕವೆಂಬೆ (ವಚಶಾ. I, ೮೫). [< ಸಂ. ಕೌಟಿಕ]

**ಕೌಳಿಕ**$_2$ 'ಕೌಲಿಕ' ನೋ.

**ಕೌಳಿಕಂದಾಯ** (ನಾ). ಭತ್ತದ ರೂಪದಲ್ಲಿ ಕೊಡುವ ಕಂದಾಯ, —ತೆರಿಗೆ: ಅವರಿಗೆ ಬೇಕಾದ ಹಣವನ್ನೆಲ್ಲಾ ಆ ಕುಳ್ಳನ ಚೀಲವೇ ಕೊಡುತ್ತಿತ್ತು. ಆದ್ದರಿಂದ ರಾಜ್ಯದಲ್ಲಿ ಅವರಿರುವವರೆಗೂ ಯಾರೂ ಕೌಳಿಕಂದಾಯ ಕೊಡಬೇಕಾಗಿರಲಿಲ್ಲ (ದೇಶಾಂಕ. ೯೧). [ಕೌಳಿ$_2$ (< ಕಟವೆ) + ಕಂದಾಯ]

**ಕೌಳಿಕೆ** 'ಕವಳಿಗೆ$_1$' ನೋ.

**ಕೌಳಿಗೆ**$_1$ 'ಕವಳಿಗೆ$_1$' ನೋ.

**ಕೌಳಿಗೆ**$_2$ 'ಕವಳಿಗೆ$_2$' ನೋ.

**ಕೌಳು**$_1$ (ನಾ). ಕವಲಾಗಿರುವಿಕೆ; ಟಿಸಿಲು; ಕವಲೊಡೆದ ಕೊಂಬೆ. 'ಕೌಳುಗೋಲ್' ಪರಾ. [< ಕವಲ್$_1$]

**ಕೌಳು**$_2$ 'ಕವುಳು' ನೋ.

**ಕೌಳುಗೋಲ್** 'ಕವಲ್ಗೋಲ್' ನೋ.

**ಕೌಳುಡೆ** 'ಕವುಳುಡೆ' ನೋ.

**ಕೌಳೇಯ** 'ಕೌಲೇಯ' ನೋ.

**ಕೌಳೇಯಕ** 'ಕೌಲೇಯಕ' ನೋ.

**ಕೌಳೇಯಕತತಿ** (ನಾ). ನಾಯಿಗಳ ಗುಂಪು, —ಸಮೂಹ: ಆ ಯತಿಗಾಯತಿಗಿಡೆ ಕೌಳೇಯಕತತಿ ನೃಪತಿ ಕೇಳರ್ದು . . . ಪೊಯ್ಮಲ್ (ಯಶೋಚ. ೪-೪೪).
[ಕೌಳೇಯಕ (= ಕೌಲೇಯಕ) + ತತಿ]

**ಕೌಳೇಯಕುಟುಂಬಿನಿ** (ನಾ). (ಬೇಟೆಯ) ಹೆಣ್ಣುನಾಯಿ: ಕಾಯಲ್ವೇಟ್ಟುದು ಸಿಂಹನಿಕಾಯಮನೆಂದಭಯದಾನಮಂ ಬೇಡುವ ಸಿಂಹೀಯೂಥಮೆಂದಿನಂ ಕೌಳೇಯಕುಟುಂಬಿನಿಗಳೆಸೆದುವಾತನ ಕೆಲದೊಳ್ (ಕಾದಂಪೂ. ೧೬೪).
[ಕೌಳೇಯ (= ಕೌಲೇಯ) + ಕುಟುಂಬಿನಿ]

**ಕೌಱಿಡು** 'ಕವುಱಿಡು' ನೋ.

**ಕೌಱು₁** 'ಕವುಱು₁' ನೋ.

**ಕೌಱು₂** 'ಕವುಱು₂' ನೋ.

**ಕೌಱುನಾಱು** 'ಕವುಱುನಾಱು' ನೋ.

**ಕೌಱೇಳ್** 'ಕವುಱೇಳ್' ನೋ.

**ಕೌಱೇಱ್** 'ಕವುಱೇಳ್' ನೋ.

**ಕೌಱೆಣ್ಣೆ** (ನಾ). ಕಮರುವಾಸನೆ ಬರುವ ಎಣ್ಣೆ; ಕರಿದ ಎಣ್ಣೆ; ಕಂಟಾದ ಎಣ್ಣೆ: ಕಾಪ್ಪುಟ್ಟಿಯ ಬತ್ತಿಯೊಳಂ ಕೌಱೆಣ್ಣೆಯೊಳ್ ಪೊತ್ತಿಸಿದ ದೀಪಂಗಳುಂ (ಲೀಲಾವ. ೭-೬೪ವ).
[ಕೌಱು₂ (< ಕಮಱು₂) + ಎಣ್ಣೆ]

**ಕ್ಯಾಂಪು** (ನಾ). ೧. ಬೀಡು; ಬಿಡಾರ. ೨. ಪಾಳೆಯ; ಶಿಬಿರ; ಠಾಣ್ಯ: ಅವನ ತಂದೆಗೆ ಜಾಲಹಳ್ಳಿಯ ಕ್ಯಾಂಪಿನಲ್ಲಿ ಕೆಲಸ (ನಾಡಿಗೇ. ೧೪೧). [← ಇಂ. Camp]

**ಕ್ಯಾತೆ** (ನಾ). ತರಲೆ; ತಂಟೆ: ಅಲ್ಲಿ ಕೂತುಕೊಂಡು ಕ್ಯಾತೆ ತೆಗೆಯೋಕೆ ಗೊತ್ತು (ಮುನಿಮಾ. ೧೦೮). [?]

**ಕ್ಯಾದಿಗೆ** (ನಾ). ಒಂದು ಜಾತಿಯ ಸುವಾಸನೆಯ ಹೂವು; ತಾಳೆ ಹೂ: ಕಮಲ ಮಲ್ಲಿಗೆ ಜಾಜಿ ಸಂಪಿಗೆ ಕ್ಯಾ[ಪಾಠಾಂ. ಕೇ]ದಿಗೆ ವಿಮಲ ಘಂಟಿ ಪಂಚವಾದ್ಯವಿದ್ದು (ಪುರಂದ. ೨-೮೧-೯); ಕ್ಯಾದಿಗೆ ಬೇರಿನ ರಸ ಹದಿನಾರು ಸೇರ್‍ನ್ನೂ . . . ಆ ಕೊಪ್ಪರಿಗೆಯಲ್ಲಿ ಹಾಕಿ ಕಾಯಿಸಿ (ಸಕವೈ. ೬೨). [< ಕೇದಗೆ]

**ಕ್ಯಾನ್ನಾಗಿಡ** (ನಾ). ಒಂದು ಸಸ್ಯದ ಹೆಸರು; ಕಾಬಾಳೆಗಿಡ: ಕ್ಯಾನ್ನಾಗಿಡ, ಚರೆಗುಂಡಿನ ಗಿಡ, ಸರ್ವಜಯ, ಹೂದಿಂಗಣ (ಮೈಔಗಿ. ೧೭-೨೯೯). [← ಇಂ. Canna]

**ಕ್ಯಾನ್ಸರ್** (ನಾ). ಏಡಿಹುಣ್ಣು; ಅರ್ಬುದರೋಗ: "ತಾನಿರುವ ದೇಹಭಾಗವನ್ನು ತಿಂದುಹಾಕಿ, ಮಿತಿಯಿಲ್ಲದೆ ಹರಡುತ್ತ, ತೆಗೆದುಹಾಕಿದಲ್ಲಿ ಮತ್ತೆ ಬೆಳೆಯುತ್ತ ಹೋಗುವ ಕೆಟ್ಟ ಕುರು; ಏಡಿಹುಣ್ಣು; ಅರ್ಬುದ ರೋಗ" (Cancer. ಇಂಕನಿ); ಕ್ಯಾನ್ಸರ್ ಬರುತ್ತದೆಂಬ ಭಯದಿಂದಲಾದರೂ ಸಿಗರೇಟ್ ಬಿಟ್ಟರೆ . . . ತನ್ನೊಳಗೇ ಚಿಂತಿಸುತಿರುವಂತೆ ಸ್ಟೂಅರ್ಟ್ ಕೇಳಮನೆ ಮಾತಾಡಿದ (ಹೊಸಕ್ಷಿ. ೨೧೪).
[← ಇಂ. Cancer]

**ಕ್ಯಾಬೇಜ್** (ನಾ). ಕೋಸುಗಡ್ಡೆ: ಮುದ್ದೆಕೋಸು, ಕೋಸುಗೆಡ್ಡೆ, ಕ್ಯಾಬೇಜ್ (ಮೈಔಗಿ. ೧೪-೨೫೦). [← ಇಂ. Cabbage]

**ಕ್ಯಾಮರ** (ನಾ). ಚಿತ್ರವನ್ನು ತೆಗೆಯುವ ಯಂತ್ರಸಲಕರಣೆ; ಛಾಯಾಗ್ರಾಹಿ: ಮಾವಿನ ಮರವು ಕ್ಯಾಮರಕ್ಕೆ ಅಡ್ಡಬರುವಂತಿಹುದು (ಅರರೋ. ೪). [← ಇಂ. Camera]

**ಕ್ಯಾರಟ್ಟು, ಕ್ಯಾರೆಟ್** (ನಾ). ಒಂದು ಬಗೆಯ ಮೂಲಂಗಿ; ಕೆಂಪು ಮೂಲಂಗಿ; ಗಜ್ಜರಿ: ಕೆಂಪು ಮೂಲಂಗಿ, ಗಾಜರಗೆಡ್ಡೆ, ಕ್ಯಾರಟ್ಟು (ಮೈಔಗಿ. ೨೯-೫೫೯). ಕ್ಯಾರೆಟ್: ಕ್ಯಾರೆಟ್ ಕೋಸಂಬರಿ ಬೂದಿ ಕುಂಬಳಕಾಯಿ ಮಜ್ಜಿಗೆಹುಳಿ (ಅನ್ನಾವ. ೫೭); ಕ್ಯಾರೆಟನ್ನು ನಮ್ಮ ದೇಶದಲ್ಲಿ ತರಕಾರಿಯಂತೆ ಉಪಯೋಗಿಸುತ್ತಾರೆ (ತರಬೆ. ೪೯).
[← ಇಂ. Carrot]

**ಕ್ಯಾರೆಟ್** 'ಕ್ಯಾರಟ್ಟು' ನೋ.

**ಕ್ಯಾಸತ್ತೆ** (ನಾ). ಒಂದು ಬಗೆಯ ಮರ: ಬೀಗದಮರ, ಗುಡ್ಡದರೆಂಬೆ, ಕ್ಯಾಸತ್ತೆ, ರಾಹುಬೀಜ (ಮೈಔಗಿ. ೩೩-೬೩೪). [?]

**ಕ್ಯಾಸುರಿನ** (ನಾ). ಒಂದು ಜಾತಿಯ ಮರ; ಸರ್ವೆಮರ: ಸರ್ವೆ ಮರ, ಕ್ಯಾಸುರಿನ (ಮೈಔಗಿ. ೧೯-೩೪೪). [← ಇಂ. Casuarina]

**ಕ್ರಂದನ** (ನಾ). ೧. ಕೂಗುವಿಕೆ; ಕರೆ; ಆಹ್ವಾನ: ಆ ಗಳಿಗೆಗೆ ನನ್ನ ಕಣ್ಣಿನಲ್ಲಿ ಏನೊ ಒಂದು ಕ್ರಂದನವನ್ನು ಕಂಡಿರಬೇಕು (ಕಾಗೆಕ. ೧೨೯). ೨. ಅಳುವಿಕೆ; ರೋದನ: ಯಾವದೊಂದು ಮನೆಯ ಶಿಶುವಿನ ಕ್ರಂದನ ಕೂಡ ಕೇಳಬರುತ್ತಿರಲಿಲ್ಲ (ಅಂಜಿಕೆ. ೧೪).

ಕ್ರಂದನಮಾಡು = ಕೂಗಿಕೊಳ್ಳು; ಒರಲು: 'ಕ್ರ್ಯಾವ್' ಎನ್ನುವ ಕ್ರೂರ ಭೀಕರವಾದ ಪ್ರೇತದ ಕೂಗಿನಂತೆ ಕ್ರಂದನಮಾಡುತ್ತ ಗೋದಿ ಹೋಗೋ ಬಾಗಿಲು ತೆರೆದು ಹೊರಗೆ ಬಿದ್ದಳು (ಹಳ್ಳಿಹಾ. ೧೨೧). [ಸಂ.]

**ಕ್ರಂದಿತ** (ಗು). ಮೊರೆಯಿಟ್ಟ; ಅತ್ತ; ರೋಧಿಸಿದ. [ಸಂ.]

**ಕ್ರಕಚ** (ನಾ). ೧. ಕರಗಸ; ಗರಗಸ: ಒಡಲುಮನಾತ್ಮನುಮಂ ಬೇರ್ಪಡಿಕುಂ . . . ಏಂ ಪಡೆಮಾತರಭಟ್ಟಾರಕರಡಿದಳಿರೊಳ್ ಪೊಳೆವ ನಖರುಚಿ ಕ್ರಕಚಂಗಳ್ (ಪಂಪರಾಮಾ. ೭-೨); ಮೌನಿಶಿಲೆಯಂ ಧ್ವನಿ ಕ್ರಕಚದಿಂ ಗರ್ಗರಿಸಿ ಕೊಯ್ವಂತೆವೋಲ್ (ಶ್ರೀರಾಮಾ. ೩೩-೧೪೩). ೨. ಒಂದು ನರಕದ ಹೆಸರು: ಕ್ರಕಚ ಕುಂಭೀಪಾಕಮುಖ ನಾರಕದೊಳರಮನೆ ನಿನಗೆ (ಕುವ್ಯಾಗ. ೯-೩೧). [ಸಂ.]

**ಕ್ರಕಚವಿದಾರಣ** (ನಾ). ಗರಗಸದಿಂದ ಕೊಯ್ಯುವಿಕೆ, —ಸೀಳುವಿಕೆ: ಅತಿದಾರಣ ಕ್ರಕಚವಿದಾರಣದೊಳಮತಿ ಕರಾಳ ಶೂಲಾರೋಹಣದೊಳಂ (ಅಜಿಪು. ೧೧-೧೦ವ); ಶೂಲಾರೋಹಣ ಕ್ರಕಚವಿದಾರಣ ಕಾರಾಗಾರ ವಿನಿವೇಶನ ಸರ್ವಸ್ವಹರಣಾದಿಗಳಂ ಇಲ್ಲಿಯೆ ಪಡುಗುಂ (ತತ್ತ್ವಪ್ರ. ೨೭೧). [ಕ್ರಕಚ + ವಿದಾರಣ]

**ಕ್ರಕಚೆ** (ನಾ). ಒಂದು ಸಸ್ಯದ ಹೆಸರು: "ಕ್ರಕಚೆಯೆನೆ ಗರಗತಿಗಮಕ್ಕು" (ಮಂಗರಾ. ೩೫-೧೪). [ಸಂ. ಕ್ರಕಚಾ]

**ಕ್ರಕಣ** (ನಾ). = ಕ್ರಕರ ೧: "ಕೃಕಣ - ಕ್ರಕರ" (ನಾಚಿರಾ. ೬).
[< ಸಂ. ಕೃಕಣ]

**ಕ್ರಕರ** (ನಾ). ೧. ಒಂದು ಬಗೆಯ ಪಕ್ಷಿ; ಕಬ್ಬಕ್ಕಿ; ಕಾಡುಕೋಳ್ಕರೆ. ೨. ಒಂದು ಬಗೆಯ ಕಂಟಿ; ಪೊದೆ. [ಸಂ.]

**ಕ್ರಕರವಕ್ಕಿ** (ನಾ). = ಕ್ರಕರ ೧: "ಕೃಕರಃ, ಕ್ರಕರಃ – ಈ ೨ ಕ್ರಕರವಕ್ಕಿ" (ನಾಚಿರಾ. ೧೧೪). [ಕ್ರಕರ + ಪಕ್ಕಿ₁]

**ಕ್ರತಕ** (ನಾ). ಒಂದು ಬಗೆಯ ಮರ; ಎಲಹೂಲಿ: "ಎಲಹುರಿಯ ಕರ್ಕಶಂ ಕ್ರತಕ [ಪಾಠಾಂ. ಕತ, ಕತಕ, ಕತಪ]ವಕ್ಕುಂ" (ಮಂಗರಾ. ४೦-೩೧). [?]

**ಕ್ರತು** (ನಾ). ೧. ಯಾಗ; ಯಜ್ಞ: ಕ್ರತುವ ಮಾಡಿಸಬೇಕು ಬಂದೆನಗಿತರ ದೈವವನಱಿಯೆ ನೀವೇ ಗತಿಯೆನುತ ಮೈಯಿಕ್ಕೆ (ಕೌಶಿರಾ. ೧-೫೭); ಕ್ರತುಗಳಾದೆಸೆಯಾಭಿಚಾರ ಕ್ರತುಗಳೆದೆಸೆಯಾಗಿ ಸಂದವು (ಕುವ್ಯಾಕ. ೨೨-೫); ಹದಿನೆಂಟು ದಿನ ಅವಿಚ್ಛಿನ್ನವಾಗಿ ನಡೆಯಿತು ಈ ಅಶ್ವಮೇಧ ಕ್ರತು (ಶಾಂತಲಾ. ೨೩೩).

೨. ಸಂಕಲ್ಪ; ಧ್ಯಾನ: "ಕ್ರತು ಎಂದರೆ ಸಂಕಲ್ಪವು; ಧ್ಯಾನವು ಎಂದರ್ಥ" (ಬ್ರಹ್ಮಭಾ. ೨೫೨). ೩. ಧ್ಯೇಯ: ಕ್ರತುವೆಂದರೆ (ಜೀವನದ) ಧ್ಯೇಯ, ಮತ್ತು ಅದೇ ಧ್ಯೇಯಸಾಧಕವೂ ಸಂಕಲ್ಪಾತ್ಮಕವೂ ಆದ ಕರ್ಮ (ಋಕ್ಸಾರ. ೮೬ ಪೀಠಿಕೆ). ೪. ಮನಸ್ಸಿನ ಹದಿನಾರು ವಿಕಾರಗಳಲ್ಲಿ ಒಂದು: ಸಂಜ್ಞಾನ . . . ಕ್ರತು, ಅಸು, ಕಾಮ, ವಶ ಈ ಹದಿನಾರು ಮನಸ್ಸಿನ ವಿಕಾರಗಳೆಂದಿರುವವು (ಅಮೃತ. ೬–೨೬ ಟೀಕು). ೫. ಒಬ್ಬ ಋಷಿಯ ಹೆಸರು: ಪುಲಸ್ತ್ಯ . . . ಕ್ರತು . . . ಕೌಶಿಕರೆಂಬೀ ದ್ವಾದಶಋಷಿಗಳು (ವಿವೇಕ. ೨೬೬). ೬. ಒಂದು ನರಕದ ಹೆಸರು: ಕ್ರತು, ಪೂತಿಮಾಂಸ, ತಪ್ತಜತುಲೇಪ, ದ್ರವತ್ರಪು, ಪುಚ್ಛಾಸವೆಂಬೈದು ಮಂತ್ರಿ ನರಕಂಗಳಿಂ ಕೂಡಿ (ವಿವೇಕ. ೧೮೦). ೭. ಗಜ್ಜುಗದ ಗಿಡ: "ಗದುಗು ಕ್ರತುವೆನಿಕ್ಕು" (ಮಂಗರಾ. ೪೫–೪೮). ೮. ಪ್ರಜಾಪತಿಗಳಲ್ಲಿ ಒಬ್ಬ. ೯. ವಿಶ್ವೇದೇವರಲ್ಲಿ ಒಬ್ಬ. ೧೦. [ಗಣಿತ] ಸಂಖ್ಯೆಯ (ಏಕ್ಕಂ ದಾಹಂ ಮೊದಲಾದ) ಸ್ಥಾನಗಳಲ್ಲಿ ೩೫ನೆಯ ಸ್ಥಾನ; ೩೫ ಅಂಕಗಳಿರುವ ಸಂಖ್ಯೆ: ಪಂಚತ್ರಿಂಶತ್ ಕ್ರತುಶ್ಚೈವ ಷಡುತ್ರಿಂಶತ್ ಮಹಾಕ್ರತುಃ (ವ್ಯವಹಾ. ೮–೧೯). [ಸಂ.]

**ಕ್ರತುಕ** (ನಾ). ಒಂದು ಊರಿನ ಹೆಸರು. ℙ ಈಗಿನ ಗದುಗು: ಕ್ರತುಕ ಸ್ವಯಂಭು ತ್ರಿಕೂಟೇಶ್ವರ ದೇವಸ್ಥಾನಾಚಾರ್ಯಸ್ಯ (ಎಇ. III, ೨೧೯–೧೪; 1191). [ಸಂ.]

**ಕ್ರತುಕರ್ತೃ** (ನಾ). ಯಾಗವನ್ನು ಮಾಡುವವನು: ಸೂತರಿಂ ಮತ್ತೆ ತತ್ಕ್ರತುಕರ್ತೃ ಪುರುಷರಿಂ . . . ಮೆಱೆದುದಾ ರಾಯನೊಡ್ಡೋಲಗಂ (ಭಾವಚಿಂ. ೬–೫). [ಸಂ.]

**ಕ್ರತುಜೀವನ** (ನಾ). ಧ್ಯೇಯನಿಷ್ಠ ಜೀವನ: ಅವರುಗಳ ಕ್ರತುಜೀವನದಲ್ಲಿ ಮೊಟ್ಟಮೊದಲ ಸಲ ದೊರೆತಿರುವ ಈ ವಿರಾಮದ ದಿನಗಳಲ್ಲಿ (ವಂಶವೃ. ೨೬೩). [ಕ್ರತು + ಜೀವನ]

**ಕ್ರತುಧ್ವಂಸಿ** (ನಾ). (ದಕ್ಷನ)ಯಜ್ಞವನ್ನು ನಾಶಪಡಿಸಿದವನು; ಶಿವ. [< ಸಂ. ಕ್ರತುಧ್ವಂಸಿನ್]

**ಕ್ರತುಪತಿ** (ನಾ). ಯಜ್ಞಕ್ಕೆ ಒಡೆಯ; ಯಾಗದ ಯಜಮಾನ: ಸತಿಕುಮಾರನು ಸಹಿತ ಮಂತ್ರಿ ಬಲಗೂಡಿಯಾ ಕ್ರತುಪತಿಯು ವೊಲವಿಂದ ಪೂಜಿಸುಟ್ಟು (ಹಚಕಾ. ೨೩೩ ಪಂ). [ಕ್ರತು + ಪತಿ]

**ಕ್ರತುಪುರುಷ** (ನಾ). ಯಜ್ಞಕ್ಕೆ ಅಧಿದೇವತೆ; ವಿಷ್ಣು: ಕ್ರತುಪುರುಷನಾದಿಪುರುಷಂ ಶ್ರುತಿಪುರುಷನಿರಲ್ಕೆ ಮಿಕ್ಕ ಪುರುಷರಪೂಜ್ಯರ್ (ಜಗವಿ. ೧೬–೧೬); ಈಗಳರಿತೆನಯ್ ಕ್ರತುಪುರುಷನಂದಿತ್ತ ಸಂದೇಶದರ್ಥಮಂ (ಶ್ರೀರಾಮಾ. ೧೦೨–೬೧). [ಕ್ರತು + ಪುರುಷ]

**ಕ್ರತುಬುದ್ಧಿ** (ನಾ). ೧. ಸಂಕಲ್ಪ ಶಕ್ತಿ; ನಿಶ್ಚಯ ಬುದ್ಧಿ. ೨. ಸಂಕಲ್ಪ ಶಕ್ತಿಯುಳ್ಳವನು: ನರರೊಳಗೆಯಾ ಕ್ರಮದಿಂ ದ್ವಿಜಾತಿಗಳು ತದ್ವಿಜಾತಿಗಳೊಳುತ್ತಮರೆನಿಪರೈ ವಿಪ್ರರಾ ವಿಪ್ರರೊಳಗೆ ಕ್ರತುಬುದ್ಧಿಗಳು ಮಿಗಿಲಪ್ಪರು (ವೀಶ್ವಪು. ೮–೯–೫); ವೇದವಿದರಧಿಕರವರಿಂದೆ ಕ್ರತುಬುದ್ಧಿಗಳ್ ಪಿರಿಯರ್ (ಕುಮಾಪು. ೧–೮೦). [ಕ್ರತು + ಬುದ್ಧಿ]

**ಕ್ರತುಭುಗ** (ನಾ). ಯಜ್ಞದಲ್ಲಿ ಅರ್ಪಿಸಿದ ಹವಿಸ್ಸನ್ನು ಸೇವಿಸುವವನು; ದೇವತೆ: ಕುಸುಮಾಕ್ಷತಂ ಲಾಜೆ ದಧಿ ದೂರ್ವೆ ಘೃತಗಳಿಂ . . . ಕೃತುಭುಗನಿಗರ್ಪಿಸುತೆ ಭೂಸುರರ್ವೆರಸಿ (ವೆಂಕಾರಾ. ೨–೮–೩೨). [< ಸಂ. ಕ್ರತುಭುಜ್]

**ಕ್ರತುಭುಜ** (ನಾ). = ಕ್ರತುಭುಗ: ಸಲಹಿದಂ ತತ್ ಕ್ರತುಭುಜರನೆಂದಿನ ಪರಿಯೊಳರೆ ನಂದಿಕೇಶ್ವರನು (ಬಸವು. ೨–೨೬); ಕ್ರತುಭುಜರ ಸುಡಲು ಗರಳವನುಗುಳ್ವ ಲೋಚನದಿ ಶ್ರುತಿಪನಂತೆ (ಭಾವಚಿಂ. ೧–೨೩). [< ಸಂ. ಕ್ರತುಭುಜ್]

**ಕ್ರತುಮಯ** (ಗು). ೧. ಯಜ್ಞದಿಂದ ತುಂಬಿದ; ಯಾಗಮಯ. (ನಾ). ೨. ಯಜ್ಞ ಸ್ವರೂಪನಾದವನು: ಪುರುಷನು ಕ್ರತುಮಯ; ಆದ್ದರಿಂದ ಪ್ರತಿವ್ಯಕ್ತಿಯೂ ಕ್ರತುವನ್ನು ಆಚರಿಸಬೇಕು (ಋಕ್ಸಾರ. ೮೬ ಪೀಠಿಕೆ). [ಸಂ.]

**ಕ್ರತುಮೂರ್ತಿ** (ನಾ). = ಕ್ರತುಪುರುಷ: ಕ್ರತುಮೂರ್ತಿ ದಯೆಗೆಯ್ದು ಪಾಯಸಪ್ರಾಣಮಂ ನೀನುಮಾ ನಿನ್ನ ತಂಗೆಯರಿದಂ ಪಸುಗೆಗೊಳ್ವಿವ್ (ಶ್ರೀರಾಮಾ. ೧೪–೩೬೫). [ಕ್ರತು + ಮೂರ್ತಿ]

**ಕ್ರತುರಂಗ** (ನಾ). ಯಜ್ಞಸ್ಥಳ; ಯಾಗಮಂಟಪ: ನೆರೆದುದಯ್ . . . ದೇಶ ದೇಶದ ಜನಂ ಕ್ರತುರಂಗದೊಳ್ ವಿಪುಲಸಂಖ್ಯೆಯಲಿ (ಶ್ರೀರಾಮಾ. ೧೧–೨೮೧). [ಕ್ರತು + ರಂಗ]

**ಕ್ರತುವಿನಾಶ** (ನಾ). = ಕ್ರತುಧ್ವಂಸಿ: ಅಸುವೇ ಸಂಹರಿಸಿಯಾ ಸಮಸ್ತರ ಕಾಯ್ದ ಶೇಷಧರ ಭದ್ರಕಾಳಿ ಸಮೇತಂ ಕ್ರತುವಿನಾಶ ಭೀಕರರುದ್ರ . . . ವೀರಭದ್ರ (ಗುರುಚಾ. ೧೦–೨೪). [ಕ್ರತು + ವಿನಾಶ]

**ಕ್ರತುಶಕ್ತಿ** (ನಾ). ಸಂಕಲ್ಪ ಶಕ್ತಿ; ದೃಢ ನಿರ್ಧಾರದ ಶಕ್ತಿ: ಏಕಚಿತ್ತನಾಗಲು ಬೇಕಾದುದೇನು? ಕ್ರತುಶಕ್ತಿಯ ಪ್ರಭಾವ (ಸಮುಜೀ. ೩೦೨); ಅವಳ ಕ್ರತುಶಕ್ತಿಯ ನೆರವಿಲ್ಲದೆ ಬರಿಯ ತಮ್ಮ ಶಕ್ತಿಯಿಂದಲೇ ಮುನ್ನಡೆಯುವುದು ಅವರಿಗೆ ನೀರಸವಾದ ಸಾಧನೆ ಎನಿಸುತ್ತಿತ್ತು (ವಂಶವೃ. ೧೪೧). [ಕ್ರತು + ಶಕ್ತಿ]

**ಕ್ರತುಹರ** (ನಾ). = ಕ್ರತುಧ್ವಂಸಿ: ಕ್ರತುಹರ ಕಪಟವಿದೂರಂ ರತಿಪತಿಹರಣಂ ಜಿತಭವಮರಣಂ (ಹಮ್ಮೀರ. ೨–೧೦). [ಸಂ.]

**ಕ್ರಥನ** (ನಾ). ಕೊಲೆ; ವಧೆ. [ಸಂ.]

**ಕ್ರಮ** (ನಾ). ೧. ನಡೆಯುವಿಕೆ; ಮುಂದುವರಿಯುವಿಕೆ. ೨. ಹೆಜ್ಜೆಯಿಡುವುದು; ನಡೆಯುವುದು. ೩. ಅಡಿ; ಪಾದ; ಕಾಲು: "ಚರಣಂ ಕ್ರಮಂ ಪಾದಮಂಘ್ರಿಪದಮೆನೆ ಕಾಲು" (ಮಂಗರಾ. ೯೮–೧೦); ಸಮನಿಸಲಿವರ ಮನೋರಥಂ . . . ಅಭವ ಭವತ್ಕ್ರಮಕಮಳ ಸೇವೆಯಿಂದ (ಆದಿಪು. ೯–೧೧); ವಾಮನ ಕ್ರಮಂ ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ (ಲೀಲಾವ. ೧–೧೧). ೪. ಒಂದಾದ ಮೇಲೊಂದು ಬರುವ ನಿಯಮ; ಪಾಳಿ; ಪರಂಪರೆ: "ಪಾಟಿ ತರುವಾಯಿ ಕ್ರಮಮದು" (ಕವಿಕಂ. ೨೦೮). ೫. ವಂಶಪರಂಪರೆಯಾಗಿ ಬಂದ ಆಸ್ತಿ, —ರಾಜ್ಯ: ಕ್ರಮಮಂ ವಿಕ್ರಮದಿಂದ ತಾಳ್ದುವ ಮಗಂ ಗಾಂಗೇಯನಿರ್ದಂತೆ ನೋಡ ಮರುಳ್ ಶಂತನು . . . ಇತ್ತಂ ನಿಜ ಕ್ರಮಮಂ ತನ್ನಯ ಬೇಟದಾಕೆಯ ಮಗಂಗೆ (ಪಂಪಭಾ. ೧–೬೧); ಕ್ರಮಮಂ ಕಯ್ಕೊಳಲೆಂದು ಪುಟ್ಟಿ ರಣದೊಳ್ ಸಾವನ್ನೆಗಂ ಮಾಣ್ದೊಡ ಕ್ರಮಮುಕ್ಕುಂ ಕ್ರಮಮುಕ್ಕುಮೇ ಕ್ರಮಮನಾನೇಗೆಯ್ದಪೆಂ ವಿಕ್ರಮಂ ಕ್ರಮಂ (ಪಂಪಭಾ. ೧೧–೯೨); ತಮ್ಮ ಮನೆಯಂ ಕ್ರಮದವರ್ಗೆ ಕೊಟ್ಟು (ಜೀವಸಂ. ೧೨೨–೬೭ ವ). ೬. ನಿಯಮ; ರೀತಿ; ಪದ್ಧತಿ: ಕ್ರಮದಿಂ ಪೂಜಿಸುವಂ ಶತಕ್ರತುವೆ (ಪುಷ್ಪಪು. ೧೧–೫೬). ೭. ಪರಿವಿಡಿ; ಸಾಲು; ಓರಣ: ತರುಣೀ ನಿವಹಂ ಸನ್ನೆಯೊಳರಸನ ಸಂಗಡಮುನ್ನತ ಜಳಕೇಳಿಗೆಂದು ನಿಂದರ್ ಕ್ರಮದಿಂ (ಹಮ್ಮೀರ. ೪–೨೧). ೮. "ಸೂಕ್ತವಾದ ಕ್ರಿಯೆ; ಕಾನೂನುಬದ್ಧವಾಗಿ ಒಂದು ಕೆಲಸವನ್ನು ನಿರ್ವಹಿಸುವುದಕ್ಕಾಗಿ ಕೈಕೊಂಡ ಕಾರ್ಯವಿಧಾನ" (ಪತ್ರಿನಿ. ೫೩). ೯. ವೇದಮಂತ್ರಗಳನ್ನು ಹೇಳುವ ರೀತಿಗಳಲ್ಲಿ ಒಂದು: ಗುರುಗಳು ಅವನು ಕಲಿತಿರುವುದನ್ನು ಪರೀಕ್ಷಿಸಲು ಪ್ರಯತ್ನಿಸಿದಾಗ . . . ವೇದದ ಮಂತ್ರಭಾಗವನ್ನು ಜಟ, ಪದ, ಕ್ರಮಗಳ ರೀತಿಯಾಗಿ ಎಲ್ಲವನ್ನೂ ಸ್ಪಷ್ಟವಾಗಿ ಒಂದು ತಪ್ಪೂ ಇಲ್ಲದೆ ಒಪ್ಪಿಸಿದನು (ಭಾರದ. ೨೬೧).

೧೦. [ಕಾವ್ಯಮೀ] ಒಂದು ಅರ್ಥಾಲಂಕಾರ; ಯಥಾಸಂಖ್ಯಾಲಂಕಾರ: ಕುಱಿತ ಪದಾರ್ಥದ ಬೞಿಯೊಳ್ ನೆಱೆವ ಪದಾರ್ಥಂ ಕ್ರಮಂ ಹರಂ ಹರಿ ಬೊಮ್ಮರ್ ನೆಱೆವರವನೀಗೆ ನಿಮಗಿನ್ನೆಱಕದೆ ಗಿರಿಸುತೆಗೆ ಸಿರಿಗೆ ಸರಸತಿಗೆಱೆಯರ್ (ಉದಯಾ. ೪೫). 'ಕ್ರಮಾಲಂಕಾರ' ಪರಾ. ೧೧. [ಛಂದ] ಪದ್ಯದ ಪಾದದ ಮೊದಲಲ್ಲಿರುವ ಸಂಯುಕ್ತಾಕ್ಷರ: ಪಾದದ ಆದಿಯಲ್ಲಿ ಸಂಯುಕ್ತಾಕ್ಷರವಿದ್ದರೆ ಅದಕ್ಕೆ 'ಕ್ರಮ' ಎಂಬ ಸಂಜ್ಞೆಯಿದೆ (ಸಂಶೋಧ. ೧೧೨). ೧೨. ಎರಡು ಎಂಬ ಸಂಖ್ಯೆಯ ಸಂಕೇತ: "ಕ್ರಮ ಚರಣಂ ಪದಯುಗಳಂ . . . ಬಾಹು ಕಿವಿಗಳೆರಡಱ ನಾಮಂ" (ವ್ಯವಹಾ. ೯-೨).

**ಕ್ರಮಕ್ಕೈಕೊಳ್ಳು** = ೧. "ಕೆಲಸವನ್ನು ನೆರವೇರಿಸುವುದಕ್ಕೆ ಕಾರ್ಯಾಚರಣೆಯನ್ನು ಆರಂಭಿಸು. ೨. ತಪ್ಪಿತಸ್ಥನ ಮೇಲೆ ಕಾನೂನು ರೀತಿಯಿಂದ ಶಿಕ್ಷಾರೂಪದ ಕ್ರಿಯೆಯನ್ನು ಕೈಕೊಳ್ಳು" (ಪತ್ರಿನಿ. ೩). **ಕ್ರಮಜರುಗಿಸು** = ಕ್ರಮ ಕೈಕೊಳ್ಳು: ಕ್ರಮ ಜರುಗಿಸಬಹುದಾದ (ಪತ್ರಿನಿ. ೩); ಉಚ್ಚತಮ ನ್ಯಾಯಾಲಯದಲ್ಲಿ ಕ್ರಮ ಜರುಗಿಸುವ ಅಧಿಕಾರದ ಆಶ್ವಾಸನೆ ಕೊಡಲಾಗಿದೆ (ಭಾಧಾನ. ೧೯).
[ಸಂ.]

**ಕ್ರಮುಂದಪ್ಪು**, ಕ್ರಮತಪ್ಪು, ಕ್ರಮದಪ್ಪು (ಕ್ರಿ). ನಿಯಮ ಅಥವಾ ವಿಧಿಯನ್ನು ಪಾಲಿಸದಿರು; ಪದ್ಧತಿಯನ್ನು ಬಿಡು: ಮಂತ್ರಿಗಣಮಂ ಸನ್ಮಾನಪುರಸ್ಸರಂ ಕ್ರಮುಂದಪ್ಪದೆ ವಿಸರ್ಜಿಸಿ (ಶಾಂತಿಪು. ೨-೭೦ವ); ಎಮ್ಮ ಪೇೞ್ದೋಜೆಯಿಂ ಕ್ರಮುಂದಪ್ಪದೆ ನೋಂಪುದು (ಧರ್ಮಾಮೃ. ೧-೧೩೫). **ಕ್ರಮತಪ್ಪು**: ಕ್ರಮತಪ್ಪಿ ನಡೆದರೆ ಇಹವೂ ಇಲ್ಲ ಪರವೂ ಇಲ್ಲ (ರೂಢಿ). **ಕ್ರಮದಪ್ಪು**: ನಡೆನುಡಿಗಳಲ್ಲಿ ಕ್ರಮದಪ್ಪಬಾರದು (ರೂಢಿ). [ಕ್ರಮ + ತಪ್ಪು$_1$]

**ಕ್ರಮಗಣನ** (ನಾ). ಪರಿವಿಡಿಯಿಂದ ಮಾಡುವ ಎಣಿಕೆ; ಅನುಕ್ರಮವಾದ ಗಣನೆ: ಯುಗಪದುಕ್ತಿಗುತ್ತಮಪುರುಷಂ ಪರಮದನುೞಿದಿರೆ ಮಧ್ಯಮಪುರುಷಂ ಕ್ರಮಗಣನಮಿರೆಯು ಮೊಲ್ದಂತಿರೆಯುಂ (ಶಮದ. ೨೨೩). [ಕ್ರಮ + ಗಣನ]

**ಕ್ರಮಗಣನೆ** (ನಾ). = ಕ್ರಮಗಣನ: ಕ್ರಮಗಣನೆಗೆ ತಾನುಂ ಮಧ್ಯಮ ಪಾಂಡವನಾದಂ (ಗದಾಯು. ೭-೬೩). [ಕ್ರಮ + ಗಣನೆ]

**ಕ್ರಮಗೆಡಿಸು** (ಕ್ರಿ). ದಾರಿತಪ್ಪಿಸು; ರೀತಿಗೆಡುವಂತೆ ಮಾಡು: ಅಮರಾಧಿಪನ ವಂಚಿಸಿ . . . ದ್ಯುಮಣಿಯನು ಕ್ರಮಗೆಡಿಸಿಯೆ ಹಿಮಕರನ ರಾಹುವಿನ ಮುಮ್ಮೊನೆಗೆ ಸಿಕ್ಕಿಸಿ ಕಾಡುತಿಹನು (ತ್ರಿಪುಸಾಂ. ೬-೬೭); ಕಮಲಧರನ ಕಂಡು ನಿಮಿಷದೊಳತಿ ಸಂಭ್ರಮದೊಳುಬ್ಬಿದನ ಮೊಮ್ಮಗನ ಕ್ರಮಗೆಡಿಸಿದನ ಭಕ್ತನ ಕಾಳೆಗದೆ ಗೆದ್ದ ರಮೆಯ ವಲ್ಲಭ ಪಾಲಿಸೂಲಿದು (ಕಂನವಿ. ೫-೧). [ಕ್ರಮಗೆಡು + -ಇಸು$_3$]

**ಕ್ರಮಗೆಡು** (ಕ್ರಿ). ದಾರಿತಪ್ಪು; ರೀತಿಗೆಡು. 'ಕ್ರಮಗೆಡಿಸು' ಪರಾ.
[ಕ್ರಮ + ಕೆಡು$_1$]

**ಕ್ರಮಗೊಳಿಸು** (ಕ್ರಿ). ಕ್ರಮಕ್ಕೆ ಒಳಪಡಿಸು; ವ್ಯವಸ್ಥೆಗೊಳಿಸು; ಕಾನೂನಿನಂತೆ ರಚಿಸು: ಕ್ರಮಗೊಳಿಸಿದ ಪೇಟಿ (ಪತ್ರಿನಿ. ೬೯).
[ಕ್ರಮಗೊಳ್$_0$ + -ಇಸು$_3$]

**ಕ್ರಮಗೊಳ್ಳು** (ಕ್ರಿ). ವಿಧಾನವನ್ನು ಅನುಸರಿಸು; ಪದ್ಧತಿಯಂತೆ ನಡೆ: ನಾನು ದುರ್ಗಾದೇವಿ . . . ಕ್ರಮಗೊಂಡು ಪೂಜೆ ಮಾಡಿದಲ್ಲಿ ನಿನ್ನ ದೌಲತ್ತು ಬಡಾಯಿಸುತ್ತೆ (ಚಿತ್ರಪಾ. ೧೭).
[ಕ್ರಮ + ಕೊಳ್ಳು$_1$(< ಕೊಳ್$_1$)]

**ಕ್ರಮಣ** (ನಾ). ಹೋಗುವಿಕೆ; ಮುಂದುವರಿಯುವಿಕೆ; ಹೆಜ್ಜೆಯಿಡುವಿಕೆ. 'ಅತಿಕ್ರಮಣ' ಪರಾ. [ಸಂ.]

**ಕ್ರಮತಪ್ಪು** 'ಕ್ರಮುಂದಪ್ಪು' ನೋ.

**ಕ್ರಮದಪ್ಪು** 'ಕ್ರಮುಂದಪ್ಪು' ನೋ.

**ಕ್ರಮಪಡಿಸು** (ಕ್ರಿ). ನಿಯಂತ್ರಿಸು; ನಿಯಮಗಳಿಗೆ ಒಳಪಡಿಸು; ಕರಾರುವಾಕ್ಕಾಗಿ ನಡೆಯುವಂತೆ ಸರಿಹೊಂದಿಸು: ಕ್ರಮಪಡಿಸಿದ ಮಾರುಕಟ್ಟೆ (ಪತ್ರಿನಿ. ೬೯). [ಕ್ರಮ + ಪಡು$_1$ + -ಇಸು$_3$]

**ಕ್ರಮಪ್ರಾಪ್ತ** (ಗು). ೧. ಪರಂಪರೆಯಿಂದ ಬಂದ; ವಂಶಾನುಗತವಾದ: ತಂದೆಯಿಂದ ಕ್ರಮಪ್ರಾಪ್ತವಾಗಿ ಮಕ್ಕಳಿಗೆ ರಾಜ್ಯ ಬಂದರೆ ಅದಕ್ಕೆ ಧೃತರಾಷ್ಟ್ರನಿಗೆ ಸಹನೆಯಿಲ್ಲ (ವಚಭಾ. ೩೧); ಈ ಮಾಧವನು ಕ್ರಮಪ್ರಾಪ್ತವಾದ ರಾಜ್ಯವನ್ನಾಳುತ್ತಿದ್ದನೆಂದು ಪೆನುಗೊಂಡೆ ಶಾಸನದಲ್ಲಿ ಹೇಳಿದೆ (ಕರ್ನಾಅ. ೧೨೮). ೨. ನಿಯಮಕ್ಕೆ ಅನುಸಾರವಾದ; ಯೋಗ್ಯವಾದ. [ಕ್ರಮ + ಪ್ರಾಪ್ತ]

**ಕ್ರಮಬದ್ಧ** (ಗು). ನಿಯಮಕ್ಕೆ ಒಳಪಟ್ಟ; ವಿಧಿವತ್ತಾದ; ಒಂದು ಕ್ರಮದಲ್ಲಿರುವ: ಆಗಾಗ ಸೂರ್ಯನ ಮೇಲ್ಮೈಯಲ್ಲಿ ಕಪ್ಪು ಕಲೆಗಳು ಕಾಣಿಸಿಕೊಳ್ಳುತ್ತವೆ. ಅವು ಆಕಾರದಲ್ಲಿ ಕ್ರಮಬದ್ಧವಾಗಿಲ್ಲ (ಆಕಾಶ. ೯).
[ಕ್ರಮ + ಬದ್ಧ]

**ಕ್ರಮಭಂಗ** (ನಾ). ೧. ಕ್ರಮ ತಪ್ಪುವಿಕೆ: ಆಕಾಶಕಾಯದ ಚಲನೆಯಲ್ಲಿ ಕ್ರಮಭಂಗ (Inequality. ಇಂಕನಿ). ೨. ನಿಯಮ ಅಥವಾ ಸಂಪ್ರದಾಯವನ್ನು ಮುರಿಯುವಿಕೆ; ಅಕ್ರಮ.
[ಕ್ರಮ + ಭಂಗ]

**ಕ್ರಮಭ್ರಷ್ಟ** (ಗು). ಕ್ರಮ ತಪ್ಪಿದ; ರೂಢಿಗೆ ವಿರುದ್ಧವಾದ; ಅಕ್ರಮವಾದ: ಕುದುರೆಯನ್ನೋ ಆನೆಯನ್ನೋ ಕೊಟ್ಟರಾಯಿತು ಎಂದರೆ ಕ್ರಮಭ್ರಷ್ಟವಾಗುವುದು. ಆನೆಯನ್ನೋ ಕುದುರೆಯನ್ನೋ ಎನ್ನುವುದು ಕ್ರಮವು (ಆರ್ಯಧ. ೫೫). [ಕ್ರಮ + ಭ್ರಷ್ಟ]

**ಕ್ರಮಮುಕ್ತಿ** (ನಾ). ಉಪಾಸನೆಯ ಬಲದಿಂದ ಬ್ರಹ್ಮಲೋಕವನ್ನು ಸೇರಿ, ಅಲ್ಲಿ ಗಳಿಸುವ ಜ್ಞಾನಬಲದಿಂದ ಬರುವ ಮುಕ್ತಿ: ಬ್ರಹ್ಮದ ಕೆಲವು ಉಪಾಸನೆಗಳು ಅಭ್ಯುದಯಕ್ಕಾಗಿ ವಿಹಿತವಾಗಿರುತ್ತವೆ; ಕೆಲವು ಕ್ರಮಮುಕ್ತಿಗಾಗಿ ವಿಹಿತವಾಗಿವೆ (ಬ್ರಹ್ಮಭಾ. I, ೧೪೬); ಪರಮ ವೈದಿಕ ವೈದಿಕಂಗಳಿಂದ ವೇದಪುರುಷನಿಗೆ ಪ್ರಯೋಜನಮೇನೆನಲು ಸದ್ಯೋಮುಕ್ತಿ ಕ್ರಮಮುಕ್ತಿಗಳೆಂದಱಿಯಬೇಕು (ಸಾಕ್ಷಿವಿ. ೪೮).
[ಕ್ರಮ + ಮುಕ್ತಿ]

**ಕ್ರಮಯಿತ** (ನಾ). = ಕ್ರಮಿತ್ತ ೨: ಮಾಧವ ಚೌವೇರಗ್ರಾಮೀಸಾ ಕಾಣ್ವಾಯನ ಸಗೋತ್ರಃ ಕೇಸ[ಶ]ವ ಕ್ರಮಯಿತಗ್ರಂ ಇಂತೀ ಇರ್ವರ್ಗಗ್ರಂ ಏಕೋ ಭಾಗವತ್(ಃ) (ಇಅ. XVIII, ೩೩೭-೨೦; 8ನೆಯಶತ).
[< ಕ್ರಮಿತ]

**ಕ್ರಮಲೋಪ** (ನಾ). ಅನುಸರಿಸತಕ್ಕ ವಿಧಿಗೆ ಲೋಪ: ನಿಯಮ ವಿಚಾರ; ಕ್ರಮಲೋಪ (ಪ್ರತಿನಿ. ೬೦). [ಕ್ರಮ + ಲೋಪ]

**ಕ್ರಮವಳಿ** (ಕ್ರಿ). ನಿಯಮಗೆಡು; ಕ್ರಮವಿಲ್ಲವಾಗು: ಬೆಮರುತಂ ಬಿಕ್ಕುತಂ ತೇಗುತಂ ತೂಗುತಂ ಕ್ರಮವಳಿದು ಸುಳಿದು ಸುಖಿಯಾಗುತಂ (ಬಸರ. ೩-೧೦೭). [ಕ್ರಮ + ಅಳಿ$_1$ (< ಅೞಿ$_1$)]

**ಕ್ರಮವಾಚಿ** (ನಾ). ಕ್ರಮವನ್ನು ತಿಳಿಸುವ ಶಬ್ದ: "ತರುವಾಯ ತರ ಪರಿವಿಡಿಗಳು ಕ್ರಮವಾಚಿ ತಾಂ" (ಶಬ್ದಮಂ. ೫೪).
[< ಸಂ. ಕ್ರಮವಾಚಿನ್]

**ಕ್ರಮವಿಕಾಸ** (ನಾ). ಕ್ರಮವಾದ ಬೆಳವಣಿಗೆ; ಕ್ರಮವಾಗಿ ನಡೆದ ವಿಕಾಸ: ಮಾನವ ಜನಾಂಗವು ಕ್ರಮವಿಕಾಸವನ್ನು ಪಡೆಯತೊಡಗಿದಾಗ . . . ಕಟ್ಟುಕಟ್ಟಲೆಗಳ ಆವಶ್ಯಕತೆಯುಂಟಾಯಿತು (ಭಾರದ. ೪೯).
[ಕ್ರಮ + ವಿಕಾಸ]

**ಕ್ರಮವಿಕ್ಷೇಪ** (ನಾ). ಅಡಿಯಿಡುವಿಕೆ; ಹೆಜ್ಜೆಹಾಕುವಿಕೆ; ಪಾದನ್ಯಾಸ: ಕ್ರಮವಿಕ್ಷೇಪದಿನಂಚೆಗೆ ಸಮನಿಸೆ ದೈನ್ಯಂ (ಪಂರಾಮಾ. ೭-೧೦೪). [ಕ್ರಮ + ವಿಕ್ಷೇಪ]

**ಕ್ರಮವಿಡಿ** (ಕ್ರಿ). ಪರಂಪರೆಯನ್ನು ಅನುಸರಿಸು; ನಿಯಮಕ್ಕೆ ಅನುಸಾರವಾಗು: ಸಂಗತ್ಯಮೆಂದೆನಲು ಕ್ರಮವಿಡಿದ ನುಡಿಯೊನಿಕ್ಕುಂ (ಮಂಗರಾ. ೧೩೬-೩೯). [ಕ್ರಮ + ಪಿಡಿ₁]

**ಕ್ರಮವಿಪರ್ಯಾಯ** (ನಾ). ಕ್ರಮತಪ್ಪುವಿಕೆ; ರೂಢಿಗೆ ವಿರೋಧವಾದುದು: ಜನಕಂಗೆ ಜಲಾಂಜಲಿಯಂ ತನೂಭವಂ ಕುಡುವುದುಚಿತ ಮದುಗೆಟ್ಟೀಗಳ್ ನಿನಗಾಂ ಕುಡುವಂತಾದುದೆ ತನೂಜ ನೀಂ ಕ್ರಮವಿಪರ್ಯಯಂ ಮಾಡುವುದೇ (ಗದಾಯು. ೯-೬೧). [ಕ್ರಮ + ವಿಪರ್ಯಯ]

**ಕ್ರಮವಿರಹಿತ** (ಗು). ಕ್ರಮತಪ್ಪಿದ; ಸರಿಯಾದ ರೀತಿಯಲ್ಲಿ ಸೇರಿರದ: ಕಥೆಯೊಂದನ್ನು ವಿವರಿಸುವ ಬೇರೆ ಬೇರೆ ಚಿತ್ರಗಳನ್ನು ಕ್ರಮವಿರಹಿತವಾಗಿ ಕೊಟ್ಟು ಸರಿಯಾದ ಕ್ರಮದಲ್ಲಿ ಜೋಡಿಸೆಂದು ಹೇಳುವರು (ಶಿಕ್ಷದ. ೫೭೭). [ಕ್ರಮ + ವಿರಹಿತ]

**ಕ್ರಮವಿಹಿತ** (ಗು). ರೂಢಿಗೆ ಅನುಗುಣವಾದ; ಪರಂಪರಾನುಗತವಾದ: ಸಮುದಿತ ಕುಸುಮಾಮೋದೋದಯೋದ್ಯಾನ ಲೀಲಾಕ್ರಮವಿಹಿತ ಜಲಕ್ರೀಡಾವಿನೋದಾದಿನೀತಂ (ಕವಿರಾ. ೩-೨೧೧). [ಕ್ರಮ + ವಿಹಿತ]

**ಕ್ರಮಶಃ** (ಅ). ಕ್ರಮವಾಗಿ; ಕ್ರಮಾನುಗತವಾಗಿ; ಕ್ರಮೇಣ: "ಒಂದೊಂದು ಅಂಶವಾಗಿ; ಕ್ರಮವಾಗಿ ಒಂದು ವಿಷಯವಾದ ಮೇಲೆ ಮತ್ತೊಂದು ವಿಷಯದಂತೆ; ಕ್ರಮಶಃ; ಪಾಳಿಯಾಗಿ" (Seriatim. ಇಂಕನಿ). [ಸಂ.]

**ಕ್ರಮಸಂಖ್ಯೆ** (ನಾ). ಅನುಕ್ರಮನಾದ ಸಂಖ್ಯೆ: ಕ್ರಮ ಸಂಖ್ಯೆಯ ಪ್ರಕಾರ ವಸ್ತುಗಳನ್ನು ಜೋಡಿಸಿದ್ದರು (ರೂಢಿ). [ಕ್ರಮ + ಸಂಖ್ಯೆ]

**ಕ್ರಮಸಂಧಾನ** (ನಾ). ಕ್ರಮವಾಗಿ ಹೊಂದಿಸುವಿಕೆ, —ಇಡುವಿಕೆ: "ಬಟಿಕೊಳ್ – ಕ್ರಮಸಂಧಾನೇ (ಕ್ರಮವಾಗಿಡು)" (ಶಮಧಾ). [ಕ್ರಮ + ಸಂಧಾನ]

**ಕ್ರಮಾಗತ** (ಗು). ಪರಂಪರೆಯಿಂದ ಬಂದ; ಅನ್ವಯಾನುಗತ; ನಿಯಮಕ್ಕೆ ಸರಿಯಾದ: (ಶಿ). [ಕ್ರಮ + ಆಗತ]

**ಕ್ರಮಾಧಿಕ** (ನಾ). ೧. ಒಳ್ಳೆಯ ನಡತೆಯಿಂದ ಶ್ರೇಷ್ಠನಾದವನು. ೨. ಅಧಿಕ ಸಂಖ್ಯೆಯ ಪಾದಗಳನ್ನುಳ್ಳುದು; ಆರಡಿ; ದುಂಬಿ. ೧, ೨: ತ್ರಿದಶರ್ ಬಾಜಿಪ ದಿವ್ಯತೂರ್ಯರವಮಂ ನಿಷ್ಕಂಪ ಕರ್ಣಂಗಳಾಗಿ ದಿಶಾದಂತಿಗಳಾಲಿಪಲ್ಲಿ ಮದಮಂ ಗಂಡಸ್ಥಳೋದೀರ್ಣ ಕಂಪದೊಳಂ ಸೇವಿಸಿ ತುಂಬಿಗಳ್ ತಣಿದುವೇನುತ್ಸಾಹಮಂ ಮಾಡದಿರ್ಪುದೆ ಸನ್ಮಾರ್ಗದೊಳಂ ಕ್ರಮಾಧಿಕರೊಳುದ್ಯದ್ದಾನ ಸಂಪ್ರೀತಿಯುಂ (ಪುಷ್ಪಪು. ೧೧-೧೧). [ಕ್ರಮ + ಅಧಿಕ]

**ಕ್ರಮಾನುಸರಣೆ** (ನಾ). ನಿಯಮಗಳನ್ನು ಅನುಸರಿಸುವಿಕೆ, —ಪಾಲಿಸುವಿಕೆ: ವಿದ್ಯಾರ್ಥಿವೃಂದದಲ್ಲಿ ಶಿಸ್ತನ್ನು ಬೆಳಸಿ . . . ಗೌರವ, ಕ್ರಮಾನುಸರಣೆ, ಆಸಕ್ತಿ, ಉತ್ಸಾಹ ಇವನ್ನೆಲ್ಲ ಬೆಳಸಿ ಪೋಷಿಸುವಂತಿರಬೇಕು (ಶಿಕ್ಷದ. ೨೬೩). [ಕ್ರಮ + ಅನುಸರಣೆ]

**ಕ್ರಮಾಲಂಕಾರ** (ನಾ). [ಕಾವ್ಯಮೀ] ಒಂದು ಅರ್ಥಾಲಂಕಾರ; ಯಥಾಸಂಖ್ಯಾಲಂಕಾರ: ಪದಂಗಳಂ ಕ್ರಮವಿಡಿದನ್ವಯ ಪೇಳಿಹುದು ಇದಕ್ಕೇ ಕ್ರಮಾಲಂಕಾರವೆಂದು ಅಲಂಕಾರಜ್ಞಕವಿಗಳು ಪೇಳಿಹರು: ಉದಾ. . . ಅಳಿ ಕಲಭಗಿಳಿಯ ಮುಡಿ ನಡೆನುಡಿಗಳಿಂದ (ಕುವಲ. ೧೧೦-೬). [ಕ್ರಮ + ಅಲಂಕಾರ]

**ಕ್ರಮಿಕ** (ಗು). ೧. ಕ್ರಮವಾಗಿ ರಚಿಸಿದ; ಒಂದು ಕ್ರಮಕ್ಕೆ ಒಳಪಟ್ಟ; ಶ್ರೇಣಿಬದ್ಧವಾದ: ರಸೆಲ್‌ರು ಬರುವ ಮೊದಲು ಕನ್ನಡ ಕ್ರಮಿಕ ಪುಸ್ತಕಗಳಿಲ್ಲದೆ ಕನ್ನಡ ಬಲ್ಲ ಶಿಕ್ಷಕರಿಲ್ಲದೆ ಕನ್ನಡದ ವಿದ್ಯಾಭ್ಯಾಸ ನಡೆಯಬೇಕಾಗಿತ್ತು (ಸಾಸಮಾ. ೪). ೨. ವಂಶಪರಂಪರೆಯಾಗಿ ಬಂದ; ಅನ್ವಯಾನುಗತ. [ಸಂ.]

**ಕ್ರಮಿತ** (ಗು). ೧. ನಡೆದ; ಸಂಚರಿಸಿದ; ಸಾಗಿದ. (ನಾ). ೨. ಕ್ರಮಾಂತವಾಗಿ ವೇದಾಧ್ಯಯನ ಮಾಡಿದವನು. ℙ ಭಟ್ಟ, ಆಚಾರ್ಯ, ಶಾಸ್ತ್ರಿ ಎಂಬಂತೆ ಒಂದು ಗೌರವಸೂಚಕವಾದ ಪದ: ಕ್ರಮಿತರೆ ವಾಸುದೇವ ಕ್ರಮಿತರು (ಕೊಲ್ಹಾಶಾ. ೫-೫೦; 1076); ಕೋಣೆಯಮಲ್ಲ (?) ಕ್ರಮಿತರಿಗೆ (ಎಇ. XVIII, ೧೮೬-೪೮; 1097); ಕ್ರಮಿತರವಧರಿಸಿದರೆ ಶುದ್ಧ ಭ್ರಮಿತ ಮೂಲನ ಹಿರಿಯ ವಿಷ್ಣು ಕ್ರಮಿತರೆ ಧನುವಿಗೆ ಯತ್ನಮಾಡಿದಿರೆ ಕ್ರಮವೆ ತಾನಿದು ಕ್ಷತ್ರಿಯ ನಾಕ್ರಮಿಸುವುದು (ಕುವ್ಯಾಆ. ೧೫-೧೩). [ಸಂ.]

**ಕ್ರಮಿಸು** (ಕ್ರಿ). ೧. ನಡೆ; ಹೆಜ್ಜೆಯಿಡು; ಸಾಗು: ತಮ್ಮ ತಮ್ಮ ಇಚ್ಛಿತ ಸ್ಥಳಗಳ ಮಾರ್ಗ ಕ್ರಮಿಸಹತ್ತಿದ್ದಾರೆ (ಮಂಜುಳ. ೭); ಐದಾರು ಮಾರು ದಾರಿ ಕ್ರಮಿಸಿರಲಿಲ್ಲ (ಹೇಮಂತ.೨೬೪). ೨. ದಾಟು; ದಾಟಿಹೋಗು: ಸಾಗರ ಸಮಂ ನಿನ್ನ ರಾಮಾಯಣಂ . . . ಕ್ರಮಿಸಲ್ಕದಂ ದಯೆಗೆಯ್ಯೆನಗೆ ವೈನತೇಯನ ವಜ್ರವೀರ್ಯಮಂ (ಶ್ರೀರಾಮಾ. ೨೪೨-೩೯೧). [ಕ್ರಮಣ ? + -ಇಸು₃]

**ಕ್ರಮುಕ** (ನಾ). ೧. ಅಡಕೆ; ಪೂಗ; ಕೌಂಗು: ಕ್ರಮುಕಮನಕ್ಕೆ ಫಲತ್ರಯದ ಮುಸಿಯನಕ್ಕಣಿಲೆಯಂ ರಸಾಂಜನಮುಮನಕ್ಕೆ . . . ಪೂಸೆ ಲಿಂಗರೋಗಂ ಕಿಡುಗುಂ (ಲೋಕೋಪ. ೯-೧೩೯); ಧರೆಗೆ ಮೊಗಸಿರಿಯೆನಿಸಿ ಮೆರೆದಿರುವಾ ಕ್ರಮುಕವೃಕ್ಷಂಗಳೊಲಿದು (ಹಚಕಾ. ೨೦೬. ಪರಿ). ೨. ಕೆಂಪು ಚಾಲಾರಿ ಗಿಡ; ಲೋಧ್ರದ ಗಿಡ. [ಸಂ.]

**ಕ್ರಮುಕಸಮಿತಿ** (ನಾ). ಅಡಕೆಮರಗಳ ಸಮೂಹ, —ಗುಂಪು: ಫಳವ್ರಾತದಿಂ ಸೇವ್ಯಮಲ್ಲಲ್ಲಿ ಕರಂ ಖರ್ಜೂರವೃಂದಂ ಕ್ರಮುಕಸಮಿತಿ (ಪುಷ್ಪಪು. ೯-೧೫). [ಕ್ರಮುಕ + ಸಮಿತಿ]

**ಕ್ರಮೇಣ** (ಅ). ಕ್ರಮವಾಗಿ; ಮೆಟ್ಟಿಲುಮೆಟ್ಟಿಲಾಗಿ; ಹಂತಹಂತವಾಗಿ: ಹಗಲಿನ ನೋಟಗಳೆಲ್ಲ ಕ್ರಮೇಣ ಕಗ್ಗತ್ತಲ ಗರ್ಭದಲ್ಲಿ ಲಯವಾಗುತ್ತವೆ (ಸೌಂದಸ. ೧). [ಸಂ.]

**ಕ್ರಮೇಣಕ** (ನಾ). = ಕ್ರಮೇಲಕ: "ರವಣಮುಷ್ಟ್ರಂ ಮಯಂ ಕರಭಂ ಕ್ರಮೇಣ [ಪಾಠಾಂ. ಳ]ಕಂ" (ಮಂಗರಾ. ೫೫-೭). [< ಸಂ. ಕ್ರಮೇಲಕ]

**ಕ್ರಮೇಲಕ, ಕ್ರಮೇಳಕ** (ನಾ). ಒಂಟೆ; ಉಷ್ಟ್ರ: (ಶಿ). **ಕ್ರಮೇಳಕ**: "ದಾಸೇರಕಃ, ಕ್ರಮೇಳಕಃ, ಉಷ್ಟ್ರಃ . . . ಶೃಂಖಳಕಃ –ಈ ೭ ಒಟ್ಟೆ" (ಹಲಾಯು. ೪೭-೧೨೫); ಮಕರಾಂಕದ್ವಿಪ ದಂತದಂಡ ದಳಿತ ಸ್ವಾಂತಂಪರಪ್ರೇಯಸೀ ವಿಕಲಂ ದುರ್ಗತಿಯೊಳ್ ಕಯಂ ತಿರಿತರುತ್ತುಂ ಬಂದು ಮತ್ತಂ ಕ್ರಮೇಳಕನಾದಂ (ಪಂರಾಮಾ. ೬-೩೭). [ಸಂ.]

**ಕ್ರಮೇಳಕ** 'ಕ್ರಮೇಲಕ' ನೋ.

**ಕ್ರಯ** (ನಾ). ೧. ಬೆಲೆ ಕೊಟ್ಟು ಕೊಳ್ಳುವಿಕೆ: ಹಟ್ಟೀಲಿ ಹುಟ್ಟಿದ್ದಲ್ಲ, ಕ್ರಯಕ್ಕೆ ಕೊಂಡದ್ದಲ್ಲ (ಗಾದೆ). ೨. ಬೆಲೆ; ಕಿಮ್ಮತ್ತು: ಈ ಹೆಂಣು ಅಳಿಗೆ ಬುದ್ಧಿವಂತರು ಕಂಡು ಕಟ್ಟಿದ ಕ್ರಯ ಗ ೩ ಅಕ್ಷರದಲು ಮೂರು ವರಹ (ಮೈಆರಿ. ೧೯೨೪, ೬೭-೯; 1808); ನಯವಾದ್ದಕ್ಕೆ ಕ್ರಯ ಹೆಚ್ಚು (ಗಾದೆ).

ಕ್ರಯಕೊಡು = ಬೆಲೆ ಕೊಡು; ಮಾರಾಟದ ಬೆಲೆಯನ್ನು ನೀಡು : (೬). ಕ್ರಯಕ್ಕೆಕೊಡು = ಬೆಲೆಗೆ ಕೊಡು ; ಮಾರು: ನಾನು ನನ್ನ ಅವಸರ ನಿಮಿತ್ತವಾಗಿ ನನ್ನ ಹೊಲೆಯಾಳು ಕನ್ನನ ಹೆಂಡತಿ ಚೌಡಿ ಎಂಭ ಹುಡುಗಿಯನ್ನು ನಿಮಗೆ ಕ್ರಯಕ್ಕೆ ಕೊಟ್ಟೆನಾಗಿ (ಮೈಆರ.೧೯೨೮ ? ೬೭–೮; 1808). ಕ್ರಯಬೀಳು=ಬೆಲೆ ಕೊಡಬೇಕಾಗು; ವೆಚ್ಚ ತಗಲು: ಸಲಿಕೆಗೆ ಯಾಕೆ ಕ್ರಯಬೀಳುತ್ತದೆ (ಮುಂಬಯಿ. ೫–೬೬). [ಸಂ.]

**ಕ್ರಯಂಗೊಳ್** (ಕ್ರಿ). ಮಾರಾಟಕ್ಕೆ ತೆಗೆದುಕೊಳ್ಳು ; ಬೆಲೆಗೆ ಕೊಂಡುಕೊಳ್ಳು: ಧರಣಿಯಮರನ ಪುತ್ರನೊಬ್ಬನ ನೀ ಕ್ರಯಂಗೊಂಡು ಏನನಿತ್ತಾದಡೆಯು ತಂದಾ ಸೂನುವನು ತನಗೀವುದು( ಸಂಭಪ. ೩೦೫.ಪರಿ). [ಕ್ರಯ + ಕೊಳ್$_1$]

**ಕ್ರಯಚೀಟು** (ನಾ). ಮಾರಾಟವನ್ನು ಸ್ಥಿರಪಡಿಸುವ ಚೀಟಿ; ವಿಕ್ರಯಪತ್ರ : ಭೀಮಾಚಾರ್ಯರು ಬರಸಿಕೊಟ್ಟ ಹೊಲೆಯಾಳು ಹೆಣ್ಣಾಳು ಕ್ರಯಚೀಟ್ಟಿನ ಕ್ರಮವೆಂತೆಂದರೆ . . . ಎಂದು ಬರಸಿಕೊಟ್ಟ ಕ್ರಯಚೀಟು (ಮೈಆರ. ೧೯೨೮, ೬೭–೧೩ ; 1808) ; ಅವರ ಸ್ವಾರ್ಜಿತ ಸೊತ್ತನ್ನು ಕೂಡಾ ಅವರು . . . ನನ್ನ ತಾಯಿಗೋ ತಮ್ಮನಿಗೋ ಕ್ರಯಚೀಟು ಮಾಡುತ್ತಾರಂತೆ (ಒಡ್ಡಿಉ. ೮೧). [ಕ್ರಯ + ಚೀಟು$_2$]

**ಕ್ರಯದಾರ** (ನಾ). ಕೊಂಡುಕೊಳ್ಳುವವನು : (ಮೈಗಜೆ. IV, ೭೭೭). [ಕ್ರಯ + –ದಾರ$_4$]

**ಕ್ರಯಪಟ್ಟಿ** (ನಾ). ಬೆಲೆಗಳನ್ನು ತಿಳಿಸುವ ಪಟ್ಟಿ: ಅಂಗಡಿಯ ಮುಂದೆ ಕ್ರಯಪಟ್ಟಿ ಇಟ್ಟಿರಬೇಕು (ರೂಢಿ). [ಕ್ರಯ + ಪಟ್ಟಿ]

**ಕ್ರಯರೂಪ** (ನಾ). ಮಾರಾಟ; ಕೊಳ್ಳುವುದು: [ಕೇತ] ಗಾವುಂಡನ ಕಯ್ಯೊಳು ಸಂಗಯ್ಯನು ಕ್ರಯರೂಪದಿಂ ಕೊಂಡ ಸಂಪಗೆಯ ತೋಟ (ಸೌಇಇ. XX, ೨೦೬–೩೦ ; ?). [ಕ್ರಯ + ರೂಪ]

**ಕ್ರಯವಿಕ್ರಯ** (ನಾ). ಕೊಳ್ಳುವಿಕೆ ಹಾಗೂ ಮಾರುವಿಕೆ; ವ್ಯಾಪಾರ: ಕೂಡೆ ಗಜಬಜವಾಯ್ತು . . . ಕ್ರಯವಿಕ್ರಯದ ವಾಣಿಜ್ಯ ವೀಥಿಯಲಿ ಹೂಡಿದವು ಬಂಡಿಗಳು ಹರಿದೆಡೆಯಾಡಿದವು ಕೊಲ್ಲಾರಿಗಳು (ಕುವ್ಯಾಗ. ೪–೧೧). [ಕ್ರಯ + ವಿಕ್ರಯ]

**ಕ್ರಯವಿಕ್ರಯಿಕ** (ನಾ). ಕೊಳ್ಳುವವನು ಹಾಗೂ ಮಾರುವವನು ; ವ್ಯಾಪಾರಿ; ವರ್ತಕ. [ಸಂ.]

**ಕ್ರಯಶಕ್ತಿ** (ನಾ). ಕೊಂಡುಕೊಳ್ಳುವ ಶಕ್ತಿ : ಮುಕ್ಕಾಲು ಪಾಲು ಜನತೆ ಹೊಲಸಾಗುವಳಿಯಲ್ಲಿ ದುಡಿಯುತ್ತಿದ್ದು, ಅವರ ಕ್ರಯಶಕ್ತಿ ತೀರ ಕನಿಷ್ಠವಾಗಿದೆ (ಮಾವಾದ. ೧೪೧). [ಕ್ರಯ + ಶಕ್ತಿ]

**ಕ್ರಯಿಕ** (ನಾ). ಕೊಂಡುಕೊಳ್ಳುವವನು ; ಗ್ರಾಹಕ. [ಸಂ.]

**ಕ್ರಯ್ಯ** (ನಾ). ಮಾರಾಟಕ್ಕಾಗಿ ಇಟ್ಟ ವಸ್ತು ; ಬೆಲೆಗೆ ಕೊಳ್ಳಬಹುದಾದ ಪದಾರ್ಥ. [ಸಂ.]

**ಕ್ರವಿಂತ, ಕ್ರವಿತ, ಕ್ರವಿತ್ರ** (ನಾ). = ಕ್ರಮಿತ೨: ನನ್ದಿಯಣ ಕ್ರವಿಂತರ ವಾಸುದೇವ ಕ್ರವಿಂತರು (ಸೌಇಇ. XI–ii, ೧೮೯–೪ ; 1106). **ಕ್ರವಿತ** : ತೆಲುಗರ ಮಾಗೆಯ ಕ್ರವಿತರ ಮನೆ (ಎಇ. XIII, ೪೮–೭೯ ; 1112). **ಕ್ರವಿತ್ರ** : ಚೌನ್ದಭಟ್ಟೋಪಾಧ್ಯಾಯರು ಬೌಧಾಯನ ಚೌನ್ದೆಯ ಕ್ರವಿತ್ರರು (ಕಇಆ. ೭೬–೧೨–೬೫ ; 1170). [< ಕ್ರಮಿತ]

**ಕ್ರವಿತ** ‘ಕ್ರವಿಂತ’ ನೋ.

**ಕ್ರವಿತ್ರ** ‘ಕ್ರವಿಂತ’ ನೋ.

**ಕ್ರವ್ಯ** (ನಾ). ಹಸಿಯ ಅಡಗು; ಬೇಯಿಸದ ಮಾಂಸ: ಸುಹುತಂ ಕೌರವ್ಯ ಕ್ರವ್ಯ ಹವ್ಯದಿಂದೆನ್ನ ಕೋಪ ಹವ್ಯವಹಂ ಲೋಹಿತದಿನಾದುದ ವಭೃಥಸವನಂ (ಗದಾಯು. ೮–೪೭) ; ಮನುಜಕ್ರವ್ಯಮಿದೆಂದಱಿದಾಗಳ್ . . . ಶಾಪಮನಿತ್ತಂ (ವಿಷ್ಣುಪು. ೧೪–೭೦). [ಸಂ.]

**ಕ್ರವ್ಯಾದ** (ನಾ). ೧. ರಾಕ್ಷಸ: ಕ್ರವ್ಯಾದ ಸಂಹನನಕ್ರವ್ಯಾದನಪ್ಪೆನಗೆ ಅನಭ್ಯಸ್ತಶಸ್ತ್ರನೊಳ್ ಯುದ್ಧವತಿನಿಷಿದ್ಧಮುಂ (ಜಗವಿ. ೫–೬೧ವ); ವಿಭೀಷಣಂಬೆರಸು ಕ್ರವ್ಯಾದರಂ ಕದನ ಬೇಡೆನುತ ಸನ್ಮಾರ್ಗಮಂ ಬೋಧಿಸಿದಂ (ವೆಂಕಾರಾ. ೬–೨ ಸೂಚನೆ). ೨. ಮಾಂಸಾಹಾರಿಯಾದ ಪ್ರಾಣಿ ; ಹಿಂಸ್ರಪಕ್ಷಿ: ಹಕ್ಕಿಗಳು ಕ್ರವ್ಯಾದಗಳು, ಅಕ್ರವ್ಯಾದಗಳು ಎಂದೆರಡು ಪ್ರಕಾರದವು. ಕಾಗೆ, ಹದ್ದು, ರಣಹದ್ದು ಮುಂತಾದವು ಕ್ರವ್ಯಾದಗಳು (ಆರ್ಯಧ. ೧೦೫). [ಸಂ.]

**ಕ್ರಾಂತ** (ಗು). ೧. ಹೋದ; ದಾಟಿದ; ಮೀರಿದ. ‘ಕ್ರಾಂತದರ್ಶನ’ ಪರಾ. (ನಾ). ೨. ನಡೆಯುವುದು; ಹೆಜ್ಜೆಯಿಡುವುದು. ೩. [ನಾಟ್ಯ] ಒಂಬತ್ತು ಬಗೆಯ ಉಪವಿಷ್ಟ ಸ್ಥಾನಗಳಲ್ಲಿ ಒಂದು: ಕರಮೆರಡುಂ ಗಡ್ಡದೊಳಿರೆ ಶಿರನೊಂದಿರೆ ಭುಜದ ಮೇಲೆ ಯೆರಡುಂ ಕಣ್ಣೋಳ್ ಕರಮೊಸರೆ ಬಾಷ್ಪಜಲಮಿದು ತರುಣೀ ಕೇಳ್ ಕ್ರಾಂತಮೆಂಬ ತಾಣಮೆನಿಕ್ಕುಂ (ಲಾಸ್ಯರಂ. ೭–೫೪). ೪. [ನಾಟ್ಯ] ಆಕಾಶಚಾರಿಯ ಹತ್ತು ಭೇದಗಳಲ್ಲಿ ಒಂದು : ಅತಿಕ್ರಾಂತ, ದಂಡಪಾದ, ಕ್ರಾಂತ . . . ಲಲಿತ ಈ ಹತ್ತು ಆಕಾಶಮಂಡಲಂಗಳ್ (ಲಾಸ್ಯರಂ. ೮–೪ವ). [ಸಂ.]

**ಕ್ರಾಂತದರ್ಶನ** (ನಾ). ೧. ಬಾಹ್ಯೇಂದ್ರಿಯಗಳಿಗೆ ಗೋಚರವಾಗದ ವಸ್ತುವನ್ನು ಕಾಣುವಿಕೆ; ಅತೀಂದ್ರಿಯ ದರ್ಶನ. ೨. ಇಂತಹ ದರ್ಶನವುಳ್ಳವನು; ಸರ್ವಜ್ಞ : ಕೃತಯುಗದ ಕ್ರತುಗಳಿಗೆ ಕ್ರಾಂತ ದರ್ಶನರಾಗಿ “ಕೃಣ್ವಂತೋವಿಶ್ವಮಾರ್ಯಂ” ಎಂದು ಘೋಷಿಸಿದ (ಕ್ರಾಂಚಧ್ವ. ೪೬). [ಕ್ರಾಂತ + ದರ್ಶನ]

**ಕ್ರಾಂತದರ್ಶಿ** (ನಾ). ಕ್ರಾಂತದರ್ಶನವನ್ನುಳ್ಳವನು; ಅತೀಂದ್ರಿಯ ಜ್ಞಾನಿ : ಪ್ರಾಜ್ಞರೂ, ಕ್ರಾಂತದರ್ಶಿಗಳೂ ಆದ ಯಾವ ಸ್ತುತಿಕರ್ತರಿದ್ದಾರೆಯೋ ಅವರು ತಮ್ಮ ಸ್ತುತಿಗಳನ್ನು ವರುಣನಿಗೆ ಅರ್ಪಿಸುತ್ತಾರೆ (ಋಕ್ಸಾರ. ೧೧೮) ; ಕವಿಗಳು ಕ್ರಾಂತದರ್ಶಿಗಳೆಂದು ಪ್ರಾಚೀನರ ಮತ (ಸಾಹಿವಿ. ೫) ; ಕವಿ ಕ್ರಾಂತದರ್ಶಿ, ನಿಜವಾದ ಕವಿತ್ವವು ಸರ್ವಸಮದರ್ಶಿ ಎಂಬುದಕ್ಕೆ ಕನಕದಾಸರು ಕುಲಗುರುಗಳಾಗಿದ್ದಾರೆ (ತವನಿ. ೧೬೧). [ಸಂ. ಕ್ರಾಂತದರ್ಶಿನ್]

**ಕ್ರಾಂತದರ್ಶಿತ್ವ** (ನಾ). ಅಗೋಚರವಾದುದನ್ನು ಕಾಣುವ ಶಕ್ತಿ : ಮನನಶೀಲತೆಯಿಂದ ಮುನಿಯಾಗುತ್ತಾನೆ, ಕ್ರಾಂತದರ್ಶಿತ್ವದಿಂದ ಕವಿಯಾಗುತ್ತಾನೆ (ಭಾರದ. ೩೯೮). [ಸಂ.]

**ಕ್ರಾಂತದೃಷ್ಟಿ** (ನಾ). ಅಗೋಚರವನ್ನು ಕಾಣುವ ದೃಷ್ಟಿ: ಅವರ ಕ್ರಾಂತದೃಷ್ಟಿಯ ಸಮೀಕ್ಷಾಕಿರಣವು ಓದುಗರಿಗೂ ನನಗೂ ಅತ್ಯಂತ ಸಹಕಾರಿ (ಕ್ರಾಂಚಧ್ವ. VII, ಪೀಠಿಕೆ). [ಕ್ರಾಂತ + ದೃಷ್ಟಿ]

**ಕ್ರಾಂತಿ** (ನಾ). ೧. ಹೋಗುವಿಕೆ; ಮುಂದುವರಿಯುವಿಕೆ; ಕ್ರಮಣ : ಮನದೊಳಗೆ ಲಕ್ಷ್ಮೀಕಾಂತನನು ನೆನೆವುತ್ತ ಮಾರ್ಗ ಕ್ರಾ[ಪಾಠಾಂ. ಶ್ರಾ]ಂತಿಯನ್ನು ನೆಱೆ ಮಱೆದು (ನಿಭಾಗ. ೧೦–೩೩–೩೫). ೨. ಆಕ್ರಮಣ ; ಧಾಳಿ. ೩. ಖಗೋಲಗಳು ಸಂಚರಿಸುವ ವಕ್ರ ಮಾರ್ಗ; ಸೂರ್ಯಪಥ. ‘ಕ್ರಾಂತಿವೃತ್ತ’ ಪರಾ. ೫. ವಿಪ್ಲವ; ಕ್ಷೋಭೆ: ಭಾರತದ ಆಧ್ಯಾತ್ಮಿಕ ವಿಚಾರದಲ್ಲಿ ಕ್ರಾಂತಿಯನ್ನು ಮಾಡಿದ ಪಂಥಗಳಲ್ಲಿ ಅದ್ವೈತಸಿದ್ಧಾಂತ ಉನ್ನತ ಸ್ಥಾನವನ್ನು ಪಡೆದಿದೆ (ಭಾರದ. ೩೦೪) ; ರವೀಂದ್ರರು ಹುಟ್ಟಿದ ಕಾಲ ದೇಶದ ತುಂಬೆಲ್ಲ ದೊಡ್ಡ ಕ್ರಾಂತಿಯ ಕಾಲ (ಧರ್ಮಸಾ. ೬೪). [ಸಂ.]

**ಕ್ರಾಂತಿಕಾತಿ** (ನಾ). ಕ್ರಾಂತಿಯನ್ನು ಉಂಟುಮಾಡುವವಳು ; ಕ್ರಾಂತಿಯ ಕಾರ್ಯದಲ್ಲಿ ತೊಡಗಿದವಳು : ಬಿಡುವು ದೊರೆತಾಗಲೆಲ್ಲ ಆ ಕ್ರಾಂತಿಕಾತಿ ಅವನಿಗೆ ಪಾಠ ಹೇಳಿಕೊಡುತ್ತಿದ್ದಳು (ಪುನರು. ೫೨೮). [ಕ್ರಾಂತಿ + –ಕಾತಿ$_5$]

**ಕ್ರಾಂತಿಕಾರ** (ನಾ). ಕ್ರಾಂತಿಯನ್ನು ಉಂಟುಮಾಡುವವನು; ಕ್ರಾಂತಿಯ ಕಾರ್ಯದಲ್ಲಿ ತೊಡಗಿದವನು: ಸ್ವಾತಂತ್ರ್ಯಕ್ಕಾಗಿ ಹವಣಿಸುತ್ತಿರುವ ಕ್ರಾಂತಿಕಾರರ ಚಿತ್ರವೇ ಈ ಕಾದಂಬರಿ (ಭಾರತಿ. II, ಮುನ್ನುಡಿ); ತಾನು ಕ್ರಾಂತಿಕಾರ ಪಾರ್ಟಿಗೆ ಸೇರಿದ್ದೇನೆ ಎಂದು ನಿನ್ನೆ ತಾನೇ ಆತ ಹೇಳಿದ (ಆತ್ಮಾರ್ಪ. ೭೩).
[ಕ್ರಾಂತಿ + -ಕಾರ$_1$ (< -ಕಾಜ)]

**ಕ್ರಾಂತಿಕಾರಕ** (ಗು). ಕ್ರಾಂತಿಯನ್ನುಂಟುಮಾಡುವ; ವಿಪ್ಲವಕಾರಿಯಾದ: ಆಚಾರ್ಯರುಗಳು ಸಮಾಜದಲ್ಲಿ ಪ್ರಚಲಿತವಾಗಿದ್ದ ನಿಯಮಗಳನ್ನು ಕ್ರಾಂತಿಕಾರಕವಾದ ಸಂಸ್ಕರಣಗಳಿಂದ ತಿದ್ದಿಲ್ಲ (ಭಾರದ. ೨೬೮). ಇವರೆಲ್ಲರ ಜೀವನದಲ್ಲಿ ಒಂದೇ ಕಾಲಕ್ಕೆ . . . ಕ್ರಾಂತಿಕಾರಕ ಅಗ್ನಿದಿವ್ಯ ಬರುತ್ತದೆ (ಸಮಜೀ. ೨೪, ಪೀಠಿಕೆ). [ಕ್ರಾಂತಿ + ಕಾರಕ$_2$]

**ಕ್ರಾಂತಿಕಾರಿ** (ಗು). ೧. = ಕ್ರಾಂತಿಕಾರಕ: ವಾಸ್ತವವಾಗಿ ವೀರದುಃಖೋವ ಕ್ರಾಂತಿಕಾರಿಯಾಗಿದ್ದಳು (ಪುನರು. ೨೨೨). (ನಾ). ೨. = ಕ್ರಾಂತಿಕಾರ: ಗಲ್ಲುಕಂಬವೇರುವ ಕ್ರಾಂತಿಕಾರಿಯನ್ನು ನೋಡಲು . . . ನಿಲ್ಲುತ್ತಾರೆ (ಆತ್ಮಾರ್ಪ. ೧೩).
[< ಸಂ. ಕ್ರಾಂತಿಕಾರಿನ್]

**ಕ್ರಾಂತಿಕಾಲ** (ನಾ). ೧. ಪರಿವರ್ತನೆಯ ಕಾಲ; ಸಂಕ್ರಮಣಕಾಲ: ಶ್ರೀಪುರುಷನ ಕಾಲವು ಲಿಪಿಯ ಬೆಳವಣಿಗೆಯಲ್ಲಿ ಕ್ರಾಂತಿಕಾಲ (Period of transition) (ಕರ್ನಾಅ. ೧೧೬). ೨. ಕ್ರಾಂತಿ ನಡೆಯುವ ಕಾಲ. [ಕ್ರಾಂತಿ + ಕಾಲ]

**ಕ್ರಾಂತಿಜೀವಿ** (ನಾ). = ಕ್ರಾಂತಿಕಾರ: ಪ್ರತಿ ಭಾರತೀಯ ಯುವಕನೂ ಮನೆಯಲ್ಲಿ ಸನಾತನಿ, ಮನೆಯ ಹೊರಗೆ ಕ್ರಾಂತಿಜೀವಿ (ಹೊಸಕ್ಷಿ. ೨೧೯).
[ಸಂ. ಕ್ರಾಂತಿಜೀವಿನ್]

**ಕ್ರಾಂತಿಪಕ್ಷ** (ನಾ). ಎಲ್ಲವೂ ಬದಲಾಗಬೇಕೆಂಬ ಪಕ್ಷ; ಕ್ರಾಂತಿಯನ್ನು ಬಯಸುವ ಪಕ್ಷ; ಬುಡದಿಂದ ತಿದ್ದುಪಾಟಾಗಬೇಕೆಂಬ ಮತ: "ಬುಡದಿಂದ ತಿದ್ದು ಪಾಟಾಗಬೇಕೆಂಬ ಮತದವರು: ಕ್ರಾಂತಿ ಪಕ್ಷ" (Left-centre. ಇಂಕನಿ). [ಕ್ರಾಂತಿ + ಪಕ್ಷ]

**ಕ್ರಾಂತಿಪಥ** (ನಾ). ೧. ಸೂರ್ಯನು ತಿರುಗುವ ಪಥ, —ಮಾರ್ಗ: ಆಕಾಶದಲ್ಲಿ ಸೂರ್ಯನು ಒಂದು ಗೊತ್ತಾದ ಮಾರ್ಗದಲ್ಲಿ ಚಲಿಸುತ್ತಾನೆ, ಇದನ್ನು ಸೂರ್ಯಪಥ - ಕ್ರಾಂತಿಪಥ ಎಂದು ಕರೆಯುತ್ತಾರೆ (ಆಕಾಶ. ೮೨). ೨. ವಿಪ್ಲವ ಮಾರ್ಗ: ಅವರು ಕ್ರಾಂತಿಪಥವನ್ನು ಹಿಡಿದರು (ರೂಢಿ). [ಕ್ರಾಂತಿ + ಪಥ]

**ಕ್ರಾಂತಿಯುಗ** (ನಾ). ಕ್ರಾಂತಿಯಿಂದ ಕೂಡಿದ ಯುಗ: ಈ ಯುಗವನ್ನು ಕ್ರಾಂತಿಯುಗವೆಂದೇ ಕರೆಯಬಹುದು (ರೂಢಿ).
[ಕ್ರಾಂತಿ + ಯುಗ]

**ಕ್ರಾಂತಿವಾದಿ** (ನಾ). ಕ್ರಾಂತಿಯಾಗಬೇಕೆಂದು ವಾದಿಸುವವನು: ಕ್ರಾಂತಿವಾದಿಗಳೆಂದು (Revolutionaries) ನಾವು ಕರೆಯುವ ಜನರು ಇವರೇ (ರಾಜಪ. ೨೫). [ಸಂ. ಕ್ರಾಂತಿವಾದಿನ್]

**ಕ್ರಾಂತಿವೃತ್ತ** (ನಾ). = ಕ್ರಾಂತಿಪಥ ೧: ನಕ್ಷತ್ರಮಂಡಲದಲ್ಲಿ ಸೂರ್ಯನು ಚಲಿಸುತ್ತಿರುವ ಈ ವಾರ್ಷಿಕಪಥವನ್ನು ಕ್ರಾಂತಿವೃತ್ತವೆಂದು ಕರೆಯುತ್ತಾರೆ (ಜಗತ್ತು. ೫೧). [ಕ್ರಾಂತಿ + ವೃತ್ತ]

**ಕ್ರಾಪು** (ನಾ). ಕತ್ತರಿಸಿದ ತಲೆಕೂದಲಿನ ಒಂದು ರೀತಿಯ ರಚನೆ: ಕೆಲವರು ಇಂಗ್ಲೀಷರಂತೆ ಕ್ರಾಪು ಮಾಡಿಸಿಕೊಂಡಿದ್ದರು (ಹುಟ್ಟಿಹ. ೮); ಪದ್ಮಾವತಿಯು ಕೇಶವನ ಕ್ರಾಪಿನ ಮುಂಗುರುಳುಗಳನ್ನು ತೀಡಿದಳು (ಸಮಜೀ. ೧೨೮). [← ಇಂ. Crop]

**ಕ್ರಾಯಕ** (ನಾ). ಕೊಂಡುಕೊಳ್ಳುವವನು; ಗ್ರಾಹಕ. [ಸಂ.]

**ಕ್ರಿ, ಕ್ರೀ** (ನಾ). = ಕ್ರಿಯೆ: ಕಾಯಕ್ಕೆ ಕ್ರಿ ಮನಕ್ಕೆ ಅಱಿವು (ಕೋಲಶಾಂ. ೫೬); ಕ್ರಿ[ಪಾಠಾಂ. ಕ್ರೀ]ಯುಳ್ಳೊಡಂತೊಂದಾಸೆ (ಮಹಾದೇ. ೨೭-೬೮); ಕ್ರಿ ನಿರ್ಧರವಾದಲ್ಲಿ ಆಚಾರಕ್ಕೆ ಅಂಕುರ (ಮೋಳಿಮಾ. ೮೫-೩೩೫). ಕ್ರೀ: ಬಸವಣ್ಣ ನಿನ್ನ ಮುಟ್ಟಿಮುಟ್ಟಿ ಎನ್ನ ಕ್ರೀ ಬಯಲಾಯಿತ್ತು (ಅವಚಂ. ೨೦೧-೯೦೮); ಕರ್ಮಂಗಳನೆ ಕಳೆಯಿತ್ತು ಕ್ರೀಗಳನೆ ಮೀಱಿತ್ತಲ್ಲಾ (ಬಸವ. ೬೪೮); ಬಳ್ಳಿ ಮರನ ಸುತ್ತಿ ಆದು ಸಾಲದೆ ಮತ್ತೊಂದಕ್ಕೆ ಅಲ್ಲಾಡುವಂತೆ ನಿಲ್ಲದು ಮನ ಕ್ರೀ[ಪಾಠಾಂ. ಕ್ರಿ]ಯಲ್ಲಿ (ಮೋಳಿಮಾ. ೧೧-೪೦). [< ಸಂ. ಕ್ರಿಯಾ]

**ಕ್ರಿಜ್ಞಾನ** (ನಾ). = ಕ್ರಿಯಾಜ್ಞಾನ: ನಡೆದಂತೆ ನುಡಿವ ನುಡಿದಂತೆ ನಡೆವ 'ಕ್ರಿಜ್ಞಾನ ನಿರುತವಾದಂಗಳಲ್ಲದೆ' ಲಿಂಗಯ್ಯನೊಲುಮೆ ಇಲ್ಲ (ಮೋಳಿಮಾ. ೧೨೯ ಪ್ರಸ್ತಾವನೆ). [ಕ್ರಿ + ಜ್ಞಾನ]

**ಕ್ರಿತ** (ನಾ). ಕೃಷಿಮಾಡುವುದು; ಅಭಿವೃದ್ಧಿಮಾಡುವುದು (?): ನಡಸದೆ ೧ ಕಾಲ ಉಳಿದರೆ ಕ್ರಿತವನಿಕ್ಕಿದೆನೆಂದು ಹೇಳದೆ ಈ ಬಾಳನು ತೋಟವನು ಬಿಡುವೆನು (ಸೌಇಇ. IX-ii, ೪೪೮-೧೬; 1442).
[< ಸಂ. ಕೃತ]

**ಕ್ರಿಪಾಸನ** (ನಾ). (?): ಕೀರ್ತಿ ನರ್ತನಾಚಾರ್ಯ್ಯ ಕ್ರಿಪಾಸನ ಪತ್ರಿತ ಮಾಳವ ಕಾಮಿನೀ ಕರ್ಣ್ನಜಪ ನಿಜ ಸೈನ್ಯ ಸಂನ್ನಾಹ ಕಿಂಕರ (ಕಇಅ. ೨೯-೪೧-೧೬; 1121). [?]

**ಕ್ರಿಮಿ** (ನಾ). ೧. ಹುಳು; ಕ್ಷುದ್ರಜಂತು: "ಕ್ರಿಮಿಯೆನಲ್ಕೆ ಜಂತಕ್ಕು" (ಮಂಗರಾ. ೪೯-೧೩); ಕ್ರಿಮಿ - ಕೀಟಗಳ ಬಗ್ಗೆ ನಮ್ಮಲ್ಲಿ ಬಹಳ ಪ್ರಚಾರವಾಗಬೇಕಾಗಿದೆ (ತರಚಿ. ೧೩). ೨. ಅರಗು; ಲಾಕ್ಷ: "ಕ್ರಸ ಲಾಕ್ಷಂ ಕ್ರಿಮಿಯೆಂದೆನಿಕ್ಕು" (ನಾನಾರ. ೧೨೨). [ಸಂ.]

**ಕ್ರಿಮಿಕುಲ** (ನಾ). ಒಂದು ನರಕದ ಹೆಸರು: ಲಾಕ್ಷಾಪ್ರಲೇಪ . . . ಕ್ರಿಮಿಕುಲಂಗಳೆಂಬುವೇಯೆಂಟು ರಾಜನರಕಂಗಳು (ವಿವೇಕ. ೧೭೯).
[ಸಂ.]

**ಕ್ರಿಮಿಘ್ನ** (ನಾ). ಒಂದು ಬಗೆಯ ಸಸ್ಯ: ಸಿಂಗಾರಬಳ್ಳಿ, ಕ್ರಿಮಿಘ್ನ (ಮೈಔಗಿ. ೩೫-೬೭೬). [?]

**ಕ್ರಿಮಿಜ** (ನಾ). ಹುಳುಗಳಿಂದ ಹುಟ್ಟಿದುದು; ರೇಷ್ಮೆ: ನಾರುನೂಲು ಕ್ರಿಮಿಜ ರೋಮಂಗಳಿಂದೆ ನೆಯ್ದಾ ಆ ಸೀರೆ ನಾಲ್ಕು ತೆಱನಕ್ಕು (ಮಂಗರಾ. ೧೦೧-೨೭). [ಸಂ.]

**ಕ್ರಿಮಿದಂತ** (ನಾ). ಹಲ್ಲಿಗೆ ಹುಳು ಹಿಡಿಯುವ ರೋಗ; ಹುಳಿತ ಹಲ್ಲು; ಹುಳುಕುಹಲ್ಲು: ಕ್ರಿಮಿದಂತವೆಂಬ ದಂತರೋಗದಲ್ಲಿ ಹಲ್ಲು ಕಪ್ಪಾಗಿಹುದು. ರಂಧ್ರಗಳುಂಟಾಗಿ ಆ ರಂಧ್ರಗಳಿಂದ ಕೀವು ರಕ್ತ ಸುರಿವುದು (ವೈದ್ಯಸಾ. II, ೧೨೧). [ಕ್ರಿಮಿ + ದಂತ]

**ಕ್ರಿಮಿನಾಶಕ** (ಗು). ೧. ಕ್ರಿಮಿಕೀಟಗಳನ್ನು ಕೊಲ್ಲುವಂತಹ, —ನಾಶಗೊಳಿಸುವಂತಹ. (ನಾ). ೨. ಕ್ರಿಮಿಗಳನ್ನು ಕೊಲ್ಲುವ ಔಷಧ ದ್ರವ್ಯ: ಹಾಕು ಗೊಬ್ಬರ ಬೆಳೆಗೆ ಕ್ರಿಮಿನಾಶಕವ ಹೊಡೆದು ಎಲ್ಲರನು ಕರೆಕರೆದು ಹಬ್ಬ ಮಾಡು (ನೆಲಮು. ೨೨); ರೋಗ ಪ್ರಬಲವಾದರೆ ಕ್ರಿಮಿನಾಶಕ ವಸ್ತುಗಳನ್ನು ಬಹಳ ಎಚ್ಚರಿಕೆಯಿಂದ ಉಪಯೋಗಿಸಬೇಕು (ತರಚಿ. ೧೩); ಸೂರ್ಯರಶ್ಮಿಯು ಬಹು ಮುಖ್ಯವಾದ ಕ್ರಿಮಿನಾಶಕವಾಗಿದೆ (ಗೃಹವಿ. ೧೮೨). [ಕ್ರಿಮಿ + ನಾಶಕ]

**ಕ್ರಿಮಿನಾಶ ಹೂವು** (ನಾ). ಒಂದು ಬಗೆಯ ಹೂವು: ಪೈರೆತ್ರಂ, ಕ್ರಿಮಿನಾಶ ಹೂವು (ಮೈಔಗಿ. ೬೫-೧೩೨೯). [?]

**ಕ್ರಿಮಿನಾಶಿ** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೨೯-೫೭೦). [?]

**ಕ್ರಿಮಿಬಂಧ** (ನಾ). ಒಂದು ಜಾತಿಯ ಗಿಡ: ಹುಳುಹಿಡಕ ಗಿಡ, ಕ್ರಿಮಿಬಂಧ (ಮೈಔಗಿ. ೩೨-೬೧೬). [ಕ್ರಿಮಿ + ಬಂಧ]

**ಕ್ರಿಮಿರಾಗ** (ನಾ). ಅರಗಿನ ಬಣ್ಣ (?): ಮಾನಂ ಕಲ್ಲಕಂಬದಂತೆ ಮಾಯೆ ಬಿದಿರ ಮುರುಡಿನಂತೆ ಲೋಭಂ ಕ್ರಿಮಿರಾಗದ ಕಂಬಳದಂತೆ (ಪಸಾರ. ೨೧-೨೩). [ಕ್ರಿಮಿ + ರಾಗ]

**ಕ್ರಿಮಿರೋಗ** (ನಾ). ಹೊಟ್ಟೆಯಲ್ಲಿ ಜಂತುಹುಳುವಾಗುವ ರೋಗ; ಜಂತುಜ್ವರ: ಇದರಿಂ ... ಹೊಟ್ಟೆಶೂಲೆ, ಮುಖರೋಗ, ಕ್ರಿಮಿರೋಗ ಸಹ ಪರಿಹಾರವಹುದು (ಸಕವೈ. ೨೧೮). [ಕ್ರಿಮಿ + ರೋಗ]

**ಕ್ರಿಮಿವಿದೂಷಿತ** (ಗು). ಹುಳುಹಿಡಿದು ಹಾಳಾದ; ಕುಟ್ಟೆ ಹಿಡಿದ: ಸೂಪಕರ್ಮಕೆ ತೊಗರಿ ಹೆಸರಾ ಚಣಾಖ್ಯವಿಂನೋಕ್ತುರ್ದಿನುತ್ತಮಂ ... ಸತ್ವಚಂಗಳ್ ಕ್ರಿಮಿವಿದೂಷಿತಂಗಳ ಬಿಡುವುದು (ವೀಕೃತು. ೬-೧೦-೬೪). [ಕ್ರಿಮಿ + ವಿದೂಷಿತ]

**ಕ್ರಿಮಿಶಾಸ್ತ್ರ** (ನಾ). ಕ್ರಿಮಿಗಳನ್ನು ಕುರಿತ ವಿಜ್ಞಾನ: "ಕೀಟವಿಜ್ಞಾನ; ಕ್ರಿಮಿಶಾಸ್ತ್ರ, ವಿದ್ಯೆ" (Entomology. ಇಂಕನ್). [ಕ್ರಿಮಿ + ಶಾಸ್ತ್ರ]

**ಕ್ರಿಮಿಶುದ್ಧಿಸಂಸ್ಕರಣ** (ನಾ). ಕ್ರಿಮಿಗಳೆಲ್ಲ ನಾಶವಾಗುವಂತೆ ಮಾಡುವ ವಿಧಾನ: ಮೊದಲು ಎಲ್ಲವನ್ನೂ ಕ್ರಿಮಿಶುದ್ಧಿಸಂಸ್ಕರಣ (Sterlizie) ಮಾಡು (ಹೊಸಕ್ಷಿ. ೬).
[ಕ್ರಿಮಿ + ಶುದ್ಧಿ + ಸಂಸ್ಕರಣ]

**ಕ್ರಿಮಿಸಂಘ** (ನಾ). ೧. ಕ್ರಿಮಿಗಳ ಸಮೂಹ. ೨. ಒಂದು ನರಕದ ಹೆಸರು: ಕ್ರಿಮಿಸಂಘ ... ದುರ್ಗಂಧವಾಸಗಳೆಂಬ್ಯೆದು ಮಂತ್ರಿ ನರಕಂಗಳಿಂದೊಡಗೂಡಿ (ವಿವೇಕ. ೧೮೦). [ಕ್ರಿಮಿ + ಸಂಘ]

**ಕ್ರಿಮಿಹರಣ** (ನಾ). = ಕ್ರಿಮಿನಾಶಕ: ವನದ್ರಾಕ್ಷೆ ವಜ್ರಕೀಟಾಪಹರಂ ××× ನಿರುತಂ ತುರಂಗ ಕ್ರಿಮಿಹರಣಂ (ಅಶ್ವಶಾ. ೧೧-೪೧).
[ಕ್ರಿಮಿ + ಹರಣ]

**ಕ್ರಿಯಾಋದ್ಧಿ** (ನಾ). [ಜೈನ] = ಕ್ರಿಯಾಗೋಚರದ್ಧಿ: ಪರ್ಯಂಕಾಸನಾದಿ ಯೋಗಾಸ್ಥಿತ ಸ್ವರೂಪ ಚಾರಣತ್ವಮುಂ ... ಆಕಾಶಗಾಮಿತ್ವಮೆಂದಿರ್ಕೆಜನಪ್ಪ ಕ್ರಿಯಾಋದ್ಧಿಯೊಳಂ (ಚಂದ್ರಪ್ರ. ೧೪-೩೦ ವ). [ಸಂ. (ಕ್ರಿಯಾ + ಋದ್ಧಿ)]

**ಕ್ರಿಯಾಂಗ** (ನಾ). ೧. [ನಾಟ್ಯ] ಅಭಿನಯಿಸುವ ಅಂಶ, —ಭಾಗ; ಅಭಿನಯಕ್ಕೆ ತಕ್ಕ ವೇಷಭೂಷಣ: "ಸಂಗತಿಯು ನುಡಿಯುತ್ತಿರಲು ಭಾಷಾಂಗಮಕ್ಕು ರೂಪಂ ಮೆಱೆದು ತೋಱಲ್ ಕ್ರಿಯಾಂಗಮಕ್ಕುಂ" (ಮಂಗರಾ. ೨೫-೯); ಸರಸ ಭಾಷಾಂಗ ಕ್ರಿಯಾಂಗೋತ್ಕರದ ನಾಟಕ ಗದ್ಯಪದ್ಯ ವಿಸರ ಮಧುರ ಗೀತೋಕ್ತಿಯಿಂ (ಬಸವ. ೨೫-೨೦). ೨. [ಸಂಗೀತ]ರಾಗದ ನಾಲ್ಕು ಅಂಗಗಳಲ್ಲಿ ಒಂದು: ರಾಗಾಂಗ, ಭಾಷಾಂಗ, ಕ್ರಿಯಾಂಗ, ಉಪಾಂಗವೆಂಬ ನಾಲ್ಕು ಅಂಗಂಗಳು (ವಿವೇಕ. ೨೩೩). [ಸಂ. (ಕ್ರಿಯಾ + ಅಂಗ)]

**ಕ್ರಿಯಾಕರ್ಮ** (ನಾ). ಧಾರ್ಮಿಕ ಕರ್ಮ; (ಧಾರ್ಮಿಕ ವಿಧಿಗಳಲ್ಲಿ) ಯಾಗಾದಿ ಪೂರ್ವಕ್ರಿಯೆ ಮತ್ತು ಶ್ರಾದ್ಧಾದಿ ಅಪರಕ್ರಿಯೆ: ಕ್ರಿಯಾಕರ್ಮಗಳ ಕಾರಣದಿಂದಲೂ ಪರ್ವಪೂರ್ಣಮಾನಿಮಿತ್ತದಿಂದಲೂ ಈ ದಾಸಿಯು ನಡುನಡುವೆ ಬ್ರಾಹ್ಮಣಭೋಜನ ಮಾಡಿಸಿ ದಕ್ಷಿಣೆ ಕೊಡುತ್ತಿದ್ದಳು (ಇಪ್ಪಕ. ೧೪೭). [ಸಂ. (ಕ್ರಿಯಾ + ಕರ್ಮ)]

**ಕ್ರಿಯಾಕಾಯವಾದಿ** (ನಾ). ಕ್ರಿಯೆಗಾಗಿಯೇ ದೇಹವೆಂದು ವಾದಿಸುವವನು; ಕಾಯವು ಕ್ರಿಯೆಗಾಗಿಯೇ ಎಂದು ವಾದಿಸುವವನು: ಮಾದಯ್ಯನು 'ಕ್ರಿಯಾಕಾಯವಾದಿ'ಯೆಂದು ಕೇಳಿದ ಜಾನಪದ ಕವಿಯು ... ಹಾಡಿದ್ದಾನೆ (ಕನ್ನಜಾ. ೨೦೪).
[ಸಂ. ಕ್ರಿಯಾಕಾಯವಾದಿನ್]

**ಕ್ರಿಯಾಕಾರ** (ನಾ). ೧. ಒಪ್ಪಂದ; ಕರಾರು. ೨. ಹೊಸ ವಿದ್ಯಾರ್ಥಿ; ನೂತನ ಶಿಷ್ಯ. [ಸಂ.]

**ಕ್ರಿಯಾಕಾಲ** (ನಾ). ಕ್ರಿಯೆಯನ್ನು ಮಾಡುವ ಕಾಲ: ಭವಿಯಾಗಿ ಹೋಹರ ಮುಟ್ಟಲಾಗದು ... ಅವನ ಶ್ರಾದ್ಧಕಾಲವೆ ಶ್ವಾನಮಾಂಸ ಕ್ರಿಯಾಕಾಲ[ಪಾ ಕಾಂ. ರ]ವೆ ಕ್ರಿಮಿಗಳು ತದ್ದಿನವೆ ಮದ್ಯಮಾಂಸ (ಬಸವ. ೬೬೪). [ಸಂ. (ಕ್ರಿಯಾ + ಕಾಲ)]

**ಕ್ರಿಯಾಕುಶಲಿ** (ಗು). ೧. ಕೆಲಸ ಮಾಡುವುದರಲ್ಲಿ ಕುಶಲನಾದ; ಕರ್ಮಕುಶಲ: ಶ್ರುತಿವಿಹಿತ ಕ್ರಿಯಾಕುಶಲ ಶೈವಮತಾಶ್ರಿತ ಶಾಸ್ತ್ರನಿತ್ಯಪುರೋಹಿತ ಕೃತ ಹೋಮಕುಂಡದೆಡೆಗೇಳ್ತರುತುಂ (ರಾಜಶೇ. ೮-೭೦). (ನಾ). ೨. ಕಾರ್ಯದಲ್ಲಿ ಕೌಶಲವುಳ್ಳವನು; ಕರ್ಮಕುಶಲಿ: ಶಾಂತಿಕ ಪೌಷ್ಟಿಕ ಕ್ರಿಯಾಕುಶಲನುಂ ಧರ್ಮಕಾರ್ಯಾದಿ ಕುಶಲನುಂ (ಆದಿಪು. ೧೧-೩ ವ). [ಸಂ. (ಕ್ರಿಯಾ + ಕುಶಲ]

**ಕ್ರಿಯಾಖಂಡನ** (ನಾ). ಕಾರ್ಯಭಂಗ: "ಕ್ರಿಯಾಖಂಡನಂ—ಕಾರ್ಯಭಂಗ" (ನಾನಾರ. ೨೯ ಟೀಕೆ). [ಸಂ. (ಕ್ರಿಯಾ + ಖಂಡನ]

**ಕ್ರಿಯಾಗೋಚರದ್ಧಿ** (ನಾ). [ಜೈನ] ಅಷ್ಟವಿಧ ಋದ್ಧಿಗಳಲ್ಲಿ ಒಂದು: ಅಣಿಮಾ ಮಹಿಮಾ ... ಕಾಮರೂಪಿತ್ವಾದಿ ಭೇದದಿಂ ಕ್ರಿಯಾಗೋಚರದ್ಧಿ ಬಹುವಿಧಂ (ತತ್ತ್ವಪ್ರ. ೧೬೪).
[ಸಂ. (ಕ್ರಿಯಾ + ಗೋಚರ + ಋದ್ಧಿ]

**ಕ್ರಿಯಾಗೋಪಕ** (ನಾ). [ಕಾವ್ಯಮೀ] ಒಂದು ಶಬ್ದಾಲಂಕಾರ. ವಾಕ್ಯದಲ್ಲಿ ಕ್ರಿಯಾಪದವು ಸ್ಪಷ್ಟವಾಗಿ ಗೋಚರಿಸದಂತೆ ಬಚ್ಚಿಟ್ಟು ಹೇಳುವುದು: ಅರಸಿಯ ದಿವ್ಯ ಸೇನಾದರದಿರದೀಗಡೆ ನಿನ್ನರಸಿಯನೆಯ್ದುವಿನಂ ಪರಿಜನಮಂ ಕಳುಪಿಂ — ಕ್ರಿಯಾಗೋಪಕ (ಕವಿರಾ. ೨-೧೩೯). [ಸಂ. (ಕ್ರಿಯಾ + ಗೋಪಕ)]

**ಕ್ರಿಯಾಚಾರ** (ನಾ). ಕಾರ್ಯವನ್ನು ಆಚರಿಸುವುದು; ಕರ್ಮಾಚರಣೆ: ಶಂಕರನು ... ಕ್ಷುದ್ರದೇವತೆಗಳ ಹೆಸರಿನಲ್ಲಿ ನಡೆಯುತ್ತಿದ್ದ ಅಸಹ್ಯವಾದ ಕ್ರಿಯಾಚಾರಗಳನ್ನು ಬಿಡಿಸಿದನು (ಭಾರದ. ೩೦೪).
[ಸಂ. (ಕ್ರಿಯಾ + ಆಚಾರ)]

**ಕ್ರಿಯಾತ್ಮಕ** (ಗು). ೧. ಕಾರ್ಯರೂಪವಾಗಿರುವ; ಕ್ರಿಯೆಯನ್ನೊಳಗೊಂಡ: ರಾಜೂರವರ ಹೊಗೆರಹಿತ ಒಲೆ (ಚೂಲಾ)ಯು ಕ್ರಿಯಾತ್ಮಕ ಪರಿಹಾರವನ್ನೊದಗಿಸುತ್ತದೆ (ಆಡುಸಾ. ೧೯). ೨. ಕ್ರಿಯೆಯೆ ಸ್ವಭಾವವಾಗಿ ಉಳ್ಳ; ಕ್ರಿಯಾಶೀಲವಾದ: ಪ್ರಕೃತಿ ಯಾವತ್ತು ಕ್ರಿಯಾತ್ಮಕವಾಗಿದೆ, ಕ್ರಿಯಾಶೀಲವಾಗಿದೆ (ಭಾರದ. ೧೧೫). (ನಾ). ೩. [ವ್ಯಾಕ] ಕ್ರಿಯಾರ್ಥವನ್ನು ಒಳಗೊಂಡದ್ದು; ಕ್ರಿಯಾಸೂಚಕವಾದದು; ಕ್ರಿಯಾರೂಪವಾದುದು: ವಿನುತ ಕ್ರಿಯಾತ್ಮಕಂಗಳುಮೆನಿಸುವ ಸಂಸ್ಕೃತದ ಭಾವವಚನಂಗಳಂ (ಶಮುದ. ೬೪). [ಸಂ.]

**ಕ್ರಿಯಾತ್ಮಕಶಿಕ್ಷಣ** (ನಾ). ಕ್ರಿಯೆಯ ಮೂಲಕ ನಡೆಯುವ ಶಿಕ್ಷಣ; ಮೂಲಶಿಕ್ಷಣ: ಕ್ರಿಯಾತ್ಮಕಶಿಕ್ಷಣ ವಿಧಾನವನ್ನು ಗಾಂಧಿ ನಿರೂಪಿಸಿದರು (ಕ್ರಿಯಾಶಿ. ೧). [ಕ್ರಿಯಾತ್ಮಕ + ಶಿಕ್ಷಣ]

**ಕ್ರಿಯಾತ್ಮಕಾವ್ಯಯ** (ನಾ). [ವ್ಯಾಕ] ಕ್ರಿಯಾರ್ಥವನ್ನು ಉಳ್ಳ ಅವ್ಯಯ. ಉದಾ: ಅಲ್, ಇಲ್: ಸೂಲ್ಲೊಳ್ ಕ್ರಿಯಾತ್ಮಕಾವ್ಯಯಮಿಲ್ಲೆಂಬುದು (ಶಮುದ. ೩೦೧). [ಕ್ರಿಯಾತ್ಮಕ + ಅವ್ಯಯ]

**ಕ್ರಿಯಾದೀಕ್ಷೆ** (ನಾ). [ವೀಶೈ] ಗುರುವಿನ ಮೂಲಕ ಶಿಷ್ಯನಿಗೆ ವಿಧಾನ ಪೂರ್ವಕ ನಡೆಯುವ ದೀಕ್ಷೆ: "ಶಿಷ್ಯನ ಹಸ್ತದಲ್ಲಿ (ವಿಧ್ಯುಕ್ತ ಸಂಸ್ಕಾರದಿಂದ ಕೂಡಿದ ಇಷ್ಟಲಿಂಗವು) ಗುರುವಿನಿಂದ ಪ್ರಾಪ್ತವಾಗುವುದೇ ಕ್ರಿಯಾದೀಕ್ಷೆಯೆನಿಸುವುದು" (ಶಿವಾಸೂ. ೭೧-೩೯); ಹೋಮಕುಂಡದಿಂದಲೂ ... ಮಂತ್ರೋಪದೇಶದಿಂದಲೂ ಕೂಡಿರುವುದೇ ಕ್ರಿಯಾದೀಕ್ಷೆಯೆಂದು ಹೇಳಲ್ಪಡುತ್ತದೆ (ಅಷ್ಟಾವಿ. ೧).
[ಸಂ. ಕ್ರಿಯಾದೀಕ್ಷಾ (ಕ್ರಿಯಾ + ದೀಕ್ಷಾ)]

**ಕ್ರಿಯಾದ್ವೇಷ** (ನಾ). ೧. ಯಾವ ಕ್ರಿಯೆಯಲ್ಲಿಯೂ ದ್ವೇಷ ಭಾವನೆ ಯಿರುವುದು. ೨.[ಕಾವ್ಯಮಿ] ವಿಪ್ರಲಂಭ ಶೃಂಗಾರದ ದಶಾವಸ್ಥೆ ಗಳಲ್ಲಿ ಒಂದು: ಅಭಿಲಾಷೆ, ಚಿಂತೆ . . . ಕ್ರಿಯಾದ್ವೇಷ, ವಿಕಲ, ಮೌನ, ಮೂರ್ಛೆ, ಮರಣವೆಂಬ ದಶಾವಸ್ಥಾ ವಿಚಾರಪರರಿಂದುಪಾಶ್ರಿತ ರಾಗಿ (ವಿವೇಕ. ೨೩೦). [ಸಂ. (ಕ್ರಿಯಾ + ದ್ವೇಷ)]

**ಕ್ರಿಯಾದ್ವೈತ** (ನಾ). ಮೂರು ಬಗೆಯ ಅದ್ವೈತಗಳಲ್ಲಿ ಒಂದು: ಭಾವಾದ್ವೈತ, ದ್ರವ್ಯಾದ್ವೈತ, ಕ್ರಿಯಾದ್ವೈತವೆಂಬ ಮೂರು ಅದ್ವೈತ ಗಳನ್ನು ಭಾವಿಸಬೇಕು . . . ತಾನು ಮಾಡುವ ಸರ್ವ ಕರ್ಮಗಳನ್ನು ತನ್ನೊಳಗಿದ್ದು ಪರಮಾತ್ಮನೇ ಮಾಡಿ ಮಾಡಿಸಿದನೆಂದು ಭಾವಿಸಿ ತನ್ನ ಸ್ವಾತಂತ್ರ್ಯ ಕರ್ತೃತ್ವವನ್ನು ಬಿಟ್ಟು ಸರ್ವಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸುವುದೇ ಕ್ರಿಯಾದ್ವೈತವು (ಹಸಾರ. ೩೨೧ ಟೀಕು). [ಸಂ. (ಕ್ರಿಯಾ + ಅದ್ವೈತ)]

**ಕ್ರಿಯಾಧಿಕಾರ** (ನಾ). ಹತ್ತು ಆಗಮಭಾಗಗಳಲ್ಲಿ ಒಂದು: ಖಿಲ, ಖಿಲಾಧಿಕಾರ, ಪುರಾಧಿಕಾರ, . . . ಕ್ರಿಯಾಧಿಕಾರ, ನಿರುಕ್ತಾಧಿಕಾರ, ಪ್ರಕೀರ್ಣಾಧಿಕಾರ, ಯಜ್ಞಾಧಿಕಾರಗಳೆಂಬ ಹತ್ತು ಆಗಮ ಭಾಗಗಳು (ಭಾರದ. ೭೫). [ಸಂ. (ಕ್ರಿಯಾ + ಅಧಿಕಾರ)]

**ಕ್ರಿಯಾನಿವೃತ್ತಿ** (ನಾ). ಕ್ರಿಯೆಯನ್ನು ನಿಲ್ಲಿಸುವುದು,—ಮಾಡದಿರು ವುದು: ಸಂಸಾರ ಪರಿತ್ಯಾಗೋದ್ಯುಕ್ತ ಸಮ್ಯಗ್ ಜ್ಞಾನೋಪೇತ ಭವ್ಯ ಜೀವನ ಬಾಹ್ಯಾಭ್ಯಂತರ ಕ್ರಿಯಾನಿವೃತ್ತಿ ಸಮ್ಯಕ್‌ಚಾರಿತ್ರಮೆಂಬುದು (ಆದಿಪು. ೧೦–೬೧ವ); ಹಿಂಸಾದ್ಯಶೇಷ ಸಾವದ್ಯ ಕ್ರಿಯಾನಿವೃತ್ತಿಗೆಯ್ದು (ಸುಕುಮಾ. ೬–೮ ವ). [ಸಂ. (ಕ್ರಿಯಾ + ನಿವೃತ್ತಿ)]

**ಕ್ರಿಯಾಪಟು** (ಗು). ಕ್ರಿಯೆಯಲ್ಲಿ ಚುರುಕಾದ; ಕ್ರಿಯಾಚತುರ ವಾದ: ಕೆಲವು ಕೀಟಗಳಲ್ಲಿ ಪ್ಯೂಪ ಒಡೆಯುವ ಮುನ್ನ ಕ್ರಿಯಾಪಟು ವಾಗುತ್ತದೆ (ಕೀಟಬಿ. ೧೩೯). [ಸಂ. (ಕ್ರಿಯಾ + ಪಟು)]

**ಕ್ರಿಯಾಪದ** (ನಾ). ೧. ಕ್ರಿಯಾರೂಪ, —ಸ್ಥಿತಿ (?): ಇಂತೀ ಗುಣ ದಂತೆ ಹೊಜಗಣ ಕ್ರಿಯಾಪದ ಒಳಗಣ ಜ್ಞಾನಸಂಭವ ಉಭಯದ ತತ್ತಿಲ್ಲ (ಮದೇಮ್ಮ. ೨೭೬–೨೭). ೨. [ವ್ಯಾಕ] ಕ್ರಿಯೆಯನ್ನು ಸೂಚಿಸುವ ಪದ; ಕರ್ತೃವಿನ ಕೆಲಸವನ್ನು ಹೇಳುವ ಶಬ್ದ: ಏಕತೆಯೆ ತನಗೆ ಬಹುತೆಯನಾಕರಿಸದು ಜಾತಿ ತಾಂ . . . ಏಕತ್ವಮನೇ ಕತ್ವಮನಾ ಕ್ರಿಯಾಪದಂ ಪಡೆಯಲೊಡಂ (ಶಮದ. ೧೩೮); ಕ್ರಿಯಾ ಪದವು ಕರ್ತೃವಿನ ಕೆಲಸವನ್ನು ಹೇಳುತ್ತದೆ (ಮಧ್ಯಮ. ೬೧). [ಸಂ.]

**ಕ್ರಿಯಾಪರಿಚ್ಛೇದ** (ನಾ). ಕ್ರಿಯೆಯನ್ನು ಭಾಗಮಾಡಿಕೊಡುವಿಕೆ; ಶ್ರಮವಿಭಾಗ: "ಕ್ರಿಯಾಪರಿಚ್ಛೇದ, ವಿಭಜನ, ಕ್ರಿಯಾಸವ್ಯವಚ್ಛೇದ; ಶ್ರಮವಿಶ್ಲೇಷ" (Division of Labour. ಪಾರಿಸಿ). [ಸಂ. (ಕ್ರಿಯಾ + ಪರಿಚ್ಛೇದ)]

**ಕ್ರಿಯಾಪಾದ** (ನಾ). ಆಗಮದ ನಾಲ್ಕು ಪಾದಗಳಲ್ಲಿ ಒಂದು. ℙ ಪೂಜಾವಿಧಾನ ಮೊದಲಾದುವನ್ನು ತಿಳಿಸುವ ಆಗಮಭಾಗ: ಸಕಲಾಗಮಂಗಳಲ್ಲಿಯೂ ಕ್ರಿಯಾಪಾದ, ಚರ್ಯಾಪಾದ, ಯೋಗಪಾದ ಜ್ಞಾನಪಾದವೆಂಬ ನಾಲ್ಕು ಪಾದಂಗಳುಂ . . . ಅಕ್ಕುಂ (ವಿವೇಕ. ೬೨); ದೇವತಾಮೂರ್ತಿಗಳನ್ನು ಸುಲಕ್ಷಣವಾಗಿ ನಿರ್ಮಿಸಿ, ಪ್ರತಿಷ್ಠಿಸಿ, ಪೂಜಿಸುವ ವಿವರಗಳನ್ನು "ಕ್ರಿಯಾಪಾದ"ವು ತಿಳಿಸುತ್ತದೆ (ಭಾರದ. ೬೩). [ಸಂ. (ಕ್ರಿಯಾ + ಪಾದ)]

**ಕ್ರಿಯಾಪೂರ್ವಕ** (ನಾ). ವಿಧಿಗೆ ಅನುಸಾರವಾದುದು; ವಿಧಾನ ಪೂರ್ವಕವಾದುದು: ಬಲಗೊಂಡೊಳಗಂ ಪೊಕ್ಕು ಕ್ರಿಯಾ ಪೂರ್ವಕದಿಂ ದೇವರಂ ಬಂದಿಸಿ (ಶಾಂತಿಪು. ೫–೩ ವ). [ಸಂ. (ಕ್ರಿಯಾ + ಪೂರ್ವಕ)]

**ಕ್ರಿಯಾಪ್ರಕೃತಿ** (ನಾ). [ವ್ಯಾಕ] ಕ್ರಿಯಾ ರೂಪಾರ್ಥದ ಪ್ರಕೃತಿ; ಧಾತುಪ್ರಕೃತಿ; ಕೃಲ್ಲಿಂಗ: ಹೋದಳು, ಹೊರಡುತ್ತದೆ . . . ಎಂಬ ಕ್ರಿಯಾಪದಗಳಲ್ಲಿರುವ ಪ್ರತ್ಯಯಗಳನ್ನು ತೆಗೆದು ಹಾಕಿದರೆ . . . ಉಳಿಯುವುವು ಹೋಗು ಹೊರಡು ಎಂಬುವು. ಇವನ್ನು ಕ್ರಿಯಾಪ್ರಕೃತಿ ಎನ್ನಬಹುದು. ಆದರೆ ಇದಕ್ಕೆ ಧಾತು ಎಂಬ ಹೆಸರೇ ಪ್ರಸಿದ್ಧವಾಗಿದೆ (ಮಧ್ಯಮ. ೭). [ಸಂ. (ಕ್ರಿಯಾ + ಪ್ರಕೃತಿ)]

**ಕ್ರಿಯಾಫಲ** (ನಾ). ಕ್ರಿಯೆಯಿಂದ ಉಂಟಾಗತಕ್ಕ ಪರಿಣಾಮ, —ಪ್ರಯೋಜನ, —ಫಲ. [ಸಂ. (ಕ್ರಿಯಾ + ಫಲ)]

**ಕ್ರಿಯಾಭಸಿತ** (ನಾ). [ವೀಶೈ] "ಗುರುವಿನಿಂದ ಸಂಸ್ಕರಿಸಲ್ಪಟ್ಟ ಪವಿತ್ರ ಭಸ್ಮ" (ಶರಸಾ. ೨೪–೭). [ಸಂ. (ಕ್ರಿಯಾ + ಭಸಿತ)]

**ಕ್ರಿಯಾಭಾಗ** (ನಾ). = ಕ್ರಿಯಾಪಾದ: ಕ್ರಿಯಾಭಾಗವು ದೇವಾಲಯ ನಿರ್ಮಾಣ, ವಿಗ್ರಹಗಳ ರಚನೆಗಳನ್ನು ವಿವರಿಸುತ್ತದೆ (ಭಾರದ. ೨೧೦). [ಸಂ. (ಕ್ರಿಯಾ + ಭಾಗ)]

**ಕ್ರಿಯಾಭೋಗಿ** (ನಾ). ಕ್ರಿಯೆ ಹಾಗೂ ಭೋಗ ಇವೆರಡನ್ನೂ ಉಳ್ಳದ್ದು: ಪಶುಗಳಲ್ಲಿ ಜ್ಞಾನ ಲಕ್ಷಣವಿಲ್ಲ. ಅವು ಕೇವಲ ಕ್ರಿಯಾ ಭೋಗಿಗಳು (ಜೀವಾತ್ಮ. ೧೯೨). [ಸಂ. ಕ್ರಿಯಾಭೋಗಿನ್]

**ಕ್ರಿಯಾಭ್ರಮೆ** (ನಾ). ಸಂಸಾರದ ದುಃಖಕ್ಕೆ ಕಾರಣವಾದ ಮೂರು ಭ್ರಮೆಗಳಲ್ಲಿ ಒಂದು: ಪುನಃ ಪುನಃ ಸಂಸಾರದಲ್ಲಿ ಲೋಲಾಡುವಂತೆ ಮಾಡುವುದಕ್ಕೆ ಕಾರಕಭ್ರಮೆ, ಕ್ರಿಯಾಭ್ರಮೆ, ದ್ರವ್ಯ ಭ್ರಮೆ ಎಂಬ ಮೂರು ವಿಧದ ಭ್ರಮೆಗಳು ಕಾರಣವಾಗಿರುವವು (ಹಸಾರ. ೧೬–೨೯ ಟೀಕು). [< ಸಂ. ಕ್ರಿಯಾಭ್ರಮ]

**ಕ್ರಿಯಾಭ್ರಷ್ಟ** (ನಾ). ಕರ್ತವ್ಯದಿಂದ ಚ್ಯುತನಾದವನು; ನಡತೆ ಗೆಟ್ಟವನು; ಉಪಕಾರಗೇಡಿ: ಅವನಂತೆ ಯಾರೂ ಕ್ರಿಯಾಭ್ರಷ್ಟರಿಲ್ಲ (ರೂಢಿ). [ಸಂ. (ಕ್ರಿಯಾ + ಭ್ರಷ್ಟ)]

**ಕ್ರಿಯಾಮಂತ್ರ** (ನಾ). [ಜೈನ] ಐದು ಬಗೆಯ ಮಂತ್ರಗಳಲ್ಲಿ ಒಂದು: ಮಂತ್ರಮೆಂಬುದು ಪಂಚವಿಧಮಕ್ಕುಮವಱೊಳು ಕ್ರಿಯಾ ಮಂತ್ರ ಪರಸ್ಥಾನಾರ್ಹಂತ್ಯಮುಂ ಮಾಳ್ಕುಂ (ಚಾವುಂಪು. ೨೪೦). [ಸಂ. (ಕ್ರಿಯಾ + ಮಂತ್ರ)]

**ಕ್ರಿಯಾಮಥನ** (ನಾ). ಪ್ರಯತ್ನಪೂರ್ವಕವಾದ ಕ್ರಿಯೆ; ವಿಶೇಷ ವಾದ ಪರಿಶ್ರಮ: ಕ್ರಿಯಾಮಥನವಿಲ್ಲದೆ ಕಾಣಬಂದುದೇ ಇಕ್ಷುವಿ ನೊಳಗಣ ಮಧುರ? ಕ್ರಿಯಾಮಥನವಿಲ್ಲದೆ ಕಾಣಬಂದುದೇ ತಿಲದೊಳಗಣ ತೈಲ? (ಅವಚಂ. ೧೬೯–೬೬೧). [ಸಂ. (ಕ್ರಿಯಾ + ಮಥನ)]

**ಕ್ರಿಯಾಮಾರ್ಗ** (ನಾ). [ಶೈವ] ಶೈವಸಿದ್ಧಾಂತದ ನಾಲ್ಕು ಮಾರ್ಗಗಳಲ್ಲಿ ಒಂದು: ದಕ್ಷಿಣ ದೇಶದ ಶೈವಸಿದ್ಧಾಂತಿಗಳಲ್ಲಿ ಚರ್ಯಾಮಾರ್ಗ, ಕ್ರಿಯಾಮಾರ್ಗ, ಯೋಗಮಾರ್ಗ, ಜ್ಞಾನಮಾರ್ಗ ಗಳೆಂಬ ನಾಲ್ಕು ಅಂತಸ್ತಿನ ಸಾಧನಗಳಿವೆ . . . ಕ್ರಿಯಾಮಾರ್ಗ ಅಥವಾ ಸತ್ಪುತ್ರಮಾರ್ಗದಲ್ಲಿ ಹೇಳಿರುವ ಶಿವಪೂಜಾ, ಅಗ್ನಿಕಾರ್ಯ, ಶಿವ ಮಂತ್ರೋಚ್ಚಾರಣೆ ಮೊದಲಾದ ಕರ್ಮಗಳನ್ನು ಮಾಡುತ್ತಾ ಧ್ಯಾನಾ ಸಕ್ತನಾಗಿ ಶಿವಸಾಮೀಪ್ಯವನ್ನು ಹೊಂದುವನು (ಭಾರದ. ೨೧೭). [ಸಂ. (ಕ್ರಿಯಾ + ಮಾರ್ಗ)]

**ಕ್ರಿಯಾಮಾಲೆ** (ನಾ). ೧. ಕೆಲಸಗಳ ಸಾಲು. ೨. ಕ್ರಿಯಾಪದಗಳ ಪಂಕ್ತಿ. ೩. ಕ್ರಿಯಾಪದದ ಎಲ್ಲ ರೂಪಗಳ ಪಟ್ಟಿ. [ಸಂ. (ಕ್ರಿಯಾ + ಮಾಲಾ)]

**ಕ್ರಿಯಾಮೂರ್ತಿ** (ನಾ). [ವೀಶೈ] "ಶರಣರು ಪಾದ ಪೂಜೆಗಾಗಿ ನಿಶ್ಚಯಿಸಿಕೊಂಡಿರುವ ಗುರು" (ಶರಸಾ. ೨೪–೭). [ಸಂ. (ಕ್ರಿಯಾ + ಮೂರ್ತಿ)]

**ಕ್ರಿಯಾಯೋಗ** (ನಾ). ೧. = ಕರ್ಮಯೋಗ: ಈಶ್ವರಪ್ರಣಿಧಾನವೆಂಬ ಈಶ್ವರಭಕ್ತಿಯಲ್ಲಿ ಧರ್ಮಶಾಸ್ತ್ರ, ಭಗವಚ್ಛಾಸ್ತ್ರ, ಭಗವದ್ಗೀತಾ ಮೊದಲಾದ ಸಕಲ ಶಾಸ್ತ್ರಗಳಲ್ಲೂ ಹೇಳಲ್ಪಟ್ಟ ಸಕಲ ಸತ್ಕರ್ಮಗಳೂ ಅಡಗಿರುತ್ತವೆ. ಇದು ಕ್ರಿಯಾಯೋಗವೆನ್ನಲ್ಪಡುವುದು (ಹಿಂದಸಾ. ೧೦೦). ೨. [ವ್ಯಾಕ] ಕ್ರಿಯಾಪದದೊಡನೆ ಸಂಬಂಧ. [ಸಂ. (ಕ್ರಿಯಾ + ಯೋಗ)]

**ಕ್ರಿಯಾರೂಪ** (ನಾ). ೧. ಕ್ರಿಯೆಯಾಗಿ ಬಂದುದು; ವಾಸ್ತವವಾದುದು. ೨. ಕಟ್ಟುಪಾಡು; ಕ್ರಮ; ವ್ಯವಸ್ಥೆ: ದೃಷ್ಟಿ (self) ಯೆಂದರೆ . . . ಕ್ರಿಯಾರೂಪ (system) ಎಂದು ಕೊಲರಿಜ್ ಹೇಳಿದ್ದು ಅತ್ಯಂತ ಅರ್ಥಪೂರ್ಣವಾಗಿದೆ (ನವ್ಯಕಾ. ೮೪). [ಸಂ. (ಕ್ರಿಯಾ + ರೂಪ)]

**ಕ್ರಿಯಾರ್ಥ** (ನಾ). [ವ್ಯಾಕ] ಕ್ರಿಯೆಯ ಅರ್ಥವನ್ನುಳ್ಳದ್ದು; ಕ್ರಿಯಾಪದ: ಕ್ರಿಯಾರ್ಥದ ಮೂಲಂ ವಿಭಕ್ತಿರಹಿತ ಧಾತುವೆಂಬುದು (ಶಮುದ. ೨೧೬ ವೃತ್ತಿ). [ಸಂ. (ಕ್ರಿಯಾ + ಅರ್ಥ)]

**ಕ್ರಿಯಾರ್ಥಕ** (ನಾ). = ಕ್ರಿಯಾರ್ಥ. 'ಕ್ರಿಯಾರ್ಥಕಾವ್ಯಯ' ಪರಾ. [ಸಂ]

**ಕ್ರಿಯಾರ್ಥಕಾವ್ಯಯ** (ನಾ). = ಕ್ರಿಯಾತ್ಮಕಾವ್ಯಯ: ರೂಪಭೇದ ಹೊಂದದೆ ಪೂರ್ಣ ಕ್ರಿಯಾಪದದ ಅರ್ಥವನ್ನು ಕೊಡುವ ಪದಕ್ಕೆ ಕ್ರಿಯಾರ್ಥಕಾವ್ಯಯವೆಂದು ಹೆಸರು (ಮಧ್ಯಮ. ೯೮). [ಕ್ರಿಯಾರ್ಥಕ + ಅವ್ಯಯ]

**ಕ್ರಿಯಾರ್ಪಣ** (ನಾ). [ವೀಶೈ] ತನ್ನ ಉಪಭೋಗದ್ರವ್ಯಗಳೆಲ್ಲ ತ್ರಿವಿಧಲಿಂಗಕ್ಕೆ ಅರ್ಪಣಮಾಡುವ ಕ್ರಿಯೆ: ತನ್ನ ಉಪಭೋಗಕ್ಕಾಗಿ ಯದೃಚ್ಛಾ ಸಂಭವವಾದ ಎಂದರೆ, ತಾವಾಗಿಯೇ ಪ್ರಾಪ್ತವಾದ ಮತ್ತು ಆಯಾ ಕಾಲೋಚಿತವಾದ ದ್ರವ್ಯಗಳಿಂದ ತಾನು ಅದರದಿಂದ ತ್ರಿವಿಧಲಿಂಗದಲ್ಲಿ (ಇಷ್ಟ, ಪ್ರಾಣ, ಭಾವದಲ್ಲಿ) ಮಾಡತಕ್ಕ ಅರ್ಪಣ ಕ್ರಿಯೇನುಂಟೋ; ಅದನ್ನು ಕ್ರಿಯಾರ್ಪಣವೆಂದು ಅರ್ಪಣತತ್ತ್ವಜ್ಞರು ಹೇಳುವರು (ಶಿವಾಸೂ. ೧೦೫-೩೪). [ಸಂ. (ಕ್ರಿಯಾ + ಅರ್ಪಣ)]

**ಕ್ರಿಯಾಲಿಂಗ** (ನಾ). [ವೀಶೈ] ಇಷ್ಟಲಿಂಗ: ಮೀಱಿದ ಕ್ರಿಯಾಲಿಂಗ ವಿಡಿದು ಕ್ರಿಯಾನಿಷ್ಪತ್ತಿಲಿಂಗ ಸಿದ್ಧಿ (ಬಸವ. ೮೭೭); ಕ್ರಿಯಾಲಿಂಗ ಸಂಬಂಧವೆ ಭಕ್ತಂಗೆ ಮತವು (ಅವಚಂ. ೨೩೯-೧೦೮೭). [ಸಂ. (ಕ್ರಿಯಾ + ಲಿಂಗ)]

**ಕ್ರಿಯಾಲೋಪ** (ನಾ). ೧. ಮಾಡಬೇಕಾದ ಕೆಲಸವನ್ನು ಮಾಡದಿರುವಿಕೆ; ಧಾರ್ಮಿಕ ಕರ್ಮಾಚರಣೆಯಲ್ಲಿ ಉಂಟಾದ ನ್ಯೂನತೆ, —ದೋಷ. ೨. ಶಾಸನ ಸಭೆಗಳ ನಡವಳಿಕೆಯಲ್ಲಿ ನ್ಯೂನಾತಿರೇಕಗಳಾದರೆ ಎತ್ತುವ ಔಚಿತ್ಯಪ್ರಶ್ನೆ, —ವಿಧಿಲೋಪ: ವಿರೋಧ ಪಕ್ಷದವರು ಕ್ರಿಯಾಲೋಪವೆತ್ತಿದರು (ರೂಢಿ). [ಸಂ. (ಕ್ರಿಯಾ + ಲೋಪ)]

**ಕ್ರಿಯಾವಂತ** (ಗು). ೧. ಚಟುವಟಿಕೆಯುಳ್ಳ; ಕ್ರಿಯಾಶೀಲವಾದ. (ನಾ). ೨. ಕರ್ತವ್ಯನಿಷ್ಠ; ಕಾರ್ಯನಿರತನಾದವನು. ೩. ಉಪಕಾರವನ್ನು ಸ್ಮರಿಸುವವನು; ಕೃತಜ್ಞ. ೪. ಮತಸಂಬಂಧವಾದ ವ್ರತಾಚರಣೆಗಳನ್ನು ಸಂಪ್ರದಾಯಬದ್ಧವಾಗಿ ಮಾಡಿಕೊಂಡು ಬರುವವನು. [< ಸಂ. ಕ್ರಿಯಾವತ್]

**ಕ್ರಿಯಾವತಿ** (ನಾ). [ವೀಶೈ] ಗುರು ಕೊಡುವ ಅಧಿಕಾರದೀಕ್ಷೆಯ ಅನೇಕ ಪ್ರಕಾರಗಳಲ್ಲಿ ಒಂದು: ಸನ್ನಹಿತಮಂಟಪಂ ಕಲಶವಿಭವದೆ ಶಿಷ್ಯಗಂ ನಾಡೆ ಭಸಿತಲೇಪನ ದೇಹಶುದ್ಧ ದೀಕ್ಷೋನ್ನತಂ ತಾಂ ಕ್ರಿಯಾವತಿಯೆಂಬರೈಯ್ಯ ಸಿದ್ಧಾಂತಿಗಳು (ವೀಶೈಪು. ೬-೬-೬೬). [ಸಂ. ಕ್ರಿಯಾವತೀ]

**ಕ್ರಿಯಾವತ್ವ** (ನಾ). ಕ್ರಿಯೆಯಿಂದ ಕೂಡಿರುವಿಕೆ: ಅಂತಾದೊಡೆ ಕಾಲಕ್ಕಂ ಕ್ರಿಯಾವತ್ವಮಕ್ಕುಮೆನಲ್ವೇಡ (ತತ್ತ್ವಪ್ರ. ೨೪೧). [ಸಂ.]

**ಕ್ರಿಯಾವರ್ತನೆ** (ನಾ). ಕ್ರಿಯೆಯನ್ನು ಮಾಡುವ ಸ್ಥಿತಿ; ಕಾರ್ಯಾಚರಣೆ: ಜ್ಯೋತಿಯೊಳಗಣ ಕರ್ಪುರಕ್ಕೆ ಅಪ್ಪುವಿನ ಕಯ್ಯಲ್ಲಿಪ್ಪ ಉಪ್ಪುವಿಂಗೆ ಶ್ರೀಗುರುವಿನ ಹಸ್ತದೊಳಗಿಪ್ಪ ಶಿಷ್ಯಂಗೆ ಈ ಮೂಱಕ್ಕೆಯು ಬೇಱೆ ಕ್ರಿಯಾವರ್ತನೆಯುಂಟೆ (ಅವಚಂ. ೧೬-೬೨). [ಸಂ. (ಕ್ರಿಯಾ + ವರ್ತನ)]

**ಕ್ರಿಯಾವರ್ಧನ** (ನಾ). [ಜೈನ] ಒಂದು ಬಗೆಯ ತಪಸ್ಸು: ಈತಂಗಂ ಕ್ರಿಯಾವರ್ಧನ ತಪಃಪ್ರಭಾವದಿಂ ದೇವಲೋಕದೊಳಮೀ ವಿದ್ಯಾಧರ ಲೋಕದೊಳಮಮಿತ ತೇಜೋತಿಶಯಮಾದುದು (ಶಾಂತಿಪು. ೯-೮೬ ವ). [ಸಂ. (ಕ್ರಿಯಾ + ವರ್ಧನ)]

**ಕ್ರಿಯಾವಾಚಕ** (ನಾ). [ವ್ಯಾಕ] ಕ್ರಿಯೆಯನ್ನು ಹೇಳುವ ಶಬ್ದರೂಪ; ಧಾತು: ಕ್ರಿಯಾವಾಚಕಮಾಗಿ ಸಲ್ಲದುದು . . . ನಿರರ್ಥಮಾಗಿ ಸಲ್ಲದುದು ಲಿಂಗಮೆನಿಸುಗುಂ (ಶಮುದ. ೬೨ ವೃತ್ತಿ). 'ನಾಮವಾಚಕ' ಪರಾ. [ಸಂ. (ಕ್ರಿಯಾ + ವಾಚಕ)]

**ಕ್ರಿಯಾವಾಹಿ** (ನಾ). = ಕ್ರಿಯಾವಾಹಿನಿ: ಕೆಲವು ನರಗಳು (ಕ್ರಿಯಾವಾಹಿಗಳು) ಸ್ನಾಯುಗಳನ್ನು ಕುಗ್ಗಿಕೊಳ್ಳುವಂತೆ ಮಾಡುವುವು (ಪ್ರಾಣಿಶಾ. ೪). [ಸಂ. (ಕ್ರಿಯಾ + ವಾಹಿನ್)]

**ಕ್ರಿಯಾವಾಹಿನಿ** (ನಾ). ಅಪವಾಹಿ ರಕ್ತನಾಳ; ಬಹಿರ್ವಾಹಿ ನರ: (Efferent nerve. ಪಾರಿಶ). [ಸಂ. (ಕ್ರಿಯಾ + ವಾಹಿನೀ)]

**ಕ್ರಿಯಾವಿಭಕ್ತಿ** (ನಾ). [ವ್ಯಾಕ] ಆಖ್ಯಾತ ಪ್ರತ್ಯಯ: ಕ್ರಿಯಾವಿಭಕ್ತಿ [ಪಾಠಾಂ. ಧಾತು (ಆಖ್ಯಾತ) ವಿಭಕ್ತಿ]ಯಲ್ಲಿ–ನುಡಿದ + ಅರ್ಮ್= ನುಡಿದಂ (ಶಮುದ. ೫೦ ಪ್ರಯೋ). [ಸಂ. (ಕ್ರಿಯಾ + ವಿಭಕ್ತಿ)]

**ಕ್ರಿಯಾವಿಶೇಷ** (ನಾ). ವಿಶಿಷ್ಟವಾದ ಕೆಲಸ; ವಿಶೇಷವಾದ ಕೆಲಸ: ಭರತೈರಾವತಂಗಳೊಳ್ . . . ನೆಗೞ್ದೀ ಕ್ರಿಯಾವಿಶೇಷಂಗಳನಿಲ್ಲಿಂ ದಿತ್ತೆಡೆಯುಡುಗದೆ ನಡೆಯಿಸುವುದು (ಆದಿಪು. ೧೫-೧೬ ವ). [ಸಂ. (ಕ್ರಿಯಾ + ವಿಶೇಷ)]

**ಕ್ರಿಯಾವಿಶೇಷಣ** (ನಾ). [ವ್ಯಾಕ] ಕ್ರಿಯೆಯ ಹೆಚ್ಚಿನ ವಿವರವನ್ನು ತಿಳಿಸುವ ಪದ; ಕ್ರಿಯೆಯ ಕಾಲ, ದೇಶ, ರೀತಿ ಮೊದಲಾದುವನ್ನು ವರ್ಣಿಸುವ ಪದ: ಒಂದಂ ಕ್ರಿಯಾವಿಶೇಷಣಮಂ ದೊರೆಕೊಳೆ ಸಯ್ತು ಪೇೞಬದದಱೊಳೆ ಪೆಱತಂ ಸಂದಿಸಿ ಪೇೞ್ದೊಡೆ ಕೃತಿಯೊಳಗೊಂದಿರದೆರಡಕ್ಕೆ ಬಿಟ್ಟ ಕಱುವಂ ಪೋಲ್ಕುಂ (ಕವಿರಾ. ೨-೨); ಯುಗಳಾರ್ಥದ ಬಹುವಚನಕ್ಕೊಗೆತಂದಾವಿಷ್ಟಲಿಂಗದೆಡೆಗೇಕತ್ವಂ ನೆಗೞ್ಗುಂ ಕ್ರಿಯಾವಿಶೇಷಣಮುಗಲದೆ ನಿಂದೆಡೆಗಮುಱಿವರಿಂದೇಕತ್ವಂ (ಶಮುದ. ೧೪೪). [ಸಂ. (ಕ್ರಿಯಾ + ವಿಶೇಷಣ)]

**ಕ್ರಿಯಾವಿಶ್ರಾಂತಿ** (ನಾ). [ವೀಶೈ] "ಷಟ್‌ಸ್ಥಲಾಚಾರ ಸಂಪನ್ನನಾದ ವೀರಶೈವನು ಮಾಡುವ ಕ್ರಿಯೆಗಳೆಲ್ಲವೂ . . . ತಾವಾಗಿಯೆ ಆತನಲ್ಲಿ ಸುಖಲಕ್ಷಣದಿಂದ ಲಕ್ಷಿತವಾದ ವಿಶ್ರಾಂತಿಯನ್ನು ಹೊಂದುವವು, ಇಂತಹ ವಿಶ್ರಾಂತಿಯೇ ತತ್ತ್ವಜ್ಞರಿಂದ ಕ್ರಿಯಾವಿಶ್ರಾಂತಿಯೆಂದು ಹೇಳಲ್ಪಡುವವು" (ಶಿವಾಸೂ. ೧೨೪-೨೬). [ಸಂ. (ಕ್ರಿಯಾ + ವಿಶ್ರಾಂತಿ)]

**ಕ್ರಿಯಾವೃತ್ತಿ** (ನಾ). ಕಾರ್ಯಮಾಡುವ ಸ್ವಭಾವ; ಕ್ರಿಯಾಶೀಲತೆ: ತಾನು ಸಂಗ್ರಹಿಸಿದ ವಿಷಯಗಳ ವಿಚಾರವಾಗಿ ಹೆಚ್ಚು ತಿಳಿಯಲು ಬಯಸುತ್ತಾನೆ . . . ಅದರಲ್ಲಿ ಪರಿವರ್ತನೆ ಮಾಡಲು ಬಯಸುತ್ತಾನೆ. ಈ ರೀತಿಯ ಅವನ ವೃತ್ತಿಗೆ ಕ್ರಿಯಾವೃತ್ತಿ ಎಂದು ಹೆಸರು (ಜೀವಾತ್ಮ. ೩೬). [ಸಂ. (ಕ್ರಿಯಾ + ವೃತ್ತಿ)]

**ಕ್ರಿಯಾವೇತ್ತ** (ನಾ). ಯಜ್ಞಯಾಗಾದಿಗಳ ಕ್ರಮವನ್ನು ತಿಳಿದವನು: ಕ್ರಿಯಾವೇತ್ತನಾದವನು ಅಗ್ನಿಯಲ್ಲಿ ದೇವರನ್ನು ಕಂಡರೆ ಮನೀಷಿಯಾದವನು ಹೃದಯದಲ್ಲಿ ಕಾಣುತ್ತಾನೆ (ಸೌಂದಸ. ೧೧೯ ಅಡಿಟ). [< ಸಂ. ಕ್ರಿಯಾವೇತೃ]

**ಕ್ರಿಯಾಶಕ್ತಿ** (ನಾ). ೧. ಕೆಲಸಮಾಡುವ ಶಕ್ತಿ; ಕಾರ್ಯಶಕ್ತಿ: ಅನೀಮಿಯ ಕಾಯಿಲೆಯಿರುವ ಜನರಲ್ಲಿ ಕ್ರಿಯಾಶಕ್ತಿ ಕಡಿಮೆ (ಅಡುಸೌ. ೫೯); ಲಾಭದ ಪ್ರಮಾಣವು ಅಂಗಡಿಯ ವ್ಯವಸ್ಥಾಪಕನ ಯೋಗ್ಯತೆ, ಕ್ರಿಯಾಶಕ್ತಿ, ಕುಶಲತೆಗಳನ್ನು ಅನುಸರಿಸುತ್ತದೆ (ಗೃಹವಿ. ೧೯೪); ಬಡತನವು ದಿನದಿನವು ಹೆಚ್ಚಿ, ಜನರ ಕ್ರಿಯಾಶಕ್ತಿಯೂ, ಧೈರ್ಯಸ್ಥೈರ್ಯಗಳೂ ಉಡುಗಿಹೋದವು (ಭಾರದ.೩೯೩). ೨. [ವೀಶೈ] ಶಿವನಲ್ಲಿರುವ ಆರುಬಗೆಯ ಶಕ್ತಿಗಳಲ್ಲಿ ಒಂದು: ಶಿವನೊಳಿರುವ ಶಕ್ತಿಯು ಚಿಚ್ಛಕ್ತಿ, ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಎಂಬ ಷಡ್ರೂಪದಿಂದ ... ಷಡ್ಲಿಂಗಗಳನಾಶ್ರಯಿಸಿತು (ಭಾರದ. ೨೫೩). [ಸಂ. (ಕ್ರಿಯಾ + ಶಕ್ತಿ)]

**ಕ್ರಿಯಾಶಬ್ದ** (ನಾ). [ವ್ಯಾಕ] ಶಬ್ದಗಳಲ್ಲಿ ಒಂದು ಭೇದ; ಕ್ರಿಯಾವಾಚಕ ಶಬ್ದ: ಪತಂಜಲಿ ಮೊದಲಾದವರು ಜಾತಿಶಬ್ದ, ಗುಣಶಬ್ದ, ಕ್ರಿಯಾಶಬ್ದ, ದ್ರವ್ಯಶಬ್ದ ಎಂದು ವಿಭಾಗಮಾಡಿರುವರು (ಹಿಂದಸಾ.೧೪೭). [ಸಂ. (ಕ್ರಿಯಾ + ಶಬ್ದ)]

**ಕ್ರಿಯಾಶೀಲ** (ಗು). ಕಾರ್ಯಮಾಡುವ ಸ್ವಭಾವವುಳ್ಳ; ಕಾರ್ಯಶೀಲ: ವಿಭೀಷಣನು ... ರೂಪವಂತನೂ, ಧರ್ಮರಕ್ಷಕನೂ ಕ್ರಿಯಾಶೀಲನೂ ಆದನು (ವಚಭಾ. ೪೦೩); ಪ್ರಕೃತಿ ಯಾವತ್ತು ಕ್ರಿಯಾತ್ಮಕವಾಗಿದೆ, ಕ್ರಿಯಾಶೀಲವಾಗಿದೆ (ಭಾರದ.೧೧೫). [ಸಂ. (ಕ್ರಿಯಾ + ಶೀಲ)]

**ಕ್ರಿಯಾಶುದ್ಧಿ** (ನಾ). ಕೆಲಸಮಾಡುವುದರಲ್ಲಿ ತೋರುವ ಶುದ್ಧತೆ; ಪ್ರಾಮಾಣಿಕತೆ. [ಸಂ. (ಕ್ರಿಯಾ + ಶುದ್ಧಿ)]

**ಕ್ರಿಯಾಶೂನ್ಯ** (ಗು). ಯಾವ ಕ್ರಿಯೆಯೂ ಇಲ್ಲದ; ನಿಷ್ಕ್ರಿಯವಾದ; ಸುಮ್ಮನೆ ಇರುವ: ಕ್ರಿಯಾಶೂನ್ಯಾರ್ಥದೊಳ್ ಗುಜುಗುಂಮುಗೆ, ಬಿಂನಗೆ, ಬಿಂನನೆ ಎಂಬವ್ಯಯಮಂ ಪೇೞಲಕ್ಕುಂ (ಶಮುದ. ೩೦೨ ವೃತ್ತಿ). [ಸಂ. (ಕ್ರಿಯಾ + ಶೂನ್ಯ)]

**ಕ್ರಿಯಾಸಕ್ತ** (ಗು). ಕೆಲಸದಲ್ಲಿ ನಿರತವಾದ; ಚಟುವಟಿಕೆಯುಳ್ಳ: ಕ್ರಿಯಾಸಕ್ತ (Active) ಕೀಟದಲ್ಲಿ ಈ ಅನುಬಂಧಗಳು ಬೇರೆಬೇರೆ ಕೆಲಸಗಳಿಗಾಗಿ ವ್ಯತ್ಯಾಸಗೊಂಡಿವೆ (ಕೀಟಬೆ.೧೩). [ಸಂ. (ಕ್ರಿಯಾ + ಆಸಕ್ತ)]

**ಕ್ರಿಯಾಸದ್ಭಾವ** (ನಾ). ಕ್ರಿಯೆಯಲ್ಲಿರುವ ಒಳ್ಳೆಯ ಭಾವ: ತುಷರಸವಿದ್ದುದಕ್ಕಲ್ಲದೆ ಫಲ ಫಲಿಸಲಿಲ್ಲ, ಕ್ರಿಯಾಸದ್ಭಾವವಿದ್ದಲ್ಲದೆ ಸತ್ಪಥಭಾವಿಯಲ್ಲ (ಮದೇಮ್ಮ.೨೭೮-೩೩). [ಸಂ. (ಕ್ರಿಯಾ + ಸದ್ಭಾವ)]

**ಕ್ರಿಯಾಸಮಭಿಹಾರ** (ನಾ). ಕ್ರಿಯೆಯ ಪುನರಾವರ್ತನ; ಮತ್ತೆ ಮತ್ತೆ ಅದನ್ನೇ ಮಾಡುವಿಕೆ: ದೂರಾಭೀಕ್ಷಣ ವೀಪ್ಸೋದಾರಾನುಕೃತಿ ಕ್ರಿಯಾಸಮಭಿಹಾರ ಸಮೀಪೋರುತರ ಚಾಪಳಾದಿಗೆ ಸಾರಂ ಬುಧರಿಂ ಪದಕ್ಕೆ ಯುಗಳೋಚ್ಚರಣಂ (ಶಮುದ. ೧೯೫). [ಸಂ. (ಕ್ರಿಯಾ + ಸಮಭಿಹಾರ)]

**ಕ್ರಿಯಾಸಮಾಧಿ** (ನಾ). [ವೀಶೈ] "ಶಿವಯೋಗಿಗಳಿಗೂ ಶರಣರಿಗೂ ಮಾಡುವ ವಿಶೇಷ ರೀತಿಯ ಆಗಮೋಕ್ತ ಶಿವಸಮಾಧಿ" (ಶರಸಾ. ೨೪-೭). 'ಕಾಯಸಮಾಧಿ' ಪರಾ. [ಸಂ. (ಕ್ರಿಯಾ + ಸಮಾಧಿ)]

**ಕ್ರಿಯಾಸಮಾಸ** (ನಾ). [ವ್ಯಾಕ] ಸಮಾಸಗಳಲ್ಲಿ ಒಂದು; ಪೂರ್ವಪದ ಕಾರಕವಾಗಿಯೂ ಉತ್ತರಪದ ಕ್ರಿಯೆಯಾಗಿಯೂ ಇರುವ ಸಮಾಸ: ಕ್ರಿಯಾಸಮಾಸಂ ಮೊದಲೊಳ್ ಕಾರಕಮುಮಗ್ರದೊಳ್ ಕ್ರಿಯೆಯುಂ ಸನ್ನಿದಮಾಗೆ (ಶಮುದ.೧೬೭). [ಸಂ. (ಕ್ರಿಯಾ + ಸಮಾಸ)]

**ಕ್ರಿಯಾಸಮಿತಿ** (ನಾ). ಕಾರ್ಯಮಾಡುವ ಸಮಿತಿ; ಕಾರ್ಯಸಮಿತಿ: (Action Committee. ಪಾರಿಭಾ). [ಸಂ. (ಕ್ರಿಯಾ + ಸಮಿತಿ)]

**ಕ್ರಿಯಾಸಿದ್ಧಿ** (ನಾ). ಕೆಲಸ ನೆರವೇರುವಿಕೆ; ಕಾರ್ಯಸಿದ್ಧಿ. [ಸಂ. (ಕ್ರಿಯಾ + ಸಿದ್ಧಿ)]

**ಕ್ರಿಯಾಹೀನ** (ಗು). ೧. ಕೆಲಸವಿಲ್ಲದ; ಕೆಲಸ ತಪ್ಪಿದ. ೨. ಕೃತಘ್ನ. [ಸಂ. (ಕ್ರಿಯಾ + ಹೀನ)]

**ಕ್ರಿಯೆ** (ನಾ). ೧. ಕೆಲಸ; ಕಾರ್ಯ; ಕರ್ಮ: ಸಕಲ ಕ್ರಿಯೆಯೂ ಕರ್ಮವೇ (ಧರ್ಮಸಾ. ೧೧೪). ೨. ಆಚರಣೆ; ಕಾರ್ಯಾಚರಣೆ: ಆಯ್ದನೆಯ ಕ್ರಿಯೆಯೆಂಬುದು ಮುಂ ಪೇೞ್ದ ಗರ್ಭಾನ್ವಯ ದೀಕ್ಷಾನ್ವಯ ಕರ್ತ್ರನ್ವಯ ಕ್ರಿಯೆಗಳ್ (ಚಾವುಂಪು. ೨೪೦); ಆಱುವೆ ಜಂಗಮರೂಪು ಕ್ರಿಯೆಯೆ ಲಿಂಗಂ (ಕುಮಾಪು. ೧-೭೯). ೩. ಕವಿ ಕರ್ಮ; ಕೃತಿರಚನೆ. ೪. ದೈಹಿಕ ಕರ್ಮ; ಇಂದ್ರಿಯ ಕರ್ಮ. ೫. ಉಪಕಾರ ಸ್ಮರಣೆ. ೬. ಅಭ್ಯಾಸ; ವ್ಯಾಸಂಗ. ೭. ವೈದ್ಯೋಪಚಾರ; ವೈದ್ಯಕೀಯ ಚಿಕಿತ್ಸೆ. ೮. ವ್ರತಾಚರಣೆ; ಉಪಾಸನೆ; ಪ್ರಮಾಣಪೂರ್ವಕವಾಗಿ ನಡೆಸುವ ಧಾರ್ಮಿಕ ಆಚಾರ. ೯. ಪ್ರಾಯಶ್ಚಿತ್ತ ಕರ್ಮ. ೧೦. ಸಾಧನ; ಉಪಾಯ. ೧೧. ನ್ಯಾಯಾಲಯದಿಂದ ಏರ್ಪಟ್ಟ ತನಿಖೆ, —ವಿಮರ್ಶೆ. ೧೨. ಕ್ರಮ; ರೀತಿ; ವಿಧಾನ: ಸ್ಫುರಿತ, ನಾಗೋಷ್ಠ, ನಿರ್ಭರ, ವಲ್ಗನ, ಲಂಘನ ಇವು ಐದು ಕ್ರಿಯೆಗಳು. ಕ್ರಿಯೆಗಳೆಂದರೆ ಓಡಿಸುವ ಕ್ರಮಗಳು (ಅಶ್ವಟೀ. ೨೫-೬). ೧೩. ಆರಂಭಿಸುವಿಕೆ; ಉಪಕ್ರಮ. ೧೪. [ವ್ಯಾಕ] ಕ್ರಿಯಾಪದದಿಂದ ಸೂಚಿತವಾಗುವ ಕೆಲಸ, —ಕರ್ಮ: ಕ್ರಿಯೆಯಂ ನುಡಿಯದುದು ವಿಭಕ್ತಿಯನಿಲ್ಲದುದರ್ಥಮುಳ್ಳುದಂತದು ಲಿಂಗಂ (ಶಮುದ. ೭೨). ೧೫. [ವ್ಯಾಕ] ಕ್ರಿಯಾಪದ: ಭೂತಭವಿಷ್ಯಕ್ರಿಯೆಗಳುಪೇತ ವಿಭಕ್ತಿಗಳನುೞಿಯೆ ಕೃತ್ತಪ್ಪುವು (ಶಮುದ. ೭೩). ೧೬. [ವೀಶೈ] ಮೂರು ಬಗೆಯ ದೀಕ್ಷೆಗಳಲ್ಲಿ ಒಂದು: ಈ ಆಣವ, ಮಾಯಾ, ಕಾರ್ಮ ಮಲಗಳನ್ನು ಶ್ರೀಗುರುವು ವೇಧಾ, ಮನು, ಕ್ರಿಯೆಗಳೆಂಬ ಮೂರು ದೀಕ್ಷೆಗಳಿಂದ ಸುಟ್ಟು (ಭಾರದ. ೨೪೮). [ಸಂ. ಕ್ರಿಯಾ]

**ಕ್ರಿಯೆಬಟ್ಟಲು** (ನಾ). [ವೀಶೈ] "ಶರಣರು ಲಿಂಗೋದಕ ತೆಗೆದುಕೊಳ್ಳುವ ಬಟ್ಟಲು" (ಶರಸಾ. ೨೪-೮). [ಕ್ರಿಯೆ + ಬಟ್ಟಲು (< ಬಟ್ಟಲ್)]

**ಕ್ರಿಯೆವೆಱು** (ಕ್ರಿ). ಕರ್ಮವನ್ನು ಪಡೆ; ಸಂಸ್ಕಾರ ಹೊಂದು: ಸುವರ್ಣಮುಂಟಾಗಿಯುಂ ದಹನ ತಾಪನ ಪಿಂಡಿಬದ್ಧನಾದಿ ಕ್ರಿಯೆ[ವೆ]ಱ[ಪಾಠಾಂ. ವಿರಮಿಱ, ವಿಱ]ದನ್ನೆಗಂ ಪೊನ್ನಾಗದಂತೆ ತಪದಿಂದಲ್ಲದೆ ಮೋಕ್ಷಮಾಗದು (ವಡ್ಡಾರಾ. ೧೦೧-೧). [ಕ್ರಿಯೆ + ಪೆಱು₁]

**ಕ್ರಿಶ್ಚನ್** 'ಕ್ರಿಶ್ಚಿಯನ್' ನೋ.

**ಕ್ರಿಶ್ಚಿಯನ್, ಕ್ರಿಶ್ಚನ್, ಕ್ರಿಸ್ತಾನ** (ನಾ). ಕ್ರೈಸ್ತಮತಾವಲಂಬಿ; ಕಿರಿಸ್ತಾನ: ಪುರಾತನದಿಂದ ಬಂದ ಲೋಹಾರನನ್ನು ಕ್ರಿಶ್ಚಿಯನನ್ನು ಮುಸಲ್ಮಾನನನ್ನು ಮತ್ತು ಕಾಪು ಜಾತಿಯವನನ್ನು ಶಿಕ್ಷಿಸಕೂಡದೆಂದು ಈ ಸೆರ್ಕ್ಯುಲರ್‌ನಲ್ಲಿ ಹೇಳಿದೆ (ಗ್ರಾಮಾಕ. ೬೨); ಏಸುಕ್ರಿಸ್ತನ ಶಿಷ್ಯರು ಮೊಟ್ಟಮೊದಲು ಕ್ರಿಶ್ಚಿಯನ್‌ರು ಎಂದು ಕರೆಯಲ್ಪಟ್ಟರು (ಭೂಗೋಳ. ೧೦೫). ಕ್ರಿಶ್ಚನ್: ಕ್ರಿಶ್ಚನರು ಪಂಜಾಬದ 'ಸಾಧುಸಿಂಹರೇ' ಪ್ರತಿ ಕ್ರೈಸ್ತರಾಗಿ ಬಂದಿರುವರೆಂದು ಅನ್ನುವರು (ವಿಚಾಮಂ. ೯). ಕ್ರಿಸ್ತಾನ: ಆಚಾರ ವ್ಯವಹಾರ ವಿಚಾರದಲ್ಲಿ ಆ ಕ್ರಿಸ್ತಾನ ಹುಡುಗಿಗೂ ಹೆದರಬೇಕಾಗಿತ್ತು (ಅಕಾರ. ೧೨೩). 'ಕಿರಿಸ್ತಾನ' ಪರಾ. [← ಇಂ. Christian]

**ಕ್ರಿಷ್ಣ** (ನಾ). = ಕೃಷ್ಣ: ಶ್ರೀಮದ್ಭಕ್ತಪಾಲ ಶ್ರೀ ವೇಣುಗೋಪಾಲ ಕ್ರಿಷ್ಣಸ್ವಾಮೀ (ಎಕ. XI, ಹೊಳಲ್ಕೆ. ೭-೯; 1568). [< ಕೃಷ್ಣ]

**ಕ್ರಿಸ್‌ಮಸ್** (ನಾ). ಕ್ರಿಸ್ತನ ವರ್ಧಂತಿ, —ಹಬ್ಬ: ಕ್ರಿಸ್‌ಮಸ್ ಹಬ್ಬದ ಸಮಯದಲ್ಲಿ ಅವನೊಂದು ಕ್ರಿಸ್‌ಮಸ್ ವೃಕ್ಷವನ್ನಲಂಕರಿಸಿದ್ದನು (ಪುನರು. ೨೬೩). [← ಇಂ. Christmas]

**ಕ್ರಿಸ್ತ** (ನಾ). ಕ್ರೈಸ್ತ ಧರ್ಮಸ್ಥಾಪಕನಾದ ಯೇಸು. 'ಕ್ರಿಸ್ತಮತ' ಪರಾ. [← ಇಂ. Christ]

**ಕ್ರಿಸ್ತಪೂರ್ವ** (ಗು). ಯೇಸುಕ್ರಿಸ್ತನು ಹುಟ್ಟುವುದಕ್ಕೆ ಮುಂಚಿನ; ಕ್ರಿಸ್ತಶಕಕ್ಕೆ ಪೂರ್ವದ: ಕ್ರಿಸ್ತಪೂರ್ವ ಮೂರನೆಯ ಶತಮಾನದ ಅಶೋಕನ ಶಾಸನಗಳು (ಕಶಾಅ. ೧೫). [ಕ್ರಿಸ್ತ + ಪೂರ್ವ]

**ಕ್ರಿಸ್ತಮತ** (ನಾ). ಕ್ರೈಸ್ತಮತ: ನಮ್ಮ ಹಳ್ಳಿಗೆ ಪದೇಪದೇ . . . ಕ್ರಿಸ್ತಮತ ಬೋಧಕರು ಮುಂತಾದವರು ತಮ್ಮ ತಮ್ಮ ಮೋಟಾರುಗಳಲ್ಲಿ ಬಂದು (ಹುಟ್ಟಿಹ. ೧೫೪). [ಕ್ರಿಸ್ತ + ಮತ]

**ಕ್ರಿಸ್ತಶಕ** (ನಾ). ಕ್ರಿಸ್ತನು ಹುಟ್ಟಿದ ಕಾಲದಿಂದ ಎಣಿಸುವ ವರ್ಷ, —ಆರಂಭವಾದ ಶಕೆ: ಶಾಲಿವಾಹನ ಶಕ ಎಂಬ ಮಾತು ಕ್ರಿಸ್ತಶಕದ ಮೊದಲ ಸಾವಿರ ವರ್ಷಗಳಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ (ಕಶಾಅ. ೫೨ ಅಡಿಟ). 'ಶಾಲಿವಾಹನಶಕ' ಪರಾ. [ಕ್ರಿಸ್ತ + ಶಕ]

**ಕ್ರಿಸ್ತಾನ** 'ಕ್ರಿಶ್ಚಿಯನ್' ನೋ.

**ಕ್ರಿಸ್ತಿಯ, ಕ್ರಿಸ್ತೀಯ** (ನಾ). = ಕ್ರಿಶ್ಚಿಯನ್: (೬). **ಕ್ರಿಸ್ತೀಯ**: ಟಿಳಕರು ಕ್ರಿಸ್ತೀಯ ಕವಿಯೆಂದು ಪ್ರಸಿದ್ಧರಾಗಿದ್ದರೂ (ಸ್ಮೃತಿಚಿ. ೧). [< ಕ್ರಿಸ್ತ]

**ಕ್ರಿಸ್ತೀಯ** 'ಕ್ರಿಸ್ತಿಯ' ನೋ.

**ಕ್ರೀ** 'ಕ್ರಿ' ನೋ.

**ಕ್ರೀಂಕಾರ** (ನಾ). ಒಂದು ಅನುಕರಣ ಧ್ವನಿ; ಹಂಸಪಕ್ಷಿಗಳ ಕೂಗು. ವಾರಿರುಹನಾಳಮಂ ಕ್ರೀಂ[ಪಾಠಾಂ. ಕ್ರೇಂ] ಕಾರರವಂ ಸಹಿತವಂಚೆ ಮುಕ್ಕಿದುವೆನೆ ಮಂಜೀರಮನಳವಡಿಸಿದರು (೧೦ಕ. ೧೦–೩೨). [ಸಂ.]

**ಕ್ರೀಡನ** (ನಾ). = ಕ್ರೀಡೆ. 'ಕ್ರೀಡನಶೀಲ' ಪರಾ. [ಸಂ.]

**ಕ್ರೀಡನಶೀಲ** (ನಾ). ಆಟಗುಳಿ; ಕ್ರೀಡಾಶೀಲ: ಕೆಲವೆಡೆಯೊಳ್ ನಾಗರಕ ಗಗನಚರ ಕ್ರೀಡನಶೀಲ ಕುಮಾರಕರ್ (ಶಾಂತಿಪು. ೨–೧೦೫ವ). [ಸಂ.]

**ಕ್ರೀಡಮಾನ** (ಗು). ಆಡುತ್ತಿರುವ; ಕ್ರೀಡಿಸುತ್ತಿರುವ: ಮಂಗಳ ಚರಿತಂ ಕ್ರೀಡಮಾನನೆಸೆದಂ ಕೃಷ್ಣಂ (ಜಗವಿ. ४–४३). [ಸಂ.]

**ಕ್ರೀಡಾಂಗಣ** (ನಾ). ಆಟದ ಬಯಲು; ಆಡುಂಬೊಲ: ಮಳೆಯಿಂದ ಕ್ರೀಡಾಂಗಣದಲ್ಲಿ ನೀರು ನಿಂತು ಆಟ ನಿಂತುಹೋಯಿತು (ರೂಢಿ). [ಸಂ. (ಕ್ರೀಡಾ + ಅಂಗಣ)]

**ಕ್ರೀಡಾಕುಳಿ** 'ಕೇಡಾಕುಳಿ' ನೋ.

**ಕ್ರೀಡಾಗೃಹ** (ನಾ). ಆಟದ ಮನೆ; ವಿನೋದ ಗೃಹ; ಲೀಲಾಸದನ. [ಸಂ. (ಕ್ರೀಡಾ + ಗೃಹ)]

**ಕ್ರೀಡಾಗೋಳಕ** (ನಾ). ಆಟದ ಸೆಂಡು, —ಚೆಂಡು: ನಿಜಸಿದ ಕನಕ ಕಲಶಯುಗಲಮುಮಂ ಪೌರ್ಣಮಾಸೀ ಸೌಂದರಿಯ ಸಿಂದೂರಾರುಣ ಕ್ರೀಡಾಗೋಳ[ಪಾಠಾಂ. ಲ]ಕಂಗಳುಮಂ ಪೋಲ್ತು (ಆದಿಪು. ೬–೫೨ವ). [ಸಂ. (ಕ್ರೀಡಾ + ಗೋಳಕ (= ಗೋಲಕ)]

**ಕ್ರೀಡಾಚಳ** (ನಾ). ವಿಹಾರಕ್ಕಾಗಿ ರಚಿಸಿದ ಬೆಟ್ಟ; ಕ್ರೀಡಾಶೈಲ: ನಿಸರ್ಗಸೌಂದರ ಕ್ರೀಡಾಚಳ ಕೇಳೀಸಮಭಿರಾಮಮುಮಾಗಿ (ಆದಿಪು. ೧೦–೨೫ವ). [ಸಂ. (ಕ್ರೀಡಾ + ಅಚಲ)]

**ಕ್ರೀಡಾಪಟು** (ನಾ). ಆಟದಲ್ಲಿ ನಿಪುಣನಾದವನು: ಆ ಶಾಲೆಯಲ್ಲಿ ಒಳ್ಳೆಯ ಕ್ರೀಡಾಪಟುಗಳಿದ್ದಾರೆ (ರೂಢಿ). [ಸಂ. (ಕ್ರೀಡಾ + ಪಟು)]

**ಕ್ರೀಡಾಪರ್ವತ** (ನಾ). = ಕ್ರೀಡಾಚಳ: ವಿಕ್ರಮ ಕ್ರೀಡಾಪರ್ವತವಿರ್ಪಂತಿರ್ದ ವಿಜಯಪರ್ವತ ಗಜೇಂದ್ರಮನೇಱಿ (ಆದಿಪು. ೧೨–೬೧ವ); ಚಂದ್ರಾಪೀಡನು ಕ್ರೀಡಾಪರ್ವತದಿಂದಿಳಿದನು (ವಚಕಾ. ೬೦). [ಸಂ. (ಕ್ರೀಡಾ + ಪರ್ವತ)]

**ಕ್ರೀಡಾಬಂಧ** (ನಾ). ಆಟದಲ್ಲಿಯ ಪಟ್ಟು, —ಹಿಡಿತ: ಸಂಗೀತ ಸಾಹಿತ್ಯಾದಿ ವಿದ್ಯಾಗೋಷ್ಠಿಗಳಿಂ ಕ್ರೀಡಾಬಂಧ ರತಿಬಂಧಾದಿಗಳಿಂ (ವಿವೇಕ. ೨೧೩). [ಸಂ. (ಕ್ರೀಡಾ + ಬಂಧ)]

**ಕ್ರೀಡಾಬ್ರಹ್ಮವಾದ** (ನಾ). ಅಧ್ಯಾತ್ಮ ಮತಗಳಲ್ಲಿ ಒಂದು: ಭಾಸ್ಕರೀಯ, ಮಾಯಾವಾದ, ಶಬ್ದಬ್ರಹ್ಮವಾದ, ಕ್ರೀಡಾಬ್ರಹ್ಮವಾದವೆಂದು ನಾಲ್ಕು ತೆಱನಾಗಿ ಪ್ರಚುರಗೊಂಡಿರ್ಪುದು (ವಿವೇಕ. ೧೧). [ಸಂ. (ಕ್ರೀಡಾ + ಬ್ರಹ್ಮನ್ + ವಾದ)]

**ಕ್ರೀಡಾರಥ** (ನಾ). ವಿನೋದ ವಿಹಾರಗಳಿಗಾಗಿ ಏರ್ಪಡಿಸಿದ ರಥ: "ಕ್ರೀಡಾರಥ[ಪಾಠಾಂ. ರ್ಥ]ಸ್ಸ್ಯಾತ್ ಪುಷ್ಪರಥಃ" (ಹಲಾಯು. ೬೩–೨೯೨). [ಸಂ. (ಕ್ರೀಡಾ + ರಥ)]

**ಕ್ರೀಡಾರಸ** (ನಾ). ಆಟದಿಂದ ಉಂಟಾಗುವ ಸಂತೋಷ, —ಆನಂದ: ಜಾತಕರ್ಮೋತ್ಸವದೊಳ್ ಪರಿಜನಮುಂ ಪುರಜನಮು ಮೊಸಗೆ ಮರುಳ್ಗೊಂಡು ನಿರ್ಭರ ಕ್ರೀಡಾರಸ ಪರವಶರಾದಾಗಳ್ (ಆದಿಪು. ೬–೧೧೧ವ). [ಸಂ. (ಕ್ರೀಡಾ + ರಸ)]

**ಕ್ರೀಡಾರಾಜ** (ನಾ). ಗಿಡ, ಮರಗಳನ್ನು ನೆಡುವ ಹನ್ನೊಂದು ವಿನ್ಯಾಸಗಳಲ್ಲಿ ಒಂದು: ವರ್ತುಳ ಶ್ರೇಣಿ ವನವಾಟ ಚಕ್ರಾವರ್ತ ತೋರಣ ಸಾಲು ಗೋಪುರ ಚಿತ್ರ ನರ್ತನವಾಟ ಗಗನವಾಟ ಕ್ರೀಡಾರಾಜ ಚಿತ್ರವ್ಯೂಹ ಕೋಣಕ್ರಮಗಳೆಂಬ ಹನ್ನೊಂದು ವೃಕ್ಷಸನ್ನಿವೇಶಗಳುಂ (ವಿವೇಕ. ೨೧೧). [ಸಂ.]

**ಕ್ರೀಡಾವನ** (ನಾ). ವಿಹಾರಕ್ಕಾಗಿ ಏರ್ಪಡಿಸಿದ ಉದ್ಯಾನ; ಕೇಳೀವನ; ಲೀಲೋದ್ಯಾನ. [ಸಂ.]

**ಕ್ರೀಡಾವಿನೋದ** (ನಾ). ವಿನೋದಕ್ಕಾಗಿ ಆಡುವ ಆಟ; ಆಟದ ವಿನೋದ: ಕ್ರೀಡಾವಿನೋದಗಳು ಅನೇಕ ವಿಧವಾಗಿದ್ದವು. ಪುರುಷರಿಗೆ ಮಲ್ಲಯುದ್ಧ. . . ಬಿಲ್ಲು ಬಾಣ ಕತ್ತಿ ಗದೆಗಳಲ್ಲಿ ಕೌಶಲ್ಯ ಕ್ರೀಡೆಗಳಾಗಿದ್ದವು (ಭಾರದ. ೧೩). [ಸಂ. (ಕ್ರೀಡಾ + ವಿನೋದ)]

**ಕ್ರೀಡಾವಿಲೋಲತೆ** (ನಾ). ಆಟವಾಡುವುದರಲ್ಲಿ ಆಸಕ್ತಿ; ಕ್ರೀಡಾಲೋಲುಪತೆ: ಪುಣ್ಯಗಣ್ಯ ಮಂದಾಕಿನಿಯ ವಾಹಿನಿಯ ಕಂದರ ಕ್ರೀಡಾ ವಿಲೋಲತೆಯ ನೀಲ ಲೀಲಾಶೀಲ ಸಲಿಲಕಲ್ಲೋಲದಿಂ (ಶ್ರೀರಾಮಾ. ೧೨೬–೩೪). [ಸಂ. (ಕ್ರೀಡಾ + ವಿಲೋಲತಾ)]

**ಕ್ರೀಡಾಶಾಲೆ** (ನಾ). = ಕ್ರೀಡಾಗೃಹ: ಮತ್ತಮಾ ವನಂಗಳಲ್ಲಿ ಚಿತ್ರಶಾಲೆ, ಚಂದ್ರಶಾಲೆ . . . ಗಾನಶಾಲೆ, ಕ್ರೀಡಾಶಾಲೆ . . . ತರುವಾಟಿಗಳ ತಣ್ಣೆಳಲ್ಗಳೊಳಗೆಯುಂ (ವಿವೇಕ. ೨೧೩). [ಸಂ. (ಕ್ರೀಡಾ + ಶಾಲಾ)]

**ಕ್ರೀಡಾಶೀಲ** (ಗು). = ಕ್ರೀಡನಶೀಲ: ಆ ಸಾಗರದ ಹೃದಯದಲ್ಲಿ ಕ್ರೀಡಾಶೀಲವಾದ ಚಂದ್ರಕಿರಣದ ಲೇಖನದಂತೆ (ಕಪಾಕುಂ. ೧೯). [ಸಂ. (ಕ್ರೀಡಾ + ಶೀಲ)]

**ಕ್ರೀಡಾಶೀಲತ್ವ** (ನಾ). ಆಟವಾಡುವ ಸ್ವಭಾವ; ಆಟಗುಳಿತನ: ವಿಶಿಷ್ಟ ಪ್ರಣಿಧಾನಾಭಾವದಿಂದಂ ಕ್ರೀಡಾಶೀಲತ್ವದಿಂದಮಭೀಕ್ಷ್ಣಜ್ಞಾನೋಪಯೋಗಾದಿಭಾವನಾನುಪಪತ್ತಿಯಿಂದಂ (ಗೊಮ್ಮಸಾ. ೧೨–೬). [ಸಂ.]

**ಕ್ರೀಡಾಶೈಲ** (ನಾ). = ಕ್ರೀಡಾಚಳ: ಈ ಪರ್ವತಶ್ರೇಣಿಯು ಅತ್ಯುನ್ನತವಾಗಿರದೆ ಕ್ರೀಡಾಶೈಲದಂತೆ ವಿಹಾರಕ್ಕೆ ಅನುಕೂಲವಾದ ಪ್ರದೇಶವಾಗಿರುವದು (ಚಿನ್ನಬೀ. ೬೨). [ಸಂ. (ಕ್ರೀಡಾ + ಶೈಲ)]

**ಕ್ರೀಡಾಸಕ್ತ** (ಗು). ಆಟದಲ್ಲಿ ಆಸಕ್ತವಾದ, —ತೊಡಗಿದ: ಗಂಗಾಜಲಕ್ರೀಡಾಸಕ್ತಚಿತ್ತನಾಗಿ (ಆದಿಪು. ೧೧-೧೩೯ ವ). [ಸಂ. (ಕ್ರೀಡಾ + ಆಸಕ್ತ)]

**ಕ್ರೀಡಾಸ್ಪರ್ಧೆ** (ನಾ). ಆಟಗಳ ಸ್ಪರ್ಧೆ, —ಮೇಲಾಟ: ಉತ್ಸವದ ಅಂಗವಾಗಿ ಕ್ರೀಡಾಸ್ಪರ್ಧೆಗಳು ನಡೆದವು (ರೂಢಿ). [ಸಂ. (ಕ್ರೀಡಾ + ಸ್ಪರ್ಧಾ)]

**ಕ್ರೀಡಿಸು** (ಕ್ರಿ). ೧. ಆಟವಾಡು ; ವಿನೋದಪಡು ; ಕೇಳಿಯಾಡು : ಮುನ್ನಿನ ಗಂಧಹಸ್ತಿಯೊಡನೆ ಬಾರಿಯೊಳ್ ಮೂವತ್ತೆರಡು ಗಜ ಕ್ರೀಡೆಗಳಿಂದಂ ನೀಡುಂ ಬೇಗಂ ಕ್ರೀಡಿಸಿಯಾನೆಯ ಸೇದೆಗೆಡಿಸಿ (ವಡ್ಡಾರಾ. ೩೪-೧೫) ; ಭರತಮಂಡಲದೊಳ್ ಇರ್ಪತ್ತುವಯೂಜು ಸಿಂಹಂ ಕ್ರೀಡಿಸುತಿರ್ದುದಂ ಕಂಡುದಱಿಂದೆ (ಚಾವುಂಪು. ೭೪-೨೫) ; ಸಲಿಲದೊಳ್ ಕ್ರೀಡಿಸಿದರಂಗನೆಯರು (ಜೈಮಿಭಾ. ೩೦-೧೦). ೨. ಸಂಭೋಗಮಾಡು ; ರತಿಕ್ರೀಡೆ ಆಡು : ಸಿದ್ಧದಂಪತಿಗಳ್ ಕ್ರೀಡಿಸುತಿರ್ಪರೀನಗತಟ ಶ್ರೀಖಂಡಷಂಡಂಗಳೊಳ್ (ಆದಿಪು. ೯-೧೧೮) ; ಪುರದ ಸೂಳೆಯರ್ವೆರಸಸಹಾಯಂ ಮನಕೆ ಬಂದಪೋಲ್ ಕ್ರೀಡಿಸುವಂ (ಧರ್ಮಾಮೃ. ೨-೩೧) ; ಸ್ವಪನದಿ ಬಂದು ಕ್ರೀಡಿಸಿದಾತ ಪ್ರಿಯನಾದಪ ಕೆಲದಿವಸಂಗಳಿಗೆ (ಮೋಹತ. ೨೫-೨೭). [< ಕ್ರೀಡನ + -ಇಸ್ಸು]

**ಕ್ರೀಡೆ** (ನಾ). ೧. ಆಟ ; ವಿನೋದ ; ಕೇಳಿ : ತಿಳದಿಂ ವಸ್ತ್ರದಿನರ್ಥದಿಂ . . . ಕ್ರೀಡೆಯಿಂ ಫಳಮಕ್ಕುಂ (ಜಾತಕತಿ. ೯-೧೯) ; ಅದು ಪಾಂಡಿತ್ಯಕ್ಕೆ ಮಾತ್ರ ರುಚಿಸುವ ಒಂದು ಶಾಬ್ದಿಕ ಕ್ರೀಡೆ (ಸಾಹಿಕ. ೫೮). ೨. ಸಂಭೋಗ ; ರತಿಕ್ರೀಡೆ : "ರಮಿಸು- ಕ್ರೀಡಾಯಾಂ" (ಶಮುಧಾ). [ಸಂ. ಕ್ರೀಡಾ]

**ಕ್ರೀತ** (ಗು). ೧. ಬೆಲೆಗೆ ಕೊಂಡ ; ಕ್ರಯಕ್ಕೆ ಪಡೆದ. ೨. (ನಾ). ಹನ್ನೆರಡು ವಿಧದ ಪುತ್ರರಲ್ಲಿ ಒಬ್ಬ ; ಹಡೆದ ತಾಯ್ತಂದೆಗಳಿಂದ ಬೆಲೆಕೊಟ್ಟುಕೊಂಡು ಸಾಕಿದ ಮಗ. [ಸಂ.]

**ಕ್ರೀತದಾಸ** (ನಾ). ಕ್ರಯಕ್ಕೆ ಕೊಂಡು ಇಟ್ಟುಕೊಂಡ ಆಳು, —ದಾಸ : ಬಿಲಾಲನೆಂಬ ಒಬ್ಬ ಕ್ರೀತದಾಸನು ಇಸ್ಲಾಮಧರ್ಮವನ್ನು ಸ್ವೀಕರಿಸಿದ್ದನು (ಹಮಪ. ೧೦) ; ಅವಳೇನು ತಿಳಿದುಕೊಂಡಿದ್ದಾಳೆಯೋ ನಾನು ತನ್ನ ಕ್ರೀತದಾಸನೆಂದು (ಇಪ್ಪಕ. ೨೫೭). [ಕ್ರೀತ + ದಾಸ]

**ಕ್ರೀತದಾಸಿ** (ನಾ). ಕ್ರಯಕ್ಕೆ ಕೊಂಡು ಇಟ್ಟುಕೊಂಡ ಹೆಣ್ಣಾಳು, —ದಾಸಿ : ನೀನು ಭೀಷ್ಮನ ಪ್ರಣಯಿನಿಯಲ್ಲ, ಕ್ರೀತದಾಸಿ (ಕುರುಕ್ಷೇ. ೭೩). [ಕ್ರೀತ + ದಾಸಿ]

**ಕ್ರೀತಾನುಶಯ** (ನಾ). ಕ್ರಯದ ವಿಷಯದಲ್ಲಿ ಉಂಟಾಗುವ ಪಶ್ಚಾತ್ತಾಪ : ವ್ಯವಹಾರ ಕಾಂಡದಲ್ಲಿ . . . ಕ್ರೀತಾನುಶಯ, ಅಭ್ಯುಪೇತ್ಯಾಶುಶ್ರೂಷಾ . . . ಎಂಬ ೨೫ ಪ್ರಕರಣಗಳಿವೆ (ಭಾರದ. ೬೨). [ಸಂ. (ಕ್ರೀತ + ಅನುಶಯ)]

**ಕ್ರೀದಾಸಿ** (ನಾ). ಕೆಲಸದವಳು ; ತೊತ್ತು : ಶಿವಪೂಜಾಲಂಬನಕರ್ಮ ಕ್ರೀದಾಸಿ ಕೊಡನ ಹೊತ್ತಂತೆ, ಶೇಷನ ಚಮತ್ಕಾರಭೇದದಂತೆ (ಮದೇವಮ್ಮ. ೨೮೪-೫೭). [< ಕ್ರೀತದಾಸಿ]

**ಕ್ರೀವಂತ** (ನಾ). = ಕ್ರಿಯಾವಂತ : ವಂದಿಸಿ ನಿಂದಿಸಬಾರದೆಂಬುದೇ ಕ್ರೀವಂತನ ಇರವು (ಅಜಿವಾ. ೨೬೭) ; ಕ್ರೀವಂತಂಗೆ ಪಡಿಪುಚ್ಚಕ್ಕೆ ಬಂದಾಗವೇ ಆಚಾರಕ್ಕೆ ಭಂಗ (ಮೋಳಿಮಾ. ೬೩-೨೫೭). [< ಸಂ. ಕ್ರಿಯಾವತ್]

**ಕ್ರೀವಿರಕ್ತಿ** (ನಾ). (ಬಾಹ್ಯ) ಕ್ರಿಯೆಯಲ್ಲಿ ತೋರುವ ವಿರಕ್ತಿ ; ಡಾಂಭಿಕ ವೈರಾಗ್ಯ ; ತೋರಿಕೆಯ ವಿರಕ್ತಿ (?) : ಮಣ್ಣಬೆಕ್ಕು ನನ್ನಿಯ ಮೂಷಕನ ಮುಟ್ಟಬಹುದುಂಟೆ ? ಜಗಗನ್ನರ ಕ್ರೀವಿರಕ್ತಿ ಪ್ರಸನ್ನನ ಮುಟ್ಟಬಹುದುಂಟೇ ? (ಮೋಳಿಮಾ. ೬೪-೨೬೬). [ಕ್ರೀ (< ಕ್ರಿ) + ವಿರಕ್ತಿ]

**ಕ್ರೀಶುದ್ಧ** (ನಾ). ಕ್ರಿಯೆಯಲ್ಲಿ ಪರಿಶುದ್ಧತೆ (?) : ಕುಸುಮವು ಒಣಗಲು ವಾಸನೆ ಮುಡಿದಲ್ಲಿ ಮೂಸಲು ತಿಳಿವಂತೆ ಕ್ರೀಶುದ್ಧ ಅದಲ್ಲಿ ವಸುಧೀಶ ಭಾವಶುದ್ಧವಾಗಿರ್ಪನು (ಸಿದ್ಧಪು. ೨೫-೬). 'ಭಾವಶುದ್ಧ' ಪರಾ. [ಕ್ರೀ (< ಕ್ರಿ) + ಶುದ್ಧ]

**ಕ್ರೀಶುದ್ಧಾತ್ಮ** (ನಾ). ಕ್ರಿಯೆಯಲ್ಲಿ ಶುದ್ಧನಾದವನು : ಪಾಷಾಣವಿಲ್ಲದೆ ದೀಪ್ತಿಗೆ ತೋಱಗೊಡಲಿಲ್ಲ. ಕ್ರೀಶುದ್ಧಾತ್ಮನಾಗಿಯಲ್ಲದೆ ವಿರಕ್ತಿಯನಱಿವುದಕ್ಕೆ ಒಡಲಿಲ್ಲವೆಂದೆ (ಮೋಳಿಮಾ. ೬೪-೨೬೨). [ಕ್ರೀಶುದ್ಧ + ಆತ್ಮ]

**ಕ್ರುಂಚ** (ನಾ). ಕ್ರೌಂಚಪಕ್ಷಿ ; ಕೊಂಚೆ : "ಕೊಂಚೆ ಕ್ರುಂಚಂ [ಪಾಠಾಂ. ಆಕ್ರೋಂಚ ಕ್ರುಚ್] ಕ್ರೌಂಚಮೆನಿಕುಂ" (ಮಂಗರಾ. ೫೦-೩). [< ಸಂ. ಕ್ರೌಂಚ]

**ಕ್ರುಕರ** (ನಾ). = ಕೃಕರ. 'ಕ್ರುಕರಮಾರುತ' ಪರಾ. [< ಕೃಕರ]

**ಕ್ರುಕರಮಾರುತ** (ನಾ). ಕ್ರುಕರವೆಂಬ ಮಾರುತ, —ವಾಯು : ಕ್ರುಕರಮಾರುತನಂಜನದ ವರ್ಣಮನೆಯ್ದಿ ನಾಸಿಕದಗ್ರದೊಳಗಿರುತ್ತಾ (ವೀಶೈಪು. ೪-೨೦-೨೫). [ಕ್ರುಕರ + ಮಾರುತ]

**ಕ್ರುಕರವಾಯು** (ನಾ). = ಕ್ರುಕರಮಾರುತ : ಕ್ರುಕರವಾಯುವು ಯೆಂದರೆ ಸೀನುಗಳ ಮಾಡಿಸುವ ಹಾಗೆ ವಾಯುವು (ಅಷ್ಟಸ್ವ. ೧೫-೪). [ಕ್ರುಕರ + ವಾಯು]

**ಕ್ರುಡ್ಡಿಸು** (ಕ್ರಿ). (?) : ಅಡ್ಡ ಬಂದುದುರ್ವ ಕರಕದ ಪೊನಲ್ ಭೂಮಿಯಿಂ ಸಡ್ಡಳಂ ಬೆಳದು ಕೋಮಲಿಸಿ ವಿಜಾಲದಿಂದಡ್ಡ ಹೆಬ್ಬಳಸಿನಿಂ ಜಯನವ್ಯಸುಲಭದಿಂ ಕ್ರುಡ್ಡಿಸಲ್ವರುಷಗಾಲಾ (ಲಿಂಗಪು. ೩೩-೫). [?]

**ಕ್ರುದ್ಧ** (ಗು). ೧. ರೇಗಿದ ; ಕೋಪಗೊಂಡ ; ಕ್ರೋಧವನ್ನು ಹೊಂದಿದ. (ನಾ). ೨. ರೇಗಿದವ್ಯಕ್ತಿ ; ಕೋಪಗೊಂಡವ್ಯಕ್ತಿ : "ಕ್ರುದ್ಧನೆನಲ್ ಕೋಪಿಯೆಂದು [ಪಾಠಾಂ. ಕೋಪಮಕ್ಕು] ತಿಳಿಗೆ ವಿದಗ್ಧರ್" (ಭಾರನಿ. ೮) ; ಅಂತು ಭೂಧರವಿರೋಧಿ ಭೂಧರಧರಂಗೆ ಕ್ರುದ್ಧನಾಗಿ (ಜಗವಿ. ೪-೮೪ವ) ; ಕ್ರುದ್ಧನಾದಂ ಧನಂಜಯಂ (ಜೈಮಿಭಾ. ೧೩-೪) ; ಮೇನಕೆಯು ಕ್ರುದ್ಧಳಾಗಿ ಭೂಮ್ಯಾಕಾಶಗಳನ್ನು ಒಂದಾಗಿಸುತ್ತಾಳೆ (ಸಮಜೀ. ೭ ಪೀಠಿಕೆ). ೩. [ನಾಟ್ಯ] ಎಂಟು ಸ್ಥಾಯೀ ದೃಷ್ಟಿಗಳಲ್ಲಿ ಒಂದು : ತರದಿಂದುರ್ವಿದ ಱೆಪ್ಪೆಯನುರುತರ ಕಣ್ಣಾಲಿ ಚಲನ ಮಿನಿತುಂಬೆತ್ತುಂ ಪಿರಿದುಂ ಪುರ್ಬುಂ ಗಂಟಂ ಧರಿಯಿಸಿ ಬಿಱುಸಾಗಿ [ಪಾಠಾಂ. ಬಾಗಿ] ನೋಡೆ ಕ್ರುದ್ಧಮೆನಿಕ್ಕುಂ (ಲಾಸ್ಯರಂ. ೩-೨೧). [ಸಂ.]

**ಕ್ರುದ್ಧಮುದ್ರೆ** (ನಾ). ಕೋಪವನ್ನು ತೋರುವ ಮುಖಭಾವ ; ಕ್ರೋಧದ ಭಂಗಿ : ಕ್ರುದ್ಧಮುದ್ರೆಯಿಂದ ತಿಪ್ಪನಿಗೆ . . . ಹೆದರಿಕೆ ಹಾಕಿದರು (ಸಪುಜೀ. ೧೪೩). [ಕ್ರುದ್ಧ + ಮುದ್ರೆ]

**ಕ್ರುಷ್ಟ** (ಗು). ೧. ಕರೆಯುವ ; ಕೂಗುವ. ೨. ಅಳುವ ; ಪ್ರಲಾಪಿಸುವ. (ನಾ). ೩. ಅಳುವಿಕೆ ; ಪ್ರಲಾಪ. [ಸಂ.]

**ಕ್ರೂಜೆ, ಕ್ರೂಶ, ಕ್ರೂಸ, ಕ್ರೋಸು** (ನಾ). ಶಿಲುಬೆ : ಗುಂಪಾಗಿ ಸಾಲಿನಲ್ಲಿದ್ದ ಗುಡಿಸಲುಗಳು ಕ್ರೂಜೆಯ (Cross) ಕೈಗಳಂತೆ ಕಾಣುತ್ತಿದ್ದವು (ಇಂಪ್ರಜಾ. ೧). ೨. ಗೌರವಸೂಚಕ ಪದಕ : ಕ್ರೂಜೆ ಮತ್ತು ಬಿರುದು ಬಾವಲಿಗಳನ್ನು ಎದೆಯ ಮೇಲೆ ತಗುಲಿಹಾಕಿಕೊಂಡಿದ್ದ ಕಾವಲುಗಾರನೊಬ್ಬ (ಪುನರು. ೨೧೮). ೩. ಯೇಸುವಿನ ಸ್ಮಾರಕವಾಗಿ ಕ್ರೈಸ್ತಧರ್ಮದವರು ಕೊರಳಲ್ಲಿ ಧರಿಸುವ ಶಿಲುಬೆ ಯಾಕಾರದ ಚಿಹ್ನೆ : ನನ್ನ ಬಲವೆಲ್ಲ ಕುಗ್ಗಿಹೋಗಿದೆ. ನನ್ನ ಕತ್ತಿನ ಕ್ರೂಜೆ ಹಿಡಿದೆಳೆದು ಏನು ಮಾಡಬೇಕೆಂದಿದ್ದೀಯೆ ? (ಪುನರು. ೨೪೬).

**ಕ್ರೂಶ.** 'ಕ್ರೂಶಾರೋಹಣ' ಪರಾ. **ಕ್ರೂಸ** : ಚರ್ಚದ ಮುಖ್ಯ ಪೀಠದ ಮೇಲೆ ಕ್ರೂಸದ ಮೇಲೆ ಏರಿಸಿದ ಯೇಸುಕ್ರಿಸ್ತನ ಮೂರ್ತಿಯನ್ನು . . . ಇಟ್ಟಿರುವರು (ಕಭಾಗ. ೨೪೯). **ಕ್ರೂಸು** : ೪. ನೇಗಿಲನ್ನು ಎಳೆಯುವ ಸಾಧನ; ಬಾಂದಿನವರ ಉಪಕರಣಗಳಲ್ಲಿ ಒಂದು (?) : ನಾವೂ ಕೂಡ ನಮ್ಮ ಗದ್ದೆಯ ಕ್ರೂಸಿಗೆ ಸರಿಯಾಗಿರುವ ಅವರ ತೆಂಗಿನ ಮರಗಳನ್ನು ನಮ್ಮದನ್ನಾಗಿ ಮಾಡಿಕೊಳ್ಳಬೇಕು (ಮಣ್ಣನಂ. ೪). [← ಇಂ. Cross]

**ಕ್ರೂರ** (ಗು). ೧. ನಿರ್ದಯವಾದ; ಕರುಣವಿಲ್ಲದ; ಕಠೋರ ಹೃದಯದ : "ಕ್ಷುದ್ರಮೆನಿಸಿರ್ಪುದಂ ಕ್ರೂರಮೆಂದೆಂಬುದು" (ಮಂಗರಾ. ೧೩೯-೫); ಕ್ರೂರ ಕೆಂಗಣ್ಣಳಿಂ ಕಚ್ಚಿದಧರಂಗಳಿಂ (ಮಲ್ಲಾರಿ. ೬-೨೬). ೨. ದಯಾಹೀನನಾದವನು; ದುಷ್ಟ; ನೀಚ : "ದುರ್ಜನ ಮೂರ್ಖಂ ಕಳ್ಳಂ ಮಜ್ಜುಗದೊಳ್ ಕ್ರೂರಶಬ್ದ" (ನಾನಾಕಂ. ೧೩೧); ಕ್ರೂರರವಗುಣದ ಕುಟಿಲೋದ್ಧಾರರ್ . . . ನಡೆತಂದರಿರದೆ (ಹಮ್ಮೀರ. ೨-೧೦೦). ೩. ಕಳ್ಳ; ತಸ್ಕರ : "ಖಳ ಮೃಗಭೇದ ತಸ್ಕರರು ಕ್ರೂರಮೆನಿಕ್ಕು" (ನಾನಾರ. ೧೦೬). ೪. ಒಂದು ಬಗೆಯ ಮೃಗ. ೫. ಗಿಡುಗ. ೬. ಅನ್ನ; ಕೂಳು. [ಸಂ.]

**ಕ್ರೂರಕರುಣಿ** (ನಾ). ಕ್ರೂರ ರೀತಿಯಿಂದ ಕರುಣೆ ತೋರುವವನು; ಕ್ರೂರಕಾರ್ಯಮಾಡಿ ಕರುಣೆತೋರುವವನು: ಬೆಂದೆನ್ನೆರ್ದೆಗೆ ಕರೆದೆ ನೀನಮೃತಮಂ, ಶೋಕಸಂತಪ್ತನೆಂದೊಡನೆ ವಿಷವೂಡಿದಯ್, ಕ್ರೂರಕರುಣಿ (ಶ್ರೀರಾಮಾ. ೫೧೫-೪೦೬). [ಕ್ರೂರ + ಕರುಣಿ]

**ಕ್ರೂರಕರ್ಮಿ** (ನಾ). ನಿರ್ದಯವಾದ ಕಾರ್ಯ ಮಾಡುವವನು; ದುಷ್ಟ : "ಕ್ರೂರಕರ್ಮಿ ನೃಶಂಸನೆನೆ ಬಿರಿಸಿನವನಕ್ಕು" (ಮಂಗರಾ. ೬೦-೧೪); ಕ್ರೂರಕರ್ಮಿಗಳಂ ಕೊಲುವುದೇನಜಿಉದು ನಿಮ್ಮವನು (ಬಸವು. ೫೧-೬೪). [ಸಂ. ಕ್ರೂರಕರ್ಮಿನ್]

**ಕ್ರೂರಗ್ರಾಹ್ಯ** (ನಾ). ಚಾಡಿಯ ಮಾತನ್ನು ಕೇಳುವವನು : "ಕ್ರೂರಗ್ರಾ[ಪಾಠಾಂ. ಗಾ]ಹ್ಯಂ ಕುವಾಕ್ಯಶ್ರುತನೆನಲು ಚಹಡಮಂ ಕೇಳ್ವಂಗೆ ನಾಮಮಕ್ಕುಂ" (ಮಂಗರಾ. ೬೨-೨೩). [ಕ್ರೂರ + ಗ್ರಾಹ್ಯ]

**ಕ್ರೂರಚಿತ್ತ** (ನಾ). ಕಠೋರವಾದ ಮನಸ್ಸುಳ್ಳವನು; ಕಠಿನಚಿತ್ತ; ಕಲ್ಲೆದೆಯವನು : ತನ್ನ ಕುಮಾರನಾದೊಡೆ ಜಂಗಮವಲಾ ಕ್ರೂರ ಚಿತ್ತನು ಕೊಂದನಾ ಪಾಪಕ್ಕೆ ಶಂಕಿಸದೆ (ಬಸವು. ೨೫-೨೬). [ಕ್ರೂರ + ಚಿತ್ತ]

**ಕ್ರೂರತನ** (ನಾ). ನಿರ್ದಯತೆ; ನಿಷ್ಕರುಣೆ : ಕ್ರೂರತನದಲಿ ಕೊಲಿಸಿ ಚಿಂತಿಸಲಾರು ಮೆಚ್ಚುವರು (ಕೌಶಿರಾ. ೩೬-೭೬). [ಕ್ರೂರ + -ತನ]

**ಕ್ರೂರದರ್ಶಿನಿ** (ನಾ). ಕ್ರೌರ್ಯವನ್ನು ತೋರುವವಳು; ದುಷ್ಟೆ : ಧರ್ಮಜ್ಞನಾತನಾ ಕೈಕಯೀ ಕ್ರೂರದರ್ಶಿನಿಯ ಗರ್ಭದಿನೆಂತುಟು ದಿಸಿದನೊ ಸೋಜಿಗಂ (ಶ್ರೀರಾಮಾ. ೨೦೨-೨೦೯). [ಕ್ರೂರ + ದರ್ಶಿನಿ]

**ಕ್ರೂರಮಾವು** (ನಾ). ಒಂದು ಬಗೆಯ ಮರ : "ಚಿಟ್ಟುತಾಂಡ್ರಿ ಮರ, ಕಾಡುಲವಂಗ, ಕ್ರೂರಮಾವು" (ನೃಪಿಗಿ. ೫೨-೧೦೬೪). [?]

**ಕ್ರೂರಾಜ್ಞೆ** (ನಾ). ಕಠೋರವಾದ ಆಜ್ಞೆ, —ಅಪ್ಪಣೆ : ನಾನು ಎಂದಿಗೂ ಅಣ್ಣನ ಕ್ರೂರಾಜ್ಞೆಯಂತೆ ನಡೆಯುವುದಿಲ್ಲ (ವಚಭಾ. ೩೬). [ಕ್ರೂರ + ಆಜ್ಞೆ]

**ಕ್ರೂರಾಸ್ತ್ರ** (ನಾ). ಭಯಾನಕವಾದ ಆಯುಧ : "ಕ್ರೂರಾಸ್ತ್ರದೊಳು ಗಾಳಿ ತಿರುರಿಯೊಳು ಸೇನೆಯೊಳು ಕೋಕದೊಳು ಚಕ್ರಮಕ್ಕುಂ" (ಮಂಗರಾ. ೧೫೧-೫೨). [ಕ್ರೂರ + ಅಸ್ತ್ರ]

**ಕ್ರೂರಿ** (ನಾ). = ಕ್ರೂರ ೨ : ಕಲ್ಲಾಗಿ ಮಾನವರೆ, ಕಠಿಣಮನಸ್ಕರಾಗಿ, ಕ್ರೂರಿಗಳಾಗಿ (ಅನ್ನಪೂ. ೬೫). [ಕ್ರೂರ + -ಇ]

**ಕ್ರೂಶ** 'ಕ್ರೂಜೆ' ನೋ.

**ಕ್ರೂಶಾರೋಹಣ** (ನಾ). ಯೇಸುಕ್ರಿಸ್ತನು ಶಿಲುಬೆಗೆ ಏರಿದುದು : ಅಲ್ಲಿ ಕ್ರೂಶಾರೋಹಣದ ದೊಡ್ಡ ಚಿತ್ರವೊಂದನ್ನು ನೋಡಿ ನೆಕ್ಲುದೋವ್ ಚಕಿತನಾದನು (ಪುನರು. ೧೮೫). [ಕ್ರೂಶ (< ಕ್ರೂಜೆ) + ಆರೋಹಣ]

**ಕ್ರೂಸ** 'ಕ್ರೂಜೆ' ನೋ.

**ಕ್ರೇಂಕಾರ** (ನಾ). ಒಂದು ಅನುಕರಣ ಪದ; ಹಂಸಪಕ್ಷಿಗಳ ಕೂಗು : ವಾರಿರುಹನಾಳಮಂ ಕ್ರೇಂ[ಪಾಠಾಂ. ಕ್ರೀಂ]ಕಾರರವಂ ಸಹಿತಮಂಚೆ ಮುಕ್ಕಿದುವು (ಗಿರಿಕ. ೧೦-೩೨); ತಳರ್ವ ಹಂಸೆಗಳ ಕ್ರೇಂಕಾರವೇ ಕಹಳೆಗಳ್ (ಚೀರಮು. ೬-೨೦). 'ಕ್ರೀಂಕಾರ' ಪರಾ. [?]

**ಕ್ರೇಣಿ** (ನಾ). ಕೊಂಡುಕೊಳ್ಳುವಿಕೆ; ಕ್ರಯಕ್ಕೆ ಪಡೆಯುವಿಕೆ. [ಸಂ.]

**ಕ್ರೇಣಿಕಾಱ** (ನಾ). ತೆರಿಗೆ ವಸೂಲಿ ಮಾಡುವವನು; ಅಧಿಕಾರಿ (?): ಮಿರಿಂಜೆನಾಡ ಕ್ರೇಣಿಕಾಱಂ ಮಾಳಪಯ್ಯ ನಾಯಕರ (ಎಇ. XIX, ೩೮-೪೪; 1144). [ಕ್ರೇಣಿ + -ಕಾಱ]

**ಕ್ರೇತವ್ಯ** (ಗು). ಕ್ರಯಕ್ಕೆ ಪಡೆಯಬಹುದಾದ; ಕೊಳ್ಳಲು ಯೋಗ್ಯವಾದ. [ಸಂ.]

**ಕ್ರೇತೃ** (ನಾ). ಕ್ರಯಕ್ಕೆ ಪಡೆಯುವವನು; ಕೊಳ್ಳುವವನು. [ಸಂ.]

**ಕ್ರೇಯ** (ಗು). = ಕ್ರೇತವ್ಯ. [ಸಂ.]

**ಕ್ರೈಸ್ತ** (ನಾ). = ಕ್ರಿಶ್ಚಿಯನ್ : ಕ್ರೈಸ್ತ ಮಹಮ್ಮದೀಯ ಮತಗಳಲ್ಲಿ ಮತಾಂತರಹೊಂದಿ ಮದುವೆಯಾಗಲು ಅವಕಾಶವಿದೆ (ಬಂಕಿಮು. ೨೧೩); ಹಿಂದು ಜೈನ ಮುಸ್ಲೀಮ ಕ್ರೈಸ್ತರಾವೊಂದೇ ಬಾಂಧವರು (೧೪ವಿಂ. ೪೬-೪); ಕ್ರೈಸ್ತ ಪಾದರಿಗಳು . . . ಶಾಲೆಗಳನ್ನು ಸ್ಥಾಪಿಸಿದರು (ಭಾರದ. ೪೨೬). [← ಇಂ. Christ]

**ಕ್ರೋಂ** (ನಾ). ಒಂದು ಮಂತ್ರಾಕ್ಷರ : ಕ್ರೋಂ ಕವಚ ಮುಖ್ಯೆ ಮಂತ್ರಾಧಿದೇವತೆ ದೇವಿ (ಕೈವಲ್ಯ. ೧-೬-೧). [ಸಂ.]

**ಕ್ರೋಟನ್‌ಗಿಡ** (ನಾ). ಒಂದು ಜಾತಿಯ ಸಸ್ಯ; ರಂಗಿನ ಗಿಡ (ಕರಾ) : (ನೃಪಿಗಿ. ೨೩-೪೨೬). [< ಕ್ರೋಟನ್ನು + ಗಿಡ (< ಗಿಡು)]

**ಕ್ರೋಟನ್ನು** (ನಾ). = ಕ್ರೋಟನ್‌ಗಿಡ : ಗುಲಾಬಿ, ಗೊರಟಿಗೆ, ಕ್ರೋಟನ್ನುಗಳಿಗೆ ಮೇಲಿಂದಮೇಲೆ ಕ್ಷೌರಮಾಡಬೇಕಾಗುತ್ತದೆ (ಗಾಳಿಪ. ೧೦೬). [← ಇಂ. Croton]

**ಕ್ರೋಡ** (ನಾ). ೧. ಎದೆ; ವಕ್ಷಸ್ಥಳ : ವಾರ್ಧಿಕ್ರೋಡಾವಗೂಢಂ ಹರಿ ಬಡಗೊರವಂ ನಂಟನೀ ಯಾಮಿನೀನಾಥಾರ್ಧ ಪ್ರೋತ್ತಂಸ ನೆಂಬೊಂ (ಜಗವಿ. ೧೬-೮೪); ಕ್ರೋಡಂ ಕುಳಿದಿರೆ ಕಕ್ಷಂ ನೋಡಲ್ ಮಾಂಸಭರಿತಮಾಗಿರೆ . . . ತುರಗಂ ಶುಭದಂ (ಅಶ್ವಶಾ. ೧-೩೨). ೨. ಹಂದಿ; ವರಾಹ : ಸುರವೆಣ್ಣಿಂದಲಿ ಪುಷ್ಪದಂತ ವನದೊಳ್ ತಾಂ ಕ್ರೋಡರೂಪಾಗನೇ (ಸೋಮೇಶ. ೮೯); ಬಂದರಮನೆಯ ಹೊಕ್ಕವು ಕ್ರೋಡ ಶತಕಗಳು (ಕೌಶಿರಾ. ೧೪-೪). ೩. ವರಾಹಾವತಾರಿಯಾದ ವಿಷ್ಣು : ಪದದೊಳು ಕೂರ್ಮಸ್ವರೂಪಂ . . . ಘನಗ್ರೀವದೊಳಾದಿ ಕ್ರೋಡಸ್ವರೂಪಂ ನಡುವಿನೊಳು ನೃಸಿಂಹತ್ವಂ (ಎಕ. V, ಹಾಸನ. ೫೩-೧೬; 1170). ೪. ಶನಿಗ್ರಹ. ೧, ೪ : ಇದು ದೀಹಾರದ ಗೇಹದಂತೆ ಹರಿಚೀರಮ್ಮಂ ಗ್ರಹಗ್ರಾಮದಂತುದಿತ ಕ್ರೋಡ ವಿಭಾಸಿ (ಪುಷ್ಪಪು. ೫-೬೮). ೫. ಬಳಿ; ಸಮೀಪ (?) : ಇಂಗುದೀ ಪಾದಪದ ಕ್ರೋಡಮಂ ಸಾರಿ ಕುಳಿತು (ವೆಂಕಾರಾ. ೬-೧೫-೪). ೬. ಭೂಮಿಯನ್ನು ಹೊತ್ತಿರುವ ಎಂಟು ಕುಲಸರ್ಪಗಳಲ್ಲಿ ಒಂದು : ಇಂದ್ರಾಗ್ನಿ ಮೊದಲಾದೆಂಟು ದಿಕ್ಕಿನ ಭೂಮಿಯಂ ಕ್ರಮದಿಂ ಪೊತ್ತು ಅನಂತ . . . ಕ್ರೋಡ ಕಾಲವೆಂಬಷ್ಟ ಕುಲಫಣಿಗಳಿಕ್ಕುಂ (ವಿವೇಕ. ೧೬೬). [ಸಂ.]

**ಕ್ರೋಡಧ್ವಜ** (ನಾ). ಹಂದಿಯ ಗುರುತುಳ್ಳ ಧ್ವಜ; ವರಾಹಧ್ವಜ: ನನೆಯಂಬಂ ಮಿಗೆ ಕಣ್ಮಲರ್ ಮಕರಮಂ ಕ್ರೋಡಧ್ವಜಂ ಪೋಲೆ ಕ್ರೋಡ ಕಾಲ (ಗದಾಯು. ೧-೬). [ಕ್ರೋಡ + ಧ್ವಜ]

**ಕ್ರೋಡಪತ್ರ** (ನಾ). ೧. ಗ್ರಂಥದಲ್ಲಿ ಪುಟಗಳು ನಷ್ಟವಾದಲ್ಲಿ, ಹೊಸದಾಗಿ ಬರೆದು ಸೇರಿಸಿದ ಪುಟ; ಮಧ್ಯೆ ಹೊಸದಾಗಿ ಬರೆದು ಸೇರಿಸಿದ ಪುಟ. ೨. ಶಾಸ್ತ್ರಗ್ರಂಥಗಳಲ್ಲಿ ಉಕ್ತವಾಗಿರುವ ಲಕ್ಷಣಗಳಿಗೆ ಊಹಾಪೋಹಗಳಿಂದ ಶಂಕೆ ಮತ್ತು ಸಮಾಧಾನರೂಪವಾಗಿ ಬರೆದಿಟ್ಟಿರುವ ಪತ್ರ; ಪುಟದ ಪಕ್ಕದಲ್ಲಿ ಬರೆದುದು: ದಾಸರುಗಳ ಭಾವಸಮಾಧಿಯಲ್ಲಿ ಸ್ವಯಂಸ್ಫೂರ್ತಿಯಿಂದ ಹೊರಟ ದಿವ್ಯನಾಮಗಳು ಶಾಸ್ತ್ರಾರ್ಥಗಳ ಕ್ರೋಡಪತ್ರಗಳಂತಿವೆ (ಕಥವಿ. II, ೧೬೫). ೩. ಅನುಬಂಧ: ಇದಕ್ಕೆ ನಾಲ್ಕು ಕ್ರೋಡಪತ್ರ ಅಥವಾ ಅನುಬಂಧಗಳಿವೆ (ಬಂಕಿವು. ೪೧೯). [ಸಂ.]

**ಕ್ರೋಡವಸೆ** (ನಾ). ಹಂದಿಯ ಕೊಬ್ಬು, —ನೆಣ: ಮೊದಲಲ್ಲಿ ಬಾಟೆಗಂಕೋಲದ ಜಲಮಂ ಕ್ರೋಡವಸೆಯುಮಂ ರುಧಿರಮುಮಂ ಕುದಿಯಿಸಿ ಪೊಯ್ದೊಡೆ ದಾಳಿಂಬದ ಫಲದಾಕೃತಿಯ ಫಲಮನದು ತಳೆದಿರ್ಕುಂ (ಲೋಕೋಪ. ೬-೩೦). [ಕ್ರೋಡ + ಬಸೆ]

**ಕ್ರೋಡಶಾಬ** (ನಾ). ಹಂದಿಯ ಮರಿ; ಮರಿಹಂದಿ: ವ್ಯಾಘ್ರಚರ್ಮಮಂ ಕ್ರೋಡಶಾಬಂಗಳಂ ಪೂಡಿದೆಕ್ಕಂ ಹರಿಶ್ಚಂದ್ರರಾಯಂಗೆ ಕಾಣಿಕೆಯನಿತ್ತು (ಹಚಕಾ. ೫-೩). [ಕ್ರೋಡ + ಶಾಬ]

**ಕ್ರೋಡಶಾಲೆ** (ನಾ). ಗಜಶಾಲೆ; ಕರೋಟೆ: ದಿಕ್ಪಾಲ ಶಾಸನದಿ ನಾಶಾಕರೀಂದ್ರಂಗಳ್ಗೆಂದು ಸುಪ್ರತೀಕಪತಿ ಸಮೆಯಿಸಿದ ವಿಶಾಲ ಕ್ರೋಡಶಾಲೆಗಳೆನಿಸಿದ ಚಿಂಬೊನ್ನ ಕಲಶದ ಮಾಡಶಾಲೆಗಳುಮಂ ನೋಡಿ (ಶಾಂತಿಪು. ೩-೧೯ ವ). [< ಕ್ಷೋಡಶಾಲೆ]

**ಕ್ರೋಡೀಕರಣ** (ನಾ). ೧. ಅಪ್ಪಿಕೊಳ್ಳುವಿಕೆ; ಆಲಿಂಗನ: "ಆಲಿಂಗನಂ . . . ಕ್ರೋಡೀಕರಣಂ – ಈ ೭ ಅಪ್ಪಿಕೊಳುಹ" (ಹಲಾಯು. ೯೩-೪೧೪). ೨. ಕೂಡಿಸಿ ಕಟ್ಟುವಿಕೆ; ಒಟ್ಟುಗೂಡಿಸುವಿಕೆ; ಸಂಗ್ರಹಣ: ಪ್ರಾಚೀನಕಾಲದಲ್ಲೇ ನಮ್ಮ ದೇಶದಲ್ಲಿ ಕಲೆಗಳೂ ಕಾವ್ಯವೂ ಉಚ್ಛ್ರಾಯಸ್ಥಿತಿಯನ್ನು ಐದಿದ್ದು ಭರತನಾಟ್ಯ ಶಾಸ್ತ್ರದಂತ ಕ್ರೋಡೀಕರಣವು ಶಕ್ಯವಾಯಿತು (ಭಾರದ. ೫೫೦). [ಸಂ.]

**ಕ್ರೋಡೀಕರಿಸು** (ಕ್ರಿ). ೧. ಅಪ್ಪಿಕೊಳ್ಳು; ಆಲಿಂಗಿಸು. 'ಕ್ರೋಡೀಕರಣ' ಪರಾ. ೨. ಕೂಡಿಸಿ ಕಟ್ಟು; ಒಟ್ಟುಗೂಡಿಸು; ಸಂಗ್ರಹಗೊಳಿಸು: ಪ್ರಾಕ್ತನ ಪರೀಕ್ಷಕರ ವರದಿಗಳ ಅಂಶಗಳನ್ನು ಕ್ರೋಡೀಕರಿಸಿದಲ್ಲಿ ಇತಿಹಾಸವು ಸಿದ್ಧವಾಗುವುದಿಲ್ಲ (ಭಾಇಪ್ರ. ೮); ಆ ನಿಯಮಗಳನ್ನು ಕ್ರೋಡೀಕರಿಸಿ ಈಗ ನಮಗೆ ಅರ್ಥವಾಗುವ ಕಾಲಮಾನದಿಂದ ವಿವರಿಸಬಹುದು (ಭಾರದ. ೧೬೧); ಜಗದೀಶಚಂದ್ರಬೋಸರು ಇಲ್ಲಿಯವರೆಗೆ ನಡೆಸಿದ ಸಂಶೋಧನೆಗಳ ಫಲಿತಾಂಶಗಳನ್ನು ಕ್ರೋಡೀಕರಿಸಿ . . . ಕಳುಹಿಸಿ ಕೊಟ್ಟರು (ಸಸ್ಯಕ. ೯೮). [ಕ್ರೋಡೀಕರಣ + –ಇಸು₁]

**ಕ್ರೋಡೀಕೃತ** (ಗು). ಒಟ್ಟುಗೂಡಿದ; ಸಂಗ್ರಹೀತ: ಐಯನ್ ಮಧ್ಯಸ್ಥಮಂತಸ್ಥ ಕರ್ಮವಶಭ್ರಾಮ್ಯದನೇಕ ಜೀವನಿವಹ ಕ್ರೋಡೀಕೃತಾಭ್ಯಂತರಂ (ಆದಿಪು. ೧-೪೩); ವಾತಾಯನ ಪರೀತ ಮತ್ತವಾರಣ ಕ್ರೋಡೀಕೃತ ಚಂದ್ರಕಾಂತ ಕಾಂತ ಸುಧಾವೇದಿಕಾ ಮಧ್ಯ ಭೂಮ್ಯಂತರಾಳದೊಳ್ (ಶಾಂತಿಪು. ೮-೮೬ ವ); ಮೆದುಳಿನ ಕೆಲವು ಕಣಗಳಲ್ಲಿ ವಿದ್ಯುತ್ ಶಕ್ತಿಯು ರಾಸಾಯನಿಕ ಮಾರ್ಪಾಡುಗಳಿಂದ ಉಂಟಾಗಿ, ಕ್ರೋಡೀಕೃತವಾಗುತ್ತದೆ (ಮನೋನಂ. ೪೫). [ಸಂ.]

**ಕ್ರೋಧ** (ನಾ). ರೇಗು; ಕೋಪಾತಿರೇಕ: ಅನಂತಾನುಬಂಧಿ ಕ್ರೋಧ ಮಾನ ಮಾಯಾ ಲೋಭಂಗಳಂ ವಿಸಂಯೋಜಿಸಿ (ಆದಿಪು. ೧೦-೧೪ ವ); ಕ್ರೋಧಾರ್ಥರಾದ್ಯಮಿಥ್ಯಂಗಳಂ ಪರಿಹರಿಸಿ (ಹಚಕಾ. ೮-೧೬); ಹರುಷ ದರ್ಪ ಕ್ರೋಧ ಲಜ್ಜಾತುರತ ಮಾನವಿಮಾನವಿವಜಿಲಿ ನಿರುತ ಸಮನೆಂದೆನಿಸಿ (ಕುವ್ಯಾಉ. ೩-೪೪). [ಸಂ.]

**ಕ್ರೋಧಚರ್ವಿತ** (ನಾ). [ಕಾಮಶಾ] ಎಂಟು ಬಗೆಯ ದಂತಕ್ಷತಗಳಲ್ಲಿ ಒಂದು: ರಾಗೋಪಗೂಢ . . . ಕ್ರೋಧಚರ್ವಿತ, ವರಾಹಚರ್ವಿತವೆಂಬಷ್ಟ ವಿಧ ರದನಕ್ಷತ ಲಾಕ್ಷಣಿಕರಿಂ (ವಿವೇಕ. ೨೨೯). [ಸಂ.]

**ಕ್ರೋಧನ** (ಗು). ೧. ಮುನಿಸಿನ; ಕೋಪಾವೇಶದ; ಕ್ರೋಧವನ್ನುಳ್ಳ. (ನಾ). ೨. ಕ್ರುದ್ಧನಾದವನು; ಕೋಪಗೊಂಡವನು: ನೀಂ ಕ್ರೋಧನನಾಗಲ್ ನಿನ್ನ ತಮ್ಮಂ ನಿನಗೆಜಗನಿದಂ ನಂಬು ರಾಜಾಧಿರಾಜಾ (ಆದಿಪು. ೧೪-೮೪). ೩. ಕ್ರೋಧ; ಕೋಪ. ೪. ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಐವತ್ತೊಂಬತ್ತನೆಯದು: ಪ್ರಭವ, ವಿಭವ . . . ಕ್ರೋಧನ ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೧). [ಸಂ.]

**ಕ್ರೋಧವಾಣಿ** (ನಾ). ಕ್ರೋಧದಿಂದ ಆಡುವ ಮಾತು; ಸಿಡುಕಿನ ಮಾತು: ಕ್ರೋಧವಾಣಿ ಸಂಶಯಕ್ಕೆ ಸಮರ್ಪಕವಾದ ಉತ್ತರವಲ್ಲ (ಬಿತಂಬಾ. ೧೬೮). [ಕ್ರೋಧ + ವಾಣಿ]

**ಕ್ರೋಧಾಂಧ** (ನಾ). ಕೋಪದಿಂದ ಕುರುಡಾದವನು; ವಿವೇಕ ತಪ್ಪಿದವನು: ಕ್ರೋಧಾಂಧ ಸೋದರನ ಭೀಷಣ ಮನಃಸ್ಥಿತಿಯನಳುಕಿ (ಶ್ರೀರಾಮಾ. ೨೫೬-೭೪೩). [ಕ್ರೋಧ + ಅಂಧ]

**ಕ್ರೋಧಾತಿರೇಕ** (ನಾ). ೧. ಕೋಪದ ಅತಿರೇಕ, —ಹೆಚ್ಚಳ. ೨. ಅತಿಯಾದ ಕ್ರೋಧವುಳ್ಳವನು: ಜಾತಿಸಂಕರಕಾಜಿಗೆ ಕ್ರೋಧಾತಿರೇಕಗೆ ಗಾಢಗರ್ವಿಗೆ ಭೂತವೈರಿಗೆ ಪಾರ್ಥಕೇಳ್ ಪರಲೋಕವಿಲ್ಲೆಂದ (ಕುವ್ಯಾಆ. ೪-೨೫). [ಕ್ರೋಧ + ಅತಿರೇಕ]

**ಕ್ರೋಧಿ** (ನಾ). ೧. ಕೋಪಿಷ್ಠ; ರೇಗುವ ಸ್ವಭಾವದವನು: ದುಷ್ಟ ಮಾನಸನಂ ಕುಜನ ಜನಶಿಷ್ಟನಂ ಕ್ರೋಧಿಯನಸಕ್ಯನನಾದಿ ಬಾಧಕನಾ (ಬಸಪು. ೬೦-೫೫). ೨. ಪ್ರಭವ ಮೊದಲಾದ ಅರವತ್ತು ಸಂವತ್ಸರಗಳಲ್ಲಿ ಮೂವತ್ತೆಂಟನೆಯದು: ಮತ್ತಮಾವರುಷವೇ ಪ್ರಭವ . . . ಕ್ರೋಧಿ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೧). [ಸಂ. ಕ್ರೋಧಿನ್]

**ಕ್ರೋಧಿನಿ** (ನಾ). ಆನೆಯ ಏಳು ಮದಾವಸ್ಥೆಗಳಲ್ಲಿ ಒಂದು: ಎನಿತುಂ ಮದವಾರಣಂ ಕ್ರೋಧಿನಿ ಪೊಕ್ಕುಂ ಸಿಂಹಪೋತಮಂ ಗೆಲ್ದುವೆ (ಶಾಂತಿಪು. ೪-೫೧); ಅಯ್ದನೆಯ ಕ್ರೋಧಿನಿಯೆಂಬ ಮದದೊಳತಿವರ್ತಿಯಾಗಿ (ಪಂರಾಮಾ. ೧೫-೩೦ ವ); ನರಸಿಂಗ ಪೊನೆಯವರ ಪಟ್ಟದಾನೆ ಸಂಚಿತ ತಿಲಕಿತ ಅರ್ಧಕಪೋಲಿತ ಅತಿವರ್ತಿತ ಅಧೋನಿಬಂಧಿನಿ ಕ್ರೋಧಿನಿ ಗಂಧಚಾರಿಣಿಯೆಂಬ ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ (ನಂಬಿರ. ೨-೨೧). [ಸಂ. ಕ್ರೋಧಿನೀ]

**ಕ್ರೋಶ** (ನಾ). ೧. ಕೂಗುವಿಕೆ; ಕೂಗು. ೨. ದೂರವನ್ನು ಅಳೆಯುವ ಒಂದು ಪ್ರಮಾಣ; ಮೂರು ನಾಲ್ಕು ಮೈಲಿಯ ಅಳತೆ; ಹರಿದಾರಿ: "ಎರಡುಂ ಸಾಸಿರ ದಂಡಂ ನಿರುತಂ ತಾನೊಂದು ಕ್ರೋಶ" (ವ್ಯವಹಾ. ಅನು. I, ೮-೪೧); ಆ ದಂಡವೆರಡು ಸಾವಿರ ಮಾಗಲೊಂದು ಕ್ರೋಶವೆನಿಸುವದು (ವಿವೇಕ. ೩೦೧); ಒಂದು ಯೋಜನವನ್ನು ಎಂಟು ಕ್ರೋಶಗಳಾಗಿಯೂ . . . ವಿಂಗಡಿಸುತ್ತಾರೆ (ಪ್ರವಾಇ. I, ೧೯೬); ಸ್ವಾಮಿತೀರ್ಥದ ಉತ್ತರ ದಿಕ್ಕಿನಲ್ಲಿ ಒಂದು ಕ್ರೋಶದ (ಹರದಾರಿ) ಮೇಲೆ ಆಕಾಶಗಂಗೆ ಎಂಬುದೊಂದು ಪ್ರಸಿದ್ಧ ತೀರ್ಥವದೆ (ವೇಂಮಾಹಾ. ೮). [ಸಂ.]

**ಕ್ರೋಷಾ** (ನಾ). ಕಸೂತಿ: ಶೀಷೆಗಳಲ್ಲಿ ಹೂವು ಚೆಂಡು ಹಾಕುವುದು, ಕಾಗದದ ಹೂಗಳನ್ನು ಮಾಡುವುದು, ಕ್ರೋಷಾಕೆಲಸ . . . ಇತ್ಯಾದಿ (ಶನಿಸಂ. ೧೫). [← ಇಂ. Crochet]

**ಕ್ರೋಷ್ಟು** (ನಾ). ೧. ಕೂಗುವವನು. ೨. ನರಿ: "ಘೇರವಂ ಮೃಗ ಧೂರ್ತಕಂ . . . ಕ್ರೋಷ್ಟುವೆನೆ ನರಿಯಕ್ಕು" (ಮಂಗರಾ. ೪೮–೧೦); ಅದಱ ಪೊಡೆಯಂ ಡಾಣೆಯಿಂ ಪೊಯ್ಯಲ್ಕೆಯಾ ಕ್ರೋಷ್ಟು ನಿರ್ವೇದಂಗೊಂಡು (ಪಂಚತಂ. ೧೯–೧೩). [ಸಂ.]

**ಕ್ರೋಷ್ಟುವಿನ್ನೆ** (ನಾ). ಒಂದು ಬಗೆಯ ಹುಲ್ಲು: ಕ್ರೋಷ್ಟುವಿನ್ನಾ . . . ಗುಹಾ – ಈ ೫ ನರಿಬಾಲದ ಹುಲ್ಲು, ನರಿಬಾಲದ ಹೊನ್ನೆ" (ಸಿದ್ಧಾಂತಿ. ೧೧೭). [ಸಂ. ಕ್ರೋಷ್ಟುವಿನ್ನಾ]

**ಕ್ರೋಷ್ಟ್ರು** (ನಾ). ೧. ಒಂದು ಬಗೆಯ ಸಸ್ಯ. ೨. ನರಿ. [ಸಂ.]

**ಕ್ರೋಷ್ಟ್ರೀ** (ನಾ). ೧. ಒಂದು ಬಗೆಯ ಕುಂಬಳ; ಬಿಳಿಕುಂಬಳ: "ವಿದಾರೀ . . . ಕ್ರೋಷ್ಟ್ರೀ, ಭೂಸೀತಾ – ಬಿಳೀ ಕುಂಬಳದ ಹೆಸರು" (ಸಿದ್ಧಾಂತಿ. ೧೨೦). ೨. ಹೆಣ್ಣುನರಿ. [ಸಂ.]

**ಕ್ರೋಸು** 'ಕ್ರೂಜೆ' ನೋ.

**ಕ್ರೋಳ** (ನಾ). ಎದೆ; ವಕ್ಷ: "ವಕ್ಷದಯೆಡೆಯ ಕ್ರೋಳ(ಡ)ಮುದಕ್ಕುಂ" (ಅಶ್ವಶಾ. ೯–೩೦). [< ಸಂ. ಕ್ರೋಡ]

**ಕ್ರೌಂಚ** (ನಾ). ೧. ಕೊಂಚೆ; ನೀರುಕೊಕ್ಕರೆ: "ಕೊಂಚೆ ಕ್ರೌಂಚಕೆ" (ಕಶರ. ೨೯). ಕ್ರೌಂಚಮಿಥುನದ ಕೇಳಿ ಇಂಚರದ ಚಿಲಿಪಿಲಿ (ಕ್ರೌಂಚಧ್ವ. ೩೨); ಹಿಮಗಿರಿಯ ದೂರದಿಂದೈತಂದುವೆಡೆಬಿಡದೆ ಕ್ರೌಂಚ ಸಾರಸ ಪಂಕ್ತಿ (ಶ್ರೀರಾಮಾ. ೧೫–೩೯೮). ೨. ಸಮುದ್ರದಿಂದ ಸುತ್ತುವರಿಯಲ್ಪಟ್ಟ ಸಪ್ತದ್ವೀಪಗಳಲ್ಲಿ ಒಂದು. ೩. ಷಣ್ಮುಖನಿಂದ ಸೀಳಲ್ಪಟ್ಟುದೆಂದು ಹೇಳಲಾದ ಹಿಮಾಲಯದಲ್ಲಿಯ ಒಂದು ಪರ್ವತ: ಎಚ್ಚಂತೆ ಮುಂ ಧೂರ್ಜಟಿಪುತ್ರಂ ಕ್ರೌಂಚಮಂ (ರಾಜಶೇ. ೬–೮೯). ೪. ಒಬ್ಬ ರಾಕ್ಷಸನ ಹೆಸರು. [ಸಂ.]

**ಕ್ರೌಂಚದಾರಣ** (ನಾ). ಕ್ರೌಂಚಪರ್ವತವನ್ನು ಸೀಳಿದವನು; ಕುಮಾರಸ್ವಾಮಿ; ಷಣ್ಮುಖ. [ಕ್ರೌಂಚ + ದಾರಣ]

**ಕ್ರೌಂಚಪದ** (ನಾ). ೧. [ಸಂಗೀತ] ಒಂದು ಬಗೆಯ ತಾಳ: ಚಂಚತ್ಪುಟ . . . ಕ್ರೌಂಚಪದ . . . ಜಯಾಳಮೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮). ೨. [ಛಂದ] ಪ್ರತಿಪಾದದಲ್ಲೂ ಇಪ್ಪತ್ತೈದು ಅಕ್ಷರಗಳಿರುವ ಒಂದು ಅಕ್ಷರವೃತ್ತ: ಅತಿಶಯ ರಚನೋಪೇತಮಶೇಷೋರ್ವೀತಳಕಂ ಕ್ರೌಂಚಪದಮಿದತಿಶಯ ಪದ ರಚನೆಗಳಿಂ (ಛಂದೋಂಬು. ೨–೧೪೪). ಕ್ರೌಂಚಪದಂ ತಾನೆಂದಪರಾರ್ಯರ್ ಭಮಸಭನನನನಗಮಿವು ನೆರೆದಿರಲ್ (ಕೈಪಿಡಿ. ೮೮). [< ಸಂ. ಕ್ರೌಂಚಪದಾ]

**ಕ್ರೌಂಚವ್ಯೂಹ** (ನಾ). ಕ್ರೌಂಚಪಕ್ಷಿಯ ಆಕಾರದಲ್ಲಿ ರಚಿಸಿದ ಸೇನಾವ್ಯೂಹ: ಧೃಷ್ಟದ್ಯುಮ್ನನು ಪಾಂಡವಸೇನೆಯನ್ನು ಕ್ರೌಂಚವ್ಯೂಹವಾಗಿ ರಚಿಸಿ (ಪಚಭಾ. ೨೭೧). [ಕ್ರೌಂಚ + ವ್ಯೂಹ]

**ಕ್ರೌಂಚಾರಾತಿ** (ನಾ). ೧. ಕ್ರೌಂಚವೆಂಬ ಪರ್ವತದ ವೈರಿ; ಷಣ್ಮುಖ. ೨. ಪರಶುರಾಮ: ಕ್ರೌಂಚಾರಾತಿಯಾಗಿಯುಂ ಷಣ್ಮುಖನಲ್ತು (ಜಗನಿ. ೮–೧೦ವ). [ಕ್ರೌಂಚ + ಅರಾತಿ]

**ಕ್ರೌಂಚಾರಿ** (ನಾ). = ಕ್ರೌಂಚಾರಾತಿ ೧: "ಗೌರೀಸುತಂ ವಿಶಾಖಂ ಶಕ್ತಿಪಾಣಿ ಕ್ರೌಂಚಾರಿ ಸೇನಾನಿ . . . ಸ್ವಾಮಿ, ಕಾರ್ತಿಕೇಯಂ" (ಮಂಗರಾ. ೫–೧೬); ತಾರಕಾರಾತಿಯೆಂಬಭಿಧಾನದಿಂದ ಬೃಂದಾರಕರ ಪೊರೆದ ಕ್ರೌಂಚಾರಿ ರಕ್ಷಿಪುದೆನ್ನ (ಪ್ರೌಢರಾ. ೧–೧೩). [ಕ್ರೌಂಚ + ಅರಿ]

**ಕ್ರೌಂಚಾಸನ** (ನಾ). [ಯೋಗ] ಒಂದು ಬಗೆಯ ಆಸನ: ಯೋಗಯೋಗ್ಯಾಸನಗಳಲ್ಲಿ ಶುದ್ಧಾಸನ . . . ಕ್ರೌಂಚಾಸನ . . . ಅರ್ಧಾಸನಾದಿ ಎಂಭತ್ನಾಲ್ಕಾಸನಭೇದಗಳುಂ (ವಿವೇಕ. ೧೪೯). [ಕ್ರೌಂಚ + ಆಸನ]

**ಕ್ರೌರ್ಯ** (ನಾ). ೧. ಕ್ರೂರತನ; ನಿರ್ದಯತೆ; ಕಲ್ಲೆದೆತನ. ೨. ಭೀಕರವಾಗಿರುವಿಕೆ; ಉಗ್ರತೆ: ತನ್ನ ಶಕ್ತಿಗೆ ತಕ್ಕಂತೆ ಸಂಸ್ಕೃತಿಯ ಸೇವೆಮಾಡಿ ಶತ್ರುಗಳ ಕ್ರೌರ್ಯಕ್ಕೆ ಬಲಿಯಾದನು (ಋಕ್ಸಾರ. ೧೧೩ ಪೀಠಿಕೆ). [ಸಂ.]

**ಕ್ಲಪ್ತ, ಕ್ಲುಪ್ತ** (ಗು). ನಿಗದಿಯಾದ; ಗೊತ್ತುಪಡಿಸಿದ; ನಿಶ್ಚಿತವಾದ; ನಿರ್ದಿಷ್ಟ: ಹೆಚ್ಚಿನವರು . . . ಆಫೀಸುಗಳಿಗೆ ಕ್ಲಪ್ತಸಮಯಕ್ಕೆ ಬಂದು ಹೋಗಲು ಬಯಸುವರು (ಬಾಲಪ್ರ. I, ೩೪೫); ಕ್ಲಪ್ತಕಾಲಕ್ಕೆ ಹಣವನ್ನು ಕಳುಹಿಸಬೇಕಲ್ಲ (ಸ್ವಪ್ನಹೂ. ೧೫೦); ನನಗೆ ಶಾಪಾಂತರವು ಋಷಿಯಿಂದ ಹೀಗೆ ಕ್ಲಪ್ತವಾಗಿತ್ತು (ಅರ್ಕಮಾ. ೬೦). **ಕ್ಲುಪ್ತ**: ಅರ್ಥವೂ ಶಬ್ದವೂ ಪರಸ್ಪರ ಕ್ಲುಪ್ತಗಳಾಗಿವೆ (ಜೀವಸೌ. ೪೩). [< ಸಂ. ಕ್ಲಪ್ತ]

**ಕ್ಲಪ್ತಕಾಲ, ಕ್ಲುಪ್ತಕಾಲ** (ನಾ). ಗೊತ್ತುಪಡಿಸಿದ ಸಮಯ: ಅನನ್ಯರಾಧಿಕೆಯೋ ಅಕ್ಕ ಸಮನೆಯೋ ಸಾಧುಗಳ ಜತೆಯಲ್ಲಿ ಅಲ್ಲಿ ಕ್ಲಪ್ತಕಾಲಕ್ಕೆ ಬಂದು ಕುಳಿತುಕೊಳ್ಳುತ್ತಾರೆ (ಸನ್ಯಾಸಿ. ೧೨೯); ಆಹಾರವನ್ನು ಕ್ಲಪ್ತಕಾಲದಲ್ಲಿ ಅವಳು ಸೇವಿಸುವಂತೆ ಏರ್ಪಾಡು ಮಾಡಿದ್ದರು (ಇಣಿನೋ. ೩೦). **ಕ್ಲುಪ್ತಕಾಲ**: ಕ್ಲುಪ್ತಕಾಲದಲ್ಲಿ ಹೆಚ್ಚು ನೂಲನ್ನು ತೆಗೆಯುವುದಕ್ಕೂ ಸಾಧ್ಯವಾಗದಂತಾಯಿತು (ಭಾಗ್ಯಶಿ. ೧೯). [ಕ್ಲಪ್ತ + ಕಾಲ]

**ಕ್ಲಪ್ತವೃತ್ತ** (ನಾ). ಕಲ್ಪಿತವಾದ ವಸ್ತು: 'ಕ್ಲಪ್ತವೃತ್ತ' ಎಂದರೆ ಆದರ ವಸ್ತುವು ಕಲ್ಪಿತವಾದದ್ದು (ಸಂನಾಟ. ೧೮೯). [ಕ್ಲಪ್ತ + ವೃತ್ತ]

**ಕ್ಲಬ್ಬು** (ನಾ). ವಿಹಾರ, ವಿನೋದಾರ್ಥಗಳಿಗಾಗಿ ಏರ್ಪಟ್ಟ ಸಂಘ; ಕೂಟ: ನಾಗರಾಜ ಮನೆಯಲ್ಲಿದ್ದಾನೋ ಕ್ಲಬ್ಬಿಗೆ ಹೊರಟುಬಿಟ್ಟನೋ ಎಂದು ಮುಂತಾಗಿ . . . ಆಡತೊಡಗಿದರು (ಮಹಾಗ. ೨೫). [← ಇಂ. Club]

**ಕ್ಲಮ** (ನಾ). ಬಳಲಿಕೆ; ಆಯಾಸ; ದಣಿವು. [ಸಂ.]

**ಕ್ಲಮಥ** (ನಾ). = ಕ್ಲಮ. [ಸಂ.]

**ಕ್ಲಮಥು** (ನಾ). ೧. = ಕ್ಲಮ: "ಗ್ಲಾನಿಃ, ಕ್ಲಮಥುಃ – ಈ ೨ ಉಮ್ಮಳಿಕೆ" (ಹಲಾಯು. ೯೮–೪೪೭). ೨. ನೋವು: "ಕ್ಲಮಥು ಗ್ಲಾನಿಯೆಂದೆನಲು ನೋವೆನಿಕ್ಕುಂ" (ಮಂಗರಾ. ೧೧೩–೧). [ಸಂ.]

**ಕ್ಲಾಂತ** (ಗು). ಬಳಲಿದ; ದಣಿದ; ಆಯಾಸಗೊಂಡ: ದಿವಸಕರ ಸಂತಾಪ ಕ್ಲಾಂತಮಪ್ಪ [ಪಾಠಾಂ. ಸಂತಾಕ್ರಾಂತವಪ್ಪ] ಕುಮುದಾಕರ ಕುನ್ಮುಖತೆಯ ದೊರೆಕೊಳ್ಗುಂ (ಕಾದಂಉ. ೩೭೧); ದುರ್ಗಾದಾಸನು ಮಾರ್ಗಾಯಾಸದಿಂದ ಕ್ಲಾಂತನಾಗಿ ಮಲಗಿಕೊಂಡು ನಿದ್ರೆಹೋಗುತ್ತಿದ್ದನು (ಕೋಹಿನೂ. ೨೩); ರಾಮಾದಿಗಳುಮರಸುತ್ತ ಬಂದು ಕಂಡರು . . . ಕ್ಲಾಂತ ಸುಗ್ರೀವನಂ (ಶ್ರೀರಾಮಾ. ೩೦೭–೧೭೧). [ಸಂ.]

**ಕ್ಲಾಂತಿ** (ನಾ). = ಕ್ಲಮ: ಮನುಷ್ಯನ ಕ್ಲಾಂತಿಯ ಮೇಲೆ ದೇವಲೋಕದ ಶಾಂತಿಯ ಆಶೀರ್ವಾದವನ್ನು ನೋಡಲಾಗಲಿಲ್ಲ (ನಿಬಂಧ. II, ೧೮೧). [ಸಂ.]

**ಕ್ಲಾರ್ಕು** (ನಾ). ಕಾರಕೂನ; ಗುಮಾಸ್ತ: ಅವನು ಅದೇ ಕಚೇರಿಯಲ್ಲಿ ಕ್ಲಾರ್ಕಾಗಿದ್ದಾನೆ (ರೂಢಿ). [← ಇಂ. Clerk]

**ಕ್ಲಿಕ್‌ದುಂಬಿ** (ನಾ). ಒಂದು ಬಗೆಯ ದುಂಬಿ: ಎಲೆದುಂಬಿಗಳು 'ಕ್ಲಿಕ್' ದುಂಬಿಗಳು ಅಳತೆ ಕೀಟಗಳು . . . ಸತ್ತಂತೆ ನಟಿಸಿ ತಪ್ಪಿಸಿಕೊಳ್ಳುತ್ತವೆ (ಕೀಟಬೆ. ೨೩). [? + ದುಂಬಿ (< ತುಂಬಿ)]

**ಕ್ಲಿನ್ನ** (ಗು). ೧. ನೆನೆದ; ತೇವಗೊಂಡ; ಹಸಿಯಾದ; ಒದ್ದೆಯಾದ. (ನಾ). ೨. ತೇವ; ಒದ್ದೆ: "ಉನ್ನಂ, ಕ್ಲಿನ್ನಂ – ಈ ೨ ಹಸಿ." (ಹಲಾಯು. ೧೨೬–೮೨); ಅಧಿಕ ಮಧುರ ರಸಮಯ ಕ್ಲಿನ್ನಗುಡಂ ಸ್ವಗುಣಾಪಾದನದಿಂ ಸ್ವಮಧ್ಯಪತಿತ ರೇಣ್ವಾದಿಗಳ್ಗೆ ಪಾರಿಣಾಮಿಕ ಮಪ್ಪವೋಲ್ (ತತ್ತ್ವಪ್ರ. ೨೫೦). [ಸಂ.]

**ಕ್ಲಿನ್ನಾಕ್ಷ** (ನಾ). ೧. ನೀರು ಸುರಿಯುತ್ತಿರುವ ಕಣ್ಣುಳ್ಳವನು; ಸೋರುಗಣ್ಣಿನವನು. ೨. ಮಂದದೃಷ್ಟಿಯವನು. [ಸಂ.]

**ಕ್ಲಿಶಿತ** (ಗು). ೧. ತೊಂದರೆಗೊಂಡ; ಪೀಡೆಗೊಳಗಾದ; ನೋಯಿಸಲ್ಪಟ್ಟ. ೨. ಬಳಲಿದ; ಆಯಾಸಗೊಂಡ. [ಸಂ.]

**ಕ್ಲಿಶ್ಯಮಾನ** (ಗು). ತೊಂದರೆಗೆ ಒಳಗಾದ; ದುಃಖದಲ್ಲಿರುವ: ಸತ್ವಂಗಳೊಳ್ ಮೈತ್ರಿಯುಂ ಗುಣಾಧಿಕರೊಳ್ ಪ್ರಮೋದಮುಂ ಕ್ಲಿಶ್ಯಮಾನರೊಳ್ ಕಾರುಣ್ಯಮುಂ (ಅಜಿಪು. ೬–೮೭). ಸತ್ವಗುಣಾಧಿಕ ಕ್ಲಿಶ್ಯಮಾನಾವಿನಯದೊಳ್ ಮೈತ್ರೀಪ್ರಮೋದಕಾರುಣ್ಯ ಮಾಧ್ಯಸ್ಥ ವೃತ್ತಿಯಂ ಭಾವಿಸುತ್ತುಂ (ಸುಕುಮಾ. ೪–೨೧ ವ). [ಸಂ.]

**ಕ್ಲಿಷ್ಟ** (ಗು). ೧. ಕಠಿನವಾದ: ಕಷ್ಟಕರವಾದ: ಕ್ಲಿಷ್ಟವೀ ಬ್ರಹ್ಮಕೃತಿ (ಮಂಕುಕ. ೨೬); ಆತ್ಮಶಾಸ್ತ್ರದಂತೆ ಕರ್ತವ್ಯ ಶಾಸ್ತ್ರವೂ ಜಟಿಲ ಸಮಸ್ಯೆಗಳಿಂದ ಕ್ಲಿಷ್ಟವಾಗಿದೆ (ಜೀವಾತ್ಮ. ೬). (ನಾ). ೨. ತೊಂದರೆ; ಕ್ಲೇಶ; ಪೀಡೆ; ಬಾಧೆ: ಸುಕುಮಾರಿ ನೀನರಿಯೆ ವಿಪಿನವಾಸದ ಭಯಂಕರತೆಯಂ, ಘೋರಮಂ, ಕ್ಲಿಷ್ಟಕಷ್ಟಂಗಳಂ (ಶ್ರೀರಾಮಾ. ೮೬–೨೬೦). ೩. [ಕಾವ್ಯಮೀ] ಪದದೋಷಗಳಲ್ಲಿ ಒಂದು: ಕ್ಲಿಷ್ಟ-ಪಾಠಕರಿಗೆ ಸುಲಭವಾಗಿ ಅರ್ಥವಾಗದಿರುವುದು (ಕೈಪಿಡಿ. ೨೨೮). [ಸಂ.]

**ಕ್ಲಿಷ್ಟಕ** (ನಾ). ತೊಂದರೆಗೊಳಿಸುವವನು; ಪೀಡಿಸುವವನು: ಕುಟಿಲಂ ಕ್ಲಿಷ್ಟಕಂ ಸಾಧುದುಷ್ಟಂ ಪಿಸುಣರ್ ಮತ್ತಾರೊ ಪೇಟ್ ನಾರದಮುನಿಯವೋಲ್ (ಜಗವಿ. ೨–೪೫). [ಸಂ.]

**ಕ್ಲಿಷ್ಟತೆ** (ನಾ). ಕಠಿನತೆ; ಜಟಿಲತೆ: ಆ ಸಮಸ್ಯೆಯ ಕ್ಲಿಷ್ಟತೆಯೆ ಆಕರ್ಷಕವಾಗಿತ್ತು (ಪುನರು. ೧೯೩). [ಸಂ. ಕ್ಲಿಷ್ಟತಾ]

**ಕ್ಲೀತಕ** (ನಾ). ಅತಿಮಧುರ; ಜ್ಯೇಷ್ಠಮಧು: "ಕ್ಲೀತಕ – ಜ್ಯೇಷ್ಠಮಧು" (ಗಂಗಾಮು. ೧೦೬). [ಸಂ.]

**ಕ್ಲೀತನ** (ನಾ). = ಕ್ಲೀತಕ: "ಮಧುರಸಾ – ಕ್ಲೀತನ, ಯಷ್ಟಿಮಧುಕ– ಕಿರುಕುಸಾಲೆ, ಹೆಗ್ಗುರುಟಿಗೆ" (ಒಷಧಿ. ೧೨೦). [< ಸಂ. ಕ್ಲೀತನೀ]

**ಕ್ಲೀಬ** (ನಾ). ೧. ನಪುಂಸಕ; ಷಂಡ: "ಷಂಡಂ ಕ್ಲೀಬನೆನೆ ನಪುಂಸಕ ನೆನಿಕ್ಕುಂ" (ಮಂಗರಾ. ೮೦–೮); ಕಾಮಶಾಸ್ತ್ರಮಂ ಕ್ಲೀಬರ್ಕಳೇಂ ಬಲ್ಲರೇ (ದುರಪು. ೧–೧೮); ಲ್ಯೂಕ್ರೇಷಿಯಾ ತನ್ನ ಗಂಡ ಕ್ಲೀಬ ಎಂದಳು (ಸಣ್ಣಕ. VIII, ೬೪). ೨. ಅಶಕ್ತನಾದವನು; ಕೈಲಾಗದವನು; ಹೇಡಿ; ಪುಕ್ಕ: "ಅಳಿಯಾಳಿನೊಳು ಕ್ಲೀಬವೆಂಗು" (ಮಂಗರಾ. ೧೪೨–೧೬). ೩. ಸೋಮಾರಿ; ಮೈಗಳ್ಳ. ೪. ಲೋಭಿ; ಕೃಪಣ. ೫. [ವ್ಯಾಕ] ನಪುಂಸಕ ಲಿಂಗ: "ನಪುಂಸಕಾತಂಕ ಶರೀರಿಯುಂ ಕೃಪಣರಿಂತಿವು ಕ್ಲೀಬಮೆನಿಕ್ಕು" (ನಾನಾರ. ೧೪೭). [ಸಂ.]

**ಕ್ಲೀಬತನ** (ನಾ). ಹೇಡಿತನ; ಷಂಡತ್ವ; ನಪುಂಸಕತ್ವ: ಕ್ಲೀಬತನದಲಿ ಮರೆತು ತಮ್ಮ ಪೌರುಷವನೆಲ್ಲ ಸತ್ತಹೋದಂತಿಹರು ಮತ್ತುಳಿದಮರರು (ಪಾಂಚಜ. ೩೯). [ಸಂ.]

**ಕ್ಲೀಬವರ್ಣ** (ನಾ). [ವ್ಯಾಕ] ತತ್ಸಮ ಶಬ್ದಗಳಲ್ಲಿ ಮಾತ್ರ ಬರತಕ್ಕ ವರ್ಣ; ದುರ್ಬಲವಾದ ವರ್ಣ: ತತ್ಸಮಗಳಲ್ಲಿ ಮಾತ್ರ ಬರತಕ್ಕ ವರ್ಣಗಳು ಯಾವವು? ಋ ಋೂ ಶ ಷ ವಿಸರ್ಗ ಜಿಹ್ವಾಮೂಲೀಯೋಪಧ್ಮಾನೀಯಗಳು . . . ಇವುಗಳಿಗೆ ಕ್ಲೀಬವರ್ಣಗಳೆಂದು ಹೆಸರು (ಹೊಸಗ. ೪). [ಕ್ಲೀಬ + ವರ್ಣ]

**ಕ್ಲೀಬಸ್ವರ** (ನಾ). = ಕ್ಲೀಬವರ್ಣ: ಎಲ್ಲಾ ಸ್ವರಗಳಿಗೂ ಕ್ಲೀಬಸ್ವರ ಪರವಾದರೆ, ಪ್ರಕೃತಿಭಾವವೇ ಬರುತ್ತದೆ (ಹೊಸಗ. ೧೪). [ಕ್ಲೀಬ + ಸ್ವರ]

**ಕ್ಲೀವ** (ನಾ). = ಕ್ಲೀಬ. [ಸಂ.]

**ಕ್ಲೃಪ್ತ** 'ಕ್ಲಪ್ತ' ನೋ.

**ಕ್ಲೃಪ್ತಕಾಲ** 'ಕ್ಲಪ್ತಕಾಲ' ನೋ.

**ಕ್ಲೃಪ್ತಿ** (ನಾ). ಗೊತ್ತುಪಡಿಸುವಿಕೆ; ನಿಶ್ಚಿತಪಡಿಸುವಿಕೆ; ನಿಗದಿ: ವೇಣುಪುರವರದೊಳ್ ಸ್ಥಳನಿವೇಶನ ಪೇಟೆಸಾಲ ಕ್ಲೃಪ್ತಿಗಳಂ ಮಾಡಿಸಿ ಸ್ಥಿರಲೇಖನಂಗಳಂ ಬರೆಸಿತ್ತು (ಕಳಸ್ಯ. ೬–೨); ವಾಸುದೇವನ ನಾಮಾವಳಿಯ ಕ್ಲೃಪ್ತಿಯನು ವ್ಯಾಸರಾಯರ ದಯದಿಂದ ಬಣ್ಣಿಪೆನು (ಜಗದಾ. ೩೬). [< ಸಂ. ಕ್ಲೃಪ್ತಿ]

**ಕ್ಲೇದನ** (ನಾ). ತೇವಗೊಳಿಸುವಿಕೆ; ಒದ್ದೆಯಾಗುವಂತೆ ಮಾಡುವಿಕೆ: ಜಳವಸುಮತಿ ಪವನಾತಪಂಗಳಿನಗೋಚರಮಪ್ಪ ಕ್ಲೇದನಾದಾನ ವಿಹರಣೋಷ್ಮಾವಗಾಹನ ಸನ್ನಿಧಾನ ಜನಿತೋಪಕಾರದಿಂ (ಚಾವುಂಪು. ೧೫). [ಸಂ.]

**ಕ್ಲೇದನೆ** (ನಾ). = ಕ್ಲೇದನ: "ಉಂದೀ" ಎಂದರೆ ಕ್ಲೇದನೆ; ಎಂದರೆ ಮನಸ್ಸನ್ನು ಕರಗಿಸತಕ್ಕದ್ದು (ಸೌಂದಸ. ೪೬). [< ಸಂ. ಕ್ಲೇದನ]

**ಕ್ಲೇಶ** (ನಾ). ೧. ತೊಂದರೆ; ಕಷ್ಟ; ದುಃಖ: ಪರರ ಕ್ಲೇಶವೀಕ್ಷಿಸದ ಭಾಷೆ ಪರರ ನಿಂದಿಸಿ ತನ್ನ ಹೊಗಳಿಕೊಳ್ಳದ ಭಾಷೆ (ಹಚಕಾ. ೧–೧೬); ಮೈಥಿಲಿಯನತ್ಯಂತ ಸುಖಸೇವಿನಿಯನೆಂತೊ ಕಾನನಕ್ಲೇಶದಿಂದೊಯ್ಯಲೈತಂದಿಹನೊ (ಶ್ರೀರಾಮಾ. ೧೫೯–೧೯೩). ೨. [ಯೋಗಶಾ] ದುಃಖಕ್ಕೆ ಕಾರಣವಾದ ಐದು ಬಗೆಯ ಕಷ್ಟಗಳು: ಕ್ಲೇಶವೆಂದರೆ ಕಷ್ಟ. ಅದು ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶವೆಂದು ಐದು ಪ್ರಕಾರ (ಹಿಂದಸಾ. ೯೬). 'ಕ್ಲೇಶಪಂಚಕ' ಪರಾ. [ಸಂ.]

**ಕ್ಲೇಶಂಗೊಳಿಸು** (ಕ್ರಿ). ತೊಂದರೆ ಕೊಡು; ಕಾಡು; ಪೀಡಿಸು: ಸೂಚಿಗಾಜನಂತೆ ಪೆಜರಂ ಕ್ಲೇಶಂಗೊಳಿಸದೆ (ಧರ್ಮಾಮೃ. ೫–೯೯). [ಕ್ಲೇಶ + ಕೊಳ್₁ + -ಇಸು₃]

**ಕ್ಲೇಶಂಬಡು, ಕ್ಲೇಶಪಡು** (ಕ್ರಿ). ಕಷ್ಟಪಡು; ಆಯಾಸಗೊಳ್ಳು; ದುಃಖಪಡು: (ಕ). **ಕ್ಲೇಶಪಡು**: ಈ ಸುದ್ದಿಯಿಂದ ಅವರು ಬಹಳ ಕ್ಲೇಶಪಟ್ಟರು (ರೂಢಿ). [ಕ್ಲೇಶ + ಪಡು₁]

**ಕ್ಲೇಶಕ್ಷತ** (ನಾ). ೧. ಕಷ್ಟದಿಂದ ಘಾಸಿಗೊಂಡವನು. ೨. ಕ್ಲೇಶವನ್ನು ಕಡಿಮೆ ಮಾಡುವವನು,—ಪರಿಹಾರಮಾಡುವವನು(?): ನಿಪುಣಂ ಕೂರ್ಪರನಿಂಗಿತಜ್ಞನೆನಿಸುಂ ಕ್ಲೇಶಕ್ಷತಂ ಶೌಚ ನೀತಿಪರಂ . . . ಸಂದ ವಿದೂಷಕಂ ಸ್ಮರಕಳಾ ರಾರಾಜಿತಂ (ಮದನ. ೧೦–೩೯). [ಕ್ಲೇಶ + ಕ್ಷತ]

**ಕ್ಲೇಶಗೊಳ್** (ಕ್ರಿ). ದುಃಖಿಸು; ನೊಂದುಕೊಳ್ಳು: ಅನಸೂಯಾದೇವಿ ಕ್ಲೇಶಗೊಂಡಳು ಕೈಯೊಡನೆ ವನವಾಸವಾದುದೆಯಕಟ ಬಹಳಾಯಾಸ ಘಟಿಸಿತೆ ರಾಜನಂದನೆಗೆಂದು ಮನಸಿನಲಿ (ತೊರರಾ. ೩–೧–೨). [ಕ್ಲೇಶ + ಕೊಳ್₁]

**ಕ್ಲೇಶನ** (ನಾ). ದುಃಖಗೊಳಿಸುವಿಕೆ; ತೊಂದರೆಗೊಳಿಸುವಿಕೆ; ಪೀಡಿಸುವಿಕೆ: ಕ್ಲೇಶನ ಸಮುತ್ಪಾತನ ಚೂರ್ಣನ . . . ನಾನಾವಿಧಾ ಸಂಖ್ಯಾತ ತೀವ್ರವೇದನಾರೂಪಂಗಳಾಗಿ (ವಿವೇಕ. ೧೮೧). [ಸಂ.]

**ಕ್ಲೇಶಪಂಚಕ** (ನಾ). = ಕ್ಲೇಶ ೨: ಆಶೆ ದೋಷವ ಕಳೆದು ಕ್ಲೇಶ ಪಂಚಕವಳಿದು ಈಶನೊಳು ಬೆರೆದ ಶರಣಂಗೆ ಬಹುಭವದ ಪಾಶ ತಾನುಂಟೆ (ಸರ್ವಜ್ಞ. ೧೪೪). [ಕ್ಲೇಶ + ಪಂಚಕ]

**ಕ್ಲೇಶಪಡು** 'ಕ್ಲೇಶಂಬಡು' ನೋ.

**ಕ್ಲೇಶರಹಿತ** (ಗು). ಕಷ್ಟವಿಲ್ಲದ; ತೊಂದರೆಯಿಲ್ಲದ: ಇಗೊ ನೋಡಿ ಕ್ಲೇಶರಹಿತವಾದ ವಿಮೋಚನಾಮಾರ್ಗ ಬಹುದೂರವಿಲ್ಲ (ಪುನರು. ೩೪೬). [ಕ್ಲೇಶ + ರಹಿತ]

**ಕ್ಲೇಶಸಹಿಷ್ಣು** (ನಾ). ಕಷ್ಟಗಳನ್ನು ತಾಳಿಕೊಳ್ಳುವವನು; ಕಷ್ಟ ಸಹಿಸುವವನು: ಇರೆ ಧಾತ್ರೀಶನಯಂ ದಿನೇಶಗೃಹದೊಳ್ ಸ್ವಲ್ಪಾಂಗನಾಸೂನು ದುರ್ಗರತಂ ಕ್ಲೇಶಸಹಿಷ್ಣು ನಿಸ್ವನೆನಿಕುಂ (ಜಾತತಿ. ೧೬–೨೦). [ಕ್ಲೇಶ + ಸಹಿಷ್ಣು]

**ಕ್ಲೇಶಾನುಬಂಧ** (ನಾ). ದುಃಖಪರಂಪರೆ: ದುಃಖಪರಂಪರೆಯೇ ಕ್ಲೇಶಾನುಬಂಧವು (ಹಿಂದಸಾ. ೧೪). [ಕ್ಲೇಶ + ಅನುಬಂಧ]

**ಕ್ಲೇಶಿ** (ನಾ). ೧. ಕ್ಲೇಶವುಳ್ಳವನು; ತೊಂದರೆಯುಳ್ಳವನು. ೨. ದುಃಖವನ್ನುಂಟುಮಾಡುವವನು; ಹಿಂಸಕ; ಪೀಡಕ: ದೇಶಗ್ರಾಮಗಳೆಲ್ಲ ತಿರುಗುತ . . . ಕ್ಲೇಶಿಗಳು ತುಂಬಿದರು ಜಗದೊಳಗೆಲ್ಲ ದುರ್ಬೋಧ (ಬಜ್ಜಪು. ೧೦೯–೮೧). [ಸಂ. ಕ್ಲೇಶಿನ್]

**ಕ್ಲೈಬ್ಯ** (ನಾ). = ಕ್ಲೀಬತನ: ಕ್ಲೈಬ್ಯವನು ಸಂಹರಿಸೊ ದೌರ್ಬಲ್ಯವನು ದಹಿಸೊ (ಕೋಗಿಲೆ. ೬೬–೧). [ಸಂ.]

**ಕ್ಲೈಬ್ಯತೆ** (ನಾ). = ಕ್ಲೀಬತನ: ನರನಂತೆ ನಡುಗಿ ಕ್ಲೈಬ್ಯತೆಯನ್ನಾಂತು (ಕಲ್ಯಾಣಿ. ೪೧–೧೬). [ಸಂ. ಕ್ಲೈಬ್ಯತಾ]

**ಕ್ಲೋಮ** (ನಾ). ೧. ಶ್ವಾಸಕೋಶ. ೨. ಮೂತ್ರಕೋಶ. [ಸಂ. ಕ್ಲೋಮನ್]

**ಕ್ಲೋರೋಫಾರಂ** 'ಕ್ಲೋರೋಫಾರ್ಮು' ನೋ.

**ಕ್ಲೋರೋಫಾರ್ಮು**, ಕ್ಲೋರೋಫಾರಂ (ನಾ). "ಹಬೆಯನ್ನು ಮೂಗಿನೊಳಕ್ಕೆ ಸೇರಿಸಿಕೊಂಡರೆ ಪ್ರಜ್ಞೆ ತಪ್ಪಿಸುವ ಮತ್ತು ಶರೀರದ ನೋವನ್ನು ತಿಳಿಯದಂತೆ ಮಾಡುವ, ಬಣ್ಣವಿಲ್ಲದ ತೆಳ್ಳನೆಯ ಒಂದು ದ್ರವ" (Chloroform. ಇಂಕನಿ); ನಿಮಗೆ ಕ್ಲೋರೋಫಾರ್ಮು ಕೊಡಲು ಬರುವಂತಿಲ್ಲ. ಔಷಧದಿಂದಲೇ ಮೆಲ್ಲ ಮೆಲ್ಲನೆ ಗುಣವಾಗುವದು ಎನ್ನುವರು (ಸ್ಮೃತಿಚಿ. ೪೪೯). **ಕ್ಲೋರೋಫಾರಂ**: ಒಬ್ಬನನ್ನು ಕ್ಲೋರೋಫಾರಂ ಪ್ರಭಾವಕ್ಕೆ ಗುರಿಪಡಿಸಿ ಪ್ರಜ್ಞೆ ತಪ್ಪಿಸು (Chloroform. ಇಂಕನಿ). [← ಇಂ. Chloroform]

**ಕ್ಲೋವರ್** (ನಾ). ಕುದುರೆ ಮೊದಲಾದ ಪ್ರಾಣಿಗಳ ಮೇವಿಗಾಗಿ ಉಪಯೋಗಿಸುವ ಮೂರೆಲೆಯ ದಳಗಳುಳ್ಳ ಸಸ್ಯಜಾತಿ; ಕಳಾವರ: ನನಗೊಂದು ಬೋಗುಣಿ ಪಲಾವು, ನಿನಗೆ ಒಂದು ಕ್ಲೋವರ್ ಕಂತೆ ಇಷ್ಟನ್ನು ಕಳಿಸಿಕೊಡಲಿ (ನಗೆಹೂ. ೬); ವೃದ್ಧವಿಧವೆಯರು ವಿಪುಲವಾಗಿದ್ದಲ್ಲೆಲ್ಲ ಕ್ಲೋವರ್ ಸಸ್ಯ ಸಮೃದ್ಧವಾಗಿ ಬೆಳೆವುದೇಕೆ? (ಗಾಳಿಪ. ೨೨೦). [← ಇಂ. Clover]

**ಕ್ವಚಿತ, ಕ್ವಚಿತ್ತ, ಕ್ವಚಿತ್ತು** (ಅ). ೧. ಎಲ್ಲಿಯಾದರೂ; ಎಲ್ಲೋ ಒಂದೆಡೆ; ಅಪರೂಪವಾಗಿ. ೨. ಎಂದಾದರೂ, ಎಂದೋ ಒಂದು ದಿನ; ಯಾವಾಗಲೋ ಒಂದು ಸಲ; ಅತ್ಯಲ್ಪವಾಗಿ; ತೀರಕಡಮೆಯಾಗಿ: ರಾಯರು ಸ್ವತಃ ತಮ್ಮ ಹೊಲಗಳಿಗೆ ಹೋಗುವದು ಬಹಳ ಕ್ವಚಿತವಾಗಿತ್ತು (ಚಂದ್ರಶಾ. ೨). ೩. ರಹಸ್ಯವಾಗಿ, ಏಕಾಂತದಲ್ಲಿ. **ಕ್ವಚಿತ್ತ**: ೨. ಈಗಲೂ ಬರುತ್ತಿರುತ್ತದೆ ಆದರೆ ಕ್ವಚಿತ್ತ – ಆರು ತಿಂಗಳಿಗೋ ವರ್ಷಕ್ಕೋ ಒಮ್ಮೆ (ಮೂರುದಾ. ೮೬). **ಕ್ವಚಿತ್ತು**: ೨. ತಾರುಣ್ಯದಲ್ಲಿ ಕ್ವಚಿತ್ತಾಗಿ ದೊರಕಬಹುದಾದ ವಿರಾಮ (ಸಮುಜೀ. ೧೨೩); ಆಲಂಕಾರಿಕ ಗ್ರಂಥಗಳಲ್ಲಿ ಸೌಂದರ್ಯ ಎಂಬ ಪದ ಬಹು ಕ್ವಚಿತ್ತಾಗಿ ಪ್ರಯೋಗದಲ್ಲಿದೆ (ಸೌಂದಸ. ೪೫); ಗೋವಿಂದಭಟ್ಟ ಪೂಜೆಗೆ ಬರುವುದು ತೀರಾ ಕ್ವಚಿತ್ತಾಗಿತ್ತು (ದೀಪಹ. II, ೩೦೫); "ಸಮಯಮುಂ ಕೈಯೆತ್ತಿ ನಿಂದಲ್ಲಿಯುಂ ಪ್ರುತಮಂ ಕೇಳ್ವೆಡೆಯುಂ ರಹಸ್ಯಮತಿ ಸ್ವಲ್ಪಂಗಳ್ ಕ್ವಚಿದ್ವಾಚಕಂ" (ನಾನಾರ. ೧೬೪). [< ಸಂ. ಕ್ವಚಿತ್]

**ಕ್ವಚಿತ್ತ** 'ಕ್ವಚಿತ' ನೋ.

**ಕ್ವಚಿತ್ತು** 'ಕ್ವಚಿತ' ನೋ.

**ಕ್ವಚಿತ್ಪ್ರಯೋಗ** (ನಾ). ಅಪರೂಪವಾಗಿ ಬಳಸಲ್ಪಡುವುದು: ಲಿಂಗತ್ರಯಂ ಕನ್ನಡದೊಳ್ ಪಿರಿದುಂ ಪ್ರಸಿದ್ಧಂ; ಮಿಕ್ಕಲಿಂಗಂಗಳೆಲ್ಲಂ ಕ್ವಚಿತ್ಪ್ರಯೋಗಂಗಳ್ (ಶಮದ. ೯೧ ಪ್ರಯೋ). [ಸಂ. (ಕ್ವಚಿತ್ + ಪ್ರಯೋಗ)]

**ಕ್ವಣ** (ನಾ). ೧. ಆಭರಣ ಮೊದಲಾದುವುಗಳ ಧ್ವನಿ. ೨. ವೀಣೆ ಮೊದಲಾದ ವಾದ್ಯಗಳ ಧ್ವನಿ: ಜನಿಯಿಸೆ ವೀಣಾಕ್ವಣ ಮುರಜ ನಿನದ ತಾಳಪ್ರಣಾದ ವಂಶಧ್ವನಿಗಳ್ (ಅಜಿಪು. ೫–೧೩). [ಸಂ.]

**ಕ್ವಣತ್ಕಂಕಣ** (ನಾ). ಸದ್ದುಮಾಡುತ್ತಿರುವ ಕೈಬಳೆ: ಕ್ವಣತ್ಕಂಕಣ, ಝುಣನ್ನೂಪುರೆ (ಶಮದ. ೮೧ ಪ್ರಯೋ). [ಸಂ.]

**ಕ್ವಣನ** (ನಾ). = ಕ್ವಣ: ಆದಜ ಮೃದು ನಿನದವಾಗಳ್ ಮುದಯುತ ಪಟ್ಟರಣ ಸಂಕುಳ ಕ್ವಣನಮಂ . . . ಅದಟಲೆದವುದೆನಿಸೆ ಬೀಣೆಯಂ ಬಾಜಿಸಿದಂ (ನೇಮಿಪು. ೩–೧೬೯). [ಸಂ.]

**ಕ್ವಣಿತ** (ನಾ). = ಕ್ವಣ: ಮತ್ತಕಾಮಿನೀ ಮೃದುಪದ ನೂಪುರಕ್ವಣಿತದೊಳ್ (ಪಂಪಭಾ. ೯–೨೬); ಕ್ವಣಿತ ಮಣಿನೂಪುರಸಹಸ್ರ ಮುಖರಿತ ದಿಗಂತಮುಂ (ಕಾದಂಪೂ. ೪೨೮); ಕೇಳಬಲ್ಲುದೆ ಕುಡುಪಣಂ ಕ್ವಣಿತಮನ್ನ? (ಗಿರಿವಿಂ. ೫೬–೮). [ಸಂ.]

**ಕ್ವಥನ** (ನಾ). ೧. ಬೇಯಿಸುವುದು; ಕುದಿಸುವುದು. ೨. ಕುದಿತ; ಉಕ್ಕುವಿಕೆ. [ಸಂ.]

**ಕ್ವಥನಬಿಂದು** (ನಾ). ಕುದಿಯುವ ಉಷ್ಣಮಾನ. (Boiling point. ಪಾರಿಪ. ೯). [ಕ್ವಥನ + ಬಿಂದು]

**ಕ್ವಥನಮಾಪಕ** (ನಾ). ಕುದಿಯನ್ನು ಅಳತೆಮಾಡುವ ಸಾಧನ (?): (Ebullioscope ಪಾರಿಪ. ೩೪). [ಕ್ವಥನ + ಮಾಪಕ]

**ಕ್ವಥಿತ** (ಗು). ಕುದಿದ; ಬೆಂದ; ಕುದಿಸಿದ; ಪರಿತಪ್ತ: ಗತವೇಳಂ ಚೋಳನುತ್ಪಲ್ಲವ ಕಲಿತ ಕರಂಪಲ್ಲವಂ . . . ಕ್ವಥಿತ ಪೃಥುಳ ಹೃಜ್ಜಾಂಗಳಂ ಸಿಂಗಳಂ (ಎಕ. VII, ಶಿಕಾರಿ. ೧೩೬–೧೬; 1113). [ಸಂ.]

**ಕ್ವಯನಾಮರ** (ನಾ). ಒಂದು ಜಾತಿಯ ಮರ; ಸಿಂಕೋನ: "ಕ್ವಯನಾಮರ, ಸಿಂಕೋನ" (ಮೈಔಗಿ. ೨೧–೩೮೫). [ಕ್ವಯನು (< ಕ್ವಿನೀನು) + ಮರ$_1$]

**ಕ್ವಯನು** 'ಕ್ವಿನೀನು' ನೋ.

**ಕ್ವಾಣ** (ನಾ). = ಕ್ವಣ: [ಸಂ.]

**ಕ್ವಾಥ** (ನಾ). ಮರಳಿಸಿ ತೆಗೆದುದು; ಕುದಿಸಿ ತೆಗೆದ ಸಾರ; ಕಷಾಯ. [ಸಂ.]

**ಕ್ವಾಥರಸ** (ನಾ). ಕುದಿಸಿ ತೆಗೆದ ರಸ, —ಅರ್ಕ. [ಸಂ.]

**ಕ್ವಾಥೋದ್ಭವ** (ನಾ). ೧. ಕುದಿಸುವುದರಿಂದ ಆದದ್ದು; ಭಟ್ಟಿಯಿಳಿಸಿದುದು. ೨. ರಸಾಂಜನ; ಮೈಲುತುತ್ತ. [ಕ್ವಾಥ + ಉದ್ಭವ]

**ಕ್ವಿಂಟಲ್** 'ಕ್ವಿಂಟಾಲು' ನೋ.

**ಕ್ವಿಂಟಾಲು, ಕ್ವಿಂಟಲ್** (ನಾ). ತೂಕದ ಒಂದು ಪ್ರಮಾಣ; ನೂರು ಕಿಲೊಗ್ರಾಂ ತೂಕ: ಕ್ವಿಂಟಾಲ್ ಒಂದಕ್ಕೆ ಐದು ರೂಪಾಯಿಯಂತೆ ಬೆಲೆ ಏರಿದೆ (ರೂಢಿ). **ಕ್ವಿಂಟಲ್**: ಈ ದಿನ ಮೂರು ಸಾವಿರ ಕ್ವಿಂಟಲ್ ಅಕ್ಕಿ ಮಾರಾಟವಾಯಿತು (ರೂಢಿ). [← ಇಂ. Quintal]

ಕ್ವಿನಾಯಿನ್ 'ಕ್ವಿನೀನು' ನೋ.

ಕ್ವಿನೀನು, ಕ್ವಯನು, ಕ್ವಿನಾಯಿನ್ (ನಾ). ಚಳಿಜ್ವರದ ಔಷಧಿಗಾಗಿ ಉಪಯೋಗವಾಗುವ, ಸಿಂಕೋನಮರದ ತೊಗಟೆಯಿಂದ ದೊರೆಯುವ ಒಂದು ಸಸ್ಯಕ್ಷಾರ: ಅವರಿಬ್ಬರಿಗೂ ಕ್ವಿನೀನು ತಿನ್ನಿಸುವುದು (ಜೋಳದ. ೮೯). ಕ್ವೈಯನು: ಒಂದು ಕ್ವಯನು ಗುಳಿಗೆ ನುಂಗಿದೆ (ಡೂ). ಕ್ವಿನಾಯಿನ್: ಅವನು ಜ್ವರದ ಭೀತಿಯಿಂದ ವಿಪುಲವಾಗಿ ಕ್ವಿನಾಯಿನ್ ತಕ್ಕೊಂಡಿದ್ದನು (ಕಳ್ಳಕಾ. ೭೩).

[← ಇಂ. Quinine]

ಕ್ಷಂತೃ (ನಾ). ಕ್ಷಮಾಗುಣವುಳ್ಳವನು; ಸಹನೆಯುಳ್ಳವನು. [ಸಂ.]

ಕ್ಷಕಾರ (ನಾ). ಕ್ಷ ಎಂಬ ಅಕ್ಷರ: ಕ್ಷಕಾರಕ್ಕೆ ಸಕಾರಮೊದಲ್ ಘಟಯಿಸುಗುಂ (ಶಮದ. ೨೬೨ ವೃತ್ತಿ). [ಸಂ.]

ಕ್ಷಕಿರಣ (ನಾ). ಅಪಾರದರ್ಶಕ ವಸ್ತುಗಳನ್ನೂ ಭೇದಿಸಿಕೊಂಡು ಹೋಗಿ, ಸೂಕ್ಷ್ಮಗ್ರಾಹಿಯಾದ ಬಿಂಬಗ್ರಾಹಕ ಪಟಲದ ಮೇಲೆ, (ಅಪಾರದರ್ಶಕ ವಸ್ತುಗಳ ಒಡಲಲ್ಲಿ ಸೇರಿಕೊಂಡ) ವಸ್ತುಗಳ ನೆರಳು-ಚಿತ್ರಗಳನ್ನು ಮೂಡಿಸುವ ಬೆಳಕಿನ ಕಿರಣ; ಎಕ್ಸರೇ: ಕ್ಷಕಿರಣಗಳು ಸಹ ಅದನ್ನು ಗುರುತಿಸಲು ಸಾಧ್ಯವಾಗುವುದಿಲ್ಲ (ಕೆಲರೋ. ೮೩); ಕ್ಷಕಿರಣವು ದೇಹದ ಒಳಹಂದರವನ್ನು ಕಂಡುಕೊಳ್ಳುವಂತೆ (ಮಾವಾದ. ೧೬೩); ನಮ್ಮ ಗುಡಿಸಿಲಿನ ಒಳಭಾಗವು ಪ್ರತಿಯೊಂದು ಸಾಮಾನುಸಹಿತವಾಗಿ ಕ್ಷಕಿರಣ ಹಿಡಿದು ನೋಡಿದಂತೆ ವಿವರ ವಿವರವಾಗಿ ಕಾಣುತ್ತಿತ್ತು (ಹೇಮಂತ. ೧೧೦). [ಸಂ.]

ಕ್ಷಕಿರಣಪಟ (ನಾ). ಕ್ಷಕಿರಣಗಳಿಂದ ಮೂಡಿದ ಛಾಯಾಚಿತ್ರ: ಆಂತಹವರ ಎದೆಯ 'ಕ್ಷ'ಕಿರಣಪಟವನ್ನು ತೆಗೆಯಿಸಬೇಕು (ಕೆಲರೋ. ೯೧). [ಕ್ಷಕಿರಣ + ಪಟ್ಟ]

ಕ್ಷಣ (ನಾ). ೧. ಕಾಲವನ್ನು ಅಳೆಯುವ ಒಂದು ಪ್ರಮಾಣ; ಸೆಕಂಡಿನ ⅘ ಭಾಗ; ಅತ್ಯಲ್ಪವಾದ ಕಾಲ: "ಮೂವತ್ತು ಕಳೆಯಿಂ ಕ್ಷಣಂ ವಿದಿತಂ" (ವ್ಯವಹಾ. ಅನು I, ೬-೨೯); ಕ್ಷಣಕೆ ಮರಳೆಚ್ಚತ್ತನು (ಕುವ್ಯಾಕ. ೩-೪೮); ಕ್ಷಣಕ್ಷಣಗಳು ಕೂಡಿ ವರುಷಗಳಾದವು ಕ್ಷಣವನುಪೇಕ್ಷಿಸಬೇಡ (ಇಂಚಾಪ. ೧೦೪-೬); ಈ ಗಳಿಗೆ 'ಭಾವನೆ' – ಮರುಗಳಿಗೆ 'ಕಲ್ಪನೆ' – ಕ್ಷಣ ಚಿತ್ತ ಕ್ಷಣ ಪಿತ್ತ (ರಾಮರಾ. ೮೭). ೨. ಬಿಡುವು; ವಿರಾಮ; ಪುರಸತ್ತು. ೩. ಸರಿಯಾದ ಸಮಯ; ಸುಯೋಗ್ಯ ಕಾಲ; ಸಂದರ್ಭ: "ಕ್ಷಣಮೆನಲ್ ಪ್ರಸ್ತಾವವಕ್ಕು" (ಮಂಗರಾ. ೧೩೪-೩೩). ೪. ಉದ್ಯೋಗ; ವ್ಯಾಪಾರ; ಕೆಲಸ. ೫. ಹಬ್ಬ; ಉತ್ಸವ; ಹರ್ಷ; ಸಂತೋಷ: "ಕ್ಷಣಮೆನಲ್ಕೊಸಗೆಯುದು" (ಮಂಗರಾ. ೧೩೩-೩೦); ಕೀರ್ತಿ ದಾಂಗುಡಿವಡೆ ಬರ್ಮದೇವನನಿತುಂ ಕ್ಷಣದುನ್ನತಿಯುಂ ನೆಗರ್ಚಿದಂ (ಎಕ. VII, ಶಿಕಾರಿ. ೧೨೪-೨೩; 1077). ೬. ನಡುವಿನ ಭಾಗ; ಮಧ್ಯ. ೭. ಪರಾಧೀನತೆ; ಸೇವಾವೃತ್ತಿ. ೮. ಆಮಂತ್ರಣ: ಧರ್ಮಸುತ ಕ್ಷಣವಿತ್ತ ನಾಲ್ವರಿಂಗೆ (ತುರಂಗ. ೨೬-೩೮); ಬಿನ್ನಹ ಮುನಿಪ ತದ್ದಿವಸವೆಂದು ನಮ್ಮಯ್ಯನದು ಸ್ವೀಕರಿಸಿ ಕ್ಷಣವನೆನಲ್ (ತುರಂಗ. ೨೬-೪೦). ೯. ಹೀನ; ಅಧಮ. ೧೦. ವ್ಯಾಪ್ತಿ: "ಹೀನಂ ಕಾಲ ವಿಶೇಷ ಮಧ್ಯಮುತಿ ಶೀಘ್ರಂ ವ್ಯಾಪ್ತಿ ಹರ್ಷಂ ಪರಾಧೀನಂ ತಾಂ ಕ್ಷಣಮಕ್ಕು" (ನಾನಾರ. ೧೧೪); "ಅವಸರದಲಿ ವ್ಯಾಪಾರದಲಿ ಸಂತೋಷದಲಿ ಪರಾಧೀನದಲಿ ಕಾಲದಲಿ ಮಧ್ಯದಲ್ಲಿ ತೋರ್ಜ ಕ್ಷಣಾಖ್ಯಮಕ್ಕುಂ" (ಮಂಗರಾ. ೧೪೫-೩೦). [ಸಂ.]

ಕ್ಷಣಗಂಡ (ನಾ). ಕ್ಷಣಕ್ಕೊಮ್ಮೆ ಅಥವಾ ಪದೇಪದೇ ಬರುವ ವಿಪತ್ತು: ಹಿಂದೂಗಳ ಪಾಲಿಗೆ ಈ ಯವನರ ದಬ್ಬಾಳಿಕೆ ದಿನಗಂಡ ಕ್ಷಣಗಂಡಗಳಾಗಿವೆ (ರಾಜ್ಯೋದ. ೧೩೧). [ಕ್ಷಣ + ಗಂಡ]

ಕ್ಷಣಗಭಸ್ತಿ (ನಾ). = ಕ್ಷಣಪ್ರಭೆ: "ಘನದೀಪ್ತಿ ಸೌದಾಮಿನಿ ಕ್ಷಣಗಭಸ್ತಿ ಹ್ರಾದಿನಿ ವಿದ್ಯುದೈರಾವತಿ ಕ್ಷಣಕೆಯಚಿರಾಂಶುವೆನಲು . . . ಮಿಂಚೆನಿಕ್ಕುಂ" (ಮಂಗರಾ. ೧೩-೪). [ಕ್ಷಣ + ಗಭಸ್ತಿ]

ಕ್ಷಣದಾಚರ (ನಾ). ನಿಶಾಚರ; ರಾಕ್ಷಸ: ದುರ್ಜನ ಕ್ಷಣದಾಚರಾದ್ರಿ ಕುಲಕುಲಿಶ ವಪುವರ್ಜಿತ ಮದಾಪಹನೆ (ಪ್ರಾಭರಾ. ೬-೧).

[ಸಂ. (ಕ್ಷಣದಾ + ಚರ)]

ಕ್ಷಣದಾಟನ (ನಾ). = ಕ್ಷಣದಾಚರ: ತತ್‌ಕ್ಷಣಮಂತಾ ಕ್ಷಣದಾವನೀ ಕ್ಷಣಸುಖಂ ಕೈಗಣ್ಮೆ ನಿಶ್ರೇಣಿಯಿಂ ಗಣಿಕಾಶ್ರೇಣಿಯುಮೇಱಿ ನಿಂದುದು ತವಂಗಶ್ರೇಣಿಯಂ ಲೀಲೆಯಿಂ (ಜಗವಿ. ೬-೪೪).

[ಸಂ. (ಕ್ಷಣದಾ + ಅಟನ)]

ಕ್ಷಣದೆ (ನಾ). ವಿರಾಮ, ವಿಶ್ರಾಂತಿಗಳನ್ನು ಕೊಡುವಂತಹುದು; ಇರುಳು; ರಾತ್ರಿ: "ಇರುಳು ತಮಿ ಯಾಮಿನೀ . . . ರಜನಿ ಕ್ಷಪೆ ಕ್ಷಣದೆ ಶ್ಯಾಮೆಯೆನೆ ರಾತ್ರಿಗಭಿಧಾನಮಕ್ಕುಂ" (ಮಂಗರಾ. ೨೦-೬).

[ಸಂ. ಕ್ಷಣದಾ]

ಕ್ಷಣನ (ನಾ). ಗಾಯಗೊಳಿಸುವಿಕೆ; ಕೊಲ್ಲುವಿಕೆ; ವಧೆ. [ಸಂ.]

ಕ್ಷಣಪದವಿ (ನಾ). ಅಲ್ಪಕಾಲ ಮಾತ್ರ ಇರುವ ಪದವಿ: ಎಲೆ ದೇವ ಎಂದೆಂದಿಗೀ ಕ್ಷಣಪದವಿಯಂ ಯಾನೊಲ್ಲೆ (ನವನೋ. ೨೦-೬೩).

[ಕ್ಷಣ + ಪದವಿ]

ಕ್ಷಣಪ್ರಭೆ (ನಾ). ತೋರಿ ಒಂದು ಕ್ಷಣದಲ್ಲಿಯೆ ಮಾಯವಾಗುವ ಬೆಳಕು; ಮಿಂಚು. [ಕ್ಷಣ + ಪ್ರಭೆ]

ಕ್ಷಣಭಂಗವೃತ್ತಿ (ನಾ). ಅತ್ಯಲ್ಪ ಕಾಲದಲ್ಲಿ ನಾಶವಾಗುವ ಸ್ವಭಾವವುಳ್ಳದ್ದು; ಕ್ಷಣಭಂಗುರವಾದದ್ದು: ಕ್ಷಣಭಂಗವೃತ್ತಿ ತನುಭೃದ್ಗಣ ಜೀವನಂ (ಚಂದ್ರಪು. ೨-೩೧). [ಕ್ಷಣ + ಭಂಗ + ವೃತ್ತಿ]

ಕ್ಷಣಭಂಗಿ (ನಾ). ೧. = ಕ್ಷಣಭಂಗುರ. ೨. ಕ್ಷಣಕ್ಕೊಂದು ಭಂಗಿ ತೋರಿಸುವಂಥದ್ದು (?). ೧, ೨: ಆ ಪುರಂ . . . ಅನೇಕ ಭೂಮಿಕಾಶ್ರಯಮಾಗಿಯುಂ ಕ್ಷಣಭಂಗಿ ಶೋಭಾಸಂಗಮಲ್ತು (ಚಂದ್ರಪು. ೧-೧೬೩). [ಸಂ. ಕ್ಷಣಭಂಗಿನ್]

ಕ್ಷಣಭಂಗುರ (ಗು). ಸ್ವಲ್ಪಕಾಲದಲ್ಲಿಯೇ ನಾಶವಾಗತಕ್ಕ; ಸ್ಥಿರವಲ್ಲದ; ಕ್ಷಣಿಕ: ಕಾಲವೇ ನಿರ್ಗುಣವಚೇತನಂ ನಿಷ್ಫಲಮಕಾಯವಾಕ್ಷಣಭಂಗುರಂ (ವೀಕ್ಕ್ವಪು. ೪-೫-೫೦); ಕ್ಷಣಭಂಗುರದೀ ಕಾಯ ದುಡಿಸಿ ಕಾಯಕ ಮಾಡಿ (ಜೀವಲ. ೭೭); ಮಿಂಚಿನಂತೆ ಅಲ್ಲಿಯೂ ಸುಖವು ಕ್ಷಣಭಂಗುರವೇ (ಚತಸ. ೧೧೧). [ಕ್ಷಣ + ಭಂಗುರ]

ಕ್ಷಣಮಾತ್ರ (ಅ). ಒಂದು ಕ್ಷಣಕಾಲಕ್ಕೆ ಮಾತ್ರ: ಕನಕಲತೆಯು ಮಾಕೆಗಮರಸಂಗಂ ಕ್ಷಣಮಾತ್ರ ವಿದ್ವೇಷಕಾರಿಯಪ್ಪ ಪುಷ್ಪಮಾಲೆಯಂ . . . ಅಟ್ಟುವುದುಂ (ಶಾಂತಿಪು. ೯-೫೦ವ); ಕಟ್ಟಿ ತುಂಬಿದ ಮೇಲೆ ಕ್ಷಣಮಾತ್ರ ಇರಲಿಲ್ಲ (ಪುರಂದ. ೨-೩೧-೫).

[ಕ್ಷಣ + ಮಾತ್ರ]

ಕ್ಷಣರುಚಿ (ನಾ). = ಕ್ಷಣಪ್ರಭೆ: ಅನೇಕ ಮಣಿಭೂಷಣ ಕ್ಷಣರುಚಿಪ್ರಭಾಶೋಭಿವೆತ್ತ . . . ಶಕ್ರಾಂಬುದಂ ಜಿನಾರ್ಭಕನ ಮೇಲದೇಂ ಕಱಿದುದೋ ಪಯೋಧಾರೆಯಂ (ಮಲ್ಲಿಪು. ೧೨-೧೪೬); ಕ್ಷಣರುಚಿ ರುಚಿರೇಕ್ಷಣೆ ಪಾರ್ವಣ ವಿಧುಮುಖಿ . . . ಸುಯ್ಯು ಬೈದಳಾ ಕಮಳಜನಂ (ರಾಜಶೇ. ೧೧-೨೫). [ಕ್ಷಣ + ರುಚಿ]

ಕ್ಷಣವಂತ (ನಾ). [ಜೈನ] ಎಲ್ಲ ವ್ಯಾಪಾರಗಳನ್ನು ಬಿಟ್ಟವನು; ಶಾಂತನಾದವನು: ಕ್ಷಣವಂತನೆಂಬೊಂ ಧರ್ಮಶ್ರವಣ ಸಮಯದೊಳ್ ಪರಿತ್ಯಕ್ತ ಸಕಲವ್ಯಾಪಾರಂ (ಚಾವುಂಪು. ೬).

[< ಸಂ. ಕ್ಷಣವತ್]

**ಕ್ಷಣವಿಳಂಬಿ** (ಗು). ಅತ್ಯಲ್ಪಕಾಲ ಮಾತ್ರ ಇರುವ; ಕ್ಷಣಿಕವಾದ; ಅಸ್ಥಿರವಾದ: ರೂಪವೇದನಾ ವಿಜ್ಞಾನ ಸಂಜ್ಞಾನ ಸಂಸ್ಕಾ(ಸಾ)ರಂಗಳೆಂಬಯ್ದುಂ ಸ್ಕಂಧಂಗಳ್ ದೀಪಶಿಖಾ ರೂಪದಿಂ ಕ್ಷಣವಿಳಂಬಿಗಳ್ (ಶಾಂತಿಪು. ೮-೧೪೨ ವ). [< ಸಂ. ಕ್ಷಣವಿಲಂಬಿನ್]

**ಕ್ಷಣವೀಕ್ಷಣ** (ನಾ). ಸ್ವಲ್ಪಕಾಲ ಮಾತ್ರ ನೋಡುವಿಕೆ: "ನಸುನೋಟ, ಕ್ಷಣವೀಕ್ಷಣ" (Squinter. ಇಂಶನಿ). [ಕ್ಷಣ + ವೀಕ್ಷಣ]

**ಕ್ಷಣವೇಧಿ** (ಗು). ಕ್ಷಣದಲ್ಲಿ ಭೇದಿಸಬಹುದಾದ (?): ಇಂತು ಕ್ಷಣವೇಧಿ ಅಂತರಂಗಪನು ವೇಧಿಸಲ್ಕೆ ಅಗಣಿತ ಅಕ್ಷೇಶ್ವರ ತಾನೆಂದಱಿದು (ಅವಚಂ. ೬೩-೨೬೫). [ಸಂ. ಕ್ಷಣವೇಧಿನ್]

**ಕ್ಷಣಶಃ** (ಅ). ಕ್ಷಣಕ್ಷಣವಾಗಿ; ಒಂದೊಂದು ಕ್ಷಣದಲ್ಲಿಯೂ: ನಾವು ನಮ್ಮ ಶ್ವಾಸದಿಂದ ಹವೆಯನ್ನು ಕ್ಷಣಶಃ ನುಂಗುತ್ತಿರುತ್ತೇವೆ (ಮುಂಬಯಿ. ೫-೧೫೦). [ಸಂ.]

**ಕ್ಷಣಾಂಶ** (ನಾ). ಕ್ಷಣದಲ್ಲಿ ಒಂದು ಭಾಗ; ತೀರ ಅಲ್ಪವಾದ ಕಾಲ: ಕ್ಷಣಾಂಶ ಮಾತ್ರ ಅಂಗಾಲು ಬೆಂಕಿಯನ್ನು ಸೋಕಿದರೆ ಏನೂ ಅಪಾಯವಾಗುವುದಿಲ್ಲವಲ್ಲ? (ಮನೋನಂ. ೧೯೬). [ಕ್ಷಣ + ಅಂಶ]

**ಕ್ಷಣಾರ್ಧ** (ನಾ). ಅರ್ಧಕ್ಷಣ; ಸ್ವಲ್ಪ ಸಮಯ: ಗುಣಿ ದೂಷಿಸೆ ಯುಕ್ತಿಗಳಿಂ ಕ್ಷಣಾರ್ಧಮುಂ ನಿಲ್ಲದಲ್ಲಿ ದಕ್ಕನುಮಾನಂ (ಶಾಂತಿಪು. ೮-೧೪೪); ಅವದೇವನ್ನಿನಗೋತು ಬರ್ಪನವನಂ ಸದೆದಿಕ್ಕುವೆನೀ ಕ್ಷಣಾರ್ಧದೊಳ್ (ಶಬಶಂ. ೪-೧೦೬). [ಕ್ಷಣ + ಅರ್ಧ]

**ಕ್ಷಣಿಕ** (ಗು). ಕ್ಷಣಕಾಲ ಮಾತ್ರ ಇರುವ; ಅಸ್ಥಿರವಾದ; ಅಲ್ಪಕಾಲಿಕವಾದ: ಅಮರಚಾಪಚಪಳಂ ವಿದ್ಯುತ್ ಕ್ಷಣಿಕಂ . . . ಯೌವನರೂಪ ವಿಭವ ಭೋಗಾಭೋಗಂ (ಆದಿಪು. ೪-೭೫); ಸ್ಥೂಲ ತನುವಿದು ನೀರ ಬೊಬ್ಬುಳಿಯಂತೆ ಕ್ಷಣಿಕಂ (ಗಗತಾ. ೧೦-೪೦); ಪ್ರಪಂಚದಲ್ಲಿ ಯಾವ ವಸ್ತುವೂ ಕ್ಷಣಿಕವಲ್ಲ. ವಸ್ತುಗಳಲ್ಲಿ ಕೆಲವು ನಿತ್ಯ; ಕೆಲವು ಅನಿತ್ಯ (ಭಾರದ. ೧೨೪). [ಸಂ.]

**ಕ್ಷಣಿಕಗುಣ** (ನಾ). ಚಂಚಲತೆ; ಚಪಲತೆ (?): ಅಣಿಯನಱಿಯದೆ ನಡೆವಗುಲಿದರೆ ಕ್ಷಣಿಕಗುಣವಣಗುವದೆ (ಬಜ್ಜಪು. ೬೪-೩). [ಕ್ಷಣಿಕ + ಗುಣ್ಯ]

**ಕ್ಷಣಿಕತ್ವ** (ನಾ). ಕ್ಷಣಿಕವಾಗಿರುವಿಕೆ: ಪೂರ್ವಕಾಲ ಭಾವಿ ವಿಜ್ಞಾನ ಮುತ್ತರಕಾಲಾದಿಗಳೊಳ್ ನೆಗೆದು ಕ್ಷಣಿಕತ್ವದಿಂದಮಾಗಳಾ ವಿಜ್ಞಾನಂ ನಿಲ್ಲದಪ್ಪುದಱಿಂದಂ (ಶಾಂತಿಪು. ೮-೧೪೨ ವ). [ಸಂ.]

**ಕ್ಷಣಿಕೆ** (ನಾ). = ಕ್ಷಣಪ್ರಭೆ: "ಕ್ಷಣಿಕೆಯಚಿರಾಂಶುವೆನಲು . . . ಮಿಂಚೆನಿಕ್ಕುಂ" (ಮಂಗರಾ. ೧೩-೪). [ಸಂ. ಕ್ಷಣಿಕಾ]

**ಕ್ಷತ** (ಗು). ೧. ಗಾಯವಾದ; ಏಟುತಿಂದ; ಪೆಟ್ಟು ಬಿದ್ದ. 'ಕ್ಷತತನು' ಪರಾ. (ನಾ). ೨. ಗಾಯ; ಪೆಟ್ಟು: ವಿಶಾಲೋರುಕ್ಷತದಿಂದೊಱಿದನಿತು ಜಡೆಯುಮಂ ನಾಂದಿ (ಪಂಪಭಾ. ೧-೧೦೫); ಕೃತ ತಪಸ್ಸಿಂ ಭಿನ್ನ ಖೇದ ಕ್ಷತ ಶರೀರವ್ಯಥೆಯನಮರಾವತಿಯೊಳಗೆ ಕಳೆ (ಕುವ್ಯಾಅ. ೭-೯); ಶರಹತಿಪರಿಗಳಿತ ಕ್ಷತಜಾತಕಲಿತ ಕಾಯರಜೇಯರ್ (ರಾಜಶೇ. ೫-೫೧). [ಸಂ.]

**ಕ್ಷತಜ** (ನಾ). ೧. ಗಾಯದಿಂದ ಉಂಟಾದುದು. ೨. ನೆತ್ತರು. ೩. ಕೀವು. [ಸಂ.]

**ಕ್ಷತತನು** (ನಾ). ಗಾಯದಿಂದ ಕೂಡಿದ ದೇಹವುಳ್ಳವನು: ಕನಕನಿರೆ ಲಗ್ನದೊಳ್ ಕ್ಷತತನು (ಜಾತತಿ. ೧೮-೯). [ಕ್ಷತ + ತನ್ಯು]

**ಕ್ಷತತ್ರಾಣ** (ನಾ). ಆಪತ್ತಿನಿಂದ ರಕ್ಷಿಸುವಿಕೆ; ಕಷ್ಟದಿಂದ ಕಾಪಾಡುವುದು: ಕ್ಷತತ್ರಾಣಾದಿ ಗುಣೋಪೇತಮಪ್ಪ ನಿಖಿಲ ಕ್ಷತ್ರಿಯ ಸಮೂಹಕ್ಕೆ ಶಸ್ತ್ರಕರ್ಮಮುಮಂ (ಆದಿಪು. ೮-೬೪ವ). [ಕ್ಷತ + ತ್ರಾಣ]

**ಕ್ಷತವಿಕ್ಷತ** (ಗು). ಗಾಯಗಳಿಂದ ನೊಂದ; ಗಾಯಗಳಿಂದ ಜರ್ಝರಿತವಾದ; ಚೂರುಚೂರಾದ: ಭೀಷ್ಮನು ಕ್ಷತವಿಕ್ಷತನಾಗಿದ್ದರೂ ಒಡನೆಯೇ ಹೋಗಿ ರಾಮನ ಪಾದಕ್ಕೆ ಬಿದ್ದನು (ಭೀಷ್ಮಚ. ?); ಸಾವಿರಾರು ನಾರಾಚಗಳು ಆ ದಂತಿಗಳ ಮೈಯನ್ನು ಕ್ಷತವಿಕ್ಷತ ಮಾಡಿದವು (ಶಾಂತಲಾ. ೪೦೧). [ಕ್ಷತ + ವಿಕ್ಷತ]

**ಕ್ಷತವ್ರತ** (ನಾ). ವ್ರತವನ್ನು ಭಂಗಗೊಳಿಸಿಕೊಂಡವನು; ವ್ರತಗೇಡಿ; ವ್ರತಭ್ರಷ್ಟ. [ಕ್ಷತ + ವ್ರತ]

**ಕ್ಷತಿ** (ನಾ). ೧. ನೋವು; ಗಾಯ. ೨. ಕೇಡು; ನಷ್ಟ: ನೀನು ನಮ್ಮ ಹಿತವನೆಂದಱಿದಿರ್ದೆ ಇಂದೆಮ್ಮ ಅಭಿಮಾನಕ್ಷತಿ ಮಾಡಿದ್ಯೆ (ಪ್ರೌಢರಾ. ೨೧-೧೧); ಕ್ಷಾತ್ರಧರ್ಮವೆಂದರೆ ಕ್ಷತಿಯಿಂದ ಕ್ಷಿತಿಯನ್ನು ಕಾಪಾಡುವುದು ಎಂದು ಅರ್ಥ (ಭಾರದ. ೧೧೭). [ಸಂ.]

**ಕ್ಷತ್ತೃ** (ನಾ). ೧. ಬಾಗಿಲು ಕಾಯುವವನು; ದ್ವಾರಪಾಲಕ. ೨. ಸಾರಥಿ; ಸೂತ. ೩. ಶೂದ್ರನಿಂದ ಕ್ಷತ್ರಿಯ ಹೆಂಗಸಿನಲ್ಲಿ ಹುಟ್ಟಿದವನು. ೪. ಶೂದ್ರನಿಂದ ವೈಶ್ಯ ಸ್ತ್ರೀಯಲ್ಲಿ ಹುಟ್ಟಿದವನು. ೫. ದಾಸೀಪುತ್ರ; ಸೇವಕಿಯ ಮಗ. [ಸಂ.]

**ಕ್ಷತ್ರ** (ನಾ). ೧. ಚತುರ್ವರ್ಣಗಳಲ್ಲಿ ಎರಡನೆಯದು; ಕ್ಷತ್ರಿಯ ಜಾತಿ. ೨. ಕ್ಷತ್ರಿಯ ಕುಲಕ್ಕೆ ಸೇರಿದವನು; ಕ್ಷತ್ರಿಯ; ಜನಕ್ಕೆ ಕಷ್ಟಗಳು ಬಾರದಂತೆ ಕಾಪಾಡುವವನು. ೩. ಕಷ್ಟಗಳು ಬಾರದಂತೆ ಕಾಪಾಡುವಿಕೆ: ಕ್ಷತ್ರಂ ತೇಜೋಗುಣಮಾ ಕ್ಷತ್ರಿಯರೊಳ್ ನೆಲಸಿ ನಿಂದುದು (ಪಂಪಭಾ. ೧-೨೧). [ಸಂ.]

**ಕ್ಷತ್ರಕ್ಷಯ** (ನಾ). ಕ್ಷತ್ರಿಯರ ನಾಶ(?): ಪ್ರಧಾನ ಪುರುಷರ್ ಕ್ಷತ್ರಕ್ಷಯಸ್ಥಾನಮೆಂದು ಯಥಾರ್ಥಂ ನುಡಿದಾರ್ತರಿಲ್ಲ (ಗದಾಯು. ೪-೬೫). [ಕ್ಷತ್ರ + ಕ್ಷಯ]

**ಕ್ಷತ್ರಚಕ್ರ** (ನಾ). ಕ್ಷತ್ರಿಯರ ಸಮೂಹ, —ರಾಜರ ಗುಂಪು: ಹತವೈರಿ ಕ್ಷತ್ರಚಕ್ರಂ ಭಯಚಕಿತ ಜಗದ್ವೀರ ಚಕ್ರಂ (ಆದಿಪು. ೧೪-೩). [ಕ್ಷತ್ರ + ಚಕ್ರ]

**ಕ್ಷತ್ರತಾಮಸ** (ನಾ). ಕ್ಷತ್ರಿಯನ ತಮೋಗುಣ, —ಅಜ್ಞಾನ: ವಿಲಸದುಪನಿಷದುರುರಹಸ್ಯವ ತಿಳಿಹಿದೆನು ನಿನಗೊಮ್ಮೆ ಮತ್ತೆಯು ತಿಳಿದುದಿಲ್ಲಾ ಕ್ಷತ್ರತಾಮಸ ಬಿಡದು ಬುದ್ಧಿಯಲಿ (ಕುವ್ಯಾದ್ರೋ. ೩-೬೬). [ಕ್ಷತ್ರ + ತಾಮಸ]

**ಕ್ಷತ್ರತಿಮಿರ** (ನಾ). = ಕ್ಷತ್ರತಾಮಸ: ಮಾದ್ರದೇಶದ ಭೂರಿದುರಿತರು ಕ್ಷತ್ರತಿಮಿರ ವಿಕಾರಿಗಳ ಜಾತಿಯಲಿ ಜನಿಸಿದೆ ಶಲ್ಯ (ಕುವ್ಯಾಕ. ೯-೧೯). [ಕ್ಷತ್ರ + ತಿಮಿರ]

**ಕ್ಷತ್ರತೇಜ** (ನಾ). ಕ್ಷತ್ರಿಯ ತೇಜಸ್ಸು: ಆ ಪರಮ ಕ್ಷತ್ರತೇಜೋರಾಶಿಗೆ (ಶಾಂತಿಪು. ೯-೧೫೨ ವ). [ಕ್ಷತ್ರ + ತೇಜ]

**ಕ್ಷತ್ರಧರ್ಮ** (ನಾ). ಕ್ಷತ್ರಿಯರ ಧರ್ಮ; ರಾಜಧರ್ಮ: ಬಲದೇವ ವಾಸುದೇವರ್ . . . ಪವಿತ್ರ ಕ್ಷತ್ರಧರ್ಮ ಕಂಠೀರವ ದಂಷ್ಟ್ರಾಂಕುರಯುಗ್ಮಮುಂ . . . ಎನೆ (ಶಾಂತಿಪು. ೧-೮೦ ವ); ಶರಣಾಯಾತರ್ಕಳಂ ಕಾವುದು ಮೆಱೆದವರ್ಗಾರ್ತಿರ್ವುದುಂ ಕ್ಷತ್ರಧರ್ಮಂ (ಪುಷ್ಪಪು. ೮-೪). [ಕ್ಷತ್ರ + ಧರ್ಮ]

**ಕ್ಷತ್ರಧಾಮ** (ನಾ). ೧. ಕ್ಷಾತ್ರದ ನೆಲೆ; ಕ್ಷತ್ರಿಯ ತೇಜದ ನೆಲೆ. ೨. = ಕ್ಷತ್ರತೇಜ: ವಿಪುಳಯಶಃಪಿಂಡಂ ಪುಣ್ಯಪುಂಜಮಾ ಕ್ಷತ್ರಧಾಮಧಾಮಂ ತಾನಾ ನೃಪಸುತನೆನ್ನದೆ ಪೆಱತೊಂದು ಪಾಂಗಿನೊಳ್ ನೆಗಟ್ದ ಭರತನಂ ಬಣ್ಣಿಪರಾರ್ (ಆದಿಪು. ೮-೪೪). [ಕ್ಷತ್ರ + ಧಾಮ]

**ಕ್ಷತ್ರಪ** (ನಾ). ೧. ರಾಜ್ಯದ ವಿಭಾಗ: ಡೇರಿಯುಸನು . . . ತನ್ನ ರಾಜ್ಯವನ್ನು ಇಪ್ಪತ್ತು ಕ್ಷತ್ರಪಗಳಾಗಿ ವಿಂಗಡಿಸಿದನು (ಪ್ರವಾಇ. I, ೫).

೨. ಪ್ರಾಂತ್ಯದ ಅಧಿಕಾರಿ: ಪಶ್ಚಿಮ ಕ್ಷತ್ರಪ ನಹಪಾನನ ಶಾಸನ ವೊಂದು ಪೌರಮಂದಿರದ ಸಾಲದ ಒಪ್ಪಂದಗಳನ್ನು ನಮೂದಿಸುತ್ತಿದ್ದ ಫಲಕಗಳ ವಿಷಯವನ್ನು ತಿಳಿಸುತ್ತದೆ (ಭಾರಪ. ೧೪). [ಸಂ.]

**ಕ್ಷತ್ರಪುತ್ರ** (ನಾ). ಕ್ಷತ್ರಿಯ ಕುಮಾರ; ಕ್ಷತ್ರಿಯ: ಆ ಕ್ಷತ್ರಪುತ್ರರ್ ಗಹೋದ್ಭವರಾ ಕನ್ನೆಗೆ ಯೋಗ್ಯರಲ್ಲರ್ (ನೇಮಿಪು. ೬-೩); ವಿಜಯ ಶ್ರೀಯಂ ಬಹುಕ್ಷತ್ರಪುತ್ರರ ಸುತ್ತಿಂಗೊಳಗಾಗದಿರ್ದಜಿಕೆಯಿಂ ಸುತ್ತಲ್ಕೆ ನೀಳ್ದಂತೆ ಚಿತ್ತರದಿಂ ದೀರ್ಘತರಂಗಳಾದುವು ಭುಜಂ (ಪುಷ್ಪಪು. ೪-೬೬). [ಕ್ಷತ್ರ + ಪುತ್ರ]

**ಕ್ಷತ್ರವೃತ್ತಿ** (ನಾ). ಕ್ಷತ್ರಿಯನ ಧರ್ಮ, —ಆಚರಣೆ: ಈ ಕ್ಷಿತೀಶಂ ಕ್ಷತ್ರವೃತ್ತಿಯೊಳ್ ನೆಗಳ್ದಂ (ಆದಿಪು. ೬-೨೪ ವ). [ಕ್ಷತ್ರ + ವೃತ್ತಿ]

**ಕ್ಷತ್ರವೇದ** (ನಾ). ಅಥರ್ವವೇದ: ಕ್ಷತ್ರಿಯರು ಹೇಗಾದರೂ ಜಯವನ್ನು ಗಳಿಸಬೇಕಾಗಿದ್ದುದರಿಂದ ಈ ಮಾಟ ಮಂತ್ರಗಳ ಪ್ರಯೋಗ ಅವರಲ್ಲಿ ಹೆಚ್ಚು ಬಳಕೆಯಲ್ಲಿದ್ದು ಈ ವೇದಕ್ಕೆ 'ಕ್ಷತ್ರವೇದ'ವೆಂಬ ಹೆಸರು ಕೂಡ ಉಂಟಾಯಿತು (ಭಾರದ. ೨೯). [ಕ್ಷತ್ರ + ವೇದ]

**ಕ್ಷತ್ರಾಧಮ** (ನಾ). ನೀಚನಾದ ಕ್ಷತ್ರಿಯ; ಕೆಟ್ಟ ಕ್ಷತ್ರಿಯ: ದನುಜ ಕ್ಷತ್ರಾಧಮಾನೀಕಮನಗಣಿತಮಂ ಕೂಡೆ ನಿರ್ಮೂಲನಂಗೆಯ್ದು ನಿತುಂ ಭೂಭಾರಮಂ ಪಿಂಗಿಸಲುದಯಿಸಿದಂ ಚಕ್ರಿ (ಜಗವಿ. ೩-೪). [ಕ್ಷತ್ರ + ಅಧಮ]

**ಕ್ಷತ್ರಿಯ** (ನಾ). ಚತುರ್ವರ್ಣದಲ್ಲಿ ಎರಡನೆಯ ವರ್ಗ; ದೇಶ ಅಥವಾ ಧರ್ಮರಕ್ಷಣೆಗಾಗಿ ಯುದ್ಧಮಾಡುವುದೇ ಸಹಜ ವೃತ್ತಿಯಾಗುಳ್ಳ ಜನಾಂಗ: ಕಾಳೆಗಕೆ ಜೂಜಿಗೆ ಕರೆದಡೋಸರಿಸಿದೊಡೆ ಬಳಿಕವ ಗರುವನೇ ಕ್ಷತ್ರಿಯರೊಳಗೆ (ಕುವ್ಯಾಸ. ೧೩-೭೯); ಕ್ಷತ್ರಿಯನಾದ ಅರ್ಜುನನಿಗೆ ಕ್ಷಾತ್ರಧರ್ಮವಾದ ಯುದ್ಧ ಶಾಸ್ತ್ರಸಮ್ಮತವಾದದ್ದು (ಭಾರದ. ೧೧೬). [ಸಂ.]

**ಕ್ಷತ್ರಿಯಕುಲ** (ನಾ). ಕ್ಷತ್ರಿಯ ವಂಶ: ಕ್ಷತ್ರಿಯಕುಲ ತಿಲಕಂ ನೋಡಿದಂ ಚಕ್ರನಾಥಂ (ಆದಿಪು. ೧೨-೭೦). [ಕ್ಷತ್ರಿಯ + ಕುಲ]

**ಕ್ಷತ್ರಿಯಕುಲೀನೆ** (ನಾ). ಕ್ಷತ್ರಿಯ ವಂಶಕ್ಕೆ ಸೇರಿದ ಕುಲೀನೆ; ರಾಜಸ್ತ್ರೀ: ಬಡಗಿ ಮಾಚಲದೇವಿಯಂ ಕ್ಷತ್ರಿಯಕುಲೀನೆಯಂ ಮಾಡಿಹೆವೆಂದು . . . ಹರುಷಂ ಮಿಕ್ಕು ನಲಿವುತ್ತ (ಬಸವು. ೫೫-೧೪). [ಕ್ಷತ್ರಿಯ + ಕುಲೀನೆ]

**ಕ್ಷತ್ರಿಯಗೆಡುಕ** (ನಾ). ೧. ಕೆಡುಕನಾದ ಕ್ಷತ್ರಿಯ; ನೀಚಕ್ಷತ್ರಿಯ. ೨. ಕ್ಷತ್ರಿಯ ಕುಲಕ್ಕೆ ಕೆಡುಕನ್ನುಂಟುಮಾಡುವವನು: ಪೊಡವಿಯೊಳು ಯಾದವರು ಕ್ಷತ್ರಿಯಗೆಡುಕರು (ಕುವ್ಯಾದ್ರೋ. ೧೪-೧೮). [ಕ್ಷತ್ರಿಯ + ಕೆಡುಕ]

**ಕ್ಷತ್ರಿಯಜಾತಿ** (ನಾ). ಕ್ಷತ್ರಿಯ ವಂಶ; ನಾಲ್ಕು ವರ್ಣಗಳಲ್ಲಿ ಎರಡನೆಯ ವರ್ಣ: ಪಳುಕಿನಂದದಿ ನಿರ್ಮಲತ್ವದಿಂ ತೋರಿ ಶಶಿಕಳೆಯ ತೋರುವದು ಭೂಸುರಜಾತಿಯಕ್ಕುಮಗ್ಗಳಮೆನಿಪದೆಳೆಗೆಂಪನೆಸಗುವ ಪ್ರಿಯಂಗು ಸುಮದಂತೆ ಕ್ಷತ್ರಿಯ ಜಾತಿಯು (ರತ್ನಶಾ. ೩-೯). [ಕ್ಷತ್ರಿಯ + ಜಾತಿ]

**ಕ್ಷತ್ರಿಯಪವಿತ್ರ** (ನಾ). ಕ್ಷತ್ರಿಯ ಕುಲಕ್ಕೆ ಪಾವಿತ್ರ್ಯವನ್ನುಂಟು ಮಾಡುವವನು; ಒಂದು ಬಿರುದು: ಚಾಳುಕ್ಯ ಚೂಡಾಮಣಿ ಕದನತ್ರಿಣೇತ್ರ ಕ್ಷತ್ರಿಯಪವಿತ್ರ ಮತ್ತಗಜಾಂಗರಾಜ (ಸೌಇಇ. XX, ೫೫-೧೪; 1082). [ಕ್ಷತ್ರಿಯ + ಪವಿತ್ರ]

**ಕ್ಷತ್ರಿಯಾಣಿ** (ನಾ). ಕ್ಷತ್ರಿಯ ಕುಲದ ಸ್ತ್ರೀ. [ಸಂ. ಕ್ಷತ್ರಿಯಾಣೀ]

**ಕ್ಷತ್ರಿಯಾತ್ಮಜ** (ನಾ). ಕ್ಷತ್ರಿಯನ ಮಗ; ರಾಜಕುಮಾರ: ನೆಲನನಲಗಿನ ಮೊನೆಯಲಲ್ಲದೆ ಮೆಲುನುಡಿಯ ಸಾಮದಲಿ ಗೀಮದಲಿಳೆಯ ಕೊಂಬರೆ ಧರೆಯೊಳಧಿಕ ಕ್ಷತ್ರಿಯಾತ್ಮಜರು (ಕುವ್ಯಾಉ. ೧-೮). [ಕ್ಷತ್ರಿಯ + ಆತ್ಮಜ]

**ಕ್ಷತ್ರಿಯಿ** (ನಾ). ಕ್ಷತ್ರಿಯನ ಹೆಂಡತಿ. [ಸಂ. ಕ್ಷತ್ರಿಯೀ]

**ಕ್ಷತ್ರಿಯಿತಿ** (ನಾ). =ಕ್ಷತ್ರಿಯಾಣಿ: ಬ್ರಾಹ್ಮಣಿತಿ, ಪಾರ್ವಿತಿ, ಕ್ಷತ್ರಿಯಿತಿ, ಅರಸಿತಿ (ಶಬ್ದಾನು. ೧೯೦ ಪ್ರಯೋ). [ಕ್ಷತ್ರಿಯ + -ಇತಿ$_1$ (< -ಇತ್ತಿ)]

**ಕ್ಷತ್ರಿಯೆ** (ನಾ). = ಕ್ಷತ್ರಿಯಾಣಿ: ಅಮ್ಮಾ ಕ್ಷತ್ರಿಯೇ ಇದನ್ನು ನಾನು ಬಲ್ಲೆ (ವಚಭಾ. ೩೨೬). [ಸಂ. ಕ್ಷತ್ರಿಯಾ]

**ಕ್ಷತ್ವ** (ನಾ). 'ಕ್ಷ' ಎಂಬ ಅಕ್ಷರ; ಕ್ಷಕಾರ: ಕ್ಷತ್ವಕ್ಕೆ ಬಹುಳದಿಂದಂ ಸತ್ವಂ ಕತ್ವಂ (ಶಮದ. ೨೬೨). [ಸಂ.]

**ಕ್ಷಪಕ** (ನಾ). [ಜೈನ] ಕರ್ಮಗಳನ್ನು ಕಳೆದುಕೊಳ್ಳುವವನು, —ನಿವಾರಿಸುವವನು: ಕ್ಷಪಕಚಾರಿತ್ರಮೋಹನೀಯಮಂ ಕ್ಷಪಿಯಿಸುತ್ತಿರ್ದನುಂ (ತತ್ತ್ವಪ್ರ. ೩೫೫); ಮೋಕ್ಷ ನಿಶಾಂತ ಸೋಪಾನವೆಂಬಂತೆ ಮುಂತಣ ಕ್ಷಪಕಶ್ರೇಣಿಯೊಳೆಂಟು ಗುಣಸ್ಥಾನದಂತರವನು ನೆಲೆಮಾಡಿ (ವರ್ಧಚ. ೧೨-೪೭). [ಸಂ.]

**ಕ್ಷಪಕತ್ವ** (ನಾ). [ಜೈನ] ಕರ್ಮನಾಶ ಮಾಡುವ ಸ್ಥಿತಿ (?): ಸೂಕ್ಷ್ಮಸಾಂಪರಾಯಪರಿಣಾಮಪರಿಣತಂ ಕ್ಷಪಕತ್ವಮನನುಭವಿಸಿ ತದನಂತರ ಸಮಯದೊಳ್ ಮೋಹನೀಯಮಂ . . . ಕ್ಷಪಿಯಿಸಿ (ತತ್ತ್ವಪ್ರ. ೩೬೮). [ಸಂ.]

**ಕ್ಷಪಕಶ್ರೇಣಿ** (ನಾ). [ಜೈನ] ಕರ್ಮಕ್ಷಯಮಾಡಿ ಉತ್ತಮಗತಿಗೆ ಹೋಗುವ ಒಂದು ಮಾರ್ಗ: ಮೋಕ್ಷಪ್ರಾಸಾಧಿರೋಹಣ ನಿಶ್ರೇಣೀಭೂತ ಕ್ಷಪಕಶ್ರೇಣಿ ಪ್ರಯೋಗ್ಯಾಥಃ ಪ್ರವೃತ್ತಿಕರಣ ಪರಿಣತನ (ಆದಿಪು. ೧೦-೧೪ ವ); ಸಹಸ್ರ ಕ್ಷಪಕಶ್ರೇಣಿ ಪ್ರಾಯೋಗ್ಯಾಥಃ ಪ್ರವೃತ್ತಕರಣ ಕ್ಷಪಕನಾಗಿ (ಶಾಂತಿಪು.೧೧-೧೧೧ ವ); ಕ್ಷಪಕಶ್ರೇಣ್ಯಾರೋಹಣಾಭಿಮುಖಂ (ಸುಕುಮಾ. ೮-೬೨ ವ). [ಕ್ಷಪಕ + ಶ್ರೇಣಿ]

**ಕ್ಷಪಣ** (ನಾ). ೧. ಉಪವಾಸದಿಂದ ದೇಹವನ್ನು ಕುಗ್ಗಿಸುವುದು. ೨. ಕ್ಷೀಣಗೊಳಿಸುವಿಕೆ; ನಾಶ: ಮೋಹಕ್ಷಪಣಾನಂತರ ಸಮಯದೊಳ್ (ತತ್ತ್ವಪ್ರ. ೧೬). ೩. ಬೌದ್ಧ ಸಂನ್ಯಾಸಿ. ೪. ಜೈನ ಸಂನ್ಯಾಸಿ; ಸವಣ: "ಸಾಧು ನಿರ್ಗ್ರಂಥರಾ ನಗ್ನಾಟರು ಜೈನರ್ ದಿಗಂಬರರ್ ಜೀವಕರ್ ಮಲಧರರ್ ತಾನಜೀವರ್ ಕ್ಷಪಣರೆನೆ ಗುರುಗಳಕ್ಕು" (ಮಂಗರಾ. ೬೬-೧); ಕ್ಷಪಣರೊಳಗಾಡಿ ಲಜ್ಜೆದೊಱೆವವನಲ್ಲ (ಸರ್ವವ. ೨-೬). [ಸಂ.]

**ಕ್ಷಪಣಕ** (ನಾ). = ಕ್ಷಪಣ ೪: ಮಗಳೆ, ಉಟಿದ ಭೃತಂಗಳೆಲ್ಲಮಂ ಪೋಗಿಯಾ ಕ್ಷಪಣಕಂಗೊಪ್ಪಿಸುವಂ (ವಡ್ಡಾರಾ. ೧೧-೧೪); ನೀ ಕ್ಷಪಣಕರ ಕೈಯಿಂದ ಮರುಳುಗೊಂಡೆಯೊ (ಬಸವು. ೫೨-೬). [ಸಂ.]

**ಕ್ಷಪಣಕತ್ವ** (ನಾ). ಜೈನ ಸಂನ್ಯಾಸಿಯಾಗಿರುವಿಕೆ; ಜೈನಮತಾವಲಂಬನ: ಕ್ಷಪಣಕತ್ವಂ ಪಿಂಗಿ ಸದ್ಭಕ್ತನಾಗಿರುತೆ (ವಾಗೀರ. ೨೬೩-೨). [ಸಂ.]

**ಕ್ಷಪಣೆ** (ನಾ). ೧. ಇಲ್ಲದಿರುವಿಕೆ; ಅಭಾವ. ೨. ಕರ್ಮಕ್ಷಯ: ತಪನಾತಪದಿಂ ಚೇಷ್ಟಾಕ್ಷಪಣೆಯನೊಳಕೊಂಡು [ಪಾಠಾಂ. ಕ್ಷಪಣತೆಯೊಳ್] ಕೋಟ್ಟಿಗಂ ಬೆಳ್ಗಿಗಮಾತ್ಮ ಪುರೋಭಾಗದೊಳಿರ್ದೊಡಮುಪಶಮಿಸಿದುದು (ಪಂಲಾಮಾ. ೭-೯೫); ಕ್ಷಪಣೆಯಂ ಕಱುತ್ತು ಅನಂತಾನುಬಂಧಿ ಕ್ರೋಧಮಾನ ಮಾಯಾಲೋಭಂ (ಗೊಮ್ಮಸಾ. ೩-೪). [< ಸಂ. ಕ್ಷಪಣ]

**ಕ್ಷಪಾಕರ** (ನಾ). ನಿಶಾಕರ; ಚಂದ್ರ: ಕ್ಷಪಾಕರನಿನಾತ್ಮಜಾಂಶಗತನಾಗೆ (ಜಾತತಿ. ೨೦-೨೨); ಶಿಶುವು ದಿನೇ ದಿನೇ ಶುಕ್ಲಪಕ್ಷ ಕ್ಷಪಾಕರನಂತೆ ಮಿಂಚುತ್ತಿದ್ದಿತು (ಪುರಾವಿ. ೧೪೬). [ಸಂ.]

**ಕ್ಷಪಾನಾಥ** (ನಾ). ರಾತ್ರಿಯ ಒಡೆಯ; ಚಂದ್ರ. [ಸಂ.]

**ಕ್ಷಪಿತ** (ಗು) ೧. ಕಳೆದ; ಕಳಿಸಿದ; ಎಸೆದ; ಬಿಸುಟ. ೨. ಕ್ಷೀಣವಾದ; ಕುಗ್ಗಿದ; ಸೊರಗಿದ. ೩. ನಾಶಮಾಡಲ್ಪಟ್ಟ: ಅಖರ್ವಬಾಹಾಗರ್ವಂ ಕ್ಷಪಿತ ರಿಪುಸೈನ್ಯನಿರ್ದಂ . . . ಸುಗ್ರೀವಂ (ಪಂರಾಮಾ. ೧೪-೪೧); ಶ್ರೀವರ್ಮಮಂಡಲೇಶ್ವರಂ ದುರ್ಧರ ತಪೋಮಹಾತಪ ಕ್ಷಪಿತ ಜೀವನಂ ಜೀವಿತಾಂತ್ಯದೊಳ್ ಸಮಾಧಿವಿಧಿಯಿನವತೀರ್ಣಶರೀರಭಾರನಾಗಿ (ಚಂದ್ರಪು. ೪-೬೦ ವ). [ಸಂ.]

**ಕ್ಷಪಿತಕಾಯ** (ನಾ). ಸೊರಗಿದ ದೇಹವುಳ್ಳವನು: ಮತ್ತಿತ್ತ ಮೃದುಮತಿಗಳ್ ಉಗ್ರೋಗ್ರ ತಪಂಗೆಯ್ದತಿ ಕ್ಷಪಿತಕಾಯರಾಲೋಕನಗರಕ್ಕೆ ಚರಿಗೆಗೆ ಪೋದೊಡೆ (ಪಂರಾಮಾ. ೧೫-೪೯ ವ). [ಕ್ಷಪಿತ + ಕಾಯ]

**ಕ್ಷಪಿತದುರಿತ** (ನಾ). ಪಾಪಗಳನ್ನು ನಾಶಮಾಡಿದವನು: ಕ್ಷಪಿತದುರಿತನ ವಚಃ ಕರ್ಣಪೂರಮಂ ಶ್ರವಣನಿಕಟದೊಳ್ ತಾಳ್ದಿ (ಶಾಂತಿಪು. ೬-೫೭). [ಕ್ಷಪಿತ + ದುರಿತ]

**ಕ್ಷಪಿತವಯಸ** (ನಾ). ೧. ವಯಸ್ಸು ಕುಗ್ಗಿದವನು; ಇಳಿವಯಸ್ಸಿನವನು. ೨. ಪಕ್ಷಿಗಳನ್ನು ನಾಶಮಾಡುವವನು. ೧, ೨: ಅಭಿನವಯೌವನನಾಗಿಯುಂ ಕ್ಷಪಿತವಯಸನುಂ ಕೃಷ್ಣನಾಗಿಯುಂ ಅಸುದರ್ಶನನುಂ (ಕಾದಂಪೂ. ೧೬೬). [< ಸಂ. ಕ್ಷಪಿತವಯಸ್]

**ಕ್ಷಪಿಯಿಸು, ಕ್ಷಪಿಸು** (ಕ್ರಿ). ೧. ಕುಗ್ಗಿಸು; ಕ್ಷೀಣಗೊಳಿಸು: ಜಪದಿಂ ತಪದಿಂದೊಡಲಂ ಕ್ಷಪಿಯಿಸಿದಪೆನೆಂಬೊಡದು ಕೃತಜ್ಞತೆ ಗಡ (ಕಾದಂಪೂ. ೯೫೬); ಉಪವಾಸ ಪ್ರಚುರತೆಯಿಂ ವಪು ಗಿಡಿಗಿಡಿಜಂತ್ರಮಾದುದೆಂಬನೆವರಂ ಕ್ಷಪಿಯಿಸಿ (ಸುಕುಮಾ. ೪-೪). ೨. ನಾಶಗೊಳಿಸು; ಇಲ್ಲವಾಗಿಸು: ಮೋಹನೀಯಮಂ ನಿರ್ಮೂಲಮಪ್ಪಿನಂ ನಿರವಶೇಷಂ ಕ್ಷಪಿಯಿಸಿ (ತತ್ತ್ವಪ್ರ. ೩೬೮); ಕ್ಷಾಯಿಕ ಸಮ್ಯಕ್ತ್ವದೊಳು ದರ್ಶನಮೋಹತ್ರಯಂ ಕ್ಷಪಿಯಿಸಲ್ಪಟ್ಟುದಱಿಂದಂ (ಗೊಮ್ಮಸಾ. ೮೭-೨). **ಕ್ಷಪಿಸು**: ದ್ವಾದಶಪ್ರಕೃತಿಗಳುಂ ನಿರವಶೇಷಮಾಗಿ ಕ್ಷಪಿಸಲ್ಪಟ್ಟುವಪ್ಪುದಱಿಂದಂ(ಗೊಮ್ಮಸಾ. ೬೬-೩). [ಕ್ಷಪಣ + -ಇಸು₃]

**ಕ್ಷಪಿಸು** 'ಕ್ಷಪಿಯಿಸು' ನೋ.

**ಕ್ಷಪೆ** (ನಾ). ೧. ಇರುಳು; ರಾತ್ರಿ: "ತಮೀ, ತಮಿಸ್ರಾ . . . ಕ್ಷಪಾ . . . ರಾತ್ರಿಃ — ಈ ೧೯ ಇರುಳಿನ ಪೆಸರ್" (ಹಲಾಯು. ೧೮-೧೦೭). ೨. ಅರಿಸಿನ. [ಸಂ. ಕ್ಷಪಾ]

**ಕ್ಷಮ**₁ 'ಕ್ಷಮೆ' ನೋ.

**ಕ್ಷಮ**₂ (ಗು). ೧. ತಾಳ್ಮೆಯುಳ್ಳ; ಸೈರಣೆಯುಳ್ಳ; ಶಾಂತ; ಸಹನಶೀಲ. ೨. ಶಕ್ತ; ಸಮರ್ಥ; ತಕ್ಕ. ೩. ಅನುಕೂಲವಾದ. (ನಾ). ೪. ಸಮರ್ಥನಾದವನು; ಶಕ್ತನಾದವನು: "ಕ್ಷಮಃ, ಶಕ್ತಃ – ಈ ೨ ಅರ್ಪವಂ" (ಹಲಾಯು. ೬೪-೨೩೨); ಕ್ಷಮರಾರಿತರರ್ ನಿಜಪದವುಮನಱಿಯಲ್ (ಜಗವಿ. ೩-೧೦೫). [ಸಂ.]

**ಕ್ಷಮಣ** (ನಾ). ಸೈರಣೆ, ಸಹನೆ; ತಾಳ್ಮೆ: "ಕ್ಷಮಾ . . . ಕ್ಷಮಣಂ, ಕ್ಷಮಣೀಯಂ, ಕ್ಷಾಂತಿಃ — ಈ ೫ ತಾಳ್ಮೆ" (ಕಾಶಕ್ಯ. ೧೦೮). [ಸಂ.]

**ಕ್ಷಮತೆ** (ನಾ). ೧. ಯೋಗ್ಯತೆ; ಅರ್ಹತೆ. 'ಕಾರ್ಯಕ್ಷಮತೆ' ಪರಾ. ೨. ಶಕ್ತಿ; ಸಾಮರ್ಥ್ಯ: ದುಷ್ಟನಿಗ್ರಹ ಶಿಷ್ಟಪ್ರತಿಪಾಲನಕ್ಷಮತೆಯಂ ಕೈಗಾಯದೆ (ಪಂರಾಮಾ ೯-೮೬); ಪ್ರವಚನ ಪರಿಪಠನ ಕ್ಷಮತೆವಾಣಿಯಂ . . . ಪಿಂಗದನ್ನಮಾರ್ಚಿಪೆನಜಿನಂ (ಚಂದ್ರಪು. ೪-೧೭). [ಸಂ. ಕ್ಷಮತಾ]

**ಕ್ಷಮಾಗುಣ** (ನಾ). ಕ್ಷಮಿಸುವ ಗುಣ; ತಾಳಿಕೊಳ್ಳುವ ಗುಣ; ತಾಳ್ಮೆ; ಸೈರಣೆ; ಸಹನೆ: ನೆಱೆದಱ್ತಿ ಭಕ್ತಿ ದಯೆ ಪುದಿದಱಿವಾದಾರ್ಯಂ ಕ್ಷಮಾಗುಣಂ ಶಕ್ತಿಯುಮೆಂಬಱಿಕೆಯ ಗುಣಮೇೞಱೊಳಂ (ಆದಿಪು. ೪-೯೭). [ಸಂ. (ಕ್ಷಮಾ + ಗುಣ)]

**ಕ್ಷಮಾಜ** (ನಾ). ಭೂಮಿಯಲ್ಲಿ ಹುಟ್ಟಿದುದು; ಗಿಡ; ಮರ; ವೃಕ್ಷ: ಉದ್ದಾಮ ವಟಕ್ಷಮಾಜಮಂ ಶಬರವಲ್ಲಭಂ ಮೆಲ್ಲಮೆಲ್ಲನೆಯ್ದಿದನಾಗಳ್ (ಪಂಚತಂ. ೨೪೫-೧೨). 'ಕ್ಷಿತಿಜ' ಪರಾ. [ಸಂ.]

**ಕ್ಷಮಾದಾನ** (ನಾ). ಕ್ಷಮೆಯನ್ನು ಕೊಡುವುದು; ಅಪರಾಧವನ್ನು ಕ್ಷಮಿಸುವುದು: ಕೆಲವು ಮೊಕದ್ದಮೆಗಳಲ್ಲಿ ಕ್ಷಮಾದಾನ ಮುಂತಾದವುಗಳನ್ನು ಮಾಡುವುದಕ್ಕೂ (ಭಾಧಾನ. ೩೫); ಅವಳು ಆ ಕೆಸರಿನಲ್ಲಿ ಸಿಕ್ಕಿಕೊಂಡಿದ್ದಾಳೆ. ಅವಳಿಗೆ ಕ್ಷಮಾದಾನ ಮಾಡಬೇಕೆಂದು ನಾವು ಹೇಳಬೇಕಾಗಿದೆ (ಪುನರು. ೧೦೦). [ಸಂ. (ಕ್ಷಮಾ + ದಾನ)]

**ಕ್ಷಮಾಧರ** (ನಾ). ೧. ಭೂಮಿಯನ್ನು ಧರಿಸಿರುವುದು; ಬೆಟ್ಟ; ಪರ್ವತ. ೨. ಭೂಮಿಯನ್ನು ಹೊತ್ತು ನಿಂತವನು; ಆದಿಶೇಷ. ೧, ೨: ಕ್ಷಮಾಧರಮನೀಗಳೆತ್ತಿ ಮೆಱೆದಂ ಮುಕುಂದಂ ನತಕ್ಷಮಾಧರನನಾತನಂ ಕ್ಷಮೆಗೊಳಲ್ಕೆವೇೞ್ಕುಂ (ಜಗವಿ. ೪-೯೮). [ಸಂ. (ಕ್ಷಮಾ + ಧರ)]

**ಕ್ಷಮಾಧರತೆ** (ನಾ). ಭೂಮಿಯು ಕೆಳಗೆ ಇಳಿಯುವಿಕೆ; ಅಧೋಲೋಕವಾದ ಪಾತಾಳಕ್ಕೆ ಹೋಗುವುದು (?): ಕ್ಷಮಾಧರತೆಯಂ ಕಿಡಲ್ ಚಲದೆ ತೋಱಿದಾ ಧೈರ್ಯಮಂ (ಜಗವಿ. ೪-೯೮). [ಸಂ. ಕ್ಷಮಾಧರತಾ]

**ಕ್ಷಮಾಧರನಿವಾಸ** (ನಾ). ಆದಿಶೇಷನ ವಾಸಸ್ಥಳ; ಪಾತಾಳಲೋಕ: ಕ್ಷಮಾಧರನಿವಾಸದೊಳ್ ಬಳಿಯನಿಕ್ಕಿದಾ ಶೌರ್ಯಮಂ . . . ಕ್ಷಮಾಧರಮನೀಗಳೆತ್ತಿ ಮೆಱೆದಂ ಮುಕುಂದಂ (ಜಗವಿ. ೪-೯೮). [ಕ್ಷಮಾಧರ + ನಿವಾಸ]

**ಕ್ಷಮಾಪ** (ನಾ). ಭೂಮಿಯ ಒಡೆಯ; ಅರಸ; ರಾಜ: ಋಕ್ಷದಂತಿ ತರೆಕ್ಷುಪಣೆ ಹರಿ ಯಕ್ಷ ಶಿಖಿ ಚೋರ ಕ್ಷಮಾಪ ವಿಪಕ್ಷ ವಿಷಯವು . . . ಭೀತಿಗಳು ಆ ಕ್ಷಣವಳಿದು (ಬಸಪು. ೬೧-೮೩). [ಸಂ.]

**ಕ್ಷಮಾಪಣ, ಕ್ಷಮಾಪಣೆ** (ನಾ). ೧. ಕ್ಷಮೆಯನ್ನು ಯಾಚಿಸುವುದು. ೨. ತಾಳಿಕೊಳ್ಳುವಿಕೆ; ಮನ್ನಿಸುವಿಕೆ; ಕ್ಷಮಿಸುವಿಕೆ; ಕ್ಷಮೆ: (?). **ಕ್ಷಮಾಪಣೆ**: ೧. ಆತನು ಕ್ಷಮಾಪಣೆ ಕೇಳಿದಮೇಲೆ ಅವನನ್ನು ಬಿಡುಗಡೆ ಮಾಡಿದರು (ರೂಢಿ). [< ಸಂ. ಕ್ಷಮಾಪಣಂ]

**ಕ್ಷಮಾಪಣೆ** 'ಕ್ಷಮಾಪಣ' ನೋ.

**ಕ್ಷಮಾಪರ** (ನಾ). ಕ್ಷಮಾಗುಣವುಳ್ಳವನು; ಸಹನಶೀಲನಾದವನು; ಸಹಿಷ್ಣು: ಅಹಿತಸಿಂಹನಾಗಿಯುಮಾರ್ಗಂ ನಿಜದಿಂ ಕ್ಷಮಾಪರನುಂ (ಶಾಂತಿಪು. ೨-೯); ವಿತರ್ಕಮಾತುರನಲ್ಲಂ ಸ್ಥಿರಮಂ ಕ್ಷಮಾಪರನೆನಿಕ್ಕುಂ (ಜಾತತಿ. ೧೪-೮). [ಸಂ.]

**ಕ್ಷಮಾಪ್ರಾರ್ಥನೆ** (ನಾ). ಕ್ಷಮೆ ಬೇಡುವಿಕೆ; ಕ್ಷಮೆಗಾಗಿ ಪ್ರಾರ್ಥನೆ: ಈಗ ರಾಜಾಧಿರಾಜರ ಪಾದಕ್ಕೆರಗಿ ಕ್ಷಮಾಪ್ರಾರ್ಥನೆಯನ್ನು ಮಾಡಿಕೊ (ಕವಿಕ. ೭೦). [ಸಂ. (ಕ್ಷಮಾ + ಪ್ರಾರ್ಥನಾ)]

**ಕ್ಷಮಾಭಿಕ್ಷೆ** (ನಾ). = ಕ್ಷಮಾದಾನ: ರೋಜನು . . . ಆ ಸೈನಿಕರಿಗೆ ಕ್ಷಮಾಭಿಕ್ಷೆಯನ್ನು ಕೊಡಿಸಿದನು (ಝಾರಾಣಿ. ೪೫೭); ಇವರೆಲ್ಲರ ಪರವಾಗಿ ಗ್ರಾಮಸ್ಥರೆಲ್ಲರ ಕ್ಷಮಾಭಿಕ್ಷೆ ನಡೆಯಿತು (ಚಿತೆಸ. ೧೦೯); ಆರ್ಬೆಲ್ ಸಂಘದ ಸದಸ್ಯನ ಒತ್ತಾಯದಿಂದ ಅವರಿಗೆ ಕ್ಷಮಾಭಿಕ್ಷೆ ನೀಡಬಹುದೆಂದು ಶಿಫಾರಸ್ಸು ಮಾಡಲಾಯಿತು (ಪುನರು. ೧೦೩). [ಸಂ. (ಕ್ಷಮಾ + ಭಿಕ್ಷಾ)]

**ಕ್ಷಮಾಯಾಚನೆ** (ನಾ). = ಕ್ಷಮಾಪ್ರಾರ್ಥನೆ : "ನಾನು ಕ್ಷಮಾಯಾಚನೆಗಾಗಿ ಬಂದಿದ್ದೇನೆ" ಎಂದವನು . . . ನುಡಿದನು (ಪುನರು. ೧೯೧). [ಸಂ. (ಕ್ಷಮಾ + ಯಾಚನಾ)]

**ಕ್ಷಮಾರುಹ** (ನಾ). ಭೂಮಿಯಲ್ಲಿ ಹುಟ್ಟಿದುದು ; ಮರ ; ವೃಕ್ಷ: ಧರಣಿಯೊಳು ಕೆಡೆದಿರ್ದ ರುದ್ರಾಕ್ಷಾ ಕ್ಷಮಾರುಹ[ಪಾಠಾಂ. ಮಹೀರುಹ]ಮೋ (ಬಸವು. ೨೦–೨೧). 'ಭೂರುಹ' ಪರಾ. [ಸಂ.]

**ಕ್ಷಮಾರ್ಹ** (ಗು). ಕ್ಷಮಿಸುವುದಕ್ಕೆ ಯೋಗ್ಯ ; ಮನ್ನಿಸಲ್ಪಡತಕ್ಕ : ನಾವು ಕ್ಷಮಾರ್ಹರಲ್ಲ ನಮಗೆ ಮುಕ್ತಿವಿಮೋಚನೆಗಳಿಲ್ಲ (ಪುನರು. ೩೪೫). [ಸಂ. (ಕ್ಷಮಾ + ಅರ್ಹ)]

**ಕ್ಷಮಾವಲ್ಲಭ** (ನಾ). = ಕ್ಷಮಾಪ : ನಿಜಪರಿ ರಕ್ಷಣಕ್ಷಮ ಕ್ಷಮಾವಲ್ಲಭಲಾಭ ಪ್ರಮುದಿತ ಮೇದಿನೀ ಹೃದಯದಂತೆ ಜಳಮಪಗತಕಲುಷಮಾಗೆ (ಆದಿಪು. ೬–೩೬ ವ). [ಸಂ. (ಕ್ಷಮಾ + ವಲ್ಲಭ)]

**ಕ್ಷಮಿ** (ಗು). ಕ್ಷಮಾಶೀಲ ; ಕ್ಷಮಿಸುವ ಗುಣವುಳ್ಳ : ಬಹುಸ್ತ್ರೀಪುತ್ರವಿತ್ತಾನ್ವಿತಂ ಕ್ಷಮಿ ತೇಜೋನಿಳಯಂ . . . ತ್ಯಾಗಶೀಲ ಮಹೌದಾರ್ಯಗುಣಂ ಗುಣಾಢ್ಯನೆನಿಕು (ಜಾತಕ. ೧೬–೨೬). [ಸಂ. ಕ್ಷಮಿನ್]

**ಕ್ಷಮಿತೃ** (ನಾ). ತಾಳ್ಮೆಯುಳ್ಳವನು ; ಸಹಿಸುವವನು ; ಕ್ಷಮಿಸುವವನು. [ಸಂ.]

**ಕ್ಷಮಿಯಿಸು** 'ಕ್ಷಮಿಸು' ನೋ.

**ಕ್ಷಮಿಸು, ಕ್ಷಮಿಯಿಸು** (ಕ್ರಿ). ಸೈರಿಸು ; ಅಪರಾಧವನ್ನು ಮನ್ನಿಸು ; ಕ್ಷಮೆಯನ್ನು ತೋರು : ಎನ್ನ ಗೆಯ್ದ ಪರಾಧಮಂ ಕ್ಷಮಿಸಿ ಸೈರಿಸುವುದು (ಚಾವುಂಪು. ೧೧೪–೨); ಇದನಾತನಂ ಬೆಸಗೊಂಡೊರ್ಮೆಗೆ ಕ್ಷಮಿಸುವಂತು ಮಾಟ್ಪೆಂ (ಪಂಚತಂ. ೧೩೮–೩) ; ಕ್ಷಮಿಸುವುದು ಸರ್ವೇಶ . . . ವೃಥಾಸುಭಟಾಭಿಮಾನ ಭ್ರಮಿತನನು (ಕುವ್ಯಾಅ. ೬–೮೦) ; ಶಿಕ್ಷಿಸುವುದಕ್ಕಿಂತ ಕ್ಷಮಿಸುವುದು ಬಹು ಯೋಗ್ಯವು (ಮುಂಬಯಿ. ೩–೧೪). **ಕ್ಷಮಿಯಿಸು** : ನೀಮುಂ ಮನದೊಳೇವಂಗೊಳ್ಳದೆ ಕ್ಷಮಿಯಿಸಿಪೆಂದು ನುಡಿದು(ವಡ್ಡಾರಾ. ೯೧–೨೧) ; ನೀಮೆಮ್ಮಂ ಪರೀಕ್ಷಿಸದೆ ಗೆಯ್ದ ಪರಾಧಮಂ ಕ್ಷಮಿಯಿಸುವುದೆನೆ (ಚಾವುಂಪು. ೯೪–೨೦); ದೇವರೆನಗೆ ಕಾರುಣ್ಯಂಗೆಯ್ದೊಡಿದೊಂದಂ ಕ್ಷಮಿಯಿಸುವುದೆಂದೊಡೆ (ಪಂರಾಮಾ. ೧೬–೭ ವ). [ಕ್ಷಮೆ + -ಇಸು$_3$]

**ಕ್ಷಮೆ, ಕ್ಷಮೆ$_1$** (ನಾ). ೧. ಇತರರ ತಪ್ಪನ್ನು ಮನ್ನಿಸುವ ಗುಣ ; ಸೈರಣೆ, ತಾಳ್ಮೆ ; ಸಹನೆ : ದಯೆಯುಂ ಕ್ಷಮೆಯುಂ ಪುಣ್ಯಾಶ್ರಮಗಳೆಂದಱಿದನುಷ್ಠಿಸಲ್ ಸಿದ್ಧಂ ಸಂಯಮಂ (ಜಿನಾಲಿ. ೧೯) ; ಕ್ಷಮೆಗೀಗಳ್ ಜಾವನಂ ಶೀವಿದುದತುಳ ತಪಃಶ್ರೀಗೆ ಲಾವಣ್ಯಮೀಗಳ್ ಸಮುಸನ್ನಿದ್ದರ್ತತ್ತು (ಎಕ. II, ೧೨೭–೧೭೯ ; 1115) ; ದೀಪವಲ್ಲಾ ಕ್ಷಮೆಯಖಿಳ ದೋಷಾಪಹಾರವು ಶೌರ್ಯಧರ್ಮದ ರೂಪುನೆಲೆಯಾ ಕ್ಷಮೆಯೆನಲು (ಕುವ್ಯಾವಿ. ೩–೨೫). ೨. ಭೂಮಿ ; ಮಹಿ : ಕ್ಷಮೆಯ ವಲ್ಲಭರೆಲ್ಲರಲಿ ನಿರ್ಮಮತೆಯಾಯಿತು ಮನಕೆ ನಿಮ್ಮಲಿ ರಮಿಸುವೀಯನುರಾಗವೆನಗಾಯ್ತೆಂದಳೆಂದುಮುಖಿ (ತೊರರಾ. ೩–೪–೧೨) ; ನುಡಿದಳಾ ಕ್ಷಮೆಯಸುತೆ (ಶ್ರೀರಾಮಾ. ೮೬–೨೪೦). **ಕ್ಷಮೆ$_1$** : ೧. ಅತ್ಯಧಿಕಮಹ ಕ್ಷಮುಪುಯೆಂದೆನಿಸುವವು ಅದು ಬಿತ್ತರಿಸೆ ಧೈರ್ಯವದು ದಶ (ಜ್ಞಾನಸಿಂ. ೨೬–೫). [ಸಂ. ಕ್ಷಮಾ]

**ಕ್ಷಮೆಗೊಳ್** (ಕ್ರಿ). ೧. ಸೈರಿಸು ; ಕ್ಷಮಿಸು : ಮನದೊಳೆಳ್ಳನಿತಪ್ಪೊಡಂ ಮುನಿಸಿಲ್ಲದೆ . . . ಕ್ಷಮೆಗೊಂಡು ಮತ್ತೊಂದೆಡೆಗೆ ಪೋಪುದುಂ (ಧರ್ಮಾಮೃ. ೫–೨೦೩). ೨. ಕ್ಷಮೆಯನ್ನು ಬೇಡು ; ಕ್ಷಮಾಯಾಚನೆ ಮಾಡು : ಕ್ಷಮಾಧರಮುನೀಗಳೆತ್ತಿ ಮೆಱೆದಂ ಮುಕುಂದಂ ನತಕ್ಷಮಾಧರನಾತನಂ ಕ್ಷಮೆಗೊಳಲ್ಕೆವೇಟ್ಕುಂ ದಿಟಂ (ಜಗವಿ. ೪–೯೪). [ಕ್ಷಮೆ + ಕೊಳ್$_1$]

**ಕ್ಷಮ್ಯ** (ಗು). ಕ್ಷಮಿಸಲು ಯೋಗ್ಯವಾದ ; ಕ್ಷಮಿಸಬಹುದಾದ : ಮುದುಕಿ ಹಾಗೆ ಮಾತನಾಡಿದರೆ ಅದೂ ಕ್ಷಮ್ಯವಲ್ಲವೆ ? (ಸಮುಜೀ. ೬೧೦). [ಸಂ.]

**ಕ್ಷಯ** (ನಾ). ೧. ಕೊರಗುವಿಕೆ ; ಕುಗ್ಗುವಿಕೆ ; ಸೊರಗುವಿಕೆ ; ಕ್ಷೀಣತೆ. ೨. ಹಾಳಾಗುವಿಕೆ ; ನಾಶ ; ನಷ್ಟ ; ಅಂತ್ಯ : ಈ ಮದವತ್ಕಂಸಂಗಕಾಂಡ ಕ್ಷಯ ಸಮುದಿತ ಚಂಡಾಂಶು ಚಂಡಾಂಶುವೆಂಬಂದದಿಂ (ಜಗವಿ. ೩–೨). ೩. ಜಗತ್ತಿನ ನಾಶ ; ಪ್ರಳಯ ; ಕಲ್ಪಾಂತ : "ಆ ಯುಗಾಂತಂ ಕ್ಷಯಮುದೆಂದೆನಲು . . . ಜಗವಿನಾಶಮಕ್ಕುಂ" (ಮಂಗರಾ. ೨೧–೧೨). ೪. ಒಂದು ಬಗೆಯ ರೋಗ ; ರಾಜಯಕ್ಷ್ಮ : ಮನುಜಂ ಪ್ಲೀಹಶ್ವಸನ ಕ್ಷಯಗುಲ್ಮವಿದ್ರಧಿ ವ್ಯಾಧಿಯುತಂ (ಜಾತಕ. ೨೧–೧೩) ; ಆಮಶಂಕೆ, ಕ್ಷಯ ಮೊದಲಾದ ರೋಗಗಳು (ಅಡುಸಾ. ೬೪). ೫. ಎರಡು ಸಂಕ್ರಮಣಗಳುಳ್ಳ ಒಂದು ಚಾಂದ್ರಮಾಸ. 'ಕ್ಷಯಮಾಸ' ಪರಾ. ೬. ಪ್ರಭವಾದಿ ಅರುವತ್ತು ಸಂವತ್ಸರಗಳಲ್ಲಿ ಒಂದು : ಪ್ರಭವ . . . ಕ್ಷಯ [ಪಾಠಾಂ. ಅಕ್ಷಯ]ವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೧). ೭. ಕ್ಷಯ, ಸ್ಥಾನ ಮತ್ತು ವೃದ್ಧಿ ಎಂಬ ತ್ರಿವರ್ಗದಲ್ಲಿ ಮೊದಲನೆಯದು : "ಕ್ಷಯಃ-ಶತ್ರುಗಳಿಂತಲೂ ತಾನು ಕಡಿಮೆಯಾಗಿರುವಿಕೆ" (ಸಿದ್ಧಾಂತಿ. ೨೦೭). ೮. ಸಮನಾಗಿರುವುದು ; ಸಮಾನ : ಆ ದೊರೆ ಯೇದೊರೆಯೊಂ ತಾನೇದೊರೆ ತದ್ದೇಶಕಾಲಮೇ ದೊರೆಯೋ ಮೇಣೇದೊರೆ ತಾಂ ಕ್ಷಯವೃದ್ಧಿಗಳಾದೊರೆಯವಿವೊರೆದು ಮುನ್ನೆ ಪರಿಕಿಪುದಱಿದೊಂ (ಶಾಂತಿಪು. ೨–೪೦). ೯. ಮನೆ ; ವಾಸಸ್ಥಳ ; ನಿವಾಸ : "ಆವಾಸಃ . . . ಕ್ಷಯಃ . . . ಆಲಯಃ – ಈ ೩೧ ಮನೆ" (ಹಲಾಯು. ೪೯–೧೩೬). ೧೦. ಯಮನ ನಿವಾಸ. ೧೧. ಯಮಧರ್ಮನ ಒಬ್ಬ ಮಂತ್ರಿ : ತಪನಜಂ ಪೊಱಮಟ್ಟು . . . ಕ್ಷಯನೆಂಬ ಮಂತ್ರಿಯೊಡನೈತಂದರು (ಜೈಮಿಭಾ. ೨೬–೨೩). ೧೨. ಸತ್ತ ಸೂತಕ ; ಮೃತಾಶೌಚ : ದಾಯಾದಿಗಳ ಮರಣದಿಂದ ಕ್ಷಯ ಉಂಟಾಗುತ್ತದೆ (ರೂಢಿ). [ಸಂ.]

**ಕ್ಷಯಕರ** (ಗು). ನಾಶಮಾಡುವಂತಹ ; ನಾಶಕಾರಕವಾದ : ಅಹಿತಪಕ್ಷಕ್ಷಯಕರರ್ ಕಲಿಯುಗ ಗಾಂಗೇಯರ್ (ಕಇ. II, ೧೧–೭ ; 1080) ; ದುರ್ಭವ ಕ್ಷಯಕರನ ಗರ್ಭಾವಿರ್ಭವಂ ನಿರ್ಭಿನ್ನಭಾವಂ (ಬಸವು. ೫೩–೩). [ಸಂ.]

**ಕ್ಷಯಕಾಸ** (ನಾ). ಕ್ಷಯರೋಗದಿಂದ ಬರುವ ಕೆಮ್ಮಲು : ಉಗುಳು ಶ್ವೇತವರ್ಣವಾಗಿ ಬಹಳ ಶ್ಲೇಷ್ಮದಿಂ ಕೂಡಿಕೊಂಡಿಹುದೆ ಶ್ಲೇಷಕಾಸ . . . ಶ್ಲೇಷ್ಮವು ಕಪ್ಪುಹಳದಿ ವರ್ಣವಾಗಿರಲು ಕ್ಷಯಕಾಸ (ಸಕವೈ. ೨೦೬). [ಕ್ಷಯ + ಕಾಸ]

**ಕ್ಷಯತಿಥಿ** (ನಾ). ೧. ಸೂರ್ಯೋದಯಾನಂತರ ಆರಂಭವಾಗಿ ಮರುದಿನ ಸೂರ್ಯೋದಯಕ್ಕೆ ಮುಂಚಿತವಾಗಿ ಮುಗಿಯುವ ತಿಥಿ. ೨. ಮರಣ ಹೊಂದಿದ ತಿಥಿ. [ಕ್ಷಯ + ತಿಥಿ]

**ಕ್ಷಯಪಕ್ಷ** (ನಾ). ಚಂದ್ರನು ಕುಂದುತ್ತಾ ಹೋಗುವ ಪಕ್ಷ ; ಕೃಷ್ಣಪಕ್ಷ ; ಚಾಂದ್ರಮಾನ ತಿಂಗಳಿನ ಉತ್ತರಾರ್ಧ. [ಕ್ಷಯ + ಪಕ್ಷ]

**ಕ್ಷಯಮಾಸ** (ನಾ). ಎರಡು ಸಂಕ್ರಮಣಗಳುಂಟಾಗುವ ಚಾಂದ್ರಮಾನ ತಿಂಗಳು : ಒಮ್ಮೊಮ್ಮೆ ಒಂದು ಚಾಂದ್ರಮಾಸದಲ್ಲಿ ಎರಡು ಸೌರ ಸಂಕ್ರಾಂತಿಗಳಾಗುತ್ತವೆ ; ಅದಕ್ಕೆ ಕ್ಷಯಮಾಸವೆಂಬ ಹೆಸರು (ಮುಂಬಯಿ. ೬–೭೦). 'ಮಲಮಾಸ' ಪರಾ. [ಕ್ಷಯ + ಮಾಸ]

**ಕ್ಷಯರೋಗ** (ನಾ). ಜ್ವರ, ಶ್ವಾಸ, ಕೆಮ್ಮಲು ಹಾಗು ರಕ್ತವನ್ನು ಕಾರುವುದು, ಮೊದಲಾದ ಲಕ್ಷಣಗಳುಳ್ಳ ದೇಹವನ್ನು ದುರ್ಬಲಗೊಳಿಸುವ ಒಂದು ಬಗೆಯ ರೋಗ; ರಾಜಯಕ್ಷ್ಮ: ದೇಹವನ್ನು ನಶಿಸುವ ಕಾಯಿಲೆಗಳಲ್ಲೆಲ್ಲಾ ಕ್ಷಯರೋಗ ಒಂದು ಮುಖ್ಯವಾದ ಕಾಯಿಲೆ (ಕಲರೋ. ೮೨). [ಕ್ಷಯ + ರೋಗ]

**ಕ್ಷಯರೋಗಾಣು** (ನಾ). ಕ್ಷಯರೋಗವನ್ನು ಉಂಟುಮಾಡುವ ರೋಗಾಣು: ಕ್ಷಯರೋಗಾಣುಗಳು ನಮ್ಮ ದೇಹಕ್ಕೆ ಗಾಳಿಯ ಮೂಲಕ ಸೇರಿಕೊಳ್ಳುತ್ತವೆ (ಕಲರೋ. ೮೪). [ಕ್ಷಯ + ರೋಗಾಣು]

**ಕ್ಷಯರೋಗಿಣಿ** (ನಾ). ಕ್ಷಯರೋಗವುಳ್ಳವಳು: ಕ್ಷಯರೋಗಿಣಿಯರು ಹೇಗೆ ಸಾಯುತ್ತಾರೆಂಬ ದೃಶ್ಯವನ್ನು ವಿವೇಕಿಯ ತಾರೆಯೊಬ್ಬಳು ನವೀನ ರೀತಿಯಲ್ಲಿ ತೋರಿಸುತ್ತಿದ್ದಳು (ಪುನರು. ೩೯೮). [ಸಂ. ಕ್ಷಯರೋಗಿಣೀ]

**ಕ್ಷಯವೃಜಿನ** (ನಾ). ಪಾಪಗಳನ್ನು ನಾಶಮಾಡುವವನು; ಪಾಪವನ್ನು ಪರಿಹರಿಸುವವನು: ಕ್ಷಯವೃಜಿನಂ ಜಿನಸಮುಯಂ . . . ನಯವ್ಯಾಕಸರಂ ಸರಸ್ವತೀಮುಖಮುಕುರಂ (ಸುಕುಮಾ. ೧–೫೧). [ಕ್ಷಯ + ವೃಜಿನ]

**ಕ್ಷಯವ್ಯಾಧಿ** (ನಾ). =ಕ್ಷಯರೋಗ: "ಶೋಥಂ ಕ್ಷಯಂ ಕ್ಷಯವ್ಯಾಧಿಯದು" (ಮಂಗರಾ. ೧೧೪–೩). [ಕ್ಷಯ + ವ್ಯಾಧಿ]

**ಕ್ಷಯಾಶುಶುಕ್ಷಣಿ** (ನಾ). ಪ್ರಳಯಕಾಲದ ಬೆಂಕಿ; ಪ್ರಳಯಾಗ್ನಿ: ಐರಾವತ ಪ್ರಭಾವದೊಳಂ ಕ್ಷಯಾಶುಶುಕ್ಷಣಿ ಕ್ಷೇಪದೊಳಂ ಪ್ರಳಯ ಜಲಧರ ಧ್ವಾನದೊಳಂ . . . ಅಗುರ್ವುಮದ್ಭುತಮುಮೆನಿಸಿ (ಜಗವಿ. ೬–೩೫ ವ). [ಕ್ಷಯ + ಆಶುಶುಕ್ಷಣಿ]

**ಕ್ಷಯಿತ್ವ** (ನಾ). ಕ್ಷೀಣವಾಗುವಿಕೆ; ಕ್ಷಯವನ್ನು ಹೊಂದುವಿಕೆ: ಶೋಚನೀಯವಾದ ಚಂದ್ರನು ಚಂದ್ರನೇ ಸರಿ ಎಂದರೆ ಕ್ಷಯಿತ್ವ, ವಿಲಾಸಶೂನ್ಯತ್ವ, ಮಲಿನತ್ವ ಮುಂತಾದ ಅವಗುಣಗಳಿಂದ ನಿಕೃಷ್ಟನೇಸರಿ (ಧ್ವನ್ಯಾಲೋ. ೧೧೯ ಅಡಿಟ). [ಸಂ.]

**ಕ್ಷಯಿಷ್ಣು** (ಗು). ಕುಗ್ಗುವ ಸ್ವಭಾವವುಳ್ಳ; ಕ್ಷಯ ಹೊಂದುವಂತಹ; ನಶ್ವರವಾದ. [ಸಂ.]

**ಕ್ಷಯಿಸು** (ಕ್ರಿ). ೧. ಸೊರಗು; ಕೃಶವಾಗು: ಗ್ಲಾನ, ಗ್ಲಾಸ್ನು ಶಬ್ದಗಳು ಸಂಣಗೆ ಕ್ಷಯಿಸಿ ದುರ್ಬಲನಾದವನ ಹೆಸರುಗಳು (ಸಿದ್ಧಾಂತಿ. ೧೬೧). ೨. ಕ್ಷಯಹೊಂದು; ನಾಶವಾಗು. ೩. ನಾಶಮಾಡು: ನಿನ್ನೈಶ್ವರ್ಯ ಕ್ಷಯಿಸುವೆ ನಿಮಿಷ ಮಾತ್ರದಲಿ (ಚಂದ್ರಹಾ. ೪೯–೪೯). [ಕ್ಷಯ + –ಇಸು$_3$]

**ಕ್ಷಯೋಪಶಮ** (ನಾ). [ಜೈನ] ಆತ್ಮನ ಐದು ಭಾವಗಳಲ್ಲಿ ಒಂದು; ಕರ್ಮದ ಕೆಲವು ಅಂಶಗಳು ನಾಶವಾಗುವುದು; ಕೆಲವು ಶಾಂತವಾಗುವುದು: ಜಾತಿಸ್ಮರನಾದಂ ಕ್ಷಯೋಪಶಮವಶದಿಂದಂ (ಸುಕುಮಾ. ೧೧–೨೮). 'ಕ್ಷಾಯೋಪಶಮಿಕ' ಪರಾ. [ಕ್ಷಯ + ಉಪಶಮ]

**ಕ್ಷಯೋಪಶಮಲಬ್ಧಿ** (ನಾ). [ಜೈನ] ಐದು ಬಗೆಯ ಲಬ್ಧಿಗಳಲ್ಲಿ ಒಂದು: ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿಯೆಂಬ ಲಬ್ಧಿಪಂಚಕಮುಮಂ (ಸುಕುಮಾ. ೩–೩೯ ವ). [ಕ್ಷಯೋಪಶಮ + ಲಬ್ಧಿ]

**ಕ್ಷರ** (ಗು.) ೧. ಕರಗಿ ಹೋಗುವ; ನಶ್ವರವಾದ. ೨. ವಿಕಾರ ಹೊಂದತಕ್ಕ; ಮಾರ್ಪಡುವ ಸ್ವಭಾವವುಳ್ಳ: ಕ್ಷರನಕ್ಷರನೆನಿಪಗಣಿತ ವಿರುದ್ಧಗುಣ ನಿನ್ನ ನಿಜವದೇಂ ಕೇವಳಮೇ (ಜಗವಿ. ೩–೯೬). ೩. ಸ್ಥೂಲ ಶರೀರವನ್ನು ಹೊಂದಿರುವ; ಪ್ರಾಕೃತಿಕವಾದ; ಪಂಚಭೂತಾತ್ಮಕವಾದ: ಪರಕೆ ಪರವೆನಿಪಾ ಕ್ಷರಾಕ್ಷರ ಪುರುಷರೀಪ್ರಕೃತಿಯಲಿ ತೋಱಲು (ಅಮೃತ. ४–೫೬); ಸ್ಫುರಿಕುಂ ಮಹಾ ಕ್ಷರಾಕ್ಷರರೂಪಂ ಜಗಮೆಲ್ಲಂ (ವಿಷ್ಣುಪು. ೬–೯೬); ಕ್ಷರ ಅಂದರೆ ಸ್ಥೂಲ ಶರೀರವನ್ನು ಹೊಂದಿ ಶರೀರವನ್ನು ಕಳೆದುಕೊಳ್ಳುವ ಸ್ವಭಾವಗಳುಳ್ಳ ಬ್ರಹ್ಮಾದಿಗಳೆಲ್ಲರೂ ಕ್ಷರ ಶಬ್ದವಾಚ್ಯರು (ಹಸಾರ. ೩–೧ ಟೀಕು); ಕ್ಷರ, ಅಕ್ಷರ, ಉತ್ತಮ ಈ ತತ್ತ್ವತ್ರಯಗಳನ್ನು ಗೀತೆ ಪ್ರತಿಪಾದಿಸುತ್ತದೆ (ಭಾರದ. ೧೧೩). [ಸಂ.]

**ಕ್ಷರಣೆ** (ನಾ). ಸ್ರವಿಸುವುದು; ಸೋರುವುದು; ಸ್ಖಲನ: ಆಕೆಯಂ ನೆನೆದಿಂದ್ರಿಯ ಕ್ಷರಣೆಯಾದೊಡೆ (ಪಂಪಭಾ. ೧–೬೦ವ); ಅಂತು ಕೆಂತು ಪರವಶನಾಗಿ ಧೈರ್ಯಕ್ಷರಣೆಯುಮಿಂದ್ರಿಯಕ್ಷರಣೆಯುಮೊಡನೊಡನಾಗೆ (ಪಂಪಭಾ. ೨–೪೨ ವ). [< ಸಂ. ಕ್ಷರಣ]

**ಕ್ಷರತ್ಕರಟ** (ನಾ). ಸ್ರವಿಸುತ್ತಿರುವ (ಆನೆಯ) ಕುಂಭ; ಮದೋದಕ ಹರಿಯುತ್ತಿರುವ ಕಪೋಲವುಳ್ಳದ್ದು: ಕ್ಷರತ್ಕರಟಂ ಪ್ರಾಂಶುಮುಖಂ ದಶದ್ವಯನಖಂ ಕ್ರೋಧೋದ್ಧುರಂ ಸಿಂಧುರಂ (ಚಂದ್ರಪ್ರ. ೯–೯೯). [ಸಂ. ಕ್ಷರತ್ + ಕರಟ]

**ಕ್ಷರಿಸು** (ಕ್ರಿ). ಜಿನುಗು; ಹನಿ; ಸ್ರವಿಸು: ಆ ಕ್ಷರದ ಕ್ಷಾರ ಕ್ಷರಿಸುತ್ತಲಿರಲಿ ಅಕ್ಷರವು ಶಾಂತ ಜಲಧಿ (ಮುಕ್ತಕಂ. ೧೬–೧೧). [ಕ್ಷರಣ + –ಇಸು$_1$]

**ಕ್ಷವ** (ನಾ). ೧. ಸೀನುವಿಕೆ; ಸೀನು. ೨. ಕರಿಯ ಸಾಸವೆ. ೩. ಒಂದು ಬಗೆಯ ಸಸ್ಯ: "ಶಬಲಃ – ಕ್ಷವ, ಕೆವಟಗೆಬುಲ್ಲು" (ಒಷಧಿ. ೧೫೯). [ಸಂ.]

**ಕ್ಷವಥು** (ನಾ). ೧. ಸೀನು. ೨. ಕೆಮ್ಮಲು; ಕೆಮ್ಮು: "ಕ್ಷವಥುಃ, ಕಾಸಃ – ಈ ೩ ಕೆಮ್ಮು" (ಹಲಾಯು. ೬೮–೪೪೭); "ಕ್ಷವಥು ಖಾಸಮೆನೆ ಕೆಮ್ಮಕ್ಕು" (ಮಂಗರಾ. ೧೧೪–೪); ಕ್ಷವಥು ಪ್ರಾಣೋಪಾನೋದ್ರೇಕಾದಿರಹಿತಮುಮಾಗಿ (ಚಾವುಂಪು. ೪೭೪–೩). [ಸಂ.]

**ಕ್ಷಳ** (ನಾ). [ವ್ಯಾಕ] ಸಂಸ್ಕೃತದ ಲಕಾರಕ್ಕೆ ಪರ್ಯಾಯವಾಗಿ ಕನ್ನಡದಲ್ಲಿ ಬರುವ ಳಕಾರ: ಸಂಸ್ಕೃತಶಬ್ದನಿಯುಕ್ತ ಲಕಾರದ ನೆಲೆಗೆ ನಿಂದು ಸರಿಯಾಗಿ ಸಲ್ವುದಂ ಕ್ಷಳನೆಂಬರ್ (ಶಮದ. ೧೬); ಕೊಡೆ ಕವಿತತಿ ವಿಚಾರಿಸಬೇಡದಱಿಂ ಱಳ ಕುಳಕ್ಷಳಂಗಳನಿದಱೊಳ್ (ಗರಳ. ೧–೩೨); ಱಳಕುಳಕ್ಷಳ ಲಕ್ಷ್ಮದೆ . . . ಪೊಣ್ಮಳರಕಾಱ ಪ್ರಾಸಭೇದಂಗಳ (ಸಾಳ್ವಭಾ. ೧–೫೫). 'ಕುಳ', 'ಱಳ' ಪರಾ. [?]

**ಕ್ಷಾಂತ** (ಗು.) ೧. ಸೈರಣೆಯುಳ್ಳ; ಸಹಿಸುವ; ಶಾಂತವಾದ. (ನಾ). ೨. ತಾಳ್ಮೆಯುಳ್ಳವನು; ಸಹಿಸುವವನು: ನವ ಕುಮಾರನು . . . ಸ್ವಲ್ಪವರಲ್ಲಿ ಕ್ಷಾಂತನಾಗುವ ಸ್ವಭಾವದವನಾಗಿರಲಿಲ್ಲ (ಕಪಾಕುಂ. ೭). [ಸಂ.]

**ಕ್ಷಾಂತಿ** (ನಾ). ತಾಳ್ಮೆ; ಸೈರಣೆ; ಸಹನೆ; ಕ್ಷಮೆ: ಕಟ್ಟಿದ ಪಟ್ಟಂ ಬರ್ಪ ಮುಪ್ಪಂ ಮಱೆಯಿಸಿತಧಿಕಕ್ಷಾಂತಿಯುಂ ವಿಪ್ರವರ್ಗಾಸ್ಪದ ದರ್ಭಾಗ್ನೀಕ ಸಂಮಾರ್ಜನಿ ಕಳೆದುದೆನಲ್ ದುಷ್ಪರಪ್ಪರ್ ನೃಪಾಲರ್ (ಕಾದಂಪೂ. ೪೫೪); ಕ್ಷಾಂತಿಃ – ಕ್ಷಮೆಯುಂ (ತತ್ತ್ವಪ್ರ. ೨೬೧). [ಸಂ.]

**ಕ್ಷಾತ್ರ** (ಗು).೧. ಕ್ಷತ್ರಿಯನಿಗೆ ಸೇರಿದ; ಕ್ಷತ್ರಿಯನಿಗೆ ಸಂಬಂಧಪಟ್ಟ: ಕ್ಷಾತ್ರದುಸ್ಸಾಮುಸಮಡಸಿದವಂಗಳ್ಕುಮೇ ಸದ್ವಿವೇಕಂ (ಶಬಕಂ. ४–೫೫). (ನಾ). ೨. ಕ್ಷತ್ರಿಯರ ಕುಲ ಅಥವಾ ಸಮೂಹ: ಕೆಡಿಸುವರು ರಾಷ್ಟ್ರವನು ಕ್ಷಾತ್ರವ ತಡೆಗೆಡಿಸಿ ಚತುರಂಗಬಲವನು ಹುಡಿಹುಡಿಯ ಮಾಡುವರು ನಿರ್ಜರರು (ಕುವ್ಯಾಉ. ४–೭೭). ೩. ಕ್ಷತ್ರಿಯರ ತೇಜಸ್ಸು, —ಘನತೆ, —ಗೌರವ, —ಮಹತ್ವ. ೪. ರಾಜ್ಯಪಾಲನೆ. 'ಕ್ಷಾತ್ರಭಾರ' ಪರಾ. [ಸಂ.]

**ಕ್ಷಾತ್ರತೇಜ** (ನಾ). = ಕ್ಷತ್ರತೇಜ : ಭಾರತದಲ್ಲಿ . . . ಕ್ಷಾತ್ರತೇಜವೇ ಬಲಗೊಂಡು ಸಂದರ್ಭವಶಾತ್ ಸತ್ವದ ಸಹಾನುಭೂತಿಯನ್ನೊಂದುತ್ತದೆ (ಭಾರದ. ೪೮೪). [ಕ್ಷಾತ್ರ + ತೇಜ]

**ಕ್ಷಾತ್ರತೇಜಸ್ಸು** (ನಾ). = ಕ್ಷತ್ರತೇಜ : ಮುಖದಲ್ಲಿ ಕ್ಷಾತ್ರತೇಜಸ್ಸಿದೆ (ವಚಭಾ. ೭೮); ಈ ಕಲಿಯುಗದಲ್ಲಿ ಕ್ಷಾತ್ರತೇಜಸ್ಸಿನ ಮುಂದೆ ಬ್ರಾಹ್ಮಣ್ಯವು ಕಳೆಗುಂದಿತಲ್ಲ (ಕರ್ನಾಅ. ೧೭). [ಕ್ಷಾತ್ರ + ತೇಜಸ್ಸು]

**ಕ್ಷಾತ್ರಧರ್ಮ** (ನಾ). = ಕ್ಷತ್ರಧರ್ಮ : ಕ್ಷಾತ್ರಧರ್ಮವನೀಕ್ಷಿಸಲ್ ನಿನಗೆ ಪಾತಕಂ ಗೋತ್ರವಧೆಯಿಂದೆ ಬರ್ಪುದೆ (ಜೈಮಿಭಾ. ೨-೨೨); ಕ್ಷಾತ್ರಧರ್ಮವೆಂದರೆ ಕ್ಷತಿಯಿಂದ ಕ್ಷಿತಿಯನ್ನು ಕಾಪಾಡುವುದು (ಭಾರದ. ೧೧೭). [ಕ್ಷಾತ್ರ + ಧರ್ಮ]

**ಕ್ಷಾತ್ರಪ** (ನಾ). ಪ್ರಾಂತಾಧಿಕಾರಿ; ಕ್ಷತ್ರಪ: ದರ್ಯವುಷನು ನಿಯಮಿಸಿದ ಪ್ರಾಂತಾಧಿಕಾರಿಗಳಿಗೆ 'ಕ್ಷಾತ್ರಪ' ಎಂದು ಹೆಸರು (ಭಾರದ. ೪೧೯). [< ಸಂ. ಕ್ಷತ್ರಪ]

**ಕ್ಷಾತ್ರಪೂರ್ಣ** (ಗು). ಕ್ಷತ್ರಿಯ ತೇಜಸ್ಸಿದಿಂದ ಕೂಡಿದ; ವೀರಾವೇಶವುಳ್ಳ : ಕ್ಷಾತ್ರಪೂರ್ಣವಾದ ಮಾತುಗಳಿಂದ ಶ್ರೀಕೃಷ್ಣನನ್ನು ಸಂಬೋಧಿಸಿ . . . ಕೇಳುತ್ತಾನೆ (ಭಾರದ. ೧೧೧). [ಕ್ಷಾತ್ರ + ಪೂರ್ಣ]

**ಕ್ಷಾತ್ರಭಾರ** (ನಾ). ೧. ರಾಜ್ಯಭಾರ; ಆಡಳಿತದ ಹೊಣೆ: ಸಮಸ್ತ ಕ್ಷಾತ್ರಭಾರಮಂ ಜಿತಶತ್ರುವೆಂಬ ಪುತ್ರನೊಳ್ ನಿಜಿಸಿ (ಚಂದ್ರಪು. ೯-೪೧ ವ). ೨. ಕ್ಷತ್ರಿಯೋಚಿತ ಹೊಣೆ. [ಕ್ಷಾತ್ರ + ಭಾರ]

**ಕ್ಷಾತ್ರವೀರ** (ನಾ). ಕ್ಷತ್ರಿಯ ಕುಲದ ವೀರ: ಯುದ್ಧಮಾಡಲು ಕ್ಷಾತ್ರವೀರನಾದ ಅರ್ಜುನನು ಅಲ್ಲಗಳೆಯುತ್ತಾನೆ (ಧರ್ಮಸಾ. ೧೩೮). [ಕ್ಷಾತ್ರ + ವೀರ]

**ಕ್ಷಾತ್ರಶಕ್ತಿ** (ನಾ). ಕ್ಷತ್ರಿಯ ಶಕ್ತಿ ; ಸೈನಿಕ ಶಕ್ತಿ : ರಾಷ್ಟ್ರದ ಸಂಪತ್ತು ಮತ್ತು ಸಂಸ್ಕೃತಿಯ ರಕ್ಷಣೆ ನಾಯಕನ ಕ್ಷಾತ್ರಶಕ್ತಿಯನ್ನವಲಂಬಿಸಿದೆ (ಮಕ್ಷಾರ. ೧೦೩ ಪೀಠಿಕೆ); ಕ್ಷಾತ್ರಶಕ್ತಿಯನು ಗೆದ್ದಂದದಲಿ ಬ್ರಹ್ಮತೇಜವನು ಗೆಲ್ಲುವರೆ? (ಕೋಗಿಲೆ. ೨೧-೬೨). [ಕ್ಷಾತ್ರ + ಶಕ್ತಿ]

**ಕ್ಷಾಮ** (ಗು). ೧. ಸುಡಲ್ಪಟ್ಟ; ಸೀದುಹೋದ: (ಶ). ೨. ಬಡವಾದ; ಸೊರಗಿದ; ಕೃಶವಾದ; ತೆಳುವಾದ: ಕ್ಷಾಮವು ಮಧ್ಯವು ಅಕೃಶವು ಜಘನವು (ಇಂಚಾಪ. ೧೭೪-೫೬). (ನಾ). ೩. ತೆಳುವು; ಕ್ಷೀಣತೆ: ಕ್ಷಾಮಂ ಲಲನಾಮಧ್ಯದೊಳಲ್ಲದಾ ಸುದೇಶದೊಳುಂಟೇ (ಗಿರಿಕ. ೨-೮). ೪. ಬರ; ಬರಗಾಲ: "ಡಾವರಮೂ ಕ್ಷಾಮಮುಮಕ್ಕುಂ" (ಕವಿಕಂ. ೨೬೯); ಕ್ಷಾಮಕಾಲಕ್ಕೆ ನಾನು ಮಾತ್ರ ಲಾಭ (ಗಾದೆ). ೫. [ನಾಟ್ಯ] ಕಪೋಲದ ಆರು ಭೇದಗಳಲ್ಲಿ ಒಂದು ೞ ಕೆನ್ನೆಗಳು ತೆಳ್ಳಗೆ ಕಾಣುವಂತೆ ಸ್ವಲ್ಪ ಒಳಕ್ಕೆ ಮಾಡುವುದು : ತೆಳ್ಪಂ ತಾಳ್ದಿದ ಗಲ್ಲಗಳೊಳ್ಪಂಬಡೆ ಕ್ಷಾಮಂ (ಲಾಸ್ಯರಂ. ೩-೧).

**ಕ್ಷಾಮಡಾಮರ** = ಕ್ಷಾಮ ಮತ್ತು ಡಾಮರ: ಕ್ಷಾಮಡಾಮರ ಕಾಲಲೀಲೆ . . . ಮದನನ ಮದಂ ಭೂತಖ್ಯಾತಿ ಹುಗಲಾಜವು (ಹಚಕಾ. ೧೧-೩೬); ಕ್ಷಾಮಡಾಮರ ಭಯನಿವಾರಣ (ಬಸವು. ೭-೧೭); ಕ್ಷಾಮಡಾಮರಂಗಳುಂ ಬೇರುಡಿದು ಪಾಟಿಪ್ಪೀಳುಂ ಪೊಟಲೊಳ್ (ರಾಮಾಶ್ವ. ೧೪-೨೯); ಈ ಸಸ್ಯವರ್ಗಗಳು . . . ಕ್ಷಾಮಡಾಮರಗಳನ್ನು ತಂದು ಸೇಡುತೀರಿಸಿಕೊಳ್ಳುತ್ತವೋ (ಈಚಕ. ೧೨೦). [ಸಂ.]

**ಕ್ಷಾಮಬಾಧೆ** (ನಾ). ಬರಗಾಲದಿಂದ ಉಂಟಾಗುವ ತೊಂದರೆ: ಆರಂಬದಲ್ಲಿ ತೊಡಗಿದವರೆಲ್ಲರೂ ಹೀಗೆ ಮನಸ್ಸಿಟ್ಟು ಸರಿಯಾಗಿ ಕೆಲಸ ಮಾಡುತ್ತಾ ಬಂದರೆ ಆ ದೇಶಕ್ಕೆ ಕ್ಷಾಮಬಾಧೆಯೇ ಇರುವುದಿಲ್ಲ (ವ್ಯವಮು. vii, ಮುನ್ನುಡಿ). [ಕ್ಷಾಮ + ಬಾಧೆ]

**ಕ್ಷಾಯಿಕ** (ನಾ). [ಜೈನ] ಆತ್ಮನ ಐದು ಭಾವಗಳಲ್ಲಿ ಒಂದು ; ಕರ್ಮಬಂಧದಿಂದ ಸಂಪೂರ್ಣ ಬಿಡುಗಡೆ ಹೊಂದುವ ಅವಸ್ಥೆ : ಜೀವನನಾವುಪಾಯದಿನುಪಲಕ್ಷಿಸಲ್ ಬರ್ಕುಮೆಂದೊಡೆ ಭಾವೋಪಲಕ್ಷಕಂ ಜೀವನೆಂಬುದು ಅವಾವುವೆಂದೊಡೆ ಔದಯಿಕಭಾವಂ ಔಪಶಮಿಕಭಾವಂ ಕ್ಷಾಯಿಕಭಾವಂ ಕ್ಷಾಯೋಪಶಮಿಕಭಾವಂ ಪಾರಿಣಾಮಿಕಭಾವಮೆಂದಿಂತು ಭಾವಮಯ್ದು ತೆಜಿನಕ್ಕುಂ (ಸುಕುಮಾ. ೮-೪ ವ); ಕೇವಲಜ್ಞಾನಿಗಳ್ಗೆ ನಿಯಮದಿಂ ಕ್ಷಾಯಿಕಮಕ್ಕುಂ . . . ನಿರ್ಲೇಶ್ಯರ್ಗೆ ನಿಯವದಿಂ ಕ್ಷಾಯಿಕಮಕ್ಕುಂ, ಅಭವ್ಯರ್ಗಿಲ್ಲ (ತತ್ತ್ವಪ್ರ. ೧೨). [ಸಂ.]

**ಕ್ಷಾಯಿಕದೃಷ್ಟಿ** (ನಾ). [ಜೈನ] = ಕ್ಷಾಯಿಕಸಮ್ಯಕ್ತ್ವ: ಕ್ಷಾಯಿಕದೃಷ್ಟಿ ತುಷ್ಟಿಯೊಳೊಡಂಬಡೆ (ಶಾಂತಿಪು. ೧-೪). [ಕ್ಷಾಯಿಕ + ದೃಷ್ಟಿ]

**ಕ್ಷಾಯಿಕಸಮ್ಯಕ್ತ್ವ** (ನಾ). [ಜೈನ]: "ದರ್ಶನ ಮೋಹನೀಯ ಕರ್ಮವು ಕ್ಷೀಣವಾದಮೇಲೆ ನಿರ್ಮಲಶ್ರದ್ಧೆಯುಂಟಾಗುತ್ತದೆ. ಇದಕ್ಕೆ ಕ್ಷಾಯಿಕ ಸಮ್ಯಕ್ತ್ವವೆಂದು ಹೇಳುತ್ತಾರೆ" (ಶ್ರಾವಕಾ. ೬೨೩); ಕ್ಷಾಯಿಕ ಸಮ್ಯಕ್ತ್ವಮುಮನಂತಜ್ಞಾನಮುಮನಂತದರ್ಶನಮುಮನಂತ ವೀರ್ಯಮುಂ . . . ಅವ್ಯಾಬಾಧಂಗಳೆಂಟುಂ ಗುಣಂಗಳಾತ್ಮಾಯತ್ತಮಾಗೆ (ಶಾಂತಿಪು. ೧೨-೫೧ ವ); ಸಪ್ತ ಪ್ರಕೃತಿಗಳ ನಿರವಶೇಷಕ್ಷಯದಿಂ ಕ್ಷಾಯಿಕಸಮ್ಯಕ್ತ್ವಮಕ್ಕುಂ (ಶಾಸ್ತ್ರಟೀ. ೪೨-೪). [ಕ್ಷಾಯಿಕ + ಸಮ್ಯಕ್ತ್ವ]

**ಕ್ಷಾಯಿಕಸಮ್ಯಗ್ದರ್ಶನ** (ನಾ). = ಕ್ಷಾಯಿಕಸಮ್ಯಕ್ತ್ವ : ಮಿಥ್ಯಾತ್ವ ಸಮ್ಯಕ್ತ್ವಪ್ರಕೃತಿ ಸಮ್ಯಙ್ಮಿಥ್ಯಾತ್ವಮೆಂದು ತ್ರಿವಿಧಮಪ್ಪ ದರ್ಶನ ಮೋಹನೀಯಮುಂ ನಿರ್ಮೂಲಿಸಿ ಕ್ಷಾಯಿಕಸಮ್ಯಗ್ದರ್ಶನಮುಮನವಗಯ್ಸಿ (ಶಾಂತಿಪು. ೧೧-೧೧೧ ವ). [ಕ್ಷಾಯಿಕ + ಸಮ್ಯಗ್ದರ್ಶನ]

**ಕ್ಷಾಯಿಕಸಮ್ಯಗ್ದೃಷ್ಟಿ** (ನಾ). ೧. = ಕ್ಷಾಯಿಕಸಮ್ಯಕ್ತ್ವ : ಸಪ್ತ ಪ್ರಕೃತಿಗಳ ನಿರವಶೇಷ ಕ್ಷಯದಿಂ ಕ್ಷಾಯಿಕ ಸಮ್ಯಗ್ದೃಷ್ಟಿಯಕ್ಕುಂ (ಶ್ರಾವಕಾ. ೧೭೩-೧). ೨. ಕ್ಷಾಯಿಕಸಮ್ಯಕ್ತ್ವವನ್ನು ಹೊಂದಿದವನು : ದರ್ಶನ ಮೋಹನೀಯತ್ರಿಕದ ನಿರ್ಮೂಲನದಿಂ ಕ್ಷಾಯಿಕ ಸಮ್ಯಗ್ದೃಷ್ಟಿಯಾಗಿ (ಆದಿಪು. ೧೦-೧೪ ವ), ಆ ಯತಿನಾಥರ ಶಿಷ್ಯರ್ . . . ಕ್ಷಾಯಿಕ ಸಮ್ಯಗ್ದೃಷ್ಟಿಗಳ್ (ಶಾಂತಿಪು. ೧-೨೦). [ಕ್ಷಾಯಿಕ + ಸಮ್ಯಗ್ದೃಷ್ಟಿ]

**ಕ್ಷಾಯೋಪಶಮಿಕ** (ನಾ). [ಜೈನ] ಆತ್ಮನ ಐದು ಭಾವಗಳಲ್ಲಿ ಒಂದು: ಔದಯಿಕಭಾವಂ . . . ಕ್ಷಾಯೋಪಶಮಿಕಭಾವಂ ಪಾರಿಣಾಮಿಕ ಭಾವಮೆಂದಿಂತು ಭಾವಮಯ್ದು ತೆಜಿನಕ್ಕುಂ (ಸುಕುಮಾ. ೮-೪ ವ). [ಸಂ.]

**ಕ್ಷಾರ** (ಗು). ೧. ಉಪ್ಪಾದ ; ಉಪ್ಪಿನ ರುಚಿಯುಳ್ಳ; ಉಪ್ಪುಪ್ಪಾದ. ೨. ಕೊರೆಯುವ ; ಕಟುವಾದ ; ಖಾರವಾದ ; ಉಗ್ರವಾದ ; ತೀಕ್ಷ್ಣವಾದ : ನಾಲಗೆ . . . ಕ್ಷಾರವಾಗಿ ದ್ರವವಾತ ಇದ್ದರೆ ಪಿತ್ತಾಧಿಕ್ಯವೆಂದರಿವುದು (ಸಕವೈ. ೧೪). ೩. ಜಿನುಗುವ ; ಸೋರುವ ; ದ್ರವಿಸುವ. (ನಾ). ೪. ಉಪ್ಪು ; ಲವಣ ; ಸವುಳು ; ಚವುಳು : ಕ್ಷಾರಂ=ಉಪ್ಪಿಗೂ (ನಾನಾರ. ೭೨೮ ಟೀಕೆ). ೫. ಉಗ್ರತೆ ; ತೀಕ್ಷ್ಣತೆ : ಈ ಉಪ್ಪಿಗೆ ಅಟ್ಟುಪ್ಪು ಅನ್ನುತ್ತಾರೆ. ಆದಕ್ಕೆ ನಮ್ಮ ದೇಶದಲ್ಲಿ ಹುಟ್ಟುವ ಉಪ್ಪಿಗಿಂತ ಕ್ಷಾರ ಕಡಿಮೆ (ಮುಂಬಯಿ. ೪-೨೦೦); ಹೆಚ್ಚು ಕ್ಷಾರವುಳ್ಳ ಅಗ್ಗದ ಸಾಬೂನನ್ನು ಉಪಯೋಗಿಸಿ (ಗೃಹವಿ.೬೨). ೬. ಬೂದಿ; ಭಸ್ಮ : "ಕ್ಷಾರಂ ವಿಭೂತಿ ಭಸ್ಮಂ ರಕ್ಷೆ ಭಸಿತಮೆನೆ ಸಾರ್ದಿರ್ ಬೂದಿಯಕ್ಕು" (ಮಂಗರಾ.೧೫-೯); ಆದಕ್ಕೈದು ನಾಮವದನಜಿಪುವೆಂ ವರ ವಿಭೂತಿರ್ಭಸಿತ ಭಸ್ಮಕ್ಷಾರಂ ರಕ್ಷೆ ಪರಿವಿಡಿಯೊಳುಜುವ ಪೆಸರಿಂತಿವುಂ (ಲಶಿಚಂ. ೪೧-೪).

೭. ಗಾಜು; ಕಾಜು. ೮. ಬಯ್ಗುಳು ೯. (ಅಲಂ) ದುಷ್ಟ; ನೀಚ. ▯ ನುಗ್ಗೆ, ಮೂಲಂಗಿ, ಮುತ್ತುಗ, ಪುಲ್ಲಂಪುರುಚೆ, ಚಿತ್ರಮೂಲ, ಹಸಿಶುಂಠಿ, ಬೇವು, ಕಬ್ಬು, ಉತ್ತರಣೆ, ಕೀರೆ —ಈ ಹತ್ತು ಕ್ಷಾರದ್ರವ್ಯಗಳು. ಇವುಗಳಿಗೆ ಕ್ಷಾರದಶಕಗಳೆಂದೂ ಹೆಸರು. [ಸಂ.]

**ಕ್ಷಾರಕ** (ನಾ). ಮೊಗ್ಗು; ಕೋರಕ; ಕುಟ್ಮಲ; ಕಲಿಕೆ. [ಸಂ.]

**ಕ್ಷಾರಕಿ** (ನಾ). ಒಂದು ಬಗೆಯ ಬಳ್ಳಿ: "ಕ್ಷಾರಕಿಯೆನಲ್ಕೆ ತಮ್ಮಡಿವಲ್ಲಿ" (ಮಂಗರಾ. ೪೪-೫೫). [ಸಂ.]

**ಕ್ಷಾರಕೂಪ** (ನಾ). ಒಂದು ನರಕದ ಹೆಸರು: ಕ್ಷಾರಕೂಪ . . . ಶಿಲಾಸಂಕಟಮೆಂಬೈದು ಮಂತ್ರಿನರಕಂಗಳೆಂದೊಪ್ಪಿ ವಿಷವರ್ತುಳವೆಂಬರಸು ನರಕವಿಹುದು (ವಿವೇಕ. ೧೪೧). [ಕ್ಷಾರ + ಕೂಪ]

**ಕ್ಷಾರಣ** (ನಾ). ೧. ಸೋರುವಂತೆ ಮಾಡುವುದು. ೨. ವ್ಯಭಿಚಾರದ ಆರೋಪ, —ತಪ್ಪು ಹೊರಿಸುವುದು. ೩. ಬಯ್ಗುಳು: "ಶಾಪಮಾಕ್ರೋಶಂ ವಿರೂಕ್ಷಣಂ ಕ್ಷಾರಣಾಕ್ಷೇಪಮೆನೆ ಬೈಗುಳೆನಿಸಿಕ್ಕು" (ಮಂಗರಾ. ೨೬-೫). [ಸಂ.]

**ಕ್ಷಾರದ್ರವ್ಯ** (ನಾ). ಲವಣಾಂಶವುಳ್ಳ ದ್ರವ್ಯ; ಕ್ಷಾರ ಸಹಿತವಾದ ದ್ರವ್ಯ: ಕ್ಷಾರದ್ರವ್ಯಗಳನ್ನು ಹೆಚ್ಚಾಗಿ ತೆಗೆದುಕೊಂಡಿದ್ದರೆ ನಾಡಿಯು ಬೆವರುಸಹಿತ ಅತಿವೇಗದಲ್ಲಿ ನಡೆಯುತ್ತೆ (ಸಕವೈ. ೧೨). [ಕ್ಷಾರ + ದ್ರವ್ಯ]

**ಕ್ಷಾರಮೃತ್ತಿಕೆ** (ನಾ). ಉಪ್ಪುಮಣ್ಣು; ಸವುಳುಮಣ್ಣು; ಚೌಳು ಮಣ್ಣು: "ಊಷಃ, ಕ್ಷಾರಮೃತ್ತಿಕಾ – ೨ ಚೌಳುಮಣ್ಣಿನ ಹೆಸರುಗಳು" (ಸಿದ್ಧಾಂತಿ. ೮೩). [ಕ್ಷಾರ + ಮೃತ್ತಿಕೆ]

**ಕ್ಷಾರವಾರಿ** (ನಾ). ಉಪ್ಪುನೀರು: ಸುಜುಸುಜನೆ ಬಡಿತಂಗಾಸುವುದುಂ ಕರ್ಕಶ ಕ್ಷಾರವಾರಿಯಂ ತಂದು ಸಜಸಜನೆ ಪೂಸುವುದುಂ (ಸುಕುಮಾ. ೧೧-೯೭ ವ). [ಕ್ಷಾರ + ವಾರಿ]

**ಕ್ಷಾರವಿಧಿ** (ನಾ). ಒಂದು ಬಗೆಯ ವೈದ್ಯಕೀಯ ಚಿಕಿತ್ಸೆ; ಲವಣವನ್ನು ಉಪಯೋಗಿಸಿ ಮಾಡುವ ಚಿಕಿತ್ಸೆ: ಬಾಲ್ಯದಲ್ಲಿಯೂ ವೃದ್ಧಾಪ್ಯದಲ್ಲಿಯೂ ಕ್ಷಾರವಿಧಿ, ಅಗ್ನಿವಿಧಿ, ಶಸ್ತ್ರವಿಧಿಗಳನ್ನು ಮಾಡಲಾಗದು (ಸಕವೈ. ೧೫). [ಕ್ಷಾರ + ವಿಧಿ]

**ಕ್ಷಾರಾಂಬುಧಿ** (ನಾ). ಉಪ್ಪುನೀರಿನ ಕಡಲು; ಲವಣಸಮುದ್ರ. [ಕ್ಷಾರ + ಅಂಬುಧಿ]

**ಕ್ಷಾರಾಂಶ** (ನಾ). ಉಪ್ಪಿನ ಅಂಶ: ಅದು (ನೀರು) ಬಿಸಿಲಿಗೆ ಬತ್ತಿ ಹೋಗಿ, ಅದರೊಳಗಿನ ಕ್ಷಾರಾಂಶವು ತಳಕ್ಕೆ ಕೂಡುತ್ತದೆ (ಮುಂಬಯಿ. ೪-೧೪೮). [ಕ್ಷಾರ + ಅಂಶ]

**ಕ್ಷಾರಿತ** (ಗು). ೧. ಸೋರುವಂತೆ ಮಾಡಲ್ಪಟ್ಟ. ೨. ವ್ಯಭಿಚಾರದ ಆರೋಪಕ್ಕೆ ಗುರಿಯಾದ. (ನಾ). ೩. ಅನಾಚಾರದ ಆರೋಪಕ್ಕೆ ಗುರಿಯಾದವನು: "ಅಕ್ಷಾರಿತಃ, ಕ್ಷಾರಿತಃ, ಅಭಿಶಸ್ತಃ – ೩ ಪರಸ್ತ್ರೀಗಮನ ಬ್ರಹ್ಮಹತ್ಯಾದಿ ದೋಷಗಳಿಂದ ದೂರಲ್ಪಟ್ಟವನ ಹೆಸರುಗಳು" (ಸಿದ್ಧಾಂತಿ. ೨೮೭). [ಸಂ.]

**ಕ್ಷಾರೋದಕ** (ನಾ). ಉಪ್ಪುನೀರು: ಲವಣಾಂಬುಧಿಯ ಕ್ಷಾರೋದಕವು ಮೇಘಗಳ ಸಂಸ್ಕೃತಿಯಿಂಬಿಡಿದು ಸ್ವಾದೈದಿದೊಲು (ಗಗತಾ. ೧೪-೨೬). [ಕ್ಷಾರ + ಉದಕ]

**ಕ್ಷಾರೋದಧಿ** (ನಾ). = ಕ್ಷಾರಾಂಬುಧಿ: ನನ್ನೆದೆಯ ನಿನ್ನೆದೆಯ ನಡುವೆ ಕ್ಷಾರೋದಧಿಯು (ಉಯ್ಯಾಲೆ. ೩೭-೧). [ಕ್ಷಾರ + ಉದಧಿ]

**ಕ್ಷಾಲ** (ನಾ). ತೊಳೆಯುವಿಕೆ; ಶುದ್ಧಿಮಾಡುವಿಕೆ. [ಸಂ.]

**ಕ್ಷಾಲನ** (ನಾ). = ಕ್ಷಾಲ: ತದ್ದೋಷ ಪಂಕಿಲತಾ ಕ್ಷಾಲನ ತತ್ಪರಂ (ಪಂರಾಮಾ. ೭-೧೧೭); ಶಾಲ್ಮಕ್ಷತಪ್ರಸರ ಕ್ಷಾಲನ ತೋರಣ ಗ್ರಥನ ಮುಕ್ತಾಮಾಳಿಕಾಳಂಬನ ವ್ಯಸನ ವ್ಯಗ್ರಕರಂ ಕರಂ ಸೊಗಯಿಸಿತ್ತಂತಲ್ಲಿ ಕಾಂತಾಜನಂ (ಚಂದ್ರಪ್ರ. ೬-೫೫); ಚರಣವದನ ಕ್ಷಾಲನಾಂತಃಕರಣ ಶುದ್ಧಿಯಲಾಚಮನ ವಿಸ್ತರಣದಲಿ (ಕು ವ್ಯಾ ಗ. ೩-೪೨); ದುಃಖ ಪಾತಕಗಳ ಕ್ಷಾಲನವಾಗಲೇಬೇಕು (ತುಳಸಿ. ೧೭೯). [ಸಂ.]

**ಕ್ಷಾಲನೆ** (ನಾ). = ಕ್ಷಾಲ: ಆ ಪಾಪಕ್ಷಾಲನೆಯಾದಾಗ ಆ ರಜ್ಜು ಮಾಯವಾದೀತು (ಸಮಜೀ. ೯೭೧). [< ಸಂ. ಕ್ಷಾಲನ]

**ಕ್ಷಾಲಿತ** (ಗು). ತೊಳೆಯಲ್ಪಟ್ಟ; ಶುದ್ಧಗೊಳಿಸಲ್ಪಟ್ಟ: ಕ್ಷಾಲಿತ ಮಲಿನಪಂಕಹಯಪಯಸೇ ಲಾಲಿತಾಸಮತೇಜಸೇ . . . ಬಸವಾಯ ತೇ ಜಯತು (ಬಸವು. ೬೦-೮೯). [ಸಂ.]

**ಕ್ಷಾವ** (ನಾ). = ಕ್ಷವ. [ಸಂ.]

**ಕ್ಷಿತ** (ಗು). ೧. ಕುಗ್ಗಿಸಲ್ಪಟ್ಟ; ಕಡಮೆಗೊಳಿಸಿದ; ಕ್ಷೀಣಿಸಿದ; ಕ್ಷೀಣ. ೨. ನೋಯಿಸಲ್ಪಟ್ಟ; ಹಿಂಸಿಸಲ್ಪಟ್ಟ. [ಸಂ.]

**ಕ್ಷಿತಿ** (ನಾ). ೧. ಪೃಥ್ವಿ; ಭೂಮಿ: ಚತುರಂತ ಕ್ಷಿತಿಕಾಂತೆ ಕೇಳ್ ಜಲಧಿ ಕೇಳ್ . . . ಎಂದು ಪೂಣ್ದೊದಱಿದಂ (ಗಪಾಯು. ೮-೨೩); ಕ್ಷಿತಿಯೊಳ್ ಮುನ್ನಬ್ಜನೇತ್ರಂ ಮನೆಯಳಿಯನೆನಲ್ ಕ್ಷೀರವಾರಾಶಿಯಿಂ ವಿಶ್ರುತ ಲಕ್ಷ್ಮೀದೇವಿಯಿಂ ಕೌಸ್ತುಭಮಣಿಸಹಿತಂ ಕೊಂಡಂ (ಪುಷ್ಪವು. ೧-೭೨); ನಿನ್ನಂತೆ ಸತ್ಕರೀ ಕ್ಷಿತಿಯೊಳಿನ್ನಾರುಂಟು (ಹಚಕಾ. ೧೪-೧೦). ೨. ಸ್ಥಳ; ಪ್ರದೇಶ: ಕ್ಷಿತಿಪತಿಯ ಪಾದಪೀಠ ಕ್ಷಿತಿಯೊಳ್ ನತರಾಗಿ (ನೇಮಿಪು. ೩-೧೩೨). ೩. ಮಣ್ಣು; ನೆಲ; ಹೊಲ. ೪. ಕೇಡು; ಕ್ಷಯ; ನಾಶ: "ಧರಾತಳ ಕೇಡುಂ ಕ್ಷಿತಿಯಕ್ಕುಂ" (ನಾನಾರ. ೧೩೧); ರಾಜಲೀಲಾನುವರ್ತನೆ ದೋಷಾವೃತಮಲ್ಲದೇ ಕ್ಷಿತಿ ಮನಕ್ಕುದ್ವೇಗಮಂ ಮಾಡದೇ (ಪುಷ್ಪವು. ೧೩-೨೯). ೫. ವಾಸಸ್ಥಳ; ನಿವಾಸ. ೬. [ಗಣಿತ] ಇಪ್ಪತ್ತೊಂದು ಅಂಕಗಳಿರುವ ಸಂಖ್ಯೆ: ಕ್ಷಿತಿರೇಕ ವಿಂಶಸ್ಥಾನಂ (ವ್ಯವಹಾ. ೮); ಕ್ಷಿತಿ, ಮಹಾಕ್ಷಿತಿ . . . ನಿಧಿ . . . ಇವು ೩೨ ವುಭಡಣೆ ಹೆಸರುಗಳು (ಭಾಸ್ಕರ. ೧೧-೮). [ಸಂ.]

**ಕ್ಷಿತಿಕಂಪ** (ನಾ). ಭೂಕಂಪ: ಕ್ಷಿತಿಕಂಪ ರಾಹುಕೇತುಭ್ರಮೆ ನರಪ್ರಗತಿ ಅತಿಚರಿತೆ ಪ್ರಕೃತಿಯಲಿ (ಮುಂಕುಕ. ೧೬೭). [ಕ್ಷಿತಿ + ಕಂಪ]

**ಕ್ಷಿತಿಕಾಂತ** (ನಾ). ಭೂಮಿಯ ಒಡೆಯ; ಅರಸ: ಸಂತಸಂ ಮಿಗೆ ಬಿಜ್ಜಳಕ್ಷಿತಿಕಾಂತನುಂ ತಾಂ ಬಂದು (ಬಸವು. ೫೩-೨೮). [ಕ್ಷಿತಿ + ಕಾಂತ]

**ಕ್ಷಿತಿಚಕ್ರ** (ನಾ). ಭೂಮಂಡಲ: ಹತವೈರಿ ಕ್ಷತ್ರಚಕ್ರಂ . . . ವಿನಮ್ರ ಕ್ಷಿತಿಚಕ್ರಂ (ಆದಿಪು. ೧೪-೩). [ಕ್ಷಿತಿ + ಚಕ್ರ]

**ಕ್ಷಿತಿಜ** (ನಾ). ೧. ಭೂಮಿಯಲ್ಲಿ ಹುಟ್ಟಿದುದು; ಮರ; ವೃಕ್ಷ: ಅಮರಕ್ಷಿತಿಜಮುಂ ಸುರಧೇನುವುಂ ಕನಕಾಚಲಮುಮಿರಲು . . . ಭಕ್ತನಾದವನಿತರ ಧನಮಂ ಬಯಸಿದಪನೇ (ಬಸವು. ೧೧-೯). ೨. ಅಂಗಾರಕ; ಮಂಗಳ; ಕುಜಗ್ರಹ: ಇನವರ್ಜ್ಯಂ ಕ್ಷಿತಿಜಾದಿಗಳ್ ಹಿಮಮಯೂಖಂಗಂತ್ಯದೊಳ್ ಕೂಡಿದಂದನಫಾಯೋಗಮದಕ್ಕುಂ (ಜಾತತಿ. ೧೪-೧). ೩. ಭೂಮಿಯನ್ನು ಮುಟ್ಟಿದಂತೆ ಕಾಣುವ ಆಕಾಶಭಾಗ; ದಿಗಂತರೇಖೆ; ದಿಕ್ತಟ: ಬೆಳ್ಳಕ್ಕಿಯ ಸಾಲು . . . ನಭದಲಿ ನೆಗೆದು ಸೊಬಗನು ವರ್ಣಿಸಿ ಕ್ಷಿತಿಜದಾಚೆ ಮರೆಯಾಗಿಹವು (ಚಿಂತನ. ೮೧); ಸೂರ್ಯಬಿಂಬ ಪೂರ್ವಕ್ಷಿತಿಜದಿಂದ ಮೇಲಕ್ಕೇಳುತ್ತಿದ್ದಾಗ (ಶಾಂತಲಾ. ೧೭೩). ೪. (ಅಲಂ) ಹೊಸ ಪ್ರದೇಶ, —ಅವಕಾಶ: ಹೊಸ ಪರಿಸ್ಥಿತಿಯು, ಹೊಸ ಕ್ಷಿತಿಜಗಳು ಕಣ್ಣೆಳತೆಯಲ್ಲಿ ಬರತೊಡಗುತ್ತವೆ (ಕರ್ನಾಟ. ೫೪೩). [ಸಂ.]

**ಕ್ಷಿತಿಜಾತ** (ನಾ). ಭೂಮಿಯಲ್ಲಿ ಹುಟ್ಟಿದುದು ; ಮರ; ವೃಕ್ಷ: ಚೈತ್ಯ ಕ್ಷಿತಿಜಾತ ಪ್ರಾಂತದೇಶಸ್ಥಿತ ಕನಕಮಯ ಪ್ರಾತಿಹಾರ್ಯಾಷ್ಟಕಾರ್ಹತ್ ಪ್ರತಿಬಿಂಬಭ್ರಾಂತಿಯಂ ಮಾಡಿದಂ (ಚಂದ್ರಪು. ೨-೮೨). [ಕ್ಷಿತಿ + ಜಾತ]

**ಕ್ಷಿತಿಜೆ** (ನಾ). ಭೂಮಿಯ ಮಗಳು ; ಸೀತೆ. [ಸಂ. ಕ್ಷಿತಿಜಾ]

**ಕ್ಷಿತಿಧರ** (ನಾ). ಭೂಮಿಗೆ ಆಧಾರವಾದುದು ; ಬೆಟ್ಟ ; ಪರ್ವತ : ಗುಣರತ್ನ ರೋಹಣ ಕ್ಷಿತಿಧರನತ್ಯುದಾತ್ತ ಮಹಿಮಂ (ಸಂರಾಮಾ. ೧೦-೨೩೬). [ಸಂ.]

**ಕ್ಷಿತಿಧರೇಂದ್ರ** (ನಾ). ಬೆಟ್ಟಗಳ ರಾಜ ; ಗಿರಿರಾಜ ; ಹಿಮವಂತ : ಕ್ಷಿತಿಧರೇಂದ್ರಸುತಾಸ್ಯ ಶತದಳಮದಮಧುವ್ರತನು (ಬಸವು. ೧೬-೩೦). [ಕ್ಷಿತಿಧರ + ಇಂದ್ರ]

**ಕ್ಷಿತಿನಾಥ** (ನಾ). ೧. ಭೂಮಿಯ ಒಡೆಯ; ಅರಸ; ರಾಜ: ಕ್ಷಿತಿನಾಥಂ ಕ್ಷಿತಿನಾಥನಂ ಪೊಣರ್ದು ಗೆಲ್ವಂತಾತನುಂ ದಲ್ ಗುಣ ಸ್ತುತಿಗಕ್ಕುಂ (ಶಾಂತಿಪು. ೮-೫೮) ; ಷಟ್ಖಂಡ ಕ್ಷಿತಿನಾಥನಪ್ಪಧಿಕ ಪುಣ್ಯಂ . . . ಸಾರ್ಗುಮಿನ್ನಾತನಂ (ಚಂದ್ರಪು. ೫-೩೫). ೨. ನಾಶವನ್ನು ಬಯಸುವವನು. ೧, ೨: ಆ ನೃಪಂ . . . ಕ್ಷಿತಿನಾಥನಾಗಿಯುಂ ಕ್ಷಿತಿನಾಥನಲ್ಲು ಅನಂಗ ಸುಭಗನಾಗಿಯುಂ ಅನಂಗಸುಭಗನಲ್ಲು (ಪುಷ್ಪಪು. ೯-೩೯ ವ). [ಕ್ಷಿತಿ + ನಾಥ]

**ಕ್ಷಿತಿನಾಥತ್ವ** (ನಾ). ಅರಸೊತ್ತಿಗೆ; ರಾಜತ್ವ: ಕ್ಷಿತಿನಾಥತ್ವಮ ನೊಲ್ವ ರಾಜತನಯರ್ ಪೂಣ್ದೆತ್ತಲೀ ಪ್ರಸ್ತರಕ್ಕೆ ತಗಳ್ವೆಂಬುದುಂ (ಶಾಂತಿಪು. ೫-೨೬). [ಸಂ.]

**ಕ್ಷಿತಿಪ** (ನಾ). = ಕ್ಷಿತಿಪಾಲ : ಕ್ಷಿತಿಪನ ಚಿತ್ತವೃತ್ತಿಗುಪದೇಶಿಪ ಲಾಸಕಿ ಯಂತೆ ತೋಱಿದಲ್ (ಚಂದ್ರಪು. ೩-೮೩) ; ಕ್ಷಿತಿಪ ನಿನ್ನೊಳು ನೆನೆದು ಕೊಳ್ವಾ ಫಲ ಉಸುರಲೇನು (ಬಸವು. ೫೧-೮). [ಸಂ.]

**ಕ್ಷಿತಿಪತಿ** (ನಾ). ಭೂಮಿಯ ಒಡೆಯ ; ಅರಸ: ಬ್ರತಹೀನರನನಿ ಬರುಮಂ ಕ್ಷಿತಿಪತಿ ಬೇಱಿರಿಸಿ ಮಾನ್ಯರಂ ಮನ್ನಿಸೆ (ಆದಿಪು. ೧೫-೩) ; ಕ್ಷಿತಿಪತಿಯ ವಿಜಯಭುಜದಸಿಲತೆ ರಿಪುನೃಪರ್ಗೀವುದಧಿಕ ತಾಪೋ ದಯಮುಮಂ (ಚಂದ್ರಪು. ೨-೩). [ಕ್ಷಿತಿ + ಪತಿ]

**ಕ್ಷಿತಿಪಾಲ** (ನಾ). ಭೂಮಿಯನ್ನು ರಕ್ಷಿಸುವವನು ; ದೊರೆ ; ಅರಸ. [ಸಂ.]

**ಕ್ಷಿತಿಪಾಲಕ** (ನಾ). = ಕ್ಷಿತಿಪಾಲ : ಪ್ರಕೃತಿಹಿತಾರ್ಥಂ ಕ್ಷಿತಿಪಾಲಕರು ದ್ಯೋಗಿಸುಗೆ (ಶಾಕುಂತ. ೧೧೬-೧೯೮). [ಕ್ಷಿತಿ + ಪಾಲಕ]

**ಕ್ಷಿತಿಪಾಲಮರ** (ನಾ). ಒಂದು ಬಗೆಯ ಮರ: "ಕ್ಷಿತಿಪಾಲಮರ, ಕಾಕಮರ" (ವೈಔಗಿ. ೭೯-೧೬೩೧). [ಕ್ಷಿತಿಪಾಲ + ಮರ₁]

**ಕ್ಷಿತಿರಕ್ಷಕ** (ನಾ). = ಕ್ಷಿತಿಪಾಲ : ಪಾತಕಮನಾ ಕ್ಷಿತಿರಕ್ಷಕನಂದು ಕೇಳ್ದು (ನೇಮಿಪು. ೬-೫೬). [ಕ್ಷಿತಿ + ರಕ್ಷಕ]

**ಕ್ಷಿತಿರಮಣ** (ನಾ). = ಕ್ಷಿತಿಕಾಂತ : ಕ್ಷಿತಿರಮಣ ಗರ್ವಸ್ಥಿರ ಸರಸ ಗಾಂಧರ್ವಶೋಭಾಕರ (ಬಸವು. ೩೬-೩೯). [ಕ್ಷಿತಿ + ರಮಣ]

**ಕ್ಷಿತಿರಸ** (ನಾ). ಭೂಮಿಯಲ್ಲಿನ ನೀರು : ಕ್ಷಿತಿರಸಮಂ ರವಿದ್ಯುತಿ ನಿಜದ್ಯುತಿಯಿಂ ತೆಗೆವಂತೆ (ಸುಕುಮಾ. ೮-೩೧). [ಕ್ಷಿತಿ + ರಸ]

**ಕ್ಷಿತಿರುಹ** (ನಾ). ಮರ; ವೃಕ್ಷ: ಕ್ಷಿತಿರುಹಕೆ ಸುಮುಫಲಮುಹೂರ್ತ ನಿಶ್ಚಿತವೇನು ? (ಮಂಕುಕ. ೫೬೯). [ಸಂ.]

**ಕ್ಷಿತಿವರ** (ನಾ). = ಕ್ಷಿತಿನಾಥ : ಜಿತಭವಮರಣಂ ಕ್ಷಿತಿವರನಿದಿರೊಳೆ ನಿಂದಂ (ಹಮ್ಮೀರ. ೨-೧೦). [ಕ್ಷಿತಿ + ವರ]

**ಕ್ಷಿತಿವಲಯ** (ನಾ). ಭೂಮಂಡಲ ; ಭೂವಲಯ : ಚತುರಂಭೋರಾಶಿ ಮಧ್ಯಕ್ಷಿತಿವಲಯದೊಳಂ (ಆದಿಪು. ೧೩-೯೧). [ಕ್ಷಿತಿ + ವಲಯ]

**ಕ್ಷಿತಿಸುತೆ** (ನಾ). = ಕ್ಷಿತಿಜೆ. [ಕ್ಷಿತಿ + ಸುತೆ]

**ಕ್ಷಿತಿಸುರ** (ನಾ). ಭೂಸುರ ; ಬ್ರಾಹ್ಮಣ : ಅತಿದುರಾತ್ಮಕರವದಿರೆನಿಬರು ಕ್ಷಿತಿಸುರರ ಕೊಂದಮಳಭೂಷಪ್ರತತಿಯನು ಕೊಂಡೊಯ್ದರು (ಕುವ್ಯಾಕ. ೧೭-೧೪). [ಕ್ಷಿತಿ + ಸುರ]

**ಕ್ಷಿತೀಶ** (ನಾ). = ಕ್ಷಿತಿನಾಥ : ಆ ಮುನೀಶಂ ಮುಮುಕ್ಷುವೃತ್ತಿಯೊಳ್ ನೆಗೞ್ದಂ, ಈ ಕ್ಷಿತೀಶಂ ಕ್ಷತ್ರವೃತ್ತಿಯೊಳ್ ನೆಗೞ್ದಂ (ಆದಿಪು. ೬-೧೪ ವ). [ಕ್ಷಿತಿ + ಈಶ]

**ಕ್ಷಿತ್ಯಧಿಪ** (ನಾ). = ಕ್ಷಿತಿನಾಥ : ಓಲಗಂ ಪರಿದು ಮತ್ಕುಪಾಯವ ನೆಯ್ದೆ ಪೋದನು ಕ್ಷಿತ್ಯಧಿಪನು (ಬಸವು. ೫೪-೮೩). [ಕ್ಷಿತಿ + ಅಧಿಪ]

**ಕ್ಷಿಪಣಿ** (ನಾ). ೧. "ಎಸೆತ ; ಚಲ್ಲೋಣ" (ಗಂಗಾಮ. ೩೫೬). ೨. ಅಸ್ತ್ರ; ದೂರದಿಂದ ನಿಯಂತ್ರಿಸಲ್ಪಡುವ ಸ್ಫೋಟಕ, — ಆಯುಧ: ಅವು ಕೂಡ ಸ್ಫೋಟವಾಗಿ ಹಾರುತ್ತಿರುವ ಕ್ಷಿಪಣಿಯ ವೇಗವನ್ನು ತೀವ್ರ ಗೊಳಿಸುತ್ತವೆ (ಆಕಾಶ. ೪೮) ; ಈ ಕ್ಷಿಪಣಿಗೆ ಯಾವ ನಿಯಂತ್ರಕನನ್ನು ನಿಯಮಿಸಲಿ (ಕಲ್ಲೋಲ. ೩೮). [ಸಂ.]

**ಕ್ಷಿಪೆ** (ನಾ). ೧. ಎಸೆಯುವಿಕೆ ; ಬಿಸಾಡುವಿಕೆ. ೨. ಕಳುಹಿಸುವಿಕೆ. ೩. ನಡೆಸುವಿಕೆ; ನಿರ್ದೇಶನ. [ಸಂ. ಕ್ಷಿಪಾ]

**ಕ್ಷಿಪ್ತ** (ಗು). ೧. ಎಸೆಯಲ್ಪಟ್ಟ ; ಬಿಸುಟ. ೨. ಚೆದರಿದ ; ಚಿಮ್ಮಿದ ; ಪ್ರಯೋಗಿಸಲ್ಪಟ್ಟ. ೩. ಕಳುಹಿಸಿದ ; ವಿಸರ್ಜಿಸಿದ. ೪. ಹರಡಿದ; ವ್ಯಾಪಿಸಿದ. (ನಾ). ೫. ನೂಕುವಿಕೆ: "ಕ್ಷಿಪ್ತಮೆನೆ ನುನ್ನಮೆನೆ ನೂಂಕಲ್ಕೆ ಪೆಸರಕ್ಕು" (ಮಂಗರಾ. ೧೩೨-೨೬). ೬. [ಯೋಗ] ಚಿತ್ತಸ್ಥಿತಿಯ ಐದು ವಿಧಗಳಲ್ಲಿ ಒಂದು: ಕ್ಷಿಪ್ತ, ಮೂಢ, ವಿಕ್ಷಿಪ್ತ, ಏಕಾಗ್ರ, ವಿರುದ್ಧವೆಂದು ಚಿತ್ತಸ್ಥಿತಿ ಐದು ವಿಧ. ಕ್ಷಿಪ್ತವೆಂದರೆ ಲೋಕ ವ್ಯವಹಾರ ವಿಷಯದಲ್ಲೇ ವ್ಯಾಪೃತವಾಗಿರುವ ಚಿತ್ತ (ಹಿಂದಸಾ. ೧೦೨). ೭. [ಸಂಗೀತ] ಇಪ್ಪತ್ತೆರಡು ಶ್ರುತಿ ಗಮಕಗಳಲ್ಲಿ ಒಂದು: ಸ್ಫುರಿತ . . . ಕ್ಷಿಪ್ತ . . . ಕೋಮಲವೆಂಬವಿಪ್ಪತ್ತೆರಡೇ ಶ್ರುತಿಗಮಕಂ ಗಳು (ವಿವೇಕ. ೨೩೨). [ಸಂ.]

**ಕ್ಷಿಪ್ಣು** (ಗು). ೧. ಎಸೆಯುವ ಸ್ವಭಾವವನ್ನುಳ್ಳ. ೨. ಅಡ್ಡಿಪಡಿಸುವ ಗುಣವುಳ್ಳ. (ನಾ). ೩. ಅಡ್ಡಿ; ಆತಂಕ; ವಿಘ್ನ. ೪. ತಿರಸ್ಕಾರ ಮಾಡುವವನು; ನಿಂದಕ ಸ್ವಭಾವದವನು : "ನಿರಾಕರಿಷ್ಣುಃ, ಕ್ಷಿಪ್ಣುಃ – ೨ ತಿರಸ್ಕರಿಸುವ ಸ್ವಭಾವವುಳ್ಳವನ ಹೆಸರುಗಳು" (ಸಿದ್ಧಾಂತಿ. ೨೮೫). [ಸಂ.]

**ಕ್ಷಿಪ್ರ** (ಗು). ೧. ತ್ವರಿತವಾದ; ಶೀಘ್ರವಾದ; ವೇಗವುಳ್ಳ: "ತ್ವರಿತಂ ದ್ರುತಂ ಕ್ಷಿಪ್ರಮಾಶು . . . ಶೀಘ್ರಮುಕ್ಕು" (ಮಂಗರಾ. ೧೨೬-೭). (ನಾ). ೨. ವೇಗ; ಶೀಘ್ರತೆ; ತ್ವರಿತ: ಕ್ಷಿಪ್ರದಿಂದಂ ನೃಪನನೊಡಗೊಂಡು (ಹಜಕಾ. ೧೪-೨೨) ; ಕ್ಷಿಪ್ರದಲ್ಲಿ ಚಂದನಕಾಷ್ಠದ ಚಿತೆ ರಾಜಪಿತೃಭೂಮಿಯಲ್ಲಿ ಸಿದ್ಧವಾಯಿತು (ಶಾಂತಲಾ. ೧೮೦). [ಸಂ.]

**ಕ್ಷಿಪ್ರಕಾರಿತೆ** (ನಾ). ಬೇಗ ಕೆಲಸಮಾಡುವಿಕೆ; ಶೀಘ್ರತೆ; ತ್ವರಿತತೆ: ಅವನು . . . ಅಸಾಧಾರಣ ಕ್ಷಿಪ್ರಕಾರಿತೆಯಿಂದ ಬಾಣವನ್ನು ಪ್ರಯೋಗ ಮಾಡುವನು (ಭೀಷ್ಮಚ. ೬೦). [ಸಂ. ಕ್ಷಿಪ್ರಕಾರಿತಾ]

**ಕ್ಷಿಪ್ರಹಸ್ತ** (ನಾ). ವೇಗವಾಗಿ ಕೆಲಸಮಾಡುವ ಕೈ; ಚುರುಕಾದ ಕೈ : ತಾಯಿ ಆಗ ಅಡಕೊತ್ತನ್ನು ಹಿಡಿದು ಕ್ಷಿಪ್ರಹಸ್ತದಿಂದ ಅಡಕೆ ಕತ್ತರಿಸುತ್ತಿದ್ದಳು (ಇಪ್ಪಕ. ೩೭೧). [ಕ್ಷಿಪ್ರ + ಹಸ್ತ]

**ಕ್ಷಿಯೆ** (ನಾ). ೧. ಕುಗ್ಗುವಿಕೆ; ಕಡಮೆಯಾಗುವಿಕೆ; ಕುಂದು. ೨. ಕೇಡು; ನಾಶ. [ಸಂ. ಕ್ಷಿಯಾ]

**ಕ್ಷೀಣ** (ಗು). ೧. ಕುಗ್ಗಿದ; ಸೊರಗಿದ; ಸವೆದ; ಕೃಶವಾದ : "ಕ್ಷಾಮಂ ಕೃಶಂ ಪೇಲವಂ ಕ್ಷೀಣಮೆನಲಸಿದು" (ಮಂಗರಾ. ೧೨೯-೧೪). ೨. ನಷ್ಟವಾದ; ನಾಶವಾದ. ೩. ಕೀಳಾದ; ನೀಚವಾದ; ಹೀನವಾದ : ಅರಿಯದಾದಂ ದೈತ್ಯ ದುರುಳತನದಿಂ ಯಮುನ ಸೆರಗ ಪಿಡಿದೆಳೆವಂತೆ ಕ್ಷೀಣ ಜೀವನಕಿಂದು ಬರಿದೆ ಕೆಣಕಿದನು (ವೆಂಕಾರಾ. ೩-೧-೨೨). ೪. ಮುರಿದ ; ಜೀರ್ಣವಾದ ; ಭಗ್ನವಾದ. ೫. ಬಲಹೀನವಾದ ; ಶಕ್ತಿಗುಂದಿದ. (ನಾ). ೬. ನಾಶ ; ಕೇಡು : ಹರಿಶ್ಚಂದ್ರಭೂಪಂಗೆ ಪ್ರಾಣಪರಿಯಂತಲ್ಲದಪಮೃತ್ಯು ಸಾರ್ಗೆಂದು ಕ್ಷೀಣಮಂ ತೋಱಿ ನುಡಿವಂದದಿಂ ಕೋಪದೊಳು ಜಂಬಮರ್ದನ ನುಡಿದನು (ಹಚಕಾ. ೨-೧೨). [ಸಂ.]

**ಕ್ಷೀಣಕಷಾಯ** (ನಾ). [ಜೈನ] ಕಷಾಯ ಕ್ಷಯಿಸಿದವನು ; ಕರ್ಮಬಂಧದಿಂದ ಮುಕ್ತನಾದವನು : ಶುಕ್ಲಧ್ಯಾನಮಂ ಕ್ಷೀಣಕಷಾಯನಾಗಿ ಜಾನಿಸಿ (ವಡ್ಡಾರಾ. ೧೫೪-೧೪) ; ಮೋಹನೀಯಮಂ ನಿರ್ಮೂಲಿಸಿದಂ ಕ್ಷೀಣಕಷಾಯಂ (ತತ್ತ್ವಪ್ರ. ೧೬). [ಕ್ಷೀಣ + ಕಷಾಯ]

**ಕ್ಷೀಣಕಾಂತಿ** (ನಾ). ಮಂದವಾದ ಪ್ರಕಾಶ : ಚಂದ್ರನಿಂದ ಸ್ವಲ್ಪ ಕೆಳಗೆ . . . ಕ್ಷೀಣಕಾಂತಿಯ ಮೂರು ನಕ್ಷತ್ರಗಳ ಗುಚ್ಛವಿದೆ (ನಕ್ಷತ್ರ. ೪). [ಕ್ಷೀಣ + ಕಾಂತಿ]

**ಕ್ಷೀಣತ್ವ** (ನಾ). ತಗ್ಗುವಿಕೆ ; ಕುಗ್ಗುವಿಕೆ ; ಬಲಹೀನತೆ : "ತಱ್ಗು - ಕ್ಷೀಣತ್ವೇ" (ಶಮಧಾ). [ಸಂ.]

**ಕ್ಷೀಣಧನ** (ನಾ). ಹಣ ಕಡಮೆಯಾದವನು ; ಬಡವ ; ದರಿದ್ರ : ಅತಿವ್ಯಸನ ಕ್ಷೀಣಧನ ಜನಂಗಳಂ ಮೂಲಧನ ದಾನದಿಂ ಸಂಭಾವಿಸಿಯುಂ (ಚಂದ್ರಪು. ೨-೬೦ ವ). [ಕ್ಷೀಣ + ಧನ]

**ಕ್ಷೀಣಧಾತು** (ನಾ). ಶಕ್ತಿಗುಂದಿದವನು : ಮಹಾತಪಂಗಳಿಂ ತಪ್ತರಾಗಿ ಕ್ಷೀಣಧಾತುಗಳಾಗಿಯುಂ ಮಾಣದೆ (ಪಂಚತಂ. ೧೧೪-೧೬). [ಕ್ಷೀಣ + ಧಾತು]

**ಕ್ಷೀಣಪುಣ್ಯ** (ನಾ). ಪುಣ್ಯಕ್ಷಯವಾದವನು ; ಪುಣ್ಯಹೀನ : ನೀನೂ ನಿನ್ನ ತಮ್ಮಂದಿರೂ ಕ್ಷೀಣಪುಣ್ಯರಾಗಿ ದುರ್ಗತಿಯನ್ನು ಪಡೆಯಬೇಡಿ (ವಚಭಾ. ೨೫೮). [ಕ್ಷೀಣ + ಪುಣ್ಯ]

**ಕ್ಷೀಣಬಲ** (ಗು). ಬಲಹೀನ ; ಶಕ್ತಿಹೀನ : ಅಗಧರ ನಿನ್ನಂಘ್ರಿ ಭಾರಮಂ ಕ್ಷೀಣಬಲೋರಗನೆಂತು ಸೈರಿಪಂ (ಜಗವಿ. ೩-೧೧೧). [ಕ್ಷೀಣ + ಬಲ]

**ಕ್ಷೀಣಶಕ್ತಿಕ** (ನಾ). ಬಲಹೀನನಾದವನು : ಜೀವನು ಮಲಾವೃತನಾಗಿ ಕ್ಷೀಣಶಕ್ತಿಕನಾಗಿರುವನಷ್ಟೆ (ಶಕ್ತಿವಿ. ೬೪). [ಸಂ.]

**ಕ್ಷೀಣಿಸು** (ಕ್ರಿ). ೧. ಸೊರಗು ; ಕೊರಗು ; ಕೃಶವಾಗು ; ದುರ್ಬಲವಾಗು : ನೀನು ಕ್ಷೀಣಿಸಿರುವುದನ್ನು ಕಂಡು ಬೇಸರಿಸುತ್ತಾರೆ (ಪತಂಗ. ೧೬) ; ಬಹಳವಾಗಿ ರಕ್ತಸ್ರಾವವಾಗಿರುವುದರಿಂದ ಹುಡುಗನು ಬಹಳವಾಗಿ ಕ್ಷೀಣಿಸುತ್ತಲಿದ್ದಾನೆ (ಮೊಗ್ಗು. ೭೫) ; ರಾಜಾಶ್ರಯವಿಲ್ಲದೆ ಲಲಿತಕಲೆಗಳು ಕ್ಷೀಣಿಸಿದವು (ಇಸ್ಲಾಂಸಂ. ೧೪೬). ೨. ನಾಶವಾಗು ; ಕ್ಷಯಿಸು : ಕೆಲವು ದುಂಬಿಗಳ ರೆಕ್ಕೆಗಳು ಹಾರಲು ಅಪ್ರಯೋಜಕವಾಗಿ ಕ್ಷೀಣಿಸಿವೆ (ಕೀಟಬೆ. ೧೪). ೩. ದುರ್ಬಲಗೊಳಿಸು : ಈ ಕ್ಷಯ ಅವರನ್ನು ಸಣ್ಣಾಗಿ ಕ್ಷೀಣಿಸದಿರುವುದಿಲ್ಲ (ದೀಪಹ. II, ೨೨೧). [ಕ್ಷೀಣ + -ಇಸು]

**ಕ್ಷೀಬ** (ಗು). ಮದಿಸಿದ ; ಮದ್ಯಸೇವನೆಯಿಂದ ಉನ್ಮತ್ತವಾದ ; ಅಮಲೇರಿದ : "ಕ್ಷೀಬ - ಸೊಕ್ಕಿದಂಥ" (ಗಂಗಾಮು. ೩೫೬). [ಸಂ.]

**ಕ್ಷೀಬತ್ವ** (ನಾ). (ಮದ್ಯ) ಕುಡಿದು ಮತ್ತೇರುವಿಕೆ ; ಮದಿಸುವಿಕೆ ; ಕುಡುಕುತನ (Drunkenness, ಪಾರಿನಿ). [ಸಂ.]

**ಕ್ಷೀರ** (ನಾ). ೧. ಹಾಲು : ಕ್ಷೀರಗುಡಾದ್ಯಂತರ ರಸಾಂತರಂ ಜಾತ್ಯಂತರಮಪ್ಪಂತು (ಕವಿರಾ. ೨-೯೫) ; ಪಾವನಕ್ಷೀರಮಂ ಕೊಡುವ ಕೆಚ್ಚಲ ಮಾಂಸವಾವ ಲೇಸು (ಹಚಕಾ. ೭-೧೬) ; ಕ್ಷೀರ ಕ್ಷೀರವ ಕೂಡಿದಲ್ಲಿ ಪದರುಂಟೆ ಅಯ್ಯ (ಅಖಂಡೇ. ೩೪೧-೫೬). ೨. ಗಿಡ, ಮರಗಳ ಹಾಲು. 'ಕ್ಷೀರವೃಕ್ಷ' ಪರಾ. ೩. ನೀರು ; ಜಲ. ೪. ಮೋಡ ; ಮೇಘ : "ಹಾಲ್ನೀರಿಡೆಮೇಘಂ ಮೂಱು ಕ್ಷೀರಶಬ್ದಂ" (ನಾನಾಕಂ. ೩೯) ; "ಕಾದಂಬಿನಿ ವಾರಿ ದುಗ್ಧಮಿವು ಕ್ಷೀರಸಮಾಹ್ವಯ" (ನಾನಾರ. ೧೨). [ಸಂ.]

**ಕ್ಷೀರಕ** (ನಾ). ಹಾಲುಕುರಟಿಗೆ ಗಿಡ. [ಸಂ.]

**ಕ್ಷೀರಕಂದ** (ನಾ). ಹಾಲುಗುಂಬಳ : "ಪಯೋಲತಾ, ಪಯಸ್ಕಂಧ - ಈಯೆರಡುಂ ಕ್ಷೀರಕಂದ" (ಓಷಧಿ. ೯೧). [ಸಂ.]

**ಕ್ಷೀರಕಾಕೋಲಿ, ಕ್ಷೀರಕಾಕೋಳಿ** (ನಾ). ಒಂದು ಮೂಲಿಕೆಯ ಹೆಸರು ; ಅಷ್ಟವರ್ಗದ ಜೀವನೀಯಗಳಲ್ಲಿ ಒಂದು : (ಕ). **ಕ್ಷೀರಕಾಕೋಳಿ** : "ಜೀವವಲ್ಲೀ, ಜೀವಶುಕ್ಲಾ - ಈಯೆರಡುಂ ಕ್ಷೀರಕಾಕೋಳಿ" (ಓಷಧಿ. ೬೩) ; ಕಾಕೋಳಿ, ಮೇದೆ, ಮಹಾಮೇದೆ, ಕ್ಷೀರಕಾಕೋಳಿ . . . ಇವಿಷ್ಟನ್ನು ಪ್ರತ್ಯೇಕ ನಾಲ್ಕುವರಹ ತೂಕವನು ಸಣ್ಣಾಗಿ ಚೂರ್ಣಿಸಿ (ವೈದ್ಯಸಾ. II, ೫೪). [ಕ್ಷೀರ + ಕಾಕೋಲಿ]

**ಕ್ಷೀರಕಾಕೋಳಿ** 'ಕ್ಷೀರಕಾಕೋಲಿ' ನೋ.

**ಕ್ಷೀರಕೊಲ** (ನಾ). ಒಂದು ಬಗೆಯ ಕೊಳ : ತ್ರಿಸನ್ಧಿ ಸಿಮಾತು ಕ್ಷೀರಕೊಲ ತಥಾ (ಇಆ. VIII, ೯೫-II B ; 444). ℙ ಈ ಪದದಲ್ಲಿ ಸಂಸ್ಕೃತ ಭಾಷೆಗಾಗಿ 'ಳ' ಕಾರ 'ಲ'ಕಾರವಾಗಿರಬಹುದು. [?]

**ಕ್ಷೀರಕ್ಷೇತ್ರ** (ನಾ). ಹಾಲುಮಾರುವ ಸಂಸ್ಥೆಯ ಪ್ರದೇಶ ; ಕ್ಷೀರ ವಿಕ್ರಯ ಸಂಸ್ಥೆ : ಶ್ರೀಮಂತೆಯರಿಬ್ಬರಿಗೆ ಸೇರಿದ್ದ ಕ್ಷೀರಕ್ಷೇತ್ರವೊಂದರಲ್ಲಿ ಕೂಲಿ ಕೆಲಸಕ್ಕಿದ್ದಳು (ಪುನರು. ೬). [ಕ್ಷೀರ + ಕ್ಷೇತ್ರ]

**ಕ್ಷೀರಗೌರ** (ಗು). ಹಾಲಿನಂತೆ ಬೆಳ್ಳಗಿರುವ : ಕ್ಷೀರಗೌರ ಯಶೋಧಿಕನೀತನೇ (ಕವಿರಾ. ೧-೧೩೯). [ಕ್ಷೀರ + ಗೌರ]

**ಕ್ಷೀರಗೌರತ್ವ** (ನಾ). ಹಾಲಿನಂತೆ ಬೆಳ್ಳಗಿರುವುದು ; ಹಾಲಿನಂತಹ ಬಿಳಿಯಬಣ್ಣ : ನಿಸ್ವೇದತ್ವಮುಂ ನಿರ್ಮಲತ್ವಮುಂ ಕ್ಷೀರಗೌರತ್ವಮುಂ . . . ಎಂಬ ದಶವಿಧಸ್ವಭಾವಾತಿಶಯಸಂಪನ್ನನುಂ (ಅಜಿಪು. ೫-೯೩ ವ). [ಸಂ.]

**ಕ್ಷೀರಜಲಾಕರ** (ನಾ). ಹಾಲಿನ ಕಡಲು ; ಕ್ಷೀರಸಮುದ್ರ : ಕ್ಷೀರಜಲಾಕರಮಂ . . . ಆ ಕಾಂತೆ ನಿಶೆಯ ಕಡೆಯೊಳ್ ಕಂಡಳ್ (ಪುಷ್ಪಪು. ೩-೧೨೦). [ಕ್ಷೀರ + ಜಲಾಕರ]

**ಕ್ಷೀರನೀರ** (ನಾ). ೧. ಹಾಲು ಮತ್ತು ನೀರು. ೨. ಹಾಲುನೀರುಗಳಂತೆ ಒಂದರೊಳಗೊಂದು ಸೇರಿಕೊಳ್ಳುವಿಕೆ. ೩. [ಕಾಮಶಾ] ಒಂದು ಬಗೆಯ ಆಲಿಂಗನ : ಕಾಂತೆ ಬೆಚ್ಚಂದದೆ ರಾಗಿಸಿ ನಾಣಂ ತೊಱೆದಾಲಿಂಗಿಸೆ ಬಲ್ಪಿಂ ಕ್ಷೀರನೀರಮೆಂಬಾಶ್ಲೇಷಂ (ಮನ್ಮವಿ. ೧೧-೧೪). 'ಕ್ಷೀರನೀರಾಯಿತ' ಪರಾ. [ಕ್ಷೀರ + ನೀರ್]

**ಕ್ಷೀರನೀರನ್ಯಾಯ** (ನಾ). ಹಾಲುನೀರು ಒಂದರೊಳಗೊಂದು ಬೆರೆಯುವ ರೀತಿ ; ಒಂದು ಬಗೆಯ ಲೌಕಿಕ ನ್ಯಾಯ : ಕರ್ಮದ ಜೀವನ ಕ್ಷೀರನೀರನ್ಯಾಯ ಸಂಬಂಧಂ ಬಂಧಮೆಂಬುದು (ಆದಿಪು. ೧೧-೬೧ ವ) ; ಅಂತು ಜೀವನೊಳ್ ಕ್ಷೀರನೀರನ್ಯಾಯಮಾಗಿ ಕರ್ಮಯೋಗಂಗಳಪ್ಪ ಪುದ್ಗಲಂಗಳೊಳ್ (ಸುಕುಮಾ. ೮-೨೬ ವ). [ಕ್ಷೀರನೀರ + ನ್ಯಾಯ]

**ಕ್ಷೀರನೀರಾಕರ** (ನಾ). = ಕ್ಷೀರಜಲಾಕರ : ರತ್ನವೇಳಾ ವಿಳಸಿತ ಕ್ಷೀರನೀರಾಕರದಂತೆ (ಮಲ್ಲಿಪು. ೧೧-೧೧೩). [ಕ್ಷೀರ + ನೀರಾಕರ]

**ಕ್ಷೀರನೀರಾಯಿತ** (ನಾ). = ಕ್ಷೀರನೀರ ೩: ಕ್ಷೀರನೀರಾಯಿತ . . . ದ್ವಾದಶ ವಿಧಾಲಿಂಗನಗಳಿಂ (ವಿವೇಕ. ೨೨೯). [ಸಂ.]

**ಕ್ಷೀರಪಥ** (ನಾ). ಆಕಾಶದಲ್ಲಿ ಹಾಲು ಚೆಲ್ಲಿದಂತೆ ಸುತ್ತುವರಿದು ಕಾಣುವ ತೇಜೋರಾಶಿ: ಕ್ಷೀರಪಥಮೇಖಲೆಯನೊಪ್ಪಿಸುವೆ ಕಟಿಗೆ ಕೊನೆಗೆನ್ನ ಮಕುಟವನೆ ಮುಡಿಪಿಡುವೆ ನಿನಗೆ! (ಅಹಲ್ಯೆ. ೫೪); ಇದಕ್ಕೆ ಆಕಾಶಗಂಗೆ ಅಥವಾ ಕ್ಷೀರಪಥ ಎಂದು ಹೆಸರು (ನಕ್ಷತ್ರ. ೩೧). [ಕ್ಷೀರ + ಪಥ]

**ಕ್ಷೀರಪಯೋಧಿ** (ನಾ). = ಕ್ಷೀರಜಲಾಕರ: ಕೊಡಂಬೆರಸಾಳಿಗಟ್ಟ ಘೋರ್ಘೋರೆನೆ ಪೋಪ ಬರ್ಪಮರಸಂಹತಿ ಪೋಲ್ತುದು ಮಂದರಾದ್ರಿಗಂ ಕ್ಷೀರಪಯೋಧಿಗಂ ಹರಿಯ ಕಟ್ಟಿದ ಜಂಗಮಸೇತುಬಂಧಮಂ (ಶಾಂತಿಪು. ೧೦-೪೫). [ಕ್ಷೀರ + ಪಯೋಧಿ]

**ಕ್ಷೀರಪಾಕ** (ನಾ). ೧. ಹಾಲಿನಲ್ಲಿ ಬೇಯಿಸುವುದು : ನೇಲತಾಟಗೆಡ್ಡೆ ಒಂದು ಹಿಡಿಯನ್ನು ಕಷಾಯ ಕಾಯಿಸಿ ಹಾಲನ್ನು ಸೇರಿಸಿ ಕ್ಷೀರಪಾಕ ಮಾಡಿ ಬಂದ ಹಾಲನ್ನು ಹೆತ್ತ ತುಪ್ಪ ಗ ೧ ರೊಂದಿಗೆ ಕಲಸಿ ಕುಡಿಯಲು ಮೂತ್ರಕೃಚ್ಛ್ರ ಗುಣವಾಗುವುದು (ಸಕವೈ. ೫೦೫). ೨. ಹಾಲಿನಲ್ಲಿ ಬೇಯಿಸಿ ಮಾಡಿದ ಪಾಕ, —ತಿಂಡಿ. [ಕ್ಷೀರ + ಪಾಕ$_2$]

**ಕ್ಷೀರಪೂರ** (ನಾ). ಹಾಲಿನ ಪ್ರವಾಹ; ಹಾಲಿನ ಧಾರೆ: ಇಂದ್ರಕರಕಳಿತ ಕಳಶದೆ ರುಂದ್ರತರ ಕ್ಷೀರಪೂರಮಾವರಿಸೆ (ಪುಷ್ಪಪು. ೧೧-೩೦). [ಕ್ಷೀರ + ಪೂರ]

**ಕ್ಷೀರಪ್ರವಾಹ** (ನಾ). ೧. ಹಾಲಿನ ಪ್ರವಾಹ. ೨. = ಕ್ಷೀರಪಥ : ಅಮಾವಾಸ್ಯೆಯ ಸಮೀಪದ ದಿನಗಳಲ್ಲಿ ಆಕಾಶ ಮೋಡಗಳಿಲ್ಲದೆ ಕಾಳಕಪ್ಪಾಗಿರುವಾಗ ಈ ಕ್ಷೀರಪ್ರವಾಹವನ್ನು ನೋಡಬಹುದು (ಆಕಾಶ. ೬೩). [ಕ್ಷೀರ + ಪ್ರವಾಹ]

**ಕ್ಷೀರಪ್ರವೃತ್ತಿ** (ನಾ).(ಸ್ತನಗಳಲ್ಲಿ) ಹಾಲು ಬರುವಿಕೆ: ಪರಮೇಶ್ವರನ ಇಚ್ಛಾಶಕ್ತಿಯಿಂದಲೇ ಮನುಷ್ಯಪ್ರವೃತ್ತಿಯೂ ಕ್ಷೀರಪ್ರವೃತ್ತಿಯೂ ಎಂದು ಈಶ್ವರವಾದಿಗಳು ಹೇಳುವರು (ಹಿಂದಸಾ. ೬೨). [ಕ್ಷೀರ + ಪ್ರವೃತ್ತಿ]

**ಕ್ಷೀರಲಂಪಟ** (ನಾ). ಹಾಲಿನ ಆಸೆಯುಳ್ಳವನು: ಕ್ಷೀರಲಂಪಟನಾಡಿದಂ ನವನೀತಚೋರಕನಾಡಿದಂ (ಜಗವಿ. ೩-೫೪). [ಕ್ಷೀರ+ಲಂಪಟ]

**ಕ್ಷೀರವತಿ** (ನಾ). ಒಂದು ಬಗೆಯ ಸಸ್ಯ; ಬುಗುಡಿ: "ಕ್ಷೀರವತಿಯೆನೆ ಬುಗುಡಿ" (ಮಂಗರಾ. ೪೪-೪೫). [ಸಂ. ಕ್ಷೀರವತೀ]

**ಕ್ಷೀರವರ್ತಿಕೆ** (ನಾ). ಹಾಲಿನಲ್ಲಿ ಅದ್ದಿದ ಹತ್ತಿ; ಹಾಲುಬತ್ತಿ (?): ಎರಡುಂ ಬಾಳಂ ಮಧುಕಂ . . . ನೆಯ್ದಿಲಗೆಡ್ಡೆಯನರೆದವಱಿಂ ಕ್ಷೀರವರ್ತಿಕೆಯನನುನಯದಿಂ ವರುಷದ ಮಱಿಗೊಬ್ಬಳಮಾಗಿರೆ ಯೋಜಿಪುದು (ಅಶ್ವಶಾ. ೧೦-೧೬). [ಕ್ಷೀರ + ವರ್ತಿಕೆ]

**ಕ್ಷೀರವಾರಾಶಿ** (ನಾ). = ಕ್ಷೀರಜಲಾಕರ: ಅಬ್ಜನೇತ್ರಂ ಮನೆಯಳಿಯನೆನಲ್ ಕ್ಷೀರವಾರಾಶಿಯಿಂ ವಿಶ್ರುತಲಕ್ಷ್ಮೀದೇವಿಯಂ . . . ಕೊಂಡಂ (ಪುಷ್ಪಪು. ೧-೬೨); ಕ್ಷೀರವಾರಾಶಿಪತಿ ತನ್ನ ಸುತಗೆ ಮಿತ್ರನುಷ್ಣ ಸೋಂಕದಂತೆ ಧವಲಾಂಬರದ ಪೇರ್ಗುಡಾರವನು ರಚಿಸಿದವೊಲು (ನವಮೋ. ೨-೧೬). [ಕ್ಷೀರ + ವಾರಾಶಿ]

**ಕ್ಷೀರವಾರಿಧಿ** (ನಾ). = ಕ್ಷೀರಜಲಾಕರ: ಅಂತಾ ಕ್ಷೀರವಾರಿಧಿವಾರಿಯೆಲ್ಲಮನೊರ್ಮೊದಲೊಳೆ ಪೊಯ್ವಂತೆ ಪೊಯ್ವು (ಶಾಂತಿಪು. ೧೦-೪೨೮). [ಕ್ಷೀರ + ವಾರಿಧಿ]

**ಕ್ಷೀರವಾರಿಧಿಶಯನ** (ನಾ). ಹಾಲ್ಗಡಲಲ್ಲಿ ಮಲಗಿರುವವನು; ವಿಷ್ಣು : ಕ್ಷೀರವಾರಿಧಿಶಯನ ಬಂದನು (ಕುವ್ಯಾಉ. ೮-೫೪); ಕ್ಷೀರವಾರಿಧಿಶಯನ ಶಾಂತಾಕಾರ . . . ರಕ್ಷಿಸು ನಮ್ಮನನವರತ (ಹರಿಸಾ. ೫). [ಕ್ಷೀರವಾರಿಧಿ + ಶಯನ]

**ಕ್ಷೀರವಿದಾರಿ** (ನಾ). ಕರಿಯ ನೆಲಗುಂಬಳ; "ಸಂಡಿಗೆ ಕುಂಬಳಕಾಯಿ" (ಗಂಗಾಮು. ೩೫೬): "ಕ್ಷೀರವಿದಾರಿ, ಮಹಾಶ್ವೇತಾ, ಋಕ್ಷಗ್ರಂಥಿಕಾ-೩ ಕರೀನೆಲಕುಂಬಳದ ಹೆಸರುಗಳು" (ಸಿದ್ಧಾಂತಿ. ೧೨೦). [ಸಂ. ಕ್ಷೀರವಿದಾರೀ]

**ಕ್ಷೀರವೃಕ್ಷ** (ನಾ). ೧. ಹಾಲು ಬರುವ ಮರ; ಆಲದ ಮರ : ಈ ಕ್ಷೀರವೃಕ್ಷದ ನೆರಳಲ್ಲಿ ಕುಳಿತುಕೊಳ್ಳೋಣ ಬನ್ನಿ (ಶಾಕುಂತ. ೫೫-೨೬). ೨. ಅತ್ತಿಮರ. ೩. ಅರಳಿಮರ. ೪. ಬಸರಿಮರ. ೫. ಹಿಪ್ಪೆಮರ. [ಕ್ಷೀರ + ವೃಕ್ಷ]

**ಕ್ಷೀರವೃತ್ತಿ** (ನಾ). ಹಾಲು ಕುಡಿಯುವ ಪ್ರವೃತ್ತಿ; ಸ್ತನ್ಯಪಾನಾಸಕ್ತಿ: ಕ್ಷೀರವೃತ್ತಿ, ಅನ್ನವೃತ್ತಿಗಳುಳ್ಳ ಹುಟ್ಟಿದ ಒಂದು ವರ್ಷ ತೊಡಗಿ ಹದಿನಾರು ವರ್ಷ ಪರ್ಯಂತರಕ್ಕೂ ಬಾಲ್ಯವೆನಿಸಿಕೊಂಬುದು (ಸಕವೈ. ೧೫). [ಕ್ಷೀರ + ವೃತ್ತಿ]

**ಕ್ಷೀರಶರ್ಕರ** (ನಾ). "ಹಾಲಿನಲ್ಲಿಯ ಸಕ್ಕರೆ ಪದಾರ್ಥ; ಹಾಲಿನ ಸಕ್ಕರೆ; ಕ್ಷೀರಶರ್ಕರ" (Lactose. ಇಂಕನಿ). [ಕ್ಷೀರ + ಶರ್ಕರ]

**ಕ್ಷೀರಶುಕ್ಲೆ** (ನಾ). ಬಿಳಿಯ ನೆಲಗುಂಬಳ: "ಸಂಡಿಗೆ ಕುಂಬಳಕಾಯಿ" (ಗಂಗಾಮು. ೩೫೬). [ಸಂ. ಕ್ಷೀರಶುಕ್ಲಾ]

**ಕ್ಷೀರಶುದ್ಧಿ** (ನಾ). ಹಾಲಿನ ಶುದ್ಧತೆ. 'ಕ್ಷೀರಶುದ್ಧಿದರ್ಶಕ' ಪರಾ. [ಕ್ಷೀರ + ಶುದ್ಧಿ]

**ಕ್ಷೀರಶುದ್ಧಿದರ್ಶಕ** (ನಾ). ಹಾಲು ಎಷ್ಟು ಶುದ್ಧವಾಗಿದೆಯೆಂಬುದನ್ನು ತೋರಿಸುವ ಯಂತ್ರಸಾಧನ: (Lactoscope. ಇಂಕನಿ). [ಕ್ಷೀರಶುದ್ಧಿ + ದರ್ಶಕ]

**ಕ್ಷೀರಶುದ್ಧಿಮಾಪಕ** (ನಾ). ಹಾಲಿನ ಶುದ್ಧತೆಯನ್ನು ಅಳೆದು ತೋರಿಸುವ ಯಾಂತ್ರಿಕ ಉಪಕರಣ: (Lactometer. ಇಂಕನಿ). [ಕ್ಷೀರಶುದ್ಧಿ + ಮಾಪಕ]

**ಕ್ಷೀರಸ** (ನಾ). ೧. ಹಾಲಿನ ಸಾರಸತ್ತ್ವ; ಹಾಲಿನಿಂದ ಸಿದ್ಧಪಡಿಸಿದುದು: "ಕಿಲಾಟಃ, ಕೂರ್ಚಿಕಾ - ಈ ೨ ಕ್ಷೀ(ಕೀ) ರಸಂ" (ಹಲಾಯು. ೫೪-೧೬೯). ೨. ಹಾಲಿನಿಂದ ಮಾಡಿದ ಒಂದು ಬಗೆಯ ಭಕ್ಷ್ಯ: "ತುಪ್ಪ ಹಾಲೆರಡಱಲಿ ತಾಳಿಸಿದ ಹೊಯ್ಗಲವು ಕ್ಷೀರಸಂಕೀಲಸಾಖ್ಯಂ" (ಮಂಗರಾ. ೬೪-೩). [< ಸಂ. ಕ್ಷೀರರಸ]

**ಕ್ಷೀರಸಮುದ್ರ** (ನಾ). = ಕ್ಷೀರಜಲಾಕರ. [ಕ್ಷೀರ + ಸಮುದ್ರ]

**ಕ್ಷೀರಸಾಗರ** (ನಾ). = ಕ್ಷೀರಜಲಾಕರ: ಪುಳಿವೆರೆಯೆ ಕೊಡವಾಲು ಸಹಜವನುಳಿವುದಲ್ಲದೆ ಕ್ಷೀರಸಾಗರಮುಳಿವುದೇ (ಗಗತಾ. ೧೬-೪೫); ಕ್ಷೀರಸಾಗರದಿಂ ಕಿಶೋರಶಶಿ ಬರುವಂತೆ (ಶ್ರೀರಾಮಪ. ೧೬-೪೧೪). [ಕ್ಷೀರ + ಸಾಗರ]

**ಕ್ಷೀರಸ್ಫಟಿಕ** (ನಾ). ಒಂದು ಬಗೆಯ ರತ್ನ : ಕ್ಷೀರಸ್ಫಟಿಕವು ಈ ಶಿವಧಾತುವೆಂಬ ಖನಿಜದ ಅವಾಂತರಭೇದವದೆ (ಮುಂಬಯಿ. ೬-೪೬). [ಕ್ಷೀರ + ಸ್ಫಟಿಕ]

**ಕ್ಷೀರಸ್ರಾವಿತ್ವ** (ನಾ). [ಜೈನ] ಕೈಗೆ ಭಿಕ್ಷೆಯಾಗಿ ನೀಡಿದ ಕದನ್ನವನ್ನೂ ಕ್ಷೀರರಸವನ್ನಾಗಿ ಮಾಡುವ ಸಿದ್ಧಿ, —ಪವಾಡ: ಅರ್ಕಲಂಬರ ಪಾಣಿಪುಟದೊಳು ನೀರಸಮಪ್ಪನ್ನಮನಿಕ್ಕಿದೊಡಂ ಕ್ಷೀರರಸ ಸಮಾನಮಾಗಿ ಪರಿಣಮಿಸುಗು ಕ್ಷೀರಸ್ರಾವಿತ್ವಮೆಂಬುದು (ಶ್ರಾವಕಾ. ೯೫-೧೬). [ಸಂ.]

**ಕ್ಷೀರಾಂಬು** (ನಾ). ಹಾಲು : ಜೈನಜನ್ಮಾಭಿಷೇಕ ಸ್ಥಗಿತಕ್ಷೀರಾಂಬುಫೇನಪ್ರಕರದೆ ಕಡುವೆಳ್ಪೇಱಿದಿಂದ್ರಾದ್ರಿ (ಚಂದ್ರಪು. ೩-೮೧). [ಕ್ಷೀರ+ಅಂಬು$_3$]

**ಕ್ಷೀರಾಂಬುಧಿ** (ನಾ). = ಕ್ಷೀರವಾರಾಶಿ: ಕ್ಷಾರಕ್ಷೀರಾಂಬುಧಿಗಂ . . . ಐಕ್ಯಂ (ಕಾವ್ಯಾವ. ೯೦೬). [ಕ್ಷೀರ + ಅಂಬುಧಿ]

**ಕ್ಷೀರಾಗಾರ** (ನಾ). ಹಾಲು ಒದಗಿಸುವ ಮನೆ; ಕ್ಷೀರಸಂಗ್ರಹಶಾಲೆ. [ಕ್ಷೀರ + ಆಗಾರ]

**ಕ್ಷೀರಾಗಾರಿ** (ನಾ). ಕ್ಷೀರಾಗಾರವುಳ್ಳವನು; ಹಾಲು ಮಾರುವವನು; ಗೋವಳಿಗ. [ಸಂ. ಕ್ಷೀರಾಗಾರಿನ್]

**ಕ್ಷೀರಾನ್ನ** (ನಾ). ಒಂದು ಬಗೆಯ ಭಕ್ಷ್ಯ; ಹಾಲನ್ನ: ಕ್ಷೀರಾನ್ನದಿಂದೆ ನರಪುಷ್ಟಿ (ಮಂಕುಕ. ೩೪೧). [ಕ್ಷೀರ + ಅನ್ನ$_3$]

**ಕ್ಷೀರಾಬ್ಧಿ** (ನಾ). = ಕ್ಷೀರಜಲಾಕರ: ಕ್ಷೀರಾಬ್ಧಿಯೊಳಗನಿಲನೀಡಿಱಿಯಲಾ ನೊರೆ ಮುಸಗಿ ತೆರೆಗಟ್ಟೆ (ಹಚಕಾ. ೩-೨೩). [ಕ್ಷೀರ + ಅಬ್ಧಿ]

**ಕ್ಷೀರಾಬ್ಧಿತನಯೆ** (ನಾ). ಹಾಲ್ಗಡಲಿನಲ್ಲಿ ಹುಟ್ಟಿದವಳು; ಲಕ್ಷ್ಮಿ: "ಹಾಲಿನ ಸಮುದ್ರದ ಮಗಳು, ಲಕ್ಷ್ಮಿ" (ಗಂಗಾಮ. ೩೫೬). [ಕ್ಷೀರಾಬ್ಧಿ + ತನಯೆ]

**ಕ್ಷೀರಾಭಿಷೇಕ** (ನಾ). ಹಾಲಿನಿಂದ ಮಾಡುವ ಅಭಿಷೇಕ. [ಕ್ಷೀರ + ಅಭಿಷೇಕ]

**ಕ್ಷೀರಾರ್ಣವ** (ನಾ). = ಕ್ಷೀರಜಲಾಕರ: ವಿಮಳ ಕ್ಷೀರಾರ್ಣವಶ್ರೀಯಿನಾ ಶತಪತ್ರಾನನೆ ಪೋಲ್ತು ಬೆಳ್ವಸದನಂಗೊಂಡೇಂ ಮನಂಗೊಂಡಳೋ (ಪುಷ್ಪಪು. ೯-೯೪). [ಕ್ಷೀರ + ಅರ್ಣವ]

**ಕ್ಷೀರಾವಿ** (ನಾ). ೧. ಹಾಲುತೊಟ್ಟಿನ ಗಿಡ: "ಕ್ಷೀರಾವೀ, ದುಗ್ಧಿಕಾ – ೨ ಆಕ್ಕಿಹೆಡೆಯ ಗಿಡದ ಹೆಸರುಗಳು" (ಸಿದ್ಧಾಂತಿ. ೧೧೮). ೨. "ದೂದಿ, ತೀವ್ರವಾಗಿ ಬೆಂಕಿಹತ್ತುವದೊಂದು ಪದಾರ್ಥ" (ಗಂಗಾಮ. ೩೫೬). [ಸಂ. ಕ್ಷೀರಾವೀ]

**ಕ್ಷೀರಿಕೆ$_1$** (ನಾ). ೧. ಹಾಲೆಗಿಡ; ಸಿಹಿಹಾಲೆ: "ರಾಜಾದನಂ, ಫಲಾಧ್ಯಕ್ಷಂ, ಕ್ಷೀರಿಕಾ – ೩ ಹಾಲೆಗಿಡ, ಹಾಲುಬಳ್ಳಿ ಹೆಸರು (ಸಿದ್ಧಾಂತಿ. ೧೦೭). ೨. ಹಾಲಿನಿಂದ ಮಾಡಿದುದು; ಪಾಯಸ; ಪರಮಾನ್ನ. [ಸಂ. ಕ್ಷೀರಿಕಾ]

**ಕ್ಷೀರಿಕೆ$_2$** (ನಾ). [ಅಶ್ವಶಾ] ಕುದುರೆಯ ಖುರದ ಒಂದು ಭಾಗ: ಖುರದ ನಡುವೆ ತಳಮೆ(ಯೆ)ಂಬ ಪೆಸರಕ್ಕುಂ ತಳದ ನಡುವಣ ತ್ರಿಕೋಣರೇಖೆಗೆ ಮಂಡೂಕಿಯೆಂಬ ಪೆಸರಕ್ಕುಂ ಅದಂ ಪೊರ್ದಿ ಪೊಱಗಿರ್ದುದು ಕ್ಷೀರಿಕೆಯೆಂಬ ಪೆಸರಕ್ಕುಂ (ಅಶ್ವಶಾ. ೮೮-೨೮). [?]

**ಕ್ಷೀರಿಣಿ** (ನಾ). ೧. ಹಾಲುತೊಟ್ಟಿನ ಗಿಡ. ೨. ದತ್ತೂರಿ: ಕಿರುನೆಲ್ಲಿ ಸೊಪ್ಪು ರಸ, ದತ್ತೂರಿ (ಕ್ಷೀರಿಣೀ) ಬೀಜ . . . ಕಷಾಯಗಳಲ್ಲಿ (ಸಕವೈ. ೪೨೭). ೩. ಹಾಲಿನಿಂದ ಮಾಡಿದುದು; ಹಾಲುಬಾಯಿ: ನನಗೆ ಕ್ಷೀರಿಣಿ (ಹಾಲುಬಾಯಿ)ಯನ್ನು ತಿನ್ನಬೇಕೆನ್ನಿಸಿದೆ. ಅದನ್ನು ಈದಿನವೇ ಮಾಡು (ಕಸರಿ. ೪೨). [ಸಂ. ಕ್ಷೀರಿಣೀ]

**ಕ್ಷೀರೋದ** (ನಾ). ಹಾಲ್ಗಡಲು. 'ಕ್ಷೀರೋದಭವ' ಪರಾ. [ಸಂ.]

**ಕ್ಷೀರೋದಕನ್ಯಾಯ** (ನಾ). = ಕ್ಷೀರನೀರನ್ಯಾಯ: ಕ್ಷೀರೋದಕನ್ಯಾಯಮೆಂಬುದಂ ಪರಿಭವಿಸಿತೀ ಭಕ್ತ ಪಾದಾಂಬು (ಆರಾಜ. ೨-೫). [ಕ್ಷೀರ + ಉದಕ$_2$ + ನ್ಯಾಯ]

**ಕ್ಷೀರೋದಭವ** (ನಾ). ಹಾಲ್ಗಡಲಲ್ಲಿ ಹುಟ್ಟಿದವನು; ಚಂದ್ರ: ಕ್ಷೀರೋದಭವಾತ್ರಿಜೇಂದುಗಳ್ಗಂ . . . ಐಕ್ಯಂ (ಕಾವ್ಯಾವ. ೯೦೬). [ಕ್ಷೀರೋದ + ಭವ]

**ಕ್ಷೀರೋದವಾರಿ** (ನಾ). ಹಾಲ್ಗಡಲಿನ ನೀರು: ಕ್ಷೀರೋದವಾರಿಧಾರಾಪೂರದ ಚೆಲ್ವಂಗೆ ಸೆಣಸುವಂತೆ (ಆದಿಪು. ೭-೭೩). [ಕ್ಷೀರೋದ + ವಾರಿ]

**ಕ್ಷೀವ** (ಗು). = ಕ್ಷೀಬ. [ಸಂ.]

**ಕ್ಷುಣ್ಣ** (ಗು). ೧. ಮೆಟ್ಟಿದ; ತುಳಿಯಲ್ಪಟ್ಟ: ತುರಗ ಖುರಕ್ಷುಣ್ಣೀಳಾಪರಿಪಾಂಸು ಪರಾಗಮಿಭಕಟ್ಟಾಳಿಗಳೊಳ್ ಪಾಯ್ದಿರೆ (ಶಾಂತಿಪು. ೧೧-೧೭); ಕುರಂಗಶಿಶುಗಳ್ ನಲಿಯುತಿವೆ ಹರಿಣಚರಣ ಕ್ಷುಣ್ಣ ಶಾದ್ವಲದ ಪಚ್ಚೆಸೊಂಪಿನ ವೇದಿಕೆಯನೇರ್ದು (ಶ್ರೀರಾಮಾ. ೧೩೧-೧೭೨). ೨. ಹಿಸುಕಲ್ಪಟ್ಟ; ಮರ್ದಿಸಿದ: ಅಬಲಾ ಪೀನಸ್ತನಕ್ಷುಣ್ಣಸಾರವಿಟೌಘಂ ಗುರು ಶೀತಕಾಲವೆಸೆದತ್ತೆತ್ತಂ (ಪಂಚತಂ. ೨೪೧-೨೩). ೩. ನೋಯಿಸಲ್ಪಟ್ಟ; ಅಸಮಾಧಾನಗೊಂಡ: ಈ ಭಾವ ಪರಿಸ್ಫುಟವಾಗಿ ಅವರನ್ನು ಕ್ಷುಣ್ಣರನ್ನಾಗಿ ಮಾಡಿತ್ತು (ರಾಮಾನೆ. ೮೫). ೪. ಪಳಗಿದ; ಅಭ್ಯಾಸಮಾಡಿದ; ನಿಷ್ಣಾತ. (ನಾ). ೫. ಶಾಸ್ತ್ರದಲ್ಲಿ ಪ್ರವೀಣನಾದವನು; ನಿಷ್ಣಾತನಾದವನು; ಪಂಡಿತ: "ವ್ಯುತ್ಪನ್ನಃ, ಪ್ರಹತಃ, ಕ್ಷುಣ್ಣಃ, ಸಂಸ್ಕೃತಃ – ಈೞ ಪಂಡಿತಂ" (ಹಲಾಯು. ೫೮-೧೯೭). [ಸಂ.]

**ಕ್ಷುಣ್ಣತೆ** (ನಾ). ಅಸಮಾಧಾನ; ಖಿನ್ನತೆ: ನಾಗಪ್ಪನು . . . ಕ್ಷುಣ್ಣತೆಯೊಂದಿಗೆ ಹಿಂದಿರುಗಿದನು (ಕಾಬರ್ಝೂ. ೮೩). [ಸಂ. ಕ್ಷುಣ್ಣತಾ]

**ಕ್ಷುತ** (ನಾ). ಸೀನು; ಸೀನುವಿಕೆ: ಫಲಪಾಕಾಂತದೊಳ್ ಕ್ಷುತವಿಜೃಂಭಣವ್ಯಾಜದಿಂ ಲೋಕಾಂತರಿತರಾಗಿ (ಆದಿಪು. ೫-೬೯ವ); ಪಿತೃದ್ವಂದ್ವಂ ಕ್ಷುತಜೃಂಭಣವ್ಯಾಜದಿಂ ಪರಾಸುಗಳಕ್ಕುಮೆಂದು ಪೇೞ್ದೆ (ಚಂದ್ರಪು. ೩-೩೮ವ). [ಸಂ.]

**ಕ್ಷುತಕರಣ** (ನಾ). ಸೀನುವಿಕೆ: "ಸೀನ್ – ಕ್ಷುತಕರಣೇ" (ಶಮಧಾ). [ಸಂ.]

**ಕ್ಷುತಾಭಿಜನನ** (ನಾ). ಕರಿಯ ಸಾಸವೆ. [ಸಂ.]

**ಕ್ಷುತ್ಕ್ಷಾಮ** (ಗು). ೧. ಹಸಿವೆಯಿಂದ ಬಳಲಿದ. (ನಾ). ೨. ಹಸಿವೆಯಿಂದ ಬಳಲಿದವನು: ದಿಶೆಯೆಂಬತ್ತಱ ದಿವಿಜನಿಕಾಯಮನಿಕ್ಕುವಂ ಜವಂ ಕ್ಷುತ್ಕ್ಷಾಮಂ (ಮಲ್ಲಿಪು. ೧೩-೧೧೯). [ಸಂ. (ಕ್ಷುಧ್ + ಕ್ಷಾಮ)]

**ಕ್ಷುತ್ತು** (ನಾ). ಹಸಿವೆ: ಕ್ಷುತ್ತು ಮೈದೋಱೆ ಭಿಕ್ಷಕ್ಕೆ ಹೋದಲ್ಲಿ ಭಾಂಡವ ತೊಳೆದ ದ್ರವ್ಯಪದಾರ್ಥಮಂ ತರಲು (ಘನವ. ೨೦); ಕ್ಷುತ್ತುಮಮತೆಗಳು ಜೀವಕೆ ಕುಲಿಮೆ ಸುತ್ತಿಗೆಗಳ್ (ಮಂಕುಕ. ೬೧೦). [< ಸಂ. ಕ್ಷುಧ್]

**ಕ್ಷುತ್ಪಿಪಾಸಕ** (ನಾ). ೧. ಹಸಿವು ಮತ್ತು ನೀರಡಿಕೆಗಳಿಂದ ಬಳಲುವವನು. ೨. ಒಂದು ನರಕದ ಹೆಸರು: ಲಾಕ್ಷಾಪ್ರಲೇಪ . . . ಕ್ಷುತ್ಪಿಪಾಸಕ ಕ್ರಿಮಿಕುಲಂಗಳೆಂಬವೇೞೆಂಟು ರಾಜನರಕಗಳು (ವಿವೇಕ. ೧೭೯). [ಸಂ.]

**ಕ್ಷುತ್ಪಿಪಾಸೆ** (ನಾ). ಹಸಿವೆ ಮತ್ತು ನೀರಡಿಕೆ: ಅತಿಬಿಸಿಲು ಗಾಳಿ ಕಲ್ ಮುಳು ಕ್ಷುತ್ಪಿಪಾಸೆ ಜಾಡ್ಯತೆಗಳೆಂಬಿಂತಿವಱ ಕಾಟದಿಂ (ಹಚಕಾ. ೯-೩೦). [ಸಂ. (ಕ್ಷುಧ್ + ಪಿಪಾಸಾ)]

**ಕ್ಷುತ್ಪ್ರಕಾರ** (ನಾ). ಸೀನಿನ ಪ್ರಕಾರ: ಬ್ರಹ್ಮನು . . . ಸೀನಲಾ ನೆಪದಿಂದಲೋರ್ವನುದಯಿಸೆ ಕ್ಷುತ್ಪ್ರಕಾರವೇ ಕಪಟವಾ ಸಂಬಂಧದಿಂ ಕ್ಷುಪನೆನಿಪ್ಪ ಪೆಸರಾದುದವಗೆ (ವೀಶೈಪು. ೨-೧೩-೧೧). [ಸಂ. (ಕ್ಷುಧ್ + ಪ್ರಕಾರ)]

**ಕ್ಷುದ್ಬಾಧೆ** (ನಾ). ಹಸಿವೆಯ ಸಂಕಟ: ಮಹಾಪಾತಕಂ ಜನಿಸೆ, ಕ್ಷುದ್ಬಾಧೆಯಿಂತಾದುದು (ಅದ್ಭುತ. ೨೩-೧೮); ದೇವತೆಗಳು ಕ್ಷುದ್ಬಾಧೆ (ಹಸಿವಿನ ಹಿಂಸೆ)ಯನ್ನು ಎಲ್ಲರಿಗೂ ಸಮಾನವಾಗಿ ಕೊಡಲಿಲ್ಲ (ಮುಕ್ಸಾರ. ೩೧೨). [ಸಂ. (ಕ್ಷುಧ್ + ಬಾಧೆ)]

**ಕ್ಷುದ್ಭಯ** (ನಾ). ಹಸಿವೆಯ ಅಂಜಿಕೆ: ತೃಪ್ತಂಗೆ ಕ್ಷುದ್ಭಯಮೆ (ಗಗತಾ. ೧೬-೪೪). [ಸಂ. (ಕ್ಷುಧ್ + ಭಯ)]

**ಕ್ಷುದ್ರ** (ಗು). ೧. ತೀರ ಚಿಕ್ಕದಾದ; ಅಲ್ಪವಾದ: "ಅಲ್ಪಂ ಲವಂ . . . ಅತಿಸೂಕ್ಷ್ಮಮಾ ಕ್ಷುದ್ರಮುಂ" (ಮಂಗರಾ. ೧೨೭-೫). ೨. ನೀಚವಾದ; ನಿಕೃಷ್ಟ; ಕೀಳುದರ್ಜೆಯ; ಅಲ್ಪವಾದ. ೩. ಅತಿಲೋಭಿಯಾದ; ದುರಾಶೆಯುಳ್ಳ. ೪. ಕ್ರೂರವಾದ; ನಿರ್ದಯವಾದ; ದುಷ್ಟವಾದ: "ಕ್ಷುದ್ರಮೆನಿಸಿರ್ಪುದಂ ಕ್ರೂರ ಮೆಂದೆಂಬುದು" (ಮಂಗರಾ. ೧೩೯-೫). (ನಾ). ೫. ದರಿದ್ರ; ಬಡವ; ದೀನ; ನಿರ್ಗತಿಕ: "ಕ್ಷುದ್ರಃ, ದರಿದ್ರಃ . . . ದುರ್ಗತಃ – ಈ ೬ ಬಡವಂ" (ಹಲಾಯು. ೫೭-೧೯೩); "ಕ್ಷುಲ್ಲಕಂ ಕ್ಷುದ್ರವೆನೆ ಕರ ಕೃಪಣನಕ್ಕುಂ" (ಮಂಗರಾ. ೬೮-೭). ೬. ಅಲ್ಪನಾದವನು; ಕ್ಷುಲ್ಲಕ ವ್ಯಕ್ತಿ: ಕ್ಷುದ್ರನೆ ನಿನಗೆಲವೋ ಮುನಿವುದೆನಗಮುಯುಕ್ತಂ (ನೇಮಿಪು. ೫-೮೨); ಕೊಲನೇ ಕ್ಷುದ್ರ ಸಮರ್ಥನಂ (ಸೋಮೇಶ. ೩೧). ೭. ಜೇನು; ಮಧು. ೮. ಗುಳ್ಳೆ ಶಂಖ; ಸಣ್ಣ ಶಂಖ. ೯. ಇರುವೆ; ಪಿಪೀಲಿಕೆ: "ಕ್ಷುದ್ರಮೆಂದೆನಲ್ಕಿರುಹೆಯಕ್ಕುಂ" (ಮಂಗರಾ. ೪೯-೧೨). ೧೦. ಬಿಸಿಲು. ೧೧. ಚಾಡಿ; ಇನ್ನೊಬ್ಬರ ಮೇಲೆ ಮಾಡುವ ದೋಷಾರೋಪಣೆ: ಕ್ಷುದ್ರ ಕೇಳುವವನು ಶೂದ್ರನಿಗಿಂತ ಕಡೆ (ಗಾದೆ). ೧೨. ಸಣ್ಣತನ; ಅಲ್ಪತೆ; ಕ್ಷುದ್ರತೆ: ಹೃದಯದಲ್ಲಿಯ ಕ್ಷುದ್ರವನ್ನು ಹೊಸದಾಗಿ ಕಾಣಬೇಕೆ? (ಒಡೆಕ. ೮೦). ೧೩. ದುಂಬಿ; ಜೇನುನೊಣ: "ಅತಿದೀನಂ ಶಂಬುಕಂ ಕ್ರೂರ ಮಾತಪಮುಂ ಕ್ಷುದ್ರನೆನಿಕ್ಕು" (ನಾನಾರ. ೧೫೨). ೧೪. ಚಾಡಿಕೋರ: "ದುರ್ಜನಃ, ಪಿಶುನಃ, ಕ್ಷುದ್ರಃ . . . ಖಳಃ – ಈ ೬ ಪಿಸುಣಂ" (ಹಲಾಯು. ೫೭-೧೯೧). [ಸಂ.]

**ಕ್ಷುದ್ರಕ** (ಗು). ೧. ಸಣ್ಣ; ಅಲ್ಪವಾದ; ಸೂಕ್ಷ್ಮವಾದ. (ನಾ). ೨. ಚಾಡಿಕೋರ; ನಿಂದಕ. ೩. ಶ್ವಾಸರೋಗದ ಐದು ಪ್ರಕಾರಗಳಲ್ಲಿ ಒಂದು: ಈ ಶ್ವಾಸರೋಗವು ಕ್ಷುದ್ರಕವೆಂದೂ, ತಮಕವೆಂದೂ, ಛಿನ್ನವೆಂದೂ, ಮಹಾನೆಂದೂ, ಊರ್ಧ್ವವೆಂದೂ ಐದು ವಿಧವಾಗಿರ್ಪುದು (ಸಕವೈ. ೨೨೮). [ಸಂ.]

**ಕ್ಷುದ್ರಗಾರ** (ನಾ). ಚಾಡಿಕೋರ: "ಕರ್ಣೇಜಪಃ, ಸೂಚಕಃ, ಪಿಶುನಃ – ೩ ಚಾಡಿ ಹೇಳುವವನು, ಕ್ಷುದ್ರಗಾರ" (ಸಿದ್ಧಾಂತಿ. ೨೮೯). [ಕ್ಷುದ್ರ + -ಕಾರ$_1$ (< -ಕಾಜ)]

**ಕ್ಷುದ್ರಗ್ರಹ** (ನಾ). ಸಣ್ಣ ಗ್ರಹ: ಕ್ಷುದ್ರಗ್ರಹಗಳು ಮತ್ತು ಉಲ್ಕೆಗಳು ಸೂರ್ಯನಿಂದ ಶಾಖ ಪಡೆದ ಮೇಘದ ಒಳವಲಯಕ್ಕೆ ಸಂಬಂಧಿಸಿವೆ (ಭೂಹುಟ್ಟು. ೭೨). [ಕ್ಷುದ್ರ + ಗ್ರಹ]

**ಕ್ಷುದ್ರಘುಂಟಿಕೆ** (ನಾ). ೧. ಕಿರುಗೆಜ್ಜೆ; ಸಣ್ಣಗೆಜ್ಜೆ; ಕಿಂಕಿಣಿ: "ಕಿಂಕಿಣೀ ಕ್ಷುದ್ರಘುಂಟಿಕಾ" (ಹಲಾಯು. ೯೨-೪೦೬). ೨. ಕಿರುಗೆಜ್ಜೆಗಳುಳ್ಳ ಆಭರಣ: (ಕಿ). [ಕ್ಷುದ್ರ + ಘುಂಟಿಕೆ]

**ಕ್ಷುದ್ರಜಂತು** (ನಾ). ತೀರ ಚಿಕ್ಕ ಜೀವ; ಕ್ಷುಲ್ಲಕವಾದ ಜೀವ, —ಪ್ರಾಣಿ: ನೀನೆತ್ತಣ ಪರಮಾಣು ಕ್ಷುದ್ರಜಂತು (ಬಸರ. ೮-೧೩೭). [ಕ್ಷುದ್ರ + ಜಂತು]

**ಕ್ಷುದ್ರಜನ** (ನಾ). ಕೆಳಮಟ್ಟದ ಜನ; ಪಾಮರ ಜನ: ಕ್ಷುದ್ರಜನರುಗಳ ಸಂಚಾರದಿಂದ ಸವೆದ ದಾರಿಯಿದು (ವಚಕಾ. ೨೦). [ಕ್ಷುದ್ರ + ಜನ]

**ಕ್ಷುದ್ರತಂಡುಲ** (ನಾ). ಒಡಕಲು ಅಕ್ಕಿ; ಅಕ್ಕಿಯ ನುಚ್ಚು; ಕಡಿಯಕ್ಕಿ: "ಕಣಃ, ಕ್ಷುದ್ರತಂಡುಲಃ – ಈ ೨ ನುಚ್ಚು" (ಹಲಾಯು. ೯೫-೪೨೪). [ಕ್ಷುದ್ರ + ತಂಡುಲ]

**ಕ್ಷುದ್ರತನ** (ನಾ). ಸಣ್ಣತನ; ಅಲ್ಪತೆ; ನೀಚತನ: ನನ್ನಯ್ಯ ಕ್ಷುದ್ರತನ ಸುಟ್ಟುಬಂದಿರುವೆ (ಸಿದ್ಧಪು. ೫-೭೪). [ಕ್ಷುದ್ರ + -ತನ]

**ಕ್ಷುದ್ರತೆ** (ನಾ). = ಕ್ಷುದ್ರತನ: ಆ ಭಾವನಾವೇಶದಲ್ಲಿ ಕ್ಷುದ್ರತೆಗೆ ಆಸ್ಪದವಿರಲಿಲ್ಲ (ಸಮಜೀ. ೭೮೮). [ಸಂ. ಕ್ಷುದ್ರತಾ]

**ಕ್ಷುದ್ರದವನ** (ನಾ). ಒಂದು ಬಗೆಯ ದವನ: "ಮುನಿಪುತ್ರಕಃ – ಕ್ಷುದ್ರದವನ" (ಒಷಧಿ. ೧೨೭). [ಕ್ಷುದ್ರ + ದವನ]

**ಕ್ಷುದ್ರದೇವತೆ** (ನಾ). ಕೀಳುದೈವ: ಕೆಲವು ಜನ ಕ್ಷುದ್ರದೇವತೆಗಳನ್ನು ಪೂಜಿಸುತ್ತಾರೆ (ರೂಢಿ). [ಕ್ಷುದ್ರ + ದೇವತೆ]

**ಕ್ಷುದ್ರಧಾನ್ಯ** (ನಾ). ನುಚ್ಚುನುಚ್ಚಾದ ಧಾನ್ಯ, —ಕಾಳು: (ಕಿ). [ಕ್ಷುದ್ರ + ಧಾನ್ಯ]

**ಕ್ಷುದ್ರನಾಸಿಕೆ** (ಗು). ೧. ಸಣ್ಣಮೂಗುಳ್ಳ. (ನಾ). ೨. ಚಿಕ್ಕ ಮೂಗುಳ್ಳವನು: "ನಕ್ಷುದ್ರಃ ಕ್ಷುದ್ರನಾಸಿಕಃ" (ಹಲಾಯು. ೯೯-೪೫೩). [ಕ್ಷುದ್ರ + ನಾಸಿಕೆ]

**ಕ್ಷುದ್ರಪಕ್ಷಿಕ** (ನಾ). ಒಂದು ಜಾತಿಯ ಪಕ್ಷಿ; ಟಿಟ್ಟಿಭ: "ಟಟ್ಟಭಾಃ, ಕ್ಷುದ್ರಪಕ್ಷಿಕಾಃ – ಈ ೨ ಟಿಟ್ಟಿ" (ಹಲಾಯು. ೪೨-೧೯). [ಸಂ.]

**ಕ್ಷುದ್ರಪತ್ರ** (ನಾ). ಕಗ್ಗೊರಲೆ; ಪುಲ್ಲಂಪುರಿಚೆ: "ಕಗ್ಗೊಜಲೆ ಬಾಬರಿ ಕ್ಷುದ್ರಪತ್ರಂ" (ಮಂಗರಾ. ೩೯-೨೭). [ಸಂ. ಕ್ಷುದ್ರಪತ್ರಾ]

**ಕ್ಷುದ್ರಪಾತ್ರ** (ನಾ). ೧. ನೀಚಪಾತ್ರ; ದುಷ್ಟಪಾತ್ರ: ನಾಯಕ ಪಾತ್ರದ ಉದಾತ್ತತೆಯಲ್ಲಿ . . . ಉತ್ತೇಜನ ದೊರಕಿಸಿ, ಕ್ಷುದ್ರಪಾತ್ರಗಳ ಅಭಿನಯದ ಕೌತುಕವನ್ನು ಮಾಡಿಯೂ ಅವುಗಳ ಕ್ಷುಲ್ಲಕಭಾವನೆಗಳ ಕಡೆಗೆ ತಟಸ್ಥ ವಿಸ್ಮಯದಿಂದಲೂ . . . ಪ್ರೇಕ್ಷಕನು ನೋಡಲು ಶಕ್ತನಾಗುವನು (ಪ್ರಬಂಧ. ೩೦). ೨. ಸಣ್ಣಪಾತ್ರ; ಅಪ್ರಧಾನ ಪಾತ್ರ. [ಕ್ಷುದ್ರ + ಪಾತ್ರ]

**ಕ್ಷುದ್ರಪ್ರಬಂಧ** (ನಾ). [ಕಾವ್ಯಮಿ] ಕಾವ್ಯಪ್ರಭೇದಗಳಲ್ಲಿ ಒಂದು; ಸಣ್ಣ ಪ್ರಬಂಧ; ಲಘುಕಾವ್ಯ: ಗದ್ಯಕಾವ್ಯ ಪದ್ಯಕಾವ್ಯ ಚಂಪೂ ಕಾವ್ಯ ಗೀತಪ್ರಬಂಧ ಕ್ಷುದ್ರಪ್ರಬಂಧಗಳೆಂಬ ಪಂಚವಿಧ ಕಾವ್ಯ ಪ್ರಬಂಧಗಳಂ (ವಿವೇಕ. ೨೨೭). [ಕ್ಷುದ್ರ + ಪ್ರಬಂಧ]

**ಕ್ಷುದ್ರಮೃಗ** (ನಾ). ಕ್ರೂರಮೃಗ; ದುಷ್ಟಮೃಗ: ನಿನ್ನಂ ಮತ್ತೊರ್ವಂ ರಕ್ಷಿಸದಂದು ನಿನಗೆ ಕ್ಷುದ್ರಮೃಗೋಪದ್ರವಮಕ್ಕು (ಪಂಚತಂ. ೫೪-೭). [ಕ್ಷುದ್ರ + ಮೃಗ]

**ಕ್ಷುದ್ರರೂಪ** (ನಾ). ಸೂಕ್ಷ್ಮರೂಪ; ಸಣ್ಣರೂಪ (?): ವಿದ್ರವಣವನು ಮಾಳ್ಪೆನೆನುತಾ ಕ್ಷುದ್ರರೂಪವ ತಾಳಬೇಕೆನುತಸುರನನುವಾದ (ಕೌಶಿರಾ. ೩೯-೨೮). [ಕ್ಷುದ್ರ + ರೂಪ]

**ಕ್ಷುದ್ರವಾರ್ತಾಕಿ** (ನಾ). ಗುಳ್ಳಬದನೆ; ರಾಮುಗುಳ್ಳ. [ಸಂ. ಕ್ಷುದ್ರವಾರ್ತಾಕೀ]

**ಕ್ಷುದ್ರವೃತ್ತಿ** (ನಾ). ಕೀಳುಮಟ್ಟದ ಉದ್ಯೋಗ: ಅರ್ಜನೆಯೆಂದು ಅತ್ಯಾಶೆಗೂ ಅತಿಕ್ಲೇಶಕ್ಕೂ ಒಳಗಾಗಬಾರದು. ಕ್ಷುದ್ರವೃತ್ತಿಯನ್ನೂ ಅವಲಂಬಿಸಬಾರದು (ಆರ್ಯಧ. ೪೭). [ಕ್ಷುದ್ರ + ವೃತ್ತಿ]

**ಕ್ಷುದ್ರಶಂಖ** (ನಾ). ಚಿಕ್ಕಶಂಖ; ಸಣ್ಣಶಂಖ: "ಕ್ಷುಲ್ಲಕಂ, ಕ್ಷುದ್ರಶಂಖಃ, ಶಂಬೂಕಃ – ಈ ೩ ಕಿಜಿಯ ಶಂಖಂ" (ಹಲಾಯು. ೧೯೧-೪೨); "ಶುಕ್ತಿಯೆನೆ ಕ್ಷುದ್ರಶಂಖಂ" (ಮಂಗರಾ. ೧೨೨-೯). ಕ್ಷುದ್ರಶಂಖೋದರದಿಂ ಬ್ರಹ್ಮಾಂಡಗರ್ಭಂ ಪಿರಿದೆನೆ (ಜಗವಿ. ೧-೧೯). [ಕ್ಷುದ್ರ + ಶಂಖ]

**ಕ್ಷುದ್ರಹೇಳು** (ಕ್ರಿ). ಚಾಡಿಹೇಳು: ಇವನ ಮೇಲೆ ಕೆಲವು ಕೆಟ್ಟ ಜನರು ಕ್ಷುದ್ರಹೇಳಿದ್ದರಿಂದ ವಿಜಯನಗರದ ರಾಯರು ಬೇಸರಗೊಂಡು ತಿಮ್ಮಣ್ಣನಾಯಕನನ್ನು . . . ಸೆರೆಯಲ್ಲಿಟ್ಟು (ಚಿತ್ರಪಾ. ೧೪). [ಕ್ಷುದ್ರ + ಹೇಳು (< ಪೇೞ್)]

**ಕ್ಷುದ್ರಾಂಡ** (ನಾ). ಮರಿಮೀನುಗಳ ಮೊತ್ತ: “ಕ್ಷುದ್ರಾಂಡಃ, ಮತ್ಸ್ಯಸಂಘಾತಃ, ಪೋತಾಧಾನಂ – ಈ ೩ ಕಿಱಿಯಮೀನ ಮೊತ್ತಂ” (ಹಲಾಯು. ೧೦೯–೩೯). [ಸಂ.]

**ಕ್ಷುದ್ರಿ** (ನಾ). ಚಾಡಿಕೋರ; ಚಾಡಿ ಹೇಳುವವನು: (+). [ಸಂ. ಕ್ಷುದ್ರಿನ್]

**ಕ್ಷುದ್ರಿಕೆ** (ನಾ). ಕೀಳು ಕೆಲಸ; ಕೀಳ್ತನ; ಸಣ್ಣತನ (?): ವಂಚನೆ ಮೊದಲಾದ ಕ್ಷುದ್ರಿಕೆಗಳನುಪದೇಶಂಗೆಯ್ವುದಾರಂಭಕೋಪದೇಶಮುಕ್ಕು (ಪಸಾರ. ೬೨೭–೪). [?]

**ಕ್ಷುದ್ರೆ** (ನಾ). ೧. ನಡತೆಗೆಟ್ಟವಳು; ಜಾರೆ; ಸೂಳೆ: “ರೂಪಜೀವಾ, ವೇಶ್ಯಾ, ಗಣಿಕಾ, ಪಣ್ಯಾಂಗನಾ, ಕ್ಷುದ್ರಾ – ಈ ೫ ಸೂ(ೞೆ)ಳೆ” (ಹಲಾಯು. ೮೦–೩೩೬); “ವಾರಸತಿ . . . ವೇಸಿ ಕ್ಷುದ್ರೆಯೆನೆ . . . ಸೂಳೆಯಕ್ಕು” (ಮಂಗರಾ. ೯೦–೫). ೨. ಕುಣಿತದ ಹೆಣ್ಣು; ನರ್ತಕಿ; ನಟಿ: “ನಟಿ ಕ್ಷುದ್ರೆಯೆನೆ ನಟ್ಟುವಿತಿಗಕ್ಕು ನಾಮಂ” (ಮಂಗರಾ. ೧೧೧–೩). ೩. ಅಂಗಹೀನಳಾದ ಹೆಂಗಸು; ವಿರೂಪಗೊಂಡ ಹೆಂಗಸು. ೪. ಜೇನುಹುಳು. ೫. ಒಂದು ಜಾತಿಯ ಸಸ್ಯ; ಹೆಗ್ಗುಳ್ಳ. ೬. ಬಿಕ್ಕಳಿಕೆ: “ಶರೀರಾಯಾಸದಿಂದ ವಾಯುವು ಹೆಚ್ಚಿ ಉಂಟಾದ ಬಿಕ್ಕಳು ಕ್ಷುದ್ರೆ ಎನಿಸಿಕೊಳ್ಳುವುದು” (ಶಕವೈ. ೨೪೦). [ಸಂ. ಕ್ಷುದ್ರಾ]

**ಕ್ಷುದ್ರೋಪದ್ರ** (ನಾ). ಚಾಡಿಯ ಅಪಚಾರದ ಮಾತು: ಸದಾ ನಮ್ಮ ಮೇಲೆ ಕ್ಷುದ್ರೋಪದ್ರ ಹೇಳಿ ನಮಗೂ ನಮ್ಮ ರಾಜ್ಯಕ್ಕೂ ಬಹಳ ಖರಾಬು ಮಾಡಿಸಿದ್ದಾನೆ (ರಾಜೇಂದ್ರ. ೧೦೬). [ಕ್ಷುದ್ರ + ಉಪದ್ರ]

**ಕ್ಷುದ್ವ್ಯಾಧಿ** (ನಾ). ಹಸಿವಿನ ಬಾಧೆ, —ಬೇನೆ: ಜಲಜಾತಪ್ರಿಯನೆಂಟ ಱಿಯೊಳ್ . . . ಅರ್ಕಜಂ ನಿಲೆ ಮಹಾಕ್ಷುದ್ವ್ಯಾಧಿಯಿಂ ಪೊಂದುಗುಂ (ಜಾತತಿ. ೨೩–೨). [ಸಂ. (ಕ್ಷುಧ್ + ವ್ಯಾಧಿ)]

**ಕ್ಷುಧಾಪೋಷಕ** (ನಾ). ಹಸಿವೆಯನ್ನು ಹಿಂಗಿಸಿಕೊಳ್ಳುವವನು; ಹೊಟ್ಟೆಹೊರೆದುಕೊಳ್ಳುವವನು: ಜಿಹ್ವೆಯ ಲಂಪಟತ್ವದಿಂದ ಕ್ಷುಧಾ ಪೋಷಕನಾಗಿ (ಮೋಳಿಮಾ. ೨೦೦–೭೪೪). [ಸಂ. (ಕ್ಷುಧಾ + ಪೋಷಕ)]

**ಕ್ಷುಧಾಭಿಜನನ** (ನಾ). ೧. ಹಸಿವನ್ನು ಉಂಟುಮಾಡುವುದು. ೨. ಕರಿಯ ಸಾಸವೆ. [ಸಂ.]

**ಕ್ಷುಧಾರ್ತ** (ಗು). ಹಸಿವಿನಿಂದ ಪೀಡಿಸಲ್ಪಟ್ಟ; ಹಸಿವಿನಿಂದ ಕಂಗೆಟ್ಟ. [ಸಂ. (ಕ್ಷುಧಾ + ಆರ್ತ)]

**ಕ್ಷುಧಾಶಾಂತಿ** (ನಾ). ಹಸಿವನ್ನು ಹಿಂಗಿಸುವಿಕೆ; ಹಸಿವನ್ನು ನಿವಾರಿಸುವಿಕೆ; ಹಸಿವೆಯ ತೃಪ್ತಿಗಾಗಿ ಉಣ್ಣುವುದು ಅಥವಾ ತಿನ್ನುವುದು; ಉಪಾಹಾರ: ಸಂಜೆಯ ಕ್ಷುಧಾಶಾಂತಿಗಾಗಿ ವೆಂಕಮ್ಮನವರಿಗೆ ಬೇಕಾದ ಅವಲಕ್ಕಿಯ ಬಗ್ಗೆ . . . ಒಂದು ದೊಡ್ಡ ರಸಕಸಿಯು ಏಳುತ್ತದೆ (ಸಮಜೀ. ೭ ಪೀಠಿಕೆ). [ಸಂ. (ಕ್ಷುಧಾ + ಶಾಂತಿ)]

**ಕ್ಷುಧಿತ** (ಗು). ೧. ಹಸಿದ. (ನಾ). ೨. ಹಸಿದವನು: ಎಲೆ ವಿಪ್ರಶಾರ್ದೂಲನೆ, ಕ್ಷುಧಿತನಾದಂಥ ನನ್ನ ವಾಕ್ಯವನ್ನು ಕೇಳು (ಶೇಷಧ. ೭). [ಸಂ.]

**ಕ್ಷುಧೆ** (ನಾ). ಹಸಿವೆ; ಹಸಿವು: “ಹಸಿವು ಕ್ಷುತ್ ಕ್ಷುಧೆ ಬುಭುಕ್ಷೆ ಯೆನಿಕ್ಕು” (ಮಂಗರಾ. ೭೦–೧೪); ತಮ್ಮ ಹಣ್ಣು ತಾವೆ ತಿನ್ನವು ಮರಗಳು ಅನ್ಯರ ಕ್ಷುಧೆ ಕಳೆದಪುವು (ಇಂಚಾಪ. ೧೩೫–೬೫). [ಸಂ. ಕ್ಷುಧಾ]

**ಕ್ಷುಪ** (ನಾ). ೧. ಪೊದೆ; ಕಂಟೆ: “ಕ್ಷುಪಃ, ಗುಚ್ಛಃ – ಈ ೨ ಮಡಲ್” (ಹಲಾಯು. ೯೫–೪೨೫). ೨. ಚಿಕ್ಕಚಿಕ್ಕ ರೆಂಬೆಗಳುಳ್ಳ ಮರ: “ಗುಜ್ಜುಗೊಂಬಿನ ಮರನಂ ಕ್ಷುಪಮೆಂಬುದು” (ಹಲಾಯು. ೨೯–೨೪); “ಕಡುಗುಜ್ಜುವೃಕ್ಷಂ ಕ್ಷುಪಾಖ್ಯಂ” (ಮಂಗರಾ. ೩೧–೧); ಉರುಕಾಂತಾರದೊಳಚ್ಛನೀರದೊಳನೇಕ ತೃಣಕ್ಷುಪಗುಲ್ಮಜಾಲದೊಳ್ (ಪಂಚತಂ. ೫೭–೧೧); ಕುಸುಮಿಸಿದುವು ಮಿಕ್ಕೆಸೆವಾ ಕ್ಷುಪ [ಪಾಠಾಂ. ಮಿಕ್ಕಿನವಾಕ್ಷುಪ] ಕುಜಾತವೀರುತ್ತುಗಳುಂ (ಕಾವ್ಯಾವ. ೧೯೫). ೩. ಸೂರ್ಯವಂಶದಲ್ಲಿ ಹುಟ್ಟಿದ ಒಬ್ಬ ರಾಜ: “ಕ್ಷುಪಃ – ದಧೀಚನೊಡನೆ ಪಗಡೆಯನಾಡಿ ಸೋಲ್ತ ಸೂರ್ಯವಂಶದ ರಾಯಂ” (ಕಾಶಕ್ಯ. ೨೪೮); ಹರಿ ಚಕ್ರದಿಂ ಕ್ಷುಪನಿಮಿತ್ತಂ ದಧೀಚಿಯಂ ಭರದಿನಿಡೆ (ಪದ್ಮರಾ. ೧೦–೨೪೨). ೪. ಒಬ್ಬ ಋಷಿಯ ಹೆಸರು. ೧, ೪: ಕ್ಷುಪಶಾಂಡಿಲ್ಯಸುರೇಶ . . . ಮರವಟ್ಟಿರ್ಕುಂ ನದೀತೀರದೊಳ್ (ಹಮ್ಮಿರ. ೪–೭೧). [ಸಂ.]

**ಕ್ಷುಬ್ಧ** (ಗು). ಕದಡಿದ; ಕ್ಷೋಭೆಗೊಂಡ; ಅಶಾಂತವಾದ; ಅಲ್ಲೋಲಕಲ್ಲೋಲವಾದ: ವಿಚಿತ್ರಸ್ವಪ್ನಗಳಿಂದ ಅಂದಿನ ರಾತ್ರಿ ನರಹರಿಯ ನಿದ್ರೆಯೆಲ್ಲ ಕ್ಷುಬ್ಧವಾಗಿತ್ತು (ಸಮಜೀ. ೩೨೨). [ಸಂ.]

**ಕ್ಷುಭಿತ** (ಗು). ೧. = ಕ್ಷುಬ್ಧ: ಚಳದನಿಳಾಹತ ಕ್ಷುಭಿತ ಭಂಗುರ ತುಂಗತರಂಗಮಾಳಿಕಾವಳನ . . . ಜಳಮಂ (ಪಂಪಭಾ. ೪–೨೫); ಕ್ಷುಭಿತದಯಾರ್ಣವ ಘೂರ್ಣಿತ ರಭಸಮೆನಲ್ (ಪಂರಾಮಾ. ೬–೨೯). ೨. ಬಿರುಸಾದ; ಉದ್ಧತವಾದ: ಇಭೋದ್ಧೃತ್ ಕರ್ಣತಾಳ ಕ್ಷುಭಿತ ಪವನವಿಕ್ಷೇಪದಿಂ ವಾರ್ಧಿಯಂ ತುಳ್ಕುವ ಸೇನಾಚಕ್ರಮಂ (ಮಲ್ಲಿಪು. ೯–೨೯). ೩. ಕನಲಿದ; ಅಸಮಾಧಾನಗೊಂಡ; ಉದ್ರಿಕ್ತವಾದ; ಕೋಪಗೊಂಡ. ‘ಕ್ಷುಭಿತಚಿತ್ತ’ ಪರಾ. ೪. ಕಳವಳಗೊಂಡ; ವ್ಯಾಕುಲವಾದ: ಅಂತತಿಕ್ಷುಭಿತಹೃದಯನಾಗಿ ತೊಟ್ಟನೆ ಮಗುಟ್ಟು (ಪಂಚತಂ. ೨೬–೧೦). ೫. ಬೆದರಿದ; ಭೀತನಾದ. (ನಾ). ೬. ಕ್ಷೋಭೆ; ಉದ್ರೇಕ: ಕ್ಷುಭಿತವಳಿದ ಚಿತ್ತದೊಳು ಮತ್ತೆ ಮಾಳ್ಪುದು ಅಭಯ ಶುದ್ಧೋಪಯೋಗವದು (ಭರಚ. ೬೯–೮೭). [ಸಂ.]

**ಕ್ಷುಭಿತಚಿತ್ತ** (ನಾ). ೧. ಕನಲಿದ ಮನಸ್ಸುಳ್ಳವನು; ಕುಪಿತ ಮನುಷ್ಯ: ಇದು ವಿಪಕ್ಷಬಲಮೆಂದಱಿದು ಕ್ಷುಭಿತಚಿತ್ತನಾಗಿ ಬಾಹುಬಲಿಕುಮಾರಂ . . . ಭರತೇಶ್ವರಚಕ್ರವರ್ತಿಯ ಸೈನ್ಯಕ್ಕೆ ಮುಟ್ಟವರೆ (ಆದಿಪು. ೧೪–೯೩ ವ). ೨. ಅಸಮಾಧಾನಗೊಂಡವನು; ಕಳವಳವನ್ನು ಹೊಂದಿದವನು: ಆಗಳರಸನತಿ ಸಂಭ್ರಮರಸ ಕ್ಷುಭಿತಚಿತ್ತನಾಗಿ (ಮಲ್ಲಿಪು. ೪–೧೫ ವ). [ಕ್ಷುಭಿತ + ಚಿತ್ತ]

**ಕ್ಷುಭಿತವಾರಿಧಿ** (ನಾ). ಅಲ್ಲೋಲಕಲ್ಲೋಲವಾದ ಸಮುದ್ರ; ಪ್ರಕ್ಷುಬ್ಧವಾದ ಸಾಗರ: ಕ್ಷುಭಿತವಾರಿಧಿಯಂತೆ ಹೆಚ್ಚಿತು ರಭಸ (ಕಾಶಿರಾ. ೩೨–೨೪). [ಕ್ಷುಭಿತ + ವಾರಿಧಿ]

**ಕ್ಷುಭಿಯಿಸು** ‘ಕ್ಷುಭಿಸು’ ನೋ.

**ಕ್ಷುಭಿಸು, ಕ್ಷುಭಿಯಿಸು** (ಕ್ರಿ). ಅಲ್ಲೋಲಕಲ್ಲೋಲವಾಗು; ಕ್ಷೋಭೆಗೊಳ್ಳು: ಅಭಿಘಾತಜ್ವರದಂತೆ ದುಷ್ಕರ್ಮ ಕುಣಿದಾಡಿ ಕ್ಷುಭಿಸಿ ಬೀಳ್ಪುದು ಕಂಡ ಕಡೆಗೆ (ಭರಚ. ೫೨–೧೨೦). **ಕ್ಷುಭಿಯಿಸು**: ಯುಧಿಷ್ಠಿರನಿರದವೆಲ್ಲಮನೊಪ್ಪಿಸಿ ಕಳೆವುದುಂ ಪ್ರಭಂಜನತನೂಜನುಂ ಧನಂಜಯನುಂ ಕ್ಷುಭಿಯಿಸಿ (ನೇಮಿಪು. ೧೦–೩೯ ವ). [ಕ್ಷುಭ್$_0$ + –ಇಸು$_3$]

**ಕ್ಷುಮೆ** (ನಾ). ೧. ಕರಿ ಅಗಸೆ; ಎಳ್ಳಗಸೆ: “ಅತಸೀ, ಉಮಾ, ಕ್ಷುಮಾ – ಈ ೩ ಎಳ್ಳಗಸೆ” (ಹಲಾಯು. ೯೫–೨೨೮). ೨. ಒಂದು ಬಗೆಯ ಸೆಣಬು, —ನಾರು: (+). [ಸಂ. ಕ್ಷುಮಾ]

**ಕ್ಷುರ** (ನಾ). ೧. ಸಣ್ಣಕತ್ತಿ; ಸುರಿಗೆ: ಕರಶಾಖೆಗಳತನು ಕ್ಷುರದಂದಂ ಕರನಖಮವು ಕೇದಗೆಯೆಸಟಿಂದಂ (ಸುಕುಮಾ. ೫–೫೧). ೨. ಹಸು, ಎತ್ತು, ಕುದುರೆ ಮೊದಲಾದುವುಗಳ ಗೊರಸು; ಖುರ; ಕೊಳಗು. ೩. ಕೊಳವಳಿಕೆ ಗಿಡ; ಕೋಕಿಲಾಕ್ಷ. [ಸಂ.]

**ಕ್ಷುರಕ** (ನಾ). ೧. ತಿಲಕವೃಕ್ಷ: "ಕ್ಷುರಕಮೆನೆ ಫೇನಿಲಮೆನಲ್ ತಿಲಕ ತರುವಕ್ಕು" (ಮಂಗರಾ. ೩೭-೧೭). ೨. ನಾಯಿಂದ; ನಾಪಿತ; ಕ್ಷೌರಿಕ. ೩. = ಕ್ಷುರ ೧: ವೈರಿಗಳ ಪೆರ್ಬಲಂ ಬಾಳೆತ್ತಿ ಪೊಣರ್ದೊಡೆ ನಿವಾರಣಂಗೆಯ್ದರಿ ಕ್ಷುರಕಾದಿಗಳ ಮುೞಿದು (ಭಾವಚಂ. ೫-೧೯). [ಸಂ.]

**ಕ್ಷುರಕರ್ಮ** (ನಾ). ೧. (ನಾಪಿತನ ಕತ್ತಿಯಿಂದ) ಕೂದಲು ಕತ್ತರಿಸುವುದು; ಕ್ಷೌರ: ಕ್ಷೌರಕನ, ಕ್ಷೌರದ, ಕ್ಷುರಕರ್ಮದ (Tonsorial. ಇಂಕನಿ). ೨. ಚೌಲ; ಕೇಶಖಂಡನ. [ಸಂ. ಕ್ಷುರಕರ್ಮನ್].

**ಕ್ಷುರಧಾರೆ** (ನಾ). ೧. (ನಾಪಿತನ) ಕತ್ತಿಯ ಅಲಗು; ಖಡ್ಗದ ಬಾಯಿ. ೨. ಎಂಟು ಮಹಾನರಕಗಳಲ್ಲಿ ಒಂದು: ಸೂಚೀಮುಖ, ಕಾಲ, ಖಡ್ಗಧಾರೆ, ಕ್ಷುರಧಾರೆ . . . ಸಂತಾಪಂಗಳೆಂಬುವೇ ಯೆಂಟು ಮಹಾನರಕಂಗಳು (ವಿವೇಕ. ೧೭೯). [ಕ್ಷುರ + ಧಾರೆ]

**ಕ್ಷುರಪ್ರ** (ನಾ). ೧. ಕುದುರೆಯ ಗೊರಸಿನಾಕಾರದ ಅಲಗನ್ನುಳ್ಳ ಬಾಣ; ಕವಲಂಬು: "ಕ್ಷುರಪ್ರವೆಂಬುದು ಬೋೞೆಯಂಬು" (ಹಲಾಯು. ೭೭-೩೧೫). ೨. ಕುರುಪೆ; ಉಜ್ಜುಗೋರಿ. [ಸಂ.]

**ಕ್ಷುರಭಾಂಡ** (ನಾ). ನಾಯಿಂದನ ಕತ್ತಿ ಮೊದಲಾದುವನ್ನು ಇಡುವ ಚೀಲ, —ಹಡಪ: ಬೇಗಂ ಕ್ಷುರಭಾಂಡಮನೀಯೆಂದು ಬೇಡಿದೊಡೆ (ಪಂಚತಂ. ೭೮-೧೭). [ಕ್ಷುರ + ಭಾಂಡ]

**ಕ್ಷುರಮರ್ದಿ** (ನಾ). ಕ್ಷೌರದ ಕತ್ತಿಯನ್ನು ಮಸೆಯುವವನು; ನಾಯಿಂದ; ಕ್ಷೌರಿಕ; ಹಜಾಮು: ನಿಪುಣರುಂ ಸುಖಹಸ್ತರು ಮೆನಿಪ್ಪ ಶಿಕ್ಷಿತ ಕ್ಷುರಮರ್ದಿಗಳ್ ಬಂದು (ಶ್ರೀರಾಮಾ. ೮೭೭-೪೩೯). [ಸಂ. ಕ್ಷುರಮರ್ದಿನ್]

**ಕ್ಷುರಿ** (ನಾ). = ಕ್ಷುರಮರ್ದಿ. [ಸಂ. ಕ್ಷುರಿನ್]

**ಕ್ಷುರಿಕಾಸ್ತ್ರ** (ನಾ). ಐದು ಮಂತ್ರಾಸ್ತ್ರಗಳಲ್ಲಿ ಒಂದು: ಶಿವಾಸ್ತ್ರ, ಕ್ಷುರಿಕಾಸ್ತ್ರ, ಪಾಶುಪತಾಸ್ತ್ರ, ವ್ಯೋಮಾಸ್ತ್ರ, ಅಘೋರಾಸ್ತ್ರವೆಂಬ ಪಂಚಾಸ್ತ್ರ ಮಹಾಮಂತ್ರಗಳಂ (ವಿವೇಕ. ೮೧). [ಸಂ. (ಕ್ಷುರಿಕಾ + ಅಸ್ತ್ರ)]

**ಕ್ಷುರಿಕೆ** (ನಾ). ಚೂರಿ; ಸುರಿಗೆ; ಬಾಕು: "ಅಸಿಪುತ್ರಿಕಾ, ಅಸಿಧೇನುಃ, ಕ್ಷುರಿಕಾ, ಪತ್ರಂ, ಶಸ್ತ್ರಿಕಾ – ಈ ೫ ಸುರಿಗೆ" (ಹಲಾಯು. ೭೮-೩೧೯); "ಪಾಳೆಪರಂಜುವೆನಲು ಮೋಹಳಮಕ್ಕಣೆ ಕ್ಷುರಿಕೆಯೆನಲು ಮುಕ್ಕಂಬಿಯ ಕಠಾರಿ ವಂಕುಡಿಗಳಕ್ಕುಂ" (ಮಂಗರಾ. ೮೮-೩೭). [ಸಂ. ಕ್ಷುರಿಕಾ]

**ಕ್ಷುಲ್ಲ** (ಗು). ೧. ಅಲ್ಪ; ಸ್ವಲ್ಪ. ೨. ಕೀಳಾದ; ನಿಕೃಷ್ಟವಾದ: ಉರವಣಿಸಿ ಮೊರೆಯುವವನು ಕ್ಷುಲ್ಲ ಮಾನಿಸನಿವನು (ಮಂಕುಕ. ೨೦೫). [ಸಂ.]

**ಕ್ಷುಲ್ಲಕ** (ಗು). ೧. ಚಿಕ್ಕದಾದ; ಕಿರಿಯ; ಸಣ್ಣ: ಪೊಟಲ ನಡುವಣ ಕ್ಷುಲ್ಲಕದ್ವಾರದಿಂ ಪೊಱಮಟ್ಟು (ಪಂರಾಮಾ. ೭-೭ ವ). ೨. ಅತ್ಯಾಸೆಯುಳ್ಳ; ಲೋಭಿಯಾದ. ೩. ಕೀಳಾದ; ಹೀನ; ಕ್ಷುದ್ರ: ಉಗಿಯು ಇಷ್ಟು ಸುಲಭ ರೀತಿಯಿಂದ ಹುಟ್ಟುವ ಕಾರಣ ಅದು ಕ್ಷುಲ್ಲಕ ಪದಾರ್ಥವೆಂದು ಎಣಿಸಕೂಡದು (ಮುಂಬಯಿ. ೪-೯೮); ಅವರನ್ನು ತೀರಾ ಕುಲ್ಲಕವಾಗಿ ಕಾಣುವುದು ಶಾನುಭೋಗರ ಸ್ವಭಾವವಾಗಿತ್ತು (ರಂಗರೋ. ೮೨). (ನಾ). ೪. ದೀನ; ದರಿದ್ರ; ಕೃಪಣ: "ಕೃಪಣಃ, ಕ್ಷುಲ್ಲಕಃ, ಕ್ಲೀಬಃ, ಕ್ಷುದ್ರಃ – ಈ ೪ ಕ್ಷುದ್ರಂ" (ಹಲಾಯು. ೫೭-೧೯೨); "ಕ್ಷುಲ್ಲಕಂ ಕ್ಷುದ್ರನೆನೆ ಕರಕೃಪಣನಕ್ಕು" (ಮಂಗರಾ. ೬೮-೭). ೫. ದಡ್ಡ; ಮೂರ್ಖ; ಮತಿಹೀನ. ೬. ಕೀಳುಜಾತಿಯ ಮನುಷ್ಯ; ಪಾಮರ. ೭. ಕುತ್ಸಿತ; ಅಲ್ಪನಾದವನು: ಕ್ಷುಲ್ಲಕನು ನರನಾದೊಡಂ ಕಾಲನಿದಿರೊಳ್ ಉಲ್ಲಾಸವೇ ಧರ್ಮ (ಮಂಕುಕ. ೭೪೩). ೮. ಸುಳ್ಳು ಹೇಳುವವನು; ಮಿಥ್ಯಾವಾದಿ. ೯. ಬೇಡ; ಶಬರ; ಕಿರಾತ. ೧೦. ಚಿಕ್ಕಶಂಖ: "ಕ್ಷುಲ್ಲಕಃ, ಕ್ಷುದ್ರಶಂಖಃ, ಶಂಬೂಕಃ – ಈ ೩ ಕಿಱಿಯ ಶಂಖಂ" (ಹಲಾಯು. ೧೧೯-೪೨). ೧೧. ಕಂಚು; ಕಾಂಸ್ಯ. ೧೨. [ಜೈನ] ಪ್ರತಿಮಾಧಾರಿಗಳಲ್ಲಿರುವ ಎರಡು ಪ್ರಕಾರಗಳಲ್ಲಿ ಒಂದು: ಕ್ಷುಲ್ಲಕನು ಕೌಪೀನ, ಖಂಡವಸ್ತ್ರಗಳನ್ನು ಧರಿಸುವವನು. ಐಲಕನು ಕೌಪೀನವನ್ನಷ್ಟು ಮಾತ್ರ ಧರಿಸುವವನು (ಜೈನಪ. ೪೯೦); "ಸೂಕ್ಷ್ಮದೊಳು ಪಾಮರಕುಲದೊಳು ಗುಳ್ಳೆಯೊಳು ಕ್ಷುಲ್ಲಕವೆನಿಕ್ಕು" (ಮಂಗರಾ. ೧೫೧-೫೩); "ಶಬರಂ ಜಡಾಲ್ಪಮತಿ ಕಾಂಸ್ಯಂ ಕ್ಷುದ್ರ ಮಿಥ್ಯತ್ವಮುಂ ಕೃಪಣಂ ಕ್ಷುಲ್ಲಕಮಕ್ಕು" (ನಾನಾರ. ೫೯). [ಸಂ.]

**ಕ್ಷುಲ್ಲಕತನ** (ನಾ). ಕೀಳುತನ; ಕುತ್ಸಿತವರ್ತನೆ: ಈತನ ಕ್ಷುಲ್ಲಕತನಕ್ಕೆ ಹೇಸಿ, ಮೆಡಿಕಲ್ ಹವ್ಯಾಸ ತೊರೆದು, ಬಿ.ಎಸ್‌ಸಿ. ಮುಂದುವರಿಸಿದೆ (ಬದುಜ. ೭೪). [ಕ್ಷುಲ್ಲಕ + -ತನ]

**ಕ್ಷುಲ್ಲಕದ್ವಾರ** (ನಾ). ಚಿಕ್ಕಬಾಗಿಲು; ದಿಡ್ಡಿಬಾಗಿಲು: ಪೆರ್ವೀಧಿಗಳೆರಡುಂ ದೆಸೆಯೊಳೆಸೆವೆಂಟುಂ ಕ್ಷುಲ್ಲಕದ್ವಾರದಿರ್ಕೆಲಂಗಳೊಳಂ (ಚಂದ್ರಪು. ೧೫-೫೧ ವ). [ಕ್ಷುಲ್ಲಕ + ದ್ವಾರ]

**ಕ್ಷುಲ್ಲಕಭಾಷೆ** (ನಾ). ಗ್ರಾಂಥಿಕರೂಪ ತಾಳದೆ ಕೇವಲ ಆಡುಮಾತಾಗಿ ಉಳಿದುಕೊಂಡಿರುವ ಭಾಷೆ: ಗ್ರಾಂಥಿಕರೂಪವನ್ನು ಹೊಂದದೆ ಕೇವಲ ವ್ಯವಹಾರಕ್ಕೆ ಮಾತ್ರ ಉಪಯೋಗಿಸುವ ಭಾಷೆಯನ್ನು ಕ್ಷುಲ್ಲಕಭಾಷೆಯೆನ್ನುತ್ತಾರೆ (ಕೈಪಿಡಿ. ೨೯೩). [ಕ್ಷುಲ್ಲಕ + ಭಾಷೆ]

**ಕ್ಷುಲ್ಲಕಾಮ್ಲೆ** (ನಾ). ಒಂದು ಬಗೆಯ ಸೊಪ್ಪು; ಪುಲ್ಲಂಪುರಿಚೆ; ಹುಲ್ಲುಹುಳಿಗನ ಸೊಪ್ಪು: "ಅಲೋಣಿಕೆ ಕ್ಷುಲ್ಲಕಾಮ್ಲೆ [ಪಾಠಾಂ. ಮ್ಲಿ] ಪುಳ್ಳಂಪುಣಿಸೆ" (ಮಂಗರಾ. ೪೨-೩೯). [ಸಂ. (ಕ್ಷುಲ್ಲಕ + ಅಮ್ಲ + -)]

**ಕ್ಷುಲ್ಲತನ** (ನಾ). = ಕ್ಷುಲ್ಲಕತನ: ಕ್ಷುಲ್ಲತನ ಕುಂದೆಡಱು ಬಡತನವಿಲ್ಲ ಜಯಸಿರಿಬೀಡು (ಕೌಶಿರಾ. ೧-೨೨). [ಕ್ಷುಲ್ಲ + -ತನ]

**ಕ್ಷೂಣತೆ** (ನಾ). ಕೊರತೆ; ನ್ಯೂನತೆ: ಈ ಕ್ಷೂಣತೆಯಾದುದಾ ಸವಣನಿಂದೆನಗೆಂದು (ನೇಮಿಪು. ೬-೫೪ ವ). [< ಸಂ. ಕ್ಷುಣ್ಣತಾ]

**ಕ್ಷೂರತೆ** (ನಾ). ಕ್ರೂರತೆ (?): ಕ್ಷಾತ್ರದಿಂದೀ ಕ್ಷಿತಿ ಕ್ಷೀಣಿಸಿ ಕ್ಷುದ್ರರ ಕ್ಷೂರತೆಯಿಂ ಕ್ಷೇತ್ರಯ್ಯೆಸೆ (ಶತಸಾಂ. ೭೮-೧೦೧). [?]

**ಕ್ಷೇತ್ರ** (ನಾ). ೧. ಹೊಲ; ಗದ್ದೆ; ಭೂಮಿ: "ವಪ್ರಂ, ಕ್ಷೇತ್ರಂ, ಕೇದಾರಂ – ಈ ೩ ಕೆಯ್" (ಹಲಾಯು. ೯೪-೪೨೦); ಧನಮಂ ಸ್ತ್ರೀಪುತ್ರರಂ ಕೆಮ್ಮನೆ ಕಿಡುವ ಗೃಹಕ್ಷೇತ್ರಮುಂ ಮಿತ್ರರಂ ವಸ್ತ್ರನಿಕಾಯಾ ಕಲ್ಪಮುಂ ಮುಂತೆನಗೆನುತೆ (ರಕ್ಷಾಶ. ೮). ೨. ಪ್ರದೇಶ; ದೇಶ; ಪ್ರಾಂತ್ಯ: ನಾನಾಕ್ಷೇತ್ರದೊಳುತ್ತಮಂ ಭರತಮಾ ಭೂಭಾಗದೊಳ್ ಕುಂತಳಂ (ಸೌಇಇ. XX, ೪೭-೧೨; 1074). ೩. ಪುಣ್ಯಸ್ಥಳ; ಯಾತ್ರಾಸ್ಥಳ: ಹೋಗು ಪವನಜ ಒಂದು ಚಣದಲಿ ತಹುದು ಲಿಂಗವ ಹಿರಿಯ ಕ್ಷೇತ್ರದಲಿ ಹಿಂದುಗಳೆಯದಿರು (ಕೌಶಿರಾ. ೪೪-೧೯); ಪೇಳೆನಗೆ . . . ರಾಮಚರಣಕ್ಷೇತ್ರಯಾತ್ರೆಯಂ (ಶ್ರೀರಾಮಾ. ೧೬೦-೨೧೨). ೪. ಹೆಂಡತಿ: "ವಧು ಕ್ಷೇತ್ರಮಾ ಭಾರ್ಯೆ . . . ಹೆಂಡತಿಗೆ ನಾಮಂ" (ಮಂಗರಾ. ೯೦-೬); ನಿಮ್ಮ ತಮ್ಮಂ ವಿಚಿತ್ರವೀರ್ಯನ ಕ್ಷೇತ್ರದೊಳಂಬಿಕೆಗಮಂಬಾಲೆಗಂ ಪುತ್ರರಪ್ಪಂತು ವರಪ್ರಸಾದಮಂ ದಯೆಗೆಯ್ವುದು (ಪಂಪಭಾ. ೧-೮೪ ವ). ೫. ಉತ್ಪತ್ತಿಸ್ಥಾನ; ಜನನಸ್ಥಾನ. 'ಕ್ಷೇತ್ರಸಂಸ್ಕಾರ' ಪರಾ. ೬. ದೇಹ; ಶರೀರ: "ತನುಃ . . . ಕ್ಷೇತ್ರಂ, ಗಾತ್ರಃ, ಅಪಘನಃ, ಮೂರ್ತಿಃ – ಈ ೧೭ ಶರೀರಂ" (ಹಲಾಯು. ೮೪-೩೫೭); ಕೇಳು ಶುಕ ದೃಗ್ದೃಶ್ಯಭೇದವ ಪೇಳುವೆನು ಕ್ಷೇತ್ರಜ್ಞ ಕ್ಷೇತ್ರಗಳೊಳಿಹ ವಿಭಾಗದ ವಿವೇಕವ (ಅಮೃತ. ೩-೧೮).

೭. [ಜ್ಯೋತಿ] ಜಾತಕದಲ್ಲಿ ಸೂರ್ಯಾದಿ ಗ್ರಹಗಳ ಗ್ರಹಸ್ಥಾನ; ಮೇಷ ಮೊದಲಾದ ಹನ್ನೆರಡು ರಾಶಿಗಳು. ೮. [ಗಣಿತ] ಚದರ; ಸಲೆ; ವಿಸ್ತೀರ್ಣ; ಆಯ: ಉದ್ದವೂ ಅಗಲವೂ ವುಳ್ಳ ವುಪರಿಭಾಗವನ್ನು ಕ್ಷೇತ್ರವೆಂದು ಆಯವೆಂದೂ . . . ಹೇಳುವುದು (ಭೂಮಿಅ. ೮). ೯. [ಜೈನ] ಕಥೆಯ ಸಪ್ತಾಂಗಗಳಲ್ಲಿ ಒಂದು: ನಾಲ್ಕನೆಯದೆನಿಪ ಕಥೆಯೆಂಬುದು ದ್ರವ್ಯಮುಂ ಕ್ಷೇತ್ರಮುಂ ಕಾಲಮುಂ . . . ಫಲಮುಮೆಂದು ಸಪ್ತಾಂಗಮಕ್ಕುಂ . . . ಕ್ಷೇತ್ರಮೆಂಬುದು ತ್ರೈಲೋಕ್ಯಂ (ಚಾವುಂಪು. ೫). [ಸಂ.]

**ಕ್ಷೇತ್ರಗಣಿತ** (ನಾ). "ಉದ್ದ, ಚದರ, ಘನ, —ಅಳತೆಗಳನ್ನು ಕಂಡುಹಿಡಿಯುವ ಸೂತ್ರಗಳ ಶಾಸ್ತ್ರ" (Mensuration. ಇಂಕನ); ಕ್ಷೇತ್ರಗಣಿತದಲ್ಲಿ ಆಯಾಕೃತಿಯು . . . ವಸ್ತುಗಳ ಘನಪರಿಮಾಣಗಳು ಕೊಡಲ್ಪಟ್ಟಿವೆ (ಗಣಿಚ. ೧೦). [ಕ್ಷೇತ್ರ + ಗಣಿತ]

**ಕ್ಷೇತ್ರಜ** (ಗು). ೧. ಹೊಲಗದ್ದೆಗಳಲ್ಲಿ ಬೆಳೆದ. ೨. ಶರೀರದಲ್ಲಿ ಹುಟ್ಟಿದ. (ನಾ). ೩. ಹನ್ನೆರಡು ವಿಧವಾದ ಪುತ್ರರಲ್ಲಿ ಒಬ್ಬ; ವಂಶಾಭಿವೃದ್ಧಿಗಾಗಿ ಹಿರಿಯರ ಅನುಮತಿಯಿಂದ ಪತಿಯ ಸೋದರರಿಂದ ಹುಟ್ಟಿದ ಮಗ. ೪. [ಜೈನ] ಐದು ಬಗೆಯ ದುಃಖಗಳಲ್ಲಿ ಒಂದು: ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತಂಗಳೆಂಬಯ್ದು ತೆಱದ ದುಃಖಂಗಳೊಳ್ (ಆದಿಪು. ೫-೮೮); ಶಾರೀರಂ ಮಾನಸಂ ಕ್ಷೇತ್ರಜಂ ಪರಸ್ಪರೋದೀರಿತಂ ಸಂಕ್ಲಿಷ್ಟಾಸುರೋದೀರಿತಂಗಳೆಂಬ ಪಂಚಪ್ರಕಾರ ದುಃಖಂಗಳನನೇಕ ಪ್ರಕಾರದಿನನುಭವಿಸುತ್ತಮರ್ಧನಿಮಿಷ ಮಾತ್ರಮುಪ್ಪೊಡಮುಸಿರ್ಪ[ತ್ತಂ] ಬಡೆಯದೆ (ಸುಕುಮಾ. ೧೧-೪೬ ವ). [ಸಂ.]

**ಕ್ಷೇತ್ರಜ್ಞ** (ನಾ). ೧. ಆತ್ಮ: "ಕ್ಷೇತ್ರಜ್ಞಃ, ಪುರುಷಃ, ಆತ್ಮಾ, ಸಂಸಾರೀ, ಚೇತನಃ – ಈ ೫ ಆತ್ಮನ ಪೆಸರ್" (ಹಲಾಯು. ೨೨-೧೩೪); ಈ ವಿಧದ ಕ್ಷೇತ್ರವನು ಬಲ್ಲವನಾವನವ ಕ್ಷೇತ್ರಜ್ಞನೆನಿಸುವ . . . ಕೇವಲ ಚಿದಾನಂದಮಯ ಸದ್ಭಾವ (ಅಮೃತ. ೩-೩೩); ಅಂತರ್ಯದೊಂದು ಚೈತನ್ಯ ನಿನ್ನ ಕೈಂಕರ್ಯ ಕರ್ತೃವಾಗಿ ಕ್ಷೇತ್ರಜ್ಞ ಬರಲಿ ಚೈತ್ಯೇಶನಾಗಿ (ಅರಳು. ೩-೧೦). ೨. ಚತುರ; ನಿಷ್ಣಾತ; ಪ್ರವೀಣ: "ಚತುರಃ, ಕ್ಷೇತ್ರಜ್ಞಃ . . . ಪ್ರವೀಣಃ–ಈ ೧೧ ಬಲ್ಲವಂ" (ಹಲಾಯು. ೫೫-೧೪೦). [ಸಂ.]

**ಕ್ಷೇತ್ರಪರಾವರ್ತನ** (ನಾ). [ಜೈನ] ಒಂದು ಕ್ಷೇತ್ರವನ್ನು ಬಿಟ್ಟು ಮತ್ತೊಂದು ಕ್ಷೇತ್ರಕ್ಕೆ ಹೋಗುವುದು (?): ಜಗತ್ತ್ರಯಮಧ್ಯ ಪ್ರದೇಶದೊಳತೀವ ಜಘನ್ಯ ಶರೀರಮಂ ಕೈಕೊಂಡು ಪುಟ್ಟಿ . . . ಮೂಱುಂ ಲೋಕದ ಸರ್ವಕ್ಷೇತ್ರಂಗಳನಿತಱೊಳಮಾ ಮಾರ್ಗದಿಂದೆ ಯುಡುಗದೆ ಕೂಡಿ ಪುಟ್ಟುವುದು ಕ್ಷೇತ್ರಪರಾವರ್ತನಮೆಂಬುದು (ಸುಕುಮಾ. ೬-೭ ವ). [ಕ್ಷೇತ್ರ + ಪರಾವರ್ತನ]

**ಕ್ಷೇತ್ರಪಾಲ** (ನಾ). ೧. ಹೊಲ, ಗದ್ದೆ ಮೊದಲಾದ ಭೂಮಿಯನ್ನು ಕಾಯುತಕ್ಕವನು. ೨. ಕ್ಷೇತ್ರವನ್ನು ರಕ್ಷಿಸುವ ದೇವತೆ: "ವಟುಕನಾ ಕ್ಷೇತ್ರಪಾಲಂ" (ಮಂಗರಾ. ೫-೧೪); ಬಲದೇವನಂತೆ ಪೆಣನಂ ಪೊತ್ತು ತೊೞಲ್ವ ಕ್ಷೇತ್ರಪಾಲರಿಂ (ಕಾವ್ಯಸಾ. ೫೨೫ಶೂದ್ರಕ); ಗಣಪತಿ ಕ್ಷೇತ್ರಪಾಲಪೂಜೆಯಂ ಮಾಡಿ (ಸಕವ್ಯೆ. ೩೪೧). [ಸಂ.]

**ಕ್ಷೇತ್ರಪಾಲಕ** (ನಾ). = ಕ್ಷೇತ್ರಪಾಲ: (೧).
[ಕ್ಷೇತ್ರ + ಪಾಲಕ]

**ಕ್ಷೇತ್ರಪ್ರಾಧಾನ್ಯ** (ನಾ). ಒಡೆತನವನ್ನು ನಿರ್ಣಯಿಸುವಾಗ ಬೀಜದ ವಿಚಾರವನ್ನು ಗಮನಿಸದೆ ಕ್ಷೇತ್ರಕ್ಕೇ ಪ್ರಾಮುಖ್ಯತೆ ಕೊಡುವುದು: ಧರ್ಮಶಾಸ್ತ್ರದ ಪ್ರಕಾರ ವರ್ಣವಿಭಾಗವು ಸ್ತ್ರೀಮೂಲಕವಾಗಿರುತ್ತದೆ. ಪೂರ್ವದಲ್ಲಿ ಬೀಜಪ್ರಾಧಾನ್ಯವಿತ್ತು. ಪ್ರಕೃತದಲ್ಲಿ ಕ್ಷೇತ್ರಪ್ರಾಧಾನ್ಯವೇ ವ್ಯವಹಾರಕ್ಕೆ ಮೂಲಕಾರಣವಾಗಿರುತ್ತದೆ (ಹಿಂದಸಾ. ೧೪೫). 'ಬೀಜಪ್ರಾಧಾನ್ಯ' ಪರಾ.
[ಕ್ಷೇತ್ರ + ಪ್ರಾಧಾನ್ಯ]

**ಕ್ಷೇತ್ರಫಲ** (ನಾ). ೧. ವಿಸ್ತೀರ್ಣ; ಆಯ; ಸಲೆ: ಹಿಂದೂಸ್ತಾನದ ಕ್ಷೇತ್ರಫಲವು ಹೆಚ್ಚುಕಡಮೆ ಹದಿನಾರು ಲಕ್ಷ ಚಚ್ಚೌಕು ಮೈಲು (ಮುಂಬಯಿ. ೪-೧೧೨). ೨. [ಗಣಿತ] ಭಾಗಲಬ್ಧ; ಗುಣಲಬ್ಧ. ೩. ವ್ಯವಹಾರದ ಲಾಭ: (೧).
[ಕ್ಷೇತ್ರ + ಫಲ]

**ಕ್ಷೇತ್ರಫಲಫಣಿ** (ನಾ). ಕ್ಷೇತ್ರಫಲವನ್ನು ಕಂಡುಹಿಡಿಯುವುದಕ್ಕೆ ಬಳಸಲಾಗುವ ಒಂದು ಸಾಧನ: ಕ್ಷೇತ್ರಫಲಫಣಿಯೆನಲಾಗಿ ನಕ್ಷೆಯಲ್ಲಿರುವ ಒಂದು ಕ್ಷೇತ್ರದಲ್ಲಿ ಒಂದು ಪ್ರದೇಶ ಅಥವಾ ಪೂರಾ ಕ್ಷೇತ್ರದ ಅಳತೆಯನ್ನು ಕಂಡುಹಿಡಿಯುವುದಕ್ಕಾಗಿ ಉಪಯೋಗಿಸುವ ಸಾಧನವಾಗಿರುತ್ತೆ (ಭೂಮಿಅ. ೪೩).
[ಕ್ಷೇತ್ರಫಲ + ಫಣಿ]

**ಕ್ಷೇತ್ರಫಲಮಾಪಕ** (ನಾ). ಕ್ಷೇತ್ರಫಲವನ್ನು ಕಂಡು ಹಿಡಿಯುವ ಸಾಧನ: "ವಕ್ರಾಕಾರದ ಸಮತಲ ರೇಖಾಕೃತಿಯ ಕ್ಷೇತ್ರಫಲವನ್ನು ಅಳೆಯುವ ಸಲಕರಣೆ" (Planimeter. ಇಂಕನ).
[ಕ್ಷೇತ್ರಫಲ + ಮಾಪಕ]

**ಕ್ಷೇತ್ರಭೇದ** (ನಾ). ಸ್ಥಳಭೇದ; ಸ್ಥಾನಭೇದ: ಜ್ಯೋತಿರ್ಲೋಕ ಚಂದ್ರಸೂರ್ಯಪ್ರಜ್ಞಪ್ತಿಯಿಂ ಗ್ರಹಚಾರ ಕ್ಷೇತ್ರಭೇದಮಂ ವೇದಾಂತಿಗಳಪ್ಪ ಬ್ರಾಹ್ಮರನೋದಿಸಿ (ಕಗವಿ. ೧೧೩). [ಕ್ಷೇತ್ರ + ಭೇದ]

**ಕ್ಷೇತ್ರಮಾಪನ** (ನಾ). ಕ್ಷೇತ್ರವನ್ನು ಅಳೆಯುವಿಕೆ: ಕ್ಷೇತ್ರಮಾಪನದ (Survey) ವಿಷಯವಾಗಿ ವಿಜ್ಞಾನದೃಷ್ಟಿಯಿಂದ ಬರೆದಿದ್ದನು (ಗಣಿಚ. ೪೫).
[ಕ್ಷೇತ್ರ + ಮಾಪನ]

**ಕ್ಷೇತ್ರರ್ದ್ಧಿ** (ನಾ). [ಜೈನ] ಅಷ್ಟಋದ್ಧಿಗಳಲ್ಲಿ ಒಂದು: ಕ್ಷೇತ್ರರ್ದ್ಧಿಪ್ರಾಪ್ತಾರ್ಯರ್ ಅಕ್ಷೀಣಮಹಾಶನರುಂ ಅಕ್ಷೀಣಮಹಾಲಯರುಂ ಎಂದಿತ್ತೆಱಂ (ತತ್ತ್ವಪ್ರ. ೧೭೪). 'ಅಕ್ಷೀಣ ಮಹಾಲಯ', 'ಅಕ್ಷೀಣ ಮಹಾಶನ' ಪರಾ. [ಕ್ಷೇತ್ರ + ಋದ್ಧಿ]

**ಕ್ಷೇತ್ರವಿಪಾಕಿ** (ನಾ). [ಜೈನ] ಮೂರು ಬಗೆಯ ನಾಮಕರ್ಮಗಳಲ್ಲಿ ಒಂದು: ಜೀವವಿಪಾಕಿಯುಂ ಪುದ್ಗಲವಿಪಾಕಿಯುಂ ಕ್ಷೇತ್ರವಿಪಾಕಿಯುಮೆಂದಿಂತು ನಾಮಕರ್ಮಂ ತ್ರಿವಿಧಮಕ್ಕುಂ (ಗೊಮ್ಮಸಾ. ೨-೭).
[ಕ್ಷೇತ್ರ + ವಿಪಾಕಿ]

**ಕ್ಷೇತ್ರವ್ಯಾಪ್ತಿ** (ನಾ). ಕ್ಷೇತ್ರದ ಅಳವು, —ಮಿತಿ: ತಮ್ಮ ಕ್ಷೇತ್ರವ್ಯಾಪ್ತಿಗೆ ಮೀರಿದ ಗಹನವಾದ ಅಂತಿಮ ಸತ್ಯಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಕೆಲವರು ಮೌನತಾಳಿದರು (ಋಕ್ಸಾರ. ೨೬ ಪೀಠಿಕೆ).
[ಕ್ಷೇತ್ರ + ವ್ಯಾಪ್ತಿ]

**ಕ್ಷೇತ್ರಸಂಸ್ಕಾರ** (ನಾ). ತಾಯಿಯಾಗಲಿರುವವಳಿಗೆ ಮಾಡುವ ಸಂಸ್ಕಾರ: ಗರ್ಭಾಧಾನ, ಪುಂಸವನ, ಸೀಮಂತೋನ್ನಯನ ಈ ಮೂರೂ ಕ್ಷೇತ್ರಸಂಸ್ಕಾರಗಳು. ಕ್ಷೇತ್ರ (ತಾಯಿಯ) ಸಂಸ್ಕಾರವಾದುದರಿಂದ ಒಂದೇ ಸಲ ಮಾಡುವುದು, ಪ್ರತಿಗರ್ಭಕ್ಕೂ ಮಾಡುವುದಿಲ್ಲ (ಆರ್ಯಧ. ೧೨೨). [ಕ್ಷೇತ್ರ + ಸಂಸ್ಕಾರ]

**ಕ್ಷೇತ್ರಾಕರ್ಷ** (ನಾ). ಹೊಲವನ್ನು ಉಳುವಿಕೆ; ನೇಗಿಲು ಹೊಡೆದ ಸಾಲು, —ಗೆರೆ: ಕ್ಷೇತ್ರಾಕರ್ಷದಂತೆ ಪೋತ್ರಿಪೋತ್ರಾಹತಧರಣಿತಳಮುಂ ಗೃಹೀತ ಗೋಲಾಂಗೂಲಮುಂ (ಚಂದ್ರಪು. ೫-೫೨ ವ).
[ಸಂ. (ಕ್ಷೇತ್ರ + ಆಕರ್ಷ)]

**ಕ್ಷೇತ್ರಾಘಾಟ** (ನಾ). ಕ್ಷೇತ್ರದ ಗಡಿ (?) : ವಿನೋದಸುಖ ಸಸ್ಯ ಸಮುದಯ ಕ್ಷೇತ್ರಾಘಾಟಮೆನಿಪ ಗಣಿಕಾವಾಟಮಂ ಪುಗುವಾಗಳ್ (ಚಂದ್ರಪು. ೮–೪೫ ವ). [ಕ್ಷೇತ್ರ + ಆಘಾಟ]

**ಕ್ಷೇತ್ರಾಜೀವ** (ನಾ). ಕೃಷಿಯಿಂದ ಜೀವಿಸುವವನು ; ಕೃಷಿಕ ; ಒಕ್ಕಲಿಗ : "ಕ್ಷೇತ್ರಾಜೀವಃ, ಕೃಷಿಕಃ . . . ಕುಟುಂಬೀ – ಈ ೫ ಗೆಯ್ವೊಕ್ಕಲಿಗಂ" (ಹಲಾಯು. ೯೪–೪೨೦). [ಸಂ.]

**ಕ್ಷೇತ್ರಾಜೀವಿ** (ನಾ). = ಕ್ಷೇತ್ರಾಜೀವ : "ಕೃಷಿಕಂ ಕುಟುಂಬಿ ಕ್ಷೇತ್ರಾಜೀವಿ ಕರ್ಷಕಂ ಕೃಷಿಯ ಮಾಟಿಪ್ಪೊಕ್ಕಲಿಗನಕ್ಕುಂ"(ಮಂಗರಾ.೧೧೯–೧). [ಸಂ. ಕ್ಷೇತ್ರಾಜೀವಿನ್]

**ಕ್ಷೇತ್ರಾಧಿಕಾರ** (ನಾ). ಅಧಿಕಾರ ವ್ಯಾಪ್ತಿ : ಪ್ರತಿಯೊಂದು ಉಚ್ಚನ್ಯಾಯಾಲಯಕ್ಕೂ ಯಾವ ರಾಜ್ಯಕ್ಷೇತ್ರಗಳ ಸಂಬಂಧದಲ್ಲಿ ಅದು ಕ್ಷೇತ್ರಾಧಿಕಾರವನ್ನು ಚಲಾಯಿಸುತ್ತದೋ ಆ ರಾಜ್ಯಕ್ಷೇತ್ರಗಳಲ್ಲೆಲ್ಲ (ಭಾಧಾಸ. ೧೨೩). [ಕ್ಷೇತ್ರ + ಅಧಿಕಾರ]

**ಕ್ಷೇಪ** (ನಾ). ೧. ಎಸೆಯುವುದು ; ಚೆಲ್ಲುವುದು : ಶ್ರೀರಾಮಾನಟ ಕೌಸ್ತುಭದ್ಯುತಿ ಶಿರತ್ಪುಷ್ಪಾಂಜಲಿ ಕ್ಷೇಪ ವಕ್ಷೋರಂಗಸ್ಥಿತೆಯಾದ (ಜಗವಿ. ೧–೧). ೨. ಮುಂದಕ್ಕೆ ನೂಕುವುದು ; ತಳ್ಳುವುದು ; ಪ್ರೇರಿಸುವುದು ; ಕಳುಹಿಸುವುದು. ೩. ಇಡುವುದು ; ಇರಿಸುವುದು. ೪. ದೂಷಿಸುವುದು ; ನಿಂದಿಸುವುದು. ೫. ಕಳೆಯುವುದು. 'ಕಾಲಕ್ಷೇಪ' ಪರಾ. ೬. (ಬಣ್ಣ ಮೊದಲಾದುವನ್ನು) ಬಳಿಯುವುದು. ೭. [ನಾಟ್ಯ] ಒಂದು ಬಗೆಯ ಕೈಯ ಚಲನೆ : ಧೂನನ, ಶ್ಲೇಷ, ವಿಶ್ಲೇಷ, ಕ್ಷೇಪ . . . ಈ ಇಪ್ಪತ್ತು ಕರಕರ್ಮಭೇದಂಗಳ್ (ಲಾಸ್ಯರಂ. ೪–೧೩ ವ). [ಸಂ.]

**ಕ್ಷೇಪಕ** (ನಾ). ೧. ಎಸೆಯುವವನು. ೨. ಕಳುಹಿಸುವವನು ; ಪ್ರೇಷಕ. ೩. ನಡುವೆ ಸೇರಿಸಲ್ಪಟ್ಟುದು ; ಪ್ರಕ್ಷಿಪ್ತವಾದುದು ; ಅಧಿಕ ಪಾಠ. ೪. ಪರಿಶಿಷ್ಟ. [ಸಂ.]

**ಕ್ಷೇಪಣ** (ನಾ). ೧. ಎಸೆಯುವುದು ; ಬಿಸುಡುವುದು. ೨. ಕಳುಹಿಸುವುದು ; ನಿರ್ದೇಶನ. ೩. ಮೇಲೆ ಅಥವಾ ಒಳಗೆ ಇಡುವುದು. ೪. ಜೋಡಿಸುವುದು ; ಸೇರಿಸುವುದು. [ಸಂ.]

**ಕ್ಷೇಪಣಿ** (ನಾ). ೧. ದೋಣಿ ನಡೆಸುವ ಹುಟ್ಟು : "ನೌಕಾದಂಡಃ, ಕ್ಷೇಪಣೀ – ೨ ಹಡಗು ನಡಸುವ ದಂಡದ ಹೆಸರುಗಳು" (ಸಿದ್ಧಾಂತಿ. ೭೧). ೨. ಕವಣೆ : "ಕ್ಷೇಪಣೀ – ಕವಣೆ" (ಕಾಶಕ್ಯ. ೨೯೧). [ಸಂ. ಕ್ಷೇಪಣೀ]

**ಕ್ಷೇಪಿಷ್ಠ** (ಗು). ಅತಿ ಶೀಘ್ರವಾದ ; ಬಹಳ ವೇಗವಾದ. [ಸಂ.]

**ಕ್ಷೇಮ** (ನಾ). ೧. ವಾಸಸ್ಥಾನ ; ವಿಶ್ರಾಮಸ್ಥಾನ. ೨. ನೆಮ್ಮದಿ ; ಸುಖ ; ಕುಶಲ : ತಲೆಯ ಕೂದಲು ಸುಟ್ಟು ಬೋಳಾಗಿರುವುದು ಹೊರತು ಆತ ಕ್ಷೇಮವಾಗಿದ್ದಾರೆ (ಸಂಸಕ. ೯೯). ೩. ಆರೋಗ್ಯ ; ಸ್ವಾಸ್ಥ್ಯ. ೪. ದೊರೆತ ಅಥವಾ ಗಳಿಸಿದ ವಸ್ತುವನ್ನು ಕಾಯ್ದಿಟ್ಟುಕೊಳ್ಳುವುದು. 'ಯೋಗಕ್ಷೇಮ' ಪರಾ. ೫. ಶುಭ ; ಮಂಗಳ ; ಕಲ್ಯಾಣ. ೬. ಒಂದು ಬಗೆಯ ಸುಗಂಧದ್ರವ್ಯ ; ಕರಿಯ ಕಚೋರ. ೭. ಸ್ನೇಹಪೂರ್ವಕವಾದ ಆಲಿಂಗನ. [ಸಂ.]

**ಕ್ಷೇಮಂಕರ** (ಗು). ೧. ಕ್ಷೇಮವನ್ನು ಉಂಟುಮಾಡುವ ; ಸೌಖ್ಯವನ್ನು ತರುವ. (ನಾ). ೨. ಹಿತವನ್ನುಂಟುಮಾಡುವವನು : ಕ್ಷೇಮಂಕರಃ, ಅರಿಷ್ಟತಾತಿಃ – ಈ ೨ ಕ್ಷೇಮಂ ಮಾಳ್ಪವಂ" (ಹಲಾಯು. ೫೬–೧೮೫) ; ಅದಱಿಂದಾತನಂ ಕ್ಷೇಮಂಕರನೆಂದು ಪೆಸರನಿಟ್ಟರ್ (ಆದಿಪು. ೬–೫೬ ವ). ೩. [ಜೈನ] ಲೋಕಾಂತಿಕ ದೇವತೆಗಳಲ್ಲಿ ಒಂದು ವರ್ಗ : ವಹ್ನ್ಯರುಣಾಂತರದೊಳ್ ಶ್ರೇಯಸ್ಕರ ಕ್ಷೇಮಂಕರರುಂ (ತತ್ತ್ವಪ್ರ. ೨೨೨). [ಸಂ.]

**ಕ್ಷೇಮಕರ** (ನಾ). ಸೌಖ್ಯವನ್ನುಂಟುಮಾಡುವಂತಹುದು : ದುಷ್ಟರೊಂದಿಗೆ ಎಚ್ಚರಿಕೆಯಿಂದಿರುವುದು ಯಾವಾಗಲೂ ಕ್ಷೇಮಕರ (ರೂಢಿ). [< ಸಂ. ಕ್ಷೇಮಂಕರ]

**ಕ್ಷೇಮಕರಣ** (ನಾ). ಕ್ಷೇಮವನ್ನು ಉಂಟುಮಾಡುವಿಕೆ : ಪ್ರಕಟಿತ ಕರುಣಂ ವೈಮಾನಿಕ ನಿಕರ ಕ್ಷೇಮಕರಣ ಕಾರಣಮುರುಣಂ (ವಸ್ತವಂ. ೪–೩೨). [ಕ್ಷೇಮ + ಕರಣ]

**ಕ್ಷೇಮಕಾರಿ** (ಗು). ೧. = ಕ್ಷೇಮಂಕರ ೧. (ನಾ). ೨. ಮಂಗಳವನ್ನು ಸೂಚಿಸುವ ಪಕ್ಷಿ ; ಗರುಡಪಕ್ಷಿ : ಕ್ಷೇಮಕಾರಿ ಹಾಗೆಯೇ . . . ಗಗನದಲ್ಲಿ ಸುತ್ತು ಹಾಕಿತು (ಸಣ್ಣಕ. VII, ೪೧). [ಸಂ. ಕ್ಷೇಮಕಾರಿನ್]

**ಕ್ಷೇಮಕ್ಷೇತ್ರ** (ನಾ). ಕ್ಷೇಮಕ್ಕೆ ಸ್ಥಾನ ; ಶುಭಸ್ಥಾನ : ಇಂದಿನ ದಿವಸಮೆ ಶುಭದಿವಸಾಗ್ರೇಸರಂ ಇಂದಿನ ನಕ್ಷತ್ರಮೆ ಸಕಳ ಕ್ಷೇಮಕ್ಷೇತ್ರಂ (ಆದಿಪು. ೪–೩೦ ವ). [ಕ್ಷೇಮ + ಕ್ಷೇತ್ರ]

**ಕ್ಷೇಮಗೆಯ್**, ಕ್ಷೇಮಗೈ (ಕ್ರಿ). ಹಿತವನ್ನು ಉಂಟುಮಾಡು ; ಇಷ್ಟವನ್ನು ನೆರವೇರಿಸು : ಕ್ಷೇಮಗೆಯ್ವ[ಪಾಠಾಂ. ಗೈವ]ವನಿಷ್ಟಕಾರಿಯೆನಿಸಿಕ್ಕು (ಮಂಗರಾ. ೬೮–೮). **ಕ್ಷೇಮಗೈ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಕ್ಷೇಮ + ಕೆಯ್$_1$]

**ಕ್ಷೇಮಗೈ** 'ಕ್ಷೇಮಗೆಯ್' ನೋ.

**ಕ್ಷೇಮಗೊಳ್** (ಕ್ರಿ). ಕ್ಷೇಮವನ್ನು ಹೊಂದು ; ಸುಖಪಡೆ ; ಸುರಕ್ಷಿತವಾಗು. 'ಕ್ಷೇಮಗೊಳಿಸು' ಪರಾ. [ಕ್ಷೇಮ + ಕೊಳ್$_1$]

**ಕ್ಷೇಮಗೊಳಿಸು** (ಕ್ರಿ). ಕ್ಷೇಮವನ್ನು ಹೊಂದುವಂತೆ ಮಾಡು ; ನೆಮ್ಮದಿಯಿಂದ ಇರುವಂತೆ ಮಾಡು ; ಸುರಕ್ಷಿತವಾಗಿರುವಂತೆ ಮಾಡು : ದೂಷಣನನ್ನೂ ಸಾವಿರಾರು ರಾಕ್ಷಸರನ್ನೂ ಕೊಂದು ರಾಮನು ಆ ಧರ್ಮಾರಣ್ಯವನ್ನು ಕ್ಷೇಮಗೊಳಿಸಿದನು (ವಚಭಾ. ೪೦೫). [ಕ್ಷೇಮಗೊಳ್ + –ಇಸು$_3$]

**ಕ್ಷೇಮದ್ರವ್ಯ** (ನಾ). ಕ್ಷೇಮಕ್ಕಾಗಿ ಕೂಡಿಟ್ಟ ಹಣ : "ಕೂಡ ಹಾಕುವುದು, ಕೂಡ ಹಾಕಿದ್ದು ; ಕ್ಷೇಮದ್ರವ್ಯ" (Saving. ಇಂಕನಿ). [ಕ್ಷೇಮ + ದ್ರವ್ಯ]

**ಕ್ಷೇಮನಿಧಿ** (ನಾ). ಕೆಲಸಗಾರನ ಆದಾಯದಲ್ಲಿ ತಿಂಗಳು ತಿಂಗಳೂ ಕೆಲವಂಶದಂತೆ ಅವನ ಭವಿಷ್ಯಜೀವನದ ಪ್ರಯೋಜನಾರ್ಥವಾಗಿ ಕೂಡಿಸಿ ಇಟ್ಟ ಹಣ : "ಕ್ಷೇಮನಿಧಿ, ಭವಿಷ್ಯನಿಧಿ" (Provident fund. ಪತ್ರಿನಿ. ೬೫). [ಕ್ಷೇಮ + ನಿಧಿ]

**ಕ್ಷೇಮಪ್ರಾಪ್ತಿ** (ನಾ). ಕ್ಷೇಮವುಂಟಾಗುವಿಕೆ ; ನೆಮ್ಮದಿ ಸಿಗುವಿಕೆ : ತನ್ನ ಕಾರುಬಾರುಗಳು . . . ಇಡೀ ಪ್ರಪಂಚಕ್ಕೆ ಕ್ಷೇಮಪ್ರಾಪ್ತಿಯೊ ಅಥವಾ ಹಾನಿಪ್ರಾಪ್ತಿಯೊ ಆ ವಿಷಯದಲ್ಲವನು ಸಂಪೂರ್ಣ ಉದಾಸೀನನಾಗಿದ್ದನು (ಪುನರು. ೩೩೩). [ಕ್ಷೇಮ + ಪ್ರಾಪ್ತಿ]

**ಕ್ಷೇಮಲಾಭ** (ನಾ). = ಕ್ಷೇಮಪ್ರಾಪ್ತಿ : ನಮ್ಮ ಅಣ್ಣ ಶ್ರೀನಿವಾಸರಾಯರ ಕ್ಷೇಮಲಾಭ ನನ್ನದೇ (ಹೈದರ. ೧೦೦). [ಕ್ಷೇಮ + ಲಾಭ]

**ಕ್ಷೇಮಸಮಾಚಾರ** (ನಾ). ಸುಖದ ಸುದ್ದಿ ; ಚೆನ್ನಾಗಿರುವ ಸಮಾಚಾರ ; ಕುಶಲ ವೃತ್ತಾಂತ ; ಆರೋಗ್ಯದ ವರ್ತಮಾನ : ನಿನ್ನ ಕ್ಷೇಮಸಮಾಚಾರವನ್ನು ಮೇಲಿಂದ ಮೇಲೆ ಬರೆಯುತ್ತಿರು (ರೂಢಿ). [ಕ್ಷೇಮ + ಸಮಾಚಾರ]

**ಕ್ಷೇಮಾಕಾಂಕ್ಷೆ** (ನಾ). ಒಳ್ಳೆಯದಾಗಲೆಂಬ ಹಾರೈಕೆ ; ಶುಭಚಿಂತನ : ಚಕ್ರವರ್ತಿಯ ಮತ್ತು ಅವನ ಕುಟುಂಬಸಂಬಂಧವಾದ ಕ್ಷೇಮಾಕಾಂಕ್ಷೆ ಆ ಪ್ರಾರ್ಥನೆಗಳಲ್ಲಿ ಪ್ರಧಾನವಾಗಿ ಪ್ರಕಟವಾಗುತ್ತಿತ್ತು (ಪುನರು. ೧೭೫). [ಕ್ಷೇಮ + ಆಕಾಂಕ್ಷೆ]

**ಕ್ಷೈತ್ರ** (ನಾ). ಕ್ಷೇತ್ರಗಳ ಸಮೂಹ. [ಸಂ.]

**ಕ್ಷೈರೇಯ** (ಗು). ೧. ಹಾಲಿನಲ್ಲಿ ಬೇಯಿಸಿದ. (ನಾ). ೨. ಹಾಲಿನಲ್ಲಿ ಬೇಯಿಸಿದ ಪಾಯಸ ಮೊದಲಾದ ಅಡಿಗೆ: "ಕ್ಷೈರೇಯಂ [ಪಾಠಾಂ. ಯಿ], ಪಾಯಸಂ, ಪರಮಾನ್ನಂ – ಈ ೩ ತುಯ್ಯಲ್" (ಹಲಾಯು. ೫೩–೧೬೫). [ಸಂ.]

**ಕ್ಷೈರೇಯಿ** (ನಾ). = ಕ್ಷೈರೇಯ ೨: "ಕ್ಷೈರೇಯಿ [ಪಾಠಾಂ. ಯಂ] ಪಾಯಸಂ, ಪರಮಾನ್ನಂ – ಈ ೩ ತುಯ್ಯಲ್" (ಹಲಾಯು. ೫೩–೧೬೫). [< ಸಂ. ಕ್ಷೈರೇಯ]

**ಕ್ಷೋಣಿ** (ನಾ). ೧. ನೆಲ; ಭೂಮಿ; ಭೂಲೋಕ: ತನಗೀ ಕ್ಷೋಣಿಯಲಿ ಪೂರ್ವದ ಪರಿಗ್ರಹವೀ ಸರೋವರವು (ಕುವ್ಯಾ.ಆ. ೩೨–೨೯). ೨. ಲೋಕದ ಜನ: ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತೆಂಬ ಕ್ಷೋಣಿಯಾಡುವ ಗಾದೆಯಂತೆ (ಹಚಕಾ. ೨–೧೨). ೩. [ಛಂದ] ಮೂರು ಗುರುಗಳಿರುವ ಅಕ್ಷರಗಣ; ಮಗಣ (– – –): ಕ್ಷೋಣೀವಾಯು ದಿನೇಶನೀಶ್ವರಂ ಬಾಣಸ್ಥಾನದೊಳಾಗೆ ವಿಶ್ರಮಂ (ಛಂದೋಂಬು. ೨–೬೨). ೪. [ಗಣಿತ] ಹದಿನೇಳು ಅಂಕೆಗಳನ್ನುಳ್ಳ ಒಂದು ಸಂಖ್ಯೆ: ಕ್ಷೋಣಿಸಪ್ತದಶಶ್ಚೈವ ಮಹಾಕ್ಷೋಣಿ ದಶಾಷ್ಟಕಂ (ವ್ಯವಹಾ. ೮); "ಖರ್ವ ಪದ್ಮ ಕ್ಷೋಣಿ ಶಂಖಂ ಕ್ಷಿತಿ ಕ್ಷೋಭ . . . ಚವ್ವೀಸ ತಾಣವರೆ ಸಂಖ್ಯೆಯಕ್ಕುಂ" (ಮಂಗರಾ. ೧೦೫–೧೩). [ಸಂ.]

**ಕ್ಷೋಣಿಜಾಸುತ** (ನಾ). ಸೀತೆಯ ಮಗ; ಲವ; ಕುಶ: ಕ್ಷೋಣಿಜಾಸುತ ಕೇಳು . . . ಶೋಣಭದ್ರನ ಕಂಡು ಕೌಶಿಕಮುನಿಯ ಬೆಸಗೊಂಡ (ತೊರರಾ. ೧–೧೨–೭). [ಸಂ. (ಕ್ಷೋಣಿಜಾ + ಸುತ)]

**ಕ್ಷೋಣಿಜೆ** (ನಾ). ಭೂಮಿಯ ಮಗಳು; ಸೀತೆ. [ಸಂ. ಕ್ಷೋಣಿಜಾ]

**ಕ್ಷೋಣಿಧರ** (ನಾ). ೧. ಭೂಮಿಯನ್ನು ಧರಿಸಿರುವುದು; ಬೆಟ್ಟ; ಪರ್ವತ. ೨. ಅರಸ; ರಾಜ: ರಾಣಿ ರುಕುಮಿಣಿಯಾದಿಯಾದ ಕ್ಷೋಣಿಧರನರಸಿಯರನನಿಬರ ಕಾಣಿಕೆಯ ಕೊಟ್ಟೆಜಗಿ ದುರುಪದಿ ಕಂಡಳೊಲವಿನಲಿ (ಕುವ್ಯಾ.ವಿ. ೧೦–೫೮). [ಸಂ.]

**ಕ್ಷೋಣಿಭೃತ್ತು** (ನಾ). ೧. ಪರ್ವತ: ಕ್ಷೋಣಿಭೃತ್ಪಕ್ಷಮಂ ದೇವೇಂದ್ರಂ ಕಡಿದಂದದಿಂದೆ (ಪಂರಾಮಾ. ೧–೨೪). ೨. ಅರಸ; ರಾಜ: ಸಮರಾಯಾತಾಹಿತ ಕ್ಷೋಣಿಭೃದತುಳ ಬಳೋದ್ಯಾನದೊಳ್ ಪಾವಕಾನುಕ್ರಮದಿಂದಂ ಕ್ರೀಡಿಸುತ್ತುಂ (ಎಕ. V, ಬೇಲೂರು. ೧೨೪–೪೬; 1133). [< ಸಂ. ಕ್ಷೋಣಿಭೃತ್]

**ಕ್ಷೋಣೀಧ್ರ** (ನಾ). ಬೆಟ್ಟ; ಪರ್ವತ: ಧ್ವನತತ್ತೂರ್ಯ ಸಂತತಿನಾದ ಪ್ರತಿಪೂರಿತಾಖಿಳಕುಳ ಕ್ಷೋಣೀಧ್ರಕುಂಜರ(ಆದಿಪು.೭–೩೭); ಎಲೆ ಇದಲ್ತೆ ತುಹಿನ ಕ್ಷೋಣೀಧ್ರದುತ್ತುಂಗ ಸಾನುಗಳ್ (ಶಮುದ.೫೬ಪ್ರಯೋ). [ಸಂ.]

**ಕ್ಷೋಣೀಪತಿ** (ನಾ). ಭೂಮಿಯ ಒಡೆಯ; ದೊರೆ; ರಾಜ. [ಸಂ. (ಕ್ಷೋಣೀ + ಪತಿ)]

**ಕ್ಷೋಣೀಭಾಗ** (ನಾ). ಭೂಭಾಗ: ಕ್ಷೋಣೀಭಾಗದೆ ಬೇರೆ ತೋರ್ಕುಮೆನಗಾ ಸ್ತ್ರೀರತ್ನ ಸೃಷ್ಟಿಕ್ರಮಂ (ಶಾಕುಂತ. ೨೫–೪೪). [ಸಂ. (ಕ್ಷೋಣೀ + ಭಾಗ]

**ಕ್ಷೋಣೀಶ** (ನಾ). = ಕ್ಷೋಣೀಪತಿ: ಅವಳ್ದಿರಂ ಭಯವಶದಿಂ ಕ್ಷೋಣೀಶಂ ಕುಡೆ ಕೊಳ್ಳದೆ ಮಾಣೆಂ ಹಲಿಯಾಣೆ ಪರಮದೀಕ್ಷೆಯ ನಾಗಳ್ (ಶಾಂತಿಪು. ೨–೬೨); ಕ್ಷೋಣೀಶನೆನಿಸುವ ಹರಿಶ್ಚಂದ್ರ ಭೂಪಂಗೆ (ಹಚಕಾ. ೨–೧೨). [ಕ್ಷೋಣಿ + ಈಶ]

**ಕ್ಷೋಣೀಶ್ವರ** (ನಾ). = ಕ್ಷೋಣೀಪತಿ: ಆ ಕ್ಷೋಣೀಶ್ವರವಲ್ಲಭೆ ಋಕ್ಷಜ ಸೂರ್ಯಜ ತನೂಜರಂ ಪಡೆದು (ಪಂರಾಮಾ. ೧೦–೭೨೮). [ಕ್ಷೋಣಿ + ಈಶ್ವರ]

**ಕ್ಷೋದ** (ನಾ). ೧. ಅರೆಯುವುದು; ಕುಟ್ಟುವುದು; ಪುಡಿಮಾಡುವುದು. ೨. ಚೂರ್ಣ; ಪುಡಿ; ಹುಡಿ: "ಚೂರ್ಣಂ ಧೂಳಿಪಾಂಸು ರೇಣು ಕ್ಷೋದಮಾ ರಜಂ ಸಣ್ಣಹುಡಿಯೆಂದೆನಿಕ್ಕುಂ" (ಮಂಗರಾ. ೭೪–೨೩); ಕಾಳಾಗರು ಕಾಶ್ಮೀರ ಕಸ್ತೂರಿ ಕರ್ಪೂರ ಯಕ್ಷಕರ್ದಮ ಕ್ಷೋದದೊಳಂ (ಆದಿಪು. ೧೧–೧೩೫ ವ); ರಂಗಕಲಶೋನ್ಮಿಶ್ರಚಂದನ ಕ್ಷೋದದಿಂ (ಚಂದ್ರಪು. ೬–೧೧೧ ರ); ಕುಂಕುಮಕ್ಷೋದಮಂ ಘನಸ್ತನಕೆ ಲೇಪಿಸುತ್ತ (ರಾಜಶೇ. ೭–೭). ೩. ತಿಕ್ಕಾಟ; ಕ್ಷೋಭೆ. [ಸಂ.]

**ಕ್ಷೋದಕ್ಷಮ** (ಗು). ೧. ತಿಕ್ಕಾಟವನ್ನು ಸಹಿಸಬಲ್ಲ. ೨. ವಿಚಾರ ವಿಮರ್ಶೆಯನ್ನು ತಡೆದುಕೊಳ್ಳಬಲ್ಲ; ಭದ್ರವಾದ; ದೃಢವಾದ: ವಿದಿತಾರ್ಥಂ ಕ್ಷೋದಕ್ಷಮಮುದಾತ್ತಶಬ್ದಂ ಪರಸ್ಪರಂ ಸಾಪೇಕ್ಷಂ ಪದಸಮುದಾಯಂ ವಾಕ್ಯಂ (ಕಾವ್ಯಾವ. ೪೫೩). [ಕ್ಷೋದ + ಕ್ಷಮ]

**ಕ್ಷೋದನೀಯ** (ಗು). ೧. ಪುಡಿಮಾಡಲ್ಪಡುವ. ೨. ಪುಡಿಮಾಡಲು ಯೋಗ್ಯವಾದ. ೩. ಪುಡಿಮಾಡಲು ಶಕ್ಯವಾದ: ಅತ್ಯಂತ ಕೋಮಲ ತಾಲುಸಂಘಟ್ಟಮಾತ್ರ ಕ್ಷೋದನೀಯ ಮೋದಕಮುಮಂ (ಆದಿಪು. ೧೧–೨೬ವ). [ಸಂ.]

**ಕ್ಷೋದಿ** (ಗು). ೧. ಕುಟ್ಟುವ; ಪುಡಿಮಾಡುವ. ೨. (ಆಲಂ) ಕೆಡುಕನ್ನು ಉಂಟುಮಾಡುವ: ಕ್ಷೋದಿಯಹ ಸಾಬ್ರಹ್ಮಹತ್ಯ ಮಧುಪಾನ ಗುರುವಂಗನಾಗಮನ ಸ್ತೇಯ ಬಾಧಿಪವು (ವೆಂಕಾರಾ. ೨–೧೯–೧೨). [ಸಂ. ಕ್ಷೋದಿನ್]

**ಕ್ಷೋದಿಷ್ಠ** (ಗು). ಅತ್ಯಂತ ಸೂಕ್ಷ್ಮವಾದ; ಅತಿ ಚಿಕ್ಕ. [ಸಂ.]

**ಕ್ಷೋದೀಯ** (ಗು). ಬಹಳ ಕ್ಷುದ್ರವಾದ, —ಹೀನವಾದ; ಕೆಡುಕನ್ನುಂಟುಮಾಡುವ; ನೀಚವಾದ: ಅನಿತರೊಳ್ ಕ್ಷೋದೀಯ್ಯ ತಾಮಸಂ ಪರಿದು ದುಃಖಂ ಪೋಗೆ ಮೂದೇವಮಯ ಮೂಡವೆಟ್ಟ ದುದಿಯನ್ನಡರಿ ನೋಡಿದಂ ಪ್ರೀತಿಯಿಂದೆ (ವೆಂಕಾರಾ. ೨–೨೭–೧೨). [< ಸಂ. ಕ್ಷೋದೀಯಸ್]

**ಕ್ಷೋಭ** (ನಾ). ೧. ಅಲುಗಾಟ; ಕುಲುಕಾಟ. ೨. ಕದಡುವಿಕೆ; ಕೋಲಾಹಲ; ಅಲ್ಲೋಲ ಕಲ್ಲೋಲವಾಗುವಿಕೆ: ನೆಲಂ ಮೂರಿವಿಟ್ಟಂತೆ ಸಭಾಕ್ಷೋಭಮಾಗೆ (ಪಂಪಭಾ. ೨–೮೬ ವ); ಮನೋಜ ರಾಜಾವೇಶಮಂತ್ರದಿಂ ಸ್ತೋಭಂಗೊಂಡಂತೆ ಪುರ ಕ್ಷೋಭಮಾಗೆ (ಸುಕುಮಾ. ೧೧–೭ ವ); ಸಮುದ್ರಕ್ಷೋಭದಂತೆ ಘೂರ್ಣಿಸುವ ಜನ ಕ್ಷೋಭಮಂ (ಜಗವಿ. ೨–೫೩ ವ). ೨. ಉದ್ವಿಗ್ನತೆ; ಉದ್ರೇಕ; ಉದ್ವೇಗ: ಮನ್ಮೂರ್ಛನಮ ಕ್ಷೋಭದಿಂ ಕಂಪಿಸುತಂ (ಕಾದಂಉ. ೫೪೨); ರಥಮನತಿ ಕ್ಷೋಭದಿಂದೇಱಿ ಬಂದಂ (ಪಂರಾಮಾ. ೧೪–೧೨೯). ೩. ಕೋಪ; ಕ್ರೋಧ: ರಾಸಭ ರಾಕ್ಷಸನತಿಕ್ಷೋಭಮಂ ತಳೆದು (ಜಗವಿ. ೪–೪೦ ವ). ೪. ಕಳವಳ; ಕಷ್ಟ; ವಿಪತ್ತು: ಪುರದುರ್ಗಂಗಳ ಬಲ್ಮೆ ಮಾಡದೆ ಪ್ರಜಾಕ್ಷೋಭಂಗಳಂ ನೋಡದೆ (ಸೋಮೇಶ. ೫೫). ೫. [ಗಣಿತ] ಇಪ್ಪತ್ತುಮೂರು ಅಂಕೆಗಳಿರುವ ಒಂದು ಸಂಖ್ಯೆ: ತ್ರಿವಿಂಶಕಮಥ ಕ್ಷೋಭಂ (ವ್ಯವಹಾ. ೮); ಕ್ಷಿತಿ, ಮಹಾಕ್ಷಿತಿ, ಕ್ಷೋಭ, ಮಹಾಕ್ಷೋಭ, ನಿಧಿ . . . ಇವು ೩೨ ವುಘಡಣೆ ಹೆಸರುಗಳು (ಭಾಸ್ಕರ. ೧೧–೮). ೬. (ಒಮ್ಮೆಲೆ ಉಂಟಾಗುವ) ಹೊಡೆತ, —ಆಘಾತ: ನಮ್ಮ ನರಗಳಲ್ಲಿ ತಟ್ಟನೆ ಉಂಟಾಗುವ ಎಳೆತ ಅಥವಾ ಕ್ಷೋಭದಿಂದ (Shock) ವಿದ್ಯುಚ್ಛಕ್ತಿಯ ಅನುಭವವೂ ನಮಗೆ ಆಗುತ್ತದೆ (ಭೌತವಿ. ೧೫). ೭. [ಕಾವ್ಯಮೀ] ಕಾವ್ಯಾನಂದದ ನಾಲ್ಕು ಅವಸ್ಥೆಗಳಲ್ಲಿ ಒಂದು: ಕಾವ್ಯಾರ್ಥವನ್ನು ಗ್ರಹಿಸುವುದರಿಂದ ಆಗುವ ಆನಂದವು (ಚಿತ್ತ)ವಿಕಾಸ, ವಿಸ್ತಾರ, ಕ್ಷೋಭ, ವಿಕ್ಷೇಪ ಎಂದು ನಾಲ್ಕು ವಿಧ (ಕೈಪಿಡಿ. ೨೦೦). [ಸಂ.]

**ಕ್ಷೋಭಕ** (ನಾ). ಕಲುಕುವವನು; ಅಲುಗಾಡಿಸುವವನು; ಅಲ್ಲಾಡಿಸುವವನು: "ಕ್ಷೋಭಕಃ, ಕ್ಷೋಭಮಾನಃ – ಈ ೨ ಅಲುಗುವಂ" (ಕಾಶಕ್ಯ. ೧೩೨). [ಸಂ.]

**ಕ್ಷೋಭಕಾರಿ** (ಗು). ೧. ದಿಗಿಲನ್ನು ಉಂಟುಮಾಡುವ; ಕ್ಷೋಭೆಯನ್ನು ಮಾಡುವ: ಅಂತು ತ್ರೈಲೋಕ್ಯಕ್ಷೋಭಕಾರಿಯಾದೊಸಗೆಯೊಳ್ (ಶಾಂತಿಪು. ೧೧–೧೦೧ ವ). (ನಾ). ೨. ಕ್ಷೋಭೆಯನ್ನುಂಟುಮಾಡುವವನು; ಗೊಂದಲವನ್ನುಂಟುಮಾಡುವವನು: ಆವನೊಬ್ಬ ಕ್ಷೋಭಕಾರಿಯಾದ ಮನುಷ್ಯ (ರೂಢಿ).

[ಸಂ. ಕ್ಷೋಭಕಾರಿನ್]

**ಕ್ಷೋಭಾಂತ** (ಗು). ಕ್ಷೋಭೆಯಲ್ಲಿ ಕೊನೆಗೊಳ್ಳುವ; ದುಃಖಾಂತವಾದ: ಭದ್ರ, ರುದ್ರ, ಶೋಭಾಂತ, ಕ್ಷೋಭಾಂತ, ಹದಗೊನೆ, ಮುದಗೊನೆ ... ಇವುಗಳ ಅನವಶ್ಯಕ ಶಬ್ದ ಸಂತತಿ ನಿಯಮನವು ಅಗತ್ಯವಲ್ಲವೇ? (ಸಾಹಿವಿ. ೧೨೨). [ಕ್ಷೋಭ + ಅಂತ್ಯ]

**ಕ್ಷೋಭಿತ** (ಗು). ಕ್ಷೋಭೆಗೊಳಿಸಲ್ಪಟ್ಟ: ಆ ನೃಪಸುತೇಂದೂದಯ ಕ್ಷೋಭಿತ ಸೌರರಾಗಸಾಗರ ನಿರ್ಘೋಷಾಯಮಾಣ ... ಭೇರೀಶಂಖ ಕಾಹಳಾ ರವದೊಡನೆ (ಚಂದ್ರಪು. ೩–೯೪ ವ). [ಸಂ.]

**ಕ್ಷೋಭಿಸು** (ಕ್ರಿ). ೧. ಕಲಕಲ್ಪಡು: ಅಲ್ಲೋಲಕಲ್ಲೋಲವಾಗು: ರತ್ನಾಕರಂ ಕೌಮುದಿಯಿಂದಂ ಕ್ಷೋಭಿಸಿರ್ದುಂ ಸಹಜವೆನಿಪ ತನ್ನೊಂದು ಮರ್ಯಾದೆಯಂ ದ್ಧಾಂಟದವೋಲ್ (ಕಾದಂಉ. ೩೫೪). ೨. ರೇಗು; ಕೋಪಿಸು: ಪರಿವಾರಮೆಲ್ಲಂ ಕ್ಷೋಭಿಸಿ ರಾಜ್ಯಕ್ಕೆ ಇವನಯೋಗ್ಯನೆಂದು ಕುಂಭನಂ ಪತ್ತುವಿಡೆ (ಚಾವುಂಪು. II, ೫೪–೨೭). ೩. ಸಿಟ್ಟಿಗೆಬ್ಬಿಸು; ಉದ್ರೇಕಿಸು: ಆತನು ಶಂಕರನ ಮನಸ್ಸನ್ನು ಕ್ಷೋಭಿಸುವನು (ತುಳಸಿ. ೨೭). [ಕ್ಷೋಭ + – ಇಸು₃]

**ಕ್ಷೋಭೆ** (ನಾ). ಕೋಲಾಹಲ; ಗೊಂದಲ; ಅಶಾಂತಿ; ಆಂದೋಲನ; ವಿಪ್ಲವ: ಇತರರ ಕೈಸೇರುವುದರಿಂದ ಪ್ರಜಾಕ್ಷೋಭೆಯಾಗಬಹುದು (ಶಾಂತಲಾ. ೨೮); ರಾಜಕೀಯ ಕ್ಷೋಭೆಯ ಮಧ್ಯದಲ್ಲಿಯೂ ಹದಿಮೂರನೆಯ ಶತಮಾನದಲ್ಲಿ ಪುನಃ ಧರ್ಮಸ್ಥಾಪನೆಯ ಕಾರ್ಯ ನಡೆಯಿತು (ಕರ್ನಾಕ. ೩೭); ಕ್ಷಾಮದಲ್ಲಿ ಕ್ಷೋಭೆಗೆ ಕಡಮೆಯೇ (ಗಾದೆ). [< ಸಂ. ಕ್ಷೋಭ]

**ಕ್ಷೋಮ** (ನಾ). = ಕ್ಷೌಮ ೧: ಇವರ ಉಡುಪುಗಳನ್ನು ಕೌಶೇಯ, ಕ್ಷೋಮ, ಕಂಬಳ ಮತ್ತು ಕರಾಳ ಎಂದು ನಾಲ್ಕು ತರಹ ಬಟ್ಟೆಗಳಿಂದ ಮಾಡಿರುತ್ತಾರೆ (ಪ್ರವಾಇ. I, ೧೯೮). [< ಸಂ. ಕ್ಷೌಮ]

**ಕ್ಷೌದ್ರ** (ನಾ). ಜೇನುತುಪ್ಪ: "ಸಾರಘಂ, ಮಾಕ್ಷಿಕಂ, ಕ್ಷೌದ್ರಂ, ಮಧು, ಪುಷ್ಪರಸಃ – ಈ ೫ ಜೇನುತುಪ್ಪಂ" (ಹಲಾಯು. ೧೦೨–೪೬೭).

[ಸಂ.]

**ಕ್ಷೌದ್ರಪಟಲ**, ಕ್ಷೌದ್ರಪಟಳ (ನಾ). ಜೇನುಹುಟ್ಟಿ; ಜೇನುಗೂಡು: ಮಧುಕಕ್ಷಲಕ್ಷಗಳ್ ಕ್ಷೌದ್ರಪಟಲದೊಳಮಿತಸಂಖ್ಯೆಯಿಂದಿರ್ಪವೋಲ್ (ಶ್ರೀರಾಮಾ. ೪೫೪–೨೬೦). **ಕ್ಷೌದ್ರಪಟಳೆ**: ನೃಪಸೇನಾಪತಿ ಸರಘಾಳಿ ಪರೀತ ಕ್ಷೌದ್ರಪಟಳದಿಂದೆಳೆಯಂ ಪಾಳಿಪವೋಲ್ ... ತನ್ಮೂರ್ಧಾಳಿಯಿಂದನೂಚ್ಚಾಡಿಸಿದಂ (ಶಾಂತಿಪು. ೧೧–೨೪). [ಕ್ಷೌದ್ರ + ಪಟಲ]

**ಕ್ಷೌದ್ರಪಟಳೆ** 'ಕ್ಷೌದ್ರಪಟಲ' ನೋ.

**ಕ್ಷೌಮ** (ನಾ). ೧. ರೇಷ್ಮೆವಸ್ತ್ರ; ಪಟ್ಟೆವಸ್ತ್ರ; ದುಕೂಲ: "ದುಕೂಲಂ, ಕ್ಷೌಮಂ – ಈ ೨ ದು(ಗು)ಕೂಲಂ" (ಹಲಾಯು. ೯೦–೩೯೫); "ಕ್ಷೌಮಮೆನಲಾ ಸುಪಠಾವಳಿ ದುಕೂಲಮೆನೆ ಪಟ್ಟೆ" (ಮಂಗರಾ. ೧೧೧–೨೭); ಗಿರಿಜಾತಾದೀರ್ಘನೇತ್ರದ್ಯುತಿ ಧವಳಿತ ಚರ್ಮಾಂಬರಂ ಕ್ಷೌಮದಿವ್ಯಾಂಬರಮಂ (ರಾಜಶೇ. ೧೪–೧೦೯). ೨. ನಾರಿನಿಂದ ಮಾಡಿದ ಬಟ್ಟೆ; ನಾರುಮುಡಿ. ೩. ಅಟ್ಟಳಿಗೆ; ಅಟ್ಟಣಿಗೆ. ೪. ಉಪ್ಪರಿಗೆ; ಮಹಡಿ. [ಸಂ.]

**ಕ್ಷೌಮಾಂಬರ** (ನಾ). ರೇಷ್ಮೆಯ ವಸ್ತ್ರ: ಮಂದಮಾರುತಾಂದೋಳಿತ ಸೂಕ್ಷ್ಮ ಕ್ಷೌಮಾಂಬರ ಪಲ್ಲವಂ (ಆದಿಪು. ೮–೫೫); ಶಿಥಿಲ ಕ್ಷೌಮಾಂಬರಂ ... ಕಣ್ಗಿಂಬಾಯ್ತು (ರಾಜಶೇ. ೫–೪೭).

[ಕ್ಷೌಮ + ಅಂಬರ]

**ಕ್ಷೌರ** (ನಾ). ೧. ತಲೆಕೂದಲನ್ನು ಬೋಳಿಸುವುದು; ಮುಂಡನ; ಕಷ್ಟ (ಉಕ): "ಕ್ಷೌರಂ, ಭದ್ರಾಕರಣಂ, ಮುಂಡನಂ, ವಪನಂ – ಈ ೪ ಬೋಳಿಸುಹ" (ಹಲಾಯು. ೧೧೯–೩೭); ವೈರವಿದ್ದವನಿಂದ ಕ್ಷೌರ ಮಾಡಿಸಿಕೊಂಡ ಹಾಗೆ (ಗಾದೆ). ೨. (ಆಲಂ) ನಷ್ಟ; ಅನವಶ್ಯಕವಾದ ವೆಚ್ಚ: ದೊಡ್ಡಸ್ತಿಕೆಗೆ ಕಟ್ಟುಬಿದ್ದು ಹತ್ತುರೂಪಾಯಿ ಕ್ಷೌರವಾಯಿತು ಅವನಿಗೆ (ರೂಢಿ). [ಸಂ.]

**ಕ್ಷೌರಕ** (ನಾ). ನಾಯಿಂದ; ನಾಪಿತ: ಕ್ಷೌರಕರಿಗೆ ಗ ೧॥೦ (ಎಕ. VI, ಶೃಂಗೇರಿ. ೧೧– ಪು. ೩೭೨; 1652). [ಸಂ.]

**ಕ್ಷೌರಗೃಹ** (ನಾ). ಕ್ಷೌರಮಾಡತಕ್ಕ ಸ್ಥಳ; ಆಯುಷ್ಕರ್ಮಶಾಲೆ; ನಾಯಿಂದನ ಮನೆ: "ನಾವಿಂದರಾಲಯಂ ಕ್ಷೌರಗೃಹಮಕ್ಕು" (ಮಂಗರಾ. ೫೯–೧೦). [ಕ್ಷೌರ + ಗೃಹ]

**ಕ್ಷೌರಿಕ** (ನಾ). = ಕ್ಷೌರಕ: ಊರಿಗೊಬ್ಬ ಕ್ಷೌರಿಕ ಬೇಕು (ರೂಢಿ).

[ಸಂ.]

**ಕ್ಷ್ಣುತ** (ಗು). ಸಾಣೆ ಹಿಡಿಯಲ್ಪಟ್ಟ; ಹರಿತಗೊಳಿಸಲ್ಪಟ್ಟ. [ಸಂ.]

**ಕ್ಷ್ಮಾ** (ನಾ). ೧. ಭೂಮಿ: ಸ್ಥಿರ ಗೋಪಾಧ್ಯಾಯ ಕ್ಷ್ಮಾಪರಿಪಾಲ್ಯ ಕ್ಷೇತ್ರಕರ್ಷಣಂಗಳ್ ಕ್ರಿಯೆಗಳ್ (ಕವಿರಾ. ೧–೬೪); ಅಶೇಷ ಕ್ಷ್ಮಾಚಕ್ರಸಂರಕ್ಷಣದಕ್ಷ ದಕ್ಷಿಣಭುಜೋತ್ಖಡ್ಗಂ (ಸುಕುಮಾ. ೧–೭೯ವ). ೨. [ಛಂದ] ಒಂದು ಗಣದ ಹೆಸರು; ಮಗಣ (– – –): ಆದಿ ಕ್ಷ್ಮಾಯುಗ್ಮಾಕಾಶಾಗ್ರಂ (ಛಂದೋಂಬು. ೨–೧೪೭). [ಸಂ.]

**ಕ್ಷ್ಮಾಚರ** (ನಾ). ಭೂಮಿಯ ಮೇಲೆ ತಿರುಗಾಡುವವನು; ಭೂಚರ; ಮನುಷ್ಯ: ಗಗನಕ್ಷ್ಮಾಚರರೊಳ್ ಸ್ವಯಂವರದೊಳೀ ಸ್ತ್ರೀರತ್ನಮಂ ಕನ್ನೆಯಂ ಬಗೆಗೊಂಡಂತೊಳಗೊಳ್ವೆವು (ಶಾಂತಿಪು. ೬–೨೩).

[ಸಂ.]

**ಕ್ಷ್ಮಾಚಳ** (ನಾ). ಬೆಟ್ಟ; ಪರ್ವತ: ಮೇರುಕ್ಷ್ಮಾಚಳಂ ಬಂದವು ದೆನೆ ... ನಂದಿಷೇಣಕ್ಷಿತಿಪತಿಯ ಗೃಹದ್ವಾರದೇಶಕ್ಕೆ ವಂದಂ (ಮಲ್ಲಿಪು. ೧೩–೧೯೬). [ಕ್ಷ್ಮಾ + ಅಚಳ (= ಅಚಲ)]

**ಕ್ಷ್ಮಾಜ** (ನಾ). ೧. ಭೂಮಿಯಲ್ಲಿ ಹುಟ್ಟಿದುದು; ಮರ; ವೃಕ್ಷ: ಬಹು ಚಂದನಕ್ಷ್ಮಾಜಂಗಳುಂ (ಬಸವು. ೧೯–೭೦); ಉದ್ಧೃತಕ್ಷ್ಮಾಜ ವ್ರಜಂ ... ಪೊಯ್ಯುದು ರಟಜ್ಝಂಝಾಮರುತ್ಕುಂಜರಂ (ರಾಜಶೇ. ೮–೧೦೬). ೨. ಅಂಗಾರಕ ಗ್ರಹ; ಮಂಗಳಗ್ರಹ; ಕುಜ. [ಸಂ.]

**ಕ್ಷ್ಮಾಜಾತ** (ನಾ). = ಕ್ಷ್ಮಾಜ ೧: ತಟಕ್ಷ್ಮಾಜಾತ ಪುಷ್ಪವ್ರಜರಜಂ (ರಾಜಶೇ. ೨–೬೪). [ಸಂ.]

**ಕ್ಷ್ಮಾಧರ** (ನಾ). ಬೆಟ್ಟ; ಪರ್ವತ: ಮೇರು ಕ್ಷ್ಮಾಧರತುಂಗ ಹರ್ಮ್ಯ ಮೆನಿಪರಮನೆಯಂ ... ಈಕ್ಷಿಸಿ (ಚಂದ್ರಪು. ೧೧–೮೦); ತುಹಿನ ಕ್ಷ್ಮಾಧರಜಾತಾಲೋಲೇಕ್ಷಣ (ಉದ್ಭದೇ. ೩–೩). [ಸಂ.]

**ಕ್ಷ್ಮಾಧವ** (ನಾ). ಭೂಮಿಯ ಒಡೆಯ; ಅರಸ: ಅಮಳಸ್ವಾಂತಂ ಪರಕ್ಷ್ಮಾಧವಸ್ತವನೀಯಂ (ರಾಜಶೇ. ೩–೨೨). [ಸಂ.]

**ಕ್ಷ್ಮಾಧೃ** (ನಾ). = ಕ್ಷ್ಮಾಧರ: ಜೃಂಭದ್ದಂಭೋಳಿ ಹಸ್ತಾಹತಚಕಿತಗತ ಕ್ಷ್ಮಾಧೃ ವಿಸ್ಫಾರವಿದ್ಯುತ್ಸಂಭಿನ್ನ ... ಫೇನಪ್ರತಾನಂ (ರಾಜಶೇ. ೧–೯೦).

[ಸಂ.]

**ಕ್ಷ್ಮಾಪ** (ನಾ). ಭೂಮಿಯನ್ನು ರಕ್ಷಿಸುವವನು; ಅರಸ: ವಿರೋಧಿಕ್ಷ್ಮಾಪರೆನ್ನೀ ಗದಾಪರಿಘಾಘಾತದಿನಟ್ಟಿ ತಟ್ಟಿ ಮುಡಿದಿನ್ನುಟ್ಟಾಡದೇಂ ಪೋಪರೇ (ಪಂಪಭಾ. ೧೩-೯೦); ಗಣನಾಥಯೂಥವಂ ಕ್ಷ್ಮಾಪಸಮೂಹಮಂ (ಶಾಂತಿಪು. ೧೨-೩). [ಸಂ.]

**ಕ್ಷ್ಮಾಪತಿ** (ನಾ). ೧. = ಕ್ಷ್ಮಾಧವ. ೨. ಭೂದೇವಿಯ ಪತಿ; ವಿಷ್ಣು. [ಸಂ.]

**ಕ್ಷ್ಮಾಪಾಲ** (ನಾ). = ಕ್ಷ್ಮಾಪ: ನಂಬು ಖಚರ ಕ್ಷ್ಮಾಪಾಲ ಚೂಡಾಮಣೀ (ಆದಿಪು. ೨-೭); ಇಂಬುಕೆಯ್ಯನದೊಳೊಪ್ಪಿಂ . . . ಉಪಶಾಂತಿಯಂ ಕುರುಕುಲ ಕ್ಷ್ಮಾಪಾಲ ಚೂಡಾಮಣೀ (ಗದಾಯು. ೭-೪೪). [ಸಂ.]

**ಕ್ಷ್ಮಾವಕ್ಷ** (ನಾ). ಭೂಮಿಯ ಎದೆ; ಭೂತಲ: ಶತಪಥವುಲೆದ ಪೋಲ್ ಕ್ಷ್ಮಾವಕ್ಷಮಂ (ಶ್ರೀರಾಮಾ. ೨೨೧-೨೭೦). [ಸಂ.]

**ಕ್ಷ್ವೇಡ** (ನಾ). ನಂಜು; ವಿಷ: ನಿಜವಕ್ತ್ರೋಜನಿಕ್ಷಿಪ್ತ ಕ್ಷ್ವೇಡಪೀಡಿತ ಲೋಕಘಾತಿನಿಯಪ್ಪ ಪೂತನಿಯುಮಂ . . . ಕರೆದು(ಜಗವಿ. ೩-೨೨ ವ). [ಸಂ.]

**ಕ್ಷ್ವೇಡನ** (ನಾ). ೧. ಅಸ್ಪಷ್ಟವಾಗಿ ಮಾತಾಡುವುದು; ಪಿಸುಗುಟ್ಟುವಿಕೆ. ೨. ಬುಸುಗುಟ್ಟುವುದು; ಗುರುಗುಟ್ಟುವುದು. ೩. ಬಿದಿರಿನ ದೊಣ್ಣೆ. [ಸಂ.]

**ಕ್ಷ್ವೇಡಾಗ್ನಿ** (ನಾ). ವಿಷದ ಉರಿ: ಆ ಕಾಮ ಬಾಣಾಗ್ನಿಯಿಂ ಸರ್ಪಮುಖ ಕ್ಷ್ವೇಡಾಗ್ನಿಯೇಂ ದುಸ್ಸಹಮೆ (ಜಗವಿ. ೩-೯೬). [ಕ್ಷ್ವೇಡ + ಅಗ್ನಿ]

**ಕ್ಷ್ವೇಡಾಶ** (ನಾ). ಗರುಡ. 'ಕ್ಷ್ವೇಡಾಶಗಮನ' ಪರಾ. [ಸಂ.]

**ಕ್ಷ್ವೇಡಾಶಗಮನ** (ನಾ). ಗರುಡನ ಮೇಲೆ ಸವಾರಿಮಾಡುವವನು; ಗರುಡವಾಹನ; ವಿಷ್ಣು: ನಾಡೊಳಗುಳ್ಳನಾನಾವಿದ್ಯದೇಳ್ಗೆಯ ನೋಡ ಚಿತ್ರೈಸಿದ ಬಳಿಕ ಕ್ಷ್ವೇಡಾಶಗಮನನಾಕ್ಷಣದಲ್ಲಿ ತರಿಸಿದ ಕ್ರೀಡಾವಿಹಂಗಸಂತತಿಯ (ಮೋಹತ. ೪-೧೮). [ಕ್ಷ್ವೇಡಾಶ + ಗಮನ]

**ಕ್ಷ್ವೇಡಿತ** (ನಾ). ವೀರಗರ್ಜನೆ; ಸಿಂಹನಾದ. [ಸಂ.]

**ಕ್ಷ್ವೇಡೆ** (ನಾ). ೧. ಸಿಂಹನಾದ; ವೀರಗರ್ಜನೆ: "ಕ್ಷ್ವೇಡಾ = ಬೊಬ್ಬೆ, ಯುದ್ಧಕಾಲದ 'ಗರ್ಜನೆ'" (ಹಲಾಯು. ೧೩೦-೧೦೦ ಅಡಿಟಿ). ೨. ಅಚ್ಚವಿಷ; ಅಪ್ಪಟ ವಿಷ: "ಸಿಂಹನಾದಂ ಕ್ಷ್ವೇಡೆಯುಂ ಅಚ್ಚವಿಷಮುಕ್ಕು" (ಮಂಗರಾ. ೧೩೬-೪೧). ೩. ಬಿದಿರಿನ ಕೋಲು. [ಸಂ. ಕ್ಷ್ವೇಡಾ]

**ಕ್ಷ್ವೇಳ** (ನಾ). = ಕ್ಷ್ವೇಡ: ಬಾಲಘಾತಿನಿ ಯಶೋದಾಸೂನುವಂ ಕ್ಷ್ವೇಳದಿಂದಿಡಿದಾತ್ಮಸ್ತನಮಂ ಧರಾತಳದೊಳಂದಾರ್ಗಿತ್ತಳಾ ಬಾಲಕರ್ಮಡಿದರ್ (ವಿಷ್ಣುಪು. ೫-೨-೫); ಕ್ಷ್ವೇಳವೇನಮೃತವೇಂ (ಮಂಕುಕ. ೧೯). [< ಸಂ. ಕ್ಷ್ವೇಡ]

# ಖ

**ಖ**₁ (ನಾ). ಕನ್ನಡ ವರ್ಣಮಾಲೆಯ ಇಪ್ಪತ್ತೆರಡನೆಯ ಅಕ್ಷರ.

**ಖ**₂ (ನಾ). ೧. ಬಾನು; ಆಕಾಶ; ಗಗನ. 'ಖಗ', 'ಖಚರ' ಪರಾ. ೨. ಇಂದ್ರಿಯ. ೩. ಅರಿವು; ಬುದ್ಧಿ. ೪. ಮನಸ್ಸು; ಚಿತ್ತ. ೫. ಬ್ರಹ್ಮ. ೬. ದೇವಲೋಕ; ಸ್ವರ್ಗ. ೭. ಹೊಲ; ಕ್ಷೇತ್ರ. ೮. ಬೀಗ; ಕೀಲಿ. ೯. ಯತಿ. ೧೦. ಶೂನ್ಯಪ್ರದೇಶ. ೧೧. ಸೊನ್ನೆ; ಬಿಂದು: "ಖಂ ಮಿಗೆಯಾಕಾಶಂ . . . ಬಿಂದುವಿನ ನಾಮ" (ವ್ಯವಹಾ. ೧೦-೧೦). ೧೨. ಹಾವು; ಸರ್ಪ. ೧೩. ವಿಷ್ಣು: "ಖಃ - ವಿಷ್ಣು" (ಕಾಶಕ್ಯ. ೧೨೫). ೧೪. ಎರಡು ಎಂಬ ಸಂಖ್ಯೆಯ ಸಂಕೇತ: "ನಿರುತದಿಂ ಕಟಪ[ಯ]ಮೆನಲ್ಕೊಂದು ಖಶಘರಮದೆರಡಕ್ಕು" (ಮಂಗರಾ. ೧೦೪-೧೦); "ಅಹಿಯೊಳಿಂದ್ರಿಯದೊಳು ಯತೀಶನೊಳು ವ್ಯೋಮದೊಳು . . . ಖಂ ಶಬ್ದ ವರ್ತಿಸಿರ್ಕುಂ" (ಮಂಗರಾ. ೧೪೮-೪೨); "ಸ್ವರ್ಗದೊಳುಂ ಪಿತಾಮಹನೊಳಿಂದ್ರಿಯದೊಳ್ ಮನ ಬುದ್ಧಿ ಶೂನ್ಯ ವ್ಯೋಮಮಾರ್ಗಳಕ್ಷೇತ್ರಮೆಂಬಿನಿತಜೊಳ್ ಯತಿಯೊಳ್ ಸಲೆ ಖಂ ಸಮಾಹ್ವಯಂ" (ನಾನಾರ. ೧೧೭). [ಸಂ.]

**ಖಂಕರ** (ನಾ). ಗುಂಗುರುಗೂದಲು. [ಸಂ.]

**ಖಂಕರಿ** (ನಾ). ಗುಂಗುರುಗೂದಲುಳ್ಳವನು. [ಸಂ. ಖಂಕರಿನ್]

**ಖಂಗು** 'ಕಂಗ್ಯು' ನೋ.

**ಖಂಜ** (ನಾ). ಕಾಲಿಲ್ಲದವನು; ಕುಂಟ; ಹೆಳವ: "ಖಂಜಃ, ಪಂಗುಃ, ಶೋಣಿಃ - ಈ ೩ ಹೆಳವಂ" (ಹಲಾಯು. ೧೦೦-೪೫೬); ಕುರೋಗಾಸಹನರಂಧರು ಖಂಜರತಿ ಮೂಕರು ಬಧಿರ ಜಡರು(ಅಧ್ಯಾರಾ. ೬-೨೩). [ಸಂ.]

**ಖಂಜನ** (ನಾ). ಒಂದು ಬಗೆಯ ಪಕ್ಷಿ; ಗೀಜುಗ: "ಖಂಜರೀಟಃ, ಖಂಜನಃ - ಈ ೨ ಗ(ಕ)ವಿಂಜು" (ಹಲಾಯು. ೪೧-೯೧); "ಖಂಜನಂ ಖಂಜರೀಟಮೆನೆ ಗವುಜೆನಿಕ್ಕು" (ಮಂಗರಾ. ೫೧-೭); ಸಲಕ್ಷಣ ಸೌಂದರ್ಯ ಸ್ತ್ರೀಜನ ನೇತ್ರಚಾಂಚಲ್ಯೋಪಮೆಗೆ ಬಣ್ಣಿಸಲ್ ಯೋಗ್ಯಮಪ್ಪ ಖಂಜನಪುಂಜಮುಂ (ಪಂಚತಂ. ೨೨೫-೧೭). [ಸಂ.]

**ಖಂಜರಿ** 'ಕಂಜರಿ' ನೋ.

**ಖಂಜರೀಟ** (ನಾ). = ಖಂಜನ: "ಆಗಸವಕ್ಕಿ ಖಂಜರೀಟಮೆನಿಕ್ಕುಂ" (ಕವಿಕಂ. ೬೨); ಕಾರಂಡ ಹರಡೆ ಚಕೋರ ತಿತ್ತಿರಿ ಸೇನದಾರು ಚುಂಬಕ ಖಂಜರೀಟ (ಭೈರವೇ. ೧-೫೫). [ಸಂ.]

**ಖಂಜಾಖಂಜ** (ನಾ). [ಸಂಗೀತ] ತಾಳಗಳಲ್ಲಿ ಒಂದು ಬಗೆ: ಚಂಚತ್ಪುಟ . . . ಖಂಜಾಖಂಜ . . . ಜಯಾಳಮೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೪). [?]

**ಖಂಜಾತಿ** (ನಾ). [ಸಂಗೀತ] ಒಂದು ರಾಗದ ಹೆಸರು: ಮಾಳವ ಗೌಳ ಬಂಗಾಳ ಗೂರ್ಜರಿ ಕರ್ನಾಟ ಕಾಂಭೋಜಿ ಕೇತಾರಂಗಳ್ ದೇಶೀಯ . . . ಘಂಟಾರಾಗಂ ನಾದವತಿಯಾಗಿರ್ದವುದು ಖಂಜಾತಿ ಮೇಘರಂಜಿಯಾದತ್ತು (ಹವಿಮ್ಮಾರ. ೨-೯೦ ವ). [?]

**ಖಂಜೀಕೃತ** (ಗು). ಕುಂಟುಗೊಳಿಸಿದ; ಕುಂಠಿಸಿದ: ನಿಜತ್ವಿಟ್ ಖಂಜೀಕೃತ ಸೂರ್ಯಪಾದಚಯಮುಪ್ಪುದ್ದಾ ಮತೇಜಂ (ಚಂದ್ರಪು. ೫-೩೫). [ಸಂ.]

**ಖಂಜೀರ** 'ಕಂಜರ್ಯ' ನೋ.

**ಖಂಡ** (ನಾ). **೧.** ತುಂಡು; ಚೂರು: ಪಿಶಿತದ ಖಂಡಮಂ ಬಾಯೊಳಿಡೆ (ವಡ್ಡಾರಾ. ೨೦-೧); ತರುಣೋತ್ತುಂಗ ಶಶಾಂಕಖಂಡಮೆ ಸುಧಾಬೀಜಂ (ಗದಾಯು. ೧-೨); ದಂಡಂ ಖಂಡಮಪ್ಪಂತು ಪೊಯ್ದಂ (ರಾಮಾಶ್ವ. ೧೪೫-೨೮). **೨.** ಕಲ್ಲುಸಕ್ಕರೆ. 'ಖಂಡಸಕ್ಕರೆ' ಪರಾ. **೩.** ಗುಂಪು; ಸಮೂಹ: ನಾಗರ ಖಂಡಂಗಳನಾ ನಾಗರಖಂಡದೊಳ್ ತೊಡರೆ ನರನಿಸುವುದುಮಾ ನಾಗರ ಖಂಡಂಗಳುಮಂ ನಾಗರಖಂಡಮುಮನಳುರ್ದು ಕೊಂಡಂ ದಹನಂ (ಪಂಪಭಾ. ೫-೮೯). **೪.** (ಮೂಳೆಯಿಲ್ಲದ) ಮಾಂಸ; ಅಡಗು: ಸೊಣಗಂಗೆ ಖಂಡವ ಚೆಲ್ಲುವ ತೆಜನಂತೆ (ಗಣಭಾ. ೨೩-೫ ಸೊಡ್ಡಳ); ನೆತ್ತರಂ ನೆಣನಂ ಖಂಡಮನೆಯ್ದೆ ಪಿಂಡಿ (ಜಗವಿ. ೩-೨೪); ಖಂಡವಿದೆ ಕೊ ಮಾಂಸವಿದೆ ಕೊ (ಗೋಹಾಡು. ೯೩). **೫.** ಗ್ರಂಥದ ಅಧ್ಯಾಯ; ಆಶ್ವಾಸ: ೬ನೆಯ ಅನುಚ್ಛೇದದ (ಖ)ಖಂಡದ ಉದ್ದೇಶಗಳಿಗಾಗಿ . . . ಬಂದವನೆಂದೇ ಭಾವಿಸತಕ್ಕುದು (ಭಾಧಾನ. ೫). **೬.** ಅನೇಕ ದೇಶಗಳನ್ನೊಳಗೊಂಡ ದೊಡ್ಡ ಭೂಭಾಗ: ಮಹಾದ್ವೀಪದ ವಿಭಾಗಕ್ಕೆ ಖಂಡವೆನ್ನುತ್ತಾರೆ (ಮುಂಬಯಿ. ೪-೯೪); ನೆಲಭಾಗವು ಏಷ್ಯಾ, ಯೂರೋಪ್ . . . ಒಷೀನಿಯಾ ಎಂದು ಆರು ಖಂಡಗಳಾಗಿ ವಿಂಗಡಿಸಲ್ಪಟ್ಟದೆ (ಭೂಗೋಳ. ೧೪). **೭.** ಅರ್ಧಚಂದ್ರ; ಪೆರೆ: "ಅರ್ಧೇಂದು ಖಂಡಮಕ್ಕುಂ" (ಮಂಗರಾ. ೧೧-೫). **೮.** [ಸಂಗೀತ] ತಾಳದ ಐದು ಜಾತಿಗಳಲ್ಲಿ ಒಂದು: ೧. ತ್ರಿಶ್ರ, ೨. ಚತುರಶ್ರ, ೩. ಖಂಡ, ೪. ಮಿಶ್ರ, ೫. ಸಂಕೀರ್ಣ ಈ ಐದೂ ಜಾತಿಗಳೂ ಲಘುವಿಗೆ ಮಾತ್ರ ಸಲ್ಲುತ್ತವೆ (ಸಂಗೀಚಂ. ೫೬). **೯.** [ನಾಟ್ಯ] ನೃತ್ಯದ ಚಲನೆಯಲ್ಲಿ ಒಂದು ವಿಧ: ಎರಡು ಕಾಲುಗಳಿಂದಲೂ ಮಾಡುವ ಚಲನೆಗೆ 'ಕರಣ' ಎನ್ನುತ್ತಾರೆ. ಮೂರು ಕರಣಗಳ ಜೋಡಣೆಗೆ 'ಖಂಡ'ವೆಂದು ಹೆಸರು (ಆಭಾನ್ಯ. ೫೦). [ಸಂ.]

**ಖಂಡಂಗೊಯ್** (ಕ್ರಿ). ಮಾಂಸವನ್ನು ಕತ್ತರಿಸು, —ತುಂಡು ಮಾಡು: ಒರ್ವರನೊರ್ವ[ರ್]ಪಿಡಿದು ಖಂಡಂಗೊಯ್ದು ಬಾಯೊಳುಗಿಡಿದು (ಶ್ರಾವಕಾ. ೨೨-೧೬). [ಖಂಡ + ಕೊಯ್$_1$]

**ಖಂಡಕ** (ನಾ). **೧.** ತುಂಡು ತುಂಡಾಗಿ ಕತ್ತರಿಸುವಿಕೆ. **೨.** ತುಂಡು ತುಂಡಾಗಿ ಕತ್ತರಿಸುವವನು: "ಖಂಡಿತಃ, ಖಂಡಕಃ, ಖಂಡಾನಃ – ಈ ೩ ಖಂಡಿಸುವಂ" (ಕಾಶಕ್ಯ. ೧೦೨). **೩.** ತುಂಡು; ಚೂರು. [ಸಂ.]

**ಖಂಡಕಥೆ** (ನಾ). ಗದ್ಯಕಥೆಗಳಲ್ಲಿ ಒಂದು ಪ್ರಕಾರ: ಸಂಸ್ಕೃತದಲ್ಲಿಯೂ ಹಿಂದೆ ಗದ್ಯದಲ್ಲಿ . . . ಆಖ್ಯಾಯಿಕೆ, ಕಥೆ, ಖಂಡಕಥೆ, ಪರಿಕಥೆ, ಕಥಾನಿಕೆ ಎಂಬಂತೆ ಐದು ವಿಧವಾಗಿದ್ದಂತೆ ಅಗ್ನಿಪುರಾಣವು ತಿಳಿಸುತ್ತದೆ (ಕೈಪಿಡಿ. ೧೮೦). [ಖಂಡ + ಕಥೆ]

**ಖಂಡಕಾವ್ಯ** (ನಾ). ಮಹಾಕಾವ್ಯಕ್ಕಿಂತಲೂ ಕಡಮೆ ಸರ್ಗಗಳುಳ್ಳ ಕಾವ್ಯ; ಚಿಕ್ಕಕಾವ್ಯ: ಗಾತ್ರದಲ್ಲಿ ಖಂಡಕಾವ್ಯದಷ್ಟು ಚಿಕ್ಕದಲ್ಲ; ಮಹಾಕಾವ್ಯದಷ್ಟು ದೊಡ್ಡದಲ್ಲ (ಕಸಾಚ. ೨೧೦); ನಳಚರಿತ್ರೆ ಮಾತ್ರ ಹೃದಯಸ್ಪರ್ಶಿಯಾದ ಒಂದು ಖಂಡಕಾವ್ಯದ ಸೊಗಸನ್ನು ತುಂಬಿಕೊಂಡು ನಿಂತಿದೆ (ಪರಿಶೀ. ೧೦೫). [ಖಂಡ + ಕಾವ್ಯ]

**ಖಂಡಗಟ್ಟು** (ಕ್ರಿ). ಮಾಂಸಖಂಡಗಳು ಬೆಳೆದು ಪುಷ್ಟವಾಗು: ಬಿಟ್ಟಿ ದೊರೆಯುವ ಸಾರಾಯಿಯಿಂದಲೇ ಹೋರಿಗಳು ಖಂಡಗಟ್ಟುವುದಾದರೆ . . . ಧರ್ಮ ನೀತಿ ಯಾರಿಗೆ ಬೇಕು (ಬೆಳುವು. ೧೬೭). [ಖಂಡ + ಕಟ್ಟು$_1$]

**ಖಂಡಗ್ರಹಣ** (ನಾ). ಸೂರ್ಯ ಅಥವಾ ಚಂದ್ರನನ್ನು ಪೂರ್ಣವಾಗಿ ಆವರಿಸದೆ ಇರುವ ಗ್ರಹಣ; ಪಾರ್ಶ್ವಗ್ರಹಣ (Partial Eclipse. ಪಾಂನಿ). 'ಖಗ್ರಾಸಗ್ರಹಣ' ಪರಾ. [ಖಂಡ + ಗ್ರಹಣ]

**ಖಂಡಚಂದ್ರ** (ನಾ). ವಕ್ರಚಂದ್ರ; ಕೋರೆಚಂದ್ರ: ತಿಂಗಳ ಮೊದಲ ಮತ್ತು ಕೊನೆಯ ಕಾಲುಭಾಗಗಳಲ್ಲಿ ಕಾಣುವ ಚಂದ್ರಬಿಂಬ: ಬಾಲಚಂದ್ರ; ಎಳವೆರೆ; ಖಂಡಚಂದ್ರ (Crescent. ಇಂಕನಿ); ನಡುವೆ ಒಂದು ರೇಖೆ ಇರುವ ಅಥವಾ ಇಲ್ಲದಿರುವ ಖಂಡಚಂದ್ರದಂಥ ಗುರುತು (ಭಾರಪ. ೨೦). [ಖಂಡ + ಚಂದ್ರ]

**ಖಂಡಣಿ** 'ಖಂಡಣೆ$_2$' ನೋ.

**ಖಂಡಣಿಹಣ** 'ಖಂಡಣೆಹಣ' ನೋ.

**ಖಂಡಣೆ$_1$** (ನಾ). **೧.** ಒಡೆಯುವುದು; ಮುರಿಯುವುದು: ಕರ್ಮದ ಕಟ್ಟನೆ ಕೊಯ್ದು ಬ್ರಹ್ಮದ್ವಾರದ ಕಂಡೆ ಮೇಲೊಂದು ಕಂಭವ ಕಂಡೆನಲ್ಲಾ ಕಂಭವ ಖಂಡಣೆಯ ಮಾಡಿ ಮಹಾಬೆಳಗನೆ ಕಂಡೆ (ಅವಚಂ. ೧೮೦-೮೦೭). **೨.** ಕೆತ್ತುವಿಕೆ; ಕಂಡರಣೆ: ವೇದಿಕಾಸ್ತಂಭಂಗಳ ನಡುವೆ ಹಂಸಕುಳ ಕೀರ ಕುರವಕ ಸರಸೀರುಹ ಲತಾವಳಿಗಳ ಖಂಡಣೆಯಿಂ ಕೊಳನಂತೆ ವಿರಾಜಿಪ ಹಂಗುಳಿಕೆಯ ಮೇಲಿರ್ದ ಪದ್ಮಾವತಿಯಂ ಭೋಂಕನೆ ಕಂಡು (ಆದರ. ೧೪೭-೧೪). [< ಸಂ. ಖಂಡನ]

**ಖಂಡಣೆ$_2$**, ಖಂಡಣಿ (ನಾ). **೧.** ಮಾಂಡಲಿಕರು ಒಪ್ಪಿಸುವ ಕಪ್ಪಕಾಣಿಕೆ; ಪೊಗದಿ: ಪ್ರಾಕಿನ ಬಾಕಿ ಹಣ ಖಂಡಣೆ ಸಹಾ ೩೦ ಲಕ್ಷ ರೂಪಾಯಿ ಮೇಲೆ ಚುಕಾಯಿಸಿ (ಹೈದರ. ೧೦೧); ಇಕ್ಕೇರೀ ಶಿವಪ್ಪನಾಯಕನು . . . ನಿಂತ ಹಣಕ್ಕೆ ಖಂಡಣೆಯನ್ನು ಗೊತ್ತುಮಾಡಿ (ಚಾಮುವಂ. ೧೦೩). **ಖಂಡಣಿ: ೧.** ಪ್ರತಿವರ್ಷ ೧೦ ಲಕ್ಷ ದರಹಂ ನಾಣ್ಯಗಳನ್ನು ಖಂಡಣಿಯಾಗಿ ಕೊಡಲೊಪ್ಪಿಕೊಂಡರೆ ಮಾರ್ಗವನ್ನು ಬಿಟ್ಟುಕೊಡುತ್ತೇನೆ (ಹಿಂಮುಸ. ೨೫); ಪೇಶ್ವೆಯು ಕಳೆದ ೬ ವರ್ಷಗಳ ಖಂಡಣಿಯನ್ನು ಕೇಳಬಾರದು (ಚರಿಸಂ. ೯೬). **೨.** ಕಂದಾಯ; ಗುತ್ತಿಗೆ: ದೇಶದಲ್ಲಿ ಮಹಾ ಬರಗಾಲ ಖಂಡಣಿಯ ವಸೂಲಿ ನಿಂತುಬಿಟ್ಟದೆ (ಹಂಸಾ. ೧೦೦).

**ಖಂಡಣೆಮಾಡು** = ಗೊತ್ತುಮಾಡು; ನಿಗದಿಪಡಿಸು: ಅವನಿಂದ ಪಗುದಿಯ ಹಣವು ಬರುವಂತೆ ಖಂಡಣೆಮಾಡಿದ್ದರು (ಬೆಟ್ಟಅ. ೪೪-೧೨). [← ಮರಾ. ಖಂಡಣೀ]

**ಖಂಡಣೆಗೆಯ್** (ಕ್ರಿ). ತುಂಡುಮಾಡು; ಕತ್ತರಿಸು: ಖಂಡಣೆಗೆಯ್ದು ಕಾರ್ಮುಕದರ್ಧಭಾಗದ ದಿಂಡನೆ ತಿರುಹಿ ಮನ್ಮಥನ ಮಂಡೆಯ ಮೇಲೆ ಗಟ್ಟಸಲೊಡ್ಡಿಕೊಳಲು ಕೋದಂಡವಿಕ್ಕಡಿಯಾಯ್ತು ಕರದೆ (ಮೋಹತ. ೧೨-೬೪). [ಖಂಡಣೆ$_1$ + ಕೆಯ್$_1$]

**ಖಂಡಣೆಹಣ**, ಖಂಡಣಿಹಣ (ನಾ). **೧.** ಪೊಗದಿಯ ಹಣ; ಕಪ್ಪಕಾಣಿಕೆ: ಟೀಪುಸುಲ್ತಾನರು ಹೇಳಿದ ಮೇರೆ ಅವರ ಕೈಯಿಂದ ಖಂಡಣೆಹಣಾ ತೆಗೆದುಕೊಳ್ಳುವಂಥಾದ್ದು ಧರ್ಮವೇ ಸರಿ (ರಾಜೇಂದ್ರ. ೫೨). **ಖಂಡಣಿಹಣ: ೧.** ಖಂಡಣಿಹಣವನ್ನು ಮದಕರಿ ನಾಯಕ ಕೊಡುತ್ತೇನೆಂದು ಒಪ್ಪಿಕೊಂಡ ಮೇಲೂ (ಪಾಳಗಾ. ೩೧); ಆಗ ಬಸಲತ್ತು ಜಂಗನು, ಕರ್ನಾಟಕದೇಶದಿಂದ ಖಂಡಣಿಹಣ ತೆಗೆದುಕೊಂಡು ಹೋಗಲು ಬಂದನು (ಚಿತ್ರಪಾ. ೬೨). **೨.** ಕ್ರಯವಾಗಿ ಗೊತ್ತುಪಡಿಸಿದ ಹಣ; ದಂಡರೂಪವಾದ ಹಣ: ಇಂಗ್ಲಂಡದ ಜನರು ಶೂರನಾದ ರಿಚರ್ಡನ ಸಲುವಾಗಿ ಖಂಡಣಿಹಣ ಕೊಟ್ಟು ಅವನನ್ನು ಬಿಡಿಸಿಕೊಂಡರು (ಇಂಗ್ಲಂಢ. ೪೬). [ಖಂಡಣೆ$_2$ + ಹಣ (< ಪಣ$_1$)]

**ಖಂಡತುಂಡ** 'ಖಂಡತುಂಡು' ನೋ.

**ಖಂಡತುಂಡು**, ಖಂಡತುಂಡ, ಖಂಡುತುಂಡು (ನಾ). **೧.** ಕತ್ತರಿಸಿದ ತುಂಡು, —ಚೂರು: ದಶವದನನಸುರಪಡೆಗಳ ಕಡಿದು ಖಂಡತುಂಡನೆ ಮಾಡಿ (ಪುರಂದ. ೨-೬೫-೨). **ಖಂಡತುಂಡ: ೨.** (ಆಲಂ) ನಿಷ್ಕೃಷ್ಟವಾದುದು; ನಿರ್ದಾಕ್ಷಿಣ್ಯವಾದುದು; ನಿಸ್ಸಂದಿಗ್ಧವಾದುದು: ನೀವು ಖಂಡತುಂಡ ಜವಾಬು ಕೊಡಿಸಬೇಕು (ಗ್ರಾಮಾಯು. ೩೯೨).

**ಖಂಡುತುಂಡು :** ೧. ಅವರ ದೃಷ್ಟಿಯಲ್ಲಿ ಜೀವನ ಖಂಡುತುಂಡಾದ ಎರಡೆರಡು ಭಾಗಗಳಿದ್ದಂತೆ (ಒಂಟಿದ. ೧೧೬).

ಖಂಡತುಂಡವಾಗಿ =ಸ್ಪಷ್ಟವಾಗಿ ; ನಿರ್ದಾಕ್ಷಿಣ್ಯವಾಗಿ : ಸರಕಾರದ ರೀತಿನೀತಿಗಳನ್ನು ಖಂಡತುಂಡವಾಗಿ ನಿಂದಿಸಿ (ರಾಜವ. ೩೮) ; ಭಾಗೀರಥಿ ಖಂಡತುಂಡವಾಗಿ ಹೇಳಿದಳು (ಭಾರಥಿ. ೮). [ಖಂಡ + ತುಂಡು₁]

**ಖಂಡನ** (ನಾ). ೧. ಕತ್ತರಿಸುವುದು ; ಒಡೆಯುವುದು ; ಮುರಿಯುವುದು. ೨. ಅಡ್ಡಿ ಉಂಟುಮಾಡುವಿಕೆ; ಆತಂಕ ಪಡಿಸುವುದು. ೩. ಇನ್ನೊಬ್ಬರ ಅಭಿಪ್ರಾಯ ಅಥವಾ ವಾದವನ್ನು ತಪ್ಪೆಂದು ಹೇಳುವುದು, —ಖಂಡಿಸುವುದು. [ಸಂ.]

**ಖಂಡನಪತ್ರ** (ನಾ). (?) : ಕಲ್ಪಿತವ ಹಜಿುದು ಏಕಮಯವಾಗಿ ಖಂಡನ ಪತ್ರದಲ್ಲಿ ತೋಱುವ ಚಂಡಿಕಾ ಕಿರಣದಂತೆ (ಅಜಿಮಾ. ೨೫೪).

ಖಂಡನೆಯಪತ್ರ = (?) : ಪರಿಭಿನ್ನವಾಗಿ ಸ್ವಸ್ಥಾನಂಗಳಲ್ಲಿ ಮುಟ್ಟಿ ಭೇದಿಸಿಕೊಂಬ ವಸ್ತು ಒಂದಾದಲ್ಲಿ ಅದು ಖಂಡನೆಯಪತ್ರದ ಚಂಡಿಕಾ [ಪಾಠಾಂ. ಚಂದ್ರಿಕಾ] ಕಿರಣದಂತೆ (ಮೋಳಮಾ. ೧೨೪–೪೫೫).

[ಖಂಡನ ? + ಪತ್ರ]

**ಖಂಡನೀಯ** (ಗು). ೧. ಕತ್ತರಿಸಲು ಶಕ್ಯವಾದ ; ಚೂರುಮಾಡಲು ಬರುವ : ಅಲ್ಪದರ್ಶನದಂಶಮಾತ್ರ ಖಂಡನೀಯಮಂಡಕಮುಮಂ (ಆದಿಪು. ೧೧–೨೬ವ) ; ಅಲ್ಪದರ್ಶನದಂಶಮಾತ್ರ ಖಂಡನೀಯಕರಂಗಳೆನಿಸಿದ ಮಂಡಕಗಳುಮಂ (ಸುಕುಮಾ. ೧೧–೨೫ ವ). ೨. ನಿರಾಕರಿಸಲು ಯೋಗ್ಯವಾದ ; ಖಂಡಿಸುವುದಕ್ಕೆ ಯೋಗ್ಯವಾದ. [ಸಂ.]

**ಖಂಡನೆ** (ನಾ).೧. = ಖಂಡನ ೩: ಆಚಾರ್ಯದ್ವಯರೂ . . . ಪರಮತ ಖಂಡನೆ ಮತ್ತು ಸ್ವಮತಮಂಡನ ಕಾರ್ಯೋದ್ಯುಕ್ತರಾದರು (ಭಾರದ. ೧೦೫); ನಾಂ ಗೆಯ್ದುದಾರ ಖಂಡನೆಯಲ್ತು (ಶ್ರೀರಾಮಾ. ೮೬೩–೧೨೬). ೨. ಒಂದು ಮರ್ಯಾದೆ (?): ಪಂಚಾಂಗ ಪಸಾಯಚ್ಛತ್ರ ಸುಖಾಸನಬ್ಬುಲ ಗದ್ದಿ ಅಂಕದಣ್ಣ ಖಣ್ಣನೆ ಅಷ್ಟಭೋಗ ತೇಜಸೌಮ್ಯ (ಇಅ. VIII, ೯ಸ–IIa ; 444). [ಸಂ. ಖಂಡನ]

**ಖಂಡನ್ಯಾಯಾಲಯ** (ನಾ). ಉಚ್ಚನ್ಯಾಯಾಲಯಕ್ಕಿಂತ ಕೆಳಗಿನ ನ್ಯಾಯಾಲಯ ; ಕೆಳಕೋರ್ಟು: ಏಕನ್ಯಾಯಾಲಯ ಮತ್ತು ಖಂಡನ್ಯಾಯಾಲಯಗಳ ಶಕ್ತಿಗಳ ವಿಷಯದಲ್ಲಿಯೂ (ಭಾಥಾನ. ೭೮).

[ಖಂಡ + ನ್ಯಾಯಾಲಯ]

**ಖಂಡಪರಶು** (ನಾ). ೧. ಅರ್ಧ ಚಂದ್ರಾಕಾರದಲ್ಲಿರುವ ತೆಳುವಾದ ಕೊಡಲಿ. ೨. ಪರಮೇಶ್ವರ : ಗಜಾಸುರನಂ ಕಂಡ ಖಂಡಪರಶುವಿನಂತುದ್ಭಟಾರಭಟಿಯಿಂದಾರ್ದು (ಜಗವಿ. ೬–೫೦ ವ) ; ನಿರ್ಮಳ ಖಂಡ ಪರಶುವ ಕಂಡನಬುಜಭವ (ಕುವ್ಯಾಕ. ೬–೧೯). ೩. ಕೊಡಲಿ ರಾಮು ; ಪರಶುರಾಮ. ೪. ವಿನಾಯಕ : "ಲಸಜ್ಜ್ಞಾಮುದಗ್ನಂ ಹಲನುಂ ಹೇರಂಬನುಂ ಖಂಡಪರಶುವೆನಿಕುಂ" (ನಾನಾರ. ೧೬೬). [ಸಂ.]

**ಖಂಡಪ್ರಾಸ** (ನಾ). [ಛಂದ] ಒಂದು ಬಗೆಯ ಪ್ರಾಸ; ಆದಿಪ್ರಾಸ: ಪೂರ್ವಾಚಾರ್ಯರ್ ದೇಸಿಯನೆ ನಿಜಿಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ (ಕವಿರಾ. ೧–೭೪). [ಖಂಡ + ಪ್ರಾಸ]

**ಖಂಡಭಂಡ** (ನಾ). ರಾಶಿರಾಶಿಯಾದ ಸರಕು ; ಸಾಮಗ್ರಿ : ಜಂಬೂ ದ್ವೀಪದ ವ್ಯವಹಾರಿ ಖಂಡಭಂಡವ ತುಂಬಿ ಕುಂಭಿನಿಯುದರದ ಮೇಲೆ ಪಸರವನಿಕ್ಕಿದ (ಅವಜಂ. ೫–೧೮). [ಖಂಡ + ಭಂಡ]

**ಖಂಡಮಂಡಲ** (ನಾ). ೧. ವೃತ್ತದ ಭಾಗ, —ತುಂಡು. ೨. ಅಪೂರ್ಣವಾದ ವೃತ್ತ ; ಅರ್ಧವೃತ್ತ. ೩. ತುಂಡುತುಂಡಾದುದು ; ಚೂರುಚೂರು ; ಅಸಮಗ್ರವಾದುದು : ಚಿತ್ತೆ ಮಳೆ ಖಂಡ ಮಂಡಲ ಆಗಿದೆ (ರೂಢಿ). [ಖಂಡ + ಮಂಡಲ]

**ಖಂಡಮೇಘ** (ನಾ). ಮೇಘದ ತುಂಡು ; ತುಂಡು ಮೋಡ : ನೀಲಾಂಬರ ಸಂಚಾರಿಯಾದ ಬಿಳುಪಾದ ಖಂಡಮೇಘವು ಮೆಲ್ಲ ಮೆಲ್ಲನೆ ಹರಿದುಹೋಗುತ್ತಿದ್ದಿತು (ಕಪಾಕುಂ. ೯೯).

[ಖಂಡ + ಮೇಘ]

**ಖಂಡರಿಸು** 'ಕಂಡರಿಸು' ನೋ.

**ಖಂಡಲಡ್ಡುಗೆ** (ನಾ). ಚಪಾತಿಯನ್ನು ಚೂರುಗಳಾಗಿ ಮಾಡಿ ಖರ್ಜೂರ, ದ್ರಾಕ್ಷೆ, ಸಕ್ಕರೆಯ ನೀರು, ನಾಗಕೇಸರ, ಲವಂಗ, ಏಲಕ್ಕಿ ಮೊದಲಾದುವನ್ನು ಬೆರಸಿ ಕಟ್ಟಿದ ಲಡ್ಡುಗೆ; ಮಾಲದಿ ಉಂಡೆ ; ಮೋಹನ ಲಾಡು (ಕರಾ) : ಅರೆದಿಂಬಾಗಿರೆ ಬೆಂದ ಪೋಟಿಗೆಗಳಂ ತಚ್ಚೂರ್ಣಪಂಚಾಂಶಮಾಗಿರೆ ಖರ್ಜೂರಮನಲ್ಲದಂದೆಜದ ಪಣ್ಣಂ ದ್ರಾಕ್ಷೆಯಂ ಮತ್ತೆ ಶರ್ಕರೆಯಂ ಪೊಯ್ದು ಸಿತಾಂಬುವಿಂ ನೆಗಪಿ ಚಾತುರ್ಜಾತಕಂಗೂಡಿ ಕಪ್ಪುರದಿಂ ವೇಧಿಸಿ ಖಂಡಲಡ್ಡುಗೆಗಳಂ ಮಾಟ್ಕೆಂದುಮಿಾ ಮಾಟ್ಕೆಯಿಂ (ಲೋಕೋಪ. ೮–೧೪).

[ಖಂಡ + ಲಡ್ಡುಗೆ]

**ಖಂಡವಿಧು** (ನಾ). = ಖಂಡಚಂದ್ರ : ಕುರಂಗಲೋಚನೆ ಖಂಡವಿಧು ನಿಟಿಲೆ (ನವಮೋ. ೧೧–೪). [ಖಂಡ + ವಿಧು]

**ಖಂಡವಿಸ್ತಾರ** (ನಾ). ಅಡ್ಡಕೊಯ್ತದ ವಿಸ್ತೀರ್ಣ : ಹೀಗೆ ಒಂದು ಭಾಗವು ಇನ್ನೊಂದರ ಮೇಲೆ ಪ್ರಯೋಗಿಸುವ ಬಲವನ್ನು ಆ ಭಾಗದ ಖಂಡವಿಸ್ತಾರದಿಂದ (Area of cross section) ಭಾಗಿಸಿದರೆ ಬರುವ ಲಬ್ಧಕ್ಕೆ ಪ್ರಯತ್ನವೆಂದು ಹೆಸರು (ಭೌತವಿ. ೧೦೬).

[ಖಂಡ + ವಿಸ್ತಾರ]

**ಖಂಡವೀಣೆ** (ನಾ). ಒಂದು ಬಗೆಯ ವೀಣೆ: ವೇದಗಳಲ್ಲಿ ವೀಣೆ, ನೂರುತಂತಿಗಳಿದ್ದ ವಾಣಾ, ಖಂಡವೀಣೆ . . . ಆಡಂಬರ ಮುಂತಾದ ವಾದ್ಯಗಳ ಉಲ್ಲೇಖವಿದೆ (ಭಾರದ. ೫೩೭). [ಖಂಡ + ವೀಣೆ]

**ಖಂಡವೃದ್ಧ** (ನಾ). [ಸಂಗೀತ] ನೂರೆಂಟು ತಾಳಗಳಲ್ಲಿ ಒಂದು : ಚಂಚತ್ಪುಟ . . . ಖಂಡವೃದ್ಧ, ಉಪವೃದ್ಧ, ಸುಭದ್ರ . . . ಜಯಾಳಮೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮).

[ಖಂಡ + ವೃದ್ಧ]

**ಖಂಡಶರ್ಕರೆ** (ನಾ). ಕಲ್ಲುಸಕ್ಕರೆ. [ಸಂ. ಖಂಡಶರ್ಕರಾ]

**ಖಂಡಶಶಧರ** (ನಾ). = ಖಂಡಚಂದ್ರ : ಖಂಡಶಶಧರಕಲಿತ ಮೌಳಿಗೆ ಖಂಡಪರಶುಗೆ . . . ಸಮರ್ಪಣಂಗೆಯ್ದು (ಬಸವು. ೫೮–೬೭).

[ಖಂಡ + ಶಶಧರ]

**ಖಂಡಶಶಿ** (ನಾ). = ಖಂಡಚಂದ್ರ : ಮೌಕ್ತಿಕದ ಸೂಸಕಂ ಗಗನದೊಳು ಖಂಡಶಶಿಯೆಡೆಗೆ ನಕ್ಷತ್ರವಾ ಜಡೆಯೆಡೆಗೆ ಮಲ್ಲಿಗೆಯ ದಂಡೆ (ವೀಶೈವು. ೫–೮–೧). [ಖಂಡ + ಶಶಿ]

**ಖಂಡಶಶಿಶೇಖರ** (ನಾ). ಖಂಡಶಶಿಯನ್ನು ತಲೆಯಲ್ಲಿ ಉಳ್ಳವನು; ಶಿವ : ಖಂಡಶಶಿಶೇಖರನ ಲಾಂಛನ ಮಂಡಿತರನೊಲವಿಂದ ಗೌರಿಯ ಗಂಡನೆಂದೇ ನಂಬು (ಬಸವು. ೪–೬೨). [ಖಂಡಶಶಿ + ಶೇಖರ]

**ಖಂಡಸಕ್ಕರೆ** 'ಕಂಡಸಕ್ಕರೆ' ನೋ.

**ಖಂಡಸೂಚಿ** (ನಾ). [ನಾಟ್ಯ] ಇಪ್ಪತ್ತುಮೂರು ದೇಶೀಯ ಸ್ಥಾನಗಳಲ್ಲಿ ಒಂದು. ℙ ಒಂದು ಕಾಲನ್ನು ಕುಂಚಿತ ಮಾಡಿ ಇನ್ನೊಂದು ಕಾಲಿನ ತೊಡೆ ಮತ್ತು ಹಿಮ್ಮಡಿ ಇವೆರಡನ್ನೂ ನೆಲದ ಮೇಲಿಟ್ಟು ಅಡ್ಡಲಾಗಿ ಪ್ರಸರಿಸುವುದು : ಚರಣಂ ಕುಂಚಿತಪಾದದಿಸಿರೆ ಮತ್ತೊಂದವನಿಯಲ್ಲಿ ಪತ್ತಿದ ತೊಡೆ ಮಡಮಿರುತಡ್ಡಮಾಗಿ ಪಸರಿಸೆ ತರುಣೀ ಕೇಳ್ ಖಂಡಸೂಚಿತಾಣಮೆನಿಕ್ಕುಂ (ಲಾಸ್ಯರಂ. ೬–೪೪).

[ಖಂಡ + ಸೂಚಿ]

**ಖಂಡಸ್ಫುಟಿತ** (ಗು). ೧. ಅಲ್ಪಸ್ವಲ್ಪ ಮುರಿದ, —ಒಡೆದ. (ನಾ). ೨. ಅಲ್ಪಸ್ವಲ್ಪ ಮುರಿದುದು, —ಒಡೆದುದು : ದೇವರ ನಿವೇದ್ಯಕ್ಕಂ ಖಂಡಸ್ಫುಟಿತ ಜೀರ್ಣ್ನೋದ್ಧಾರಕ್ಕಂ (ಎಕ. VII, ಶಿಕಾರಿ. ೧೨೫–೨೭ ; 1019) ; ನಗರೇಶ್ವರ ದೇವರ ಭೋಗಕ್ಕಂ ಖಣ್ಡಸ್ಫುಟಿತಕ್ಕಂ (ಸೌಇಇ. XX, ೨೧–೫೫ ; 1019) ; ದೇಗುಲದ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ (ಕಇಅ. ೨೨–೭–೩೨; 1083). [ಖಂಡ + ಸ್ಫುಟಿತ]

**ಖಂಡಸ್ವಪ್ನ** (ನಾ). ತುಂಡು ತುಂಡಾದ ಕನಸು : ರೂಪಾ ರಾತ್ರಿಯಲ್ಲಿ ಅನೇಕ ಖಂಡಸ್ವಪ್ನಗಳನ್ನು ಕಂಡು ಬಹಳ ಸಾರೆ ಬಡಬಡಿಸಿದಳು (ಜಯಂತ. ೪೦೮). [ಖಂಡ + ಸ್ವಪ್ನ]

**ಖಂಡಾನ** (ನಾ). ಖಂಡಿಸುವವನು : "ಖಂಡಿತಃ, ಖಂಡಕಃ, ಖಂಡಾನಃ ಈ ೩ ಖಂಡಿಸುವಂ" (ಕಾಶಕ್ಯ. ೧೦೨). [ಸಂ.]

**ಖಂಡಾಭ್ರಕ** (ನಾ). [ಕಾಮಶಾ] ಎಂಟು ಬಗೆಯ ದಂತಕ್ಷತಗಳಲ್ಲಿ ಒಂದು : ರಾಗೋಪಗೂಢ . . . ಖಂಡಾಭ್ರಕ, ಮಂಡಲಾಕೃತಿ, ಕ್ರೋಧಚರ್ವಿತ, ವರಾಹಚರ್ವಿತಮೆಂಬಪ್ಪವಿಧ ರದನಕ್ಷತ ಲಾಕ್ಷಣಿಕರಿಂ (ವಿವೇಕ. ೨೨೯). [ಸಂ.]

**ಖಂಡಿ$_1$** 'ಕಂಡಿ$_1$' ನೋ.

**ಖಂಡಿ$_2$, ಕಂಡಿ$_2$** (ನಾ). ೧. ಒಂದು ಬಗೆಯ ತೂಕ : ನೂಱೆರಡು ಖಂಡಿ ಭತ್ತವ . . . ಕೊಟ್ಟು ತೆಗೆದು ಅಳೆಯಲ್ (ವ್ಯವಹಾ. ೨೧ ಅನು.); ಅವರ ತೋಟದಲ್ಲಿ ಅರುವತ್ತು ಖಂಡಿ ಅಡಿಕೆ ಬೆಳೆಯುತ್ತಿತ್ತು (ಈಕಥೆ. ೬೦); ೨೮ ಮಣಕ್ಕೆ ಒಂದು ಖಂಡಿ ಎಂತ ಹಿಡಿದು ಖಂಡಿ ಒಂದಕ್ಕೆ ಹತ್ತು ಆಣೆಯಂತೆ ತೆಗೆದುಕೊಂಡೇವು (ಮುಂಬವ್ಯಾ. ೯); ಮಣವಿಲ್ಲದೆ ಖಂಡಿಯಿಲ್ಲ, ಹಣವಿಲ್ಲದೆ ವರಹವಿಲ್ಲ (ಗಾದೆ). ೨. ಒಂದು ಖಂಡಿಯಷ್ಟು ಬೀಜವರಿಯುಳ್ಳ ಭೂಮಿ : ಕೊಡಿಗೆಯಿಂದ ಸಾಹಬೀಜವಂ ಖಂಡಿ ೩೦ (ಎಕ. VI, ಕೊಪ್ಪ. ೨೧–೫ ; 1509). **ಕಂಡಿ$_2$** : ೧. (ರೈಸ್‌ಗ. ೫೫೨). ೩. ಹತ್ತುಸಾವಿರಚದರ ತರಿಭೂಮಿ : (ರೈಸ್‌ಗ. ೫೫೨). [ದೇ ?. ‖ ತಮಿ. ಮಲ. ಕಣ್ಡಿ ; ತುಳು. ತೆಲು. ಖಂಡಿ. / ಮರಾ. ಖಂಡೀ]

**ಖಂಡಿಕ$_1$** (ನಾ). ೧. ಬಟ್ಟಗಡಲೆ; ಬಟಾಣಿ: "ಕಳಾಯಃ, ಖಂಡಿಕಃ, ಸಾತೀನಃ – ಈ ೩ ಬಟ್ಟಗಡಲೆ" (ಹಲಾಯು. ೯೫–೪೨೮). ೨. ಕಡಲೆ; ಚಣಕ : "ಚಣಂಗಿ ಖಂಡಿಕಮೆನಲು ಕಡಲೆ" (ಮಂಗರಾ. ೧೧೧–೪). ೩. ನೆಲಗಡಲೆ; ಸೇಂಗಾ. ೪. ಗ್ರಂಥವನ್ನು ಭಾಗಭಾಗವಾಗಿ ಓದುವುದು, —ಪಠಿಸುವುದು : ಋಗ್ವೇದ ಬಾಲಶಿಕ್ಷೆಯ ಖಣ್ಡಿಕ ಯಜುರ್ವೇದ ಬಾಲಶಿಕ್ಷೆಯ ಖಣ್ಡಿಕ ಅಂತಾಯೆರಡು ಖಣ್ಡಿಕ ನಡವನ್ನಾಗಿಯಶೇಷಮಹಾಜನಂ . . . ಕೊಟ್ಟ ಲೊಕ್ಕಿ ಗದ್ಯಾಣಂ ನೂಱಿಪ್ಪತ್ತು (ಎಇ. XIII, ೪೯–೮೨ ; 1117) ; ಖಣ್ಡಿಕಕ್ಕೆ ಬಿಟ್ಟ ಕಮ್ಮರ್ಣ್ಣಗೇರಿಯ ಎರೆಯ ಹಸಲು . . . ಈ ಖಣ್ಡಿಕಮಂ ವರ್ಷಕ್ಕೊಬ್ಬರ್ರೆ ಪೇಳ್ವುದು (ಸೌಇಇ. XI-ii, ೨೦೩–೨೪ ; 1122); ರುಗ್ವೇದದ ಬಾಲಶಿಕ್ಷೆಯ ಖಣ್ಡಿಕದಲ್ಲಿ ಸ್ವಾಧ್ಯಾಯಂಗೆಯ್ವ ಮಾಣಿಯರ ಗ್ರಾಸಕ್ಕೆ (ಸೌಇಇ. XI-ii, ೧೭೩–೫೪ ; 1124). 'ಖಂಡಿಕೋಪಾಧ್ಯಾಯ' ಪರಾ. ೫. ಗ್ರಂಥವನ್ನು ಭಾಗಭಾಗವಾಗಿ ಪಠನಮಾಡುವ ವಿದ್ಯಾರ್ಥಿ. ೬. ವೇದ ಮೊದಲಾದುವನ್ನು ಕಲಿಸುವ ಗುರುಗಳಿಗೆ ಕೊಡುವ ಸಂಭಾವನೆ, —ದತ್ತಿ : ಮಹಾಜನಂಗಳು ತಾಉ ಶ್ರೋತ್ರಿಯ ಹೊಂನನು ತೆತ್ತು ಮಾಂನ್ಯವಾಗಿ ಖಂಡಿಕವಾಗಿ ಕೊಟ್ಟ (ಸೌಇಇ. IX-ii, ೪೪೦–೩೨ ; 1419); ಗದ್ದೆ ಕಮ್ಮ ಹದಿನೆಂಟು ೧೮ ಖಂಡಿಕಕ್ಕೆ (ಇಎ. ೧೯೪೭, ಹಾನಗಲ್. ೨೨೯–೨೪ ; ?); ಖಂಡಿಕ ಎನ್ನುವುದು ವಿದ್ಯೆಗಾಗಿ ಬಿಟ್ಟುಕೊಟ್ಟ ದತ್ತಿ (ಕಶಾಅ. ೨೧೩). ಖಂಡಿಕದುಪಾಧ್ಯಾಯ = ಖಂಡಿಕೋಪಾಧ್ಯಾಯ : ಕಂನಡಕ್ಷರ ಸಿಕ್ಷೆ ಘಳಿಯಾರವಾಱುಂ ಖಂಡಿಕದುಪಾಧ್ಯಾಯಚ್ಛಾತ್ರರ ಗ್ರಾಸವಸ್ತ್ರಕ್ಕಂ ಸತ್ರಕ್ಕಂ (ಎಕ. VII, ಶಿಕಾರಿ. ೧೮೫–೫೬ ; 1158). [ಸಂ.]

**ಖಂಡಿಕ$_2$** (ನಾ). = ಖಂಡಿ$_2$ ೨ : ಖಂಡಿಕ ಒಳಗೆ ನಮಗೆ ಉಳ ಭೂಮಿ ಬೀಜವರಿ ಖಂಡುಗಕ್ಕೆ ನಿಂಮ ಕೈಯಲೂ ಯಿಸಿಕೊಂಡ ಕ್ರಯ (ಎಕ. VIII, ತೀರ್ಥಹ. ೩೨–೪೧ ; 1418). [ಖಂಡಿ$_2$ + -ಕ ?]

**ಖಂಡಿಕವಿದ್ಯಾರ್ಥಿ** (ನಾ). = ಖಂಡಿಕ$_1$ ೫ : ವೇದಗಳನ್ನು ಭಾಗಭಾಗವಾಗಿ ಅಧ್ಯಯನಮಾಡುವ . . . ವಿದ್ಯಾರ್ಥಿಯನ್ನು ಖಂಡಿಕವಿದ್ಯಾರ್ಥಿಯೆಂದೂ ಶಾಸನಗಳು ಕರೆದಿರುವಂತಿದೆ (ಕಶಾಅ. ೨೩೫). [ಖಂಡಿಕ$_1$ + ವಿದ್ಯಾರ್ಥಿ]

**ಖಂಡಿಕೆ$_1$** (ನಾ). = ಖಂಡಿಕ$_1$ ೪ : ಈ ಖಣ್ಡಿಕೆಯ ಸ್ಥಾನಿಕರು ಪೇಳ್ವುದು ಪರಸ್ಥಾನದವರಿಗಿಲ್ಲ (ಸೌಇಇ. IX-i, ೨೦೩–೩೦ ; 1122). [< ಸಂ. ಖಂಡಿಕ]

**ಖಂಡಿಕೆ$_2$** (ನಾ). ನಿಖರವಾದ ಆದಾಯ; ಲಾಭ (?) : ಲಾಭಜಮೆಂತೆನೆ ಅವನಾನೊರ್ವ ವ್ಯವಹಾರಿದಪ್ಪ ಭಂಡಮಂ ಕೊಂಡ ಅದ ಮಾಱಲು ಪೂರ್ಘ ಖಂಡಿಕೆಯಾದಾಗ ಮಾಱುಮೆಂದು ಮಾಣಿಸಲು ಅರ್ಘ್ಯಂ ಪೆರ್ಚುವುದುಂ . . . ಪಿರಿದು ಲಾಭಮಂ ಪಡೆವೆನೆಂದು ಚಿಂತಿಸುತಿರ್ಪಂ (ಶ್ರಾವಕಾ. ೮೯–೬). [?]

**ಖಂಡಿಕೋಪಾಧ್ಯಾಯ** (ನಾ). ವೇದ ಮೊದಲಾದುವುಗಳನ್ನು ಭಾಗಭಾಗವಾಗಿ ಅಧ್ಯಯನ ಮಾಡಿಸುವ ಉಪಾಧ್ಯಾಯ, —ಗುರು : ವೇದಗಳನ್ನು ಭಾಗಭಾಗವಾಗಿ ಅಧ್ಯಯನ ಮಾಡುವುದನ್ನು ವೇದಖಂಡಿಕವೆಂದೂ, ಪಾಠಹೇಳುವ ಉಪಾಧ್ಯಾಯನನ್ನು ಖಂಡಿಕೋಪಾಧ್ಯಾಯನೆಂದೂ, ವಿದ್ಯಾರ್ಥಿಯನ್ನು ಖಂಡಿಕವಿದ್ಯಾರ್ಥಿಯೆಂದೂ ಶಾಸನಗಳು ಕರೆದಿರುವಂತಿದೆ (ಕಶಾಅ. ೨೩೧). [ಖಂಡಿಕ$_1$ + ಉಪಾಧ್ಯಾಯ]

**ಖಂಡಿಗಳೆ** (ಕ್ರಿ). ಕತ್ತರಿಸಿ ಹೋಗಲಾಡಿಸು; ಭೇದಿಸು (?) : ಅಂಬಲವ ನೀ ಖಂಡಿಗಳೆ ಮೋಹರ ಸಹಿತ ಬಹೆನು (ಕುವ್ಯಾದ್ರೋ. ೪–೪೬); ರಿಪುಜಾಲವನು ನೀ ಖಂಡಿಗಳೆ ಬಹೆವಾವು ಬಳಿಸಲಿಸಿ (ಕುವ್ಯಾದ್ರೋ. ೮–೨೭). [ಖಂಡಿ$_1$ (< ಕಂಡಿ$_1$) + ಕಳೆ$_1$]

**ಖಂಡಿತ$_1$** (ಗು). ೧. ಕತ್ತರಿಸಿದ; ಒಡೆಯಲ್ಪಟ್ಟ : ನನೆದ ಜಾಜಿನ ಗಿರಿಯೊ ಭೀಮನ ತನುವೊ ಖಂಡಿತ ರಕ್ತಚಂದನ ಬನವೊ ರಥವೋ ತಳಿತಶೋಕೆಯ ಮರನೊ ಸಾರಥಿಯೊ (ಕುವ್ಯಾಕ. ೩–೨೬). ೨. ವಿರೋಧಿಸಲ್ಪಟ್ಟ; ಪ್ರತಿಭಟಿಸಿದ : ಚಂಡಾಹಿ ತುಂಡ ಖಂಡಿತ ಪುಂಡರೀಕಾಕ್ಷ ವದನ ವಿನ್ಯಸ್ತ ನಿರಸ್ತ ತರಳತಾರನೇತ್ರರುಂ (ಜಗವಿ. ೩–೯೪ ವ). ೩. ನಾಶಮಾಡಲ್ಪಟ್ಟ ; ಹಾಳಾದ. ೪. ನಿಶ್ಚಿತವಾದ; ನಿಖರವಾದ. 'ಖಂಡಿತೋಕ್ತಿ' ಪರಾ. (ನಾ). ೫. ಖಂಡಿಸುವವನು; ವಿರೋಧಿಸುವವನು : "ಖಂಡಿತಃ, ಖಂಡಕಃ, ಖಂಡಾನಃ – ಈ ೩ ಖಂಡಿಸುವಂ" (ಕಾಶಕ್ಯ. ೧೦೨). ೬. ಅಸಮಗ್ರತೆ; ಅಸಂಪೂರ್ಣತೆ : ಖಂಡಿತವಿಲ್ಲಾಗಿ ಸರ್ವಾಂಗವೆಲ್ಲವೂ ಜಿಹ್ವೆಯಾಯಿತ್ತು (ಅವಚಂ. ೧೭೨–೭೭೬). ೭. ನ್ಯೂನತೆಯುಳ್ಳವನು; ಅಸಂಪೂರ್ಣ : ಮಾಡುವ ಭಕ್ತನಲ್ಲಿ ಕೂಡಿರ್ಪ ಜಂಗಮವು ಕೋಡಿಗಳೆವುತ್ತಿಪ್ಪರೊಬ್ಬರನೊಬ್ಬರು ತಮ್ಮ ತಮ್ಮವರ ತಾವಱಿಯದ ಖಂಡಿತರು (ಅವಚಂ. ೨೫೮–೧೧೭೩); ಲಿಂಗ ಒಂದು ಸ್ಥಲ ಒಂದೆಂಬುದು ಖಂಡಿತನ ಗುಣ (ಮೋಳಿಮಾ. ೧೪೯–೫೬೪). ೮. ಕಚ್ಚಿದ ಗಾಯ : ನಾಲ್ಕು ಹಲ್ಲು ನಟ್ಟ ಘಾಯ ಖಂಡಿತಮೆನಿಸಿಕೊಂಬುದು (ವಿಷಚಿ. ೮–೫). ೯. ಅರ್ಧಿಸುವುದು; ಅರ್ಧಿಸಿದುದು : "ದಳಿತ, ಅರ್ಧಿತ . . . ಖಂಡಿತ ಇಂತಿನಿತುಂ ಅರ್ಧಿಸೋಹಕ್ಕೆ ಹೆಸರು" (ವ್ಯವಹಾ. ೧೧). [ಸಂ.]

**ಖಂಡಿತ₂** (ಅ). ೧. ನಿಶ್ಚಿತವಾಗಿ; ನಿಖರವಾಗಿ; ನಿರ್ಧಾರವಾಗಿ: ಒಂದು ಬಾರಿ ಖಂಡಿತ ನಮ್ಮೂರಿಗೆ ಬಾ (ಅವತಂ. ೧); ಖಂಡಿತ ಹೇಳುವುದಿಲ್ಲ (ದೂಬಿಟ್ಟ. ೧೨೧). ೨. ನಿಜವಾಗಿ; ಸತ್ಯವಾಗಿ: ನೀನು ಖಂಡಿತ ಹೇಳು (ರೂಢಿ). [< ಖಂಡಿತ₁]

**ಖಂಡಿತಕಾಯಕ** (ನಾ). ದೃಢವಾದ ಕಾಯಕ; ನಿಜವಾದ ಕಾಯಕ (?): ಖಂಡಿತಕಾಯಕವನಂಗೀಕರಿಸಿದ ಭಕ್ತಂಗೆ ಮತ್ತೆ ಹೆಂಡತಿಮಕ್ಕಳು ಬಂಧುಗಳೆಂದು ಜಂಗಮಕ್ಕೆ ತಂದ ದ್ರವ್ಯವನವರಿಗಿಕ್ಕಿ ತಾನುಂಡನಾದರೆ . . . ಭಂಡಂಗೆ ಕಡೆ (ಮೋಳಿಮಾ. ೫೭–೨೪೦). [ಖಂಡಿತ₁ + ಕಾಯಕ]

**ಖಂಡಿತಕಾಲ** (ನಾ). ಕಾಲವನ್ನು ನಾಶಮಾಡಿದವನು: ಖಂಡಿತಕಾಲ ಮೃಕಂಡುಜ ಪಾಲಾಖಂಡಲಬಾಲಾಕಾಂಡದ ಲೀಲ (ಶಾಕುಂತ. ೧೧೬ ಅಡಿಟ). [ಖಂಡಿತ₁ + ಕಾಲ]

**ಖಂಡಿತಭರ್ತಾರಿಕೆ** (ನಾ). = ಖಂಡಿತೆ: ಗಂಡಂ ಪೆಱಳೊರ್ವಳೊಳಿರ್ದೆ ಗೊಂಡಿರೆ ವಲ್ಲಭನನನ್ಯೆಯಿಂ ಕೇಳ್ ಪಡೆದಾ ಪೆಂಡತಿ ಕಾಮನ ಮತದಿಂ ಖಂಡಿತಭರ್ತಾರಿಕಾಭಿಧಾನಮನಾಳ್ಗುಂ (ಶೃಂಗಾರ. ೩–೫೩). [< ಸಂ. ಖಂಡಿತಭರ್ತೃಕಾ]

**ಖಂಡಿತಮಯ** (ಗು). ೧. ಚೂರುಗಳಿಂದ ತುಂಬಿದ; ತುಂಡುಗಳಿಂದ ಕೂಡಿದ. (ನಾ). ೨. ಅಸಂಪೂರ್ಣನಾದವನು; ಪರಿಪೂರ್ಣನಲ್ಲದವನು: ಖಂಡಿತಜ್ಞಾನಿಗಳಾದ ಜೀವ ಪರಮರು ಅಹುದಲ್ಲವೆಂದು . . . ಖಂಡಿತಮಯರು (ಸಗಬೊ. ೧೭೭). [ಸಂ.]

**ಖಂಡಿತಮಾಡು** (ಕ್ರಿ). ೧. ನಿಶ್ಚಿತಮಾಡು; ಖಚಿತಗೊಳಿಸು: ಶತ್ರುಗಳಿಗೆ ಅನಿಷ್ಟವುಂಟಾಗಕೂಡದೆಂತಲೂ . . . ಖಂಡಿತಮಾಡಿಕೊಂಡಿದ್ದಳು (ದೇವೀಚಾ. ೧೪೧). ೨. [ವೀಶೈ] (ಪ್ರಸಾದವನ್ನು) ಪೂರ್ತಿಯಾಗಿ ಸೇವಿಸು: "ಖಂಡಿತಮಾಡು = ಊಟದ ಬಟ್ಟಲಲ್ಲಿನ ಪ್ರಸಾದವನ್ನು ಬಿಡದಂತೆ ಸೇವಿಸು" (ಶರಸಾ. ೨೪–೭). [ಖಂಡಿತ₂ + ಮಾಡು₁]

**ಖಂಡಿತರೂಪ** (ನಾ). [ತತ್ತ್ವಶಾ] ಮಾಯೆಯ ಪಂಚಲಕ್ಷಣಗಳಲ್ಲಿ ಒಂದು: ಅಸತ್ತು, ಜಡ, ದುಃಖ, ಅನಿತ್ಯ, ಖಂಡಿತಮೆಂಬವೇ ಮಾಯಾಪಂಚಕ ಲಕ್ಷಣಂಗಳು . . . ಕಾಲಪರಿಚ್ಛೇದಾಧಿಕವೇ ಖಂಡಿತರೂಪಮಕ್ಕುಂ (ವಿವೇಕ. ೨೮). [ಖಂಡಿತ₁ + ರೂಪ]

**ಖಂಡಿತವಾದಿ** (ನಾ). ೧. ಖಂಡತುಂಡವಾಗಿ ಮಾತನಾಡುವವನು; ಇದ್ದುದನ್ನು ಇದ್ದಂತೆ ನುಡಿಯುವವನು; ಖಂಡಿಸಿ ಮಾತನಾಡುವವನು: ಅವರು ತುಂಬ ಖಂಡಿತವಾದಿಗಳಾಗಿದ್ದರು . . . ಅಂಥ ಖಂಡಿತವಾದಿಗಳು ಹೇಗಿದ್ದರೂ ಅಪ್ರಿಯರಾಗಲೇಬೇಕು (ಬದುಜ. ೩೪); ಖಂಡಿತವಾದಿ ಲೋಕವಿರೋಧಿ (ಗಾದೆ). ೨. ರಾಜಕೀಯದಲ್ಲಿ ಉಗ್ರಗಾಮಿ; ಉಗ್ರಪಕ್ಷಕ್ಕೆ ಸೇರಿದವನು: ೧೯೦೭ರಲ್ಲಿ ಕಾಂಗ್ರೆಸ್ಸಿನ ಎರಡು ಶಾಖೆಗಳಲ್ಲಿ ಉಪಾಯವಾದಿಗಳು (Moderates) ಮತ್ತು ಖಂಡಿತವಾದಿಗಳ (Extremists)ಲ್ಲಿ ಭಿನ್ನತೆ ಈ ಬಗೆಯಾಗಿತ್ತು (ದಾದಾನ. ೧೫೯). [ಖಂಡಿತ₂ + ವಾದಿ]

**ಖಂಡಿತೆ** (ನಾ). [ಕಾವ್ಯಮೀ] ಎಂಟು ಬಗೆಯ ಕಥಾನಾಯಿಕೆಯರಲ್ಲಿ ಒಬ್ಬಳು. ℙ ಪರಸ್ತ್ರೀಯರಲ್ಲಿ ಪತಿಯು ಆಸಕ್ತನಾದುದನ್ನು ಕಂಡು ಅಸೂಯೆಯಿಂದ ಕೋಪಗೊಂಡವಳು: ಪ್ರಕಟಾಖ್ಯಂ ಸ್ವಾಧೀನ ಪತಿಕೆ ಖಂಡಿತೆ ವಿಪ್ರಲಂಭೆಯಭಿಸಾರಿಕೆ ವಾಸಕಸಜ್ಜಿಕೆ ಗತಭರ್ತಾರಿಕೆಯಭಿಸಂಧಿಕೆ ಸಮುತ್ಕೆಯೆಂದೆಂಟುತೆಱಂ (ಶೃಂಗಾರ. ೩–೪೯); ಸ್ವಾಧೀನ ಭರ್ತೃಕೆ ಖಂಡಿತೆ . . . ಕಲಹಾಂತರಿತೆಯೆಂಬ ಯೆಂಟುತೆಱದವಸ್ಥಾನಿ ಬದ್ಧರಾದ ಕಾಮಿನಿಯರಿಂ (ವಿವೇಕ. ೨೨೮). [ಸಂ. ಖಂಡಿತಾ]

**ಖಂಡಿತೋಕ್ತಿ** (ನಾ). ನಿಜವಾದ ಮಾತು; ಖಂಡತುಂಡವಾದ ಉಕ್ತಿ: ಶಕುಂತಲೆಯ ಋಜುಸ್ವಭಾವವನ್ನು ಕುರಿತು . . . ಋಷಿಪುತ್ರರ ಖಂಡಿತೋಕ್ತಿಗಳು, ಇವು ನಮ್ಮ ಅಭಿಮಾನವನ್ನು ಕೆರಳಿಸುತ್ತವೆ (ಭಾರದ. ೯೮೮). [ಖಂಡಿತ₂ + ಉಕ್ತಿ]

**ಖಂಡಿಸು** (ಕ್ರಿ). ೧. ಕತ್ತರಿಸು; ತುಂಡುಮಾಡು; ಛೇದಿಸು: ಎಮ್ಮೆಱಂಕೆಯಂ ಕುಲಿಶದಿನೊರ್ಮೆ ಖಂಡಿಸಿದಂ (ಕಾವ್ಯಸಾ. ೫೭೫ ಶೂದ್ರಕ); ಅತನ ಮುಂಗಯ್ ಧಾತ್ರಿಪಾಹನನ ಯೋಧನಿಂ ಚಕ್ರಪಾಣಿಯಿಂ ಖಂಡಿಸೆ (ವಡ್ಡಾರಾ. ೧೪೮–೪); ಅತನ ಕೋಲ ಖಂಡಿಸಿ ಧನುವ ಕಡಿದನು ಮೂಱುಬಾಣದಲಿ (ಕುವ್ಯಾದ್ರೋ. ೧೩–೪೦); ಪೆರ್ಗುಱುಗೋಲುಗಳಿಂದಲಡೆಗಿಕ್ಕಿ ಖಂಡಿಸುವರು ಕಬ್ಬುಗಳನು (ಮೋಹತ. ೨–೪೯). ೨. ಹೋಗಲಾಡಿಸು; ಕಳೆ; ನಿವಾರಿಸು: ಚಂಡಹೃದಯನ ನುಡಿಯ ವಿಷವನು ಖಂಡಿಸಿದೆಲಾ (ಕುವ್ಯಾಅ. ೬೧೩. ೧೭–೪೧); ಬೆಸುವ ಮೇಘದ ಕಾಳಕೆಯು ಖಂಡಿಸುವ ಮಿಂಚಿನ ಸಂಚರದ (ತೊರರಾ. ೪–೬–೬); ಕಂಡರೆ ಹೊಱಗೆಲ್ಲವಿಹುದೊಳಗೆಲ್ಲವ ಖಂಡಿಸಿದಾಚಾರ್ಯನವನು (ಭರಚ. ೮–೧೧೧); ವರತಪದಿಂದಘವನು ಖಂಡಿಸಿ (ಜೀವಂಸಾಂ. ೫–೭೪). ೩. ಸರಿಯಲ್ಲವೆಂದು ಹೇಳು; ತಪ್ಪೆಂದು ಸಾಧಿಸು: ಮತಿಗೆಟ್ಟ ಇಪ್ಪತ್ತೊಂದು ಮತವ ಖಂಡಿಸಿ (ಪುರಂದ. ೧–೨೦೦–೩); ವೇದಗಳನ್ನೂ ದೇವರನ್ನೂ ಬುದ್ಧನು ನಿರ್ದಾಕ್ಷಿಣ್ಯವಾಗಿ ಖಂಡಿಸಿ ತನ್ನ ಬುದ್ಧಿವಾದವನ್ನೇ . . . ಮಂಡಿಸತೊಡಗಿದನು (ಭಾರದ. ೧೨೦). ೪. ನಿಂದಿಸು; ಬಯ್ಯು; ಧಿಕ್ಕರಿಸು; ಕಡೆಗಣಿಸು: ಮಂಡೂಕಂ . . . ಪಱಿಗುಮುಬ್ಬಿಗದು ಭಂಗಮೆ ಪೇೞ್ ಖಂಡಿಸೆ ಕುಕವಿಸಮೂಹಂ ಪಂಡಿತರಪ್ಪವರ್ಗೆ ಭಂಗಮಕ್ಕುಮೆ ಜಗದೊಳ್ (ಧರ್ಮಾಮೃ. ೧–೪೪); ಈಶ್ವರರಾಯರು ಅನೇಕ ಬಾರಿ ಗೌರಮ್ಮನನ್ನೂ ಖಂಡಿಸಿದ್ದರು (ಕಲಾಸಾ. ೨೭). [ಖಂಡನ + –ಇಸು₃]

**ಖಂಡು₁** 'ಕಂಡ₁' ನೋ.

**ಖಂಡು₂** (ನಾ). (ಉಕ) ಗುತ್ತಿಗೆ: ನಮ್ಮ ಹೊಲವನ್ನು ಖಂಡು ಕೊಟ್ಟಿದ್ದೇನೆ (ರೂಢಿ). [← ಮರಾ. ಖಂಡಣೀ]

**ಖಂಡುಕೆ** 'ಖಂಡುಗ' ನೋ.

**ಖಂಡುಗ**, ಕಂಡಗೆ, ಕಂಡುಕ, ಕಂಡುಗ, ಖಂಡುಕ (ನಾ). ೧. ಒಂದು ಬಗೆಯ ಅಳತೆ: ಪನ್ನಿರ್ಖಣ್ಡುಗಂ ಭತ್ತಮುಂ (ಎಕ. IV, ಹೆಗ್ಗಡ. ೪–೨೩; 750); ಮೇಂಟಿ ಖಣ್ಡುಗ ದೇವಗ್ಗೆ (ಸೌಇ. IX–i, ೨೨–೪೦; 897); ಪಿಂಡಿಯಂ ಬಿಡಿಸಪೋದ ಮರುಳ್ ಖಂಡುಗೆಣ್ಣೆಯನಾಂತು ಬಂದುದು (ಧರ್ಮಾಮೃ. ೫–೮೨); ಅ ಕೆಱೆಯ ಕೆಳಗಿಹ ಗದ್ದೆಯಲ್ಲಿ ಬೀಜವರಿ ಖಂಡುಗ ಗದ್ದೆ (ಎಕ. IX, ಚನ್ನಪ. ೧೬೯–೧೨; 1416). **ಕಂಡಗೆ**: ೨. ಕೊಯ್ಲು; ಕಟಾವು: ಅಱುವತ್ತೊಕ್ಕಲು ಕೊಟ್ಟ ತಾಱಿನ ಕಂಡಗೆಯೆಲೆ ಕೊಯಲಾಳಿ ಕೊಯ್ದು ಕುಡುವರು (ಕಇ. I, ೩೦–೪೮; 1223); ಧರೆಗೆಸೆವ ಪಂಚಲಿಂಗನ ಚರಣಾಬ್ಜ ವರಪ್ರಸಾದತೋಟಗರಿತ್ತ ವರ್ಷಂಪ್ರತಿ ಕಂಡಗೆಯಂ ಸ್ಥಿರತರ ತಾಱಿಂಗೆ ರಂಗಭೋಗಕ್ಕೆಂದುಂ (ಕಇ. I, ೩೦–೩೭; 1224). **ಕಂಡುಕ**: ೧. ಸಪ್ತ ಕಣ್ಡುಕಾವಾಪ ಮಾತ್ರಂ ಕ್ಷೇತ್ರಮ್ (ಮೈಆರಿ. ೧೯೩೪, ೧–೨೬; 570); ಪಾರ್ವ್ವರೊದೊಳ್ ಸತ್ತಾನ್ ಪೆರಾಣ್ಕೋವನ್ ಕಣ್ಡುಕದಾವೆದೆ ಕಟನಿ ನೆತ್ತರ್ಪ್ಪಟ್ಟ (ಎಕ. X (S), ಶ್ರೀನಿವಾ. ೧೧೬–೫; 700). **ಕಂಡುಗ**: ೧. ಕಟು ಕಣ್ಚೇಶ್ವಂಕು ಪೊಯ್ತುಮಮ್ಮೆಂತ ಕಟನಿ ಕಣ್ಡುಗಂ ಎಟ್ತು (ಎಕ. X, ಕೋಲಾರ. ೬–೪; 753); ಮೂಸಾಸಿರಗಂಡುಗ ಬತ್ತಮುಮಂ (ವಡ್ಡಾರಾ. ೨೨–೩); ಬಡಗಣ ಮಣ್ಣು ಮೊಳೆವೆಡೆ ಏಟ್ಕಣ್ಡುಗಂ . . . ಮೂಗಣ್ಡುಗಂ (ಎಕ. IV, ಎಳಂದೂ. ೨೫–೪; 925).

೩. ಹೆಚ್ಚು; ಬಹಳ: ಕಂಡುಗ ಹಾಲಿನೊಳಗೊಂದು ಇದ್ದಲಿ ಇರ್ದಡೇನು (ಚನ್ನವ. ಕ. ೩೫-೭೭); ಕಂಡುಗ ಹಾಲಿಗೆ ಒಂದೇ ಬೊಟ್ಟು ಹೆಪ್ಪು (ಗಾದೆ). **ಖಂಡುಕ:** ೧. ತಟಾಕಸ್ಯಾಧಸ್ತಾತ್ ಷಟ್ಖಂಡು ಕಾವಾಷಂ (ಎಕ. XVI, ತುಮಕೂ. ೭೮-೭ ; 400).

**ಕಂಡುಗಮಂ ಬಳ್ಳದೊಳಳೆ** = (ಆಲಂ) ಕೆಲಸ ದೊಡ್ಡದಿದ್ದರೂ ಸಂಕ್ಷಿಪ್ತವಾಗಿ ಮಾಡಿ ಮುಗಿಸು; ಸಂಕ್ಷೇಪವಾಗಿ ಹೇಳು; ಸಂಗ್ರಹವಾಗಿ ಹೇಳು: ಅಗಸ್ತ್ಯಂ ನಿಜಶಿಷ್ಯಂಬೆರಸಯೋಧ್ಯೆಗೈತರ್ಪ ಪದದೊಳ್ ಬಣ್ಣಿಸಿ ಪೇಟ್ದ ನುಡಿಗಳಿವು. ಅದನೆ ಕಂಡುಗಮಂ ಬಳ್ಳದೊಳಳೆದೆನ್ನೆಸೆ (ರಾಮಾಶ್ವ. ೧೦-೮). [← ಪ್ರಾ. ಖಂಡಿಅ]

**ಖಂಡುಗವೆದೆ** (ನಾ). ಒಂದು ಖಂಡುಗ ಬೀಜವರಿಯ ಗದ್ದೆ: ಗೊರವಗಟ್ಟದ ಕೆಳಗೆ ಖಂಡುಗವೆದೆಯ ಗದ್ದೆಯಿಂತಿನಿತುಮಂ ಬಿಟ್ಟರು (ಸೌಇಇ. IX-i, ೨೯೧-೨೨ ; 11ನೆಯ ಶತ). [ಖಂಡುಗ + ಬೆದ್ದೆ$_2$]

**ಖಂಡುತುಂಡು** 'ಖಂಡತುಂಡು' ನೋ.

**ಖಂಡೆ, ಕಂಡೆ** (ನಾ). ನೇರವಾದ ಅಲಗುಳ್ಳ ಕಿರುಗತ್ತಿ; ಖಡ್ಗ: ಖಂಡೆ ಮುದ್ಗರ ಕೊಂತವಿಡಿದಾಱುಕ್ಷೋಣಿಯುರ್ದಂಡ ರಥವು (ದೇವಾಂಪು. ೪-೧೩); ಖಂಡೆದ ಸಾಧನೆಯು ಅದರ ಭೇದಗಳನ್ನು ಖಡ್ಗಶಾಸ್ತ್ರ ಪ್ರಕಾರದಿಂದ ಹೇಳುತ್ತೇನೆ (ಖಡ್ಗಟೀ. ೪-೫೧); ಶೂರರೂ, ಬಂಟರೂ, ಸಮರಶಕ್ತ - ಖಂಡೆಯನ್ನೇ ಪೂಜಿಸುತ್ತಿದ್ದಾರೆ (ಕತೆಗಾ. ೧೬). **ಕಂಡೆ:** ಕಂಡೇವ ಹಿಡಿದಾನ ಭಂಡಿ ಮ್ಯಾಲಿಟ್ಟಾನ (ಲೋಕಗೀ. ೫೭-೪).

**ಖಂಡೆಯಪೂಜೆ** = (ನವರಾತ್ರಿಯಲ್ಲಿ ಮಾಡುವ) ಆಯುಧ ಪೂಜೆ: ಅರಸರು ಮಾಡುವ ಈ ಪೂಜೆಗೆ ಖಂಡೆಯಪೂಜೆಯೆನ್ನುತ್ತಾರೆ (ಕನ್ನಜಾ. ೧೬೧). [← ಪ್ರಾ. ಖಂಡ < ಸಂ. ಖಡ್ಗ]

**ಖಂಡೆಯ$_1$** (ನಾ). ಕಂಡರಣೆ; ಕೊರೆಯುವಿಕೆ; ಕಡೆತ: ಈಯುಳತೆಯೀಯಧಿಷ್ಠಾನವೀ ರೇಖೆಯೀ ಖಂಡೆಯಂ ಕಡಿಗೆಯೀ ತಾನವೀಯಾಯವು (ಸಿದ್ಧರಾ. ೩-೪೩). [< ಖಂಡಣೆ$_1$]

**ಖಂಡೆಯ$_2$**, ಕಂಡೆಯ$_1$ (ನಾ). = ಖಂಡೆ: ಅಟ್ಟೆಬಂದು ಖಂಡೆಯವ ಕಳೆದುಕೊಂಡು ಮಂಡೆಯನೊಡೆಯಲು (ಬಸವ. ೬೨೫); ಸೆಲ್ಲ ಸಬಳ ಕುಂತ ಕಕ್ಕಡೆ ಕಟಾರಿ ಖಂಡೆಯ ಕೋದಂಡ ಪರಶು ಪಟ್ಟೆಯ ಪ್ರಮುಖ ಬತ್ತೀಸಾಯುಧ ಭಯಂಕರರ್ ಪರಿತಂದು (ಮಹಾನೇ. ೧೨-೨೪ವ); ಎನ್ನೊಳು ತುಡುಕಿ ಬದುಕುವನಾವನೆಂದನು ಖಂಡೆಯವ ಜಡಿದು (ಕುವ್ಯಾವಿ. ೫-೨೧); ಮಂಡೆಯೊಲೆದರೆ ಹೆಂಗಳಿಗೆ ಮನ್ಮಥನದೊ ಖಂಡೆಯವಲುಗಿದಂತಿಹುದು (ಭರಚ. ೧-೪೧). **ಕಂಡೆಯ$_1$:** ಅಱುವತ್ತು ನಾಲ್ಕು ಕೋಲಭ್ಯಾಸವ ಮಾಡಿದೆನಯ್ಯಾ ಇಱಿವ ಘಾಯ ಕಂಡೆಯ ಭೇದವಿನ್ನೂ ತಿಳಿಯದು (ಬಸವ. ೭೦೧); ಬಾಯಲ್ಲಿ ಕತ್ತರಿವಾಣ ಕಾಲಿನಲ್ಲಿ ಕಂಡೆಯ ಅಂಡದಲ್ಲಿ ಕಾಳಕೂಟ (ಅಱಿಮಾ. ೭-೪೯); ಕಾದಿದರ್ಕೈ ಜಡಿಯೆ ಕಂಡೆಯದ ಬಿಣ್ಪಿನಿಂ ಪಟುಭಟರ್ (ಚೆಬಪು. ೧೬-೧೪); ಉಗಿದು ಕಂಡೆಯವನೆದೆಗೆ ಸಾರ್ಚೆ (ಮೋಳಪು. ೨-೧೭೬). [< ಖಂಡೆ]

**ಖಂಡೆಯಕಾರ** 'ಖಂಡೆಯಕಾಱ' ನೋ.

**ಖಂಡೆಯಕಾಱ**, ಖಂಡೆಯಕಾರ (ನಾ). ಖಂಡೆಯವನ್ನು ಹಿಡಿದು ಕಾಳಗ ಮಾಡುವವನು: ನಿಯೋಗಾಧಿಪತಿವಾಳ ಖಂಡೆಯಕಾಱರಧಿಷ್ಠಾಯಕಂ (ಬೊಂಕಶಾ. ೧೯೩೪, ರಾಣಿಬೆ. ೮೪-೭ ; 1104); ಸೇನಾನಾಯಕರು ನೂಕಿದರು ಖಂಡೆಯಕಾಱ ಮೋಹರವ (ಕುವ್ಯಾಭೀ. ೪-೨೪); ಹರಿಕಾಱರ ಖಂಡೆಯಕಾಱರ ಬಲು ಹರಿಗೆಕಾಱರ ಸಬಳಿಗರ ಸುರಗಿಕಾಱರ ಬಿಲುಗಾಱರ ವಾಹಳಿ ಪುರದ ಪೊಱಗೆ ಕಣ್ಗೆಸೆದವು (ಕುರಾಸಾಂ. ೪-೮೨).

**ಖಂಡೆಯಕಾರ:** ಖಂಡೆಯಕಾರರ . . . ವಾಹಳಿಗಳೂ . . . ಏರ್ಪಾಡಾಗುತ್ತಿದ್ದುವು (ನಂಜುಂಡ. ೧೩೨). [ಖಂಡೆಯ$_2$ + -ಕಾಱ]

**ಖಂಡೆಯವೆಱು** (ಕ್ರಿ). ಖಂಡೆಯವನ್ನು ಧರಿಸು; ಖಡ್ಗಧಾರಿಯಾಗು: ಮಂಡಳಮಂ ನಿಜಮಂ ದ್ವಿಜಮಂಡಲಿಗಂ ದೇವತಾಲಯಕ್ಕಂ ಕೊಟ್ಟಂ ಖಂಡೆಯವೆತ್ತೆಳೆಯಂ ಪರಮಂಡಳಮಂ ವೀರ ವಿಷ್ಣುವರ್ಧನ ನಾಳ್ದಂ (ಎಕ. VI, ಕಡೂರು. ೧೩೯-೩೦ ; 1173). [ಖಂಡೆಯ$_2$ + ಪೆಱು$_1$]

**ಖಂಡೇಂದು** (ನಾ). = ಖಂಡಚಂದ್ರ: ಖಂಡೇಂದು ಭಾಲಸ್ಥಲಾಗ್ರಮುಮಂ ತಾಗೆ ಚಳಲ್ಲಸದ್ಭ್ರಮರಕಂ (ಕಾವ್ಯಸಾ. ೬೫೬ ಶೂದ್ರಕ). [ಖಂಡ + ಇಂದು$_3$]

**ಖಂಡೇಂದುಧರ** (ನಾ). = ಖಂಡಶಶಿಶೇಖರ: ಖಂಡೇಂದುಧರನಾಗಂ ಪ್ರಸನ್ನನಾಗುತ್ತಲು (ವೀಶೈಪು. ೨-೧೩-೪೧). [ಸಂ.]

**ಖಂಡೇಂದುಮೌಳಿ** (ನಾ). = ಖಂಡಶಶಿಶೇಖರ: ಖಂಡೇಂದುಮೌಳಿ ಮಾಡಿದನೆ ಇಂತಿದನೆಂದು ನಿಂತಿರಲ್ (ನಂಬಿರ. ೧೩-೮೨). [ಖಂಡೇಂದು + ಮೌಳಿ (= ಮೌಲಿ)]

**ಖಂಡೇರಾವು** (ನಾ). ಶಿವನ ಒಂದು ಅವತಾರ: (ಕ). [← ಮರಾ. ಖಂಡೇರಾವ್]

**ಖಂಡೋಬಾ** (ನಾ). = ಖಂಡೇರಾವು: (ಕ). [← ಮರಾ. ಖಂಡೋಬಾ]

**ಖಂತಿ** (ನಾ). ಜೈನ ಸಂನ್ಯಾಸಿನಿ; ಕಂತಿ: ಸ್ವಸ್ತಿಶ್ರೀ ಕೊಳತ್ತೂರ ಸಂಘದಾದೇವ ××× ಖನ್ತಿಯನ್ನ್ರ್ನಸಿ × (ಎಕ. II, ೯೩-೩; 700). [< ಕಂತಿ$_2$]

**ಖಂತಿಕಾಱ** (ನಾ). ಒಬ್ಬಾತನ ಹೆಸರು (?).

**ಖಂತಿಕಾಱರಾಯರಗಂಡ** = ಒಂದು ಬಿರುದು: ಶ್ರೀಮತು ಖಂತಿಕಾಱರಾಯರಗಂಡ ತೆಪ್ಪದ ನಾಗಂಣವೊಡೆಯರು (ಮೈಆರಿ. ೧೯೩೬, ೨೪-೧೩ ; 1360); ಖಂತಿಕಾಱರಾಯರಗಂಡ ನಾರಂಣವೊಡೆಯರ ಕುಮಾರ ಪೇಂಪಣವೊಡೆಯರು ಪೃಥ್ವೀರಾಜ್ಯವನಾಳುತ್ತ (ಎಕ. X, ಶಿಡ್ಲಘ. ೧೧೨-೧೩ ; 1378). 'ಕಂತಿಕಾಱ' ಪರಾ. [?]

**ಖಂಪಣ** (ನಾ). = ಕಂಪಣ$_1$: ಅಱುನೂಱುಂಬಾಡದ ಖಂಪಣ ಬಾಗೆಯಯ್ವತ್ತಱ ಬಳಿಯಂ (ಇಆ. XIX, ೧೯೦-೭ ; 1054). [?]

**ಖಂಬೀರ** (ಗು). ೧. ಸಾಹಸಿಯಾದ; ದಿಟ್ಟತನದ: ಅವಳಂತಹ ಖಂಬೀರಸ್ತ್ರೀಯನ್ನು ನಾನಿದುವರೆಗೂ ನೋಡಿಲ್ಲ (ಅಂಬಿಕೆ. ೯೧); ಅವನ ಪತ್ನಿ ಭೀಮಕ್ಕ ಅಷ್ಟೆ ಖಂಬೀರ ಹೆಂಗಸು (ಗೀಚುಗ. ೪೪). (ನಾ). ೨. ಸಾಹಸಿ; ಧೈರ್ಯಶಾಲಿ: ಕಾಸಿಮಖಾನರಂಥ ಖಂಬೀರರಿಗೆ ಕನಸಿನಲ್ಲಿಯಾದರೂ ಭಯವುಂಟಾದದ್ದು ಆಶ್ಚರ್ಯವಲ್ಲವೆ? (ಮಾಧವ. ೨೮೧). [← ಮರಾ. ಖಂಬೀರ್. / ಸಂ. ಗಂಭೀರ]

**ಖಂಬೀರತನ** (ನಾ). ಸಾಹಸ ಪ್ರವೃತ್ತಿ; ದಿಟ್ಟತನ: ಬಸಗೋಂಡನಲ್ಲಿ ತಂದೆಯ ಜಿಗಟು, ಖಂಬೀರತನವೂ ಇರಲಿಲ್ಲ (ದೀಪಹ. II, ೨೮೮). [ಖಂಬೀರ + -ತನ]

**ಖಕಾರ** (ನಾ). = ಖ$_1$: ಖಕಾರಕ್ಕೆ ಕಕಾರಂ: ಖಜಾಕ - ಕಜಾಕ (ಶಮುದ. ೨೫೫ ಪ್ರಯೋ). [ಸಂ.]

**ಖಗ** (ನಾ). ೧. ಗಾಳಿಯಲ್ಲಿ ಸಂಚರಿಸುವಂಥದು. ೨. ಹಕ್ಕಿ; ಪಕ್ಷಿ: ಮರಗಳ್ ಪುಟ್ಟುವ ತಾಣವೊಂದೆ ಖಗಕಂ (ಸೋಮೇಶ. ೩೮). ೩. ಬಾಣ; ಅಂಬು. ೪. ದೇವತೆ; ಖೇಚರ: ಆಗಸೂದನನೆಚ್ಚ ಮಹೋರಗ ಶರಮಂ . . . ಖಗರಚ್ಚರಿವಡೆ ತಱಿದಂ ಖಗಪತಿ ಖಗದಿಂ ಖಗೇಂದ್ರವಾಹನನೆಡೆಯೊಳ್ (ಜಗವಿ. ೧೩-೧೦೩). ೫. ನೇಸರು; ಸೂರ್ಯ. ೬. ಮನೆ; ಗೃಹ. ೭. ಆಕಾಶ; ಗಗನ. 'ಖಗವೇಱು' ಪರಾ. "ದಿನೇಶನೊಳಂಬಿನೊಳು ಪಕ್ಷಿಯೊಳು ಗೃಹದೊಳಮರರೊಳು ಖಗಮೆನಿಕ್ಕು" (ಮಂಗರಾ. ೧೪೯-೪೭); "ಸುರ ರವಿ ನಿಳಯಂ ಶರಪಕ್ಷಿ ನಭಂ ತಿಳಿಯಲ್ಕಾಱು ಪೆಸರು ಜಗಕೆ ಖಗಶಬ್ದಂಗಳ್" (ನಾನಾಕಂ. ೮೯). [ಸಂ.]

**ಖಗಕುಳ** (ನಾ). ಪಕ್ಷಿಗಳ ಸಮೂಹ, —ಗುಂಪು: ಆ ವಿಷವಾಹಿಯ ವಿಷಮುಖ ಪಾವಕನಿಂ ಪಾಱುತಿರ್ಪ ಖಗಕುಳಮುಂ . . . ಬೇವುದು (ಜಗವಿ. ೩-೮೦). [ಖಗ + ಕುಳ್ಕ (= ಕುಲ)]

**ಖಗಗಮನ** (ನಾ). ೧. ಪಕ್ಷಿಗಳ ಸಂಚಾರ. ೨. ಪಕ್ಷಿಯ ಮೇಲೆ ಕುಳಿತು ಸಂಚರಿಸುವವನು; ಗರುಡವಾಹನ; ವಿಷ್ಣು: ಖಗ ಗಮನನಂ ಕಾಣೆ ನಿಶ್ಚಾಪ ನಿನಗೆನಲು (ಪ್ರೌಢರಾ. ೮-೭).
[ಖಗ + ಗಮನ]

**ಖಗಜ** (ನಾ). ಸೂರ್ಯನ ಮಗ; ಶನಿ: ಕೂಡಿರಲ್ ಖಗಜಂ ಕೇಂದ್ರ ಗೃಹಂಗಳಲ್ಲಿ ಮೊದಲ ದ್ರೇಕ್ಕಾಣದೊಳ್ (ಜಾತಕ. ೨೧-೧೦). [ಸಂ.]

**ಖಗತ್ವ** (ನಾ). ಗಗನದಲ್ಲಿ ಸಂಚರಿಸುವಿಕೆ; ಆಕಾಶಗಮನ ಶಕ್ತಿ: ಚಿನ್ಮಯನಂ ಮೃಗಾಕೃತಿಯೆಂದು ಹೋಲಿಸಿ ನುಡಿದಡೀ ತಪ್ಪಿಂದ ಹೋಗಿ ಮೃಗಂಗಳಾಗಿ ಖಗತ್ವಮಂ ನೀಗಿ (ಬಸವು. ೩೪-೧೦). [ಸಂ.]

**ಖಗನಗ** (ನಾ). [ಜೈನ] ಖೇಚರರು ವಾಸಿಸುವ ಪರ್ವತ; ವಿಜಯಾರ್ಧ ಪರ್ವತ: ಗಜರಿಪು ಲಂಘಿಸಿದುದೊ ಪವನಜವದೆ ಶಿಖರಕ್ಕೆ ಶಿಖರದಿಂ ಖಗನಗದಾ (ಅಜಿಪು. ೯-೨೭). [ಖಗ + ನಗ್ಗ]

**ಖಗಪ** (ನಾ). ಖೇಚರರ ಅಧಿಪತಿ; ವಿದ್ಯಾಧರ ರಾಜ: ಖಗಪ ಕಂಡು ತರಂಗತಮನ್ನೆದೊಗೆದ ಕರುಣದಿ ಮಂತ್ರವನು ಕಿವಿಯೊಗಿಸಲು (ಜಿರಾಮಾ. ೩೨೭-೨೫). [ಸಂ.]

**ಖಗಪತಿ** (ನಾ). ಪಕ್ಷಿಗಳ ರಾಜ; ಗರುಡ: ಶ್ವಾನ ಕುಕ್ಕುಟ ಕಾಕ ಬಕ ಪವಮಾನ ಖಗಪತಿ ದಿವಿಜ ರಜನಿ . . . ಮೃಗ ಪೋತಕನ ಗುಣವಾ ನರೇಂದ್ರನೊಳಿರಲುಬೇಹುದು (ಕುವ್ಯಾಉ. ೩-೧೦೯). [ಖಗ + ಪತಿ₂]

**ಖಗಪತಿಖಗ** (ನಾ). ಗರುಡಾಸ್ತ್ರ: ಮಹೋರಗಶರಮಂ . . . ತಱಿದಂ ಖಗಪತಿಖಗದಿಂ ಖಗೇಂದ್ರವಾಹನನೆಡೆಯೊಳ್ (ಜಗವಿ. ೧೩-೧೦೩).
[ಖಗಪತಿ + ಖಗ]

**ಖಗಪತಿಗಮನ** (ನಾ). = ಖಗಗಮನ ೨: ವಾಸುಕಿಶಯನ ಖಗಪತಿ ಗಮನ ಕಂಜಜನಯ್ಯ ರಕ್ಷಿಸು (ಹರಿಸಾ. ೪). [ಖಗಪತಿ + ಗಮನ]

**ಖಗಬಂಧ** (ನಾ). ಪಕ್ಷಿಗಳನ್ನು ಹಿಡಿಯುವ ಬಲೆ: "ಖಗಬಂಧಂ ಪಾಶಂ" (ವಸ್ತುಕೋ. ೫೧-೩೫). [ಖಗ + ಬಂಧ]

**ಖಗಯುವತಿ** (ನಾ). ದೇವತಾಸ್ತ್ರೀ; ಖೇಚರ ಯುವತಿ: ಧವಳ ಶೋಭನಗಳ ಪಾಡುತಿರ್ದರು ಖಗಯುವತಿಯರು (ಭರಚ. ೩೧-೬೯).
[ಖಗ + ಯುವತಿ]

**ಖಗರಥ** (ನಾ). ಆಕಾಶದಲ್ಲಿ ಸಂಚರಿಸುವ ರಥ: ಖಗರಥವನರೆ ಯಟ್ಟಿದನ್ . . . ಕಲಿ ಜಟಾಯು (ಶ್ರೀರಾಮಾ. ೨೪೮-೫೪೩).
[ಖಗ + ರಥ]

**ಖಗರಾಜ** (ನಾ). ೧. = ಖಗಪತಿ: ಪಾತಾಳಲೋಕದೊಳ್ ಖಗರಾಜ ನೊರಸಿದಹಿನಿಕರದಸು ಮರಳ್ವಂತೆ (ಜೈಮಿಭಾ. ೨೪-೨). ೨. ಖೇಚರರ ರಾಜ. 'ಖಗರಾಜೇಂದ್ರ' ಪರಾ. [ಖಗ + ರಾಜ]

**ಖಗರಾಜಾಸ್ತ್ರ** (ನಾ). ಗರುಡಾಸ್ತ್ರ: ಆಶೀವಿಷೋಗ್ರಾಸ್ತ್ರಮಂ ಖಗ ರಾಜಾಸ್ತ್ರ ನಿಪಾತದಿಂ ಕಿಡಿಸಿ (ಪಂಪರಾಮಾ. ೧೪-೨೦). [ಖಗರಾಜ + ಅಸ್ತ್ರ]

**ಖಗರಾಜೇಂದ್ರ** (ನಾ). ಖೇಚರರ ಅಧಿಪತಿ: ಖಗರಾಜೇಂದ್ರ ಗಜೇಂದ್ರ ರುಂದ್ರ ಘಟಿಗಂದೆಚ್ಚಂಬುಗಳ್ (ಶಾಂತಿಪು. ೪-೨೧).
[ಖಗರಾಜ + ಇಂದ್ರ]

**ಖಗಲಿಪಿ** (ನಾ). ಒಂದು ಬಗೆಯ ಲಿಪಿ; ಗೂಢಲಿಪಿ (?): ಪಿಶಾಚ ಲಿಪಿ, ಖಗಲಿಪಿ, ಕದಂಬಲಿಪಿ . . . ಯಿಾ ಅಗಣಿತಲಿಪಿಗಳ ನೋಡಲರಿ ಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತಿದ್ದರು ವಿದ್ವಾಂಸರು ಗಳೆಲ್ಲಾ (ಭಾಸ್ಕರ. ೭೭-೪). [ಖಗ + ಲಿಪಿ]

**ಖಗವಂಶ** (ನಾ). ೧. ಸೂರ್ಯವಂಶ: ಖಗವಂಶದಿಕ್ಷ್ವಾಕು ಭೂವರೆನ ಪೀಳಿಗೆಯೊಳೊಗೆದ ತ್ರಿಶಂಕು ವಸುಧಾಧಿನಾಯಕನ (ಹಚಕಾ. ೧೧-೧೪). ೨. ಗಂಧರ್ವಕುಲ; ಖೇಚರವಂಶ: ಬರೆ ಖಗವಂಶಶಿಖಾಮಣಿ ಬರಲೀಯನೆ ವಿಭುವನಾತನಂ ಸೋಯಿಪುದೇಂ ಪುರುಷಾರ್ಥಮೆ (ಶಾಂತಿಪು. ೩-೮೫). [ಖಗ + ವಂಶ]

**ಖಗವರ** (ನಾ). = ಖಗಪತಿ: ದುರುಳ ರಾವಣಿಯುರಗಪಾಶದಿ ಹರಿಯ ಪಡೆಯನು ಕಟ್ಟದಡೆ ಖಗವರನ ದೆಸೆಯಲಿ ವಿಜಯರಾಘವ ಗೆಲಿದನು (ಕೌಶಿರಾ. ೧೯ ಸೂಚನೆ). [ಖಗ + ವರ]

**ಖಗವಲ್ಲಭ** (ನಾ). = ಖಗಪತಿ: ಖಗವಲ್ಲಭಂ ಪತಿನಿರೂಪವನೊಮ್ಮೆಯುಂ ಮಿಾರ್ವನಲ್ಲೆಂದು (ಜೈಮಿಭಾ. ೧೪-೧೯). [ಖಗ + ವಲ್ಲಭ]

**ಖಗವಿಂಡು** (ನಾ). = ಖಗಕುಳ: ಚರಿಸುವ ವಿಟರ ಕರಣವೆಂಬ ಖಗ ವಿಂಡಿಗಿರದೊಡ್ಡಿದ ದೀಹವೆನಲು (ಕಂಸವಿ. ೭-೯೨). [ಖಗ + ಪಿಂಡು₂]

**ಖಗವಿಷ್ಠೆ** (ನಾ). ಹಕ್ಕಿಯ ಹಿಕ್ಕೆ; ಪಕ್ಷಿಯ ಮಲ: ಮಹೀರುಹದಗ್ರ ದಲಿ ಸಂಚರಿಸುತಿಹ ಖಗವಿಷ್ಠೆ ಬಿದ್ದುದು ಮೇಲೆ ಭೂಸುರನ (ಕುವ್ಯಾಅ. ೧೫-೨). [ಖಗ + ವಿಷ್ಠೆ]

**ಖಗವೀರ** (ನಾ). ಪಕ್ಷಿಗಳಲ್ಲಿ ವೀರ: ಓ ಜಟಾಯುೞ! ಕರೆದೊನುಸಿರು ಮೇಲುಸಿರಾಗಿ ಖಗವೀರನಂ (ಶ್ರೀರಾಮಾ. ೨೫೫-೭೨೫). [ಖಗ + ವೀರ]

**ಖಗಾಂಡ** (ನಾ). ಪಕ್ಷಿಯ ಮೊಟ್ಟೆ, —ತತ್ತಿ. 'ಖಗಾಂಡಶಾಸ್ತ್ರ' ಪರಾ. [ಖಗ + ಅಂಡ₂]

**ಖಗಾಂಡಶಾಸ್ತ್ರ** (ನಾ). "ಹಕ್ಕಿಗಳ ಮೊಟ್ಟೆಗಳ ವಿವರಣಶಾಸ್ತ್ರ" (Oology. ಇಂಕನಿ). [ಖಗಾಂಡ + ಶಾಸ್ತ್ರ]

**ಖಗಾದ್ರಿ** (ನಾ). = ಖಗನಗ: ನೋಡೆ ಮರುಳ್ಚಿತ್ತು ಖಗಾದ್ರಿ ಚಕ್ರ ಧರನಂ ಸಂಗೀತಕ ಕ್ರೀಡೆಯಿಂ (ಅಜಿಪು. ೯-೩೮). [ಖಗ + ಅದ್ರಿ]

**ಖಗಾಧಿಪ** (ನಾ). = ಖಗಪತಿ. 'ಖಗಾಧಿಪಲಕ್ಷ್ಮ' ಪರಾ.
[ಖಗ + ಅಧಿಪ]

**ಖಗಾಧಿಪಲಕ್ಷ್ಮ** (ನಾ). ಗರುಡನನ್ನು ಲಾಂಛನವಾಗಿ ಉಳ್ಳವನು; ಗರುಡಧ್ವಜ; ವಿಷ್ಣು: ಲಕ್ಷ್ಮೀದೇವಿ ಖಗಾಧಿಪಲಕ್ಷ್ಮಂಗೆಸೆದಿರ್ದು ವಿಷ್ಣುಗೆಸೆವಂತೆ ವಲಂ ಲಕ್ಷ್ಮೀದೇವಿ ಲಸನ್ಮೃಗಲಕ್ಷ್ಮನನೆ ವಿಷ್ಣು ಗಗ್ರಸತಿಯೆನೆ ನೆಗಳ್ದಳ್ (ಎಕ. V, ಅರಸೀ. ೬೯-೧೩; 1174).
[ಖಗಾಧಿಪ + ಲಕ್ಷ್ಮ]

**ಖಗಾಧೀಶ್ವರ** (ನಾ). ಖೇಚರರ ಒಡೆಯ; ವಿದ್ಯಾಧರಚಕ್ರವರ್ತಿ: ಬಗೆದು ಕೇಳ್ ಪೇೞ್ವೆಂ ಖಗಾಧೀಶ್ವರಾ (ಶಾಂತಿಪು. ೫-೨೧).
[ಖಗ + ಅಧೀಶ್ವರ]

**ಖಗಾನೀಕ** (ನಾ). = ಖಗಕುಳ: ತುಱುಗಿ ನಭದೊಳು ಖಗಾನೀಕ ಮಂಡಳಿಸಲಿಟ್ಟೊಬಿಲಿ ಕೆಡೆದು (ಹಚಕಾ. ೫-೪೨). [ಖಗ + ಅನೀಕ]

**ಖಗೇಂದ್ರ** (ನಾ). ೧. ಖೇಚರರ ಅರಸು; ವಿದ್ಯಾಧರ ರಾಜ: ಎರಚಿಕ್ಕಿಲಂಬಿಡಿದು ಖಗೇಂದ್ರನೋಲಗದೊಳಿರ್ದ ವಿಳಾಸ ವಿಳಾಸಿನೀ ಜನಂ (ಆದಿಪು. ೨-೪). ೨. ಗರುಡ. 'ಖಗೇಂದ್ರವಾಹನ' ಪರಾ.
[ಖಗ + ಇಂದ್ರ]

**ಖಗೇಂದ್ರಕನ್ನಿಕೆ** (ನಾ). = ಖಗಯುವತಿ: ಖಗೇಂದ್ರಕನ್ನಿಕೆ . . . ಹಳಿಗಂ ಹರಿಗಂ ನುಡಿಗುಂ (ಶಾಂತಿಪು. ೪-೮೦). [ಖಗೇಂದ್ರ + ಕನ್ನಿಕೆ]

**ಖಗೇಂದ್ರವಾಹನ** (ನಾ). ಗರುಡನನ್ನು ವಾಹನವಾಗಿ ಉಳ್ಳವನು; ವಿಷ್ಣು: ಖಗರಚ್ಚರಿವಡೆ ತಱಿದಂ ಖಗದಿಂ ಖಗೇಂದ್ರವಾಹನನೆಡೆ ಯೊಳ್ (ಜಗವಿ. ೧೩-೧೦೩). [ಖಗೇಂದ್ರ + ವಾಹನ]

**ಖಗೇಶ** (ನಾ). = ಖಗೇಂದ್ರ: ದಟಮೊಳಸೋರೆ ಖಗೇಶಾವನೀಶ ಸೈನಿಕರಾರ್ದರ್ (ಶಾಂತಿಪು. ೬-೩೯). [ಖಗ + ಈಶ]

**ಖಗೇಶ್ವರ** (ನಾ). = ಖಗೇಂದ್ರ: ಆ ಖಗೇಶ್ವರನ ಕಟ್ಟು ಕಱಲ್ದುದು (ಶಾಂತಿಪು. ೪-೪). [ಖಗ + ಈಶ್ವರ]

**ಖಗೋಲ, ಖಗೋಳ** (ನಾ). ೧. ಗೋಲಾಕಾರವಾಗಿ ಕಾಣುವ ಆಕಾಶದ ಪರಿಧಿ; ಆಕಾಶಮಂಡಲ: (Celetial Globe. ಪಾರಿಏ). ೨. "ಗ್ರಹ, ತಾರೆಗಳಿಗೆ ಸಂಬಂಧಿಸಿದ ಶಾಸ್ತ್ರ" (ಸಿಂಕೋ. ೧೪೭). 'ಖಗೋಳಜ್ಞ' ಪರಾ. **ಖಗೋಳ**: ೨. ಅವನು ಖಗೋಳವನ್ನು ಕುರಿತು ತಾನು ಅರಿತ ತತ್ವಗಳನ್ನು ... ವರ್ಣಿಸಬೇಕಾಯಿತು (ಮುಕ್ಸಾರ. ೧೭ ಪೀಠಿಕೆ). [ಖ₂ + ಗೋಲ]

**ಖಗೋಳ** 'ಖಗೋಲ' ನೋ.

**ಖಗೋಳಜ್ಞ** (ನಾ). ಖಗೋಳ ವಿಷಯವನ್ನು ಬಲ್ಲವನು; ಖಗೋಳ ಶಾಸ್ತ್ರಜ್ಞ: ಖಗೋಳಜ್ಞರು ಬರಿಯ ಕಣ್ಣಿಗೆ ಕಾಣುವ ನಕ್ಷತ್ರಗಳನ್ನು ... ಆರು ವರ್ಗಗಳಾಗಿ ವಿಂಗಡಿಸಿದ್ದಾರೆ (ನಕ್ಷತ್ರ. ೧೨). [ಸಂ. ಖಗೋಲಜ್ಞ]

**ಖಗೋಳಜ್ಞಾನ** (ನಾ). ಗ್ರಹ, ನಕ್ಷತ್ರಾದಿಗಳ ಜ್ಞಾನ: ಪರಕಾಯ ಪ್ರವೇಶ ... ತ್ರಿಕಾಲಜ್ಞಾನ, ಖಗೋಳಜ್ಞಾನ ಮೊದಲಾದವುಗಳು ಅವಾಂತರ ಸಿದ್ಧಿಗಳು. ಈ ಸಿದ್ಧಿಗಳು ಮೋಕ್ಷವನ್ನೇ ಕೋರುವವನಿಗೆ ವಿಘ್ನಗಳಾಗಿರುತ್ತವೆ (ಭಾರದ. ೧೭೫). [ಖಗೋಳ (= ಖಗೋಲ) + ಜ್ಞಾನ]

**ಖಗೋಳಶಾಸ್ತ್ರ** (ನಾ). ಗ್ರಹ ನಕ್ಷತ್ರಾದಿಗಳನ್ನು ವಿವರಿಸುವ ಶಾಸ್ತ್ರ: ಚೀಣಾ ಚಕ್ರವರ್ತಿಯ ಕಾಲದಲ್ಲಿ ಖಗೋಳಶಾಸ್ತ್ರಕ್ಕೆ ಸಂಬಂಧ ಪಟ್ಟ ಅನೇಕ ವಿಷಯಗಳು ಬರೆಯಲ್ಪಟ್ಟಿವೆ (ಗಣಿಚ. ೬). [ಖಗೋಳ (= ಖಗೋಲ) + ಶಾಸ್ತ್ರ]

**ಖಗೋಳಶಾಸ್ತ್ರಜ್ಞ** (ನಾ). = ಖಗೋಳಜ್ಞ: ಖಗೋಳಶಾಸ್ತ್ರಜ್ಞರು ಬಹಳ ದೊಡ್ಡ ದೂರದರ್ಶಕ ಯಂತ್ರಗಳನ್ನು ಉಪಯೋಗಿಸುತ್ತಾರೆ (ಆಕಾಶ. ೬). [ಸಂ. ಖಗೋಲಶಾಸ್ತ್ರಜ್ಞ]

**ಖಗ್ಗೊಳ** (ನಾ). ಒಂದು ಕೊಳದ ಹೆಸರು (?): ಅಂತೆ ಬರೆ ಖಗ್ಗೊಳಂ ಅಂತೆ ಮುಗ್ಗುಡ್ಡೆಯ ಪಾಸಱೆ (ಎಕ. XI, ದಾವಣ. ೧೯-೨೦; 1043). [?]

**ಖಗ್ರಾಸ** (ನಾ). ಗ್ರಹಣದ ಮೂಲಕ (ಚಂದ್ರ ಅಥವಾ ಸೂರ್ಯ ಮಂಡಲಗಳು) ಪೂರ್ಣವಾಗಿ ಮುಚ್ಚಿಹೋಗುವಿಕೆ. 'ಖಗ್ರಾಸ ಗ್ರಹಣ' ಪರಾ. [ಖ₃ + ಗ್ರಾಸ]

**ಖಗ್ರಾಸಗ್ರಹಣ** (ನಾ). ೧. ಪೂರ್ಣಗ್ರಹಣ. ೨. (ಆಲಂ) ಮಂಕು; ಮಾಯೆ: ಬರುಬರುತ್ತ ... ಕಣ್ಣುಗಳಿಗೆ ಖಗ್ರಾಸಗ್ರಹಣವು ಹಿಡಿಯುತ್ತದೆ (ಬ್ರಹ್ಮಜೀ. ೨೭); ಆಧುನಿಕ ಭಾರತದಲ್ಲಿಯೂ ಬುದ್ಧಿಗೆ, ವಿಚಾರವಂತಿಕೆಗೆ ಖಗ್ರಾಸಗ್ರಹಣ ತಪ್ಪಿಲ್ಲ (ವಿಚಾವಾ. ೨೭). [ಖಗ್ರಾಸ + ಗ್ರಹಣ]

**ಖಚ** (ನಾ). ೧. ಒಂದು ದೇಶದ ಹೆಸರು. ೨. ಆ ದೇಶದವನು (?): ಚೋಳನ ಜೂಬು ಮಾಳವನ ಗೋಣ್ಮುರಿ ಚೇರರನಟ್ಟಿ ತಿಂಬ ಮಾಕಾಳಿ ವರಾಳನಂ ತುಳಿವ ಗಂಧಗಜಂ ಖಚನಳ್ಳಿಯಂಬು ನೇಪಾಳನ ಬೆನ್ನ ಚಮ್ಮಟಿಗೆಯಿಂ ನಡೆತಂದನೆ ವೀರವಿಷ್ಣುಭೂಪಾಲಕಂ (ಎಕ. VII. ಶಿವಮೊ. ೫-೭; 1218). [?]

**ಖಚಕ್ಕನೆ** (ಅ). ಒಂದು ಅನುಕರಣ ಶಬ್ದ: ತಾನೆ ಸರಭಸಂ ಖಚಕ್ಕನಿಱಿದುತ್ಕುಚದಿಂ ಬಿಗಿತಕ್ಕೆಗೆಯ್ದೊಡಲ್ ಬಸವಳಿದಂತಿರೊಪ್ಪಿಪುದು (ಚಿಕವಿ. ೬-೧೬೨). [?]

**ಖಚನ** (ನಾ). ಚಿನ್ನದಲ್ಲಿ ಹರಳನ್ನು ಕೆಚ್ಚುವುದು; ಕುಂದಣವಿಡುವುದು: ಆಭರಣಗಳೂ ಅಲಂಕಾರಗಳೂ ಹೆಚ್ಚಿ, ಖಚನ ಚಾತುರ್ಯವು ಪ್ರೌಢವಾಯಿತು (ಭಾಇಪ್ರ. ೬೭). [ಸಂ.]

**ಖಚರ** (ಗು) ೧. ಆಕಾಶದಲ್ಲಿ ಸಂಚರಿಸುವ; ಆಕಾಶಗಾಮಿಯಾದ. (ನಾ). ೨. ಹಕ್ಕಿ; ಪಕ್ಷಿ. ೩. ನೇಸರು; ಸೂರ್ಯ. ೪. ಗಂಧರ್ವ: "ದೇಶೀಯ ಗಾಣನೊಳ್ ಖಚರ[ಪಾಠಾಂ. ಟರ]ರೊಳು ಕುದುರೆಯೊಳು ವೈಸಿರಿಯ ಕಾಂತಿಯೊಳು ಗಂಧರ್ವನಾಮುಮುಕ್ಕು" (ಮಂಗರಾ. ೧೫೧-೫೪). ೫. ಯಕ್ಷ, ವಿದ್ಯಾಧರ ಮೊದಲಾದ ದೇವಗಣಕ್ಕೆ ಸೇರಿದವನು: ಬಲಿಯ ಭೂಮಿ, ಕರ್ಣನ ಕವಚ, ಖಚರನ ಅಸ್ತಿ, ಶಿಬಿಯ ಮಾಂಸ ವೃಥಾ ಹೋಯಿತ್ತಲ್ಲಾ (ಬಸವ. ೨೨೪); ಮಱಿವೊಕ್ಕೊಡೆ ಕಾವಡೆಯೊಳ್ ಖಚರನೆನಿಸಿದಂ ನೃಪತಿಲಕಂ (ಎಕ. V, ಚನ್ನರಾ. ೨೪೩-೧೧; 1209). 'ಖೇಚರ' ಪರಾ. ೬. ಒಂದು ಎಂಬ ಸಂಖ್ಯೆಯ ಸಂಕೇತ: (೧). ೭. [ಸಂಗೀತ] ವಾದ್ಯವನ್ನು ನುಡಿಸುವುದರಲ್ಲಿ ಒಂದು ರೀತಿ: ಭಣಿತೆ ಬೆಡಂಗು ಕಾಕು ಖಚರಂ ಗಮಕಂ ... ಎಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮಂ (ಜಗವಿ. ೫-೩). [ಸಂ.]

**ಖಚರನಾಯಕ** (ನಾ). ವಿದ್ಯಾಧರರಾಜ; ಜೀಮೂತವಾಹನ: ಪರಿಕಿಸೆ ಕರ್ಣನಿಂ ಖಚರನಾಯಕನಿಂ ದಿವಿಜೇಂದ್ರ ಪುತ್ರನಿಂ ಪಿರಿಯ ನೆನಿಪ್ಪನುಕೃತರ ದಾನದೊಳಾರ್ಪಿನೊಳೆಯ್ದೆ ಗಂಡಿನೊಳ್ (ಎಕ. VI, ಚಿಕ್ಕಮ. ೧೩೭-೪೦; 1130). [ಖಚರ + ನಾಯಕ]

**ಖಚರಪತಿ** (ನಾ). ಖೇಚರರಾಜ; ವಿದ್ಯಾಧರ ಚಕ್ರವರ್ತಿ: ಅದ ನಾಳ್ವನಖಿಳ ಖಚರಪತಿ ಮುಕುಟಮಣಿಗಣ ಕಿರಣ ರಾಗರಂಜಿತ ಚರಣ ನಳಿನಯುಗಳಂ (ಆದಿಪು. ೧-೭೧ ವ). [ಖಚರ + ಪತಿ₂]

**ಖಚರಪ್ಲುತ** (ನಾ). [ಛಂದ] ಪ್ರತಿಪಾದದಲ್ಲಿಯೂ ಹತ್ತೊಂಬತ್ತು ಅಕ್ಷರಗಳಿರುವ ಒಂದು ಸಮವೃತ್ತ: ವಾತಮಿತ್ರ ಮರುತ್ಪವನಂ ವ್ಯೋಮಾರ್ಕಯುಗಂ ತ್ರಿಪುರಾಂತಕರೋಪೇತಮಾಗಿರೆ ವಿಶ್ರಮಂ ತಾಂ ಪಕ್ಷದೊಳೊಂದಿರೆ ... ಖಚರಪ್ಲುತಂ (ಛಂದೋಂಬು. ೨-೧೨೪); ಒಪ್ಪಿರಲ್ ರಸಸಂತಜಜಂಗಂ ಪುಟ್ಟುವುದಾ ಖಚರಪ್ಲುತಂ (ಕೈಪಿಡಿ. ೮೬). [ಸಂ.]

**ಖಚರಾಂಗನೆ** (ನಾ). ದೇವಾಂಗನೆ; ಖಚರ ಸ್ತ್ರೀ: ನಭೋಂತದೊಳ್ ವಿಹರಿಪರ್ ಖಚರಾಂಗನೆಯರ್ ವಿಲಾಸದಿಂ (ಶಬಶಂ. ೨-೩೭). [ಖಚರ + ಅಂಗನೆ]

**ಖಚರಿ** (ನಾ). = ಖಚರಾಂಗನೆ: ಲಸಜ್ಜಲಕಣಮುನಮಳ ಮುಕ್ತಾಫಳ ಮೆಂದುಱಿ ಮುಗ್ಧ ಖಚರಿಯರ್ ಕೈಯಿಡುವರ್ (ರಾಜಶೇ. ೧-೯೩). [ಸಂ. ಖಚರೀ]

**ಖಚರೇಂದ್ರ** (ನಾ). = ಖಚರಪತಿ: ಮಾಱೋಲೆಯನೆಯ್ದಿಸಿದೊಡೆ ನಡೆಯುತ್ತುಂ ಬಾಚಿಸಿ ತಡೆಯದೆ ಬರ್ಮಿಮಿರ್ಮಮೇ ಖಚರೇಂದ್ರಂ (ಶಾಂತಿಪು. ೫-೩೫). [ಖಚರ + ಇಂದ್ರ]

**ಖಚರೇಶ** (ನಾ). = ಖಚರಪತಿ: ಖಚರೇಶ ಪೊತ್ತು ನಿಂದಿರ್ ದೊರೆವೆತ್ತುರ್ವೀಭರಮಂ (ಶಾಂತಿಪು. ೫-೮೪). [ಖಚರ + ಈಶ]

**ಖಚಿತ** (ಗು). ೧. ಕೂಡಿಸಿದ; ಕೆಚ್ಚಿದ; ಕುಂದಣಿಸಿದ; ಮೆಟ್ಟಿದ: ಅನಂತಮಣಿಗಣಖಚಿತ ಲಾಲಿತ್ಯಸಾಂದ್ರ ರಮ್ಯಾಸ್ಥಾನ ಮಂಟಪ (ಬಸಪು. ೧-೪೦); ಪದ್ಮರಾಗದ ರುಚಿರರತ್ನವು ಜಾತರೂಪದಿ ಖಚಿತವಾದೊಡೆ ಪುಣ್ಯ (ಕುವ್ಯಾಆ. ೧೨-೨೬); ನವರತ್ನಖಚಿತ ಕಮನೀಯ ಕಾಂಚನಮಯೋನ್ನತ ದೃಢ ಪ್ರಾಕಾರದ (ಜೈಮಿಭಾ. ೩-೨೦); ನವರತ್ನ ಖಚಿತವಾದ ... ಚಿನ್ನದ ತೋಡವನ್ನು ಕುವರನ ಬಲಗಾಲಿಗೆ ಬಹುಮಾನಿಸಿದರು (ಶಾಂತಲಾ. ೨೦೬). ೨. ನಿಶ್ಚಿತವಾದ; ಖಂಡಿತವಾದ: ಆಳತೆ ತೂಕಗಳು ಬಹಳ ಖಚಿತವಾಗಿದ್ದವು (ಭಾರದ. ೧೫);

ಈ ವಿಷಯುದಲ್ಲಿ ಅವನು ಅಡ್ಡ ಬರುವುದು ಖಚಿತವಾಗಿತ್ತು (ಜೆವರಿ. ೫೨); ಇದರಲ್ಲಿ ಕೂಡ ಖಚಿತವಾಗಿ ನಿರ್ಧಾರಕ್ಕೆ ಬರುವುದು ಅಗುವುದಿಲ್ಲ (ಕನ್ನಸಂ. ೫೯). **೩.** ಬೆರಸಿದ ; ಮಿಶ್ರವಾದ.

**ಖಚಿತಮಾಡಿಕೊಡು** = ದೃಢೀಕರಿಸು ; ಖಾತ್ರಿಮಾಡು : ತಾವು ಯಾರೆಂಬುದನ್ನು . . . ಖಚಿತಮಾಡಿಕೊಡುವುದುಬಹಳ ಕಷ್ಟವಾಯಿತು (ಪ್ರವಾಇ. II, ೧೦). **ಖಚಿತವಾಗಿ** = ನಿಖರವಾಗಿ; ನಿಶ್ಚಿತವಾಗಿ; ದೃಢವಾಗಿ : ದಾರ್ಶನಿಕರು ಮೂರುಮಾರ್ಗಗಳನ್ನು ಖಚಿತವಾಗಿ ಅನುಸರಿಸಿರುತ್ತಾರೆ (ಭಾರದ. ೨೫೮) ; ಖಚಿತವಾಗಿ ಹೇಳಲಾಗುವುದಿಲ್ಲ (ತರಬೆ. ೬೦). **ಖಚಿತವಾಗು** = ಖಾತ್ರಿಯಾಗು ; ನಿಖರವಾಗು : ಕರ್ಮದಂತೆ ಫಲವೆಂಬುದು ನನಗೆ ಖಚಿತವಾಗಿದೆ (ನಾಕಥೆ. ೨೪); ಅವಳೇ ತುಡುಗು ಮಾಡಿರುವಳೋ ಇಲ್ಲವೋ ಎಂಬದೂ ಅವನಿಗೆ ಖಚಿತವಾಗಲಿಲ್ಲ (ಭಾರತಿ. ೨೫). [ಸಂ.]

**ಖಚಿತಗೊಳಿಸು** (ಕ್ರಿ). ನಿಶ್ಚಿತಪಡಿಸು ; ಸ್ಪಷ್ಟಗೊಳಿಸು : ಬಿಡಿಸ ಬೇಕಾದ ಪ್ರಧಾನಅಂಶವನ್ನು ಎದ್ದು ಕಾಣುವಂತೆ ಖಚಿತಗೊಳಿಸಿ ತೋರಿಸಬೇಕು (ಶಿಕ್ಷದ. ೨೩೫). [ಖಚಿತ + ಕೊಳ್$_1$ + – ಇಸು$_3$]

**ಖಚಿತತೆ** (ನಾ). ನಿಶ್ಚಿತವಾದುದು ; ನಿಃಸಂದಿಗ್ಧತೆ; ಖಾತ್ರಿ : ಅವನ ಹೇಳಿಕೆಯಲ್ಲಿ ಏಕರೂಪದ ಖಚಿತತೆಯಿಲ್ಲ; ಸ್ಪಷ್ಟವಾದ ನಿಲುವಿಲ್ಲ (ದ್ರಾವಿವಿ. ೨೧೫) ; ವಿವರಗಳು ಇದೇ ಕತೆಗಾಗಿ ಹೇಳಿ ಮಾಡಿಸಿದವು ಎನ್ನುವ ಖಚಿತತೆ ಉಳಿದಿಲ್ಲ (ಹೊಸಕ್ಷಿ. ೨೮೨). [ಸಂ. ಖಚಿತತಾ]

**ಖಚಿತಪಡಿಸು** (ಕ್ರಿ). ನಿಶ್ಚಿತವಾಗುವಂತೆ ಮಾಡು ; ದೃಢಪಡಿಸು : ರಾಜಿನಾಮೆಯ ವರದಿಯನ್ನು ಪ್ರಧಾನಿಗಳು ಖಚಿತಪಡಿಸಿದರು (ರೂಢಿ). [ಖಚಿತ + ಪಡಿಸು]

**ಖಚಿಯಿಸು,** ಖಚಿಸು (ಕ್ರಿ). ಕೆಚ್ಚು; ಕುಂದಣಿಸು; ಬೆಟ್ಟು : ಕೋಡುಂ ಕುಳಗುಮುಂ ಸುವರ್ಣದೊಳ್ ಖಚಿಯಿಸಿ (ಎಇ. XIX, ೫೨೪–೧೯; 1022); ಸಾಸಿರ ಕವಿಲೆಯ ಕೋಡುಕೊಳಗುಮಂ ಪಂಚರತ್ನಂಗಳಿಂ ಖಚಿಯಿಸಿ (ಎಕ. VII, ಶಿಕಾರಿ (s), ೩೪೨–೫೦ ; 1050). **ಖಚಿಸು** : ರತ್ನವನು ಖಚಿಸಿರುವ ಕಟ್ಟಡ (Setting. ಇಂಕನಿ). [ಖಚನ + – ಇಸು$_3$]

**ಖಚಿಸು** 'ಖಚಿಯಿಸು' ನೋ.

**ಖಚೋರ,** ಖಜೋರ (ನಾ). ಗಂಧಪತ್ರ ; ಗಂಧಕಚೋರ : "ಕಚ್ಛೂರಕಃ – ಖಚೋರಃ" (ಓಷಧಿ. ೨೫); ಕಟುಕರೋಹಿಣಿ, ಅಗಿಲು, ಖಚೋರ, ಸಹದೇವಿ . . . ಅರೆದು ಸಂದುಗಳಲ್ಲಿ ಪೂಸಿದರೆ ಶೀತಜ್ವರ ಪರಿಹಾರವಾಗುವುದು (ಸಕವೈ. ೬೦). **ಖಜೋರ** : "ಗಣಹಾಸಃ – ಖಜೋರ" (ಓಷಧಿ. ೪೬); ಬಾಳಂ ಮಲಯರುಹಂ ಕರ್ಬಾಳಂ ಕೋಷ್ಟಂ ಖಜೋರ ಮೇಲೆ ಲವಂಗಂ (ಅಶ್ವಶಾ ೩–೧೮). [< ಸಂ. ಕಚೋರ, ಕಚ್ಛೋರ]

**ಖಜ** (ನಾ). **೧.** ಕಡೆಯುವಿಕೆ ; ಮಂಥನ. **೨.** ಮಂತು ; ಕಡೆಗೋಲು. **೩.** ಸೌಟು ; ಸಟ್ಟುಗ. **೪.** ಕದನ ; ಕಾಳಗ. **[ಸಂ.]**

**ಖಜಕ**(ನಾ). **೧.** ಕಡೆಗೋಲು; ಮಂತು: "ಮಂಥಣಿಗರ್ಗರಿ ಕಡೆಗೋಲ್ ಮಂಥಾದಂ ಮಂತುವಂತದಕ್ಕುಂ ಖಜಕಂ" (ವಸ್ತುಕೋ. ೫೦–೩೧). **೨.** ಮೇಲ್ಕಟ್ಟು; ವಿತಾನ: "ಚಂದ್ರೋದಯಃ, ವಿತಾನಂ, ಉಲ್ಲೋಚಃ, ಖಜಕಃ – ಈ ೪ ಮೇಲ್ಕಟ್ಟು" (ಹಲಾಯು. ೫೨-೧೫೫). **[ಸಂ.]**

**ಖಜಾಂಚಿ,** ಖಜಾಂಜಿ (ನಾ). ಖಜಾನೆಯ ಅಧಿಕಾರಿ ; ಭಂಡಾರಿ ; ಕೋಶಾಧ್ಯಕ್ಷ : ದಾದಾಭಾಯಿಯನ್ನು ಖಜಾಂಚಿಯನ್ನಾಗಿಯೂ ನೇಮಿಸಿದರು (ದಾದಾನ. ೧೬) ; ನೀನೇ ನಮ್ಮ ಖಜಾಂಚಿ (ನಾಪೋಲೀ. ೧೮೮). **ಖಜಾಂಜಿ** : ಬಾಡಿಗೆ ತೆರುವ ಖಜಾಂಜಿಯೂ ಅವನೇ (ಆಳನಿ. ೧೧೧). [← ಪಾರ. ಹಿಂ. ಅರ. ಮರಾ. ಖಜಾನ್‌ಚೀ]

**ಖಜಾಂಜಿ** 'ಖಜಾಂಚಿ' ನೋ.

**ಖಜಾಕೆ** (ನಾ). ಸೌಟು ; ಸಟ್ಟುಗ. [ಸಂ. ಖಜಾಕಾ]

**ಖಜಾನ** 'ಖಜಾನೆ' ನೋ.

**ಖಜಾನೆ,** ಖಜಾನ, ಖಜೀನಿ, ಖಜೀನೆ (ನಾ). **೧.** ಬೊಕ್ಕಸ ; ಭಂಡಾರ ; ತಿಜೋರಿ ; ಕೋಶಾಗಾರ : ಹಜೂರು ಖಜಾನೆಗೆ ಐವಜು ಸಂದಾಯ ಮಾಡಿ (ಮಹಾವಂ. II, ೬೭) ; ಆ ಹಣವನ್ನು ತಾಲ್ಲೂಕು ಖಜಾನೆಗೆ ಪಾರಖಾವಣೆ ಮಾಡುವುದಕ್ಕಾಗಿ (ಗ್ರಾಮಾಕ. ೩) ; ಈ ರೇವು ಪಟ್ಟಣದಿಂದ ಖಜಾನೆಗೆ ಅಪಾರ ಹಣ ಒದಗುತ್ತದೆ (ಪ್ರವಾಇ. II, ೬೩); ಇವನ್ನು ನಿಮ್ಮ ಖಜಾನೆಯಲ್ಲಿ ಇಡಿಸಿ ಬಿಡಿರಿ (ಕಲಿಕು. ೧೬೩) ; ಖರ್ಚುಗಳನ್ನು ನಿರ್ವಹಿಸುವುದಕ್ಕೂ ಖಜಾನೆಯಲ್ಲಿ ಹಣವಿರಲಿಲ್ಲ (ದಾದಾನ. ೬೨). **ಖಜಾನ** : (ರೈಸ್‌ಗ. ೫೫೩). **ಖಜೀನಿ** : **೨.** ನಗದು ಹಣ ; ಬಂಡವಾಳ : ಈಗ ನಮ್ಮ ಗಾಡಿಯ ಖರ್ಚುಗಲ್ಲದೆ ಮೇಲೆ ಒಂದು ರೂಪಾಯಿ – ಇಷ್ಟೆ ನಮ್ಮ ಖಜೀನಿ (ಸ್ಮೃತಿಚಿ. ೨೮೪). **ಖಜೀನೆ** : (ಕ).

[← **ಪಾರ.** ಖಜಾನಹ್; **ಅರ.** ಖಜಾನ, ಖಿಜಾನಾ; **ಹಿಂ.** ಖಜಾನಾ; **ಮರಾ.** ಖಜಾನಾ, ಖಜೀನಾ]

**ಖಜಾನೆದಾರ** (ನಾ). ಖಜಾನೆಯ ಅಧಿಕಾರಿ ; ಭಂಡಾರಿ : ನವಾಬನ ಖಾಸಗೀ ಖಜಾನೆದಾರ ಪದವಿಯೇ ರಾಯರಿಗೆ ಪ್ರಾಪ್ತವಾಯಿತು (ಕಭವಿ. II, ೨೪೧). [ಖಜಾನೆ + – ದಾರ$_4$]

**ಖಜಾನೆದ್ರವ್ಯ** (ನಾ). ಖಜಾನೆಯಲ್ಲಿರುವ ಹಣ ; ಬೊಕ್ಕಸದಲ್ಲಿರುವ ಹಣ : ಹೈದರಲ್ಲಿ ಖಾನರು ನಾಜರಜಂಗರ ಖಜಾನೆದ್ರವ್ಯವೆಲ್ಲ ದಿಕ್ಕಾಪಾಲಿಗೆ ಲೂಟಿಸಿಕೊಂಡು ಹೋಗುವರಲ್ಲಿ ಕೆಲವರನ್ನು ಹೊಡೆದು (ಹೈದರ. ೩೩). [ಖಜಾನೆ + ದ್ರವ್ಯ]

**ಖಜಿಕೆ** (ನಾ). = ಖಜಾಕೆ : "ದರ್ವಿ ದಾರುಹಸ್ತಮೆನಿಪ್ಪುದದು ಖಜಿಕಾಖ್ಯಂ" (ವಸ್ತುಕೋ. ೫೦–೩೩) ; "ಖಜಿಕೆ ದರ್ವೀದಾರುಹಸ್ತಂ ದ್ರುತಂ ಹುಟ್ಟೆನಿಕ್ಕು" (ಮಂಗರಾ. ೬೧–೧೮). [ಸಂ. ಖಜಿಕಾ]

**ಖಜಿಖ** (ನಾ). = ಖಜಾಕೆ : (ಕ). [< ಸಂ. ಖಜಿಕಾ]

**ಖಜೀನದಾರಿ** (ನಾ). ಕೋಶಾಧ್ಯಕ್ಷತೆ ; ಭಂಡಾರಿಯ ಕೆಲಸ : ಸ್ವಲ್ಪ ದಿವಸಗಳಲ್ಲಿಯೇ ಬಾದಶಾಹೀ ಖಜೀನದಾರಿಯ ಅತ್ಯುಚ್ಚ ಪದಕ್ಕೇರಿದನು (ಬೆಳದೀ. ೩೨). [← **ಅರ. ಹಿಂ.** ಖಜೀನದಾರೀ]

**ಖಜೀನಿ** 'ಖಜಾನೆ' ನೋ.

**ಖಜೀನೆ** 'ಖಜಾನೆ' ನೋ.

**ಖಜೀಲ** (ಗು). **೧.** ಖಿನ್ನವಾದ : ಒಂದು ಕುದುರೆಯು ಸಪ್ಪಳಿಲ್ಲದೆ ಅವರ ಬೆನ್ನ ಹಿಂದೇ ಬಂದು ನಿಂತುಬಿಟ್ಟಿತು. ಅದನ್ನು ನೋಡಿ ಅವರೆಲ್ಲರೂ 'ಖಜೀಲ' (ಖಿನ್ನರಾಗಿ) ಸ್ವಲ್ಪ ಅಂಜಿದರು (ಸಿವಭಾ. ೯೬) ; ಒಮ್ಮೆಲೆ ಮನಸ್ಸು ಖಜೀಲ ಅನಿಸಿಹೋಯಿತು ವೆಂಕಣ್ಣನಿಗೆ (ಸಾವಿಉ. ೯೩). (ನಾ). **೨.** = ಖಿನ್ನತೆ : ನೀರಿನಿಂದ ಒಮ್ಮೆಲೆ ಎದ್ದು ಹೊರಗೆ ಬರುವುದೆಂದರೆ ಎಷ್ಟು ಖಜೀಲಾಗುತ್ತದೆ ಮನಸ್ಸಿಗೆ (ಹೊಸಕ್ಷಿ. ೧೯೦).

[← **ಪಾರ. ಹಿಂ.** ಖಜಿಲ್ ; **ಅರ.** ಖಜಲ್ ; **ಮರಾ.** ಖಜೀಲ್]

**ಖಜೋರ** 'ಖಚೋರ' ನೋ.

**ಖಜ್ಜಯ** 'ಕಜ್ಜಾಯ' ನೋ.

**ಖಜ್ಜಾ** (ನಾ). ಜಗಳ. 'ಖಜ್ಜಾಖೋರ' ಪರಾ. [< ಸಂ. ಖಜಾ]

**ಖಜ್ಜಾಖೋರ** (ನಾ). ಜಗಳಗಂಟ ; ಕಲಹಶೀಲ : (ಕ). [← **ಮರಾ.** ಕಜ್ಜೇಖೋರ್]

**ಖಜ್ಜಾಯ** 'ಕಜ್ಜಾಯ' ನೋ.

**ಖಜ್ಜಿ** 'ಕಜ್ಜಿ' ನೋ.

**ಖಜ್ಜೂರಿ** (ಗು). ಅನೇಕ ಎಳೆ ಅಥವಾ ಪದರಗಳಿಂದ ಕೂಡಿದ; ದಪ್ಪನಾದ. 'ಖಜ್ಜೂರಿದಾರ' ಪರಾ. [← ಮರಾ. ಖಜೂರೀ]

**ಖಜ್ಜೂರಿದಾರ** (ನಾ). ಅನೇಕ ಎಳೆಗಳನ್ನು ಹೊಸೆದು ಮಾಡಿದ ದಾರ; ಹುರಿಗೊಳಿಸಿದ ದಾರ: ಗುಳದಾಳಿ ಪೋಣಿಸುವುದಕ್ಕೆ ಖಜ್ಜೂರಿದಾರ ಬೇಕು (ರೂಢಿ). [ಖಜ್ಜೂರಿ + ದಾರ$_1$]

**ಖಟ$_1$** (ನಾ). ೧. ಹುಲ್ಲು. ೨. ಹಾಳುಬಾವಿ; ಅಂಧಕೂಪ. ೩. ಶ್ಲೇಷ್ಮ; ಕಫ; ಉಗುಳು. ೪. ಕೈಗೊಡಲಿ; ಮಚ್ಚು. ೫. ನೇಗಿಲು. [ಸಂ.]

**ಖಟ$_2$** 'ಖಟ್ಟ' ನೋ.

**ಖಟಕಟಾಹಕ** (ನಾ). ಉಗುಳುವುದಕ್ಕಾಗಿ ಇಟ್ಟ ಪಾತ್ರೆ; ಪೀಕದಾನಿ; ಕಾಳಾಂಜಿ. [ಖಟ$_1$ + ಕಟಾಹಕ ?]

**ಖಟಪಟಿ** 'ಕಟಪಟಿ' ನೋ.

**ಖಟಬಾಕಿ** (ನಾ). (ಉಕ) ೧. ಹಿಂದಕ್ಕೆ ಬರದೆ ಇರುವ ಸಾಲ; ವಸೂಲಾಗದ ಸಾಲ. ೨. ಸಾಲವನ್ನು ಮರಳಿ ಕೊಡದೆ ಇರುವವನು: ಯಾವನೊ ಒಬ್ಬ ಖಟಬಾಕಿ ಗಿರಾಕಿಗೆ ಹುಂಬತನದಿಂದ ಸಾಲ ಕೊಟ್ಟು ಇವರು ವಸೂಲಮಾಡದೆ ಎಷ್ಟೊ ವರ್ಷ ಬಿಟ್ಟುಬಿಡುತ್ತಾರೆ (ಗಾಳಿಪ. ೧೮೭). 'ಬೇಬಾಕಿ' ಪರಾ. [ಖಟ$_2$ (< ಖಟ್ಟ) + ಬಾಕಿ]

**ಖಟರಾ**, ಖಟಾರ (ನಾ). (ಉಕ) ೧. ಎತ್ತಿನ ಬಂಡಿ; ಚಕ್ಕಡಿ: ನಮ್ಮ ದಾವಲ್ ಸಾಬನ ಖಟರಾ ಅದ ತಾಬೇದಾಗ (ದೀಪಹ. II, ૩೮૯).

**ಖಟಾರ** (ಗು). ೨. ಕೆಟ್ಟು ಹೋದ; ನಿರುಪಯೋಗಿಯಾದ: ಹೊಡದು ಹೊಡದು ನುಗ್ಗಾದ ಖಟಾರ ಮೋಟರದಂತೆ ಆಗಿರತದೆ (ಅನ್ನ. ೧೩೧). [← ಮರಾ. ಖಟಾರಾ]

**ಖಟಾಟೋಪ** (ನಾ). ೧. ದೊಡ್ಡ ಆಡಂಬರ; ಡೌಲು. ೨. ಸಾಹಸ; ಪ್ರಯತ್ನ: ದೇವರ ಕಾರಣಿಕರ ಮುಂದೆ ಮನುಷ್ಯರ ಖಟಾಟೋಪವೇನಿಲ್ಲ ವಲ್ಲ (ಸ್ವಪ್ನಹೊ. ೧೨೦). ೩. ಗಲಾಟೆ; ಗೊಂದಲ; ಗಡಿಬಿಡಿ: ಎಷ್ಟು ಖಟಾಟೋಪ ಎಷ್ಟು ಗೋಳಾಟ (ತಿಡುಗು. ೪೧); ಜಗತ್ತಿನ ಈ ಯಾವತ್ತು ಖಟಾಟೋಪವು ಮಾಯಾಪ್ರಸಾರವಿರುತ್ತದೆಂದು ಹೇಳಿ . . . ಉಪದೇಶವನ್ನು ಸ್ವಲ್ಪಮಟ್ಟಿಗೆ ಮಾಡಿದರು (ತುಳಸಿ. ೧೮೮). 'ಆಟಾಟೋಪ' ಪರಾ. [← ಹಿಂ. ಮರಾ. ಖಟಾಟೋಪ್]

**ಖಟಾರ** 'ಖಟರಾ' ನೋ.

**ಖಟಿಕೆ** (ನಾ). ಸೀಮೆಸುಣ್ಣ; ಖಡು. [ಸಂ. ಖಟಿಕಾ]

**ಖಟಿಪಿಟಿ** 'ಕಟಪಟಿ' ನೋ.

**ಖಟಿಲ್** 'ಖಟಾಲ್' ನೋ.

**ಖಟೀತ** (ಗು). ತಡೆದು ನಿಂತ; ಸ್ಥಗಿತವಾದ; ಹಿಂದೆ ಉಳಿದ: ಎಷ್ಟೋ ಖಟೀತ ಜೀನಸು ಅಂದರೆ ಬಹಳ ದಿವಸದಲ್ಲಿ ಖರ್ಚು ಆಗುವಂಥ ಔಷಧಿ ವಗೈರೆ (ಮುಂಬವ್ಯಾ. ೯ ಪ್ರಸ್ತಾವನೆ). [← ಮರಾ. ಖಟೀತ್]

**ಖಟ್ಟ**, ಖಟ$_2$ (ಗು). ೧. ಬಲವಾದ; ಗಟ್ಟಿಯಾದ. 'ಖಟ್ಟಖರೆ' ಪರಾ. ೨. ಮೊಂಡ; ನಿಷ್ಠುರವಾದ: ಅವರಿಗೆ ಇವರಿಗೆ ಕೈಗಡಸಾಲ . . . ಖಟ್ಟ ಗಿರಾಕಿಗಳಿಗೆಲ್ಲಾ ಕೊಟ್ಟು (ಜನಜೀ. ೫೧); ಒಬ್ಬ ಖಟ್ಟ ಮುದುಕಿಯ ಹತ್ತಿರ ಎರಡು ಗಡಿಗೆಗಳಿವೆಯೆಂದು . . . ತಿಳಿಯಿತು (ಕನಕ. ೧೪). ಖಟ್ಟ: ೧. 'ಖಟಬಾಕಿ' ಪರಾ. [← ಮರಾ. ಕಟ್ಟಾ]

**ಖಟ್ಟಖರೆ** (ನಾ). ಕಡುಸತ್ಯ; ಪೂರ್ತಿ ನಿಜವಾದುದು: ಆಗದೀ ಖಟ್ಟಖರೆ ಆಗುವಂಥಾದು ಹೇಳರಿ (ನಾಥಾರಿ. ೪೧). [ಖಟ್ಟ + ಖರೆ$_1$ (< ಖರೆಯ)]

**ಖಟ್ಟಿಕ** (ನಾ). ೧. ಕಟುಕ; ಕಸಾಯಿಗಾರ. ೨. ಬೇಟೆಗಾರ; ಮೃಗಪಕ್ಷಿಗಳನ್ನು ಹಿಡಿದು ಮಾರುವವನು. [ಸಂ.]

**ಖಟ್ಟು** (ನಾ). ಒರೆಗೆ ಹಚ್ಚುವಿಕೆ; ಪರೀಕ್ಷೆ.

ಖಟ್ಟಿಗೆ ಹಚ್ಚು = ಒರೆಗೆ ಹಚ್ಚು; ಪರೀಕ್ಷೆಗೆ ಗುರಿಮಾಡು: "ಎಷ್ಟುದಿನ ಹೀಗೆ ನನಗೆ ಭಾರವಾಗಿರಬೇಕೆನ್ನುತ್ತೀ" ಎಂದು ಇವರು ಖಟ್ಟಿಗೆ ಹಚ್ಚಿದರು (ಕಾಗೆಕ. ೧೨೭); ಬಸವಂತಿ ಇಷ್ಟಾದರೂ ಅವನನ್ನು ಬಿಡದೆ ಖಟ್ಟಿಗೆ ಹಚ್ಚಿ (ದೀಪಹ. II, ೧೮೩). [?]

**ಖಟ್ಲೆ** 'ಕಟ್ಟಳೆ$_1$' ನೋ.

**ಖಟ್ವ** (ನಾ). ೧. ಮಂಚ; ಹೊರಸು: "ಹೊರಸು ಖಟ್ವಮೆನಿಸಿಕ್ಕು" (ಮಂಗರಾ. ೬೦-೧೫); ನೆಲದಲಿದರ್ಭಶನಾ ಮಂಚಮಂ ಬಯಸುವಂ ಸಲೆ ಖಟ್ವದಿಂದಿಳಿಯನೆಳಸುವಂ (ವೀಶೈಪು. ೪-೨೫-೨೨). ೨. ಉಯ್ಯಾಲೆ; ತೂಗುಮಂಚ. ೩. [ನಾಟ್ಯ] ಇಪ್ಪತ್ತುನಾಲ್ಕು ಸಂಯುತ ಹಸ್ತಗಳಲ್ಲಿ ಒಂದು: ೧. ಅಂಜಲಿ . . . ೨೨. ಖಟ್ವ, ೨೩. ಬೇರುಂಡ, ೨೪. ಅವಹಿತ್ಥ (ಅಭಾನ್ಯ. ೪೮). [< ಸಂ. ಖಟ್ವಾ]

**ಖಟ್ವಾಂಗ** (ನಾ). ೧. ಮಂಚ: ಅಖಂಡಜ್ಞಾನಭರಿತಂಗೆ ಪೃಥ್ವಿಯೆ ಖಟ್ವಾಂಗ ಆಕಾಶವೇ ಕಿರೀಟ ಮೇಘಾದಿಗಳೆ ಮಜ್ಜನ (ಅಖಂಡೇ. ೩೭೯-೫೨). ೨. ತುದಿಯಲ್ಲಿ ತಲೆಬುರುಡೆಯುಳ್ಳ ಶಿವನ ಗದೆ; ಪರಮೇಶ್ವರನ ಆಯುಧ: ಹುಲಿಚರ್ಮವಾವ ವಸ್ತ್ರದೊಳಗು ಖಟ್ವಾಂಗವಾವ ಆಯುಧದೊಳಗು (ಅವಚಂ. ೧೫೪-೭೦೫); ಖಟ್ವಾಂಗಮಂ ಬಿಡಿಸಿ ಮಾದುಫಲಮನಿಂಬುಗೊಳಿಸಿ (ಗಿರಿಕ. ೧೦-೬೦೨); ಲಲಿತ ಖಟ್ವಾಂಗದ ಕಪಾಲದ ಹೊಳೆವ ಶೂಲದ ಕರದ ನಿಗಮಾವಳಿ ಶಿರೋಮಣಿ ಮೆಚ್ಚಿದನಂದೀಶಾನವಕ್ತ್ರದಲಿ (ಕುವ್ಯಾ. ಅ. ೬-೭೩). ೩. ಸೂರ್ಯವಂಶದ ಒಬ್ಬ ಅರಸು; ದಿಲೀಪ: ಎಡೆಯಾವಂ ನರರೊಳ್ ಖಟ್ವಾಂಗ ಭೂಪತಿಲಕಂಗಿಳೆಯೊಳ್ (ವಿಷ್ಣುಪು. ೧೪-೯೪). ೪. ಒಂದು ಬಗೆಯ ವೃಕ್ಷ; ಹೆಮ್ಮರ: "ಖಟ್ವಾಂಗಂ ತಾನರಳಕ್ಕುಂ" (ವಸ್ತುಕೋ. ೩೫-೧೭); "ಖಟ್ವಾಂಗ - ಹೆಮ್ಮರ" (ಔಷಧಿ. ೪೨). 'ಖಟ್ವಾಂಗಗುಳಿಗೆ' ಪರಾ. [ಸಂ.]

**ಖಟ್ವಾಂಗಗುಳಿಗೆ** (ನಾ). ಅತಿಸಾರಕ್ಕೆ ಔಷಧಿಯಾಗಿ ಕೊಡುವ ಮಾತ್ರೆ, —ಗುಳಿಗೆ: ಖಟ್ವಾಂಗಗುಳಿಗೆ: - ಹೆಮ್ಮರದ ತೊಕ್ಕನು ನಾಗಳ ನೀರಿನಲ್ಲಿ ಹಾಕಿ ಕಷಾಯವಿಕ್ಕಿ . . . ಗುಳಿಗೆಯಂ ಮಾಡಿ (ಸಕವೈ. ೩೩೦). [ಖಟ್ವಾಂಗ + ಗುಳಿಗೆ$_1$]

**ಖಟ್ವಾಂಗಧರ** (ನಾ). ಖಟ್ವಾಂಗವನ್ನು ಧರಿಸಿದವನು; ಶಿವ: ಖಟ್ವಾಂಗಧರಂ ಗಿರಿತನಯಾರ್ಧಾಂಗಧರಂ . . . ಚಂದ್ರಧರಂ (ವಸ್ತುಕೋ. ೩-೧೪); ಪಟ್ಟವ ಕಟ್ಟಿ ಸಲಹಿ ಪಾವನಮೂರ್ತಿ ಖಟ್ವಾಂಗ ಧರ ನೇಮಿಸಿದ (ಹರಿಸಾಂ. ೯೪-೩೯). [ಸಂ.]

**ಖಟ್ವಾಂಗಿ** (ನಾ). = ಖಟ್ವಾಂಗಧರ: ಖಟ್ವಾಂಗಿ [ಪಾಠಾಂ. ಕಷ್ವಾಂಗ] ಶಿವರೂಪ ಸಿದ್ಧರಾಮನ ಕಂಡು ಸಾಷ್ಟಾಂಗವೆರಗಿ ಕೊಂಡಾಡೆ (ಅಮುಸಾಂ. ೨-೪೪). [ಸಂ. ಖಟ್ವಾಂಗಿನ್]

**ಖಡ** (ನಾ). ೧. ಮಜ್ಜಿಗೆಹುಳಿ; ಪಳದ್ಯ. ೨. ಹುಲ್ಲು. ೩. ಒಡೆಯುವುದು; ಭಾಗಮಾಡುವುದು. [ಸಂ.]

**ಖಡಕು**, ಖಡಕ್ಕು (ಗು). ೧. ತೀಕ್ಷ್ಣವಾದ; ಉಗ್ರವಾದ; ಕಠೋರವಾದ. (ನಾ). ೨. ತೀವ್ರತೆ; ಉಗ್ರತೆ; ಆವೇಶ: ಎಷ್ಟು ಖಡಕಿನಿಂದ ಹೋರಾಡಿದರೂ ಸುತ್ತುವರಿದ ಸೇನೆಯ ಇದಿರು ಮೈಸೂರು ಬಲ ಹಿಂಜರಿಯುತ್ತಿತ್ತು (ಅನ್ನಾವ. ೨೧). ೩. ಸಡಗರ; ವಿಜೃಂಭಣೆ; ವೈಭವ: ಖಡಕೀಲೆ ಉಡಿಯಕ್ಕಿ ಹಾಕಿದರವ್ವಾ ಒಳ್ಳೆ ದುಡುಕೀಲೆ ಮುಂದಕೆ ನೂಕಿದರವ್ವಾ (ಶರೀಫ. ೨೧-೧); ಈ ವರಸದ ಜಾತ್ರಿ ಬಾಳ ಖಡಕಲೇ ಆಗೂದೈತಿ (ಬೆಂದಯು. ೫೩). ೪. ಕಠೋರನಾದವನು; ಕಟ್ಟುನಿಟ್ಟಾದವನು: ಅವರಣ್ಣ ಮೊದಲೆ ಖಡಕು. ಇಂಥಾ ಪತ್ರ ಹೋದರೆ ಸಾಕು. ತಿರಿಗಿ ಕಳಿಸಿಬಿಡ್ತಿ ಅಂತಾರ (ವೃತಿ. ೩೦೨).

**ಖಡಕ್ಕು**: ೧. ಖಡಕ್ಕಾದ (Strong) ಬೀರನ್ನು ಕಷ್ಟದ ಕೆಲಸಕ್ಕೆ ಕುಡಿಯುವುದು ಅಗತ್ಯವೆಂದು ಆವನು ತಿಳಿದುಕೊಂಡಿದ್ದನು (ಬೆಂಜನ್. ೬೫).

ಖಡಕ್ಕಾಗಿ = ಚೆನ್ನಾಗಿ; ಉತ್ತಮವಾಗಿ: ಒಳ್ಳೇ ಮಸಾಲೆ ಸಾಮಾನು ಹಾಕಿ ಖಡಕ್ಕಾಗಿ ಮಳ್ಳಿಸುತ್ತಿದ್ದೆ (ವೈನಿ. ೨೧೫). [← ಮರಾ. ಖಡಕ್; ಹಿಂ. ಕಡಕ್]

**ಖಡಕ್ಕು** 'ಖಡಕು' ನೋ.

**ಖಡಖಡ** (ನಾ). ಒಂದು ಅನುಕರಣ ಪದ. 'ಖಡಖಡನೆ' ಪರಾ.

**ಖಡಖಡನೆ** (ಅ). 'ಖಡಖಡ' ಎಂದು ಶಬ್ದವಾಗುವಂತೆ: ಖಡಖಡನೆ ಹಲ್ಗಡಿಯುತಲಿ ಗುಡುಗುಡಿಸುವೊ ಘನಘೋಷದಲಿ . . . ಆಡವಿಯ ಲ್ಲಾರ್ಭಟ ಮಾಡಿದಳು (ಕರ್ಣಾಕ. ೨೯೩). [ಖಡಖಡ + -ಅನೆ$_1$]

**ಖಡಖಡಾಟ** (ನಾ). ಖಡಖಡ ಶಬ್ದ ಮಾಡುವಿಕೆ; ಗರ್ಜನೆ: ಅತ್ತೆಯ ಗುಡುಗು ತನ್ನ ಖಡಖಡಾಟವನ್ನು ಇನ್ನೂ ಹೆಚ್ಚಿಸಿತು (ಸ್ಮೃತಿಚಿ. ೨೮). [← ಮರಾ. ಖಡಖಡಾಟ್; ಹಿಂ. ಖಡಖಡಾಹಟ್]

**ಖಡಖೋಡು**, ಖಡಾಖೋಡು (ನಾ). ಬಲವಾಗಿರುವುದು; ಮಜಬೂತು; ಬಂದೋಬಸ್ತು: ಅವನಿಗೆ ಖಡಖೋಡಾಗಿ . . . ಐಬಿಲ್ಲದೆ ಬಲವುಂಟಾದ್ದು (ಕಥಾಮಂ. IV, ೨೫). **ಖಡಾಖೋಡು**: ಈ ಚಿನ್ನದ ಬಳೆ ಖಡಾಖೋಡಾಗಿದೆ (ರೂಢಿ). [?]

**ಖಡಗಾಯಿ** (ನಾ). ಕಹಿಯಾದ ಕಾಯಿ; ವಿಷಗಾಯಿ: ಒಂದೇ ಸವತಿಯ ಬಳ್ಳಿಗೆ ಸೀಕಾಯಿ ಬಿಡುವಂತೆ ಕಹಿ ಖಡಗಾಯಿಯೂ ಬಿಡುತ್ತವೆ (ದೀಪಹ. II, ೩೬೦). [ಖಡ್$_0$ (< ಕಟ್ಟು$_2$) + ಕಾಯಿ$_4$ (< ಕಾಯ್$_4$)]

**ಖಡಚಿ** 'ಕಡಚಿ' ನೋ.

**ಖಡತರ** (ಗು). ಕಠೋರವಾದ; ಉಗ್ರವಾದ; ನಿಷ್ಠುರ: ಹಾಂಗ ಅನಬಾರದಪ್ಪಾ ಅನಂತಾ. ದೇವಿ ಭಾಳ ಖಡತರ (ನಿಸರ್ಗ. ೧೫೪). [← ಮರಾ. ಖಡತರ್]

**ಖಡಲ್ಲಿ** (ನಾ). ಒಂದು ಬಗೆಯ ಆಯುಧ; ಕೊಡಲಿ (?): ಕತ್ತಿ ತೆಡಾಯ ಖಡಲ್ಲಿ ತೆಯಲ್ಲಿ ಬಿಲ್ಲು ನಾರಾಚ ಗದೆ . . . ಮೊದಲಾದಾ ಬತ್ತೀಶಾಯುಧ (ಎಕ. XVI, ಗುಬ್ಬಿ, ೬೪-೨೧; 1672). [?]

**ಖಡಾಖಂಡಿತ** (ಗು). ಸುಸ್ಪಷ್ಟವಾದ; ಖಂಡತುಂಡಾದ; ನಿರ್ದಾಕ್ಷಿಣ್ಯವಾದ.

ಖಡಾಖಂಡಿತವಾಗಿ = ಖಂಡತುಂಡಾಗಿ; ಸ್ಪಷ್ಟವಾಗಿ; ನಿರ್ದಾಕ್ಷಿಣ್ಯವಾಗಿ: ತಾನು ಅಷ್ಟು ಖಡಾಖಂಡಿತವಾಗಿ ಮಾತನಾಡಿದ್ದು ತಪ್ಪು (ಏಳಜೀ. ೯೪); ನರಸಿಂಹ ಖಡಾಖಂಡಿತವಾಗಿ ಹೇಳಿದಾಗ ಚಹ ಮುಗಿದಿತ್ತು (ಮಾಮನೆ. ೨೬); ಆವಳು ಎಂದೂ ಅವನ ಎದುರಿಗೆ ವಿಚಾರ ವಾದವನ್ನು ಖಡಾಖಂಡಿತವಾಗಿ ಹೀಯಾಳಿಸಿರಲಿಲ್ಲ (ದೂರಸ. ೧೮೮). [?]

**ಖಡಾಖಡಿ$_1$**, ಕಡಾಖಡಿ, ಖಾಡಾಖಾಡಿ$_1$ (ನಾ). ಖಂಡಿತ; ಸ್ಪಷ್ಟವಾದುದು; ಖಂಡತುಂಡ: ನಾವುಗಳು ಖಡಾಖಡಿಯಾಗಿ ನಿಮಗೆ ಹೇಳಲೇಬೇಕು (ದೌಲತ್. ೨೬೬); ಈ ಚಕ್ರೇಶ್ವರನಿಗೆ ಖಡಾಖಡಿಯಾದ ಮಾತೊಂದನ್ನು ಹೇಳಿಹೋಗಬೇಕು (ಶ್ರೀರಾಯ. ೨೬೭); ನಾನು ಖಡಾಖಡಿಯಾಗಿ ನಿರಾಕರಿಸಿದೆನು (ಬೆಂಜನ್. ೨೦೦). **ಕಡಾಖಡಿ**: (ಕಿ). **ಖಾಡಾಖಾಡಿ$_1$**: ನಾವು ಖಾಡಾಖಾಡಿ ಮನಗಾಣುವುದರಿಂದ (ರೂಪಸಂ. ೨೦); ನಾನು ಬರುವುದಿಲ್ಲ ಎಂದು ಖಾಡಾಖಾಡಿಯಾಗಿ ನುಡಿದಳು (ಸಂಜೀವಿ. ೧೩೩). [← ಮರಾ. ಖಡಾಖಡೀ]

**ಖಡಾಖಡಿ$_2$** 'ಖಾಡಾಖಾಡಿ$_2$' ನೋ.

**ಖಡಾಖೋಡು** 'ಖಡಖೋಡು' ನೋ.

**ಖಡಾಜಂಗಿ**, ಖಾಡಾಜಂಗಿ (ನಾ). ಕಟುವಾದ ವಾದವಿವಾದ; ತೀವ್ರವಾದ ಜಗಳ: ಸುರೇಶ ತನ್ನ, ಶ್ಯಾಮರಾಯನ ನಡುವೆ ಆದ ಖಡಾಜಂಗಿಯ ವಿವರ ಒಪ್ಪಿಸಿದ (ದೀಪಹ. II, ೨೬೮); ಬರುವ ವಾರವೇ ಈ ಬಗ್ಗೆ ಸರಕಾರ ಮತ್ತು ಸಭಾಸದರಲ್ಲಿ 'ಖಡಾಜಂಗಿ' ಆಗುವ ಸಂಭವ ಬಹಳವಾಗಿದೆ (ಕರ್ಣಪ. ೬). **ಖಾಡಾಜಂಗಿ**: ಶಿನ್ನನ ಹೆಂಡತಿಗೆ ಮತ್ತು ತುಂಗಕ್ಕನಿಗೆ ಒಳ್ಳೇ ಖಾಡಾಜಂಗಿ (ಮೂರುದಾ. ೧೪೬). [← ಮರಾ. ಖಡಾಜಂಗೀ]

**ಖಡಾವಿಗೆ** 'ಕಡಾವಿಗೆ' ನೋ.

**ಖಡಿ$_1$** (ನಾ). ೧. ಕಲ್ಲಿನ ಸಣ್ಣ ಚೂರು; ಜಲ್ಲಿ: ರಸ್ತೆಯ ಮೇಲೆ ಖಡಿಹಾಕಿ . . . ಸಮಮಾಡುವುದೂ ಸಾಗಿದೆ (ಅನ್ನ. ೧೯೬). ೨. ಗೋಲಿ; ಗುಂಡು (?): ಸಡಗರ ಯಾರಿಂದ ಬಡಿವಾರ ಯಾರಿಂದ ಖಡಿ ಹೊಡದು ಆಡು ಮಗನಿಂದ ಕಟ್ಟಿಕಲ್ಲ ಜಡಿದೇರಿ ಬರುವ ಸೊಸಿಯಿಂದ (ಗರತಿ. ೧೧೧). [← ಮರಾ. ಖಡೀ]

**ಖಡಿ$_2$** (ನಾ). ಚೂರು; ತುಂಡು: ಕಾಮನಿಗೆ ಯೋಗ್ಯವಾದ ಮೃಗನೇತ್ರೆಯರ ಅವಯವಂಗಳ ಬಲ್ಲವರು ಕೂಡಿ ಕಾಡಗಿಚ್ಚಿನ ಖಡಿಗಳಂತಿರ್ಪ ಸ್ವರಂಗಳ ನೆನೆಯುವುದು (ಕಾಮಶಾ. ೨-೩೦). [< ಕಡಿ$_3$]

**ಖಡಿ$_3$** (ನಾ). ಕಟು; ಕಡು (?): ಮಡದಿ ಭಾಗೀರಥಿ ನಿನ್ನ ಖಡಿಯ ಕೋಪವ ಕಂಡು ಕೊಡಲಿಲ್ಲ ಹೆಣ್ಣು ಮಗನಿಗೆ, ಏ ಭಾಗೀರಥಿ ಕೊಡಲಿಲ್ಲ ಹೆಣ್ಣು ಮಗನಿಗೆ ಬ್ರಹ್ಮಚರ್ಯ ಹಿಡಿದ ಭೀಷ್ಮನ ಮರತೇನ (ಕರ್ಣಾಕ. ೨೩೬). [< ಕಡಿದು ?]

**ಖಡಿಕೆ** (ನಾ). = ಖಟಿಕೆ: (ಕಿ). [< ಸಂ. ಖಟಿಕಾ]

**ಖಡಿಚಿ** 'ಕಡಚಿ' ನೋ.

**ಖಡಿಯ** 'ಕಡೆಯ್ಯ$_2$' ನೋ.

**ಖಡು**, ಕಡು$_4$ (ನಾ). (ಉಕ) ಸೀಮೆಸುಣ್ಣ: ಸುಣ್ಣದ ಕಲ್ಲು ಖಡು, . . . ಮುಂತಾದ ಶಿಲೆಗಳಲ್ಲಿ ಕಾರ್ಬೊನ್ನು ಇರುತ್ತದೆ (ಮುಂಬಯಿ. ೬-೧೨); ಬಾಗಿಲ ಮೇಲೆ ಖಡುವಿನಿಂದ ಬರೆದ ಹೆಸರನ್ನು ಓದಿದ (ಪ್ರೇಮತ. ೬೫); ನೀಳವಾದ ಬೈತಲವು . . . ಖಡುವಿನ ನೀಳವಾದ ಗೆರೆಯಂತೆ ಶೋಭಿಸುತ್ತಿತ್ತು (ರಕ್ತಧ್ವ. ೨೧೬); ಖಡುವಿನ ಪುಡಿ ಕೊಟ್ಟರೂ ನಿದ್ದೆ ಬಂದಿತಂತೆ (ಸಾಹಿವಿ. ೩೮). **ಕಡು$_4$**: (ಕಿ). [← ಮರಾ. ಖಡೀ, ಖಡು, ಖಡೂ./ ಸಂ. ಖಡೀ]

**ಖಡುಗ** 'ಖಡ್ಗ' ನೋ.

**ಖಡುಗಧಾರೆ** 'ಖಡ್ಗಧಾರೆ' ನೋ.

**ಖಡುಗಮಿಗ** (ನಾ). = ಖಡ್ಗಮೃಗ: ಮೆರೆದುದೆಡಗೈ ರೌದ್ರಮುಷ್ಟಿಯಲ್ಲಿ ಖಡುಗಮಿಗದೊಗಲಿನ ಕರಿ ಗುರಾಣಿ (ಶ್ರೀರಾಮಾ. ೬೪೩-೩೯). [ಖಡುಗ (< ಖಡ್ಗ) + ಮಿಗ]

**ಖಡೆ** 'ಕಡೆಯ್ಯ$_2$' ನೋ.

**ಖಡೆಯ** 'ಕಡೆಯ್ಯ$_2$' ನೋ.

**ಖಡ್ಗ** (ನಾ). ೧. ಕತ್ತಿ; ಕರವಾಳ; ತಲವಾರ: "ಕರವಾಲಮಸಿ ರಿಷ್ಟಿ ಖಡ್ಗಂ ಕೃಪಾಣಮೆಂದಿರಲಡಾಯುಧಮೆನಿಕ್ಕು" (ಮಂಗರಾ. ೮೮-೩೬); ಖಡ್ಗದಿಂ ಖಡ್ಗದಿಂ ಮಾಡುವ ಯುದ್ಧಮಾವುದದು ಖಡ್ಗಾಖಡ್ಗಿ (ಶಮದ. ೧೮೫ ಪ್ರಯೋ); ಕಯ್ಯಾರೆ ಖಡ್ಗಮಂ ಕೊಟ್ಟು ತನ್ನರಸಿಯಂ ಹೊಯ್ಯೆಂದು ಪೇಳದಡವಿಗೆ ಕಳುಹಿ ಬಾಯೆಂದನಯ್ಯಯ್ಯೊ ರಾಘವಂ ಕಾರುಣ್ಯನಿಧಿ (ಜೈಮಿಭಾ. ೧೯-೧೬). ೨. = ಖಡ್ಗಮೃಗ: ಕರಡಿ ಕಾಡ್ಗೋಣ ಪೇರ್ಮರೆ ಚಿತ್ರಕಾಯ ಸೂಕರ ಖಡ್ಗ ಕಡವೆಯು (ಭೈರವೇ. ೩-೧೬). ೩. ಎಂಟು ಮಹಾ ನರಕಗಳಲ್ಲಿ ಒಂದು: ಖಡ್ಗ . . . ಸಂತಾಪಂಗಳೆಂಬಿವೇ ಯೆಂಟು ಮಹಾನರಕಂಗಳು (ವಿವೇಕ. ೧೭೪).

೪. [ಕಾವ್ಯಮೀ] ಒಂದು ಬಗೆಯ ಚಿತ್ರಕಾವ್ಯ; ಖಡ್ಗದ ಆಕಾರದಲ್ಲಿರುವ ಪದ್ಯಬಂಧ: (೬). 'ಖಟ್ಗ' ಪರಾ. ೫. [ವೀಶೈ] ವೀರಭದ್ರನ ಸ್ತೋತ್ರ: ಪದ್ಧತಿಯಂತೆ ಭಕ್ತರಹಳ್ಳಿಯಿಂದ ಲಿಂಗಧೀರಪ್ಪನ ವಂಶದವರು ಬಂದು ವೀರಭದ್ರನ ಅವತಾರಕ್ಕೆ ಸಂಬಂಧಿಸಿದ ಖಡ್ಗಗಳನ್ನು ಹೇಳಿ ಹೋದರು (ಊರುಕ. ೧೦೨).

ಖಡ್ಗಹೇಳುವದು = ಕೈಯಲ್ಲಿ ಖಡ್ಗವನ್ನು ಹಿಡಿದು ವೀರಭದ್ರದೇವರನ್ನು ಸ್ತುತಿಸುವಿಕೆ. [ಸಂ.]

**ಖಡ್ಗಕರ** (ನಾ). ಕತ್ತಿ ಹಿಡಿದಿರುವ ಕೈ; ಖಡ್ಗಪಾಣಿ: ಖಡ್ಗಕರದಿಂ ಮುನ್ನಲೈದಾಸ್ಥಾನಸಾಲೆಗೆ ಕುಳಿತು ವಿಷ್ಟರದಿ (ಬಜ್ಜಪು. ೧೦೨-೫೦). [ಖಡ್ಗ + ಕರ್]

**ಖಡ್ಗಚ್ಛವಿ** (ನಾ). ಖಡ್ಗದ ಹೊಳಪು: ಝಗಝಗಿಪ ತನುರುಚಿಯ ಮಿಂಚನು ಮಿಗುವ ಖಡ್ಗಚ್ಛವಿಯ ತಲೆಯೊತ್ತುಗಳ ಚಾವಡಿಯೊಳಗೆ ಕೌರವರಾಯನೈತಂದ (ಕುವ್ಯಾಆ. ೬-೨೬). [ಖಡ್ಗ + ಛವಿ]

**ಖಡ್ಗಧಾರಾವ್ರತ** (ನಾ). ೧. ದಂಪತಿಗಳು ಏಕಶಯ್ಯೆಯಲ್ಲಿದ್ದರೂ ಸಂಯಮದಿಂದ ಇರುವುದು: ಖಡ್ಗಧಾರಾವ್ರತವನಾಂತು ದ ಶ ರ ಥ ನೃ ಪ ಂ . . . ತನುಜಾತಕಾಮೇಚ್ಛೆಯಿಂ ಕೈಕೊಂಡು (ಶ್ರೀರಾಮಾ. ೧೧-೨೯೬).'ಅಸಿಧಾರಾವ್ರತ' ಪರಾ. ೨. ಆಚರಿಸಲು ಕಷ್ಟವಾದ ವ್ರತ. [ಸಂ. (ಖಡ್ಗ + ಧಾರಾ + ವ್ರತ)]

**ಖಡ್ಗಧಾರೆ** (ನಾ). = ಖಟ್ಗಧಾರೆ: ಕೋ ೕ ಪಾ ನ ಲ ನ ಂ ಖ ಡ್ಗ [ಪಾಠಾಂ. ಟ್ಗ] ಧಾರಾಜಲದಿಂ ನಂದಿಸಲುಂ (ಪಂರಾಮಾ. ೧೩-೧೩ ವ); ಚೋರರ ಖಡ್ಗಧಾರೆಯಿಂ ಬಸವಳಿದ ಹಸುಳೆಯಂ ತನ್ನಯ ಕುಮಾರನೆಂದೇ ಬಗೆದು ಕರೆಕರೆದು ತಲೆದಡವಿ (ಹಚಕಾ. ೧೩-೨). [ಖಡ್ಗ + ಧಾರೆ]

**ಖಡ್ಗಧೇನುಕ** (ನಾ). ೧. ಕಿರುಗತ್ತಿ; ಸುರಗಿ: ಕೋಶಗುಪ್ತಗುಲ್ಫಾಂತರಪ್ರಾಪ್ತ ಖಡ್ಗಧೇನುಕಮಾಂಧ್ರ ಧಾನುಷ್ಕಬಲಂ (ಆದಿಪು. ೧೩-೪೫). 'ಅಸಿಧೇನುಕೆ' ಪರಾ. ೨. = ಖಡ್ಗಮೃಗ. [ಸಂ. ಖಡ್ಗಧೇನುಕಾ]

**ಖಡ್ಗಪಿಧಾನ** (ನಾ). ಕತ್ತಿಯ ಒರೆ; ಖಡ್ಗಕೋಶ: "ಕೋಶಃ, ಪ್ರತ್ಯಾಕಾರಃ, ಖಡ್ಗಪಿಧಾನಂ – ಈ ೩ ಒಜೆ" (ಹಲಾಯು. ೭೮-೩೯೯); "ಕೋಶಂ ಖಡ್ಗಪಿಧಾನಂ" (ವಸ್ತುಕೋ. ೧೩೫-೧೦೦). [ಖಡ್ಗ + ಪಿಧಾನ]

**ಖಡ್ಗಫಲ** (ನಾ). ಕತ್ತಿಯ ಅಲಗು; ಖಡ್ಗಧಾರೆ. [ಖಡ್ಗ + ಫಲ]

**ಖಡ್ಗಬಿನ್ನಾಣ** (ನಾ). ಕತ್ತಿಯ ವರಸೆ; ಖಡ್ಗಪ್ರಯೋಗದ ವಿಧಾನ: ಸ್ವಪಕ್ಷ ಪರಪಕ್ಷ ಹೆಲ್ಲಣೆ ನಿರ್ವಾದ . . . ತಾಳವಟ್ಟವೆಂಬ ನಾನಾವಿಧ ಖಡ್ಗಬಿನ್ನಾಣಮಂ (ತ್ರಿಪುವಿ. ೨೩-೧೭ ವ). [ಖಡ್ಗ + ಬಿನ್ನಾಣ]

**ಖಡ್ಗಮುದ್ರೆ** (ನಾ). ಖಡ್ಗದ ಚಿಹ್ನೆವುಳ್ಳ ಮುದ್ರೆ: ನಾಕು ಸುತ್ತೆತ್ತ ಕೊಲೆಗೆ ಖಡ್ಗಮುದ್ರೆಯದೇಕೆ ನಾನಿದಕಂಜಿ . . . ಕಳುಪಿದಡೆಮ್ಮ ಭೂಕಾಂತನೆನಗೆ ಮುನಿಯನೆ (ಕುರಾಸಾಂ. ೧೧-೮). [ಖಡ್ಗ + ಮುದ್ರೆ]

**ಖಡ್ಗಮುಷ್ಟಿ** (ನಾ). ೧. ಖಡ್ಗವನ್ನು ಹಿಡಿದ ಮುಷ್ಟಿ; ಖಡ್ಗಹಸ್ತ: ಹುಯ್ಯಲಿಗೆ ಹೊಗುವಾಳ ತಱಿದನು ಖಡ್ಗಮುಷ್ಟಿಯ ಕಾಲಭೈರವ ಬೀದಿವರಿದನು ಕೇರಿಕೇರಿಯಲಿ (ಕುವ್ಯಾಗ. ೯-೩೬). ೨. ಕತ್ತಿಯ ಹಿಡಿ, —ಹಿಡಿಕೆ: "ತ್ಸರು ಖಡ್ಗಮುಷ್ಟಿ" (ವಸ್ತುಕೋ. ೮೫-೨೧). ೩. ಕತ್ತಿಯನ್ನು ಕೈಯಲ್ಲಿ ಹಿಡಿದವನು; ಖಡ್ಗಪಾಣಿ. [ಖಡ್ಗ + ಮುಷ್ಟಿ]

**ಖಡ್ಗಮೃಗ** (ನಾ). ಮೂಗಿನ ಮೇಲೆ ಕೊಂಬುಳ್ಳ ಮೃಗ; ಗಂಡಕಮೃಗ; ಗೇಂಡಾಮೃಗ: "ಗಂಡಕಂ ಖಡ್ಗಮೃಗಮಕ್ಕು" (ಮಂಗರಾ. ೪೯-೧೧); ಕಾಡುಗಳಲ್ಲಿ ಜೀವಿಸುವಾಗ ಖಡ್ಗ[ಪಾಠಾಂ. ಡ್ಗಿ]ಮೃಗವು ೭೦-೮೦ ವರ್ಷಕಾಲ ಬಾಳುವುದು (ಬಾಲಪ್ರ. III, ೧೩೮೫). 'ಖಡ್ಗಿ' ಪರಾ. [ಖಡ್ಗ + ಮೃಗ]

**ಖಡ್ಗರತ್ನ** (ನಾ). [ಜೈನ] ಚಕ್ರವರ್ತಿಗಳಿಗೆ ಸಹಜವಾಗಿ ಒದಗುವ ಏಳು ಅಜೀವರತ್ನಗಳಲ್ಲಿ ಒಂದು; ಶ್ರೇಷ್ಠವಾದ ಖಡ್ಗ: ಸೌನಂದಕಮೆಂಬ ಖಡ್ಗರತ್ನಮುಂ (ಆದಿಪು. ೧೧-೩,ವ); ಜವನ ನಾಲಗೆಯ ಪೋಲ್ವೆಯಾದ ಸೌಗಂಧಕಮೆಂಬ ಖಡ್ಗರತ್ನಮುಂ (ಚಂದ್ರಪು. ೬-೧೦೧ ವ). [ಖಡ್ಗ + ರತ್ನ]

**ಖಡ್ಗವಿದ್ಯೆ** (ನಾ). ೧. ಖಡ್ಗಪ್ರಯೋಗದ ವಿದ್ಯೆ. ೨. ಉಳಿಯನ್ನು ಉಪಯೋಗಿಸುವ ವಿದ್ಯೆ; ಚಾಣದಿಂದ ಕಂಡರಿಸುವ ಶಕ್ತಿ.

ಖಡ್ಗವಿದ್ಯೆಸಿದ್ಧಾಚಾರ್ಯ = ಕಂಡರಿಸುವುದರಲ್ಲಿ ಬಲ್ಲಿದ: ಕಲ್ಲ ಬೆಸಗೆಯ್ದೊ ಅಯ್ಯಣ್ಣ××× ವಂ ಬರೆದೊ ಖಡ್ಗವಿದ್ಯೆಸಿದ್ಧಾಚಾರ್ಯೊ (ಎಕ. VIII, ಸೊರಬ. ೨೪೫-೫; 950). [ಖಡ್ಗ + ವಿದ್ಯೆ]

**ಖಡ್ಗಹಸ್ತ** (ನಾ). ೧. ಕೈಯಲ್ಲಿ ಕತ್ತಿ ಹಿಡಿದವನು; ಖಡ್ಗಪಾಣಿ. ೨. ಭೈರವ: "ತೋರರಮೂರ್ತಿಯು ಖಡ್ಗಹಸ್ತಂ ದಿಗಂಬರಂ ಭೈರವನ ಪೆಸರಕ್ಕು" (ಮಂಗರಾ. ೫-೧೫). [ಖಡ್ಗ + ಹಸ್ತ]

**ಖಡ್ಗಾಂಶು** (ನಾ). ಖಡ್ಗದ ಕಿರಣ, —ಹೊಳಪು, —ಕಾಂತಿ: ದೆಸೆಯಂ ಖಡ್ಗಾಂಶುಜಾಲಂ ಬೆಳಗೆ ಧರಣಿಯಂ ದಾನಧಾರಾಂಬು ಜೌಗೇಱಿಸೆ (ಚಂದ್ರಪು. ೧೦-೫೮). [ಖಡ್ಗ + ಅಂಶು]

**ಖಡ್ಗಾಖಡ್ಗಿ** (ನಾ). ಖಡ್ಗ ಖಡ್ಗದಿಂದ ಮಾಡುವ ಯುದ್ಧ; ಕತ್ತಿಕಾಳಗ: ಕೊತ್ತಳದಾಳ್ವೇರಿಯ ಜೆಟ್ಟಿಗರೊಳ್ ಶಸ್ತ್ರಾಶಸ್ತ್ರಿಯುಂ ಖಡ್ಗಾಖಡ್ಗಿಯುಂ ದಂಡಾದಂಡಿಯುಂ ಕಚಾಕಚಿಯುಮಾಗಿ (ಅನಂಪು. ೧೧-೮೩ ಫ); ಖಡ್ಗದಿಂ ಖಡ್ಗದಿಂ ಮಾಡುವ ಯುದ್ಧಮಾವುದದು ಖಡ್ಗಾಖಡ್ಗಿ (ಶಮದ. ೧೮೫ ಪ್ರಯೋ); ತರದಿ ದಂಡಾದಂಡಿ ಕೂಡೆ ಖಡ್ಗಾಖಡ್ಗಿ ಭರದ ಮುಷ್ಟಾಮುಷ್ಟಿ ಕೂಡೆ ಕೇಶಾಕೇಶಿ . . . ಯುದ್ಧಮಾಡುದು (ಸಾಳ್ವಭಾ. ೧೫-೧೪). [ಸಂ.]

**ಖಡ್ಗಾದಂಡಿ** (ನಾ). ಖಡ್ಗ ಮತ್ತು ದಂಡಗಳಿಂದ ಮಾಡುವ ಯುದ್ಧ (?): ಪಟ್ಟುವಿಡಿದು ಖಡ್ಗಾದಂಡಿ ಯುದ್ಧಮಾಡುವರು (ಬಿರುಗಂ. ೩೫-೧೫). [?]

**ಖಡ್ಗಾಸನ** (ನಾ). [ಯೋಗ] ಯೋಗಾಸನಗಳಲ್ಲಿ ಒಂದು: ಯೋಗಯೋಗ್ಯಾಸನಗಳಲ್ಲಿ ಖಡ್ಗಾಸನ . . . ಅರ್ಧಾಸನಾದಿಯೆಂಬತ್ತನಾಲ್ಕಾಸನಭೇದಗಳು (ವಿವೇಕ. ೧೪೪). [ಖಡ್ಗ + ಆಸನ]

**ಖಡ್ಗಿ** (ನಾ). ೧. ಖಡ್ಗವನ್ನು ಹಿಡಿದವನು; ಖಡ್ಗಧಾರಿ: ತಲೆವರಿಗೆಯಲಿ ಖಡ್ಗಿಗಳು[ಪಾಠಾಂ. ರು] ಮುಂಕೊಳಿಸಿ ನಿಂದರು (ತೊರರಾ. ೬-೧೩-೨೧). ೨. ಗಂಡಕಮೃಗ; ಗೇಂಡಾಮೃಗ; ಖಡ್ಗಮೃಗ: ಅಪೂತಚರಿತ್ರೆಗೆ ಮೆಯ್ಯಾಸಾಗಿ ಕೃಪಾಣಪಾಣಿಪಲ್ಲವೆಯರ್ ದೇವಾಪಗೆಯ ಕೆಲದ ಖಡ್ಗಿಕಳಾಪಮನನುಕರಿಸಿದರ್ (ಶಾಂತಿಪು. ೯-೯೧); ನರಿ ತೋಳ . . . ಸಾರಂಗ ಖಡ್ಗಿಗಳನುಱೆ ಪಿಡಿದರ್ (ಹವಿಮ್ಮಾರ. ೪-೫೯); ಮತ್ತೆಸೆವ ಖಡ್ಗಿ ಮರೆ ಶಾರ್ದೂಲ ಭಲ್ಲೂಕ (ರುಕ್ಮಾಂಗ. ೧೦-೪). [ಸಂ. ಖಡ್ಗಿನ್]

**ಖಡ್ಗಿಗ** (ನಾ). ಖಡ್ಗವನ್ನು ಉಳ್ಳವನು; ಕತ್ತಿಯನ್ನು ಹಿಡಿದವನು: ತಲೆವರಿಗೆಯಲಿ ಖಡ್ಗಿಗರು [ಪಾಠಾಂ. ಳು] ಮುಂಕೊಳಿಸಿ ನಿಂದರು (ತೊರರಾ. ೬-೧೩-೨೧). [ಖಡ್ಗ + -ಇಗ]

**ಖಡ್ಗಿಧೇನುಕ** (ನಾ). ಹೆಣ್ಣು ಖಡ್ಗಮೃಗ : ಆಗಳ್ ಪೆತ್ತ ಮಱಿಗಳಂ ಬಿಟ್ಟು ಬೆದಱಿ ಪೋಗಲಾಱದೆಳಸಿ ನಿಲಲಾಱದೆ ಬಾಯ್ವಿಟ್ಟೊದಱಿ ಪೆಳಱಿ ಪರಿವ ಖಡ್ಗಿಧೇನುಕಂಗಳ ಕರುಣಾಕ್ರಂದನಂಗಳೊಳಂ (ಕಾದಂಪೂ. ೧೬೦). [ಸಂ. ಖಡ್ಗಿಧೇನುಕಾ]

**ಖಡ್ಗಿಮೃಗ** (ನಾ). = ಖಡ್ಗಿಧೇನುಕ: "ವಾರ್ಧ್ರೀಣಸಃ, ಖಡ್ಗೀ, ಗಂಡಕಃ-ಈ ೩ ಖಡ್ಗಿಮೃಗಂ" (ಹಲಾಯು. ೩೮-೬೪); "ಗಂಡಕಂ ಖಡ್ಗಿ [ಪಾಠಾಂ. ಡ್ಗ] ಮೃಗಮಕ್ಕು" (ಮಂಗರಾ. ೪೯-೧೧). [ಸಂ.]

**ಖಡ್ಡ**$_1$ 'ಕಡ್ಡ$_1$' ನೋ.

**ಖಡ್ಡ**$_2$ 'ಕಡ್ಡ$_2$' ನೋ.

**ಖಡ್ಡಣಿಗೆ** 'ಕಡ್ಡಣಿಗೆ' ನೋ.

**ಖಡ್ಡತನ** 'ಕಡ್ಡತನ' ನೋ.

**ಖಡ್ಡಳಿ** (ಕ್ರಿ). ದಿಟ್ಟತನವಿಲ್ಲದಂತಾಗು ; ಧೈರ್ಯಗೆಡು : ಅಡ್ಡ ಮುಡಿಯ ಸೋಮರ್ಮುಡಿಯ ಸೊನ್ನಾರದ ದೊಡ್ಡ ಮುಡಿಯ ತೆಕ್ಕೆದುಱುಬ ಒಡ್ಡುದೋಱದೆ ಬಿಟ್ಟು ಬೇಸಱು ಮುಡಿಗಟ್ಟಿ ಖಡ್ಡಳಿದೆಯ್ತಂದರೊಸೆದು (ಭರಜ. ೧೬-೨೪). [ಖಡ್ಡು (< ಕಡ್ಡ$_1$) + ಅಳಿ$_1$ (< ಅೞಿ$_1$)]

**ಖಡ್ಡಾಯ** 'ಕಡ್ಡಾಯ' ನೋ.

**ಖಡ್ಡಿ**$_1$ 'ಕಡ್ಡಿ' ನೋ.

**ಖಡ್ಡಿ**$_2$ (ನಾ). ದಿಟ್ಟತನ; ಧೈರ್ಯ : ಹರಣರಕ್ಷೆ ನಿಮಿತ್ತ ಮರಣಾಧ್ವರದ ಕೃತಕವನೊಡ್ಡಿದರೆ ಹಿತಕರವಹುದೆ ಬಿಡು ಬೇಗ ಖಡ್ಡಿಯೊಳೀಳು[ಪಾಠಾಂ. ಕಲಿಯಾಗೇಳು] ರಣಕೆಂದ (ತೊರರಾ. ೬-೪೨-೩೧). [< ಕಡ್ಡ$_1$ ?]

**ಖಡ್ಡಿಚಿರಾಯತ** (ನಾ). ಒಂದು ಔಷಧಿ ದ್ರವ್ಯ : ಖಡ್ಡಿಚಿರಾಯತ (ಮುಂಬವ್ಯಾ. ೧೨೪). [ಖಡ್ಡಿ$_1$ (< ಕಡ್ಡಿ) + ಚಿರಾಯತ]

**ಖಡ್ಡಿಬತ್ತಿ** 'ಕಡ್ಡಿಬತ್ತಿ' ನೋ.

**ಖಡ್ಡಿವಲೆ** 'ಕಡ್ಡಿವಲೆ' ನೋ.

**ಖಡ್ಡಿಸು** (ಕ್ರಿ). ಖಂಡಿಸು ; ನಿರೋಧಿಸು ; ತಡೆ ; ನಿಲ್ಲಿಸು (?) : ವಿಷಾನಲಾಗ್ರವನಡ್ಡವಿಸಿ ಫಡ ಹೋಗದಿರು ಹೋಗದಿರು ನಿಲ್ಲೆನುತ ಖಡ್ಡಿಸುತ ಕರೆದಡೆ ಕರಾಗ್ರಕೆ ಗೆಡ್ಡೆ ಸಹಿತೈತಂದುದಾ ವಿಷದೊಡ್ಡು (ನಿಭಾಗ. ೭-೬-೪೪) ; ಖಡ್ಡಿಸಿದರೆಂತಱಿವರೆನ್ನನು ಜಡ್ಡಮತಿಗಳು (ನಿಭಾಗ. ೧೦-೮-೮) ; ಖಳ ಖಡ್ಡಿಸುತ ಬೆಂಬತ್ತಿದನು ನಿಲು ಹೋಗದಿರು ಎನುತ (ನಿಭಾಗ. ೧೦-೫೧-೪೫) ; "ಹಟಮಾಡು" (ನಿಭಾಗ. ಕೋಶ). [< ಖಂಡಿಸು ?]

**ಖಡ್ಡು** 'ಕಡ್ಡ$_1$' ನೋ.

**ಖಣ**$_1$ (ನಾ). ೧. = ಕಳ್ಳ$_3$ ೧ : ಕಾಳು ಪೂರಾ ಒಣಗಿದ ಮೇಲೆ ಖಣವ ಮಾಡಿ, ಹಂತಿಯ ಕಟ್ಟಿ, ಕಾಳು ತುಳಿಸಿ, ತೂರಿ ಮನೆಗೆ ತೆಗೆದುಕೊಂಡು ಹೋಗುತ್ತಾರೆ (ಮುಂಬಯಿ. ೫-೧೯೭). ೨. ಕಣದ ಮೇಲಿನ ತೆರಿಗೆ: ಖಣಾ ಕತರಿಗೆಯಿಲ್ಲ ಸುಂಕ ಗಣಾಚಾರಯಿಲ್ಲ (ಮೈಆರಿ. ೧೯೩೧, ೪೭-೪ ; 1653). ೩. ಮಲ್ಲಯುದ್ಧದ ರಂಗ; ಅಖಾಡ : ಪೌರುಷವು ದೈವದ ಕೂಡ ಗುದ್ದಾಡುವ ಕುಸ್ತಿಯ (ಕಣ, ಕಳ) ಖಣವೆಂದೂ . . . ಬೇರೆ ಬೇರೆ ರಸಿಕರು ಹೇಳುವರು (ಸಾಹಿವಿ. ೪೪). ೪. ಸೆಳೆ ; ಖಾನೆ : ತಾನು ಬರೆಯುವ ಮೇಜಿಗೆ ಬಂದ. ಅದರ ಖಣದೊಳಗಿಂದ ಆ ಪತ್ರ ತೆಗೆದ (ಮೂರುದಾ. ೨೦೪). ೫. (?) : ಇದೊಂದು ದೂಳಿಚಿತ್ರದ ಖಣಮೆಂದು ಮೆಯ್ಯೊರಸಿ ಧೀಂಕಿಡುವರ್ ಕಡೆಯೊಳ್ ಲತಾಂಗಿಯರ್ (ಆನಂಪು. ೬-೪೪) ; ಮಂಜಿನಿಂ ಸುರಿವ ಖಣಕಮೃತಮಂ ನೀವರೆ ನಿಖಿಲ ಜನದಿಂ ಗುಣವೆತ್ತ ಪುರುಷಜನ್ಮವ ಕೆಡಿಪರೆ ತಪಾಗ್ರಣಿಯಾಗದಿಹ ಪರದೊಳು (ಲಿಂಗಪು. ೧೧-೩೪) ; ಖಣವು, ರಣವು, ಜನವು ಹೆಣವು ಸಾವಿಗಾಗಿ ದುಡಿವರೆ (ಗಂಗಾವ. ೫೯-೧೩). [< ಕಳ$_3$]

**ಖಣ**$_2$ 'ಕಣ$_2$' ನೋ.

**ಖಣಖಣ** 'ಕಣಕಣ' ನೋ.

**ಖಣತ್ಕಾರ** (ನಾ). ಖಣಖಣ ಎಂಬ ಧ್ವನಿ : ಬಾಣಾಸಾರ ಘೋರ ಧ್ವನಿಯುಮಸಿಖಣತ್ಕಾರಮುಂ ಪರ್ವಿ (ಪಂರಾಮಾ. ೧೩-೩೭) ; ಖಡ್ಗದ ಖಣತ್ಕಾರಂಗಳಿಂ (ಶ್ರೀರಾಮಾ. ೪೭೪-೧೭). [ಸಂ.]

**ಖಣತ್ಕೃತಿ** (ನಾ). = ಖಣತ್ಕಾರ : ಆ ಸದ್ದನತಿಗಳೆದು ಕೈದುಗಳ ಕರ್ಬುನ ಖಣತ್ಕೃತಿಗಳೇರ್ದುವು (ಶ್ರೀರಾಮಾ. ೬೦೭-೫೭). [ಸಂ.]

**ಖಣಯ** 'ಕಣೆಯ$_3$' ನೋ.

**ಖಣಿ**$_1$ 'ಕಣಿ$_2$' ನೋ.

**ಖಣಿ**$_2$ 'ಕಣಿ$_6$' ನೋ.

**ಖಣಿ**$_3$ (ನಾ). ಒಂದು ಅನುಕರಣ ಶಬ್ದ. 'ಖಣಿಗುಟ್ಟು' ಪರಾ.

**ಖಣಿಗುಟ್ಟು** (ಕ್ರಿ). ಖಣಖಣ ಸದ್ದುಮಾಡು : ಕಲ್ಲುದಾರಿ ಅವನ ಕತ್ತೆಯ ಚುರುಕುಗೊರಸುಗಳ ಹೊಡೆತದಲ್ಲಿ ಖಣಿಗುಟ್ಟಿ ಹೊಗೆಯುಗುಳುತ್ತದೆ (ನಗಹೊ. ೪).

ಖಣಿಖಣಿಗುಟ್ಟು (ದ್ವಿರುಕ್ತಿ) : ಚೆನ್ನಾಗಿ ಬಲಿತ ಜೇಗಿನ ಮರ ಒಂದಕ್ಕೊಂದು ತಟ್ಟಿದರೆ ಖಣಿಖಣಿಗುಟ್ಟುವಂತಿರುತ್ತದೆ (ನಾಪದ. ೪). [ಖಣಿ$_3$ + ಕುಟ್ಟು$_1$]

**ಖಣಿತೆಗಾರ** (ನಾ). (?) : ಹತ್ತುಸಾವಿರ ಮಂದಿ ನೆಲಧೊರೆಗಳ ಹುರುಳು ಗೆ[ಗ]ಡಿ ಖಣಿತೆಗಾರರನ್ನೆಂದು ಸಾತ್ಯಕಿಯು ಕೋಪವಂ ಧರಿಸಿದಂ (ತುರಂಗ. ೪೫-೨೨). ℙ 'ಭಣಿತೆಗಾರ' ಎಂಬುದರ ಅಪಲಿಖಿತ ವಿರಬಹುದೆ ? [?]

**ಖಣಿಲ್** 'ಖಟಿಲ್' ನೋ.

**ಖತ**, ಕತ್ತು$_4$, ಖತ್ತ, ಖತ್ತು (ನಾ). ೧. ಕೈಬರೆಹ; ಬರೆವಣಿಗೆ. ೨. ಕಾಗದ ; ಪತ್ರ. ೩. ಬರೆಯುವವನು ; ಕರಣಿಕ ; ಕಾರಕೂನ : ಖತ ಸುಬ್ಬರಾವ ಮುನಷಿ ಹಜೂರಹ ಮೊಕ್ಕಾಮ ನಂಜನಗೂಡ (ಮೈಆರಿ. ೧೯೨೯, ೯೪-೪೫; 1843). **ಕತ್ತು$_4$** : (೩). **ಖತ್ತ** : ೨. ಖತ್ತ ಅಶ್ವತ್ಥನಾರಣ್ಣೆಯ ಮುನಶಿ (ಮೈಆರಿ. ೧೯೩೦, ೪೩-೪೭ ; 1812). **ಖತ್ತು** : ೨. ೧೮೧೨ನೇ ಇಸವಿ ಖತ್ತು ಮುನಿಶಿ ತಿಮ್ಮಪ್ಪ ಹಜೂರು (ಮೈಆರಿ. ೧೯೩೪, ೫೨-೧೮ ; 1812). [← ಹಿಂ. ಅರ. ಖತ್ತ್; ಮರಾ. ಖತ]

**ಖತಂ** (ನಾ). ಮುಕ್ತಾಯ ; ಸಮಾಪ್ತಿ : ಖತಂ ಆತು ಅವನ ಡ್ರೈವರ್‌ಗಿರಿ (ಬೆಂಗಬ. ೧೭೪). [← ಅರ. ಹಿಂ. ಖತಮ್]

**ಖತಮಾಲಿ** (ನಾ). ೧. ಮೋಡ ; ಮೇಘ. ೨. ಹೊಗೆ ; ಧೂಮ. [ಸಂ.]

**ಖತಲ್** 'ಖತಲು' ನೋ.

**ಖತಲು**, ಖತಲ್ (ನಾ). ಕೊಲೆ ; ವಧೆ : ಸದರಿ ಸೋಜರರು ಬಾರು ಜನರಲ್ಲಿ ಹೊಕ್ಕು ಹೊಡದು ಖತಲು ಮಾಡಿ ತೋಪುಗಳ ಕಸಕೊಂಡರು (ಹೈದರ. ೭೦). **ಖತಲ್** : ತಕರಾರು ಮಾಡಿದರೆ ಖತಲ್ ಮಾಡಿಯೇನು (ಮುಸುಗ. ೧೪). [← ಅರ. ಕತ್ಲ್ ; ಮರಾ. ಕತಲ್, ಕತ್ತಲ್]

**ಖತಾಯತಿ**, ಖತಾಯಿತಿ (ನಾ). ದಾಖಲೆ ; ನಮೂದು ; ಉಲ್ಲೇಖ : ಜಫ್ತಿ ಮಾಡಲು ಯಾವ ಸ್ವತ್ತು ದೊರೆಯದ ಪಕ್ಷದಲ್ಲಿ ಅದನ್ನು ಸಹಾ ತಗಾದೆ ನೋಟೀಸಿನ ಮೇಲೆ ತಾರೀಖಿನೊಡನೆ ಖತಾಯತಿ ಮಾಡಬೇಕು (ಗ್ರಾಮಾಕ. ೭೪). **ಖತಾಯಿತಿ** : ನ್ಯಾಯಾಲಯದ ಪದಾಧಿಕಾರಿಗಳು ಯಾವ ನಮೂನೆಗಳಲ್ಲಿ ಪುಸ್ತಕಗಳನ್ನೂ ಖತಾಯಿತಿಗಳನ್ನೂ ಲೆಕ್ಕಗಳನ್ನೂ ಇಟ್ಟರಬೇಕಾಗಿದೆಯೋ ಆ ನಮೂನೆಗಳನ್ನು ಗೊತ್ತುಮಾಡಬಹುದು (ಭಾಧಾನ. ೧೨೪). [← ಹಿಂ. ಖತಿಯಾನಾ, ಖತಿಯಾನೀ]

**ಖತಾಯಿತಿ** 'ಖತಾಯತಿ' ನೋ.

**ಖತಾವಣಿ** 'ಕಥಾವಣಿ' ನೋ.

**ಖತಾವಣೆ** 'ಕಥಾವಣಿ' ನೋ.

**ಖತಿ₁, ಕತಿ, ಕಾತಿ₁, ಖಾತಿ** (ನಾ). ೧. ರೇಗುವಿಕೆ; ಕೋಪ; ಕ್ರೋಧ: ಸಸಿ ವರುಣದಿಗುವಧುವನಾಲಿಂಗಿಸಲು ಕುಮುದಿನಿ ಖತಿಯ ಹಿಡಿದಳು (ಕುವ್ಯಾದ್ರೋ. ೨-೧೩); ಹಿತವನಾಗಿಯೆ ಬಂದು ನೀ ಪರಿಮಿತದಿ ಹೇಳಿದಡಾನು ಕೇಳುವೆ ಖತಿಯ ಹುಟ್ಟಿಸಿ ನೆರೆದ ಸಭೆಯಲಿ ಗಳಹೆ ಸೈರಿಸೆನು (ಕೌಶಿರಾ. ೧೮-೪೭); ಪರಮೇಶ್ವರಂ ಶಬರರೂಪವಂ ತೊಟ್ಟು ಬಂದಡ್ಡೈಸಿದಂ ಖತಿಯೊಳು (ವೀಶೈಪು. ೩-೧-೯). ೨. ದುಃಖ. 'ಖತಿಗೊಳ್' ಪರಾ. ೩. ಉಭಯಸಂಕಟ; ಇಕ್ಕಟ್ಟಿನ ಸ್ಥಿತಿ: (ರೀವ್). **ಕತಿ**: ೧. "ಕಿನಿಸು" (ಚತುನಿ. ೬. I, ೧೬); ಕತಿಯಿಂದ ತಬ್ಬಿರುವಾತನೊಡನೆ . . . ಹೋರಾಡುತ್ತಿದ್ದು (ಬಿಟ್ಟಅ. ೧೧೩-೧). 'ಕತಿಗೊಳ್' ಪರಾ. **ಕಾತಿ₁**: ೧. ರಾಮನೆಂಬುವನು . . . ಕಾತಿಯಿಂ ತನ್ನನುಜ ವಾನರಯೂಥ ಸಹಿತವೆ ಬಂದು ಕಟ್ಟಿದ ಸೇತುವನು ಮುತ್ತಿದನು ಲಂಕೆಯನು (ಕೌಶಿರಾ. ೩೯-೨೪). **ಖಾತಿ**: ೧. ಪರಶುರಾಮನ ಖಾತಿಗಂಬುಧಿ ನೆಲನ ಬಿಡುವಂತೆ (ಕುವ್ಯಾದ್ರೋ. ೩-೪೪); ತನುಜ ಸಾಕೇಳೇಳು ಖಾತಿಯು ನೆನಹು ನಮ್ಮೊಳಗಿಲ್ಲ (ಪ್ರಭುಲೀ. ೧೩-೩೯); ಬಂಟತನವೇ, ಸೆರೆಯೆ, ಬೀರ್ಗಲ್ಲೆ, ಕೋವಿಯಂಜಿಕೆಯೆ ತನ್ನವರೆ ಹೇರುತಿಹ ಆಪವಾದ ಭೀತಿಯೇ ಖಾತಿಯೆ? (ಅಮತಂ. ೨೩-೫). [?]

**ಖತಿ₂** 'ಕತ್ತ₃' ನೋ.

**ಖತಿಗಳೆ** (ಕ್ರಿ). ಕೋಪವನ್ನು ಬಿಡು; ಶಾಂತವಾಗು: ರತಿಕಲೆಯೊಳತಿಚದುರೆ ಅತಿಮಿತಿಯು ಮಾತಿನೊಳು ಖತಿಗಳೆದ ಮೊಗವು ಸೊಬಗಿನಾ ಸುದತಿ ಕಂಡತಿಬಯಸದಿಹರೆ (ಸರ್ವಜ್ಞ. ೧೬೫೩). [ಖತಿ₁ + ಕಳೆ₁]

**ಖತಿಗೊಳ್, ಕತಿಗೊಳ್, ಖತಿಗೊಳ್ಳು, ಖಾತಿಗೊಳ್** (ಕ್ರಿ). ೧. ಕೋಪಗೊಳ್ಳು; ಸಿಟ್ಟಿಗೇಳು; ಕ್ರುದ್ಧನಾಗು: ನಿಮ್ಮ ಮಾವನ ಕುಜಾಂದಜಗೆ ಖತಿಗೊಂಡು ಕಾದಿ ವಿರಾಟ ಕೈಕೆಯರು ತುಱುಗಿದರು ತೆತ್ತೀಸರಲಿ (ಕುವ್ಯಾದ್ರೋ. ೧೮-೮); ಕಾಲರುದ್ರನ ನಿಶಿತ [ಪಾಠಾಂ. ವಿಷವು] ಕೋಪಜ್ವಾಲೆಗಿಮ್ಮಿಗಿಲೆನಲು ಖತಿಗೊಂಡ (ತೊರರಾ. ೩-೫-೩); ಸತಿಯರೊಲಿದು ಪರಸಿದುದೆಯನುಗ್ರಹ ಖತಿಗೊಂಡು ನುಡಿದುದೆ ಶಾಪ (ಹದಿಬ. ೨-೪೪). **ಕತಿಗೊಳ್**: ೧. ಮನದೊಳ್ ಕತಿಗೊಳ್ಳದೆ ಸೈರಿಪರಂ . . . ಕೊಂಡು ಕೊನೆವರ್ (ನೀತಿಮಂ. II, ೮೧೫). **ಖತಿಗೊಳ್ಳು**: ೧. ಖತಿಗೊಂಡು ಹೋದ ಹೃದಯದಲ್ಲಿಯ ಕರುಣೆ ಅವತರಿಸಿತು (ಈಪಸೊ. ೧೧೪). ೨. ದುಃಖಗೊಳ್ಳು; ವ್ಯಥೆಪಡು; ನೊಂದುಕೊಳ್ಳು: ಕ್ಷತಿಯಿಂದ ಖತಿಯಿಂದ ಕಾಯುವವನಾಗದೆ ತಾನೇ ಖತಿಗೊಂಡಿದ್ದಾನೆ ಅರ್ಜುನ (ಭಾರದ. ೧೧೬). **ಖಾತಿಗೊಳ್**: ೨. ಕಂಥೆ ಕತ್ತಲಿಟ್ಟು ಗರಳದಂತೆ ರಾಹುವರ್ಣವೇಱಿ ಕಂಡು ಖಾತಿಗೊಂಡು ಚಿಂತೆಗೊಂಡು ಮೇಗ ನೋಡಿ ಸುಯ್ದು (ತಿಱುತೊಂ. ೨೩೭-೧೧); ಹೆತ್ತಮಕ್ಕಳ ಬಿಡು ಪೃಥಾಸುತರತ್ತ ತಿರುಗೆನೆ ಖಾತಿಗೊಂಡೆನು ಮತ್ತೆ ಮುನಿಯದಿರೆಂದು ವಿದುರನನಪ್ಪಿದನು ನೃಪತಿ (ಕುವ್ಯಾಅ. ೧-೧೯). [ಖತಿ₁ + ಕೊಳ್₁]

**ಖತಿಗೊಳ್ಳು** 'ಖತಿಗೊಳ್' ನೋ.

**ಖತಿನೆಡು, ಖತೆನೆಡು** (ಕ್ರಿ). ತುಕ್ಕುಹಿಡಿ; ಜಂಗುತಿನ್ನು: ಖತಿನೆಟ್ಟ ಧಾತುಗಳನ್ನು ಕೆಂಪಗೆ ಕಾಸಿ ಜಲಜವಾಯುವಿನ ಕುಪ್ಪಿಯೊಳಗೆ ಚೆಲ್ಲಿದರೆ ಜಂಗು ಹೊರಟುಹೋಗಿ ಧಾತುಗಳು ಶುದ್ಧವಾಗುತ್ತವೆ (ಮುಂಬಯಿ. ೬-೧೧). **ಖತೆನೆಡು**: ಬೆಲೆಯುಳ್ಳ ಯಂತ್ರವನ್ನು . . . ನಡಿಸದೆ ಹಾಗೇ ಒಂದು ಮೂಲೆಯಲ್ಲಿ ಇಟ್ಟುಬಿಟ್ಟರೆ ಅದು ಸ್ವಲ್ಪ ಕಾಲದೊಳಗೆ ಖತೆನೆಟ್ಟು ಕೆಲಸಕ್ಕೆ ಬಾರದೆ ಹೊರಟು ಹೋಗುತ್ತದೆ (ಮುಂಬಯಿ. ೫-೧೭೨). [ಖತಿ₂ (< ಕತ್ತ₃) + ನೆಡು (< ನಡು₁)]

**ಖತಿಲಕ** (ನಾ). ಆಕಾಶಕ್ಕೆ ತಿಲಕದಂತಿರುವವನು; ಸೂರ್ಯ. [ಸಂ.]

**ಖತೀಬ** (ನಾ). (ಮಸೀದಿಯಲ್ಲಿ) ಖುತ್ಬ ಪಠಿಸುವವನು; ಪ್ರವಚನಕಾರ; ಧರ್ಮೋಪದೇಶಕ: ಒಬ್ಬ ಖತೀಬನು ಎದ್ದು ನಿಂತು . . . ಸದಾಚರಣೆಯನ್ನು ಜನರಿಗೆ ಬೋಧಿಸುತ್ತಾನೆ (ಮುಂಬಯಿ. ೬-೨೭). [← ಅರ. ಹಿಂ. ಖತೀಬ್]

**ಖತೆ** 'ಕತ್ತ₃' ನೋ.

**ಖತೆನೆಡು** 'ಖತಿನೆಡು' ನೋ.

**ಖತ್ತ** 'ಖತ' ನೋ.

**ಖತ್ತು** 'ಖತ' ನೋ.

**ಖತ್ರ** 'ಕತ್ತರ₁' ನೋ.

**ಖತ್ವ** (ನಾ). = ಖಕಾರ: ಖತ್ವಕ್ಕಂ ಬಹುಳತೆಯಿಂ ಗತ್ವಂ . . . ಉಂಟರೆಯೆಡೆಯೊಳ್ (ಶಮದ. ೨೫೬). [ಸಂ.]

**ಖದಖದಿಸು** (ಕ್ರಿ). ನಡುಗು; ಅದುರು (?): ಹೊಂಗೆಜ್ಜೆಯುಲಿಯೆ ಕಾಂಚೀಧಾಮ ಖದಖದಿಸೆ ಪಿಂಗದರ್ಧೋರುಕಂ ಚಲಿಸೆ . . . ನಟಿಸುತಿರ್ದಳು (ಚತುಪು. ೧-೪-೭೫). [< ಕದಕದಿಸು ?]

**ಖದರ** (ನಾ). ಬೆಲೆ; ಗುಣ; ಪ್ರಭಾವ; ಶಕ್ತಿ: ಆಟದ ಖದರ ಗೊತ್ತಾಗುವದು (ಚಂದತೋ. ೧೯೫). [← ಅರ. ಕದ್ರ್; ಹಿಂ. ಮರಾ. ಕದರ್]

**ಖದಾಯ** (ನಾ). (?): ಗಾಜುಗಳ ಲೆಕ್ಕಗಳನ್ನು ಗಲ್ಲಕ್ಕಿಟ್ಟು ಬಿಡುಗಡೆಯ ಬಯಕೆಯನ್ನು ಗಾಜುಗಳ ಸಂದಿನೊಳಗಿಂದ ಪರಾವರ್ತಿಸಿದಳು. ಬಾಬೂ ಕೂಡ ಅವಳು ಅಪ್ಪಿಕೊಂಡ ಆ ಖದಾಯ, ಈ ಬದಿಯನ್ನು ಮೆಲ್ಲಗೆ ನೇವರಿಸುತ್ತ ಒಂದೆರಡು ನಿಮಿಷ ಮೆಲ್ಲಗೆ ನಿಂತನು (ರಕ್ತಧ್ವ. ೩೩೦). [?]

**ಖದಿರ** (ನಾ). ೧. ಕಗ್ಗಲಿಮರ; ಕಾಚಿನಮರ: ನ್ಯಗ್ರೋಧ ಶಮ್ಯಪಾಮಾರ್ಗ ಖದಿರಾದಿ ಶುಷ್ಕ ಸಮಿತ್ತುಗಳುಮಂ (ಪಂಚತಂ. ೧೧೬-೨೧); ಅತ್ತಿ ಕಪಿತ್ಥ ಪಿಪ್ಪೆ ಖದಿರಂ ಮದನಂ ಕರಿಕಕ್ಕೆ (ನಳಚಂ. ೭೧). ೨. ಕಗ್ಗಲಿಮರದ ಅಂಟು; ಕಾಚು: ಖದಿರ ಕಷಾಯದ ತೋಯಂ ಪದಿನಾರ್ಮಡಿಯಾಗಿ ಕಲಸಿಕೊಂಡಾ ಪುಡಿಯಂ ಮಿದಿದು . . . ಖೈರಗುಳಿಗೆಯ ಮಾಱ್ಕಿ (ಲೋಕೋಪ. ೬-೧೦). [ಸಂ.]

**ಖದಿರಕ** (ನಾ). = ಖದಿರ ೧: ಬೆತ್ತ ಬೆವಗರ ಯಣಲೆ ಮುಳ್ಳರ ಮುತ್ತು ಖದಿರಕ [ಪಾಠಾಂ. ಕಾತರು, ಖಾದಿರ] ಕರ್ಣಿಕಾರದ ಮೊತ್ತವಿವ ನೋಡಬಲೆ (ತೊರರಾ. ೩-೧-೨೬). [ಸಂ.]

**ಖದಿರಗುಲಿಕೆ, ಖದಿರಗುಳಿಕೆ** (ನಾ). ಕಾಚಿನ ಗುಳಿಗೆ, —ಉಂಡೆ: ಮೃಗಮದಮಿಲಿತ ಖದಿರಗುಲಿಕಾ ಬಹುಲ ಕರ್ಪೂರ ಪರೀತ ಮುಖವಾಸಂಗಳುಮಂ (ಸುಕುಮಾ. ೧೧-೩೨ವ). **ಖದಿರಗುಳಿಕೆ**: ಮೃಗಮದ ಖದಿರಗುಳಿಕಾ ಬಹಳ ಕರ್ಪೂರ ಪಾಳೀ ಸಂಮಿಶ್ರ ತಾಂಬೂಲ ದ್ವಿಗುಣಿತ ವದನಾರವಿಂದಾಮೋದನುಮಾಗಿ (ಆದಿಪು. ೧೧-೨೭ವ). [ಖದಿರ + ಗುಲಿಕೆ]

**ಖದಿರಗುಳಿಕೆ** 'ಖದಿರಗುಲಿಕೆ' ನೋ.

**ಖದಿರತಾಂಬೂಲ** (ನಾ). ಕಾಚು ಸಹಿತವಾದ ತಾಂಬೂಲ: (೬). [ಖದಿರ + ತಾಂಬೂಲ]

**ಖದಿರರಾಗ** (ನಾ). ಕಾಚಿನ ಬಣ್ಣ : ಅವಳ ಬೆರಳುಗಳು ತಾಂಬೂಲ ಪತ್ರವನ್ನು ಖದಿರರಾಗದಿಂದ ರಂಜಿತಗೊಳಿಸುವುದರಲ್ಲಿ ಮಗ್ನವಾದವು (ಬಾಣಅ. ೨೪). [ಖದಿರ + ರಾಗ]

**ಖದಿರಿ** (ನಾ). ಒಂದು ಜಾತಿಯ ಸಸ್ಯ ; ಮುಟ್ಟಿದರೆ ಮುನಿ ; ಮುಟ್ಟಲುಮುರಿಕೆ. [ಸಂ. ಖದಿರೀ]

**ಖದೀಮ** 'ಕದೀಮ' ನೋ.

**ಖದೀಮತನ** (ನಾ). ಕದೀಮನಾಗಿರುವಿಕೆ ; ಪ್ರಚಂಡತನ : ಮತ್ತೆ ಕೆಲವರು ಖದೀಮತನಕ್ಕಾಗಿ, ಗುರುಗಳ ಮೂಲಕ ಅರಮನೆಯ ಸಂಪರ್ಕ ಬೆಳೆಸುವುದಕ್ಕಾಗಿ ಬಂದಿದ್ದರು (ಹೇಮುಕೂ. ೯೪). [ಖದೀಮ (< ಕದೀಮ) + -ತನ]

**ಖದ್ದರ** (ನಾ). ಕೈನೂಲಿನಿಂದ ಮಾಡಿದ ಬಟ್ಟೆ ; ಉರುಟುಬಟ್ಟೆ ; ಖಾದಿ. 'ಖದ್ದರಧಾರಿ' ಪರಾ. [← ಹಿಂ. ಖದ್ದಡ ; ಖದ್ದರ್]

**ಖದ್ದರಧಾರಿ** (ನಾ). ಖಾದಿ ಧರಿಸಿದವನು : ಸಮರಕೆ ನಿಲುವಾ ಖದ್ದರಧಾರಿಗೆ ಸೆರೆಮನೆ ಅದು ತಾ ತಪ್ಪೀತೆ ? (ತುಟವಿಸಾ. ೧೩೧). [ಖದ್ದರ + -ಧಾರ್‍ಇ]

**ಖದ್ಗಿ** 'ಕದ್ಗಿ$_1$' ನೋ.

**ಖದ್ಗಿಕಾಟಿ** 'ಕದ್ಗಿಕಾಟಿ' ನೋ.

**ಖದ್ಯೋತ** (ನಾ). ೧. ನೇಸರು ; ಸೂರ್ಯ : ಮಿಸುಪ ಕಲಧೌತ ಪುಂಖಪ್ರಸರಂ ಖದ್ಯೋತತತಿವೊಲಾದುದು ನಭದೊಳ್ (ಜಗವಿ. ೧೨-೧೨); ಮಾನ್ಯನಿಳೆಗೆ ಖದ್ಯೋತ ಸನ್ನಿಭಂ (ಜೈಮಿಭಾ. ೧೮-೫೧). ೨. ಮಿಂಚುಹುಳು ; ಮಿಣುಕುಹುಳು : "ಮಿಂಚುಬುಬುಳುವದಾ ಖದ್ಯೋತಮಕ್ಕು" (ಮಂಗರಾ. ೫೨-೧೦) ; ಶೇಷಮಹಾನಾಗಫಣಾಮಣಿದ್ಯುತಿಯನೇಂ ಖದ್ಯೋತದೊಳ್ ಕಾಣ್ಬರೇ (ಪಂಪಭಾ. ೫-೭೬) ; ಮರುಳೆ ನೀ ಬಲು ಬಣ್ಣವಿದೆ ಖದ್ಯೋತ ರವಿಯಹುದೆ (ಕೌಶಿರಾ. ೨೧-೨೦). [ಸಂ.]

**ಖದ್ಯೋತಕುಲ** (ನಾ). ಸೂರ್ಯಕುಲ, —ವಂಶ : ಜಾತರಹಿತನು ಜನಿಸಿದನು ಖದ್ಯೋತಕುಲದಲಿ . . . ದಶರಥನೃಪನ ಗರ್ಭದಲಿ (ತೊರರಾ. ೧-೨-೧೯). [ಖದ್ಯೋತ + ಕುಲ]

**ಖದ್ಯೋತದೀಧಿತಿ** (ನಾ). ಸೂರ್ಯನ ಕಾಂತಿ, —ಪ್ರಕಾಶ : ಹೊಳೆವಸಿ ಮುಸುಂಡಿ ತ್ರಿಶೂಲ ಕೊಂತ ಪ್ರಸರಕಾಂತಿಗಳೆಳುಹಿದವು ಖದ್ಯೋತದೀಧಿತಿಯ (ಕುವ್ಯಾದ್ರೋ. ೧೨-೯). [ಖದ್ಯೋತ + ದೀಧಿತಿ]

**ಖದ್ಯೋತಮಂಡಲ** (ನಾ). ಸೂರ್ಯಮಂಡಲ : ಹೊಯ್ಲುಗಳ ಗದೆಯಲಿ ಹೊರಳೆಗಿಡಿ ಝೊಂಪಿಸಿದುವುರುಖದ್ಯೋತಮಂಡಲವ (ಕುವ್ಯಾಗ. ೭-೧೬). [ಖದ್ಯೋತ + ಮಂಡಲ]

**ಖದ್ಯೋತರಾಸಿ** (ನಾ). ಮಿಂಚುಹುಳುಗಳ ಸಮೂಹ, —ಗುಂಪು : ತಳಿತ ಮಿಂಚಿನ ಮುರಿವುಗಳೊ ತನಿ ಹೊಳಹುಗಳೊ ಖಂಡೆಯದ ಧಾರೆಯ ಕೊಳುಗಿಡಿಯೊ ಖದ್ಯೋತರಾಸಿಯೊ ಹೇಳಲೇನದನು (ಕುವ್ಯಾದ್ರೋ. ೧೪-೭). [ಖದ್ಯೋತ + ರಾಸಿ]

**ಖದ್ರು** (ನಾ). ಕಶ್ಯಪನ ಹೆಂಡತಿ ; ಸರ್ಪಗಳ ತಾಯಿ : ಖದ್ರುವಿನಿಂ ಭುಜಂಗಮರು ಉದಿಸಿದರು (ತೊರರಾ. ೩-೧-೪೦). [< ಸಂ. ಕದ್ರು]

**ಖನಕ** (ನಾ). ೧. ತೋಡುವಿಕೆ ; ಅಗೆತ : (೩). ೨. ಭೂಮಿಯನ್ನು ಅಗೆಯುವವನು ; ಗಣಿಗಳಲ್ಲಿ ಕೆಲಸ ಮಾಡುವವನು : ಖನಿಗಳಲ್ಲಿ ಕೆಲಸ ಮಾಡುವವರಿಗೆ ಖನಕರು . . . ಎಂಬ ಹೆಸರು ಕೊಡಬಹುದು (ಮುಂಬಯಿ. ೬-೪೨). ೩. ಕನ್ನ ಕೊರೆಯುವವನು ; ಕನ್ನಗಳ್ಳ. ೪. ಹೆಗ್ಗಣ ; ಮೂಷಿಕ : "ಉಂದುರಃ, ಖನಕಃ - ಈ ೨ ಹೆಗ್ಗಣಂ" (ಹಲಾಯು. ೩೯-೮೨) ; "ಖನಕಮುಂದುರುವೆನಲು ಪೆಗ್ಗಣಂ" (ಮಂಗರಾ. ೯೯-೧೨). [ಸಂ.]

**ಖನನ** (ನಾ). ೧. ತೋಡುವಿಕೆ ; ಅಗೆತ : ಕಂಸಶ್ರೋತ್ರ ಕ್ಷಿತಿಖನನ ಪವಿಶಲಾಕಾತತಿಯೆನೆ ದಶನಾಂಶು ನಿಮಿರೆ (ಜಗವಿ. ೨-೪೩) ; ಇದಿರ್ಗೊಂಡನಾಹಾ ತಟಾಕ ಖನನೋದ್ಯೋಗನು (ಸಿದ್ಧರಾ. ೯-೧೮). ೨. ಕನ್ನ ಕೊರೆಯುವುದು : ಇಲ್ಲೆಲ್ಲಿಯುಂ ಬಂದಿ ಮಂಚಲ್ ಖನನ ಪ್ರಾರಂಭ ಚೌರ್ಯಾದಿಗಳ್ (ಸುಕುಮಾ. ೭-೧೮). ೩. ಹೆಣವನ್ನು ಹೂಳುವುದು ; ಮಣ್ಣು ಮಾಡುವುದು. [ಸಂ.]

**ಖನನತಂತ್ರ** (ನಾ). ತಾಂತ್ರಿಕ ಸಿದ್ಧಿಮಂತ್ರಗಳಲ್ಲಿ ಒಂದು : ದಹನತಂತ್ರ, ದರ್ಶನತಂತ್ರ, ಖನನತಂತ್ರ, ಬಂಧನತಂತ್ರ, ವಚನತಂತ್ರಾದಿ ತಾಂತ್ರಿಕಸಿದ್ಧಿ ಮಂತ್ರಂಗಳಂ (ವಿವೇಕ. ೮೧). [ಖನನ + ತಂತ್ರ]

**ಖನಿ** (ನಾ). ಲೋಹ, ರತ್ನ ಮೊದಲಾದುವುಗಳ ಉತ್ಪತ್ತಿಸ್ಥಾನ ; ಗಣಿ; ಆಕರ : "ಖನಿ ಗುಂಜಮಾಕರಂ ಕಣಿಯಕ್ಕು" (ಮಂಗರಾ. ೩೧-೫); ಅಖಂಡ ತೇಜೋರಾಶಿ ಖನಿಯಾಗಿ ಗದ್ದುಗೆಯ ಮಧ್ಯಪ್ರದೇಶದೊಳ್ ಬೆಳಗಿತಾ ಮುನಿಯ ಕಣ್ಗೆ (ವೆಂಕಾರಾ. ೧-೧-೩೯) ; ಈ ಐಶ್ವರ್ಯದ ಖನಿಯ ನಡುವೆ ಆ ಅಸೂಯೆ ದಿನದಿನಕ್ಕೆ ವೃದ್ಧಿಸಿತು (ಶಾಂತಲಾ. ೧೨೪). [ಸಂ.]

**ಖನಿಜ** (ನಾ). ಗಣಿಯಲ್ಲಿ ಹುಟ್ಟಿದುದು ; ಲೋಹ, ರತ್ನ ಮೊದಲಾದ ವಸ್ತು : ಕಣಿಗಳಲ್ಲಿ ಹುಟ್ಟುವ ಕಾರಣ ಧಾತುಗಳಿಗೆ ಖನಿಜಗಳು ಅನ್ನುತ್ತಾರೆ (ಮುಂಬಯಿ. ೪-೯೦) ; ಬ್ರಹ್ಮಾಂಡದಲ್ಲಿರುವ ಸ್ಥಾವರ ಜಂಗಮಗಳೆಲ್ಲವೂ ಖನಿಜ, ಉದ್ಭಿಜ, ಸ್ವೇದಜ, ಅಂಡಜ, ಜರಾಯುಜ ಎಂಬ ಪಂಚವಿಧ ಪ್ರಾಣಿಗಳು (ನಡೆದಾ. II, ೧೪೧೫). [ಸಂ.]

**ಖನಿಜಚೂರ್ಣಕ** (ನಾ). ಖನಿಜಗಳನ್ನು ಚೂರು ಮಾಡುವ ಯಂತ್ರ : (Spalder. ಇಂಕನಿ). [ಖನಿಜ + ಚೂರ್ಣಕ]

**ಖನಿಜತೈಲ** (ನಾ). ಗಣಿಗಳಲ್ಲಿ ದೊರಕುವ ಎಣ್ಣೆ ; ಸೀಮೆಯೆಣ್ಣೆ ; ಕಲ್ಲೆಣ್ಣೆ : ಸಾಧಾರಣವಾಗಿ ಖನಿಜತೈಲ (ಚಿಮಣಿಎಣ್ಣೆ) ಹಾಕಿ ಹಚ್ಚಿದ್ದೊಂದು ದೀಪಕ್ಕೆ ಒಬ್ಬ ಮನುಷ್ಯನಿಗೆ ಬೇಕಾಗುವಷ್ಟೇ ಪ್ರಾಣವಾಯುವು ಬೇಕಾಗುತ್ತದೆಂದೇ ಹೇಳುತ್ತಾರೆ (ಮುಂಬಯಿ. ೫-೧೫೩). [ಖನಿಜ + ತೈಲ]

**ಖನಿತ್ರ** (ನಾ). ಅಗೆಯಲು ಉಪಯೋಗಿಸುವ ಸಾಧನ ; ಗುದ್ದಲಿ : ಆದಜಿಂ ಭೂಪಾಲ ನಿನ್ನಿಂದಗುಳ್ದು ಶಿತ ಖನಿತ್ರಂಗಳಿಂ ನೋಡೆ ವಲ್ಮೀಕದೊಳಿರ್ಕ್ಕುಂ ದೇವಂ (ವೆಂಕಮ. ೯-೮). [ಸಂ.]

**ಖನ್ನ** (ನಾ). ನಾಶ (?) : ಎನ್ನ ಮಾಯದಿ ನಾನು ಖನ್ನ ಮಾಡುತಶ್ರವೆಯ ಮುನ್ನುಪಡಿಸಿದೆನೀಗ ನಿನ್ನ ಕ್ಷಿತಿಯೊಳಗೆ (ಹಮಚ. ೨೨೦). [?]

**ಖನ್ನೋಜಿ** (ನಾ). ಖನೋಜ ದೇಶದವನು : ಒಂದು ದೆಸೆಯೊಳೊಡ್ಡಿಯರು ಖನ್ನೋಜಿಗಳೊಂದು ದೆಸೆಯೊಳು ತುರುಕರು ಒಂದು ದೆಸೆಯೊಳು ಖಾನರು ಬಲವೆರಸು ಖೋಯೆಂದು ರಾಮನ ಮುಸುಕಿದರು (ಕುರಾಸಾಂ. ೨೦-೨೬). [← ಮರಾ. ಕನೋಜೀ ; ಹಿಂ. ಕನೌಜಿಯಾ]

**ಖಪ** (ನಾ). ಖರ್ಚು ; ಮಾರಾಟ ; ವಿಕ್ರಯ : ಈ ಮಾಲಿಗೆ ಯಾವಾಗಾದರೂ ಖಪವು ಇಲ್ಲಿ ಕಡಿಮೆ (ಮುಂಬವ್ಯಾ. ೪೪). 'ಖಪಿಸು' ಪರಾ. [← ಮರಾ. ಖಪ್]

**ಖಪಲಿ** (ನಾ). ಗೋಧಿಯಲ್ಲಿ ಒಂದು ಬಗೆ : ಗೋಧಿ-ಕೆಂಪು, ಖಪಲಿ, ಹೊಳಿಯೆಂಬ ಮೂರು ಜಾತಿಗಳು ಈ ಜಿಲ್ಲೆಯಲ್ಲಿ ಬೆಳೆಯುತ್ತವೆ (ಕಭಾಗೆ. ೨೭೧). [← ಮರಾ. ಖಪಲಾ]

**ಖಸಸು** 'ಖಪಿಸು' ನೋ.

**ಖಸಾಸು** 'ಖಪಿಸು' ನೋ.

**ಖಪಿಸು**, ಖಪಸು, ಖಪಾಸು, ಖಪ್ಪಸು (ಕ್ರಿ). (ಉಕ) ೧. ಕ್ರಯವಾಗು ; ಮಾರಾಟವಾಗು ; ಖರ್ಚಾಗು : ಈ ಮಾಲವು ಇಲ್ಲೆ ಬಹಳ ಖಪಿಸುವದು (ಮುಂಬವ್ಯಾ. ೫೧). **ಖಪಸು :** ೧. ತೊಯಿದದ್ದು . . . ಸತ್ವ ಇಲ್ಲದಂಥಾದ್ದಿದ್ದರೆ ಆ ಮಾಲು ಖಪಸುವುದಿಲ್ಲ (ಮುಂಬವ್ಯಾ. ೪೩). **ಖಪಾಸು :** ೧. ಇಂಥಾ ಪ್ರಸಂಗದಲ್ಲಿ . . . ಬಹಳ ಮಾಲ ಖಪಾಸುವ ಸಂಭವ ಇರುತ್ತದೆ (ಮುಂಬವ್ಯಾ. ೩೩). **ಖಪ್ಪಸು :** ೨. ಖರ್ಚುಮಾಡು ; ವೆಚ್ಚಮಾಡು. ೩. (ಆಲಂ) ಮದುವೆ ಮಾಡಿಕೊಡು : ಎರಡೂ ಹುಡುಗೂರ್ನ ಖಪ್ಪಸೋದೇನು ಜಡಾ ಅಲ್ಲಾ (ದೀಪಹ. II, ೧೮). [ಖಪ + ಇಸು$_3$]

**ಖಪುರ** (ನಾ). ೧. ಅಡಕೆಮರ ; ಪೂಗ. ೨. ತ್ರಿಪುರ ; ಶಿವನಿಂದ ನಾಶಮಾಡಲ್ಪಟ್ಟ ಮೂರು ಪಟ್ಟಣಗಳು. ೩. ಮುಖ. ೪. ಮರ; ವೃಕ್ಷ. ೫. ಕೋಣ ; ಮಹಿಷ. ೬. ಅವಮಾನ : "ತ್ರಿಪುರ ಪೂಗಂ ವಕ್ತ್ರ ಭೂಜಾಪಮಾನ ಉಲಾಯಂ ಖಪುರಾಭಿಧಾನ" (ನಾನಾರ. ೧೦೩). [ಸಂ.]

**ಖಪುಷ್ಪ** (ನಾ). ಆಕಾಶದಲ್ಲಿ ಬಿಡುವ ಹೂವು ; ಗಗನಕುಸುಮ ; ಅಸಂಭವವಾದುದು : ಪಿರಿದುಂ ಬಿದಿ ನಿಜಜನ್ಮಾಕರಮೆನಿಸಿದ ಪದ್ಮಜಾತಿಗಂ ಮ್ಲಾನತೆಯಂ ದೊರೆಕೊಳಿಸಿದನೆನೆ ಮತ್ತಿತರರೊಳಾದಂ ಮಾಟ್ಪ ಕೃಪೆ ಖಪುಷ್ಪಮದಲ್ತೇ (ಚಂದ್ರಪ್ರ. ೮–೧೪). [ಖ$_2$ + ಪುಷ್ಪ]

**ಖಪ್ಪರ** 'ಕಪ್ಪರ$_2$' ನೋ.

**ಖಪ್ಪಲಿ** 'ಕಪ್ಪರಿ' ನೋ.

**ಖಪ್ಪಸು** 'ಖಪಿಸು' ನೋ.

**ಖಪ್ರವಾಹ** (ನಾ). ಬಾಂದೊರೆ ; ದೇವಗಂಗೆ. [ಖ$_2$ + ಪ್ರವಾಹ]

**ಖಪ್ರವಾಹಜೂಟ** (ನಾ). ದೇವಗಂಗೆಯನ್ನು ತಲೆಯಲ್ಲಿ ಧರಿಸಿದವನು ; ಶಿವ. [ಖಪ್ರವಾಹ + ಜೂಟ]

**ಖಬರ** 'ಖಬರು' ನೋ.

**ಖಬರದಾರ್** 'ಖಬರ್ದಾರ್' ನೋ.

**ಖಬರದಾರ** 'ಖಬರ್ದಾರ್' ನೋ.

**ಖಬರದಾರಿ** 'ಖಬರುದಾರಿ' ನೋ.

**ಖಬರಿ** (ನಾ). ಸುದ್ದಿ ; ವಾರ್ತೆ ; ಸಮಾಚಾರ (?) : ಪುತಳಾಬಾಯಿ ಅಕ್ಕಾವರು ಕೆಟ್ಟ ಜ್ವಾಳಾ ತಿಂದು ಸತ್ತರೂ ಅಂತ ಖಬರೀ ರಿಪೋರ್ಟು ಮಾಡೂದ (ಗ್ರಾಮಾಯ. ೧೬೮). [← ಅರ. ಹಿಂ. ಖಬರ್]

**ಖಬರು**, ಕಬರು$_3$, ಖಬರ (ನಾ). ಅರಿವು ; ಎಚ್ಚರಿಕೆ ; ಪ್ರಜ್ಞೆ : ವರುಷವರುಷಕ್ಕೂ ಕಂದಕಗಳು ಹೆಚ್ಚುಕಡಮೆ ಆಗುವದರ ಖಬರು ತೆಗೆದುಕೊಳ್ಳಬೇಕು (ರಾಜೇಂದ್ರ. ೧೩೮) ; ಕೆಸರು ಆ ಬುಟ್ಟಿ ತುಂಬಿ ಹೊರಚೆಲ್ಲಿತಾದರೂ ಅವನಿಗೆ ಖಬರು ಇರಲಿಲ್ಲ (ಬನಸಿ. ೧೪೮) ; ನೆಲದ ಮೇಲೆ ತನ್ನ ಕೂಸಿನ ಖಬರಿಲ್ಲದೆ ಧೊಪ್ಪನೆ ಬಿದ್ದುಬಿಟ್ಟಳು (ಅನ್ನ. ೧೪೨). **ಕಬರು$_3$ :** ಮೈಯಾಗೆ ಕಬರು ಇಲ್ಲದೆ ಯಂಡ್ತಿ ಮಕ್ಕಳನ್ನು ಬಡೀತವ್ನೆ (ಬೆಂಗಬ. ೧೭). **ಖಬರ :** ಮೈಮೇಗೆ ಖಬರ ತಪ್ಪಿತ್ತೋ ಏನೊ ! (ಪ್ರೇಮಾಶ್ರ. ೧೫೮).

ಖಬರತಪ್ಪು = ಖಬರುಹಾರು : ನನ್ನ ಮುಂಗೈ ರಕ್ತ ನೋಡಿ ಖಬರತಪ್ಪಿದವರ ಹಾಂಗೆ ಮಾಡಿದಳು (ವೈನಿ. ೭೨). ಖಬರುಹಾರು = ಎಚ್ಚರದಪ್ಪು; ಹೌಹಾರು : ಈ ಜರದ ಸೀರಿ ಜಬರು ನೋಡಿದರ ಖಬರಹಾರುಹಾಂಗ ಅದ ಅಲ್ಲಾ ! (ಮಿಂಚಿಹು. ೧೩೯). [← ಅರ. ಹಿಂ. ಖಬರ್]

**ಖಬರುದಾರಿ**, ಖಬರದಾರಿ, ಖಬ್ಬರದಾರಿ (ನಾ). ಎಚ್ಚರವಹಿಸುವುದು; ಜಾಗರೂಕತೆ; ಬಂದೋಬಸ್ತು: ರಾತ್ರಿವೇಳೆಯಲ್ಲಿ ಕಳ್ಳಕಾಕರ ಉಪದ್ರವವಾಗದಂತೆ ಖಬರುದಾರಿ ಮಾಡಿಸಿ . . . ನಡೆದುಕೊಂಡು ಬರುವುದು (ಗುರುದ. ೧೦). **ಖಬರದಾರಿ :** ಈ ಸಮಯದಲ್ಲಿ ನಾವು ಖಬರದಾರಿ ಹುಷಾರಿಯಿಂದ ಕ್ಷೇಮದಲ್ಲಿ ಇರಬೇಕು (ರಾಜೇಂದ್ರ. ೩೭). **ಖಬ್ಬರದಾರಿ :** ಆದಷ್ಟು ಮಟ್ಟಿಗೆ . . . ಖಬ್ಬರದಾರಿಯನ್ನು ತಕ್ಕೊಳ್ಳುತ್ತೇವೆ (ಮುಂಬವ್ಯಾ. ೨೭೭). [← ಪಾರ. ಅರ. ಮರಾ. ಖಬರ್ದಾರೀ]

**ಖಬರ್ದಾರ್**, ಕಬರುದಾರು, ಖಬರದಾರ್, ಖಬರದಾರ (ನಾ). ಜೋಕೆ ; ಎಚ್ಚರಿಕೆ ; ಹುಷಾರ್ : ಖಬರ್ದಾರ್ ! ನನ್ನ ಕುಲದ ಮಾತು ತೆಗೆದರೆ (ಮೂರುದಾ. ೩೮) ; ಅವಳ ಬೆರಳನ್ನು ಮುಟ್ಟಿದರೆ 'ಖಬರ್ದಾರ್' ಎಂದನು (ಬೀಟೆನಾ. ೮೭). **ಕಬರುದಾರು :** (೬). **ಖಬರದಾರ್ :** ಖಬರದಾರ್ ! ನಿನಗೆ ಏನು ಹೇಳಬೇಕಾಗಿದೆಯೋ ಅದನ್ನು ಸರಳವಾಗಿ ಹೇಳು (ಮೂರುದಾ. ೧೫). **ಖಬರದಾರ :** ಖಬರದಾರ ! ನಾನ ಇಲ್ಲಿ ಸಾಹೇಬ (ಜೀದಾನ. ೯೬). [← ಪಾರ. ಅರ. ಹಿಂ. ಮರಾ. ಖಬರ್ದಾರ್]

**ಖಬೂಲ್** (ನಾ). ಒಪ್ಪಿಗೆ ; ಕಬೂಲಿ : ನಾವು ಖಬೂಲ್ ಮಾಡಿದೆವು (ಚಾಮುವಂ. ೨೨೭). [< ಕಬೂಲ್]

**ಖಬ್ಬರದಾರಿ** 'ಖಬರುದಾರಿ' ನೋ.

**ಖಬ್ಬುಡುಬ್ಬು** (ನಾ). ಎತ್ತರವಾದ ಭಾಗ ; ಉಬ್ಬುಬ್ಬಾಗಿರುವಿಕೆ (?) : ರೋಗಿಯ ತಲೆಯು ವಿಶೇಷತಃ ಕಪಾಳವು ದೊಡ್ಡದಿದ್ದು ಆದರ ಮೇಲೆ ಬುಗುಟಿ ಖಬ್ಬುಡುಬ್ಬು ಕಾಣೋಣ, ಅದಕ್ಕೆ ಮೇಲೆ ಮೇಲೆ ಬೆವರು ಬಂದಂತೆ ಇರೋಣ (ಔಷಧೀ. ೧೧). [?]

**ಖಮಂಗ** (ಗು). ಸುವಾಸನೆಯಿಂದ ಕೂಡಿದ ; ಕಮ್ಮಗಾದ ; ಗಮಗಮಿಸುವ : ಆ ಹೊತ್ತಿನಲ್ಲಿ ಒಂದು ಮನೆಯಿಂದ ಭಕ್ಷ್ಯಭೋಜ್ಯಗಳ ಖಮಂಗ ಸುವಾಸನೆ ಬರಹತ್ತಿತು (ನಡೆದಾ. II, ೯೦೩) ; ವಾರಕ್ಕೊಮ್ಮೆ ಖಮಂಗ ಪಂಥೀರು ಬೆಣ್ಣಿಮುಟ್ಟಿಸುವ ಮಕ್ತೇದಾರೀ ಹೊತ್ತಿದ್ದ (ದೀಪಹ. II, ೨೩೨). [← ಮರಾ. ಖಮಂಗ್]

**ಖಮಣಿ** (ನಾ). ಆಕಾಶದ ರತ್ನ ; ಸೂರ್ಯ : ರಘುಕುಲ ಖಮಣಿ . . . ತುಡುಕಿದನು ಕಲ್ಪಭೂರುಹ ಸದೃಶ ಚಾಪಮಂ (ಶ್ರೀರಾಮಾ. ೪೯–೫೭೭). 'ದಿನಮಣಿ' ಪರಾ. [ಖ$_2$ + ಮಣಿ$_4$]

**ಖಮಾಚು**, ಕಮಾಛ್, ಖಮಾಜ (ನಾ). [ಸಂಗೀತ] ಒಂದು ರಾಗದ ಹೆಸರು : ಹಿಂದಿನವರು ಹಾಡುತ್ತಿದ್ದ ಧಾಟಿಗಳು . . . ಖಮಾಚು, ಮಧ್ಯಮಾವತಿ, ಆನಂದಭೈರವಿಯಂಥ ರಾಗಗಳಿಂದ ಕೂಡಿದ್ದುವು (ಜಾನಗೀ. ೧೧೬). **ಕಮಾಚ್ :** ಕಮಾಚ್. ೨೮ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ (ಸಂಗೀಚಂ. ೧೩೩). **ಖಮಾಜ :** ಖಮಾಜ ರಾಗದಲ್ಲಿ ಮೀರಾಬಾಯಿಯ ಭಜನದ ಪಲ್ಲವಿಯೊಂದನ್ನು ನುಡಿಸಲು ತೊಡಗಿದ (ಜನಗೀ. ೧೨೮). [← ಹಿಂ. ಮರಾ. ಖಮಾಚ್]

**ಖಮಾಜ** 'ಖಮಾಚು' ನೋ.

**ಖಮ್ಮರಿ** 'ಕಮ್ಮರಿ$_2$' ನೋ.

**ಖಮ್ಮನೆ** (ಅ). ಒಂದು ಅನುಕರಣ ಪದ : ಅನುಕರಣೇ – ಖಮ್ಮನೆ, ಘುಟ್ಟಿಲನೆ, ಛಿಲ್ಲನೆ, ಪಠಿಲನೆ (ಭಾಷಾಭೂ. ೧೧ ವೃತ್ತಿ).

**ಖಯ** (ನಾ). ೧. ಜಂಬ ; ಸೊಕ್ಕು. ೨. ಮೊಂಡುತನ ; ಹಟಮಾರಿತನ : (೬). [← ಮರಾ. ಖಯ]

**ಖಯಖೋಡಿ**, ಕಯಕೋಡು (ನಾ). ೧. ಅಳುಕು ; ಅಂಜಿಕೆ : ಕೂಡೆ ತಮತಮಗಾಹವದ ಖಯಖೋಡಿಯಿಲ್ಲದೆ ಸುಭಟರಬ್ಬರ ಝಾಡಿಮಸಗಿತು ಕದನದಲಿ ಕಾಲಾಳ ಕೇರಿಯಲಿ (ಕುವ್ಯಾಕ. ೮–೧೩).

೨. ಸಂಕೋಚ; ಅನುಮಾನ: ಮಾಡದಿರಿ ಸಂದೇಹವನು ಖಯ ಖೋಡಿಯಿದಱೊಳಗಿಲ್ಲ (ಕುವ್ಯಾಅ. ೧೬-೧೨); ಚಿತ್ತದಲಿ ಖಯಖೋಡಿ ಯಿಲ್ಲದೆ ಸಕಲಜನ ಕೊಂಡಾಡೆ ಕೊಂಡನು ಕುಮತಿ ಸತಿ ತನಗಿತ್ತ ವಲ್ಕಲವ (ತೊರರಾ. ೨-೩-೨೮); ಖಯಖೋಡಿ ಕಾತರ ಕಂಗೆಡು ಕಳವಳ . . . ರೆಯವೆತ್ತ ಕಂಪನ ರಂಗಯಿದೆಲ್ಲವು ಭಯದೋಱಿ ಬಂದು ಬಾಧಿಪವು (ಶತಸಾಂ. ೫೦-೫೧). ೩. ಕೊರಗು; ನೋವು; ದುಃಖ: ಖಯಖೋಡಿಯನು ಬಿಡಿಸಿದೆಯಲಾ ತ್ರಿದಶರಲಿ ಪಾಂಡುವಿನ (ಕುವ್ಯಾಸ. ೧೫-೬೧). ೪. ಮೊಂಡುತನ; ಹಠ: ಮಾಡ ಲಾಗದಸೂಯೆಯನು ಖಯಖೋಡಿಯನು ಹಿಡಿಯದಿರಿ ತನ್ನಲಿ (ನಿಭಾಗ. ೧೦-೬೩-೨೯); ಹರಿಯೆಡೆಗೆ ಮಿಗೆ ಖಯಖೋಡಿಯೆಂಬುದ ಹಿಡಿಯಲಾಗದು (ಕೋಗಯ. ೧೫-೧೮). ೫. ಕೊರತೆ; ದೋಷ; ನ್ಯೂನತೆ: ಜ್ಞಾನಕ್ಕೆ ಸಾಧನನೀ ಕಳೇವರವು ಕೂಡುವನು ನಿಜಮೂರ್ತಿ ಯನು ಖಯಖೋಡಿಯಿಲ್ಲದ ಬೋಧಸಿಖಿಯಿಂ ನೋಡು ಯೋಗಿಯ ಚರಿತಗಳನು (ನಿಭಾಗ. ೧೧-೨೪-೭೧); ಪೆಂಡಿತಿಯೊಳಾತ್ಮಜನೊಳರಸ ನೊಳ್ಮಿಗೆ ನೋಡಿ ಕಂಡುದಿಲ್ಲೊಂದಿನಿಸು ಖಯಖೋಡಿಯಂ (ಜೈಮಿಭಾ. ೨೬-೬೪). ೬. "ವಂಚನೆ; ಮೋಸ" (ಪ್ರಭಣ್ಣ). ೭. ಚಾಡಿಹೇಳು ವವನು; ನಿಂದಕ; ಅಪವಾದ ಹೊರಿಸುವವನು: (ಕ). ಕಯಕೋಡು: ೫. ಕಯಕೋಡನೆಣಿಸದವನೋರ್ವ ದಾಸಿಯ ಕಳುಹೆ ದಯವೆಣಿಸಿ ಸತ್ಕರಿಸುವವನ ಲೇಸಿನ ಸತಿಗೆ ನಿಯತ ದಿವ್ಯ ಸುಗಂಧ ಮಾಲ್ಯಾಂಬರವ ಕಳುಹಲ್ (ಲಕ್ಷ್ಮಭಾ. ೩-೨೫-೧೬).

[ಖಯ + ಖೋಡಿ]

**ಖಯಲ್** 'ಖಯಾಲಿ' ನೋ.

**ಖಯಾಲ್** 'ಖಯಾಲಿ' ನೋ.

**ಖಯಾಲಿ, ಖಯಲ್, ಖಯಾಲ್, ಖಯಾಲು, ಖಯ್ಯಾಲಿ, ಖ್ಯಾಲ್, ಖ್ಯಾಲ, ಖ್ಯಾಲಿ, ಖ್ಯಾಲು** (ನಾ). ೧. ಮನಸ್ಸಿನ ಒಲವು; ಇಷ್ಟ; ಮರ್ಜಿ: ಅಧಿಕಾರಿಗಳಲ್ಲಿ ಕೆಲವರು . . . ತನ್ನ ಅಥವಾ ಮೇಲಧಿಕಾರಿಗಳ ಖಯಾಲಿಗನುಗುಣವಾಗಿ ತಮಗೆ ಬೇಡವಾದ ಜನರನ್ನು ಬಂಧಿಸಿ (ಪುನರು. ೫೦೦). ೨. ಆಸಕ್ತಿ; ಮೋಹ; ಹುಚ್ಚು: ರಾಯರಿಗೆ ಹೆಣ್ಣಿನ ಖಯಾಲಿ ಬಹಳ ಎಂದವರ ಪ್ರಚಾರ (ದುಂಬಿಕ. ೫೭); ಅವರಿಗೆ ಬಣ್ಣದ ಖಯಾಲಿ ಹೆಚ್ಚು (ಊರುಕ. ೧೫೯). ೩. ವಿಚಾರ; ಕಲ್ಪನೆ; ಯೋಚನೆ: ಪುರುಸೊತ್ತು ಇದ್ದ ಕಾಲದಲ್ಲಿ ಆವುಗಳನ್ನು ಹಿಡಿದಿಡುವ ಖಯಾಲಿ ಬಂತು (ನಿಬಂಧ. II, ೮೭). ೪. ವಿಲಾಸಪ್ರಿಯತೆ; ರಸಿಕತೆ: ಖಯಾಲೀ ಕರ್ನಲ್‌ಗಳು ಅವರು ಒಬ್ಬರೇ ಅಲ್ಲದೆ ತಮ್ಮ ನಾಯಿಗೂ ಹಲ್ಲು ಕಟ್ಟಿಸ್ತಾರೆ (ಮಾಮನೆ. ೧೭೮). ೫. ವಿಲಾಸಪ್ರಿಯ; ರಸಿಕ: ಮೊದಲೇ ಖಯಾಲಿಯಾಗಿದ್ದವನು, ಆಗ ಮತ್ತಷ್ಟು ಖಯಾಲಿಯಾದ (ಹಂಗೀತೆ. ೧೦೧). **ಖಯಲ್**: ೨. ಆದರ ಮೇಲೆ ಇಸ್ಪೇಟ್ ಖಯಲ್ ಬೇರೆ (ನಿಂದನೆ. ೬೭). ೬. ಒಂದು ಬಗೆಯ ಜಾನಪದ ನೃತ್ಯನಾಟಕ: ಜಾನಪದ ನರ್ತನದ ಕಸಬು ದಾರರ ಗೋಷ್ಠಿಗಳಿಂದ ಖಯಲ್‌ಗಳು ಆಡಲಾಗುತ್ತವೆ (ಭಾರಜಾ. ೯೫). **ಖಯಾಲ್**: ೬. ಕೆಲವು ವೇಳೆ. . .'ಖಯಾಲ್' ಎಂಬ ನೃತ್ಯನಾಟಕ ಗಳನ್ನು ಆಡುತ್ತಾರೆ (ಆಭಾನ್ಯ. ೧೧೫). **ಖಯಾಲು**: ೨. ತಾಳ, ಮದ್ದಳೆ, ಯಕ್ಷಗಾನ, ಬಯಲಾಟವೆಂದರೆ ರುದ್ರನಿಗೆ ತುಂಬಾ ಖಯಾಲು (ದೇವಹೆಂ. ೧೩೬). **ಖಯ್ಯಾಲಿ**: ೨. ಬಣ್ಣ ಹಾಕಿ ನಡೆಯುವ ಸಮಸ್ತ ಕ್ರಿಯೆಯೂ ಅವನಿಗೆ ಖಯ್ಯಾಲಿ (ಸಂಸ್ಕಾರ. ೭೫). **ಖ್ಯಾಲ್**: ೭. [ಸಂಗೀತ] ಹಿಂದುಸ್ತಾನೀ ಹಾಡುಗಾರಿಕೆಯಲ್ಲಿ ಒಂದು ಪ್ರಕಾರ: ಖಂಬಾವತಿಯಲ್ಲಿ ಒಂದು ಖ್ಯಾಲ್ ಹಾಡಿದಳು (ರೂಪಸ. ೪೯). **ಖ್ಯಾಲ**: ೭. ಕಸಬಿಣಗಳಲ್ಲಿ ಕೆಲವರು ಲಾವಣಿ, ಖ್ಯಾಲ, ಕುಮರಿ ಮುಂತಾದ ಹಾಡುಗಳನ್ನು ಕಲಿತಿರುತ್ತಾರೆ (ಕಭಾಗ. ೧೯೬). **ಖ್ಯಾಲಿ**: ೪. ಮನಸ್ಸು ಇನ್ನೂ ವರುಷದ ಮಗುವಿನಂತೆ ನಿರ್ಮಲವಾಗಿತ್ತು. ಖ್ಯಾಲಿಯ ಅರ್ಥ ಕೂಡ ಹೊಳೆಯದಷ್ಟು ಮುಗ್ಧವಾಗಿತ್ತು (ದೀಪಹ. II, ೧೨೨). **ಖ್ಯಾಲು**: ೭. ಆ ಮಾಲಕಂಸ ರಾಗದ ಒಂದೇ ಒಂದು ಖ್ಯಾಲು ಮುಗಿಯುವಾಗ ಒಂದೂಕಾಲು ಘಂಟೆ ಕಳೆದಿತ್ತು (ಒಂಟಿದ. ೫೧). [← ಹಿಂ. ಅರ. ಖಯಾಲ್; ಖ್ಯಾಲ್]

**ಖಯಾಲು** 'ಖಯಾಲಿ' ನೋ.

**ಖಯ್ಯಾಲಿ** 'ಖಯಾಲಿ' ನೋ.

**ಖರ$_1$** 'ಕರಂ' ನೋ.

**ಖರ$_2$** (ಗು). ೧. ಒರಟಾದ; ಗಟ್ಟಿಯಾದ; ಕಠಿನವಾದ: ವಾಹಕರಾ ಕುಟಿಲಾಶ್ವಕ್ಕೆ ಖರ ಖಲೀನಮನಿಟ್ಟರ್ (ಪಂರಾಮಾ. ೪-೧೧೪). ೨. ಹರಿತ ವಾದ; ಮೊನಚಾದ; ತೀಕ್ಷ್ಣವಾದ: ಖರಕೋಪಾದಿ ಕಷಾಯ ದುಬ್ಬರಿಕೆಯಿಂ ಚಾರಿತ್ರ ಮೋಹಾಸ್ರವಂ ದೊರಕೊಳ್ಗುಂ (ಸುಕುಮಾ. ೮-೧೯); ಖರ ನಖರದೆ ಹರಿ ಗಿರಿಕರಿವರಶಿರಮಂ ಸೀಳ್ದು (ರಾಜಶೇ. ೧-೧೧೦); ಖರಶರಂ ಛಿದ್ರಿಸಲ್ಕೆ (ಶ್ರೀರಾಮಾ. ೨೩೭-೨೬೧). (ನಾ). ೩. ಹೇಸರಗತ್ತೆ. ೪. ಕತ್ತೆ; ಗರ್ದಭ: "ಗರ್ದಭಂ ಚಕ್ರಿವತ್ ಖರಂ ರಾಸಭಮ ಕತ್ತೆಯಕ್ಕುಂ" (ಮಂಗರಾ. ೫೫-೮); ಖರ ಕರಭ ಸೃಗಾಳ ಸಾರಮೇಯಾಕೃತಿಗಳಪ್ಪುತ್ಪತ್ತಿಸ್ಥಾನಂಗಳೊಳ್ ಪುಟ್ಟಿ (ಶಾಂತಿಪು. ೭-೮೮ ವ); ಸೂಕರದ ಖರದ ಕರಭಾನೀಕದ . . . ಸರದ ವಾಜಿ ಕರಮಶುಭಕರಂ (ಅಶ್ವಶಾ. ೩-೨೭). ೫. ರಾಕ್ಷಸ. ೧, ೫: ಖರನಂ ಖರನಂ ಮುರಾರಿ ಸಂಹರಿಸೆ (ಜಗವಿ. ೪-೪೨). ೬. ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತೈದನೆಯದು: ಪ್ರಭವ . . . ಖರ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೧). ೭. ಆರು ಎಂಬ ಸಂಖ್ಯೆಯ ಸಂಕೇತ: "ಖರ, ದ್ರವ್ಯ . . . ಇಂತಿನಿತುಂ ೬ಕ್ಕೆ ಪೆಸರು" (ವ್ಯವಹಾ. ೧೦); "ಋತು ರಸ ಖರವಾಱು" (ಮಂಗರಾ. ೧೦೩-೮). ೮. ಸಂಕೇತಭಾಷೆಯಲ್ಲಿ ಒಂದು ಸಂಖ್ಯೆ (?): ಸುಟ್ಟುಂಬೆಗೆ ದಶಂ ಸುಟ್ಟುಂಬೆಯಡ್ಡಗೆಱಿ ಹತ್ತುನೂಱಂ ಖರಂ" (ಮಂಗರಾ. ೧೦೩-೭). ೯. (ರಾಮನು ಕೊಂದ) ಒಬ್ಬ ರಾಕ್ಷಸನ ಹೆಸರು: ಖರದೂಷಣಾದಿ ತ್ರಿಶಿರಾದಿಗಳ ಕೀನಾಶನಗರಿಗೆ ಕಳುಹಿದನು ಕಡುಗಲಿ ರಘುಪ್ರಭವ (ತೊರರಾ. ೩-೬ ಸೂಚನೆ). [ಸಂ.]

**ಖರಕರ** (ನಾ). ೧. ಉಗ್ರವಾದ ಕಿರಣಗಳನ್ನುಳ್ಳವನು; ಸೂರ್ಯ: ಪರಿವೇಷಂಗೊಂಡಾ ಖರಕರನಂ ಕಂಡುದಱಿಂ (ಆದಿಪು. ೧೫-೪೨); ಖರಕರನಂತೆ ಖರದಂಡಪ್ರಿಯರುಂ (ಸುಕುಮಾ. ೨-೫ ವ); ಖರಕರನ ತಾಪದಿಂದಂ ಧರಣಿತಳಂ ಬೀಡೆವಿಟ್ಟು (ಜಟ್ಟಮ. ೧-೩೨). ೨. [ಛಂದ] ಅಕ್ಷರಗಣಗಳಲ್ಲಿ ಒಂದು ಬಗೆ; ಜಗಣ (U–U): ಸುರಪುರ ಯುಗಳಂ ಬರೆ ಶಶಿ ದಿವಿಜರ್ಖರಕರ ಸುರಯುಗತೋಯಂ ವಿರಚಿಸೆ . . . ಪರೆದುದು ಲಲಿತಂ ಧರೆಗಿದು ಪೆಸರಾಗಿರೆ (ಛಂದೋಂಬು. ೨-೧೯೦).

[ಖರ$_2$ + ಕರ$_3$]

**ಖರಕರಕಿರಣ** (ನಾ). ಸೂರ್ಯನ ಕಿರಣ: ಸುರಕರಿ ಕರದಿಂ ಕೆದರ್ದಂತಿರೆ ಪಸರಿಸುತಿರ್ದುದುದಿತ ಖರಕರಕಿರಣಂ (ರಾಜಶೇ. ೧೨-೨೮).

[ಖರಕರ + ಕಿರಣ]

**ಖರಕರನಂದನ** (ನಾ). ೧. ಸೂರ್ಯನ ಮಗ; ಶನಿ: ಖರಕರನಂದನಂ ಮಕರಲಗ್ನದೊಳಿಂದ್ರಪುರೋಹಿತಂ ಧನುರ್ಧರ ಗೃಹದೊಳ್ (ಜಾತಕ. ೧೨-೧೮). ೨. ಯಮಧರ್ಮ. ೩. ಸುಗ್ರೀವ. ೪. ಕರ್ಣ.

[ಖರಕರ + ನಂದನ]

**ಖರಕಲ** (ನಾ). ಕಲಕಲ ಧ್ವನಿ: ಹುಲಿಯ ಮೊರಹು ಫಣಿಗಳ ಫೂತ್ಕಾರವು ವಿಲಸಿತ ನವಿಲ ಕ್ರೇಂಕಾರ ಹಲವು ಭೇರುಂಡವಕ್ಕಿ ಖರಕಲ ವಲ್ಲಿ ನೆಲಸಿದವಾ ಠಾವಿನೊಳು (ಜ್ಞಾನಚಂ. ೧೦–೮೮). [< ಕಲಕಲ]

**ಖರಕಿರಣ** (ನಾ). = ಖರಕರ: ಖರಕಿರಣಂ ತೀವ್ರಂ ಶೀತರೋಚಿ ಜಡ ಮೂರ್ತಿ ಕಲ್ಪವೃಕ್ಷಂ ಸ್ತಬ್ಧಂ (ಶಾಂತಿಪು. ೨–೭೭); ಖರಕಿರಣ ತಾಪ ಮೆನಿತುಬ್ಬರಿಸಿದೊಡಂ ಕಂದಿ ಕುಂದದರವಿಂದದವೋಲ್ (ಪುಷ್ಪಪು. ೧೪–೨೮). [ಖರ್$_2$ + ಕಿರಣ]

**ಖರಖುರ** (ನಾ). ಗಟ್ಟಿಯಾದ ಗೊರಸು: ಖರಖುರ ಧಾರಾಟಂಕಾಹತಿ ಮುಗಿಲ ಮುರಿಗಳಂ ಕೆದಱುವಿನಂ (ಶಾಂತಿಪು. ೧೧–೪೨); ಖರಖುರ ಹತಿಯಿಂ ಖರಮುಂ ಕರಭಂಗಳನಟ್ಟಿ ಮುಟ್ಟಿ (ಪಂರಾಮಾ. ೪–೧೦೯). [ಖರ್$_2$ + ಖುರ]

**ಖರಗಂಧ** (ನಾ). ಒಂದು ಬಗೆಯ ಸಸ್ಯ; ಬೋಳಂಗಡಲೆ: "ಖರ [ಪಾಠಾಂ. ಕರ]ಗಂಧಮೆನಲು ಕರಿಕೆ" (ಮಂಗರಾ. ೩೫–೧೪). [< ಸಂ. ಖರಗಂಧಾ]

**ಖರಡಾಹಂಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು: "ಬಡೆಹುಲ್ಲು, ಖರಡಾಹಂಚೀಹುಲ್ಲು, ಕರಡಅಂಜಿಹುಲ್ಲು" (ಮೈಔಗಿ. ೨೭–೫೧೪). [ಖರಡ$_0$ (< ಕರಡ) + ಹಂಚಿಹುಲ್ಲು]

**ಖರಡು$_1$** 'ಕರಡು$_3$' ನೋ.

**ಖರಡು$_2$** 'ಕರಡು$_5$' ನೋ.

**ಖರಡೆ** (ನಾ). = ಕರಡು$_4$. 'ಪಕ್ಕಾಖರಡೆ' ಪರಾ. [< ಕರಡು$_4$]

**ಖರಣಸ** (ನಾ). ಚೂಪಾದ ಮೂಗುಳ್ಳವನು. [ಸಂ.]

**ಖರತನ** (ನಾ). ತೀಕ್ಷ್ಣತೆ; ಉಗ್ರತೆ; ಪ್ರಖರತೆ: ಖರಕಿರಣಂಗಳ ಕಾಯ್ಪಿನ ಖರ[ಪಾಠಾಂ. ಕರ]ತನದಿಂ ಚಂದ್ರಕಿರಣದುಜ್ವಳಿಕೆಯಿನಾ ಭರತನ ಮುಳಿಸೊಸಗೆಯನನುಕರಿಸಿದುದೇಂ ಚಕ್ರವರ್ತಿವೃತ್ತಮೊ ಶರದಂ (ಆದಿಪು. ೧೧–೭). [ಖರ್$_2$ + – ತನ]

**ಖರದಂಡ** (ನಾ). ಒರಟಾದ ನಾಳವುಳ್ಳುದು; ತಾವರೆ; ಕಮಲ: "ಸರಸಿಜಂ . . . ಖರದಂಡಮಬ್ಜಂ" (ಮಂಗರಾ. ೧೨೪–೧೬); ಮಂಡೂಕಬಹಳಮಂ ಖರದಂಡೋತ್ಪಲ ಕುಮುದರಾಜಿ ರಂಜಿತಮಂ . . . ಕಂಡುದೊಂದು ಕೊಳನಂ ಸರ್ಪಂ (ಪಂಚತಂ. ೨೬೯–೫); ಕೆಸಱೊಳ್ ಪುಟ್ಟಿದುದು . . . ಮಧುಪಪ್ರಸಂಗಿ ಖರದಂಡಂ ಮತ್ತೆನುತಬ್ಜಮಂ ಬಿಸುಟು (ಜಗವಿ. ೧–೬). [ಖರ್$_2$ + ದಂಡ]

**ಖರದಂಡನಾಭ** (ನಾ). ಹೊಕ್ಕುಳಲ್ಲಿ ಕಮಲವನ್ನುಳ್ಳವನು; ವಿಷ್ಣು: ಖರದಂಡನಾಭನ ಮತಕೆ ನೃಪತಿ ಹಸಾದವೆನುತಿರ್ದ (ಕುವ್ಯಾಭೀ. ೭–೧೩). [ಸಂ. (ಖರದಂಡ + ನಾಭಿ + –)]

**ಖರದಂಡಪ್ರಿಯ** (ನಾ). ೧. ಕಮಲಗಳಿಗೆ ಪ್ರಿಯನಾದವನು; ಸೂರ್ಯ. ೨. ಉಗ್ರವಾದ ಶಿಕ್ಷೆ ವಿಧಿಸುವುದರಲ್ಲಿ ಇಷ್ಟವುಳ್ಳವನು. ೧, ೨: ಖರಕರನಂತೆ ಖರದಂಡಪ್ರಿಯರುಂ ಉದಧಿಯಂತೆ ಜಡ ಸ್ವಭಾವರುಂ (ಸುಕುಮಾ. ೨–೫ ವ); ಸದುರ್ದರ್ಶನರುಚಿ ಖರದಂಡ ಪ್ರಿಯಂ ತಾನೆನಿಪ್ಪಾ ಕ್ಷಿತಿಪಂಗೆನ್ನಂದದಿಂದಂ ಸಮನಿಸುಗುಮಧಃಪಾತ ಮಸ್ತಾಬ್ಧಿಯೊಳ್ (ಚಂದ್ರಪು. ೨–೪೫). [ಖರದಂಡ + ಪ್ರಿಯ]

**ಖರಪಾಕ** (ನಾ). [ವೈದ್ಯ] ಔಷಧಿಯನ್ನು ಪಾಕಗೊಳಿಸುವ ಮೂರು ವಿಧಾನಗಳಲ್ಲಿ ಒಂದು; ಎಣ್ಣೆಯಂತೆ ಸ್ನಿಗ್ಧವಾಗಿರುವ ಹದ: ಮೃದುಪಾಕ, ಖರಪಾಕ, ಚಿಕ್ಕಣಪಾಕವೆಂದು ಮೂರು ತೆಱ . . . ಖರಪಾಕ ವಾತಹರ (ವೈದ್ಯಸಾ. I, ೧೨೧); ಕುಡಿಯುವುದಕ್ಕೆ ಮಧ್ಯಪಾಕವೂ, ಅಭ್ಯಂಗಲೇಪಗಳಿಗೆ ಖರಪಾಕವೂ ಹಿತ (ಸಕವೈ. XIII ಪ್ರಸ್ತಾವನೆ). [ಖರ್$_2$ + ಪಾಕ$_2$]

**ಖರಪುಷ್ಪ** (ನಾ). ಒಂದು ಬಗೆಯ ವನಸ್ಪತಿ; ನಾರಂಬೇಳಿ ಗಿಡ. [< ಸಂ. ಖರಪುಷ್ಪಾ]

**ಖರಬುಜ** 'ಕರಬೂಜ' ನೋ.

**ಖರಬೂಜು** 'ಕರಬೂಜ' ನೋ.

**ಖರಮಂಜರಿ** (ನಾ). ಒಂದು ಸಸ್ಯದ ಹೆಸರು; ಉತ್ತರಾಣಿ. [ಸಂ.]

**ಖರಮರೀಚಿ** (ನಾ). ೧. ತೀಕ್ಷ್ಣವಾದ ಕಿರಣ. ೨. ತೀಕ್ಷ್ಣಕಿರಣ ಗಳನ್ನುಳ್ಳವನು; ಸೂರ್ಯ: ಖರಮರೀಚಿಯ ಜಳಕೆ ಬಾಡಿದ ತರುಣ ತುಲಸಿಯ ದಂಡೆ (ಕುವ್ಯಾಉ. ೮–೭). [ಖರ್$_2$ + ಮರೀಚಿ]

**ಖರರುಙ್ನಂದನ** (ನಾ). ಸೂರ್ಯನ ಮಗ; ಶನಿ: ಖರರುಙ್ನಂದ [ಪಾಠಾಂ. ದುದ್ದಂಧ, ದುಗ್ನಂಧ]ನ ನೊಂದಿದಂದುದಯದೊಳ್ ರೋಗಾ ನ್ವಿತಂ ಬಾಲ್ಯಕಾಲ ರುಜಾರ್ತಂಮಲಿನಂ ಸಕಾಮನಲನಂ ಪಾರತ್ರಿಕ ವ್ಯಾಪ್ತಿ ತತ್ಪರನಕ್ಕುಂ (ಜಾತತಿ.೧೮–೧೪). [ಸಂ. (ಖರರುಚ್ + ನಂದನ)]

**ಖರರುಚಿ** (ನಾ). = ಖರಮರೀಚಿ ೨: ಖರರುಚಿಯ ಮಾರಾಂಕವೋ ಸುರಗಿರಿಯ ಸೋದರವೋ ಮೃಗಾಂಕನ ಮಱುದಲೆಯೋ ಮೇಣೆನಲು ರಥ ಹೊಳೆದಿಳಿದುದಂಬರದಿ (ಕುವ್ಯಾಅ. ೭–೧೨). [ಖರ್$_2$ + ರುಚಿ]

**ಖರವಳಿ** 'ಕರವಳಿ' ನೋ.

**ಖರವಾಹನ** (ನಾ). ಕತ್ತೆಸವಾರಿ; ಕತ್ತೆಯನ್ನು ವಾಹನವಾಗಿ ಮಾಡಿಕೊಂಡಿರುವುದು (?): ತಲೆಯದಿಲ್ಲದ ನೆರಳ ತಾ ಕುಳವಳಿಸಿ ಪೆಣನನು ತಬ್ಬಿದುದ ಮೇಣಿಳೆಗೆ ತಾರಕರಾಜಿ ಬಿದ್ದುದ ದಕ್ಷಿಣಾಶೆಯೊಳು ಅಳುತ ಪೋಪುದ ತೈಲದೊಡಲಿನೊಳಲಸಿ ಖರವಾಹನದಿ ಪೋಪುದ ಖಳನು ಕಂಡುರೆ ಬೆದರಿ ನಿಶ್ಚೈಸಿದನು ಮರಣವನು (ಕೃಕರ್ಣಾ. ೫–೫೯). [ಖರ್$_2$ + ವಾಹನ]

**ಖರವಿಷಾಣ** (ನಾ). ಕತ್ತೆಯ ಕೋಡಿನಂತೆ ಅಸಂಭವವಾದುದು; ಅಸತ್ಯವಾದುದು: ಜೀವಮೆಂಬುದುಮಂಬರಕುಸುಮ ಸಮಾನಮುಂ ಪರಲೋಕಮೆಂಬುದು ಖರವಿಷಾಣ ನಿರ್ವಿಶೇಷಂಗಳುಂ (ಶಾಂತಿಪು. ೮–೧೩೨ ವ); ಚೈತನ್ಯಂ ಮುಕ್ತಾತ್ಮಸ್ವರೂಪಮೆಂದು ಪರಿಕಲ್ಪಿಸುವರ್ ಅದು ಖರವಿಷಾಣದವೊಲ್ ಉಂಟಾಗಿಯುಂ ಅಭಾವಮೆ . . . ಆತ್ಮ ನಿವಾರಣಮೆಂಬುದು ತಮ್ಮಂದಮೆ ನಿರಾಕರಿಸೆ ಪಟ್ಟುದಱಿಂ ಖರವಿಷಾಣ ಕಲ್ಪಮೆ (ತತ್ತ್ವಪ್ರ. ೫). [ಖರ್$_2$ + ವಿಷಾಣ]

**ಖರವೈರಿ** (ನಾ). ಖರನೆಂಬ ರಾಕ್ಷಸನ ಶತ್ರು; ಶ್ರೀರಾಮ: (ಕಿ). [ಖರ್$_2$ + ವೈರಿ]

**ಖರಶತ್ರು** (ನಾ). = ಖರವೈರಿ: ಮುನಿಮನಹಾರಿಯೂ ಅದ್ಭುತರೂಪ ಧಾರಿಯೂ ಆದ ಆ ಖರಶತ್ರುವನ್ನು ನೋಡಿ ಕೌಸಲ್ಯೆಯ ಆನಂದವು ಉಕ್ಕಿ ಹೊರಸೂಸಹತ್ತಿತು (ತುಳಸಿ. ೫೫). [ಖರ್$_2$ + ಶತ್ರು]

**ಖರಶಾಣ** (ನಾ). ೧. ಒರಟಾದ ಮಸೆಗಲ್ಲು; ರತ್ನಗಳನ್ನು ಸಾಣೆ ಹಿಡಿಯುವ ಕಲ್ಲು: ಖರಶಾಣಕಷಣದಿಂ ಮಣಿಗುರುತೇಜೋವೃತ್ತಿ ನೆಗಟ್ಟುವೋಲ್ (ಚಂದ್ರಪು. ೧–೪೪). ೨. ಹರಿತವಾದ ಗರಗಸ: (ಕಿ). [ಖರ್$_2$ + ಶಾಣ]

**ಖರಸತ್ವ** (ನಾ). [ಕಾಮಶಾ] ಸ್ತ್ರೀಯರ ಹನ್ನೆರಡು ಸತ್ವಗಳಲ್ಲಿ ಒಂದು: ದೇವಸತ್ವ, ಯಕ್ಷಸತ್ವ . . . ಕಿನ್ನರ ಸತ್ವ, ಖರಸತ್ವವೆಂಬ ದ್ವಾದಶಸತ್ವದ ಸತಿಯರಿಂ (ವಿವೇಕ. ೨೬೯); ಎದುರಾಗಿ ವಾಕ್ಯಂಗಳನು ನುಡಿವಳು ವಿಟರಲ್ಲಿ ಅನುರಕ್ತೆಯಾದವಳು ಇವಳು ಖರಸತ್ವದ ಸ್ತ್ರೀ (ಕಾಮಶಾ. ೪–೬೩). [ಖರ್$_2$ + ಸತ್ವ]

**ಖರಸಾಣೆ** 'ಕರಸಾಣೆ' ನೋ.

**ಖರಹರಪ್ರಿಯ** (ನಾ). [ಸಂಗೀತ] ಒಂದು ರಾಗದ ಹೆಸರು : ಖರಹರಪ್ರಿಯ : ಈ ರಾಗದ ನಿಜನಾಮ ಹರಪ್ರಿಯ . . . 'ಖರ' ಎಂಬ ಮುಂ–ಪ್ರತ್ಯಯ ಹೊಂದಿ ೨೨ನೇ ಮೇಳಕರ್ತವಾಗಿದೆ (ಸಂಗೀಚಂ. ೧೩೪); ಖರಹರಪ್ರಿಯರಾಗದಿಂದ ಅಭ್ಯಾಸವನ್ನಾರಂಭಿಸುವುದು ಸ್ವಲ್ಪ ಕಷ್ಟ (ಹೇಮಕೂ. ೧೦೫). [ಖರ್ $_2$ + ಹರ + ಪ್ರಿಯ]

**ಖರಾಂತಕ** (ನಾ). = ಖರವೈರಿ : ಖಿಲಪ್ರಾಯಮಾಗಿರ್ದ ನಿಜಬಲಜಾಲಮಂ ಖರಾಂತಕನನುಜನೀಕ್ಷಿಸಿ ಕನಲ್ದು (ಜೈಮಿಭಾ. ೨೦–೧೨). [ಖರ್ $_2$ + ಅಂತಕ]

**ಖರಾಂಶು** (ನಾ). = ಖರಕರ : ಬೇಸಜಿಕೆ ಲೋಕಮಂ ತಗುಳ್ದು ಸುಟ್ಟಬಲಿಂದೆ ಖರಾಂಶು ನಾರಕಾವಾಸದೊಳಾಬ್ಬ್ಯೋಲಪತವಾರ್ಧಿಯೊಳಾಬ್ಬುದುಂ (ಪಂಪಭಾ. ೩–೮೧). [ಖರ್ $_2$ + ಅಂಶು]

**ಖರಾತ್ಮಕ** (ನಾ). ಒಂದು ಸುಗಂಧ ಸಸ್ಯ ; ಮರುಗ : "ಖರಸುಸಃ – ಖರಾತ್ಮಕ, ಮರುಗ" (ಓಷಧಿ. ೪೩). [?]

**ಖರಾಬು** 'ಕರಾಬು' ನೋ.

**ಖರಾಮತ್** 'ಕರಾಮತಿ' ನೋ.

**ಖರಾಮತಿ** 'ಕರಾಮತಿ' ನೋ.

**ಖರಾಮತ್ತು** 'ಕರಾಮತಿ' ನೋ.

**ಖರಾಯ**(ನಾ).[ಗಣಿತ] ಆಯಗಳಲ್ಲಿ ಒಂದು ಪ್ರಭೇದ: ವಿಸ್ತಾರವಾಗಿ ಉದ್ದ ಅಗಲವನು ಅಳೆದು ವೊಟ್ಟುಗೂಡಿ ಕೊಂಡ ಕೋಲುಯೆಷ್ಟೋ ಆದನು ೩ ಹೆಚ್ಚಿ . . . ಆದಂ ೮ ರಿಂದ ಭಾಗಿಸಿ ಉಳಿದವು ಆಯಗಳೂ × × × ೬ ಉಳಿದರೆ ಖರಾಯ (ಆಯಟೀ. ೧–೬). [ಖರ್ $_2$ + ಆಯ $_1$]

**ಖರಾರ** 'ಕರಾರು $_2$' ನೋ.

**ಖರಾರಿ$_1$** (ನಾ). = ಖರವೈರಿ : (ಕ). [ಖರ್ $_2$ + ಅರಿ $_6$]

**ಖರಾರಿ$_2$** 'ಕರಾರು $_2$' ನೋ.

**ಖರಾರು$_1$** 'ಕರಾರ' ನೋ.

**ಖರಾರು$_2$** 'ಕರಾರು $_2$' ನೋ.

**ಖರಾರುವಾಕ್ಕು** 'ಕರಾರುವಾಕ್ಕು' ನೋ.

**ಖರಾಶ್ಕೆ** (ನಾ). ಓಮ ; ವಾದಕ್ಕಿ ; ಅಜಿವಾನ. [ಸಂ. ಖರಾಶ್ವಾ]

**ಖರಿಯ** 'ಖರೆಯ' ನೋ.

**ಖರೀತ, ಕರೀತ, ಖರೀತಾ, ಖಲಿತಾ, ಖಲಿತೆ** (ನಾ). ೧. ಲಕೋಟೆ; ಪತ್ರಗಳನ್ನು ಹಾಕಿ ಒಯ್ಯುವ ಚೀಲ. ೨. ಆಜ್ಞಾಪತ್ರ; ನಿರೂಪ : ಲಾರ್ಡ್ ಮಾರ್ನಿಂಗ್‌ಟನ್‌ರವರ ಖರೀತ (ಕೃಷ್ಣಭೂ. ೯೨). **ಕರೀತ** : ೨. ಕರೀತ ಬರೆದು ಕಳುಹಿಸಿದನು (ಪಾಳೆಗಾ. ೪೫) ; ಕಂಪಣೀ ಸರ್ಕಾರದವರು ಮಹಾರಾಜರ ಸರ್ಕಾರಕ್ಕೆ ಕರೀತಾ ಬರೆದಿದಾರೆ (ಮುಸುಗ. ೧೪೬). ೩. ಪತ್ರವ್ಯವಹಾರ : ಕಂಪನಿ ಸರ್ಕಾರಕ್ಕೂ ಮಹಾರಾಜರಿಗೂ ಕರೀತ ನಡೆಯುತಾ ಇತ್ತು (ಕುರಾಚ. ೪೪). **ಖರೀತಾ** : ೨. ಖರೀತಾಗಳನ್ನು ಬರೆದು (ಮಹಾವಂ. II, ೫೦) ; ಹೈದರಲ್ಲಿಯು . . . ಖರೀತಾ ಬರೆಯಿಸಿ ಖಿಲ್ಲತ್ತನ್ನು ಕೊಟ್ಟು (ಚಿತ್ರಪಾ. ೬೧). **ಖಲಿತಾ** : ೨. ಕಾಕಾ ಅವರದೇನೋ ಖಾಸ್ ಖಲಿತಾ ಬಂಥಾಂಗದ (ದೀಪಹ. II, ೭೩). **ಖಲಿತೆ** : ೨. ಕೂಡಲೆ ನಿನ್ನನ್ನು ಒಪ್ಪಿಸಬೇಕೆಂದು ಇಂದು ಖಲಿತೆ ಕಳಿಸಿದ್ದಾರೆ (ವಿಜಸಾ. ೫೪). [← ಅರ. ಖರೀತಹ್ ; ಹಿಂ. ಮರಾ. ಖರೀತಾ]

**ಖರೀತಾ** 'ಖರೀತ' ನೋ.

**ಖರೀದಿ** (ನಾ). ೧. ಬೆಲೆಕೊಟ್ಟು ಕೊಂಡುಕೊಳ್ಳುವಿಕೆ : ಒಂದು ಎಕರೆ ರಬ್ಬರು ತೋಟ ಖರೀದಿ ಮಾಡುವಷ್ಟು ಸಿರಿವಂತರಿದ್ದಾರೆಯೆ ನಿನ್ನ ತಾಯಿತಂದೆ? (ಸಮಸಾ. ೧೨೫) ; ಕೆಲವು ವಸ್ತುಗಳ ಖರೀದಿಗಾಗಿಯೆ ಇವರನ್ನು . . . ಕಳುಹಿಸಿರಬಹುದು (ರತ್ನಗೋ. ೨೧) ; ಒಂದು ಕೈಗಡಿಯಾರವೂ ಖರೀದಿ ಆಯಿತು (ವೈನಿ. ೧೯೧). ೨. ಬೆಲೆ ; ಕ್ರಯ : ಗ್ರಾಮಾಧಿಪತಿಯು ಒಂದು ರೂಪಾಯಿ ಖರೀದಿಗೆ ಒಳಪಟ್ಟ ಕುರಿ, ಕೋಳಿ. . . ಸ್ವತ್ತುಗಳ ಚಿಕ್ಕಪುಟ್ಟ ಕಳವು ಮೊಕದ್ದಮೆಗಳನ್ನು ಹಿಡಿದು ವಿಚಾರಿಸಲು ಲಾಯಖಾಗಿರುತ್ತಾನೆ (ಗ್ರಾಮಾಕ. ೬೧) ; ನಿಮ್ಮ ಕುದುರೆ ಖರೀದಿ ಏನೆಂದು ಕೇಳಲು (ಶನಿಮಾ. ೧೦) ; ಅದಕ್ಕಾದ ಖರೀದಿಯನ್ನು ಕೊಟ್ಟು ಆ ಮನೆಯನ್ನು ತೆಗೆದುಕೊಂಡರು (ಪಂಚಾವ್ಯ. ೩೦).

ಖರೀದಿಮಾಡು = ಕೊಂಡುಕೊಳ್ಳು : ನಿಂಮ ನಿಂಮ ತಾಲ್ಲುಕದಲ್ಲಿ ಖರೀದಿಮಾಡಿ (ಮೈಆರಿ. ೧೯೩೪, ೨೫–೭ ; 1826) ; ರತ್ನಗೋಲವನ್ನು ಖರೀದಿಮಾಡಲು ಪ್ರಯತ್ನಿಸಬೇಕೆಂದು ಅಪ್ಪಣೆಕೊಟ್ಟನು (ರತ್ನಗೋ. ೫೬). [← ಮರಾ. ಖರೀದೀ ; ಹಿಂ. ಪಾರ. ಖರೀದ್]

**ಖರೀದಿಪತ್ರ** (ನಾ). ಮಾರಾಟಮಾಡಿದ ಬಗೆಗೆ ಬರೆದುಕೊಟ್ಟ ಪತ್ರ; ಕ್ರಯಪತ್ರ: ನಾಳೆ ಖರೀದಿಪತ್ರ ಮಾಡಿಬಿಡೋಣ (ತಿಡುಗು. ೫೨). [ಖರೀದಿ + ಪತ್ರ]

**ಖರೀದಿಸು** (ಕ್ರಿ). ಖರೀದಿ ಮಾಡು ; ಕೊಂಡುಕೊಳ್ಳು : ಮಾರ್ಕೆಟ್ಟಿಗೆ ಬಂದು ಕೆಲವು ಹಣ್ಣುಗಳನ್ನು ಖರೀದಿಸಿದೆ (ಬದುಜ. ೮೫). [ಖರೀದಿ + –ಇಸು $_3$]

**ಖರೀಪ** (ನಾ). ಮುಂಗಾರುಬೆಳೆ : ಮುಂಗಾರಿಯ ಸರ್ವಧಾನ್ಯವು, ಎಳ್ಳು, ಕಾರೆಳ್ಳು, ಮುಂತಾದ ಖರೀಪ ಸಹಿತವಾಗಿ (ಕೃಷಿಪ್ರ. ೪೧). [← ಪಾರ. ಅರ. ಹಿಂ. ಮರಾ. ಖರೀಫ್]

**ಖರುವ** (ನಾ). ನಗರ ಮತ್ತು ಹಳ್ಳಿಗಳ ಮಧ್ಯಸ್ಥಿತಿಯಲ್ಲಿರುವ ನದೀಪರ್ವತಗಳಿಂದ ಕೂಡಿದ ಪ್ರದೇಶ : ಕೆಜಿಕೆ ತೋಜಿಕೆ ಪುರ ಗ್ರಾಮ ಖರುವ ಪತ್ತನವೆಂಬುದಜಿಯದೈತರುತ (ಭೈರವೇ. ೨–೨೩೦). [< ಸಂ. ಖರ್ವಟ]

**ಖರೆ$_1$** 'ಖರೆಯ' ನೋ.

**ಖರೆ$_2$** (ನಾ). ಒಂದು ಬಗೆಯ ಹುಲ್ಲು ; ದಾಗಡಿ ಹುಲ್ಲು : (ಕ). [?]

**ಖರೆಗೊಳ್** (ಕ್ರಿ). ಸತ್ಯವೆಂದು ಗ್ರಹಿಸು ; ನಿಜವೆಂದು ಭಾವಿಸು : ಪತಿಯು ಲೋಕವ ಪಡೆವೆನೆಂದೇ ಪತಿಯ ಸಂಗಡ ಶಿಖಿಯ ಬೀಳಲು ಅತಿ ನರಕವೆಂತೆನ್ನದಲೆ ದುರ್ಬಲವ ಖರೆಗೊಂಡು ಪತಿಯ ಕೂಡೆಯು ಯಿದ್ದರಡು ದಿನ ಹಿತದಿ ಹೋಗುವಳೈಯ ನರಕಕೆ (ಜ್ಞಾನಸಿಂ. ೨–೧೯). [ಖರೆ$_1$ (< ಖರೆಯ) + ಕೊಳ್$_1$]

**ಖರೆತನ** 'ಖರೆಯತನ', ನೋ.

**ಖರೆಯ, ಕರ್ರೆ$_9$, ಖರಿಯ, ಖರೆ$_1$** (ನಾ). ೧. ದಿಟವಾದುದು ; ನನ್ನಿ ; ನಿಜ : ಪಟುಗಳೋ ಮರುಳು ಪೂತು ಪಾಂಡವಭಟರು ಖರೆಯವಲಾ (ಕುವ್ಯಾದ್ರೋ. ೨–೩೬) ; ಪೊಡವಿಜೆಯ ಬಿಡನೆಂಬ ಚಿತ್ತದ ಕಡುಹು ಖರೆಯುನೆ (ಕೌಶಿರಾ. ೧೯–೬) ; ಖರೆಯುವಾಗಿದೆ ಕನಸಿನ ವಾಕ್ಯ (ನೋಹತ. ೨೮–೧೦) ; ಖರೆಯ ಬಾವನ್ನಮಂತೆಯ್ದಿಲ್ಲದುರೆ ದಿವ್ಯ ಪರಿಮಳವನೆಂತೀವುದು (ಪರಶು. ೧೯–೩). ೨. ಮೇಲಾದವನು ; ಶ್ರೇಷ್ಠ : ಖರೆಯರಲ್ಲಾ ನೀವು ಕೊಂತಿಯ ವರಕುಮಾರರು ನಿಮ್ಮೊಡನೆ ಸಂಗರಕೆ ಸರಿಸರಿ ನಾವು (ಕುವ್ಯಾಕ. ೪–೩೨) ; ಸುಭಟಾಂಗದಲಿ ನೀನತಿ ಖರೆಯನೈ ಸಂದೇಹವೇ (ಕೌಶಿರಾ. ೨೨–೪೩) ; ಅಹುದೋ ಖೋಡಿಯಿಲ್ಲದ ಖರೆಯನಹೆ ಖದ್ಯೋತವಂಶದಲಿ (ತೊರರಾ. ೪–೪–೩೩) ; ಅವರಿನ್ನೇಂ ಖರೆಯರೋ ಮುಕ್ತಿಪಥದಲಿ ದೂರಗಮನದಲಿ (ನಿಭಾಗ. ೧೧–೧೨–೩೫). **ಕರ್ರೆ$_9$** : ೧. ನೀವು ಹೇಳೋದು ಕರೆ ಕಾಣಾದಿಲ್ಲಪ್ಪಾ (ವಿಜಯ. ೨೧೯). **ಖರಿಯ** : ೨. ಜಗಕೆ ಕಾಯ್ವ ಗುರುವರ ನೀನೆ ಖರಿಯಾ (ಜಗದಾ. ೩.೨೮). **ಖರೆ$_1$** : ೧. ರಂಭೆಯ ನಾಚಿಪಳೆಂಬುದು ಖರೆಯು (ಕುಮಾವಿ. ೪) ; ನೀನು ಆಡುವ ಮಾತು ಅಕ್ಷರಶಃ ಖರೆ (ಮೋಹಿನೀ. ೫೫).

ಖರೆಖೊಟ್ಟಿಮಾಡು = ಸತ್ಯವೊ ಸುಳ್ಳೊ ಎಂಬುದನ್ನು ಒರೆಗೆ ಹಚ್ಚಿನೋಡು: ಖರೇಖೊಟ್ಟಿಮಾಡಿರಿ. ಅಲ್ಲಿಂದ ಹೊಡೀರಿ (ದೀಪಹ. II, ೫೭); ಸೋನಕ್ಕಗ ಬಡಕೊಂಡ ವ್ಯರ್ಥ ಅಪವಾದದಾಗ ಏನೂ ತಥ್ಯ ಇಲ್ಲ ಅನ್ನೂದನ್ನ ಖರೇಖೊಟ್ಟಿ ಮಾಡಲಿಕ್ಕೆ ಬರತದ (ದೀಪಹ. II, ೧೭).

ಖರೆಬರು = ನಿಜವಾಗು; ಸತ್ಯವಾಗು: ಕೈಗೆರೆಗಳ ಮೇಲಿಂದ ಹೇಳಿದ ಭವಿಷ್ಯ ಎಷ್ಟೋ ಸಲ ಖರೆಬರುತ್ತದೆ (ಮುಕ್ತಿ. ೪೭).

ಖರೆಮಾಡು = ಸತ್ಯವಾಗುವಂತೆ ಮಾಡು; ದಿಟಗೊಳಿಸು: ಮುಸಲವನ್ನು ಹೆರುವಳೆಂಬ ವಿಪ್ರಶಾಪದಿಂದ ಬಂದುದನ್ನು ಖರೆಮಾಡಲು ವನಿಕೆ ಮಸೆಯಲು ಆ ಪುತಿಗಿ ಬೆಳೆದಿತು (ವಿಜಯ. ೭೩); ಕಾಕಾ ಭವಿಷ್ಯ ನುಡಿದಾರ. ಅದನ್ನ ಖರೆಮಾಡಿ ತೋರಿಸಬೇಕು (ದೀಪಹ. II, ೨೭). [← ಮರಾ. ಖರಾಯೀ]

**ಖರೆಯತನ,** ಖರೆತನ (ನಾ). ೧. ಹಿರಿಮೆ; ಶ್ರೇಷ್ಠತೆ; ಮೇಲ್ಮೆ: ಗೆಲವೇ ನಮಗೆ ನಿಂದರೆ ನಿನ್ನ ಸಮ್ಮುಖದಲಿ ಮಹಾದೇವಹುದು ಬಳಿಕೇನು ತನ್ನಲುಂಟೀ ಖರೆಯತನ (ಕುವ್ಯಾದ್ರೋ. ೧೪-೧೭). **ಖರೆತನ:** ೨. ಒಳ್ಳೆಯತನ; ಪ್ರಾಮಾಣಿಕತೆ: ಖರೆ ಮಾಲನ್ನು ಖರೀದಿಮಾಡಿ ಕಳುಹಿಸಿದ ಕಾರಣ ಖರೆತನದ ಬಗ್ಗೆ ಆ ಮಾಲಿಗೆ ಹೆಚ್ಚು ಬೆಲೆಯು ಬೀಳುವುದು (ಮುಂಬಪ್ಯಾ. ೯೮). [ಖರೆಯ + -ತನ]

**ಖರೆಲೇಸು** (ನಾ). ಬಹಳ ಒಳ್ಳೆಯದು; ತುಂಬಾ ಚೆನ್ನಾದುದು: ಆ ಗೋವಳರು ಖರೆ[ಪಾಠಾಂ. ಕರ]ಲೇಸೆಂದೆನುತ . . . ಸತ್ರದ ಶಾಲೆಗೈತಂದು (ನಿಭಾಗ. ೧೦-೨೧-೫); ತನತನಗೆ ಖರೆ[ಪಾಠಾಂ. ಬರೆ] ಲೇಸು ಕಾರ್ಯವಿದೆನುತ (ನಿಭಾಗ. ೧೦-೨೨-೨೦). [< ಕರಲೇಸು?]

**ಖರೋಷ್ಠಿ** (ನಾ). ಒಂದು ಬಗೆಯ ಲಿಪಿ: ಸಿಂಧುನದಿಯ ಪಶ್ಚಿಮ ಭಾಗದಲ್ಲಿ ಸಿಕ್ಕಿರತಕ್ಕ ಶಾಸನಗಳು ಬಲದಿಂದ ಎಡಕ್ಕೆ ಬರೆಯುವ ಖರೋಷ್ಠೀ ಲಿಪಿಯಲ್ಲಿವೆ (ಭಾಇಪ್ರ. ೧೪೮); 'ಧರ್ಮಪದ'ದ ಪ್ರಾಕೃತ ರೂಪ ಖರೋಷ್ಠಿ ಲಿಪಿಯಲ್ಲಿ ದೊರಕಿತು (ಭಾರದ. ೩೪೮). [ಸಂ. ಖರೋಷ್ಠೀ]

**ಖರ್ಗ** 'ಖಟ್ಗ' ನೋ.

**ಖರ್ಗಸ** (ನಾ). ಒಂದು ಜಾತಿಯ ಮರ: "ಗರ್ಗತ್ತಿ, ಖರ್ಗಸ" (ಮೈಔಗಿ. ೩೭-೭೦೮); ಖರ್ಗಸ (ಖರ್ವತ) - ಮಧ್ಯಮಆಕಾರದ್ದು. ಕಟ್ಟಿಗೆಯ ಸಾಮಾನು ಮಾಡುವಾಗ . . . ಈ ಮರದ ಎಲೆಗಳಿಂದ ಉಜ್ಜಿ ನುಣುಪು ಮಾಡುತ್ತಾರೆ (ಕಭಾಗೆ. ೩೮). [?]

**ಖರ್ಚಿಕ** (ನಾ). ಬಹಳ ವೆಚ್ಚಮಾಡುವವನು; ಖರ್ಚುದಾರ: "ದುಂದುಗಾರ" (ಜಾನಕೋ. ೪೩); ರಜಪೂತರು - ದೊಡ್ಡ ಮನಸ್ಸಿನವರೂ ಖರ್ಚಿಕರೂ ಇರುತ್ತಾರೆ (ಕಭಾಗೆ. ೧೧೪); ಭಾವೂಸಾಹೇಬನು ಬಹಳ ಖರ್ಚಿಕನು (ಉತ್ತಗೃ. ೧೫). [← ಮರಾ. ಖರ್ಚೀಕ]

**ಖರ್ಚು** 'ಕರ್ಚು$_4$' ನೋ.

**ಖರ್ಚುದಾರ** (ನಾ). ೧. ಖರ್ಚುಮಾಡುವವನು; ವೆಚ್ಚಮಾಡುವವನು. ೨. ಬಹಳವಾಗಿ ವೆಚ್ಚಮಾಡುವವನು; ದುಂದುಗಾರ: (ಕಿ). [ಖರ್ಚು (< ಕರ್ಚು$_4$) + -ದಾರ$_4$]

**ಖರ್ಚುಪಟ್ಟಿ** (ನಾ). ಖರ್ಚುಮಾಡಬೇಕಾದ ಹಣದ ವಿವರಗಳನ್ನುಳ್ಳ ಪಟ್ಟಿ: ಯಾರ ಹೆಸರಿನಲ್ಲಿ ಖರ್ಚುಪಟ್ಟಿ ಬರೆಯಲಿ ಸ್ವಾಮಿ? ನಿಮ್ಮ ಹೆಸರಿನಲ್ಲಿಯೊ (ಮಲೆನಾ. ೫). 'ಜಮಾಪಟ್ಟಿ' ಪರಾ. [ಖರ್ಚು (< ಕರ್ಚು$_4$) + ಪಟ್ಟಿ]

**ಖರ್ಜ** (ನಾ). = ಕಜ್ಜಿ: ಅರಿದಾಳಂ . . . ಎಂಬಿನಂ ಗೋಮೂತ್ರಂ ಬೆರಸರೆದು ಪೂಸೆ ತರ್ಮಂ ಮರವೂ(ವು)ವುಂ ಖರ್ಜೆಯುಂ ವಿಸರ್ಪಮುಮಱಿಗುಂ (ಲೋಕೋಪ. ೯-೧೦೫). [< ಸಂ. ಖರ್ಜು, ಖರ್ಜೂ]

**ಖರ್ಜಿಕಾಯಿ** 'ಕರಂಜಿಕಾಯ್' ನೋ.

**ಖರ್ಜು** (ನಾ). ೧. ನವೆ; ಕಡಿತ. ೨. ಒಂದು ಬಗೆಯ ಗೆಡ್ಡೆ: "ಖರ್ಜು[ಪಾಠಾಂ. ಸಿರ್ಜು] ಮರಸಣಿಯಕ್ಕು" (ಮಂಗರಾ. ೪೪-೪೭). ೩. = ಖರ್ಜೂರ. [ಸಂ.]

**ಖರ್ಜುರ** (ನಾ). ೧. ಬೆಳ್ಳಿ. ೨. ತವರ: "ಖರ್ಜುರ ತ್ರಪುವಕ್ಕು" (ಮಂಗರಾ. ೪೧-೩೩). [ಸಂ.]

**ಖರ್ಜೂರ** (ನಾ). ೧. ತಾಳೆ ಜಾತಿಗೆ ಸೇರಿದ ಒಂದು ಬಗೆಯ ಮರ; ಉತ್ತುತ್ತಿ: "ಖರ್ಜೂರವೆನಲುತುತ್ತಿಯಕ್ಕು" (ಮಂಗರಾ. ೪೩-೪೩); ಬಾಚಿಟಿಯ ಖರ್ಜೂರದ ಕಿತ್ತೀಳೆಯ . . . ಮರದಿಂ (ಕಾವ್ಯಾವ. ೨೩೦); ಸಂತತ ಸರಸ ಫಳವ್ರಾತದಿಂ ಸೇವ್ಯಮಲ್ಲಲ್ಲಿ ಕರಂ ಖರ್ಜೂರವೃಂದಂ (ಪುಷ್ಪವು. ೯-೧೫); ಖರ್ಜೂರ ಹಣ್ಣಾಗುವಾಗ್ಯೆ ಕಾಗೇ ಬಾಯಿಗೆ ಹುಣ್ಣು (ಗಾದೆ). ೨. ಬೆಳ್ಳಿ. 'ಖರ್ಜೂರ ಪರ್ವತ' ಪರಾ. [ಸಂ.]

**ಖರ್ಜೂರಪರ್ವತ** (ನಾ). ಬೆಳ್ಳಿಯ ಬೆಟ್ಟ; ರಜತಾದ್ರಿ: ಖಂಡಿತಾಮೃತಕಿರಣಜೂಟಂಗೆ . . . ಖರ್ಜೂರಪರ್ವತವಾಸಿಗೆ (ಭಾವಚಿಂ. ೪-೩೭). [ಖರ್ಜೂರ + ಪರ್ವತ]

**ಖರ್ಪರ** (ನಾ). ೧. ತಲೆಬುರುಡೆಯ ಚಿಪ್ಪು; ಕಪಾಲ: ವಿಾಜಾದ ವಿಚಾರ ಖರ್ಪರವ ಪಿಡಿದ ಜಾತಂಗೆ ಭಿಕ್ಷ (ಭಿಕ್ಷಾಚ. ೩-೧೭). ೨. ಕೂರ್ಮನ ಬೆನ್ನಿನ ಕವಚ; ಆಮೆಯ ಚಿಪ್ಪು: ಕೂರ್ಮನ ಖರ್ಪರದೆಲ್ಪು ನುರ್ಗಿ ಬೆನ್ನೊಳಗುಚಿದತ್ತು (ಪುಷ್ಪವು. ೫-೩೭); ಕಮಠಖರ್ಪರ ಸಮಂ ರಕ್ಕಸನ ಮೆಯ್ಯ್ (ಶ್ರೀರಾಮಾ. ೧೮೧-೧೫೫). ೩. ಕೊಪ್ಪರಿಗೆ: "ಕಟಾಹವಾ ಖರ್ಪರವದು ಕೊಪ್ಪರಿಗೆಯಕ್ಕು" (ಮಂಗರಾ. ೭೨-೨೨); ಧರಣಿ ತಾನೈವತ್ತುಕೋಟಿಯ ಹರಹು ಭೂಮಿಗೆ ಹತ್ತುಮಡಿ ಖರ್ಪರ ಕಟಾಹವದಕ್ಕೆ ದಶಗುಣ (ಕುವ್ಯಾಸ. ೯-೨೫); ಬಿಡದೆ ನೆಲದಲಿ ಮೆಟ್ಟುತಲಿ ಬ್ರಹ್ಮಾಂಡ ಖರ್ಪರವ (ಸುದಾಮು. ೭೦). ೪. ಭಿಕ್ಷಾಪಾತ್ರೆ: ಕಣ್ಣೆ ಕಟ್ಟಿಗೆಯಾಗಿ ಕೈಯೆ ಖರ್ಪರವಾಗಿ. . . ಮನದ ಭಿಕ್ಷವನುಂಡು (ಅವಚಂ. ೧೦೦-೪೫೦); ಭಿಕ್ಷೆಯಿದ ಸವಿವುದೆನೆ . . . ಖರ್ಪರವ ಮುಂದಿರಿಸಿದಂ ಮಲ್ಲಿನಾಥಂ (ಸಿದ್ಧೇಪು. ೮-೨೪). ೫. ಕೊಡೆ; ಛತ್ರಿ: (ಕಿ). ೬. ಒಡೆದ ಮಡಕೆಯ ಚೂರು; ಬಕ್ಕರೆ; ಬೋಕಿ. ೭. ಕಳ್ಳ; ಚೋರ. ೮. ಧೂರ್ತ; ನೀಚ. ೯. ಒಂದು ದೇಶದ ಹೆಸರು: ಲಾಳ ಮಾಳವ ಗೌಳ ಕುರು ನೇಪಾಳ ಖರ್ಪರ ಬರ್ಬರಂ . . . ಭೂಪಾಳರೋಲೈಸೆ (ಬಸವು. ೬೧-೩೦); ಖರ್ಪರ ದೇಶಾಧಿಪತಿಯ ದರ್ಪಗೆಡಿಸಿ ಪಿಡಿದಾ ನೇಮಿಮಲ್ಲುಕನಾರ್ಪಿಗೆಣೆಯೆ ಲೋಕದೊಳಗೆ (ಕುರಾಸಾಂ. ೧೭-೩೧). ೯. ಒಂದು ಬಗೆಯ ಲೋಹ; ಸತುವು. 'ಖರ್ಪರಪುಷ್ಪ' ಪರಾ. [ಸಂ.]

**ಖರ್ಪರಪುಷ್ಪ** (ನಾ). ಸತುವನ್ನು ಉರಿಸಿದಾಗ ಉಳಿಯುವ ಶೇಷ: ಹನೆಯಲ್ಲಿ ಇದನ್ನು (ಸತುವನ್ನು) ಕಾಸಿದರೆ, ಇದಕ್ಕೆ ಬೆಂಕಿ ಹತ್ತಿ ಬಿಳಿ ಜ್ವಾಲೆಯುಂಟಾಗುವುದು. ಅದರಿಂದುಂಟಾದ ಪದಾರ್ಥಕ್ಕೆ (ಖರ್ಪರ ಪುಷ್ಪ) ಸತುವಿನ ಹೂವೆಂದೆನ್ನುವರು (ಮುಂಬಯಿ. ೭-೨೧). [ಖರ್ಪರ + ಪುಷ್ಪ]

**ಖರ್ಪರಯಂತ್ರ** (ನಾ). ಒಂದು ಬಗೆಯ ಅಗ್ಗಿಷ್ಟಿಕೆ (?): ಲೋಹದ ಆರಹುಡಿಯನ್ನು . . . ಖರ್ಪರಯಂತ್ರದಿಂದ ಕಿರುಪುಟವನ್ನು ಹಾಕಿ (ಸಕವೈ. ೯೫). [ಖರ್ಪರ + ಯಂತ್ರ]

**ಖರ್ಪರಿ** (ನಾ). ಮೈಲುತುತ್ತ. [ಸಂ. ಖರ್ಪರೀ]

**ಖರ್ಪರಿತುತ್ಥ** (ನಾ). = ಖರ್ಪರಿ: "ಅಮೃತತುತ್ಥಂ - ಖರ್ಪರಿತುತ್ಥಂ" (ಒಷಧಿ. ೮). [ಖರ್ಪರಿ + ತುತ್ಥ]

**ಖರ್ಬುರ** (ಗು). ಮಿಶ್ರವರ್ಣದ; ಶಬಲವಾದ: ಖರ್ಬುರ ರತ್ನ ಸೇನೆಯಖಿಳಾವನಿ ರಾಜಿಪ ಸಂಪದಂಗಳ್ (ಕಜಿಕಂ. ೮೬). [< ಸಂ. ಕರ್ಬುರ]

**ಖರ್ವ** (ಗು). ೧. ಮುರಿದ; ಊನವಾದ; ಅಂಗಹೀನವಾದ: ಸ್ಕೂಲಿನಲ್ಲಿ ಎಷ್ಟು ಚರಿತ್ರೆಗಳ ಪಾಠಗಳನ್ನೂ . . . ಕಂಠಪಾಠ ಮಾಡಿದ್ದೇವೆಯೊ ಅವೆಲ್ಲ ಅತ್ಯಂತ ಕ್ಷೀಣವಾಗಿ ಖರ್ವವಾಗಿ ಬಿಡುತ್ತವೆ (ನಿಬಂಧ. I, ೧೫೪). ೨. ಕುಳ್ಳ; ಗಿಡ್ಡ; ಕುಬ್ಜ: ಭಾನೆಡೆಯೊಳಿಹ ಶಾಖೆಯಗ್ರದೊಳಗಿಹ ಫಲಂ ತಾನು ಕೈಸಾರುವುದೆ ಖರ್ವ ಮಾನಸಗೆ (ವೆಂಕಾರಾ. ೨-೩೩-೧೨). (ನಾ). ೩. ಹದಿಮೂರು ಅಂಕೆಗಳಿರುವ ಒಂದು ಸಂಖ್ಯೆ; ಒಂದು ಸಾವಿರ ಕೋಟಿ: ಎಕ್ಕಂ, ದಾಹಂ, ಶತಂ... ದಾಕೋಟಿ, ಶತಕೋಟಿ, ಅರ್ಬುದ, ನ್ಯ[ನಿ]ರ್ಬುದ, ಖರ್ವ (ವ್ಯವಹಾ. ೮); ಖರ್ವ ಪದ್ಮಕ್ಷೋಣಿ ಶಂಖಂ ಕ್ಷಿತಿ ಕ್ಷೋಭ ಪೂರ್ವಮಪ್ಪಂಕೆ ಯಾದಿಗೆ ಮಹಾಶಬ್ದ ಬರೆ ತೋರ್ಪವರ ದಶಕಂಗಳಕ್ಕಿಂತು ಚವ್ವೀಸ ತಾಣವರೆ ಸಂಖ್ಯೆಯಕ್ಕುಂ (ಮಂಗರಾ. ೧೦೫-೧೩); ಅರ್ಬುದ ಹಸ್ತದೊಳರ್ಚಿಸಿ ನಿರ್ಬುದ ನೇತ್ರದಿಂ ನೋಡಿ ಶಿವ ನಿಮ್ಮಡಿಯಂ ಖರ್ವ ಜಿಹ್ವೆಯೊಳು ಕೀರ್ತಿಸಿ ಕೊರ್ಬುವೆನೆಂದೋ (ಶಂಕಕಂ. ೧೧೬). ೪. ಕುಬೇರನ ನವನಿಧಿಗಳಲ್ಲಿ ಒಂದು. [ಸಂ.]

**ಖರ್ವಗೊಳಿಸು** (ಕ್ರಿ). ಮುರಿ; ಭಂಗಗೊಳಿಸು; ಕೆಡಿಸು: ನೀಲ ಕಂಠನು ಈ ಕವಿತೆಯೊಳಗಿನ ಅಲಂಕಾರ ಬಾಹುಲ್ಯಕ್ಕೆ ಕೈಹಚ್ಚಲಾರ. ಕತ್ತರಿಸಿ ಖರ್ವಗೊಳಿಸಲಾರ (ಇಪ್ಪಕ. ೪೦೪). [ಖರ್ವ + ಕೊಳ್₁ + -ಇಸು₃]

**ಖರ್ವಟ** (ನಾ). = ಖರ್ವಡ: ಗ್ರಾಮನಿಕರ ಖೇಟ ಖರ್ವಟ ಮಟಂಬ ಪತ್ತನ ದ್ರೋಣಾಮುಖ ಸಂವಾಹನಿಚಯ ನಿಚಿತಮುಂ (ಜಗವಿ. ೨-೧೧); ಪುರ ನಗರ ಖರ್ವಟ ಮಡಂಬ ಸ್ಫುರಿತ ಖೇಟಗ್ರಾಮವೆಂಬವನೆರಡು ಭಾಗವ ಮಾಡಿದರು ಕೂಡಿದರು ಸಮವಾಗಿ (ಕುವ್ಯಾಅ. ೧೮-೪). [ಸಂ.]

**ಖರ್ವಡ, ಕರ್ಬಡ** (ನಾ). ನಗರ ಮತ್ತು ಹಳ್ಳಿಗಳ ಮಧ್ಯಸ್ಥಿತಿ ಯಲ್ಲಿದ್ದು ಬೆಟ್ಟಗಳಿಂದ ಸುತ್ತುವರಿದ ಊರು: ಖರ್ವಡ ಮಡಂಬ . . . ದ್ರೋಣಾಮುಖಂಗಳಂ ವಿಹಾರಿಸುತ್ತಂ (ವಡ್ಡಾರಾ. ೭-೨); ಉರ್ವೀಧರ ನಿರುದ್ಧಂಗಳಪ್ಪ ಖರ್ವಡಂಗಳುಮಂ (ಆದಿಪು. ೮-೩೩ ವ); ಪರ್ವಿರೆ ಮೂಱುಂ ದೆಸೆಯೊಳು ಪರ್ವತಕುಳವೊಂದೆ ದೆಸೆಯೆ ಬಯಲಾಗಿರೆ ತಾಂ ಖರ್ವಡ (ಕೊಲ್ಹಾಶಾ. ೧೫-೩೭; ೧೧೮೭); ಶರಧಿ ಪರ್ವತಗಳಿಂ ಬಳಸಿರೆ ಖೇಟವು ಗಿರಿ ಬಳಸಿರಲು ಖರ್ವಡವು (ಶಾಂತೀಚ. ೮-೭೦). **ಕರ್ಬಡ**: "ಭೂಮೀಧ್ರಂ ಸುತ್ತುಗೊಂಡೆತ್ತಲುಮಿರೆ ಪುದುವಿಂ ಕರ್ಬಡಂ" (ವಸ್ತುಕೋ. ೪೩-೪). [< ಸಂ. ಖರ್ವಟ]

**ಖರ್ವತ** (ನಾ). ಒಂದು ಜಾತಿಯ ಮರ: ಅಜ್ಜನಪಟ್ಟೆ (ಖರ್ವತ): ಗಡುತರವಾಗಿ ಬೆಳೆಯುವುದು. ಕಟ್ಟಿಗೆ ಮಿದು (ಕಭಾಗಿ. ೩೫). [?]

**ಖರ್ವಶಾಖ** (ಗು). ೧. ಕುಳ್ಳಾದ; ಗಿಡ್ಡನೆಯ; ಕುಬ್ಜ. (ನಾ). ೨. ಚಿಕ್ಕ ಚಿಕ್ಕ ರೆಂಬೆಗಳುಳ್ಳ ಸಣ್ಣ ಮರ. [ಸಂ.]

**ಖರ್ವಿತ** (ಗು). ನುಗ್ಗಾದ; ತುಳಿಯಲ್ಪಟ್ಟ: ಮತ್ತಮಾತಂಗ ಪದನಖ ಖರ್ವಿತೋರ್ವೀತಳಮುಂ (ಪಂಪಭಾ. ೧೩-೫೧ ವ); "ನೆಗ್ಗಿದ, ಅಗೆದ" (ಪಂಪಭಾ. ಕೋಶ); "ತೋಡಿದ" (ಪಂಪದೀ. ೫೩೦). [ಸಂ.]

**ಖರ್ವು** 'ಕರ್ವು₁' ನೋ.

**ಖರ್ಬೂಜ** 'ಕರಬೂಜ' ನೋ.

**ಖರ್ಸಿ** (ನಾ). (ಕರಾ) ಒಂದು ಜಾತಿಯ ಮೀನು. [← ತುಳು. ಕುರ್ಚಿ, ಕುರ್ಸಿ]

**ಖಲ, ಖಳ₁** (ನಾ). ೧. ಧಾನ್ಯವನ್ನು ಒಕ್ಕುವ ಕಣ. ೨. ಎಳ್ಳಿನ ಹಿಂಡಿ. ೩. ಕಾಳಗ; ಕದನ. ೪. ಔಷಧಿ ಮೊದಲಾದುವನ್ನು ಅರೆಯುವ ಕಲ್ಲಿನ ಅಥವಾ ಲೋಹದ ಬಟ್ಟಲು; ಕಲಬತ್ತು. ೫. ನೀಚ; ದುಷ್ಟ: ಕಂಡಱಿದುಂ ಕೇಳ್ದಱಿದುಂ ಮಾನ್ಯರನೆ ಖಲನುಮೇಂ ಮನ್ನಿಸನೇ (ಶಾಂತಿಪು. ೨-೭೬); ಮಾರೀಚ ಮೊದಲಪ್ಪ ಖಲನಿಶಾಚರರನಿಬರುಂ (ಶ್ರೀರಾಮಾ. ೩೦-೫೪). **ಖಳ₁**: ೧. "ಖಳಧಾನಂ, ಖಳಃ— ಈ ೨ ಕಳಂ" (ಹಲಾಯು. ೯೫-೪೨೪). ೫. "ನೀಚಂ ಖಳಂ ಪಿಸುಣನೆನೆ ದುರ್ಜನಗೆ ನಾಮಮುಕ್ಕುಂ" (ಮಂಗರಾ. ೭೮-೮); ಖಳಂ ಗಡೆಂತುಂ ರಸಂಗಳೊಳ್ ಪೊರೆದಪನೇ (ಪುಷ್ಪಪು. ೧-೪೭); ಖಳ ಕಿಡಿ ಮಸಗೆ ಕಿತ್ತೆತ್ತಿದನು ಮೃತ್ಯುಂಜಯನ ಗಿರಿಯ (ತೊರರಾ. ೧-೮-೩೨). ನನ್ನಿಂದ ತಾವು ಆ ಖಳನ ಪರುಷವಾಕ್ಯಗಳನ್ನು ಕೇಳಬೇಕಾಯಿತು (ಶಾಂತಲಾ. ೧೪೨). ೬. ಕೊಂಕಣಿಗ: "ಖಳನೆನಲು ಕೊಂಕಣಿಗನು" (ಮಂಗರಾ. ೧೧೨-೭). [ಸಂ.]

**ಖಲಕಪಟ** (ನಾ). ಹೇಯವಾದ ಮೋಸ; ತುಚ್ಛವಾದ ವಂಚನೆ: ತನ್ನನ್ನು ಅವನು ಸೂರ್ಯಮುಖಿಯ ಸ್ಥಾನದಲ್ಲಿಟ್ಟಿದ್ದರೆ ತನ್ನ ಹೃದಯ ದಲ್ಲಿ ಅಷ್ಟು ಖಲಕಪಟಗಳಿರುತ್ತಿರಲಿಲ್ಲ (ಬಂಕಿಮ.೫೯). [ಖಲ + ಕಪಟ]

**ಖಲತ್** 'ಖಲತ್ತು' ನೋ.

**ಖಲತಿ, ಖಳತಿ** (ನಾ). ೧. ಬೋಳುದಲೆ; ಕೂದಲಿಲ್ಲದ ತಲೆ. ೨. ಬೋಳುದಲೆಯವನು. **ಖಳತಿ**: ೨. "ಖಳತಿಃ, ಶಿಪಿವಿಷ್ಟಃ, ಖಂದ್ರಲುಪ್ತಕಃ— ಈ ೩ ತರಟದಲೆ(ಯಂ)" (ಹಲಾಯು. ೯೯-೪೫೪). [ಸಂ.]

**ಖಲತ್ತು, ಖಲತ್** (ನಾ). ಉದ್ದನೆಯ ಅಂಗಿ; ನಿಲುವಂಗಿ: ಅವನು . . . ಸುಟ್ಟು ತೂತಾದ ತನ್ನ ಖಲತ್ತನ್ನು ಮೈಮೇಲೆಳೆದುಕೊಂಡು ಮೆಲ್ಲಗೆ ಜಾರಿಕೊಂಡು ಹೋಗುತ್ತಾನೆ (ನಗೆಹೊ. ೩); ಆಮೇಲೆ ತನ್ನ ಖಲತ್ತಿನ ಅಂಚನ್ನು ಮೇಲೆತ್ತಿಕೊಂಡು . . . ಕೂತುಕೊಂಡನು (ನಗೆಹೊ. ೨೦). **ಖಲತ್**: ಬಹು ಬೆಲೆಯ ಖಲತ್ ತೊಟ್ಟಿದ್ದ ಒಬ್ಬಾತ . . . ಹೊರಕ್ಕೆ ನೋಡುತ್ತಿದ್ದನು (ನಗೆಹೊ. ೭೭). [← ಅರ. ಖಲತ್]

**ಖಲಧಾನ, ಖಳಧಾನ** (ನಾ). ಕಾಳು ಒಕ್ಕುವ ಸ್ಥಳ; ಕಣ. **ಖಳಧಾನ**: "ಖಳದಾ[ಧಾ]ನಂ, ಖಳಃ – ಈ ೨ ಕಳಂ" (ಹಲಾಯು. ೯೫-೪೨೪). [ಸಂ.]

**ಖಲಧಾನ್ಯ** (ನಾ). = ಖಲಧಾನ. [ಸಂ.]

**ಖಲನಾಯಕ, ಖಳನಾಯಕ** (ನಾ). ಕಥೆ ಅಥವಾ ನಾಟಕದಲ್ಲಿ ನಾಯಕನಿಗೆ ಎದುರಾಗಿ ನಿಲ್ಲುವ ದುಷ್ಟ ವ್ಯಕ್ತಿ: ಆ ಸಂಪ್ರದಾಯದ ಏರಿಕೆಯ ಕಾಲದ ಕಹಿ ನೆನಪುಗಳು ಇಂದ್ರನನ್ನು ಖಲನಾಯಕನನ್ನಾಗಿ ಚಿತ್ರಿಸಲು ಪ್ರೇರೇಪಿಸಿದುವು (ಕರ್ನಾಟ. ೫೭). **ಖಳನಾಯಕ**: ಹಿಂದಿ ಚಿತ್ರದಲ್ಲಿ ಖಳನಾಯಕನ ಪಾತ್ರಕ್ಕೆ ಲಾಯಿಖು ಆಗುವ ಆಕಾರ (ಬೆಂಗಬ. ೫). [ಖಲ + ನಾಯಕ]

**ಖಲನೆ₁** (ನಾ). ಮಿಶ್ರಣಮಾಡುವಿಕೆ: ವೈದ್ಯ ರಸೌಷಧಿಯನ್ನು ಸಿದ್ಧ ಗೊಳಿಸಲು ಹವಣಿಸಿ ಬೇರೆ ಬೇರೆ ವನಸ್ಪತಿಗಳನ್ನೂ ರಸಪದಾರ್ಥಗಳನ್ನೂ . . . ಖಲನೆಯಿಂದಲೂ ಉಷ್ಣತೆಯಿಂದಲೂ ಸಂಯೋಗಗೊಳಿಸಿ, ರಸಯೋಗವನ್ನು ಪಾಕಕ್ಕೆ ಇಳಿಸುತ್ತಾನೆ (ಜನಜೀ. ೨೮ ಮುನ್ನುಡಿ). [< ಸಂ. ಖಲನ]

**ಖಲನೆ₂** (ನಾ). ದುಷ್ಟತನ; ನೀಚತನ (?): ಪುರುಷರಂದವ ನೋಡಿ ಖಲನೆಯಿಂ ಚಲನೆಯಿಂ ಸುರತಕವರೊಳ್ಮನಂ ಲಯಸುತಂ ಇರುವ ಸತಿಯರ ಹಾಯ್ಕು ತೂಳ್ದಡಂ ಸೀಳ್ದಡಂ ತಮ್ಮಿಚ್ಛೆಗೆ (ಪಶಿಲ. ೨-೩೩). [?]

**ಖಲನ್ಯಾಯ**, ಖಳನ್ಯಾಯ (ನಾ). ೧. ಕೆಟ್ಟನಡತೆ; ಕೀಳಾದ ಆಚರಣೆ; ದುಷ್ಟ ವ್ಯವಹಾರ: ತೋಯುದ ವಾಹನನನ್ವಯದಾಯಿಕಿ ಕಿಡೆ ಪಾಟಿದಪ್ಪಿ ಪಟಿ ಪೊರ್ದೆ ಪರಸ್ತ್ರೀಯನಪೇಕ್ಷಿಸಿದ ಖಲನ್ಯಾಯವು ನಾರಯ್ದು ನೋಡಿಕೊಳ್ವಿಂ ನಿರ್ಮ್ಮೊಳ್ (ಪಂರಾಮಾ. ೧೧-೧೩೮). **ಖಳನ್ಯಾಯ**: ೨. ಸಂಗ್ರಹದ ರೀತಿ; ಸಂಚಯನ ಪದ್ಧತಿ: ವಾಯುಸದಂತೆ ನೋಡು ಬಕನಂತಿರೆ ಮೆಲ್ಲನೆ ಮೆಟ್ಟು . . . ನೀಂ ಖಳನ್ಯಾಯದಿನೆಲ್ಲಮಂ ನೆಱೆಯೆ ಕಲ್ತುಪದೇಶಕನಾಗು ಲೋಕದೊಳ್ (ಶಮದ. ೨೩೦ ಪ್ರಯೋ). [ಖಲ + ನ್ಯಾಯ]

**ಖಲಪಾತ್ರ** (ನಾ). ಕಥೆಯಲ್ಲಿ ಅಥವಾ ನಾಟಕದಲ್ಲಿ ಬರುವ ದುಷ್ಟ ಪಾತ್ರ; ನೀಚವ್ಯಕ್ತಿ: ಇವರು ಖಲಪಾತ್ರಗಳು (ಬಂಕಿಮ. ೨೦೧). [ಖಲ + ಪಾತ್ರ]

**ಖಲಪು** (ನಾ). ಕಸಬಳಿಯುವವನು; ನೆಲವನ್ನು ಗುಡಿಸಿ ಚೊಕ್ಕಟ ಮಾಡುವವನು: (?). [< ಸಂ. ಖಲಪೂ]

**ಖಲಬತ್ತು** 'ಕಲಬತ್ತು' ನೋ.

**ಖಲಮತ** (ನಾ). ದುಷ್ಟಮತ; ಕುಮತ: ಬಲರಾಮಂ . . . ತ್ರಿದಂಡವ ಧರಿಸಿ ಖಲಮತಮಂ ಖಂಡಿಸಿ ಯತಿಪತಿ ರೂಪಾಂತಂ (ಮೈಸೂಮ. ೨-೬೩). [ಖಲ + ಮತ]

**ಖಲಮು** 'ಕಲಂ' ನೋ.

**ಖಲಲು** 'ಕಲಲು' ನೋ.

**ಖಲಾಂತಕ** (ನಾ). ದುಷ್ಟರನ್ನು ನಾಶಮಾಡುವವನು: ಮಹಾತ್ಮನಾಗಲಿ ಖಲಾಂತಕನಾಗಲಿ ಧರ್ಮಮಾರ್ಗದೊಳ್ ಚರಿಸುವನಾದಡಾಗಲಿ (ಅಮಕ. ೪೯). [ಖಲ + ಅಂತಕ]

**ಖಲಾಸ್** 'ಕಲಾಸ್' ನೋ.

**ಖಲಾಸ** 'ಕಲಾಸ್' ನೋ.

**ಖಲಾಸಿ** 'ಕಲಾಸಿ' ನೋ.

**ಖಲಾಸು** 'ಕಲಾಸ್' ನೋ.

**ಖಲಿಂದರ**, ಖಲಿಂಧರ (ನಾ). ಮಹಮ್ಮದೀಯ ಬೈರಾಗಿ: ಮತ್ತಲ್ಲಿಂದ ಬರುತಿರೆ ಖಲಿಂದರರು ಜಾಲ ಕಬ್ಬಿನದ ಮುರುಮುದ್ರೆ ನಿಮಗಿಲ್ಲವೆನೆ (ಗುರುಚಾ. ೩-೨೫). **ಖಲಿಂಧರ**: ವರ ಖಲಿಂಧರ[ಪಾಠಾಂ. ಖಲಂದರ] ರೇಳುನೂರ್ವರ್ಗೆ ಗುರುವಾಗಿ ಹರುಷದಿಂ ಮಕ್ಕಕ್ಕೆ ಪೋಗಿ (ಜಬಪು. ೧-೧೯). [← ಅರ. ಕಲಂದರ್]

**ಖಲಿಂಧರ** 'ಖಲಿಂದರ' ನೋ.

**ಖಲಿತಾ** 'ಖರೀತ' ನೋ.

**ಖಲಿತೆ** 'ಖರೀತ' ನೋ.

**ಖಲಿನಿ** (ನಾ). ೧. ಕಣಗಳ ಸಮೂಹ. ೨. ದುರ್ಜನರ ಗುಂಪು. [ಸಂ. ಖಲಿನೀ]

**ಖಲೀನ** (ಗು). ೧. ಆಕಾಶದಲ್ಲಿ ಅಡಗಿರುವ, —ಸೇರಿರುವ. (ನಾ). ೨. ಕಡಿವಾಣ: "ಖಲೀನಂ, ಕವಿಯಂ – ಈ ೨ ಕಡಿಯಾಣಂ" (ಹಲಾಯು. ೬೩-೨೮೮); ಪಣ್ಣಿದ ಜಾತ್ಯಶ್ವ ರಥಾಶ್ವಸಂಕುಳ ಖಲೀನೋದ್ಧೂತ ಲಾಲಾಜಲಂ ಕದಡೆದ್ದು (ಪಂಪಭಾ. ೧೦-೩೧); ಸವಾರಿಗಳ್ ತಳೆದು ಖಲೀನಮಂ ತುರಿಪದಿಂ ಬರೆ (ಪಂರಾಮಾ. ೪-೧೧೩). ೧, ೨: ಆ ಮಹಾವನಂ . . . ಸನ್ನದ್ಧ ಸಪ್ತಿಯಂತೆ ಖಲೀನಶಾಖಾಮುಖಮುಂ (ಚಂದ್ರಪ್ರ. ೫-೫೨೪). [ಸಂ.]

**ಖಲೀಫ** (ನಾ). ೧. ಮಹಮ್ಮದೀಯರ ಧಾರ್ಮಿಕ ಗುರು; ಇಸ್ಲಾಂ ಧರ್ಮದ ಪ್ರಭು: ಪೈಗಂಬರನು . . . ಕಾಲವಾಗಲು, ಅವನ ಗೆಳೆಯನಾಥ ಅಬುಬಕರನು ಖಲೀಫನಾದನು (ಬಾಲಕೃ. II, ೯೩೩); ಮುಸಲ್ಮಾನ ಖಲೀಫರೆಂದರೆ ಮುಸಲ್ಮಾನರ ರಾಜ್ಯಕ್ಕೆ ಮುಖ್ಯಸ್ಥರು ಮತ್ತು ಧರ್ಮಗುರುಗಳು (ಧರ್ಮಸಾ. ೪೩). ೨. ಅಧ್ಯಕ್ಷ; ಅಧಿಕಾರಿ. ೩. ದೊರೆ; ಧಣಿ; ಶ್ರೀಮಂತ: ಇಂಥ ಐಂದ್ರಜಾಲಿಕರು ಒಂದೆರಡು ವರ್ಷಗಳಲ್ಲಿ ಖಲೀಫರಾಗತೊಡಗಿದರು (ಜಾರುದಾ. ೨೨೪). [← ಅರ. ಖಲೀಫ್; ಹಿಂ. ಖಲೀಫಾ]

**ಖಲೂರಿಕೆ** (ನಾ). ಗರುಡಿಯ ಮನೆ; ಶಸ್ತ್ರಾಭ್ಯಾಸದ ಸ್ಥಳ: "ಖಲೂರಿಕಾ ಎಂಬುದು ಶ್ರಮಗೆಯ್ವ ಠಾವು" (ಹಲಾಯು. ೬೬-೩೧೬); "ಖಲೂರಿಕೆ ಶ್ರಮಗೃಹಂ ಗರುಡಿ ಸಾಧನೆಯ ಮನೆಯಕ್ಕುಂ" (ಮಂಗರಾ. ೫೯-೧೦). [ಸಂ. ಖಲೂರಿಕಾ]

**ಖಲೇವಾಲಿ** (ನಾ). ಕಣದ ಮಧ್ಯದಲ್ಲಿ ನೆಟ್ಟ ಕಂಬ; ಮೇಟಿ; ಮೇಟಿಕಂಬ. [ಸಂ. ಖಲೇವಾಲೀ]

**ಖಲೋತ್ಕಾಲಿ** (ನಾ). = ಖಲೇವಾಲಿ: "ಖಲೋತ್ಕಾಲೀ, ಮೇಥೀ– ಈ ೨ ಮೇಟಿ" (ಹಲಾಯು. ೯೫-೪೨೪). [ಸಂ. ಖಲೋತ್ಕಾಲೀ]

**ಖಲ್ಮೊಱಡಿ** 'ಕಲ್ಮೊರಡಿ' ನೋ.

**ಖಲ್ಯ** (ನಾ). ಶೂರ; ಪರಾಕ್ರಮಿ (?): ಶಲ್ಯಂ ಸತ್ತಿಂಬೞಿಯ ಮಖಲ್ಯಂ ಕೊಳದೊಳಗೆ ಪೊಕ್ಕು ಮೆಯ್ಗರೆದೈ ಚೀ ಖಲ್ಯನೆನೆ ಬಾರ್ತೆ ಗೆಟ್ಟುದಮೂಲ್ಯ ಯಶೋರತ್ನಮೆಂಬುದಂ ಮಾಸುವನೇ (ಗದಾಯು. ೬-೨೪). 'ಅಖಲ್ಯ' ಪರಾ. [ಸಂ.]

**ಖಲ್ಯೆ** (ನಾ). ಧಾನ್ಯಗಳನ್ನು ಒಟ್ಟುವ ಕಣಗಳ ಸಮೂಹ. [ಸಂ. ಖಲ್ಯಾ]

**ಖಲ್ಲ** (ನಾ). ೧. ಕಾಗದದಿಂದ ಮಾಡಿದ ಪುಡಿಕೆ, —ಚೀಲ. ೨. ಔಷಧಿಗಳನ್ನು ಅರೆಯುವ ಕಲ್ಲೊರಳು; ಕಲಬತ್ತು. [ಸಂ.]

**ಖಲ್ವ** (ನಾ). ೧. = ಕಲಬತ್ತು: ಕನಕದ ಸೊಪ್ಪಿನ ರಸವ ಖಲ್ವದಲ್ಲಿ ಹಾಕಿ ಅರೆದು (ವಿವೈವಿ. ೨೦೧); ಲೋಹದ ಅರಹುಡಿಯನ್ನು . . . ಖಲ್ವದೊಳಿಕ್ಕಿ ಸೂಕ್ಷ್ಮಚೂರ್ಣಮಾಡಲು (ಸಕವೈ. ೯೫). ೨. [ನಾಟ್ಯ] ಹೊಟ್ಟೆಯನ್ನು ಒಳಗೆ ಎಳೆದುಕೊಂಡು ಬಾಗುವಿಕೆ. ▷ ಹಸಿದಿರುವವನು, ರೋಗಿ ಮತ್ತು ಕೃಶವಾಗಿರುವವನು ಇವರಿಗಿರುವಂತೆ ಹೊಟ್ಟೆಯನ್ನು ಒಳಕ್ಕೆ ಮಾಡಿ ಬಗ್ಗಿಸುವುದು (ಲಾಸ್ಯರಂ. ೨೩೨ ಗದ್ಯಾನುವಾದ): ಪಿರಿದುಂ ಪಸಿದವನೊಳ್ ಮಿಗೆ ಕರರೋಗಿಯೊಳೆಯ್ದೆ ನೋಡೆ ಕೃಶಮಾದವನೊಳ್ ದೊರೆಕೊಳ್ವುಂ ಖಲ್ವಮೆನಿಪ್ಪುರುನಾಮದಿ (ಲಾಸ್ಯರಂ. ೨-೧೩೫). [ಸಂ.]

**ಖಲ್ವಾಟ** (ನಾ). ಬೋಳುತಲೆ; ಕೂದಲು ಉದುರಿಹೋದ ತಲೆ: ತಲೆಯ ಮುಂಭಾಗ ಖಲ್ವಾಟವಾಗಿದೆ (ದೇವದಾ. ೫೪); ಕೂದಲುಗಳು ದುರಿ ಖಲ್ವಾಟವಾಗುವುದೂ ಸಹ ವೀರ್ಯಕ್ಷೀಣತೆಯ ಲಕ್ಷಣವದೆ (ಬ್ರಹ್ಮಜೀ. ೨೫). [ಸಂ.]

**ಖಲ್ವಾಯಿತ** (ನಾ). ಮನೆ ಸಾರಿಸುವವನು; ಕಸ ಗುಡಿಸುವವನು (?): ತ್ರಿಕಾಲದೊಳಂ ಖಲ್ವಾಯಿತನಂತೆ ಗಂಗಾಜಲಮಂ ತಂದು ತಳಿವ ಬೆಳ್ಮುಗಿಲ್ಗಳುಮಂ (ಪಂಚತಂ. ೧೧೯-೧೮). [?]

**ಖವಖವ** (ನಾ). ನಗುವನ್ನು ಸೂಚಿಸುವ ಒಂದು ಅನುಕರಣ ಶಬ್ದ. 'ಖವಖವಿಸು' ಪರಾ.

**ಖವಖವಿಸು** (ಕ್ರಿ). ೧. ಗಹಗಹಿಸು: ಅಗ್ನಿ ಖವಖವಿಸಿಯೆ ನಗುವಂತೆ (ಅಂಜಚ. ೫-೨೨೮); ಖವಖವಿಸಿ ನಗುತಾ ವಿಭೀಷಣ (ತೊರರಾ. ೬-೨-೧೫); ಕಿವಿಯ ಕಚ್ಚುವಿರೇಕೆನುತ ಖವಖವಿಸಿ ನಗುತ (ನಿಭಾಗ. ೧೦-೫೬-೧೨). ೨. ಹೊಳೆ; ಪ್ರಕಾಶಿಸು: ಶಿವನ ಕಾಯದ ಕಾಂತಿ ಮೈಯಲಿ ಖವಖವಿಸಿದುದು (ತೊರರಾ. ೩-೩-೮೨); ಕಟ್ಟಾಣಿಮುತ್ತಿನ ಖವಖವಿಸುವ ಪಂಚಸರದ (ಕಂನವಿ. ೯-೬೨). [ಖವಖವ + -ಇಸು]

**ಖವಳಿಸು** (ಕ್ರಿ). ಉದ್ರೇಕಗೊಳ್ಳು; ಕೆರಳು : ಖವಳಿಸಿದ ಶ್ಯಾಮರಾಯ, ಖವಳಿಸಲಿರುವ ಶಿವ್ಯಾನ ನಡುವೆ ರಾಜಪ್ಪ ದುರ್ಗಮ ಭಿತ್ತಿಯಾಗಿ ನಿಂತಿದ್ದರಿಂದ ತಾತ್ಕಾಲಿಕ ಹಗರಣ ತಪ್ಪಿತ್ತು (ದೀಪಹ. II, ೨೮೯). [← ಮರಾ. ಖವಳಣೇ]

**ಖಸ** (ನಾ). ೧. ನವೆ; ತುರಿ; ಕಡಿತ : "ಪಾಮಾ, ಕಚ್ಛೂಃ, ಖಸಃ— ಈ ೩ ಕೆರಕು (ಕೆಱಕು)" (ಹಲಾಯು. ೯೮–೪೪೮); "ಪಾಮಂ ಖಸಂ ಖತ್ತುವೆನೆ ಕೆರಕೆನಿಕ್ಕುಂ" (ಮಂಗರಾ. ೧೧೬–೧). ೨. (ಉತ್ತರ ಭಾರತದ) ಒಂದು ದೇಶದ ಹೆಸರು : ಕರ್ಣಾಟಕ ಖಸ ಕರಹಾಟಾಂಗ ಕಾಶ್ಮೀರ . . . ವಿವಿಧ ದೇಶಂಗಳೊಳ್ (ಸು ಕು ಮಾ. ೮–೭೦); ರತಿಚತುರತೆ ಖಸದೇಶದಬಲೆಯಗೊಳವಕ್ಕುಂ (ಮನ್ಮವಿ. ೫–೨೯). [ಸಂ.]

**ಖಸಖಸಿ** 'ಕಸಕಸೆ' ನೋ.

**ಖಸರತ್ತು** 'ಕಸರತ್ತು' ನೋ.

**ಖಸಿ**$_1$ (ಕ್ರಿ). ಕುಕ್ಕು; ತಿವಿ : ಎಣ್ಣಿ ನೀಡಲಿ ಬೇಡ ನೆತ್ತಿ ಖಸಿಯಲಿ ಬೇಡ ಅನ್ನಿಗರ ಮಗಳೆಂದೆನಬೇಡ (ಹಳ್ಳಿಯು. ೧೩೧); ಗೋದಕ್ಕ ಆಮೇಲೆ ಹುಚ್ಚುನಗೆ ನಕ್ಕು . . . ಮಿದುವಾಗಿ ತಮ್ಮನ ತಲೆ ಖಸಿದಳು (ವೈನಿ. ೨೬). [?]

**ಖಸಿ**$_2$ 'ಕಸಿ$_5$' ನೋ.

**ಖಸ್ತು** 'ಕಸ್ತು' ನೋ.

**ಖಸ್ತುವರಾತ** (ನಾ). ತೀವ್ರವಾದ ಒತ್ತಾಯ; ಹೆಚ್ಚಿನ ತಗಾದೆ : ಕರಾರು ಮೀರಿ ಹಣಾ ಕೊಡಿಯಂತಾ ಖಸ್ತುವರಾತ ಹತ್ತಿಸಿದಲ್ಲಿ (ರಾಜೇಂದ್ರ. ೭). [ಖಸ್ತು (< ಕಸ್ತು) + ವರಾತ]

**ಖಸ್ಥ** (ಗು). ೧. ಆಕಾಶದಲ್ಲಿ ಇರುವ. (ನಾ). ೨. ಆಕಾಶದಲ್ಲಿ ಇರುವವನು : ಕುಸ್ಥನೆನಿಸುವ ಭೂಮಿಯೊಳು ಆಕಶಸ್ಥನೆನಿಸುವ ದಿಗ್ವಲಯದೊಳು ಖಸ್ಥನೆನಿಪಾಕಾಶದೊಳು (ಹಸಾರಿ. ೨೨–೨೨). [ಸಂ.]

**ಖಸ್ವಸ್ತಿಕ** (ನಾ). ಆಕಾಶದ ಮಧ್ಯಸ್ಥಲ; ನೆತ್ತಿಗೆ ನೇರವಾದ ಆಕಾಶಪ್ರದೇಶ : ಅದರ ಕೇಂದ್ರವು ಖಸ್ವಸ್ತಿಕ(ನೆತ್ತಿಗೆ ನೇರ)ವನ್ನೂ, ಪರಿಧಿಯು ಕ್ಷಿತಿಜವನ್ನೂ ತೋರಿಸುತ್ತದೆ (ಜ್ಯೋತಿರ್ವಿ. ೧೬); ಧ್ರುವ ನಕ್ಷತ್ರವು . . . ಇಂಗ್ಲೆಂಡದಲ್ಲಿ ಖಸ್ವಸ್ತಿಕಕ್ಕಿಂತ ಸ್ವಲ್ಪ ಕೆಳಗೆ, ಸಿಂಹಲ ದ್ವೀಪದಲ್ಲಿ ಕ್ಷಿತಿಜಕ್ಕೆ ಹೊಂದಿ ಕಾಣಿಸುತ್ತದೆ (ಮುಂಬಯಿ. ೬–೩೬೦). [ಖ$_2$ + ಸ್ವಸ್ತಿಕ]

**ಖಹರ** (ನಾ). [ಗಣಿತ] ಸೊನ್ನೆಯಿಂದ ಭಾಗಿಸಲ್ಪಟ್ಟುದು; ಅನಂತವಾದುದು : ಒಂದು ಪರಿಮಿತ ಪರಿಮಾಣವನ್ನು ಸೊನ್ನೆಯಿಂದ ಭಾಗಿಸಿದರೆ ಖಹರ ಎಂದು ಹೇಳಿ ಖಹರದ ಬೆಲೆ ಅನಂತರಾಶಿ ಎಂಬುದಾಗಿ ತಿಳಿಸಿದ್ದಾನೆ (ತತ್ವಪ್ರಾ. ೯೭೯). [ಸಂ.]

**ಖಳ**$_1$ 'ಖಲ' ನೋ.

**ಖಳ**$_2$ (ಗು). ೧. ಉಗ್ರವಾದ; ತೀಕ್ಷ್ಣವಾದ. 'ಖಳವಹ್ನಿ' ಪರಾ. (ನಾ). ೨. ರಾಕ್ಷಸ; ದೈತ್ಯ. 'ಖಳಶಿರೋಮಣಿ' ಪರಾ. [< ಖರ]

**ಖಳಕರ್ಮ** (ನಾ). ೧. ಕೆಟ್ಟ ಕೆಲಸ; ದುಷ್ಕರ್ಮ. 'ಖಳಕರ್ಮೋಪಾರ್ಜಿತ' ಪರಾ. ೨. [ಜೈನ] ಆತ್ಮನಿಗೆ ಅಹಿತಕರವಾದ ಕರ್ಮ : ಹೇಯಂಗಳ್ ಖಳಕರ್ಮ ಬಂಧನಕರಕ್ರೋಧಾದಿಗಳ್ (ಆದಿಪು. ೧–೪); ಆ ಸಕಳಾಮರೋರಗನರಾವನತಂ ಖಳಕರ್ಮ ಸೈನ್ಯ ಸಂತ್ರಾಸಿ ಮನೋರಥಂ (ಶಾಂತಿಪು. ೯–೬೦). [ಖಳ$_1$(=ಖಲ) + ಕರ್ಮ]

**ಖಳಕರ್ಮಾಷ್ಟಕ** (ನಾ). [ಜೈನ] ಎಂಟು ಬಗೆಯ ದುಷ್ಟ ಕರ್ಮಗಳು : ಖಳಕರ್ಮಾಷ್ಟಕಮಂ ಪಡಲ್ವಡಿಸಿ (ಆದಿಪು. ೧೬–೫೫). 'ಅಷ್ಟಕರ್ಮ' ಪರಾ. [ಖಳಕರ್ಮ + ಅಷ್ಟಕ]

**ಖಳಕರ್ಮೋಪಾರ್ಜಿತ** (ನಾ). ದುಷ್ಕೃತ್ಯದಿಂದ ಸಂಪಾದಿಸುವವನು; ಅನ್ಯಾಯದಿಂದ ಧನವನ್ನು ಗಳಿಸುವವನು : ಕವಿಕನ್ಯಾನಿಳಯಸ್ಥನಾಗೆ ಖಳ[ಪಾಠಾಂ. ರ]ಕರ್ಮೋಪಾರ್ಜಿತಂ (ಜಾತಕ. ೧೬–೩೦). [ಖಳಕರ್ಮ + ಉಪಾರ್ಜಿತ]

**ಖಳಕಳಂಕ** (ನಾ). ಕೆಟ್ಟ ನಿಂದೆ; ಹೀನವಾದ ಅಪವಾದ : ಔದುಂಬರಕುಷ್ಠಂ ನೆಗೆದು . . . ಆ ಧೊರೆಯಂಗಾಯ್ತು ಖಳಕಳಂಕಾತಂಕಂ (ಸುಕುಮಾ. ೫–೧೧). [ಖಳ$_1$(= ಖಲ)+ಕಳಂಕ (= ಕಲಂಕ)]

**ಖಳಕೃತಿ** (ನಾ). ಕೆಟ್ಟಕೆಲಸ; ದುಷ್ಟಕಾರ್ಯ. 'ಖಳಕೃತಿನಿರತ' ಪರಾ. [ಖಳ$_1$ (= ಖಲ) + ಕೃತಿ]

**ಖಳಕೃತಿನಿರತ** (ನಾ). ಕೆಟ್ಟ ಕಾರ್ಯದಲ್ಲಿ ತೊಡಗಿದವನು; ದುಷ್ಟಕಾರ್ಯದಲ್ಲಿ ನಿರತನಾದವನು : ದಿವಸೇಂದ್ರಂ ಕನ್ನೆಯೊಳ್ ಕೂಡಿರೆ . . . ಖಳಕೃತಿ [ಪಾಠಾಂ. ಶಿ]ನಿರತಂ (ಜಾತಕ. ೧೬–೧೬). [ಖಳಕೃತಿ + ನಿರತ]

**ಖಳಖಳ, ಕಳಕಳ**$_2$ (ನಾ). [ಜೈನ] ಒಂದು ನರಕದ ಬಿಲ : ಪ್ರಥಮ ನರಕದೊಳತಿಘೋರಮುಪ್ಪುದಜೊಳ್ ಖಳಖಳಮೆಂಬ[ಪಾಠಾಂ. ಕಳಕಳವೆಂಬ, ಕಳಮ ಕಳಮೆಯೆಂಬ] ನರಕಬಿಲದೊಳ್ (ವಡ್ಡಾರಾ.೧೯೫–೧೪).

**ಕಳಕಳ**$_2$ : ಮೇಲಿನ ಪ್ರಯೋಗದ ಪಾಠಾಂತರವನ್ನುನೋಡಿ. [?]

**ಖಳಗ** 'ಖಟ್ಗ' ನೋ.

**ಖಳತಿ**$_1$ (ನಾ). ಒಳಕೋಣೆ (?) : ವಿದ್ಯುದ್ವೇಗೆ ಸೌಧಭವನದೊಳ್ ಕುಮಾರನಂ ರತ್ನಕಂಬಳಾವೃತನಂ ಹರ್ಮ್ಯತಳಗತನಂ ಮಾಡಿ ಖಳತಿ [ಪಾಠಾಂ. ಕಿ]ಯ (?) ಬಾಗಿಲಂ ಕೆತ್ತು ತನ್ನ ಗುರುಜನಮಂ ತರಲೆಂದು ಪೋದಳ್ (ಚಾವುಂಪು. I, ೧೧೩–೧೬). 'ಗಳಂತಿಗೆ' ಪರಾ. [?]

**ಖಳತಿ**$_2$ 'ಖಲತಿ' ನೋ.

**ಖಳತಿಲಕ** (ನಾ). ದುಷ್ಟರಲ್ಲಿ ಮಿಗಿಲಾದವನು; ತುಂಬ ನೀಚ : ಕರುಣಿಸೈ ಗಾಂಗೇಯ ಕರುಣಾಶರಧಿಯೈ ಖಳತಿಲಕ ಕರ್ಣನ ದುರುಳತನವನು ಮಱೆದು ಮೆಱೆವುದು ನಿಮ್ಮ ಸದ್ಗುಣವ (ಕುವ್ಯಾದ್ರೋ.೧–೨೧). [ಖಳ$_1$ (= ಖಲ) + ತಿಲಕ]

**ಖಳಧಾನ** 'ಖಲಧಾನ' ನೋ.

**ಖಳನಾಯಕ** 'ಖಲನಾಯಕ' ನೋ.

**ಖಳನೃಪಾಲ** (ನಾ). ರಾಕ್ಷಸರಾಜ : ಶೇಷಂ ಫಣಂಬಳ್ಕಿ ಸುರ್ಕಿದಪಂ ಸೀರೆಯ ಸಿಂಬಿವೊಲ್ ಖಳನೃಪಾಲಾಕ್ರಾಂತಿ ಹಿಂದೇ ಭಾರದಿಂ (ಜಗವಿ. ೧–೩೦). [ಖಳ$_2$ + ನೃಪಾಲ]

**ಖಳನ್ಯಾಯ** 'ಖಲನ್ಯಾಯ' ನೋ.

**ಖಳಪತಿ** (ನಾ). ದುಷ್ಟರ ಒಡೆಯ; ನೀಚರ ನಾಯಕ : ಸೊಗಸಿ ರಾಜ್ಯವನಿತ್ತೆ ನಿನಗದು ಮಗುಚದೊಡೆಯೊನ್ನಾಣೆಯೆನುತಪ್ಪಿದನು ಖಳಪತಿಯ [ಪಾಠಾಂ. ಸಹಭವನ] (ಕುವ್ಯಾಆ. ೨೧–೫೯). [ಖಳ$_1$ (= ಖಲ) + ಪತಿ$_2$]

**ಖಳಫಳ** (ನಾ). ಒಂದು ಅನುಕರಣ ಪದ : ದೂಪಾಳಿಯಲಿ ಕೈಯಿಕ್ಕಿದುದು ಕಾಲಾಳು ಖಳಫಳಯೆನಲು ಕೈದುಗಳು (ತೊರರಾ. ೫–೬–೧೩).

**ಖಳಮಲ್ಲ** (ನಾ). ರಾಕ್ಷಸ ವೀರ; ರಕ್ಕಸ ಜಟ್ಟಿ : ಅಣುವ ಪೊದಲಾದವರ ತೃಣವೆಂದೆಣಿಸಿ ಬಗೆಯದೆ ಬಂದ . . . ಮೆಱೆವ ಖಳಮಲ್ಲ (ಕೌಶಿರಾ. ೩೬–೧೬). [ಖಳ$_2$ + ಮಲ್ಲ]

**ಖಳಲ್** 'ಖಟಿಲ್' ನೋ.

**ಖಳವಹ್ನಿ** (ನಾ). ಉಗ್ರವಾದ ಬೆಂಕಿ : ಪೊಡವಿಯೊಳು ಖಳವಹ್ನಿಯುಗ್ರ ಖಳವಹ್ನಿಯಿಂದಡವಿಗಿಚ್ಚತ್ಯುಗ್ರವಡವಿಗಿಚ್ಚಿಂದ ನೆಱೆ ಸಿಡಿಲುಗ್ರ (ಹಚಕಾ. ೮–೧೪). [ಖಳ$_2$ + ವಹ್ನಿ]

**ಖಳವಿನೀತ** (ನಾ). ದುಷ್ಟತನದಲ್ಲಿ ಪಳಗಿದವನು ; ದುರ್ವಿನೀತ : ನಿರೀಕ್ಷಿಸಿ . . . ಸೋಮಶರ್ಮಾತ್ಮಜಾತರಂ ಖಳವಿನೀತರಂ ವಿಕೃತ ಮಾರ್ಗವಿಖ್ಯಾತರಂ (ಸುಕುಮಾ. ೨-೧೮).
[ಖಳ$_1$ (= ಖಲ) + ವಿನೀತ]

**ಖಳಶಿರೋಮಣಿ$_1$** (ನಾ). = ಖಳತಿಲಕ : ಕಾಣಿಕೆಗಳನು ಸುರಿದರು ಖಳಶಿರೋಮಣಿಗೆಜಗಿದರು ಧೃತರಾಷ್ಟ್ರ ಭೂಪತಿಗೆ (ಕುವ್ಯಾಸ. ೧೩-೮).
[ಖಳ$_1$ (= ಖಲ) + ಶಿರೋಮಣಿ]

**ಖಳಶಿರೋಮಣಿ$_2$** (ನಾ). ರಾಕ್ಷಸರಲ್ಲಿ ಮಿಗಿಲಾದವನು: ಖಳ ಶಿರೋಮಣಿ ಮಸಗಿದನು ಭೂಪಾಲ ಕೇಳೆಂದ (ಕುವ್ಯಾಸ. ೮-೧೧).
[ಖಳ$_2$ + ಶಿರೋಮಣಿ]

**ಖಳಸಂಯಮ** (ನಾ). ೧. ದುಷ್ಟರನ್ನು ನಿಗ್ರಹಿಸುವುದು. ೨. ದುಷ್ಟ ನಿಗ್ರಹ ಮಾಡುವವನು: ಖಳಸಂಯಮನು ನಿಸ್ನಾತ್ಮಜನು . . . ಎಂದನಾ ಮುನಿಪ (ನಿಭಾಗ. ೧೧-೧೦-೨೯).
[ಖಳ$_1$ (= ಖಲ) + ಸಂಯಮ]

**ಖಳಸಂಸರಣ** (ನಾ). ಕಷ್ಟಕರ ಸಂಸಾರ ; ದಾರುಣವಾದ ಸಂಸಾರ : ಪದಾರ್ಥನಿಶ್ಚಯಂ ತನ್ನ ಮನಕ್ಕೆ ತೀಡೆ ಖಳಸಂಸರಣಕ್ಕೆ ವಿರಕ್ತಿಯಾಗಿ (ಸುಕುಮಾ. ೮-೪೦). [ಖಳ$_2$ (= ಖಲ) + ಸಂಸರಣ]

**ಖಳಸಂಸೃತಿ** (ನಾ). = ಖಳಸಂಸರಣ: ನಿನಗೀ ಖಳಸಂಸೃತಿಯೆಂಬು ದೊಂದು ಜೂಟಣದೊಳಗಮ್ಮ ನೀಂ ಮೊಗಪೆಯಾಗದೆ ತಾಳ್ದಪವರ್ಗ ಮಾರ್ಗಮಂ (ಆದಿಪು. ೩-೭೧). [ಖಳ$_2$ (= ಖಲ) + ಸಂಸೃತಿ]

**ಖಳಾಗ್ರಣಿ** (ನಾ). ದುಷ್ಟರಲ್ಲಿ ಮಿಗಿಲಾದವನು; ದುರುಳರ ನಾಯಕ: ಖಳಾಗ್ರಣಿ ಮೇಲುಗಾಣನಲಾ ಮದಾಂಧನ ಸೋಲಿಸುವ ರಾರುಂಟು (ಕುವ್ಯಾವಿ. ೨-೨೪).
[ಖಳ$_1$ (= ಖಲ) + ಅಗ್ರಣಿ]

**ಖಳಾನ್ವಿತ** (ನಾ). ದುಷ್ಟರಿಂದ ಕೂಡಿದವನು; ನೀಚರ ಸಹವಾಸ ದಲ್ಲಿರುವವನು: ವ್ಯಸನಂ ದುರ್ಜನರೊಳೆ ಪಸರಿಸಿತು ಖಳಾನ್ವಿತರ್ಗೆ ಸದ್ಗುಣಂ ಸಮನಿಕುಮೇ (ಪಾರ್ಶ್ವಪು. ೩-೭೦).
[ಖಳ$_1$ (= ಖಲ) + ಅನ್ವಿತ]

**ಖಳಾಪಸ್ಮಾರ** (ನಾ). ಉಗ್ರವಾದ ಮಲರೋಗ: ಆರಿಗೊಜಲುವೆನ್ನೆ ಖಳಾಪಸ್ಮಾರವಿದೆ ಸೆಟೆವಿಡಿದು ತನ್ನನುಸುವಾರಿಗೆಯು ವೈರಾಗ್ಯಗಡ ಮತ್ತಾಣವಿಭುಗಳಿಗೆ (ಕುವ್ಯಾಸ. ೧೪-೧೨೪). [ಖಳ$_2$ + ಅಪಸ್ಮಾರ]

**ಖಳಿ** (ನಾ). ಗಂಜಿ; ಸರಿ: ಆ ಕಷಾಯದೊಳಗೆ ಖಳಿ ಇಲ್ಲದಂಥ ಕಾಗದವನ್ನು ಎದ್ದಿ ಒಣಗಿಸಿ ಇಡಬೇಕು (ಮುಂಬಯಿ. ೬-೩೩).
[< ಕಟಿ]

**ಖಳಿಲ್** 'ಖಟಿಲ್' ನೋ.

**ಖಳಿಲು** 'ಖಟಿಲ್' ನೋ.

**ಖಳಿಲೆ** (ನಾ). "ಗ್ರೀಷ್ಮಋತು" (ರಾಮಾಶ್ವ. ಕೋಶ): ಖಳಿಲೆಯ ಕಾಯ್ಪನೇಡಿಸುವ . . . ಬೀರದ ಜೋದರ ದಟವುಐದಿಂ (ರಾಮಾಶ್ವ. ೯೪-೧೭).  [?]

**ಖಳಿಯ** (ನಾ). = ಕಲ್ಸೆ ೪ : ಯೋಗಾದಿ ಸಂಪನ್ನ ಖಳಿಯಂಗಳೆಲ್ಲವಂ ಸಂಪಾದಿಸಿ (ಸೌಇಇ. XV, ೧೯೦-೭ ; 1256). [< ಸಂ. ಕಲಾ]

**ಖಳ್ಗ** 'ಖಟ್ಗ' ನೋ.

**ಖಳ್ಗಿ** 'ಖಟ್ಗ' ನೋ.

**ಖಜ್ಜನೆ** (ಅ). ಕಪ್ಪಾಗಿ; ಕರ್ರಗೆ: ಕಿಜ್ಜನೆ ತಿರಿ ತಂದು ಖಳಂ ಖಜ್ಜನೆ ತನು ಕಂದಿ ಕುಂದಿ ಭಯವಶದಿಂ (ಧರ್ಮಾಮೃ. ೧೨-೧೫೫).
[< ಕಜ್ಜನೆ]

**ಖಟಿಲ್, ಕಡಿಲ್, ಖಟಲ್, ಖಣಿಲ್, ಖಳಲ್, ಖಳಿಲ್, ಖಳಿಲು** (ನಾ). ಒಂದು ಅನುಕರಣ ಪದ: ಖಟಿಲೆ ನುಡಿದಟಲೆ ಬಗ್ಗಿಸಿ (ಶಮುದ. ೧೯ ಪ್ರಯೋ); ಖಟಿಲೆಂಬ ಘಟಲೆಂಬ ಘುಟುವೆಂಬ ಘಟಿಲೆಂಬ ಧಟಿಲೆಂಬವೋಲ್ . . . ಅನುಕರಣೆಯೆಲ್ಲವುಂ ನಿತ್ಯಜಟ ನೆಂಬರ್ (ಸಂಜೀವ. ೯). **ಕಡಿಲ್** : ಆಕೆಗೆ ಕಡಿಲೆಂದಾತಂ ನುಡಿದಂ (ಶಮುದ. ಸ. ೧೨೩ ಪ್ರಯೋ). **ಖಟಲ್** : ಕೂರಸಿಯೊಳಿಟ್ಟಣಿಸಿ ಪೊಯ್ದಲ್ಲಿ ಖಣಿಲೆಂಬ ಖಟಲೆಂಬ ನಿಳಿಲೆಂಬ ನೆರ್ಕೆಂಬ . . . ದನಿಯಡ ಸುತಂ ಪುಟ್ಟೆ (ಇಹರ. ೪೧-೨೧). **ಖಣಿಲ್** : ಭುಜಾಸಿಯೊಳ್ ಖಣಿಲ್ ಖಣಿಲೆನೆ ತಳ್ತು ಪೊಯಿದು (ಎಕ. VIII, ಸಾಗರ. ೧೦೯-೩೨ ; 1042). **ಖಳಲ್** : ಎಳೆದು ಬಿಸುಟನು ಶಿಶಿರಋತುವವನು ಖಳಲೆ ಜಡಿದು ವಸಂತನನು (ನಿಭಾಗ. ೧೦-೧೮-೭). **ಖಳಿಲ್** : ಖಳಿಲ್ ಖಳಿಲ್ ತೊಪ್ಪತೊಪ್ಪ ಛಳಿಲ್ ಛಳಿಲೆಂದು ಕೊಳ್ವ ಬಡಿಗಂ ಚಳಿತು (ಧರ್ಮಾಮೃ. ೬-೮೮). **ಖಳಿಲು** : ಖಣಿಖಟ ಖಳಿಲುಖಳಿಲೆಂಬಂಬುಗಳ ದನಿ ತುಂಬಿತಂಬರವ (ಕುವ್ಯಾದ್ರೋ. ೧೮-೪).

**ಖಣಿಕಟಲು, ಖಣಿಖಟಲು, ಖಣಿಖಣಿ, ಖಣಿಖಣಿಲು, ಖಣಿಲ್ಖಟಲ್, ಖಳಿಕಟಲ್, ಖಳಿಖಟಲು** (ದ್ವಿರುಕ್ತಿ) : ಕೋಳು ಗಿಡಿಯ ಖಂಡೆಯದ ಖಣಿಕಟಲೆಸೆಯೆ ಕಾದಿದರು (ಕುವ್ಯಾದ್ರೋ. ೧೪-೬); ತಲೆಯಂ ನಿವಾಳಿಸಿದರಾಳ್ವಂಗೆ ಕೈದುಗಳ ಹೋರಟೆಯ ಖಣಿಕಟಲ ರಭಸದಿಂದೆ (ಜೈಮಿಭಾ. ೨೨-೭); ಹಳಚುವಸಿಗಳ ಖಣಿಖಟಲು ಕಳಕಳಕೆ ಮಿಗೆ ಹೊಯ್ದಾಡಿ (ಕುವ್ಯಾದ್ರೋ. ೨-೫೬); ಕೋಲಾಟದಲಿ ಖಣಿಖಣಿ ಖಣಿಲು ಖಣಿಖಣಿ ಮಸಗಲೆಚ್ಚಾಡಿದರು (ಕುವ್ಯಾಆ. ೭-೫೧); ಕುದುರೆ ಕತ್ತಿಯ ಖಣಿಖಣಿ ಧ್ವನಿ ಕೇಳಿತು (ಇಂಗೀತ. ೬೭-೮). ಖಣಿಖಣಿಲು ರವವೆಸೆಯಲ್ಕೆ ಕಾದಿತು ಸುರಗಿಯತಿಬಲರು (ಕುವ್ಯಾಭೀ. ೪-೨೩); ಖಣಿಖಣಿಲು ನಟನಟಲು ನಜುನಜು . . . ಕೈದುವ ಧ್ವನಿ ಮಹೋನ್ನತವು (ಸಾನಂತ. ೮-೧೪); ಖಣಿಲ್ ಖಟಲ್ಗೊಗಹುಧೊಕ್ಕು ಧುಡುಮ್ಮು . . . ಎಂಬ ನಿಷ್ಠುರರವಂ ಮಿಗೆ (೧೦ಕ. ೬-೬೮); ಖಳಿಕಟಲ ಬಿಬುವೊಯಿಲೊ ಸಿಡಿಲಿನ ಸುಳಿಯೊ (ಕುವ್ಯಾದ್ರೋ.೧೪-೭); ಖಳಿಖಟಲು ಖಟಲೆಂಬ ರವದಿಂದೆ (ಜೈಮಿಭಾ. ೨೭-೭). ಖಟಿಲನೆ, ಖಣಿಲನೆ, ಖಣಿಲ್ಲನೆ, ಖಣಿಲ್ಲನೆ, ಖಟಿಲನೆ, ಖಟಿಲ್ಲನೆ, ಖಟಿಲ್ಲನೆ = 'ಖಳಿಲ್' ಎಂದು ಶಬ್ದ ಮಾಡುತ್ತ: ಖಟಿಲನೆ ಛಮ್ಮನೆ . . . ಎಂಬಿವಾದಿಯಾಗಜುವುದು (ಶಮುದ. ೧೪ ಪ್ರಯೋ); ಹುಡುಕುವ, ಕೊಪ್ಪರಿಗೆ ಕಣ್ಣಿನ ನೆರೆಗೆ ಖಣಿಲನೆದ್ದೊಲಾದುದು ಗೆಲವು (ಹಬ್ಬಿರ. ೨೦-೯೪); ಖಟಿಲ್ಲನೆ [ಪಾಠಾಂ. ಖಣಿಲ್ಲನೆ, ಖಣಿಲ್ಲನೆ] ಖಟಿಲೆನೆ, ಛಮ್ಮನೆ, ಧುಮ್ಮನೆ (ಶಮುದ. ೧೪ ಪ್ರಯೋ); ಖಟಿಲ್ಲನೆ (ಖಟಿಲೆನೆ), ಛಟಿಲ್ಲನೆ . . . ನಿತ್ಯಜಟಂಗಳ್ (ಶಮುದ. ಪರಿ. ೧).

**ಖಟ್ಗ, ಕಡುಗ$_1$, ಕಳ್ಗ, ಖಡುಗ, ಖರ್ಗ, ಖಳಗ, ಖಳ್ಗ** (ನಾ). ಕತ್ತಿ; ಖಡ್ಗ; ಕರವಾಳ: ಸಿಂಹನಾದಂಗೆಯ್ದು ಖಟ್ಗಸನ್ನಿಭಮಪ್ಪ ಮಹಾಶಿಲೆಯಂ ಕಿಟ್ಟು (ವಡ್ಡಾರಾ. ೫೬-೨೩); ಖಟ್ಗದಿಂ ವಾರಣಮಂ ಪಡಲ್ವಡಿಸಿ (ಪಂಪಭಾ. ೧೦-೧೧೨); ಆ ಖಲನಿಜಾಯಲ್ಕೆತ್ತೆ ಖಟ್ಗಂ ನಿಲೆ (ನೇಮಿಪು. ೫-೯). **ಕಡುಗ$_1$** : ಕಡುಗದ ಪೊಯ್ಲಿಂದಂ ಕಾಲಡಿಗಳ್ ಕಡಿ ಯಾಗೆ (ಕಬ್ಬಿಕಾ. ೨೭೩); ಹೊಡೆದ ಕಡುಗದ ಬಾಯ ಕಡೆಯ ಹೊಯ್ಲುಳ ನಾಂತು (ಹಚಕಾ. ೧೩-೧೯); ಹೊಳೆಯುವ ಕಡುಗದ ಹೊದರಿನ ಧಾರೆಯ (ಮೋಹತ. ೩೬-೪೪). **ಕಳ್ಗ** : "ಅಸಿ – ಕಳ್ಗ (ಖಡ್ಗ = ಖಟ್ಗ)" (ಒಪಧಿ. ೧). **ಖಡುಗ** : ಖಡುಗದ ಕಾಂತಿ ಸೂರ್ಯನ ಹೊದಿಸಿದುದು (ಕುವ್ಯಾದ್ರೋ. ೧೨-೭); ಪಡೆದನು . . . ಬಲು ಖಡುಗವನು ವರಚಂದ್ರಹಾಸಕನೆಂಬ ನಾಮಕದ (ಕೊರರಾ.೧-೪-೩೩);

ಜಂತ್ರ ಖಡುಗಕೆ ಹರನು ತಂತ್ರ ಚಕ್ರಕೆ ಹರಿಯು ಮಂತ್ರ ನೋಹಕ್ಕೆ ಬೊಮ್ಮನು (ಸರ್ವಜ್ಞ. ೨೧೦). **ಖರ್ಗ:** ಅವಿಧೇಯಾರಾತಿ ಭೂಪಾಳರನುಱದಿಱಿವಾಳ್ ಕಾರ್ಯದೊಳ್ ಖರ್ಗದೊಳ್ (ಕಇ. V, ೧೨-೧೨; 1080); ತಂನ ಸಾಹಸದಿಂ ಖರ್ಗ್ಗವೇತಕದೊಳು ಕಿರಾತ ಪಡೆಯಂ ಕೊಂದು (ಎಕ. VI, ತರೀಕೆ. ೭೪-೮; 1209); ಅನ್ಯ ಪರಾಕ್ರಮಂಗಳಂ ಮೀಱಿದ ಖರ್ಗ್ಗದಿಂದೆಸೆವ ಪೆಂಪುಗಳೊಬ್ಬುಳಿ ಗೊಬ್ಬನೀಶ್ವರಂ (ಎಕ. XI, ದಾವಣ. ೫೫-೫೧; 1280). **ಖಳೆಗ:** ಮನೆಯಾಳುಗಳ್ ಪರಶು ಮುದ್ಗರ ಖಳೆಗದಿಂದ ನಡೆದರು (ತುರಂಗ. ೮೨-೧೭). **ಖಳ್ಗ:** ಕೊಟ್ಟ ಖಳ್ಗಲತಾಡಂಬರ (ಬೊಂಕಶಾ. ೧೯೩೭; ಪರಸಗಾಡು. ೫೪-೨೦; 970); ವೈರಿ ವೀರಾವನೀಶ್ವರ ವಕ್ಷಸ್ಥಳಮಂ ಸ್ವಖಳ್ಗನಖರವ್ಯಾಘಾತದಿಂ ಪೋಳ್ದು (ಮೈಆರಿ. ೧೯೩೪, ೧-೧೭; 1174); ಧುರದೊಳು ಬಂಮನೃಪಾಳಕಂ ಮುಳಿಸಿನಿಂ ಖಳ್ಗಕ್ಕೆ ಕೈನೀಡೆ (ಕಇ. IV, ೧-೪೦; 1204); ಖಳ್ಗದಿಂದವೆ ಕಲಿ ರತ್ನಪಾಳನ ಶಿರೋಂಬುಜಮಂ ಜಯಲಕ್ಷ್ಮಿಗಿತ್ತು (ಎಕ. XI, ಚಿತ್ರದು. ೧೨-೯; 1286).

[< ಸಂ. ಖಡ್ಗ]

**ಖಡ್ಗಧಾರೆ,** ಖಡುಗಧಾರೆ (ನಾ). ಕತ್ತಿಯ ಅಲಗು; ಅಸಿಧಾರೆ: ಎಱಗಿಸುಗು ಖಡ್ಗಧಾರೆಯಿಂ ಧಾರಿಣಿಗನ್ನೆಱಗುವರನಣ್ಣನಂಘ್ರಿಯೊಳೆಱಗಿ ಸುಗುಂ (ಸೌಇ. XX, ೫೫-೧೧; 1082). **ಖಡುಗಧಾರೆ:** ಕಡುಮನದ ಕಾಲಾಳು ಕಱಿದುದು ಖಡುಗಧಾರೆಯಲು (ಕುವ್ಯಾದ್ರೋ. ೬-೩೯).

[ಖಡ್ಗ + ಧಾರೆ]

**ಖಡ್ಗಧೇನು** (ನಾ). ಹೆಣ್ಣುಗೇಂಡಾಮೃಗ; ಖಡ್ಗಮೃಗಿ: ಖಡ್ಗ [ಪಾಠಾಂ. ಡ್ಗ] ಧೇನುಗಳ ತೊರೆದ ಮೊಲೆಯಿಂದಂಬಿರಿವಿಡಿದು ಸುರಿವ ಪಾಲ್ಗೆ ಪಜ್ಜೆವಿಡಿದು ಪರಿವರಣ್ಯಮಾರ್ಜಾರ ಪೋತಕಂಗಳುಂ (ಚಂದ್ರಪು. ೫-೬೫ ವ).  [< ಸಂ. ಖಡ್ಗಧೇನು]

**ಖಡ್ಗಯೋಗಿನಿ** (ನಾ). ಕತ್ತಿಯನ್ನು ಹಿಡಿದ ಸಾಧಕಿ (?): ಇರೆ ಮುಡಿ ಬಿರ್ಚಿ ನಾಂದಮರೆ ಪತ್ತಿದ ಪಟ್ಟೆಯಿನುಟ್ಟುದಿಲ್ಲದಂತಿರೆ ಕಮ ಕೋನ್ಮುಖಂ ಶಿಖಿಮುಖಾಸಿಯವೋಲಲೆಮಾಲೆ ಮುಂದೆ ನೀಳ್ದಿರೆ ಧರ ಣೀಶ್ವರಂ ಕೆಲದೊಳುತ್ತರಸಾಧಕನಾದ ಕಾಮನಂತಿರೆ ರತಿ ಖಡ್ಗಯೋಗಿ ನಿಯವೊಲ್ ಜಲಕೇಳಿಯೊಳೊರ್ಬಳೊಪ್ಪಿದಳ್ (ಮಲ್ಲಿಪು. ೬-೧೨೫).

[ಖಡ್ಗ + ಯೋಗಿನಿ]

**ಖಡ್ಗರುಚಿ** (ನಾ). ಕತ್ತಿಯ ಹೊಳಪು; ತೆಳು ನೀಲಿಬಣ್ಣ: ಮರೆನಂ ಕೆತ್ತೆ . . . ಕೇಸುರಿಯಂ ಪೋಲ್ತಿರೆ ಕಪ್ಪೆ ಖಡ್ಗ [ಪಾಠಾಂ. ನೀಲ] ರುಚಿಯಿಂ ನಿರ್ಧೂಮದಿಂ ಪಲ್ಲಿ ಸೂಕರವರ್ಣಂ ಪುಗೆ ವೃಶ್ಚಿಕಂ ಸಮನಿಕುಂ (ಲೋಕೋಪ. ೩-೧೧). "ನೀಲವರ್ಣ" (ಲೋಕೋಪ. ಅಡಿಟಿ).

[ಖಡ್ಗ + ರುಚಿ]

**ಖಡ್ಗಾಖಡ್ಗಿ** (ನಾ). = ಖಡ್ಗಾಖಡ್ಗಿ: ಚಕ್ರಾಚಕ್ರಿಯುಂ ಖಡ್ಗಾ ಖಡ್ಗಿಯುಮಾಗೆಯುಂ ಪೆಣೆದಿಱಿವ ಪದದೊಳ್ (ಶಾಂತಿಪು. ೬-೮೨ ವ).

[< ಖಡ್ಗಾಖಡ್ಗಿ]

**ಖಡ್ಗಿ,** ಖಳ್ಗಿ (ನಾ). ೧. ಕತ್ತಿಯನ್ನು ಹಿಡಿದವನು; ಖಡ್ಗಧಾರಿ. ೨. ಗಂಡಕಮೃಗ; ಖಡ್ಗಮೃಗ. ೧, ೨: ಆ ವನಂ ದಕ್ಷಾಧ್ವರದಂತೆ ಸ್ಥಾಣುವಿರಹಿತಮುಂ . . . ವಿಪ್ರೋತ್ಕೀರ್ಣಮಾಗಿಯುಂ ಮಹಾಗ್ರಹಾರ ಮುಮ್ತು ಖಡ್ಗಿಸಮೇತ ಮಾಗಿಯುಂ ನೃಪನಿಳಯಮುಮ್ತು (ಕುಸುಮಾ. ೧-೧೦೪ ವ). **ಖಳ್ಗಿ:** ೧. ಪ್ಲುತೇಭರಥಾಲಂಬಿತ ಖಳ್ಗಿಖಳ್ಗಿನಿಹತಾಶ್ವೌಘಂ (ಎಕ. VI, ಚಿಕ್ಕಮ. ೧೬೧-೯೫; 1137). ೨. ಚಮರಿಯ ಹುರಮೆಂಟಡಿಯ ಹೊಳಳ್ ಕಾಟಿಯು ಕೊಟ್ಟಂ ಖಳ್ಗಿಯ ಪಳ್ಳಿ . . . ಭೀಮಾರಣ್ಯಂ (ಜಯುಕಾ. ೧೫-೨೩).  [< ಸಂ. ಖಡ್ಗಿನ್]

**ಖಡ್ಗಿವೃಂದ** (ನಾ). ೧. ಖಡ್ಗಧಾರಿಗಳ ಸಮೂಹ. ೨. ಖಡ್ಗ ಮೃಗಗಳ ಗುಂಪು, —ಸಮೂಹ. ೧, ೨: ದಮಿತಾರಿಯ ರಥಚಕ್ರ ರಕ್ಷಕರಪ್ಪ ಖಡ್ಗಿವೃಂದಂ ಬಳಿಯೊಳ್ ಕೊಡರ್ದ ಖಡ್ಗಿವೃಂದಮಂ ಕೂಡುವಿನಂ ನಿಡುಗಡಿದಂತಿರೆ (ಶಾಂತಿಪು. ೪-೪೪ ವ). [ಖಡ್ಗಿ + ವೃಂದ]

**ಖಾಂಡವ** (ನಾ). (ಕುರುಕ್ಷೇತ್ರದ) ಒಂದು ವನದ ಹೆಸರು. ℙ ಇದು ಇಂದ್ರನ ವನ. ಅರ್ಜುನನ ನೆರವಿನಿಂದ ಅಗ್ನಿ ಇದನ್ನು ಸುಟ್ಟನು: ಪಾವಕನಱ್ಪಿ ಖಾಂಡವಮನುಂಡಪಂ (ಪಂಪಭಾ. ೫-೭೮); ನರನಿಂದಗ್ಗದ ಖಾಂಡವಂ ನೆಗಱ್ದ ಲಂಕಾದ್ವೀಪಮಂತೊಂದು ವಾನರನಿಂ . . . ಪರಿಭವಂಬೆತ್ತುವು (ಕಇಆ. ೯೪-೩-೩೦; 1124); ಖಾಂಡವದ ವನ ದಹನದಾವೋಜ್ಜಂಡ ಗಂಡರಗಂಡ . . . ಧಾಳಿಯಿಟ್ಟನು ಚಂಡಗಾಂಡೀವಿ (ಕುವ್ಯಾಆ. ೨೦ ಸೂಚನೆ).  [ಸಂ.]

**ಖಾಂಡವವನ** (ನಾ). = ಖಾಂಡವ: ಸುಖವೆ ಹೇಳೈ ತಂದೆ ಖಾಂಡವ ವನದ ನಿರ್ದಹನ (ಕುವ್ಯಾಆ. ೨೦-೧೭).  [ಖಾಂಡವ + ವನ]

**ಖಾಂಡಿ** (ನಾ). ಬಾಣವನ್ನು ಹೊಂದಿರುವುದು; ಬಿಲ್ಲು; ಧನುಸ್ಸು: ಇಗೋ ನೋಡುಯೆನ್ನ ಕರಾಗ್ರದೊಳಿರುವ ಖಾಂಡಿಯನ್ನು ಝೇಂಕರಿಸಿ ನಿನ್ನ ದೊಡ್ಡ ಹೊಟ್ಟೆಯನ್ನು ಸೀಳಿ (ದುಶ್ಶಾಕ. ೨೨).

[< ಸಂ. ಕಾಂಡಿನ್]

**ಖಾಂದಿ** (ನಾ). ಆಳು; ಸೇವಕಿ; ಆಶ್ರಿತೆ: ಶಿವಗನನ್ನು ಮಾದಿ ಎಂಬ ಖಾಂದಿಯು ಮದನಸಿಂಗನ ಮನೆಗೆ ಕರೆದುತಂದು . . . ಎರಡು ತಿಂಗಳ ರಜ ಬೇಕೆಂತಲೂ ಕೇಳಿಕೊಂಡಳು (ಅದೂಟ. ೧೯೪). [← ಮರಾ. ಖಾಂದ]

**ಖಾಕಿ,** ಕಾಕ್ಕಿ, ಖಾಖಿ (ಗು). ೧. ದೂಳುಬಣ್ಣದ; ಮಾಸಲು ಹಳದಿಯ. (ನಾ). ೨. ಮಾಸಲು ಬಣ್ಣದ ಬಟ್ಟೆ: (ಬ್ರಿಟಿಷ್ ಸೈನ್ಯದಲ್ಲಿ ಉಪಯೋಗಿಸುವ) ಖಾಕಿಬಣ್ಣದ, ಹತ್ತಿಯ ಅಥವಾ ಉಣ್ಣೆಯ, ಮೂಲೆನೆಯ್ಗೆಯ, ಉಬ್ಬುಗೆರೆಗಳ ಬಟ್ಟೆ, ಖಾಕಿ ಬಟ್ಟೆ (Khaki. ಇಂಕನಿ); ಅವರ ಖಾಕೀ ಕೋಟು, ಎತ್ತರವಾದ ಟೊಪ್ಪಿಗೆ . . . ಅವರಲ್ಲಿರುವ ದರ್ಪಬುದ್ಧಿಗೆ ಸಾಕ್ಷಿ ನುಡಿಯುತ್ತಿದ್ದವು (ರಂಗರೋ. ೧); ಖಾಕಿ ಚಣ್ಣ ಹಾಕಿಕೊಂಡು ಕಚೇರಿಗೆ ಹಾಜರಾಗಿ (ಗಂಮಾಯಿ. ೧೨೧); ಖಾಕಿ ಬಣ್ಣವನ್ನು ಸರಕಾರ ಏಕೆ ಗುತ್ತಿಗೆ ಹಿಡಿಯಿತೋ ತಿಳಿಯದು (ಗಾ೪ ಪ. ೧೩೭). **ಕಾಕ್ಕಿ:** ೧. ಸಾಮಾನ್ಯವಾಗಿ ಸೇನಾಳುಗಳಿಗೆ ತೊಡಿಸುವ ಕಾಕಿ ಬಟ್ಟೆಯ ಸಮರೂಪ (uniform)ದ ಉದ್ದೇಶವೂ ಅದೇ (ಬಾಲಪ್ರ. II, ೧೦೨೪). **ಖಾಖಿ:** ೧. ಖಾಖಿ ಉಡುಪಿನ ಟ್ರಾಮುಸಾರಥಿ ಯೊಬ್ಬ . . . ಬರುತ್ತಿದ್ದ (ಹುಚ್ಚುಹು. ೨೧).

[← ಪಾರ. ಖಾಕೀ; ಹಿಂ. ಮರಾ. ಖಾಕೀ]

**ಖಾಖಿ** 'ಖಾಕಿ' ನೋ.

**ಖಾಜಿ** 'ಕಾಜಿ' ನೋ.

**ಖಾಜಿನ್ಯಾಯ** 'ಕಾಜಿನ್ಯಾಯ' ನೋ.

**ಖಾಟ** (ನಾ). ಘಾಟು; ತೀವ್ರವಾದ ವಾಸನೆ: ಆಗಾಗ್ಗೆ ಜರದಾ, ತಂಬಾಕದ ಖಾಟವೂ ಈ ವೀಟೀರಸಕ್ಕೆ ತನ್ನ ಶಾಕ ಪೂರೈಸುವ ಭಾಸ ವಾಗುವುದು (ಗಾ೪ ಪ. VIII, ಮುನ್ನುಡಿ).  [?]

**ಖಾಡಾಖಾಡಿ$_1$** 'ಖಡಾಖಡಿ$_1$' ನೋ.

**ಖಾಡಾಖಾಡಿ$_2$,** ಖಡಾಖಡಿ$_2$ (ನಾ). ೧. ಮಲ್ಲಯುದ್ಧ; ಕೈಕೈ ಕಾಳಗ; ದ್ವಂದ್ವಯುದ್ಧ: "ಖಾಡಾಖಾಡಿಯೆನಲ್ ಮಲ್ಲಯುದ್ಧ ಮೆಂದಱಿಗೆ" (ಭಾರನಿ. ೫); ಲಲಿತಚಂದ್ರಿಕೆಗೇಕೆ ದಾವಾನಳನ ಖಾಡಾ ಖಾಡಿ (ಕುವ್ಯಾದ್ರೋ. ೪-೪೮); ನನಗೂ ಅವಗೂ ಖಾಡಾಖಾಡಿ ಆಗಿ (ಮುಂಗಾಪು. ೭೭); ಅವರ ಮಕ್ಕಳ ಖಾಡಾಖಾಡಿ ತಿಂಗಳು, ವರ್ಷ ನಡೆದಲ್ಲ ಇನ್ನಷ್ಟು ಸಂತೋಷವಾಗುತ್ತಿತ್ತು (ಜ್ಞಾರುದಾ. ೧೫೧).

೨. ಬಿರುಸು; ಆವೇಶ; ಜೋರು: ನೋಡಿ ತದಸುರನ ಖಾಡಾಖಾಡಿಯನುದ್ಭಟಮಹೀಶನಾರ್ದಸಿಯಂ . . . ನಿಶಾಚರನನೆಜಗಿದಂ (ಉದ್ಭಟ. ೪–೧೦೦); ತಿರುವಿಲ್ಲಂಬ ತೊಡಚಿ ಖಾಡಾಖಾಡಿಯೊಳಿಸಲು (ಅಂಜಚ. ೬–೧೧೬); ನನ್ನ ಕಣೆಯಲಿ ಬಿರಿಯಲಾತನ ದೇಹ ಖಾಡಾಖಾಡಿಯುದ್ಧದಲಿ (ಕುವ್ಯಾಕ. ೮–೩೮). ೩. ಸ್ಪರ್ಧೆ; ಪೈಪೋಟಿ; ಏರಾಟ: ಹೂಡಿದರು ಸಾರಿಗಳ ನೆತ್ತವನಾಡಿದರು ಮನವೊಲಿದು ಖಾಡಾಖಾಡಿಯಲಿ ದುಗ ಬಾರವಿತ್ತಿಗವೆಂದು ಹರುಷದಲಿ (ನಳಚ. ೯–೪೪); ಬೆರಸಿ ಧಾಳಾಧೂಳಿಯಲಿ ಖೊಪ್ಪರಿಸಿ ಖಾಡಾಖಾಡಿಯಲಿ . . . ಕಾದಿತು ಸೇನೆ (ತೊರರಾ. ೬–೩೮–೩). ೪. ಗದಾಯುದ್ಧದಲ್ಲಿ ಒಂದು ವರಸೆ: ಝಾಡಿ ಝಂಕಣಿ ಝಡವು ಖಾಡಾಖಾಡಿ ದೃಢಗತಿ ದೃಷ್ಟಿ ಪಾತಾಲೀಢ ಗೋಮೂತ್ರಿಕ ಪರಿಭ್ರಮಣ ಪ್ರವಿಕ್ಷೇಪ ಪಾಡು ಪೈಸರ ಪಂಥದ ಗಾಢ ಘುಲ್ಲಣೆಗಳಲಿ ಗದೆ ಕುಣಿದಾಡಿದವು ಕಿಡಿಸೂಸಲಿಬ್ಬರ ನಿರ್ಭರಾಂಗದಲಿ (ತೊರರಾ. ೬–೧೪–೧೬); ಎಕ್ಕೆಯೊಳೊಕ್ಕು ಪಳಂಚುವ ಪಾಂಗಿಂ ತಕ್ಕು ಮಿಗಲ್ಕೆಕ್ಕತುಳಂ ಪೊರ್ಕುಳಿವೊಕ್ಕು ಕರಂ ಖಾಡಾಖಾಡಿಯೊಳುಜಿದಿಜಿದರ್ ತಮ್ಮೊಳಗೆ (ಜಯುಕಾ. ೬–೩೧). **ಖಡಾಖಡಿ$_{2}$**: ೧. ಖಡಾಖಡಿ ಲಡಾಯಿ ಮಾಡಬೇಕು (ಎಳಕ. ೩೪); ಜಯಮಲ್ಲನೆಂಬ ಶೂರಾಗ್ರಣಿಯು . . . ಅಕಬರನೊಡನೆ ಖಡಾಖಡಿಯಾಗಿ ಯುದ್ಧವನ್ನು ಮಾಡಿದನು (ಭಜ್ಯೋತಿ. ೭೮); ಖಡಾಖಡಿ ಯುದ್ಧಕ್ಕೆ ಒಪ್ಪುತ್ತೇನೆ (ದೌಲತ್. ೧೦೯). [?]

**ಖಾಡಾಖಾಡಿಕಾತಿ** (ನಾ). ಹೋರಾಡುವವಳು; ಸ್ಪರ್ಧಾಳು: ಮದನನ ಮೊನೆಯ ಖಾಡಾಖಾಡಿಕಾ[ಪಾಠಾಂ. ಖಾ]ತಿಯರ್ಬೈದೆ ಹೊಯರ್ ಹೊಯ್ದು ದನುಜಹರನರಸಿಯರು ಕುಂತಿಯ ತನಯರರಸಿಯರೊಡನೆ . . . ಪಾಂಚಾಲಿನಿಯರೋಕುಳಿಯನಾಡಿದರು (ಕುವ್ಯಾವಿ. ೧೦–೮೨).
[ಖಾಡಾಖಾಡಿ$_{2}$ + –ಕಾತಿ$_{5}$]

**ಖಾಡಾಜಂಗಿ** 'ಖಡಾಜಂಗಿ' ನೋ.

**ಖಾಡಿ** (ನಾ). ತಿಳುವಳಿಕೆ (?): ಸಮೀಪದ ಆಪ್ತ ಮುಂತಾದವರು ಸತ್ತಿದ್ದರೆ ಡಿಪ್ಯುಟಿ ಇನ್ಸ್‌ಪೆಕ್ಟರರಿಗೆ ಖಾಡಿ ಆಗುವಂತೆ ರಿಪೋರ್ಟು ಮಾಡದ ಹೊರತು ಹೋಗಕೂಡದು (ಪಾಶ್ಚಾವಿ. ೪೪೩). [?]

**ಖಾಣ, ಕಾಣ$_{2}$, ಖಾನ$_{1}$** (ನಾ). ೧. ಕುದುರೆ, ದನಕರು ಮೊದಲಾದವುಗಳ ಆಹಾರ; ಮೇವು: ಖೊಪ್ಪರಂ ಖಾಣಂ, ಖಾರಿಗೆ (ಶಮದ. ೧೫ ಪ್ರಯೋ); ಕಲ್ಲ ನಂದಿಯನೆಬ್ಬಿಸುತ್ತಂ ಹುಲ್ಲು ಖಾಣವನಿಕ್ಕಿ ಮೇಸಿದ (ಬಸಪು. ೨೨–೨೭); ಮೇಹುಗೊಳ್ಳದು ಖಾಣಕ್ಕಂ ಪಡೆದು ಬಾರದು . . . ಜ್ವರವಿಕಾರಮಾದೊಡೆ (ಹಯಕಂ) ತುರಗಂ (ಅಶ್ವಶಾ. ೧೩–೧); ಬಸವನಾದೊಡೆ ಖಾಣವಂ ಮೇಯಬೇಕೆಂದು ಹೊಸ ಕಡಲೆಯಂ ಸುರಿಯೆ (ಲಶಿಚಂ. ೩೮–೧೫೫); ಓಡಿಸಿದನೀಕ್ಷಿಸಲು ಹುಲ್ಲಖಾಣವ ಮೆಯ್ಸಿ (ಗುರುಚಾ. ೧೧–೧೧); ಪಾಳ್ಯಗಳಿಗೆ . . . ಕಬಳ ಖಾಣಗಳನ್ನು ಕೊಡುವ ಹಾಗೆ ಕಟ್ಟು ಮಾಡಿಸಿದನು (ಕೃವಾಭೀ. ೭). ೨. ಒಂದು ಬಗೆಯ ತೆರಿಗೆ; ಮೇವಿನ ಮೇಲೆ ಹಾಕುವ ತೆರಿಗೆ: ಖಾಣ, ಎಳ್ಳು, ಜೋಳ, ನಲ್ಲಾವು, ನಲ್ಲೆತ್ತು, ಕಳುಕು, ಕಂಡಿಕೆವಣ (ಎಕ. VI, ತರೀಕೆ. ೨೦–೨೮; 1185); ಕುದುರೆಯ ಸೇನೆ ಖಾಣವಾಚಿದ್ದಿಯ ಭಂಡಿ ಜೆಡೆದೆಜ಼ ಇವೊಳಗಾಗಿ ಮುಂದೆ ಹುಟ್ಟುವ ಅಪೂರ್ವಾಯವೆಲ್ಲವಂ ಮಾಣಿಸಿ (ಎಕ. V, ಹಾಸನ. ೧೩೯–೧೦; 1200); ಅಭ್ಯಾಗತೆ, ಖಾಣ, ಕಳುಕು ಅಡುಗುಬು (ಎಕ. XV, ಬೇಲೂರು. ೨೫೨–೬; 1298); ವಟ್ಟ ವಾಸಿಯು ಸುಂಕಸೋದಿಗೆ ಖಾಣಖಡ್ಡಾಯ (ಬಸಪು. ೨೭–೫೨); ಅರಮನೆಇಂದ ಖಾಣಧಾನ್ಯ ಯೆತ್ತು ತುಪ್ಪ ಸಬರೆ ಮಾಟ್ಟದಳ ಮೋಳ ಮುಂತಾದ ವೆಚ್ಚ ವಿರಾಡವನೂ ಕುಳಸರದಿಯಲಿ ತೆಜುವೆಳೂ (ಸೌಇಇ. IX-ii, ೪೩೩–೫೦; 1408). **ಕಾಣ$_{2}$**: ೧. ಕಾಣಕ್ಕೆ ತೆಗೆವ ಬಾಯರ್ ಕಡಿವಾಣಕಂ ತೆಗೆಯಬೇಡವೆ (ಶಂಕಕಂ. ೨೫); ಮಣ್ಣೆತ್ತು, ಅವರು ನೀಡಿದ ಕಾಣವನ್ನು ಮೆಯ್ದಿತು (ಬೆಳುಮ. ೨೧೪). ೨. ರೋಣ[ದ] ಪನ್ನಿರ್ವ್ವರ್ಜು ಗದ್ಯಾಣಂ ಸಿದ್ಧಾಯ ಉಪ್ಪುತುಪ್ಪ ಕಾಣಂ . . . ಕೊಂಡು ಬಿಟ್ಟ ಮತ್ತರ್ (ಇಆ. XII, ೨೫೬–೧೬; 971). **ಖಾನ$_{1}$**: ೧. ತುರಗಕ್ಕೆ ಗಂಧಮಾಲ್ಯಾಭರಣಾರ್ಪಣ ಖಾನ ಪಾ(ಣ)ನ ಭೋಜನ ಶಯನಾದರಮಂ ಮಾಡುವ (ಅಶ್ವಶಾ. ೭–೬೫). ೩. ಆಹಾರ; ಭೋಜನ: ಪಲತೆಜದ ಅಸ್ತ್ರದಿಂದಂ ಪಲತೆಜದ ವಿಷಾನ್ನಪಾನಖಾನಾದಿಗಳಿಂ . . . ಪಲರುಂ ಸತ್ತರ್ (ಮದತಿ. ೧–೭೫).
[← ಪ್ರಾ. ಖಾಣ. / ಸಂ. ಖಾದನ]

**ಖಾಣಂಗಟ್ಟು** (ಕ್ರಿ). ಹುರುಳಿ, ಕಡಲೆ ಮೊದಲಾದ ಆಹಾರವನ್ನು ಕುದುರೆಗೆ ಬಾಯಿಚೀಲದಲ್ಲಿ ಕಟ್ಟು: ಜವೆಯಂ ಖಾಣಂಗಟ್ಟುವಡು ವಿಯಂ ಕಳೆದಿಕ್ಕಿ ಮಾಡಿ ಕಟ್ಟುಗೆ ಪೆಸಜಂ ತೊವರಿಯನುರ್ದುವುಮಂ ಗೋದುವೆಯುಮನಿಕ್ಕುವೊಡೆ ತೆಗಸಿ ಕಟ್ಟುವುದುಚಿತಂ (ಅಶ್ವಶಾ. ೭–೫೬).
[ಖಾಣ + ಕಟ್ಟು$_{1}$]

**ಖಾಣವಿಧಿ** (ನಾ). ಆಹಾರ ವಿಷಯದಲ್ಲಿ ಪಾಲಿಸಬೇಕಾದ ವಿಧಿ; ಆಹಾರ ನಿಯಮ: ಬರಗೆಳ್ಳು ಕೋಜ಼ ಪಾರಕುವೆರಸಗಸೆ ಕುಸುಂಬೆ ಕಟುವೆ ನೆಲ್ ಸಾವೆಗಳುಂ ತುರಗಕ್ಕಹಿತಂ ಬಲಸಂಹರಣಂಗಳ್ ಖಾಣವಿಧಿಯಿನಭಿನವಚಂದ್ರಾ (ಅಶ್ವಶಾ. ೭–೫೯). [ಖಾಣ + ವಿಧಿ]

**ಖಾತ$_{1}$** (ಗು). ೧. ಅಗೆಯಲ್ಪಟ್ಟ; ತೋಡಿದ. (ನಾ). ೨. ಅಗೆದದ್ದು; ಅಗಳು; ಕಂದಕ: "ಖಾತಮಾ ದೇವಖಾತಮೆನಲ್ಕದಗಳೆನಿಕ್ಕು" (ಮಂಗರಾ. ೧೨೩–೧೪); ಪಾತಾಳತಳಮನೆಯ್ದಿದ ಖಾತಂ ಸುರಪುರಮನೆಯ್ದಿದಟ್ಟಳೆ ಪೆಂಪು ದ್ಯೋತಿಸೆ ಪುರವಿಜ಼ಪುದು . . . ಅಮರಾವತಿಯಂ (ಅಜಿಪು. ೨–೧೬). ದಂಡಕಗಿರಿಯ ಗುಹಾಗೇಹದೊಳೊಂದು ಯೋಜನದೆಂಟನೆಯ ಭಾಗಂ ಖಾತಮಾದಲ್ಲಿ ಪಾತಾಳಲಂಕೆಯೆಂಬ ಪುರಮಿರ್ಪುದು (ಪಂರಾಮಾ. ೯–೧೬ ವ); ತುಳಸಿ ನಸುನಗುತ್ತ ಅವನನ್ನು ಪಾತಾಳ ಖಾತಕ್ಕೆ ನುಗಿಸಿದ್ದಳು (ದೀಪಹ. II, ೧೦೯). [ಸಂ.]

**ಖಾತ$_{2}$** (ನಾ). ಕೊಳ; ಪುಷ್ಕರಿಣಿ: "ಖಾತಮೆನೆ ಪುಷ್ಕರಿಣಿಯೆನಲು ಪೊಕ್ಕರಣೆ" (ಮಂಗರಾ. ೧೨೩–೧೪). [< ಸಂ. ಖಾತಾ]

**ಖಾತ$_{3}$** 'ಖಾತೆ$_{2}$' ನೋ.

**ಖಾತಕ** (ನಾ). ೧. ಅಗೆಯುವವನು; ತೋಡುವವನು. ೨. ಅಗೆದು ಮಾಡಿದುದು; ಗುಳಿ; ತಗ್ಗು; ಕಂದಕ. ೩. ಕೊಳ; ಕಲ್ಯಾಣಿ. 'ದೇವಖಾತಕ' ಪರಾ. [ಸಂ.]

**ಖಾತರ್‌ಜಮಾ** 'ಖಾತರ್‌ಜಮೆ' ನೋ.

**ಖಾತರ್‌ಜಮೆ, ಖಾತರ್‌ಜಮಾ, ಖಾತಿರಜಮೆ** (ನಾ). ೧. ಸಂತೋಷ; ಆನಂದ: ಮುಂದೆ ಆ ನೆರೆಯಲ್ಲಾ ಸಮೀಪದ ಸರಕಾರಗಳಿಗೆ ಸುಖ ಖಾತರ್‌ಜಮೆ ಹಾಸಲ್ ಆದೀತು (ರಾಜೇಂದ್ರ. ೧೦೪). **ಖಾತರ್‌ಜಮಾ**: ೧. ಈ ಶ್ರೇಯಸ್ಸು ಜಯ ಹಾರೈಸುವಂಥಾ ದೋಸ್ತುದಾರರಿಗೆ ಮನಸ್ಸಿನಲ್ಲಿ ಇರಾದೆ ಇದ್ದ ಮೇರೆಗೆ ಖಾತರ್‌ಜಮಾ ಆಯಿತು (ರಾಜೇಂದ್ರ. ೧೧೮). ೨. ನಂಬುಗೆ; ವಿಶ್ವಾಸ; ಖಾತ್ರಿ. **ಖಾತಿರಜಮೆ**: ೧. ನಾವು ಖಾತಿರಜಮೆ ಆಗಿ ಇರಬೇಕು (ರಾಜೇಂದ್ರ. ೬).
[← ಮರಾ. ಖಾತರ್‌ಜಮಾ; ಅರ. ಹಿಂ. ಖಾತಿರ್‌ಜಮಾ]

**ಖಾತರ** (ನಾ). = ಖಾತರಿ: ಮಾಜಿ ಅಮೀಲ ಶಿರಸ್ತೆದಾರ ಶೇಕದಾರ ವಗೈರೇರು ಖಾತರ ನಿಮಿತ್ಯ ದರಿಯಾಫ್ತು ಮಾಡದೆ ತಾತ್ಸಾರಮಾಡಿ ಬಿಟ್ಟದ್ದು ರುಜು ಆದದ್ದೇ ಉಂಟಾದರೆ ಹಾಲಿ ಅಮೀಲ ಕೊಡಬೇಕು (ಮಹಾವಂ. II, ೫೯). [< ಖಾತರಿ]

**ಖಾತರಿ,** ಖಾತರು, ಖಾತ್ರಿ (ನಾ). ೧. ವಿಚಾರ; ಚರ್ಚೆ; ಪರ್ಯಾಲೋಚನೆ: ಸರಕಾರದಿಂದ ಭೂಮಿ ಉತಾರಾ ನಡಸತಕ ಬಗ್ಯೆ ಅಪ್ಪಣೆಯಾಗಬೇಕೆಂಬದಾಗಿ ಅರಿಕೇ ಮಾಡಿಕೊಂಡದ್ದರಿಂದಾ ಹೆಚಿತಿಂಮಯನ ಅರ್ಜಿ ಖಾತರಿಗೆ ತಂದು . . . ಕಟ್ಲೇಮಾಡಿಸಿ (ಎಕ. VI, ಕೊಪ್ಪ. ೪೮–೩೫; 1811). ೨. ನಂಬುಗೆ; ವಿಶ್ವಾಸ: ಖಾತರಿಯಾದ ಅಂಗಡಿಯಲ್ಲಿ ಲೆಕ್ಕವಿಟ್ಟು ತಿಂಗಳು ತಿಂಗಳಿಗೆ ಹಣವನ್ನು ಬಾವತಿಮಾಡಬಹುದು (ಗೃಹವಿ. ೧೯೯). ೩. ನಿಶ್ಚಯ; ನಿರ್ಧಾರ: ಈತ ಬಂದಿರಲಿಲ್ಲ ಅಂತ ಖಾತರಿಯಾಗಿತ್ತು (ಮನೊ.೯ನಂ. ೧೦೦); ತೋಟಗಾರನ ಕೆಲಸ ಖಾತರಿಯೊ? (ನಡೆದಾ. I, 368); ರಾಜನು ಮಾಡುವ ಶಾಸನವು . . . ರಾಜ್ಯದ ಮುಖ್ಯೋದ್ದೇಶಕ್ಕೆ ಅನುಸಾರವಾಗಿರುತ್ತದೆಂಬ ಖಾತರಿಯೇನು? (ರಾಜ್ಯಶಾ. ೪೭). **ಖಾತರು:** ೪. ಹೊಣೆ; ಜವಾಬ್ದಾರಿ: ಈ ಹಣ ಸಾಧಾರಣ ವಸ್ತುವೆಂದು ತಿಳಿಯಬೇಡ . . . ಅಕ್ಕನ ವಿವಾಹಕ್ಕೆ ನೀನೇ ಖಾತರು (ಮಸಕೂ. ೬೮). **ಖಾತ್ರಿ:** ೩. ಇದುವರೆಗೂ ಈ ಬಗ್ಗೆ ನನಗೆ ಖಾತ್ರಿಯಾದಂಥ ಸುದ್ದಿ ತಿಳಿದುಬಂದಿಲ್ಲ (ರತ್ನಗೋ. ೨೨); ನಾಳೆ ನೀನು . . . ಅವಳನ್ನು ಹೊರಗಿಡುವುದಿಲ್ಲ ಎಂದು ಯಾವ ಖಾತ್ರಿ? (ದುಂಬಿಕ. ೩೬); ನಿದ್ದೆ ಹತ್ತಿದ ಖಾತ್ರಿಯಾಗಬೇಕಲ್ಲ! (ನಾಪೋಲೀ. ೧೬೭).

**ಖಾತರಿಮಾಡಿಕೊಳ್ಳು, ಖಾತ್ರಿಮಾಡಿಕೊಳ್ಳು** = ನಿಶ್ಚಯಮಾಡಿಕೊಳ್ಳು; ಖಚಿತಪಡಿಸಿಕೊಳ್ಳು: ಈ ವಿಷಯ ಎತ್ತಿದರೆ ಅಪ್ಪ ಒಪ್ಪಿಯೇ ತೀರುತ್ತಾರೆ ಎಂದು ಖಾತರಿಮಾಡಿಕೊಂಡು (ಸ್ವಾಮಿನ್ನೇ. ೬೭); ನನ್ನ ನಡತೆಯ ಬಗೆಗೆ ತಾವು ಬೇಕಾದ ಹಾಗೆ ಖಾತ್ರಿಮಾಡಿಕೊಳ್ಳಬೇಕೆಂದೂ (ಚಂದುಟಿ. ೪೪); ಅದನ್ನು ಮತ್ತೊಮ್ಮೆ ಖಾತ್ರಿಮಾಡಿಕೊಳ್ಳಬೇಕೆಂದು ಹೊರಟಾಗ (ಹೊಸಕ್ಷಿ. ೨೯೧). **ಖಾತ್ರಿಆಗು** = ಭರವಸೆಯಾಗು; ನಂಬಿಕೆಯಾಗು; ನಿಶ್ಚಿತವಾಗು: ರಾಯರ ಅರಳಿದ ಮುಖ ನೋಡಿ ಅನಿಲನಿಗೂ ಖಾತ್ರಿಆಗಿತ್ತು (ಅಪನಾ. ೧೫); ಅವನು ಜೀವಂತ ಇದ್ದದ್ದು ಈಗ ಖಾತ್ರಿಆಯಿತು (ರಕ್ತಧ್ವ. ೭೯). **ಖಾತ್ರಿಕೊಡು** = ರುಜುವಾತುಮಾಡು; ಖಚಿತಪಡಿಸಿಕೊಡು: ಆ ಬಗ್ಗೆ ನಾನು ಎಲ್ಲಿ ಬೇಕಾದರೂ ಖಾತ್ರಿಕೊಡುತ್ತೇನೆ (ಹಳ್ಳಿಹಾ. ೪೦). **ಖಾತ್ರಿಮಾಡಿಸು** = ಖಚಿತಪಡಿಸು; ಮನದಟ್ಟುಮಾಡಿಸು: ಕಂಟಲೆಯನ್ನು ಕರತಂದು ನನಗೆ ಖಾತ್ರಿಮಾಡಿಸಿಕೊಡು (ಮೋಹಿನೀ. ೧೨೧). **ಖಾತ್ರಿಮಾಡು** = ಮನಗಾಣಿಸು; ಖಚಿತಪಡಿಸು: ಸಾಲಕೊಟ್ಟದ್ದಾಗಲಿ . . . ನನಗೆ ಖಾತ್ರಿಮಾಡಿಕೊಟ್ಟರೆ ಪೈಗೆ ಪೈ ಸಾಲ ತೀರಿಸುವ ಭಾರವನ್ನು ನಾನು ಹೊರುವೆ (ಬೆಟ್ಟಹೊ. ೬೦); ಖಾತ್ರಿ ಮಾಡಲ್ಪಟ್ಟ ಮೊಬಲಗನ್ನು ಕೊಡಬೇಕಾದ ಸಂದರ್ಭದಲ್ಲಿ (ಗ್ರಾಮಾಕ. ೧೬೮). **ಖಾತ್ರಿಹಿಡಿ** = ಭರವಸೆ ಹೊಂದು; ನಂಬು: ಅಂತೂ ಒಳಗೊಳಗೇ ಖಾತ್ರಿಹಿಡಿದಿದ್ದೆಯೆನ್ನು (ಕಾಗೆಕ. ೪೭).

[← ಹಿಂ. ಮರಾ. ಖಾತರ್; ಅರ. ಪಾರ. ಖಾತಿರ್, ಖಾತರೀ]

**ಖಾತರಿಪತ್ರ** (ನಾ). ಭರವಸೆಯ ಕಾಗದ; ನಂಬಿಕೆಯ ಪತ್ರ: ತಾತಾ ಅವರಿಗೆ ಖಾತರಿಪತ್ರವನ್ನು ಬರೆದುಕೊಟ್ಟಿದ್ದ ನಮ್ಮ ವರ್ತಕರೆಲ್ಲರೂ ಒಬ್ಬೊಬ್ಬರಾಗಿ ಕಳಚಿಕೊಂಡು (ಭಾಗ್ಯಶಿ. ೪೪).

[ಖಾತರಿ + ಪತ್ರ]

**ಖಾತರು** 'ಖಾತರಿ' ನೋ.

**ಖಾತಿ** 'ಖತಿ₁' ನೋ.

**ಖಾತಿಕೆ** (ನಾ). ಕಂದಕ; ಅಗಳು: ಮಹಾಂಬುನಿಧಿ ಪ್ರಾವೃತ ಖಾತಿಕಾ ಪರಿಧಿ ಜಂಬೂದ್ವೀಪಮಂದೊಂದೆ ಪತ್ತನದಂತಿರ್ದುದು (ಚಂದ್ರಪು. ೧೨–೬೮).

[ಸಂ. ಖಾತಿಕಾ]

**ಖಾತಿಗೆಡು** (ನಾ). ದರ್ಪಗೆಡು; ಶಕ್ತಿಗುಂದು: ಖಾತಿಗೆಟ್ಟುದು ಬಲಾಢ್ಯರು ಕಾಮುಸುತನಡ್ಡವಾತಿನ ಕೋಲ್ಗಳುಬ್ಬಟೆಗೆ ಭೀತಿಸಿ ಹಿಮ್ಮೆಟ್ಟಿ ಸಾರ್ದರು (ಮೋಹತ. ೩೫–೨೪).

[ಖಾತಿ (< ಖತಿ₁) + ಕೆಡು₁]

**ಖಾತಿಗೊಳ್** 'ಖತಿಗೊಳ್' ನೋ.

**ಖಾತಿರಜಮೆ** 'ಖಾತರ್‌ಜಮೆ' ನೋ.

**ಖಾತೆ₁** (ನಾ). ಕೊಳ; ಹೊಕ್ಕರಣೆ; ಪುಷ್ಕರಿಣಿ: "ಖಾತಾ, ಪುಷ್ಕರಿಣೀ – ಈ ೨ ಹೊಕ್ಕರಣೆ" (ಹಲಾಯು. ೧೧೧–೫೩).

[ಸಂ. ಖಾತಾ]

**ಖಾತೆ₂**, ಖಾತ್ರ (ನಾ). ೧. ಕಿರ್ದಿ ಪುಸ್ತಕದಲ್ಲಿ ನಮೂದಾಗಿರುವ ಜಮಾಖರ್ಚಿನ ಭಾಗ; ಜಮಾಖರ್ಚಿನಲ್ಲಿ ಒಬ್ಬ ವ್ಯಕ್ತಿ, ಸಂಸ್ಥೆ ಅಥವಾ ವಿಷಯಕ್ಕೆ ಮೀಸಲಾದ ಲೆಕ್ಕದ ವಿಭಾಗ: ಹೋದಸಲ ಕೊಟ್ಕಂದಾಯ್ತು ರಶೀತೀಲಿ ಸಂವತ್ಸರಿಲ್ಲ, ಖಾತೆಇಲ್ಲ (ಹುಟ್ಟಿಹ. ೧೩೮); ಸದ್ಯ ನಮ್ಮಲ್ಲಿ ಯಾರ ಖಾತೆಗಳು ನಡಿಯುತ್ತಿದ್ದಾವೋ ಅವರಿಗೆ . . . ಕೊಡುವುದು (ಮುಂಬವ್ಯಾ. ೪೩); ರಸೀದಿಗಳೇನೋ ಸರಿಯಾಗಿವೆ ಮಹಾಸ್ವಾಮಿ, ಅಂದರೆ ಖಾತೆಗೆ ಖರ್ದಿಗೆ ಜಮಾ ಬಂದಿಲ್ಲ (ಕಲಿನ. ೧೬೪); ೨. ಲೆಕ್ಕದ ಪುಸ್ತಕ; ಖತಾವಣಿ; ಪಟ್ಟಿ: ಮೇಜಿನ ಮೇಲೆ ಹಲವು ಬಗೆಯ ಖಾತೆಗಳು (ಕುಂಹಿಂ. ೧೪೮); ಖಾತೆ . . . ಶಾನುಭೋಗರ ಹೆಸರಿಗೆ ಇರುವುದು ಕಾಣುತ್ತಿತ್ತು (ನನ್ನೂರು. ೧೪೮). ೩. "ಆಸ್ತಿ ತನಗೆ ಸೇರಿದ್ದೆಂದು ಸರಕಾರಿ ದಫ್ತರಿನಲ್ಲಿ ದಾಖಲು ಮಾಡಿಸುವುದು; ಹೀಗೆ ದಾಖಲಾದ ಆಸ್ತಿ" (ರೈಸ್‌ಗ. ೫೮೩). ೪. ಸರ್ಕಾರದ ಆಡಳಿತ ಭಾಗ, —ಇಲಾಖೆ: ಮುಲ್ಕಿ ಮತ್ತು ನ್ಯಾಯಖಾತೆಯಲ್ಲಿ ಕಂಡುಬಂದ, ಈ ಮನುಷ್ಯ ಸ್ವಭಾವವೇ ದಂಡಿನಲ್ಲಿ . . . ಅನುಭವಕ್ಕೆ ಬಂದರೆ ಸೋಜಿಗವೇನು? (ಯುಕ್ಷಪ್ರ. ೫೩); ಮುನಿಸಿಪಾಲ್ಟಿ ನೀರಿನ ಖಾತೆ ಕೆಲಸಗಾರರ ಸಂಪತ್ತಲ್ಲ! (ಹುಚ್ಚುಹು. ೨೫); ಪೋಲೀಸ ಖಾತೆಯು ಜನರ ವಿತ್ತ ಜೀವಿತಗಳ ಸಂರಕ್ಷಣಕ್ಕಾಗಿ ಇರುವದು (ಸ್ಕೂಲವಿ. ೨೨೩). ೫. ಮಂತ್ರಿಮಂಡಲದಲ್ಲಿ ಪ್ರತಿಯೊಬ್ಬ ಮಂತ್ರಿಗೆ ಒಪ್ಪಿಸುವ ಆಡಳಿತ ಶಾಖೆ: (Portfolio. ಪಾರಿಭಾ). 'ವಿದ್ಯಾಖಾತೆ' ಪರಾ. **ಖಾತ್ರ:** (ವೈಗೆಜೆ. IV, ೭೭೫).

[← ಹಿಂ. ಖಾತಾ; ಮರಾ. ಖಾತೇ; ಪಾರ. ಖತ್]

**ಖಾತೆಕಿರ್ದಿ** (ನಾ). ವ್ಯಕ್ತಿ ಹಾಗು ವಿಷಯಗಳ ಪ್ರಕಾರ ವಿಂಗಡಿಸಿ ಬರೆದ ಜಮಾಖರ್ಚಿನ ಪುಸ್ತಕ: ತನ್ನ ಖಾತೆಕಿರ್ದಿಗಳನ್ನು ತೆಗೆದುಕೊಂಡು ಒಡೆಯನಿಗೆ ಕೈಮುಗಿದು ನಿಂತುಕೊಂಡ (ಜಮೀನ್ದಾ. ೪೨); ಹೊಳೆವ ನಕ್ಷತ್ರಗಳ ಕಣ್‌ಬೆಳಕಿನಲ್ಲಿ ನೀನಿಟ್ಟ ಖಾತೆಕಿರ್ದಿಯನೊಮ್ಮೆ ತೆರೆಯಬೇಕು (ನೆಲಮು. ೨೬).

[ಖಾತೆ₂ + ಕಿರ್ದಿ]

**ಖಾತೆಪುಸ್ತಕ** (ನಾ). ಜಮಾಖರ್ಚಿನ ಪುಸ್ತಕ; ಖಾತೆಕಿರ್ದಿ: ಒಂದು ಖಾತೆಪುಸ್ತಕವನ್ನು ಮೇಜಿನ ಮೇಲೆ ಅಗಲಿಸಿಟ್ಟು (ಸುವಸಂ. ೭೮).

[ಖಾತೆ₂ + ಪುಸ್ತಕ]

**ಖಾತೆಮಾಡು** (ಕ್ರಿ). ಲೆಕ್ಕಿಸು; ಗಣನೆಗೆ ತರು: ಈತನ ಪಾದವಲ್ಲದೆ ಖಾತೆಮಾಡೆನುವುಳಿದ ದೈವವನು (ಶಂಕದಾ. ೩–೭).

[ಖಾತೆ₂ + ಮಾಡು₁]

**ಖಾತೇದಾರ** (ನಾ). ೧. ಭೂಮಿಯ ಸ್ವಾಧೀನಾಧಿಕಾರವನ್ನು ಪಡೆದವನು; ಜಮೀನು ತನ್ನ ಕೈಯಲ್ಲಿದೆಯೆಂದು ಸರಕಾರದ ದಫ್ತರಿನಲ್ಲಿ ದಾಖಲುಮಾಡಿಸಿಕೊಂಡವನು; ಪಟ್ಟೇದಾರ: ತಮಾಂ ಸರ್ವೆನಂಬರುಗಳಿಗೂ ಸರ್ಕಾರಕ್ಕೆ ಖಾತೇದಾರರು ವೃತ್ತಿದಾರರ ಹೊರತು ಮತ್ಯಾರ ಹೆಸರೂ ಸರ್ಕಾರಿ ಲೆಖ್ಖಗಳಲ್ಲಿಲ್ಲ (ಕಲಿನ. ೨೫೪).

೨. ಬ್ಯಾಂಕುಗಳಲ್ಲಿ ಹಣದ ವ್ಯವಹಾರಕ್ಕಾಗಿ, ತನ್ನ ಹೆಸರಿನ ಲೆಕ್ಕ ಇಡಿಸಿದವನು: ಪ್ರಸಿದ್ಧವಾದ ಕೆಲ ಬ್ಯಾಂಕುಗಳಲ್ಲಿ ಸಣ್ಣ ಖಾತೇದಾರರಿಗೆ ಸಲ್ಲತಕ್ಕ ಮಾರ್ಗದರ್ಶನವು ಸಿಕ್ಕುವುದಿಲ್ಲೆಂದು ಕೂಗು ಕೇಳಬರುವದು (ಬ್ಯಾಂಕಕ್ಕ. ೬). ೩. ಜಮೀನ್ದಾರ; ಸಿರಿವಂತ: ಚನ್ನಮ್ಮನು ತಾನೊಬ್ಬ ಖಾತೇದಾರನನ್ನು ಕೈಹಿಡಿಯಬೇಕೆಂದು ಕನಸಿನ ಸುಪ್ಪತ್ತಿಗೆಯನ್ನು ನಿರ್ಮಿಸುತ್ತಿದ್ದಳು (ಪಂಜಪಂ. ೫೫). [ಖಾತೆ$_2$ + -ದಾರ$_4$]

**ಖಾತೇವಾರು** (ನಾ). ಬೇರೆ ಬೇರೆ ಖಾತೆಗಳಾಗಿ ವಿಂಗಡಿಸಿದುದು; ವರ್ಗೀಕೃತವಾದುದು: ಡೂಮ್ಸಡೇ ಬುಕ್ ಎಂಬ ಹೆಸರಿನ ಖಾತೇವಾರ ಪತ್ರಿಕೆಯನ್ನು ಇಡಿಸಿದನು (ಇಂಗ್ಲಂಡ. ೨೪). [ಖಾತೆ$_2$ + ವಾರು$_2$ (< ವಾರ$_1$)]

**ಖಾತ್ರಿ** 'ಖಾತರಿ' ನೋ.

**ಖಾತ್ರಿಜನ** (ನಾ). ನಂಬಿಕೆಗೆ ಪಾತ್ರವಾದ ಜನ; ಪ್ರಾಮಾಣಿಕ ಮಂದಿ: ಖಾತ್ರಿಜನ ನುಡಿದಂತೆ ನಡೆಯುವವರು ಎಂದು ರಾಮರಾಯರಿಗೆ ಮನದಟ್ಟಾಯಿತು (ಕುರುಕಾ. ೩೯). [ಖಾತ್ರಿ (< ಖಾತರಿ) + ಜನ]

**ಖಾತ್ರಿಲಾಯಖು**, ಖಾತ್ರಿಲಾಹಿಕ (ನಾ). ನಂಬುಗೆಗೆ ಯೋಗ್ಯವಾದುದು; ವಿಶ್ವಸನೀಯವಾದುದು: ಈ ಮಾಹಿತಿಯು ಪ್ರತಿಯೊಬ್ಬ ವರ್ತಕರಿಗೆ ಖಾತ್ರಿಲಾಯಖು. . . ಇರುತ್ತದೆ (ಮುಂಬವ್ಯಾ. ೧೧ ಪ್ರಸ್ತಾವ). **ಖಾತ್ರಿಲಾಹಿಕ**: ಒಂದೇ ಸ್ಥಳದಲ್ಲಿ ಖಾತ್ರಿಲಾಹಿಕ ಮಾಲು ಶಿಗುವದಿಲ್ಲ (ಮುಂಬವ್ಯಾ. ೧೯೩). [ಖಾತ್ರಿ (< ಖಾತರಿ) + ಲಾಯಖು]

**ಖಾತ್ರಿಲಾಹಿಕ** 'ಖಾತ್ರಿಲಾಯಖು' ನೋ.

**ಖಾದ** (ನಾ). = ಖಾದನ: (ಕ). [< ಸಂ. ಖಾದ್ಯ]

**ಖಾದಕ** (ನಾ). ತಿನ್ನುವವನು; ಭಕ್ಷಿಸುವವನು. [ಸಂ.]

**ಖಾದನ** (ನಾ). ೧. ಅಗಿಯುವುದು; ಕಚ್ಚುವುದು; ತಿನ್ನುವುದು. ೨. ಆಹಾರ; ಭಕ್ಷ್ಯ. ೩. [ನಾಟ್ಯ] ನೃತ್ಯದಲ್ಲಿ ದಂತಪಂಕ್ತಿಗಳ ಎಂಟು ಅಭಿನಯಗಳಲ್ಲೊಂದು: ಕೆಳಗಣ ಮೇಗಣ ಪಲ್ಲಂ ಘಳಿಲನೆ ತಾಗಲ್ಕೆ ಕುಟ್ಟಿನಾಖ್ಯಂ ಮತ್ತಂ ನಳಿನಾಕ್ಷಿ ಪಲವು ಸೂಳಿಂದೆಳೆಯಳೆ ಸೋಂಕುತ್ತಮಗಲೆ ಖಾದನಮುಕ್ಕುಂ (ಲಾಸ್ಯರಂ. ೩-೪೯); ಖಾದನ: ಅಗಿಯುವಾಗ ಮಾಡುವಂತೆ ಅನೇಕಾವರ್ತಿ ಮೇಲು ಮತ್ತು ಕೆಳಗಿನ ಸಾಲುಗಳ ಹಲ್ಲುಗಳನ್ನು ಸೇರಿಸಿ ಬಿಡಿಸುವುದು. ಇದನ್ನು ಜಪ, ಅಧ್ಯಯನ, ಸಂಲಾಪ, ತಿನ್ನುವುದು ಇವುಗಳಲ್ಲಿ ವಿನಿಯೋಗಿಸಬೇಕು (ಲಾಸ್ಯರಂ. ೨೭೯ ಗದ್ಯಾನುವಾದ). [ಸಂ.]

**ಖಾದಿ**, ಕಾದಿ (ನಾ). ಕೈನೂಲಿನಿಂದ ಕೈಮಗ್ಗದಲ್ಲಿ ತಯಾರಿಸಿದ ಬಟ್ಟೆ; ಉರುಟು ಬಟ್ಟೆ; ಖದ್ದರ್: ವಿಂಗಡ ಬಾಬು ಕೆಂಪ ನುಲು ಖಾದಿ ಮಗ ಸಹಾ (ಮೈಆರಿ. ೧೯೩೯, ೪೨-೫೬; 1825); ಕಾವಿಯೋ ಖಾದಿಯೋ? ಅಂತವೋ ಆದಿಯೋ? (ಪಾಂಚಜ. ೪೨); ಮೋಢ ನೂತೇ ನೂಲುವದು ಬಿಳಿದಾರ ದಾರಾಕಾರದಿ . . . ಗದ್ದೆ ಹೊಲ ತೋಟಕ್ಕೆ ಹೊಚ್ಚಿದೆ ಕೆಂಪು ಖಾದಿಯ ಶಾಲನು (ನೆಲಮು. ೧೧). **ಕಾದಿ**: ಊಟಕ್ಕೆ ತೋಟದ ಸೊಪ್ಪೇ ಆಧಾರ; ಉಡುವುದಕ್ಕೆ ನೀನು ಕೊಟ್ಟ ಕಾದಿಯೇ (ಕಥಾಮಂ. IV, ೮೨). [← ಹಿಂ. ಮರಾ. ಖಾದೀ]

**ಖಾದಿತ** (ಗು). ತಿನ್ನಲ್ಪಟ್ಟ; ಭಕ್ಷಿಸಿದ. [ಸಂ.]

**ಖಾದಿರ** (ಗು). ೧. ಖದಿರಮರಕ್ಕೆ ಸಂಬಂಧಿಸಿದ; ಕಗ್ಗಲಿಮರದಿಂದ ಮಾಡಿದ. (ನಾ). ೨. ಕಗ್ಗಲಿಮರದಿಂದ ಮಾಡಿದುದು: ಪಾಲಾಶ ಮೇಳು ಖಾದಿರಮಾಬು ಬಲ್ವಮೈದು ದೃಷ್ಟಮಾದುನ್ನತ ಶ್ಲೇಷ್ಮಾತಕಂ ಮೂಜಿಧಿಷ್ಠಿತದ ಯೂಪಮಿಂತೇಕವಿಂಶತಿಗಳು (ಜೈಮಿಭಾ. ೩೩-೩೬). ೩. ಕಗ್ಗಲಿಮರದ ಗೋಂದು; ಕಾಚು. [ಸಂ.]

**ಖಾದ್ಯ** (ನಾ). ೧. ಅಗಿದು ತಿನ್ನಬೇಕಾದುದು; ಭಕ್ಷ್ಯ; ತಿಂಡಿ: "ಚತುರವಿಧ= ಖಾದ್ಯ, ಪೇಯ, ಚೋಷ್ಯ, ಲೇಹ್ಯವೆಂಬ ೪ ವಿಧಗಳು. ಖಾದ್ಯವೆಂದರೆ ಅಗಿದು ತಿನ್ನುವ ಭಕ್ಷ್ಯಾದಿಗಳು" (ಹಸಾರ. ೪-೧ ಟೀಕು); ಎಲ್ಲ ಬಗೆಯ ಖಾದ್ಯಪದಾರ್ಥಗಳನ್ನು ಅರಗಿಸಿ ಬಿಡುವೆನೆಂಬ ಸಾರ್ವಭೌಮಿಕ ಉದಾರತೆ ನಮ್ಮ ಜಠರಾಗ್ನಿಗೂ ಇಲ್ಲ (ನಿಬಂಧ. I, ೨೪); ನಿನಗೆ ಚಾಕಲೆಟ್ಟು ಇಷ್ಟವಾದ ಖಾದ್ಯ (ವಾಸನಾ. ೫೦). [ಸಂ.]

**ಖಾನ**$_1$ 'ಖಾಣ' ನೋ.

**ಖಾನ**$_2$ (ನಾ). ೧. ಸರದಾರ; ಅಮೀರ; ದೊರೆ: ತಾನಾಳ್ವ ದೇಶದ ಖಾನ ವಜೀರರಂ ಕರಸಿ (ಮೈಆರಿ. ೧೯೩೧, ೧-೧೬; 1310 ?); ಡಿಳ್ಳಿಯ ಖಾನರೆಂದೆಂಬ ಮೆದೆಗೆ ಬಲುಕೊ[ಪಾಠಾಂ. ಗೊ]ಳ್ಳಿಯೆಂದೆಂಬ ಬಿರುದನು (ಕುರಾಸಾಂ. ೧೧-೫೫); ಬಳಿಕಾಗ ಖಾನಖಾನರು ಫೌಜ ಬೇಜೆಬೇಜಳವಡಿಸಿಯೆ ನಡೆತರಲು (ಕಂಸವಿ. ೧೧-೨೯). ೨. ಮುಸಲ್ಮಾನರಲ್ಲಿ ವಿಶೇಷವಾಗಿ ಪಾರ್ಸಿ ಅಥವಾ ಪಠಾಣಿ ವಂಶಸ್ಥರಾದವರಿಗೆ ಸಲ್ಲುವ ಒಂದು ಗೌರವ ಸೂಚಕ ಪದ. ℙ ಹೆಸರಿನ ಮುಂದೆ ಜೋಡಿಸಲ್ಪಡುತ್ತದೆ: ದಿಲಾವರಖಾನ ವೊಡೆಯರ ಕಾರ್ಯಕೆ ಕರ್ತ್ತರಾದ ಶಿತಾಪ ಖಾನವಡೆಯರು (ಮೈಆರಿ. ೧೯೪೧, ೧೬-೯; 1556). [← ಹಿಂ. ಪಾರ. ಖಾನ್]

**ಖಾನಾಜಂಗಿ** (ನಾ). ಖಾಡಾಖಾಡಿ ಕಾಳಗ; ಬಿರುಸಿನ ಯುದ್ಧ: ಹಿಂದಿರುಗಿ ಹೋಗುತ್ತಾ ರಾಜೋಟಿ ಬಳಿ ಪುನಹಾ ಖಾನಾಜಂಗಿಯಾಗಿ (ಹೈದರ. ೩೨). [← ಪಾರ. ಮರಾ. ಖಾನಜಂಗೀ]

**ಖಾನಾವಳಿ** (ನಾ). (ಉಕ) ದುಡ್ಡು ತೆಗೆದುಕೊಂಡು ಊಟ ಹಾಕುವ ಸ್ಥಳ; ಹೋಟೆಲು: ಒಂದು ಕೋಣೆಯಲ್ಲಿದ್ದು ಖಾನಾವಳಿಯಲ್ಲಿ ಊಟಮಾಡುತ್ತಿದ್ದೆ (ನಿಷ್ಕಾಮು. ೩೧); ಈಗ ಶಿರ್ಸಿಯಲ್ಲಿ ಖಾನಾವಳಿ ಇಟ್ಟಿದ್ದಾಳಂತಲ್ಲ? (ಮೂರುದಾ. ೪೪); ಖಾನಾವಳಿಯೇನು ಹತ್ತಿರ ಇದೆಯೆ? (ಪ್ರೇಮುತ. ೨). [← ಮರಾ. ಖಾಣಾವಳ]

**ಖಾನಿ** 'ಖಾನೆ' ನೋ.

**ಖಾನಿಗೆ** (ಗು). ೧. ಮನೆಗೆ ಸಂಬಂಧಿಸಿದ; ಮನೆತನಕ್ಕೆ ಸಂಬಂಧಪಟ್ಟ; ಖಾಸಗಿಯಾದ: (ಕ). (ನಾ). ೨. ಖಾಸಗಿ ಕಚೇರಿ; ಸ್ವಂತ ಕಾರ್ಯಾಲಯ: ರಾಜನ ಖಾನಿಗೆಯಲ್ಲಿ ನೌಕರಿಯಾಯಿತು (ಕಥವಿ. II, ೧೯೫). [← ಪಾರ. ಮರಾ. ಖಾನಗೀ]

**ಖಾನೆ**, ಕಾನೆ, ಖಾನಿ (ನಾ). ೧. ಮನೆ; ನಿವಾಸ; ವಾಸಸ್ಥಳ: ಆ ಕತ್ತಲಾದ ಖಾನೇಲಿ ಗೂಬೆ ಹಾಗೆ ಒಬ್ಬನೇ ಇರೋದರ ಬದಲು, ಇನ್ನೊಬ್ಬ ಮನುಷ್ಯನ ಸಾಮೀಪ್ಯವನ್ನು ಹೊಂದಿರಬಹುದಲ್ಲಾ ಅಂತ (ವೀರಯೋ. ೧೮). 'ಕಾರ್ಖಾನೆ', 'ದವಾಖಾನೆ' ಪರಾ. ೨. ಪೆಟ್ಟಿಗೆ, ಮೇಜು, ಕಪಾಟು ಮೊದಲಾದುವುಗಳಲ್ಲಿ ಮಾಡಿದ ಚಿಕ್ಕಚಿಕ್ಕ ವಿಭಾಗ; ಸೆಳೆ: ತಮ್ಮ ಕೋಟಿನ ಜೇಬುಗಳನ್ನು, ಮೇಜಿನ ಖಾನೆಗಳನ್ನು ಮತ್ತೆ ಮತ್ತೆ ಹುಡುಕಿ ನೋಡಿಕೊಂಡರು (ಪ್ರತಿಬಿಂ. ೩೬). **ಕಾನೆ**: ೩. ಇಟ್ಟಿಗೆ ಮೊದಲಾದುವುಗಳನ್ನು ಮಾಡುವ ಅಚ್ಚು: ಆ ಕಾನೆಗಳಲ್ಲಿ ಹದಮಾಡಿದ ಅರಲು ತುಂಬಿ ಸಿದ್ಧನ ತಂದೆಯು ಇಟ್ಟಿಗೆಗಳನ್ನು ಮಾಡುತ್ತಿದ್ದನು (ಕಪಪು. ೪-೧೩). **ಖಾನಿ**: ೨. ಪೆಟ್ಟಿಗೆಯೊಳಗೆ ಮೇಲಣ ಸಾಲಿನಲ್ಲಿ ಖಾನಿಗಳಿದ್ದವು (ಬೆನ್ನಬೇ. ೨೪); ಅದು ಒಂದು ಕೊಠಡಿ; ಅದಕ್ಕೆ ಕಿಟಕಿ ಇಲ್ಲ; ಪೆಟ್ಟಿಗೆಯ ಖಾನಿಯಂತಿತ್ತು (ಬಂಕಿಮು. ೪೨). [← ಪಾರ. ಖಾಹ್‌ನ; ಹಿಂ. ಮರಾ. ಖಾನಾ]

**ಖಾನೆಸುಮಾರಿ** 'ಖಾನೇಸುಮಾರಿ' ನೋ.

**ಖಾನೇಶುಮಾರಿ**, ಖಾನೆಸುಮಾರಿ, ಖಾನೇಷುಮಾರಿ, ಖಾನೇಸುಮಾರಿ (ನಾ). ಊರೂರುಗಳಲ್ಲಿ ಮನೆ, ಜನ, ದನಕರು ಮೊದಲಾದವುಗಳನ್ನು ಕ್ರಮವಾಗಿ ಎಣಿಕೆಮಾಡುವಿಕೆ; ಜನಗಣತಿ: ೧೯೧೦ರ ಖಾನೇಶುಮಾರಿಯಲ್ಲಿ . . . ಕೆಲಸಮಾಡಿದವರಿಗೆಲ್ಲಾ ಸಾಮಾನ್ಯವಾಗಿ ಕೊಡೋಣಾಗುವ ಸರ್ಟಫಿಕೇಟು (ಪಂಜೆನೆ. ೯೦). **ಖಾನೆಸುಮಾರಿ:** ನೆಲದ ಮಕ್ಕಳ ಖಾನೆಸುಮಾರಿ ಮಾಡಿ (ಗಾಳಿಪ.೧೦೪). **ಖಾನೇಷುಮಾರಿ:** ತಾಲ್ಲೋಕಾಫೀಸಿನಲ್ಲಿರುವ ಖಾನೇಷುಮಾರಿ ಲೆಕ್ಕದ ಪ್ರಕಾರ ಮಾಡಿದ್ದು (ಮರಳಿ. ೧೧೮); ಮಾನವ ಸ್ವಭಾವದ ವೃತ್ತಿ ಪ್ರವೃತ್ತಿಗಳ ಖಾನೇಷುಮಾರಿ ಯಾರಿಗೆ ಸಾಧ್ಯ? (ಜೀವಸಾ. ೩೧). **ಖಾನೇಸುಮಾರಿ:** ಕಳೆದ ಖಾನೇಸುಮಾರಿಯಲ್ಲಿ ಅದರ ಜನಸಂಖ್ಯೆ ಸುಮಾರು ಹದಿನೈದು ಸಾವಿರವಿತ್ತೆನ್ನಬಹುದು (ಸಮಜೀ. ೧); ಬರುವ ಡಿಶಂಬರ ತಿಂಗಳಲ್ಲಿ ಖಾನೇಸುಮಾರಿಯಾಗುವದಿದೆ (ಪಾಶ್ಚಾವಿ. ೪೪೩).
[← ಪಾರ. ಹಿಂ. ಖಾನಾಶುಮಾರೀ ; ಮರಾ. ಖಾನೇಸುಮಾರೀ]

**ಖಾನೇಷುಮಾರಿ** 'ಖಾನೇಶುಮಾರಿ' ನೋ.

**ಖಾನೇಸುಮಾರಿ** 'ಖಾನೇಶುಮಾರಿ' ನೋ.

**ಖಾಯಂ** 'ಕಾಯಂ' ನೋ.

**ಖಾಯಂಗುತ್ತಾ** 'ಕಾಯಂಗುತ್ತ' ನೋ.

**ಖಾಯಂಗುತ್ತಾದಾರ** (ನಾ). ಭೂಮಿಯನ್ನಾಗಲಿ, ಗ್ರಾಮವನ್ನಾಗಲಿ ಕಾಯಂಗುತ್ತೆ ಪಡೆದುಕೊಂಡಿರುವವನು; ಕಾಯಂಗುತ್ತಿಗೆದಾರ: (ರೈಸ್‌ಗ. ೫೫೩).
[ಖಾಯಂಗುತ್ತಾ (< ಕಾಯಂಗುತ್ತ) + -ದಾರ$_4$]

**ಖಾಯಂಗುತ್ತಿಗೆ** (ನಾ). = ಕಾಯಂಗುತ್ತ: (ರೈಸ್‌ಗ. ೫೫೩).
[ಖಾಯಂ (< ಕಾಯಂ) + ಗುತ್ತಿಗೆ]

**ಖಾಯದತ್ತ** (ನಾ). ಶಾಶ್ವತ ಕೊಡಿಗೆ (?): ಸಂಗಮೇಶ್ವರ ದೇವಸ್ಥಾನದ ಅಧಿಕಾರಿಯಾಗಿದ್ದು ಖಾಯದತ್ತವಾಗಿ ಕರಪನಹಳ್ಳಿ ಎಂಬ ಗ್ರಾಮವನ್ನು ಸ್ವೀಕರಿಸಿದ ಸ್ಥಾನಿಕ ಕಣ್ಣಪ್ಪ (ತುಳುನಾ. ೧೨೪).
[< ಖಾಯಂ + ದತ್ತ ?]

**ಖಾಯಮು** 'ಕಾಯಂ' ನೋ.

**ಖಾಯಮ್ಮು** 'ಕಾಯಂ' ನೋ

**ಖಾಯಿಲೆ** 'ಕಾಯಿಲೆ' ನೋ.

**ಖಾಯಿಲೆಕಸಾಲೆ** 'ಕಾಯಿಲೆಕಸಾಲೆ' ನೋ.

**ಖಾಯಿಷ್**, ಖಾಯಿಸು (ನಾ). ಬಯಕೆ; ಇಚ್ಛೆ; ಅಭಿಲಾಷೆ; ಅಪೇಕ್ಷೆ: ಖಾಯಿಷ್ ಪಡತಕ್ಕವರು ನಮ್ಮ ಬಳಿಗೆ ಬಂದಲ್ಲಿ ಅವರ ಕೆಲಸ ನಿರ್ವಹಿಸಲ್ಪಟ್ಟೀತು (ಪಾಶ್ಚಾವಿ. ೪೪೧). **ಖಾಯಿಸು:** ಈ ರೀತಿಯ ಸೀರೆ ಉಳಿದವರಿಗೆ ಖಾಯಿಸಾಗಲಾರದು (ಜಾರುಬಾ. ೬೧).
[← ಹಿಂ. ಖಾಹಿಷ್; ಪಾರ. ಖ್ವಾಹಿಶ್; ಮರಾ. ಖಾಈಶ್, ಖಾಹೀಶ್]

**ಖಾಯಿಸು** 'ಖಾಯಿಷ್' ನೋ.

**ಖಾರ$_1$** 'ಕಾರ$_2$' ನೋ.

**ಖಾರ$_2$** (ನಾ). (ಗುಜರಾತದಲ್ಲಿ ತಯಾರಾಗುವ) ಒಂದು ಬಗೆಯ ಕೆಂಬಣ್ಣದ ಉರುಟು ಬಟ್ಟೆ. 'ಖಾರಬಟ್ಟೆ' ಪರಾ.
[← ಪಾರ. ಹಿಂ. ಖಾರಾ ; ಮರಾ. ಖಾರವಾ]

**ಖಾರಗೆಣಸು** 'ಕಾರಗೆಣಸು' ನೋ.

**ಖಾರದಹುಲ್ಲು** (ನಾ). ಒಂದು ಬಗೆಯ ಹುಲ್ಲು: ಕಾಸಿಹುಲ್ಲು, ಕಾಮಾಂಚಹುಲ್ಲು, ಅಂಚಿಹುಲ್ಲು, ಖಾರದಹುಲ್ಲು (ಮೈಔಗ. ೨೭-೫೧೨).
[ಖಾರ$_8$ + ಹುಲ್ಲು (< ಪುಲ್)]

**ಖಾರದಾಣಿ** 'ಕಾರದಾಣಿ' ನೋ.

**ಖಾರಬಟ್ಟೆ** (ನಾ). = ಖಾರ$_2$: ಅವನ ಆ ಕೃಶವಾದ ಶರೀರಕ್ಕೆ ಖಾರಬಟ್ಟೆಗಳ ಆವರಣ ಬೇರೆ (ಹಾಡುಹು. ೮). [ಖಾರ$_2$ + ಬಟ್ಟೆ]

**ಖಾರಬೇಳೆ** (ನಾ). (ಉಕ). ಒಂದು ವ್ಯಂಜನ ಪದಾರ್ಥ; ಉಪ್ಪು ಕಾರ ಸಹಿತವಾದ, ಬೆಂದ ತೊಗರಿಬೇಳೆ: ಇಂದಿನ ಊಟದಲ್ಲಿ ಸಾರಿನೊಂದಿಗೆ ಖಾರಬೇಳೆ ಇದ್ದಿತು (ರೂಢಿ).
[ಖಾರ$_1$ (< ಕಾರ$_2$) + ಬೇಳೆ]

**ಖಾರವಿ** (ನಾ). (ಉಕ). = ಖಾರ$_2$: ಸಮರ್ಥ ರಾಮದಾಸರು ಖಾರವಿ ಬಟ್ಟೆಹಾಕಿಕೊಳ್ಳುತ್ತಿದ್ದರು (ರೂಢಿ).
[← ಮರಾ. ಖಾರವೀ]

**ಖಾರವುರ** (ನಾ). ಒಂದು ಊರಿನ ಹೆಸರು: ಕಡೆಕೊಳಂ ಖಾರವುರಂ ಪಯ್ದುಗೆಯ ಮುಕ್ಕೂಡಲ್ (ಮೈಆರಿ. ೧೯೩೪, ೩೮-೬ ; 11ನೆಯ ಶತ).
[?]

**ಖಾರಿ$_1$** 'ಕಾರಿ$_2$' ನೋ.

**ಖಾರಿ$_2$** (ನಾ). ಹದಿನಾರು ದ್ರೋಣ (ಅಥವಾ ಕೊಳಗ)ಗಳ ಒಂದು ಅಳತೆ; ಒಂದು ಖಂಡುಗ: "ಖಾರೀ – ೧ ಖಂಡುಗದ ಹೆಸರು" (ಸಿದ್ಧಾಂಶಿ. ೨೫೯). [ಸಂ. ಖಾರೀ]

**ಖಾರಿಗೆ** 'ಕಾರಿಗೆ' ನೋ.

**ಖಾರೀಕ** 'ಕಾರಿಕ$_2$' ನೋ.

**ಖಾರೀವಾಪ** (ನಾ). ಒಂದು ಖಾರಿಯಷ್ಟು ಬೀಜ ಬಿತ್ತಿದ ಭೂಮಿ; ಒಂದು ಖಂಡುಗ ಬೀಜವರಿ ಭೂಮಿ . [ಸಂ.]

**ಖಾರ್ವ** (ನಾ). "ಕುದುರೆ ವ್ಯಾಪಾರಿ (?)" (ನನ್ನೂರು. ಕೋಶ): ಗೌಡರು . . . ಕುದುರೆ ಖಾರ್ವನಿಗೆ ಒಂದು ಕುದುರೆ ಇನಾಂ ಕೊಟ್ಟಿದ್ದರು (ನನ್ನೂರು. ೩೦೨). [?]

**ಖಾಲಸಾ**, ಖಾಲಸಾತ, ಖಾಲಸಾತಿ, ಖಾಲಸಾತು, ಖಾಲಿಸಾತ (ನಾ). ೧. ಸ್ವಾಧೀನಪಡಿಸಿಕೊಳ್ಳುವಿಕೆ; ಸಂಸ್ಥಾನಿಕರಿಂದ ರಾಜ್ಯದ ಅಧಿಕಾರವನ್ನು ಕಿತ್ತುಕೊಳ್ಳುವಿಕೆ: ಚಿಂಚಲಿಯ ಸಂಸ್ಥಾನಿಕನು ಸಂತತಿಯಿಲ್ಲದೆ ಸತ್ತದ್ದರಿಂದ ಅನವಾಲದ ಪರಗಣೆಯು ಖಾಲಸಾ ಆಯಿತು (ಕಭಾಗ. ೩೬೩); ಸಾತಾರೆಯ ರಾಜ್ಯವು ಖಾಲಸಾ ಆದ ಕಾಲದಲ್ಲಿ ವಿಜಾಪುರವು ಇಂಗ್ಲಿಷರ ಕಡೆಗೆ ಬಂದಿತು (ವಿವರ್ಣ. ೧೧); ಅವರ ಅಧಿಕಾರಕ್ಕೊಳಪಟ್ಟ ಎಂಬತ್ತೆಂಟು ಹಳ್ಳಿಗಳನ್ನು ಖಾಲಸಾಮಾಡಿ ಇದೊಂದೇ ಗ್ರಾಮವನ್ನು . . . ಉಳಿಸಿದರು (ಗ್ರಾಮಾಯ. ೩). **ಖಾಲಸಾತ:** ಕೆಲವು ರಾಜ್ಯಗಳನ್ನು ಖಾಲಸಾತ ಮಾಡಿದನು (ಹಿಂದುಇ. ೩೦೧). **೨.** ಸರಕಾರವೇ ವಹಿವಾಟು ಮಾಡುತ್ತಿರುವ ಭೂಮಿ ಅಥವಾ ಗ್ರಾಮ: ಖಾಲಸಾತ . . . ಜೋಡಿ ಖಾಲಸಾತ ಭೂಮಿ (ಬೊಂಕಶಾ. ೧೯೩೪, ರಾಣಿಬೆ. ೮೨-೬ ; ?). **ಖಾಲಸಾತಿ:** ೧. ಸನ್ ೧೯೩೯ರಲ್ಲಿ . . . ಅಥಣಿಯು ಖಾಲಸಾತಿಗೆ ಬಂತು (ಬೆಳವ. ೬೨). **ಖಾಲಸಾತು:** ೧. ಆಯರ್ಲಂಡದಲ್ಲಿ ವಸಾಹತು ಮಾಡಿದಂಥ ಇಂಗ್ಲಿಷ ಜನರ ಭೂಮಿಗಳನ್ನೆಲ್ಲ ಖಾಲಸಾತು ಮಾಡಿರುತ್ತದೆಂದು ಪ್ರಸಿದ್ಧ ಮಾಡಿದರು (ಇಂಗ್ಲಂಡ. ೧೮೩). **ಖಾಲಿಸಾತ:** ನಿಮ್ಮ ವತನವನ್ನು ಖಾಲಿಸಾತ ಮಾಡಿಸಿ ಬಿಡುತ್ತೇನೆಂಬುದನ್ನು ಲಕ್ಷ್ಯವಿಡಿ (ಹಬ್ಬಿಬ. ೨೧೭).
[← ಪಾರ. ಮರಾ. ಖಾಲಸಾ, ಖಾಲಿಸಾ ; ಹಿಂ. ಖಾಲಸಾ]

**ಖಾಲಸಾತ** 'ಖಾಲಸಾ' ನೋ.

**ಖಾಲಸಾತಿ** 'ಖಾಲಸಾ' ನೋ.

**ಖಾಲಸಾತು** 'ಖಾಲಸಾ' ನೋ.

**ಖಾಲಿ** (ನಾ). ೧. ಬರಿದಾದುದು; ತೆರವಾದುದು: ಹೇರಳ ರಸ್ತು ಮುಸ್ತೈದೆ ಇರುವಂಥಾದ್ದು ಖಾಲಿ ಆದೀತು (ರಾಜೇಂದ್ರ. ೬೮); ಎದುರಿನ ಮನೆಯ ಕಿಟಕಿ ಖಾಲಿಯಾಗಿತ್ತು (ಭ್ರಮಾನ. ೧); ಖಾಲಿಯ ಹೊಟ್ಟೆಯೊಳುರಿಯಿದ್ದ ವೇಳೆಗೆ ಹೊಗೆ ಮುತ್ತಿಕೊಳುವುದು ತಲೆಗೆ (ಇಂಚಾಪ. ೨೨೧-೯೧); ಇನ್ನೂರು ಚೀಲಗಳು ಹಿಡಿಯುವಷ್ಟು ಸ್ಥಳ ಖಾಲಿ ಉಳಿಯುತ್ತದೆ (ಮುಂಬಯ್ವಾ. ೪). (ಗು). ೨. ಕೆಲಸಕ್ಕೆ ಬಾರದ; ನಿರರ್ಥಕವಾದ; ಹುರುಳಿಲ್ಲದ: ನಮ್ಮ ಹತ್ತಿರ ಖಾಲಿ ರೋಪ್ ಹಾಕೋಹಾಗಲ್ಲ (ರಾಗಿಣಿ. ೩೬).

**ಖಾಲಿಮಾಡು** = ಬರಿದುಮಾಡು; ತೆರವುಮಾಡು: ಹೇರಿಕೊಂಡು ಹೋದ ಸಾಮಾನುಗಳನ್ನು ಮೆಕ್ಕಾದಲ್ಲಿ ಖಾಲಿಮಾಡಿ . . . ಹಿಂದಿರುಗುತ್ತಿತ್ತು (ಪ್ರವಾಇ. II, ೨೨೯); ನೀವು ಈಗಲೆ ಮನೆ ಖಾಲಿಮಾಡಬೇಕು (ಕೊನೆಭೇ. ೧೯೬); ಜನ ಊರನ್ನು ಖಾಲಿಮಾಡಿ ಹೊರಗಡೆ ಗುಡಿಸಿಲುಗಳನ್ನು ಹಾಕಿಕೊಂಡಿದ್ದರು (ರಂಗಕ. ೧೨೯). **ಖಾಲಿಯಾಗು** = ೧. ಬರಿದಾಗು: ಅದು ಪೂರ್ಣ ಖರ್ಚಾಗಿ ಪಾತ್ರೆ ಖಾಲಿಯಾಗುವ ಮೊದಲೇ ಬೇರೆ ಕೊಂಡುಕೊಳ್ಳುವುದು ಒಳ್ಳೆಯದು (ಅಡುಸಾ. ೫೨). ೨. ಸಾಯು; ತೀರಿಕೊಳ್ಳು: ನಾಲ್ಕಾರು ಆಳು ಖಾಲಿಯಾಗುತ್ತಾರೆ (ಬೆಸ್ತ್ರಕ. ೬).

[← ಅರ. ಪಾರ. ಹಿಂ. ಮರಾ. ಖಾಲೀ]

**ಖಾಲಿಸಾತ** 'ಖಾಲಸಾ' ನೋ.

**ಖಾವಂದ**, **ಕಾವಂದ**, **ಖಾವಿಂದ್**, **ಖಾವಿಂದ** (ನಾ). ಒಡೆಯ; ಸ್ವಾಮಿ; ಪ್ರಭು; ಯಜಮಾನ: ಖಾವಂದರೊರೆದುದ ಸೇವಕರೆಸಗುವ ಭಾವವು ಜಗದಿ ಸ್ವಾಭಾವಿಕವಾಗಿದೆ (ರಾವಣೋ. ೨೩); ಅಪ್ಪಣೆ ಕೇಳಿಕೊಂಡು ನಮ್ಮ ಖಾವಂದರ ಬಳಿಗೆ ಹೋದೆವು (ರಾಜೇಂದ್ರ. ೩೪); ಖಾವಂದರವರು . . . ಚಿಕ್ಕಯ್ಯನಿಗೆ ನಿರೂಪವನ್ನು ಅಪ್ಪಣೆಕೊಡಿಸಿದರು (ಮಹಾವಂ. II, ೪); ಸನ್ನಿಧಾನದಲ್ಲಿ ಹೇಳಲು ಭಯವಾಗುತ್ತದೆ . . . ಖಾವಂದರು ಕ್ಷಮಿಸಬೇಕು (ಶ್ರೀರಾಯ. ೨೪೪); ಖಾವಂದರವರು . . . ಉಪಕಾರ ಮಾಡಬೇಕಾಗಿ ನಮ್ರ ವಿನಂತಿ (ಜನಜೀ. ೫೬). **ಕಾವಂದ**: ಅವರಿಬರು ಬೂಮಿಗೆ ಕಾವಂದರಾದವರ ಕರಸಿ (ಎಕ. XI, ಮೊಳಕಾ. ೨೫-೯೦; 1665). **ಖಾವಿಂದ್**: ನಾನು ಅಂಥ ಬೇಕೂಫನೇ ಖಾವಿಂದ್? (ಕೆಲನೆ. ೨೧೧). **ಖಾವಿಂದ**: ಖಾವಿಂದ! ನಿಮ್ಮ ಅಜ್ಞೆಯೆಂದರೆ . . . ದೇವಾಜ್ಞೆಗಿಂತಲೂ ಅಧಿಕವಾದದ್ದು (ಸ್ಕೂಲಮಿ. ೨೦).

[← ಪಾರ. ಹಿಂ. ಖಾವಂದ್; ಮರಾ. ಖಾವಂದ, ಖಾವಿಂದ]

**ಖಾವಿಂದ್** 'ಖಾವಂದ' ನೋ.

**ಖಾವಿಂದ** 'ಖಾವಂದ' ನೋ.

**ಖಾವು** (ನಾ). ಸಿಹಿಯಾದ ತಿಂಡಿ; ಮಿಠಾಯಿ: ಇಲ್ಲಿ ಬಾಪ್ಪಾ! ನಿನಗ ಖಾವು ಕೊಡುತೇನಿ (ಸಮಜೀ. ೬೨೮). [← ಮರಾ. ಖಾಊ]

**ಖಾವುಳ** (ನಾ). [ಸಂಗೀತ] ನಾಲ್ಕು ಧ್ವನಿಭೇದಗಳಲ್ಲಿ ಒಂದು; ಗೀತಧ್ವನಿ: ತಾಳಂ ಮೇಳಂ ಮೇಳವಮಾಗೆ ಖಾವುಳ ಬೊಂಬಳ ನಾರಾಟ ಮಿಶ್ರಮೆಂಬ ನಾಲ್ಕುಂ ಧ್ವನಿಯ ಭೇದಮನಱಿದು (ಶಾಂತೀಶ್ವ. ೧೬-೬೬ ವ); ಇಪ್ಪತ್ತೆರಡು ಶ್ರುತಿಗಳು ನೆಗಳುತಿರೆ ನಾರಾಟ ಖಾ[ಪಾಠಾಂ. ಕಾ]ವುಳವೆಂಬ ದನಿಗೂಡಿ (ಬಸವು. ೧೯-೧೦). 'ಕಾವಳ$_2$' ಪರಾ. [ಸಂ. ಕಾಹಲ]

**ಖಾಸ್** 'ಖಾಸಾ' ನೋ.

**ಖಾಸ್‌ಕಛೇರಿ** (ನಾ). ಹುಜೂರು ಕಚೇರಿ; ಮುಖ್ಯ ಕಾರ್ಯಾಲಯ: ದೇವನೂರು ಗ್ರಾಮದ ದೇವರಾಜೈಯ್ಯನಿಗೆ ಖಾಸ್ ಕಛೇರಿಯಿಂದ ದೇವನೂರು ಗ್ರಾಮದ ಕಂದಾಯದ ವಿಚಾರ ತೀರ್ಮಾನವಾಗ ಬೇಕಾದ್ದರಿಂದ . . . ಖಾಸ್‌ಕಛೇರಿ ಮುಂದೆಹಾಜರಾಗಬೇಕು (ಜಿಂಗಾಳ್ಳ. ೩೦೬). [ಖಾಸ್ (< ಖಾಸಾ) + ಕಛೇರಿ]

**ಖಾಸ್‌ತಬೇಲಿ** 'ಖಾಸಾತಬೇಲಿ' ನೋ.

**ಖಾಸ$_1$** (ನಾ). ಕೆಮ್ಮು; ಕೆಮ್ಮಲು: ಚಿತ್ರಕ . . . ತ್ರಿಫಲೆಯಿಂತಿವ ನೆಲ್ಲವನರೆದೇಕತ್ರಯುಮಂ ಕುಡೆ ಹಯ ಖಾಸತ್ರಯಮಂ ಕಿಡಿಸುಗೆಂದ ನಭಿನವಚಂದ್ರಂ (ಅಶ್ವಶಾ. ೭-೩೯). [< ಸಂ. ಕಾಸ]

**ಖಾಸ$_2$** 'ಖಾಸಾ' ನೋ.

**ಖಾಸಕುದುರೆ** (ನಾ). ರಾಜನ ಕುದುರೆ; ಅರಸನ ಸ್ವಂತ ಕುದುರೆ: ಪಶ್ಚಿಮ ಭಾಗ ಖಾಸ ಕುದುರೆಲಾಯಕ್ಕೆ ಬಲದ ಪಾರ್ಶ್ವದಲ್ಲಿ (ಎಕ. III, ಮೈಸೂರು. ೧-೬; 1822); ಚಿಗಿದು ಕುಣಿಯುವ ಖಾಸ ಕುದುರೆಗಳು ಸಿಂಗರಿಸಿ ಪಂಙ್ತಿಗೊಂಡಿರಲಿ ಮುಂದೆ (ಕೃಷ್ಣವಿ. ೩-೧೧).

[ಖಾಸ$_2$ (< ಖಾಸಾ) + ಕುದುರೆ]

**ಖಾಸಗತ**, **ಖಾಸಗತಿ** (ಗು). ಸ್ವಂತದ; ಖಾಸಗಿಯಾದ: ನಮ್ಮದ ಖಾಸಗತ ಜಮೀನ ಅಗಿದ್ದರೆ ಹೊಂದತಿದ್ದಿವಿ (ಗ್ರಾಮಾಯ. ೪೯೮). **ಖಾಸಗತಿ**: "ಖಾಸ = ಖಾಸಗತಿ" (ಜಾನಕೋ. ೪೩).

[← ಮರಾ. ಖಾಸಗತ]

**ಖಾಸಗತಿ** 'ಖಾಸಗತ' ನೋ.

**ಖಾಸಗಿ**, **ಕಾಸಗಿ$_1$** (ಗು). ೧. ಸ್ವಂತದ; ಸ್ವಕೀಯವಾದ; ವೈಯಕ್ತಿಕವಾದ: ಮಾಲತಿ . . . ಸದಾಶಿವಂರವರ ಖಾಸಗೀ ಕೋಣೆಯೊಳಗೆ ಹೊಕ್ಕಳು (ಪತಿ. ೫೬); ಭಾವನ ಖಾಸಗೀ ಜೀವನದ ಕುರಿತಾದ ಟೀಕೆ . . . ಅವರ ಮಗನ ಇದಿರಿಗೆ ಬರಬಾರದು (ವಾತ್ಸಲ್ಯ. ೧೫೦). ೨. ಸರಕಾರದ ಅಧಿಕಾರಕ್ಕೆ ಸೇರದ; ವೈಯಕ್ತಿಕವಾದ ಒಡೆತನವನ್ನುಳ್ಳ: ಖಾಸಗೀ ಬಸ್ಸುಗಳೇ ಓಡಾಡುತ್ತಿದ್ದವು (ನಾಪೋಲೀ. ೧೦೨); ಕೌಲ್ವರನ ವಿದ್ಯಾಭ್ಯಾಸವೆಲ್ಲ ಹೆಚ್ಚಾಗಿ ಖಾಸಗೀ ಶಾಲೆಗಳಲ್ಲೇ ಮುಗಿಯಿತು (ಸಸ್ಯಕ. ೩೪). **ಕಾಸಗಿ$_1$**: (ಕಿ).

**ಖಾಸಗಿಯಾಗಿ** = ವೈಯಕ್ತಿಕವಾಗಿ; ಸ್ವಂತ ಹೊಣೆಗಾರಿಕೆಯಿಂದ: ಇತರ ವಿಧದಲ್ಲಿ ಖಾಸಗಿಯಾಗಿ ಪರಭಾರೆ ಮಾಡುವುದು (ಗ್ರಾಮಾಕ. ೩೬). **ಖಾಸಗಿಶಿಕ್ಷಣ** = ಮನೆಗಳಲ್ಲಿ ಮಕ್ಕಳಿಗೆ ಪ್ರತ್ಯೇಕವಾಗಿ ಹೇಳಿಕೊಡುವ ಪಾಠ: ಒಬ್ಬೊಬ್ಬರನ್ನೇ ರಹಸ್ಯವಾಗಿ ಕರೆದು ತಮ್ಮ ಮನೆಗೆ ಖಾಸಗಿ ಶಿಕ್ಷಣ ಪಡೆಯಲು ಬಂದು ಉದ್ಧಾರವಾಗಬೇಕೆಂದು ಹೇಳುತ್ತಿದ್ದರು (ರಂಗರೋ. ೫೧). **ಖಾಸಗಿ ಶಿಕ್ಷಣ ಸಂಸ್ಥೆ** = ಸರಕಾರಕ್ಕೆ ಸೇರದ ಶಿಕ್ಷಣ ಸಂಸ್ಥೆ: ಈಗೀಗ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಹೆಚ್ಚು ಮನ್ನಣೆ ದೊರಕಿದೆ (ರೂಢಿ).

[← ಅರ. ಹಿಂ. ಮರಾ. ಖಾಸಗೀ]

**ಖಾಸಗಿಕ್ಷೇತ್ರ** (ನಾ). ಸರಕಾರದ್ದಲ್ಲದ ಕ್ಷೇತ್ರ; ವೈಯಕ್ತಿಕ ಒಡೆತನವನ್ನುಳ್ಳ ಕ್ಷೇತ್ರ: (private Sector. ಪತ್ರಿಸಿ). [ಖಾಸಗಿ + ಕ್ಷೇತ್ರ]

**ಖಾಸಗಿಖಜಾನೆದಾರ** (ನಾ). ಅರಸನ ಸ್ವಂತ ಭಂಡಾರದ ಅಧಿಕಾರಿ: ನವಾಬನ ಖಾಸಗೀ ಖಜಾನೆದಾರ ಪದವಿಯೇ ರಾಯರಿಗೆ ಪ್ರಾಪ್ತವಾಯಿತು (ಕಛವಿ. II, ೯೧). [ಖಾಸಗಿ + ಖಜಾನೆದಾರ]

**ಖಾಸಗಿಪತ್ರ** (ನಾ). ವೈಯಕ್ತಿಕವಾದ ಕಾಗದಪತ್ರ; ಸರಕಾರಿ ಅಥವಾ ಸಾರ್ವಜನಿಕವಲ್ಲದ ಕಾಗದಪತ್ರ: (Private document. ಪಾರಿಸಿ). [ಖಾಸಗಿ + ಪತ್ರ]

**ಖಾಸಗಿಭಂಡಾರ** (ನಾ). ಸ್ವಂತದ ಖಜಾನೆ; ವೈಯಕ್ತಿಕವಾದ ಬೊಕ್ಕಸ: ಮಹಾರಾಜರು ತಮ್ಮ ಖಾಸಗೀಭಂಡಾರದಲ್ಲಿನ ರತ್ನ ದೊಡವೆಗಳನ್ನು ಮಾರಿಬಿಡಲು ನಿರ್ಧರಿಸಿರುವುದು ಅತ್ಯಂತ ಸ್ತುತ್ಯವಾದುದು (ರತ್ನಗೋ. ೬). [ಖಾಸಗಿ + ಭಂಡಾರ]

**ಖಾಸಗಿಲೆಕ್ಕ** (ನಾ). ವೈಯಕ್ತಿಕವಾದ ಲೆಕ್ಕ; ಸ್ವಂತ ಲೆಕ್ಕ: ಒಬ್ಬ ದೇಶಸ್ಥ ಬ್ರಾಹ್ಮಣನನ್ನು ಇರಿಸಿಕೊಂಡರೆ ಕಾಗದಪತ್ರಗಳಿಗೂ ಖಾಸಗಿಲೆಕ್ಕಕ್ಕೂ ಅವನು ಸಾಕು (ಮುಸುಗ. ೩೫). [ಖಾಸಗಿ + ಲೆಕ್ಕ]

**ಖಾಸಟೆ** 'ಕಾಸಟೆ' ನೋ.

**ಖಾಸತಬೇಲಿ** 'ಖಾಸಾತಬೇಲಿ' ನೋ.

**ಖಾಸತೈನಾತಿ** (ನಾ). ಸ್ವಂತದ ಸೇವೆ, —ಚಾಕರಿ: ಇವಳನ್ನು ಬಾದಶಹ ಬೇಗಮಳು ತನ್ನ ಖಾಸತೈನಾತಿಗೆಂದು ಕರೆಸಿಕೊಂಡಳು (ಹಂಸಾ. ೧೩೨). [ಖಾಸ್$_2$ (< ಖಾಸಾ) + ತೈನಾತಿ]

**ಖಾಸಪಾಗೆ** 'ಖಾಸಾಪಾಗ' ನೋ.

**ಖಾಸಬಂಗ್ಲೆ** (ನಾ). (ಅರಸನ) ಸ್ವಂತ ಬಂಗಲೆ; ಖಾಸಗಿ ಉಪಯೋಗಕ್ಕಾಗಿ ಇರುವ ಮಹಲು. ℙ ಮೈಸೂರಿನಲ್ಲಿರುವ ಮೃಗಾಲಯಕ್ಕೆ ಈ ಹೆಸರು ಇದೆ: ಧಾಯಂ ವಾಸಿಪ ಮಂದಿರಕ್ಕೆ ... ಆಯುಕ್ಕೆರ್ೀಂ ಗಡ ಖಾಸಬಂಗ್ಲೆಯೆನುವೋಲ್ ತೋಕ್ಕುರ್ಂ ಜಗನ್ಮೋಹನಂ (ಮೈಸೂಮ. ೩-೬೩). [ಖಾಸ್$_2$ + ಬಂಗ್ಲೆ (< ಬಂಗಲೆ)]

**ಖಾಸಬೊಕ್ಕಸ** 'ಖಾಸಾಬೊಕ್ಕಸ' ನೋ.

**ಖಾಸಮೊಹರು** 'ಖಾಸಾಮೊಹರು' ನೋ.

**ಖಾಸರೋಗ** (ನಾ). ಕೆಮ್ಮಲು ರೋಗ; ಗೂರಲು: ಅಜೀರ್ಣಜ್ವರ, ಖಾಸರೋಗ ಮುಂತಾದ ರೋಗಗಳಿಂದ ಕೂಡಿದವರು ದಂತಧಾವನಕ್ಕೆ ಅನರ್ಹರೆಂದರಿವುದು (ಸಕವೈ. ೨೯). [ಖಾಸ$_1$ + ರೋಗ]

**ಖಾಸವ್ಯಾಧಿ** (ನಾ). = ಖಾಸರೋಗ: ದೋಷ ದುರ್ಗುಣವೆಂಬ ದುರಿತ ದುಃಖಪಡಿಸುತ್ತಿಪ್ಪುವು ನೋಡಾ. ಸಕಲ ಕರಣಂಗಳೆಂಬ ಖಾಸವ್ಯಾಧಿ ಹಿಡಿದು ಕಳವಳಿಸುತ್ತಿಪ್ಪರು ನೋಡಾ (ಸಿದ್ಧೇವ. ೩೬೧). [ಖಾಸ$_1$ + ವ್ಯಾಧಿ]

**ಖಾಸಸವಾರಿ** 'ಖಾಸಾಸ್ವಾರಿ' ನೋ.

**ಖಾಸಾ**, ಕಾಸ್$_3$, ಕಾಸಾ, ಖಾಸ್, ಖಾಸ್$_2$ (ಗು). ೧. ತನ್ನದೇ ಆದ; ಸ್ವಂತ; ಸ್ವಕೀಯವಾದ; ಖುದ್ದು: ಖಾಸಾ ಮತ್ಪುತ್ರಿಯಿಂದಾ ಕೈಕಸೆ ಪೋಗಿ (ರಾವಣೋ. ೧೩); ಭಗವಂತನ ಸೃಷ್ಟಿಯಲ್ಲಿನ ಉತ್ತಮ ವಸ್ತುಗಳು ... ಕೆಲವುಮಾತ್ರರ ಖಾಸಾ ಭೋಗಕ್ಕಾಗಿ ಇವು ಮೀಸಲಿಲ್ಲ (ಭಾರದ. ೬); ನೀನು ನನ್ನ ಖಾಸಾ ಅಕ್ಕನ ಮಗ (ಬದುಜ. ೩೪). ೨. (ಅರಸನ) ಖಾಸಗಿ ಅಧಿಕಾರಕ್ಕೆ ಒಳಪಟ್ಟ; (ರಾಜನ) ವೈಯಕ್ತಿಕ ವ್ಯವಹಾರಕ್ಕೆ ಸಂಬಂಧಿಸಿದ: ಬರದಾತ ಖಾಸಾ ರಹಸ್ಯದ ಶಂಭೈಯ (ಎಕ. I, ೧೩-೩೦; 1796); ಟೀಪೂಸುಲ್ತಾನರ ಆವರಂಗುಯೆಂಬ ಖಾಸಾ ಪಾಲ್ಕಿ (ರಾಜೇಂದ್ರ. ೨೮). **ಕಾಸ್$_3$**: ೧. "ಕಾಸ= ಸ್ವತಃ" (ಜಾನಕೋ. ೩೭). **ಕಾಸಾ**: ೧. "ಕಾಸಾ= ಸ್ವಕೀಯವುಂ, ಕಟಿಬಂಧವುಂ" (ಕಾಶಕೃ.೨೦೧); ಹುಜೂರು ಕಾಸಾ ದೊರೆಗಳ ಅಕ್ಷರದಲು ಬರದು (ಎಕ. VI, ಕೊಪ್ಪ. ೪೮-೫೫; 1811). **ಖಾಸ್**: ೧. ಖಾಸ್ ಮನೆಯ ಯಜಮಾನನನ್ನೇ ಮುಂದಿನ ಡಬ್ಬಿಗೆ ದಬ್ಬಬಹುದಾಗಿತ್ತು (ದೀಪಹ. II, ೨೨೯); ತಾನು ಖಾಸ್ ಹರಿಕಾರನೆಂದೂ ಬಾಕಿಯುವರಿಬ್ಬರು ... ಕಛೇರಿಯ ಕೋಲುಕಾರರೆಂದೂ (ಚೆಂಗಾಳ್ವ. ೩೧೬). ೩. ವಿಶೇಷವಾದ; ವಿಶಿಷ್ಟವಾದ: ಖಾಸ್ ಸವಲತ್ತೆಂದು ಶಾಲೆಯ ಹುಡುಗರಿಗೆ ಅರ್ಧಟಿಕೀಟಿನ ಆಟವಿಡುವರೆಂದು ಸುದ್ದಿಯಿತ್ತು (ಗೀಚುಗೆ. ೨೨). **ಖಾಸ್$_2$**: ೧. ಬೇಸರವ ಭಾವಿಸದೆ ಮನದೊಳು ಖಾಸ ರಚಿಸಿದಳೀ ಚರಿತೆಯನು (ಕರ್ಣಾಕ. ೪೩೨); ತನ್ನ ಖಾಸ ಕಮತದಲ್ಲಿಯ ಒಳ್ಳೇ ಆಗುಳ್ಳ ಭೂಮಿಯನ್ನು ಅವಳಿಗೆ ಸಾಗಮಾಡಲು ಕೊಟ್ಟನು (ಬೆಳುಭಾ. ೧೬೧); ಖಾಸ ತಮ್ಮಂದಿರಿಗಿಂತ ಆತನು ... ಕಡಿಮೆಯಾದವನಲ್ಲ (ಯಕ್ಷಪ್ರ. ೬೩). ೪. ಸ್ಪಷ್ಟ; ಖಚಿತ; ನಿಶ್ಚಿತ: ಸಪ್ಪಳ ಆಗದೇ ಹೋದ ಪಕ್ಷದಲ್ಲಿ ಆ ಮಾಲು ಹಳೆದೆಂದು ಖಾಸ ತಿಳಿಯಬೇಕು (ಮುಂಬವ್ಯಾ. ೪೧). [← ಹಿಂ. ಮರಾ. ಖಾಸಾ; ಅರ. ಖಾಸ್ಸ್]

**ಖಾಸಾಕೋಣೆ** (ನಾ). ಸ್ವಂತದ ಉಪಯೋಗಕ್ಕೆ ಮೀಸಲಾದ ಕೋಣೆ; ಒಳಕೋಣೆ: ಅವನ ಖಾಸಾ ಕೋಣೆಗೆ ಕರೆದುಕೊಂಡು ನಡೆದಳು (ದೀಪಹ. II, ೧೩೪); ಸಣ್ಣ ಒಳಕೋಣೆ, ಖಾಸಾಕೋಣೆ (Cabinet. ಇಂಕನಿ). [ಖಾಸಾ + ಕೋಣೆ]

**ಖಾಸಾತಬೇಲಿ**, ಖಾಸ್‌ತಬೇಲೆ, ಖಾಸತಬೇಲಿ (ನಾ). ೧. ಅರಸನ ಸ್ವಂತ ಕುದುರೆಲಾಯ; ಖಾಸಗಿ ಅಶ್ವಶಾಲೆ. ೨. ರಾಜನ ಖಾಸಗಿ ಕುದುರೆಸವಾರರು, —ಅಶ್ವದಳ: ಎಡಭರ್ಜಿ, ಬಲಭರ್ಜಿ ಜನ, ಖಾಸಾತಬೇಲಿಜನ ... ಸೇರಿಸಿಕೊಂಡು ನಿಂತರು (ಚಿತ್ರಪಾ. ೬೩). **ಖಾಸ್‌ತಬೇಲೆ**: ೨. ಮಲ್ಲೇಶ್ವರ ದೇವಸ್ಥಾನಕ್ಕೆ ಖಾಸ್‌ತಬೇಲೆ ಗುರಿಕಾರಂಟ್ರೆ ಸುಬ್ಬಂಣನಿಂದ ವಪ್ಪಿಶಿದ ನಿಲುವಿನ ಸೇವಾರ್ಥ (ಎಕ. XIV, ಚಾಮರಾ. ೨೨೧-೨; 1868). **ಖಾಸತಬೇಲಿ**: ೧. ನಮ್ಮ ಖಾಸತಬೇಲಿಯಲ್ಲಿ ಮೇಲುವಿಚಾರಣೆ ಮಾಡಿಕೊಂಡು ಅವನ ಸಂಬಳವನ್ನು ತೆಗೆದುಕೊಳ್ಳುತ್ತಾ ಇರಲಿ (ಮಾಮರಾ. ೧೮). ೨. ಹೈದರಲ್ಲೀ ಖಾನರು ಸವಾರರನ್ನು ಖಾಸತಬೇಲಿಯೆಂತಲೂ ಸಿಲೆದಾರರೆಂತಲೂ ಎರಡು ತಂಡವಾಗಿ ಮಾಡಿದರು (ಮಹಾವಂ. II, ೧೬). [ಖಾಸಾ + ತಬೇಲಿ]

**ಖಾಸಾಪಾಗ**, ಖಾಸಪಾಗೆ (ನಾ). = ಖಾಸಾತಬೇಲಿ: ಹಜಾಮರು ತಿಂಗಳಿಗೆ ಒಂದುಸಾರಿ ಸರದೀಮೇರೆ ... ಖಾಸಾಪಾಗದ ಕುದುರೆಗಳ ಮೈಕೂದಲನ್ನೂ ಆಯಾಲನ್ನೂ ಕತ್ತರಿಸಬೇಕು (ಚಿತ್ರಪಾ. ೪೯). **ಖಾಸಪಾಗೆ**: ಬಾದಶಹನ ಖಾಸಪಾಗೆಯೊಳಗಿನ ಕೆಲವು ಉತ್ತಮ ಕುದುರೆಗಳನ್ನು ... ಹಿಡಕೊಂಡು ಹೋದರು (ಸತ್ವಸಾ. ೪೪). [ಖಾಸಾ + ಪಾಗ]

**ಖಾಸಾಬಾರು** (ನಾ). ರಾಜನ ಅಂಗರಕ್ಷಕ ಪಡೆ, —ದಳ: ಎಕ್ಕಂಡೆ ಸಿಪಾಯಿ, ಜೀರಾಯಿತು ಜನ, ಖಾಸಾಬಾರು ಕಂದಾಚಾರ ವಗೈರೆ ಜನರಿಗೆ ಸೇರಿಸಿಕೊಂಡು ನಿಂತರು (ಚಿತ್ರಪಾ. ೬೪). [← ಮರಾ. ಖಾಸಬಾರಗೀರ್]

**ಖಾಸಾಬೇಗಂ** (ನಾ). ನವಾಬನ ಪತ್ನಿ, –ರಾಣಿ, –ಪಟ್ಟಮಹಿಷಿ: ಕುಮಾರ ಸಲೀಮನು ನಿನ್ನನ್ನು ವಿವಾಹ ಮಾಡಿಕೊಂಡು ಖಾಸಾಬೇಗಮಾಗಿ ಮಾಡಿಕೊಳ್ಳುವನೆಂದು ಕೇಳಿದೆನು (ಕಪಾಕುಂ. ೭೫). [ಖಾಸಾ + ಬೇಗಂ]

**ಖಾಸಾಬೊಕ್ಕಸ**, ಖಾಸಬೊಕ್ಕಸ (ನಾ). ರಾಜಭಂಡಾರ; ಹುಜೂರು ಖಜಾನೆ: ಅವುಗಳನ್ನು ಖಾಸಾಬೊಕ್ಕಸಕ್ಕೆ ಕಳುಹಿಸಿ ಆರೋಗಣೆಯನ್ನು ಒಪ್ಪಿಸಿಕೊಳ್ಳುತ್ತಿದ್ದರು (ಒಡೆಕ. ೫೨). **ಖಾಸಬೊಕ್ಕಸ**: ಶಷ್ಟಬ್ರಂಹ ವಂಶಸ್ತನಾದ ಖಾಸಬೊಕ್ಕಸದ ಲಿಂಗಾಚಾರ್ರಿ ಕೊಮಾರನಾದ (ಎಕ. XIV, ಶ್ರೀರಂಗ. ೧೮೫-೩; 1853); ಸಂನ್ನಿಧಿಗೆ ಹಜೂರ್ರು ಖಾಸಬೊಕ್ಕಸದ ... ಸಿದ್ದಪ್ಪನ ಸೇವೆ (ಎಕ. XV, ಹೊಳೆನ. ೪೧-೧; ?). [ಖಾಸಾ + ಬೊಕ್ಕಸ]

**ಖಾಸಾಮೊಹರು**, ಖಾಸಮೊಹರು (ನಾ). ರಾಜನ ಸ್ವಂತ ಮೊಹರು, —ಮುದ್ರೆ: ಪಟ್ಟಿಯನ್ನು ಪಟ್ಟದ ಕತ್ತಿಯ ಒರೆಯೊಳಗೆ ಇರಿಸಿ ಖಾಸಾಮೊಹರು ಮಾಡಿಸಿ ... ಕೊಂಡರು (ಚಾಮವಂ. ೪೦). **ಖಾಸಮೊಹರು**: ಆ ಪಟ್ಟಿಯಂ ... ಖಾಸಮೊಹರುಮಾಡಿಸಿ ಶ್ರೀ ಚಾಮುಂಡೇಶ್ವರಿ ಅಮ್ಮನವರ ಸನ್ನಿಧಿಯಲ್ಲಿ ಇರಿಸುವಂತೆ ನಿಬಂಧನೆ ಮಾಡಿ (ಮಹಾವಂ. I, ೪೦). [ಖಾಸಾ + ಮೊಹರು]

**ಖಾಸಾಮೋತೀಖಾನೆ** (ನಾ). ಅರಮನೆಯ ಸ್ವಂತ ಉಗ್ರಾಣ: ಭೋಜನಕ್ಕೆ ಬೇಕಾದ ಸಾಮಗ್ರಿಯನ್ನು ಖಾಸಾಮೋತೀಖಾನೆ ಎಂಬ ಸ್ವಂತ ಉಗ್ರಾಣದಿಂದ ಕೊಡುವ ಹಾಗೆ ನೇಮಿಸಿದನು (ಕಥಾಮಂ. IV, ೨). [ಖಾಸಾ + ಮೋತೀಖಾನೆ]

**ಖಾಸಾಲವಾಜಮೆ,** ಖಾಸಾಲವಾಜಿಮಾ (ನಾ). ಅರಮನೆಯ ಸ್ವಂತ ಉಗ್ರಾಣದಿಂದ ಸಾಮಾನುಗಳ ಸರಬರಾಜು: ವಿದ್ವಾಂಸರಿಗೆ . . . ೬೦ ಸೇರು ಅಕ್ಕಿ ಖಾಸಾಲವಾಜಮೆ ಅಪ್ಪಣೆಯಾಯಿತು (ನಾಕಲಾ. ೭). **ಖಾಸಾಲವಾಜಿಮಾ:** ಅರಮನೆಯಿಂದ ಖಾಸಾಲವಾಜಿಮಾ ಬರುತ್ತಿದ್ದುದರಿಂದ ದಾಸರ ಯೋಗಕ್ಷೇಮವು ಮಹಾರಾಣಿಯವರದಾಗಿತ್ತು (ಕಥವಿ. II, ೨೨೨). [ಖಾಸಾ + ಲವಾಜಮೆ]

**ಖಾಸಾಲವಾಜಿಮಾ** 'ಖಾಸಾಲವಾಜಮೆ' ನೋ.

**ಖಾಸಾಸ್ವಾರಿ,** ಖಾಸಸವಾರಿ, ಖಾಸ್ಸವಾರಿ (ನಾ). ೧. (ಸರದಾರ ಅಥವಾ ದೊರೆ) ಪರಿವಾರ ಸಹಿತವಾಗಿ ಬರುವಿಕೆ: (ಕ). ೨. ದೊರೆ; ಪ್ರಭು: (ಕ). **ಖಾಸಸವಾರಿ:** ೨. ನೀವೆಲ್ಲರೂ . . . ಖಾಸಸವಾರಿಯ ಹಿಂದೆ ಬೇಟೆಗೆ ಹೊರಡಬೇಕು (ಪೇಟೇಮಾ. ೨). **ಖಾಸ್ಸವಾರಿ:** ೨. ಒಬ್ಬ ಜೋಡೀದಾರನು ಬಹು ಆಟ್ಟಹಾಸದಿಂದ ತನ್ನ ಮನೆಯಲ್ಲಿ ಮದುವೆಮಾಡಿ ಖಾಸ್ಸವಾರಿಯು ಒಂದು ದಿವಸ ಅಲ್ಲಿಗೆ ದಯಮಾಡಬೇಕೆಂದು ಕೇಳಿಕೊಂಡನು (ಮುಸುಗ. ೫೦). [ಖಾಸಾ + ಸ್ವಾರಿ]

**ಖಾಸ್ಸವಾರಿ** 'ಖಾಸಾಸ್ವಾರಿ' ನೋ.

**ಖಿಂಕೃತ** (ನಾ). ಒಂದು ಅನುಕರಣ ಶಬ್ದ: "ಖಿಂಕೃತಂ [ಪಾಠಾಂ. ಬಿಂಕೃತಂ, ಛೇಂಕೃತಂ] ಬಾಣದೊಳು . . . ವರ್ತಿಸಿರ್ಕುಂ" (ಮಂಗರಾ. ೨೭-೬).

**ಖಿಜಮತಗಾರ** (ನಾ). (ದೊಡ್ಡ ಮನುಷ್ಯರ ಸೇವೆಯಲ್ಲಿ) ಸಣ್ಣಪುಟ್ಟ ಕೆಲಸಮಾಡಿಕೊಂಡಿರುವ ಆಳು; ಅಡಿಯಾಳು: ಚೋಪದಾರ ಮಹಲದಾರ ನಕೀಬ ಖಿಜಮತಗಾರ . . . ಇವರೇ ಮೊದಲಾದವರು (ಚಾಮುವಂ. ೨೨೬). [← ಪಾರ. ಹಿಂ. ಖಿದಮತ್‌ಗಾರ್; ಮರಾ. ಖಿಜಮತಗಾರ್]

**ಖಿಜಮತಗಾರಿ** (ನಾ). ಖಿಜಮತಗಾರನ ಕೆಲಸ; ದೊಡ್ಡವರ ಸೇವೆಯಲ್ಲಿ ಸಣ್ಣಪುಟ್ಟ ಕೆಲಸಮಾಡಿಕೊಂಡಿರುವಿಕೆ: (ಕ). [← ಮರಾ. ಹಿಂ. ಖಿದಮತ್ಗಾರೀ; ಪಾರ. ಖಿದಮತಗಾರೀ]

**ಖಿಜಮತ್ತು** (ನಾ). ಸೇವೆ; ಚಾಕರಿ; ಊಳಿಗ: ಆ ರಿಸಾಲೆ ಖಿಜಮತ್ತು ಶಾಬಾಸಾಬರುಕ್ಸೆರಿಗೆ ಮೊಕರೂರಾಗಿಯಿರುತ್ತಾ ಇದ್ದರು (ಹೈದರ. ೩೦). [← ಹಿಂ. ಮರಾ. ಖಿಜಮತ್; ಪಾರ. ಖಿದಮತ್]

**ಖಿದ್ದಿಸೆ** 'ಕಿದ್ದೆಸೆ' ನೋ.

**ಖಿನ್ನ** (ಗು). ೧. ನೊಂದ; ವಿಷಾದ ಹೊಂದಿದ; ದುಃಖಿತ: ಇನ್ನು ಹೆಂಗಿದಕೇನು ಮಾಡುವೆನೆನ್ನದಾತ್ಮದೊಳಿನಿತು ಕೊಂಕದ ಖಿ[ಪಾಠಾಂ. ಛಿ]ನ್ನವಾಗದೆ ಗೊಡ್ಡನಾಗಳೆ ಹೋಗಿ ಹಿಡಿತಂದು (ಬಸಪು. ೪-೨೫); ಆ ಪನ್ನಗೇಶ್ವರಂ ಧೃತರಾಷ್ಟ್ರನೆಂದ ಮಾತಿನ ಮೇಲೆ ಖಿನ್ನನಾಗಿ (ಜೈಮಿಭಾ. ೨೪-೨೫); ಅವನು ಎಲ್ಲವನ್ನೂ ಕೇಳಿ ತಿಳಿದು ಖಿನ್ನನಾದನು (ಬಂಕಿಮ. ೧೯೩); ಅಲ್ಲಿಂದ ಹೊರಡುವಾಗ ಅವನ ಮನಸ್ಸು ಖಿನ್ನವಾಯಿತು (ಅಶೋಕ. ೪೩); ನೀರು ಕೊಳೆಯನ್ನು ತೊಳೆದು ಖಿನ್ನವಾಗುವುದಿಲ್ಲ (ಕಲ್ಲೋಲ. ೧೦). ೨. ದಣಿದ; ಆಯಾಸಗೊಂಡ; ಬಳಲಿದ: (ಕ). (ನಾ). ೩. ಖೇದ; ವಿಷಾದ: ಅನ್ನವನು ಇಕ್ಕಿ ನೀ ಖಿನ್ನವನು ಪಡಬೇಡ ಭಿನ್ನಭೇದಗಳು ಇಲ್ಲದೆ ಶಿವ ಜಗವ ಸಲಹಿಹನು (ಸರ್ವಜ್ಞ. ೬೫೫). [ಸಂ.]

**ಖಿನ್ನತೆ** (ನಾ). ವಿಷಾದ; ಖೇದ: ಖಿನ್ನತೆಯ ತೋರಿ ಬಿಸುಸುಯ್ಯುತಿಹವು (ವಿಸೀಗೀ. ೨೬); ಲಕ್ಕೋಟೆಯನ್ನು ಕೈಲಿ ಎತ್ತಿ ತೂಗುತ್ತ, ಖಿನ್ನತೆಯಿಂದ ಮುಗುಳ್ನಗೆ ನಗುತ್ತ (ವೀರಯೋ. ೨೦). [ಸಂ. ಖಿನ್ನತಾ]

**ಖಿನ್ನಮುಖಿ** (ನಾ). ವಿಷಾದ ತುಂಬಿದ ಮುಖವುಳ್ಳವಳು: ಮಾಸ್ಲೋವ . . . ಖಿನ್ನಮುಖಿಯಾಗಿ ಮಂಚದ ಮೇಲೆ ಕುಳಿತಿದ್ದಳು (ಪುನರು. ೨೦೯). [ಸಂ. ಖಿನ್ನಮುಖೀ (ಖಿನ್ನ + ಮುಖ + -)]

**ಖಿಫಾಯಿತ** (ನಾ). ಲಾಭವನ್ನು ಹೊಂದುವವನು; ವ್ಯಾಪಾರ ಮಾಡುವವನು; ಗ್ರಾಹಕ: ಆ ಅಡಚಣಿಯು ದೂರಾಗುವದು ಬಹಳ ಅಗತ್ಯವಾದದ್ದು. ಇದು ನಮ್ಮ ಖಿಫಾಯಿತರಿಗೆ ತಿಳಿಯುವದು ಅವಶ್ಯವದೆ (ಮುಂಬವ್ಯಾ. ೮೦). [< ಕಿಫಾಯತಿ]

**ಖಿರದಿ** 'ಕಿರ್ದಿ' ನೋ.

**ಖಿರ್ದಿ** 'ಕಿರ್ದಿ' ನೋ.

**ಖಿರ್ದಿಚಿಟ್ಟೆ** (ನಾ). ಕಿರ್ದಿಯ ಪುಸ್ತಕ; ರಸೀತಿಯ ಪುಸ್ತಕ; ಲೆಕ್ಕದ ಪುಸ್ತಕ: ಹಣ ವಸೂಲಾದ ಕೂಡಲೆ ೧೩ನೇ ನಂಬರು ಖಿರ್ದಿಚಿಟ್ಟೆಗೆ ದಾಖಲ್ಮಾಡಿ . . . ರುಜುಮಾಡಬೇಕು (ಗ್ರಾಮಾಕ. ೬೮). [ಖಿರ್ದಿ (< ಕಿರ್ದಿ) + ಚಿಟ್ಟೆ₂]

**ಖಿಲ** (ನಾ). ೧. ಸಾಗುವಮಾಡದಿರುವ ಭೂಮಿ; ಪಡಭೂಮಿ; ಬೀಳು. ೨. ಗ್ರಂಥಕ್ಕೆ ಪೂರಕವಾಗಿ ಸೇರಿಸಿದ ಭಾಗ; ಅನುಬಂಧ: ಖಿಲ, ಖಿಲಾಧಿಕಾರ . . . ಎಂದು ಹತ್ತು ಆಗಮಭಾಗಗಳು (ಭಾರದ. ೭೫). ೩. ಏನೂ ಇಲ್ಲದಿರುವುದು; ಶೂನ್ಯತೆ; ರಿಕ್ತತೆ. ೪. ಉಳಿದುದು; ಶೇಷ. ೫. ಅಂತರ; ಅವಕಾಶ; ತೆರವು. ೬. ಜೀರ್ಣ; ಶಿಥಿಲ: ಗ್ರಂಥ ಖಿಲವಾಗಿದೆ (ರೂಢಿ).

ಖಿಲವಾಗು = ೧. ಹಾಳಾಗು; ನಾಶವಾಗು: ಅನೇಕ ಕಾಲ ಆ ಗ್ರಾಮವು ಖಿಲವಾಗಿ ಯಿರಲಾಗಿ ಆ ಗ್ರಾಮವನೂ ರೂಪುಮಾಡಿ ಆ ಗ್ರಾಮದ ಕುಂಟೆಯನೂ ಕಟ್ಟಿಸಿ (ಸಾಇಇ. IX-ii, ೪೬೪-೧೧; 1497). ೨. ಕುಗ್ಗು; ಕುಂಠಿತವಾಗು; ದುಃಸ್ಥಿತಿಗೆ ಬರು: ಖಿಲವಾಗಿದ್ದ ಭಾಗವತಧರ್ಮವು ಇವರಿಂದ ಪುನರುದ್ಧಾರವಾಯಿತು (ಕಥವಿ. I, ೪೧); ಬೌದ್ಧಮತ ಖಿಲವಾಗಿ ಪುನಃ ಹಿಂದೂಧರ್ಮವು ಪುನರುತ್ಥಾನವಾದ ಮೇಲೆ (ದಿಲ್ಲಿಸ. ೨೯). [ಸಂ.]

**ಖಿಲಕ್ಷೇತ್ರ** (ನಾ). ಸಾಗುವಮಾಡದಿರುವ ಕ್ಷೇತ್ರ; ಬೀಳು; ಪಾಳುಭೂಮಿ: "ಬೀಟು - ಪತನೇ, ಖಿಲಕ್ಷೇತ್ರೇ ಚ (ಪಾಳುಭೂಮಿ)" (ಶಮಧಾ). [ಖಿಲ + ಕ್ಷೇತ್ರ]

**ಖಿಲಖಿಲನೆ** 'ಕಿಲಕಿಲನೆ' ನೋ.

**ಖಿಲಾಡಿ** 'ಕಿಲಾಡಿ' ನೋ.

**ಖಿಲಾರಿ** 'ಕಿಲಾರಿ' ನೋ.

**ಖಿಲ್ಲತ್ತು** 'ಕಿಲ್ಲತ್ತು' ನೋ.

**ಖಿಲ್ಲೆ** 'ಕಿಲ್ಲೆ' ನೋ.

**ಖಿಲ್ಲೇದಾರ** 'ಕಿಲ್ಲೆದಾರ' ನೋ.

**ಖಿಲ್ವ,** ಖಿಳ್ವ (ನಾ). ಹಾಳುನೆಲ (?): ಖಿಲ್ವ [ಪಾಠಾಂ. ಳ್ವ] - ಕಿಲ್ (ಶಮದ. ೨೪೧ ಪ್ರಯೋ). **ಖಿಳ್ವ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [< ಸಂ. ಖಿಲ]

**ಖಿಶೆ** 'ಕಿಸೆ' ನೋ.

**ಖಿಸಮಿಸ** (ನಾ). ಒಂದು ಬಗೆಯ ದ್ರಾಕ್ಷೆ: ಉತ್ತತ್ತಿ, ಖಜೂರು, ಮನೂಕೆ, ಖಿಸಮಿಸ . . . ಮಳೆಗಾಲದಲ್ಲಿ ಬಹಳೇ ಕೆಡುತ್ತದೆ (ಮುಂಬವ್ಯಾ. ೬೩). [← ಮರಾ. ಖಿಸಮೀಸ್; ಪಾರ. ಕಿಶ್ಮಿಶ್]

**ಖಿಸ್ತು** ‘ಕಿಸ್ತು’ ನೋ.

**ಖಿಸ್ತುಬಂದಿ** ‘ಕಿಸ್ತುಬಂದಿ’ ನೋ.

**ಖಿಳಿ** (ನಾ). ಒಂದು ಬಗೆಯ ಕಾಡು ಪ್ರಾಣಿ: ಇದೆ ಮಹಾಕಾಂತಾರ ವತಿದೂರದಲಿ ವೃಕ ಶಾರ್ದೂಲ ಕೇಸರಿ ಕದಲಿ ಕಳಭಕ್ರೋಡ ಖಿಳಿ [ಪಾಠಾಂ. ಶಿಖಿ]ಲೂಲಾಯ ಸಾರಂಗ (ಕುವ್ಯಾಅ. ೧೩–೧೬). [?]

**ಖಿಳ್ವೆ** ‘ಖಿಲ್ವೆ’ ನೋ.

**ಖೀಜು** ‘ಕೀಚ್ಚು₂’ ನೋ.

**ಖೀರು** ‘ಕೀರ್ರು₄’ ನೋ.

**ಖುತ್ತ** (ನಾ). [ನಾಟ್ಯ] ರಥಚಕ್ರವೇ ಮೊದಲಾದ ಮೂವತ್ತೈದು ದೇಶೀಯ ಭೌಮಚಾರಿಗಳಲ್ಲಿ ಒಂದು. ▷ ತುದಿಗಾಲಿನಿಂದ ನೆಲವನ್ನು ತಟ್ಟುವ ಅಭಿನಯ. ‘ಖುತ್ತಚಾರಿ’ ಪರಾ.

[< ಸಂ. ಖುತ್ತಾ]

**ಖುತ್ತಚಾರಿ** (ನಾ). = ಖುತ್ತ: “ಚರಣಾಗ್ರದಿಂದೆ ಭೂಮಿಯನಿರದೇ ತಟ್ಟಲ್ಕೆ ಖುತ್ತಚಾರಿಯೆನಿಕ್ಕುಂ” (ಲಾಸ್ಯರಂ. ೬–೮೨).

[ಖುತ್ತ + ಚಾರಿ₃]

**ಖುದ** ‘ಖುದ್ದು₁’ ನೋ.

**ಖುದಾ, ಖೊದಾ** (ನಾ). ದೇವರು; ಈಶ್ವರ; ಪರಮಾತ್ಮ: ಭಕ್ತನಂ ಮಸ್ತಕದಿ ಪೊತ್ತು ನಡೆಯೆ ಕಂಡೀತಂ ಖುದಾನೆಂದು ಮನ್ನಿಸುತ (ಗುರುಚಾ. ೧೫–೬೪); ಖುದಾನನ್ನು ಸಂತೋಷಪಡಿಸುತ್ತೇನೆ (ದೌಲತ್. ೫); ಸಾಹೇಬರು . . . ಖುದಾನ ಹೆಸರಿನಿಂದ ಆಣೆ ಮಾಡಿದ್ದರು (ಗ್ರಾಮಾಯ. ೪೭೯). **ಖೊದಾ**: ಸತ್ಯನೀತಂ ಖೊದಾನಹುದೆಂದು (ಗುರುಚಾ. ೧೪–೨೯).

[← ಪಾರ. ಹಿಂ. ಖುದಾ]

**ಖುದಾವಂದ್** (ನಾ). ಒಡೆಯ; ಪ್ರಭು: ಬೈರಾಗಿಯು, “ಖುದಾವಂದ್ ಪರವರ್ದಿಗಾರ ಎಲ್ಲಾ ಒಳ್ಳೇದು ಮಾಡುತ್ತದೆ” ಎಂದನು (ಮಧುನ. ೬೪).

[← ಪಾರ. ಹಿಂ. ಖುದಾವಂದ್]

**ಖುದ್ದ₁** ‘ಖುದ್ದು₁’ ನೋ.

**ಖುದ್ದ₂** ‘ಖುದ್ದು₂’ ನೋ.

**ಖುದ್ದರ** ‘ಕುದ್ರ’ ನೋ.

**ಖುದ್ದರಗೇಡಿ** ‘ಕುದ್ರಗೇಡಿ’ ನೋ.

**ಖುದ್ದು₁, ಖುದ, ಖುದ್ದ₁** (ಗು). ಸ್ವಂತ; ಸ್ವಕೀಯವಾದ; ಖಾಸಾ: ಮಹಾಸ್ವಾಮಿಯವರು . . . ಖುದ್ದು ರಾಜ್ಯಭಾರ ವಹಿಸಿದುದನ್ನು ಅನುಮೋದಿಸಿದರು (ಮಹಾವಂ. II, ೩೭); ಇಬ್ಬರೂ ಖುದ್ದು ರಾಜಿಯಿಂದ ಜಮೀನು ಮಾರಲು ಬಂದರು (ಚಂದತೋ. ೭೩); ಇದನ್ನು ಹೇಳುತ್ತಿರುವುದು ಖುದ್ದು ಅನುಭವದಿಂದ (ಆಳನ. ೨೫೨); ಖುದ್ದು ಕಮಲಾಕಾಂತ ಚಕ್ರವರ್ತಿಯ ಹೆಸರಿಂದ (ಕಮಕ. ೪೭). **ಖುದ**: ತಾನೆ ಖುದ ಮುಸಲ್ಮಾನರೆಂಬಭಿಧಾನದಿಂ (ಕದಂಪು. ೮೪). **ಖುದ್ದ₁**: ಖುದ್ದ ಗೌಡನಲ್ಲವಾದರೂ ಗೌಡರ ಅಣ್ಣತಮ್ಮಂದಿರೊಳಗಿನವನು (ಬೆಟ್ಟಹೊ. ೧೪); ಖುದ್ದ ಸಂಸ್ಥಾನದ ಒಡೆಯರಾದ ನಿಮ್ಮ ದೊಡ್ಡ ಸಾಹೇಬರ . . . ಉಂಗುರವೂ ನನ್ನ ದೃಷ್ಟಿಪಥದಲ್ಲಿ ಬರದೆ ಉಳಿದಿಲ್ಲ (ಕಳ್ಳಕಾ. ೪).

[← ಪಾರ. ಹಿಂ. ಖುದ್; ಮರಾ. ಖುದ್ದ]

**ಖುದ್ದು₂, ಖುದ್ದ₂** (ಅ). ಸ್ವತಃ; ತಾನಾಗಿ; ಮುದ್ದಾಂ: ಉಭಯತ್ರರಿಂದಲೂ ಖುದ್ದು ಕೇಳಿದೇನೆ (ಕೆಲನೆ. ೨೧೮); ಆಚಾರ್ಯರ ವರ್ಣನೆಯನ್ನು ಖುದ್ದು ಆಸ್ವಾದಿಸಿದ್ದಾಯಿತು (ಸಂಸ್ಕಾರ. ೪೨); ರಜವಿದ್ದ ದಿನ ತಾವೇ ಖುದ್ದು ಹೋಗಿ (ಭೀಮಕಾ. ೧೩). **ಖುದ್ದ₂**: ಖುದ್ದ ತಾವಾಗಿಯೇ ಪತ್ರ ಬರೆಯುವ ಭಾನಗಡಿಯಲ್ಲಿ ಬೀಳುತ್ತಿರಲಿಲ್ಲ ಆದರೆ ಇಂದು ಬಂದ ಕಾಗದ, ಅವರ ಸ್ವಹಸ್ತದಲ್ಲಿತ್ತು (ದೀಪಹ. II, ೯೬). **ಖುದ್ದಾಗಿ** = ತಾನಾಗಿ; ಸ್ವತಃ: ಗ್ರಾಮ ಮುನಸಿಫನೇ ತಾನೇ ಖುದ್ದಾಗಿ ಸದರಿ ಪಟ್ಟಿಯಲ್ಲಿ ನಮೂದಿಸಿರುವವರ ಪೈಕಿ ಒಬ್ಬನನ್ನು . . . ಚುನಾಯಿಸಿಕೊಳ್ಳತಕ್ಕದ್ದು (ಗ್ರಾಮಾಕ. ೧೭); ಮಹಾಸೇನಾಪತಿ . . . ತಾನೇ ಖುದ್ದಾಗಿ ಅರಮನೆಗೆ ಮಹಾಸೈನ್ಯದೊಡನೆ ಬಂದಿಳಿದನು (ಪುಟ್ಟರ. ೧೦); ಪ್ರತಿಯೊಂದು ಸ್ಥಳವನ್ನೂ ತಾವೇ ಖುದ್ದಾಗಿ ಪರಿಶೋಧಿಸಿದರು (ಶ್ರೀರಾಯ. ೧೩೦).

[< ಖುದ್ದು₁]

**ಖುದ್ರ** ‘ಕುದ್ರ’ ನೋ.

**ಖುದ್ರಗೇಡಿ** ‘ಕುದ್ರಗೇಡಿ’ ನೋ.

**ಖುಬಿ, ಖೂಬಿ** (ನಾ). ೧. ಚೆಲುವು; ಸೊಗಸು; ಅಂದ: ಅಹಾ! ಇದಾರು? ಭಲೆ ಖುಬಿಯಾಗಿದ್ದಾಳಲ್ಲ (ಕದಂಬ. ೬೫). ೨. ಗುಟ್ಟು; ಮರ್ಮ; ರಹಸ್ಯ: ತಿಳಿತೇನು . . . ಮಾತಿನ ಖುಬಿ? (ಕಮ್ಮಟ. ೪೫). **ಖೂಬಿ**: ೨. ವ್ಯಾಪಾರದ ಖೂಬಿ ಗೊತ್ತಿದ್ದವರು ಕೈಹಾಕದಂಥ ವ್ಯವಹಾರವಿಲ್ಲ (ಜಾರುದಾ. ೨೦೭).

[← ಮರಾ. ಖುಬೀ]

**ಖುಮ್ಮಕ್ಕು** ‘ಕುಮಕು’ ನೋ.

**ಖುರ** (ನಾ). ಹಸು, ಕುದುರೆ, ಮೊದಲಾದುವುಗಳ ಕಾಲಗೊರಸು; ಕೊಳಗು: ಆ ಶಿಶಿರಕರ ರಥ ತುರಗ ಖುರ ಶಿಖರ ನಿಖಂಡಿತ ಲವಂಗ ಪಲ್ಲವಮುಂ (ಪಂಪಭಾ. ೪–೧೮ ವ); ಖುರದಲವನಿಯ ಹೊಯ್ದು ಲಹರಿಯಲುರಿ ಮಸಗಲುಬ್ಬೆದ್ದ ತೇಜಿಯ ಮೆಚ್ಚಿಸ ಮುಕ್ತಾವಳಿಯ ತೇರಿನ ನವವಿಳಾಸದಲಿ (ಕುವ್ಯಾವಿ. ೬–೫೬); ತನ್ನ ಹಿಂದಿನ ನಡುವೆ ನಿಂದುದು . . . ಕೆಸರು ಮುಚ್ಚಿದ ಖುರದ ಕಾಲ್ಗಳ ಮಿಗದ ಹೋರಿ (ಶ್ರೀರಾಮಾ. ೩೪೨–೬೨).

[ಸಂ.]

**ಖುರಖಂಡಿತ** (ಗು). ಗೊರಸಿನಿಂದ ಒಡೆಯಲ್ಪಟ್ಟ, —ಕತ್ತರಿಸಲ್ಪಟ್ಟ: ಚಟುಳಹಯ ಖುರಖಂಡಿತೋರ್ವೀನಿಟಿಲನಿರ್ಗತ ಬಹಳ ಧೂಳೀಪಟಲ (ಕುವ್ಯಾಭೀ. ೩–೩).

[ಖುರ + ಖಂಡಿತ]

**ಖುರಗತಿ** (ನಾ). (ಕುದುರೆಯ) ಗೊರಸಿನ ಚಲನೆ: ಥಳಥಳಿಪ ಸೂನಿಗೆಯ ಮುಮ್ಮೊನೆಗಳ ರಥಾಂಗದ ಮೇಲುಪಸರದ ಪಳಹರದ ಖುರಗತಿಯ ಜೋಡ ಜವಾಯ್ಲ ಕುದುರೆಗಳ . . . ಸುರೇಖೆಯ ಗತಿಯ ವಾಜಿಯು ರಥವ ನೋಡಿದರು (ಕುವ್ಯಾಉ. ೧೧–೧೭).

[ಖುರ + ಗತಿ]

**ಖುರಜೆ** (ನಾ). = ಖುರ (?): ಇನಿತಾನುಂ ಸಂದಂಶಂ ಜನಿಯಿಸುಗುಂ ಕೇಸರುಂಗಳುಂ ಖುರಜೆಗಳುಂ ತನುವು ಮತಿಮೃದುಳಮಕ್ಕುಂ ಜನಿಯಿಸಿದಶ್ವಕ್ಕೆ ನೋಡುವಡೆ ಮಾಸೈಕಂ (ಅಶ್ವಶಾ. ೫–೩).

[?]

**ಖುರಜೋಡು** (ನಾ). ಗೊರಸಿನ ಜೊತೆ; ಎರಡು ಗೊರಸುಗಳು: ಜೋಡೊಡೆದು ಥಟ್ಟುಗಿದು ಬೆನ್ನಲಿ ಮೂಡಲದಟರ ಸೀಳಿದನು ಖುರಜೋಡು ಹುಡಿಹುಡಿಯಾಗೆ ತೇಜಿಯ ಥಟ್ಟ ಖಂಡಿಸಿದ (ಕುವ್ಯಾದ್ರೋ. ೫–೫).

[ಖುರ + ಜೋಡು₁]

**ಖುರಣಸ** (ನಾ). ಗೊರಸಿನಂತೆ ಮೂಗುಳ್ಳವನು: “ಖುರಣಾಃ, ಖುರಣಸಃ –೨ ಬುರುಡೆ ಮೂಗುಳ್ಳವನು. ಪೀನಸಿ ಮೂಗನು ಕೊಕ್ಕೇ ಮೂಗಿನವರಿಗೂ ಹೆಸರು” (ಸಿದ್ಧಾಂತಿ. ೧೫೮).

[ಸಂ.]

**ಖುರಪುಟ** (ನಾ). = ಖುರ: ಖುರಪುಟದಲಾಕಾಶಭಿತ್ತಿಯ ಬರೆವವೋಲ್ ಸೂರಿಯನ ತುರಗವ ಕರೆವವೋಲ್ . . . ಅರರೆ ಪೂತುರೆ ಹಯವೆನುತೆ ಚಪ್ಪರಿಸಲೊಡೆ ನಿಗುರಿದವು ಕೆಂದೂಳಿರದೆ ನಭಕುಪ್ಪರಿಸಿ (ಕುವ್ಯಾವಿ. ೬–೬೨); ಅರರೆ ನೀಲನ ಖುರಪುಟಂಗಳ ತಾಳಲಸುರರಿಗೆ ತರಹರವು ನಾ ಕಾಣೆ (ಕೌಶಿರಾ. ೩೪–೧೬); ಪ್ರಥಿಲೆ ಏರುವ ಕುದುರೆಯ ಖುರಪುಟಗಳು . . . ಪ್ರತಿಧ್ವನಿಸುತ್ತವೆ (ಸಮಜೀ. ೯ ಪೀಠಿಕೆ).

[ಖುರ + ಪುಟ₁]

**ಖುರಪುಟಧ್ವನಿ** (ನಾ). ಗೊರಸಿನ ಸದ್ದು: ಕುದುರೆಗಳ ಖುರಪುಟಧ್ವನಿ ನಿಜವರೂಥ ಚಕ್ರದ ರವಂ (ಜೈಮಿಭಾ. ೧೩–೨); ಬಾರಾಮಾರ್ಗದಲ್ಲಿ ಕುದುರೆಗಳ ಖುರಪುಟಧ್ವನಿಯೊಂದೇ ಕೇಳಿಬರುತ್ತಿತ್ತು (ಪುನರು. ೨೯೬). [ಖುರಪುಟ + ಧ್ವನಿ]

**ಖುರಪೆ** 'ಕುರುಪ್ಪೆ₁' ನೋ.

**ಖುರಪ್ಪ** (ನಾ). ತೀಕ್ಷ್ಣವಾದ ಅಲಗುಳ್ಳ ಒಂದು ಬಗೆಯ ಬಾಣ: ನನಗೆ ತಗಲಿದ ಈ ಬಾಣವು ಖುರಪ್ಪವೆ, ವೈಕಾಂಡವೆ . . . ಅಥವಾ ಕರವೀರಪತ್ರವೆ? (ಬುದ್ಧ ಪ.೪೦). [← ಪ್ರಾ. ಖುರಪ್ಪ < ಸಂ. ಕ್ಷುರಪ್ರ]

**ಖುರಬಾನ** (ನಾ). ಆಹುತಿ; ಬಲಿ; ನೈವೇದ್ಯ: ಹಾಳಿಹದ್ದು ಬಂದು ಹೋಳಿಗಿ ಮಾಡಿತು ಬಹಳ ಹೂರಣ ಹಾಕಿ ಮೀನು ಒಂದು ಖುರಬಾನ ಬಸ್ತಿತು (ಕರ್ನಾಸಂ. ೪೦). [← ಮರಾ. ಖುರಬಾಣ; ಅರ. ಕುರ್ಬಾನ್]

**ಖುರಮಣಿಕೆ** (ನಾ). ಕುದುರೆಯು ಕಾಲಿಡುವುದಕ್ಕೆ ಹಾಸಿರುವ ಮರದ ಹಲಗೆ: ಇಂದ್ರಾಯುಧದ . . . ಸಟೆಯನೊಯ್ಯನೋಸರಿಸುತ್ತಂ ಖುರಮಣಿಕೆಯೊಳ್ ಕಾಲನಿಕ್ಕಿ ಮಂದುರದ ಮುಂಡಿಗೆಯಂ ಮಲಂಗಿ (ಕಾದಂಉ. ೧೯೬). [ಖುರ + ಮಣಿಕೆ]

**ಖುರವ** (ನಾ). (?): ಸ್ವರ್ಗ ನರಕದ ದಾರಿ ಬಿಟ್ಟು ಸರ್ವಕರ್ಮಕೆ ಕಿಚ್ಚಿಟ್ಟು ಈರ್ವ ಪದಗಳ ನಾಲ್ಕನು ಹೊಂದದ ನಿರ್ವಾಣವೆ ಯಿರುವರವರಿಗೆ ಯಲೆಗಾವುದಿ ದೂಷಣ ಭೂಷಣವಳಿದು ನಾನು ನರನುಯೆಂಬುದಳಿದು ಖುರವ ಗುರುತುಗಳೆಲ್ಲ ಅಳಿದು ತಾನೆ ಚಿದಾನಂದ ವಿರೂಪಾಕ್ಷ ಹರಿಗೆ (ಚಿದಾಕೋ. ೧೬೩–೧). [< ಕುರುಹು ?]

**ಖುರವಿಡು** (ನಾ). (ಕುದುರೆ) ಹೆಜ್ಜೆಯಿಡು; ಮುಂದುವರಿ: ತುಡುಕುವಾನೆಯನೀಸಿನಲಿ ಖುರವಿಡುವ ಕುದುರೆಯನೊತ್ತಿ ಹಾಯ್ಸುವ ಬಿಡುರಥವ ತಲೆವರಿಗೆಯಲಿ ತವಕಿಸುವ ಕಾಲಾಳ ಕಡಿದಂಬಿನೊಳು (ಕುವ್ಯಾಕ. ೧೫–೨೩). [ಖುರ + ಇಡು₁]

**ಖುರಳಿ** (ನಾ). ಶಸ್ತ್ರಾಭ್ಯಾಸ; ಆಯುಧಪ್ರಯೋಗದ ಅಭ್ಯಾಸ: ಪ್ರಹರಣಶ್ರಮಂ ಖುರಳಿಯೊಳ್ (ಚಂದ್ರಪು. ೩–೯ ವ); ಕರಿಶಿಕ್ಷಾ ಕ್ರೀಡೆಯಂಮಾಡುವ ವರ ತುರಗಾರೂಢಿಯಂ ತೋರ್ಪ ಚಾಪಾದ್ಯುರು ಶಸ್ತ್ರಾಭ್ಯಾಸಮಂ ಬಿತ್ತರಿಪ ಖುರಳಿಯೊಳ್ ಸಾಧನಂಗೆಯ್ವ (ಕುಸುಮಾ. ೨–೮೨). [< ಸಂ. ಖುರಲೀ]

**ಖುರಾಕು** (ನಾ). ೧. ಪುಷ್ಟಿಕರವಾದ ಆಹಾರ; ಅಶಕ್ತತೆಯನ್ನು ದೂರಮಾಡಲು ಕೊಡುವ ವಿಶೇಷಾಹಾರ: ಪಂಜಾಬಿ ಪೈಲವಾನರಿಗೆ ಕೊಡುವ ಖುರಾಕನ್ನು ಅವನು ಉಳಿದ ಕುಸ್ತಿಗಡಿಗಳಿಗೆ ಕೊಡುತ್ತಿರಲಿಲ್ಲ (ಗ್ರಾಮಾಯ. ೪೫೯). ೨. (ಆಲಂ) ಲಂಚ: ಅಕೌಂಟೆಂಟರೂ ಶ್ಯಾಮರಾಯರನ್ನು ಖುರಾಕಿಗಾಗಿ ಅಷ್ಟು ಹಿಂಡುತ್ತಿರಲಿಲ್ಲ (ದೀಪಹ. II, ೨೩೨). [← ಪಾರ. ಹಿಂ. ಮರಾ. ಖುರಾಕ್]

**ಖುರಾಣ** 'ಕುರಾನು' ನೋ.

**ಖುರಾನ್** 'ಕುರಾನು' ನೋ.

**ಖುರಾಸಾಣಿ** 'ಖುರಾಸಾನಿ' ನೋ.

**ಖುರಾಸಾನಿ,** ಕುರುಸಾನಿ, ಕೋರಾಸಾನಿ, ಖುರಾಸಾಣಿ, ಖುರೇಸಾನಿ, ಖೋರಾಸಾನಿ (ನಾ). ೧. ಇರಾಣ ದೇಶದ ಪೂರ್ವಕ್ಕೆ ಇರುವ 'ಖುರಾಸಾನ್' ಎಂಬ ದೇಶದಲ್ಲಿ ವಾಸಿಸುವ ವ್ಯಕ್ತಿ; ಖುರಾಸಾನ್ ದೇಶದಿಂದ ಬಂದ ವ್ಯಕ್ತಿ: ಕನ್ನೋಜಿಗಳು ಪಂಡಿತರು ಖುರಾಸಾನಿ ಮನ್ನೆಯ ಗುಜ್ಜರಾತಿಗಳು (ಕಂನವಿ. ೧೨–೬೬). **ಕುರುಸಾನಿ:** ೨. ಒಂದು ಬಗೆಯ ಓಮ; ಅಜಿವಾನ: ನೆಲಗುಳ್ಳ, ಮರದರಿಸಿನ . . . ಕುರುಸಾನಿ, ವಾದಕ್ಕಿ . . . ಇವುಗಳನ್ನು ಕಷಾಯ ಕಾಯಿಸಿ ಸೇವಿಸಲು ಸ್ವರ ಸುಸ್ವರವಾಗುವುದು (ಸಕವೈ. ೧೨೨). **ಕೋರಾಸಾನಿ:** ೧. ಹತ್ತುಸಾವಿರ ಕುದುರೆಯ ಜಾಯಿ ಮಲ್ಲುಕ ಮತ್ತೆ ಕೋರಾಸಾನಿಗಳು ಮುತ್ತಿಗೆಯನು ಮಾಡಿದರು (ಕುರಾಸಾಂ. ೨೦–೨೨). **ಖುರಾಸಾಣಿ:** ೨. ಜಾಯಿಕಾಯಿ, ಖುರಾಸಾಣಿ, ಶುಂಠಿ, ಮೆಣಸು, ಹಿಪ್ಪಲಿ . . . ಇಷ್ಟನು ಸಮಾಂಶವಾಗಿ (ವೈದ್ಯಸಾ. I, ೨೧೪). **ಖುರೇಸಾನಿ:** ೧. ನೆರೆ ಗುಜ್ಜರಾತಿ ಕನ್ನೋಜಿ ಖುರೇಸಾನಿ ಬಿರುದಿನವರ ಪಟಾಣಿಗಳು (ಕಂನವಿ. ೧೧–೯೪). **ಖೋರಾಸಾನಿ:** ೧. ಚೀನ ಮುಂಗುಲಿಯಿಂಗ ವಂಗ ಬರ್ಬರ . . . ಕೋಸಲ ಖೋ[ಪಾಠಾಂ. ಕೋ]ರಾಸಾನಿಗಳೆಸೆದರಂದದಲ್ಲಿ (ಕುರಾಸಾಂ. ४೦–೨೩). [← ಪಾರ. ಹಿಂ. ಖುರಾಸಾನೀ]

**ಖುರಾಸಾನಿಬೋರೆಹಣ್ಣು** (ನಾ). ಒಂದು ಬಗೆಯ ಬೋರೆಹಣ್ಣು. (ಮೈಔಗಿ. ೬೯–೧೬೩). [ಖುರಾಸಾನಿ + ಬೋರೆ₂ + ಹಣ್ಣು (< ಪಣ್₂)]

**ಖುರಾಹತಿ** (ನಾ). ಗೊರಸಿನ ಏಟು, —ಹೊಡೆತ: ಅತಿಮಲಿನಾಂಗಮಾದ ಜಗಮಂ ಭವದೀಯ ಹಯಸ್ಫುರತ್ಖುರಾಹತಿಯಂ . . . ಲಯಮೆಯ್ದುವಲ್ಲಿ (ಜಗವಿ. ೧–೬೪). [ಖುರ + ಆಹತಿ]

**ಖುರೆ, ಕುರ್ರೆ** (ನಾ). ಬೆಳ್ಳಿ; ಶುದ್ಧವಾದ ಬೆಳ್ಳಿ: ಬೆಳ್ಳಿ (ಖುರೆ) ೫೦೦ ಭಾರಕ್ಕಿಂತ ಕಡಿಮೆ ಖರೀದಿಗೆ ಅಡತ, ಹಕ್ಕು, ಶಾಯಿ, ದಲಾಲಿ ಮತ್ತು ಧರ್ಮಾದಾಯ.(ಮುಂಬವ್ಯಾ. ೩೫ ಪ್ರಸ್ತಾವ). **ಕುರ್ರೆ:** (ಕ). [← ಮರಾ. ಖುರ]

**ಖುರೇಸಾನಿ** 'ಖುರಾಸಾನಿ' ನೋ.

**ಖುರ್ಚಿ** 'ಕುರ್ಚಿ₁' ನೋ.

**ಖುರ್ಚೆ** 'ಕುರ್ಚಿ₁' ನೋ.

**ಖುರ್ದ್‌ಬರ್ದ್** 'ಖುರ್ದುಬರ್ದು' ನೋ.

**ಖುರ್ದುಫರ್ದು** 'ಖುರ್ದುಬರ್ದು' ನೋ.

**ಖುರ್ದುಬರ್ದು,** ಖುರ್ದ್‌ಬರ್ದ್, ಖುರ್ದುಫರ್ದು (ನಾ). ಸರಕಾರೀ ಹಣವನ್ನು ಮೋಸದಿಂದ ಸ್ವಂತಕ್ಕೆ ಬಳಸಿಕೊಳ್ಳುವಿಕೆ; ದುರುಪಯೋಗ; ಅಪಹಾರ: ಮಾಜಿ ಅಮೀಲ, ಶಿರಸ್ತೆದಾರ ವಗೈರೆ ಜನರುಗಳ ಖುರ್ದುಬರ್ದು, ಛಪಾವಣೆ ವಿಚಾರಗಳಲ್ಲಿ ನಡೆಸತಕ್ಕ ಕ್ರಮ (ಮಹಾವಂ. II, ೫೭). **ಖುರ್ದ್‌ಬರ್ದ್:** "ಸಾರ್ವಜನಿಕ ಹಣದ ದುರುಪಯೋಗ" (ರೈಸ್‌ಗೆ. II, ೫೫೩). **ಖುರ್ದುಫರ್ದು:** ಗ್ರಾಮಾಧಿಪತಿಗೆ ಕೊಟ್ಟಿರುವ ಅಧಿಕಾರವನ್ನು ನ್ಯಾಯವಾಗಿ ವಿನಿಯೋಗಿಸದೆ ಖುರ್ದುಫರ್ದು ನಡಸಿದರೆ ತಾನೇ ಶಿಕ್ಷೆಗೆ ಗುರಿಯಾಗುವನೆಂದು ತಾನು ಮನಸ್ಸಿನಲ್ಲಿ ದೃಢವಾಗಿ ಇಟ್ಟುಕೊಂಡಿರಬೇಕು (ಗ್ರಾಮಾಕ. ೬೫). [← ಪಾರ. ಹಿಂ. ಖುರ್ದ್‌ಬರ್ದ್]

**ಖುರ್ನಾಸ** 'ಖುರ್ನೀಸು' ನೋ.

**ಖುರ್ನಿಷ್** 'ಖುರ್ನೀಸು' ನೋ.

**ಖುರ್ನೀಸು,** ಖುರ್ನಾಸ, ಖುರ್ನಿಷ್ (ನಾ). ನಮಸ್ಕಾರ; ವಂದನೆ: (ಕ). **ಖುರ್ನಾಸ:** (ಕ). **ಖುರ್ನಿಷ್:** ನನ್ನ ತಪ್ಪನ್ನು ಕ್ಷಮಿಸಬೇಕು ಎಂದು ಖುರ್ನಿಷ್ ಮಾಡಿದರು (ಕಭವಿ. II, ೨೪೬). 'ಕುರ್ನಿಸಾತು' ಪರಾ. [← ತುರ್ಕಿ. ಕೋರ್ನಿಶಾತ್]

**ಖುರ್ಪಿ** 'ಕುರುಪೆ₁' ನೋ.

**ಖುಲಾಯಿಸು** (ಕ್ರಿ). ತೆರೆ; ಬಿಚ್ಚು; ಅರಳು; ಕುದುರು: ಕಜಿಯಾ ಆಗಿ ಇರುವಂಥಾದ್ದು ವಿಸ್ತಾರ ಮಾಡುವದರಲ್ಲಿ ಖುಲಾಯಿಸುವುದಕ್ಕೆ ಸೌಖ್ಯವಾಗಿ ಇರುವಂಥಾದ್ದಕ್ಕೆ ವೈಷಮ್ಯಬಾರದೆ ಇರುವಂತೆಯೂ (ರಾಜೇಂದ್ರ. ೮೧); ಸರಿಯಾದ ಕಡೆ ಅಂಗಡಿ ಇಟ್ಟರೆ ಅದೃಷ್ಟ ಖುಲಾಯಿಸೋದೇನೂ ಆಶ್ಚರ್ಯವಲ್ಲ (ಮಾರ್ಗದ. ೩); ಸದಾನ ಅದೃಷ್ಟ ಖುಲಾಯಿಸಿತು (ಅನ್ನಪೂ. ೩೫). [ಖುಲ್ಲಾ (< ಕುಲ್ಲಾ) + -ಇಸು₃]

**ಖುಲಾಸ** 'ಕುಲಾಸ್' ನೋ.
**ಖುಲಾಸವಾರ,** ಖುಲಾಸೇವಾರ (ಗು). ಸ್ಪಷ್ಟವಾದ; ಬಿಡಿಬಿಡಿಸಿ ಹೇಳಿದ; ವಿವರವಾದ: ಇದರ ವಿಷಯಕ್ಕೆ ಖುಲಾಸವಾರ ಮಾಹಿತಿ ಆ ಜನರಿಗೆ ತಿಳಿಸದೆ ಇದ್ದರೆ (ಮುಂಬವ್ಯಾ. ೧೦ ಪ್ರಸ್ತಾವ). **ಖುಲಾಸೇವಾರ:** ಕೆಲವು ನಮ್ಮ ಆಸಾಮಿಗಳು . . . ಖುಲಾಸೇವಾರ ಬರಿಯದೆ. . .ಸುಮಾರು ಕಳಿಸಿರೆಂದು ಬರೆಯುತ್ತಾರೆ (ಮುಂಬವ್ಯಾ.೬೭).
[ಖುಲಾಸ (< ಕುಲಾಸ್) + –ವಾರ$_4$]
**ಖುಲಾಸಾ** 'ಖುಲಾಸೆ' ನೋ.
**ಖುಲಾಸು** 'ಖುಲಾಸೆ' ನೋ.
**ಖುಲಾಸೆ,** ಖುಲಾಸಾ, ಖುಲಾಸು (ನಾ). ೧. ಬಿಡುಗಡೆ ; ಮುಕ್ತಿ : ಕೇಸಿನಲ್ಲಿ ನಿನಗೆ ಖುಲಾಸೆಯಾಯಿತಂತೆ (ಪಂಜಪಂ. ೧೪೨) ; ಖುಲಾಸೆಯಾದ ಅಪರಾಧಿ ಫರಾರಿಯಾಗುವುದರೊಳಗಾಗಿ (ಕಲನೆ. ೧೨೬) ; ಅಪರಾಧಿಯನ್ನು ಖುಲಾಸೆಮಾಡಲಿಕ್ಕೆ ಆಗುವುದಿಲ್ಲ (ದೌಲತ್. ೧೧೬) ; ಸದರೀ ಸ್ವತ್ತನ್ನು ಜಪ್ತಿಯಿಂದ ಖುಲಾಸೆ ಮಾಡಬಹುದು(ಗ್ರಾಮಾಕ.೩೮). ೨. ತೆರವಾಗುವಿಕೆ ; ಖಾಲಿಯಾಗುವಿಕೆ ; ಬಿಡುಗಡೆಯಾಗುವಿಕೆ : ರಾಣಿಯ ಸೈನ್ಯವು ಬಹಳ ದಿನಗಳಿಗೆ ಮುಂಚೆಯೇ ಖುಲಾಸೆಯಾಗಿದ್ದಿತು (ಝಾರಾಣಿ. ೧೭೦). **ಖುಲಾಸಾ :** ೩. ನಿಶ್ಚಿಂತತೆ ; ಮುಕ್ತವಾದ ಮನಸ್ಸು: ಅಲ್ಲೊಂದ್ಹಲಸಾ ಇಲ್ಲಿ ಖುಲಾಸಾ (ಚಿಂತನ. ೫೯). **ಖುಲಾಸು :** ೧. ಮರಣವೆಂಬುದು . . . ನೂತನವಾದ ಸಂಪೂರ್ಣ ಜೀವನಕ್ಕೆ ಹೋಗುವ ದಾರಿಯನ್ನು ಖುಲಾಸು ಮಾಡುತ್ತದೆ (ನಿಷ್ಕಾಮ. ೧೫೧) ; ಅವನಿಗೆ ವರ್ಷಕ್ಕೆ ೪೦೦೦ ಪೌಂಡುಗಳಂತೆ ನಿವೃತ್ತಿವೇತನವನ್ನು ಕೊಟ್ಟು ಖುಲಾಸುಮಾಡಿದರು (ಪಾಶ್ಚಾವಿ. ೨೫). [← ಅರ. ಹಿಂ. ಮರಾ. ಖುಲಾಸಾ]
**ಖುಲಾಸೆಹುಕುಮು** (ನಾ). ಬಿಡುಗಡೆಯ ಆಜ್ಞೆ, —ಅಪ್ಪಣೆ : ೧೯೦೪ನೆ ಇಸವಿಯ ಕ್ರಿಮಿನಲ್ ಪ್ರೊಸೀಜರ್ ಕೋಡಿಗನುಗುಣವಾಗಿ ಖುಲಾಸೆಹುಕುಮಿನ ಮೇಲೆ(ಗ್ರಾಮಾಕ.೧೭೪). [ಖುಲಾಸೆ+ಹುಕುಮು]
**ಖುಲಾಸೇವಾರ** 'ಖುಲಾಸವಾರ' ನೋ.
**ಖುಲಿಖುಲಿ** 'ಕುಲಿಕುಲಿ' ನೋ.
**ಖುಲ್ಲ$_1$** (ಗು). ೧. ಚಿಕ್ಕದಾದ ; ಅಲ್ಪವಾದ ; ಕ್ಷುದ್ರವಾದ : ಖುಲ್ಲರಿಪುಗಳ ಬಿಸುಟು ಹೊದರಿನ ಹೊಳ್ಳುಗರನೊಡೆಹಾಯ್ಸಿ (ಕುವ್ಯಾದ್ರೋ. ೨–೩೦) ; ಖುಲ್ಲಮಪ್ಪೀ ಮನವೆಲ್ಲ ಹೊತ್ತಿನೊಳು ಅತಿಸಲ್ಲೀಲೆಯಿಂದಿರುತಿಹುದು (ಶ್ರೀಪಾಲ. ೧–೧೭) ; ಖುಲ್ಲ ಮಾನವ ಬೇಡೆ ಕಲ್ಲು ತಾ ಕೊಡುವನೇ (ಸರ್ವಜ್ಞ. ೨೪೧) ; ನಲ್ಲಾಟವಾಡುವೆ ಖುಲ್ಲಮನವೆ (ಮೈಲಾರ. ೧೯೮–೮). (ನಾ). ೨. ಅಲ್ಪತನ ; ಕ್ಷುದ್ರತೆ ; ಅಧಮತೆ : ಅಧಿಕ ಖುಲ್ಲವನಿಕ್ಕಿಕೊಂಡಿಹರಂತರಂಗದೊಳು (ಶಂಕದಾ. ೧೬–೪೫). ೩. ಅಲ್ಪನಾದವನು ; ಖೂಳ : ಆಗುಹೋಗನರಿಯದೆ ಜ್ಞಾನಕ್ಕೆ ನನಗವರರ್ಹರೆಂಬ ಖುಲ್ಲರ ನೋಡಿ ಜಾಣನಾಗಿ ಅಡಗಿದೆಯಲ್ಲಾ (ಮೊಳಮಾ. ೧೦೨–೪೦೯) ; ಕಲ್ಲುಪ್ಪು ಕರ್ಪುರವು ಸೊಲ್ಲೆರಡು ಧಾತೊಂದು ಖುಲ್ಲನೊಳ್ಳಿದನ ರೂಪೊಂದು ಗುಣದೊಳಗೆ ಎಲ್ಲ ಅಂತರವು (ಸರ್ವಜ್ಞ. ೮೧೨). [ಸಂ.]
**ಖುಲ್ಲ$_2$** 'ಕುಲ್ಲಾ' ನೋ.
**ಖುಲ್ಲಕ** (ಗು). ಕ್ಷುಲ್ಲಕ ; ಅಲ್ಪ. [ಸಂ.]
**ಖುಲ್ಲತನ** 'ಕುಲ್ಲತನ' ನೋ.
**ಖುಲ್ಲರಿಸು** (ಕ್ರಿ). (?) : ಕಲ್ಲೆದೆಯೊಳಿಹ ಭಟರು ಕಾಲಾಳು ಮೇಲಾಳು ಖುಲ್ಲರಿಸೆ ಧರಣಿಯಂ ಪೊತ್ತಿರ್ದ ಫಣಿರಾಜ ಹಲ್ಲಬಿಡೆ ದಿಗ್ಗಜಂ ಡೆಂಡಣಿಸೆ ಕೂರ್ಮ ಕುಪ್ಪಳಿಸಿದಂ ದಳ ನಡೆಯಲು (ತುರಂಗ. ೪೨–೨೭). [?]

**ಖುಲ್ಲಾ** 'ಕುಲ್ಲಾ' ನೋ.
**ಖುವತ್ತು** 'ಕುವತ್ತು' ನೋ.
**ಖುಶಾಲ್** 'ಕುಶಾಲು' ನೋ.
**ಖುಶಾಲ** 'ಕುಶಾಲು' ನೋ.
**ಖುಶಾಲಿ** (ನಾ). ೧. ಖುಷಿ ; ಸಂತೋಷ. ೨. ಬಕ್ಷೀಸು ; ಖುಷಿಗಾಗಿ ಕೊಡುವ ಹಣ : ಇವನು ಮೋತಿಚಂದನ ಬಳಿಯಲ್ಲಿ 'ಖುಶಾಲಿ' ಬೇಡಿದನು (ಮೋಹನೀ. ೭೫) ; ಕೈತುಂಬ ಖುಶಾಲಿ ಸಿಗುತ್ತಿತ್ತು (ನಡೆದಾ. II, ೧೧೯೦). [← ಮರಾ. ಖುಶಾಲೀ]
**ಖುಶಾಲು** 'ಕುಶಾಲು' ನೋ.
**ಖುಶಿ,** ಕುಶಿ$_2$, ಕುಷಿ, ಕುಸಿ$_4$, ಖುಷಿ, ಖುಸಿ (ನಾ). ೧. ಹಿಗ್ಗು ; ಸಂತೋಷ ; ಆನಂದ : ಮೂರು ಸಂಸ್ಥಾನದವರು ವಪ್ಪಿ ಖುಶಿಯಿಂದ ನಂಬಿಗೆ ಭಾಷೆಯಿಂದ ನಿಶ್ಚೈಸಿದ ಮೇರೆ (ರಾಜೇಂದ್ರ. ೪೪) ; ಗುಡಿಸಲನ್ನು ಎತ್ತಿ ಸರಿಪಡಿಸುವವರನ್ನು ನೋಡಿ ಅವನಿಗೆ ಖುಶಿ ಬಂತು (ಕಣ್ಮಣಿ. ೫೩) ; ಸಂತೋಷದ ಸುದ್ದಿ ಕೇಳಿ ಹುಡುಗನ ತಾಯಿ ಖುಶಿಯಿಂದ ತನ್ನ ಒಪ್ಪಿಗೆಯನ್ನು ಸೂಚಿಸಿದ್ದೂ ಆಯಿತು (ಮೂರುದಾ. ೯೪). ೨. ಮೆಚ್ಚುಗೆಯಾಗಿ ಕೊಡುವ ಹಣ ; ಭಕ್ಷೀಸು : "ಖುಶಿ–ಮೆಚ್ಚುಗೆಯ ಹಣ" (ಜಾನಕೋ. ೪೩) ; ಹಬ್ಬದ ಖುಶಿ ಕೇಳುವುದಕ್ಕಾಗಿ ಆಳು ಒಡೆಯನ ಬಳಿಗೆ ಬಂದನು (ರೂಢಿ). **ಕುಶಿ$_2$ :** ೧. ಬಸವನ ವ್ರತವ ಬಿಜ್ಜಳ ಕೇಳಿ ಮನದೊಳು ಕುಶಿಯಾಗಿ (ಬಿಜ್ಜರಾ. ೮–೫೬) ; ಅಸುರೆಂದು ನೀ ಕುಶಿ ಪಡೆಯದೆ ಮೃದು ಉಸುರುತ (ಸಮುಮ. ೩೦). **ಕುಷಿ :** ೧. ಮನುಷ್ಯ ಪ್ರಯೋಜನಕ್ಕೆ ಬರುತ್ತಾನೆ. ಕೊಂಚ ಕುಷಿಮಾಡಿ ಕಳಿಸೋಣ (ಅಭಿಮಾ. ೪೮). **ಕುಸಿ$_4$ :** ೧. ಚೆಲ್ವಿನಿಂ ನಿರ್ಜರರ ಪುರವೆನಿಸಿ ನಗರ ಮೇಣ್ ಕುಸಿಯಾಯ್ತು ತ್ರಿಪುರದಭಿಧಾನದಿಂ (ಪರಶು. ೪೩–೩೪) ; ಅವ ಕುಸಿಲಿ ಬಂದನು ರಾಜನಾಸ್ಥಾನಕ್ಕೆ (ಸೌಂದಕಾ. ೧–೭೬). **ಖುಷಿ :** ೧. ನಾವು ಖುಷಿಯಿಂದ ನಮ್ಮ ಶೀಮೆಯಲ್ಲಿ ಇದ್ದೇವು(ರಾಜೇಂದ್ರ. ೧೪); ಆ ದ್ರೌಪದಿಯ ಸಾಹಸವನ್ನು ಕಂಡು ಅವನಿಗೂ ಖುಷಿಯಾಯಿತು (ಸ್ವಪ್ನಹೊ. ೪೨). ೨. ಪಾರ್ವತಿ . . . ಸಾತೂನಿಗೆ ಒಂದು ರೂಪಾಯಿ ಖುಷಿ ಕೊಟ್ಟಳು (ಕುಂಕುಮ. ೨೩); ಹಿರಿಯನು . . . ಖುಷಿಗೆಂದು ೪ ರೂಪಾಯಿ ಕೊಟ್ಟು (ದಾಸಹು. ೩೧). ೩. ಇಚ್ಛೆ ; ಇಷ್ಟ ; ಮರ್ಜಿ : ನಮ್ಮ ಖುಷಿ ನೀವು ಕೇಳಬೇಕಾದ್ದೇ ಇಲ್ಲ (ಚಂದತೋ. ೧೫೬) ; ನಿಮಗೆ ಖುಷಿ ಬಂದಂತೆ ಮಾಡಬಹುದು (ಪುನರು. ೧೫೪) ; ಒಂದೊಂದು ಸಾರಿ, ಮನುಷ್ಯನಿಗೆ ಮೀರಿದ ಯಾವುದೇ ಶಕ್ತಿಯ ಲೀಲೆ ಅಥವಾ "ಖುಷಿ" ಎನ್ನಿಸುತ್ತದೆ (ಬಂಕಿಮ. ೧೧೨). ೪. ವಿನೋದ ; ಹಾಸ್ಯ : ಮಕ್ಕಳ ಖುಷಿಗೋಸ್ಕರ ನರಹರಿರಾಯ ಕೋತಿಯಂತೆ ಕುಣಿದ (ಸಾವಿಸ. ೪೮) ; ಖುಷಿಗಳಿಂದ ಭಾಷೆ ಹುಟ್ಟಿತೆಂಬುದು ಖುಷಿಗೆ ಹೇಳಿದ ಕುಶಾಲು ಮಾತೇ ಹೊರತು ಸತ್ಯ ಸಂಗತಿಯಲ್ಲ (ದ್ರಾವಿವಿ. ೯೧). **ಖುಸಿ :** ೧. ಸೊಸಿಯು ಬರತಾಳಂತ ಖುಸಿ ಭಾಳ ಮನದಾಗ (ಗರತಿ. ೫೯) ; ಮತ್ತೇನು, ಈಗಾದಪ್ರೊ ಖುಸೀನ ? (ತಿಡುಗು. ೩೯). [← ಪಾರ. ಹಿಂ. ಮರಾ. ಖುಶೀ]
**ಖುಷಾದು** (ನಾ). ಮುಕ್ತವಾದುದು ; ಅನಿರ್ಬಂಧವಾದುದು : ಇವನಿಗೆ ಯಾವುದೋ ಒಬ್ಬ ದೇಸಾಯಿ ಹದಿನೈದು ಕೂರಿಗೆ ಜಮೀನನ್ನು ಖುಷಾದಾಗಿ ಇನಾಮು ಕೊಟ್ಟಿದ್ದನಂತೆ (ಎಳಕ. ೨೪).
[← ಮರಾ. ಖುಶಾದ್ ; ಪಾರ. ಕುಶಾದ್]
**ಖುಷಾಮತಿ** 'ಕುಶಾಮತ್ತು' ನೋ.
**ಖುಷಾಮತು** 'ಕುಶಾಮತ್ತು' ನೋ.
**ಖುಷಿ** 'ಖುಶಿ' ನೋ.

**ಖುಷಿಗಾರ** (ನಾ). ಹಿಗ್ಗಿನವನು ; ಸಂತೋಷಪಡುವವನು : ನಾನು ಖುಷಿಗಾರ, ನನಗೆ ಎಲ್ಲರೂ ಬೇಕು (ಮಲೆನಾ. ೬೫).
[ಖುಷಿ (< ಖುಶಿ) + –ಗಾರ$_1$ (< –ಕಾಱ)]

**ಖುಷಿಪಡಿಸು** (ಕ್ರಿ). ಹಿಗ್ಗನ್ನುಂಟುಮಾಡು ; ಸಂತೋಷಪಡಿಸು ; ಪ್ರಸನ್ನಗೊಳಿಸು : ಖುಷಿಪಡಿಸಬಲ್ಲ ಒಂದು ಮಾತಾಡಬೇಕೆನ್ನಿಸಿತು (ಹೊಸಕ್ಷಿ. ೧೦೨). [ಖುಷಿಪಡು + –ಇಸು$_3$]

**ಖುಷಿಪಡು** (ಕ್ರಿ). ಹಿಗ್ಗು ; ಸಂತೋಷಪಡು. 'ಖುಷಿಪಡಿಸು' ಪರಾ.
[ಖುಷಿ (< ಖುಶಿ) + ಪಡು$_1$]

**ಖುಷ್ಕರೀದಿ** (ನಾ). ಯಾವುದೇ ನಿರ್ಬಂಧಕ್ಕೊಳಗಾಗದೆ ಸ್ವಸಂತೋಷದಿಂದ ಮಾಡಿದ ಖರೀದಿ ; ಮುಂಗಡ ಪಡೆಯದೆ, ವಿವಾದವಿಲ್ಲದೆ ಮಾಡಿದ ಖರೀದಿ : (ಶಿ).
[ಖುಷ್$_0$ + ಕರೀದಿ$_0$ (< ಖರೀದಿ)]

**ಖುಷ್ಕಿ** 'ಕುಷ್ಕಿ' ನೋ.

**ಖುಷ್ಕಿಪೈರು** (ನಾ). ಒಣ ಭೂಮಿಯಲ್ಲಿ ಬೆಳೆಯುವ ಪಯಿರು ; ಹೊಲದ ಬೆಳೆ : ಮೇಲೆ ಹೇಳಿರುವ ವಿಷಯಗಳೆಲ್ಲ ಸಾಮಾನ್ಯವಾಗಿ ಖುಷ್ಕಿಪೈರುಗಳಿಗೆ ಅನ್ವಯಿಸುತ್ತವೆ (ವ್ಯವಮು. ೨೪).
[ಖುಷ್ಕಿ (< ಕುಷ್ಕಿ) + ಪೈರು (< ಪಯಿರ್)]

**ಖುಷ್ಬಾಷ್** 'ಕುಷ್‌ಬಾಷ್' ನೋ.

**ಖುಸಿ** 'ಖುಶಿ' ನೋ.

**ಖುಳಖುಳ** (ನಾ). ಒಂದು ಅನುಕರಣ ಶಬ್ದ : ಖಳನು ಖುಳಖುಳನೆಂದು ಕೂಗಲು ಕೋಟಿ ಸಿಡಿಲಿನ ರಭಸದಿ (ಪುರಂದ. ೩–೧೧೨–೨).

**ಖುಳುಖುಳು** (ನಾ). ಒಂದು ಅನುಕರಣ ಶಬ್ದ : ಕುದುರೆಯ ಮೈಯಲ್ಲಿ ನಡೆವಾಗ ಓಡುವಾಗ ಖುಳುಖುಳು ಎಂಬ ದನಿ ಹುಟ್ಟುವುದು (ಅಶ್ವಟೀ. ೨೦–೪).

**ಖೂನ್** 'ಖೂನಿ' ನೋ.

**ಖೂನ** 'ಕೂನ$_2$' ನೋ.

**ಖೂನದೋರು** (ಕ್ರಿ). ಗುರುತನ್ನು ಕಾಣಿಸು ; ಸುಳಿವುದೋರು : ನೀನು ಖೂನದೋರದಿದ್ದರೆ ಪ್ರಾಣ ನಿಲ್ಲದೊ ನಿಮಿಷಾರ್ಧವಿಲ್ಲಿ . . . ಎಂದವರು ಉಸುರುವರು (ಪರಪ. ೬೬).
[ಖೂನ (< ಕೂನ$_2$) + ತೋರು (< ತೋಱು$_1$)]

**ಖೂನವಱಿ** (ಕ್ರಿ). ಗುರುತಿಸು ; ಲಕ್ಷಣವನ್ನು ತಿಳಿ : ನೀನು ಎನ್ನ ಸ್ವಾಮಿ ನಾನು ಭೃತ್ಯನೆಂದು ಖೂನವಱಿದನ ಕುಡತಿ ಜಲವ ಪಿಡಿದು (ವಿಪ್ರಸು. ೩೪–೪). [ಖೂನ (< ಕೂನ$_2$) + ಅಱಿ$_1$]

**ಖೂನಿ, ಖೂನ್, ಖೂನು** (ನಾ). ಕೊಲ್ಲುವಿಕೆ ; ವಧೆ : ಉದ್ಧೂರಿಗೈದಿಯಾ ಖೂನಿ ದರ್ಯಾಫ್ತನ್ನು ಮಾಡಿ (ಅರ್ಜಾವಿ. ೩೧–೨೮) ; ಮೋತೀಬಜಾರಿನಲ್ಲಾದ ಖೂನಿಗಳ ವಿಚಾರ ನೀವು ಓದಿಲ್ಲವೆ (ರತ್ನಗೂ. ೩೮) ; ಖೂನಿ ಮಾಡಿದವ ಹೆಣ ಮುಚ್ಚಿಡ್ತಾನ ಅಂತ (ನಡೆದಾ. I, ೩೩೭) ; ಅವನು ಖೂನಿ ಅಸಾಮಿಯೇನು ? (ಭಾರತಿ. ೨೬) ; ಖೂನಿಗೆ ಮರಣದಂಡನೆ ವಿಧಿಸಿದರು (ರೂಢಿ). **ಖೂನ್** : (ಕ್ರೈಸ್ತಗ. II, ೫೫೩). **ಖೂನು** : ಎಲ್ಲೊ ಗಲಾಟೆ, ಖೂನು, ದರೋಡೆ (ಸೂರ್ಯಪಾ. ೫೦–೬) ; ಚಿಕ್ಕಬಾಬುಗಳ ಖೂನಾಗಿ ಹೋಗಿದೆ (ಸಾಹೇಬ್. ೫೮೩). [← ಪಾರ. ಹಿಂ. ಮರಾ. ಖೂನ್]

**ಖೂನಿಗಾರ** (ನಾ). ಖೂನಿಮಾಡುವವನು ; ಕೊಲೆಗಾರ : ನಿನ್ನನ್ನು ಖೂನಿಗಾರರು ವಾಸಿಸುವ ಕತ್ತಲಿನ ಜೈಲಿಗೆ ಸೇರಿಸುತ್ತೇನೆ (ಗೋಪುರ. ೪). [ಖೂನಿ + –ಗಾರ$_1$ (< –ಕಾಱ)]

**ಖೂನು** 'ಖೂನಿ' ನೋ.

**ಖೂಬ, ಖೂಬು** (ಅ). ಹೆಚ್ಚಾಗಿ ; ಹೇರಳವಾಗಿ : ಛಟಾರಜಿ . . . ನಿಮಗ ಪೈಸಾ ಖೂಬ ಕೊಡ್ತಾವ (ಸ್ವಾವಲಂ. ೮). **ಖೂಬು** : (ಶಿ).
[← ಪಾರ. ಹಿಂ. ಮರಾ. ಖೂಬ್]

**ಖೂಬಿ** 'ಖುಬಿ' ನೋ.

**ಖೂಬು** 'ಖೂಬ' ನೋ.

**ಖೂಳ** 'ಕೂಳ' ನೋ.

**ಖೂಳತನ** 'ಕೂಳತನ' ನೋ.

**ಖೂಳೆ** 'ಕೂಳೆ$_4$' ನೋ.

**ಖೂಳೆಜಿಯ** (ನಾ). ನೀಚಪ್ರಭು : ಖೂಳೆಜಿಯರು ಚತುರಾಕಾರರಂ ಮೆಚ್ಚದಂತೀ ಧರೆಯೊಳು ದಾರ್ಜನ್ಯರೆಲ್ಲಂ ಪರಕೃತಿನುತಿಗಂ ಸಲುವರ್ (ಪುಣ್ಯಾಸ್ರ. ೧–೨೪). [ಖೂಳ + ಎಜಿಯ]

**ಖೂಟಿ** 'ಕೂಟಿ' ನೋ.

**ಖೆಕಾಟೆ** 'ಖೇಕಾಟಿ' ನೋ.

**ಖೆಕ್ಕು** (ಕ್ರಿ). ಎಸೆ ; ಬಿಡು ; ಹೂಡು (?) : ಉಕ್ಕಿದರು ಬಲ್ಲೆಯದಿ ಸುಭಟರು ಖೆಕ್ಕಿದರು ಮೊನೆಗಣೆಯ ಬೋಳೆಯ ವಿಕ್ಕವರು ಸುರನಾರಿಯರ ತೋಳಿನಲಿ ಅಪ್ಪಿದರು (ಮೂಲರಾ. ೪–೧೭). [< ಸೆಕ್ಕು ?]

**ಖೆಡಿಲೆ** (ನಾ). ಒಂದು ಜಾತಿಯ ಕುದುರೆ (?) : ನಾಫೇಣಿಂದಂ ಮೇಲೆ ಹೊಳೆಯ ಕುದುರೆ 'ಖೆಡಿಲೆಯ ಕುದುರೆ ನಾಡಕುದುರೆಗೆ ಪ್ರತಿ ಗದ್ಯಾಣ ಒಂದಕ್ಕಂ ಬೇಳೆ (ಎಕ. V, ಬೇಲೂರು. ೭೫–೧೧೧ ; 1352). [?]

**ಖೆಡೆಯ** 'ಖೇಡೆಯ' ನೋ.

**ಖೆಡ್ಡಾ** 'ಕೆಡ್ಡಾ' ನೋ.

**ಖೆತ್ರಿ** (ನಾ). ೧. ಕ್ಷತ್ರಿಯರಲ್ಲಿ ಒಂದು ಜಾತಿ : ಬೈಲುಗಂಬಾರರು – ಇವರ ಅಡ್ಡ ಹೆಸರು ಚವಾಣ . . . ಖೆತ್ರಿ . . . ಇತ್ಯಾದಿ (ಕಭಾಗ. ೧೫೭). ೨. ಒಂದು ಕ್ಷುದ್ರದೇವತೆ : ನಿರಂಕಾರ, ಜಟ್ಟಿಗ, ಖೆತ್ರಿ . . . ಎಂಬ ದೇವತೆಗಳಿಗೆ ಇವರು ನಡಕೊಳ್ಳುವರು (ಕಭಾಗ. ೧೩೮).
[← ಮರಾ. ಖೇತ್ರೀ]

**ಖೇಕರಿಸು** 'ಕೇಂಕರಿಸು' ನೋ.

**ಖೇಕಾಟೆ, ಖೆಕಾಟೆ** (ನಾ). ದೊಡ್ಡ ಧ್ವನಿಯಿಂದ ಮಾಡುವ ಉತ್ಸಾಹದ ಕೂಗು ; ಕೇಕೆ : ಹರುಷ ವಿಸ್ಮಯಗಳಿಂದ ಕೂಗು ಖೇಕಾಟೆಗಳನ್ನು ಊರು ದರುವುಹಿಡಿಯುವಂತೆ ಹಾಕುವವರೇ (ಕರಿಹಾ. ೩೩). **ಖೆಕಾಟೆ** : ಹಳ್ಳಿಗರು ಹಾಕುತ್ತಿರುವ ಕೂಗು ಖೆಕಾಟೆಗಳಿಂದ ಉತ್ಸಾಹ ತುಂಬಿ (ಗಂಗಾಗಾ. ೧೮). [← ಮರಾ. ಖೇಕಾಟ]

**ಖೇಚಕ್ರ** (ನಾ). ೧. ಆಕಾಶಮಂಡಲ. ೨. ರಾಶಿಚಕ್ರ. ೧, ೨ : ಆ ಪಂಡಿತಂ ಕನ್ನಗಳ್ಳನಂತೆ ಬಳಪಮಂ ತೆಗೆದು : . . ಕೃಷಿನಿರತನಂತೆ ರಾಸಿಯಂ ನಿಲಿಸಿ ವಿಹಗದಂತೆ ಖೇಚಕ್ರಮಂ ವರ್ತಿಸಿ (ಸುಕುಮಾ. ೩–೬ ವ).
[ಸಂ.]

**ಖೇಚರ** (ನಾ). ೧. ಆಕಾಶದಲ್ಲಿ ಸಂಚರಿಸುವವನು ; ಗಂಧರ್ವ, ವಿದ್ಯಾಧರ ಮೊದಲಾದ ದೇವಗಣಕ್ಕೆ ಸೇರಿದವನು : ಅಪಹಸಿತ ಭೂಚರ ಖೇಚರ ರಾಜಲೀಲಾ ವಿಲಾಸವಿಭವನುಂ (ಶಾಂತಿಪು. ೧–೭೧ ವ) ; ಈಗಳಿನ ಪೊತ್ತಪ್ಪುದು ಖೇಚರನಿಶಾಚರದ್ಯುಚರ ಸಂಚಾರಮಲ್ಲದೆ ಭೂಚರಗೋಚರಮಲ್ಲಂ (ಸುಕುಮಾ. ೭–೧೮ ವ). ೨. ಸೂರ್ಯ, ಚಂದ್ರ, ನಕ್ಷತ್ರ ಮೊದಲಾದವು : ಗೆಲಿಲಿಯೋ ತನ್ನ ದೂರದರ್ಶಕದಲ್ಲಿ ಖೇಚರಗಳನ್ನು ಪರೀಕ್ಷಿಸಿದಂದಿನಿಂದ (ವಿಜ್ಞಾ. ಕ. ೪೭). ೩. ಹಕ್ಕಿ ; ಪಕ್ಷಿ. ೪. [ಯೋಗ] ಯೋಗಮುದ್ರೆಯಲ್ಲಿ ಒಂದು ಬಗೆ : ಖೇಚರದ ಮುದ್ರೆಯನು ಆಚರಿಸಲಱಿದಿಹರೆ ಲೋಚನವು ಮೂಱು ತನಗಕ್ಕು ಭೂಚರನು ಖೇಚರನಕ್ಕು (ಸರ್ವಜ್ಞ. ೫೪೭). [ಸಂ.]

**ಖೇಚರಚಕ್ರಿ** (ನಾ). ೧. ದೇವತೆಗಳ ಚಕ್ರವರ್ತಿ; ಇಂದ್ರ. ೨. ವಿದ್ಯಾಧರರ ಚಕ್ರವರ್ತಿ; ಜೀಮೂತವಾಹನ: ಮಱಿ ಪೊಕ್ಕೊಡೆ ಖೇಚರಚಕ್ರಿ ನನ್ನಿಯಂ ನುಡಿವೊಡೆ ಕರ್ಣನಾಂತೊಡೆ ಕೃತಾಂತಂ (ಎಕ. V, ಹಾಸನ. ೬೯-೪೨; 1156). [ಖೇಚರ+ ಚಕ್ರಿ]

**ಖೇಚರತ್ವ** (ನಾ). ಆಕಾಶ ಸಂಚಾರಿಯಾಗಿರುವಿಕೆ; ಆಕಾಶ ಗಮನ ವಿದ್ಯೆ: ಭೂಚರತ್ವ ಖೇಚರತ್ವ ಅತೀತ ಅನಾಗತವರ್ತಮಾನ . . . ಇವೆಲ್ಲವ ಕಲಿತಡೇನೋ (ಮ ಡಿ ಮಾ. ೪೬-೬೧); ಪಟಿ ಬಾಲಸರವ ಕೂಡಿದ್ದಡೇನು ಸೂತ್ರ ಕಿಂಚಿತ್ತು ತಪ್ಪಿದಡೆ ಅದು ಖೇಚರತ್ವದಲ್ಲಿ ಆಡಲಱಿಯದು (ಮೋಳಿಮಾ. ೬೭-೧೫೬). [ಸಂ.]

**ಖೇಚರಮಂಡಲ** (ನಾ). ಪಕ್ಷಿಗಳ ಸಮೂಹ: ಪೃಥ್ವಿಯಾಕಾಶದ ಮಧ್ಯದಲ್ಲಿ ಖೇಚರಮಂಡಲ, ಆ ಮಂಡಲದರಸು ವಿಹಂಗರಾಜ (ಕಲ್ಯಾಶಾಂ. ೧೧-೧೦೭). [ಖೇಚರ + ಮಂಡಲ]

**ಖೇಚರರಾಜ** (ನಾ). ವಿದ್ಯಾಧರ ರಾಜ, —ಅರಸು: ಪ್ರೀತಿಲತಾ ಶಾಖಾಯಮನದರ್ಪನೆಯೆಂದು ಖೇಚರರಾಜಂ (ಶಾಂತಿಪು. ೫-೩೪). [ಖೇಚರ+ ರಾಜ]

**ಖೇಚರವಾರವಧು** (ನಾ). ದೇವಲೋಕದ ಸೂಳೆ: ಚತುರ ಖೇಚರ ವಾರವಧೂ ನಿಧಾನಮಾದಿತ್ಯ ಪುರಂ ಪುರಂದರಪುರಪ್ರತಿಮಂ (ಚಂದ್ರಪು. ೬-೫). [ಖೇಚರ + ವಾರವಧು]

**ಖೇಚರಾಹಿ** (ನಾ). ಸೂರ್ಯಚಂದ್ರರನ್ನು ನುಂಗುವ ಸರ್ಪ; ರಾಹು: "ಇನರಿಪು ವಿಧುಂತುದಂ ಸ್ವರ್ಭಾನು ಸಿಂಹಿಕಾತನಯಂ ತಮಂ ಖೇಚರಾಹಿಯೆನೆ ರಾಹು" (ಮಂಗರಾ.೧೨-೭). [ಖೇಚರ+ ಅಹಿ]

**ಖೇಚರಿ** (ನಾ). ೧. ದೇವತಾಸ್ತ್ರೀ; ವಿದ್ಯಾಧರಿ: ಖೇಚರಿಯೋ ಭೂಚರಿಯೊ ನಿಶಾಚರಿಯೋ ರೂಪು ಬಣ್ಣಿಸಲ್ಕಾರ್ಗಮವಾಗ್ಗೋಚರಂ (ಪಂಪಭಾ. ೩-೧೪). ೨. = ಖೇಚರ ೪: ಷಣ್ಮುಖೀ, ಖೇಚರೀ, ಶಾಂಭವೀ ಮೊದಲಾದ ಮುದ್ರಾಭೇದಂಗಳಿಂ (ವಿವೇಕ. ೧೫೪); ಸಚರಾಚರಾತ್ಮನೊಳೈಕ್ಯಮೊಂದಿಪ ಖೇಚರಿಯ ಮುದ್ರಾವಿಶೇಷಣಮಂ ನಿರೂಪಿಸಿದ (ಗಗತಾ. ೧೨ ಸೂಚನೆ). [ಸಂ. ಖೇಚರೀ]

**ಖೇಚರಿಮುದ್ರೆ** (ನಾ). = ಖೇಚರ ೪: ಇಂತು ಖೇಚರಿಮುದ್ರೆಯುಲಿ ಜಯಮಾಂತಡಲ್ಲಿಗೆ . . . ಸ್ಥೈರ್ಯತೆಯಾಹದ್ಧೆ (ಗಗತಾ. ೧೨-೬೨). [ಖೇಚರಿ + ಮುದ್ರೆ]

**ಖೇಚರೀಮುದ್ರೆ** (ನಾ). = ಖೇಚರ ೪: ನಾದಾನುಸಂಧಾನದಲ್ಲಿ ಮನೋಮಾರುತಂಗಳು ನಿಶ್ಚಲಮಾಗಿರ್ಪುದೆ ಖೇಚರೀಮುದ್ರೆ ಎನಿಸುವುದು (ಅಖಂಡೇ. ೨೨೬-೬೩); ಖೇಚರೀಮುದ್ರೆಯೇ ಮೊದಲಾದ ಹಠಯೋಗ ಕ್ರಿಯೆಗಳಿಗೂ ಈ ವಯಸ್ಸು ಯುಕ್ತವಾದುದೆಂದು ಹೇಳುತ್ತಾರೆ (ಭಾರದ. ೧೫೪). [ಸಂ. ಖೇಚರೀಮುದ್ರಾ (ಖೇಚರೀ + ಮುದ್ರಾ)]

**ಖೇಚರೇಂದ್ರ** (ನಾ). = ಖೇಚರರಾಜ: ಕಂಠಿಕೆಯನುಭಯ ವಿದ್ಯಾಧರಶ್ರೇಣಿಗಳ್ ಮಂಗಳ ಗೀತಾತೊದ್ಯನಾದಂಗಳೊಳೆ ಪುದುವಿನಂ ಕಟ್ಟಿದಂ ಖೇಚರೇಂದ್ರಂ (ಆದಿಪು. ೧-೬೬); ಖೇಚರೇಂದ್ರವಿಲಾಸಂ ತನಗೆಕ್ಕಲಾವಣಮೆನಲ್ (ಮಲ್ಲಿಪು. ೮-೭). [ಖೇಚರ + ಇಂದ್ರ]

**ಖೇಟ** (ನಾ). ೧. ಹಳ್ಳಿ; ಗ್ರಾಮ: "ಗ್ರಾಮದಾನಂ ಖೇಟಮಕ್ಕು" (ಮಂಗರಾ. ೫೬-೧); ಗಿರಿ ಸರಿತ್ ಸಂರುದ್ಧಂಗಳಪ್ಪ ಖೇಟಂಗಳುಮಂ (ಆದಿಪು. ೮-೬೪ ವ); ಪುರ ನಗರ ಖರ್ವಟ ಮಡಂಬ ಸ್ಫುರಿತ ಖೇಟ ಗ್ರಾಮವೆಂಬವನೆರಡು ಭಾಗವ ಮಾಡಿದರು ಕೂಡಿದರು ಸಮವಾಗಿ (ಕುವ್ಯಾಅ. ೧೯-೪). ೨. ಕಫ; ಶ್ಲೇಷ್ಮ: "ಶ್ಲೇಷ್ಮದಲ್ಲಿಯುಂ ಖೇಟವೆಂಬುದು" (ಹಲಾಯು.೧೩೨-೬); "ಶ್ಲೇಷ್ಮಮಂ ವರ ಖೇಟವೆಂಬುದು" (ಮಂಗರಾ. ೧೩೯-೫). ೩. ಬೆಟ್ಟದ ತಪ್ಪಲು; ಗಿರಿಯ ಸಾನು. ೪. ಗುರಾಣಿ; ಹರಿಗೆ; ಅಡ್ಡಣ; ಢಾಲು: "ಖೇಟ ಮಡ್ಡಣಂ" (ಕವಿಕಂ. ೧೨೬); ನೂರು ಅಡಿ ಎತ್ತರದ ವೀರಭದ್ರ ಕತ್ತಿ, ಬಾಣ, ಧನುಸ್, ಖೇಟ ಹಿಡಿದಿದೆ (ಹೊಯ್ಸವಾ. ೯೫). ೫. ಆಕಾಶದಲ್ಲಿ ಸಂಚರಿಸುವುದು; ಪಕ್ಷಿ. ೬. ಬೇಟೆ; ಶಿಕಾರಿ. ೭. ನೀಚವಾದುದು; ಹೀನವಾದುದು; ನಿಕೃಷ್ಟವಾದುದು: "ಅರ್ವಾಣಂ . . . ಖೇಟಂ, ಪಾಪಂ, ರೇಫಸಂ – ಈ ೧೩ ಹೊಲ್ಲಹ ವಸ್ತು" (ಹಲಾಯು. ೫೬-೧೮೨). ೮. ನೀಚ; ಅಧಮ; ಪಾಪಿ: "ಪಾಪಿ ಖೇಟಂ . . . ನಿಕೃಷ್ಟನೆನೆ ಕಷ್ಟನೆಂದೆಂಬವಗೆ ನಾಮಮುಕ್ಕುಂ" (ಮಂಗರಾ. ೬೭-೪); "ಪುರ ಗಿರಿಸಾನುಂ ಕಫಮಡ್ಡಣಂಗಳಿವು ಖೇಟಾಖ್ಯಾನಂ" (ನಾನಾರ. ೨೪). [ಸಂ.]

**ಖೇಟಕ** (ನಾ). ೧. ಹಳ್ಳಿ; ಗ್ರಾಮ: "ಗ್ರಾಮದಾನಂ, ಖೇಟಕಂ – ಈ ೨ ಖೇಡಂ" (ಹಲಾಯು. ೪೩-೧೦೩); ನಗರ ಗ್ರಾಮ ಮಡಂಬ ಖೇಟಕ ಸಮುದ್ಭೂತಾತಿ ಸೌಖ್ಯಂಗಳಿಂ (ಯಾದಮ. ೧-೪೦). ೨. ಅಡ್ಡಣ; ಹರಿಗೆ; ಢಾಲು: "ಖೇಟಕಂ, ಫಳಕಂ, ಚರ್ಮ, ಆವರಣಂ – ಈ ೪ ಹರಿಗೆ" (ಹಲಾಯು. ೭೬-೩೦೬); ಮಿಸುಪ್ಪಸಿ ಖೇಟಕಮಿಂತಿವೊಂದುಗುಂದದೆ ನಿಲೆ (ಪಂಪಭಾ. ೭-೬೯); ಪಂಚರತ್ನಮಯ ಖೇಟಕದಂತಿರೆ ಬಿರ್ಚಿ ಬರ್ಹಮಂ ಪದೆದು ನವಿಲ್ಗಳಾಡೆ (ಜಗವಿ. ೪-೩೦). ೩. ಕಫ; ಶ್ಲೇಷ್ಮ. ೪. ಬೆಟ್ಟದ ತಪ್ಪಲು; ಗಿರಿಯ ಸಾನು: "ಪುರಶ್ಲೇಷ್ಮಂ ಹರಿಗೆಗಳುಂ ಗಿರಿತಪ್ಪಲು ನಾಲ್ಕು ಖೇಟಕಾನ್ವಯು" (ನಾನಾಕಂ. ೫೯). [ಸಂ.]

**ಖೇಟಗತಿ** (ನಾ). ಪಕ್ಷಿಗಳಂತೆ ಆಕಾಶದಲ್ಲಿ ಸಂಚರಿಸುವಿಕೆ: ಒಂದು ಕೋಟಿಗೆ ಮಿಗಿಲು ನೋಟಕರ ಸಾಫಲ್ಯಮುಕ್ಕುದಲೆ ನಿಜಸಂಗ ಬೂಟಕದ ಸಂಗ ಬಿಡು ನಿನ್ನೊಳಿರುತಿರೆ ಮಣಿಯು ಖೇಟಗತಿ ಗುಹೇಶ್ವರ (ಅವಚಂ. ೨೮೨-೧೯೯೩). "ಸುರಕ್ಷಿತ ಪ್ರಯಾಣ": (ಅವಚಂ. ಕೋಶ). [ಖೇಟ + ಗತಿ]

**ಖೇಡ** (ನಾ). ೧. ಹಳ್ಳಿ; ಗ್ರಾಮ; "ಎತ್ತರವಾದ ಕೋಟೆಯನ್ನುಳ್ಳ ಊರು" (ವಡ್ಡಾರಾ.೧೯೯). "ಗ್ರಾಮದಾನಂ, ಖೇಟಕಂ-ಈ ೨ ಖೇಡಂ" (ಹಲಾಯು. ೪೩-೧೦೩); ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾ ಮುಖಂಗಳಂ ವಿಹಾರಿಸುತ್ತಂ (ವಡ್ಡಾರಾ. ೭-೨); ನಡೆದಳು ನಗರ ಪುರ ಖೇಡ ಖರ್ವಡಗಳ ನಿಟ್ಟಿಸುತ(ಕುರಾಸಾಂ.೪೧-೮೦). ೨. ಹೆದರಿದವನು; ಭಯಗ್ರಸ್ತ: "ಖೇ[ಪಾಠಾಂ. ಬೇ]ಡನೆನೆ ಭೀತ ಚಿತ್ತಂ" (ಭಾರನಿ. ೫); ಖೇಡನಾಗದಿರದುಭುತಧ್ವನಿಮಾಡೆನಂಜದಿರು (ಕುವ್ಯಾವಿ. ೬-೬೬); ನೀ ಮರುಳಲಾ ಶಲ್ಯ ಫಡ . . . ಜಿತಕಾಮನೇ ಬಡಭೀಮನುಬುಬೆಗೆ ಖೇಡನಾದೆಯಲ (ಕುವ್ಯಾಕ. ೧೨-೧೭). [< ಸಂ. ಖೇಟ]

**ಖೇಡಕುಳಿ** 'ಕೇಡಾಕುಳಿ' ನೋ.

**ಖೇಡತನ** (ನಾ). ಹೆದರಿಕೆ; ಪುಕ್ಕತನ; ಹೇಡಿತನ: ಮೆಚ್ಚಿದುದ ನುಡಿ ಖೇಡತನವೇಕೆ (ಕುವ್ಯಾದ್ರೋ. ೧-೩೯); ಗಯನನು ಬೇಡಬಂದಳು ನಿನ್ನ ವಧು ನೀ ಖೇಡತನವನು ಮಾಡದೀಕ್ಷಣ ಕೊಟ್ಟು ಕಳುಹಲ್ಕೆ ನಾಡು ಮೆಚ್ಚುವುದು (ಕೋಗಯ. ೧೪-೯). [ಖೇಡ + -ತನ]

**ಖೇಡನ** (ನಾ). ಆಟ; ಕ್ರೀಡೆ; ಲೀಲೆ: ಖೇಡನ ನರ್ತನ ಹಾಸ್ಯವನಾಡಂಬರ ನಟನ ವೇಣುವಾದನ ಗೇಯ ಕ್ರೀಡೆಗಳಿಂ. . .ರಾಮುಕೃಷ್ಣರಿರ್ದ ವಸರದೊಳ್ (ಜಗವಿ. ೪-೪೮). [< ಸಂ. ಖೇಲನ]

**ಖೇಡಯ** 'ಖೇಡೆಯ' ನೋ.

**ಖೇಡಾಕುಳಿ** 'ಕೇಡಾಕುಳಿ' ನೋ.

**ಖೇಡಾಕುಳಿ** 'ಕೇಡಾಕುಳಿ' ನೋ.

**ಖೇಡಿ** (ನಾ). ಹೇಡಿ; ಅಂಜುವವನು; ಭೀರು: ಸ್ವಾಮಿನಾಥನ್ ಸ್ವಲ್ಪ ಖೇಡಿ, ಸ್ವಲ್ಪ ಪುಕ್ಕಲು (ಸ್ವಾಮಿಸ್ನೇ. ೧೦). [ಖೇದ + -ಇ₃]

**ಖೇಡೆಯ,** ಖೆಡೆಯ, ಖೇಡಯ, ಖೇಡ್ಯ₁, ಖೇಳಕ (ನಾ). ಗುರಾಣಿ; ಅಡ್ಡಣ; ಹರಿಗೆ: ತೋಡುವಿಲ್ಲಂಬು ತರಕಸ ಬಲ್ಲೆಯ ಜೋಡ ಖೇಡೆಯ ಸವಗ ಸೀಸಕದ (ಕುರಾಸಾಂ. ೧೧-೧೭); ಜೋಡು ಸೀಸಕ ವಾಂತ ಸಬಳಿಗರೊತ್ತಂಡ ಚೂಡಾಯ್ತು ಹರಿಗೆ ಬಿಲ್ಲವರ ಖೇಡೆಯವಡೆದ ರಾವುತ ಜೋದ ರಥಿಕರ ನೋಡ ಚಿತ್ರೈಸಲೆ ದೇವ (ಮೋಹತ. ೨೦-೫೪); ಖೇಡೆಯವಡ ಕೆಂಬಿಸಿಲುರವಣಿಗೆ ನಿಡುವಾಳ ಮಿಂಚಿಗೆ ಖಚರನೆದೆಗೆಟ್ಟ (ಸಾಳ್ವಭಾ. ೬-೩೪). **ಖೆಡೆಯ:** ಖೆ[ಪಾಠಾಂ. ಖೇ]ಡೆಯ ನೂಲ ಹರಿಗೆ ಬದ್ಧರ ತೌಳಿ ಜೋಡು ಸವಗ ಪಕ್ಕರಕೆಯೂ (ಕುರಾಸಾಂ. ४೧-೫೦); ಕಂಗಳ ಬಾಣ ಧನು ಭ್ರೂ ಪೇರ್ಮೊಲೆಯೆ ಖೆಡೆಯ ನಖ ಸುರಗಿ (ಭೈರವೇ. ೨-४೦); ರತ್ನದಿಂ ಸಮೆದು ಪಿಡಿದ ಖೆಡೆಯವೆಂಬಂ ತೆಸೆದುದು . . . ಮೂಡುವ ಚಂದ್ರಬಿಂಬ (ರಾ ಮ ವಿ. ೧೦-೧೬). **ಖೇಡಯ:** ಉಗುರ್ಗಳ ಸುರಗಿಗಳ ನೆಲೆಮೊಲೆಯ ಖೇಡಯದ ಕರಮೆಸೆವ ಮೊಗದಡ್ಡಣದ ಪಂಕರುಹ ಬಾಣನ ಸೇನೆ ನಡೆತಂದುದು (ಸನತ್ಕು. ೯-೬೧). **ಖೇಡ್ಯ₁:** "ಚರ್ಮಿನ್, ಫಲಕಪಾಣಿ:-೨ ಹಲಿಗೆ ವುಳ್ಳವನು, ಖೇಡ್ಯವುಳ್ಳವನು" (ಸಿದ್ಧಾಂತಿ. ೨೨೧); ಕಠಿನವಾದ ಖೇಡ್ಯವಂ ಕೊಂಡು (ಸೌಗಂಧಿ. ೫೫-೧೬). **ಖೇಳಕ:** "ಖೇಟಕಕ್ಕೆ ಖೇಳಕಂ ಹರಿಗೆ" (ಸಂಜೀವ. ೨೯). [← ಪ್ರಾ. ಖೇಡಯ < ಸಂ. ಖೇಟಕ]

**ಖೇಡ್ಯ₁** 'ಖೇಡೆಯ' ನೋ.

**ಖೇಡ್ಯ₂** 'ಕೆಡ್ಡಾ' ನೋ.

**ಖೇಣಿ** 'ಕೇಣಿ₃' ನೋ.

**ಖೇಣಿಕಾಣಿ** 'ಕೇಣಿಗಾಣಿ' ನೋ.

**ಖೇತಬಾಡಿ** (ನಾ). ಬೇಸಾಯ; ಆರಂಬ; ಕೃಷಿ: ತನಗೆ . . . ಜಾಗೇ ಕೊಟ್ಟು ಖೇತಬಾಡಿ ಮಾಡಿಸಿಕೊಡಬೇಕೆಂದು ಹೇಳಿಕೊಂಡದ್ದರಿಂದಾ (ಹೈದರ. ३४). [← ಹಿಂ. ಖೇತೀಬಾರೀ]

**ಖೇತಿ** (ನಾ). = ಖೇತಬಾಡಿ: "ಉತ್ತಮ ಖೇತಿ, ಮಧ್ಯಮ ಬೇಪಾರ, ಕನಿಷ್ಠ ನೌಕರಿ" ಎಂಬ ಗಾದೆಯು ಒಕ್ಕಲುತನದ ಗೌರವವನ್ನು ತೋರಿಸುತ್ತದೆ (ಮುಂಬಯಿ. ೬-೨೪೭). [← ಹಿಂ. ಖೇತೀ]

**ಖೇತ್ವಾರ** (ನಾ). ಗ್ರಾಮಗಳಲ್ಲಿರುವ ಜಮೀನುಗಳ ದಾಖಲೆ ಪುಸ್ತಕ: (ಮೈಗೆಜಿ. IV, ೭೭೬). [?]

**ಖೇದ** (ನಾ). ೧. ಉಮ್ಮಳ; ದುಃಖ; ವ್ಯಥೆ: "ನಿರ್ವೇದಃ, ಖೇದಃ - ಈ ೨ ಉಮ್ಮಳಂ" (ಹಲಾಯು. ೧೨೪-೬೯); ಖೇದಂ ಮಾಣ್ಗೆ ಶುಭೋದಯಂ ಸಮನಿಕುಂ (ಪಂರಾಮಾ. ೧೦-೪೬); ಬೇದನೆಯೊಳಹಹ ಮೆಂಬುದು ಖೇದದೊಳಚ್ಚರಿಯೊಳಕ್ಕಟಾ ಎಂಬುದು (ಶಮುದ. ३೦४); ಹೃದಯಕಿರುವ ಮೈಗಿರುವ ಹರ್ಷಖೇದಗಳ ಸ್ಪರ್ಶಗಿರ್ಶ (ಅರಳು. ೧೭೯). ೨. ಕುದುರೆಯ ಕೆನೆತ; ಹೇಷಾರವ. ३. ಸಿಂಹದ ಗರ್ಜನೆ. ४. ಸ್ವಲ್ಪವಾದುದು; ಅಲ್ಪ. ೫. ಬಿದಿರು. ೬. ವಿಷ. ೭. ದಣಿವು; ಬಳಲಿಕೆ; ಆಯಾಸ: "ಹಯಸಿಂಹನಾದವತಿದುಃಖಂ ಸ್ವಲ್ಪ ತ್ವಕ್ಸಾರಮುಂ ಗರಳಂ ಖೇದವೆನಿಕ್ಕು" (ನಾನಾರ. ೫೬). [ಸಂ.]

**ಖೇದಗೊಳ್** (ಕ್ರಿ). ದುಃಖವನ್ನು ಹೊಂದು; ವಿಷಾದ ಪಡು: (ಕ). [ಖೇದ + ಕೊಳ್₁]

**ಖೇದಪಡು** (ಕ್ರಿ). = ಖೇದಗೊಳ್: ನಮಗಾಗಿ ನೀವು ಖೇದ ಪಡುವುದು ಬೇಡ (ರಂಗರೋ. ೯). [ಖೇದ + ಪಡು₁]

**ಖೇದವಿಡಂಬನ** (ನಾ). ೧. ಖೇದ ಹಾಗು ವಿಡಂಬನೆ: ಖೇದ ವಿಡಂಬನಕರುಣಾನಾದದೊಳಯ್ಯೋ ಎನಿಪ್ಪುದವತರಿಸಿರ್ಕುಂ (ಶಮುದ. ३೦೭). ೨. ದುಃಖ ಮೊದಲಾದುವುಗಳ ಅಭಿವ್ಯಕ್ತಿ: (ಕ). [ಖೇದ + ವಿಡಂಬನ]

**ಖೇದಶ್ರಮ** (ನಾ). ಅತ್ಯಂತವಾದ ಶ್ರಮ; ದಣಿವಿನಿಂದಾದ ಬಳಲಿಕೆ: ಲಸದಾಸ್ಯೋದಯಮಿಂದುಬಿಂಬದುದಯಂ ತಾನಾಗೆ ಖೇದ ಶ್ರಮುಶ್ವಸಿತಂ ಮಾರುತಮಾಗೆ . . . ನಿರ್ಝರ ರತೋದೀರ್ಣಾರ್ಣವಂ ಘೂರ್ಣಿಸಲ್ (ಶಾಂತಿಪು. ೮-೧೦೨). [ಖೇದ + ಶ್ರಮ]

**ಖೇದಾಂತ** (ಗು). ದುಃಖದಲ್ಲಿ ಕೊನೆಗೊಳ್ಳುವ; ದುಃಖಾಂತ; ವಿಷಾದಾಂತ: ಈ ಖೇದಾಂತನಾಟಕದಿಂದ ನಾನು ಸರ್ವಸ್ವವನ್ನು ಕಳೆದುಕೊಳ್ಳುವುದು ಮಾತ್ರವೇ ಅಲ್ಲದೆ, ರಾಜದಂಡನೆಗೂ ಗುರಿಯಾಗ ಬೇಕಾಗುವುದು (ಚಿನ್ನಬೇ. ४४). [ಖೇದ + ಅಂತ₂]

**ಖೇದಾಂಧತೆ** (ನಾ). ದುಃಖದಿಂದ ಕಂಗೆಡುವಿಕೆ, —ಬುದ್ಧಿಗೆಡು ವಿಕೆ: ಏಂ ಬಾಚಿತ್ತೆ ನಿನಗೆಂದಬಲ್ಲಳ್ ತಟ್ಟುರೆ ಸತಿ ಸುಮತಿ ಕುಮತಿ ಖೇದಾಂಧತೆಯಿಂ (ಶಾಂತಿಪು. ೬-೬४). [ಖೇದ + ಅಂಧತೆ]

**ಖೇದಾಶ್ರುಜಲ** (ನಾ). ದುಃಖದಿಂದ ಬರುವ ಕಣ್ಣೀರು; ದುಃಖಾಶ್ರು: ಖೇದಾಶ್ರುಜಲಂ ಮೊದಲೊಳ್ ಸೂಸೆ ಬಱಿಕ್ಕಂ ವಿದಿತಾ ಚ್ಯುತಮಹಿಮನಾಗಿ ಬಲನೇೞ್ದಂದಂ (ಜಗವಿ. ೩-೮೮). [ಖೇದ + ಅಶ್ರುಜಲ]

**ಖೇದಿಸು** (ಕ್ರಿ). ಉಮ್ಮಳಿಸು; ದುಃಖಿಸು; ವ್ಯಥೆಪಡು: ನೀವಿನ್ನು ಕೀೞ್ಪಟ್ಟು ನುಡಿಯೆ ಕಾದಂಬರೀದೇವಿ ಖೇದಿಸುವಳ್ (ಕಾದಂಉ. ೧೫೭); ಆ ದಂಡಕಂ . . . ದುರ್ಗತಿಗಳೊಳ್ ತೊಟಲ್ದೀಗಳ್ ಪರ್ದಾಗಿರ್ದನೆನೆ ಕೇಳ್ದದರ್ಕೆ ಖಗಂ ಖೇದಿಸೆ (ಪಂರಾಮಾ. ೯-೧೫ ವ); ಎಮಗೆ ನಿನಗೆ ಪುನರೀಕ್ಷಣ ಮಾಸಕೆ ಸಮನಿಪುದೇಕೆ ಖೇದಿಸುವೆ (ವರ್ಧಚ. ೯-೧೯); ಖೇದಿ ಸದಿರ್ಪೈ ಭಿಲ್ಲರಾಣ್ಮ, ಸೈರಿಸು (ಹಬ್ಬೆರ. ೧೬-೬). [ಖೇದ + -ಇಸು₃]

**ಖೇನ** (ನಾ). ಒಂದು ಬಗೆಯ ಸಸ್ಯ (?): "ಪರ್ವಮೂಲಾ - ರೋಮ ಕಂದರ, ಖೇನ" (ಓಷಧಿ. ೯३). [?]

**ಖೇಪು** 'ಖೇಪೆ' ನೋ.

**ಖೇಪೆ,** ಖೇಪು (ನಾ). ಸರದಿ; ಬಾರಿ; ಸಲ; ಪಾಳಿ: ಇನಿತು ಸಂತಾನವನು ಧರಣಿಯಲನಿತುವನು ಸಂಹರಿಸಿ ಕೊಡುವನು ವನಜ ಲೋಚನ ಮುಂದೆಯಿಪ್ಪತ್ತೊಂದು ಖೇಪೆಯಲಿ (ಕುವ್ಯಾಆ. ಓ೦ಇ. ೨೫-೫೯); ಕಾದನೈ ಹೊಜದೊಂದು ಖೇಪೆಯ [ಪಾಠಾಂ. ನೊಂದು ಸಾರಿಗೆ]ನಾ ದಯಾಂಬುಧಿ ಮತ್ಸ್ಯನಾಗಿಯೆ ಮೇದಿನಿಯ (ಸಂಭಪ. ४-೯). **ಖೇಪು:** (ಕ). [← ಹಿಂ. ಮರಾ. ಖೇಪ್; ಪಾರ. ಕ್ಲೇಪ್]

**ಖೇಮ** (ನಾ). ಕುಶಲ; ಕ್ಷೇಮ: ಎಲ್ಲಾ ಖೇಮ; ನೀವೆಲ್ಲಾ ಕ್ಷೇಮ? (ಶಿವಭಾ. ೧೧३). [← ಪ್ರಾ. ಖೇಮ; ಸಂ. ಕ್ಷೇಮ]

**ಖೇಯ** (ನಾ). ತಗ್ಗು; ಕಂದಕ; ಅಗಳು: ಗಂಭೀರಾರಾವದಿಂ ಪಲ್ಮೊರೆವವೋಲೆಸೆಗುಂ ಸುತ್ತಿ ಪಾನೀಯ ಖೇಯಂ (ಸುಕುಮಾ. ೯-೫೭). [ಸಂ.]

**ಖೇರ** (ನಾ). (?): ಅವಚಿಡೆಗಡೆಗೆ ಬೆಳ್ಳಿಯ ಮೊಳೆಗಳಂತೆಸೆವ ಬಾಚಿ ಯಂಕುರದ ಖೇಡ [ಪಾಠಾಂ. ತೆರ, ಕೇತೆರ]ನೊರೆದು (ಲೀಲಾವ. ೧೧-೫೪ವ). ☞ 'ಬೇರು' ಎಂಬುದರ ಅಪಲಿಖಿತವಿರಬಹುದೇ? [?]

**ಖೇಲ,** ಖೇಳ₁ (ನಾ). ಆಟ; ಕ್ರೀಡೆ: "ಖೇಲ - ಕ್ರೀಡೆ" (ಅಕಾನಿ. ೮-೧); ಖೇಲಮದು ಪೊಸತು ಕೇಳಿಲ್ಲ ಕಂಡಿಲ್ಲೆಲ್ಲಿಯುಂ (ದುರಪು. ೧೬-೪೬). **ಖೇಳ₁.** 'ಖೇಳಮೇಳ' ಪರಾ. [ಸಂ.]

**ಖೇಲಕ** (ನಾ). ಆಟವಾಡುವವನು ; ಆಟಗಾರ: ಬಾಳಸಿರಿ ಸೊಗಸುಗಳ ಪೆರ್ಚಿಪನು ಖೇಲಕನು, ಕೀಳದೆನಿಪವನೊರಟ, ಮಂಕ, ಕಲ್ಲೆದೆಗ (ಮಂಕುಕ. ೨೬೫). [ಸಂ.]

**ಖೇಲನ, ಖೇಳನ** (ನಾ). ೧. ಆಟ; ಕ್ರೀಡೆ: ಇತ್ತ ದೇವಿಯರುಂ ಮಜ್ಜನ ಮಂಡನ ಖೇಲನಾದಿ ವಿಧಿಗಳಂ ಮಾಡಿ (ಚಾವುಂಪು. ೩೨–೬); ಮಹಾಪ್ರಳಯಾಗ್ನಿಖೇಲನನ ಕೈಯೊಳಾಕ್ಷಣದಲ್ಲಿ ಹಲಗೆಯಾಗನೆ ವೀತಿಹೋತ್ರನೇತಜ ದೈವ (ವೀಶೈಪು. ೪–೩–೩೩); ಖೇಲನವ ಬೇಡವೆನು ವರನು ವಿಧಿರಾಯನವಹೇಳಿಪನು ಸೆರೆವಿಡಿದು (ಮಂಕುಕ. ೨೬೭). **ಖೇಳನ**: ೧. "ಖೇಳನಂ [ಪಾಠಾಂ. ಟನಂ]ಕೇಳಿಯೆನೆ ನೃಪರುಗಳ ಕ್ರೀಡೆಯಕ್ಕು"(ಮಂಗರಾ. ೮೦–೯). ೨. ಆಟದ ಸಾಮಾನು; ಆಟಿಗೆ: ಕಾಲಕರ್ಮ ಮಹೀಂದ್ರಜಾಲವಿಲೋಲನಿರ್ಮೂಲನನಹಿತಕುಲಖೇಳನಂ ಪರದೈವ ಕೋಲಾಹಳ ಕಳಾಶಾಲಿ (ಬಸಪು. ೨೩–೨). [ಸಂ.]

**ಖೇಲನರಂಗ** (ನಾ). ಕ್ರೀಡಾರಂಗ: (ಅಶ್ವಸಾಧನೆ ಮೊ. ಪ್ರದರ್ಶನಗಳಿಗಾಗಿ) ವೃತ್ತಾಕಾರವಾಗಿ ಅಥವಾ ದೀರ್ಘವೃತ್ತಾಕಾರವಾಗಿ ಆಸನಗಳ ಅಂತಸ್ತುಗಳನ್ನು ಅಳವಡಿಸಿರುವ ಖೇಲನರಂಗ; ವೃತ್ತ ಕ್ರೀಡಾರಂಗ (Circus. ಇಂಕನಿ). [ಖೇಲನ + ರಂಗ]

**ಖೇಲನಸ್ಥಳ** (ನಾ). ಆಟದ ಸ್ಥಳ; ಆಡುವೊಲ; ಕ್ರೀಡಾಕ್ಷೇತ್ರ: ಹರಿಕರಿಗಳ ರವಿವೈಶ್ವಾನರ ಚಂದ್ರಾದಿಗಳ ಖೇಲನಸ್ಥಳಚಯಮಾ ಗಿರಿಗಳ ಮೇಲಿರ್ಕುಂ (ವಿಷ್ಣುಪು. ೭–೭೦). [ಖೇಲನ + ಸ್ಥಳ (= ಸ್ಥಲ)]

**ಖೇಲನೌದಾರ್ಯ** (ನಾ). ಆಟದಲ್ಲಿ ಸೋಲುಗೆಲವುಗಳಿಂದ ವ್ಯಗ್ರನಾಗದೆ ಸಮಚಿತ್ತನಾಗಿ ಆಟವಾಡುವಿಕೆ: ಆಟಗಾರನು ಗೆಲವಿಗೆ ಸಿದ್ಧನಾಗಿರುವಂತೆಯೇ ಸೋಲಿಗೂ ಸಿದ್ಧನಾಗಿರುತ್ತಾನೆ. ಈ ತೆರದ ಖೇಲನೌದಾರ್ಯವು . . . ಇಂಗ್ಲಿಷ್‌ಜನದ ಸಾಮಾನ್ಯಮನೋವೃತ್ತಿ – ರಾಜಕೀಯದಲ್ಲಿ ಸಹ (ರಾಜ್ಯಶಾ. ೩೧೦). [ಖೇಲನ + ಔದಾರ್ಯ]

**ಖೇಲು** (ನಾ). = ಖೇಲ: ಸುಭೋಜ್ಯಂಗಳಿಂ ತುಷ್ಟಿಯಂಗೊಳಿಸ್ಯದೆ ಸಾಂದ್ರದಿಂ ಕುಳ್ಳಿರಿಸಲಾಮೋದ ಖೇಲುವಿಂದೆ (ಪರಶು. ೧೫–೪೩). [< ಸಂ. ಖೇಲ]

**ಖೇಳ$_1$** 'ಖೇಲ' ನೋ.

**ಖೇಳ$_2$** (ನಾ). ಕೇರಳದೇಶದವನು; ಮಲಯಾಳಿ: "ಮಲೆಯಾಳುವಂ ಖೇಳನಕ್ಕುಂ" (ಮಂಗರಾ. ೧೧೨–೭). [< ಕೇರಲ ?]

**ಖೇಳಕ** 'ಖೇಡೆಯ' ನೋ.

**ಖೇಳನ** 'ಖೇಲನ' ನೋ.

**ಖೇಳಮೇಳ** (ನಾ). ೧. ಆಟಪಾಟ; ಸರಸಸಲ್ಲಾಪ; ವಿನೋದಗೋಷ್ಠಿ: ಆಳುಗೆಲಸಕೆ ಕೆಲಬರರಸನ ಖೇಳಮೇಳಕೆ ಕೆಲರು (ಕುವ್ಯಾಭೀ. ೩–೧೪); ಸಂದವೀಪರಿ ಕೆಲವು ದಿನ . . . ಮುಕುಂದನೊಡನೆಯೆ ಖೇಳಮೇಳದಲಾ ನೃಪಾಲರಿಗೆ (ನಿಭಾಗ. ೧೦–೬೯–೨೭). ೨. ಜೂಜಿನ ಆಟ; ಜೂಜಾಟ (?): ಖುಲ್ಲರೊಡನೆಯೆ ಖೇಳಮೇಳಕೆ ಚಲ್ಲಣವ ವೆಂಟಣಿಸಲಾ ಜನವೆಲ್ಲ ಮಱುಗಿತು ಧರ್ಮಜನ ಮಱುಜೂಜಿನುಬ್ಬಟೆಗೆ (ಕುವ್ಯಾಸ. ೧೬–೪೩). [ಖೇಳ$_1$ (= ಖೇಲ) + ಮೇಳ (= ಮೇಲ)]

**ಖೈದಿ** 'ಕೈದಿ' ನೋ.

**ಖೈದು** 'ಕೈದು$_2$' ನೋ.

**ಖೈದುವಾರು** (ಅ). ನಿಯಮಾನುಸಾರವಾಗಿ; ಶಿಸ್ತಿಗೆ ಅನುಗುಣವಾಗಿ; ಶಾಸನದ ಮೇರೆಗೆ: ಖೈದುವಾರು ಜಾಗದಲ್ಲಿ ಇಳಿಸಿ . . . ಕಳ್ಳಕಾಕರ ಉಪದ್ರವವಾಗದಂತೆ ಖಬರು ಮಾಡಿಸಿ (ಗುರುದ. ೧೦). [← ಅರ. ಮರಾ. ಕೈದವಾರ್]

**ಖೈರ್‌ಖಾಯಿ** (ನಾ). ಒಳ್ಳೆಯದನ್ನು ಬಗೆಯುವಿಕೆ; ಲೇಸನ್ನು ಎಣಿಸುವಿಕೆ; ಶುಭಚಿಂತನೆ: ನಮ್ಮಿಂದ ಆಗತಕ್ಕ ಸಹಾಯವನ್ನು ಖೈರ್‌ಖಾಯಿ ಮಾರ್ಗದಿಂದ ಪ್ರಯತ್ನಬಟ್ಟು ಮಾಡಿ ಇದ್ಧೇವೆ (ರಾಜೇಂದ್ರ. ೫೨); ಇಂಗ್ರೇಜಿ ಬಹಾದ್ದರ ಕುಂಪನಿ ಸರಕಾರದ ಖೈರ್‌ಖಾಯಿ ಕೆಲಸವೇ ಹೊರ್ತು ಮತ್ತೊಂದಲ್ಲಾ (ರಾಜೇಂದ್ರ. ೧೦೨). [← ಪಾರ. ಮರಾ. ಖೈರ್‌ಖ್ವಾಹೀ]

**ಖೈರ$_1$** 'ಕಯ್ರ' ನೋ.

**ಖೈರ$_2$** 'ಕಯಿರ$_1$' ನೋ.

**ಖೈರಂದಱು** 'ಕೈರಂದಱು' ನೋ.

**ಖೈರಗುಳಿಗೆ** 'ಕಯ್ರಗುಳಿಗೆ' ನೋ.

**ಖೈರಿಯತ್ತು** (ನಾ). ಕ್ಷೇಮ; ಕುಶಲ; ಸುಖ: ತಂ ಮನಸಿಗೆ ಸಂತೋಷವಾದ ವರ್ತಮಾನವು ಖೈರಿಯತ್ತಿನಿಂದಾ ಮಡಿಕೇರಿ ಕೋಟೆಯಲ್ಲಿ ಇರುವ ವರ್ತಮಾನವು ಬರೆಸಿ ಇದ್ದದ್ದು ತಿಳಿಯಬಂತು (ರಾಜೇಂದ್ರ. ೧೨೬). [← ಅರ. ಮರಾ. ಖೈರಿಯತ್]

**ಖೈರು** (ನಾ). ಕ್ಷೇಮ; ಕಲ್ಯಾಣ; ಸುಸ್ಥಿತಿ: ನಾನು ನಿಮ್ಮ ಸರಕಾರದ ಖೈರು ಕಾದಿದ್ಧೇನೆ (ರಾಜೇಂದ್ರ. ೫೫). [← ಅರ. ಮರಾ. ಖೈರ್]

**ಖೊಂಡ್** (ನಾ). ದ್ರಾವಿಡವರ್ಗಕ್ಕೆ ಸೇರಿದ ಒಂದು ಉಪಭಾಷೆ: ಖೊಂಡ್, ಕೋಲಾಮಿ, ಕೊಂಡ (ದ್ರಾವಿವಿ. ೬). [?]

**ಖೊಜ್ಜೆ** 'ಕೊಜ್ಜೆ' ನೋ.

**ಖೊಟ್ಟಿ** 'ಕೊಟ್ಟಿ$_2$' ನೋ.

**ಖೊಟ್ಟಿಗದೇವ** 'ಕೊಟ್ಟಿಗದೇವ' ನೋ.

**ಖೊಟ್ಟಿತನ** 'ಕೊಟ್ಟಿತನ' ನೋ.

**ಖೊಟ್ಟಿನಶೀಬ** 'ಖೊಟ್ಟಿನಸೀಬ' ನೋ.

**ಖೊಟ್ಟಿನಸೀಬ, ಖೊಟ್ಟಿನಶೀಬ** (ನಾ). ದುರ್ದೈವ; ದುರದೃಷ್ಟ: ಏನು ಮಾಡೋದರೆವಾ ಖೊಟ್ಟಿನಸೀಬ (ವೈನಿ.೧೨). **ಖೊಟ್ಟಿನಶೀಬ**: ಒಂದು ಸಾವಿರನೂ ಉಳೀಬಾರದು ಅಂದರ ನನ್ನ ಖೊಟ್ಟಿನಶೀಬ (ಗಂಮಾಯಿ. ೧೭೯); ಖೊಟ್ಟಿನಶೀಬಕ್ಕ ಏನು ಮಾಡೋದ್ಯೆತಿ (ಮೇದಿಮು. ೨೧೪). [ಖೊಟ್ಟಿ (< ಕೊಟ್ಟಿ$_2$) + ನಸೀಬ (< ನಶೀಬು)]

**ಖೊಟ್ಟಿನಾಣ್ಯ** (ನಾ). ಚಲಾವಣೆಗೆ ಸಲ್ಲದ ನಾಣ್ಯ; ಕಳ್ಳನಾಣ್ಯ; ಖೋಟಾನಾಣ್ಯ: ನಾನು ಮಾತ್ರ ಸ್ವತಃ ಬೆಲೆ ಬಾಳದೆ . . . ಖೊಟ್ಟಿನಾಣ್ಯದಂತೆ ಸಾವಿರಾರು ಜನರಿಂದ ಬಿಸಾಡಿಸಿಕೊಂಡು ಬಂದಿರುವೆ (ವೈದ್ಯರಾ. ೭೪); ನಿನ್ನೆ ಯಾವನೊ ಒಬ್ಬ ಹಸ್ತಕುಶಲಿ ನನಗೆ ಮತ್ತೊಂದು ಖೊಟ್ಟಿನಾಣ್ಯ ಅಮರಿಸಿ ಹೋದ (ಗಾಳಿಪ. ೧೪೪). [ಖೊಟ್ಟಿ (< ಕೊಟ್ಟಿ$_2$) + ನಾಣ್ಯ]

**ಖೊಟ್ಟಿಮುತ್ತು** (ನಾ). ಕೃತಕವಾದ ಮುತ್ತು: ಹೆಂಡತಿಗೆ ಹರಳಿನ ಮೂಗುಬೊಟ್ಟು, ಖೊಟ್ಟಿಮುತ್ತಿನ ಬೆಂಡವಾಲಿ ತಂದ (ದೀಪಹ. II, ೧೪೩). [ಖೊಟ್ಟಿ (< ಕೊಟ್ಟಿ$_2$) + ಮುತ್ತು$_2$]

**ಖೊಟ್ಟಿರೊಟ್ಟಿ** (ನಾ). ಅಡಕೆ ಹಾಳೆಯ ಮೇಲೆ ತಟ್ಟಿ, ಕೆಂಡದಲ್ಲಿ ಬೇಯಿಸಿದ ರೊಟ್ಟಿ; ಕೆಂಡದ ರೊಟ್ಟಿ: ಮುದುಕಿ . . . ಮೊಮ್ಮಗನಿಗಾಗಿ ಅವನಿಗೆ ತುಂಬ ಸೇರುವ ಖೊಟ್ಟಿರೊಟ್ಟಿ ಮಾಡಿಟ್ಟಿದ್ದಾಳೆ (ಹೊಸಕ್ಷಿ. ೬೬). [ಖೊಟ್ಟಿ$_0$ (< ಕೊಟ್ಟಿ$_2$) + ರೊಟ್ಟಿ]

**ಖೊದಾ** 'ಖುದಾ' ನೋ.

**ಖೊಪ್ಪರ$_1$** 'ಕೊಪ್ಪರ$_2$' ನೋ.

**ಖೊಪ್ಪರ$_2$** 'ಕೊಪ್ಪರ$_3$' ನೋ.

**ಖೊಪ್ಪರಿಸು$_1$** 'ಕೊಪ್ಪರಿಸು$_1$' ನೋ.

**ಖೊಪ್ಪರಿಸು₂** 'ಕುಪ್ಪರಿಸು' ನೋ.

**ಖೊಬರಿ** 'ಕೊಬ್ಬರಿ₂' ನೋ.

**ಖೊಳ್** 'ಕೊಳ್₂' ನೋ.

**ಖೊಳಂಬ** 'ಕೊಳಂಬ' ನೋ.

**ಖೊಳಂಬಿಸು** (ಕ್ರಿ). ೧. ತಡೆ; ಕಾದುನೋಡು; ವಿಲಂಬಿಸು : ಪರಾ ನವುಗ ಪಾಸದ ಅಂದ ಮ್ಯಾಲ ಖೊಳಂಬಿಸೋದ್ಯಾಕ (ಸಮಜೀ. ೨೪೩). ೨. ಅವಶ್ಯವಾಗಿರು; ಹರಕತ್ತಾಗು; ಅಗತ್ಯವಾಗಿರು : ನನಗೆ ಐದು ರೂಪಾಯಿ ಖೊಳಂಬಿಸಿದೆ, ಕೊಡಿರಿ (ರೂಢಿ).
[ಖೊಳಂಬ (< ಕೊಳಂಬ) + -ಇಸು₃]

**ಖೊಳ್ಳನೆ** (ಅ). 'ಖೊಳ್' ಎಂಬ ಶಬ್ದದೊಡನೆ : ಹುಸೇನಿ ಖೊಳ್ಳನೆ ನಕ್ಕು ಓಡಿಹೋದನು (ರಂಗರೋ. ೨೨).
[ಖೊಳ್ (< ಕೊಳ್₂) + -ಅನೆ₁]

**ಖೋ** (ನಾ). ೧. ಒಂದು ಅನುಕರಣ ಶಬ್ದ : ತವಕದಲಿ ತುದಿಪಾಳೆಯದ ಕಪಿನಿವಹ ಖೋ [ಪಾಠಾಂ. ಭೋ]ಯೆಂದೆದ್ದು ಮುತ್ತಿದರು (ತೊರರಾ. ೬-೩-೫); ಎಮ್ಮ ಬಲಮ್ಮೈದೆ ಖೋಯೆಂದು ಬೊಬ್ಬಿಟ್ಟು ಕವಿಯಲಾಗಿ (ಭಾವಚಿಂ. ೫-೧೨); ಖೋಯೆಂದರೊತ್ತಿನ ಭೂಮಂಡಲಾಧಿಪರು ಕೈಯೆತ್ತಿ (ಕುರಾಸಾಂ. ೪೦-೪೫); ಸರ್ವಪರಿವಾರ ಖೋಯೆಂದು ನಲಿಯೆ (ಭರಚ. ೪೦-೧೧೪). ೨. ಖೋಖೋ ಆಟದಲ್ಲಿ ತನ್ನ ಕೆಲಸವನ್ನು ಇನ್ನೊಬ್ಬನಿಗೆ ಒಪ್ಪಿಸಿಕೊಡುವಿಕೆ; ಕುಳಿತ ಆಟಗಾರನನ್ನು ಎಬ್ಬಿಸುವುದಕ್ಕೆ ಮಾಡುವ ಸೂಚಕಧ್ವನಿ. ೩. (ಆಲಂ) ಬಾರಿ : ತಂದೆ ಮಗನಿಗೆ ಖೋಕೊಟ್ಟು ಕುಳಿತಿದ್ದಾನೆ (ರೂಢಿ). [← ಮರಾ. ಖೋ]

**ಖೋಕಾ** (ನಾ). ೧. ಮುಚ್ಚಳವಿಲ್ಲದ ಖಾಲಿ ಮರದ ಪೆಟ್ಟಿಗೆ : ಖಾಲೀ ಖೋಕಾ . . . ಗಜಗಮನೆಯಾಗಿರುತ್ತದೆ (ದೀಪಹ. I, ೭೧). ೨. (ಆಲಂ) ಹುರುಳಿಲ್ಲದುದು; ಶೂನ್ಯವಾದುದು : ತಲೆಯಲ್ಲಿ ಚೀಜವಸ್ತುವೆಂಬುದೇ ಇಲ್ಲ. ಅಖಂಡ ಖೋಕಾ (ದೀಪಹ. II, ೨೩೮).
[← ಮರಾ. ಖೋಕಾ, ಖೋಖಾ]

**ಖೋಖೋ** (ನಾ). ಒಂದು ಬಗೆಯ ಆಟ; ಕೊಕ್ಕಾಟ : ವ್ಯಾಯಾಮದಲ್ಲಿ ತಿಳ್ಳಿ, ಓಡುವದು, ಖೋಖೋ ಮೊದಲಾದವುಗಳೂ ಬರುತ್ತವೆ (ಬ್ರಹ್ಮಜೀ. ೨೦೦); ಅವರ ಸಂಗಡ ಚಿಣಿಫಣಿ . . . ಖೋಖೋ, ಚಂಡು ಎಲ್ಲ ಆಟಗಳನ್ನು ಆಡುತ್ತಿದ್ದಳು (ಫಲಸಂ. ೨೬); ಸ್ವತಃ ಮಾಸ್ತರರೇ ವಿದ್ಯಾರ್ಥಿಗಳೊಡನೆ ಖೋಖೋ ಹೂತೂತು ಆಟ ಪಾಡುವರು (ಸಶೂರ. ೨೧೯). [← ಮರಾ. ಖೋಖೋ]

**ಖೋಗೀರು** 'ಕೋಗೀರು' ನೋ.

**ಖೋಜಾ** 'ಕೊಜ್ಜೆ' ನೋ.

**ಖೋಜೆ** 'ಕೊಜ್ಜೆ' ನೋ.

**ಖೋಟಾ** (ಗು). ೧. ಕೆಟ್ಟ; ಕ್ರೂರವಾದ : ಅವನ ಅದೃಷ್ಟ ಮಾತ್ರ ಖೋಟಾ (ಬಂಕಿಮು. ೧೦೩). ೨. ನಿಜವಲ್ಲದ; ಕೃತ್ರಿಮವಾದ; ನಕಲಿಯಾದ : ಪಂಡಿತರು, ಸ್ವಾಮಿಗಳು, ಸಂನ್ಯಾಸಿಗಳು ಇವರಲ್ಲಿ ಖೋಟಾ ಸಾಚಾ ಇಬ್ಬರೂ ಇದ್ದರು (ಬಂಕಿಮು. ೧೫೪); ಖೋಟಾ ರತ್ನಗಳನ್ನು ತಯಾರು ಮಾಡುವುದು ನ್ಯಾಯವಲ್ಲ (ಯೋಧಪು. ೫೭); ಇವರು ಬೇಕಾದರೆ ಖೋಟಾ ಹರಳುಗಳನ್ನೂ ಮುತ್ತುಗಳನ್ನೂ ಮಾಡಬಲ್ಲರು (ಪ್ರವಾಇ. II, ೨೭೧). [← ಹಿಂ. ಮರಾ. ಖೋಟಾ]

**ಖೋಟಾನಾಣ್ಯ** (ನಾ). = ಖೊಟ್ಟಿನಾಣ್ಯ : ನೀವು ನಿಮ್ಮಲ್ಲಿರುವ ಖೋಟಾನಾಣ್ಯಗಳನ್ನು ಚಲಾಯಿಸದಿದ್ದರೆ ಸಾಕು (ನಾಡಿಗೇ. ೨೨೮).
[ಖೋಟಾ + ನಾಣ್ಯ]

**ಖೋಡ** (ನಾ). ೧. ಕುಂಟ; ಹೆಳವ. ೨. ಮಲ್ಲಯುದ್ಧದಲ್ಲಿ ಒಂದು ವರಸೆ : ಬಾಹುದಣೆ ಖುಮ್ಮರಿ ಕತ್ತರಿ ಖೋಡವಂಕುಶಂ ಸಸಿಕುವೆನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಪೊಪ್ಪೆ ಕಾದಿದರ್ (ಚಂದ್ರಪು ೫-೭೮). [ಸಂ.]

**ಖೋಡಾಸು** (ಕ್ರಿ). ಅಳಿಸಿಹಾಕು; ತೆಗೆದು ಹಾಕು; ರದ್ದುಪಡಿಸು : ಬಾದಖಾತೇದಾಗಿಂದ ಹೆಸರ ಖೋಡಾಸು (ದೀಪಹ. II, ೧೬೧).
[← ಮರಾ. ಖೋಡ್]

**ಖೋಡಿ, ಕೋಡಿ₅** (ಗು). ೧. ಕೆಟ್ಟ; ದುರುಳ; ಕಿಡಿಗೇಡಿಯಾದ; ಹೀನ : ಖೋಡಿ ವಿನೋದದಿ ನೋಡದೆ ನಾ ಬಲು ಮಾಡಿದ ಪಾಪ ಬಿಟ್ಹೋಡಿ ಹೋಗೋ ಹಾಗೆ (ಪುರಂದ. ೧-೬೩-೧); ದೇಹ ತಾನದು ಖೋಡಿ ಕೇಳ್ರೈ ದೇಹವಿದು ಯಡವಟ್ಟು (ಜ್ಞಾನಸಿಂ. ೧೯-೬೩); ಎಂಥಾ ದುಃಖ ಬಂದ್ರೂ ಖೋಡಿ ಹೊಟ್ಟೆಯೊಂದು ಅದೆ ಅಲ್ಲ (ಮಿಂಚಿಹು. ೪೧). (ನಾ). ೨. ದುರುಳತನ; ದುಷ್ಟತನ; ನೀಚತನ : ಜಾಳ ಜಱಿದು ಜಡಾತ್ಮರಿಗೆ ಜಂಘಾಳತನವನು ಮೆಱೆದು ಖೋಡಿಯ ಖೂಳರನು ಖೊಪ್ಪರಿಸಿ (ಕುವ್ಯಾಕ. ೧೬-೨೧). ೩. ಕೆಟ್ಟ ವ್ಯಕ್ತಿ; ನೀಚ; ಖೂಳ : ಆಡಿದಡೆ ಜಗವೇನನೆಂಬುದೊ ಖೋಡಿಗಳು ಕಿಱಿದುಂಟು ಮಿಕ್ಕಿನ ಹಾಡಿ ಹೊಗಳಿಸಿಕೊಂಬ ಜಗದ ಪತಿವ್ರತಾಜನಕೆ (ತೊರರಾ. ೫-೩-೪೨); ನಾನು ಆ ಖೋಡಿಯನ್ನು ಹೇಳಿಕೇಳಿ ನನಗೆ ಮುಳುವಾಗಿ ಕಟ್ಟಿಕೊಂಡಿರುತ್ತೇನೆ (ಅಂಬಿಕೆ. ೧೨೭). ೪. ಕೊರತೆ; ನ್ಯೂನತೆ : "ಖೋಡಿಯೆನೆ ಕೊಱತೆ" (ಭಾರನಿ. ೫); ಆಡಭಾರದು ತೋಱಿ ನುಡಿದರೆ ಖೋಡಿ ನನಗಹುದೆಲೆ ಮರುಳೆ (ಕುವ್ಯಾದ್ರೋ. ೩-೬೫); ನೀಡಿ ಕೈಮುಟ್ಟಿದೊಡೆ ಕಾಯದ ಖೋಡಿ ಹೋಯಿತು ವಿಮಲ ತನುಮನ ಮಾಡಿತು (ಪ್ರಭುಲೀ. ೧೯-೪೧); ಅಹುದೋ ಖೋಡಿಯಿಲ್ಲದ ಖರೆಯನಹೆ ಖದ್ಯೋತವಂಶದಲಿ (ತೊರರಾ. ೪-೪-೩೩); ಆತ್ಮೇಶ್ವರನವಯುವದಲ್ಲಿ ಮೂಡಿರ್ದ ವರಸೌಂದರದಿ ಖೋಡಿಯೆಳ್ಳನಿತಿಲ್ಲದಿರಲು (ಮೋಹತ. ೩-೩೮); ಖೋಡಿಯುಂಟು ಕೇಳ್ಮಾಣಿಕದೊಳು ವಾ ನಾಡೊಳು ದುರ್ನುಡಿಯಿಲ್ಲಾ (ತರ್ಕಕಾ. ೧-೩೩). ೫. ತಪ್ಪು; ಅಪರಾಧ; ಕಳಂಕ : ತಮ್ಮಯ ಖೋಡಿಯನು ತಾವಱಿಯರೆಂದನು (ಪ್ರಭುಲೀ. ೧೪-೨೭); ಖೋಡಿಯಾಗದು ಧರ್ಮಮಾರ್ಗಕೆ ಕೇಡು ಬಾರದು (ಕುವ್ಯಾಆ. ಒರಿಇ. ೩೩-೫೧); ಖೋಡಿಯ ಹೊಱಿಸಬೇಡೆನಗೆ (ಮೋಹತ. ೨೭-೫೬); ದಧೀಚಿ ಶಿಬಿಗಳ ಮಾಳ್ಕೆ ಖೋಡಿಯಾದುದೆ (ಜೈಮಿಭಾ. ೨೪-೨೧); ಸುಮ್ಮನೆ ಖೋಡಿಯನೆನ್ನ ಮೇಲಿರಿಸುತಿರ್ಪುದು ಚೆಂದಮೇ (ನಳವಿ. ೫೧). ೬. ಹಾನಿ; ಕೆಡುಕು; ಕೇಡು : ಕೌರವೇಂದ್ರಗೆ ಖೋಡಿಯುಂಟೇ ದ್ರೋಣ ಕೇಣವ ಬಿಟ್ಟು ಕಾದುವರೆ (ಕುವ್ಯಾದ್ರೋ. ೨-೫೮); ಹೇಡಿ ನೃಪಾಲರೊತ್ತಿನೊಳಿರೆ ನಮಗಿನ್ನು ಖೋಡಿ ತಪ್ಪದು ಮುಂದಕೆಂದು (ಕುರಾಸಾಂ. ೯-೫೧). ೭. ಅನುಮಾನ; ಸಂಶಯ : ಆಹುದಲ್ಲವೆಂಬೀ ಖೋಡಿಯಿಲ್ಲದೆ ಕೊಂಡು ಸುಖಿಸುವ ಸರ್ವಭಕ್ಷಂಗೆ . . . ಪುನರಪಿ ನೀಡತೊಡಗಿದರೆಂಟುದೆಸೆಯಲಿ (ಪ್ರಭುಲೀ. ೨೩-೧೬); ಖೋಡಿಯಿಲ್ಲದೆ ಸುರುಚಿಯೊಂದುದ ಮಾಡು (ನಿಭಾಗ. ೪-೬-೧೯). ೮. ಬಡಪಾಯಿ; ದರಿದ್ರ; ಕುತ್ಸಿತ ವ್ಯಕ್ತಿ : ಗಂಗೆಯ ಶಿರದಲ್ಲಿ ಧರಿಸಿದ ನಮ್ಮ ಶಿವ ಕುಂಭವ ಹೊಱದೇ ಬಡಕೊಂಬೆ ಖೋಡಿ (ಪುರಂದ. ೧-೮೭-೧); ಮಂಗಮನವೆ ವಾದ ಸಾಕು ಖೋಡಿ (ಅರಳು. ೩೪೯-೧೬). **ಕೋಡಿ₅** : ೨. ಕಾಂತೆಯಾಗಿ ಗಾಡಿಯಂ ಮೆಱೆದು ದೈತ್ಯರ ಕರದ ಕಲಶಮಂ ಕೋಡಿಯಿಂ ಕೊಂಡು (ಚಬಪು. ೨೨-೨೬). ೩. ನಿನ್ನಂ ವಂಚಿಸಿದ ಕೋಡಿ ಕೂಳರಾದೆವ್ಮ ದುರ್ಗುಣವನೆಣಿಸದೆ (ಮಲ್ಲಚ. ೧೧-೮).

೪. ಈಶಾನ್ಯದೊಳ್ ಕೋಡಿಯಿಲ್ಲದೆ ಜಡಿದುದು . . . ಅಮರಸುಭಟಾಳಿ (ಚಿಬವು. ೪೨–೩೧). ೫. ನಾಡುಗರೆ ನಿಮ್ಮಿಂದೆಮಗೆ ನೆಜಿಕೋಡಿ ಬಂದುದು (ಶಂಕದಾ. ೧೨–೫). ೬. ಬೆದಜಿದರು ಕೋಡಿಗಳು [ಪಾಠಾಂ. ಕೆದಜಿದುವು ಕೇರಿಗಳು] ರಾಯನ ಹದನದೇನೆನುತ ಹರದರು ಹರಿದರಗಲವಲಿ (ಕುವ್ಯಾಅ. ೨೦–೨); ಕೋಡಿಗಳೆರಾ ಪರಮುಶಿವಯೋಗಿ ಗುರುವರ್ಯರೀಡಿಜಿವ ಹರಿಸದಿಂದಿತ್ತ ಪರಕೆಯ ಕೇಳ್ವೊಡಂ ಬಧಿರಮಾಯ್ತು (ಕೊಟ್ಟೂಬ. ೪–೧೨೨).

**ಖೋಡಿಮಾಡು** = ಕೀಳುಮಾಡು: ಖೋಡಿಮಾಡದಿರಲೆ ಕಿರೀಟ ವಿಭಾಡಿಸುವುದರಿಂದೇ ದೊಠಾರಿಸಿಯಾಡುವುದು ದೊರೆಗುಚಿತವೇ (ಕುವ್ಯಾಭೀ. ೯–೩೬). [← ಮರಾ. ಖೋಡ್, ಖೋಡೀ]

**ಖೋಡಿಗಳೆ**, ಕೋಡಿಕಳೆ, ಕೋಡಿಗಳೆ (ಕ್ರಿ). ದೂರು; ಅಲ್ಲಗಳೆ; ಕಡೆಗಣಿಸು: ಖೋಡಿಗಳೆಯದಿರಾರುವನು . . . ರಣಖೇಡನಾಗದಿರು (ಕುವ್ಯಾಅ. ೪–೨೩); ಎಮ್ಮ ಗುರುವನು ಖೋಡಿಗಳೆದರೆ ಕೆಡುವೆ ನೀನು (ಪ್ರಭುಲೀ. ೧೬–೧); ಸೇವೆಯ ಮಾಡಿಸಿಕೊಂಡು ಭಟರನು ಖೋಡಿಗಳೆವ ಕೋಮಟಿಗ ದೊರೆಗಳ ಬಿಟ್ಟು (ಕುರಾಸಾಂ. ೯–೧೩); ಧರ್ಮತೇಜನ ಖೋಡಿಗಳವವರಲ್ಲಲಾ ತಪ್ಪೇನು ಕಂಡಿಹರೊ (ನಿಭಾಗ. ೬–೧–೨೮). **ಕೋಡಿಕಳೆ**: "ತಿರಸ್ಕರಿಸು, ನಿರಾಕರಿಸು" (ಸಿಂಕೋ. ೧೪೧). **ಕೋಡಿಗಳೆ**: ಮಾಡುವ ಭಕ್ತನಲ್ಲಿ ಕೂಡಿಪ್ಪ ಜಂಗಮವು ಕೋಡಿಗಳೆವುತ್ತಿಪ್ಪರೊಬ್ಬರನೊಬ್ಬರು (ಅವಚಂ. ೨೫೮–೧೧೬೩); ಶಾಸ್ತ್ರವ ಕೋ [ಪಾಠಾಂ. ಖೋ]ಡಿಗಳೆವವನಲ್ಲ (ಕುವ್ಯಾಕ. ೨೬–೧೬); ಕುಂದಿಸರಲೇ ಕೋ[ಪಾಠಾಂ. ಖೋ]ಡಿಗಳೆದು ವಹಮಾನದೊಳ್ಸಂಧಿಸರಲೇ ಕೊಂಕು ಕೊಜತೆಗಳನು (ಜೈಮಿಭಾ. ೧೮–೪೨).

[ಖೋಡಿ + ಕಳೆ$_1$]

**ಖೋಡಿಗಾಣ್**, ಕೋಡಿಕಾಣು, ಕೋಡಿಗಾಣು (ಕ್ರಿ). ತಪ್ಪು ಎಣಿಸು; ಕೊರತೆಯನ್ನು ಕಾಣು; ನ್ಯೂನತೆಯೆಂದು ಭಾವಿಸು: ಅಡಿ ಹುಸಿಯಲ್ಕೆಚ್ಚು ತಪ್ಪಲು ಖೋಡಿಗಾಂಬುದು ಲೋಕ (ಕುವ್ಯಾಅ. ಓರಿಇ.೬೦–೪೩). **ಕೋಡಿಕಾಣು**: "ಕೊರತೆಕಾಣು" (ಸಿಂಕೋ. ೧೪೨). **ಕೋಡಿಗಾಣು**. 'ಕೋಡಿಗಾಣಿಸು' ಪರಾ. [ಖೋಡಿ + ಕಾಣ್]

**ಖೋಡಿಗಾಣಿಸು**, ಕೋಡಿಗಾಣಿಸು (ಕ್ರಿ). ಕೊರತೆಯನ್ನುತೋರು: ಖೋ [ಪಾಠಾಂ. ಕೋ]ಡಿಗಾಣಿಸದೀತನನು ಕೊಂಡಾಡಬಹುದೆನುತಸುರ ವಂಶವಿಭಾಡ ಹೊಗಳಲು (ತೊರಾ. ೬–೫೦–೪೩). **ಕೋಡಿಗಾಣಿಸು**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ಖೋಡಿಗಾಣ್ + –ಇಸು$_3$]

**ಖೋಡಿಗೊಳ್** (ಕ್ರಿ). ಕೇಡುಹೊಂದು; ಅವಮಾನಪಡೆ (?): ಖೋಡಿಗೊಂಡನು ಕಂಡು ಶತಬಲಿ ನೋಡಿ ಮಾರುತಿ ನಾಚುತೆಂದನು ನೋಡುನೋಡೀ ನಳನ ಗರ್ವವನೆಂದು ಮನದೊಳಗೆ (ಕಾಶಿರಾ. ೧೬–೧೫).

[ಖೋಡಿ + ಕೊಳ್$_1$]

**ಖೋಡಿಚಾಳಿ** (ನಾ). ಕೆಟ್ಟಚಟ; ದುರಭ್ಯಾಸ: ರಾಮರಾಜನಲಿಯಾದರೂ ಅಪಮೃತ್ಯುವಿನ ಭಯದ ಖೋಡಿಚಾಳಿಯೊಂದು ಇತ್ತು (ಕನ್ನಡಿ. ೩೭). [ಖೋಡಿ + ಚಾಳಿ]

**ಖೋಡಿತನ** (ನಾ). ತುಂಟತನ; ಕಿಡಿಗೇಡಿತನ: ಇದರ ಖೋಡಿತನಕ್ಕ ಒಂದು ಗಳಿಗ್ಗೆ ಸಿಟ್ಟು . . . ಮತ್ತೊಂದು ಗಳಿಗ್ಗೆ ನಗಿ ಬರತದ (ವೈನಿ. ೨೧). [ಖೋಡಿ + –ತನ]

**ಖೋಡಿದೈವ** (ನಾ). ದುರ್ದೈವ; ದುರದೃಷ್ಟ: ಖೋಡಿದೈವದ ಹುಡುಗಿ ಸುಮ್ಮನೆ . . . ಮದುವೆಯಾಗಲಿಕ್ಕೆ ಒಪ್ಪಿಕೊಂಡಿದ್ದರೆ ಆಗುತ್ತಿರಲಿಲ್ಲವೆ? (ಸುದರ್ಶ. ೧೧೦). [ಖೋಡಿ + ದೈವ]

**ಖೋಡಿಯೋಗು** (ಕ್ರಿ). ತಪ್ಪುಮಾಡು; ದೋಷಯುಕ್ತವಾಗು: ಹಾಡುವೆಡೆಗಳೊಳಾಡುವೆಡೆಗಳೊಳು ಖೋಡಿಯೋಗದೆ ಬೇಡನಾಗದೆ . . . ಓಲಾಡುತಿಪ್ಪರು (ಸದ್ಗುರು. ೯–೧). [ಖೋಡಿ + ಪೋಗು$_1$]

**ಖೋತ$_1$**, ಕೋತ$_2$, ಖೋತಾ (ನಾ). ಕಡಮೆ ಮಾಡುವಿಕೆ; ಕಡಿತ; ಭಂಗ: ಮನಿಆರ್ಡರಿನಲ್ಲಿ ಖೋತಮಾಡಿ ಚೆನ್ನಾಗಿ ತಿನ್ನೋ ಅಂದರು (ಚೆಂಗೂಲಿ. ೧೨೪); ಈಗ . . . ಕಾರ್ಡಿನಲ್ಲೂ ಕೋಟ ಖೋತಮಾಡುತ್ತಾರೆ (ಮರಳ. ೧೨೫). **ಕೋತ$_2$**: ಕಡಮೆಮಾಡುವುದು; ಕೋತ ಮಾಡುವುದು (Abridgement. ಇಂಕನಿ). **ಖೋತಾ**: ಕಲ್ಲಿನ ದೇವರ ಅರ್ಚನೆಯನ್ನು ಖೋತಾಮಾಡಿದರು (ದುಂಬಿಕ. ೫೬); ಸಂಬಳಗಳಲ್ಲಿ ಖೋತಾ ಆಗಿತ್ತು (ದಾದಾನ. ೧೧೧); ಹಣ ಖೋತಾ ಬಿದ್ದಿದೆ (ಚೆಂಗೂಲಿ. ೯೫).

[← ಪಾರ. ಕೋತಾಹ್; ಹಿಂ. ಮರಾ. ಕೋತಾ]

**ಖೋತ$_2$** (ನಾ). ಸರಕಾರದಿಂದ ಕಂದಾಯ ವಸೂಲಿ, ಜಕಾತಿ ಮೊದಲಾದುವುಗಳ ಒಟ್ಟು ಗುತ್ತಿಗೆ ಹಿಡಿಯುವವನು; ಗ್ರಾಮದ ಅಧಿಕಾರಿ: ಖೋತರೆಂದರೆ ಹೊಲದ ತೆರಿಗೆಯನ್ನು ನಿರ್ಧರಿಸಿ ಒಡೆಯರಿಂದ ವಸೂಲುಮಾಡಿ ಸರಕಾರಕ್ಕೆ ತುಂಬುವ ವೇತನವಿಲ್ಲದ ದಲ್ಲಾಳಿ (ಶ್ಯಾಮತಾ. ೧೧). [← ಮರಾ. ಖೋತ]

**ಖೋತಾ** 'ಖೋತ$_1$' ನೋ.

**ಖೋತಾಸೂಚನೆ** (ನಾ). (ವಿಧಾನ ಸಭೆ ಮೊದಲಾದುವುಗಳಲ್ಲಿ) ಯಾವುದಾದರೂ ಕೆಲಸಕ್ಕೆ ಗೊತ್ತುಪಡಿಸಲಾದ ಹಣದಲ್ಲಿ ಕಡಿತ ಮಾಡಬೇಕೆಂಬ ಸೂಚನೆ (Cut motion. ಪತ್ರಿನಿ. ೫೬).

[ಖೋತಾ (< ಖೋತ$_1$) + ಸೂಚನೆ]

**–ಖೋರ** '–ಕೋರ$_3$' ನೋ.

**ಖೋರಾಸಾನಿ** 'ಖುರಾಸಾನಿ' ನೋ.

**ಖೋಲ** (ನಾ). = ಖೋಡ: (ಕ). [< ಸಂ. ಖೋಡ]

**ಖೋಲಿ$_1$** (ನಾ). ಬತ್ತಳಿಕೆ. [ಸಂ.]

**ಖೋಲಿ$_2$** (ನಾ). (ಉಕ) ಕೋಣೆ; ಕೊಠಡಿ: ದೇಶಪಾಂಡೆಯವರು ಖೋಲಿಯಿಂದ ಹೊರಗೆ ನಡೆದರು (ಹೊಸಬೆ. ೧೧); ಪಕ್ಕೆಯ ಖೋಲಿಯಲ್ಲಿದ್ದ ವಿದ್ಯಾರ್ಥಿಗಳಿಗೆ ಗಂಟುಬಿದ್ದು . . . ಪತ್ರವನ್ನು ಬರೆಯಿಸಿಕೊಂಡ (ಹುಚ್ಚುಹು. ೧೬); ಅಮೃತನು ಕಲಕಿದ ಮನಸ್ಸು ಕಟ್ಟಿಕೊಂಡು ಖೋಲಿ ಸೇರಿದನು (ಅನ್ನ. ೨೩). [← ಹಿಂ. ಮರಾ. ಖೋಲೀ]

**ಖೋವಾ**, ಕೋವೆ$_5$ (ನಾ). ಕಾಯಿಸಿ ಗಟ್ಟಿಗೊಳಿಸಿದ ಹಾಲು: ಪ್ರಸನ್ನಳು ನಾಳೆ ಖೋವಾ ತಂದು ಕೊಡುತ್ತೇನೆಂದು ಹೇಳಿದ್ದಾಳೆ (ಕಮಕ. ೧೨೧). **ಕೋವೆ$_5$**: (ಕ). [← ಹಿಂ. ಮರಾ. ಖೋವಾ]

**ಖ್ಯಾತ** (ಗು). ೧. ಹೆಸರಾದ; ಪ್ರಸಿದ್ಧವಾದ: ಆತನ ಕುಲವನಿತೆ ಜಗತ್ ಖ್ಯಾತ ಗುಣವ್ರಾತೆ ರೂಪಲಾವಣ್ಯರಸೋಪೇತೆ (ಛಂದೋಂಬು. ೧–೧೮). (ನಾ). ೨. ಪ್ರಸಿದ್ಧಿ; ಖ್ಯಾತಿ: ಖ್ಯಾತಮಾಯ್ತು ಜಾತಕತಿಲಕಂ (ಜಾತತಿ. ೨೪–೩೬). 'ಪ್ರಖ್ಯಾತ' ಪರಾ. [ಸಂ.]

**ಖ್ಯಾತಕರ್ಣಾಟಕ** (ನಾ). ೧. ಪ್ರಸಿದ್ಧವಾದ ಕರ್ಣಾಟಕ ದೇಶ ಮತ್ತು ಭಾಷೆ. ೨. ಕನ್ನಡದಲ್ಲಿ ಪ್ರಸಿದ್ಧವಾದ ಆರು ಸಂಸ್ಕೃತ ವೃತ್ತಗಳು. ☞ ಉತ್ಪಲಮಾಲೆ, ಚಂಪಕಮಾಲೆ, ಶಾರ್ದೂಲ ವಿಕ್ರೀಡಿತ, ಮತ್ತೇಭವಿಕ್ರೀಡಿತ, ಸ್ರಗ್ಧರೆ, ಮಹಾಸ್ರಗ್ಧರೆ: ಗುರುವೊಂದಾದಿಯೊಳುತ್ಪಲಂ . . . ಚಂಪಕಮಿಂತಿವಾಱುಂ ಖ್ಯಾತ ಕರ್ಣಾಟಕಂ (ಛಂದೋಂಬು. ೨–೧೪೯ ಅಡಿಟ); ಈ ಖ್ಯಾತ ಕರ್ಣಾಟಕ ವೃತ್ತಗಳಲ್ಲಿ ಚಂಪಕಮಾಲೆ ಕನ್ನಡಕವಿಗಳಿಗೆ ಬಹಳ ಪ್ರಿಯವೆಂದು ಕಾಣುತ್ತದೆ (ಛಂದೋವಿ. ೧೦೮). [ಖ್ಯಾತ + ಕರ್ಣಾಟಕ]

**ಖ್ಯಾತಗರ್ಹಣ** (ಗು). ೧. ಎಲ್ಲರಿಗೂ ತಿಳಿದಂತೆ ನಿಂದೆಗೆ ಪಾತ್ರವಾದ; ಕುಪ್ರಸಿದ್ಧವಾದ; ದುಷ್ಕೀರ್ತಿಯನ್ನು ಗಳಿಸಿದ. (ನಾ). ೨. ಬಹಳ ನಿಂದೆಗೊಳಗಾದವನು: "ಅವಗೀತಃ, ಖ್ಯಾತಗರ್ಹಣಃ –೨ ಪ್ರಸಿದ್ಧವಾದ ನಿಂದೆಯುಳ್ಳವನು" (ಸಿದ್ಧಾಂತಿ. ೨೯೯). [ಖ್ಯಾತ + ಗರ್ಹಣ]

**ಖ್ಯಾತನಾಮ** (ನಾ). ಹೆಸರಾದವನು; ಪ್ರಸಿದ್ಧನಾದವನು: ಖ್ಯಾತನಾಮನಾದ ಆ ವಕೀಲನಲ್ಲಿ ಈ ಪುರೋಹಿತನಿಗೆ ವಿಶೇಷ ಗೌರವವಿತ್ತು (ಪುನರು. ೩೫). [ಖ್ಯಾತ + ನಾಮ]

**ಖ್ಯಾತಯಶ** (ನಾ). = ಖ್ಯಾತನಾಮ: ಎಲ್ಲಮಂ ನೂತನಪೂರ್ಗಮೆಸೆಯೆ ಪೇೞ್ದಂ ಖ್ಯಾತಯಶಂ ಕವಿತಾಗುಣೋದಯಂ (ಕಾವ್ಯಾವ. ೭೭೮). [ಖ್ಯಾತ + ಯಶ]

**ಖ್ಯಾತಿ** (ನಾ). ೧. ಹೆಸರುವಾಸಿ; ಪ್ರಸಿದ್ಧಿ; ಕೀರ್ತಿ: ನಿನ್ನಯ ನುತ ಖ್ಯಾತಿಗದಟಿಂಗೆ ರೂಪಿಂಗೆ . . . ಮರುಳಾಗಿ ಮತಿಗೆಟ್ಟೆವು (ಹಚಕಾ. ೭–೨೩). ೨. ಹೊಗಳಿಕೆ; ಸ್ತುತಿ: ವನಜಾಕ್ಷಖ್ಯಾತಿಪೂತಂ ಕಥೆ ಕವಿ ಕವಿರಾಜಂ (ಜಗವಿ. ೧–೨೨). ೩. ತೋರುವಿಕೆ; ಪ್ರಕಟವಾಗುವಿಕೆ: ಇಲ್ಲಿ ವಸ್ತುಗಳು ತೋರುವುದಕ್ಕೆ ಖ್ಯಾತಿಯೆಂದೂ ಅನಂತರ ನಿವೃತ್ತಿಯಾಗುವುದಕ್ಕೆ ಬಾಧೆಯೆಂದೂ ಹೆಸರು (ಹಿಂದಸಾ. ೨೧೦). ೪. ವರದಿ; ನಿರೂಪಣೆ; ಹೇಳುವಿಕೆ. 'ಖ್ಯಾತಿಸು' ಪರಾ. ೫. "ಗಣ್ಯತೆ, ಖ್ಯಾತಿ, ಗೌರವ" (Credit. ಪತ್ರಿನಿ.೨೭). ೬. [ಯೋಗ] ಸಾಕ್ಷಾತ್ಕಾರ: ಖ್ಯಾತಿಯೆಂದರೆ ಸಾಕ್ಷಾತ್ಕಾರ (ಹಿಂದಸಾ. ೧೦೨). [ಸಂ.]

**ಖ್ಯಾತಿಕಾಂಕ್ಷೆ** (ನಾ). ಹೆಸರು ಗಳಿಸುವ ಬಯಕೆ; ಪ್ರಸಿದ್ಧಿಯ ಅಪೇಕ್ಷೆ: ನನ್ನಂಥವರಿಗೆ ಪ್ರೇರಣೆ . . . ಧನಾರ್ಜನೆಯೂ ಅಲ್ಲ, ಖ್ಯಾತಿಕಾಂಕ್ಷೆಯೂ ಅಲ್ಲ (ಸಂಶೋಧ. V ಪ್ರಸ್ತಾವ). [ಖ್ಯಾತಿ + ಕಾಂಕ್ಷೆ]

**ಖ್ಯಾತಿಗಳಿಸು** (ಕ್ರಿ). ಹೆಸರಾಗು; ಪ್ರಸಿದ್ಧಿಯನ್ನು ಪಡೆ; ವಿಖ್ಯಾತವಾಗು: ನಿಟ್ಟೂರು ಮತ್ತು ಅದರ ಸುತ್ತಲ ಊರುಗಳು . . . ಖ್ಯಾತಿಗಳಿಸಿದ್ದುವು (ನಿಟ್ಟೂಶಾಂ. ೧). [ಖ್ಯಾತಿ + ಗಳಿಸು]

**ಖ್ಯಾತಿಪಡು** (ಕ್ರಿ). = ಖ್ಯಾತಿಗಳಿಸು: ನೀತಿಯುಳ್ಳವನು ಖ್ಯಾತಿಪಟ್ಟನು (ಗಾದೆ). [ಖ್ಯಾತಿ + ಪಡು$_1$]

**ಖ್ಯಾತಿವಡೆ** (ಕ್ರಿ). = ಖ್ಯಾತಿಗಳಿಸು: ಖ್ಯಾತಿವಡೆದಿರ್ದ ನಾಲ್ಕುಂ ಜಾತಿಗಳೊಳ್ ಮದುವೆಯಾಗಲಕ್ಕುಂ ಪಾರ್ವರ್ಗೆ (ಸಮಪ. ೬–೯೪); ಖ್ಯಾತಿವಡೆದ ಕೋವಿದ ನಿಕುರುಂಬಮದೇತೆಜನೆಂದು ತಿರಸ್ಕರಿಸದೆ (ಜಯಕಾ. ೧–೧೫). [ಖ್ಯಾತಿ + ಪಡೆ$_1$]

**ಖ್ಯಾತಿಸು** (ಕ್ರಿ). ಹೇಳು; ನಿರೂಪಿಸು; ಪ್ರಸಿದ್ಧಪಡಿಸು: ಗೀತೆಯಲಿ ವಿಶ್ವಜೀವನ ರಹಸ್ಯವನವರ್ ಖ್ಯಾತಿಸಿಹರು (ಮಂಕುಕ. ೪೬೨). [ಖ್ಯಾತಿ + –ಇಸು$_3$]

**ಖ್ಯಾತೆ** (ನಾ). ಪ್ರಸಿದ್ಧಳಾದವಳು; ಹೊಗಳಲ್ಪಟ್ಟವಳು: ಹುಡುಕಿ ಬಾರೊ ಹಾರಿ ಜಲಧಿ ಸುಗುಣವೆಂಬ ಸೀತೆಯ ಪೂತೆ ಖ್ಯಾತೆ ತ್ರಾತೆಯ (ಕಲ್ಲೋಲ. ೫೫). [ಸಂ. ಖ್ಯಾತಾ]

**ಖ್ಯಾಪನ** (ನಾ). ತಿಳಿಯಪಡಿಸುವುದು; ನಿರೂಪಣ: ಅಧಿಕೃತಮಪ್ಪ ಮತ್ಯಾದಿಗಳ್ಗೆ ನಿಯಮದಿಂ ಪ್ರಮಾಣತ್ವ ಖ್ಯಾಪನಾರ್ಥಂ ಉತ್ತರ ಸೂತ್ರಾವತಾರಂ (ತತ್ತ್ವಪ್ರ. ೫೩). [ಸಂ.]

**ಖ್ಯಾಲ್** 'ಖಯಾಲಿ' ನೋ.

**ಖ್ಯಾಲ** 'ಖಯಾಲಿ' ನೋ.

**ಖ್ಯಾಲಿ** 'ಖಯಾಲಿ' ನೋ.

**ಖ್ಯಾಲು** 'ಖಯಾಲಿ' ನೋ.

**ಖ್ಯಾಜಾ** 'ಕೊಜ್ಜೆ' ನೋ.

# ಗ



**$ಗ_1$** (ನಾ). ೧. ಕನ್ನಡ ವರ್ಣಮಾಲೆಯ ಇಪ್ಪತ್ತಮೂರನೆಯ ಅಕ್ಷರ; ಗಕಾರ: ವ್ಯಂಜನಗಳು:—ವರ್ಗೀಯ: ಕ ಖ ಗ ಘ ಙ (ಕೈಪಿಡಿ. ೩). ೨. [ಛಂದ] ದೀರ್ಘಾಕ್ಷರದ ಸಂಕೇತ; ಗುರು: ಈ ಲಕ್ಷಣ ವಾಕ್ಯಗಳಲ್ಲಿ ಲ ಎಂದರೆ ಲಘುವೆಂದೂ ಗ ಎಂದರೆ ಗುರುವೆಂದೂ ತಿಳಿಯಬೇಕು (ಕೈಪಿಡಿ. ೬೮). ೩. [ಸಂಗೀತ] ಸಪ್ತಸ್ವರಗಳಲ್ಲಿ ಮೂರನೆಯದು; ಗಾಂಧಾರ: ಸಪ್ತಸ್ವರಗಳು ಕ್ರಮವಾಗಿ ಸ, ರಿ, ಗ, ಮ, ಪ, ಧ, ನಿ ಎಂಬ ಸಂಕೇತಾಕ್ಷರಗಳಿಂದ ಪ್ರಯೋಗದಲ್ಲಿವೆ (ಸಂಗೀಚಂ. ೧೫). ೪. (ಶಾಸನಗಳಲ್ಲಿ ಬರುವ) 'ಗದ್ಯಾಣ' ಎಂಬುದರ ಸಂಕ್ಷಿಪ್ತರೂಪ: ಬಮ್ಮರಸ ಬಿಟ್ಟ ಗ ೨ . . . ಕ್ರವಿಂತರು ಬಿಟ್ಟ ಗ ೧ (ಸೌಇಇ. XI–ii, ೧೮೯–೪; 1106); ವಾತಶ್ಲೇಷ್ಮಜ್ವರಗಳಿಗೆ:— ಚಾಳೀಸಪತ್ರೆ ಗ ೧ ತೂಕ, ಮೆಣಸು ಗ ೧ ತೂಕ (ವಿವೈವಿ. ೨೦೧). ೫. (ಉಕ) ಗರ್ವ; ಅಹಂಕಾರ; ಕೊಬ್ಬು: ಅವನಿಗೆ ಗ ಬಹಳ (ರೂಢಿ); ಶ್ರೀ ಒಣಗಿದೆ ಗ ಬಚ್ಚಿದೆ (ಗಾದೆ).

**$-ಗ_2$** (ಪ್ರ). ಇದರಲ್ಲಿ ವರ್ತಿಸುವವನು ಎಂಬ ಅರ್ಥದಲ್ಲಿ ಬರುವ ಒಂದು ತದ್ಧಿತಪ್ರತ್ಯಯ: ಇವರುಟ್ಟರುಮಲ್ಲರ್ ಬತ್ತಲೆಗರುಮಲ್ಲರ್ (ವಡ್ಡಾರಾ. ೯೩–೧೨); ಬತ್ತಲೆಗರ ಮಾತುಗೇಳದಿರ್ (ಆದಿಪು. ೨–೯); ಘನವಾಗಿ ವರ್ತಿಸುವನೀತನಿವಱೊಳೆಂಬಲ್ಲಿ ಕುಟಿಗ ಗ ಪ್ರತ್ಯಯಮುಂ . . . ಮಾತುಗಂ ಬೂತುಗಂ (ಶಮದ. ೨೦೧ ಮತ್ತು ಪ್ರಯೋ).

**ಗಉಡ** 'ಗಾಮುಂಡ' ನೋ.

**ಗಉಡಿಕೆ** 'ಗಾವುಂಡಿಕೆ' ನೋ.

**ಗಉಡುಂಬಳಿ** 'ಗೌಂಡುಂಬಳಿ' ನೋ.

**ಗಉಡುಗೊಡಗೆ** 'ಗವುಡುಗೊಡಗೆ' ನೋ.

**ಗಂಗ** (ನಾ). ೧. ಒಬ್ಬಾತನ ಹೆಸರು: ಕೇಸವರಾಜ ಆಗಸವ್ವೆ ದಾಸರ ಗಂಗ (ಎಕ. VII, ಚನ್ನಗಿ. ೩೨–೨೩೯; 1050). ೨. ಕರ್ನಾಟಕದ ಅರಸುಮನೆತನಗಳಲ್ಲಿ ಒಂದು: ಕೆಲ್ಲಂಗೆಱೆಯಾದಿತೀರ್ತ್ಥಮದು ಮುನ್ನಂ ಗಂಗರಿಂ ನಿರ್ಮಿತಂ (ಎಕ. II, ೩೪೫–೪೫; 1159); ಕದಂಬರು, ಗಂಗರು, ರಾಷ್ಟ್ರಕೂಟರು, ಚಾಳುಕ್ಯರು, ಹೊಯ್ಸಳರು – ಇವರ ಪ್ರೋತ್ಸಾಹದಿಂದ ಜೈನಧರ್ಮ . . . ಬೆಳಗಿತು (ಕಶಾಅ. ೬೯). 'ಗಂಗವಾಡಿ' ಪರಾ. ೩. ರೈತರಲ್ಲಿ ಒಂದು ಪಂಗಡ (?): ಊರೂರ್ದಪ್ಪದೆ ಪೂತ ಚೂತಲತೆಯಿಂ ಮತ್ತಾಳಿಯಿಂ ಶಾಳಿಯಿಂ ದೂರರ್ದಪ್ಪದೆ ಗಂಗರಿಂ ಕುಡಿಯರಿಂ ಶ್ರೀಮಂತರಿಂ ಕಾಂತರಿಂ (ಎಇ. XIV, ೨೭೧–೧೮; 1173).

ಗಂಗಚೂಡಾಮಣಿ = ಗಂಗರಸರಲ್ಲಿ ಶ್ರೇಷ್ಠನಾದವನು; ಒಂದು ಬಿರುದು: ಕಾಳನೋ ರಾವಣನೋ ಶಿಶುಪಾಳನೊ ತಾನೆನಿಸಿ ನೆಗೞ್ದ ನರಗನ ತಲೆ ತನ್ನಾಳಾಳ ಕೈಯ್ಗೆ ವನ್ದುದು ಹೇಳಾಸಾಧ್ಯದೊಳೆ ಗಂಗಚೂಡಾಮಣಿಯಾ (ಎಕ. II, ೫೯–೯೬; 974). ಗಂಗಪೆರ್ಮಾನಡಿ = ಒಂದು ಬಿರುದು (?): ಶ್ರೀಮಚಾಳುಕ್ಯ ಕ[ಲಿ]ಗಂಗಪೆರ್ಮ್ಮಾನಡಿ ವಿಕ್ರಮಾದಿತ್ಯದೇವವರ್ಮ್ಮ ವಂದಲೆ ಮಯ್ಯಾರ್ಗದೆ (ಸೌಇಇ. XX, ೩೫–೪; 1055). **ಗಂಗವೆಡಂಗ** = ಗಂಗರಲ್ಲಿ ಶ್ರೇಷ್ಠನಾದವನು; ಒಂದು ಬಿರುದು (?): ಗಙ್ಗವೆಡಙ್ಗ ಶ್ರೀಮತ್ ರಾಚೆಯರಸರ ಅರಸಿ ಗಾಳಬ್ಬೆ (ಎಕ. V, ಹೊಳೆನ. ೧೪–೧೦; 960). [?]

**ಗಂಗಗಾವುಂಡ** (ನಾ). ಒಬ್ಬಾತನ ಹೆಸರು: ಗಂಗಗಾವುಣ್ಡನ ಮಗಂ ರಟ್ಟಕುಳ ಕಾಲಚೋಳಗಾವುಣ್ಡಂಗಂ (ಎಕ. IX, ನೆಲಮಂ. ೧–೯; 1029). [ಗಂಗ + ಗಾವುಂಡ (< ಗಾಮುಂಡ)]

**ಗಂಗಡಿಕಾರ** 'ಗಂಗಡಿಕಾಱ' ನೋ.

**ಗಂಗಡಿಕಾಱ**, ಗಂಗಡಿಕಾರ (ನಾ). ಒಕ್ಕಲಿಗಜಾತಿಯಲ್ಲಿ ಒಂದು ಪಂಗಡ; ಅಷ್ಟಾದಶ ಜಾತಿಗಳಲ್ಲಿ ಒಂದು: "ಗಂಗಡಿಕಾಱ [ಪಾಠಾಂ. ಗುಡಿಕಾಱ]ನ ಕ್ರಮುನಭೀರನೆಂದೆನೆ ಮಹಾಶೂದ್ರನಕ್ಕುಂ" (ಮಂಗರಾ. ೧೧೦–೬). **ಗಂಗಡಿಕಾರ**: ಗಂಗಡಿಕಾರರಲ್ಲಿ ಜನಿಸಿದ ಬೋಗಗಉಡ (ಎಕ. XIV, ಕೃಷ್ಣರಾ. ೯೧; 1851); (ಎಸಮೈ. II, ೪೧). 'ಗಂಗಢಾಡಿಕಾರ' ಪರಾ. [$ಗಂಗಡಿ_0$ + –ಕಾಱ]

**ಗಂಗನೆ** (ಅ). ತೀವ್ರವಾಗಿ; ಹೆಚ್ಚಾಗಿ: ನಮ್ಮ ಮನ್ಯಾಗ ಇದ್ದುಬಿಡೂ ಅಂತ ಗಂಗನೆ ಗಲವತ್ತುಕೊಂಡೆ (ಜೀವರಂ. ೮೪). 'ಕಂಗನೆ' ಪರಾ.

**ಗಂಗಪಾಣಿ** (ನಾ). ತೆಂಗಿನಲ್ಲಿ ಒಂದು ಬಗೆ; ಶ್ರೇಷ್ಠಜಾತಿಯ ತೆಂಗು: ಗಂಗಪಾಣಿ ತೆಂಗಿನಕಾಯ ತಿರುಳು ಗಜ್ಜುಗದ ತಿರುಳು (ಅಶ್ವಟೀ. ೬೪–೯); ಹಸನಾದ ಗಂಗಪಾಣೆಳೆನೀರ ಕಾಶಿಯ ವಸುಧೇಶ್ವರ ನೋಡಿದನು (ಜ್ಞಾನಚ. ೩೮–೧೨೫). [< ಸಂ. ಗಂಗಾಪಾನೀಯ ?]

**ಗಂಗಪುರ** (ನಾ). ಒಂದು ಊರಿನ ಹೆಸರು ಮತ್ತು ಅಲ್ಲಿ ತಯಾರಾಗುವ ಸೀರೆ: ಗುಲುಗುಂಜಿ ಮಡಿಯು ಗಂಗಪುರವು ದಾಯಗಲ್ಲು ಕರಾಳಿಯು (ಅಮುಸಾಂ. ೪–೧೨). 'ಗಂಗವುರ' ಪರಾ. [?]

**ಗಂಗಮಡು** (ನಾ). ಒಂದು ಪ್ರದೇಶದ ಹೆಸರು: ತುಱುಗಳ್ ಗಙ್ಗಮಡುವಿನ್ ಇಳ್ದು ಮುಟ್ಟೆ ಕಾದಿ ಸತ್ತು ಸ್ವರ್ಗ್ಗಿಯ ಆದ (ಮೈಆರಿ. ೧೯೨೩, ೨೩–೧೨; ?). [ಗಂಗ + ಮಡು ?]

**ಗಂಗಮಾಳ**, ಗಂಗಾಮಾಳ (ನಾ). ನಾಟಿ ಚಪ್ಪಲಿ; ಸ್ಥಳೀಯವಾದ ಕೆರ (ಸ್ಯಾಂಡರ್). **ಗಂಗಾಮಾಳ**: "ಚಪ್ಪಲಿ" (ರಮಾಕಾಂ. ೨೦೧). [?]

**ಗಂಗಮ್ಮ** (ನಾ). ೧. ಗಂಗೆ; ಗಂಗಾದೇವಿ: ಇಂದು ಗಂಗಮ್ಮನ ಪೂಜೆ (ರೂಢಿ). ೨. ನದಿ. ೩. ನೀರು. ೪. ಒಬ್ಬಾಕೆಯ ಹೆಸರು: ನಂಮ್ಮ ಊಳಿಗದ ಬೊಕಸ್ತ ಮುದಂಣನ ಮಗಳು ಗಂಗಮ್ಮನು ರುದ್ರಪ್ಪದೇವರಿಗೆ ತಮಗೆ ಅನೇಕ ಧರ್ಮವಾಗಲಿಯೆಂದು . . . ಕೊಟ್ಟ ಶಿಲಾಶಾಸನ (ಎಕ. XI, ಹೊಳಲ್ಕೆ. ೮೦–೧೭; 1682). [$ಗಂಗೆ_2$ + $ಅಮ್ಮ_1$]

**ಗಂಗಯ್ಯ** (ನಾ). ಒಬ್ಬಾತನ ಹೆಸರು: ಬೆಟ್ಟಾಲಿ ರಾಝುಯ್ಯ ಕೊಱಗಾಲ ಗಂಗಯ್ಯ (ಎಕ. IV, ಹೆಗ್ಗಡ. ೧೦೪–೧೫; 1037); ಗಂಗಯ್ಯನ ಭಣ್ಣ (ಎಕ. XII, ತುಮಕೂ. ೧೩–೨; 1112). [ಗಂಗ + $ಅಯ್ಯ_1$]

**ಗಂಗರ** '$ಗರ್ಗರ_1$' ನೋ.

**ಗಂಗರಾಸಿ** (ನಾ). ಒಬ್ಬಾತನ ಹೆಸರು: ಗಂಗರಾಸಿಭಟಾರಾ ಬರೆದ (ಎಕ. VIII, ಸೊರಬ. ೫೭೦–೨೨; 951). [ಗಂಗ + ರಾಸಿ ?]

**ಗಂಗವಾಡ** (ನಾ). ಒಂದು ಪ್ರದೇಶದ ಹೆಸರು: ಕನ್ನವಾಡ ಗಂಗವಾಡ ಬಳೆಯವಾಡ (ಮೈಆರಿ. ೧೯೨೯, ೧೧೮–೧; 820). [ಗಂಗ + $ಬಾಡ_1$]

**ಗಂಗವಾಡಿ** (ನಾ). = ಗಂಗವಾಡ: ಗಙ್ಗವಾಡಿ ತೊಂಬತ್ತಱು ಸಾಸಿರಂ (ಎಇ. I, ೩೫೦-೩; 900); ಬಲ್ಲಪಂ ಗಂಗವಾಡಿಗೆ ಬನ್ದ ಕಾಲದೊಳಗೆಯರಿಂ ರಾಜ್ಯಂಗೆಯೆ (ಎಕ. III, ಮಳವ. ೨೫-೩; 986); ಗಂಗವಾಡಿ ತೊಂಭತ್ತಱುಸಾಸಿರಮುಂ ಬ್ರಾಹ್ಮಣ ದತ್ತಿಗೆ ವರೆ (ಯಶೋಚ. ೧-೧೧). [ಗಂಗ + ಪಾಡಿ$_1$]

**ಗಂಗವಾಣಿ,** ಗಂಗೆವಾಳಿ (ನಾ). ಒಂದು ಜಾತಿಯ ಕುದುರೆ; ಬಿಳಿಯ ಕುದುರೆ: ಖುರ ನಯನ . . . ಕಕ್ಷವಕ್ಷದೊಳ್ ಪಾಂಡುರ ವಾಗಿರೆ ಮೆಯ್ ಗಂಗೆಯ ತೊಳಗುವ ನೊರೆಯಂ ಪೋಲ್ತಿಸೆಯೆ ಗಂಗವಾಣಿಯೆನಿಕ್ಕುಂ (ಅಶ್ವಶಾ. ೨-೨೪). **ಗಂಗೆವಾಳಿ:** ಕಕ್ಷ ವಕ್ಷಂ ಪಾಂಡುರವಾಗಿರೆ ಮೈ ಗಂಗೆಯ ನೊರೆಯಂ ಪೋಲ್ತಿಸೆಯೆ ಗಂಗೆವಾಳಿಯೆನಿಕ್ಕುಂ (ಅಶ್ವವೈ. ೨-೨೪). [?]

**ಗಂಗವಾಲುಕ** 'ಗಂಗೆವಾಳುಕ' ನೋ.

**ಗಂಗವಾಸ** (ನಾ). ಒಬ್ಬಾತನ ಹೆಸರು: ಗಂಗವಾಸನ ಮಗಂ ಗೋವಿನ್ದರಂ (ಎಕ. IX, ದೇವನ. ೪೨-೩; 900?). [ಗಂಗ + ವಾಸ?]

**ಗಂಗವುರ,** ಗಂಗಾಪುರ (ನಾ). ೧. ಒಂದು ಊರಿನ ಹೆಸರು: ಗಙ್ಗವುರದ ತುಱುಗೋಳೊಳ್ (ಎಕ. VIII, ಶಿಕಾ. ೨೪-೩; 970?). **ಗಂಗಾಪುರ**: ೨. ಗಂಗವುರದಲ್ಲಿ ತಯಾರಾಗುವ ಸೀರೆ: ಚಿತ್ರ ಚಿತ್ರಾವಳಿ ಪಾಗು ಪಸುರ ಪಟ್ಟೆ ಸೂತ್ರವಳಿಯ ಚಿನ್ನಧಾರೆ ನೇತ್ರವಳಿಯು ಸುಲಿಪಲ್ಲು ಗಂಗಾಪುರ ಸೂತ್ರ ರಾಗದ ಗಿಂಡಿನೆಡೆಯ (ಅ ಮು ಸಾ ೦. ೪-೮). [?]

**ಗಂಗವೂರ್** (ನಾ). ಒಂದು ಊರಿನ ಹೆಸರು: ಪಜ್ಜ (?ವ್ವ)ನೂರ್ ಗಙ್ಗವೂರ್ ಪುಲಿಗೆಱೆ (ಇಆ. VIII, ೨೪೩-೧೮; 634); ನಿರ್ಗುನ್ದ ನಾಡು ಮೂನೂಱು ಇಱಿಗಲ್ವಾಡಿ ಮೂನೂಱು ಗಂಗವೂರ ಮೂವತ್ತು (ಎಕ. IX, ಚಳ್ಳಕೆ. ೩೪-೧೩; 815). [ಗಂಗ + ಊರ್]

**ಗಂಗವ್ವ** (ನಾ).=ಗಂಗಮ್ಮ$_2$: ಒಳ್ಳೊಳ್ಳೆ ಮಾನ ಗರಿ ತೆಗೆದು ಅಡ್ಡಾವ ಗರತಿ ಗಂಗವ್ವನ ಉಡಿಯಾಗೆ (ಗರತಿ.೧೧೪). [ಗಂಗೆ+ಅವ್ವ$_1$(< ಅವ್ವೆ)]

**ಗಂಗಸ,** ಗಂಗಸೆ (ನಾ). ಹಿಂಸೆ; ಸಂಕಟ (?): ದೆಸೆದೆಸೆಗೆ ಸಿಡಿದವು ಕಿರೀಟ ಪ್ರಸರ ಹಱಿದವು ಹಾರವೆದೆಯಲಿ ಬಸವಳಿದು ಬಿಲ್ಲುಗುಳಿಸಿತು ರುಧಿರವನು ವದನದಲಿ ರಸದ ಲಂಪಟಕಿಕ್ಕುವನು ಖಂಡಿಸಲು ಸಿಲುಕಿದ ನಾಲಗೆಯ ಗಂಗಸದ [ಪಾಠಾಂ. ಗಂಗಸೆಯ] ನರಿಯವೊಲಿರ್ದನಾ ಬಿಲ್ಲಡಿಯಲಸುರೇಂದ್ರ (ತೊರವೆ. ೧-೧೫-೨೬); "ಅಪಮಾನ; ಉಪಹತಿ" (ಪ್ರಭಣ್ಣ). **ಗಂಗಸೆ:** ಒಸಗೆಯಾಟವೊ ಬಿಲ್ಲ ಹೊಯ್ಲಿನ ಹಸುಗೆಯಾಟವೊ ಗರುವರಿಗೆ ಗಂಗಸೆಯ ಮಾಡಿತು ಚಾಪವಿತ್ತಲು ಭೂಪ ಕೇಳೆಂದ (ಕುವ್ಯಾಆ. ೧೪-೪). [?]

**ಗಂಗಸರಾಯಿ** (ನಾ). ಒಂದು ಬಗೆಯ ಮದ್ಯ, —ಹೆಂಡ: ಕಾವೇರಿ ತನ್ನ ಗಂಡ . . . ಗಂಗಸರಾಯಿ ಕುಡಿದು ಬಿದ್ದ ಕತೆ ಹೇಳಿ ಕಣ್ಣೀರು ಮಿಡಿದಳು.(ಹೊಸಕ್ಷಿ. ೫೪). [ಗಂಗ? + ಸರಾಯಿ]

**ಗಂಗಸಾಗರ,** ಗಂಗಸಾರ (ನಾ). ೧. = ಗಂಗಸರಾಯಿ: ಸುರೆ ಬಗಿನಿಯಿಾಚಲೋಲೆಯ ಮರಗಳಾದಿ ಮತ್ತಿರದೆಸೆವ ಗಂಗಸಾಗರ ಮುಖ್ಯರಕ್ಕಸರ ಪರಿಪರಿಯ ಭೋಜನದ್ರವ್ಯಂಗಳೆಡಿದ ಭಂಡಿಗಳೈದೆ ಬರುತಿರ್ದುವು (ಚೆಬಪು. ೪೭-೪೫). **ಗಂಗಸಾರ:** ೧. ಹೇಸರಗತ್ತೆಯ ಮೇಲೆ ಬಂಗಿಯ ಹೇರು ಸಾಸಿರ ಗಂಗಸಾರಗಳ ಸೂಸುವ ಸಾರಾಯದ ಪೀಪಗಳ (ಕಂನವಿ. ೧೧-೩೮). [< ಗಂಗಾಸಾಗರ]

**ಗಂಗಸಾರ** 'ಗಂಗಸಾಗರ' ನೋ.

**ಗಂಗಸೆ** 'ಗಂಗಸ' ನೋ.

**ಗಂಗಳ** 'ಗಂಗಾಳ' ನೋ.

**ಗಂಗಱುಸಾಸಿರ** (ನಾ). ಒಂದು ನಾಡಿನ ಹೆಸರು: ಮಹಾಬಲಿ ಬಾಣ ರೆಸರ್ಗ್ಗ್ರಙ್ಗಱುಸಾಸಿರಮುಮಾಳೆ (ಎಕ. X, ಕೋಲಾರ. ೨೩೫-೨; 890?). [ಗಂಗ + ಅಱುಸಾಸಿರ]

**ಗಂಗಾಂಬು** (ನಾ). = ಗಂಗಾಜಲ: ಗಂಗಾಂಬುವಂ ಮುಟ್ಟದಿರ ಬಹುದೆ (ಜೈಮಿಭಾ. ೯-೨೬). [ಸಂ. (ಗಂಗಾ + ಅಂಬು)]

**ಗಂಗಾಕುಮಾರ** (ನಾ). ಗಂಗಾದೇವಿಯ ಮಗ; ಭೀಷ್ಮ: ಗಂಗಾಕುಮಾರನ ಕಳಶಜನ ರಾಧಾತನೂಜನ ರಂಗಭೂಮಿಯಿದು (ಕುವ್ಯಾಶ. ೩-೨೬). [ಸಂ. (ಗಂಗಾ + ಕುಮಾರ)]

**ಗಂಗಾಕುಮಾರಕ** (ನಾ). = ಗಂಗಾಕುಮಾರ: ಸೈನ್ಯಮಹೋದಧಿಯ ಮಧ್ಯದಲಿ ಮೆಱೆವವನಾ ದುರಂತಪರಾಕ್ರಮನು ಗಂಗಾಕುಮಾರಕನು (ಕುವ್ಯಾಭೀ. ೩-೭). [ಸಂ. (ಗಂಗಾ + ಕುಮಾರಕ)]

**ಗಂಗಾಜಮುನ** (ನಾ). ೧. ಗಂಗೆ ಮತ್ತು ಯಮುನಾ ನದಿಗಳು. ೨. ಒಂದು ಅಂಚಿನಲ್ಲಿ ಒಂದು ಬಣ್ಣ ಮತ್ತೊಂದು ಅಂಚಿನಲ್ಲಿ ಮತ್ತೊಂದು ಬಣ್ಣವಿರುವ ಸೀರೆ, ಪಂಚೆ ಮೊದಲಾದ ವಸ್ತ್ರ: (ಕ). [ಸಂ. (ಗಂಗಾ+ ಜಮುನಾ). / ಮರಾ. ಹಿಂ. ಗಂಗಾಜಮುನೀ]

**ಗಂಗಾಜಲ,** ಗಂಗಾಜಳ (ನಾ). ಗಂಗಾನದಿಯ ನೀರು; ಪವಿತ್ರ ನೀರು: ಗಂಗಾಜಲವ ಪೊರವಡಿಸಿಯೆ ಭಗೀರಥನು ವಗಿಸಿ ಭೂಮಿಗೆ ತಂದು ಹರಹಿದ (ಗಗತಾ. ೧೦-೧೪). **ಗಂಗಾಜಳ:** ಕಳಸಾರೋಹಣ ಮಾಗಿ ನೆಱೆಯ ನಿರ್ವ್ವಹಿಸಿದಗ್ಗ್ರಂಗಾಜಳ ಧೌತವಸ್ತ್ರಪವಿತ್ರೀಕೃತೋತ್ತ ಮಾಂಗೆಯರಪ್ಪರ್ (ಕಇಆ. ೪೯-೫-೫೭; 973). [ಸಂ. (ಗಂಗಾ + ಜಲ)]

**ಗಂಗಾಜಳ** 'ಗಂಗಾಜಲ' ನೋ.

**ಗಂಗಾಜಾತ** (ನಾ). = ಗಂಗಾಕುಮಾರ: ಗಂಗಾಜಾತನೋಲಗದಿಂದ ಸರಿದನು ತನ್ನ ಮಂದಿರಕೆ (ಕುವ್ಯಾಉ. ೭-೧೯). [ಸಂ.]

**ಗಂಗಾಜೂಟ** (ನಾ). ಗಂಗೆಯನ್ನು ಜಟೆಯಲ್ಲಿ ಧರಿಸಿರುವವನು; ಶಿವ: ಕೋಟ ಭಕ್ತರ ಮನೆಗಳಲಿ ಪರಿಪಾಟಿಯಿಂದಱಸುತ ಗಂಗಾ ಜೂಟನಗ್ಗದ ಜಂಗಮಾಂಘ್ರಿಗೆ ನಮಿಸಿ ನಿಮಿಷದಲಿ (ಬಸವು. ೩೫-೫೫). [ಸಂ. (ಗಂಗಾ + ಜೂಟ)]

**ಗಂಗಾತೀರ** (ನಾ). ಗಂಗಾನದಿಯ ದಡ: ಗಂಗಾತೀರದೊಳಿರ್ಪ ಸೂತನೆಂಬವಂ ಕಂಡು (ಪಂಪಭಾ. ೧-೯೫ವ).[ಸಂ. (ಗಂಗಾ + ತೀರ)]

**ಗಂಗಾದೇವಿ** (ನಾ). ೧. ಗಂಗಾನದಿಯ ಅಧಿದೇವತೆ: ಗಂಗಾ ದೇವಿಯುಂ ಆ ಕೂಸಂ ಮುಟುಗಲೀಯದೆ . . . ತೆಱೆಕೈಸಿ ತರೆ (ಪಂಪಭಾ. ೧-೯೫ವ). ೨. "ಜಲದೇವತೆ" (ರಮಾಕಾಂ. ೨೦೧). [ಸಂ. (ಗಂಗಾ + ದೇವಿ)]

**ಗಂಗಾದ್ವಾರ** (ನಾ). ೧. ಗಂಗೆಯು ಸ್ವರ್ಗದಿಂದ ಭೂಮಿಗೆ ಇಳಿದ ಸ್ಥಳ. ೨. ಗಂಗಾನದಿ ಬೆಟ್ಟದಿಂದ ಸಮತಲ ಭೂಮಿಗೆ ಬರುವ ಪ್ರದೇಶ; ಹರಿದ್ವಾರ: ಗಂಗಾದ್ವಾರದಲ್ಲಿ ಭರದ್ವಾಜನೆಂಬ ಮಹರ್ಷಿ ಯಿದ್ದನು (ವಚಭಾ. ೪೯). [ಸಂ. (ಗಂಗಾ + ದ್ವಾರ)]

**ಗಂಗಾಧರ** (ನಾ). ಗಂಗೆಯನ್ನು ಧರಿಸಿದವನು; ಶಿವ: "ಈಶಾನಃ . . . ಗಂಗಾಧರಃ, ಮಹಾದೇವಃ. . . —ಈ ೪೫ ಮಹಾದೇವರ ಪೆಸರ್" (ಹಲಾಯು. ೪-೧೩); ಗಂಗಾಧರಾ ಚಂದ್ರಶೇಖರಾ ಕರುಣಾಕರಾ (ನಂಬಿರ. ೧೬-೩೨). [ಸಂ.]

**ಗಂಗಾಧರಚೂರ್ಣ** (ನಾ). [ವೈದ್ಯ] ಒಂದು ಬಗೆಯ ಚೂರ್ಣ: ಗಂಗಾಧರಚೂರ್ಣ:—ಹೆಮ್ಮರದ ಚೆಕ್ಕೆ, ಕೊನ್ನಾರಿಗೆಡ್ಡೆ, ಶುಂಠಿ, ಧಾತಕೀಕುಸುಮ, ಬಿಲ್ವದ ಹಣ್ಣು, ಲೋಧ್ರದ ಚೆಕ್ಕೆ . . . ಅಕ್ಕಿ ತೊಳೆದ ನೀರಿನೊಡನೆಯಾಗಲೀ ಸೇವಿಸಿದರೆ ಸರ್ವಾತಿಸಾರ ಗ್ರಹಣೀ ಸಹ ಮಾಣುವುವು (ಸಕವೈ. ಪರಿ ೪೭೭). [ಗಂಗಾಧರ? + ಚೂರ್ಣ]

**ಗಂಗಾಧೀಶ** (ನಾ). ೧. ಗಂಗೆಯ ಒಡೆಯ; ಶಿವ. ೨. [ಛಂದ] ರುದ್ರ ಗಣದಲ್ಲಿ ಒಂದು ಬಗೆ: ಗಂಗಾಧೀಶಂ [ಪಾಠಾಂ. ಗಂಗಾಧರಂ] . . . ಇವು ಪದಿನಾಱುಂ ರುದ್ರಗಣಂಗಳ್ (ಛಂದೋಂಬು. ೫-೩). [ಸಂ. (ಗಂಗಾ + ಅಧೀಶ)]

**ಗಂಗಾನಂದನ** (ನಾ). = ಗಂಗಾಕುಮಾರ: ಗಂಗಾನಂದನ ದ್ರೋಣಾದಿಗಳನೆತ್ತಿದನು ಕರುಣದಲಿ (ಕುವ್ಯಾಉ. ೬-೨೨). [ಸಂ. (ಗಂಗಾ + ನಂದನ)]

**ಗಂಗಾನದಿ** (ನಾ). ೧. ಒಂದು ನದಿಯ ಹೆಸರು. ☞ ಭಾರತದ ಪ್ರಸಿದ್ಧ ಹಾಗೂ ಪವಿತ್ರವೆನಿಸಿದ ನದಿಗಳಲ್ಲಿ ಒಂದು: ಗಂಗಾನದಿ, ಅದರ ಉಪನದಿಗಳಾದ ಯಮುನ, ಗೋಗ್ರ, ರಾಪ್ತಿ, ಗಂಡಕಿ (ಭೂವಿವ. ೨೪೩). ೨. ಒಂದು ಬಗೆಯ ನಾಡಿ; ಪಿಂಗಳನಾಡಿ: ದಕ್ಷಿಣಭಾಗದ ಪಿಂಗಳನಾಡಿಯೇ ಸೂರ್ಯನಾಡಿಯೆಂದು ಗಂಗಾನದಿಯೆಂದು ಪೇಳಲ್ಪಡುವುದು (ಅಖಂಡೇ. ೨೧೮-೫೮). [ಸಂ. (ಗಂಗಾ + ನದೀ)]

**ಗಂಗಾನ್ವಯ** (ನಾ). ಗಂಗಕುಲ, —ವಂಶ: ಸ್ವಸ್ತ್ಯಶೇಷಭುವನ ವಿದಿತ ಗಂಗಾನ್ವಯಸೂತ್ರಯಮಾನ ಮಾನೋದಯ ಶ್ರೀ ಮಾಧವವ್ಮತ್ತರಸರ್ (ಎಕ. X, ಚೌರಿಂಗ್. ೧೩-೧; 890). [ಗಂಗ + ಅನ್ವಯ]

**ಗಂಗಾಪುತ್ರ** (ನಾ). ೧. = ಗಂಗಾಕುಮಾರ. ೨. ಅಂಬಿಗನ ಜಾತಿಯವನು; ಮೀನುಗಾರ; ಬೆಸ್ತ: (ಕಿ). [ಸಂ. (ಗಂಗಾ + ಪುತ್ರ)]

**ಗಂಗಾಪುರ** 'ಗಂಗಪುರ' ನೋ.

**ಗಂಗಾಫಲ** (ನಾ). ಗಂಗೆಯಲ್ಲಿ ದೊರೆಯುವ ಫಲ; ಮೀನು: 'ಬಂಗಾಳದವರು ಮೀನನ್ನು 'ಗಂಗಾಫಲ' ಎಂದು ಕರೆಯುತ್ತಾರೆ (ನಂಟರು. ೧೧೮). [ಸಂ. (ಗಂಗಾ + ಫಲ)]

**ಗಂಗಾಭವ** (ನಾ). = ಗಂಗಾಜಾತ: ಗಂಗಾಭವನ ನೇಮ್ಮದಲಿ ಮಹದಾಹವಕೆ ನಡೆದುದು ಕಟಕ (ಕುವ್ಯಾಭೀ. ೧-೫೭). [ಸಂ. (ಗಂಗಾ + ಭವ)]

**ಗಂಗಾಭಾಗೀರಥಿ** (ನಾ). ೧. = ಗಂಗಾದೇವಿ. ೨. ವಿಧವೆಯರನ್ನು ಕುರಿತು ಹೇಳುವಾಗ ಅವರ ಹೆಸರಿನ ಹಿಂದೆ ಸೇರಿರುವ ಮಾತು: ಗಂಗಾಭಾಗೀರಥೀ . . . ಮೊದಲಾದ ಶಬ್ದಗಳನ್ನು ಪತ್ರ ಸ್ವೀಕರಿಸತಕ್ಕ ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯ ಉಂಟು (ಮುಂಬಯಿ. ೪-೭೪). [ಸಂ. (ಗಂಗಾ + ಭಾಗೀರಥೀ)]

**ಗಂಗಾಮಾಳ** 'ಗಂಗಮಾಳ' ನೋ.

**ಗಂಗಾಮೃತ** (ನಾ). ನೀರು; ಗಂಗಾಜಲ: ನಾನು ಬಂದಾಗ ಬಿಡಿಸಿದ ಬಣ್ಣದ ಚಾಪೆ ಇದ್ದಹಾಗೆ ಇದೆ. ಹೋಗಲಿ . . . ಗಂಗಾಮೃತದ ಪಾತ್ರೆಗಳನ್ನೂ ತೆಗೆದಿಲ್ಲವಲ್ಲ (ದೇವಹೆಂ. ೨೫೭). [ಸಂ. (ಗಂಗಾ + ಅಮೃತ)]

**ಗಂಗಾಮೃತ್ತಿಕೆ** (ನಾ). ಗಂಗಾತೀರದ ಮಣ್ಣು: ಗಂಗಾಮೃತ್ತಿಕೆಯಿಂದ ನಿರ್ಮಿಸಿದ್ದನಾಗಿದ್ದರೆ ಅದಕ್ಕೆ ಬೆಲೆ ಬರುತ್ತಿತ್ತು (ಇಪ್ಪಕ. ೪೩೦). [ಸಂ. (ಗಂಗಾ + ಮೃತ್ತಿಕಾ)]

**ಗಂಗಾಮೌಳಿ** (ನಾ). ಗಂಗೆಯನ್ನು ತಲೆಯಲ್ಲಿ ಧರಿಸಿದವನು; ಶಿವ: ಆಲಿಸುತ ಮುದವೆತ್ತು ಗಂಗಾಮೌಳಿ ನಾರದಮುನಿಯನೀಕ್ಷಿಸಿ (ಬಸವು. ೨-೩೩). [ಸಂ. (ಗಂಗಾ + ಮೌಳಿ)]

**ಗಂಗಾಯಾತ್ರೆ** (ನಾ). ಕಾಶಿಗೆ ಹೋಗಿಬರುವಿಕೆ; ಕಾಶೀಯಾತ್ರೆ: (ಕಿ). [ಸಂ. (ಗಂಗಾ + ಯಾತ್ರಾ)]

**ಗಂಗಾವಗಹನ** (ನಾ). ಗಂಗಾನದಿಯಲ್ಲಿ ಮುಳುಗಿ ಸ್ನಾನಮಾಡುವುದು; ಗಂಗಾಸ್ನಾನ: ನಿಖಿಳ ಕಾಂತಾವಳಿ ಸಹಿತ ಗಂಗಾವಗಹನವ ಮಾಡಿದನು ನೃಪತಿ (ಕುವ್ಯಾಗ.೧೨-೨೩). [ಸಂ. (ಗಂಗಾ + ಅವಗಹನ)]

**ಗಂಗಾವತಂಸ** (ನಾ). ಗಂಗೆಯನ್ನೇ ಅಲಂಕಾರವಾಗಿ ಉಳ್ಳವನು; ಶಿವ: ಮಾರಹರನ ವಿನೋದಶಯ್ಯಾಗಾರವೋ ಗಂಗಾವತಂಸನ ಚಾರು ಪುಷ್ಪಕವೋ (ಬಸವು. ೧೨-೧೫). [ಸಂ. (ಗಂಗಾ + ಅವತಂಸ)]

**ಗಂಗಾವತರಣ** (ನಾ). ೧. ಗಂಗೆಯು ಭೂಮಿಗೆ ಇಳಿಯುವಿಕೆ. ೨. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ಬಗೆ: ಎರಡುಂ ತ್ರಿಪತಾಕಕರಂ ಚರಣವನೆತ್ತಿರಿಸುವಲ್ಲಿ ಹಸ್ತಮನೆತ್ತೆತ್ತಿರಿಸುತ್ತೆ ಶಿರವು ದಂತೇ ಧರಿಸಲ್ ಗಂಗಾವತರಣಕರಣಮೆನಿಕ್ಕುಂ (ಲಾಸ್ಯರಂ. ೪-೧೬೫). [ಸಂ. (ಗಂಗಾ + ಅವತರಣ)]

**ಗಂಗಾವನ** (ನಾ). (ಉಕ) ಕೂದಲು ಕಡಿಮೆಯಾದಲ್ಲಿ ಅಲಂಕಾರಕ್ಕಾಗಿ ಸೇರಿಸುವ ಕೂದಲು; ಚೌರಿ. [← ಮರಾ. ಗಂಗಾವನ]

**ಗಂಗಾವಾರ್ಧಿ** (ನಾ). = ಗಂಗಾನದಿ: ಗಂಗಾವಾರ್ಧಿಯೊಳಾತ್ಮ ತುರಂಗಮುಂ ಮಿಸಿಸಿ (ಪಂಪಭಾ. ೧-೩೮). [ಸಂ. (ಗಂಗಾ + ವಾರ್ಧಿ)]

**ಗಂಗಾವಾಳುಕ** (ನಾ). = ಗಂಗೆವಾಳುಕ: ನಾನಾರೂಪುಗಳುಳ್ಳ ಮಹಾಪರಾಕ್ರಮಿಗಳಾದ ಗಂಗಾವಾಳುಕ ಸಮಾರುದ್ರರುಗಳಿಂದ ಆವೃತರಾಗಿ ತಮ್ಮ ತಮ್ಮ ಹೆಸರುಳ್ಳ ರುದ್ರಲೋಕಂಗಳಲ್ಲಿ ಯಿರುತ್ತಿಹರು (ದಶಟೀ. ೬೨-೧೭). [?]

**ಗಂಗಾಸಮಾರಾಧನೆ** (ನಾ). ಕಾಶೀಯಾತ್ರೆ ಮಾಡಿ ಬಂದವರು ಮಾಡಿಸುವ ಭೋಜನ ಸಮಾರಂಭ. [ಸಂ. (ಗಂಗಾ + ಸಮಾರಾಧನಾ)]

**ಗಂಗಾಸಾಗರ** (ನಾ). ೧. ಗಂಗಾನದಿಯ ನೀರು. ೨. = ಗಂಗಸರಾಯಿ. ೧, ೨: ಶಿಕ್ತಿ ಸಿದ್ಧಿಗೆ ತೊಗಲ್ವೇಱೆನೊಳಗೆ ಬಂದತ್ತು ಗಂಗಾಸಾಗರವು ಎತ್ತಿ ಬಾಹಂತೆ ಗಂಗಾಸಾಗರ ಬೆಂಬತ್ತಿ ಸೇನಾ ಶರನಿಧಿಯ (ಕುರಾಸಾಂ. ೧೯-೧೧). [ಸಂ. (ಗಂಗಾ + ಸಾಗರ)]

**ಗಂಗಾಸುತ** (ನಾ). = ಗಂಗಾಕುಮಾರ: "ಗಂಗಾಸುತ . . . ಗಾಂಗೇಯ ನಾಮಂ" (ನಾನಾರ. ೪೫); ಗಂಗಾಸುತಂ ಪೃಥಾಸುತರಂ ಗೆಲ್ದೊಡೆ ತಪಕೆ ಪೋಪೆಂ (ಪಂಪಭಾ. ೧೦-೨೨). [ಸಂ. (ಗಂಗಾ + ಸುತ)]

**ಗಂಗಾಸ್ನಾನ** (ನಾ). ಗಂಗಾನದಿಯಲ್ಲಿ ಮಾಡುವ ಸ್ನಾನ: ಗಂಗಾಸ್ನಾನ ತುಂಗಾಪಾನ (ಗಾದೆ). [ಸಂ. (ಗಂಗಾ + ಸ್ನಾನ)]

**ಗಂಗಾಹಿಮಕರಾವಹ** (ನಾ). ೧. ಗಂಗೆ ಮತ್ತು ಚಂದ್ರನನ್ನು ಧರಿಸಿದವನು; ಶಿವ. ೨. ನೀರು, ಹಾವು ಮತ್ತು ಮೊಸಳೆಗಳುಳ್ಳುದು; ಸಮುದ್ರ. ೧, ೨: ಶಿವನಂತೆ ಗಂಗಾಹಿಮಕರಾವಹಂ ರಮಾಧವನಂತೆ ಗೋತ್ರೈಕಪಾಲಕಂ (ಜೈಮಿಭಾ. ೬-೫). [ಸಂ. (ಗಂಗಾ + ಹಿಮಕರ + ಆವಹ; ಗಂಗಾ + ಅಹಿ + ಮಕರ + ಆವಹ)]

**ಗಂಗಾಳ**, ಗಂಗಳ (ನಾ). ೧. ನೀರು ತುಂಬುವ ದುಂಡನೆಯ ಲೋಹದ ಪಾತ್ರೆ: "ಗಂಗಾಳ – ಗಂಗಾಲಯ = ದೊಡ್ಡಪಾತ್ರೆ" (ತದ್ಭಕೋ. ೯); ಗಂಗೋದಕವ ತನ್ನಿರೆ ಗಂಗಾಳದಲ್ಲಿ ಬೆರಸಿರೆ (ಪುರಂದ.೧-೧೦೭-೫); ಭಂಗಾರದಿಂದ ರಚಿಸಿದ ಗಂಗಾಳದಿ ಉಷ್ಣಮಾದ ಗಂಗಾಜಲವಂ . . . ಎರದಳತಿ ಸಂಭ್ರಮದೊಳ್ (ಕುಚೇಲೋ. ೧೧೩). ೨. ಆಹಾರವನ್ನು ತೆಗೆದುಕೊಳ್ಳುವ ತಟ್ಟೆ; ಊಟದ ತಟ್ಟೆ: ಕಾಳಿದೇವನ ಮುಂದಿಳುಹು ಗಂಗಾಳವಂ ತ್ರಿಪುರಾರಿದೇವ (ಬಸವು. ೬೦-೨); ಲಿಂಗಪ್ರಸಾದವನು ಅಂಗಕ್ಕೆ ಕೊಂಬುವರು ಗಂಗಾಳದೊಳಗೆ ಕೈತೊಳೆದು ಚೆಲ್ಲುವ ಮಂಗಗಳ ನೋಡು (ಸರ್ವಜ್ಞ. ೧೮೦); ಗೆಣಸಿನ್ಹೋಳಿಗಿಮಾಡಿ ಎಣಿಸಿ ಗಂಗಾಳಕ್ಹಾಕಿ (ಕನ್ನಜಾ. ೧೧೮).

**ಗಂಗಳ:** ೧. ಒಲಿಯೊಳಟ್ಟು ಸೆಕೆಯುಳಗೆಯೊಳು ಗಂಗಳವ ನಿರಿಸಲ್ಲಿ (ಸೂಪಶಾ. ೨-೩); ಕಳಸಿಗೆಯ ಬಾಯಲ್ಲಿ ಗಂಗಳವನಿರಿಸಿ (ಭೀಮಸೂ. ೪೪). ೨. ಲಿಂಗದಿಚ್ಛೆಯನಱಿಯದೆ ತನ್ನಂಗದ ಆ ರಜಕ್ಕಾಗಿ ಗಂಗಳ ತುಂಬಿ ಸುರಿಸಿಕೊಂಬ ಕುನ್ನಿಗಳನೊಲ್ಲ (ಅಜಿಮಾ. ೮೦); ಬೆಂಗದಿರನ ಕಿರಣಂ ಗಂಗಳದೊಳ್ ಬಿಂಬಿಸಿ (ಮನೋವಿ. ೫-೨೦ ವ್ಯಾಖ್ಯಾ); ಒಕ್ಕಲಿಗರೆಲ್ಲಾ ಗಂಗಳದಲ್ಲಿ ಊಟಮಾಡುತ್ತಿದ್ದುದರಿಂದ ನಾಣಿಗೆ ಅಲ್ಲಿ ಊಟದ ಎಲೆ ದೊರಕುತ್ತಿರಲಿಲ್ಲ (ಬೈಸರ್ವ. ೫೨); ಊಟಕ್ಕೆ ಗಂಗಳ ಚೆಂಬು ಇಡುತ್ತಿರಲಿಲ್ಲ (ನನ್ನೂರು. ೩೧೫).

[< ಸಂ. ಗಂಗಾಲಯ. / ಹಿಂ. ಮರಾ. ಗಂಗಾಲ]

**ಗಂಗಾಳೆಮುರಗೆ** 'ಗಂಗಾಳಮುರಿಗೆ' ನೋ.

**ಗಂಗಾಳೆಮುರಿಗೆ,** ಗಂಗಾಳೆಮುರಗೆ (ನಾ). (ಉಕ) ಮಕ್ಕಳು ವೃತ್ತಾಕಾರದಲ್ಲಿ ಕುಳಿತುಕೊಂಡು ಒಬ್ಬನು ಹೊಸೆದ ಅರಿವೆಯೊಂದನ್ನು ಕುಳಿತಿರುವವರ ಹಿಂದೆ ಹಾಕಿ ಆಡುವ ಆಟ; ಟೋಪಿ ಆಟ (ದಕ): ಈ ಅನರರೀ ಕೆಲಸಾ ಅಂದರೆ ಗಂಗಾಳಮುರಿಗೆಯೊಳಗಿನ ಲಡ್ಡು ಇದ್ದಾಂಗ (ಮಿಂಚಿಹು. ೧೮೧). **ಗಂಗಾಳೆಮುರಗೆ:** 'ಗಂಗಾಳ ಮುರಗೆ'ಯನ್ನಾಗಲಿ ಅಥವಾ ಕೂತು 'ಇಬತಿ'ಯನ್ನಾಗಲಿ ಆಡುವುದನ್ನು ಹಳ್ಳಿಯ ಮಕ್ಕಳಲ್ಲಿ ಕಾಣಬಹುದು (ಕನ್ನಜಾ. ೩೮).

[ಗಂಗಾಳ$_0$ + ಮುರಿಗೆ]

**ಗಂಗಿಗವುಂಡ** (ನಾ). ಒಬ್ಬಾತನ ಹೆಸರು: ಶ್ರೀಮತ್ ಗಂಗಿಗವುಣ್ಡನ ಮಗ ರಜಯ್ಯ ತುಱುವನಿಕ್ಕಿಸಿ ಸತ್ತಂ (ಎಕ. XIV, ನಾಗಮಂ. ೧೩೯-೩; 950). [< ಗಂಗಗಾವುಂಡ ?]

**ಗಂಗಿಪಾಂಡಿವೂರು** (ನಾ). ಒಂದು ಊರಿನ ಹೆಸರು. ℗ ಈಗಿನ ಧಾರವಾಡ ಜಿಲ್ಲೆಯ ಆಡೂರು: ಸಿನ್ಧರಸಗ್ಗ್ರಂಗಿಪಾಣ್ಡಿವೂರಮಾನಾಳೆ (ಸೌಇಇ. XX, ೯-೧೬; ಸು. 8ನೆಯ ಶತ).

[ಗಂಗಿಪಾಂಡಿ ? + ಊರು$_3$ (< ಊರ್)]

**ಗಂಗು** (ನಾ). (ಕರಾ) ಒಂದು ಬಗೆಯ ಮೀನು; ದೊಡ್ಡ ಮೀನು.

[?]

**ಗಂಗುಂಗ** 'ಗಂಗುಂಗೆ' ನೋ.

**ಗಂಗುಂಗೆ,** ಗಂಗುಂಗ, ಗಂಗೊಂಗೆ (ನಾ). ಒಂದು ಬಗೆಯ ಸಸ್ಯ: ಅಯತದಿಂ ಗಂಗುಂಗೇಕಾಯಂ ತಾ ತಂದು ಸೂರ್ಯಪುಟದೊಳ್ ಸಪ್ತೋಪಾಯದಿ ತೆಗೆದೆಣ್ಣೆಯನುದಿನಾಯಂಗೊಳಲೇಳು ದಿನಕೆ ಮತಿ ಸಮನಿಸಿತು (ಕರ್ಣಾಕ. ೫೬); ಗಂಗುಂಗೆಯ ಬೀಜ ಕರಿಜೀರಿಗೆ ಇಷ್ಟನು ಸಮನಾಗಿ ಚೂರ್ಣಿಸಿ . . . ಬೆಲ್ಲದಿಂದ ಕೊಡಿಸಲು ಕಾಸಶ್ವಾಸಹರ (ವೈದ್ಯಸಾ. I, ೧೫೩). **ಗಂಗುಂಗ:** ಕರಿಗೊನ್ನೆ, ಭವಂಗಬೀಜ, ಗಂಗುಂಗಹಂಬು, ಕಂಗೊಂದಿಬಳ್ಳಿ, ಗವನಗೊಂಗೆ (ಮೈಔನಿ.೧೯-೩೫೦). **ಗಂಗೊಂಗೆ:** ಸಮುದ್ರಫಲ ಗಂಗೊಂಗೆಯ ಬೇರು ಇವೆರಡನು ಮಜ್ಜಿಗೆಯಿಂದ ಅರೆದು ಪಾನ, ಲೇಪನಂಗಳ ಮಾಡಿಸಲು ಕೆಂಜಿಗನ ವಿಷ ಪರಿಹರವಹುದು (ವೈದ್ಯಸಾ. II, ೨೨೨). 'ಕಂಗುಂಗೆ' ಪರಾ.

[?]

**ಗಂಗುಳ್** (ನಾ). ಒಬ್ಬಾತನ ಹೆಸರು (?): ಸ್ವಸ್ತಿ ಶ್ರೀಮತು ಗಙ್ಗುಳ್ ಪೃಥು × × × ರಾಜ್ಯಗೆಯೆ (ಎಕ. XII, ಮದ್ದಗಿ. ೯೪-೧; ಸು. 750).

[?]

**ಗಂಗೆ$_1$** (ನಾ). ಕಂಠ; ಕೊರಳು: ಕೊರಲೊಳ್ ಗಂಗೆಯದೊವಲುಂ ನೆಗಟ್ದಿರೆ (ಅಶ್ವಶಾ. ೬-೩೧); ಕೊರಳೊಳು ಗಂಗೆಯದೊವಲುಂ ನೆಗಳ್ದಿರೆ ತಾಂ ಗಂಗೆವಾರಿಯೆಂಬುದಱಿಂದೆ (ಅಶ್ವವೈ. ೬-೩). 'ಗಂಗೆದೊವಲ್' ಪರಾ. [< ಗೊಂಕೆ]

**ಗಂಗೆ$_2$** (ನಾ). ೧. ಒಂದು ನದಿಯ ಹೆಸರು; ಭಾರತದಲ್ಲಿ ಪವಿತ್ರವೆಂದು ಭಾವಿಸಲಾದ ಏಳು ಮಹಾನದಿಗಳಲ್ಲೊಂದು: ಗಂಗೆಯ ತಡಿವಿಡಿದು (ಶಾಂತಿಪು. ೧೦-೧೬೬); ಇನ್ತೀ ಧರ್ಮ್ಮಮಂ ನಡಯಿಸಿದಾತಂ ಗಂಗೆಯ ತಡಿಯಸಾಸಿರ ಕವಿಲೆಯಂ . . . ಕೊಟ್ಟ ಫಳಮಕ್ಕು (ಎಕ. V, ಅರಸೀ. ೫೨-೩೪; 1152); ಗಂಗಾದಿ ತೀರ್ಥಸ್ನಾನ ಫಲ (ಕುವ್ಯಾಅ. ೧-೨೦); ಗಂಗೆಗೆ ಹೋದರೂ ತುಂಬಿಗೆ ಮೇಲೆ ಜ್ಞಾನ (ಗಾದೆ). ೨. ನೀರು; ಜಲ; ಉದಕ: ಗಂಗೆಯಂ ಮುಳುಗಿದರೆ ಬಿಡುವನಲ್ಲ (ತುರಂಗ. ೬೫-೧೧). ೩. ಶಿವನ ತಲೆಯ ಮೇಲಿರುವ ಗಂಗಾದೇವಿ: ಜಡೆಗಂಗೆಯ ಸ್ಥಾನ (ಬಸವ. ೮೪೪); ಹೈಮವತಿ ಗಂಗೆಯರ್ ನಿಜಸತಿಯರ್ (ಮಂಗರಾ. ೪-೧೩); ಸರಸಿಜಾಸನ ಕೊಟ್ಟ ಶಾಪದಿಯರಸಿಯಾದಳು ಗಂಗೆ (ಕುವ್ಯಾಅ. ೨-೨೧); ಗಂಗೆ ಗೌರಿ ಜಗಳ (ರೂಢಿ). ೪. ಒಂದು ಪ್ರದೇಶದ ಹೆಸರು: ಸ್ವಸ್ತಿಶ್ರೀ ಗಂಗೆಯುಂ ಕಡಾರಮುಂ ಪೂರ್ವದೇಸಮುಂ ಕೊಣ್ಡ (ಎಕ. X, ಕೋಲಾರ. ೧೪-೧; 1045). [ಸಂ. ಗಂಗಾ]

**ಗಂಗೆತ್ತು** (ನಾ). ಕೌಲೆಬಸವ; ಕೋಲೆಬಸವ; ಆಟದ ಎತ್ತು; ಕೌಲೆತ್ತು: ಗಂಗೆತ್ತಿನವರು ಸುಗ್ಗಿಯ ಕಾಲಕ್ಕೆ ಬರುತ್ತಾರೆ (ರೂಢಿ).

[ಗಂಗೆ$_1$ + ಎತ್ತು$_2$ (< ಎಱು$_1$)]

**ಗಂಗೆದೊಗಲ್** 'ಗಂಗೆದೊವಲ್' ನೋ.

**ಗಂಗೆದೊಗಲು** 'ಗಂಗೆದೊವಲ್' ನೋ.

**ಗಂಗೆದೊವಲ್,** ಗಂಗೆದೊಗಲ್, ಗಂಗೆದೊಗಲು, ಗಂಗೆದೊವಲು, ಗಂಗೆದೋಲು, ಗಂಗೆದೋವಲ್ (ನಾ). ಪಶುಗಳ ಕಂಠ ಪ್ರದೇಶದಲ್ಲಿ ಇಳಿಬಿದ್ದಿರುವ ಚರ್ಮ; ಸ್ನಾಸ್ನೆ: ಒರಸೆ ಮುಸುಡಿನಿಂದ ಗಂಗೆದೊವಲನಿರ್ದ ಕಱುವಿನಂದವ ಕಂಡಳಾಗ (ವರ್ಧಜ. ೩-೨೨). **ಗಂಗೆದೊಗಲ್:** "ಗಳಕಾ-ದನದ ಗಂಗೆದೊಗಲ್" (ಕಾಶಕ್ಯ.೪೬); ಎಱ್ತಿನ ಗಂಗೆದೊಗಲಿಂದಾದೊಡಂ (ಲೋಕೋಪ. ೬-೪೧ ಟೀಕೆ). **ಗಂಗೆದೊಗಲು:** ಬೆಳೆವಿಣಿಲ ಮಿಡಿಗಲವ ಬಾಲದ ನೆಲಕೆ ನಿಗುರುವ ಗಂಗೆದೊಗಲಿನ . . . ಸಲಗ (ಕುವ್ಯಾಅ. ೧೭-೩೬); ಗಂಗೆದೊಗಲಿನಂತೆ ಇಳಿಬಿದ್ದ ಕುತ್ತಿಗೆ (ಹೇಮಂತ. ೩೦೬); ಗಂಡಮೃಗ . . . ಕುತ್ತಿಗೆಯಿಂದ ಗಂಗೆದೊಗಲು ನೇತಾಡುತ್ತಿರುತ್ತದೆ (ಪ್ರವಾಇ. I, ೩೬೩). **ಗಂಗೆದೊವಲು:** "ಸಾಸ್ನಾ (ಸ್ನಾತ್), ಗಳಕಂಬಳಃ – ಈ ೨ ಗಂಗೆದೊವಲು" (ಹಲಾಯು. ೪೪-೧೧೧); ಉಬ್ಬಿದ ಕತ್ತು; (ದನಗಳ) ಗಂಗೆದೊವಲು (Jowl. ಇಂಕನಿ). **ಗಂಗೆದೋಲು:** "ಸಾಸ್ನೆ" (ಪ್ರಭಣ್ಣ). **ಗಂಗೆದೋವಲ್:** ಭಾಗದ ತೋವಲಕ್ಕೆ ಕಡುಕರ್ಪೆಸೆವೆಱ್ತಿನ ಗಂಗೆದೋವಲಕ್ಕಾಗಳೆ ಕೊಂಡು (ಲೋಕೋಪ. ೬-೪೧).

[ಗಂಗೆ$_1$ + ತೊವಲ್$_2$. / ತೆಲು. ಗಂಗೆದೋಲು]

**ಗಂಗೆದೊವಲು** 'ಗಂಗೆದೊವಲ್' ನೋ.

**ಗಂಗೆದೊಱೆ** (ನಾ). = ಗಂಗಾನದಿ: ಅಱುವತ್ತುನಾಲ್ಕು ದಂತಿಗ ಳೊಪ್ಪುವಾ ಗಂಗೆದೊಱೆ (ಜೈಮಿಭಾ. ೩೪-೪). [ಗಂಗೆ$_2$ + ತೊಱೆ$_2$]

**ಗಂಗೆದೋಲು** 'ಗಂಗೆದೊವಲ್' ನೋ.

**ಗಂಗೆದೋವಲ್** 'ಗಂಗೆದೊವಲ್' ನೋ.

**ಗಂಗೆಯ** (ನಾ). = ಗಾಂಗೇಯ: ಭಂಗಿಯಿನ್ದೊಳಗುಳ್ಳಂಗನೆಯರಪುತ್ರಂ ಗಂಗೆಯಂಗೆರಡಲ್ಲಾಳ್ದೀ ಜಿನದಾಸಿ (ಸೌಇಇ. XX, ೨೪-೨೪; 1034).

[< ಸಂ. ಗಾಂಗೇಯ]

**ಗಂಗೆವಾರಿ** (ನಾ). ಕುದುರೆಯ ಒಂದು ಕಂಠರೋಗ: ಕೊರಲೊಳ್ ಗಂಗೆಯದೊವಲುಂ ನೆಗಟ್ದಿರೆ ತಾಂ ಗಂಗೆವಾರಿಯೆಂಬುದಱಿಂದೆ . . . ವಾಜಿಗೆ ಮರಣಭಯಂ ತೋರ್ಕುಂ (ಅಶ್ವಶಾ.೬-೩೧). [ಗಂಗೆ+ಮಾರಿ ?]

**ಗಂಗೆವಾಳ** (ನಾ). (?) : ನೆಲಕೆ ನಿಗುರುವ ಗಂಗೆವಾಳ [ಪಾಠಾಂ.ದಾರ]ದ ಬಿಳಿಯ ಚೌರಿಗಳುಲಿವ ಗಂಟೆಯ ತೊಳಪ ಬದ್ದುಗೆದಾರ ಕಾಂಚನಮಯದ ಗೊಂಡೆಯದ (ಕುವ್ಯಾಭೀ. ೪-೩೨). ಉದ್ದವಾದ ಕೂದಲು; ಉದ್ದವಾದ ಬಾಲ : (೬). [?]

**ಗಂಗೆವಾಳುಕೆ,** ಗಂಗವಾಲುಕ (ನಾ). [ವೀಶೈ] "ಸ್ವರ್ಗವಾಸಿಗಳ ಒಂದು ವರ್ಗ" (ಚೆಬಪು. ಕೋಶ) : ಮೈಯೆಲ್ಲ ಕಣ್ಣವರು ನಂದಿ ವಾಹನರು ಗಂಗೆವಾಳುಕರೆಲ್ಲಾ ನಿಮ್ಮ ಮುಂದಿರ್ದು (ಅವಚಂ. ೨೦೦-೯೦೨) ; ಮಂಗಳೆಯನಂಗದೊಳ್ ಸಂಗೊಳಿಸಿ ಪರಸಿವ ಸಿಂಗಪೀಠದಿ ಪ್ರಮಥ ಗಂಗೆವಾಳುಕರು ಮುನಿಪುಂಗವರ್ಸಹಿತೋಲಗಂಗೊಟ್ಟು ರಂಜಿಸುವರು (ಚೆಬಪು. ೧-೮) ; ತೆಂಗು ಬಟ್ಟಲು ನುಂಗಿ ಮುಂಗುಲಿಯನಿಲಿ ನುಂಗಿ ಗಂಗೆವಾಳುಕರ ಹರ ನುಂಗಿ ಜಗವು ಬೆಳದಿಂಗಳಂತಿಕ್ಕು (ಸರ್ವಜ್ಞ. ೨೦೭೦). **ಗಂಗವಾಲುಕೆ :** ವಿಲಾಸಿತ ಪ್ರಮುಥರ ಪುಂಗವರ ಎಿದ್ದೇಶ್ವರರ ಸಲೆ ಗಂಗವಾಲುಕ ಸಮಾರುದ್ರರ ಮೂಲ ಬಹುರೂಪನಾದ ಬ್ರಹ್ಮನ (ಏಕೋಪು. ೭-೧೨).

**ಗಂಗೆವಾಳುಕಸಮರುದ್ರರು,** ಗಂಗವಾಳುಕಸಮಾರುದ್ರರು=ಗಂಗಾನದಿಯ ಮಳಲ ಕಣದಂತೆ ಅಸಂಖ್ಯಾತರಾದವರು ; ಅಸಂಖ್ಯಾತ ರುದ್ರರು : ಸದಾಶಿವರೊಂದುಕೋಟಿ ಗಂಗೆವಾಳುಕಸಮರುದ್ರರು (ಬಸವ. ೯೨೦) ; ಕರ್ಮದೊಳಗಾಗಿ ಚತುರ್ವಿಧರಹಿತ ಗಂಗೆವಾಳುಕ ಸಮಾರುದ್ರರೊಳಗಾಗಿ ಬಂಧನ ವಿರಹಿತ (ಮೋಳಮಾ. ೧೦೪-೪೧೬). [?]

**ಗಂಗೆವಾಳೆ** 'ಗಂಗವಾಣಿ' ನೋ.

**ಗಂಗೊಂಗೆ** 'ಗಂಗುಂಗೆ' ನೋ.

**ಗಂಗೋಜ** (ನಾ). ಒಬ್ಬಾತನ ಹೆಸರು : ಗಂಗೋಜಂ ಹೊಯ್ದ ಶಾಸನಂ (ಎಕ. V, ಹಾಸನ. ೩೮-೩೮ ; 1000 ?).

[ಗಂಗ + ಓಜ$_1$ (< ಒವಜ್ಝ)]

**ಗಂಗೋತ್ರಿ** (ನಾ). ೧. ಗಂಗೆಯು ಸ್ವರ್ಗದಿಂದ ಭೂಮಿಗೆ ಇಳಿದ ಸ್ಥಳ. ೨. ಗಂಗಾನದಿ ಹುಟ್ಟುವ ಸ್ಥಳ : ಬರೆಯುವೆನೆನ್ನ ಮಾನಸದ ಗಂಗೋತ್ರಿಯ ಕರ್ಣಪೀಯೂಷದ ಕತೆಯ (ಇಂಚಾಪ. ೫೨-೪೯).

[← ಹಿಂ. ಮರಾ. ಗಂಗೋತ್ರೀ]

**ಗಂಗೋದಕ** (ನಾ). ೧. = ಗಂಗಾಜಲ : ಕಾಶಿಯವರೆಗೆ ಬಂದ ಮೇಲೆ ಗಂಗೋದಕವಿಲ್ಲದೆ ಮರಳುವದುಂಟೇ (ಗಂಮಾಯು.೨). ೨. ಕುಡಿಯುವ ನೀರು : ಘಾಳಿಯ ಬೀಸಿ ಕೊಡಿ ಗಂಗೋದಕವನ್ನು (ಚಂದ್ರಾವ. ೧೩) ; ಗಂಗೋದಕ ಸಹ ನಾನು ಬಾಯಿಗೆ ಹಾಕುವುದಿಲ್ಲ. ನಿಟ್ಟುಪವಾಸ (ಮಹಾಗ. ೧೪೪). [ಸಂ. (ಗಂಗಾ + ಉದಕ)]

**ಗಂಚಿ** 'ಗಂಜ್ಶ$_3$' ನೋ.

**ಗಂಜ$_1$** (ನಾ). ೧. ಕೋಶ; ಭಂಡಾರ; ಸಂಗ್ರಹ : "ಭಂಡಾರದಲ್ಲಿಯುಂ ಗಂಜಮೆಂಬುದು" (ಹಲಾಯು. ೧೩೨-೧೧). ೨. ಗಣಿ; ಖನಿ. ೩. ವ್ಯಾಪಾರಸ್ಥಳ; ಮಾರುಕಟ್ಟೆ. ೪. ಮೂರು ಎಂಬ ಸಂಖ್ಯೆಯ ಸಂಕೇತ : "ತೃತಯದಲ್ಲಿ ಭಂಡಾರದಲ್ಲಿ ಗಂಜಮೆಂದೆಂಬುದು" (ಮಂಗರಾ. ೧೩೯-೮). ೫. ಕುತೂಹಲ : "ಖಣಿ ಕೋಶ ಕುತೂಹಲ ಗಂಜವಾಚಕಂ" (ನಾನಾರ. ೧೦೫). [ಸಂ.]

**ಗಂಜ$_2$** (ನಾ). ಹೆಂಡದ ಅಂಗಡಿ; ಪಡಖಾನೆ : "ಕಳ್ಳು ಮಾಜುವ ಗೃಹಂ ಗಂಜಮೆನಿಸಿಕ್ಕು" (ಮಂಗರಾ. ೫೯-೧೧). [ಸಂ. ಗಂಜಾ]

**ಗಂಜಣ** 'ಗಂಜಳ' ನೋ.

**ಗಂಜಣಿ** 'ಗಂಜಳ' ನೋ.

**ಗಂಜಣಿಕೆ** 'ಗಂಜಳಿಕೆ' ನೋ.

**ಗಂಜನ** (ನಾ). ಹೊನ್ನು ; ಒಂದು ತೂಕ (?) : ಅವನ ಅಯ್ವತ್ತು ಗಂಜನದ ಪತುಮೆಯ ಕಟಿ ತನ್ನು ಅಟ್ಟಿಗೆ ಕೊಟ್ಟ (ಎಕ. IV, ಹುಣಸೂ. ೧೧-೨೦ ; 1020 ?). [?]

**ಗಂಜನಿ** 'ಗಂಜಳ' ನೋ.

**ಗಂಜಲ** 'ಗಂಜಳ$_1$' ನೋ.

**ಗಂಜಲುಗರಿಕೆ** 'ಗಂಜಳಗಟುಕೆ' ನೋ.

**ಗಂಜಳ$_1$,** ಗಂಜಣ, ಗಂಜಲ (ನಾ). ೧. ದನಕರುಗಳ ಮೂತ್ರ; ಗೋಮೂತ್ರ : ಗಂಗಾನದಿಯಲ್ಲಿ ಮಿಂದು ಗಂಜಳದಲ್ಲಿ ಹೊರಳುವರೆ (ವಚರ. ೮೦) ; ಎಳಗಟು ತುಡುಕೆ ಕೆಚ್ಚಲ . . . ಗಂಜಳವ ಬಿಟ್ಟು ಮಜುಕದೊಳೆಳಗಂದಿಯದೆ ನೋಡು ನೀಜಿ (ವರ್ಧಜ. ೩-೨೧) ; ಗಂಜಳದಲ್ಲಿರುವ ಸಾರಜನಕದ ಪರಿಮಾಣವು ಮಲದಲ್ಲಿರುವ ಎರಡರಷ್ಟಕ್ಕಿಂತಲೂ ಹೆಚ್ಚಾಗಿರುವುದು (ವಿಜ್ಞಾನ. ೫೫). ೨. ಕೆಟ್ಟವಾಸನೆ; ದುರ್ವಾಸನೆ : ಸಗಣಿಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ ರಂಜನೆಯಹುದಲ್ಲದೆ ಅದಜ ಗಂಜಳ ಬಿಡದಣ್ಣಾ (ಬಸವ. ೯೩). **ಗಂಜಣ :** ೧. ಪೆಣ್ಗತ್ತೆಗಳು ಜಡಿದಂತುತ್ತಮದ ವಸ್ತ್ರಾಭರಣವನು ಲೇಪನವ ಮಾಡಿ ಮತ್ತೆ ಗಂಜಣವುಳ್ಳ ಭೂಮಿಯ ಗರ್ತದಲಿ ಕೆಡವಂತೆ (ನಿಭಾಗ. ೧೧-೩೨-೧೩); ಚಂಪಕ್ಕೆಯುಗುರ್-ಪತ್ತಿದ ಗಂಜಣಂ ಪಡಿಗದಂಬುಲವಾಯ್ತ್ ಪಜೀನೆತ್ತಿ ಕಣ್ಣ ಪುಚ್ಚೆತ್ತಿದ ಬೆನ್ನ ಬಾಸುಟಿದೆ ಗಟ್ಟಿನ ತಾಡಿನ ರೊಟ್ಟಿ ಸಿಂಬೆ ತಾಂ ಪಿತ್ತಿಲ ತಿಪ್ಪೆ ಪಟ್ಕಿವನೆ ಚೀ ಅದನಪ್ಪುವರೆಂತು ಗಾವಿಲರ್ (ಕಾವ್ಯಸಾ. ೧೧೨೯). **ಗಂಜಲ :** ೧. ನಿತ್ಯ ಹತ್ತು ಔನ್ಸ್ ಗಂಜಲ ಸಹ ದೊರೆಯುವಷ್ಟು ಒಳ್ಳೇ ಹಸುಗಳು ನಮ್ಮಲ್ಲಿಲ್ಲ (ಬೆಸ್ತಕ. ೬೭); ಕೊಟ್ಟಿಗೆಯಲ್ಲಿ ಎಮ್ಮೆಯು . . . ಗಂಜಲ ಹುಯ್ದು ಮತ್ತೆ ಮಲಗಿಕೊಂಡಿತು (ಮಲೆನಾ. ೧೨೦).

[< ಸಂ. ಗೋಜಲ]

**ಗಂಜಳ$_2$,** ಗಂಜಣಿ, ಗಂಜನಿ, ಗಂಜಳಿ (ನಾ). ಒಂದು ಬಗೆಯ ಹುಲ್ಲು : "ಉಲಪಃ, ಬಲ್ವಜಃ- ಈ ೨ ಗಂಜಳದ ಪುಲ್" (ಹಲಾಯು. ೩೨-೩೨). **ಗಂಜಣಿ :** "ಗಂಜಣಿ [ಪಾಠಾಂ. ಳಿ]ಯದುಲಪಮುಕ್ಕುಂ" (ಮಂಗರಾ. ೩೩-೬) ; ಪೂಸಿದ ಚಂದನಂ ಮುಡಿದ ಪಾದರಿ ತೊಟ್ಟಿಳ ಮುತ್ತು ಸುತ್ತಿನೊಳ್ ಮಾಸದ ತೆಂಗಿನೋಲೆ ಹದನಾಜದ ಬೆಳ್ಮಡಿ ಮೆಲ್ಲ ಪಚ್ಚೆ ನೀರ್ವಾಸು ತಗುಳ್ದ ಗಂಜಣಿಯೊಳೊಂದಿದ ಬಾಳದ ಬೇರ ಚಪ್ಪರಂ ಬೇಸಗೆ ಸಂದ ಭೋಗಿಗೆ ವಿಲಾಸದ ದೇಸೆಯನುಂಟುಮಾಡುಗುಂ (ಸೂಕ್ತಿಸು. ೧೦-೧೩೯). **ಗಂಜನಿ :** ಗಂಜನಿಹುಲ್ಲು . . . ಜಂಭೀರ (ಕಂಚಿಕಾಯಿ) ಮುಂತಾದುವುಗಳ ಚಟ್ನಿಯು ಗ್ರಾಹಕ ಲಘು ಇರುವುದು (ಅಷ್ಟಾಂಗ. ೧೪೧). **ಗಂಜಳಿ :** (೬).

**ಗಂಜಣಿಯ ಹುಲ್ಲು** = ಗಂಜಣಿ : "ಕತ್ತೃಣಂ, ಪೌರಂ, ಸೌಗಂಧಿಕಂ, ಧ್ಯಾಮಂ, ದೇವಜಗ್ಧಕಂ, ರೌಹಿಷಂ – ಈ ೬ ಗಂಜಣಿಯ [ಪಾಠಾಂ. ಗಂಜಣಿಕೆಯ] ಹುಲ್ಲು" (ನಾಚಿರಾ. ೧೧೨). [?]

**ಗಂಜಳಗರಿಕೆ** 'ಗಂಜಳಗಟುಕೆ' ನೋ.

**ಗಂಜಳಗಱುಕೆ** 'ಗಂಜಳಗಟುಕೆ' ನೋ.

**ಗಂಜಳಗಟುಕೆ,** ಗಂಜಲುಗರಿಕೆ, ಗಂಜಳಗರಿಕೆ, ಗಂಜಳಗಱುಕೆ, ಗಂಜಳಿಗಟುಕೆ (ನಾ). = ಗಂಜಳ$_2$ : "ಗಂಧ ದೂರ್ವಾ – ಗಂಜಳಗಟುಕೆ" (ಔಷಧಿ. ೪೬). **ಗಂಜಲುಗರಿಕೆ :** ಗಂಜಲುಗರಿಕೆ, ಬಿಳೀಜೋಳ (ನಮ್ಮಸು. ೨೪೯). **ಗಂಜಳಗರಿಕೆ :** ಉರುಕುನ್ ಹುಲ್ಲು, ಗಂಜಳಗರಿಕೆ ಹುಲ್ಲು (ಮೈಔಗಿ. ೩೦-೫೭೯). **ಗಂಜಳಗಱುಕೆ :** "ಕುಂದುರುಃ – ಗಂಜಳಗಱುಕೆ" (ಔಷಧಿ. ೩೫). **ಗಂಜಳಿಗಟುಕೆ :** "ಕುಂದುರುಮೂಲಃ – ಗಂಜಳಿಗಟುಕೆಯು" (ಔಷಧಿ. ೩೬).

[ಗಂಜಳ$_2$ + ಕಱುಕೆ$_1$ (< ಕಱುಂಕೆ)]

**ಗಂಜಳಿ** 'ಗಂಜಳ್ಳ' ನೋ.

**ಗಂಜಳಿಕೆ,** ಗಂಜಣಿಕೆ (ನಾ). ಒಂದು ಬಗೆಯ ಹುಲ್ಲು : "ಮೃಗವಲ್ಲಭ – ಗಂಜಳಿಕೆಯ ಹುಲ್ಲು" (ಓಷಧಿ. ೧೨೪). **ಗಂಜಣಿಕೆ :** "ಕತ್ತೃಣಂ, ಪೌರಂ, ಸೌಗಂಧಿಕಂ, ಧ್ಯಾಮಂ, ದೇವಜಗ್ಧಕಂ, ರೌಹಿಷಂ – ಈ ೬ ಗಂಜಣಿಕೆಯ [ಪಾಠಾಂ. ಗಂಜಣಿಯ] ಹುಲ್ಲು" (ನಾಚಿರಾ. ೧೧೨).
[< ಗಂಜಳ್ಳ$_2$]

**ಗಂಜಳಿಗಱುಕೆ** 'ಗಂಜಳಗಱುಕೆ' ನೋ.

**ಗಂಜಾಲ** (ನಾ). ವಂಚನೆ; ಮೋಸ; ಕಪಟ: ಏಕೆ ನಿನಗಿಷ್ಟು ಗಂಜಾಲ ಬಿಡೊ ಹರಿಯೆ (ಪುರಂದ. ೩–೫–೧). [← ಮರಾ. ಗಜಾಲ್ ?]

**ಗಂಜಿ$_1$** (ನಾ). ೧. ಅಕ್ಕಿ ಬೇಯಿಸಿ ತೆಗೆದ ಸಾರ: "ಯವಾಗೂಃ . . . ವಿಲೇಪಿಕಾ – ಈ ೫ ಗಂಜಿ" (ಹಲಾಯು. ೫೩–೧೬೫); ಗಂಜಿಯುಂ ಕುಡಿದು ಕಟಿವೆಯ ಕೂೞುಮನುಂಡು (ಧರ್ಮಾಮೃ. ೧೩–೧೪೦); ಪರರಾಯರ್ಕಳ ಸೇನೆಯಂ ಗೆಲಿದು ಮತ್ತೇಭಂಗಳಂ ಸೀಳ್ದು ತನ್ನರಿಯೆಂದೆಂಬರನೊಕ್ಕಲಿಕ್ಕುವ ಭಟರ್ಗಂ ಗಂಜಿ ಕೀೞ್ ನಾಯ್ಗಳಂ ನಿರುತಂ ಭೋಜ್ಯವಿಶೇಷಮಿತ್ತು ಪೊರೆವರ್ (ಸೋಮೇಶ. ೭೫); ಬಲುರಾಯರೊಳ್ಳೆ ಗಡಯುಂಬುದೆಲ್ಲಂ ನವಣೆಯೊಳುಗಂಜಿ ಗಡ (ಚಿಬಪು. ೧೧–೭೦); ಗಂಜಿಯ ಕುಡಿದರು ಗಂಡನ ಮನೆ ಲೇಸು (ಜಗೀತ. ೫೫); ಗಂಜಿ ಕುಡಿಯುವವನಿಗೆ ಮೀಸೆ ತಿಕ್ಕುವವನೊಬ್ಬ (ಗಾದೆ). ೨. ರವೆ, ಅಕ್ಕಿನುಚ್ಚು ಮೊದಲಾದುವನ್ನು ಹಾಕಿ ತಯಾರಿಸಿದ ದ್ರವರೂಪದ ಆಹಾರ; ಅಂಬಲಿ: ಊಟಕ್ಕೆ ಅಕ್ಕಿಯನ್ನು ಹುರಿದು ಗಂಜಿಮಾಡಿರಿ (ಕಾವೇರಿ. ೨೦೬); ಹೊಟ್ಟೆಗೇನಾದರೂ ಗಂಜಿಮಾಡಿಕೊಡಲೇ ಎಂದು ತಾಯಿಯನ್ನು ಕೇಳಿದನು (ಮಹಾಗ. ೧೬೬). ೩. (ಮಡಿಮಾಡುವಲ್ಲಿ) ಬಟ್ಟೆಗಳಿಗೆ ಹಾಕುವ ಪಿಷ್ಟಪದಾರ್ಥ. ೪. ತೆಂಗಿನ ಎಳನೀರು ಕಾಯಿಯಲ್ಲಿರುವ ಎಳೆಯ ತಿರುಳು; ಬಂಬಲು.

ಗಂಜಿಹಾಕು (ಕರಾ) = ಊಟಹಾಕು; ಅನ್ನಹಾಕು: ಏನಿಲ್ಲವಮ್ಮ ಸ್ವಲ್ಪ ಗಂಜಿಹಾಕು . . . ಉಡುಪಿಗೆ ಹೋಗಿ ಬರುತ್ತೇನೆ (ಹೊಸಕ್ಷಿ. ೬೨). **ಗಂಜಿಗೆಕೊಡು, ಗಂಜಿಗೆಹಾಕು** = (ಉಕ) ಬಟ್ಟೆಗಳನ್ನು ಒಗೆಯಲು ಹಾಕು; ಚೆಲುವೆಗೆ ಹಾಕು, —ಕೊಡು.
[← ಪ್ರಾ. ಕಾಂಜಿ, ಕಾಂಚಿ. < ಸಂ. ಕಾಂಚಿಕಾ]

**ಗಂಜಿ$_2$** 'ಗಾಂಜಾ' ನೋ.

**ಗಂಜಿ$_3$,** ಗಂಚಿ (ನಾ). ಒಂದು ಬಗೆಯ ಗಿಡ. 'ಗುಲಗಂಜಿ' ಪರಾ. **ಗಂಚಿ :** 'ಗುಲಗಂಚಿ' ಪರಾ. [< ಸಂ. ಗುಂಜಾ]

**ಗಂಜಿಕೆಸ** (ನಾ). ಒಂದು ಬಗೆಯ ಬಳ್ಳಿ : (ಕ). [ಗಂಜಿ$_3$ + ಕೆಸ]

**ಗಂಜಿಕಾಳು** (ನಾ). ಎಳೆಯ ಕಾಳು; ಹಾಲುಗಾಳು: ತೆನೆ ಇನ್ನೂ ಬಲಿತಿಲ್ಲ, ಬರೀ ಗಂಜಿಕಾಳು (ರೂಢಿ).
[ಗಂಜಿ$_1$ + ಕಾಳು$_2$ (< ಕಾೞ್$_2$)]

**ಗಂಜಿಗರಿಕೆ** (ನಾ). ಒಂದು ಬಗೆಯ ಹುಲ್ಲು : ಚಲೋ ಸಣ್ಣ ಕಣ್ಣಿನ ಹುಲ್ಲು, ಗಂಜಿಗರಿಕೆಹುಲ್ಲು (ಮೈಔಗಿ. ೨೧–೩೭೪). 'ಗಂಜಳಗಱುಕೆ' ಪರಾ. [ಗಂಜಿ$_3$ + ಕರಿಕೆ (< ಕಱುಂಕೆ)]

**ಗಂಜಿಗಾಯಿ** (ನಾ). ಎಳಗಾಯಿ; ಕಸುಗಾಯಿ.
[ಗಂಜಿ$_1$ + ಕಾಯಿ$_4$ (< ಕಾಯ್$_4$)]

**ಗಂಜಿಗುಡಿ** (ಕ್ರಿ). ಗಂಜಿಯನ್ನು ಕುಡಿ: ಬಿರ್ದೂಟವನೊಡಬಡದೆ ಗಂಜಿಗುಡಿವ ಮರುಳಂ ಪೋಲ್ಕುಂ (ಧರ್ಮಾಮೃ. ೧೦–೭೧); ಕೂೞಿರ್ಪಿನಂ ಮಾಣ್ದು ಸ್ವೈರಿಸದುಂಬರ್ತಿಯನೊಕ್ಕು ಗಂಜಿಗುಡಿವರ್ನಿಮ್ಮನ್ನರಾರ್ ಗಾವಿಲರ್ (ಜೀವಸಂ. ೬೩–೧೩). [ಗಂಜಿ$_1$ + ಕುಡಿ$_1$]

**ಗಂಜಿಗುಡಿಹಿ** (ನಾ). ಗಾಂಜಾ ಸೇದುವವನು; ಗಾಂಜಿ ಸೇದುವವನು (?): ಗಂಜಿಗುಡಿಹಿಯ ಭಕ್ತಿ ತನ್ನ ಸಂಸಾರದ ಅಡಿಯೊಳಗೆ ಅಡಗಿತ್ತು (ಏಲೀಶ್ವ. ೧೫೬). [ಗಂಜಿ$_2$ (< ಗಾಂಜಾ) + ಕುಡಿಹಿ]

**ಗಂಜಿಗುಡುಕೆ** (ನಾ). = ಗಂಜಿಗುಡಿಹಿ: ಇಱಿ ಕಡಿ ತಱಿ ಹೊಯ್ ಗಂಜಿಗುಡುಕರನೆಂದುಱುಬಿ ಮುಮ್ಮೊನೆಯ ನಾಯಕರು . . . ಅಟ್ಟಿದರು (ಕಂನವಿ. ೧೭–೩೪). [ಗಂಜಿ$_2$ (< ಗಾಂಜಾ) + ಕುಡುಕ (< ಕುಡಿಕ)]

**ಗಂಜಿನಾಡು,** ಗಂಜೆನಾಡು (ನಾ). ಒಂದು ಊರಿನ ಹೆಸರು: ನೆಲ್ಲಿವರ ಕಾಳಕನ್ನ ಕಲಿಕಜ್ಜರಾಣಿಱಿದೋಡಿಸಿ ಗಂಜಿನಾಡ ಕ್ಕಲಿದೊಱೆಗಳುಂ ಗೊಂಬುಕ್ಕಿ ಆರಸರುಂ ಪಡೆದುದು (ಎಕ. X, ಮಾಲೂರು. ೯೭–೨; 750). **ಗಂಜೆನಾಡು :** ಮಜುಂಗರೆಯ ಗಂಜೆನಾಡ ನೀರ್ಗುಂಥ ಭೊಳ್ಳೆಯ ವೊಳ್ಗೊಳವ (ಮೈಆರಿ. ೧೯೨೪, ೭೪–೨೭; ?). [ಗಂಜಿ ? + ನಾಡು]

**ಗಂಜಿಪರಾಕು** (ನಾ). (ಉಕ) ಒಳಅಂಗಿ; ಬನೀನು.
[← ಮರಾ. ಗಂಜೀಫರಾಸ್, ಗಂಜೀಫ್ರಾಕ್]

**ಗಂಜಿಬಟ್ಟೆ** (ನಾ). ಗಂಜಿಹಾಕಿ ಗರಿಗರಿಯಾಗುವ ಹಾಗೆ ಮಾಡಿದ ಬಟ್ಟೆ : (ಕ). [ಗಂಜಿ$_1$ + ಬಟ್ಟೆ$_1$]

**ಗಂಜಿಬದನೆ** (ನಾ). ಉದ್ದವಾದ ಒಂದು ಬಗೆಯ ಬದನೆಕಾಯಿ : (ಕ). [ಗಂಜಿ ? + ಬದನೆ (< ಬದಣೆ)]

**ಗಂಜಿಮಠ** (ನಾ). ಧರ್ಮಾರ್ಥವಾಗಿ ಗಂಜಿ ಹಾಕುವ ಛತ್ರ; ಅನಾಥಾಶ್ರಮ: ಮನೆಯವರನ್ನು ಗಂಜೀಮಠಕ್ಕೆ ಯಾತ್ರೆಗೆ ಕಳುಹಿಸುವ ಸಂಭವವಿರುತ್ತೆ (ಪರಾವ. ೪೯). [ಗಂಜಿ$_1$ + ಮಠ]

**ಗಂಜಿಮುಡಿ** (ನಾ). = ಗಂಜಿಬಟ್ಟೆ : ಗಂಜಿಮುಡಿ[ಪಾಠಾಂ. ವಡೆ]ಯಂ ಸೊಪ್ಪಾಗದಂತುಟ್ಟು ಬರ್ಬರಮಂ ಪೂಸಿ ತೊಟಿಲ್ವರ್ (ಸಮುಪ. ೬–೩೪).
[ಗಂಜಿ$_1$ + ಮುಡಿ$_5$]

**ಗಂಜಿಮಾಡು** (ಕ್ರಿ). ೧. ಗಂಜಿಯನ್ನು ತಯಾರಿಸು; ಅಂಬಲಿಯನ್ನು ಮಾಡು : ಗಂಜಿಮಾಡಿ ಆಯಿತೆ? (ರೂಢಿ). ೨. ಬಟ್ಟೆಗಳಿಗೆ ಗಂಜಿಹಾಕು; ಚೆಲುವೆ ಮಾಡು : ಚಿನ್ನದ ಇಸ್ತ್ರಿಲೆಗುಂಡಿಗಳಿಂದ ಕಟ್ಟಿಗೊಂಡು ಗಂಜಿಮಾಡಿದ ಷರಟಿನ ತೋಳ್ಪಟ್ಟಿಯ ಪಟ್ಟಿಗಳಿಂದ ಆ ಮುಷ್ಟಿ ಇಣುಕುತ್ತಿತ್ತು (ಪುನರು. ೨೨೫). [ಗಂಜಿ$_1$ + ಮಾಡು$_1$]

**ಗಂಜಿಯನ್ನ** (ನಾ). ೧. ಗಂಜಿ ಸುತ್ತಿಕೊಂಡ ಅನ್ನ; ಗಿಂಜಲು : ಗಂಜಿಯನ್ನ ಮಾಡಿ ಮುದ್ದೆಮಾಡಿದ್ದಿಯೇ (ರೂಢಿ). ೨. ನೀರಾಗಿ ಮಾಡಿದ ಅನ್ನ: ಗಂಜಿಯನ್ನ ಎಂದರೆ. . . ಅನ್ನದಲ್ಲಿ ಸಾಕಷ್ಟು ನೀರು ಸುರುವಿದೆಯಂದರೆ ಅದೇ ಗಂಜಿಯನ್ನ (ಸ್ಮೃತಿಚಿ. ೫೩).
[ಗಂಜಿ$_1$ + ಅನ್ನ$_3$]

**ಗಂಜಿಯರಿವೆ** (ನಾ). = ಗಂಜಿಬಟ್ಟೆ: ಅವನು ಗಂಜಿಯರಿವೆ ತೊಟ್ಟು ಹೊರಟ (ರೂಢಿ). [ಗಂಜಿ$_1$ + ಅರಿವೆ (< ಅಱುವೆ)]

**ಗಂಜಿಯೆಕ್ಕಸರ** (ನಾ). ಗುಲಗಂಜಿಯ ಒಂದೆಳೆಯ ಸರ: ಪುಲಿಯುಗುರ ಬಾವುಲಿಯ ಗಂಜಿಯೆಕ್ಕಸರದ . . . . ಪುಳಿಂದಿಯರ್ (ರಾಮಾಶ್ವ. ೮೩–೨೭). [ಗಂಜಿ$_3$ + ಎಕ್ಕಸರ$_1$]

**ಗಂಜೀಪ** 'ಗಂಜೀಪು' ನೋ.

**ಗಂಜೀಪಿ** 'ಗಂಜೀಪು' ನೋ.

**ಗಂಜೀಪು,** ಗಂಜೀಪ, ಗಂಜೀಪಿ, ಗಂಜೀಫು (ನಾ). ವಿವಿಧಾಕಾರದ ಚಿತ್ರ ಹಾಗೂ ಸಂಖ್ಯೆಗಳಿಂದ ಕೂಡಿದ ಕಾಗದದ ಎಲೆಗಳಿರುವ ಕಟ್ಟು ಮತ್ತು ಇವುಗಳಿಂದ ಆಡುವ ಆಟ: ಗಂಜೀಪಿನ ಆಟದಲ್ಲಿ ಕುಳಿತವರು ಅಮ್ಮ ಸತ್ತ ಸುದ್ದಿ ಬಂದರೂ ಆಟ ಬಿಟ್ಟು ಏಳಲಾರರು (ಚಿಕರಾ. ೩೪); ಕೇಶವರಾಯನು ದಿನದ ಹನ್ನೆರಡು ತಾಸುಗಳನ್ನು . . . ಇಸ್ಪೇಟು ಗಂಜೀಫುಗಳ ಆಟದಲ್ಲಿ . . . ಕಳೆಯುಪತ್ತಿದನು (ಅಂಬಿಕೆ. ೭೪);

ಮುಟ್ಟಾಳರನ್ನು ಕೂಡಿ 'ಗಂಜೀಫು' ಆಡುವುದು ನಮ್ಮ ಮನೆತನಕ್ಕೆ ಕೀರ್ತಿ ತರುವಂತಹದಲ್ಲ (ಹಬ್ಬಬ .೧೦೪); ಗಂಜೀಫು ಆಡೋರಿಗೆ ಗಂಜಿಯೂ ಸಿಕ್ಕದು (ಗಾದೆ). **ಗಂಜೀಪ:** ಲೆತ್ತ ಪಗಡೆ ಚದುರಂಗ ಗಂಜೀಪ ಮೊದಲಾದ ವಿನೋದ ಪ್ರಸಂಗ (ಕೃಷಿಪ್ರ.೧೪). **ಗಂಜೀಪಿ:** ಇವತ್ತೇನು ಸಂತೆ; ಗಂಜೀಪಿ ಆಡೂ ಹಂಗಿಲ್ಲಾ (ತಿಡುಗು. ೩೫). **ಗಂಜೀಫು:** ಜೀವಿಸಂಘವಿದೇನು? ಗಂಜೀಫಿನೆಲೆಕಟ್ಟು. ದೈವ ಪೌರುಷ ಪೂರ್ವವಾಸನೆಗಳೆಂಬಾ ಮೂವರದನಾಡುವರು, ಚದರಿಸುತೆ, ಬೆರಸಿಡುತೆ ನಾವೆಲ್ಲರಾಟದೆಲೆ (ಮಂಕುತ. ೩೨೭). [← ಪಾರ. ಹಿಂ. ಗಂಜೀಫಾ; ಮರಾ. ಗಂಜೀಫ್]

**ಗಂಜೀಫು** 'ಗಂಜೀವು' ನೋ.

**ಗಂಜು**$_1$ (ನಾ). = ಗಂಜಳ$_1$: "ದನದ ಮೂತ್ರ" (ಗಂಗಾಮ. ೧೯೯); ದನದ ಗಂಜಿನಿಂದ ಒಳ್ಳೆ ಗೊಬ್ಬರ ಬರುತ್ತದೆ (ರೂಢಿ). [< ಗಂಜಳ$_1$ ?]

**ಗಂಜು**$_2$ (ನಾ). ೧. ಒಂದರೊಳಗೊಂದು ಅಡಕವಾಗುವ ತಾಮ್ರ ಅಥವಾ ಹಿತ್ತಾಳೆಯ ಪಾತ್ರೆ: (ಕ). ೨. ಮದ್ಯದ ಪಾತ್ರೆ. ೩. ಕುಡಿಯಲು ಬಳಸುವ ಸಣ್ಣ ಪಾತ್ರೆ. [< ಸಂ. ಗಂಜಾ]

**ಗಂಜು**$_3$ (ನಾ). ವಸ್ತುಗಳನ್ನು ಮಾರುವ ಸ್ಥಳ; ಮಾರುಕಟ್ಟೆ; ಬಜಾರು: ಹೈದ್ರಾಬಾದಿನ ಈ ಹಳೆಯ 'ಗಂಜಿ'ನಲ್ಲಿ ಎಲ್ಲ ಮನೆಗಳಿಗೂ ಎತ್ತರವಾದ ಕಾಂಪೌಂಡು (ದೀಪನಿ. ೩೧). [← ಹಿಂ. ಪಾರ. ಗಂಜ್]

**ಗಂಜೆನಾಡು** 'ಗಂಜಿನಾಡು' ನೋ.

**ಗಂಟ**$_1$ 'ಗುಂಟ$_3$' ನೋ.

**-ಗಂಟ**$_2$ (ಪ್ರ). ಇದರಲ್ಲಿ ವ್ಯವಹರಿಸುವವನು ಎಂಬರ್ಥದಲ್ಲಿ ಬರುವ ತದ್ಧಿತಪ್ರತ್ಯಯ. 'ಜಗಳಗಂಟ' ಪರಾ.

**ಗಂಟಡಿ** (ನಾ). ಸಣ್ಣ ಗಂಟು, —ಮೂಟೆ: (ಕ). 'ಗದಡಿ' ಪರಾ. [← ಮರಾ. ಗಂಠಡೀ, ಗಠಡೀ; ಹಿಂ. ಗಠಡ್ಡೀ]

**ಗಂಟಲ್**, ಗಂಟಲು$_1$ (ನಾ). ೧. ಕೊರಳು; ಕುತ್ತಿಗೆ; ಕಂಠ: ಪಗೆವರ ಗಂಟಲನೊತ್ತುವಂತೆ ಪೌಂಡ್ರಮೆಂಬ ಶಂಖಮನೊತ್ತಿ (ಪಂಪಭಾ. ೧೧–೯೭ ವ); ಆಕ್ರಂದನದಿಂ ಗಂಟಲೊಡೆದು ದನಿ ಕಿಡೆ (ಕಾದಂಪೂ. ೯೪೯); ಧರಣಿಯನೊಕ್ಕಲಿಕ್ಕಿ ದಿಗಧೀಶರ ಗಂಟಲನೊತ್ತಿ (ಗಿರಿಕ. ೬–೫). **ಗಂಟಲು**$_1$: ೧. ತತ್ತನೂಜನ ಗಂಟಲಲಿ ಬಲುಗತ್ತಿಯಂ ಪಿತನೊತ್ತುವಾಗಳ್ (ಬಸವು. ೨೫–೨೫); ಅರಿಗಳುದ್ಭವವಿನ್ನು ಗಂಟಲನರಿವುದು (ಕುವ್ಯಾಆ. ೮–೫೭); ವೆಂಕಮ್ಮನ ಗಂಟಲು ಕಟ್ಟಿತು (ಪದ್ಮಸ. ೪೮); ಗಂಟಲು ಹರಿಯುವಂತೆ ಕಿರಿಚಿಕೊಂಡರು (ಚಂದ್ರತಾ. ೪೩). ೨. ಕೊರಳಿನ ನಾದ,—ಧ್ವನಿ: ಅವನ ಕಂಠವು ಸ್ವಾಭಾವಿಕವಾಗಿ ಸಣ್ಣ ಮಕ್ಕಳ ಗಂಟಲಿನಂತೆ ಇದ್ದುದರಿಂದಲೂ ಅವನಿಗೆ ಆ ಪಾತ್ರ ಮಿಾಸಲಾಗಿತ್ತು (ರಾಯಕ. ೬೨); ಹಾಡಲು ಒಳ್ಳೆಯ ಗಂಟಲಿರಬೇಕು (ರೂಢಿ).

**ಗಂಟಲಗಾಣ, ಗಂಟಲಗಾಳ** = ಗಂಟಲಿಗೆ ಹಾಕುವ ಗಾಣ; ಕೊರಳ ಕೊಕ್ಕೆ; ಪ್ರಾಣಘಾತಕ: ಖಳರ ಗಂಟಲಗಾಣನೊ ಜಗದೊಳಗೆ ಪ್ರವೀಣನೊ (ಪುರಂದ. ೧–೨೦೪–೩); ನಾವು ಆದೀವಿ ಇಲ್ಲೇ ನಿಮ್ಮ ಗಂಟಲಗಾಣರು (ಹೊಸಂಸಾ. ೩೩); ವಿರಹಿಯ ಗಂಟಲಗಾಳಂ ಸ್ಮರವೀರನ ಮಸೆದ ಸೆಂಡುಗೋಲ್ . . . ಎನೆ ಕರಮೆಸೆದತ್ತಂದು ಕೊಂಕಿದೆಳವೆಟಕಿ ನಭದೊಳ್ (ಸೂಕ್ತಿಸು. ೧೦–೮); ನಿನ್ನ ಗಂಟಲಗಾಳ ನಿನಗಳುಕುವನೆ (ಕುವ್ಯಾಕ. ೧೬–೨೧); ಎಂಟು ಕಂಟಕರಿಂಗೆ ನೆಂಟರುಗಳಯ್ವರಿಗೆ ಗಂಟಲಗಾಳನಾಗಿಪ್ಪ ಗುರುನೀಲಕಂಠನಾಗಿಕ್ಕು (ಸರ್ವಜ್ಞ. ೭೦). **ಗಂಟಲತೀಟೆ** = ಮಾತಿನ ಚಾಪಲ್ಯ, —ನವೆ; ಗಟ್ಟಿಯಾಗಿ ಧ್ವನಿಮಾಡಬೇಕೆಂಬ ಅಪೇಕ್ಷೆ: ಸಿಂಹನಾದಕ್ಕೇರಬೇಕೆಂಬ ಗಂಟಲತೀಟೆಯನ್ನು ಸಯ್ಯಿಕ್ಕಿ (ಮಂತ್ರಶ. ೬೩–೭). [ದೇ. ? ‖ ತುಳು. ಕಂಟಿಲ್; ಕೊಡ. ಗಡ್ಲಿ]

**ಗಂಟಲು**$_1$ 'ಗಂಟಲ್' ನೋ.

**ಗಂಟಲು**$_2$ (ನಾ). ಗಂಟುಗಂಟಾದುದು; ಕಗ್ಗಂಟು. 'ಗಂಟಲುನ್ಯಾಯ' ಪರಾ. [ಗಂಟು + –ಅಲು (< –ಅಲ್$_2$)]

**ಗಂಟಲುಕಟ್ಟು** (ಕ್ರಿ). ಗಂಟಲಲ್ಲಿ ಅಡ್ಡಿಯುಂಟಾಗು; ಕೊರಳ ಸೆರೆ ಬಿಗಿದು ಬರು: ಜಾರಿತು ನೀರಿಗೆ ತುತ್ತೂರಿ ಗಂಟಲುಕಟ್ಟಿತು ನೀರೂರಿ (ಕಪಪು. ೧). [ಗಂಟಲು$_1$ (< ಗಂಟಲ್) + ಕಟ್ಟು$_1$]

**ಗಂಟಲುಚಿಟಿಕೆ** (ನಾ). ೧. ಗಂಟಲಿನ ಎರಡು ಕಡೆಯಲ್ಲಿಯೂ ಇರುವ ಗ್ರಂಥಿ; ಗಳಗ್ರಂಥಿ. ೨. ಆ ಗ್ರಂಥಿಗಳು ಊದಿ ಆಗುವ ರೋಗ; ಲಾಳಶಂಕು: ಗಂಟಲುಚಿಟಿಕೆಯಾಗಿ ಏನೂ ನುಂಗುವುದಕ್ಕೇ ಆಗುತ್ತಿಲ್ಲ (ರೂಢಿ). [ಗಂಟಲು$_1$ (< ಗಂಟಲ್) + ಚಿಟಿಕೆ$_4$]

**ಗಂಟಲುನ್ಯಾಯ** (ನಾ). ಗಂಟುಗಂಟಾದ ನ್ಯಾಯ; ತೊಡಕಿನ ನ್ಯಾಯ: ಸೋಮ್ಮೋರು . . . ಎಂತ ಗಂಟಲುನ್ಯಾಯ ಬಂದ್ರೂ ಪರಿಹರ್ಸಿ ಬಿಡೋರು (ಚೆಂಗಾಳ್ವ. ೨೦೫). 'ಗಂಟುವ್ಯಾಜ್ಯ' ಪರಾ. [ಗಂಟಲು$_2$ + ನ್ಯಾಯ]

**ಗಂಟಲುವ್ಯಾಜ್ಯ** (ನಾ). ಗಂಟುಗಂಟಾದ ವ್ಯಾಜ್ಯ; ತೀರದ ಜಗಳ; ತರಲೆಜಗಳ: ಪಕ್ಕದ ಮನೆ ಮುರಲಿಗೂ ಮಧುಸೂದನನಿಗೂ ಮೊದಲಿನಿಂದಲೂ ಆಗುತ್ತಿರಲಿಲ್ಲ. ಮುರಲಿ ಮಾತಾಡಿದ್ದಕ್ಕೆ ಏನಾದರೊಂದು ಗಂಟಲುವ್ಯಾಜ್ಯ ತೆಗೆಯುತ್ತಿದ್ದ (ರಾಗಿಣಿ. ೩೫); ಕಿತ್ತಮಣಿ ಗಂಟಾಕೋದರಲ್ಲಿ ನಿಸ್ಸೀಮ. ಇಲ್ಲದೆ ಇದ್ದ ಗಂಟಲುವ್ಯಾಜ್ಯ ಹಚ್ಕೋತ್ತಾನೆ (ಚೆಂಗಾಳ್ವ. ೫೩೫). [ಗಂಟಲು$_2$ + ವ್ಯಾಜ್ಯ]

**ಗಂಟಿ**$_1$ (ನಾ). ದನಕರು; ಜಾನುವಾರು: ಗಂಟಿಯಂ ಪುಗಲೀಯದಿಕ್ಕಿದ ಬೇಲಿ ಕಿಚ್ಚು ಕೊಳೆ ಕಾಗುವೆ (ಜೀವಸಂ. ೩೧–೫ ವ); ಗಂಟಿಯನ್ನು ಸಾಕುವ ಕೆಲಸ ನಡೆಯಲೇಬೇಕು (ಮರಮ. ೫೯); ಧನಿಯ ಹಟ್ಟಿಯಿಂದ ಗಂಟಿಗಳನ್ನು ಅಟ್ಟಿಕೊಂಡು ಮೇಯಿಸಲು ಹೋಗಬಹುದು (ಸ್ವಪ್ನಹೊ. ೧). [ದೇ. ‖ ತಮಿ. ಕಣ್ಣಿ]

**ಗಂಟಿ**$_2$ (ನಾ). ಕಿವಿಯ ಒಂದು ಆಭರಣ: ಕಿವಿಯೊಳೊಪ್ಪುವ ಕಾಮಾಕ್ಷಿ ಕಡಕು ಗಂಟಿ ತವೆ ಚಿನ್ನಸರ ಪೈರಣೆಯ ಜವಿಯಿಂದ (ಕಂನವಿ. ೨೦–೬೦). [← ಮರಾ. ಗಾಠಾ, ಗಾಠೀ]

**ಗಂಟಿಕೆ**, ಗಂಟಿಗೆ (ನಾ). ಗುಂಪು; ಸಮೂಹ; ಪೊದೆ: "ಸ್ತಂಬಃ . . . ಹುಲ್ಲು ಮುಂತಾದುವುಗಳ ಹೊದರಿನ ಹೆಸರು. ಗಂಟಿಕೆ" (ಸಿದ್ಧಾಂತಿ. ೨೪೦). **ಗಂಟಿಗೆ:** ನಿತ್ಯ ಬಿಂದುಗಳ್ – ಗಂಟಿಗೆ, ಬೇಂಟೆ, ಸುಂಟಿಗೆ (ಶಮುದ. ೩೭ ಪ್ರಯೋ). [< ಸಂ. ಗ್ರಂಥಿಕಾ]

**ಗಂಟಿಕ್ಕಿಸು** (ಕ್ರಿ). ಗಂಟುಹಾಕಿಸು: ಕುಂಕುಮ ಪಂಕಾಂಕಿತಮಾದ ಕಂಕಣದ ದಾರಮಂ ಕಟ್ಟಿ ಮನಂಗೊಳಿಪ ಮದುವಕ್ಕಳ ರಂಜಿಪ ಮುಂಜೆಜಗೆರಡಂ ಭೂದಿವಿಜಂ ಗಂಟಿಕ್ಕಿಸಿದ (ಉದ್ಭಟ. ೮–೬೪ ವ). [ಗಂಟಿಕ್ಕು + –ಇಸು$_3$]

**ಗಂಟಿಕ್ಕು** (ಕ್ರಿ). ೧. ಬಂಧಿಸು; ಕಟ್ಟು; ಗಂಟುಹಾಕು: ಪಟ್ಟಸೂತ್ರದೆರಡೆಳೆಯುಮಂ ಗಂಟಿಕ್ಕುವಂತೆ (ಶಾಂತಿಪು. ೫–೩೩ ವ); ಗಾಳಿಯಂ ಗಂಟಿಕ್ಕುವಂತೆ (ಧರ್ಮಾಮೃ. ೯–೪೨); ಕನಕಕವಚವ ತೊಟ್ಟು ಗಡ್ಡದ ಘನತೆಯನು ಗಂಟಿಕ್ಕಿ (ಕುವ್ಯಾದ್ರೋ. ೯–೧೪); ಭೋಜನಕೆ ಬಂದ ಬಡವರ ವೃಂದಮುಡಿಗಡಿಗೆ ದಕ್ಷಿಣೆಯಂ ಕೊಂಡು ಗಂಟಿಕ್ಕುವರ ತಂಡ ಕಿಕ್ಕಿರಿದಿರ್ದುದು (ಭರಭ. ೧–೧೪); ಜುಟ್ಟನು ಬಾಚಿ ಗಂಟಿಕ್ಕಿದ ಮೇಲೆಯೆ ಹೂವಿನ ಕುಚ್ಚನು ಬೇಡು (ಇಂಚಾಪ. ೨೦೮–೨೭). ೨. ಜೋಡಿಸು; ಕೂಡಿಸಿಕಟ್ಟು; ಸೇರಿಸು: ಧರಣೀಚಕ್ರಮುಮಂ ವಿಯತ್ತಳಮುಮಂ ಗಂಟಿಕ್ಕುವರ್ (ಧರ್ಮಾಮೃ. ೩–೧೩೪); ಧಾತ್ರಿಯುಂ ಗಗನಮುಂ ಗಂಟಿಕ್ಕಿದಂತಲ್ಲಿ ಪೆರ್ವಡೆಯಿರ್ದತ್ತು (ಪಾರ್ಶ್ವಪು. ೧೧–೮೪).

೩. ಗಾಢವಾಗಿ ಬಂಧಿಸು, —ಕೂಡಿಸು: ಕಳನೇೞಿದಂಕಮಂ ಗಳಿಯೋಸರಿಸದ ಮುನ್ನಂ ಕುತ್ತಿ ಕೆಡಪುವ ತಳ್ತು ಗಂಟಿಕ್ಕಿ ಟಿಂಟಣಿಸುವ (ಗಿರಿಕ. ೨–೧೦೫ ವ). ೪. ತೊಡಗು; ಹಿಡಿದುಕೊಳ್ಳು; ಗಂಟುಬೀಳು; ಉಂಟಾಗು: ಆತಂಗೆ ನಿನಗೆ ಗಂಟಿಕ್ಕಿದ ಸಮರ (ಮೋಹತ. ೩೮–೨೧); ಮಂಟಪದೊಳಗಿಂದು ಮಂತ್ರಿಯಿರಲು ಚಿಂತೆ ಗಂಟಿಕ್ಕಿತಹುದೆಮಗರಸಾ (ಭರಚ. ೧೪–೨೩). ೫. ಆರಂಭಿಸು; ಉಂಟುಮಾಡು: ಹರಿಯಕ್ಷನ ಕೂಡೆ ಕದನವ ಗಂಟಿಕ್ಕಿ ಕರಿಕಲಭವು ಜೀವಿಪುದೆ (ಕಂನವಿ. ೧೧–೧೨೧). ೬. ತೊಡಕು ಹಾಕು; ಅಡ್ಡಿಯಾಗು: ಅಲ್ಲಲ್ಲಿ ಹೋಹರಂ ಕರೆಕರೆದು ದೂಱುತಿಹ ಘಲ್ಲಣೆಗೆ ತಲ್ಲಣಿಸಿ ಬಿಡಹೋಗಿ ಗಂಟಿಕ್ಕಿದಂತಾದರಾ ಬಡವರು (ಸಿದ್ಧರಾ. ೮–೪); ಕೆಲಂಬರೊಳ್ ನಕ್ಕು ಕೆಲಂಬರೊಳ್ಮನಿದು ಬಾಳ್ವುದಿದೇಂ ಬಿಡಪೋಗಿ ಮೂಱುಗಂಟಿಕ್ಕಿದ ಗಾದೆಯಾದೆನು (ಅಪಶ. ೫೮). ೭. ಮುಡುಪಾಗಿಡು; ಹರಕೆಯಿಡು: ಜೀವಕೆ ಗಂಟಿಕ್ಕಿದೆನ್ನ ತೊಡವೆ ಪೋದುದೆ (ಗಿಳಿವಿಂ. ೭೭–೬೩). ೮. (ಆಲಂ) ಮದುವೆಮಾಡು; ಲಗ್ನಮಾಡು: ಕುಮಾರಸಂಭವ ಮಾಡಿಯೆಂದೇ ನಾರಿಯನ್ನು ಗಂಟಿಕ್ಕಿ (ಕುವ್ಯಾಅ. ಓರಿಇ. ೨೨–೩೧); ವರ ಚಿತ್ರಲೇಖೆ ಶುಭಮುಹೂರ್ತದಿಂ ಗಂಟಿಕ್ಕಿಯಿರದೆ ಕೈಗೂಡಿಸುತೆ ಯಿರ್ವರಿಂ ಬೀಳ್ಕೊಂಡು ಪೊರಮಟ್ಟು (ನವಮೋ. ೨೭–೭೩).

[ಗಂಟು + ಇಕ್ಕು]

**ಗಂಟಿಗೆ** 'ಗಂಟಿಕೆ' ನೋ.

**ಗಂಟಿಚವುಡಿ**, ಗಂಟಿಚೌಡಿ, ಗಂಟಿಚೋಡಿ (ನಾ). ಮುಚ್ಚಿಟ್ಟದ್ದನ್ನು ಹೊತ್ತುಕೊಂಡು ಹೋಗುವವನು; ಗಂಟುಕಳ್ಳ: ಗಂಟಿಚವುಡಿಗಳು ಎಲ್ಲರಕಿಂತ ಮುಂಚೆ ಬರಬಹುದು (ಜೀವಲ. ೩೧). **ಗಂಟಿಚೌಡಿ:** ಬುಟ್ಟಿಯೊಳು ಪಟ್ಟಿವನಿಟ್ಟು ಉಟ್ಟರದನ ಚೀಲ ಜೋಕಿ ಕೆಟ್ಟ ಗಂಟಿಚೌಡೆರು ಬಂದು ಕತ್ತರಿಸಿಕೊಂಡು ಹೋದಾರ ಮುದಕೀ (ಶರೀಫ. ೩೩–೨). **ಗಂಟಿಚೋಡಿ:** ಒಂದು ಗುಂಪಿಗೆ ಗಂಟಿಚೋಡಿಗಳೆಂದು ಹೆಸರು (ನಡೆದಾ. II, ೮೫೫).

[← ಮರಾ. ಗಂಠೀಛೋಡ್]

**ಗಂಟಿಚೌಡಿ** 'ಗಂಟಿಚವುಡಿ' ನೋ.

**ಗಂಟಿಡಿ** (ಕ್ರಿ). ಗಂಟಾಗು; ಗೆಣ್ಣಿಡು; ಕಣ್ಣಾಗು: ದೆಸೆಗೆ ಕವಿಲ್ತು ಗಂಟಡಿದು ನುಣ್ಪುಸಿಱಿಂ ಪೊರೆಯೇಱಿ ಕೊಬ್ಬಿ (ದಶಕು. ೧–೨೭).

[ಗಂಟು + ಇಡಿ$_2$]

**ಗಂಟು** (ನಾ). ೧. ಕಬ್ಬು, ಜೋಳ, ಬಿದಿರು ಮೊದಲಾದುವುಗಳ ಕಣ್ಣು; ಗೆಣ್ಣು: "ಗ್ರಂಥಿಃ, ಪರ್ವ, ಪರುಸ್–ಈ ೩ ಗಂಟು" (ಹಲಾಯು. ೩೧–೩); "ಗ್ರಂಥಿ – ಗಂಟು" (ಶಮದ. ೨೫೭ ಪ್ರಯೋ); ಬಿದಿರ ಗಂಟುಗಳಂ ಕಳೆವಂತೆ (ಪಂಪಭಾ. ೧೨–೧೦೩); ಒದವಿ ಪೊದೆಱ್ದು ಬಳ್ಳಿಗಳ ಗಂಟುಗಳಂ ನೆಱೆ ಪೊಱ್ದು ಬೇರ್ಗಳೂಱಿದೊಡರಿದಲ್ಲಿ ಕೊಯ್ದು (ಲೋಕೋಪ. ೬–೫೬); ಬಿದಿರ ಗಂಟಂ ಕಡಿವಂತಿರೆ ಕಡಿದು (ಧರ್ಮಾಮೃ. ೩–೨೪೭); ವನವಹ್ನಿಯಿಂ ಬಿದಿರ ಗಂಟೊಡೆವಂತೆ ಛಟಚ್ಛಟಸ್ವನಂ ಬಳೆದುದು (ಜಗವಿ. ೬–೬೩); ಗಂಟಿಲ್ಲದ ಅಂಡೆಯಲ್ಲೆರೆದ ನೀರಿನಂತೆ ನೆಲೆಗೊಳ್ಳದು (ನಾಡೋಜ. ೩೫೭). ೨. (ಸೇರಿಸಿ) ಕಟ್ಟಿದುದು; ಕಟ್ಟು: ಪರಾಕ್ರಮಧವಳನ ಶರಪರಿಣತಿಯಂ ಕಂಡು ದುರ್ಯೋಧನನ ಮೊಗಂ ತಲೆನವಿರ ಗಂಟಂ ಕಿಱಿದಾಗೆ (ಪಂಪಭಾ. ೨–೭೭ ವ); ಕೊತ್ತುಂಬರಿಯ ಗಂಟನಿಕ್ಕಿ ಪರಿಮಳವ ಪೊರೆಯೊತ್ತಿ (ಸೂಪಶಾ. ೪–೨೭); ಬೆನ್ನ ಮೇಲಲೆವ ಕೇಶದ ಗಂಟು (ಭರಚ. ೪–೭೦); ಲಜ್ಜೆಯ ಗಂಟು ಇನ್ನು ಬಿಚ್ಚಿಲ್ಲ (ಬಾಣಅ. ೩೦೫); ಅವನದಾಗಿ ಒಂದು ದಫ್ತರದ ಗಂಟು ಇತ್ತು (ಕಮಕ. ೨). ೩. ಐಶ್ವರ್ಯ; ಹಣ; ನಿಧಿ: ಶೌರ್ಯದ ಗಂಟು ಬಲುಹದ ಕಂಡು ಬಲ್ಲೆನು ಹಲವು ಬಾರಿಯಲಿ (ಕುವ್ಯಾದ್ರೋ. ೧೩–೫೩); ಗಂಟನೊಬ್ಬರ ಕೈಯಲಿಡುವಾತ ಮೂರ್ಖ (ಪುರಂದ. ೧–೬೨–೩); ಪಾಪಿಯ ಗಂಟು ಪರರಿಗೆ ಮುಂಡೇ ಗಂಟು ಕಂಡವರಿಗೆ (ಗಾದೆ). ೪. ನರಗಳಲ್ಲಿ ಉಂಟಾಗುವ ಊತ, —ಗೆಡ್ಡೆ: (ಕ). ೫. ಮೂಳೆಯ ಕೀಲು; ಅಸ್ಥಿಸಂಧಿ; ಎಲುವಿನ ಸಂದು: ಕಣ್ಣು ಮೂಗು ಕಿವಿ ಕೈ ಕಾಲು ಗಂಟು ಅಣ್ಣ ನಿಮ್ಮಂತೆಯೆ ನನಗೆಲ್ಲ ಉಂಟು (ಕಎಪು. ೫೬). ೬. ಪರಸ್ಪರ ಸಂಬಂಧ; ನಂಟು: ನನ್ನ ತರಗತಿಯೊಳು ನಾನಿದ್ದೆನೊಬ್ಬನೆ ಗುರುಗಳಿಗೊಬ್ಬನೆ ಗಂಟು (ಇಂಚಾಪ. ೨೮–೨೬); ನನಗೂ ಅವಗೂ ಗಂಟು (ರೂಢಿ). ೭. ಸಮಸ್ಯೆ; ತೊಡಕು: ಬಹು ಜಾಣತನದಿಂದ ಈ ಗಂಟು ಹಾಕಿದೆ . . . ನೋಡು ಈ ಗಂಟನ್ನು ಬಿಚ್ಚಬಲ್ಲೆಯಾ (ಆರ್ಯಕ. ೭೫). ೮. "ಗುಲ್ಮರೋಗ; ಪ್ಲೇಗು ಬೇನೆಯ ಬೊಬ್ಬುಳಿ" (ಕಸ್ತೂಕೋ. ೨೮೧).

**ಗಂಟಿನ ರೋಗ** = ಗಂಟುಬೇನೆ; ಪ್ಲೇಗು: ಬಕಾಸುರನಂತೆ ಬಾಯ್ದೆರೆದು ಬಂದ ಗಂಟಿನ ರೋಗವು ನಮ್ಮ ಸಂಸಾರದ ಸವಿಯನ್ನೆಲ್ಲಾ ಕೆಡಿಸಿಬಿಟ್ಟಿತು (ಸೂಜಿಗ. ೨). [< ಸಂ. ಗ್ರಂಥಿ]

**ಗಂಟುಕಟ್ಟು** 'ಗಂಟುಗಟ್ಟು' ನೋ.

**ಗಂಟುಕತ್ತರಿಸು** (ಕ್ರಿ). ೧. ಗಂಟಿರುವ ಭಾಗವನ್ನು ಕತ್ತರಿಸು. ೨. (ಆಲಂ) ಹಣವನ್ನು ಕದಿ, —ಅಪಹರಿಸು: ಎಲಾ ಗಂಟು ಕತ್ತರಿಸುವವನೆ (ಶಾಕುಂತ. ೭೬–೧೮). ೩. ಸಂಬಂಧವನ್ನು ಕಡಿದುಕೊಳ್ಳು. ೪. ಸಮಸ್ಯೆಯನ್ನು ಬಿಡಿಸು; ತೊಡಕನ್ನುನಿವಾರಿಸು: ಬಂದುಬಿಟ್ಟಿದ್ದೇನೆ ಎಂದಮೇಲೆ ಹಿಂದೆ ಸರಿಯುವುದಿಲ್ಲ: ಒಂದು ವೇಳೆ ಹಿಂದೆ ಸರಿಯುವುದೇ ಆದಲ್ಲಿ ಗಂಟು ಕತ್ತರಿಸಿಯೇ ಹೊರಬೀಳುತ್ತೇನೆ (ಇಪ್ಪಕ. ೪೮೮). [ಗಂಟು + ಕತ್ತರಿಸು]

**ಗಂಟುಕಳ್ಳ** 'ಗಂಟುಗಳ್ಳ' ನೋ.

**ಗಂಟುಕಾಚಿ** (ನಾ). ಒಂದು ಬಗೆಯ ಹುಲ್ಲು: ಬೆಟ್ಟಂಚಿಹುಲ್ಲು . . . ಗಂಟುಕಾಚಿ (ಮೈಔಗಿ. ೭೪–೧೫೧೯).

[ಗಂಟು + ಕಾಚಿ$_1$ (< ಕಾವಂಚಿ)]

**ಗಂಟುಕಾಲು** 'ಗಂಟುಗಾಲು' ನೋ.

**ಗಂಟುಕಾಳುಗೆಡ್ಡೆ** (ನಾ). ಒಂದು ಬಗೆಯ ಗೆಡ್ಡೆ: (ಮೈಔಗಿ. ೫೦–೯೯೧). [ಗಂಟು + ಕಾಳು$_2$ (< ಕಾಟ್$_2$) + ಗೆಡ್ಡೆ (< ಗಡ್ಡೆ)]

**ಗಂಟುಕೊಯ್ಕ** 'ಗಂಟುಗೊಯ್ಕ' ನೋ.

**ಗಂಟುಗಟ್ಟು**, ಗಂಟುಕಟ್ಟು (ಕ್ರಿ). ೧. ಗಂಟಾಗು; ಗೆಣ್ಣಾಗು: ಅಱಿವಂ ಪೊರ್ದದ ಬಾಲಕಾಲಮೆ ಮೊದಲ್ಸಂಕ್ಲೇಶ ಚಿಂತಾದಿಗಳ್ ತುಱುಗಿರ್ದಲ್ಲಿಯ ಗಂಟುಗಟ್ಟಿರಸಮಂ ಪೊರ್ದಿ (ಜೀವಸಂ. ೧೨೪–೨). **ಗಂಟುಕಟ್ಟು:** ೨. ಹಣವನ್ನು ಕೂಡಿಹಾಕು; ಗಂಟುಮಾಡು: ಗಂಟುಕಟ್ಟಲಿಕ್ಕೆ ಕಲಿಸೋದು ರೊಕ್ಕ ತುಂಟತನಗಳನು ಬಲಿಸೋದು ರೊಕ್ಕ (ಪುರಂದ. ೨–೫೦–೫). [ಗಂಟು + ಕಟ್ಟು$_1$]

**ಗಂಟುಗಡಿ** (ಕ್ರಿ). ಗಂಟುಗಂಟಿಗೆ ಕತ್ತರಿಸು,—ತುಂಡುಮಾಡು: ಸಂಧಿಸಂಧಿಗಳಂ ಗಂಟುಗಡಿವುದುಂ ತಡಂಗಡಿವುದುಂ (ಸುಕುಮಾ. ೧೧–೪೬ ವ). [ಗಂಟು + ಕಡಿ$_1$]

**ಗಂಟುಗದಡಿ** (ನಾ). ಗಂಟು ಮೂಟೆ: ಫಕೀರನ ಗಂಟುಗದಡಿಗಳನೆಲ್ಲ ಹುಡುಕಿಸಿದನು (ಮುಂಬಯಿ. ೪–೧೬೫); ನನ್ನ ಗಂಟುಗದಡಿಗಳನ್ನು ಕಟ್ಟಿಕೊಂಡು ಎದ್ದೇಬಿಟ್ಟೆನು (ಬ್ರಹ್ಮಜೀ. ೧೨೭); ಗಂಟುಗದಡಿ, ಹಾಸಿಗೆ ಬಟ್ಟೆ, ಮೊಟ್ಟೆಕಟ್ಟುವ ಸಂಭ್ರಮವೇಕೆ (ಇಪ್ಪಕ. ೨೬೨).

[ಗಂಟು + ಗದಡಿ]

**ಗಂಟುಗಳ್ಳ**, ಗಂಟುಕಳ್ಳ (ನಾ). ೧. ಗಂಟು ಇದ್ದರೂ ಇಲ್ಲದಂತೆ ನಟಿಸುವವನು : "ಬಡವನೆಂದು ತೋರಿಸುವವ" (ಜಾನಕೋ. ೪೫). ೨. ಪಡೆದ ಹಣವನ್ನು ಹಿಂದಿರುಗಿಸದವನು : ನಂಟರಿಷ್ಟರು ಗುರು ಹಿರಿಯರೊಳು ಟಿಂಠಣಿಸಿ ಕಡುಮೂರ್ಖರಾಗಿಹ ಗಂಟುಗಳ್ಳರಿಗಱುಹದಿರು ಮಱೆದನುಭವಾಮೃತವ (ಅಮೃತ. ೭-೨). ೩. ಗಂಟು ಹೊಡೆಯುವವನು; ಹಣವನ್ನು ಲಪಟಾಯಿಸುವವನು : ನಂಟನು ಸಣ್ಣವನೆಂದು ನಂಬಿದೆನಮ್ಮ, ಗಂಟುಗಳ್ಳನೆಂದಱಿಯದೆ (ಪುರಂದ. ೪-೬೨-೧). **ಗಂಟುಕಳ್ಳ** : ೩. ಸಂತೆ ನೆರೆಯುವುದಕ್ಕಿಂತ ಮುಂಚೆ ಗಂಟುಕಳ್ಳರ ಹಾವಳಿ (ಗಾದೆ). [ಗಂಟು + ಕಳ್ಳ$_1$]

**ಗಂಟುಗಾಲು**, ಗಂಟುಕಾಲು (ನಾ). ೧. ಗಂಟುಗಂಟಾದ ಕಾಲು; ನರಗಳು ಗಂಟಿಕ್ಕಿಕೊಂಡಿರುವ ಕಾಲು : (ಕ). **ಗಂಟುಕಾಲು** : ೧. ಗಂಟುಕಾಲಿನ ಎತ್ತು (ರೂಢಿ). ೨. ಒಂದು ಬಗೆಯ ಸೊಪ್ಪು : ಪಾದರು, ನೆಲವೆಂಬು, ಗಂಟುಕಾಲು (ನಮ್ಮನು. ೨೩೮). [ಗಂಟು + ಕಾಲು$_1$ (< ಕಾಲ್$_1$)]

**ಗಂಟುಗೆಯ್**, ಗಂಟುಗೈ (ನಾ). ಗಂಟುಗಂಟಾದ ಕೈ : ಕೆದಱು ಮಿಸೆಯ ಕೀಱಿವಲ್ಲುಗಳ ಒಱಿತ ಬಾಯ್ಗಳ ಗಂಟುಗೆಯ್[ಪಾಠಾಂ. ಗೈ] ಗಳ ಬಱತೆದೆಗಳೊಳಡೊಂಕುಕಾಲ್ಗಳ ಕಿಱುಕುಲರು (ಬಸವು. ೫೮-೪೯). **ಗಂಟುಗೈ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಗಂಟು + ಕೆಯ್$_2$]

**ಗಂಟುಗೈ** 'ಗಂಟುಗೆಯ್' ನೋ.

**ಗಂಟುಗೊಯ್ಕ**, ಗಂಟುಕೊಯ್ಕ (ನಾ). ಗಂಟನ್ನು ಅಪಹರಿಸುವವನು; ಹಣವನ್ನು ಹೊಡೆಯುವವನು. **ಗಂಟುಕೊಯ್ಕ** : "ಹಣವನ್ನು ಕಳವುಮಾಡುವವ, ಕಿಸೆಗಳ್ಳ" (ಕಸ್ತೂಕೋ. ೨೮೧). [ಗಂಟು + ಕೊಯ್ಕ]

**ಗಂಟುಗೊಳ್** (ಕ್ರಿ). ೧. ತೊಡಕಾಗು; ಜಟಿಲವಾಗು; ಗಂಟು ಹಾಕಿಕೊಳ್ಳು. ೨. ನಿಕಟವಾಗಿ ಸೇರು; ಭದ್ರವಾಗಿ ಕೂಡು : ನೇಹದ ನಂಟರೊಳನಂಟು ಗಂಟುಗೊಳ್ವಂತುಂ (ರಾಮಾಶ್ವ. ೮೭-೬). [ಗಂಟು + ಕೊಳ್$_1$]

**ಗಂಟುಣಿಗ** (ನಾ). ಗಂಟನ್ನೆಲ್ಲ ತಿಂದುಹಾಕುವವನು : "ಆಸ್ತಿಯನ್ನೇ ತಿಂದು ಮುಗಿಸುವವನು" (ಅನಂನಾ). [ಗಂಟು + -ಉಣಿಗ]

**ಗಂಟುತೀರಿಸು** (ಕ್ರಿ). ೧. ಸಾಲವನ್ನು ತೀರಿಸು : (ಸ್ಯಾಂಡರ್). ೨. ಹಣವನ್ನು ಮುಗಿಸು; ಆಸ್ತಿ ಇಲ್ಲದಂತೆ ಮಾಡು : ಅವನು ಗಂಟುತೀರಿಸಿ ಪರದೇಸಿಯಾಗಿದ್ದಾನೆ (ರೂಢಿ). [ಗಂಟು + ತೀರಿಸು]

**ಗಂಟುತುಂಬೆ** (ನಾ). ಒಂದು ಜಾತಿಯ ಸಸ್ಯ : ಗಂಟುತುಂಬೆ, ಕರ್ಜಾಲಿಗಿಡ (ವೈಔಗಿ. ೫೦-೧೦೦೧). [ಗಂಟು + ತುಂಬೆ$_2$ (< ತುಂಬಿ$_2$)]

**ಗಂಟುತೋರಿಸು** (ಕ್ರಿ). ೧. ಹಣದಾಸೆಯನ್ನು ಹುಟ್ಟಿಸು. ೨. ಹಣವನ್ನು ತೋರಿಸು; ನಿಧಿಯನ್ನು ತೋರಿಸು : (ಸ್ಯಾಂಡರ್). [ಗಂಟು + ತೋರಿಸು (< ತೋಱಿಸು)]

**ಗಂಟುಪರಂಗಿ** (ನಾ). ಒಂದು ಬಗೆಯ ಸಸ್ಯ : ಗಂಟುಪರಂಗಿ ಮತ್ತು ತಂಗಡಿ ಚಿಗುರುಗಳನ್ನು ಅರೆದು ನೆತ್ತಿಯಲ್ಲಿ ಕಟ್ಟುವುದು (ಸಕವೈ. ಪರಿ. ೪೨೯). [< ಗಂಟುಭಾರಂಗಿ ?]

**ಗಂಟುಪುರ್ಬು**, ಗಂಟುಹುಬ್ಬು (ನಾ). ೧. (ಕೋಪದಿಂದ) ಗಂಟು ಹಾಕಿದ ಹುಬ್ಬು : ಬೆಱತ ಮೋಱೆಯ ಗಂಟುಪುರ್ಬಿನ ಕೆಱುಟು ಮಂಡೆಯ ದೊಡ್ಡಮೂಗಿನ (ಬಸವು. ೨೦-೧೨); ಪಾವಸೆವಲ್ಮಿಗೆ ಗಂಟು ಪುರ್ಬುಗಳ್ (ವೃಷವಿ. ೧೧-೬೦). **ಗಂಟುಹುಬ್ಬು** : ಗಂಟುಹುಬ್ಬಾಗಿ ನಡೆದಾಡುತ್ತಿದ್ದ (ಮಂತ್ರಶ. ೬೫-೭). [ಗಂಟು + ಪುರ್ಬು (< ಪುರ್ವು)]

**ಗಂಟುಬಾರಂಗಿ** 'ಗಂಟುಭಾರಂಗಿ' ನೋ.

**ಗಂಟುಬಿಚ್ಚು** (ಕ್ರಿ). ೧. ಗಂಟನ್ನುಬಿಚ್ಚು, —ಸಡಲಿಸು. ೨. (ಅಲಂ) ಹಣವನ್ನು ಖರ್ಚುಮಾಡು. [ಗಂಟು + ಬಿಚ್ಚು (< ಬಿರ್ಚು)]

**ಗಂಟುಬಿಡು** (ಕ್ರಿ). ಸಂಬಂಧ ಕಳೆದುಕೊಳ್ಳು (?) : ಕಠೋರವಚನದಿ ಗಂಟುಬಿಡದಾವಾಗ ವಿಷಯಾಸಕ್ತರಾದರಿಗೆ . . . ಅಱುಹದಿರು ಮಱೆದನುಭವಾಮೃತವ (ಅಮೃತ. ೭-೨). [ಗಂಟು + ಬಿಡು$_1$]

**ಗಂಟುಬೀಳು** (ಕ್ರಿ). ೧. ಗಂಟುಗಂಟಾಗು; ಉಂಡೆಯಾಗು; ಗೋಜಾಗು : ಉಪ್ಪಿಟ್ಟಿನ ರವೆ ಗಂಟುಬಿದ್ದಿತ್ತು (ರೂಢಿ); ನೂಲಿನ ಉಂಡೆ ಗಂಟುಬಿದ್ದಿತು (ರೂಢಿ). ೨. ಅಮರಿಕೊಳ್ಳು; ಅಂಟಿಕೊಳ್ಳು; ಬೆನ್ನುಹತ್ತು : ನಾನು ಭಟ್ಟನಿಗೆ ಗಂಟುಬಿದ್ದೆ (ಮೇದಿಮು. ೪); ಅಂಥ ಒಳ್ಳೆಯವರಿಗೆ ನನ್ನಂಥವಳು ಗಂಟುಬಿದ್ದು ಅವರ ಮನೆ ಮುರಿದೆನಂತೆ (ಆಮನೆ. ೧೩); ಈ ಸಾಡೇಸಾತಿಯೊಬ್ಬಳು ನಮಗೆಲ್ಲಿ ಗಂಟು ಬಿದ್ದಳೋ (ಮೂರುದಾ. ೨೬೯). ೩. ಸಮನಾಗು; ಸರಿಯಾಗು; ಕೂಡಿಬರು : ಒಂದು ಅದ್ಭುತವಾದ ಚೌಡಿಯನ್ನು ತಾನು ಕಣ್ಣುಟ್ಟ ನೋಡಿದ್ದೆನೆಂದು ಹೇಳುತ್ತಿರಲಿಕ್ಕೂ . . . ಈ ಕುಮಾರಿಯು ಬಂದು ನಿಲ್ಲಲಿಕ್ಕೂ ಗಂಟುಬಿದ್ದಿತು (ಅಂಬಿಕೆ. ೬). [ಗಂಟು + ಬೀಳು$_1$ (< ಬೀೞ್$_1$)]

**ಗಂಟುಬೇನೆ** (ನಾ). ಜ್ವರ ಬಂದು ಗಂಟು ಏಳುವ ರೋಗ; ಪ್ಲೇಗು : ಇಲಿಗಳು ಗಂಟುಬೇನೆಯವಂತೆ (ಹೊಸಂಸಾ. ೯೭); ಈಗ ಹತ್ತು ಹದಿನೈದು ದಿನಗಳಾಗಿರಬೇಕು, ಊರಲ್ಲಿ ಗಂಟುಬೇನೆ ಮೊದಲಾಗಿ (ಭೂಮಿತಾ. ೫೫). [ಗಂಟು + ಬೇನೆ]

**ಗಂಟುಭಾರಂಗಿ**, ಗಂಟುಬಾರಂಗಿ (ನಾ). ಒಂದು ಬಗೆಯ ಔಷಧಿ ಮೂಲಿಕೆ : ಗಂಟುಭಾರಂಗಿಯನ್ನು ಶುಂಠಿಯೊಡನೆ ಸಣ್ಣನಾಗಿ ಅರೆದು ಬಿಸಿನೀರಿನಲ್ಲಿ ಕುಡಿಯೆ ಶ್ವಾಸಕಾಸಂಗಳಂ ಕೆಡಿಸುಗುಂ (ವಿವೈವಿ. ೨೦); ಗಂಟುಭಾರಂಗಿ . . . ಕೊಡಸಾರಿಗೆಡ್ಡೆ ಇಷ್ಟನ್ನೂ ಅಷ್ಟಾವಶೇಷವಾಗಿ ಕಷಾಯವ ಕಾಸಿ . . . ಕೊಡಿಸಲು ಶ್ಲೇಷ್ಮಜ್ವರ ಹರ (ವೈದ್ಯಸಾ. II, ೬೧); ಪರ್ಪಾಟಕ, ಅಳಲೆಕಾಯಿ, ಶುಂಠಿ, ಗಂಟುಭಾರಂಗಿ . . . ಅಷ್ಟಾವಶೇಷ ಕಷಾಯಂ ಕಾಯಿಸಿಕೊಡಲು ಶೀತಜ್ವರ, ವಿಷಜ್ವರ . . . ಮಾಣ್ಗುಂ (ಸಕವೈ. ೬೩). **ಗಂಟುಬಾರಂಗಿ** : ಗಂಟುಬಾರಂಗಿ, ಒಣಶುಂಠಿ, ಹಿಪ್ಪಲಿ . . . ಚೂರ್ಣವನ್ನು ಬೆಲ್ಲದಲ್ಲಿ ಕಲಸಿ ದಿನಕ್ಕೆ ಎರಡು ಯಾ ಮೂರುಸಲ ತಕ್ಕೊಳ್ಳುವುದು (ಮನೆಮ. ೫೪). [ಗಂಟು + ಭಾರಂಗಿ]

**ಗಂಟುಮರ** (ನಾ). ೧. ಗಂಟುಗಂಟಾದ ಮರ; ಒರಟಾದ ಮರ : ಗಂಟುಮರ ಒಡೆಯಲು ಸುಲಭವಾಗಿ ಬರುವುದಿಲ್ಲ (ರೂಢಿ). ೨. ಒಂದು ಬಗೆಯ ಔಷಧಿ ಸಸ್ಯ : (ವೈಔಗಿ. ೫೨-೧೦೪೦). [ಗಂಟು + ಮರ$_1$]

**ಗಂಟುಮಾಡು** (ಕ್ರಿ). ಹಣ ಮಾಡು, —ಗಳಿಸು : ಅವನು ಚೆನ್ನಾಗಿ ಗಂಟುಮಾಡಿದ್ದಾನೆ (ರೂಢಿ). [ಗಂಟು + ಮಾಡು$_1$]

**ಗಂಟುಮುಖ** (ನಾ). ೧. ಅಪ್ರಸನ್ನವಾದ ಮುಖ; ಬಿಗುವಾದ ಮುಖ. ೨. ಕೋಪದಿಂದ ಗಂಟುಹಾಕಿಕೊಂಡ ಮುಖ : ರಾಜಕುಮಾರಿಯದು ಯಾವಾಗಲೂ ಗಂಟುಮುಖ (ಕಥಕ. ೨೫). [ಗಂಟು + ಮುಖ]

**ಗಂಟುಮುಳುಕ** (ನಾ). ಗಂಟನ್ನು ಮುಳುಗಿಸುವವನು; ಹಣವನ್ನು ಹೊಡೆಯುವವನು : ತುಂಗಮ್ಮನ ಗಂಡನೂ ಗಂಟುಮುಳುಕರಿಂದ ನಷ್ಟಗೊಂಡವರೇನೆ ಹೊರತು ಮುಳುಗಿಸಿದವರಲ್ಲ (ಸ್ವಪ್ನಹೊ. ೧೫೭). [ಗಂಟು + ಮುಳುಕ (< ಮುೞುಕ)]

**ಗಂಟುಮುಳುಗಿಸು** (ಕ್ರಿ). ಇನ್ನೊಬ್ಬರಿಂದ ಪಡೆದ ಹಣವನ್ನು ಹಿಂತಿರುಗಿಸದೆ ಹಣವನ್ನು ಅಪಹರಿಸು: ಇನ್ನೊಬ್ಬರ ಗಂಟು ಮುಳುಗಿಸಿ ಅವರ ಬೆದರಿಕೆಗೂ ಬೈಗಳಿಗೂ ಪಾತ್ರರಾಗಿ ಬ್ಯಾರಿಗಳು ತುಂಬಾ ಧೈರ್ಯಶಾಲಿಗಳಾಗಿದ್ದರು (ಮುಂಗಾಮು. ೩).
[ಗಂಟು + ಮುಳುಗಿಸು (< ಮುಳುಂಗಿಸು)]

**ಗಂಟುಮೂಗು** (ನಾ). ಗಂಟುಗಂಟಾದ ಮೂಗು; ಗೆಡ್ಡೆಮೂಗು: ದೊಡ್ಡ ಹೊಟ್ಟೆಯ ಕೂನುಬೆನ್ನಿನ ಅಡ್ಡಮೋರೆಯ ಗಂಟುಮೂಗಿನ ಪಡ್ಡ ಕೈಕಾಲುಗಳ . . . ನೃಪತಿ (ನಳಚ. ೬–೧೪). [ಗಂಟು + ಮೂಗು$_1$]

**ಗಂಟುಮೂಟೆ** (ನಾ). = ಗಂಟುಗದಡಿ: ಅಡಿಗೇಮಾಣಿ ಗಂಟು ಮೂಟೆ ಸಹಿತ ಪತ್ತೆಯಿಲ್ಲ (ರೂಪಸಂ. ೧೭). [ಗಂಟು + ಮೂಟೆ]

**ಗಂಟುಮೊಟ್ಟೆ** (ನಾ). = ಗಂಟುಗದಡಿ: (ಕ). [ಗಂಟು + ಮೊಟ್ಟೆ]

**ಗಂಟುಮೋರೆ** (ನಾ). = ಗಂಟುಮುಖ: ವಿನೋದದ ಚುಟುಕುಗಳು ಎಂಥ ಗಂಟುಮೋರೆಯನ್ನಾದರೂ ಸಡಿಲಿಸಿ ಖೊಳ್ಳೆಂದು ನಗುವಂತೆ ಮಾಡುವುವು (ಕಥಕ. ೨೫). [ಗಂಟು + ಮೋರೆ (< ಮೋಱೆ)]

**ಗಂಟುವ್ಯಾಜ್ಯ** (ನಾ). ಗಂಟುಗಂಟಾದ ಜಗಳ; ಬಿಡಿಸಲಾಗದ ವ್ಯಾಜ್ಯ; ಗಂಟಾದ ಜಗಳ: ಈ ಗಂಟುವ್ಯಾಜ್ಯವನ್ನು ಬಿಡಿಸುವರಾರು (ರೂಢಿ). 'ಗಂಟಲುವ್ಯಾಜ್ಯ' ಪರಾ. [ಗಂಟು + ವ್ಯಾಜ್ಯ]

**ಗಂಟುಹಾಕು** (ಕ್ರಿ). ೧. ಸಂಗ್ರಹಿಸು; ಶೇಖರಿಸು; ಕೂಡಿಸು: ಮಲ್ಲವ್ವ . . . ಮೊಸರನ್ನು ಮಾರುತ್ತ ದುಡ್ಡನ್ನು ಗಂಟುಹಾಕುತ್ತಿದ್ದಳು (ನೀತಿಚಿಂ. ೯–೨೯). ೨. ಸಂಬಂಧ ಉಂಟುಮಾಡು; ಹೊಂದಿಸು: ಒಂದು ಹೆಣ್ಣನ್ನು ಹುಡುಕಿ ಅವನಿಗೆ ಗಂಟುಹಾಕಬೇಕೆಂದೂ ಇಚ್ಛಿಸಿದಳು (ಫಲಸಂ. ೮೪); ಒಬ್ಬರಿಗೊಬ್ಬರಿಗೆ ಗಂಟುಹಾಕಿಬಿಡಬೇಕು ಎಂದು ಮನಸ್ಸಿನಲ್ಲಿ ನಿರ್ಧರಿಸಿದನೇನೋ ಸರಿ (ರಾಮಾನ. ೬೮).
[ಗಂಟು + ಹಾಕು (< ಪಾಯ್ಕು$_1$)]

**ಗಂಟುಹುಣ್ಣು** (ನಾ). ಒಂದು ಬಗೆಯ ಹುಣ್ಣು (?): ನಾರಾಯಣ ತೈಲ . . . ಈ ತೈಲವಂ ಸರ್ವಾಂಗಲೇಪಂಗೈಯೆ ಸಕಲಸನ್ನಿಪಾತಂಗಳು, ಶೂಲೆ, ಗಂಟುಹುಣ್ಣುಗಳು ಮುಂತಾದುವು ಮಾಣುವುವು (ಸಕವೈ. ೧೭೯); ಗಂಟುಹುಣ್ಣು ಮೊದಲಾದ್ದು ಯಿಲ್ಲದೆಯಿದ್ದರೂ (ಸೌಗಂಧಿ. ೩೧೦–೧೦). [ಗಂಟು + ಹುಣ್ಣು (< ಪುಣ್)]

**ಗಂಟುಹುಬ್ಬು** 'ಗಂಟುಪುರ್ಬು' ನೋ.

**ಗಂಟೆ$_1$** (ನಾ). ಗಡ್ಡೆ; ಗೆಡ್ಡೆ: ಯಾವುದರಿಂದ ಹುಲ್ಲು ಮುಂತಾದ ಗಂಟೆಗಳು ಅಗಿಯಲ್ಪಡುತ್ತೋ ಅಂಥಾ ಗುದ್ದಲಿ (ಸಿದ್ಧಾಂತಿ. ೩೧೬). [?]

**ಗಂಟೆ$_2$** (ನಾ). ೧. ಕಂಚು, ಹಿತ್ತಾಳೆ ಮೊದಲಾದ ಮಿಶ್ರಲೋಹಗಳಿಂದ ತಯಾರಿಸಿದ ಬಾರಿಸುವ ಸಾಧನ; ಘಂಟೆ: "ಘಂಟಾ – ಗಂಟೆ" (ಶಮದ. ೨೫೫ ಪ್ರಯೋ); ಗಗನಗಜಕ್ಕಿಕ್ಕಿದ ಪೊನ್ನ ಗಂಟೆಯೆರಡೆನಲು (ಆದಿಪು. ೬–೫೨); ಗಂಟೆ ಜಯಗಂಟೆ ತಾಳ ಕೌಸಾಳ ಮೊದಲಾದ ವಾದ್ಯವನಱಿವುದು (ಆದವ. ೬–೧೨); ಗಂಟೆ ಜಾಂಗಟೆ ಮೊದಲಾದುವುಗಳನ್ನು ಬಾರಿಸಿ (ಕನ್ನಜಾ. ೧೭೦). ೨. ಅರುವತ್ತು ನಿಮಿಷಗಳ ಕಾಲ; ಎರಡುವರೆ ಗಳಿಗೆಯ ಹೊತ್ತು; ಒಂದು ತಾಸು: ಗಂಟೆ ಹತ್ತಾದರೂ ಮನೆಯನು ಸೇರನು (ಚಂದ್ರವೀ. ೭೩–೮೯). ೩. ಗಂಟೆಯ ಆಕಾರದಲ್ಲಿ ಹೂ ಬಿಡುವ ಒಂದು ಬಳ್ಳಿ: ಮೊಗಲಿಂಗಮರ, ಕಲ್ಗೋಟೆ, ಕಲ್‌ಗಂಟೆ, ಗಂಟೆ (ಮೈಔಗಿ. ೬೮–೧೩೯೬). ೪. ಕಿರುಗೆಜ್ಜೆ. 'ಗಂಟೆಸರ' ಪರಾ. [< ಸಂ. ಘಂಟಾ]

**ಗಂಟೆಕಚೋರ** (ನಾ). ಒಂದು ಬಗೆಯ ಗಿಡ: "ಶಟೀ . . . ಪಲಾಶಃ –ಜ ಗಂಟೀಕಚೋರ" (ಸಿದ್ಧಾಂತಿ. ೧೨೯).
[ಗಂಟೆ$_1$ + ಕಚೋರ]

**ಗಂಟೆಕಾಯಕ** (ನಾ). [ವೀಶೈ] ಒಂದು ಬಗೆಯ ಕಾಯಕ; ಬೆಳಗಿನ ಝಾವದಲ್ಲಿ ಜನರನ್ನು ಏಳಿಸಲು ಗಂಟೆಯನ್ನು ಅಲ್ಲಾಡಿಸಿಕೊಂಡು ಮನೆಮನೆಗೆ ಹೋಗುವ ಜಂಗಮನ ಕಾಯಕ: (ಕ).
[ಗಂಟೆ$_2$ + ಕಾಯಕ]

**ಗಂಟೆಗ** (ನಾ). ಒಂದು ಬಗೆಯ ಹಕ್ಕಿ: ಕಾಗೆ ನವಿಲಿಬ್ಬಾಯ ಗುಬ್ಬಿ ಪಾರಿವ ಕೊಂಚೆ ಗೂಗೆ ಕುಕಿಲಿಱಿವ ಗಂಟೆಗ [ಪಾಠಾಂ. ಕಂಟಕ, ಗಂಟಿಗ] ಕಿಱುಬ ಗೊರವ ಗಿಳಿ (ಸೋಮಚ. ೩–೯); (ಹಚಕಾ. ೫–೪೩ ನೋ). [?]

**ಗಂಟೆಚೋಡಿ** 'ಗಂಟಚವುಡಿ' ನೋ.

**ಗಂಟೆಬಟ್ಟಲು** (ನಾ). [ವೀಶೈ] ಮದುವೆ ಮೊದಲಾದ ಮಂಗಳಕಾರ್ಯಗಳಲ್ಲಿ ಬಳಸುವ ಹಿತ್ತಾಳೆಯ ದೊಡ್ಡ ಉದ್ಧರಣೆಯಾಕಾರದ, ಸರಪಣಿ ಮತ್ತು ಗಂಟೆಯನ್ನೊಳಗೊಂಡ, ಒಂದು ವಸ್ತು: ಮೆರವಣಿಗೆಯಲ್ಲಿ ಗಂಟೆಬಟ್ಟಲು ಹಿಡಿದುಕೊಂಡು ಹೊರಟರು (ರೂಢಿ). [ಗಂಟೆ$_2$ + ಬಟ್ಟಲು (< ಬಟ್ಟಲ್)]

**ಗಂಟೆಮುಸ್ತೆ** (ನಾ). ಒಂದು ಬಗೆಯ ಗಡ್ಡೆ; ಕೊಡನಾರಿ ಗೆಡ್ಡೆ: ಚೂಡಾಲಾ . . . ಒಂದು ಗಡ್ಡೆ ವಳಗೆ ಅನೇಕ ಮೋತೆಗಳುಳ್ಳ ಗಂಟೆಮುಸ್ತೆಗಳು (ಸಿದ್ಧಾಂತಿ. ೧೩೧). [ಗಂಟೆ$_1$ + ಮುಸ್ತೆ]

**ಗಂಟೆಸರ** (ನಾ). ಕಿರುಗೆಜ್ಜೆಗಳಿಂದ ಮಾಡಿದ ಸರ: ಉತ್ತಮ ಮಿಸುನಿಯ ಗಂಟೆಸರಗಳಿಂದ ಮತ್ತೇಭಯಾನೆಯೊಪ್ಪಿದಳು (ಕಂನವಿ. ೯–೭೦). [ಗಂಟೆ$_2$ + ಸರ$_6$]

**ಗಂಟೊಡೆ** (ಕ್ರಿ). ೧. ಗೆಣ್ಣು ಒಡೆ; ಗಂಟನಲ್ಲಿ ಮೊಳಕೆ ತೋರು; ಕುಡಿಯೊಡೆ; ಚಿಗುರು: ಮುಗುಳ ತೊಡಂಬೆ ಗಂಟೊಡೆಯೆ ಮೊಲ್ಲೆಗೆ ಬೆಳ್ಸುಱಿ ಪುಟ್ಟೆ (ಪಂರಾಮಾ. ೭–೧೩೯); ನೀರಸತ್ವಂ ಕಿಡೆ ನುಣ್ಪಿನಿಂ ಸೊಗಸಿನಿಂದೆಲೆ ಗಂಟೊಡೆದೆತ್ತಿದತ್ತು ಚೂತಾಂಕುರಂ (ಜಗವಿ. ೧೪–೨೨); ವನಮಲ್ಲಿಗೆ ಗಂಟೊಡೆದುದು (ರಾಮಾಶ್ವ. ೨–೨೫). ೨. "ಬಿಚ್ಚು, ಅರಳು, ವಿಕಸಿಸು" (ಪ್ರಭಣ್ಣ). [ಗಂಟು + ಒಡೆ$_1$]

**ಗಂಡ$_1$** (ನಾ). ೧. ಗಂಡುತನವನ್ನು ಉಳ್ಳವನು; ಶೂರ; ವೀರ: ಆನೆಯಂ ತಂದಂದು ಗಂಡರ್ ನಿನ್ನನ್ನರೀ ಭುವನದೊಳಾರುಮಿಲ್ಲ (ವಡ್ಡಾರಾ. ೭೪–೨೭); ವನಧಿ ಪರೀತ ಭೂತಳದೊಳಾತನೆ ಸೋಲದ ಗಂಡನೆಂಬ ಪೆಂಪಿನ ಪೆಸರಂ ನಿಮಿರ್ಚಿದುದು (ಪಂಪಭಾ. ೧–೨೬); ಜನಿಸಲು ಬೇಡ ಗಂಡರು ಭೀಮ ಸನ್ನಿಭರು (ಕುವ್ಯಾಉ. ೩–೬೦); ಗಂಡರ ಗಂಡನುರ್ಕುವರ ಮಕ್ಕಳ ಗಂಡ (ಚಿಕವಿ. ೫–೭೨). ೨. ಪತಿ; ಕಾಂತ; ಒಡೆಯ: "ಕಾಂತಃ . . . ಪ್ರಾಣಾಧಿನಾಥಃ, ಅನುಕಃ –ಈ ೧೪ ಗಂಡಂ" (ಹಲಾಯು. ೮೨–೧೪); ಸೆಟ್ಟಿತ್ತಿಯ ಮಗಳ ಗಣ್ಡ (ಎಕ. II, ೩೯೪–೮; 884); ಮಕ್ಕಳಂ ಪಡೆವೆನೆಂದು ಮರ್ದಂ ಕುಡಿದ ಮಱು ದಿವಸಕ್ಕೆ ಗಂಡಂ ಸತ್ತನೆಂಬಂತೆ (ಧರ್ಮಾಮೃ. ೨–೬೬); ಗಂಡ ಹೆಂಡಿರ ನತ್ಯುಗ್ರದಿ ಶಿಕ್ಷಿಸಲ್ (ಸೋಮೇಶ. ೨೯); ಮೊದಲಾಣ್ಮನೊಲ್ಲೆಂದೊರ್ವ ಬಲವಂತನಂ ಬಯಸಿ ಬಾಳ್ವೊಗಲ್ ಬಡಿವ ಗಂಡಂ ದೊರಕಿದಂತೆ (ಚೆಬಪು. ೩೩–೭); ಹೆಣ್ಣಿಗೆ ಆದನು ಗಂಡಸು ಗಂಡನು ಗಂಡಿಗೆ ಸಾಲವೆ ಗಂಡ (ಇಂಚಾಪ. ೧೭೧–೪೧). ೩. ಗಂಡಸು; ಪುರುಷ: ಗಂಡರಿಲ್ಲದ ಮನೆಯ ಹೊಗೆವು (ಕೌಶಿರಾ. ೬–೩೧). ೪. ಗಂಡುತನ; ಪರಾಕ್ರಮ; ಶೌರ್ಯ. 'ಅಱಿಗಂಡ' ಪರಾ.

**ಗಂಡಕಾಳಾನಳ** = ಶೂರರಿಗೆ ಪ್ರಳಯಾಗ್ನಿಯಂತಿರುವವನು; ಒಂದು ಬಿರುದು: ಪ್ರತ್ಯಕ್ಷ ವಿಕ್ರಮಾದಿತ್ಯಂ ಗಣ್ಡಕಾಳಾನಳಂ ಕೊಂಕಣದಲ್ಲಳಂ (ಕಇ. IV, ೪೧–೫; 11ನೆಯ ಶತ). **ಗಂಡಗಳಗತ್ತರಿ** = ಶೂರರ ಕೊರಳಿಗೆ ಕತ್ತರಿಯಂತಿರುವವನು; ಒಂದು ಬಿರುದು: ಕಡೆಕಳಕಿಕ್ಕಿ ಗಂಡಗಳಗತ್ತರಿ ಬಾಳಿಮ ಮಂಡಳೀಕ (ಎಕ. VIII, ಸಾಗರ. ೧೫–೩೪; 1218).

**ಗಂಡಗೋವ** = ಶೂರರಿಗೆ ಆಶ್ರಯದಾತನಾಗಿರುವವನು ; ಒಂದು ಬಿರುದು : ಶ್ರೀಮತು ಬೋದಯ್ಯ ಗಣ್ಡಗೋವ ಪುಸಿವರ ಶೂಲ (ಎಕ. VIII, ಸೊರಬ. ೪೧೩–೯ ; 986). **ಗಂಡಜೇಂಕಾಱ** = ಒಂದು ಬಿರುದು : ಜಯಸಿಂಘ ನ್ರಿಪನ ಪೆಸರಂ ಕೀರ್ತಿದ್ವಾತಿ ಪಾಳಿಸಿ ಕುಡೆ ನೆಗಟ್ದ ಗಣ್ಡಜೇಂಕಾಱನಿವಂ (ಸೌಇಇ. XI–i, ೮೬–೨೮ ; 1050). **ಗಂಡತಳಪ್ರಹಾರಿ** = ಶೂರರಿಗೆ ಪ್ರಹಾರ ಮಾಡುವವನು ; ಒಂದು ಬಿರುದು : ರಟ್ಟಮಾರ್ತ್ತಣ್ಡಂ ದಳಮುಟ್ಟಿಗಣ್ಡಂ ಗಣ್ಡತಳ ಪ್ರಹಾರಿ ಮಣ್ಡಳಗಾವಂ ಕಲಿಗಳಾದಿತ್ಯಂ (ಸೌಇಇ. XI–i, ೭೪–೧೧ ; 1041). **ಗಂಡತ್ರಿಣೇತ್ರ** = ಶೂರರಲ್ಲಿ ಮುಕ್ಕಣ್ಣನಂತಿರುವವನು ; ಒಂದು ಬಿರುದು : ಜಯಲಕ್ಷ್ಮೀ ಸಮಾಲಿಂಗಿತ ವಕ್ಷಸ್ಥಲ ಗಂಡ ತ್ರಿಣೇತ್ರ ಶ್ರೀಬಯ್ಯುಂಬ ಮಹಾರಾಜರ್ (ಎಇ. XXIV, ೨೬–೩ ; 885). **ಗಂಡಪ್ರಚಂಡ**=ಶೂರರಲ್ಲಿ ಪ್ರಚಂಡನಾದವನು ; ಒಂದು ಬಿರುದು : ನುಡಿದಂತೆ ಗಣ್ಡಂ ಗಣ್ಡಪ್ರಚಣ್ಡಂ ತೊಡರೆ ಬಲುಗಣ್ಡಂ (ಎಕ. XI, ಚಿತ್ರದು. ೪೭–೧೫ ; 1067). **ಗಂಡಬಂಗಾಱ** = ಶೂರರಲ್ಲಿ ಶ್ರೇಷ್ಠ ನಾದವನು ; ಒಂದು ಬಿರುದು : ಗಂಡರೊಳ್ ಗಂಡ(ಂ) ಗಂಡ ಬಂಗಾಱಂ (ಇಆ. V, ೧೫–೪ ; 1019). **ಗಂಡಬಂದಿಕಾಱ** = ಶೂರರನ್ನು ಬಂಧಿಸುವವನು ; ಒಂದು ಬಿರುದು : ಗಣ್ಡಬನ್ದಿಕಾಱ ದೇವನೆ ಶ್ರೀಮ[ಚ್ಚಾಳು]ಕ್ಯವಂಸ ಶಿಖಾಮಣಿ (ಸೌಇಇ. XX, ೨೧–೩೮ ; 1019). **ಗಂಡಭೈರವ** = ಶೂರರಿಗೆ ಭೈರವನಂತಿರುವವನು ; ಒಂದು ಬಿರುದು : ಅಂ[ಕಕಾಱಂ]ಗಣ್ಡಭೈರವನಾಮಾ[ದಿ] (ಸೌಇಇ. XX, ೨೬–೩೬ ; 1040). **ಗಂಡರಗಂಡ** = ಶೂರರ ಶೂರ ; ಒಂದು ಬಿರುದು : ಗಣ್ಡರಗಣ್ಡಂ ವೈರಿಭೇರುಣ್ಡಂ (ಸೌಇಇ. XX, ೧೮–೯ ; 980) ; ಗಣ್ಡರಗಣ್ಡ ನ್ಸೈಚನವನಿಂ ಕಿಱಿಯಂ ವಿಭು (ಕಇಆ. ೭–೩–೨೫೦ ; 1062). **ಗಂಡರಗೂಳಿ** = ಶೂರರಿಗೆ ಗೂಳಿಯಂತಿರುವವನು ; ಒಂದು ಬಿರುದು : ಧುರದೊಳ್ಗಂಡರಗೂಳಿ ವೈರಿಗಜ ಸಿಂಹಂ (ಎಕ. XI, ದಾವಣ. ೨೯–೨೭; 1424) ; ಚಂಡಿಮಶಾಲಿಬಾಹುಬಲದಂಡಿತವೈರಿಗಣೋ ಗಂಡರ ಗೂಳಿ (ಎಕ. XII, ತುಮಕೂ. ೧–೯೦ ; 1571). **ಗಂಡರಗೋವ** = ಗಂಡ ಗೋವ : ಸತ್ಯರತ್ನಾಕರಂ ನಡೆಗೋಟಿಮಲ್ಲಂ ಗ(ಂ)ಣ್ಡರಗೋವಂ (ಸೌಇಇ. XI–i, ೫೭–೨೧ ; 1019) ; ತ್ರಿಭುವನಿ ಗಂಡರಗೋವ ಸಾಮಂತ ನಾರಾಯಣ (ಕಇ. I, ೪೬–೭ ; 1423). **ಗಂಡರತೀರ್ಥ** = ಶೂರರಿಗೆ ತೀರ್ಥಪ್ರಾಯನಾದವನು; ಒಂದು ಬಿರುದು : ಪರಿಪಂತಿಪಾರ್ತ್ಥನುಂ ಗಂಡರತೀರ್ತ್ಥನುಂ (ಎಕ. VI, ಕಡೂರು. ೧೫೩–೪೪ ; 1190). **ಗಂಡರ ದಾವಣಿ, ಗಂಡರ ಡಾವಣಿ** = ಶೂರರಿಗೆ ದಾವಣಿ ಆಯುಧ ದಂತಿರುವವನು ; ಒಂದು ಬಿರುದು : ಸ್ವಸ್ತಿ ಶ್ರೀಮತು ಕಾದಂಬ ಚಕ್ರವರ್ತ್ತಿ ಕಲಿಗಳಂಕುಸ ಗಂಡರದಾವಣಿ (ಸೌಇಇ. XX, ೨೪೯–೧ ; 1081) ; ಮಾದಯ್ಯನ ಅಳಿಯ ಗಂಡರಡಾವಣಿ ಸೂರೆಯನಾಯಕಂ (ಮೈಆರಿ.೧೯೨೭,೧೩೧–೪; 11ನೆಯ ಶತ) **ಗಂಡರಾಚಾರ್ಯ** = ಶೂರರಲ್ಲಿ ಆಚಾರ್ಯನಂತಿರುವವನು ; ಒಂದು ಬಿರುದು : ಮುಳಿವರಾದಿತ್ಯಂ ಮನ್ನೆಯವಲ್ಲಭಂ ಗಣ್ಡರಾಚಾರ್ಯಂ (ಸೌಇಇ. XX, ೨೧–೬೯ ; 1019). **ಗಂಡರಾಭರಣ** = ಶೂರರಿಗೆ ಆಭರಣದಂತಿರುವವನು ; ಒಂದು ಬಿರುದು : ವಿಜಯರಾಯ ವಿಜಯ ಸಂಹರಣಂ ಗಣ್ಡರಾಭರಣಂ (ಕಇಆ. ೨೨–೭–೨೦; 1083). **ಗಂಡರೊಳ್‍ಗಂಡ** = ಗಂಡರಗಂಡ : ರಾಯಗಜ ಗಂಡರೊಳ್[ಗಣ್ಡಂ]ಗಣ್ಡ ಮಾರ್ತ್ತಣ್ಡಂ (ಎಇ. XIII, ೩೩೦–೨೦ ; 929) ; ಚಾಳುಕ್ಯಾಭರಣಂ ಗಣ್ಡರೊಳ್ಗಣ್ಡಂ (ಸೌಇಇ. XX, ೨೧–೬ ; 1019).

[ದೇ. ‖ ತಮಿ. ಮಲ. ಗಣ್ಡ; ಕೊಡ. ಗಂಡೆ; ತುಳು. ತೆಲು. ಗಂಡ]

**ಗಂಡ$_{2}$** (ನಾ). ಖಂಡ ; ಚೂರು. 'ಗಂಡಗೊಡಲಿ' ಪರಾ.

[< ಸಂ. ಖಂಡ]

**ಗಂಡ$_{3}$** (ನಾ). ೧. ಕಪೋಲ ; ಕೆನ್ನೆ ; ಗಲ್ಲ : "ಗಂಡಮೆನೆ ಗಲ್ಲಮೆನಿಕ್ಕು" (ಮಂಗರಾ. ೯೪–೪) ; ಗಂಡಮನೋರಂತಿರೆ ಪೊಯ್ಯೆ ಕುಂಡಲಯುಗಂ (ಕಾವ್ಯಸಾ. ೬೫೬); ದಾಡೆಯ ಹಲ್ಲುಗಳ ಮೇಲಣ ಹೊಱಗು ಗಂಡವೆನಿಸಿ ಕೊಂಬುವು (ಅಶ್ವಟೀ. ೫೮–೬). ೨. ಆನೆಯ ಕುಂಭಸ್ಥಳ: "ಕರಟಃ, ಕಟಃ, ಗಂಡಃ –ಈ ೩ ಆನೆಯ ಗಂಡಸ್ಥಳಂ" (ಹಲಾಯು. ೩೬–೬೩) ; "ಗಂಡಮೆನಲು ಗಂಡಸ್ಥಳಂ" (ಮಂಗರಾ. ೪೬–೧) ; ಮಾದ್ಯದ್ಗಜಗಂಡ ಭಿತ್ತಿಕಷಣಪ್ರೋದ್ಭೇದದಿಂ ಸಾದ್ರ್ರ ಬಂಧಿದಿರೊಳ್ ಕೂಡುವುದು (ಪಂಪಭಾ. ೪–೨೨) ; ಬದ್ಧಫಣಿಯಂದಮರರ್ಕಡೆಯಲ್ಕೆ ಕಟ್ಟಿದಗ್ಗದ ಫಣಿ ಗಂಡಮಂಡಳವುದಾಂಬುಗೆ ಪಾರ್ದಱಪುನ್ಮದಾಳಿ (ರಾಜಶೇ.೧–೭). ೩. ಕುರು ; ಬೊಬ್ಬೆ ; ಗುಳ್ಳೆ : ಅಂಗ ಸೋಂಕೆಂಬುದು ಅಧಮವು ಉರಸೆಜ್ಜೆಯೆಂಬುದು ಎದೆಯ ಗಂಡ ಕಕ್ಷವೆಂಬುದು ಕವುಚಿನ ತವದುಮನೆ (ಅವಚಂ. ೧೮೭–೮೪೨). ೪. ಗ್ರಹಗಳ ಪ್ರಭಾವದಿಂದ ಉಂಟಾಗುವ ರೋಗರುಜಿನ ; ಆಪತ್ತು ; ಅಪಾಯ : ಊರ್ಧ್ವರೋಮವಾದರೆ ಆಯುಧಗಂಡದಿಂದ ಪ್ರಾಣ ಬಿಡುವನು (ಸೌಗಂಧಿ. ೬೬೧–೧) ; ಅವರಿಗೆ ಬಂದ ಗಂಡವು ತೊಲಗುವಂತೆ ತಾನು ಮಾಡಿದ ಸಂಚನ್ನು ವಿವರಿಸಿದನು (ಭೀಷ್ಮಚ.೭೬); ಬಾಲಕನಿಗೆ ಬಂದ ಗಂಡವು ತೊಲಗಿತು (ಆರ್ಯಕೀ.೩೮). ೫. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಹತ್ತನೆಯದು : ವಿಷ್ಕಂಭ . . . ಗಂಡ . . . ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳು (ವಿವೇಕ. ೩೨೦) ; ಯೋಗಗಳತಿಶಯನರಿಯ್ಯೆಯ್ಯ ಪೇಳುವೆ ವ್ಯತಿಯು ಧೃತಿವಿಷ್ಕಂಬ ಶೂಲವು ಗಂಡ (ಗಗತಾ. ೪–೬೯). [ಸಂ.]

**ಗಂಡಕ** (ನಾ). ೧. ಖಡ್ಗಮೃಗ ; ಘೇಂಡಾಮೃಗ : "ಖಡ್ಗೀ, ಗಂಡಕಃ –ಈ ೨ ಖಡ್ಗಮೃಗಂ" (ಹಲಾಯು. ೩೮–೭೪) ; ದಾನಧಾರೆಯಂತೆ ಪುಂಡರೀಕ ಗಂಡಕ ಮಂಡಿತಮುಂ (ರಾಜಶೇ.೫–೭೪ ವ); ಚಮರೀಮೃಗ ಗಂಡಕ ಮುಖ್ಯಮಾದ ಭೀಕರಮೃಗಯೂಥ ನಿಸ್ವನ (ಚಿಕ್ಕದೇ. ೨೨) ; ಎಲ್ಲರೂ ನೋಡಿ ಮತ್ತೆ ಹತಾಶರಾದರು. ಯಾಕೆಂದರೆ ಅದು ಸಿಂಹ ವಾಗಿರದೆ ಗಂಡಕವಾಗಿತ್ತು (ಮೇದಿಮ. ೧೪೫). ೨. ಮಂತ್ರಿನರಕಗಳಲ್ಲಿ ಒಂದು : ಜಳೂಕ . . . ಗಂಡಕವೆಂಬೈದು ಮಂತ್ರಿನರಕಂಗಳ್ (ವಿವೇಕ. ೧೮೦). ೩. ಒಂದು ಬಗೆಯ ಆಭರಣ, —ಒಡವೆ. 'ಗಂಡಕಾಭರಣ' ಪರಾ. ೪. ಒಂದು ತರದ ಮಾನು : (ಸ್ಯಾಂಡರ್). [ಸಂ.]

**ಗಂಡಕಾಭರಣ** (ನಾ). ೧. = ಗಂಡಕ ೩. ೨. ಗಂಡಕಮೃಗಗಳನ್ನು ಹೊಂದಿರುವುದು ; ಘೇಂಡಾಮೃಗಗಳನ್ನು ಪಡೆದಿರುವುದು. ೧, ೨: ಬಾಲಗಳದಂತೆ ವ್ಯಾಘ್ರನಖಮಂಡಿತಮುಂ ಗಂಡಕಾಭರಣಮುಂ (ಕಾದಂಪೂ. ೧೦೦). [ಗಂಡಕ + ಆಭರಣ]

**ಗಂಡಕಾರಿ** (ನಾ). ಒಂದು ಗಿಡದ ಹೆಸರು ; ಮುಟ್ಟಲಮುರುಕ ; ಮುಟ್ಟಿದರೆ ಮುನಿ : "ಮುಟ್ಟಲುಮುರಿಕೆಯ ಗಿಡ" (ಗಂಗಾಮ.೧೦೯).

[ಸಂ. ಗಂಡಕಾರೀ]

**ಗಂಡಕಾಲಿ** (ನಾ). = ಗಂಡಕಾರಿ. [ಸಂ.]

**ಗಂಡಕೇಸರ** (ನಾ). ಗಂಡಸ್ಥಳದ ಕೂದಲು ; ಕಪೋಲಕೇಶ : ಅರಸಿಂಗನ ಗಂಡಕೇಸರದ ತೇಜಸ್ವಿತೆಯಿಂದ (ಮಂತ್ರಶ. ೯೧–೨೪).

[ಗಂಡ$_{3}$ + ಕೇಸರ]

**ಗಂಡಕೊಡಲಿ** 'ಗಂಡಗೊಡಲಿ' ನೋ.

**ಗಂಡಕ್ಷರ** (ನಾ). ಮಹಾಪ್ರಾಣಾಕ್ಷರ : (ಳ).

[ಗಂಡು$_{1}$ + ಅಕ್ಷರ]

**ಗಂಡಗಟ್ಟಳೆ** (ನಾ). ವೀರರ ಮಾದರಿ; ವೀರಶಾಸನ (?): ಗಣ್ಡವಾತಿನ ಪೆಂಪಂ ಕಣ್ಣಿಂ ಕೇಳ್ದಿಲ್ಲರುಮ್ಮಣ್ಡಲದೊಳಗೆ ಪೊಗಟ್ಡಪ್ಪರೆಜಿ ಯಮ್ಮ ಗಣ್ಡಗಟ್ಟಳೆಯಾದೊಂ ಭುವನದೊಳ್ (ಸೌಇಇ. XI–i, ೩೧–೧೦; 966). [ಗಂಡ$_1$ + ಕಟ್ಟಳೆ$_1$]

**ಗಂಡಗತ್ತರಿ** (ನಾ). ಕುತ್ತಿಗೆಯನ್ನು ಕತ್ತರಿಸಲು ಬಳಸುವ ಅರ್ಧ ಚಂದ್ರಾಕೃತಿಯ ಆಯುಧ (?). ಕರಗಸದ ಗಂಡಗತ್ತರಿಯ ಶೂಲದ ಕಾಲತೊಡರ (ಗಿರಿಕ. ೬–೫೫ ವ); ಸೂಲಸೂಲದಿಂ ಗಿಲಿತದ ಗಂಡ ಗತ್ತರಿಯ (ಕಬ್ಬಿಕಾ. ೨೬೨); ಗಂಡಗತ್ತರಿಯ ನಾಜಂ ಶಿವನ ನಿಂದಿಸಲ್ (ಚೆಬಪು. ೫೬–೫). [ಗಂಡ$_3$ + ಕತ್ತರಿ$_1$]

**ಗಂಡಗತ್ತಿ** (ನಾ). ೧. = ಗಂಡಗತ್ತರಿ: ಕೊಂತಗಾಜರ ತಿಂತಿಣಿಯ ನಡುವೆ ಪಿಡಿದ ವಜ್ರಮುಷ್ಟಿಯ ಮಸೆದಿಟ್ಟಯೆಸೆವ ಗಂಡಗತ್ತಿಯ (ಗಿರಿಕ. ೬–೫೫ ವ). ೨. "ಗಂಡುಗೊಡಲಿ" (ಪ್ರಭಣ್ಣ). [ಗಂಡ$_2$ + ಕತ್ತಿ]

**ಗಂಡಗರಿಗೆ** (ನಾ). ಒಂದು ಬಗೆಯ ಮರ: ಮರಗಳು: . . . ಕವಲು, ಗಂಡಗರಿಗೆ, ದಾಲುಮರ (ನಮ್ಮಸು. ೨೩೬). [ಗಂಡ$_2$ + ಗರಿಗೆ$_0$]

**ಗಂಡಗರ್ವ** (ನಾ). ಶೂರನೆಂಬ ಗರ್ವ; ಪರಾಕ್ರಮಿಯ ಸೊಕ್ಕು: ಕೃಷ್ಣೆಯ ಕಚಪ್ರಾರಂಭಮಂ ಬಾಹುವಿಕ್ರಮಿ ದುಶ್ಶಾಸನ ನಿನ್ನ ಮುಂದೆ ತೆಗೆವಂದೆಲ್ಲಿರ್ದೆಯಿಾ ಗಂಡಗರ್ವಮುಮಂದೆಲ್ಲಿಗೆ ಪೋಯ್ತು (ಗದಾಯು. ೭–೩೨); ಎಣ್ದೆಸೆಯ ಗಣ್ಡರ ಮೀಸೆಯ ಮೇಲೆ ಮೇಲೆ ವರ್ತ್ತಿಸುವುದು ಗಣ್ಡಗರ್ವ್ವದ ಜಸಂ (ಎಕ. VII, ಶಿವಮೊ. ೪–೮೩; 1122); ಈ ಗಂಡಗರ್ವವೂ ಅಂದೆಲ್ಲಿ ಹೋಗಿತ್ತು (ಭಾಮಣಿ. ೬೧). [ಗಂಡ$_1$ + ಗರ್ವ]

**ಗಂಡಗಲಿ** (ನಾ). ಮಹಾಪರಾಕ್ರಮಿ: ಗಂಡಗಲಿ, ಗಂಡಗರ್ವ (ಶಬ್ದಾನು. ೨೯೮ ಪ್ರಯೋ). [ಗಂಡ$_1$ + ಕಲಿ$_2$]

**ಗಂಡಗಾಡಿ** (ನಾ). ೧. ಗಂಡಸುತನದ ಸೊಬಗು: ಸಹಜ ಮನೋಜನ ರೂಪಿಂಗಂ ಸುರತಮಕರಧ್ವಜನ ಸೌಂದರ್ಯಕ್ಕಂ ಗಂಧೇಭವಿದ್ಯಾಧರನ ಗಂಡಗಾಡಿಗಂ ತಾಮೆ ಸೋಲ್ತು (ಪಂಪಭಾ. ೭–೯೧ ವ); ಮನುಜೇಂದ್ರ ಚಂದ್ರನ ಗಂಡಗಾಡಿಯಂ ನೋಡಿ (ಮಲ್ಲಿಪು. ೩–೩೨). ೨. ಪರಾಕ್ರಮದ ಸೊಬಗು: ಅತನ ರೂಪಾತನ ನವಲಾವಣ್ಯವಾತನ ಗಂಡಗಾಡಿಯನು ಭೂತಳಪತಿ ಕಂಡು (ಪ್ರಭಂಜ. ೧–೩೨); ಗಂಡಗಾಡಿಗೆ ಸೋಲದ ರಮಣಿ ಯಾರು (ಕಾವ್ಯಸ. ೬೬). ೩. ಗಂಡುಬೀರಿ; "ಪುರುಷ ಸ್ವಭಾವದವಳು" (ಜಾತತಿ. ಟೀಕು): ವಿಷಮಂ ಬರಿ ಗಂಡಗಾಡಿ ದುಃಖದ ಕಣಿಯಕ್ಕುಂ (ಜಾತತಿ. ೨೨–೨). [ಗಂಡ$_1$ + ಗಾಡಿ$_1$]

**ಗಂಡಗಾಹಿ** (ನಾ). ಭಯಂಕರ ಸರ್ಪ; ಭೀಕರವಾದ ನಾಗ (?): ಸಿಂಹಸೇನಂ ತನ್ನ ಭಂಡಾರದೊಳ್ ಪುಟ್ಟಿದ ಗಂಡಗಾಹಿ ಕೊಳೆ ಸತ್ತಂ (ಚಾವುಂಪು. ೧೬೩). [ಗಂಡಗ$_0$ + ಅಹಿ]

**ಗಂಡಗುಂಡ** (ನಾ). ಸ್ವೇಚ್ಛೆಯಾಗಿರುವ ವ್ಯಕ್ತಿ (?): ಈಗಿನ ಕುಟುಂಬಗಳಲ್ಲಿ ಕಲಹಗಳು ಹೆಚ್ಚಿ ಹೆಂಡತಿಯು ಬಂದ ಕೂಡಲೆ ಗಂಡನು ಆಕೆಯನ್ನು ಕಟ್ಟಿಕೊಂಡು ಗಂಡಗುಂಡರಾಗಿ ಬೇರೆ ಇರತೊಡಗಿರುವದನ್ನು ಅಲ್ಲಲ್ಲಿ ಕಾಣಬಹುದು (ಕುಟುಂಬ. ೧೫). [?]

**ಗಂಡಗುಣ** (ನಾ). ಪರಾಕ್ರಮ; ಶೌರ್ಯ: ಖರನ ವಿಪತ್ತಿಯೊಳ್ ವಿಕಲನಾದನೆ ಗೆತ್ತಿನಿತೇಕೆ ಪೆಂಡಿರಂತಿರೆ ಬಹು ಶೋಕಮಾ ತೆಜದಿನಿ ರ್ದೊಡೆ ಗಂಡಗುಣಕ್ಕೆ ನಾಡೆಯುಂ ಪರಿಭವಮೆಂದಳ್ (ಪಂರಾಮಾ. ೯–೧೫೬); ಭಂಡಣದೊಳ್ ಜಯಾಪಜಯವೆಂಬುದು ಸಿದ್ಧಮದೊಂದು ಕುಂದೆ ಪೇಟ್ ಗಂಡಗುಣಂಗಳುಳ್ಳವರ್ಗೆ (ದಶಕು. ೨–೩೪). [ಗಂಡ$_1$ + ಗುಣ]

**ಗಂಡಗೂಸು** 'ಗಂಡುಗೂಸು' ನೋ.

**ಗಂಡಗೊಡಲಿ**, ಗಂಡಕೊಡಲಿ, ಗಂಡುಕೊಡಲಿ, ಗಂಡುಗೊಡಲಿ (ನಾ). ಅರ್ಧಚಂದ್ರಾಕೃತಿಯ ಕೊಡಲಿ: "ಕ್ಷುಠಾರಃ, ಪರಶುಃ – ೨ ಗಂಡಗೊಡಲಿ" (ಸಿದ್ಧಾಂತಿ. ೨೨೮). **ಗಂಡಕೊಡಲಿ**: (೬). **ಗಂಡುಕೊಡಲಿ**: ಗಂಡುಕೊಡಲಿ, ಭರ್ಜಿ, ಗುರಾಣಿ ಎಲ್ಲವನ್ನೂ ಧರಿಸಿದ್ದೆ (ಆರ್ಯಕ. ೫೨). **ಗಂಡುಗೊಡಲಿ**: ಕಟಿಯಲ್ಲಿ ಕತ್ತಿ, ಗಂಡಕೊಡಲಿ ನೇತಿವೆ (ಅಳಾಕ. ೧೨೫); ದಿಕ್ಕು ತಪ್ಪಿದ ಜನತೆ ಗಂಡು ಗೊಡಲಿಯನ್ನೆತ್ತಿ ರಕ್ತಪಾತಮಾಡುವುದು ಅಪೇಕ್ಷಣೀಯ (ದಿವಾಬ. V, ಅರಿಕೆ); ಇದನ್ನು ಕೊನೆಗಾಣಿಸಲು . . . ಗಂಡುಗೊಡಲಿಗಳನ್ನು ಬೀಸಬೇಕೋ ತಿಳಿಯದಾಗಿದೆ (ಹೇಮಕೂ. ೩ ಮುನ್ನುಡಿ). [ಗಂಡ$_2$ + ಕೊಡಲಿ]

**ಗಂಡಚಿಹ್ನ** (ನಾ). ಪರಾಕ್ರಮದ ಗುರುತು, —ಚಿಹ್ನೆ: ಶ್ರೀಮನ್ಮಹೀ ಶೂರ ಮಹಾರಾಜ ಮಹಾಸ್ವಾಮಿಯವರ ಉದ್ದಂಡ ಧ್ವಜದ ಗಂಡ ಚಿಹ್ನವದು (ಮಂತ್ರಶ. ೧೧೯–೨೬). [ಗಂಡ$_1$ + ಚಿಹ್ನ]

**ಗಂಡಡಿಕೆ** (ನಾ). ಒರಟಾದ ಅಡಿಕೆ; ಗೋಟಡಕೆ: ಚೀಲದಿಂದ ಕೈಯಂದಾಜಿನ ಮೇಲೆ ಗಂಡಡಿಕೆಯೊಂದನ್ನು ಆಯ್ದು ತೆಗೆದು (ಮಲೆಮ. ೪೦). [ಗಂಡು$_1$ + ಅಡಿಕೆ (< ಅಡಕೆ$_1$)]

**ಗಂಡತನ** (ನಾ). ಪೌರುಷ; ಪರಾಕ್ರಮ: ಕಂಡ ಸೌಂದರನೃಪನಾ ಕಲಿಕಾಮನು ಗಂಡತನದ ಪಟುಕರವನು ಕೊಂಡಾಡುತ (ತ್ರಿಭುತಿ. ೧೮–೩೯). 'ಗಂಡುತನ' ಪರಾ. [ಗಂಡ$_1$ + –ತನ]

**ಗಂಡದೀಪ** (ನಾ). ಆಪತ್ತಿನ ಪರಿಹಾರಕ್ಕಾಗಿ ದೇವಸ್ಥಾನದಲ್ಲಿ ಮಾಡುವ ಒಂದು ಸೇವೆ: "ಹರಕೆಯಂತೆ ದೇವಸ್ಥಾನವನ್ನು ಪ್ರದಕ್ಷಿಣೆ ಮಾಡುವುದಕ್ಕಾಗಿ ತಲೆಯ ಮೇಲಿಟ್ಟು ಕೊಳ್ಳುವ ಹೊತ್ತಿಸಿದ ದೀಪ" (ಅನಂನಾ). [ಗಂಡ$_2$ + ದೀಪ]

**ಗಂಡದುಪ್ಪುಳು** (ನಾ). ಗಂಡಸ್ಥಳದ ಕೂದಲು; ಕಪೋಲಕೇಶ: ಈ ಮೇಗಯ್ಯ ಗಂಡದುಪ್ಪುಳೂ ಕರ್ಗೆಂಪಿನ ಬೀರವಣ್ಣ (ಮಂತ್ರಶ. ೯೨–೧೪). [ಗಂಡ$_2$ + ತುಪ್ಪುಳು (< ತುಪ್ಪುೞ್)]

**ಗಂಡಪೆಂಡರ** 'ಗಂಡಪೆಂಡಾರ' ನೋ.

**ಗಂಡಪೆಂಡಾರ**, ಗಂಡಪೆಂಡರ, ಗಂಡಪೆಂಡೇರ (ನಾ). ೧. ಶ್ರೇಷ್ಠ ವೀರರಿಗೆ ಶೌರ್ಯಸೂಚಕವಾಗಿ ಕೊಡುವ ಬಿರುದು; ಅಂತಹ ಬಿರುದನ್ನು ಸೂಚಿಸುವ ಎಡಗಾಲಿನ ಆಭರಣ: ಮಾಸೆಗಳಿಂ ಹುರಿ ಗೊಂಡೆ ಗಂಡಪೆಂಡಾರಮನಾಳ್ದ ಸಿಂದಕುಳಮಂಡನನೊಪ್ಪಿಡಿಯಪ್ಪ ಗಂಡರಾರ್ (ಎಇ. XX, ೧೨–೨೪; 1167). ೨. ಶ್ರೇಷ್ಠನಾದವನು; ಹಿರಿಮೆಯುಳ್ಳವನು: ಧೀರೋದಾತ್ತ ವಿರೋಧಿರಾಯ ಬಳವದ್ದಂಡೇಶರೊಳ್ಗಂಡಪೆಂಡಾರ ಕಾವಣದಂಡನಾಥನೆ ವಲಂ ವಿದ್ವಿಷ್ಟ ವಿದ್ರಾವಣಂ (ಎಕ. XI, ದಾವಣ. ೪೪–೩೪; 1180); ಭೂಚಕ್ರ ದೊಳ್ಗಣ್ಡಪೆಣ್ಡಾರಂ ಯಾದವ ಮಂತ್ರಿ ಸೋಮನಳಿಯ ಶ್ರೀಕೇತ ದಣ್ಡಾಧಿಪಂ (ಎಕ. III, ಮಂಡ್ಯ. ೩೦–೨೩; 1261). **ಗಂಡಪೆಂಡರ**: ೧. ಬಿರುದಿನ ಅಂಕಮಾಲೆ ತೊಡರಿಕ್ಕಿದ ಕಾಲೊಳು ಗಂಡಪೆಂಡರಂ (ಸೌಇಇ. XI–i, ೨೭೬–೩೨; 1183). **ಗಂಡಪೆಂಡೇರ**: ೧. ಎಡಗಾಲಿಗೆ 'ಗಂಡಪೆಂಡೇರ'ವನ್ನು ಕಟ್ಟಿಕೊಳ್ಳುತ್ತಿದ್ದನು (ಕಶಾಅ. ೩೦೯); ನವರತ್ನಖಚಿತವಾದ ಗಂಡಪೆಂಡೇರವೆಂಬ ಚಿನ್ನದ ತೋಡವನ್ನು ಕುವರನ ಬಲಗಾಲಿಗೆ ಬಹುಮಾನಿಸಿದರು (ಶಾಂತಲಾ. ೨೦೬).

[ಗಂಡ$_1$ + ಪೆಂಡಾರ. / ತೆಲು. ಗಂಡಪೆಂಡರ, ಗಂಡಪೆಂಡಾರ, ಗಂಡಪೆಂಡೇರ]

**ಗಂಡಪೆಂಡೇರ** 'ಗಂಡಪೆಂಡಾರ' ನೋ.

**ಗಂಡಬೀರಿ** 'ಗಂಡುಬೀರಿ' ನೋ.

**ಗಂಡಭಾಗ** (ನಾ). = ಗಂಡಸ್ಥಳ : ಮುಂದುಗಡೆಯೊಳ್ ಮದ್ದಾನೆಗಳ ಗಂಡಭಾಗಂಗಳಿಂ (ಸೌಗಂಧಿ. ೨೨೩-೯). [ಗಂಡ$_3$ + ಭಾಗ]

**ಗಂಡಭೇರುಂಡ** (ನಾ). ೧. ಎರಡು ತಲೆಗಳಿರುವ ಒಂದು ಕಾಲ್ಪನಿಕ ಪಕ್ಷಿ: "ಕೇಸರಿ ದ್ವಿಷಾರಿಯೆನೆ ಗಂಡಭೇರುಂಡನಕ್ಕು" (ಮಂಗರಾ. ೪೮-೮) ; ಗಂಡಭೇರುಂಡ ಪಕ್ಷಿಯಂತೆ (ಅವರೀ. ೩೮); ಗಂಡಭೇರುಂಡನ ಪಕ್ಷಿಯಂತೆ ಒಡಲೊಂದೇ ಉಭಯಶಿರ ಬೇರಾದ ತೆಱ (ಸರ್ವವ. ೭೬-೪೨೫) ; ಗಂಡಭೇರುಂಡ ಪಕ್ಷಿಯ . . . ಎರಡು ಮುಖಗಳಂತೆ (ಭಾರದ. ೭೦). ೨. ಗಂಡಭೇರುಂಡನಂತಿರುವವನು ; ಒಂದು ಬಿರುದು : ಗಣ್ಡರಗಣ್ಡಂ ಗಣ್ಡಭೇರುಣ್ಡಂ ಮೂಜುರಾಯಾಸ್ಥಾನಂ (ಇಅ. IV, ೧೭೯-೮ ; 1048). [ಗಂಡ$_3$ + ಭೇರುಂಡ]

**ಗಂಡಭೇರುಂಡಾಸನ** (ನಾ). [ಯೋಗ] ಒಂದು ಬಗೆಯ ಆಸನ : ಮುಖ್ಯವಾದ ಕೆಲವು ಆಸನಗಳು . . . ೭೦ ಗಂಡಭೇರುಂಡಾಸನ ೭೧ ತ್ರಿವಿಕ್ರಮಾಸನ (ಭಾರದ. ೧೬೭).
[ಗಂಡಭೇರುಂಡ + ಆಸನ]

**ಗಂಡಮಂಡಲ,** ಗಂಡಮಂಡಳ (ನಾ). ಕೆನ್ನೆಯ ಪ್ರದೇಶ; ಕಪೋಲ : ಮಣಿಕುಂಡಲಾಹತ ಗಂಡಮಂಡಲಮುಂ (ಕಾದಂಪೂ. ೪೨೮) ; ಪಟು ಪಟಹ ಶಂಖರುತಿ ದಿಕ್ತಟಮಂ ತಳ್ಪೊಯ್ಯೆ ಗಂಡಮಂಡಲ ಪಟದೊಳ್ ನಟಿಯಿಸೆ ಮಣಿಕುಂಡಲ ರುಚಿಪಟಲಂ (ಹಂರಾಮಾ. ೨-೧೦) ; ಸಿಂಧೂರ ವಿಲಿಪ್ತ ಮದಸಿಂಧುರ ಗಂಡಮಂಡಲದೊಂದು ಹಾಂಗಿನಿಂ (ರಾಮಾಶ್ವ. ೭೨-೨೧). **ಗಂಡಮಂಡಳ :** ಪೊಳೆವಲರ್ಗಂಗಳಿಂ ಮಿಳಿರ್ವ ಬೆಳ್ಪು ರಸಾತ್ಮಕವಾಗಿ ಗಂಡಮಂಡಳತಳದಿಂದಮುದಿಱಯುತಿರ್ದುದೆನಲ್ (ಕಾದಂಪೂ. ೬೯೯) ; ಮರಕತ ಮಣಿಕುಂಡಳ ರಶ್ಮಿ ರೇಖೆಯಿಂ ಗಂಡ ಮಂಡಳಂ ಶೈವಾಳಂಬೊರೆದ ಕನಕಾಬ್ಜದಳದಂತಿರೆ (ಮಲ್ಲಿಪು. ೮-೧೨೩) ; ಕನಕಕುಂಡಲಗಳು ಗಂಡಮಂಡಳದೊಳು ಹೊಳೆವಂಥ ಕಿವಿಗಳಿಗಿವಳು ತಾಳೆಯ ಗರಿಗಳನಿಟ್ಟುಕೊಂಡಿರುವಳು (ಗಾಥಾಸ. ೪-೯೮).
[ಗಂಡ$_3$ + ಮಂಡಲ]

**ಗಂಡಮಂಡಳ** 'ಗಂಡಮಂಡಲ' ನೋ.

**ಗಂಡಮಚ್ಚರ** (ನಾ). ಪರಾಕ್ರಮಿಯ ಅಸೂಯೆ ; ಶೂರನ ಮಾತ್ಸರ್ಯ : ಕಱುಪೆಟ್ಟ ಪಗೆಯ ಬೇರ್ವರಿದುಱುಮಿಕೆಯ ಪೊದಟ್ಟ ಗಂಡಮಚ್ಚರದೊದವಿಂ (ಪಂಪಭಾ. ೧೨-೧೪೭) ; ಕೌರವಸೇನೆಯಂ ತುಳಿದು ಗೆಲ್ದಾ ಗಣ್ಡರುಂ ಗಂಡಮಚ್ಚರದಿಂ ಶಕ್ತಿಯ ಬೀರರಂ ಪೊಣಱ್ದು ಗೆಲ್ದಾಗಣ್ಡರುಂ (ಸೌಇಅ. XI-i, ೫೨-೧೨ ; 1007) ; ಗಂಡಮಚ್ಚರದಿಂ ದುರ್ಮುಖಿಂ ಪರಾಭವಿಸಿ (ಜಗವಿ. ೯-೬೮ ವ).
[ಗಂಡ$_1$ + ಮಚ್ಚರ]

**ಗಂಡಮಾತು** 'ಗಂಡವಾತು' ನೋ.

**ಗಂಡಮಾಲೆ,** ಗಂಡಾಮಾಲೆ (ನಾ). ೧. ಕತ್ತಿನ ಗ್ರಂಥಿಗಳಿಗೆ ಉಂಟಾಗುವ ಒಂದು ಬಗೆಯ ರೋಗ : ಕರಿಯೊಳ್ಳು ಮಾಂಸಿ ಲಕ್ಕಕ ಮರಪಿಚ್ಚುಗೆಯರ್ಕದುಗ್ಧಮೆಂಬಿವನಿಂಬಾಗರೆದು ತೊಡೆದಂದು ಕರ ಮಚ್ಚರಿಯೆನಿಸುವ ಗಂಡಮಾಲೆಗಳ್ ಪಱಪಡುಗುಂ (ಲೋಕೋಪ. ೯-೯೭) ; ಶುಂಠಿ, ನುಗ್ಗೆಬೇರು, ಕಟ್ಟಿ ಗಂಡಮಾಲೆ ಮಾಣ್ಗುಂ (ವಿವೈವಿ. ೭೫). ೨. "ಹುಟ್ಟುವಾಗ ಮಗುವಿನ ಕೊರಳಿಗೆ ಹೊಕ್ಕಳು ನಾಳ ಸುತ್ತಿಕೊಂಡಿರುವಿಕೆ" (ಅನಂನಾ). **ಗಂಡಾಮಾಲೆ :** ೧. "ಭಲ್ಲಾತಕೀಘೃತ . . . ಸೇವಿಸಲು ಮೂಲವ್ಯಾಧಿ, ಮಂದ್ಯಾಗಿ . . . ಗಂಡೆ, ಗಂಡಾಮಾಲೆ, ಶ್ಲೀಷ್ಮ ಸಹ ಮಾಣ್ಗುಂ (ಸಕವೈ. ೨೯೫).
[ಗಂಡ$_3$ + ಮಾಲೆ]

**ಗಂಡಮೃಗ,** ಗಂಡಾಮೃಗ (ನಾ). = ಗಂಡಕ : "ಖಲಃ – ಗಂಡಮೃಗಂ . . . ಖಲ್ಲಃ = ಗಂಡಮೃಗಂ" (ಕಾಶಕ್ಯ. ೫೦). **ಗಂಡಾಮೃಗ :** "ಗಂಡಕಃ – ಗಂಡಾಮೃಗ" (ಒಷಧಿ. ೪೫). [ಸಂ.]

**ಗಂಡಮೆಣಸು** (ನಾ). ಮೆಣಸಿನಲ್ಲಿ ಒಂದು ಬಗೆ; ಜಮೈಕಾ ಮೆಣಸು : (ಕ). [ಗಂಡ$_1$ + ಮೆಣಸು (< ಮೆಱಸು)]

**ಗಂಡಯೋಗ** (ನಾ). [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಹತ್ತನೆಯದು : ಗಂಡಯೋಗಕ್ಕೆ ಫಲ ೩೧ ಗಳಿಗೆ ಮೇಲೆ ತ್ಯಾಜ್ಯ (ಭಾಸ್ಕರ. ೭೦-೧). [ಗಂಡ$_3$ + ಯೋಗ]

**ಗಂಡಯ್ಯ** (ನಾ). ಒಬ್ಬಾತನ ಹೆಸರು : ಕೊಳಮ್ಮಗಾವುಣ್ಡನುಂ ಗಾವುಣ್ಡ ಗಂಡಯ್ಯನುಂ (ಎಕ. XI, ಹೊಳಲ್ಕೆ. ೩೦-೧೧ ; 964).
[ಗಂಡ$_1$ + ಅಯ್ಯ$_1$]

**ಗಂಡರಾಮಿ** 'ಗಂಡುರಾಮೆ' ನೋ.

**ಗಂಡರಿಸಿನ** (ನಾ). ಅರಿಸಿನದಲ್ಲಿ ಒಂದು ಬಗೆ; ಅರಿಸಿನದ ಗೆಡ್ಡೆ : "ಜರಟ್ಟೀ – ಗಂಡರಿಸಿನ, ಶ್ರೀಗಂಧ" (ಒಷಧಿ. ೭೦) ; ಚಿಕ್ಕಮರುಳು, ಮೈಕೆಬೇರು ಗಂಡರಿಸಿನದಲ್ಲಿ ನಿಂಬೆಕಾಯಿಪ್ಪು ಕುಡಿಯೆ ಬಾಣಂತಿ ರೋಗ . . . ಮಾಣ್ಗುಂ (ವಿವೈವಿ. ೮೧). [ಗಂಡು$_1$ + ಅರಿಸಿನ]

**ಗಂಡಲಚ್ಚಣ** (ನಾ). ಶೌರ್ಯದ ಲಕ್ಷಣ; ಪೌರುಷದ ಗುರುತು : ಜವನುಂ ತಂನಯ ಗಂಡಲಚ್ಚಣಮೆನಿಪ್ಪಾ ಮಿಾಸೆಯಂ ತಿರ್ದ್ದಲಂಜು ವಿನಂ (ಮೈಅರಿ. ೧೯೩೭, ೨೮-೮ ; 1148). [ಗಂಡ$_1$ + ಲಚ್ಚಣ]

**ಗಂಡಲರ್ವಕ್ಕಿ** (ನಾ). ಗಂಡುತುಂಬಿ, —ಭ್ರಮರ : ಗಂಡಲರ್ವಕ್ಕಿ ತಿಱುವಾಂತ ಕುಸುಮ ಕೋದಂಡ (ಮೋಹತ. ೭-೩೨).
[ಗಂಡು$_1$ + ಅಲರ್ವಕ್ಕಿ]

**ಗಂಡವಗ್ರಾಮ** (ನಾ). ಒಂದು ಊರಿನ ಹೆಸರು : ಪುಲಿಗೆಱೆ ಗಣ್ಡವ ಗ್ರಾಮ(ಮಾ) (ಇಅ. VIII, ೨೪೩-೧೮ ; 634). [ಗಂಡವ$_0$ + ಗ್ರಾಮ]

**ಗಂಡವರಿಜು** 'ಗಂಡುವರಿಜು' ನೋ.

**ಗಂಡವಸದನ** (ನಾ). ಗಂಡಸಿನ ಅಲಂಕಾರ ಸಾಮಗ್ರಿ ; ಪುರುಷನ ಅಲಂಕಾರ : ಗಂಡವಸದನ ಗಂಡಗರ್ವ ಗಂಡಗುಣವೆಂದು ಸಲೆ ಸಂತತಂ ತಾನೊಪ್ಪಿ ತೋರ್ಕುಂ (ಕಬ್ಬಿಕೈ. ೫೫) ; ಗಂಡವರಿಜು, ಗಂಡವಸದನ (ಶಮದ. ೨೯೮ ಪ್ರಯೋ). [ಗಂಡ$_1$ + ಪಸದನ]

**ಗಂಡವಳ್ತಿ** (ನಾ). (?) : ವಿವಿಧ ಗಂಧಂಗಳನಾನವಯವದೊಳ್ ಮಾಡುವ ಘಟ್ಟವಳ್ತಿಯೆಂ ದೇವಿಗಂಡವಳ್ತಿ [ಪಾಠಾಂ. ದಂಡವಳ್ತಿ]ಯೆ ನಲ್ಲೆಂ (ಪಂಪಭಾ. ೮-೫೬) ; "ಗಂಡನನ್ನುಳ್ಳವಳು" (ಪಂಪದೀ. ೨೮೫).
[< ಗಂಡ$_1$]

**ಗಂಡವಾತು,** ಗಂಡಮಾತು (ನಾ). ಶೌರ್ಯದ ಮಾತು ; ಪೌರುಷದ ನುಡಿ : ಬರ್ಕೆ ನಿನ್ನ ಪಿರಿಯಣ್ಣನೆ ಪಣ್ಣನೆ ನೋಟ್ಪ ಮಾತನೊಡ್ಡಱಿಯದ ಗಂಡವಾತಂ (ಪಂಪಭಾ. ೩-೧೬) ; ಗಣ್ಡ ನೊಳಾರುಮಪ್ ದೊರೆಯೆ ಭುವನವಳೆಯದೊಳ್ ಗಣ್ಡವಾತಿನ ಪೆಂಪಂ ಕಣ್ಡು ಕೇಳ್ದಲ್ಲರುವ್ಮಣ್ಡಲದೊಳಗೆ ಪೊಗಟ್ಟಪ್ಪರ್ (ಸೌಇಅ. IX-i, ೩೧-೮ ; 966) ; ಬೀರಮನಾಡಿ ಗರ್ಜಿಸುವ ನಿನ್ನೀ ಗಂಡವಾತಿಂಗೆ ಕಾತರನುಂ ಬೆರ್ಚುಗು ಬೆರ್ಚನಪ್ರತಿಮ ಶೌರ್ಯಾಟೋಪಂ (ಪುಷ್ಪಪು. ೭-೬೬). **ಗಂಡಮಾತು :** ಅಣ್ಮಿ ಸತ್ತರ ಗಂಡಮಾತನುಪಮಾತೀತಂ ಮಾಡಿ ಪೊಗಟ್ಟು (ಶಾಂತಿಪು. ೫-೬೪ ವ). [ಗಂಡ$_1$ + ಮಾತು$_1$]

**ಗಂಡಶಿಲಾತಳ** (ನಾ). ದೊಡ್ಡ ಬಂಡೆಗಲ್ಲು : ಗಂಡಶಿಲಾತಳದೊಳ್ ಘನಮಂಡಳವೆಱಗಿರ್ದ ಗೋತ್ರನಗದಂದದಿನಾಖಂಡಳನಿರ್ದಂ ನಿಜಭುಜ ದಂಡಂಗಳೊಳೆಸೆಯೆ ಪೂರ್ಣಕುಂಭಶತಂಗಳ್ (ಮಲ್ಲಿಪು. ೧೨-೧೪೩).
[ಸಂ. ಗಂಡಶಿಲಾತಲ]

**ಗಂಡಶ್ಶೈಲ** (ನಾ). (ಬೆಟ್ಟದಮೇಲಿನಿಂದ) ಜಾರಿ ಕೆಳಕ್ಕೆ ಬಿದ್ದಿರುವ ದೊಡ್ಡ ಬಂಡೆ; ಉರುಳಿಬಿದ್ದ ಬಂಡೆ; ಹೆಬ್ಬಂಡೆ: "ಗಿರಿಯ ಶಿಖರದಿಂದುರುಳ್ವ ಸರಿಗುಂಡುಗಳ್ ಗಂಡಶ್ಶೈಲಂಗಳೆಂದೆನಿಕ್ಕು" (ಮಂಗರಾ. ೨೯-೧); ವಾನರವಿದ್ಯೆಯಂ ತಳೆದು . . . ಕುದುರೆಯಂ ರಥಮುಂ ಪೃಥು ಗಂಡಶ್ಶೈಲ ಸಂತಾನದಿನಿಟ್ಟು (ಪಂರಾಮಾ. ೧೦-೨೧೮); ಪರಿಕಲಿತ ಗಂಡಶ್ಶೈಲೋತ್ಕರ ಮಧ್ಯದೊಳಮರ್ದು ರಂಜಿಪಂಜನಗಿರಿಯಂ ಕರಿಪೋಲ್ತಿರಲೆಸೆದುದು ಬಳಸಿರೆ ಪೋತಕಕಲಾಪಂ (ಪುಷ್ಪಪು. ೫-೮೩); ಪರ್ವತ ಶಿಖರದಿಂದ ಉರುಳುವ ಗಂಡಶ್ಶೈಲದಂತೆ ಬಿದ್ದು (ಗುರುಚ. ೩). [ಸಂ.]

**ಗಂಡಸು,** ಗಂಡುಸು (ನಾ). ೧. ಪುರುಷ: ಮೊಲೆ ಮುಡಿ ಬಂದರೆ ಆ ಪಿಂಡವನು ಹೆಣ್ಣೆಂಬರು ಗಡ್ಡ ಮೀಸೆಗಳು ಬಂದರೆ ಆ ಪಿಂಡವನು ಗಂಡಸೆಂಬರು ಈ ಇಬ್ಬರ ನಡುವೆ ಸುಳಿವ ಆತ್ಮನು ಹೆಣ್ಣು ಅಲ್ಲ ಗಂಡು ಅಲ್ಲ ನೋಡಾ (ಗಣಭಾ. ೧೦೭ ಅಂಬಿವ); ಊರಿನ ಗಂಡಸರೆಲ್ಲಾ ಅಗಲೇ ಆ ತೋಟ್ಟಿಯಲ್ಲಿ ಸೇರಿದ್ದರು (ಕಳಹು. ೯); ಹೆಣ್ಣಿಗೆ ಅದನು ಗಂಡಸು ಗಂಡನು ಗಂಡಿಗೆ ಸಾಲವೆ ಗಂಡ (ಇಂಚಾಪ. ೧೬೧-೪೧). **ಗಂಡುಸು:** ೧. ಗಂಡುಸೆನಿಸಿದ ತನ್ನ ಪ್ರತಿಷ್ಠೆಗೆ ಅದು ಕುಂದೆಂದು ಕಂಡಿತು (ಕುಡಿಕೂ. ೪೪). ೨. ಪೌರುಷವುಳ್ಳವನು; ಶೂರ; ವೀರ: ಮನೆಯ ಪೆಣ್ಣಿಂಗಂಜುವಂ ಗಂಡುಸೇ (ಸೋಮೇಶ. ೭೮); ಗಂಡುಸಾದರೆ ನಿನ್ನ ಬಲಿ ಕೊಡುವೆಯೇನು (ಗಿರಿ. ೩೬-೧೦). 'ಹೆಂಗುಸು' ಪರಾ. [< ಗಂಡುಗೂಸು]

**ಗಂಡಸುತನ**(ನಾ). ಪೌರುಷ; ಶೌರ್ಯ: "ಪೌರುಷಂ . . . ಗಂಡಸುತನ" (ಸಿದ್ಧಾಂಶಿ. ೩೬೭); ಅಹಲ್ಯೆ . . . ಅಂತಹ ಗಂಡಸುತನವನ್ನು ತೋರಲಿಲ್ಲ (ರಂಗವ. ೨೫೭); ರಾಜಕುಮಾರನ ತೇಜಸ್ಸನ್ನೂ ಗಂಡಸುತನವನ್ನೂ ನೋಡಿ (ಮಣಿಸ. ೪೪). [ಗಂಡಸು + -ತನ]

**ಗಂಡಸುತನವೆಱು** (ಕ್ರಿ). ಶೌರ್ಯವನ್ನು ಪಡೆ; ಪರಾಕ್ರಮವನ್ನು ಹೊಂದು: ಗಂಡಸುತನವೆತ್ತು ನುಡಿದ ಪಂತದ ಹೆಮ್ಮೆಗಂಡು ವೃಂದಾರಕರುಗಳ ಹಿಂದು ಬದುಕಿತೆಂದು ಜೀವನು ಕಳುಹಿಸಿಕೊಂಡಡರಿದ ಸುರಪುರಿಗೆ (ಮೋಹತ. ೫-೬೨). [ಗಂಡಸುತನ + ಪೆಱು$_1$]

**ಗಂಡಸುಮಗ** (ನಾ). ಗಂಡುಮಗ; ಸುತ; ಪುತ್ರ: ಅವರಿಗೆ ಗಂಡಸುಮಕ್ಕಳಿಲ್ಲದ್ದೇ ಅವರ ಧೈರ್ಯಕ್ಕೆ ಮೂಲ ಕಾರಣ (ಹೇಮಂತ. ೧೪೫). [ಗಂಡಸು + ಮಗ]

**ಗಂಡಸೂಚಿ** (ನಾ). [ನಾಟ್ಯ] ನೃತ್ಯದಲ್ಲಿ ಒಂದು ಭಂಗಿ; ನೂರೆಂಟು ಕರಣಗಳಲ್ಲಿ ಒಂದು: ಪದಮುಂ ಸೂಚ್ಯಾ[ಕ್ಯ]ಮುದಂ ಪುದುಗೊಂಡುಂ ನಡು[ವ]ಬಾಗಿಸುತ್ತಂ ಮತ್ತಂ ಮುದದೆಡೆಗಯ್ಯುಲಪದ್ಮ ಮನೊದವುತೆ ಗಂಡದೊಳೆ ನಿಲಿಸಿ ಬಲಗೈ ಬೇಗಂ . . . ಗಂಡಸೂಚಿ ಕರಣಮೆನಿಕ್ಕುಂ (ಲಾಸ್ಯರಂ. ೪-೧೨೮). [ಸಂ. ಗಂಡಸೂಚೀ]

**ಗಂಡಸ್ಥ** (ನಾ). (?) : ಶ್ವೇತಾಶ್ವಂಗಳೊಳ್ ಪೂಡಿದ ದಿವ್ಯ ರಥಮುಮಂ ದಧೀಚಿಗಂಡಸ್ಥಮುಪ್ಪ ಗಾಂಡೀವಮೆಂಬ ಬಿಲ್ಲುಮಂ (ಪಂಪಭಾ. ೫-೭೭ವ); "ದವಡೆ" (ಪಂಪನಿ); "ಕಪೋಲ ಪ್ರದೇಶ" (ಪಂಪದೀ. ೨೦೬). [?]

**ಗಂಡಸ್ಥಲ,** ಗಂಡಸ್ಥಳ (ನಾ). ಕಪೋಲ ಪ್ರದೇಶ; ಕೆನ್ನೆ: ಕಿಸು ಸೆರೆ ಪರಿದಿರೆ ಕಣ್ಣೊಳ್ ನೊಸಲೊಳ್ ಪುರ್ವಡರ್ದು ಪೊಡರೆ ಗಂಡಸ್ಥಲದೊಳ್ ಪಸರಿಸೆ ಬೆಮರ್ವನಿಗಳ್ ಮುನಿದು (ಪಂರಾಮಾ. ೧೧-೧೩೫); ಗಂಡಸ್ಥಲದಿಂದ ಹನಿಹನಿಯಾಗಿ ಉದುರುತ್ತಿರುವ ಬೆವರು (ಬಾಬಲ. ೧೮); ಬೆದೆ ಬಂದು ಉನ್ಮತ್ತವಾದ ಹೆಣ್ಣಾನೆಯ ಗಂಡಸ್ಥಲದ ಬಳಿಯಿರುವ ರಂಧ್ರದ ಮೂಲಕ ಕೊಬ್ಬಿನಂತಹ ದ್ರವ ಸ್ರವಿಸುತ್ತದೆ (ಪ್ರವಾಇ. I, ೪೨).

**ಗಂಡಸ್ಥಳ:** "ಗಂಡಮೆನಲು ಗಂಡಸ್ಥಳಂ" (ಮಂಗರಾ. ೪೬-೧); ಮೃಗದ ಕರ್ದಮ ಸಂಪಾದಿತ ಲೇಖಾಮಂಡಿತ ಗಂಡಸ್ಥಳನುಂ (ಆದಿಪು. ೮-೨೦೩); ಗಂಡಸ್ಥಳದೊಳ್ ಶ್ರೀಕುಂಡಲಂ ಮೆಲ್ಲನೆ ತೊನೆಯೆ (ಜಗವಿ. ೧-೮೦); ಸ್ತನಗಳು ಬಾಹು ನಯನ ಮುಖಮು ××× ದನ ಹೃದಯ ಗಂಡಸ್ಥಳ ನಿಟಿಲಾ (ಜನವ. ೫-೨೪). [ಗಂಡ$_3$ + ಸ್ಥಲ]

**ಗಂಡಸ್ಥಳ** 'ಗಂಡಸ್ಥಲ' ನೋ.

**ಗಂಡಸ್ಥಳಿ** (ನಾ). = ಗಂಡಸ್ಥಲ: ಉರದೊಳ್ ಹಾರಾಂಶು ಗಂಡಸ್ಥಳಿಯೊಳಮಳ ಕರ್ಣಾವತಂಸಾಂಶು ಮತ್ತಂ ಶಿರದೊಳ್ ರತ್ನಾವಳೀಶೇಖರ ಶಿಖರಸಮುತ್ಕ್ರಾಂಶುಗಳ್ (ಚಂದ್ರಪು. ೬-೭೦). [ಸಂ. ಗಂಡಸ್ಥಲೀ]

**ಗಂಡಸ್ಥಾನ** (ನಾ). ಗುಂಡುಕಲ್ಲುಗಳಿಂದ ತುಂಬಿರುವ ಸ್ಥಳ, —ಪ್ರದೇಶ: ಶಿಲೋಚ್ಚಯ ಸಾನುವಿನ ಗಹ್ವರದ ಗಂಡಸ್ಥಾನ ದೀರ್ಘದ್ರೋಣಿಗಳಲಜಿಸಿದರು ಮೃಗಕುಲವ (ಕುಮ್ಯಾಅ. ೧೩-೨೪). [ಗಂಡ$_3$ + ಸ್ಥಾನ]

**ಗಂಡಳಿ** (ಕ್ರಿ). ಪೌರುಷ ನಾಶವಾಗು; ಶೌರ್ಯಗುಂದು: ರಣದೊಳಿದಿರ್ಚಿ ಗಣ್ಡಳಿದು . . . ಸರಿದ ಚೋಳನೆ ಪೇಳನೆ ಬೀರದೇಳ್ಗೆಯ (ಕಇಅ. ೨-೨-೩೧; 1058). [ಗಂಡು$_1$ + ಅಳಿ$_1$ (< ಅೞ್$_1$)]

**ಗಂಡಳಿಕೆ** (ನಾ). ಪೌರುಷ; ಪರಾಕ್ರಮ (?): ಅದಿಯರ ಬಳಿಯ ಗಂಡಳಿಕೆಯ ಉಟಕೊಂಡ ರಾಮನಾಯ್ಕನು (ಮೈಆರಿ. ೧೯೪೩, ೩೫-೧; 1488). [☞ ಇದು 'ಗಂಡಾಳಿಕೆ (ಗಂಡಾಳು + -ಇಕೆ)'ಯ ಅಪಲಿಖಿತವಿರಬಹುದು] [?]

**ಗಂಡಾಂತ** (ನಾ). [ಜ್ಯೋತಿ] ಅನಿಷ್ಟಕಾಲ; ಕುಯೋಗ; ಕೆಲವು ತಿಥಿ, ನಕ್ಷತ್ರ ಮತ್ತು ಲಗ್ನಗಳ ಸಂಧಿಕಾಲ: [☞ ಇವು ಶುಭ ಕಾರ್ಯಗಳಿಗೆ ನಿಷಿದ್ಧ] ಸಮನಿಸೆ ಗಂಡಾಂತಂ ಜಾತಮರ್ತ್ಯನಟಿಗುಂ (ಜಾತಕಿ. ೬-೫೧); ಕರ್ಕಟ ವೃಶ್ಚಿಕ ಮೀನರಾಶಿಗಳ ಕೊನೆಯ ಭಾಗವೇ ಗಂಡಾಂತವು (ಜಾತಕಿ-ಟೀಕೆ). [ಗಂಡ$_3$ + ಅಂತ$_2$]

**ಗಂಡಾಂತರ** (ನಾ). ಹೆಚ್ಚಿನ ಅಪಾಯ; ವಿಪತ್ತು; ತೊಂದರೆ: ಗಂಡಾಂತರಗಳನ್ನು ಜಯಿಸಿದವರ ಅನುಭವಸಾರವನ್ನು ನಾನು ಇಲ್ಲಿ ಹೇಳಿರುವೆ (ಶಾಂಪಜೀ. ೪೩); ನಾನಾಸಾಹೇಬರ ಎದುರು ಮಾತನಾಡುವುದು ಗಂಡಾಂತರವನ್ನು ಮೈಮೇಲೆ ಹಾಕಿಕೊಂಡಂತೆಯೆ (ಬದುಜಿ. ೧೬೧); ಈ ಗಂಡಾಂತರದಿಂದ ಪಾರಾಗಲಿಕ್ಕೆ ಬರುವಂತಿಲ್ಲವೇನು (ಸ್ಕೂಲಮಿ. ೨೧೨). [ಸಂ.]

**ಗಂಡಾಂತರಕಾರಿ** (ನಾ). ಗಂಡಾಂತರವನ್ನು ಉಂಟುಮಾಡುವಂತಹುದು; ಅಪಾಯಕಾರಿ: ಹೀಗೆ ಸಹಸ್ರದಷ್ಟು ರೂಪಾಯಿಗಳನ್ನು ಇರಿಸಿಕೊಂಡು ತಿರುಗುವುದು ಗಂಡಾಂತರಕಾರಿ (ಬದುಜಿ. ೯೨); ಇದೊಂದು ಗಂಡಾಂತರಕಾರಿಯಾದ ರೋಗ (ರೂಢಿ). [ಸಂ. ಗಂಡಾಂತರಕಾರಿನ್]

**ಗಂಡಾಗು** (ಕ್ರಿ). ೧. ಧೈರ್ಯವನ್ನು ಪಡೆ; ಪರಾಕ್ರಮವನ್ನು ಹೊಂದು: "ಯುದ್ಧಕ್ಕೆ ಸಿದ್ಧನಾಗು; ಧೈರ್ಯವನ್ನು ಹೊಂದು" (ಕಲ್ಪದ್ರು); ಮಹಾರಾಜನು ಅಮೃತಸರಕ್ಕೆ ತಿರುಗಿ ಬರುವಷ್ಟರಲ್ಲಿ ಫ್ರೆಂಚರ ದಂಡಯಾತ್ರೆಯ ಸುದ್ದಿಯು ಸುಳ್ಳೆಂದು ಗೊತ್ತಾದ್ದರಿಂದ ಇಂಗ್ಲಿಷರು ಗಂಡಾದರು (ಚರಿಸಂ. ೨೦೬). ೨. (ಆಲಂ) ಫಲಪ್ರದವಾಗು; ಯಶಸ್ವಿಯಾಗು: ಹೋದ ಕೆಲಸ ಗಂಡಾಯ್ತೋ ಹೆಣ್ಣಾಯ್ತೋ? (ರೂಢಿ). [ಗಂಡು$_1$ + ಆಗು$_1$]

**ಗಂಡಾಗುಂಡಿ** (ನಾ). ೧. ದುರುಳತನ; ದುಂಡಾವರ್ತಿ; ಬಲಾತ್ಕಾರ: ಗಂಡಾಗುಂಡಿಯಿಂದ ಹೂಗಳನ್ನು ತೆಗೆದುಕೊಂಡು ಹೋಗಬೇಕೆನ್ನು ತ್ತೀಯೆ (ವಚಭಾ. ೧೫೩); ಗಂಡಾಗುಂಡಿಮಾಡಿಯಾದರೂ ಗಡಿಗೆ ತುಪ್ಪ ಕುಡಿಯಬೇಕು (ನನ್ನೂರು. ೩೧೫); ಅವರ ಗಂಡಾಗುಂಡಿ ಜಗತ್ತಿಗೇ ಗೊತ್ತು (ಅನಾಥೆ. ೨೯೨). ೨. "ಕುತ್ತು; ಆಪತ್ತು; ಕಂಟಕ" (ಜಾನಕೋ. ೪೫). ೩. ತಾಟಾಪೋಟಿ: ಗಂಡಾಗುಂಡಿ ಮಾಡಿ ಗಂಡಿಗೆ ಒಂದು ಹೆಣ್ಣು ಗಂಟುಹಾಕಿದ (ರೂಢಿ). [?]

**ಗಂಡಾಡಿ** (ನಾ). ಗಂಡುತನವುಳ್ಳವನು; ಶೂರ: "ಸತ್ವಶಾಲಿ; ಸಾಹಸಿಗ" (ಅನಂನಾ); ಬಿದಿರ ಮೆಳೆಯಲಿ ಗಂಡುಬಿದಿರಾಗು, ಬಳಿಯ ಗಂಡಾಡಿಯಾಗೆಲೊ ಕಂದ (ಹೆಬ್ಬೆರ. ೪–೫೪).
[ಗಂಡು$_1$ + ಆಡಿ$_1$]

**ಗಂಡಾಡು$_1$** (ಕ್ರಿ). "ಪೌರುಷದ ಮಾತನಾಡು" (ಪ್ರಭಣ್ಣ); ಗಂಡಾಡಿದುರು ಭಾಷೆಗರಿಗಳ ಶಿರಂಗಳಂ ಚೆಂಡಾಡಿ (ಜೈಮಿಭಾ. ೭–೬೩).
[ಗಂಡು$_1$ + ಆಡು$_1$]

**ಗಂಡಾಡು$_2$** (ನಾ). ಗಂಡುಮೇಕೆ; ಹೋತ: "ತುಂಭಃ . . . ಆಡುಹೋರಿ, ಗಂಡಾಡು, ಹೋತ" (ಸಿದ್ಧಾಂತಿ. ೨೫೪).
[ಗಂಡು$_1$ + ಆಡು$_3$]

**ಗಂಡಾಮಾಲೆ** 'ಗಂಡಮಾಲೆ' ನೋ.

**ಗಂಡಾಮಿಗ** (ನಾ). = ಗಂಡಮೃಗ: ಗಂಡಾಮಿಗಂ (ರೇವಣ. ೩೭–೧೫).
[< ಗಂಡಮೃಗ]

**ಗಂಡಾಮೃಗ** 'ಗಂಡಮೃಗ' ನೋ.

**ಗಂಡಾಲಿ** (ನಾ). ಬಳ್ಳಿಗರಿಕೆ ಹುಲ್ಲು: "ಗಂಡಾಲಿ, ಶಕುಲಾಕ್ಷಕಾಃ –೨ ಬಳ್ಳಿಗರಿಕೇಹುಲ್ಲು" (ಸಿದ್ಧಾಂತಿ. ೧೩೧). [ಸಂ.]

**ಗಂಡಾಳು** (ನಾ). ೧. ಗಂಡಸು; ಪುರುಷ: ಪೂಗೊಲಯೇಕಾಕಿ ಗಂಡಾಳಿಹ ಆಲಯಮುಮನಾಯಾಶ್ರೈಸಿರ್ಪ (ನವಮೋ. ೯–೨೪). ೨. ಕೂಲಿಕೆಲಸಮಾಡುವ ಗಂಡಸು; ಗಂಡು ಆಳು: ಹೆಂಣಾಳು ಗಂಡಾಳು ಕುಟುಟಗಳು (ಸೌಇಇ. IX–ii, ೪೧೭–೧೦; 1377); ಗಂಡಾಳಿಗೆ . . . ಬೈದು (ಹೊಸಕ್ಷಿ. ೧೧೫). "ಹೆಣ್ಣಾಳು" ಪರಾ.
[ಗಂಡು$_1$ + ಆಳ್$_3$]

**ಗಂಡಾಳುತನ** 'ಗಂಡಾಳ್ತನ' ನೋ.

**ಗಂಡಾಳ್ತನ, ಗಂಡಾಳುತನ** (ನಾ). ಪೌರುಷ; ಪರಾಕ್ರಮ; ಶೂರತನ: ಪೊಸೆದು ಮುಕ್ಕಲ್ ಸಾಲನೇ ಶಾಙ್ಗಿರ್ ನಮ್ಮಂ ಗಂಡಾಳ್ತನಮೇವುದಾಶ್ರಯಿಸುವಂ ಶ್ರೀಪಾದಮಂ ಕೃಷ್ಣನಾ (ಜಗವಿ. ೮–೯೫); ದೀನಾನಾಥವಜ್ರಪಂಜರ ಎಂಬ ಗಂಡಾಳ್ತನದ ಕಡುಹಿನ ಬಿರುದಿಗೆ (ಬಿಟ್ಟಅ. ೬೮–೨೭). **ಗಂಡಾಳುತನ**: ಗಂಡಾಳುತನದಿ ಸಿಂಹವ ಸೀಳ್ವ ಶರಭಭೇರುಂಡನೋಲ್ ಖಳರಾಯ ಬರಲು (ಮೋಹತ. ೧೨–೮೦).
[ಗಂಡಾಳ್ + –ತನ]

**ಗಂಡಿ$_1$** (ನಾ). ೧. ಕಂಡಿ; ರಂಧ್ರ; ಬಿರುಕು: "ಗಂಡಿ–ತೂತು" (ಕಾಶಕ್ಯ. ೨೬); ಕಂಡಳಸುರನ ಗದೆಯ ಘಾಯದ ಗಂಡಿಯಲಿ (ದೇವೀಮ. ೮–೩೨). ೨. ಗುಹೆ; ಗಹ್ವರ: ಗಂಡಿಗಳೊಳುಲಿವ ಕೇಸರಿಗಳಿಂ ಕರಿಗಳಿಂ (ಮಲ್ಲಾರಿ. ೧–೧೧). [< ಕಂಡಿ$_1$]

**ಗಂಡಿ$_2$** (ನಾ). ಮರದ ಕಾಂಡ; ವೃಕ್ಷದ ಮೂಲ: "ಹರಿಗಳವರೆಗಿನ ಮರದ ಬೊಡ್ಡೆ" (ಕಸ್ತೂಕೋ. ೨೮೧). [ಸಂ.]

**ಗಂಡಿಕಾವಲಿ** (ನಾ). ೧. ಕೋಟೆಯ ಕಂಡಿಯನ್ನು ಕಾಯುವ ಕಾವಲುಗಾರ: (ಕಿ). ೨. ಉಕ್ಕಡದಲ್ಲಿ ಸುಂಕ ತೆಗೆದುಕೊಳ್ಳುವವನು: (ರೀವ್). [ಗಂಡಿ$_1$ + ಕಾವಲ್$_1$ + –ಇ$_3$]

**ಗಂಡಿಕೆ$_1$** (ನಾ). = ಗಂಡುತನ: ಬಲ್ಗಂಡಿಕೆಯಿನಾಳೆ ಮೆಟ್ಟಿದೊನೆಂದೊಡರ್ಜುನಂ ಬಂದಾತನನಿಂತೆಂದ (ಬಂಹರಿ. ೧೧–೨೮ವ); ಗಂಡಿಕೆಯಿನುಳಿದವರು ಸೊಕ್ಕು ಸೆಣಸನ್ನುಸಿಕನಾಲಿಸಿದೆ (ಹೆಬ್ಬೆರ. ೧೪–೪).
[ಗಂಡು$_1$ + –ಇಕೆ]

**ಗಂಡಿಕೆ$_2$** (ನಾ). ಬತ್ತ ಮೊದಲಾದವುಗಳ ಊಬು: "ಊಬು ಗಂಡಿಕೆ [ಪಾಠಾಂ. ಕಂಟಕಿ] ಯಕ್ಕು" (ಮಂಗರಾ. ೩೩–೮).
[< ಕಂಟಕಿ]

**ಗಂಡಿಕೆಗಾಣ್** (ಕ್ರಿ). ಪೌರುಷವನ್ನು ಕಾಣು; ಶೌರ್ಯವನ್ನು ನೋಡು: ಬಗ್ಗದ ಗಂಡಿಕೆಗಂಡು ನೆತ್ತಿಯಗ್ರದೆ ಮೊನೆಯುರ್ಚಿ ಕೆಯ್ಯುಸಿರಿಗೆಯಿಂದಿರದಿಕ್ಕಿದನಾ ವನೇಚರಂ (ಶಬಶಂ. ೩–೫೪).
[ಗಂಡಿಕೆ$_1$ + ಕಾಣ್]

**ಗಂಡಿಗ$_1$, ಗಂಡುಗ** (ನಾ). ೧. ಗಂಡುತನವುಳ್ಳವನು; ಧೀರ; ಶೂರ; ಪರಾಕ್ರಮಿ: ಗಂಡಿಗನಾಗಿ ತನ್ನಿಲಯಕೆಯ್ದಿದೆಂ (ದಶಕು. ೧೩–೪೯); ಅಱಿಯದ ಗಂಡಿಗನನೇನೆಂದು ನುಡಿವೆನು (ಬಸವು. ೧೫–೩೨); ಶಿವಶಿವ ಪೂತು ಗಂಡಿಗನೆಂದು ಗರ್ಜಿಸಿತಖಿಳ ವಂದಿಜನ (ಕುವ್ಯಾಕ. ೧೫–೩೭). **ಗಂಡುಗ**: ೧. 'ಗಂಡುಗತನ' ಪರಾ. ೨. ಬೇಟೆಯನಾಯಿ: ಈ ಸಂಪಿಗೆ ಎಂಬ ಗಂಡುಗನು ಹುಲಿಗಳ ಬಾಲವ ಹಿಡಿದು ಯಳವ ಹಾಂಗೆ (ಎಕ. X, ಮಾಲೂರು. ೨–೧; 1434 ?). [ಗಂಡು + –ಇಗ]

**ಗಂಡಿಗ$_2$** (ನಾ). ಅಪಾಯಕಾರಿ; ಕೇಡಿಗ: ಕೊಂಡೆಯರಂ ದುರ್ಜನರಂ ಗಂಡಿಗರಂ ತೆಗೆದು ತೆಗೆದು ಸಿಕ್ಷಿಪರೆ (ಎಕ. XI, ದಾವಣ. ೧೩–೫೦; 1271); ಮಿಂಡುದಂಡುಗಳತಿಕಾಱರು ಗಂಡಿಗರು ಗರ್ವಿತರು (ತೊರರಾ. ೫–೫–೧೪). [ಗಂಡ$_3$ + –ಇಗ]

**ಗಂಡೀರ** (ನಾ). ಮಂಗರಬಳ್ಳಿ: "ಮೊಗವಾಳ, ಮಂಗರಬಳ್ಳಿ" (ಅಮರ– ಟೀಕೆ). [ಸಂ.]

**ಗಂಡು** (ನಾ). ೧. ಶೌರ್ಯ; ಪರಾಕ್ರಮ; ಅರ್ಪು: ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ ಬಲದೊಳ್ ಮದ್ರೇಶಂ (ಪಂಪಭಾ. ೧೪–೬೪); ಗಂಡಿಲ್ಲದ ಭಟನ ಯುದ್ಧಮಂ (ಧರ್ಮಾಮೃ. ೭–೪೯); ಹೊಸ ಗಂಡುವೀರ ಚೈತನ್ಯಗಳು (ಏಸೀಗೀ. ೫೩–೧೯). ೨. ಬಿರುಸು; ಗಟ್ಟಿ: ಅನ್ನ ಇನ್ನೂ ಗಂಡಾಗಿದೆ; ಇನ್ನೂ ಬೇಯಿಸಬೇಕು (ರೂಢಿ). ೩. ಮರಗಳ ಕೆಚ್ಚು, —ತಿರುಳು, —ಸಾರ: ಅಶೋಕಕಟ್ಟಿಗೆಯೊಳಗಿನ ಗಂಡು ಕಪ್ಪುಬಣ್ಣದ್ದು ಬಿರುಸು (ಕಭಾಗ. ೩೬); ಇದರ ಬಳಿ ಕಟ್ಟಿಗೆಯನ್ನು ಕೆತ್ತಿ, ಚಲ್ಲಿ, ನಡುವಿನ ಗಂಡನ್ನು ತುಂಡುತುಂಡಾಗಿ ಕಡಿದು (ಮುಂಬಯಿ. ೫–೨೧೧). ೪. ಗಂಡಸು; ಪುರುಷ: ಮೊಲೆ ಮುಡಿ ಬಂದರೆ ಹೆಣ್ಣೆಂಬರು, ಗಡ್ಡ ಮೀಸೆ ಬಂದರೆ ಗಂಡೆಂಬರು ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ (ದೇದಾವ. ೬೫–೧೩೩); ಒಲ್ಲದ ಹೆಣ್ಣು ಗಂಡುಗಳನೊಂದಾಗಿಸಬಲ್ಲ ಭಾವಜ್ಞರ ತೋಱು (ಮೋಹತ. ೮–೩೨); ಹೆಣ್ಣು ಏನೂ ಗಳಿಸದೆ ಮನೆಯಲ್ಲಿಯೆ ಇರುವುದೆಂದು ಆಕ್ಷೇಪಿಸುವ ಗಂಡು ಸ್ವಲ್ಪ ಎಣಿಕೆಮಾಡಿ ನೋಡಲಿ (ಯಕ್ಷಪ್ರ. ೧೫೨). ೫. ಶೂರ; ಪರಾಕ್ರಮಿ: ಎಲವೊ ನೆರೆ ಗಂಡಹೆ ಕಣಾ ನೀ ಮಲೆತು ನಿಂದುದು ಸಾಲದೇ (ಕುವ್ಯಾದ್ರೋ. ೧೬–೩೨). 'ಗಂಡುಮೆಟ್ಟು' ಪರಾ. ೬. ಮದುವೆಯ ವರ: ಎಲ್ಲಿ ಗಂಡು ಬರಲಿಲ್ಲ ಗಂಡು ಎಂದರು (ಹುಟ್ಟಹ. ೧೩); ಗಂಡಿನ ಮೆರವಣಿಗೆ (ರೂಢಿ). ೭. ಬಲಭಾಗ; ದಕ್ಷಿಣ: ಗಂಡು ಮೇಲಾಗಿ ಮಲಗಿದನು ವೈದ್ಯನ ಗಂಡ ಕಾಣಯ್ಯ (ಸರ್ವಜ್ಞ. ೨೦೦೯). ೮. (ಆಲಂ) ಯಶಸ್ವಿಯಾದುದು; ಫಲಪ್ರದವಾದುದು: ಹೋದ ಕೆಲಸ ಗಂಡೋ ಹೆಣ್ಣೋ? (ರೂಢಿ).
[ದೇ. ‖ ತಮಿ. ಗಿಣ್ಣ; ಕೊಡ, ಕಂಡೆ; ತುಳು, ತೆಲು. ಗಂಡು]

**ಗಂಡುಕಚ್ಚೆ** 'ಗಂಡುಗಚ್ಚೆ' ನೋ.

**ಗಂಡುಕಣೆ** (ನಾ). ಕಬ್ಬಿನ ಗಾಣದಲ್ಲಿರುವ ದೊಡ್ಡ ಕಣೆ, —ಕೊರಡು : (ಕ). [ಗಂಡು + ಕಣ್ಣೆ (< ಗಬೆ)]

**ಗಂಡುಕಾವ್ಯ** (ನಾ). ವೀರರಸ ಪ್ರಧಾನವಾದ ಕಾವ್ಯ; ಕೆಚ್ಚಿನ ಸತ್ವವುಳ್ಳ ಕಾವ್ಯ : ಕುಮಾರವ್ಯಾಸ... ಇಂಥ ಗಂಡುಕಾವ್ಯವನ್ನು ಬರೆದ (ಕನ್ನನು. ೧–೪೪). [ಗಂಡು + ಕಾವ್ಯ]

**ಗಂಡುಕಾಳಿಂಗ** (ನಾ). ಒಂದು ಬಗೆಯ ಗಿಡ : (ಮೈಔಗಿ. ೪೮–೯೬೪). [ಗಂಡು + ಕಾಳಿಂಗ (=ಕಾಲಿಂಗ)]

**ಗಂಡುಕೂಸು** 'ಗಂಡುಗೂಸು' ನೋ.

**ಗಂಡುಕೆಲಸ** 'ಗಂಡುಗೆಲಸ' ನೋ.

**ಗಂಡುಕೇಪಳೆ** (ನಾ). ಒಂದು ಬಗೆಯ ಗಿಡ: "ಗಂಡುಕೇಪಳ, ಬಂದಿಕ್ಯಾಗಿಡ" (ಮೈಔಗಿ ೫೩–೧೦೬೫). [ಗಂಡು + ಕೇಪಳ (= ಕೇಪಲ)]

**ಗಂಡುಕೊಡಲಿ** 'ಗಂಡುಗೊಡಲಿ' ನೋ.

**ಗಂಡುಕೊನೆ** (ನಾ). ಗಂಡುಕುಡಿ, —ಮಗು : ಒಂದು ಗಂಡುಕೊನೆ ಹುಟ್ಟಿದ್ದರೆ ಹೀಗಾಗುತ್ತಿತ್ತೆ (ಮಾಮರಾ. ೧೨೧). [ಗಂಡು + ಕೊನ್ಸೆ]

**ಗಂಡುಕೋಗಿಲೆ** 'ಗಂಡುಗೋಗಿಲೆ' ನೋ.

**ಗಂಡುಗ** 'ಗಂಡಿಗ' ನೋ.

**ಗಂಡುಗಂಡ** (ನಾ). ಕಠಿನವಾದ ಕೆನ್ನೆ, —ಕಪೋಲ: ಚಂಡ ವಾನರ ಗಂಡುಗಂಡಕೆ ಸಿಡಿಲ್ವುದಾ ಬಂಡೆ (ಶ್ರೀರಾಮಾ. ೨೪೧–೯೧). [ಗಂಡು + ಗಂಡ$_3$]

**ಗಂಡುಗಚ್ಚೆ**, ಗಂಡುಕಚ್ಚೆ (ನಾ). ನಿರಿಯನ್ನು ಹಿಂದಕ್ಕೆ ಹೊರಳಿಸಿ ಬಿಗಿದು ಕಟ್ಟಿದ ಕಚ್ಚೆ; ವೀರಗಚ್ಚೆ: ವೀರಪುರುಷರ ಗಂಡುಗಚ್ಚೆಯ ಮೇಲೆ ಅದು ಆಗುತ್ತಿಲ್ಲವೇಕೆ? (ಇಪ್ಪಕ. ೪೪೩). **ಗಂಡುಕಚ್ಚೆ** : ಗಂಡುಕಚ್ಚೆ ಹಾಕಿಕೊಂಡು ಸೈಕಲ್ ಹತ್ತಿದರು (ರೂಢಿ).

**ಗಂಡುಗಚ್ಚೆಹಾಕು** =ಸಿದ್ಧವಾಗು; ತಯಾರಾಗು: ಗಂಡುಗಚ್ಚೆ ಹಾಕಿದಳು. ಕೈಯಲ್ಲಿ ಒನಕೆಯನ್ನು ಹಿಡಿದು ಆ ಕಳ್ಳಗಂಡಿಯ ಮಗ್ಗುಲಿಗೆ ನಿಂತುಕೊಂಡಳು (ಕಪವು. ೨–೭೫); ಗಂಡುಗಚ್ಚೆ ಹಾಕಲಿಲ್ಲ; ಅಷ್ಟೆ ಎಂದ ಕಿಟ್ಟಿ (ಸ್ವಪ್ನಹೊ. ೯೧). [ಗಂಡು + ಕಚ್ಚೆ]

**ಗಂಡುಗತನ** (ನಾ). ೧. ಪರಾಕ್ರಮ; ಶೌರ್ಯ; ಸಾಹಸ: ತಾಗಿದವ ದಿರನಿಕ್ಕಿದನು ರಣದಾಗಡಿಗರನು ಯೆಕ್ಕಿದನು ಕೈದಾಗಿಸಿದನನಿಬರಲಿ ಗಂಡುಗತನದ ಗಾಡಿಕೆಯ (ಕುವ್ಯಾಅ. ೧೦–೫೧); ಗಂಡುಗತನದ ವೀರ ವರ್ಚಸಕ್ಕೆ ಮಿಾಸೆವೊತ್ತು (ಮಂತ್ರಶ. ೯೧–೧೦). [ಗಂಡುಗ (< ಗಂಡಿಗ) + -ತನ]

**ಗಂಡುಗತ್ತರಿ** (ನಾ). = ಗಂಡಗತ್ತರಿ: ಗಂಡುಗತ್ತರಿಯಂ ಕೊರಳೊಳು ಸೇರಿಸಿಕೊಂಡುಯೇನೆನ್ನುತಿರ್ದಳು (ಕರಿಕ. ೨೩–೪); ಕವೆಗೋಲ ಇರ್ಕುಟಿಯ ದಂಡದ ಗಂಡುಗತ್ತರಿಯ ಕೊಡಲಿಯ (ರಾಮಾಶ್ವ. ೭೯–೨೧). 'ಗಂಡಗತ್ತರಿ' ಪರಾ. [ಗಂಡು + ಕತ್ತರಿ$_2$]

**ಗಂಡುಗರಟೆ** (ನಾ). ತೆಂಗಿನಕಾಯಿ ಒಡೆದಾಗ ಬರುವ ಮೇಲ್ಭಾಗದ ಚಿಪ್ಪು, —ಕಣ್ಣಿಲ್ಲದ ಭಾಗ: ಕೀಸಿ ಸುಣ್ಣಗೆ ಮಾಡಿದ ಎರಡು ಗಂಡು ಗರಟೆಗಳನ್ನೂ ತಂದು ಮುಂದಿಟ್ಟು (ಮಲೆಮ. ೧೩). [ಗಂಡು + ಕರಟ$_1$ (< ಕರಂಟ)]

**ಗಂಡುಗರಣೆ** (ನಾ). ಗಟ್ಟಿಯಾದ ಮೊಸರು; ಕೆನೆಮೊಸರು: ಗಂಡಗಂಬಲಿಯಿಕ್ಕಿ ಗಂಡುಗರಣೆಯ ನುಂಗಿ ಗಂಡ ಬಂದಾಗ ನರಳುವ ಹೆಣ್ಣನು ಗುಂಡಿಗಿಕ್ಕೆಂದ (ಸರ್ವಜ್ಞ. ೧೪೫೪). [ಗಂಡು + ಕರಣೆ$_1$]

**ಗಂಡುಗರ್ವ** (ನಾ). = ಗಂಡಗರ್ವ: ಗಂಡುಗರ್ವವನೆಮ್ಮೊಡನೆ ಕೋದಂಡದಲಿ ಮೆರೆ ಸಾಕು (ಕುವ್ಯಾಕ. ೧೧–೪೫). [ಗಂಡು + ಗರ್ವ]

**ಗಂಡುಗಲಿ** (ನಾ). ಅತ್ಯಂತ ಪರಾಕ್ರಮಿ; ಮಹಾಶೂರ: ಗಂಡುಗಲಿ ಕೋದಂಡ ರುದ್ರನ ಕಂಡು ವಿರಥನ ಮಾಡಿದನು ಮಾರ್ತಾಂಡ ತನಯನ ಗೆಲಿದು ರಣದಲಿ ನೊಂದನಾ ಭೀಮ (ಕುವ್ಯಾದ್ರೋ.೧೩ ಸೂಚನೆ); ಗಂಡುಗಲಿ ರಾವಣಗೆ ಬಿಲ್ಲಿನ ದಂಡೆಯನು ಹಾಯ್ಕಿದಳೆ ನಿಜದೋರ್ದಂಡ ದಂಗನೆಯೆನುತ ಗುಹಿಲಿಕ್ಕಿತು ಸತೀನಿವಹ (ತೊರರಾ. ೧–೧೫–೨೫); ಭರವು ಎಷ್ಟೆಂದರೂ ಗಂಡುಗಲಿ (ಜೀವರಂ. ೨೩). [ಗಂಡು + ಕಲಿ$_2$]

**ಗಂಡುಗಲಿತನ** (ನಾ). ಅತಿ ಪರಾಕ್ರಮ; ಮಹಾಶೌರ್ಯ: ಗಂಡುಗಲಿತನದಿ ಅರಸುಗಳಂ ಮೆಚ್ಚಿಸಿ (ಎಕ. V, ಹಾಸನ. ೩೮–೭; 1000); ಅಳಲು, ಅಂಜಿಕೆ, ಶಕ್ತಿಹೀನತೆ, ಯಾವುದೊಂದೂ ಇಲ್ಲದು ಗಂಡುಗಲಿತನವೊಂದೆ ಉಳಿವುದು (ವಿಜದ. ೧೫). [ಗಂಡುಗಲಿ + -ತನ]

**ಗಂಡುಗಾಡಿ** (ನಾ). = ಗಂಡಗಾಡಿ: ಕಂಡಳವಳು ಕಡು ತವಕದೆ ಕುಸುಮ ಕೋದಂಡನ ಪಳಿವ ಚೆಲ್ವಿಕೆಯ ಗಂಡುಗಾಡಿಯ ನೆರೆರೂಪ ಜಯಂತನ (ಕಂನವಿ. ೯–೧೦೦); ನಳಕೂಬರನಗ್ಗದ ಗಂಡು [ಪಾಠಾಂ. ಗಂಡ] ಗಾಡಿಯ ತಳೆದು ಮನೋಜನೋಜೆಯ ವಿಳಾಸಮನೇಳಿಸಿ (ರಾಜಶೇ. ೧೩–೬೦). [ಗಂಡು + ಗಾಡಿ$_1$]

**ಗಂಡುಗಾರೆ** (ನಾ). ಒರಟಾದ ಮುಳ್ಳುಗಳಿರುವ ಕಾರೆಗಿಡ: ಅವಳಿಗೆ ಗಂಡನ ಮನೆಯು ಗಂಡುಗಾರೆ ಮುಳ್ಳಾಗುವುದು (ಕನ್ನಜಾ. ೧೦೯). [ಗಂಡು + ಕಾರೆ$_1$]

**ಗಂಡುಗಿಡಿಸು** 'ಗಂಡುಗೆಡಿಸು' ನೋ.

**ಗಂಡುಗಿಡು** 'ಗಂಡುಗೆಡು' ನೋ.

**ಗಂಡುಗುಂಟಣಿ** (ನಾ). ಕುಂಟಣಿಯ ಕೆಲಸವನ್ನು ಮಾಡುವವನು; ತಲೆಹಿಡುಕ: ಜೂಜಿನಕಟ್ಟೆ ಕಳ್ಳಂಗಡಿ ಮಾಡಿಕೊಂಡಾಳುತ್ತಿದ್ದ ನೀನು ಗಂಡುಗುಂಟಣಿ ಮಾತ್ರ (ಬಿಟ್ಟಅ. ೧೪೬–೧೪). [ಗಂಡು + ಕುಂಟಣಿ]

**ಗಂಡುಗುಂದು** (ನಾ). ಗಂಡುಗೆಡುವಿಕೆ; ಪೌರುಷಹೀನತೆ: ಗಂಡು ಗುಂದಿನ ಬೀತ ಬಿರುದಿನ ತೊಂಡುಗೇಡಿನ ಜಯದ ಜಾರಿನ ಖಂಡ ಶೌರ್ಯದ ಧೀರರಿದ್ದುದು ನೃಪನ ಬಳಸಿನಲಿ (ಕುವ್ಯಾಕ. ೧೩–೪೬). [ಗಂಡು + ಕುಂದು$_3$]

**ಗಂಡುಗುಡಿ** (ನಾ). = ಗಂಡುಕೊನೆ: ತೊಂಡನೂರಿನಿಂದಯೆಡೆಗೊಂಡು ತೊಡಗಿಯೆ ಪಿಡಿದು ಗಂಡುಗುಡಿಯನೂ ಕೊಂದ ಹೆಂಡಗಂಡಿ ಮೂಳಿ (ಕರಿಕ. ೧೨೫–೩). [ಗಂಡು + ಕುಡಿ$_2$]

**ಗಂಡುಗುಣ** (ನಾ). ಪೌರುಷದ ಗುಣ; ಶೌರ್ಯದ ಗುಣ: ಹೆಚ್ಚಾಗಿ ಗಂಡುಗುಣವುಳ್ಳವನು; ಪೌರುಷಶಾಲಿ (Man ಇಂಕನಿ). [ಗಂಡು + ಗುಣ$_1$]

**ಗಂಡುಗುವರ** (ನಾ). = ಗಂಡುಮಗು: ವಿಲಾಸವತಿಗೆ ಗಂಡುಗುವರ ನಾಗಲಾಗಿ, ಆ ವಾರ್ತೆ ಹೇಳಿದವರಿಗೆ ಸರ್ವಾಭೀಷ್ಟವನ್ನು ಕೊಟ್ಟು (ವಚಕಾ. ೬). [ಗಂಡು + ಕುವರ]

**ಗಂಡುಗೂಸು**, ಗಂಡಗೂಸು, ಗಂಡುಕೂಸು (ನಾ). ೧. ಗಂಡು ಮಗು: ಮುನೀಂದ್ರನಿಂದ್ರಿಯದೊಳೊಗೆದ ಪೆಣ್ಗೂಸುಮಂ ಗಂಡು ಗೂಸುಮನವಜ ಕೆಲದೊಳಿರ್ದ ದಿವ್ಯಶರಾಸನಶರಂಗಳುಮಂ ಕಂಡು ಕೊಂಡುಪೋಗಿ (ಪಂಪಭಾ. ೨–೩೩ ವ); ನಿನ್ನ ಗರ್ಭದೊಳ್ ಗಂಡುಗೂಸು ಪುಟ್ಟಿದಪುದು (ಪಂಚತಂ. ೧೮೪–೧೮); ಕೇಳ್ದನು ಗಂಡುಗೂಸಿನ ಜನನ ಸ್ಥಿತಿಯನು (ಮೋಹತ. ೧೭–೩೧). ೨. ಪುರುಷ; ಗಂಡಸು: "ಮಾನವಂ... ಮನುಜಂ ಗಂಡುಗೂಸಕ್ಕು" (ನಂಗರಾ. ೬೩–೧).

**ಗಂಡಗೂಸು** : ೧. ಆತನ ಪೆಣ್ಡಿತಿ ಹುಕ್ಕಬ್ಬೆಗೆ ನಾಡ ಗಣ್ಡಗೂಸನುವೆತ್ತು ಮುಗಂ ಜೀಯಸನುತಂನ ಕಲ್ಲನೆಱಿಸಿದ (ಎಕ. VII, ಶಿಕಾರಿ. ೧೯೫-೬ ; 1007). ೨. ಗಡ್ಡ ಮೀಸೆಯಿಲ್ಲದ ಗಂಡಗೂಸುಮಂ ತೂಬರಮೆಂಬುದು (ಹಲಾಯು. ೪೬-೧೨೩) ; ಗೌಡೊಕ್ಕೊಲನೆರವಿಗಳ್ ಗಂಡಗೂಸು ಹೆಂಗೂಸೆಂನದೆ ಮದುವೆಗೆ ವೀಸವಯ್ದುಂ ದೇವರಾಯವಾಗಿ ಕೊಟ್ಟರ್ (ಎಇ. V, ೨೦-೭೧ ; 1161). **ಗಂಡುಕೂಸು** : ೧. ನಮ್ಮ ಪಕ್ಕದ ಮನೆಯಲ್ಲಿ ಗಂಡುಕೂಸು ಹುಟ್ಟಿತು (ರೂಢಿ). [ಗಂಡು + ಕೂಸು]

**ಗಂಡುಗೂಸುತನ** (ನಾ). ಪೌರುಷ ; ಶೌರ್ಯ : ಪೆಣ್ಬುಯ್ಯಲನಾರಯ್ಯದೋಸರಿಪುದೆನ್ನ ಗಂಡುಗೂಸುತನಕ್ಕೆ ಪಸುಗೆಯಲ್ತೆಂದು (ಚಂದ್ರಪು. ೮-೬೬ವ). [ಗಂಡುಗೂಸು + -ತನ]

**ಗಂಡುಗೆಡಿಸು**, ಗಂಡುಗಿಡಿಸು (ಕ್ರಿ). ಶಕ್ತಿಗುಂದಿಸು ; ಪರಾಕ್ರಮವನ್ನು ಕುಗ್ಗಿಸು ; ಸೊಕ್ಕುಮುರಿ : ಮುಳಿದು ಭೀಮನ ಗಂಡುಗೆಡಿಸುವರಿಲ್ಲ ಕೌರವದಳದ ಸುಭಟರಲಿ (ಕುವ್ಯಾಕ. ೧೦-೧೮) ; ಗಂಡುಗೆಡಿಸಿದನಿಂತು ಸಕಲಮಹಾವನೀಶ್ವರರ (ವಿಭಾಗ. ೧೦-೨-೪೬). **ಗಂಡುಗಿಡಿಸು** : (ಪ್ರಭಣ್ಣ). [ಗಂಡು + ಕೆಡಿಸು]

**ಗಂಡುಗೆಡು**, ಗಂಡುಗಿಡು (ಕ್ರಿ). ಪರಾಕ್ರಮ ಕುಗ್ಗು ; ಶಕ್ತಿಗುಂದು; ನಿರ್ವೀರ್ಯವಾಗು : ನೆತ್ತರ ಕಾರಿ ರಾವಣ ಗಂಡುಗೆಟ್ಟನು (ಕೌಶಿರಾ. ೨-೩೧) ; ಗಂಡುಗೆಟ್ಟು ಬಳೆದೊಟ್ಟು ಬೃಹನ್ನಳೆಯಾಗಿದ್ದ ಅವನಿರವು ಶಾಪವೋ ತನ್ನ ಪಾಪವೊ (ಭಾಮುಣಿ. ೪೪). **ಗಂಡುಗಿಡು** : ಬಿಡೆ ಪಿಣಿಲಂ ಕುರುಧ್ವಜಿನಿ ತೊಟ್ಟನೆ ಬಾಯನೆ ಬಿಟ್ಟುದಂದು ಗಂಡುಡೆಯುಡೆ ಗಂಡುಗೆಟ್ಟುದು ನೆಗೞ್ತೆಯ ಗಾಂಡಿವಮುಂ ತಗುಳ್ದು ಜೇವೊಡೆಯೆ ಸಿಡಿಲ್ ಸಿಡಿಲ್ದು ಪೊಡೆವಂತೆವೊಲಾಯ್ತು (ಪಂಪಭಾ. ೮-೧೧೧) ; ವಸುಧೀಶಂ ಗಂಡುಗೆಟ್ಟು ಬೆಂಡಾಗಿರ್ದಂ (ಧರ್ಮಾಮೃ. ೪-೨೦೬) ; ಗಜದೊಡ್ಡು ಗಂಡುಗೆಟ್ಟು ಬೆಂಗೊಟ್ಟು ನಿಲ್ಲದೋಡಿಯುಂ (ಗಿರಿಕ. ೬-೬೬ವ). [ಗಂಡು + ಕೆಡು$_1$]

**ಗಂಡುಗೆಡೆ** (ಕ್ರಿ). ಪೌರುಷವನ್ನು ಕೊಚ್ಚಿಕೊಳ್ಳು ; ಜಂಬಕೊಚ್ಚು: ಎನಗಾರ್ಬಲ್ಲಿದರೆಂದು ಗಂಡುಗೆಡೆ [ಪಾಠಾಂ. ಡ]ದೊರ್ವಂ ದೇವಶಕ್ತಿಕ್ಕಿ ಸಾಧನ ಸಮ್ಮೋಹನದಿಂದಮೆನ್ನ ಮುಗಳಂ ಬಲ್ಲಾಳ್ತನಂಗೆಯ್ದು .... ಕೈಕೊಂಡು ನಿಂದಂ (ಸುಕುಮಾ. ೬-೪೨). [ಗಂಡು + ಕೆಡ್ಡೆ]

**ಗಂಡುಗೆದಱು** (ಕ್ರಿ). ಪೌರುಷವನ್ನು ಹೊಗಳಿಕೊ; ಪರಾಕ್ರಮದ ಮಾತುಗಳನ್ನು ಆಡು : ಒಂದಕ್ಕೊಂಬತ್ತ ನುಡಿದು ಕಣ್ಣ ಕೆಂಚನೆ ಮಾಡಿ ಗಂಡುಗೆದಱಿ ಮುಡುಹಿಕ್ಕಿ (ಬಸವ. ೪೪೭) ; ತನ್ನಾಳ್ದನ ಭುಜಬಲಪ್ರತಾಪ ಲೇಪಮನೆ ಮುಂದಿಟ್ಟು ದಂಡಮನೆ ಗಂಡುಗೆದಱಿದ ದೂತನ ಮಾತಿಂಗೆ (ಅನಂಪು. ೧೩-೪೯ವ) ; ಗಂಡುಗೆದಱಿದ ರೋಷಶಿಖಿ ಹುರಿಗೊಂಡುದಕ್ಷಿಗಳಲಿ ವೃಕೋದರ ಕೊಂಡನೇ ತಪ್ಪೇನೆನುತನಿಂದಿದ್ದನಾರಾಮ (ಕುವ್ಯಾಗ. ೮-೨೨). [ಗಂಡು + ಕೆದಱು$_1$ (< ಕೆದಱ್)]

**ಗಂಡುಗೆಯ್** (ಕ್ರಿ). ಪರಾಕ್ರಮವನ್ನು ತೋರಿಸು ; ಸಾಹಸಮಾಡು; ಧೈರ್ಯಮಾಡು : ಎಕ್ಕೆಯಿನಿರ್ಪ ಪುಲ್ಲೆಗಳನಿಲ್ಲಿಯೆ ಮುಗ್ಗಿಸು ಗಂಡುಗೆಯ್ದು ಪೋಪೆಕ್ಕಲವಂದಿಯುಂ ಶಿವಿ (ನಳಚಂ. ೭೪). [ಗಂಡು + ಕೆಯ್$_1$]

**ಗಂಡುಗೆಲಸ**, ಗಂಡುಕೆಲಸ (ನಾ). ೧ "ಉತ್ತಮ ಕಾರ್ಯ; ಮೇಲ್ತರದ ಕಾರ್ಯ" (ಅನಂನಾ). ೨. "ಕಷ್ಟದ ಕೆಲಸ" (ಅನಂನಾ). **ಗಂಡುಕೆಲಸ** : ೩. ಪರಾಕ್ರಮದ ಕೆಲಸ, —ಕಾರ್ಯ : ಪೌರುಷಂ ... ಗಂಡಸುತನ, ಗಂಡುಕೆಲಸ (ಸಿದ್ಧಾಂತಿ. ೩೬೭). [ಗಂಡು + ಕೆಲಸ]

**ಗಂಡುಗೆಲೆ** (ನಾ). ಪರಾಕ್ರಮವನ್ನು ಪ್ರದರ್ಶಿಸು : ಪದುಮಿದೇವಂ ಗಂಡುಗೆಲೆವುತ್ತಿರ್ಪನಂತದಂ ನಾಳೆ ಭೂಮಂಡಲೇಶಂಗಱುಪಿ (ಪದ್ಮರಾ. ೬-೩). [ಗಂಡು + ಕೆಲೆ]

**ಗಂಡುಗೊಡಲಿ** 'ಗಂಡಗೊಡಲಿ' ನೋ.

**ಗಂಡುಗೊಳ್**, ಗಂಡುಗೊಳ್ಳು (ಕ್ರಿ). ಪರಾಕ್ರಮವನ್ನು ಪಡೆ ; ಶೌರ್ಯವನ್ನು ತಾಳು ; ದಿಟ್ಟನಾಗು : ಗಂಡುಗೊಂಡುಗಿಬಗಿಮಾಡಿ ಮಾರ್ಮಲೆತ ವೀರ ಕಿರಾತರನೊಕ್ಕಲಿಕ್ಕಿ (ರಾಜಶೇ. ೫-೧೧೭). **ಗಂಡುಗೊಳ್ಳು** : "ಶೂರನಾಗು ; ಧೈರ್ಯಗೊಳ್ಳು ; ಉದ್ರೇಕಗೊಳ್ಳು" (ಅನಂನಾ). "ಸಾಹಸಮಾಡು" (ಕಸ್ತೂಕೋ. ೨೮೨). [ಗಂಡು + ಕೊಳ್$_1$]

**ಗಂಡುಗೊಳ್ಳು** 'ಗಂಡುಗೊಳ್' ನೋ.

**ಗಂಡುಗೋಗಿಲೆ**, ಗಂಡುಕೋಗಿಲೆ (ನಾ). ಕೋಗಿಲೆಯಲ್ಲಿ ಗಂಡು ; ಗಂಡುಕೋಕಿಲ ; ಪುಂಸ್ಕೋಕಿಲ : ಗಂಡುಗೋಗಿಲೆಯ ತಂಡಮುಂ ತೊಂಡುಗಿಳಿಯ ಪಿಂಡುಂ ಮುಂಪಯಣಮಾಗೆ (ಶಾಂತಿಪು. ೭-೧೨೫ವ) ; ತಂಡತಂಡದಿಂ ಕೂಗುವ ಗಂಡುಗೋಗಿಲೆಗಳಂ (ಗಿರಿಕ. ೩-೧೦೩ವ) ; ಗಿಳಿಗಿನಿದು ನುಡಿಗಳಂ ಬಱಿಸುತಂ ಗಂಡುಗೋಗಿಲೆಗಳ ಸರಂಗಳಂ ತಿರ್ದುತಂ (ಚೆಬಪು. ೧೧-೪೦). **ಗಂಡುಕೋಗಿಲೆ** : ಪಂಜರದ ಗಂಡುಕೋಗಿಲೆಗಳ್ಗೆ ಚೂತಾಂಕುರದ ಕುಟುಕನಿಕ್ಕಲುಂ ... ಪೇೞ್ವ ಮನೋಹರಾಲಾಪಂಗಳಂ ಕೇಳುತ್ತುಂ (ಕಾದಂಪೂ. ೧೦೦೬). [ಗಂಡು+ಕೋಗಿಲೆ]

**ಗಂಡುಜಂಭ** (ನಾ). ಗಂಡಸಿನ ಅಹಂಕಾರ, —ಗರ್ವ : "ಬಸ್ಸಿನಲ್ಲಿ ಹೋಗಿ ಬಸ್ಸಿನಲ್ಲಿ ಬರುವುದಾದರೆ ನನ್ನ ಅಭ್ಯಂತರವಿಲ್ಲ" ಎಂದು ಗಂಡುಜಂಭದಿಂದ ಹೇಳಿದೆ (ಮನೋನಂ. ೬೭). [ಗಂಡು + ಜಂಭ]

**ಗಂಡುಜನ** (ನಾ). ಗಂಡಸರು ; ಪುರುಷವರ್ಗ : ಜಡಜಕುಟ್ಮಲಕುಚಾನ್ವಿತೆ ನಿನ್ನ ಕಂಡಡೆ ಬಿಡಲಾರ್ಪರೆ ಗಂಡುಜನರು (ಮೋಹತ. ೧೦-೨೭). [ಗಂಡು + ಜನ]

**ಗಂಡುಜನ್ಮ** (ನಾ). = ಗಂಡುಜಾತಿ : ಗಂಡುಬೀರಿಯರ ಮಾತಿಗೆ ಮರುಳಾಗಿ ಗಂಡುಜನ್ಮದ ಮೇಲೆಯೇ ಸೇಡು ತೀರಿಸಿಕೊಳ್ಳಲು ಕಚ್ಚೆ ಹಾಕಿ ಅಧಿಕಾರದಂಡ ಹಿಡಿದಿದ್ದಳು (ಭೂಮಿತಾ. ೭೦). [ಗಂಡು + ಜನ್ಮ]

**ಗಂಡುಜಾತಿ** (ನಾ). ಪುರುಷಜಾತಿ, —ವರ್ಗ : 'ಹೆಣ್ಣುಜಾತಿ' ಪರಾ. [ಗಂಡು + ಜಾತಿ]

**ಗಂಡುಜೋಹ** (ನಾ). ಗಂಡಸಿನ ರೂಪ ; ಪುರುಷವೇಷ : ಇವದಿರು ಗಂಡುಜೋಹದ ಗರುವ ಸೂಳೆಯರು (ಕುವ್ಯಾದ್ರೋ. ೧೯-೪೪) ; ಗಂಡುಜೋಹದ ಸೂಳೆಯುರ್ (ಚೆಬಪು. ೪೩-೪೫). [ಗಂಡು + ಜೋಹ (< ಚೋಹ)]

**ಗಂಡುಡಿಗೆ** 'ಗಂಡುಡುಗೆ' ನೋ.

**ಗಂಡುಡುಗು** (ಕ್ರಿ). ಪೌರುಷ ಉಡುಗು ; ಶೌರ್ಯಗುಂದು ; ದುರ್ಬಲವಾಗು : ಗಾಡಿಗೆಟ್ಟುಗಂಡುಡುಗಿರ್ದ ದೇವರ್ಕಳನಲ್ಲಲ್ಲಿ ಕರೆದು (ಗಿರಿಕ. ೬-೭೯ವ) ; ಜೈನರೆಲ್ಲಂ ಗಂಡುಡುಗಿ ಬಿಗುತುರ್ಮ ಮಣಿದರಾದ್ಯರ ಕಥೆಯಂ ಕೊಂಡು ಕೊನೆವಂತು (ವೃಷವಿ. ೩೬-೫೮). [ಗಂಡು + ಉಡುಗು$_1$]

**ಗಂಡುಡುಗೆ**, ಗಂಡುಡಿಗೆ (ನಾ). ೧. ಗಂಡಸಿನ ವೇಷ ; ಪುರುಷವೇಷ: ಪಟ್ಟಪಟ್ಟಾವಳಿಯ ಗಂಡುಡು[ಪಾಠಾಂ.ಡಿ]ಗೆಯೊಳಮೆಸೆದು ಪಸದನಂಗೆಯ್ದು (ಜಗವಿ. ೪-೮೦ವ) ; ಹುಡುಗಿಯೊಬ್ಬಳಿಗೆ ಗಂಡುಡುಗೆಯನ್ನು ಹಾಕಿದಂತೆ ತೋರುತ್ತಿತ್ತು (ಕಳಹು. ೨). **ಗಂಡುಡಿಗೆ** : ೨. ವೀರನ ಉಡುಗೆ ; ವೀರಗಾಸೆ : ಅಗಳೆ ಗಂಡುಡಿಗೆಯುಟ್ಟು ಬಿಟ್ಟು ಪಿಣಿಲಂ (ಶಮದ. ೨೩೮ ಪ್ರಯೋ) ; ಬಿಗಿದ ಗಂಡುಡಿಗೆಯಲಿ ಹೊನ್ನಾಯುಗದ ಹೊಳೆವ ಕಠಾರಿಯನು ಮೊನೆಮುಗುಚಿ... ಆಹವಕ್ಕನುವಾದನಭಿಮನ್ಯು (ಕುವ್ಯಾದ್ರೋ. ೪-೪೯) ; ಬಿಗಿದ ಗಂಡುಡಿಗೆ ಕಟ್ಟಿದ ಬಂಕು ಕಯ್ಯೊಳು (ಕುರಾಸಾಂ. ೧೪-೩೯). [ಗಂಡು + ಉಡುಗೆ]

**ಗಂಡುಡೆ** (ನಾ). = ಗಂಡುಡುಗೆ ೨: ಬಾಹುಯುದ್ಧ ಸನ್ನದ್ಧನಾಗಿ ಕಲಿಗಂಟಿಕ್ಕಿ ಗಂಡುಡೆಯುಮನುಟ್ಟು (ಪಂಪಭಾ. ೮-೬೩೪).
[ಗಂಡು + ಉಡ್ಕ$_2$]

**ಗಂಡುಡೆಯುಡು** (ಕ್ರಿ). ೧. ಗಂಡಸಿನ ವಸ್ತ್ರವನ್ನು ತೊಡು; ಪುರುಷನ ವೇಷವನ್ನು ಹಾಕು. ೨. ವೀರಗಾಸೆ ಹಾಕು: ಬಿಡೆ ಪಿಣಿಲಂ ಕುರುಧ್ವಜಿನಿ ತೊಟ್ಟನೆ ಬಾಯನೆ ಬಿಟ್ಟುದಂದು ಗಂಡುಡೆಯುಡೆ ಗಂಡುಗೆಟ್ಟುದು (ಪಂಪಭಾ. ೮-೧೦೧); ಗಂಡುಡೆಯುಟ್ಟು ಕೈದುವಿಡಿದುಮ್ಮಳಮಂ ನಿನಗುಂಟುಮಾಟ್ಟು ಬಲ್ಗಂಡಿನ ದೇವಮಾನವ ವಿಯಚ್ಚರರೊರ್ವರುಮಿಲ್ಲ (ಪಂರಾಮಾ. ೯-೧೫೮); ಒಕ್ಕ ಸೆಱಂಗಿನಿಂ ಮೊಲೆಯ ಗಾಳಿಸಿ ಗಂಡುಡೆ ಯುಟ್ಟು ಸಜ್ಜು ಗಂಟಿಕ್ಕಿ (ಅರ್ಧನೇ. ೬-೧೦).
[ಗಂಡುಡೆ + ಉಡು$_1$]

**ಗಂಡುತನ** (ನಾ). ಪೌರುಷ; ಪರಾಕ್ರಮ; ಶೌರ್ಯ: ಅಱುವೆಸ ದೊಳ್ನಂಟನೆಡಱೊಳೂರಱವಿನೊಳಂ ತಱಿಸಂದು ಗಂಡುತನಮನೆ ನೆಱಪದವಂ ಗಂಡನಲ್ಲನೆಂತುಂ ಷಂಢಂ (ಗದಾಯು. ೨-೨೪); ನಿನ್ನ ಗಂಡುತನದ ಪುರುಳಂ ಕಂಡೆನ್ನ ತಂಗಿಯರ್ ಕರುಳಂ ಪಿಡಿದು ನಗೆಯೊಳ್ ಪೊರಱುತ್ತಮಿರ್ದರ್ (ಪಂಚತಂ. ೨೮೪-೪); ಗಂಡುತನ ವೇನಾಯ್ತು ಹೇಳೆಲೆ ಭಂಡ (ಕೌಶಿರಾ. ೨೧-೫೧); ಗಂಡುತನಕೇಸೋ ಸೊನ್ನಿ ಲೆಕ್ಕಕ್ಕೆ ಮೂವತ್ತುಮೂರುಕೋಟಿ (ಗರಿ. ೫೧-೧); ವಿರುದ್ಧ ಪರಿಸ್ಥಿತಿಯನ್ನು ಎದುರಿಸಿ ಗೆಲ್ಲುವ ಗಂಡುತನವನ್ನು ಮೆರೆಯದೆ (ಹಂಗೀತೆ. ೮೪). [ಗಂಡು + -ತನ]

**ಗಂಡುತುರುಚೆ** 'ಗಂಡುದುಱುಚೆ' ನೋ.

**ಗಂಡುತೊತ್ತಿಗ** (ನಾ). ಗಂಡಾಳು; ಸೇವಕ: ಎನಗಮರರೆಲ್ಲರು ಗಂಡುತೊತ್ತಿಗರೈಸೆ (ಕೌಶಿರಾ. ೨೨-೧೨). [ಗಂಡು + ತೊತ್ತಿಗ]

**ಗಂಡುತೊರೆ** 'ಗಂಡುದೊಱೆ' ನೋ.

**ಗಂಡುದುಱುಚೆ**, ಗಂಡುತುರುಚೆ (ನಾ). ತುರುಚೆ ಗಿಡದಲ್ಲಿ ಒಂದು ಬಗೆ:- ಗಂಡುದುಱುಚೆ . . . ಶುಂಠಿ ಇವರ ಕಷಾಯವನಾದರೂ ಕೊಡಿಸಲು ವಾತಜ್ವರಹರ (ವೈದ್ಯಸಾ. I, ೫೮). **ಗಂಡುತುರುಚೆ:** ಗಂಡುತುರುಚೆಬೇರು, ಅಮರದವಳ್ಳಿ, ಕೊಡನಾರಿಗೆಡ್ಡೆ ಇವಂ ಕಷಾಯ ವಿಕ್ಕಿ ಸೇವಿಸಿದರೆ ವಾತಜ್ವರಂ ಕೆಡುಗುಂ (ಸಕವೈ. ೬೬).
[ಗಂಡು + ತುಱುಚೆ]

**ಗಂಡುದೊತ್ತಾಳ್** 'ಗಂಡುದೊಱ್ತಾಳ್' ನೋ.

**ಗಂಡುದೊತ್ತು** 'ಗಂಡುದೊಱ್ತು' ನೋ.

**ಗಂಡುದೊಳ್ತು** 'ಗಂಡುದೊಱ್ತು' ನೋ.

**ಗಂಡುದೊಱೆ**, ಗಂಡುತೊರೆ (ನಾ). ಪೂರ್ವದಿಂದ ಪಶ್ಚಿಮಕ್ಕೆ ಹರಿಯುವ ನದಿ; ಗಂಡುಹೊಳೆ; ನದ: "ಭಿದ್ಯಃ, ಉದ್ಯಃ, ನದಃ —ಈ ೩ ಗಂಡುದೊಱೆ" (ಹಲಾಯು. ೧೧೦-೪೪); "ನದ್ಯಮುದ್ಯಮೆನೆ ಭೇದ್ಯಮೆನೆ ಗಂಡುದೊಱೆ" (ಮಂಗರಾ ೧೨೨-೧೦). **ಗಂಡುತೊರೆ:** (ಶ). 'ಗಂಡುಹೊಳೆ' ಪರಾ. [ಗಂಡು + ತೊಱೆ$_2$]

**ಗಂಡುದೊಱ್ತಾಳ್**, ಗಂಡುದೊತ್ತಾಳ್ (ಕ್ರಿ). ಗಂಡಾಳಾಗಿ ಮಾಡಿಕೊಳ್ಳು; ಸೇವಕನನ್ನಾಗಿ ಮಾಡಿಕೊಳ್ಳು: ಈಕೆಗಳನಂಗ ಕ್ರೀಡೆಯೊಳ್ ಮಚ್ಚಿದಂದಾರಂ ದಂಡಿಸರಾರನಂಡಲೆಯರಾರಂ ಗಂಡು ದೊಱ್ತಾಳರ್ (ಮಲ್ಲಿಪು. ೬-೫೫). **ಗಂಡುದೊತ್ತಾಳ್:** ಕದಪಂ ಪೊಯ್ವನ್ನುದಕ್ಕೆರ್ಗೆಗೊಳಿಸಿ ತಿವುಳನಂ ಗಣ್ಡುದೊತ್ತಾಳ್ದಂ (ಮೈ ಆರಿ. ೧೯೨೯. ೬೫-೧೮; 1024); ಅವಂ ಸ್ವರ್ಗಾಪವರ್ಗಕ್ಕೆಳಸುವನವನಂ ಗಂಡುದೊತ್ತಾಳ್ವರ್ (ಮಲ್ಲಿಪು. ೨-೫೬).
[ಗಂಡುದೊಱ್ತು + ಆಳ್$_1$]

**ಗಂಡುದೊಱ್ತು**, ಗಂಡುದೊತ್ತು, ಗಂಡುದೊಳ್ತು (ನಾ). ೧. ಗಂಡಾಳು; ಸೇವಕ; ದಾಸ: ಎನಗೂ ಜೂದಿನೊಳಗ್ರಜಾನುಜ ಸಮೇತಂ ಗಂಡುದೊಱ್ತಾಗಿ ಕಾನನದೊಳ್ ವಲ್ಕಲಧಾರಿಯಾಗಿ ಹರನೊಳ್ದಿವ್ಯಾಸ್ತ್ರಮಂ ಬೇಡೆ (ಗದಾಯು. ೩-೨೯); ಇನಲಗ್ನಾಂಶ ಪತೀಂದು ಜೀವರೆನಿಪಾ ನಾಲ್ಕುಂ ಗ್ರಹಂ ನೀಚಶತ್ರುನಿವಾಸಂಗಳೊಳಾ . . . ಇರಲ್ ಬೆಸಲೆಗೊಂಡರ್ ಗಂಡನುಂ ಗಂಡುದೊಱ್ತಿನಿಕುಂ (ಜಾತತಿ. ೨೧-೨೧). **ಗಂಡುದೊತ್ತು:** ೧. ಈಗಳು ಹತ್ತೆಂಟು ಹರೆಯದ ಗಂಡುದೊತ್ತಾದೆ ಏಳೇಳು (ನಂಬಿರ. ೬-೯೫); ಭಂಡರೀ ಭೂಮಿಪರು ದ್ರುಪದನ ಗಂಡುದೊತ್ತಿರು (ಕುವ್ಯಾಅ. ೧೪-೧೬); ನಾನು ಪಂಪಾವಿರೂಪಾಕ್ಷನ ಗಂಡುದೊತ್ತು (ತುಂಗಭ. ೯೧); ನಾನು ನಿನ್ನ ಗಂಡುದೊತ್ತು (ಕಲ್ಲಿಕಾ. ೧೩೬). **ಗಂಡುದೊಳ್ತು:** ೧. ಪೆಂಡಿರ ಪೆಸರ ಪಿಡಿಯದಿರ್ಪ ಯತಿಗಳ ತಂಡವ ಪಿಡಿದು ತಂದಿರದೆ ಗಂಡುದೊಳ್ತಾಗಿಪ ಮದನ (ಕುರಾಸಾಂ. ೩೩-೧೪). ೨. "ಖೋಜೆ" (ಪ್ರಭಣ್ಣ).
[ಗಂಡು + ತೊಱ್ತು]

**ಗಂಡುದೋಱು** (ಕ್ರಿ). ಪರಾಕ್ರಮವನ್ನು ತೋರಿಸು; ಶೌರ್ಯವನ್ನು ಪ್ರದರ್ಶಿಸು: ಅರಿಯಂಗುಕ್ಕುರ್ಗಡಿ ಬಲ್ಲಿದಂಗೆ ಘಟಸರ್ಪಂ ಗಂಡುದೋರ್ಪಂಗೆ ಮಾಡಿ (ಎಕ. VII, ಶಿಕಾರಿ. ೧೫೧-೪೨; 1042); ಮಾಳಿಗೆಯಂ ಸುಟ್ಟು ಸೀತೆನೆಯಂ ತಿಂಬಮುಗನಂ ಕೊಂದು ಗಂಡು ದೋಱುವ . . . ಕಟ್ಟೆಗ್ಗರಂತೆ (ಧರ್ಮಾಮೃ. ೯-೧೬೨).
[ಗಂಡು + ತೋಱು$_1$]

**ಗಂಡುನಡಿಗೆ** (ನಾ). ದಿಟ್ಟತನದ ಹೆಜ್ಜೆ; ಧೈರ್ಯದಿಂದ ನಡೆಯುವಿಕೆ: ಕವಿ ಹೊಸದಾಗಿ ನಿರ್ಮಿಸಿಕೊಂಡಿರುವ ಉದ್ದಂಡ ಷಟ್ಪದಿಯ ಗಂಡುನಡಿಗೆ ವೀರಭಾವಪ್ರಧಾನವಾದ ವಸ್ತುವಿಗೆ ಅತ್ಯಂತ ಉಚಿತ (ಪರಿಶೀ. ೬೧). 'ಹೆಣ್ಣುನಡಿಗೆ' ಪರಾ.
[ಗಂಡು + ನಡಿಗೆ (< ನಡಗೆ)]

**ಗಂಡುನರ** (ನಾ). ಪರಾಕ್ರಮಿಯಾದ ಮಾನವ: ಮೋಹಂಗೊಂಡು ಪುಂಡರಕ್ಕಸಪುರಿಗೆ ಗಂಡುನರರು ಬರುವುದೆಂತು (ಸೌಗಂಧಿ. ೯೦-೧೦).
[ಗಂಡು + ನರ$_2$]

**ಗಂಡುನವಿಲು** (ನಾ). ಗಂಡುಜಾತಿಯ ನವಿಲು; ಮಯೂರ; ಸೋಗೆ: "ಸೋಗೆಯೆನಲ್ ಗಂಡುನವಿಲು" (ಚತುನಿ. ೯೧).
[ಗಂಡು + ನವಿಲು (< ನವಿಲ್)]

**ಗಂಡುನಾಬಳ್ಳಿ** (ನಾ). ಒಂದು ಬಗೆಯ ಬಳ್ಳಿ: (ಶ). [?]

**ಗಂಡುನೆರೆ** (ಕ್ರಿ). ೧. "ಶಕ್ತಿಯುಂಟಾಗು; ಸಾಹಸಗೂಡು" (ಪ್ರಭಣ್ಣ). ೨. ಶಕ್ತಿಯನ್ನು ಹೊಂದು; ಧೈರ್ಯವನ್ನು ಪಡೆ: ಪ್ರೀತಿವಟ್ಟುನಡಪುತ್ತಿರ್ಪುದುಮದು ಗಂಡುನೆರೆದುಕೊಂಡು ತುಡುಗುಣಿಯಾಗಿ ಭಾಂಡ ಸಂಕರಂಗೆಯ್ಯುತ್ತಿರ್ಪುದುಂ (ಪಂಚತಂ. ೨೬೦-೧೯). [ಗಂಡು + ನೆರೆ$_1$]

**ಗಂಡುಪಂಡಿತವಕ್ಕಿ** (ನಾ). ಗಂಡುಗಿಳಿ, —ಶುಕ: ಗಂಡುಪಂಡಿತ ವಕ್ಕಿ ಕೇಳ್ (ಉದ್ಭಟ. ೭-೭೧).
[ಗಂಡು + ಪಂಡಿತವಕ್ಕಿ]

**ಗಂಡುಪಾಳ್ಯ** (ನಾ). ಕೇವಲ ಗಂಡಸರಿರುವ ಮನೆ: ಮುದುಕಿ ಸತ್ತಮೇಲೆ ಆ ಮನೆ ಕೇವಲ ಗಂಡುಪಾಳ್ಯವಾಗಿ ಹೋಗಿದೆ (ರೂಢಿ).
[ಗಂಡು + ಪಾಳ್ಯ (< ಪಾಳೆಯ)]

**ಗಂಡುಪಿಂಡ** (ನಾ). ಗಂಡುಪಿಳ್ಳೆ; ಪುರುಷ: ಅದರ ವಿತರಣೆಯ ಕಾಮಗಿರಿಯನ್ನು ಆ ಆ ಮನೆಗಳ ಗಂಡುಪಿಂಡಗಳ ಪಾಲಿಗೆ ಬಿಟ್ಟು (ದೀಪಹ. II, ೧). [ಗಂಡು + ಪಿಂಡ]

**ಗಂಡುಪುತ್ತಳಿ** (ನಾ). ಗಂಡುರೂಪದ ಬೊಂಬೆ: ಚಿತ್ತೈಸು ಮದನ ಮೋಹಿನಿ ಚೆಲುವಿನ ಕರುವೆತ್ತಿಹ ಗಂಡುಪುತ್ತಳಿಯು ಬಿತ್ತರವಡೆದೀ ಪಟ್ಟಣದೊಳಗೊರ್ವನುತ್ತಮನಾಯಕನಿಹನು (ಕಂನವಿ. ೯-೪೫).
[ಗಂಡು + ಪುತ್ತಳಿ (< ಪುತ್ತಱಿ)]

**ಗಂಡುಪೋರ** (ನಾ). = ಗಂಡುಕೂಸು : ರಾಮಿಯ ಕಣ್ಣಮುಂದೆ . . . ಅವಳ ಗಂಡುಪೋರನಲ್ಲದೇ ಇನ್ನೇನೂ ಕಾಣುವುದೇ ಇಲ್ಲ (ಹೊಸಕ್ಷಿ. ೬೩).
[ಗಂಡು + ಪೋರ]

**ಗಂಡುಬತ್ತ** (ನಾ). ಬತ್ತದೊಂದಿಗೆ ಸೇರಿ ಬರುವ ಒಂದು ಬಗೆಯ ಬೀಜ; ಹುಲ್ಲುಬೀಜ: ಅಕ್ಕಿಯಲ್ಲಿ ತುಂಬ ಗಂಡುಬತ್ತ ಸೇರಿದೆ (ರೂಢಿ). [ಗಂಡು + ಬತ್ತ]

**ಗಂಡುಬಿಡಾರ** (ನಾ). = ಗಂಡುಪಾಳ್ಯ. [ಗಂಡು + ಬಿಡಾರ]

**ಗಂಡುಬಿದಿರು,** ಗಂಡುಬಿದುರು (ನಾ). ಗಟ್ಟಿಯಾದ ಬಿದಿರು; ಬಲವಾದ ಬೊಂಬು: ಬಿದಿಯ ಮೆಳೆಯಲಿ ಗಂಡುಬಿದಿರಾಗು (ಹೆಬ್ಬೆರ. ೪-೧೩); ಗಂಡುಬಿದಿರಿನ ಬಡಿಗೆಗಳು (ಮುಂಬಯಿ. ೪-೫೫). **ಗಂಡುಬಿದುರು :** "ಗಂಡುಬಿದುರು, ಕಿರಿಬಿದಿರು" (ವೈಔಗಿ. ೨೯-೫೬೭). [ಗಂಡು + ಬಿದಿರು$_2$ (< ಬಿದಿರ್$_2$)]

**ಗಂಡುಬಿದುರು** 'ಗಂಡುಬಿದಿರು' ನೋ.

**ಗಂಡುಬೀಡು** 'ಗಂಡುವೀಡು' ನೋ.

**ಗಂಡುಬೀರನಗಿಡ** (ನಾ). ಒಂದು ಬಗೆಯ ಗಿಡ : "ಗಂಡುಬೀರನ ಗಿಡ, ಗಂಡುಕರೀತುಂಬೆ, ಮೊಗಬೀರಚೆಟ್ಟು" (ವೈಔಗಿ. ೭-೧೧೭).
[ಗಂಡುಬೀರ$_0$ + ಗಿಡ (<ಗಿಡು)]

**ಗಂಡುಬೀರಿ,** ಗಂಡಬೀರಿ (ನಾ). ಗಂಡುತನವನ್ನು ತೋರುವವಳು; ಹೆಣ್ಣುತನವನ್ನು ಬಿಟ್ಟು ವ್ಯವಹರಿಸುವವಳು : ಗಂಡುಬೀರಿ, ಎಂದು ಅನ್ನುತ್ತ ಗುಂಡನು ನಿಂತಲ್ಲಿಂದ ಕದಲಲಿಲ್ಲ (ರಂಗರೋ. ೧೮೫); ಗಂಡುಬೀರಿಯರ ಮಾತಿಗೆ ಮರುಳಾಗಿ ಗಂಡುಜನ್ಮದ ಮೇಲೆಯೇ ಸೇಡುತೀರಿಸಿಕೊಳ್ಳಲು ಕಚ್ಚೆಹಾಕಿ ಅಧಿಕಾರ ದಂಡ ಹಿಡಿದಿದ್ದಳು (ಭೂಮಿತಾ. ೭೦); ಎಷ್ಟೋ ಜನ ಅವಳನ್ನು ಗಂಡುಬೀರಿ, ಅಮೆಜಾನ್ ಎಂದು ಕರೆದುದೂ ಉಂಟು (ಆಲಹೂ. ೩೭). **ಗಂಡಬೀರಿ :** ಗಂಡಬೀರಿಯ ಬಗ್ಗೆ ವಸಂತರಾಯನಿಗೆ ಎಳ್ಳಷ್ಟೂ ಆದರವಿರಲಿಲ್ಲ (ಗಂಮಾಯಿ. ೬೧); ಗಂಡಬೀರಿ, ಸುಮ್ಮಗ ದಾರೀಹಿಡಿದು ಹೋಗು (ದಾಸಹು. ೧). [ಗಂಡು + ಬೀರ + -ಇ$_2$]

**ಗಂಡುಬೀರಿತನ** (ನಾ). ಗಂಡುಬೀರಿಯ ವರ್ತನೆ; ಅತಿದಿಟ್ಟತನ: ಆಗಾಗ ಗಂಡನಲ್ಲಿ ಗಂಡುಬೀರಿತನ ತೋರಿಸುತ್ತಿದ್ದಳು (ಕಾವೇರಿ. ೧೩೪).
[ಗಂಡುಬೀರಿ+ -ತನ]

**ಗಂಡುಬೆಸ** 'ಗಂಡುವೆಸ' ನೋ.

**ಗಂಡುಭಾಷೆ** (ನಾ). ಶಕ್ತಿಯುತವಾದ ಭಾಷೆ; ವೀರ್ಯವತ್ತಾದ ನುಡಿ : ಯುದ್ಧವರ್ಣನೆಯಲ್ಲಿ ಶಕ್ತಕವಿಗಳು ಗಂಡುಭಾಷೆಯನ್ನು ಬಳಸುತ್ತಾರೆ (ರೂಢಿ). [ಗಂಡು + ಭಾಷೆ]

**ಗಂಡುಭೂಮಿ** (ನಾ). ಪರಾಕ್ರಮಿಗಳ ನಾಡು; ವೀರರ ಬೀಡು; ಗಂಡುಮೆಟ್ಟು : ಚಿತ್ರದುರ್ಗವು ಬಹಳ ಗಂಡುಭೂಮಿಯಾಗಿದೆ (ಚಿತ್ರಪಾ. ೭೪); ಮಹಾವೀರ ಪರಶುರಾಮನು ಮೆಚ್ಚಿದ ಗಂಡುಭೂಮಿಯಲ್ಲವೇ ಈ ಕರ್ಣಾಟಕ (ಶ್ರೀವಿದ್ಯಾ. ೩). [ಗಂಡು + ಭೂಮಿ]

**ಗಂಡುಮಗ** (ನಾ). ೧. ಗಂಡುಕೂಸು; ಪುತ್ರ : ನವಮಾಸಂ ನೆಱೆವುದುಮೆನ್ನ ಪೆಂಡತಿ ಗಂಡುಮಗನಂ ಪೆಱಲೊಡಂ (ಪಂಚತಂ. ೧೮೭-೫); ನೆಱೆ ಗಂಡುಮಗನೆನಗಾದರೆ ಮೇಲುದ ಮಱೆಮಾಡಿಕೊಂಡಮರ್ದಪ್ಪಿ ಪೆಱೆಹಿಂಗದೆ ನೋಡಿ ನುಡಿಸುವೆ (ಮೋಹತ. ೧೭-೪); ಗಂಡುಮಗನಾದನವಮ್ಮಾ ಕಂಜನೇತ್ರಿಗೆ (ಸೌಗಂಧಿ. ೧೯-೭). ೨. ಸೇವಕ; ಗಂಡಾಳು : ಇಂದು ಗಂಡುಮಗ ಕೆಲಸಕ್ಕೆ ಬರಲಿಲ್ಲ (ರೂಢಿ).
[ಗಂಡು + ಮಗ]

**ಗಂಡುಮಗು** (ನಾ).=ಗಂಡುಮಗ **೧.** : ಗಂಡುಮಕ್ಕಳಿಲ್ಲದ ಮುಂಡೆಯ ಮನಸ್ಸು ಗುಂಡಿಗಿಂತ ಗಟ್ಟಿ (ಗಾದೆ). 'ಹೆಣ್ಣುಮಗು' ಪರಾ.
[ಗಂಡು + ಮಗು]

**ಗಂಡುಮಲಸೂತ್ರ** (ನಾ). ಗಟ್ಟಿಯಾದ ತಿರುಪು, —ಮರಸುತ್ತು : ಆ ಪಾತ್ರೆಗೆ ಒಂದು ಕೊಳವೆ ಹಚ್ಚಿರುತ್ತದೆ. ಅದರ ತುದಿಗೆ ಹೊರಮೈಯಲ್ಲಿ ಗಂಡುಮಲಸೂತ್ರದ ಪೇಚುಗಳಿರುತ್ತವೆ (ಮುಂಬಯಿ. ೪-೭೨).
[ಗಂಡು + ಮಲಸೂತ್ರ]

**ಗಂಡುಮಱಿ** (ನಾ). ಎಳೆಯ ಗಂಡುಪ್ರಾಣಿ; ಗಂಡುಶಿಶು : ಚಾಟಕೈರ-ಗುಬ್ಬಿಗೆ ಹುಟ್ಟಿದ ಗಂಡುಮಱಿ (ನಾಚಿರಾ. ೬); ಗಂಡುಮಱಿ ಗುಹ್ಯದಲಿ ಸಂಗವಕೊಂಡು ಸಾವಂದದಲಿ (ಕುವ್ಯಾಆ. ಓರಿಇ. ೨೬-೮೬).
[ಗಂಡು + ಮಱಿ]

**ಗಂಡುಮಿಗು** (ಕ್ರಿ). ಪೌರುಷ ಹೆಚ್ಚಾಗು; ಬಹಳವಾಗಿ ಸೊಕ್ಕು : ಗಂಡುಮಿಕ್ಕುಪತಾಪಿಸುವುದುದ್ದಂಡಿಸುವುದೇ ನನ್ನ ಸಾಕಿದ ಗಂಡನೋ ನೀನೀಗಳೋಹಿಯೊ ಬೊಜಗನೊ (ಬಸವು. ೪೦-೩೪); ಅಕ್ಕಱಿಂದಂ ಸಾಕಲಾಗಿ ಪಿರಿದುಂ ಗಂಡುಮಿಕ್ಕು ಮೆಯ್ಯಱಿಯದೇ ಮೇಲುತಾಗಂ ನೋಡದುಕ್ಕುಸೊಕ್ಕಿಂ ಬೆಳೆದು ಜವ್ವನಂ ಬಡೆದು ಜೂದುಂಗಾಱನಾದೆಯಲ್ಲ (ಸಮ್ಯಕೌ. ೧೦-೮). [ಗಂಡು + ಮಿಗು$_1$]

**ಗಂಡುಮೀರು** (ಕ್ರಿ). ಉದ್ಧಟನಾಗು; ಹತೋಟಿಮೀರು : ಹಾಗಾದರ ಹೊಲೇರ ಗಂಡುಮೀರಿದರನ್ನು (ಹೊಸಂಸಾ. ೩೬-೯).
[ಗಂಡು+ ಮೀರು$_1$ (< ಮೀಱು)]

**ಗಂಡುಮೆಟ್ಟು** (ನಾ). ಪರಾಕ್ರಮಿಗಳ ಭೂಮಿ; ಕೆಚ್ಚಿನ ನೆಲ: ಕರ್ನಾಟಕದ ಗಂಡುಮೆಟ್ಟಿನ ಸ್ಥಲವಾದ ಸೊಲ್ಲಾಪುರ (ಕನ್ನನು ೧-೧೬೦); ಕನ್ನಡಿಗರ ಗಂಡುಮೆಟ್ಟಾದ ಕಮ್ಮಟದುರ್ಗ (ರಾಜ್ಯೋದ. ೭೧).
[ಗಂಡು + ಮೆಟ್ಟು$_2$]

**ಗಂಡುಮೋಳಿಗ** (ನಾ). ವಿಟ : ಗಂಡುಮೋಳಿಗರ ಕೈ ಬೆಮರೊಂದದ ಸೂಳೆಮೋಳಂ (ಚಿಕವಿ. ೬-೧೫೫).
[ಗಂಡು + ಮೋಳಿಗ]

**ಗಂಡುರಾಮೆ,** ಗಂಡರಾಮಿ (ನಾ). = ಗಂಡುಬೀರಿ : ಮಗಳು 'ಗಂಡುರಾಮೆ'ಯಾಗಿ ನಡೆಯುತ್ತಿರುವುದನ್ನು ನೋಡಿದಾಗ ಅವರು ವಿಚಾರಿಸತೊಡಗಿದರು (ರಂಗರೋ. ೧೮೭); ಅಲೆದಾಡುತ್ತಿರುವ ಗಂಡುರಾಮೆಗಳ ಗುಂಪು (ಜೀದಾನ. ೨೪); ತಾನು ಕೇವಲ ಗಂಡುರಾಮೆಯಂತೆ ವರ್ತಿಸಿದೆ (ಚೀನಬಾ. ೧೩೫). **ಗಂಡರಾಮಿ :** ಯಾವಾಗಲೂ ಗಂಡರಾಮಿಯಂತೆ ಪುರುಷರೊಡನೆ . . . ಆಕೆಯ ಕಾಲಕ್ಷೇಪ (ಕುಮುದಿ. ೧೨೬); ನಾಚಿಗ್ಗಿ ಬಿಟ್ಟ ನಿಂತೆ ಗಂಡರಾಮಿ ಹಾಂಗ (ನಡುಮ. ೧೦೩); ಎಲ್ಲಾರೂ ಅಂಬೋಹಾಂಗ ನೀ ಗಂಡರಾಮಿಯಾನ ಖರೆ ನೋಡು (ಅಮನಿ. ೨೨).
[ಗಂಡು + ರಾಮೆ]

**ಗಂಡುರೂಪು** (ನಾ). ಗಂಡಸಿನ ರೂಪು; ಪುರುಷಾಕಾರ : ಪುಟ್ಟಿದಂ ಸಂಸಾರ ಸುಖದ ಲೀಲೆಯಿನಲ್ಲಿ ಸುಮುಹೂರ್ತವೇ ಗಂಡುರೂಪಾದ ತೆಱನಾಗೆ (ಬಸರ. ೧-೧೩೧). [ಗಂಡು + ರೂಪು]

**ಗಂಡುರೊಟ್ಟಿ** (ನಾ). ಎಲೆಯ ಮೇಲೆ ತಟ್ಟಿ, ಎಲೆಯನ್ನು ಮುಚ್ಚಿ ಕೆಂಡದಲ್ಲಿ ಬೇಯಿಸುವ ರೊಟ್ಟಿ; ಒರಟಾದ ರೊಟ್ಟಿ; ಕೆಂಡರೊಟ್ಟಿ: ನಡುನಡುವೆ ಗಂಡುರೊಟ್ಟಿ ಉಣ್ಣುವ ಪ್ರಸಂಗಗಳು (ಚಿಟ್ಟಹೊ. ೨೧).
[ಗಂಡು + ರೊಟ್ಟಿ]

**ಗಂಡುವರಿಜ** (ನಾ). ಪೌರುಷವನ್ನು ಪಡೆದವನು ; ಶೂರ ; ಧೀರ : ನಿಚ್ಚ ಸೊಗದ ಗಂಡುವರಿಜಂಗೆ ಗೆಲವಕ್ಕೆ (ರಾಮಾಶ್ವ. ೯೮-೧೫). [ಗಂಡುವರಿಜು + -ಅ₇]

**ಗಂಡುವರಿಜು,** ಗಂಡವರಿಜು (ನಾ). ಗಂಡುರೂಪು ; ಪುರುಷಾಕಾರ : ನಯನಾಕರ್ಷಣದೆ ಗಂಡುವರಿಜಂ ಕೈಕೊಂಡುದೋ (ಪಂರಾಮಾ. ೩-೩೮) ; ಈ ರೀತಿಯಲ್ಲಿ ಗಂಡುವರಿಜಂದಳೆದ ಪಂಚಭೂತಂಗಳಂತೆ (ಭಾರಶಾಂ. ೩೭-೨೭೪). **ಗಂಡವರಿಜು :** ಸೋಲದಿಂದೆಳಸಿ ಸುಱಿಯಿಸುವ ಕಡೆಗಣ್ಣ ನೋಟದಿಂ ಮಾಟದ ಗಂಡವರಿಜೆಂದಱಿದು (ಪಂರಾಮಾ. ೭-೧೦೫ ವ) ; ಗಂಡವರಿಜು, ಗಂಡವಸದನ (ಶಮುದ. ೨೯೫ ಪ್ರಯೋ). [ಗಂಡು + ಪರಿಜು]

**ಗಂಡುವಳಿ** (ನಾ). "ಗಂಡಿನ ಕಡೆಯವರು" (ಜಾನಕೋ. ೪೫). [ಗಂಡು + ಬಳಿ₃ (< ಬೞಿ₃)]

**ಗಂಡುವಾಳ** (ನಾ). ಎರಡು ಇಂದ್ರಿಯಗಳುಳ್ಳ ಒಂದು ಬಗೆಯ ಕ್ರಿಮಿ ; ಎರೆಹುಳು ; ಮಣ್ಣುಹುಳು : ಶಂಬೂಕ ಮಾತೃವಾಹಿ ಶಂಖ ಶುಕ್ತಿ ಗಂಡುವಾಳ ಜಲೂಕ ಭೂನಾಗಾ ಪಾದೋದರ ಕ್ರಿಮ್ಯಾದಿ ದ್ವೀಂದ್ರಿಯಗಳ್ (ತತ್ತ್ವಪ್ರ. ೯೮). [< ಸಂ. ಗಂಡೂಪದ = ಎರೆಹುಳು]

**ಗಂಡುವೀಡು,** ಗಂಡುಬೀಡು (ನಾ). ೧. ಪೌರುಷದ ಬೀಡು ; ವೀರತ್ವದ ನಾಡು : ಜವನಂ ಜವಂಗೆಡಿಸುವಾ ಗಂಡುವೀಡು (ಶ್ರೀರಾಮಾ. ೪೫೫-೨೭). ೨. ಕೇವಲ ಗಂಡಸರೇ ವಾಸಿಸುವ ಸ್ಥಳ ; ಗಂಡು ಬಿಡಾರ : ಪೆಣ್ಣಿಂಬ ಸುಳಿವಿರದೆ ಬರಿ ಗಂಡುವೀಡಾಗಿ ಭೀಷಣತೆವೆತ್ತುದಾ ಕುಂಭಕರ್ಣ ಪ್ರಪಂಚಂ (ಶ್ರೀರಾಮಾ. ೪೫೭-೨). **ಗಂಡುಬೀಡು :** ೨. ಹಾಸ್ಟಲೂಟ ಚೆನ್ನವೇ ಹೇಳು. ಎಲ್ಲಾ ಶುದ್ಧ ಗಂಡುಬೀಡು (ಮರಳಿ. ೯೭). 'ಹೆಣ್ಣುಬೀಡು' ಪರಾ. [ಗಂಡ + ಬೀಡು₂]

**ಗಂಡುವೆಸ,** ಗಂಡುಬೆಸ (ನಾ). ಪೌರುಷದ ಕಾರ್ಯ ; ಶೌರ್ಯದ ಕೆಲಸ : ಕೆಂದೊಡೆ ಸಾಯಲುಜ್ಜುಗಿಸುವಾಸನಪಲ್ಲಟದಟ್ಟಿ ಬಾಯ್ಗೆ ವಂದಂದದೊಳೆಂದೊಡೆಂದುದನೊಡಂಬಡಿಪಿಚ್ಚೆಯ ಬಿಚ್ಚತಿಕ್ಕೆ ನಾಣಿಂದ ಮಗಲ್ದು ಗಂಡುವೆಸ [ಪಾಠಾಂ. ಬೆಸ]ದೊಳ್ ಬಸದಪ್ಪ ಪೊಡರ್ಪು ರೂಪು ಮೈಗುಂದದ ಚೆಂದವಿಂಗೊರಲ ಮೆಲ್ಲುಲಿಯೊಪ್ಪಿದುದೊಲ್ವ ಕೂಟದೊಳ್ (ಚಂದ್ರಪು. ೮-೬೭). **ಗಂಡುಬೆಸ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಗಂಡು + ಬೆಸ₁]

**ಗಂಡುವೆಸರು** (ನಾ). ಗಂಡಸಿನ ಹೆಸರು : ಮುಸುಡುಗಾಣದ ತೆಱದಿ ಹಿಂದೆ ಸೊಡರಿಟ್ಟು ನೆಱೆನಸಿದ ರಾಗದಿ ಕೊಳೆತ ಹಾಡ ಬಗುಳುತ ಗಂಡು ವೆಸರು ಸುಳಿಯಲ್ಕೆ ಬಾರೆನ್ನಾಣೆಯೆಂಬ ಮುದುಪಾಱುರ್ದೆಳೊಂದೆಸೆ ಯೊಳು (ಹಚಕಾ. ೪-೨೭). [ಗಂಡು + ಪೆಸರು₁ (< ಪೆಸರ್)]

**ಗಂಡುಶಿಲೆ** (ನಾ). ದೊಡ್ಡ ಶಿಲೆ ; ಹೆಬ್ಬಂಡೆ : ಗಂಡುಶಿಲೆಯ ಬೀಱುತೆ ಓರಂತೆ ಪಿಡಿದು ದೆಸೆದೆಸೆಗೆ (ಜೆಬಪು. ೨೮-೨೦). [< ಸಂ. ಗಂಡಶಿಲಾ]

**ಗಂಡುಶೈಲಿ** (ನಾ). ಶಕ್ತಿಯುತವಾದ ಶೈಲಿ ; ಪ್ರೌಢ ಶೈಲಿ : ಶ್ರೀ ಜಗನ್ನಾಥದಾಸರದು ರಾಜಶೈಲಿ, ಗಂಡುಶೈಲಿ (ಜಗದಾ. ೩೨೨). [ಗಂಡು₁ + ಶೈಲಿ]

**ಗಂಡುಸಂತತಿ** (ನಾ). ಗಂಡು ಸಂತಾನ ; ಗಂಡುವಂಶ : (Male-line ಪಶ್ರಿನಿ. ೫೧). [ಗಂಡು + ಸಂತತಿ]

**ಗಂಡುಸಿ**(ನಾ). (?) : "ಕೊಜ್ಜ, ನಪುಂಸಕ, ಷಂಡ "(ಸರ್ವಜ್ಞ-ಕೋಶ) ; ಸಂತೆಯಂಗಡಿ ಸೂಳೆ ಮುಂತೊಲಿವ ಡೊಂಬತಿಯು ಎಂತು ಗಂಡುಸಿಯ ಜೋಗತಿಯ ಹೋದವನ ಸಂತಾನ ಕೆಡುಗು (ಸರ್ವಜ್ಞ. ೧೯೪೭). [?]

**ಗಂಡುಸು** 'ಗಂಡಸು' ನೋ.

**ಗಂಡುಸೂಳೆ** (ನಾ). ೧. ದಿಟ್ಟಳಾದ ವೇಶ್ಯೆ ; ಗಟ್ಟಿಗಿತ್ತಿಯಾದ ಸೂಳೆ : ತ್ರಿಳುಹಿ ಮುಱುಹಾದಲ್ಲಿ ಜಾಣ್ಮೆಯನಲರಿಸುತ್ತೊಯ್ಯಾರದಲಿ ಸುಳಿಸುಳಿದು ಬೆಱೆವೃತ ಗಂಡುಸೂಳೆಯು ತೆಱದಿ ನಡೆವುತ್ತ (ಬಸಪು. ೪೨-೧೭). ೨. ಚತುರಳಾದ ವೇಶ್ಯೆ : (ಕ). [ಗಂಡು + ಸೂಳೆ]

**ಗಂಡುಹಂಜೆ** (ನಾ). ಒಂದು ಬಗೆಯ ಸಸ್ಯ : ಅಳಲೆಕಾಯಿ, ಕೊತ್ತಂಬರಿ, ಭದ್ರಮುಸ್ತೆ, ಶುಂಠಿ, ಗಂಡುಹಂಜೇಬೇರು . . . ಹಸಿಶುಂಠಿಯ ರಸದಿಂದ ಅರೆದು ಸಕ್ಕರೆವೆರಸಿ ತೆಗೆದುಕೊಳ್ಳಲು ಶ್ಲೇಷ್ಮ ಜ್ವರ ನಾಶ (ಸಕವೈ. ೮೭). [ಗಂಡು + ಹಂಜೆ]

**ಗಂಡುಹುಳು** (ನಾ). ೧. ಗಂಡು ಕ್ರಿಮಿ : (ಕ). ೨. ಗಂಡು ಜೀಡ : (ಕ). ೩. ಗಂಡು ಸಂತಾನ : ನಾಳೆ ಸತ್ತಮೇಲೆ ಬಾಯಿಗಿಷ್ಟು ನೀರನ್ನು ಬಿಡಲು ಒಂದು ಗಂಡುಹುಳುವಾದರೂ ಬೇಡವೇ ? (ಮರವು-೨೦) ; ಅಂಥ ದೊಡ್ಡ ರಾಜವಂಶದಲ್ಲಿ ಕೊನೆಗೆ ಒಂದು ಗಂಡು ಹುಳುವೂ ಉಳಿಯಲಿಲ್ಲ. (ರೂಢಿ). [ಗಂಡು + ಹುಳು (< ಪುೞು₁)]

**ಗಂಡುಹೂವು** (ನಾ). ಗಂಡಿನ ಅಂಶವಿರುವ ಹೂವು ; ಕೇಸರ ವಿರುವ ಹೂವು : ಕೇಸರವುಳ್ಳ ಹೂವು ಗಂಡು (Male or Staminate Flower). ಗಂಡುಹೂವು ಕಾಯಿಬಿಡದೆ ಒಣಗಿ ಹೋಗುವುದು. ಹೆಣ್ಣು ಹೂವು ಬಲಿತು ಕಾಯಾಗುವುದು (ಸಸ್ಯಶಾ. ೫೩). 'ಹೆಣ್ಣುಹೂವು' ಪರಾ. [ಗಂಡು + ಹೂವು (< ಪೂ₂)]

**ಗಂಡುಹೊಳೆ** (ನಾ). = ಗಂಡುದೊಱೆ : ಶೋಣಃ, ಹಿರಣ್ಯವಾಹಃ- ೨ ಶೋಣನದಕ್ಕೆ ಹೆಸರು, ಇದು ಗಂಡುಹೊಳೆ (ಸಿದ್ಧಾಂತಿ. ೭೮). [ಗಂಡು + ಹೊಳೆ₄ (< ಪೊೞೆ₁)]

**ಗಂಡೂಪದ** (ನಾ). ೧. ಎರುಬುಹುಳು ; ಎರೆಹುಳು : "ಗಂಡೂ ಪದಾಖ್ಯಮದು ಕಿಂಚುಳಕಂ" (ವಸ್ತುಕೋ. ೨೩-೮) ; "ಗಂಡೂ ಪದಾಖ್ಯಮೆನೆ ನಾಯಿನೊಳಲೆಗಕ್ಕು ನಾಮಂ" (ಮಂಗರಾ. ೧೨೨-೮). [ಸಂ.]

**ಗಂಡೂಪದಿ** (ನಾ). ಹೆಣ್ಣು ಎರುಬು ಹುಳು ; ಹೆಣ್ಣುನಾಯಿನೊಳಲೆ. [ಸಂ. ಗಂಡೂಪದೀ]

**ಗಂಡೂಷ** (ನಾ). ೧. ಬಾಯಿ ಮುಕ್ಕುಳಿಸುವುದು : "ಗಂಡೂಷಃ, ಮುಖಪೂರಣಂ-ಈ ೨ ಮುಕ್ಕುಳ್" (ಹಲಾಯು. ೧೩೦-೧೦೦) ; "ಗಂಡೂಷಮೆನೆ ಮುಕ್ಕುಳಿಸೆ ನಾಮಮುಕ್ಕುಂ" (ಮಂಗರಾ. ೧೩೭-೪೧) ; ಮಾನಸೋನ್ಮತ್ತ ಕಾಮಿನೀ ಗಂಡೂಷ ಸೀಧು ಸೇಕ ಪುಳಕಿತ ವಕುಳ ಮುಕುಳ (ಪಂಪಭಾ. ೫-೧೦ ವ) ; ಸನ್ನಿಪಾತಜ್ವರದಲ್ಲಿ . . . ಗಂಡೂಷ ತೀಕ್ಷ್ಣವಾದ ಕಬಳಂಗಳಂ ಮಾಡಿಸುವುದು (ಸಕವೈ. ೧೫೭). ೨. ಬಾಯಿ ಮುಕ್ಕುಳಿಸುವ ನೀರು : ಪಂಡಿತನೊಡನಮೃತಾಕ್ಷರ ಗಂಡೂಷಮನು ಗುಳ್ಳತೆಬಿಡನುಗ್ರಾಹಿಸೆ (ಶಾಂತಿಪು. ೮-೧೯೪) ; ಮದ್ಯ ಗಂಡೂಷದಲಿ ಬಕುಳನ ಮರವ ಬುಲ್ಲವಿಸಿದೆವು (ಕುವ್ಯಾಅ. ೧೯-೧೩). [ಸಂ.]

**ಗಂಡೂಷಂಗೈ** (ಕ್ರಿ). ಮುಕ್ಕುಳಿಸು : ದ್ರಾಕ್ಷಿಹಣ್ಣಿನ ಪಾನಕವಂ ಗಂಡೂಷಂಗೈವುದು (ಸಕವೈ. ೨೮೭). [ಗಂಡೂಷ + ಗೈ₁ (< ಕೆಯ್₁)]

**ಗಂಡೂಷೀಕೃತ** (ಗು). ಮುಕ್ಕುಳಿಸಲ್ಪಟ್ಟ : ಗಂಡೂಷೀಕೃತ ಲವಣಾಬ್ಧಿಜಲನುಮೆನಿಪ್ಪಗಸ್ತ್ಯಮುನಿಗಾಶ್ರಯಮಾಗಿರ್ದ ದಕ್ಷಿಣ ದಿಗ್ಭಾಗದೊಳ್ (ಪಂಚತಂ. ೩೮೮-೧). [ಸಂ.]

**ಗಂಡೂಷೆ** (ನಾ). ೧. ಬಾಯಿ ಮುಕ್ಕುಳಿಸಲು ಬೊಗಸೆಯಲ್ಲಿ ತೆಗೆದುಕೊಳ್ಳುವ ನೀರು : "ಬಾಯಿ ಮುಕ್ಕಳಿಸುವ ನೀರು" (ಗಂಗಾಮು. ೧೯). ೨. ಮೇಲಕ್ಕೆ ಉಬ್ಬಿದ ಹೊಕ್ಕಳು : "ಮೇಲಕ್ಕೆ ಆದ ಹೊಕ್ಕಳು" (ಗಂಗಾಮು ೧೯). [ಸಂ. ಗಂಡೂಷಾ]

**ಗಂಡೆದೆ** (ನಾ). ೧. ಗಂಡಸಿನ ಎದೆ. ೨. ಎದೆಗಾರಿಕೆ; ಧೈರ್ಯ: ಕಠಿಣ ಪ್ರಸಂಗಗಳನ್ನೆದುರಿಸಲು ಗಂಡೆದೆಯುಳ್ಳವರಾಗಬೇಕು (ಧರ್ಮಸಾ.೫೨); ವ್ಯರ್ಥವಾಗಿದೆ ವ್ಯಕ್ತಿಶಕ್ತಿಯಪಾರ್ಥಗೊಂಡಿದೆ ಗಂಡೆದೆ (ನೆಲಮು. ೫೩); ಅವನು ಗಂಡೆದೆಯಿಂದಲೇ ಕಾಳಗಕ್ಕಾಗಿ ಆಹ್ವಾನಿಸಿದನು (ಬಂಗಾಹೆ. ೪೯). 'ಕೆಚ್ಚೆದೆ' ಪರಾ.
[ಗಂಡು + ಎದೆ (< ಎರ್ದೆ)]

**ಗಂಡೆಲೆ** (ನಾ). (ಮುತ್ತುಗದ ಕೊನೆಯಲ್ಲಿ) ಮಧ್ಯದ ದೊಡ್ಡ ಎಲೆ; ಗುಂಡಾಗಿರುವ ಎಲೆ: ಸಮೀಪದಲ್ಲಿದ್ದ ಅಗಲಗಲವಾದ ಮುತ್ತುಗದ ಗಂಡೆಲೆಯನ್ನು ಕಿತ್ತು ಅದರಲ್ಲಿ ದೊನ್ನೆಕಟ್ಟಿ ನೀರನ್ನು ಅದರಲ್ಲಿ ತುಂಬಿಕೊಂಡು ಬಂದು ರಾಜನಿಗೆ ಒಪ್ಪಿಸಿದನು (ಪೇಟೇಮಾ.೫).
[ಗಂಡು + ಎಲೆ$_{1}$]

**ಗಂಡೆಸೆ** (ಕ್ರಿ). ಗಂಡುತನವನ್ನು ಬೀರು; ಸೊಕ್ಕುತೋರು; ಉದ್ಧತನಾಗು: ಮಲೆವವರಿಲ್ಲ ಗಂಡೆಸೆವರಿಲ್ಲ ದಿರಿಪ್ಪವರಿಲ್ಲ ತೇಜವೆಂದುಲಿವವರಿಲ್ಲ (ಎಕ. VII, ಶಿಕಾರಿ.೧೧೯-೩೪; 1181). [ಗಂಡು + ಎಸ್$_{1}$]

**ಗಂಡೇಳ್**, ಗಂಡೇಳು (ಕ್ರಿ). ೧. ಗಂಡುತನ ಹೆಚ್ಚಾಗು; ಪೌರುಷವುಂಟಾಗು; ಶೌರ್ಯವನ್ನು ಹೊಂದು: ಗಂಡೇಳ್ವ ಭೂತಮುತ್ಪ್ರೇತಜಾತಂಗಳಿಂ ದಿಂಡುರುಳ್ವ ಪೊರಳ್ವ ನರಳ್ವಾ ಪರಾಕ್ರಮಿಗಳಿಂ (ಚೆಬಪು. ೧೬-೨೧). **ಗಂಡೇಳು**: ೧. ಖಂಡಗಳ ಬೆಟ್ಟವಂ ಕಂಡು ರಾತ್ರಿಂಚರರ್ ಗಂಡೆದ್ದು ಕಡಿದು ಹೊಡೆಗೆಡಹಿ (ಲಶಿಚಂ. ೧೭-೧೭); ಗಂಡೆದ್ದು ಗಗನಕುರ್ವಿಗೆ ಠಣಠಣನೆ ಹೊಯ್ಯೆಂಡಿನಂತಿಳಿದೇಱುತಿಹರು (ಭರಚ. ೬೩-೫೪); ೨. ಧೈರ್ಯವನ್ನು ಹೊಂದು; ಉತ್ಸಾಹಗೊಳ್ಳು: ಬೆಂಡೇಳ್ವ ಕಣ್ಣಿಂದೆ ಬೇಟವವಾಳ್ವಳು ಗಂಡೆದ್ದೊಲಿದು ಚುಂಬಿಸುವಳು (ಕುರಾಸಾಂ. ೨೪-೧೩೨). [ಗಂಡು + ಏಳು$_{1}$ (< ಏೞ್$_{1}$)]

**ಗಂಡೇಳು** 'ಗಂಡೇಳ್' ನೋ.

**ಗಂಡೇಱು** (ಕ್ರಿ). ಗಂಡುತನ ಏರು; ಶೌರ್ಯ ಹೆಚ್ಚಾಗು: ಬಳಿಯಂ ಮೆಯ್ಗೊಂಡು ಗಂಡೇಱಿ ತತ್ಕಲಿಯಂ ತಾಂ ಬಿಡೆ (ಎಕ. V, ಹಾಸನ. ೭೨-೩೨; 1160 ?); ಕಾಂತಾರದೊಳ್ ಬಿಬ್ದು ಸಾವವನಂ ತಂದೆನಗಿತ್ತೊಡೆಯ್ದೆ ನಡೆಪಲ್ ಮೆಯ್ವೊಯ್ದು ಗಂಡೇಱಿ . . . ಎನ್ನಂ ಪಿಱಿದುಂ ಪರಾಭವಿಸಿದಂ (ನೇಮಿಪು. ೭-೧೫೧); ದರ್ಪಕನ ದರ್ಪಂಬೆರಸೆಳಕುಳಿಗೊಂಡು ಗಂಡೇಱಿದ ಗಂಡಗಾಡಿ ರೂಢಿವಡೆಯೆ (ಅನಂಪು. ೬-೨೨ ವ); ಮಂಡೆಯುನೊತ್ತಿ ಪೆಭುರ್ಜಗಳನೊರಸಿ ಹೊನ್ನಂಡೆಯೊಳ್ ಪನಿನೀರನಿತ್ತು ಖಂಡೇಂದುವದನಬಾಲೆಯರು ಗೆಲಿಸಿ ಕುಡೆ ಗಂಡೇಱಿ ಮಾತನಾಡಿದನು (ಮೋಹತ. ೧೨-೯೧).
[ಗಂಡು + ಏಱು$_{1}$ (< ಏಱ್$_{1}$)]

**ಗಂಡೋದ್ಗಾರಿ** (ಗು). ಕೆನ್ನೆಯಲ್ಲಿ ಹೊರಸೂಸುತ್ತಿರುವ; ಕಪೋಲದಲ್ಲಿ ಮೂಡಿರುವ: ಸೌಮಿತ್ರಿ ಸುಗ್ರೀವಂಗೆಂದನುದಂಚಿತ ಭ್ರುಕುಟಿ ಗಂಡೋದ್ಗಾರಿ ಘರ್ಮೋದಕಂ (ಪಂರಾಮಾ. ೧೧-೧೭೩).
[ಗಂಡ$_{3}$ + ಉದ್ಗಾರಿ]

**ಗಂಡೋಲ** (ನಾ). ೧. ಕವಳ; ತುತ್ತು; ಗ್ರಾಸ. ೨. ಹಸಿಯ ಬೆಲ್ಲ: ಅರಳೊಳ್ಪುಗಂಧಮಂ ಗಂಡೋಲದೊಳು ಸವಿಯು ಬೆರೆದಂತೆ (ಮಹಾಂತೇ. ೨೦-೧). [ಸಂ.]

**ಗಂಡೋಲಿ$_{1}$** (ನಾ). ಗಂಡು ಎರಳೆ, —ಜಿಂಕೆ: (ಕ).
[ಗಂಡು + ?]

**ಗಂಡೋಲಿ$_{2}$** (ನಾ). ಕಡಜದ ಹುಳು; ಕಡಜೀರಿಗೆ: ಯೋಸುವಿನೊಳಿರುವ ಧರ್ಮಾಸೂಯೆಗಾಂ ದುಡುಕೆ ಗಂಡೋಲಿಗಳ ಗೂಡಿಗೆಸೆದ ಕಲ್ಲಂತಾಗದಿರದು (ಗೊಲ್ಗೊಥಾ. ೮-೧). [< ಸಂ. ಗಂಧೋಲೀ]

**ಗಂಡೌಷಧ** (ನಾ). ಉತ್ಕ್ರಮಣ ಕಾಲದಲ್ಲಿ ವೈದ್ಯರು ಉಪಯೋಗಿಸುವ ಪರಿಣಾಮಕಾರಿಯಾದ ನಾಲಿಗೆಗೆ ಬಳಿಯುವ ಒಂದು ಔಷಧ: "ನಾಲಿಗೆಗೆ ಹಚ್ಚುವ ಒಂದು ಔಷಧ" (ಅನಂನಾ).
[ಗಂಡ$_{3}$ + ಔಷಧ]

**ಗಂತಲು** (ನಾ). ಬೈಗಳು; ನಿಂದೆ(?): ಗಂತಲು ಹಾಕುವನೊ ಎಂದು ಹೆದರಿ (ಕಾಮಿಕಾಂ. ೧೫೭). [?]

**ಗಂತವ್ಯ** (ನಾ). ಸೇರಬೇಕಾದ ಸ್ಥಳ; ಗುರಿ: ಕೇವಲ ಮಾರ್ಗದ ಗಂತವ್ಯ ಇದು (ವಚಸಂ. XXXI, ಒಳಗೆ ಪ್ರವೇಶ); ಮುಂಬರಿದನಾ . . . ಸ್ವಾಮಿಕಾರ್ಯಂ ಕುರಿತ ಗಂತವ್ಯಕೆ (ಶ್ರೀರಾಮಾ. ೪೧೦-೩೧೧).
[ಸಂ.]

**ಗಂತಿ$_{1}$** (ನಾ). ಜೈನ ಸಂನ್ಯಾಸಿನಿ: ಅಜಿಗಣದಾ ರಾಜ್ಞೀಮತೀ ಗನ್ತಿಯೂರ್ (ಎಕ. II, ೯೭-೧; ಸು. ೭೦೦); ಶೀಲವತೀ ಮಹಾದೇವಿಯುಂ ಸುವ್ರತ ಗಂತಿಯರಲ್ಲಿ ದೀಕ್ಷೆಯಂ ಕೈಕೊಂಡು (ಧರ್ಮಾಮೃ. ೪-೨೭೧). [< ಕಂತಿ$_{2}$]

**ಗಂತಿ$_{2}$** (ನಾ). ಗಂಟು; ಗ್ರಂಥಿ; ಗೆಡ್ಡೆ: ಹಣೆಯ ತಿಲಕವನ್ನಾಗಲಿ, ಬೆನ್ನಿನ ಗಂತಿಯನ್ನಾಗಲಿ ಕಾಣಲು ಕನ್ನಡಿಗೇ ಹೋಗಬೇಕು (ಜೀವಸಾ. ೩೦); ಗಂತಿಗಳು ಗಂಟುಗಳು ಮಡಿಪು ಮಡಿಪುಗಳಲ್ಲಿ ಸ್ವಂತಕೇ ದುರ್ದರ್ಶ (ಮಂಕುಕ. ೧೯೪). [< ಸಂ. ಗ್ರಂಥಿ]

**ಗಂತು** (ನಾ). ೧. ಹಾದಿ; ಮಾರ್ಗ. ೨. ಹಾದಿಕಾರ; ಪಥಿಕ; ಪ್ರಯಾಣಿಕ. ೩. ಸುಳಿದಾಟ; ಚಲನೆ: ತಿರುತಿರುಗಿ ಸುಳಿವ ಜಲಜಂತುಗಳ ಗಂತುಗಳ ನೆರೆನೆರೆದು ಮುನಿಜನಂ ಸೇವಿಸುವ ಭಾವಿಸುವ ಗಂಗೆಗವನಿಜೆ ಬಂದಳು (ಜೈಮಿಭಾ. ೧೯-೫). [ಸಂ.]

**ಗಂತೃ** (ನಾ). ಸಂಚರಿಸುವವನು; ಪ್ರವಾಸಿ; ಪ್ರಯಾಣಿಕ.
**ಗಂತೃಗಂತವ್ಯಭಾವ** = ಪ್ರಯಾಣಿಕನಿಗೂ ಅವನು ಹೋಗುವ ಸ್ಥಳಕ್ಕೂ ಇರುವ ಸಂಬಂಧ: ಗಂತೃಗಂತವ್ಯಭಾವವೂ ಜೀವಪರಮಾತ್ಮರಿಗಿದೆ, ಬುದ್ಧಿ ಜೀವರುಗಳಿಗಿಲ್ಲ (ಬ್ರಹ್ಮಭಾ. ೨೮೨ ಅಡಿಟ).
[ಸಂ.]

**ಗಂತ್ರಿ** (ನಾ). ಎತ್ತಿನಗಾಡಿ, —ಬಂಡಿ: "ಸ್ಯಂದನಂ ಶಕಟಂ ವರೂಥಂ ರಥಂ ಗಂತ್ರಿಯೆಂದೆನಲ್" (ಮಂಗರಾ. ೮೪-೨೩).
[ಸಂ. ಗಂತ್ರೀ]

**ಗಂದ** (ನಾ). = ಗಂಧ: "ಗಂದ – ಗಂಧ = ಪರಿಮಳ" (ತದ್ಭಕೋ. ೧೦).
[< ಸಂ. ಗಂಧ]

**ಗಂದಕ** (ನಾ). = ಗಂಧಕ: "ಗಂಧಕಂ = ಗಂದಕಂ" (ಕಾಶಕ್ಕೃ. ೨೭೦).
[< ಸಂ. ಗಂಧಕ]

**ಗಂದರ** (ನಾ). = ಗಂಧರ್ವ: "ಗಂದರ – ಗಂಧರ್ವ = ಖೇಚರ" (ತದ್ಭಕೋ. ೧೦); ಜಾಣೆಸೆದಿರ್ಪಿನಂ ಪದೆದು ಪಾಡುವ ಗಂದರರಂ (ಶಬಶಂ. ೧-೨೯); ಬಾಜಣೆಯ ಬಿಜ್ಜೋದರರ ಗಂದರರಚ್ಚರರ ಗಜಬಜಿಂ ತೇರೈಸಿದ . . . ದೇವಾಂಗನೆಯರ ಗೊಂದಣಂ (ರಾಮಾಶ್ವ. ೭೬-೨೯). [< ಸಂ. ಗಂಧರ್ವ]

**ಗಂದರಗಿವಿಯ** (ನಾ). ಗಾನಾಸಕ್ತನಾದವನು; ಈಶ್ವರ: "ಪಂದಲೆವಚ್ಚ ಗಂದರಗಿವಿಯನೀಸರಂ ದೇಸಿಗಂ" (ಶಬ್ದಮಂ. ೩); "ಎಣ್ಮಯ್ಯಂ . . . ದೇಸಿಗಂ, ಗಂದರಗಿವಿಯಂ, ಬೆಳ್ಪಡಿ . . . ಐಮೊಗಂ – ಈ ೩೩ ಈಶ್ವರಂಗೆ ಪೆಸರ್" (ಕಶಸಾ. ೧–೧); ಗಂದರಗಿವಿಯನ ನಡುನೆತ್ತಿಯಿಂ ತಿರೆಗೆ ಭೋರೆಂದು ಧೀಂಕಿಡುವ ಸುರಗಂಗೆಯೊಂದು ಬೆಳ್ವೊನಲ್ಗೆ (ರಾಮಾಶ್ವ. ೭೫-೧೯). [ಗಂದರ + ಕಿವಿ$_{3}$ + – ಅ$_{7}$]

**ಗಂದವಟಿಗೆ** 'ಗಂಧವಟ್ಟಿಗೆ' ನೋ.

**ಗಂಡವಟ್ಟಿಗೆ** 'ಗಂಧವಟ್ಟಿಗೆ' ನೋ.

**ಗಂಡವಟ್ಟೆ** (ನಾ). = ಗಂಧವಟ್ಟಿಗೆ ೧: ವಜ್ರದ ಪಡಿ ವೈಡೂರ್ಯದ ತೊಲೆಗಳು ರಜ್ಜುವಿಡಿದ ನೀಲದಿಂದ ಪಜ್ಜಳಿಸುವ ಕಂಥಿ ಬೋಧಿಗೆ ಪೊಸರನ್ನ ದುಜ್ಜಳ ಗಂಡವಟ್ಟೆಗಳು (ಅಂಜಚ. ೩-೧೧).
[< ಗಂಧವಟ್ಟಿಗೆ]

**ಗಂಡವಡಿಗ** (ನಾ). = ಗಂದಿಗ ೧: "ಸುಗಂಧದ್ರವ್ಯಗಳನ್ನು ಮಾಡುವವನು, -ಮಾರುವವನು; ಸುಗಂಧಕಾರ; ಗಂಡವಡಿಗ" (Perfumer. ಇಂಕನಿ). [ಗಂಡ + -ವಡಿಗ]

**ಗಂಡವಣ**, ಗಂಧವಣ (ನಾ). ೧. ಗಂಧದ ಅಂಗಡಿ; ಸುಗಂಧ ದ್ರವ್ಯಗಳನ್ನು ಮಾರುವ ಸ್ಥಳ: ಬಳಸಿದ ಪರಿಮಳಮಂ ದೆಸೆದೆಸೆಗಗ್ಗಳಮಾಗಿರೆ ಬೀರುತ್ತಂ ಗಂದಿಗರಳವಿಗಳೆದ ಕೇರಿಗಳಂ ಕೊಂಡದು ಗಂಡವಣದವರು ಬಾಯ್ಬಿಡುತೋಡೆ (ಕುಮುರಾ. ೧೪-೩೯). **ಗಂಧವಣ**: ೧. ಗಂಧವಣದಂಗಡಿಯ ನಖರಂಗಳು ತಮ್ಮಂಗಡಿಯಲು (ಸೌಇಇ. XV. ೧೩೫-೫೩; 1179); ಪುರದೊಳ್ ಗಂಧವಣಂಗಳೊಳ್ ಅವುದಿಲ್ಲವಲ ಮುಂಟಾಕೇರಿಯೊಳ್ (ಅನಂಪು. ೧-೧೦೫ ವ). ೨. ಗಂಧದ ಮೂಟೆ, —ಹೊರೆ: ಹೊಜಗಣಿಂ ಬಂದ ಗಂಧವಣಕ್ಕೆ (ಎಇ. XIII, ೨೧-೫೩; 1204). [< ಸಂ. ಗಂಧಾಪಣ]

**ಗಂಡವುಡಿ**, ಗಂದುಡಿ (ನಾ). ಗಂಧದ ಪುಡಿ: (೬). **ಗಂದುಡಿ**: (ಕಲ್ಪದ್ರು).

**ಗಂಡವುಡಿಯುಟ್ಸವ** = ದೇವರ ಪ್ರತಿಮೆಯ ಒಂದು ಬಗೆಯ ಉತ್ಸವ: (೬). [ಗಂಡ + ಪುಡಿ]

**ಗಂದಿಗ**, ಗ್ರಂದಿಗ (ನಾ). ೧. ಗಂಧವನ್ನು ಮಾರುವವನು; ಸುಗಂಧ ದ್ರವ್ಯದ ವ್ಯಾಪಾರಿ: ಸೆಟ್ಟಿಗುತ್ತರಂ × × × ಣಿಗರುಂ ಗನ್ದಿಗರುಂ ಗಂಧವಣಿಗರುಂ (ಸೌಇಇ. XX, ೬೩-೩೩; 1098); ಗಂದಿಗನೆರವಣಿಗ ಸರವಂದಿಗನಾ ಪಟ್ಟಸಾಲಿಗ ಬಾಣಸಿಗಂ (ಕಾವ್ಯಾವ ೩೨೩); ವಣಿಗ್ವರರ್ ಗಂದಿ[ಪಾಠಾಂ. ಧಿ]ಗರ್ ಬಾಣಸರ್ ತಾಂಬೂಲಿಗರ್ (ಚಬಪು. ೪೭-೪೧). ೨. ಔಷಧದ ಮೂಲಿಕೆಗಳನ್ನು ಮಾರುವವನು; ಗ್ರಂದಿಗ. "ಗಂದಿಗವಸರ" ಪರಾ. ೩. ಕುಂಟಣಿಗ; ತಲೆಹಿಡುಕ: (ಚತುನಿ. ೬. I. ೯). ೪. ಕಣ್ಣಿನ ವೈದ್ಯ; ನೇತ್ರ ವೈದ್ಯ: (೬). **ಗ್ರಂದಿಗ**: ೨. ಅವನೊಬ್ಬ ಗ್ರಂದಿಗ (ರೂಢಿ). [ಗಂಡ + -ಇಗ]

**ಗಂದಿಗತಗರ** (ನಾ). ಒಂದು ಬಗೆಯ ಔಷಧಿ ಸಸ್ಯ: ಖರ್ಜೂರ, ಗಂದಿಗ ತಗರ . . . ಕಷಾಯ ಹಾಕಿ ಕೊಡಲು . . . ಸಕಲ ಜ್ವರಗಳೂ ನಿಲ್ಲುವುವು (ಸಕವೈ. ೧೧೧). 'ಗಂಧಿಕತಗರ' ಪರಾ. [ಗಂದಿಗ + ತಗರ]

**ಗಂದಿಗಪಸರ** 'ಗಂದಿಗವಸರ' ನೋ.

**ಗಂದಿಗವಸರ**, ಗಂದಿಗಪಸರ (ನಾ). ೧. ಗಂಧದ ಅಂಗಡಿಗಳ ಸಮೂಹ, —ಸಾಲು; ಗಂಧದ ಪೇಟೆ: ಬಾವನ್ನವಿಡಿಯಂ ತೀವ ಘಟ್ಟಿವಳ್ತಿಯರ ಗಂದಿಗವಸರದಿಂ (ರಾಮಾಶ್ವ. ೧೦೩-೬). ೨. ಔಷಧಿ ಅಂಗಡಿಗಳ ಸಾಲು; ಗಂದಿಗೆ ಅಂಗಡಿಗಳ ಸಾಲು: ನಾಕೇಜ ನಗದ ಮಹೌಷಧಿಗಳೆ ನಿಜ ಸೃಷ್ಟಿಯೊಳೆನಿಪುದಲ್ಲಿ ಗಂದಿಗವಸರಂ (ಜಗವಿ. ೯-೧೦೮); ಸಕಲ ಸಂಬರವ ಬಿಸಗೊಂಡು ಬೇಡಲು ತೂಗುವ ಗಂದಿಗವಸರಂಗಳಿರ್ದುವಿಕ್ಕೆಲದಿ (ಮೋಹತ. ೩-೧೯). **ಗಂದಿಗಪಸರ**: ೨. ಔಷಧ ಮಂಡಳಿಯಿಂ ಸೇವ್ಯವಲ್ಲಿ ಗಂದಿಗಪ [ಪಾಠಾಂ. ವ]ಸರಂ (ಪುಷ್ಪಪು. ೨-೮೪). [ಗಂದಿಗ + ಪಸರ]

**ಗಂದಿಗಸರಕು** (ನಾ). ೧. ಗಂಧದ ಸರಕು. ೨. ಮೂಲಿಕೆಯ ವಸ್ತುಗಳು; ಗಂದಿಗೆ ವಸ್ತುಗಳು: ಧಾತಕೀ ಪುಷ್ಪ ಇಂತೆಂಬ ಗಂದಿಗ ಸರಕು (ಖಾಹಟೀ. ೨-೧-೧೬ ವ). [ಗಂದಿಗ + ಸರಕು$_3$]

**ಗಂದಿಗಿತಿ** (ನಾ). ಗಂಧವನ್ನು ಮಾಡುವವಳು; ಘಟ್ಟಿವಳ್ತಿ: ಗಂದಿಗಿತಿ ಪಟ್ಟಸಾಲಿಗಿತಿ (ಶಬ್ದಾನು. ೧೯೫ ಪ್ರಯೋ).
[ಗಂದಿಗ + -ಇತಿ$_1$ (< -ಇತ್ತಿ)]

**ಗಂದಿಗೆ**, ಗ್ರಂದಿಗೆ (ನಾ). ೧. ಗಂಧ; ಪರಿಮಳ ದ್ರವ್ಯ. ೨. ಗಂಧದ ವ್ಯಾಪಾರ: "ಗಂದಿಗೆ - ಗ್ರಂಥಿಕ = ಗಂಧವ್ಯಾಪಾರ" (ತದ್ಭಕೋ. ೧೧). ೩. ಔಷಧ ದ್ರವ್ಯ; ಗ್ರಂದಿಗೆ: (೬). ೪. ಔಷಧ ದ್ರವ್ಯಗಳನ್ನು ಮಾರುವ ಸ್ಥಳ, —ಅಂಗಡಿ: ಹಿರಿಯ ಹಸುಬೆಯು ಶೆಟ್ಟಿ ತೆರದಂತೆ ಗಂದಿಗೆಯು ವರ ದಿನಸು ಮಾರುತಲಿ ಮಾಂಡವ್ಯಪುರಿಗೆ (ಶರಲೀ. ೧೪೯-೧). **ಗ್ರಂದಿಗೆ**: ಅವರು ಗ್ರಂದಿಗೆ ಅಂಗಡಿಯನ್ನು ಇಟ್ಟಿದ್ದಾರೆ (ರೂಢಿ).

**ಗಂದಿಗೆಯಂಗಡಿ** = ಔಷಧ ದ್ರವ್ಯವನ್ನು ಮಾರುವ ಅಂಗಡಿ: (೬). [< ಸಂ. ಗ್ರಂಥಿಕ]

**ಗಂದುಡಿ** 'ಗಂದವುಡಿ' ನೋ.

**ಗಂದೆ** (ನಾ). (ಚರ್ಮದ ಮೇಲೆ ಏಳುವ) ಸಣ್ಣ ಗುಳ್ಳೆ, —ಬೊಬ್ಬೆ, —ಗಂಟು: ಪಾಲ್ಮರಂಗಳ ಪಾಲ್ ಪಿಂಗಿಸುಗುಂ ತಡೆದಿರದಭ್ಯಂಗಿಸಿದೊಡೆ ಪುಟು ತಿಂದ ಬೇನೆಯಂ ಗಂದೆಯುಮಂ (ಲೋಕೋಪ. ೧೦-೪೦); ತಿಂಬ ಗಂದೆಯ ಮೇಲೆ ಉಗುರು ಬಿದ್ದಂತಾಯಿತ್ತು ಅಜಿಸುವ ಬಳ್ಳಿ ಕಾಲ ಸುತ್ತಿದಂತಾಯಿತ್ತು (ಅವಚಂ. ೨೩೪-೧೦೬೩); ನೆಲ್ಲಿಚೆಟ್ಟು, ಕೊತ್ತುಂಬರಿ ಇವಂ ಚೂರ್ಣವಂ ಮಾಡಿ . . . ಸಮಸಕ್ಕರೆ ವೆರಸಿ ಎಳನೀರಿನಿಂಬಾಗಲಿ . . . ತೆಗೆದುಕೊಳ್ಳಲು ಪೈತ್ಯದಿಂದಾದ ಗಂದೆ, ದದ್ದು . . . ಮಾಣ್ಗುಂ (ಸಕವೈ. ೧೪೩). 'ತೀಟೆಗಂದೆ' ಪರಾ. [< ಸಂ. ಗ್ರಂಥಿ]

**ಗಂದೆಯೇಳು** 'ಗಂದೆಯೇೞ್' ನೋ.

**ಗಂದೆಯೇೞ್**, ಗಂದೆಯೇಳು (ಕ್ರಿ). ಗುಳ್ಳೆಯಾಗು; ಬೊಬ್ಬೆಬರು; ಗಂಟಾಗು: ಕೆತ್ತುಗುಂದದ ಕುಚಂ ನಡುಕಂಗಿಡದೂರು ಗಂದೆಯೇಱದ ಕರಘಾತಮೊಪ್ಪೆ ಸುಸಿಲಿಂ ತಣಿದೊಯ್ಯನೆ ಜಾಜಿಜಾಜಿದಳ್ (ಲೀಲಾವ. ೩-೧೫). **ಗಂದೆಯೇಳು**: ಅಧಿಕಪಿತ್ತದಿಂದ ಗಂದೆಯೇಳುತ್ತವೆ (ರೂಢಿ).
[ಗಂದೆ + ಏೞ್$_1$]

**ಗಂದೊಟಿಕೆ** 'ಗಂಧವಟ್ಟಿಗೆ' ನೋ.

**ಗಂಧ** (ನಾ). ೧. ವಾಸನೆ: ಪ್ರತ್ಯಕ್ಷವು . . . ರೂಪ ರಸ ಗಂಧ ಸ್ಪರ್ಶ ಶಬ್ದ ಅಥವಾ ಅವುಗಳಿಗಾಶ್ರಯವಾದ ಸ್ಥೂಲವನ್ನು ವಿಷಯೀಕರಿಸುತ್ತದೆ (ಭಾರದ. ೨೨೯). ೨. ಸುವಾಸನೆ; ಪರಿಮಳ: ಹುವ್ವಿನ ಮೇಲಣ ತುಂಬಿ ಹುವ್ವ ತಿಂದು ಗಂಧವನುಳುಹಿತ್ತು (ಅಜಿಮಾ. ೨೨-೫೯); ಕೇದಗೆಯ ಚಂದನದ ಗಂಧವನು ಬಯಸುವೊಡೆ ಸರ್ಪಗಳ ವಿಷದಂತ ಕಂಜಬೇಡ (ಕಲ್ಲೋಲ. ೪೩); ಹೇಗೆ ಮಲಯಾಚಲ ಗಂಧ ಸಂಸರ್ಗದೆ ಚಂದನವಪ್ಪುದಿಂಧನವು (ಇಂಚಾಪ. ೬೩-೬೯). ೩. ಸುವಾಸನೆಯುಳ್ಳ ಮರ; ಶ್ರೀಗಂಧ; ಚಂದನ: "ಮಲಯಜಂ ಚಂದನಂ ಗಂಧಮೆಂದೆನಿಕ್ಕುಂ" (ಮಂಗರಾ. ೯೯-೨೧); ಕನ್ನಡ ದೇಶವು ಗಂಧದ ಮರದ ಕಾಡುಗಳಿಗೂ . . . ಪ್ರಸಿದ್ಧಿಯನ್ನು ಪಡೆದಿರುವುದು (ದ್ರಾವಿವಿ. ೯೧); ಚಿನ್ನದ ನಾಡದು ಮೈಸೂರು ಗಂಧದ ಗುಡಿಯದು ಮೈಸೂರು (ಹೊಂಗಳು. ೫-೨೨). ೪. ಹಣೆಯಮೇಲೆ ಇಟ್ಟುಕೊಳ್ಳುವ ಶ್ರೀಗಂಧದ ಬೊಟ್ಟು, —ಅಡ್ಡಗೀರು. ೫. (ಸತ್ಕರಿಸುವಾಗ ಕೊಡುವ) ಗಂಧಮಿಶ್ರಿತ ನೀರು: ಚಂದನಧಾರಣವಿಧಿ-ದೇವತೆಗಳಿಗೂ, ಗುರುಗಳಿಗೂ ಮೊದಲು ಗಂಧವಂ ಕೊಟ್ಟು ಆಮೇಲೆ ತನ್ನ ಶರೀರಕ್ಕೆ ಲೇಪನಮಾಡಿಕೊಳ್ಳಬೇಕು (ಸಕವೈ. ೪೦); ಅರತಕ್ಷತೆಯಲ್ಲಿ ಗಂಧ ಫಲಪುಷ್ಪ ತಾಂಬೂಲವನ್ನು ಕೊಟ್ಟರು (ರೂಢಿ).

೬. ಮದ ; ಸೊಕ್ಕು ; ಗರ್ವ : ತ್ರಿಜಗದ ತಿರಿಕಂ ವಿದ್ಯಾಭಿಜಾತ ಗಂಧಂ ನಿಮಿತ್ತ ವಿದನಾಸಭೆಯೊಳ್ ದ್ವಿಜನಜಿದಿಂತೆಂದನಮೋಘ ಜಿಹ್ವನೆಂಬೊಂ ಸಮಸ್ತವಸುಧಾಧಿಪನಂ (ಶಾಂತಿಪು.೬-೨೪). ೭. ಆನೆಯ ಮದೋದಕ : 'ಗಂಧಗಜ', 'ಗಂಧಾಂಧ' ಪರಾ. ೮. ಸಂಬಂಧ ; ನಂಟು : (ಕ). ೯. ಅಕ್ಕಪಕ್ಕ ; ನೆರೆಹೊರೆ. ೧೦. ಅಲ್ಪ ; ಸ್ವಲ್ಪ : "ಒಪ್ಪಚ್ಚಿಯಲ್ಲಿ ಗಂಧಮೆಂಬುದು" (ಹಲಾಯು. ೧೩೨-೬) ; "ಕಿಚ್ಚಿದ ನುಡಿವಲ್ಲಿ ಗಂಧವೆನಿಕ್ಕು" (ಮಂಗರಾ. ೧೩೮-೪). ೧೧. ಶಿಲೆ ; ಕಲ್ಲು ; ಉಪಲ : "ಶಿಲೆಯುಲ್ಪಾಪೋದ ಗಂಧಾಹ್ವಯಂ" (ನಾನಾರ. ೬೯) ; "ಅಲ್ಪಂ ಶಿಲೆ ಪರಿಮಳವೆಸದಿರಲೀ ಮೂರು ಶಬ್ದ ಗಂಧವೆಸರ್ಗಳ್" (ನಾನಾಕಂ. ೯೯). ೧೨. ಅಲ್ಪಜ್ಞಾನ ; ಸುಳಿವು : ನಿನಗೆ ಇಸಪೇಟಿನ ಗಂಧವೂ ಗೊತ್ತಿಲ್ಲ (ಗಾಳಿಪ. ೧೯) ; ಸಮಾಜ ಸೇವೆಮಾಡುವುದು . . . ಶಿಕ್ಷಣ ಪದ್ಧತಿಯಲ್ಲಿ ಆದರ ಗಂಧವೇ ಇರುವುದಿಲ್ಲ (ಕ್ರಿಯಾಶಿ. ೧೨೫) ; ಅದರ ಗಂಧವೇ ಅವನಿಗೆ ಹತ್ತದಂತೆ (ಮನೆಬಿ. ೩೦). ೧೩. [ದ್ವೈತ] ನಲವತ್ತು ಗುಣಗಳಲ್ಲಿ ಒಂದು : ರೂಪ, ರಸ, ಗಂಧ, ಸ್ಪರ್ಶ . . . ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಒಂದಸಾ. ೨೬೫).

**ಗಂಧದ ಎಣ್ಣೆ** = ಗಂಧದ ಮರದಿಂದ ತೆಗೆದ ಎಣ್ಣೆ ; ಪರಿಮಳ ಯುಕ್ತವಾದ ತೈಲ : ಅವಳು ಕೂದಲಿಗೆ ಗಂಧದ ಎಣ್ಣೆಯನ್ನು ಹಚ್ಚಿಕೊಂಡಿದ್ದಾಳೆ. (ರೂಢಿ). **ಗಂಧದ ಕಡ್ಡಿ** = ಸುಗಂಧವಸ್ತುಗಳಿಂದ ತಯಾರಿಸಿದ ಕಡ್ಡಿ ; ಊದುಕಡ್ಡಿ; ಅಗರುಬತ್ತಿ : ದೇವರ ಮುಂದೆ ಗಂಧದ ಕಡ್ಡಿಯನ್ನು ಹತ್ತಿಸಿಡು. (ರೂಢಿ). **ಗಂಧದಕಲ್ಲು** = ಗಂಧಕಲ್ಲು: ಗಂಧತೇಯಲು ಗಂಧದಕಲ್ಲು ತೆಗೆದುಕೊಂಡು ಬಾ. (ರೂಢಿ). **ಗಂಧದ ಬಟ್ಟಲು** = ಪರಿಮಳಯುಕ್ತವಾದ ದ್ರವವನ್ನು ತುಂಬಿಸಿಡಲು ಬಳಸುವ, ನಕಾಸೆಯುಳ್ಳ ಬಟ್ಟಲು : ದೇವರ ಮುಂದೆ ಬೆಳ್ಳಿಯ ಗಂಧದ ಬಟ್ಟಲು ಇದೆ. (ರೂಢಿ). **ಗಂಧದ ಬಿಲ್ಲೆ** = ನೀರಿನೊಂದಿಗೆ ತೇದು, ಪರಿಮಳಯುಕ್ತವಾದ ದ್ರವವನ್ನು ತಯಾರಿಸಲು ಬಳಸುವ ಸುಗಂಧದ ಬಿಲ್ಲೆ, – ತುಂಡು : ಗಂಧದ ಬಿಲ್ಲೆಯನ್ನು ತೇಡು, ಪನ್ನೀರನ್ನು ತಯಾರಿಸು (ರೂಢಿ). [ಸಂ.]

**ಗಂಧಕ** (ನಾ). ೧. ಹಳದಿ ಬಣ್ಣದ ಒಂದು ರಾಸಾಯನಿಕ ದ್ರವ್ಯ : ಇಂಗಾಲ, ಸಾರಜನಕ, ಗಂಧಕ . . . ಸಸ್ಯಗಳ ಆಹಾರದ ಘಟಕವಸ್ತುಗಳು (ಪ್ರಾಣಿಶಾ. ೬) ; ನವಸಾಗರ, ಸೋರುಪ್ಪು, ಗಂಧಕ ಮುಂತಾದ ವಿಷರೂಪ ಪೌರಾದಿಗಳಿರುತ್ತವೆ (ಮುಂಬಯಿ. ೫-೧೫೭). [ಸಂ.]

**ಗಂಧಕಗುಟಿಕೆ** (ನಾ). ಗಂಧಕದ ಬಿಲ್ಲೆ, —ಗುಳಿಗೆ : ಗಂಧಕ ಗುಟಿಕೆ : — ರಸ . . . ಪ್ರಮೇಹಂಗಳು, ಮತ್ತೆ ಹುಟ್ಟುವಂಥಾ ರೋಗಗಳು ಮಾಣುವುವು ಸುವರ್ಣಕಾಯಕಾಂತಿ, ಆರೋಗ್ಯ, ಸತ್ವ, ರೂಪು ಆಹುದು (ವಿವೈವಿ. ೨೩). [ಗಂಧಕ + ಗುಟಿಕೆ]

**ಗಂಧಕಚೋರ** (ನಾ). ೧. ಒಂದು ಬಗೆಯ ಸುವಾಸನೆಯ ದ್ರವ್ಯ; ಸುಗಂಧ ವಸ್ತು : "ಕಚ್ಚೂರಕಃ . . . ಗಂಧಕಚೋರದ ಹೆಸರುಗಳು" (ಸಿದ್ಧಾಂತಿ. ೧೨೫). [ಗಂಧ + ಕಚೋರ]

**ಗಂಧಕಟ್ಟಿಕೆ** (ನಾ). ಧೂಪದ ಕಡ್ಡಿ ; ಅಗರು ಚಕ್ಕೆ : ನೂರ ಎಂಟು ಹೊಂನು ಗಂಧಕಟ್ಟಿಕೆ ತಾಂಬೂಲ (ಸೌಇವಿ. ೧೯೪೦ ; ವೆಲ್ಲೂರ್. ೨೧೦-೧೭ ; 1430). [ಗಂಧ + ಕಟ್ಟಿಕೆ (< ಕಟ್ಟಿಗೆ$_1$)]

**ಗಂಧಕತೈಲ** (ನಾ). ಗಂಧಕದ ಎಣ್ಣೆ : ಗಂಧಕತೈಲ :—ಗಂಧಕವನ್ನು ನಿಂಬೇಹುಳಿಯಲ್ಲಿ ಅರೆದು ಮೊಸುಕನ ಹಾಗೆ ಮಾಡಿ ಮಣ್ಣು ಮೊಗೆ ತುಂಬಿ, ಗಾಜಿನ ಬಟ್ಟಲಲ್ಲಿ ಮೊಗೆ ಮಡಗಿ ಬಿಸಿಲಲ್ಲಿ ಎಪ್ಪತ್ತು ದಿನ ಇರಿಸಲು ಮೊಗೆಯಿಂದ ಕೆಳಗೆ ಸಾರಲದು ಗಾಜಿನ ಬಟ್ಟಲಿಗೆ ಬೀಳುವುದು (ವಿವೈವಿ. ೨೩). [ಗಂಧಕ + ತೈಲ]

**ಗಂಧಕಧೃತಿ** (ನಾ). = ಗಂಧಕಾಮ್ಲ : ಇದರಿಂದ ಹುಟ್ಟುವ ಗಂಧಕಧೃತಿ (ಸಲ್ಫ್ಯೂರಿಕ್ ಆಸಿಡ್)ಯೆಂಬ ಉಗ್ರಾಮ್ಲವು ರಸಾಯನ ಕಾರ್ಯಗಳಲ್ಲಿ ಅತ್ಯುಪಯುಕ್ತವಾದದ್ದು (ಮುಂಬಯಿ. ೬-೧೩). [ಗಂಧಕ + ಧೃತಿ]

**ಗಂಧಕರಸಾಯನ** (ನಾ). ಒಂದು ಔಷಧ ; ಗಂಧಕದಿಂದ ತಯಾರಿಸಿದ ಕಲ್ಕ : (ಕ). [ಗಂಧಕ + ರಸಾಯನ]

**ಗಂಧಕಲ್ಲು** (ನಾ). ಗಂಧವನ್ನು ತೇಯುವ ಕಲ್ಲು ; ಸಾಣೆಕಲ್ಲು : (ಸ್ಯಾಂಡರ್.). [ಗಂಧ + ಕಲ್ಲು (< ಕಲ್$_3$)]

**ಗಂಧಕಾಮ್ಲ** (ನಾ). ಗಂಧಕದಿಂದ ತಯಾರಿಸಿದ ಆಮ್ಲ ; ಸಲ್ಫ್ಯೂರಿಕ್ ಆಮ್ಲ : ಸತುವು ಗಂಧಕಾಮ್ಲದೊಡನೆ ವಿಕ್ರಿಯೆ ಹೊಂದಿದಾಗ ಉಂಟಾಗುವ ಜಲಜನಕವು ತಾಮ್ರದ ತಗಡಿನ ಮೇಲೆ ಗುಳ್ಳೆಗಳ ರೂಪದಲ್ಲಿ ಕುಳಿತುಕೊಳ್ಳುವುದೇ ಇದಕ್ಕೆ ಕಾರಣವೆಂದು ತಿಳಿದುಬಂದಿತು (ಭೌತವಿ. ೩೩೦). [ಗಂಧಕ + ಆಮ್ಲ]

**ಗಂಧಕುಟಿ** (ನಾ). ೧. ಒಂದು ಬಗೆಯ ಸುಗಂಧ ದ್ರವ್ಯ : "ಚಾಳಿಸಪತ್ರಿ" (ಗಂಗಾಮು. ೧೧೯). ೨. ಶ್ರೀಗಂಧದ ಕುಟೀರ; ಗಂಧದ ಗುಡಿ. ೩. [ಜೈನ] ಸಮವಸರಣದಲ್ಲಿಯ ಒಂದು ಭಾಗ; ಅರ್ಹಂತನಾಗುವವನಿಗಾಗಿ ನಿರ್ಮಿಸಿದ ಶ್ರೀಗಂಧದ ಕುಟೀರ : ನಿರ್ಭರಗಂಧಂ ಗಂಧಕುಟಿ ಕರಂ ಸೊಗಯಿಸುಗುಂ (ಆದಿಪು. ೧೦-೩೬) ; ಗಂಧಕುಟಿಯುಂ ಸುಸೌರಭ ಬಂಧುರಮಂ ತ್ರಿಪ್ರದಕ್ಷಿಣಂ ಬರುತೆ (ಪಾರ್ಶ್ವಪು. ೧೬-೮೮); ಅಂದವಡೆದ ಗಂಧಕುಟಿಯ ನಲಿದು ಬಲವಂದನು (ಚಂಪ್ರಸಾಂ. ೧೪-೧೧೩). [ಸಂ. ಗಂಧಕುಟೀ]

**ಗಂಧಗಜ** (ನಾ). ಮದೋದಕವನ್ನು ಸುರಿಸುವ ಆನೆ; ಒಂದು ಬಗೆಯ ಶ್ರೇಷ್ಠ ಜಾತಿಯ ಆನೆ: ನಯನಕ್ಕಾನಂದಮಂ ಪೊಣ್ಮೆ ಮಂಗಳಭೇರೀರವಮೇಳೆ ಗಂಧಗಜಮಂ ಸೇನಾಶತಂ ತನ್ನೆರಟ್ಟೆಲದೊಳ್ ಘೂರ್ಣಿಸೆ ಮೇರುವಿಂ ಮಿಥಿಳೆಗೆಯ್ತಂದಂ ಸುರಾಧೀಶ್ವರಂ (ಮಲ್ಲಿಪು. ೧೩-೧೩). [ಗಂಧ + ಗಜ$_1$]

**ಗಂಧಗರಗೆ, ಗಂಧಗರಿಗೆ** (ನಾ). ಒಂದು ಜಾತಿಯ ಮರ : ಕಲ್ಲುಗರಗೆ ಗಂಧಗರಗೆ ಮುಂತಾದ ಗಗನಚುಂಬಿ ವೃಕ್ಷಗಳು (ಪಂಜಪಂ. ೨). **ಗಂಧಗರಿಗೆ** : "ಕೆಂಪು ಗಂಧಗಿರಿ, ನಂದಿವೃಕ್ಷ . . . ಗಂಧಗರಿಗೆ" (ವೈಟಿಗಿ. ೧೯-೩೪೮). [ಗಂಧ + ಗರಗೆ?]

**ಗಂಧಗರಿಗೆ** 'ಗಂಧಗರಗೆ' ನೋ.

**ಗಂಧಗರ್ಭ** (ನಾ). ಗಂಧವನ್ನು ಹೊಂದಿರುವುದು, —ಕೂಡಿರುವುದು : ಕನದಖಿಳ ಕನಕ ವಾತಾಯನಂಗಳೊಳ್ ಸುರಭಿ ಗಂಧಗರ್ಭಂಗಳ್ . . . ಅವರ ಮೊಗಂಗಳ್ (ಶಾಂತಿಪು. ೬-೧೧). [ಗಂಧ + ಗರ್ಭ]

**ಗಂಧಗಾಳಿ** (ನಾ). ಸುವಾಸನೆಯನ್ನು ಹೊತ್ತ ಗಾಳಿ: ಮೆಲ್ಲೀಡತೊಡಗಿತು ಗಂಧಗಾಳಿ (ಶ್ರೀರಾಮಾ. ೫೪೨-೫೦). [ಗಂಧ + ಗಾಳಿ$_1$]

**ಗಂಧಗಿರಿ** (ನಾ). ಒಂದು ಜಾತಿಯ ಮರ : "ದೇವದಾರಿ, ಗಂಧಗಿರಿ, ಗ್ಯಾದಾರಿ, ಚೆಂಬುಳುಕಾಯಿ" (ವೈಟಿಗಿ. ೩೫-೭೮೩). [?]

**ಗಂಧಚಾರಿಣಿ** (ನಾ). ಆನೆಯ ಏಳು ಮದಾವಸ್ಥೆಗಳಲ್ಲಿ ಒಂದು : ನರಸಿಂಗವೊನೆಯರ ಪಟ್ಟದಾನೆ . . . ಗಂಧಚಾರಿಣಿಯೆಂಬ . . . ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ (ನಂಬಿರ. ೨-೨೧) ; ಗಂಧಚಾರಿಣಿಯಿನುನ್ಮತ್ತಾಳಿ ಸಂದೋಹ ಸಮ್ಮದ ಸಂದಾರಿಣಿಯಿಂ ವಿರಾಜಿಸುತ ಮಿರ್ಕುಂ ವಜ್ರಘೋಷದ್ವಿಪಂ (ಪಾರ್ಶ್ವಪು. ೪-೧೨). [ಸಂ. ಗಂಧಚಾರಿಣೀ]

**ಗಂಧಚೇಳಿಕೆ** (ನಾ). ಒಂದು ಬಗೆಯ ಸುಗಂಧ ದ್ರವ್ಯ; ಪುನುಗು: "ಗಂಧಚೇಳಿಕೆಯೆನಲ್ ಪುಣುಗು" (ಮಂಗರಾ. ೯೯–೨೨). [< ಸಂ. ಗಂಧಚೇಲಿಕಾ]

**ಗಂಧತೋಯ** (ನಾ). ಗಂಧಮಿಶ್ರಿತವಾದ ನೀರು; ಪನ್ನೀರು: ಗಂಧತೋಯದಿನಾಪ್ತಾಂಘ್ರಿಯನಾದಮರ್ಚಿಸಿದರಾ ಶ್ರೀದೇವನುಂ ದೇವಿಯುಂ (ಶಾಂತಿಪು. ೭–೩೬). [ಗಂಧ + ತೋಯ]

**ಗಂಧದಾಯಕಿ** (ನಾ). ಗಂಧವನ್ನು ತಯಾರಿಸುವವಳು; ಘಟ್ಟಿವಳ್ತಿ: ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತನಿಂದ್ರತನಯಂ . . . ಪಾಂಚಾಲಿಯುಂ ಗಂಧದಾಯಕಿಯಾಗಿರ್ಪಿನಮುಂದು ಮತ್ಸ್ಯಗೃಹದಿಂದೀ ನಿಗ್ರಹಂ ಪೊಲ್ಲದೇ (ಗದಾಯು. ೩–೩೪). [ಸಂ. ಗಂಧದಾಯಕೀ]

**ಗಂಧದ್ರವ್ಯ** (ನಾ). ಸುಗಂಧ ವಸ್ತು; ಸುವಾಸನೆಯ ದ್ರವ್ಯ: "ಗಂಧದ್ರವ್ಯಂಗಳೊಳ್ಪಾದು" (ಶಬ್ದಮಂ. ೧೦೦). [ಗಂಧ + ದ್ರವ್ಯ]

**ಗಂಧದ್ವಿಪ** (ನಾ). = ಗಂಧಗಜ: ಅಪರಾಜಿತನಿನೆ ಗಂಧದ್ವಿಪಂ ಮೊಗಂದಿಱುದು ತನ್ನ ಬಲಮನೆ ತುಳಿದತ್ತು (ಶಾಂತಿಪು. ೪–೨೦); ಗಂಧದ್ವಿಪಗಣಘನಘಂಟಾ ಪ್ರಘೋಷಂ (ರಾಜಶೇ. ೨–೧೧೨). [ಗಂಧ + ದ್ವಿಪ]

**ಗಂಧಧಾರಣ** (ನಾ). ಗಂಧವನ್ನು ಬಳಿಯುವಿಕೆ, —ಲೇಪಿಸುವಿಕೆ: ಗಂಧಧಾರಣದಲ್ಲಿ ಅನುಸರಿಸಬೇಕಾದ ಋತು ನಿಯಮ (ಸಕವೈ. ೪೦). [ಗಂಧ + ಧಾರಣ]

**ಗಂಧಧೂಪ** (ನಾ). ಗಂಧದ ಹೊಗೆ, —ಧೂಪ: ಗನ್ಧಧೂಪಕ್ಕಮೆನ್ನು . . . ಬಿಟ್ಟ . . . ಧರ್ಮ (ಸೌಇಇ. XX, ೪೨–೪; ?). [ಗಂಧ + ಧೂಪ]

**ಗಂಧನ** (ನಾ). ೧. ಉತ್ಸಾಹ; ಸಂಭ್ರಮ. ೨. ಪ್ರಕಟಪಡಿಸುವುದು; ಪ್ರಕಾಶನ. ೩. ಹೇಳಿಕೆ; ಸೂಚನೆ; ತಿಳಿಸುವುದು. ೪. ಸಂತೋಷ; ಸಂಭ್ರಮ. ೫. ಹಿಂಸೆ; ನಾಶ: ಹರಿಬದಲಿಹೊಕ್ಕೆರಡು ಸಾವಿರ ತುರಗ ಬಿದ್ದವು ನೂಱು ಮದಸಿಂಧುರಕೆಗಂಧನವಾಯ್ತು [ಪಾಠಾಂ. ಖಂಡನವಾಯ್ತು, ಗಂಭನವೋಯ್ತು, ನಿಧನವದಾಯ್ತು] ಪಯದಳವೆಂಟು ಸಾವಿರದ (ಕುವ್ಯಾಗ. ೨–೩೩). ೬. ಸುವಾಸನೆ; ಪರಿಮಳ: "ಅಱಿಪುವುದಱೊಳು ಪ್ರಕಾಶದೊಳು ಸಂತೋಷದೊಳು ನೆರೆ ಗಂಧನಾಖ್ಯಮಕ್ಕುಂ" (ಮಂಗರಾ. ೧೫೪–೬೭); "ಉತ್ಸವಮುಂ ಪ್ರಕಾಶಮುಂ ಅರುಪುವಕಾರ್ಯ ಸೌರಭಮು ಗಂಧನಮಕ್ಕುಂ" (ನಾನಾರ. ೧೬೨). [ಸಂ.]

**ಗಂಧನಕ** (ನಾ). ಒಂದು ಬಗೆಯ ಸಸ್ಯ: "ವ್ಯಾಘ್ರಪಾದೀ – ಗಂಧನಕ" (ಓಷಧಿ. ೧೫೨). [?]

**ಗಂಧನಕುಲ** (ನಾ). ೧. ಒಂದು ಬಗೆಯ ಸಸ್ಯ: "ಗಂಧನಕುಲ, ರಸ್ನಾ, ಸೀತೆಹೂ" (ವೈಔಗಿ. ೬೭–೧೩೭೧). ೨. ಒಂದು ಬಗೆಯ ಇಲಿ; ಕಸ್ತೂರಿ ಇಲಿ; ಮೂಗಿಲಿ: "ಸೊಂಡಿಇಲಿ" (ಕಸ್ತೂಕೋ. ೨೮೫). [ಗಂಧ + ನಕುಲ]

**ಗಂಧನಾಕುಲಿ** (ನಾ). ಒಂದು ಬಗೆಯ ಗಿಡ; ಈಶ್ವರಿಬಳ್ಳಿ: "ಗಂಧನಾಕುಲೀ . . . ಹಾವುಕಣ್ಣಿನ ಗಿಡ, ನಂಜಾರೆಗಿಡ, ಮುಂಗುಸಿಮೇವುಗಿಡ" (ಸಿದ್ಧಾಂತಿ. ೧೨೧). 'ಗಂಧನಕುಲ' ಪರಾ. [< ಸಂ. ಗಂಧನಾಕುಲೀ]

**ಗಂಧನಾಮಕರ್ಮ** (ನಾ). [ಜೈನ] ಕರ್ಮಗಳಲ್ಲಿ ಒಂದು ಬಗೆ: ಪೀತ ಶುಕ್ಲ ವರ್ಣ ನಾಮಕರ್ಮಮೆಂದಿಂತು ಗಂಧನಾಮಕರ್ಮಂ ದ್ವಿವಿಧಮಕ್ಕುಂ (ಗೊಮ್ಮಸಾ. ೪–೧೦). [ಗಂಧ + ನಾಮ + ಕರ್ಮ]

**ಗಂಧನಾಳಿ** (ನಾ). ಮೂಗು, —ನಾಸಿಕ. [< ಸಂ. ಗಂಧನಾಲೀ]

**ಗಂಧಪತ್ರ** (ನಾ). ೧. ಸುವಾಸನೆಯ ಪತ್ರ. ೨. ತುಳಸಿ, ಮರುಗ, ಬಿಲ್ವಪತ್ರೆ ಮೊದಲಾದ ಗಿಡದ ಎಲೆ: "ಗಂಧಪತ್ರಿಕಾ – ಅಜಮೋದಾ, ತುಳಸಿ, ಗಂಧಪತ್ರ" (ಓಷಧಿ. ೪೭). [ಗಂಧ + ಪತ್ರ]

**ಗಂಧಪುಡಿ** 'ಗಂಧವುಡಿ' ನೋ.

**ಗಂಧಪೂರಮರ** (ನಾ). ಒಂದು ಬಗೆಯ ಪರಿಮಳ ದ್ರವ್ಯವನ್ನು ಕೊಡುವ ಮರ: (ವೈಔಗಿ. ೩೯–೭೭೭). [ಗಂಧ + ಪೂರ + ಮರ$_1$]

**ಗಂಧಫಲಿ** (ನಾ). ೧. ಗಂಧವನ್ನು ಕೊಡುವ ಸಂಪಗೆ, ಬಕುಳ, ಪ್ರಿಯಂಗು ಮೊದಲಾದ ಮರ. ೨. ಸಂಪಿಗೆ ಮೊಗ್ಗು: (ಕಿ). [ಸಂ. ಗಂಧಫಲೀ]

**ಗಂಧಬಿಡಾಲಕ** (ನಾ). ಪುನುಗಿನ ಬೆಕ್ಕು; ಪುನುಗು. [ಗಂಧ + ಬಿಡಾಲಕ]

**ಗಂಧಬೀಡು** 'ಗಂಧವೀಡು' ನೋ.

**ಗಂಧಬೇವು** (ನಾ). ಬೇವಿನಲ್ಲಿ ಒಂದು ಬಗೆ; ಪಾರಿಜಾತಕ: "ಪಾರಿಭದ್ರಃ, ನಿಬಂತರುಃ, ಮಂದಾರಃ, ಪಾರಿಜಾತಕಃ ೪ ಹಾಲಿವಾಣದ ಮರದ ಹೆಸರುಗಳು. ಇದಕ್ಕೆ ಗಂಧಬೇವಂತಲೂ ಪಾರಿಜಾತಕವೆಂದೂ ಕೆಲವರು ಅರ್ಥಹೇಳುವರು" (ಸಿದ್ಧಾಂತಿ. ೧೦೩). [ಗಂಧ + ಬೇವು]

**ಗಂಧಮಣಿ** (ನಾ). ಮುಟ್ಟಿದೊಡನೆ ಪರಿಮಳವನ್ನುಂಟುಮಾಡುವ ಒಂದು ಬಗೆಯ ಮಣಿ: ತನ್ನ ಸ್ಪರ್ಷ ಮಾತ್ರದಿಂ ದ್ವಾದಶಯೋಜನಂಗಳು ಪ್ರಸರಿಸುವಂತೆ ದಿವ್ಯಪರಿಮಳವೀವ ಗಂಧಮಣಿ (ವಿವೇಕ. ೨೧೦). [ಗಂಧ + ಮಣಿ$_3$]

**ಗಂಧಮಾಂಸಿ** (ನಾ). ಒಂದು ಬಗೆಯ ಔಷಧಿ: "ಜಟಾಲಾ – ಗಂಧಮಾಂಸಿ" (ಓಷಧಿ. ೫೯). [ಗಂಧ + ಮಾಂಸಿ]

**ಗಂಧಮಾದನ** (ನಾ). ೧. ಒಂದು ಪರ್ವತದ ಹೆಸರು; ಸಪ್ತಕುಲ ಪರ್ವತಗಳಲ್ಲಿ ಒಂದು: ತೆಂಕಲು[ಗ]ನ್ಧಮಾದನಗಿರಿ ಪಶ್ಚಿಮದಲು ನೋಡ ಶ್ರೀಕೂಟಂ (ಕಇಅ. ೭೮–೧೩–೨೦; 1088); ಅ ಮುಚುಕುಂದನಾ ಮಹಾ ಗುಹಾದ್ವಾರಮಂ ಪೊಱಮಟ್ಟು ಗಂಧಮಾದನ ನಗೇಂದ್ರೋಪಾಂತದ ಬದರಿಕಾಶ್ರಮ (ಜಗವಿ. ೯–೫೩ವ); ರಾಘವನ ಧನುವಿಂಕಡಿವಡೆದುಳಿದ ಗಂಧಮಾದನದಡರುವಿಕೆ ತಾನೆನಿತು ಭೂಭಾರಕತನದಮಾತು ಬಿಡದ ಕುಲಶೈಲಂಗಳಗ್ಗದ ಕಡುಹೆನಿತು (ಬಸವು. ೧೯–೩೦). ೨. ಒಬ್ಬ ವಾನರಶ್ರೇಷ್ಠನ ಹೆಸರು: ವಿನುತದಧಿಮುಖ ಗಂಧಮಾದನಪನಸ ಶರಭಜ್ಯೋತಿಮುಖರೆನಿಪನುವರೋತ್ಸವ ಭಟರು (ತೊರರಾ. ೪–೭–೧೪). [ಗಂಧ + ಮಾದನ]

**ಗಂಧಮಾರ್ಜಾರ** (ನಾ). ಪುನುಗಿನ ಬೆಕ್ಕು: (ಕಿ). [ಗಂಧ + ಮಾರ್ಜಾರ]

**ಗಂಧಮಾರ್ಜಾಲ** (ನಾ). = ಗಂಧಮಾರ್ಜಾರ: "ಪುಣುಗಿನ ಬೆಕ್ಕು" (ಅನಂನಾ). [ಗಂಧ + ಮಾರ್ಜಾಲ]

**ಗಂಧಮುಖ** (ನಾ). ಕಸ್ತೂರಿ ಇಲಿ; ಮೂಗಿಲಿ. [ಸಂ. ಗಂಧಮುಖಾ]

**ಗಂಧಮುರೆ** (ನಾ). ಒಂದು ಬಗೆಯ ವನಸ್ಪತಿ: "ಗಂಧಾಕುಟೀ – ಗಂಧಮುರೆ" (ಓಷಧಿ. ೪೭). [ಗಂಧ + ಮುರೆ]

**ಗಂಧಮೂಷಿ** (ನಾ). = ಗಂಧಮುಖ: "ಚುಚುಂದರೀ, ಗಂಧಮೂಷೀ ೨ ಚುಂಡಿಲೀ ಹೆಸರು" (ಸಿದ್ಧಾಂತಿ. ೧೩೭). [ಸಂ. ಗಂಧಮೂಷೀ]

**ಗಂಧಮೂಷಿಕೆ** (ನಾ). = ಗಂಧಮುಖ: (ಕಿ). [ಸಂ. ಗಂಧಮೂಷಿಕಾ]

**ಗಂಧಯುಕ್ತಿ** (ನಾ). ಅರುವತ್ತುನಾಲ್ಕು ವಿದ್ಯೆಗಳಲ್ಲಿ ಒಂದು; ಸುಗಂಧ ದ್ರವ್ಯಗಳನ್ನು ಮಿಶ್ರಣಮಾಡುವ ತಿಳಿವಳಿಕೆ: ಬರೆಪಂ ಬಾಜನೆ ಗಂಡ[ಧ]ಯುಕ್ತಿ ಗಣಿತಂ ಗಂಧರ್ವವಾಖ್ಯಾನಕಂ ಭರತಾಖ್ಯಾಸಮಿಭೇಂದ್ರಶಿಕ್ಷೆ ಹಯಶಾಸ್ತ್ರಂ ಸೂಪಶಾಸ್ತ್ರಂ ನದೀತರಣಂ ತಾಪನಮಿಂದ್ರಜಾಲಮೆಜಕಂ ಲೆಪ್ಪಂ ಶಿಲಾಕರ್ಮಮುತ್ಕರಣಂ ಚಿತ್ರ ವಿವಕ್ಷೆ ವಾಸ್ತುಶಕುನಜ್ಞಾನಂ ರಥಾರೋಹಣಂ (ಪುಷ್ಪಪು. ೪-೫೯). 'ಚತುಷ್ಷಷ್ಟಿಕಲೆ' ಪರಾ. [ಗಂಧ + ಯುಕ್ತಿ]

**ಗಂಧರಬಟ್ಟಲು** (ನಾ). ಒಂದು ಬಗೆಯ ಬಟ್ಟಲು (?): ಹಸುಂಬೆಯ ನಿಕ್ಕುವಲ್ಲಿ ಹಸೆಯ ಜವಳಿ ಗಂಧರಬಟ್ಟಲು ಒಂದು ಗೋಂಟು (ಎಇ.XIX. ೩೮-೩೦; 1114). [ಗಂಧರ$_0$ + ಬಟ್ಟಲು (< ಬಟ್ಟಲ್)]

**ಗಂಧರಸ** (ನಾ). ೧. ಒಂದು ಬಗೆಯ ಮರದಿಂದ ಬರುವ ಅಂಟು ದ್ರವ; ಗೋಲರಸ; ರಸಗಂಧಕ. [ಗಂಧ + ರಸ]

**ಗಂಧರಾಜ** (ನಾ). ೧. ಒಂದು ಬಗೆಯ ಸುವಾಸನೆಯ ಹೂವು. ೨. ಗಂಧದಮರ; ಶ್ರೀಗಂಧ: ಹಂದಿ ಶ್ರೀಗಂಧವ ಹೂಸಿದಡೇನು? ಗಂಧರಾಜನಾಗಬಲ್ಲುದೇ? (ದೇದಾವ. ೨೨-೫೯). [ಗಂಧ + ರಾಜ]

**ಗಂಧರ್ವ** (ನಾ). ೧. ಒಂದು ದೇವಜಾತಿ; ದೇವಲೋಕದ ಸಂಗೀತಗಾರ: "ಯಕ್ಷಃ, ರಾಕ್ಷಸಃ, ಗಂಧರ್ವಃ . . . ದೇವಯೋನಿಃ —ಇಂತಿವೆಲ್ಲಂ ದೇವಜಾತಿಯೆಂಬುದು" (ಹಲಾಯು. ೧೫-೮೭); ಕುಬೇರನಾಯಕನಂಗದರ್ಪಣನೆಂಬ ಗಂಧರ್ವಂ ಜಳಕ್ರೀಡೆಯಾಡು ತಿರ್ದಂ (ಪಂಪಭಾ. ೩-೩೩ ವ); ಗಂಧರ್ವರ್ ಪೊಗಳಲ್ . . . ಪುರವಿಜಯನೆಸೆದನಾಸ್ಥಾಯಿಕೆಯೊಳ್ (ತ್ರಿಪುವಿ. ೪೮-೧೫); ಗಂಧರ್ವರ ಸೀಮೆಯಾಯಿತು ಕಾಡಿನಾ ನಾಡು (ಗರ. ೨-೧೦). ೨. ಮರಣಾ ನಂತರ ಬೇರೆಯಾಗಿ ಸಂಚರಿಸುವ ಜೀವ; ಪ್ರೇತ; ದೆವ್ವ. 'ಗಂಧರ್ವಗ್ರಹ' ಪರಾ. ೩. ಗಾಯಕ; ಸಂಗೀತಗಾರ. ೪. ಕುದುರೆ; ಅಶ್ವ: "ಅರ್ವಾ, ಗಂಧರ್ವಃ . . . ವಾಹಃ—ಈ ೧೪ ಕುದಿರೆ" (ಹಲಾಯು. ೭೨-೨೮೨); ಪೊಣರ್ವ ಸಗರ್ವ ಗಂಧರ್ವ ವಾಹಕ ಸಮೂಹದ ಸಾಹಸದಾಹವದ ಮೋಹರಮಂ ಕಾಹುರದ ಮೋಡಿಯಿಂ ನೋಡಿ (ರಾಜಶೇ. ೬-೬೫ ವ). ೫. ಒಂದು ಬಗೆಯ ಜಿಂಕೆ; ಮೃಗ. ೬. ಕೋಗಿಲೆ; ಗಂಡುಕೋಗಿಲೆ. ೭. ಒಂದು ಬಗೆಯ ದುಂಬಿ, —ಭ್ರಮರ. ೮. ಸೂರ್ಯ; ರವಿ. ೯. ಅರವತ್ತುನಾಲ್ಕು ವಿದ್ಯೆಗಳಲ್ಲಿ ಒಂದು; ಸಂಗೀತ ವಿದ್ಯೆ. ೧೦. ಹೆಂಗಸು; ಸ್ತ್ರೀ: "ದೇಸೀಯ ಗಾನದೊಳು ಖಚರರೊಳು ಕುದುರೆಯೊಳು ಮೈಸಿರಿಯ ಕಾಂತಿಯೊಳು ಗಂಧರ್ವನಾಮಂ" (ಮಂಗರಾ. ೧೫೧-೫೪); "ವಾಜಿಯುಂ ಗಾನನು[ವು]ಂ ಸತಿಯುಂ ಖೇಚರರುಂ ಮೃಗಾಳಿ ವಿವರಂ ಗಂಧರ್ವ ಮಕ್ಕುಂ" (ನಾನಾರ. ೧೩೩); "ಭೃಂಗಂ ಸ್ತ್ರೀ ಗಾನಂ ತುರಗಂಗಾವ್ಯೃಗ ಖಚರರಾಜು ಗಂಧರ್ವಾಖ್ಯಂ" (ನಾನಾಕಂ. ೧೫೫). [ಸಂ.]

**ಗಂಧರ್ವಗಜುಕೆ** (ನಾ). ಒಂದು ಬಗೆಯ ವನಸ್ಪತಿ: "ತೀವ್ರಾಕ್ಷೀ— ಗಂಧರ್ವಗಜುಕೆ" (ಓಷಧಿ. ೭೦).

[ಗಂಧರ್ವ + ಕಜುಕೆ$_1$ (< ಕಜುಂಕೆ)]

**ಗಂಧರ್ವಗಾನ** (ನಾ). ೧. ಗಂಧರ್ವರು ಮಾಡುವ ಗಾನ, —ಹಾಡುವ ಸಂಗೀತ. ೨. ಸುಮಧುರವಾದ ಗಾನ: ಅವರ ಹಾಡುಗಾರಿಕೆಯು ಗಂಧರ್ವಗಾನವೆಂದು ಒಕ್ಕೊರಲಿನಿಂದ ಕರೆದಿದ್ದಾರೆ (ಸಂಗೀತ. ೩); ಚವ್ಯ, ಹಿಪ್ಪಲಿಮೂಲ . . . ಕಷಾಯ ಕಾಯಿಸಿ, ಜೇನುತುಪ್ಪ ಬೆರಸಿ ಸೇವಿಸಲು ಸ್ವರಭಂಗ ರೋಗನಾಶವಾಗಿ ಗಂಧರ್ವ ಗಾನಕ್ಕೆ ಮನುಷ್ಯನು ಯೋಗ್ಯನಾಗುವನು (ಸಕವೈ. ೧೨೨).

[ಗಂಧರ್ವ + ಗಾನ]

**ಗಂಧರ್ವಗಾಯನ** (ನಾ). = ಗಂಧರ್ವಗಾನ: ತುಂಬಿದತ್ತಶರೀರ ಗಂಧರ್ವಗಾಯನಂ ನೀರವ ನಿಶಾನಭೋದೇಶವಮಂ (ಶ್ರೀರಾಮಾ. ೧೬-೪೨೪). [ಗಂಧರ್ವ + ಗಾಯನ]

**ಗಂಧರ್ವಗ್ರಹ** (ನಾ). ದೆವ್ವ ಹಿಡಿಯುವುದು; ಗಂಧರ್ವ ಪೀಡೆ: ನಾನಾ ಶಸ್ತ್ರಧಾರಣೆ ಮಾಡುವುದರಿಂದ . . . ದೇವಗ್ರಹ, ಗಂಧರ್ವಗ್ರಹ, ಯಕ್ಷಗ್ರಹ . . . ಹಾನಿಯನ್ನು ಕೆಡಿಸುವುದು (ಸಕವೈ. ೫೬).

[ಗಂಧರ್ವ + ಗ್ರಹ]

**ಗಂಧರ್ವದೂರ್ವೆ** (ನಾ). ಒಂದು ಬಗೆಯ ಸಸ್ಯ; ಗಂಧರ್ವಗಜುಕೆ: "ಶಕುಲಾಕ್ಷಿ – ಗಂಧರ್ವದೂರ್ವೆ" (ಓಷಧಿ. ೧೬೦).

[ಗಂಧರ್ವ + ದೂರ್ವೆ]

**ಗಂಧರ್ವನಗರ** (ನಾ). ೧. ಗಂಧರ್ವರ ಪಟ್ಟಣ. ೨. ಆಕಾಶದಲ್ಲಿಯ ಒಂದು ಕಾಲ್ಪನಿಕ ಪಟ್ಟಣ: (ಕ). [ಗಂಧರ್ವ + ನಗರ]

**ಗಂಧರ್ವನಾರಿ** (ನಾ). ಗಂಧರ್ವ ಸ್ತ್ರೀ: ಗಂಧರ್ವನಾರಿಯರು ಪುರುಷರು ವಿನೋದ ವಿಹಾರ ಲೀಲೆಯೊಳಯ್ದೊಯ್ದು ವಿಚಾರಗೇಡಿ ಗಳಾಗಿ ತಾವವರಿದ್ದರಣ್ಯದಲಿ (ಬಸವು. ೩೪-೭). [ಗಂಧರ್ವ + ನಾರಿ$_2$]

**ಗಂಧರ್ವಪಾಶ** (ನಾ). ಗಂಧರ್ವನ ಹಿಡಿತ: ಗಂಧರ್ವಪಾಶದಲ್ಲಿ ಸಿಕ್ಕ ರೂಪಾನನ್ನು ಸಹ ಹೇಗೋ ಲಗ್ನವಾಗಿ, ಮನೆಗೊಯಿದು ಪಾಶಗಳನ್ನು ಬಿಚ್ಚಿ ಎತ್ತಿಕೊಳ್ಳುವಂತೆ ನಾನು ಪ್ರೇರೇಪಿಸುವೆನು (ಜಯಂತ. ೨೪೪).

[ಗಂಧರ್ವ + ಪಾಶ]

**ಗಂಧರ್ವರಾಜ** (ನಾ). ೧. ಗಂಧರ್ವರ ಒಡೆಯ, – ಅಧಿಪತಿ: ಗಂಧರ್ವರಾಜನಂದನೆಯನತಿದೂರದೊಳ್ ವಿಸ್ಮಿತಾಂತರಂಗನಾಗ್ಯನೋಡಿ (ಕಾದಂಬು. ೩೦). ೨. ಗಂಧರ್ವರ ರಾಜನಾದ ಚಿತ್ರಸೇನ: ಗಂಧರ್ವ ರಾಜನು ಮಾಯೆಯಿಂದ ಅಂತರ್ಧಾನನಾಗಿ ಬಾಣ ಬಿಡುವುದಕ್ಕೆ ಮೊದಲು ಮಾಡಿದನು. (ವಚಭಾ. ೧೬೨).

[ಗಂಧರ್ವ + ರಾಜ]

**ಗಂಧರ್ವವಿದ್ಯೆ** (ನಾ). ಗಾಯನ ವಿದ್ಯೆ; ಸಂಗೀತ ವಿದ್ಯೆ: ರಾಗೋ ಚ್ಚರಣಲಯಗೀತಮಾಯ್ತುಚ್ಚರಿ ತದ್ಗಂಧರ್ವವಿದ್ಯೆ ಸುರಸುಂದರಿಯಾ (ಚಂದ್ರಪು. ೧೧-೧೪೦). [ಗಂಧರ್ವ + ವಿದ್ಯೆ]

**ಗಂಧರ್ವವಿವಾಹ** (ನಾ). ಎಂಟು ಬಗೆಯ ವಿವಾಹಗಳಲ್ಲಿ ಒಂದು; ವಧೂವರರು ಪರಸ್ಪರ ಮೆಚ್ಚಿ ತಾವೇ ಮಾಡಿಕೊಳ್ಳುವ ಮದುವೆ: ಗಂಧರ್ವವಿವಾಹಮನಾ ಬಂಧೂಕಾಧರೆಯರವರ್ಗೆ ಮಾಡಿದರೊಲವಿಂ (ಲೀಲಾವ. ೧೩-೪). 'ಗಾಂಧರ್ವವಿವಾಹ' ಪರಾ.

[ಗಂಧರ್ವ + ವಿವಾಹ]

**ಗಂಧರ್ವವೇದ** (ನಾ). ಉಪವೇದಗಳಲ್ಲಿ ಒಂದು; ಸಂಗೀತ ವಿದ್ಯೆ.

[ಗಂಧರ್ವ + ವೇದ]

**ಗಂಧರ್ವಹಸ್ತ** (ನಾ). ಔಡಲಗಿಡ; ಹರಳುಗಿಡ: (ಕ).

[ಗಂಧರ್ವ + ಹಸ್ತ]

**ಗಂಧರ್ವಹಸ್ತಕ** (ನಾ). = ಗಂಧರ್ವಹಸ್ತ: "ಔಡ್ಲಗಿಡ" (ಗಂಗಾಮು. ೧೧೦). [ಗಂಧರ್ವ + ಹಸ್ತಕ]

**ಗಂಧರ್ವೆ** (ನಾ). = ಗಂಧರ್ವನಾರಿ: ದುಂದುಭಿ ಎಂಬ ಗಂಧರ್ವೆ ಯನ್ನು ಕರೆದು ಅವಳು ಮಂಥರೆಯೆಂಬ ಗೂನೆಯಾಗಿ ಹುಟ್ಟುವಂತೆ ಆಜ್ಞೆ ಮಾಡಿದನು (ವಚಭಾ. ೪೦೪). [< ಸಂ. ಗಂಧರ್ವಾ ?]

**ಗಂಧಲಂಪಟತೆ** (ನಾ). ಸುಗಂಧದಲ್ಲಿ ಅತಿಯಾದ ಆಸಕ್ತಿಯಿರುವಿಕೆ; ಸೌರಭಲೋಲುಪತೆ: ರಟದಳಿ ವೃಂದಮೆಂತೆಣಗುಗುಂ ದಳಿತಾಂಬುರುಹಕ್ಕೆ ಗಂಧಲಂಪಟತೆಯಿಂ (ಆದಿಪು. ೩-೯೦).

[ಗಂಧ + ಲಂಪಟತೆ]

**ಗಂಧವಟಿಕೆ** 'ಗಂಧವಟ್ಟಿಗೆ' ನೋ.

**ಗಂಧವಟ್ಟಿಲು** (ನಾ). ಗಂಧದ ಬಟ್ಟಲು: ಗಂಧವ ಗಂಧೋದಕದಿಂದೆ ಹದಮಾಡಿ ಗಂಧವಟ್ಟಲನಿರಿಸಿದಳು (ನೋಹತ. ೨೧-೯). [ಗಂಧ+ ಬಟ್ಟಲು (< ಬಟ್ಟಲ್)]

**ಗಂಧವಟ್ಟಿಗೆ**, ಗಂದವಟಿಗೆ, ಗಂದವಟ್ಟಿಗೆ, ಗಂದೊಟಿಕೆ, ಗಂಧವಟಿಕೆ (ನಾ). ೧. ಕದ, ಮಣೆ, ಮೊದಲಾದುವುಗಳಿಗೆ ಹಾಕುವ ಮರದ ಅಡ್ಡಪಟ್ಟಿ: ರಸದಾಳಿಯಸಿಯ ಗಂಧವಟ್ಟಿಗೆಯಿಂ (ದಶಕು. ೧೧-೭೨ಪ); ಮಿರುವ ಘನವಜ್ರದ ಕವಾಟಕ ಗಂಧವಟ್ಟಿಗೆಯ (ನಳಚ. ೧-೨೦). ೨. ಬಾಗಿಲುವಾಡದ ಮೇಲ್ಭಾಗ: ಗಂಧವಟ್ಟಿಗೆಯ ಮೇಲೆ ಪಂಚವಣಿಗೆ ಇಟ್ಟಿದ್ದೇನೆ (ರೂಢಿ). **ಗಂದವಟಿಗೆ**: ೧. ಕದಗಳ ಮೇಲೆ ಬಿದ್ದು ಅವುಗಳ ಗಂದವಟಿಗೆಗಳೂ ಗಡಾರಿಗಳೂ ಜರ್ಜರಿತವಾಗುವ ಹಾಗೆ ಗುದ್ದರಿಸಿತು (ಭಾರವೀ. ೧೧೧). **ಗಂದವಟ್ಟಿಗೆ**: ೧. ಕದ ಮೊದಲಾದುವಕ್ಕೆ ಹಾಕುವ ಗಂದವಟ್ಟಿಗೆ (ಇಂಕನಿ: Batten). **ಗಂದೊಟಿಕೆ**: ೧. ಬಾಗಿಲದ ಒಂದು ಗಂದೊಟಿಕೆಯನ್ನು ಏರಿಸಿ ಚಿಲಕದ ಕೊಂಡಿಯನ್ನು ಹಿಡಿದ (ಮೇದಿಮ. ೧೭). **ಗಂಧವಟಿಕೆ**: ೧. ಕದದ ನಡುವಣ ಗಂಧವಟಿಕೆಯ ಬಲಕೊನೆಯ ಬೆಳ್ಳಿಯ ಮೊಗ್ಗನ್ನು ಬಲವಾಗಿ ಹಿಡಿದು ತಿರುಗಿಸಿದಳು (ಕೃಷ್ಣಭೂ. ೪೨). [?]

**ಗಂಧವಡಿಗ** (ನಾ). "ಸುಗಂಧ ದ್ರವ್ಯಗಳನ್ನು ತಯಾರಿಸುವವನು ಅಥವಾ ಮಾರುವವನು; ಸುಗಂಧಕಾರ": (ಅನಂನಾ). [ಗಂಧ + -ವಡಿಗ]

**ಗಂಧವಣ** 'ಗಂದವಣ' ನೋ.

**ಗಂಧವಣಿಗ** (ನಾ). = ಗಂಧವಡಿಗ: ಗಣ್ಣಿಗರುಂ ಗಂಧವಣಿಗರುಂ (ಸೌಇಇ. XX, ೬೩-೩೩; 1098); ಬಾಯಿನದಿಂ ಬಂದುದುಂ ಗಂಧವಣಿಗ ಹಗಡಿಯಿಂ (ಶ್ರಾವಕಾ. ೧೩೪-೨೧). [ಗಂಧ + -ವಣಿಗ]

**ಗಂಧವತಿ** (ನಾ). ೧. ಗಂಧವನ್ನು ಉಳ್ಳದು; ಭೂಮಿ; ಧರಿತ್ರಿ. ೨. ಒಂದು ಬಗೆಯ ಮಲ್ಲಿಗೆ. ೩. ಒಬ್ಬಾಕೆಯ ಹೆಸರು; ವ್ಯಾಸನ ತಾಯಿ. ೪. ಒಂದು ನಗರದ ಹೆಸರು: (ಕಿ). ೫. ಗಂಧಕ: "ಗಂಧವತಿ ಗಂಧೋಪಲಂ ಗಂಧಕಮೆನಿಕ್ಕು" (ಮಂಗರಾ. ೩೧-೧). ೬. ಒಂದು ಬಗೆಯ ಸುಗಂಧ ದ್ರವ್ಯ: "ಸುರಭಿ ಗಂಧವತಿಯೆನಿಸಿಕ್ಕು" (ಮಂಗರಾ. ೩೯-೨೭). ೭. ಒಂದು ತಪ್ಪಲು ಪ್ರದೇಶದ ಹೆಸರು: ಕುಮುದ್ವತಿ, ಗಂಧವತಿ, ಭೋಗವತಿ . . . ತಪ್ಪಲುಗಳು ನಾಲ್ಕು ದಿಕ್ಕುಗಳಲ್ಲಿಯೂ ದೇವ ಋಷಿಗಳಿಂದ ಸೇವಿತವಾಗಿರುವವು (ಕಕುಮಾ. ೨೪೪-೭). [ಸಂ. ಗಂಧವತೀ]

**ಗಂಧವಹ** (ನಾ). ಗಂಧವನ್ನು ಹೊತ್ತುಕೊಂಡು ಹೋಗುವವನು; ಗಾಳಿ; ವಾಯು: ದಕ್ಷಿಣಾಶೆಯ ನಜುಜುಯ್ಯ ಗಾಳಿಯನೆ ಪೋಲ್ತುದು ಗಂಧವಹಂ ವಸಂತದೊಳ್ (ಶಾಂತಿಪು. ೬-೧೨೬); ಗಂಧವಹಂಗಳ್ ಮಂಗಳ ಗಾಂಧರ್ವಮನೆಸಗೆ ಮಧುರ ಭೃಂಗೀರವದಿಂ (ಲೀಲಾವ. ೧೩-೪); ಮಾರುತನಂ ನೆನೆಯೆ . . . ನಡುಗುತುಂ ಬಂದು ಮಯ್ಯಿಕ್ಕಿನಿಂದು ಮುಂದಿರ್ದ ಗಂಧವಹನಂ ಕಂಡಭಯಮಣಿತ್ತು (ನಂಬಿರ. ೧೪-೬೦). [ಸಂ.]

**ಗಂಧವಹೆ** (ನಾ). ವಾಸನೆಯನ್ನು ತೆಗೆದುಕೊಳ್ಳುವಂಥದು; ಮೂಗು; ನಾಸಿಕ. [ಸಂ. ಗಂಧವಹಾ]

**ಗಂಧವಾರಣ** (ನಾ). = ಗಂಧಗಜ: ಅನ್ಯ ನರೇಂದ್ರ ಗಂಧವಾರಣ ಮದವಾರಣಂ ವಿಜಯಕಾರಣನಮ್ಮನ ಗಂಧವಾರಣಂ (ಗದಾಯು.೧-೧೭); ಮಾರಯ ಮಾರಿಯಾನ್ತರಿಗೆ ಮುಮ್ಮಡಿ ಚೋಟನ ಗನ್ಧವಾರಣಂ (ಎಕ. III, ಶ್ರೀರಂಗ. ೧೪೧-೧೭; 1012). [ಗಂಧ + ವಾರಣ]

**ಗಂಧವಾರಿ** (ನಾ). ೧. ಸುಗಂಧದ ನೀರು; ಪನ್ನೀರು. ೨. ಹದಿನಾಲ್ಕು ನಾಡಿಗಳಲ್ಲಿ ಒಂದು: ತರಳ ತಿಳಿ ನಾಡಿಗಳ ಚೌದಶಗಳಿಗೆ ನಾಮಗಳಾಯುರು ಸುಷುಮ್ನೆಯು . . . ಪಯಸ್ವಿನಿ ಗಂಧವಾರಿಯು (ಗಗತಾ. ೯-೧೧). [ಗಂಧ + ವಾರ್ಇ]

**ಗಂಧವಾಹ** (ನಾ). ೧. = ಗಂಧವಹ: ಗೋಶೀರ್ಷಸಾರ ದ್ರವಾಮೋದದಿನೆತ್ತಂ ಗಂಧವಾಹಂ ಮಗಮಗಿಸೆ (ಆದಿಪು. ೧೩-೬೮). ೨. ಕಸ್ತೂರಿಮೃಗ: ಅಸುಕೆಯ ಬನದ ಕಡೆಯಿಂದ ಉತ್ತಮದ ಹೂಗಂಪು ಬರುತಿರಲಿತ್ತನೋಡುವೆನೆನುತ ಬಾಲದ ಸುತ್ತ ಸಡಲಿಸಿ ಗಂಧವಾಹನ ಬಳಿಯಲ್ಯೆದಿದನು (ಕೌಶಿರಾ. ೧೧-೪೯). [ಸಂ.]

**ಗಂಧವೀಡು**, ಗಂಧಬೀಡು (ನಾ). ಕರಿಯ ಉಪ್ಪು; ಬೀಡುಲವಣ: (ಕಿ). **ಗಂಧಬೀಡು**: ಔಷಧಿಗೆ ಉಪಯೋಗಿಸುವ ಒಂದು ಬಗೆಯ ಉಪ್ಪು (ಸ್ಯಾಂಡರ್.). [← ಮರಾ. ಗಂಧವೀಡ]

**ಗಂಧವುಡಿ**, ಗಂಧಪುಡಿ, ಗಂಧಹುಡಿ (ನಾ). ಗಂಧದಪುಡಿ; ಶ್ರೀಗಂಧದ ಹೊಟ್ಟು: ಬಹು ಧಾನ್ಯವನು ಮಾರುವರುಯಲೆಯಡಿಕೆಯ ಗಂಧವಿ[ವು]ಡಿ ಫಲಸರಕು ಗಡಿಸರಕು (ನವನೋ. ೩೦-೫೬); ಪರಿಮಳ ಪುಷ್ಪ . . . ಎಣ್ಣೆ ಗಂಧವಿ[ವು]ಡಿ ಮುಂತಾದ ಪರಿಮಳದ್ರವ್ಯ ಸೇವನೆ (ಸಕನ್ಯೆ. ೧೬೦). **ಗಂಧಪುಡಿ**: (ಸಿದ್ಧಾಂತಿ. ಕಿ. ೨೨೯). **ಗಂಧಹುಡಿ**: ಚಿನ್ನವರದಿಗಯಕ್ಕಸಾಲೆಯರು . . . ಗಂಧಹುಡಿ ಹಸುಂಬೆಯರಷ್ಪಶಿಟ್ಟಿಯರು ವ್ಯವಹರಿಪರು (ನವನೋ. ೨-೪೭). [ಗಂಧ + ಪುಡಿ]

**ಗಂಧಶಾಲಿ**, ಗಂಧಶಾಳಿ (ನಾ). ಒಂದು ಬಗೆಯ ಭತ್ತ; ಸುವಾಸನೆಯ ಭತ್ತ; ಗಂಧಸಾಲೆ ಭತ್ತ: "ಕಳಮಃ – ಕಳಮೆ, ಗಂಧಶಾಲಿ" (ಓಷಧಿ. ೨೨); ಘನಗಂಧಶಾಲಿಯಿಲ್ಲದ ಪೊಲಂ . . . ಇಲ್ಲ (ಪುಷ್ಪಪು ೨-೧೧); ಬೆಳವುವು ಬಿಡದೆ ತದ್ವಿಷಯದೊಳು ಸೊಂಪಿನ ಗಂಧಶಾಲಿಗಳು (ಸಾಳ್ವಭಾ. ೧-೬೦). **ಗಂಧಶಾಳಿ**: ಬೆಳೆದು ಮಗಮಗಿಪ ಗಂಧಶಾಳಿಯಿಂದಲ್ಲಿ ಸುಟಿುವ ಗಿಳಿವಿಂಡಿನೋಳಿಯಿಂ (ಪಂಪಭಾ. ೩-೨೭). [ಗಂಧ + ಶಾಲಿ]

**ಗಂಧಶಾಲಿವನ**, ಗಂಧಶಾಳಿವನ (ನಾ). ಗಂಧಶಾಲಿ ಬತ್ತದ ಗದ್ದೆ: ನಾಣ್ಚಿ ತಲೆಯನೆಜಗಿದ ಸುಜನೋತ್ತಮರಂತೆ ಭರದಿನೆಜಗಿದುವಮೇಯ ಪರಿಪಕ್ವ ಗಂಧಶಾಲಿವನಂಗಳ್ (ಶಾಂತಿಪು. ೧-೫೯); ಗಂಧಶಾಲಿವನ ಮನೋಹರವೆನಿಸಿದ ಭರತಕ್ಷೇತ್ರ . . . ಎಂಟು (ಜಗವಿ. ೨-೧೮). **ಗಂಧಶಾಳಿವನ**: ಪೊಂಬಣ್ಣದ ಕೆಂಪಿಡಿದಿರೆ ಸೊಗಯಿಪುವು ಗಂಧಶಾಳಿವನಂಗಳ್ (ಆದಿಪು. ೧-೬೦). [ಗಂಧಶಾಲಿ + ವನ]

**ಗಂಧಶಾಳಿ** 'ಗಂಧಶಾಲಿ' ನೋ.

**ಗಂಧಶಾಳಿವನ** 'ಗಂಧಶಾಲಿವನ' ನೋ.

**ಗಂಧಸರಕು** (ನಾ). = ಗಂದಿಗಸರಕು: ಗಂಧಸರಕುಗಳು ದ್ವೀಪಗಳಲ್ಲಿಯೂ . . . ಹತ್ತಿ, ನೀಲಿ ಇಂಡಿಯಾದಲ್ಲಿಯೂ ಬೆಳೆಯುತ್ತವೆ (ಭೂಗೋಳ ೨೮). [ಗಂಧ + ಸರಕ್ಉ]

**ಗಂಧಸಾರ** (ನಾ). ಚಂದನ; ಶ್ರೀಗಂಧ: ಅಗುರು ಕರಿಯಗುರು ಗುಗ್ಗುಳ ಗಂಧಸಾರವಾ ಸಜ್ಜರಸವು (ಗುರುಚಾ. ೬-೩೭). [ಗಂಧ + ಸಾರ್ಅ]

**ಗಂಧಸಾಲಿ**, ಗಂಧಸಾಲೆ (ನಾ). = ಗಂಧಶಾಲಿ: ಗಂಧಸಾಲಿಯ ನೆಲ್ಲು ಬೀಜವನ್ನು . . . ತರಿಸಿ (ಕೃಷಿಪ್ರ. ೨೦೪). **ಗಂಧಸಾಲೆ**: ಅವರುಣ್ಣುವ ಅಕ್ಕಿ ಸಣ್ಣಕ್ಕಿಯೇ ಆಗಬೇಕು, ಇಲ್ಲವೆ ಗಂಧಸಾಲೆಯಾಗಬೇಕು (ಜಾರುದಾ. ೬೨). [< ಸಂ. ಗಂಧಶಾಲಿ]

**ಗಂಧಸಾಲೆ** 'ಗಂಧಸಾಲಿ' ನೋ.

**ಗಂಧಸಿಂಧುರ** (ನಾ). = ಗಂಧಗಜ : ಕುರುಕುಳನಂದನಂ ಪವನನಂದನನೆಂಬ ಮದಾಂಧ ಗಂಧಸಿಂಧುರಮೆ ಕಱುತ್ತು ಪಾಯೆ ಪಡಲಿಟ್ಟವೊಲಾದುದು (ಪಂಪಭಾ. ೧೩–೧೨); ಚಾಮೀಕರ ರಕ್ಷಾಭಿರಾಮ ಮದಾಂಧ ಗಂಧಸಿಂಧುರಂ ಬರ್ಪಂತೆ (ಶಾಂತಿಪು. ೪–೫೭); ಬಂದುದು ಪುರಂದರ ನೇಱುವ ಗಂಧಸಿಂಧುರಂ (ಪುಷ್ಪಪು. ೧೪–೪೪). [ಗಂಧ + ಸಿಂಧುರ]

**ಗಂಧಸಿಂಧುರೇಂದ್ರ** (ನಾ). ಶ್ರೇಷ್ಠವಾದ ಗಂಧಗಜ; ಉತ್ತಮವಾದ ಮದಕರಿ : ಮದಜಳಚ್ಛಟಾಟೋಪ ಭೀಷಣಾರುಣ ಗಂಡಸ್ಥಳಮುಮಪ್ಪ ಗಂಧಸಿಂಧುರೇಂದ್ರಮನನುಕರಿಸಿ (ಆದಿಪು. ೧೪–೬೩ವ). [ಗಂಧಸಿಂಧುರ + ಇಂದ್ರ]

**ಗಂಧಹಸ್ತಿ** (ನಾ). = ಗಂಧಗಜ : ಚಂಚರೀಕತತಿ ಗಂಧಹಸ್ತಿಯೊಳ್ ನೆಲಸುವವೋಲ್ (ಶಾಂತಿಪು. ೫–೯೬). [ಗಂಧ + ಹಸ್ತಿ]

**ಗಂಧಹುಡಿ** 'ಗಂಧವುಡಿ' ನೋ.

**ಗಂಧಾಂಧ** (ಗು). ಮದೋದಕದಿಂದ ಕುರುಡಾದ, —ಮದಿಸಿದ, —ಮದೋನ್ಮತ್ತವಾದ. 'ಗಂಧಾಂಧಸಿಂಧುರ' ಪರಾ. [ಗಂಧ + ಅಂಧ]

**ಗಂಧಾಂಧಸಿಂಧುರ** (ನಾ). ಮದದಿಂದ ಕುರುಡಾದ ಆನೆ; ಮದಿಸಿದ ಆನೆ : ಬಂದಂ ಧವಳಾತಪತ್ರದಡಿಯೊಳ್ ಕಾಲ್ಗೋದು ಗಂಧಾಂಧ ಸಿಂಧುರಮಂ ಮೆಯ್ಗಲಿ ವಜ್ರಬಾಹು ಮಹಿಪಂ (ಪಂರಾಮಾ. ೨–೧೧). [ಗಂಧಾಂಧ + ಸಿಂಧುರ]

**ಗಂಧಾಕುಳ** (ಗು). ಗಂಧದಿಂದ ಆವೃತವಾದ, —ಕೂಡಿದ : ಬಂದುದು ದಾನಬಂಧುರ ಗಂಧಾಕುಳ ಭೃಂಗಮಂಗಜಗಜಂ ಬರ್ಪಂತೆ (ಚಂದ್ರಪು. ೭–೩೪). [ಗಂಧ + ಆಕುಳ (= ಆಕುಲ)]

**ಗಂಧಾಕ್ಷತೆ** (ನಾ). ೧. ಗಂಧ ಮತ್ತು ಅರಿಸಿನ ಬೆರಸಿದ ಅಕ್ಕಿಯ ಕಾಳು; ಮಂತ್ರಾಕ್ಷತೆ: ಗೋಪನಂ ಗಂಧಾಕ್ಷತಾರ್ಚನೆ ಧೂಪದೀಪಾರತಿಗಳೆಸೆಯೆ ನಿರೂಪಿಸುತ (ಬಸವ. ೨–೫೩); ಲೇಸಾದುದೆಂದು ಮಾವನ ಮತಿಗೊಪ್ಪಿ ಶಶಿಹಾಸಂ ಪ್ರಸೂನ ಗಂಧಾಕ್ಷತೆಗಳಂ ತರಿಸಲು (ಜೈಮಿಭಾ. ೩೧–೩೯). ೨. ಹಣೆಯ ಮೇಲೆ ಹಚ್ಚುವ ಶ್ರೀಗಂಧದ ಅಡ್ಡಗೀರು ಮತ್ತು ಅಕ್ಷತೆಯ ಬೊಟ್ಟು : ಬ್ರಾಹ್ಮಣರು ಊಟಕ್ಕೆ ಮೊದಲು ಗಂಧಾಕ್ಷತೆಯನ್ನು ಇಟ್ಟುಕೊಳ್ಳುವುದು ಪದ್ಧತಿ (ರೂಢಿ). [ಗಂಧ + ಅಕ್ಷತೆ]

**ಗಂಧಾಖು** (ನಾ). = ಗಂಧಮೂಷಿ. [ಗಂಧ + ಆಖು]

**ಗಂಧಾನಿಲ** (ನಾ). ಕಂಪಿನ ಗಾಳಿ; ಸುವಾಸನೆಯ ಗಾಳಿ; ಕಮ್ಮೆಲರು : ಗಂಧಾನಿಲಂಗಳವು ಪರಸತ್ತ್ವ ಪುಷ್ಪದವು ಸಂದೇಹವೇ ನೆಲವೊ (ಮಂಕುಕ. ೨೨೦). [ಗಂಧ + ಅನಿಲ]

**ಗಂಧಾಪಣ** (ನಾ). ಗಂಧದ ಅಂಗಡಿ; ಸುಗಂಧ ದ್ರವ್ಯಗಳನ್ನು ಮಾರುವ ಸ್ಥಳ : ಉತ್ಪಾದಿತ ಘ್ರಾಣೇಂದ್ರಿಯ ಪ್ರಾಪಣಂಗಳಪ್ಪ ಗಂಧಾಪಣಂಗಳೊಳ್ (ಚಂದ್ರಪು. ೧–೧೨೯). [ಗಂಧ + ಆಪಣ]

**ಗಂಧಾಶ್ಮ** (ನಾ). ಗಂಧಕ. [ಗಂಧ + ಅಶ್ಮ]

**ಗಂಧಾಸ್ತಿ** (ನಾ). = ಗಂಧಗಜ : ಪಗವರ ಗನ್ಧಾಸ್ತಿ ಪಾರ್ವ್ವರ ಇಚ್ಚೆ (ಎಕ. XVI, ಮದ್ದೂಗಿ. ೧೧೮–೨; 8ನೆಯ ಶತ). [< ಗಂಧಹಸ್ತಿ]

**ಗಂಧಿ** (ಗು). ೧. ಗಂಧದಿಂದ ಕೂಡಿದ; ವಾಸನೆಯಿಂದ ತುಂಬಿರುವ. (ನಾ). ೨. ಒಂದು ಬಗೆಯ ವನಸ್ಪತಿ : "ನಾಗೀ—ಸುರಹೊನ್ನೆ, ಗಂಧಿ, ಅಕ್ಕಿಹೆಡೆ" (ಒಷಧಿ. ೮೫). [ಸಂ. ಗಂಧಿನ್]

**ಗಂಧಿಕ** (ಗು). ೧. ಗಂಧದಿಂದ ಕೂಡಿದ; ವಾಸನೆಯುಳ್ಳ. (ನಾ). ೨. ಗಂಧಕ. ೩. ಸುಗಂಧದ್ರವ್ಯಗಳನ್ನು ಮಾರುವವನು; ಗಂಧಿಗ. [ಸಂ.]

**ಗಂಧಿಕತಗರ** (ನಾ). ಒಂದು ಬಗೆಯ ವನಸ್ಪತಿ : ಗಂಧಿಕತಗರ, ನೈದಿಲಗೆಡ್ಡೆ . . . ಅರೆದು ಕುಡಿಯ ಕೊಡಿಸಲು ಪಿತ್ತದೋಷಯುಕ್ತವಾದ ಯೋನಿ ಶುದ್ಧವಹುದು (ವೈದ್ಯಸಾ. II, ೪೧). [ಗಂಧಿಕ + ತಗರ]

**ಗಂಧಿಕಾವೋದಿ** (ನಾ). [ಸಂಗೀತ] ಒಂದು ರಾಗದ ಹೆಸರು : ನೀಲೋತ್ಪಲಿನಿ . . . ಗಂಧಿಕಾವೋದಿ . . . ಎಂಬ ಇಪ್ಪತ್ತೆರಡು ರಾಗಂಗಳು (ವಿವೇಕ. ೨೩೪). [?]

**ಗಂಧಿಗ** (ನಾ). ಗಂಧದ ವ್ಯಾಪಾರಿ; ಸುಗಂಧದ್ರವ್ಯಗಳನ್ನು ಮಾರುವವನು : ಗನ್ಧಿಗ ರೇವಿಸೆಟ್ಟಿ . . . ರಾಮೇಶ್ವರದೇವರಂಗ ಭೋಗಕ್ಕೆ ಹಸುಂಬೆ[ಗೆ]ಹಾಗವಂ ಸ್ಥಾಯಿಯಾಗಿ ಬಿಟ್ಟರು (ಸೌಇಇ. XX, ೭೮–೩೦; 1118); ವಣಿಗ್ವರರ್ ಗಂಧಿಗರ್ ಬಾಣಸರ್ (ಜಿಬಪು. ೪೭–೪೧); ವಾಣಿಜರ ಗಂಧಿಗರ ಸೆಟ್ಟಿಯರ . . . ಕೇರಿಗಳು (ಸಿದ್ಧಕಾ. ೧೩–೩೭). [ಗಂಧ + -ಇಗ]

**ಗಂಧಿನಿ** (ನಾ). ೧. ಗಂಧವುಳ್ಳ ವಸ್ತು; ಒಂದು ಬಗೆಯ ಸುಗಂಧ. [ಸಂ. ಗಂಧಿನೀ]

**ಗಂಧೇಂಗಾಲಕ** (ನಾ). ಒಂದು ಆಯುಧ ವಿಶೇಷ : ಬಿಲ್ಲು ತೀರು . . . . ಗಂಧೇಂಗಾಲಕ . . . . ಖೇಟಕ ಮುಂತಾದ ಶತ್ರುಜಯಾತ್ಮ ರಕ್ಷಾದಿಸಾಧನ ವಿಶೇಷಂಗಳಿಂದಲೂ (ವಿವೇಕ. ೨೬೩). [?]

**ಗಂಧೇಭ** (ನಾ). = ಗಂಧಗಜ : ಭೃಂಗೀ ನಿನದ ಮುಖರಿತಾಶಾಚಕ್ರ ಗಂಧೇಭಚಕ್ರಂ (ಆದಿಪು. ೧೧–೩೦); ಕೌರವ್ಯ ಗಂಧೇಭ ಕೇಸರಿ (ಗದಾಯು. ೧–೫೨). [ಗಂಧ + ಇಭ]

**ಗಂಧೋತ್ತಮೆ** (ನಾ). ಮದ್ಯ; ಸುರೆ; ಹೆಂಡ : "ಸರಾಯ" (ಗಂಗಾಮು. ೧೧೦). [ಸಂ. ಗಂಧೋತ್ತಮಾ]

**ಗಂಧೋದಕ** (ನಾ). ಸುವಾಸನೆಯ ನೀರು; ಪನ್ನೀರು : ಘೃತಕ್ಷೀರ ದಧಿ ನಾಳಿಕೇರ ತೋಯಾಮ್ರರಸೇಕ್ಷುರಸ ಗಂಧೋದಕಾದಿಗಳಿಂ ಮಾಡುವ ಸವನನಮುಂ (ಆದಿಪು. ೧೫–೧೩ವ); ಗಂಧೋದಕದಿಂದ ಬಾಯಿ ತೊಳೆದನು (ಪುನರು. ೧೪). [ಗಂಧ + ಉದಕ]

**ಗಂಧೋದಕವೃಷ್ಟಿ** (ನಾ). ಸುಗಂಧ ಜಲದ ಮಳೆ; ಪನ್ನೀರಿನ ಮಳೆ : ಗಂಧೋದಕವೃಷ್ಟಿಯಂ ಸುರಿವರೊಯ್ಯನೆ (ಶಾಂತಿಪು. ೧೨–೨೨). [ಗಂಧೋದಕ + ವೃಷ್ಟಿ]

**ಗಂಧೋದಕಸವನ** (ನಾ). ಸುಗಂಧ ಜಲದಿಂದ ಮಾಡುವ ಸ್ನಾನ; ಪನ್ನೀರಿನ ಸ್ನಾನ : ಜಿನೇಂದ್ರ ಮಹಾಭಿಷೇಕದೊಳ್ . . . ಗಂಧೋದಕಸವನಮಂ (ಸುಕುಮಾ. ೬–೨೫ವ). [ಗಂಧೋದಕ + ಸವನ]

**ಗಂಧೋದಕಸ್ನಾನ** (ನಾ). = ಗಂಧೋದಕ ಸವನ : ಬಿತ್ತರಿಸಿದರ್ ಗಂಧೋದಕಸ್ನಾನಮಂಗಳಮಂ ತೀರ್ಥಕರಂಗೆ (ಪುಷ್ಪಪು. ೧೧–೪೬). [ಗಂಧೋದಕ + ಸ್ನಾನ]

**ಗಂಧೋದ್ಗಾರಿ** (ಗು). ಗಂಧವನ್ನು ಹೊರಸೂಸುವ, —ಚೆಲ್ಲುವ : ಹಿಮಗಂಧೋದ್ಗಾರಿಯಾಯ್ತೆಂದು ಗಾಳಿ (ಪುಷ್ಪಪು. ೧೦–೩). [ಗಂಧ + ಉದ್ಗಾರಿ]

**ಗಂಧೋಪಲ** (ನಾ). = ಗಂಧಕ : "ಗಂಧವತಿ ಗಂಧೋಪಲಂ ಗಂಧಕ ಮೆನಿಕ್ಕು" (ಮಂಗರಾ. ೩೧–೧). [ಗಂಧ + ಉಪಲ]

**ಗಂಧೋಲಿ** (ನಾ). ೧. ಕಡಜ; ಕಣಜ; ಕಡಂದುರು : (ಕ). ೨. "ಜೇನುನೊಣ" (ಗಂಗಾಮು. ೧೧೦). [ಸಂ. ಗಂಧೋಲೀ]

**ಗಂಪ** 'ಗಾಂಪ' ನೋ.

**ಗಂಪಲ್** 'ಕಂಪಲ್' ನೋ.

**ಗಂಪಿಲ** (ನಾ). ಬೇಟೆಯ ಒಂದು ಸಾಧನ : ತಡಿವಲೆಯ ಬಗರೆಗೆಯ ವಾಜಿಯ ಸಿಡಿವಲೆಯ ಕಾಲ್ಗಣ್ಣಿ ಗಂಪಿಲ ಬಡಿವಲೆಯ ಬೆಳ್ಬಾರವಲೆ ಪೇರ್ವಿಡಿಸುವಲೆಗಳನೂ (ಅನಂರಾ. ೩-೩-೫). [?]

**ಗಂಪು** ‘ಕಂಪು’ ನೋ.

**ಗಂಪೆ** (ನಾ). (ಕಸದ) ಗೂಡೆ; ಕುಕ್ಕೆ : ‘ಗಂಪೆಧಾರಿ’ ಪರಾ.

[ದೇ. ‖ ತೆಲು. ಗಂಪ]

**ಗಂಪೆಧಾರಿ** (ನಾ). (ಕಸದ) ಬುಟ್ಟಿ ಹೊರುವವನು : ಇಂತೀ ಮೂವರು ಗಂಪೆಧಾರಿಗಳೆಂಬೆ (ಮೋಳಿಮಾ. ೧೦೪-೪೧೬); “ಕೂಲಿಕಾರ; ಬುಟ್ಟಿ ಹೊರುವವ” (ಮೋಳಿಮಾ. ಕೋಶ). [ಗಂಪೆ+ -ಧಾರಿ₃]

**ಗಂಬದಗಡಣೆ** (ನಾ). ಒಂದು ಬಗೆಯ ಆಟ : ಗುಡುಗು ಗುತ್ತಿನ ಚೆಂಡು ಗುಮ್ಮನ ಬಡಿವ ಕತ್ತಲೆ ಗುದ್ದು ಗಂಬದ [ಪಾಠಾಂ. ಗಂಬಗೆ, ಗಂಭದ]ಗಡಣೆ ಕಣ್ಮುಚ್ಚುಸಗವರಿ ಹರಿಹಲಗೆ ನಿಡುಗವಣೆ . . . ಆಡಿದರು (ಕುವ್ಯಾಅ. ೬-೩). [?]

**ಗಂಬೂರ** (ನಾ). ಕಪ್ಪುರ; ಕರ್ಪೂರ : ಗಂಬೂರ ಕುರುಜು ೪ ಕಸ್ತೂರಿಕಳಂಜು (ಸೌಇಇ. IX–ii, ೫೪೭-೩ ; 1532); ಚುಂಬನಂ ಚೀತ್ಕಾರದ್ವಾದಶಾಲಿಂಗನಗಳೆಂಬತ್ತುನಾಲ್ಕು ಬಂಧಪ್ರೌಢಿಯಿಾರೆಂಟು ಕಲೆ ನೆಲೆಯ ತಾಣವನಱಿದು ಗಂಬೂರ ಕತ್ತುರಿ ಕದಂಬಗಳ್ ಪೊಣ್ಮೆ ರುಚಿ ಬಿಂಬಾಧರದ ರಸಂ ತುಂಬಿ ತುಳ್ಕಾಡೆ (ಲಕ್ಷ್ಮಭಾ. ೧೬-೮).

[ದೇ. ‖ ತೆಲು. ಗಂಬೂರ, ಗಂಬುರ]

**ಗಂಭಾರಿ** (ನಾ). ಶಿವನಿ ಮರ : (ಸ). [?]

**ಗಂಭೀರ** (ಗು). ೧. ಆಳವಾದ; ಗಹನವಾದ; ಗೂಢವಾದ. ೨. ಘನವಾದ; ಭವ್ಯವಾದ : ಮಂದ್ರ ಗಂಭೀರ ದುಂದುಭಿ ಧ್ವನಿ . . . ಪೊಣ್ಮೆ (ಶ್ರೀರಾಮಾ. ೧೩-೩೫೧). [ಸಂ.]

**ಗಂಭೀರಗುಣ** (ನಾ). ೧. ಗಾಢವಾದುದು; ತಿಳಿಯಲಶಕ್ಯವಾದುದು. ೨. ಆಳವಾದುದು : ಗಂಭೀರಗುಣದೊಳಮಾವರ್ತನ ಸಿದ್ಧಿಯೊಳಂ ಜಳನಿಧಿಯನೆಪೋಲ್ವ (ಪಂಪಭಾ. ೨-೩೯ ವ) ; ಗಂಭೀರಮಮಳ ಲಕ್ಷ್ಮೀ ಸಂಭವ ಪದಂ (ಕಾವ್ಯಾವ. ೬೪೩) ; ಚಾರುನಿಶ್ಚಲ ಧೀರನಂ ಗಂಭೀರಗುಣ ಮಣಿಹಾರನಂ ಸಂಸಾರಭೂಜ ಕುಠಾರನಂ (ಬಸವು. ೫-೧೬).

[ಗಂಭೀರ + ಗುಣ]

**ಗಂಭೀರಗೆಡು** (ಕ್ರಿ). ಗಾಂಭೀರ್ಯವನ್ನು ಕಳೆದುಕೊಳ್ಳು ; ಆಳ ವನ್ನು ಕಳೆದುಕೊಳ್ಳು : ಮಂತ್ರಿಪೇಳೆ ಗಂಭೀರಗೆಟ್ಟವರೊಪ್ಪಿ ತವಗೆ ಬಾರದೊಡವೆಯ ಬಲ್ಲಿದಗೆ ಕೋರುವವೆಂದು (ಭರಚ. ೫೫-೧೧೪).

[ಗಂಭೀರ + ಕೆಡು₁]

**ಗಂಭೀರತೆ** (ನಾ). ಗಂಭೀರಭಾವ ; ಗಾಂಭೀರ್ಯ : ಪುರುಷತನವೇ ಗುಣವೆ ಪೆಂಪೇ ಗರುವಿಕೆಯೆ ಗಂಭೀರತೆಯೆ ಸನ್ಮಾರ್ಗವರ್ತನವೆ (ಬಸವು. ೪೬-೧೦) ; ಪಾಂಡುರತೆ ಮಂದಯಾನತೆ ಗಂಭೀರತೆ (ಕಗದ್ಯ. II, ೪೦). [ಸಂ. ಗಂಭೀರತಾ]

**ಗಂಭೀರಭಾವ** (ನಾ). ೧. = ಗಂಭೀರತೆ. ೨. ಗಾಂಭೀರ್ಯವುಳ್ಳ ವನು : ಗಜದಿಂ ಗಂಭೀರಭಾವಂ ವೃಷಭದಿನಭವಂ (ಶಾಂತಿಪು. ೯-೨೧೦).

[ಗಂಭೀರ + ಭಾವ]

**ಗಂಭೀರಭಾಷಿತ** (ನಾ). ಗಾಂಭೀರ್ಯದ ಮಾತು ; ಘನವಾದ ನುಡಿ : ಭಾರತೀಪತಿ ಚತುರ ಪರ್ರಿಮಿತೋದಾರ ಗಂಭೀರ ಭಾಷಿತಂಗಳಿಂ ಬಿನ್ನಪಂಗೆಯ್ಯೆ (ಜಗವಿ. ೧-೬೬ವ). [ಗಂಭೀರ + ಭಾಷಿತ]

**ಗಂಭೀರವಡೆ** (ನಾ). ಗಾಂಭೀರ್ಯವನ್ನು ತಾಳು : ನಿತಂಬಿನಿಯರ ಗುಂಪಿನಲಿ ಗಂಭೀರವಡೆದು ರುಕ್ಮಿಣಿದೇವಿ ವಿಶ್ವಕುಟುಂಬಿಗೆ ಬಿನ್ನಯಿಸಿ ದಳು (ಮೋಹತ. ೪-೫೩). [ಗಂಭೀರ + ಪಡೆ₁]

**ಗಂಭೀರವೇದಿ** (ನಾ). ಅಂಕುಶಕ್ಕೂ ಮಣಿಯದಿರುವ ಮದಿಸಿದ ಆನೆ ; ತುಂಟಾನೆ : ಪ್ರವರಾಂಕುಶಮಂ ಗಂಭೀರವೇದಿ ಶಿರದೊಳ್ ನಿಷಾದಿ ನಿಱಿಸುವ ತೆಱದಿಂ (ಶಾಂತಿಪು. ೧೦-೧೬೨).

[ಸಂ. ಗಂಭೀರವೇದಿನ್]

**ಗಂಭೀರೆ** (ನಾ). ೧. ಆಳವಾದ ವ್ಯಕ್ತಿತ್ವವುಳ್ಳವಳು ; ಗಂಭೀರತೆ ಯುಳ್ಳವಳು ; ಘನತೆಯನ್ನು ಹೊಂದಿದವಳು : ಗಂಭೀರೆಯಾಗಿ ದೊರ್ಡಂ ನಿರ್ಮಲೆಯಾಗಿರ್ಪನವಂತರಂಗಂ ಪೆರ್ಗ ಕಾಣಲಕ್ಕು (ರಾಮಾಶ್ವ. ೮-೮). ೨. ಬಿಕ್ಕುಳಿನಲ್ಲಿ ಒಂದು ಬಗೆ : ಗಂಭೀರೆ ಎಂಬ ಬಿಕ್ಕುಳು ಗಂಭೀರಧ್ವನಿಯುಳ್ಳದಾಗಿ ಮಹಾವೇಗವುಂಟಾಗಿಹುದು (ಸಕವೈ. ೨೪೧). [ಸಂ. ಗಂಭೀರಾ]

**ಗಂಹರ, ಗವ್ಹರ** (ನಾ). ೧. ಬೆಟ್ಟದ ಗವಿ, —ಗುಹೆ : “ಗಂಹರ (ಗವಿ) – ಗಹ್ವರ” (ತದ್ಭಕೋ. ೯) ; ಇರಲಿ ಗಿರಿ ಶೃಂಗಾಗ್ರದಲಿ ಗಂಹರ ಗಳಲಿ (ನಿಭಾಗ. ೨-೧-೫) ; ಗಂಹರವ ಹೊಕ್ಕಿರ್ದು ಸಿಂಹಗಳನಿಱಿಯು ವುದು (ಸರ್ವಜ್ಞ. ೧೨೮೫). ೨. ಕಾಡು ; ಅರಣ್ಯ. ೩. ಮೋಸಗಾರಿಕೆ; ಕುಹಕ ; ಕಪಟ : ಯೌವನ ಕುಂದಿದರೂ ಗಂಹರ ಕುಂದಲಿಲ್ಲ (ಗಾದೆ). **ಗವ್ಹರ** : ೧. “ಬಿಲದ ಮಾರ್ಗ” (ಚತುನಿ. ಸ. I, ೩೩) ; “ಗವ್ಹರ (ಗಂಹರ) – ಗಹ್ವರ” (ತದ್ಭಕೋ. ೧೦). [< ಸಂ. ಗಹ್ವರ]

**ಗಂಹರಿ** (ನಾ). ಭೂಮಿ ; ಧರೆ ; ಇಳೆ : ಗೋಮಿನಿಯ ಪತಿ ಗಂ [ಪಾಠಾಂ. ರುಂ]ಹರಿಯ ಭಾರವನೊನೆಯಲುದಿಸಿದನಹನೆ (ತೊರರಾ, ೧-೯-೨). [< ಸಂ. ಗಹ್ವರೀ]

**ಗಕ್ಕನೆ** ‘ಕಟ್ಕನೆ’ ನೋ.

**ಗಕ್ಕಾಗು** ‘ಗರ್ಕಾಗು’ ನೋ.

**ಗಕ್ಕು** (ನಾ). ೧. ಒಂದು ಬಗೆಯ ಕೊಕ್ಕರೆ; ಬಕಪಕ್ಷಿ : (ಸ). ೨. “ಕೆಂಪುಕೊಕ್ಕರೆ” (ಅನಂನಾ. ). [?]

**ಗಗನ** (ನಾ). ೧. ಬಾನು ; ಆಕಾಶ : “ನಭಃ . . . ಗಗನಃ, ದ್ಯುಃ – ಈ ೧೫ ಆಕಾಶಂ” (ಹಲಾಯು. ೨೨-೧೩೬) ; ಗಗನಂ ನಿಜಭೂಷಣ ದೀಪ್ತಿಗಳಿಂ ತಱತಱಿಸಿ ಪೊಳೆಯೆ . . . ಮನುಜ ಲೋಕದಿಂ ಪೊಗಱಿಸಿ ದಳ್ (ಶಾಂತಿಪು. ೪-೧೦೨) , ನೀಲಾಭ್ರ ಘಟೆಯೆ ಗಗನವನೆಡೆಗೊಂಡ ವೋಲಾಯ್ತು (ಜಗವಿ: ೪-೫೪). ಗಗನದ ಹರಿಸುರಪತಿಗಳ್ ಜಗದ್ಧಿತಾರ್ಥ ಮಹೇಶ . . . ಕಾಮನುರಿದು ಕರಿಮುಱಿವೋದಂ (ಗಿರಿಕ. ೮-೪೯). ೨. [ಗಣಿತ] ಸೊನ್ನೆ : “ಗಗನಂ . . . ಬಿಂದುವಿನನಾಮಂ” (ವ್ಯವಹಾ. ೧೦-೧೦) ; ಅನಲಂ ಗಗನಂ ಶೂನ್ಯಂ ಹರನಯನಂ ಅಂಭರ . . . ಸಪ್ತಸಪ್ತ ತ್ರಿಂಶತಿಕಾ (ಭಾಸ್ಕರ ೪ – ೬). ೩. [ಛಂದ] ಅಕ್ಷರಗಣ ಗಳಲ್ಲಿ ಒಂದು ; ತಗಣ : ಆದಿಯ ಮಧ್ಯಾಂತದೆ ಲಘುವಾದೊಡೆ ಜಲ ವಹ್ನಿ ಗಗನ ಲಘುವಿಂ ನಾಕಂ (ಛಂದೋಂಬು. ೧-೩೮ ಆಡಿಟ.).

**ಗಗನದರಳು** = ಆಕಾಶಕುಸುಮ ; ಕಲ್ಪನೆಯ ಹೂವು : ಗಗನದರಳಂ ನಿಲಿಕಿ ಕೊಯ್ಯಲು (ಬಸವು. ೪೨-೩)., **ಗಗನದಹಣ್ಣು** = ಆಕಾಶದ ಹಣ್ಣು ; ಕಲ್ಪನೆಯ ಹಣ್ಣು : ಗಗನದ ಹಣ್ಣನೆ ಕೊಯ್ದು ಮುಗುದೆ ರುಚಿಯನಱಿಯಳು (ಅವಚಂ. ೯-೩೫). [ಸಂ.]

**ಗಗನಕುಂತಳ** (ನಾ). ಆಕಾಶವೇ ಕೂದಲಾಗಿರುವವನು ; ವ್ಯೋಮ ಕೇಶ ; ಶಿವ : ಗಗನಕುಂತಳ . . . ಚಂದ್ರಶೇಖರ (ಹವ್ಮಾರ. ೮-೫೦).

[ಗಗನ+ ಕುಂತಳ (= ಕುಂತಲ)]

**ಗಗನಕುಸುಮ** (ನಾ). ೧. ಆಕಾಶದಲ್ಲಿರುವ ಹೂವು : ಗಗನಕುಸುಮಮನೆ ಪಡೆವಂತೊಗೆವುಗುರ್ಗಳ ಬಿಳಿಯ ಬೆಳಗು ಬಳೆದಡರ್ದಿರೆ ಕುಂಚಿಗೆಯನವಂ ಜೀಸಲೊಡಂ ಸೊಗಯಿಸಿದುದು ಭೋಂಕೆನಮರಪತಿ ಸಭೆ ನಭದೊಳ್ (ಲೀಲಾವ. ೪-೯೬).

೨. (ಅಲಂ) ಅಸಂಭವವಾದುದು ; ಸುಳ್ಳು : ತನಗೆ ಸುಖವು ಗಗನ ಕುಸುಮವಲ್ಲವೆ? ಎಂದು ಒಮ್ಮೊಮ್ಮೆ ಆತನು ಯೋಚಿಸುವ (ಚಿತಸ. ೧೧೧) ; ಏಕ ಸರ್ಕಾರದ, ಏಕ ಸಮಾಜದ, ಏಕರಾಷ್ಟ್ರದ ಕಲ್ಪನೆ ಈ ಕ್ಷಣದಲ್ಲಂತು ಗಗನಕುಸುಮವಾಗುಳಿದಿದೆ (ಸಾಹಿಪ್ರ. iii, ಪ್ರಸ್ತಾವನೆ). [ಗಗನ + ಕುಸುಮ]

**ಗಗನಕೇಶ** (ನಾ). = ಗಗನಕುಂತಳ : ಜಗವನೆಲ್ಲವ ನಿರ್ಮಿಸುವ ನಾಲ್ಮೊಗನೊಳಗೆ ತಾನಿದ್ದು ಸಲಹುವ ಗಗನಕೇಶನೊಳಿದ್ದು ಸಂಹರಿಸುವನು ಲೋಕಗಳ (ಹಸಾರ. ೨-೮). 'ವ್ಯೋಮಕೇಶ' ಪರಾ. [ಗಗನ + ಕೇಶ]

**ಗಗನಖಂಡ** (ನಾ). ಆಕಾಶ ಭಾಗ; ವ್ಯೋಮವಿಭಾಗ : ಒಂದು ಮುಹೂರ್ತ ಕಾಲದಲ್ಲಿ ಚಂದ್ರನು ೬೭ ಗಗನಖಂಡದಷ್ಟು, ಸೂರ್ಯನು ೫ ಗಗನಖಂಡದಷ್ಟೂ, ನಕ್ಷತ್ರದಿಂದ ಹಿಂದಕ್ಕೆ ಸರಿಯುತ್ತಾರೆ (ತತ್ತ್ವ ಪ್ರ. ೨೦೨). [ಗಗನ + ಖಂಡ]

**ಗಗನಗಂಗೆ** (ನಾ). ಆಕಾಶಗಂಗೆ; ದೇವಗಂಗೆ : ಘನವಹ್ನಿಜ್ವಾಲ ಧೂಮಾವಳಿ ಗಗನಗಂಗಾತಟೋದ್ಯುಕ್ತಮಾಳೀ ವನವೋ (ಚಂದ್ರಪು. ೪-೩೧). [ಗಗನ + ಗಂಗೆ$_2$]

**ಗಗನಗಜ** (ನಾ). ಆಕಾಶದ ಆನೆ; ಐರಾವತ : ಗಗನಗಜಕ್ಕಿಕ್ಕಿದ ಪೊನ್ನ ಗಂಟೆಯೆರಡೆನಲು (ಆದಿಪು. ೬-೫೨) ; ಗಗನಗಜ ನಿಟಿಲತಟದಿಂ ಜಗುಳ್ದಂತೆ ಪುರಾಣರಶ್ಮಿ ಮಣಿಮಯ ಮುಕುರಂ ಮಿಗೆ ಮೆಚಿದುದರರೆ ಪಶ್ಚಿಮನಗದೊಳಿಳಿದು ತೋರ್ಪ ದಿನಕರಬಿಂಬಂ (ರಾಜಶೇ. ೧೧-೨). [ಗಗನ + ಗಜ]

**ಗಗನಗತಿ** (ನಾ). ೧. ಆಕಾಶಮಾರ್ಗದಲ್ಲಿನ ಗಮನ, —ಸಂಚಾರ : ಗಗನಗತಿ ಶ್ರಮಮಂ ನೆಟ್ಟಗೆ ಕಳೆವರ್ (ಕುಸುಮಾ. ೨-೭೭) ; ೨. ಆಕಾಶವೇ ಗತಿಯಾಗಿ ಉಳ್ಳದ್ದು ; ದೇವತೆ, ಗ್ರಹ, ಪಕ್ಷಿ, ವಿಮಾನ ಮುಂತಾದುವು. [ಗಗನ + ಗತಿ]

**ಗಗನಗಮನ** (ನಾ). ೧. ಆಕಾಶದಲ್ಲಿ ಸಂಚರಿಸುವುದು, —ಗಮಿಸುವುದು : ಸುಕವಿ ಪ್ರಣುತರ್ ವ್ಯಾಕರಣ ಕರ್ತೃಗಳ್ ಗಗನಗಮನ ಸಾಮರ್ಥ್ಯರ್ (ಚಾವುಂಪು. ೭-೭) ; ಗಗನಗಮನಕ್ಕೆ ಹಂಸಂ ಮೊಗಸಿದುದೆನೆ (ಕಾದಂಪೂ. ೨೦೪) ; ಗಗನಗಮನದ ನಿಖಿಳ ವಿಹಗಾಳಿಗಳು ಬೆಂದವು (ಕುವ್ಯಾಕ. ೨೫-೪). [ಗಗನ + ಗಮನ]

**ಗಗನಗಾಮಿ** (ನಾ). ಆಕಾಶದಲ್ಲಿ ಸಂಚಾರ ಮಾಡುವವನು. [ಸಂ. ಗಗನಗಾಮಿನ್]

**ಗಗನಗಾಮಿನೀವಿದ್ಯೆ** (ನಾ). ಆಕಾಶದಲ್ಲಿ ಸಂಚರಿಸುವ ವಿದ್ಯೆ ; ಖೇಚರವಿದ್ಯೆ : ನೀನೆನ್ನಂ ನಿನ್ನ ಗಗನಗಾಮಿನೀವಿದ್ಯೆಯಿನುತ್ತರ ಕುರುವನೆಯ್ದಿಸು (ಆದಿಪು. ೨-೧೪ವ) ; ಕನಕಶ್ರೀಯಂ ಗಗನಗಾಮಿನೀ ವಿದ್ಯೆಯಿನೊಯ್ದು (ಶಾಂತಿಪು. ೩-೬೦ವ). [ಸಂ. ಗಗನಗಾಮಿನೀವಿದ್ಯಾ (ಗಗನಗಾಮಿನೀ + ವಿದ್ಯಾ)]

**ಗಗನಚರ** (ನಾ). ೧. ಗಗನದಲ್ಲಿ ಸಂಚರಿಸುವಂಥದು. ೨. ಹಕ್ಕಿ; ಪಕ್ಷಿ. ೩. ಸೂರ್ಯನೇ ಮೊದಲಾದ ಗ್ರಹಗಳು. ೪. ಗಂಧರ್ವ ; ಖೇಚರ : ಜಳಚರ ಸ್ಥಳಚರ ಗಗನಚರ ಪ್ರಕಾರದಿಂ (ಶಾಂತಿಪು. ೧೨-೧೧ವ) ; ಗಗನಚರಂ ಲಕ್ಷ್ಮೀಧರನಗಣ್ಯಪುಣ್ಯಪ್ರಭಾವದಿಂ (ಪಂರಾಮಾ. ೧೪-೪೭). [ಗಗನ + ಚರ$_2$]

**ಗಗನಚರಭುಜಗ** (ನಾ). ಗ್ರಹಗಳನ್ನು ಹಿಡಿಯುವ ಹಾವು ; ರಾಹು : "ಭಾನುರಿಪು ಸಿಂಹಿಕಾಪ್ರಿಯಸೂನು ತಮಂ ರಾಹು ಗಗನಚರಭುಜಗಂ ಸ್ವರ್ಭಾನು ವಿಧುಂತುದನಂತದು ತಾನಕ್ಕುಂ ಕೇತುನಾಮದಿಂ ಶಿಖಿಯೆನಿಕುಂ" (ವಸ್ತುಕೋ. ೧೩-೭೫). [ಗಗನಚರ + ಭುಜಗ]

**ಗಗನಚರಾಧೀಶ** (ನಾ). (ಆಕಾಶದಲ್ಲಿ ಸಂಚರಿಸುವ) ದೇವತೆಗಳ ಒಡೆಯ, —ದೊರೆ : ಇದಿರೆಟ್ಟು ಭಕ್ತಿಪುರಸ್ಸರಂ ಮನದೆಱಕದಿನೆಱಗಿದ ಗಗನಚರಾಧೀಶನಂ ಯತಿ ಪರಸಿ (ಶಾಂತಿಪು. ೨-೨೧). [ಗಗನಚರ + ಅಧೀಶ]

**ಗಗನಚರಿ** (ನಾ). ಗಗನದಲ್ಲಿ ಸಂಚರಿಸುವವಳು ; ದೇವತಾಸ್ತ್ರೀ : ಮಿಗೆ ನೆಗೆವ ಗಗನಚರಿಯ ನಿಡುಜಡೆ ತೊಡಂಕಿ ಜಿಗಿಲ್ತು ತೆಗೆಯಲ್ ಬಾರದಿರೆ ಪಾಱುಗೆಟ್ಟು (ಶಬಶಂ. ೩-೩೫ವ). [ಸಂ. ಗಗನಚರೀ]

**ಗಗನಚರೇಂದ್ರ** (ನಾ). = ಗಗನಚರಾಧೀಶ: ಕೆಱುತ್ತು ನಟ್ಟು ಬೆನ್ನಟ್ಟುವ ಗಗನಚರೇಂದ್ರನ ರೌದ್ರರಸಮಂ (ಶಾಂತಿಪು. ೬-೪೦). [ಗಗನಚರ + ಇಂದ್ರ]

**ಗಗನಚಾಪ** (ನಾ). ಕಾಮನಬಿಲ್ಲು ; ಇಂದ್ರಚಾಪ : ಗಗನದರಳಂ ನಿಲಿಕಿ ಕೊಯ್ಯಲು ಗಗನಚಾಪವನೇಱಿಸಲು (ಬಸಪು. ೪೧-೩). [ಗಗನ + ಚಾಪ$_1$]

**ಗಗನಚುಂಬಕ** (ನಾ). ಆಕಾಶವನ್ನು ಮುಟ್ಟುವಂತಹುದು ; ವ್ಯೋಮ ಚುಂಬಕ : ಇಂಥ ಗಗನಚುಂಬಕ (Sky Scrapers) ಗಳಿಗೆ ನ್ಯೂಯಾರ್ಕ್ ನಗರ ಪ್ರಸಿದ್ಧ (ಬಾಲಪ್ರ II, ೯೭೨). [ಗಗನ + ಚುಂಬಕ]

**ಗಗನಚುಂಬಿ** (ನಾ). = ಗಗನಚುಂಬಕ : ಆ ಪಟ್ಟಣದಲ್ಲಿ ಗಗನಚುಂಬಿಯಾದ ಕಟ್ಟಡಗಳಿವೆ (ರೂಢಿ). [ಸಂ. ಗಗನಚುಂಬಿನ್]

**ಗಗನತಳ** (ನಾ). ಬಾಂದಳ; ಆಕಾಶ ಪ್ರದೇಶ; ಅಂತರಿಕ್ಷ : ಮತ್ತೊರ್ವಂ ಗಗನತಳಂ ನಿಜಭೂಷಾಂಶುಗಳಿಂ ಪ್ರಜ್ವಳಿಸುವಂತು ಬೇಗಂ ಬಂದಂ (ಪಂರಾಮಾ. ೧೪-೪೬) ; ಗಗನತಳಂಗಳೊಳ್ ಖಚಿತರತ್ನ ಕದಂಬದ ಕಾಂತಿ ಬಣ್ಣವಣ್ಣಿಗೆಯ ಮುಗಿಲ್ಗಳಂ ಕೆದಱಿ (ಅನಂಪು. ೯-೬೫); ಗಗನತಳವನು ಬಿಗಿದ ಬಲುಚಿಂಚಿಗಳ (ಕುವ್ಯಾದ್ರೌ. ೩-೫). [ಗಗನ + ತಳ (= ತಲ)]

**ಗಗನತಾರಾವಳಿ** (ನಾ). ೧. ಆಕಾಶದಲ್ಲಿಯ ನಕ್ಷತ್ರಗಳ ಗುಂಪು, —ಸಮೂಹ. ೨. ಕನ್ನಡದ ಒಂದು ಗ್ರಂಥದ ಹೆಸರು : ಈ ಮಹಾ ಘನಗಗನತಾರಾವಳಿಯ ವಿರಚಿಸುವ (ಗಗತಾ. ೧-೧೪). [ಗಗನ + ತಾರಾವಳಿ]

**ಗಗನದನಿ** (ನಾ). ಬಾನುಲಿ; ಆಕಾಶದಲ್ಲಿ ಕೇಳಿಬರುವ ಧ್ವನಿ; ಆಕಾಶವಾಣಿ : ನುಡಿಯಲ್ ಜಟಾಯುವಾತ್ಮಂ ಗಗನದನಿಯಾಗಿ (ಶ್ರೀರಾಮಾ. ೮೦೩-೮೨). [ಗಗನ + ದನಿ]

**ಗಗನಧುನಿ** (ನಾ). = ಗಗನಗಂಗೆ : ಗಗನಧುನಿಯಂ ತಂದ ಸಗರ (ವೆಂಕಾರಾ. ೧-೧೩-೮೯). [ಗಗನ + ಧುನಿ]

**ಗಗನಭುವನ** (ನಾ). = ಗಗನಗಂಗೆ : ಭುವನಭವಸಖ ಭುವನಭವ ರಿಪುವನಲನಯನ ಗಗನಭುವನಾವತಂಸ (ಗುರುಚಾ. ೧೨-೧). [ಗಗನ + ಭುವನ]

**ಗಗನಮಂಡಲ**, ಗಗನಮಂಡಳ (ನಾ). ೧. ಆಕಾಶಮಂಡಲ ; ವ್ಯೋಮ ಪ್ರದೇಶ. ೨. ಬ್ರಹ್ಮರಂಧ್ರ : ಗಗನಮಂಡಲದ ಸೂಕ್ಷ್ಮನಾಳದಲ್ಲಿ ಸೋಹಂ ಸೋಹಂ ಎನುತ್ತಿದ್ದಿತು ಒಂದು ಬಿಂದು (ಅವಚಂ. ೫೭-೨೪೭). **ಗಗನಮಂಡಳ** : ೧. ಇಲ್ಲಿಂದ ಪೋಜಗಂ ಗಗನಮಂಡಳದಿಂ ಬಳಸಿ (ಜೀವಸಂ. ೩೩-೧೦ ವ.) [ಗಗನ + ಮಂಡಲ]

**ಗಗನಮಂಡಳ** 'ಗಗನಮಂಡಲ' ನೋ.

**ಗಗನಮಣಿ** (ನಾ). ಸೂರ್ಯ ; ದಿನಮಣಿ : "ಗಗನಮಣಿಯೆನಲ್ ರವಿ" (ಭಾರನಿ. ೧೮) ; ಅವನಿ ನಡುಗಿತು ಗಗನಮಣಿಪರಿವೇಷದಲಿ ತಾರೆಗಳು ಪೊಳೆದವು ಸುರಿದವರುಣಾಂಬುಧಾರೆಗಳು (ಕುವ್ಯಾವಿ. ೪-೨೪) ;

ಗಗನಮಣಿ ಪಶ್ಚಿಮಾಂಗನೆಯ ಬೈತಲೆಯ ರಂಗು ಮಾಣಿಕದಂತೆ (ಚಂದ್ರಸ. ೮). [ಗಗನ+ ಮಣಿ]

**ಗಗನಮಾಲಾವಳಿ** (ನಾ). ಒಂದು ಬಗೆಯ ಸೀರೆ; ಆಕಾಶಬಣ್ಣದ ಸೀರೆ (?) : ಧಾವಳ್ಯ ದಿವ್ಯತಾರಾವಳಿಯ ಗಗನಮಾಲಾವಳಿಯ . . . ಸೀರೆಗಳ (ನವಮೋ. ೧೭–೬೦). [ಗಗನ + ಮಾಲಾವಳಿ ?]

**ಗಗನಯಾತ್ರಿ** (ನಾ). = ಗಗನಗಾಮಿ : ಗಗನಯಾತ್ರಿಗಳಾದರಾ ಸೂರ್ಯಚಂದ್ರರು ಎಲ್ಲರೂ ತಿಗಣೆಗಂಜಿದರು (ಇಂಚಾಪ. ೧೧೮–೬೪). [ಗಗನ + ಯಾತ್ರಿ]

**ಗಗನಲತೆ** (ನಾ). ೧. ಆಕಾಶದಲ್ಲಿರುವ ಬಳ್ಳಿ. ೨. (ಆಲಂ) ಅಸಂಭವವಾದುದು : ಗಗನಲತೆಯಲಿ ಪಕ್ಷಿ ಸುಳಿದೊಡೆ (ಅಮೃತ. ೬–೨೩). [ಗಗನ+ ಲತೆ]

**ಗಗನಲಿಪಿ** (ನಾ). ಒಂದು ಬಗೆಯ ಗೂಢಲಿಪಿ : ಲಿಪಿಗಳ ವಿವರ, ಗಗನಲಿಪಿ, ಧೂಮಲಿಪಿ, ಜಲಲಿಪಿ . . . ಯೀ ಅಗಣಿತಲಿಪಿಗಳ ನೋದಲರಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲಾ (ಭಾಸ್ಕರ. ೭೭–೪). [ಗಗನ + ಲಿಪಿ]

**ಗಗನವಟ್ಟೆ** (ನಾ). ಆಕಾಶಮಾರ್ಗ; ಬಾಂಬಟ್ಟೆ : ಗುರುಪಾದವ ಕೊರ್ತು ನಡೆದಳು ಜಲಜಾಕ್ಷಿ ಗಗನವಟ್ಟೆಯಲಿ (ಮೋಹತ. ೩೯–೭). [ಗಗನ + ಬಟ್ಟೆ]

**ಗಗನವಿಜ್ಞಾನಿ** (ನಾ). ಆಕಾಶದ ವಿಷಯವನ್ನು ತಿಳಿದುಕೊಂಡವನು; ಖಗೋಳಶಾಸ್ತ್ರಜ್ಞ : ದೂರದರ್ಶಕಯಂತ್ರದಕ್ಷಿಯೊಳ್ ಕಣ್ಣಿಟ್ಟು, ಗಗನವಿಜ್ಞಾನಿ ತಾಂ ರಾತ್ರಿಯಾಕಾಶದಲಿ ಕಾಣ್ಬೊಂದು ತಾರಾಗರ್ಭದಂತೆ (ಶ್ರೀರಾಮಾ. ೧೧–೨೬೪). [ಗಗನ + ವಿಜ್ಞಾನಿ]

**ಗಗನವಿವರ** (ನಾ). ಆಕಾಶದ ಭಾಗ, —ವಿಸ್ತಾರ : ಪರಿದಿರೆ ಸಂಧ್ಯಾರಾಗಂ ನಿರಂತರಂ ಗಗನವಿವರಮೊಪ್ಪಿತ್ತೆಂದಾದರದಿಂ ಪೇಳಲ್ಪಗೆದಂತಿರೆ (ಕವಿರಾ. ೧–೧೦೨). [ಗಗನ + ವಿವರ]

**ಗಗನವಿಹಾರ** (ನಾ). ಆಕಾಶಯಾನ; ಗಗನದಲ್ಲಿ ವಿಹರಿಸುವುದು : ಕನಕರುಚಿರುಚಿರವಿಂಶತಿಧನುಃಪ್ರಮಾಣಾಂಗಮೆಸೆಯೆ ಗಗನವಿಹಾರಂ ತನಗೊಪ್ಪೆ ವಿಹಾರಿಸಿಯುಂ (ಶಾಂತಿಪು. ೧೨–೨೦). [ಗಗನ + ವಿಹಾರ]

**ಗಗನವಿಹಾರಿಣಿ** (ನಾ). ಆಕಾಶದಲ್ಲಿ ವಿಹರಿಸುವವಳು, —ಕ್ರೀಡಿಸುವವಳು : ಕಪಾಲಕುಂಡಲೆಯು ಆಕಾಶವನ್ನು ನೋಡುತ್ತ ಗಗನವಿಹಾರಿಣಿಯೂ ಭಯಂಕರಿಯೂ ಆದಾ ಶಂಕರಿಯನ್ನು ನೋಡಿದ್ದ ಕಡೆ ದೃಷ್ಟಿಯಿಟ್ಟು ನೋಡಿದಳು (ಕಪಾಕುಂ. ೧೨೭). [ಸಂ. ಗಗನವಿಹಾರಿಣೀ (ಗಗನ + ವಿಹಾರಿಣೀ)]

**ಗಗನಸಖಿ** (ನಾ). ವಿಮಾನದಲ್ಲಿ ಪ್ರಯಾಣಿಕರನ್ನು ಸತ್ಕರಿಸುವವಳು, —ಮೇಲ್ವಿಚಾರಕಳು : ವಿಮಾನದಲ್ಲಿ ನಮ್ಮ ಊಟ ತಿಂಡಿಗಳನ್ನು ನೋಡಿಕೊಳ್ಳುತ್ತಿದ್ದ ಗಗನಸಖಿಯನ್ನು (Air Hostess) ಮರೆಹೊಕ್ಕೆ (ನಂಟರು. ೪೦೮); ಎದುರಿಗೆ ನಿಂತಿದ್ದ ಗಗನಸಖಿ (ಏರ್‌ಹೋಸ್ಟೆಸ್) ಮಿಸ್. ರಸಲ್ (ನಡೆದಾ. II, ೯೦೮). [ಗಗನ + ಸಖಿ]

**ಗಗನಸಿದ್ಧಿ** (ನಾ). ಎಂಟು ಸಿದ್ಧಿಗಳಲ್ಲಿ ಒಂದು; ಆಕಾಶದಲ್ಲಿ ಹಾರುವ ವಿದ್ಯೆ (?) : ನಾದಾನುಭೂತಿ . . . ನಿರೂಪದರ್ಶನ, ವಾಯು ಪರಿಕಲ್ಪನ, ಸ್ವರರೂಪತೆಯೆಂಬಿವೆಂಟು ಗಗನಸಿದ್ಧಿಗಳ್ (ವಿವೇಕ. ೨೭೭). [ಗಗನ + ಸಿದ್ಧಿ]

**ಗಗನಸ್ಥಳಿ** (ನಾ). = ಗಗನಮಂಡಲ ೧ : ಬಳೆದು ನೆಗೆತಂದು ದಾಂಥಳ ಥಳಂದಳ ಧ್ವನಿಯಳುರ್ಕೆಗೊಳೆ ಶಬ್ದಗುಣಂ ತಳಿವೊಡದಕಾಯ್ತು ಗಗನಸ್ಥಳಿಗಲ್ಲದೊಡಲ್ಲಿ ಶಬ್ದಮೇಂ ಸಮನಿಸುಮೇ (ರಾಜಶೇ. ೬–೪೪). [ಸಂ. ಗಗನಸ್ಥಲೀ]

**ಗಗನಸ್ಥಾನ** (ನಾ). = ಗಗನಮಂಡಲ ೧ : ಗಗನಸ್ಥಾನದಿನಿಳಿತಂದ ಸೊರ್ಮೊದಲ್ ಪಗಲುಳ್ಕಂ ತಾನೆನೆ ಮುನಿವಿಖ್ಯಾತಂ . . . ಅಜಸಂಜಾತಂ (ಜಗವಿ. ೨–೪೦). [ಗಗನ + ಸ್ಥಾನ]

**ಗಗನಾಂಗಣ** (ನಾ). = ಗಗನಮಂಡಲ ೧ : "ಶರೀರ ವಿಸ್ತರಂ ಕಾಳಗ ಮತ್ಕುದಾರಗಗನಾಂಗಣಮೆಂಬಿವುವಿಗ್ರಹಾಹ್ವಯಂ" (ನಾನಾರ. ೯೯); ಗಗನಾಂಗಣಸೌಧಾಗ್ರದೊಳೊಗುವಿಗೆಯಿಂ, ರಾಜಿಸಿರ್ಪ ಮಣಿಕಲಶಂ ಬೊಲ್ (ಕಾದಂಬ. ೬೩೨); ಗಗನಾಂಗಣದೊಳ್ ನಡೆವರ್ (ಪಂಪರಾಮಾ. ೫–೨೩); ಸರಳಿನ ಸೇತುವನು ಕಟ್ಟಿದನು ಗಗನಾಂಗಣಕೆ ಕಲಿಪಾರ್ಥ (ಕುವ್ಯಾವಿ. ೮–೨೦); ಗಗನಾಂಗಣದಲಿ ಉಡು ತೊಳಗೆ (ಕಏಪು. ೬–೧). [ಗಗನ + ಅಂಗಣ]

**ಗಗನಾಂಗಳ** (ನಾ). = ಗಗನಮಂಡಲ ೧ : ಹೊಳೆವ ಮಕುಟದ ವದನ ಗಗನಾಂಗಳಕೆ ಚಿಮ್ಮಿತು (ಕುವ್ಯಾದ್ರೋ. ೧೪–೪೦). [ಗಗನ + ಅಂಗಳ]

**ಗಗನಾಂಬರೆ** (ನಾ). ಗಗನವನ್ನೇ ಬಟ್ಟೆಯಾಗಿ ಉಳ್ಳವಳು; ದಿಗಂಬರೆ : ಶರಧಿಶರೀರೆ; ಗಿರಿವನವದನೆ; ಗಗನಾಂಬರೆ; ಅಧಿಮಾನಸಸದನೆ (ಅನಿಕೇ. ೨೭–೧೩). [ಸಂ. ಗಗನಾಂಬರಾ (ಗಗನ + ಅಂಬರ + –)]

**ಗಗನಾಧ್ವ** (ನಾ). ೧. = ಗಗನವಟ್ಟೆ : ಇಂದುಕಾಂತ ಶಿಲಾತಳದೊಳ್ ವಿಶ್ರಮಿಸಿ ಮನೋವಿಷಾದಮುಮಂ ಗಗನಾಧ್ವ ಖೇದಮುಮಂ ಕಳೆದು (ಪಂರಾಮಾ. ೪–೮೭ವ). ೨. ಆಕಾಶಮಾರ್ಗದಲ್ಲಿ ಸಂಚರಿಸುವವನು; ದೇವತೆ : ಗಗನಾಧ್ವರ್ ಶರಣಾಗಿಮಾಗಿಮ ಮರರ್ . . . ಎನುತುಂ ತನ್ವಂಗಿ ಪುಯ್ಯಲ್ಚಿದಳ್ (ಕಾವ್ಯಾವ. ೪೬೧). [ಗಗನ + ಅಧ್ವ]

**ಗಗನಾಧ್ವಗ** (ನಾ). ಆಕಾಶದಲ್ಲಿ ಸಂಚರಿಸುವಂತಹುದು : "ಸೂರ್ಯಚಂದ್ರಗ್ರಹನಕ್ಷತ್ರಾದಿಗಳು; ದೇವತೆಗಳು; ವಿಮಾನ; ಪಕ್ಷಿ" (ಕಸ್ತೂಕೋ. ೨೭೭). [ಗಗನ + ಅಧ್ವಗ]

**ಗಗನಾಪಗಾಜೂಟ** (ನಾ). ಗಂಗೆಯನ್ನು ಜೂಟದಲ್ಲಿ ಧರಿಸಿರುವವನು; ಗಂಗಾಧರ : ನಗಜಾತೆ ಕೇಳೆಂದು ನಂದಿ ಸುಪ್ರಮಥರಿಗೆ ಗಗನಾಪಗಾಜೂಟನುಸುರುತಿರಲು (ದುರಪು. ೩–೨). [ಸಂ. (ಗಗನಾಪಗಾ + ಜೂಟ)]

**ಗಗನಾಭೋಗ** (ನಾ). ಆಕಾಶದ ವಿಸ್ತಾರ, —ಹರಹು : ಗಗನಾಭೋಗದೊಳೊಪ್ಪಿ ಬರ್ಪ ಪಲವುಯಾನಂಗಳಂ ತೋರ್ಪ್ (ಆದಿಪು. ೭–೧೦೯); ಗಗನಾಭೋಗಮನಾವಗಂ ಬೆಳಗುತುಂ ಜ್ವಾಲಾಸಹಸ್ರಂಗಳಿಂದುಗುಳುತ್ತುಂ ಕಿಡಿಯಂ (ಪಂರಾಮಾ. ೧೪–೬೬); ಗಗನಾಭೋಗಮನೆಯ್ದೆ ನೀಳ್ದೊಗೆದ ಗೌರಚ್ಛಾಯೆ . . . ನೋಡಾಕಾಶ ಗಂಗಾಜಲಂ (ಕಾವ್ಯಾವ. ೪೮). [ಗಗನ + ಆಭೋಗ]

**ಗಗನಾರವಿಂದ** (ನಾ). = ಗಗನಕುಸುಮ : ನಿರೀಶ್ವರ ಸಾಂಖ್ಯವಿಡಿದು ಮುಕ್ತಿಯ ಪಡೆವೆನೆನೆ ಶಶವಿಷಾಣಗಗನಾರವಿಂದದ ತೆಜನಲಾ (ವೀಶೈಪು. ೪–೬–೨೧). [ಗಗನ + ಅರವಿಂದ]

**ಗಗನಾಹಿ** (ನಾ). ಆಕಾಶದ ಸರ್ಪ; ರಾಹು : ನರಸಿಂಹರಾಯನುದ್ಧತ ಕರಾಸಿಗಗನಾಹಿ ನುಂಗುವುದು ಸಂಗರದೊಳ್ (ಎಕ. V, ಚನ್ನರಾ. ೨೪೩–ಜಿ೨; 1209). [ಗಗನ + ಅಹಿ]

**ಗಗನೇಚರ** (ನಾ). = ಗಗನಗಾಮಿ : ಆ ಗಗನೇಚರನುಂ ಧನುರಾಗಮ ವಿದ್ಯಾಗಮೈಕನಿಧಿ ವಿದ್ಯೆಗಳಿಂ ಪೋಗದೆ ಕಾದುತ್ತಿರೆ (ಶಾಂತಿಪು. ೪–೨೫); ಗಗನೇಚರತೇಜಶಿಖಿ ಪಗೆವರ ಭಾಸುರ ಯಶೋವಿತಾನಮನುರಿಪಲ್ ನೆಗೆದುದೆನೆ (ಪಂರಾಮಾ. ೪–೧೦೩); ಗಗನೇಚರದ ಗತಿಯಲಿ ಬಂದನೈದ್ವೈಪಾಯನ ವ್ರತಿಪ (ಕುವ್ಯಾದ್ರೋ. ೬–೨೦). [ಸಂ.]

**ಗಗನೇಚರಿ** (ನಾ). = ಗಗನಚರಿ: ಗಗನೇಚರಿಯರ ಪದದಲತಗೆವೊರೆದ ರುಣಂಗಳಾದುವಿದಜ ಫಲಶ್ರೇಣಿಗಳೆನೆ ಪಣ್ಗಳ ಕೆಂಪಿಂ ಸೊಗಯಿಸಿತು ದ್ದಂಡಕಾಂಡಭಾಂಡೀರವಟಂ (ಜಗವಿ. ೪-೪೫); ಗಗನೇಚರಿಯರ್ ಶ್ರಮಮಂ ಮಿಗೆ ನೂಂಕಲ್ ನಿಲ್ವುದರ್ಕಿವೆಮ್ಮೆಮ್ಮಯ ಠಾವುಗಳೆಂದು (ದಶಕು. ೧-೩೪). [ಸಂ. ಗಗನೇಚರೀ]

**ಗಗನೋಪಲ** (ನಾ). ಆಕಾಶದಲ್ಲಿ ತೇಜಃಪುಂಜವಾಗಿ ಹೊಳೆದು ಬೀಳುವ ಶಿಲೆ; ಉಲ್ಕೆ: ಗಗನೋಪಲಗಳು ಬೀಳುತ್ತ (ಜ್ಯೋತಿರ್ವಿ. ೧೮೨). [ಗಗನ + ಉಪಲ]

**ಗಗ್ಗ**$_1$ (ನಾ). ಕಾಡು ಮನುಷ್ಯ; ಒರಟ; ಒಡ್ಡ: ಅಯ್ಯೊ ಗಗ್ಗ ಇದೇನೇ ನಿನಗೆ ತಿಳಿಯುವುದು (ಕಿಂಕಥೆ. ೧೨೦); ಒರಟ, ನಯವಿಲ್ಲದವನು, ಅಸಂಸ್ಕಾರಿ, ಗಗ್ಗ (Boor. ಇಂಕನಿ). [< ಕಗ್ಗ$_1$]

**ಗಗ್ಗ**$_2$ (ನಾ). ಒಂದು ವಂಶದ ಹೆಸರು: ಸ್ವಸ್ತಿಶ್ರೀ ಮನು ಗಗ್ಗರೊಕ್ಕಲಾ ಮದಲೂರ ಕುಪ್ಪನೊಃಜುಗೊಳೊಳ್ ಬಿದು ಸತ್ತು (ಎಕ. X, ಕೋಲಾರ. ೧೮೨-೧; ಸು. 1000?). [ಔ 'ಗಂಗ' ಅಥವಾ 'ಗೊಗ್ಗ' ಎಂಬುದರ ಅಪಲಿಖಿತವಿರಬಹುದು] [?]

**ಗಗ್ಗನಾತ**(ನಾ). ಕೆಟ್ಟವಾಸನೆ; ಗಬ್ಬುನಾತ: ಗಗ್ಗನಾತದಲೆ ಗೊರಕೆಹೊಡೆಯುವದು ದಿನದ ಜನದ ಮಂದಿ (ಅರಳು. ೩೪೩-೮). [< ಗಬ್ಬುನಾತ]

**ಗಗ್ಗರ**$_1$ 'ಗರ್ಗರ$_1$' ನೋ.

**ಗಗ್ಗರ**$_2$ 'ಗರ್ಗರ$_2$' ನೋ.

**ಗಗ್ಗರ**$_3$ (ನಾ). = ಗದ್ಗದ. 'ಗಗ್ಗರಿಸು' ಪರಾ. [< ಸಂ. ಗದ್ಗದ]

**ಗಗ್ಗರಗೆಜ್ಜೆ** (ನಾ). = ಗಗ್ಗರ$_1$: ಕೊರಲ ಕಿಱುಗಂಟೆಯ ಕಾಲ ಗಗ್ಗರ ಗೆಜ್ಜೆಯ (ರಾಮಾಶ್ವ. ೯೪-೭). [ಗಗ್ಗರ$_1$ (< ಗರ್ಗರ$_1$) + ಗೆಜ್ಜೆ$_1$]

**ಗಗ್ಗರಗೋಲು** 'ಗರ್ಗರಿಕೋಲು' ನೋ.

**ಗಗ್ಗರದನಿ** (ನಾ). ಗರಗರ ಎಂಬ ಧ್ವನಿ; ಕರ್ಕಶವಾದ ಶಬ್ದ: ನೀವು ಒಂದೆರಡುಸಲ ಕೆಮ್ಮಿ ಗಗ್ಗರದನಿಯಿಂದ ಹೇಳಿದರೆ (ನಂಟರು. ೩೪). 'ಗೊಗ್ಗರದನಿ' ಪರಾ. [ಗಗ್ಗರ$_2$ (< ಗರ್ಗರ$_2$) + ದನಿ]

**ಗಗ್ಗರವಜಿ** (ನಾ). ಗರಗರ ಎಂದು ಶಬ್ದಮಾಡುವ ತಮಟೆ, —ಹಲಗೆ: ಗಗ್ಗರವಜಿ ಗಡಿಬಿಡಿ ತೂಳುವಜಿ ಚಿನ್ನಬೊಗ್ಗಿನವಜಿ ಜಿನಗಹಳೆ (ಕುರಾಸಾಂ. ೪೧-೭೮). [ಗಗ್ಗರ$_1$ (< ಗರ್ಗರ$_1$) + ಪಜಿ$_1$]

**ಗಗ್ಗರವಿಡು** (ಕ್ರಿ). ಗಗ್ಗರವನ್ನು ಇಡು; ಅಂದುಗೆ ತೊಡಿಸು; ಗೆಜ್ಜೆಕಟ್ಟು: ಭೂತಕ್ಕೆ ಗಗ್ಗರವಿಟ್ಟು ನಿಂತಾಗ ಭಟ್ಟರು ಹೇಳುವ 'ಮದು' ಅಥವಾ ನುಡಿಗಟ್ಟು ಹೀಗಿರುತ್ತದೆ (ದಂಬನಾ. ೧೪). [ಗಗ್ಗರ$_1$ (< ಗರ್ಗರ$_1$) + ಇಡು$_1$]

**ಗಗ್ಗರಸ್ವನ** (ನಾ). = ಗಗ್ಗರದನಿ: ಹಿಗ್ಗಿದುದು ಸುರರೊಗ್ಗು ಗಗ್ಗರಸ್ವನದಿಂದೆ ಸಗ್ಗದಿಂ ಪೂಮಳೆಯು ಸುಗ್ಗಿ ನುಗ್ಗಿತು (ಭರಥ. ೨-೧೯). [ಗಗ್ಗರ$_2$ (< ಗರ್ಗರ$_2$) + ಸ್ವನ]

**ಗಗ್ಗರಿ**$_1$ 'ಗರ್ಗರ$_1$' ನೋ.

**ಗಗ್ಗರಿ**$_2$ (ನಾ). ಜಗಲಿ; ಚಡತ: ಚಿತ್ರದ ಅಂಕಣಗಳ ಇಮ್ಮಗ್ಗಲಿನ ಸ್ತಂಭಗಳ ಮೇಲೆಯೂ ನಡುವಣ ಗಗ್ಗರಿಯ ಮೇಲೆಯೂ ಬರೆಹವನ್ನು ಕಂಡರಿಸಿರುವರು (ಶಾಸಪ. ೨); ಅಮಲನು ಕಟಾಂಜನದ ಕೆಳಗಿದ್ದ ತುಸು ಎತ್ತರದ ಗಗ್ಗರಿಯ ಮೇಲೆ ಕುಳಿತು ಕಾಲು ಚಾಚುವನು (ಇಪ್ಪಕ. ೨೩೩). [?]

**ಗಗ್ಗರಿ**$_3$ (ನಾ). (ಉಕ) ೧. ಬಹಳ ನಿರಿಗೆಯುಳ್ಳ ಉಳ್ಳ ಲಂಗ: "ಪರಕಾರ" (ಜಾನಕೋ. ೪೪); ಲಂಗಕ್ಕೆ ಕೆಲವೆಡೆ ಪರಕಾರ, ಗಗ್ಗರಿ ಎನ್ನುವರು (ರೂಢಿ). ೨. "ಬಗಲಂಗಿ; ಜಾಕೀಟು" (ರಮಾಕಾಂ. ೨೦೫). [← ಪ್ರಾ. ಘಗ್ಗರ, ಗಗ್ಗರ; ಹಿಂ. ಘಘರ್, ಘಘರೀ]

**ಗಗ್ಗರಿಕಟ್ಟಿಗೆ** (ನಾ). = ಗರ್ಗರಿಕೋಲು: ಆಸಾಸೋಟ, ಜನುದಂಡ, ಗಗ್ಗರಿಕಟ್ಟಿಗೆ (ಗುರುದ. ೧೦). [ಗಗ್ಗರಿ$_1$ (< ಗರ್ಗರ$_1$) + ಕಟ್ಟಿಗೆ$_1$]

**ಗಗ್ಗರಿಕೆ, ಗಗ್ಗರಿಕ್ಕೆ** (ನಾ). ಗದ್ಗದಸ್ವರ: ಒದವಿ ತಗುಳ್ದ ಗಗ್ಗರಿಕೆ ಸೂಸುವ ಕಣ್ಬನಿ (ಆದಿಪು. ೧೨-೨೬); ಗಗ್ಗರಿಕೆ [ಪ್ರಾಶಾಂ. ೪೬] ಯಗ್ಗಳವಾದುದು (ಅರ್ಧನೇ. ೭-೧೪); ನಿನ್ನ ಗೀತವುಂ ಪಾಡಲೊಡರ್ಚೆ ಗಗ್ಗರಿಕೆಯೊಳ್ ಜರಿವಳ್ (ಅನಂಪು. ೮-೩೪); "ದುಃಖ" (ಪ್ರಭಣ್ಣ). **ಗಗ್ಗರಿಕ್ಕೆ**: ತೀವಿದ ಕಣ್ಣಿನೀರ್ ಮಿಡಿದುಪಾಯ್ವೆರ್ದೆ ಹಿಗ್ಗಿದ ಗಗ್ಗರಿಕ್ಕೆ (ಅನಂಪು. ೩-೮೬); ಅಪ್ಪಿನ ಹಮ್ಮುದಂಗಳಿಂ ಕೂಡುವ ಗಗ್ಗರಿಕ್ಕೆ ಮೆಱೆದೊಂದಿ ನಿಮಿರ್ದುವು ಜಕ್ಕವಕ್ಕಿಗಳ್ (ಅನಂಪು. ೮-೭೮). [< ಗದ್ಗದಿಕೆ]

**ಗಗ್ಗರಿಕೆಗೊಳ್** (ಕ್ರಿ). ಗದ್ಗದಗೊಳ್ಳು: ಕಣ್ಣನೀರ್ಗಳೋಗಡಿಸದೆ ಸೂಸೆ ಗಗ್ಗರಿಕೆಗೊಂಡುದನಾಂ ನೆನೆವೆಂ ಲತಾಂಗಿಯಂ (ಆದಿಪು. ೧೨-೩೩); ಗಗ್ಗರಿಕೆಗೊಳ್ವ ಸರಮಂ ಪರಂಪರೆಯಿಂ ಕೇಳ್ದು (ಪಂಪಭಾ. ೮-೭೯ ವ). [ಗಗ್ಗರಿಕೆ + ಕೊಳ್$_1$]

**ಗಗ್ಗರಿಕ್ಕೆ** 'ಗಗ್ಗರಿಕೆ' ನೋ.

**ಗಗ್ಗರಿಗೋಲು** 'ಗರ್ಗರಿಕೋಲು' ನೋ.

**ಗಗ್ಗರಿಘಂಟೆ** (ನಾ). ಗರಗರ ಎಂದು ಶಬ್ದಮಾಡುವ ಘಂಟೆ: ಕಡುಬಿರಿದನಾಂತುವಸುಗಟ್ಟು ಗಗ್ಗರಿಘಂಟೆ ಜಡಿವ ಝಲ್ಲಿ (ನವಮೋ. ೨೩-೫೬). [ಗಗ್ಗರಿ$_1$ (< ಗರ್ಗರ$_1$) + ಘಂಟೆ]

**ಗಗ್ಗರಿಸು** (ಕ್ರಿ). ೧. = ಗಗ್ಗರಿಕೆಗೊಳ್: ಅಂತರ್ನಿರ್ಘೂರ್ಣಿತಾಪೂರ್ಣಮನ್ಯುವೇಗದೊಳ್ಪಿರಿವಂತೆ ಗಗ್ಗರಿಪ ಕೊರಲೊಳುಬ್ಬರಿಪೊರೆದ ಸೆರೆಗಳೊಳಂ (ವರ್ಧಪು. ೯-೬೩ ವ). ೨. ದೈನ್ಯತೆಯಿಂದ ಬೇಡು: "ದಯನಾಸಬಿಟ್ಟುಬೇಡು" (ಜಾನಕೋ. ೪೪). [ಗಗ್ಗರ$_3$ + -ಇಸು$_3$]

**ಗಗ್ಗೆ** 'ಗೆಗ್ಗೆ' ನೋ.

**ಗಗ್ಘರಗಂಟೆ** (ನಾ). = ಗಗ್ಗರಿಘಂಟೆ: ಹೊನ್ನ ಹೊರಜೆ ಮಿಸುನಿಯ ಗಗ್ಘರಗಂಟೆ ರನ್ನಗಂಬಳಿ ಝುಲ್ಲಿ (ಚಂಪ್ರಸಾಂ. ೨೧-೩೦). [ಗಗ್ಘರ$_0$ + ಗಂಟೆ$_2$]

**ಗಚಕಂ**, ಗಚುಕು (ನಾ). "ಕೆಸರು" (ಗಂಗಾಮ. ೧೧೦). **ಗಚುಕು**: (ಸ್ಯಾಂಡರ್). [?]

**ಗಚಕೆ** (ನಾ). (ಉಕ). ೧. ಜಾರುವಿಕೆ. ೨. ಪೆಟ್ಟು; ಆಘಾತ: ಅವನು ವ್ಯಾಪಾರದಲ್ಲಿ ಗಚಕೆ ತಿಂದನು (ರೂಢಿ). [← ಮರಾ. ಗಚಕಾ]

**ಗಚಕ್ಕನೆ** (ಅ). ಮುಳ್ಳು ಮೊದಲಾದುವುಗಳು ಚುಚ್ಚುವುದನ್ನು ಅನುಕರಿಸುವ ಅವ್ಯಯ: (ಸ್ಯಾಂಡರ್). [< ಕಚಕ್ಕನೆ]

**ಗಚುಕು** 'ಗಚಕು' ನೋ.

**ಗಚ್ಚಗೊಳಿಸು** (ಕ್ರಿ). ಓಡಿಸು; ಕಳುಹಿಸು: ಇಚ್ಛೆಯಾಯ್ತು [ಯೆ]ಡೆಯುಲಿದಡುಳಿದರಿತರಾವನಿಗೆ ಗಚ್ಚಗೊಳಿಸುವೆನೆಂದ (ಜಿನಮು. ೧೧-೩೫). [< ಗಚ್ಛ + ಕೊಳಿಸು]

**ಗಚ್ಚರಿಸು** (ಕ್ರಿ). ಅಗೆ; ತೋಡು; ಗೋರು; ಕವರು: ಒಳಗಂ ಗಚ್ಚರಿಸಿದ ಮಾತುಳಂಗಮಂ ನೆಱೆ ಮಗುಚ್ಚಿ ಪುಟದಿಂ ಮಂದಾನಿಳದಿಂದೆ ಸುಟ್ಟು ಮುಖದೊಳ್ ತಳೆದೊಡೆ ಮುಖವಾಸಮಿಂತಿದತಿಶಯಮಕ್ಕುಂ (ಲೋಕೋಪ. ೭-೮). [< ಕಚ್ಚರ + -ಇಸು$_3$]

**ಗಚ್ಚಾಗು** (ಕ್ರಿ). ಪೂರ್ಣವಾಗು; ದಟ್ಟವಾಗು; ಭರ್ತಿಯಾಗು: ಒಚ್ಚತಯಿಲ್ಲೆನಲಾಗದು ಕಾಲವೊಂದಚ್ಚಿ ಕರ್ಮಗಳತ್ತ ತಹುದು ಚುಚ್ಚಿ ಕೊಡುವರಂತೆ ಪುದ್ಗಲ ಪರಿಣತಿ ಗಚ್ಚಾದ ಕಾರಣದಿಂದ (ಭರಚ. ೬೮-೪೨);

ಮತ್ಸ್ಯಾವತಾರಮಂ ಕೈಕೊಂಡ ಹರಿಯಂತೆ ಗಚ್ಚಾಗಿ (ಪಠಶು. ೬-೧೪); ಹಬ್ಬ ಹುಣ್ಣಿವೀ ಹೂರಣಷ್ಟು ಮ್ಯಾಲಿಂದ ಮ್ಯಾಲ ಗಚ್ಚಾಗಿ ಬಿದ್ದ ಬೀಳ್ತಿರತದ (ಮಿಂಚಿಹು. ೫೧). [ಗಚ್ಚು$_2$ + ಆಗು$_1$]

**ಗಚ್ಚಿ** 'ಗಚ್ಚು$_2$' ನೋ.

**ಗಚ್ಚಿಸು$_1$** (ಕ್ರಿ). ಅಂಟಿಕೊಳ್ಳುವಂತೆ ಮಾಡು; ಕಚ್ಚುವಂತೆ ಮಾಡು; ಭದ್ರಗೊಳಿಸು: ಯಚ್ಚನದರಗ್ರದಲಿ ಮಿಂಬುಳಗಚ್ಚಿಸಿದ ತೆರನಾಗಿ ಆಲವಗೊಚ್ಚಿಸಿದನಸಿ ಪಂಜರದ ತೆರನಾಗಿ ಅಚ್ಯುತನೂ (ಜಿರಾಮಾ. ೩೧೬-೩೨). [ಗಚ್ಚು$_1$ (< ಕಚ್ಚು$_4$) + -ಇಸು$_3$]

**ಗಚ್ಚಿಸು$_2$** (ಕ್ರಿ). ಹೋಗು: ಗಚ್ಚಿಸುವನವನಿಂಗೆ ಪುನರಾಗಚ್ಛವಿಲ್ಲೆಂಬಾಗಮವ ಮನ ಕಿಚ್ಚಿಸುಳಿಯಂನ್ಯಾಯವೇನಿರಲೆನೆ ವಿಭೀಷಣನಾ (ಜಿರಾಮಾ. ೨೩೬-೧೬). [< ಗಚ್ಛ + -ಇಸು$_3$]

**ಗಚ್ಚು$_1$** 'ಕಚ್ಚು$_4$' ನೋ.

**ಗಚ್ಚು$_2$**, ಗಚ್ಚಿ (ನಾ). ೧. ನೆಲ, ಗೋಡೆ ಮೊದಲಾದುವುಗಳಿಗೆ ಹಾಕುವ ಗಾರೆ, —ಲೆಪ್ಪ: ಹೊಸ ಸುಣ್ಣಮಂ ಮಣ್ಣ ಕಲಸಿ ಗಚ್ಚಂ ಮಾಡಲೊಸೆದು (ಗುರುಚಾ. ೮-೪೧); ಸುಣ್ಣವನ್ನೂ ಉಸುಕನ್ನೂ ಕೂಡಿಸಿ ಕುಟ್ಟಿ ಗಚ್ಚುಮಾಡಿಕೊಳ್ಳಬೇಕು (ಮುಂಬಯಿ. ೪-೧೪೭); ಬದಿಯಲ್ಲಿಯೇ ಗಚ್ಚನ್ನು ಅರೆಯುವ ವರ್ತುಲವಿತ್ತು. ಅದರಲ್ಲಿ ಹಸಿಯ ಗಚ್ಚು ತುಂಬಿತ್ತು (ಶ್ರೀಮತ. ೬೨). ೨. (ಆಲಂ) ಒಯ್ಯಾರ; ಜಂಭ: ಗಚ್ಚಿಯ ನವರತ್ನಮಯದ ಸಂಜೋಗ ಪಳಚ್ಚನೊಪ್ಪುವ ತೇಜಿಯೇಜು (ಭರಚ. ೨೯-೧೭). **ಗಚ್ಚಿ**: ೩. ಗಚ್ಚಿನಿಂದ ಮಾಡಿದ ಮೇಲ್ಮಾಳಿಗೆ; ತಾರಸಿ: ಹಿಂಬದಿಯ ಕೋಣೆಗಳ ಮೇಲೆ ಗಚ್ಚಿ ಇರುವುದರಿಂದ ಬೇಸಗೆಯ ದಿನಗಳಲ್ಲಿ ಬೆಳುದಿಂಗಳ ರಾತ್ರಿಗಳಲ್ಲಿ ಅಲ್ಲಿ ವಿರಾಮ ತೆಗೆದುಕೊಳ್ಳಲು ಅತ್ಯಂತ ಸುಖದಾಯಕವಾಗಿದೆ (ಇತಿಶ್ರೀ. ೧೩); ಗಚ್ಚಿಯಲ್ಲಿಂದ ಒಳಕ್ಕೆ ಬಂದು ಹಾಸುಗೆಯಲ್ಲಿ ಹಾಗೆಯೆ ಹೊರಳಿಕೊಂಡಿದ್ದೆ (ನಿರೀಕ್ಷೆ. ೬೫).

**ಗಚ್ಚಿನಕಟ್ಟೆ** = ಗಾರೆಯಿಂದ ಕಟ್ಟಿದ ಕಟ್ಟೆ: ಆ ಕಿಡಕಿಗಳ ನಡುವಿನ ಸ್ಥಳಗಳಲ್ಲಿ ಕೂಡುವುದಕ್ಕೆಂದು ಗಚ್ಚಿನಕಟ್ಟೆಗಳನ್ನು ಕಟ್ಟಿರುತ್ತಾರೆ (ವಿವರ್ಣ. ೧೮). **ಗಚ್ಚಿನಗುಡಿ** = ೧. ಗಾರೆಹಾಕಿ ಕಟ್ಟಿದ ಗುಡಿ. ೨. (ಆಲಂ). ಪ್ರತಿಧ್ವನಿ ಕೊಡುವಸ್ಥಳ. ೩. (ಆಲಂ) ಇನ್ನೊಬ್ಬರ ಅಭಿಪ್ರಾಯವನ್ನು ಅಥವಾ ಮಾತನ್ನು ಪಡಿನುಡಿಯುವ ವ್ಯಕ್ತಿ: ದೋರಳು ದೊಡ್ಡಪ್ಪನ ಗಚ್ಚಿನಗುಡಿಯಾಗಿದ್ದಳು (ದೋರಾಕ. ೧೬). **ಗಚ್ಚಿಯೆಣ್ಣೆ** = ಹೊಳಪು ಕೊಡುವ ಎಣ್ಣೆ; ಮೆರುಗೆಣ್ಣೆ; ವಾರ್ನಿಷ್: (ಕ).

[←ಮರಾ. ಗಚ್ಚಿ; ಪಾರ. ಗಚ್ಚ್, ಗಚ. / ತೆಲು. ಗಚ್ಚು]

**ಗಚ್ಚುಕುಟ್ಟು** (ಕ್ರಿ). ಗಚ್ಚನ್ನು ಹಾಕಿ ಭದ್ರಪಡಿಸು; ದಮ್ಮಸ್ಸು ಮಾಡು: (ಸ್ಯಾಂಡರ್). [ಗಚ್ಚು$_2$ + ಕುಟ್ಟು$_1$]

**ಗಚ್ಚುಗಟ್ಟು** (ನಾ). ಗಾರೆಯಿಂದ ಕಟ್ಟಲ್ಪಟ್ಟುದು: ರೋಚಿರ್ಮಯದ ಗಚ್ಚುಗಟ್ಟಿನಂಗಡಿಗಳತಿ ಶೌಚಮಾಗೆಸೆಯಲಾ ಪುರದಬಾಜಾರ (ಗುರುಚಾ. ೧-೨೯). [ಗಚ್ಚು$_2$ + ಕಟ್ಟು$_2$]

**ಗಚ್ಚೆನ್ನೆಕಾಯಿ** (ನಾ). ಒಂದು ಬಗೆಯ ಕಾಯಿ (?): "ಮುಳ್ಳು ಬೆಟ್ಟಮಾವು, ಗಚ್ಚೆನ್ನೆಕಾಯಿ" (ವೈಔಗ. ೨೪-೪೪೦).

[ಗಚ್ಚೆನ್ನೆ ? + ಕಾಯಿ$_4$ (< ಕಾಯ್$_4$)]

**ಗಚ್ಚೊರಸು** (ಕ್ರಿ). ಗಚ್ಚುಹಾಕು; ಗಾರೆಹಾಕು; ಗಿಲಾವು ಮಾಡು: ಗಂಭೀರಮಾತುಗಳ ಗಚ್ಚೊರಸಿದ ಮೇಲೆ ನನ್ನ ಮುಖರಸವನ್ನೂ ಸಿಂಪಡಿಸಲಿಕ್ಕೇ ಬೇಕು (ಹುಚ್ಚಾಟ. ೧೩೩).

[ಗಚ್ಚು$_2$ + ಒರಸು$_1$]

**ಗಚ್ಛ** (ನಾ). ೧. ಓಡಿಹೋಗುವಿಕೆ; ಪರಾರಿ. ೨. [ಜೈನ] ಪ್ರವಾಸ ಮಾಡುವ ಮುನಿಗಳ ಗುಂಪು: ತಮ್ಮ ಗುರುಗಳು ಸೂರಸ್ತಗಣದ ಕಾಣೂರ್ಗ್ಗಚ್ಛದ ಅರ್ಹನನ್ದಿ ಪಂಡಿತದೇವರ್ಗೆ (ಸೌಇಇ. XI-i, ೫೨-೫೫; 1007); ಸಾಮಾನ್ಯವಾಗಿ ಸಂಘಗಳಿಗೆ ಗಣ, ಗಚ್ಛ (ಬಲಿ) ಅನ್ವಯ ಎಂದೂ ಕರೆಯುವ ರೂಢಿಯುಂಟು (ಜೈನಪ. ೬೧). ೩. [ಗಣಿತ] "ಗಣಿತದಲ್ಲಿ ಶ್ರುಂಖಲಾ ಪದ್ಧತಿಯ ಒಂದು ವಿಧಾನ" (ಕಸ್ತೂಕೋ. ೨೬೬). ೪. (ಆಲಂ). ಸಾವು; ಮರಣ. 'ಗಚ್ಛಹೊಡೆ' ಪರಾ.

**ಗಚ್ಛಮಾಡು** = ಓಡಿಹೋಗು; ಕಂಬಿ ಕೀಳು: ವಶಕ್ಕೆ ಬಂದ ಹೆಣ್ಣು ಕೈಮೀರಿ ಹೋದೀತೇನೆಂಬ ಭಯಕ್ಕಾಗಿ ಹುಡಿಗೆಯನ್ನೇ ಇದೇ ರಾತ್ರಿ ಎತ್ತಿಕೊಂಡು ತಮ್ಮೂರಿಗೆ ಗಚ್ಛಮಾಡಬೇಕೆಂಬ ಆಲೋಚನೆಯಲ್ಲಿದ್ದಾನೆ (ಪವಶೀ. ೬೫). **ಗಚ್ಛಹೊಡೆ** = ೧. ಗಚ್ಛಹೊಡೆಸು: ಆಗ್ಗೆ ನಿನ್ನ ಕೈಯಿಂದಾ ಕೊಸರಿಕೊಂಡು ನಾನು ಹೇಗೆ ಗಚ್ಚಾಹೊಡೆದೆನು (ಯಚ್ಚಮ. ೩೧). ೨. (ಆಲಂ). ಸಾಯು; ಪರಲೋಕವಾಸಿಯಾಗು: ಮಕ್ಕಳು ಬರುವಷ್ಟರಲ್ಲಿ ಮುದುಕ ಗಚ್ಛಹೊಡೆದಿದ್ದನು (ರೂಢಿ). [ಸಂ.].

**ಗಚ್ಛಂಮಾಡು** (ಕ್ರಿ). ಅಪಹರಿಸು (?): ಗಚ್ಛಂಮಾಡಿ ಪರಿಹಾರಂ (ಎಇ. VI, ೪೪-೯; 840). [ಗಚ್ಛ + ಮಾಡು$_1$]

**ಗಜ** (ನಾ). ೧. ಆನೆ; ಕರಿ; ಇಭ: "ದ್ವಿಪಃ, ಕರೀ, ಗಜಃ . . . ಸಿಂಧುರಃ—ಈ ೧೪ ಆನೆಯ ಪೆಸರ್" (ಹಲಾಯು. ೩೬-೬೧); ಗದೆಯೊಳ್ ಬಿಲ್ಲೊಳ್ ಗಜದೊಳ್ ಕುದುರೆಯೊಳ್ . . . ಬೆಡಂಗೊದವಿರೆ (ಪಂಪಭಾ. ೨-೬೧); ಗಜಮಂ ಬಳವೈರಿ . . . ಏಜಿ ನಭಕ್ಕೆ ಸಲ್ವುದುಂ (ಜಗವಿ. ೧-೩೬). ೨. ಒಬ್ಬ ರಾಕ್ಷಸನ ಹೆಸರು. 'ಗಜಾಸುರ' ಪರಾ. ೩. ದೊಡ್ಡದು; ಹಿರಿದಾದುದು. 'ಗಜನಿಂಬೆ' ಪರಾ. ೪. ವಿಗ್ರಹ ರಚನೆಯಲ್ಲಿ ಒಂದು ಆಯ ವಿಶೇಷ: ಎಂಟು ವಿಧವಾದ ಗಜ, ಉಷ್ಟ್ರ (ಒಂಟೆ), ಖರ . . . ಎಂಬ ಆಯಗಳು (ಭಾರದ. ೮೦). ೫. ಒಂದು ಅಳತೆ; ಎರಡು ಮೊಳ ಅಥವಾ ಮೂರಡಿ ಉದ್ದ: ಬಾಲ್ಯದಲ್ಲಿ ಬೆಳೆದ ಪ್ರಮಾಣದಲ್ಲಿಯೇ ಕೈ ಬೆಳೆಯುತ್ತ ಹೋದರೆ ೪೦ ವರ್ಷದ ಯುವಕನ ಕೈ ಕೆಲವು ಗಜ ಉದ್ದವಾಗಿರಬೇಕಾಗುತ್ತಿತ್ತು (ಜೀವಾತ್ಮ. ೧೬೩); ಅದು ಮುನ್ನೂರು ಗಜ ದೂರವಾಯಿತು (ಹುಟ್ಟಹ. ೨೫). ೬. ಕಾಗದದ ನಿರ್ದಿಷ್ಟ ಅಳತೆಯ ಒಂದು ಹಾಳೆ: ಅಂಗಡಿಯಿಂದ ಒಂದು ಗಜ ಕಾಗದ ತೆಗೆದುಕೊಂಡು ಬಾ (ರೂಢಿ). ೭. ಕಂಬಿ; ಸಲಾಕೆ; ಸರಳು: ಗೋರಿಯ ಸುತ್ತು ಮುತ್ತು ಕಬ್ಬಿಣದ ಗಜಗಳನ್ನು ಕೂಡ್ರಿಸಿ (ಮುಂಬಯಿ. ೬-೨೬). ೮. ಪೆಟ್ಟಿಗೆ ಕಾಯಿ ಅಥವಾ ಮದ್ದು ಹಾಕಿ ಹೊಡೆಯುವ ಬಿದರಿನ ಕೋಲು, —ಕಡ್ಡಿ: 'ಗಜಗಡ್ಡಿ' ಪರಾ. ೯. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ: "ಅಷ್ಟ, ವಸು . . . ಇಭ, ಕರಿ, ಗಜ . . . ಇಂತಿನಿತುಂ ಲಕ್ಕೆ ಪೆಸರು" (ವ್ಯವಹಾ. ೧೦-೩೦). ೧೦. [ಛಂದ] ಪ್ರಾಸದಲ್ಲಿ ಒಂದು ಬಗೆ: ನಿಜದಿಂ ಬಂದೊಡೆ ಸಿಂಗಂ ಗಜ ದೀರ್ಘಂ (ಛಂದೋಂಬು. ೧-೪೩). [ಸಂ.]

**ಗಜಕಟ್ಟಣೆ** (ನಾ). ಆನೆಯನ್ನು ಅಳೆಯುವ ಮಾನ (?): ಆನೆಯ ಅಳೆವುದರ್ಕೆ ಗಜಕಟ್ಟಣೆ ಗಜ ೧ಕ್ಕೆ ಹಿಡಿಗಳ ೮ ಹಿಡಿಯ ಮಡಿದುಯಿದ್ದು ಮೊಬದ ಅಳತೆ (ವ್ಯವಹಾ. ೧-೪ ಅನುಬಂ.).

[ಗಜ + ಕಟ್ಟಣೆ$_2$ (< ಕಟ್ಟಳೆ$_1$)]

**ಗಜಕಟ್ಟು** (ನಾ). (?): ಕಾಸಿಯ ಕಣಕಟ್ಟು ಕನಕೇರಿ ಗಜಕಟ್ಟು ವಾಸುವುಳ್ಳವರು ಆಳಿಯರು (ಲೋಕಗೀ. ೫೪). [?]

**ಗಜಕಡ್ಡಿ** 'ಗಜಗಡ್ಡಿ' ನೋ.

**ಗಜಕರಣ** (ನಾ). ಕಣ್ಣುಕಟ್ಟು ; ಯಕ್ಷಿಣೀ ವಿದ್ಯೆಗಳಲ್ಲಿ ಒಂದು ; ಮಳೆ ತರಿಸುವುದು (?) : ಗಜಕರಣದಂತೆ ಇಂದ್ರಮಹೇಂದ್ರಜಾಲ ದಂತೆ ಅಗ್ನಿಸ್ತಂಭನೆಯಂತೆ (ಸರ್ವವ. ೧೨೯-೬೫೫). [ಸಂ.]

**ಗಜಕರಣಿ** (ನಾ). ಆನೆಯಂತೆ ಸೊಂಡಲಿನಿಂದ ನೀರನ್ನು ಸುರಿಸು ವುದು (?) : ಶರಧಿಯ ನೀರೀಂಟಿ ಮುಗಿಲ್ಗಳೆಳೆಗೆ ಗಜಕರಣಿಯ ಮಾಡುವಂದದಲಿ ಸುರಿವ ಮಳೆಯೊಳೆಲ್ಲಿಯು ದಂಡು ಪೇಳಿದರಿರವನೆನಗೆ ದಂಡನಾಥ (ಕುರಾಸಾಂ. ೩೫-೯೪). [?]

**ಗಜಕರ್ಣ$_1$** (ನಾ). ಒಂದು ಬಗೆಯ ಚರ್ಮರೋಗ; ಇಸಬು : "ಮಂಡಲಕ-ಗಜಕರ್ಣ" (ಗಂಗಾಮು. ೨೩೬); ಕಜ್ಜಿ ತಿಮುರು ಇಸಬು ಗಜಕರ್ಣ ಇಂಥ ರೋಗಗಳು ಆಗುವವು (ಕೃಷಿಪ್ರ. ೨೬೯); ಇದರಿಂದ ನಾರು, ಹುರುಕು, ಕಜ್ಜಿ, ಗಜಕರ್ಣ, ಇಸಬು ಮುಂತಾದ ತ್ವಗ್ರೋಗ ಗಳು . . . ಸೇರುತ್ತವೆ (ಮುಂಬಯಿ. ೫-೧೫೪). [ಸಂ.]

**ಗಜಕರ್ಣ$_2$** (ನಾ). ಒಂದು ಬಗೆಯ ಗಿಡ; ಕೆಂಪುಹರಳುಗಿಡ: ಗಜಕರ್ಣ: ಇದು ಮಳೆಗಾಲದಲ್ಲಿ ಎಲ್ಲ ಕಡೆಯಲ್ಲಿಯೂ ಕಾಣಿಸಿ ಕೊಳ್ಳುವುದು (ಸಸ್ಯಶಾ. ೧೩೬). [ಸಂ. ಗಜಕರ್ಣಾ]

**ಗಜಕರ್ಣಿ** (ನಾ). = ಗಜಕರ್ಣ$_2$ : "ಮಡಲು ಗಜಕರ್ಣಿ [ಪಾಠಾಂ. ಕರ್ಣಿಕೆ]ಯುಕ್ಕು" (ಮಂಗರಾ. ४೦-೩೨). [ಸಂ. ಗಜಕರ್ಣೀ]

**ಗಜಕರ್ಣಿಕಾತೈಲ** (ನಾ). ಗಜಕರ್ಣಿಕೆಯಿಂದ ಮಾಡಿದ ತೈಲ: ಗಜ ಕರ್ಣಿಕಾತೈಲ – ಬಲರಾಕ್ಷಸಗೆಡ್ಡೆ, ಸಮೂಲ, ಅಶ್ವಗಂಧಿ. . .ದಿನದಿನಕ್ಕೆ ಶರೀರಪುಷ್ಟಿಯಾಗುವುದು (ಸಕವೈ.೧೧೬). [ಸಂ.(ಗಜಕರ್ಣಿಕಾ+ತೈಲ)]

**ಗಜಕರ್ಣಿಕೆ** (ನಾ). = ಗಜಕರ್ಣ$_2$ : "ಮಡಲು ಗಜಕರ್ಣಿಕೆ [ಪಾಠಾಂ. ಕರ್ಣಿ]ಯಕ್ಕು" (ಮಂಗರಾ. ४೦-೩೨). [ಸಂ. ಗಜಕರ್ಣಿಕಾ]

**ಗಜಕೇಸರ** (ನಾ). ಒಂದು ಬಗೆಯ ಗಿಡ (?) : "ನಾಗಂ ಗಜ ಕೇಸರಂ" (ವಸ್ತುಕೋ. ೩೪-೬). [ಗಜ + ಕೇಸರ ?]

**ಗಜಕೇಸರಿಯೋಗ** (ನಾ). ಒಂದು ಬಗೆಯ ಔಷಧ (?) : ಗಜಕೇಸರಿಯೋಗ (ಶೀತಜ್ವರ ಗುಲ್ಮಶೂಲೆಗಳಿಗೆ) (ವಿವೈವಿ. ೨೪). [ಗಜಕೇಸರಿ$_0$ + ಯೋಗ]

**ಗಜಕ್ರೀಡಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು: ಗಜಕ್ರೀಡಿತ . . . ಗಂಗಾವತರಣ — ೧೦೮ ಕರಣಂಗಳ್ (ಲಾಸ್ಯರಂ. ४-४೨ವ). [ಗಜ + ಕ್ರೀಡಿತ]

**ಗಜಗ** 'ಗರ್ದುಗು' ನೋ.

**ಗಜಗಜಿಸು** (ಕ್ರಿ). ೧. ಕೋಲಾಹಲದಿಂದಿರು; ಗದ್ದಲದಿಂದ ತುಂಬು : ಭುಜಗನರಾಮರಭುವನವೆಲ್ಲವು ಗಜಗಜಿಸಿದುದಾ ಬಲ್ಲಿನಿಗೆ (ಶ್ರೀಪಾಲ. ೧೩-೪೯). [< ಗಜಬಜಿಸು]

**ಗಜಗಡ್ಡಿ, ಗಜಕಡ್ಡಿ** (ನಾ). ೧. ಒಂದು ಗಜ ಉದ್ದವಾದ ಅಳತೆಯ ಕಡ್ಡಿ, —ಅಳತೆಗೋಲು : ಒಳ್ಳೆ ಗಜಗಡ್ಡಿಯಾಗುತ್ತೆ ಎಂದು ಕೇಳಿ (ಮಲೆನಾ. ೬೯). ೨. ± ಗಜ ೮ : ನನ್ನ ಪಟ್ಲನ ಗಜಗಡ್ಡಿ ಮುರಿದು ಹೋಯಿತು (ರೂಢಿ). **ಗಜಕಡ್ಡಿ** : ಆನೆಗೆ ಗಜಕಡ್ಡಿ, ಕುದುರೆಗೆ ಕಡು ಮೆಟ್ಟು ಕೋಡಿಗೆ ಇಪ್ಪತ್ತು ಹಚ್ಚಡಾ ಕೋಡಿಗೆ ४ ಚವುಕ ಚವುಕಳಿ ೧ಕ್ಕೆ ಹಚ್ಚಡ ೫ (ಭಾಸ್ಕರ. ೬೮-೨); ಅಳತೆಗಾಗಿ ಗಜಕಡ್ಡಿಯನ್ನುಪಯೋಗಿಸು ತ್ತಿದ್ದರು (ಭಾರದ. ೧೫); ನಾನಂತು ಈ ಗಜಕಡ್ಡೀಲಿ ಅಳೆದುಬಿಟ್ಟಿ ದ್ದೀನಿ (ಮಹಾಲ. ४೬). [ಗಜ + ಕಡ್ಡಿ]

**ಗಜಗಮನ** (ನಾ). ೧. ಆನೆಯ ನಡಗೆ; ಗಂಭೀರವಾದ ನಡೆ; ಮಂದಗಮನ: ಗಜಗಮನೆಯರ್ಗಿದು ಯುಕ್ತಂ ಗಜ ಗಮನಮೆನುತ್ತೆ ಕೀರ್ತಿಸುತ್ತಿರೆ ಸುಜನರ್ (ಪಾರ್ಶ್ವಪು. ೮-೮೯). ೨. ಆನೆಯ ಮೇಲೆ ಕುಳಿತು ಹೋಗುವವನು ; ಇಂದ್ರ: ಗಜಗಮನ ಸಂಭ್ರಮಿಸದಿರು ನೀನಜ ಕಳಕಳದೇಕೆನುತ್ತಂ ಭುಜಬಲರು ದ್ವಾರಾಕರು ಹೋಯೆನುತ ಪಾರಿಸಲು (ಬಸವು. ೧-४४). [ಗಜ + ಗಮನ]

**ಗಜಗಮನೆ** (ನಾ). ಆನೆಯಂತೆ ನಡಗೆಯುಳ್ಳವಳು; ಮಂದಗಾಮಿನಿ: ಉನ್ಮತ್ತಗಜಗಮನೆಯರ್ ಬಂದೊತ್ತಿಗೆ ನಿಲ್ವರ್ (ಸುಕುಮಾ. ೯-೩೨); ಗಜಗಮನೆಯರ್ಗಿದು ಯುಕ್ತಂ ಗಜಗಮನಮೆನುತ್ತೆ ಕೀರ್ತಿಸುತ್ತಿರೆ ಸುಜನರ್ (ಪಾರ್ಶ್ವಪು. ೮-೮೯). [ಸಂ. ಗಜಗಮನಾ (ಗಜ + ಗಮನ + –)]

**ಗಜಗರ್ಭ** (ನಾ). ೧. ಆನೆಯ ಗರ್ಭ, —ಗರ್ಭಧಾರಣೆ. ೨. (ಆಲಂ) ಬಹಳ ನಿಧಾನವಾಗುವಿಕೆ; ವಿಳಂಬವಾಗುವಿಕೆ : ಅವನ ಕಾರ್ಯ ಗಜಗರ್ಭವಾಗಿದೆ (ರೂಢಿ). [ಗಜ + ಗರ್ಭ]

**ಗಜಗಲಿಸು** (ಕ್ರಿ). ೧. ಹೊಳೆ; ಪ್ರಕಾಶಿಸು; ಶೋಭಿಸು : ತನ್ನದೆನ್ನ ದೆಂದು ನಚ್ಚುವರಂ ನಗುವಂತು ಗಜಗಲಿಸುತ್ತುಮಿರ್ದ ಕಾಂಚನ ಪಂಚರತ್ನಸಂಚಯಮುಮಂ ಕಂಡು (ಅರ್ಧನೇ. ४-೧೧४ ವ); ಸುರಗಿ ಚಕ್ರಂ ಮುದ್ಗರಂಗಳಾ ಸಬುದದಿಂದೊಗೆದ ಕಿಡಿ ಗಜಗಲಿಸೆ [ಪಾಠಾಂ. ಗಜಬಜಿಸೆ, ಝುಗಝುಗಿಸೆ] (ಹ ಚ ಕಾ. ೫-೧೩); ಗಜಗಲಿಸಿದುದು ಸೋಮಸೂರ್ಯರ ನಿಜದ ನಿಜುಗೆಯ ಲಹರಿಯಲಿ (ತ್ರೊರರಾ. ೬-೫४-೬); ಕಾಮುಮದಹರನವೊಲ್ ಭುಜಗನಿಕರಸ್ತೋಮಭೂಷಣಂ ತಾವೆನಲ್ ಗಜಗಲಿಸಿತಾ ಪೊಳಲ ಪೆಂಪು (ರುಕ್ಮಾಂಗ. ೩-೧೫). ೨. "ಝೇಂಕರಿಸು" (ಪ್ರಭಣ್ಣ); ಹಾರಿದವು ಹಂಸೆಗಳು ಶುಕಪಿಕ ಚೀರಿದುವು ಗಜಗಲಿಸಿ ತುಂಬಿಗಳೇರಿದವು (ಅಂಬಿಕಾ. ೧೮-४). [ಗಜಗಲ ? + –ಇಸು$_3$]

**ಗಜಗವಳ** (ನಾ). ೧. ಆನೆಯ ತುತ್ತು, —ಆಹಾರ (?). ೨. ದೊಡ್ಡ ತುತ್ತು ; ಅಧಿಕವಾದ ಆಹಾರ. [ಗಜ + ಕವಳ$_2$ (= ಕವಲ)]

**ಗಜಗಾಮಿನಿ** (ನಾ). = ಗಜಗಮನೆ : ಮದಗಜಗಾಮಿನಿ ಬಂದಳು ಕಾಮಿನಿ ಬಂದಳು ಲೀಲೆಯಿಂದಲಸಭಾವದೊಳು (ಇಂಚಾಪ. ೯೮-೮೦). [ಸಂ. ಗಜಗಾಮಿನೀ]

**ಗಜಗಿಪ್ಪಲಿ** (ನಾ). ಒಂದು ಬಗೆಯ ವನಸ್ಪತಿ : "ಕಪಿಪಿಪ್ಪಲಿ – ಚೆವ್ಯಗ್ಗಿಲು, ಗಜಗಿಪ್ಪಲಿ" (ಒಷಧಿ. ೨೬). [< ಗಜಪಿಪ್ಪಲಿ]

**ಗಜಗು** 'ಗರ್ದುಗು' ನೋ.

**ಗಜಗೊಟ್ಟೆಮುಳ್ಳು** (ನಾ). ಒಂದು ಬಗೆಯ ಮುಳ್ಳು : "ಆಸಿನ ಗೊಟ್ಟೆಮುಳ್ಳು, ಗಜಗೊಟ್ಟೆಮುಳ್ಳು, ಜಿಡ್ಡುಮುಳ್ಳು" (ವೈಔಗಿ. ೭೯-೧೬೨೬). [ಗಜಗೊಟ್ಟೆ ? + ಮುಳ್ಳು (< ಮುಳ್$_2$)]

**ಗಜಗೊಡು** (ಕ್ರಿ). ಅಳತೆಮಾಡು (?) : ನಾಳೆ ಜ್ಯಾಡ ಬಂದು ನಾಳೆ ಮಗ್ಗಾ ಹೂಡಿ ಬಾಳೀಯ ವನಕ ಗಜಗೊಟ್ಟು ನೇದಾನ ಬಾಲಿ ಗೌರವ್ವ ದಡಿಸೆಲ್ಲೆ (ಲೋಕಗೀ. ೧೧೭-೬). [ಗಜ + ಕೊಡು$_1$]

**ಗಜಗೊಳ** (ನಾ). ಒಂದು ಊರಿನ ಹೆಸರು : ಬಳ್ಳಿಗೆರೆಯ ಪಡುವ ಗಜಗೊಳ (ಎಕ. XII, ಗುಬ್ಬಿ. ೬೧-೯೩ ; 812). [ಗಜ + ಕೊಳ$_2$]

**ಗಜಘಂಟಾರವ** (ನಾ). ಆನೆಗೆ ಕಟ್ಟಿದ ಘಂಟೆಯ ಶಬ್ದ: ಗಜ ಘಂಟಾರವಮನುಜಿದೆ ಪೆಜಗಿಡೆ ಭೈರವಮೆಸೆದತ್ತು ಚರದ ಬಲ ಜಲನಿಧಿಯೊಳ್ (ಶಾಂತಿಪು. ೩-೯೬). [ಸಂ. (ಗಜ + ಘಂಟಾ + ರವ)]

**ಗಜಘಟೆ** (ನಾ). ೧. ಆನೆಗಳ ಗುಂಪು, —ಸಮೂಹ: ಗಜಘಟೆಗೆ ನಾಥನಾಗಿಯುಂ ಅಜಾತ ಮದ . . . ಅಮಾನುಷಂ ಹಲಹಸ್ತಿಂ (ಶಾಂತಿಪು. ೨-೯). ೨. ಆನೆಗಳ ಪಡೆ, —ದಂಡು: ತಳರೆ ಮಹೀ ರಜದಿಂ ಘನವಿಳಾಸ ಗಜಘಟೆಯಿನವನಿಯಂ ನಭಕೆ ನಭಸ್ಥಳಮಂ ನೆಲಕ್ಕೆ ತಂದಂ (ಶಾಂತಿಪು. ೧೦-೧४೬) ; ಗಜಘಟೆಯ ತೇರುಗಳ (ನಾಗರಿ. ೫೯). [ಗಜ + ಘಟೆ]

**ಗಜಚರ್ಮ** (ನಾ). ಆನೆಯ ಚರ್ಮ, —ತೊಗಲು: ಲಸದಿಡುಗುಡಿಯ ಪೆರ್ವಾಡಿ ರಕ್ಷ ಗಜಚರ್ಮಸೌಂದರ್ಯವಸನಾ (ವೀಶೈಪು. ೪-೫-೧). 'ಗಜಚರ್ಮಧಾರಿ' ಪರಾ. [ಗಜ + ಚರ್ಮ]

**ಗಜಚರ್ಮಧಾರಿ** (ನಾ). ಗಜಚರ್ಮವನ್ನು ಧರಿಸಿದವನು ; ಈಶ್ವರ; ಶಿವ : ಹೋರಾಡಲಾರದೆ ಅಗಸನ ಹತ್ತಿರ ಹರಿ ಪಟ್ಟೆಯುಡೆಯುಟ್ಟು ಮೆರೆದ ಗಜಚರ್ಮಧಾರಿ ತಾನಾದನು ಶಂಕರ ಭೈರವ ಭೈರಾಸ ಹರಿದ (ಇಂಚಾಪ. ೧೫೯-೬೨). [ಸಂ. ಗಜಚರ್ಮಧಾರಿನ್]

**ಗಜಜಾತಿ** (ನಾ). ಆನೆಗಳ ಕುಲ, —ವಂಶ: "ಮಂದಂ ಮೃಗಂ ಭದ್ರಮೆನಲುಗಜಜಾತಿ" (ಮಂಗರಾ. ೪೭-೨). [ಗಜ + ಜಾತಿ]

**ಗಜಜೀವ** (ನಾ). ಆನೆಯನ್ನು ಸಾಕುವವನು : (ಶಿ).
[< ಸಂ. ಗಜಾಜೀವ]

**ಗಜಜೀವಿ** (ನಾ). (ಆನೆಯನ್ನು ಸಾಕುವ) ಸೇವಕ, —ಆಳು ; ಮಾವುತ : "ಗಜಜೀವಿಯೆನಲು ಸೇವಕನೆನಿಕ್ಕುಂ" (ಮಂಗರಾ. ೪೭-೫).
[ಗಜ + ಜೀವಿ]

**ಗಜಜ್ಞಾನ** (ನಾ). ಮುಂದಾಗುವುದನ್ನು ತಿಳಿಯುವುದು ; ಭವಿಷ್ಯ ಜ್ಞಾನ : ಶ್ವಾನಜ್ಞಾನ ಗಜಜ್ಞಾನ ಕುಕ್ಕುಟಜ್ಞಾನವೆಂಬ ಜ್ಞಾನತ್ರಯಂ ಗಳೇನಾದುವು (ಬಸವ. ೭೯೮). [ಗಜ + ಜ್ಞಾನ]

**ಗಜಢಕ್ಕೆಯ** (ನಾ). ಆನೆಯ ಮೇಲೆ ಇಟ್ಟು ಹೊಡೆಯುವ ನಗಾರಿ ; ಒಂದು ರಾಜ ಚಿಹ್ನೆ : ಗಜಢಕ್ಕೆಯ ಪಾಟಿ ಮಹಾಧ್ವಜ ದೊಜ್ಜರದೇಕಶಂಖ ರವಿಶಶಿಬಿಂಬ ಧ್ವಜದ ಧವಳಾತಪತ್ರವ್ರಜದೊಳಗನೆ ನಡೆಯೆ ಪೊನ್ನಸಿರಿವಟಿಯಿಗೆಯೊಳ್ (ಶಾಂತಿಪು. ೧೦-೧೫೦).
[ಗಜ + ಢಕ್ಕೆಯ]

**ಗಜತಂತ್ರ** (ನಾ). = ಗಜಶಿಕ್ಷೆ. 'ಗಜತಂತ್ರ ನಿಪುಣ' ಪರಾ.
[ಗಜ + ತಂತ್ರ]

**ಗಜತಂತ್ರನಿಪುಣ** (ನಾ). ಗಜಶಿಕ್ಷೆಯಲ್ಲಿ ಪ್ರವೀಣನಾದವನು: ಗಜತಂತ್ರನಿಪುಣ ಶಿಕ್ಷಿತ ವಿಜಿತತ್ವದೆ . . . ಕಾದುತಿರ್ದಲ್ಲಿ (ಬಂಹರಿ. ೧೨-೪೯). [ಗಜತಂತ್ರ + ನಿಪುಣ]

**ಗಜತೆ** (ನಾ). ಆನೆಗಳ ಸಮೂಹ : "ಹಾಸ್ತಿಕಂ, ಗಜತಾ – ೨ ಬೃಂದೆ ಆನೆಗಳ ಹಿಂಡು, ಆನೆಗುಂಪು" (ಸಿದ್ಧಾಂತಿ. ೨೧೨). [ಸಂ. ಗಜತಾ]

**ಗಜದಂತ** (ನಾ). ೧. ಆನೆಯ ಹಲ್ಲು, —ಕೋರೆ: "ನಿಗ್ಗವಮೆನೆ ಗಜದಂತಂ" (ಚತುನಿ. ೯೭); "ನಿಗ್ಗವಮೆ ಗಜದಂತಮುಕ್ಕು" (ಕಬ್ಬಕೈ. ೭೬); ಗಜದಂತಾಕಾರಂಗಳ್ ಗಜದಂತಾದ್ರಿಗಳಿವಲ್ತೆ ತೋರ್ಪವು-ಮಧುಪವ್ರಜ ಪರಿವಾರಿತಮಾದ್ಯದ್‌ಗಜಕಟಕಷಣ ಪ್ರಭಗ್ನ ಚಂದನತರುಗಳ್ (ಆದಿಪು. ೨-೨೭) ; ಗಜದಂತಕಷಣಕಂಪಿತಕುಜಕೂಟದ್ವಿಹಗರುತಮನಾಲಿಸಿ ಸಿಂಗಂ ನಿಜಗುಹೆಯಂ ಪೊಱಮಟ್ಟುದು ವಿಜಿಗೀಷುಗೆ ಸಂದ ಲಕ್ಷಣಂ ನಿಜಮೆಂಬೊಲಂ (ಅಜಿಪು. ೯-೨೬); ಕುರುಧರೆಗಳ್ ಪಿರಿದುಂ ಮಂದ ರಾಗಮುಂ ಪೊರ್ದಿ ಮತ್ತೆ ಗಜದಂತಯುಗಾಂತರಿತಂಗಳಾದುವೆನೆ (ಚಂದ್ರಪು.೧-೮೦); ಗಜದಂತಂಗಳ ಮುತ್ತುಗಳ್ ಬಜನೆ ವಲ್ಕವ್ರಾತ ಮೇನಾದುವೀ ಭುಜಗ . . . ಭೂಭುಜರಂ ಮೆಯ್ಯಿಡುವಂತೆ ಸಂತ ಮಿಡುವರ್ ಕಾಂತಾರದೊಳ್ ಕಾಂತೆಯರ್ (ಧರ್ಮನಾ. ೩-೧೨). ೨. [ನಾಟ್ಯ] ಸಂಯುತಹಸ್ತಗಳಲ್ಲಿ ಒಂದು ಬಗೆ: ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತಹಸ್ತಗಳು ಯಾವುವೆಂದರೆ ೧. ಅಂಜಲಿ. . . ೧೧. ಗಜದಂತ (ಅಭಾನ್ಯ. ೪೮). [ಗಜ + ದಂತ]

**ಗಜದಳ** (ನಾ). ಚತುರಂಗ ಬಲಗಳಲ್ಲಿ ಒಂದು ; ಆನೆಗಳ ಪಡೆ, —ಸೈನ್ಯ : ಗಜದಳ ಮಾಯವಾದುದು, (ಕುಮ್ಮಾದ್ರೌ. ೨-೬೨). 'ಅಶ್ವದಳ' ಪರಾ. [ಗಜ + ದಳ$_2$ (= ದಲ)]

**ಗಜದಾನ** (ನಾ). ೧. ಆನೆಯ ಮದೋದಕ : "ಅಳಿ ಗಜದಾನ ವೀಚಿ ವಿಪುಳಂ ನವಯವ್ವನಮುಂ ಮದಾಶ್ರಯಂ" (ನಾ ನಾ ರ. ೧೦೮). ೨. ಆನೆಯನ್ನು ದಾನವಾಗಿ ಕೊಡುವಿಕೆ; ಆನೆಯ ದಾನ : (ಶಿ).
[ಗಜ + ದಾನ]

**ಗಜದಾನವ** (ನಾ). = ಗಜಾಸುರ : ನಿಜನಿರ್ಮಲಿತರೂಪನಂ ಪೂರ್ವ ಪೂರ್ವನಂ ಗಜದಾನವಧ್ವಂಸಿಯಂ ಕಾಲಕಾಲನಂ (ಜೈಮಿಭಾ. ೧೫-೨೩).
[ಗಜ + ದಾನವ]

**ಗಜದುಳಿ** (ನಾ). ೧. ಆನೆಯಂತೆ ತುಳಿಯುವಿಕೆ. ೨. ಆನೆಯಂತೆ ತುಳಿಯುವವನು; ಒಂದು ಬಿರುದು : ಬಿರುದಿಂಗೆ – ಗಜದುಳಿ, ಗಜಪಾಖು (ಶಮದ. ೧೭೪ ಪ್ರಯೋ). [ಗಜ + ತುಳಿ$_2$ (< ತುಟಿ$_2$)]

**ಗಜದ್ವಿಷ** (ನಾ). ಆನೆಯ ಶತ್ರು ; ಸಿಂಹ : ಗಜದ್ವಿಷವಿಷ್ಟರ (ಜಿನಾಲೆ. ೧೦-೧೦). [< ಸಂ. ಗಜದ್ವಿಷ್]

**ಗಜಧ್ವಜ** (ನಾ). ೧. ಬಾಳೆ ; ಕದಳಿ : "ಗಜಧ್ವಜದೊಳು ಕದಳಿ ಯೆಂಬುದು" (ಮಂಗರಾ. ೧೪೦-೯). ೨. ಆನೆಯ ಚಿಹ್ನೆಯನ್ನುಳ್ಳ ಬಾವುಟ, —ಧ್ವಜ ; ℙ. ಗಂಗರಾಜರ ಲಾಂಛನ, —ಗುರುತು.
[ಗಜ + ಧ್ವಜ]

**ಗಜನಗರಿ** (ನಾ). ಹಸ್ತಿನಾವತಿ ಪಟ್ಟಣ : ಗಜನಗರಿಗಾಕೆಯಂ ಕಳುಹಿ ಕುದುರೆಯ ಕೂಡೆ ವಿಜಯನೈತರೆ (ಜೈಮಿಭಾ. ೧೬-೧೯).
[ಗಜ + ನಗರಿ]

**ಗಜನಿ** (ನಾ). ಒಂದು ಬಗೆಯ ಭೂಮಿ (?) : ಭೂಮಿ ಗದ್ದೆ ಗಜನಿಗಳಾಗಿ ಗಡಿ (ಬೊಂಕಶಾ. ೧೯೪೦, ಕುಮುಟ. ೧೧೧-೯ ; 1324) ; (ಅಡಕೆ ತೋಟಗಳಿಗೆ) ಗಜನಿಯೆಂಬ ಕರೆಭೂಮಿ ಮಧ್ಯಮ (ಮುಂಬಯಿ. ೫-೨೧೬). [?]

**ಗಜನಿಂಬು** 'ಗಜನಿಂಬೆ' ನೋ.

**ಗಜನಿಂಬೆ**, ಗಜನಿಂಬು, ಗಜಲಿಂಬೆ (ನಾ). ದೊಡ್ಡದಾದ ಒಂದು ಬಗೆಯ ನಿಂಬೆಯ ಗಿಡ ಮತ್ತು ಅದರ ಹಣ್ಣು : ಕರ್ಜೂರ ದಾಡಿಮ ನಿಂಬೆ ಗಜನಿಂಬೆ ಸೀನಿಂಬೆ (ನವಮೋ. ೨೪-೫೦) ; ಬುಟ್ಟಿಯಿಂದ ಗಜನಿಂಬೆಕಾಯಿಗಳನ್ನು ತೆಗೆದು ಎಲ್ಲರಿಗೂ ಗುರಿಯಿಟ್ಟು ಹೊಡೆದನಂತೆ (ಹೊಸಕ್ಷಿ. ೧೧೪) ; ಅಮ್ಮಾನ ಗುಡಿಸುತ್ತ ಗಮ್ಮಾನದೇ ನೀರೇ ಗಂಡುಭೂತಾಳೆ ಗಜನಿಂಬೆ ಗಮನಕ್ಕೆ ಗೂಡು ಕಟ್ಟೇವೆ ಆರಗಿಳಿ (ಜಗೀತೆ. ೧೩). **ಗಜನಿಂಬು** : ಆರಾಮಂಗಳೊಳು . . . ನಿಂಬು ಗಜನಿಂಬು (ವಿವೇಕ. ೨೧೧). **ಗಜಲಿಂಬೆ** : ಅಮ್ಮಾನ ಗುಡಿಮುಂದೇ ಗಮ್ಮನ್ನೊದೇನೀರೆ ಗಂಡು ಭೂತಾಳೆ ಗಜಲಿಂಬೇ ಗಮನಾಕೆ ಹಿಂಡೂಮಾವೆಲ್ಲಾ ಫಲಬಿಟ್ಟೋ (ಹುಟ್ಟಹ. ೫೭).
[ಗಜ + ನಿಂಬೆ]

**ಗಜನಿಮೀಲಿಕೆ** (ನಾ). ೧. ಆನೆಯು ಕಣ್ಣು ಮುಚ್ಚುವಿಕೆ, —ಎಚ್ಚರವಾಗಿರುವಿಕೆ : (ಶಿ). ೨. ಲಘುನಿದ್ರೆ. [ಗಜ + ನಿಮೀಲಿಕೆ]

**ಗಜನೋಹಿ** (ನಾ). ಒಂದು ಬಗೆಯ ವ್ರತ; ಗಜಗೌರೀವ್ರತ : ಬಡತನದಲ್ಲಿರುವ ಪಾಂಡವರು ಗಜನೋಹಿಗೆ ಅರಸರನ್ನು ಸ್ವಾಗತಿಸಿದಾಗ (ಯಕ್ಷಬ. ೧೨೪). [ಗಜ + ನೋಹಿ (< ನೋಂಪಿ)]

**ಗಜಪಂಡಿತ** (ನಾ). = ಗಜವಿದ್ವಾಂಸ: ಆ ರಾಜನ ಆಸ್ಥಾನದಲ್ಲಿ ಒಳ್ಳೆಯ ಗಜಪಂಡಿತರ ಸಮೂಹವೇ ಇತ್ತು (ರೂಢಿ). [ಗಜ + ಪಂಡಿತ]

**ಗಜಪಗೆ** (ನಾ). ಆನೆಯ ಶತ್ರು ; ಸಿಂಹ.

ಗಜಪಗೆಯಮೊಗ = ಸಿಂಹದ ಮುಖ ; ಸಿಂಹಾಸ್ಯ : ಅಜವಾಣಿ ನೆರೆಯಲ್ಲಿ ವಾಸವಾಗಿದ್ದ ನರಗಜಪಗೆಯಮೊಗನೆ ಆನಂದ ಮಗನೆ (ತೀರ್ಥಮ. ೫೧). [ಗಜ + ಪಗೆ$_2$]

**ಗಜಪತಿ** (ನಾ). ೧. ಆನೆಗಳ ಒಡೆಯ. ೨. ಗಜೇಂದ್ರ. ೩. ಪಟ್ಟದ ಆನೆ: (ಶ). ೪. ಕಳಿಂಗದೇಶದ ರಾಜ: ಚೋಳಪಲ್ಲವಪಾಂಡ್ಯ ಸಿಳಾಮೇಘ ಕೇರಳ ಸೂರಟ್ಟರ್ ಗೋವ ಭೋಜಲಾಳಗಜಪತಿಹಯಪತಿ ನರಪತಿಯೆನಿಪ (ಎಇ. VI, ೨೧೬-೮ ; 1057); ಅಶ್ವಪತಿಗಜಪತಿಮನೋಭಯಂಕರ (ಮೈಆರಿ. ೧೯೩೩, ೩೨-೧೨ ; 1318); ಗಜಪತಿನೃಪತಿಂ ಚಾಪಿ ಜಿತ್ವಾ (ಎಕ. VII, ಶಿವಮೊ. ೧-೨೨ ; 1513). ೫. ಒಂದು ಬಗೆಯ ನಾಣ್ಯ. P. ವಿಜಯನಗರದ ನಾಣ್ಯ: ದಕ್ಷಿಣದಲ್ಲಿ ೧೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡಿಯುತ್ತಿದ್ದುವು ೧ ಗಜಪತಿ (ಕಭಾಗೆ. ೨೮೦). ೬. ಆನೆಯನ್ನು ಸಾಕುವವನು. [ಗಜ+ ಪತಿ₂]

**ಗಜಪರೀಕ್ಷೆ** (ನಾ). ಅರುವತ್ತುನಾಲ್ಕು ಕಲೆಗಳಲ್ಲಿ ಒಂದು; ಗಜಶಾಸ್ತ್ರ: ಅಶ್ವಪರೀಕ್ಷೆ, ಗಜಪರೀಕ್ಷೆ . . . ಮೊದಲಾದ ಅರವತ್ತುನಾಲ್ಕು ಕಲೆಗಳಿಗೂ ಆಗಮಶಾಸ್ತ್ರವು ಆಶ್ರಯವಾಗಿದೆ (ಭಾರದ. ೬೦). 'ಚತುಷ್ಷಷ್ಟಿಕಲೆ' ಪರಾ. [ಗಜ + ಪರೀಕ್ಷೆ]

**ಗಜಪಾಱು** (ನಾ). ಒಂದು ಬಿರುದು: ಬಿರುದಿಂಗೆ– ಗಜದುಳಿ, ಗಜ [ಪಾಠಾಂ. ಜಗ]ಪಾಱು (ಶಮುದ. ೧೬೪ ಪ್ರಯೋ). [ಗಜ + ಪಾಱು₂]

**ಗಜಪಿಪ್ಪಲಿ**, ಗಜಹಿಪ್ಪಲಿ (ನಾ). ಒಂದು ಬಗೆಯ ಗಿಡ; ದೊಡ್ಡ ಹಿಪ್ಪಲಿ: (ಶ). **ಗಜಹಿಪ್ಪಲಿ**: "ಕರಿಪಿಪ್ಪಲೀ, ಕಪಿವಲ್ಲಿ, ಕೋಲವಲ್ಲಿ, ಶ್ರೇಯಸಿ, ದಸಿರ ಈ ೫ ಗಜಹಿಪ್ಪಲಿ" (ನಾಚಿರಾ. ೧೯); ತೊಕ್ಕು, ಗಜಹಿಪ್ಪಲಿ, ಚವ್ಯ (ಸಕವ್ವೆ. ೨೧೬); "ದ್ವಿಪಿಪ್ಪಲೀ– ಹಿಪ್ಪಲಿ, ಗಜಹಿಪ್ಪಲಿ" (ಓಷಧಿ. ೬೬). [ಗಜ + ಪಿಪ್ಪಲಿ]

**ಗಜಪುಟ** (ನಾ). ೧. ಬೆಂಕಿ ಮಾಡುವುದಕ್ಕಾಗಿ ಭೂಮಿಯಲ್ಲಿ ಮಾಡಿದ ರಂಧ್ರ. ೨. ಪುಟಹಾಕುವುದರಲ್ಲಿ ಒಂದು ಬಗೆ; ಹೆಚ್ಚು ಬೆಂಕಿಯಲ್ಲಿ ಕಾಯಿಸುವಿಕೆ: ಕಲ್ಯಾಣಕ್ಷಾರ– ಶುಂಠಿ, ಹಿಪ್ಪಲಿ . . . ಒಂದು ಭಾಂಡದಲ್ಲಿ ತುಂಬಿ . . . ಗಜಪುಟವ ಹಾಕಿ (ಸಕವ್ವೆ. ೩೦೬). [ಗಜ + ಪುಟ₂]

**ಗಜಪ್ರಾಸ** (ನಾ). [ಛಂದ] ಆರು ಬಗೆಯ ಪ್ರಾಸಗಳಲ್ಲಿ ಒಂದು; ದೀರ್ಘವು ಪ್ರಾಸಸ್ಥಾನದಲ್ಲಿ ಬರುವುದು: ಸ್ವರವು ಹ್ರಸ್ವವಾಗಿದ್ದರೆ ಸಿಂಹಪ್ರಾಸ ದೀರ್ಘವಾಗಿದ್ದರೆ ಗಜಪ್ರಾಸ (ಕೈಪಿಡಿ. ೬೧). 'ಅಜಪ್ರಾಸ' ಪರಾ. [ಗಜ + ಪ್ರಾಸ]

**ಗಜಪ್ರಿಯೆ** (ನಾ). ಆನೆಗೆ ಪ್ರಿಯವಾದ ಮರ; ತದಕು; ಆನೆಬೇಲ: "ಸಲ್ಲಕಿ ಗಜಪ್ರಿಯಾಹ್ವಂ" (ವಸ್ತುಕೋ. ೩೪-೧೧); "ಸಲ್ಲಕೀ, ಗಜಪ್ರಿಯಾ – ಈ ೨ ತದಕು" (ಹಲಾಯು. ೩೩-೪೬). [ಸಂ. ಗಜಪ್ರಿಯಾ]

**ಗಜಪ್ರೇಮಿ** (ನಾ). = ಗಜಪ್ರಿಯೆ: "ಸಲ್ಲಕಿ ಗಜಪ್ರೇಮಿಯೆನೆ ತದಕೆ ನಿಕ್ಕುಂ" (ಮಂಗರಾ. ೨೬-೨೧). [ಗಜ + ಪ್ರೇಮಿ]

**ಗಜಬಂಧನಿ** (ನಾ). ೧. ಆನೆಯನ್ನು ಕಟ್ಟುವ ಲಾಯ; ಗಜಶಾಲೆ; ಕರೋಟಿ. ೨. ಆನೆಯನ್ನು ಕಟ್ಟುವ ಗೂಟ. [ಸಂ.]

**ಗಜಬಜ**, ಗಜಬಜಿ, ಗಜಬಜೆ, ಗಜಿಬಿಜಿ, ಗಜೆಬಜೆ (ನಾ). ೧. ಗದ್ದಲ; ಗಲಿಬಿಲಿ; ಕೋಲಾಹಲ; ಗಲಾಟೆ: "ಗಜಬಜಮೆನೆ ಕೋಲಾಹಲಂ" (ಭಾರನಿ. ೫೦); ಸೂತಜರು ಕಮ್ಮಱರು ಚಿಪ್ಪಿಗ ತೈಲಘಾತುಕ ಕುಜಾತಿಯೊಳಗಾದ ಗಡಣ ಗಜಬಜವ ಮಾಡಿ (ಹಚಕಾ. ಪರಿ. ೨೦೬); ಗಜಬಜವಿದೇನೆನುತ ಪವನಾತ್ಮಜನು ನಡೆತಂದನು (ತೊರರಾ. ೪-೬-೨೧); ಮೊರೆವ ಕುಕಿಲ್ವಪಾಡುವ ಬಾಸೆವಕ್ಕಿಗಳ ಗಜಬಜದಿಂ (ರಾಮಾಶ್ವ. ೬೪-೬) **ಗಜಬಜಿ**: ೧. ಗಜಬಜಿಯ ಸಂಗದಲಿ ಬಲು ಭೂಭುಜರ ಗಜಪಾದಂತೆ (ನಿಭಾಗ. ೧೧-೧೪-೧೯). **ಗಜಬಜೆ**: ೧. ಜಿನುಗುವ ಗಜಬಜೆ ನಿಳ್ಕದ ಘನ ತೇಜೋರಾಶಿ ನಿಜನಿವೇಶದೊಳಿರ್ದಂ (ಗಿರಿಕ. ೫-೩೬); ಮಾಯದ ಗಜಬಜೆಯ ಹುಸಿಗೆ ಬೆದರುವನೆ ಮಹಾಶರಣನು (ಸಿದ್ಧೇವ. ೬೮೩); ಗಜಬಜೆ ಬೇಡ ಸೀತೆಯ ರೂಪು ಗುಣಗಳ ನಿಜವ ತಪ್ಪದೆ ಪೇಳೆನಲು (ರಾಮಪಿ. ೧೨-೨೩). **ಗಜಿಬಿಜಿ**: ೧. ಲೋಕದ ಗಜಿಬಿಜಿ ದೈವಂಗಳಿಗೆಱಗುವ ಕುನ್ನಿಮಾನವರ ಕಂಡರೆ (ವಚಶಾ. I, ೩೩೩); ಸೈನ್ಯದಲ್ಲುಂಟಾದ ಗಜಿಬಿಜಿಯನ್ನು ಹೇಳತೀರದು (ಬಪ್ಪೆರು. ೨೦); ಜಾತ್ರೆ ಗಜಿಬಿಜಿ ಕಳೆದು (ನಡೆಬಂ. ೧೦೦). ೨. ಅಸ್ತವ್ಯಸ್ತವಾದುದು; ಅಸ್ಪಷ್ಟವಾದುದು: ಆತನ ಬರವಣಿಗೆ ತುಂಬ ಗಜಿಬಿಜಿಯಾಗಿದೆ (ರೂಢಿ). **ಗಜೆಬಜೆ**: ೧. ಗಜೆಬಜೆಯಿಲ್ಲದ ಮನಕ್ಕೆ ಸಹಜವ . . . ತೋಱಿದ (ಶರಚ. ೧೦೩); ಗಜೆಬಜೆ ಪುಗದಾನಂದ ಸಂದಿತ್ತು (ಗಿರಿಕ. ೧-೩); ಗಜೆಬಜೆ ಹೋಗದ ಒಂದು ಉನ್ನತ ಸ್ಥಿತಿ (ವಿಚಾಮಂ. ೧೦೫).

**ಗಜಬಜವಾಗು** = ಗದ್ದಲವಾಗು; ಗಲಭೆಯಾಗು: ಒಳಗೆ ಗಜಬಜವಾಯ್ತು ಶಲ್ಯನ ಬಲು ಭಟರು ಮುಕ್ಕುಱುಕಿದರು (ಕುವ್ಯಾಕ. ೯-೩೯); ಗಜಬಜವಾಯ್ತು ಧೃತರಾಷ್ಟ್ರಾಗಮನವಾರ್ತೆಯ ಸಮೀರಜನಾಗ ತಿಳಿದು (ತಿಮ್ಮಸ್ತ್ರೀ. ೨-೪೦); ಮದುವೆಯ ದಿನ ಮುಂಜಾವದ ಕೋಳಿಯ ಕೆಲೆವ ಮೊದಲೆ ಗಜಬಜವಾಯ್ತು (ನಲ್ಮೆ. ೨೬). **ಗಜಿಬಿಜಿಬರೆಹ** = ಸುಲಭವಾಗಿ ಓದಲು ಸಾಧ್ಯವಾಗದಂತೆ ಬರೆದ ಬರಹ; ಮೋಡಿಬರಹ: (ಶ). [← ಮರಾ. ಗಜಬಜ್]

**ಗಜಬಜಿ** 'ಗಜಬಜ' ನೋ.

**ಗಜಬಜಿಕೆ** (ನಾ). = ಗಜಬಜ೧: ಗಜಬಜಿಕೆ ಮೊಳೆತುದು ಕೇರಿಕೇರಿಯಲಿ (ಕುವ್ಯಾಗ. ೪-೧೯); ಗಜರಿದವು ನಿಸ್ಸಾಳವಾದ್ಯವ್ರಜದ ಕಹಳೆಯ ಭಟರ ಬೊಬ್ಬೆಯ ಗಜಬಜಿಕೆ [ಪಾಠಾಂ. ಜಕೆ] ಘಾಡಿಸಿತು (ಕುವ್ಯಾಕ. ೨೫-೮). [ಗಜಬಜ + –ಇಕೆ]

**ಗಜಬಜಿಗ** (ನಾ). ಗದ್ದಲದವನು; ಗಲಭೆಕೋರ: ಕದ್ದರೋ ಕಲಶವನು ಕಳ್ಳರು ಗೆದ್ದರೋ ಗಜಬಜಿಗರಮೃತವ (ನಿಭಾಗ. ೮-೯-೮). [ಗಜಬಜ + –ಇಗ]

**ಗಜಬಜಿಸು** (ಕ್ರಿ). ೧. ಗದ್ದಲಮಾಡು; ಗಜಬಜಮಾಡು; ಗಲಭೆಮಾಡು: ಊರುಗಳಿಂ ಮಿಗುವ ವೃಷಭೇಂದ್ರನನೌಂಕುತ್ತ ಗಲದೆ ನಿಜಮೂರ್ತಿಯೊಳಗೆ ಗಜಬಜಿಸುತ್ತುಂ (ಗಿರಿಕ. ೯-೯೮); ಗಜಬಜಿಸದಿರಿ ದಿವಿಜರಿರ ಗುಜುಗುಜುವೆನುತ್ತಿರದಿರಿ ಮುನಿಗಳಿರ ಭುಜಗರಿರ ಸಂದಣಿಸದಿರಿ (ಬಸಪು. ೧-೪೪). ೨. ಗಲಾಟೆಯಿಂದ ತುಂಬು, —ಸಂದಣಿಸು: ಜನಳನ ರಾಜಧಾನಿಯು ಬಗೆಬಗೆಯ ಅನಂದದಾಯಕ ಉದ್ಗಾರಗಳಿಂದ ಗಜಬಜಿಸಿಯೋಯಿತು (ತುಳಸಿ. ೯೪). ೩. ಆತಂಕಪಡು: ಹೆದಱಿ ಗಜಬಜಿಸಿ ಸತಿಸುತರ ಕೈವಿಡಿದು (ಹಚಕಾ. ೧೦-೮). [ಗಜಬಜ + –ಇಸು₃]

**ಗಜಬಜೆ** 'ಗಜಬಜ' ನೋ.

**ಗಜಬಿಂದು** (ನಾ). ಆನೆಯ ಮೈಮೇಲಿನ ಚುಕ್ಕೆ, —ಚಿಬ್ಬು: ನಳಿನಂ . . . ಗಜಬಿಂದುವಕ್ರಫಣಿಸಂಖ್ಯಾಭೇದಪದ್ಮಾಂಕಿತಂ (ನಾನಾರ. ೫೫). [ಗಜ+ ಬಿಂದು]

**ಗಜಬೀರ** (ನಾ). ಒಂದು ಬಗೆಯ ವನಸ್ಪತಿ: "ಕುಡವಲೆ, ಹೆತ್ತಿರಿ ಮುಳ್ಳು, ಮುಳ್ಳುತಾರೆ, ಗಜಬೀರ" (ಮೈಔಗ. ೩೬-೬೩೯). [?]

**ಗಜಬೇಂಟೆ** 'ಗಜವೇಂಟೆ' ನೋ.

**ಗಜಬೇಂಟೆಕಾರ** 'ಗಜವೇಂಟೆಕಾಱ' ನೋ.

**ಗಜಬೇಂಟೆಕಾಱ** 'ಗಜವೇಂಟೆಕಾಱ' ನೋ.

**ಗಜಬೇರು** (ನಾ). ಒಂದು ಬಗೆಯ ವನಸ್ಪತಿ: ಗಜಬೇರು, ಹಬ್ಬು ಸೊಂಟೆ . . . ಕಷಾಯ ಕಾಯಿಸಿ . . . ಕೊಡಲು ವಾತಪಿತ್ತಜ್ವರ . . . ಗುಣವಾಗುವುವು (ಸಕವ್ವೆ. ೯೪). [ಗಜ ? + ಬೇರು (< ಬೇರ್)]

**ಗಜಭಕ್ಷ್ಯೆ** (ನಾ). = ಗಜಪ್ರಿಯೆ. [ಸಂ. ಗಜಭಕ್ಷ್ಯಾ]

**ಗಜಮಂಡನ** (ನಾ). ಆನೆಗೆ ಮಾಡುವ ಅಲಂಕಾರ; ಆನೆಯ ತಲೆಯ ಮೇಲೆ ಬರೆಯುವ ಬಣ್ಣಬಣ್ಣದ ಗೆರೆಗಳು. [ಗಜ + ಮಂಡನ]

**ಗಜಮದ** (ನಾ). ೧. ಆನೆಯ ಮದೋನ್ಮತ್ತತೆ, —ಬೆದೆ: (ಸ್ಯಾಂಡರ್). ೨. ಆನೆಯ ಮದೋದಕ: "ದಾನಂ – ಗಜಮದ" (ಒಷಧಿ. ೭೫); ಗಜಮದವಿಲಿಪ್ತನಿಜಗುರುಭುಜಯುಗದೊಳ್ ಪಾಯ್ದು ಮಧುಪಮಾಳಾಯುಗದಿಂ ವಿಜಯೋತ್ಸುಕನಾಗಿ ಚತುರ್ಭುಜನಾದ ವೊಲಿರ್ದನುಪನಿಯುದ್ಧಂ ಕೃಷ್ಣಂ (ಅರ್ಧನೇ.೮–೮೯). [ಗಜ + ಮದ$_1$]

**ಗಜಮು** (ನಾ). (ಉಕ) ತಲೆಕೆಳಗಾಗಿ ನಿಲ್ಲುವುದು: ಸರ್ಕಸ್ಸಿನಲ್ಲಿ ನಾನು ಸಾಯಕಲ್ಲೇರಿದಾಗ ನನ್ನ ಮೇಲೆ ನೀನು ಗಜಮು ನಿಲ್ಲಬೇಕು (ಮೇದಿವು. ೪೧); ಸಾಹೇಬರು ಕುಳಿತ ಖುರ್ಚಿಯಮೇಲೆ. . . ಗಜಮು ನಿಲ್ಲಲಿಲ್ಲ, ನಮ್ಮ ದೈವ (ದೀಪಹ. II, ೨೫). [← ಹಿಂ. ಪಾರ. ಕಜ]

**ಗಜಮುಖ** (ನಾ). ೧. ಆನೆಯ ಮುಖ. ೨. ಆನೆಯಂತೆ ಮುಖವುಳ್ಳವನು; ಗಣಪತಿ; ಕರಿಮೊಗ: ನಿಮ್ಮಡಿಗಳ ಮಗನೊರ್ವಂ ಗಜಮುಖನೊರ್ವಂ ಷಣ್ಮುಖನೊರ್ವಂ . . . ಈಗಳೀ ಮರ್ತ್ಯದೊಳ ಗೊರ್ವ ಪೊಸಮಗನಂ ಪಡೆದೆವು (ನಂಬಿರ. ೧೨-೧೨೨); ಗಜಮುಖನೆ ಮೆಜ಼ಿವೇಕದಂತನೆ . . . ತ್ರಿಜಗವಂದಿತ ಗಣಪ ಮಾಳ್ಪುದು ಮತಿಗೆ ಮಂಗಳವ (ಕುವ್ಯಾಅ. ೧–೪). [ಗಜ + ಮುಖ]

**ಗಜಮುದುಡು** (ನಾ). = ಗಜಬಜ೧: ಸಕಲ ಮಂತ್ರತಂತ್ರಗಳೆಂಬೀ ಗಜಮುದುಡಿನೊಳಗೆ ಸಿಲುಕದೆ (ಷಡಕಂ. ೮೫). [ಗಜ + ಮುದುಡು$_2$]

**ಗಜಮೌಕ್ತಿಕ** (ನಾ). ಆನೆಯ ಕುಂಭಸ್ಥಳದಲ್ಲಿ ಸಿಕ್ಕುವುದೆಂದು ಹೇಳಲಾದ ಮುತ್ತು: ಮಿಡಿವಿಲ್ಲಿಡಿದು ಪುಳಿಂದಿಯರಿಡೆ ಗಜಮೌಕ್ತಿಕದ ಮಿಂಟೆಯಂಬರದೆಡೆಯೊಳ್ನಡೆದು(ರಾಜಶೇ. ೫-೮೦). [ಗಜ+ಮೌಕ್ತಿಕ]

**ಗಜಯೋಧ** (ನಾ). ಆನೆಯ ಮೇಲೆ ಕುಳಿತು ಯುದ್ಧ ಮಾಡುವ ಯೋಧ, —ಸೈನಿಕ: ಆಸೆ ಕೈಗೂಡದೆಯೆ ಮನನೊಂದು ಗಜಯೋಧರೊಡಗೂಡಿ ಬೆಂಕಿಯಲ್ಲಿ ಬೀಳುವಂತವರು (ಭಾಸನಾ. ೭೧). [ಗಜ + ಯೋಧ]

**ಗಜರಗಳೆ** (ನಾ). ಅಸಂಬದ್ಧವಾದ ಮಾತು, —ನಡೆವಳಿ: ಮೊಗದಲಿ ನಗೆಯೂರುತಿರೆ ನೂರಾರು ಕುವರರ ಗಜರಗಳೆಯ ಕೇಳಿ (ಹೆಬ್ಬೆರ. ೯–೩); ಗಜರಗಳೆಯೂ (Nonsense) ಹಾಸ್ಯಪ್ರೇರಕವಾಗುವ ಅತಿಶಯೋಕ್ತಿಗಳಲ್ಲಿ ಒಂದಾಗಿದೆ (ಗೊತ್ತುಗು. ೪೬). 'ಗೊಜರಗಳೆ' ಪರಾ. [ಗಜ ? + ರಗಳೆ]

**ಗಜರಾಜ** (ನಾ). ಶ್ರೇಷ್ಠವಾದ ಆನೆ: ತನ್ನೇಱಿದ ಯಾನಗಜರಾಜನನಿೞಿದು (ಶಾಂತಿಪು. ೧–೮೪ ವ). [ಗಜ + ರಾಜ]

**ಗಜರಿಪು** (ನಾ). ಆನೆಯ ಶತ್ರು; ಸಿಂಹ: ಗಜರಿಪು ಲಂಘಿಸಿದುದೊ ಪವನ ಜವದೆ ಶಿಖರಕ್ಕೆ (ಅಜಿಪು. ೯–೨೭); ಗಜರಿಪು ನಖರ ಪ್ರಕರದೆ ಗಜಮಂ ಸೀಳ್ದೊಟ್ಟುವಂತೆ (ಪಂರಾಮಾ. ೧೩–೧೦೯); ಗಜರಿಪುನಾದದಿಂ ಗಜಱಿ ಗರ್ಜಿಸಿ (ಚಂದ್ರಪು. ೧೦–೧೦೨). [ಗಜ + ರಿಪು]

**ಗಜರು$_1$** 'ಗಜಱು$_1$' ನೋ.

**ಗಜರು$_2$** 'ಗಜಱು$_2$' ನೋ.

**ಗಜರೋಹಕ** (ನಾ). = ಗಜಯೋಧ: ತುದಿವೆರಳ ತುಟಿಯುಬ್ಬರಕೆ ಗಜ ಬೆದರೆ ಗಜರೋಹಕರ ಗರ್ಜಿಸಿ ಗದೆಯ ತಿರುಹುತ ಹೊಕ್ಕನು (ಕುವ್ಯಾಕ. ೨–೧೪). [ಗಜ + ರೋಹಕ]

**ಗಜಲ್**, ಗಜಲ, ಗಜಲು$_1$, ಗಜಾಲು$_2$ (ನಾ). [ಸಂಗೀತ] ಹಾಡಿನಲ್ಲಿ ಒಂದು ಬಗೆ: ಠುಮ್ರಿ, ಥಪ್ಪ, ದಾದ್ರ, ಗಜಲ್ ಮುಂತಾದ ಪ್ರೇಮ ಗೀತೆಗಳನ್ನು ಹಾಡಿ (ಅಭಾನ್ಯ. ೯೧). **ಗಜಲ**: 'ಗಜಲಗಾನ' ಪರಾ. **ಗಜಲು$_1$**: ಆಗಿನಕಾಲದ ಗಜಲು, ಕವಾಲಿಗಳು (ಬಾಲಪ್ರ. II, ೧೧೦೫). **ಗಜಾಲು$_2$**: "ಒಂದು ಹಾಡುಗಾರಿಕೆ" (ಕಸ್ತೂಕೋ. ೨೯೭). [← ಹಿಂ. ಗಜಲ್; ಮರಾ. ಗಜಲ್, ಗಝುಲ್; ಅರ. ಗಯುಲ್]

**ಗಜಲ್‌ಗಾಯಕಿ** (ನಾ). ೧. ಗಜಲನ್ನು ಹಾಡುವವಳು. ೨. ಗಜಲ ಧಾಟಿಯ ಗಾಯನ; ಗಜಲನ್ನು ಹಾಡುವಿಕೆ; ಗಜಲಗಾನ: ಬೇಕಾದಾಗ ಆರಂಭಿಸಿ ಎಲ್ಲಿ ಬೇಡಾದಲ್ಲಿ ನಿಲ್ಲಿಸುವುದಕ್ಕೆ ಗಜಲ್ ಗಾಯಕಿಯೆ ಸೈ (ಗಾಳಿಪ. ೪೨). [ಗಜಲ್ + ಗಾಯಕಿ]

**ಗಜಲ** 'ಗಜಲ್' ನೋ.

**ಗಜಲಕ್ಷ್ಮಿ** (ನಾ). ೧. ಆನೆಗಳ ಸಂಪತ್ತು; ಗಜರೂಪವಾದ ಐಶ್ವರ್ಯ; ಉತ್ತಮವಾದ ಆನೆಗಳನ್ನು ಹೆಚ್ಚಾಗಿ ಹೊಂದಿರುವ ಭಾಗ್ಯ: ಆನೆ ಕಡಿಯುವನೇ ಗಜಲಕ್ಷ್ಮಿ, ಕುದುರೆ ಕಡಿಯುವನೇ ಅಶ್ವಲಕ್ಷ್ಮಿ ಇನ್ನು ಯಾರನ್ನು ಕಡಿಯಲಿ ಅಂದರೆ ಕಡಿಯಲೆ ಬೋಳು ಹಾರುವನ (ಗಾದೆ). ೨. ಎಡಬಲದಲ್ಲಿ ಆನೆಗಳಿರುವ ಲಕ್ಷ್ಮಿಯ ವಿಗ್ರಹ: ಆದಿನಾರಾಯಣಿ . . . ನಾದಮಯಿ ಗಜಲಕ್ಷ್ಮಿ (ಕುವ್ಯಾಅ. ೧–೬); ದ್ವಾರಬಂಧದ ಮೇಲೆ ಗಜಲಕ್ಷ್ಮಿ ಮುಂತಾದ ವಿಗ್ರಹಗಳು (ಹೊಯ್ಸವಾ. ೧೮). [ಗಜ + ಲಕ್ಷ್ಮಿ]

**ಗಜಲಗಾನ** (ನಾ). ಗಜಲನ್ನು ಹಾಡುವಿಕೆ; ಗಜಲ್‌ಗಾಯನ: ತಂತ್ರೀವಾದ್ಯವನ್ನು ತೊಡೆಯ ಮೇಲಿರಿಸಿ ದ್ರಾಕ್ಷಾವನದ ಗಜಲಗಾನ ಮಾಡುತ್ತಿದ್ದರು (ಇಪ್ಪಕ. ೧೪೩). [ಗಜಲ (< ಗಜಲ್) + ಗಾನ$_2$]

**ಗಜಲಿಂಬೆ** 'ಗಜನಿಂಬೆ' ನೋ.

**ಗಜಲು$_1$** 'ಗಜಲ್' ನೋ.

**ಗಜಲು$_2$** (ನಾ). ಒಂದು ಬಗೆಯ ಆಟ (?): ಚೆಂದು ಚಕ್ಕಡಿ ಕವಿಲು ಗಜಲು . . . ಮೊದಲಾದ ಆಟಗಳಿಂ (ವಿರೂಪಾ. ೮೮ ವ). [?]

**ಗಜವದನ** (ನಾ). = ಗಜಮುಖ: "ಹೇರಂಬಃ . . . ಗಜವದನಃ . . . ವಿಘ್ನರಾಜಃ – ಈ ೯ ಬೆನಕನ ಪೆಸರ್" (ಹಲಾಯು. ೪–೧೯); ಶಶಾಂಕಂ ತಾರಕಾರಿಗಜವದನವಾಸಿಷ್ಠಮನುಮುನಿನಿಕರವು (ಹಚಶಾ. ೧೪–೬). [ಗಜ + ವದನ]

**ಗಜವಧು** (ನಾ). ಹೆಣ್ಣಾನೆ; ಪಿಡಿ: "ವಶಾ ಕರಿಣೀ ಧೇನು ಕರೇಣುಗಳ್ ಗಜವಧೂ ಪರ್ಯಾಯದೊಳ್ ವರ್ತಿಕುಂ" (ವಸ್ತುಕೋ. ೮೭–೩೧). [ಸಂ. ಗಜವಧೂ (ಗಜ + ವಧೂ)]

**ಗಜವಶೆ** (ನಾ). = ಗಜವಧು: ಅರಸಿಯರುಂ ತಾನುಂ ಕತಿಪಯ ಪರಿಚಿತಾಂಗರಕ್ಷಕಪರಿವೃತ ಗಜವಶಾರೂಢನಾಗಿ ಬರೆ (ಶಾಂತಿಪು. ೮–೬೩ ವ.). [ಸಂ. ಗಜವಶಾ (ಗಜ + ವಶಾ)]

**ಗಜವಿಂಡು** (ನಾ). ಆನೆಗಳ ಸಮೂಹ, —ಗುಂಪು: ಬಾರಿಸುತಿರ್ಪ ನಾನಾವಾದ್ಯ ಸಾಕೆಂದು ಸಾರಿಸಿ ಗಜವಿಂಡ ನಿಲಿಸಿ ತೋಱಿಸಿದರು (ಮೋಹತ. ೨೪–೩೩). [ಗಜ + ಪಿಂಡು$_2$]

**ಗಜವಿದ್ವಾಂಸ** (ನಾ). ದೊಡ್ಡ ವಿದ್ವಾಂಸ; ಪ್ರಕಾಂಡ ಪಂಡಿತ: (ಸ್ಯಾಂಡರ್). [ಗಜ + ವಿದ್ವಾಂಸ]

**ಗಜವೆಡಂಗ** (ನಾ). ಆನೆಯನ್ನು ಪಾಲಿಸುವುದರಲ್ಲಿ ಬೆಡಗುಳ್ಳವನು, —ಜಾಣ: ಕಿವಿಸವಿ ದನಿ ಕಣ್ಸವಿ ರೂಪವ ಧರಿಸೆಲೆ ಗಜವೆಡಂಗ ನೀನುಳಿದೊಡೆ ಸಾವವಳೆನಗೆ ಮಿಕ್ಕ ಗಂಡರ್ ಸವಸೋದರರೆಂದು ತಿಳಿಪಿದಳ್ (ಯಶೋಚ. ೨–೫೨). [ಗಜ + ಬೆಡಂಗ]

**ಗಜವೇಂಟೆ**, ಗಜಬೇಂಟೆ (ನಾ). ಆನೆಗಳ ಬೇಟೆ. 'ಗಜವೇಂಟೆಕಾಱ' ಪರಾ. **ಗಜಬೇಂಟೆ**. 'ಗಜಬೇಂಟೆಕಾಱ' ಪರಾ. [ಗಜ + ಬೇಂಟೆ]

**ಗಜವೇಂಟೆಕಾಱ,** ಗಜಬೇಂಟೆಕಾರ, ಗಜಬೇಂಟೆಕಾಱ (ನಾ). ಆನೆಗಳನ್ನು ಬೇಟೆಯಾಡುವವನು ; ಒಂದು ಬಿರುದು: ಧರೆಗಧಿಕ ಮೂಱು ರಾಯರ ಗಂಡನಪ್ರತಿಮ ಬಿರುದಂಕ ಗಜವೇಂಟೆಕಾಱ ದೇವೇಂದ್ರ ಭೂವರನ (ಲಶಿಚಿಂ. ೧–೯) ; ಗಜವೇಂಟೆಕಾಱ (ಶಬ್ದಾನು. ೨೯೫ ಪ್ರಯೋ) ; 'ಗಜವೇಂಟೆಕಾಱ' ಎಂಬ ಬಿರುದಿನಿಂದ ಪ್ರಸಿದ್ಧವಾದ ಈ ಪ್ರೌಢದೇವರಾಯ (ಶಂಕಶ. XXIV, ಪೀಠಿಕೆ). **ಗಜಬೇಂಟೆಕಾರ:** ಸ್ವಸ್ತಿ ಶ್ರೀಮನ್ಮಹಾಮಣ್ಡಲೇಶ್ವರ ಗಜಬೇಣ್ಟೆಕಾರ (ಬಿರುಗಂ. ೨೮–೧೭). **ಗಜಬೇಂಟೆಕಾಱ:** ಗಜಬೇಂ[ಪಾಠಾಂ. ವೇಂ]ಟೆಕಾಱ ಸದಮಲ ಸದಾಚಾರಸತ್ಯಸದ್ಗುಣಂ (ಲಶಿಚಿಂ. ೩೮–೧೨೯) ; ಕರಮೆಸೆವ ಗಜಬೇಂಟೆಕಾಱನೀಶ್ವರಪಾದಸರಸಿರುಹ ಸೇವಕ (ಆರಾಚ. ೧–೪೪) ; ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಗಜಬೇಂಟೆಕಾಱ (ಎಕ. IX, ಕಾನಕಾ. ೩೯–೪ ; 1506). [ಗಜವೇಂಟೆ + -ಕಾಱ]

**ಗಜವೇಡೆಯ** (ನಾ). ಆನೆಗಳ ವ್ಯೂಹ : ಒಡನೊಯ್ಯನೆ ಗಜವೇಡೆಯದೊಳಗದ ಬಿಡದೆಬ್ಬಿಸಿಕೊಂಡು ಬಂದು (ಕುರಾಸಾಂ. ೯–೯೪). [ಗಜ + ವೇಡೆಯ]

**ಗಜವೈದ್ಯ** (ನಾ). ೧. ಆನೆಗಳ ಚಿಕಿತ್ಸೆ. ೨. ಆನೆಗಳಿಗೆ ಚಿಕಿತ್ಸೆ ಮಾಡುವ ವೈದ್ಯ; ಆನೆಗಳ ವೈದ್ಯ. 'ಅಶ್ವವೈದ್ಯ' ಪರಾ. [ಗಜ + ವೈದ್ಯ]

**ಗಜವೈರಿ** (ನಾ). ಆನೆಯ ಶತ್ರು ; ಸಿಂಹ ; ಕೇಸರಿ : ಕೂರಗೆವಿಂಡಂ ಗಜವೈರಿ ಪೊಕ್ಕವೊಲ್ (ಶಾಂತಿಪು. ೭–೫೪) ; ಗಜವೈರಿಯನುನ್ನತ ಸಾಮಜರಾಜನನಂತೆ . . . ಭೋಂಕೆನೆ ಕಂಡು (ನೇಮಿಪು. ೬–೬೭). [ಗಜ + ವೈರಿ]

**ಗಜವೈರಿಪೀಠ** (ನಾ). ಸಿಂಹಪೀಠ ; ಸಿಂಹಾಸನ : ಗಜವೈರಿಪೀಠಂ (ಜಿನಾಲೆ. ೪–೪). [ಗಜವೈರಿ + ಪೀಠ]

**ಗಜವೈಹಾಳಿ** (ನಾ). ಗಜದಮೇಲೆ ವಿಹಾರಿಸುವುದು ; ಆನೆಸವಾರಿ : ಕಾಲದೊಳಗೆ ವಸಂತ ವಿದ್ಯಾಜಾಲದೊಳಗೆ ಕವಿತ್ವ ಗಜವೈಹಾಳಿಯಲಿ ದೇವೇಂದ್ರ (ಕುವ್ಯಾಉ. ೩–೬೫). [ಗಜ + ವೈಹಾಳಿ (=ವೈಹಾಲಿ)]

**ಗಜವ್ರಜ** (ನಾ). ೧. ಆನೆಗಳ ಗುಂಪು, —ಸಮೂಹ. ೨. ಎಂಟು ಎಂಬ ಸಂಖ್ಯೆಯ ಸಂಕೇತ : (ಕಿ). [ಗಜ + ವ್ರಜ]

**ಗಜಶಾಲೆ** (ನಾ). ಆನೆಗಳನ್ನು ಕಟ್ಟುವ ಲಾಯ ; ಕರೋಟಿ : "ಗಜಶಾಲೆಯೊನಲಾನೆಗಳ ಮನೆಯೊನಿಕ್ಕುಂ (ಮಂಗರಾ. ೫೭–೬). [ಗಜ + ಶಾಲೆ$_1$]

**ಗಜಶಾಸ್ತ್ರ** (ನಾ). ೧. ಆನೆಗಳ ಲಕ್ಷಣ, ಚಿಕಿತ್ಸೆ, ಅವನ್ನು ಪಳಗಿಸುವುದು ಮುಂತಾದ ವಿಷಯಗಳನ್ನು ವಿವರಿಸುವ ಶಾಸ್ತ್ರ. ೨. ಈ ಶಾಸ್ತ್ರವನ್ನು ಕುರಿತ ಗ್ರಂಥ : ಶ್ರೀಪುರುಷನು ಬಹು ಪರಾಕ್ರಮಿಯಾದ ರಾಜನು . . . ಇವನು ಗಜಶಾಸ್ತ್ರವೆಂಬ ಗ್ರಂಥವನ್ನು ರಚಿಸಿದ್ದನು (ಕರ್ಣಾಅ. ೧೬೦). 'ಅಶ್ವಶಾಸ್ತ್ರ' ಪರಾ. [ಗಜ + ಶಾಸ್ತ್ರ]

**ಗಜಶಿಕ್ಷೆ** (ನಾ). ಆನೆಗಳನ್ನು ಪಳಗಿಸುವುದು ಮುಂತಾದುವನ್ನು ಕಲಿಯುವಿಕೆ : ತುರಗಾರೋಹಣದಿಂದಮೊರ್ಮೆ ಗಜಶಿಕ್ಷಾಲೀಲೆಯಿಂದೊರ್ಮೆ (ಚಂದ್ರಪು. ೪–೨೮). 'ಅಶ್ವಶಿಕ್ಷೆ' ಪರಾ. [ಗಜ + ಶಿಕ್ಷೆ]

**ಗಜಶೈಲ** (ನಾ). ಹತ್ತು ಕುಲಪರ್ವತಗಳಲ್ಲಿ ಒಂದು: ಶೈಲೇಂದ್ರ . . . ಗಜಶೈಲ . . . ಹಿಮಾದ್ರಿಗಳೆಂಬ ದಶಕುಲಪರ್ವತಂಗಳು (ವಿವೇಕ. ೨೧೫). [ಗಜ + ಶೈಲ]

**ಗಜಸಾಹಣಿ** (ನಾ). ಆನೆಯ ಸೈನ್ಯದ ಮೇಲ್ವಿಚಾರಕ : ಗಜಸಾಹಣಿ ಬಿಲುವಯ್ಯಂಗಳ ಪಾದಪದ್ಮೋಪಜೀವಿ (ಎಕ. XII, ಗುಬ್ಬಿ. ೩೪–೪೨ ; 1134) ; ಮುಖ್ಯಾಧಿಕಾರಿಯನ್ನೇ ಕನ್ನಡ ಶಾಸನಗಳು ಗಜಸಾಹಣಿ ಎಂದು ಕರೆಯುವಂತೆ ಕಾಣುತ್ತದೆ (ಕಶಾಅ. ೨೬೩). [ಗಜ + ಸಾಹಣಿ]

**ಗಜಸ್ಕಂಧ** (ನಾ). ಆನೆಯ ಹೆಗಲು, —ಭುಜ : ಅ ವರೂಥವನೇಳನೆಂಟೆ ಗಜಾವಳಿಗಳಿಟ್ಟವು ಗಜಸ್ಕಂಧಾವಲಂಬವ ಸಿಕ್ಕಿದರು ಸುರಗಿಯಲಿ ಸಮರಥರು (ಕುವ್ಯಾಶ. ೨–೧೫). [ಗಜ + ಸ್ಕಂಧ]

**ಗಜಸ್ನಾನ** (ನಾ). ೧. ಆನೆಯಂತೆ ಮುಳುಗಿ ಮಾಡುವ ಸ್ನಾನ. ೨. (ಆಲಂ). ಉಪಯೋಗವಿಲ್ಲದ ಕಾರ್ಯ : ಗಜಸ್ನಾನದಂತೆ ವೊಲೆಯ್ದೆ ನಿಷ್ಫಲಂ ಜಲದೊಳಗೆ ಮುಳುಗಿರ್ದೊಡಂ ಕಲುಮಸಂ ಕಿಡದು (ಆರಾಚ. ೧೧–೨) ; ಗಜಸ್ನಾನಕ್ಕಿಳಿಯುತ್ತಿರದಂತೆ ಸುವ್ಯವಸ್ಥೆಗೊಳಿಸಿ (ಬೆಟ್ಟಅ. ೨೦೩–೧೫). ℙ ಆನೆ ನೀರಿನಿಂದ ಮೇಲೆ ಬಂದ ಕೂಡಲೆ ಧೂಳನ್ನು ಒಟ್ಟಿಕೊಳ್ಳುವುದರಿಂದ ಅದು ವ್ಯರ್ಥವಾದ ಸ್ನಾನವಾಗುತ್ತದೆ. [ಗಜ + ಸ್ನಾನ]

**ಗಜಹಮೂರ್ತಿ** (ನಾ). ಗಜಾಸುರವನ್ನು ಕೊಂದವನ ಮೂರ್ತಿ; ಶಿವನ ಮೂರ್ತಿ: ವಿಶ್ವರೂಪ, ನೃಸಿಂಹ, ಪರಶುರಾಮ ಮತ್ತು ಗಜಹಮೂರ್ತಿಗಳು ಈ 'ಉಗ್ರ'ಪಂಕ್ತಿಗೆ ಸೇರಿದ ಪ್ರತಿಮೆಗಳು (ಭಾರದ. ೫೧೩). [ಸಂ. ಗಜಹಮೂರ್ತಿ (ಗಜಹನ್ + ಮೂರ್ತಿ)]

**ಗಜಹಸ್ತ** (ನಾ). ಆನೆಯ ಸೊಂಡಿಲು, —ಕೈ : (ಕಿ). [ಗಜ + ಹಸ್ತ]

**ಗಜಹಿಪ್ಪಲಿ** 'ಗಜಪಿಪ್ಪಲಿ' ನೋ.

**ಗಜಱು$_1$,** ಗಜರು$_1$ (ಕ್ರಿ). ೧. ಗದರಿಸು; ಬೆದರಿಸು; ಆರ್ಭಟಿಸು : ಜಳಧರ ನಿನಾದದಿಂ ಗಜಱಿ ಗರ್ಜಿಸಿದ ಜಟಾಸುರಾರಾತಿಯ ಗಳಗರ್ಜನೆಗೆ (ಪಂಪಭಾ. ೧೩–೮೦ ವ) ; ಸೃಗಾಲನರಪಾಲಂ ಕೇಳ್ದು ಪ್ರಳಯಕಾಲ ಜಲಧರದಂತೆ ಗಜಱಿ ಗರ್ಜಿಸಿ (ಜಗವಿ. ೮–೬೫ವ) ; ಹೊಱವಂಟ ನಾಡಂಬರದ ಸಿಡಿಲು ಗಜಱಿ ಗರ್ಜಿಸಿ ಮೇಘದಿಂದ ಪೊಱಮಡುವಂದದಿ (ಹಚಕಾ. ೨–೩೪) ; ಡೌಡೆಯ ತೂಳುವಱೆಗಳು ಗಜಱಿದವು (ಕುವ್ಯಾದ್ರೋ. ೩–೭). **ಗಜರು$_1$ :** ೨. "ಸೊಕ್ಕು" (ರುದ್ರನಿ). [ದೇ. ‖ ಮಲ. ಕಯರ್ ; ತೆಲು. ಕಸರು ; ಕುರುಖ್. ಕಚ್ಕರ್ಚ. / ಮರಾ. ಗಜರ್]

**ಗಜಱು$_2$** ಗಜರು$_2$ (ನಾ). ಗದರಿಕೆ ; ಗದ್ದಲ ; ಗರ್ಜನೆ; ಆರ್ಭಟ : "ಗಜಱಿನೆ ಕೋಪಿಸಿ ನುಡಿದುದು" (ಭಾರನಿ. ೫೦) ; ಪಾವಿಲ್ಲದೆಡೆಯೊಳ್ ಕಪ್ಪೆಗಳ್ ತಮ್ಮ ಗಜಱ ಗಜಱಾಗಿರ್ಪುವು ಪಾವು ಬರೆ ಗಜಱುಗೆಟ್ಟು ಸತ್ತಂತಿರ್ಪುವು (ಧರ್ಮಾಮೃ. ೧–೧೭೪) ; ಘನ ಗಂಭೀರ ಭೇರಿಗಳ ಚಟುಳ ಕಹಳೆಯ ಗಜಱು ಮಿಗಲು (ಕುವ್ಯಾದ್ರೋ. ೧೫–೨೨) ; ಯುಧಿಷ್ಠಿರನಾಳ್ವ ದೇಶದೊಳ್ ಕಳವು ಕೊಲೆ . . . ಗಜಱು ಗಾವಳಿ . . . ಮೊಳೆದೋಱವು (ಜೈಮಿಭಾ. ೨–೫). **ಗಜರು$_2$ :** "ಕೋಪದ ಮಾತು" (ರುದ್ರನಿ). [< ಗಜಱು$_1$]

**ಗಜಱುಗಹಳೆ** (ನಾ). ಗರ್ಜಿಸುವ ಕಹಳೆ; ಮೊರೆವ ಕಾಳೆ: ಬಿಜಯ ಮಾಡಿದನರಸನನಿಲಾತ್ಮಜನ ಕೈವಿಡಿದಮರರಾಯನ ಗಜಱುಗಹಳೆಯ ಸನ್ನೆಯಲಿ (ತೊರರಾ. ೬–೯–೩೧). [ಗಜಱು$_1$ + ಕಹಳೆ]

**ಗಜಱುಗೆಡು** (ಕ್ರಿ). ಗದ್ದಲವಿಲ್ಲದಂತಾಗು ; ಗರ್ಜನೆ ನಿಂತುಹೋಗು: ಪಾವಿಲ್ಲದೆಡೆಯೊಳ್ ಕಪ್ಪೆಗಳ್ ತಮ್ಮ ಗಜಱ ಗಜಱಾಗಿರ್ಪುವು ಪಾವು ಬರೆ ಗಜಱುಗೆಟ್ಟು ಸತ್ತಂತಿರ್ಪುವು (ಧರ್ಮಾಮೃ. ೧–೧೭೪). [ಗಜಱು$_2$ + ಕೆಡು$_1$]

**ಗಜಾಂಕುಶ** (ನಾ). ೧. ಆನೆಯನ್ನು ವಶದಲ್ಲಿ ಇಟ್ಟುಕೊಳ್ಳುವ ಸಾಧನ, —ಅಂಕುಶ : ಚಕ್ರಚಾಪಶಿಲಾಮುಖ ಗಜಾಂಕುಶಾದ್ಯಾಯುಧ (ಯಾದಮ. ೩–೧ವ). ೨. ಕನ್ನಡದ ಒಬ್ಬ ಕವಿ : ಗಜಾಂಕುಶನೊಳ್ಪುವೆತ್ತು ರಂಜಿಸುವ ಸದರ್ಥದೃಷ್ಟಿ (ಧರ್ಮಾಮೃ. ೧–೩೯).

**ಗಜಾಂಕುಶಕುಳತಿಲಕ** = ಗಜಾಂಕುಶನ ವಂಶಕ್ಕೆ ಶ್ರೇಷ್ಠನಾದವನು, —ತಿಲಕಪ್ರಾಯನಾದವನು : ಶ್ರೀಮನ್ಮಹಾಪ್ರಚಂಡಂ ದಂಡನಾಯಕಂ ಗಜಾಂಕುಶಕುಳತಿಲಕಂ ಪ್ರಭು ಕೇಸರಿನಾಯಕರುಂ (ಕಇ. II, ೧೨–೩೮; 1114). [ಗಜ + ಅಂಕುಶ]

**ಗಜಾಂಬರ** (ನಾ). = ಗಜಚರ್ಮ : ಅಜಹರಿವಂದಿತ ಮೂಜಗದೊಡೆಯನು ಗಜಾಂಬರ ಹೊದಿಸೂತ ಸಿದ್ಧಗೆ ಕರೆದು ಗಿರಿಜೆಗೆ ನಿನ ಕಂದನ ಕೊಳ್ಳೆಂದ (ಸಿದ್ಧಪು. ೫–೯೯). [ಗಜ + ಅಂಬರ]

**ಗಜಾಖ್ಯೆ** (ನಾ). ಒಂದು ಬಗೆಯ ಗಿಡ ; ಆನೆಗ ; ವಾತಾಗಸ್ತ್ಯ : "ಗಜಾಖ್ಯೆ [ಪಾಠಾಂ. ಗಜ್ಯಾಖ್ಯೆ]ಯಾನೆಗಮೆನಿಕ್ಕುಂ" (ಮಂಗರಾ. ೩೫–೧೫). [ಸಂ. ಗಜಾಖ್ಯಾ]

**ಗಜಾಗರ** (ನಾ). (ಆಟದಲ್ಲಿ) ಎಂಟರ ಗರ (?) : ಸಂದಿ ಕಳಂತಿ ಗಜಾಗರವೆಂದಚ್ಚಂ ಕೊಂಡು ಕವಡೆಯಂ ತೂಗಿಯಿನಿತ್ತೆಂದುಜಿಕೈಚಳಕಂ ಮಿಗೆ ಚಂದಮ್ಮನಲ್ ಲಗ್ಗೆದೋಱಲಾಡುತ್ತಿರ್ದರ್ (ದಶಕು. ೮–೮೮). [?]

**ಗಜಾಜೀವ** (ನಾ). ೧. ಆನೆಯನ್ನು ಕಾಪಾಡುವುದರಿಂದ ಜೀವನವನ್ನು ನಡೆಸುವವನು ; ಆನೆಯ ಮಾವುತ. ೨. ಆನೆಯ ವೈದ್ಯ: "ಗಜಾಜೀವಃ, ಮಹಾಮಾತ್ರಃ – ಈ ೨ ಆನೆಯ ವೈದ್ಯಂ" (ಹಲಾಯು. ೩೮–೬೨). [ಸಂ.]

**ಗಜಾನನ** (ನಾ). ೧. = ಗಜಮುಖ : "ವಿನಾಯಕಃ . . . ಲಂಬೋದರಃ, ಗಜಾನನಃ . . . ಶಿವಪುತ್ರನಾದ ಗಣಪತಿಯ ಹೆಸರುಗಳು" (ಸಿದ್ಧಾಂತಿ. ೨೦). ೨. [ಜೈನ] ಒಂದು ನರಕದ ಹೆಸರು : ಸಕಲಶಲ್ಯ ಸಿಂಹಗಜಾನನವ್ಯಾಘ್ರವೆಂಬ್ಬೆದು ಮಂತ್ರಿನರಕಂಗಳ ಮೇಳದಲ್ಲಿ (ವಿವೇಕ. ೧೮೦). [ಗಜ + ಆನನ]

**ಗಜಾಯ** (ನಾ). ಆಯದಲ್ಲಿ ಒಂದು ಬಗೆ (?) : ವಿಸ್ತಾರವಾಗಿ ಉದ್ದ ಅಗಲವನು ಅಳದು ಪೊಟ್ಟುಗೂಡಿಕೊಂಡ ಕೋಲುಯೆಷ್ಟೋ ಅಧನು ೩ ಹೆಚ್ಚಿ . . . ಅದಂ ೮ ರಿಂದ ಭಾಗಿಸಿ ಉಳಿದವು ಆಯಂಗಳೂ × × × ೭ ವುಳದರೆ ಗಜಾಯ (ಆಯಟೀ. ೧–೬). [ಗಜ + ಆಯ$_1$]

**ಗಜಾರಣ್ಯ** (ನಾ). ೧. ಆನೆಗಳಿರುವ ಅರಣ್ಯ ; ಆನೆಗಳಕಾಡು. ೨. (ಅಲಂ) "ಆನೆಯ ಕುಂಭಸ್ಥಳದಷ್ಟು ಕುಚಗಳುಳ್ಳ ಸ್ಥಳ" (ಗುರುಚಾ. ಕೋಶ). ೧, ೨. ವಸುಕುಂಭಕಂಚಿಯೆಂದಳಿಲೆ ಮಹೇಶ್ವರ ನೋಡದುಸಿಕನ್ಯೆದುವರೆಯೆನೆ ಬದರಿಕಾಶ್ರಮದಲ್ಲಿ ಮಿಸುಪ ಮಾಲೂರ ಚಕೋರಗಳಿಗೆ ಪಸರಿಪ ಗಜಾರಣ್ಯದಲ್ಲೇನುಮೆನೆ ನಾಣ್ಚೆ ನಸುನಗೆಯನಾಂತು (ಗುರುಚಾ. ೧–೩). ೩. ಈಗಿನ ತಲಕಾಡಿಗೆ ಪುರಾಣ ಕಾಲದಲ್ಲಿದ್ದ ಹೆಸರು : ಗಜಾರಣ್ಯಕ್ಷೇತ್ರ (ರೂಢಿ). [ಗಜ + ಅರಣ್ಯ]

**ಗಜಾರಾತಿ** (ನಾ). ೧. = ಗಜವೈರಿ : ಸಾಯದೆ ಪೋಗು ಪೋಗದೊಡೆ ಮೇಣ್ ಮೇಲ್ವಾಯ್ದು ನೋಡೀಗಳಿಂತೆ ಗಜಾರಾತಿಯನಾಂತ ದಂತಿಗೆಣೆಯಾಗಾಂ ಮಾಡಿ ನಿನ್ನಂ . . . ಮಾಡುವೆಂ (ಚಂಪ್ರಪು. ೫–೭೫). ೨. "ಗಜಾಸುರನ ಶತ್ರು ; ಶಿವ" : (ಅನಂನಾ). [ಗಜ + ಅರಾತಿ]

**ಗಜಾರಿ** (ನಾ). ೧. = ಗಜವೈರಿ : ಗಜಮಸ್ತಕದೊಳ್ ಪಾಯ್ವುದು ಗಜಾರಿ ಪಾಯ್ವಂತೆ ನಿಶಿತ ಬಾಣಾವಳಿಗಳ್ (ಶಾಂತಿಪು. ೪–೧೮). ೨. "ಶಿವ" (ಗಂಗಾಮ. ೧೧೦). [ಗಜ + ಅರಿ$_6$]

**ಗಜಾರಿಧ್ವಜ** (ನಾ). ೧. ಸಿಂಹಧ್ವಜ ; ಸಿಂಹದ ಗುರುತುಳ್ಳ ಬಾವುಟ. ೨. ಸಿಂಹಧ್ವಜವುಳ್ಳವನು ; ಭೀಮ. ೩. ಮನಾಳ ವಂಶದ ಜಯಕೇಶಿ ಎಂಬ ರಾಜ : ಪುರಿಗೆಱೆಯೊಳ್ಪೆರ್ಮಾಡಿಯ ಪುರವರಮಳಿದಿರ್ಪುದಂ ಗಜಾರಿಧ್ವಜನಾದರದಿನ್ನವೆ ನೋಡಿ (ಸೌಇ. XX, ೪೬–೩೨ ; 1074). [ಗಜಾರಿ + ಧ್ವಜ]

**ಗಜಾರೂಢ** (ನಾ). ಆನೆಯನ್ನು ಏರಿದವನು : ನಲಿಯುತ್ತೆ ಗಜಾರೂಢನಾಗುತುಂ ಗಿರಿರಾಜಂ (ಗಿರಿಕ. ೩–೧೧೧). [ಗಜ + ಆರೂಢ]

**ಗಜಾರೋಹ** (ನಾ). ೧. ಆನೆಯನ್ನು ಏರುವುದು, —ಹತ್ತುವುದು. ೨. ಆನೆಯ ಸವಾರ ; ಆನೆಯನ್ನು ನಡೆಸುವವನು ; ಮಾವುತ. [ಗಜ + ಆರೋಹ]

**ಗಜಾರೋಹಕ** (ನಾ). = ಗಜಾರೋಹ ೨: ನೂಂಕುವ ಗಜಾರೋಹಕನಿಕರವಲ್ಲಿ (ಇಹರ. ೩೬–೧೮); ನುತ ಗಜಾರೋಹಕರು ಕುರುಭೂಪತಿಯ ಹೊರೆಯಲಿ ಮೆಱೆದರು (ಕುವ್ಯಾಉ. ೮–೪೨). [ಗಜ + ಆರೋಹಕ]

**ಗಜಾರೋಹಣ** (ನಾ). ಆನೆಯನ್ನು ಏರುವಿಕೆ, —ಹತ್ತುವಿಕೆ ; ಆನೆಯ ಸವಾರಿ : ಗಜಾರೋಹಣ ಗುಣಶ್ರೇಷ್ಠವಾದ ಕೊಂಬುಗಳುಳ್ಳ . . . ಆನೆಯನ್ನು ಏರುವುದರಿಂದ . . . ಜಠರಾಗ್ನಿಯನ್ನು ಪ್ರಬಲ ಮಾಡುವುದು (ಸಕವೈ. ೫೪). [ಗಜ + ಆರೋಹಣ]

**ಗಜಾರೋಹಿಣಿ** (ನಾ). ಆನೆಯನ್ನು ಹತ್ತಿದವಳು, —ಏರಿದವಳು : ಗುರುಕುಚದ ಭರಣಿ ಸುಂದರಗಜಾರೋಹಿಣಿ ಮಧುರಕಾಮಕೇಳೀರಸಾರ್ದ್ರೆ (ಜೈಮಿಭಾ. ೬–೨೨). [ಗಜ + ಆರೋಹಿಣಿ]

**ಗಜಾಲು$_1$** (ನಾ). ೧. ಗದ್ದಲ ; ಗಲಭೆ ; ಗಲಾಟೆ : ಜನರ ಗಜಾಲು ನಿಂತು ಹೋಯಿತು (ಪೀಟಮಾ. ೨೨) ; ನೀನೂ ಬೈದಿ ನಾನೂ ಬೈದೆ ಗಜಾಲಿನಲ್ಲಿ ಗಜಾಲು ಸರಿಹೋಯಿತು (ಕಥಾಮಂ. IV, ೧೯) ; ಈಗ ಮಾರಿಹಬ್ಬದ ಗಜಾಲಲ್ಲವಾ ? (ಮಾಮರಾ. ೪). ೨. "ಕಾಡುಹರಟೆ ; ಪ್ರಯೋಜನವಿಲ್ಲದ ಮಾತು" (ಅನಂನಾ). [← ಮರಾ. ಗಜಾಲ್]

**ಗಜಾಲು$_2$** 'ಗಜಲ್' ನೋ.

**ಗಜಾಲುಗಾತಿ** (ನಾ). ೧. ಗದ್ದಲ ಮಾಡುವವಳು ; ಗಲಾಟೆ ಮಾಡುವವಳು : (ಕಿ). ೨. "ಒಣ ಹರಟೆ ಹರಟುವವಳು ; ಹರಟೆಮಲ್ಲಿ" (ಅನಂನಾ). [ಗಜಾಲುಗಾರ + -ತಿ$_1$ (< -ಇತ್ತಿ)]

**ಗಜಾಲುಗಾರ** (ನಾ). ೧. ಗದ್ದಲಮಾಡುವವನು ; ಗಲಾಟೆ ಮಾಡುವವನು : (ಕಿ). ೨. "ಹರಟೆಮಲ್ಲ" (ಅನಂನಾ). [ಗಜಾಲು + -ಗಾರ (< -ಕಾಱ)]

**ಗಜಾಸುರ** (ನಾ). ಆನೆಯ ರೂಪದ ಒಬ್ಬ ರಾಕ್ಷಸ : ಇದು ಗಜಾಸುರನೋ ಮಹಾದೇವಿದುವೆ ಮಹಿಷಾಸುರನೊ (ಕುವ್ಯಾದ್ರೋ. ೩–೧೨). [ಗಜ + ಅಸುರ]

**ಗಜಾಸ್ಯ** (ನಾ). = ಗಜಮುಖ : ಮುಳಿದು ಗಜಾಸ್ಯನಬ್ಬರಿಸಿದಂ (ಶಬಶಂ. ೪–೪೬). [ಗಜ + ಆಸ್ಯ]

**ಗಜಿಗ** 'ಗರ್ದುಗು' ನೋ.

**ಗಜಿಬಿಜಿ** 'ಗಜಬಜ' ನೋ.

**ಗಜುಗ** 'ಗರ್ದುಗು' ನೋ.

**ಗಜೆ** (ನಾ). = ಗದೆ : "ಗದಾ–ಗಜೆ" (ಶಮದ. ೨೬೬ ಪ್ರಯೋ); ಗಜೆಯಂ ಭೋರೆನೆ ಪರ್ವಿ ಬೀಸಿ ಕಡುಪಿಂದೆಯ್ತಂದು (ಪಂಪಭಾ. ೧೦–೧೦೨) ; ಗಜೆಯಂ ಸಜಯಂ ಗೆಲೆ ತೂಗಿ ರಾಗದಿಂ (ನೇಮಿಪು. ೧೧–೩೪). [< ಸಂ. ಗದಾ]

**ಗಜೆಗೊಳ್** (ಕ್ರಿ). ಗದೆಯನ್ನುಹಿಡಿ : ಗಜೆಯೊಳ್ ಭೀಮಸೇನನಿದಿರಾಂತು ಬರ್ದುಂಕುವ ವೈರಿಭೂಭುಜಧ್ವಜಿನಿಗಳಿಲ್ಲ (ಪಂಪಭಾ. ೯–೫೨). [ಗಜೆ + ಕೊಳ್$_1$]

**ಗಜೆಬಜೆ** 'ಗಜಬಜ' ನೋ.

**ಗಜೇಂದ್ರ** (ನಾ). ಸಲಗ : ಮಲೆಯುತ್ತೊಲೆಯುತ್ತೆ ಸುತ್ತಿ ಕೈಪಱಿದ ಗಜೇಂದ್ರನಂತೆ ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೧೧೧೨ ಶೂದ್ರಕ). [ಗಜ + ಇಂದ್ರ]

**ಗಜೋತ್ಕರ** (ನಾ). ಆನೆಗ್ಗಳ ಹಿಂಡು, —ಗುಂಪು : "ಗಜೋತ್ಕರಮುಂ – ಆನೆಗಳ ಸಮುದಾಯ" (ನಾನಾರ. ೧೧೦). [ಗಜ + ಉತ್ಕರ]

**ಗಜೋನ್ಮೀಲನ** (ನಾ). ೧. ಆನೆ ಕಣ್ಣು ತೆರೆದುಕೊಳ್ಳುವುದು. ೨. (ಆಲಂ) ಎಲ್ಲವನ್ನೂ ಸರಿಯಾಗಿ ನೋಡುವಿಕೆ ; ನಿಧಾನವಾದ ಪರಿಶೀಲನೆ: ಅಪರಾಜಿತಂ. . .ಕಿಱಿದು ಲೋಕಜ್ಞತೆಯೊಂದಿರ್ಪುದಱಿಂ ರಸಭಂಗಂಮಾಡದೆ ಗಜೋನ್ಮೀಲನಂಗೆಯ್ದು (ಶಾಂತಿಪು. ೨–೨೨ವ). [ಗಜ + ಉನ್ಮೀಲನ]

**ಗಜೋಪಜೀವಿ** (ನಾ). ಆನೆಗಳನ್ನು ಪಾಲಿಸಿ ಜೀವಿಸುವವನು ; ಮಾವಟಿಗ : ಸರ್ವದೋಷಪ್ರದುಷ್ಟ ಗಜಂಗಳನುಪಲಾಲನೆಯೊಳ ಮಿಚ್ಛಾನುವರ್ತನದೊಳಮುಳವಳಿಡುವ ಕುಶಲ ಗಜೋಪಜೀವಿಯಂತೆ (ಶಾಂತಿಪು. ೩–೭೨ ವ). [ಗಜ + ಉಪಜೀವಿ]

**ಗಜ್ಜ** (ನಾ). ಗರ್ಜನೆ; ಗುಡುಗು : 'ಗಜ್ಜವೃಷ್ಟಿ' ಪರಾ. [< ಸಂ. ಗರ್ಜ]

**ಗಜ್ಜಗ** 'ಗರ್ದುಗು' ನೋ.

**ಗಜ್ಜರಿ** 'ಕಜ್ಜರಿ' ನೋ.

**ಗಜ್ಜರೆ** 'ಕಜ್ಜರಿ' ನೋ.

**ಗಜ್ಜರೆಗೆಂಪು** (ನಾ). ಗಜ್ಜರಿಯ ಕೆಂಪುಬಣ್ಣ ; ಕಿತ್ತಳೆಗೆಂಪು: ಗಜ್ಜರೆಗೆಂಪು ಮೈಬಣ್ಣದ ನಡು ಹರೆಯದವರು (ಹುಚ್ಚಾಟ. ೪). [ಗಜ್ಜರೆ (< ಕಜ್ಜರಿ) + ಕೆಂಪು]

**ಗಜ್ಜಲು** (ನಾ). ೧. "ತೊಡೆಯ ಸಂದು ; ಗೆಜ್ಜೆ" (ಅಂಸನಾ). ೨. "ಆಕಳ ಕೆಚ್ಚಲು" (ಅಸಂನಾ).

**ಗಜ್ಜಲುಬಿಗಿಯು, ಗಜ್ಜಲುಹಿಡುಕೊಳ್ಳು** = (ಕರಾ) ೧. ಮೂತ್ರ ಒತ್ತರಿಸು, —ಅಂಟಿಬರು. ೨. "ತೊಡೆಯ ಸಂದು ಬೇನೆ ಯಾಗು ; ತೊಡೆವಾಳೆಯಾಗು" (ಸ್ಯಾಂಡರ್). 'ಗೆಜ್ಜೆ' ಪರಾ. [?]

**ಗಜ್ಜವೃಷ್ಟಿ** (ನಾ). ಗರ್ಜನೆಯಿಂದ ಕೂಡಿದ ಮಳೆ ; ಗುಡುಗಿನಿಂದ ಕೂಡಿದ ಮಳೆ: ಪೆರ್ಮೊಬಿಗಲ್ಲಿದು ಗಜ್ಜವೃಷ್ಟಿಯಲ್ಲಿದು ಸುರಿವಸ್ತ್ರ ಜಾಲವೆನಲ್ (ಜಗವಿ. ೧೮–೯೦). [ಗಜ್ಜ + ವೃಷ್ಟಿ]

**ಗಜ್ಜಿ** 'ಕಜ್ಜಿ' ನೋ.

**ಗಜ್ಜಿಗ** 'ಗರ್ದುಗು' ನೋ.

**ಗಜ್ಜಿಹಲ್ಲು** (ನಾ). ನವೆದ ಹಲ್ಲು ; ಹುಳುಕುಹಲ್ಲು : (ಎಸವ್ಯ. XV, ೪೨). [ಗಜ್ಜಿ (< ಕಜ್ಜಿ) + ಹಲ್ಲು (< ಪಲ್)]

**ಗಜ್ಜು$_1$** 'ಕೊಚ್ಚೆ' ನೋ.

**ಗಜ್ಜು$_2$** (ನಾ). ಪಟ್ಟು; ಸಲ; ಸರದಿ; ಬಾರಿ: ಒಂದು ಗಜ್ಜು ಫಸ್ಟ್‌ಕ್ಲಾಸ್ ಊಟಮಾಡಿ (ಕ್ಷಿತಿಜ. ೯೦); ಇಲ್ಲದಿದ್ದರ ಒಂದೇ ಗಜ್ಜಿಗೆ ಐ.ಸಿ.ಎಸ್. ಆಗಿ ಬರುತಿದ್ದಾ (ದೀಪಹ. II, ೨೧). [← ಹಿಂ. ಮರಾ. ಗಚ್]

**ಗಜ್ಜುಗ** 'ಗರ್ದುಗು' ನೋ.

**ಗಜ್ಜೆ** 'ಗೆಜ್ಜೆ' ನೋ.

**ಗಟ** 'ಗಡ$_2$' ನೋ.

**ಗಟಕ** (ನಾ). ಯೋಜಿಸುವವನು ; ಘಟಕ : "ಗಟಕ– ಘಟಕ ಆಯೋಜಕ" (ತದ್ಭಕೋ. ೯). [< ಸಂ. ಘಟಕ]

**ಗಟಕರಿಸು** 'ಗಟಗರಿಸು' ನೋ.

**ಗಟಕ್ಕನೆ** (ಅ). ಕೂಡಲೆ; ಒಮ್ಮೆಲೆ : ಗುಟುಕು ನೀರನ್ನು ಗಟಕ್ಕನೆ ನುಂಗಿದೆ ಅಂದನಂತೆ (ಹುಟ್ಟಹ. ೧೧೨). [ಗಟಕು ? + –ಅನೆ$_1$]

**ಗಟಗಟನೆ** (ಅ). = ಗಟಕ್ಕನೆ : ಸುರಿಗೆಯೊಳಂದೊಕ್ಕನೆ ನಿನ್ನುರವಂ ಪಿಡಿದಿಱಿದು ತೆಗೆಯೆ ಭೋರ್ಗರೆದು ಕರಂ ಸುರಿಯೆ ತಪ್ಪಬಿಸಿಯ ನೆತ್ತರ ಗಟಗಟನಾಂ ಕುಡಿಯಲೆಂದು ಬಯಸಿದೆನರಸಾ (ಬಂಹರಿ. ೫–೩೭); ಒಂದು ಬಟ್ಲವನ್ನು ಗಟಗಟನೆ ಕುಡಿದು ಇನ್ನೊಂದು ಬೇಡುವವಳೇ (ಮೋಹಿನೀ. ೫೬). [ಗಟಗಟ + –ಅನೆ$_1$]

**ಗಟಗಟಿಸು** (ಕ್ರಿ). ಗಟಗಟ ಎಂದು ಶಬ್ದಮಾಡಿಕೊಂಡು ಕುಡಿ: ಬೀರಿನ ಬಾಟಲು ಮುಂದಿಟ್ಟು ಗಟಗಟಿಸಲು ಮೇಜಿನ ಮುಂದೆ ಕುಳಿತ (ಮಾಮನೆ. ೩೬). [ಗಟಗಟ + –ಇಸು$_3$]

**ಗಟಗರಿಸು**, ಗಟಕರಿಸು, ಗಟುಕರಿಸು (ಕ್ರಿ). (ಚಳಿಯಿಂದ ಹಲ್ಲು) ಕಡಿ ; ತಿನ್ನು : ಚಳಿಯಿಂದ ಹಲ್ಲುಗಳು ಗಟಗರಿಸಿ ಹೋದವು (ಮಂಜುಕ. ೧೬೭). **ಗಟಕರಿಸು** : ಮರದ ಕೆಳಗೆ ಒಂದೆರಡು ಜೀವಿಗಳು ತಪತಪನೆ ತೋಯಿಸಿಕೊಂಡರೂ ಬೇರೆ ಕಡೆಗೆ ಹೋಗಲಾರದೆ ಹಲ್ಲು ಗಟಕರಿಸುತ್ತ ಅಲ್ಲಿಯೇ ನಿಂತಿವೆ (ಮುಗಿಮ. ೪). **ಗಟುಕರಿಸು** : "ಥಂಡಿಯಿಂದ ಹಲ್ಲುಕಡಿ" (ಜಾನಕೋ. ೪೪). 'ಕಟಕರಿಸು' ಪರಾ. [ಗಟಗರ ? + –ಇಸು$_3$]

**ಗಟರು**, ಗಡರು (ಕ್ರಿ). ತೇಗು ; ಡರಕೆ ಹೊಡೆ : ಅವನಿಗೆ ಇನ್ನೇನು ಕೆಲಸವೇ ಇಲ್ಲ ಸುಮ್ಮನೆ ಗಟರುತ್ತಾ ಇರೋದೆ (ರೂಢಿ). **ಗಡರು** : ಉಂಡು ಗಡರುತ್ತ ಮನೆಯಂಗಳದ ಬೆಳುದಿಂಗಳಲ್ಲಿ ಎಲೆ ಅಡಕೆ ಮೆಲ್ಲುತ್ತ ಕುಳಿತಿದ್ದ (ಬೆಳುಮ. ೭೯). [< ಗುಟುರು ?]

**ಗಟವಾಣಿ** 'ಗಟ್ಟಿವಾಳಿ' ನೋ.

**ಗಟಾಂಗಟಿ** (ನಾ). ಗಟ್ಟಿಗ ; ಸಮರ್ಥ ; ಶೂರ : ಮೇಲೆ ನೋಡಿದರೆ ಗಟಾಂಗಟಿ ಒಳಗೆ ಲೊಟಾಂಪಟಿ (ಗಾದೆ). [< ಘಟಾನುಘಟಿ]

**ಗಟಾರ** 'ಗಟಾರು' ನೋ.

**ಗಟಾರು**, ಗಟಾರ, ಗಠಾರ, ಗಠಾರು (ನಾ). (ಉಕ) ಕೊಳಚೆ ನೀರು ಹರಿಯುವ ಸ್ಥಳ; ಚರಂಡಿ; ಮೋರಿ : ಕೊಳಚೆ ನೀರು ತುಂಬಿದ ಗಟಾರಿನಲ್ಲಿ ಇಳಿದು ನೀವು ಹೇಗೆ ಬರುತ್ತೀರಿ ಬನ್ನಿ; ನೀರು ಸಿಡಿಸುತ್ತೇನೆ ಎಂದು ಹಾಸ್ಯಮಾಡುತ್ತಿದ್ದ (ಧರ್ಮಸಾ. ೪೬) ; ಒಂದು ಅಮೃತಧಾರೆ ಇನ್ನೊಂದು ಗಟಾರು ನೀರು (ರಂಗರೋ. ೧೮೦). **ಗಟಾರ** : ಇವನು ನಮ್ಮ ಮನೆತನವನ್ನೇ ಗಟಾರಕ್ಕೆ ಎಳೆದುಬಿಟ್ಟನು (ಬೇಟೆನಾ. ೯೩); ಎಲೆ ತಂದು ಗಟಾರದಲ್ಲಿ ಬೀಸಿದರು (ಅನ್ನ. ೨೭೭) ; ಗಟಾರದ ಹೊಲಸು ನಾರುವ ಮಣ್ಣನ್ನು ಬೆರಸಿ ಮೋರೆಗೆ ತಿಕ್ಕುವುದೂ ಕೂಡ ಈ ಆಟದ ಒಂದು ಅಂಗವಾಗಿರುತ್ತಿತ್ತು (ರಂಗರೋ. ೪೮). **ಗಠಾರ** : ಆ ಗಠಾರದ ವಠಾರದಲ್ಲಿ ಮಲಗಿದ್ದವರೆಲ್ಲರೂ ಎದ್ದರು (ಬೆಂಗಬ. ೪೫). **ಗಠಾರು** : ಗಠಾರಿನ ದುರ್ಗಂಧ (ಬೆಂಗಬ. ೪೨). [← ಹಿಂ. ಮರಾ. ಗಟರ್ ; ಗಟಾರ್. / ಇಂ. Gutter]

**ಗಟಿ** (ನಾ). ಭೂಮಿಯ ಒಂದು ಅಳತೆ (?) : ನಾಲ್ವತ್ತು ಹಾನೆ ಗಟಿಯೇಳು ಮೂಡೆಗದ್ದೆಯುನು (ಕಇ. I, ೪೧–೪೦ ; 1417). [?]

**ಗಟಿಕೆ** (ನಾ). ೧. ಗಟ್ಟಿಯಾಗಿರುವಿಕೆ ; ಘನರೂಪ ; ಘಟ್ಟಿ : ಬ್ರಹ್ಮಾಂಡವೆಂಬ ಗಟಿಕೆಯು ಪಿಂಡವೆಂಬ ಕಟ್ಟಳೆಯನಿಕ್ಕಿ ತೂಗುವೆನಯ್ಯಾ (ಆದವ. ೧೬೭–೨೯೫) ; ಕಲ್ಲುಸಕ್ಕರೆ ಗ[ಪಾಠಾಂ. ಘ]ಟಿಕೆ ಆಗುವ ಹಾಗೆ ಕಾಯಿಸಿದ ಕಬ್ಬಿನ ಹಾಲಿಗೆ ಮತ್ಸಂಡೀಯೆಂತಲೂ . . . ಹೆಸರು (ಸಿದ್ಧಾಂತಿ. ೨೪೫). [< ಸಂ. ಘಟಿಕಾ]

**ಗಟಿವಾಣಿ** 'ಗಟ್ಟಿವಾಳಿ' ನೋ.

**ಗಟುಕರಿಸು** 'ಗಟಗರಿಸು' ನೋ.

**ಗಟೆ** (ನಾ). ಆನೆಗಳ ಗುಂಪು, —ಸಮೂಹ : "ಘಟೆ – ಗಟೆ" (ಶಬ್ದಾನು. ೧೪೩ ಪ್ರಯೋ). [< ಸಂ. ಘಟಾ]

**ಗಟ್ಟ$_1$**, ಗಟ್ಟು (ನಾ). ೧. ಬೆಟ್ಟಗಳ ಸಾಲು ; ಪರ್ವತಾವಳಿ : ಕುರುಡನಪ್ಪ ಪೊಲಂಬಿಗನಂ ನಂಬಿ ಗಟ್ಟದಿಟ್ಟೆಡೆಯೊಳಿರುಳ್ ದೂರ ದೇಶಕ್ಕೆ ಪಯಣಂಬೋಪೆನೆಂಬಾತಂ (ಧರ್ಮಾಮೃ. ೭–೩೫) ;

ಗಂಗೆಯೊಡನಾಡಿದ ಗಟ್ಟ[ಪಾಠಾಂ. ಟ್ಟ] ಬೆಟ್ಟಂಗಳು ಕೆಟ್ಟ ಕೇಡ ನೋಡಯ್ಯ (ಮಹಾದೇ. ಬ. ೬೨–೧೫೨); ಪುದಿದ ಗಿಡುವಿನೊಳು ಮಡುವಿನೊಳು ಬೆಟ್ಟದೊಳು ಗಟ್ಟದೊಳು(ಹಚಕಾ.೬–೩೧); ಬಟ್ಟೆಗಂ ಗಟ್ಟದೊಳ್ ಪೊಟ್ಟಂ ಮುಟುಂಗಿಸಿದಂ (ಶಬ್ದಾನು. ೫೩೬ ವ್ಯಾಖ್ಯಾ); ಗಟ್ಟಕ್ಕೆ ಹೋಗುವ ದಾರಿ ಇದು (ಹಾಹುತ್ತ. ೭೨) ; ಹುಟ್ಟುಗುಣ ಗಟ್ಟ ಹತ್ತಿದರೂ ಹೋಗದು (ಗಾದೆ). ೨. ನದಿ, ಸರೋವರ, ಕೆರೆ ಮುಂತಾದೆಡೆಗಳಲ್ಲಿ ಮೆಟ್ಟಿಲಿರುವ ಸ್ಥಳ. 'ಸ್ನಾನಗಟ್ಟ' ಪರಾ. ೩. ಪಗಡೆ ; ಚೌಕಾಭಾರ ಮೊದಲಾದ ಆಟಗಳಲ್ಲಿ ಕಾಯಿಗಳನ್ನು ಕೊಲ್ಲಲು ಅವಕಾಶವಿಲ್ಲದ ಸ್ಥಳ, —ಮನೆ. 'ಗಟ್ಟಗುಂಡಾಟ' ಪರಾ. **ಗಟ್ಟು**: ೨. "ಕೂಲಂ, ರೋಧಃ, ತೀರಂ, ಪ್ರತೀರಂ, ತಟಂ – ೫ ಅಂದರೆ ನೀರಿನ ತಡಿ, ನೀರಿನ ಗಟ್ಟು, ಜಲಗಟ್ಟ" (ಸಿದ್ಧಾಂತಿ. ೬೯) ; ಮಹಾವಿಷ್ಣುವು ಮತ್ಸ್ಯತೀರ್ಥದ ಗಟ್ಟನಲ್ಲಿ ಸನಕ ಸನಂದನ ಮೊದಲಾದವರಿಂದ ಸಹಿತವಾಗಿ ನಿಂತನು (ಅರ್ಕಮಾ. ೩೧).

**ಗಟ್ಟದುಪ್ಪು ಬೆಟ್ಟದ ನೆಲ್ಲಿಕಾಯಿ** = ಅನಿರೀಕ್ಷಿತವಾದ ಸಂಬಂಧ : ಗಟ್ಟದುಪ್ಪು ಬೆಟ್ಟದನೆಲ್ಲಿಕಾಯ್ಗೆ ಸುಪ್ರಯೋಗಿಸಿದಂತೆ ಸುಗುಣಾನಿರುದ್ಧಗೆ ಕಪ್ಪುರಗಂಧಿ ಸೇರಿದಳು (ಮೋಹತ. ೪೧–೪೫) ; ಗಟ್ಟದುಪ್ಪು ಬೆಟ್ಟದ ನೆಲ್ಲಿಕಾಯಿ (ಗಾದೆ). [< ಸಂ. ಘಟ್ಟ]

**ಗಟ್ಟಿ₂**, ಗಟ್ಟಿ (ನಾ). ೧. "ಗೋಣಿ ಪಟ್ಟಿಯಲ್ಲಿ ಕಟ್ಟಿ ಹಗ್ಗ, ತಗಡು ಮೊದಲಾದುವುಗಳಿಂದ ಬಿಗಿದಿರುವ ವ್ಯಾಪಾರದ ಸರಕಿನ ಮೂಟೆ, ಪಿಂಡಿ, ಗಟ್ಟಿ" (Bale. ೩೦೮೫). ೨. (ಮರದ) ತುಂಡು ; ಬೆಣೆ : ಗೋಡೆಗೆ ಮರದ ಗಟ್ಟವನ್ನು ಭದ್ರವಾಗಿ ಹೊಡೆ (ರೂಢಿ). **ಗಟ್ಟೆ** : (ಕ).

**ಗಟ್ಟಿಹಾಕು** = ಮೂಟೆ ಕಟ್ಟು : ಗೋಣಿಚೀಲಗಳನ್ನು ಗಟ್ಟ ಹಾಕಿದ್ದಾರೆ (ರೂಢಿ). [← ಹಿಂ. ಮರಾ. ಗಠ್ಠಾ./ ಸಂ. ಗ್ರಂಥ]

**ಗಟ್ಟಿಗುಂಡಾಟ** (ನಾ). ಒಂದು ಬಗೆಯ ಆಟ (?): ಹಳ್ಳಿಯವರು ಗಟ್ಟಗುಂಡಾಟ, ಕಾಡುಹರಟೆ, ಕೋರ್ಟುವ್ಯವಹಾರಗಳಲ್ಲಿ ವಿರಾಮಕಾಲವನ್ನೂ ಕಷ್ಟಾರ್ಜಿತಹಣವನ್ನೂ ವೃಥಾ ಕಳೆಯುತ್ತಿರುವರು (ತರಬೆ. ೭೦). [ಗಟ್ಟ₁ + ಗುಂಡಾಟ ?]

**ಗಟ್ಟಿಗೆ** (ನಾ). ಒಂದು ನದಿಯ ಹೆಸರು; ಘಟಪ್ರಭೆ: ಆಜಿಕೆಯ ಗಟ್ಟಗೆಯುಂ ಪೆರ್ದೊರೆಯುಂ ಪರಿದಲ್ಲಿ ತದ್ವಾಡಿಗೆ ತೆಂಕಲ್ . . . ಬೆಳುಗಲಿ ದೇಶಂ (ಅಜಿಪು. ೧೨–೪೪). [< ಘಟಪ್ರಭಾ]

**ಗಟ್ಟಿಣೆ** 'ಘಟ್ಟಣೆ' ನೋ.

**ಗಟ್ಟಿಣೆಮಣೆ** (ನಾ). (ನೆಲವನ್ನು) ಗಟ್ಟಿಮಾಡಲು ಉಪಯೋಗಿಸುವ ಮಣೆ ; ದಮ್ಮಸ್ಸು : (ಕ). [ಗಟ್ಟಣೆ (< ಘಟ್ಟಣೆ) + ಮಣೆ]

**ಗಟ್ಟಿವಾಡಿ** (ನಾ). ಒಂದು ಊರಿನ ಹೆಸರು : ಸತ್ಯವಾಕ್ಯ ಪೆರ್ಮಾನಡಿ ಗಟ್ಟವಾಡಿಯೊಳೆ ರಾಜ್ಯಂಗೆಯ್ವುತ್ತಿರೆ (ಮೈಆರಿ. ೧೯೩೨, ೫೪–೫; 9ನೆಯ ಶತ). [ಗಟ್ಟ₁ + ಪಾಡಿ₁]

**ಗಟ್ಟಿ**, ಘಟ್ಟಿ (ನಾ). ೧. (ದ್ರವರೂಪ) ಗಡುಸಾದುದು ; ಹೆಪ್ಪುಗಟ್ಟಿದುದು ; ಹೆತ್ತುಕೊಂಡಿರುವುದು ; ಗರಣೆಯಾದುದು : ಉದಿರಿದುವು ಧರಣಿಯಲಿ ಬಲುಮಾಂಸದ ಸುರಕ್ತದ ಗಟ್ಟಿಗಳು ಖಂಡದ ಸುಡಾಳದ ಜಿಗಿಯ ಹೇಸಿಕೆ ನಿಕರ ನೂಚಿಕೊಂದು (ಸಂಭಪ. ೧೫–೪೬) ; ಭೂಪ ಬೆಟ್ಟದ ಚಾಮುನ ವೀರರಸದ ಬಲುಗಟ್ಟಿಯನೇನ ಬಣ್ಣಿಸುವೆ (ಕಂನವಿ. ೩–೯೯). ೨. ಬಿರುಸಾದುದು ; ಕಲ್ಲಿನಂತಾದುದು : ನೆಲ್ಲವೆಲ್ಲ ಒಣಗಿ ಗಟ್ಟಿಯಾಗುವುದು (ಮುಂಬಯಿ. ೨–೯೯). ೩. ಸಾಮರ್ಥ್ಯ ; ಬಲ ; ಶಕ್ತಿ : ಲೆಕ್ಕದಲ್ಲಿ ಬಹಳ ಗಟ್ಟಿಯಾದ ಹುಡುಗ (ರೂಢಿ). 'ಗಟ್ಟಿಗ' ಪರಾ. ೪. ಲೋಹದ (ಭಾರವಾದ) ಸಣ್ಣ ತುಂಡು,—ಚೂರು : ಒರೆಯಂ ನೋಡದೆ ನೋಡಿ ಚಿನ್ನದುನೆ ಕಂಡಾ ಚಿನ್ನಮುಂ ವರ್ಣದಂತ ರಮಂ ತಪ್ಪದೆ ಪೇಳ್ವ ತೂಗದೆನಸುಂ ಕೈತೂಕದಿಂ ತೂಕದಂತರವುಂ ಗಟ್ಟಿಗೆ ಪೇಳ್ವ. . . ಚಿನ್ನವರದರ್ (ಶಾಂತೀಶ್ವ. ೧–೧೨೧); ಗಟ್ಟಿ ಚಿನ್ನದ ಬೆಳ್ಳಿಯ ಗುದಿಗೆಯ ಕೆಯ್ಯ ಜಟ್ಟಿಗಳ್ (ಮೋಹತ.೨೦–೫೮) ; ಒಂದು ಕಡೆಯಲ್ಲಿ ೭೦ ಟನ್ನು ತೂಕದ ಕಬ್ಬಿಣದ ಗಟ್ಟಿ (ಬಾಲಪ್ರ. I, ೫೩೩). ೫. ಸುಗಂಧ ದ್ರವ್ಯದ ಕರಣೆ, —ಬಿಲ್ಲೆ, —ಉಂಡೆ : ಕರ್ಣಪೂರಿತೋತ್ಪಲ ಮೊಲೆದಾಡೆ ಗಟ್ಟಿಗಳನಂದು ಮುಗುಳ್ಚಿದರಿಂದುವಕ್ತ್ರೆಯರ್ (ಗಿರಿಕ. ೨–೯೦). 'ವಿಭೂತಿಗಟ್ಟಿ' ಪರಾ. ೬.ಕಡ್ಡಿ ; ಕಾಂಡ : ಅಂಗಜನೆಂಬ ಧೀವರ ಮೋಹಿಗಳ ದಿಟ್ಟ ಮಾಂಗಳ ಸೆಳೆಯಲು ಪಿಡಿದಾ ಹೊಂಗಾಣದಾ ಗಟ್ಟಿಯೆನಲಾ ಲತೆಗಳು ದಾಂಗುಡಿಗಳಿಂದೊಪ್ಪಿದುವು (ಶ್ರೀಪಾಲ. ೪–೧೧೪). ೭. ದೃಢವಾದುದು ; ಭದ್ರವಾದುದು : "ದೃಢಂ=ಗಟ್ಟಿ" (ಕಾಶಕ್ಯ. ೨೭) ; ದೆವ್ವ ಅವರನ್ನು ಗಟ್ಟಿಯಾಗಿ ಹಿಡಿಯಿತು (ನಿರಾತೆ. ೧೫). ೮. ದೊಡ್ಡದನಿ ; ಏರಿಸಿದ ಧ್ವನಿ ; ಜೋರು : ರಾಯರು . . . ಇರಬಹುದಾದ ನ್ಯೂನತೆಗಳನ್ನು ಗಟ್ಟಿಯಾಗಿ ವರ್ಣಿಸುತ್ತಾರೆ (ರಾಯುಕ. ೯೮) ; ಬಹಳ ಗಟ್ಟಿಯಾಗಿ ಓದಬಾರದು (ಮುಂಬಯಿ. ೨–೧). ೯. ಚಿಲ್ಲರೆಮಾಡದ ಇಡೀ ನಾಣ್ಯ ; ಉಂಡೆನಾಣ್ಯ : ಪ್ರಮಾಣು ಗಟ್ಟಿಗ ೪೦ ಅಕ್ಷರದಲ್ಲೂ ಗಟ್ಟಿ ನಾಲ್ವತ್ತು ವರಹಂನು (ಮೈಆರಿ. ೧೯೪೯ ; ೫–೧೭ ; 1530). ೧೦. (ಕರಾ). ತುಳುನಾಡಿನಲ್ಲಿ ಒಂದು ಪಂಗಡದವರು : ಒಕ್ಕಲಿಗ, ಗಟ್ಟಿ ಕೊಟ್ಟಾರಿ (ತುಳುನಾ. ೧೬೫). ೧೧. ಮನೋಹರವಾದುದು ; ಸುಂದರವಾದುದು : "ಲೇಸು ಹಸ ಗಟ್ಟಿಯೆಡ್ಡವೆನಲೂ ಪೊಡವಿಯೊಳಿವುಂ ಮನೋಹರವಾಚಿ" (ಶಬ್ದಮಂ. ೫೬). ೧೨. ದೃಢ ; ಖಂಡಿತ. 'ಗಟ್ಟಿಮಾತು' ಪರಾ. ೧೩. ಜೊಳ್ಳಲ್ಲದುದು ; ಸತ್ತ್ವಯುತವಾದುದು : 'ಗಟ್ಟಿಕಾಳು' ಪರಾ. **ಘಟ್ಟಿ**: ೧. ಘಟ್ಟಾಗಿ ಸಕ್ಕರೆ ತುಪ್ಪ ರೊಟ್ಟಿ ಉಣಿಸೋ (ಪುರಂದ. ೨–೨೩–೨). ೪. ಪಟಿ ಲೋಹದ ಘಟ್ಟಿ (ಶಮದ. ಪರಿ. ೧). ೫. ತಲೆಯುದ್ದದ ಪೂವಿನ ಘಟ್ಟಿ [ಪಾಠಾಂ. ಪುಟ್ಟು] ಕಾಮದೇವನ ಕೃತಕಾದ್ರಿಯಂತೆ (ಅಜಿಪು. ೨–೧೩) ; ನೆರೆದ ಪುಳಕದ ಘಟ್ಟಿಯಂ ಕಂಡು (ಸಿದ್ಧರಾ. ೨–೭೦). ೬. ಕರ್ಪುರದ ಘಟ್ಟಿಯಿಂದಂ ನೇರ್ಪಡೆ ನಿರ್ಮಿಸಿದ ಚಾರು ಪುತ್ರಿಕೆಯೊ (ಬಾಧಪು. ೫–೯೧). ೭. ದಿಟ್ಟತನ ಪೊಳ್ಳಾಯ್ತು ಶೌರ್ಯದ ಘಟ್ಟಿ ಕರಗಿತು (ಕುವ್ಯಾಭೀ. ೮–೬೨).

**ಗಟ್ಟಿಯರು** = ಶೂರರು ; ಸಮರ್ಥರು : ದಿಟ್ಟಿಯರು ಕುಟಿಲೆಯರು ಕುಹಕದ ಗ[ಪಾಠಾಂ. ಘ]ಟ್ಟಿಯರು ಲಟ್ಟೆಯರು ಮಿಂಡಿರ ಬೆಟ್ಟಿಯರು (ಬಸವು. ೪೦–೫೬) ; ಕಟ್ಟದ ಜೋಣಿಯಂಬು ಕೈಯ ಸಿಂಗಾಡಿಯ ಗಟ್ಟಿಯರಿವರಾರೊ (ಕಂನವಿ. ೧೨–೬೫). **ಗಟ್ಟಿಗೆಹಚ್ಚು** = ಒತ್ತಾಯ ಪಡಿಸು ; ಬಲವಂತಮಾಡು : ಅವರು ತೀರ ಗಟ್ಟಿಗೆ ಹಚ್ಚಿದ್ದರಿಂದ ಆಗ ನಾನು ಮಾತುಕತೆಯಾದದ್ದನ್ನೆಲ್ಲ ಹೇಳಿದೆ (ಸ್ಮೃತಿಚಿ. ೨೯೬). **ಘಟ್ಟಿಯತನ** = ಗಟ್ಟಿತನ : ಇಷ್ಟವೆಂದೇನು ವ್ರತಗೆಟ್ಟವನೆಂದೇನು ಉಂಡು ಘಟ್ಟಿಯತನದಲ್ಲಿ ಹೋರುವ ಮಿಟ್ಟೆಯ ಭಂಡಂಗೆ ಮತ್ತೆ ಸದಾಚಾರಭಕ್ತಿಯುಂಟೆ (ಏಲೇಶ್ವ. ೧೧೮).

[ದೇ. ‖ ತಮಿ. ಗಟ್ಟಿ, ಗೆಟ್ಟಿ ; ಮಲ. ಗಟ್ಟಿ, ಗಣ್ಟಿ ; ತುಳು. ತೆಲು. ಗಟ್ಟಿ]

**ಗಟ್ಟಿಕಾಳು** (ನಾ). ೧. ಹಾಲು ತುಂಬಿದ ಕಾಳು; ಜೊಳ್ಳಲ್ಲದ ಕಾಳು. ೨. (ಆಲಂ) ಸತ್ವಯುತವಾದುದು : ಸದ್ಭಾವದ ಶ್ರದ್ಧೆಯು ಇಲ್ಲಿ ಗಟ್ಟಿಕಾಳಾಗಿದೆ (ನೆಲಮು. IX ಮುನ್ನುಡಿ).

[ಗಟ್ಟಿ + ಕಾಳು₂ (< ಕಾಟಿಲ್₂)]

**ಗಟ್ಟಿಕುಳ** (ನಾ). ಆರಬರಗಳಿಗೆ ಜಗ್ಗದವನು; ಹಣವಂತ; ಐಶ್ವರ್ಯವಂತ; ಧಡೂತಿಯ ಮನುಷ್ಯ; ಆಢ್ಯ: ಅವನೊಬ್ಬ ಗಟ್ಟಿಕುಳ (ರೂಢಿ). [ಗಟ್ಟಿ + ಕುಳ$_5$ (= ಕುಲ)]

**ಗಟ್ಟಿಕೆಲಸ** (ನಾ). ಭದ್ರವಾದ ಕೆಲಸ; ಬಲವಾದ ಕಾರ್ಯ; ಶಾಶ್ವತವಾದ ಕೆಲಸ; ಬೆಲೆಯುಳ್ಳ ಕೆಲಸ: ವಿದ್ವತ್ಕಾರ್ಯವು ಗಟ್ಟಿಕೆಲಸವಾಗಿರಬೇಕು (ರೂಢಿ). [ಗಟ್ಟಿ + ಕೆಲಸ]

**ಗಟ್ಟಿಕೊಳ್** 'ಗಟ್ಟಿಗೊಳ್' ನೋ.

**ಗಟ್ಟಿಕೊಳ್ಳು** 'ಗಟ್ಟಿಗೊಳ್' ನೋ.

**ಗಟ್ಟಿಗ, ಘಟ್ಟಿಗ** (ನಾ). **೧.** ಸಮರ್ಥ; ಶೂರ; ಸಾಹಸಿ: ಜರಾಸಂಧಾದಿ ನಾಯಕರು ಯುದ್ಧದಲ್ಲಿ ಗಟ್ಟಿಗರು (ರಾ ಜ ಸೂ. ೧೩); ನಿಮ್ಮ ತಂದೆ ಗಟ್ಟಿಗರು (ಹಂಗೀತೆ. ೧೯). **೨.** ಬಲ್ಲವನು; ನಿಷ್ಣಾತ: ಅವನು ವೇದಶಾಸ್ತ್ರ ಪುರಾಣಗಳಲ್ಲಿ ಬಹಳ ಗಟ್ಟಿಗನಾಗಿದ್ದನು (ಹುಟ್ಟಿಹ. ೫೧). **ಘಟ್ಟಿಗ: ೧.** ಮಾಡಿ ಮರುಗುವ ನೀಡಿ ನಿಜವಿಲ್ಲದಿಹ ಕೊಟ್ಟು ಹೊಟ್ಟೆ ರೋಗವಿಕ್ಕುವ ಘಟ್ಟಿಗನಿರವು ಬಟ್ಟೆಯ ಬಡಿದುಂಬ ಹೊಟ್ಟೆಯ ಹೊರಕರಂತೆ (ಮೋಳಿಮಾ. ೪೮-೧೯೬). [ಗಟ್ಟಿ + -ಗ$_3$]

**ಗಟ್ಟಿಗಡ್ಡೆ, ಗಟ್ಟಿಗೆಡ್ಡೆ** (ನಾ). ಗಟ್ಟಿಯಾದ ಗಡ್ಡೆ; ಗಡುಸಾದ ಗೆಡ್ಡೆ: ಗಟ್ಟಿಗಡ್ಡೆ (Corm) ಕಾಂಡವು ನೆಲದೊಳಗೆ ಚಂಡಿನ ಆಕೃತಿಯಲ್ಲಿ ದಪ್ಪನಾಗಿ ಬೆಳೆಯುತ್ತದೆ (ಸಸ್ಯಶಾ. ೨೮). **ಗಟ್ಟಿಗೆಡ್ಡೆ:** "ನೆಲದೊಳಗಿನ ಗೆಡ್ಡೆಯಂಥ ದಂಟು; ಗಟ್ಟಿಗೆಡ್ಡೆ" (Corm. ಇಂಕನಿ).

[ಗಟ್ಟಿ + ಗಡ್ಡೆ]

**ಗಟ್ಟಿಗಣ್ಣು** (ನಾ). ಒಂದು ಬಗೆಯ ಕಣ್ಣುರೋಗ: ಕಣ್ಣೊಳಗಿನ ಅಂತರ್ದ್ರವದ ಒತ್ತಡದ ಹೆಚ್ಚು ಅಥವಾ ಗಟ್ಟಿಗಣ್ಣು (Glaucoma) ಈ ರೋಗವನ್ನು ಸರಿಯಾದ ಸ್ಥಿತಿಯಲ್ಲಿ ಗೊತ್ತುಹಚ್ಚಿದರೆ ಪೂರ್ಣ ಹತೋಟಿಯಲ್ಲಿಡಬಹುದು (ನಿಮ್ಮದೃ. ೧೩೪).

[ಗಟ್ಟಿ + ಕಣ್ಣು (< ಕಣ್)]

**ಗಟ್ಟಿಗತನ, ಘಟ್ಟಿಗತನ** (ನಾ). ಗಟ್ಟಿಯಾಗಿರುವಿಕೆ; ಶೂರತನ; ಸಾಮರ್ಥ್ಯ; ಎದೆಗಾರಿಕೆ; ಧೈರ್ಯ: ನೀನು ಗಂಡಸಾಗಿದ್ದರೆ ನಿನ್ನ ಗಟ್ಟಿಗತನ ತೋರಿಸಬಲ್ಲೆಯೇನೋ (ಸ್ವಾಮಿಸ್ನೇ. ೨೧); ನನಗೇ ಅರಿತ ಸಂಗತಿಗಳನ್ನು ಅಂದೇ ವ್ಯಕ್ತಗೊಳಿಸುವಷ್ಟು ಗಟ್ಟಿಗತನವಿದ್ದಿದ್ದರೆ (ಆಬೋಲಿ. ೭೦). **ಘಟ್ಟಿಗತನ:** ಘಟಂಗತನದಿಂದ ಘಟ್ಟಿಗತನ ಕಳಕೊಂಡ (ಗಾದೆ). [ಗಟ್ಟಿಗ + -ತನ]

**ಗಟ್ಟಿಗಾತಿ** (ನಾ). = ಗಟ್ಟಿಗಿತ್ತಿ: "ಬಲವಾಗಿರುವ ಹೆಂಗಸು" (ಅನಂನಾ.) [ಗಟ್ಟಿಗಾರ + -ತಿ$_1$ (< -ಇತ್ತಿ)]

**ಗಟ್ಟಿಗಾರ** (ನಾ). = ಗಟ್ಟಿಗ ೧: ನೀನು ಗಟ್ಟಿಗಾರ (ರೂಢಿ).

[ಗಟ್ಟಿ + -ಗಾರ (< -ಕಾಱ)]

**ಗಟ್ಟಿಗಿತ್ತಿ** (ನಾ). ಸಮರ್ಥಳಾದವಳು; ಶಕ್ತೆ; ಶೂರೆ: ಸುಮಿತ್ರೆ ಎಷ್ಟು ಹಠಮಾರಿಯೋ, ಎಷ್ಟು ಗಟ್ಟಿಗಿತ್ತಿಯೋ ಅಷ್ಟೇ ಮೃದು ಸರೋಜೆ (ವಿದ್ಯಾರಿ. ೩೦); ಒಗತನದಲ್ಲಿ ಗಟ್ಟಿಗಿತ್ತಿಯಾಗಿದ್ದ ನಾಗಕ್ಕ (ಮಲೆಮ. ೭೪೫); ಶೈವಲಿನಿ ತುಂಬ ಗಟ್ಟಿಗಿತ್ತಿಯಾದ ಹೆಂಗಸು (ಬಂಕಿಮ. ೨೦೪).

[ಗಟ್ಟಿಗ + -ಇತ್ತಿ]

**ಗಟ್ಟಿಗೆ$_1$** (ನಾ). ಅಂಕುಶ: "ಒತ್ತುವಹಾರೆ ಗಟ್ಟಿಗೆ ಅಯೋಮುಖಂ ಶೂಲಿಕೆಯೆನಿಕ್ಕು" (ಮಂಗರಾ. ೪೭-೬). [< ಕಟ್ಟಿಗೆ]

**ಗಟ್ಟಿಗೆ$_2$** (ನಾ). = ಗಟ್ಟಿಗಿತ್ತಿ: ಚಂದ್ರಿಯಂಥ ಚೆಲುವೆ, ಗಟ್ಟಿಗೆ, ಒಳ್ಳೆಯ ಹೆಂಗಸು ಈ ನೂರು ಮೈಲಿಯಲ್ಲಿ ಇದ್ದಾಳಾ (ಸಂಸ್ಕಾರ. ೭೭).

[ಗಟ್ಟಿಗ + -ಎ$_2$]

**ಗಟ್ಟಿಗೆಡ್ಡೆ** 'ಗಟ್ಟಿಗಡ್ಡೆ' ನೋ,

**ಗಟ್ಟಿಗೊಳ್, ಗಟ್ಟಿಕೊಳ್, ಗಟ್ಟಿಕೊಳ್ಳು, ಘಟ್ಟಿಗೊಳ್:** (ಕ್ರಿ). ಘನೀಭವಿಸು; ಗಟ್ಟಿಯಾಗು; ಘನರೂಪವಾಗು: ಗಟ್ಟಿಗೊಂಡ ಬಲ್ಮೊಸರಂ ಕೊಂಡು ಪದುಳಿಸಿ (ಧರ್ಮಾಮೃ. ೧-೧೪೮); ಬಟ್ಟ ಬಯಲೆಲ್ಲ ಗಟ್ಟಿಗೊಂಡಡೆ ಸ್ವರ್ಗ ಮರ್ತ್ಯ ಪಾತಾಳಕ್ಕೆ ಠಾವಿನ್ನೆಲ್ಲಿಯದೊ (ಚನ್ನವ. ೧೭೩-೩೭೭); ಶೂನ್ಯವೆ ಗಟ್ಟಿಗೊಂಡು ಬಹಿರಂತರ ಖಂಡಿತ ಲಿಂಗವಾಗಿ (ಶತಕ. ೧೭೯-೫೭). **೨.** ಸ್ಥಿರವಾಗಿನಿಲ್ಲು; ಭದ್ರವಾಗಿರು: ಅಷ್ಟಾಂಗಯೋಗ ಗಟ್ಟಿಗೊಂಡು ಪ್ರಾಣಮನಪವನ ಹುರಿಗೂಡಿ (ಆದವ. ೧೧-೨೧); ನಿಷ್ಠೆ ಇದ್ದಡೆ ಶಿವನು ಗಟ್ಟಿಗೊಂಡೊಳಗಿಪ್ಪ ನಿಷ್ಠೆಯಿಲ್ಲದಲೆ ಭಜಿಸಿದಡೆ ಶಿವನವನ ಬಿಟ್ಟು ಬಯಲಪ್ಪ (ಸರ್ವಜ್ಞ. ೧೨೬). **ಗಟ್ಟಿಕೊಳ್: ೧.** ಹೆಪ್ಪಿಟ್ಟ ಹಾಲು ಗಟ್ಟಿಕೊ[ಪಾಠಾಂ. ಗೊ]ಂಡು ಸಿಹಿಯಾದುದುಂಟು (ಮಹಾದೇ. ಬ. ೧೧೦-೨೪೯). **ಗಟ್ಟಿಕೊಳ್ಳು: ೧.** ಜ್ಞಾನವೇ ಗಟ್ಟಿಕೊಂಡು ನುಡಿಯಾಗಿಲ್ಲ (ಮೋಳಿಮಾ. ೭ ಪ್ರಸ್ತಾವನೆ). **ಗಟ್ಟಿಗೊಳ್: ೧.** ಫಲ ಅಪ್ಪುವ ನುಂಗಿ ಅಪ್ಪು ಫಲವ ನುಂಗಿ ಒಪ್ಪಿ ಘಟ್ಟಿಗೊಂಡ ಭೇದವೆ ಭಕ್ತಿಜ್ಞಾನ (ಮೋಳಿಮಾ. ೧೨೪-೪೮೧); ಒಂದೆಡೆಯೊಳಿಂದ್ರನೀಲಮಣಿ ಚೂಳಿಕೆಯ ಮೇಚಕಮರೀಚಿಯೆ ಘಟ್ಟಿಗೊಂಡಂತೆ (ಜಗವಿ. ೧೬-೩೪ ವ). [ಗಟ್ಟಿ + ಕೊಳ್$_1$]

**ಗಟ್ಟಿತನ, ಘಟ್ಟಿತನ** (ನಾ). = ಗಟ್ಟಿಗತನ: ಈ ಖಾಹಿಲೆಗಳಿಗೆ ಎದೆಗಟ್ಟಿತನ ಬೇಕು (ಕಾವೇರಿ. ೨೦೫). **೨.** "ಬುದ್ಧಿವಂತಿಕೆ; ಚಾತುರ್ಯ" (ಅನಂನಾ). **ಘಟ್ಟಿತನ: ೧.** ಹಟ್ಟಹಟ್ಟ ತಿರುಗುವಳ ತನ್ನ ಘ[ಪಾಠಾಂ. ಗ]ಟ್ಟಿತನದಲ್ಲಿ ಮಾರುಮಲೆತವಳ (ಪುರಂದ. ೨-೧೪-೩). [ಗಟ್ಟಿ + -ತನ]

**ಗಟ್ಟಿದುಡ್ಡು** (ನಾ). **೧.** ಒಂದು ನಾಣ್ಯ; ನಾಲ್ಕು ಕಾಸಿನ ದುಡ್ಡು: ಶಾಹೀ ದುಡ್ಡು. ಇದು ನಾಲ್ಕು ರುವಿ ಬೆಲೆಯುಳ್ಳುದಾದುದರಿಂದ ಇದಕ್ಕೆ ಗಟ್ಟಿದುಡ್ಡು ಎಂತಲೂ ಅನ್ನುವರು . . . ರೂಪಾಯಿಗೆ ಗಟ್ಟಿದುಡ್ಡು ೪೮ ಅಥವಾ ಮೂರು 'ಟೆಂಕಿ' (ಕಭಾಗ. ೨೮೧). **೨.** ಗಟ್ಟಿನಾಣ್ಯ: ಮುದುಕನ ಹತ್ರ ನೂರು ಗಟ್ಟಿದುಡ್ಡುಗಳಿವೆ (ರೂಢಿ). [ಗಟ್ಟಿ + ದುಡ್ಡು]

**ಗಟ್ಟಿದುಪ್ಪ** (ನಾ). ಗಟ್ಟಿಯಾದ ತುಪ್ಪ; ಹೆತ್ತ ತುಪ್ಪ: ಗಟ್ಟಿದುಪ್ಪಕ್ಕೆ ತಿಳಿದುಪ್ಪಕ್ಕೆ ಭೇದ ಉಂಟೆ ಅಯ್ಯ? (ಮಹಾದೇ. ಬ. ೭೩-೧೮೧).

[ಗಟ್ಟಿ + ತುಪ್ಪ]

**ಗಟ್ಟಿದೇವ** (ನಾ). ಒಬ್ಬಾತನ ಹೆಸರು: ಶ್ರೀಮನುಮಹಾಮಂಡಳೇಸ್ವರಂ ವೀರನೊಳಂಬ ಗಟ್ಟಿದೇವ (ಸೌಇಇ. IX-i, ೧೧೪-೮; 1054).

[ಗಟ್ಟಿ + ದೇವ]

**ಗಟ್ಟಿಪಾಲ್, ಗಟ್ಟಿಹಾಲು, ಘಟ್ಟಿಪಾಲ್** (ನಾ). ಗಟ್ಟಿಯಾದ ಹಾಲು; ಮಂದವಾದ ಹಾಲು; ನೀರು ಬೆರಸದ ಹಾಲು: ತೀವಿದ ಗ[ಪಾಠಾಂ. ಘ]ಟ್ಟಿಪಾಲೊದವು ಗೋಧನದೊಳ್ ನೆಗಟ್ಟುಂ (ಜಗವಿ. ೪-೭೭). **ಗಟ್ಟಿಹಾಲು:** ಡೈರಿಯಲ್ಲಿ ಗಟ್ಟಿಹಾಲು ಸಿಕ್ಕುತ್ತದೆ (ರೂಢಿ). **ಘಟ್ಟಿಪಾಲ್:** ಮೇಲಿನ ಜಗವಿ ಪ್ರಯೋಗದ ಪಾಠಾಂತರವನ್ನು ನೋಡಿ. [ಗಟ್ಟಿ + ಪಾಲ್$_1$]

**ಗಟ್ಟಿಬಣ್ಣ** (ನಾ). ಶಾಶ್ವತವಾದ ಬಣ್ಣ; ದೃಢವಾದ ಬಣ್ಣ; ಮಾಸದ ಬಣ್ಣ: ಗಟ್ಟಿಬಣ್ಣದ ಸೀರೆ (ರೂಢಿ). [ಗಟ್ಟಿ + ಬಣ್ಣ]

**ಗಟ್ಟಿಮುಗುಳ್ಚು** 'ಗಟ್ಟಿಮುಗುಚ್ಚು' ನೋ.

**ಗಟ್ಟಿಮುಗುಚ್ಚು,** ಗಟ್ಟಿಮುಗುಳ್ಚು, ಘಟ್ಟಿಮುಗುಳ್ಚು, ಘಟ್ಟಿಮುಗುಚ್ಚು (ಕ್ರಿ). ಗಂಧವನ್ನು ತೇಯು, —ಅರೆ: ಪಳಚ್ಚನಪ್ಪ ಶಶಿಕಾಂತದ ಸಣ್ಣಿಗೆ ನೋಡಲೀಯದವ್ವಳಿಸೆ ಕುಚದ್ವಯಂ ಪದನಿನುಣ್ಮುವ ಸುಯ್ಯೆಲರ್ಗಂಪುಗಳ್ ದಳಂಗಳನಧಿವಾಸಿಸುತ್ತುಮಿರೆ ಗ[ಪಾಠಾಂ. ಘ]ಟ್ಟಿಮುಗುಚ್ಚುವುದಂಗನಾಜನಂ (ಚಂದ್ರಪ್ರ. ೧-೧೩೦).

ಗಟ್ಟಿಮಗುಳ್ಚುವ ಗಟ್ಟಿವಳ್ತಿಯರ(ರಾಮಾಶ್ವ.೨-೨೦). **ಗಟ್ಟಿಮಗುಳ್ಚು :** ನೂಂಕಿದರ್ ದೆಸೆದೆಸೆಗೆಲ್ಲ ಕಂಪೆಸಗೆ ಗಟ್ಟಿಮಗುಳ್ಚುತೆ ಗಟ್ಟಿವಳ್ತಿಯರ್ (ಗಿರಿಕ. ೨-೮೯); ಗಟ್ಟಿಮಗುಳ್ಚುವ ದೀಪವರ್ತಿಯಂ ಸಾಗಿಪ ತಾಪಸೇಂದ್ರರ ಕುಮಾರಿಯರೊಪ್ಪುಗುಮಲ್ಲಿ ಸಂತತಂ (ಶಬಶಂ. ೨-೬೪); **ಘಟ್ಟಿಮಗುಳ್ಚು :** ಮಱುದುಂಬಿಗಳು ಎಸೆದುವು ಘಟ್ಟಿಮಗುಳ್ಚುವ ಬಲೆಯರ ಮಿಸುವ ಮುಖಾಂಬುಜದೊಳ್ (ಜಯಕಾ. ೧-೬೦); ಹಿಮಕಾಶ್ಮೀರಮಲಯಕಂಗಳಿಂ ಘ[ಪಾಠಾಂ. ಗ]ಟ್ಟಿಮಗುಳ್ಚಿದ ಘಟ್ಟಿಯಂ ಶುಕ್ತಿಯೊಳಿರಿಸಿ (ವೃಷವಿ. ೯-೨೧ ವ). **ಘಟ್ಟಿಮಗುಚ್ಚು :** ಘಟ್ಟಿಮಗುಚ್ಚುವ ಘಟ್ಟಿವಳ್ತಿಯರ್ (ಜಗವಿ. ೯-೧೧೨).

[ಗಟ್ಟಿ + ಮಗುಚ್ಚು]

**ಗಟ್ಟಿಮಜ್ಜಿಗೆ,** ಘಟ್ಟಿಮಜ್ಜಿಗೆ (ನಾ). ಗಟ್ಟಿಯಾದ ಅಥವಾ ಮಂದವಾದ ಮಜ್ಜಿಗೆ: ಸಲೆ ಕಟ್ಟುಮೊಸರುಗಳ ಗಟ್ಟಿಮಜ್ಜಿಗೆಗಳ ಲಲನೆಯರುಣಬಡಿಸಿದರು (ಕಂಸವಿ. ೮-೯೧). **ಘಟ್ಟಿಮಜ್ಜಿಗೆ:** ಘಟ್ಟಿಮಜ್ಜಿಗೆಗೆ ಹಸನಾದ ಸಂಭಾರಗಳನಿಟ್ಟು (ಸೂಪಶಾ. ೪-೩೬). 'ತಿಳಿಮಜ್ಜಿಗೆ' ಪರಾ.

[ಗಟ್ಟಿ + ಮಜ್ಜಿಗೆ]

**ಗಟ್ಟಿಮನಸ್ಸು** (ನಾ). ದೃಢವಾದ ಮನಸ್ಸು; ಸ್ಥಿರಮನಸ್ಸು: ಬಲದೇವನ ಗಟ್ಟಿಮನಸ್ಸನ್ನು ನೋಡಿ ಆಶ್ಚರ್ಯವಾಯಿತು (ಕಲಾಸಾ. ೪೪).

[ಗಟ್ಟಿ + ಮನಸ್ಸು]

**ಗಟ್ಟಿಮಾನಸ** (ನಾ). = ಗಟ್ಟಿಮನಸ್ಸು: ಗಟ್ಟಿಮಾನಸದಿಂದೆ ರಾಜನೆ ಪಟ್ಟದರಸಿಯ ಶೋಕವನು ಬಿಡು (ರಘುವಂ. ೮-೮೩).

[ಗಟ್ಟಿ + ಮಾನಸ]

**ಗಟ್ಟಿಮುಟ್ಟು,** ಘಟ್ಟಿಮುಟ್ಟು (ನಾ). ೧. ಬಲವಾದುದು; ಶಕ್ತಿಯುತವಾದುದು: ತಕ್ಕಮಟ್ಟಿಗೆ ಗಟ್ಟಿಮುಟ್ಟಾಗಿದ್ದಾನೆ (ಮುನಿಮಾ.೪). ೨. ನಿಶ್ಚಯವಾದುದು; ದೃಢವಾದುದು: ಮಾತು ಗಟ್ಟಿಮುಟ್ಟೆ? (ಹೊಸಂಸಾ. ೨೬). (ಗು). ೩. ಸದೃಢವಾದ; ದಷ್ಟಪುಷ್ಟವಾದ. **ಘಟ್ಟಿಮುಟ್ಟು :** ೧. ಘಟ್ಟಿಮುಟ್ಟಾದ ಕುದುರೆಗಳು (ಸೌಗಂಧಿ. ೧೨೮-೨೧).

**ಗಟ್ಟಿಮುಟ್ಟಾಗು** = ಸದೃಢವಾಗು; ಬಲವಾಗು: ಅವನ ಗಟ್ಟಿಮುಟ್ಟಾದ ದೇಹ (ಮಣಿಸ. ೮೬); ಗಟ್ಟಿಮುಟ್ಟಾದ ಕರ್ರಗಿನ ಆಕೃತಿ (ದೀಪದ. ೬೧). [ಗಟ್ಟಿ + ಮುಟ್ಟು$_4$]

**ಗಟ್ಟಿಮುರವು** (ನಾ). ಟೊಳ್ಳಿಲ್ಲದೆ ಗಟ್ಟಿಯಾಗಿ ಮಾಡಿಸಿದ ಆಭರಣ.

[ಗಟ್ಟಿ + ಮುರವು (< ಮುರ)]

**ಗಟ್ಟಿಮೊಸರು,** ಘಟ್ಟಿಮೊಸರ್ (ನಾ). ಗಡ್ಡೆಯಾದ ಮೊಸರು. 'ಕೆನೆಮೊಸರು' ಪರಾ. **ಘಟ್ಟಿಮೊಸರ್ :** ಕಟ್ಟುಮೊಸರ್ ಸುರಿವ ಮೊಸರ್ ಘಟ್ಟಿಮೊಸರ್ ಕೆನೆಮೊಸರ್ . . . ಪುಳಿಮೊಸರೆಂದಿಟ್ಟರ್ ಬಟ್ಟಲ್ಗಳೊಳಿಂ ಸರೋಜಾನನೆಯರ್ (ನಳಚಂ. ೪೬೧).

[ಗಟ್ಟಿ + ಮೊಸರು (< ಮೊಸರ್)]

**ಗಟ್ಟಿಯಾಳು** (ನಾ). = ಗಟ್ಟಿಗ ೧: (೩).

[ಗಟ್ಟಿ + ಆಳ್ಕು$_3$ (< ಆಳ್$_3$)]

**ಗಟ್ಟಿರೂಪಾಯಿ** (ನಾ). ಮುರಿಸದೆ ಇರುವ ರೂಪಾಯಿ; ಚಿಲ್ಲರೆ ಮಾಡಿಸದ ನಾಣ್ಯ: ಬೆಳ್ಳಿಯ ಎರಡು ಗಟ್ಟಿರೂಪಾಯಿಗಳು ನನ್ನ ಕೈತುಂಬ ಇದ್ದುವು (ಬಂಕಿಮ. ೧೩ ಮುನ್ನುಡಿ). [ಗಟ್ಟಿ + ರೂಪಾಯಿ]

**ಗಟ್ಟಿವಜ್ರ** (ನಾ). ದೃಢವಾದ ವಜ್ರಾಯುಧ: ತವರಾಜಾ ಕಟ್ಟದಿರೊಳಾಗಳುಮಿರಲದಂ ಬಿಟ್ಟು ತಾಡಂ ಮುಕ್ಕುವನವೊಲು ಗ[ಪಾಠಾಂ: ಘ]ಟ್ಟಿವಜ್ರವಿರಲ್ಕೆ ಸುರಗಿಯನರ್ಥಿಸಿದನವೊಲು (ಬಸಪು. ೬೦-೪೫). [ಗಟ್ಟಿ + ವಜ್ರ]

**ಗಟ್ಟಿವಳ,** ಘಟ್ಟಿವಳ, ಘಟ್ಟಿವಳ್ಳ, ಘಟ್ಟಿವಾಳ$_1$ (ನಾ). ಗಂಧವನ್ನು ತಯಾರಿಸುವವನು. 'ಗಟ್ಟಿವಳ್ತಿ' ಪರಾ. **ಘಟ್ಟಿವಳ :** ಕಂಪಂ ಬೀರ್ವ ಘಟ್ಟಿವಳರ ಕದಂಬದಿನಾ ರಾಜವೀಥಿ ಕಣ್ಗೆಸೆದಿರ್ಕುಂ (ಉದ್ಭಟ. ೧-೫೦); ವಿಸ್ತರದಿಂ ಸೊಗಯಿಪುವು ಘಟ್ಟಿವಳರಂಗಡಿಗಳ್ (ಪುಷ್ಪಪು. ೨-೮೩). **ಘಟ್ಟಿವಳ್ಳ :** ಗಂಧಮಂ ಸುರಭಿ ಚಂಪನಗಂಧಮಂ . . . ನಿರಂತರಂ ಪುಗುವುದು ಘಟ್ಟಿವಳ್ಳನೆನೆ ಗಂಧವಹಂ ಬಹುಗಂಧಬಂಧುರಂ (ಪಾರ್ಶ್ವಪು. ೬-೯೧). **ಘಟ್ಟಿವಾಳ$_1$:** ಘಟ್ಟಿವಾಳರ ಮಾಲೆಗಾಜಿರ . . . ನಿಟ್ಟಸುತ್ತೆಯ್ವುತಿರ್ದು (ಭರಜ. ೪೭-೧೭); ಘಟ್ಟಿವಾಳರ ನವ್ಯಪರಿಮಳದಿಡುಗುಡ್ಡೆಯಿಟ್ಟ ಗಂಪಿನ ಗಂದಿಗರ . . . ಕಂಡನಾ ನೃಪತಿ (ನಾಗಕು. ೩೧-೬೫). [ಗಟ್ಟಿ + -ವಳ]

**ಗಟ್ಟಿವಳಿತಿ** 'ಗಟ್ಟಿವಳ್ತಿ' ನೋ.

**ಗಟ್ಟಿವಳ್ತಿ,** ಗಟ್ಟಿವಳಿತಿ, ಘಟ್ಟಿವಳಿತಿ, ಘಟ್ಟಿವಳ್ತಿ, ಘಟ್ಟಿವಾಳ್ತಿ (ನಾ). ಗಂಧವನ್ನು ಅರೆಯುವವಳು: ಪೊಸಜವ್ವನೆ ನಡೆತಂದಳ್ ಕುಸುಮಾಸ್ತ್ರನ ಗಟ್ಟಿವಳ್ತಿಯೊರ್ಬಳ್ ಭರದಿಂ (ಗಿರಿಕ. ೭-೮); ಕ್ಷಣದೊಳು ಕ್ರಯಕೀವ ಗಟ್ಟಿವಳ್ತಿಯರ ಸಂದಣಿ ಮೆಱೆದುದು ಬೀದಿಯೊಳಗೆ (ಕಂಸವಿ. ೬-೮೪); ಭಾವಿಸಿ ಗಟ್ಟಿವಳ್ತಿಯರೊಡರ್ಚುವ ಸಾದಿನ ತಣ್ಪು (ಚಿಕವಿ. ೬-೩೩); ಗಟ್ಟಿಮಗುಚ್ಚುವ ಗಟ್ಟಿವಳ್ತಿಯರ ಪಟ್ಟುಡೆಯೊಳ್ ಕಡುವಡೆದು (ರಾಮಾಶ್ವ. ೨-೨೦). **ಗಟ್ಟಿವಳಿತಿ :** ಒಂದೆಡೆಯೊಳಗೊರ್ವ ಗಟ್ಟಿವಳಿತಿ ಸಿರಿಗಂಧವ ವಿಟನುರದೆಡೆಗೆ ಪೊಂದಿಸಿ (ಕಂಸವಿ. ೨-೮೫). **ಘಟ್ಟಿವಳಿತಿ :** ಬಾಣಸಿಗಿತಿ, ಮಡಿವಳಿತಿ, ಘಟ್ಟಿವಳಿತಿ (ಭಾಷಾಭೂ. ೧೮೪ ಉದಾ). **ಘಟ್ಟಿವಳ್ತಿ :** "ಪರಿವೇಶ್ಮಸ್ಥಿತೆ ಘಟ್ಟಿವಳ್ತಿ ಪೆಸರಿಂ ಸೈರಂಧ್ರಿ" (ವಸ್ತುಕೋ. ೫೩-೯); "ಸೈರಂಧ್ರೀ, ಗಂಧಕಾರಿಕಾ- ಈ ೨ ಘಟ್ಟಿವಳ್ತಿ" (ಹಲಾಯು. ೮೧-೩೩೪); ವಿವಿಧ ಗಂಧಂಗಳನಾನವಯವದೊಳ್ ಮಾಡುವ ಘಟ್ಟಿವಳ್ತಿಯಿಂ ದೇವಿ ಗಂಡವಳ್ತಿಯೆನಲ್ಲೆಂ (ಪಂಪಭಾ. ೮-೫೬); ಬಳಮರ್ದನಂಗಜಂಗರೆವವೊಲೀಳೆಸಾಂದರೆವರಿಂ ಬಳವಟ್ಟರೆ ಘಟ್ಟಿವಳ್ತಿಯರ್ (ಮಲ್ಲಿಪು. ೨-೬೦); ಪರಿಮಳದ ಪಸರವಮಾ ಘಟ್ಟಿವಳ್ತಿಯರ ಚೆಲ್ವಿಂ ಮೆಱೆದುದು (ಚಿಬಪು. ೧೧-೫). **ಘಟ್ಟಿವಾಳ್ತಿ :** ಮುಂಗಡೆಯರ ಘಟ್ಟಿವಾಳ್ತಿಯರ ಘನತರದ ಸಾಲಂಗಡಿಗಳಂ ನೋಡುತಧಿಪಂ ಬರೆ (ರುಕ್ಮಾಂಗ. ೧೫-೧೫).

[ಗಟ್ಟಿವಳ + -ಇತ್ತಿ$_1$ (< -ಇತ್ತಿ)]

**ಗಟ್ಟಿವಾಳ,** ಘಟ್ಟಿವಾಳ$_2$ (ನಾ). ೧. = ಗಟ್ಟಿಗ ೧: ಹೊದೆಯೇಱಿಸಿದ ಬಿಲ್ಗೋಲಿನ ಗಟ್ಟಿವಾಳರು ತಿರುಗಿದರು (ಮೋಹತ. ೧೮-೧೦೪). ೨. = ಗಟ್ಟಿಗ ೨: ಮೇಳನಟ್ಟುವ ನಾನಾ ವಿದ್ಯೆಗಳ ಗಟ್ಟಿವಾಳರ ಮನೆಗಳೊಪ್ಪಿದುವು (ಕರ್ಣಾಜ. ೯೫). **ಘಟ್ಟಿವಾಳ$_2$:** ೧. ಮನಮುಟ್ಟಿ ಕಾದಲು ಮಗನೆ[ಪಾಠಾಂ. ಗೆ] ಸರಿಯುಹ ಘಟ್ಟಿವಾಳರದಾರು (ತೊರರಾ. ೬-೩೬-೪೪). ೩. ಗಟ್ಟಿಮನಸ್ಸಿನವನು; ಸ್ಥಿರತೆಯುಳ್ಳವನು; ದೃಢಮನಸ್ಸನ್ನುಳ್ಳವನು: ಲೆಕ್ಕವಿಲ್ಲದ ಆಶೆ ಮನದೊಳಗೆ ತಿರುಗಾಡುತಿಹ ಚಿಕ್ಕಮಕ್ಕಳಿಗೆಲ್ಲಿಯದೋ ನಿರ್ವಾಣ ಘಟ್ಟಿವಾಳಂಗಲ್ಲದೆ (ಮೋಳಮಾ. ೩೨-೧೩೩); ಗೋಹೇಶ್ವರ ನಿಮ್ಮ ಶರಣ ಘಟ್ಟಿವಾಳ ಅಲ್ಲಮನಂತಿಂತೆಂಬವರ ಗಂಡ (ಅವಚಂ. ೨೪೨-೧೧೯೯). ೪. "ಸ್ಥೈರ್ಯ; ದೃಢ; ಸಾರ; ಕೆಚ್ಚು" (ಪ್ರಭಣ್ಣ.). [ಗಟ್ಟಿ + ವಾಳ$_3$]

**ಗಟ್ಟಿವಾಳಿ,** ಗಟಿವಾಣಿ (ನಾ). (ಉಕ) = ಗಟ್ಟಿಗಿತ್ತಿ: " ದಿಟ್ಟೆ; ಧೈರ್ಯಸ್ಥೆ " (ಜಾನಕೋ. ೪೪); ಇಂಥ ಗಟ್ಟಿವಾಳಿ ಬೇಡಪ್ಪ ನನಗೆ (ಎಲೆಕ. ೩). **ಗಟಿವಾಣಿ :** ಅವ್ವಾ ಮಾಡ್ಯಾಳ ಆಟಗಾಳೆಂತಾ ಗಟಿವಾಣಿವ್ವ ಬೀಗುತಿ ಗಟಿವಾಣೆವ್ವ ಬೀಗುತಿ ಕೋಟಿರ ತನಕ ಕೀರುತಿ (ಲೋಕಗೀ. ೫೧-೩). [ಗಟ್ಟಿವಾಳ + -ಇ$_3$]

**ಗಟ್ಟಿವಾಳಿಕೆ** (ನಾ). "ಶೌರ್ಯ" (ಪ್ರಭಣ್ಣ): ರಕ್ಕಸನ ಗಟ್ಟಿ[ಟ್ಟಿ] ವಾಳಿಕೆಯು ವಂಚಿಸಿ ನೊಸಲೊಡೆವಂತೆ ಹೆಟ್ಟಿದ ವಜ್ರಮುಷ್ಟಿಯಲಿ (ಮೋಹತ. ೧೨-೮೮). [ಗಟ್ಟಿವಾಳ + -ಇಕೆ]

**ಗಟ್ಟಿಸು$_1$** (ಕ್ರಿ). ೧. ಗಟ್ಟಿಯಾಗಿ ಹೇಳು: ಕೈದೋಟದ ಬಾಗಿಲು ದಾಟುತ್ತಿದ್ದರು. ಇನ್ನೇನು ಹೋದರೆಂದು ಗಟ್ಟಿಸಿ ಬಿದ್ದುಬಿದ್ದು ನಕ್ಕರು (ಚೆಂದುಟ. ೪೪). ೨. "ಗಟ್ಟಿಮಾಡು; ದೃಢಪಡಿಸು; ಬಿಗಿಯಾಗಿ ಕಟ್ಟು" (ಪ್ರಭಣ್ಣ); ನೀನಿಂತಿರೆ ಗಡಾವಣೆಯಂ ಕೋರವಿಸಿ ಗಟ್ಟಿಸಲೇ (ರಾಮಾಶ್ವ. ೯೨-೧೩); ಕಡೆಗೆ ಸಾಲದವನ ಮನೆ ಆಳಾಗಬೇಕಾದೀತು. ಗಟ್ಟಿಸಿ ಹೇಳಿಬಿಡಣ್ಣಾ ರಟ್ಟಿಹಳ್ಳಿಗೆ ಹೋಗಲೋ ಹೇಗೆ? (ಸುವಸಂ. ೬೩). [ಗಟ್ಟಿ + -ಇಸು$_3$]

**ಗಟ್ಟಿಸು$_2$** 'ಘಟ್ಟಿಸು$_2$' ನೋ.

**ಗಟ್ಟಿಹಾಲು** 'ಗಟ್ಟಿಪಾಲ್' ನೋ.

**ಗಟ್ಟು** 'ಗಟ್ಟಿ$_1$' ನೋ.

**ಗಟ್ಟುಣಿ** (ನಾ). "ಇಂದ್ರಾಯುಧ" (ಅನಂನಾ.); "ವಜ್ರಾಯುಧ" (ಗಂಗಾಮ. ೧೧೦). [?]

**ಗಟ್ಟುವತನ** (ನಾ). = ಗಟ್ಟಿಗತನ: ಗಟ್ಟುವತನದಿ ಮಂತ್ರಿಸಿ ಮಹಾಜ್ವಾಲೆಯ ಕಟ್ಟುವಳ್ ಕಡುನೀತಿಯಿಂದೆ (ಮೋಹತ. ೨೯-೩೦). [ℙ. ಇದು 'ಗಟ್ಟಿಗತನ'ದ ಅಪಲಿಖಿತವಿರಬಹುದು.]

**ಗಟ್ಟೆ** 'ಗಟ್ಟಿ$_2$' ನೋ.

**ಗಠಡಿ** (ನಾ). ಗಂಟು; ಕಟ್ಟು: ಒಂದಕ್ಕಿಂತ ಬೇಕಾದಷ್ಟು ಹೆಚ್ಚು ಗಠಡಿಗಳನ್ನು ತಕ್ಕೊಂಡದ್ದಾದರೆ ಅದರ ಧಾರಣೆಯು ಒಂದೇ ಸಮ ಇರುವದು (ಮುಂಬವ್ಯಾ. ೭೩). 'ಗದಡಿ' ಪಠಾ. [← ಮರಾ. ಗಠಡೀ; ಹಿಂ. ಗಠ್ಠೀ]

**ಗಠಾರ** 'ಗಟಾರು' ನೋ.

**ಗಠಾರು** 'ಗಟಾರು' ನೋ.

**ಗಡ$_1$** (ನಾ). ನಡುಗುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ.

**ಗಡಗಡ$_1$** (ದ್ವಿರುಕ್ತಿ): ಉದಯ ಕಾಲದಲೆದ್ದು ಗಡಗಡ [ಪಾಠಾಂ. ಗದಗದ] ನಡುಗುತ್ತ (ಪುರಂದ. ೨-೨೬-೨); ತಗ್ಗುಬ್ಬುರಸ್ತೆಯಲ್ಲಿ ಉರುಳುತ್ತಿದ್ದ ಗಾಲಿಗಳ ಗಡಗಡ ಶಬ್ದ (ಪುನರು. ೩೧೦); **ಗಡಗಡ ಎನ್ನು** = ಗಡಗಡ ಎಂದು ಶಬ್ದಮಾಡು: ಪೃಥ್ವಿಗೆ ಸರ್ವಾಧಾರಮಯವಾದ ಧರಣೀತತ್ವಕ್ಕೆ ಗಡಗಡವೆಂಬ ಶಬ್ದವು (ವಚಶಾ. II, ೨೯).

**ಗಡ$_2$, ಗಟ** (ನಾ). ೧. ಮಣ್ಣಿನ ಅಥವಾ ಲೋಹದ ಕೊಡ, —ಬಿಂದಿಗೆ: "ಘಟಃ - ಗಡ" (ಶಮುದ. ೨೫೫ ಪ್ರಯೋ); "ಗಡ (ಗಡಿ, ಗಡೆ), -ಘಟ = ಕೊಡ" (ತದ್ಭಕೋ. ೯). **ಗಟ**: ೧. "ಘಟಃ -ಗಟಂ" (ಕಾಶಕ್ಯ. ೧೯). ೨. "ಶರೀರ" (ಅಸಂನಾ.); (ರುದ್ರನಿ.); "ಗಟ - ಕೊಡ, ಶರೀರ" (ಕಲ್ಪದ್ರು.). [< ಸಂ. ಘಟ]

**ಗಡ$_3$** (ನಾ). ಸಣ್ಣ ಕೋಟೆ, —ದುರ್ಗ: ಗೋವೆಯ ಗಡಮಂ ಸಮಿಾಕದೊಳ್ ಸಾಧಿಸಿದಂ (ಕೆಳನೃ. ೩-೯). [← ಮರಾ. ಗಡ; ಪ್ರಾ. ಗಢ]

**ಗಡ$_4$**, ಗಡಂ, ಗಡಾ$_1$, ಗರ$_1$, ಗಳ$_1$, ಗಳಂ, ಗಳಾ (ಅ). ಸಂತೋಷ, ಮೆಚ್ಚಿಗೆ, ಆಶ್ಚರ್ಯ, ಆಕ್ಷೇಪ, ಹಾಸ್ಯ, ಅವಧಾರಣ, ದುಃಖ ಮುಂತಾದುವುಗಳನ್ನು ಸೂಚಿಸುವ ಮಾತು: "ಗಡ ಗಳ ಗಡಂ ಗಳವುಪಚಿತ ವಾರ್ತೆಯೊಳಮುಚಿತ ಸಂಭಾಷಣೆಯೊಳ್" (ಶಮುದ. ೩೧೬); ಸಾಮಾನ್ಯಾವ್ಯಯಗಳು . . . ಗಡಂ, ಗಡ, ಗಡಾ, ಗಳ (ಕೈಪಿಡಿ. ೫೨). (i) ಸಂತೋಷಕ್ಕೆ: ಮಗನು ದಳಪತಿಯಾದ ಗಡ ಕಾಳಗವ ನೋಡುವೆನೆಂಬವೊಲು (ಕುವ್ಯಾಕ. ೨-೧). (ii) ಮೆಚ್ಚಿಗೆಗೆ: ಅವಲರುಂ ಪಣ್ಣುಂ ಬೀತೋಪವು ಗಡ (ಪಂಪಭಾ. ೧-೫೫); ಅರಸುಮಗಂಗಡ ಕಲಿಗಡ ಪಿರಿದೀವಂಗಡ (ಸಮುಪ. ೧-೪೭); ಎನಗೆಂದಾ ವಿಕ್ರಮಾಂಕಂ ಗಡ ನಿಗಳಮನಿಕ್ಕಿಟ್ಟನೋ ಪೋಪೊ (ಎಕ. VII, ಶಿವಮೊ. ೬೪-೨; 1112). (iii) ಆಶ್ಚರ್ಯಕ್ಕೆ: ತೊಡಕಿದನು ಗಡ ಗರುಡ ಹಾವಿನ ತಡಿಕೆವಲೆಯಲಿ (ಕುವ್ಯಾಕ. ೧೬-೩೦). (iv) ಆಕ್ಷೇಪಕ್ಕೆ: ನುಡಿವೊಡೆ ನಾಚಿಕೆಗಡ (ಕಾದಂಪೂ. ೪೦೫); ತಾಂ ಗಡ ನಮಗೀಗಳ್ ಮಾವಂ ಗಡ ನಾಮುಂ ಗಡೀಗಳಳಿಯಂದಿರೆವಿನ್ನುಂ ಗಡ ನಮಗಂ ತಮಗಂ ಸಂಗತ ಸಂಬಂಧ ಬಂಧುರಂ ಬಂಧುತನಂ (ಸುಕುಮಾ. ೨-೬೪). (v) ಹಾಸ್ಯಕ್ಕೆ: ಪಡೆವಳ್ಳಂ ಗಡಮಾಬಲಕ್ಕೆ ದಲೆ ಧೃಷ್ಟದ್ಯುಮ್ನನೆಂಬೊಳ್ಳೆ (ಪಂಪಭಾ. ೧೦-೩); ಹೆಂಡತಿಗಡ ಮಾಹೇಶ್ವರಿ ಗಂಡಂ ಗಡ ಜೈನ (ಸಮುಪ. ೪-೧೨೬); ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ಧರ್ಮಾಮೃ. ೨-೯೨). (vi) ಅವಧಾರಣಕ್ಕೆ: ಒಡಲೊಳೆ ಜೀವಮಿರ್ದುಗಡ ಸಂಚಿಸುತಿರ್ಪುದು ಪುಣ್ಯ ಪಾಪಮಂ ಗಡ ಬೞಿಕತ್ತ ಬೇಱೆ ಪೆಱತೊಂದೊಡಲೊಳ್ಗಡ ತಾನೆ ನಿಂದೊಡಂಬಡಿಪುದು ಧರ್ಮಕರ್ಮಫಲಮಂ ಗಡ ಸತ್ತನೆ ಮತ್ತೆ ಪುಟ್ಟುವಂ ಗಡ ಪುಸಿಕಾಣ ಡಂಬಮಿದು ಖೇಚರ ನೀನಿದನೆಂತು ನಂಬಿದೋ (ಆದಿಪು. ೨-೮). (vii) ನಿಶ್ಚಿತಕ್ಕೆ: ಏಂ ಗಡ ಜಿನಶಾಸನಮಾದ್ಯಂ ಗಡ (ಸಮುಪ. ೨-೯೨); ಮಕ್ಕಳಿಲ್ಲದ ನಾರಿಯರು ನರಕಕ್ಕೆ ಸಲುವರು ಗಡ (ತೊರರಾ. ೧-೪-೩). **ಗಡಂ**: ಮಿಂದಱಿಯದವರ ಕಾಲ್ಗೆಱಗುವೆಂ ಗಡಮೆಂದು (ವಡ್ಡಾರಾ. ೭-೧೯); ಎನಿತು ಗಡಂ ಪಯೋನಿಧಿ ಪರೀತ ಮಹೀತಳಮೆಂಬುದಾಂಪ ಬೀರ[ನ] ಪೆಸರಾವುದು (ಪಂಪಭಾ. ೬-೨೫); ಉಂಬುದು ಕಳವೆಯ ಕೂಟ್ಗಡ ತಂಬುಲಮಿಪೊರ್ತ್ತಿನುಣಿಸು ಮಿಾಹಂ ಕೇಳಿಲ್ಲೆಂಬಿನಿತೆ ಗಡಂ (ಧರ್ಮಾಮೃ. ೧-೧೩೯). **ಗಡಾ$_1$**: ಗಡಾ, ಗಳಾ. (ಶಬ್ದಾನು. ೨೧ಪ್ರಯೋ); ಸಾಮಾನ್ಯಾವ್ಯಯಗಳು . . . ಗಡಂ, ಗಡ, ಗಡಾ, ಗಳ (ಕೈಪಿಡಿ. ೫೨). (viii) ದುಃಖಕ್ಕೆ: ಕೈಕಾಲ್ಗಳೊಳ್ ಜೀವವನಂಟಂಟೆಲ್ಲಿಯುಂ ಕಾಣದೆಯಕಟಕಟವಯ್ಯೋ ಗಡಾ ಸತ್ತೆನೆಂಬೀ ಪವಣಿಂದಂ ಮುನ್ನಂ (ರಕ್ಷಾಶ. ೪೦). **ಗರ$_1$**: (ii) ಈಯದೆ ಇಱಿಯದೆ ನನ್ನಿನುಡಿಯದೆ ನಣ್ಪಿ ದೇವಂಗೆಱಿಪ್ಪಿ ಮುಯ್ವುಮ್ಪಡೆದೊಂ ಗರ ಅಲೆದೊಂ ಮೂದಲಿಪೊಂ (ಎಇ. XXIV; ೨೬-೧೪; 885). **ಗಳ$_1$**: ಮುನ್ನಿಲೆ ತಾಂ ಮೇಱ್ವೆಱಂ ಗಡಂ ಗಳಮಾದಂ ಕೆನ್ನಂ ನಿಲ್ಲೆಂದಿವನೆಂದುಂ (ಕವಿರಾ. ೨-೧೩); (ii) ಕೂಟದೊಳುಣ್ಮಿದ ಬೆಚ್ಚ ತಟ್ಟೆಯೊಳ್ ಕೂಟ ಸುಖಂಗಳಂ ಪಡೆದನೇಂ ಚದುರಂ ಗಳಬದ್ದೆ ದಲ್ಲಱಿಂ (ಪಂಪಭಾ. ೩-೮೨); ಗರ್ಬ್ಬಿತೆಯ ರಾಗ್ಗ್ರಳ ಚಂಡಲದೇವಿಯಂದದಿಂ (ಎಕ. VII, ಶಿವಮೊ. ೬೪-೮೯; 1112). (iv) ಸಾಲದೆ ಜೂದು ನಿಮ್ಮೊಳಗಿದೇಂ ಗಳ ಮಾಣಿಸಿಂ (ಪಂಪಭಾ. ೬-೭೪); ಏಂ ಗಳ ದವನಕ ಪಲವು ದಿನಂಗಳ್ ಕಂಡಱಿಯೆವು (ಪಂಚತಂ. ೩೩-೨೦); ಅಲ್ಪ ಬುದ್ಧಿಗಳ್ ರಾಗಿಸಿ ಪೊರ್ದಲೇಂ ಗಳ ಕುದೈವದೊಳಂ ಫಲಮಾಗಲಾರ್ಪುದೇ (ಧರ್ಮಾಮೃ. ೭-೭೮). (vi) ನೀಂಗಳ ಕಾಲ್ಗರ್ಚಿದ ನೀರುಂ ಗಂಗೆಯ ನೀರುಮೆಂಬಿವೀ ನಿಖಿಳ ಜಗನ್ಮಂಗಳಕರಂ (ಕಾವ್ಯಾವ. ೯೧). **ಗಳಂ**: ಅವ್ಯಯಂ . . . ಗಡಂ ಗಳಂ (ಶಬ್ದಾನು. ೨೦ ಪ್ರಯೋ). **ಗಳಾ**: ಅವ್ಯಯಂ . . . ಗಡಾ, ಗಳಾ (ಶಬ್ದಾನು. ೨೧ ಪ್ರಯೋ). [?]

**ಗಡ$_5$**, ಗಡಾ$_2$, ಗಾಡ$_3$ (ಅ). (ಉಕ) ಬೇಗನೆ; ಜಾಗ್ರತೆಯಾಗಿ; ಕ್ಷಿಪ್ರವಾಗಿ: (ಕಿ). **ಗಡಾ$_2$**: ಸಾಮಾನ ಗಡಾ ಸಿಗಾಣೆಲ್ಲಾ. ತಡಾ ಆತ ಅಂದರ ಅಷ್ಟ ತಾಟೂ ಮಣೆ ನಾಕರಿ (ರಕ್ತಧ್ವ. ೫೦):

**ಗಾಡ$_3$** : ನೀ ಹುಲುಮನುಜ ನಿನ್ನನು ಗಾಡ ತಿನ್ನದಲೆ ಹೆಣಗಿಸುವೆ ಹಿಂಸೆಯಲಿ (ಜಿನಭಾ. ೧೫-೫೫) ; ರಾಮಪ್ಪ ನಡಿ ಮತ್ತ ಗಾಡ ಬಂದು ಬಿಡಾನ (ನಮ್ಮಳ್ಳಿ. ೪).

**ಗಡಗಡ$_2$, ಗಡಾಗಡಾ** (ದ್ವಿರುಕ್ತಿ) : ಗಡಗಡ ಉಂಡು ಮೇವು ಹಿರಕೊಂಡು ಬಂದು ಹಾಕ್ರಿ (ಬೆಳುಮ. ೧೫೬) ; ಗೌಡರು ಗಡಗಡ ಮುಗಸಂದರು (ನಾಥಾರಿ. ೩೦) ; ಇಕಾ ಗೌಡಾ ಎಲ್ಲಾ ಗಡಾಗಡಾ ಹೇಳ್ತೀನಿ (ಮಿಂಚಿಹು. ೧೩೨). [?]

**ಗಡಂ** 'ಗಡ$_4$' ನೋ.

**ಗಡಂಗ** 'ಗಡಂಗು' ನೋ.

**ಗಡಂಗಣ** (ನಾ). = ಗಡಂಗು : ಅವನೊಂದಿಗೆ ಹರಟಿಕೊಚ್ಚುತ್ತ ಗಡಂಗಣಕ್ಕೆ ಕರೆದು ತಂದಿದ್ದ ಬನುವ (ಬನಸಿ. ೨೧). [< ಗಡಂಗು ?]

**ಗಡಂಗು**, ಗಡಂಗ (ನಾ). ೧. ದಾಸ್ತಾನು ಮಳಿಗೆ ; ಗೊದಾಮು : ಶೇಖರಿಸಿದ ಸಾಂಬ್ರಾಣಿಯನ್ನು ಭದ್ರವಾಗಿಡಲು ಒಂದು ಗಡಂಗೂ ಇದೆ (ಪ್ರವಾಇ.I, ೮೯) ; ತರಗಿನ ಪೇಟೆಯ ಗಡಂಗುಗಳು (ಮಹಾಗ. ೬೯). ೨. ಮಾದಕವಸ್ತುಗಳನ್ನು ಮಾರುವ ಮನೆ; ಹೆಂಡದಂಗಡಿ ; ಪಡಖಾನೆ : ಗಡಂಗಿನಲ್ಲಿದ್ದ ಎಲ್ಲರಿಗೂ ಕುಡಿಯಲು ಹೇಳುತ್ತಾನೆ (ನಾಡಿಗೇ. ೩೯) ; ಸಂಜೆ ಗಡಂಗಿನಲ್ಲಿಷ್ಟೇ ವೆಂಕಟಪ್ಪನ ಈ ಉಪನ್ಯಾಸ ಮಾಲೆ (ಅನ್ನಪೂ. ೬೬). **ಗಡಂಗ** : ೨. ಈ ಮನೆಯನ್ನು 'ಗಡಂಗ' ವೆಂದು ಭಾವಿಸಿರುವಿರಾ ? (ಮುತ್ತೈದೆ. ೨೦೦) ; ಕುಡುಕ ಸಂಜೆಯವರೆಗೆ ತನ್ನ ಮನಸ್ಸಿಗೆ ಬುದ್ಧಿಹೇಳಿ ಬಳಿಕ ಗಡಂಗದ ಮಾರ್ಗಹಿಡಿಯುತ್ತಾನೆ (ಗಾಳಿಗು. ೩೦) ; ಸಂಗಡಿಗರೊಡನೆ ಗಡಂಗಕ್ಕೆ ಹೋಗಿ ಯಥೇಚ್ಛ ಹೆಂಡಕುಡಿದು (ಕಲಿಕು. ೧೩೬).

[ದೇ. ‖ ತಮಿ. ಗಿಡಙ್ಗ ; ಮಲ. ಗಿಡಙ್ಙು ; ತುಳು. ಗಡಂಗು ; ತೆಲು. ಗಿಡ್ಡಂಗಿ./ ಹಿಂ. ಗಿಡಂಗೀ ; ಬಂಗಾಳಿ. ಗುಡಾವ‍್ನ್. / ಇಂ. Godown]

**ಗಡಕ** (ನಾ). ಒಂದು ಬಗೆಯ ಹೊಂಬಣ್ಣದ ಮೀನು : (ಕ).

[< ಸಂ. ಗಂಡಕೀ ?]

**ಗಡಕರಿ** (ನಾ). ೧. ಕಿಲ್ಲೆಯ ಕಾವಲುಗಾರ; ಕಿಲ್ಲೆದಾರ : ಇಲ್ಲಿಯ ಗಡಕರಿಗಳು (ಕಾವಲುಗಾರರು) . . . . ಬಂಡಾಯಮಾಡಿದ್ದರು (ಕಭಾಗ. ೬-೧೬). [← ಮರಾ. ಗಡಕರೀ]

**ಗಡಕುಹಾಕು** (ಕ್ರಿ). ಕೇಕರಿಸು : ಬಣಕಾರರು ಇನ್ನೊಂದು ಸಲ ಗಡಕುಹಾಕಿ ಎಲೆಅಡಕೆ ತಂಬಾಕಿನ ಹಿಂಡಿಯನ್ನು ಹೊರಗೆ ಉಗುಳಿ . . . ಅಣಿಮಾಡಿದರು (ಸುವಸಂ. ೫೧).

[ಗಡಕು ? + ಹಾಕು (< ಪಾಯ್ಕು$_1$)]

**ಗಡಗಂಚಿ**, ಗಡುಗಂಚಿ (ನಾ). ಮನೆಯಲ್ಲಿ ಪದಾರ್ಥಗಳನ್ನಿಡಲು ಗೋಡೆಗೆ ಹೊಂದಿಸಿ ಮಾಡಿದ ಅಟ್ಟಣೆ ; ಬಡು : ಹತ್ತಿರವೇ ಇದ್ದ ಗಡಗಂಚಿಯನ್ನು ಹಿಡಿದುಕೊಂಡು ಹೇಗೋ ನಿಂತುಕೊಂಡಳು (ಎರಸೆ. ೩೮) ; ಮಂಚದ ಮನೆಯಲ್ಲಿ ಗಡಗಂಚಿಯ ತುಂಬ ಒಡವೆ (ಬನ್ನಹ. ೩೨); ಪಕ್ಕಮೇಜು, ಗಡಗಂಚಿ, ಬಡು (Buffet. ಇಂಕನ). **ಗಡುಗಂಚಿ** : ಅಲ್ಲಿ ಗಡುಗಂಚಿಗಳ ಮೇಲೆ ಕಾಳಿನ ಚೀಲಗಳ ಸಾಲುಗಳು ಅಡಕಲಾಗಿ ನಿಂತಿವೆ (ಹಬ್ಬಬ. ೧೯).

[← ಮರಾ. ಘಡವಂಚೀ; ಹಿಂ. ಘಡೋಂಚೀ]

**ಗಡಗಡ$_1$** 'ಗಡ$_1$' ಪರಾ.

**ಗಡಗಡ$_2$** 'ಗಡ$_5$' ಪರಾ.

**ಗಡಗಡನೆ** (ಅ). ಒಂದು ಅನುಕರಣಾವ್ಯಯ : ನದಿಯುತಾ ಚಲಿಸಲು ಮರಂಗಳು ಗಡಗಡನೆ ನಡುಗುವವೊಲು (ನಿಭಾಗ. ೧೧-೨೪-೬೭) ; ಎಂದು ನುಡಿದ ಮಾತಿಗೆ ಗಡಗಡನೆ ನಡುಗಿ ಬಿಜ್ಜಳನೃಪಂ ಬಸವನ ಮೊಗಂ ನೋಡಿ (ಬಸರ. ೬-೭೮) ; ಒಡೆದು ದೀಬ್ರಹ್ಮಾಂಡಮಂಡಲ ಗಡಗಡನೆ ನಡುಗಿದುದು (ಕುವ್ಯಾದ್ರೋ. ಪರಿ. ೨೮೦).

[ಗಡಗಡ$_1$ + -ಅನೆ$_1$]

**ಗಡಗಡಿಸು** (ಕ್ರಿ). ನಡುಗು ; ಅಲುಗು ; ಕಂಪಿಸು : ಗದಗದಿಸುವ ಮೊಲೆ ಗಡಗಡಿಸುವ ತೊಡೆ ಕೆದರ್ದ ಧಾಳದ ಕಡೆಗಣ್ಣು (ಭರಚ. ೧೩-೬೭) ; ರಾಷ್ಟ್ರಕೂಟ ಸಿಂಹಾಸನ ಗಡಗಡಿಸುವುದೆಂದು ಭಾವಿಸಿದನೆ (ವೀರಬಂ. ೬೫). [ಗಡಗಡ$_1$ + -ಇಸು$_3$]

**ಗಡಗಡೆ** (ನಾ). ಬಾವಿಯಿಂದ ನೀರು ಸೇದಲು ಅನುಕೂಲವಾದ ಗಾಲಿ ; ರಾಟೆ : ಬಾವಿಯ ಗಡಗಡೆಯ ಮೇಲೆ ಇಳಿಬಿಟ್ಟ ಹಗ್ಗದ ಕೊಂಡಿಗೆ ಕೊಡವನ್ನು ಸಿಕ್ಕಿಸಿ . . . ಬಿಟ್ಟಳು (ಮೂರುದಾ. ೧೬೬) ; ಬಲಪ್ರಯೋಗದ ದಿಕ್ಕನ್ನು ಬದಲಾಯಿಸಲು ಅನುಕೂಲಿಸುವ ಒಂದು ಸರಳಯಂತ್ರ ಸಲಕರಣೆ : ರಾಟೆ ; ಕಪ್ಪಿ ; ಗಡಗಡೆ (Pulley. ಇಂಕನ).

[← ಮರಾ. ಘಡಘಡಾ]

**ಗಡಗುಟಿಸು** (ಕ್ರಿ). ಅಲ್ಲಾಡಿಸು ; ನಡುಗಿಸು : ಆತ್ಮಹತ್ಯೆಮಾಡಿಕೊಳ್ಳುವಳೇ ಎನ್ನುವ ಭಯ ಮಾಸ್ತರನ್ನು ಗಡಗುಟ್ಟಿಸಿಬಿಟ್ಟಿತು (ಕಾವೇರಿ. ೧೮೨). [ಗಡಗುಟ್ಟು + -ಇಸು$_3$]

**ಗಡಗುಟ್ಟು** (ಕ್ರಿ). ಭಯಪಡು ; ನಡುಗು ; ಬೆದರು : ಇದ್ದಕ್ಕಿದ್ದಂತೆ ತೆಂಗಿನಮರದಿಂದ ಕಾಯೊಂದು ದಡಕ್ಕನೆ ಮನೆ ಅಂಗಣದಲ್ಲಿ ಬಿದ್ದಾಗ ಒಮ್ಮೆ ಗಡಗುಟ್ಟಿ ನಡುಗಿದರು (ಪದ್ಮಸ. ೧೭). [ಗಡ$_1$ + ಕುಟ್ಟು$_1$]

**ಗಡಗೆ** 'ಗಡಿಗೆ' ನೋ.

**ಗಡಚಿಕ್ಕಿಸು** (ಕ್ರಿ). ಕಿವಿಗೆ ಕರ್ಕಶವಾಗಿಸು ; ಕರ್ಕಶವಾದ ಧ್ವನಿಯಿಂದ ಕಿವಿಯನ್ನು ಕಿವುಡಾಗಿಸು : ಬಜಂತ್ರಿಯ ಹಾಗೂ ಸನಾದಿಯ ಒಡಕಲದನಿ ಕಿವಿಯನ್ನು ಗಡಚಿಕ್ಕಿಸಿ ಬಿಟ್ಟಿತು (ವೈನಿ. ೭) ; ಕಿವಿಗಳನು ಗಡಚಿಕ್ಕಿಸುವಂಥ ಗರ್ಜನೆ (ಮುಂಬಯಿ. ೫-೭೦).

[ಗಡಚಿಕ್ಕು + -ಇಸು$_3$]

**ಗಡಚಿಕ್ಕು** (ಕ್ರಿ). ಗಡುಸಾಗು ; (ಕಿವಿಗೆ) ಕರ್ಕಶವಾಗು : ಕೆಂಪು ಮೋರೆಯ ದಂಡು ತೋಪು ತುಬಾಕಿ ಗಡಚಿಕ್ಕಿ (ಲೋಕಗೀ. ೨೨೨) ; ಅವನು ನೆಲಕ್ಕೆ ಕಾಲೂರಿದ ಕೂಡಲೇ ಜನರು ಕಿವಿ ಗಡಚಿಕ್ಕುವಂತೆ ಚಪ್ಪಾಳೆ ತಟ್ಟಿದರು (ಕಪಪು. ೫-೧೦) ; ಗಡಚಿಕ್ಕುವ ಗುಡುಗಿನ ದನಿಯನ್ನು ಆಲಿಸಿರಿ (ಜನನಾ. ೧೨೯). [ಗಡಚು (< ಗಡುಸು) + ಇಕ್ಕು$_1$]

**ಗಡಚು** 'ಗಡುಸು' ನೋ.

**ಗಡಚುತನ** 'ಗಡುಸುತನ' ನೋ.

**ಗಡಣ**, ಗಡಣೆ$_1$ (ನಾ). ೧. ಕೂಡಿಸುವಿಕೆ ; ಸೇರಿಸುವಿಕೆ. 'ಗಡಣಿಸು' ಪರಾ. ೨. ಗುಂಪು ; ಸಮೂಹ; ರಾಶಿ : "ಗಡಣವೆನಲದೆ ಸಮೂಹಂ" (ಕಶರ. ೩೦) ; "ಗಡಣವಂಗಡಂಕಿಕ್ಕಂದಂ . . . ಸ್ತೋಮಾಭಿಧಾನಂ" (ಕವಿಕಂ. ೧೦೬) ; ದೇವರ ಪಡೆಗಡಣದೆ ಪೊಗಟ್ಟುದಿನತನೂಜನ ಗಂಡಂ (ಪಂಪಭಾ. ೧೨-೨೧೬) ; ನುಡಿಯ ಗಡಣವ ಮರೆದು ತೆರಹಿಲ್ಲದಿದ್ದರೇನು (ಮಹಾದೇ. ಬ ೧೧೪-೨೬೦) ; ಗಡಣದೆ ಮಾದೇವಿಯ ಬಗೆಯೊಡೆಯನ ನೊಸಲೊಳ್ . . . ಬಿಡೆ ನಟ್ಟುವು ಕಾವನಂಬುಗಳ್ ತಾವ್ಯೆದುಂ (ಕಬ್ಬಿಕಾ. ೩೦೭) ; ಪೊಡಮಡುತ ನಿಗಮುಗಳರಸುವ ಅಭವನ ಗಡಣಕೆಣೆಯಾರು (ಸರ್ವಜ್ಞ. ೨೧೬) ; ಪಡೆವಳರಾಕೆ ವಾಳರ ಗಡಣಂ ನೆರೆದಿರೆ (ರಾಮಾಶ್ವ. ೫೦-೯). ೩. ಸಹವಾಸ ; ಕೂಟ ; ಸಂಗ : ಪರಸ್ತ್ರೀಯರೊಳ್ ಗಡಣಂ ನನ್ನಿಗೆ ಬೇಗುವರ್ ನುಡಿತೊದಳ್ ದೋಸಕ್ಕೆ ಪಕ್ಕಾದೆ ದಂಬದ ಗಣ್ಣರ್ ಕಲಿಕಾಲದೊಳ್ (ಎಕ. II, ೧೩೩-೬೯ ; 982) ; ವನಲಕ್ಷ್ಮಿಯ ಬೆಡಂಗಿನೊಡನೆ ಗಡಣಮನೊಡರಿಸುವ (ವರ್ಧಪು. ೨-೩೭ವ);

ದೇವನಿದ್ದನು ವೀರಭಟ ಸುಗ್ರೀವ ಲಕ್ಷ್ಮಣರುಗಳ ಗಡಣದಲಿ (ತೊರರಾ. ೫-೯-೧೮). **ಗಡಣೆ**$_1$: ೧. 'ನುಡಿಗಡಣೆ' ಪರಾ. ೪. ಮೇಳ; ಗಾಯನ ಗೋಷ್ಠಿ: ಕನಕಗೋಪುರಂಗಳೊಳಗಣೆರಡುದೆಸೆಯ ಗುಣಣೆಯಿಂ ವಿಳಾಸಿನಿಯರ ಗಡಣೆಯಿಂ (ಪಂಪಭಾ. ೧-೫೮); ಕಡೆಯ ಪೆಂಡೆಯದ ನಟ್ಟುವರು ಮದ್ದಳೆಗರು ಗಡಣೆಯ ತಾಳಧಾರಿಗಳು ಬಿಡಯವಿಲ್ಲದ ಗೀತವಾದ್ಯ ವಿದ್ಯಾಧಿಕ ಪಡೆಯಿದ್ದುದೊಡ್ಡೋಲಗದಿ (ಮೋ ೯ ಹ ತ. ೨೦-೩೭). "ಹಾಡುವಿಕೆ" (ಪಂಪನಿ). ೫. (ಅಲಂ) ಗದ್ದಲ; ಆಡಂಬರ; ಪದವಾಕ್ಯವಿದರಾಗ ವಾದಗಡಣೆಯ ಬಿಟ್ಟು ಒದವಿಪರು ದಿಟದರಿವ (ಮಂಕುಕ. ೪೧).

[< ಸಂ. ಘಟನ]

**ಗಡಣಂಗೊಳ್**, ಗಡಣಗೊಳ್, ಗಡಣೆಗೊಳ್ (ಕ್ರಿ). ೧. ಗುಂಪಾಗು; ಒಟ್ಟುಗೂಡು; ಮೇಳವಿಸು; ಹಿಂಡುಗಟ್ಟು: ಪಸರಂಬಡೆದಂ; ಗಡಣಂಗೊಂಡಂ (ಕಮುದ. ೧೭೭ ಪ್ರಯೋ); ಮೃಗಂ ಗಡಣಂಗೊಂಡು ಬರಲ್ಕೆ (ದಶಕು. ೧-೩೦); ಕಿನ್ನರಿಯ ಸರಸಸಂಗೀತಮಂ ಕೇಳ್ದು ಗಡಣಂಗೊಂಡು ಪಡೆಯೆತ್ತ ನಲಿವ ನಾಗಂಗಳಂ (ಶಬಶಂ. ೩-೩೫ ವ). **ಗಡಣಗೊಳ್**: ೨. ಕೂಡು; ನೆರೆ: ಅವಳಲಿ ಗಡಣಗೊಂಬ ಮ ಹಾ ತ್ಮ ರಿ ಗೆ ಮೈ ವ ಳಿ ಯೊ ಳಿ ಹ ಳಿ ಂ ದ (ನಿಭಾಗ. ೫-೮-೨೪). **ಗಡಣೆಗೊಳ್**: ೧. ಮತ್ತೆ ಮತ್ತುರವಣಿಸಿ ದೈತ್ಯರಂ ಗಡಣೆಗೊಳ್ಳದೆ ಪತ್ತುತಿರ್ದುದಮರವ್ರಾತಮೇನೆಂಬನದ್ಭುತವನು (ಚಿಬಪು. ೪೨-೪೩). ೨. ಕಾಮಾರಿಭಕ್ತರು ವಾರವನಿತೆಯರ ಸಂಗಸುಖಮುಂ ಗಡಣೆಗೊಂಬರೆ (ಬಸಪು. ೪೦-೭೯). [ಗಡಣ + ಕೊಳ್$_1$]

**ಗಡಣಂಬಡೆ** (ಕ್ರಿ). ಗುಂಪಾಗು; ಒಟ್ಟಾಗಿರು; ಸಾಲುಗೊಳ್ಳು: ರದನಂ ಗಡಣಂಬಡೆದಾರದನಂಗನ ಕೀರ್ತಿಲತೆಯ ಬಿತ್ತನಿಸಿರ್ದುಂ ಪುದು ತನ್ನ ಕಾಂತಿ ಪವಿಗೆನಿಪುದು ತನ್ನವಪಲ್ಲವೋಪಮಾನಾಧರೆಯಾ (ಜಗವಿ. ೧೦-೩೭). [ಗಡಣ + ಪಡೆ$_1$]

**ಗಡಣಗೊಳ್** 'ಗಡಣಂಗೊಳ್' ನೋ.

**ಗಡಣಿಗ** (ನಾ). ಕೂಡಿಕೊಂಡಿರುವವನು; ಸಂಗಡಿಗ; ಜೊತೆಗಾರ: ಗಡಣಿಗರು ಮೂದಲಿಸಿ ಕವಿದುದು ರಾಯರಾವುತರು (ಕುವ್ಯಾಭೀ.೪-೫೫); ಎಲವೊ ನಿನ್ನಯ ಗಡಣಿಗರ ಕರೆ ಕಾಯ್ದುಕೊಳಲಿ (ಕುವ್ಯಾದ್ರೋ. ೧೭-೪೫). [ಗಡಣ + -ಇಗ]

**ಗಡಣಿಸು**, ಘಡಣಿಸು (ಕ್ರಿ). ೧. ಗುಂಪಾಗು; ಒಟ್ಟುಗೂಡು: ಜೊತೆಗೂಡು: ಚಿತ್ರಲೇಖೆ ಚಿತ್ರದ ಪಟಮಂ ಪಸರಿಸಿದಳೊರ್ಮೆ ಗಡಣಿಸಿ ಪಸರಿಸುತಿರೆ ಬಾಣಸುತೆಯ ಕಣ್ಣುಂ ಮನಮುಂ (ಜಗವಿ. ೧೭-೧೧೩); ಪರಿಚಾರಿಕೆಯರ್ ಗಡಣಿಸಿ ಬರೆ (ಪುಣ್ಯಾಸ್ರ. ೭-೪೯); ಓಡುವುದು ಗರುವಾಯಿಯೇ ಭಯ ಬೇಡ ಭೂಮಿಪರೆನ್ನ ತೇರಿನ ಕೂಡೆ ಗಡಣಿಸಿ (ಕುವ್ಯಾದ್ರೋ. ೧೩-೨೦); ಪೊಟ್ಟೆಯಿಂ ಕರುಳ್ಗಡಣಿಸಿ ಪಾಯ್ವಿನಂ ತುಳಿದುದು . . . ಮತ್ತವಾರಣಂ (ರಾಜಶೇ. ೬-೮೩). ೨. ಸೇರಿಸು; ಜೋಡಿಸು; ಹೆಣೆ: ಮಾಲೆಗೆ ಬಟುವಟು ತನ್ನ ಪವಮಾಲೆಯ ಕಣ್ಮಲರ ಮಾಲೆಯೆನೆ ಮಾಲೆಯನಾ ಬಾಲೆ ಭವಬದ್ಧ ನಿಜರುಚಿ ಮಾಲಾನ್ವಿತ ಮಮಿತತೇಜನೊಳ್ ಗಡಣಿಸಿದಳ್ (ವರ್ಧಪು. ೯-೪೬); ತಡಿಯ ಬಲಿಸುವ ಗುಳಿನ ಜಿಂಜಿಯ ಗಡಣಿಸುವ ಹಕ್ಕರಿಕೆಗಳನಾಯ್ದಡಿಸಿ ಹೊಲಿಸುವ (ಕುವ್ಯಾಭೀ. ೫-೩೭); ಹಡಗು ದ್ವೀಪಕೆ ಹೋಗುತಿರಲಲ್ಲಿ ವಸ್ತುವ ಗಡಣಿಸಿ ಕಳುಹುವನಂತೆ (ಭರಚ. ೩-೪೧). ೨. ನೆರವೇರು; ಘಟಿಸು: ತೊಡಗಿದ ಕಾರ್ಯಂ ದೈವದೆ ಗಡಣಿಸಲದು ತಾಂ ಸಮಾಹಿತಂ ತಿಳಿಪಲ್ (ಉದಯಾ. ೧೧). ೩. ಸಾಲಾಗಿ ಬಡಿಸು; ಸರಿಯಾಗಿ ಎಡೆಮಾಡು: ಓಗರ ಭಾಜನ ವಿಲ್ಲದೆ ಗಡಣಿಸಿ ಭೋಜನವಿಲ್ಲದೆ ತೃಪ್ತಿಯಾಯಿತ್ತು (ಅವಚಂ.೧೨೭-೫೭೩); ಹೊನ್ನ ಹರಿವಾಣಸಾಹಸ್ರದೊಳು ದಿವ್ಯಮೃಷ್ಟಾನ್ನಂಗಳಂ . . . ಗಡಣಿಸಿ (ಗುರುಚಾ. ೬-೫೯); ಭಕ್ಷ್ಯ ಭೋಜ್ಯಾದಿ ವಸ್ತುಗಳನು ಪರಿಯಾಣದಲ್ಲಿ ಗಡಣಿಸಿ (ಸಿದ್ಧೇಪು. ೨೨-೮೯). **ಘಡಣಿಸು**: ೧. ವೀರಭಟಾವಳಿ ಯಾಂತು ಪಂಥಮಂ ಘಡಣಿಸೆ ಪಂಪಿನೋಲಗಮನಿತ್ತೆಸೆದಂ ನೃಪರಾಜ ಕುಂಜರಂ (ಉದ್ಧಟ. ೨-೧೨). [ಗಡಣ + -ಇಸು$_3$]

**ಗಡಣೆ**$_1$ 'ಗಡಣ' ನೋ.

**ಗಡಣೆ**$_2$ (ನಾ). ೧. ಎಣಿಕೆ; ಆಲೋಚನೆ; ಚಿಂತೆ: ಕಾಯದ ಗಡಣೆ ಕೆಲಬರಿಗುಂಟು ಜೀವದ ಗಡಣೆ ಕೆಲಬರಿಗುಂಟು ಭಾವದ ಗಡಣೆ ಕೆಲಬರಿಗುಂಟು . . . ಪ್ರಾಣಲಿಂಗದ ಗಡಣೆ ಆರಿಗೂ ಇಲ್ಲ (ಬಸವ. ೮೦೭); ಜಡಿವ ಹಗೆಯನು ಕಾಲಕರ್ಮದ ಗಡಣೆಯನು ಸುಖದುಃಖದುದಯದ ಕಡೆ ಮೊದಲ ಕಾಣಿಸುವನಾವವನೆಂದನು (ಕುವ್ಯಾಆ. ಓರಿಇ. ೨೦-೩೧).

[< ಸಂ. ಗಣನ]

**ಗಡಣೆಗೊಳ್** 'ಗಡಣಂಗೊಳ್' ನೋ.

**ಗಡದು** 'ಗಡದ್ದು' ನೋ.

**ಗಡದ್ದು**, ಗಡದು (ಗು). ೧. ಗಡುಸಾದ; ದಪ್ಪವಾದ. ೨. ಆಳವಾದ; ಗಾಢವಾದ: ಕೊನೆಗೆ ಗಡದ್ದು ನಿದ್ದೆ ಹತ್ತಿದ್ದನ್ನು ತಿಳಿದು (ಮುಂಬಯಿ. ೩-೫೧). ೩. ಹೇರಳವಾದ; ವಿಶೇಷವಾದ: ಮರ ಕಾಲನಿಗೆ ಗಡದ್ದು ಇನಾಮು ಆಗಬೇಕು (ಔದಾಉ. ೧೬೧). (ನಾ). ೪. ವೈಭವ; ಭರ್ಜರಿ: ಮಗಳ ಮದುವೆ ಆದಷ್ಟು ಗಡದ್ದಿನಲ್ಲಿ ನಡೆಯಲೆಂದು (ಮರವು. ೧). **ಗಡದು**: ೨. ಗಡದು ನಿದ್ದೆ ಮಾಡಿದವನನ್ನು ಕಂಡು (ಬಿಟ್ಟಹೊ. ೬೩).

**ಗಡದ್ದಾಗು** = ಹೇರಳವಾಗು; ಪುಷ್ಕಳವಾಗು: ಎಲ್ಲರೂ ಗಡದ್ದಾಗಿ ತಿಂದರು (ಮೂಲಾನ. ೪೭); ಸುವಾಸಿನಿಯರಿಗೆ ಗಡದ್ದಾಗಿ ಊಟವಾಯಿತು (ಪ್ರಶ್ನೆ. ೧೪೨); ನಾನೂ ಗಡದ್ದಾಗಿ ಉಂಡಿದ್ದೆ (ಮಲೆಮ. ೨೯೯). [← ಮರಾ. ಗಡದ್]

**ಗಡನೆ** (ಅ). ಒಡನೆ; ಕೂಡಲೆ: ಒಡನೆ ಹೋಗಿ ಬಡತನ ಗಡನೆ ಬಂದಿತು (ಪುಕಿಉಹ. ೩-೧೫೨-೨); ಒಡನೊಡನೆ ನಿರ್ಮಿಸುತ ಲಿಂಗ ಪೂಜಾದಿಯಿಂ ಗಡನೆಯಾರೋಗಣೆಗೆ ನೀಡಿಯಾರೋಗಿಪುದು ದೇವ (ಮಹಾವಿ. ೧೧-೧೯); ಮೃಡನ ಪೆಂಡತಿಯನ್ನರುಂಧತಿ ತೊಡೆಯ ಮೇಲೆತ್ತಿರಿಸಿಕೊಂಡಳು ಗಡನೆ ಮೈದಡವುತ್ತಲಾಕೆಯ ಮುಖವ ಚುಂಬಿಸುತ (ಪಾರ್ವಪ. ೩೧); ಹನಿಹನಿಗೂಡಿ ಮಾಗಿ ಗಡನೊಂದೆ ರಸವಾಗಿ (ಉಯ್ಯಾಲೆ. ೭೮-೧೧). [ಗಡ$_5$ + -ಅನೆ$_1$]

**ಗಡಪ್** 'ಗಡಪ್ಪು' ನೋ.

**ಗಡಪಾರೆ** 'ಗಡಬಾರೆ' ನೋ.

**ಗಡಪು** 'ಗಡಪ್ಪು' ನೋ.

**ಗಡಪ್ಪು**, ಗಡಪ್, ಗಡಪು (ನಾ). ೧. ಅಡಗುವಿಕೆ; ಕಣ್ಣಿಗೆ ಕಾಣದಾಗುವಿಕೆ; ಮರೆಯಾಗುವಿಕೆ: ಈ ಚಮತ್ಕಾರದ ಪ್ರಕರಣವನ್ನು ಹಾಗೇ ಗಡಪ್ಪು ಮಾಡಿ (ವೈಭವ. ೧೨೪). **ಗಡಪ್**: ೨. ನುಂಗುವುದು; ತಿಂದುಹಾಕುವುದು; ದಕ್ಕಿಸಿಕೊಳ್ಳುವುದು: ಏಳುನೂರು ರೂಪಾಯಿ ಇಟ್ಟಿದ್ದೆ. ಅವನ್ನು ಎಲ್ಲ ಗಡಪ್ ಮಾಡಿದರು (ರಕ್ತಧ್ವ. ೧೧೧). **ಗಡಪು**: ೧. ಜಗಲಿಯ ಮೇಲೆ ಯಾರದೂ ಸುಳಿವಿಲ್ಲ. ಎಲ್ಲರೂ ಎಲ್ಲಿ ಗಡಪಾದರೋ? (ಮೂರುದಾ. ೧೩).

**ಗಡಪ್ಪುಮಾಡು** = ವ್ಯಯಿಸು; ಖರ್ಚುಮಾಡು: ಹಣವನ್ನು ಎಷ್ಟಿತ್ತರೂ ಎಲ್ಲವನ್ನು ಗಡಪ್ಪುಮಾಡುತ್ತಾನೆ (ರೂಢಿ).

[← ಹಿಂ. ಮರಾ. ಗಡಪ್; ಅರ. ಗರ್ಬ್]

**ಗಡಬ** 'ಗಡುವು' ನೋ.

**ಗಡಬಡ**, ಗಡಬಡಿ, ಗಡಬಡೆ, ಗಡಿಬಿಡಿ (ನಾ). ೧. ಅವಸರ; ಆತುರ; ತ್ವರೆ: ಬಱಿಯ ಗಡಬಡಗಳಿಂದಜ್ಞರಂ ಕೆಲರನಲೆದು ಪಿರಿಯ ನಾನೆಂದಹಂಕರಿಸಿಕೊಂಡಿರ್ಪುದಂ ಪರಿಹರಿಸಿ (ಪದ್ಮರಾ. ೯-೧೪); ಬೀದೀ ತುಂಬ ಜನವೇನೋ ಓಡಾಡುತ್ತಿದ್ದರು, ಗಡಬಡ (ಚಂಗೂಲಿ. ೧೧೨). ೨. ಗೊಂದಲ; ಗದ್ದಲ; ಕೋಲಾಹಲ: ಸಡಗರಂಗಳು ಬಱಿಯ ಠಕ್ಕಿನ ಗಡಬಡಂಗಳು (ಬಸವು. ೫೬-೧೭); ಅಡಿಗಡಿಗರಸನ ನೋಡಿದೆರೆದೆ ಸೋತು ಗಡಬಡವಹುದಾಟವೆಂದು (ಭರಚ. ೧೨-೧೧೯). **ಗಡಬಡಿ:** ೧. ಕೆಲಸದ ಗಡಬಡಿ ಇರಬೇಕರಿ (ಬಿಂದಯು. ೫೫); ಹೀಗೆ ಗಡಬಡಿ ಮಾಡಿದರೆ ಹೇಗೆ (ಅಶೋಕ. ೩). ೨. ವಾದ್ಯದ ಗಡಣ ಮೊಱೆದುದು ಪಾಠಕರ ಗಡಬಡಿಯ ಕಳರವ ಬಗಿದುದಬುಜಭವಾಂಡವಂಡಲವ (ಕುವ್ಯಾಕ. ೮-೨೧). ೩. ಗಾಬರಿ; ಭಯ: ಗಡಬಡಿಯಿಂದ ನೋಡು ತ್ತಾಳೆ (ಮೋಹಿನೀ. ೨೭). **ಗಡಬಡೆ:** ೨. ಸಂಸಾರವೆಂಬ ಗಡಬಡೆಯಲ್ಲಿ ಸಿಲುಕಿದೆ (ಡಬೊಮ್ಮ. ೮೯); ತುಡುಗುಣಿ ಹೊಕ್ಕು ಗಡಬಡೆಯ ಮಾಡಿದಂತೆ (ಶಿವಮಂ. ೮೪); ಶಾಸ್ತ್ರದ ಗಡಬಡೆಯೊಳಗಾಡಿ ದೇಹದ ವಸ್ತ್ರ ಮಾತ್ರವ ಬಿಟ್ಟ ಮುನಿಯೆ (ಭರಚ. ೮-೧೦೭); ಕಳಕಳದ ಬಗೆಬಗೆಯ ವಾದ್ಯ ಧ್ವನಿಗಳ ಗಡಬಡೆಯೊಳಖಿಳ ಬ್ರಹ್ಮಾಂಡಂಗಳೋಳಿಯಿಂದೊಡೆಯದಿರದೆನೆ (ಚಬಪು. ೨೩-೨೪). **ಗಡಿಬಿಡಿ:** ೨. ನೋಡಿದ . . . ಬಿಡದೆ ದೈತ್ಯರ ಮಡದಿಯರ ಗಡಿಬಿಡಿಯೊಳಗೆ ನಡನಡುಗುತಿರುವಳ (ಹನುಮ. ೨೯); ಅಂತೂ ಸಂಭ್ರಮ, ಗಡಿಬಿಡಿ, ಉತ್ಸಾಹ (ರೂಪಸಂ. ೧೭). ೩. ಗಡಿಬಿಡಿ ಮನೋವಿಕೃತಿಯ ಹೆಗ್ಗುರುತು (ದಾಬುತ್ತಿ. ೩).

[← ಹಿಂ. ಮರಾ. ಗಡ್‌ಬಡ್]

**ಗಡಬಡಿ** 'ಗಡಬಡ' ನೋ.

**ಗಡಬಡಿಕೆ** (ನಾ). "ಗದ್ದಲ; ಗಡಬಿಡಿ" (ಅನಂನಾ).

[ಗಡಬಡ + – ಇಕೆ]

**ಗಡಬಡಿಸು** (ಕ್ರಿ). ೧. ಅವಸರಿಸು; ಆತುರಗೊಳ್ಳು; ತ್ವರೆ ಮಾಡು: ಕಡೆಗಂಗಳಿಂ ಸೀದಿರಾಜನಂ ನೋಡುತ್ತ ಗಡಬಡಿಸಿ ತುಟಿ ಮಿಡುಕಿ ಮೂಗುವಿಡಿದಾಡುತ್ತೆ (ಸೇದಿರ. ೩೪-೧೭); ಅಹಲ್ಯಾ ಗಡಬಡಿಸಿ ಎದ್ದು ಹೊರಕ್ಕೆ ಹಾರಿದಳು (ರಂಗವ. ೧೪೪); ರೋಹಿಣಿ ಗಡಬಡಿಸಿದಳು (ರಂಗರೋ. ೧೭೮); ಭಟ್ಟರ ದನಿಯನ್ನು ಕೇಳಿ ಸೆಟ್ಟರು ಗಡಬಡಿಸಿದರು (ಹಬ್ಬಬ. ೧೯). ೨. ಗದ್ದಲಮಾಡು; ಗೊಂದಲವೆಬ್ಬಿಸು: ಕಾಲ ದುರ್ಭರಭೋಗಿ ಜಿಂಹ್ವಾ ಜ್ವಾಲೆ ಕಿಡಿಯುನುಗುಳುತ ಮಡಕೆಯು ಮೇಲೆ ಹೆಡೆಯಂ ಬಡಿದುಕೊಳುತಂ ಕಡುಗಡಬಡಿಸುತ (ಬಸವು. ೫೧-೫೯); ಶೈವನಂ ವಾದಮುಖದಿ ನಾಂ ಪರಿಭವಂಬಡಿಸದೆ ಬಿಡೆಂಬಿಡೆನೆನುತ್ತೆ ಸಿಡಿಮಿಡಿಗೊಂಡು ಗಡಬಡಿಸುತೆ (ಪದ್ಮರಾ. ೯-೪); ಘುಡುಘುಡಿಪ ಕೋಪದಲಿ ದುರ್ಗದ ಹೆಡಕು ಪರಿಯಂತೇಱೆ ಪುರ ಗಡಬಡಿಸಿ ಬೆಚ್ಚಿತು (ತೊರರಾ. ೪-೬-೨೦).

[ಗಡಬಡ + – ಇಸು₃]

**ಗಡಬಡೆ** 'ಗಡಬಡ' ನೋ.

**ಗಡಬಡೆಯ** (ನಾ). ದೇವಸ್ಥಾನದ ಒಬ್ಬ ಅಧಿಕಾರಿ (?): ಯಿ ಗೋಪಾಳದೇವರ ಸ್ಥಾನಿಕ ನಂಬಿಯರು ಗಡಬಡೆಯರು ಯಿ ಧರ್ಮಕ್ಕೆ ಸಹಾಯ ಖಿಡೆಯ ದಲ್ಲಪ್ಪನವರು (ಎಕ. XI, ಚಿತ್ರದು. ೬-೩೭; 1338).

[?]

**ಗಡಬಾರೆ**, ಗಡಪಾರೆ, ಗಡಹಾರೆ, ಗಡಾರಿ (ನಾ). ದೊಡ್ಡ ಹಾರೆ: ಕಬ್ಬಿಣದ ಕಿಟ್ಟ ೩ ಹಲವನ್ನು ಗಡಬಾರೆಯಲ್ಲಿಡಿದು ಮಣ್ಣು ತೆಗೆದು ಒಂದು ಬಾಂಡದಲ್ಲಿ ಹಾಕಿ (ಸಕವೈ. ೨೫೭). **ಗಡಪಾರೆ:** ಬಾಗಿಲು ತೆಗೆಯಲು ಬಾರದ್ದರಿಂದ ಗಡಪಾರೆಯಿಂದ ಒಡೆದು ತೆಗೆಯಬೇಕಾಯಿತು (ರೂಢಿ). **ಗಡಹಾರೆ:** ಸರಿಕಿನ ಕೋಟೆ ಕಟ್ಟಳೆಯುರಂ ಕುಡುಗೋಲೆತ್ತಿರೆಸೀರೆ ದಬ್ಬಳಂ ಹುರಿ ಗಡಹಾರೆ ನೇಣ್ಗೊಡಲಿ . . . ಸಾಧನಂಬೆರಸು ದಂಡಿನವರ್ ಪೊಱಮಟ್ಟರ್ (ತ್ರಿಪುವಿ. ೨೪-೨೮೫). **ಗಡಾರಿ:** ಮುಳ್ಳು ಹೊಕ್ಕರೆ ಮುಳ್ಳೇ ಸಾಧನ, ಗಡಾರಿಯಲ್ಲ (ಕನ್ನಸು. II, ೩೭೯); ಕೋಟೆಯ ಕದಗಳಿಗೆಲ್ಲ ಮೊನೆಯಾದ ಕಬ್ಬಿಣದ ಗಡಾರಿಗಳನ್ನು ನಾಟಿದ್ದರು (ಭಾರವೀ. ೧೦೦). [ದೇ॥ ತಮಿ. ಗಡಪ್ಪಾರೈ; ಗಡ್ಡಪಾರೈ; ತೆಲು. ಗಡ್ಡಪಾರ]

**ಗಡಬು** 'ಗಡುವು' ನೋ.

**ಗಡಮುಂಚಿಕೆ** (ನಾ). ೧. = ಗಡಗಂಚಿ: ಕೊಡವನ್ನೆತ್ತಿ ಗಡಮುಂಚಿಕೆ ಯಂತಿರುವ ಅಡ್ಡಹಲಿಗೆ ಮೇಲಿಟ್ಟುಕೋ (ದೇವೀಚಾ. ೯೭). ೨. "ಹಾಸಿಗೆ ಮುಂತಾದವುಗಳನ್ನು ಇಡುವುದಕ್ಕಾಗಿ ಮಾಡಿದ ಸುಮಾರು ಒಂದು ಅಡಿ ಎತ್ತರದ ಕಾಲುಮಂಚ" (ಅನಂನಾ).

[← ತೆಲು. ಗಡಮಂಚೆ, ಗಡಮಂಚೆ]

**ಗಡರಗಪ್ಪೆ** (ನಾ). ಮಂಡರಗಪ್ಪೆ; ದೊಡ್ಡ ಚೇಳು; ಎಮ್ಮೆಚೇಳು (ಉಕ); ಕಬ್ಬಿಣಚೇಳು (ಕರಾ): ತನ್ನ ಜೋಡಿಗೊಂದು ಗಡರಗಪ್ಪೆ (ಮಾಧವ. II, ೧೩೭). [ಗಡರ ? + ಕಪ್ಪೆ₁]

**ಗಡರು** 'ಗಟರು' ನೋ.

**ಗಡವ** (ನಾ). ೧. ದೊಡ್ಡ ಗಂಡು ಕೋತಿ ಅಥವಾ ಬೆಕ್ಕು: ತಂದೆ ಯಾದವನು, ಮೃಗದಲಿ ಗಡವನಂತೆ, ಮಗು ತನತಲ್ಲ ಎನ್ನಬೇಕೆಂದಲ್ಲ (ನವರಾ. IV, ೯); ಒಳ್ಳೆಯ ಗಡವ ಬೆಳೆದಂತೆ ಬೆಳೆದಿದಾಳೆ (ನಿಂದೆನ. ೨೦೪). (ಗು). ೨. ಕೊಬ್ಬಿದ; ಕಟ್ಟುಮಸ್ತಾದ: ನಾಲ್ಕುವಯಸ್ಸಿನ ಕೋತಿ ಎಲ್ಲರ ಕಣ್ಣಿಗೂ ಗಡವ ಕೋತಿಯಾಗಿ ಪುಟ್ಟರಾಕ್ಷಸನ ಹಾಗೆ ಇತ್ತು (ದಿನಾರಿ. ೬೭). [ದೇ. ॥ ತಮಿ. ಮಲ. ಗಡುವ]

**ಗಡವತನ** (ನಾ). ಗಟ್ಟಿತನ; ಕೊಬ್ಬಿರುವಿಕೆ: ಕರಡಿಯ ಗಡವ ತನವನು ಮೆಚ್ಚಿಕೊಂಡ (ಕಲ್ಲಿಕಾ. ೮೫). [ಗಡವ + – ತನ]

**ಗಡವು** 'ಗಡುವು' ನೋ.

**ಗಡಸರ್ಪ** (ನಾ). ದೊಡ್ಡಸರ್ಪ; ಭಯಂಕರವಾದ ಹಾವು: ಪರನಾರೀ ಪುತ್ರಕ ನಂಟರ ತೊಟ್ಟು ಕೆಳೆಗೆ ಕುಪ್ಪಾರ್ತ ಪಿಸುಣ ಗಡಸರ್ಪ ತೊಡಟ್ಟರ ಬೀವ ಬಾವನಬಣ್ಣ ಗುಣ್ಣಚಕ್ಕ ಜಡ್ಡುಗಂ (ಎಕ. II, ೩೧೭; ೯೫೦). [< ಘಟಸರ್ಪ]

**ಗಡಸು** 'ಗಡುಸು' ನೋ.

**ಗಡಸುಗಾತಿ** 'ಗಡುಸುಗಾರ್ತಿ' ನೋ.

**ಗಡಸುಗಾರತನ** 'ಗಡಸುಗಾಱತನ' ನೋ.

**ಗಡಸುಗಾಱ** 'ಗಡುಸುಗಾಱ' ನೋ.

**ಗಡಸುಗಾಱತನ**, ಗಡಸುಗಾರತನ (ನಾ). ಗಟ್ಟಿಗತನ; ಸೊಕ್ಕು; ದರ್ಪ; ಮೊಂಡುತನ: ಬಲ್ಲಿನವನ ಗಡಸುಗಾಱತನಮಂ (ಬದ್ಧಪ್ರ. ೧೨-೨೨೪). **ಗಡಸುಗಾರತನ:** ಗಡಸುಗಾರತನ ಹೋಗಿ ಹೆಮ್ಮೆಯ ಉಕ್ಕುಡುಗಿ (ಬದ್ಧಪ್ರ. XI, ಪೀಠಿಕೆ).

[ಗಡಸುಗಾಱ (< ಗಡುಸುಗಾಱ) + – ತನ]

**ಗಡಸುತನ** 'ಗಡುಸುತನ' ನೋ.

**ಗಡಸುನಗೆ** (ನಾ). ಬಿರುನಗೆ; ಅಟ್ಟಹಾಸ: ಕಿಟಕಿಯ ಬಳಿ ನಿಂತಿದ್ದ ಹೆಂಗಸರ ಗುಂಪಿನಿಂದ ಅಸಭ್ಯರೀತಿಯ ಗಡಸುನಗೆ ಕೇಳಿಸಿತು (ಪುನರು. ೧೪೫). [ಗಡಸು (< ಗಡುಸು) + ನಗೆ₂]

**ಗಡಹ** (ನಾ). ಬಾಗಿಲು; ದ್ವಾರ: ದುರ್ಗವ ಮೂಱು ದಾಂಟಿ ತನುತ್ರಯ ಮಲತ್ರಯಗಳೆಂಬ ಗಿರಿಗಡಹಗಳನು ದೀಕ್ಷಾತ್ರಯಂಗಳಿಂ ನಷ್ಟಂ ಮಾಡಿ (ಕವಿಚ. III, ೩೯೮; ಕರಸ್ಥಲದ ನಾಗಲಿಂಗ ತ್ರಿಪದಿ ಟೀಕೆ).

[← ತೆಲು. ಗಡಪ, ಕಡಪ]

**ಗಡಹಾರೆ** 'ಗಡಬಾರೆ' ನೋ.
**ಗಡಹು**$_1$ 'ಗಟಿವು' ನೋ.
**ಗಡಹು**$_2$ (ನಾ). ನಾಶಪಡಿಸುವ ಸಾಧನ (?): ಇಲಿ ಗಡ[ಪಾಠಾಂ. ಡು] ಹನೊಡ್ಡಿದಲ್ಲಿ ರ್ಪಂತೆ ಎನ್ನ ಸಂಸಾರ (ಬಸವ. ೧೦). [?]
**ಗಡಾ**$_1$ 'ಗಡ$_1$' ನೋ.
**ಗಡಾ**$_2$ 'ಗಡ$_5$' ನೋ.
**ಗಡಾಣಿ** (ನಾ). ಒಂದು ಬಗೆಯ ಚರ್ಮವಾದ್ಯ: ಕುಂದಪ್ರಜ ಪಟ್ಟಾವುಜ ಕುಡುಬಾಹುಜ ಆಡಾಹುಜ ಗಡಾಣಿಯೆಂಬೈದು ತೆಱನಾದಾ ಜವನೋಜೆಯಿಂ ಬಾಜಿಸುವ (ವಿವೇಕ. ೨೩೭). [?]
**ಗಡಾಯಿ** (ನಾ). (ಕರಾ) ಗಡಿ; ಮೇರೆ: 'ಗಡಾಯಿಸು' ಪರಾ. [?]
**ಗಡಾಯಿಸು** (ಕ್ರಿ). ೧. ಗಡಿಕಲ್ಲಿನಂತೆ ಭದ್ರಪಡಿಸು; ನೆಡು: (*). ೨. ಕಲ್ಲನ್ನು ಕಟ್ಟಡಕ್ಕಾಗಿ ಕಡೆದು ಸಿದ್ಧಮಾಡು; ಕಲ್ಲುಕಡೆ: ಕಲ್ಲನ್ನು ಗಡಾಯಿಸುತ್ತಿದ್ದಾರೆ (ರೂಢಿ). [ಗಡಾಯಿ + – ಇಸು$_3$]
**ಗಡಾರಿ** 'ಗಡಬಾರೆ' ನೋ.
**ಗಡಾವಣೆ**$_1$ (ನಾ). ಒಟ್ಟಿಗೆ ಸೇರುವಿಕೆ; ಒಂದಾಗುವಿಕೆ: ಅಱಿವ ಮನ ಏಕವಾಗಿಯಲ್ಲದೆ ವಸ್ತುವನೊಡಗೂಡಬಾರದು ರಜ್ಜು ಒಂದೇ ಗಡಾವಣೆಯಲ್ಲಿ ಎರಡೆ ಬಳಿಕಿಲ್ಲ (ಮೋಳಿಮಾ. ೨-೩). [<ಗಡಣ]
**ಗಡಾವಣೆ**$_2$, ಗಢಾವಣೆ, ಘಡಾವಣೆ (ನಾ). ೧. ಗಟ್ಟಿಯಾದ ಶಬ್ದ; ಬೊಬ್ಬೆ; ಕೋಲಾಹಲ: ತಾಳ ಸಮೇಳ ಸದ್ಗತಿಯಿಂದಲುಗ್ಘಡಣೆಯ ಗಡಾವಣೆಯಿಂದಲಲ್ಲಮನು . . . ಬಾಜಿಸುತಿರ್ದನೈ ಹಲವಂದದಲಿ ಮದ್ದಳೆಯ (ಪ್ರಭುಲೀ. ೫-೯); ಯುದ್ಧದ ಗಡಾವಣೆಯಿಂದ ಹೊಕ್ಕರು ಕಾಳೆಗದ ಕಣನ (ಕೋಗಯು. ೨೩-೧೭); ಗುಡುಗಿಗಿಂತಲೂ ಹೆಚ್ಚಿನ ಗಡಾವಣೆಯುಳ್ಳ ಧ್ವನಿ ವಂದು ಅವನಿಗೆ ಕೇಳಿಸಿತು (ಪೈಮುಹ. ೧೫). ೨. ಸಂಭ್ರಮ; ಸಡಗರ; ವೈಭವ: ಜಂಗಮರಾಯನಮೃತ ಪ್ರಯೋಗಕಾಲದೊಳೊಲವಿನಿಂ ಶೈವಾಗಮೋಕ್ತದೊಳೆಸಗಿದನು ಗೌರವ ಗಡಾವಣೆಯ (ಶಂಕದಾ. ೪-೩). **ಗಢಾವಣೆ**: ೧. ಚತುರಂಗದ ಗಢಾ[ಪಾಠಾಂ. ಡಾ]ವಣೆ ಘಾಡಿಸಿತು ಜಗವ (ತೊರರಾ. ೬-೧-೧೦); ಮಾತಿನ ಗಢಾ[ಪಾಠಾಂ. ಡಾ]ವಣೆಗಾ ವನೌಕಸಜನಪನೆದ್ದನು (ತೊರರಾ. ೬-೫-೨೩). **ಘಡಾವಣೆ**: ೧. ಚಾಪಾಗಮಾಚಾರ್ಯನ ಘಡಾವಣೆ ಘುಲ್ಲಿಸಿತು ಜಗವ (ಸಂಭಪ. ೧೮-೪೧); ಮುನಿತರ್ಕದ ಘಡಾವಣೆ ಘಾಡಿಸಿದುದಾ ಯಜ್ಞಮಂಟಪವ (ತೊರರಾ. ೧-೭-೪೫). ೨. ಕಳವಳಿಸಿದವು ಕರಣವಿಂದ್ರಿಯಗಳು ನಿತಂಬಿನಿಯರಲಿ ಸಿಕ್ಕಿದನಲರುಗಣೆಯಣ್ಣನ ಘಡಾವಣೆಗಾ ವಿಭಾಂಡುಸುತ (ತೊರರಾ. ೧-೫-೫೩); ಸಡಗರದ ಸೌರಂಭದಲ್ಲಿ ಕೆನ್ನೆಯ ಮೇಲೆ ಕೈ ಎಳೆದುಕೊಂಡರೆ ಆಗಲೆ ಘಡಾವಣೆ ಘಾಡಿಸಿರುತ್ತದೆ (ಗಾಳಿಪ. ೭೭). ೩. ಆಧಿಕ್ಯ; ಹೆಚ್ಚಳ: ಹಲ್ಲಣಿಸಿ ಹರಿತಂದು ಮೋಹರವಲ್ಲಿಗಲ್ಲಿಗೆ ನಿಂದುದೆರಡಱ ಘುಲ್ಲಣೆಯ ಘಾಯದ ಘಡಾವಣೆ ಮಿಱಿ ಘಾತಿಸಿತು (ಕುವ್ಯಾಭೀ. ೭-೨). [?]
**ಗಡಿ**$_1$ (ನಾ). ೧. ಎಲ್ಲೆ; ಮೇರೆ; ಅಂಚು; ಸೀಮೆ: "ವಸುಮತೀಶರಿಗೆ ತಮಗೆನಿತು ಮಹಿಯುಂಟದಱ ಪೆಸರು ರಾಷ್ಟ್ರಮೆನಿಕ್ಕು ಆದಱ ಕಡೆ ಗಡಿಯಕ್ಕು" (ಮಂಗರಾ. ೫೬-೨); ಮೂಡಲುಂ ತೆಂಕಲುಂ ಪಳ್ಳಂ ಗಡಿಯಾಗಂತು ಚತುರಾಘಾಟದಿಂ (ಎಕ. VII, ಶಿಕಾರಿ. ೧೫೧-೬೧; 1047); ಜಾರೆಯ ಮಗನಂ ಗಡಿಯ ನಾಯಕನಂ ನಂಬಿಸಿ ಕೊಲ್ವವನಂ ಪೋಲ್ವ ಸಮ್ಯಜ್ಮಿಥ್ಯಾತ್ವಮುಮಂ . . . ಪರಿಹರಿಪುದುಂ (ಧರ್ಮಾಮೃ. ೫-೧೨೫); ಗಡಿಯ ದುರ್ಗಗಳ ಮುತ್ತಿದ ಪಗೆವಡೆಯ ಸನ್ನಾಹವ ಕೇಳಿ (ಕಂನವಿ. ೩-೪೯). ೨. ಆಶ್ರಯ; ನೆಲೆ; ಬೀಡು: "ಗಡಿ – ಆಶ್ರಯಕ್ಕೆ ಪೆಸರ್" (ಕಶಸಾ. ೧೫-೩೯೦); "ಗಡಿ ಗರುಡಿ ಬೀಡುಮಾಡುಂಬೊಲನೆಂದಕ್ಕು" (ಕವಿಕಂ. ೧೩೫). ೩. ತಾಲ್ಲೂಕು: ಇಂತಹ ಕೆಲವು ಹೋಬಳಿಗಳು ಕೂಡಿದರೆ (೪-೧೦) ಒಂದು ಗಡಿಯಾಗುತ್ತಿದ್ದಿತು. ಹತ್ತಿಪ್ಪತ್ತು ಗಡಿ ಕೂಡಿ ಒಂದು ನಾಡು (ವಿನಸಾ. ೭೪).

**ಗಡಿಯಂಕಭೀಮ** = ಗಡಿಯಲ್ಲಿ ರಣರಂಗಭೀಮನಂತಿರುವವನು; ಒಂದು ಬಿರುದು: ಗಡಿಯಂಕಭೀಮ ಗಡಿಗೆ ಲಾಳವಿಂಡಿಗೆ ಮಱಿವೊಕ್ಕರೆ ಕಾವ ಸಿತಗರಗಂಡ (ಎಕ. XVI, ತಿಪಟೂ. ೧೭೦-೮; 1277); ಸ್ವಾಮಿದ್ರೋಹದ ಗಂಡ ಗಡಿಯಂಕಭೀಮ ರಾಂ[ಮ] ರಾಜೇಂದ್ರ (ಕಇ. IV, ೩೦-೭; 1505). **ಗಡಿಯಂಕಮಲ್ಲ** = ಗಡಿಯ ಯುದ್ಧದಲ್ಲಿ ಶೂರನಾದವನು; ಒಂದು ಬಿರುದು: ಚಲದಜ್ಜರಾಮಂ ಗಡಿಯಂಕಮಲ್ಲಂ (ಎಕ. III, ಹುಣಸೂ. ೧೦-೫; 1020); ಗಡಿಯಂಕಮಲ್ಲನೆನಿಪ್ಪತ್ತೊರ್ಡದರ್ಪರ ಜವನೆನಿಪರ್ . . . ಅಱುವಗ್ಗಾರ್ವುಂಡುಗಳ್ (ಕಇ. I, ೨೪-೧೨; 1148). **ಗಡಿಯಂಕಸಿಂಗ** = ಗಡಿಯ ಯುದ್ಧದಲ್ಲಿ ಸಿಂಹದಂತಿರುವವನು; ಒಂದು ಬಿರುದು: ಗಡಿಯಂಕಸಿಂಗಂ ಶಿವಧರ್ಮ್ಮನಿರುತಂ (ಸೌಇಇ. XI-i, ೧೦೦-೨೭; 1064).
[ದೇ. ‖ ತುಳು. ತೆಲು. ಗಡಿ. / ಸಂ. ಘಟ]
**ಗಡಿ**$_2$ 'ಗಱಿ' ನೋ.
**ಗಡಿ**$_3$ (ನಾ). ಸಣ್ಣ ಕೋಟೆ; ಚಿಕ್ಕದುರ್ಗ: (*).
[ದೇ. ‖ ತಮಿ. ಕಡಿ; ತೆಲು. ಗಡಿ. / ಹಿಂ. ಮರಾ. ಗಡೀ, ಗಢೀ]
**ಗಡಿ**$_4$ (ನಾ). ೧. = ಗಡಿಗೆ ೧: "ಗಡಿ(ಡೆ) – ಘಟೀ = ಸಣ್ಣಕೊಡ" (ತದ್ಭಕೋ. ೯). ೨. ಗಳಿಗೆ; ಅವಧಿ; ಕಾಲ: ಮುನ್ನಿನ ಪರಿಯನ ದಱಿೊಳಾ ಪರಿಯನೇಳೆಂಟು ಗಡಿತನಕ ಕಂಡು (ಸಿದ್ಧರಾ. ೬-೮); ನುಡಿಯ ನುಡಿದಾಲಿಪುದು ನಾನೀವ ಭಾಷೆಗಳ ಗಡಿಯಂ (ಸಿದ್ಧರಾ. ೭-೮). 'ಗಡಿಯಾರ', 'ಗಡಿಯಾಲ' ಪರಾ. [< ಸಂ. ಘಟೀ]
**ಗಡಿಂಬ**, ಗಡಿಬ, ಗಳಿಂಬ (ನಾ). ಭೂಮಿಯ ಅಳತೆ, —ಪ್ರಮಾಣ: ಕಚ್ಚವಿಯ ಗಡಿಂಬದ ಗಳೆಯೊಳ್ ಅಳೆದು ಕೊಟ್ಟ ಗಱ್ದೆ ಮತ್ತರೆರಡು (ಮೈಆರಿ. ೧೯೨೯, ೬೫-೮; 1024); ನಗರೇಶ್ವರದ ಗಡಿಂಬದ ಕೋಲೊಳ್ (ಸೌಇಇ. XI-i, ೯೭-೩೧; 1062); ಹುಲಿಗೆಱಿಯ ಗಡಿಂಬದ ಗಳೆ (ಎಇ. XVI, ೪೮-೫೪; 1147). **ಗಡಿಬ**: ಕೋಗಳಿಯ ಹೊಲದ ತೆಂಕಣದೆಸೆಯಾ ಮೇರೆಯೊಳಾ ಗಡಿಬದೊಳಂ ಧಾರಿಣಿಯಱುವತ್ತು ಮತ್ತರೆರೆಯಂ ಬಿಟ್ಟರು (ಸೌಇಇ. IX-I, ೧೫೩-೫೮; 1083); ಪೂರ್ವದ ಗಡಿಬ ಏಳುಮಾರ (ಎಕ. XVI, ಚಿಕ್ಕನಾ. ೬೯-೫೪; 1178); ಗಡಿಬ ಗದ್ದೆಗೆ ಕಳಂ (ಎಕ. II, ೩೨೦-೧; 1650). **ಗಳಿಂಬ**: ಆ ದೇಗುಲದ ಕೆಱಿಯ ಕೆಳಗೆ ಕಚ್ಚವಿಯ ಗಳಿಂಬದೊಳೆ ಬಿಟ್ಟ ಗಱ್ದೆ (ಎಕ. VII, ಶಿಕಾರಿ. ೨೦-೧೫; 1032). [?]
**ಗಡಿಕಲ್ಲು** (ನಾ). ಗಡಿಯನ್ನು ಸೂಚಿಸುವುದಕ್ಕಾಗಿ ನೆಟ್ಟ ಕಲ್ಲು; ಸೀಮೆಕಲ್ಲು; ಬಾಂದುಕಲ್ಲು: ವಿಜಾಪುರಜಿಲ್ಲೆಯ . . . ಗುಡಿಹಾಳ ಮತ್ತು ಕುಂಟೋಜಿ ಗ್ರಾಮಗಳ ನಡುವಣ ಗಡಿಕಲ್ಲಿನಲ್ಲಿ ಇದು ಬಸವರಾಜದೇವರ ಮಾನ್ಯ ಎಂದಿರುವಲ್ಲಿ (ಮೂರುಉ. ೫೯); ಮೈಸೂರು ಸೀಮೆ ಗಡಿಕಲ್ಲು (ರೂಢಿ). [ಗಡಿ$_1$ + ಕಲ್ಲು (<ಕಲ್$_3$)]
**ಗಡಿಕಾರ** (ನಾ). ಗಡಿಕಾಯುವವನು; ರಕ್ಷಕ: ಕಾಷ್ಠತಟುವೆಂಬ ಗಡಿಕಾರಂ ಪುಳ್ಳೆಯ ಪೊರೆಯಂ ಪೊತ್ತು ಬರುತ್ತಂ (ಕಗವಿ. ೧೦೫-೨ ರಾಜಾವಳೀಕಥೆ). [ಗಡಿ$_1$ + – ಕಾರ$_1$ (<–ಕಾಱ)]
**ಗಡಿಕೊರೆ** (ಕ್ರಿ). ಗಡಿಯನ್ನು ಬರೆ, —ಗುರುತುಮಾಡು; ಗೆರೆಹಾಕು: ನಡುನಡುವೆ ಗಡಿಕೊರೆದು ಆಡದಿರು 'ಹುಡುತುತು' ಹೂಡದಿರು ಹೋರಿಗಳ ಸುಮ್ಮಸುಮ್ಮ (ನೆಲಮು. ೧೮). [ಗಡಿ$_1$ + ಕೊರೆ$_1$ (<ಕೊಱ$_1$)]

**ಗಡಿಕೊಳಗ** (ನಾ). ಗುತ್ತಿಗೆ ಧಾನ್ಯ ಅಳೆಯುವ ಕೊಳಗ; ದೊಡ್ಡ ಕೊಳಗ : ಕೊಳಗವೆಂದರೆ ಗಡಿಕೊಳಗವಲ್ಲ; ಕೂಲಿಯ ಕೊಳಗ . . . ಸಾಹುಕಾರರೂ, ತಮಗೆ ಬರಬೇಕಾದ ಭತ್ತವನ್ನು ಅಳೆಯಿಸುವಾಗ ಗಡಿಕೊಳಗದಲ್ಲಿ ಅಳೆಯಿಸಿಕೊಳ್ಳುತ್ತಿದ್ದರು (ಪಂಜಪಂ. ೯). 'ಕೂಲಿಕೊಳಗ' ಪರಾ. [ಗಡಿ$_4$? + ಕೊಳಗ$_1$]

**ಗಡಿಗಟ್ಟು** (ಕ್ರಿ). ಗಡಿಯನ್ನು ರಚಿಸು; ಎಲ್ಲೆಯನ್ನು ಕಲ್ಪಿಸು; ಸೀಮೆಯನ್ನು ಗುರುತಿಸು : ಸೃಷ್ಟಿಯಲಿ ಯಿಾ ಕಾಲಗತಿ ಗಡಿಗಟ್ಟಿ ಲಜ್ಜೆಯದ ಪರಮಮಹಿಮನ ಕಟ್ಟಿದಳು ದಾಮದಲಿ ನಂದನಕಾಂತೆ ಮುರಹರನ (ನಿಭಾಗ.೧೦–೯ ಸೂಚನೆ); ಸೃಷ್ಟಿಪಾಲಕರೊಡೆಯನಂಘ್ರಿಯ ಮುಟ್ಟಿ ಮೋಕ್ಷವ ಪಡೆಯೆನುತ ಗಡಿಗಟ್ಟಿದರು ಶಾಪಕ್ಕೆ (ನಿಭಾಗ. ೧೦–೨೯–೧೪). [ಗಡಿ$_1$+ಕಟ್ಟು$_1$]

**ಗಡಿಗಾಡು** (ನಾ). ಗಡಿಯಲ್ಲಿರುವ ಕಾಡು : ಕಾಣದ ಗಡಿಗಾಡು ಗಳಿಂದ, ದುರ್ಗಮ ದುರ್ಗಗಳಿಂದ (ದ್ರಾಕ್ಷಿದಾ. ೧). [ಗಡಿ$_1$+ಕಾಡು$_2$]

**ಗಡಿಗುತ್ತಿಗೆ** (ನಾ). ಕ್ಲುಪ್ತಕಾಲದ ಗುತ್ತಿಗೆ: ಚಂದ್ರಯ್ಯಗೌಡರ ಗದ್ದೆತೋಟಗಳನ್ನು ಗಡಿಗುತ್ತಿಗೆಗೆ ಮಾಡಿಕೊಂಡು ಒಕ್ಕಲಾಗಿದ್ದರು (ಕಾನೂರು. ೬೮). [ಗಡಿ$_4$+ಗುತ್ತಿಗೆ$_1$ (< ಗುತ್ತಗೆ)]

**ಗಡಿಗೆ, ಗಡಗೆ, ಗಡುಗೆ, ಗಡ್ಡಿಗೆ, ಗಡ್ಡುಗೆ** (ನಾ). ೧. ಮಣ್ಣಿನ ಪಾತ್ರೆ; ಕೊಡ : ತುಪದ ಗಡಿಗೆಯಂತೆ ಇದು ಹಸನಲ್ಲ (ಮೋಳಿಮಾ. ೧೧೭–೪೬೦); ಕುದಿವುತಿಹ ಗಡಿಗೆಯಂ ಪೊಡೆದಿವಿದು ತತ್ಕಂಠಮಂ ದ್ವಿಜನ ಕೊರಳಿಂಗೆ ಸಿಕ್ಕಿಸಿದನು (ಗುರುಚಾ. ೧೫–೫೧); ಒಡೆವ ಗಡಿಗೆಯನ್ನು ಸರಿಪಡಿಸಿ ಆಗುವದೇನು? (ದಾಸಿ. ೬೫); ಕುರುಡಿಯ ಮದುವೆಯಾದರೆ ಮನೆಯ ಗಡಿಗೆಗೆ ಮೂಲ (ಗಾದೆ). **ಗಡಗೆ: ೨.** ಜಂತೆಗಳನ್ನು ಇರಿಸುವುದಕ್ಕೆ ಮಾಡಿದ ದುಂಡಗಿನ ಆಕಾರದ ಸಾಧನ; ಗುಂಭ: ವೈಡೂರ್ಯದ ಗಡಗೆಗಳೆಸೆಯೆ ಬೀಜ್ ಶಶಿಕಾಂತದ ಜಂತೆಗಳೊಪ್ಪಿ ತೋಱೆ (ಸುಕುಮಾ. ೧೦–೬೬ ರ); ನವಕನಕಸ್ತಂಭದ ಮೇಗನುಮಾಡಿದ ಗಡಗೆಗಳೆನೆ ಸತಿಯ ನಿತಂಬಂ ಸೊಗಯಿಸಿತು (ಜಯಕಾ. ೩–೩೧); ಸೇರಿದ ಮುತ್ತಿನ ಗಡಗೆ ಬೋದಿಗೆಯಿಂದ ಸಾರಸಿಂಗರದೊಳೊಪ್ಪಿದುವು (ನಾಗಕು. ೨೭–೧೬). **ಗಡುಗೆ: ೧.** ಕ್ಷೀರಂ ದಧಿ[ಘೃ]ತಸಿತ ಮಧುಧಾರಾಳಿಯ ಲಕ್ಕೆ ಗಡುಗೆಗೊಟ್ಟ [ಸೊಂ]ಟಿಗೆ (ಸೌಇಇ. XX, ೪೯–೫೨; 1076); ಪ್ರತಿವರ್ಷಂ ಲಕ್ಷಗಡುಗೆ ನಿಮಿತ್ತವಾಗಿಯಲ್ಲಿ ಯರ್ಗ್ಗವಾಣೆಯಂ ತಹರು ನಾಲ್ವರು ಪುಟ್ಟಮನಿಕ್ಕುವ ಗಡುಗೆಯಂ ಕುಡುವ (ಸೌಇಇ. IX–i, ೨೫೫–೧೬; 1148); ಜೀವಿತವಗ್ಗ್ರಮುಂ ಗಡುಗೆಯುಂ ನೈವೇದ್ಯಮುಂ (ಎಕ. VI; ಕಡೂರು. ೫೧–೬೦; 1169); ಗ್ರಾಮು ಶಾಸ್ತ್ರಿಯಲುಂ ದೇವಗ್ಗ್ರೆ ಸಹಸ್ರ ಗಡುಗೆ ಪೂಜೆ (ಸೌಇಇ. IX–i, ೨೭೬–೪೮; 1183). **ಗಡ್ಡಿಗೆ: ೧.** ಬಡ್ಡಣಿಸಿ[ಒಡ್ಡವಿಸಿ]ದರಂಗನೆಯ ರೂಪ್ಪುವ ಗಡ್ಡಿಗೆಯ ತೀಳದುಪ್ಪವಂ ಪೂರೈಸಿ (ಮದೇಪು. ೧೬–೨೪). **ಗಡ್ಡುಗೆ: ೧.** ಘಳಮುಣೀಗುವಾ ಪಬ್ಬಂಗಳೊಳ್ದೇವಗ್ಗ್ರೆ ಸಹಸ್ರ ಗಡ್ಡುಗೆಯಂ ಪ್ರಾರಂಭಿಸಿ ಪುಂಜ್ಯಾಹವಾಚನೆಯಂ ಮಾಡಿ (ಎಕ. VII, ಶಿಕಾರಿ. ೧೮೫–೬೩; 1158). [< ಸಂ. ಘಟಿಕಾ, ಗಡ್ಡುಕ, ಗಡ್ಡೂಕ]

**ಗಡಿಗೆಗುಮ್ಮ** (ನಾ). ೧. ಗಡಿಗೆಯೊಳಗಿರುವ ಭೂತ. ೨. (ಅಲಂ) ಸದ್ದುಗದ್ದಲವಿಲ್ಲದೆ ತನ್ನ ಅಭಿಪ್ರಾಯಗಳನ್ನು ಅದುಮಿಕೊಂಡಿರುವ ವ್ಯಕ್ತಿ: ಅದಕ್ಕೇನೆ ಹೀಗೆ ಗಡಿಗೆಗುಮ್ಮನಂತೆ ಇರೋದು (ತುಂಬಿಕೊ. ೮). [ಗಡಿಗೆ+ಗುಮ್ಮ$_1$]

**ಗಡಿಗೆಡು** (ಕ್ರಿ). ಎಲ್ಲೆಮಿಾರು; ಅವಧಿಯನ್ನು ಅತಿಕ್ರಮಿಸು; ಹದ್ದುಮಿಾರು : ಗಡಿಗೆಟ್ಟಜಾಂಡಕೋಟಿಯನೆಡೆಯುಡುಗದೆ ನುಂಗಿಯು ಗುಟ್ಟಿ ನಿನಗೀ ಪಗೆಯಂ ಮುಡಿಪುವುದು ಪಿರಿದೆ (ಜಗವಿ. ೬–೮೨); ಕುಡಿಯುಟ್ಟುದು ಧೀಂಕಿಟ್ಟುದು ಗಡಿಗೆಟ್ಟುದು ಪುಣ್ಯಕೀರ್ತಿಲತೆ ಧಾರುಣಿಯೊಳ್ (ಗಿರಿಕ. ೩–೬೪); ಚಂಡವರ್ಮಂ ಗಡಿಗೆಟ್ಟ ಕೋಪದೊದವಿಂ ದಳಮುಖ್ಯನನಂದು ನೋಡಿದಂ (ದಶಕು. ೭–೪೮); ಬಿಟ್ಟು ಹೆಂಡಿರು ಮಕ್ಕಳನು ಗಡಿಗೆಟ್ಟ ಭಂಡಾರವನು . . . ಹೊಱವಂಟನು ನಿಜಾಲಯವ (ನಿಭಾಗ. ೬–೧೪–೨೩); ಗಡಿಗೆಟ್ಟುದು ಕಪ್ಪೀಟಂ ನಡೆಗೆಟ್ಟುದು ಚಿತ್ತವೃತ್ತಿ (ರಾಜಶೇ. ೭–೬೮). [ಗಡಿ$_1$ + ಕೆಡು$_1$]

**ಗಡಿಗೆಬಾವಿ** (ನಾ). ಓಡೆಯ ಬಳಿಯಲ್ಲಿ ಕಟ್ಟಿದ ಬಾವಿ; ಓಡೆಬಾವಿ : ಗಡ್ಡಂ ಮಿಾಸೆಗಳು ಬೇಯಲು ಸಮಿಾಪದ ಗಡಿಗೆಬಾವಿಗಳೊಳಗೆ ಧುಮ್ಮಿಕ್ಕುವರು ತಮ್ಮಯ ಪ್ರಾಣಸಂಕಟಕೆ (ಬಸವು. ೫೬–೩೪). [ಗಡಿಗೆ + ಬಾವಿ]

**ಗಡಿಗೆಮೋಡ** (ನಾ). ಜಲಾಂಶವಿರುವ ಮೋಡ; ಕಾರ್ಮೋಡ: ಅನಾವೃಷ್ಟಿಯಿಂದ ಪೈರೆಲ್ಲ ಒಣಗಿಹೋಗುವಷ್ಟರಲ್ಲಿ ಹುಟ್ಟಿದ ಗಡಿಗೆ ಮೋಡದಂತೆ (ಮುಂಬಯಿ. ೬–೨೧೪). [ಗಡಿಗೆ + ಮೋಡ$_1$]

**ಗಡಿಗೆಮ್ಮ** (ನಾ). ಒಂದು ಕ್ಷುದ್ರದೇವತೆ; ಮಾರಮ್ಮ: ಚವಡಿಕಿ ಮಾರಿ ಮಸಣಿ ಜಕ್ಕಿ . . . ಕೊಲ್ಲುವ ಪೋತಗನು ಕಚ್ಚಿನ ಗಡಿಗೆಮ್ಮ (ವಿಸಾಸು. ೫೮–೨). [ಗಡಿಗೆ + ಅಮ್ಮ$_2$]

**ಗಡಿಗೆಱೆ** (ನಾ). ಒಂದು ಕೆರೆಯ ಹೆಸರು : ಗಡಿಗೆಱೆಯ ಕೆಲಗಣ ತೋಣ್ಣ (ಕಇ. II, ೫–೩; 859). [ಗಡಿ$_1$ + ಕೆಱೆ]

**ಗಡಿಗೋಂಟೆ** (ನಾ). ಗಡಿಯಲ್ಲಿರುವ ಕೋಟೆ: ಪಡುವ[ಣ] ಮೂಡಣ ತೆಂಕಣ ಗಡಿಗೋಂಟೆಯ ಕಾಪುಗೊಂಡ ಪಡೆವಳರ್ (ಅಪ್ರತಿ. ೨–೭); ಗಡಿಗೋಂಟೆ, ನಡೆಗೋಂಟೆ (ಭಾಷಾಶಾ. ೨೫೭). [ಗಡಿ$_1$ + ಕೋಂಟೆ]

**ಗಡಿತಂಟೆ** (ನಾ). ಗಡಿವಿವಾದ, — ಜಗಳ : ಗಡಿತಂಟೆಯಲ್ಲಿ ಚೀನಕ್ಕೆ ತುಂಬ ಆಸಕ್ತಿಯಿರುವಂತಿದೆ (ರೂಢಿ). [ಗಡಿ$_1$ + ತಂಟೆ$_1$]

**ಗಡಿತಡಿ** (ನಾ). ಗಡಿಪ್ರದೇಶ, —ದಡ: ಒಡೆಯರು ಭಕ್ತರಿಗೆ ಮಾಡಿಹೆನೆಂದು ಗಡಿತಡಿಗಳಲ್ಲಿ . . . ನಿಂದು ಕಾಯಲೀತಕ್ಕೆ (ಸರ್ವವ. ೭೬–೪೨೪). [ಗಡಿ$_1$ + ತಡಿ$_2$]

**ಗಡಿದುರ್ಗ** (ನಾ). = ಗಡಿಗೋಂಟೆ : ಒಡೆಯಂಗುತ್ಸವವಾಗೆ ಸರ್ವಜನಮಾನಂದಂಗೊಳಲ್ ರಾಜ್ಯದೊಳ್ . . . ಗಡಿದುರ್ಗಂಗಳು ಭದ್ರವಾಗೆ . . . ನಡೆವಂ ಮಂತ್ರಿವರೇಣ್ಯನೈ (ಸೋಮೇಶ. ೬೫); ಅರಿಪುರದೆಡಬಲ ಗಡಿದುರ್ಗಗಳನೀಗ ಭರದೆ ಮುತ್ತಿಗೆಯಿಕ್ಕಿ ಸೆಳೆಯೆ (ಕಂನವಿ. ೩–೨೦); ಕೆಲವರು ಯುದ್ಧಸನ್ನದ್ಧರಾಗಿ ಕೋಟೆ ಕೊತ್ತಲ ಗಡಿದುರ್ಗಂಗಳಂ ಸಜ್ಜುಮಾಡಿ (ಸೌಗಂಧಿ. ೨೫೪–೧೨); ಗಡಿದುರ್ಗದೊಳೆ ಮೆಟ್ಟಿ ಮುರಿದಟ್ಟಿಬಿಡಿ ನೀವು ಕೆಟ್ಟ ಆಲೋಚನೆಗಳನು (ಇಂಚಾಪಿ. ೧೯೨–೫೦). [ಗಡಿ$_1$ + ದುರ್ಗ]

**ಗಡಿನಾಡು** (ನಾ). ಗಡಿಯಲ್ಲಿರುವ ಪ್ರಾಂತ್ಯ : ನಮ್ಮ ರಾಜ್ಯದ ಗಡಿನಾಡುಗಳಲ್ಲಿ ಸಮ್ಮೇಳನಗಳು ನಡೆದವು (ರೂಢಿ). [ಗಡಿ$_1$ + ನಾಡು]

**ಗಡಿಪಾರು, ಗಡೀಪಾರು** (ನಾ). ಗಡಿಯಿಂದ ಹೊರಗೆ ಹಾಕುವುದು; ದೇಶದಿಂದ ಓಡಿಸುವುದು; "ಹದ್ದುಪಾರು" (ಜಾನಕೋ. ೪೫). **ಗಡೀಪಾರು** : ಅರಬಿ ಪಾಷನನ್ನು ಸೆರೆಹಿಡಿದು ಸಿಲೋನಿಗೆ ಗಡೀಪಾರು ಮಾಡಿದರು (ಇಸ್ಲಾಂಸಂ. ೫೫); ಇನ್ನು ಅತ್ತೆಯವರ ಕಾಶೀಯಾತ್ರೆ? ನನ್ನ ಗಡೀಪಾರು (ಕೊನೆಭೇ. ೧೫೦); ನನ್ನ ಕೈಗೂ ಕೋಳ ಹಾಕಿದರು; ಈಗ ಗಡೀಪಾರು ಶಿಕ್ಷೆ ಕಾದಿದೆ (ಪುನರು. ೨೪೧). [ಗಡಿ$_1$ + ಪಾರು?]

**ಗಡಿಬ** 'ಗಡಿಂಬ' ನೋ.

**ಗಡಿಬಿಡಿ** 'ಗಡಬಡ' ನೋ.

**ಗಡಿಭತ್ತ, ಗಡೀಭತ್ತ** (ನಾ). ಗುತ್ತಿಗೆಯಾಗಿ ಕೊಡುವ ಭತ್ತ : ಬೀಜ ೧೭ ಅದಕ್ಕಂ ಗಡಿಭತ್ತ ೩೭ (ಎಕ. VI, ಕೊಪ್ಪ. ೪೭–೧೯; 1530);

ಅರೆಖಂಡುಗ ಭೂಮಿ ಗಡಿಭತ್ತ (ಎಕ. VI, ಕೊಪ್ಪ. ೫೮–೭ ; 1592 ). **ಗಡೀಭತ್ತ :** ಬೀಜವರಿ ಖಂ ೧೧೨೮ಕ್ಕೆ ಗಡೀಭತ್ತ ಖಂ ೫೨೭೧ (ಎಕ. VIII, ತೀರ್ಥಹ. ೧೯–೫೯ ; 1573).

[ಗಡಿ₄ ? + ಭತ್ತ (< ಬತ್ತ₁)]

**ಗಡಿಮನ್ನೆಯ** (ನಾ). = ಗಡಿಕಾರ : ನಮ್ಮ 'ಗಡಿಮನ್ನೆಯ'ರನ್ನು ಕರೆದು, ಆಪ್ಪಣೆಮಾಡಿ ಲಗ್ಗೆಯೇರಿದ ರಿಪುಬಲವನ್ನು ಯಮಸದನಕ್ಕಟ್ಟಿಸು (ಕರ್ಣಾಜ. ೫೦). [ಗಡಿ₁ + ಮನ್ನೆಯ]

**ಗಡಿಮೀರು** (ಕ್ರಿ). ೧. ಗಡಿದಾಟು. ೨. ಮಿತಿಮೀರು ; ಅಳತೆಮೀರು: ಅಕ್ಕ ಬಂದರೆ ಆಗುವ ಖರ್ಚು ಗಡಿಮೀರುತ್ತದೆ (ಕಾವೇರಿ. ೧೨). [ಗಡಿ₁ + ಮೀರು (< ಮೀಱು)]

**ಗಡಿಯಾರ** 'ಘಳಿಯಾರ' ನೋ.

**ಗಡಿಯಾಲ** 'ಘಳಿಯಾರ' ನೋ.

**ಗಡಿಯಾಳ** 'ಘಳಿಯಾರ' ನೋ.

**ಗಡಿಯಿಡು** (ಕ್ರಿ). ಎಲ್ಲೆಯನ್ನು ಕಲ್ಪಿಸು; ಅವಧಿಯನ್ನು ಹೇಳು(?): ತಳರ್ದನೆತ್ತ ಮೊಗಸಿದನಾವಂ ಗಡಿಯಿಟ್ಟನಣ್ಣನೆಂದುಂ ಪುಡಿಕೆಯ ಮೊಲದಂತೆ ತುಬ್ಬುತಿರ್ಪರ್ ಪಗೆವರ್ (ಚಾವುಂಪು. ೫–೨). [ಗಡಿ₁ + ಇಡು₁]

**ಗಡಿಯೊತ್ತು** (ನಾ). ಗಡುವಿನ ಕಾಲ ; ಅವಧಿಯ ಸಮೀಪ : ನುಡಿದು ಹುಸಿದನೆ ಬಪ್ಪೆನೆಂದು ತಪ್ಪಿದನೆ . . . ಗಡಿಯೊತ್ತಿನೊಳು ಬಂದ ಭಾಪುರೆ ಸಿದ್ಧಪತಿಯೆ (ಸಿದ್ಧರಾ. ೬–೫೩).

[ಗಡಿ₄ + ಪೊತ್ತು₂ (< ಪೊೞ್ತು)]

**ಗಡಿರೇಖೆ** (ನಾ). ಗಡಿಯನ್ನು ಗುರುತಿಸಲು ಎಳೆದಿರುವ ರೇಖೆ ; ಸೀಮಾರೇಖೆ : ಹಸಿರು, ನೀಲಿ, ಹಳದಿ, ಕಂದುಬಣ್ಣಗಳ ಭೂಪಟದ ಗಡಿರೇಖೆ (ಮೂರುದಾ. ೮೩). [ಗಡಿ₁ + ರೇಖೆ]

**ಗಡಿವಾಡ** (ನಾ). ೧. ಗಡಿಯ ಪ್ರದೇಶದಲ್ಲಿರುವ ಊರು,—ಗ್ರಾಮ; ಸರಹದ್ದಿನ ಪ್ರದೇಶ : ಗಡಿವಾಡದ ಸುಂಕವ ಕದ್ದು ಹೋಗಜಿಯದೆ ಬಂಕೇಶ್ವರಲಿಂಗವನಜಿಯಿರಣ್ಣಾ (ಸುಂಕಬಂ. ೧೫) ; ವಸುಧೇಶ ಕೇಳಿಮ್ಮ ಗಡಿವಾಡಗಳನು ಮಾಮಸಕದಿಂ ಪರಭೂಪರಿಜಿಯುತಿರ್ದಪರೆಂಬ ಸುದ್ದಿಯಂ ಕೇಳ್ದನಾಗ (ಸಮ್ಯಕೌ. ೨–೬) ; ಗಡಿವಾಡದ ಹಳ್ಳಿಗರೆಲ್ಲರೂ ಇವರಿಗೆ ಸುಪರಿಚಿತರು (ಬೆಳುಮ. ೨೬). [ಗಡಿ₁ + ಬಾಡ₁]

**ಗಡಿವಿವಾದ** (ನಾ). ಗಡಿಯ ಬಗೆಗೆ ಇರುವ ಅಭಿಪ್ರಾಯದ ವ್ಯತ್ಯಾಸ, —ಚರ್ಚೆ : ವಿಶ್ವಸಂಸ್ಥೆಗೆ ರಾಷ್ಟ್ರಗಳ ಗಡಿವಿವಾದಗಳು ಸಮಸ್ಯೆಯನ್ನುಂಟುಮಾಡಿವೆ (ರೂಢಿ). [ಗಡಿ₁ + ವಿವಾದ]

**ಗಡಿಸರಕು** (ನಾ). ಗಡಿಯಾಚೆಯಿಂದ ಬಂದ ಸರಕು : ಬಹುಧಾನ್ಯವನು ಮಾರುವರು ಯೆಲೆಯಡಿಕೆಯ ಗಂಧವಿಡಿ ಫಲಸರಕು ಗಡಿಸರಕಿನಾ ವಿನುತಕೋಟಾಕೋಟಿಯಂಗಡಿಯ ಬಾಜಾರ (ನವಮೋ. ೨೯–೫೬).

[ಗಡಿ₁ + ಸರಕು₃]

**ಗಡಿಸು** 'ಗಡುಸು' ನೋ.

**ಗಡಿಸುವಲೆ** (ನಾ). ಒಂದು ಬಗೆಯ ಬಲೆ ; ಗಟ್ಟಿಯಾದ ಕಣ್ಣಿಗಳಿಂದ ಮಾಡಿದ ಬಲೆ : ಇಡುವ ಗುಂಡಜಿಗಲ್ಲು ಗಾಣದ ಗಡಿಸುವಲೆ ಗಂಗಸದ ಸಿಲುಕಿನ ದಡಿವಲೆಯ ಸಿಡಿವಲೆಯ . . . ಕಡುಹುಕಾಜಿರಿ ನೆಸೆದುದಗ್ಗದ ದುರ್ಗ (ತೊರರಾ. ೬–೭–೧೦).

[ಗಡಿಸು (< ಗಡುಸು) + ಬಲೆ₁]

**ಗಡೀಪಾರು** 'ಗಡಿಪಾರು' ನೋ.

**ಗಡೀಭತ್ತ** 'ಗಡಿಭತ್ತ' ನೋ.

**ಗಡು₁** 'ಗಡುವು' ನೋ.

**ಗಡು₂** (ನಾ). ಹೊಳೆಯನ್ನು ದಾಟುವ ಸ್ಥಳ ; ಹಾಯ್ಗಡ : ಜಡದ ತೊರೆಯನ ಊಗಿಕೊಂಡನು ; ಕಡೆಯದೀಗಲೆ ಗಡುವ ಹಾಯಿಸು (ಇಂಗೀತ. ೬೬–೩). [< ಕಡಹು₂]

**ಗಡು₃** (ನಾ). ೧. ಗಳಗಂಡ ; ಗಂಡಮಾಲೆಯ ರೋಗ : "ಕುರು ಗಡುವೆನಿಸಿಕ್ಕು" (ಮಂಗರಾ. ೧೧೩–೨). ೨. ಹಿಣಿಲು ; ಡುಬ್ಬ. ೩. ಮಣ್ಣುಹುಳು ; ಎರೆಹುಳು. [ಸಂ.]

**ಗಡುಗಂಚಿ** 'ಗಡಗಂಚಿ' ನೋ.

**ಗಡುಗೆ** 'ಗಡಿಗೆ' ನೋ.

**ಗಡುಚು** 'ಗಡುಸು' ನೋ.

**ಗಡುಚುನೀರು** 'ಗಡುಸುನೀರು' ನೋ.

**ಗಡುತರ** (ಗು). ದಪ್ಪವಾದ ; ಸ್ಥೂಲವಾದ ; ಗಾತ್ರವುಳ್ಳ : ಅಜ್ಜನ ಪಟ್ಟೆ (ಖರ್ವತ) ಗಡುತರವಾಗಿ ಬೆಳೆಯುವುದು (ಕಭಾಗ. ೩೫) ; ಯಲ್ಲನ ಗಡುತರವಾದ ದೇಹ (ರಕ್ತಧ್ವ. ೧೬).

[< ಗಡಸು + ತರ್‌ (< ತರಹ)]

**ಗಡುಬ** 'ಗಡುವು' ನೋ.

**ಗಡುಬು** 'ಗಡುವು' ನೋ.

**ಗಡುರ** (ನಾ). ಕೂನು ಬೆನ್ನಿನವನು ; ಕುಬ್ಜ ; ಕೂನ. [ಸಂ.]

**ಗಡುಲ**, ಗಡುಳ (ನಾ). = ಗಡುರ : (ಕ). **ಗಡುಳ :** "ಗಡುಳಃ, ಕುಬ್ಜಃ —ಈ ಎರಡು ಗುಜ್ಜಂ" (ಹಲಾಯು. ೧೯೦–೫೫೭). [ಸಂ.]

**ಗಡುವಿಡು** (ಕ್ರಿ). ವಾಯಿದೆಯನ್ನು ಹೇಳು ; ಅವಧಿ ಕಲ್ಪಿಸು : ಕೋಟಿಯು ಗಡುವಿಟ್ಟದ್ದನ್ನು ಕಂಡು ಬಲ್ಲಾಳನ ಉಪ್ಪರಿಗೆಯೇ ಗಡಗಡನೆ ನಡುಗಿತು (ಕೋಟಿಚೆ. ೧೭). [ಗಡುವು + ಇಡು₁]

**ಗಡುವು**, ಗಡಬ, ಗಡಬು, ಗಡವು, ಗಡು₁, ಗಡುಬ, ಗಡುಬು (ನಾ). ವಾಯಿದೆ ; ಅವಧಿ : ಆಸೆಗೆ ಬಹುಕಾಲ ಗಡುವು ಕಟ್ಟಬೇಕು. ಗಡುವು ಸಮೀಪಕ್ಕೆ ಬಂದರೆ ಒಂದು ವಿಘ್ನವನ್ನು ಕಲ್ಪಿಸಬೇಕು (ಕೃವಾಆ. ೨೭೧) ; ನಿನಗೊಂದು ವರುಷದ ಗಡುವನ್ನು ಮಾಡಿ ಸಾಲ ಕೊಟ್ಟೆ (ಬತ್ತೀಪು. ೪೫). **ಗಡಬ :** ಯಾಕೆ ಬಾಯಿತಪ್ಪಿ ಮೂರು ದಿವಸದ ಗಡಬವನ್ನು ಹೇಳಿದೆನೋ (ಮುಸುಗ. ೨೬). **ಗಡಬು :** ಭೀಷ್ಮನ ಕೊಂದ ಪಾರ್ಥನ ತಲೆಯ ರಣದೊಳಗೇ ಕೆಡಹಲಾತನ ಸುತನು ಮತ್ಸರವಿಡಿದು ಬಹದಾರನೆಯ ತಿಂಗಳ ಗಡಬಿನೊಳಗೆನುತಾಗ ಶಾಪವ ನಿತ್ತು ತೆರಳಿದಳೂ (ನೀಲಧ್ವ. ೪೮). **ಗಡವು :** ಎಷ್ಟು ದಿನದ ಗಡವು (ದೇವೀಚಾ. ೭). **ಗಡು₁ :** ಗಡುವನಿತ್ತೆನು ತಿಂಗಳು (ಜಿನಭಾ. ೨೯–೩೪). **ಗಡುಬ :** ಇದು ಬೆಡಗಿನ ಮಾತೆನ್ನಬೇಡಿ ನಿಮ್ಮ ಗಡುಬದ ದಿನ ಬಂತು ನೋಡಿ (ಎಬಕಾ. ೧೩೭–೧೪) ; ಗಡುಬವೋ ಹದಿನಾಲ್ಕುವರುಷವು (ರಾಮಾಸಂ. ೨–೪–೧೧) ; ಈ ಹಣ ನಾಲ್ಕು ಐದು ಗಡುಬದಲ್ಲಿ ಸಂದಾಯತಮಾಡಿಕೊಡುತ್ತೇವೆ (ರಾಜೇಂದ್ರ. ೭). **ಗಡುಬು :** ಹಳೆವೂರ ಗಡುಬಿನಿಂ ನಾಲಕೂರೊಳು (ಕಇ. I, ೩೦–೩೨ ; 1222).

[ದೇ. ‖ ತಮಿ. ಮಲ. ಗಡು, ಗೆಡು ; ತುಳು. ಗಡು ; ತೆಲು. ಗಡುವು]

**ಗಡುಸು**, ಗಡಚು, ಗಡಸು, ಗಡಿಸು, ಗಡುಚು (ನಾ). ೧. ಗಟ್ಟಿಯಾದುದು ; ಬಿರುಸು ; ಕಾಠಿನ್ಯ ; ಒರಟು : ಗಡುಸು ಪದಾರ್ಥದಿಂದಾದ ಆಸರೆಗಳಿರುತ್ತವೆ (ಪ್ರಾಣಿಶಾ. ೧೯). ೨. ಕ್ಲಿಷ್ಟವಾದುದು ; ಗಹನವಾದುದು : ವಿಜ್ಞಾನದ ಗಡುಸಿನ ವಿಚಾರಗಳು ಬಹುಜನರಿಗೆ ತಿಳಿಯುತ್ತಿರಲಿಲ್ಲ (ಸಸ್ಯಕ. ೨೮). **ಗಡಚು :** ೨. ಹೆಚ್ಚು ಗಡಚು ಇರುವುದರಿಂದ ನೀವು ಇನ್ನು ಮುಂದೆ ಹೆಚ್ಚು ಶ್ರಮ ತಕ್ಕೊಂಡು ಕಲಿಯಬೇಕಾಗುತ್ತದೆ (ಮುಂಬಯಿ ೪–೧) ;

ಅದನ್ನು ಕಂಡುಕೊಳ್ಳುವುದು ಬಹುಗಡಚು (ಮ ತ ೦ ೬. ೧೨).
**ಗಡಸು** : ೧. ಗಡಸಿನ ಸರಕು ಹೊರತಾಗಿ (ಮೈಅರಿ. ೧೯೨೮, ೫೮–೧೦ ; 1674) ; ಸ್ವಲ್ಪ ಹೊತ್ತಿನ ಮೇಲೆ ಗಾಳಿಯ ಗಡಸು ತಗ್ಗಿತು (ಚೀನಜಾ. ೨೦) ; ಗಡಸು ನುಡಿಗಳ ಸಹಿಸಿ ಎನಿತೊ ನೊಂದಿಹರು (ಕುಮಾಕೃ. ೩೩) ; ಅವನ ಮೈಕಟ್ಟು ಪೋಲೀಸನಾಗಲು ಬಹಳ ತಕ್ಕುದಾದ ಗಡಸಿನದಲ್ಲ (ಕನಕ. ೧೨೧). **ಗಡಿಸು** : ೧. ಅಡಕೆ ಮೆಣಸು ಝಲ್ಲಿ . . . ಮುಂತಾದ ಗಡಿಸಿನ ಸರಕು ಹೊ ರ ತಾ ಗಿ (ಎಕ. VIII, ತೀರ್ಥಹ. ೬೮–೨೨ ; 1673). **ಗಡುಚು** : ೧. ಗಡುಚಿಲ್ಲದೆ ಮೆಲುವಾಗಿ ಬಳ್ಳಿ ಹಬ್ಬುವಂತೆ ಹಬ್ಬಲಿ (ಕನ್ನನು. I, ೩).

**ಗಡುಸಾಗು, ಗಡಚಾಗು, ಗಡುಚಾಗು** = ೧. ಬಿ ರು ಸಾ ಗು ; ಒರಟಾಗು : ತಂಡಮಾರ್ಕರ್ಷಗೊಳಿ ಆಗೀಗ ಗಡುಸಾಗಿ ಗಂಡುದೆನಲಾ ವಾದಿಯಿಂದ (ಜಿನಮು. ೧೦–೫) ; ಅವನ ಕೊನೆಯ ಮಾತು ಗಡು ಸಾಗಿತ್ತು (ಮರಳಿ. ೮೧) ; ರಂಗಣ್ಣ ಗಡುಸಾಗಿ ಹೇಳಿದ (ರಂಗರೋ. ೧೧). ೨. ಕ್ಲಿಷ್ಟವಾಗು ; ಕಠಿನವಾಗು : ಅನಿಲನಿಗೆ ಇದೊಂದು ಹೊಸ ಸಮಸ್ಯೆ ಗಡಚಾದ ಪ್ರಶ್ನೆ . . . ಎಂದೆನಿಸಲಿಲ್ಲ (ಅಪನಾ. ೫೮) ; ವಾಕ್ಯ ಗಳು ಗಡಚಾಗುತ್ತ ಹೋಗುತ್ತವೆ (ಮುಂಬಯಿ. ೫–೨೩೫) ; ಈ ವಿಷಯ ಅಷ್ಟು ಗಡುಚಾಗಿ ತೋರಲಿಲ್ಲ (ನೂರಜ. ೫೯).

[ದೇ. ‖ ತಮಿ. ತೆಲು. ಗಡುಸು]

**ಗಡುಸುಗಾರ್ತಿ**, ಗಡಸುಗಾರ್ತಿ (ನಾ). ೧. ಗಟ್ಟಿಗಿತ್ತಿ ; ದಿಟ್ಟೆ : ಬ ಲ್ಲ ಡು [ಪಾಠಾಂ. ಡ] ಸು ಗಾ ರ್ತಿ ಯೈ ಸೆ (ರಾಮಾಶ್ವ. ೫–೨೦). ೨. ಜಂಬಗಾತಿ : "ಬಲ್ ಸೊಕ್ಕಿದವಳಿಗೆ ಗಡುಸುಗಾರ್ತಿಯೆಂದಕ್ಕು" (ಕಶರ. ೧೨೨). **ಗಡಸುಗಾರ್ತಿ** : ೧. ಕೃ ಷ್ಣ ರಾ ಯ ನ ತಂಗಿ ಗಡಸುಗಾರ್ತಿ ಎಂದು ಇಷ್ಟು ಕೇಣಕಿದೆ (ಕುರುಕ್ಷಾ. ೧೩).

[ಗಡುಸುಗಾಱ + –ತಿ$_1$ (< –ಇತ್ತಿ)]

**ಗಡುಸುಗಾಱ**, ಗಡಸುಗಾಱ (ನಾ). ಗಟ್ಟಿಗ : ಶತ್ರುಘ್ನಂ ಬಲ್ಲಡುಸು ಗಾಱಂ (ರಾಮಾಶ್ವ. ೬೨–೮). **ಗಡಸುಗಾಱ** : 'ಗಡಸುಗಾಱತನ' ಪರಾ. [ಗಡುಸು + –ಗಾಱ (< –ಕಾಱ)]

**ಗಡುಸುತನ**, ಗಡಚುತನ, ಗಡಸುತನ (ನಾ). ೧. ಗಟ್ಟಿತನ : ಒಂದು ರೀತಿ ಮೃದುತ್ವ ಅಥವಾ ಗಡುಸುತನವನ್ನಷ್ಟೇ ಅಲ್ಲ ಮಾನವ ಮನೋಕಾಮನೆಗಳ ಸಮಗ್ರಸಾರವನ್ನೇ ವ್ಯಕ್ತಪಡಿಸಬಲ್ಲುದು (ಭಾರದ. ೫೩೦). **ಗಡಚುತನ** : ೨. ದರ್ಪ ; ಸೊಕ್ಕು : ಧ್ವನಿಯಲ್ಲಿ ಗಡಚು ತನವಿತ್ತು (ಹಾ ಡು ಹು. ೬೬). **ಗಡಸುತನ** : ೨. ಗಡಸುತನವನ್ನು ಬಿಡದೆ ಠೀವಿಯಿಂದಲೇ ಆ ಚಪ್ಪರದೊಳಗೆ ನಡೆದುಬಂದ (ಕಣ್ಮಣಿ. ४೦) ; ಅಮ್ಮನ ಎದುರು ಅದೆಲ್ಲಿಂದ ಬಂದಿತ್ತೋ ಆ ಗಡಸುತನ (ಪದ್ಮಸ. ೯೫) ; ತುಸು ಗಡಸುತನದಿಂದ ಹೇಳಬೇಕಾಯಿತು (ಬಾಬಲ. ४೫).

[ಗಡುಸು + –ತನ]

**ಗಡುಸುನೀರು**, ಗಡುಚುನೀರು (ನಾ). ಉಪ್ಪು ಸೇರಿರುವ ನೀರು : ಗಡುಸುನೀರಿಗೆ ಚೌಳು ವಾಷಿಂಗ್‌ಸೋಡವನ್ನು ಸಾಕಷ್ಟು ಹಾಕಿ, ಮೆದುವು ಮಾಡಬೇಕು (ಗೃಹವಿ. ೮೬). **ಗಡಚುನೀರು** : "ಬಿರುಸಾದ ನೀರು ; ಸೌಳುನೀರು" : (Hard water. ಇಂಕನಿ).

[ಗಡುಸು + ನೀರು$_1$ (< ನೀರ್$_1$)]

**ಗಡುಳ** 'ಗಡುಲ' ನೋ.

**ಗಡೆ**$_1$ 'ಗಟಿಕೆ' ನೋ.

**ಗಡೆ**$_2$ (ನಾ). (ಬಾವಿಯ) ರಾಟೆ ; ಗಾಲಿ : ಪ್ರತಿಯೊಂದು ಹಳ್ಳಿಗೆ ಒಂದು ಮಂಗಳೂರು ಹೆಂಚಿನ ಧರ್ಮಶಾಲೆ, ಅದರೆದುರು ಒಂದು ಗಡೆ ಹಚ್ಚಿದ ಬಾವಿ (ಸಮಜೀ. ೩). 'ಗಡಗಡೆ' ಪರಾ. [?]

**ಗಡೆಕಾರ** 'ಗಟಿಕಾಱ' ನೋ.

**ಗಡೆಬಡಿಗ** (ನಾ). ಗದ್ದಲಮಾಡುವವನು : ತಡೆಯದಿರಿ ಭಟರೀಳಿ ವಾದ್ಯದ ಗಡೆಬಡಿಗರೀ ಸಕಲಜನ ನೀವ್ ಕಡುಬಳಲಿದಿರಿ ಹೋಗಿ ಪಾಳೆಯಕೆ (ಕುವ್ಯಾಗ. ೮–४४). [< ಗಡಬಡ + –ಇಗ]

**ಗಡ್ಡ**$_1$, ಗದ್ದ (ನಾ). ೧. ಗಲ್ಲ ; ದವಡೆ : "ತುಟಿಯ ಕೆಳಗಣ ಭಾಗವೇ ಚುಬುಕಮೆನಿಸುಗು, ಗಡ್ಡ" (ನಾಚಿರಾ. ೧೨೨) ; "ಅಧಸ್ತಾತ್ ತುಟಿಯ ಕೆಳಗಡೆ ಗಲ್ಲದ ಹೆಸರು, ಗಡ್ಡ" (ಸಿದ್ಧಾಂತಿ. ೧೬೯). ೨. ಗದ್ದದ ಮೇಲಿನ ಕೂದಲು ; ದಾಡಿ : ಗಡ್ಡಮುಂ [ಪಾಠಾಂ. ಗಂಡ] ಕಕ್ಷಾ ಕುಕ್ಷಿಪ್ರದೇಶಂಗಳ ರೋಮಂಗಳುಂ (ವಡ್ಡಾರಾ. ೯४–೯) ; ಪುರುಷಂಗೆ ಗಡ್ಡಮಾಸೆಯೊಪ್ಪುಗುಮಲ್ಲದೆ ಪೆರ್ಮೊಲೆಗಳೊಪ್ಪವು (ಧರ್ಮಾಪ್ಯು. ೬–೨೨೫) ; ಮೊಲೆ ಮುಡಿ ಬಂದರೆ ಹೆಣ್ಣೆಂಬರು ಗಡ್ಡಮಿಸೆ ಬಂದರೆ ಗಂಡೆಂಬರು (ದೇವಾವ. ೬೫–೧೩೩) ; ಇತ್ತ ನೋಡೌ ತಾಯೆ ಹಾರುವರತ್ತ ಗಡ್ಡದುಪಾಧ್ಯರನು (ಕುವ್ಯಾಅ. ೧೫–೨೦) ; ಹರಕುಗಡ್ಡದ ಗಿಡ್ಡತನದ ಕುರೂಪಿಯಾದನು ನೃಪತಿ ವಿಷದಿಂದ (ನಳಚ. ೬–೧४) ; ನೆಱೆ ಗಡ್ಡ ಮಂಡೆ ಮೇಲ್ಮೀಸೆ ಸೀಕರಿಯಾಗಿಯುರುಳಿಬಿದ್ದರು (ಕಂಸವಿ. ೧४–೬೫) ; ಗಡ್ಡಕ್ಕೆ ಬೆಂಕಿ ಹತ್ತಿದಾಗ, ಹಪ್ಪಳ ಸುಡಲಿಕ್ಕೆ ಬಂದ (ಗಾದೆ). **ಗದ್ದ** : ೧. ಅವನೆದ್ದು ಹರಿತಂದಿನತನೂಜನ ಗದ್ದವನು ಹಿಡಿದಿಱುಕಿ ಕೋಪ ದೊಳೆಱಗಿ ಬೊಬ್ಬಿಱಿದ (ತೊರರಾ. ೬–೩೮–೧೫) ; ಗದ್ದವೆಂಬುದು ಸವಿಮುದ್ದಿನ ಗಂಟು ಮುದ್ದಿನ ಮುಖ ಮೋಕ್ಷದ ಜನ ನ್ನಂಟು (ಪ್ರಸಭಾ. ೧೫–೨) ; ಗದ್ದದಲಿ ಕರವಿಟ್ಟು (ರಾಮಾಸಂ. ೫–४–೨೯).

**ಗಡ್ಡದಯ್ಯ**=೧. ಜೋಗಿ ; ವಿರಕ್ತ ; ಗಡ್ಡ ಬಿಟ್ಟವನು : ಗಡ್ಡದಯ್ಯ ಬಂದರು (ರೂಢಿ). ೨. "ಸೀಸಕಕ್ಕೆ ಜೋಡಿಸುವ ಕೆಳಮುಖ ರಕ್ಷೆ ; ಗಡ್ಡದಯ್ಯ" (Beaver. ಇಂಕನಿ).

[ದೇ. ‖ ತಮಿ. ಗಡ್ಡ, ಗೆಡ್ಡ ; ತ.ಳು. ಗಡ್ಡ ; ಕೊಡ. ಗೆಡ್ಡ ; ತೆಲು. ಗಡ್ಡ, ಗದ್ದುವ ; ಕೊಲಾ. ನಾಯ್ಕಿ. ಗಡ್ಡ ; ಪರ್ಜಿ. ಗಡ್ಡೊ ; ಗೊಂಡಿ. ಗಡ್ಡೊ, ಗಡ್ಡೊಕಾ. / ಪ್ರಾ. ಖಡ್ಡ]

**ಗಡ್ಡ**$_2$ (ನಾ). ತಂಬೂರಿ ಮತ್ತು ವೀಣೆಗಳಲ್ಲಿ ತಂತಿಯು ಹಾದು ಹೋಗುವ ಎತ್ತರದ ಭಾಗ ; ಜಗಲಿ : ದಂಡಿಗೆ ನೇರವಾಗಿ ಕಾಯಿ, ಅದಕ್ಕೆ ಸೇರಿದಂತೆ ಹೊರಭಾಗಕ್ಕೆ ಒಂದು ಜಗುಲಿ ಅಥವಾ ಗಡ್ಡ ಹೊಂದಿರುತ್ತದೆ (ಸಂಗೀತಂ. ೧೧೧). [< ಗಡ್ಡೆ]

**ಗಡ್ಡಯ್ಯ** (ನಾ). ೧. ಗಡ್ಡದಯ್ಯ ; ಜೋಗಿ : ಕೊಡುವುದಕ್ಕೆ ಮುನ್ನವೆ ಕೈಯಾಂತು ಬಳಲುವ ಗಡ್ಡಯ್ಯಗಳ ನೋಡಿ ಬೆಱಗಾದೆನಯ್ಯ (ಮೋಳಿಮಾ. ೫೨–೨೧೬). ೨. ಒಬ್ಬಾತನ ಹೆಸರು : ತುಮ್ಬೆವಾಡಿಯ ಗಡ್ಡಯ್ಯನ ಮಗಂ ಪೊನ್ನಿಗಂ ಕಾದಿ ಸತ್ತು (ಎಕ. XII, ಮದ್ದಗಿ. ೨೬–೨೦ ; ೯೫೦). [ಗಡ್ಡ$_1$ + ಅಯ್ಯ$_1$]

**ಗಡ್ಡಿ** (ನಾ). (ಉಕ) ಹತ್ತು ದಸ್ತುಗಳ ಕಾಗದದ ಕಟ್ಟು ; ಅರ್ಧ ರೀಮು : ಒಂದು ಕುಡಿಕೆ ಮಸಿ ; ಒಂದು ಗಡ್ಡಿ ಕಾಗದ (ಹಾಸುಹೊ. ೫೩) ; ೨೦ ದಸ್ತಾ ಅಂದರೆ ಒಂದು ಗಡ್ಡಿ (ಮುಂಬವ್ಯಾ. ೧೩೯).

[← ಹಿಂ. ಮರಾ. ಗಡ್ಡೀ]

**ಗಡ್ಡಿಗೆ** 'ಗಡಿಗೆ' ನೋ.

**ಗಡ್ಡುಕೆ** (ನಾ). = ಗಡಿಗೆ ೧ : ಪ್ರಸಂನ ಮಲ್ಲಿಕಾರ್ಜುನದೇವರ್ಗ್ಗೆ . . . ಸಹಸ್ರಗಡ್ಡುಕಾಪುರಸ್ಸರಂ ಮಹಾಪೂಜೆಯಂ ಮಾಡಿ (ಕಇಅ. ೬೬–೧೨–४೬ ; 1170). [ಸಂ. ಗಡ್ಡುಕ]

**ಗಡ್ಡುಗೆ** 'ಗಡಿಗೆ' ನೋ.

**ಗಡ್ಡೆ**, ಗೆಂಡೆ$_1$, ಗೆಡ್ಡೆ (ನಾ). ೧. ಉಂಡೆ ; ಗಂಟು : ಪರಿಪರಿ ಗಡ್ಡೆಯ ಕಟ್ಟಿ ಶಿರದೊಳು ರಚಿಸಿತಾ ಉಪ್ಪುಗಳ್ ಬಾಯೊಳ್ (ಬಿಜ್ಜರಾ. ೬–೧೯) ;

ಆಚಾರ್ಯರು ಒಂದು ದೊಡ್ಡ ಗೋಪೀಚಂದನದ ಗಡ್ಡೆಯನ್ನು ಮಾತ್ರ ತೆಗೆದುಕೊಂಡು ಮಠಕ್ಕೆ ಬಂದರು (ಭಜ್ಯೋತಿ. ೬೨); ಮಂಜೆನ ಗಡ್ಡೆ ಹೆಪ್ಪುಗಟ್ಟಿದೆ (ಅನಿಕೇ. ೨-೫). 'ಮಂಜುಗಡ್ಡೆ' ಪರಾ. **೨.** ಗೆಣಸು ಮುಂತಾದುವುಗಳಂತೆ ದುಂಡಾಗಿರುವ ಬೇರು; ಕಂದ: ಬೇರು ಗಡ್ಡೆಗೆಣಸು ಮೊದಲಾದವಱಲ್ಲಿ ಗಂಧವನಱಿವುದು (ಆದವ. ೫-೧೨); ಗಡ್ಡೆ ಬೇರು ಗೆಣಸ ಮೆದ್ದೆಯಂತೆ (ಪುರಂದ. ೧-೧೧-೨); ನೆಲದೊಳಗಿನ ಗಡ್ಡೆಗಳನ್ನೂ ಬೇರುಗಳನ್ನೂ ಅಗಿದು ತಿನ್ನುತ್ತದೆ (ಮುಂಬಯಿ. ೪-೨೧೨). **೩.** ನೀರಿನ ಮಧ್ಯವಿರುವ ಸಣ್ಣ ಭೂಭಾಗ; ದ್ವೀಪ; ನಡುಗಡ್ಡೆ: ಗಡ್ಡೆ ಇರ್ಪುದು ಕಿರಿದು, ಸಲಮಿಸಿನ ಮುಂದುಗಡೆ (ಪಾರಸಿ. ೧೭-೧೬). 'ನಡುಗಡ್ಡೆ' ಪರಾ. **೪.** ಶರೀರದಲ್ಲಿ ರೋಗದಿಂದ ಬೆಳೆಯುವ ಗಂಟು, —ಗ್ರಂಥಿ: ಜ್ವರದ ಗಡ್ಡೆ (ಪ್ರಭಣ್ಣ); ಪ್ಲೇಗಿನ ಗಡ್ಡೆ (ರೂಢಿ). **೫.** ಮೂಲ; ಬುಡ; ಬುಡಕಟ್ಟು: ಅವರು ಈ ಗಡ್ಡೆಗೆ ಸೇರಿದವರು (ರೂಢಿ). **೬.** ದಿಣ್ಣೆ; ದಿಬ್ಬ: ಕೆಱೆಯ ಕೋಡೀ ನೀರು ಹಾಯಿದಾ ಗಡ್ಡೆ ತೆಂಕಸೀಮೆ ಮೇರಿಯಾಗಿ (ಎಕ.XIV, ಶ್ರೀರಂಗ. ೮೬-೩೫; 1471). **೭.** ರಥದ ಅಥವಾ ಬಂಡಿಯ ವೇದಿಕೆ; "ರಥದಲ್ಲಿ ವಿಗ್ರಹ ಕೂಡಿಸುವ ಪೀಠ" (ಅನಂನಾ): ಗಡ್ಡೆಯ ಮೇಗ್ಲಿಂದ ಎದ್ದ್ಬಾರೆ ದೊಡ್ಡಮ್ಮ ಸೀಯರ್ಾದ ಮಗ್ಗ ತಂದಿವ್ನಿ (ಹಳ್ಳಿಯ. ೩೫). **೮.** ಕಿವಿಯ ಬುಡ: ಚೂಲಿಕೆ – ಆನೆಯ ಕಿವೀಗಡ್ಡೆ (ಗಂಗಾವು. ೧೩೩). **ಗೆಂಡೆ**$_1$: **೨.** ಸಸಿಗೆ ನಾಲ್ಕು ಹಣ ಗೆಂಡೆಗೆ ವೊಂದು ಹೊಂನಿನ ವೋಪಾದಿಯಲು (ಸೌಇಇ. IX-ii, ೪೭೧-೨೯; 1482); ತೋಟದಲಿ ತೆಂಗಿನ ಸಸಿಯ ನಟದಕೆ ಗೆಂಡೆಗೆ ವೊಂದು ಹೊಂನಿನ ಮರ್ಯಾದೆಯಲಿ (ಸೌಇಇ. IX-ii, ೫೨೫-೧೯; 1528); ಅಡವಿಯ ಗೆಂಡೆ ದಿಂಡುಗಳ ತಿಂದಾ ಬೇಡ (ನೇಮಿಸಂ. ೨-೯೯); ಹಾಡೆಯ ಗೆಂಡೆ ತ್ರಿಕಟುಕ ಜೀರಿಗೆ (ಸಾಳ್ವಸಾಂ. ೧೦). **ಗೆಡ್ಡೆ**: **೯.** ಆಧಾರ; ಆಶ್ರಯ: ಗೆಡ್ಡೆ ಗಡ ನೀನಖಿಳಸುರರಿಗೆ ಖಡ್ಡಿ ಗಡ ಸುರಲೋಕ ಪಾಲರು (ನಭಾಗ. ೧೦-೫೧-೪೫).

**ಗಡ್ಡೆಯಂಬೋಗು** = ಗಡ್ಡೆಯಂತಾಗು; ಗಂಟುಗಂಟಾಗು; ಮುರುಟು: ಪೋದೊಲವೆಯ್ದೆ ಮತ್ತೆ ಪೊಸತಾದುವು ನೀರಸವಾಗಿ ಗಡ್ಡೆಯಂಬೋದ ಮನಂ ಕೊನರ್ತುವು (ಚಂದ್ರಪು. ೭-೬೬).

[ದೇ. ‖ ತುಳು. ಕಂಡೆ, ಗಡ್ಡೆ; ತೆಲು. ಗಡ್ಡ. / ಸಂ. ಕಂದ]

**ಗಡ್ಡೆಕಟ್ಟಿಸು** (ಕ್ರಿ). ಗಟ್ಟಿಗೊಳಿಸು; ಘನರೂಪಗೊಳಿಸು: ನರನೆತ್ತರನು ಗಡ್ಡೆಕಟ್ಟಿಸಿ ತಟ್ಟಿ ಮಲಗಿಸುವ ತಂಪು (ಚಂಡೆಮ. ೬).

[ಗಡ್ಡೆಕಟ್ಟು (<ಗಡ್ಡೆಗಟ್ಟು) + – ಇಸು$_3$]

**ಗಡ್ಡೆಕಟ್ಟು** 'ಗಡ್ಡೆಗಟ್ಟು' ನೋ.

**ಗಡ್ಡೆಗಟ್ಟು, ಗಡ್ಡೆಕಟ್ಟು, ಗೆಡ್ಡೆಗಟ್ಟು** (ಕ್ರಿ). **೧.** ಗಂಟುಗಂಟಾಗು: ಮರದ ಕೊಂಬೆ ಗಡ್ಡೆಗಟ್ಟಿದೆ (ರೂಢಿ). **೨.** ಗಟ್ಟಿಯಾಗು; ಘನವಾಗು: (ಕ). **ಗಡ್ಡೆಕಟ್ಟು**: **೨.** "ಹೆಪ್ಪುಗಟ್ಟು" (ಜಾನಕೋ. ೪೫). **ಗೆಡ್ಡೆಗಟ್ಟು**: **೨.** ಎಳವೆಯೊಳೆ ತನ್ನ ವೈರಿಯ ಮೊಳೆಯುಮನೊಗೆತಪ್ಪ ರುಜೆಯ ಮೊಳೆಯುಮಪೊಗೆದಾಗಳೆ ಕಳೆಗೆ ಗೆಡ್ಡೆಗಟ್ಟಿದ ಬಟಿಕ್ಕೆ ಕಳೆಯಲ್ಕೆ ಬಾರದು (ಸುಕುಮಾ. ೧೧-೩೫).

**ಗಡ್ಡೆಕಟ್ಟಿಕೊಳ್ಳು** = ಗಟ್ಟಿಯಾಗು; ಘನರೂಪವಾಗು: ರಕ್ತವು ಗಡ್ಡೆಕಟ್ಟಿಕೊಳ್ಳದೆ ಪೆಟ್ಟು ಬಿದ್ದ ಭಾಗದಿಂದ ಹೆಚ್ಚಾಗಿ ರಕ್ತಸ್ರಾವವಾಗುತ್ತದೆ (ಗೃಹವಿ. ೨೦). [ಗಡ್ಡೆ + ಕಟ್ಟು$_1$]

**ಗಡ್ಡೆಗುಂಡುಹುಲ್ಲು** (ನಾ). ಒಂದು ಬಗೆಯ ಹುಲ್ಲು: ಕಾಡುಗುಂಡು ಹುಲ್ಲು, ಗಡ್ಡೆಗುಂಡುಹುಲ್ಲು (ವೈಔಗಿ. ೩೭-೭೩೪).

[ಗಡ್ಡೆ + ಗುಂಡು ? + ಹುಲ್ಲು (<ಪುಲ್)]

**ಗಡ್ಡೆಜ್ವರ** (ನಾ). ಗುಲ್ಮದಲ್ಲಿ ಗಡ್ಡೆಯನ್ನು ಬರಿಸುವ ಜ್ವರ; ಚಳಿಜ್ವರ: ಈ ಮಲೆಯ ನೀರು ಗಡ್ಡೆಜ್ವರದ ಬೀಜ (ಕಂಬಹು. ೧೭).

[ಗಡ್ಡೆ + ಜ್ವರ]

**ಗಡ್ಡೆನೆಲ** (ನಾ). ನಡುಗಡ್ಡೆ; ದ್ವೀಪ: ಕಡಲ ನಡುವಿನ ಗಡ್ಡೆನೆಲ (ಏಳಜೀ. ೧೩೭). [ಗಡ್ಡೆ + ನೆಲ$_1$]

**ಗಡ್ಡೆಮೊಸರ್, ಗೆಡ್ಡೆಮೊಸರ್** (ನಾ). ಗಟ್ಟಿಯಾದ ಮೊಸರು; ಕೆನೆಮೊಸರು; ಗರಣೆಮೊಸರು: ಬಗಿದಗುಱಿೂಂದದಂತೆ ತೆಗೆದಾಱಿಸಿ ದೋಗರದೊಳ್ ಪೊದಟ್ಟು ಕಮ್ಮಗೆ ಕೆನೆಗೊಂಡ ಗ[ಪಾಠಾಂ. ಗೆ]ಡ್ಡೆ ಮೊಸರಂ ಸುರಿದು (ಲೀಲಾವ. ೫-೭೦; ಸೂಕ್ತಿಸು. ೧೧-೮೫ ನೋ). **ಗೆಡ್ಡೆಮೊಸರ್**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಗಡ್ಡೆ + ಮೊಸರ್]

**ಗಡ್ಡೆಹಾಗಲ** (ನಾ). ಹಾಗಲದಲ್ಲಿ ಒಂದು ಜಾತಿ: "ಕಾರವೆಲ್ಲಃ . . . ಹಾಗಲ, ಕಾಡುಹಾಗಲ, ಗಡ್ಡೆಹಾಗಲ, ಬಂಜೆಹಾಗಲ" (ಸಿದ್ಧಾಂಶಿ. ೧೨೯).

[ಗಡ್ಡೆ + ಹಾಗಲ (<ಪಾಗಲ್)]

**ಗಡ್ಡೆಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಕ).

[ಗಡ್ಡೆ + ಹುಲ್ಲು (< ಪುಲ್)]

**ಗಡ್ರಬಡ್ರ** (ನಾ). ಒಂದು ಅನುಕರಣ ಧ್ವನಿ: ಯಾವಾಗಲೂ ಗಡ್ರಬಡ್ರ ಎಂದು ಗಲಾಟೆಯಾಗಿಯೇ ಇದ್ದಿತು (ಹುಟ್ಟಿಹ. ೬).

**ಗಢಾವಣೆ** 'ಗಡಾವಣ್ಕೆ' ನೋ.

**ಗಣ** (ನಾ). **೧.** ಸಮೂಹ; ಗುಂಪು; ಮೊತ್ತ; ಹಿಂಡು: "ನಿಕರಃ, ನಿಕಾಯಃ . . . ಗಣಃ, ಓಘಃ . . . ಸ್ತೋಮಃ —ಈ ೩೯ ಸಮೂಹಂ" (ಹಲಾಯು. ೧೧೪-೧); [ಅ]ನೆಯ ಕೇರಿಯ ಮೂನೂರ್ವರುಂ, ಗಣಮುಮಿಱ್ದು ಶ್ರೀಮರುಳೇಶ್ವರದೇವರಿಗೆ ದಾನಂಗೊಟ್ಟರು (ಕಇ. II, ೧೦-೨೨; 1080); ಕೇವಳಿಗಳ್ಗೈಸಾಸಿರ್ವರೆಣ್ಬಾಸಿರಂ ಗಣದೊಳ್ನೋಱ್ಪೊಡೆ . . . ಆ ಸಭಾವಳಯದೊಳ್ ಲಕ್ಷದ್ವಯಿೂವಾದಿಗಳ್ (ಅನಂಪು. ೧೪-೪೪; ಪೊದೆದ ದುಗುಲಂ ರಣನಿಶಾಟ ಗಣದಿಶಾಪಟಮಲ್ಲನ ಚೆಲ್ವಿನ ಬೆಳ್ವಟ್ಟೆಯಂ ಪಱಿಯೆ (ರಾಮಾಶ್ವ. ೧೩೯-೧೨). **೨.** [ವೀಶೈ] ಜಂಗಮ: ಜಲವ ತಪ್ಪಿದ ಮತ್ಸ್ಯ ಬದುಕುವುದೇ ಸೋಱಿಗ ಗಣತಿಂಥಿಣಿಯೊಳಗಿರಿಸೆನ್ನನು ಲಿಂಗವೇ (ಬಸವ. ೬೬೭); ಹೀನರೆಲ್ಲ ಗಣಂಗಳಾದರೆ ಏನು ರೋಗೈತರಲಿ (ಬಿಜ್ಜಪು. ೬೨-೫೬). **೩.** ಶಿವನ ಪ್ರಮಥರ ಸಮೂಹ; ಶಿವಗಣ: ಶಿವನು ಉಮೆಯನ್ನು ಕೂಡಿ ಗಣಗಳಿಂದ ಪರಿವೃತನಾಗಿ ನರ್ತಿಸುವನಂತೆ (ಬಾಲಪ್ರ. II, ೯೧೭). **೪.** ಇಪ್ಪತ್ತೇಳು ರಥಗಳು, ಇಪ್ಪತ್ತೇಳು ಆನೆಗಳು, ಎಂಬತ್ತೊಂದು ಕುದುರೆಗಳು, ನೂರುಮೂವತ್ತೈದು ಕಾಲಾಳುಗಳಿರುವ ದಂಡು, —ಸೈನ್ಯ: ಆನೆ ೨೭, ರಥ ೨೭, ಕುದಿರೆ ೮೧, ಕಾಲಾಳು ೧೩೫ ಇದು ಗಣವೆಂಬ ಬಲ (ವ್ಯವಹಾ. ಅನುಬಂ. ೧-೯). **೫.** ಗ್ರಹ; ಭೂತ; ಕ್ಷುದ್ರದೇವತೆ: ಪಂಜ್ರೊಳ್ಳಿ ಗಣ ಬತ್ತಿತ್ತು. ಗಣ ಕೇಳೋಕೆ ಅಂತ ಹತ್ತಿಪ್ಪತ್ತು ಮೈಲಿ ಪಾಸಂತರ ಜನ ಬತ್ತಾ ಇತ್ತು (ಪಂಜಪಂ. ೪); ನಾರಾಯಣ ನಡುಗುತ್ತಿದ್ದ ಗಣ ಬಂದವನಂತೆ (ಪ್ರಶ್ನೆ. ೨೫). **೬.** ವರ್ಗ; ಶಾಖೆ: ಸಾಮಾನ್ಯವಾಗಿ ಸಂಘಗಳಿಗೆ ಗಣ, ಗಚ್ಛ (ಬಲಿ) ಅನ್ವಯ ಎಂದೂ ಕರೆಯುವ ರೂಢಿಯುಂಟು (ಜೈನಪ. ೭೧); ದಿಗಂಬರ ಸಂಪ್ರದಾಯದಲ್ಲಿದ್ದಂತೆಯೇ ಅನೇಕ ಸಂಘ, ಗಣ . . . ಇದ್ದುವು (ಕಶಾಅ. ೭೬). **೭.** [ಛಂದ]: "ಗಣವೆಂದರೆ ಕೆಲವು ನಿಯಮಗಳಿಗನುಸಾರವಾಗಿ ವಿಂಗಡಿಸಿದ ಅಕ್ಷರಗಳ ಗುಂಪು" (ಕೈಪಿಡಿ. ೬೯): ಧರಣಿ ಜಲಾಗ್ನಿ ಮರುದ್ವ್ಯೋಮ ರವಿ ಶಶಾಂಕೇಂದ್ರನಿಲಯಮಿವು ಗಣದ ಪೆಸರ್ (ಛಂದೋಂಬು. ೧-೨೮); ಗಣಕ್ಕೆ ಮೂಲಾಂಶ ಒಂದು ಗುರು (ಕೈಪಿಡಿ. ೧೧೮).

'ಅಂಶಗಣ', 'ಅಕ್ಷರಗಣ', 'ಮಾತ್ರಾಗಣ', 'ವರ್ಣಗಣ' ಪರಾ. ೮. ಒಂದು ಬಗೆಯ ಸುಗಂಧದ್ರವ್ಯ; "ಅಜಿವಾನ" (ಗಂಗಾವು. ೧೧೧). ೯. [ಜ್ಯೋತಿ] ಗಣಕೂಟವನ್ನು ಗಣಿಸುವಾಗ ಹೇಳಿರುವ ದೇವ, ಮನುಷ್ಯ ಮತ್ತು ರಾಕ್ಷಸ ಎಂಬ ಮೂರು ಬಗೆಯ ನಕ್ಷತ್ರಗಳ ಗುಂಪು. [ಸಂ.]

**ಗಣಂಕ** (ನಾ). ಒಬ್ಬಾತನ ಹೆಸರು: ಭಾರದ್ವಾಜಾನಾಂ ಗಣಜ್ಜ ಬಾಳುಜ್ಜ ದೇವುಣಜ್ಜಶ್ಚ ಕಾಶ್ಯಪಾನಾಂ (ಮೈಆರಿ. ೧೯೩೯, ೩೦–೨೫; 670). [? + ಅಂಕ$_2$]

**ಗಣಕ** (ನಾ). ೧. ಗಣಿತವನ್ನು ಬಲ್ಲವನು; ಲೆಕ್ಕಿಗ; ಕರಣಿಕ: ಆರುಂ ಕಾಣದೇ ಭಕ್ಷಿಪಾ ಗಣಕಂ ಹೆಗ್ಗಣಕಂ ಸಮಂ (ಸೋಮೇಶ. ೬೩); ಪ್ರತಿಯೊಂದು ಪಂಚಾಯಿತಿಯಲ್ಲಿಯೂ ಗಣಕ, ಲೇಖಕ ಮತ್ತು ಸಾಧ್ಯಪಾಲ ಎಂಬ ಮೂವರನ್ನು ನೇಮಿಸಿರುತ್ತಿದ್ದರು (ಭಾರದ. ೫೬). ೨. ಜೋಯಿಸ: ಶುಭಮುಹೂರ್ತಮೆನೆ ಗಣಕನಿಳಾಪ್ರಭುವೊಗೆದನುದಿತ ಕಾಯಪ್ರಭೆಯೊಗೆದಿರೆ (ಪಂಪಭಾ. ೧–೧೨೬). [ಸಂ.]

**ಗಣಕಯಂತ್ರ** (ನಾ). "ಲೆಕ್ಕಮಾಡುವ ಯಂತ್ರ": (ಕಸ್ತೂಕೋ. ೨೦೦). [ಗಣಕ + ಯಂತ್ರ]

**ಗಣಕಿ$_1$** (ನಾ). ಜೋಯಿಸನ ಹೆಂಡತಿ: (ಕ). [ಸಂ. ಗಣಕೀ]

**ಗಣಕಿ$_2$** 'ಗಣಿಕೆ$_2$' ನೋ.

**ಗಣಕಿಕ** (ನಾ). = ಗಣಕ: ಗಣಕಿಕರ ಬ್ರಹ್ಮದೇವಭಟ್ಟರು (ಸೌಇಇ. XX, ೧೪೪–೫೩; 1166). ['ಗಣಕಿಗ' ಎಂಬುದರ ಅಪಲಿಖಿತವಿರಬಹುದು]

**ಗಣಕೂಟ** (ನಾ). [ಜ್ಯೋತಿ] ಜಾತಕದಲ್ಲಿ ಗಂಡುಹೆಣ್ಣುಗಳಿಗೆ ಕೂಡಿ ಬರುತ್ತದೆಯೆ ಎಂದು ನೋಡುವ ದ್ವಾದಶಕೂಟಗಳಲ್ಲಿ ಒಂದು: ವಧೂವರರ ಗಣಕೂಟ ಪ್ರಶಸ್ತವಾಗಿದೆ (ರೂಢಿ). [ಗಣ + ಕೂಟ$_3$]

**ಗಣಕೆ$_1$** 'ಗಣಿಕೆ$_1$' ನೋ.

**ಗಣಕೆ$_2$** 'ಗಣಿಕೆ$_2$' ನೋ.

**ಗಣಗ** (ನಾ). ಒಂದು ಬಗೆಯ ಹುಲ್ಲು: ಎರಡುಮೂರು ಸಾರಿ ಗಣಗ ವೆಂಬ ಹುಲ್ಲನ್ನು ಕೆತ್ತಿ ತೆಗೆಯಬೇಕಾಗುತ್ತದೆ (ಮುಂಬಯಿ. ೫–೧೯೯). [?]

**ಗಣಗಂಟೆ** (ನಾ). ಗಣಗಣ ಎಂದು ಸದ್ದುಮಾಡುವ ಗಂಟೆ: ಗಣಂಗಳಿಗೆ ಗಣಗಂಟೆ ಬೇಕು ಗಣದಲ್ಲಿ ಬೇಕು ಗಣಕೆ (ಅರಳು. ೨೯೨–೫). [ಗಣ$_0$ + ಗಂಟೆ$_2$]

**ಗಣಗಣ** (ನಾ). ಒಂದು ಅನುಕರಣ ಶಬ್ದ. 'ಗಣಗಣಿಸು' ಪರಾ.

**ಗಣಗಣಿಸು** (ಕ್ರಿ). ಗಣಗಣ ಎಂಬ ಶಬ್ದವನ್ನು ಮಾಡು; ಗಣಗಣ ಎನ್ನು: (ಕ). 'ಘಣಘಣಿಸು' ಪರಾ. [ಗಣಗಣ + -ಇಸು$_3$]

**ಗಣಗಳ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು; ಕಣಗಿಲು: ಕೆಂಪಿನ ಗಣಗಳ ಹುವು (ಎಕ. IX, ಕಾನಕಾ. ೯೦–೫೬; 1700). 'ಕಣಗಿಲೆ$_1$' ಪರಾ. [?]

**ಗಣಗಿಲು** (ನಾ). ಬೀಜವರಿ: ಬಿತ್ತುವ ಬೆದೆ ಗಣಗಿಲು ನಾಗಂಡುಗದಲು (ಸೌಇಇ. IX–ii, ४೨೪–೨೧; 1401); ಬಿತ್ತುವ ಬೆದೆ ಗಣಗಿಲು ನಾಘಂಡುಗದ (ಸೌಇಎ. ೧೯೩೨, ಉಡುಪಿ. ೨೫೪–೧೪; 1434); ಯಿಂತೀ ಚತುಸೀಮೆಯೊಳಗೆ ಬಿಟ್ಟ ಬೆದೆ ಗಣಗಿಲು ಬಯಲು ನಾಗಂಡೆಯಲು (ಸೌಇಇ. IX–ii, ४४೬–೧೩; 1436). [?]

**ಗಣಗ್ರಹಣ** (ನಾ). [ಜೈನ] ಎಂಟು ದೀಕ್ಷಾನ್ವಯಕ್ರಿಯೆಗಳಲ್ಲಿ ಒಂದು: ಮತ್ತಮವತಾರವೃತ್ತಿ ಲಾಭಸ್ಥಾನಲಾಭಗಣಗ್ರಹಣ ಪೂಜಾರಾಧ್ಯ ಪುಣ್ಯ . . . ಎಂಬೆಂಟುಂಬೆರಸು (ಆದಿಪು. ೧೫–೧೬ ವ); ಎಲೈ ದೇವತೆಗಳಿರಾ ಇದುವರೆಗೂ ಅಜ್ಞಾನದಿಂ ನಿಮ್ಮಂ ಪೂಜಿಸಿದೆನು ಇನ್ನು ಜೈನವ್ರತೋಚಿತ ದೇವರುಗಳಂ ಪೂಜಿಸುವೆನು. ಇನ್ನು ನೀವುಗಳು ಅನ್ಯತ್ರ ಹೋಗಬಹುದೆಂದು ಆ ವಿಗ್ರಹಗಳಂ ತ್ಯಜಿಸಿ ಜಿನಬಿಂಬಗಳಂ ಪೂಜಿಸುವುದೇ ಗಣಗ್ರಹಣವೆಂಬ ४ನೇ ಕರ್ಮವು (ಪುರುಚ. ೨೧೬–೨೧೭). [ಗಣ + ಗ್ರಹಣ]

**ಗಣಜಲ** 'ಗಣಜಿಲೆ$_1$' ನೋ.

**ಗಣಜಲಿ** 'ಗಣಜಿಲೆ$_1$' ನೋ.

**ಗಣಜಲೆ** 'ಗಣಜಿಲೆ$_1$' ನೋ.

**ಗಣಜಿಲು** 'ಗಣಜಿಲೆ$_1$' ನೋ.

**ಗಣಜಿಲೆ$_1$**, ಗಣಜಲ, ಗಣಜಲಿ, ಗಣಜಲೆ, ಗಣಜಿಲು, ಗಣಿಜಿಲೆ, ಗನಿಜೆಲೆ (ನಾ). ಒಂದು ಬಗೆಯ ವನೌಷಧಿ: "ಗಣಜಲಿ ಪುನರ್ನವಿ ಶಿವಾಟಕೆಯೆನಿಕ್ಕುಂ" (ಮಂಗರಾ. ४೦–೩೧); ಗಣಜಿಲೆಯ ಬೇರ ನೀರಲ್ಲಿ ಅರೆದಾದರೂ ಯಷ್ಟಿಮಧುಕದ ಮಜ್ಜಿಗೆಯಲ್ಲಿ ಅರೆದಾದರೂ ಪಾನವ ಮಾಡಿಸಲು ಕಕ್ಕೆಯ ವಿಷ ಶಮನವಹುದು (ವೈದ್ಯಸಾ. II, ೨೩೫); ಗಣಜಿಲೆಯಬೇರು, ದೇವದಾರು . . . ಗೋಮೂತ್ರದಲ್ಲಿ ಕಾಯಿಸಿ ಕುಡಿಯಲು ಶ್ಲೇಷ್ಮಾದಿಗಳೆಲ್ಲವೂ ಮಾಣುವುವು (ವಿವೈವಿ. ೧೯). **ಗಣಜಲ:** ಕೆಂಪು ಬಿಳಿ ಗಣಜಲ . . . ಕಫವಾತಗಳನ್ನು ನಾಶಮಾಡುತ್ತವೆ (ಅಷ್ಟಾಂಗ. ೧೩೯–೯೬). **ಗಣಜಲಿ:** ಕೆಂಪುಕೊಮ್ಮೆ, ಗಣಜಲಿ (ಮೈಔಗಿ. ೭೫–೧೫೩೯). **ಗಣಜಲೆ:** ಪುನರ್ನವದ (ಗಣಜಲೆಯ) ಸೊಪ್ಪನ್ನು ಶುಂಠಿಯೊಡನೆ ಬೇಯಿಸಿ ಹುಳಿಪಲ್ಯವನ್ನು ಮಾಡುವುದು (ಭೀಮಸೂ. ೧೫–४೦ ಟೀಕೆ). **ಗಣಜಿಲು:** "ಜಟಲ – ಗಣಜಿಲು" (ಓಷಧಿ. ೫೯). **ಗಣಿಜಿಲೆ:** "ಪ್ರವರ್ಣವಾ, ಶೋಷಘ್ನಿ – ಈ ೨ ಗಣಿಜಿಲೆ" (ನಾಚರಾ. ೧೧೨); "ಅಂಡವಕ್ರ – ಗಣಿಜಿಲೆ" (ಅಕಾನಿ. ೧–೨೧). **ಗನಿಜೆಲೆ:** ಕೊಮ್ಮೆ, ಗನಿಜೆಲೆ, ಈಜಿಮುಳ್ಳು, ನಲ್ಲಗನ್ನೆ (ಮೈಔಗಿ. ೧೫–೨೭೧). [?]

**ಗಣಜಿಲೆ$_2$** (ನಾ). (ಉಕ) ಸಿಡುಬುರೋಗ; ಸೀತಾಳಿ; ನೀರುಕೋಟಲೆ (ಕರಾ): ಮೈಲಿಗೊಬ್ಬರ ಗಣಜಿಲೆಗಳ ಉಪದ್ರವವು ವಾಡಿಕೆಯಾಗಿ ಆಗುತ್ತದೆ (ಕಭಾಗ. ४೧೫). [?]

**ಗಣಜೆ** (ನಾ). ಒಂದು ಬಗೆಯ ಜಿಂಕೆ, —ಸಾರಂಗ: "ಗೋಕರ್ಣ [ಪಾಠಾಂ. ಗಂಧರ್ವ, ಶರಭ] – ಗಣಜೆ" (ನಾಚರಾ. ೬). [?]

**ಗಣತಂತ್ರ** (ನಾ). ಪ್ರಜಾತಂತ್ರ; ಗಣರಾಜ್ಯದ ಆಡಳಿತ; ಪ್ರಜಾಪ್ರಭುತ್ವ: ಸ್ವತಂತ್ರನಾದವನು ತನ್ನನ್ನು ರಾಜತಂತ್ರದಲ್ಲಿಯೂ ರಾಜತಂತ್ರದಿಂದ ಗಣತಂತ್ರದಲ್ಲಿಯೂ ಸಾರ್ಥಕಮಾಡಿಕೊಳ್ಳುವುದಕ್ಕಾಗಿ ಯುದ್ಧಮಾಡಿ ಸಾಯುತ್ತಾನೆ (ನಿಬಂಧ. II, ೨೭೯). [ಗಣ + ತಂತ್ರ]

**ಗಣತಿ$_1$** 'ಗಳಂತಿಗೆ$_1$' ನೋ.

**ಗಣತಿ$_2$**, ಗಣಿತಿ$_1$, ಗಣಿತೆ (ನಾ). ೧. ಎಣಿಕೆ; ಲೆಕ್ಕ: ಸಾಲುಸಾಲಾಗಿ ನಿಂತಿರುವಾನೆ ಕುದುರೆಯ ಮೇಲಾದ ರಾವುತರನ್ನೂ ಲೀಲೆಯಿಂ ಗಣತಿಯ ನೋಡಿ ಸುಗಂಧಭೂಪಾಲನು ಮೆರೆದನು (ಸೌಗಂಪ. ४–೧೮); ಖರ್ಚು ಗಣತಿಗೇ ಬರಲಿಲ್ಲ (ಅಲಿಮು. ೧೮೭). 'ಗಣಿತ' ಪರಾ. ೨. ಜನಗಣತಿ; ಖಾನೇಸುಮಾರಿ: ಅಖಿಲ ಭಾರತ ಗಣತಿ (ಸೆನ್ಸಸ್) ಒಂದು ಅಪೂರ್ವವಾದ ವಿಶಿಷ್ಟತೆಯಿಂದ ಕೂಡಿದೆ (ಕಬಸಾ. ೧೫೨). **ಗಣಿತಿ$_1$:** ೨. ಒಂದನ್ನೂ ವಿಚಾರಿಸದೆ ಗಣಿತಿಗಾಗಿ ಬಂದ ನಮ್ಮ ಸೇನೆಯಂ ಕಂಡು (ಮುದ್ರಾಮಂ. ೧೯೧); ಆತನ ಪೌಜು ಗಣಿತಿಯಾಗಬೇಕಾದರೆ (ಕಥಾಮಂ. IV, ೫೭). **ಗಣಿತೆ:** ೨. ಕಡುಗಲಿ ಖಾನವಜೀರರು ನನ್ನಿಯ ಪಡೆಯನೆಲ್ಲವ ಬೇಜಿ ಬೇಜಿ ಬಿಡದೆ ಗಣಿತೆಯ ತೋಜಿಸಿದೋ (ಕಂನವಿ. ೧೧–೮೦). [← ಮರಾ. ಗಣತೀ]

**ಗಣತಿಗೆ** 'ಗಳಂತಿಗೆ$_1$' ನೋ.

**ಗಣದಿಗೆ** 'ಗಳಂತಿಗೆ$_1$' ನೋ.

**ಗಣದೀಪಕ** (ನಾ). ಗಣಶ್ರೇಷ್ಠ; ಗಣಗಳನ್ನು ಬೆಳಗುವವನು; ಗುಂಪಿನ ಶ್ರೇಷ್ಠ: ಮುನೀನ್ದ್ರರಭಯಣನ್ದಿ ಮುನೀನ್ದ್ರಗ್ರ್ಗಣ ದೀಪಕರೆನಿಸಿದ ಮಾಘಣನ್ದಿಗಳ್ (ಕಶಾಅ. ೭೨-೮-೯; 1008). [ಗಣ + ದೀಪಕ]

**ಗಣದೇವತೆ** (ನಾ). ಗಣಕ್ಕೆ ಸೇರಿದ ದೇವತೆ: ದಿವ್ಯ ಗಣದೇವತೆಗಳಂ ಕಾಪುವೇಟ್ಟು (ಜೀವಸಂ. ೪೦-೭). [ಗಣ + ದೇವತೆ]

**ಗಣದ್ರವ್ಯ** (ನಾ). ೧. ಸಾರ್ವಜನಿಕರ ಸ್ವತ್ತು. ೨. ಬಗೆಬಗೆಯ ವಸ್ತುಗಳ ಗುಂಪು: (ಕಿ). [ಗಣ + ದ್ರವ್ಯ]

**ಗಣಧರ** (ನಾ). [ಜೈನ] ಶ್ರೇಷ್ಠವಾದ ಜ್ಞಾನ, ದರ್ಶನ ಮುಂತಾದ ಧರ್ಮಗಳನ್ನು ಹೊಂದಿರುವವನು; ತೀರ್ಥಂಕರನ ಶಿಷ್ಯರಗುಂಪಿನ ಮುಂದಾಳು, —ಮುಖ್ಯಶಿಷ್ಯರಲ್ಲಿ ಒಬ್ಬ: ಗಣಧರಗಣಮುಂ ಬಿಟ್ಟು ಏಕವಿಹಾರಿಯಾಗಿ (ಆದಿಪು. ೬-೩೩ವ); ತೊಂಬತ್ತುಮೂವರ್ ಗಣಧರರುಂ (ಚಂದ್ರಪು. ೧೫-೮೧ವ); ಗಣಧರರೋ ಸ್ವಾಮಿಗಳೋ ಗುಣದಿಂದಾಮುಱಿಯೆ (ಯಶೋಚ. ೧-೪); ಶರಣೆಂಬ ಪರಮಪುರಾಣದ ಕಥೆಗಳನೆರಡನೆ ಗಣಧರರೆನಿಸಿ ಧರೆ ಪೊಗಳ್ವಿನ ವಿಸ್ತರಿಸಿದ ಶ್ರೀ ಕವಿ ಪರಮೇಷ್ಠಿಸ್ವಾಮಿಗಳಡಿಗೆ (ನಾಗಕು. ೧-೮). [ಸಂ.]

**ಗಣನ** (ನಾ). =ಗಣನೆ ೧: 'ಗಣನಯಂತ್ರ' ಪರಾ. [ಸಂ.]

**ಗಣನಯಂತ್ರ** (ನಾ). ಲೆಕ್ಕಾಚಾರ ಮಾಡುವ ಯಂತ್ರ; ಲೆಕ್ಕದಲ್ಲಿ ಸಹಾಯಮಾಡುವ ಯಂತ್ರ: ಇಂಥ ಗಣನಯಂತ್ರ (Arithmetical Machine) ವನ್ನು . . . ನಿರ್ಮಿಸಿದನು (ಗಣಿಚ. ೧೨೧). [ಗಣನ + ಯಂತ್ರ]

**ಗಣನಶಾಸ್ತ್ರ** (ನಾ). ಅಂಕಿ ಅಂಶಗಳನ್ನು ತಿಳಿಸುವ ಶಾಸ್ತ್ರ; ಸಂಖ್ಯಾಶಾಸ್ತ್ರ: Statisticsಗೆ ಗಣನಶಾಸ್ತ್ರವೆಂಬ ಹೆಸರು ಈಚೆಗೆ ಕೊಟ್ಟಿರುತ್ತಾರೆ (ಗಣಿಚ. viii ಪೀಠಿಕೆ). [ಗಣನ + ಶಾಸ್ತ್ರ]

**ಗಣನಾತಿಕ್ರಾಂತ** (ನಾ). ಗಣನೆಗೆ ಸಿಕ್ಕದುದು; ಅಸಂಖ್ಯವಾದುದು: "ಗಣನಾತಿಕ್ರಾಂತಮಂತದಕ್ಕುಮಸಂಖ್ಯಂ" (ವಸ್ತುಕೋ. ೧೦೩-೩೪). [ಗಣನ + ಅತಿಕ್ರಾಂತ]

**ಗಣನಾತೀತ** (ಗು). ಗಣನೆಗೆ ಮೀರಿದ; ಎಣಿಕೆಗೆ ಸಿಕ್ಕದ: ಗಣನಾತೀತಾಜ್ಯಾಹುತಿ ಗಣದಿಂದಂ ತಣಿಯೆ ಜಾತವೇದಂ (ಪಂಪಭಾ. ೬-೩೭); ಕಾಮದೇವ ಕ್ಷಿತಿಪತಿ ಗಣನಾತೀತ ತೇಜಪ್ರತಾಪಂ (ಎಕ. VIII(S), ಸೊರಬ. ೨೭೬-೩೮; 1070); ಗಣನಾತೀತಮಮರ್ತ್ಯಕೋಟಿ ಬಲದೊಳ್ ಜ್ಯೋತಿಷ್ಕದೇವಾಳಿ ಪಿಂತಣಮೆಯ್ಯೊಳ್ ಬರೆ . . . ಗಮನಂ ಕಣ್ಗೆಂ ಬೆಡಂಗಾದುದೋ (ಚಂದ್ರಪು. ೧೨-೭೫). [ಗಣನ + ಅತೀತ]

**ಗಣನಾಥ** (ನಾ). ೧. ಗುಂಪಿನ ಯಜಮಾನ: ವೃಷಭಸೇನ ಗಣನಾಥ ಪುರಸ್ಸರಂ ಪುರುತನಯರಾಕ್ರಮದೊಳ್ ಪರಮಸುಖಾಸ್ಪದಮನನಿಬರುಂ ಕೈಕೊಂಡರ್ (ಆದಿಪು. ೧೬-೭೫ವ); ಗಣನಾಥರ್ಜಯಮುಖ್ಯರರ್ಧಶತಕಂ (ಅನಂಪು. ೧೪-೪೪). ೨. [ವೀಶೈ] ಗಣಗಳ ಒಡೆಯ; ಗಣಪತಿ; ಗಣೇಶ: ಗಣನಾಥನ ಐವತ್ತೆರಡುಸರ ಹಱಿದುಬಿದ್ದುವು (ಬಸವ. ೯೩೧). ೩. ಗಣಗಳ ಒಡೆಯ; ಶಿವ: ಗಣನಾಥನಂ ಸಾರ್ದು (ಬಸಪು. ೪೪-೩೦); ಗಣನಾಥಂ ಸುಪ್ರಧಾನಂ ನಿನಗಧಿಕಹಿತಂ (ವೃಷವಿ. ೬-೪೦). [ಗಣ + ನಾಥ]

**ಗಣನಾಯಕ** (ನಾ). =ಗಣನಾಥ ೨: ಜಗತ್ತ್ರಯನಾದ ದೇವನಂಕದ ಗಣನಾಯಕಂ ವರದನಕ್ಕೆವುಗವ್ಮನಗಂಧವಾರಣಂ (ಗದಾಯು. ೧-೧೦); ಪ್ಯೋಮಾನಿಲಂ . . . ವಾರಿಯೆಂಬಿವೆಂಟೀಶಗುದ್ದಾಮತನುವೆನಿಸಿಕ್ಕು . . . ಸ್ವಾಮಿ ಗಣನಾಯಕರ್ ನಿಜಪುತ್ರರೆನಿಸಿಕ್ಕು (ಮಂಗರಾ. ೪-೧೩). ೨. [ಜೈನ] ಮುನಿ, ಆರ್ಯಿಕೆ, ಶ್ರಾವಕ ಮತ್ತು ಶ್ರಾವಿಕೆ ಈ ನಾಲ್ಕು ಸಂಘಗಳ ನಾಯಕ: ನೆಜವಂ ತಾಳ್ದಿದ . . . ಶ್ರುತಸ್ಕಂಧ ಮಾದಱಿಂದಂ ಗಣನಾಯಕರ್ ಸಮುಱಿ ಭವ್ಯಶ್ರೇಣಿಗವ್ಯಾಜದಿಂದಱಿಯಲ್ (ಆದಿಪು. ೧-೩೯). [ಗಣ + ನಾಯಕ]

**ಗಣನಿಯಮ** (ನಾ). [ಛಂದ] ಗಣಗಳ ನಿಯಮ, —ಕಟ್ಟಳೆ, —ನಿರ್ಬಂಧ: ಗಣನಿಯಮವಿಪರ್ಯಾಸದೊಳೆಡೆವಡೆದೊಪ್ಪಿಸಿಯೆ ಮಾತ್ರೆ ಸಮನಾಗೆ . . . ರಥುಟಾಬಂಧಂ (ಛಂದೋಂಬು. ೩-೨೨೨). [ಗಣ + ನಿಯಮ]

**ಗಣನೀಯ** (ಗು). ಗಣನೆಮಾಡಲು ಯೋಗ್ಯವಾದ, —ಲಕ್ಷಿಸಬೇಕಾದ; ಮುಖ್ಯವಾದ: ಮೊದಲನೆಯ ಗಣನೀಯ ವಿಜ್ಞಾನಿ ಥೇಲಿಸ್ ಎಂಬುವವನು (ಪುಕ್ಸಾರ. ೭ ಪೀಠಿಕೆ). (ನಾ). ೨. ಎಣಿಸತಕ್ಕುದು: "ಗಣನೀಯಂ ಸಂಖ್ಯೇಯಂ" (ವಸ್ತುಕೋ. ೧೦೩-೩೪). [ಸಂ.]

**ಗಣನೆ** (ನಾ). ೧. ಎಣಿಕೆ; ಲೆಕ್ಕ: ಗಣನೆಗಳುಂಬಮಾಗೆ ಮೊದಲಿಂ ತುದಿಯೆಯ್ದೆ ತಗುಳ್ದು ರಾಮಲಕ್ಷ್ಮಣರ ಮಹಾಪ್ರಭಾವಮನದಂ ನೆಱೆ ಬಣ್ಣಿಸೆ (ಪಂರಾಮಾ. ೬-೮); ಸುಕವಿಜನಗಣನೆಯೊಳ್ . . . ಕಾಳಿದಾಸಂ ಮೊದಲೆಂದು ಕರಂ ಬಣ್ಣಿಪರ್ (ಜಗವಿ. ೧-೯); ಗಣನೆಯಿಲ್ಲದ ದೇವಗಣ ಸಂದಣಿಯಲಿರ್ದುದು (ತೊರರಾ. ೩-೭-೧೧). ೨. ಗಮನ; ಲಕ್ಷ್ಯ: ಪದವಿ ಪ್ರಶಸ್ತಿಗಳು ಗಣನೆಗೆ ಬಂದೇಬರುತ್ತವೆ (ಶಿಕ್ಷದ. ೩೪೩). ೩. ಗೌರವ; ಆದರ: ಪ್ರಜಾಸತ್ತೆಯಲ್ಲಿ ಜನಸಾಮಾನ್ಯರ ಗಣನೆಗೆ ಬರಬೇಕಾದರೆ ತುಂಬಾ ಯೋಗ್ಯತೆಯಿರಬೇಕು (ರೂಢಿ). [ಸಂ. ಗಣನಾ]

**ಗಣನೆಗೆಡು** (ಕ್ರಿ). ಎಣಿಕೆ ಮೀರು; ಲೆಕ್ಕಕ್ಕೆ ಸಿಕ್ಕದಿರು: ಗಣನೆಗೆಟ್ಟ ಚರಾಚರಂಗಳೊಳಣಕವಲ್ಲಿಹನೆನ್ನೊಡೆಯನು (ನಿಭಾಗ. ೭-೭-೨೩). [ಗಣನೆ + ಕೆಡು$_1$]

**ಗಣನೆವಡೆ** (ಕ್ರಿ). ಎಣಿಸಲ್ಪಡು; ವಿಖ್ಯಾತನಾಗು: ಕೊಂಡಕುಂದಾನ್ವಯದೊಳ್ ಗಣನೆವಡೆದೆಸೆವ ವಿನಯಾಗ್ರಣಿ ವಿಮಲತರ ಸ್ವಭಾವನಗ್ಗಳದೇವಂ (ಚಂದ್ರಪು. ೧-೫೩). [ಗಣನೆ + ಪಡೆ$_1$]

**ಗಣಪ** (ನಾ). = ಗಣನಾಥ ೨: ಈ ಲಿಪಿಗಳಂ ತಿಳಿದು ಯೋಚಿಸಿ ಹೇಳುವೊಡೆ ಗುಹಗಣಪರಜವನಮಾಲಿಮುಖ್ಯರ್ಗಲ್ಲದೀ ಮಾನವರಿಗರಿದೆನಲು (ಬಸಪು. ೫-೫೫); ತ್ರಿಜಗವಂದಿತ ಗಣಪ ಮಾಳ್ಪುದು ಮತಿಗೆ ಮಂಗಳವ (ಕುವ್ಯಾಅ. ೧-೪). [ಸಂ.]

**ಗಣಪತಿ** (ನಾ). ೧. = ಗಣನಾಥ ೨: "ಪರಶುಧರಂ ಗಣಪತಿ ವಿಘ್ನರಾಜ . . . ಹೇರಂಬಂ" (ವಸ್ತುಕೋ. ೪-೧೭); ಗಣಪತಿಃ . . . ವಿನಾಯಕಃ, ವಿಘ್ನರಾಜಃ – ಈ ೯ ಬೆನಕನ ಪೆಸರ್" (ಹಲಾಯು. ೪-೧೯); ಗಣಪತಿ ಮಾಡೆವಂಗೆ ನಿರ್ವಿಘ್ನದಾಯಕವ (ಕುವ್ಯಾಅ. ೧-೩); ಗಣಪತಿ ಮದುವೆ ನಿತ್ಯ ನಾಳೆ (ಗಾದೆ). ೨. ಗುಂಪಿನ ಒಡೆಯ: (ಕಿ). [ಗಣ + ಪತಿ]

**ಗಣಪದ** (ನಾ). [ವೀಶೈ] (ಶಿವ)ಗಣಗಳ ಪದವಿ, —ಅಧಿಕಾರ: ಗಣಪದಮಂ ನೆಗಟ್ಟಿವಡೆದು ಓಹಿಲಧರಾಧಿಪಂಗೆ ಕೊಟ್ಟು (ಉದ್ಭಟ. ೧೧-೧೩೧); ಅಳಿಕಾಕ್ಷನೊಲಿದು ಗಣಪದವನಿತ್ತನು (ವೀಶೈಪು. ೨-೬-೨೧). [ಗಣ + ಪದ$_3$]

**ಗಣಪದವಿ** (ನಾ). = ಗಣಪದ: ಶರಣಂಗೆ ತಪ್ಪಿತ್ತು ಗಣಪದವಿ ಲಿಂಗಕ್ಕೆ ದೂರ ಜಂಗಮಕ್ಕೆ ದೂರ (ಬಸವ. ೬೨೦). [ಗಣ + ಪದವಿ]

**ಗಣಪರ್ವ** (ನಾ). [ವೀಶೈ] ಶಿವಭಕ್ತರಿಗಾಗಿ ಮಾಡುವ ಹಬ್ಬ; ಜಂಗಮದಾಸೋಹ: ಅನುಗ್ರಹಂಗೆಯ್ಸಿ ಗಣಪರ್ವವಂ ಮಾಡಿ (ಪದ್ಮರಾ. ೧೨-೨೬); ಪುಷ್ಪಾಂಜಲಿಮಾಡಿ ವಿಭೂತಿವೀಳೆಯವಿತ್ತು ತವುತವುಗೆ ಗಣಪರ್ವ ಮಾಡಿದರು (ಮೋಳಿಮಾ. ೭೫ ಪ್ರಸ್ತಾವನೆ). [ಗಣ + ಪರ್ವ]

**ಗಣಪೆಯುಬಳ್ಳಿ** (ನಾ). ಒಂದು ಬಗೆಯ ಬಳ್ಳಿ: ಗಣಪೆಯುಬಳ್ಳಿ . . . ಎಂಬುವ ಲತೆಯೊಂದಿರುತಿಹುದು (ದುಂಬಿನಾ. ೮೨). [ಗಣಪೆ$_0$+ಬಳ್ಳಿ]

**ಗಣಪ್ಪ** (ನಾ). ಒಬ್ಬಾತನ ಹೆಸರು: ಸಿವಮಾರರ್ ಪ್ರಿತುವೀಕಾರಣಿಗ ಗಣಪ್ಪನ್ (ಇಅ. XIV, ೨೩೨-೫೩ ; 9 ನೆಯ ಶತ). [ಗಣ ? + ಅಪ್ಪ$_1$]

**ಗಣಪ್ರವರ** (ನಾ). [ಜೈನ] ಸಂಘದಲ್ಲಿ ಶ್ರೇಷ್ಠ: ಮುನ್ನಂ ಗಣ ಪ್ರವರರ್ ಗೌತಮರಾದಿಯಾಗೆ ಮುನಿಮುಖ್ಯರ್ (ಪಂರಾಮಾ. ೧-೩೯). [ಗಣ + ಪ್ರವರ]

**ಗಣಬರು** (ಕ್ರಿ). ಮೈಮೇಲೆ ಗ್ರಹ ಬರು ; ಮೈದುಂಬು ; ದೇವರು ಬರು: ಗಣ ಬಂದವನ ತೆರದಿ ರಿಂಗಣಗುಣಿದು (ಶ್ರೀರಾಮಾ.೨೪೨-೪೦೨). [ಗಣ + ಬರು$_1$ (< ಬರ್$_1$)]

**ಗಣಮಗ** (ನಾ). ಗ್ರಹ ಮೈಮೇಲೆ ಬರಿಸಿಕೊಂಡವನು; ಆವೇಶ ಬಂದವನು: "ಏನೋ ಸಕುನ ಬರ್ಲಿಲ್ಲಾ, ಒಡೆಯ ಗಣಮಗನೂ ಹೇಳ್ತು . . . ಸನಿಬಿಡ್ತದೆ ಅಂತಾ" (ಮಲೆಮ. ೭೧೭). [ಗಣ + ಮಗ]

**ಗಣಯಿಸು** 'ಗಣಿಸು' ನೋ.

**ಗಣರಮ್ಮ** (ನಾ). ಒಬ್ಬಾತನ ಹೆಸರು: ಗಣರಮ್ಮಂ ಮಣಿಯಂ (ಎಇ. XIII, ೧೪೯-೫ ; 888). [ಗಣರ್$_0$ + ಅಮ್ಮ$_1$]

**ಗಣರಾಜ** (ನಾ). ಗಣರಾಜ್ಯದ ರಾಜ, —ಅಧಿಪತಿ: ಭಗವಾನ್ ಮಹಾ ವೀರಸ್ವಾಮಿಯ ಕಾಲಕ್ಕೆ ಹದಿನೆಂಟು ಮಂದಿ ಗಣರಾಜರು ಈ ಭಗವಂತನ ಸೇವೆಗೆ ಕೈಕಟ್ಟಿ ನಿಂತಿದ್ದರು (ಭಾರದ. ೧೭೫). [ಗಣ + ರಾಜ]

**ಗಣರಾಜ್ಯ** (ನಾ). ಅನೇಕ ರಾಜ್ಯಗಳು ಸೇರಿ ಆದ ಒಂದು ಕೇಂದ್ರಾಡಳಿತದ ರಾಷ್ಟ್ರ; ಪ್ರಜಾಪ್ರಭುತ್ವ ರಾಜ್ಯ; ರಿಪಬ್ಲಿಕ್: ಭಾರತವನ್ನು ಒಂದು ಸಂಪೂರ್ಣಪ್ರಭುತ್ವಸಂಪನ್ನ ಲೋಕತಂತ್ರಾತ್ಮಕ ಗಣರಾಜ್ಯವಾಗಿ ವ್ಯವಸ್ಥೆಗೊಳಿಸುವುದಕ್ಕಾಗಿಯೂ (ಭಾಧಾನ. ೧); ಅರಾಜಕ ಗಣರಾಜ್ಯವನ್ನಾದರೂ ತೋರಿಸಬೇಕು (ಬದ್ಧಪ್ರ. XXXIII ಪೀಠಿಕೆ). [ಗಣ + ರಾಜ್ಯ]

**ಗಣರಾತ್ರ** (ನಾ). ಅನೇಕ ರಾತ್ರಿಗಳ ಮೊತ್ತ, —ಲೆಕ್ಕ: "ರಾತ್ರಿಗಳವು ಪಲವುಮಾಗೆ ಗಣರಾತ್ರಗಳ್" (ವಸ್ತುಕೋ. ೧೬-೩); "ಹಲವಿರುಳಾದಡೆ ಗಣರಾತ್ರಮೆಂಬುದು" (ಹಲಾಯು. ೧೮-೧೦೭). [ಸಂ. (ಗಣ + ರಾತ್ರಿ + -)]

**ಗಣರಾತ್ರೆ** (ನಾ). = ಗಣರಾತ್ರ: "ಹಲವಿರುಳು ಗಣರಾತ್ರೆಯೆನಿಸಿಕ್ಕು" (ಮಂಗರಾ. ೨೦-೭). [ಸಂ. ಗಣರಾತ್ರ]

**ಗಣರೂಪ** (ನಾ). ಎಕ್ಕದ ಗಿಡ: "ಅರ್ಕಾಹ್ವಃ, ವಸುಕಃ, ಸ್ಫೋಟಃ, ಗಣರೂಪಃ, ವಿಕೀರಣಃ, ಮಂದಾರಃ, ಅರ್ಕಪರ್ಣಃ – ೭ ಎಕ್ಕೆ ಗಿಡ, ಸೂರ್ಯವೃಕ್ಷ" (ಸಿದ್ಧಾಂತಿ. ೧೧೫). [ಗಣ + ರೂಪ]

**ಗಣಲು** (ನಾ). = ಗಣಿಕೆ: (ಕ). [< ಗಣಿಕೆ$_1$]

**ಗಣವರಿ** (ನಾ). ಒಂದು ಬಗೆಯ ತೆರಿಗೆ ; ಒಂದು ಗುಂಪಿನವರು ಕೊಡಬೇಕಾದ ತೆರಿಗೆ (?): ಊರೊಳಗಣ ನಿವೇಷಣ ೪ ಗಣವರಿ ಸೂ ೧ ಕೊಡಕ್ಕೆ ಸೂ ೧ ತೋಟದಲಿ ಅಡಕೆಯ ಮರ ೧ (ಸೌಇಇ. IX–i, ೨೬೪-೪೦ ; 1154). [ಗಣ + ವರಿ$_1$]

**ಗಣವಾರಿಕೆ** (ನಾ). ಒಂದು ಬಗೆಯ ತೆರಿಗೆ: ಕುಮಾಬದೆಜ಼ ಕುಂಬಾರದೆಜ಼ ಗಣವಾರಿಕೆ (ಮೈಆರಿ. ೧೯೩೮, ೭೮-೬ ; 1507). [?]

**ಗಣವೇಷ** (ನಾ). ಎಲ್ಲರೂ ಹಾಕುವ ಒಂದೇ ಬಗೆಯ ವಸ್ತ್ರ, —ಪೋಷಾಕು ; ಸಮವಸ್ತ್ರ: ಪೋಲೀಸರ ಗಣವೇಷದಂತೆ ದಂಡಿನ ಗುಡಾರದಂತೆ ಎಲ್ಲ ನಾಗರಿಕರಿಗೂ ಸರಕಾರವು ಹೊಟ್ಟೆಬಟ್ಟೆಗೆ ನೇರವಾಗಿ ಕೊಟ್ಟು ಸಾಕುವುದೆಂದಲ್ಲ (ಮಾವಾದ. ೧೫೮). [ಗಣ + ವೇಷ]

**ಗಣವ್ರಿತ್ತಿ** (ನಾ). ಒಂದು ವೃತ್ತಿಗಾಗಿ ಕೊಟ್ಟ ದಾನದ ಭೂಮಿ: ಆ ಶಿವಪುರವನು ಮೂವತ್ತಯೆರಡು ಗಣವ್ರಿತ್ತಿಯ ಮಾಡಿ (ಎಕ. XVI, ಗುಬ್ಬಿ. ೭೬-೧೮ ; 1252). [ಗಣ + ವ್ರಿತ್ತಿ]

**ಗಣಸ್ಥ** (ನಾ). ಗಣದಲ್ಲಿ ಸೇರಿರುವವನು ; ಸಮೂಹದ ಮುಖಂಡ: ಸಮಯವನ್ನು ನಿರೀಕ್ಷಿಸುತ್ತಲಿದ್ದ ಮಾದ್ರಕ, ಯೌಧೇಯ, ಮಾಳವ ಮುಂತಾದ ಗಣಸ್ಥರು . . . ತುಖಾರರ ಆಧಿಪತ್ಯವನ್ನು ಕೊನೆಗಾಣಿಸಿ ಬಿಟ್ಟರು (ಭಾಇಪ್ರ. ೨೦೪). 'ಕೂಟಸ್ಥ' ಸರಾ. [ಸಂ.]

**ಗಣಸ್ಥಾನ** (ನಾ). [ಛಂದ] ಗಣದ ಸ್ಥಾನ, —ಎಡೆ: ಗಣಕ್ಕೆ ಮೂಲಾಂಶ ಒಂದು ಗುರು (ಲಘುವಲ್ಲ) . . . ಆದರೆ ಪಾದಾಂತದಲ್ಲಿ ಗಣಸ್ಥಾನದಲ್ಲಿ ನಿಲ್ಲಬಹುದು (ಕೈಪಿಡಿ. ೧೧೮). [ಗಣ + ಸ್ಥಾನ]

**ಗಣಹೋಮ** (ನಾ). ಗಣಪತಿಯ ಪ್ರೀತಿಗಾಗಿ ಮಾಡುವ ಹೋಮ: ೬ ಕೂಟಮತಸ್ಥರಿಗೆ 'ಗಣಹೋಮ' ಏಕೆ ಪ್ರಾಶಸ್ತ್ಯವೆಂಬುದನ್ನು . . . ತಿಳಿಸಿದ್ದಾರೆ (ತುಳುನಾ. ೨೩೭). [ಗಣ + ಹೋಮ]

**ಗಣಾಕ್ಷರ** (ನಾ). [ಛಂದ] ಗಣದ ಹೆಸರಾಗಿ ನಿಂತ ಅಕ್ಷರ: "ಮಯ ರಸತಜಭನಲಗ ಸಂಚಯವೆಂಬುದು ನಿಯಮದಿಂ ಗಣಾಕ್ಷರಮಕ್ಕುಂ" (ಛಂದೋಂಬು. ೧-೩೭). [ಗಣ + ಅಕ್ಷರ]

**ಗಣಾಗ್ರಣಿ** (ನಾ). ಗಣದ ಮುಂದಾಳು, —ಪ್ರಮುಖ: ಭರತಪತಿಯ ಶೋಕಾವೇಗಮಂ ವೃಷಭಸೇನ ಗಣಾಗ್ರಣಿಗಳಿಂತೆಂದಾಜಿಸಿದರ್ (ಆದಿಪು. ೧೬-೫೪ ವ). [ಗಣ + ಅಗ್ರಣಿ]

**ಗಣಾಚಾರ** (ನಾ). [ವೀಶೈ] ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಮತ್ತು ಭೃತ್ಯಾಚಾರ ಎಂಬ ಪಂಚಾಚಾರಗಳಲ್ಲಿ ಒಂದು ; "ವೀರಶೈವರಿಗೆ ಕುಂದುನಿಂದೆಗಳು ಬಂದರೆ ಅವುಗಳನ್ನ ಪರಿಹರಿಸದೆ ತಕ್ಕ ಪ್ರತೀಕಾರ ಮಾಡುವದೇ ಗಣಾಚಾರವು" (ಶಿವಾಕೋ. ೯೯): ಲಿಂಗಾರ್ಪಿತವಲ್ಲದೆ ಉದಕವ ಮುಕ್ಕುಳಿಸಿದೆನಾದರೆ ಸಲ್ಲೆನು ನಿಮ್ಮ ಗಣಾಚಾರಕ್ಕಯ್ಯಾ (ಬಸವ. ೭೮೫); ಲಿಂಗಾಚಾರ ಸದಾಚಾರ ಭೃತ್ಯಾಚಾರ ಸಿವಾಚಾರ ಗಣಾಚಾರವೆಂಬ ಪಂಚಾಚಾರ ನಿಷ್ಠನಾಗಿ (ವಿವೇಕ. ೧೧೦); ಸ್ಥಾನಿಕ ತಂಮಣನು ಗಣಾಚಾರದ ಕಟ್ಟುಗೆಯ ತೆರುವ ಹಣವನು (ಎಕ. VII, ಶಿವಮೊ. ೨೧-೮ ; ?). [ಗಣ + ಆಚಾರ]

**ಗಣಾಚಾರಿ** (ನಾ). [ವೀಶೈ] ಜಂಗಮರಲ್ಲಿ ಒಂದು ಪಂಗಡ: ಹರಿಯಪ್ಪವೊಡೆಯರಿಗೆ ಧರ್ಮ್ಮವಾಗಬೇಕೆಂದು ಗಣಾಚಾರಿ ಹರಿಯಂಣನು . . . ಬರಿಸಿದ (ಎಕ. XIV, ನಂಜನ. ೨೮೦-೨ ; ?); ಆಯುಳ್ಳ ಮಟಪತಿ ಚಾಯುಳ್ಳ ಗಣಾಚಾರಿ ಮೇಲಾದ ನನ್ನೂರ ಮಟದಯ್ಯ (ಲೋಕಗೀ. ೬೧-೧೮); ಲಿಂಗವಂತ ಜಂಗಮರಲ್ಲಿ ವಿರಕ್ತರು ಸಾಮಾನ್ಯರು ಗಣಾಚಾರಿಗಳು ಮಠಪತಿಗಳು ಯೆಂಬ ನಾಲ್ಕುವೊಳಭೇದಗಳಿರುತ್ತವೆ (ಕಭಾಗ. ೯೪). [ಸಂ. ಗಣಾಚಾರಿನ್]

**ಗಣಾಡಂಬರ** (ನಾ). [ವೀಶೈ] ೧. ಗಣಗಳ ಸಮೂಹ, —ಗುಂಪು: ವಿಭೂತಿಯ ಹೂಸಿ ಗಣಾಡಂಬರದ ನಡುವೆ ನಲಿನಲಿದಾಡಿ ಉಂಡು ತಾಂಬುಲಗೊಂಡು ಹೋಹುದಲ್ಲಾ (ಬಸವ. ೨೦೫). ೨. ಗಣಗಳಿಗೆ ಮಾಡುವ ಸತ್ಕಾರ ; ಜಂಗಮದಾಸೋಹ: ಮಹಾವಿಭೂತಿಯಿಂ ಗಣಾಡಂಬರವಂ ಮಾಡಿ ಶಿವಾರ್ಚ್ಚನೆಯ ಮಾಡಿ (ಎಇ. XIV, ೨೮೦-೧೮ ; 1173). [ಗಣ + ಆಡಂಬರ]

**ಗಣಾಧಿನಾಥ** (ನಾ). = ಗಣಧರ : ಭರತನನಾಜಿಸಿದಂ ಮುನಿವಿನುತ ಗಣಾಧಿನಾಥವಚನಾಮೃತದಿಂ (ಆದಿಪು. ೧೬-೬೦). [ಗಣ + ಅಧಿನಾಥ]

**ಗಣಾಧಿಪ** (ನಾ). = ಗಣನಾಥ : (ಕ). [ಗಣ + ಅಧಿಪ]

**ಗಣಾಧೀಶ** (ನಾ).= ಗಣನಾಥ ೨ : "ಗಣಾಧೀಶಂ ಕುಠಾರಧರನಾಖುರಥ ನೆನಲು ಲಂಬೋದರನೆನಿಕ್ಕು" (ಮಂಗರಾ. ೫-೧೬). [ಗಣ + ಅಧೀಶ]

**ಗಣಾರ** (ನಾ). = ಗಣವರಿ (?) : ದೇವಸ್ಥಾನಕ್ಕೆ ಪಾಲಿಸಿದದು ಗಣಾರ ಕಂ ಮಾ ಱ ತೆ ಱಿ ಗೆ ಕುಂತೆರಿಗೆ ಮಾದಾರಿಕೆ ಉಪಿನಕಾವಲಿ ಸುಂಕ (ಎಕ. XIV, ಗುಂಡ್ಲುಪೇ. ೧೨೯-೮೩ ; 1521). [?]

**ಗಣಾರಾಧನೆ** (ನಾ). [ವೀಶೈ] "ಜಂಗಮರ ತೃಪ್ತಿಗಾಗಿ ಮಾಡುವ ಭೋಜನ ಸಮಾರಂಭ" (ಶರಸಾ. ೨೮-೪) : 'ಶಿವಗಣಾರಾಧನೆ' ಪರಾ. [ಗಣ + ಆರಾಧನೆ]

**ಗಣಾರ್ಚನೆ** (ನಾ). [ವೀಶೈ] ಜಂಗಮರ ಪೂಜೆ, —ಆತಿಥ್ಯ : (ಕ). [ಗಣ + ಅರ್ಚನೆ]

**ಗಣಿ**$_1$ 'ಗಟಿ' ನೋ.

**ಗಣಿ**$_2$ 'ಕಣಿ$_6$' ನೋ.

**ಗಣಿಕ** (ನಾ).=ಗಣಕ ೧ : ಹಿಮ್ಮ . . . ಗುಣಗಳ ಲೆಕ್ಕಿಪ ಗಣಿಕನದಾವಂ (ಅಂಜಚ. ೯-೨೬೫) ; ಗಣಿಕನ ನೆರೆ ಹೊಲ್ಲ ಗಣಿಕೆ ಮುದಿಯಳು ಹೊಲ್ಲ (ಸರ್ವಜ್ಞ. ೭೪೬) ; ಮೂಲಾಧಾರಪತ್ರವನ್ನು ಕೊಟ್ಟನು. ಅದನ್ನು ಒಬ್ಬ ಗಣಿಕನು ಓದುವುದಕ್ಕೆ ಆರಂಭಿಸಿದನು (ಪುರಾವಿ. ೨೬). [< ಸಂ. ಗಣಕ]

**ಗಣಿಕಾಂಗನೆ** (ನಾ). = ಗಣಿಕೆ$_3$ : ನೃತ್ಯಂ ಗಣಿಕಾಂಗನಾ ತಳಿರುಗಳ್ ಪೂವಣ್ಣು . . . ಕಂಡೊಡಂ ಶಕುನಂ ಶೋಭನಕಾಸ್ಪದಂ (ಸೋಮೇಶ. ೬೭) ; ಮೇನಕೆ ತಿಲೋತ್ತಮೆಯರೀ ಸರ್ವ ಸೊಬಗಿನ ಸದನಮಪ್ಪ ಶೋಣಿತಪುರಮೆ ಪೂರ್ವಮರವಾಸವಿದೆಯೆಂದು ಬಂದಿರ್ಪಂತೆ ಗಣಿಕಾಂಗನೆಯರೆಸೆದರು (ನವಮೋ. ೨-೫೪). [ಸಂ. (ಗಣಿಕಾ + ಅಂಗನಾ)]

**ಗಣಿಕಾಜನ** (ನಾ). ವೇಶ್ಯೆ ; ಸೂಳೆ : ತನಗೆನ್ನದ ನಿಶ್ಚಯಮಪ್ಪ ದಾನಮೆಂಬಿನಿತನಿತಿಲ್ಲದೊಂದೆ ಗಣಿಕಾಜನಸಾಧನಸಿದ್ಧಿಯಕ್ಕುಮೇ (ಶಾಂತಿಪು. ೮-೯೯). [ಸಂ. (ಗಣಿಕಾ + ಜನ)]

**ಗಣಿಕಾನಿಕರ** (ನಾ). ಗಣಿಕೆಯರ ಗುಂಪು ; ವೇಶ್ಯೆಯರ ಸಮೂಹ : ಗಣಿಕಾನಿಕರ ಮಣಿಗಣವೆಲ್ಲಿ ಗಜಜಾತ್ಯಶ್ವವೆಲ್ಲಿ . . . ನೆರೆದಿಹುದು (ಕುವ್ಯಾಉ. ೩-೭೪). [ಸಂ. (ಗಣಿಕಾ + ನಿಕರ)]

**ಗಣಿಕಾಪ್ರತೋಳಿ** (ನಾ). ಗಣಿಕೆಯರಿರುವ ವಠಾರ; ವೇಶ್ಯಾವಾಟ; ಸೂಳೆಗೇರಿ : ನೋಡಲೆಸೆದತ್ತು ಸದಾ ಗಣಿಕಾಪ್ರತೋಳಿ ತಾಂ (ಹವ್ಯಾರ. ೨-೯೨). [ಸಂ. (ಗಣಿಕಾ + ಪ್ರತೋಳಿ = ಪ್ರತೋಲಿ)]

**ಗಣಿಕಾಭವನ** (ನಾ). ವೇಶ್ಯಾಗೃಹ ; ಸೂಳೆಯ ಮನೆ : ಮಿಂಚಿವ ಗಣಿಕಾಭವನ ಕೋಟಿಯ ಸುತ್ತಲುದ್ಯಾನ (ಕಾಶಿರಾ. ೧-೨೩). [ಸಂ. (ಗಣಿಕಾ + ಭವನ)]

**ಗಣಿಕಾರಿ** (ನಾ). ಒಂದು ಬಗೆಯ ಗಿಡ ಮತ್ತು ಅದರ ಸುಗಂಧ ಕುಸುಮ : "ಗಂಧಕುಸುಮ – ಗಣಿಕಾರಿ" (ಓಷಧಿ. ೪೬). [?]

**ಗಣಿಕಾರಿಕೆ** (ನಾ). ಒಂದು ಬಗೆಯ ನೆಲ್ಲಿ ಮರ : ಶ್ರೀಪರ್ಣಂ, ಅಗ್ನಿಮಂಥಃ, ಕಣಿಕಾ, ಗಣಿಕಾರಿಕಾ, ಜಯಾ – ಈ ನರುವಲ ಹೆಸರುಗಳು, ನೆಲ್ಲಿಗಿಡದಲ್ಲಿ ವಿಶೇಷ (ಸಿದ್ಧಾಂತಿ. ೧೧೧). [ಸಂ. ಗಣಿಕಾರಿಕಾ]

**ಗಣಿಕಾವಾಟ** (ನಾ). ಗಣಿಕೆಯರ ವಾಸಸ್ಥಳ ; ಸೂಳೆಗೇರಿ ; ವೇಶ್ಯಾವಾಟ : ರಂಜಿಪುದು ವಿಯೋಗಿನಿಕಾಯ ಕಾಳಕೂಟಂ . . . ಗಣಿಕಾವಾಟಂ (ಪುಷ್ಪಪು. ೨-೬೬). [ಸಂ. (ಗಣಿಕಾ + ವಾಟ)]

**ಗಣಿಕಾವಾಟಿ** (ನಾ). = ಗಣಿಕಾವಾಟ : ಗಣಿಕಾವಾಟಿಯನೆಸೆವಾ ಪಣಕೋಟಿಯನಟ್ಟಿಯಿಂದೆ ಪುರದೊಳ್ ಕಡೆ ಮುಟ್ಟೆ ಣಿಸುವೊಡಂ ನೋಡುವೊಡಂ ಫಣಿಪತಿಯುಂ ದಿವಿಜಪತಿಯುಮಾಗಲೆವೇಳ್ಕುಂ (ಚಂದ್ರಪ್ರ. ೧೧-೬೪). [ಸಂ. (ಗಣಿಕಾ + ವಾಟಿ)]

**ಗಣಿಕೆ**$_1$, **ಗಣಕ್ಕೆ**$_1$ (ನಾ). ೧. ಗೆಣ್ಣು ; ಗಂಟು ; ಗ್ರಂಥಿ. ೨. ಕಬ್ಬು, ದಂಟು ಮೊದಲಾದುವುಗಳ ತುಂಡು : ಕಬ್ಬಿನ ಗಣಿಕೆಯನ್ನು ಕೊಟ್ಟಳು (ಮುಂಬಯು. ೩-೪೩). **ಗಣಕ್ಕೆ**$_1$ : ೨. ಕಡೆಗಳಿವು ನಾಳಿನಲಿ ಕಬ್ಬಿನ ಗಣಿಕೆಗಳು (ಕುವ್ಯಾಸ. ೩-೧೦) ; ನನ್ನ ಬಾಣಗಳೇನು ಕಬ್ಬಿನ ಗಣಿಕೆಗಳೆ (ರಾಜಸೂ. ೩೦). [< ಕಣಿಕೆ$_1$]

**ಗಣಿಕೆ**$_2$, **ಗಣಕ್ಕೆ**$_2$, **ಗಣಕ್ಕೆ**$_2$ (ನಾ). ಕೆಂಪು ಮತ್ತು ಕಪ್ಪುಬಣ್ಣದ ಹಣ್ಣುಗಳನ್ನು ಬಿಡುವ ಒಂದು ಬಗೆಯ ಸಣ್ಣಗಿಡ : "ಕಪೋತಿಕಾ –ಹವಳ, ಗಣಿಕೆ, ಪಾರಿವಪಕ್ಷಿ" (ಓಷಧಿ. ೨೫) ; ಗಣಿಕೆಯುಂ ಸಮೂಲವಂ ಅಂಬಿಲದಲ್ಲಿ ಅರೆದು ನೆತ್ತಿಗೆ ಒತ್ತಲು . . . ಶೋಫವಾತ ಗುಣ (ವಿವೈವಿ. ೪). **ಗಣಕ್ಕೆ**$_2$ : "ಕಾಕಮಾಚಿ, ವಾಯಸಿ" (ನಾಚಿರಾ. ೩). **ಗಣಕ್ಕೆ**$_2$ : "ಕಾಕಮಾಚಿ, ವಾಯಸಿ ಈ ೨ ಗಣಕೆ" (ನಾಚಿರಾ. ೧೧೨) ; ಯಾಲಕ್ಕಿ ಮೆಕ್ಕೆ ಗಣಕೆ ಮೊದಲಾದ ಘಮಘಮಿಸುತ್ತಾ (ಸೌಗಂಧಿ. ೩೬-೧೪). [?]

**ಗಣಿಕೆ**$_3$ (ನಾ). ೧. ವೇಶ್ಯೆ ; ಸೂಳೆ ; ಜಾರೆ : ಗಣಿಕೆಯರ್ಕಳುಂಬೆರಸು . . . ವಿಮಾನಮನೇಱಿ (ವಡ್ಡಾರಾ. ೮೩-೧೯) ; ತಪೋವಿಘಾತಂ ಮಾಡಲೆಂದು ಬಂದ ಪುರಂದರನ ಗಣಿಕೆಯರ ಕಡೆಗಣ್ಣ ನೋಟಕ್ಕಂ . . . ಅಳ್ಕದ ಶೌಚಾಂಜನೇಯನ ಶೌಚಮುಂ (ಪಂಪಭಾ. ೯-೫೨ವ) ; ಬಣ್ಣದಾಸೆಗೆ ಬದುಕು ಮಾಱಿದ ಗಣಿಕೆಯಂತಹುದು (ಕಾಶಿರಾ. ೧೮-೪೦) ; ಲಜ್ಜೆಯೆ ಗಣಿಕೆಗೆ ನಾಶನಿಮಿತ್ತವು ನಿರ್ಲಜ್ಜೆ ಸತಿಯರಿಗಳಿವು (ಇಂಚಾಪ. ೧೪೩-೨). ೨. ಹೆಣ್ಣಾನೆ ; ಪಿಡಿ : "ಪಿಡಿಯಾನೆಯಲ್ಲಿಯುಂ ಧೇನುಕಾ, ಗಣಿಕಾ ಎಂಬುದು" (ಹಲಾಯು. ೧೩೩-೧೩). ೩. ಒಂದು ಬಗೆಯ ಜಾಜಿಮಲ್ಲಿಗೆ : "ಜಾಜಿಮಲ್ಲಿಗೆಹೂವು" (ಗಂಗಾಮ. ೧೧೧) ; "ಕೃಷ್ಣವಲ್ಲೀ – ಆಸಡಿ, ಸುಗಂಧಿ, ಗಣಿಕೆ" (ಓಷಧಿ. ೩೯). [ಸಂ. ಗಣಿಕಾ]

**ಗಣಿಕೆಗಣ್ಣು** (ನಾ). ಜೋಳ, ಕಬ್ಬು ಮೊದಲಾದುವುಗಳ ಗಂಟಿನ ಮೇಲೆ ಮೊಳಕೆ ಬರುವ ಗೆಣ್ಣು : ಎವೆ ತೆರೆಯದ ಕೂಸು – ಕಣ್ಣು ಮೊಳಕೆ ಬರದ ಗಣಿಕೆಗಣ್ಣು (ಅರಳು. ೭೪-೩). [ಗಣಿಕೆ$_1$ + ಕಣ್ಣು (< ಕಣ್)]

**ಗಣಿಕೆಹುಣ್ಣು** (ನಾ). ಬೆರಳ ಗೆಣ್ಣುಗಳಲ್ಲಿ ಉಂಟಾಗುವ ಒಂದು ರೋಗ ; ಕೀಲುಗಳ ಮೇಲಿನ ವ್ರಣ : (ಕ). [ಗಣಿಕೆ$_1$ + ಹುಣ್ಣು (< ಪುಣ್)]

**ಗಣಿಗ** 'ಗಾಣಿಗ' ನೋ.

**ಗಣಿಗಲತೋರ** (ನಾ). ಒಂದು ಬಗೆಯ ಮರ : ನೀವಾರ, ಗಣಿಗಲ ತೋರ (ಮೈಔಗಿ. ೧೨-೨೦೧). [?]

**ಗಣಿಗಲು**$_1$ 'ಕಣಗಿಲೆ$_1$' ನೋ.

**ಗಣಿಗಲು**$_2$ (ನಾ). = ಗಣಿಕೆಗಣ್ಣು : ತುಂಡುಗಳ ನಡುವೆ ಗಣಿಗಲುಗಳನ್ನು ಉಳಿಸಿ ಕಡಿದಿರಬೇಕು (ಕೃಷಿಪ್ರ. ೧೮೨). [ಗಣಿಕೆ$_1$ + -ಅಲು (< -ಅಲ್$_2$)]

**ಗಣಿಗಲೆ** 'ಕಣಗಿಲೆ$_1$' ನೋ.

**ಗಣಿಗಿಲಮುಸ್ತೆ** (ನಾ). ಒಂದು ಬಗೆಯ ಗಡ್ಡೆ : (ಕ). [< ಗಣಿಗಿಲು + ಮುಸ್ತೆ]

**ಗಣಿಗಿಲು** 'ಕಣಗಿಲೆ$_1$' ನೋ.

**ಗಣಿಗೆ$_1$** 'ಗಳಗೆ' ನೋ.

**ಗಣಿಗೆ$_2$** 'ಗಟ್ಟಿಗೆ' ನೋ.

**ಗಣಿಜಿಲೆ** 'ಗಣಜಿಲೆ$_1$' ನೋ.

**ಗಣಿತ** (ಗು). ೧. ಲೆಕ್ಕಹಾಕಿದ; ಎಣಿಸಿದ: 'ಅಗಣಿತ' ಪರಾ. (ನಾ). ೨. ಗಣನೆ; ಎಣಿಕೆ; ಲೆಕ್ಕಾಚಾರ: ಬರಹವಾಚಕಗಣಿತ ಶಬ್ದಾರ್ಥರಸಭಾವೋಕ್ತಿಪ್ರವೀಣತೆ (ಬಸವು. ೩-೪೨). ೩. ಲೆಕ್ಕ; ಗಣಿತಶಾಸ್ತ್ರ: ಸಕಲವ್ಯಾಕರಣಾರ್ಥಶಾಸ್ತ್ರ ಗಣಿತಾಲಂಕಾರ . . . ಹೃದ್ಯವಿದ್ಯಾಕದಂಬಕನು (ಮದಕಿ. ೧-೫೧); ಉಪಾಧ್ಯಾಯರು ನನಗೆ ಓದುಬರಹವನ್ನೂ ಗಣಿತವನ್ನೂ ಕಲಿಸಿದರು (ಕಸರಿ. ೧). 'ಅಂಕಗಣಿತ', ಬೀಜಗಣಿತ', 'ರೇಖಾಗಣಿತ' ಪರಾ.

**ಗಣಿತಮಾಡು** = ಲೆಕ್ಕಮಾಡು; ಎಣಿಸು: ಶಬ್ದದ ವೇಗವನ್ನು ಗಣಿತಮಾಡಿದರು (ಭೌತವಿ. ೧೪೧). **ಗಣಿತಹಾಕು** = ಲೆಕ್ಕಹಾಕು: ನೀರಿನ ವೇಗವೆಷ್ಟಿರಬಹುದೆಂದು ಗಣಿತಹಾಕತೊಡಗಿದರು (ಮುಂಗಾಪು. ೬೦). [ಸಂ.]

**ಗಣಿತಜ್ಞ** (ನಾ). ೧. ಗಣಿತವನ್ನು ಬಲ್ಲವನು, - ತಿಳಿದವನು: ಗಣಿತವನಱಿಯದಿಹ ಗಣಿತಜ್ಞ (ಮದೇಪು. ೩-೨೪); ಸಕಲದೇಶದ ವಹಿಗಳಂ ಬರೆವ ಗಣಿತಜ್ಞ ಕರ್ಣಿಕರು (ನವಮೋ. ೩-೨೧). ೨. ಜ್ಯೋತಿಷಿ. [ಸಂ.]

**ಗಣಿತವಿಜ್ಞಾನ** (ನಾ). ಗಣಿತವನ್ನು ತಿಳಿಸುವ ವಿಜ್ಞಾನ, —ಶಾಸ್ತ್ರ: ಗಣಿತವಿಜ್ಞಾನ, ಇತಿಹಾಸ ಮೊದಲಾದುವುಗಳಿಗೆ ಸಂಬಂಧಿಸಿದುವು (ಪರಜೀ. iv ಮುನ್ನುಡಿ). [ಗಣಿತ + ವಿಜ್ಞಾನ]

**ಗಣಿತಶಾಸ್ತ್ರ** (ನಾ). = ಗಣಿತವಿಜ್ಞಾನ: ಅವನು ಗಣಿತಶಾಸ್ತ್ರದಲ್ಲಿ ಹೆಚ್ಚು ಅಂಕಗಳನ್ನು ಗಳಿಸಿದ್ದಾನೆ (ರೂಢಿ). [ಗಣಿತ + ಶಾಸ್ತ್ರ]

**ಗಣಿತಿ$_1$** 'ಗಣತಿ$_2$' ನೋ.

**ಗಣಿತಿ$_2$** 'ಗಳಂತಿಗೆ$_1$' ನೋ.

**ಗಣಿತಿಗ** (ನಾ). = ಗಣಿತಜ್ಞ: ಜೋಯಿಸಿಗಂ, ಗಣಿತಿಗಂ, ಸಿದ್ಧಾಂತಿಗಂ (ಭಾಷಾಭೂ. ೧೬೭ ಉದಾ). [ಗಣಿತ + - ಇಗ]

**ಗಣಿತಿಸು** (ಕ್ರಿ). ಲೆಕ್ಕಹಾಕು; ಎಣಿಸು: ಘನಮಹಿಮನಹ ಚನ್ನಬಸವನ ನೆಲೆಯನಂತಾಡಿ ಬಸವನ ಗಣಿತಿಸಲು ಬಲ್ಲ (ಬಸವು. ೭-೧೧). [ಗಣಿತ + -ಇಸು$_3$]

**ಗಣಿತೆ** 'ಗಣತಿ$_2$' ನೋ.

**ಗಣಿದ** (ನಾ). = ಗಣಿತ ೨: ಭಾರವಿ ಕಾಳಿದಾಸ ಮಾಘಾದಿಗಳೀ ಗಣಿದದೊಳ್ ಮಹಾಕಾವ್ಯಪ್ರಣಯಮನಾಗಿಸಿದರ್ (ಕವಿರಾ. ೧-೩೧); ಗಣಿದಮಂ ಬಗೆಯದಿಂತು ಕೊಟ್ಟಂ ತಂಗೆಗೆ ಬಱಿವಱಿಯೆಂದಿಂತು ಸರ್ವಸ್ವಮೆಲ್ಲಮಂ (ಪಂಪಭಾ. ೫-೨೬); ನೆಱಪಲ್ ಪೂಣ್ಕೆಯನಮರರೊಳಿಱಿದುದವೇ ಗಣಿದಮುಮರಹಿತನಚ್ಯುತ ನೀಂ (ಜಗವಿ. ೧೪-೨). [< ಸಂ. ಗಣಿತ]

**ಗಣಿದಂಗೆಯ್** (ಕ್ರಿ). ಲೆಕ್ಕಹಾಕು, - ಮಾಡು; ಎಣಿಸು: ಗಣಿದಂಗೆಯ್ವೊಡಹೀಂದ್ರನುಂ ನೆಱೆಯನೀ ದಿವ್ಯಾಶ್ವರತ್ನಾಂಗಲಕ್ಷಣಶೋಭಾಸಮುದಾಯಮಂ (ಕುಸುಮಾ. ೮-೫೦). [ಗಣಿದ + ಕೆಯ್$_1$]

**ಗಣಿದಂಗೊಳ್** (ಕ್ರಿ). = ಗಣಿದಂಗೆಯ್: ಗಣಿದಂಗೊಳ್ವೊಡೆ ಮಿಕ್ಕ ನಕ್ಕರದ ಮಾತಂತಿರ್ಕೆ (ಧರ್ಮನಾ. ೧-೬೯). [ಗಣಿದ + ಕೊಳ್$_1$]

**ಗಣಿದಿಗ** (ನಾ). = ಗಣಿತಿಗ: ಗಣಿದಿಗನಿನಿತನಿತಕ್ಕಾಪೆ ಹಿಣಿಯೆಂದೆಣಿಸಲ್ ಸಮರ್ಥನಕ್ಕುಮ (ಪಂರಾಮಾ. ೧೩-೧೦); ಗಣಿದಿಗಂ, ಸಿದ್ಧಾಂತಿಗಂ, ಲೆಕ್ಕಿಗಂ (ಶಬ್ದಾನು. ೪೦೮ ಪ್ರಯೋ). [ಗಣಿದ + - ಇಗ]

**ಗಣಿದಿಸು** (ಕ್ರಿ). = ಗಣಿತಿಸು: ಗಣಿದಿಸಲು ಮೆಱೆವಂತೆ ಮಾಣಿಕ್ಯ ಮುಖ್ಯವಹ ಮಣಿಗಳೊಳು ರುದ್ರಾಕ್ಷಿಯೇ ಮಿಗಿಲು (ವೀಶೈವು. ೧-೩-೬೯). [ಗಣಿದ + -ಇಸು$_3$]

**ಗಣಿನಿ** (ನಾ). [ಜೈನ] ಶ್ರಾವಕಿಗಣಕ್ಕೆ ಮುಖಂಡಳು; ಕಂತಿ; ಗುರುಸ್ಥಾನದಲ್ಲಿರುವವಳು: ಸುಪ್ರಭೆಯುಂ ಸುದರ್ಶನನಾಮ ಗಣಿನೀಸಮಕ್ಷದೊಳ್ ರತ್ನಾವಳಿಯಂ ನೋಂತು (ಆದಿಪು. ೩-೬೫ ವ); ಅಮಳ ಚರಿತದಿಂ ನಡೆದು ಬಱಿಕ್ಕಾ ಗಣಿನಿ . . . ಪೊಕ್ಕಳಚ್ಯುತಾಭ್ಯಂತರಮಂ (ನೇಮಿಪು. ೩-೨೩). [ಸಂ. ಗಣಿನೀ]

**ಗಣಿಪರಾಮು** (ನಾ.) ಒಬ್ಬಾತನ ಹೆಸರು: ರಾವಿನಾಡ ಮಾರ್ಕ್ಯಮ್ಮ ಮಮ್ಮ ಗಣಿಪರಾಮ ತುಱುವನಿಕ್ಕಿಸಿ ಅಟ್ಟಿ ಸತ್ತನ್ (ಎಕ. X, ಮುಳಬಾ. ೨೦೩-೩; 934). [ಗಣಿಪ$_0$ + ರಾಮು]

**ಗಣಿಯಿಸು** 'ಗಣಿಸು' ನೋ.

**ಗಣಿಸು**, ಗಣಯಿಸು, ಗಣಿಯಿಸು (ಕ್ರಿ). ೧. ಎಣಿಸು; ಗಣನೆ ಮಾಡು; ಲೆಕ್ಕಹಾಕು: ಗಣಿಸಲ್ಕಿಲೋಕಚೂಡಾಮಣಿಗಳ್ ಕೈಲಾಸಶೈಲ [ಕಲ್ಪಕ] ಸುಭಟಾಗ್ರಣಿಗಳ್ ನೆರೆದು (ಗದಾಯು. ೪-೬೪). ೨. ಲೆಕ್ಕಿಸು; ಲಕ್ಷ್ಯಕ್ಕೆ ತರು; ಮಹತ್ತ್ವವನ್ನು ಕೊಡು: ಕರ್ಣಾದ್ಯರನು ಕಡ್ಡಿಗೆ ಬಗೆಯನೀ ಹಾಹೆಗಳ ಗಣಿಸುವನೆ (ಕುವ್ಯಾದ್ರೋ. ೫-೭೪); ಹರನ ಗಣಿಸದ ಮೃತ್ಯುಗಿತ್ಯುವ ಸರಕುಮಾಡದ (ತೊರರಾ. ೬-೨೯-೬); ಬವರದೊಳಗಿತರರನು ಗಣಿಸದ ಹವಣಿನಲ್ಲಿಹ ಸಾತ್ಯಕಿಯು (ಕೋಗಯ. ೧೯-೯); ನೂತನವೂ ಫಲಪ್ರದವೂ ಆದ ಶಿಕ್ಷಣಕ್ರಮವೆಂಬುದನ್ನು ಉಪಾಧ್ಯಾಯರು ಗಣಿಸಬೇಕು (ಶಿಕ್ಷದ. ೨೪೯).

**ಗಣಯಿಸು**: ೧. ಗಣ[ಪಾಠಾಂ. ಗುಣಿ]ಯಿಪುದಗಣಿತ ಗುಣನಿಲಯ ನಾಗವರ್ಮನ ಮತದಿಂ (ಛಂದೋಬು. ೨-೧೫೧). **ಗಣಿಯಿಸು**: ೧. ವಿಶಿಷ್ಟರಂ ದುಷ್ಟರೊಳಂ ಗಣಿಯಿಸಿ ಸಮನೆಂಬವಗುಣಗಣಂಗಳಿವು ಲಕ್ಷ್ಮಿ ನಿನ್ನ ದೂಸಱಿನಲ್ತೆ (ಗದಾಯು. ೯-೯); ಗಣಿಯಿಪೊಡಿದು ಸೌಂದರ್ಯದ ಕಣಿಯೆನುತುಂ ನೋಡಿ ತಚ್ಛಿಲಾಪುತ್ರಿಕೆಯಂ (ಕುಸುಮಾ. ೨-೭). ೨. ಪಣವೆ ದಿಟಕ್ಕೆ ಸೂಳೆವೆನೆಗಲ್ಲದೆ ತೆತ್ತು ಪಣಂ ಧನಂಗಳಂ ಗಣಿಯಿಸದಿತ್ತು (ಲೀಲಾವ. ೨-೯೫). [ಗಣನ + - ಇಸು$_3$]

**ಗಣೆ** 'ಗಟಿ$^3$' ನೋ.

**ಗಣೆಗಾರ** 'ಗಟಿಕಾಱ' ನೋ.

**ಗಣೆಯ** 'ಗಟಿ$^3$' ನೋ.

**ಗಣೆಯೋದಿಸು** (ಕ್ರಿ). ಕಣಿ ಹೇಳಿಸು: ಅಮ್ಮಾ! ಊರೊಳಗಿರುವ ಜುಂಜಪ್ಪನ ಪೂಜಾರಿ ನಂಜಪ್ಪನನ್ನು ಕರೆಯಿಸಿ ಗಣೆಯೋದಿಸಿ ಕೇಳಿದರೆ . . . ತಿಳಿಯುವುದು (ಮಲೆಮಂ. ೯೭). [ಗಣೆಯೋದು + - ಇಸು$_3$]

**ಗಣೆಯೋದು** (ಕ್ರಿ). ಸಣ್ಣಕೋಲನ್ನು ಕೈಯಲ್ಲಿ ಹಿಡಿದು ಆಡಿಸುತ್ತಾ ಕಣಿ ಹೇಳು: ಮಗೂ, ಗಣೆಯೋದುವವನ ಮಾತೆಲ್ಲವೂ ನಿಜ (ಮಲೆಮಂ. ೯೭). [ಗಣೆ (< ಗಟಿ) + ಓದು$_1$]

**ಗಣೇರಿ** (ನಾ). ಒಂದು ಸ್ಥಳದ ಹೆಸರು: ಗಣೇರಿಯ ಆಯ್ಗುಳವೆಡೆಯ ಬಿಟ್ಟ ಗೆಟ್ಟಿದ್ದಿಯ ಕಮ್ಮ ೨೩೩ (ಎಕ. XI, ದಾವಣ. ೧೪೦-೧೫; 1060). [?]

**ಗಣೇಶ** (ನಾ). = ಗಣನಾಥ೧: ಸಕಲ ಮುನೀಶರುಂ ಭೃಂಗೀಶ ವೀರಗಣೇಶರುಂ ರುದ್ರೇಶ ಯೋಗಾಚಾರ್ಯರುಂ ನೆರೆದೋಲಯಿಸುತಿರಲು (ಬಸವು. ೨೪-೪೮). [ಗಣ + ಈಶ]

**ಗಣೇಶನಹೂ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು: ಕೆಂಪು ಕಾಸಿಕಣಿಗಲು, ತುರುಕುಮಲ್ಲಿಗೆ, ಗಣೇಶನಹೂ (ಮೈಔಗಿ. ೭೭-೧೫೫೧). [ಗಣೇಶ + ಹೂ$_2$ (< ಪೂ$_2$)]

**ಗಣೇಶ್ವರ** (ನಾ). = ಗಣನಾಥ ೩ : ಗಣೇಶ್ವರಾಯ ಮುನೀಶ್ವರಾಯ ಸುರೇಶ್ವರಾಯ ನಮೋ (ಬಸವು. ೬೧-೪೭). [ಗಣ + ಈಶ್ವರ]

**ಗಣೇಸ** (ನಾ). = ಗಣನಾಥ ೧ : ಕೆಲದಲ್ಲಿ ನಿಂದ ಬೀರಗಣೇಸರ್ (ಕಬ್ಬಿಕಾ. ೧೬೧). [<ಸಂ. ಗಣೇಶ]

**ಗಣ್ಣ** (ನಾ). ಭತ್ತದ ಗದ್ದೆಯ ಮಡಿ, —ಪಾತಿ : ಹಕ್ಕಲು, ಹಾಡ್ಯ ; ಹಳ್ಳ, ಹಾದಿ ; ಗದ್ದೆ, ಗಣ್ಣ ಇವುಗಳನ್ನೆಲ್ಲ ಸುಲಭವಾಗಿ ವಿಂಗಡಿಸಿ ಕೊಂಡರು (ಗಂಗಾಳ. ೨೬). [← ತಮಿ. ಕಣ್ಣ]

**ಗಣ್ಯ** (ಗು). ೧. ಎಣಿಸಲಾಗುವ ; ಲೆಕ್ಕಿಸುವ. ೨. ಲಕ್ಷ್ಯಮಾಡ ತಕ್ಕ ; ಗಣನೀಯ : ಗಣ್ಯಮಹೋದ್ಭಟಾಂಕಸುಜಿ ಸೂಸಿದ ಮಂಜುಳ ವಾಃಕಣಾಳಿ (ಉದ್ಭಟ. ೯-೧೦೮) ; ದಡಿಗ ರಾವಣನಿಗೆ ಗಣ್ಯವೆ (ಕಾಶಿರಾ. ೮-೩೨). (ನಾ). ೩. ಗಣನೀಯನಾದವನು ; ಮಾನ್ಯ : ನಾನೂ ಗಣ್ಯನಾಗಿರಬೇಕು . . . ಎಂಬ ಆಕಾಂಕ್ಷೆ (ರಾಯಕ. ೩೭) ; ಗಂಡ ಹೆಸರು ಪಡೆದಿರಬೇಕು. ಗಣ್ಯನಾಗಿರಬೇಕು (ಆಲಹೂ. ೭೨೦). [ಸಂ.]

**ಗಣ್ಯತೆ** (ನಾ). ಗೌರವ ; ಮರ್ಯಾದೆ : ಅವರು ಸ್ವದೇಶದಲ್ಲೇ ಅಲ್ಲದೆ ಪರದೇಶದಲ್ಲಿಯೂ ಗಣ್ಯತೆ ಪಡೆದಿದ್ದರು (ರೂಢಿ). [ಸಂ. ಗಣ್ಯತಾ]

**ಗತ$_1$, ಗತ್ತ** (ನಾ). ಮೂತ್ರ ; ಗಂಜಲ : ಲದ್ದಿಯ ಹಾಕುವಾಗ ಗತವ ಮಾಡುವಾಗ ತಡೆದು ಸಿಕ್ಕಿಸಿಕ್ಕಿ ಬೀಳಲು (ಅಶ್ವಟೀ. ೩೮-೭). **ಗತ್ತ** : ಅಗುರುವ ಧೂಪಮೆತ್ತ ಕೊಳೆನಾಱುವ ಗತ್ತದ ನಾತಮೆತ್ತ (ಬಂಹರಿ. ೪-೫) ; ಕಣ್ಣೀರು ಸುರಿವುತ್ತ ಗತ್ತ [ಪಾಠಾಂ. ಕತ್ತ]ವ ಬಿಟ್ಟು ಲದ್ದಿಯ ಹನುಮಿಸಲು ಆ ಕುದುರೆಯ ಒಡೆಯಂಗೆ ಆಂಜಿಕೆ ಯುಂಟಾಹುದು (ಅಶ್ವಟೀ. ೧೮-೧೨).

ಗತಗತನಾರು = ಹಳೆಯದಾಗಿ ಕೊಳೆತು ನಾರು ; ದುರ್ವಾಸನೆ ಬರು ; ಗಬ್ಬುನಾರು : ಗತಗತನಾರುತ್ತಿದ್ದ ಬೊಬ್ಬೆಯುಬ್ಬರದ ಪುರುಷರ ಕೋಣೆಗಳ ಸಾಲುಗಳ ಮೂಲಕ ಹಾದುಹೋದರು (ಪುನರು. ೫).

[< ಗೋತ್ರ$_2$]

**ಗತ$_2$** (ಗು). ೧. ಗತಿಸಿದ ; ಕಳೆದುಹೋದ : ಗತಕಾರುಣ್ಯರಸಂ ವಿಂಶತಿ ಜಳನಿಧಿ ಕಳೆಯೆ (ಮಲ್ಲಿಪು. ೧೩-೧೧೬) ; ಗತಕಲುಷನಾಗಿ ಭೂಪತಿ ಬೆಸಗೊಳೆ (ಕುಸುಮಾ. ೧೫-೪೨). ೨. ಮುಳುಗಿದ ; ಮರೆಯಾದ : ಆ ಸಮಯದಿ ರವಿ ಗತವಾಗಿ ಪಡುವಣ ರಾಸಿಯನಿಳಿದು ಮುಳುಗಲು (ಅಬ್ಬಲೂ. ೨-೧೨). ೩. ತಲುಪಿದ ; ಸೇರಿದ. ೪. ಒಳಗಿರುವ. (ನಾ). ೫. ಹಿಂದೆ ಆದುದು, —ಸಂಭವಿಸಿದುದು : ಆಯತಿಗೆ ಬಾಯ್ಬಿಡದೆ ಗತವ ಚಿಂತಿಸದಿಹುದು (ಮಂಕುಕ. ೭೧೩). ೬. ಹೋಗು ವಿಕೆ ; ನಡೆ. ೭. ಅವಸ್ಥೆ ; ಸ್ಥಿತಿ. [ಸಂ.]

**ಗತಕ$_1$**, ಗದಕ, ಗದಕು, ಗದುಕು (ನಾ). ೧. ಕೃತಕವಾದುದು ; ನಿಜವಲ್ಲದುದು : 'ಗತಕವೆಟ್ಟು' ಪರಾ. ೨. ಕಪಟ ; ಮೋಸ ; ವಂಚನೆ : "ಗತಕ – ಘಾತಕ ; ಕೃತಕ" (ತದ್ಭಕೋ. ೧೦) ; ಬಾಹ್ಯ ದಲ್ಲಿ ಶೀಲ ಅಂತರ್ಯಾಮಿಯಲ್ಲಿ ದುಶ್ಶೀಲ ಹೊರಗೆ ವ್ರತ ಒಳಗೆ ಗತಕ (ಶರಚ. ೫೦೪). **ಗದಕ** : ೨. "ಗದಕ (ಗತಕ, ಕತಕ) – ಕೃತಕ" (ತದ್ಭಕೋ. ೧೩) ; ಕಪಟದಿಂದ ಸತಿಯ ಹಿಡಿದಡೆ ಗದಕದಲ್ಲಿದ್ದನೆಂದೆಡೆ (ಮೋಳಿಮಾ. ೩೧-೧೨೭) ; ಮರಾಳನ ಗದಕ ತೇಜಿಯ ಚಿತ್ರ ಪನ್ನಗನ ವಳಿ ಹೊಳಹಿನಂತೆ ಘಟಾತ್ಮನ ಭೇದ (ದಾಸೋಸಂ. ೮೫). **ಗದಕು** : ೧. ವಿಜಯಾಂಗನೆಯ ಗದಕಿನ ರೂಪೊಯೆಂದೆನೆ ನೋಳ್ಪರ ಕಣ್ಗೆ ಮುದವೆ ತ್ತುದಾ ದಿವ್ಯವಾಜಿ (ಕುರಾಸಾಂ. ೩೯-೬೩) ; ಪದುಳದಿ ನೀವಿಂದು ತೆರಳುವು ದೆಂದಿಷ್ಟು ಗದಕಿನ ಮಾತನಾಡಿದನು (ಭರಚ. ೩೮-೯೭). **ಗದುಕು** : ೨. ಬೇಹುಗಾಱರ ಮೊಗದಿಂದರಿರಾಯರ ಗಾಹು ಗದುಕುಗಳಸಱಿತು (ಕುರಾಸಾಂ. ೩೦-೩೫). [< ಸಂ. ಕೃತಕ]

**ಗತಕ$_2$** (ನಾ). ೧. ಹೋಗುವಿಕೆ ; ಚಲನೆ. ೨. ಅಲ್ಲಾಡುವಿಕೆ ; ಚಂಚಲತೆ : ಸೊಗಸುವ ಬೇಟದೊಳ್ ಕೃತಕಮೊಲವಿನೊಳ್ ಗತಕಂ (ಜೈಮಿಭಾ. ೬-೩೪). [ಸಂ.]

**ಗತಕವೆಟ್ಟು** (ನಾ). ಕೃತಕವಾದ ಬೆಟ್ಟ ; ಕೃತಕಾಚಲ : "ಗತಕ ವೆಟ್ಟೆಂದು ಕೃತಕಾಚಲಂ" (ಕಶಸಾ. ೩೨-೬೭೩) ; "ಕೃತಕಾಚಲಕ್ಕಂ ಲೋಕದೊಳಂ ಗತಕವೆಟ್ಟುಮೆಂಬರು" (ಕವಿಕಂ. ೨೪೭).

[ಗತಕ$_1$ + ಬೆಟ್ಟು$_2$]

**ಗತಕಾಲ** (ನಾ). ಕಳೆದುಹೋದ ಕಾಲ ; ಹಿಂದಿನ ಕಾಲ : ಭೂಮಿಯ ಇಂದಿನ ಪರಿಸ್ಥಿತಿಯನ್ನು ಪರಿಶೀಲಿಸುವುದಕ್ಕಾಗಿ ವಿಜ್ಞಾನಿಗಳು ಭೂಮಿಯ ಗತಕಾಲವನ್ನೇ ಮುಖ್ಯವಾಗಿ ಅಭ್ಯಾಸಮಾಡುತ್ತಿದ್ದಾರೆ (ಭೂಹುಟ್ಟು. ೧೦೩). [ಗತ$_2$ + ಕಾಲ]

**ಗತಕಿ$_1$**, ಗದಕಿ (ನಾ). ಘಾತಕಿ ; ಕಪಟಿ : ನೀನುಮಾವ ನಾಡ ಗತಕಿಯೋ (ರಾಮಾಶ್ವ. ೧೫೨-೧). **ಗದಕಿ** : "ಕೃತಕಿ – ಗದಕಿ" (ಶಮುದ. ೨೬೮ ಪ್ರಯೋ.). [ಗತಕ$_1$ + – ಇ$_3$]

**ಗತಗೋಷ್ಠಿ** (ನಾ). ಕಳೆದುಹೋದ ಸಭೆ, —ಕೂಟ, —ಸಂಗತಿ : ಪೊಱಗಣ ವಿಷಯದ ಚಿಂತೆಯನುಳಿದು ಬಱಿ ಗತಗೋಷ್ಠಿಗಳಂ ನೆಱೆ ಕಳೆದು (ಪರಗೀ. ೯-೧) ; ಅದೊಂದು ಗತಗೋಷ್ಠಿ — ಈ ರೀತಿಯಿಂದ ಅವರು . . . ಅಲಿಪ್ತರಾಗಿ ನೋಡಬಲ್ಲರು (ಸ್ಮೃತಿಚ. ೧೨).

[ಗತ$_2$ + ಗೋಷ್ಠಿ]

**ಗತಜೀವಿತ** (ನಾ). ಪ್ರಾಣ ಹೋದವನು ; ಸತ್ತವನು ; ಮೃತ : ಕೆಲರ್ . . . ದೆಸೆಯನೆ ನೋಡಿ ನೋಡಿ ಗತಜೀವಿತರಾದರ್ (ಶಾಂತಿಪು. ೪-೩೦ವ). [ಗತ$_2$ + ಜೀವಿತ]

**ಗತದೋಷಿ** (ನಾ). ದೋಷವನ್ನು ಕಳೆದುಕೊಂಡವನು ; ಪರಿಶುದ್ಧ : ಗತದೋಷಿಗೆ ಕೃತಕದೋಷಿಗೆ ಹಿತಹತಿ ಮಾಟ್ಪಲ್ಲಿ ಸರಿಯೆ ಮೊಗ ರಾಗಂ (ಕಾವ್ಯಸಾ. ೪೨೧). [ಸಂ. ಗತದೋಷಿನ್]

**ಗತನಾಸಿಕ** (ನಾ). ಮೂಗು ಹೋದವನು ; ಮೂಕೊರೆಯ : "ಗತ ನಾಸಿಕಂ ಮೂಕೊಱೆಯನಕ್ಕು" (ಮಂಗರಾ. ೧೧೫-೬). [ಗತ$_2$+ನಾಸಿಕ]

**ಗತಪಾರ** (ನಾ). ದಾಟಿದವನು ; ದಡ ಮುಟ್ಟಿದವನು : ಲಲಿತವಿಹಾರ ನಿಗಮವಿದೂರ ಸುಖಸಾಕಾರ ಗತಪಾರ . . . ಸಲಹಬೇಕೆಂದ (ಕುವ್ಯಾಭೀ. ೩-೮೭). [ಗತ$_2$ + ಪಾರ$_2$]

**ಗತಪ್ರಜ್ಞ** (ನಾ). ಪ್ರಜ್ಞೆಯನ್ನು ಕಳೆದುಕೊಂಡವನು : ನಿರೀಕ್ಷಿಸಿ ನಿಕೃಷ್ಟದುಷ್ಟಗಣರಂ ಗತಪ್ರಜ್ಞ[ರ]ಂ (ಸುಕುಮಾ. ೨-೧೮). [ಸಂ.]

**ಗತಪ್ರತ್ಯಾಗತ** (ನಾ). [ಕಾವ್ಯಮಿ] ಒಂದು ಬಗೆಯ ಚಿತ್ರಕವಿತ್ವ : "ಎಡದಿಂದ ಬಲಕ್ಕೂ ಬಲದಿಂದ ಎಡಕ್ಕೂ ಒಂದೇ ಆಗಿ ಓದುವ (ಪದ, ಪದ್ಯ ಮೊ. ವು) ; ಗತಪ್ರತ್ಯಾಗತ" (Palindrome. ಇಂಕನಿ) ; ಗತಪ್ರತ್ಯಾಗತೋಪಾತ್ತ ಚತುಷ್ಟಯವಿಕಲ್ಪಮಾ ಪ್ರತೀತಿ ತೋರ್ಪನಾ ಗೂಢಚತುರ್ಥಗಳ ಲಕ್ಷ್ಯಮಂ (ಕವಿರಾ. ೨-೧೧೭) ; ಸಂದ ಗತಪ್ರತ್ಯಾ ಗತಮೊಂದೀ ಕೃತಿಯೊಂದಿವಕ್ಕೆ ಗೆಲ್ಗುಂ (ಶಾಂತಿಪು. ೧೨-೭೪) ; ಚ್ಯುತದತ್ತಾಕ್ಷರಮುಂ ಗೋಪಿತ ಕ್ರಿಯಾಕಾರಂ ನಿಗೂಢಚತುರ್ಥಂ ಪ್ರತಿನಿಯತ ಗತಪ್ರತ್ಯಾಗತಂ ದಲೆಂದಿಂತು ಪೆಱವುಮಕ್ಕುಂ ಚಿತ್ರಂ (ಕಾವ್ಯಾವ. ೫೮೭). [ಗತ$_2$ + ಪ್ರತ್ಯಾಗತ]

**ಗತಬಲ** (ನಾ). ೧. ಬಲಗುಂದಿದವನು ; ದುರ್ಬಲನಾದವನು. ೨. ಬಲನೆಂಬ ರಾಕ್ಷಸನನ್ನು ಕೊಂದವನು ; ಇಂದ್ರ. ೧, ೨ : ಗತಬಲನಾಗಿ ವಜ್ರಧರನಲ್ತು (ಪುಷ್ಪಪು. ೧೩-೩೫). [ಗತ$_2$ + ಬಲ]

**ಗತಭಾಗ್ಯ** (ನಾ). ಭಾಗ್ಯವಿಹೀನ ; ನತದೃಷ್ಟ : ಗತಭಾಗ್ಯನ ಕಣ್ಣಿಗೆ ಶುಭರತ್ನಂ ಕಲ್ಲಾಗಿ ತೋಱುವಂತೆ (ಶಂಕಕಂ. ೧೦೧). [ಗತ$_2$ + ಭಾಗ್ಯ]

**ಗತಭ್ರಾಂತಿ** (ನಾ). ೧. ಭ್ರಾಂತಿಯಿಲ್ಲದಿರುವಿಕೆ; ಎಚ್ಚರ; ಅರಿವು. ೨. ಭ್ರಾಂತಿರಹಿತನಾದವನು; ನಿಶ್ಚಯಜ್ಞಾನವುಳ್ಳವನು: ಸುದಿಗಂಬರವರ್ತನಂ ಗತ ಭ್ರಾಂ ತಿ . . . ಮುನಿಚಂದ್ರಮುನೀಂದ್ರನೆ ವಂದ್ಯಂ (ಚಂದ್ರಪು. ೧-೨೭). [ಗತ್ಯ + ಭ್ರಾಂತಿ]

**ಗತರಾಗ** (ನಾ). ಆಸಕ್ತಿಯನ್ನು ಕಳೆದುಕೊಂಡವನು; ಮೋಹವನ್ನು ಕಳೆದುಕೊಂಡವನು; ವಿರಾಗಿ: ಆ ಗತರಾಗನ ಬಳಸೆ ಪನ್ನೆರಡುಗಣಂ . . . ಎ ಸೆ ದು ದಿ ೀ ಭರತಾವನಿ (ಶಾಂತಿಪು. ೧೨-೨೪). [ಗತ್ಯ + ರಾಗ]

**ಗತಲೇಪ** (ನಾ). ಯಾವುದಕ್ಕೂ ಅಂಟಿಕೊಳ್ಳದವನು; ನಿರ್ಲಿಪ್ತ: ಗತಲೇಪನ ದರ್ಶನದೊಳಾದ ಪರಮಾನಂದ ಶ್ರೀಪದದೊಳ್ ರಂಜಿಸಿದ ನಿಳಾಪೂಜ್ಯಂ (ಪುಷ್ಪಪು. ೧೨-೧). [ಗತ್ಯ + ಲೇಪ]

**ಗತವರ್ಷ** (ನಾ). ಹೋದ ವರ್ಷ; ಕಳೆದ ವರ್ಷ: ಗತವರ್ಷದ ಲೆಕ್ಕ ಕೊಟ್ಟರೆ ಈ ವರ್ಷದಲ್ಲಿ ಕಂದಾಯ ಕಡಿಮೆಮಾಡಬಹುದು (ರೂಢಿ). [ಗತ್ಯ + ವರ್ಷ]

**ಗತವೇದ** (ನಾ). [ಜೈನ] ಇಂದ್ರಿಯಾಭಿಲಾಷೆಯನ್ನು ಕಳೆದುಕೊಂಡವನು: ವೇದನಬಂಧಮಂ ಸಮುಯೋನದ್ವಾ್ಯವಳಿಕಾ ಸಮಯಂಗಳಿಂ ವಿದಾರಿಸಿ ಗತವೇದನಾಗಿ (ಶಾಂತಿಪು. ೧೧-೧೧೧೩). ℙ ವೇದವೆನ್ನುವುದು ಮೂರುವಿಧ. ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗಗಳಿಗೆ ಸಂಬಂಧಿಸಿದ ಇಂದ್ರಿಯಾಭಿಲಾಷೆಯನ್ನು ಕುರಿತುದು. ಇದಕ್ಕೆ ಸಂಬಂಧಪಟ್ಟ ಆಸಕ್ತಿಯನ್ನು ಕಳೆದುಕೊಂಡವನು ಎಂದರ್ಥ. [ಗತ್ಯ + ವೇದ]

**ಗತವೈಭವ** (ನಾ). ಕಳೆದುಹೋದ ವೈಭವ; ಹಿಂದಿನ ವೈಭವ: ಗತವೈಭವಂಗಳ ಕಂಡಾಗ ಕಣ್ಣಾರ ಒಡೆಯಿತು ಕವನದ ಕೋಡಿ (ಇಂಚಾಪ. ೨೯-೩೧). [ಗತ್ಯ + ವೈಭವ]

**ಗತಶ್ರೀಕ** (ನಾ). = ಗತಭಾಗ್ಯ: ಗತಶ್ರೀಕನಪ್ಪನಂ ಸೇವಿಪರಾರ್ (ರಾಜಶೇ. ೯-೬೫). [ಸಂ.]

**ಗತಾಗತ** (ನಾ). ೧. "ಬರುವುದು ಹೋಗುವುದು" (ಅನಂನಾ). ೨. ಹಿಂದಿನಿಂದ ನಡೆದುಬಂದುದು; ಸಂಪ್ರದಾಯ. ೩. [ನಾಟ್ಯ] ನಡೆಯದೆ ನಡೆಯುವ ರೀತಿಯನ್ನು ತೋರಿಸುವ ಒಂದು ಬಗೆ: ನಡೆವುದ್ಯೋಗದಿನೂರ್ಧ್ವಂಬಡೆಯಲ್ ಮೊಗವೆತ್ತಿ ಪಾ ದ ಮೊ ಂ ದಂ ನಡೆಯದೆ ನಡೆವ ರೀತಿಯನೆ ತೋಜಲ್ ಮಡದಿ ಕೇಳ್ ಗತಾಗತಾಖ್ಯತಾ[ಣ]ಮೆನಿಕ್ಕುಂ (ಲಾಸ್ಯರಂ. ೬-೨೯); "ನಿಂತಲ್ಲಿಯೇ ನಡೆಯುವಂತೆ ಕಾಲನ್ನು ಎತ್ತೆತ್ತಿ ನೆಲದ ಮೇಲಿಡುವುದು" (ಲಾಸ್ಯರಂ. ೩೨೯ ಗದ್ಯಾನುವಾದ). [ಗತ್ಯ + ಆಗತ]

**ಗತಾಗತಿ** (ನಾ). ಹಿಂದಿನ ನಡವಳಿಕೆ; ಆಚಾರ; ರೂಢಿ: ಸೃಷ್ಟಿ ಸಂಹಾರದಲಿ ಭೂತದ ಕಟ್ಟಳೆಗಳ ಗತಾಗತಿಗಳಲಿ ಮುಟ್ಟಿಸಿದ ವಿದ್ಯೆಯಲ ವಿದ್ಯೆಯಲಪ್ರತಿಮನೆನಿಸಿ (ಕುವ್ಯಾಉ. ೪-೮). [ಗತ್ಯ + ಆಗತಿ]

**ಗತಾನುಗತಿಕ** (ನಾ). ೧. ಹಿಂದಿನಂತೆ ನಡೆಯುವುದು; ಸಂಪ್ರದಾಯ; ರೂಢಿ: ವೈದರ್ಭಗೌಡಮಾರ್ಗವಿಭೇದಂ ಬ ಗೆ ವೊ ಡೆ ಗತಾನುಗತಿಕಮಿದೆಂದೊಲ್ದಾದರಿಪರ್ ಕೆಲಬರ್ ಸಂವಾದದೊಳೆರಡುಂ ಸಮರ್ಥಮಪ್ಪುದಜಿಂದಂ (ಕಾವ್ಯಾವ. ೫೨೨). ೨. ವಿವೇಚನೆಯಿಲ್ಲದೆ ಹಿಂದಿನದನ್ನು ಅನುಸರಿಸುವವನು; ಅಂಧಶ್ರದ್ಧೆಯಿಂದ ಸಂಪ್ರದಾಯವನ್ನು ಅನುಸರಿಸುವವನು: ಯಾವುದೋ ಹೆಣ್ಣನ್ನಾರಿಸಿ ಮದುವೆಯಾಗಿಬಿಡುವ ಈ ಗತಾನುಗತಿಕರ ಅಂಧಾನುಕರಣ ನನ್ನ ಮಟ್ಟಿಗಂತೂ ನಾನು ಮಾಡಲಾರೆ (ಪರಿಲ. ೩). [ಸಂ.]

**ಗತಾಬ್ದ** (ನಾ). = ಗತವರ್ಷ: (ಕಿ). [ಗತ್ಯ + ಅಬ್ದ]

**ಗತಾಯು** (ಗು). ೧. ಆಯುಸ್ಸು ತೀರಿಹೋದ; ಆಸನ್ನಮರಣನಾದ. ೨. ಶಕ್ತಿಗುಂದಿದ; ಮುಪ್ಪಾದ: 'ಗತಾಯುಸ್ಥಿತಿ' ಪರಾ. (ನಾ). ೩. ಕಳೆದ ಆಯುಸ್ಸು; ಮುಪ್ಪು. ೪. ಆಸನ್ನಮರಣನಾದವನು: ಕಂಡರು ಜಟಾಯುವಂ . . . ಕಡಿದೆರಂಕೆಯ ಪರಿದ ತಿಪ್ಪುಳ ಗತಾಯುವಂ (ಶ್ರೀರಾಮಾ. ೨೫೭-೭೭೬). [ಗತ್ಯ + ಆಯು]

**ಗತಾಯುಸ್ಥಿತಿ** (ನಾ). ಮುಪ್ಪಿನ ಕಾಲ; ಕೊನೆಗಾಲ; ಅಂತ್ಯಕಾಲ: ಈ ನನ್ನ ಗತಾಯುಸ್ಥಿತಿಯಲ್ಲಿ ನಿನ್ನನ್ನು ನೂರು ಸಾರಿ ನೆನೆಸಿರುವೆ (ಜಯಂತ. ೪೭೭). [ಗತಾಯು + ಸ್ಥಿತಿ]

**ಗತಾರ್ಥ** (ಗು). ೧. ತಿಳಿದ; ಅರ್ಥವಾದ; ಹೇಳಿದುದರಲ್ಲಿಯೇ ಸೇರಿರುವ. ೨. ಅರ್ಥವಿಲ್ಲದ; ನಿಷ್ಪ್ರಯೋಜಕವಾದ. (ನಾ). ೩. ಹಣವನ್ನು ಕಳೆದುಕೊಂಡವನು; ಬಡವ. [ಗತ್ಯ + ಅರ್ಥ]

**ಗತಿ** (ನಾ). ೧. ಗಮನ; ನಡಗೆ; ಸಂಚಾರ: "ಗತಿ ಪರಿವ್ರಾಜಂ" (ಮಂಗರಾ. ೧೩೫-೩೩); ಅಂಗಂ ಬಹುವಿಧದಾವರ್ತಂ ಗತಿ ಹೇಷಿತರವಂ ಲಸದ್ವರ್ಣಂ ಸತ್ವಂ ಗಂಧಂ ರುಚಿಯೆಂದಷ್ಟಾಂಗಂ ಹಯಲಕ್ಷಣಂ (ಲೋಕೋಪ. ೧೧-೭೩); ಹೊಟ್ಟೆ ನೆಲಮಂ ಕೀಸುವೊಲ್ ಮೆರೆಯೆ ಹಯಗತಿರಯಂ (ಶ್ರೀರಾಮಾ. ೧೧೫-೧೪೬). ೨. ಇರುವ ಸ್ಥಿತಿ; ಅವಸ್ಥೆ: ಬುದ್ಧಿಯ ಮಾತನು ಹೆಂಡತಿ ನುಡಿದರು . . . ಅದರಂತೆ ಗಂಡನು ನಡೆಯುವುದಾದರೆ ಗತಿಯನು ಊಹಿಸಬಹುದೆ (ಇಂಚಾಪ. ೨೦೭-೨೪); ಅತಿಸ್ನೇಹ ಗತಿ ಕೆಡಿಸಿತು (ಗಾದೆ). ೩. ಉಪಾಯ; ಕಾರ್ಯ ಸಾಧಿಸುವ ಯುಕ್ತಿ; ಸಾಧನೆ. ೪. ಸರಣಿ; ಪದ್ಧತಿ; ಮಾರ್ಗ: ಧರ್ಮ್ಮಮಂ ಪ್ರತಿಪಾಳಿಸುವರು ಯಿಹಲೋಕಕ್ಕೆ ಸುಖಮಂ ಪರಲೋಕಕ್ಕೆ ಗತಿಯಂ ಪಡೆವರು (ಎಕ. VII, ಶಿವಮೊ. ೪೫-೩೭; 1172); ಮೂ ಖ ರ ರ ಗತಿಯನನುಕರಿಸಿದರೆ ಬಳಿಕ ವಿಶೇಷವೇನೆಂದ (ಕುವ್ಯಾದ್ರೋ. ೧೮-೫೮). ೫. ಆಧಾರ; ಆಶ್ರಯ: ಗತಿಯುಂಟೊ ದಯೆಯುಂಟೊ . . . ಕೇಳನ್ಯರ ಸತಿಯರ್ಗಳಿಪಿದ ನರಂಗೆ ವಸುಧಾತಳದೊಳ್ (ಧರ್ಮಾಮೃ. ೧೫-೧೬೫); ಸುತಗುಣ ಚಾವುಂಡೋರ್ವೀಪತಿಗಂ ಸಿರಿದೇವಿಗಂ ಕುಮಾರರ್ಕ್ಕಂಣುಂ ಗತಿಯುಮೆನೆ ಪುಟ್ಟಿದರ್ (ಎಇ. XX, ೧೨-೭; 1187); ಶಿವನು ಬಲ್ಲನು ದೈವವೇ ಗತಿಯೆಂದಳಿಂದುಮುಖಿ (ಕೌಶಿರಾ. ೪೩-೩೧); ಪತಿಯ ಪಾದಾಬ್ಜಭಕ್ತಿಯೆ ತವುಗಿಹಪರ ಗತಿ (ಹದಿಬ. ೨-೧೬). ೬. ಯೋಚನೆ; ನೆನಹು: "ಅಜೀವ ನೆನಹಂ ಗತಿಯೆನಿಕ್ಕು" (ಮಂಗರಾ. ೧೩೯-೪). ೭. ಪಾಪ: "ವೃಜಿನಂ ತಾಂ ಗತಿಯೆಂದೆನಿಕ್ಕು" (ನಾನಾರ. ೧೭೬). ೮. ಅಧ್ಯಾಯ; ಆಶ್ವಾಸ: ಅಂತು ಗತಿ ೨೫ಕ್ಕಂ ಪದ ೧೧೧೧ ಕ್ಕಂ ಮ ಂ ಗ ಳ ಂ (ಪ್ರಭುಲೀ. ೨೫-೨೫ ವ). ೯. ಅದೃಷ್ಟ; ಭಾಗ್ಯ: "ಗತಿ-ನಸೀಬ, ಭಾಗ್ಯ" (ಜಾನಕೋ. ೪೫). ೧೦. ಪಾಂಡಿತ್ಯ; ಜ್ಞಾನ; ನೈಪುಣ್ಯ: ಸ್ವಾಮಿದಾಸರಿಗೆ ಸಂಸ್ಕೃತಸಾಹಿತ್ಯದಲ್ಲಿ ಅಗಾಧ ಗತಿಯಿತ್ತು (ಸಮುಜೀ. ೧೧೧೯). ೧೧. ಎರಡರ ಸಂಕೇತ: ಗತವಾದ ಮಾಸವನು ಗತಿಯಿಂದ ದ್ವಿಗುಣಿಸಲು ಪ್ರತಿಪದವು ತಿಥಿಯನೊಡಗೂಡೆ ಕರಣ ತಾನತಿಶಯದಿ ಬಕ್ಕು (ಸರ್ವಜ್ಞ. ೧೫೬೭). ೧೨. ಸೌಖ್ಯ: 'ಇಹಪರಗತಿ' ಪರಾ. ೧೩. ಹಿಂದೆ ಮಾಡಿದ ಕರ್ಮಫಲ: (ಕಿ). ೧೪. ಸಂಗೀತ ಮತ್ತು ನೃತ್ಯಗಳಲ್ಲಿಯ ಲಯ: ಶಿವಗಣಾವಳಿ . . . ತವತವಗೆ ಗತಿಗಳಿಗೆ ಕುಣಿವುತ (ಬಸವು. ೩೨-೩೭); ಗತಿಗೆ ಕುಣಿದವು ಹಂಸೆ (ತೊರರಾ. ೧-೫-೪೬); ಗತಿ ಗಹಗಹಿಸಲ್ . . . ಪಾಡಿದಂ ಮುನಿಋಷಭಂ (ವೀರವಿ. ೬-೯೦). ೧೫. [ಗಣಿತ] ನಾಲ್ಕರ ಸಂಕೇತ: ಗತಿ . . . ಎಂದು ನಾಲ್ಕಱ ನಾಮಂ (ವ್ಯವಹಾ. ೯-೩).

೧೬. [ಜ್ಯೋತಿ] ಗ್ರಹಗಳ ಚಲನೆ: 'ಗ್ರಹಗತಿ' ಪರಾ. ೧೭.[ಜೈನ] ಜೀವನ ಪರಲೋಕ ಗಮನ; ಜನ್ಮಾಂತರ ಪ್ರಾಪ್ತಿ; ಕರ್ಮಾನುಗುಣವಾಗಿ ಜೀವನಿಗೆ ಒದಗುವ ನಾಲ್ಕು ಬಗೆಯ ಜನ್ಮ: ಗತಿಗಳ್ ನಾಲ್ಕುವಱೊಳಳಂಕೃತದಿಂ ಪದಿನಾಲ್ಕು ತೆಱದಿನಿರ್ದುವು . . . ತಿರಿತರುತು ಮಿರ್ಪುದೇ ಸಂಸಾರಂ (ಜೀವಸಂ. ೭೭-೧); ಜೀವನಿಗೆ ನರಕ, ತಿರ್ಯಂಚ, ಮನುಷ್ಯ, ದೇವ ಎಂಬ ನಾಲ್ಕು ಗತಿಗಳಿರುತ್ತವೆ (ಜೈನಪ. ೨೯೫). 'ಚತುರ್ಗತಿ' ಪರಾ. ೧೮. ಸ್ಥಿತಿ; ಪದ: 'ಸದ್ಗತಿ' ಪರಾ. ೧೯. ಚಾಲನೆ: 'ಗತಿಕೊಡು' ಪರಾ. [ಸಂ.]

**ಗತಿಕಾಣಿಸು** 'ಗತಿಗಾಣಿಸು' ನೋ.

**ಗತಿಕಾಣು** 'ಗತಿಗಾಣು' ನೋ.

**ಗತಿಕೆಡಿಸು** 'ಗತಿಗೆಡಿಸು' ನೋ.

**ಗತಿಕೆಡು** 'ಗತಿಗೆಡು' ನೋ.

**ಗತಿಕೊಡು** 'ಗತಿಗೊಡು' ನೋ.

**ಗತಿಗಾಣಿಸು**, ಗತಿಕಾಣಿಸು (ಕ್ರಿ). ೧. ಕೊನೆಮುಟ್ಟಿಸು; ಅಂತ್ಯಗೊಳಿಸು: ಆದನ್ನು ಎಲ್ಲಕ್ಕೂ ಮೊದಲು ಗತಿಗಾಣಿಸಿದನು (ಅಂಬಿಕೆ. ೮೬). **ಗತಿಕಾಣಿಸು**: ೧. ಮನೆಯ ಸಾಮಾನುಗಳಿಗೆಲ್ಲ ಗತಿಕಾಣಿಸುವ ತನಕ . . . ಒಪ್ಪಿಸಿ (ಪುನರು. ೩೦೮). ೨. ಸದ್ಗತಿಯನ್ನು ದೊರಕಿಸಿ ಕೊಡು: ಮಕ್ಕಳು ಇಹದಲ್ಲಿ ದಿಕ್ಕಾಗಿ ಪರದಲ್ಲಿ ಗತಿಕಾಣಿಸುತ್ತಾರೆ (ವಚಭಾ. ೩೪೨). [ಗತಿಗಾಣು + -ಇಸು$_3$]

**ಗತಿಗಾಣು**, ಗತಿಕಾಣು (ಕ್ರಿ). ೧. ದಿಕ್ಕುಕಾಣು: ಬೇರೆ ಗತಿಗಾಣದೆ . . . ಕುಳಿತುಬಿಟ್ಟರು (ಒಡೆಕ. ೬೯). **ಗತಿಕಾಣು**: ೧. ಹಾನಿಯನು ತಪ್ಪಿಸಲು ಗತಿಕಾಣೆನಲ್ಲ (ಕವಿಪು. ೩೫-೭). ೨. ಸದ್ಗತಿಯನ್ನು ಹೊಂದು: 'ಗತಿಕಾಣಿಸು' ಪರಾ. [ಗತಿ + ಕಾಣು (< ಕಾಣ್)]

**ಗತಿಗಿಡಿಸು** 'ಗತಿಗೆಡಿಸು' ನೋ.

**ಗತಿಗಿಡು** 'ಗತಿಗೆಡು' ನೋ.

**ಗತಿಗುಂದು** (ಕ್ರಿ). ನಡಗೆ ಕುಗ್ಗು; ವೇಗಗುಂದು: ಅಗಲಲಾಱದೆ ಮುರಿದು ಮೋಱೆಯ ದುಗುಡದಲಿ ಹಯವಶ್ವವಾರಿಯನುಗುಳಿ ಗತಿಗುಂದಿದುವು ಗುಣಭರಿತನ ವಿಯೋಗದಲಿ (ತೊರಱಾ. ೨-೫-೨). [ಗತಿ + ಕುಂದು$_1$]

**ಗತಿಗುಡು** 'ಗತಿಗೊಡು' ನೋ.

**ಗತಿಗೆಡಿಸು**, ಗತಿಕೆಡಿಸು, ಗತಿಗಿಡಿಸು (ಕ್ರಿ). ೧. ನಡೆಗೆಡುವಂತೆ ಮಾಡು; ದಾರಿತಪ್ಪಿಸು: ಗತಿಗೆಡಿಸಿತ್ತು ಪಾತಕನ [ಮೈತ್ರಿಯು] ವೋಲ್ (ಕುಸುಮಾ. ೧೫-೮೬); ಮಿತ್ರನ ತೇಜಕ್ಕಡ್ಡಲಾದೆಂ ದ್ವಿಜಗತಿಗೆಡಿಸಿರ್ದೆಂ (ರಾಜಶೇ. ೬-೪). ೨. ಇದ್ದುದನ್ನು ಹಾಳುಮಾಡು; ಸ್ಥಿತಿಯನ್ನು ಕೆಡಿಸು: ಅತಿಮೋಹಂ ಗತಿಗೆಡಿಸುಗುಂ (ಸಮುಪ. ೫-೮೨). **ಗತಿಕೆಡಿಸು**: ೨. ತಾನು ಕೆಡುವುದಲ್ಲದೆ ಅವರನ್ನೂ ಗತಿಕೆಡಿಸಿಬಿಟ್ಟ (ರೂಢಿ); ಅತಿಯಾಸೆ ಗತಿಕೆಡಿಸಿತು (ಗಾದೆ). **ಗತಿಗಿಡಿಸು**: ೩. ಸದ್ಗತಿ ದೊರಕದಂತೆ ಮಾಡು: ಸುಡುವುದು ಕಿರ್ಚಲ್ಲದೆ ಗತಿಗಿಡಿಸದು ಕೋಪಾಗ್ನಿ ಸುಟ್ಟುಮೊದಲಂ ಗತಿಯಂ ಕಿಡಿಸಿದುದು (ಪಂಪರಾಮಾ. ೯-೧೫); ಗತಿಗಿಡಿಪಾಜ್ಞೆಯುಳ್ಳವರೆ ಸದ್ಗತಿಯಂ ಕುಡಲಾರ್ಪರ್ (ಜಗವಿ. ೧೬-೫೩). [ಗತಿಗೆಡು + -ಇಸು$_3$]

**ಗತಿಗೆಡು**, ಗತಿಕೆಡು, ಗತಿಗಿಡು (ನಾ). ೧. ಚಲನೆಯಿಲ್ಲದಾಗು; ನಡೆಗೆಡು: ರಂಡೆಯಂತೆ ಪತಿಯಿಲ್ಲದೆ ಕಾಲ್ಗೆಟ್ಟನಂತೆ ಗತಿಗೆಟ್ಟು (ಧರ್ಮಾಮ್ಮ. ೨-೧೦೫). ೨. ಹಾಳಾಗು; ದಾರಿತಪ್ಪು: ಪಿರಿದುಮ ಧರ್ಮದೆ ಗತಿಗೆಟ್ಟರಸುಗಳೆಲೆ ಪೆಱವುಗೊಂಡರ್ (ಕಾದಂಪೂ. ೫೩೦); ಯತಿವನಿತಾವಿಲಾಸಗತಿಯಿಂ ಗತಿಗೆಟ್ಟುವು . . . ಅಂಚೆವಿಂಡುಗಳ್ (ಜಗವಿ. ೧೬-೫೩). ೩. ಅವಸ್ಥೆ ಹಾಳಾಗು; ಸ್ಥಿತಿಗೆಡು; ಆಶ್ರಯ ತಪ್ಪು: ನಿರ್ಘಟದಲ್ಲಿ ಘಟ ಹುಟ್ಟಿ ಪ್ರಕಟಿಸುವುದ ಕಂಡೆ . . . ಆ ಉಭಯದ ಗತಿಗೆಟ್ಟವರ ಕಂಡೆ (ನೋಳಮಾ. ೧೦-೩೬); ಪ್ರತಿಗಳ್ . . . ಮತಿಗೆಟ್ಟರ್ ಧೃತಿಗೆಟ್ಟರ್ ಗತಿಗೆಟ್ಟರ್ (ಗಿರಿಕ. ೮-೨೩); ಗತಿಗೆಟ್ಟು ಬಂದಿಹೆನು (ಕವಿಸೋ. ೭೯). **ಗತಿಕೆಡು**: ೩. ಅವನಿಗೆ ಗತಿಕೆಟ್ಟ ಮೇಲೇ ಬುದ್ಧಿ ಬಂದದ್ದು (ರೂಢಿ). **ಗತಿಗಿಡು**: ೩. 'ಗತಿಗಿಡಿಸು' ಪರಾ. [ಗತಿ + ಕೆಡು$_1$]

**ಗತಿಗೇಡಿ** (ನಾ). ೧. ಇದ್ದುದನ್ನು ಹಾಳುಮಾಡಿಕೊಂಡವನು; ದುರ್ದೈವಿ: ಅತಿಯಾಸೆಮಾಡುವನು ಗತಿಗೇಡಿಯಾಗುವನು ಅತಿಯಾಸೆಯಿಂದ ಮತಿಕೆಡುಗು ರತಿಯಿಂದ ಸತಿಸುತರು ಕೆಡುಗು (ಸರ್ವಜ್ಞ. ೧೧೭೬). ೨. ನಿರ್ಭಾಗ್ಯ; ದರಿದ್ರ: ಸಾಕಲು ಯೋಗ್ಯತೆಯಿರದ ಗತಿಗೇಡಿ (ವಾತ್ಸಲ್ಯ. ೯೭). ೩. ಬೇರೆಯವರಿಗೆ ಕೆಡುಕನ್ನುಂಟುಮಾಡುವವನು: (ಶಿ). [ಗತಿಗೇಡು + -ಇ$_2$]

**ಗತಿಗೇಡಿಗ** (ನಾ). = ಗತಿಗೇಡಿ ೩: ರಣಗಳ್ಳನನು ಗತಿಗೇಡಿ [ಪಾಠಾಂ. ಡು]ಗನನೀ ದ್ರೋಹಿ ರಕ್ಕಸನ . . . ಹೊಳ್ಳುವಾಱಿಸಲೂದುವೆನು (ತೊರಱಾ. ೫-೭-೩೬). [ಗತಿಗೇಡು + -ಇಗ]

**ಗತಿಗೇಡು** (ನಾ). ಒಳ್ಳೆಯ ಸ್ಥಿತಿಗೆ ಹಾನಿ: ಅತಿಯಾಸೆ ಗತಿಗೇಡು (ಗಾದೆ). [ಗತಿ + ಕೇಡು]

**ಗತಿಗೇಡುತನ** (ನಾ). ಗತಿಯಿಲ್ಲದಾಗುವಿಕೆ; ದಾರಿದ್ರ್ಯ; ಅಭಾವ ಸ್ಥಿತಿ: ತಬ್ಬಲಿ ಹುಡುಗಿಯೊಬ್ಬಳನ್ನು ಸಾಕದೆ ಇರುವಷ್ಟು ಗತಿಗೇಡುತನ ಬಂದಿಲ್ಲ ನನಗೆ (ವಾತ್ಸಲ್ಯ. ೯೬). [ಗತಿಗೇಡು + -ತನ]

**ಗತಿಗೊಡು**, ಗತಿಕೊಡು, ಗತಿಗುಡು (ಕ್ರಿ). ೧. ದಾರಿತೋರಿಸು; ಅನುಕೂಲಮಾಡಿಕೊಡು: ತನಗೆ ಗತಿಗೊ[ಪಾಠಾಂ. ಗು]ಡುವ ಸೊಸೆಯೆಂದು ಬಯಸಿದೊಡೆ ಬಂದಯ್ಯನಾಡನೆ ಸುರಾಸುರರ ಮುಂದೆ ಕಪಿಕಟಕಮಱಿಯೆ (ಜೈಮಿಭಾ. ೧೮-೫೨). **ಗತಿಕೊಡು**: ೨. ಮುನ್ನಡಸು; ಚಲಿಸುವಂತೆ ಮಾಡು: ಅವನು ಬಂದದ್ದು ನಿಂತ ಕೆಲಸಕ್ಕೆ ಗತಿಕೊಟ್ಟಂತಾಯಿತು (ರೂಢಿ). **ಗತಿಗುಡು**: ೧. ಮೇಲಿನ 'ಜೈಮಿಭಾ' ಪ್ರಯೋಗದ ಪಾಠಾಂತರವನ್ನು ನೋಡಿ. [ಗತಿ + ಕೊಡು$_1$]

**ಗತಿಗೊಳ್** (ಕ್ರಿ). ೧. ಚಲನೆಯನ್ನು ಪಡೆ: ತುಡುಕಿ ತೂಳುವ ಸೂತ್ರಯಂತ್ರದ ಗಡಣದಲಿ ಗತಿಗೊಂಡು ಬೇಡಿದ ಕೊಡುವ ಮಣಿಪುತ್ರಿಕೆಗಳೆಸೆದುವು . . . ವಿವಿಧರಚನೆಯಲಿ (ತೊರಱಾ. ೧-೧೩-೧೦). ೨. ಸದ್ಗತಿಯನ್ನು ಪಡೆ: 'ಗತಿಗೊಳಿಸು' ಪರಾ. [ಗತಿ + ಕೊಳ್$_1$]

**ಗತಿಗೊಳಿಸು** (ಕ್ರಿ). ಸದ್ಗತಿಯನ್ನು ಉಂಟುಮಾಡು, -ಕೊಡು: ಮಾರ್ಗಾಂತರದಿ ಕಂಡ ಜಟಾಯುವನು ಮನಮುಱಿಗಿ ವೃತ್ತಾಂತವನು ತಿಳಿದವನಲ್ಲಿ ಗತಿಗೊಳಿಸಿ . . . ಊರ್ಮಿಳೆವಲ್ಲಭನನೊಡಗೊಂಡು ಕಿಷ್ಕಿಂದಾದ್ರಿಗೈತಂದು (ರಾಮಚ. ೧೩). [ಗತಿಗೊಳ್ + -ಇಸು$_3$]

**ಗತಿಚತುಷ್ಟಯ** (ನಾ). [ಜೈನ] ಕರ್ಮಾನುಗುಣವಾಗಿ ಜೀವನಿಗೆ ಒದಗುವ ನಾಲ್ಕು ವಿಧದ ಜನ್ಮಗಳು: ನಾರಕ ತಿರ್ಯಙ್ನರ ಬೃಂದಾರಕರೆನೆ ಗತಿಚತುಷ್ಟಯಂಗಳ್ (ಪುಷ್ಪಪು. ೧೩-೫೩). [ಗತಿ + ಚತುಷ್ಟಯ]

**ಗತಿನಾದ** (ನಾ). [ಸಂಗೀತ] ತಾಳಬದ್ಧವಾದ ನಾದ: ಶ್ರುತಿಯೊಳಡಗಿದ ಗತಿನಾದದಂತೆ ಸುಖದೊಳಡಗಿದ ಪ್ರತಿರೂಪದಂತೆ (ನೋಳಮಾ. ೪೯-೩೫೩). [ಗತಿ + ನಾದ]

**ಗತಿಪರಂಪರೆ** (ನಾ). ವಂಶ; ಅನ್ವಯ (successive. ಪಾರಿಶ. ೩೦). [ಗತಿ + ಪರಂಪರೆ]

**ಗತಿಮಂಡಲ** (ನಾ). [ನಾಟ್ಯ] ಮೂವತ್ತೆರಡು ಅಭಿನಯಮುದ್ರೆಗಳಲ್ಲಿ ಒಂದು: ಗತಿಮಂಡಲ . . . ಸ್ವಸ್ತಿಕರೇಚಿತ – ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಲಾಸ್ಯರಂ. ೫-೭೨). [ಗತಿ + ಮಂಡಲ]

**ಗತಿಮುಟ್ಟು** (ಕ್ರಿ). ಒಳ್ಳೆಯ ಸ್ಥಿತಿಯನ್ನು ಪಡೆ: ನಿಮ್ಮೆದುರಿಗೆ ಅದನ್ನೆಲ್ಲ ಹೇಳದಿದ್ದರೆ ನಾನು ಗತಿಮುಟ್ಟುವಂತೆಯೇ ಇಲ್ಲ (ಅಂಬಿಕೆ. ೮೬). [ಗತಿ + ಮುಟ್ಟು$_1$]

**ಗತಿಯುದ್ಧ** (ನಾ). ವೇಗದ ಪೈಪೋಟಿ, — ಸ್ಪರ್ಧೆ: ಗತಿಯುದ್ಧದಿಂ ತನ್ನ ಗೆಲ್ದಾಗಲ್ಲದೆ ಪ್ರಭಾವತಿ ಮಾಲೆ ಸೂಡಳೆಂಬುದಂ . . . ಪೇಟಿ (ಚಾವುಂಉ. ೫೮). [ಗತಿ + ಯುದ್ಧ]

**ಗತಿಲಾಘವ** (ನಾ). ನಡೆಯುವುದರಲ್ಲಿ ವೇಗ; ಚಳಕದಿಂದ ಅಡಿಯಿಡುವುದು: (?). [ಗತಿ + ಲಾಘವ]

**ಗತಿವಡೆ** (ಕ್ರಿ). ಉತ್ತಮಸ್ಥಿತಿಯನ್ನು ಪಡೆ; ಒಳ್ಳೆಯ ಸ್ಥಿತಿಯನ್ನು ಹೊಂದು; ಸದ್ಗತಿಯನ್ನು ಹೊಂದು: ಗತಿವಡೆವೆನೆಂಬುದು ಕಾಯಕ್ಲೇಶಂ ಬೇಟ್ಟುದು (ಧರ್ಮಾಮೃ. ೧-೧೧೪); ಹಿಂಸಾಧರ್ಮ ವೃತ್ತಿಯಲಿ ನಡೆದು ಯಾವಜ್ಜೀವದಲಿ ಗತಿವಡೆದರುಂಟಲೆ ಪಾರ್ಥ (ಕುವ್ಯಾಕ. ೧೭-೧೩); ಹೂವಿಂದ ನಾರು ಗತಿವಡೆದಂತೆ (ಸೌಂದಪು. ೬-೫೨); ಸಜ್ಜನರ ಗತಿವಡೆವೆನಲ್ಲದೊಡೆ . . . ಮಹಾಪಾತಕಂ ಪೋಗದು (ಜೈಮಿಭಾ. ೨೪-೭೬). [ಗತಿ + ಪಡೆ$_1$]

**ಗತಿವಿಡಿ** (ಕ್ರಿ). ದಾರಿಯನ್ನು ಹಿಡಿ; ನಡೆಯನ್ನು ಅನುಸರಿಸು: ಅತನ ಪಾದಪದ್ಮದ ಗತಿವಿಡಿದಿರಲು ಕಾಯ್ವ ನಿಮ್ಮವನು (ಬಸವ. ೨೨-೩೭); ನಡೆತಂದನು ಮಹಾರಣ್ಯದಲಿ ಮಾಯಾಮೃಗದ ಗತಿವಿಡಿದು (ತೊರರಾ. ೩-೯-೧೮). [ಗತಿ + ಹಿಡಿ$_1$]

**ಗತಿವಿಹೀನ** (ಗು). ೧. ಸ್ಥಿರವಾದ; ಚಲಿಸದ. (ನಾ). ೨. ದಿಕ್ಕಿಲ್ಲದವನು; ದಾರಿಗಾಣದವನು: ಗತಿವಿಹೀನರ ದೈನ್ಯವಾಚಾಯುತರ . . . ಅಟುವುದು ಧರ್ಮವೇ ನಾವಜಿಯೆವಿದನೆಂದ (ಕುವ್ಯಾಕ. ೨೭-೩೨); ಗತಿವಿಹೀನರಿಗಾರು ನೀನೇ ಗತಿ ಕಣಾ (ಹರಿಸಾ. ೫೪). [ಗತಿ + ವಿಹೀನ]

**ಗತಿಶೀಲ** (ಗು). ಚಲನೆ ಇರುವ; ಚಲನೆಯೇ ಸ್ವಭಾವವಾಗಿರುವ: ಈ ಸಾಮರ್ಥ್ಯವಾದರೋ ಸ್ವತಃ ಗತಿಶೀಲವಾದುದಲ್ಲ. ಇದಕ್ಕೆ ಈ ಗತಿ (ಕಂಪನ) ಮತ್ತೆಲ್ಲಿಂದಲೋ ಬರಬೇಕು (ಜೀವಾತ್ಮ. ೧೦೫). [ಗತಿ + ಶೀಲ]

**ಗತಿಶೂನ್ಯ** (ನಾ). = ಗತಿವಿಹೀನ ೨: ಮುಕುಂದ ಗತಿಶೂನ್ಯರಿಗೆ ನೀನೇ ಗತಿಯೆಲೈ ಗರುವಾಯಿಗೆಟ್ಟೆನಲೈ (ಕುವ್ಯಾವಿ. ೩-೫). [ಗತಿ + ಶೂನ್ಯ]

**ಗತಿಸಂರೋಧನ** (ನಾ). ಮುಗ್ಗರಿಸುವಿಕೆ; ಅಡ್ಡಿ: ಉನ್ಮಗ್ನ ನಿಮಗ್ನ ಜಲಾಪಗಾಯುಗಂ ಗತಿಸಂರೋಧನಮಾಗೆ (ಶಾಂತಿಪು. ೧೧-೫೦). [ಗತಿ + ಸಂರೋಧನ]

**ಗತಿಸು** (ಕ್ರಿ). ೧. ಗಮಿಸು; ನಡೆ: ಜನಕನ ಸುತೆಯು ತನ್ನತ್ತೆಂದಿರೆಡೆಯಲಿ ಗತಿಸಿ ಮಂಜುಸ್ವರದೆ ನುಡಿದಳು (ರಘುವಂ. ೧೫೧). ೨. ಸಂದು ಹೋಗು; ಕಳೆ; ಆಗಿಹೋಗು: ನಾಲ್ಸಾಸಿರಂ ನಾಲ್ಕುನೂಱುಂ ಈ ಮಾಯಾಪೂರ್ಣ ಕಲ್ಪಬ್ದದೆ ಗತಿಸೆ (ಸೋಮೇಶ. ೧೦೩); ಛಂದಸ್ಸು, ಶೈಲಿ ಇವುಗಳಿಂದ ಪ್ರಚುರವಾದ ಒಂದು ಕನ್ನಡಸಾಹಿತ್ಯ ಯುಗವು ಗತಿಸಿಹೋಗಿರಬೇಕು (ಕಸಾಚ. ೮); ಆಯುಷ್ಯವು ಗತಿಸುತ್ತದೆ (ಅರ್ಯಧ. ೧೯೦). ೩. ಉಂಟಾಗು; ಒದಗು: ಈ ಯೆಡೆ ಗತಿಸಿದುದು ನಮಗಧಿಕ ಸಂತಸವೆಂದ ಪಾಂಚಾಲ (ಜೀನಭಾ. ೨೨-೩೪). ೪. ತೀರು; ಸಾಯು; ನಿಧನಹೊಂದು: ಅವರು ಗತಿಸಿದ ನಂತರ ಮನೆ ಮೂರಾಬಟ್ಟೆಯಾಯಿತು (ರೂಢಿ). [ಗತ$_2$ + – ಇಸು$_3$]

**ಗತಿಸ್ತಂಭ** (ನಾ). = ಗತಿಸಂರೋಧನ: ಏಱಿದರ ಮೆಯ್ಯಳ್ಳಾಡೆ ತೂಗಿ ತೊನೆವಿನಂ ನಿಂದ ವಿಮಾನ ಗತಿಸ್ತಂಭಮಂ ಕಂಡು (ಶಾಂತಿಪು. ೪-೭೧೨). [ಗತಿ + ಸ್ತಂಭ]

**ಗತುಕು** 'ಗದಗು' ನೋ.

**ಗತೋದಕ** (ನಾ). ೧. ಹರಿದು ಹೋದ ನೀರು. ೨. ನೀರು ಹೋದ ಸ್ಥಳ; ನೀರು ಹಿಂಗಿದ ಸ್ಥಳ: ಗತೋದಕದಲುಱೆ ಸೇತುಸಂಬಂಧದಲಿ ಫಲವೇನು (ಕುವ್ಯಾದ್ರೋ. ೧೮-೫೮). [ಗತ$_2$ + ಉದಕ$_2$]

**ಗತ್ತ** 'ಗತ$_1$' ನೋ.

**ಗತ್ತಿಗೆ** (ನಾ). ಕತ್ತಿ; ಕಠಾರಿ: ಪರಸಮಯಪ್ರತಿವಾದಿಯ ಸುಪುಷ್ಪದೈವದ ಮೂಗನರಿವ ಗತ್ತಿಗೆಯ [ಪಾಠಾಂ. ದ ಸಾಣೆಯನು] ಹೊಸ ಸಾಣೆವಿಡಿದಂತೆ ಹೊಳೆವ ದೃಷ್ಟಿಪಾತನಗ್ಗೈವುತ (ಸಿಂಗಿರಾ. ೨೭-೪೧). [< ಕತ್ತಿಗೆ]

**ಗತ್ತಿವರ್ಮ** (ನಾ). ಒಬ್ಬಾತನ ಹೆಸರು: ಗತ್ತಿವರ್ಮ್ಮ ಪಡೆತನು ಮೊರಸನಾಡ ಪೆರ್ಪುರ್ಸುರ್ ನಾಮ ಗ್ರಾಮವನ್ (ಮೈಅರಿ. ೧೯೧೪, ೯-೧೧; ?). [ಗತ್ತಿ$_0$ + ವರ್ಮ$_2$]

**ಗತ್ತು** (ನಾ). ೧. ಗತಿ; ಗಮನ: "ಗತ್ತು – ಗತಿ" (ತದ್ಭಕೋ. ೧೦). ೨. ಠೀವಿ; ಜಬರ್; ದರ್ಪ: ಮತ್ತೊಂದು ಗತ್ತು ತೋರಿಸುವಾಯಂದು ಗದಾಯುಧವಂ ತೆಗೆದು ಬೊಬ್ಬಿರಿದು (ಸೌಗಂಧಿ. ೩೫೧-೪); ಎಂಭತ್ತುವರ್ಷದವನು ಇಪ್ಪತ್ತುವರ್ಷದ ಹುಡುಗರ ಗತ್ತಿನಿಂದ ತೋಟದಲ್ಲಿದ್ದ ಮನೆಗೆ ಹೋದನು (ಛಾಟೀಮು. ೪); ಭಟ್ಟರು ಯೋಗ್ಯಜನ, ಅವರದೇ ಒಂದು ಗತ್ತು ವೈಖರಿ (ಹೊಸಕ್ಷಿ. ೫೯); ಗಾಡಿ ಎತ್ತುಗಳು ಒಳ್ಳೆ ಗತ್ತಿನಿಂದ ಸಾಗುತ್ತಲೆ ಇದ್ದವು (ಗಿರಿಜಾ. ೨೩). ೩. ಕುಯುಕ್ತಿ; ಕುತಂತ್ರ: ನನಗೆಲ್ಲಾ ಗೊತ್ತಾಗೇದ ಬಿಡು ನಿನ್ನ ಗತ್ತು (ಗಂಮಾಯಿ. ೫೨); ಇದರಾಗ ಶಿವರಾಯಿ ಗತ್ತ ಇದ್ದಂಗ ಕಾಣ್ತದ (ಬಿವರಿ. ೭೪). ೪. ಅನುಸರಣೆ; ಹೊಂದಿಕೆ: ನಾವಿರಲು ಹೋಲೆವುದು ಹೊತ್ತುಗೊತ್ತಿನ ಗತ್ತು ನಾ ಮ್ಮೆಯು ಎನಲು ದಿಕ್ಕಾಲ ಕಡೆ (ಅರಳು. ೯೨-೧೩); ನಿಮ್ಮ ಗುರಿಕೆಯ ಗತ್ತು ಬೇಕು ಈ ಹೊತ್ತು! (ಕ್ರೌಂಚಧ್ವ. ೧೯). ೫. ಉಚ್ಚಸ್ಥಿತಿ: ಕ್ರೀಡಾಪಟು ಈ ದಿನ ಒಳ್ಳೆಯ ಗತ್ತಿನಲ್ಲಿ ಆಟವಾಡಿದ (ರೂಢಿ). ೬. [ಸಂಗೀತ] ತಾಳಮಾನದ ಒಂದು ಲಯ; "ಬಾರಿಸುವುದರಲ್ಲಿ ಹಿಡಿಯುವ ತಾಳ" (ಜಾನಕೋ. ೪೫): ಕವನಗಳನ್ನು ಗತ್ತಿಗೆ ಸರಿಯಾಗಿ ಹೆಣೆಯುತ್ತಿದ್ದರು (ಹುಟ್ಟಿಹ. ೨೯); ಗತ್ತು ಮುಕ್ತಾಯಕ್ಕೇ ಬಂದಿತ್ತು (ಗ್ರಾಮಾಯ. ೫೭೩); ಪಧನೀಸ ಸರೀಗಮ ನಾರಿ ನಿನ್ನ ಗತ್ತಾ ನನ್ನ ಕಂಡು ಹೋಗಬ್ಯಾಡ ಚದರಿ (ಮಣ್ಣುಹ. ೪೨); ನಾಟಕದ ಗತ್ತು ಇತ್ಯಾದಿಗಳ ಬಗ್ಗೆಯೂ ಸೂಚನೆ ಕೊಡುತ್ತಿದ್ದವನೂ ಅವನೆ (ಸಂಸ್ಕಾರ. ೭೫).

ಗತ್ತಿನ ಮೇಲಿರು = ಘೋರಣೆಯಲ್ಲಿರು; ದರ್ಪದಿಂದಿರು: ಅವರು ಬಹಳ ಗತ್ತಿನ ಮೇಲಿದ್ದಾರಮ್ಮ (ಕೀಲುಗೊಂ. ೨೧). [← ಹಿಂ. ಮರಾ. ಗತ್]

**ಗತ್ತುಕಾರ** 'ಗತ್ತುಗಾರ' ನೋ.

**ಗತ್ತುಕಾರಿಕೆ** 'ಗತ್ತುಗಾರಿಕೆ' ನೋ.

**ಗತ್ತುಗಾರ**, ಗತ್ತುಕಾರ (ನಾ). ೧. ಸ್ವಾರ್ಥಸಾಧಕ; ಸಮಯಾನುವರ್ತಿ. ೨. ಉಪಾಯಗಾರ; ತಂತ್ರಿ: ಬೆರಕೆಯ ಗತ್ತುಗಾರನೆಂದು ಜನರು ನಿನಗೆ ಬೆದರದಿರಲಿ (ದಾಬಂತ್ತಿ. ೨೭). **ಗತ್ತುಕಾರ**: ೨. 'ಗತ್ತುಕಾರಿಕೆ' ಪರಾ. [ಗತ್ತು + – ಗಾರ$_1$ (< – ಕಾಱ)]

**ಗತ್ತುಗಾರಿಕೆ**, ಗತ್ತುಕಾರಿಕೆ (ನಾ). ಕುತಂತ್ರ; ಕುಟಿಲ; ಕಪಟೋಪಾಯ: ಮೆತ್ತಗೆ ಮಾತನಾಡಿ ಉತ್ತಮನಂತಿರುವನು ಕತ್ತುಕೊಯ್ಯಲು ಧೂರ್ತನೀತನು ಕುಹಕ ಗತ್ತುಗಾರಿಕೆ ಯಾರು ಅರಿಯರು (ಸಿದ್ಧಪು. ೧೫–೪೨); ತನ್ನನ್ನು ಬೇಕೆಂದೇ ಅವಮಾನಮಾಡುವ ಗತ್ತುಗಾರಿಕೆ ಯೆಂದು ಕೂಗಾಡಿದಳು (ಬದುಜ. ೧೫೨). **ಗತ್ತುಕಾರಿಕೆ**: ಇದೊಂದು ಅಳುವರಸರ ಕುತಂತ್ರ, ಕಂಡಿರಾ? ರಾಜಕಾರಣದ ಗತ್ತುಕಾರಿಕೆ (ಮುಗಜ. ೪). [ಗತ್ತುಗಾರ + –ಇಕೆ]

**ಗತ್ತುಹೂಡು** (ಕ್ರಿ). ಕುಯುಕ್ತಿಯನ್ನು ಮಾಡು; ತಂತ್ರವನ್ನು ಹೂಡು: ಮುಂಬಯಿಯಲ್ಲಿ ಗತ್ತುಹೂಡಿ ಕಾಲಕಳೆಯಬೇಕೆಂದಿದ್ದೆ (ಸೋಲು. ೪). [ಗತ್ತು + ಹೂಡು$_1$ (< ಪೂಡು$_1$)]

**ಗತ್ಯಂತರ** (ನಾ). ಬೇರೆಯ ಉಪಾಯ; ಅನ್ಯಮಾರ್ಗ: ಇದು ತಪ್ಪಾದ ಕಲ್ಪನೆಯೆಂದು ಹೇಳದೆ ಗತ್ಯಂತರವಿಲ್ಲ (ಗ್ರಂಥಾಲ. ೫); ರಾಜಮಾರ್ಗದಲ್ಲಿ ನಡೆಯದೆ ಗತ್ಯಂತರವಿಲ್ಲ (ಗೂತ್ತುಗು. ೩೧). [ಗತಿ + ಅಂತರ]

**ಗತ್ಯಾಖ್ಯಾನ** (ನಾ). [ಜೈನ] ಕರ್ಮಫಲಕ್ಕನುಸಾರವಾಗಿ ಗತಿಗಳನ್ನು ಹೇಳುವುದು: ಗತ್ಯಾಖ್ಯಾನಮೆಂಬುದು ತ್ರಿಷಷ್ಟಿಶಲಾಕಾಪುರುಷಕೃತ ಕರ್ಮಸಂಬಂಧಜನಿತ ಸುಖಾದಿಸಮನುಭವನಕಾರಣಂಗಳಪ್ಪ ಗತಿವಿಕಲ್ಪಂಗಳಂ ಪೇಳ್ವುದು (ಚಾವುಂಉ. ೧೨). [ಗತಿ + ಆಖ್ಯಾನ]

**ಗತ್ಯಾತ್ಮಕ** (ಗು). ನಡೆಯುವ ಸ್ವಭಾವವುಳ್ಳ; ಚಲಿಸುವ; ಚರ: ಪ್ರಪಂಚದಲ್ಲಿ ಗತ್ಯಾತ್ಮಕ(ಚಲ) ಮತ್ತು ಸ್ಥಿತ್ಯಾತ್ಮಕ (ಅಚಲ) ಸಾಮರ್ಥ್ಯವು ಒಂದು ನಿಯಮಿತ ಪ್ರಮಾಣದಲ್ಲಿರುತ್ತದೆ (ಜೀವಾತ್ಮ. ೧೦೫). [ಸಂ.]

**ಗತ್ಯುಪಗ್ರಹ** (ನಾ). ಚಲನೆಗೆ ಸಹಕಾರಿಯಾಗುವುದು: ಗತಿಸ್ಥಿತ್ಯುಪಗ್ರಹೌ—ಗತ್ಯುಪಗ್ರಹಮುಂ ಸ್ಥಿತ್ಯುಪಗ್ರಹಮುಂ ಎಂಬೆರಡುಂ, ಧರ್ಮಾಧರ್ಮಯೋಃ – ಧರ್ಮಾಧರ್ಮದ್ರವ್ಯಂಗಳ ಸಂಬಂಧದಿಂದಾದ, ಉಪಕಾರಃ – ಉಪಕಾರಮಕ್ಕುಂ (ತತ್ತ್ವಪ್ರ. ೨೩೮); 'ಸ್ಥಿತ್ಯುಪಗ್ರಹ' ಪರಾ. [ಗತಿ + ಉಪಗ್ರಹ]

**ಗತ್ವ** (ನಾ). = ಗಕಾರ: ಖತ್ವಕ್ಕಂ ಬಹುಳತೆಯಿಂ ಗತ್ವಂ ಛತ್ವಂ (ಶಮದ. ೨೫೬). [ಸಂ.]

**ಗದ$_1$** (ನಾ). ಭಯ ಅಥವಾ ಚಳಿಯಿಂದುಂಟಾಗುವ ನಡುಗುವಿಕೆಯನ್ನು ಸೂಚಿಸುವ ಒಂದು ಅನುಕರಣ ಶಬ್ದ: 'ಗದಗಂಪ' ಪರಾ.

ಗದಗದ (ದ್ವಿರುಕ್ತಿ). **ಗದಗದನಡುಗು, ಗದಗದನೆನಡುಗು** = ಭಯ ಅಥವಾ ಚಳಿಯಿಂದ ಬಹಳವಾಗಿ ನಡುಗು: ಉದಯಕಾಲದಲೆದ್ದು ಗದಗದ [ಪಾಠಾಂ.ಗಡಗಡ] ನಡುಗುತ ನದಿಯಲಿ ಮಿಂದೆನೆಂದು ಹಿಗ್ಗುತಲಿ (ಪುರಂದ. ೨–೨೫–೧); ಗದ್ಗದನೆ ನಡುಗುತೆ ಬಂದು ಸೈಗೆಡೆದು ಬಿದ್ದು ತಿರುನೀಲಕಂಠರ ಚರಣಮಂ ಪಿಡಿದು (ತಿರುರ. ದೇ. ೬–೧೫); ಗದಗದನೆ ನಡುಗುತ ಯುಗದ್ವಯವದನ ಕೈಮುಗಿದು (ತೊರರಾ. ೬–೨೬–೪೩); ಆ ಭಯಾನಕ ದೃಶ್ಯವನ್ನು ಕಂಡು ಪಂತನು ಗದಗದನೆ ನಡುಗಿದನು (ಅಂಬಿಕೆ. ೨೦). 'ಗಡಗಡ$_1$' ಪರಾ.

**ಗದ$_2$** (ನಾ). ೧. ಹೇಳಿಕೆ; ಮಾತು: "ಮಾತಾಡುವಿಕೆ; ವಾಕ್ಯ; ಭಾಷೆ" (ಅನಂನಾ): 'ಗದಿಸು' ಪರಾ. ೨. ರೋಗ; ವ್ಯಾಧಿ: ನಿಮ್ಮಯ ಗದವ ಬಿಜ್ಜಳಗೆ ಸನಯದಿಂ ಪಾಲಿಸೆನೆ... ಗದವನನುನಯದಿ ತೆಗೆದು (ಗುರುಚಾ. ೮–೯೬). ೩. (ರೋಹಿಣೀಗರ್ಭದಲ್ಲಿ ಹುಟ್ಟಿದ) ಶ್ರೀಕೃಷ್ಣನ ಮಲತಮ್ಮ: ಬಲದೇವನು ಬಲಿಷ್ಠನು ಗದನು ಸುಕುಮಾರನು (ಭೀಷ್ಮಚ. ೧೪೩). 'ಗದಾಗ್ರಜ' ಪರಾ. ೪. ಒಂದು ಬಗೆಯ ವಿಷ; ಗರಳ: (ಕ). [ಸಂ.]

**ಗದಕ** 'ಗತಕ$_1$' ನೋ.

**ಗದಕಿ** 'ಗತಕಿ' ನೋ.

**ಗದಕು** 'ಗತಕ$_1$' ನೋ.

**ಗದಗಂಪ** (ನಾ). ಬಲವಾದ ನಡುಕ, —ಕಂಪನ: 'ಗದಗಂಪಂಗೊಳ್' ಪರಾ. [ಗದ$_1$ + ಕಂಪ]

**ಗದಗಂಪಂಗೊಳ್**, ಗದಗಂಪಗೊಳ್ (ಕ್ರಿ). ಬಲವಾಗಿ ನಡುಗು, —ಕಂಪಿಸು: ಗದಗಂಪಂಗೊಳೆ ಲೋಕಮಾಕ್ರಮುದೆ ಬಂದಾ ಚಕ್ರಮಂ ಕೊಂಡು ಕೋಪದ ಜ್ವಾಳೆ ನಿಜಾಕ್ಷಿಯಿಂ ನಿಮಿರಲ್ (ಶಾಂತೀಶ್ವ. ೩–೧೧೩); ಗದಗಂಪಂಗೊಳುತುಂ ಪುಳಿಂದ ಸಮುರೋದ್ಯದ್ಭೀತಿಯಿಂ (ಕುಸುಮಾ. ೧೪–೧೧೧). **ಗದಗಂಪಗೊಳ್**: ಗಾಳಿಸುಳಿಯದ ಠಾವ ಹೊಕ್ಕವ ಬೇಳುತಿರೆ ಗದಗಂಪು[ಪ]ಗೊಂಡುದು ಭುವನ ಭಯ ಮಿಗಲು (ಕೌಶಿರಾ. ೩೮–೨೭). [ಗದಗಂಪ + ಕೊಳ್$_1$]

**ಗದಗಂಪಗೊಳ್** 'ಗದಗಂಪಂಗೊಳ್' ನೋ.

**ಗದಗದಿತ** (ಗು). "ನಡುಗಿದ; ಬಿಕ್ಕುವ; ತೊದಲಿಸುತ್ತಿರುವ" (ಪ್ರಭಣ್ಣ). [< ಸಂ. ಗದ್ಗದಿತ]

**ಗದಗದಿಸು** (ಕ್ರಿ). ಬಲವಾಗಿ ನಡುಗು, —ಕಂಪಿಸು; ತತ್ತರಿಸು: ಕುದುಕುಳಿಗಳುರವಣಿಸೆ ಕಾಣುತ ಗದಗದಿಸಿ ಮುರವೈರಿ ಚಾಚಿದನುರ್ಜನಗೆ ರಥವ (ಕುಮ್ಯಾದ್ರೋ. ೧೦–೩೦); ಮದಗಜಯೂಥ ಕಂಠೀರವ ಬರೆ ಕಂಡು ಗದಗದಿಪಂತೆ ಬೆಚ್ಚಿದರು (ಮೋಹತ. ೨೨–೪೩); ಗದಗದಿಸುವ ಮೊಲೆ ಗಡಗಡಿಸುವ ತೊಡೆ ಕೆದರ್ವ ಥಾಳಾದ ಕಡೆಗಣ್ಣು (ಭರಚ. ೧೩–೬೭); ಪುದುಗಿತೆಡ್ಡೆಸೆಯಾನೆ ಹದುಗಿದಂ ಭೋಗಿಪಂ ಗದಗದಿಸಿತಾ ಸಾಯಕದ ಬಿಸಿಗೆ ಬ್ರಹ್ಮಾಂಡ (ಜೈಮಿಭಾ. ೧೩–೪೭). 'ಕದಕದಿಸು' ಪರಾ. [ಗದಗದ + –ಇಸು$_3$]

**ಗದಗಮಿಸು** (ಕ್ರಿ). ತತ್ತರಿಸು; ಗಾಬರಿಗೊಳ್ಳು: ಶಂಖವನ್ನು ಊದಲು ದಶದಿಕ್ಕುಗಳು ಗದಗಮಿಸಿ ಹೋದವು (ಮಭಾರ. ೨೦೩); ಇತ್ತ ತಿರುಗಿದರೆ ಹುಲಿ ಅತ್ತ ತಿರುಗಿದರೆ ಸಿಂಹ ಮಧ್ಯೆ ಸಿಕ್ಕು ಗದಗಮಿಸಿದ್ದಾಳೆ ಆಕೆ (ಬನಸಿ. ೧೩೪); ಈ ಭಕ್ಷ್ಯಪ್ರಿಯರ ಕೋಲಾಹಲವೇ ಕೋಲಾಹಲ. ಊರೆಲ್ಲ ಗದಗಮಿಸಿ ಹೋಯಿತು (ಸಮಜೀ. ೩೨). [ಗದಗಮ ? + –ಇಸು$_3$]

**ಗದಗಾಪಿಸು** (ಕ್ರಿ). = ಗದಗಂಪಂಗೊಳ್: ಬೆಧಜು... ಪುರವೆಲ್ಲ ಗದಗಾಪಿಸಿತು (ಚಂಪ್ರಸಾಂ. ೧೬–೧೯); ಹೆಗ್ಗಾಳೆಗೆ ತುರುಕರ ಪಾಳೆಯ ಗದಗಾಪಿಸಿತು (ಕುಮಾಸಾಂ. ೩೫೬). [ಗದಗಾಪು + –ಇಸು$_3$]

**ಗದಗಾಪು** (ನಾ). = ಗದಗಂಪ. 'ಗದಗಾಪುಗೊಳ್' ಪರಾ. [< ಗದಗಂಪ ?]

**ಗದಗಾಪುಗೊಳ್** (ಕ್ರಿ). = ಗದಗಂಪಂಗೊಳ್: ಕೈನೆಟ್ಟಯಂ ಮುಜಿವ ಶಾಕಿನಿ ಡಾಕಿನಿ ಗದಗಾಪುಗೊಂಬಾಗ್ರಹಂ ನಡುಗುವೊತ್ತರಗಳ ದಟುಗೆಡುವಾ ವ್ಯಂತರಗಳೆಸೆದುವಂತಲ್ಲಿ (ಸಮ್ಯಕೌ. ೫–೩೯); ಬೇಗದಿ ನಾಗಪಾಶದಿ ಕಟ್ಟಿ ಸದರದೊಳೊಂಭತ್ತು ಮಂದಿಯ ತರುತಿರ್ದ ಗದಗಾಪುಗೊಳೆ ರಾಜಕಟಕಾ (ಭರಜ. ೫೬–೪೨); ಬೆದಜುಯೋಡುವ ದನಗಳ ಕಂಡು ಜಗವೆಲ್ಲ ಗದಗಾಪುಗೊಂಡುದೇವೇಳ್ವೆ (ಕಂನವಿ. ೧೧–೫೧). [ಗದಗಾಪು + ಕೊಳ್$_1$]

**ಗದಗಾಪುಗೊಳಿಸು** (ಕ್ರಿ). ಗಾಬರಿಮಾಡು; ಗಾಸಿಗೊಳಿಸು: ಬುದಿಬುದಿನವನೂರ ನಡುವೆ ಕೆಂಡವನೂಸಿ ಗದಗಾಪುಗೊಳಿಸಲೆ ಪುರವಾ (ಭರಜ. ೨೪–೧೦); ಗದಗಾಪುಗೊಳಿಸುತಲಿ ಇಜುದುಹಾಕುತ ಪಟುಭಟರ (ಜ್ಞಾನಚ. ೩೨–೩೫). [ಗದಗಾಪುಗೊಳ್ + –ಇಸು$_3$]

**ಗದಗು,** ಗತುಕು₁ (ಕ್ರಿ). ೧. ತಿನ್ನು; ಮುಕ್ಕು: ತೆಗೆದುಕೊಂಡು ಬಾ ತಾಯಿ ಏನುಮಾಡಿದ್ದೀಯೊ ಕೊಡು ಚೆನ್ನಾಗಿ ಗದಗುತ್ತೇನೆ (ಗೃಹಲ. ೧೨೫). **ಗತುಕು₁** : ೨. ನಾಯಿಯಂತೆ ನಾಲಿಗೆಯಿಂದ ಚಪ್ಪರಿಸು, —ನೆಕ್ಕು. (ಸ್ಯಾಂಡರ್).

[ದೇ. ‖ ತಮಿ. ಕದಕ್ಕು ; ತುಳು. ಗದಕು ; ತೆಲು. ಕತಕು, ಗತುಕು, ಗದುಕು]

**ಗದಗುಟ್ಟು** (ಕ್ರಿ). ನಡುಗು; ಕಂಪಿಸು: ಮೇರಿಯ ಮನೆಯಲ್ಲಿ ಊಟಮಾಡುವುದಾದರೆ ತನಗೆ ಅನಾಹುತವಿದೆಯೆಂದು ಹರಿದಾಸರು ಗದಗುಟ್ಟಿದರು (ಕಾವೇರಿ. ೧೨೨).

ಗದಗುಟ್ಟಿ ನಡುಗು = ಬಹಳವಾಗಿ ನಡುಗು: ಕತೆಯನ್ನು ಕೇಳಿ ಗದಗುಟ್ಟಿ ನಡುಗಿದ (ರಂಗರೋ. ೧೨); ಆ ಅಗಂತುಕಮೂರ್ತಿಯನ್ನು ಕಂಡು ಅವರೆಲ್ಲರೂ ಮತ್ತೆ ಗದಗುಟ್ಟಿ ನಡುಗಹತ್ತಿದ್ದರು (ಅಂಬಿಕೆ. ೯).

[ಗದ್₁ + ಕುಟ್ಟು₁]

**ಗದಡಿ** (ನಾ). (ಉಕ) ಸಾಮಾನಿನ ಗಂಟು, — ಮೂಟೆ: ಫಕೀರನ ಗಂಟುಗದಡಿಗಳನ್ನೆಲ್ಲ ಹುಡುಕಿಸಿದನು (ಮುಂಬಯಿ. ೯–೧೬೫); ಧಮ ಸಿಗನು ಗಂಟುಗದಡಿಗಳನ್ನು ಕಟ್ಟೆಯ ಮೇಲೆ ಇಟ್ಟನು (ರಕ್ತಧ್ವ. ೧೦೧). 'ಗಂಟುಗದಡಿ' ಪರಾ.

[← ಮರಾ. ಗಠಡೀ ; ಹಿಂ. ಗಠಡೀ, ಗಠರೀ]

**ಗದಡು,** ಗದರು₃ (ನಾ). ಘಾಟುವಾಸನೆ: ಮೆಣಸಿನಕಾಯಿ ಗದಡು (ರೂಢಿ). **ಗದರು₃** : ಮೆಣಸಿನಪುಡಿ ತುಂಬ ಗದರು (ರೂಢಿ).

[← ಮರಾ. ಗದಳ ; ಹಿಂ. ಗದಲಾ]

**ಗದಬದಿಸು** (ಕ್ರಿ). = ಗದಗದಿಸು: ಗದಬದಿಸಿ ಕಾರಂಡ ಬಕ ಚೀಱಿದವು (ತೊರರಾ. ೯–೧೦–೯). [ಗದಬದ ? + – ಇಸು₃]

**ಗದಮು** 'ಗದುಬು₁' ನೋ.

**ಗದರಿಕೆ,** ಗದ್ದರಿಕೆ (ನಾ). ೧. ಅಬ್ಬರದಿಂದ ಮಾತಾಡಿ ಹೆದರಿಸುವುದು, —ಗರ್ಜಿಸುವುದು; ಬೆದರಿಕೆ. ೨. ದನಕರುಗಳನ್ನು ಅದ್ದಲಿಸುವುದು, —ಅಟ್ಟುವುದು: (*). **ಗದ್ದರಿಕೆ** : ೧. ಈ ಗದ್ದರಿಕೆಯನ್ನು ಕೇಳಿ ವಿದ್ಯಾರ್ಥಿಗಳ ಅರ್ಧಪ್ರಾಣವೇ ಹೋದಂತಾಗಿತ್ತು (ರಂಗರೋ. ೩). 'ಬೆದರಿಕೆ' ಪರಾ.

[ಗದರು₂ (< ಗದಱು₂) + – ಇಕೆ] .

**ಗದರಿಸು,** ಗದ್ದರಿಸು, ಗದ್ದಿಸು, ಗರ್ದಿಸು (ಕ್ರಿ). ೧. ಅಬ್ಬರಿಸು; ಗರ್ಜಿಸು; ಬೆದರಿಸು: ನೀನು ಕರ್ಮಗಳನ್ನು ಗದರಿಸಿದರೆ ಅವು ಮಾಯವಾಗುವುವು (ಹುಟ್ಟಿಹ. ೧೬೬); ಅರಸು ಕೋಪದಿಂದ ಗದರಿಸಿದ (ಹಾಹುತ್ತ. ೪೩); ಹುಡುಗನನ್ನು ಗದರಿಸಬೇಡ (ಮಗಮಾಂ. ೯೨). ೨. ದನಕರುಗಳನ್ನು ಅದ್ದಲಿಸು, —ಅಟ್ಟು: (*). 'ಬೆದರಿಸು' ಪರಾ. **ಗದ್ದರಿಸು** : ೧. ಅವರು ಕೋಪಾವಿಷ್ಟರಾಗಿ ಬಸವಲಿಂಗ ಶರಣರನ್ನು ಕರೆದು ಗದ್ದರಿಸಿದರು (ಶರಚ. ೭೮೫); ಮುಗಿದೀತೆ ಒಮ್ಮೆಗೆ ಬೈದು ಗದ್ದರಿಸಿದ ಮಾತ್ರಕೆ ದುಷ್ಟರುಪಟಳವು (ಇಂಚಾಪ. ೭೫–೬೪); ಮುಂದಕ್ಕೆ ತೆರಳು ಎಂದು ಗದ್ದರಿಸಿದನು (ಪಿಶಾಪ. ೨). **ಗದ್ದಿಸು** : ೧. ಸದ್ಧಾಕೃಪಾಗಿ ತನ್ನ ಪೊಲಿರದ ಲೋಭಿಯಂ ಗದ್ದಿಸುವ ತೆಱದಿಂದೆ (ಜೈಮಿಭಾ. ೧೭–೨); ಎಡ್ಡೆಸೆಯೊಣ್ಮರಂ ಗದ್ದಿಸುವಂ (ಅದ್ಭುತ. ೨೯–೨೨). **ಗರ್ದಿಸು** : ೧. ಬೆಂಗೊಟ್ಟೋಡುವ ಬೇಸಗೆಯಂ ಗರ್ದಿ [ಪಾಠಾಂ ರ್ಜಿ]ಸುವಬ್ಬಸಮಯ (ಗಿರಿಕ. ೯–೪೪); ಪುತ್ರರನ್ನು ಗರ್ದಿಸಿ ಮುದ್ದಿಸಿ ಕೇಳಿಯನ್ನಾಡುವ ಪುಣ್ಯಮಿಲ್ಲ (ಸಾನಂಗ. ೫).

[ಗದರು₂ (< ಗದಱು₂) + –ಇಸು₁ ./ ತೆಲು. ಗದ್ದರಿಂಚು]

**ಗದರ್ಕು** 'ಗದಱು₁' ನೋ.

**ಗದರು₂** 'ಗದಱು₂' ನೋ.

**ಗದರು₃** 'ಗದಡು' ನೋ.

**ಗದರುದನಿ** (ನಾ). ಬೆದರಿಸುವ ಧ್ವನಿ; ಅಬ್ಬರದ ಧ್ವನಿ: ಯಾವ ಮಾರ್ಗವನ್ನು ತೋರಿಸಬೇಕೆಂದಿರುವೆ ? ಎಂದು ಶಿವದಾಸರು ಗದರುದನಿಯಿಂದ ಕೇಳಿದರು (ಜಯಂತ. ೧೮೪).

[ಗದರು₁ (< ಗದಱು₁) + ದನಿ₂]

**ಗದಱು₁,** ಗದರು₁ (ಕ್ರಿ). ಅಬ್ಬರಿಸು; ಗರ್ಜಿಸು; ಅದ್ದಲಿಸು: "ಗದಱು – ಗರ್ಜನೇ" (ಶಮುಧಾ); ಗದಱಿದನ ತಲೆಯಂ ಪಱಿದು ಹಾಯ್ಕಿದೆನಿದಾರದು ತಪ್ಪು ಹೇಳಿರೆ (ಬಸಪು. ೨೮–೪೩); ಲಘುವೆನಲೆನ್ನ ಗದಱಿದೆ ಕಶಾದಂಡದಿಂ ಹೊಡೆದನಯ್ಯ (ಭಾವಚಿಂ. ೧–೩೮); ಪುರ್ವಿನ ಜರ್ವಿಂ ಗದಱಿ (ರಾಮಾಶ್ವ. ೨೪–೧೧); ಪೆಣ್‌ಬಲ್ಲ ಮಾತಿನೊಳ್, ಬಾಯ್‌ ಮುಚ್ಚಿರಲ್ ಚಿಲ್ವು ಪೆಣ್ಣೆಂದು ಗದಱಿ, ನೂಂಕಿ, ಪೊಱಮಟ್ಟನ್ (ಅಶ್ವತ್ಥಾ. ೧೨–೨೫೩). **ಗದರು₁** : ಅಯ್ಯೊ ಶಿಟ್ಟಿ ಯಾಕೆ ಗದರುತ್ತೀಯಾ (ಕಥಾಮಂ. II, ೩೨); ಪಾರ್ವತಮ್ಮ ಗದರಿ, ಬೈದು, ಪೀಡಿಸುತ್ತಿದ್ದಾಳೆ (ಸಂಸಕ. ೧೧೪).

**ಗದರಿಕೊಳ್ಳು** = ಅಬ್ಬರದಿಂದ ಹೇಳು, —ಗರ್ಜಿಸು; ಬಾಯಿ ಮಾಡು: ಪ್ರಜೆಗಳ ಮೇಲೆ ಅಭಿಮಾನವಿರಲಿಲ್ಲ. ಯಾರನ್ನು ಕಂಡರೂ ಗದರಿಕೊಳ್ಳುತ್ತಾ ಇದ್ದನು (ನೀತಿಚಿಂ. XIII, ೬).

[ದೇ. ‖ ತಮಿ. ಮಲ. ಕದಱು ; ತೆಲು. ಗದುಮು]

**ಗದಱು₂,** ಗದರು₂ (ನಾ). ೧. ಅಬ್ಬರ; ಗರ್ಜನೆ; ಕೂಗು: ಗ[ಪಾಠಾಂ.ಹ]ದಱನಲಿ ಹೆಂಡಿರನು ಜರೆನರೆ ಪುದಿದ ವೃದ್ಧಪಿತಾಮಹರ ನೆಳೆವದುಭುತದ ಕಳಕಳಿಕೆ ಬಲಿದುದು ನಗರದಗಲದಲಿ (ತೊರರಾ. ೫–೮–೬೯) **ಗದರು₂** : ೧. ಗದರಿನ ಮಾತು ನಡೆಯುವುದಿಲ್ಲ (ರೂಢಿ). ೨. "ಗದ್ದಲ; ಕೋಲಾಹಲ" (ಪ್ರಭಣ್ಣ). [< ಗದಱು₁]

**ಗದಾಗ್ರಜ** (ನಾ). ೧. ಗದ ಎಂಬುವನ ಅಣ್ಣ; ಬಲರಾಮ. ೨. ಕೃಷ್ಣ. [ಗದ್ಗ + ಅಗ್ರಜ]

**ಗದಾಘಾತ** (ನಾ). ಗದೆಯ ಹೊಡೆತ, —ಪೆಟ್ಟು: ಗದಾಘಾತದಿಂ ದೂರುಯುಗಂ ಮುಱಿದೆತ್ತಂನುಚ್ಚುನೂಱಾಗಿರೆಕೆಡೆದನಿಳಾಭಾಗದೊಳ್ ಧಾರ್ತರಾಷ್ಟ್ರಂ (ಪಂಪಭಾ. ೧೩–೯೬); ಭೀಮಸೇನನ ಬಲುಗದಾಘಾತದಲಿ ಕುರುಕುಲವಳಿವುದು (ಕುವ್ಯಾಭೀ. ೨–೩೬).

[ಸಂ. (ಗದಾ + ಆಘಾತ)]

**ಗದಾಧರ** (ನಾ). ಗದೆಯನ್ನು ಧರಿಸಿದವನು; ವಿಷ್ಣು: ನೆರೆದು ವಾರಾಣಸಿಯೊಳು ಗದಾಧರನ ದೇಗುಲದೊತ್ತಿನಲಿ ಸಭೆವೆರಸಿ ಕುಳ್ಳಿತು (ಬಸಪು. ೫೩–೫೮). [ಸಂ.]

**ಗದಾನ್ವೇಷಣ** (ನಾ). ೧. ಗದೆಯನ್ನು ಹುಡುಕುವುದು. ೨. ರೋಗವನ್ನು ಹುಡುಕುವುದು. ೧, ೨: ವೈದ್ಯನಂತಹಿತಗದಾನ್ವೇಷಣಂಗೆಯ್ದು ನೋಡಿಯುಂ (ಗದಾಯು. ೬–೨೫೮).

[ಸಂ. (ಗದಾ + ಅನ್ವೇಷಣ ; ಗದ + ಅನ್ವೇಷಣ)]

**ಗದಾಪ್ರಹಾರ** (ನಾ). ಗದೆಯ ಹೊಡೆತ.

[ಸಂ. (ಗದಾ + ಪ್ರಹಾರ)]

**ಗದಾಮುದ್ರೆ** (ನಾ). ೧. ವೈಷ್ಣವರು ಧರಿಸುವ ಶಂಖ, ಚಕ್ರ, ಗದಾ, ಪದ್ಮ ಮತ್ತು ನಾಮ ಎಂಬ ಐದು ಮುದ್ರೆಗಳಲ್ಲೊಂದು: ಗದೆಯಲಿ = ಗದಾಮುದ್ರೆಯಲ್ಲಿ (ಹಸಾರ. ೮–೨೮ ಪದ್ಯಾರ್ಥ). ೨. ದೇವರಿಗೆ ನೈವೇದ್ಯವನ್ನು ಅರ್ಪಿಸುವಾಗ ತೋರಿಸುವ ಇಪ್ಪತ್ತೊಂದು ಹಸ್ತವಿನ್ಯಾಸಗಳಲ್ಲಿ ಒಂದು: (*).

[ಸಂ. ಗದಾಮುದ್ರಾ (ಗದಾ + ಮುದ್ರಾ)]

**ಗದಾಯುದ್ಧ** (ನಾ). ೧. ಗದೆಗಳಿಂದ ಮಾಡುವ ಯುದ್ಧ: ದುರ್ಯೋಧನ ಭೀಮಸೇನರ ಗದಾಯುದ್ಧಂ ಮಹಾಭೈರವಂ (ಪಂಪಭಾ. ೧೩-೯೪); ಏಂ ಭುವನಮಂ ಪರ್ಯಾಕುಲಂಮಾಡಲಾರ್ತುದೋ ದುರ್ಯೋಧನ ಭೀಮಸೇನರ ಗದಾಯುದ್ಧಂ ಶ್ರೀಧಾಭ್ರಾಂತಿಯುಂ (ಗದಾಯು. ೮-೧೦). ೨. ರನ್ನಕವಿ ರಚಿಸಿದ ಒಂದು ಕಾವ್ಯದ ಹೆಸರು: ಒಳಪೊಕ್ಕು ನೋಡೆ ಭಾರತದೊಳಗಣ ಕಥೆಯೆಲ್ಲಮಾ ಗದಾಯುದ್ಧದೊಳಂತೊಳಕೊಂಡತ್ತೆನೆ ಸಿಂಹಾವಲೋಕನಕ್ರಮದಿನಱಿಪಿದಂ ಕವಿರನ್ನಂ (ಗದಾಯು. ೧-೪೫). [ಸಂ. (ಗದಾ + ಯುದ್ಧ)]

**ಗದಿ** (ಕ್ರಿ). ಹೇಳು; ನುಡಿ: ಅಱಿದು ನಿಜಕ್ಕೆ ಬೇಱೊಂದ ಬಿಡೆಂದು ಗದಿಯಲೇತಕ್ಕೆ (ಬಬ್ಬಬಾ. ೫೬-೫); ಮತ್ತಿದಿರುದ್ದೈವವುಂಟೆಂದು ಗದಿಯಬೇಡ (ಅಱಿವಮಾ. ೧೫೨-೧೮೧); ಮದಡನಿವನೆಂದೆನ್ನದಿರಿ ನಾ ಗದಿದು ನಿಮ್ಮಂ ಕೇಳಲ್ (ಸದ್ಗುರು. ೭-೧೨); ಗದಿಯಬೇಡಿನ್ನಾತ ನಾಡಿದ ತುದಿಯ ಕೊಸರನು (ತೊರರಾ. ೩-೨-೪೮). 'ಗದಿತ' ಪದಾ. [< ಗದಿಸು]

**ಗದಿಗೆ** 'ಗರ್ದುಗ್ಗೆ' ನೋ.

**ಗದಿತ** (ಗು). ಹೇಳಿದ; ನುಡಿದ: ದೊರೆಕೊಳ್ಗುಂ ಗದಿತಫಲಂ (ಜಾತಕ. ೨೨-೧೦); ಜಿನಗದಿತಮಾರ್ಗದಿಂ ಜಿನಮುನಿಗನ್ನಮನಿತ್ತು (ಪಂರಾಮಾ. ೧೫-೪೩). [ಸಂ.]

**ಗದಿಮು** 'ಗದುಬ್ಬು$_1$' ನೋ.

**ಗದಿಸು** (ಕ್ರಿ). ಹೇಳು; ನುಡಿ: ಕಬ್ಬಿಗರೇಕೆ ಕಬ್ಬಮಂ ಗದಿಪರೊ ಬೇರೆನುತ್ತೆ ನುಡಿವಳ್ಕಱಕಾರನವಂಗೆ ಪುತ್ರಸಂಪದದೊದವೇಕೆ (ರಾಜಶೇ. ೧-೩೫); ತನ್ಮಹಾತ್ಮೆಯಂ ಗದಿಸುವಾಗಮಸಾಕ್ಷಿಯಿಂದೊಂದಪೂರ್ವ ಕಥನವ ಕಥಿಪೆನೆಂತೆಂದೊಡೆ (ಕೊಟ್ಟೂಬ. ೧೬-೮೭). [ಗದ್$_2$ + -ಇಸು$_1$]

**ಗದು, ಗದುವು** (ನಾ). ಊತ; ಬಾವು: ಪೆಟ್ಟುಬಿದ್ದ ಜಾಗ ಗದು ಆಗಿದೆ (ರೂಢಿ). **ಗದುವು**: (೬). [ದೇ. ॥ ತಮಿ. ತೆಲು. ಕದು]

**ಗದುಕು** 'ಗತಕ$_1$' ನೋ.

**ಗದುಗ$_1$** 'ಗರ್ದುಗು' ನೋ.

**ಗದುಗ$_2$** (ನಾ). ಒಂದು ಜಾತಿಯ ನಾಯಿ: ತರವೇಱಬ್ ಸಾಳುವವೇಗನಂ . . . ಗದುಗನಂ ಮತ್ತುಳ್ಳ ಪೆಸರ್ನಾಯ್ಗಳಂ (ನಳಚಂ. ೬೬). [?]

**ಗದುಗದ** (ನಾ). = ಗದ್ಗದ: ಭವದ ಬೇಗೆ ಬೆಂಬತ್ತಿ ಕರಣಂ ಕಾಹೇಱಿ ಹರಣಂ ಕುಕ್ಕುಳಂಗುದಿದು ಗದುಗದವಿಂಗಿ[ಪಾಠಾಂ. ದುಪಾಗಿ] ಕಣ್ಗಳಂ ಮುಚ್ಚಿ ಸೆರೆಬಿಗಿದು (ಬಸರ. ೨-೫೭); ಕಡುಮಱುಗಿ ಗದುಗದಮೊದವಿ ಧೃತರಾಷ್ಟ್ರಾವನಿಪನು . . . ಎಂತು ಸೈರಿಸಿದ (ತಿಮ್ಮಸ್ತ್ರೀ. ೧-೧). [< ಸಂ. ಗದ್ಗದ]

**ಗದುಗದಂಗೊಳ್** (ಕ್ರಿ). ಗದ್ಗದಸ್ವರವನ್ನು ಹೊಂದು: ಭಗವದ್ಗುಣಾನುಭವದಿಂ ಗದುಗದಂಗೊಂಬ (ಚಿಕವಂ. ೬೩-೫). [ಗದುಗದ + ಕೊಳ್$_1$]

**ಗದುಗದಿಕೆ, ಗದುಗದುಕೆ** (ನಾ). = ಗದ್ಗದಿಕೆ: ಸೆರೆ ನೆಗೆದು ಕಂಠದೊಳು ಗದುಗದಿಕೆ [ಪಾಠಾಂ. ಕು] ಮೂಡೆ (ಶಿವಗೀ. ೨೮-೧೨೪); ತೊದಳಿಂದ ನುಡಿವುತಂ ಸಂದ ಗದುಗದಿಕೆಯಿಂದಾನಂದವೇಱುತಂ (ಬಸರ. ೩-೧೦೨). **ಗದುಗದುಕೆ**: "ಗದ್ಗದಃ-ಗದುಗದುಕೆ" (ಕಾಶಕ್ಯ. ೨೮೨); ಗದುಗದುಕೆಯಿಂದೊಮ್ಮೆ ಮುದದಿಂದಲೊಮ್ಮೆ . . . ಅಚ್ಚಿಸುತ್ತ (ತಿರುರ. ದೇ. ೫-೩); ಗದುಗದುಕೆ ವಾಣಿಗಳ (ಷಠಿಲ. ೨-೧೯). [ಗದುಗದ + -ಇಕೆ]

**ಗದುಗದಿತ** (ಗು). = ಗದ್ಗದಿತ: ಕುಂತೀದೇವಿ . . . ಎಂದಳತಿ ಗದುಗದಿತ ವಚನದಲಿ (ನಿಭಾಗ. ೧೦-೩೪-೯). [< ಸಂ. ಗದ್ಗದಿತ]

**ಗದುಗದಿಸು** (ಕ್ರಿ). = ಗದ್ಗದಿಸು: ನೋಟಮಂ ಮಿಗೆ ಮಱೆದು ಕಣ್ಮುಚ್ಚಿ ಗದುಗದಿಸಿ . . . ಬಸವರಾಜಂ ಮಚ್ಚಿ ಪೂಜಿಸುತ್ತಿರೆಯಿರೆ (ಬಸರ. ३-೧೧೭). [ಗದುಗದ + -ಇಸು$_3$]

**ಗದುಗದುಕೆ** 'ಗದುಗದಿಕೆ' ನೋ.

**ಗದುಗಾಟ** (ನಾ). (?): ಅವಿರಳ ಶಿವಪೂಜಾನುರಕ್ತಂ ನಂಬಿಯಣ್ಣಂ ಗದುಗಾಟದ ಸದುಗೋಷ್ಠಿಯೊಳಿರೆ [ಪಾಠಾಂ. ಜೂಜಿನ ಗೋಷ್ಠಿಯಿಂ ಗದುಗಿನ ಪೊಡ್ಡದ ಶಿವಾಚಾರದೊಳುಯಿರೆ, ಗದುಗಿನ ಶಿವಪೂಜೆಯೊಳಿರೆ] (ನಂಬಿರ. ೧೬-೧೪೭). [?]

**ಗದುಗು$_1$** 'ಗರ್ದುಗು' ನೋ.

**ಗದುಗು$_2$** 'ಗಟ್ಟುಗು' ನೋ.

**ಗದುಗೆ** 'ಗರ್ದುಗ್ಗೆ' ನೋ.

**ಗದುಬ್ಬು$_1$, ಗದಮು, ಗದಿಮು, ಗದುಮು** (ಕ್ರಿ). ೧. ಅಟ್ಟು; ಓಡಿಸು: ಹುದುಗಿದರೆ ಬಿಡೆವೆಂದು ಖಡ್ಗಮಂ ಜಳಪಿಸುತ ಗದುಬಿದರು ತರುಬಿದರು (ತುರಂಗ. ೬೩-೧೮); ಸೈಂಧವನ ಕೊಲ್ಲಗೊಡೆನಿಂದಿಗಂ ಪೋಗೆನುತ್ತಾ ಚಾರ್ಯ ಗದುಬಿದಂ ಫಲುಗುಣನನು (ತುರಂಗ. ೫೪-೩೦). **ಗದಮು**: ೨. "ಚೆನ್ನಾಗಿ ಥಳಿಸು; ಬಡಿ; ಹೊಡೆ" (ಜಾನಕೋ. ೪೫). **ಗದಿಮು**: ೧. ಹೆಮ್ಮೆ ಬಿಡಿಸಿ ಭೀತಿ ಪುಟ್ಟಿಸಿ ಗದಿಮಿದ ಬೊಮ್ಮ ಜಟ್ಟಿಗರ (ಕನಕ. ೧೧೨-೩). **ಗದುಮು**: ೧. ಮುರಿದು ಬೆಂಗೊಟ್ಟು ಪೋಡಲು ಹರಿಯ ಗದುಮುತ್ತೆ ಕೋಣನ ಸುತ್ತಂ ತಿರ್‍ರನೇ (ನವಮೋ. ೧೦-೬೦).

ಗದುಮಿಕೊಳ್ಳು = ಹೊಡೆದುಕೊಳ್ಳು; ಗುದ್ದಿಕೊಳ್ಳು: ಮುದಿಯೆತ್ತಿನಾರಂಬ ಮುದಿಸೂಳೆಯೊಡನಾಟ ಬೆದಱುವ ಪಯಣ ತಲೆ ಹೊಱೆಯು ತನ್ನತಾ ಗದುಮಿಕೊಂಡಂತೆ (ಸರ್ವಜ್ಞ. ೧೫೦೪). [?]

**ಗದುಬ್ಬು$_2$** (ನಾ). ಒಂದು ಬಗೆಯ ಕಾಳು (?): ನೀಲವಂತ ಚಿಕ್ಕನು ಹಾಕಿಸಿದ ಗದುಬು ಬೀಜವೊ ಕುಳಕೆ ಗುಳಿ ಅರು (ಎಕ. X, ಮುಳಬಾ. ೬೯-೪; ಸು. 1552). [?]

**ಗದುಮು** 'ಗದುಬ್ಬು$_1$' ನೋ.

**ಗದುವು** 'ಗದು' ನೋ.

**ಗದೆ** (ನಾ). ೧. ಒಂದು ಬಗೆಯ ಆಯುಧ: ಗದೆಯೊಳ್ ಘಟ್ಟಿಸೆ ಪುಟ್ಟಿದುಳ್ಕತತಿ ನೀಳ್ದಾಕಾಶಮಂ ತಾಪಿನಂಪುದಿದಾ ದೇವರ ಕಣ್ಗೊಳುಳ್ಕಿವಿಳಯೋಳ್ಕಾಶಂಕೆಯಂ ಮಾಡೆ (ಪಂಪಭಾ. ೧೩-೯೪); ಗದೆ ಗದೆಯಂ ಘಟ್ಟಿಸೆ ಪುಟ್ಟಿದ ಕೆಂಡದ ಕಿಡಿಯ ತಂಡವೆಂಟುಂ ದೆಸೆಯಂ ಪುದಿಯೆ (ಗದಾಯು. ೮-೧೩); ನಡುವಂ ಕೊಡಲಿಯಿಂ ಕಡಿದುಂ ತೋಳಂ ಗದೆಯಿಂ ಬಡಿದುಂ (ಧರ್ಮಾಮೃ. ೭-೧೦೫); ಗದೆಯ ತಿರುಹುತ ಹೊಕ್ಕನಿವರೊಡ್ಡಿನಲಿ ಕಲಿಭೀಮ (ಕುವ್ಯಾಕ. ೨-೧೪). ೨. "ಮುದ್ರೆ ಕೋಲು; ದೊಣ್ಣೆ" (ಕಲ್ಪದ್ರು). [ಸಂ. ಗದಾ]

**ಗದೆಗುದುಗೆ** (ನಾ). ಗದೆಯಂತಿರುವ ಗುದುಗೆ, —ದೊಣ್ಣೆ; ಲಾಠಿ: ಗದೆಗುದುಗೆಯ ಝುಲ್ಲು ಝುಲ್ಲೆಂದು ತಳವಾಱರಿಧೆ ಬಂದರೆಂದು ಕಾತರಿಸಿ ಬೆದೆಗಾತಿಯರನು ಬಿಟ್ಟಗಲುವ ವಿಟರುಗಳೆದೆಗೇಡನೇನ ಬಣ್ಣಿಸುವೆ (ಮೋಹತ. ೧೮-೨೫). [ಗದೆ + ಗುದುಗೆ (< ಗುದಿಗ್ಗೆ$_1$)]

**ಗದೆಗೊಳ್** (ಕ್ರಿ). ಗದೆಯನ್ನು ಎತ್ತಿಕೊಳ್ಳು, —ತೆಗೆದುಕೊಳ್ಳು: ಅಂತು ವಿಕ್ರಮಾರ್ಜುನಂ ಬಿಲ್ಗೊಳಲುಂ ಭೀಮಸೇನಂ ಗದೆಗೊಳಲುಮಾಂಪುದರಿದು (ಪಂಪಭಾ. ೨-೯೦ವ); ಪವನಸುತಂ ಗದೆಗೊಳೆ ಗಾಂಡಿವಿ ಬಿಲ್ಗೊಳೆ ಕೆಯ್ದುಗೊಳ್ವ ಪಾರ್ಕೊರ್ಳ್ವಧಟರ್ ಭುವನದೊಳಿಲ್ಲ (ಗದಾಯು. ೩-೧೬); ಗದೆಗೊಂಡೆಯ್ತರ್ಪ ದುರ್ಯೋಧನನ ಮುಸಕಮುಂ ಕಂಡು (ಜಗನಿ. ೭-೯೨). [ಗದೆ + ಕೊಳ್$_1$]

**ಗದೆವಿಡಿ** (ಕ್ರಿ). ಗದೆಯನ್ನು ಹಿಡಿ, —ಧರಿಸು : ಹೊದೆಗೋಲು ಶೀರಲೆಚ್ಚಾಡುವೆನೆಂದರೆ ಮೆದೆಗೆಡಹುವೆ ನಿನ್ನ ಬಲವ ಗದೆವಿಡಿದಾಯತನಾಗೆಂದು ಹಲಧರ ಸದೆಬಡಿದನು ಖಲೋತ್ತಮನ (ಮೋಹತ. ೪೦-೫೮). [ಗದೆ + ಪಿಡಿ$_1$]

**ಗದ್ಗದ** (ನಾ). ನಿಂತು ನಿಂತು ಬರುವ ಅಸ್ಪಷ್ಟವಾದ ಮಾತು; ಧ್ವನಿ ನಡುಕ; ಬಿಗಿದ ಕಂಠ: ತೃಷ್ಣಾತುರ ಗದ್ಗದಕಾಂತೆಯನಾತಾಪಸನಾಗಳವಳನಿದಿರೊಳೆ ಕಂಡಂ (ಸುಕುಮಾ. ೪-೫೬); ಇಳಿವಶ್ರುಜಲಕೆ ಪುರುಡಿಸುತೆ ನಡೆನೋಡುತುಂ ಗದ್ಗದವನೊಪ್ಪಿರಿಸಿ ಪೊಗಳೆ ಲಟಲಟಿಸುವಂ (ಬಸರ. ೩-೧೪೯). [ಸಂ.]

**ಗದ್ಗದಗೈ**(ಕ್ರಿ). ಗದ್ಗದ ಸ್ವರವನ್ನು ಹೊರಡಿಸು,—ಮಾಡು : ಸುರಿವೆ ಕಣ್ಣೀರನು ಬಿಡುವೆ ನಿಟ್ಟುಸಿರನು ಮತ್ತಿದೊ ಗದ್ಗದಗೈವೆ (ಇಂಚಾಪ. ೧೬೨-೫೦). [ಗದ್ಗದ + ಗೈ (< ಕೆಯ್$_1$)]

**ಗದ್ಗದಸ್ವನ** (ನಾ). ೧. ಅಸ್ಪಷ್ಟ ಧ್ವನಿ; ನಡುಗುವ ಧ್ವನಿ. ೨. ಅಸ್ಪಷ್ಟ ಧ್ವನಿಯುಳ್ಳವನು; ಗದ್ಗದ ಕಂಠನಾದವನು : ಗಿಳಿಯ ಬೆನ್ನನೆ ಮೆಲ್ಲನೆ ಗದ್ಗದಸ್ವನಂ ಕಂಚುಕಿ ಬಂದು ಕಂಡನನುರಾಗದಿನಾ ಮನುಜೇಂದ್ರ ಚಂದ್ರನಂ (ಕಾದಂಪೂ. ೮೩). [ಗದ್ಗದ+ಸ್ವನ]

**ಗದ್ಗದಿಕೆ** (ನಾ). = ಗದ್ಗದಸ್ವನ ೧ : ಕಾಂತೆಯುನುಪಸಂಹೃತಮನ್ಯುವೇಗೆಯುಂ ಗದ್ಗದಿಕಾವಗೃಹ್ಯಮಾಣಕಂಠೆಯುಮಾಗಿ ಕುಮಾರನನಿಂತೆಂದಳ್ (ಕಾದಂಉ. ೫೪೪); ಹೆಸರುಗೊಳಲೊಡನಾಗ ಗದ್ಗದಿಕೆಯಾದವೊಲು ತೊದಲಿಸಿ (ಬಸಪು. ೩೦-೪೦). [ಸಂ. ಗದ್ಗದಿಕಾ]

**ಗದ್ಗದಿಕೆಗೊಳ್**(ಕ್ರಿ). (ಮಾತು) ಅಸ್ಪಷ್ಟವಾಗು: ಸೋರ್ವ ಕಣ್ಬನಿಯ ತೆರಳ್ಕೆ ಗದ್ಗದಿಕೆಗೊಳ್ವ ಸರಂ ಮಿಗೆ ಪೋದರಾತ್ಮನಾಥನ ಬಟ್ಟೆಯಂ . . . ಯಶಸ್ವತಿಯುಂ ಸುನಂದೆಯುಂ (ಆದಿಪು. ೯-೭೩). [ಗದ್ಗದಿಕೆ + ಕೊಳ್$_1$]

**ಗದ್ಗದಿಸು** (ಕ್ರಿ). = ಗದ್ಗದಿಕೆಗೊಳ್ : ಗದ್ಗದಿಸುತೆ ಪುಳಕ ನಿಕಾಯಮನಾನುತಶ್ರುವಂ ಕಳೆಯುತ್ತುಂ (ಗಿರಿಕ. ೯-೧೧೦); ಗದ್ಗದಿಸುತಶ್ರುಜಲ ತುಳ್ಕೆ (ಸೌಂದಪು. ೧೭-೭೬); ಮೆಯ್ ನಡುಗಲಾ ಗದ್ಗದಿಸಿದಳ್ ಮಹಿಳೆ ಕೈಮುಗಿದು (ಶ್ರೀರಾಮಾ. ೭೧-೪೭೩). [ಗದ್ಗದ + -ಇಸು$_3$]

**ಗದ್ಗದುಕೆ** (ನಾ). = ಗದ್ಗದಿಕೆ : ಚೆಂದದಿಂ ಪುಳಕಾಂಕುರಂಗಳುಣ್ಮುತೆ ನುಡಿಯೊಳಂದು ಗದ್ಗದುಕೆಗಳೂಡುತ್ತೆ (ಪಾಸೋಪು. ೧೫-೬). [< ಗದ್ಗದಿಕೆ]

**ಗದ್ದ** 'ಗಡ್ಡ$_1$' ನೋ.

**ಗದ್ದಕಟ್ಟು** (ನಾ). ಒಂದು ಬಗೆಯ ಕಂಠರೋಗ; ಮಂಗನ ಬಾವು (ಉಕ); ಕೆಪ್ಪಟರಾಯ (ಕರಾ); "ಕರ್ಣೋಪಾಂತ ಗ್ರಂಥಿಗಳೂ ಲಾಲಾಗ್ರಂಥಿಗಳೂ ಊದಿಕೊಳ್ಳುವ ಒಂದು ಅಂಟು ಜಾಡ್ಯ" (Mumps ಇಂಕನಿ) : ಗದ್ದಕಟ್ಟಿಗೆ ಗಂಧ ಬಳಿಯಬೇಕು (ರೂಢಿ).

**ಗದ್ದಕಟ್ಟಿನಸಮಯ** = (?) : ಸಮಯಂ ಬಿಟ್ಟ ಸ್ವಾತಂತ್ರಿಗಳ ಸಮಯಮಂತೆ ಮಾಯಕಟ್ಟಿನ ಸಮಯ ಗದ್ದಕಟ್ಟಿನ ಸಮಯ ಗೂಳಿಕೊಂಡಾ ಕಾಂತಯ್ಯಗಳ ಸಮಯ (ಮಹಾವಿ. ೧೮-೩೩). [ಗದ್ದ (< ಗಡ್ಡ$_1$) + ಕಟ್ಟು$_2$]

**ಗದ್ದಬಾವು** (ನಾ). = ಗದ್ದಕಟ್ಟು : ಆ ಮಗುವಿಗೆ ಗದ್ದಬಾವು ಆಗಿದೆ (ರೂಢಿ). [ಗದ್ದ (< ಗಡ್ಡ$_1$) + ಬಾವು]

**ಗದ್ದರಣೆ** (ನಾ). = ಗದರಿಕೆ : ಒಡೆಯನ ಗದ್ದರಣೆಯಿಲ್ಲ, ಆಳಿನ ದೈನ್ಯದ ಸ್ವಾಮಿಆರಾಧನೆಯಿಲ್ಲ (ಪ್ರೇಮಾಶ್ರ. ೨೪೨); ಮುಗಲಿಲ್ಲ ಮಾಡಿಲ್ಲ ಮಿಂಚ ಗದ್ದರಣೆಲ್ಲ ಇದು ಯಾತರ ಬೆಳಕ ಕರಣೀಕ (ಮಲ್ಲಿಗೆ. ೪೬). [< ಗದಱು$_1$ + - ಅಣೆ]

**ಗದ್ದರಿಕೆ** 'ಗದರಿಕೆ' ನೋ.

**ಗದ್ದರಿಸು** 'ಗದರಿಸು' ನೋ.

**ಗದ್ದಲ** (ನಾ). ೧. ಕೋಲಾಹಲ; ಗೊಂದಲ; ಗಲಾಟೆ : ಕಡುಗದ್ದಲವು ಘನವಾಯ್ತಲಾ ನೀನಿದ್ದ ಹವಣಿನಲಿರಲಱಿಯೆಲಾಯೆನುತ ಗರ್ಜಿಸಿದ (ತೊರರಾ. ೨-೩-೪೨); ಬೇಡಿವನ ಗದ್ದಲಗಳಿನ್ನೆಂದ (ಪ್ರಹ್ಲಾಚ. ೭-೯೫); ನಿಶ್ಶಬ್ದವಾಗಿದ್ದ ಮನೆ ಸಡಗರ ಗದ್ದಲಗಳ ಸಂತೆಯಾಗಿ ಪರಿಣಮಿಸಿತು (ಹಾಹುತ್ತ. ೮೯); ಗದ್ದಲ ಗಲಾಟೆಗಳು ಓದುಗರ ಧ್ಯಾನವನ್ನು ಕದಡಲಾರವು (ಗ್ರಂಥಾಲ. ೬). ೨. ಜನಸಂದಣಿ; ದಟ್ಟಣೆ : ಜಾತ್ರೆಯಲ್ಲಿ ಬಹಳ ಗದ್ದಲವಿತ್ತು (ರೂಢಿ). [ದೇ. ‖ ತುಳು. ಗದ್ದಲ]

**ಗದ್ದಲಗೈ** (ಕ್ರಿ). ಗದ್ದಲಮಾಡು; ಗಲಾಟೆಮಾಡು : ಸೇರಿದರೆಂದರೆ ಮುದುಕಿಯರಿಬ್ಬರು . . . ಸಂತೆಯ ಮಾಳದ ಗದ್ದಲಗೈವರು (ಇಂಚಾಪ. ೧೯೭-೨೧). [ಗದ್ದಲ + ಗೈ (< ಕೆಯ್$_1$)]

**ಗದ್ದಲಿಸು** (ಕ್ರಿ). ಗದರಿಸು; ಗರ್ಜಿಸು : ಅವನಿಸುತೆ ಸುತ್ತಿರ್ದ ನೂತನ ನಾರ ಸೀರೆಯ ಸೆಳೆದು ಸೀಳ್ದಿಕ್ಕಿ ಗ[ಪಾಠಾಂ. ಅ]ದ್ದಲಿಸಿದನು ಕೈಕೆಯನು (ತೊರರಾ. ೨-೩-೪೨); ತಪ್ಪಿನಲಿ ಕದ್ದ ಕಳ್ಳಿಯನು ಗದ್ದಲಿಸಿದಂತೆ (ಶ್ರೀಕೃಪಾ. ೪೭); ಎದ್ದಿದ್ದ ಮೋಡಿಲ್ಲ ಎರಗೋರೆ ಸಿಡಿಲಿಲ್ಲ ಗದ್ದಲಿಸಿ ಹುಯ್ಯೊ ಮಳೆಯುಂಟು (ನಾಪದ. ೭೫). [< ಗದರಿಸು]

**ಗದ್ದಿ** (ನಾ). (?) : ಸುಖಾಸನಬ್ಬಲ ಗದ್ದಿ ಅಂಕದಣ್ಣ ಖಣ್ಡನೆ ಅಷ್ಟಭೋಗ ತೇಜಸ್ಸಾಮ್ಯ (ಇಅ. VIII, ೯೫-೨; 444). [?]

**ಗದ್ದಿಗೆ** 'ಗದ್ದುಗೆ$_2$' ನೋ.

**ಗದ್ದಿಗೆಕಲ್ಲು** 'ಗದ್ದುಗೆಕಲ್ಲು' ನೋ.

**ಗದ್ದಿಗೆಧಾವಳಿ** (ನಾ). [ವೀಶೈ] ಶಿವಪೂಜೆಗಾಗಿ ಕುಳಿತುಕೊಳ್ಳಲು ಹಾಸುವ ಚಿಕ್ಕ ಬಿಳಿ ಕಂಬಳಿ. [ಗದ್ದಿಗೆ (< ಗದ್ದುಗೆ$_2$) + ಧಾವಳಿ (< ಧಾಬಳಿ)]

**ಗದ್ದಿಗೆಯಿಕ್ಕು** 'ಗದ್ದುಗೆಯಿಕ್ಕು' ನೋ.

**ಗದ್ದಿಸು** 'ಗದರಿಸು' ನೋ.

**ಗದ್ದುಗಿಕ್ಕು** 'ಗದ್ದುಗೆಯಿಕ್ಕು' ನೋ.

**ಗದ್ದುಗೆ$_1$** 'ಗದ್ದುಗೆ$_1$' ನೋ.

**ಗದ್ದುಗೆ$_2$** 'ಗದ್ದುಗೆ$_2$' ನೋ.

**ಗದ್ದುಗೆಕಲ್ಲು, ಗದ್ದಿಗೆಕಲ್ಲು** (ನಾ). ಕಂಬಕ್ಕೆ ಪೀಠವಾಗಿರುವ ಕಲ್ಲು; ಕಂಬದ ಅಡಿಗಲ್ಲು : ಗದ್ದುಗೆಕಲ್ಲುಗಳ ಮೇಲೂ ಕೂಡ ಸುಂದರವಾದ ಕೆತ್ತನೆ ಇದೆ (ರೂಢಿ). **ಗದ್ದಿಗೆಕಲ್ಲು** : ನೆಲದ ಮೇಲೆ ಗದ್ದಿಗೆಕಲ್ಲುಗಳನ್ನು ಹಾಕಿ ಅವುಗಳ ಮೇಲೆ ಕಂಬಗಳನ್ನು ನಿಲ್ಲಿಸಿ (ಮುಂಬಯಿ. ೪-೧೧೭). [ಗದ್ದುಗೆ$_2$ (< ಗದ್ದುಗೆ$_2$) + ಕಲ್ಲು (< ಕಲ್$_3$)]

**ಗದ್ದುಗೆಗುಡು** (ಕ್ರಿ). = ಗದ್ದುಗೆಯಿಕ್ಕು : ಅಲ್ಲಿ ನಿಂದಿರೆ ಕಂಡು ಕರೆದು ಗದ್ದುಗೆಗೊಟ್ಟು (ಕೇಶಿರ. ಹ. ೨೯೯-೩೦). [ಗದ್ದುಗೆ$_2$ (< ಗದ್ದುಗೆ$_2$) + ಕುಡು$_1$ (< ಕೊಡು$_1$)]

**ಗದ್ದುಗೆಗೈ** (ಕ್ರಿ). ಪೀಠವನ್ನು ಸಿದ್ಧಪಡಿಸು, —ಸ್ಥಾಪಿಸು : ಚಾರು ನವರತ್ನ ಕೀಲಿಸಿದ ವಸುಮಯದ ಗದ್ದುಗೆಗೈದಲಂಕರಿಸಿರೇ (ನವಮೋ. ೧೮-೪೧). [ಗದ್ದುಗೆ$_2$ (< ಗದ್ದುಗೆ$_2$) + ಗೈ (< ಕೆಯ್$_1$)]

**ಗದ್ದುಗೆಗೊಳ್** (ಕ್ರಿ). ಗದ್ದುಗೆಯಲ್ಲಿ ಕುಳಿತುಕೊಳ್ಳು, —ಮಂಡಿಸು : ಪರಮಮುನೀಂದ್ರ ಗದ್ದುಗೆಗೊಳಲಸುರೇಶ್ವರ ತನ್ನ ಪೀಠದೆ ಕುಳಿತು (ಮೋಹತ. ೧೧-೬). [ಗದ್ದುಗೆ$_2$ (< ಗದ್ದುಗೆ$_2$) + ಕೊಳ್$_1$]

**ಗದ್ದುಗೆಯಿಕ್ಕು**, ಗದ್ದಿಗೆಯಿಕ್ಕು, ಗದ್ದುಗಿಕ್ಕು (ಕ್ರಿ). ಪೀಠವನ್ನು ಇಡು; ಮಣೆಯನ್ನು ಹಾಕು : ನಡುವೆ ಗದ್ದುಗೆಯಿಕ್ಕಿ ಬಿಗಿಬಿಗಿದು ಸುತ್ತುವೊತ್ತದ ಮಾಳ್ಕೆಯಿಂ (ಸಿದ್ಧರಾ. ೯-೧೨); ದಿವ್ಯಾಂಬರದ ಪೆಂಪೆಸೆವ ಗದ್ದುಗೆಯಿಕ್ಕಿ (ಸಾಳ್ವಭಾ. ೨೧-೨೫). **ಗದ್ದಿಗೆಯಿಕ್ಕು** : ಲಲಿತಾಂಗಿ ಗೆಸೆವ ಗದ್ದಿಗೆಯಿಕ್ಕಿ (ವರ್ಧಪು. ೧೩-೫೨). **ಗದ್ದುಗಿಕ್ಕು** : ಚಾಮರವ ನಿಕ್ಕುವನ ಪೆಸರ್ಶ್ಯವ ಹಡಪಿ ವೈಷ್ಣವ ಗದ್ದುಗಿಕ್ಕುವನ ಪೆಸರಾರುಹತ (ಸಿಂಗಿರಾ. ೨೬-೬). [ಗದ್ದುಗೆ$_2$ (< ಗದ್ದುಗೆ$_2$) + ಇಕ್ಕು]

**ಗದ್ದುಗೆಯಿೞ** (ಕ್ರಿ). = ಗದ್ದುಗೆಯಿಕ್ಕು: ಆಗಳಾ ಬಸವನೆಲ್ಲರ್ಗೆ ಗದ್ದುಗೆಯಿತ್ತು ರಾಗದಿಂ ಕೈಮುಗಿದು ಕಿಂಕರತೆಯಂ ಹೊತ್ತು (ಬಸರ ೯-೩೫). [ಗದ್ದುಗೆ$_2$ (< ಗದ್ದುಗೆ$_2$) + ಈ$_2$]

**ಗದ್ದುಗೆಯೇಱು** (ಕ್ರಿ). = ಗದ್ದುಗೆಗೊಳ್ : ಗದ್ದುಗೆಯೇಱಿ ದುಷ್ಕಥೆ ಗೇಳಿ ಹಲಬರು ಬಿದ್ದುಹೋಗುವರಧೋಗತಿಗೆ (ಭರಚ. ೨-೫೪).
[ಗದ್ದುಗೆ$_2$ (< ಗದ್ದುಗೆ$_2$) + ಏಱು$_1$ (< ಏಱ್$_1$)]

**ಗದ್ದುಗೆವಿಡಿ** (ಕ್ರಿ). = ಗದ್ದುಗೆಗೊಳ್ : ಬಾಗಿಲು ಹಿಡಿಯದೆ ಪೊಕ್ಕು ಗದ್ದುಗೆವಿಡಿದಲ್ಕೆಲದಿ (ಮೋಹತ. ೩-೪೮).
[ಗದ್ದುಗೆ$_2$ (< ಗದ್ದುಗೆ$_2$) + ಪಿಡಿ$_1$)]

**ಗದ್ದುಗೆವೊಯ್**, ಗದ್ದುಗೆಹೊಯ್ (ಕ್ರಿ). (ಕೋಪದಿಂದ) ಕುಳಿತ ಪೀಠವನ್ನು ಹೊಡೆ, —ಬಡಿ, —ಕುಟ್ಟು: ತಾರಕಾಸುರಂ ಕಂಡು ಕೋಪಮನೆಡೆಗೊಂಡು ಅಸ್ಫೋಟಿಸಿ ಬಾಹಾಸ್ಫಾಲನಂಗೆಯ್ದು ಗಜಱು ಗರ್ಜಿಸಿ ಗದ್ದುಗೆವೊಯ್ದುದರ್ (ಗಿರಿಕ. ೬-೬೭ ವ); ಗದ್ದುಗೆವೊಯ್ದು ಕಣ್ಣ ಕೆಂಪು ಕಿಸುಸಂಜೆಯಂ ಪಸರಿಸೆ (ಕಬ್ಬಿಕಾ. ೧೯೩); ಗದ್ದುಗೆವೊಯ್ದಾ ವೀರನೆದ್ದು ಕೋಪದಲಿ (ಕುರಾಸಾಂ. ೩೨-೧೦೨). **ಗದ್ದುಗೆಹೊಯ್** : ಎನಲೊಡಜಱ ಕೆಕ್ಕಳಂಗೆದಱ ಗದ್ದುಗೆಹೊ[ಪಾಠಾಂ. ವೊ]ಯ್ದು . . . ನಿಸ್ಸಾಣಮಂ ಪೊಯ್ಸಿ (ಸಮ್ಯಕೌ. ೨-೮).
[ಗದ್ದುಗೆ$_2$ (< ಗದ್ದುಗೆ$_2$) + ಪೊಯ್$_1$]

**ಗದ್ದುಗೆಹೊಯ್** 'ಗದ್ದುಗೆವೊಯ್' ನೋ.

**ಗದ್ದೆ** 'ಗಟ್ಟಿ' ನೋ.

**ಗದ್ದೆಒದವಿನಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೈಔಗಿ. ೬೦-೧೧೯೮).
[ಗದ್ದೆ (< ಗಟ್ಟಿ) + ಒದವಿನ? + ಹುಲ್ಲು (< ಪುಲ್)]

**ಗದ್ದೆಕಟ್ಟು** (ನಾ). "ಬತ್ತ ಬೆಳೆಯಲು ಯೋಗ್ಯವಾದ ಭೂಮಿ" (ಅನಂನಾ) : ಪುಂಡಕೀತನ ಕೆಱೆಯ ಕೆಳಗೆ ಗದ್ದೆಕಟ್ಟು (ಎಇ. XIV, ೨೬೩-೪೩ ; 1173). 'ಅಚ್ಚುಕಟ್ಟು$_2$' ಪರಾ.
[ಗದ್ದೆ (< ಗಟ್ಟಿ) + ಕಟ್ಟು$_2$]

**ಗದ್ದೆಕರ** (ನಾ). ಗದ್ದೆಗಾಗಿ ಕೊಡುವ ಕಂದಾಯ, —ತೆರಿಗೆ: ಗದ್ದೆಕರ ಬೆದ್ದಲುಗಂದಾಯ ಕಾಡಾರಂಬ ಮನೆದೆರಿಗೆ (ಬೆಟ್ಟಅ. ೧೫೫-೫).
[ಗದ್ದೆ (< ಗಟ್ಟಿ) + ಕರ$_4$]

**ಗದ್ದೆಕಾನೆ** (ನಾ). ಗದ್ದೆಗಳ ಗುಂಪು, —ಸಮೂಹ: "ಕೈದಾರಕಂ . . . ಗದ್ದೆಗಳ ಗುಂಪಿಗೆ ಹೆಸರು; ಗದ್ದೆತಾಕು, ಗದ್ದೆಕಾನೆ" (ಸಿದ್ಧಾಂತಿ. ೨೩೬). [ಗದ್ದೆ (< ಗಟ್ಟಿ) + ಕಾನೆ (< ಖಾನೆ)]

**ಗದ್ದೆಗಳೆ** 'ಗಳ್ದೆಗಳೆ' ನೋ.

**ಗದ್ದೆತಾಕು** (ನಾ). ಗದ್ದೆಯ ಪ್ರದೇಶ: "ಕೈದಾರಕಂ . . . ಗದ್ದೆಗಳ ಗುಂಪಿಗೆ ಹೆಸರು; ಗದ್ದೆತಾಕು, ಗದ್ದೆಕಾನೆ" (ಸಿದ್ಧಾಂತಿ. ೨೩೬).
[ಗದ್ದೆ (< ಗಟ್ಟಿ) + ತಾಕು$_2$ < ತಾಂಕು$_2$]

**ಗದ್ದೆತೆವರು** (ನಾ). ಗದ್ದೆಯನ್ನು ಮಡಿಗಳಾಗಿ ಮಾಡುವ ದಿಂಡು, —ಬದು : (ಕ). [ಗದ್ದೆ (< ಗಟ್ಟಿ) + ತೆವರು$_3$ (< ತೆಮರ್$_2$)]

**ಗದ್ದೆಬದು** (ನಾ). = ಗದ್ದೆತೆವರು : ಗದ್ದೆಬದು ಇರುವಲ್ಲಿ ಹುಷಾರಾಗಿ ನಡೆಯಬೇಕು (ರೂಢಿ). [ಗದ್ದೆ (< ಗಟ್ಟಿ) + ಬದು]

**ಗದ್ದೆಬಯಲು** (ನಾ). ಗದ್ದೆಗಳ ಬಯಲು, —ಪ್ರದೇಶ: ಹಚ್ಚ ಹಸುರಾದ ಗದ್ದೆಬಯಲು (ರೂಢಿ).
[ಗದ್ದೆ (< ಗಟ್ಟಿ) + ಬಯಲು (< ಬಯಲ್)]

**ಗದ್ದೆಬೆದ್ದಲು** (ನಾ). ಗದ್ದೆ ಮತ್ತು ಹೊಲ; ನೀರಾರಂಬ ಮತ್ತು ಕಾಡಾರಂಬ; ತರಿ ಮತ್ತು ಖುಷ್ಕಿ: ಗದ್ದೆಬೆದ್ದಲು ಹಟ್ಟಹಕ್ಕಲು ತೋಟತುಡಿಕೆ (ಮೈಆರಿ. ೧೯೩೪, ೫೩-೧೮ ; 1405).
[ಗದ್ದೆ (< ಗಟ್ಟಿ) + ಬೆದ್ದಲು]

**ಗದ್ದೆಮಡಿ** (ನಾ). ೧. ಗದ್ದೆಗಳಲ್ಲಿ ಚಚ್ಚೌಕವಾಗಿ ಮಾಡಿರುವ ಭಾಗ: ಬತ್ತ ಬೆಳೆಯುವ ಭೂಮಿ (ಕಿಸಂಗ್ಲಾ. ೧೦). ೨. ಚೌಕಳಿ: ಉಡಲು ಯಾವಾಗಲೂ ಜರತಾರಿಯ ಧೋತ್ರ ಸುತ್ತುವುದು ಗದ್ದೆಮಡಿಯ ರುಮಾಲು (ಕಥವಿ. II, ೩೫೪). [ಗದ್ದೆ (< ಗಟ್ಟಿ) + ಮಡಿ$_2$]

**ಗದ್ದೆಮಡಿರುಮಾಲು** (ನಾ). ಚಚ್ಚೌಕವಾದ ಮನೆಗಳಿರುವ ಜರಿಯ ಪೇಟ; "ಚೌಕಳಿಯ ಒಂದು ಬಗೆಯ ರೇಶ್ಮೆಯ ಮುಂಡಾಸು" (ಅನಂನಾ). [ಗದ್ದೆಮಡಿ + ರುಮಾಲು]

**ಗದ್ದೆಮರ** (ನಾ). ಗದ್ದೆಯನ್ನು ಸಮಮಾಡಲು ಉಪಯೋಗಿಸುವ ಒಂದು ಸಲಕರಣೆ, —ಮಣೆ: "ಗದ್ದೆಮರ—ಉತ್ತ ಗದ್ದೆಯನ್ನು ಮಟ್ಟ ಮಾಡುವ ಸಲಕರಣೆ" (ಅನಂನಾ.). [ಗದ್ದೆ (< ಗಟ್ಟಿ) + ಮರ$_1$]

**ಗದ್ದೆಯುಳು** (ಕ್ರಿ). ಗದ್ದೆಯನ್ನು ಉಳು, —ಗೇಯು : ಗದ್ದೆಯುಳುತಿಹ ಕೋಣಗಳ (ಪಶುಭಾ. ೬-೬೫).
[ಗದ್ದೆ (< ಗಟ್ಟಿ) + ಉಳು (< ಉೞ್)]

**ಗದ್ದೆವರಗ** (ನಾ). ಒಂದು ಬಗೆಯ ಗಿಡ : ಒಂದೆಲಗ, ಇಲಿಕಿವಿಗಿಡ, ಸರಸ್ವತೀಸೊಪ್ಪು, ಬ್ರಾಹ್ಮೀಸೊಪ್ಪು, ಗದ್ದೆವರಗ (ಮೈಔಗಿ. ೨೦-೩೫೬).
[ಗದ್ದೆ (< ಗಟ್ಟಿ) + ಬರಗ (< ಬಱಗು ?)]

**ಗದ್ಧಣ** 'ಗದ್ಯಾಣ' ನೋ.

**ಗದ್ಯ** (ಗು). ೧. ಹೇಳತಕ್ಕ; ಹೇಳಬಹುದಾದ; ನುಡಿಯಬೇಕಾದ. (ನಾ). ೨. ಆಡುವ ಮಾತು; ವಚನ. ೩. ಛಂದೋಬದ್ಧವಲ್ಲದ ವಾಕ್ಯ; ಪದ್ಯವಲ್ಲದುದು: ಕವಿ ಪ್ರಧಾನ ಪ್ರಯೋಗ ಪದಪದ್ಧತಿಯೊಳ್ ದ್ವಿವಿಧಮೆನಿಕುಮದತಿಶಯ ಧವಳೋಕ್ತ ಕ್ರಮದೆ ಗದ್ಯಪದ್ಯಾಖ್ಯಾತಂ (ಕವಿರಾ. ೧-೨೪); ಪದ್ಯಂ ವಧ್ಯಂ; ಗದ್ಯಂ ಹೃದ್ಯಂ, ಹೃದ್ಯಮಪ್ಪ ಗದ್ಯದೊಳೆ ಪೇಳ್ವುದು (ರಾಮಾಶ್ವ. ೫-೧೪); ಕಾವ್ಯವನ್ನು ಗದ್ಯ ಪದ್ಯ ಮತ್ತು ಮಿಶ್ರವೆಂದೂ ಭಾಗಿಸುತ್ತಾರೆ (ಕೈಪಿಡಿ. ೧೬೮). 'ಪದ್ಯ' ಪರಾ.
[ಸಂ.]

**ಗದ್ಯಕಾವ್ಯ** (ನಾ). [ಕಾವ್ಯಮಿೞ] ಕಾವ್ಯಗಳಲ್ಲಿ ಒಂದು ಬಗೆ; ಗದ್ಯದಲ್ಲಿ ರಚಿಸಿದ ಕಾವ್ಯ : ಗದ್ಯಕಾವ್ಯದ ಸ್ವರೂಪ, ಸ್ವಭಾವ, ಉದ್ದೇಶಗಳ ವಿಷಯದಲ್ಲಿ ಪ್ರಾಚೀನರ ಅಭಿಪ್ರಾಯವೇ ಬೇರೆಯಿದ್ದಂತೆ ತೋರುತ್ತದೆ (ಕೈಪಿಡಿ. ೧೬೮). 'ಪದ್ಯಕಾವ್ಯ' ಪರಾ.
[ಗದ್ಯ + ಕಾವ್ಯ]

**ಗದ್ಯಜಾತಿ** (ನಾ). ಗದ್ಯದ ರೀತಿಗೆ ಸೇರಿದುದು : ದಂಡಿಗೆ ಪರಿಚಿತವಾಗಿದ್ದ ಗದ್ಯಜಾತಿ ಗ್ರಂಥಗಳು ಈಗ ಸಂಸ್ಕೃತದಲ್ಲಿಯೂ ಇಲ್ಲ (ಕೈಪಿಡಿ. ೧೮೦). 'ಪದ್ಯಜಾತಿ' ಪರಾ. [ಗದ್ಯ + ಜಾತಿ]

**ಗದ್ಯತನ** (ನಾ). ೧. ಗದ್ಯದಂತೆ ಇರುವಿಕೆ. ೨. ಕಾವ್ಯಗುಣವಿಲ್ಲದಿರುವಿಕೆ; ನೀರಸತೆ: ಕೆಲವು ಸಲ ಪದ್ಯಗಳಲ್ಲಿ ಗದ್ಯತನ ತೋರಿದಂತಾಗಬಹುದು (ಸಾಸಮಾ ೧೫೬).
[ಗದ್ಯ + -ತನ]

**ಗದ್ಯಾಣ, ಗದ್ಧಣ, ಗದ್ಯಾನ** (ನಾ). ೧. ಒಂದು ಚಿನ್ನದ ನಾಣ್ಯ; ನಿಷ್ಕ. ℙ ಮೂವತ್ತೆರಡು ಅಥವಾ ಅರುವತ್ತುನಾಲ್ಕು ಗುಂಜಿ ತೂಕದ ನಾಣ್ಯ; ಹತ್ತು ಹಣ ಬೆಲೆಯ ನಾಣ್ಯ: "ಗದ್ಯಾಣ = ಹತ್ತು ಪಣ ಅಥವಾ ಹಣ" (ಕಶಾಅ. ೩೯೦); ವರ್ಷಕ್ಕೆ ಪತ್ತು ಗದ್ಯಾಣಂ ತೆಱೆ (ಎಕ. IV, ಹೆಗ್ಗಡ. ೪-೬ ; 750); ಸಾಯಿರ ಗದ್ಯಾಣದ ಪೊನ್ನೇ ಸಾಲ್ಗುಮಗ್ಗಳಂ ಬೇಡ (ಪಂಪಭಾ. ೬-೭೧ ವ); ಏೞು ಗದ್ಯಾಣಂ ಪೊನ್ನುಂ ಬತ್ತಂ (ಎಕ. IX, ಹೊಸಕೋ. ೧೦-೧೭ ; 1023); ಸಾಸಿರ ಗದ್ಯಾಣಕಲ್ಲದೆ ಕಥೆಯಂ ಪೇೞ್ವೆಲ್ಲ (ಪಂಚತಂ. ೧೫೨-೬); ಅವನ ಕೋೞಿ ಗೆಲಲುಮದಱೊಡನೆ ಸಾವಿರ ಗದ್ಯಾಣವನು ಈವೆನೆನಲು (ಶಾಂತೀಶ. ೫-೧೦); ನಾಲ್ಕು ಗದ್ಯಾಣ ಮುನ್ನೂರು ಖಂಡುಗ (ಪಂಜಿನೆ. ೧೬); ಹೊಸಮಾರ್ಗಕ್ಕೆ ಹೆಚ್ಚು ಗದ್ಯಾಣ ಖರ್ಚಾಯಿತು (ಸವಶಿ. ೬೩). ೨. ಒಂದು ತೂಕದ ಪ್ರಮಾಣ; ಹತ್ತು ಹಣದ ತೂಕ: ಇಷ್ಟನ್ನು ಬಳ್ಳನೀರಿನಲ್ಲಿ ಹಾಕಿ . . . ಗುಗ್ಗುಳ ಗದ್ಯಾಣ ೧ ತೂಕವಂ ಕೂಡಿಕೊಡಲು ಸಂಧಿಗಸನ್ನಿಗುಣಮಕ್ಕುಂ (ಸಕವೈ. ೧೫೨). **ಗದ್ಧಣ:** ೧. ನಾಗಯ್ಯನ ಮಗನ ಕನ್ದೆಱೆಯನ್ ಕೊಟ್ಟುದು ಸೊಡರು ಪನ್ನೆರಡು ಗದ್ಧಣ ಆಚನ್ದ್ರತಾರಕಂ (ಎಕ. VII, ಶಿಕಾರಿ. ೪೫-೬೫; 890). **ಗದ್ಯಾನ:** ೧. ಪರಿಹಾರ ಹೆಗ್ಗಡೆ ಗದ್ಯಾನ ಗನಹೂರಲು (ಎಕ. IX, ಕೊಡಗು. ೩೩-೯; 1115 ?); ಈ ಅಗ್ರಕ್ಕೆ ಕೊಟ್ಟ ಗದ್ಯಾನಂ ಇಪ್ಪತ್ತು (ಕಇ. III, ೧-೮ ; ಸು ೧೨ನೆಯ ಶತ). [< ಸಂ. ಗದ್ಯಾಣಕ, ಗದ್ಯಾನಕ]

**ಗದ್ಯಾನ** 'ಗದ್ಯಾಣ' ನೋ.

**ಗನ, ಗನ್ನ$_3$** (ನಾ). ೧. ಗಟ್ಟಿಯಾದುದು; ಕಲ್ಲು: ೨. ಭಾರವಾದುದು; ಗುರುತರವಾದುದು: "ಗನ-ಘನ = ಬಲ, ಭಾರ" (ತದ್ಭಕೋ. ೧೦); ಸರಸಸೂರುಳು ಗನ್ನಗರುವಿಕೆ ಗರಗರಿಕೆ . . . ಮಹಿಳಾಜನ ವಿರಾಜಿಸಿತು (ತೊರರಾ. ೧-೫-೩೨). ೩. ಬಹಳ; ಅತಿ: ಪಾಪಿಗೆ ಕೋಪ ಗನ (ಗಾದೆ). ೪. ಮಹತ್ವವಾದುದು; ಶ್ರೇಷ್ಠ; ಮಿಗಿಲಾದುದು: ಅಂತುಟೇಂಗನಂ (ರಾಮಾಶ್ವ ೧೧೫-೩೦); ಗರುಡನ ಪೂಜೆ ಗನಪೂಜೆ (ನಾಪದ. ೫೧-೧). **ಗನ್ನ$_3$:** ೧. ಚದುರಿಲ್ಲಿಂದಮೆ ಪರ್ವಿತು . . . ಗನ್ನಂಗಸಿಗಟ್ಟಿತೀಯೆಡೆಯಿಂ (ಚಿಕವಿ. ೬-೬೫). ೨. ನಿನ್ನಿಂದ ನನಗೆ ನನ್ನಿಂದ ನಿನಗೆ ತಾಪ ಮುನ್ನುಕ್ಕಿ ಹೊಯ್ಮಾಲೆಯಾಯ್ತು ಇನ್ನಿಲ್ಲ ಹೊಯ್ಮಾಲೆ ಹೂಮಾಲೆಯಾಯ್ತೆಂಬ ಗನ್ನದೊಳ್ಮಾಲೆಯಿಕ್ಕಿದಳು (ಭರಚ. ೪೧-೨೫). ೫. ಘನತೆ; ಗಾಂಭೀರ್ಯ. 'ಗನ್ನವೇೞು' ಪರಾ. [< ಸಂ. ಘನ]

**ಗನಗಲು** (ನಾ). ಒಂದು ಗಿಡದ ಹೆಸರು: ಬೆಟ್ಟದ ಗಣಿಗಲು, ಗನಗಲು (ವೈಔಗಿ. ೩೦-೫೮೭). [< ಕಣಗಿಲೆ]

**ಗನಪಳ್ಳಿ** (ನಾ). ಒಂದು ಹಳ್ಳಿಯ ಹೆಸರು: ನಾಗತಿಯೆಂಬ ಬೆಳನಱಿ ಅರಸರಾಳೆ. ಗನಪಳ್ಳಿಯ ಎಱ (ಎಕ. VIII(S), ಸೊರಬ. ೫೭೫-೭ ; 981). [ಗನ ? + ಪಳ್ಳಿ$_1$]

**ಗನಹ** (ನಾ). ೧. ಈಶ್ವರ; ಶಿವ: "ಎಣ್ಮಯ್ಯಂ . . . ಗನಹಂ ಐವೊಗಂ ಈ ೨೨ – ಈಶ್ವರಂಗೆ ಪೆಸರ್" (ಕಶಸಾ. ೧-೧); "ಗನಹನಱುಮೊಗನೈಯಂ . . . ಸ್ಮರಹರಂಗೆ ನಾಮಂ" (ಕವಿಕಂ. ೧೫); "ಗನಹ ಗಂದರಗಿವಿಯನೀಶ್ವರಂ" (ಕಶರ. ೩೧). ೨. ಹಿರಿಯವನು; ಮುಖ್ಯನಾದವನು: "ಗನಹರೆಂದುಂ . . . ಪಿರಿಯರ್ಗೆಪೆಸರ್" (ಕಶಸಾ. ೧೭-೩೩೨); ಜನಿಯಿಸಿದನ್ವಯವೇೞ್ವುದು ಗನಹರಿವರ್ ಖಳವಂದಿರೆನಿಪರ್ ಗುಣದಿಂ (ನೀತಿಮಂ. I, ೨೭೬). ೩. ಬ್ರಾಹ್ಮಣ; ದ್ವಿಜ: "ಗನಹರುಮೆನಲ್ ಬ್ರಾಹ್ಮಣರ್" (ಕಶರ. ೩೧); ಬಡಗಲು ಗನಹಹೊಲ (ಎಕ. IX, ಚನ್ನಪ. ೧೬೯-೧೩ ; 1416); ಅವನ್ನಾಚರಿಸಲೇಬೇಕೆಂಬ ಬಲಾತ್ಕಾರದ ವೇಗದಲ್ಲಿ ಗನಹರನ್ನೂ ಗೌರವಗಿಡಿಸಿ ಆದರ್ಪ್ಪಿಸಿ (ಮಂತ್ರಶ. ೬೮-೧). [<ಸಂ. ಗಹನ]

**ಗನಾವಳಿ** (ನಾ). ಗಣಗಳ ಗುಂಪು, —ಸಮೂಹ (?): ಇಱ್ಪ ಇತ್ತಮಣ್ಣ ಆಱಲೂರ ಗನಾವಳಿ ಗುಣಸಾಗರ ತಮ್ಮಡಿಗಳ್ಗೆ ಕೊಟ್ಟದಾ × × (ಎಕ. IV, ಗುಂಡ್ಲುಪೇ. ೮೮-೭ ; ಸು. 750). [?]

**ಗನಿ** 'ಕಣಿ$_6$' ನೋ.

**ಗನಿಗಾರಿಕೆ** (ನಾ). ಗಣಿಯ ಕೆಲಸ, —ಉದ್ಯೋಗ: ರಬ್ಬರು ಉದ್ಯಮದಲ್ಲಿ ಸುಮಾರು ಆರೇಳು ಲಕ್ಷ ಕೆಲಸಗಾರರಿದ್ದಾರೆ ಗನಿಗಾರಿಕೆಯಲ್ಲಿ ಬರೇ ೮೦,೦೦೦ (ಏಶಿಸಂ. ೨೭). [ಗನಿ (<ಕಣಿ$_6$)+ ಕಾರಿಕೆ$_1$]

**ಗನಿಜೆಲಿ** 'ಗಣಜಿಲೆ$_1$' ನೋ.

**ಗನಿಮೆ** (ನಾ). ಅಡ್ಡಗಟ್ಟೆ: ಗದ್ದೆಗೆ ನೀರುಹಾಯಿಸುವವನು . . . ಗನಿಮೆಯನ್ನು ಮಾತ್ರ ತೆಗೆಯುವವನು (ಹಿಂದಸಾ. ೧೬). [ದೇ. ‖ ತೆಲು. ಗನಿಮ]

**ಗನೀಬ** (ನಾ). = ಗನೀಮ ೧: ಅವನೆನಗಂ ಗನೀಬನಾಗಿ ನಡೆಯುತ್ತಿರ್ಪನ್ (ಕೆಳನೃ. ೯-೪೭). [< ಗನೀಮ]

**ಗನೀಮ** (ನಾ). ೧. ಗುಪ್ತವಿರೋಧಿ; ಕಪಟಶತ್ರು; ಹಗೆ: ಚಳಕದೊಳಂ ಪೊನ್ನಾಳಿಯೊಳಿಳಿದಾ ರಣಮಸ್ತಾಖಾನ ಮುಖ್ಯ ವಜೀರರ್ಮುಳಿಸಿಂದೆ ಗನೀಮ ನಿಮ್ಮೊಳಪೊಕ್ಕೊಡನಿರ್ಪನವನನೀವುದೆನುತ್ತುಂ ಕೇಳಿಸೆ (ಕೆಳನೃ. ೯-೮೩). ೨. ಕೊಳ್ಳೆ; ಸೂರೆ; ಲೂಟಿ: ಸರ್ಕಾರದ ಆದಾಯ ಮುಖ್ಯವಾಗಿ ಐದು ಮೂಲಗಳಿಂದ ಬರುತ್ತಿತ್ತು . . . (೪) ಗನೀಮ (ಕೊಳ್ಳೆ) (ಇಸ್ಲಾಂಸಂ. ೪೨). [←ಅರ. ಪಾರ. ಹಿಂ. ಮರಾ. ಗನೀಮ್]

**ಗನೆ** (ಕ್ರಿ). ಹೆಚ್ಚು ಶಬ್ದವನ್ನು ಹೊರಹೊಮ್ಮಿಸು; ಘರ್ಜಿಸು: (ಶಿ). 'ಕೆನೆ$_1$' ಪರಾ. [?. / ತಮಿ. ಕನೈ]

**ಗನ್ನ$_1$** (ನಾ). ಕಪಟ; ಮೋಸ; ಕುತಂತ್ರ: "ಕಪಟಂಗಳೆ ಗನ್ನಗಾಹುಗಳ್" (ಕರ್ಣಾನಿ. ೨೭); ಇವರು ಗನ್ನದ ಗಾಂಭೀರವ ನುಡಿವುದು ಅನ್ಯಾಯವೆ ಆತುರವೈರಿ ಮಾರೇಶ್ವರಾ (ನಗಮಾ. ೧೮). ಗನ್ನದಿಂ ಮಱಹಿಕ್ಕಿ ಕೊಂಡೊಯ್ದು ಬಳಿಕ ಮುನಿ ನನ್ನ ಬನ್ನಬಡಿಸಿಯೆ ಕಾಡಿದಪನು (ಹಚಕಾ. ೫-೭೩). 'ಗನ್ನಗತಕ' ಪರಾ. [ದೇ. ‖ ತೆಲು. ಕನ್ನು. / ಸಂ. ಗಹನ].

**ಗನ್ನ$_2$** (ನಾ). ರಂಧ್ರ; ಸಂಧಿ: ಒಂದು ಗನ್ನಮಂ ಕಂಡು ಬೆಱಗಾಗಿ (ಸೌಂದಪು. ೫-೧೨). [< ಕನ್ನ$_1$]

**ಗನ್ನ$_3$** 'ಗನ' ನೋ.

**ಗನ್ನ$_4$** (ನಾ). ಆಕಾಶ; ಬಾನು: ಮುನ್ನೆರಕೆ ಬೀಸಿ ನೀಲನ್ನ ಗನ್ನದೊಳೇರುತಿನ್ನು ಹಾಡುವೆ (ಗೀವಿಂ. ೪-೧೧). [< ಸಂ. ಗಗನ]

**ಗನ್ನ$_5$** (ನಾ). ಕಬ್ಬು; ಇಕ್ಷು: (ಕೈಸಾಗೆ. ೫೪೮). 'ಗನ್ನಾಪೈರು' ಪರಾ. [← ಹಿಂ. ಗನ್ನಾ]

**ಗನ್ನಂಗೊಳ್** (ಕ್ರಿ). ನಟಿಸು; ಸೋಗುಹಾಕು: ಗನ್ನಂಗೊಂಡೊಪ್ಪಿ ನಿಂದಪ್ರತಿಮನೊಳೆ ಸುರಂಗಾಗ್ನಿ ಸಾನ್ನಿಧ್ಯದೊಳ್ (ಅಪ್ರತಿ. ೪೭-೧೦). [ಗನ್ನ$_1$ + ಕೊಳ್$_1$]

**ಗನ್ನಕಾತಿ** 'ಗನ್ನಗಾತಿ' ನೋ.

**ಗನ್ನಕಾಱ** 'ಗನ್ನಗಾಱ' ನೋ.

**ಗನ್ನಗತಕ, ಕನ್ನಘಾತಕ, ಗನ್ನಗದಕ, ಗನ್ನಗದಿಕು, ಗನ್ನಗದುಕು, ಗನ್ನಘಾತಕ** (ನಾ). ೧. ತೋರಿಕೆಯ ಭಾವ; ನಟನೆ; ಸೋಗು; ಮೋಸ: ಇದಂ ತೋಱಿ ಸಿಕ್ಕಿಸಬಂದ ಗನ್ನಗತಕಕ್ಕೆ ಸೆಡೆವೆನೆ (ಹಚಕಾ. ೧೩-೧೮); ಅರ್ಜುನ ಗನ್ನಗತಕದಲರಿಯ ಹೊಯ್ದನು (ಕುವ್ಯಾದ್ರೋ. ೧೫-೬); ಸ್ಮರತಂತ್ರದೋಱೆ ಪದಿರು ಗನ್ನಗತಕ ಜೋಸರವುದಯಿಪ ತಾಣವೆಸೆಯೆ (ಭೈರಸೂ. ೨೯೩).

**ಕನ್ನಘಾತಕ**: ೧. ಆದಿಯುನಱಿದ ಮತ್ತೆ ಆದಿಯಲಿ ನಡೆವ ಪ್ರಪಂಚ ವೇಕೋ ಅನಾಗತವನಱಿದ ಮತ್ತೆ ಅನ್ಯಾಯದಲ್ಲಿ ನಡೆವ ಕನ್ನಘಾತಕವ ಬಿಡಬೇಕು. ಇಪಪರ ಉಭಯವನಱಿದ ಮತ್ತೆ ಪರಮನಾಗಿರಬೇಕು (ಮೋಳಿಮಾ. ೮೯-೩೫೪). **ಗನ್ನಗದಕೆ**: ೧. ನಿನ್ನ ಗೊಡ್ಡಾಟವ ನಱಿದನೀ ಗನ್ನಗದ [ಪಾಠಾಂ. ತ]ಕದೊಳಿದ್ದೊಡಿರು (ಬಸವು. ೨೪-೬೫).

**ಗನ್ನಗದಿಕು**: ೧. ಗನ್ನಗದಿಕಿಂದೋರ್ವವಿಟನೇನ್ರುವಂ ಕೊ ಡ ದೆ (ಚೇರಮ ೮-೯೪). **ಗನ್ನಗದುಕು**: ೧. ನನ್ನಿಂದ ತಪ್ಪುತಾನೇನಾಯ್ತೋ ಮನೆಯಲ್ಲಿ ಗನ್ನಗದುಕನಾಡಿದರೋ (ಜ್ಞಾನಜ. ೨-೬೨) ; ನಗಡ ಭಕ್ತರ ಹದಿರು ಚಿದುರು, ಗನ್ನಗದುಕು ಹಾಸ್ಯದ ಪ್ರಸಂಗವಂ ಮಾಡಿ ನಗಿಸಿ (ಭೈರಸೂ. ೨೧೪) ; ಗನ್ನಗದುಕು ಬಱಿಯ ಮೋಸರಣೆ (ಚಂಪ್ರಸಾಂ. ೧೪-೮೫); ಗನ್ನಗದುಕುಗಳ ಕಳೆದು ಗರ್ವವ ಬಿಟ್ಟು (ಹದಿಬ. ೩-೨೨).

**ಗನ್ನಘಾತಕ**: ೧. ಗನ್ನಘಾತಕವನು ನಾನಱಿತವನಲ್ಲ ನಿನ್ನಾಣೆ ಕೇಳಲೆ ರಮಣಿ (ಜಿನರಾ. ೪-೧೩೪) ; ನಿಜಶಕ್ತಿಯಿಂ ಹರಿಸಲಾರದೆ ಯುಳಿದು ಗನ್ನಘಾತಕದಿ . . . ಕಶ್ಮಲನಸೀಲ್ದ (ನವಮೋ. ೩೩-೭). ೨. "ಮೋಸಗಾರ" (ಗಂಗಾಮು. ೧೧೦). [ಗನ್ನ₁ + ಗತಕ₁]

**ಗನ್ನಗದಕ** 'ಗನ್ನಗತಕ' ನೋ.

**ಗನ್ನಗದಿಕು** 'ಗನ್ನಗತಕ' ನೋ.

**ಗನ್ನಗದುಕು** 'ಗನ್ನಗತಕ' ನೋ.

**ಗನ್ನಗಾತಿ**, ಗನ್ನಕಾತಿ (ನಾ). ೧. ವಂಚಕಿ; ಮೋಸಗಾತಿ: ಮುನ್ನೇಸಱೊಗೆಯಲೊಡನರಮನೆಯ ಬಾಗಿಲ್ಗೆ ಗನ್ನಗಾತಿಯನಿವಳ ಮುಂದಲೆಯ ಸುತ್ತಿ ಹಿಡಿತರಿಸಿ ನೋಳ್ಪಂತೆಲ್ಲರು (ಸಮ್ಯಕೌ. ೧೧-೬೫). ೨. "ಹಿಂಸೆ ಮಾಡುವವಳು" (ಪ್ರಭಂಜ). **ಗನ್ನಕಾತಿ**: ೧. ನನ್ನ ವ್ರತವ ಕೆಡಿಸಲುಬಹುದೆಯೆಂದು ಗನ್ನಕಾತಿಯು ಮೊ ಱೆ ಯಿ ಡ ಲು (ಪ್ರಭಂಜ. ೩-೧೦೫). [ಗನ್ನ₁ + -ಕಾತ್ತಿ]

**ಗನ್ನಗಾಱ**, ಗನ್ನಕಾಱ (ನಾ). ವಂಚಕ; ಮೋಸಗಾರ: ಹೊನ್ನು ಹೆಣ್ಣು ಮಣ್ಣಿಗಾಗಿ ಅನ್ನವನಿಕ್ಕುವರ ಪ್ರಸಂಗವ ಹಡೆಯ ಬಂದ ಗನ್ನ ಗಾಱಂಗೇಕೆ ಅಱಿವು (ಮೋಳಿಮಾ. ೮೪-೩೩೪). **ಗನ್ನಕಾಱ**: ಗನ್ನ ಕಾಱನು ಕೃಷ್ಣನು (ಕುವ್ಯಾದ್ರೋ. ೧-೨೮) ; ಸನ್ನುತರವರಿರ್ದ ಬದರೀ ವನಕೆಯ್ದಿ ಗನ್ನಕಾಱನು ಬೀಡ ಬಿಡಲು (ನೇಮಿಸಂ. ೨೪-೧೧೦). [ಗನ್ನ₁ + -ಕಾಱ]

**ಗನ್ನಘಾತ** (ನಾ). = ಗನ್ನಗತಕ ೧: ಹದುಂಬಿನೆಡೆ ಗನ್ನಘಾತದ ತಾಣ ಕುಟಿಲ ಕುಹಕದ ನೆಲೆಯು (ನವಮೋ. ೧೭-೫೨). [ಗನ್ನ₁ + ಘಾತ]

**ಗನ್ನಘಾತಕ** 'ಗನ್ನಗತಕ' ನೋ.

**ಗನ್ನಘಾತಕಿ** (ನಾ). = ಗನ್ನಗಾತಿ: ತೊನ್ನಬಡುಕ ಮಾವ ಅನ್ಯಕಾರಿ ಅತ್ತೆ ಗನ್ನಘಾತಕಿ ರಂಡೆ ಅತ್ತಿಗೆಯು (ಪುರಂದ. ೨-೮೪-೭). [ಗನ್ನ₁ + ಘಾತಕಿ₀ (< ಗತಕಿ)]

**ಗನ್ನತನ** (ನಾ). ವಂಚನೆ; ಮೋಸ: ಕಾಯಹೋಗಿ ಕರ್ಮವಮಾಡಿ ಜೀವಕ್ಕೆ ಬಾಧೆಯ ತಂದಿತ್ತೆಂಬರು . . . ಕಾಯವು ಆ ಜೀವನಿಗೂ ನಿನಗೂ ಸರಿಹುದುಗು ಎನ್ನನೇಕೆ ಕಾಡಿಹೆ ಗನ್ನತನವೇಕೆ (ಮೋಳಿಮಾ. ೩೦-೨೪೮). [ಗನ್ನ₁ + - ತನ]

**ಗನ್ನನಿಟ್ಟುರ** (ನಾ). ಅತಿನಿಷ್ಠುರ; ಬಹಳ ಕಠಿಣ: ಗಾಳುಗೂಟರೊಳ್ ಪೊಣರ್ವ ಗನ್ನನಿಟ್ಟುರದ ಸೆಣಸಾಟವುಂ ರಾಮಸೇನೆಗೆ ಮುಡಿದುದು (ರಾಮಾಶ್ವ. ೧೬೩-೨೪). [ಗನ್ನ₃ (< ಗನ) + ನಿಟ್ಟುರ]

**ಗನ್ನರಸ** (ನಾ). ಒಬ್ಬಾತನ ಹೆಸರು: ಅಯ್ಯಪದೇವನ ಮಗಂ ಗನ್ನರಸಂ ದೞಿಗವಾಡಿಯ ಕೞುಕ್ಷನ್ನಟ್ಟಿಯನಾಳುತ್ತಿರೆ (ಎಕ. IX, ಹೊಸಕೋ. ೧೧೧-೪ ; 997). [ಗನ್ನ₃ (< ಗನ) + ಅರಸ₁]

**ಗನ್ನವಾತು** (ನಾ). ವಂಚನೆಯ ಮಾತು; ಮೋಸದ ನುಡಿ: ಮಿಱುಗುವ ಮೆಯ್ಸಿರಿಗಮರ್ದಾ ಕುಱಿಪುಗಳಂ ಮಾಂಜಿಮಾಂಜಿ ಮಾಯೆಗಳಿಂದಂ ಮುಱಿಮುಱಿಯಿಪ ಗೋಪಾಲಕರೆಱೆಯನೊಳೀ ಗನ್ನವಾತ ನುಸಿರ್ದಳ್ (ಗೀತಗೋ. ೨೮-೯೯). [ಗನ್ನ₁ + ಮಾತು₁]

**ಗನ್ನವೇಱು** (ನಾ). ಘನತೆ ಹೆಚ್ಚಾಗು; ಗಾಂಭೀರ್ಯ ಹೆಚ್ಚು: ಗಾಡಿಗಳಿವ ನಡೆ ಗನ್ನವೇಱುವ ನುಡಿ ಮೋಡಿದೋಱುವ ಮುದ್ದು ನೋಟ (ಹದಿಬ. ೬-೨೦). [ಗನ್ನ₃ (< ಗನ) + ಏಱು₁(< ಏಱ್₁)]

**ಗನ್ನಾಪೈರು** (ನಾ). ಕಬ್ಬಿನ ಬೆಳೆ: ಗನ್ನಾಪೈರಾಗುತ್ತಿದ್ದ ಜಮೀನಿನ ಮೇಲೆ ದಾಖಲಾಗಿದ್ದ ತೆರಿಗೆಯ ದರವನ್ನು ಕಡಿಮೆ ಮಾಡಿದರು (ಮಹಾವಂ. II. ೮೦). [< ಗನ್ನ₅ + ಪೈರು (< ಪಯಿರ್)]

**ಗನ್ನೇರಳೆ** (ನಾ). ಕಣಗಿಲ ಗಿಡ: "ಪ್ರತಿಹಾಸಃ . . . ಕರವೀರಃ - ಈ ಗನ್ನೇರಳೆ, ಗುಣಿಗಲ ಗಿಡದ ಹೆಸರು" (ಸಿದ್ಧಾಂತಿ ೧೧೪). [?. / ತೆಲು. ಗನ್ನೆರು, ಗನ್ನೇರು]

**ಗಪ್‌ಚಿಪ್**, ಗಪ್ಪುಚಿಪ್ಪು (ಅ). ಮೌನವಾಗಿ; ಮಾತಿಲ್ಲದೆ; ಸುಮ್ಮನೆ: ನಿಬ್ಬಣಿಗರೆಲ್ಲ ಹಸಿದಿದ್ದರು. ಅವರೆಲ್ಲ ಗಪ್‌ಚಿಪ್ ಉಪಹಾರ ಮಾಡಿ ಬೀಗರ ದಾರಿಕಾಯುತ್ತ ಕುಳಿತರು (ಸ್ಮೃತಿಚಿ. ೨೫) ; ಎಲ್ಲಾ ಗಪ್‌ಚಿಪ್ (ದೌಲತ್. ೯೪). **ಗಪ್ಪುಚಿಪ್ಪು**: ಏನೂ ಮಾತಾಡದೆ ಗಪ್ಪುಚಿಪ್ಪಾಗಿ ದೀಪವಾರಿಸಿ ತೆಪ್ಪಗೆ ಮಲಗಿಕೊಂಡರು (ಮೊಪಾಸಾ. ೭).

ಗಪ್‌ಚಿಪ್ಪಾಗು = ಸುಮ್ಮನಾಗು ; ಮಾತನಾಡದಿರು: ಸ್ವಾಮಿ ಗಪ್‌ಚಿಪ್ ಆಗಬೇಕಾಯಿತು (ಸ್ವಾಮಿಸ್ನೇ. ೧೩೮) ; ಗಂಜಿ ಗಪ್‌ಚಿಪ್ಪಾಗಿ ಉಣ್ಣುತ್ತಿದ್ದುದನ್ನು ಕಂಡ ನರ್ಸಿ (ಹೊಸಕ್ಷಿ. ೬೨). [← ಹಿಂ. ಮರಾ. ಗಪ್‌ಚಿಪ್]

**ಗಪಗಪ**, ಗಬಗಬ (ನಾ). ಆತುರದಿಂದ ತಿನ್ನುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ: ಮಧ್ಯಾಹ್ನ ಗಪಗಪ ಉಂಡು ಹೋಗಿದ್ದೆ (ಮೂರುದಾ. ೬೦) ; ವಿದ್ಯಾರ್ಥಿನಿಯರು ಗಪಗಪ ತಿಂದು ನೀರು ಕುಡಿಯಲು ಹಾತೊರೆಯುತ್ತಿದ್ದರು (ರಕ್ತಧ್ವ. ೨೮೭). **ಗಬಗಬ**: ಗಬಗಬ ಸ್ವಲ್ಪ ತಿಂದು (ಮೇದಿಮು. ೨೧) ; ಗಬಗಬ ಅಂತ ಎರಡು ತುತ್ತು ತಿಂದು (ದೂಬೆಟ್ಟ. ೧).

ಗಪಗಪನೆ, ಗಬಗಬನೆ, ಗಬಗಬಕನೆ = ಆತುರವಾಗಿ; ತ್ವರಿತವಾಗಿ: ಗಪಗಪನೆ ತಿನ್ನಬೇಡ (ರೂಢಿ) ; ಉಳಿದಿದ್ದ ಅನ್ನವನ್ನು ಗಬಗಬನೆ ತಿಂದು ಮುಗಿಸಿದನು (ಮಾರ್ಗದ. ೨೪೩) ; ಸಿಗರೇಟನ್ನು ಗಬಗಬಕನೆ ಸೇದುತ್ತಿದ್ದನು (ಪುನರು. ೪೫೦). [ದೇ. ‖ ತುಳು. ತೆಲು. ಗಬಗಬ. / ಮರಾ. ಗಪ]

**ಗಪ್ಪನೆ** (ಅ). ಕೂಡಲೆ; ಥಟಕ್ಕನೆ; ತಕ್ಷಣ: ಬೇಟೆ ಕಣ್ಣಿಗೆ ಬಿದ್ದ ಕೂಡಲೆ . . . ಅದನ್ನು ಗಪ್ಪನೆ ಹಿಡಿದು ಗವಿಗೆ ಒಯ್ಯುತ್ತದೆ (ಮುಂಬಯಿ. ೪-೩೭). [ಗಪ್ಪು₂ + -ಅನೆ₁]

**ಗಪ್ಪಳಾಸು** (ನಾ). (ಕರಾ) ನಿರಾಧಾರವಾದ ಮಾತು ; ಬುರುಡೆ: ಅವಳನ್ನು ಊರಿಗೆ ಕಳುಹಿಸಿ ಈಗ ನನ್ನ ಮುಂದೆ ಗಪ್ಪಳಾಸು ಬಿಡುತ್ತೀರಾ (ದೇವಹೆಂ. ೨೨೭). [← ತುಳು. ಗಪಲತ್]

**ಗಪ್ಪು₁** 'ಗಪ್ಪಾ' ನೋ.

**ಗಪ್ಪು₂** (ಅ). ೧. ಸುಮ್ಮನೆ; ಮೌನವಾಗಿ; ಸದ್ದಿಲ್ಲದೆ: ಗಪ್ಪ ಕುಂಡ್ರೋ ಮೂಳಾ (ಬಾನಾನೀ. ೮). ೨. ತಟ್ಟನೆ; ಕೂಡಲೆ: ಎಲ್ಲಿ ಬಾಳೆ ಆವಳು ಅಂತ ತೀಡು ಗಪ್ಪಂತ ಹಿಡಿಕೋಬೇಕು (ಮುನಿಮಾ. ೧೪೮).

ಗಪ್ಪಾಗು = ೧. ಸದ್ದಿಲ್ಲದಾಗು ; ಸುಮ್ಮನಾಗು: ಮಗು ಗಪ್ಪಾದುದನ್ನು ಕಂಡು (ಜೀವಪ್ರ. ೩೦) ೨. ಅದೃಶ್ಯವಾಗು; ಕಾಣೆಯಾಗು: ಕೆಸರೊಳಗೆ ಮುಳುಗಿ ಗಪ್ಪಾಗುತ್ತವೆ (ಕಭಾಗೆ. I, ೧೪) ;

ಆ ಚಣಿಯು ಒಮ್ಮಿಂದೊಮ್ಮೆ ಗಪ್ಪಾಯಿತು (ಮುಂಬಯಿ. ೫-೨೬೮); ಏ ನಿಂಗ್ಯಾ . . . ಎಲ್ಲಿ ಗಪ್ಪಾದಿ ? (ನಾಥಾಂ. ೩೩). **ಗಪ್ಪುಗಡದು** = ಮೌನವಾಗಿರುವಿಕೆ; ಗುಪ್ತವಾಗಿರುವಿಕೆ; ಯಾರಿಗೂ ತಿಳಿಯದಂತೆ ಇರುವಿಕೆ: ಹೊರಗೆಲ್ಲಿಯೂ ಹೋಗನು . . . ಸದಾ ಗಪ್ಪುಗಡದು (ಪವನ. ೧೧); ಅದೇನಿಲ್ಲ ಗಪ್ಪುಗಡದಾಗಿ ಹೊರಡುವಿಯೋ (ಬಿಟ್ಟಹೊ. ೨೬). **ಗಪ್ಪುಮಾಡು** = ೧. ಮೌನವಾಗಿಸು; ಸುಮ್ಮನಾಗಿಸು: ಶೀಪಣ್ಣ ನನ್ನನ್ನು ಜಬರಿಸ ಬಂದರೂ ಅವ್ವ ಅವನನ್ನು ಗಪ್ಪುಮಾಡುತ್ತಿದ್ದಳು (ವೈನಿ. ೧೬೫). ೨. ಮುಚ್ಚಿಡು; ರಹಸ್ಯವಾಗಿಡು: ಆ ಸಾಮಾನನ್ನು ಇದ್ದಕ್ಕಿದ್ದಂತೆ ಗಪ್ಪುಮಾಡಿದರು (ರೂಢಿ). [← ಹಿಂ. ಮರಾ. ಗಪ್]

**ಗಪ್ಪುಗಾರು** (ನಾ). ಗಪ್‌ಚಿಪ್ ಆಗಿರುವಿಕೆ: ನಟ್ಟನಡುರಾತ್ರಿಯಲಿ ಸಪ್ಪಳಿಲ್ಲದ ಗಪ್ಪುಗಾರಿನಲ್ಲಿ (ನನಲ್ಲ. ೧೧-೬).

**ಗಪ್ಪುಗಾರಾಗು** = ೧. ಸುಮ್ಮನಾಗು: ವಾಮಣ್ಣನು ಒಳಗೊಳಗೆ ಉರಿದು ಗಪ್ಪುಗಾರಾಗಿ ಕುಳಿತನು (ಕಾರುಪ. ೧೨). ೨. ಅದೃಶ್ಯವಾಗು: ಇದ್ದಕ್ಕಿದ್ದಂತೆ ಆ ವಸ್ತು ಗಪ್ಪುಗಾರಾಯಿತು (ರೂಢಿ). [< ಗಪ್ಪು$_2$]

**ಗಪ್ಪುಚಿಪ್ಪು** 'ಗಪ್‌ಚಿಪ್' ನೋ.

**ಗಪ್ಪಾ, ಗಪ್ಪು$_1$** (ನಾ). ನಿರಾಧಾರವಾದ ಮಾತು; ಹರಟೆ: ಹೋಗಲಿ ಬಿಡ್ರಿ ಬರೇ ಗಪ್ಪಾನೇ ಆತು (ನಡುಮ. ೨೫); ಹರಟೆಯೆಂದರೇನು? ಎಲ್ಲ ಗಪ್ಪಾದಲ್ಲಿಯೆ ಎಲ್ಲಾ ತಮ್ಮ ಮೌಲ್ಯ ಅಮೌಲ್ಯ ವೇಳೆಯನ್ನು ಎರೆದು ಬಿಡುವ (ಮುಂಗಾಪು. ೪ ಮುನ್ನುಡಿ). **ಗಪ್ಪು$_1$** : (ಕಿ). [← ಅರ. ಗಪ; ಹಿಂ. ಗಪ್; ಮರಾ. ಗಪ್, ಗಪ್ಪಾ, ಗಫ್]

**ಗಬಕ್** (ಅ). ಥಟ್ಟನೆ; ಕೂಡಲೆ: ಹೂರಿಗೆಯೆಂದರೆ ಗಬಕ್ಕೆಂಬಗಾದೆಯುಂತಾರಿಂತು ನುಡಿವರ್ಸಿಯೆಂದಾ (ಭರಚ. ೩೦-೨೫).

**ಗಬಕ್ಕನೆ, ಗವಕ್ಕನೆ** = ಥಟಕ್ಕನೆ; ಸರಕ್ಕನೆ: ಈ ಕಪ್ಪೆರಾಯ ಅವನ್ನು ಮೇಲಕ್ಕೆ ಬಿಡಗೊಡದೆ ಗಬಕ್ಕನೆ ನುಂಗಿಬಿಡುತ್ತಿದ್ದನು (ಪಠಾಕ್ರಿ. ೧೦೮); ಬಕಪಕ್ಷಿಯೊಂದು . . . ಸಣ್ಣಮೀನನ್ನು ಗಬಕ್ಕನೆ ನುಂಗುತ್ತಿದ್ದಿತು (ಶ್ರೀರಾಯ. ೨೨); ಅದನ್ನು ಗವಕ್ಕನೆ ಕಚ್ಚಿಕೊಂಡು ಹಾರಿತು (ರೂಢಿ). [?]

**ಗಬಗಬ** 'ಗಪಗಪ' ನೋ.

**ಗಬರು$_1$** (ನಾ). ೧. ಗಟ್ಟಿಗ; ಘಾಟಿ; "ಗಟ್ಟಿಯುಳ್ಳವ; ಅಂಜದವ" (ಜಾನಕೋ. ೪೬). ೨. ಚೆಲುವ; ಸುಂದರ ಪುರುಷ: ಅವನು ಬಹಳ ಗಬರು ಮನುಷ್ಯನಿದ್ದಾನೆ (ರೂಢಿ). ೩. ದಡ್ಡ; ಪೆದ್ದ: ಅವನೊಬ್ಬ ಗಬರು. ಏನೂ ತಿಳಿಯುವುದಿಲ್ಲ (ರೂಢಿ). [← ಹಿಂ. ಮರಾ. ಗಬ್ರೂ]

**ಗಬರು$_2$** (ನಾ). ಒಂದು ಬಗೆಯ ಬಂಗಾರದ ನಾಣ್ಯ: ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು, ಯಾವುವೆಂದರೆ :- ೧ ಗಬರು (ಚಿತ್ರಪಾ. ೧೦೩). [← ಮರಾ. ಗಬ್ಬರ್]

**ಗಬಲಿಕ್ಕು$_1$** (ಕ್ರಿ). ಕಬಳಿಸು; ತುತ್ತುಮಾಡು; ನುಂಗು: ಅಟ್ಟಸದೆದನು ಮಿಾಜಿ ಘಾಡಿಪ ಘಟ್ಟಿಯರ ಗಬಲಿಕ್ಕುವಸುರರ ಮೆಟ್ಟಿಸೀಳಿದನೆಡಬಲದಲೌಕುವ ನಿಶಾಚರರ (ತೊರರಾ. ೫-೪-೨೪). [< ಕಬಲಿಕ್ಕು]

**ಗಬಲಿಕ್ಕು$_2$** (ಕ್ರಿ). ಅರ್ಭಟಿಸು (?): ಗಬ್ಬರಿಸಿ ಗಬಲಿಕ್ಕಿ ಮುಸುಕುವ ಹಬ್ಬುಗಣೆಗಳನಿದಿರುಗಣೆಯಿಂದೆಬ್ಬಿಸಿದನುಬ್ಬಿಸಿದ ನೆಸುಗೆಯಲಮರ ಸಂತತಿಯ (ತೊರರಾ. ೬-೪೦-೨೪); ಗಬ್ಬರಿಸಿ ಗಬ್ಬಲಿಕ್ಕಿ ಮುಸುಕಿದಂ ಕೊರ್ಗಣೆಯ ಹಬ್ಬುಗಣೆನಿದಿರುಗಣೆ ಬಳಿಸಲಿಸಿ ರಿಪುಬಲವನೆಬ್ಬಿಸಿದ ಯಮುನಗರಿಗಂ ಬಾಲನಾಜಿಯೋಳ್ (ತುರಂಗ. ೫೧-೨೬). [ಗಬಲ ? + ಇಕ್ಕು]

**ಗಬಾಡು** (ನಾ). ೧. "ಹೊಲಸು" (ಜಾನಕೋ. ೪೩). ೨. "ಹೊಲಸುಳ್ಳವ; ಕಾಡ" (ಜಾನಕೋ. ೪೩). [< ಗಬ್ಬು$_1$]

**ಗಬೋತಶರ್ಮ** (ನಾ). ಒಬ್ಬಾತನ ಹೆಸರು: ದೂದಿಬೋಯಸ್ಯ ಕಾಣ್ಡಿಲ್ಯಗೋತ್ರ ಗಬೋತಶರ್ಮಣ ಏಕಂಶಃ (ಇಆ. VII. ೧೮೮-೩೬; 668). [P 'ಕಪೋತಶರ್ಮ' ಎಂಬುದರ ಅಪಲಿಖಿತವಿರಬಹುದೆ ?]

**ಗಬ್ಬ$_1$** (ನಾ). ೧. ಬಸಿರು; ಗರ್ಭ: "ಗಬ್ಬಂ ಗರ್ಭಂ" (ಕರ್ಣಾನಿ. ೫೨); ದಿನಬಲದೊಳು ಗಬ್ಬ ಬೆಳೆಯಲು ಕುಚಗಳ ಕೊನೆಗಳಿರದೆ ಕರಿದಾಗೆ (ಅಂಜಚ. ೪-೨೩); ಗಬ್ಬ[ಪಾಠಾಂ. ರ್ಭ]ವು ತುಂಬಿದೆರಲೆಯನೊಡಲಶಿಶು ವುಚ್ಚಳಿಸಿ ಬಿರ್ದು ಗಿಲೆ (ಸಾಳ್ವಭಾ. ೫-೨೮); ಕಿರಿಯ ರಾಣಿಯ ಗಬ್ಬ ಬೆಳೆಯಲಿ ಎಂದು ಅವಳು ಆಶಿಸುತ್ತಿದ್ದಳು (ಸವತಿ. ೧೩೬); ಕಬ್ಬಿಗನೆದೆಯೊಳು ಗಬ್ಬವನಾಂತಿಹ ಕಬ್ಬವು ಹೊರವೊಗೆವಂದದಲಿ (ಸಾಸಮಾ. ೯೬). ೨. ಹೊಟ್ಟೆ: 'ಗಬ್ಬವೊಡೆ' ಪರಾ.

**ಗಬ್ಬವಾಗು, ಗಬ್ಬಾಗು** = ಬಸುರಾಗು; ಗರ್ಭವನ್ನು ಧರಿಸು: ಗಬ್ಬವಾಯಿತು, ಅಬ್ಬೆಯಾಯಿತು, ಹಬ್ಬವಾಯಿತು, ಹಾಲಿನಾ (ಕಎಪು. ೧೮-೧೦); ಉತ್ತರೆ ಗಬ್ಬವಾಗುವುದೆಂದು ಹೇಳುತ್ತಿದ್ದರು (ಹುಟ್ಟಹ. ೬೦); ಹೆಣ್ಣುಸಿಂಹವು ಗಬ್ಬಾಗಿ ಐದು ತಿಂಗಳಿಗೆ ಈಯುವುದು (ಮುಂಬಯಿ. ೪-೨೦೯); ಹೆಣ್ಣುಮಂಗವು ಗಬ್ಬಾಯ್ತು (ಬುದ್ಧಜಾ. ೬೯). [ಪ್ರಾ. ಗಬ್ಬ < ಸಂ. ಗರ್ಭ]

**ಗಬ್ಬ$_2$** 'ಗರುವ್ವ' ನೋ.

**ಗಬ್ಬಗರ** (ನಾ). ದೇವಾಲಯದಲ್ಲಿ ದೇವತಾಮೂರ್ತಿಯಿರುವ ಸ್ಥಳ; ಗರ್ಭಗೃಹ: ಭಕ್ತಿಭರದೊಳ್ ಗಬ್ಬಗರವಾಗಿಲೊಳ್ ನಿಂದು (ಚಿಕವಂ. ೧೨೩-೧೨); "ದೇವರಕೋಣೆ" (ಪ್ರಭಣ್ಣ.) [ಪ್ರಾ. ಗಬ್ಬಘರ < ಸಂ. ಗರ್ಭಗೃಹ]

**ಗಬ್ಬರ** (ನಾ). ಗಾಢತೆ; ಆಳ (?): ಗಬ್ಬರ ಅಬ್ಬರ ಉಬ್ಬರ (ಶಬ್ದಾನು. ೫೩೯ ಪ್ರಯೋ). [< ಸಂ. ಗಹ್ವರ ?]

**ಗಬ್ಬರಣೆ** (ನಾ). ೧. ಅಗೆಯುವುದು. ೨. ವ್ಯಾಪಿಸುವುದು. ೩. ಮುಚ್ಚುವುದು. 'ಗಬ್ಬರಿಸು' ಪರಾ. [ದೇ. ‖ ?]

**ಗಬ್ಬರಸದಾಳಿ** (ನಾ). ಕಬ್ಬಿನಲ್ಲಿ ಒಂದು ಬಗೆ: ರಾಮರಸದಾಳಿ, ಗಬ್ಬರಸದಾಳಿ, ಹಾಲುಗಬ್ಬು, ಕರೆಕಬ್ಬು (ಕಭಾಗೆ. ೨೬೩). [ಗಬ್ಬು$_0$ (< ಕರ್ವು$_1$) + ರಸದಾಳಿ]

**ಗಬ್ಬರಿಸು** (ಕ್ರಿ). ೧. (ನೆಲವನ್ನು) ಅಗೆ; ತೋಡು; ಬಗಿ: "ಗಬ್ಬರಿಸು-ಖನನೇ" (ಶಮುಧಾ.); ಗಬ್ಬರಿಸಿ ಗಬಲಿಕ್ಕಿ ಮುಸುಕುವ ಹಬ್ಬುಗಣೆಗಳ (ತೊರರಾ. ೬-೪೦-೨೪); ಬೊಬ್ಬಿಜಾಿದು ಪಡೆ ಕೆಡೆಯೆ ವಾಸುಕಿ ಗಬ್ಬರಿಸಿದನು ಗಿರಿಯನು (ನಿಭಾಗ. ೮-೬-೧೧). ೨. ಹಳ್ಳ ಬೀಳು; ತಗ್ಗು ಬೀಳು: ಅಬ್ಬರದೊಳಗೆ ಗಬ್ಬರಿಸೆ ನೆಲ ಗಾಲಿಗಳ ಘಲ್ಲಣೆಗೆ (ಕುವ್ಯಾಕ. ೨-೩೪). ೩. ಹರಡು; ವ್ಯಾಪಿಸು; ಆವರಿಸು: ಸಂದಿಯೊಳು ಗೊಂದಿಯೊಳು ಗಬ್ಬರಿಸಿ ತಮತಮಗೆ ಚೀಜಾಿ ಕರೆದರು (ಸಿದ್ಧರಾ. ೨-೪೮); ಚಿಲುದನಿ ಗಬ್ಬರಿಸಿದವು ನಭವ (ಕುವ್ಯಾಭೀ. ೮-೫); ಘುಮ್ಮು ಘುಳಿಲೆಂಬಬ್ಬರಣೆ ಗಬ್ಬರಿಸೆ ದಿಗುತಟವ (ತೊರರಾ. ೬-೨೫-೧೦); ಗಬ್ಬರಿಸಲು ಗಗನಾಂಗಣವನು ಬಲು ಬೊಬ್ಬೆ (ಕುರಾಸಾಂ. ೪೫-೯೦); ಸರ್ಬಲೋಕಾಧೀಶಪದವನು ಗಬ್ಬರಿಸಿ ದೈತ್ಯೇಂದ್ರನಿಂತು ಸಗರ್ಭಿತನು ತಾನಾಗಿ ಮೆರೆದು ಭುಜಪ್ರತಾಪವನು (ನಿಭಾಗ. ೩-೮-೧೯). ೪. ಭೇದಿಸು; ಸೀಳು: ವಜ್ರಹತಿ ಗಬ್ಬರಿಸಿದಲ್ಲದೆ ಗಿರಿಗಳೊಡೆಯವು (ಕುವ್ಯಾಉ. ೯-೪೫); ಅಬ್ಬರಿಸಿದುವು ಬೇಂಟೆವಜಾಿ ನೆಲ ಗಬ್ಬರಿಸೆ ಶಬರಾಳಿ ಬೊಬ್ಬೆಯಲಿ ನಲವೇಜಾಿ ನರ್ತಿಸಿ (ತೊರರಾ. ೩-೩-೧೧);

ಕೊಚಿದರೆದು ಕಡಿದಿಜಿಂದು ಬಗಿದು ಗಿದು ಗಬ್ಬರಿಸಿ ಪಜಿಂದು ಸೀಳ್ದುತ್ತರಿಸಿ (ಜೈಮಿಭಾ. ೪-೪೪). ೫. ಆರ್ಭಟಿಸು ; ಗರ್ಜಿಸು ; ಧ್ವನಿಮಾಡು : ನಿರಿಣಿಟಿಲುನಿಟಿಲೆಂಬ ರಭಸದಲಿ ಗಬ್ಬರಿಸಿ ಹೆಗ್ಗೊಂಬುಗಳ ಮುರಿದಬ್ಬರದೊಳಿಡುತಿಡುತ (ಅನಂರಾ. ೪-೫-೩). ೬. ಹೋಗಲಾಡಿಸು ; ಕಳೆ : ಧರ್ಮಸಂಗತಿಗಳ ಸುಸಂವಾದದಲಿ ನಿಜತನುಪುಳಕವುಬ್ಬರಿಸಿದುದು ಗಬ್ಬರಿಸಿದುದು ದುಷ್ಕೃತವ (ಕುವ್ಯಾಅ. ೨೩-೪೬). ೭. ಹೆಮ್ಮೆಪಡು ; ಗರ್ವಿಸು : ಉಬ್ಬಿರುವ ವೀರರನು ಹೊಗಳಲು ಗಬ್ಬರಿಪ ಕೂರುಮಗೆ ತೀರದು (ಮೈರಾಕಾ. ೩-೬೪).

[ಗಬ್ಬರಣೆ + – ಇಸು₃]

**ಗಬ್ಬಲು,** ಗಬ್ಲು (ನಾ). ಕೆಟ್ಟ ವಾಸನೆ ; ದುರ್ನಾತ ; ಮನೆಯ ಎದುರಿಗೇ ತಿಪ್ಪೆ, ಗಬ್ಬಲು (ರೂಢಿ). **ಗಬ್ಲು** : ನಿನ್ನ ಪಟ್ಟಣದಲ್ಲಿನ ಈ ಚರಂಡಿ ಗಬ್ಲು (ಸಣ್ಣಕ. X, ೩೪). [ಗಬ್ಬು₁ + – ಅಲು (< – ಅಲ್₂)]

**ಗಬ್ಬವನೆ** (ನಾ). = ಗಬ್ಬಗರ : ರಂಗುವಡೆದ ನವರಂಗಮುಂ . . . ಗಬ್ಬವನೆಯುಮೊಪ್ಪುವೊಳ್ಪುವಡೆದ ದೇಗುಲಮುಂ ಕಟ್ಟಿಸಿ (ಚಕವಂ. ೩೯-೮). [ಗಬ್ಬ₁ + ಮನೆ]

**ಗಬ್ಬವಿಕ್ಕಿಸು** (ಕ್ರಿ). ಸೊಕ್ಕಡಗಿಸು ; ಗರ್ವವಿಳಿಸು ; ಗರ್ವವನ್ನಡಗಿಸು : ಕಡುಕೈದ ಶಬರರೊಳಗೊಬ್ಬರುಳಿಯದ ತೆಱದಿ ಕೊಂದಿಕ್ಕಿ ನಾಯ್ಗಳಂ ಗಬ್ಬವಿಕ್ಕಿಸಿದ ರಕ್ಕಸವಂದಿ (ಹಚಕಾ. ೬-೨೧).

[ಗಬ್ಬವಿಕ್ಕು + – ಇಸು₃]

**ಗಬ್ಬವಿಕ್ಕು** (ಕ್ರಿ). ೧. ಸೊಕ್ಕುಗೆಡು ; ಧೈರ್ಯಗುಂದು ; ಹೆದರು ; ನಡುಗು : ಕೊಬ್ಬಿ ಹರಿದುದು ವಿವಿಧ ವಾದ್ಯದ ನಿಬ್ಬರದ ನಿಡುದನಿಯು ಜಲನಿಧಿ ಗಬ್ಬವಿಕ್ಕಿತು ಸೈನ್ಯಜಲಧಿಯ ಬಹಳ ಗರ್ಜನೆಗೆ (ಕುವ್ಯಾಭೀ. ೮-೫). ೨. "ಗರ್ವವನ್ನು ಬಿಡು ; ವಿಧೇಯವಾಗು" (ಪ್ರಭಣ್ಣ) ; ಅಕ್ಕಳಿಸೆ ಧರೆಯುಕ್ಕೆ ಜಲಧಿ ಹಗೆಗಳು ಗಬ್ಬ[ಪಾಠಾಂ. ಬ್ಬ]ಕ್ಕಿ . . . ಧ್ವನಿ ಹಬ್ಬಿ ಹರೆಕಲಿಸಿತು (ಸೋಮುಚ. ೫-೩).

[ಗಬ್ಬ₂ (< ಗರುವ್ವ₃) + ಇಕ್ಕು]

**ಗಬ್ಬವೊಡೆ** (ಕ್ರಿ). "ಹೊಟ್ಟೆಸೀಳು" (ಪ್ರಭಣ್ಣ) : ಉಬ್ಬರಿಸಿ ಬಹ ಸರಸಿಮಧ್ಯದೊಳಬ್ಬರಿಸಿ ಬರೆ ಮತ್ಸ್ಯಾವಾನರ ಗಬ್ಬವೊಡೆದುದು (ಮೈರಾಕಾ. ೩-೭೨). [ಗಬ್ಬ₁ + ಒಡೆ₁]

**ಗಬ್ಬಾಳಿಕೆ** (ನಾ). ಕೆಟ್ಟ ಆಡಳಿತ ; ನೀಚತನದ ಆಳ್ವಿಕೆ : ಪರಕೀಯರ ದಬ್ಬಾಳಿಕೆ ನಮ್ಮವರೆದೆಯುಬ್ಬಾಳಿಕೆ, ಮಬ್ಬಾಳಿಕೆ, ಗಬ್ಬಾಳಿಕೆ ಎಲ್ಲ ಒಂದೆ ಒಂದೆ (ನಡೆಬಂ. ೭೦). [ಗಬ್ಬು₁ + ಆಳಿಕೆ < ಆಳ್]

**ಗಬ್ಬಿ₁** (ನಾ). ೧. ಸೊಕ್ಕಿದವನು ; ಅಹಂಕಾರಿ ; ಗರ್ವಿ : "ಗಬ್ಬಿ – ಗರ್ವಿನ್ = ಗರ್ವಿಷ್ಠ" (ತದ್ಭಕೋ. ೫೦) ; ಕಬ್ಬೊಗೆಯನು ಕಾಣುತುಬ್ಬಿ ಗವಡುತಾ ಗಬ್ಬಿ ದಾನವನ ಪಟ್ಟಣದ ಸಬ್ಬುಜನರು ತಬ್ಬಿಬ್ಬುಗೊಳಲು ಊರಬ್ಬರ ಹಿರಿದಾಯ್ತೆಂದು (ತ್ರಿಪುಸಾಂ. ೧೬-೧೮೩). ೨. ಆಧಿಕ್ಯ ; ಹೆಚ್ಚಳ : ಅರಳ್ವಾಗ ಪೊಡೆಬಿರ್ಚಿದಾಗ ಬಂಡಿಡಿದಾಗ ಪರಿಮಳವಪ್ಪರಳೆ ಮಗಿಂದು ಸರಿಯಲ್ಲವೆಂದು ಗಬ್ಬಿಯ ಪುಟ್ಟುಗಂಪಿನ ಮುರುಗ ದವನಗಳ ಮುಂದಿಟ್ಟೆ (ಸೊಬಸೋ. ೧೨-೮೪). ೩. ಘನತೆವೆತ್ತವನು ; ಗರುವ ; ಶ್ರೇಷ್ಠ : ಗಬ್ಬಿಗಳರಸನು ವಸುದೇವನಿದಿರಾಗಿ ಕೊಬ್ಬಿರಿದಾಗಲೇಜಿಂದನು (ನೇಮಿಸಂ. ೧೨-೭೫). [< ಸಂ. ಗರ್ವಿನ್]

**ಗಬ್ಬಿ₂** (ನಾ). ಕೊಬ್ಬಿದವಳು ; ಗರ್ವಿಷ್ಠೆ : ಒಬ್ಬಳೆ ತಾನೆಂದು ಮನೆಯ ಹೊಕ್ಕೈತಹ ಗಬ್ಬಿಯಾರಿವಳೆಂದ ನೃಪತಿ (ಭರಚ. ೪೨-೩೭) ; ಎಬ್ಬಿಸಲು ಕೋಪಮಂ ಧರಿಸುವನೊ ಮುನಿದೆನ್ನ ಗಬ್ಬಿ ಯೇಳೆಸದಾದಳೆಂದು . . . ಡಬ್ಬುವನೊ (ತುರಂಗ. ೫-೩೫).

[ಗಬ್ಬ₃ (< ಗರುವ್ವ₃) + –'ಇ₃]

**ಗಬ್ಬಿಗ** (ನಾ). ಶ್ರೇಷ್ಠನಾದವನು ; ಗರುವ : ಗಬ್ಬಿಗ ಕುವರ ಮಾಡುವ ಸಿಂಹನಾದದೊಲಬ್ಬರವ (ಚಂಪ್ರಸಾಂ. ೧೧-೬೮) ; ಗಬ್ಬಿಗರು ಸಮಬಲದಿ ಕಾದುವ ಹಬ್ಬವರಿದಾಹವಕೆ ಮುರುಳಿನವೊಬ್ಬುಳಿಗದ್ಯೆತಂದವು (ಜಿನಭಾ. ೨೧-೮೫) ; ಹೆಬ್ಬುಲಿಗಳೊಳು ಸಿಲುಕಿ ಜಾರುವ ಉಬ್ಬಸದ ಮರಿಯೆರಳೆಯಂದದಿ ಗಬ್ಬಿಗರ ಹಿಂದಿಕ್ಕಿ ಬಳಲಿಕೆ ಬಗೆಯದಿರವಳಿದು (ಅಂಬಿಕಾ. ೪-೩೮). [ಗಬ್ಬಿ₁ + –ಗ₃]

**ಗಬ್ಬಿಗಲಿ** (ನಾ). ಬಲಿಷ್ಠನಾದವನು ; ಶೂರ ; ಸಮರ್ಥ : ಶರದಿಂದ ಗಬ್ಬಿಗಲಿಗಳನೆಸೆದರು ಶಾಕಿನಿಯರು (ಚಂಪ್ರಸಾಂ. ೮-೨೧).

[ಗಬ್ಬಿ₁ + ಕಲಿ₂]

**ಗಬ್ಬಿಗೆ** (ನಾ). ಕಡಿವಾಣ ; ಕೀಳು : ಜೋಡು ಸೀಸಕ ಬಾಹುರಕ್ಷೆಯ ಮೂಡಿಗೆಯ ಮೊಚ್ಚೆಯದ ಸವಗದ ನೀಡುಗಳ ಗಬ್ಬಿಗೆಯ ಮೊಗರಂಬಗಳ ಹಲ್ಲಣದ . . . ಕೊಡಲಿಗಳಿನೊಪ್ಪಿದುದು ರಣರಂಗ (ಮೈರಾಕಾ. ೪-೯೦). [< ಕಬ್ಬಿ]

**ಗಬ್ಬಿತನ** (ನಾ). ಗರ್ವದಿಂದಿರುವಿಕೆ ; ಅಹಂಕಾರ : ಎತ್ತು ಕತ್ತೆ ಕಾಗೆಯನು ದುರುಳತನದಿ ಕೊಂದ ಗಬ್ಬಿತನದ ಮಾತನೊರೆದು ಕೆಡಲುಬೇಡ ತೊಲಗು (ನೇಮಿಸಂ. ೧೬-೯೪) ; ಗಬ್ಬಿತನದೊಳಾತ ಹೊಕ್ಕಿರ್ದುದ ಕಂಡು ತುಬ್ಬಿಸಿಕೊಟ್ಟವರಾವು (ಮೋಹತ. ೩೬-೧೭) ; ಗಬ್ಬಿತನದಲಿ ಗಳಹದಿರು (ಪ್ರಹ್ಲಾಚ. ೭-೫೭) ; ಹಬ್ಬಿದಾ ಮಲೆಮಧ್ಯದೊಳಗೆ ಅರ್ಬುತಾನೆಂತೆಂಬ ವ್ಯಾಘ್ರನು ಗಬ್ಬಿತನದೊಳು ಬೆಟ್ಟದಾ ಅಡಿ ಕಿಬ್ಬಿಯೊಳು ತಾನಿರುವನು (ಗೋಹಾಡು. ೪೭). [ಗಬ್ಬಿ₁ + – ತನ]

**ಗಬ್ಬಿಲ** (ನಾ). ತೊಗಲ ಬಾವಲಿ ; ಕಣ್ಣುಕಪ್ಪಡಿ : ಪಕ್ಕದ ಮರಗಳಲ್ಲಿ ಗಬ್ಬಿಲಗಳು ಚೀರಾಡುತ್ತಿದ್ದುವು (ಕೃಹಿಕಾ. ೪).

[← ತೆಲು. ಗಬ್ಬಿಲ, ಗಬ್ಬಿಲಾಯ, ಗಬ್ಬಿಲಾಯಿ]

**ಗಬ್ಬು₁,** ಗರ್ಬು, ಗೊಬ್ಬು₁ (ನಾ). ೧. ಕೆಟ್ಟವಾಸನೆ ; ದುರ್ವಾಸನೆ ; ನಾತ : ಹೆಬ್ಬುಲಿ ಮಲಗಿರ್ದು ಪೋದ ತಾಣದ ಪೊಸಗಬ್ಬಿದೆ ಕಾಡ್ಕೋಣಗಳ ಒಬ್ಬುಳಿ ಪೋದೆಡೆಯಿದೆ (ಕುರಾಸಾಂ. ೨೭-೬೭) ; ಮಬ್ಬುಕವಿದಂತೆ ಗಬ್ಬು ದೇಹದಲ್ಲಿ ಹಬ್ಬಿದ ಪಾಪದ ನಿಬ್ಬಡಿ ತಿಳಿಯದೆ (ಮೋಕ್ಷದೀ. ೩೮-೨). ೨. ಹೊಲಸು ; ಕೊಳಕು : ಎಂಥ ಹೊಲಸು ಕೆಲಸ ಎಂಥ ಗಬ್ಬುವಾಸ (ನೀನಮು. ೧೦೫) ; ಆ ಕಡೆ ಗಬ್ಬಿದೆ ಈ ಕಡೆ ಬಾ (ರೂಢಿ). **ಗರ್ಬು** : ೧. ಪುಲ್ಲಂ ಮೇಯುಲೆಳಸಿ ಬಂದು ಮಯ್ಯ ತೀಂಟೆಗೆ ಪುಲಿ ಪೊರಳ್ದು ಪೋದ ತಾಣದೊಳ್ಮಿಂದು ಗರ್ಬಿಂಗಗಿದುರ್ಬುಗುಂದಿ ಹಮ್ಮದಂಬೋದ ಹರಿಣಂಗಳಿಂ (ರಾಜಶೇ. ೫-೫೫) ; ಹಿಡಿಹಿಡಿಕೆಯನ್ನೂ ಮೆಣಸನ್ನೂ ಸೇರಿಸಿ ಅಂಬಿಲದಲ್ಲಿ ತೊಳೆಯಲು ಗರ್ಬುವಾಗದು (ವಿವೈವಿ. ೩೭). **ಗೊಬ್ಬು₁** : ೨. 'ಗೊಬ್ಬುನುಡಿ' ಪರಾ.

[ದೇಶಿ ತುಳು. ತೆಲು. ಗಬ್ಬು]

**ಗಬ್ಬು₂** (ನಾ). ಸೊಕ್ಕು ; ಗರ್ವ : 'ಗಬ್ಬುಜವ್ವನೆ' ಪರಾ.

[< ಗಬ್ಬ₂]

**ಗಬ್ಬುಚಿಕ್ಕೆ** (ನಾ). ಒಂದು ಬಗೆಯ ಗಿಡ : ಗಬ್ಬುಚಿಕ್ಕೆ, ನರಕ ಭೂತಾಳೆ (ಮೈಔಗಿ. ೩೯-೭೭೧). [?]

**ಗಬ್ಬುಜವ್ವನೆ** (ನಾ). ಅತಿಯಾದ ಸೊಕ್ಕಿನವಳು ; ಏರುಂಜವ್ವನೆ : ಗಬ್ಬುಜವ್ವನೆಯರ ಕಣ್ಣುನೋಟದ ಹೊಸ ಹಬ್ಬವಲ್ಲವೆ ನಮ್ಮ ರಾಯ (ಭರಚ. ೬-೯೫). 'ಸೊಕ್ಕುಜವ್ವನೆ' ಪರಾ.

[ಗಬ್ಬು₂ + ಜವ್ವನೆ]

**ಗಬ್ಬುಜಾಲಿ** (ನಾ). ಜಾಲಿಯಲ್ಲಿ ಒಂದು ಬಗೆ ದುರ್ವಾಸನೆಯುಳ್ಳ ಗೊಬ್ಬಳಿ : ಹೊಟ್ಟೆಜಾಲಿ, ದೊಡ್ಡಮುಳ್ಳಿನ ಜಾಲಿ, ಆನೆಗೊಬ್ಬಿ, ಗಬ್ಬುಜಾಲಿ (ಮೈಔಗಿ. ೧-೧೫). [ಗಬ್ಬು₁ + ಜಾಲಿ₁]

**ಗಬ್ಬುನಾತ** (ನಾ). ಕೆಟ್ಟವಾಸನೆ; ದುರ್ವಾಸನೆ: ಸರಾಯಿ ಅಂಗಡಿ ಗಬ್ಬುನಾತ ಹೊಡೆಯುತ್ತಿದೆ (ಸಾಹೇಬ್. ೧೧೧); ಚರಂಡಿಯ ಗಬ್ಬು ನಾತ (ರೂಢಿ). [ಗಬ್ಬು$_1$ + ನಾತ]

**ಗಬ್ಬುನಾರು** (ಕ್ರಿ). ಕೆಟ್ಟವಾಸನೆ ಬೀರು; ದುರ್ವಾಸನೆ ಹೊಂದು: ಕಪ್ಪಾಗಿದ್ದ ನೆಲದ ಮೇಲೆ ಗಬ್ಬುನಾರುತ್ತಿದ್ದ ತೊಟ್ಟಿಯೊಂದಿತ್ತು (ಪುಸರು. ೧೪೦). [ಗಬ್ಬು$_1$ + ನಾರು$_1$ (< ನಾಱು$_1$)]

**ಗಬ್ಬುಸಣ್ಣಶಾವಂತಿ** (ನಾ). ಸೇವಂತಿಗೆಯಲ್ಲಿ ಒಂದು ಬಗೆ: ಗಬ್ಬು ಸಣ್ಣಶಾವಂತಿ, ಸೆಟ್ಟಗಬ್ಬುಶಾವಂತಿ (ಮೈಔಗಿ. ೭೩-೧೫೪). [?]

**ಗಬ್ಬುಸೊಪ್ಪು** (ನಾ). ಒಂದು ವಿಧವಾದ ಸಸ್ಯ: (ಮೈಔಗಿ. ೧೩-೨೨೯). [ಗಬ್ಬು$_1$ + ಸೊಪ್ಪು$_3$]

**ಗಬ್ಬುಹಿಡಿ** (ಕ್ರಿ). = ಗಬ್ಬುನಾರು: ಎಣ್ಣೆಯಲ್ಲಿ ಕರಿದ ಹಳೆಯ ತಿಂಡಿ ಗಬ್ಬುಹಿಡಿದಿದೆ (ರೂಢಿ). [ಗಬ್ಬು$_1$ + ಹಿಡಿ$_1$ (< ಪಿಡಿ$_1$)]

**ಗಬ್ಬುಹೊಡೆ** (ಕ್ರಿ). = ಗಬ್ಬುನಾರು: ಹೊಲಸು ಗಬ್ಬುಹೊಡೆಯುತ್ತಿದೆ (ರೂಢಿ). [ಗಬ್ಬು$_1$ + ಹೊಡೆ$_1$ (< ಪೊಡೆ$_1$)]

**ಗಬ್ಬುಳಗಂದಿ** (ನಾ). ಒಂದು ಬಗೆಯ ವಸ್ತ್ರ, — ಬಟ್ಟೆ: ಪಳಿಪಟ್ಟೆ ಪುಲ್ಲಿ ಚೀನಾಂಬರದ ಸರಿ ಗಬ್ಬುಳಗಂದಿ ಮೇಘವಣ್ಣಿಗೆಯ ತಲೆಯ ಮೇಲೆಲ್ಲರ್ಗೆ ಕಱಿಕಿದರು ವಸ್ತ್ರದ ಮಳೆ ತಾನೆ ಕಱಿದುದೆಂಬಂತೆ (ಭರಚ. ೭೩-೧೧೩). [?]

**ಗಬ್ಬು** 'ಗಬ್ಬಲು'. ನೋ.

**ಗಭಸ್ತಿ** (ನಾ). ೧. ಕಿರಣ; ರಶ್ಮಿ; ಪ್ರಕಾಶ: ದಂತಗಭಸ್ತಿಗಳ್ ನಿಜಾಸ್ಯದಿನೊಗೆತರೆ... ಕನಸಂ ಪೇೞ್ದಳ್ (ಜಗವಿ. ೨-೮೧); ಪ್ರಸ್ತುತ ದೊಳೊಗೆದ ಮುಂಬೆಳಗಮಲದಂತದ ಗಭಸ್ತಿ (ಜೈಮಿಭಾ. ೧-೩). ೨. ಸೂರ್ಯ; ನೇಸರು: 'ಗಭಸ್ತಿಮಂಡಲ' ಪರಾ. [ಸಂ.]

**ಗಭಸ್ತಿಕರ** (ನಾ). ಕಿರಣಗಳೇ ಕೈಯಾಗಿರುವವನು; ಸೂರ್ಯ. [ಗಭಸ್ತಿ + ಕರ$_3$]

**ಗಭಸ್ತಿಮಂಡಲ** (ನಾ). ಸೂರ್ಯಮಂಡಲ, — ಬಿಂಬ: ವಿಸ್ತರಿಸ ಲೇನಮನು ರಾಹುಗ್ರಸ್ತವಾದಂದದಲಿ ಚಂಡ ಗಭಸ್ತಿಮಂಡಲವಿಳೆಗೆ ಕಾಣಿಸದಾಯ್ತು (ತೊರರಾ. ೬-೨೮-೫೭). [ಗಭಸ್ತಿ + ಮಂಡಲ]

**ಗಭಸ್ತಿಮಾಲಿ** (ನಾ). ಕಿರಣಗಳ ಮಾಲೆಯನ್ನು ಹೊಂದಿರುವವನು; ಸೂರ್ಯ: ಸಕಲ ಜಗಜ್ಜನ ಸಂಸ್ತೂಯಮಾನ ಗುಪ್ತಾನ್ವಯ ಜಲಧರ ಮಾರ್ಗ ಗಭಸ್ತಿಮಾಲಿಯಂ (ಪಂಚತಂ. ೧೯೪-೩). [ಸಂ. ಗಭಸ್ತಿಮಾಲಿನ್]

**ಗಭೀರ** (ಗು). ೧. ಗಂಭೀರವಾದ; ಗಹನವಾದ; ಘನವಾದ; ಉದಾತ್ತವಾದ. 'ಗಭೀರನಿನದ', 'ಗಭೀರನಿನಾದ' ಪರಾ. (ನಾ). ೨. ಗಂಭೀರವಾದುದು; ಆಳವಾದುದು; ಗಹನವಾದುದು; ಉದಾತ್ತವಾದುದು: "ಗುಣ್ಪು ಗಭೀರಂ" (ಕವಿಕಂ. ೨೨೯); ಆಳೋಚಿಸೆ ನಿನ್ನ ತತ್ತ್ವಮು[ವಿ] ಸಂವಾದಂ ದುರಾಪಂ ಗುಣಾಬ್ಧಿ ಗಭೀರಂ ಭವದೀಯಂ (ಶಾಂತಿಪು. ೮-೧೫೮); ಕಳಾವಿಭವದೊಳ್ ಭುಜವಿಕ್ರಮ ದೊಳ್ ಗಭೀರದೊಳ್ ಗರಿಮೆಯೊಳ್... ನಿನಗಾರ್ ದೊರೆ ಮಾನ ವರೀ ಧರಿತ್ರಿಯೊಳ್ (ಪುಷ್ಪಪು. ೮-೬೭); ಜೈನೀಯ ಶಾಸನಂ ವಿಶ್ರುತ ಮಖಿಳಹಿತಂ ದೋಷದೂರಂ ಗಭೀರಂ (ಎಕ. II, ೬೫-೨; 1313); ಪಾರಾವಾರ ಗಭೀರಂ... ಅಖಿಲ ಸುಜನಾಧಾರಂ (ಅಪ್ರತಿ. ೩೪-೧೪). [ಸಂ.]

**ಗಭೀರಗುಣ** (ನಾ). ೧. ಆಳವಾಗಿರುವಿಕೆ; ಗಹನತೆ. ೨. ಉದಾತ್ತವಾದ ಗುಣ; ಘನತೆ; ಗಾಂಭೀರ್ಯ. ೧,೨: ಸಲೆ ಸಂದ ವಜ್ರ ಪಂಜರಮಾನನಾರತಂ ಪಳಿವುತಿರ್ಪುದು [ಕಾ] ವಗುಣಂ ಪರೀಕ್ಷಿಸಲ್ಸರಧಿ ಯನೆ[ಯ್ದೆ] ಜಿ [ವ] × ಪುದು ತನ್ನ ಗಭೀರಗುಣಂ... [ಕ]ಲಿ ಕನ್ನ ಭೂಪನ (ಸೌಇಇ. XX, ೫೦-೧೪; ?). [ಗಭೀರ + ಗುಣ$_1$]

**ಗಭೀರಧ್ವಾನ** (ನಾ). ಘನವಾದ ಧ್ವನಿ: ಭೇರಿಯ ಗಭೀರಧ್ವಾನದಿಂ ದಿಗ್ಗಜಾವಳಿ ಕಂಪಂಗೊಳೆ (ರಾಜಶೇ. ೧೩-೭೭). [ಗಭೀರ + ಧ್ವಾನ]

**ಗಭೀರನಿನದ** (ನಾ). ೧. = ಗಭೀರಧ್ವಾನ. ೨. ಘನವಾದ ಧ್ವನಿಯುಳ್ಳವನು: ದುಂದುಭಿ ಗಭೀರನಿನದಂ ದುಂದುಭಿ ಸಂವತ್ಸರೋದ್ಭವಂ... ಪಂಪಂ (ಆದಿಪು. ೧-೩೩). [ಗಭೀರ + ನಿನದ]

**ಗಭೀರನಿನಾದ** (ನಾ). = ಗಭೀರಧ್ವಾನ: ರಥಿಕರು ತಾಗಿದರು ವಾದ್ಯ ಗಭೀರನಿನಾದದೇಳ್ಗೆಯಲಿ (ನಾಗಕು. ೧೮-೭೮) [ಗಭೀರ + ನಿನಾದ]

**ಗಭೀರವೃತ್ತಿ** (ನಾ). ೧. ಗಂಭೀರವಾದ ವ್ಯವಹಾರ, — ನಡೆವಳಿಕೆ. ೨. ಆಳವಾಗಿರುವಿಕೆ. ೩. ಗಂಭೀರವಾದ ಶಬ್ದಾರ್ಥವ್ಯಾಪಾರ. ೨,೩: ಸತತಗಭೀರವೃತ್ತಿಯಿನುದಾರತೆಯಿಂ ಜಗದೇಕಜೀವನಸ್ಥಿತಿಯಿನತಿ ಪ್ರಸಾದಗುಣದಿಂ ರಸಭಾವವಿಳಾಸದಿಂ ಕವಿಪ್ರತತಿ ನಿತಾಂತ ಸೇವ್ಯತೆ ಯಿನೊಂದಿ ಸರಸ್ವತಿಯಂದದಿಂ ಸರಸ್ವತಿ ದಯೆಗೆಯ್ಗೆ ನಮ್ಮೊಳನು ಕೂಲತೆಯಿಂದವೆ ನಿರ್ಮಳತ್ವಮಂ (ಕಾದಂಪೂ. ೨). [ಗಭೀರ + ವೃತ್ತಿ]

**ಗಭೀರೋಕ್ತಿ** (ನಾ). ಗಂಭೀರವಾದ ನುಡಿ, — ಮಾತು: ಮುಕುಂದಂ ... ದಿವ್ಯ ಗಭೀರೋಕ್ತಿಯಿಂದಮಾಗಳ್ ಪೇೞ್ದಂ (ಜಗವಿ. ೪-೮೧). [ಗಭೀರ + ಉಕ್ತಿ]

**ಗಮ$_1$** (ನಾ). ಸುವಾಸನೆ; ಪರಿಮಳ: ಆಕಾಶದ ಮ್ಯಾಗಣ ಧೂಪದ ಗಮವೇನೆ ಅತ ಬಸವಣ್ಣನ ಶಿವಪೂಜೆಯಾಗುವಾಗ ಆಕಾಶದ್ ಘಂಟೆ ಘಣೆರೆಂದೊ (ಸಾಪದ. ೨೨೧-೧೧). 'ಕಮ್ಮಿತ್ತು', 'ಘಂ' ಪರಾ.

**ಗಮುಗಮ** (ದ್ವಿರುಕ್ತಿ). ಗಮುಗಮಾ ಗಮಾಡಸತಾವ ಮಲ್ಲೀಗಿ (ಗಂಗಾತ. ೭೦-೧).; ಕಾಫಿ ಮಾಡಬೇಕಮ್ಮ ಬಿಸಿಬಿಸಿಯಾಗಿರಬೇಕು, ಗಮುಗಮಾಂತ ಇರಬೇಕು (ಸ್ವಾಮಿಸ್ನೇ. ೪೩). 'ಮಗಮಗ' ಪರಾ. **ಗಮುಗಮು ಅನ್ನು** = ಸುವಾಸನೆಯಿಂದ ಕೂಡಿರು: ಮಲ್ಲಿಗೆ ಹೂವಿನಿಂದ ಕೋಣೆಯೆಲ್ಲ ಗಮುಗಮು ಅನ್ನುತ್ತಿತ್ತು (ರೂಢಿ). [ದೇ. ‖ ತಮಿ. ತುಳು. ಗಮುಗಮು; ತೆಲು. ಗಮ್ಮು]

**ಗಮ$_2$** (ನಾ). ೧. ಹೋಗುವುದು; ಮುನ್ನಡೆ; ಚಲನೆ. ೨. ದುಡುಕು; ಚಪಲತೆ. ೩. ಅಲ್ಪಜ್ಞಾನ. [ಸಂ.]

**ಗಮುಂಡ** 'ಗಾಮುಂಡ'. ನೋ.

**ಗಮುಕ** (ಗು). ೧. ಸ್ಪಷ್ಟಪಡಿಸುವ; ಮನದಟ್ಟುಮಾಡುವ; ತಿಳಿಸುವ. (ನಾ). ೨. ಸಹಾಯಕವಾದ ಅರ್ಥವಿಶೇಷ: ಸಮನಿಸೆ ಸಾಪೇಕ್ಷಮುಮಾ ಸಮಾಸಮುಂ ಪೆಱಗುಮೆಲ್ಲಿಯಾನುಂ ಗಮಕಂ (ಕವಿರಾ. ೨-೯೩); ಇಲ್ಲಿ ಉತ್ಪ್ರೇಕ್ಷೆಗೆ ಸರಿಯಾದ 'ಗಮಕ'ಗಳಿವೆ (ಧ್ವನ್ಯಾಲೋ. ೧೧೮). ೩. ಬಗೆ; ಕ್ರಮ; ರೀತಿ: ತಿಳಿದು ಕಾಲದ ಗತಿಯ ಗಮುಕಂಗಳನಱಿದು ನಡೆವವರುಗಳು ನಿರ್ಮಳದಲೆಡಹದೆ ಬೆರಸಿಕೊಂಬರು ಮುಕ್ತಿರಾಜ್ಯವನು (ಕುವ್ಯಾಉ. ೪-೩೪). ೪. ಘನತೆ; ಗಾಂಭೀರ್ಯ; ಠೀವಿ; ಬೆಡಗು; ಸೊಗಸು; ಗತ್ತು: ಇದು ಚಿತ್ರಮಿಾ ಗಮುಕಮಿಾ ಪರಿಯಾ ದರಹಾಸಮಿಾ ಬೆಡಂಗೆಂದಿನ ಭಂಗಿಯಲ್ಲಿದು (ಜಗವಿ. ೨-೮೦); ಮತಿಯಂ ಬುದ್ಧಿಯ ಜಾಡ್ಯಮಂ ಗಮುಕಮಂ ಗಾಂಭೀರ್ಯಮಂ ... ಶತಕಾರ್ಥಂ ಕೊಡದಿರ್ಪುದೇ (ಸೋಮೇಶ. ೧೦೨); ಬಂದನು ಹಿಮವಂತದೇವನು ಕನ್ನೆಯ ಮಂದಿರವೆರಸು ಗಮುಕದೊಳು (ಭರಚ. ೩೭-೪).

೫. ಉತ್ಸಾಹ; ಸಂಭ್ರಮ: ನಿನ್ನಯ ಕುವರಿ ತನ್ನಾಟದೊಂದು ಗಮಕದಿಂ ಸಲ್ಗೆಯಿನೆನ್ನ ಕಣ್ಗಳಂ ಕುರ್ಕಿ ನೋಯಿಸಿದಳ್ (ರಾಮಾಶ್ವ. ೬೬-೨೪). ೬. ರಸೋಚಿತವಾದ ರಾಗಗಳನ್ನು ಸಂಯೋಜಿಸಿ ಸಹೃದಯರ ಮನಮುಟ್ಟುವಂತೆ ಕಾವ್ಯಗಾಯನ ಮಾಡುವ ಕಲೆ: ಗಮಕ:-ಶಾಸ್ತ್ರಶುದ್ಧವಾದ ಸಾಂಪ್ರದಾಯಿಕ ಹಾಡುಗಾರಿಕೆ, ಹಾಡಿನ ಹೃದಯವು ಸ್ಪಷ್ಟವಾಗುವಂತೆ ಹೇಳುವ ರೀತಿ (ಸಾಹಿವಿ. i, ಟಿಪ್ಪಣಿ); ಸಭೆಯು ಭಾರತೀನಂಜನೆಂಬನ ಗಮಕದಿಂದ . . . ನರ್ತನ ಜಡೆ ಕೋಲಾಟಗಳಿಂದ ಆರಂಭವಾಗುತ್ತದೆ (ಸಂಸಕ. ೧೨೦); ಅರಸಿಕನಿಗೆ ಏಕೆ ಕಾವ್ಯದ ಗಮಕವು (ಇಂಚಾಪ. ೭೮-೭೮). ೭. ಬೋಧನೆ; ಉಪದೇಶ: ದಯೆಯಿಂದೊಳ್ಪಿನ ತೆಳ್ಪಿನಿಂ ಗುಣಗಣಾಳಂಕಾರದಿಂ ಮಾರ್ಗ್ಗ ನಿರ್ಣ್ಣಯದಿಂ ತತ್ವವಿಚಾರದಿಂ ಗಮಕದಿಂದಾಹಾರ ಭೈಷಜ್ಯಸಾಭಯ ಶಾಸ್ತ್ರಾಮುಳದಾನದಿಂದಧಿಕನೆಂದಂದೊಳ್ಪಿನಿಂ ಶಾನ್ತಿವರ್ಮ್ಮನ ವಿಖ್ಯಾತಿಯನೊಂದೆ ನಾಲಗೆಯೊಳಿನ್ನೇವಣ್ಣಿಪೋಂ (ಸೌಇಇ. XX, ೧೮-೨೦ ; 980). ೮. ಉಪದೇಶ ಮಾಡುವವನು; ಬೋಧಕ: ಅನುಷ್ಠಾಣ ನಿಷ್ಠಿತಾತ್ಮರ್ನ್ನಗಟ್ಬಾದಗಮಿಕರ್ಗ್ಗಮಕರ್ತ್ರತ್ಪುರುಷ ಮುನೀಶ್ವರರ್ (ಸೌಇಇ. XI – i, ೧೧೬-೧೯ ; 1075). ೯. [ವ್ಯಾಕ] ಸಮಾಸಗಳಲ್ಲಿ ಒಂದು: ಜನಿಯಿಸುಗುಂ ಸಂಖ್ಯಾ ಸರ್ವನಾಮ ಗುಣವಚನ ಕೃತ್ತ್ಪೂರ್ವಂ ಗಮಕಂ ತನಗತ್ವಂ ಪೆಱಗಿತ್ವಂ ತನಗಱಿಪದನಿಲ್ಲ ಕರ್ಮಧಾರಯಮದುವುಂ (ಶಮದ. ೧೬೮). ೧೦. [ಸಂಗೀತ] ಬೇರೊಂದು ಶ್ರುತಿಯನ್ನು ಅವಲಂಬಿಸಿ ಸ್ವಂತ ಶ್ರುತಿಸ್ಥಾನದ ಛಾಯೆಯಿಂದ ಮೂರ್ಛನೆಯನ್ನು ಮುಟ್ಟುವ ಸ್ವರ ವಿಶೇಷ: ಪದ ಕೊರಲಿಂಪನಪ್ಪುಕೆಯೆ[ಕೊಂಕುನ]ಯಂ ಗಮಕಂಗ್ಗಳಿಂ ಪೊದರ್ಕೊರ್ದಳೆಱದಿಕ್ಕಿದಂತೆ ಸುತಿಯೊಳ್ ಸಮವಾಗಿರೆ . . . ಮೇನಕೆ ಸರಸ್ವತಿ ಬಾಯ್ದೆಱದಂತೆ ಪಾಡಿದಳ್ (ಪಂಪಭಾ.. ೭-೮೮); ಭಣಿತೆ ಬೆಡಂಗು ಕಾಕು ಖಚರಂ ಗಮಕಂ ತಿರುಪಿಂಪು ನುಣ್ಪು ನೇವಱ. . .ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮುಂ (ಜಗವಿ. ೫-೩); ಆ ಶ್ರುತಿಯೊಳಿಪ್ಪತ್ತೆರಡು ಗಮಕಮಕ್ಕು (ಮಂಗರಾ. ೨೩-೫). [ಸಂ.]

**ಗಮಕಕಲೆ** (ನಾ). ಕಾವ್ಯಗಾಯನ ಮಾಡುವ ಕಲೆ: ಏನಿದು ನಿನ್ನ ಗಮಕಕಲೆ? ಅದ್ಭುತ (ಚಂದ್ರಹಾ. ೮೬). [ಗಮಕ + ಕಲೆ$_3$]

**ಗಮಕರಿಸು** (ಕ್ರಿ). ಪರಿಮಳಗೊಳಿಸು: ಗಮಕರಿಸಿ ಮಾರಿಗವುತಣ ಪೇಳ್ದ ಮಾಳ್ಕೆಯಿಂದ (ಘೋರಾಸು. ೧೧೪-೮).
[< ಗಮ$_1$ + -ಇಸು$_3$]

**ಗಮಕವೆಱು** (ಕ್ರಿ). ಸೊಗಸನ್ನು ಹೊಂದು; ಅಂದವಾಗು; ಶೋಭಿಸು: ರಂಗೆಸೆವ ಧ್ವಜಪಟಾವಳಿ ಛತ್ರಚಾಮರಗಳಿಂ ಗಮಕವೆತ್ತು ಕೈತಾಳ ಜೇಗಟೆ ಗಂಟೆ. . . ನಾನಾ ವಾದ್ಯಘೋಷಣಂ (ಗುರುಚಾ. ೩-೪೩). [ಗಮಕ + ಪೆಱು$_1$]

**ಗಮಕಸಪ್ತಕ** (ನಾ). [ಸಂಗೀತ] ಕಂಪಿತ, ಸ್ಫುರಿತ, ನೀಲ, ಭಿನ್ನ, ಸ್ಥಾವರ, ಆಹತ, ಆಂದೋಲಿತಗಳೆಂಬ ಏಳು ಬಗೆಯ ಗಮಕ: ಸುಗತಿಯಿಂದನುಬದ್ಧಗೂಡಿ ಪ್ರಗಣಿತಾಳತಿಯೆಸೆಯೆ ಸಂಧಿಸೆ ಗಮಕಸಪ್ತಕವು (ಬಸಪು. ೧೯-೧೦). [ಗಮಕ + ಸಪ್ತಕ]

**ಗಮಕಸಮಾಸ** (ನಾ). = ಗಮಕ ೯: ಪರಪದದೊಳ್ ಕಾರಕಮುಂ ಪೂರ್ವಪದದೊಳ್ ಸಂಖ್ಯಾಸರ್ವನಾಮ ಗುಣವಚನ ಕೃತ್ಪದಂಗಳಾವು ವಿರ್ದೊಡಂ ಗಮಕಸಮಾಸಮಕ್ಕುಂ (ಶಮದ. ೧೬೮ ವೃತ್ತಿ); ಸಂಖ್ಯಾ ಸರ್ವನಾಮ ಗುಣವಚನ ಕೃದಂತಗಳು ಪೂರ್ವಪದವಾಗಿದ್ದು ಉತ್ತರ ಪದವು ಕಾರಕವಾಗಿದ್ದರೆ ಗಮಕಸಮಾಸ (ಕೈಪಿಡಿ. ೨೨).
[ಗಮಕ + ಸಮಾಸ]

**ಗಮಕಿ** (ನಾ). (ಕಾವ್ಯಗಳನ್ನು) ಸಹೃದಯರ ಮನಮುಟ್ಟುವಂತೆ ಓದುವವನು, —ವಾಚನಮಾಡುವವನು: "ಲಿಪಿಯನೋದುವಂ ಗಮಕಿ ವಾಚಕನಕ್ಕು" (ಮಂಗರಾ. ೧೦೬-೧೬); ಕವಿ ಗಮಕಿ ವಾದಿ ವಾಗ್ಮಿಪ್ರವರರ ಪಂಡಿತರ . . . ಓಲಗದೊಳಿರ್ದನಾಗಳ್ ಹರಿಗಂ (ಪಂಪಭಾ. ೩-೮೦); ಮಲ್ಲಜಟ್ಟಿಗಳ ಕವಿಗಳ ಗಮಕಿಗಳ ವಾದಿಗಳ (ಬಸರ. ೬-೨೪); ಉಬ್ಬಾಳು ಮಿಗೆ ಕೈನೆಗಹಿ ಕೈವಾರಿಸುವ ಗಮಕಿಗಳು (ಕುವ್ಯಾದ್ರೋ. ೪-೫೨). [ಸಂ. ಗಮಕಿನ್]

**ಗಮಕಿತೆ** (ನಾ). ಗಮಕ ಕಲೆ; ಗಮಕ: ಸುಶ್ರಾವ್ಯವಾಗಿ ವಾಚಿಸಿ ಕುಮಾರವ್ಯಾಸನನ್ನು ಗಮಕಿತೆಯ ಪರಮ ಸ್ವರ್ಗ್ಗಕ್ಕೇರಿಸಿ, ಆ ಗಮಕಿ ಧನ್ಯನಾಗುವನು (ಬೆಟ್ಟಆ. ೮೪-೧೬). [ಸಂ. ಗಮಕಿತಾ]

**ಗಮಕಿಸು** (ಕ್ರಿ). ಆತುರಪಡು; ದುಡುಕು: ಫಕ್ಕನೆ ಬಂದಾಗ ಗಮಕಿಸಿ ಪಿಡಿಯಲು ಸಿಕ್ಕದೆ ಅತ್ತಿತ್ತ ತೊಲಗೆ (ಯನಳ.೮೮). [< ಗಮ$_2$ + -ಇಸು$_3$]

**ಗಮಕು** (ನಾ). ಸೊಗಸು; ಬೆಡಗು; ಠೀವಿ: ಗಂಧದ ಬೊಟ್ಟು ಗಮಕಿಲೆ ಇಟ್ಟು ಹಂಗನೂಲು ಹಾಕಿಯೆಷ್ಟು (ಶರೀಫ. ೩೭-೨).
[< ಗಮಕ ./ ಮರಾ. ಗಮಕ್, ಗಮಕಾ]

**ಗಮುಗಮಿಸು** (ಕ್ರಿ). ಹೆಚ್ಚಾದ ಸುವಾಸನೆಯಿಂದ ಕೂಡಿರು; ಅತಿಯಾದ ಪರಿಮಳವನ್ನು ಹರಡು: ಸುಗಂಧ ದ್ರವ್ಯಗಳಿಂದ ಗಮುಗಮಿಸುವಂತೆ ನಿನ್ನ ಭಕ್ತರು ಧೂಪಹಾಕುತ್ತಿರುವರು (ಹುಟ್ಟಿಹ. ೧೬೪); ಆ ಹೊತ್ತು ಮಸೀದೆಗಳೆಲ್ಲ ಗಮುಗಮಿಸಿದವು (ಹಬ್ಬಬ. ೧೩). 'ಮಗಮಗಿಸು' ಪರಾ. [ಗಮುಗಮು + -ಇಸು$_3$]

**ಗಮುಜು** (ನಾ). ಸೊಕ್ಕು; ಅಹಂಕಾರ; ಗರ್ವ; ಮದ: ಮತ್ತೂ ನಿಮ್ಮ ಗಮುಜಿನಾಗ ನೀವಿದ್ದಿರಿ (ಹೊಸಂಸಾ. ೫೪); ರಮಾಬಾಯಿ ಶ್ರೀಮಂತಿಕೆ ಗಮುಜೆಲ್ಲಾ ಇಳಿಸಲೇಬೇಕು ಕೆಳಗೆ (ಬಾಂಡಾಯ. ೬೦); ರೊಕ್ಕದ ಗಮುಜಿತ್ತು (ದೀಪಹ. II, ೧೯೩).
[← ಮರಾ. ಗಮುಜಾ, ಗಮ್ಜಾ; ಪಾರ. ಗಮ್ಜಾ]

**ಗಮುಟು** 'ಗವುಟು' ನೋ.

**ಗಮನ$_1$** (ನಾ). ಸುವಾಸನೆ; ಕಂಪು: ಅಮ್ಮಾನ ಗುಡಿಸುತ್ತ ಗಮ್ಮಾನದೇನೀರೆ ಗಂಡು ಭೂತಾಳಿ ಗಜನಿಂಬೆ ಗಮನಕ್ಕೆ ಗೂಡು ಕಟ್ಟೇವೆ ಅರಗಿಳಿ (ಜಗೀತೆ. ೧೩). [< ಗಮ$_1$]

**ಗಮನ$_2$** (ನಾ). ೧. ಹೋಗುವುದು; ನಡೆಯುವುದು; ಮುನ್ನಡೆ: "ಗಮ್, ಗಮನಂ . . . ಗತಂಈ ೯ ಗಮನಂ" (ಕಾಶಕ್ಕ. ೭೬). ೨. ನಡಗೆ; ನಡೆ: ದೃಢವಾದ ಮತ್ತು ಸುಂದರವಾದ ಗಮನದಿಂದ . . . ಕಿಟಕಿಯ ಮುಂದೆ ಹೋದಳು (ಮಲೆನಾ. ೬೬). ೩. ಸಂಭೋಗ; ಕೂಟ. 'ಪರದಾರಗಮನ' ಪರಾ. ೪. ಲಕ್ಷ್ಯ; ಅವಧಾನ: ಅವರ ಜ್ಞಾನದ ಒರತೆ ಗಮನ ಮತ್ತು ಅಮೂಲ್ಯವೇಳೆ ಈ ಕಡೆಗೆ ಹೊರಳದಿರುವುದು (ದ್ರಾವಿವಿ. ೩. ಹಿನ್ನೆಲೆ). [ಸಂ.]

**ಗಮನಗೇಡಿಕೆ** (ನಾ). ಗಮನವಿಲ್ಲದಿರುವಿಕೆ: ಈ ಶೈಥಿಲ್ಯಕ್ಕೆ, ನಿಶ್ಶಕ್ತಿಗೆ, ಅಡ್ಡಾದಿಡ್ಡಿಗೆ, ಗಮನಗೇಡಿಕೆಗೆ ಕಾರಣವಾವುದು? (ಕಬಸಾ. XXIII, ಪೀಠಿಕೆ). [ಗಮನಗೇಡು$_0$ + -ಇಕೆ]

**ಗಮನ ಪ್ರಾಯಶ್ಚಿತ್ತ** (ನಾ). [ಜೈನ] ಶ್ರಮಣರ ಪ್ರಯಾಣದಲ್ಲಿ ಉಂಟಾಗುವ ಕ್ರಿಮಿಕೀಟಾದಿಗಳ ಹಿಂಸೆಗಾಗಿ ಆಚರಿಸುವ ಪ್ರಾಯಶ್ಚಿತ್ತ: ಗಮನ ಪ್ರಾಯಶ್ಚಿತ್ತ ನಿಮಿತ್ತಂ ಸುದತ್ತಾಚಾರ್ಯರ್ ಪುರೋಪವನಮಂ ಸಾರ್ದರ್ (ಯಶೋಚ. ೧-೪೪). 'ಪಂಥಾತಿಚಾರ' ಪರಾ. [ಗಮನ$_2$ + ಪ್ರಾಯಶ್ಚಿತ್ತ]

**ಗಮನಸೆಳೆ** (ಕ್ರಿ). ಲಕ್ಷ್ಯವನ್ನು ಎಳೆ; ಮನಸ್ಸನ್ನು ಸೆಳೆ: ಅತ್ತಣಿಂದ ಗಮನಸೆಳೆಯಲು ಹೇಳಿದೆ (ಬಾಣಅ. ೫).

**ಗಮನಸೆಳೆಯುವ ಸೂಚನೆ** = ಒಂದು ಗೊತ್ತಾದ ವಿಷಯದ ಬಗ್ಗೆ ಅಧಿಕಾರಿಗಳ ಗಮನವನ್ನು ಸೆಳೆಯಲು ಶಾಸನಸಭೆ ಮೊದಲಾದ ಕಡೆಗಳಲ್ಲಿ ಮಂಡಿಸಲಾಗುವ ಸೂಚನೆ: (Calling attention Notice ಪತ್ರಿನಿ. ೧೨); ವಿಧಾನಸಭೆಯಲ್ಲಿ ಗಮನಸೆಳೆಯುವ ಸೂಚನೆಯನ್ನು ಮಂಡಿಸಿದರು (ರೂಢಿ).
[ಗಮನ್ನ + ಸೆಳೆ$_1$]

**ಗಮನಾಗಮನ** (ನಾ). ೧. ಹೋಗುವುದು ಮತ್ತು ಬರುವುದು. ೨. ತಿರುಗಾಟ; ಸಂಚಾರ: ಈ ಮಾರ್ಗದಿಂದಲೇ ಇಬ್ಬರು ಜಹಗೀರುದಾರರೂ ಗಮನಾಗಮನಗಳನ್ನು ಇಟ್ಟುಕೊಂಡಿದ್ದರು (ಚೆನ್ನಬೇ. ೭೪). ೩. ಹೋಗಿಬರುವ ರೂಢಿ; ಆಗಾಗ್ಗೆ ಭೇಟಿಕೊಡುವುದು: (ಕ). ೪. ಸಾಯುವುದು ಮತ್ತು ಹುಟ್ಟುವುದು: ಸಂಸಾರಾವಸ್ಥೆಯಲ್ಲಿ ಜೀವನಿಗೆ ಗಮನಾಗಮನ ಎಂದರೆ ಹುಟ್ಟುವುದು ಮತ್ತು ಸಾಯುವುದು ಈ ಪರಂಪರೆಯು ತಪ್ಪಿದ್ದಲ್ಲ (ಭಾತತ್ತ್ವ. ೫೩೫).
[ಗಮನ್ನ$_2$ + ಆಗಮನ]

**ಗಮನಾರ್ಹ** (ಗು). ಗಮನಿಸಬೇಕಾದ; ಲಕ್ಷ್ಯಕೊಡಲು ಯೋಗ್ಯವಾದ: ಇಂಥ ಸಂದರ್ಭಗಳಲ್ಲೆಲ್ಲಾ ಗಮನಾರ್ಹವೆಂದು ಅರ್ಥಪೂರ್ಣವೆಂದು ತನಗೆ ತೋರಿದ ಅಂಶಗಳನ್ನು ಮಾತ್ರ . . . ಆರಿಸಿಕೊಳ್ಳುತ್ತಾನೆ (ಸಮಾಲೋ. ೧೧೩). [ಗಮನ್ನ$_2$ + ಅರ್ಹ]

**ಗಮನಾಲಸ** (ಗು). ನಡಿಗೆಯಲ್ಲಿ ಮಂದವಾದ, — ನಿಧಾನವಾದ: ಅಚ್ಯುತಂ ಬಳೆಯೆ ತನ್ನುದರಾಂತರದೊಳ್ ತದೀಯ ನಿರ್ಭರ ಭರದಿಂದವಾದ ಗಮನಾಲಸವೃತ್ತಿಯನೇನನೆಂದಪೆಂ (ಜಗವಿ. ೨–೯೭).
[ಗಮನ್ನ$_2$ + ಆಲಸ]

**ಗಮನಿ$_1$** (ನಾ). ೧. ಮೋಸಗಾರ; ಠಕ್ಕ; ವಂಚಕ: (ಕ). ೨. ಪ್ರವೃತ್ತಿಮಾರ್ಗವನ್ನು ಹಿಡಿದವನು; ಇಹಲೋಕಾಸಕ್ತಿಯುಳ್ಳವನು; ಲೌಕಿಕ: ಶರಣ ಗಮನಿಯಾದಡೆ ಕಿಱಿದೆಂಬರು ಶರಣ ನಿರ್ಗಮನಿಯಾದಡೆ ಹಿರಿದೆಂಬರು (ಅಖಂಡೇ. ೩೦೬–೮೯).
[ಸಂ. ಗಮನಿನ್]

**ಗಮನಿ$_2$** (ನಾ). ಒಂದು ನಾಡಿ: ಧಮನಿ, ಗಮನಿ, ಲೋಲೆ, ಧೃತಿ ಸರ್ವಗಾ ಎಂಬೈದು ನಾಮವನುಳ್ಳ ನಾಡಿಯು . . . ಐದು ಬೆರಳಿಗೂ ಪ್ರಧಾನವಾದ ಹೆಬ್ಬೆಟ್ಟಿನ ಮೂಲದಲ್ಲಿರುವ ನರದಮೇಲೆ ಸಣ್ಣನಾಗಿ ಕಾಣಬರುವುದು (ಸಕವೈ. ೧೦). [ಸಂ. ಗಮನೀ]

**ಗಮನಿಕೆ** (ನಾ). [ಜೈನ] ಅನ್ವಯವಾಗುವಿಕೆ; ಹೊಂದಾಣಿಕೆಯಾಗುವಿಕೆ: ಆಗಸದೊಳಡರ್ದು ಪರಿದಿರದೀಗಡೆ ನಿರ್ವಾಣರೇಖೆಗೊಂಡನೊ ಬಿದಿಯೆಂಬೀ ಗಮನಿಕೆಯಂತಾದೇವಾಗಮ[ನ]ದ ಚೆಲ್ವುವಾಗಗೋಚರಮಲ್ತೇ (ಶಾಂತಿಪು. ೧೦–೫); ಸಾಮಾನ್ಯ ಗುಣಸ್ಥಾನದೊಳ್ಪೇಳ್ದಂತೆ ಗಮನಿಕೆಯಱಿಯಲ್ಪಡುಗುಂ (ಗೊಮ್ಮಸಾ. ೨೦–೧); ಸ್ತ್ರೀವೇದಿಗಳೊಳ್ಪೇಳ್ದಂತಪ್ಪುವು ಗಮನಿಕೆಯುಮಾ ಪ್ರಕಾರಮೆಯಕ್ಕುಂ (ಗೊಮ್ಮಸಾ. ೨೦–೬). [ಸಂ. ಗಮನಿಕಾ]

**ಗಮನಿಸು** (ಕ್ರಿ). ೧. ಹೋಗು; ನಡೆ: ಎನುತ ಮೆಲ್ಲನೆ ಗಮನಿಸುತ್ತಂ ಘನವನಾಂತರದೊಳು ಪೊಗುತ (ಬಸವು. ೨೬–೩೪); ಭೂಕಾಂತನೋಲಗಕೆ ಗಮನಿಸಿ ತನ್ನೃಪಾಲನಂ ಕಂಡು (ಪದ್ಮರಾ. ೬–೫); ಹಿರಿದಾಗಿ ವನದಲಿ ತೊಳಲಿದಿರಿ ಸಾಕಿಂದು ಗಮನಿಸಿರೆಂದು ಬೀಳ್ಕೊಟ್ಟ (ನಳಚ. ೨–೪೭). ೨. ಲಕ್ಷ್ಯಕೊಡು; ಗಮನಿಸು: ನಾವು ಕಾಣುವ ನೃತ್ಯಗಳಲ್ಲಿ ಒಂದು ಮೂಲಭೂತವಾದ ಸಾಂಪ್ರದಾಯಿಕ ಏಕಮತ್ಯವನ್ನು ಗಮನಿಸಬಹುದು (ಭಾರಜಾ. ೨೫); ಅವನು ಅದನ್ನು ಗಮನಿಸಲೇ ಇಲ್ಲ (ಚೆಂಗಾಳ್ವ. ೬೭).
[ಗಮನ್ನ$_2$ + -ಇಸು$_1$]

**ಗಮನೀಯ** (ಗು). ೧. ಹೋಗಬೇಕಾದ; ಪ್ರವೇಶಿಸಲು ಸಾಧ್ಯವಾದ. ೨. ಗಮನಿಸಬೇಕಾದ; ಲಕ್ಷ್ಯಕೊಡಬೇಕಾದ. (ನಾ). ೩. ಗಮನಿಸಬೇಕಾದುದು; ಲಕ್ಷಿಸಬೇಕಾದುದು: ಅವರು ಕಚೇರಿಗಳಲ್ಲಿ ತಂಬೂರಿಯನ್ನು . . . ಮಲಗಿಸಿಟ್ಟುಕೊಂಡಿರುತ್ತಿದ್ದರೆಂಬುದು ಗಮನೀಯ (ಸಂಗೀತ. ೯). [ಸಂ.]

**ಗಮನೇಂಗಿತೆ** (ನಾ). (ಬೇರೆಡೆಗೆ) ಹೋಗುವ ಮನಸ್ಸುಳ್ಳವಳು: ಪೊಜಗನೆ ನೋಟ್ಪಡೆ ಬೇಸರ ತೆಱಪಂ ನುಡಿದೊಡೆ ವಿಭೂಷಣಂಗಳ ನುಡಿಯಿಂ ಮಱವಡೆಯೆಂದಂ ಸತಿ ಕೇಳ್ಪೆಱತೆ ನೀನೆಂದುಮಱಿಗೆ ಗಮನೇಂ[ಪಾಠಾಂ. ಳೇಂ]ಗಿತೆಯಂ (ಮದತಿ. ೧೧–೩೪).
[ಸಂ. ಗಮನೇಂಗಿತಾ (ಗಮನ + ಇಂಗಿತ + –)]

**ಗಮಲು** (ನಾ). ವಾಸನೆ; ಕಂಪು: ಬಾರಿಬಾರಿಗೆ ಮೆಯ್ಯವಾಸನೆ ತೋರುತಿದೆ ಹೊಸ ಗಮಲು ನಿಶಿಚರ (ವಾಲಿಕಾ. ೬).
[ಗಮ್ಮ$_1$ + –ಅಲು (< –ಅಲ್$_2$)]

**ಗಮಸಾಲೆ** (ನಾ). ಒಂದು ಬಗೆಯ ಸುವಾಸನೆಯ ಅಕ್ಕಿ: (ಕ).
[ಗಮ್ಮ$_1$ + ಸಾಲೆ$_4$]

**ಗಮಾಡಿಸು** (ಕ್ರಿ). = ಗಮಾಯಿಸು: ಗಮಗಮಾ ಗಮಾಡಸತಾವ ಮಲ್ಲೀಗಿ (ಗಂಗಾತ. ೭೦–೧); ದೋಸೆಯ ಕಂಪು ಗಮಾಡಿಸುತ್ತಿತ್ತು (ರೂಢಿ). [P. ಮರಾಠಿಯ ಘಮಘಮಾಟದಿಂದ ಬಂದಿರಬಹುದು]

**ಗಮಾಯಿಸು** (ಕ್ರಿ). ಗಮಗಮಿಸು; ಸುವಾಸನೆಯನ್ನು ಹರಡು: ಹಲಸಿನ ವಾಸನೆ ಗಮಾಯಿಸುತ್ತಿದೆ (ರೂಢಿ).
[< ಗಮ್ಮ$_1$ + –ಇಸು$_3$. / ತುಳು. ಗಮಾಯಿಸು]

**ಗಮಾರ**, ಗವಾರ (ನಾ). ಹಳ್ಳಿಗ; ಗಾವಿಲ; ಅನಾಗರಿಕ; ಒರಟ: ಅವನಂಥ ಜನರು ಮನುಷ್ಯರೇ ಅಲ್ಲ ಬರೇ ಗಮಾರರು (ತಾಯಿ. ೧೦೪); ದೀನ, ದಲಿತ, ಬಡವ, ಗಮಾರ ಚೆಂಗೂಲಿ ಎಂದು ಸುಮ್ಮನೆ ಕೂಗೆಬ್ಬಿಸುತ್ತಿದ್ದರೆ ಸಾಲದು (ಚೆಂಗೂಲಿ. ೪). **ಗವಾರ**: “ಹಳ್ಳಿಗ” (ಜಾನಕೋ. ೪೬).
[ಪ್ರಾ. ಗಮಾರ. / ಹಿಂ. ಮರಾ. ಗಂವಾರ್]

**ಗಮಿಯಿಸು** ‘ಗಮಿಸು’ ನೋ.

**ಗಮಿಸು**, ಗಮಿಯಿಸು (ಕ್ರಿ). ೧. ಹೋಗು; ನಡೆ; ಸಾಗು: “ಗಮಿಸು – ಗಮಕತ್ವೇ” (ಶಮಧಾ); ಕಾಶೀಪುರಾಭಿಮುಖವಾಗಿ ಗಮಿಸಿ (ಪದ್ಮರಾ. ೧೩–೨೪); ಅರಸ ಮೃಗ ಘನವಿಂದು ಬೇಂಟೆಗೆ ಗಮಿಸಬೇಕೆನೆ (ನಳಚ. ೨–೯); ಅವಳು ಹಾದಿಯ ಕಡೆಗೆ ಗಮಿಸಿದಳು (ನವನೀ. ೨೩); ವಯಸ್ಸಿಗೆ ಬಂದ ಮಗಾನ ಸತ್ತುಹೋದ ಮ್ಯಾಲ ಆ ಊರಾಗ ಇದ್ದು ಜೀವ ಗಮಿಸೀತೇನ್ರಿ? (ಮಾಡಿಮು. ೧೨೪). ೨. ತಿಳಿದುಬರು: ಅಮರಗಣವಾತತೋಯಂ ಸಮನಿಸಿರೆ ನಾಮದಿಂದಂ ಗಮಿಸಿತಿದು ನಾಕಿಯಿಂದಂ ರಮಣಿಯಱಿ ನೀಂ ಮಯೂರಂ (ಛಂದೋಂಬು. ೨–೧೦೫). **ಗಮಿಯಿಸು**: ೧. ಇನಿತು ಗೆಂಟಾಗಿಯುಂ ಮದನದಹನಸಂತಪ್ತನಾದೆನ್ನನಾ ಸ್ವಭಾವಸರಸೆಯ ಸರಸತೆಯ ರಕ್ಷಿಸಿದಪುದು . . . ಆ ದಕ್ಷಿಣ ಹೃದಯೆಯ ದಕ್ಷಿಣತ್ವಮೆ ಗಮಿಯಿಸಿದಪುದು (ಕಾದಂಬ. ೪೦೪); ಇದು ನೆನೆದಾಕಾರಂ ಮಾಡುವ ಘನಪದದೊಳ್ ಗಮಿಯಿಸುವ ವಿದಿತ ಲಸದ್ವಿದ್ಯಾಮಣಿ ಮುದ್ರಿಕೆ (ಜಯಕಾ. ೪–೬). [ಗಮ್ಮ$_2$ + –ಇಸು$_3$]

**ಗಮ್ಮ** (ನಾ). ೧. ಬೇಗೆ; ಸೆಕೆ; ಉಷ್ಣ: “ಗಮ್ಮವೆನೆ ಘರ್ಮವೆಂದಕ್ಕು” (ಕಶರ. ೧೨೨); ಊಷ್ಮದ ಗಮ್ಮಕ್ಕೆ ಬೆಮರ್ತು (ವಚಸಂ. ೫೩೬–೧೬ ಟೀಕೆ); ಮಧ್ಯಾಹ್ನದ ಅಸಹನೀಯವಾದ ಬೇಗುದಿ ಇದೀಗ ಕಡಿಮೆಯಾಗಿದ್ದಿತು. ಆದರೂ ಗಮ್ಮ ಮಾತ್ರ ಇನ್ನೂ ಇದ್ದಿತು (ಪ್ರೇಮುತ. ೪೦). ೨. ಬೆವರು. ‘ಗಮ್ಮುಟ್ಟು’ ಪರಾ. [< ಸಂ. ಘರ್ಮ]

**ಗಮ್ಮಕುಚ್ಚು** (ಕ್ರಿ). ಸೆಕೆಯಾಗು ; ಬೇಗೆಯಾಗು : ಸಿಟ್ಟಿಗೆದ್ದು ನಮಗೆ ಗಮ್ಮಕುಚ್ಚಿದಂತಾಗಿ ಬೆವರು ಬಂದು (ನಿರಾಘ. ೧೬೨) ; ಇಂದು ಕಾರ್ಮೋಡ ಕವಿದು ಗಮ್ಮಕುಚ್ಚುತ್ತದೆ (ಇಪ್ಪಕ. ೨೬೨).

[ಗಮ್ಮ + ಕುಚ್ಚು$_1$ (< ಕುದಿಸು)]

**ಗಮ್ಮಗಾವು** (ನಾ). ಬೇಸಗೆಯ ಕಾವು, —ಸೆಕೆ : ಗಮ್ಮಗಾವನು ತಿಳಿಸಬೇಡವೆ ಬಂದು ಬೇಸಗೆ ಮುಂಬನಿ (ಹಾಡುಪಾ. ೪೪–೪).

[ಗಮ್ಮ + ಕಾವು$_2$ (< ಕಾಯ್ಪು$_1$)]

**ಗಮ್ಮತು** 'ಗಮ್ಮತ್ತು' ನೋ.

**ಗಮ್ಮತ್ತು**, ಗಮ್ಮತು (ನಾ). ೧. ಠೀವಿ ; ಜಬರ್ ; ಗತ್ತು : ಹಮ್ಮುಗಾರಿಕೆ ನುಡಿಯನಾಡದಿರು ತಾನಿಲ್ಲದಿರ್ದರೀ ಭೂವಲಯವಾ ಗಮ್ಮತ್ತಿನರಸುಗಳ್ ಮಡಿವರೇ (ಪರಶು. ೩೯–೪೮); ನಮ್ಮ ಹೊನ್ನೂರಿಗೆ ಹೋಗಿ ನೋಡಿ ಆವಾಗ ಗೊತ್ತಾಗುತ್ತದೆ ಹಳ್ಳಿಯ ಹಬ್ಬದ ಗಮ್ಮತ್ತು ಕಿಮ್ಮತ್ತು (ಸುವಸಂ.೪೬) ; ಯಳಂದೂರು ಜಹಗೀರುದಾರ್ರನ್ನ ಬಿಟ್ಟರೆ, ಈ ಗತ್ತು, ಈ ಗಮ್ಮತ್ತು, ಯಾರಿಗುಂಟು ? (ಮಲ್ಲಿ. ೨೫) ; ಗಾಣಿಗರ ಹುಡುಗಿಯ ಗಮ್ಮತ್ತು ನೋಡಯ್ಯ (ಹಳ್ಳಿಯು. ೮೩). **ಗಮ್ಮತು** : ೨. ತಮಾಷೆ ; ವಿನೋದ ; ಮೋಜು : ನಾನು ಆ ಮುದುಕರೊಂದಿಗೆ ಗಮ್ಮತು ಮಾಡುವವನಿದ್ದೇನೆ (ಚೆಂದುಟ. ೯೭).

**ಗಮ್ಮತ್ತುಮಾಡು** = ತಮಾಷೆ ಮಾಡು ; ವಿನೋದ ಮಾಡು : ಟಳಕರ ಮಿತ್ರರು ಅವರಿಗೆ ತಿಳಿಯದಂತೆ ಗಮ್ಮತ್ತುಮಾಡಿದ್ದರು (ಸ್ಮೃತಿಚಿ. ೧೨೩).

[← ಮರಾ. ಹಿಂ. ಗಮ್ಮತ್ ./ ತುಳು. ತೆಲು. ಗಮ್ಮತ್ತು]

**ಗಮ್ಮನೆ$_1$** (ಅ). ೧. ಬೇಗನೆ ; ತಕ್ಷಣ ; ಶೀಘ್ರವಾಗಿ : "ಬಿಮ್ಮನೆ ಗಮ್ಮನೆ ವಹಿಲಂ" (ಚತುನಿ. ೮೧) ; ಇನ್ನಂತುಟು ಪೇೞ್ದು ಕೆಮ್ಮಗಿರೆ ಗಮ್ಮನೆ[ಪಾಠಾಂ. ತಪ್ಪದೆ]ಕಮ್ಮರಿಯೋಜನಾಗನೇ (ಆದಿಪು. ೨–೬೧) ; ಇನಿಸಾನುಂ ಬೇಗದಿಂ ಗಮ್ಮನೆೞ್ಚಿತ್ತು (ಲೀಲಾವ. ೫–೧೭) ; ಒಮ್ಮೆ ಸದ್ಗುರುವಿನುಪದೇಶವಪ್ಪಡೆ ಗಮ್ಮನೇ ಮುಕ್ತಿ (ಸರ್ವಜ್ಞ. ೬೮); ಕೌಸಲ್ಯೆ ಪರಿಹರಿಸೆ ನುಡಿಯಲಮ್ಮದೆ ಸುಮ್ಮನಾಗಿ ಗಮ್ಮನೆ ಚರಣದೆಡೆಗೆ ನಡೆತಂದೆ ಜೀಯ (ವೆಂಕಾರಾ. ೨–೨೮–೬೨). ೨. ಸುಮ್ಮನೆ ; ಮೌನವಾಗಿ : ಒಮ್ಮನವ ಮಾಡೆ, ಗಮ್ಮನೆ ನಡೆಯೆ, ಘಳಿಲೆಂದು ಪೋಗೆ, ಧಿಗಿಲೆಂದು ಹತ್ತೆ (ಶಿವಗೀ. ೮೦೧ ವ).

[ದೇ. ‖ ತೆಲು. ಗಮ್ಮನೆ]

**ಗಮ್ಮನೆ$_2$** (ಅ). ಸುವಾಸನೆಯಾಗಿ ; ಸುಗಂಧದೊಡನೆ : ಮುಗುಳ್ಗಳ ಮಾಲೆ ಸುಯ್ಯ ನರುಗಂಪಿನೊಳಿರ್ಮಡಿ ಗಮ್ಮನಾಗೆ (ವರ್ಧಪು. ೧–೬೪).

[< ಕಮ್ಮನೆ$_2$]

**ಗಮ್ಮಿಡು** (ಕ್ರಿ). ಗಂ ಎಂದು ಧ್ವನಿಯುಂಟಾಗು ; ಪ್ರತಿಧ್ವನಿಸು : ನಿನ್ನ ಕಾವಗ್ಗಳೆಯರಿಲ್ಲಕಟಿನುತ ಮುಂದಕೆ ನಿಲುಕಿ ಹೊಯ್ದನು ಗಗನ ಗ[ಪಾಠಾಂ. ಘು, ಘು]ಮ್ಮಿಡೆ ಕಲಿವಿಭೀಷಣನ (ತೊರರಾ. ೬–೧೪–೨೫).

[< ಘುಂ + ಇಡು$_1$]

**ಗಮ್ಮು** (ನಾ). ಅಹಂಕಾರ ; ಗರ್ವ : ಹಮ್ಮುಯೆಂಬೊದೆ ಎಮ್ಮೆ ಗಮ್ಮುಯೆಂಬೋದೆ ಹಗ್ಗ ಹೆಮ್ಮೆಯೆಂಬೊದೆ ಆದಕೆ ಧಮ್ಮಗುದ್ದಿ (ಪುರಂದ. ೨–೫೫–೧) ; ಎಲ್ಲ ಜನಗಳಿಗಿಂತ ಬಲ್ಲಿಹೆವು ನಾವೆಂದು ಇಲ್ಲದ ಗಮ್ಮು ಗರುವಿಕೆಯ ತೋರೂತ ಹಲ್ಲಾಗ ಸಿಕ್ಕಿಹರು ಯಮದೂತರ (ಸಿದ್ಧಪು. ೧೬–೬೫). [?]

**ಗಮ್ಮುಟ್ಟು** (ಕ್ರಿ). ಬೆವರು ಹುಟ್ಟು ; ಬೆವರು : ಥುಳುಥುಳುನಟ್ಟೆ ಬಹ ಗೋಪಾಲಂಗೆ ಗಮ್ಮುಟ್ಟೆ ತೀಡಿದರೋರ್ವರ್ಗೊಂದೊಂದಂಬ ಕುರುವರರು (ಜಿನಭಾ. ೫೭–೧೧). [ಗಮ್ಮ + ಪುಟ್ಟು$_1$]

**ಗಮ್ಮೈಸು** (ಕ್ರಿ). ತಾಪಹೊಂದು ; ಬೇಗೆಗೊಳ್ಳು (?) : ತಂದೆಯನು ಕಾಣುತ್ತಲಡಿಗಡಿಗೆ ಗಮ್ಮೈಸಿದನು ಮೃತ ಸರ್ಪನಂ ಕಂಡು ಕಂಠದೊಳಗೆ (ತುರಂಗ. ೬–೪). [ಗಮ್ಮ + –ಇಸು$_3$]

**ಗಮ್ಯ** (ಗು). ೧. ಹೋಗಬಹುದಾದ ; ಹೋಗತಕ್ಕ. 'ಗಮ್ಯಸ್ಥಾನ' ಪರಾ. ೨. ತಿಳಿಯಲು ಶಕ್ಯವಾದ ; ತಿಳುವಳಿಕೆಗೆ ನಿಲುಕುವ : ನಿತ್ಯಮಮೂರ್ತಂ ಕೇವಲಗಮ್ಯಂ ಸದಾನುಮೇಯಂ ಕಾಲಂ (ಪಂರಾಮಾ. ೧–೪೭) ; ಇವು ಪ್ರಯೋಗಗಮ್ಯಂಗಳೆಂದಱಿವುದು (ಶಮದ. ೨೪೧ ಅಡಿಟ) ; ದೇವ ಜೀಯ ಮದೀಯ ಮಾನಸ ಭಾವಗಮ್ಯ (ಬಸವು. ೫೭–೬೩). ೩. ಸಂಭೋಗಕ್ಕೆ ಯೋಗ್ಯವಾದ : 'ಗಮ್ಯೆ' ಪರಾ. (ನಾ). ೪. ಹೋಗಬೇಕಾದ ಸ್ಥಳ ; ಗುರಿ : ಭವದುರ್ಗ ವಿಪಿನದೊಳು ಗಮ್ಯವರಿಯದೆ ತೊಳಲಿ (ಗಣೇಶ. ೩೭–೧). [ಸಂ.]

**ಗಮ್ಯಗಮಕಭಾವ** (ನಾ). [ಕಾವ್ಯಮೀ] ತಿಳಿಯಬೇಕಾದುದಕ್ಕೂ ತಿಳಿಸುವಂತಹುದಕ್ಕೂ ಇರುವ ಸಂಬಂಧ ; ಸ್ಥಾಯೀಭಾವಕ್ಕೂ ಅನುಭಾವಕ್ಕೂ ಇರುವ ಸಂಬಂಧ : ಸ್ಥಾಯಿಭಾವಕ್ಕೆ ವಿಭಾವಗಳೊಡನೆ ಜನ್ಯಜನಕಭಾವ ಎಂದೂ ಅನುಭಾವಗಳೊಡನೆ ಗಮ್ಯಗಮಕಭಾವ ಎಂದೂ . . . ಹೆಸರು (ಭಾರವಿಾ. ೩೬೦).

[ಗಮ್ಯ + ಗಮಕ + ಭಾವ$_2$]

**ಗಮ್ಯವಡು** (ಕ್ರಿ). ಮನದಟ್ಟಾಗು; ತಿಳಿ; ವಿದಿತವಾಗು: ಸಮ್ಯಗೀಶ್ವರನೆಂಬ ದೃಢತೆ ಗಮ್ಯವಟ್ಟಳವಟ್ಟು ನಿಂದಿತು (ಭರಜ. ೫೪–೬೨).

[ಗಮ್ಯ + ಪಡು$_1$]

**ಗಮ್ಯಸ್ಥಾನ** (ನಾ). ಹೋಗಿ ಸೇರಬೇಕಾದ ಸ್ಥಳ ; ಉದ್ದೇಶಿತ ಸ್ಥಳ : ವಕೀಲ ಸಾರಥಿಗೆ ಗಮ್ಯಸ್ಥಾನದನ್ನು ಸೂಚಿಸಿದನು (ಪುನರು. ೩೪೮).

[ಗಮ್ಯ + ಸ್ಥಾನ]

**ಗಮ್ಯೆ** (ನಾ). ಸಂಭೋಗಕ್ಕೆ ಯೋಗ್ಯಳಾದವಳು ; ರಮಿಸಬಹುದಾದವಳು : ಗಮ್ಯೆಯಲ್ಲದ ಸತಿಯನಾವನು . . . ರಮಿಸುವನೊ (ನಿಭಾಗ. ೫–೧೧–೨೮). [ಸಂ. ಗಮ್ಯಾ]

**ಗಯಣ್ಣ** (ನಾ). ಒಬ್ಬಾತನ ಹೆಸರು : ಸೂಗೂರ ಗೋಪಾಳದೇವನ ಮಗ ಗಯಂಣನು ಬೈರವೋಜಂಗೆ (ಎಕ. VII, ಶಿವಮೊ. ೯೪–೨ ; ?).

[? + ಅಣ್ಣ$_1$]

**ಗಯಹಕ್ಕಿ** (ನಾ). ಒಂದು ಬಗೆಯ ಹಕ್ಕಿ : "ಕುಕ್ಕುರಃ-ಗಯಹಕ್ಕಿ" (ನಾಚಿರಾ. ೧೧೫). [? + ಹಕ್ಕಿ (< ಪಕ್ಕಿ$_1$)]

**ಗಯಾವಳ**, ಗಯಾವಾಳ (ನಾ). ೧. ಗಯಾಕ್ಷೇತ್ರದಲ್ಲಿ ವಾಸಿಸುವವನು, —ಯಾತ್ರಿಕರು ಕೊಡುವ ದಾನದಿಂದ ಜೀವನ ಮಾಡುವ ಬ್ರಾಹ್ಮಣ. ೨. (ಆಲಂ) ಒತ್ತಾಯದಿಂದ ಯಾಚಿಸಿ ಪಡೆಯುವವನು ; ಸುಲಿಯುವವನು : (ಕ). **ಗಯಾವಾಳ** : (ಕ).

[← ಮರಾ. ಗಯಾವಳ್ ; ಹಿಂ. ಗಯಾವಾಲ್. / ತೆಲು. ಗಯಾವಾಳೀ]

**ಗಯಾವಾಳ** 'ಗಯಾವಳ' ನೋ.

**ಗಯಾಳಿ**, ಗಯ್ಯಾಳಿ (ನಾ). ೧. ದುರ್ಬಲನಾದವನು ; ಹೇಡಿ ; ಪುಕ್ಕ : ಆ ಗಯಾಳರ ಗಾವಿಲರ ನಿರ್ಭಾಗಧೇಯರ ಮಾಡಿಯುತ್ತರ ಭಾಗದಲಿ ತಿರುಗಿತ್ತು ಪಾಳೆಯ (ಕುವ್ಯಾಸ. ೩–೨೪) ; ಈ ಮಿಡುಕುಳ್ಳವರು ಮಹಿಯಲಿ ನಾಗಪುರದರಸುಗಳು . . . ಭಾವಿನಲೀ ಗಯಾಳರ ಗರ್ವವೇನು ನಿಮಿತ್ತವಾಯ್ತೆಂದ (ಕುವ್ಯಾಸ. ೨–೬೬). ೨. ಕಪಟಿ ; ಕುಹಕಿ ; ಧೂರ್ತ : 'ಗಯಾಳವಿದ್ಯೆ' ಪರಾ. **ಗಯ್ಯಾಳಿ** : ೨. ಪೇಳಲಾನೊರ್ವ ಸಮರ್ಥನೆ ಬಾಗಿಲೊಳ್ ಭಾಳಾಂಬಕನಿರಲಾಗಿ ಕೇಳಬೇಕಾತ ನಿರೂಪಿಸಿದಡೆ ಗಯ್ಯಾಳನ ಶಿಕ್ಷಿಪುದೆಂದ (ಮೋಹತ. ೩೫–೫೫) ;

ಹೋಳು ಬೆಳ್ಳಿಲೆ ಕರ್ಪುರಗಳ ತಿಂಬ ಗಯ್ಯಾಳರ ತಹುದಚ್ಚರಿಯೆ (ಕುರಾಸಾಂ. ೨೪–೪೪). 'ಗಯ್ಯಾಳಿ' ಪರಾ.

[ದೇ. ‖ ತಮಿ. ಕೈಯಾಳಿ = ತೊಂದರೆಕೊಡು ; ತುಳು. ಗಯಾಳ್]

**ಗಯಾಳವಿದ್ಯ** (ನಾ). ಕುಹಕ ; ಕುತಂತ್ರ : ತಿಳಿಯಲೀ ಭುವನಂಗ ಳೊಡೆತನ ಕೆಲಬರದೊ ತನ್ನದೊ ವಿವೇಕಿಸಿ ಗಳಹದಾದೆ ಗಯಾಳವಿದ್ಯವೆ ನಮ್ಮ ಕೂಡೆಂದ (ತೊರರಾ. ೬–೨–೪೨). [ಗಯಾಳ + ವಿದ್ಯ]

**ಗೆಯ್ಯಾಳ** 'ಗಯಾಳ' ನೋ.

**ಗಯ್ಯಾಳಿ, ಗೈಯಾಳಿ** (ನಾ). ದುಷ್ಟ ಸ್ವಭಾವದ ಹೆಂಗಸು ; ಧೂರ್ತೆ : ಮೇಲಜೀಯದೆ ಕೊಟ್ಟಿನೀ ಗಯ್ಯಾಳಿ [ಪಾಠಾಂ. ಘಾತಾಳಿ] ಗಸುರಾಮರರ ಸಂಗ್ರಾಮದಲಿ ವರವೆರಡ (ತೊರರಾ. ೨–೨–೩೪) ; ಕದವ ಮುಚ್ಚಿದಳಿದಕೋ ಗಯ್ಯಾಳಿ ಮೂಳಿ (ಪುರಂದ. ೨–೯೩ ಪಲ್ಲವಿ) ; ಮಗಳನ್ನು ಕೃತಘ್ನಳೆಂದೂ, ಕಲ್ಲೆದೆಯ ಗಯ್ಯಾಳಿಯೆಂದೂ . . . ದೂಷಿಸಿ (ಕವಿಕ. ೩೨). **ಗೈಯಾಳಿ** : ಛೀ ಏಳ ಛೀಮಾರಿ ನಾಚಿಕಿಲ್ಲದ ನಾರಿ ಗಂಡನ್ನ ಬೈವ ಗೈಯಾಳಿ (ಜನಗೀ. ೬೪) ; ಯಾಕೆ ? ಗೈಯಾಳಿ ನಾಲಿಗೆ ಬಾಳ ಹರಿಬಿಡ್ತೀಯಾ (ಚಂದತೋ. ೨೩೯).

[ಗಯ್ಯಾಳ (<ಗಯಾಳ) + –ಇ$_2$. / ತೆಲು. ಗಯಾಳಿ, ಗಯ್ಯಾಳಿ]

**ಗಯ್ಯಾಳಿತನ, ಗಾಯಾಳಿತನ** (ನಾ). ಜಗಳಗಂಟಿತನ; ಧೂರ್ತತನ; ಹೊಂದಿಕೊಳ್ಳದಿರುವಿಕೆ : ವಾಯುಗಳೇಳ್ವುದು ನಿಂದ ನೆಲೆಯ ತನ್ನ ಕಾಯದೊಳಜೀದೊಂದನೊಂದ ದಾಯವಱಿದು ತೆಗೆದೊಂದೊಂದ ಱೊಳು ಕೂಡಿ ಗಯ್ಯಾಳಿತನವ ನಿಲ್ಲಿಸಿದಾ (ಧರಜ. ೧೮–೬). **ಗಾಯಾಳಿತನ** : ಕೊಟ್ಟರೊಲ್ಲದೆ ಗಾಯಾಳಿತನವೆ ಈಗ ದಿಟ್ಟತನವೆ ಎನ್ನೊಡನೆ (ಹರಿಸಾಂ. ೨–೫೦). [ಗಯ್ಯಾಳಿ + –ತನ]

**ಗರ$_1$** (ನಾ). ಪಗಡೆಯಾಟದಲ್ಲಿ ದಾಳಗಳನ್ನು ಉರುಳಿಸಿದಾಗ ಅವುಗಳಿಂದ ಸೂಚಿತವಾಗುವ ಸಂಖ್ಯೆ : ಆಗ ಶಕುನಿಯು ಪಗಡೆಯ ಆಟವನ್ನು ಹೂಡಿದನು. ಇವನು ಕೇಳಿದ ಗರ ಬೀಳುತ್ತಿತ್ತು (ನೀತಿಚಿಂ. VIII, ೧೦) ; ಧನಂಜಯನು ದಾಳವು ಉರುಳುತ್ತಿದ್ದ ಹಾಗೆಯೇ ಯಾವ ಗರವು ಬೀಳುವುದು ಎಂದು ತಿಳಿಯಬಲ್ಲವನು (ದೇಶಾಂತ. ೧೧೦) ; ಒಳ್ಳೆಯ ಗರಗಳು ಬೀಳದೆ, ಕಾಯಿಗಳೂ ತಪ್ಪಾಗಿ ನಡೆದರೆ ಆಗ ಸೋಲು ಶತಸ್ಸಿದ್ಧ (ಬಂಕಿಮ. ೧೮೬). [ದೇ. ‖ ತೆಲು. ಗರ]

**ಗರ$_2$** (ನಾ). ೧. ಗ್ರಹ : ಒಂಬತುಂ ಗರಮನೆಂಟುಂ ಗೊಂಟೆನೊಳ್ ಕಟ್ಟಿ ತೂಗುವೆಂ (ಕಬ್ಬಿಕಾ. ೧೫೪) ; ದೆಸೆಯಾಣ್ಮರಿಗೆ ನೆಲಕೆ ನೇಸಱಿಗಾಗಸಕ್ಕೆ ಸಸಿಗೆ ಗರಗಳಿಗಾ ರವಿ ಖೇಚರರಿಗೆ (ಸೊಬಸೋ. ೭–೫೮). ೨. (ಕಣ್ಣಿಗೆ ಕಾಣಿಸದೆ ಕಾಡಿಸುವ) ದುಷ್ಟ ಶಕ್ತಿ ; ದೆವ್ವ ; ಪಿಶಾಚಿ : ಅಜನಾ ಬೊಡಮೇನೋ ಗರಮುಟ್ಟೆ ಕೊಲ್ಲುಮಿದು ನಿಜ ವಿರೋಧಿಯಂ ಧುರದೊಳೆಂದು ಶಕ್ತಿಯನಿತ್ತಂ (ಪಂಪಭಾ. ೧–೧೦೩) ; ಪೊಡೆದುದು ಗರವತಿ ಕೋಪದೆ ಪಿಡಿದುದು ಪುಲಿ ಗಾಳಿ ಸೋಂಕಿದತ್ತು (ಕಾದಂಪೂ. ೫೬೩) ; ಗರಹೊಡೆದವರ ನುಡಿಸಬಹುದು ಸಿರಿಗರ ಹೊಡೆದವರ ನುಡಿಸಲು ಬಾರದು (ಬಸವ. ೧೩೨) ; ಯಮಸುತಂಗಱುಹುವೆನೆ ಧರ್ಮದ ಕ್ಷಮೆಯ ಗರಹೊಡೆದಿಹುದು (ಕುಮ್ಮಾವಿ. ೩–೩೩).

**ಗರಂಗಳಬಲ್ಲಹ** = ಗ್ರಹಗಳ ಒಡೆಯ ; ಸೂರ್ಯ : "ತಾವರೆಗೆಳೆಯ ನೇಸಱೆಂದು ಬಾನ್ಮಣಿ ಗರಂಗಳಬಲ್ಲಹಂ" (ಕಬ್ಬಿಕೈ. ೪೪). **ಗರಂಗಳಾಣ್ಮ** = ಗರಂಗಳ ಬಲ್ಲಹ : "ಬೆಂಗದಿರಂ . . . ಗರಂಗಳಾಣ್ಮಂ ಬಾನ್ಮಣಿ ಪಿಂಗದೆ ತಾಂ ನೇಸಱೆಂದು ತಾವರೆಗೆಳೆಯಂ" (ಕವಿಕಂ. ೪೦). **ಗರವಿಡಿಕೊಳ್, ಗರವಗೊಳ್** = ಗ್ರಹಪೀಡೆಗೆ ಒಳಗಾಗು : "ಗರವ ಕೊಂಡು [ಪಾಠಾಂ. ಗರವಗೊಂಡು, ಗರವಸಗೊಂಡು] ಬೆಂದೆನಲ್ ಕೊಱಚು ಧುವೆನೆ ಗರವರಿಸಿದರ್ಥಮಕ್ಕುಂ" (ಕಬ್ಬಿಕೈ. ೯೦). [< ಸಂ. ಗ್ರಹ]

**ಗರ$_3$** (ನಾ). ಮನೆ; ಗೃಹ. 'ಗರತಿ' ಪರಾ. [< ಸಂ. ಗೃಹ]

**ಗರ$_4$** (ನಾ). ೧. ನುಂಗುವುದು. ೨. ಕುಡಿಯುವಂತಹುದು ; ಪಾನೀಯ. ೩. ವಿಷ; ನಂಜು : ಗರ[ಪಾಠಾಂ. ಕರ]ದ ಬಿಜಾಹೊಯ್ಲಿಂದೆ ನರಳ್ವರಂ ಸುರುಳ್ವರಂ (ಚಿಬಪು. ೨೨–೧೮) ; ತವಕದಿಂ ಗರಹರಣ ಮೂಲಿಕಾ ಸಂತತಿಗಳ ವಿವೇಕದಿಂದ ಹಾಲಾಹಲವ ಪರಿಹರಿಸಿ (ವೆಂಕಾರಾ. ೫–೧–೧೨) ; ಹೊಟ್ಟೆಯಲ್ಲಿರುವ ಗೆಡ್ಡೆ, ಅಡ್ಡಗೈ, ಗರ, ವಾಯುಗುಲ್ಮಂ, ಇವು ಮಾಣುವುವು (ವಿನ್ನೈವಿ. ೨೦೦). 'ಜಲಗರ' ಪರಾ. ೪. = ಗರಕರಣ. [ಸಂ.]

**ಗರ$_5$** (ನಾ). ನೀರನ್ನು ಎತ್ತುವ ಒಂದು ಬಗೆಯ ಯಂತ್ರ (?) : ಗರವಟಿಗಂ ಗರ ಇತಿ ಜಲಯಂತ್ರ ವಿಶೇಷಃ ತತ್ರ ನಿಯುಕ್ತಃ (ಶಬ್ದಾನು. ೪೪೧ ವ್ಯಾಖ್ಯಾ). [?]

**ಗರ$_6$** 'ಗಡ$_4$' ನೋ.

**ಗರಂ** 'ಗರಮ್' ನೋ.

**ಗರಕ** 'ಗರ್ಕು$_2$' ನೋ.

**ಗರಕರಣ** (ನಾ). [ಜ್ಯೋತಿ] ಜ್ಯೋತಿಷ್ಯದಲ್ಲಿ ಪ್ರಸಿದ್ಧವಾದ ಹನ್ನೊಂದು ಕರಣಗಳಲ್ಲಿ ಐದನೆಯದು : (ಶ). [ಗರ$_4$ + ಕರಣ]

**ಗರಕಾಲಕಂಧರ** (ನಾ). ವಿಷದಿಂದ ಕಪ್ಪಾದ ಕೊರಳುಳ್ಳವನು ; ನೀಲಕಂಠ ; ಶಿವ : ಕರಾಲ ಕಾಲಮರ್ದನ ಗರಕಾಲಕಂಧರ ಧರಾಧರ ಧನ್ವ (ರಾಜಶೇ. ೧೦–೫೯). [ಗರ$_4$ + ಕಾಲ + ಕಂಧರ]

**ಗರಕು$_1$** 'ಗರಿಕು' ನೋ.

**ಗರಕು$_2$, ಗರ್ಕು$_1$** (ನಾ). ಏರುತಗ್ಗಾಗಿರುವುದು; ಸಮತಲವಲ್ಲ ದಿರುವುದು; ಒರಟಾದುದು: (ಶ). **ಗರ್ಕು$_1$** : (ಶ).

[ದೇ. ‖ ತಮಿ. ಮಲ. ಕರಕ್ಕು ; ತೆಲು. ಕಟಕು, ಕಱುಕು]

**ಗರಕ್ಕನೆ** (ಅ). ತಟ್ಟನೆ ; ಸರ್ರನೆ : ಕವಿರಾಜನು ಹುಚ್ಚುವೀರನ ಕಡೆಗೆ ಗರಕ್ಕನೆ ತಿರುಗುವನು (ತುಂಗಭ. ೧೪೦). [ಗರಕ್$_0$ + –ಅನೆ$_1$]

**ಗರಗ** 'ಗರುಗ' ನೋ.

**ಗರಗಟೆ** (ನಾ). (ಕರಾ) ಒಂದು ಜಾತಿಯ ಮೀನು. [?]

**ಗರಗಟ್ಟಿ** (ನಾ). (ಉಕ) ಒಂದು ಬಗೆಯ ಮೇಲೋಗರ ; ತರಕಾರಿಯ ಹೋಳುಹಾಕಿ ಮಾಡಿದ ಸಾಂಬಾರು ; ಕೂಟು : ಇವತ್ತು ನಿಮ ಗಾಗಿಯೇ ಗರಗಟ್ಟಿ ಮಾಡಿದ್ದಾರೆ (ರೂಢಿ).

[← ಮರಾ. ಗರಗಟ್, ಗರಗೋಟ್]

**ಗರಗಟ್ಟು** (ಕ್ರಿ). ೧. ಶುಷ್ಕವಾಗು ; ಒಣಗು : ಗಳಿಗೆಕಾಲ ಸುಮ್ಮನೆ ಕುಳಿತರು ವೆಂಕಮ್ಮ ಅವಲಕ್ಕಿ ತಿಂದ ಬಾಯಿ ಗರಗಟ್ಟಿ ಹೋಗಿತ್ತು (ಪದ್ಮಸ. ೧೫). ೨. (ಉಕ). ಅಡ್ಡಿಯನ್ನು ಹೊಂದು ; ಹರಕತ್ತು ಆಗು : ಆ ಕೆಲಸ ಗರಗಟ್ಟಿದೆ (ರೂಢಿ).

[< ಗಱುಗು + ಕಟ್ಟು$_1$]

**ಗರಗತಿಗ** (ನಾ). ಒಂದು ಜಾತಿಯ ಗಿಡ : "ಕ್ರಕಚಿಯೆನೆ ಗರಗತಿಗ ಮಕ್ಕು" (ಮಂಗರಾ. ೩೫–೧೪). [?]

**ಗರಗತ್ತಿ** (ನಾ). ಒಂದು ಜಾತಿಯ ಗಿಡ ; ಖರಪತ್ರ : (ಶ). [?]

**ಗರಗರ$_1$, ಗರಗರಿ** (ನಾ). ೧. ಚೆಲುವು ; ಸೊಗಸು. ೨. ಸ್ವಚ್ಛ ; ಅಚ್ಚುಕಟ್ಟು. 'ಗರಗರಿಕೆ$_1$' ಪರಾ. **ಗರಗರಿ** : ೧. ಸ್ಮರನರ್ಧಾಂಗಿಯು ತನ್ನ ಸುರೂಪಿಗೆ ಸರಿಯಿಲ್ಲವೆಂದಾ ಕುವರಿ ಬೆರಳಮಿಡಿವಳೆನೆಯವಳು ರೂಪಿನದೊಂದು ಗರಗರಿಯನೇನೆಂಬೆ (ಜ್ಞಾನಚಂ. ೧೨–೪೬).

**ಗರಗರನಾಗು** = ಚೆಲುವಾಗು ; ಸೊಗಸಾಗು : ಗರಗರನಾಗಿ ಭೋಗಿಪೊಡೆ ಮುಗ್ಧೆಯನಾಗುವಮಾಟ್ಟುದೋ (ಅರ್ಧನೇ. ೪–೮೬) ; ಗರಗರನಾದ ಬೆಳ್ಪಸದನಂ ಪೊಸಜವ್ವನದೇಟ್ಗೆ ದೇಸೆಯೊಳ್ ಪೊರೆದ ವಿಲಾಸಮೊಪ್ಪೆ (ಅನಂಪು. ೮–೨) ; ಅರಸನ ಗರಗರನಾದ ಚೆಲ್ವಿಕೆಯ ಕವ್ವರೆಗೊಂಡು ನೋಡುತ (ಶ್ರೀಪಾಲ. ೬–೪೯).

[ದೇ.‖ ತುಳು. ಗರಕೆನ ; ತೆಲು. ಗರಗರ]

**ಗರಗರ್ಶ$_2$** (ನಾ). ಸುತ್ತಲೂ ವೇಗವಾಗಿ ತಿರುಗುವಾಗ ಉಂಟಾಗುವ ಸದ್ದು. 'ಗರಗರನೆ$_2$' ಪರಾ.

**ಗರಗರನೆ$_1$** (ಅ). ೧. ಚೆಲುವಾಗಿ; ಸೊಗಸಾಗಿ: ತಿರಿದಾ ಕೂಚಿಂ ನೀರೊಳ್ ಗರಗರನಪ್ಪಂತು ಕರ್ಚಿ ಮೇಣುಂಡಪರೋ (ಧರ್ಮಾಮೃ. ೧–೧೦೬). ೨. ಉತ್ತಮವಾಗಿ; ಶ್ರೇಷ್ಠವಾಗಿ; ಹಸನಾಗಿ: ಪೊಂಗಿರ್ದಂಗರವೋಳಿಗೆಯಂ ಗರಗರನಪ್ಪ ತುಪ್ಪಮಂ ಶರ್ಕರೆಯಂ (ಪಾರ್ಶ್ವಪು. ೮–೫೩). [ಗರಗರ$_1$ + – ಅನೆ$_1$]

**ಗರಗರನೆ$_2$** (ಅ). ೧. ವೇಗವಾಗಿ ; ರಭಸದಿಂದ ; ಗಿರ್ರನೆ : ಗರಗರನೆ ಹಲ್ಗಿಱಿದು ಕಲುಷ ದೈತ್ಯರನೆಲ್ಲ ಸೀಳಿ (ವಾದಿಕೀ. ೨೮–೨) ; ಹೊಂದೇರ್ ಹಕ್ಕಿ ಬಂದವಕ್ಕ ಗರಗರನಾಡಿ ನಿಂದವಕ್ಕ (ನಾಪದ. ೫೫–೧೫) ; ಗರಗರನೆ ಸುತ್ತಲೂ ನೋಡುತ್ತ (ಅಶ್ವಮೇ. ೩೫).

[ಗರಗರ$_2$ + – ಅನೆ$_1$]

**ಗರಗರಿ** 'ಗರಗರ$_1$' ನೋ.

**ಗರಗರಿಕೆ$_1$** (ನಾ). ೧. ಚೆಲುವು ; ಸೊಗಸು ; ಅಂದ: "ಗರಗರಿಕೆ ನಿಱಕೆ ಸುಭಗನುಮಕ್ಕು" (ಶಬ್ದಮಂ. ೪೮) ; ಗರಗರಿಕೆಯಾಯತದ ಸುರತಾತಿಶಯದ ಸಿಂಗರದ ಸರ್ವಾಂಗವುಂ ಮಿಗೆ (ಜನವ. ೪–೧೦) ; ವರಭೋಗದಿಂದ ಶಚಿಯಲ್ಲಿ ಮಾಸಂಕೆ ಗರಗರಿಕೆಯಿಂ ಗಿರಿಸುತೆಯೊಳು ಪಿರಿದು ಕಕ್ಕಸ (ಸಮ್ಯಕ್ತ್ವಾ. ೬–೧೦) ; ಗರಗರಿಕೆಯೊಳು ಕೆಂಬಾಯ್ದೆಱೆ ದಾಳಾಪ ವಿರಚನೆ ಮಾಡಿದರೊಸೆದು (ಭರಜ. ೫–೫೬). ೨. ಚೊಕ್ಕಟ; ಸ್ವಚ್ಛತೆ ; ಅಚ್ಚುಕಟ್ಟು : "ಗರಗರಿಕೆ ಚೊಕ್ಕಟಂ" (ಚತುನಿ. ೪೦) ; ಬಲಿಯುಪಸರ್ಗಮಂ ಮಾಟ್ಟೆ ಮನಮನೆತ್ತಿಕೊಂಡು ಕೋಟಿಹೋಮ ಮುಮಂ ಬ್ರಾಹ್ಮಣ ಭೋಜನಮುಮಂ ಸೌಮ್ಯ ಗಿರಿಗುಹಾಗೇಹಂಗ ಳೊಳ್ ಮಾಡಿದಪನಲ್ಲಿಯಲ್ಲದೊಡೆಯುಂ ಗರಗರಿಕೆಯುಮಿಲ್ಲೆಂದು ಡಂಗುರವಂ ಪೊಯ್ಸೆ (ಅರ್ಧನೇ. ೬–೨೧೨) ; ಮಾಸಿದ ಸೀರೆಯಲಿ ಗರಗರಿಕೆ ತಪ್ಪಿದ ಚೆಲುವಿನಲಿ (ನಳಚ. ೮–೫೧). ೩. ಶ್ರದ್ಧೆ ; ಸಾಹಸ (?) : ಗರಗರಿಕೆಯಿಂದೆ ಮಾಡುವವರ ಯಾಗಸಮೃದ್ಧಿಯಂ ಪರೀಕ್ಷಿಸುತುಂ (ಶ್ರೀಮಹಾ. ೧೦–೫೦) ; ಭಕ್ತಿಯಿಂದಿರೆ ನಿನ್ನ ಸಂಕಲ್ಪ ಸಿದ್ಧಿಪುದು ನಾವದಕ್ಕುರೆ ಸಹಾಯಿಗಳೆನಲ್ಕೆ ಗರಗರಿಕೆಯಿಂದಾ ಶಿಖಂಡಿ ತಪಯುಕ್ತದಿಂ ಪರಮಯೋಗಾನಂದ ಪರಿಪೂರ್ಣೆಯಾಗೆ (ಲಕ್ಷ್ಮಭಾ. ೨೩–೪೦) ; ಸುರಪತಿಯಿಂ ಶಬಾಸನು ಹರುಷಮುಖದಿಂ ಪಡೆದು ದಿಕ್ಪಾಲಕರ ಕೈಯಿಂದ ವರಮಹಾಮಂತ್ರಾಸ್ತ್ರಚಯವನು ಗರಗರಿಕೆಯಲಿ ತಂದ ಪಾರ್ಥನ ಪರಿಯನೇನೆಂದಱಿಯೆ (ಕೋಗಯ. ೮–೮).

[ಗರಗರ$_1$ + –ಇಕೆ. / ತೆಲು. ಗರಗರಿಕ, ಗರಾಗರಿಕ]

**ಗರಗರಿಕೆ$_2$** (ನಾ). ಗರಗರ ಎನ್ನುವ ಶಬ್ದ ; ಗದ್ಗದ : ಗರಗರಿಕೆ ಕೊರಲೊಳೀಕ್ಷಣದೊಳ್ವಾರ್ಬಿಂದು ಮಿಡುಕೆರ್ದೆಯೊಳೊದವೆ ಪುಳಿಂದನ ಕಣೆಗಟ್ಟಿನಿಂದ ವನಹರಿಣಿಯವೊಲ್ (ಯಶೋಚ. ೨–೪೧).

[< ಗದ್ಗದ ? + – ಇಕೆ]

**ಗರಗರಿಕೆವಡೆ** (ಕ್ರಿ). ಚೆಲುವನ್ನು ಹೊಂದು ; ಸುಂದರವಾಗಿರು : ಕಂತುವಿನ ಕೆಯ್ಮ ಕೂರಸಿಯಂತಿರೆ ಗರಗರಿಕೆವಡೆದು ಪೊಳೆವಸಿಯಳೆ (ಯಶೋಚ. ೨–೩೬); ಗರಗರಿಕೆವಡೆದೆಳವೆಂಡಿರ ತಂಡದಿಂ (ಕಬ್ಬಿಗಾ. ೧೮); ಹಾವದ ಭಾವದ ಮುಱುಕದ ಠೀವಿಯ ಗರಗರಿಕೆವಡೆದ ಚೆನ್ನೆಯರುಂ ತಂದಾ ವಿಭುಗೆ ತೋಱಿ (ಪುಣ್ಯಾಸ್ರ. ೪–೪೮). [ಗರಗರಿಕೆ$_1$ + ಪಡೆ$_1$]

**ಗರಗರಿಸು$_1$** (ಕ್ರಿ). ಚೊಕ್ಕಟವಾಗು ; ಶುಭ್ರವಾಗು ; ಹಸನಾಗು : ಕಾಳಘನವೆರಸಿದೋಲಾದಿ ಸಂಖ್ಯೆಯ ವಾಹಿನಿಯುಱು ಮುತ್ತಿ ಮೊರೆಯು ತಂಬಿನ ಸೋನೆ ಸುರಿಯುತಂ ಗರಗರಿಸಿ ಹರವರಿಸಲಸುರಾರಿಯ (ಜಿನಮು. ೩೫–೧೬) ; ತರತರದಿ ವಿಟಗಾರರಾಟಲೆಯ ಕೋಟಲೆಯ ನೆರೆನೆರೆದು ಚರಚರಿಸಿ ಗರಗರಿಸಿ ಬಿಡುಬಿಡುವಿನಿರವಿರವನಾರೈದು ಸೇರುವರ್ ಸಾರುವರ್ ಬಹ ರಜನಿಸಮಯದಲ್ಲಿ (ಜಿನಮು. ೪೯–೧೩).

[ಗರಗರ$_1$ + – ಇಸು$_3$]

**ಗರಗರಿಸು$_2$** (ಕ್ರಿ). ಗರಗರ ಎಂದು ಸದ್ದುಮಾಡು : ಗರಗರಿಪ ಗಾಲಿ ಸೀರ್ಗರೆವಚ್ಚು ಸೂತರಥಿಕರು ಮೊರೆವ ಬೊಬ್ಬೆ ಪಟಹಧ್ವನಿಯ (ಜಿನಮು. ೩೮–೨೫). [ಗರಗರ$_2$ + – ಇಸು$_3$]

**ಗರಗಸ$_1$** 'ಕರಗಸ$_1$' ನೋ.

**ಗರಗಸ$_2$** (ನಾ). ಒಂದು ಬಗೆಯ ಔಷಧಿಗಿಡ : (ಮೈಔಗಿ. ३६–೭೦೩).

[?]

**ಗರಗಸವಳ್ಳಿ** (ನಾ). ಒಂದು ಬಗೆಯ ಬಳ್ಳಿ : ಬಿಡುವಿಲ್ಲದೆ ಹೆಣೆದಿದ್ದುವು ಬಳ್ಳಿ ; ಮುಳ್ಳಿನ ಪೊದೆಗಳು, ಗರಗಸವಳ್ಳಿ (ಪಾಂಚಜ. ೬೬).

[ಗರಗಸ$_2$ + ಬಳ್ಳಿ]

**ಗರಗು$_1$** 'ಗರುಗ' ನೋ.

**ಗರಗು$_2$** 'ಗಱುಗು' ನೋ.

**ಗರಗುವಡೆ** 'ಗರುಗೊಡೆ' ನೋ.

**ಗರಗೆ** 'ಗರಿಗ' ನೋ.

**ಗರಗೊಬ್ಬಟ್ಟು** (ನಾ). ಚೆನ್ನಾಗಿ ಬೇಯಿಸಿರುವುದರಿಂದ ಗರಿಗರಿಯಾದ ಒಬ್ಬಟ್ಟು, —ಹೋಳಿಗೆ : ಮದುವೆ ಮನೆಯಲ್ಲಿ ಮಾಡಿದ ಗರಗೊಬ್ಬಟ್ಟು ಚೆನ್ನಾಗಿದ್ದಿತು (ರೂಢಿ).

[ಗರಗು$_2$ (< ಗಱುಗು) + ಒಬ್ಬಟ್ಟು]

**ಗರಚಿ** (ನಾ). ಒಂದು ಬಗೆಯ ಮರ : ನೆಲ್ಲಿಹಿಲತಾಳಗರಚಿಗಳ್ ಬೆಕ್ಕಸಂ ಬೀರುತಂದಾದಿತ್ಯ ಕುಲಮುದಚಂದ್ರಂಗೆ ಗುಣಸಾಂದ್ರಂಗೆ (ರುಕ್ಮಾಂಗ. ೧೦–೩). 'ಕರಚಿ' ಪರಾ. [?]

**ಗರಜ** (ನಾ). = ಗರಕರಣ : ಬವ . . . ಗರಜ . . . ಭದ್ರೆಗಳೆಂಬೀಳು ಚರಕರಣಂಗಳುಂ (ವಿವೇಕ. ३२೦). [ಸಂ.]

**ಗರಜಾಕರಣ** (ನಾ). = ಗರಜ : ಗರಜಾಕರಣಕ್ಕೆ ಕಲ್ಯಾಣ ೧೧ ಗಳಿಗೆ ಮೇಲೆ ತ್ಯಾಜ್ಯ (ಭಾಸ್ಕರ. ೭೧–೭). [< ಸಂ. ಗರಜಕರಣ]

**ಗರಜು, ಗರ್ಜಿ$_2$, ಗರ್ಜು** (ನಾ). ಅಗತ್ಯ ; ದರದು ; ಆವಶ್ಯಕತೆ ; "ಹರಕತ್ತು ; ಅಡಚಣಿ, ಅಗತ್ಯ" (ಜಾನಕೋ. ४६) : ಗರಜು (ಬೇಡಿಕೆ), ಸಂಗ್ರಹ (ಪೂರೈಕೆ) ಕ್ರಯ – ಇವುಗಳ ಪರಸ್ಪರ ಸಂಬಂಧವನ್ನು ಕುರಿತು ನಿಯಮಗಳು (ಮುಂಬಯಿ. ೫–೨೪೯) ; ಮನೆಯಲ್ಲಿ ಧಾನ್ಯವಿಲ್ಲದವರು ಆಗಿನ ಗರಜಿಗಾಗಿ ಬೇಕಾದಷ್ಟು ಹಿಟ್ಟನ್ನು ಕೊಂಡೊಯ್ಯುತ್ತಿದ್ದರು (ಪುಣ್ಯತಿ. ೬). **ಗರ್ಜಿ$_2$** : ನಮಗೆ ವಸೂಲಿ ಬರಬೇಕು ; ನಮಗೆ ಗರ್ಜಿಉಂಟು (ಜಾರುದಾ. ೧೫೬) ; ನನಗೂ ಈಗ ಅಂಥದ್ದೇನೂ ಗರ್ಜಿಯಿಲ್ಲ (ಒಡ್ಡಿಉ. ೧೦) ; ಗವಯಿಗಳಾದವರ ಗರ್ಜಿಗೆ ಮಿತಿಯಿಲ್ಲ (ದೇಜ್ಯೋತಿ. ३५). **ಗರ್ಜು** : ನಮಗೆ ಗರ್ಜು ಬಂದಾಗ ನಿಮ್ಮ ಹಣ ಬಾರದೆ ಹೋದರೆ (ಜಾರುದಾ. ೧೬೦) ; ಈಗ ನನಗೇನು ಅಂಥ ಗರ್ಜು ಇಲ್ಲ (ಮುಗಿಯಿ. ४४೯) ; ಅದೇನಪ್ಪ ಅಂತ ಗರ್ಜು (ದೇವಹಂ. ೨೦೯). [← ಅರ. ಹಿಂ. ಮರಾ. ಗರಜ್]

**ಗರಜೆ** (ನಾ). = ಗರಜ : (ಕ). [ಸಂ. ಗರಜ]

**ಗರಜ್ಜಯ್ಯ** (ನಾ). ಒಬ್ಬಾತನ ಹೆಸರು : ಗರಜ್ಜಯ್ಯನ ಮಯ್ದುನ ಮುದೆಯ್ಯ ತುಱುಗೊಳೊಳ್ ಮುಕ್ತಿಗೆ ಸನ್ದ (ಎಕ. XI, ಹೊಳಲ್ಕೆ. ೮೮-೪ ; ಸು. 965). [< ಗೊರವ ? + ಅಜ್ಜ$_2$ + ಅಯ್ಯ$_1$]

**ಗರಟಿಗೆ** 'ಗರವಟಿಗೆ' ನೋ.

**ಗರಟಿಗೆಬರು** 'ಗರವಟಿಗೆವರ್' ನೋ.

**ಗರಟುಕೊಳ್** (ಕ್ರಿ). ಹೆಮ್ಮೈಪಡು (?): "ಖರ್ವತೀತಿ ಗರಟು ಕೊಂಡಪುದೆಂಬುದು" (ಕಾಶಕ್ಯ. ೩೦). [ಗರಟು ? + ಕೊಳ್$_1$]

**ಗರಟೆ** 'ಕರಂಟ' ನೋ.

**ಗರಟ್ಟ** (ನಾ). = ಘರಟ್ಟ : ಬಿಟ್ಟವರ ತಿಂತಿಣಿಯು ದಿವಿಜ ಗರಟ್ಟದಲಿ ದಾನವರ ಜಾತಿಗರಟ್ಟರಲಿ (ವಿವೇಭ. ೪-೮೪). [< ಸಂ. ಘರಟ್ಟ]

**ಗರಡ** (ನಾ). ಒಂದು ಬಗೆಯ ತೆರಿಗೆ (?) : ಕಿಱುಸುಂಕ ಗರಡಮಂ ಬಣ್ಣಿಗೆಯಂ (ಬೊಂಕಶಾ. ೧೯೩೮, ಇಂಡಿ. ೩೫-೩೬ ; ?). [?]

**ಗರಡಬೇವು** (ನಾ). ಒಂದು ಬಗೆಯ ಬೇವು; ಹೆಬ್ಬೇವು; ತುರಕ ಬೇವು : "ಗರಡಬೇವು" (ಪಂಡಿತ. ೬೪). [ಗರಡ ? + ಬೇವು]

**ಗರಡಿ** 'ಗರುಡಿ' ನೋ.

**ಗರಡಿಮನೆ** 'ಗರುಡಿಮನೆ' ನೋ.

**ಗರಡಿಯಾಳು** (ನಾ). ಗರಡಿ ಸಾಧನೆ ಮಾಡುವ ವ್ಯಕ್ತಿ ; ಪೈಲ್ವಾನ ; ಜಟ್ಟಿ : ಅರಮನೆಯ ಗರಡಿಯಾಳುಗಳಲ್ಲಿ ಹೆಸರು ಪಡೆದ ಜಟ್ಟಿಗಳು (ಭೀಮುಕಾ. ೮). [ಗರಡಿ (< ಗರುಡಿ) + ಆಳು$_3$ (< ಆಳ್$_3$)]

**ಗರಡಿಸಾಧಕ** 'ಗರುಡಿಸಾಧಕ' ನೋ.

**ಗರಡಿಸಾಧನೆ** 'ಗರುಡಿಸಾಧನೆ' ನೋ.

**ಗರಣ** (ನಾ). ೧. ಹಿಡಿಯುವುದು ; ಗ್ರಹಣ : "ಗ್ರಹಣಕ್ಕಂ ಗರಣ ಮಾಯ್ತು ಶಬ್ದಾದೇಶಂ" (ಶಮದ. ೨೮೦ ಪ್ರಯೋ). ೨. ಸೂರ್ಯ ಗ್ರಹಣ ಅಥವಾ ಚಂದ್ರಗ್ರಹಣ : ಗರಣ ತಾಗಿದ ಚಂದ್ರನಂತೆ (ಪ್ರಭುಪು. ೬-೩೦) ; ಹರಿಮಣಿಯಜಿಯೊಳ್ಮಿಱುಗುತ್ತಿರೆ ವೃತ್ತತೆವೆತ್ತ ದಿನಕರೋಪಲಮಿದು ಭಾಸ್ಕರ ಬಿಂಬಮೆಂದು ಬಂದಾ ಗರಣದ ಸಮಯದೆ ವಿಧುಂತುದಂ ಪಿಡಿವುದದಂ (ರಾಜಶೇ. ೬-೨೨). [< ಸಂ. ಗ್ರಹಣ]

**ಗರಣೆ** 'ಕರಣೆ$_1$' ನೋ.

**ಗರಣೆಗಟ್ಟು** (ಕ್ರಿ). ಉಂಡೆಗಟ್ಟು ; ಗಟ್ಟಿಯಾಗು : ನವಸಾರವನು ಯೆಣ್ಣೆಯಲ್ಲಿ ಕಲಸಿಯಿಕ್ಕಲು ಲದ್ದಿ ಗರಣೆಗಟ್ಟುವುದು (ಅಶ್ವವೈ. ೯-೨೯ ಟೀಕು). [ಗರಣೆ (< ಕರಣೆ$_1$) + ಕಟ್ಟು$_1$]

**ಗರಣೆಗೊಳ್** (ಕ್ರಿ). = ಗರಣೆಗಟ್ಟು : ಬರಬರಲ್ ಕೈಲಾಸ ಕೀರ್ತಿ ಕರುವಿಟ್ಟಂತೆ ಪಾಲ್ಗಡಲ್ ಗರಣೆಗೊಂಡೆದ್ದಂತೆ (ಪರಶು. ೧೦-೧೯). [ಗರಣೆ (< ಕರಣೆ$_1$) + ಕೊಳ್$_1$]

**ಗರತಿ** (ನಾ). ಗೃಹಿಣಿ ; ಪತಿವ್ರತೆ : ಹದಿಬದೆ : ಸೂಳೆಗೆ ಅನಂತ ಪುರುಷರ ಸಂಗವಲ್ಲದೆ ಗರತಿಗೆ ಅನಂತ ಪುರುಷರ ಸಂಗ ಉಂಟೆ (ಮಡಿವಾ. ೧೦-೧೧) ; ಗರತಿಯೇ ಸ್ತ್ರೀಜಾತಿಯೊಳ್ ವೆಗ್ಗಳಂ (ಸೋಮೇಶ. ೪) ; ನೆರೆಮನೆ ಮುಮ್ಮನೆ ಗರತಿಯರೊಲಿದೊಮ್ಮೆ ಬರೆ ತನ್ನ ಮನೆಯ ಬಾಗಿಲಿಗೆ (ಹದಿಬ. ೪-೩೬) ; ಗರತಿಯಾಗಿ ಬಾಳುವುದಕ್ಕೆ ಎಷ್ಟು ಓದು ತಾನೇ ಬೇಕು ! (ಮಹಾಗ. ೩೨೩). 'ಗೃಹಸ್ಥ' ಪರಾ. [< ಸಂ. ಗೃಹ./ ತುಳು. ಗರ್ತಿ ; ತೆಲು. ಗರಿತ, ಗರ್ತ]

**ಗರತಿಗೆಲಸ** (ನಾ). ಗೃಹಿಣಿಯ ಕೆಲಸ ; ಮನೆಯ ಯಜಮಾನಿಯ ಕೆಲಸ : ಗರತಿಗೆಲಸವೆಂದು ಗೆಲ್ಲಗೊಂಡುರ್ಬದೆ ಪರಿಚಾರವೆಂದು ಪಳಿಯದೆ (ಹದಿಬ. ೩-೩೩). [ಗರತಿ + ಕೆಲಸ]

**ಗರತಿತನ** (ನಾ). ಗೃಹಿಣಿಯ ಧರ್ಮ ; ಪಾತಿವ್ರತ್ಯ : ಪುರುಷನ ಭಾವಂ ಪುರುಷತನಂ ಏವಂ ವೀರತನಂ . . . ಗರತಿತನಂ (ಶಬ್ದಾನು. ೪೩೦ ಪ್ರಯೋ) ; ವಿಧವೆಯಾಗಿಯೇ ಇದ್ದು ಗರತಿತನವನ್ನು ಕಾಯ್ದುಕೊಂಡಿದ್ದೇನೆ (ಎರಸೆ. ೧೨೨). [ಗರತಿ + -ತನ]

**ಗರತಿಪ್ಪಾಳೆ** (ನಾ). (ಮಕ್ಕಳನ್ನು) ವಿನೋದಕ್ಕಾಗಿ ತೋಳುಹಿಡಿದು ಗಿರಗಿರನೆ ಸುತ್ತಲೂ ತಿರುಗಿಸುವುದು ; ಒಂದು ಆಟ : ಅವನನ್ನು ಎರಡು ಕೈಯಲ್ಲೂ ಬಲವಾಗಿ ಹಿಡಿದು ಗರತಿಪ್ಪಾಳೆ ಆಡಿಸುವಾಗ ಪರ್ವತ ವನ್ನು ಇನ್ನೊಂದು ಪರ್ವತ ರಪರಪಾಟಿ ತಿರುವುತ್ತಿರುವಂತೆ ಭಯಾನಕ ವಾಯಿತು (ದಾಸಚಿಂ. ೧೫೦). 'ಅಪ್ಪಾಲೆ ತಿಪ್ಪಾಲೆ' ಪರಾ. [?]

**ಗರದ** (ನಾ). ವಿಷವನ್ನು ಕೊಡುವವನು ; ವಿಷವನ್ನು ಕೊಟ್ಟು ಕೊಲ್ಲಲು ಬಯಸುವವನು : ಗರದಂ ಸಾಹಸಿಕಂ ನಟಂ ಪಿಶುನನುಂ ಕೈವರ್ತಕಂ . . . ಇವರಾ ರಕ್ತಾಂಭಸಕ್ಕೆಯ್ದುಗುಂ (ವಿಷ್ಣುಪು. ೬-೧೯೪). [ಸಂ.]

**ಗರದಿ** 'ಗರ್ದಿ' ನೋ.

**ಗರಧರ** (ನಾ). (ಕೊರಳಲ್ಲಿ) ವಿಷವನ್ನು ಧರಿಸಿರುವವನು ; ವಿಷ ಕಂಠ ; ಶಿವ : ಪದಿನಾಲ್ಕು ಲೋಕಕ್ಕೆ ಮಾತೆ ಗರಧರಪ್ರೀತೆ (ಪ್ರಾಥರಾ. ೧-೩) ; ಸ್ಮರಹರನಸುರವರದ ಗರಧರನು (ಗಣೇಶ. ೧೬-೪೦೭). [ಸಂ.]

**ಗರಧರಗ್ರೀವ** (ನಾ). ವಿಷವನ್ನು ಧರಿಸಿರುವ ಕೊರಳುಳ್ಳವನು ; ವಿಷಕಂಠ ; ಶಂಕರ ; ಶಿವ : ಜಯಜಯಜಗತ್ತ್ರಳಯಕರಗರಧರಗ್ರೀವ (ರಾಜಶೇ. ೧೪-೧೬೯ ರಗಳೆ). [ಗರಧರ + ಗ್ರೀವ]

**ಗರಪು, ಗರಬು$_1$** (ಕ್ರಿ). ೧. ಕೆರೆ ; ಕೆಬರು ; ಗೋರು : ನೀರತಪ್ಪಲೆ ಹಂಡೆಯನ್ನು ಗರಪುತ್ತಿತ್ತು (ಸರಸ. ೫೮). **ಗರಬು$_1$** : ೨. (ನೀರಿನಲ್ಲಿ) ಕಯ್ಯಾಡಿಸಿ ಹುಡುಕು ; ಬೆದಕು. 'ಗರಬಾಡು' ಪರಾ. [ದೇ. ‖ ತುಳು. ಗರ್ಪು]

**ಗರಬಡಿ** (ಕ್ರಿ). ೧. ದೆವ್ವ, ಪಿಶಾಚಿ ಮೊದಲಾದ ದುಷ್ಟಶಕ್ತಿಗಳ ಬಾಧೆ ತಟ್ಟು ; ದೆವ್ವ ಹಿಡಿ : ಯಜ್ಞಮಂಟಪದಲ್ಲಿದ್ದವರೆಲ್ಲರೂ ಗರಬಡಿದವರಂತಾಗಿದ್ದರು (ಬಿತಂಬಾ. ೧೬೧) ; ಸುಮಾ ಗರಬಡಿದವಳಂತೆ ಕುಳಿತು ಬಿಟ್ಟಳು (ರೂಪಸ. ೧೧೭). ೨. "ಕೆಟ್ಟಗ್ರಹದಿಂದ ತೊಂದರೆ ಯುಂಟಾಗು" (ಅನಂನಾ). [ಗರ$_2$ + ಬಡಿ$_1$]

**ಗರಬಲ** (ನಾ). ಗ್ರಹಬಲ : ಕೆಂಗದಿರನಾದಿಯಾದೊಂಭತ್ತು ಗರಬಲಂ ತುಂಗನಕ್ಷತ್ರ ಪ್ರವರ್ತನಂಗಳವೆಲ್ಲ (ಆರಾಜ. ೪-೬). [ಗರ$_2$ + ಬಲ$_2$]

**ಗರಬಾಡು** (ಕ್ರಿ). (ನೀರಿನಲ್ಲಿ) ತಡಕಾಡು ; ಹುಡುಕಾಡು (?) : ಗಂಟು ಎಲ್ಲಿಯೂ ಕಾಣದಾಗಲು ಆತನು ಸರೋವರದಲ್ಲಿ ಇಳಿದು ಕಾಲುಹತ್ತುವವರೆಗೆ ಮುಂದಕ್ಕೆ ಹೋಗಿ ಗರಬಾಡಿದನು (ಕುಮುದಿ. ೧೪). [ಗರಬು$_1$ (< ಗರಪು) + ಆಡು$_1$]

**ಗರಬು$_1$** 'ಗರಪು' ನೋ.

**ಗರಬು$_2$** (ನಾ). = ಗರಸು$_2$ : ಗರಬಿನ ಹೊಲ (ರೂಢಿ). [?]

**ಗರಭೃತ್ಕಟಕ** (ನಾ). ಸರ್ಪಗಳನ್ನು ಕಡಗವಾಗಿ ಧರಿಸಿದವನು ; ಸರ್ಪಭೂಷಣ ; ಶಿವ : ಸತ್ಕರ್ಮವರದ ಗರಭೃತ್ಕಟಕ . . . ಜಯ ಶಶ್ವದಗಣಿತ ಚಿತ್ಸುಖ (ಉದ್ಭದೇ. ೬-೩೦). [ಸಂ. (ಗರಭೃತ್ + ಕಟಕ)]

**ಗರಮ್**, ಗರಂ, ಗರಮು, ಗರಮು (ಗು). ೧. ಬಿಸಿಯಾದ ; ಉಷ್ಣವಾದ. (ನಾ). ೨. ಬಿಸಿ ; ಶಾಖ ; ಉಷ್ಣ. ೩. (ಆಲಂ) ಉದ್ರೇಕಗೊಂಡಿರುವಿಕೆ ; ಕೋಪಗೊಂಡಿರುವಿಕೆ. **ಗರಂ :** ೧. ಗರಂ ದೋಸೆ (ರೂಢಿ). ೩. ಅವರು ಯಾಕೋ ಇವೊತ್ತು ಬಹಳ ಗರಂ ಆಗಿರುವಂತೆ ತೋರುತ್ತದೆ (ರೂಢಿ). **ಗರಮು :** (ಕ). **ಗರಮು :** ೩. ನಡನಡುವೆ "ಚಾಯ್‌ಗರಮ್" ದವರ ಬಾಯಿ – ಗರಮು ಗದಗ ಮಿಸುತ್ತಿತ್ತು (ದೀಪಹ. II, ೩೮೮).

ಗರಮಾಗರಮು (ದ್ವಿರುಕ್ತಿ): ಇಬ್ಬರೂ ಆ 'ಗರಮಾಗರಮು' ಚಹವನ್ನು ಕುಡಿದರು (ಚುಬ್ಬಣ್ಣ. ೬೩). ಗರಮಾಗರಮಿಮಾಡು=೧. ಬಿಸಿಯಾಗುವಂತೆ ಮಾಡು. ೨. (ಆಲಂ) ಚೆನ್ನಾಗಿ ಹೊಡೆ; ಶಿಕ್ಷಿಸು: ಅಧಿಕಾರಿಗಳನ್ನು ಹಿಡಿತರಿಸಿ ನಯದಿಂದಲೂ ಮೊಂಡರಿಗೆ ಮೇಖು ಛಡಾಯಿಸಿ ಕೊರಡೆಗಳಯಿಂದಲೂ ಸಹಾ ಗರಮಾಗರಮಿಮಾಡಿ ನಜರಾನೆ ತೆಗೆದು ಜೀರಳ ಹಣಕಾಸುಗಳ ಜಮಮಾಡಿ (ಹೈದರ. ೬೩).

[← ಹಿಂ. ಮರಾ. ಗರಮ್; ಪಾರ. ಗರ್ಮ್]

**ಗರಮು** 'ಗರಮ್' ನೋ.

**ಗರಮಮಸಾಲೆ** (ನಾ). ೧. ಕೊತ್ತಂಬರಿ, ಜೀರಿಗೆ, ಮೆಣಸು, ಲವಂಗ, ದಾಲಚಿನ್ನಿ ಮೊದಲಾದ ಉಷ್ಣಕಾರಕ ಸಂಭಾರ ಪದಾರ್ಥಗಳು: (*). ೨. ಉಷ್ಣಕಾರಕವಾದ ಔಷಧಿವಸ್ತುಗಳು: (*). [ಗರಮ (< ಗರಮ್) + ಮಸಾಲೆ]

**ಗರಮಿ**, ಗರ್ಮಿ (ನಾ). ೧. ಉಷ್ಣ; ಕಾವು. ೨. ಒಂದು ಬಗೆಯ ಮೇಹರೋಗ; ಗುಹ್ಯರೋಗ; ಪರಂಗಿರೋಗ: ಈ ಗರಮಿಮಂದಿ ಬ್ಯಾಡೋ (ರಕ್ತಧ್ವ. ೩೦೪). **ಗರ್ಮಿ**: ೧. ಖರ್ಜೂರದ ಗರ್ಮಿಯೋ ಏನೋ? (ಕುಡಿಕೂ. ೨೫೬); ೨. ತಾವು ಗರ್ಮಿರೋಗದಿಂದ ನಾಲ್ಕಾರು ಸಲ ಆಸ್ಪತ್ರೆಯನ್ನು ಕಂಡಿದ್ದರೂ (ಎಡಹೆ. ೪೪).

[←ಹಿಂ. ಮರಾ. ಗರಮಿ; ಪಾರ. ಗರ್ಮಿ./ ಸಂ. ಘರ್ಮ]

**ಗರಮು** 'ಗರಮ್' ನೋ.

**ಗರಲ**, ಗರಳ (ನಾ). ೧. ನಂಜು; ವಿಷ: ಸುರೆ ಗರಲ ಸುಧೆಗಳ್ ಅಬ್ಧಿಯಲಿ ಸೋದರರಲ್ತೆ? (ಮಂಕುಕ. ೨೮೬). 'ಗರಲಕಂಧರ' ಪರಾ. **ಗರಳ**: ೧. ಪುಗುವುದು ಕಿಚ್ಚಂ ನುಂಗುವುದು ಗರಳಮಂ ಪಾಯ್ವುದಧಿಕ ಕುಧರಾಗ್ರದಿನುರ್ವಿಗೆ ಸೇವಿಸದಿರ್ಪುದಸೇವ್ಯಗುಣಾನ್ವಿತನಪ್ಪನರಪನಂ ಮಾನಧನಂ (ಪಂಚತಂ. ೧೩೩-೨೧). 'ಗರಳಪ್ರಾಣಿ', 'ಗರಳವನಸ್ಪತಿ' ಪರಾ. ೨. ಹಾವಿನ ವಿಷ: "ವಿಷಂ, ಗರಳಂ, ಗರಃ – ಈ ೩ ಹಾವಿನ ವಿಷಂ" (ಹಲಾಯು. ೧೦೫-೧೯); ಗರಳವಿಲ್ಲದ ಉರಗಂಗೆ ಹಲಬರಂಜಿದರುಂಟೇ (ಮೋಹಮಾ. ೬೭-೩೦೨); ಘನಗರಳಂ ವಿಜೃಂಭಿಸೆ ಫಣಾಮಣಿ ರಂಜಿಸೆ (ಜಗವಿ. ೩-೯೧); ಕಾವರಾರೈ ನಿನ್ನನೆನ್ನ ಕೋಪಪ್ರಳಯಫಣಿಗರಳದಿಂ (ಶ್ರೀರಾಮಾ. ೩೦೬-೧೫೦). [ಸಂ.]

**ಗರಲಕಂಧರ**, ಗರಳಕಂಧರ (ನಾ). ವಿಷವನ್ನು ಕೊರಳಲ್ಲಿ ಧರಿಸಿದವನು; ವಿಷಕಂಠ; ಶಿವ: (*). **ಗರಳಕಂಧರ**: ಗರಳಕಂಧರ ಮೂರ್ತಿ ನೋಡುತ (ಬಸವು. ೨೪-೨೬); ಗರಳಕಂಧರ ಮಹಾತ್ಮ್ಯಕ್ಷನಂ ಚಂದ್ರಶೇಖರನ ಕಂಡು (ವೀಶೈಪು. ೨-೮-೨೬). [ಗರಲ + ಕಂಧರ]

**ಗರಲಗ್ರೀವ**, ಗರಳಗ್ರೀವ (ನಾ). ೧. = ಗರಲಕಂಧರ: ಗರಲಗ್ರೀವ ನಹೀಂದ್ರನಿಂದು ಮೃಗಲಕ್ಷ್ಮಂ ಶಂಕರಂ ನೀಲಕಂಧರನೆಂದೇಳಿಸೆ ತನ್ನ ನಿರ್ಮಲಯಶಂ (ಪಂರಾಮಾ. ೯-೨೦೧). **ಗರಳಗ್ರೀವ**: ೧. ಅಭೀಪ್ಸಿತ ವಸ್ತುನಿಚಯವನಿತ್ತು ಗರಳಗ್ರೀವನಂ ಗೆಲಲು (ಬಸವು. ೨೫-೧೨); ಸುಧೆಗೊಬ್ಬುಗಳ ಗಂಡಿಗರ ಗಾಢದ ಗರ್ಭವನು ಹೊಳ್ಳಿಸಿತು ಗರಳಗ್ರೀವನುಪದೇಶ (ಕುವ್ಯಾಕ. ೬-೩೧). ೨. ವಿಷವನ್ನು ಧರಿಸಿದ ಕೊರಳು; ಕರೆಗೊರಳು: ಓವಿ ಗುಂಡಯ್ಯಂಗೆ ಹರೆಯವನೀವ ಶಾವಿನೊಳಾವ ಗರಳಗ್ರೀವ ಸಹಿತಂ ಹೋದೆ (ಬಸವು. ೨೪-೬೨).

[ಗರಲ + ಗ್ರೀವ]

**ಗರಲಧರ**, ಗರಳಧರ (ನಾ). ೧. (ಕೊರಳಲ್ಲಿ) ವಿಷವನ್ನು ಧರಿಸಿದವನು; ಶಿವ. ೨. ಹಾವು; ಸರ್ಪ. **ಗರಳಧರ**: ೧. ಗರಳಧರನುರಗಭೂಷಂ ಸರಸಿಜಭವಮಸ್ತಕಪ್ರಯುಕ್ತಕರಂ . . . ಭಕ್ತಿರಸಮುನೆಮುಗೀಗೆ ಹಂಪೆಯ ವಿರೂಪಾಕ್ಷಂ (೧೦೪. ೮-೧); ಗರಳಧರನೀಂಟಿದಮೃತಂ ಗರಳಂ ತಾನಾದುದು (ವೃಷವಿ. ೪೦-೮೬). ೨. ಘಟದೊಳಗೆ ಕೈದುಡುಕಿ ಪಟು ದುರ್ಘಟ ಗರಳಧರನಂ ಪಿಡಿಪಿಡಿದು ತೆಗೆವ ಸಮಯದಲಿ (ಬಸವು. ೫೧-೬೧). [ಸಂ.]

**ಗರಲಪೂರ**, ಗರಳಪೂರ (ನಾ). ವಿಷಯುಕ್ತವಾದುದು; ಹಾವು; ಸರ್ಪ. **ಗರಳಪೂರ**: "ಗರಳಪೂರಂ ಕಂಚುಕಂ ಭುಜಗನಾ ವ್ಯಾಳನೆನಲು ಸರ್ಪಂಗೆ ನಾಮಂ" (ಮಂಗರಾ. ೧೧೮-೧).

[ಗರಲ + ಪೂರ]

**ಗರಲಭುಕ್ಕು**, ಗರಳಭುಕ್ಕು (ನಾ). ವಿಷವನ್ನು ಉಂಡವನು; ನಂಜುಂಡ; ಶಿವ. **ಗರಳಭುಕ್ಕು**: 'ಗರಳಭುಗ್ರಸನ' ಪರಾ.

[ಸಂ. ಗರಲಭುಜ್]

**ಗರಲವಿಶಿಖ**, ಗರಳವಿಶಿಖ (ನಾ). ವಿಷಪೂರಿತವಾದ ಬಾಣ: (*). **ಗರಳವಿಶಿಖ**: ಮುಳಿದವಂ ಗರಳವಿಶಿಖವನುಗಿದನಾ ನರಂ ಗಾರುಡ ಶಿಲೀಮುಖವನು (ಜೈಮಿಭಾ. ೧೩-೧೫). [ಗರಲ + ವಿಶಿಖ]

**ಗರಲಾಭಿರಾಮ** (ನಾ). ವಿಷದಿಂದ ಶೋಭಿಸುವವನು; ಶಿವ: ಸುಗುಣಾನುರಾಗನು ಗರಲಾಭಿರಾಮನು ರಾಗಾದಿದೋಷರಹಿತನು . . . ನಮ್ಮನು ಸಲಹಲಿ ಶಿವನು (ಇಂಚಾಪ. ೮೩-೧).

[ಗರಲ + ಅಭಿರಾಮ]

**ಗರಲಾಶನ**, ಗರಳಾಶನ (ನಾ). = ಗರಲಭುಕ್ಕು. **ಗರಳಾಶನ**: ದೇವ ಗರಳಾಶನ ದೇವ ನಗಾತ್ಮಜೇಶ್ವರಾ (ಶಬಶಂ. ೫-೨೧).

[ಗರಲ + ಅಶನ]

**ಗರವಟ್ಟ**₁, ಘರವಟ್ಟ (ನಾ). ೧. ಪಹರೆ; ಕಾವಲು; ಗಸ್ತು: "ಗರವಟ ಇತಿ ದುರ್ಗಾದೌ ಪ್ರಹರೇ ಪ್ರಹರೇ ಪರ್ಯಟನಾದಿನಾ ಕ್ರಿಯಮಾಣೋ ರಕ್ಷಾವಿಶೇಷಃ" (ಶಬ್ದಾನು. ೪೪೧ ವ್ಯಾಖ್ಯಾ). ೨. ಸುತ್ತುವುದು; ತಿರುಗುವುದು. 'ಗರವಟಿಸು' ಪರಾ. **ಘುರವಟ್ಟ**: ೨. 'ಘರವಟ್ಟಿಸು' ಪರಾ. [< ಸಂ. ಗರ್ವಾಟ]

**ಗರವಟ್ಟ**₂ (ನಾ). ನವಗ್ರಹಗಳ ಸ್ಥಾನಗಳನ್ನು ನಿರ್ದೇಶಿಸುವ ನಕ್ಷೆ: "ಗರವಟ= ಗ್ರಹಪಟ" (ತದ್ಭಕೋ. ೧೦).

[< ಸಂ. ಗ್ರಹಪಟ]

**ಗರವಟ್ಟ**₃, ಗ್ರರವಟ್ಟ (ನಾ). ಯಾಗ; ಯಜ್ಞ: ಕೆಲರ್ ಗರವಟದ ಸನ್ನಿಯಮನಣಿಗೆಯ್ಯುತಿರ್ಪರ್ (ಅದ್ಭುತ. ೧-೧೧). **ಗರವಟ್ಟ**: ಆತನೊರ್ಮೆ ಮೊಗಸಿದ ಗರವಟ್ಟಕ್ಕೆ ಸಮಿತ್ಕಾರಂಗಳಂ ತಿರಿತರ್ಪಂ ದುಙ್ಖಗದಿಂ ಬೈಗುವೊಳ್ತಿಂಗೆ ತನ್ನಾಶ್ರಮದತ್ತಣಿಂ ಪೋಜವೋದಂ (ರಾಮಾಶ್ವ. ೩೪-೧೯); "ಗ್ರಹರೇಖೆ; ಯಜ್ಞಶಾಲೆ (?)" (ರಾಮಾಶ್ವ. ಕೋಶ). [< ಸಂ. ಗಾರ್ಹಪತ್ಯ ?]

**ಗರವಟ** (ನಾ). ಕಾವಲು; ಗಸ್ತು; ಪಹರೆ. 'ಗರವಟಿವರ್' ಪರಾ.

[< ಗರವಟ₁]

**ಗರವಟಿಗ**₁, ಘರವಟಿಗ (ನಾ). ಕಾವಲುಗಾರ; ಪಹರೆಯವನು; ಗಸ್ತು ತಿರುಗುವವನು: ಪೊಸಪೂವಡಿಗರ ಗರವಟಿಗರ ಕೊಲ್ಲಾಯ್ತರ ನುಡಿಗಾಜಿರ ಮಾಸ್ವಾರರ ಸಂದಣಿ ಸಲೆ ಸೊಗಯಿಸಿತಾಗ (ಜಯಕಾ. ೧೨-೧೯). **ಘುರವಟಿಗ**: ಘರವಟಿಗರ ಗಜವಾಜಿವಾಹಕರ ವಾಗ್ವರರ . . . ಕೇರಿಗಳೊಪ್ಪಿದವು (ಕುರಾಸಾಂ. ೪-೧೧೨).

[ಗರವಟ₁ + -ಇಗ]

**ಗರವಟಿಗ**₂ (ನಾ). ತೋಟ, ಹೊಲಗದ್ದೆಗಳಿಗೆ ನೀರೆತ್ತಿ ಒದಗಿಸುವವನು; ನೀರುಗಂಟಿ (?): ಗರವಟಿಗಂ ಗರ ಇತಿ ಜಲಯಂತ್ರವಿಶೇಷಃ ತತ್ರನಿಯುಕ್ತಃ (ಶಬ್ದಾನು. ೪೪೧ ವ್ಯಾಖ್ಯಾ).

[ಗರ₆ + -ಅಟಿಗ]

**ಗರವಟಿಗೆ**, ಗರಟಿಗೆ, ಗರವಟ್ಟಿಗೆ, ಗರವೊಟ್ಟಿಗೆ, ಘರಟಿಗೆ, ಘರವಟಿಗೆ, ಘರವಟ್ಟಿಗೆ (ನಾ). ೧.=ಗರವಟ$_1$: ನೆರೆದ ವೇದಂಗಳುಗ್ಗಡವುಪನಿಷತ್ತುಗಳ ಗ[ಪಾಠಾಂ. ಕ, ನ, ಪು]ರವಟಿಗೆ . . . ಹರಿಬ್ರಹ್ಮಾದಿಸುರರ ಕಾಹು (ಹಚಕಾ. ೫-೬೧); ಅಲ್ಲಲ್ಲಿ ಜಾವಮುಕ್ಕಡ(ಗ)ರವಟಿಗೆ ಕಳವ(ಜುಕೆ)ಯ(ಮೆ)ಕ್ಕೆಕ್ಕೆಯೊಳಂ ಶಾಣಾಂತರಮಂ ನಿರವಿಸೆಯುಂ (ಪುಷ್ಪಪು. ೭-೬೯ವ); ಮೃಗೇಂದ್ರನ ಗರವಟಿಗೆಯಲಿ ಬಡಸೃಗಾಲನ ಬಾಧೆ ಬಲುದು ಗಡಾ (ಕುವ್ಯಾಗ. ೧೧-೧೯). ೨. ಮನೋವಿಕಲತೆ; ಚಿತ್ತಕ್ಷೋಭೆ; ಹುಚ್ಚು: (ಕ). **ಗರಟಿಗೆ**: ೧. ಗರಟಿಗೆಯುಕ್ಕಡದ ವಿಯಚ್ಚರರಂ ಪೇಸೇಶಿ[ಟಿ]ಕೊಂದರೋ (ಶಾಂತಿಪು. ೬-೧೧೦); ಹೃದಯಪ್ರಿಯರಂ ತೊಡಗಿದ ಪದದೊಳ್ಗರಟಿಗೆಯ ಜಾವದುಕ್ಕಡದುಲಿ ಮುಗ್ಗಿದ ಪೊತ್ತು ಸೂಳ್ಗೆ ಕರುಮಾಡದ ಪಕ್ಕದೊಳಿರ್ದ ಪಟ್ಟದಾನೆಯ ಬದಗಂ ಬಿನದಕ್ಕೆ ಪಾಡುತ್ತಿರೆ (ಯಶೋಚ. ೨-೨೭). **ಗರವಟ್ಟಿಗೆ**: ೧.'ಗರವಟ್ಟಿಗೆವರ್' ಪರಾ. **ಗರವೊಟ್ಟಿಗೆ**: ೧. ಉಂನಾಲಗೆಯ ಗರವೊಟ್ಟಿ[ಪಾಠಾಂ. ಟ್ಟಿ]ಗೆಯ ತೊಳಲಿಕೆ ತೆರಳಿಚಿತು ತೆತ್ತೀಸು ಕೋಟಿಗಳ (ಕುವ್ಯಾಅ. ೨೦-೫೬). **ಘರಟಿಗೆ**: ೧. ನಿರವಧಿಧ್ಯಾನಂ ಚತುರ್ದಶಭುವನಮನಾ ಭರದಿಂದ ಲಾವರಿಸೆ ಘರಟಿಗೆಯ ಕಪಿಧ್ವಜನಿಕರಮನೋವಥೆ ಕೊಲುತ ಕವಿತಂದು ದಂದು ಬೆಚ್ಚರದಿಂದ ಬೊಬ್ಬೆಯುಬ್ಬರಗುರ್ವಿಸೆ ಕೊಡೆ (ಕುಮುರಾ.೧೮-೭). **ಘರವಟಿಗೆ**: ೧. 'ಘರವಟಿಗೆಬರು' ಪರಾ. **ಘರವಟ್ಟಿಗೆ**: ೧. ವನದುರ್ಗಮಂ ಪೊಲ್ವ ಬಿಲ್ವಡೆಯಿಂದಂ ಘರವಟ್ಟಿಗೆಯ ಕಟ್ಟತಿಕಾಟರಿಂದಂ (ಧರ್ಮಾಮೃ. ೮-೨೨೬). ೩. ಸ್ಪರ್ಧೆ; ಗದ್ದಲ; ಗಲಭೆ (?): ಕಲಿಗಾಪಿನಾಳುಕ್ಕಡದಾಳ ಮೇಲಿಕ್ಕಿ ಉಕ್ಕಡದಾಳ್ ಘ[ಪಾಠಾಂ. ಪು]ರವಟ್ಟಿಗೆಯೊಳ ಮೇಲಿಕ್ಕಿ ಘ[ಪಾಠಾಂ. ಪು]ರವಟ್ಟಿಗೆಯಾಗೆ ಮಾಮುಸಕಂ ಮುಸಗಿ (ಗದಾಯು. ೯-೩೨ವ); "ಘರವಟ್ಟಿಗೆಯಾಗೆ – ಇದೆಲ್ಲದರಿಂದ ಗಲಭೆಯಾಗಲು" (ಗದಾಸಂ. ೨೦೨ ಟಿಪ್ಪಣಿ). ☞ 'ಗರವಟಿ' ಎಂಬುದೇ ಮೂಲ ರೂಪವಾಗಿದ್ದು, 'ಗರವಟಿಗೆ' ಎಂಬುದು ಚತುರ್ಥ್ಯಂತವಾಗಿರಲು ಸಾಧ್ಯ.

[ಗರವಟಿ + -ಗೆ]

**ಗರವಟಿಗೆಬರು** 'ಗರವಟಿಗೆವರ್' ನೋ.

**ಗರವಟಿಗೆವರ್**, ಗರಟಿಗೆಬರು, ಗರವಟಿಗೆಬರು, ಗರವಟ್ಟಿಗೆವರ್, ಘರವಟಿಗೆಬರು (ಕ್ರಿ). ೧. ಕಾವಲಿಗಾಗಿ ಸುತ್ತಿಕೊಂಡು ಬರು; ಪಹರೆಮಾಡು; ಗಸ್ತುತಿರುಗು: "ತೊಟಲ್ಲನೆಂದು ಭ್ರಮೆಗೊಂಡನುಂ ಗರವಟಿಗೆ[ಪಾಠಾಂ. ಉಂಗರವಟ್ಟಿಗೆ, ಗರವಟ್ಟಿಗೆ] ವಂದನುಮಕ್ಕುಂ" (ಶಮುದ. ನ. ೩೩ ವೃತ್ತಿ); ಕಾಮನ ಗರವಟಿಗೆವರ್ಪಂತೆ ಸುತ್ತಿವರ್ಪುವು ಗಿಳಿಗಳ್ (ಶಮುದ. ೩೭ ಪ್ರಯೋ). ೨. ಮನೋವಿಕಲನಾಗು; ಭ್ರಮಿಷ್ಠನಾಗು: (ಕ). **ಗರಟಿಗೆಬರು**: ೧. ಪುರರಕ್ಷಕರು ಕಂಡಾ ಚಾರದವರು ಕಳವಾರರು, ಗರಟಿಗೆಬಂದಿದ್ದೇವೆ (ಮಂತ್ರಶ. ೩೦-೧೧). **ಗರವಟಿಗೆಬರು**: ೧. ರಜನೀಚರರ ಬಾಧೆಗೆ ತೊಟಿದು ನಿದ್ರೆಯ ಗ[ಪಾಠಾಂ. ಘ]ರವಟಿಗೆಬರುತಿಹೆನು ನಿಮ್ಮಡಿಯಂಗರಕ್ಷಣೆಗೆ (ತೊರರಾ. ೬-೪೫-೬). **ಗರವಟ್ಟಿಗೆವರ್**: ಮೇಲಿನ 'ಶಮುದ. ನ. ೩೩ ವೃತ್ತಿ'ಯ ಪ್ರಯೋಗದ ಪಾಠಾಂತರವನ್ನು ನೋಡಿ. **ಘರವಟಿಗೆಬರು**: ೧. ಮೇಲಿನ 'ತೊರರಾ. ೬-೪೫-೬'ರ ಪ್ರಯೋಗದ ಪಾಠಾಂತರವನ್ನು ನೋಡಿ.

[ಗರವಟಿಗೆ + ಬರ್$_1$]

**ಗರವಟಿಬರ್** (ಕ್ರಿ). = ಗರವಟಿಗೆವರ್ ೧: ಜೊಂಪಜೊಂಪದೊಳ್ ಶೋಧಿಸುತುಂ ವಿರಹಿಗಳನಱಸಿ ಕಾವನ ಗರವಟಿಬರ್ಪಂತೆ ಸುತ್ತಿಬರ್ಪುವು ಗಿಳಿಗಳ್ (ಸೂಕ್ತಿಸು. ೪-೪೬). [ಗರವಟಿ + ಬರ್$_1$]

**ಗರವಟಿಸು**, ಘರವಟ್ಟಿಸು (ಕ್ರಿ). ೧. ತೂತುಮಾಡು; ರಂಧ್ರವನ್ನು ಕೊರೆ: "ಕೊಱೆದುದು = ಗರವಟಿಸಿಡುವುದು" (ಶಮುದ. ಪರಿ. ೨). ೨. ಗರಗರನೆ ತಿರುಗಿಸು; ಸುತ್ತಿಸು: ದಂತವಕ್ತ್ರಂ . . . ಶಂಖಚಕ್ರಾನ್ವಿತನೆಂದು ಉದಧಿಯಂ ಕಲಂಕಿಯುಂ ಅನಂತಾಖ್ಯನೆಂದು ಭೂಮಿಯಂ ತಿಗುಱಿದಿರುಪಿಯುಂ ಅಬ್ಜೋದರನೆಂದು ಗಗನಮಂ ಗರವಟಿಸಿಯುಂ ಮಾಣದೆ (ಜಗವಿ. ೯-೫೩ವ). ೩. ಗಸ್ತುತಿರುಗು, —ಅಲೆ: (ಕ). **ಘರವಟ್ಟಿಸು**: ೨. ಕರವಾಳಂ ಘರವಟ್ಟಿಸಿ ಶಿರೋಜಮಂ ಪಿಡಿದು ತೆಗೆದು ಗುರುವಂ ಪಚ್ಚಂತಿರೆ ಪಿರಿದು ಪೊಯ್ದಂ (ಪಂಪಭಾ. ೧೨-೩೦); "ಘರವಟ್ಟಿಸಿ = ಬೀಸಿ, ಝಳಪಿಸಿ" (ಪಂಪವಿ. ೪೪೬).

[ಗರವಟ$_1$ + -ಇಸು$_3$]

**ಗರವಟ್ಟಿ** 'ಗರವಟ್ಟ' ನೋ.

**ಗರವಟ್ಟಿಗೆ** 'ಗರವಟಿಗೆ' ನೋ.

**ಗರವಟ್ಟಿಗೆವರ್** 'ಗರವಟಿಗೆವರ್' ನೋ.

**ಗರವರ** (ನಾ). ವಿಷಗಳಲ್ಲಿ ಭಯಂಕರವಾದುದು: ಶಿರದಲಿ ಶಿವಲಿಖಿತವದೀಪರಿಯೇ ಗರವರದಲ್ಲಿಯೆ [ಪಾಠಾಂ. ಗರಳದ ಉರಿಯಲಿ] ಒಱಗಿದೆ ಕಲಿಯೇ (ಹಚಕಾ. ೧೨-೩೦ ರಗಳೆ). [?]

**ಗರವರಿಸು** (ಕ್ರಿ). = ಗರವಟಿಸು ೧: "ಗರವಸಗೊಂಡುದೆಂದೆನಲ್ ಕೊಱೆದುದೆನೆ ಗರವರಿಸಿ [ಪಾಠಾಂ. ಟಿಸಿ]ದರ್ಥಮಕ್ಕು" (ಕಬ್ಬಿಕೈ.೯೦).

[< ಗರವಟಿಸು]

**ಗರವಸ** (ನಾ). ಕಾವಲು; ಪಹರೆ; ಗಸ್ತು (?). 'ಗರವಸಂಗೊಳ್' ಪರಾ. [?]

**ಗರವಸಂಗೊಳ್**, ಗರವಸಗೊಳ್ (ಕ್ರಿ). ಪಹರೆಮಾಡು; ಕಾವಲಾಗಿರು; ಗಸ್ತುತಿರುಗು (?): ಮುರಿದು ಕದಿರ್ವರಿದು ರಣಕೇಸರಿಯಂ ಸುತ್ತಿಱಿದು ಗರವಸಂಗೊಳ್ವಬಲಾಸ್ಫುರಿತಾಕ್ಷರುಚಿಗಳಸಿ ಪಂಜರದೊಳ್ ಸೆಱಗೆಯ್ದು ತರ್ಪವೊಲ್ ಸೊಗಯಿಸುಗುಂ (ಲೀಲಾವ. ೧೨-೫); ಗರವಸಂಗೊಳ್ವ[ಪಾಠಾಂ. ಸೊಗಯಿಸುವ] ಮುಖಮಯೂಖಂಗಳಿಂ ಬೆಳ್ದಿಂಗಳ್ ಬೆಳ್ಪಂಗೆಡೆದಂಕೆಯುಂ (ಲೀಲಾವ. ೧೨-೬ವ). **ಗರವಸಗೊಳ್**: "ಗರವಸಗೊಂಡುದು = ಗರವಟಿಸಿಡುವುದು" (ಶಮುದ. ಪರಿ. ೨); "ಗರವಸಗೊಂಡುದೆಂದೆನಲ್ ಕೊಱೆದುದೆನೆ ಗರವರಿಸಿ [ಪಾಠಾಂ. ಟಿಸಿ]ದರ್ಥಮಕ್ಕು" (ಕಬ್ಬಿಕೈ. ೯೦).

[ಗರವಸ + ಕೊಳ್$_1$]

**ಗರವಸಗೊಳ್** 'ಗರವಸಂಗೊಳ್' ನೋ.

**ಗರವಾರ** (ನಾ). ಒಂದು ಬಗೆಯ ತೆರಿಗೆ; ಮಗ್ಗಗಳ ಮೇಲಿನ ಸುಂಕ (?): ತಿರುಮುಲದೇವರಿಗೆ ಮೂಡಲಾಗಿ ಹೋದ ಸಾಲಿಗರ ಕೇರಿಯ ಮಗ್ಗ ಗರವಾರಗಳನು ಅ ಮೂಡಬಾಗಿಲ ಸುಂಕವನೂ ಆಚಂದ್ರಾರ್ಕ್ಕವಾಗಿ ತಿರುಮುಲದೇವರಿಗೆ ನಂದಾ[ದೀ]ಪ್ತಿಂಗೂ ದಿನಮಾನ ವೆಚವನೂ ನಡಸುವಂತಾಗಿ ಧಾರೆಯನೆಱದು ಕೊಟಂಥಾ ಧರ್ಮ್ಮಶಾಶನಕೆ ಶುಭಮಸ್ತು (ಸೌಇಇ. IX–ii, ೪೭೬–೧೪; 1506).

[?]

**ಗರವಿಷ** (ನಾ). ತೀಕ್ಷ್ಣವಾದ ವಿಷ, —ನಂಜು (?): ಗರುಗದ ಸೊಪ್ಪು ಹಾರವಾಣದ ಚೆಕ್ಕೆ . . . ಸೇವಿಸಿದರೆ ಶ್ವಾಸ, ಕಾಸ, ಕಂಠರೋಗ, ಗರವಿಷ, ಜಿಹ್ವಾರೋಗ, ಲಳ ವಿಧ ವಾತರೋಗ . . . ನಾಶವಾಗುವುವು (ಸಕವೈ. ಪರಿ ೪೪೭). [ಗರ$_4$ + ವಿಷ]

**ಗರವು** (ಕ್ರಿ). ಎಲ್ಲವನ್ನೂ ಸೆಳೆದುಕೊಳ್ಳು; ಅಪಹರಿಸು; ಸುಲಿ: "ಗರವು-ಸರ್ವಾಕರ್ಷಣೇ" (ಶಮುಧಾ). 'ಗರವುಗೊಳ್ಳು' ಪರಾ.

[< ಕವರ್$_1$?]

**ಗರವುಗೊಳ್ಳು** (ಕ್ರಿ). (ಎಲ್ಲವನ್ನೂ) ಸೆಳೆದುಕೊಳ್ಳು; ಅಪಹರಿಸಿಕೊಳ್ಳು (?): ಸರ್ವಸ್ವವನ್ನೂ ನನ್ನ ಮೂಲಕವಾಗಿ ನಿಮ್ಮಾಳ್ಕೆಗೆ ಇಂಬುಗೊಳಿಸಿಬಿಟ್ಟು, ನಿಮ್ಮ ಗೆರೆಯಾಜ್ಞೆಯೊಳಗೇ ಮಿಸುಕದಿರುವಂತೆ ಗರವುಗೊಳ್ಳಲಾಟಿಸುತ್ತಿರುವ ನೀವು (ಮಂತ್ರಶ. ೨೭-೧೨).
[ಗರವು + ಕೊಳ್ಳು₁ (< ಕೊಳ್₁)]

**ಗರವೇಟ** (ನಾ). ಹೆಚ್ಚಾದ ಅನುರಾಗ, —ಪ್ರೀತಿ (?): ಮತ್ತಮೊರ್ವಂ ಗರವೇಟದ ಭೋಗಿಯಿಂತೆಂದಂ (ಅನಂಪು. ೮-೫೩ವ).
[< ಕರಂ? + ಬೇಟ₂ (< ಬೇಂಟ)]

**ಗರವೇಟಗಾರ್ತಿ** (ನಾ). ಹೆಚ್ಚಾದ ಅನುರಾಗವುಳ್ಳವಳು (?): ಮತ್ತೊರ್ವಳ್ಗರವೇಟಗಾರ್ತಿ ಕಲಹದೊಳ್ದರ್ಪದ ಬೊಜಗನನೋಲಗಕ್ಕಲಂಕರಿಸಿ ಕಳುಹಿ ಚಿತ್ತದುತ್ತವಳತನಮಂ ತನ್ನ ಮನದನ್ನಳಪ್ಪ ಕೆಳದಿಗಿಂತೆಂದಳ್ (ಅನಂಪು. ೮-೧೫ ವ).
[ಗರವೇಟ + -ಕಾರ್ತಿ₁(< -ಕಾಜ) + -ತಿ₁ (< -ಇತ್ತಿ)]

**ಗರವೊಟ್ಟಿಗೆ** 'ಗರವಟಿಗೆ' ನೋ.

**ಗರವೊಡೆ**, ಗರಹೊಡೆ (ಕ್ರಿ). = ಗರಬಡಿ ೧: ಪ್ರಯಾಣಶಕುನದೊಳ್ ಉಱಿಯನೊಂದಂ ಕಂಡಂತೆ ಕಳಿಯೆ ತಡೆಯದೆ ಗರವೊಡೆದಂತೆ ಮೇಲ್ವಾಯ್ದವಪ್ಪೊಡೆ (ಪಂಚತಂ. ೨೦೭-೯). **ಗರಹೊಡೆ**: ಗರಹೊಡೆದವರ ನುಡಿಸಬಹುದು ಸಿರಿಗರ ಹೊಡೆದವರ ನುಡಿಸಲು ಬಾರದು (ಬಸವ. ೧೩೨); ಎದೆಗಳೊಳು ಕಳವಳಿಸಿ ಗರಹೊಡೆದವೊಲು ತಮ್ಮೊಳು ಮಱೆದು ತುಟಿಗಳು ಮಿಡುಕದೆ (ಬಸಪು. ೫೪-೮೧); ಪೆಮ್ಮಾಡಿರಾಯಂ . . . ಸಿರಿಗರಹೊಡೆದ ನಿರ್ಭಾಗ್ಯನಂ ಕರುಣಿಸೆಂದೆನುತೆ ಕಾರ್ಪಣ್ಯಮುಖನಾಗಿರ್ದ ಧರಣೀಶನಂ ಕೃಪಾದೃಷ್ಟಿಯಿಂ ನೋಡಿ (ಸಿದ್ಧೇಪು. ೧೩-೨೧); ಕೆಂಜ ಗರಹೊಡೆದಂತೆ ನಿಂತಿದ್ದ (ಗ್ರಾಮಾಯ. ೧೬೦). [ಗರ₂ + ಪೊಡೆ₁]

**ಗರವೊಯ್**, ಗರಹೊಯ್ (ಕ್ರಿ). = ಗರಬಡಿ ೧: ಕೆಟ್ಟೋಡಿದರಡಿಯಿಡೆ ಮಱೆದಿರ್ದರ್ ಗರವೊಯ್ದಂದದಿನಿರ್ದರ್ ಪರನೃಪಬಲದವರು (ಜಯಕಾ. ೬-೨); ಗರವೊಯ್ದಂತೆ ಅವಗ್ರಹಿಸಿಕೊಂಡು (ಮಂತ್ರಶ. ೬೬-೨೪). **ಗರಹೊಯ್**: ದುರುಳ ಕೌರವನನುಜ ದ್ರುಪದಜೆಯ ಸೀರೆಯನು ಕರದಿಂದ ಸೆಳೆಯುತಿರೆ ಪತಿಗಳೆಲ್ಲ ಗರಹೊಯ್ದಂತಿರ್ದರು (ಪುರಂದ. ೨-೫೯-೧).
[ಗರ₂ + ಪೊಯ್₁]

**ಗರಸು** (ನಾ). ೧. ದಪ್ಪಮರಳು ಮತ್ತು ಜಲ್ಲಿಯ ಮಿಶ್ರಣ; ಕಂಕರೆ: "ಹಾದಿಗೂ ರಸ್ತೆಗೂ ಹೆಚ್ಚಾಗಿ ಉಪಯೋಗಿಸುವ ದಪ್ಪ ಮರಳಿನ ಮತ್ತು ಸಣ್ಣಕಲ್ಲಿನ ಉಂಡೆಗಳ ಮಿಶ್ರಣ: ಗರಸು; ಕಂಕರೆ" (Gravel. ಇಂಕಪ); ಮಾರ್ಗದ ಮೇಲೆ ಆಗಾಗ್ಗೆ ಗರಸು ಹಾಕಿ ರೋಲುಗಳನ್ನು ತಿರುಗಿಸುತ್ತಿರುವ ಕಾರಣ ಈ ಮಾರ್ಗವು ೧೨ ತಿಂಗಳೂ ಒಂದೇ ಸಮನಾಗಿರುತ್ತದೆ (ಕಥಾಗ. ೨೯೫); ಗರಸೂ ನೀರೂ ಹಾಕಿ ಬಡಿಮಣೆಯಿಂದ ಬಡಿದು ಸಮಮಾಡಿ ನೆಲಗಟ್ಟು ಮಾಡುತ್ತಾರೆ (ಮುಂಬಯಿ. ೬-೧೧೭). ೨. ಕಲ್ಲುಮಿಶ್ರವಾದ ಹಳದಿ ಕೆಂಪು ಬೆರೆತ ಮಣ್ಣು: ಎರೆಯ ಭೂಮಿಗಳಾಗಲಿ ಉಸುಕು ಗರಸು ಕರಲು ಭೂಮಿಗಳಾಗಲಿ . . . ಒಡ್ಡು ಹಾಕಿಸುವುದು ಅಗತ್ಯವಾಗಿದೆ (ಕೃಷಿಪ್ರ. ೩೪); ಈ ತೋಟಗಳಿಗೆ ಕಾಗದಾಳಿ ಎಂಬ ಕೆಂಪು ಭೂಮಿಯು ಉತ್ತಮ . . . ಬೆಟ್ಟವೆಂಬ ಗರಸಿನಭೂಮಿ ಕನಿಷ್ಠ (ಮುಂಬಯಿ ೫-೨೧೩). ೩. ಗಡಸು; ಕರ್ಕಶ: ನರಗಳೆಲ್ಲವನ್ನೂ ಬಿಗಿಮಾಡಿಕೊಂಡು, ಗಂಟಲು ಒಣಗಿ ಗರಸಾಗುತ್ತಿರಲು . . . ರಸಿಕರಿಗೆ ಬೇಸರವಲ್ಲದೆ ಇನ್ನೇನು ಬಂದೀತು? (ಗಾನಕ. ೨೫).
[ದೇ. ‖ ತೆಲು. ಗರುಸು, ಗರ್ಸು]

**ಗರಸೂಳೆ** (ನಾ). (ಆಟದಲ್ಲಿ) ಗರ ಹಾಕುವುದರಲ್ಲಿ ಬಲಿಷ್ಠಳಾದ ಸೂಳೆ: ಹತ್ತಂಕಣದರಮನೆಗೊತ್ತಿಲಿ ಸೇದೋ ಭಾವಿ ಸತ್ಯಕ್ಕನೆಂಬಾ ಗರಸೂಳೆ ಮನೆಗೋಗಿ ಲೆತ್ತನಾಡ್ಯಾರೆ ನಿಮರಾಯ (ಗೌರಪ. ೨೦-೬).
[ಗರ₁ + ಸೂಳೆ]

**ಗರಸೆ** 'ಕೆರಸಿ' ನೋ.

**ಗರಹರಣ** (ಗು). ೧. ವಿಷವನ್ನು ಪರಿಹರಿಸುವ; ವಿಷಹಾರಿಯಾದ. 'ಗರಹರಣ ಮೂಲಿಕೆ' ಪರಾ. (ನಾ). ೨. ವಿಷವನ್ನು ಪರಿಹರಿಸುವುದು; ವಿಷವನ್ನು ನಾಶಮಾಡುವುದು. [ಗರ₄ + ಹರಣ]

**ಗರಹರಣಮೂಲಿಕೆ** (ನಾ). ವಿಷವನ್ನು ಪರಿಹರಿಸುವ ಮೂಲಿಕೆ; ಒಂದು ಬಗೆಯ ಔಷಧಿ ಸಸ್ಯ: ತವಕದಿಂ ಗರಹರಣಮೂಲಿಕಾ ಸಂತತಿಗಳ ವಿವೇಕದಿಂದ ಹಾಲಾಹಲವ ಪರಿಹರಿಸಿ ಜವಮಿಲ್ಲದಲ್ಲಲ್ಲಿ ಕರದೀಪಿಕಾತತಿಗಳೆಂಬಂತೆ ತೋರ್ದವಾಗ (ವೆಂಕಾಅ. ೫-೧-೧೨).
[ಗರಹರಣ + ಮೂಲಿಕೆ]

**ಗರಹಿಡಿ** (ಕ್ರಿ). ಪಿಶಾಚಿ ಹಿಡಿ; ದೆವ್ವಹಿಡಿ; ಭೂತಬಡಿ: ಹೆಮ್ಮೆಯಿಂದವ ತನ್ನ ನಗುವರನಱಿಯ ಕುಲಮದವೆಂಬ ಗರಹಿಡಿ[ಪಾಠಾಂ. ಹೊಡೆ]ದು (ಅಮೃತ. ೨-೫೫).
[ಗರ₂ + ಪಿಡಿ₁]

**ಗರಹೊಡೆ** 'ಗರವೊಡೆ' ನೋ.

**ಗರಹೊಯ್** 'ಗರವೊಯ್' ನೋ.

**ಗರಳ** 'ಗರಲ' ನೋ.

**ಗರಳಕಂಧರ** 'ಗರಲಕಂಧರ' ನೋ.

**ಗರಳಗೊರಳು** (ನಾ). ವಿಷವನ್ನುಳ್ಳ ಕೊರಳು; ವಿಷಕಂಠ.
**ಗರಳಗೊರಳವನು** = ಕೊರಳಲ್ಲಿ ವಿಷವನ್ನು ಧರಿಸಿದವನು; ವಿಷಕಂಠ; ಶಿವ: ಗರಳಗೊರಳವನರಳಸರಳಂಗೆ ಮುನಿವಂತೆ (ಹಡಕಾ. ೬-೩೦).
[ಗರಳ (= ಗರಲ) + ಕೊರಳು (< ಕೊರಲ್)]

**ಗರಳಗ್ರೀವ** 'ಗರಲಗ್ರೀವ' ನೋ.

**ಗರಳಧರ** 'ಗರಲಧರ' ನೋ.

**ಗರಳಧರಧರ** (ನಾ). ಸರ್ಪವನ್ನು ಆಭರಣವಾಗಿ ಧರಿಸಿದವನು; ಸರ್ಪಭೂಷಣ; ಶಿವ: ಗರಳಧರಧರ ಸ್ಥಿರಪುಣ್ಯಧಾಮ (ಹಡಕಾ. ೧-೩).
[ಸಂ. ಗರಲಧರಧರ]

**ಗರಳಪುರ** (ನಾ). ಒಂದು ಊರಿನ ಹೆಸರು; ℙ ಇದು 'ನಂಜನಗೂಡು' ಎಂಬುದರ ಸಂಸ್ಕೃತೀಕರಣವಾದ ರೂಪ: ಬೆಟ್ಟದ ಚಾಮೇಂದ್ರ . . . ಗರಳಪುರದ ನದಿಯನು ದಾಂಟ ಬಲಸಹ ನೆರೆಯರ್ಧರಾತ್ರಿಯೊಳಾಗ ಕೆರೆಹಟ್ಟಿಯ ಮುತ್ತಿದರಿತಂತ್ರವ ತಱಿದೊಟ್ಟಿದನು (ಕಂಠವಿ. ೩-೫೫). [ಗರಳ (= ಗರಲ) + ಪುರ]

**ಗರಳಪುರಿ** (ನಾ). = ಗರಳಪುರ: ನಂಜನಗೂಡು ಇಂದಿನಂತೆ ಚಿಕ್ಕ ಪಟ್ಟಣವಾಗಿರಲಿಲ್ಲ . . . ಅದು ಭಕ್ತ ಜನಗಳಿಗೂ ಭಕ್ತಪರಾಧೀನನಾದ ಪರಮೇಶ್ವರನಿಗೂ ಆವಾಸಸ್ಥಾನವಾಗಿದ್ದ ಮಹಾಶಿವಕ್ಷೇತ್ರ. ಅಂದಿನಿಂದಲೂ ಪುರಾಣಗಳಲ್ಲಿ ಪ್ರಸಿದ್ಧವಾದ ಗರಳಪುರಿಕ್ಷೇತ್ರವೇ ಅದು (ಶ್ರೀರಾಯ. ೮). [ಗರಳ (= ಗರಲ) + ಪುರಿ₁]

**ಗರಳಪೂರ** 'ಗರಲಪೂರ' ನೋ.

**ಗರಳಪ್ರಾಣಿ** (ನಾ). ವಿಷವನ್ನುಳ್ಳ ಪ್ರಾಣಿ; ವಿಷಜಂತು: ಜಂಗಮಂಗಳಹಿ ಮೊದಲಾದ ಗರಳಪ್ರಾಣಿಗಳು (ವಿಸ್ಮವಿ. ೧೮೪).
[ಗರಳ (= ಗರಲ) + ಪ್ರಾಣಿ]

**ಗರಳಭುಕ್ಕು** 'ಗರಲಭುಕ್ಕು' ನೋ.

**ಗರಳಭುಗ್ರಸನ** (ನಾ). [ವೀಶೈ] ೧. ಶಿವನನ್ನು ನಾಲಗೆಯಲ್ಲಿ ಧರಿಸಿದವನು; ಬಸವ : ಗರಳಭುಗ್ರಸನ ನುತದಿಗ್ರಮಣ ಶೈವಾಗ್ರಗಣ್ಯ . . . ಬಸವೇಶ (ಬಸಪು. ೫೪-೮೬) ೨. ನಂದಿ. 'ಅಮಳೋಕ್ಯ' ಪರಾ. P. ಬಸವನು ನಂದಿಯ ಅವತಾರವೆಂಬ ಪ್ರತೀತಿ ಇದೆ. [ಸಂ. ಗರಲಭುಗ್ರಸನ (ಗರಲಭುಜ್ + ರಸನಾ + -)]

**ಗರಳವನಸ್ಪತಿ** (ನಾ). ವಿಷದಿಂದ ಕೂಡಿದ ಸಸ್ಯ; ವಿಷಮೂಲಿಕೆ: ಗರಳವನಸ್ಪತಿಗಳು ಸ್ಥಾವರಮೆನಿಕ್ಕುಂ ಜಂಗಮಂಗಳಹಿ ಮೊದಲಾದ ಗರಳಪ್ರಾಣಿಗಳು (ವಿವೈವಿ ೧೮೪). [ಗರಳ (= ಗರಲ) + ವನಸ್ಪತಿ]

**ಗರಳವಾತ** (ನಾ). ವಿಷಪೂರಿತವಾದ ಗಾಳಿ; ವಿಷಗಾಳಿ: ಬೀಸಿ ದೂರಕೆ ಓಸರಿಸಿದುದು ಮೇಘನಾದ ಶರೌಘ ಸಂಭವಗರಳವಾತಂಗಳಂ (ಶ್ರೀರಾಮಾ. ೬೩೯-೨೬೪). [ಗರಳ (= ಗರಲ) + ವಾತ]

**ಗರಳವಿಶಿಖ** 'ಗರಲವಿಶಿಖ' ನೋ.

**ಗರಳಾಶನ** 'ಗರಲಾಶನ' ನೋ.

**ಗರಳಿಗೆ** (ನಾ). (?): ಅಗುಟಿಡ್ಡಿಡವುವ ಕಾಲ ಗರಳಿಗೆವೋಲ್ [ಪಾಠಾಂ. ಟಗೆಯೊಳ್] ನೃಪಚಿತ್ತಚೋರನಂ ತೋಱುವ ದೀವಿಗೆಯೆನೆ ಸಂಮುಖಮಾಯ್ತೊಲಗದೊಳ್ ನಿರ್ದಿಷ್ಟ ಪಳಿತ ಚಿಕುರಂ ಮುಕುರಂ (ಯಶೋಚ. ೨-೧೧); "ಗರಳಿಗೆವೋಲ್ = ಚಕ್ರದ ಹಾಗೆ ಇರುವ" (ಯಶೋಚ. ಟೀಕು). [?]

**ಗರಳು** (ನಾ). ಕೊರಳು; ಕಂಠ: ಶಾಲಬ್ಬೆ ಒದ್ದ ರಭಸಕ್ಕೆ ಶ್ರದ್ಧಾ ಮುಂದುರುಳಿ ಬೀದಿಗೆ ಬಿದ್ದಿದ್ದಳು, ಅದರೂ ಗರಳು ಬಿಚ್ಚಲಿಲ್ಲ (ಹೊಸಕ್ಷಿ. ೨೨). 'ಗರಳುಲಿ' ಪರಾ.

**ಗರಳುಒಡೆ** = (ವಯಸ್ಸು ಬಲಿತು) ಧ್ವನಿ ಗಡುಸಾಗು; ಕಂಠ ಬದಲಾಯಿಸು: ಆ ಹುಡುಗನಿಗಾಗಲೇ ಗರಳು ಒಡೆದಿದೆ (ರೂಢಿ). 'ಕೊರಳುಒಡೆ' ಪರಾ. ಗರಳುತಿರುಗು=ಗರಳುಒಡೆ: ಆ ಹುಡುಗನಿಗೆ ಗರಳುತಿರುಗಿದರೂ ಇನ್ನೂ ಹುಡುಗಾಟ ಹೋಗಿಲ್ಲ(ರೂಢಿ). [< ಕೊರಲ್]

**ಗರಳುಲಿ** (ನಾ). ಕೊರಳದನಿ; ಕಂಠದಿಂದ ಹೊಮ್ಮಿದ ನಾದ: ಗರಳುಲಿಯು ಹೂಂಕೃತಿಗಳಾರವಂ ಕಂಕಣಝುಣತ್ಕರಿಸಲೂ (ನವಮೋ. ೨೬-೯೬). [ಗರಳು + ಉಲ್ಲಿ$_2$]

**ಗರಳೆ** (ನಾ). ಒಂದು ಬಗೆಯ ಸಸ್ಯ: "ಗರಳೆಯೆನೆ ಸೊರಟೆ" (ಮಂಗರಾ. ೪೧-೩೩). [?]

**ಗರಳೋಜ** (ನಾ). ಒಬ್ಬಾತನ ಹೆಸರು: ಮಜ್ಜಲದ ಗರಳೋಜ ಅರಕೊಟ್ಟ ಕ್ಷೇತ್ರ (ಎಕ IV, ಗುಂಡ್ಲುಪೇ. ೮೭-೧೧; 750). [ಗರಳ? + ಓಜ$_1$ (< ಒವಜ್ಝು)]

**ಗರಾಣ** 'ಘರಾಣೆ' ನೋ.

**ಗರಿ** 'ಗಱಿ' ನೋ.

**ಗರಿಕಟ್ಟು** 'ಗಱಿಗಟ್ಟು' ನೋ.

**ಗರಿಕಟ್ಟೆ** (ನಾ). ಒಂದು ಜಾತಿಯ ಗಿಡ: ಗರಿಕಟ್ಟೆಗಿಡುವಂ ಶನಿವಾರ . . . ಅರ್ಚಿಸಿ . . . ಮಗುವಿಗೆ, ತಾಯಿಗೆ ರಕ್ಷೆಯ ಕಟ್ಟಲು, ಗುಳಿ ದೋಷ ಮಾಣ್ಗುಂ (ವಿವೈವಿ. ೧೧೮). [?]

**ಗರಿಕು, ಗರಕು$_1$** (ಕ್ರಿ). (ಕರಾ) ಕರಿಕಾಗು; ಸುಟ್ಟುಹೋಗು; ಕಿಟ್ಟ ಕಟ್ಟು: ಅರಬಗೆ ಹಣತಿಗೆಯೊಳಾಗ ಕರ್ಪೂರ್ಕಡಿ ಹೂವಿನಂತರಳುವುದು ಗರಿಕುತಿಹುದು, ಕಿಡಿಗೆದರಿ ಹಾರುವುದು (ನಲ್ಕೆ. ೪೬); ಗರಿಕುವ ದೀಪಕ್ಕೆ ಎಷ್ಟೆಯನ್ನೆರೆದರೆ . . . ಕಾಂತಿ ಪುಂಜವಾಗುತ್ತ ಬಂತು (ನಾಡೋಜ. ೩೭೦). **ಗರಕು$_1$**: ಜಗದ ಹಣತೆಗೆರಗಿ ಎರಗಿ ಗರಿಯ ಗರಕಿ ಸೊರಗಿ ಸೊರಗಿ ಅಳಲುತಿರಲು ಬಗೆಯ ಬೇಗೆ ಬಂದು ನಿಲುವ ಗೆಳೆಯನಿಲ್ಲ (ಭಾರಂಗ. ೧೫). [< ಕರಿಂಕು]

**ಗರಿಕೆ** 'ಕಱುಂಕೆ' ನೋ.

**ಗರಿಗ, ಗರಗೆ** (ನಾ). ಒಂದು ಬಗೆಯ ಪಕ್ಷಿ: ಕೊಂಚೆ ಕಪಿಂಜಗಿಂಚಲು ಗರಿಗ ಮೊದಲಾದಖಿಳ ಖಗಕುಲ ಬಿದ್ದುದುರಿಯೊಳಗೆ (ಕುವ್ಯಾಅ. ೨೦-೫೩). **ಗರಗೆ**: ಅರೆ ಹೊಱಸು ಟಿಟ್ಟಿಭ ಮಣಿಗನು ಗರುಡ ಕೊಣಕನು ಮೇಱು ಟೀವನು ಗರಗೆ ತೊಂಡಲು ಗಜಿಳ ಬಳಿಯಾ ಗಜಿಗ ಮುಕ್ಕುಟಕ . . . ಒಪ್ಪಿದವು (ಸಾಳ್ವಭಾ. ೫-೨೩). [?]

**ಗರಿಗಂಟಿ** 'ಗಱಿಗಂಟೆ' ನೋ.

**ಗರಿಗಂಟೆ** 'ಗಱಿಗಂಟೆ' ನೋ.

**ಗರಿಗಟ್ಟು** 'ಗಱಿಗಟ್ಟು' ನೋ.

**ಗರಿಗಣ್** (ನಾ). ೧. (ನವಿಲು) ಗರಿಯಲ್ಲಿರುವ ಕಣ್ಣು. ೨. ಗರಿಯಲ್ಲಿ ಕಣ್ಣುಳ್ಳುದು; ನವಿಲು; ಮಯೂರ: ರಾಜಕೀರಾಶಿ[ಳಿ] ಮಧುರಾಳಾಪವೇ ಮೆರವ ಸಂಗೀತರಸ ಗರಿಗಣ್ಗಳಡಿಗಳಿಯೆ ನಿರುನತ[ತನ] ರ್ತನದಿಂ . . . ಮೆರದುದಾವನ ಶ್ರಮಿಸುವರ ಪಾವನಾ (ನವಮೋ. ೨೪-೫೨). [ಗರಿ (< ಗಱಿ) + ಕಣ್]

**ಗರಿಗಣ್ವಕ್ಕಿ** (ನಾ). ಗರಿಯಲ್ಲಿ ಕಣ್ಣುಗಳನ್ನುಳ್ಳ ಹಕ್ಕಿ; ನವಿಲು: "ನವಿಲು, ಮಯೂರ, ಮೋರ, ಪೀಲಿ" (ಪ್ರಭಣ್ಣ). [ಗರಿಗಣ್ + ಪಕ್ಕಿ$_1$]

**ಗರಿಗರಿಲ್** (ನಾ). ಒಂದು ಅನುಕರಣ ಶಬ್ದ: ಕಟಿಲ್ಕಟಿಲ್ಪಟಿಲ್ ಗೀಗಾಲೆಂಬ ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳ್ (ಗಂಡ. ೬-೬೮).

**ಗರಿಗೆ** (ನಾ). ಒಂದು ಬಗೆಯ ಮಣ್ಣಿನ ಪಾತ್ರೆ: "ಗಡಿಗೆ" (ಕಲ್ಪದ್ರು). [< ಕರಗ]

**ಗರಿಗೆಡು** (ಕ್ರಿ). ೧. ರೆಕ್ಕೆ ಬಿದ್ದುಹೋಗು; ಪಕ್ಷಗಳ ಶಕ್ತಿಗುಂದು. ೨. (ಅಲಂ) ಬಲಹೀನವಾಗು; ಶಕ್ತಿಗುಂದು: ಮುಂದೆ ನಡೆದದ್ಭುತವನಾವ ಕವಿ ಬಣ್ಣಿಪನೊ? ಜೋಲುತೆ ಬಳಲ್ದು ಗರಿಗೆಟ್ಟುದುರದೇ ಮನಂ? (ಶ್ರೀರಾಮಾ. ೫೧೦-೧೬೨). [ಗರಿ (< ಗಱಿ) + ಕೆಡು$_1$]

**ಗರಿಗೆದರ್** 'ಗಱಿಗೆದಱು' ನೋ.

**ಗರಿಗೆದರು** 'ಗಱಿಗೆದಱು' ನೋ.

**ಗರಿಗೊಳ್ಳು** (ಕ್ರಿ). ೧. ರೆಕ್ಕೆಯನ್ನು ಪಡೆ; ಪಕ್ಷವನ್ನು ಹೊಂದು: ಆ ಜಲಪಾತವನ್ನು ಕಂಡು ಮನಸ್ಸು ಯಾವುದೋ ಲೋಕಕ್ಕೆ ಗರಿಗೊಂಡು ಹಾರಿದಂತೆ ಎನಿಸಿತು (ಮುಂಗಾರು. ೬೫). ೨. (ಅಲಂ) ಹುರುಪುಗೊಳ್ಳು; ಉತ್ಸಾಹಗೊಳ್ಳು: ಆದರೆ ಅವನು ಕೂಡಲೆ ಗರಿಗೊಂಡು ತನ್ನ ಮನಸ್ಸಿನಲ್ಲಿದ್ದುದನ್ನು ಅಭಿವ್ಯಕ್ತಗೊಳಿಸುವುದಕ್ಕೆ ಆ ಟೀಕೆಯನ್ನೇ ಬಳಸಿಕೊಂಡನು (ಪುನರು. ೩೦೨); ಸ್ವರ್ಗದತಿ ಶಾಂತಗತಿ, ಮಹಿಮೆಯಾ ಮಾಧುರ್ಯ, ಪರಿಶುದ್ಧರಾಗ ಗರಿಗೊಂಡ ಬಲ ಇಳಿದು ಬಂದವಾಗ (ಅರಳು ೧೯೯-೬). [ಗರಿ (< ಗಱಿ) + ಕೊಳ್ಳು$_1$ (< ಕೊಳ್$_1$)]

**ಗರಿಟೋಪಿ** (ನಾ). ಗರಿಯನ್ನು ಸಿಕ್ಕಿಸಿದ ಟೋಪಿ: ನಾನಂತೂ ಇಂಗ್ಲಿಷಿನವರಂತೆ ಅಸಭ್ಯ ಅರೆಗವಚವನ್ನೂ, ಅಸಂಗತ ಗರಿಟೋಪಿಯನ್ನೂ ಹಾಕಿಕೊಂಡಿಲ್ಲ (ನಿಬಂಧ. II, ೧೬೧). [ಗರಿ (< ಗಱಿ) + ಟೋಪಿ]

**ಗರಿಣಿ** (ನಾ). ಗೃಹಿಣಿ; ಹೆಂಡತಿ: ಅರಲಸರಲನೆಂಬರಸಂ ತನ್ನಯ ಗರಿಣಿ ರತಿಗೆ (ಜಯಕಾ. ೧೧-೨೬); ಶೌಂಡನೆಂದೆಳ್ಚಾ ಧರಣೀಪತಿ ಮದನಾವಳಿಯೆಂಬೊರ್ವ ಗರಿಣಿ ಸಹಿತ ಸುಖಮಿಹನು (ಪ್ರಭುಂಜ. ೫-೭). [< ಸಂ. ಗೃಹಿಣೀ]

**ಗರಿತುಂಬು** (ಕ್ರಿ). ರೆಕ್ಕೆಬಲಿ; ಪುಕ್ಕಬೆಳೆ: ಚಿತ್ರಶಾವಕವು ಇನ್ನೂ ಹಾರಾಡುತ್ತಿರುವಂತೆ ತೋರದಿದ್ದರೂ, ಗರಿತುಂಬಿ, ಕಾಲಿಕ್ಕಿ ಕತ್ತೆತ್ತಿ ಕಂಗೊಳಿಸುತ್ತಿರಬೇಕು ಎನ್ನುವಂತಿತ್ತು (ನಿರಾಭ. ೩೦). [ಗರಿ (< ಗಱಿ) + ತುಂಬು$_1$]

**ಗರಿತೆಗೆ** (ಕ್ರಿ). ರೆಕ್ಕೆಯನ್ನು ಬಿಚ್ಚು; ಸೋಗೆಯನ್ನು ಕೆದರು; ಗರಿಗೆದರು: ಬನದಿ ಗರಿತೆಗೆದು ಆಡುವ ನವಿಲುಗಳು (ಸಿದ್ಧಪು. ೧೧–೩೪). [ಗರಿ (< ಗಱಿ) + ತೆಗೆ$_1$]

**ಗರಿಪೂ** 'ಗಱಿಪೂ' ನೋ.

**ಗರಿಬಿಚ್ಚು** (ಕ್ರಿ). ೧. = ಗರಿತೆಗೆ. ೨. (ಅಲಂ) ಹರಡು; ವ್ಯಾಪಿಸು: ಮುಚ್ಚಂಜೆಯು ಮೈಚಾಚಿತು. ಗರಿಬಿಚ್ಚಿತು ಮೋಡ, ಹೋರಬಿದ್ದಿತು ಗೂಢ (ನಿಲಮು. ೬). [ಗರಿ (< ಗಱಿ) + ಬಿಚ್ಚು$_1$ (< ಬಿರ್ಚು$_1$)]

**ಗರಿಮ** (ನಾ). ೧. = ಗರಿಮೆ ೧. ೨. = ಗರಿಮೆ ೨: ಸ್ಮರರಾಗಂ ಮನದೊಳ್ ಬೇರ್ವರಿವಿನೆಗಂ ಬ್ರಹ್ಮಚರ್ಯನಿಷ್ಠಾಗರಿಮಂ ಕರಗುವಿನ ಮೆಳಸಿ ಕಣ್ಗಳ್ . . . ಅಕೆಗಂದಿಂತೆಂದಂ (ಶಂರಾಮಾ. ೮–೬೧). ೩. = ಗರಿಮೆ ೩: ಇಂಥ ದೃಢಭಕ್ತಿಯಿಂದ ಅಣಿಮ . . . ಗರಿಮ . . . ವಶಿತ್ವಗಳೆಂಬ ಅಷ್ಟೈಶ್ವರ್ಯಗಳನ್ನು ಹೊಂದಿದರು (ಪುರಾವಿ. ೧೩೨). [ಸಂ. ಗರಿಮನ್]

**ಗರಿಮರಿ** 'ಗರಿಮುರಿ' ನೋ.

**ಗರಿಮಾವಾಪ್ತಿ** (ನಾ). ಹಿರಿಮೆಯನ್ನು ಪಡೆಯುವುದು; ಶ್ರೇಷ್ಠತೆಯನ್ನು ಹೊಂದುವುದು: ಲಿಂಗಪೂಜೆಯಿಂ ಲಿಂಗಗರಿಮಾವಾಪ್ತಿಯಪ್ಪುದು ಪದ್ಮರಾ. ೧೧–೧೧೮). [ಸಂ. (ಗರಿಮನ್ + ಅವಾಪ್ತಿ)]

**ಗರಿಮುರಿ**, ಗರಿಮರಿ (ನಾ). ೧. ಗರಿಗರಿ; ಚೆನ್ನಾಗಿ ಒಗೆದು ಅಚ್ಚುಕಟ್ಟುಮಾಡಿದ ಬಟ್ಟೆಗಳ ಮಡಿಕೆಗಳು ಮುರಿಯದೆ ಇರುವುದು: ಉಡುಪು ನಿರ್ಮಲವಾಗಿ ಗರಿಮುರಿಯಾಗಿರಬೇಕು (ಕಥವಿ. II, ೩೫೪); ಗರಿಮುರಿ ಮಡಿಮಾಡಿಕೊಂಡ ಅತಿಥಿಯೊಬ್ಬನು . . . ಬಂದನು (ಹುಟ್ಟಿಹ. ೫೨); ಬಟ್ಟೆಗಳನ್ನು ಗರಿಮುರಿಯಾಗುವಂತೆ ಮಾಡುವುದಕ್ಕೆ ಗಂಜಿಯನ್ನು ಉಪಯೋಗಿಸುವರು (ಗೃಹವಿ. ೮೬). ೨. ಕರಿದ ತಿಂಡಿಯ ಪದಾರ್ಥಗಳು ಮೆತ್ತಗಾಗದೆ ಇರುವುದು; ಗರುಗು: ಚಕ್ಕುಲಿ ಗರಿಮುರಿಯಾಗಿದೆ (ರೂಢಿ). **ಗರಿಮರಿ**: ೧. ಒಂದು ಜೊತೆ ಬಟ್ಟೆ ಉಡೋಕೆ ತೊಡೋಕೆ ಚೆನ್ನಾಗಿ ಗರಿಮರಿ ಮಾಡಿಟ್ಟಿದ್ದಾರೆ (ಮಲ್ಲಿ. ೧೩೨). [ಗರಿ (< ಗಱಿ) + ಮುರಿ$_3$]

**ಗರಿಮೆ** (ನಾ). ೧. ಭಾರವಾಗಿರುವಿಕೆ; ತೂಕ; ಒಜ್ಜೆ. ೨. ಘನತೆ; ಹಿರಿಮೆ; ಶ್ರೇಷ್ಠತೆ: ವರ ವಿಕ್ರಮದೊಳ್ ಗಭೀರದೊಳ್ ಗರಿಮೆಯೊಳ್ . . . ನಿನಗಾರ್ ದೊರೆ (ಪುಷ್ಪಪು. ೧–೮೦); ಆ ಮಹಿಮನ ಮಹಾಗರಿಮೆಯಂ ಕೇಳ್ (ಬಸವು. ೨೩–೨೧); ಗರಿಮೆಯುಂ ಅರ್ಥಮುಂ ಸಿರಿಯುಂ ದೊರೆಗುವವರನ ಕೆಳೆತನಕ್ಕೆ ಬೇಟ್ಟ ಗುಣಂಗಳ್ (ಚಿಕವಿ. ೪–೮೮); ರಾಮನ ಹಿರಿಮೆ ಗರಿಮೆಗಳು ವ್ಯಕ್ತವಾಗಬೇಕಿದ್ದರೆ . . . ರಾವಣನಂತಹ ಪ್ರಬಲ ವಿರೋಧಿಯೂ ಬೇಕು (ವಾರಾಕ್ಕೃ. ೧). ೩. [ಯೋಗ] ಅಷ್ಟಸಿದ್ಧಿಗಳಲ್ಲಿ ಒಂದು; ಇಷ್ಟಪಟ್ಟಾಗ ದೇಹದ ಭಾರವನ್ನು ಹೆಚ್ಚಿಸಿಕೊಳ್ಳಬಲ್ಲ ಶಕ್ತಿ: ಪರಮಾಣುವಿಗೆ ಸದೃಶಮಾದ ದೇಹವನುದ್ದಕ್ಕೆ ನೆಗಹುವ ಕೃತ್ಯದಲ್ಲಿ ಸುಮೇರುವಿನ ಭಾರವಂ ತೋರ್ಪುದೇ ಗರಿಮೆ (ವಿವೇಕ. ೨೯೦); ಐಶ್ವರ್ಯವು ಅಣಿಮಾ, ಲಘಿಮಾ, ಗರಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ, ಎಂದು ಎಂಟು ವಿಧ (ಭಾತತ್ತ್ವ. ೩೨೯). 'ಅಷ್ಟಗುಣ' ಪರಾ. [< ಸಂ. ಗರಿಮನ್]

**ಗರಿಯ** (ನಾ). ದೊಡ್ಡವನು; ಗಣ್ಯ: ಅವರು ಕಡುಗಲಿ ಗರಿಯರು! ಅವರೆ ಕೊಡಗಿನ ಹಿರಿಯರು! (ಕಪಪು. ೬–೧೫೨). [< ಸಂ. ಗರೀಯಸ್]

**ಗರಿಯವರೆ** 'ಗಱಿಯವರೆ' ನೋ.

**ಗರಿಯಿಕ್ಕು** (ಕ್ರಿ). ರೆಕ್ಕೆಮೂಡು; ಗರಿಹುಟ್ಟು: ಗರಿಯಿಕ್ಕದೆಳೆವಕ್ಕಿ ಎಮ್ಮಾಸೆ ಇನ್ನೂ. ತುಂಬುಗರಿವಕ್ಕಿಯಿದು ಆಗುಪಸಕ (ವಿಸಿಗೀ. X). [ಗರಿ (< ಗಱಿ) + ಇಕ್ಕು]

**ಗರಿಯೊಡೆ** (ಕ್ರಿ). ೧. = ಗರಿಯಿಕ್ಕು. ೨. (ಅಲಂ) ಚೈತನ್ಯವನ್ನು ಪಡೆ: ತಾಳೆಗರಿ ಗರಿಯೊಡೆದು ಮರಮರವೇರಿ ಕುಕಿಲಿ ಜೆಳಕ ನೆಚ್ಚರಿಸಿದವು (ನಿಲಮು. ೭೭). [ಗರಿ (< ಗಱಿ) + ಒಡೆ$_1$]

**ಗರಿಲನೆ** (ಅ). ಒಂದು ಅನುಕರಣಾವ್ಯಯ: ಪೊಸಪೂವಿನಿಱಿಸಲಾಕೆಯ ಬಿಸುಸುಯ್ಯಿಂ ಗರಿಲನುರಿಯೆ (ಲೀಲಾವ. ೧೧–೨೩). 'ಘರಿಲನೆ' ಪರಾ. **ಗರಿಗರಿಲನೆ** (ದ್ವಿರುಕ್ತಿ): ಕುಂಚದಿಂ ಬೀಸಲೊಡನದು ಗರಿಗರಿಲನುರಿಯ ವೃಷವಿ. ೩೪–೮೧ ವ). [ಗರಿಲ್$_0$ + ಅನೆ$_1$]

**ಗರಿಷ್ಠ** (ಗು). ೧. ಅತಿಭಾರವಾದ. ೨. ಪೂಜ್ಯವಾದ; ಶ್ರೇಷ್ಠವಾದ. (ನಾ). ೩. ಪೂಜ್ಯನಾದವನು; ಶ್ರೇಷ್ಠನಾದವನು. ಮುನೀಂದ್ರ ಗರಿಷ್ಠಂ ಜಾಬಾಲಿ ನಾಮಧೇಯ ಮುನೀಂದ್ರಂ (ಕಾದಂಉ. ೬೦೭). ೪. ಘನವಾದುದು; ದೊಡ್ಡದಾದುದು: ಕಾಷ್ಠದ ಬಣಬೆಯನಡರಿ ಮೇಲ್ಮೇಲೆ ಗರಿಷ್ಠವಪ್ಪುರಿವಾಲೆಯಂತೆ (ಭರಜ. ೭೭–೧೪). [ಸಂ.]

**ಗರಿಹೊಯ್** 'ಗಱಿವೊಯ್' ನೋ.

**ಗರೀಬ** (ನಾ). ಬಡವ; ದರಿದ್ರ: ಹಾಗಾದರೆ ಕೊಡಮ್ಮ! ಯಾರಾದರೂ ಗರೀಬರಿಗೆ ಕೊಟ್ಟು ಖುಶಾನನ್ನು ಸಂತೋಷಪಡಿಸುತ್ತೇನೆ (ದೌಲತ್. ೫). [← ಅರ. ಹಿಂ. ಮರಾ. ಗರೀಬ್]

**ಗರೀಬಿ** (ನಾ). ಬಡತನ; ದಾರಿದ್ರ್ಯ: ಸರಕಾರ ಗರೀಬಿಯನ್ನು ಹೊಡೆದೋಡಿಸಲು ಪಣತೊಟ್ಟಿದೆ (ರೂಢಿ). [← ಅರ. ಹಿಂ. ಮರಾ. ಗರೀಬೀ]

**ಗರೀಯ** (ಗು). ೧. ಹೆಚ್ಚುಭಾರವಾದ; ತುಂಬ ತೂಕದ. ೨. ಶ್ರೇಷ್ಠವಾದ; ಮಹತ್ತರವಾದ; ಪೂಜ್ಯವಾದ. ೩. ಪ್ರಿಯವಾದ. [ಸಂ. ಗರೀಯಸ್]

**ಗರುಕೆ** 'ಕಱುಂಕೆ' ನೋ.

**ಗರುಗ**, ಗರಗ, ಗರಗು$_1$ (ನಾ). ಒಂದು ಬಗೆಯ ಸಸ್ಯ: "ಮಾರ್ಕವಃ, ಭೃಂಗರಾಜಃ ಈ ೨ ಗರುಗ" (ನಾಚಿರಾ ೧೧೨); ಪಣೆ ಕರ್ಣ್ ಕಿವಿ ನೆತ್ತಿ . . . ಎಂಬಿವಱೊಳಗೆ ಬೇನೆಯಾಗಲ್ ಗರುಗಂ ಖರಮೂಲದ ರಸ ಕಣಮೆಣ್ಣೆಯು ಬೆರಸಿ ನಸ್ಯಗೆಯ್ಯಲ್ ಕಿಡುಗುಂ (ಲೋಕೋಪ. ೯–೧೭೭); ಶತಾವರಿ ಪುಲಿಗಿಲ್ ಬೆಲ್ಲವತ್ತಂ ಗರುಗಂ ಗೋರಟೆ ತವಸಿ ಅವುಂಡಲಿಗೆಯುಮಂ ಇನಿತಱ ಬೇಱಂ ನಾಗುಳಮನೆ ನೀರುಮನೆಱೆದುಕೊಂಡು (ಅಶ್ವಶಾ. ೧೧–೬೦). **ಗರಗ**: "ಮಾರ್ಕವಃ, ಭೃಂಗರಾಜಃ – ೨ ಗರಗದ ಸೊಪ್ಪು" (ಸಿದ್ಧಾಂತಿ. ೧೨೯). **ಗರಗು$_1$**: ಭರದೆ ತೀರದ ಗರಗಿನಲಿ ನರವರನು ಶೋಧಿಸೆ ಮುನಿಕುಮಾರನು ಧರೆಯಮೇಲ್ಬಿದ್ದದ್ದು ಕಂಡನು ಪರವಮುಃಖದಲಿ (ರಘುವಂ. ೯೯–೭೫). 'ಕಾಡಿಗೆ ಗರಗು' ಪರಾ. [?]

**ಗರುಗಲು$_1$** (ನಾ). = ಗರುಗ: ಗರುಗಲು, ಗರುಗದಗಿಡ, ಅಜಗರ, ಕಾಡಿಗೆಗರಿಗೆ (ಮೈಔಗಿ. ೩೨–೬೨೫); ಗರುಗಲು, ಸೇವಂತಿಗೆ, ಕುಸುಂಬ (ನಮ್ಮನು. ೨೩೮). 'ಕಾಡು ಗರುಗಲುಗಿಡ' ಪರಾ. [< ಗರುಗ]

**ಗರುಗಲು$_2$** (ನಾ). ಒಣಗಿ ಹಗುರವಾದುದು; ತರಗು: ಸಣ್ಣಪುಟ್ಟ ಬಳ್ಳಿಗಳೂ ಹುಲ್ಲೂ ಒಣಗಿ ಗರುಗಲಾದವು (ಕಿಂಕಥೆ. ೮೩). [ಗರುಗು (< ಗಱುಗು) + -ಅಲು (< -ಅಲ್$_3$)]

**ಗರುಗು** 'ಗಱುಗು' ನೋ.

**ಗರುಗೊಡೆ,** ಗರಗುವಡೆ (ನಾ). ಚೆನ್ನಾಗಿ ಕರಿದಿರುವುದರಿಂದ ಗರಿಗರಿಯಾದ ವಡೆ: ಪೂರಿಗೆ ಕಡಬು ಯಣ್ಣೂರಿಗೆ ದೋಸೆ ತೋರಗೂಳೂರಿಗೆ ತೊಳೆಪ ಗರುಗೊಡೆಯು (ಕುಚೇಲೋ. ೧೧೬). **ಗರಗುವಡೆ:** ಗರಗುವಡೆ ತಿನ್ನಲು ಬಲು ರುಚಿ (ರೂಢಿ).

[ಗರುಗು (< ಗಱುಗು) + ಒಡ್ಡೆ$_3$ (< ವಡೆ$_2$)]

**ಗರುಡ** (ನಾ). ೧. ಹದ್ದಿನ ಜಾತಿಗೆ ಸೇರಿದ ಒಂದು ಪಕ್ಷಿ; ಕೆಂಪು ರೆಕ್ಕೆ ಹಾಗು ಬಿಳಿಯಕೊರಳ್ಳುಳ ಹಕ್ಕಿ: "ವಿಹಂಗರಾಜಃ, ಗರುಡಃ . . . ಕಶ್ಯಪನಂದನಃ(ಚ) – ಈ ೧೦ ಗರುಡನ ಪೆಸರ್" (ಹಲಾಯು. ೬-೩೧); ದಿಟಕ್ಕೆ ಬಂದರೆ ಕಾಣದಂತಡ್ಡಮೊಗವಿಕ್ಕುವೆ ಗರುಡಂಗೆ ಘಟಸರ್ಪನ ತೋಱುವಂತೆ (ಬಸವ. ೩೧೧); ಗರುಡ ಹಂಸ ಕೇಕಿಗಳಂಜುತ್ತಿರದೆ (ಹಮ್ಮೀರ. ೪-೬೩); ಮೇಲೊಂದು ಗರುಡ ಹಾರುತಿಹುದು ಕೆಳಗದರ ನೆರಳು ಓಡುತಿಹುದು (ಗಣೇಶ. ೩೯). ೨. ಕಶ್ಯಪ ಮತ್ತು ವಿನತಾ ದೇವಿಯರ ಪುತ್ರ; ವಿಷ್ಣುವಿನ ವಾಹನ; ಪಕ್ಷಿಗಳ ರಾಜ: "ಎಲರುಣಿವಗೆಯನೆಂದು ಪರ್ದುಪಕ್ಕಿಗಳಾಣ್ಮ ಬಳ ಗರುಡ" (ಕಬ್ಬಿಕೈ. ೮); ಗರುಡಂ ಪೇಟ್ಟುಂದದಿಂದೊಪ್ಪುವ ನಿಜಪುರಮಂ ಕೂಡೆ ನೋಡುತ್ತುಂ (ಜಗವಿ. ೯-೧೩೪); ದೊರೆ ಪತಿಭಕ್ತಿಗೆ ತನ್ನೊಳ್ ಗರುಡಂ ಗರುಡಂಗೆ ತಾನೆ ದೊರೆ ಪೆಱರಾರುಂ ದೊರೆಯಲ್ಲರೆಂಬ ತೆಱದಿಂ ದೊರೆಯಾದುವು ತಂನ ಗರುಡನೆಸೆವಾಕೃತಿಗಳ್ (ಎಕ. V, ಬೇಲೂರು. ೧೧೨-೧೦೫ ; 1220); ಗರುಡನೂರವರೆಱೆವರೇ ನಾಗರಿಗೆ ತನಿಯನು (ಕುವ್ಯಾಕ. ೨-೧೫); ಮುತ್ತಿನ ಗದ್ದುಗೆ ಗರುಡನ ಹೆಗಲಿನೊಳೆತ್ತಿಸಿ ಬಿಗಿದು ಹಲ್ಲಣಿಸಿ ಅತ್ಯಂತ ಸೌಖ್ಯವಮಾಡಿ ಸಂತಸದಿಂದೆ ಹತ್ತಿದ ಶ್ರೀಕೃಷ್ಣರಾಯ (ಮೋಹತ. ೩೬-೩೭). ೩. ಒಂದು ಎಂಬ ಸಂಖ್ಯೆಯ ಸಂಕೇತ: (ಕಿ). ೪. ಒಂದು ಜಾತಿಯ ಹಕ್ಕಿ; ಕೊಂಬು ಕೊಕ್ಕಿನ ಹಕ್ಕಿ: (ಕಿ). ೫. ಒಂದು ಬಗೆಯ •ಸೇನಾವ್ಯೂಹ. 'ಗರುಡವ್ಯೂಹ' ಪರಾ. ೬. ಒಡೆಯನಲ್ಲಿ ಪರಮ ನಿಷ್ಠೆಯನ್ನು ಹೊಂದಿದ್ದು ಅವನು ಮೃತನಾದರೆ ತಾನೂ ಆತ್ಮಾರ್ಪಣೆ ಮಾಡಿಕೊಳ್ಳುವ ಸ್ವಾಮಿಭಕ್ತನಾದ ಭಟ, —ಯೋಧ: ಸರಸ್ವತೀ ಕರ್ಣ್ಣಕುಣ್ಡಲವರ್ ಕರ್ಪೂರ ವರ್ಷವರ್ ಸಿಙ್ಗನ ಗರುಡನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಸಾಮನ್ತನೆಱೆಯಮ್ಮರಸನಿರಲ್ (ಇಅ. XIX, ೧೬೪-೧೩; 1040); ಭಯಂಕರ ಗರುಡಂಗೆ ಮಾಮ್ಮರ್ಲೆದು ಹೊಯ್ದು ಮರ್ದ್ದಪ್ಪೆ ನಿಮಿರ್ಚ್ಚಿತೋಱಿದಂ . . . ಸೋಮನೃಪಾಳನ ಲೆಂಕವಾಳಿಯಂ (ಎಕ. IV, ಕೃಷ್ಣರಾ. ೯-೪೧ ; 1257); ತಾನು ಗರುಡನಾದುದರಲ್ಲಿ ತಪ್ಪೇನು (ಶಾಂತಲಾ. ೨೭೩). ೭. ಸ್ವಾಮಿಭಕ್ತನು ತನ್ನ ಬಾಳನ್ನು ಅರಸನಿಗಾಗಿ ಮುಡಿಪಾಗಿಸುವ ಸಂಪ್ರದಾಯ, —ಪದ್ಧತಿ: ಕೀಳ್ಗುಂಟೆ ಗರುಡ ಎಂಬ ವೀರಪದ್ಧತಿಗಳೂ ಕನ್ನಡಿಗರ ಮಹಿಮಾ ಪ್ರಕಾಶನಕ್ಕೆತ್ತಿಹಿಡಿದ ಜೀವಂತ ಸಾಕ್ಷಿಗಳಾಗಿವೆ (ನಂಜುಂಡ. ೧೪೮); ದೊರೆ ಸತ್ತಾಗ ತಾವು ತಮ್ಮ ಪರಿವಾರ ಹಾಗೂ ಸತಿಯರೊಂದಿಗೆ ಪ್ರಾಣವನ್ನು ಕೊಡುತ್ತಿದ್ದರು. ಇಂಥ ಪದ್ಧತಿಗೆ 'ಗರುಡ' ಎಂದು ಹೆಸರಿದೆ (ಪ್ರವಾಇ. I, ೩೧೨ ಅಡಿಟಿ). ೮. ದೇವತೆಗಳಲ್ಲಿ ಒಂದು ಪಂಗಡ; ಗರುಡನ ಸಂತತಿಗೆ ಸೇರಿದ ದೇವಗಣ: ಬೇಡಿದರ್ ಪ್ರಾಣದಾನಮನಖಿಳ ಗರುಡರುಱೆ ಕೂಡಿದರ್ ಕಣ್ಗೆಟ್ಟು (ಚಬಪು. ೩೯-೧೭); ಗರುಡರ ಪಾಳಿ ಗಂಧರರ ತಿಂಥಿಣಿ ಸಿದ್ಧರ ಪಂಕ್ತಿ (ವೃಷವಿ. ೭-೨೮). ೯. [ನಾಟ್ಯ] ಇಪ್ಪತ್ತುಮೂರು ದೇಶೀಯ ಸ್ಥಾನಕಗಳಲ್ಲಿ ಒಂದು; ನೃತ್ಯದಲ್ಲಿ ಒಂದು ಭಂಗಿ: ಶೈವಮೆಸೆವ ಗರುಡಂ ಕೂರ್ಮಂಗೆಲೆ ನಾಗಬಂಧ ವೃಷಭಂ ಸುಲಲಿತಮಿಪ್ಪತ್ತುಮೂಱು ದೇಶಿಸ್ಥಾನಂ (ಲಾಸ್ಯರಂ. ೭-೮). ೧೦. [ನಾಟ್ಯ] ಇಪ್ಪತ್ತುನಾಲ್ಕು ಬಗೆಯ ಹಸ್ತಾಭಿನಯಗಳಲ್ಲಿ ಒಂದು: ಅಭಿನಯ ದರ್ಪಣದಲ್ಲಿ – ೧. ಅಂಜಲಿ ೨. ಕಪೋತ . . . ೨೦. ಗರುಡ ೨೧. ನಾಗಬಂಧ ([illegible] ೪೮).

**ಗರುಡನಗೆರೆ** = ಮನುಷ್ಯರ ಹಸ್ತದಲ್ಲಿರುವ ಒಂದು ರೇಖೆ, —ಗುರುತು. ℙ ಹಸ್ತದಲ್ಲಿ ಈ ರೇಖೆಯುಳ್ಳವರಿಗೆ ಹಾವು ಸುಲಭವಾಗಿ ವಶವಾಗುತ್ತದೆಂದು ಪ್ರತೀತಿ: ನಾಗಾ ಏನು, ಗರುಡನಗೆರೆ ಕಂಡೆಯೇ? (ಸಿರಾಭ. ೪೦); ಕಂಡಿಲ್ಲವೇನೊ ಅಂಗೈಯ ಗರುಡನಗೆರೆಯ (ಉಯ್ಯಾಲೆ. ೩೨). [ಸಂ.]

**ಗರುಡಕಂಭ** 'ಗರುಡಗಂಬ' ನೋ.

**ಗರುಡಕಾರೆ** (ನಾ). ಒಂದು ಜಾತಿಯ ಗಿಡ: ನಗರೆ, ದೊಡ್ಡಕಾರೆ, ಬೋನುಗಾರೆ, ಗರುಡಕಾರೆ (ವೈಔಗಿ. ೬೬-೧೩೩೯).

[ಗರುಡ + ಕಾರೆ$_1$]

**ಗರುಡಗಂಬ,** ಗರುಡಕಂಭ, ಗರುಡಗಂಭ (ನಾ). ೧. ದೇವಸ್ಥಾನಗಳ ಮುಂದೆ ದೇವರ ವಿಗ್ರಹಕ್ಕೆ ಅಭಿಮುಖವಾಗುವಂತೆ ಸ್ಥಾಪಿಸಲ್ಪಟ್ಟಿರುವ, ಬುಡದಲ್ಲಿ ಗರುಡನ ವಿಗ್ರಹದಿಂದೊಡಗೂಡಿರುವ, ಎತ್ತರವಾದ ಕಲ್ಲಿನ ಅಥವಾ ಮರದ ಕಂಬ; ಕುಡಿಮರ (ಕರಾ). ℙ ಉತ್ಸವದ ದಿನಗಳಲ್ಲಿ ಇದರ ತುದಿಯಲ್ಲಿ ಪಂಜು ಅಥವಾ ದೀಪಗಳನ್ನು ಹತ್ತಿಸುವರು: ವೈದಿಕ ದೇವಾಲಯಗಳ ಮುಂದೆ ನಿಲ್ಲಿಸಿರುವ ಗರುಡಗಂಬಗಳು, ಧ್ವಜಸ್ತಂಭಗಳು (ವೈವಾಸ್ತು. ೫೮). ೨. ಗರುಡನಾಗಿದ್ದ ವೀರನ ಸ್ಮಾರಕವಾಗಿ ನಿಲ್ಲಿಸುವ ಕಂಭ: ಸಂಜೀವರಾಯನ ಪ್ರತಿಷ್ಠೆ ಮಾಡಿ ಯೀ ಗರುಡಗಂಬ ನಿಲ್ಲಿಸಿ (ಎಕ. XII, ಶಿರಾ. ೯೨-೧೩ ; 1591). ೩. ಗ್ರಾಮಗಳಲ್ಲಿ ಚಾವಡಿಗಳ ಮುಂದೆ ನೆಟ್ಟಿರುವ ಮರದ ಕಂಬ. ℙ ಇದಕ್ಕೆ ಸಾಮಾನ್ಯವಾಗಿ ಅಪರಾಧಿಗಳನ್ನು ಕಟ್ಟಿಹಾಕುವ ಪದ್ಧತಿ ಇತ್ತು: (ಕಿ). ೪. ಭಿಕ್ಷೆಗಾಗಿ ಕೈಯಲ್ಲಿ ಹಿಡಿದುಕೊಂಡು ತಿರುಗುವ, ಗರುಡನ ವಿಗ್ರಹವುಳ್ಳ ಅಥವಾ ಸಜೀವವಾದ ಗರುಡಪಕ್ಷಿಯನ್ನು ಕೂರಿಸಿರುವ ದೀಪದ ಕಂಬ: ಆದಿಕರ್ನಾಟಕರು ಬಹಳ ದಿವಸಗಳಿಂದ ಭಜನೆಗೆ ಬೇಕಾಗುವ ಗರುಡಗಂಬ ಒಂದನ್ನು ಕರಿಸಿ ಕೊಡಿ ಅಂತಾ ಹೇಳ್ತಾ ಇದ್ರು (ಗರುದಾ. ೧೩); ಹೋಗಯ್ಯ ಆ ಗರುಡಗಂಬ ಕೊಂಡುಕೊಂಡು ನಾನು ತಿರುಪಕ್ಕೆ ತಾನೇ ಹೋಗಬೇಕು? (ಗರುದಾ. ೧೩). **ಗರುಡಕಂಭ:** ೧. ಬೈರೆಯ ನಾಯಕರು ಮಾಡಿಸಿದ ಗರುಡಕಂಭ (ವೈಅರಿ. ೧೯೪೨, ೨೯-೯ ; 1409). **ಗರುಡಗಂಭ:** ೧. ದೇವಸ್ಥಾನದ ಮುಂದಿರೋ ಗರುಡಗಂಭದ ಹಾಗೆ ನಿಂತು ಬಿಟ್ಟೆಯಲ್ಲಾ? (ಕಂಕಕೂ. ೪೦). [ಗರುಡ + ಕಂಬ$_1$ (< ಕಂಭ)]

**ಗರುಡಗಂಭ** 'ಗರುಡಗಂಬ' ನೋ.

**ಗರುಡಗಣ್ಣು** (ನಾ). ೧. ಗರುಡನ ಕಣ್ಣು. ೨. ಚುರುಕಾದ ಕಣ್ಣು: ಆ ಮುದುಕನ ಗರುಡಗಣ್ಣಿನ ಕುರಿತು ಇನ್ನಿಲ್ಲದ ವಿಸ್ಮಯ (ಬನಸಿ. ೫೭).

[ಗರುಡ + ಕಣ್ಣು (< ಕಣ್)]

**ಗರುಡಗಾಂಧಾರಿ** (ನಾ). [ಸಂಗೀತ] ಒಂದು ರಾಗದ ಹೆಸರು: ಒರ್ವ ಗರುಡಗಾಂಧಾರಿಯ ಪಾಡಿದರೆ . . . ಪರ್ದುಗಳು ಮೈನೀಡಿ ಕೆಂದು ಕೇಳಿದವು (ಭರಚ. ೬೪-೧೨).

[ಗರುಡ? + ಗಾಂಧಾರಿ]

**ಗರುಡಘೋಟಕ** (ನಾ). ಗರುಡನನ್ನು ಕುದುರೆಯಂತೆ ವಾಹನವಾಗಿ ಉಳ್ಳವನು; ಗರುಡವಾಹನ; ವಿಷ್ಣು: ಸೂಟಯಿಂ ಕುಂಭಾಂಡ ಮಂತ್ರಿಸೇಖರ ಗರುಡಘೋಟಕನ ಸನ್ನಿಧಿಗೆ ಬಂದು (ನವಮೋ. ೩೩-೫).

[ಗರುಡ + ಘೋಟಕ]

**ಗರುಡತುರಂಗ** (ನಾ). = ಗರುಡಘೋಟಕ : ಮಂಗಳಾತ್ಮಕ ದುರಿತ ತಿಮಿರಪತಂಗ ಗರುಡತುರಂಗ ರಿಪುಮದಭಂಗ (ಹರಿಸಾ. ೧೦). [ಗರುಡ + ತುರಂಗ$_1$]

**ಗರುಡತೋರಣ** (ನಾ). ಗರುಡ ಪೀಠದ ಮೇಲಿರುವ ತೋರಣ : ಪೀಠದ ಮೇಲೆ ಗರುಡತೋರಣದಲ್ಲಿ ದಶಾವತಾರಗಳು ಕಂಡುಬರುತ್ತವೆ (ಹೊಯ್ಸವಾ. ೧೫೫). [ಗರುಡ + ತೋರಣ]

**ಗರುಡದೃಷ್ಟಿ** (ನಾ). ೧.=ಗರುಡಗಣ್ಣು ೧. ೨. = ಗರುಡಗಣ್ಣು ೨; "ಸೂಕ್ಷ್ಮವಾದ ನೋಟ; ಚುರುಕುನೋಟ; ಸೂಕ್ಷ್ಮದೃಷ್ಟಿ" (ಅನಂನಾ.). [ಗರುಡ + ದೃಷ್ಟಿ]

**ಗರುಡಧ್ವಜ** (ನಾ). ೧. ಗರುಡ ಚಿಹ್ನೆಯುಳ್ಳ ಧ್ವಜ. ೨. ಧ್ವಜದಲ್ಲಿ ಗರುಡನ ಚಿಹ್ನೆಯುಳ್ಳವನು ; ವಿಷ್ಣು ; ಕೃಷ್ಣ : ಉರಗಧ್ವಜಂ ಗರುಡಧ್ವಜನಂ ಸಂಬೋಧಿಸಿ ನುಡಿಯೆ (ಗದಾಯು. ೭-೪೧ ವ) ; ಗರುಡಧ್ವಜನೆಬ್ಬೆತ್ತೂರ್ದುದುಂ (ಅರ್ಧನೇ. ೮-೩೪). ೩. [ಜೈನ] ವಾಸುದೇವ : ಗರುಡಧ್ವಜನ ಗಜದ ಮೊಗಚರ್ಮಮನರ್ವಿಸುವಿನಮಿಸೆ (ಶಾಂತಿಪು. ೫-೬೦) ; ವಿಯಚ್ಚರ ಸೈನ್ಯಂ ಸತ್ತುದು ಪುಚ್ಚೆತ್ತುದು ಬೆನ್ನಿತ್ತುದು ಪೂಣ್ದುಚಿವುದರಿದು ಗರುಡಧ್ವಜನೊಳ್ (ಪಂರಾಮಾ. ೯-೬೪). ℙ ಜೈನಪುರಾಣಗಳಲ್ಲಿ, ತೀರ್ಥಂಕರರ ಜೀವನಕ್ಕೆ ಸಂಬಂಧಿಸಿದಂತೆ, ಒಂಬತ್ತುಜನ ವಾಸುದೇವ ಮತ್ತು ಒಂಬತ್ತು ಜನ ಪ್ರತಿವಾಸುದೇವರ ಕತೆಗಳು ಬರುತ್ತವೆ. [ಗರುಡ + ಧ್ವಜ]

**ಗರುಡಧ್ವನಿ** (ನಾ). [ಸಂಗೀತ] ಒಂದು ರಾಗದ ಹೆಸರು : ಗರುಡಧ್ವನಿರಾಗದ 'ಆನಂದಸಾಗರಮಿಾ' ... ಅವರು ತಮ್ಮ ಕಚೇರಿಗಳಲ್ಲಿ ಹಾಡುತ್ತಿದ್ದರು (ಸಂಗೀತ. ೫). [ಗರುಡ ? + ಧ್ವನಿ]

**ಗರುಡಪಂಚಮಿ** (ನಾ). ಶ್ರಾವಣ ಶುದ್ಧ ಪಂಚಮಿ; ನಾಗರ ಪಂಚಮಿ : ಗರುಡಪಂಚಮಿಯದಿನ ನಾಗನಿಗೆ ತನಿ ಎರೆಯುವುದು ಪದ್ಧತಿ (ರೂಢಿ). ℙ ಆಶ್ವಯುಜ ಶುದ್ಧ ಪಂಚಮಿಯಂದೂ ಕೆಲವರು 'ನಾಗರಪಂಚಮಿ'ಯನ್ನು ಆಚರಿಸುತ್ತಾರೆ. [ಗರುಡ + ಪಂಚಮಿ]

**ಗರುಡಪಕ್ಷ** (ನಾ). ೧. ಹದ್ದಿನ ರೆಕ್ಕೆ. ೨. [ನಾಟ್ಯ] ಒಂದು ಬಗೆಯ ಹಸ್ತವಿನ್ಯಾಸ : "ಗರುಡಪಕ್ಷ: ತ್ರಿಪತಾಕ ಹಸ್ತಗಳೆರಡರ ಅಂಗೈಗಳನ್ನು ಕೆಳಮುಖಮಾಡಿ ಸೊಂಟದಲ್ಲಿ ಮೊಳಕೈಗಳನ್ನಿರಿಸಿ ಜಾಗ್ರತೆ ಕೈಗಳನ್ನು ಅಡ್ಡಲಾಗಿ ಮೇಲಕ್ಕೆತ್ತುವುದು" (ಲಾಸ್ಯರಂ. ೨೫೨ ಗದ್ಯಾನುವಾದ) ; ಮೊಳಕಯ್ಯತ್ರಿಪತಾಕಂ ಕೆಳಮೊಗಮಾಗಿರ್ದ ಕಟಿಯೊಳಿರ್ದಡ್ಡೈಸುತ್ತೆ ಳಲಿ ಬರುತೂರ್ಧ್ವಮಾಗಲ್ ಕೆಳೆಯಳೆ ಕೇಳ್ ಗರುಡಪಕ್ಷಹಸ್ತಮೆನಿಕ್ಕುಂ (ಲಾಸ್ಯರಂ. ೨-೬೪). [ಗರುಡ + ಪಕ್ಷ]

**ಗರುಡಪಚ್ಚೆ** (ನಾ). ಒಂದು ಬಗೆಯ ಹಸಿರುಬಣ್ಣದ ರತ್ನ; ಮರಕತ : ನಿರ್ಮಲವಾದ ಗರುಡಪಚ್ಚೆಗಳಿಂದ ನಿರ್ಮಿತಗಳಾದ ಬಾಗಲುಗಳು, ಮುತ್ತಿನ ಕದಗಳು (ಕೃವಾಸ. ೫) ; ಹಾಲನು ನೀರನು ಸಮಾಂಶವಾಗಿ ಕೂಡಿಸಿ ಗರುಡಪಚ್ಚೆಯುಂ ತೇದು ಅದರಲ್ಲಿ ಕದಡಿ ಕುಡಿಯೆ ಛರ್ದಿ ಹರ (ಸಕವೈ. ೨೬೬). ℙ ಗರುಡಪಚ್ಚೆ ಮಣಿಯಿಂದ ಸರ್ಪವಿಷ ಪರಿಹಾರವಾಗುವುದೆಂದು ಪ್ರತೀತಿ ಇದೆ. [ಗರುಡ + ಪಚ್ಚೆ$_2$ (< ಪಚ್ಚ$_3$)]

**ಗರುಡಪಟ** (ನಾ). ಗರುಡನ ಚಿತ್ರವನ್ನು ಬರೆದ ಪಟ, —ಬಟ್ಟೆ : ಗರುಡಪಟ ಎಂಬುದೊಂದನ್ನು ದೇವಸ್ಥಾನದ ಮುಂದೆ ಪಾಡ್ಯದ ದಿವಸ ಕಟ್ಟುತ್ತಾರೆ. ಗರುಡಪಟ ಕಟ್ಟಿರುವಾಗ ಮಡಿಯಾದ ಪದಾರ್ಥ ಮತ್ತಾವುದರಿಂದಲೂ ಮೈಲಿಗೆಯಾಗುವುದಿಲ್ಲ (ಗರುದಾ. ೫೪). [ಗರುಡ + ಪಟ$_3$]

**ಗರುಡಪತತ್ರಿ** (ನಾ). ೧. ಗರುಡಪಕ್ಷಿ. ೨. ಗರುಡ ಮಂತ್ರದಿಂದ ಅಭಿಮಂತ್ರಿಸಿ ಪ್ರಯೋಗಿಸುವ ಬಾಣ; ಗರುಡಾಸ್ತ್ರ : ಫಣಿಪ್ರಬಳ ಸಾಯಕದಿಂ ಫಣಿಚಂಡಕಾಂಡಮಂ ಗರುಡಪತತ್ರಿಯಿಂದಜಿತಸೇನ ನಡುರ್ತಿರದೆಚ್ಚು ತೂಳ್ದಿದಂ (ಚಂದ್ರಪು. ೬-೩೯). [ಗರುಡ + ಪತತ್ರಿ]

**ಗರುಡಪಾತಾಳ** (ನಾ). ೧. ಹಾವಿನ ವಿಷಕ್ಕೆ ಔಷಧವಾದ ಮೂಲಿಕೆ; ಸರ್ಪಾಕ್ಷಿ : (ಕಿ). ೨. ಬಾವಿಯಲ್ಲಿ ಬಿದ್ದ ಕೊಡ ಮೊದಲಾದುವನ್ನು ಮೇಲಕ್ಕೆ ತೆಗೆಯಲು ಉಪಯೋಗಿಸುವ, ಕಬ್ಬಿಣದ ಕೊಕ್ಕೆಗಳಿಂದ ಕೂಡಿದ ಒಂದು ಸಾಧನ; ಪಾತಾಳ ಗರುಡಿ : ಅವರ ಒಳಗೆ ಹುದುಗಿದ್ದ ಸೇವಾವೃತ್ತಿಯನ್ನೂ ಅದಕ್ಕೆ ಸಾಧನಗಳಾದ ಸತ್ಯ ಅಹಿಂಸೆಗಳನ್ನೂ ಹೊರಗೆ ಎಳೆಯುವುದಕ್ಕೆ ಸಾಹಿತ್ಯ ಗರುಡಪಾತಾಳವಾಯಿತು (ರಾಮರಾ. ೭೭). [ಗರುಡ + ಪಾತಾಳ (= ಪಾತಾಲ)]

**ಗರುಡಪಾತಾಳಿ** (ನಾ). = ಗರುಡಪಾತಾಳ ೨ : ತನ್ನಂತಹ ಹೆಂಗಸಿಗೆ ಈ ದ್ವೇಷದ ಆಳ ಯಾವ ಗರುಡಪಾತಾಳಿಗೂ ಸಿಗುವಂಥದಲ್ಲ (ಸಂಸ್ಕಾರ. ೪೮). [< ಗರುಡಪಾತಾಳ]

**ಗರುಡಪಾಳಿ** (ನಾ). = ಗರುಡಧ್ವಜ ೧ : ನಾರಾಯಣನುಮಾಗೆ ಗರುಡಪಾಳಿಯುಯಿಲ್ಲಮಜನೆನಲು ಹಂಸಧ್ವಜವೂ ತೋರದಿದೆ (ನವಮೋ. ೬-೪೩). [ಗರುಡ + ಪಾಳಿ (= ಪಾಲಿ)]

**ಗರುಡಪೀಠ** (ನಾ). ದೇವಸ್ಥಾನಗಳಲ್ಲಿರುವ, ದೇವರನ್ನು ಪ್ರತಿಷ್ಠೆ ಮಾಡಿರುವ ಕಲ್ಲಿನ ನೆಲೆಗಟ್ಟು ; ಗರುಡನ ಆಕೃತಿಯನ್ನು ಕೆತ್ತಿರುವ ಪೀಠ : ಗರುಡಪೀಠದ ಮೇಲಿರುವ ಕೇಶವ ವಿಗ್ರಹ ಅಷ್ಟು ಚೆನ್ನಾಗಿಲ್ಲ (ಹೊಯ್ಸವಾ. ೧೫೫) ; ಗರುಡಪೀಠದ ಮೇಲೆ ಅಭಯ ಚಕ್ರ ಪದ್ಮ ಹಿಡಿದಿರುವ ಯಕ್ಷಿ (ಪದ್ಮಾವತಿ) ಚೋಳ ವಿಗ್ರಹಗಳಂತೆ ಬಹಳ ಸುಂದರವಾಗಿದೆ (ನಿಟ್ಟೂಶಾಂ. ೧೪). [ಗರುಡ + ಪೀಠ]

**ಗರುಡಪುರಾಣ** (ನಾ). ಹದಿನೆಂಟು ಪುರಾಣಗಳಲ್ಲಿ ಒಂದು : ವಾಮನ, ಕೂರ್ಮ, ಮತ್ಸ್ಯ ಮತ್ತು ಗರುಡಪುರಾಣಗಳು ಅತ್ಯಂತ ಆಧುನಿಕವಾದುವುಗಳು (ಭಾರದ. ೧೪೬). ℙ ಹಿರಿಯರು ಸತ್ತಾಗ ಮೃತರ ಆತ್ಮಶಾಂತಿಗಾಗಿ ಮನೆಯಲ್ಲಿ ಈ ಪುರಾಣವನ್ನು ಓದಿಸುವ ಪದ್ಧತಿ ಇದೆ. ಇದರ ಪೂರ್ವಖಂಡದಲ್ಲಿ ಮಾನವ ಜೀವನಕ್ಕೆ ಬೇಕಾದ ಅನೇಕ ವಿಷಯಗಳೂ, ಉತ್ತರಖಂಡದಲ್ಲಿ ಮನುಷ್ಯನ ಉತ್ತರಕ್ರಿಯೆಗಳಿಗೆ ಬೇಕಾದ ವಿಷಯಗಳೂ ಉಕ್ತವಾಗಿವೆ. [ಗರುಡ + ಪುರಾಣ]

**ಗರುಡಪ್ಲುತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : "ಗರುಡಪ್ಲುತ :— ಪತಾಕಹಸ್ತಗಳೆರಡನ್ನು ಪಕ್ಕೆಗಳ ಪಕ್ಕದಲ್ಲಿ ಹಿಡಿದು, ಒಂದು ಕಾಲನ್ನು ಚೇಳಿನಬಾಲದಂತೆ ಹಿಂದಕ್ಕೆತ್ತಿ, ಎದೆಯನ್ನು ಮುಂದಕ್ಕೆ ನೀಡುವುದು" (ಲಾಸ್ಯರಂ. ೨೯೯ ಗದ್ಯಾನುವಾದ). [ಗರುಡ + ಪ್ಲುತ]

**ಗರುಡಫಲ** (ನಾ). ಒಂದು ಜಾತಿಯ ಔಷಧಿ ಗಿಡ : ಚಿಕ್ಕಸುರಟಿಗಿಡ, ಗರುಡಫಲ (ಮೈಔಗಿ. ೪೫-೮೮೧). [ಗರುಡ + ಫಲ]

**ಗರುಡಬಾಣ** (ನಾ). = ಗರುಡಪತತ್ರಿ ೨ : ಅರಸನೆಚ್ಚಾ ಸರ್ಪಬಾಣವ ಗರುಡಬಾಣದಿ (ಕೌಶಿರಾ. ೨೨-೩೧). [ಗರುಡ + ಬಾಣ$_2$]

**ಗರುಡಬೇರು** (ನಾ). ಒಂದು ಜಾತಿಯ ಬೇವು; ಅರಬೇವು : ಅರಬೇವಿಗೆ ಗರುಡಬೇರೆಂಬ ಹೆಸರು (ಕೃಷಿಪ್ರ. ೧೩೩). [ಗರುಡ + ಬೇರು (< ಬೇರ್)]

**ಗರುಡಮಂತ್ರ** (ನಾ). ಹಾವಿನ ವಿಷದ ನಿವಾರಣೆಗಾಗಿ ಜಪಿಸುವ ಗರುಡನ ಸ್ತುತಿರೂಪವಾದ ಮಂತ್ರ : ಗರುಡಮಂತ್ರವ ಕಲಿತಮಾತ್ರದಲುರಗವದನದಿ ಬೆರಳನಿಡುವರೆ (ಗಗತಾ. ೧೫-೨೧). [ಗರುಡ + ಮಂತ್ರ]

**ಗರುಡಮುಚ್ಚಿ** (ನಾ). ಒಂದು ಬಗೆಯ ಮುಚ್ಚಿ, —ಗುರುತು: ಗರುಡಮುಚ್ಚಿ ಇರುವವರನ್ನು ಕಂಡರೆ ಹಾವುಗಳು ಹೆದರುತ್ತವೆಂಬ ನಂಬಿಕೆಯಿದೆ (ರೂಢಿ). [ಗರುಡ + ಮುಚ್ಚಿ]

**ಗರುಡಮಣಿ** (ನಾ). ಹಾವಿನ ವಿಷವನ್ನು ಪರಿಹರಿಸುವ ಮಣಿ. [ಗರುಡ + ಮಣಿ]

**ಗರುಡಮುದ್ರೆ** (ನಾ). ಪೂಜಾಸಮಯದಲ್ಲಿ, ಪೂಜಾಸಾಮಗ್ರಿಗಳನ್ನು ನಿರ್ವಿಷಗೊಳಿಸುವ ಸಲುವಾಗಿ ತೋರಿಸುವ ಒಂದು ಬಗೆಯ ಮುದ್ರೆ. ಎರಡು ಹಸ್ತಗಳ ಬೆರಳುಗಳನ್ನು ಮಡಿಸಿಕೊಂಡು ಗರುಡನ ಆಕಾರದಂತೆ ಮಾಡುವ ಒಂದು ಮುದ್ರೆ. ಇದು ವಿಷ್ಣುವಿಗೆ ಪ್ರಿಯಕರವಾದುದೆಂದು ಹೇಳಲಾಗಿದೆ. [ಗರುಡ + ಮುದ್ರೆ]

**ಗರುಡಮೂಗು** (ನಾ). ೧. ಗರುಡನ ಕೊಕ್ಕಿನಂತೆ ಬಾಗಿರುವ ಮೂಗು: ಆತನ ಮೂಗೋ ಗರುಡಮೂಗು (ರೂಢಿ). 'ಗಿಣಿಮೂಗು' ಪರಾ. ೨. ಒಂದು ಬಗೆಯ ಔಷಧಿಗಿಡ: ಹುಲಿನಖ, ಗರುಡ ಮೂಗು (ವೈಶಿಗಿ. ೫೨–೧೦೫೩). [ಗರುಡ + ಮೂಗು₁]

**ಗರುಡರಥ** (ನಾ). ಗರುಡನನ್ನು ರಥವಾಗಿ ಉಳ್ಳವನು; ಗರುಡ ವಾಹನ; ವಿಷ್ಣು: ಶಚಿರಮಣ ಗರುಡರಥನತಚರಣ ಪುರವನುರುಹಿದ ಮಹಿಮ (ಪ್ರಾಥರಾ. ೨೧–೪೨). [ಗರುಡ + ರಥ]

**ಗರುಡರೇಖೆ** (ನಾ). ಗರುಡನ ಗೆರೆ: ಅವನ ಕೈಯಲ್ಲಿ ಗರುಡರೇಖೆ ಇದೆ (ರೂಢಿ). [ಗರುಡ + ರೇಖೆ]

**ಗರುಡಲೇಖಣಿ** (ನಾ). ಗರುಡನ ಗರಿಯಿಂದ ಮಾಡಿದ ಲೇಖನಿ: ಮಸಿದೌತಿಯನ್ನು ಒಂದು ಗರುಡಲೇಖಣಿಯನ್ನು ಕೊಡಿ (ಚಂಗಾಳ್ವ. ೫೬೦). [ಗರುಡ + ಲೇಖಣಿ]

**ಗರುಡವಾಯು** (ನಾ). [ಯೋಗ] ಪ್ರಾಣಾಯಾಮಕ್ಕೆ ಸಂಬಂಧಪಟ್ಟ ಒಂದು ಬಗೆಯ ವಾಯುಚಲನೆ: ರೇಚಕ ಪೂರಕ ಕುಂಭಕವೆಂಬ ಗರುಡವಾಯು ಸೋಂಕ ತೆಗೆದು ಬ್ರಹ್ಮಾಂಡದಲ್ಲಿ ಕಿತ್ತಿಟ್ಟು (ಚನ್ನವ. ಕ. ೪೯೬–೧೦೭೬). [ಗರುಡ + ವಾಯು]

**ಗರುಡವಾಹನ** (ನಾ). ೧. ಗರುಡನ ಆಕೃತಿಯ ವಾಹನ: (ಕಿ). ೨. ಗರುಡನನ್ನು ವಾಹನವಾಗಿ ಉಳ್ಳವನು; ವಿಷ್ಣು: ವಹಿಲದಿಂ ಗರುಡವಾಹನನಾಗಿ ಬಂದನಾಕ್ಷಣಕಲ್ಲಿಗರವಿಂದನಾಭನು (ಜೈಮಿಭಾ. ೧೩–೨೨). ೩. ಗರುಡನ ಮೂರ್ತಿಯ ಮೇಲೆ ವಿಷ್ಣುವಿನ ವಿಗ್ರಹವನ್ನು ಕೂರಿಸಿ ಮಾಡುವ ಒಂದು ಉತ್ಸವ: ಇವೊತ್ತು ನಮ್ಮೂರಿನ ದೇವಸ್ಥಾನದಲ್ಲಿ ಗರುಡವಾಹನದ ಉತ್ಸವವಿದೆ (ರೂಢಿ). ೪. ಪ್ರಯಾಣದ ಗಾಡಿ ಮೊದಲಾದುವುಗಳಲ್ಲಿ ಬಹಳ ಒತ್ತಾಗಿ ಜನ ತುಂಬಿರುವ ಸ್ಥಿತಿ: ಗ್ರಾಮಾಂತರ ಪ್ರದೇಶಗಳಲ್ಲಿ ಬಸ್ಸಿನ ಪ್ರಯಾಣ ಗರುಡವಾಹನವಾಗಿಬಿಟ್ಟಿದೆ (ರೂಢಿ). [ಗರುಡ + ವಾಹನ]

**ಗರುಡವಾಹಿನಿ** (ನಾ). ೧. ಒಂದು ಬಗೆಯ ಸೇನಾವ್ಯೂಹ: (ಕಿ). ೨. ಗರುಡಪಕ್ಷಿಗಳ ಸೈನ್ಯ: ಆಗಳಿಜಂಕೆಯ ಬೆಟ್ಟಂ ಬೇಗಂ ಬರ್ಪಂತೆ ಬಂದು ಲಕ್ಷ್ಮಣನ ರಥಂ ತಾಗಿದುದು ಗರುಡವಾಹಿನಿ ಸಾಗರಮುಚ್ಚಳಿಸೆ ಪಕ್ಷಪವನಾಹತಿಯಿಂ (ಪಂರಾಮಾ. ೧೪–೧೪೬). ೩. [ಜೈನ] ದೇವತೆಗಳನ್ನು ಆರಾಧಿಸಿ ದೊರಕಿಸಿಕೊಳ್ಳುವ ಒಂದು ವಿದ್ಯೆ; ಸರ್ಪಾಸ್ತ್ರವನ್ನು ಪರಿಹರಿಸುವ ವಿದ್ಯೆ: ನಿಕ್ರಮನೆಂಬೊಂ ಸಮ್ಮೇದಗಿರಿಯೊಳ್ ಸಿಂಹವಾಹಿನಿ ಗರುಡವಾಹಿನಿಯುಮೆಂಬ ವಿದ್ಯೆಗಳಂ ಸಾಧಿಸಿ (ಚಾವುಂಪು. ೨೮೧–೪); ಗರುಡಾಧಿಪನಪ್ಪ ಮಹಾಲೋಚನನಜೀದು ಬಹುವಿದ್ಯಾ ಪರಿವಾರಮನುಳ್ಳ ಸಿಂಹವಾಹಿನಿಯುಂ ಗರುಡವಾಹಿನಿಯುಮೆಂಬೆರಡು ವಿದ್ಯೆಗಳುಮಂ (ಪಂರಾಮಾ. ೧೩–೧೫೬ ವ). [ಸಂ. ಗರುಡವಾಹಿನೀ]

**ಗರುಡವೇಗ** (ನಾ). ಗರುಡನು ಹಾರುವಷ್ಟು ವೇಗ; ಹೆಚ್ಚಾದ ವೇಗ; ಬಹಳ ವೇಗ: ದೋಣಿಯು ಗರುಡವೇಗದಿಂದ ಹೊರಟು ಮರುದಿನ ಸೂರ್ಯೋದಯಕ್ಕೆ ಸರಿಯಾಗಿ ಶ್ವೇತದ್ವೀಪವನ್ನು ಸೇರಿತು (ರಾಜಾಮು. ೨೦೯). [ಗರುಡ + ವೇಗ]

**ಗರುಡವ್ಯೂಹ** (ನಾ). = ಗರುಡ ೫: ಭೀಷ್ಮನು ಕೌರವಸೇನೆಯನ್ನು ಗರುಡವ್ಯೂಹವಾಗಿ ರಚಿಸಿ ತಾನು ಅದರ ಕೊಕ್ಕಿನ ಸ್ಥಾನದಲ್ಲಿ ನಿಂತನು (ವಚಭಾ. ೨೬೧). [ಗರುಡ + ವ್ಯೂಹ]

**ಗರುಡಾಂಕ** (ನಾ). = ಗರುಡಧ್ವಜ ೨: "ಜಗತ್ಪತಿಯೆನಲು ಶ್ರೀವತ್ಸ ಗರುಡಾಂಕನೆನಲು ಕೃಷ್ಣಂ" (ಮಂಗರಾ. ೬–೧೮); ಗರುಡಾಂಕನ ಬಾಂಗೆ ಸಂಗರಮಧ್ಯಸ್ಥಳಿಗೆ ನಡೆವ ಖಗಪತಿಗಮರ್ವಂತಿರೆ ಕಾಲಧಾರಿಕಂ ತೊಟ್ಟ ರಕ್ತಪಟಮೆನಿಸಲಾರ್ತುದಂಬರವಾಗಳ್ (ವರ್ಧಪು. ೮–೨೩). [ಗರುಡ + ಅಂಕ]

**ಗರುಡಾಗಮ** (ನಾ). ಆಗಮಗಳಲ್ಲಿ ಒಂದು ಭೇದ: ಗರುಡಾಗಮ ನೈರುತಾಗಮ . . . ಕಾಲತಂತ್ರವೆಂದು ಕಿರಣಾಗಮದ ನವಭೇದಂಗಳು (ವಿವೇಕ. ೬೧). [ಗರುಡ + ಆಗಮ]

**ಗರುಡಾಗ್ರಜ** (ನಾ). ಗರುಡನ ಅಣ್ಣ; ಅರುಣ: "ಸೂರ್ಯಸೂತಃ, ಅರುಣಃ, ಅನೂರುಃ, ಕಾಶ್ಯಪಿಃ, ಗರುಡಾಗ್ರಜಃ, ೫ ಸೂರ್ಯಸಾರಥಿಯಾದ ಅರುಣನ ಹೆಸರುಗಳು" (ಸಿದ್ಧಾಂತಿ.೬೨). [ಗರುಡ + ಅಗ್ರಜ]

**ಗರುಡಾಸನ** (ನಾ). [ಯೋಗ] ಯೋಗಾಸನಗಳಲ್ಲಿ ಒಂದು: ಸುಖಸ್ಥೈರ್ಯ ನಿಶ್ಚಲಾವಹಮಾದ ಯೋಗಯೋಗ್ಯಾಸನಗಳಲ್ಲಿ ಶುದ್ಧಾಸನ ಸಿಂಹಾಸನ . . . ಗರುಡಾಸನ ಮಯೂರಾಸನ . . . ಅರ್ಧಾಸನಾದಿಯೆಂಭತ್ತನಾಲ್ಕಾಸನಭೇದಂಗಳಂ (ವಿವೇಕ. ೧೪೯); ಮುಖ್ಯವಾದ ಕೆಲವು ಆಸನಗಳು ೧ ಉತ್ತಾನಾಸನ . . . ೪೯ ಹನುಮಾನಾಸನ ೫೦ ಗರುಡಾಸನ (ಭಾರದ. ೧೬೭). [ಗರುಡ + ಆಸನ]

**ಗರುಡಾಸ್ತ್ರ** (ನಾ). ೧. ಗರುಡಮಂತ್ರದಿಂದ ಅಭಿಮಂತ್ರಿಸಿ ಬಿಡುವ ಬಾಣ. ೨. ಮಂತ್ರಶಾಸ್ತ್ರದಲ್ಲಿ ಹೇಳಿರುವ ಐದು ಉಪಾಸ್ತ್ರ ಮಂತ್ರಗಳಲ್ಲಿ ಒಂದು: ಬ್ರಹ್ಮಾಸ್ತ್ರ, ನಾಗಾಸ್ತ್ರ, ಗರುಡಾಸ್ತ್ರ, ಅನಲಾಸ್ತ್ರ, ವಾರುಣಾಸ್ತ್ರಗಳೆಂಬ ಪಂಚೋಪಾಸ್ತ್ರ ಮಂತ್ರಂಗಳಂ (ವಿವೇಕ. ೮೧). [ಗರುಡ + ಅಸ್ತ್ರ]

**ಗರುಡಿ, ಗರಡಿ** (ನಾ). ೧. ವಾಸಸ್ಥಾನ; ಆಶ್ರಯ; ನೆಲೆ: "ಗವಿ ಗರುಡಿ ಗೊತ್ತು ನೆಲೆ . . . ಎನಲ್ಕೆಯಾಶ್ರಯ ನಾಮ" (ಶಬ್ದಮಂ. ೫೪). ೨. ಶಸ್ತ್ರವಿದ್ಯೆ, ಜಟ್ಟಿಗಾಳಿಗ ಮೊದಲಾದುವನ್ನು ಅಭ್ಯಾಸ ಮಾಡುವ ಸ್ಥಳ; ವ್ಯಾಯಾಮಶಾಲೆ: ನಾವೆಲ್ಲಮೊಂದೆ ಗರುಡಿಯೊಳೋದಿದ ಮಾನಸರೆಂ (ಪಂಪಭಾ. ೯–೪೮ವ); ಗರುಡಿಯೊಳಾರೊಳೆನ್ನ ಳವಿಮಾಡುವೆನಾರೊಡನೇಜು ತೋಜುವೆಂ ಕರಿತುರಗಂಗಳಂ (ವರ್ಧಪು. ೯–೬೪); ಸುರರ ಮೆಚ್ಚದ ರಾಮನೀತನ ಕರೆದು ಗರುಡಿಯ ಹೊಗಿಸಿದನು ಕಡುಗರುವನೀ ರಾಧೇಯ (ಕುವ್ಯಾಕ. ೮–೨). ೩. ಶ್ರಮ; ಆಯಾಸ: ನೀವು ಬಿಜಯಗೈವಿರಿಂದು ಮಹಾವಿಳಾಸದೊಳಳವಡಿಸಿ ನಾನಾ ವಿಧದ ಷಡುರಸವ ಗರುಡಿಯುಲಿಂದು [ಪಾಠಾಂ. ತರುಣಿಯರಿಂದೆ] ಸವೆಸಿದೆನು (ಕುವ್ಯಾಉ. ೮–೬೪). **ಗರಡಿ**: ೨. ಆಡ ಕಲಿತರು ಗರಡಿಯಲಿ ಶ್ರಮಮಾಡ ಕಲಿತರು (ಕೌಶಿರಾ. ೧–೭೭); ಗರಡಿಯೊಳಗೆ ಸಾಧನಗೈದು (ಕಂನವಿ. ೭–೧೭); ನನ್ನ ಗರಡಿಯಲ್ಲಿ ಕುದುರಿದವ ನೀನು ನಿನಗದು ತಿಳಿಯದೆ? (ಕೃಷ್ಣಭೂ. ೧೦೦). ೪. "ಹಳ್ಳಿಯ ದೆವ್ವಕ್ಕಾಗಿ ಕಟ್ಟಿದ ಗುಡಿ" (ಕೋಟಚೆ. ಕೋಶ); ಎಣ್ಮೂರು ದೇವಬಲ್ಲಾಳನು ಕೋಟಿ ಚೆನ್ನಯರನ್ನು ಸುಟ್ಟು ಶುದ್ಧಮಾಡಿಸಿದ ಸ್ಥಳಗಳಲ್ಲಿ ಅವರ ಸಮಾಧಿಗಳನ್ನು ಕಟ್ಟಿಸಿ ಗರಡಿಗಳನ್ನು ಏರ್ಪಡಿಸಿದನು (ಕೋಟಚೆ. ೬೩).

**ಗರುಡಿಯ ಕಟ್ಟು** = ೧. ಸ್ಪರ್ಧೆಯನ್ನು ಹೂಡು; ಸ್ಪರ್ಧೆ ಮಾಡು: ಗರುಡಿಯ ಕಟ್ಟ ಶ್ರವಣ ಮಾಡುವಂತೆ ತನ್ನ ತಪ್ಪಿಸಿಕೊಂಡರೆ ಶಿವ ಮೆಚ್ಚುವನೆ (ಬಸವ. ೬೬೮). ೨. ಪ್ರತಿಜ್ಞೆಮಾಡು; ಶಪಥ ಮಾಡು: ಗರುಡಿಯ ಕಟ್ಟಿ ಅಱುವತ್ತುನಾಲ್ಕು ಕೋಲಭ್ಯಾಸವ ಮಾಡಿದೆನಯ್ಯಾ (ಬಸವ. ೭೦೧). **ಗರುಡಿಯಾಚಾರ್ಯ** = ಶಸ್ತ್ರ ವಿದ್ಯಾಭ್ಯಾಸ ಮಾಡಿಸಿದ ಗುರು; ದ್ರೋಣಾಚಾರ್ಯ: ರಾಮ ಕಟಕದ ಹಾನಿಯನು ತಲೆಗಾಯ್ದು ಜಾಂಬವಗೇನು ಕೊಱತೆಯೆನುತ್ತ ಜಱೆದನು ಗರುಡಿಯಾಚಾರ್ಯ (ಕುವ್ಯಾಭೀ. ೧-೬೭). **ಗರುಡಿಯೊಡೆಯ** = ಗರುಡಿಯಾಚಾರ್ಯ: ಗರುಡಿಯೊಡೆಯನ ಪಾಳಯಕೆ ಕಡುಭರದ ಲೈತರೆ (ಕುವ್ಯಾದ್ರೋ. ೮-೫೬). **ಗರುಡಿಯೋಜ** = ಗರುಡಿಯಾಚಾರ್ಯ: ಗರುಡಿಯೋಜರ ಪರಿವಿಡಿವಾತುಗಳಿಂದ ಪರಿಹರಿಸಿದ ನಾಸಜನು (ಕುರಾಸಾ ೦. ೨೮-೩); ದೊರೆಕೊಂಡ ಕುವರನಿರವಂ ನಿರವಿಸಿದರ್ ಗರುಡಿಯೋಜರವನೀಪತಿಯೊಳ್ (ಚಿಕವಿ. ೪-೧೩೩).

[ದೇ. ‖ ತಮಿ. ಕರಡಿ, ಕರುಡಿ, ಕೆರುಡಿ; ತುಳು. ಗರಡಿ, ಗರೊಡಿ; ತೆಲು. ಗರಿಡಿ]

**ಗರುಡಿಕಾಱ** (ನಾ). ೧. ಗರುಡಿಯಲ್ಲಿ ಸಾಧನೆ ಮಾಡಿದವನು, —ಪಳಗಿದವನು; ಮಲ್ಲ; ಜಟ್ಟಿ: ಪ್ರತಿ ಗರುಡಿಕಾಱ ಬಿರುದ ಪಾಡಿಂಗೆ ಒದಗಲು ವೀರಪಟ್ಟಿಯ ಕಟ್ಟಿ ತಿಗುರನೇಱಿಸಿಕೊಂಬೆ (ಬಸವ. ೭೦೧); ಬೆರಳ ಮೀಸೆಯುಲಿಡುತ ಮಿಗೆ ಹೂಂಕರಿಸಿ ಹೊಸ ಕಲ್ಪಾಂತ ಕಾಲನ ಗರುಡಿಕಾಱನು ಗಾಢಕೋಪಾಟೋಪದವನು ತಾಳ್ದ (ನಿಭಾಗ. ೧೧-೭೨-೨೯); ಸರಸಕಲೆಯ ಬಲ್ಲ ಸತಿ ಪುರುಷರ ಕೂಟ ಗರುಡಿಕಾಱರ ಕೂಟವಂತೆ ಭರಜ. ೭-೧೭). ೨. ಗರುಡಿಯಲ್ಲಿ ಅಭ್ಯಾಸ ಮಾಡಿಸು ವವನು; ಗರುಡಿಯಾಚಾರ್ಯ: ಮರಳುವುದು ಲೇಸೆನುತ ಹುದುರಘರುರವಣಿಸಿದರು ಬಿಗಿದ ಬಿಲ್ಲಿನ ಗರುಡಿಕಾಱನ ಕೂಡ ನೂಕಿತು ರವಿಸುತಾದಿಗಳು (ಕುವ್ಯಾದ್ರೋ. ೬-೯).

[ಗರುಡಿ + -ಕಾಱ]

**ಗರುಡಿಗಾವಲ್** (ನಾ). ೧. ಗರುಡಿಮನೆಯ ಕಾವಲು. ೨. ಗರುಡಿ ಮನೆಯ ಕಾವಲುಗಾರ: ನಗುತಾ ಭೀಮಂ ತಿರುಗಲ್ ಮುಗುದೆಯು ಆ ಗರುಡಿಗಾವಲರೊಡನಿಂತೆಂದಳ್ (ಯವಿಪ. ೨೬).

[ಗರುಡಿ + ಕಾವಲ್$_1$]

**ಗರುಡಿಗೆಯ್ತ** (ನಾ). ಗರುಡಿಮನೆಯ ವಿದ್ಯೆ; ಮಲ್ಲವಿದ್ಯಾಭ್ಯಾಸ; ಕಸರತ್ತು: ಕೈದುವಿಡಿದು ಗರುಡಿಗೆಯ್ತದ ಕೈಮೆಯೊಳೊರ್ಮೆ ಬಿಲ್ಲಹಿಡಿಗೊಂಡು ಗುಱಿಯಿಸುವ ಕೌಶಲದೊಳೊರ್ಮೆ . . . ಉಳ್ಳ ಕಾಲಮಲ್ಲನುನಿಂತೊಳ್ಗೆಯ್ತದೊಳ್ ಕಳೆದು (ಚಿಕವಂ. ೫೫-೧೯).

[ಗರುಡಿ + ಕೆಯ್ತ$_1$]

**ಗರುಡಿಗೆಯ್ಮೆ** (ನಾ). = ಗರುಡಿಗೆಯ್ತ: ಗರುಡಿಗೆಯ್ಮೆಯೊಳ್ ಚಿಕದೇವ ರಾಯನಂ ನಿಟ್ಟಿಪ ಜಟ್ಟಿಗಳ್ಗರುಡಿ ಗೋವಳನೀನೃಪನೆಂದು ವಂದಿಪರ್ (ಅಪ್ರತಿ. ೨೧-೨೧); ಮೆಯ್ಯಳಿಯ ಗರುಡಿಗೆಯ್ಮೆಯು ಉಳಿಯ ಬಿನ್ನಣದಿಂದ ಮುದ್ದಾಗಿ ಮೆಯ್ಮುಡಿ . . . ಇರುವನು. (ಚಿಟ್ಟಅ. ೧೯೯-೧೪).

[ಗರುಡಿ + ಗೆಯ್ಮೆ (< ಕೈಮೆ$_1$)]

**ಗರುಡಿಗೋವಳ** (ನಾ). ಜಟ್ಟಿಯಾದ ಗೋಪಾಲ; ಮಲ್ಲನಾದ ಕೃಷ್ಣ: ಕಟ್ಟಿದ ದಟ್ಟ . . . ನಾಮದೊಳ್ಪೊಟ್ಟು ಮನಂಗೊಳಲ್ಗರುಡಿ ಗೆಯ್ಮೆಯೊಳ್ ಚಿಕದೇವರಾಯನಂ ನಿಟ್ಟಿಪ ಜಟ್ಟಿಗಳ್ ಗರುಡಿಗೋವಳನೀ ನೃಪನೆಂದು ವಂದಿಪರ್ (ಅಪ್ರತಿ. ೨೧-೨೨); ಸಂಗಡಿಸಿದ ಜಟ್ಟಿಗರ್ ಗರುಡಿಗೋವಳನೀನೃಪನೆಂದು ವಂದಿಪರ್ (ಚಿಕವಿ. ೪-೧೭೬).

[ಗರುಡಿ + ಗೋವಳ]

**ಗರುಡಿಚೋರ** (ನಾ). ಗರುಡಿಯಲ್ಲಿ ಪಳಗಿ ಕಲಿತ ಪಟ್ಟುಗಳನ್ನು ತೋರಗೊಡದವನು (?): ಚೈತನ್ಯಾತ್ಮಾನಾತ್ಮಚೈತನ್ಯವೆಂದ ರೊಂದೆಂದಱಿತಱಿತು ಮಱೆಮಾಡಿ ಹುಸಿ ಎಂಬ ಪರಿಯ ನೋಡಾ ಗರುಡಿಚೋರನಂತೆ ಘಟಾಕಾಶ ಘಟವಿದ್ದಲ್ಲಿ ಇದ್ದು ಘಟವಳಿದಲ್ಲಿ ಘಟಾಕಾಶವಳಿಯದಂತೆ (ಅದವ. ೨೧೨-೬೭೨). [ಗರುಡಿ + ಚೋರ]

**ಗರುಡಿಮನೆ**, ಗರಡಿಮನೆ (ನಾ). ಶಸ್ತ್ರವಿದ್ಯೆ, ಜಟ್ಟಿಕಾಳಗ ಮೊದ ಲಾದುವನ್ನು ಅಭ್ಯಾಸಮಾಡುವ ಮನೆ; ವ್ಯಾಯಾಮಶಾಲೆ: ಕದ್ದು ಕದ್ದು ಗರುಡಿಮನೆಗೆ ಹೋಗಿ ಮೈಕೈ ನೋವು ಮಾಡಿಕೊಳ್ಳ ತೊಡಗಿದೆ (ಗಾಳಿಪ. ೬೬). **ಗರಡಿಮನೆ**: ಶಸ್ತ್ರಶಾಸ್ತ್ರಾಭ್ಯಾಸಗಳಲ್ಲಿಯೂ ಗರಡಿಮನೆಗಳಲ್ಲಿಯೂ ಸದಾನಿರತನಾಗಿದ್ದ ಇವನಿಗೆ ಮದುವೆ . . . ಕಂಡುಬಂತು. (ಶಾಂತಲಾ. ೧೯೨); ಪ್ರತಿಬಿಂಬದಲ್ಲಿ ಕವಿಯ ಕಲ್ಪನೆ ಯಾಡುವ ಗರಡಿಮನೆಯ ಅಂಕಣಗಳಿವೆ (ನೆಲಮು. VII, ನಾಲ್ಕುಮಾತು).

[ಗರುಡಿ + ಮನೆ]

**ಗರುಡಿಶ್ರಮ** (ನಾ). ಗರುಡಿಯಲ್ಲಿ ಕೈಗೊಂಡ ಅಭ್ಯಾಸ, —ಶಸ್ತ್ರಾ ಭ್ಯಾಸ: ಅವ ದೃಢತೆಯೊ ದೃಷ್ಟಿಪಾಳವಿದಾವ ಗರುಡಿಶ್ರಮವೆನುತ ದಿವಿಜಾವಳಿಗಳುಲಿಯಲು ವಿಭಾಡಿಸಿದನು ರಿಪುವ್ರಜನ (ಕುವ್ಯಾದ್ರೋ. ೫-೬).

[ಗರುಡಿ + ಶ್ರಮ]

**ಗರುಡಿಸಾಧಕ**, ಗರಡಿಸಾಧಕ (ನಾ). ೧. ಗರುಡಿಯಲ್ಲಿ ಸಾಧನೆ ಮಾಡಿರುವವನು; ವ್ಯಾಯಾಮಶೀಲ; ಜಟ್ಟಿ. ೨. ವ್ಯಾಯಾಮ; ಅಂಗಸಾಧನೆ: (ಕ). **ಗರಡಿಸಾಧಕೆ**: ೨. ದಿನಾಲು ನಸುಕಿನಲ್ಲೆದ್ದು ಗರಡೀಸಾಧಕ ಮಾಡುತ್ತಿದ್ದನು (ಹೂಬಿಸಿ. ೭೩). [ಗರುಡಿ + ಸಾಧಕ]

**ಗರುಡಿಸಾಧನೆ**, ಗರಡಿಸಾಧನೆ (ನಾ). ಗರುಡಿಮನೆಯಲ್ಲಿ ಮಾಡುವ ವ್ಯಾಯಾಮ; ಅಂಗಸಾಧನೆ: ಖಲೋಕೆ ಶ್ರಮಗೃಹಂ ಗರುಡಿ ಸಾಧನೆಯ ಮನೆಯೆನಿಕ್ಕುಂ (ಮಂಗರಾ. ೫೯-೧೦). **ಗರಡಿಸಾಧನೆ**: ಬಿಟ್ಟದ ಒಡೆಯರು ಗರಡಿಸಾಧನೆಯನ್ನು ಚೆನ್ನಾಗಿ ಮಾಡಿ ಬಹಳ ಬಲ ಶಾಲಿಗಳಾಗಿದ್ದರು (ಒಡೆಕ. ೨೫); ಸಂಜೆಗೆ ಪುನಃ ಗರಡಿಸಾಧನೆ (ಭೀಮಕಾ. ೨೧). [ಗರುಡಿ + ಸಾಧನೆ]

**ಗರುಡಿಸಾಮು** (ನಾ). = ಗರುಡಿಸಾಧನೆ: (ಕ). [ಗರುಡಿ + ಸಾಮು]

**ಗರುಡೋದ್ಗಾರ** (ನಾ). ಗರುಡನಂತೆ (ವಿಷವನ್ನು) ಪರಿಹರಿಸುವ ಗುಣವುಳ್ಳ ಒಂದು ಮಣಿ; ಗರುಡಪಚ್ಚೆ: "ಗರಳಾರಿಃ, ಗರುಡೋ ದ್ಗಾರ" (ಒಷಧಿ. ೪೫); ಗರುಡೋದ್ಗಾರದ ಪಚ್ಚೆಯಿಂ ಸಮೆದ ನಾನಾ ಭೂಷಣಾನೀಕಮಂ ಧರಣೀವಲ್ಲಭೆಗಂಬುದಾಗಮ ವಿಟಂ ತಂದಿಕ್ಕಿ ದೊಂದಂದದಿಂ (ಜಗವಿ. ೪-೨೦). [ಗರುಡ + ಉದ್ಗಾರ]

**ಗರುಡೋದ್ಗಾರಮಣಿ** (ನಾ). = ಗರುಡೋದ್ಗಾರ: ಗರುಡೋದ್ಗಾರ ಮಣಿಚ್ಛವಿ ಗರುಡಧ್ವಜನೆನಿಪ ಕೃಷ್ಣನಿದಿರೊಳ್ (ಪಂರಾಮಾ. ೫-೯೯); ಗರುಡೋದ್ಗಾರಮಣಿದ್ಯುತಿ ಪರಿಕರಮಪವಿತ್ರಮೆಂದು . . . ಸರಸಕೃಣ ಪ್ರಸರಮೆಸೆವುದಸದಳಮಂ ಆದಱೊಳ್ (ಶಾಂತೀಶ್ವ. ೬-೮೪); ಪರಮ ಗರುಡೋದ್ಗಾರಮಣಿಯನು ಗರಳ ಸುಡುವುದೆ (ಕುವ್ಯಾದ್ರೋ. ೪-೮).

[ಗರುಡೋದ್ಗಾರ + ಮಣಿ$_3$]

**ಗರುತ** (ನಾ). = ಗರುತ್ತು: ಹಂಸ ಗರುತದೊಳ್ ತೊಡಂಕಿದುದೊ ಶೈವಲಮೆಂಬಿನಮಾಯ್ತು ಲಾಂಛನಂ (ಚಿಕವಿ. ೬-೨೪).

[< ಸಂ. ಗರುತ್]

**ಗರುತ್ತು** (ನಾ). ಗರಿ; ಪುಕ್ಕ; ರೆಕ್ಕೆ: "ತನೂರುಹಂ, ಗರುತ್, ಪತ್ರಂ . . . ಪಕ್ಷ್ಮ—ಈ ಎಱ(೦)ಕೆ" (ಹಲಾಯು. ೪೦-೮೬); "ಲಕ್ಷಿಸೆ ತನೂರುಹಂ ಪಿಂಛಛದಂ ಗರುತ್ . . . ಪಕ್ಷಿಗಳ ಗಱಿಯಕ್ಕು" (ಮಂಗರಾ. ೫೦-೨). [ಸಂ. ಗರುತ್]

**ಗರುತ್ಮ** (ನಾ). ೧. ಗರುಡ: "ಗರುತ್ಮನೆನಲ್ಕೆ ಗರುಡನಕ್ಕುಂ" (ಮಂಗರಾ. ೭–೨೧); ವಿನತೋದರದಿಂ ಗರುತ್ಮನುದಯಾಚಳದಿಂ ದಿನಪನೊಗೆವಂತೆ ಪುಟ್ಟಿದನನಿವಾರ್ಯ ಸುತೇಜನೆನಿಪನಿನಜನ ತನಯಂ (ಪಂಪ ಭಾ. ೧–೧೨೧); ಅಗಸದಿಂ ವಧ್ಯಶಿಲಾನಾಗಂಗೆ ಗರುತ್ಮನೆಐಗುವಂತಾ ಮರದಿಂ ನಾಗಾರಿಕೇತು ಕಾಳಿಯನಾಗಂಗೆಐಗಿದನಮರ್ತ್ಯರೀಕ್ಷಿಸೆ ನಭದೊಳ್ (ಜಗವ. ೩–೮೫). ೨. ಬೆಂಕಿ; ಅಗ್ನಿ: 'ಗರುದ್ಮತ್ಪ್ರತಿಷ್ಠಿತ' ಪರಾ. [ಸಂ. ಗರುತ್ಮತ್]

**ಗರುತ್ಮಂತ** (ನಾ). ೧. ರೆಕ್ಕೆಯುಳ್ಳುದು; ಹಕ್ಕಿ; ಪಕ್ಷಿ. ೨. ಗರುಡ: ರಣಹೇಡಿಗಳಾದವರ ಕಣ್ಣಸಕೆ ಸೀರ್ನೊಣ ಗರುತ್ಮಂತನಂತಿಹುದು (ಮೋಹತ. ೧೨–೪೪); ವಿಶೇಷವಾಗಿ ಪ್ರತಿಭಾಗರುತ್ಮಂತನನ್ನೇರಿ . . . ವಿಹರಿಸಿದ ತ್ರಿವಿಕ್ರಮರು (ನಂಜುಂಡ. ೩೯).

[ಸಂ. ಗರುತ್ಮತ್]

**ಗರುತ್ಮಶರ** (ನಾ). = ಗರುಡಪತತ್ರಿ ೨: ದಶಕಂಧರನೆಚ್ಚ ರೌದ್ರಪನ್ನಗ ಶರಮಂ ಗರುತ್ಮಶರದಿಂ ಬಿಜುತೋಡಿಸಿದಂ ಜನಾರ್ದನಂ (ಪಂರಾಮಾ. ೧೪–೧೫೯). [ಗರುತ್ಮ + ಶರ]

**ಗರುದ್ಮತ್ಪ್ರತಿಷ್ಠಿತ** (ನಾ). ಅಗ್ನಿಯಿಂದ ಪ್ರತಿಷ್ಠೆಯನ್ನು ಪಡೆದವನು; ಅಗ್ನಿಹೋತ್ರಿ; ಯಾಜಕ: ಅನಾದಿ ಸಂಸಿದ್ಧಗ್ಗರುದ್ಮತ್ಪ್ರತಿಷ್ಠಿತರ ಮೋಘವರ್ಷ ಪ್ರತಿಪಾಳಕರ್ದ್ವಿಜಕುಳ ತಿಳಕರ್ (ಸೌಇಇ. XX, ೫೭–೮; 1084). [P 'ಗರುತ್ಮತ್ಪ್ರತಿಷ್ಠಿತ' ಎಂಬುದರ ಅಪಲಿಖಿತ.]

**ಗರುದ್ಮಮಾನಸ್ತಂಭ** (ನಾ). = ಗರುಡಗಂಬ ೧: ಪೆರ್ಗ್ಗಡೆ ಜೋಗಪಯ್ಯಂ ತದೀಯದೇವ ಗೃಹೋದ್ಧರಣಮುಮಂ ವಿಷ್ಣುದೇವ ಗರುದ್ಮಮಾನಸ್ತಂಭ ಪ್ರತಿಷ್ಠೆಯುಮಂ ಮಾಡಿ (ಕಇಅ. ೬೮–೫೪–೨೮; 1056). [P 'ಗರುತ್ಮಮಾನಸ್ತಂಭ' ಎಂಬುದರ ಅಪಲಿಖಿತ.]

**ಗರುದ್ಯೋಧಿ** (ನಾ). "ಲಾವಕ್ಕಿ; ಪುರಲಿಹಕ್ಕಿ; ಭರತಪಕ್ಷಿ" (ರುದ್ರನ). [ಸಂ. ಗರುದ್ಯೋಧಿನ್]

**ಗರುವ**$_1$ (ಗು). ೧. ಶ್ರೇಷ್ಠವಾದ; ಉತ್ತಮವಾದ: ತಿವಿದ ನುರುಬುವ ರಥಪದಾತಿಯ ಕವಿವ ಗರುವ ತುರಂಗಗಳ (ಕುವ್ಯಾದ್ರೋ. ೫–೧); ಏಳು ಗರುವ ಗಾಣಿಯರು (ರೇವಣ. ೩–೩೭); ಆ ಗರುವಮುನಿ ಮಂತ್ರದಿಂದ ಸರಾಗದಲಿ ಶುಭದಿವಸ ವರಸುತ ಯಾಗವನು ಪೂರೈಸಿದನು (ನಳಚ. ೧–೩೦). (ನಾ). ೨. ಶ್ರೇಷ್ಠ; ಗೌರವಕ್ಕೆ ಪಾತ್ರನಾದವನು; ಹಿರಿಯ; ದೊಡ್ಡವನು: ಗರುವರ ಗೊಟ್ಟಿಗಾಜರ . . . ಬಾಜಿಪ ಬೀಜೆಗಾಜರಾಗರಮೆನೆ ಪೆಂಪು ಸೊಂಪನೊಳಕೊಂಡೆಸದಿರ್ಪುವು ಸೂಳೆಗೇರಿಗಳ್ (ಕಬ್ಬಿಕಾ. ೪೨); ಯುಧಿಷ್ಠಿರಂಗೆಯು ಗರುವರಾರುಂಟೆಂದುವಿಗೆ ಗರ್ಜಿಸಿದನಾಭೀಷ್ಮ (ಕುವ್ಯಾಆ. ಒರಿ೩. ೨೦–೧೧೯); ಗರುವರೆ ಬಲ್ಲರು ಗಾಂಪರೆಐಯಐದು ಪರಮರಹಸ್ಯ (ಭರತ. ೩೨–೩೯). ೩. ಬಲಶಾಲಿ; ಶೂರ: ಸೈಂಧವನಳಿವುಪಾಯವ ಮಾಡು ಗರುವರು ನುಡಿದು ಕೆಡಿಸುವರೆ (ಕುವ್ಯಾದ್ರೋ. ೯–೪೫).

[ಪ್ರಾ. ಗರುಅ < ಸಂ. ಗುರುಕ]

**ಗರುವ**$_2$, ಗಬ್ಬ$_2$, ಗರುವು, ಗರ್ಬ, ಗರ್ವು (ನಾ). ಸೊಕ್ಕು; ಅಹಂಕಾರ; ಮದ: ಹಿರಿಯರಮುನಿಸು ಗರುವರ ಗರುವವನು ಹರಿಸಿತ್ತು ನೋಡ (ಸರ್ವಜ್ಞ. ೫೨೭); ಹರಿದಾಸರ ಲಕ್ಷಣ ಇರಬೇಕು ಈಪರಿ ಗರುವ ಕೋಪ ಮದ ಮತ್ಸರಾದಿ ಬಿಡಬೇಕು (ವಿಸಾಸು. ೭೦–೧). **ಗಬ್ಬ**$_2$: "ಹಂಕೆ ಬಿಂಕಂ ಗಬ್ಬ ಪನ್ನೆನಲ್ ಗರ್ವಮಕ್ಕುಂ" (ಕಬ್ಬಿಕೈ. ೫೬); ಬಿರಿದರ ಭಂಗವ ಮುಜಿವ ಉಬ್ಬಿದರ ಗಬ್ಬವ ಕಲಕುವ (ವಚಕಾ. I, ೧೭); ಉಬ್ಬಿದನು ಹರುಷದಲಿ ಕಂಗಳ ಗಬ್ಬ ಮುಜಿದುದು (ಕುವ್ಯಾಭೀ. ೩–೬೭); ಎಲೆಲೆ ಗಬ್ಬದುಬ್ಬರದ ಗರುಡಿಯ ಬೀರ (ರಾಮಾಶ್ವ. ೧೪೪–೬). **ಗರುವು**: ವೀರಭದ್ರನು ಜನಿಸಿ ಧರಿಸಿಹನು ಉಗ್ರರೂಪವ ದ್ರೋಹಿಗಳ ಗರುವಿನ ಗರಳವ ಕೊಯ್ಯಲು (ಸಿದ್ಧವು. ೧–೧೯). **ಗರ್ಬ**: ಹಿರಿದೊಂದು ದೋಹಳಂ ನೆಗಬ್ದುದು ಗರ್ಭದರ್ಭಕನ ದೋರ್ಬಲ ಗರ್ಬಮನಂದು ಪೇಟ್ವವೋಲ್ (ಆದಿಪು. ೮–೪೮); ಕೊರ್ಬಿದ ಶಾಕ್ವರನಂ ಭುಜಗರ್ಬದೆ ಪಿಡಿದಡಸಿ ಸೀಟ್ದು ನಿಜಗರ್ಬದ ಗುರ್ಬುರ್ಬಿರೆ (ಪಂಚತಂ. ೧೩೨–೭). **ಗರ್ವು**: (ಕ). [< ಸಂ. ಗರ್ವ]

**ಗರುವತನ** (ನಾ). ಹಿರಿಮೆ; ದೊಡ್ಡತನ; ಶ್ರೇಷ್ಠತೆ: ಎಲ್ಲಿ ಹೊಕ್ಕಲ್ಲಿ ನಿನ್ನ ವಿಕಾರವ ಮಾಣೆ ಗರುವತನವೆ ದಾಸನ ವಸ್ತ್ರವನುಡುವುದೊಂದು ಗರುವತನವೆ ಸಿರಿಯಾಳನ ಮಗನ ಬೇಡುವುದೊಂದು ಗರುವತನವೆ (ಬಸವ. ೭೩೯); ರಥದ ಗಾಲಿಯ ಗರುವತನ ಗಾಳಾಯ್ತಲೇ ಜೊಪ್ಪರಿಸಿ ತಗ್ಗಿತು ಕೇರು (ಕುವ್ಯಾಕ. ೨೬–೧೨); ಧರಣಿಯೊಳಗತ್ಯಂತ ವಿಷಯಾತುರರಿಗೆ . . . ಗರುವತನ ಹಿಂಗುವುದು (ಜೀವಂಚ. ೪–೨); ಪರ್ವತಕೆ ಹೋದವಗೆ ಗರುವತನವೇಕಯ್ಯ (ಸರ್ವಜ್ಞ. ೪೪೨). [ಗರುವ$_1$ + -ತನ]

**ಗರುವಲಿ** (ನಾ). ವಾಯು; ಗಾಳಿ: ತಾಳೆ ಹೂ ಗರುವಲಿಯ ಬೆನ್ನಟ್ಟಿ ಚುಚ್ಚುವುದು (ಕಾಲೂರ. ೧೧೩–೨೩೪). 'ಗರುವಲಿಪುತ್ರ' ಪರಾ.

[ದೇ. ‖ ತೆಲು. ಕರುವಲಿ]

**ಗರುವಲಿಪುತ್ರ** (ನಾ). ವಾಯುಪುತ್ರ; ಹನುಮಂತ (ಸ್ಯಾಂಡರ್.). [ಗರುವಲಿ + ಪುತ್ರ]

**ಗರುವಾಯ** (ನಾ). ವ್ಯರ್ಥವಾದ ಠೀವಿಯುಳ್ಳವನು: ಪೋ ಗಸಣಿಯ ಗರುವಾಯ ಗೂಳೆಯದ ಜೋಹಮುಂ ಬಿಡು (ರಾಮಾಶ್ವ. ೯೨–೨೩).

[ಗರುವಾಯಿ + -ಅ$_6$]

**ಗರುವಾಯಿ**, ಗರುವಾಹಿ (ನಾ). ೧. ದೊಡ್ಡತನ; ಗೌರವ; ಘನತೆ: ಓಡುವುದು ಗರುವಾಯಿಯೇ ಭಯಬೇಡ (ಕುವ್ಯಾದ್ರೋ. ೧೩–೨೦); ಜೀಯ ಬಿನ್ನಹ ಸಾಧನದ ಗರುವಾಯ[ಿ]ಯೆಂದಲ್ಲದೊಡೆ ಚಂಚಲ ನೋಯದದು (ಗಗತಾ. ೧೩–೧೧) ೨. ಠೀವಿ; ಬೆಡಗು; ಸೊಗಸು: ತರುಣಿಯರು ಕೆಂದಳಿರ ಕಲಶದ ಕರತಳದ ಗರುವಾಯಿಯಲಿ . . . ಇದಿರುಗೊಂಡರು ವಿವಿಧ ವಿಭವದಲಿ (ಕುವ್ಯಾಉ. ೭–೨೦); ಮಾನಿನಿಯರಿಗೆ ಮನ್ಮಥನೆಂಬವೊಲು ಗೋಚರಿಸಿದನು ಗರುವಾಯಿಯಲಿ ಗಜಗತಿಯ ಗಮನದಲಿ (ತೊರರಾ. ೧–೧೫–೩೬); ಮದಮಾತಂಗವೆನಲಿಭಗಮನಗರುವಾಯಿಯಲಿ ಗಮಿಸಿದಳು (ತೊರರಾ. ೩–೪–೭). **ಗರುವಾಹಿ**: ೧. ಗೋವುಗಳ ನೆರವಿಯೊಳು ವರಬೃಂದಾವನದೊಳುಪಹತಿಯ ಮಾಡುವುದಾವ ಗುಣ ಗರುವಾಹಿ (ಕುವ್ಯಾಉ. ೩–೧೨೮); ಪಟುಗತಿಯ ಗರುವಾಹಿಯಲಿ ಸಂಘಟಿಸಿ ಹಯವನುಸುಳಿಸಿದನು (ಕುವ್ಯಾದ್ರೋ. ಪರಿ. ೨೯೧). [< ಗರುವ$_1$ ./ ಹಿಂ. ಗರುಆಈ, ಗರುವಾಯಿ]

**ಗರುವಾಯಿಕಾಱ** (ನಾ). ದೊಡ್ಡತನವುಳ್ಳವನು; ಗೌರವಸ್ಥ; ಸಂಭಾವಿತ: ಬಾಯಿಬಡಿಕರು ನಾವು ನೀ ಗಱುವಾಯಿಕಾಱನು (ಕುವ್ಯಾಕ. ೪–೪). [ಗರುವಾಯಿ + -ಕಾಱ]

**ಗರುವಾಯಿಗೆಡಿಸು** (ಕ್ರಿ). ಗೌರವವನ್ನು ಕುಂದಿಸು; ಘನತೆಯನ್ನು ಕೆಡಿಸು: ತೃಣಕೆ ಕೊಂಬೆನೆ ಫಲುಗುಣನ ಕಱೆಗಿಱೆಯನಾ ಸಾರಥಿಯ ಕೈಮೈ ಗುಣವಲೇ ಗರುವಾಯಿಗೆಡಿಸಿತು ನಮ್ಮ ಮೋಹರವ (ಕುವ್ಯಾಕ. ೫–೮). [ಗರುವಾಯಿಗೆಡು + -ಇಸು$_3$]

**ಗರುವಾಯಿಗೆಡು** (ಕ್ರಿ). ಘನತೆ ಕೆಡು; ಗೌರವ ಕೆಡು: ಮುರಾರಿ ಮುಕುಂದ ಗತಿಶೂನ್ಯರಿಗೆ ನೀನೇ ಗತಿಯೆಲ್ಲೆ ಗರುವಾಯಿಗೆಟ್ಟೆನಲ್ಲೆ (ಕುವ್ಯಾವಿ. ೩–೫); ಗರುವಾಯಿಗೆಟ್ಟನು ಮೇಲೆ ಹನುಮಂತ (ಕುವ್ಯಾಭೀ. ೬–೧೭); ತನುವ ತುಂಬಿತು ಶೋಕ ತಾಪದ ಘನತೆಯಲಿ ಗರುವಾಯಿಗೆಟ್ಟನು ನನೆದು ನಯನ ಜಲಂಗಳಲಿ (ತೊರರಾ. ೨–೨–೮);

ಬಱದೇ ಪೊಡವಿಪತಿ ಗರುವಾಯಿಗೆಡಬೇಡೆಂದಳಂಬುಜಾಕ್ಷಿ (ನಿಭಾಗ. ೯–೧೩–೩೮). [ಗರುವಾಯಿ + ಕೆಡು$_1$]

**ಗರುವಾಯ್ಲ** (ಗು). ಶ್ರೇಷ್ಠವಾದ; ಉತ್ಕೃಷ್ಟವಾದ: ಸಡಿಲಬಿಡೆ ವಾಘೆಯನು ಚಿಮ್ಮಿದುವಡಿಗಡಿಗೆ ಗರುವಾಯ್ಲ ತೇಜಿಗಳು (ಕುವ್ಯಾವಿ. ೬೦೩. ೭–೫೭). [ಗರುವ$_1$ + –ಆಯ್ಲ$_2$(<– ಆಯಿಲ್ಲ$_2$)]

**ಗರುವಾಹಿ** 'ಗರುವಾಯಿ' ನೋ.

**ಗರುವಿ** (ನಾ). ಗರ್ವವುಳ್ಳವನು; ಜಂಬಗಾರ: ಹರನರ್ಚಕರು ಅಲ್ಪ ಪರನಿಂದಕರು ಬಹಳ ಗುರುಭಕ್ತರಲ್ಪ ಗರುವಿಗಳು ಬಹಳ (ಸುಸಾರ. ೧೨–೩). [ಗರುವ$_2$ + –ಇ$_3$]

**ಗರುವಿಕೆ$_1$** (ನಾ). ಹಿರಿಮೆ; ದೊಡ್ಡಸ್ತಿಕೆ; ಘನತೆ: ಮಱದಳ್ ತನ್ನ ಕುಲೋನ್ನತಿಯನಿಷ್ಟಬಂಧುಗಳಱವಂ ಮುನ್ನಮೆ ಮಱದಳ್ ಗರುವಿಕೆಯನ್ನೆಟ್ಟನೆ ಮಱದಳ್ (ಅನಂಪು. ೮–೪೩); ಗರುವಿಕೆಗಿಂಬು ಗಾಡಿಗೆ ತವರ್ಮನೆ (ಕಬ್ಬಿಕಾ. ೩); ತಾನೆ ತನ್ನಂ ಪೊಗಳುವೀ ಗರುವಿಕೆಯ ನಱಯೆವು (ಜೈಮಿಭಾ. ೨೫–೪); ಉನ್ನತಿಕೆ, ಪನ್ನತಿಕೆ, ಮಾನಸಿಕೆ, ಗರುವಿಕೆ (ಶಬ್ದಾನು. ೪೩೧ ಪ್ರಯೋ). [ಗರುವ$_1$ + –ಇಕೆ]

**ಗರುವಿಕೆ$_2$** (ನಾ). ಗರ್ವ; ಅಹಂಕಾರ: "ಗರ್ವಃ, ಗರ್ವಣಂ, ಗರ್ವಣೀಯಂ ಈ ೩ ಗರುವಿಕೆ" (ಕಾಶಕ್ಯ. ೨೮೭). [ಗರುವ$_2$ + – ಇಕೆ]

**ಗರುವಿಕೆಗೆಡು** (ಕ್ರಿ). ಹಿರಿಮೆಕುಂದು; ಘನತೆಯಳಿ: ಮಂಡೋದರಿ ... ಬಸುರ ಹೊಡೆದಳಲುತ್ತ ಗರುವಿಕೆಗೆಟ್ಟು ಹೊರಳಿದಳಕಟ ಬಾಯ್ಬಿಡುತ (ತೊರವೆರಾ. ೩೭–೧). [ಗರುವಿಕೆ$_1$ + ಕೆಡು$_1$]

**ಗರುವಿಕೆದಾಳು** (ಕ್ರಿ). ಹಿರಿಮೆಯನ್ನು ತಾಳು; ಘನತೆಯನ್ನು ಪಡೆ: ಪರಮಬ್ರಹ್ಮಹೃದಯಸರಸಿರುಹೋದರದೊಳಗೊಗೆದಾತನ ಸಿರಿ ಮೊಗದೊಳು ಗರುವಿಕೆವಾಳಿ ನೆರೆದು ಕೈವಲ್ಯಸತಿಗೆ ಸಹಚರಿಯಾಗಿ ... ಭಾರತಿ ಮನ್ಮತಿಗೀವುದು ಮಾಂಗಲ್ಯವನು (ಜಯಕಾ. ೧–೭). [ಗರುವಿಕೆ$_1$ + ತಾಳು$_1$ (< ತಾಳ್$_1$)]

**ಗರುವಿಸು** (ಕ್ರಿ). ಜಂಬಪಡು; ಗರ್ವಿಸು: "ಶೌಂಡತಿ = ಗರುವಿಸಿದಪಂ" (ಕಾಶಕ್ಯ. ೧೫); ಯೋಗಿಹೃದಯಸಂಯೋಗ ವಿಜಯವಿಠಲನೀ ಗರುವಿಸಿದರೆ ರೀಗದೆ ಒಡಲೊಳು (ಮೋಕ್ಷದೀ. ೨೨–೪). [ಗರುವ$_2$ + –ಇಸು$_3$]

**ಗರುವು** 'ಗರುವ$_2$' ನೋ.

**ಗರುವೆ** (ನಾ). ೧. ದೊಡ್ಡವಳು; ಹಿರಿಯಳು; ಪೂಜ್ಯೆ: ಗರುವೆ ಚಾಮುಂಡಿಯ ಗಿರಿಯ ಪಿರಿದೆಲ್ಲಿಗಟ್ಟಗೋಸ್ಕರ ನೆಱ ವೈರವ ಬೆರಸಿದರೀ ಭೂಪರೊಡನೆ (ಕಂನವಿ. ೩–೧೬). ೨. ಸೊಗಸುಗಾತಿ; ಚೆಲುವೆ: ಗಂಗಾಧರನ ಗರುವೆ ಚಂದ್ರಧರನರಸಿಯೆನಿಪ ಗಿರಿರಾಜತನೂಜೆ (ಗಿರಿಕ. ೯–೮೩ ವ); ಘನನಿತಂಬಂಗಳ ಗರುವೆ (ಉದ್ಭಟ. ೫–೫೩ ವ); ಅರಸುಗಳ ನಿಡುನೋಟವಲ್ಲಿಯ ಗರುವೆಯರ ನಸುನೋಟ ತವ್ಮೊಳು ಬೆರಸಿ ಹೊಯ್ದಾಡಿದವು ಖಾಡಾಖಾಡಿಯಂದದಲಿ (ಕುವ್ಯಾಅ. ೧೩–೪೪); ಪೆಱ ಳೊರ್ವಳ್ ಗಾಡಿಯ ಸಿಂಗಾಡಿಯ ಪುರ್ಬಿನ ಗರುವೆ (ರಾಮಾಶ್ವ. ೧೨೩–೧೮). 'ಗುಱುಗೆ' ಪರಾ. [ಗರುವ$_1$+ –ಎ$_2$]

**ಗರೂರಿ** (ನಾ). ಹೆಮ್ಮೆ; ಅಹಂಕಾರ; ದರ್ಪ: ಟೀಪುಸುಲ್ತಾನರು ಗರೂರಿಯಿಂದಾ ಇಂಗ್ರೇಜಿ ಕಂಪನಿ ಸರಕಾರದ ಇಲಾಖೆ ಕೊಡಗಿನಶೀಮೆ ಸರಹದ್ದಿನ ವಳಗೆ ಬಂದು (ರಾಜೇಂದ್ರ. ೧೩೪). [← ಹಿಂ. ಮರಾ. ಗರೂರೀ, ಗರೂರ್; ಅರ. ಗರೂರ್]

**ಗರೆ$_1$** (ನಾ). ಕರೆ; ಗುರುತು: ಎನ್ನ ಪೊಯ್ಕುಲ್ ನವಿರ್ ಷಾ ಕುಂದಿದುದೆ ಪೊಯ್ದ ಬಳಿಯಲ್ಲಿ ಗರೆಯಾದುದೇ (ಸಿದ್ದೇಪು. ೫–೩೦). [< ಕಱ$_2$]

**ಗರೆ$_2$** (ನಾ). ಬಟ್ಟೆ; ವಸ್ತ್ರ (?): ವಸಂತಕಂ ಸಂತಸದೊಳಾದೊಡಾನಿವಳ ನೆನ್ನ ಮನಂಬಂದಂತೆ ಗೆಯ್ವೆನೆಂದೆಱಲ್ದೊಂದು ಗರೆಯನವಳ ಕೆಂದಳ ದೊಳಿಟ್ಟು (ಚಕವಿ. ೬–೧೮೯ ವ). 'ಉಡುಗರೆ' ಪರಾ. [< ಕೊಱ$_7$ (< ಕೂಱ) ?]

**ಗರೆದರೆ** (ನಾ). ಒಂದು ಬಗೆಯ ರೋಗ (?): ಮಡುವಾಗಲದ ಗೆಡ್ಡೆಯಂ ಸಿದ್ಧಿ ದಿನದಲ್ಲಿ ತಂದು ಬೆಲ್ಲಮಂ ಸಮಾನಂಗೊಂಡು ಹಾಲಲ್ಲಿ ಕುಡಿಯೆ ... ಸರ್ವವ್ಯಾಧಿಹರೆ, ಗರೆದರೆ ಕೆಡುವುದು (ವಿವೈವಿ. ೯೫). [?]

**ಗರೆವಱ** (ಕ್ರಿ). ಸಾಲನ್ನು ಕಡಿ, —ಕತ್ತರಿಸು (?): ತಿರಿಪಿದ ತಿಗುರಿಯ ಮೇಗಣ ಗಱಯಂತೆಡವಱಯದಂಕವಣಿ ವಾಹಳಿಯಂ ಗರೆ[ಪಾಠಾಂ. ರಿ]ವಱಯೆ ದಂಡೆ ಚಾರಿಸೆ ಪರಿದುದು ಜವದಿಂ ಮನೋಜವಂ ಜಾತ್ಯಶ್ವಂ (ಮಲ್ಲಿಪು. ೯–೩೮). [< ಗೆಱ + ಪಱ$_1$]

**ಗರೋಜ** (ನಾ). ಒಬ್ಬಾತನ ಹೆಸರು: ಕೊಪಣದಾ ಮೂಱುಪತೀಯುಂ ಗುತ್ತಿಯೊಡೆಯನುಮ್ ಗರೋಜನುಂ ಕರಣಮಾಗೆ (ಕಇಅ. ೭೦–೫೫–೬; ಸು. 8ನೆಯ ಶತ). [?]

**ಗರ್ಕಾಗು**, ಗಕ್ಕಾಗು (ಕ್ರಿ). ಮಗ್ನವಾಗು; ತಲ್ಲೀನವಾಗು: ತನ್ನ ವೇಷ ಅಲಂಕಾರ ಇದರಾಗ ಗರ್ಕಾಗಿದ್ದಳು (ಧನಂಜ. ೪೦); ಜಪಮಾಲೆಯ ಎಣಿಕೆಯಲ್ಲಿ ಗರ್ಕಾಗಿದ್ದ ವೃದ್ಧವಿಧವೆ (ಹೊಸಕ್ಷಿ. ೧೮೩); ತಾಯಿ ಎಲ್ಲಿಯೋ ಕೆಲಸದಲ್ಲಿ ಗರ್ಕಾಗಿದ್ದಾಳೆ (ಅನ್ನ. ೨೦೫). **ಗಕ್ಕಾಗು**: ಆವನು ಕೆಲಸದಲ್ಲಿ ಗಕ್ಕಾದನು (ಕನಕೆ. ೧೩೦). [ಗರ್ಕ$_2$ + ಆಗು$_1$]

**ಗರ್ಕ$_1$** 'ಗರಕು$_2$' ನೋ.

**ಗರ್ಕ$_2$**, ಗರಕ (ಗು). (ಕೆಲಸ ಮೊದಲಾದುವುಗಳಲ್ಲಿ) ಮುಳುಗಿದ; ಮಗ್ನನಾದ; ತಲ್ಲೀನನಾದ: ಮಕ್ಕಳಿದ್ದರೆ ಅವು ... ಆಟದಲ್ಲಿ ಗರ್ಕ ಆಗಿರುವುವು (ಸುತ್ತುಮು. ೪೭). **ಗರಕ**: ನರಕದೆದುರಿಗಿದ್ದು ಮರೆತುಬಿಟ್ಟನು ಯೋಗಿ ಗರಕ ಆಗಿದ ಶಿವನಾಮದಿ ಸಿದ್ಧಯೋಗಿ ವೀರಾಮ ರಾಗಿಯೋಗಿವರ (ಸಿದ್ಧಪು. ೧೬–೫೨). 'ಗಕ್ಕಾಗು' ಪರಾ. [← ಅರ. ಗರಕ್; ಮರಾ. ಗರಕ್, ಗರ್ಕ್]

**ಗರ್ಗ** (ನಾ). ೧. ಒಬ್ಬ ಋಷಿಯ ಹೆಸರು; ಶ್ರೀಕೃಷ್ಣನ ಗುರು. ೨. ಹೋರಿ; ಬಸವ. ೩. ಎರೆಹುಳು. ೪. ಒಂದು ಬಗೆಯ ಸಸ್ಯ. [ಸಂ.]

**ಗರ್ಗತ್ತಿ** (ನಾ). ಒಂದು ಜಾತಿಯ ಔಷಧಿಗಿಡ: ಗರ್ಗತ್ತಿ, ಖರ್ಗಸ (ಮೈಔಗಿ. ೩೦–೭೦೮). [?]

**ಗರ್ಗರ$_1$**, ಗಗ್ಗರ$_1$, ಗಗ್ಘರ, ಗರ್ಘರ (ನಾ). ೧. ಒಂದು ಅನುಕರಣ ಧ್ವನಿ; ಗರಗರ ಎಂಬ ಸದ್ದು: ವನರುಹ ಕಂದದ ಕೊನರ್ಗಳ ಕೊನರ್ತ ತನಿರಸಮನೀಂಟಿ ಗರ್ಗರರವದಿಂ ದನಿಯೊಡೆಯೆ ... ಕಳಹಂಸಂಗಳ್ (ಲೀಲಾವ. ೫–೩೭); ಆಳು ಹೊಕ್ಕುದು ಹೊಯ್ದ ಹೊದಱನ ಬಾಳು ಗಿಡಗಳ ಖಣಿಖಟಿಲ ಘಲ್ಲಣೆಯ ಗರ್ಗರದ ಮೇಲು ಬ್ಬೇಳ್ವ ಬೊಬ್ಬೆಯ (ಕುವ್ಯಾಕ. ೧೯–೧೫); ಪಟುಗತಿಯೊಳೆಸಗಿದುದು ಗರ್ಗರಸ್ವರ ಕಲಿತ ಹೇಷಿತದೊಳು (ಪರಶು. ೧೦–೧). ೨. ಗರಗರ ಎಂದು ಸದ್ದುಮಾಡುವ ಕಾಲಿನ ಒಂದು ಆಭರಣ; ಕಿರುಗೆಜ್ಜೆ ಗಳನ್ನುಳ್ಳ ಆಭರಣ; ಕಾಲಕಡಗ: ಕುಸುರಿಗೆಲಸದ ಗರ್ಗರದ ಬಿಱುಡೆಗಳ ಪೊಂಜರಪಣಿಯಂ ಪಿಡಿದು ಜೋಗುಳಮಂ ಪಾಡುತಿರ್ದಳ್ (ಹಾಲಾಸ್ಯ. ೧–೧೨–೨೧ ವ). **ಗಗ್ಗರ$_1$**: ೨. "ಗಗ್ಗರಂ ಗರ್ಘರಾಹ್ವಂ" (ಕರ್ಣಾನಿ. ೪೭); ಅಂದುಗೆಯಂ ಗಗ್ಗರಮುಮನಿಂದುನಿಭಾನನೆ ತಗುಳ್ಚಿ ಕೆಯ್ಯೊಳ್ ಕೊರಲೊಳ್ ತಂದೆಸೆವ ರತ್ನಹಾರಂ (ಜೀವಸಂ. ೧೧೮–೧); ಸತ್ತಿಗೆ ಗಗ್ಗರಂ ಕರುಳ ಬಕ್ಕಳೆ (ಕಾವ್ಯಸಾ. ೫೩೩);

ಕಾಲಿಗೆ ಗಗ್ಗರಪಿಲ್ಲಿ ಸರಪಳಿ (ಮಲ್ಲಿ. ೪೦). ೩. "ಕೈಯಲ್ಲಿ ಹಿಡಿದು ಅಲುಗಾಡಿಸಲು ಗರಗರ ಸದ್ದು ಆಗುವ ಒಂದು ಸಾಧನ" (ಹಿಂಕೋ. ೧೧೦). **ಗಗ್ಗರ:** ೩. ಎಳೆಮಿಾಸೆ ತಿರುವೂತ ಗಗ್ಗರದ ಈಟಿ ನಡೆಸುತ್ತಾ . . . ಮುನಿಯಪ್ಪ ಎದ್ದಾನೂ (ಹುಟ್ಟಿಹ. ೩೬). **ಗರ್ಘರ:** ೧. ಖೋಯೆಂದು ಹತ್ತಿತು . . . ಸಂದಣಿಸಿ ಗಿರಿಮುರನ ಗರ್ಘ [ಪಾಠಾಂ. ರ್ಜ]ರದಿಂದ ಗಗನ ವಿಲಂಬಿತದ ಬಾಲೇಂದುಧರ ಗಿರಿಧರನ ದುರ್ಗವನೀ ಕಪಿವ್ರಾತ (ತೊರರಾ. ೬-೧೩-೪೨). [< ಸಂ. ಘರ್ಘರಾ]

**ಗರ್ಗರ$_2$** (ನಾ). ೧. ನೀರಿನ ಸುಳಿ; ಮಡುವು. ೨. ಒಂದು ಬಗೆಯ ವಾದ್ಯ. ೩. ಒಂದು ಜಾತಿಯ ಮಿಾನು. ೪. ಕಡೆಗೋಲು. [ಸಂ.]

**ಗರ್ಗರಿ$_1$** (ನಾ). ಕಡೆಗೋಲು; ಮಂತು: "ಮಂಥಣಿ ಗರ್ಗರಿ ಕಡೆಗೋಲ್" (ವಸ್ತುಕೋ. ೫೦-೩೧). [< ಸಂ. ಗರ್ಗರ]

**ಗರ್ಗರಿ$_2$** (ನಾ). ಒಂದು ಬಗೆಯ ಸಸ್ಯ; ಗರುಗ; ಭೃಂಗರಾಜ: ಕೇಶರಾಜ, ಗರ್ಗರಿ (ವೈಸಿಗಿ. ೮-೧೬೦೫). [?]

**ಗರ್ಗರಿ$_3$** 'ಗರ್ಘರಿ$_2$' ನೋ.

**ಗರ್ಗರಿಗಿಡ** (ನಾ). = ಗರ್ಗರಿ$_2$: (ಕ). [ಗರ್ಗರಿ$_2$ + ಗಿಡ (< ಗಿಡು ]

**ಗರ್ಗರಿಗೋಲು, ಗಗ್ಗರಿಗೋಲು** (ನಾ). ಗರ್ಗರ ಎಂದು ಶಬ್ದ ಮಾಡುವ ಕೋಲು; ಗಗ್ಗರ ಹಾಕಿದ ಕೋಲು; ಗೆಜ್ಜೆಕೋಲು: ನಸು ಕುಸಿದ ದೇಹ ಗರ್ಗರಿಗೋಲುವಿಡಿದು ಸಾ[ಪಾಠಾಂ. ಕಂಕರಿಗೋಲನಿಡಿದು ಬಾ]ರಿಸುತ ಕೈನಿಡದೆ ಸಂಬಳಿ ಸಂಬಳೆಂದೆಂದು ಕೊಸರುತಿಹ ಬಾಯ್ವೆರಸಿ ಬೀದಿಬೀದಿಯೊಳು ಸುಳಿದಂ ಸತ್ಯಸಂಪನ್ನನು (ಹಚಕಾ. ೧೧-೩೭). **ಗಗ್ಗರಿಗೋಲು:** "ಗಗ್ಗರಿ ಹಾಕಿದ ಕೋಲು" (ಪ್ರಭಣ್ಣ). [ಗರ್ಗರಿ$_3$ (< ಗರ್ಘರಿ$_2$) + ಕೋಲು$_1$ (< ಕೋಲ್$_1$)]

**ಗರ್ಗರಿಸು** (ಕ್ರಿ). ಗರ್‌ಗರ್ ಎಂದು ಧ್ವನಿಮಾಡು: ಗರ್ಗರಿಪ ಗಿರ್ಗಟಿಗಳ ಪೊಣ್ಮುವ ತಾಳದ (ಗಿರಿಕ. ೧೦-೭೭ ವ).

[ಗರ್ಗರ$_1$ + -ಇಸು$_3$]

**ಗರ್ಘರ** 'ಗರ್ಗರ$_1$' ನೋ.

**ಗರ್ಘರಿ$_1$, ಘರ್ಘರ$_1$** (ನಾ). ಪಾತ್ರೆ; ಕೊಡ: ಮಳಯಜಜಳ ಗರ್ಘರೀ ಸಮಾನಯನ ಸಂಭ್ರಮ ಸುರಪುರಂಧ್ರಿಕಾದ್ವಂದ್ವ ಬಂಧುರಮುಂ (ಚಂದ್ರಪ್ರ. ೧೨-೨ ವ). **ಘುರ್ಘುರ$_1$:** ಮುನ್ನಿನೆಡೆಗೈದಿ ರಕ್ಕಸರ ಲೆಕ್ಕಿಸದೆ ಹೊಕ್ಕುನ್ನತಾಮೃತದ ಘುರ್ಘರಮುದ್ರೆಯಂ ಮುರಿದು (ಸಿದ್ಧರಾ. ೬-೫೦). [< ಸಂ. ಗರ್ಗರೀ]

**ಗರ್ಘರಿ$_2$ ಗಗ್ಗರಿ$_1$, ಗರ್ಗರಿ$_3$** (ನಾ). ೧. ಒಂದು ಅನುಕರಣಶಬ್ದ. ೨. ಗೆಜ್ಜೆ; ಕಿರುಗಂಟೆ: ಖೇಟಕ ಫಲಕ ಕೀಲಿತ ಗರ್ಘರೀರುತಾಹೂತ ಯುವತೀನಿಕರ ಚಿಕುರ ಕಾಂತಿ ಕುವಲಯಿತ ವೀಥೀಭಾಗಸುಂ . . . ಬಂದು (ಚಂದ್ರಪ್ರ. ೮-೮೨ ವ). **ಗಗ್ಗರಿ$_1$:** ೧. 'ಗಗ್ಗರಿಗೋಲು' ಪರಾ. ೨. "ಗಗ್ಗರಿ ಘುರ್ಘುರೀ - ಆಭರಣಭೇದ" (ತದ್ಭಕೋ. ೯): ಗಗ್ಗರಿ ಘುಲಿರೆಂಬ ಗಾಲಿಯ ಬಲುರವ (ಕಂಸವಿ. ೨೫-೧೦೭); ಅಳವಡಿಸಿದ ಗಗ್ಗರಿಗಳ ಗರ್ಘರ ಧ್ವನಿಗಳಂ (ಸೌಗಂಧಿ. ೧೯೨-೮) **ಗರ್ಗರಿ$_3$:** ೧. 'ಗರ್ಗರಿ ಗೋಲು' ಪರಾ. [< ಸಂ. ಘರ್ಘರೀ]

**ಗರ್ಘರಿಕೆ** (ನಾ). ಒಂದು ಬಗೆಯ ವಾದ್ಯ (?): ಗರ್ಘರಿಕಾಸ್ವಾದನದಿಂದದೊರ್ಮೆ ವನವಾರಿಕ್ರೀಡೆಯಿಂದೊರ್ಮೆ . . . ಪೊಬ್ಬಿಗಟಿಸಿವಂ ಶ್ರೀ ಗೋಮಿನೀವಲ್ಲಭಂ (ಚಂದ್ರಪ್ರ. ೪-೨೮). [< ಸಂ. ಘುರ್ಘರಿಕಾ]

**ಗರ್ಚ** 'ಗರ್ಜ$_1$' ನೋ.

**ಗರ್ಜನ** (ನಾ). ಗಟ್ಟಿಯಾದ ಕೂಗು; ಆರ್ಭಟ; ಅಬ್ಬರ; ಮೊರೆತ: ಸಾಹೇಬನು ತರ್ಜನ, ಗರ್ಜನ ಮಾಡಿ (ದೇವಿಚೌ. ೧೪೩).

[ಸಂ.]

**ಗರ್ಜನೆ** (ನಾ). = ಗರ್ಜನ: ಉಳಿಯ ಜಂಪೆಯ ಜವಗತಿಯ ಹೆಕ್ಕಳದ ಗಳಗರ್ಜನೆಯ ಕಟ್ಬಾಗುಳಿಗಳ ನಾಯ್ತುಡುಕಿದವು (ತೊರರಾ. ೩-೩-೧೪); ರದನಿಗಳ ಬೃಂಹಿತದಿ ಕಲಿಸಿಂಗದ ಮಹಾ ಗರ್ಜನೆಗಳಿಂ ಕೊಬ್ಬಿದ ಹುಲಿಯ ನಿಷ್ಠುರರವದಿ (ಸಾಳ್ವಭಾ. ೬-೬); ಸಿಂಹದ ಗರ್ಜನೆಯಷ್ಟು ಭಯಂಕರವಲ್ಲ (ಮುಂಬಯಿ. ೪-೩೬).

[ಸಂ. ಗರ್ಜನ]

**ಗರ್ಜನೆಗುಡು** (ಕ್ರಿ). ಗಟ್ಟಿಯಾಗಿ ಕೂಗು; ಆರ್ಭಟಿಸು: ಮುನಿ ದಿರ್ಧನಿಯುಳ್ಳಲಿ ಗರ್ಜನೆಗುಡೆ ಭಯಮುತ್ತು ಕೊರಲನಮರ್ದಪ್ಪಿರೆ (ರಾಜಶೇ. ೫-೯೬). [ಗರ್ಜನೆ + ಕುಡು$_1$ (< ಕೊಡು$_1$)]

**ಗರ್ಜರಿ** (ನಾ). ಬೆಳ್ಳುಳ್ಳಿ; ಗಜ್ಜರಿ: "ಗರ್ಜರಂ - ಗರ್ಜರಿ" (ಒಷಧಿ. ೪೫).

[< ಸಂ. ಗರ್ಜರ]

**ಗರ್ಜಿ$_1$ ಗರ್ಚ** (ನಾ). ಉಪ್ಪಿನಕಾಯಿಗೆ ಉಪಯೋಗಿಸುವ ಹುಳಿಯಾದ ಕಾಯಿಗಳನ್ನು ಬಿಡುವ ಒಂದು ಜಾತಿಯ ಮರ ಮತ್ತು ಅದರ ಕಾಯಿ: (ಕ). **ಗರ್ಚ:** ಗರ್ಚ, ಹೆಬ್ಬೆಲಸುಗಳು ಕಾಸು ಕೊಡದೆ ಎಷ್ಟು ಬೇಕೋ ಅಷ್ಟುಸಿಕ್ಕುತ್ತವೆ (ಮುಗಿಯ. ೩೩೯). [?]

**ಗರ್ಜಿ$_2$** 'ಗರಜು' ನೋ.

**ಗರ್ಜಿತ** (ಗು). ೧. ಕೂಗಿದ; ಆರ್ಭಟಿಸಿದ; ಭಯಂಕರ ಧ್ವನಿ ಮಾಡಿದ. (ನಾ). ೨. ಮೇಘಗಳ ಗರ್ಜನೆ; ಗುಡುಗು. ೩. ಆರ್ಭಟ; ಆಡಂಬರ: "ಗರ್ಜಿತದೊಳಾಡಂಬರಾಖ್ಯಮದೆಂಬುದು" (ಮಂಗರಾ. ೧೪೪-೨೬); ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂಗೊಳಿಸಿದುದುದ್ಧ ಕೀರಮದಕೋಕಿಲಗರ್ಜಿತತರ್ಜಿತಂಗಳಿಂ (ಶಮದ. ೩೭ ಪ್ರಯೋ.). ೪. ಮದವೇರಿದ ಆನೆ; ಮದ್ದಾನೆ: "ಮದ ಸೋರುತ್ತಿರುವ ಆನೆ" (ಅಮರ. ಟೀಕೆ). [ಸಂ.]

**ಗರ್ಜಿಸು$_1$** (ಕ್ರಿ). ೧. ಗಟ್ಟಿಯಾಗಿ ಕೂಗು; ಗುಡುಗು; ಆರ್ಭಟಿಸು: "ಗರ್ಜಿಸು ಭಯಂಕರಧ್ವನೌ" (ಶಮಧಾ); ಕ್ರೋಧಾಗ್ನಿ ಪೆರ್ಚಿ ಭೈರವರೂಪಧಾರಿಯಾಗಿ ಕಳಕಳಧ್ವನಿಯಿಂದಂ ಗರ್ಜಿಸಿ (ವಡ್ಡಾರಾ. ೫೬-೨೨); ಮೇಘ ಗರ್ಜಿಸಿದುವು ದೇವದುಂದುಭಿಗಳ ಹೊಡೆದಂತೆ (ಮೋಹತ. ೪-೩೨). ೨. ಗದರಿಸು; ಜಂಕಿಸು: ಒಡನಾಡಿತನದಿಂದೆ ಬೆರೆಯಬೇಡತ್ತಹೋಗೆಂದು ದೇವಕಿ ಸತ್ಯಭಾಮೆಯುಂ ಗರ್ಜಿಸಿದಳು (ಜೈಮಿಭಾ. ೬-೪೮). [ಗರ್ಜನ + -ಇಸು$_3$]

**ಗರ್ಜಿಸು$_2$** (ಕ್ರಿ). ಅಳವಡಿಸು; ಜೋಡಿಸು; ಕೀಲಿಸು; ಕಚ್ಚಿಸು: ಹೊನ್ನಗಸೆಯ ಬಾಗಿಲಲಿ ಗರ್ಜಿಸಿದ ರನ್ನಗನ್ನಡಿ ಮಕರ ತೋರಣದಿ (ಮೋಹತ. ೪೨-೨೪). [?]

**ಗರ್ಜು** 'ಗರಜು' ನೋ.

**ಗರ್ತ** (ನಾ). ೧. ಎತ್ತರವಾದ ಪೀಠ; ಸಿಂಹಾಸನ. ೨. ರಥ; ತೇರು. ೩. ಯುದ್ಧರಥದಲ್ಲಿ ರಥಿಕನು ಕುಳಿತುಕೊಳ್ಳುವ ಪೀಠ. ೪. ಪಗಡೆಯಾಡಲು ಬಳಸುವ ಹಾಸು. ೫. ಕುಳಿ; ತಗ್ಗು: "ನಿಮ್ನಮೆನೆ ರಂಧ್ರಮೆನೆ ಗರ್ತಮೆನೆ ಸುಷಿರಮೆನೆ ಗುಳಿಗಕ್ಕುನಾಮಂ" (ಮಂಗರಾ. ೧೧೬-೨). ೬. (ನೀರಿನ) ಸುಳಿ: ಆ ಯುವತಿ ಭಯಚಕಿತೆ ಚಿಂತಾರ್ಣವಗರ್ತನಿಮಗ್ನೆ (ಪಂರಾಮಾ. ೬-೯೦); ಖಳಜನ ಸಲಿಲಾವರ್ತನಜ್ಞಾನಗರ್ತಂ (ರಕ್ಷಾಶ. ೫೧); ತರಳತರ ತರಂಗಾವರ್ತ ಗರ್ತ ನೀಹಾರ ಶ್ರೀಕರದ ನಿಕರಂ (ಹಚಕಾ. ೧-೩೩); ಸ್ರವಿಸುವುದು ಜೀವರಸ ಹೃದಯ ಗರ್ತದ ತಳದಿ (ಮಂಕುಕ. ೪೬೪); ಆ ನಭೋ ನೌಕೆ ಪಕ್ಷ ಸಂಜಾತ ಝಂಝಾಪಾತ ಗರ್ತಕ್ಕೆ ಸಿಲ್ಕಿ ತಿರ್ರನೆ ಘುರ್ಚುತಿರುಗಂ ತಿರುಗುವಂತೆ (ಶ್ರೀರಾಮಾ. ೨೪೯-೫೬೭).

[ಸಂ.]

**ಗರ್ದತೋಯ** (ನಾ). [ಜೈನ] ಲೋಕಾಂತಿಕ ದೇವತೆಗಳಲ್ಲಿ ಒಂದು ಭೇದ: ಬ್ರಹ್ಮ ಕಲ್ಪಾಂತರವಾಸಿಗಳಪ್ಪ ಸಾರಸ್ವತನುಮಾದಿತ್ಯನುಂ ವಹ್ನಿಯುಂ ವರುಣನುಂ ಗರ್ದತೋಯನುಂ . . . ಅರಿಷ್ಟನುಮೆಂಬೆಣ್ಬರುಂ ಲೋಕಾಂತಿಕದೇವರಜಿತದೇವಾಂತಿಕಕ್ಕೆ ಬಂದು (ಅಜಿಪು. ೬-೭೦ ವ); ಗ ರ್ದ ತೋ ೯ ಯ ಸಂಖ್ಯಾನಮೊಂಬೈಸಾಸಿರದೊಂಬತ್ತು (ತತ್ತ್ವಪ್ರ. ೨೨೨). [ಸಂ.]

**ಗರ್ದಭ** (ನಾ). ಕತ್ತೆ; ರಾಸಭ: "ಗರ್ದಭಂ ಚಕ್ರೀವತ್ಖರಂ ರಾಸಭಮೆ ಕತ್ತೆಯಕ್ಕುಂ" (ಮಂಗರಾ. ೫೫-೮); ತೃಣದ ಕಡ್ಡಿಯ ಮುಂದೆ ಹಿಡಿದಾಶೆ ತೋರುತಿರೆ ಕುಣಿವ ಗರ್ದಭ ನೀನು (ಮಂಕುಕ. ೧೬೯). [ಸಂ.]

**ಗರ್ದಭಾಂಡ** (ನಾ). ಒಂದು ಜಾತಿಯ ಮರ; ಬಸರೀಮರ: "ಗರ್ದಭಾಂಡಃ, ಕಂದರಾಲಃ, ಕಪೀತನಃ, ಸುಪಾರ್ಶ್ವಕಃ, ಪ್ಲಕ್ಷಃ – ೫ ಬಸರೀಗಿಡ" (ಸಿದ್ಧಾಂತಿ. ೧೦೭). [ಸಂ.]

**ಗರ್ದಭಿ** (ನಾ). ಹೆಣ್ಣುಕತ್ತೆ: ಆ ನರಿ ಹರಿಯಿರ್ದ ಗುಹಾದ್ವಾರಮಂ ಗರ್ದಭಿಯುರೊಳಗಿರ್ದರ್ ಪುಗೆನಲೊಡಂ ಪುಗುವ ಕಟ್ಟಿಯಂ ಕಂಡು (ಪಂಚತಂ. ೨೮೩-೧೪). [ಸಂ. ಗರ್ದಭಾ]

**ಗರ್ದಾಳೆ** (ನಾ). ಒಂದು ಬಗೆಯ ಔಷಧಿ ಗಿಡ: ಹಲ್ಲೀಕಾಯಿ ಬಳ್ಳಿ, ಗರ್ದಾಳೆ (ಮೈಔಗಿ. ೩೪-೬೫೨). [?]

**ಗರ್ದಿ, ಗರದಿ** (ಗು). ೧. ಭಾರಿಯಾದ; ದೊಡ್ಡ: ನಮ್ಮ ಓಣಿಯ ಹುಡುಗರ ಮೇಲೆ ಗರ್ದಿ ಮಾರಾಮಾರಿ ಮಾಡಿದರೆಂದು ಫಿರ್ಯಾದಿ ಮಾಡಿದರು (ಮನೆಬೆ. ೨೦). (ನಾ). ೨. ಗದ್ದಲ; ಗಲಾಟೆ; ಜನಸಂದಣಿ; ಗುಂಪು: ಒಳಗೆ ಗರ್ದಿ ಬಹಳ ಇದೆ (ಮುಂಗಾಪು. ೯೫); ಒಮ್ಮೆ ಮುಂಬಯಿಗೆ ಹೋಗಿ ಬರಬೇಕಾದರೆ . . . ಗಾಡಿಯಲ್ಲಿ ಗರ್ದಿ (ಹಾಸುಹೊ. ೨೮). **ಗರದಿ:** ೩. ಸಡಗರ; ವೈಭವ: ಗಂಡಹೆಂಡರವರು ಗರದೀಲಿ ಬರುವಾಗ ಕತ್ಲೆಂತ ರಂಡೀ ಬೆನ್ಹತ್ತಿ ಬರತಾಳ (ಮಲ್ಲಿಗೆ. ೧೭). [← ಮರಾ. ಗರ್ದೀ]

**ಗರ್ದಿಸು** 'ಗದರಿಸು' ನೋ.

**ಗರ್ದುಂಡಿ** (ನಾ). ಒಂದು ಜಾತಿಯ ಔಷಧಿ ಗಿಡ: ಸುರಗಿ, ಗರ್ದುಂಡಿ, ಪುನ್ನಾಗ, ಪುನೆ (ಮೈಔಗಿ. ೫೭-೧೧೪೩). [?]

**ಗರ್ದುಗ** 'ಗರ್ದುಗು' ನೋ.

**ಗರ್ದುಗು, ಗಜಗ, ಗಜಗು, ಗಜಿಗ, ಗಜುಗ, ಗಜ್ಜಗ, ಗಜ್ಜಿಗ, ಗಜ್ಜುಗ, ಗದುಗ**$_1$, **ಗದುಗು**$_1$, **ಗರ್ದುಗ, ಗೆಜ್ಜಗ** (ನಾ). ೧. ದುಂಡಾದ ಕಾಯಿಗಳನ್ನು ಬಿಡುವ ಒಂದು ಜಾತಿಯ ಮುಳ್ಳುಪೊದೆ ಮತ್ತು ಅದರ ಕಾಯಿ: ಪರಿಪಕ್ವಮಾದ ಗರ್ದುಗಿನ ತಿರುಳುಂ ಶುಂಠಿಯುಮನರೆದು ನಸ್ಯಂಗೆಯ್ದು (ಲೋಕೋಪ. ೯-೧೦೦); ಬರ್ದಿಲಂ ಸಗ್ಗಕೆ ಪೆಸರ್ಗರ್ದುಗೆಸೆವಮರ್ದುವಳ್ಳಿ . . . ಎಂಬಿವು ಸಹಜ ಶಿಥಿಲವೃತ್ತಿಯ ನಾಳ್ಕುಂ (ಶಮದ. ೪೫); ಸುರದಂಬೆ ಸಿಂಧುವಾರಂ ಮರಿಚಂ ಕಿಱುದೇಗುಗರ್ದುಗಿನೆಲೆಯೆಂಬಿವುಮಂ ಬೆರಸಿ ನೆಲಾವರೆಯಂ ಕೊಂಡರೆ ನಸ್ಯಂಗೆಯತ್ ಸಮಸ್ತವ್ರಣವಿಷಮುಱಿಗುಂ (ಖಮದ. ೭-೩೨); ಸಪ್ತಾದ್ರಿಯಂ ಸಂತತಂ ಪೊಡೆಚೆಂಡಾಡುವವಂಗದೇಂ ಗರ್ದುಗಿನಾಟಂ ಪೆಂಪೆ (ವೀರವಿ. ೧೦-೩೭).

**ಗಜಗ:** ೧. ಗಜಗ ಕೂರಿದ ಹಾಗೆ ತಿರುತಿರುಗಿ ಹಾರಿದವು ಹಳೆನೆನವು (ಸಖೀಗೀ. ೧೪-೧೮೭). ೨. ಕಣ್ಣುಗುಡ್ಡೆಯ ಮೇಲೆ ಗಜುಗದ ಕಾಯಿಯ ಆಕಾರದಲ್ಲಿ ಉಬ್ಬಿ ಬೆಳೆದಿರುವ ದುರ್ಮಾಂಸದ ಗ್ರಂಥಿ: ಕಾಣಿಸದ ಇರಲಿಕ್ಕೆ ನಮ್ಮ ಕಣ್ಣಾಗೇನು ಗಜಗ ಬೆಳೆದಿಲ್ಲ (ಬಾಂಡಾಯ.೧೪). **ಗಜಗು:** ೩. ಗಜುಗದ ಕಾಯಿಗಳಿಂದ ಆಡುವ ಒಂದು ಬಗೆಯ ಆಟ: ಗದೆ ಬಿಲ್ಲು ಗಜಗು ಚಂಡಾಟದಲಿ ಮೆರೆದೇ ಎದುರಾಯ ಹಯ ವೃಷಭ . . . ಮೊದಲಾದ ಖಳರ ಮರ್ದಿಸಿ (ವಿಸ್ಸೋಸು. ೧೭-೨).

**ಗಜಿಗ:** ೨. ಕಣ್ಣು ಹೋಗಿ ಗಜಿಗಾ ಬೆಳದೀತು (ಹಾಸ್ಯಮಂ. ೨೭). **ಗಜುಗ:** ೨. ಜೀವವಿಲ್ಲದ ಹೆಣ್ಣು ಗಜುಗ ಬೆಳೆದಾ ಕಣ್ಣು (ಕನಕ. ೫೦-೧). ೩. ಚೆಂಡು ಬೊಗರಿ ಚಿಣ್ಣಿಕೋಲು ಗಜುಗನಾಡುತಾ (ಪುರಂದ. ೨-೮೪-೩); ಗಜುಗವನಾಡುವ ನಂಬ್ಯಣ್ಣನಂ ಕಂಡು (ಭೈರಸೂ. ೩೩೭). **ಗಜ್ಜಗ:** ೧. ಎರಡು ಗಜ್ಜಗದ ದಪ್ಪ ಮೇಣದ ಉಂಡೆ ಮಾಡಿ (ಹೊಸಕ್ಷಿ. ೭೭). **ಗಜ್ಜಿಗ:** (೩). **ಗಜ್ಜುಗ:** ೩. ರಾಜಬೀದಿಗಳೊಳಗೆ ಕಡಲ ಘೋಷದಿ ಚೆಂಡು ಗಜ್ಜುಗ ಬುಗರಿ ಆಡುತಾರಮ್ಮಯ್ಯ (ಕುಜೇಲೋ. ೧೪-೭); ಪಗಡಿ ಗಜ್ಜುಗ ಮುಂತಾದ ಎಲ್ಲ ಬಗೆಯ ಆಟಗಳನ್ನು ಅವನು ಆಡಬಲ್ಲವನಾಗಿದ್ದ (ಸ್ವ್ಯಕಿಜಿ. ೨೨). **ಗದುಗ**$_1$: ೧. ಹಣ್ಣುವಾಳೆಯ ಕಾಯಸುಟ್ಟು ಸಾರಂ ತೆಗೆದು ಸಣ್ಣ ಗದುಗದ ತೋರವಂ ಮಾಡಿ ಮತ್ತವಂ ಬಣ್ಣಸರದಂತೆ ಸರಗೆಯ್ದು (ಸೂಪಶಾ. ೪-೮೩). **ಗದುಗು**$_1$: ೧. ಗದುಗಿನ ತಿರುಳಂ ಶುಂಠಿಯುಮನುದಕದಲ್ಲರೆದು (ಲೋ ೯ ಕೋ ೯ ಪ. ೯-೧೦೦ ಟೀಕೆ). **ಗೆರ್ದುಗ:** ೧. ಅವರಯಿವರಿವರು ನೂರ್ವರು ಗರ್ದುಗವನತಿ ತವಕದಿನೆಚ್ಚಾಡುತಿಹರು (ನೇ ಮಿ ಸ ೦. ೬-೫೮). **ಗೆಜ್ಜಗ:** ೧. ಗೆಜ್ಜಗವನ್ನು ಒಡೆದಂತೆ ಶಬ್ದವಾಗುತ್ತದೆ (ನಮ್ಮೂರ. ೧೪).

[ದೇ. ‖ ತಮಿ. ಕಟಿಜ್ಜು, ಕಟಿಲ್, ಕಟಿಜ್ಚಿ, ಕೆಚ್ಚಕ್ಕಾಯ್; ಮಲ. ಕಜಚ್ಚಿ, ಕಟಙ್ಙಿ; ತುಳು. ಗಜಿಗೆ; ತೆಲು. ಗಚ್ಚ]

**ಗರ್ದುಗೆ**$_1$, **ಗದ್ದುಗೆ**$_1$ (ನಾ). ಗಡಿಗೆ; ಘಟ: ರಾಮೇಶ್ವರ ದೇವರ್ಗೆ [ಹಾ]ಲ ಸಹಸ್ರ ಗರ್ದುಗೆಯಂ ಕೊಟ್ಟು ರಕ್ಷಣೆಯಾಗಿ (ಕಇ. II, ೨೪-೩೦; 1167). **ಗದ್ದುಗೆ**$_1$: ಪುಲಿಗೆಱೆಗೆ ಬಂದು ಸೋಮದೇವ ಪದನಖ ಮಯೂಖೋಲ್ಲೇಖಲೇಖಾಪಗಾ ಪ್ರವಾಹದಿಂ ಪವಿತ್ರೀಕೃತ ಶರೀರನಾಗಿ ಕ್ಷೀರಧಾರಾಪೂರದಿಂ ಸಹಸ್ರ ಗದ್ದುಗೆಯಂ ಕೊಟ್ಟು (ಎಇ. XVI, ೪೦-೫೮; 1152). 'ಗಡ್ಡುಕೆ' ಪರಾ.

[< ಸಂ. ಗಡ್ಡುಕ, ಗಡ್ಡುಕಾ]

**ಗರ್ದುಗ್ಗೆ, ಗದಿಗೆ, ಗದುಗೆ, ಗದ್ದಿಗೆ, ಗದ್ದುಗ್ಗೆ** (ನಾ). ಕುಳಿತು ಕೊಳ್ಳುವ ಪೀಠ; ಸಿಂಹಾಸನ, ಭದ್ರಾಸನ ಮೊದಲಾದುವು: ಕೆಲಬಲದ ಗರ್ದುಗೆಗಳೊಳು ಮಂಡಲಾಧೀಶರೊಪ್ಪಿರ್ದರಾ ಭೂಪನಿಂ (ಚಬಪು. ೭-೪). **ಗದಿಗೆ:** ೧. ಗುರುವಿರಕ್ತಮೂರ್ತಿಗಳಿಗೆ×ಕ×ಗ ಗದಿಗೆ ಶುಭಮಸ್ತು (ಎಕ. XVI, ಮದ್ದಗಿ. ೧೧೧-೫; ಸು. 1606). ೨.[ವೀಶೈ] ಜಂಗಮರ ಸಮಾಧಿ: ಕೊಟ್ಟೂರು ಬಸವೇಶ್ವರನ ಗದಿಗೆ ದೀಪಾರಾಧನೆ ಬಗ್ಗೆ (ಮೈಆರಿ. ೧೯೨೮, ೮೨-೧೩; 1768). **ಗದುಗೆ:** ೧. ಅನುಬಂಧಿಸಿಹ ನಿಲ್ಲಿಂದ ಮುಂದೆ ನರಸಂಚಾರವಿಲ್ಲ ಸುರರ ಗದುಗೆ ನೋಡುತ್ತಲದಿ ಯಿಡೆನುಯನಲಿಳಿದು (ಜಿನಮು. ೧೩-೨೯). **ಗದ್ದಿಗೆ:** ೧. ಅಡ್ಡಣಿಗೆ ಗದ್ದಿಗೆ ರಾಜ ಚಿನ್ನಮುಮಂ ಕೊಟ್ಟು (ಸೌಇಎ. ೧೯೩೨, ೪೮-೧೫; 960); ಕರಗಮನೆತ್ತು ಶೀತಳಕೆ ಕಾಲ್ದೊಳೆ ಮಾಲಿನಿ ತಿರ್ದು ಬೋನಮಂ ತರಳಿಕೆ ಪಾಸು ಗದ್ದಿಗೆಯನುತ್ಪಳಿನೀ (ಅನಂಪು. ೪-೮೫); ಮುತ್ತಿನ ಗದ್ದಿಗೆ ಹಾಸಿರೆ (ಪುರಂದ. ೧-೧೦೭-೬). **ಗದ್ದುಗ್ಗೆ:** ೧. "ಗದ್ದುಗೆ ಪಟ್ಟವಣೆ ನರೇಂದ್ರಾಸನಂ" (ಚತುನಿ. ೫೦); "ಸಂದ ಸಿಂಹಾಸನಕೆ ಪಟ್ಟವಣೆ ಗದ್ದುಗೆಯು ಮೆಂದು" (ಕಬ್ಬಿಕೈ. ೨೫); ವಾನರಸಂಹತಿ ದೇವಸ್ನಾನಂ ಮಾಡುವಗ್ಗ್ಗೆ ಗದ್ದುಗೆಯ ನೀರಂ ಸನ್ನಾನದೆ ತಂದೀವುವೆನಲ್ಕಾನಱಿಯೆಂ ಪೊಗಳಲವನ ತಪದುಗ್ರತೆಯ (ಎಇ. XVI, ೩-೧೨; 980); ದೇವತಾರಾಧನಂಗೆಯ್ದು ತಪೋಧನರ್ಗಿರದೆ ಗದ್ದುಗೆಗಳಂ ಕಟ್ಟಿ ಧೂಪದೀಪಂಗಳುಮಂ ಕೊಟ್ಟು ಪರಿಯಪ್ಪಿಗೈಪ ಪಟುತರ ಮರ್ಕಟ ಸಮೂಹಂಗಳುಮಂ (ಪಂಚತಂ. ೧೧೮-೧೪); ಕರೆದು ಮನ್ನಣೆವೆತ್ತ ಪನ್ನಿಬ್ಬರು ಮಹಾಮಾತ್ಯರೊಳಗಗ್ರೇಶ್ವರನೆನಲು ಪಿರಿಯ ಗದ್ದುಗೆಯಲ್ಲಿ ಕುಳ್ಳಿರಿಸಿ (ಬಸವು. ೫-೬೫)[?] ಎದ್ದು ಬಿನ್ನೈಸಿದನು ಕಪ್ಪುಲದ ಗದ್ದುಗೆಯ ಪರಮೇಷ್ಠಿ (ತೊರರಾ. ೧-೪-೫೪).

೨. ಈಗ್ರಾಮಗಳಲ್ಲಿರುವ ಗದ್ದುಗೆ, ಮಠ, ಪೂಜಾಸ್ಥಾನಗಳ ಕುರಿತು ಬಣ್ಣಿಸಿದ್ದಾರೆ (ಶಂಘ. ೬೯).

[< ಸಂ. ಗರ್ತ. / ತೆಲು. ಗದ್ದಿಯ, ಗದ್ದೆ. / ಹಿಂ. ಗದ್ದೀ; ಮರಾ. ಗಾದೀ]

**ಗರ್ದುಜು** (ನಾ).(?) : ಗರ್ದುಜು ಮುರ್ದಿದುದೆನೆಯುಂ ಗರ್ದೆಯುಮಾ ಗುರ್ದೆಯುಂ ಸರೇಫ ಪದಂಗಳ್ (ಶಮದ.೩೬). [P ಇದು 'ಗರ್ದುಗು' ಎಂಬುದರ ಅಪಲಿಖಿತವಿರಬಹುದು.]

**ಗರ್ದೆ** 'ಗಟ್ಟಿ' ನೋ.

**ಗರ್ಧನ** (ನಾ). ೧. ಆಸೆ; ಲೋಭ; ಅತಿಯಾದ ಇಚ್ಛೆ. ೨. ದುರಾಸೆಯುಳ್ಳವನು; ಆಸೆಗಾರ; ಲೋಭಿ; ಕೃಪಣ: "ಗೃಧ್ನುಃ, ಗರ್ಧನಃ, ಲುಬ್ಧಃ, ಅಭಿಲಾಷುಕಃ, ತೃಷ್ಣಕ್ – ಐ ಆಶೆಯುಳ್ಳವನ ಪೆಸರುಗಳು" (ಸಿದ್ಧಾಂತಿ. ೨೮೩). [ಸಂ.]

**ಗರ್ಧನೆ** (ನಾ). ದುರಾಸೆ; ಲೋಭ: (೬).

[ಸಂ. ಗರ್ಧನ]

**ಗರ್ನಾಲು** (ನಾ). (ಕರಾ) ೧. ಉತ್ಸವಾದಿಗಳಲ್ಲಿ ಸಿಡಿಸುವ ಸಿಡಿಮದ್ದು ತುಂಬಿರುವ ಗೋಲಿ, — ಉಂಡೆ: ಒಂದು ಬಗೆಯ ಸ್ಫೋಟಕ: ದೀಪಾವಳಿಯು ಬಂತು . . . ಪಟಾಕಿ, ಜೇನುಂಡೆ, ಗರ್ನಾಲುಗಳನ್ನು ಸುಡುವುದು ಮಕ್ಕಳಿಗೆ ತುಂಬ ಸಂತೋಷ (ನಿಷ್ಕಾಮ. ೧೧೪); ನಿನ್ನ ಲಗ್ನಕ್ಕೆ . . . ಬಿರುಸುಬಾಣ ಗರ್ನಾಲು ಹಾರಿಸೋಕೆ ಒಪ್ಪಿಕೊಂಡಿದ್ದೀವಿ (ಮಲಿಮ. ೪೩೦); ಇನ್ನೇನು, ದಿಬ್ಬಣ ಹೊರಟರ ಬೇಕು; ಗರ್ನಾಲು, ಕದಿನಿ ಕೇಳಿಸುತ್ತದೆ (ಸ್ವಪ್ನಹೊ. ೨೯೧). ೨. ಅಗಲವಾದ ಬಾಯುಳ್ಳ ತೋಪು: ಆ ರಾತ್ರಿ ಅಷ್ಟು ಗುಂಡು ಹಾರಿಸಿದರು. ಅಲ್ಲಿ ಗರ್ನಾಲು ಹೊಡೆದರೆ ಇಲ್ಲಿ ಕೇಳಿಸಬೇಕು. ಆದರೆ ನಿಮಗೆ ಯಾವುದೂ ಕೇಳಿಸಲಿಲ್ಲ (ಗೊಂಡಾರ. ೮೩).

[← ತುಳು. ಗರ್ನಾಲ್./ಹಿಂ. ಗರನಾಲ್; ಮರಾ. ಗರನಳಾ, ಗರನಾಲ್, ಗರನಾಳ್]

**ಗರ್ನಾಲುಬಿಡು** (ಕ್ರಿ). ೧. ಗರ್ನಾಲನ್ನು ಸಿಡಿಸು. ೨. (ಅಲಂ) ದೊಡ್ಡ ಸುಳ್ಳನ್ನು ಹೇಳು: ಹಾವಭಾವ ಸಹಿತ ಗುಪ್ತ ಗರ್ನಾಲು ಬಿಟ್ಟು ಯಾರಹತ್ತಿರವೂ ಹೇಳಬಾರದೆಂದು ವಿನಂತಿಸಿದ (ಒಡ್ಡಿಉ. ೧೩೬).

[ಗರ್ನಾಲು + ಬಿಡು$_1$]

**ಗರ್ಬ** 'ಗರುವ$_2$' ನೋ.

**ಗರ್ಬಂಗೆಡಿಸು** (ಕ್ರಿ). ಅಹಂಕಾರವನ್ನು ತಗ್ಗಿಸು; ಹೆಮ್ಮೆಯನ್ನು ತೊಲಗಿಸು; ಹಮ್ಮನ್ನು ಅಡಗಿಸು: ಸೌಂದರನ ಬಲವನೊರ್ಬುಳಿ ಮಾಡಿ ಗರ್ಬಂಗೆಡಿಸಿ ಕಂಗೆಡಿಸಿ (ನಂಬಿರ. ೧೮-೩೬).

[ಗರ್ಬ (< ಗರುವ$_2$) + ಕೆಡಿಸು$_1$]

**ಗರ್ಬಾನೃತ್ಯ** (ನಾ). ಗುಜರಾತಿನಲ್ಲಿ ನವರಾತ್ರಿ ಹಬ್ಬದಂದು ಸ್ತ್ರೀಯರೂ ಪುರುಷರೂ ಸಾಮೂಹಿಕವಾಗಿ ಮಾಡುವ ಒಂದು ಬಗೆಯ ಕುಣಿತ: ಶ್ರೀಕೃಷ್ಣಲೀಲೆಯನ್ನು ತೋರಿಸುವ ಲಾಸ್ಯಜಾತಿಯ 'ಗರ್ಬಾ' ನೃತ್ಯಗಳು . . . ಗುಜರಾತಿಗೆ ತುಂಬಾ ಹೆಸರನ್ನೂ ಕೀರ್ತಿಯನ್ನೂ ತಂದಿವೆ (ಅಭಾನೃ. ೧೧೪).

[← ಗುಜರಾತ್. ಗರಬಾನೃತ್ಯ]

**ಗರ್ಬಿ** (ನಾ). ಅಹಂಕಾರಿ; ಗರ್ವಿಷ್ಠ; ಸೊಕ್ಕಿನವನು: ಜಿನಸಮಯಿ ಮನೆಗೆವರೆ ಕಯ್ಯನೊಲ್ದು ಮುಗಿದಿತ್ತಬನ್ನಿಮಿರಿಯೇಬೆಸನೇನೆನುತಂ ಪದಪಿಲ್ಲದೆ ಸತ್ತನಂದದಿಂದಿರ್ಪ ಗರ್ಬಿ[ಪಾಠಾಂ. ವಿರ್]ಜೈನನೆ ಬಗೆಯಲ್ (ಸಮುಪ. ೪-೫೪); ಸಾಮಂತ ಗರ್ಬಿ ಸರ್ಬ್ಬಸ್ವ ಸೂರೆಕಾಱ (ಎಕ. VI, ಕಡೂರು. ೩೦-೩೦; 1170). [< ಸಂ. ಗರ್ವಿನ್]

**ಗರ್ಬಿಂದರ** (ನಾ). ಒಬ್ಬಾತನ ಹೆಸರು: ಶ್ರೀಮತ್ ಕೊಟ್ಟಿಗದೇವಂ ಪ್ರಿಥುವೀರಾಜ್ಯಂಗೆಯ್ಯೆ ಗರ್ಬಿನ್ದರಂ ಬನವಾಸಿ ಪನ್ನಿರ್ಚ್ಛಾಸಿರದ ಭಾಗವನಾಳೆ (ಎಕ. VIII, ಸೊರಬ. ೫೩೧-೩; 967). [P ಇದು 'ಗೋವಿಂದರಸ' ಎಂಬುದರ ಅಪಲಿಖಿತವಿರಬಹುದು.]

**ಗರ್ಬಿತ** (ನಾ). ಹಮ್ಮುಳ್ಳವನು; ಅಹಂಕಾರಿ; ಗರ್ವಿಷ್ಠ: ಬಿರುದರ ಬಿಂಕಮಂ ಕಿಡಿಸಿ ಗರ್ಬ್ಬಿತರಂ ಮುಱಿದಿಕ್ಕಿ ಮಿಕ್ಕ ಬೀರರ ಭುಜಗರ್ಬ್ಬಮಂ ತವಿಸಿ (ಎಕ. VII(S), ಶಿಕಾರಿ. ೩೩೪-೧೩; 1100).

[< ಸಂ. ಗರ್ವಿತ]

**ಗರ್ಬಿಸು** (ಕ್ರಿ). = ಗರ್ವಿಸು: ಒಲಿದು ನಲಿದು ಪಲತೆಱದಿಂ ನಿಂದುರ್ಬುತೆ ಕೊರ್ಬುತೆ ಪರ್ಬುತೆ ಗರ್ಬಿಸಿತಭಿಸಾರಿಕಾನಿಕಾಯಂ ನಿಶಿಯೊಳ್ (ಗಿಂಕ. ೪-೮೮); ಉಬ್ಬಿ ಪುಟವೆದ್ದು ನೆಱೆ ಕೊರ್ಬಿ ಗರ್ಜಿಸುತೋದಿ (ಬಸರ. ೯-೨೮).

[ಗರ್ಬ (< ಗರುವ$_2$) + -ಇಸು$_3$]

**ಗರ್ಬು** 'ಗಬ್ಬು$_1$' ನೋ.

**ಗರ್ಭ** (ನಾ). ೧. ಭ್ರೂಣವನ್ನೊಳಗೊಳ್ಳುವ ಕೋಶ; ಬಸಿರು: ತನ್ನ ಗರ್ಭಂ ತಡೆದುದರ್ಕೆ ಕಿನಿಸಿ ಕಿಂಕಿರಿವೋಗಿ (ಪಂಪಭಾ. ೧-೧೨೮ ವ); ಆದೇನೆಸೆದು ಸೊಗಯಿಸಿ ತೋಱಿತೋ ಜಗದೀಶನಿರೆ ಗರ್ಭಂ ಬಳೆದು . . . ಚೆಲ್ವುವೆತ್ತು ವೈರಾಮಹಾದೇವಿಯಾ (ಶಾಂತಿಪು. ೯-೨೧೩); ಗಂಡನಿಲ್ಲದ ಶಶಿವದನೆಗೆ ಗರ್ಭವಾದ ತೆಱನೊಳ್ ಕೆಡುಗುಂ (ಛಂದೋಂಬು. ೪-೨೮೬); ಆತಂ ನಿಜ ವಿರೋಧಿಯಪ್ಪ ಕುಂಡಲಮಂಡಿತಂ ಪೆಱತೊಂದು ಪೆಣ್ಣೂಸುವೆರಸು ವಿದೇಹಿಯ ಗರ್ಭದೊಳ್ ಬಳೆವುದಂ ತಿಳಿದು (ಪಂರಾಮಾ. ೪-೧೪ ವ); ಆ ದನುಜಾರಿಯನಾತ್ಮಗರ್ಭದೊಳ್ ಧರಿಯಿಸಿ ನಿಂದಳೀ ಪಿರಿಯಳಿಂ ಪಿರಿಯರ್ ಪೆಱರಿಲ್ಲ ಲೋಕದೊಳ್ (ಜಗವಿ. ೨-೯೬). ೨. ಪಿಂಡ; ಭ್ರೂಣ: ಆಗ ಪಟ್ಟದ ರಾಣಿಯೊಬ್ಬಳು ಗರ್ಭಿಣಿಯಾಗಿದ್ದಳು. ಮಂತ್ರಿಗಳು ಆ ಗರ್ಭಕ್ಕೆ ಪಟ್ಟಕಟ್ಟಿದರು (ಭಾರದ. ೪೫೦). ೩. ಹೊಟ್ಟೆ; ಉದರ; ಕುಕ್ಷಿ: "ಜಠರಃ, ಉದರಃ, ತುಂದಃ, ಕುಕ್ಷಿಃ, ಗರ್ಭಃ – ಈ ೫ ಹೊಟ್ಟೆ" (ಹಲಾಯು. ೮೫-೩೬೧); "ಕುಕ್ಷಿಕುಂಡಂ ಗರ್ಭಮಾ ಜಠರಮುದರವೆನೆ ಹೊಟ್ಟೆ" (ಮಂಗರಾ. ೯೬-೧೩). ೪. ಮಗು; ಕೂಸು: "ಬಾಳಃ, ಪಾಕಃ, ಅರ್ಭಕಃ, ಗರ್ಭಃ, ಪೋತಃ, ಪೃಥುಕಃ, ಶಿಶುಃ, ಶಾಬಃ, ಡಿಂಭಃ – ಈ ೯ ಮಗುವು" (ಹಲಾಯು. ೮೩-೩೪೮). ೫. ಒಳಭಾಗ; ತಿರುಳು; ಮಧ್ಯಭಾಗ: ಇಂತು ವಿಶ್ವರೂಪ ಗರ್ಭಿಣಿಯಪ್ಪದೇವಿ ನೀಂ ಬ್ರಹ್ಮಗರ್ಭಪ್ರಕೃತಿಯಂತೆಯುಂ ಪ್ರಾಗಲ್ಭ್ಯ ಗರ್ಭದೃಷ್ಟಿಯಂತೆಯುಂ ವಿವೇಕ ಗರ್ಭವಿದ್ಯೆಯಂತೆಯುಂ . . . ಮಹತ್ತ್ವಮಂ ಪಡೆದೆ (ಜಗವಿ. ೨-೯೬ವ). ೬. = ಗರ್ಭಸಂಧಿ: ಸವಸಂದ ಮುಖಂ ಪ್ರತಿಮುಖಮುವಮರ್ಶಂ ಗರ್ಭಮಂತೆ ನಿರ್ವಹಣಮೆನಿಪ್ಪುವವೆಯ್ದು ಸಂಧಿಯಕ್ಕುಂ ಸುವಿಹಿತಕವಿಮಹಿತವಿತತ ಕೃತಿಪದ್ಧತಿಯೊಳ್ (ಕಾವ್ಯಾವ. ೯೫೬); ಮೂರನೆಯ ಗರ್ಭಸಂಧಿಯಲ್ಲಿ ಕಾರ್ಯಫಲವು ಕೈಗೂಡುವ ಸೂಚನೆ ತೋರುತ್ತದೆ (ಕೃಟಿಡಿ. ೨೦೮); ರಸಾಭಿವ್ಯಕ್ತಿಗೆ ಮತ್ತೊಂದು ಮುಖ್ಯವಾದ ನಿಯಮವೆಂದರೆ ಮುಖ, ಪ್ರತಿಮುಖ, ಗರ್ಭ, ಅವಮರ್ಶ, ನಿರ್ವಹಣ ಎಂಬ ಪಂಚಸಂಧಿಗಳನ್ನೂ . . . ರಚಿಸುವುದು (ಧ್ವನ್ಯಾಲೋ. ೧೫೦). ೭. ನಲವತ್ತೈದು ಮಂತ್ರಸಾಧನಗಳಲ್ಲಿ ಒಂದು: ಬಳಿಕ ಮಂತ್ರಸಿದ್ಧಿಸೂಚಕವಾದ ಮಾತೃಕಾಚಕ್ರ . . . ಸಮಯ, ಗರ್ಭ, ಪ್ರಸವ . . . ಪಂಚಕೃತ್ಯ ಪಂಜರ ಮಾಲಿಕೆ ಮೂಲಿಕೆ ತಂತ್ರಬಲಿ ಆತ್ಮೈಕ್ಯಗಳೆಂಬ ಪಂಚಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (ವಿವೇಕ. ೮೦).

[ಸಂ.]

**ಗರ್ಭಕ** (ನಾ). ೧. ತುರುಬಿನ ಮಧ್ಯದಲ್ಲಿ ತೊಟ್ಟು ಒಳಗೆ ಅಡಗಿರುವಂತೆ ಧರಿಸುವ ಹೂವು: "ತುಱುಂಬಿದ ಹೂ ಗರ್ಭಕಮೆಂಬುದು" (ಹಲಾಯು. ೯೧–೩೯೮); "ಗರ್ಭಕಂ–ತುರುಬು ಮುಂತಾದ ಕೇಶಪಾಶದ ನಡುವೆ ಈಚೆಗೆ ಕಾಣದ ಹಾಗೆ ಮುಡಿಕೊಂಡಿರುವ ಹುವ್ವಿನಸರ" (ಸಿದ್ಧಾಂತಿ. ೧೮೧). [ಸಂ.]

**ಗರ್ಭಕಟ್ಟು** (ಕ್ರಿ). ಶುಕ್ರಶೋಣಿತಗಳ ಸಂಯೋಗವಾಗಿ ಎರಡು ಸಂಯೋಗಿ ಜೀವಕಣಗಳಿಗೆ ಸಂಪರ್ಕವಾಗು; ಬಸಿರುಂಟುಮಾಡು: ಈ ಜೀವಕಣಗಳು ಸಂಯೋಗಿ ಜೀವಕಣಗಳಂತೆ ಗರ್ಭಕಟ್ಟುವುದಿಲ್ಲ (ಸಸ್ಯಶಾ. ೮೨).

**ಗರ್ಭಕಟ್ಟುವಿಕೆ** = ಬಸಿರಾಗುವಿಕೆ: ಎರಡು ಸಂಯೋಗಿ ಕಣಗಳು ಕೂಡಿದರೆ ಮಾತ್ರ ಸಂತಾನೋತ್ಪತ್ತಿಯಾಗುವುದು. ಈ ಸೇರುವಿಕೆಯನ್ನು ಗರ್ಭಕಟ್ಟುವಿಕೆ ಅಥವಾ ಗರ್ಭ[ರ್ಭಾ]ಧಾನ ಎಂದು ಕರೆಯಬಹುದು (ಸಸ್ಯಶಾ. ೮೩). [ಗರ್ಭ + ಕಟ್ಟು₁]

**ಗರ್ಭಕರಗು** (ಕ್ರಿ). ಬಸಿರಿಳಿ; ಗರ್ಭಪಾತವಾಗು; ಮೈಯಿಳಿ: ಹಸುವಿಗೆ ಗರ್ಭಕರಗಿತು (ರೂಢಿ).
[ಗರ್ಭ + ಕರಗು (< ಕರಂಗು)]

**ಗರ್ಭಕೋಶ** (ನಾ). ಹೊಟ್ಟೆಯೊಳಗೆ ಭ್ರೂಣವಿರುವ ಚೀಲ; "ಹೊಟ್ಟೆಯೊಳಗೆ ಮಗು ಅಥವಾ ಗರ್ಭವಿರುವ ಚೀಲ" (ಅನಂನಾ); ಗರ್ಭಕೋಶದಲ್ಲಿ ಆಗಾಗ ಒಂದು ರೀತಿಯ ನೋವು ಬರುತ್ತದೆ (ಕಾವೇರಿ. ೧೯೦). [ಗರ್ಭ + ಕೋಶ]

**ಗರ್ಭಗಳಿತ** (ನಾ). (ಆಲಂ) ಧೈರ್ಯಗುಂದಿದವನು: ಸೇತುರಾಮನು ಗಾಬರಿಯಾದನು. ಅವಳ ಸಾಮಾನ್ಯ ಮೃತ್ಯುವಾಗಲಿ ಅಸಾಮಾನ್ಯ ಮೃತ್ಯುವಾಗಲಿ ತನ್ನ ಮನೆಯಲ್ಲಿಯೆ ನಡೆಯಬೇಕೆಂಬ ನಿರ್ಧಾರವನ್ನು ಕೇಳಿ ಗರ್ಭಗಳಿತನಂತೆ ನಿಸ್ತೇಜನಾದನು (ಜಯಂತ. ೩೯೧).
[ಗರ್ಭ + ಗಳಿತ ( = ಗಲಿತ)]

**ಗರ್ಭಗುಡಿ** (ನಾ). ದೇವಾಲಯಗಳಲ್ಲಿ ಮೂಲ ವಿಗ್ರಹವನ್ನು ಪ್ರತಿಷ್ಠೆ ಮಾಡಿರುವ ಭಾಗ, —ಒಳಕಟ್ಟಡ, —ಅಂತರ್ಮಂದಿರ: ಅಚಲಪ್ರತಿಮೆಗಳಿಗೆ "ಧ್ರುವಬೇರ" ಎಂದು ಹೆಸರುಂಟು. ಇವುಗಳನ್ನು ಶಿಲೆಯಿಂದ ಮಾಡುವರಲ್ಲದೆ ದೇವಾಲಯದ ಗರ್ಭಗುಡಿಯಲ್ಲಿ ಪ್ರತಿಷ್ಠೆ ಮಾಡುವರು (ಭಾರದ. ೫೧೨); ದೇವಿಯ ಗರ್ಭಗುಡಿಯಲ್ಲಿ ಮೈಲಿಗೆಯಾಗಬಾರದು ತಿಳಿಯಿತೇ (ರಂಗರೋ. ೬೦). [ಗರ್ಭ + ಗುಡಿ₃]

**ಗರ್ಭಗೃಹ** (ನಾ). ೧. ಒಳಗಣ ಕೋಣೆ; ಮಲಗುವ ಮನೆ: "ಅಪವರಕಂ ಗರ್ಭಗೃಹಂ–ಈ ೨ ಓವರಿ" (ಹಲಾಯು. ೪೯–೧೩೭); "ಓವರಿಯದುಪಗೃಹಂ ಗರ್ಭಗೃಹಮುಕ್ಕು" (ಮಂಗರಾ. ೫೮–೮); ಗರ್ಭಗೃಹಮನಭ್ಯುಕ್ಷಿತೋಜ್ವಲನಾಗಿ ಪೊಕ್ಕಾಗಳ್ (ಚಂದ್ರಪು. ೩–೯೭ವ). ೨. = ಗರ್ಭಗುಡಿ: ತಲ್ಲಣಿಸುತಂ . . . ಗರ್ಭಗೃಹಮಂ ಮೆಲ್ಲಮೆಲ್ಲನೆ ಹೊಱವಡುತ (ಬಸಪು. ೨೬–೨೭); ಶಾಂತಲೆ ಆಗ ದೇವಿಯ ಗರ್ಭಗೃಹದಲ್ಲಿ ಪದ್ಮಾಸನದಲ್ಲಿ ಕುಳಿತು ಧ್ಯಾನಾಸಕ್ತಳಾಗಿದ್ದಳು (ಶಾಂತಲಾ. ೧೩).
[ಗರ್ಭ + ಗೃಹ]

**ಗರ್ಭಚಿಹ್ನ** (ನಾ). = ಗರ್ಭಚಿಹ್ನೆ: ಅಂತು ಗರ್ಭಚಿಹ್ನಂಗಳ್ ತೋಱೆ (ಆದಿಪು. ೮–೩೨ವ); ಶಶಿಮುಖಿಗೆ ಗರ್ಭಚಿಹ್ನಂ ತೋಱಿದುದು (ನಂಬಿರ. ೧–೯೮). [ಗರ್ಭ + ಚಿಹ್ನ]

**ಗರ್ಭಚಿಹ್ನೆ** (ನಾ). ಗರ್ಭಧಾರಣೆಯಿಂದ ತೋರುವ ಶಾರೀರಿಕ ಬದಲಾವಣೆ, —ಲಕ್ಷಣ; ಬಸಿರಿನ ಲಕ್ಷಣ: ಗರ್ಭಚಿಹ್ನೆಯುಳ್ಳ ಈಕೆಯನ್ನು ನನ್ನ ಪತ್ನಿಯೆಂದು ಹೇಗೆತಾನೆ ಪರಿಗ್ರಹಿಸಲಿ (ಶಾಕುಂತ. ೬೭). [ಗರ್ಭ + ಚಿಹ್ನೆ]

**ಗರ್ಭಚೀಲ** (ನಾ). ಗರ್ಭಕೋಶ; "ಗರ್ಭಕೋಶದಲ್ಲಿನ ಹೊರಭಾಗದ ಚೀಲ" (ಅನಂನಾ). [ಗರ್ಭ + ಚೀಲ]

**ಗರ್ಭಚ್ಛೇದ** (ನಾ). ೧. ಬಸಿರಿನಲ್ಲಿ ಬೆಳೆಯುತ್ತಿರುವ ಭ್ರೂಣವನ್ನು ಕತ್ತರಿಸುವುದು; ಮೈಯಿಳಿಸುವುದು; ಗರ್ಭಸ್ರಾವ ಮಾಡಿಸುವುದು: ಈಗಿನ ನಮ್ಮ ಕಾನೂನಿನಂತೆ ಗರ್ಭಚ್ಛೇದವು ಅಪರಾಧವಲ್ಲ (ರೂಢಿ). ೨. "ಗರ್ಭವು ಕತ್ತರಿಸಿಹೋಗುವಿಕೆ, ಮೈ ಇಳಿಯುವುದು" (ಅನಂನಾ). [ಗರ್ಭ + ಛೇದ]

**ಗರ್ಭಜ** (ನಾ). ಮಗ; ಪುತ್ರ: ಗರ್ಭಜನುಂ ಸರ್ವ ವಿಶುದ್ಧನುಂ . . . ಅಪ್ಪ ಭವ್ಯಂಗೆ ತತ್ಪ್ರಥಮೋಪಶಮ ಸಮ್ಯಕ್ತ್ವಮಕ್ಕುಂ (ತತ್ತ್ವಪ್ರ. ೮೧); ತನ್ನ ಗರ್ಭಜನೊಡನೆಯುಣುವದಕಿನ್ನು ಮನಸ್ಸೈಸದು (ಬಿಜ್ಜಪು. ೭೧–೩೭). [ಸಂ.]

**ಗರ್ಭದೀಕ್ಷೆ** (ನಾ). ೧. ಹೆಂಡತಿಯು ಗರ್ಭಿಣಿಯಾಗಿರುವಾಗ ಗಂಡನು ತಾಳುವ ದೀಕ್ಷೆ. ☞ ಕ್ಷೌರ ಮಾಡಿಸಿಕೊಳ್ಳದಿರುವುದೇ ಮೊದಲಾದುವು: ಆಚಾರ್ಯರು ಗರ್ಭದೀಕ್ಷೆ ತಾಳಿದ್ದಾರೆ, ಪೂರ್ವ ಪಂಕ್ತಿಗೆ ಕುಳಿತುಕೊಳ್ಳುವುದಿಲ್ಲ (ರೂಢಿ). ೨. [ವೀಶೈ] ಮಗು ಗರ್ಭದಲ್ಲಿರುವಾಗಲೇ ಕೊಡುವ ಶಿವದೀಕ್ಷೆ. 'ಗರ್ಭಲಿಂಗ' ಪರಾ.
[ಗರ್ಭ + ದೀಕ್ಷೆ]

**ಗರ್ಭದೋಹಳ** (ನಾ). ಬಸಿರಿಯ ಬಯಕೆ; ಗರ್ಭಿಣಿಗೆ ಉಂಟಾಗುವ ಬಯಕೆ: ಅಂತು ಗರ್ಭದೋಹಳಂ ನೆಗೞೆ (ಆದಿಪು. ೮–೪೮ವ); ಅಂತಾವಿರ್ಭೂತ ಗರ್ಭನಿರ್ಭರವಿಕಾಸೆಯುಂ ಸಫಳೀಕೃತ ಗರ್ಭದೋಹಳಪ್ರಕಾರೆಯುಮಾಗುತ್ತುಂ (ಪುಷ್ಪಪು. ೧೦–೧ವ).
[ಗರ್ಭ + ದೋಹಳ ( = ದೋಹಲ)]

**ಗರ್ಭದ್ವಾರ** (ನಾ). ಗರ್ಭಗುಡಿಯ ಬಾಗಿಲು; ಒಳಮನೆಯ ಬಾಗಿಲು; ಒಳಬಾಗಿಲು: ಎಲ್ಲ ಗರ್ಭದ್ವಾರವನು ಮುಚ್ಚಲ್ಲಿ ಇಟ್ಟಿಹ ಲಿಂಗವಾತೆರದೆಲ್ಲ ದೇವಾಲಯವು ಇಹವು (ಬಿಜ್ಜಪು. ೧೦೧–೪೮).
[ಗರ್ಭ + ದ್ವಾರ]

**ಗರ್ಭಧಾರಣ** (ನಾ). ಗರ್ಭವನ್ನು ಧರಿಸುವುದು; ಬಸಿರಾಗುವುದು: ಬೆದೆಯಕಾಲ . . . ಈ ವೇಳೆಯಲ್ಲಾದ ಹೆಣ್ಣುಗಂಡಿನ ಮಿಲನವು ಗರ್ಭಧಾರಣದಲ್ಲಿ ಪರಿಣಮಿಸುವದು (ಗೋಗ್ರಾಸ. ೨೩). [ಸಂ.]

**ಗರ್ಭನಾಶನ** (ನಾ). ಗರ್ಭನಾಶವಾಗುವುದು: ಗರ್ಭನಾಶನಕ್ಕೆ: ಸಣಬಿನ ಬೀಜವಂ ನೀರಲ್ಲಿ ಅರೆದು ಕುಡಿಯಲು ನಾಶ (ವಿವೈವಿ. ೧೦೯).
[ಗರ್ಭ + ನಾಶನ]

**ಗರ್ಭನಿರೋಧ** (ನಾ). (ಕೃತ್ರಿಮೋಪಾಯಗಳಿಂದ) ಬಸಿರಾಗದಂತೆ ತಡೆಯುವುದು: "ಗರ್ಭನಿರೋಧಕಗಳನ್ನು ಉಪಯೋಗಿಸುವುದು; ಬಸಿರಾಗದಂತೆ ತಡೆಯುವುದು; ಗರ್ಭನಿರೋಧ" (Contraception. ಇಂಕನಿ). [ಗರ್ಭ + ನಿರೋಧ]

**ಗರ್ಭನಿರೋಧಕ** (ಗು). ೧. ಗರ್ಭವಾಗದಂತೆ ತಡೆಯುವ; ಬಸಿರಾಗದಂತೆ ಮಾಡುವ: ಮಿತಸಂತಾನ ಯೋಜನೆಯಲ್ಲಿ ಅಪಾಯಕರವಲ್ಲದ ಕೆಲವು ಗರ್ಭನಿರೋಧಕ ಮಾರ್ಗಗಳಿವೆ (ರೂಢಿ). (ನಾ). ೨. ಗರ್ಭವನ್ನು ತಡೆಯುವ ಸಾಧನ, —ಕೃತ್ರಿಮೋಪಕರಣ; ಬಸಿರಾಗದಂತೆ ಮಾಡುವ ಔಷಧಿ: "ಗರ್ಭನಿರೋಧಕ; ಬಸಿರು ತಡೆ" (Contraceptive. ಇಂಕನಿ); ಪ್ರಜಾಸಂಖ್ಯೆಯು ಅಧಿಕವಾಗಿರುವ ನಮ್ಮ ರಾಷ್ಟ್ರದಲ್ಲಿ ಈಗ ಗರ್ಭನಿರೋಧಕಗಳು ಅತ್ಯಾವಶ್ಯಕವಾಗಿವೆ (ರೂಢಿ). [ಗರ್ಭ + ನಿರೋಧಕ]

**ಗರ್ಭನಿಲ್ಲು** (ಕ್ರಿ). = ಗರ್ಭಕಟ್ಟು: ಸೂತಕ ನಿಂತು ಗರ್ಭನಿಲ್ಲುವುದು (ವಿವೈವಿ. ೧೦೦). [ಗರ್ಭ + ನಿಲ್ಲು₁ (< ನಿಲ್₁)]

**ಗರ್ಭನಿವಾಸ** (ನಾ). = ಗರ್ಭಗೃಹ೧. [ಗರ್ಭ + ನಿವಾಸ]

**ಗರ್ಭಪತನ** (ನಾ). ಗರ್ಭವು ಬೀಳುವುದು, —ನಷ್ಟವಾಗುವುದು ; ಬಸಿರಿಳಿಯುವುದು ; ಮೈಯಿಳಿಯುವುದು : ಜಲಜಾತಕಂದ . . . ಮಲಯರುಹಂ ಎಂಬಿವಂ ತಂಡುಲಜಲದಿಂ ಕುಡಿಯೆ ಗರ್ಭಪತನಂ ಮಾಣ್ಗುಂ (ವಿವೈವಿ. ೧೬೬) ; ಗಾಬರಿಯಾಗಬೇಡಿ, ಗರ್ಭಪತನವಾಗುವ ಸೂಚನೆಗಳಿವೆ. (ವಂಶವೃ. ೨೯೦). [ಗರ್ಭ + ಪತನ]

**ಗರ್ಭಪದಿ** (ನಾ). "ಹೊಟ್ಟೆಯಲ್ಲಿಯೇ ಕಾಲುಗಳನ್ನುಳ್ಳ, ಒಂದೇ ಕವಚದ ಮೃದುಶರೀರದ ಪ್ರಾಣಿ, (Gasteropads) ಬಸವನ ಹುಳದ ಜಾತಿ" (ಕಸಾತ್ರ್ಕೋ. ೨೮೯). [ಸಂ. ಗರ್ಭಪದೀ]

**ಗರ್ಭಪರಿಶೋಧನೆ** (ನಾ).= ಗರ್ಭಶೋಧನೆ : ಮಾಳಿನಿ . . . ಕಾಂಚನ ದೇವತೆಯೆಂಬೊರಂ ಜಿನೇಂದ್ರಾಂಬಸತ್ಯೆಕಗರ್ಭಪರಿಶೋಧನೆಗಟ್ಟಿದನಿಂದ್ರ ನಚ್ಚಿ್ತಯಿಂ (ಶಾಂತಿಪು. ೯–೧೬೬). [ಗರ್ಭ + ಪರಿಶೋಧನೆ]

**ಗರ್ಭಪಾತ** (ನಾ).= ಗರ್ಭಪತನ : ಗರ್ಭಿಣಿಯರು ಟೆನಿಸ್ ಆಡುವುದು, ಹೆಚ್ಚುಭಾರ ಎತ್ತಿಳಿಸುವುದನ್ನು ಮಾಡಬಾರದು. ಹೀಗೆ ಮಾಡಿದರೆ ದಣಿವು ಹೆಚ್ಚಾಗುವುದಲ್ಲದೆ, ಗರ್ಭಪಾತವಾಗುವುದೂ ಉಂಟು (ಗೃಹವ. ೯೯). [ಗರ್ಭ + ಪಾತ]

**ಗರ್ಭಪಿಂಡ** (ನಾ). ಗರ್ಭಾಶಯದಲ್ಲಿರುವ, ಶುಕ್ರಶೋಣಿತಗಳ ಜೀವಾಣುಗಳಿಂದ ಬೆಳೆದ ಮಾಂಸದ ಮುದ್ದೆ ; ಭ್ರೂಣ : ಅವರದು ಬರೀ ಗತಾನುಗತಿಕದ ಗೊರಟು. ನಮ್ಮದು ಇನ್ನೂ ರೂಪಕ್ಕೇ ಬಾರದ ಗರ್ಭಪಿಂಡ (ಕಾಳರಾ. ೧೧೮). [ಗರ್ಭ + ಪಿಂಡ]

**ಗರ್ಭಪಿಂಡಾಸನ** (ನಾ). [ಯೋಗ] ದೈಹಿಕ ವ್ಯಾಯಾಮದ ಎಪ್ಪತ್ತೊಂಬತ್ತು ಆಸನಗಳಲ್ಲಿ ಒಂದು ; ಗರ್ಭಾಶಯದಲ್ಲಿ ಭ್ರೂಣವು ಮಲಗಿರುವಂತೆ ದೇಹವನ್ನು ಮುದ್ದೆಯಾಗಿ ಅಳವಡಿಸಿ ಕೊಳ್ಳುವ ಒಂದು ಬಗೆಯ ಆಸನ : ಮುಖ್ಯವಾದ ಕೆಲವು ಆಸನಗಳು . . . ೧. ಉತ್ತಾನಾಸನ . . . ೪೦. ಪಿಂಡಾಸನ. ೪೧. ಗರ್ಭ ಪಿಂಡಾಸನ (ಭಾರದ. ೧೬೬). [ಗರ್ಭಪಿಂಡ + ಆಸನ]

**ಗರ್ಭಭರ** (ನಾ). ಗರ್ಭದ ಭಾರ, —ಹೊರೆ : ಲತಾಂಗಿ ಗರ್ಭಭರದಿಂ ಸುಬಾವಳ್ (ಪುಷ್ಪಪು. ೪–೧೯). [ಗರ್ಭ + ಭರ]

**ಗರ್ಭಭರಾಲಸೆ** (ನಾ). ಬಸಿರಿನ ಹೊರೆಯಿಂದ ಆಲಸ್ಯವನ್ನು ಹೊಂದಿರುವವಳು,—ಲವಲವಿಕೆ ಇಲ್ಲದವಳು : ನುಡಿವಳು ಯತ್ನದೆ ನಡೆವಳು ಯತ್ನದೆ ಗರ್ಭಭರಾಲಸೆ (ಇಂಚಾಪ. ೧೬೮–೨೮). [ಸಂ. ಗರ್ಭಭರಾಲಸಾ (ಗರ್ಭಭರ + ಅಲಸಾ)]

**ಗರ್ಭಭಾರ** (ನಾ). = ಗರ್ಭಭರ : ಕುಂತಿಯ ಗರ್ಭಭಾರಮುಂ ತಾಪ ಸಾಶ್ರಮದನುರಾಗಮುಮೊಡನೊಡನೆ ಬಳೆಯೆ (ಪಂಪಭಾ. ೧–೧೨೦ವ). [ಗರ್ಭ + ಭಾರ]

**ಗರ್ಭಮೋಚನ** (ನಾ). ಹೆರಿಗೆ ; ಹಡೆಯುವುದು ; ಪ್ರಸೂತಿ : (ಕ). [ಸಂ. (ಗರ್ಭ + ಮೋಚನ)]

**ಗರ್ಭಲಿಂಗ** (ನಾ). [ವೀಶೈ] ಬಸಿರಿನಲ್ಲಿರುವ ಶಿಶುವಿಗೆ ಶಿವದೀಕ್ಷೆ ಯನ್ನು ಕೊಡುವುದಕ್ಕಾಗಿ ಗರ್ಭಿಣಿಗೆ ಕಟ್ಟುವ ಇಷ್ಟಲಿಂಗ : ಗುರುವಿನ ಹಸ್ತದಿಂದ ಕುಕ್ಷಿಗೆ ವಿಭೂತಿಯಂ ಧರಿಸಿ ತೀರ್ಥಲಿಂಗವ ಮಾಡಿ ಆಕೆಯ ತೋಳಿಗೆ ಗರ್ಭಲಿಂಗವೆಂದು ಕಟ್ಟಿರಲು (ಭೈರಸೂ. ೧೯೬). [ಗರ್ಭ + ಲಿಂಗ]

**ಗರ್ಭವತಿ** (ನಾ). ಬಸಿರಾದ ಹೆಂಗಸು ; ಗರ್ಭಿಣಿ : ತಾವು ಗರ್ಭವತಿಯ ರೆಂದು ತಿಳಿದ ಕೂಡಲೇ ಸ್ತ್ರೀಯರು ತಮ್ಮ ಆರೋಗ್ಯಪಾಲನೆಯ ವಿಚಾರವಾಗಿ ತುಂಬಾ ಗಮನ ಕೊಡಬೇಕು (ಗೃಹವ. ೯೬). [ಸಂ. ಗರ್ಭವತೀ]

**ಗರ್ಭವಾಸ** (ನಾ). ೧. ಬಸಿರಿನಲ್ಲಿ ಇರುವುದು, —ವಾಸಿಸುವುದು. ೨. ಭ್ರೂಣದ ನೆಲೆ ; ಗರ್ಭಾಶಯ : (ಕ). ೩ = ಗರ್ಭಗುಡಿ : ಬಸವನಾ ಗುರುಗರ್ಭವಾಸವನೊಸೆದು ಪೊಕ್ಕಿರೆ (ಬಸವು. ೬೧–೬೩). [ಗರ್ಭ + ವಾಸ$_2$]

**ಗರ್ಭವಿಕ್ಕು** (ಕ್ರಿ). ೧. ಬಸಿರಿಳಿ ; ಗರ್ಭಸ್ರಾವವನ್ನು ಹೊಂದು. ೨.(ಆಲಂ) ಪೂರ್ತಿಯಾಗಿ ಅಳಿದುಹೋಗು ; ನಾಶವಾಗು : ರಥಕೆ ಮರೆಳಿದನಾತನೀತನ ವ್ಯಥೆಯನೇನೆಂಬೆನು ಸುಯೋಧನ ರಥಿಗಳುಬ್ಬಟೆ ಗರ್ಭವಿಕ್ಕಿತು ನಿಮಿಷಮಾತ್ರದಲಿ (ಕುವ್ಯಾಕ. ೧೨–೬೨). [ಗರ್ಭ + ಇಕ್ಕು]

**ಗರ್ಭವಿಜ್ಞಾನ** (ನಾ). ಗರ್ಭದ ವಿಷಯಕ್ಕೆ ಸಂಬಂಧಿಸಿದ ವಿಜ್ಞಾನ, —ಶಾಸ್ತ್ರ : "ಗರ್ಭವಿಜ್ಞಾನ, ಗರ್ಭಶಾಸ್ತ್ರ" (Embryology. ಪಾರಿನಿ. ೩೩). [ಗರ್ಭ + ವಿಜ್ಞಾನ]

**ಗರ್ಭವಿಭ್ರಮ** (ನಾ). ಗರ್ಭಧಾರಣೆಯಿಂದ ಸ್ತ್ರೀಯಲ್ಲಿ ಉಂಟಾ ಗುವ ಸೊಗಸು, —ಬೆಡಗು : ಮನಕ್ಕೆಸೆದುದು . . . ನಾಡೆ ಭಾವಿಸೆ ಮದವನ್ಮರಾಳಮೃದುಯಾನೆಯ ನಿರ್ಭರಗರ್ಭವಿಭ್ರಮಂ (ಚಂದ್ರಪು. ೩–೮೮). [ಗರ್ಭ + ವಿಭ್ರಮ]

**ಗರ್ಭವೇಷ್ಟನ** (ನಾ). ಹೆರಿಗೆಯಲ್ಲಿ ಹೊರಕ್ಕೆ ದೂಡಲ್ಪಡುವ ರಕ್ತ ನಾಳಗಳು ತುಂಬಿದ ಮಾಸು, —ಚೀಲ : ಈ ರೋಗಾಣುಗಳು ಗರ್ಭವೇಷ್ಟನದ ಮೂಲಕ ತಾಯಿಯಿಂದ ಪಿಂಡಕ್ಕೆ ಬರುತ್ತವೆ (ಕೆಲರೋ. ೬೧). [ಗರ್ಭ + ವೇಷ್ಟನ]

**ಗರ್ಭವ್ಯೂಹ** (ನಾ). ಸೈನ್ಯವ್ಯೂಹಗಳಲ್ಲಿ ಒಂದು ಬಗೆ : ಬಿಲ್ಲಾಳುಗಳ ಮಜೆಯಲಿ ವಾಜಿ ಗಜರಥವ ನಿಲಿಸಿ ಗರ್ಭವ್ಯೂಹವನು ಮಂಡಳಿಸಿದನು (ಕುವ್ಯಾದ್ರೋ. ೯–೨೧). 'ಪದ್ಮವ್ಯೂಹ' ಪರಾ. [ಗರ್ಭ + ವ್ಯೂಹ]

**ಗರ್ಭಶಯನ** (ನಾ). ಗರ್ಭಗತವಾದ ಶಿಶು ಮಲಗಿಕೊಳ್ಳುವ ಜಾಗ ; ಗರ್ಭಾಶಯ : ಮತ್ತಮುತ್ತಮಭೋಗಭೂಮಿಯ ದಂಪತಿಗಳೆ ಶುಕ್ಲಶೋಣಿತಂಗಳೊಂದೊಂದರ್ಕೊಳೊಂದಿ ಗರ್ಭಶಯನದೊಳ್ ಪರ್ವಿ ನಿಲೆ (ಶಾಂತಿಪು. ೬–೧೧೪ವ). [ಗರ್ಭ + ಶಯನ]

**ಗರ್ಭಶಾಸ್ತ್ರ** (ನಾ). = ಗರ್ಭವಿಜ್ಞಾನ : "ಗರ್ಭವಿಜ್ಞಾನ, ಗರ್ಭಶಾಸ್ತ್ರ" (Embryology. ಪಾರಿನಿ. ೩೩). [ಗರ್ಭ + ಶಾಸ್ತ್ರ]

**ಗರ್ಭಶೂಲೆ** (ನಾ). ಹೆರಿಗೆಯ ನೋವು, —ಬೇನೆ : ಶುಂಠಿ, ಕೊತ್ತುಂಬರಿಗಳ ಕಷಾಯವನು . . . ಪಾನವ ಮಾಡಲು ಸಕಲವಾದ ಗರ್ಭಶೂಲೆ ಶಮನವಹುದು (ವೈದ್ಯಸಾ. 1, ೪೫೨) ; ಎಲುವ ಸಂಧಿಯಂ ತಂದು ಕುಡಿಯ ಕೊಡಲು ಗರ್ಭಶೂಲೆ ಮಾಣ್ಗುಂ (ವಿವೈವಿ. ೧೫೧). [ಗರ್ಭ + ಶೂಲೆ]

**ಗರ್ಭಶೋಧನೆ** (ನಾ). [ಜೈನ] ಅವತರಿಸಲಿರುವ ಜಿನನಿಗೆ ಕರ್ಮ ಮಲಗಳ ಲೇಪವು ಆಗದಿರುವುದಕ್ಕೋಸ್ಕರ ಇಂದ್ರನು ಕಳು ಹಿಸಿದ ದೇವವನಿತೆಯರು ಜಿನಮಾತೆಯ ಗರ್ಭವನ್ನು ಶುದ್ಧಿ ಗೊಳಿಸುವ ಕ್ರಿಯೆ : ಮನವೊಲ್ದಿಂದ್ರನಿವಾಸಸಂಭವಶುಚಿದ್ರವ್ಯಂಗಳಿಂ ಗರ್ಭಶೋಧನಮಂ ದೇವಿಯರಿರ್ದು ಮಾಡೆ (ಆದಿಪು. ೬–೨೩) ; ಪತ್ನಿಯುದರೋತ್ಪತ್ತಿಯಂದವ ನೂತ್ನದಿಂ ದಿವಿಜಾಂಬೆರಿಡುವನು ಗರ್ಭ ಶೋಧನೆಗೆ (ಬಿಜ್ಜಪು. ೮–೩೫). [ಗರ್ಭ + ಶೋಧನೆ]

**ಗರ್ಭಶ್ರೀಮಂತ** (ನಾ). ಹುಟ್ಟಿನಿಂದಲೇ ಐಶ್ವರ್ಯವಂತ ; ಆಗರ್ಭಶ್ರೀಮಂತ : (ಕ). [ಗರ್ಭ + ಶ್ರೀಮಂತ$_1$]

**ಗರ್ಭಷಷ್ಠಿ** (ಗು). ಅರುವತ್ತು ದಿನಗಳಲ್ಲಿ ತೆನೆಬರುವ, —ಹೊಡೆ ಹಿಡುವ : ಆ ಪ್ರಸ್ತಾವದೊಳ್ ಫಳಪಾಕವಿರಾಮುಂಗಳಪ್ಪ ಗರ್ಭ ಷಷ್ಠಿವ್ರೀಹಿಯವ ಗೋಧೂಮಾದಿ ಮಹೌಷಧಂಗಳುಂ (ಆದಿಪು. ೮–೬೧ವ). [ಗರ್ಭ + ಷಷ್ಠಿ]

**ಗರ್ಭಸಂಧಿ** (ನಾ). ೧. [ಜೈನ] ಮಾತೆಯ ಗರ್ಭದ ಸಂಬಂಧ; ಉತ್ತಮಜೀವನು ಒಂದು ಭವವನ್ನು ಕಳೆದು ಇನ್ನೊಂದು ಭವವನ್ನು ಕೈಗೊಳ್ಳಲು ಮಾತೆಯ ಗರ್ಭದಲ್ಲಿ ಕಳೆದ ಕಾಲ: ವಿಮೋಹಮಾರ್ಗಾರ್ಗೆ ಭವಾಂತರಾಗವುದೊಳಾಗಳೆ ಪುಟ್ಟವೆ. ಗರ್ಭಸಂಧಿಯೊಳ್ (ಶಾಂತಿಪು. ೬–೧೫). ೨. [ಕಾವ್ಯಮೀ] ನಾಟ್ಯಲಕ್ಷಣದಲ್ಲಿ ಹೇಳಿರುವ ಮುಖ, ಪ್ರತಿಮುಖ, ಗರ್ಭ, ಅವಮರ್ಶ ಮತ್ತು ಉಪಸಂಹೃತಿಗಳೆಂಬ ಪಂಚಸಂಧಿಗಳಲ್ಲಿ ಮೂರನೆಯದು; ಕಾರ್ಯಫಲವು ಕೈಗೂಡುವ ನಾಟಕದ ಭಾಗ: ಮೂರನೆಯ ಗರ್ಭಸಂಧಿಯಲ್ಲಿ ಕಾರ್ಯಫಲವು ಕೈಗೂಡುವ ಸೂಚನೆ ತೋರುತ್ತದೆ (ಕೈಪಿಡಿ. ೨೦೮). 'ಅವಮರ್ಶಸಂಧಿ' ಪರಾ. [ಗರ್ಭ + ಸಂಧಿ]

**ಗರ್ಭಸಂಸ್ಕಾರ** (ನಾ). ೧. ಗರ್ಭದಲ್ಲಿರುವ ಶಿಶುವಿನ ಮೇಲ್ಮೆಗಾಗಿ ಗರ್ಭಿಣಿಗೆ ಮಾಡುವ ಒಂದು ಸಂಸ್ಕಾರ; ಪುಂಸವನ; ಸೀಮಂತ: ವೇದಮತದಿಂ ಗರ್ಭಸಂಸ್ಕಾರಂ ಮೊದಲೆನಿಪ್ಪ ಆದಿಕರ್ಮಂಗಳವು ಹದಿನಾಱಾದವು (ಬಸಪು. ೩–೫೨). ೨. = ಗರ್ಭಾಧಾನ ೨: (ಕಿ). [ಗರ್ಭ + ಸಂಸ್ಕಾರ]

**ಗರ್ಭಸುಖಿ** (ನಾ). ಹುಟ್ಟಿನಿಂದಲೇ ಸುಖವಾಗಿರುವವನು; ಆಗರ್ಭಸುಖಿ: ಅತ್ಯಂತರುಚಿರಮಣಿಕುಟ್ಟಿಮಭೂಮಿಯನಲ್ಲದೆ ನೆಲನಂ ಮೆಟ್ಟಿಯಱಿಯನೇಂ ಗರ್ಭಸುಖಿಯೊ ತತ್ಸುಕುಮಾರಂ (ಸುಕುಮಾ. ೧೦–೧೦೨). [ಗರ್ಭ + ಸುಖಿ]

**ಗರ್ಭಸೂತ್ರ** (ನಾ). [ಭೂಗೋಳ] ಭೂಮಿಯ ಉತ್ತರದಿಂದ ದಕ್ಷಿಣಕ್ಕೆ ಇರುವುದೆಂದು ಭಾವಿಸಲಾದ ರೇಖೆ: ಆದರಿಂದ, ಬೇಕಾದಂಥ ಎರಡುಸ್ಥಳಗಳಲ್ಲಿ ಭೂಮಿಯ ವಕ್ರತ್ವವನ್ನು ಪರೀಕ್ಷಿಸಿದರೆ, ಅದರ ಗರ್ಭಸೂತ್ರವು, ಅಂದರೆ ಬುಡದಿಂದ ತಲೆಯವರೆಗೆ ಕಲ್ಪಿಸಲ್ಪಟ್ಟ ರೇಖೆಯು (ಮುಂಬಯಿ. ೬–೬೦). [ಗರ್ಭ + ಸೂತ್ರ]

**ಗರ್ಭಸ್ಖಲನ** (ನಾ). = ಗರ್ಭಪತನ: ಆ ಗರ್ಭಸ್ಖಲನದ ಸಮಯಮೆ ಋತುಸಮಯಮಾಗೆ ಚತುರ್ಥದಿವಸ ಸಮನಂತರಂ ಮಜ್ಜನಂಬೊಕ್ಕು ಮಂಗಳಾಚಾರಮನಪ್ಪುಕೆಯ್ದು (ಜಗವಿ. ೨–೬೦ ವ). [ಗರ್ಭ + ಸ್ಖಲನ]

**ಗರ್ಭಸ್ತಂಭನ** (ನಾ). ಗರ್ಭಸ್ರಾವವಾಗದಂತೆ ಗರ್ಭವನ್ನು ತಡೆಹಿಡಿಯುವುದು; ಗರ್ಭರಕ್ಷಣೆ: ಮಾವಿನಗೊಟ್ಟೆ, ಯಷ್ಟಿಮಧುಕ . . . ನೈದಿಲಗೆಡ್ಡೆ, ಕಡಲೆಯ ಹಿಟ್ಟನೊಳಗೆ ಕೊಳ್ಳೆ ಗರ್ಭಸ್ತಂಭನ (ವಿವೈವಿ.೮೮). [ಗರ್ಭ + ಸ್ತಂಭನ]

**ಗರ್ಭಸ್ಥ** (ಗು). ೧. ಬಸಿರಿನಲ್ಲಿರುವ; ಗರ್ಭಗತವಾದ. (ನಾ). ೨. ಬಸಿರಿನಲ್ಲಿರುವವನು; ಗರ್ಭಗತನಾದ ವ್ಯಕ್ತಿ: ತತ್ಕಾಂತೆಗೆ ನೆಗೞ್ದುವು ಗರ್ಭಸ್ಥನುತ್ಸಾಹಮುಂ ತೋಳ್ವಲಮುಂ ಸಾಮ್ರಾಜ್ಯಮುಂ ಸೂಚಿಸುವವೊಲತಿಚೋದ್ಯಂಗಳೀ ದೌಹೃದಂಗಳ್ (ಆದಿಪು. ೮–೩೩); ಗರ್ಭಸ್ಥನಪ್ಪ ಶೌರಿಯ ಸಿರ್ಭರಸರಸಪ್ರಕಾಶಮಿ ಜನನಿಯೊಳಾವಿರ್ಭವಿಸಿದುದೆನೆ ತನುಸಂದರ್ಭಿತಗೌರಿಮದಿನೆಸೆದುದಾ ದೇವಕಿಯಾ (ಜಗವಿ. ೨–೮೯). ೩. ಒಳಗಿರುವುದು; ಅಂತರ್ಗತವಾದುದು. [ಸಂ.]

**ಗರ್ಭಸ್ಥಿತ** (ನಾ). ಬಸಿರಿನಿಂದ ಬಂದವನು; (ಸಾಮಾನ್ಯ) ಮನುಷ್ಯ: ಆತೋದ್ಯದುದ್ಯೋಗಮಿಲ್ಲದ ಜೈನಾಲಯಮಿಲ್ಲ ನೋಡದ ಜಿನೊಳಂ ಗರ್ಭಸ್ಥಿತರ್ ಪುಟ್ಟಿಯುಂ (ಶಾಂತಿಪು. ೯–೧೩೩). [ಸಂ.]

**ಗರ್ಭಸ್ರಾವ** (ನಾ). = ಗರ್ಭಪತನ: ಗರ್ಭಸ್ರಾವದ ನೋವಿನಿಂದ ಸೋತು ಮಲಗಿದ್ದ ಕಕ್ಕಿಯನ್ನು ನೋಡಿದಾಗ ಯಶೋದೆಗೆ ತನ್ನ ಯಾವ ಕಷ್ಟವೂ ಕಷ್ಟವಲ್ಲ ಎಂದು ತೋರಿತು (ವಾತ್ಸಲ್ಯ. ೧೮೬). [ಗರ್ಭ + ಸ್ರಾವ]

**ಗರ್ಭಸ್ರಾವಕ** (ಗು). ಗರ್ಭಸ್ರಾವವನ್ನುಂಟುಮಾಡುವ: ಗರ್ಭಸ್ರಾವಕ (ಔಷಧ) (Amblotic. ಇಂಕನಿ). [ಗರ್ಭ + ಸ್ರಾವಕ]

**ಗರ್ಭಾಂಕ** (ನಾ). [ಕಾವ್ಯಮೀ] ಒಂದು ನಾಟಕದೊಳಗೆ ಬರುವ ಉಪಕಥೆಯನ್ನೊಳಗೊಂಡ ಅಂಕ; ನಾಟಕದ ಒಳಗಿನ ನಾಟಕ: ಉತ್ತರರಾಮಚರಿತದ ಏಳನೆಯ ಅಂಕದಲ್ಲಿ ಒಂದು ಗರ್ಭಾಂಕವಿದೆ (ರೂಢಿ). [ಗರ್ಭ + ಅಂಕ೨]

**ಗರ್ಭಾಂಗಣ** (ನಾ). ದೇವಸ್ಥಾನದ ಒಳಗೆ ಗರ್ಭಗುಡಿಯ ಮುಂಭಾಗದ ಪ್ರದೇಶ, —ಒಳಹಜಾರ: ಗರ್ಭಾಂಗಣದಲ್ಲಿನ ತೊಲೆಯ ಮೇಲೆ . . . ದೇವಿಯು ಬುಧಜನರಿಂದ ಸ್ತುತಿಸಿಕೊಳ್ಳುತ್ತಿರುವಳು (ನಿಟ್ಟೂಶಾಂ. ೧೨). [ಗರ್ಭ + ಅಂಗಣ]

**ಗರ್ಭಾಗಾರ** (ನಾ). ೧. ಒಳಮನೆ. ೨. ದೇವಸ್ಥಾನದ ಗರ್ಭಗೃಹ; ಗರ್ಭಗುಡಿ: (ಕಿ). [ಗರ್ಭ + ಅಗಾರ]

**ಗರ್ಭಾಡಳಿತ** (ನಾ). ಒಳಾಡಳಿತ; ಒಳಗಿನ ಕಾರುಬಾರು: ಅರಿತು ಗರ್ಭಾಡಳಿತ ಬಹಿರಂತರಕೆ ಯರವಾದಣುಗನಿರಲ್ (ಬಜ್ಜಪು. ೧೦೦–೪೩). [ಗರ್ಭ + ಆಡಳಿತ]

**ಗರ್ಭಾಣು** (ನಾ). ವೀರ್ಯ; ರೇತಸ್ಸು; ಶುಕ್ಲ: ಪುರುಷನು ತನ್ನ ಶರೀರದಲ್ಲಿ ಬಂದು ಅಡಗಿರುವ ಇಂತಹ ಗರ್ಭಾಣುವನ್ನು ಸ್ತ್ರೀಯ ಶರೀರಕ್ಕೆ ವಹಿಸಿಕೊಡುವಿಕೆಯೇ ಅದರ ಮೊದಲನೆಯ ಜನ್ಮ (ಜೀವಾತ್ಮ. ೧೬೦). [ಗರ್ಭ + ಅಣು]

**ಗರ್ಭಾಧಾನ** (ನಾ). ೧. (ಪುರುಷನು ಸ್ತ್ರೀಯಲ್ಲಿ) ಗರ್ಭವನ್ನು ಇಡುವುದು. ೨. ಷೋಡಶಸಂಸ್ಕಾರಗಳಲ್ಲೊಂದು; ನಿಷೇಕ; ಶೋಭನಪ್ರಸ್ತ: ಗರ್ಭಾಧಾನ . . . ಎಂಬುದು ಅನ್ವರ್ಥವಾದ ಕರ್ಮ. ಋತುಮತಿಯಾದ ಸ್ತ್ರೀಗೆ ಪತಿಯು ಮಾಡುವ ಸಂಸ್ಕಾರವು (ಆರ್ಯಧ. ೧೨೨); ಗರ್ಭಾಧಾನಾದಿ ಸಂಸ್ಕಾರಗಳಿಂದ ಗರ್ಭ ಮತ್ತು ಬೀಜ ಸಂಬಂಧವಾದ ದೋಷಗಳ ನಿವಾರಣವಾಗಿ ಜೀವನು ಪಾಪವಿಮುಕ್ತನಾಗುತ್ತಾನೆ (ಭಾರದ. ೫೪). [ಗರ್ಭ + ಆಧಾನ]

**ಗರ್ಭಾನ್ವಯಕ್ರಿಯೆ** (ನಾ). [ಜೈನ] ತೀರ್ಥಂಕರನು ಭೂಮಿಯಲ್ಲಿ ಅವತರಿಸುವುದರಿಂದ ಹಿಡಿದು ನಿರ್ವಾಣಪರ್ಯಂತವಾಗಿ ಮಾಡುವ ಐವತ್ತುಮೂರು ಕ್ರಿಯೆ, —ಕರ್ಮಾಚರಣೆ: ಅಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫–೧೫ ವ). [ಗರ್ಭ + ಅನ್ವಯ + ಕ್ರಿಯೆ]

**ಗರ್ಭಾವತರಣ** (ನಾ). ೧. ಜೀವನು ತಾಯಿಯ ಗರ್ಭಾಶಯದಲ್ಲಿ ಇಳಿಯುವುದು, —ಅವತರಿಸುವುದು. ೨. [ಜೈನ] ಪಂಚಕಲ್ಯಾಣಗಳಲ್ಲಿ ಒಂದು; ಜಿನಮಾತೆಯ ಗರ್ಭದಲ್ಲಿ ತೀರ್ಥಂಕರನ ಆಗಮನ: ಗರ್ಭಾವತರಣಂ ಆಷಾಢಬಹುಳಬಿದಿಗೆಯುತ್ತರಾಷಾಢಾನಕ್ಷತ್ರದ ಬೆಳಗಪ್ಪ ಜಾವದೊಳ್ ಗರ್ಭಕ್ಕವತರಿಸಲೊಡಂ (ಆದಿಪು. ೬–೩೨ ವ); ಅಂತು ಸಂತತೋಲ್ಲಸಿತ ದೇವಕಾಂತಾಸಂತಾನಸಂಪಾದಿತೋತ್ಸವ ಪರಂಪರೆಗಳಿಂ ಪರಮನ ಚರಮಗರ್ಭಾವತರಣಮನಱಿದು (ಚಂದ್ರಪು. ೧೧–೧೪೯ ವ). [ಗರ್ಭ + ಅವತರಣ]

**ಗರ್ಭಾವತಾರ** (ನಾ). = ಗರ್ಭಾವತರಣ ೨: ಆ ಎಡೆಗೆ ನಡೆತಂದು ನಿರ್ಜರರಾಯ ಪೂಜೆಯ ಗೈದು ಪೋಗುವ ನೀಯತದಿ ಗರ್ಭಾವತಾರ ಜನ್ಮಾಭಿಷೇಕಗಳು (ಬಜ್ಜಪು. ೧೪–೬೧). [ಗರ್ಭ + ಅವತಾರ]

**ಗರ್ಭಾಶಯು** (ನಾ). = ಗರ್ಭಕೋಶ: "ಗರ್ಭಾಶಯು, ಜರಾಯು, ಉಲ್ವ, ಕಲಲ" (ನಾಚಿರಾ. ೬). [ಗರ್ಭ + ಆಶಯು]

**ಗರ್ಭಾಷ್ಟಕ** (ನಾ). = ಗರ್ಭಾಷ್ಟಮ: ಜಗದೊಳಗೆ ಸರ್ವಜ್ಞವೃಷಭನ ಬಗೆಯೊಳೊಗೆದವನಾಗಿ ಸರ್ವಕಳೆಗಳು ಸಹಜವೆನಲ್ಕೆ ಗರ್ಭಾಷ್ಟಕದೊಳಾ ಜನಕ ಮಗನನಿಗುಪನಯನವನೊಡರ್ಚಲ್ ಬಗೆದು(ಬಸವು.೩-೪೩). [P 'ಗರ್ಭಾಷ್ಟಮ' ಎಂಬರ್ಥದಲ್ಲಿ ಉಪಯೋಗಿಸಿರುವ ಪದ] [ಗರ್ಭ +'ಅಷ್ಟಕ]

**ಗರ್ಭಾಷ್ಟಮ** (ನಾ). ಗರ್ಭಧಾರಣೆಯಾದ ಕಾಲದಿಂದ ಹಿಡಿದು ಎಂಟನೆಯ ವರ್ಷ: ಆತನಿಗೆ ಗರ್ಭಾಷ್ಟಮದಲ್ಲಿ ಉಪನಯನವಾಗಿಯೇ ಆತನು ತನ್ನ ೧೬ನೆಯ ವಯಸ್ಸಿನಲ್ಲಿ ಬಾಗೇವಾಡಿಯನ್ನು ಬಿಟ್ಟುಹೋಗಿರಬೇಕು (ಮೂರುಉ. ೮೮); ಆಗಿನ್ನೂ ಗಣಪತಿಗೆ ೧೧ ವರುಷ. ಗರ್ಭಾಷ್ಟಮಕ್ಕೇ ಉಪನಯನ ಮಾಡಿದ್ದರು (ಹೊಸಕ್ಷಿ. ೨೭). [ಗರ್ಭ + ಅಷ್ಟಮ]

**ಗರ್ಭಿಣಿ** (ನಾ). = ಗರ್ಭವತಿ: "ವರಧುರ್ಯೆ ಸತ್ವೆಯಂತರ್ವತ್ನಿ ಗುರ್ವಿಯೆಂದರೆ ಗರ್ಭಿಣಿಯೆನಿಕ್ಕು" (ಮಂಗರಾ. ೯೧-೭); ಲಕ್ಷ್ಮಿಯ ಬೇರಂ ನಸ್ಮಮೆಱಗೆ ಗರ್ಭಿಣಿಯಕ್ಕುಂ (ಲೋಕೋಪ. ೯-೧೭೭); ಗರ್ಭದ ಪೆಣ್ಣಿಂಗಂ ಗರ್ಭಿಣಿಗಂ ಬಾಧೆ ಪಿಂಗೆ (ಪಂಠಾಮಾ. ೪-೧೫); ಗರ್ಭಿಣಿಯಾದಳಾಕೆಯಮೋಘವೀರ್ಯದಲಿ (ಸಂಭಪ. ೧೩-೬೪); ಅದಱಿನೀ ರವಿವಂಶಲಕ್ಷ್ಮೀಸುದತಿ ಗರ್ಭಿಣಿಯಾಗದಿರಲೆಂಬುದು ಪುರಾತನಮುನಿಸುಭಾಷಿತವು (ತೊರರಾ. ೧-೫-೮); ಆಗ ಪಟ್ಟದ ರಾಣಿಯೊಬ್ಬಳು ಗರ್ಭಿಣಿಯಾಗಿದ್ದಳು(ಭಾರದ.೪೫೦). [ಸಂ. ಗರ್ಭಿಣೀ]

**ಗರ್ಭಿಣಿಹೆನ್ನೆತ್ತರು** (ನಾ). ಗರ್ಭಿಣಿಯರ ಒಂದು ರೋಗ: ನೆಲ್ಲಿ ಚಟ್ಟು . . . ಈ ಬೀಜವಂ ಅಕ್ಕಿಗಚ್ಚಿನಲ್ಲಿ ಅರೆದು ಕುಡಿಯೆ ಗರ್ಭಿಣಿಹೆನ್ನೆತ್ತರು ಮಾಣ್ಗುಂ (ವಿವೈವಿ. ೫). 'ಹೆನ್ನೆತ್ತರು' ಪರಾ. [ಗರ್ಭಿಣಿ + ಹೆನ್ನೆತ್ತರು]

**ಗರ್ಭಿತ** (ಗು). ೧. ಬಸಿರಾದ. ೨. ಹುದುಗಿರುವ; ಒಳಗೊಂಡ: ತದ್ಭೂಮಿಗರ್ಭಿತದ ಶ್ರೀಕರಾಲಯವಿದು (ತೊರರಾ. ೧-೧೬-೨೮). 'ಅರ್ಥಗರ್ಭಿತ' ಪರಾ. [ಸಂ.]

**ಗರ್ಭೀಕರಿಸು** (ಕ್ರಿ). ಒಳಗೊಳ್ಳು; ಅಡಗಿಸಿಕೊಳ್ಳು: ಇಂತೀ ಸ್ಥಲಂಗಳ ಗರ್ಭೀಕರಿಸಿ ಆಱುಸ್ಥಲವನಲ್ಲೆನ್ನದೆ ಮೂಱುಸ್ಥಲವಿಲ್ಲೆನ್ನದೆ ಬೇಱೊಂದು ಸ್ಥಲಉಂಟೆಂದು ಊರೆಲ್ಲಕ್ಕೆ ದೂಱದೆ (ಮೋಳಿಮಾ. ೧೩೮-೫೩೨); ಸೇವಕಸಕಲನೃಪಾನೀಕಮಂ ಕೂಡೆ ಗರ್ಭೀಕರಿಸಿರ್ದ . . .ಆಸ್ಥಾನಗೇಹಂ (ಚಂದ್ರವು. ೫-೩); ವಂದಿಧ್ವನಿಯ ಗರ್ಭೀಕರಿಸಿ ಹೆಚ್ಚಿತು ಜಯಜಯಧ್ವನಿ (ಕುವ್ಯಾಕ. ೭-೧೪); ಜೊತೆಗೆ ಪ್ರಪಂಚದ ಅನೇಕ ಮಹಾಸಾಹಿತ್ಯವಾಹಿನಿಗಳನ್ನು ಗರ್ಭೀಕರಿಸಿಕೊಂಡಿರುವ ಸಾಗರೋಪಮವಾದ ಶಕ್ತಿ ಭಾಷೆ (ಸಾಹಿತ್ಯ. XII, ಪ್ರಸ್ತಾವನೆ). [ಗರ್ಭೀಕರಣ + -ಇಸು₃]

**ಗರ್ಭೀಕೃತ** (ಗು). ಹುದುಗಿಸಲ್ಪಟ್ಟ; ಒಳಗೆ ಸೇರಿಸಿದ: ಕದಂಬಕುಸುಮಗರ್ಭೀಕೃತಕಬರೀಭರಸಂಯುತಶಿರೋಭಾಗಮಂ ಬಾಸಣಿಸಿದ ನನೆಯ ಸೂಸಕದ ಕೊನೆಗಳಲುಗೆ (ಗಿರಿಕ. ೫-೭೬ ವ). [ಸಂ.]

**ಗರ್ಭೇಶ್ವರ** (ನಾ). = ಗರ್ಭಶ್ರೀಮಂತ: ಮತ್ತೊಂದೆಡೆಯೊಳೊರ್ವಂ ಗರ್ಭೇಶ್ವರಂ ತನ್ನ ಹೃದಯೇಶ್ವರಿಯನಗಲ್ದು ಬಂದು ಪೆಂಜರಾರುಮಂ ಮೆಚ್ಚದಾಕೆಯಂ ನೆನೆದು (ಪಂಪಭಾ. ೪-೧೦೪ ವ). [ಗರ್ಭ + ಈಶ್ವರ]

**ಗರ್ಭೇಶ್ವರಿ** (ನಾ). ಹುಟ್ಟಿನಿಂದಲೇ ಶ್ರೀಮಂತಳಾದವಳು; ಆಗರ್ಭಶ್ರೀಮಂತಳು: ಅಂತಾ ಗರ್ಭೇಶ್ವರಿಯರ್ ಮನಸ್ಸರೋವರದೊಳ್ ತಮ್ಮ ಪಾದಪದ್ಮಂಗಳಂ ನೆಲೆಗೊಳಿಸಿಯುಂ (ಆದಿಪು. ೮-೨೪ ವ); ಆ ಮನೋಜವಿಜಯಲಕ್ಷ್ಮಿಯಲ್ಲದೆಯುಂ ಗರ್ಭೇಶ್ವರಿ ಮತ್ತೊರ್ವಳೆಯ್ದೆ ವರ್ಪಾಗಳ್ (ಚಂದ್ರವು. ೧೦-೮ ವ). [ಸಂ. ಗರ್ಭೇಶ್ವರೀ]

**ಗರ್ಮಿ** 'ಗರಮಿ' ನೋ.

**ಗರ್ವ** (ನಾ). ೧. ಜಂಭ; ಹೆಮ್ಮೆ; ಸೊಕ್ಕು; ಅಹಂಕಾರ: "ಬಿಂಕಂ ಗಬ್ಬ ಪುಗ್ಗೆನಲ್ ಗರ್ವಮಕ್ಕುಂ" (ಶಬ್ದಕೈ. ೫೬); "ಕಾಮುಕರ ಗಬ್ಬ ಬಿಂಕಪನ್ನಮುರ್ಕೆನಲ್ ಗರ್ವವು" (ಶಬ್ದಮಂ. ೩೯); ಕವಿವ್ಯಾಸನೆನೆಂಬ ಗರ್ವಮೆನಗಿಲ್ಲ (ಪಂಪಭಾ. ೧-೧೩); ಗರ್ವ [ಪ್ರಾಕಾಂ. ಗಬ್ಬ, ಗರ್ಭ]ಮುಡಂಗಿ ಗರ್ಭದೊಳಗೊರ್ವನೆ ದುಃಖಮನುಂಡೆನಂತೆ ಬಂದೊರ್ವನೆ ತೊಟ್ಟಿಲೊಳ್ ಬಳೆದೆಂ (ಜೀವಸಂ. ೪೪-೨); ವಿಂಧ್ಯಾದ್ರಿ . . . ಅಡ್ಡವಾಗಿರಲು ಸಚ್ಚರಿತನಾಗಿದ್ದ ಗಸ್ತ್ಯನು ಹೆಚ್ಚು ತಾನೆಂದೆಂಬ ಗರ್ವವ ನುಚ್ಚುನೂಡಿಯೆ ನೆಲದ ಸಮದಲಿ ಬೆಚ್ಚಿ ಬೆರಸಿದನು (ಅನ್ನಮೃತ. ೨-೬೨). ೨. [ಕಾವ್ಯಮಿ] ಮೂವತ್ತು ಮೂರು ವ್ಯಭಿಚಾರಿಭಾವಗಳಲ್ಲಿ ಒಂದು: ಮತಿ ಲಜ್ಜೆ ಗರ್ವ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರಿಭಾವಂಗಳಿಂ ಪರಿಭಾವಿಸಿ (ವಿವೇಕ. ೨೨೭); ಸಂಚಾರಿಭಾವಗಳು ಮೂವತ್ತು ಮೂರು :- ೧.ನಿರ್ವೇದ (ಬೇಸರ) . . . ೧೮. ಗರ್ವ . . . ೩೩. ವಿತರ್ಕ (ಕೈಪಿಡಿ. ೧೮೮). ೩. [ಛಂದ] ಎರಡು ಗುರುಗಳಿಂದ ಕೂಡಿದ ನಾಲ್ಕು ಪಾದಗಳುಳ್ಳ ಅತ್ಯುಕ್ತೆಯೆಂಬ ವರ್ಣಛಂದಸ್ಸಿನಲ್ಲಿ ಪ್ರತಿಪಾದದಲ್ಲೂ ಎರಡೆರಡು ಗುರುಗಳುಳ್ಳ ವೃತ್ತ: ಶರ್ವಂ ಗೀರ್ವಾಣೋರ್ವೀ ಗರ್ವಂ (ಛಂದೋಂಬು. ೨-೫೫). ೪. [ತರ್ಕಶಾ] ಅಂತಃಕರಣದ ನಾಲ್ಕು ವೃತ್ತಿಗಳಲ್ಲಿ ಒಂದು: ವೃತ್ತಿಯು ಸಂಶಯ, ನಿಶ್ಚಯ, ಗರ್ವ ಮತ್ತು ಸ್ಮರಣ ಎಂದು ನಾಲ್ಕು ವಿಧ. ಇವುಗಳಿಗೆ ಅನುಸಾರವಾಗಿ ಒಂದೇ ಅಂತಃಕರಣವು ಕ್ರಮವಾಗಿ ಮನಸ್ಸು, ಬುದ್ಧಿ, ಅಹಂಕಾರ ಮತ್ತು ಚಿತ್ತ ಎಂಬ ನಾಲ್ಕು ಹೆಸರುಗಳನ್ನುಳ್ಳುದು (ಭಾತತ್ತ್ವ. ೫೮೮). [ಸಂ.]

**ಗರ್ವಪಡು** (ಕ್ರಿ). = ಗರ್ವಿಸು: ತಾನೊಬ್ಬನೇ ವಿದ್ಯಾವಂತನೆಂದು ಗರ್ವಪಡುತ್ತಾನೆ (ರೂಢಿ). [ಗರ್ವ + ಪಡು₁]

**ಗರ್ವಭಂಗ** (ನಾ). ಗರ್ವದ ನಾಶ; ಅಹಂಕಾರದ ನಿಗ್ರಹ; ಸೊಕ್ಕು ಮುರಿಯುವುದು: ಈ ದಿನ ಗರುಡಗರ್ವಭಂಗವೆಂಬ ಹರಿಕಥೆ ಇದೆ (ರೂಢಿ). [ಗರ್ವ + ಭಂಗ]

**ಗರ್ವವಿನಾಶಿ** (ಗು). ಹಮ್ಮನ್ನು ಅಡಗಿಸತಕ್ಕ; ಅಹಂಕಾರವನ್ನು ಭಂಗಪಡಿಸುವ: ಧನು ವರೂಥದ ಹಾನಿ ಗುರುನಂದನನ ಗರ್ವವಿನಾಶಿಯೇ ಫಡ ಎನುತ ಪಾರ್ಥನ ತಱುಬಿ ನಿಂದನು ಸೆಳೆದಡಾಯುಧದಿ (ಕುವ್ಯಾಕ. ೧೪-೨೧). [ಗರ್ವ + ವಿನಾಶಿ]

**ಗರ್ವವಿಭ್ರಮ** (ನಾ). ಗರ್ವದಿಂದ ಉಂಟಾಗುವ ಬಿಂಕ, —ಠೀವಿ: ಝಳಪಿಸುವ ಕೈದುಗಳೋಳಿ ಹೊಳೆದುದು ಸೆಳೆದುದೀತನ ಗರ್ವವಿಭ್ರಮವ (ಕುವ್ಯಾಕ. ೧೯-೩). [ಗರ್ವ + ವಿಭ್ರಮ]

**ಗರ್ವವ್ಯಾಲೆ** (ನಾ). ಅಹಂಕಾರದಿಂದ ಸೊಕ್ಕಿದವಳು; ಮಿತಿಮೀರಿ ಮದಿಸಿದವಳು: ಅಂತು ಬಂದ ಬಸಂತದೊಳ್ ಮಾದ್ರಿ ತಾಂ ಗರ್ವವ್ಯಾಲೆಯುಂ ಕ್ರೀಡಾನುಶೀಲೆಯುಮಪ್ಪುದಱಿಂ (ಪಂಪಭಾ. ೨-೧೫ ವ). [ಸಂ. (ಗರ್ವ + ವ್ಯಾಲ + -)]

**ಗರ್ವವ್ಯಾಳಿ** (ನಾ). ೧. "ಮದಿಸಿದ ದುಷ್ಟಗಜ" (ಪಂಪಭಾ. ಕೋಶ). ೨. "ಗರ್ವದಿಂದ ಕೂಡಿದ ದುಷ್ಟ" (ಪಂಪಭಾ. ಕೋಶ). ೧, ೨: ಎಂತಪ್ಪ ಗರ್ವವ್ಯಾಳಿಯುಮನತಿವರ್ತಿಗಳುಮನಾರೂಢದೊಳ್ ಕೆನಗಳವಡುವುದಱಿಂದಾರೂಢಸರ್ವಜ್ಞನುಂ (ಪಂಪಭಾ. ೧೪-೩೭ ವ). [ಗರ್ವ + ವ್ಯಾಳಿ]

**ಗರ್ವಹೀನ** (ನಾ). ಗರ್ವವನ್ನು ಬಿಟ್ಟವನು; ಜಂಭವಿಲ್ಲದವನು; ವಿನಯವಂತ: "ಸೋರ್ - ಗಲನೇ, ಗರ್ವಹೀನೇ ಚ" (ಶಮಧಾ). [ಗರ್ವ + ಹೀನ]

**ಗರ್ವಾಂಧ** (ನಾ). ಗರ್ವದಿಂದ ಕುರುಡಾದವನು; ಅಹಂಕಾರದಿಂದ ಅಂಧನಾದವನು; ವಿವೇಚನೆ ಇಲ್ಲದವನು: ಆ ಮಹೇಂದ್ರಂ ಗರ್ವಾಂಧಂ ಸಿಂಧುರಸ್ಕಂಧಧಿನಿಟಿದು ಸಹಸ್ರಾಕ್ಷೀಯಕಂ ಬರ್ಪುದಂ ಕಂಡು (ಚಂದ್ರಪ್ರ. ೫-೧೧೨); ಬುಧನು ಕುಲೀನನು ಗರ್ವಾಂಧನಾಗನು (ಇಂಚಾಪ. ೧೪೫-೧೪). [ಗರ್ವ + ಅಂಧ]

**ಗರ್ವಿ** (ನಾ). ಗರ್ವವುಳ್ಳವನು; ಜಂಭಗಾರ; ಅಹಂಕಾರಿ: ಸರ್ವಜ್ಞನಜಿದಿಹನು ಸರ್ವರನು ಅಜಿದಿಹನು ಸರ್ವಜ್ಞನಜಿಯ ದಿರುತಿಹನು ಉರ್ವಿಯೊಳು ಗರ್ವಿ ತಾನಕ್ಕು (ಸರ್ವಜ್ಞ. ೨೬). [ಸಂ. ಗರ್ವಿನ್]

**ಗರ್ವಿಕೆ** (ನಾ). ಜಂಭ; ಸೊಕ್ಕು: ಬಲರಾಮ ನನ್ನೊಳು ಸಮರಕ್ಕೆ ಸೆಣಸಿ ದುರ್ಬಲರಾಮನಾಗಿ ಹೋಗೆನುತೆ ಬಲಭದ್ರ ಗಜಮುಖ ತಜಿದ ಕೊರ್ಗಣೆಗಳ ಬಲರಾಮನತುಳ ಗರ್ವಿಕೆಯ (ಮೋಹತ. ೩೪-೫೧). [ಗರ್ವ + -ಇಕೆ]

**ಗರ್ವಿಗ** (ನಾ). = ಗರ್ವಿ: ಗರ್ವಿಗನ ಸಂಧಾನಕ್ಕೆ ಹೋಗಿ ಭಂಡಹರೆ (ಭರಜ. ೪೯-೬೬). [ಗರ್ವ + -ಇಗ]

**ಗರ್ವಿತ** (ಗು). ಗರ್ವದಿಂದ ಕೂಡಿರುವ; ಕೊಬ್ಬಿದ; ಅಹಂಕಾರಿಯಾದ: ಗರ್ವಿತ ನೃಪಾಲಕಾಧಮದುರ್ವಿಳಸನಜನಿತಭೂರಿಭಾರದೊಳಿನಸುಂ ನಿರ್ವಿಣ್ಣೆಯಾಗಿ ಭೂವಧು . . . ವಿರಂಚಿಸಭೆಯಂ ಪೊಕ್ಕಳ್ (ಜಗವಿ. ೧-೨೬); ಪ್ರತಿಯಿಡಲು ಬಾರದ ಮಹಾಗರ್ವಿತ ಹೃದಯನಂ ಕಪಟನಂ ದುಃಕೃತನನನೃತನನಿನ್ನು ಸ್ಮರಿಸಿ ತಪ್ಪುಗಳನೆನ್ನ (ಬಸಪು. ೨೬-೪೦). [ಸಂ.]

**ಗರ್ವಿಷ್ಠ** (ನಾ). = ಗರ್ವಿ: ಅವನು ಗರ್ವಿಷ್ಠ (ರೂಢಿ). [ಸಂ.]

**ಗರ್ವಿಸು** (ಕ್ರಿ). ಹೆಮ್ಮೆಪಡು; ಹಮ್ಮುಗೊಳ್ಳು; ಅಹಂಕಾರಪಡು: ಸಾಪತ್ನೀಕುಳದೊಳ್ ಗರ್ವಿಸುವ ಶಬರಿಯಿರವತಿಚಿತ್ರಂ (೧೦೪.೧-೧೧೯); ಅತನ ಸೂತ್ರದವರಾವು ನೀನಂತು ಗರ್ವಿಪರೆ (ಚಬಪು. ೧೮-೫). [ಗರ್ವ + -ಇಸು₃]

**ಗರ್ವೀಕರಿಸು** (ಕ್ರಿ). ಗರ್ವಹೊಂದು; ಅಹಂಕಾರಪಡು; ಗರ್ವಿಷ್ಠನಾಗು: ಒಂದು ವರ್ಣವನಜುಹಿದವ ಗುರುವೊಂದಪಾಯದಲುಳುಹಿದವ ಗುರು ಬಂದ ವಿಗ್ರಹದೊಳಗೆ ರಕ್ಷಿಸಿದಾತ ಪರಮಗುರು ಒಂದೆರಡು ಮೂಱಕ್ಕೆಸಲೇ ತಾನೆಂದು ಗರ್ವೀಕರಿಸಿದವರುಗಳೊಂದುವರು ಚಾಂಡಾಲ ಯೋನಿಯೊಳರಸ ಕೇಳೆಂದ (ಕುವ್ಯಾಉ. ೩-೬). [ಗರ್ವೀಕರಣ + -ಇಸು₃]

**ಗರ್ವು** 'ಗರುವ' ನೋ.

**ಗರ್ವೋಕ್ತಿ** (ನಾ). ಗರ್ವದ ಮಾತು; ಜಂಭದ ಮಾತು; ಅಹಂಕಾರದ ನುಡಿ: ಮುರಾರಿಯ ಸಿರಿವಚನಕೆ ಹಸಾದವೆಂದುಬ್ಬರದ ಗರ್ವೋಕ್ತಿಯಲಿ ಗರುವಿಕೆಗೆಡಿಸಿದನು ನೃಪನ (ಕುವ್ಯಾಕ. ೧೭-೨೭). [ಗರ್ವ + ಉಕ್ತಿ]

**ಗರ್ವೋದ್ಧತ** (ಗು). ಅಹಂಕಾರದಿಂದ ಉದ್ಧಟವಾದ; ಹೆಮ್ಮೆನಿಂದ ಸೊಕ್ಕಿದ; ದರ್ಪದಿಂದ ಕೊಬ್ಬಿದ: ನುತಿಪಂ. . . ತತಗರ್ವೋದ್ಧತ ದುರ್ವಿದಗ್ಧ ಜನತಾಹೃದ್ಭೀಮನಂ ಭೀಮನಂ (ರಾಜಶೇ. ೧-೧೮); ಗರ್ವೋದ್ಧತ ಗರ್ಜತ್ಸಿಂಹಮಂ ಬೀಳೆನುತೊಗೆದಡಟಿಂ ಖಡ್ಗದಿಂ ಪೊಯ್ದಂ (ಶಬಶಂ. ೩-೬೩). [ಗರ್ವ + ಉದ್ಧತ]

**ಗರ್ಹಕ** (ನಾ). ಬಟ್ಟಲು; ಪಾನಪಾತ್ರೆ: "ಗರ್ಹಕಃ, ಅನುತರ್ಷಃ, ಚಷಕಃ, ಸರಕಃ – ಈ ೪ ತಿಳಿವಟ್ಟಲ್" (ಹಲಾಯು. ೫೪-೧೬೨); "ಅನುಕರಂ ಗರ್ಷ[ರ್ಹ]ಕಂ ಗುಂಡಿವಟ್ಟಲಕ್ಕುಂ" (ಮಂಗರಾ. ೬೬-೨೫). [ಸಂ.]

**ಗರ್ಹಣ** (ನಾ). ಬಯ್ಯುವಿಕೆ; ತೆಗಳಿಕೆ; ದೂಷಣೆ: ಪಾಸಟಿಯೊಳ್ ಕೂಸನಪ್ಪಳಿಸಿ ಬಾಲನಿಬರ್ಹಣ ಗರ್ಹಣಾತಿರೇಕದಿಂ ಗತಶ್ರೀಕನಾಗಿ ನಿಜರಾಜಮಂದಿರಮಂ ಪೊಕ್ಕಂ (ಜಗವಿ. ೨-೫೪ ವ). [ಸಂ.]

**ಗರ್ಹಣೀಯ** (ಗು). ಬಯ್ಗುಳಿಗೆ ಅರ್ಹವಾದ; ನಿಂದೆಗೆ ತಕ್ಕ; ಕೀಳಾದ: ಅವನು ಸ್ವಜನದ್ರೋಹದಂತಹ ಗರ್ಹಣೀಯ ಕೆಲಸಕ್ಕೆ ಸಜ್ಜಾಗಿದ್ದನು (ಪರಮೇ. ೪೧); ಯಾರಾದರೂ ಮದುವೆಯಾಗಲು ಇಚ್ಛಿಸಿದರೆ ಅದು ಸ್ಪೃಹಣೀಯವೇ; ಗರ್ಹಣೀಯವಲ್ಲ (ಶರಜ. ೨೨೮). [ಸಂ.]

**ಗರ್ಹಿತ** (ಗು). ಬಯ್ಗುಳಿಗೊಳಗಾದ; ದೂಷಿಸಲ್ಪಟ್ಟ; ಕೀಳಾದ: ಲೋಕವಿರುದ್ಧಂ ತದ್ವ್ಯತಿರೇಕೋಕ್ತಿ ವಿವೇಕಿ ಲೋಕಗರ್ಹಿತವಾರ್ಗಂ (ಕವಿರಾ. ೧-೧೦೮); ರೂಪಂ ಪದಪಿಂದಂ ಮಾಡಿಯುಂ ನೋಡಿಯುಮವಸದೃಶದೊಳ್ ಗರ್ಹಿತ ಸ್ಪರ್ಶಸಂಭೋಗದೊಳಿಂತೀ ದುಷ್ಪಚಂಡಾಲರ ಕುಲದೊಳಗೇ[illegible] ದುರ್ವಿವೇಕಂ (ಕಾದಂಪೂ. ೫೦). [ಸಂ.]

**ಗರ್ಹಿಸು** (ಕ್ರಿ). [illegible]; ನಿಂದಿಸು; ದೂಷಿಸು: ಕುಲಕನ್ನೆಯರ್ಗಿದನ್ನಯಮೆಂದು [illegible]ಹತ್ವಮೆ ಗರ್ಹಿಪಂತೆಯುಂ (ಕಾದಂಉ. ೬೫). [ಗರ್ಹಣ + -ಇಸು₃]

**ಗರ್ಹೆ** (ನಾ). ಬಯ್ಯುವಿಕೆ; "ಹಟಿವು" (ನಾಚಿರಾ. ೬). [ಸಂ. ಗರ್ಹಾ]

**ಗರ್ಹ್ಯ** (ಗು). ೧. = ಗರ್ಹಣೀಯ: ಕೇವಲ ಗರ್ಹ್ಯ ಹೋರಿಯನ್ನು ಕೂಡ ಅವಳೇ ಮಾಡಬೇಕಾಗಿರುತ್ತದೆ (ದೇವಳ. ೧೦). (ನಾ). ೨. ದೂಷಣೆಗೆ ಒಳಗಾದುದು; ಕೀಳಾದುದು: "ನೀಚಮು ದುಷ್ಟಮು ಗರ್ಹ್ಯ ಎಂಬಿವು ಹಟಿವಿನೊಳ್ ಅಪ್ಪುವು" (ನಾಚಿರಾ. ೬); ಇಷ್ಟು ಮಾತ್ರಕ್ಕೆ ಯೋಗಶಾಸ್ತ್ರದ ಉಪದೇಶವಾಗಿದ್ದರೆ ಯೋಗವು ಅತ್ಯಂತ ಗರ್ಹ್ಯವೇ ಸರಿ (ಕಥವಿ. II, ೨೬). [ಸಂ.]

**ಗರ್ಹ್ಯವಾದಿ** (ನಾ). ತುಚ್ಛವಾಗಿ ಮಾತನಾಡುವವನು; ಹೀನವಾಗಿ ನುಡಿಯುವವನು; ನಿಂದಕ: "ಹೊಲ್ಲಾಗಿ ನುಡಿವವಂ ಗರ್ಹ್ಯವಾದಿಯೆನಿಕ್ಕು" (ಮಂಗರಾ. ೬೧-೧೯). [ಸಂ. ಗರ್ಹ್ಯವಾದಿನ್]

**ಗರ್ಹ್ಯಾಧೀನ** (ನಾ). ಬಯ್ಗುಳಿಗೆ ಒಳಗಾದವನು; ನಿಂದೆಗೆ ಒಳಪಟ್ಟವನು; "ಹಟಿಸಿಕೊಂಬವನು" (ನಾಚಿರಾ. ೬). [ಗರ್ಹ್ಯ + ಅಧೀನ]

**ಗಲ, ಗಳ₃** (ನಾ). ಕೊರಳು; ಕುತ್ತಿಗೆ; ಕಂಠ. 'ಗಲಗ್ರಾಹಿತ್ವ' ಪರಾ. ಗಳ₃: "ಗ್ರೀವಾ, ಧಮನಿಃ . . . ಗಳಃ, ಕಂಠಃ — ಈ ೭ ಕೊರಲ್" (ಹಲಾಯು. ೮೫-೩೬೨); ಗಳದ ಬಜಿಸೆಜ್ಜೆಯಲಿ ಲಿಂಗವು ನೆಲಸಿದುದು (ಬಸಪು. ೩೪ ಸೂಚನೆ); ಗಳದ ಸತ್ತ್ವವನಜಿಯದದ್ರಿಗೆ ತಲೆಯನೊಡ್ಡುವರೇ (ಕುವ್ಯಾದ್ರೋ. ೨-೫೧); ತೆಗೆದುತ್ತರೀಯಮಂ ಮುರಿದು ಕುದುರೆಯ ಗಳಕೆ ಬಿಗಿದು (ಜೈಮಿಭಾ. ೨೦-೮).

**ಗಲಸ್ಯಕಂಠಸ್ಯ, ಗಳಸ್ಯಕಂಠಸ್ಯ** = ೧. ಪರಸ್ಪರ ಕಂಠಾಲಿಂಗನ ಮಾಡಿಕೊಳ್ಳುವ ಗೆಳೆತನ; ಪರಮಸ್ನೇಹ: ಅವರಿಬ್ಬರಿಗೂ ಗಲಸ್ಯಕಂಠಸ್ಯ (ರೂಢಿ). ೨. ಅತ್ಯಂತ ಗೆಳೆಯ; ಪರಮಸ್ನೇಹಿತ: ಕಾಲೇಜಿನಲ್ಲಿ ಒಟ್ಟಿಗೆ ಓದುತ್ತಿದ್ದೆವು. ಗಳಸ್ಯಕಂಠಸ್ಯ ಆದೆವು (ಮನೋನಂ. ೨೦೩); ಗೋವಿಂದಭಟ್ಟಾ– ನಾನು ಗಳಸ್ಯಕಂಠಸ್ಯ (ದೀಪಹ. II, ೮೫). [P ಇದು 'ಗಳಶ್ಚಕಂಠಶ್ಚ' ಎಂಬುದರ ಅಸಾಧುರೂಪವಾದರೂ ಬಳಕೆಯಲ್ಲಿರುವ ಪದ] [ಸಂ.]

**ಗಲಂತಿ** (ನಾ). = ಗಲಂತಿಕೆ: (೬). [ಸಂ. ಗಲಂತೀ]

**ಗಲಂತಿಕೆ, ಗಳಂತಿಕೆ** (ನಾ). ೧. ಹಿಡಿ ಮತ್ತು ಮೂತಿ ಇರುವ ಸಣ್ಣ ಹೂಜಿ; ನೀರು ತುಂಬುವ ಸಣ್ಣ ಪಾತ್ರೆ: "ವರ್ಧನೀ, ಗಲಂ[ಪಾಠಾಂ. ಳಂ]ತಿಕಾ – ಈ ೨ ಗಣಿತಿಗೆ" (ಹಲಾಯು. ೫೩-೧೩೨).

೨. ಶಿವಲಿಂಗಕ್ಕೆ ಅಭಿಷೇಕಮಾಡಲು ಉಪಯೋಗಿಸುವ, ತಳದಲ್ಲಿ ತೂತು ಕೊರೆದಿರುವ ನೀರಿನ ಪಾತ್ರೆ ಅಥವಾ ಧಾರಾಪಾತ್ರೆ ಮತ್ತು ಅದರಿಂದ ಮಾಡುವ ಅಭಿಷೇಕದ ಸೇವೆ. **ಗಳಂತಿಕೆ**: ೧. ಮೇಲಿನ 'ಹಲಾಯು' ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ. ಗಲಂತಿಕಾ]

**ಗಲಕಂಬಲ**, ಗಳಕಂಬಳ (ನಾ). ೧. ಹಸು ಮತ್ತು ಎತ್ತುಗಳ ಕೊರಳಲ್ಲಿ ಜೋತಾಡುತ್ತಿರುವ ತೊಗಲು; ಗಂಗೆದೊಗಲು; ಸಾಸ್ನೆ: (ಕಿ). ೨. ಕೊರಳಿಗೆ ಸುತ್ತುವ ಬಟ್ಟೆ: "ಗಲಕಂಬಲ . . . ಕೊರಳಿಗೆ ಸುತ್ತಿದ ಶಾಲು,ಬಟ್ಟೆ ಮೊದಲಾದುವು" (ಕಸ್ತೂ ಕೋ. ೨೯೦). **ಗಳಕಂಬಳ**: ೧. "ಗಳಕಂಬಳಮಕ್ಕುಂ ಪೆಸರ್ಗೊಳಲ್ಕೆ ಸಾಸ್ನಾಖ್ಯೆ" (ವಸ್ತುಕೋ. ೮೯-೪); ಚಳಗಳಕಂಬಳಂ ಚಳನಕಂಪಿತತುಂಗಕಕುದ್ಭರಂ (ಚಂದ್ರಪ್ರ. ೨-೨೮). [ಗಲ + ಕಂಬಲ]

**ಗಲಕು**₁ 'ಗಲಗು₁' ನೋ.

**ಗಲಕು**₂, ಗಲಗು₂ (ನಾ). ೧. ಲೇಖನಿಗಳನ್ನು ಮಾಡಲು ಉಪಯೋಗಿಸುವ ಒಂದು ಬಗೆಯ ಗಟ್ಟಿಯಾದ ನಾಳವುಳ್ಳ ಕಡ್ಡಿ ಮತ್ತು ಅದರ ಸಸ್ಯ; ಲಾಳ: (ಕಿ). **ಗಲಗು**₂: ೧. ಬಳಿಕ ಕಪಿಗಳು ಗಲಗಿನ ಒಂದು ತುದಿಯನ್ನು ನೀರಲ್ಲಿರಿಸಿ ಮತ್ತೊಂದು ತುದಿಯನ್ನು ಬಾಯಲ್ಲಿ ಹಿಡಿದು, ನೀರನ್ನು ಎಳೆದುಕೊಂಡು ಕುಡಿದವು (ಬುದ್ಧಜಾ. ೧೨). ೨. ಲಾಳದ ಕಡ್ಡಿಯಿಂದ ಮಾಡಿದ ಲೇಖನಿ: ಪೆನ್ಸಿಲು, ಟಾಕು, ಗಲಗು ಅಲ್ಲದೆ ಬೆಂಕಿಪೆಟ್ಟಿಗೆಯ ಒಂದು ಕಡ್ಡಿಯೂ ಸಹ ನನಗೆ ನಡೆಯುತ್ತಿತ್ತು (ಸ್ಮೃತಿಚಿ. ೧೫೭). [?]

**ಗಲಕುಹುಲ್ಲು**, ಗಲುಕುಹುಲ್ಲು (ನಾ). ಒಂದು ಬಗೆಯ ಹುಲ್ಲು: (ಕಿ). **ಗಲುಕುಹುಲ್ಲು**: ಅಲಗು, ಗಲುಕುಹುಲ್ಲು (ಮೈಶಗ. ೭೭-೧೭೭೮). [ಗಲಕು₂ + ಹುಲ್ಲು (< ಪುಲ್)]

**ಗಲಗಲ** (ನಾ). ಗದ್ದಲ, ಕೋಲಾಹಲ ಮುಂತಾದುವನ್ನು ಸೂಚಿಸುವ ಒಂದು ಅನುಕರಣಧ್ವನಿ. 'ಗಲಗಲನೆ' ಪರಾ.

**ಗಲಗಲನೆ**, ಗಲುಗಲನೆ, ಗಲ್ಗಲನೆ (ಅ). ಗಲಗಲ ಎಂಬ ಶಬ್ದದೊಡನೆ: ಧರೆಯಂ ವಾರಾಸಿ(ಶಿ)ಪರ್ಯಂತಮನವಯವದಿಂ ದುರ್ವ್ವಿನೀತಾವನೀಪಾಳರ ಬೇರಂ ಕಿತ್ತುರ್ವ್ವಿ ನೀರೊಳ್ ಗಲಗಲನಲೆದೀಡಾಡಿ ಮುನ್ನಿಂತು ಚಕ್ರೇಶ್ವರರಾರ್ ನಿಷ್ಕಂಟಕಂ ಮಾಡಿದರೆನೆ (ಎಇ. XVI, ೫೯-೩; 1081); ಗಲಗಲನೆ ತಾರಕಿಗಳುದುರಿದವು (ಸಾಳ್ವಭಾ. ೧೮-೬೯); ತನಗೊಡನೆಂಟುಕರ್ಮದ ಮಣ್ಣುದಿರ್ವುದು ಗಲಗಲನೆ (ಭರಚ. ೫೨-೧೧೯). **ಗಲುಗಲನೆ**: ಚೋಳನ ವೇರಂ ಕಿತ್ತುರ್ವ್ವಿ ನೀರೊಳ್ಗಲುಗಲನ[ನ]ಲೆಯಲ್ಪಂದನಾ ಬಂದನಾ ಬಂದನೇ ತಾನೆಂಬಂತೆ ಬಂದಂ (ಸೌಇಇ. XX, ೪೯-೨೦; 1076). **ಗಲ್ಗಲನೆ**: ನೆಲಕೆ ನೆಗಟ್ಟಿ ಗರ್ತವನೆ ಮಾಣ್ಪುದಜಿಂ ಬಿದಿ ಮಾಡನೇಕೆ ಗಲ್ಗಲನಹಿಮಸ್ತಕಕ್ಕೆ ಮಣಿಯಂ (ಲೀಲಾವ. ೧-೪೧); ನೆತ್ತಿಯೊಡೆಯ ಮುತ್ತು ಗಳೆತ್ತಂ ಗಲ್ಗಲನೆ ಸುರಿಯೆ (ಕಬ್ಬಕಾ. ೨೮೨); ಸುಮನಸ್ಸುಗಳ್ಗೆ ಗಲ್ಗಲನವಂರಿಸಿ ಹಾಸಮನಶೇಷಜನಕಾಮೋದಂ ಸಮನಿಸೆ (ಚಕವಿ. ೬-೧೦೫). [ಗಲಗಲ + -ಅನೆ₁]

**ಗಲಗಲಿಸು** (ಕ್ರಿ). ೧. ಗಲಗಲ ಎಂದು ಧ್ವನಿಮಾಡು; ಗದ್ದಲ ಮಾಡು; ಕೋಲಾಹಲಮಾಡು: ಉಲಿವ ಗೆಜ್ಜೆಯ ಕಾಲ ಕಡಗದ ಗಲಗಲಿಸು [ಪಾಠಾಂ. ಘಲಘಲಿಸು] ವಂದುಗೆಯ ರತುನದ ಉಳಿಯ (ಪ್ರಭುಲೀ. ೬-೨೫). ೨. ಧಗಧಗಿಸು; ಪ್ರಜ್ವಲಿಸು: ಗಲಗಲಿಪ ಕೆಂಡದೊಳ್ ಕೆಡೆದ ಮೂಷಕನಂತೆ (ಪರಶು. ೩೫-೨೬). [ಗಲಗಲ + -ಇಸು₁]

**ಗಲಗು**₁, ಗಲಕು₁, ಗಲುಗು, ಗಲ್ಕು, ಗುಲುಗು₂ (ನಾ). ೧. ಗಲಾಟೆ; ಸದ್ದು; ಗದ್ದಲ: ಹಳಹಳಚನಾದುದಾಶಾವಲಯ ಕೀಡಿದುದು ಕೆಳುಗಾಳಿ ತಂಪು ತಲೆದೋಜಿತ್ತಾ ಖಗಾವಳಿಯ ಗೂಡುಗಳಲ್ಲಿ ಗಲಗು ಹಿರಿದಾಯ್ತು (ಸಮ್ಯಕೌ. ೧೦-೩೮); ಬೇಟೆಗಾರರ ಗಲಗು ಕೇಳಿಸಲಾಗಿ ನಾನು ಭಯದಿಂದ ನಮ್ಮ ತಂದೆಯ ರೆಕ್ಕೆಯೊಳಗೆ ಹೊಕ್ಕು (ವಚಕಾ. ೩); ಕೋಳೀ ಕೂಗಿಲ್ಲ ಮಕ್ಕಳ ಗಲಗಿಲ್ಲ (ಜಾನಗೀ. ೭೫). ೨. (ಗೆಜ್ಜೆ ಮೊದಲಾದುವುಗಳ) ಗಲಗಲ ಎಂಬ ಧ್ವನಿ: ಸೆಜ್ಜೆಯ ಗಾಡಿಗಳ ಎತ್ತಿನ ಗೆಜ್ಜೆಯ ಗಲಗು (ನಾಲ್ಕುಮ. ೪೮). **ಗಲಕು**₁: ೨. ಗೆಜ್ಜೆಯ ಗಲಕು ಕೇಳಿಬಂದಿತು (ರೂಢಿ). **ಗಲುಗು**: ೧. ಗಲುಗಾಗೆ ದಮಯಂತಿ ಚಿಂತೆಯಿಂದಲಿಯೆದ್ದು ದಂತಿ ಬಳಿಗೋಗೆ (ಯನಳ. ೧೧೭); ನೀರಿನ ಗುಲುಗು ಬಹು ಗಲಗು (ಜಾನಗೀ. ೭೫). **ಗಲ್ಕು**: ೨. ಕುಮಾರಕಂ . . . ಅಮೃತಮತಿದೇವಿಯರಡಿದಾವರೆಗೆಱಗಲೊಡನೆ ಕಡಗಂ ಗಲ್ಕನೆ ತೋಳ್ಗಳಿಂ ನೆಗಪಿದಳ್ (ರಾಜಶೇ. ೧೪-೩೫). **ಗುಲುಗು**₂: ೧. ಗುಡುಗಿನೊಳಗಣ ಗುಲುಗಡಗಿದ ಭೇದವ ಪೊಡವಿಯೊಳಗಣ ಅಂಬರದಂಗಣದ ಸಂಗವನಾರು ಬಲ್ಲರು (ಮೋಳಿಮಾ. ೧೩೧-೫೦೭). [← ಮರಾ. ಗಲಕಾ, ಗಲಗಾ]

**ಗಲಗು**₂ 'ಗಲಕು₂' ನೋ.

**ಗಲಗುವಡಿಸು** (ಕ್ರಿ). ಗದ್ದಲವನ್ನುಂಟುಮಾಡು: ಪತಿಯ ಬುದ್ಧಿಗೆ ಮೋಸಬಂದೊಡಮದಱಿಂದ ಖತಿಗೊಂಡು ಗಲಗುವಡಿಸದೆ ಇತರರಱಿಯದಂತೇಕಾಂತದೊಳತಿಭಕ್ತಿಯಿಂದಱುಹುವುದು (ಹದಿಬ. ೩-೨೮). [ಗಲಗು₁ + ಪಡಿಸು]

**ಗಲಗೆಸಗು** (ಕ್ರಿ). = ಗಲಗುವಡಿಸು: ಗಲಗೆಸಗದೆ ಗಾಬರಿಗೊಳಿಸದೆ ಮಿಗೆ ಕಲಹವ ಗಂಟುವಡಿಸದೆ ಬಲಮೊಗ್ಗೆಯದೆ ಬಾಲೆಯ ಬಣ್ಣವಾತಿನಿಂದೊಲಿಸಿಯೊತ್ತಿಗೆ ಬರಿಸುವುದು (ಹದಿಬ. ೬-೨೩). [ಗಲಗು₁ + ಎಸಗು₁]

**ಗಲಗ್ರಾಹಿತ್ವ**, ಗಳಗ್ರಾಹಿತ್ವ (ನಾ). ೧. ಕುತ್ತಿಗೆ ಹಿಡಿಯುವಿಕೆ; ಕೊರಳನ್ನು ಸುತ್ತುವರಿಯುವಿಕೆ. ೨. (ಅಲಂ) ಜನರನ್ನು ಇಕ್ಕಟ್ಟಿಗೆ ಸಿಕ್ಕಿಸಿ ಲಾಭಗಳಿಸುವುದು, —ಹಿಂಸೆಗೆ ಗುರಿಪಡಿಸುವುದು. ೧, ೨: ಗಲ[ಪಾಠಾಂ. ಳ]ಗ್ರಾಹಿತ್ವಮೇಕಾವಳಿಯೊಳ್ ಕಂಟಕವಕ್ರಿಮಂ ಬದರದೊಳ್ . . . ಮಹಾಮಾತ್ರವರ್ತನಂ ಸೃಣಿಯೊಳಲ್ಲದಿಲ್ಲ ಮೆಲ್ಲಿಯುಂ (ಚಂದ್ರಪ್ರ. ೩-೯ವ). **ಗಳಗ್ರಾಹಿತ್ವ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ಗಲಚಿ** (ನಾ). ಗದ್ದಲ; ಕೂಗಾಟ: ಗಲಚಿ ತೊಡಗಿತು ಮಸಗಿ ಕೆಲರಿಗಂ . . . ಕೆಲರು ಒರಗಿದರು ಕೆಲರೋಡಿದರು (ತುರಂಗ. ೮೮-೭). [IP ಇದು 'ಗಲಬೆ' ಎಂಬುದರ ಅಪಲಿಖಿತವಿರಬಹುದು]

**ಗಲತಿ** (ನಾ). ತಪ್ಪು; ದೋಷ; ಸ್ಖಲನ: ಈ ಸಲದ ಓಟುದಾರರ ಪಟ್ಟಿಯಲ್ಲಿ ಬಹಳ ಗಲತಿಗಳಿವೆ (ರೂಢಿ). [← ಅರ. ಘಲತ್; ಹಿಂ. ಮರಾ. ಗಲತ್]

**ಗಲತಿಗೆ** 'ಗಳಂತಿಗೆ₁' ನೋ.

**ಗಲಧ್ವನಿ**, ಗಳಧ್ವನಿ (ನಾ). ೧. ಕೊರಳಿನಿಂದ ಹೊರಬರುವ ಶಬ್ದ. **ಗಳಧ್ವನಿ**: ೨. ಸುರತಕಾಲದ ಕಂಠಧ್ವನಿ; ರತಕೂಜಿತ: "ಮಣಿತವೆಂಬುದು ಗಳಧ್ವನಿ" (ಹಲಾಯು. ೯೩-೪೧೫). 'ಗಳರವ' ಪರಾ. [ಗಲ + ಧ್ವನಿ]

**ಗಲನ** (ನಾ). ೧. ತೊಟ್ಟಿಕ್ಕುವಿಕೆ; ಸೋರುವಿಕೆ. ೨. ಜಾರಿ ಬೀಳುವಿಕೆ; ಜಾರುವಿಕೆ. [ಸಂ.]

**ಗಲಪಟ್ಟಿ** (ನಾ). ಕೊರಳುಪಟ್ಟಿ ; ಕಾಲರು ; ಕತ್ತುಪಟ್ಟಿ : ಗಲಪಟ್ಟಿ ಹಿಡಿದು ತಳ್ಳಿದ (ರೂಢಿ). [ಗಲ + ಪಟ್ಟಿ₃]

**ಗಲಬರಿಕೆ** (ನಾ). ಪಾತ್ರೆಯನ್ನು ತೊಳೆಯುವುದಕ್ಕಾಗಿ ನೀರಿನಲ್ಲಿ ಜಾಲಿಸುವುದು. 'ಗಲಬರಿಸು' ಪರಾ. [ಗಲಬರಿಸು + -ಇಕೆ]

**ಗಲಬರಿಸು** (ಕ್ರಿ). (ಪಾತ್ರೆ ಮುಂತಾದುವುಗಳನ್ನು) ನೀರುಹಾಕಿ ಜಾಲಿಸು; —ಅಲುಬು, —ತೊಳೆ : ಏಕಮನಸ್ಕನಾಗಿ ಸಾಲಿಗ್ರಾಮವನ್ನು ಗಲಬರಿಸುತ್ತೇನೆ (ನಡೆದಾ. I, ೫೧೨) ; ಅವನು ಬರುವ ಹೊತ್ತಿಗೆ ನೀನು ಮೋರೆ ಗಲಬರಿಸಿಕೊಂಡು ಬಟ್ಟೆ ಬದಲಾಯಿಸು (ಅಭಿಮಾ. ೬) ; ಪಾತ್ರೆಗಳನ್ನು ಹೇಗೆ ಗಲಬರಿಸಿದರೋ ತಿಳಿಯದು (ಬಾಡಿಬ. ೧೫) ; ಕೆಲಸವೆಲ್ಲಾ ಮುಗಿದ ಮೇಲೆ ಊದುಗೊಳವಿ ಗಲಬರಿಸೋಕೆ ಬಂದಳು (ಗಾದೆ). [? + -ಇಸು₃]

**ಗಲಬಲಿ** 'ಗಲಿಬಿಲಿ' ನೋ.

**ಗಲಬಲಿಸು** (ಕ್ರಿ). ಗಲಾಟೆಮಾಡು ; ಗಲಭೆಮಾಡು : ಗಲಬಲಿಸದಿರಿ ವಿಷ್ಣುರಾಜನ ಕೆಲಸವಿದು (ಸಮುಮ. ೧೨).
[ಗಲಬಲಿ (< ಗಲಿಬಲಿ) + - ಇಸು₃]

**ಗಲಬಿಲಿ** 'ಗಲಿಬಿಲಿ' ನೋ.

**ಗಲಬು** (ಕ್ರಿ). ಗಲಾಟೆಮಾಡು ; ಗದ್ದಲಮಾಡು (?) : ಕಾಮಿನಿಯ ಕಾಣದತಿಚಿಂತೆಯಂ[ಯಿಂ] ಬೊಂತೆಯಿಂದಾ ಮಾನಹಾನಿಗಳ್ ಹಲುಬುತಂ ಗಲಬುತಂ ಯಿರಲು ಗೃಹಕ್ಕೈದೆ ಸತಿಯು (ಜಿನಮು. ೩೧-೧೬). [?]

**ಗಲಬೆ**, ಗಲಭೆ (ನಾ). ಗದ್ದಲ; ಗೊಂದಲ ; ಗಲಾಟೆ : ನಾವು ಕಪಿಗಳು ಗಲಬೆ[ಪಾಠಾಂ. ಭೆ]ಗಂಜುವೆವು (ತೊರರಾ. ೬-೧೬-೪೧) ; ಎಲೆ ವನಚರ ಕೇಳಾಗದಿದುವೆ ಗಲಬೆಯೊಳುಸಿರಲ್ ಎಂದು (ದಿವ್ಯಚ. ೯-೪೮) ; ಇಂತಿದೇನನ್ನಯದ ಗಲಬೆ ? (ರಾಮಾಶ್ವ. ೨೬-೨೯) ; ಗಲಬೆಯ ಮಾಡುತಬ್ಬರಿಸುವಾಗುಲ್ಲ ಕಂಡು (ಗೊಲ್ಲೊಥಾ. ೮-೨೨೦). **ಗಲಭೆ** : ಉಲುಹಿನ ನೆಲೆಯ ಕಡಿದು ಗಲಭೆಯ ಗ್ರಾಮವ ಬಿಟ್ಟು ನೆಲೆಯಾಗು ಮನದ ಕೊನೆಯಲ್ಲಿ (ಅಜಿಮಾ. ೨೦೮) ; ಗಲಭೆ ಹೋ ನಿಲ್ಲು ಸಮ್ಮುಖವಾಗು . . . ಕುಳ್ಳಿರೆಂದು ಸುಳಿವ ಕಟ್ಟಿಗೆಕಾಜರು (ಭರಚ. ೧-೬೦) ; ತರಗತಿಯ ಬಾಲಕರು ಗಲಭೆ ಆರಂಭಿಸಿದ್ದರಿಂದ ಮೇರಿ ಕ್ಲಾಸಿಗೆ ಹೋದಳು (ಕಾವೇರಿ. ೯೦) ; ಹೇಗೆ ಹುಟ್ಟಿತೊ ಹಾಗೆ ಗಲಭೆ ಅಡಗಿದರೆ ಸರಿ (ನಡೆದಾ. I, ೩೬೬).

**ಗಲಬೆಮಾಡು**, **ಗಲಭೆಮಾಡು** = ಗದ್ದಲಮಾಡು ; ಗಲಾಟೆಮಾಡು : ಗಲಬೆಮಾಡುತ್ತ ಬಂದರ್ರೈಯ (ಸಮುಮ. ೯) ; ಕೆಲಬರೊಳಿಗದವರಾಗ ಗಲಭೆಮಾಡದೆ ತಲೆಮಣಿಸಿಕೊಂಡೊಡೆಯನ ಬಳಸಿನೊಳಿದ್ದರೀಕ್ಷಿಸುತ (ಭರಚ. ೩-೩೦).
[ದೇ. ॥ ತುಳು. ಗಲಬು ; ತೆಲು. ಗಲಬ, ಗಲಭ./ಮರಾ. ಗಲಬಾ]

**ಗಲಭೆ** 'ಗಲಬೆ' ನೋ.

**ಗಲಭೆಕಾಜ** (ನಾ). ಗಲಾಟೆಮಾಡುವವನು ; ಗದ್ದಲಮಾಡುವವನು : ಕಳಕಳಿಕೆ ಕೈಲಾಸಶಿಖರದ ಹೊಳಲೊಳಗೆ ಹೊದಜಿದ್ದುದಲ್ಲಿಯ ಗಲಭೆಕಾಜರು ಕವಿಯೆ ಗೋಪುರವಂಕವೀಥಿಯಲಿ (ತೊರರಾ. ೪-೯-೨೯) ; ಗಗನದ ಗಲಭೆಕಾಜರು ಗಾವಳಿಯನುಜಿ ನಿಲಿಸಿ ನೋಟಕರಾಯ್ತು ಕಲಿಗಳ ಕದನಕೇಳಿಯಲಿ (ತೊರರಾ. ೬-೧೪-೧೪).
[ಗಲಭೆ (< ಗಲಬೆ) + - ಕಾಜ]

**ಗಲಮಿಾಸೆ** 'ಗಲ್ಲಮಿಾಸೆ' ನೋ.

**ಗಲರವ**, ಗಳರವ (ನಾ). ೧. ಕೊರಳಿನಿಂದ ಹೊರಬರುವ ಶಬ್ದ. ೨. ಸುರತಕಾಲದ ಕಂಠಧ್ವನಿ : "ಗಲ[ಪಾಠಾಂ. ಳ]ರವಂ ಮಣಿತಮಕ್ಕು" (ಮಂಗರಾ. ೯೬-೧೬). **ಗಳರವ** : ೧. ಗಳರವಂಗಳ ಕಪೋತಂಗಳ್ಗೆ ಕಲಿಸುತಂ. . .ಬೆಲೆವೆಣ್ಣೆಳೆಸೆದಿರ್ದರು (ಚಿಬಪು.೧೧-೪೦). ೨. ಗಳರವದಿಂದಪ್ಪಿಂ ಕೋಮಳರೂಪಿಂದೆ . . . ಕಣೆಪುತಿರ್ದಳ್ (ಗಿರಿಕ. ೪-೧೫೧) ; ಗಳರವಮಾಗಿ ಮುದ್ದುಗೊಗವಾಗಿ . . . ನೀಜಿಯಂತೊಳಪುಗುವಂತೆ ಮಾಗಿ ಬರೆ ಬಾ ನಿಲೆಯೆಂಬರೆ ಭೋಗಭಾಗಿಗಳ್ (ಸೂಕ್ತಿಸು. ೧೦-೨೬೦) ; ಚಾರುತರ ಗಳರವದ ಮಂತ್ರದಿಂ (ಜೈಮಿಭಾ. ೧-೨೪).
[ಗಲ + ರವ]

**ಗಲವಾರ** (ನಾ). ಒಂದು ಬಗೆಯ ಸಸ್ಯ : (ವೈಔನಿ. ೨-೩೫). [?]

**ಗಲವಿದ್ರಧಿ** (ನಾ). ಒಂದು ಬಗೆಯ ಕಂಠದ ವ್ರಣ : ಕೊರಳ ಎಲ್ಲಾ ಪ್ರದೇಶವನು ವ್ಯಾಪಿಸಿಕೊಂಡು ತ್ರಿದೋಷದಿಂದ ಸಕಲಉಪದ್ರವ ದೊಡನೆ ಸಹಿತವಾಗಿ ಗ್ರಂಥಿ ಉಂಟಾಗುವುದು. ಅದು ಗಲವಿದ್ರಧಿ ಎನಿಸಿಕೊಂಬುದು (ವೈದ್ಯಸಾ. II, ೧೧೯). [ಗಲ + ವಿದ್ರಧಿ]

**ಗಲಸಾಧನೆ** (ನಾ). ಕಲ್ಲು, ಚೇಳು ಮುಂತಾದುವನ್ನು ಗಂಟಲಿನಲ್ಲಿ ನುಂಗಿ ಕಾರುವ ಒಂದು ಬಗೆಯ ಯಕ್ಷಿಣೀವಿದ್ಯೆ : (ಕಿ).
[ಗಲ + ಸಾಧನೆ]

**ಗಲಹಸ್ತ**, ಗಳಹಸ್ತ (ನಾ). = ಗಳಹತ್ತ : (ಕಿ). **ಗಳಹಸ್ತ** : (ಕಿ).
[ಗಲ + ಹಸ್ತ]

**ಗಲಾಟೆ** (ನಾ). ೧. ಗದ್ದಲ ; ಗಲಭೆ : ಅಷ್ಟು ಗಲಾಟೆ ಮಾಡಬಾರದು (ಶಾಲೆಮ. ೯) ; ಆಗ ಹುಡುಗರು ಗಲಾಟೆಮಾಡುತ್ತಿದ್ದರು (ಆಲಹೂ. ೧೧೯). ೨. ಗಡಿಬಿಡಿ ; ಸಂಭ್ರಮ : ಮನೆಯಲ್ಲೆಲ್ಲಾ ಜೋಯಿಸರದೇ ಗಲಾಟೆ (ಹುಟ್ಟಿಹ. ೧೩). ೩. ಹಾವಳಿ ; ತೊಂದರೆ ; ತಂಟೆ : ಬೆಳಗಾಗುವ ವೇಳೆಗೆ ಆ ಯೆಹೂದ್ಯರ ಮನೆಯ ಮುಂದೆ ಗಲಾಟೆಯೋ ಗಲಾಟೆ (ಪಂಚಾಮೃ. ೩೦) ; ಗಲಾಟೆ ಗೋಲಿಬಾರುಗಳು ನಡೆದುವು (ದ್ರಾವಿವಿ.೩೪) ; ಎಲ್ಲೊ ಗಲಾಟೆ, ಖೂನು, ದರೋಡೆ (ಅರಳು.೪೨೫-೨೧). ೪. ಜನಜಂಗುಳಿ ; ನೂಕುನುಗ್ಗಲು ; ಸಂದಣಿ : ಮಾರ್ಕೆಟ್ ಚೌಕದ ಬಳಿಯ ಗಲಾಟೆಗಳನ್ನು ದಾಟಿಕೊಂಡು . . .ಹೋಗುತ್ತಿದ್ದಾನೆ (ರಂಗಕ. ೨) ; ನವರಾತ್ರಿಯ ಗಲಾಟೆ . . . ಈಗಲೇ ಹೊರಡಯ್ಯ (ರಾಮಾನಿ.೧೦೮). [← ಮರಾ. ಗಳಾಟಾ, ಗಳ್ಹಾಟಾ./ ತಮಿ. ಗಲಾಟ್ಟಾ]

**ಗಲಾಯು** (ನಾ). ಒಂದು ಬಗೆಯ ಗಂಟಲು ರೋಗ : ಶ್ಲೇಷ್ಮ ರಕ್ತಗಳಿಂದ ಕೊರಳೊಳಗೆ ದಪ್ಪವಾಗಿ ಗಂಟುಕಟ್ಟುವದು. ಶ್ವಾಸವ ತಡೆವದು. ಸ್ವರಕ್ಷಯವಾದ ಕಾರಣ ಸ್ವರಭಂಗವಾಗಿ ಮಾತನಾಡಲೀಸದು. ಹೀಗೆ ಇದ್ದುದು ಗಲಾಯು ಎನಿಸಿಕೊಂಬುದು (ವೈದ್ಯಸಾ. II, ೧೧೯).
[< ಸಂ. ಗಲಾಯುಸ್]

**ಗಲಿತ**, ಗಳಿತ (ಗು). ೧. ಜಾರಿದ ; ಬಿದ್ದುಹೋದ : ಗಲಿತಾಲಂಕೃತಿ ವೀತಧಾತು ಶಿಥಿಲೀಭೂತಾಂಗಿ ದೋಷವ್ರಜಾಕುಲೆ . . . ಸದ್ರಸಿಕ ಚೇತೋರಾಗಮಂ ಮಾಳ್ಪಳೇ (ಶಬಶಂ. ೧-೧೨). ೨. ಸೋರಿದ ; ಜಿನುಗಿದ. **ಗಳಿತ** : ೧. ಗಳಿತ ಧಾರೆಗಳಂತಿರೆ ಪತ್ತಿಗಳ್ (ಕವಿರಾ. ೧-೧೪೩) ; ಗಳಿತಕೋಪನೇ [ಕಲಿ]ಭೀಮಂ (ಗದಾಯು. ೧-೬೩). (ನಾ). ೩. ಜಾರಿದುದು ; ಬಿದ್ದುಹೋದುದು : ನಿನ್ನ ಮಕುಟಂ ವಿಲಸಿತ ಪಾಂಡ್ಯೇಂದ್ರನಿಂದೆ ಗಳಿತಮದಕ್ಕೆಂದಲಸದೆ ಶಾಪಮನೀಯಲ್ (ಹಾಲಾಸ್ಯ. ೧-೩-೧೧). ೪. ಸೋರುವಿಕೆ ; ಜಿನುಗುವಿಕೆ : ಇಂದ್ರಿಯವನ್ನು ಹರಿಯಬಿಡುವದರಿಂದ ಒಡಕುಮಡಿಕೆಯ ನೀರಿನಂತೆ ಆಯುಸ್ಸೆಲ್ಲ ಗಳಿತವಾಗುವದು (ನೀಗಟ್ಟು. ೧೩೬). [ಸಂ.]

**ಗಲಿಬಿಲಿ**, ಗಲಬಲಿ, ಗಲಬಿಲಿ (ನಾ). ೧. ಗದ್ದಲ ; ಗಲಾಟೆ ; ಕೋಲಾಹಲ ; ಗಲಭೆ : ಆ ಸಭೆಯಲ್ಲಿ ಗಲಿಬಿಲಿಯು ಉತ್ಪನ್ನವಾಯಿತು (ಮಭಾರ. ೯೬) ; ದೀಪ ಆರಿದೊಡನೆಯೇ ಒಳಗೆಲ್ಲ ಗಲಿಬಿಲಿ (ಆಲಹೂ. ೧೦) ; ಆಲದಗಿಡದಲ್ಲಿಯ ಗಲಿಬಿಲಿಯು ಕಡಿಮೆಯಾಗಿ ಅರ್ಧತಾಸಿಗೆ ಮೇಲಾಗಿತ್ತು (ಧರ್ಮರ. ೧೫೪).

೨. ದಿಕ್ಕುತೋಚದಿರುವುದು; ಕಕ್ಕಾಬಿಕ್ಕಿಯಾಗುವುದು; ದಿಗ್ಭ್ರಾಂತಿ: ಅಡ್ಡಹಾದಿಯ ಹಿಡಿದೆಲ್ಲರ ಬೆರೆದರೆ ಪಡೆಯುವೆ ಬರಿಯ ಗಲಿಬಿಲಿಯ (ಇಂಚಾಪ.೨೧೩-೫೪); ಅವನ ತಲೆಯಲ್ಲಿ ಅಸಾಧ್ಯ ಗಲಿಬಿಲಿಯಾಗಿತ್ತು (ದುಂಬಿಕ. ೧೧೪); ಈಗಂತೂ ಅವನ ವರ್ತನೆಯಿಂದ ಇನ್ನಷ್ಟು ಗಲಿಬಿಲಿಯಾಯಿತು (ಒಡ್ಡಿಉ. ೧೯). ೩. ಗೊಂದಲ; ತೊಡಕು; ಅವ್ಯವಸ್ಥೆ: ಪ್ರತಿಮೆಗಳು . . . ಒಂದರೊಳಗೆ ಒಂದು ಕೂಡಿ ಎಲ್ಲಾ ಗಲಿಬಿಲಿಯಾಗಿ ಹೋಗುತ್ತಿದ್ದವು (ಮುಂಬಯಿ. ೩-೧೪೪); ಆದರೆ ಈಯೆಲ್ಲ ಗಲಿಬಿಲಿಯು ಶಹಜಹಾನನ ದುಃಖಕ್ಕೆ ಕಿಚ್ಚುಹಾಕಿದಂತೆ ಆಯಿತಷ್ಟೆ (ಕಗದ್ಯ. ೧೭); ಕಿಟ್ಟಿಗೆ ಅರ್ಥವಾಗದ ಗಲಿಬಿಲಿ ಇವೆಲ್ಲ (ಹೊಸಕ್ಷಿ. ೧೨೦). **ಗಲಬಲಿ**: ೧. 'ಗಲಬಲಿಸು' ಪರಾ. **ಗಲಬಿಲಿ**: (೬).

[ದೇ. || ತಮಿ. ಕಲಿಪಲಿ, ಕಲಿಪಿಲಿ; ತುಳು. ತೆಲು. ಗಲಿಬಿಲಿ. / ಮರಾ. ಗಲಬಲ]

**ಗಲಿಯಿಸು**, ಗಳಿಯಿಸು (ಕ್ರಿ). ೧. ಸುರಿ; ಸೋರು; ಜಿನುಗು: ಕ್ರಿಮಿಗಳ್ ಜನಿಯಿಸಿ . . . ಕಣ್ಣೊಳ್ ಮೇಣ್ ಗಲಿಯಿಸಿದೊಡೆ ಪಸುಮೂತ್ರಂಗಳನೂಡುಗೆ ಕಿಡಿಸುಗದುವೆ ತತ್ಕ್ರಿಮಿಕುಲಮಂ (ಅಶ್ವಶಾ. ೧೧-೩೭). **ಗಳಿಯಿಸು**: ೧. ಗಳಿಯಿಸುತಿರೆ ನಯನವಾರಿ ನಿಸ್ಸ್ವಾನನದಿಂ (ಗದಾಯು. ೧-೬೩); ಸ್ವಕೀಯ ದೀರ್ಘಲೋಚನಂಗಳಿಂ ಗಳಗಳನೆ ಗಳಿಯಿಸುವಶ್ರುಬಿಂದುಗಳನುತ್ತರೀಯಾಂಚಳದಿನೊತ್ತಿ ಕಳೆದು (ನೇಮಿಪು. ೧೪-೮೯ ವ); ಶಶಿಯಿಂ ಗಳಿಯಿಸುವ ಚಂದ್ರಕಾಂತೋಪಳದೊಳ್ ನಿರ್ಮಿಸಿದ ಪೆಣ್ಣ ರೂಪಂ ತಳೆದಳ್ (ಶೃಂಗಾರ. ೨-೭). ೨. ಕೆಳಗೆ ಬೀಳು: ವಿಳಸನ್ಮಾಗಧಕಿರೀಟ ರತ್ನಾಂಶುಗಣಂ ಗಳಿಯಿಸಿದುದು . . . ನೃಪೇಂದ್ರಪದಸರಸಿಜದೊಳ್ (ಆದಿಪು. ೧೨-೧೧೩). ೩. ನೇತುಬೀಳು; ಜೋಲುಬೀಳು: ಗಳಿಯಿಸುತಿರೆ ಕಬರಿಭರಂ (ಗದಾಯು. ೧-೬೩). ೪. ಕಳೆದುಹೋಗು; ನಾಶವಾಗು; ಇಲ್ಲವಾಗು: ತವೆ ತೈಲಂ ದೀಪಂ ನಂದುವಂತೆ ಗಳಿಯಿಸೆ ನಿಷೇಕಮಟ್ಟಿವರ್ (ಪಂರಾಮಾ. ೧-೮೨).

[ಗಲನ + -ಇಸು₁]

**ಗಲೀಜು** (ನಾ). ಕೊಳಕು; ಹೊಲಸು: ನೀರು ಬಹಳ ಗಲೀಜು ಆಗುವುದೆಂದು ತಿಳಿದದ್ದರಿಂದ ಹೀಗೆ ಮಾಡಬೇಕಾಯಿತು (ಚಂಗಾಳ್ವ. ೩೪೮); ನಿನ್ನನ್ನ ಯಾರೋ ಹೋಗಿ ಗೋಡೆಯನ್ನು ಗಲೀಜುಮಾಡಲು ಹೇಳಿದರು? (ಶಾಲಿಮ. ೩೪). [← ಅರ. ಹಿಂ. ಗಲೀಜ್]

**ಗಲೀತ** (ನಾ). ಏಟು; ಪೆಟ್ಟು; ಹೊಡೆತ: ಬೆನ್ನ ಮೇಲೆ ಇನ್ನೊಂದು ಗಲೀತ ಬಿತ್ತು (ಸ್ವಾಮಿಸ್ನೇ. ೧೨೮); ಮಾತಾಡೊ ಗತ್ತು ಬದಲಾಯಿಸ ದಿದ್ದರೆ ಗಲೀತಾ ಬಿದ್ದೀತು! (ಶಕಾರ. ೩೨). [?]

**ಗಲುಕುಹುಲ್ಲು** 'ಗಲಕುಹುಲ್ಲು' ನೋ.

**ಗಲುಗಲನೆ** 'ಗಲಗಲನೆ' ನೋ.

**ಗಲುಗು** 'ಗಲಗು₁' ನೋ.

**ಗಲೇಫು**, ಗಲ್ಲೀಪ, ಗಲ್ಲೀಪು (ನಾ). ೧. ತಲೆದಿಂಬಿನ, ಆರಾಮ ಕುರ್ಚಿಯ ಅಥವಾ ಹಾಸುಗೆಯ ಚೀಲ; ಗವಸಣಿಗೆ: (೬). **ಗಲ್ಲೀಪ**: ೨. "ದೇವರಿಗೆ ಹೊದಿಸುವ ವಸ್ತ್ರ" (ಜಾನಕೋ. ೪೭). ೩. ಎತ್ತಿನ ಬೆನ್ನಿನ ಮೇಲೆ ಹಾಕುವ ಹೊದಿಕೆ; ಜೂಲು: ಬಿತ್ತೂವ ಕಾಲಕ್ಕೆ ಹತ್ತ್ಯಾನ ಮಳಿರಾಜ . . . ನಂ ಬಸವಣ್ಣನ ಗಲ್ಲೀಪ ತೊಯ್ದು ಮುಖ ಬಾಡೀ (ಕಜಾಗೀ. ೭೪); ಮಲ್ಲಿಗೆ ತೂರೀನೆ, ಗಲ್ಲೀಪ ಹೊಲಿಸೇನೆ (ಕನ್ನಜಾ. ೬). **ಗಲ್ಲೀಪು**: ೩. ರೇಸಿಮೆಯ ಗಲ್ಲೀಪು ಸಾಸೀರ ಗೊಂಡೇವು (ಲೋಕಗೀ. ೧೯೬).

[← ಅರ. ಘಿಲಾಫ್; ಪಾರ. ಗಿಲಾಫ್, ಗಿಲೇಫ; ಹಿಂ. ಗಲೇಫ್, ಗಿಲಾಫ್; ಮರಾ. ಗಲೇಫ್]

**ಗಲೋದ್ದೇಶ**, ಗಳೋದ್ದೇಶ (ನಾ). ಕೊರಳಿನ ಎಡೆ; ಕುತ್ತಿಗೆಯ ಸ್ಥಳ; ಕಂಠಸ್ಥಳ: (೬). **ಗಳೋದ್ದೇಶ**: ನಿಗಾಳಃ, ಗಳೋದ್ದೇಶ . . . ಕುದುರೆಯ ಕೊರಳ ಮೇಲ್ಗಡೆಗೆ ಹೆಸರು (ಸಿದ್ಧಾಂತಿ. ೨೧೫).

[ಗಲ + ಉದ್ದೇಶ]

**ಗಲೌಘು** (ನಾ). ಒಂದು ಬಗೆಯ ಗಂಟಲು ರೋಗ: ರಕ್ತಶ್ಲೇಷ್ಮಗಳಿಂದ ಕೊರಳಲ್ಲಿ ಬಾತು ಉಂಟಾಗುವದು . . . ಈ ರೀತಿಯಲ್ಲಿದ್ದುದು ಗಲೌಘುವೆನಿಸಿಕೊಂಬುದು (ವೈದ್ಯಸಾ. II, ೧೧೯). [ಸಂ.]

**ಗಲ್ಕು** 'ಗಲಗು₁' ನೋ.

**ಗಲ್ಗಲನೆ** 'ಗಲಗಲನೆ' ನೋ.

**ಗಲ್ಲ₁** (ನಾ). ೧. ಕೆನ್ನೆ; ಕದಪು; ಕಪೋಲ: "ಕದಪು ಕೆಕ್ಕೆಯು ಗಲ್ಲ ಕೆನ್ನೆ" (ಶಬ್ದಮಂ.೬೨); ಮೂಗಿಯ ದೇಸಿಗನಂತೆ ಬೂದಿವೆರಸಿರ್ದೊಡಲುಂ ಎರೆಯ ಕೆಚಿಕಿಯಂತೆ ಬತ್ತಿರ್ದ ಗಲ್ಲವುಂ (ಧರ್ಮಾಮೃ. ೪-೭೫); ನೆತ್ತಿ ಮುಸುಕಿನ ಕೈಯು ಗಲ್ಲದ ಕುತ್ತದಲೆ ನೆಟ್ಟಾಲಿಗಳ ಚಲಚಿತ್ತರಿದ್ದುದು ಸಕಲನಾಯಕವಾಡಿ ದುಗುಡದಲಿ (ಕುಮ್ಯಾದ್ರೋ. ೪-೪); ಬತ್ತಿದ ಗಲ್ಲ ಹತ್ತಿದ ಮೊಲೆ ನೆಲದೊಳಗೊತ್ತಿ ಹೂಡಿದ ಕೈಗೋಲು (ಕಂಸವಿ. ೬-೧೯೦). ೨. ತುಟಿಯ ಕೆಳಭಾಗ; ಗದ್ದ; ಚಿಬುಕ: "ಗಲ್ಲಂ ಚುಬುಕವು" (ಕಶರ. ೩೧); ನೆರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡು ಪೋಗದ ಮುನ್ನ . . . ಪೂಜಿಸು (ಬಸವ. ೧೬೧); ಮದೀಯ ಪುಣ್ಯ ಶ್ಲೋಕತೆಯನುಳುಹೆಂದು ಗಲ್ಲವ ಹಿಡಿದನನಿಲಜನ (ಕುಮ್ಯಾಆ. ೪-೫); ಮೆಲ್ಲಮೆಲ್ಲನೆ ಬಂದು ಗಲ್ಲಕ್ಕೆ ಮುದ್ದು ಕೊಟ್ಟು ನಿಲ್ಲದೆ ಓಡಿಪೋದ (ಪುರಂದ. ೧-೯೧ ಅನುಪಲ್ಲವಿ). [ಸಂ.]

**ಗಲ್ಲ₂** 'ಗಲ್ಲು' ನೋ.

**ಗಲ್ಲ₃** 'ಗಲ್ಲೆ₂' ನೋ.

**ಗಲ್ಲಂಗುಜಿಗೊಳ್** (ಕ್ರಿ). ೧. ಕೆನ್ನೆಯನ್ನು ತಿವಿ; ಗಲ್ಲವನ್ನು ತಿವಿ (?). ೨. ಬುದ್ಧಿಹೇಳು (?): ಅರ ಮಗಳೆಂದು ಭೂಭುಜ ನಾರಯ್ಯದೆ ನಿನ್ನನರಸಿ ಮಾಡಿದನೆಂಬೀ ಕಾರುಣ್ಯಂ ಕೇವಳಮೇ ಧಾರಿಣಿ ಬೆಸಗೆಯ್ಯೆ ಬಾಟ್ಟುದಿದು ಬೇವಸಮೇ ಎಂದು ಕಂಡಕಂಡವರೆಲ್ಲಂ ಗಲ್ಲಂಗುಜಿ [ಪಾಠಾಂ. ಗಲ್ಲಗುಗ್ಗುರಿ]ಗೊಳೆ (ಧರ್ಮಾಮೃ. ೩-೧೯೮).

[ಗಲ್ಲ₁+ ಗುಜಿ (< ಕುಟ್ಟು₂) + ಕೊಳ್₁]

**ಗಲ್ಲಂಬಿಡಿ**, ಗಲ್ಲವಿಡಿ, ಗಲ್ಲಹಿಡಿ (ಕ್ರಿ). ಗಲ್ಲವನ್ನು ಹಿಡಿದುಕೊಳ್ಳು; ಗದ್ದವನ್ನು ಕೈಯಿಂದ ಸವರು: ಗಮನಕನುಕೂಲೆಯಾಗೆನುತ ಗಲ್ಲಂಬಿಡಿದು ಕಮಲಾಕ್ಷಿಯಂ ಮುದ್ದುಗೈದು (ಜೈಮಿಭಾ. ೧೧-೧೫). **ಗಲ್ಲವಿಡಿ**: ಗಲ್ಲವಿಡಿದು ಮುದ್ದಿಸಿ ಗರಗ್ಗರಿಕೆಯ ಅಲ್ಲೆನುಡಿಯ ನುಣ್ಪಂ ಕಿವಿಗಾಗಿಸಿ (ಜಯುಕಾ. ೧೪-೭೭). **ಗಲ್ಲಹಿಡಿ**: ಮಗುವಿನ ಗಲ್ಲಹಿಡಿದು ಮುದ್ದುಮಾಡಿದನು (ರೂಢಿ).

[ಗಲ್ಲ₁ + ಪಿಡಿ₁]

**ಗಲ್ಲಗಿವಿ** (ನಾ). ಕೆನ್ನೆಯವರೆಗೂ ಜೋಲಾಡುವ ಕಿವಿ; ದೊಡ್ಡ ಕಿವಿ: ಗಲ್ಲಗಿವಿ . . . ಗಲ್ಲಸ್ಥಳಂ (ಶಮದ. ೨೯೫ ಪ್ರಯೋ).

[ಗಲ್ಲ₁ + ಕಿವಿ₃]

**ಗಲ್ಲಗುಗ್ಗುರಿ** (ನಾ). ಕೆನ್ನೆಯ ಮೇಲೆ ತೂಗಾಡುತ್ತಿರುವ ಮುಂಗುರುಳು, —ಗುಂಗುರುಕೂದಲು: ಗಲ್ಲಗಿವಿ, ಗಲ್ಲಗುಗ್ಗುರಿ (ಶಮದ. ೨೯೫ ಪ್ರಯೋ). [ಗಲ್ಲ₁ + ಗುಗ್ಗುರಿ₂]

**ಗಲ್ಲಗುಳಿ** (ನಾ). ಕೆನ್ನೆಯಲ್ಲಿ ಅಥವಾ ಗಲ್ಲದಲ್ಲಿ ಉಂಟಾಗುವ ಸಣ್ಣ ಕುಳಿ: "ಗಲ್ಲಗುಳಿ – ನಗುವಾಗ ಅಥವಾ ಮಾತಾಡುವಾಗ ಗಲ್ಲಕ್ಕೆ ಬೀಳುವ ತಗ್ಗು" (ಕಸ್ತೂಕೋ. ೨೯೦).

[ಗಲ್ಲ₁ + ಗುಳಿ₁ (< ಕುಟ್ಟು₂)]

**ಗಲ್ಲಗೈಗೊಳ್** (ಕ್ರಿ). ೧. ಗದ್ದದ ಮೇಲೆ ಕೈಯಿಡು. ೨. ಆಲೋಚನಾಮಗ್ನವಾಗು : ಇದಿರೇಳದೆ ಗಲ್ಲಗೈಗೊಂಡು ತಲೆವಾಗಿ ಸುದತಿಯಿರಲು ನೋಡಿ (ನಾಗಕು. ೩-೧೦೭).
[ಗಲ್ಲ$_1$ + ಕೈ$_2$ (< ಕೆಯ್$_2$) + ಕೊಳ್$_1$]

**ಗಲ್ಲಟಿಕ** (ನಾ). ಕಬ್ಬಿಣದ ಹಂಚು; ಕಾವಲಿ : "ಗಲ್ಲಟಿಕಾಹ್ವಯಂ ಕಾವಲಿಯುದು" (ವಸ್ತುಕೋ. ೫೦-೩೦). [?]

**ಗಲ್ಲಣ** 'ಗಲ್ಲಣೆ' ನೋ.

**ಗಲ್ಲಣೆ, ಗಲ್ಲಣ, ಘಲ್ಲಣಿ, ಘಲ್ಲಣೆ** (ನಾ). ೧. ಕಾಟ; ತೊಂದರೆ; ಹಿಂಸೆ : "ಗಲ್ಲಣೆಯೆನೆ ಘಾಸಿಯೆಂದು ತಿಳಿಗೆ ವಿದಗ್ಧರ್" (ಭಾರನಿ. ೨೦); ಅಜಾವು ಮಜಹಿನ ಗಲ್ಲಣೆಯನೀಡಾಡಿ ತಾನಿರಬಲ್ಲೊಡಾತನೆ ಮುಕ್ತನೈ (ಪ್ರಭುಲೀ. ೨೪-೨೨); ಅಲ್ಲಿಗಲ್ಲಿಗೆ ದೈವ ಮಾಡಿದ ಗಲ್ಲಣೆಯ ಬಲು ಮಾಯಕಿದಕಿನ್ನೆಲ್ಲಿಗೈದುವೆ ನಾನು (ಕೋಗಯ. ೫-೨೩). ೨. ಗಾಬರಿಗೊಳಿಸುವ ಧ್ವನಿ; ಭಯಂಕರಶಬ್ದ : ಆಂ ತಾನೆಂಬಾಕೆವಾಳರ ಗಲ್ಲಣೆಯ ಬಲ್ಲುಲಿಯಂ ಮಾಣಿಸಿ (ರಾಮಾಶ್ವ. ೪೭-೬); "ಸಾಂಕ್ರಾಮಿಕ ಧ್ವನಿ" (ರಾಮಾಶ್ವ. ಕೋಶ). ೩. ಏಟು; ಹೊಡೆತ : ಹೆಕ್ಕಳದ ಖಡುಗದ ಗಲ್ಲಣೆಯ [ಪಾಠಾಂ. ಘಲ್ಲಣೆಯ] ಖಣಖಣಿಲ ಗಾಢಿಕೆ ಕಂಠಿಸಿತು ನಭವ (ಕುವ್ಯಾಅ. ೧೮-೩೫). **ಗಲ್ಲಣ :** ೧. ಹಲ್ಲಿ ಘಲವು ನುಡಿದ ಬಳಿಕ ಮೃತ್ಯು ಕುಲವು ಕೆಟ್ಟಿತೆಂದು ಸೊಲ್ಲ ನುಡಿಯಿಂದಾಡಿಸುವ ಗಲ್ಲಣವ ಕೇಳಿರೊ (ಕಾಲಸಂ. ೭೭). **ಘಲ್ಲಣಿ :** ೩. ನಿಲ್ಲದೋಡಿತು ದೊಡ್ಡ ಘಲ್ಲಣಿಯನಾಂತು (ಜೈಮಿಭಾ. ೨೧-೨೦); "ಕಾಳಗ" (ಜೈಮಿಭಾ. ಟೀಕ). **ಘಲ್ಲಣೆ :** ೧. ಕಲ್ಲಹಾಯ್ವಂತಿಜಾಿದುಕೊಂಬಂತೆ ಸಂಭ್ರಮಿಸುತಲ್ಲಲ್ಲಿ ಹೋಹರಂ ಕರೆಕರೆದು ದೂಜಾತಿಹ ಘಲ್ಲಣೆಗೆ ತಲ್ಲಣಿಸಿ ಬಿಡಹೋಗಿ ಗಂಟಿಕ್ಕಿದಂತಾದರಾ ಬಡವರು (ಸಿದ್ಧರಾ. ೮-೪); ಕಾಮನ ನನೆಯ ಬಾಣದ ಘಲ್ಲಣೆಗೆ ನಿಲಲಾಜಿವೆನುತ್ತೈದಿದರು ಚಪಲೆಯರು (ಅಕ್ರೂಚ. ೪-೧೨). ೨. ಭೀಮನ ಬಿಜುಗದೆಯ ಘಲ್ಲಣೆಗೆ ಚೆಲ್ಲಿತು ನಿಮ್ಮ ಪರಿವಾರ (ಕುವ್ಯಾಕ. ೧೫-೨೮). 'ಘಟ್ಟಣೆ' ಪರಾ. [?]

**ಗಲ್ಲತಗ್ಗು** (ನಾ). = ಗಲ್ಲಗುಳಿ : (ಕ). [ಗಲ್ಲ$_1$ + ತಗ್ಗು$_2$]

**ಗಲ್ಲಮಿಾಸೆ, ಗಲಮಿಾಸೆ, ಗಲ್ಲಿಮಿಾಸೆ** (ನಾ). ಕೆನ್ನೆಯ ಮೇಲೆ ಸುರುಳಿಗೊಂಡ ಮಿಾಸೆ : 'ಕುಡಿಮಿಾಸೆ, ಗಲ್ಲಮಿಾಸೆ, ಕಲ್ಲೀಮಿಾಸೆ'ಗಳು ಇವರ ಅಭಿಮಾನದ ವಿಷಯ; ಪೌರುಷದ ಲಕ್ಷಣ (ಕರ್ನಾಪೂ. ೨೮); ಗಲ್ಲಮಿಾಸೆಯ ಪೋಲೀಸಿನವನು (ರೂಢಿ). **ಗಲಮಿಾಸೆ :** "ಗಲಮಿಾಸೆ - ಕಲ್ಲಿಮಿಾಸೆ" (ಜಾನಕೋ. ೪೬). **ಗಲ್ಲಿಮಿಾಸೆ :** ಗಲ್ಲಿಮಿಾಸೆಗಳೇತಕಿವು ಗಲ್ಲದಲ್ಲಿ ತೆಗೆಸಿನ್ನು (ಕರ್ನಾಕ. ೩೦೫). 'ಕಲ್ಲಿಮಿಾಸೆ' ಪರಾ.
[ಗಲ್ಲ$_1$ + ಮಿಾಸೆ]

**ಗಲ್ಲಮುಗುರಿ** (ನಾ). (?) : ಗಲ್ಲಕ್ಕೆ : -ಗಲ್ಲಗಿವಿ, ಗಲ್ಲಗುಗ್ಗುರಿ, ಗಲ್ಲಮುಗುರಿ (ಶಮುದ. ೨೪೮ ಪ್ರಯೋ). [ಗಲ್ಲ$_1$ + ಮುಗುರಿ ?]

**ಗಲ್ಲವಿಡಿ** 'ಗಲ್ಲಂಬಿಡಿ' ನೋ.

**ಗಲ್ಲವುಣ್** (ನಾ). ಕೆನ್ನೆಯಲ್ಲಿನ ಹುಣ್ಣು, -ವ್ರಣ : ಗಲ್ಲವುಣ್ಗಳ್ ಕವಿವನ್ನಂ ತಿಂಬ ಪೆರ್ಮುಂಬಿಗಳನಿರಿಸುತುಂ ಕೊಲ್ಲದೆ (ಲೀಲಾವ. ೬-೭೫).
[ಗಲ್ಲ$_1$ + ಪುಣ್]

**ಗಲ್ಲಸ್ಥಳ** (ನಾ). ಕಪೋಲಪ್ರದೇಶ; ಗಂಡಸ್ಥಲ : "ತೆಳ್ಗಲ್ಲ ಗಲ್ಲಸ್ಥಳಂ" (ಕಬ್ಬಿಕೈ. ೯೮); ಗಲ್ಲಗಿವಿ . . . ಗಲ್ಲಸ್ಥಳಂ, ತೆಳ್ಗಲ್ಲ (ಶಮುದ. ೨೪೮ ಪ್ರಯೋ). [ಗಲ್ಲ$_1$ + ಸ್ಥಳ (= ಸ್ಥಲ)]

**ಗಲ್ಲಹಿಡಿ** 'ಗಲ್ಲಂಬಿಡಿ' ನೋ.

**ಗಲ್ಲಾ** 'ಗಲ್ಲೆ$_2$' ನೋ.

**ಗಲ್ಲಾಗುಲ್ಲಿ** (ನಾ). "ಹೀನಸ್ವಭಾವದವಳು" (ಜಾನಕೋ. ೪೬). [?]

**ಗಲ್ಲಾಪೆಟ್ಟಿಗೆ** (ನಾ). = ಗಲ್ಲೆ$_2$ ೧ : ಇಂದಿನ ಚಿತ್ರಗಳು ಗಲ್ಲಾಪೆಟ್ಟಿಗೆಯ ದೃಷ್ಟಿಯಿಂದ ತಯಾರಾದುವು (ರೂಢಿ).
[ಗಲ್ಲಾ (< ಗಲ್ಲೆ$_2$ + ಪೆಟ್ಟಿಗೆ]

**ಗಲ್ಲಿ$_1$** (ನಾ). ಎರಡು ಕಡೆ ಮನೆಗಳುಳ್ಳ ಇಕ್ಕಟ್ಟಾದ ಬೀದಿ; ಓಣಿ; ಕೇರಿ : ಆ ಗಲ್ಲಿ ಈ ಗಲ್ಲಿ ತೂರಿ, ಅತ್ತ ಜಾಗಿ ಇಲ್ಲಿ ಬಳುಕಿ. . . ತೂರಾಡುತ್ತಲೇ ಇದ್ದರು (ಮಾಮನೆ. ೧೨೩); ನನ್ನ ನೋಡಿ ಗಲ್ಲೀಲೆ ತಲೆಮರೆಸಿಕೊಂಡು ಹೋಗಬೇಡ (ಕಂಕಣ. ೮೯); ಒಂದೊಂದು ಗಲ್ಲಿಗೆ ಒಂದೊಂದರಂತೆ . . . ಕಕ್ಕಸುಗಳ ಸಾಲುಗಳನ್ನು ಕಟ್ಟಿದ್ದಾರೆ (ದಿಲ್ಲಿಪ. ೧೦೯). [← ಹಿಂ. ಗಲೀ; ಮರಾ. ಗಲ್ಲೀ]

**ಗಲ್ಲಿ$_2$** 'ಗಲ್ಲು' ನೋ.

**ಗಲ್ಲಿಮಣೆ** 'ಗಲ್ಲುಮಣೆ' ನೋ.

**ಗಲ್ಲಿಮಿಾಸೆ** 'ಗಲ್ಲಮಿಾಸೆ' ನೋ.

**ಗಲ್ಲಿಸು, ಘಲ್ಲಿಸು** (ಕ್ರಿ). ೧. ಅಲ್ಲಾಡಿಸು; ಕುಲುಕು : ಝಳಪಿಸುವಸಿ ಗಲ್ಲಿಸುವ ಕುಂತಂ (ಕಳನ್ಯ. ೨-೩೦); ಆ ಕುಪ್ಪಿಯೊಳಗೆ ನೀರು ಹಾಕಿ ಚೆನ್ನಾಗಿ ಗಲ್ಲಿಸಿದರೆ (ಮುಂಬಯಿ. ೬-೩೩). ೨. ಪೀಡಿಸು; ಕಾಡಿಸು; ಕಷ್ಟಪಡಿಸು : ಘಟೋತ್ಕಚನು ಗ[ಪಾಠಾಂ. ಘ]ಲ್ಲಿಸಿದನತಿರಥರ (ಕುವ್ಯಾದ್ರೋ. ೧೬-೯); ಗಲ್ಲಿಸಿ ನನ್ನನಂಜಿಪ ತಂತ್ರವದಕೆ ನಾನಲ್ಲಾಡಿದವನಲ್ಲವೆಂದ (ಭರಚ. ೩೭-೩೯); ಗ[ಪಾಠಾಂ. ಘ]ಲ್ಲಿಸುವ ಬೇಸಗೆಯ ಬಿಸಿಲಿಂದ ಮೂಜಗಂ ತಲ್ಲಣಿಸಿತು (ಜೈಮಿಭಾ. ೧೫-೨); ಝಲ್ಲಿಯ ಮೃಗಗಳ ಗಲ್ಲಿಸಿ ಪಿಡಿಯುತ ಮಲ್ಲರು ವಿಪಿನದೊಳು (ಹಮಚ. ೧೭); ನನ್ನ ಕಂಡು ಕುಣಿಕುಣಿದು ಕೆಲೆಕೆಲೆವ ನಿನ್ನ ಅಟ್ಟಹಾಸವು ಗಗನಕ್ಕೇರಿ ಗಲ್ಲಿಸಿ ತಾರೆಗಳನು ತುಳುಕಾಡಿಸಿತು (ಉಯ್ಯಾಲೆ. ೧೦೮-೧೫). **ಘಲ್ಲಿಸು :** ೧. ಜಡಿವ ಪಟಹಮೃದಂಗಘಂಟೆಗಳಿಡಿದ ಶಂಖಮಹಾನಿನಾದದ ಗಡಬಡಿಕೆ ಘಲ್ಲಿಸಿದುದಬುಜಭವಾಂಡಮಂಡಲವ (ನಿಭಾಗ. ೧-೭-೧೩); ಘಲ್ಲಿಸುತ ನಿಜಗದೆಯ ಕೇಸರಿ ಹುಲ್ಲೆಗಂಗೈಪಂತೆ ಸುರಕುಲವಲ್ಲಭನ ಕೋಟೇರವಿಬ್ಬಗೆಯಾಗಲೆಜಗಿದನು (ಕೋಗಯ. ೧೦-೬). ೨. ಬಿಲ್ಲ ಕೊಪ್ಪಿನಲಿಜಾಿದು ಭೀಮನ ಘಲ್ಲಿಸಿದನು (ಕುವ್ಯಾದ್ರೋ. ೧೩-೬೧). ೩. ತಾಗು; ಆಕ್ರಮಿಸು; ಮೇಲೆಬೀಳು : ಐವೇಳ್ವೆನೆಯ್ತಪ್ಪ ರಥಕುಲಮನೀಕ್ಷಿಸುತೆ ನೆಗೆದು ರಥದೊಳು ಪೋಗುತೊಗೆದು ಘಲ್ಲಿಸಿ ಮಸಗೆ (ಇಹರ. ದೇ. ೪೨-೨೩). [ಗಲ್ಲಣೆ + -ಇಸು$_3$]

**ಗಲ್ಲೀಪ** 'ಗಲೇಫು' ನೋ.

**ಗಲ್ಲೀಫು** 'ಗಲೇಫು' ನೋ.

**ಗಲ್ಲು, ಗಲ್ಲ$_2$, ಗಲ್ಲಿ$_2$** (ನಾ). ಕುತ್ತಿಗೆಗೆ ನೇಣುಹಾಕಿ ಕೊಲ್ಲುವ ಸಾಧನ ಮತ್ತು ಅದರಿಂದ ಕೊಡುವ ಶಿಕ್ಷೆ, -ದಂಡನೆ : ಹರಟೆಯಲ್ಲಿ ಕಾಲಕಳೆದರೆ ಶಿಕ್ಷೆ ಗಲ್ಲು (ಕೋಗಿಲೆ. ೨-೩೧). **ಗಲ್ಲ$_2$ :** ಪ್ರಸಿದ್ಧ ಕ್ರಾಂತಿಕಾರರೆಂದು ಪರಿಗಣಿಸಲ್ಪಟ್ಟಿದ್ದ ಭಗತ್‌ಸಿಂಗ, ರಾಜಗುರು ಮತ್ತು ಸುಖದೇವ ಮುಂತಾದವರು ಈಗಾಗಲೇ ಗಲ್ಲಕ್ಕೆ ಏರಿಸಲ್ಪಟ್ಟಿದ್ದರು (ರಾಜವ. ೪೩); ಈಗ ನನ್ನ ಮುಂದೆ ಅದು ಗಲ್ಲಕ್ಕೇರುವುದನ್ನು ನೋಡಿ ನನ್ನ ಕಣ್ಣುಗಳು ಒಡೆಯಲಾರವೇ (ವಿಧಿವ್ಯೆ. ೧೭೭). **ಗಲ್ಲಿ$_2$ :** 'ಗಲ್ಲಿಮಣೆ' ಪರಾ.

**ಗಲ್ಲಿಗೆ ಹಾಕು** = ಗಲ್ಲುಗಂಬಕ್ಕೆ ಏರಿಸು : ಕೊಲೆಕೇಸಿನ ಅಪರಾಧಿಯನ್ನು ಗಲ್ಲಿಗೆ ಹಾಕಿಯಾಯಿತು (ರೂಢಿ). **ಗಲ್ಲಿಗೇರಿಸು** = ೧. ಗಲ್ಲಿಗೆ ಹಾಕು : ಅವರನ್ನು ಗಲ್ಲಿಗೇರಿಸಲಾಯಿತು (ಪುನರು. ೫೦೫); ೧೮೫೭ರ ಬಂಡಾಯದಲ್ಲಿ ನಮ್ಮ ಅಜ್ಜನನ್ನು ಹಿಡಿದೊಯ್ದು ಗಲ್ಲಿಗೇರಿಸಿದರು (ಸ್ಮೃತಿಚಿ. ೧೫); ರಾಜಒಡೆಯನನ್ನು ಹಿಡಿತರಿಸಿ ಗಲ್ಲಿಗೇರಿಸಬೇಕೆಂದು ಸ್ಥಿರಸಂಕಲ್ಪಮಾಡಿಕೊಂಡನು (ಶ್ರೀರಾಯ. ೧೯೩);

ಆ ಮೆಸಿಫಾಕ್ಸ ಮಾತ್ರ ಹಿಂದೆಯೇ ಸೆರೆಸಿಕ್ಕು ಗಲ್ಲಿಗೇರಿಸಲ್ಪಟ್ಟನು (ಮಹಾಶ್ಮಾ. ೧೦೮). ೨. (ಆಲಂ) ನಾಶಮಾಡು; ಹಾಳುಗೆಡವು: ಸ್ವತಃ ನೇಣು ಹಾಕುವುದನ್ನು ಬಿಟ್ಟು ಜಾತಿಧರ್ಮವನ್ನು ಗಲ್ಲಿಗೇರಿಸಿದಿರಿ! (ಪಂಜೇ. ೬೩). ಗಲ್ಲಿಗೇರು = ಗಲ್ಲಿನ ಮಣೆಯನ್ನು ಹತ್ತು; ಮರಣದಂಡನೆಯನ್ನು ಅನುಭವಿಸು: ಅವನು ಗಲ್ಲಿಗೇರೋದೇ ನಿಶ್ಚಯವಾದರೆ. . . ಅಲ್ಲಿಗೆ ಒಯ್ಯಬಹುದು (ವೀರಯೋ. ೨೭).

[← ಇಂ. Gallows]

**ಗಲ್ಲುಗಂಬ** (ನಾ). ಮರಣದಂಡನೆಗೆ ಒಳಗಾದವನನ್ನು ನೇಣು ಹಾಕಲು ನೆಟ್ಟಿರುವ ಕಂಬ, —ಮರ: ನಿಲ್ಲಿಸಲು ಗಲ್ಲು-ಗಂಬ! ನಿನಗದುವೆ ಗಲ್ಲು-ಗಂಬ! (ನೀಕ್ಷ್ಣ. ೪೫).

[ಗಲ್ಲು + ಕಂಬ$_1$ (< ಕಂಭ)]

**ಗಲ್ಲುಗಾರ** (ನಾ). ಗಲ್ಲಿಗೇರಿಸುವ ಅಧಿಕಾರಿ: ಹತ್ತು ಗಂಟೆಗೆ ಕಾವಲುಗಾರ ಮತ್ತೆ ಬಂದು, ಮಾಸ್ಕೋವಿನಿಂದ ಗಲ್ಲುಗಾರ ಬಂದಿದ್ದುದಾಗಿ ಹೇಳಿ ಹೊರಟುಹೋದನು (ಪುನರು. ೫೦೪).

[ಗಲ್ಲು + -ಗಾರ$_1$ (< -ಕಾಱ)]

**ಗಲ್ಲುಮಣೆ,** ಗಲ್ಲಿಮಣೆ (ನಾ). ಗಲ್ಲಿಗೇರಿಸುವವನನ್ನು ನಿಲ್ಲಿಸುವ ಮಣೆ; ನೇಣುಗಂಬ: ಅವನನ್ನು ಗಲ್ಲುಮಣೆಗೇರಿಸಲಾಯಿತು (ರೂಢಿ). **ಗಲ್ಲಿಮಣೆ**: "ಸ್ವಾಮಿ ನಿಮ್ಮ ಚುನಾವಣೆ, ನಮಗೆ ಗಲ್ಲಿಮಣೆಯಾದರೆ?" ಎಂದು ಅವರು ತಮಗೆ ಬಂದ ಬೆದರಿಕೆಕಾಗದಗಳನ್ನು ತೋರಿಸಿದರು (ಗೊಂಡಾರ. ೧೪೫).

[ಗಲ್ಲು + ಮಣೆ]

**ಗಲ್ಲುಮರ** (ನಾ). = ಗಲ್ಲುಗಂಬ: ಪುರೋಹಿತಚುಂಬನಕ್ಕಾಗಿ ಜನರ ಮುಂದೆ ಹಿಡಿದ ಮೆರುಗುಪದಕದ ಆ ಹೊನ್ನಿನ ಶಿಲುಬೆ ಆ ಗಲ್ಲುಮರದ ಸಂಕೇತವೆಂಬಂಶ ಯಾರಿಗೂ ಹೊಳೆಯಲಿಲ್ಲ (ಪುನರು. ೧೭೯); ಬಡಗಿಗಳು ಗಲ್ಲುಮರ ನೆಡುತ್ತಿದ್ದುದಾಗಿ ಗುಟ್ಟಾಗಿ ಹೇಳಿಹೋದ (ಪುನರು. ೫೦೩).

[ಗಲ್ಲು + ಮರ$_1$]

**ಗಲ್ಲೆ$_1$** (ನಾ). ಮುದ್ದೆ; ಗಟ್ಟಿ; ಹೆಪ್ಪು; ಗೆಡ್ಡೆ: "ಆ ತಟದ ಗಲ್ಲೆ ಉಲ್ಬಮೆನಿಕ್ಕು" (ಮಂಗರಾ. ೪೧-೮); ಜೊಲ್ಲೆಯರ್ ಗಲ್ಲೆಯಂಬಲಿಯಂತೆ ನೆಲನಂ ಪತ್ತೆ (ಧರ್ಮಾಮೃ. ೨-೬೯); ಫೇನಭೂತಂ ಗಲ್ಲೆಯಾದಂಥಾ (ಬಾಹಟೀ. ೨-೩-೬೦ವ). [< ಗರಣೆ]

**ಗಲ್ಲೆ$_2$,** ಗಲ್ಲ$_3$, ಗಲ್ಲಾ (ನಾ). ೧. (ಅಂಗಡಿಗಳಲ್ಲಿರುವ) ಹಣದ ಪೆಟ್ಟಿಗೆ: ಒಂದು ದಿನ ಒಬ್ಬ ನೌಕರನು ಗಲ್ಲೆಯೊಳಗಿನ ಹಣವನ್ನು ಎತ್ತಿಕೊಂಡು ಫರಾರಿಯಾಗಿಬಿಟ್ಟ (ಎಡಹ. ೩೪). ೨. ರೊಕ್ಕವನ್ನು ಹಣದ ಪೆಟ್ಟಿಗೆಯಲ್ಲಿ ಹಾಕಲು, ಆ ಪೆಟ್ಟಿಗೆಯ ಬಳಿ ಕುಳಿತುಕೊಳ್ಳುವ ಸ್ಥಳ, —ಜಾಗ: ಕದ ತೆರೆದು 'ಗಲ್ಲೆ'ಯ ಮೇಲೆ ಕೂಡ್ರುವ ಹೊತ್ತಿಗೆ . . . ಎಂಕು ಹಾಗೂ ಅವನ ಮಗಳು ಮಂಕಾಳಿ ಬಂದರು (ಮೂರುದಾ. ೨೫). **ಗಲ್ಲ$_3$**: ೧. ಸಿರಿಬೀದಿನಲ್ಲಿ ಕಾಮತರು ಅಂಗಡಿಯ ಗಲ್ಲದೆದುರಿನಿಂದಲೇ ಕೂಗಿ (ಹೊಸಕ್ಷಿ. ೫೪); ನನ್ನ ಪತಿ . . . ಕೆಲವು ಬಾರಿ ಗಲ್ಲದ ಮುಡ್ಡನೆತ್ತಿಕೊಂಡು ಎಲ್ಲಿಗೋ ಹೋಗಿಬಿಡುತ್ತಿದ್ದರಂತೆ (ಪತಿ. ೧೨). **ಗಲ್ಲಾ**: ೧. ಆ ಕಡಲೆಯ ರಾಶಿಯ ಬಳಿ ಆ ಗಲ್ಲಾದ ಹಿಂದೆ ಅದೇ ಆ ಕಟ್ಟೆಯಲ್ಲಿ ಆ ಗೂಡಾರದೊಳಗೆ (ಬಿರುಗಂ. ೧೪-೫). ೨. ರಾಜ ಉಪಹಾರದ ಅಂಗಡಿಗೆ ಬಂದು ಗಲ್ಲಾದಲ್ಲಿ ಕುಳಿತಿದ್ದವರೊಡನೆ . . . ಕೇಳಿದನು (ಕಾವೇರಿ. ೩೨). ೩. ಕಾಳು; ಧಾನ್ಯ: (ಕಿ).

[← ಹಿಂ. ಮರಾ. ಗಲ್ಲಾ]

**ಗಲ್ಲೆ$_3$** (ನಾ). ಚರ್ಮವನ್ನು ಹದಮಾಡಲು ಆವರಿಕೆಸೊಪ್ಪಿನ ರಸ ತುಂಬಿದ ಗುಂಡಿ (ಎಸಮ್ಮೆ. XVII, ೨೨). [?]

**ಗಲ್ಲೆಗಟ್ಟು** (ಕ್ರಿ). ೧. ಗಡ್ಡೆಯಾಗು; ಗರಣೆಗಟ್ಟು; ಗಡ್ಡೆಕಟ್ಟು: ಉಲ್ಬಂ, ಕಲಿಲಂ – ಈ ೨ ಗಲ್ಲೆಗಟ್ಟದ ನೆತ್ತರು (ಹಲಾಯು. ೮೨-೩೪೬). ೨. ಗುಂಪಾಗು; ಹಿಂಡುಗಟ್ಟು: ಅಲ್ಲಿಗಲ್ಲಿಗೆ ಗಲ್ಲೆಗಟ್ಟಿರ್ದ ಪೌಜುಗಳೆಲ್ಲವ ಹೊಯ್ದು ಕೆದಱಿಸಿ (ಕುರಾಸಾಂ. ೨೦-೪೧); ಪಲ್ಲವಾಧರದಿ ಸೇವಿಸಿ ಗಲ್ಲೆಗಟ್ಟಲು ಗಲ್ಲವೆಂಬಭಿಧಾನವಾಯಿತು (ಕೃಷ್ಣಗೋ. ೪-೩೪).

[ಗಲ್ಲೆ$_1$ + ಕಟ್ಟು$_1$]

**ಗಲ್ಲೆಗೆಡೆ** (ಕ್ರಿ). ಮುದ್ದೆಯಾಗಿ ಬೀಳು; ರಾಶಿಯಾಗಿ ಕೆಡೆ: ಗಲ್ಲೆಗೆಡೆದರು ಕೆಲರು ಪಾರ್ಥನ ಕೋಲ ತೋಹಿನಲಿ (ಕುವ್ಯಾವಿ. ೭-೪೭).

[ಗಲ್ಲೆ$_1$ + ಕೆಡೆ$_1$]

**ಗಲ್ಲೆಮೊಸರ್** (ನಾ). ಗಡ್ಡೆಮೊಸರು; ಗಟ್ಟಿಮೊಸರು; ಗರಣೆಮೊಸರು: ಕೂಡಿದ ಬತ್ತುವಾಲ್ಕಿಸುಪ ಗಲ್ಲೆಮೊಸರ್ಮೊದಲಾದವೆಲ್ಲಮುಂ ಜೋಡಿಸಿ (ಹಾಲಾಸ್ಯ. ೧-೮-೫). [ಗಲ್ಲೆ$_1$ + ಮೊಸರ್]

**ಗಲ್ಲೆಯೊಡೆ** (ಕ್ರಿ). ಗುಂಪು ಚೆದರು: ಬಿಲ್ಲವರನು ಬೀದಿವರಿದು ಕೊಂದನು ಬಂದು ನಿಲ್ಲದೆ ಕವಿವ ಕಾಲಾಳ ಗಲ್ಲೆಯೊಡೆಯೆ [ಪಾಠಾಂ. ಗೆಲ್ಲೆವಡೆಯೆ] ತಿವಿದನು ಗದೆಯವರನು ಚಲ್ಲಪಿಲ್ಲಿಯ ಮಾಡಿದನು (ಕುರಾಸಾಂ. ೧೩-೨೦). [ಗಲ್ಲೆ$_1$ + ಒಡೆ$_1$]

**ಗಲ್ವರ್ಕ** (ನಾ). ೧. ಕುಡಿಯುವ ಪಾತ್ರೆ; ಪಾನಪಾತ್ರೆ. ೨. ಪಾರದರ್ಶಕವಾದ ಒಂದು ಖನಿಜ; ಸ್ಫಟಿಕ. [ಸಂ.]

**ಗಲ್ವೆಂದರ** (ನಾ). ಒಬ್ಬಾತನ ಹೆಸರು: ಗಲ್ವೆನ್ದರಂ ಬನವಾಸಿ ನಾಡಭಾಗಮುನಾಳೆ ನಾಗರಖಣ್ಡ ಎಪ್ಪತ್ತಕ್ಕೆ ಎಜಚಟ್ಟಂ ನಾಳ್ಗಾವುಣ್ದುಗೆಯ್ಯಲ್ (ಎಕ. VIII, ಸೊರಬ. ೪೦೮-೩; 951 ?). [?]

**ಗವ್** (ನಾ). (ಭಯಸೂಚಕವಾದ) ಒಂದು ಅನುಕರಣ ಶಬ್ದ: ಗವ್ವೆಂದು ಬಾಳನ್ನೇ ಆವರಿಸಿ ಬರುವಂತಿದ್ದ ಆ ಕತ್ತಲು (ರೂಪಸ. ೨); ಅಬ್ಬ! ಕತ್ತಲೆ ಗವ್ ಎನ್ನುತ್ತಿದೆ (ರೂಢಿ).

**ಗವ್‌ಗವ್ ಎನ್ನು** = ಗವ್‌ಗವ್ ಎಂಬ ಶಬ್ದಮಾಡು: ನಾಯಿ ಗವ್‌ಗವ್ ಎಂದು ಬಗುಳುತ್ತದೆ (ರೂಢಿ).

**ಗವ** (ನಾ). ಹಸು; ಗೋವು; ಆಕಳು: ಗವ ಹೂಡಿ ಬದುಕುಮಾಡಿದವನೆ ಹೊಲಯ (ವಿಸಾಸು. ೬೦-೩). 'ಗವಿ$_3$' ಪರಾ.

[< ಸಂ. ಗೋ]

**ಗವಗಣಬ್ಬೆ** (ನಾ). ಒಬ್ಬಾಕೆಯ ಹೆಸರು: ಆತನ ಪ್ರಿಯಂಪತ್ನಿ ಗವಗಣಬ್ಬೆ ಮದರಿಕಲ್ಲನಾಳುತ್ತುಂ (ಎಕ. XI, ಚಳ್ಳಕೆ. ೩೩-೪೦; ಸು. 815).

[ಗವಗಣ$_0$ + ಅಬ್ಬೆ$_1$]

**ಗವಡಿಗ** 'ಗವಱಿಗ' ನೋ.

**ಗವಡು** (ನಾ). (ಉಕ) ಕಿವುಡು. 'ಗವಡುಮಾಡು' ಪರಾ.

[< ಕಿವುಡು ?]

**ಗವಡುಮಾಡು** (ಕ್ರಿ). ಕಿವುಡುಮಾಡು; ಶಬ್ದ ಕೇಳಿಸದಂತೆ ಮಾಡು: ಕಿವಿಗಳನ್ನು ಗವಡುಮಾಡುವ ಭಯಂಕರವಾದ ಅಟ್ಟಹಾಸದಿಂದ ಗಗನವನ್ನು ಶಿಲೆಕೊಡುವ ಹಾಗೆ ಮಾಡುತ್ತಿದ್ದಹಾಗೂ (ಕೋಹಿನೂ. ೮). [ಗವಡು + ಮಾಡು$_1$]

**ಗವಣಿ** 'ಗವನಿ' ನೋ.

**ಗವತ** (ನಾ). ೧. ಹಸಿಹುಲ್ಲು; "ಘಾಸ, ಯವಸ, ಜವಸ" (ನಾಚಿರಾ. ೩). ೨. ಹುಲ್ಲುಗಾವಲು; ಗೋಮಾಳ: (ಕಿ).

[← ಮರಾ. ಗವತ]

**ಗವತೆ** (ನಾ). ಕಳ್ಳತನ; ಕೊಳ್ಳೆ; ಸುಲಿಗೆ; ದರೋಡೆ: ಇಗ್ಗಲಿಯೂರಾ ಗವತೆವಿಡಿಸಿದರ್ (ಮೈಎಂ. ೧೯೩೦, ೪೦-೭; ಸು. 9ನೆಯ ಶತ).

[< ಕವರ್ತೆ$_1$]

**ಗವನ** (ನಾ). ೧. "ಹೋಗುವಿಕೆ" (ಅನಂನಾ). ೨. ಗಮನ; ಲಕ್ಷ್ಯ; ಆಸಕ್ತಿ; ಅವಧಾನ; ಶ್ರದ್ಧೆ: "ಗವನ-ಗಮನ=ಲಕ್ಷ್ಯ" (ತದ್ಭಕೋ. ೧೦).
[< ಸಂ. ಗಮನ]

**ಗವನಗೊಂಗೆ** (ನಾ). ಒಂದು ಬಗೆಯ ಸಸ್ಯ: ಕರೀಗೊನ್ನೆ, ಭವಂಗಬೀಜ, ಗಂಗುಂಗಹಂಬು, ಕಂಗೊಂದಿಬಳ್ಳಿ, ಗವನಗೊಂಗೆ (ಮೈಔಗಿ. ೧೯-೩೫೦). [?]

**ಗವನಿ, ಗವಣಿ** (ನಾ). ೧. ಆವರಣ; ಪ್ರಾಕಾರ: ಆ ಮುಗಿಲ ಗವನಿಯಿಂದೊಳಗೆ (ಮಲ್ಲಿಪು. ೨-೬೭ವ); ಗವನಿಯ ಮಱಿಗೊಂಡಿಱಿವಿಸುವ ವರ್ಗಳ ಕೈಮಿಕ್ಕು ಮಿಕ್ಕು ತೋಱದವೋಲುಕ್ಕೆವಮಿಲ್ಲದೆಚ್ಚು ಪರಿದೇಱು ವಾಳ್ಗೆ ಸನ್ನಾಹಮೆನಿಸಿದರ್ಬಿಲ್ಲಾಳ್ಗಳ್ (ಪಾರ್ಶ್ವಪು. ೩-೧೪೩); ಎಲ್ಲಿ ಬಾಗಿಲು ಗವನಿ ಕಾಲುವೆ ಎಲ್ಲಿ ಅಗಳಗುಸೆಗಳು . . . ಅಲ್ಲಿಗಲ್ಲಿಗೆ ಭಟರ ಕಾವಲು ಬಲ್ಲಿತಾಗಲಿ (ಕೌಶಿರಾ. ೨೮-೨). ೨. ಓಣಿ; ಸಣ್ಣ ಬೀದಿ; ಗಲ್ಲಿ: ಪಡುವಣ ಗವನಿಯಲ್ಲಿ ಮನೆಯೊಂದು (ಎಇ. XIII, ೨೧-೪೩; 1204); ಧರಣಿಯನ ತೋಂಟ[ವೂ]ರು ಗವನಿಯಿಂ ಕೆಳಗೆ ಸೋಮನಾಥದೇವರಿಗೆ ಹೋದ ಬಟ್ಟೆಯಿಂ (ಕಇ. II, ೩೮-೪೯; 1235). **ಗವಣಿ:** ೧. ಡೆಂಕಣಿಯ ಗವಣಿ[ಪಾಠಾಂ. ಗವಣಿ]ಗಳ ಕೋಟೆಯ ಕೊಂಕುಗಳ ಕೊತ್ತಳದ ತೆನೆಗಳ . . . ದುರ್ಗವನೀಕ್ಷಿಸುತ (ನಿಭಾಗ. ೧೦-೩೬-೩೫).
[ದೇ. ‖ ತೆಲು. ಗವನು, ಗವಿನಿ=ಕೋಟೆಯ ಬಾಗಿಲು]

**ಗವಯ** (ನಾ). ೧. ಕಾಡಿನಲ್ಲಿ ವಾಸಿಸುವ, ಗೋವಿನಂತೆ ಇರುವ ಒಂದು ಪ್ರಾಣಿ; ಕಾಡೆತ್ತು: ಕೆಲರು ಕರಡಿಯ ಮೃಗನ ಗವಯನ ಬಲುಹ ತೋಱುವರೇಱಿ ರಕ್ಕಸಬಲವು ಬರುತಿರಲು (ಕೌಶಿರಾ. ೨೦-೧೨); ಗವಯುವು ಗೋವಿಗೆ ಸಮಾನವಾಗಿರುವುದು ಎಂಬ ವಾಕ್ಯವನ್ನು ಕಾಡುಮನುಷ್ಯನಿಂದ ಕೇಳಿರುತ್ತಾನೆ (ಹಿಂದಸಾ. ೧೪೩). ೨. ಸುಗ್ರೀವನ ಕಪಿಸೇನೆಯ ಒಬ್ಬ ನಾಯಕ: ಗವಯ . . . ದ್ವಿವಿದ ಮೊದಲಾದ ಪ್ಲವಗಪತಿಗಳು ಬಂದು ಬಿದ್ದುದು ಪವನತನುಜನ ಮೇಲೆ (ತೊರರಾ. ೬-೧೫-೧೪). [ಸಂ.]

**ಗವಯಿ, ಗವಾಯಿ** (ನಾ). ೧. ಗಾಯಕ; ಸಂಗೀತಗಾರ: ಮುಂಬಯಿಗೆ ಯಾವ ಗವಯಿ ಬಂದರೂ ಅವರ ಜಲಸಾ ಕೇಳಲು ಹೋಗುತ್ತಿದ್ದ (ಸ್ವಪ್ನಹೊ. ೨೨೩); ಒಬ್ಬ ನಿಷ್ಣಾತ ಗವಯಿಯ ಮುಂದೆ ತಬ್ಲೆ ಬಾರಿಸುವಾತ ಬರಿದೆ ಠೇಕಾ ಹಿಡಿದು ತನ್ನ ಸ್ಥಾನ ತಿಳಿದವನಂತೆ ವರ್ತಿಸುತ್ತಾನೆ (ಯಕ್ಷಬ. ೯೩). ೨. ಸಂಗೀತವಿದುಷಿ; ಗಾಯಕಿ: ಆವಳು ಭಾರಿ ಗವಯಿ. ನಮ್ಮಂಥ ಹುಡುಗರ ಮುಂದೆ ಹಾಡುವಳೇ? (ಕನ್ಯಾಬ. ೬೮). **ಗವಾಯಿ:** ೧. ಊರಮುಂದಿನ ಗುಡಿಯಲಿ ಸುಪ್ರಸಿದ್ಧ ಗವಾಯಿಗಳ ಸಂಗೀತ ಸಭೆಯು ಕಿಕ್ಕಿರಿಯಿತು (ತಿಂಮುತ. ೫೭); ಪಂಡಿತರಿಗೂ ಶಾಸ್ತ್ರಿಗಳಿಗೂ ಕೀರ್ತನಕಾರರಿಗೂ ಗವಾಯಿಗಳಿಗೂ ವಾದ್ಯಕಾರರಿಗೂ ಸನ್ಮಾನಮಾಡಿ (ಗುರುದ. ೧೩).
[← ಹಿಂ. ಗವೈಯಾ; ಮರಾ. ಗವಈ]

**ಗವರಿಗ** 'ಗವಱಿಗ' ನೋ.

**ಗವರ್ನರ್, ಗವುರ್ನರ್** (ನಾ). ೧. ಪ್ರಾಂತ್ಯಾಧಿಕಾರಿಯ ಹೆಸರು; ರಾಜ್ಯಪಾಲ: ನಮ್ಮ ಕರ್ನಾಟಕರಾಜ್ಯದಲ್ಲಿ ಕೇಂದ್ರಸರ್ಕಾರದ ಪ್ರತಿನಿಧಿಯಾಗಿ ಒಬ್ಬ ಗವರ್ನರ್ ಇರುತ್ತಾರೆ (ರೂಢಿ). ೨. ಎಂಜಿನುಗಳಲ್ಲಿ ಹಬೆಯ ಒತ್ತಡವನ್ನು ನಿಯಂತ್ರಿಸುವ ಸಾಧನ: ಉಗಿಯ ಒತ್ತಾಟವನ್ನು ಬೇಕಾದ ಕ್ರಮದಲ್ಲಿ ಇಡುವಂತೆ "ಗವರ್ನರ್" ಎಂಬ ಬೇರೊಂದು ಸಾಧನವಿದೆ (ಬಾಲಪ್ರ. I, ೪೭). **ಗವುರ್ನರ್:** ೧. ಬೊಂಬಾಯಿ ಗವುರ್ನರ್ ಮೇಜರ್ ಜನರಲ್ ರಾಬರ್ಟ್ (ರಾಜೇಂದ್ರ. ೨೪); ತಿರುಚನಾಪಲ್ಲಿ ಕೋಟೆ ಅರಶಿನವರಿಗೆ ಕೊಡುವಂತೆ ಯಿಂಗ್ರೇಜೀ ಗವುರ್ನರ ಸನ್ನದು ಕಳುಹಿಸುವುದಾಗಿಯು (ಹೈದರ. ೬೯).
[← ಇಂ. Governor]

**ಗವಲ** (ನಾ). ೧. ಕಾಡುಕೋಣ. ೨. ಕಾಡುಕೋಣದ ಕೊಂಬು: "ಮಾಹಿಷಶೃಂಗವದು ಗವಲಮುಕ್ಕಂ" (ಮಂಗರಾ. ೧೩೬-೪೦).
[ಸಂ.]

**ಗವಲಿ** 'ಗೌವಲಿ' ನೋ.

**ಗವಲಿಸು** (ಕ್ರಿ). ವಾಸನೆಯನ್ನು ಹರಡು, —ಬೀರು: ವಿಗಂಧಂ ಗವಲಿಸದಿರುವದನ್ನು ಮತ್ತೆ ಕೆಲಂಬರು ಪಾಠ ಉಂಟೆಂದರು (ಬಾಹಟೀ. ೨-೧-೨೩ ವ). [ಗವಲು (< ಗವುಲು) + -ಇಸು]

**ಗವಲು** 'ಗವುಲು' ನೋ.

**ಗವಸಣಿ** (ನಾ). = ಗವಸಣಿಗೆ೧: ರಾಯಕುಲಮಾರ್ತಾಂಡ ಕೊಡಹಿದ ನಿಜದ ಗವಸಣಿಯ (ಕೌಶಿರಾ. ೨-೪೭); ಒರೆಯೊಳಾಯುಧ ವೀಹ ಗವಸಣಿಯೊಳು ಭರಣಿಯೊಳು ರತ್ನವಿರುವಂತೆ (ಗಗತಾ. ೧೫-೨೬).
[ದೇ. ‖ ತಮಿ. ಕವಿಶನ್ಯೈ, ಕವುಶನ್ಯೈ; ಮಲ. ಕವಿಯನ್; ತೆಲು. ಗವಿಸೆನ]

**ಗವಸಣಿಕೆ** 'ಗವಸಣಿಗೆ' ನೋ.

**ಗವಸಣಿಗೆ, ಗವಸಣಿಕೆ, ಗವುಸಣಿಗೆ, ಗೌಸಣಿಕೆ, ಗೌಸಣಿಗೆ** (ನಾ). ೧. ಗವಸು; ಮುಸುಕು; ಹೊದಿಕೆ; ಯಾವುದಾದರೂ ಒಂದು ವಸ್ತುವನ್ನು ಮುಚ್ಚಿಡುವ ಸಾಧನ: ರದನದ್ವಂದ್ವಮಂಬೀ ಗದಾ ದಂಡದಿನುರ್ಚೀದಾಡಿದಂ ಪೋ ಗವಸಣಿಗೆಯ ನೀ ಕೃಷ್ಣಂ (ಜಗವಿ. ೬-೫೫); ಶಿವಪೂಜೆಯ ಕರಡಿಗೆಯಂತಿರ್ದಂ ಶಿವಪೂಜೆಯ ಗವಸಣಿಗೆಯೊಲಿರ್ದಂ (ಕುಂಬಜ. ಹ. ೨೫೩-೧೫); ಗವಸಣಿಗೆಯನುರ್ಚಿ ನಭೋಯುವತಿ ಧರಾವಧುಗೆ ನಲವಿಂದಿದಿರೊಳ್ ತೋಱುವ ಮಂಗಲದರ್ಪಣವೆಂಬವೊಲೆಸೆದುದು ಚಂದ್ರಬಿಂಬಮಂಬರತಳದೊಳ್ (ಮಹಾನೇ. ೧೪-೫೨೨); ಯಂತ್ರವನಂದವಿಟ್ಟರು ಗಗನದಲಿ ಗವಸಣಿಗೆಗಳನುಗಿದು (ಕುವ್ಯಾಆ. ೧೪-೩). ೨. ಕತ್ತಿ ಮೊದಲಾದ ಆಯುಧಗಳನ್ನು ಇಡುವ ಕೋಶ; ಒರೆ: ಒಱೆಯೆಂಬುದು ಗವಸಣಿಗೆಯೊಳಲ್ಲದೆ ಕೂರಿತು ಕೈದುಗಳ ಕಱೆಯೆಂಬುದು ಶಿವಕಂಠದೊಳಲ್ಲದೆ . . . ನಾಡೊಳಗಿಲ್ಲ (ಕುಮುರಾ. ೫೮ ಪೀಠಿಕಾಸಂಧಿ); ಕಂಗನೆ ಕನಲಿ ಗವಸಣಿಗೆಯಿಂದುಗಿದನು ನಿಜಾಯುಧವ (ಕುವ್ಯಾದ್ರೋ. ೩-೫೫). **ಗವಸಣಿಕೆ:** ೧. ಗೋಣಿಗೇತಕೆ ಗವಸಣಿಕೆ (ಅಮೃತ. ೧-೪೦); ನೀಲಗೆ ಆಭರಣಗಳನ್ನು ಬಿಟ್ಟು ಆಭರಣದ ಪೆಟ್ಟಿಗೆಯ ಗವಸಣಿಕೆಯನ್ನು ತೋರಿಸಿದರೆ ಆಣೆ (ಪವಶೀ. ೭೬). **ಗವುಸಣಿಗೆ:** ೧. ಕಡೆಗಡೆಯೊಳೆಸೆದುದಾ ಶಿಲೆ ದೇವಾಂಗದ ಗವುಸಣಿಗೆಯನರೆದೆಗೆದು (ಚಂದ್ರಪು. ೧೨-೧೦೬). **ಗೌಸಣಿಕೆ:** ೧. ಆದರ ಮೇಲಿನ ಈ ಧೂಳಿಯ ಗೌಸಣಿಕೆಯು ತೀರ ತೆಳ್ಳಗಾಗುವುದು (ಜ್ಯೋತಿಶ್ಯಾ. ೨೩). **ಗೌಸಣಿಗೆ:** ೧. ಗಾಡಿ ಎತ್ತುಗಳ ಬೆನ್ನಿಗೆ ಹೊಚೆಸುವ ಗೌಸಣಿಗೆಗಳಂತಿರುವ ಗೌನುಗಳು (ಯಕ್ಷಬ. ೧೩೬); ಗಾಣದ ಎತ್ತಿಗೆ ಗೆಜ್ಜೆಯೇಕೆ ಗೋಣಿಗೆ ಗೌಸಣಿಗೆ ಏಕೆ (ಗಾದೆ).
[ಗವಸಣಿ + -ಗೆ./ ತುಳು. ಗವಸಣಿಗೆ]

**ಗವಸಣಿಗೆಗಳೆ** (ಕ್ರಿ). ಮುಸುಕನ್ನು ತೆಗೆ; ಗವಸನ್ನು ಕಳಚು: ಗವಸಣಿಗೆಗಳೆದು ಕುಡೆ ನೋಡಿ ವೀಣೆಗಾ ನೃಪತಿ ನೀಡಲಣ್ಮನೆ ಕರಪಲ್ಲವಮಂ (ವರ್ಧಪು. ೫-೧೭); ವಸಂತಕನಾ ಪಾವುಡಮಂ ಗವಸಣಿಗೆಗಳೆಯದೆಡೆಗೊಂಡಿಱಿಸಿದ ಕೈದಳದೊಳ್ ತಳೆದು (ಚಿಕವಿ. ೬-೧೭೩ ವ).
[ಗವಸಣಿಗೆ + ಕಳೆ]

**ಗವಸಣಿಗೆದುಡಿಸು** 'ಗವಸಣಿಗೆದೊಡಿಸು' ನೋ.

**ಗವಸಣಿಗೆದೆಗೆ** (ಕ್ರಿ). = ಗವಸಣಿಗೆಗಳೆ: ಪರಮಧೈರ್ಯದ ಮೊದಲ ಗವಸಣಿಗೆದೆಗೆದಂತೆ ಹರನ ಶಾಂತಿಯ ಜವನಿಕೆಯನೆಯ್ದೆ ತೆಗೆವಂತೆ (ಸೇದಿರ. ದೇ. ೬೬-೧೧); ಪರರಿಗೆ ಭೇದಿಸುವರಳವಲ್ಲ ಕವಚವನಾದಿಯದು ಕೊಳ್ಳೆಂದು ಕೊಟ್ಟನು ಗವಸಣಿಗೆದೆಗೆದು (ಕುವ್ಯಾದ್ರೋ. ೧೦-೪೬).
[ಗವಸಣಿಗೆ + ತೆಗೆ$_1$]

**ಗವಸಣಿಗೆದೊಡಿಸು,** ಗವಸಣಿಗೆದುಡಿಸು (ಕ್ರಿ). ಮುಸುಕುಹಾಕು; ಕವಚ ತೊಡಿಸು; ಮುಚ್ಚು: ಚೆನ್ನಿಗನ ನಿಜರೂಪು ಮಾರ್ಪೊಳೆಯೆ ಕಂಡು ಕೈ ಪಿಡಿಗೆ ಗವಸಣಿಗೆದೊಡಿಸಿ ತನ್ನ ಮಿಸುಪುಪ್ಪರಿಗೆಯುಡರಿ ತೆಗೆದೀಕ್ಷಿಸಿ (ಚೀರವು. ೮-೪೩); ಕುಚಕೋಕಯುಗಕ್ಕೆ ಮುಖಚಂದ್ರ ನತ್ತಣಿಂ ಭೀತಿ ಬೇಡೆಂದೆಳೆವಿಸಿಲ ಗವಸಣಿಗೆದೊಡಿಪಂತೆ ಮಿಸುನಿ ಜವಕೆಯಂ ತೊಡಿಸಿಯುಂ (ವೃಷವಿ. ೫-೧೪೭). **ಗವಸಣಿಗೆದುಡಿಸು:** ಕುಚಕಮಳಕುಟ್ಮಳಕ್ಕೆ ಮುಖಚಂದ್ರನತ್ತಣಿಂ ಭೀತಿ ಬೇಡೆಂದು ಕುಸುಮಶರಂ ಪೊಸವಿಸಿಲ ಗವಸಣಿಗೆದುಡಿಸಿದಂತೆ (ರಾಜಶೇ. ೧-೧೩೫೭).
[ಗವಸಣಿಗೆ + ತೊಡಿಸು]

**ಗವಸಣಿಗೆಬಿಗಿ** (ಕ್ರಿ). ಮುಸುಕನ್ನು ಹಾಕಿ ಕಟ್ಟು; ಗವಸನ್ನು ಅಳವಡಿಸು: ಲಲಿತಚಂಪಕದಳಕೆ ಬೆಳುದಿಂಗಳ ತಗಡ ಪುದಿದಂತೆ ಧವಳಾ[೦]ಚಲವೆಸಗಿ ಚಕ್ರದ್ವಯಕೆ ಗವಸಣಿಗೆಬಿಗಿದಂತೆ (ಜೀವಂಚ. ೮-೩).
[ಗವಸಣಿಗೆ + ಬಿಗಿ$_1$]

**ಗವಸಣಿಗೆಯಿಕ್ಕು** (ಕ್ರಿ). = ಗವಸಣಿಗೆದೊಡಿಸು: ಪುಳಕದ ಸಾಲ್ಗೆ ದೃಷ್ಟಿಯಾದಪುದೆಂದು ಗವಸಣಿಗೆಯಿಕ್ಕುವಂತೆ ಮೈತೀವಿ ಪೊದೆಯಿಸಿ (ಬಸರ. ೮-೧೫); ಲಿಂಗಮುದ್ರೆಯ ಬಂಡಿಗೆ ತರಣಿಕಿರಣಂ ತಾಗದೊಲು ಗವಸಣಿಗೆಯಿಕ್ಕಿ (ಗುರುಚಾ. ೧೨-೩೯). [ಗವಸಣಿಗೆ + ಇಕ್ಕು]

**ಗವಸಣಿಸು** (ಕ್ರಿ). ಮುಸುಕುಹಾಕು; ಹೊದಿಸು; ಮುಚ್ಚು: ತಾಂಗಿದುದು ಗಾಳಿಯಂ ದೆಸೆಯಂ ಗವಸಣಿಸಿದುದು ಮೇಗೆ ಮೊಗೆದಾಗಸಮಂ ನುಂಗಿದುದೆನೆ ಕಟ್ಟಿಲಿಸಿ ಕರಂಗಿದ ಬಲ್ಲಡವಿ ಕಣ್ಗೆ ಪಡೆದುದಗುರ್ವಂ (ಪಂರಾಮಾ. ೭-೧೧೪); ಶೇಷಮಹಾನಿರ್ಮೋಕದಿಂದಂ ಗವಸಣಿಸಿ ಸಮಂತಿರ್ಪುದೊಂದುಗ್ರಕೋದಂಡಂ (ಜಗವಿ.೬-೨೯); ಅಳಲ ಮುಕ್ಕುಳಿಸಿದನು ಮೋಹದ ಬೆಳವಿಗೆಯ ಗವಸಣಿಸಿದನು (ಕುವ್ಯಾದ್ರೋ. ೮-೩೩); ಕೊಡೆ ಗವಸಣಿಸಿತ್ತು ಗಗನವನೀಡಿಱಿದು ಕಪಿಸೇನೆ ಸರಳಿನ ಗೂಡಿನಲಿ ಹುಗಿಸಿದನು ಹೊಳಕಿ ಸುರೇಂದ್ರಜಿತು ಭಟರ (ತೊರರಾ. ೬-೧೫-೧೫).
[ಗವಸಣಿ + -ಇಸು$_3$]

**ಗವಸು,** ಗೌಸು (ನಾ). = ಗವಸಣಿಗೆ೧: ಹಗಲೆಲ್ಲ ತಂಬೂರಿಯ ಗವಸನ್ನೇ ಬಿಚ್ಚುತ್ತಿರಲಿಲ್ಲವಂತೆ (ನಾಕಲಾ. ೭೧); ಶಾಂತಲಾದೇವಿ ತೊಟ್ಟಿಲ ಬಳಿ ಸಾರಿ ಗವಸನ್ನು ಓಸರಿಸಿ (ಸವತಿ. ೧೮೭); ಗಗನ ಬಿಸಿ ಗವಸಾಗಿ ಕೆರೆಗಳಾವಿಗೆಯಾಗಿ ಜಗದುಸಿರೆ ಹೊಗೆಯಾಗಿ ಧಗಧಗಿಸುವಂದು (ಮಂಕುಕ. ೫೦೪). **ಗೌಸು:** ಗೌಸುರ್ಚಿ ತಡಹಿ . . . ಥಕಿಥಳರೆಂದು ಮದ್ದಳೆಯ ನುಡಿಸಿದ ಮಾರ್ದಂಗಿಕನು (ಜೀವಂಸಾಂ. ೯-೮೨); ಗಾಡಿಗೆ ಮ್ಯಾಣಗಪ್ಪಟದ ಗೌಸು (ಎಕ. XIV, ನಂಜನ. ೨೯೨-೪೮; 1847).
[< ಕವಿಸು. / ಮರಾ. ಗವಸಣೀ= ಮುಚ್ಚು]

**ಗವಳಗಿತ್ತಿ** 'ಗವಳಿಗಿತ್ತಿ' ನೋ.

**ಗವಳಿ$_1$** 'ಗವುಳಿ' ನೋ.

**ಗವಳಿ$_2$,** ಗೌಳಿ$_3$ (ನಾ). ದನಕರುಗಳನ್ನು ಸಾಕಿ ಜೀವಿಸುವವನು; ಗೋವಳ; ಗೋಪಾಲ: ಯಾವ ಗವಳಿಯೂ ಅದನ್ನು ತನ್ನ ಆಕಳುಗಳ ಸಂಗಡ ಕರೆದುಕೊಂಡು ಹೋಗುವುದಿಲ್ಲ (ಫಲಸಂ. ೧). **ಗೌಳಿ$_3$:** "ಗೌಳಿ-ಗೌಡೀ; ಗೋಪಾಲೀ" (ತದ್ಭಕೋ. ೧೧). [← ಪ್ರಾ. ಗೋವಾಲಿ]

**ಗವಳಿಗ,** ಗೌಳಿಗ (ನಾ). ಗೋವಳ; ಗೋಪಾಲ: "ಗವಳಿಗ (ಗೌವಳಿಗ) - ಗೋಪಾಲಕ" (ತದ್ಭಕೋ. ೧೦); ಒಬ್ಬ ಗವಳಿಗನ ಬಳಿಯಲ್ಲಿ ಒಂದು ಎಮ್ಮೆ ಇತ್ತು (ಮುಂಬಯಿ. ೧-೧೯); ಭಗವದ್ಗೀತೆಯೆಂದರೆ . . . ಶ್ರೀಕೃಷ್ಣನೆಂಬ ಗವಳಿಗನು ಉಪನಿಷತ್ತುಗಳೆಂಬ ಆಕಳುಗಳನ್ನು ಹಿಂಡಿ ಅರ್ಜುನನಿಗೆ ಉಣಿಸಿದ ಗೀತಾಮೃತವೆಂಬ ಕ್ಷೀರಾಮೃತ (ಧರ್ಮಸಾ. ೧೦೪). **ಗೌಳಿಗ:** ನಂದಿಮಿತ್ರನೆಂಬ ಗೌಳಿಗನ [ಪಾಠಾಂ. ಗೋವುಳಿಗನ] ಮಹಿಷಿಗಳೊಳ್ ಕೋಣಂಗಳಾಗಿ ಪುಟ್ಟಿ (ಚಾವುಂಪು.೫೦); ತರಳೆ ನೀ ಗೌಳಿಗರ ಮಗಳೆನಬೇಡ (ಕುವ್ಯಾಆ. ಓರಿಇ. ೩೬-೧೦೩); ಹಿರಿಯರು ಹಾಕಿದ ದಾರಿಯ ಹಿಡಿದು ನಡೆದಿದೆ ಗೌಳಿಗನೆಮ್ಮೆ (ಚಿಂತನ. ೬೨).
[< ಸಂ. ಗೋಪಾಲಕ?]

**ಗವಳಿಗಿತ್ತಿ,** ಗವಳಗಿತ್ತಿ, ಗೌಳಿಗಿತ್ತಿ (ನಾ). ಗವಳಿಗನ ಹೆಂಡತಿ; ಗೊಲ್ಲತಿ: (ಕಿ). **ಗವಳಗಿತ್ತಿ:** ಗವಳಗಿತ್ತಿ, ಹಾಲು ಮೊಸರು ಮಾರುವವಳು (ಕಸ್ತೂಕೋ. ೨೯೧). **ಗೌಳಿಗಿತ್ತಿ:** ಅಷ್ಟುಹೊತ್ತಿಗೆ ದೇವೇಂದ್ರನು ಗೌಳಿಗಿತ್ತಿ ಗಂಗಾಜಲೆಯೊಡನೆ ಹೀರೆಗೆ ಹೇಳಿ ಕಳುಹಿಸಿದನು (ಬಂಕಿಮ. ೫೧).
[ಗವಳಿಗ + -ಇತ್ತಿ]

**ಗವಱಿಗ** 'ಗವಱಿಗ' ನೋ.

**ಗವಱಿ** (ನಾ). ೧. ಬುಟ್ಟಿ; ಗೂಡೆ: ಭುವನವೆಲ್ಲವ ನೆಱೆ ಧವಳಿಸುತ್ತಿರ ಲಿತ್ತಲವನಿಗಧಿಕ ಸಾಸಲೊಳಗೆ ಗವಱಿಯ ಕೈಗತ್ತಿ ಶಿವನ ಮಂಡೆಯ ತಾಗೆ ನವಸುಧೆ ಸೂಸಿತು (ಭೈರವೇ. ೩-೯೦); ಭೈರವರಾಜನು ತೀವಿದ ಘಾಯವೊ ಮೇಣು ಗವ[ಪಾಠಾಂ. ನವಿ]ಱಿಯ ಕೈಗತ್ತಿ ತಾಗಿ ಶಿವ ನಿಮ್ಮ ಶಿರದೊಳಗಾಂತ ಘಾಯವನೀಗ ವಿವರಿಸಬೇಕು (ಅಮುಸಾಂ. ೬-೧೫). 'ಗವಱಿಗ' ಪರಾ. ೨. ವರ್ತಕರಲ್ಲಿ ಒಂದು ವರ್ಗ, —ಗುಂಪು: ಗವಱಿಯುಂ ಗಾತ್ರಿಗರುಂ ಬೀರರುಂ ಬೀರವಣಿಗರುಂ ತಂಬುಲಿಗ ಸಾಸಿರ್ವರುಂ (ಸೌಇಇ. XI-i, ೧೪೪-೧೧; 1099); ಗವಱಿಗಳುಂ ಗಾತ್ರಿಗರುಮಯ್ವತ್ತೊಕ್ಕಲುಂ (ಕೊಲ್ಹಾಶಾ. ೧೫-೮೬; 1186).

**ಗವಱಿಬಣಜಿಗ**= ಗವಱಿ೨: ಗವಱಿಬಣಜಿಗರಲ್ಲಿ ಅಪುತ್ರಿಕ ಧನವು ದೇವರಿಗೆ ಸಲ್ಲತಕ್ಕದ್ದು ಎಂದು ತೀರ್ಮಾನವಾಗುತ್ತದೆ (ಕಶಾಅ. ೧೭೮).
[ದೇ. ‖ ತಮಿ. ಕವಱ್ಱಿ; ಮಲ. ಕವಱ]

**ಗವಱಿಗ,** ಗವಡಿಗ, ಗವರಿಗ, ಗವಱಿಗ (ನಾ). ಬಿದಿರಿನಿಂದ ಗೂಡೆ, ಮೊರ ಮುಂತಾದುವನ್ನು ಮಾಡುವವನು; ಮೇದ: ಗವಱಿಗರುಂ ಗಾತ್ರಿಗರುಂ ವೇಳಕಾಱರುಂ (ಸೌಇಇ. IX-i, ೧೧೮-೫೫; 1057); ನಾನಾದೇಶಾಭ್ಯಂತರದೆಂಟುನಾಡ ಪದಿನಱುವರು [ಗವ]ಱಿಗರುಂ (ಎಇ. XIX, ೩೭-೬; 1144). **ಗವಡಿಗ:** "ಗವಡಿಗನೆನೆ ಮೇದಾರ" (ಕಶರ. ೩೦). **ಗವರಿಗ:** (ಸ್ಯಾಂಡರ್). **ಗವಱಿಗ:** "ಗವಱಿಗಂ ಮೇದನೆನಿಕ್ಕುಂ" (ಶಬ್ದಮಂ. ೫೯).
[ಗವಱಿ + -ಗ$_2$]

**ಗವಱಿಗಂಡ** (ನಾ). ಪ್ರಮುಖನಾದ ವರ್ತಕ; ವಣಿಗ್ವರ: ಆ ಈನೂರ್ವ್ವರು ಮುಖ್ಯವಾಗಿ ಆ ಸ್ಥಳದ ಗವಱಿಗಂಡರುಂ ಮುಂಮುರಿದಂಡಂಗಳುಂ ಕೊಟ್ಟ ಧ್ರಂಮ್ಮ (ಸೌಇಇ. XI-i, ೬೯-೩೦; 1033); ಸಾಸಿರದೇಳುನೂರು ಗವಱಿಗಂಡರು ಮುಂತಾಗಿ (ಎಕ. VII, ಶಿವಮೊ. ೧೯-೧೧; 1309).
[ಗವಱಿ + ಗಂಡ$_1$]

**ಗವಾಂಗ** (ನಾ). ಒಂದು ಬಗೆಯ ಕೆಂಪುರತ್ನ: ಗವಾಂಗವೆಂಬುವದು ಅನಿಲಗಂಧಿಯುಂಬುವದು ಯಿವು ಯರಡು ಬಗೆಯಾದ ಕೆಂಪುರತ್ನವು ಶೂದ್ರಜಾತಿಯು (ಸೌಗಂಧಿ. ೩೩೭-೩೩). [P ಪದದ ಕೊನೆಯಲ್ಲಿರುವ 'ಗೋ' ಶಬ್ದಕ್ಕೆ ಸ್ವರಾಕ್ಷರಗಳು ಪರವಾದರೆ ಅವಙಾದೇಶ ಬರುತ್ತದೆ] [ಸಂ. (ಗೋ+ ಅಂಗ)?]

**ಗವಾಂತರ** (ನಾ). ಹುಲ್ಲುಗಾವಲು; ಗೋಮಾಳ(?): ಪಡುವಣ ಮೂಡಣ ಕಲ್ಲಿನೆ ಗಡಿಂಬದಿನಾರ್ಕ್ಕವಿದುವೆ ಸಾಯಿರನಾರ್ಕ್ಕಂ ತಡಮಾಗ ದೆಳೆದುಕೊಳ್ವುದು ಗಡಿಮಲ್ಲ ಬಡಗದೆಸೆಯ ಗವಾನ್ತರದೊಳ್ (ಸೌಇಇ. IX–i, ೧೧೭–೧೫; 1055). [ಸಂ. (ಗೋ + ಅಂತರ)]

**ಗವಾಂಬು** (ನಾ). ಗೋಮೂತ್ರ; ಗಂಜಲ: ಪುಲಿಗಿಲ ಕೊಟ್ಟ . . . ಕನಕಂಗಳೆಂಬಿವಂ ಕಲಸಿ ಗವಾಂಬುವಿಂತೆರ(ದು)ಡು ಮೂತ್ರದೊಳಂತವ ನಟ್ಟು ಕೊಟ್ಟು (ಅಶ್ವಶಾ. ೧೪–೧೪). [ಸಂ. (ಗೋ + ಅಂಬು)]

**ಗವಾಕ್ಷ** (ನಾ). ೧. ಗೋವಿನ ಕಣ್ಣು. ೨. ಮನೆಯಲ್ಲಿ ಗಾಳಿ, ಬೆಳಕು ಬರುವುದಕ್ಕಾಗಿ ಮಾಡಿರುವ ಕಂಡಿ; ಬೆಳಕುಕಿಂಡಿ; ಕಿಟಕಿ: "ಗವಾಕ್ಷಂ ವಿಜಾಲಕಂ ವಾತಾಯನಂ ಜಾಳಮೆನಲ್ ಬೆಳಕ ಕಂಡಿಯಕ್ಕುಂ" (ಮಂಗರಾ. ೬೦–೧೪); ಮತ್ತೊಂದು ದಿವಸಂ ನಡು ವಗಲರಸನುಂ ಮಹಾದೇವಿಯುಮಿಂತಿರ್ವರುಂ ಪ್ರಾಸಾದದ ಮೇಗಿರ್ದು ಗವಾಕ್ಷಜಾಳಾಂತರಂಗಳಿಂದಂ ದಿಶಾವಲೋಕನಂಗೆಯ್ಯುತ್ತಿರ್ಪನ್ನೆಗಂ (ವಡ್ಡಾರಾ. ೯೩–೮); ವಿವಿಧಮಣಿಕನಕಕೃತಗೃಹಗವಾಕ್ಷಜಾಳಂಗಳಿಂದ ಮಾದಂ ಪೊಱಪೊಣ್ಮುವ ಧೂಪಧೂಮಯಷ್ಟಿಗೆ ನವಿಲೊಸೆದೆಱಗುವುದು ಪಾವುಗೆತ್ತಾ ಪುರದೊಳ್ (ಅಜಿಪು. ೨–೧೮); ಸತ್ಕಲೆ ಕಾವ್ಯಗಳ ಗವಾಕ್ಷಗಳಿಂ ಗಗನದೊಳನಂತದರ್ಶನದೆ ಮುಕ್ತಿಯನೊಂದು (ಮಂಕುಕ. ೪೬೦). ೩. ಸುಗ್ರೀವನ ಸೈನ್ಯದಲ್ಲಿದ್ದ ಒಬ್ಬ ಸೇನಾಪತಿ: ಗವಯ ಶತಬಲಿ ಶರಭ ಗಜ ಜಾಂಬವ ಸುಷೇಣ ಗವಾಕ್ಷ ಮೈಂದ . . . ರಾಜಕಾರ್ಯರ್ಕ್ಕವರು ನಿಲುವರು (ತೊರರಾ. ೪–೪–೬೧). [ಸಂ. (ಗೋ + ಅಕ್ಷಿ + –)]

**ಗವಾಕ್ಷವಿವರ** (ನಾ). ಗವಾಕ್ಷದ ತೂತು, —ರಂಧ್ರ: ಗವಾಕ್ಷವಿವರ ದೊಳೊಳಪೊಕ್ಕು (ರಾಜಶೇ. ೧೨–೩೯ ವ). [ಗವಾಕ್ಷ + ವಿವರ]

**ಗವಾಕ್ಷಿ**[1] (ನಾ). = ಗವಾಕ್ಷ ೨: ಅವು ಗವಾಕ್ಷಿಗಳಂತೆ ತಿದಿಗಳಂದದೆ ತನ್ನ ಸುವಿಚಾರದಾಧೀನದಂತೆ (ವೀಶೈಪು. ೫–೪–೧೨); ನಿಲ್ಲದಾ ಮಾಳಿಗೆಯ ನೇಱ ಸುಗವಾಕ್ಷಿಯೊಳು ಘಲ್ಲನವರೆಸಗುವುದ ನೋಡುತಚ್ಚರಿವಟ್ಟು (ಪ್ರೌಢರಾ. ೭–೪೦); ಸಭೆಯ ಕಾರ್ಯಕಲಾಪಗಳನ್ನು ಗವಾಕ್ಷಿಯಿಂದ ನೋಡಿದ ಸುದ್ದಿಗಾರರೊಬ್ಬರು ವರದಿಮಾಡಿದ್ದಾರೆ (ನಾಡಿಗೇ. ೩). [< ಸಂ. ಗವಾಕ್ಷ]

**ಗವಾಕ್ಷಿ**[2] (ನಾ). ಒಂದು ಬಗೆಯ ಗಿಡ: "ಚಿತ್ರಾ, ಗವಾಕ್ಷೀ, ಗೋತುಂಬಾ – ೩ ಹೆಮ್ಮರಕ್ಕೆ ಹೆಸರು" (ಸಿದ್ಧಾಂತಿ. ೧೩೦). ೨. "ಗಿರಿಕರ್ಣಿಗಿಡ; ಮೆಕ್ಕೆಗಿಡ" (ಅನಂನಾ). [ಸಂ. ಗವಾಕ್ಷೀ]

**ಗವಾಧಿಪ** (ನಾ). ೧. ಹಸುಗಳ ಒಡೆಯ; ಗವಳಿಗ. ೨. ಗೂಳಿ; ವೃಷಭ: ಗವಾಧಿಪನದೆಲ್ಲಮುಂ ಕೇಳ್ದು (ಪಂಚತಂ. ೧೬೬–೭). [ಸಂ. (ಗೋ + ಅಧಿಪ)]

**ಗವಾಧಿಪತಿ** (ನಾ). = ಗವಾಧಿಪ ೧: "ಗೋಸ್ವಾಮಿ ಗವಾಧಿಪತಿ ತಾನವಂ ಗೋಪಳಗಂ" (ವಸ್ತುಕೋ. ೯೧–೧೪). [ಸಂ. (ಗೋ + ಅಧಿಪತಿ)]

**ಗವಾಮಿಷ** (ನಾ). ಹಸುವಿನ ಮಾಂಸ, –ಬಾಡು: ತೆಗಪಿ ಮೊದಲಲ್ಲಿ ಮತ್ಸ್ಯಾಂಬು ಗವಾಮಿಷಮುಗುರು ಪಿಂಡಿಯೆಂಬಿನಿತುವನಿಕ್ಕುಗೆ ಜಂಬುಕ ಮಾಂಸಮುನಿಕ್ಕುಗೆ ಮೊದಲೊಳ್ ಮಾದುಪಳದ ಕಾಯಲ್ ತುಱುಗಿರ್ಕುಂ (ಲೋಕೋಪ. ೬–೩೪). [ಸಂ. (ಗೋ + ಅಮಿಷ)]

**ಗವಾಯಿ** 'ಗವಯಿ' ನೋ.

**ಗವಾರ** 'ಗಮಾರ' ನೋ.

**ಗವಾಸ್ಪದ** (ನಾ). ದನಕರುಗಳಿಗೆ ಮೇಯಲು ಅವಕಾಶವಿರುವ ಸ್ಥಳ; ಹುಲ್ಲುಗಾವಲು: ಅಲ್ಲಿಗಲ್ಲಿಗೆ ಬೆಳೆದ ಬೆಳೆಗಳಿಂ ಮೆಳೆಗಳಿಂದಲ್ಲಿ ಗಲ್ಲಿಗೆ . . . ಗವಾಸ್ಪದಗಳಿಂ ನದಗಳಿಂದಾ ದೇಶಮೊಪ್ಪಿರ್ದುದು (ಚಿಬಪು. ೧೧–೪). [ಸಂ. (ಗೋ + ಆಸ್ಪದ)]

**ಗವಿ**[1] (ನಾ). ಆಕ್ರಮಿಸುವಿಕೆ; ಮೇಲೇರಿಹೋಗುವಿಕೆ; ಆಕ್ರಮಣ: ಅವನಿಪಾಲನ ಗವಿಯ ಘಾಡಿಕೆ ಜೋಡಿಸಿತು ಗೀರ್ವಾಣರಾಲಿಗಳ (ಕುವ್ಯಾಕ. ೧೫–೧೬). 'ಕವಿ[2]' ಪರಾ. [< ಕವಿ[1]]

**ಗವಿ**[2] (ನಾ). ೧. ಬೆಟ್ಟಗಳ ಸುತ್ತುಮುತ್ತಿನ ದೊಡ್ಡ ಬಿಲ; ಬಂಡೆಯ ಪೊಟರೆ; ಗುಹೆ: ಇದು ಬಗ್ಗ ಸಾರ್ದ ಗವಿ (ರಾಘಚ. ೧೭–೬೮); ಮೇಲಣ ಗವಿ ಬಸವಲಿಂಗದೇವರ ಶಿಷ್ಯರು (ಎಕ. VII, ಶಿವಮೊ. ೨೯–೭; 1712); ಹುಲಿಯು . . . ನೆಟ್ಟಗೆ ಹಸಿವೆಯಾಗುವ ತನಕ ಸುಮ್ಮನೆ ತನ್ನ ಗವಿಯೊಳಗೆ ಬಿದ್ದುಕೊಂಡಿರುತ್ತದೆ (ಮುಂಬಯಿ. ೫–೩೬); ಗವಿಯಿಂದ ಹೊರಕ್ಕೆ ನುಗ್ಗಿದನು (ಪಾಶ್ಚಾಪು. ೧೩). ೨. ನೆಲೆ; ಆಶ್ರಯಸ್ಥಾನ: "ಹಕ್ಕೆ ಗವಿ ಗರುಡಿಯಾಡುಂಬೊಲಂ ಗೊತ್ತು ನೆಲೆಯಕ್ಕು" (ಶಬ್ದಕೈ. ೬೩); "ಗವಿ ಗರುಡಿ . . . ಅಡುಂಬೊಲನೆನಲ್ಕೆಯಾಶ್ರಯನಾಮ" (ಶಬ್ದಮಂ. ೫೯). [ದೇ. ‖ ತಮಿ. ಕವಿ; ತುಳು. ತೆಲು. ಗವಿ. / ಸಂ. ಗುಹಾ]

**ಗವಿ**[3] (ನಾ). ಹಸು; ಆಕಳು: ತರಿಸಿ ಹೋರಿಯ ಗವಿಯ ಗೂಳಿಯ ಬರಿಸಿದನು (ಕುವ್ಯಾಅ. ೧೭–೩೭). [< ಸಂ. ಗೋ]

**ಗವಿಕಲ್ಲು** (ನಾ). ಗೋರಿಕಲ್ಲು; ಮಸಣಗಲ್ಲು (?): ಮಕ್ಕಳಿರ್ವ್ವರ ಕಲ್ಲ ಮಡಿಸಿದನ್ತಂನ್ನ ಗವಿಕಲ್ಲ ಮಾಡಿಸಿದ ರೋಣದ ಪಡೆದರ ಮಗ (ಸೌಇಇ. XI–i, ೩೫–೭; 933). 'ಗೊಪೆ' ಪರಾ. [ಗವಿ? + ಕಲ್ಲು (< ಕಲ್[3])]

**ಗವಿಗತ್ತಲೆ** 'ಗವಿಗಟ್ಟಲೆ' ನೋ.

**ಗವಿಗಟ್ಟಲೆ**, ಗವಿಗತ್ತಲೆ (ನಾ). ೧. ಗವಿಯೊಳಗಿನ ಕತ್ತಲೆ. ೨. ಗಾಢವಾದ ಕತ್ತಲೆ; ಕಗ್ಗತ್ತಲೆ: ಅವನ ಹಗಲೆಡೆಯ ಕೆಳೆಯರನ್ ಟಾರ್ಟರಸ್ ಗಹಿಗಟ್ಟಲೆಯಿರುಳ್ ಮುಚ್ಚಿ ಮುಸುಕಿರ್ದಪುದು (ಬದ್ಧಪ್ರ. ೧೩–೨೬೩). ಗವಿಗತ್ತಲೆ: ಎಲ್ಲರನ್ನೂ ಟಾರ್ಟರಸ್ ಅಡಿನೆಲದ ಆಳದ ಗವಿಗತ್ತಲೆಯಲ್ಲಿ ಸೆರೆಯಿಟ್ಟನು (ಬದ್ಧಪ್ರ. xii ಪೀಠಿಕೆ). [ಗವಿ[2] + ಕಟ್ಟಲೆ]

**ಗವಿಗೊಳ್** (ಕ್ರಿ). ೧. ಗುಹೆಯಲ್ಲಿರು. ೨. (ಆಲಂ) ಗುಪ್ತವಾಗಿರು; ಅಜ್ಞಾತವಾಗು: ಅಗಿನ ಚಾಳುಕ್ಯಚರಿತ್ರೆ ಇನ್ನೂ ಗವಿಗೊಂಡಿರುವುದರಿಂದ – ನುರಿತ ಚರಿತ್ರವಿದ್ವಾಂಸರಿಗೂ ಸುಲಭವಲ್ಲ (ನಾಡೋಜ. ೧೫೭). [ಗವಿ[2] + ಕೊಳ್[1]]

**ಗವಿಲಿಪಿ** (ನಾ). ಗವಿಗಳಲ್ಲಿನ ಶಿಲಾಶಾಸನಗಳಲ್ಲಿ ಕಂಡುಬರುವ ಒಂದು ಬಗೆಯ ಪ್ರಾಚೀನಲಿಪಿ: 'ಕ' ವರ್ಣವನ್ನು ಮೂಲತಃ ಅಶೋಕಲಿಪಿಯಲ್ಲಿ . . . ಬರೆಯುತ್ತಿದ್ದರು . . . ಅನಂತರ ಇದೇ 'ಗವಿಲಿಪಿ'ಯಲ್ಲಿ ಹೆಚ್ಚು ಕಡಿಮೆ . . . ಹೀಗಾಯಿತು (ಭಾಷಾಶಾ. ೧೦೩). [ಗವಿ[2] + ಲಿಪಿ]

**ಗವಿಸು** (ಕ್ರಿ). ಮುಸುಕು; ಮುತ್ತು: ಕವಿದೆಸಲಿಡಲಿಱಯಲು ಕೈಕೊಳ್ಳದೆ ಗವಿಸಿಯ್ಯಿತಹ ಕಿರಾತರ ತವೆ ಸೀಳ್ದಿತ್ತಿ ಪರ್ವಿತು . . . ಪಂದಿ (ಸೊಬಸೋ. ೧೧–೭೦). [< ಕವಿಸು]

**ಗವುಂಜು** 'ಕವಿಂಜ' ನೋ.

**ಗವುಂಡ** 'ಗಾಮುಂಡ' ನೋ.

**ಗವುಂಡತನ** (ನಾ). ಗೌಡನ ಅಧಿಕಾರ, —ವೃತ್ತಿ, —ಕರ್ತವ್ಯ; ಗೌಡಿಕೆ: ಇಡುಗುರ ಗವುಣ್ಡತನದಕಯ್ಯ ಅದ್ದಿಯಾಪಳ್ಳಿಯೊಳ್ ತುಱುಗೊಳೊಳ್ಸತ್ತ (ಎಕ. XIV, ನಾಗಮಂ. ೧೧೧–೩; ಸು. 961). [ಗವುಂಡ (< ಗಾಮುಂಡ) + –ತನ]

**ಗವುಂಡಬಳೆ** 'ಗವುಂಡವಳ' ನೋ.

**ಗವುಂಡಯ್ಯ** (ನಾ). ಒಬ್ಬಾತನ ಹೆಸರು : ಗವುಣ್ಡಯ್ಯ ನಾಳ್ಗವು[ಡು] ಗೆಯೆ (ಎಕ. VIII, ಸೊರಬ. ೨೩೪-೯ ; 999).

[ಗವುಂಡ (< ಗಾಮುಂಡ) + ಅಯ್ಯ$_1$]

**ಗವುಂಡವಳ, ಗವುಂಡಬಳ** (ನಾ). ಗೌಡಿಕೆಗಾಗಿ ಕೊಡುವ ಮಾನ್ಯ: ಚವುಣ್ಡಗಾವುಂಡನ ಗವುಂಡವಳದಿಂ ಮೂಡ ಕರಭೂಮಿಯಿಂ (ಸೌಇಇ. XI–ii,೧೫೫–೪೮ ; 1104). **ಗವುಂಡಬಳ** : ಗವುಣ್ಡಬಳದಿಂ ಬಡಗ ರಾಜಬೀದಿಯಿಂ ತೆಂಕ ನಾಲ್ಕು ಗೋಂಟಿಗಂ ಕಿನ್ನರಿಗಲ್ಲ ಗುಡ್ಡೆ ನಾಲ್ಕು (ಮುಂಬರಾ. XI, ೨೪೨–೪೨ ; ಸು. 1060).

[ಗವುಂಡ (< ಗಾಮುಂಡ) + –ವಳ]

**ಗವುಂಡಿ** 'ಗಾವುಂಡಿ' ನೋ.

**ಗವುಂಡಿಕೆ** 'ಗಾವುಂಡಿಕೆ' ನೋ.

**ಗವುಂಡು** 'ಗಾಮುಂಡ' ನೋ.

**ಗವುಗೆ** (ನಾ). ಒಂದು ಬಗೆಯ ಬತ್ತ; "ಶಾಲಿ" (ಗಂಗಾಮ. ೬). [?]

**ಗವುಜಿ** 'ಗೌಜು$_1$' ನೋ.

**ಗವುಜು$_1$** 'ಗೌಜು$_1$' ನೋ.

**ಗವುಜು$_2$** 'ಕವಿಂಜ' ನೋ.

**ಗವುಜುಗ** 'ಕವಿಂಜ' ನೋ.

**ಗವುಟು, ಗಮುಟು** (ನಾ). ಗಬ್ಬುವಾಸನೆ; ಅಸಹ್ಯವಾಸನೆ: ಅದರಿಂದಲಾದರೂ ಕುರಿಹಾಲಿನ ಗವುಟು ಮುಚ್ಚಬಹುದಲ್ಲ (ಕಲಸೆ. ೩೩೩). **ಗಮುಟು** : ಆತನು ಗಮುಟು ನಾರುತ್ತಿದ್ದ ಬಟ್ಟೆಯನ್ನು ಹಾಕಿಕೊಂಡಿದ್ದ (ರೂಢಿ). [< ಕಮುಟು]

**ಗವುಡ$_1$** 'ಗಾಮುಂಡ' ನೋ.

**ಗವುಡ$_2$** (ನಾ). ಒಂದು ಬಗೆಯ ಸಸ್ಯ : ಕಲ್‌ಗರಿಕೆ, ಡಾಲ್‌ಮರ, ಗವುಡ, ಮದಗಿರಿಬೇವು (ಮೈಔಗಿ. ೨೧–೩೮೦). [?]

**ಗವುಡಗಿತ್ತಿ** (ನಾ). ಗೌಡನ ಹೆಂಡತಿ : (೬).

[ಗವುಡ$_1$ (< ಗಾಮುಂಡ) + –ಗಿತ್ತಿ]

**ಗವುಡತನ** (ನಾ). ಗ್ರಾಮಾಧಿಪತ್ಯ; ಗೌಡಿಕೆ: (೬).

[ಗವುಡ$_1$ (< ಗಾಮುಂಡ) + –ತನ]

**ಗವುಡಸಾನಿ** (ನಾ). = ಗವುಡಗಿತ್ತಿ : (೬).

[ಗವುಡ$_1$ (< ಗಾಮುಂಡ) + ಸಾನಿ]

**ಗವುಡಿ$_1$** 'ಗಾವುಂಡಿ' ನೋ.

**ಗವುಡಿ$_2$** (ನಾ). ಒಂದು ಬಗೆಯ ಸಸ್ಯ : ಹಾಡಗ, ಬಿಳೀಚಳ್ಳೆ, ಗವುಡಿ (ಮೈಔಗಿ. ೨೪–೪೫೧). [?]

**ಗವುಡಿಕೆ** 'ಗಾವುಂಡಿಕೆ' ನೋ.

**ಗವುಡಿತಿ** 'ಗಾವುಂಡಿತಿ' ನೋ.

**ಗವುಡು** 'ಗಾಮುಂಡ' ನೋ.

**ಗವುಡುಗೊಡಗೆ, ಗಲುಡುಗೊಡಗೆ** (ನಾ). ಗೌಡನಿಗೆ ಆತನ ಸೇವಾಕಾರ್ಯಕ್ಕಾಗಿ ಬಿಟ್ಟುಕೊಟ್ಟಿರುವ ಜಮೀನು, —ಮಾನ್ಯದ ಭೂಮಿ. P ಊರೊಟ್ಟಿನ ಸೇವೆಗಾಗಿ ಹಿಂದೆ ಸರ್ವಮಾನ್ಯವಾಗಿ ಜಮೀನನ್ನು ಬಿಡಲಾಗುತ್ತಿತ್ತು : ಹೊನ್ನಗವುಡಂಗೆ ಗವುಡುಗೊಡಗೆಯಾಗಿ . . . ನೂರಹತ್ತು ಮೆಟ್ಟಿನ ಗದ್ದೆ (ಎಕ. XII, ತುಮಕೂ. ೨೭–೧೧ ; 1287) ; ಕೇಶವನಾಥ ಅರಸರು ಕೊಟ್ಟ ಗವುಡುಗೊಡಗೆ (ಮೈಆರಿ. ೧೯೩೮, ೬೪–೫ ; 15ನೆಯ ಶತ). **ಗಲುಡುಗೊಡಗೆ** : ಶ್ರೀ ತೊಳಸಿಯ ಬನಕ್ಕವಾಗಿ ಗಲುಡುಗೊಡಗೆಯಲು ಗದ್ಯಾಣವಯ್ವತ್ತಂ ಕೊಟ್ಟು (ಎಕ. VI, ಚಿಕ್ಕಮ. ೨೧–೩೧ ; 1178).

[ಗವುಡು (< ಗಾಮುಂಡ) + ಕೊಡಗೆ (< ಕೊಡಂಗೆಯ್ಯ್)]

**ಗವುದ** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀಸಿರದ ದೇವೆಜೀಯರ ಮಗ ದಾವಣ ಗವುದದ ಮಹಾಜನಕ್ಕೆ ಕೊಟ್ಟದು ಶಾಲೆ (ಎಕ. VII, ಶಿಕಾರಿ. ೪೫(b)–೩೩; ಸು.890 ?); ಸ್ವಸ್ತಿಶ್ರೀ ಸಾನ್ತರಶರ್ ರಾಜ್ಯಂಗೆಯ್ಯೆ ವೊಜ್ಜೇಳನ ಗವುದದ ಮಹಾಜನಕ್ಕೆ ಶಾಲೆ ಕೊಟ್ಟದು (ಎಕ. VII, ಶಿಕಾರಿ. ೪೫(b)–೩೫ ; ಸು. 890 ?). [?]

**ಗವುರ್ನರ್** 'ಗವರ್ನರ್' ನೋ.

**ಗವುಲಿ** 'ಗೌವಲೆ' ನೋ.

**ಗವುಲು, ಗವಲು, ಗೌಲು** (ನಾ). ೧. ವಾಸನೆ; ಕಂಪು : ಏನೋ ಗವುಲು ಬರುತ್ತಿದೆ (ರೂಢಿ). ೨. ಕೆಟ್ಟವಾಸನೆ; ಗಬ್ಬುನಾತ : (೬). **ಗವಲು** : ೧. ಕೋಣನ ಗವಲು ತಾಗಿ ಕಾಮಧೇನು ಕೆಡುತ್ತದೆ (ಕೋಲಶಾಂ. ೪೨–೩೨); ಗಾಢಮಾಂಸದ ಗವಲಿದೆಂದರು ಗೋಪನಂದನರು (ನಿಭಾಗ. ೧೦–೧೨–೨೪) ; ಹೊಸಮನುಷ್ಯರ ಗವಲಿಗೆ ಗಳ್ಳಿಕ್ಕುತ ಮುಸುಕಿ ಮುಂಬರಿವ ಶುನಿಗಳು ಎಸೆದುವಾ ದಂಡಿನೆಚ್ಚಜೀಕೆಯ ಕಾವಲೊಂದೆಸಕವನೇನವಣ್ಣಿಸುವೆ (ಕಂಸವಿ. ೧೯–೨೪). **ಗೌಲು** : ೧. "ಗೌಲು–ಗವಲು; ಕಲೆ; ನಾತ" (ಜಾನಕೋ. ೫೨).

[ದೇ. ‖ ತಮಿ. ಕವುಲ್, ಕೌಲ್ ; ತೆಲು. ಗವುಲು, ಗೌಲು]

**ಗವುಸಣಿಗೆ** 'ಗವಸಣಿಗೆ' ನೋ.

**ಗವುಳಿ, ಗವಳಿ$_1$, ಗೌಳಿ$_1$** (ನಾ). ಪಲ್ಲಿ; ಹಲ್ಲಿ : "ಗವುಳಿ – ಹಲ್ಲಿ" (ಜಾನಕೋ. ೪೩). **ಗವಳಿ$_1$** : (೬). **ಗೌಳಿ$_1$** : ಹರಡೆ ಹಂಗಂ ರಾಸಭಂ ದರ್ದುರಂ ಗೌಳಿ ದರುಶನ ಸ್ವರವನಾ ವಾಮಭಾಗದೋಳೀಯೆ . . . ಚೇರಮುಕ್ತಿಶೀಶಂ ಕೂರ್ತು ಪೊಜಮಟ್ಟನು (ಚೇರಮ. ೧೦–೩) ; ಅರಸನು ಗೌಳಿಯ ಶಕುನವ ಕೇಳುತ (ಸೌಗಂಪ. ೧೦–೩೪); ಟವಳಿಗಾರನ ಮೈಮೇಲೆ ಗೌಳಿ ಬಿತ್ತು (ಗಾದೆ).

[ದೇ. ‖ ತಮಿ. ಕವುಳಿ, ಕೌಳಿ ; ಮಲ. ತುಳು. ಗೌಳಿ ; ಕೊಡ. ಗವ್ಳಿ ; ತೆಲು. ಗವುಲಿ, ಗೌಳಿ]

**ಗವುಳು** 'ಗವುಲು' ನೋ.

**ಗವೇಂದ್ರ** (ನಾ). ಶ್ರೇಷ್ಠವಾದ ಎತ್ತು; ಉತ್ತಮವಾದ ಗೂಳಿ, —ಬಸವ: ಧ್ವಜಂ ಗರುಡ ಗವೇಂದ್ರ ಮೃಗೇಂದ್ರ ಹಂಸ . . . ಲಾಂಛನಮಪ್ಪ ದಶವಿಧದಿನೆಸೆದು (ಅಜಿಪು. ೭–೨೦ ವ); ಗವೇಂದ್ರ ಕಂಧರನಿಭದ್ವಿಣ್ಮಧ್ಯನಿಂದಿಂದಿರೋಚ್ಚ್ವಳಕೇಶಂ ಧರಣೀಶಸೂನು ತಳೆದಂ ಸಾಶ್ಚರ್ಯಸೌಂದರ್ಯಮಂ (ಚಂದ್ರಪು. ೪–೭).

[ಸಂ. (ಗೋ + ಇಂದ್ರ)]

**ಗವೇಕ್ಷಣಾಲಯ** (ನಾ). ಗ್ರಹನಕ್ಷತ್ರಾದಿಗಳ ಗತಿ ಮೊದಲಾದುವನ್ನು ಪರೀಕ್ಷಿಸಲು ಉಪಯುಕ್ತವಾದ ಉಪಕರಣಗಳಿಂದ ಸಜ್ಜಿತವಾಗಿರುವ ಶಾಲೆ; ಖಗೋಳಸಮೀಕ್ಷಾಲಯ : ಪ್ರಪಂಚದ ಮಾಡೆಂದು ಹೆಸರಾಂತ ಈ ಪ್ರದೇಶದಲ್ಲಿ ರಶಿಯದ ಸೈನ್ಸ್ ಎಕೆಡೆಮಿಯವರ ಪಾಮಿಾರ ಗವೇಕ್ಷಣಾಲಯವಿದೆ (ಏಶಿಸಂ. ೧೧೪).

[ಸಂ. (ಗೋ + ಈಕ್ಷಣ + ಆಲಯ)]

**ಗವೇಧು** (ನಾ). ಕಾಡುಗೋಧಿ : "ಗವೇಧುಃ, ಗವೇಧುಕಾ – ೨ ಕಾಡುಗೋಧಿ" (ಸಿದ್ಧಾಂತಿ. ೨೪೧). [ಸಂ.]

**ಗವೇಧುಕೆ** (ನಾ). = ಗವೇಧು : (೬). [ಸಂ. ಗವೇಧುಕಾ]

**ಗವೇಶ್ವರ** (ನಾ). ದನಗಳ ಒಡೆಯ ; ಗೋಸ್ವಾಮಿ ; ಗೋಪಾಲಕ.

[ಸಂ. (ಗೋ + ಈಶ್ವರ)]

**ಗವೇಷಣೆ** (ನಾ). ಹುಡುಕುವುದು ; ಅನ್ವೇಷಣ ; ಕಂಡುಹಿಡಿಯುವುದು ; ಸಂಶೋಧನೆ : (೬). [ಸಂ. ಗವೇಷಣಾ]

**ಗವೇಷಿತ** (ಗು). ಹುಡುಕಲ್ಪಟ್ಟ ; ಕಂಡುಹಿಡಿದ. [ಸಂ.]

**ಗವ್ಯ** (ಗು). ೧. ಹಸುವಿಗೆ ಸಂಬಂಧಿಸಿದ ಅಥವಾ ಗೋವಿನಿಂದ ದೊರಕುವ: ಗೋಪಕದಂಬಕಮಿಂದು ಗವ್ಯಮಾಹಿಷರಸಸಂಕುಳಂ ಬೆರಸು ಕಾರ್ಮುಕಪೂಜೆಗೆ ಬರ್ಪುದು (ಜಗವಿ. ೫-೬೪); ಗವ್ಯಂ ಕವಿಕುಳ ತಿಳಕನ ಕಾವ್ಯದವೊಲ್ ನವ್ಯಮನುಪಮಂ ಬುಧಜನ ಸಂಸೇವ್ಯಮೆನಿಸಿರ್ದ ಘೃತದಿಂ ಭವ್ಯೇಂದ್ರರ್ ವಿಭುಗೆ ಮಾಡಿದರ್ ಮಜ್ಜನಮಂ (ಪಾರ್ಶ್ವಪು. ೧೪-೭೭). (ನಾ). ೨. ಹಸುವಿನಿಂದ ದೊರಕುವ ಹಾಲು, ಮೊಸರು, ಗಂಜಲ ಮೊದಲಾದುವು: ದ್ರವ್ಯವಿದ್ದವನಲ್ಲಿ ಹವ್ಯವಾದರೂ ಗವ್ಯಕ್ಕೆ ಮಾತ್ರ ಬಡತನ (ಗಾದೆ). 'ಪಂಚಗವ್ಯ' ಪರಾ. [ಸಂ.]

**ಗವ್ಯೂತ** (ನಾ). = ಗವ್ಯೂತಿ ೧. [ಸಂ.]

**ಗವ್ಯೂತಿ** (ನಾ). ೧. ಒಂದು ದೂರದ ಅಳತೆ; ಎರಡು ಕ್ರೋಶದಷ್ಟು ದೂರ. ‖ ಸುಮಾರು ಐದು ಕಿಲೋಮೀಟರುಗಳಷ್ಟು ದೂರ: ನಗರಾದುತ್ತರಸ್ಯಾಂದಿಶಿ ಗವ್ಯೂತಿ ಪ್ರಮಾಣವ್ಯವಸ್ಥಿತ (ಸೌಇಇ. XX, ೭-೧೫; 735); ಅಂತು ಗಂಗಾದ್ವಾರದೊಳ್ ಚತುರಶ್ರಪಣ್ಣವತಿಗವ್ಯೂತಿ ಪ್ರಮಾಣದೊಳ್ ಬೀಡಂ ಬಿಟ್ಟು ಚಕ್ರೇಶ್ವರನಿರ್ಪುದುಂ (ಶಾಂತಿಪು. ೧೦-೧೭೭ ವ); ನೆಟ್ಟನಿಲ್ಲಿಗೇಕಗವ್ಯೂತಿ ಪ್ರಮಾಣಾಂತರದೊಳ್ (ಪುಷ್ಪಪು. ೬-೧೭ ವ). ೨. ಹುಲ್ಲುಗಾವಲು; ಗೋಮಾಳ. [ಸಂ.]

**ಗವ್ಯೆ** (ನಾ). ದನಗಳ ಗುಂಪು: (•). [ಸಂ. ಗವ್ಯಾ]

**ಗವ್ವರ** 'ಗಂಹರ' ನೋ.

**ಗವ್ವಳಿಕೆ** (ನಾ). ಕುಗ್ಗುವಿಕೆ; ನಿಶ್ಶಕ್ತಿ; ದೌರ್ಬಲ್ಯ: ಯೌವನವೊದಗಿದಾಗ ಏನೆಂದರೂ ಅಪ್ಪ ಅವ್ವ ಣ್ಣನೆಂದು ನಸುನಗುತ ಗವ್ವಳಿಕೆ ವೃದ್ಧಾಪ್ಯ ಬಂದೊದಗಲು ಇವನ ಬವ್ವನ ತೆರದಲಾಡಿಪರೋ ಪ್ರಾಣ (ವಿದಾಕ್ಯ. ೪೮-೫).
[←ಮರಾ. ಗಾಬಾಳ್=ಜೀರ್ಣವಾಗಿ ನಿರುಪಯೋಗಿಯಾದ ವಸ್ತು]

**ಗಷ್ಟು** 'ಗಸಟು' ನೋ.

**ಗಸಗಸ** (ನಾ). ಒಂದು ಅನುಕರಣ ಶಬ್ದ. 'ಗಸಗಸನೆ' ಪರಾ.
ಗಸಗಸ ತಿಕ್ಕು = ಬೇಗಬೇಗನೆ ಉಜ್ಜು: ಪಾತ್ರೆಯನ್ನು ಗಸಗಸ ತಿಕ್ಕು (ರೂಢಿ).

**ಗಸಗಸನೆ** (ಅ). ಗಸಗಸ ಎಂಬ ಸದ್ದು ಹುಟ್ಟುವಂತೆ; ಬಹಳ ಬೇಗನೆ; ಅತಿಶೀಘ್ರವಾಗಿ: ಮಸಣವೆನಿಸಿತು ಊರು ಗಸಗಸನೆ ಹರಡಿ ಆ ಸುದ್ದಿ (ಕನ್ನಜಾ. ೨೪೧-೬೪). [ಗಸಗಸ + -ಅನೆ$_1$]

**ಗಸಗಸೆ** 'ಕಸಕಸೆ' ನೋ.

**ಗಸಟು**, ಗಷ್ಟು, ಗುಷ್ಟು (ನಾ). ೧. ತುಪ್ಪ, ಎಣ್ಣೆ ಮೊದಲಾದ ದ್ರವವಸ್ತುಗಳ ತಳದಲ್ಲಿ ನಿಲ್ಲುವ ಕಸ; ಗಸಿ: ಬೆಣ್ಣೆಯಂ ಪದದೊಳ್ ಕಾಸಿದಾಗಳ್ ನೊರೆಯುಂ ಗಸಟುಂ ಪತ್ತುವಿಟ್ಟು ಪೋಗೆ ತಿಳಿದು ಕಂಪುಮಿಂಪುಮುಳ್ಳ ತುಪ್ಪಮಪ್ಪಂತೆ (ಜೀವಸಂ. ೨೧೪-೧೨ ವ).
**ಗಷ್ಟು**: ೧. ಈ ಎಣ್ಣೆಪಾತ್ರೆಯ ತಳದಲ್ಲಿ ಬಹಳ ಗಷ್ಟು ಇದೆ (ರೂಢಿ). ೨. (ಆಲಂ) ಕೊಳೆ; ಕಸ: ಇನ್ನು ಗಷ್ಟುಮುಷ್ಟುಗಳ ವಿಚಾರ ೨. (ಕನ್ನಸು. I, ೩೩೦). **ಗುಷ್ಟು**: ೨. ಅಖಿಳಮದಂಗಳ ಗುಷ್ಟು ನೆಲೆಗೆಟ್ಟು ಪೋಗೆ (ಸಿದ್ಧೇಪು. ೨೩-೩೩); ಗುಷ್ಟು ನಾರುವ ಮೆಯ್ಯ ಬಿಟ್ಟದ್ದ ಬಿರುಗಣ್ಣು (ವಾದಿಕೀ. ೭೦-೧). 'ಕಸಟು' ಪರಾ.
[ದೇ. ‖ ತಮಿ. ತೆಲು. ಕಶಟು; ತುಳು. ಕಸಂಟ್; ಪರ್ಜಿ. ಕಸಡ]

**ಗಸಣ** 'ಗಸಣಿ' ನೋ.

**ಗಸಣಿ**, ಗಸಣ, ಗಸಣೆ, ಘಸಣ, ಘಸಣಿ, ಘಸಣೆ (ನಾ). ೧. ತೊಂದರೆ; ಕೋಟಲೆ; ಹಿಂಸೆ; ಕಾಟ: ಇದು ಶತಸಹಸ್ರ ಯೋಜನಮುದಗ್ರಮಿದನಡರ್ವ ತೊಡರ್ವ ಗಸಣಿಯೊಳೇನೆಂಬುದನೆಂದು ದಿವಿಜಗಜಮುಂಬುದಮಾರ್ಗಕ್ಕೊಗೆದುದು (ಶಾಂತಿಪು. ೧೧-೨೫); ದಿಶಾದನ್ತಿಗೆ ಮಹೀಭರಮಂ ತಾಳ್ದು ವಾಯಾಸವಿನ್ನೇಕೆ ಮಹೀಭೃನ್ಮೂಳಮಂ ಪೊರ್ದ್ದುರ್ವ ಗಸಣಿ ನೆಲಕ್ಕಾನೆ ಪೋ ಸಾಲ್ವೆಂ (ಎಕ. VI, ಕಡೂರು, ೯೭-೨೧; 1141); ನಿನ್ನ ಕಂದನ ಗಸಣಿ ಬಲುಹು ಯಶೋದೆ (ಸಾಳ್ವಭಾ. ೨೧-೪೪); ಮಸಗಿತು ತಮಸ್ತೋಮಮಾದಿತ್ಯಮಂಡಲದ ಗಸಣಿಯಿಲ್ಲೆನೆ ನಭದೊಳು (ಜೈಮಿಭಾ. ೨೫-೨೫). ೨. ಗೋಜು; ಗೊಡವೆ; ಉಸಾಬರಿ: ಮಾಡುವ ಕಿಡಿಸುವ ಗಸಣಿಗೆ ನಾಡೆಯುಮದು ಪೊಜಗು (ಆದಿಪು. ೧-೯೭); ಜೂಜಿನ ಗಸಣಿ ಸಾಕೈ ಮಗನೆ ಬೇಡಿದೆನೆಂದು ತಲೆವಾಗಿದಳು ಗಾಂಧಾರಿ (ಕುವ್ಯಾಉ. ಓರಿಇ. ೯-೨೭); ಆತನ ಗಸಣಿ ನಮಗೇಕೆನುತಲಿದ್ದುದು ಜಂಗಮಸ್ತೋಮ (ಪ್ರಭುಲೀ. ೨೩-೯). ೩. ತಿಕ್ಕಾಟ; ಘರ್ಷಣೆ: ಬಹಳಾಹವದ ಭಾರಿಯ ಭಟರ ಬಲುಗಾಳಗದ ಗಸಣಿಯಲಿ ಅವನಿ ನೊಂದುದು (ತೊರರಾ. ೬-೩೦-೫). **ಗಸಣ**: ೩. "ಗಸಣ(ಣೆ) – ಘರ್ಷಣ = ತಿಕ್ಕಾಟ" (ತದ್ಭಕೋ. ೧೦). **ಗಸಣೆ**: ೧. ಇರದೆ ಚಿಂತಿಸುತಿರ್ಪ ಗಸಣಿಗೆ ಭರದೆ ಚಿಂತಾಮಣಿಗೆ ಕನಲುವರಱಿದು ದಶರಥನೃಪನ ರಾಜ್ಯದೊಳರ್ಥಿ ಸಂಕುಳವು (ಕುಮುರಾ. ೨-೮); ಹುಸಿವೊಡೀ ಮಾಯಕದ ತನುವುನದೆಸಕವವನಿನ್ನಿಲ್ಲವೆನಿಸುವ ಗಸಣೆಯೇತಕೆ ಬೇಱೆ ಮುಕ್ತಿಯ ಬೆದಕುತಿರಲೇಕೆ (ಪ್ರಭುಲೀ. ೨೪-೨೩); ಎಮಗೀ ಭಿಕ್ಷಮಲ್ಲದವರೆಡೆಗೆ ಬಹ ಗಸಣೆಯೇಂ ಬಂದಂತೆ ನೀಂ ನಡೆ (ಚಬಪು. ೨೦-೨೭). ೨. ಹಸಿಯದಿರೆ ಉಣಬೇಡ ಹಸಿದು ಮತ್ತಿರಬೇಡ ಬಿಸಿ ಬೇಡ ತಂಗೂಳುಣಬೇಡ ವೈದ್ಯನ ಗಸಣೆ ಬೇಡೆಂದ (ಸರ್ವಜ್ಞ. ೨೦-೧೨). **ಘಸಣ**: ೧. ಬೀಜಯಾತ್ರೆಯಿದು ಕರ್ಮದ ಘಸಣಕ್ಕೆ ತೇಜೋಮಯ ಕೃಷ್ಣ ವಿಜಯವಿಠಲ ಮನವೆ (ತೀರ್ಥಮ. ೨೯೪). **ಘಸಣಿ**: ೧. ಧರಾವನಿ[ತೆ]ಯ ಭಾರಾವತಾರದೊಳೆನಿತಾನುಂ ಘಸಣಿ ಪೋದುದು (ಪಂಪಭಾ. ೬-೨೪ ವ); ಘಸಣಿಯೆಂಬಡಂ ನೀನಱಿವುದು ಮಾಸಿಪ್ಪೊಡಂ ಸಮಂತೊಲ್ಲದಳಂ (ಮದತಿ. ೧೧-೪೨); ನಿಮ್ಮ ರಕ್ಷಣವ ಪಸರಿಸುವ ಪರಮಾತ್ಮ ತಾನೀ ಘಸಣಿ ನಿಮಗೇಕೆಂದು ದೇವ ಪ್ರಸರವನು ತಿಳುಹಿದನು ಕಾರುಣ್ಯದಲಿ ಕಾಮಾರಿ (ಕುವ್ಯಾಕ. ೬-೩೦); ಹೆಸರುಗೊಂಬರು ವೀರರಾವನ ವಿಷಮವಿಕ್ರಮನೆಂದು ನಿನ್ನೀ ಘಸಣಿಯನು ಘಳಿಗೆಗೆ ಗತಾಯುವ ಮಾಡನೇ ಬಳಿಕ (ನಿಭಾಗ. ೩-೮-೨೭). **ಘಸಣೆ**: ೧. ವಿಷಯವಂತರ್ಮಾರ್ಗದಲಿ ಮೋಹಿಸಿದನಾದೊಡೆ ಬಳಿಕಲಾತನ ಘಸಣೆ ದುಃಖವನೀವುದೈ (ಪ್ರಭುಲೀ. ೧೩-೬೪); ಉಸುರ ಗಮನಾಗಮದ ಸರಣಿಯ ಘಸಣೆ[ಪಾಠಾಂ. ಗಸಣಿ]ಯಲಿ ಬೆಂಡಾಗಿ ಕಿಡಿಕಿಡಿಮಸಗಿ ಕೋಪಾನಲನನೋಕರಿಸಿದನು ಕಲಿಹನುಮ (ತೊರರಾ. ೫-೨-೪೪); ಕೇಡುಕಾಲ ಭಯವಿಲ್ಲ ಕನಸಿನಬ್ಬರದಲಿ ಛಲದಿಂದ ಪುಟ್ಟುವ ಘಸಣೆಯಿಲ್ಲ (ಕನಕ. ೧೭-೫); ಅಸುರವಿರೋಧಿಗೆ ಘಸಣೆಯೆಂಬೋದು ಎತ್ತ (ವಿಪ್ರಸು. ೨-೬).
[ಪ್ರಾ. ಘಸಣ. / ಸಂ. ಘರ್ಷಣ]

**ಗಸಣಿಗೆಯ್** (ಕ್ರಿ). ಹೋರಾಡು; ಸೆಣಸು; ಘರ್ಷಿಸು: ಮಸಣಿಯೊಳ್ ಗಸಣಿಗೆಯ್ದು ಜವನಂ ಜವಗಿಡಿಸುವ ಕುಳಿಕನಂ ಗುಳಿಗೆಗಟ್ಟುವ ಪೆರ್ಕಳದ ಕಾಲಾಳ್ಗಳ ಪಡೆಯ (ರಾಮಾಶ್ವ. ೯೪-೧೭).
[ಗಸಣಿ + ಕೆಯ್$_1$]

**ಗಸಣಿಗೊಳ್**, ಘಸಣಿಗೊಳ್ (ಕ್ರಿ). ೧. ಬವಣೆಗೊಳ್ಳು; ಕೋಟಲೆಗೊಳ್ಳು; ತೊಂದರೆಯನ್ನು ಅನುಭವಿಸು: ಅಮೃತಘಟಿಕೆ ಇದ್ದು ಅಶನದ ಮುದ್ದೆಯ ಕೇಳಿ ಗಸಣಿಗೊಂಬಂತೆ (ಕಲ್ಯಾಶಾಂ. ೬೦); ತಂದೆ ಬಿಜಯಂಗೈವುದೆಂದು ಕರೆಯುತ್ತುಮಿರೆ ಅಂದು ದಣ್ಣಾಯಕರು ಗಸಣಿಗೊಳುತಂತಲ್ಲಿ ನೊಂದು ಸಮುಶೀಲವಿಲ್ಲದೆ ನುಡಿದರಂತಲ್ಲಿ (ಜೊಮ್ಮರ. ಪ. ೩೪೨-೨೭). ೨. ಆಯಾಸಪಡಿಸು; ತೊಂದರೆಯನ್ನುಂಟುಮಾಡು;

ಚರಿಯಿಪ ಕಿನ್ನರಿಯರ ಮೊಗಸಿರಿಗೊಯ್ಯನೆ ಗೋರಿಗೊಂಡು ಕೂಡೆ ಕುಕಿಲ್ದುಪ್ಪರಿಸಿ ರವಿರಥದ ವಾಜಿಗಳರುಣನನೋರೊರ್ವರ್ ಗಸಣಿಗೊಳ್ವುವು ನಭದೊಳ್ (ಸೂಕ್ತಿಸು. ೩-೨೧೯). **ಘುಸಣಿಗೊಳ್** : ೧. ಕೂರ್ಗಣೆಗಳ್ ನಭದಲ್ಲಿ ಕೂಡಿ ಸಂದಿಸೆ ಕವಿದತ್ತು ಕಣ್ಗೆ ಕಡುಗತ್ತಲೆ ನೋಡುವ ದೇವ ದಾನವರ್ ಘುಸಣಿಗೊಳಲ್ಕೆ ನೋಡಲನುವಲ್ಲೆನುತುಂ ಗಗನಾಂತರಾಳ ದೊಳ್ (ಮಹಾನೇ. ೧೨-೩೨) ; ಅಕಟ ದಿಗ್ಗಜ ಘುಸಣಿಗೊಂಬುದೆ ನಿನ್ನ ಬಾಣಪ್ರಸರಕೆ ಕುವ್ಯಾದ್ರೋ. ೧೦-೫೦) ; ಘುಸಣಿಗೊಂಬನು ಸತಿಯ ಸಂತಾಪದಲಿ (ನಿಭಾಗ. ೪-೧೮-೩). [ಗಸಣಿ + ಕೊಳ್$_1$]

**ಗಸಣಿದಾರಿ** (ನಾ). ಇಕ್ಕಟ್ಟಾದ ದಾರಿ : (ಕಿ). [ಗಸಣಿ + ದಾರಿ]

**ಗಸಣೆ** 'ಗಸಣಿ' ನೋ.

**ಗಸಬಸನೆ** (ಅ). ಬೇಗನೆ ; ಆತುರದಿಂದ ಕೂಡಿ : ವ್ಯಸನದುದ್ರೇಕಕೆ ಪಶುಗಳಂದದಿ ಗಸಬಸನೊಂದಲದು ಮೋಹವಲ್ಲ (ಭರಚ. ೪೬-೩೦).
[ಗಸಬಸ$_0$ + -ಅನೆ$_1$]

**ಗಸಿ** (ನಾ). ೧. ಗಷ್ಟು ; ಗಸಟು : ಕಿಸುವೆರಸಿದ ಪೊನ್ನುಂ ಗಸಿವೆರಸಿ ದೆಣ್ಣೆಯುಂ (ಧರ್ಮಾಮೃ. ೧೪-೧೩೪); ಇದು ನಿಜವಾಗಿ ಸರಸ್ವತೀಪೂಜೆಯ ಗಸಿ; ತುಪ್ಪ ಬೇರೆ (ಸಾಹಜೀ. ೬). ೨. (ಕರಾ) ಅನ್ನಕ್ಕೆ ಕಲಸಿಕೊಳ್ಳಲು ಹಾಕುವ ಮೇಲೋಗರದ ತಳದಲ್ಲಿ ಉಳಿದಿರುವ ಭಾಗ : ಸ್ವಲ್ಪ ಗಸಿ ಹಾಕ್ತೀನಿ. ಕಲಸಿಕೊ (ಮಲೆಮ. ೨೧). ೩. ಹೊಗೆಸೊಪ್ಪಿನ ಗಿಡದ ದೊಡ್ಡ ಎಲೆಯ ಬುಡದಲ್ಲಿ ಮೊಳೆಯುವ ಚಿಗುರೆಲೆ. 'ಗಸಿತೆಗೆ' ಪರಾ. ೪. (ಆಲಂ) ಮೋಸ ; ವಂಚನೆ. 'ಗಸಿಕೊಡು' ಪರಾ.
ಗಸಿಗಿಳಿಸು = ಸೋಸು ; ಶೋಧಿಸು : ಜೊತೆಗಾರ ತನಿಜಿನುಗು ದನಿಯಲಿ ಸೋಸುತಿಹನು, ಹಿನ್ನೋಟ ಮುನ್ನೋಟದಲಿ ಗಸಿಗಿಳಿಸುತಿರೆ ಅಭ್ರ ಧವಳಿಸುತಲಿವೆ (ಉಯ್ಯಾಲೆ. ೧೧-೧೧). [ದೇ. ‖ ತೆಲು. ಗಸಿ]

**ಗಸಿಕೊಡು** (ಕ್ರಿ). (ಆಲಂ) ಮೋಸಮಾಡು ; ವಂಚಿಸು : ಅವನು ಪೋಲೀಸರಿಗೆ ಗಸಿಕೊಟ್ಬಂವ (ಮಲೆಮ. ೬೩೮). [ಗಸಿ + ಕೊಡು$_1$]

**ಗಸಿಗಟ್ಟು** (ಕ್ರಿ). ಗಟ್ಟಿಯಾಗು ; ತಳವೂರು ; ಹೆಪ್ಪುಗಟ್ಟು : ಗನ್ನಂ ಗಸಿಗಟ್ಟಿತೀಯೆಡೆಯಿನೀ ಠಾವಿಂದೆ ಸಂದಿಚ್ಚಕಂ ಪದುಳಂಬೆತ್ತುದು ಮತ್ತಮೇಂ ಭವಸುಖಂ ಪೆಂಪಾದುದೀ ಬೀದಿಯಿಂ (ಚಿಕವಿ. ೬-೬೫).
[ಗಸಿ + ಕಟ್ಟು$_1$]

**ಗಸಿತೆಗೆ** (ಕ್ರಿ). ೧. ಗಷ್ಟನ್ನು ತೆಗೆ, —ಕಳೆ, —ಹೋಗಲಾಡಿಸು. ೨. ಹೊಗೆಸೊಪ್ಪಿನ ಸಸಿಯಿಂದ ಹಾನಿಕಾರಕವಾದ, ಹೆಚ್ಚಾದ ಚಿಗುರೆಲೆಗಳನ್ನು ಕಿತ್ತು ಬಿಸುಡು (ಸ್ಯಾಂಡರ್). [ಗಸಿ + ತೆಗೆ$_1$]

**ಗಸ್ತಿ** 'ಗಸ್ತು' ನೋ.

**ಗಸ್ತಿಗಾರ** (ನಾ). ಪಹರೆಯವನು ; ಕಾವಲಿನವನು. (ಸ್ಯಾಂಡರ್)
[ಗಸ್ತಿ (< ಗಸ್ತು) + - ಗಾರ (< -ಕಾಱ]

**ಗಸ್ತಿಪಹರೆ** (ನಾ). ಕಾವಲಿನ ಪಹರೆ : (ಕಿ).
[ಗಸ್ತಿ (< ಗಸ್ತು) + ಪಹರೆ]

**ಗಸ್ತು, ಗಸ್ತಿ** (ನಾ). ೧. ಕಾವಲುದಳದವನು ಮಾಡುವ ಪಹರೆ, —ಕಾವಲು : ಗ್ರಾಮದ ಹಣವಸೂಲಿ, ಗ್ರಾಮದ ಪಹರೆ, ರಾತ್ರಿಗಸ್ತು (ಗ್ರಾಮಾಕ. ೪) ; ಆಗತಾನೆ ಬಂದ ಮೋಟಾರಿನಿಂದ ಇಬ್ಬರು ವ್ಯಕ್ತಿಗಳು ಇಳಿಯುವುದನ್ನು ಕಂಡು ಗಸ್ತಿನ ಶಿಪಾಯಿ ಕೊಂಚ ತಡೆದು ನಿಂತ (ರತ್ನಗೋ. ೩೨) ; ಪೋಲೀಸಿನವರು ವಿಶೇಷಗಸ್ತುಗಳು, ಗ್ರಾಮಗಾವಲು, ಗ್ರಾಮಸ್ಥರಿಗೆ ಎಚ್ಚರಿಕೆ ಮೊದಲಾದ ಕ್ರಮಗಳನ್ನು ನಡೆಸುತ್ತಿದ್ದರು (ನಡೆದಾ. II, ೮೫೯). ೨. ಮೋಸ ; ದಗಾ : ಕೊಟ್ಬುಬಿಟ್ಟೆಯಲ್ಲಾ ಗಸ್ತು (ರೂಢಿ). 'ಗಸ್ತುಕೊಡು' ಪರಾ. **ಗಸ್ತಿ** : ೧. ಜಾವಜಾವಕೆ ಗಸ್ತಿ ಸಭಿ[ಲಿ]ಸಿ ತಿರುಗುವಂತೆ ರಾಯ ಕಟ್ಟಳೆಯ ಮಾಡಿಸಿದ (ಸೌಂದಕಾ. ೬-೧೬) ; ರಾತ್ರಿ 'ಗಸ್ತಿ' ತಿರುಗುವ ಪೋಲೀಸರಿಗೆ ಎಚ್ಚರಿಕೆಕೊಟ್ಟು . . . ಬೆದರಿಸಿದರು (ಬಂಗಾರ. ೨೪೦) ; ಬೆಳಗಿನ ಜಾವದ ಗಸ್ತೀಕಾವಲಿನವರು ಹೊರಡುವ ಹೊತ್ತಿಗೆ ಸರಿಯಾಗಿ ನೀವೆಲ್ಲರೂ . . . ಹೊರಡಬೇಕು (ಪೇಟಿಮಾ. ೨).
ಗಸ್ತಿಯವನು = ಗ್ರಾಮ, ನಗರಾದಿಗಳ ರಕ್ಷಣೆಗಾಗಿ ಕಾವಲು ತಿರುಗುವವನು ; ಪೋಲೀಸಿನವನು : "ಗಸ್ತಿಯವನೇ" ಎಂದು ಕೂಗಲು ಹವಣಿಸಿದನು (ಇಪ್ಪಕ. ೨೯೮).
[← ಪಾರ. ಹಿಂ. ಗಶ್ತ್ ; ಮರಾ. ಗಸ್ತ್]

**ಗಸ್ತುಕೊಡು** (ಕ್ರಿ). ಮೋಸಮಾಡು ; ದಗಾಕೊಡು : ಬೇರೊಬ್ಬ ಸಾಲಗಾರನಿಗೆ ಗಸ್ತುಕೊಡಬೇಕೆಂದು ಗಲ್ಲಿಬಿದ್ದರೆ ಈ ವಿಮಾದಲ್ಲಾಳಿ ಅಲ್ಲಿ ಪ್ರತ್ಯಕ್ಷನಾಗುತ್ತಾನೆ (ನಾಡಿಗೇ. ೨೫೪) ; ಅನೇಕ ಸಂದರ್ಭಗಳಲ್ಲಿ ನಮ್ಮ ಹುಡುಗರು ನಮಗೆ ಬಹಳ ಗಸ್ತುಕೊಟ್ಟಿದ್ದಾರೆ (ಕಸಬು. ೮) ; ಕೊನೆಗೆ ನನಗೆ ಗಸ್ತುಕೊಟ್ಟೇಬಿಟ್ಟ (ಉಡುಗೊ. ೪೮). [ಗಸ್ತು + ಕೊಡು$_1$]

**ಗಸ್ತುತಿರುಗು** (ಕ್ರಿ). (ಪಾಳೆಯ, ಪಟ್ಟಣ ಮೊದಲಾದುವುಗಳ ಸುತ್ತ) ತಿರುಗು ; ಕಾವಲುಕಾಯು : ರಾತ್ರಿಯಲ್ಲಿ ಗಸ್ತುತಿರುಗುತ್ತಿದ್ದ ಸೀಖ್ ಪಹರೆಯವನು . . . ಗಾಬರಿಗೊಂಡನು (ಮೂಲಾನ. ೩೦).
[ಗಸ್ತು + ತಿರುಗು$_1$]

**ಗಸ್ತುಹೊಡೆ** (ಕ್ರಿ). ತಿರುಗಾಡು ; ಸುತ್ತು : ೩-೪ ಮೈಲಿ ಸುತ್ತಿನಲ್ಲೇ ಗಸ್ತುಹೊಡೆಯುತ್ತಿರುತ್ತಾನೆ (ಗರುದಾ. ೮ ಪೀಠಿಕೆ) ; ನಿನ್ನನ್ನು ಹುಡುಕಿಕೊಂಡು ಊರೆಲ್ಲಾ ಗಸ್ತುಹೊಡೆದುದಾಯಿತು (ನಿಶಲು. ೨೬೨).
[ಗಸ್ತು + ಹೊಡೆ$_1$ (< ಪೊಡೆ$_1$)]

**ಗಹಕ** (ನಾ). ಹಿಗ್ಗು ; ಉತ್ಸಾಹ (?): ಇಹುದು ಸಂತಸದಲ್ಲಿ ಕಾರ್ಯದ ತಹಕವರಿದ್ಭೈದಿಸುವೆನೆಂದತಿಗಹಕದಲಿ ಮತ್ಸ್ಯೇಂದ್ರ ಸಹಿತೊಲವಿಂದ ಬೀಳ್ಕೊಟ್ಟ (ಜಿನಭಾ. ೬೨-೮). [?]

**ಗಹಗಹ** (ನಾ). ನಗೆಯಿಂದ ಉಂಟಾಗುವ ಧ್ವನಿಯನ್ನು ಅನುಕರಿಸುವ ಶಬ್ದ ; "ನಗೆಯೊಳ್ ಆದ ಧ್ವನಿ" (ಚತುನಿ. ಕಿ. I, ೫೬) : "ಹಸನವ್ಯವಹೃತಿ ಗಹಗಹಮೆನೆ" (ಶಮುದ. ೩೦೯).

**ಗಹಗಹನೆ** (ಅ). ಗಹಗಹವೆಂಬ ಶಬ್ದದೊಡನೆ : ಗಹಗಹನೆ ನಕ್ಕು (ದಶಕು. ೪-೬೦) ; ಬಹುಕಾಲಕಾಗಿ ನನ್ನೊಡೆಯನ ಕಂಡೆನೊ ಮಹಿಮೆವೆತ್ತನೊಯೆನುತೆಯ್ದಿ ಮಹಿಪನ ಮುಂದುಡುಗೊಜೆಯನಿರಿಸಿ ಗಹಗಹನೆಜಗಿದಳು ಕಾಳಿಂದಿ (ಭರಚ. ೩೭-೬೬) ; ಅವನು ಹಾಸ್ಯಗಾರನ ಮಾತುಗಳನ್ನು ಕೇಳಿ ಗಹಗಹನೆ ನಕ್ಕನು (ರೂಢಿ). [ಗಹಗಹ+ - ಅನೆ$_1$]

**ಗಹಗಹಿಕೆ** (ನಾ). ೧. ಕೊರಳಿನಿಂದ ಹೊರಹೊಮ್ಮುವ ಶಬ್ದ : ಶಬರನಿಕರಂ ಕೊರಲ ಗಹಗಹಿಕೆ ಮೊಱೆಯೆ . . . ಪಕ್ಷಿಗಳ ದನಿಯಿಂ ಕರೆಯಲು (ಹಚಕಾ. ೫-೪೨). ೨. ಗಟ್ಟಿಯಾಗಿ ನಗುವಿಕೆ; ಅಟ್ಟಹಾಸ : ಆಹತಬಲನಿವನಿವನ ಘನವಿಗ್ರಹವನಾನುವುದರಿದೆನಲು ಗಹಗಹಿಕೆಯಲಿ ತೂಷ್ಣೀಕರಿಸಿ ಸೌಮಿತ್ರಿ ಮಾಜೂಂತ (ತೊರರಾ. ೬-೩೪-೫೫). ೩. ಸಂತೋಷ ; ಹರ್ಷ : "ಗಹಗಹಿಕೆಯೆನಲ್ ಸಂತಸ" (ಭಾರನಿ. ೨೧). ೪. ಫಳಫಳನೆ ಹೊಳೆಯುವಿಕೆ ; ನಿಗಿನಿಗಿಗುಟ್ಟುವುದು : ತೈಲಲೇಪದ ನಯದ ಹೊಗರಿನ ಜಾಳಿಗೆಯ ಗಹಗಹಿಕೆಗಳ ಹೂಮಾಲೆಗಳ (ಕುವ್ಯಾದ್ರೋ. ೩-೫೬) ; ರೂಢಿವಡೆದ ಕುವರನ ರೂಪಿನ ಗಂಡಗಾಡಿಯ ಗಹಗಹಿಕೆಯನು ನೋಡಿದರು (ಕುರಾಸಾಂ. ೮-೧೪೮). ೫. [ಸಂಗೀತ] ಹಾಡುವ ವೈಖರಿಯಲ್ಲಿ ಒಂದು ಬಗೆ : ಗತಿ ಗಮಕ ಗಹಗಹಿಕೆ ತಿರುಪು ಚಾಳೆಯ ಕೊಂಕು ಜತಿ ಜೋಕೆ ಮಾರ್ಗವಣೆ . . . ತಾರಮಧುರ ಮಂದ್ರಗಳಿಂ ಹಾಡಿ (ಹಚಕಾ. ೭-೬) ; ಗಹಗಹಿಕೆವಡೆದ ವಹಣಿಯ ಸಹಾಹೆ ಝುಂಪೆಯದೊಳವುರೆ ಠಾಯದೊಳಂ ನಿರ್ವಹಿಸಿ ನೆಲೆಗೊಳಿಸಿ ಬಯ್ಸಿಕೆ ಮಹಚಾಳೆಯದಲ್ಲಿ ಮೂರ್ತಿವಡೆದುದು ರಾಗಂ (ಯಶೋಚ. ೨-೨೯) ;

ಗತಿ ಸಂಗತಿವಡೆಯೆ ಗಮಕಂ ಗಾರವಂಬಡೆಯೆ ಗಹಗಹಿಕೆ ಗೊಂಡಂ ಗೊಂಡಿಡಡಂ ಬಾಹಟಂ ಲಾಲಂಗಿ. . .ಕೊಂಕು ಕಮ್ಮಣೆ ಪೆಸರಂ ಬೆಡಂಗು ವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೧೬-೭೭ವ). [ಗಹಗಹ+ –ಇಕೆ]

**ಗಹಗಹಿಸು** (ಕ್ರಿ). ೧. ಗಟ್ಟಿಯಾಗಿ ಧ್ವನಿಮಾಡು : ಸೊಡರ ವಹಿಲದಿಂ ಪೊತ್ತಿಸಿ ಪಿಡಿದು ಗಹಗಹಿಸುತಂ (ಬಸವು. ೧೬-೨೪); ಗಹಗಹಿಪ ಭೇರಿಗಳ ಬಿರುದಿನ ಕಹಳೆಗಳ ಕಳಕಳದ ವಾದ್ಯದ (ನಿಭಾಗ. ೧೦-೪೪-೩). ೨. ಗಟ್ಟಿಯಾಗಿ ನಗು ; ಕೇಕೆಹಾಕಿ ನಗು ; ಅಟ್ಟಹಾಸಮಾಡು : ಆಯ್ಯೋ ಇದೇಕೆ ಹರಿಯಣ್ಣಂಗೆ ಬಲ್ಮರುಳ್ ಮೆಯ್ಯುನಾವರಿಸಿತೆನೆ ತದ್ದೂಷಕರ್ಬೂತುಗೆಯ್ಯುತುಂ ಗಹಗಹಿಸುತಿರೆ (ಪದ್ಮರಾ. ೫-೧೧); ನಿನ್ನ ಸೊಸೆಯರೆನ್ನ ಮಹಿಮೆಯ ಸೊಸೆಯರಂದದೊಳು ಬಹುಸುಖದೊಳು ಬಾಳಲೆಂದು ಹರಸಿ ಗಹಗಹಿಸಿದಳ್ಬಿನದಕೆ ಮಗನೆ (ಭರತ. ೯೬-೮೯); ನಿನಗೆ ಭ್ರಾಂತು ಎನ್ನುತ್ತಾ . . . ಗಹಗಹಿಸಿದರು (ಒಡ್ಡಿ.ಉ. ೮೬). ೩. ಸಂತೋಷಿಸು; ಉತ್ಸಾಹಿಸು: ಲಿಂಗವ ಕಂಡು ಗಹಗಹಿಸಿ ಕೂಡಿದಲ್ಲದೆ ಮರ್ತ್ಯದ ಹಂಗು ಹಜಿಯದು (ಚನ್ನವ. ಕ. ೧೧೦-೨೨೨). ೪. ಜಗಜಗಿಸು ; ಲಕಲಕಿಸು ; ಪ್ರಕಾಶಿಸು : ತಲೆಗೆ ಕೊ[ತೊ]ಟ್ಟನು ವರಸುದರ್ಶನವ ಗಹಗಹಿಪ ಘನತೇಜದಲಿ ಶತಮಿಹಿರರಡಗಲು (ನಿಭಾಗ. ೧೦-೪೨-೫೨). [ಗಹಗಹ + –ಇಸು₁]

**ಗಹನ** (ಗು). ೧. ತಿಳಿದುಕೊಳ್ಳಲು ಕಷ್ಟವಾದ ; ಸುಲಭಗ್ರಾಹ್ಯವಲ್ಲದ ; ರಹಸ್ಯವಾದ ; ಗೂಢ: ಗಹನತತ್ತ್ವಕೆ ಶರಣೂ ಮಂಕುತಿಮ್ಮ (ಮಂಕುಕ. ೩); ಗಹನವಿಷಯಗಳ ಮೇಲೆ ಸೂಕ್ಷ್ಮವಾಗಿ ಚಿಂತಿಸಿ ನಿರ್ಧರಿಸುವ ಶಕ್ತಿ (ಶಿಕ್ಷದ. ೩೮೩). ೨. ಪ್ರವೇಶಿಸಲು ಅಸಾಧ್ಯವಾದ; ದಟ್ಟವಾದ ; ನಿಬಿಡವಾದ: ತಾನು ಇದೀಗ ದಾರಿ ಸಿಗದ ಗಹನಾರಣ್ಯದಲ್ಲಿ ಅಂಡಲೆಯುತ್ತಿರುವಂತೆ ಅವನಿಗೆ ಎನಿಸಿತು (ಸಮಜೀ. ೨೨೩). (ನಾ). ೩. ಸುಲಭಸಾಧ್ಯವಲ್ಲದುದು ; ಕಷ್ಟದಿಂದ ನೆರವೇರಿಸತಕ್ಕುದು : ಬೆಸನದಾವುದು ಗಹನಮೆಂದು ಪೂಣ್ದು ಪೋಗಿ (ಪಂಪಭಾ. ೨-೬೧ವ); ದುರ್ಯೋಧನನಂ ಕೊಲ್ವುದುಂ ಗೆಲ್ವುದುಂ ನಮ್ಮರಸಂಗಾವುದು ಗಹನಂ (ಗದಾಯು. ೨-೮ವ); ಮರನಂ ನುಡಿಸುವುದು ಪರಮಗಹನಂ (ಪಂಚತಂ. ೧೭೨-೧೩); ಕಂಡವಳಿದು ನನಗಾವ ಗಹನಾ ವಿವರಿಸಿ ಕೇಳೆಂದೆ (ಪ್ರಭಂಜ. ೪-೨೩). ೪. ಸುಲಭವಾಗಿ ಅರ್ಥವಾಗದುದು ; ಕಷ್ಟಗ್ರಾಹ್ಯವಾದುದು : "ಗಹನಮೆನಲ್ ಕೊಱತೆಯ ನುಡಿ" (ಭಾರನಿ. ೫೪). ೫. ನಿಬಿಡವಾದ ಪ್ರದೇಶ ; ದಟ್ಟವಾದ ಸ್ಥಳ ; ಹೋಗಲು ಕಷ್ಟಕರವಾದ ಪ್ರದೇಶ: ಅಂತಾ ವನಗಹನಮೆಲ್ಲಂ ದಹನಮಯಮಾದ ಪ್ರಸ್ತಾವದೊಳ್ (ಪಂಪಭಾ. ೫-೯೭ವ). ೬. ನಿಬಿಡತೆ; ದಟ್ಟಣೆ: ಅತ್ತ ಮುನಿಯಿಂದೆ ಲಕ್ಷ್ಮಣ ರಾಮರರಿಯುತಿರೆ ಮುಂದಿರ್ದ ಮಾರ್ಗದ ಮಹಾರಣ್ಯಗಹನಮಂ (ಶ್ರೀರಾಮಾ. ೧೭೮-೬೯). ೭. ದಟ್ಟವಾದ ಕಾಡು, —ಅರಣ್ಯ : "ಅರಣ್ಯಂ, ಅಟವೀ . . . ಗಹನಂ, ದುರ್ಗಂ –ಈ ೯ ಅಡವಿ" (ಹಲಾಯು. ೩೫-೫೭); "ವನಮರಣ್ಯಂ . . . ಗಹನಮೆನಲು ಕಾಂತಾರವು" (ಮಂಗರಾ. ೪೫-೪೯); ಕೇಳಲಾದುದು ಪುರುಷಪ್ರಲಾಪಪರುದಿತಸ್ವನಮಾ ಗಹನಾಂತರಾಳದೊಳ್ (ಕಾದಂಪೂ. ೮೯೯); ಸಂಸಾರದೊಳ್ ತೊಟಲ್ದು ಮಹಾಗಹನದೊಳಿರ್ವರುಂ ಮಹಿಷಂಗಳಾಗಿ ಕಾದಿ ಸತ್ತು (ಪಂರಾಮಾ. ೧೫-೩೯ವ); ಬಹುಪರಾಕ್ರಮದಿಂದ ವಿಂಧ್ಯದ ಗಹನದಲು ಬರಬರಲು (ಕುವ್ಯಾಅ. ಓರಿಇ. ೨೫-೫೫). ೮. ದೊಡ್ಡವನು ; ಗೌರವಸ್ಥ : ಅನೊಬ್ಬನೆಂದು ಗಹನಂಮಾಡಬಬ್ಬುದೇ (ತಿರುರ. ದೇ. ೨೬-೧); ಕರುಣಾವನನಿಧಿಗಳೆನಿಸಿ ಬಾಬ್ಬುದು ಗಹನರ್ಗಲ್ಲದೆ ಪೆಱರ್ಗೆ . . . ಮೊಗ್ಗೇ (ನೀತಿಮಂ. ೩, ೨೧೭). [ಸಂ.]

**ಗಹನತೆ** (ನಾ). ೧. ನಿಬಿಡತೆ; ಸಾಂದ್ರತೆ. ೨. ಅರಿತುಕೊಳ್ಳಲು ಕಷ್ಟವಾಗಿರುವಿಕೆ ; ಸುಲಭಗ್ರಾಹ್ಯವಲ್ಲದಿರುವಿಕೆ : ಈ ಸಮಸ್ಯೆಯ ಗಹನತೆ – ಕ್ಲಿಷ್ಟತೆಗಳೂ ಗೋಚರವಾಗುವುದಿಲ್ಲ (ದ್ರಾವಿವಿ. ೨೨). [ಸಂ. ಗಹನತಾ]

**ಗಹನಪಥ** (ನಾ). ಹೋಗಲು ಕಷ್ಟಕರವಾದ ದಾರಿ ; ಶ್ರಮಸಾಧ್ಯವಾದ ಮಾರ್ಗ : ಲೋಕಮಾನ್ಯರ್ಱು . . . ಕರ್ಮಯೋಗದ ಪಥ ನಿಜಕ್ಕೂ ಅತಿ ಗಹನಪಥವೆಂದು ಸಾರುತ್ತಾರೆ (ಧರ್ಮಸಾ. ೧೩೪). [ಗಹನ + ಪಥ]

**ಗಹನಪ್ರಚಾರ** (ನಾ). ಕಾಡಿನ ಸಂಚಾರ: ಮುಳ್ಳಳಂಘ್ರಿಯಂ ಬಾರಿಪುದೆಂದು ಬಿಟ್ಟುದೆ ಮದದ್ವಿರದಂ ಗಹನಪ್ರಚಾರಮಂ (ರಾಜಶೇ. ೧೩-೧೯). [ಗಹನ + ಪ್ರಚಾರ]

**ಗಹನಮಾಡು** (ಕ್ರಿ). ದೊಡ್ಡದಾಗಿ ಎಣಿಸು ; ಹಿರಿದುಮಾಡು : ಗಹನಮಾಡದೆ ನುಡಿದ ತಪ್ಪಿನ ಬಹುಳತೆಯ ಭಾವಿಸದೆ ತನ್ನನು ಕುಹಕಿಯೆನ್ನದೆ ಕಾಯಬೇಕೆಂದೆಱಗಿದನು ಪದಕೆ (ಕುವ್ಯಾವಿ. ೬-೪೪). [ಗಹನ + ಮಾಡು₁]

**ಗಹನಮಾರ್ಗ** (ನಾ).=ಗಹನಪಥ : ನೀತಿಸೂಕ್ಷ್ಮದ ಗಹನಮಾರ್ಗಮಂ ವ್ಯಾಸರ್ ಗೀತೆಯಲಿ . . . ಖ್ಯಾತಿಸಿಹರು (ಮಂಕುಕ. ೪೭೨). [ಗಹನ + ಮಾರ್ಗ]

**ಗಹನೋದರ** (ನಾ). ಕಾಡಿನ ಮಧ್ಯ ; ಅರಣ್ಯದ ಒಳಭಾಗ : ಗಹನೋದರದೊಳಗೆ ಘಾಡಿಸಿತು ಘನವಹ್ನಿ (ಕುವ್ಯಾಅ. ೨೦-೨೭). [ಗಹನ + ಉದರ]

**ಗಹ್ವರ** (ಗು). ೧. ಅಗಮ್ಯವಾದ ; ಪ್ರವೇಶಿಸಲು ಅಸಾಧ್ಯವಾದ. ೨. ಆಳವಾದ; ಅಗಾಧವಾದ. (ನಾ). ೩. ಬಿಲ ; ಬೆಟ್ಟದ ಗವಿ ; ಗುಹೆ : ತದ್ವದನಗಹ್ವರದಿಂ ಬಿಸುನೆತ್ತರುಣ್ಮೆ (ಪಂಪಭಾ. ೩-೩೧); ಅನಿಮೇಷಾಹಿತನಾಸ್ಯಗಹ್ವರವಿನಿರ್ಯಲ್ಲೋಹಿತಂ . . . ಬಿಬ್ಬಿರ್ದನಂ ಗೆಲ್ದು (ಜಗವಿ. ೪-೫೪); ಮಲೆತುದು ಮುಂದೆ ಗಿರಿಗಹ್ವರ ಭ್ರೂಭ್ರುಕುಟಿಯಂತೆ (ಶ್ರೀರಾಮಾ. ೧೨೭-೫೬); ಗಿರಿಗಹ್ವರಗಳಲ್ಲಡಗಿಕೊಂಡಿದ್ದು ರಾತ್ರಿಯ ವೇಳೆಯೇ ಪಯಣಮಾಡುತ್ತ ತೋಬಾಗ್ರಾಮವನ್ನು ಸೇರಿದರು (ಪೈಮಹ. ೩೪). ೪. ತಗ್ಗು; ಕೊಳ್ಳ ; ಹಳ್ಳ : "ಗಹ್ವರಮಾ ನಿಕುಂಜಮೆನೆ ಕೊಳ್ಳಮೆನಿಸಿಕ್ಕು" (ಮಂಗರಾ. ೩೦-೨). ೫. ಕಾಡು ; ಅರಣ್ಯ. ೬. ಲತಾಕುಂಜ ; ಪೊದೆ ; ಪೊದರು. ೭. ಇಕ್ಕಟ್ಟಾದ ಜಾಗ. ೮. ಹೊಂಗೆಮರ ; ತಮಾಲ : "ತಮಾಳವನು ಗಹ್ವರವೆಂಬುದು" (ಮಂಗರಾ. ೧೪೯-೫). ೯. ಕತ್ತಲೆ. ೧೦. ಕಪ್ಪು. ೧೧. ಸಮಾಪ; ಹತ್ತಿರ. ೧೨. ತಿಳಿಯಲಾಗದ ಗುಟ್ಟು; ಅಭೇದ್ಯವಾದ ರಹಸ್ಯ. ೧೩. ಗದ್ಗದಸ್ವರದೊಡನೆ ಅಳುವುದು ; ರೋದನ. ೧೪. ಬೂಟಾಟಿಕೆ ; ಡಂಭ; ಕಪಟ : "ಅರಣ್ಯಮುಂ ಗುಹೆ ಕೃತಕಂ ಸಮಾಪಮುಸಿತಾಂಧಗಳೆಂಬಿವು ಗಹ್ವರಾಹ್ವಯಂ" (ನಾನಾರ. ೧೧೧). [ಸಂ.]

**ಗಹ್ವರಿ** (ನಾ). ೧. ಗುಹೆ. ೨. ಭೂಮಿ : "ಧರಣಿ ಧಾರಿಣಿ . . . ಪೃಥಿವಿ ಗಹ್ವರಿಯುಳಿಯು . . . ಸರ್ವಂಸಹಾಖ್ಯೆಯೆನೆ ನೆಲಕೆ ನಾಮಂ" (ಮಂಗರಾ. ೨೮-೧). ೩. [ಸಂಗೀತ] ಷಡ್ಜಸ್ವರದಿಂದ ಹುಟ್ಟುವ ಒಂದು ಶ್ರುತಿ : ಬಳಿಕ ಗಹ್ವರಿ . . , ಸಕಲೆಯರೆಂಬ ನಾಲ್ಕು ಶ್ರುತಿಗಳೀ ಷಡ್ಜಸ್ವರದಿಂ ಪುಟ್ಟಿದವು (ವಿವೇಕ. ೨೩೨). [ಸಂ. ಗಹ್ವರೀ]

**ಗಳ₁** 'ಗಟಿ' ನೋ.

**ಗಳ್ಳ₂** 'ಗಲ' ನೋ.

**ಗಳ್ಳ₃** 'ಗಡ್ಡ₄' ನೋ.

**ಗಳಂ** 'ಗಡ್ಡ₄' ನೋ.

**ಗಳಂತಿಕೆ** 'ಗಲಂತಿಕೆ' ನೋ.

**ಗಳಂತಿಗೆ₁**, ಗಣತಿ₁, ಗಣತಿಗೆ, ಗಣದಿಗೆ, ಗಣಿತಿ₂, ಗಲತಿಗೆ, ಗಳತಿಗೆ (ನಾ). ೧. = ಗಲಂತಿಕೆ ೧: "ಗಳಂತಿಗೆ ಗಣಿತಿಯೆನಿಸಿಕ್ಕು [ಪಾಠಾಂ. ಗಣಂವತಿಯಕ್ಕು]" (ಮಂಗರಾ. ೬೨-೨೩); ಪೊನ್ನ ಬೆಳಗುವ ಗಳಂತಿಗೆ [ಪಾಠಾಂ. ಕೆ]ಯನಾದಮಾನುಮೊಪ್ಪುತ್ತಿರ್ದುದಂ ಪಿಡಿದು (ವಡ್ಡಾರಾ. ೩೩-೬). ೨. = ಗಲಂತಿಕೆ ೨: ದೇವರ ಪೆರ್ಗಡೆ ದೂಸಿಗ ಕೇತಿಸೆಟ್ಟಿಗಗ್ರ ತೇಜಂ ಗಳಂತಿಗೆಗೆ ಮತ್ತರ್ ಪನ್ನೆರಡು (ಎಇ. XIII, ೧೬೨-೮೭; 1055); ಶ್ರೀಸ್ವಾಮಿದೇವರ್ಗೆ ವರ್ಷ ನಿಬನ್ಧದಿಂ ತೆಜುವ ಗದ್ಯಾಣ ಪನ್ನೆರಡು ಗಳಂತಿಗೆಯಲು ಪುಟ್ಟಿದಾಯುದೊಳಗೆ ಲೊಕ್ಕಿಯು ನವಿಲು ಮಾಗಿ ಪೊನ್ನವಣ (ಸೌಇಇ. IX-i, ೧೬೯-೨೭; 1098). **ಗಣತಿ₁**: ೧. "ಗಣತಿ - ಗಲಂತೀ = ನೀರಿನ ಪಾತ್ರೆ" (ತದ್ಭಕೋ. ೧೦). **ಗಣತಿಗೆ**: ೧. "ವರ್ಧನೀ, ಗಳಂತಿಕಾ - ಈ ೨ ಗಣತಿಗೆ" (ಹಲಾಯು. ೫೩-೧೬೨). **ಗಣದಿಗೆ**: ೧. "ಗಣತಿಗೆ (ಗಣದಿಗೆ) - ಗಲಂತಿಕಾ" (ತದ್ಭಕೋ. ೧೦). **ಗಣಿತಿ₂**: ೧. "ಗಳಂತಿಗೆ ಗಣಿತಿಯೆನಿಸಿಕ್ಕು [ಪಾಠಾಂ. ಗಣಂವತಿಯಕ್ಕು]" (ಮಂಗರಾ. ೬೩-೨೩). **ಗಲತಿಗೆ**: ೧. "ಗಳಂತಿಗೆ (ಗಣತಿಗೆ, ಗಲತಿಗೆ) -ಗಲಂತಿಕಾ" (ತದ್ಭಕೋ. ೧೦). **ಗಳತಿಗೆ**: ೨. 'ಗಳತಿಗೆಗೆಯ್' ಪರಾ. ೩. ಕಾಲುಮಣೆ; ಎತ್ತರವಾದ ಮಣೆ; "ಕಾಲ್ಮಣೆ, ಮಣೆ, ಪೀಠ" (ನಾನಾಶ. ೯೦). ೪. ಬಡು; "ಕಡಂಚಿಗೆ; ಕಾಳುಕಡಿ ಇಡುವ ಕಟ್ಟೆಗೆಯ ಮೆಟ್ಟು" (ಜಾನಕೋ. ೪೭). [< ಸಂ. ಗಲಂತಿಕಾ]

**ಗಳಂತಿಗೆ₂** (ನಾ). ಕೋಣೆ; ಕೊಠಡಿ: "ಓವರಿಯೆಂದುಂ, ಗಳಂತಿಗೆಯೆಂದುಂ ಕೋಣೆ" (ಕಶಸಾ. ೧೬-೩೦೮); "ಓವರಿ ಗಳಂತಿಗೆ ಕೋಣೆಯು" (ಕವಿಕಂ. ೧೧೪); ಗುಟ್ಟಿನ ಗಳಂತಿಗೆಯಿಂದ ನಿರೂಪಿಕೆಯಾಗಿರುವಳು (ಬಿಟ್ಟಅ. ೮೩-೨೩). [?]

**ಗಳಂತಿಗೆಗಟ್ಟಿ** (ನಾ). ದೇವರ ಅಭಿಷೇಕಕ್ಕಾಗಿ ಬಿಟ್ಟಿರುವ ಗದ್ದೆ, —ಭೂಮಿ: ಗಳಂತಿಗೆಗಟ್ಟಿಯಿಂ ತೆಂಕ ಮತ್ತರೊನ್ದು (ಸೌಇಇ. XI-i, ೧೧೬-೩೪; 1075). [ಗಳಂತಿಗೆ₁ + ಗಟ್ಟಿ]

**ಗಳಂತಿಗೆಗೆಯ್**, ಗಳತಿಗೆಗೆಯ್ (ನಾ). = ಗಳಂತಿಗೆಗಟ್ಟಿ: ಗಳಂತಿಗೆಗೆಯ್ಮತ್ತರಾಜು ಮನೆಯೊನ್ದು (ಎಇ. XX, ೬-೨೯; 1012). **ಗಳತಿಗೆಗೆಯ್**: ಕತ್ತಿಯಗೆರಿಯಿಂ ಪಡುವಲು ಗಳತಿಗೆಗೆಯ್ಯಿಂ ಬಡಗಲು (ಸೌಇಇ. V, ೮೫೧-೪೦; 1162).

[ಗಳಂತಿಗೆ₁ + ಕೆಯ್₄]

**ಗಳಂಬ** (ನಾ). ಒಂದು ವಂಶದ ಹೆಸರು: ಕಲಿವಿಟ್ಟರಸರ್ಬನಾವಾಸಿ ಗಳಂಬನಾಯ್ಗವರ್ಮ್ಮನಂ ಕೊನ್ದು ಕೋಟೆಯೊಳ್ ಸುಖದಿನಿರೆ (ಎಕ. VIII, ಸೊರಬ, ೮೮-೫; 912). 'ಕದಂಬ' ಪರಾ. [?]

**ಗಳಕ್** (ನಾ). ಒಂದು ಅನುಕರಣ ಶಬ್ದ: ಕೈಯಲ್ಲಿದ್ದ ಹಣ್ಣು 'ಗಳಕ್' ಎಂದು ನೀರಿಗೆ ಬಿದ್ದಿತು (ರೂಢಿ). 'ಗುಳಕ್' ಪರಾ.

**ಗಳಕೆ** (ನಾ). ಕೊರಳು; ಕುತ್ತಿಗೆ: ವಕ್ತ್ರದಿಂ ಸುಯ್ಯ್ ತಲೆಕಟ್ಟಿಂ ಮಾಲೆವೂವಾಕೆಗಳ ಗಳಕದಿಂ ಬಿಳ್ವುದುತ್ತಾರಹಾರಂ (ಎಕ. VIII, ಸೊರಬ. ೧೪೦-೭; 1198). [ಸಂ. ಗಲಕ]

**ಗಳಕಂಬಳ** 'ಗಲಕಂಬಲ' ನೋ.

**ಗಳಕನೆ**, ಗಳಕ್ಕನೆ (ಅ). ಗಳಕ್ ಎಂಬ ಶಬ್ದದೊಡನೆ: ಚಿಕ್ಕ ಕೆಲವು ತೊಳಗುತಲಿರಲು ಗಳಕನೊಂದು ಉಳುಕುತಲಿತ್ತ (ನಾದಲೀ. ೪-೪). **ಗಳಕ್ಕನೆ**: ಮರದ ಮೇಲಿಂದ ಒಂದು ಹಣ್ಣು ಗಳಕ್ಕನೆ ನೀರಿಗೆ ಬಿತ್ತು (ರೂಢಿ). [ಗಳಕ್ + -ಅನೆ₁]

**ಗಳಕ್ಕನೆ** 'ಗಳಕನೆ' ನೋ.

**ಗಳಕ್ಕೆಱೆ** (ನಾ). ಒಂದು ಕೆರೆಯ ಹೆಸರು: ಅರಸಿಯು ಕಟ್ಟಿಸಿದ ಗಳಕ್ಕೆಱೆಯ ಅ ಕೆಱೆಯನ್ತೋಸಿನಿಂದೆರಡು ತಡಿಯೊಳಮೊನ್ದೊನ್ದು ತಡಿಯೊಳ್ . . . ಗಳಕ್ಕೆಱೆಯ ತೆಙ್ಕಣ ಕಡೆಗೋಡೆಯೊಡಂ ನಿಱಿಸಿದ ಕಲ್ಲಿನ್ದಂ (ಎಕ. XII, ನಂಜನ. ೨೬೯-೯೨; 904). [? + ಕೆಱೆ]

**ಗಳಗಂಟೆ** (ನಾ). ೧. (ಎತ್ತುಗಳ) ಕೊರಳಲ್ಲಿ ಕಟ್ಟುವ ಗಂಟೆ: ಬೃಹದಾಕಾರವಾದರೂ ಬಹುಸುಂದರವಾದ ನಂದಿಗಳು ಅವು. ಪ್ರಕಾಂಡ ದೇಹ . . . ಬಿರುಗಂಟೆ, ಗಳಗಂಟೆಸರಗಳು, ಮೈತುಂಬ ಒಡವೆಗಳು (ಶಾಂತಲಾ. ೨೪೫). ೨. (ಆಲಂ) ಹರಟೆಮಲ್ಲ; ಮಾತಾಳಿ; ಹುರುಳಿಲ್ಲದ ವ್ಯಕ್ತಿ: ಶುದ್ಧ ಗಳಗಂಟೆ ಅವನು. ಅವನ ಮಾತಿಗೇನು ಬೆಲೆ? (ರೂಢಿ). [ಗಳ್₂ (= ಗಲ) + ಗಂಟೆ₂]

**ಗಳಗಂಡ** (ನಾ). ಕೊರಳಿನಲ್ಲಿ ಏಳುವ ದುರ್ಮಾಂಸದ ಗಂಟು; ಕತ್ತಿನಲ್ಲಿ ಏಳುವ ಒಂದು ಮಾಂಸಗ್ರಂಥಿ: ಅಳಿಯಿಂದಂ ಕಾಮಳೆ ತಂಡುಳಜಳದಿಂದರುಸೆ ಗವ್ಯಘೃತದಿಂದಂತಾ ಗಳಗಂಡ ಕ್ಷಯ ವಾತಂಗಳೆ ಕಿಡುಗುತ್ತರಣೆಯಂ ಪ್ರಯೋಗಿಸೆ ಸತತಂ (ಲೋಕೋಪ. ೯-೩೯); ಸಮುದ್ರದಿಂದ ಬಹಳ ದೂರವಿರುವ ಪ್ರದೇಶಗಳಲ್ಲಿ . . . ಥೈರಾಯಿಡ್‌ಗ್ರಂಥಿಯು ಸಾಕಷ್ಟು ಪ್ರಮಾಣದಲ್ಲಿ ಥೈರಾಕ್ಸಿನ್ ಅನ್ನು ತಯಾರಿಸಲು ಸಾಧ್ಯವಾಗದೆ ಊದಿಕೊಂಡು, ಗಳಗಂಡ (Symple Goiter) ಎಂಬ ರೋಗವು ಪ್ರಾಪ್ತವಾಗುತ್ತದೆ (ಗೃಹವಿ. ೨೪).

[ಗಳ್₂ (= ಗಲ) + ಗಂಡ₃]

**ಗಳಗಂಡಗತ್ತರಿ** (ನಾ). (ಶತ್ರುಗಳ) ಶಿರಸ್ಸನ್ನು ಕತ್ತರಿಸುವವನು; ಒಂದು ಬಿರುದು: ಸತ್ಯರತ್ನಾಕರಂ ಗಳಗಂಡಗತ್ತರಿ . . . ಕುಮಾರ ಬೊಂಮದೇವರಸರು (ಕಇ. IV, ೪೩-೩; 1264).

[ಗಳ್₂ (= ಗಲ) + ಗಂಡಗತ್ತರಿ]

**ಗಳಗರ್ಜನ** (ನಾ). ದೊಡ್ಡದಾದ ಕಂಠಧ್ವನಿ; ಅಬ್ಬರದ ಕೂಗಾಟ: ದಿನಪನುದಯಾಚಲದ ಚಾವಡಿವನೆಗೆ ಬರೆ ಬಲವೆರಡು ಗಳಗರ್ಜನದಿ ಬಂದೊಡ್ಡಿದುವು ಕಳನೊಳು ಖತಿಯ ಪಡಪಿನಲಿ (ಕುವ್ಯಾಭೀ. ೬-೮).

[ಗಳ್₂ (= ಗಲ) + ಗರ್ಜನ]

**ಗಳಗರ್ಜನೆ** (ನಾ). = ಗಳಗರ್ಜನ: ಜಂಗಮದ ಗಳಗರ್ಜನೆ ಜಂಗಮದ ಕೋಲಾಟಕೆ ಸೈರಿಸದಿದ್ದರೆ ನೀನೆಂದೇ ಮೂಗ ಕೊಯಿ ಕೂಡಲಸಂಗಮದೇವಾ (ಬಸವ. ೪೨೮); ಕಾಶಿಗೆ ಹೋಗುವಾಗ ಅನಂತಗಳಗರ್ಜನೆಗಳ ಮಾಡಿ ನಿರ್ಬಂಧಿಸಲು (ಭೈರಸೂ. ೭೧). [ಗಳ್₂ (= ಗಲ) + ಗರ್ಜನೆ]

**ಗಳಗರ್ತರಿ** (ನಾ). ಒಂದು ಬಗೆಯ ಆಯುಧ: ಕಂಠೀರವಮುಖದ ಭೇರುಂಡಮುಖದ ಗಳಗರ್ತರಿಯುರ್ದನಾರಿಯು ಕಟ್ಟಿದಲಗಿನ ಕನ್ನಡಿಯ . . . ಬೆಳಗುಗಳು ಮಾರ್ತಂಡಂಗೆ ಮಾರ್ಪೊಳೆಯೆ (ಮಹಾನೀ. ೧೨-೨೦ ವ). [ಗಳ್₂ (= ಗಲ) + ಕರ್ತರಿ]

**ಗಳಗಳ** 'ಗಟಗಟ' ನೋ.

**ಗಳಗಳನೆ** 'ಗಟಗಟನೆ' ನೋ.

**ಗಳಗಳಿಕೆ** (ನಾ). ಕೋಮಲತೆ: ಗಳಗಳಿಕೆಯಿನೆಳದಳಿರ್ಗಳೆಳಮಿಡಿಯಿಂ ನೆಱೆಯೆ ತುಱುಗಿದೆಳಮಾವುಗಳ್ . . . ನೋಟಕ್ಕೊಪ್ಪಿಡಂ ರಮಣೀಯಂ (ಸುಕುಮಾ. ೧೦-೬೦).

[☞ ಇದು 'ನಳನಳಿಕೆ'ಯ ಅಪಲಿಖಿತವಿರಬಹುದು]

**ಗಳಗಳಿಸು** 'ಗಟಗಟಿಸು' ನೋ.

**ಗಳಗಾಳ** (ನಾ). ಕೊರಳಿಗೆ ಹಾಕುವ ಕೊಕ್ಕೆ; ಮುಖ್ಯವಾಗಿ ಮೀನಿನ ಕೊರಳಿಗೆ ನಾಟುವಂತೆ ಹಾಕುವ ಕೊಕ್ಕೆ: ಗಾಳಕ್ಕೆ -ಎಡೆಗಾಳ, ಗಳಗಾಳ, ಸಣ್ಣಗಾಳ (ಶಮುದ. ೨೯೮ ಪ್ರಯೋ).

[ಗಳ್₂ (= ಗಲ) + ಗಾಳ]

**ಗಳಗುಸನ್ನಿ** (ನಾ). ೧. ಸನ್ನಿಪಾತದಿಂದ ಬಡಬಡಿಸುವುದು; ಹೆಚ್ಚಾಗಿ ಗಳಹುವುದು. ೨. ಹುಚ್ಚು; ಬುದ್ಧಿಭ್ರಮಣೆ. ೩. ಬುದ್ಧಿಭ್ರಮಣೆಯಿಂದ ಎಡೆಬಿಡದೆ ಮಾತಾಡುವುದು, —ಹರಟುವುದು. (ಸ್ಯಾಂಡರ್). [ಗಳಗು$_0$ (< ಗಳಪು) + ಸನ್ನಿ]

**ಗಳಗೆ, ಗಣಿಗೆ$_1$, ಗಳಿಗೆ$_2$, ಘಳಿಗೆ$_2$** (ನಾ). ೧. ದವಸಧಾನ್ಯಗಳನ್ನು ತುಂಬುವ ಒಂದು ಸಾಧನ; ಬಿದಿರಿನ ದೊಡ್ಡ ಗೂಡೆ: "ಕುಸೂಲವೆಂದು ಕಣಜಂ ಗಳಗೆ ಎಂದೂ ಎಂಬರು" (ನಾಚಿರಾ. ೬); "ಕಳಂಜಿಯೆನೆ ಗಳಗೆ" (ಮಂಗರಾ. ೬೨–೨೧); "ಗಳಗೆ (ಗಳಿಗೆ) –ಸಣ್ಣ ಬಾಯಿಯ ಎತ್ತರ ಬಿದಿರ ಬುಟ್ಟಿ" (ಜಾನಕೋ. ೪೭); ಗುಡಿನೇಣ್ ಕಾಂಡಪಟಂ ಮೊಜಂ ಗಳಗೆಯುಂ ತೊತ್ತೆತ್ತುವುಂ ಬಂಡಿ (ಸೂಕ್ತಿಸು. ೧೮–೨೩); ಎನ್ನ ಗಳಗೆಯ ಬತ್ತವಾಹುದೇ ನಿನ್ನ ದೊರೆತನವೆನ್ನ ಮಗಳಿಗೆ ನಿನ್ನ ಕವಿತಾಪ್ರೌಢಿ ರನ್ನದ ತೊಡಿಗೆಯಾದಪುದೇ (ಬಸಪು. ೪೨–೮); ಅವರ ಮನೆಯಲ್ಲಿ ಧಾನ್ಯ ತುಂಬುವ ಒಂದು ಗಳಗೆ ಇತ್ತು (ಮುಸುಗ. ೫೫). ೨. ಸಣ್ಣ ಕುಕ್ಕೆ; ಬುಟ್ಟಿ: ಹಲವು ವರ್ಣದ ಪುಷ್ಪತುಂಬಿದ ನೂಜಿಂಟು ಗಳಗೆಯನೆತ್ತಿ ಸೂಸಿದನು (ಭರಚ. ೧೬–೧೧೦). ೩. ತಡಿಕೆ; ತಟ್ಟೆ (?): ಬಲು ಸುರಂಗಗಳು ನಡೆದವು ಕೊತ್ತಳಕಾಗಿ ಗಳಗೆಯ ಸಾಲೆದ್ದುವಲ್ಲಿ . . . ತಡಿಕೆಗಳ್ನಿಂದವಲ್ಲಲ್ಲಿ (ಜ್ಞಾನಚ. ೧೨–೧೦೨). **ಗಣಿಗೆ$_1$**: ೨. ಅಕ್ಕಿಯ(ನೇ) ಗಣಿಗೆ ಒತ್ತಿ ನಿಂದಿರುವೋಳೆ ಸಟ್ಟೆ ಮದುವಣನ ಹಿರಿಯಕ್ಕ (ನಾಪದ. ೧೧೬–೧೫). **ಗಳಿಗೆ$_2$**: ೧. "ಹೇಳಿಗೆ – ಸಣ್ಣ ಬಾಯಿಯ ಗಳಿಗೆ" (ಗಂಗಾಮು. ೩೫೩); "ಗಳಗೆ (ಗಳಿಗೆ) –ಸಣ್ಣ ಬಾಯಿಯ ಎತ್ತರದ ಬಿದಿರಬುಟ್ಟಿ" (ಜಾನಕೋ. ೪೭). **ಘಳಿಗೆ$_2$**: ೨. ಅಡಿಗೆಮನೆ ಹೋಳಿಗೆ ಘಳಿಗೆ ಬಗಲಾಗ (ಹಳ್ಳಿಯ. ೧೭೮). 'ಕಣಜ' ಪರಾ.

[?]

**ಗಳಗ್ರಂಥಿ** (ನಾ). = ಗಳಗಂಡ: ಗಳಗ್ರಂಥಿಗೆ – ನೆಲಗುಳ್ಳದ ಬೇರು, ಅರಸಿನ, ಹಾವುಮೆಕ್ಕೆಯಬೇರು ಇವಂ ಎಕ್ಕದ ಹಾಲಿನಲ್ಲಿ ಅರೆದು ಪೂಸೆ ಗಳಗ್ರಂಥಿ ಪೋಕುಂ (ವಿವೈವಿ. ೮೪).

[ಗಳ್$_2$ (= ಗಲ) + ಗ್ರಂಥಿ]

**ಗಳಗ್ರಹ** (ನಾ). ೧. ಕೊರಳನ್ನು ತುಡುಕುವುದು; ಕತ್ತು ಹಿಡಿಯುವುದು. ೨. (ಕುದುರೆಗಳಿಗೆ) ಕುತ್ತಿಗೆಯಲ್ಲಿ ಬರುವ ಒಂದು ಬಗೆಯ ರೋಗ; ಲೋಳೆಸಂಕೋಲೆ: ತುರಗದ ಕದಪುಗಳುಮತಿಭಯಂಕರಮಪ್ಪಂತಿರೆ ಬಾತು ಕೋಜು ಬಾಯಿಂ ಸುರಿಯುತ್ತಿರೆ ಲೋಳೆಯದು ಗಳಗ್ರಹಮಕ್ಕು (ಅಶ್ವಶಾ. ೧೪–೭).

[ಗಳ್$_2$ (= ಗಲ) + ಗ್ರಹ]

**ಗಳಗ್ರಾಹಿತ್ವ** 'ಗಲಗ್ರಾಹಿತ್ವ' ನೋ.

**ಗಳಚರ್ಮರೋಗ** (ನಾ). ಒಂದು ಬಗೆಯ ಕಂಠರೋಗ: "ದೇಹದ ಒಳಭಾಗದಲ್ಲಿಯ ಮುಖ್ಯವಾಗಿ ಗಂಟಲಿನಲ್ಲಿಯ ಶ್ಲೇಷ್ಮಚರ್ಮವು ಉದ್ದೀಪನಹೊಂದಿ ಆದರಿಂದ ಹೊರಟ ಸ್ರವವು ಕೃತಕ ಚರ್ಮದಂತೆ ಏರ್ಪಡುವ ಕಠಿನವಾದ ಒಂದು ಅಂಟುರೋಗ, ಗಳಚರ್ಮರೋಗ (Diptheria. ಇಂಕನಿ). [ಗಳ್$_2$ (= ಗಲ) + ಚರ್ಮರೋಗ]

**ಗಳತಿ** (ನಾ). = ಗಲಂತಿಕೆ$_2$. 'ಗಳತಿಗ' ಪರಾ. [< ಸಂ. ಗಲಂತೀ]

**ಗಳತಿಗ** (ನಾ). ದೇವರಿಗೆ ಅಭಿಷೇಕಮಾಡುವ ವೃತ್ತಿಯವನು; ಪೂಜಾರಿ: ತಂನಾನುಚ್ಛಾಯದ ಮಾನ್ಯದ ನಿವೇಶನ ಗಳತಿಗರ ನಿವೇಶನದಿಂ ಪತ್ತಿರೆ ಪಡುವಲು (ಸೌಇಇ. XV, ೧೧೧–೫೫; 1165).

[ಗಳತಿ + –ಗ$_2$]

**ಗಳತಿಗೆ** 'ಗಳಂತಿಗೆ$_1$' ನೋ.

**ಗಳತಿಗೆಗೆಯ್** 'ಗಳಂತಿಗೆಗೆಯ್' ನೋ.

**ಗಳದಘ್ನ** (ನಾ). ಕತ್ತಿನವರೆಗೂ ಮುಳುಗಿರುವುದು: ಬಯಕೆ ಸಲೆಕೆಯಂತರವೇ ವಿಘ್ನ ಎಲ್ಲಾಸಗೂ ಭವವಿದು ಗಳದಘ್ನ ತೇಲಿಸ ಕಲಿತರೆ ಅದೆ ವಿಜ್ಞಾನ ಇದರೊಳಿಲ್ಲ ನನಗಿಂತಲು ಜಾಣ (ಗಣೇಶ. ೭–೧೫೮). 'ಊರುದಘ್ನ' ಪರಾ.

[ಸಂ. ಗಲದಘ್ನ]

**ಗಳದೊಡಿಗೆ** (ನಾ). ಕೊರಳಿನ ಒಡವೆ; ಕಂಠಾಭರಣ: ನೋಡೆನುತ ಗಳದೊಡಿಗೆಯಂಹ ಪಟ್ಟಳಿಯ ತೋಂಗಲನಾಕೆ ತೋಜಿದಳು (ಬಸಪು. ೧೨–೧೮). [ಗಳ್$_2$ (= ಗಲ) + ತೊಡಿಗೆ$_1$ (< ತೊಡುಗೆ)]

**ಗಳಧ್ವನಿ** 'ಗಲಧ್ವನಿ' ನೋ.

**ಗಳಪ** 'ಗಳಪ' ನೋ.

**ಗಳಪು** 'ಗಳಪು' ನೋ.

**ಗಳಪುವಕ್ಕಿ** (ನಾ). ಬಹಳ ಮಾತನಾಡುವ ಹಕ್ಕಿ; ಅರಗಿಣಿ: ಆ ವನದ ಮಧ್ಯದೊಳು ನಡೆವಕ್ಕಿ ನುಡಿವಕ್ಕಿ 'ತೀವಿ ಗುಜುಗುಜುವೆಂಬ ಗೀಜಗಂ ಕೊಳರ್ವಕ್ಕಿ ಮಾವುಗಳನೇಱಿ ಗಳಪುವ ಗಳಪುವಕ್ಕಿ . . . ಜೀವಿಪುವು ಭಯವನುಳಿದು (ಪ್ರಭುಪು. ೩–೧೪).

[ಗಳಪು (< ಗಳಪು) + ಹಕ್ಕಿ (< ಪಕ್ಕಿ$_1$)]

**ಗಳಪೂರ** (ಗು). ಕುತ್ತಿಗೆಗೆ ಬರುವಷ್ಟು ಆಳವಾದ; ಕಂಠಪ್ರಮಾಣದ: ಬೆಳಗುಜಾವದೊಳೆದ್ದು ಗಳಪೂರ ನೀರೊಳು ನಿಂದು (ಭೈರಸೂ. ೩೭).

[ಗಳ್$_2$ (= ಗಲ) + ಪೂರ]

**ಗಳಬಳ** (ನಾ). ೧. ಗದ್ದಲ; ಗಲಾಟೆ: ಕಳಕಳಮಂ ನಿವಾರಿಸುತು ಮಾಯತಮೇಎನಲಾಯತಂ ಲಸದ್ಗಳಬಳಮಂ ವಿವರ್ಜಿಸುತು ಮಾಯತಮೇಎನಲಾಯತಂ (ಗಿರಿಕ. ೧೦–೮೮); ಸುಲಿಗೆ ಲಾವಣಿಗೆ ಯೆಂಬೀ ಗಳಬಳಮಂ ನಿಲಿಸಿ ಸುಂಕಮಂ ಬಾಳಿಸಿದಂ (ಕೆಳನೃ. ೭–೩೦). ೨. ನಿರ್ಧಾರ; ನಿಶ್ಚಯ; ದೃಢವಾದುದು (?): ಅಳಿಯಂದಿರಾ ರೈಕೆಗೆಯ್ದಿದಾಗರಮನೆಯೊಳಪೊಕ್ಕು ಚಕ್ರಿಯ ಭಾಷೆ ಗಳಬಳನಾದುದ ಕಂಡತಿನಿರ್ವೇಗ ಮೊಳೆತು ದೀಕ್ಷೆಯ ಕೊಂಡರವರು (ಭರಚ. ೮೦–೪). 'ಗಳಿಬಳಿ' ಪರಾ.

[ಗಳ್$_2$ (= ಗಲ) + ಬಳ್$_2$ (= ಬಲ್$_2$)]

**ಗಳಬಳಿಸು** (ಕ್ರಿ). ೧. ಹೆಚ್ಚಾಗಿ ಸದ್ದುಮಾಡು; ಗದ್ದಲಮಾಡು: ಥಳಥಳಿಪ ಕಳಶಂಗಳೆಡೆಯೊಳು . . . ಗಳಬಳಿಪ ಶುಕಪಿಕ ಮರಾಳ ಕಪೋತ ಶಿಖಿತತಿಯಂ (ಸಾನಂಚ. ೭–೪). ೨. ಗಟ್ಟಿಯಾಗಿ ಹೇಳು; ಘೋಷಿಸು: ವಿಬುಧರು ತಳಿವ ಮಂತ್ರಾಕ್ಷತೆಯಿಂದ ಗಳಬಳಿಸುವ ಮಂಗಳಾಷ್ಟಕದಿಂದ ಭೂತಳಪತಿ ನಡೆದನೋಜೆಯೊಳು (ಭರಚ. ೨೧–೫೬). [ಗಳಬಳ + –ಇಸು$_3$]

**ಗಳರವ** 'ಗಲರವ' ನೋ.

**ಗಳರುತಿ** (ನಾ). = ಗಲಧ್ವನಿ: ಗಳರುತಿ ಮಂತ್ರನಾದಮುಳಕಸ್ಥಳತಾಡನ ಮುಷ್ಟಿಮುದ್ರೆ . . . ತಳಚುರ್ವರ್ ಇಚ್ಛೆಗಾತಿರ್ಯರ್ (ಸೂಕ್ತಿಸು. ೧೪–೨೨).

[ಗಳ್$_2$ (= ಗಲ) + ರುತಿ]

**ಗಳರೋಗ** (ನಾ). ಒಂದು ಬಗೆಯ ಕಂಠರೋಗ: ಗಳರೋಗಕ್ಕೆ:– ದ್ವಿಕ್ಷಾರ ತ್ರಿಫಲಾ ವ್ಯೋಷಾ ವಿಳಂಗಂ . . . ಗೋಮೂತ್ರೇ ವರ್ತಿತಾನಾಂ ತು ಗಳರೋಗಂ ತು ನಾಶನಂ (ವಿವೈವಿ. ೧೮೦).

[ಗಳ್$_2$ (= ಗಲ) + ರೋಗ]

**ಗಳಲು** (ನಾ). ಲಾಳದ ಕಡ್ಡಿ; ಗಲಕು: ಬಳಿಕ ಗಿರಿಜಾತಾತನಂತರ್ನಿಲಯದೊಳು ಕರೆದೊಯ್ದು ನಿರ್ಮಲ ಗಳಲಿನಾಸನಗಳನು ಮುನಿಗಳಿಗರ್ಪಿಸಿಂತೆಂದ (ಪಾರ್ವಪು. ೩–೩೭). [?]

**ಗಳಲೆ** (ನಾ). ಕಂಕುಳು ಮೊದಲಾದ ಕಡೆಗಳಲ್ಲಿ ಏಳುವ ಒಂದು ಬಗೆಯ ಗಂಟು; ಲಾಳಶಂಕು; ಹದಗಡಲೆ (ಉಕ): ಇಂಥ ಗಳಲೆಗಳು ಕಂಕುಳಲ್ಲೂ ಕತ್ತಿನಲ್ಲೂ ಆಗುವುದುಂಟು (ಬಾಲಪ್ರ. I, ೪೮೨); ೨೪ ಗಂಟೆಗಳೊಳಗೆ ಗಳಲೆಯ ಮೇಲೆ ಅರಿಸಿನ ಬಣ್ಣದ ಬಿಳಿಯ ಚುಕ್ಕೆಗಳು ಕಾಣಿಸಿಕೊಳ್ಳುತ್ತವೆ (ಕಲರೋ. ೧೭). [?]

**ಗಳವತ್ತಿಗೆ, ಗಳವೊತ್ತಿಗೆ** (ನಾ). ಆನೆಯ ಅಥವಾ ಕುದುರೆಯ ಕೊರಳಪಟ್ಟಿ: ಕೊರಳ ಬಿಗಿದು ಗಳವತ್ತಿಗೆಯನೆದೆವತ್ತಿಗೆಯು ಘನ ಮುಂಡಿಗೆಯ . . . ಅಳವಡಿಸಿದರು ವಹಿಲದಲಿ (ಕುವ್ಯಾದ್ರೋ. ೩-೩). **ಗಳವೊತ್ತಿಗೆ**: ತವಕದಲಿ ಜೋಡಿಸುತ ಜೋಧರು ನವಮದೇಭವನಡರಿ ಶಿಲುಕಿಸಿ ಕಿವಿಯಮೇಲಂಕುಶವ ಗಳವೊತ್ತಿ[ಪಾಠಾಂ. ತ್ರ]ಗೆಯ ಸುತ್ತಿದರೂ (ತಿಮ್ಮಅ. ೫-೫೪). [< ಸಂ. ಗಲಪಟ್ಟಿಕಾ]

**ಗಳವೊತ್ತಿಗೆ** 'ಗಳವತ್ತಿಗೆ' ನೋ.

**ಗಳಶುಂಡಿ**(ನಾ). ಒಂದು ಬಗೆಯ ಗಂಟಲುರೋಗ: ಗಳಶುಂಡಿ, ತುಂಡಿಕೇರಿ . . . ತಾಲುಪಾಕಗಳೆಂದು ಕಟವಾಯಲ್ಲಿ ಹುಟ್ಟಿದ ರೋಗಂಗಳು ಎಂಟು ಪ್ರಕಾರವಾಗಿಹವು (ವೈದ್ಯಸಾ. II, ೧೧೪). [ಸಂ. ಗಲಶುಂಡೀ]

**ಗಳಸುಂಟಿಗೆ, ಗಳಸುಂಟಗೆ** (ನಾ). ಒಂದು ಬಗೆಯ ಗಂಟಲಿನ ರೋಗ: ಗಳಸುಂಟ(ಟಿಗೆ) ಕಿಡುಗುಂ ಪಿಪ್ಪಲಿ ಕಾಮನ ನಸ್ಯದಿಂದೆ (ಲೋಕೋಪ. ೯-೯೮). **ಗಳಸುಂಟಿಗೆ**: ಹೊಮ್ಮಗುಳ ಬೇರ ರಸಮುಂ ನಸ್ಯಮುಂ ಮಾಡಲ್ ಗಳಸುಂಟಿಗೆಯ ರೋಗಂ ಮಾಣ್ಬುದು (ಲೋಕೋಪ. ೯-೯೮ ಟೀಕು). [ಗಳ್₂ (= ಗಲ) + ಸುಂಟಗೆ]

**ಗಳಸುಂಟಿಗೆ** 'ಗಳಸುಂಟಗೆ' ನೋ.

**ಗಳಹ** 'ಗಱಪ' ನೋ.

**ಗಳಹತನ** (ನಾ). ಬಾಯಿಗೆ ಬಂದಂತೆ ಮಾತನಾಡುವುದು; ತಲೆಹರಟೆ: ಗಳಹತನವಿದು ನಿಮ್ಮ ತಂದೆಯು ಗಳಿಸಿದರ್ಥವು ನಿಮ್ಮ ಬೀಯಕೆ ಬಳಸುವಿರಿ (ಕುವ್ಯಾಕ. ೧೦-೩೮); ಗಳಹತನವಂತಿರಲಿ ಕಾದು (ಕೌಶಿರಾ. ೩-೨೦); ಕಿಸುರು ಗಾವಳಿ ಬಂದಿ ಗಳಹತನಂ . . . ಚೆನ್ನಬಸವನಿಹ ರಾಜ್ಯದೊಳ್ ಮಿಸುಕವು (ಚಬಪು. ೬-೪೦). [ಗಳಹ (< ಗಱಪ) + -ತನ]

**ಗಳಹತ್ತ** (ನಾ). ಮಲ್ಲಯುದ್ಧದಲ್ಲಿ ಒಂದು ಪಟ್ಟು; ಕುತ್ತಿಗೆಯನ್ನು ಹಿಡಿದು ಬೀಳಿಸುವ ವರಸೆ: ಗಳಹತ್ತ ಡೊಕ್ಕರ ತಳಮೇಲು ಪೈಸರ ಸುಳಿವು ವಂಚನೆ ಪತನದಲಿ (ಕಂನವಿ. ೨೧-೯೨); ಜಟ್ಟಿಗರ ಡೊಕ್ಕರಂ ಗಳಹತ್ತಂ ಮೊದಲೆನಿಸಿದ ಪಲವುಂ ಪಟ್ಟುಗಳಂ ಕಿರಿದು ಪೊಳ್ತು ನಿಟ್ಟಿಸಿ ತುಟ್ಟಿವಡೆದು (ಮರಾಚ. ೧೧-೪೯ ವ). [< ಸಂ. ಗಲಹಸ್ತ]

**ಗಳಹಸ್ತ** 'ಗಲಹಸ್ತ' ನೋ.

**ಗಳಹಿಕೆ** (ನಾ). = ಗಳಹತನ: ಸ್ವಪ್ರಶಂಸೆಯು ಈ ಗಳಹಿಕೆಯನ್ನು ಕೇಳಿ ಹನುಮಂತ ಅವನಿಗೆಂದ (ಬಿದುರಿ. ೧೪೩). [ಗಳಹು (< ಗಱಪು) + -ಇಕೆ]

**ಗಳಹಿಸು** (ಕ್ರಿ). ಹರಟುವಂತೆ ಮಾಡು; ಪೊಳ್ಳು ಮಾತಾಡುವಂತೆ ಮಾಡು: ಇವನಂ ಗಳಹಿಸಿ ನಗುತಿರ್ಪ ವಿನೋದಂ ಸಾಲ್ವುದರಸ (ವಧರ್ಮಪು. ೭-೪೩). [ಗಳಹು (< ಗಱಪು) + -ಇಸು₃]

**ಗಳಹು** 'ಗಱಪು' ನೋ.

**ಗಳಾ** 'ಗಡ₄' ನೋ.

**ಗಳಿ** (ಕ್ರಿ). ಮೀರು; ದಾಟು (?): ಮಾಳವಮೇಳುಮುಂ ಪುಡುಕೆಗಟ್ಟಿಸಿದತ್ತಜಿಯುಟ್ಟಿ ಚೇರನುಂ ಚೋಳನುಮುಂ ಸಮುದ್ರದೊಳಗದ್ದಿ ದುದದ್ದಿದನನ್ದು ತೇಜದುಬ್ಬೇಳು ಸಮುದ್ರಮುಂ ಗಳಿಯೆ ಪಬ್ಬಿ ಪೊದಳ್ದುದು ದಿಗ್ವಯಂ ದಿಶಾಪಾಳರನಳ್ಕಿಸುತ್ತಿದಿರಲಾಂಪವರಾರ್ಜ್ಜಯಸಿಂಘದೇವನ (ಎಕ. VII, ಶಿಕಾರಿ. ೧೨೫-೧೭; 1019). [< ಕಟ್ಟು₁]

**ಗಳಿಂಬ** 'ಗಡಿಂಬ' ನೋ.

**ಗಳಿಕೆ** (ನಾ). ಗಳಿಸುವಿಕೆ; ಸಂಪಾದನೆ; ಆದಾಯ: ಬೆಳೆಗೆ ಮಳೆ ಬರಲೇಸು . . . ಸೂಳೆಗೆ ಗಳಿಕೆ ಲೇಸು (ಸರ್ವಜ್ಞ. ೧೯೦೩); ತಮ್ಮ ಗಳಿಕೆಯಿಂದಲೇ ಸ್ವಲ್ಪ ಹಣವನ್ನು . . . ಮಾಸಲಾಗಿರಿಸಿ (ಸಸ್ಯಕ. ೯೭). **ಗಳಿಕೆಬಳಕೆ** = ಆದಾಯ ಮತ್ತು ವೆಚ್ಚ: ಕಳೆದ ಮೂರು ವರ್ಷಗಳ ಗಳಿಕೆಬಳಕೆಯ ಲೆಕ್ಕಪತ್ರವನ್ನು ಹೊಂದಿಸಿ (ಇಪ್ಪಕ. ೨೬೪). [< ಗಳಿಸು (< ಘಟಿಯಿಸು) + -ಕೆ]

**ಗಳಿಗೆ₁** 'ಗಟಿಗೆ₂' ನೋ.

**ಗಳಿಗೆ₂** 'ಗಳಗೆ' ನೋ.

**ಗಳಿಗೆ₃, ಘಳಿಗೆ₃** (ನಾ). ೧. ಬಟ್ಟೆ ಮುಂತಾದುವುಗಳ ಮಡಿಕೆ,— ಪದರ: ಗಂಗೆ ಗೌರೀವಲ್ಲಭರೆಲ್ಲರು ಚತುರ್ಮುಖ ಪಂಚಮುಖ ಷಣ್ಮುಖ ದಶಮುಖರೆಲ್ಲರು ನಿಮ್ಮ ಮಡಿಯ ಗಳಿಗೆಯೊಳಗಿದ್ದರು (ಚನ್ನವ. ಕ. ೩೯೩-೮೩೪). ೨. ವೀಳೆಯದೆಲೆಯನ್ನು ಮಡಿಸಿದ ತಾಂಬೂಲ: ಬತ್ತಿರ್ದ ಮೊಲೆಯ ಕುಪ್ಪಸದೊಳರುವೆಯ ಚಂಡನೊತ್ತಿ ಬಿಗಿದುಂ ಬಾಡಿ ಬಿಸುಟೆಲೆಯ ಗಳಿಗೆಯಂ ಸುತ್ತಿ (ಚಬಪು. ೧೦-೭೬); ಮಡಿಸಿದೆಲೆಯಗಳಿಗೆಯ ಕೆಂಬಲ್ದುದಿಗಡಸಿ (ಕಂನವಿ. ೯-೧೨೫). **ಘಳಿಗೆ₃**: ೧. ಹಳದಿ ಹಸುರು ಧಾರವ ಪಿಡಿದು ಘಟ್ಟಿಸಿ ನೇದಂ ಘಳಿಗೇ ತಂದರೆ ಕೇಳೋರಿಲ್ಲವಲ್ಲಾ (ನಾಪದ. ೧೪೧-೨). ೨. ಸಖಿಯರು ಕೊಡುವೆಲೆ ಘಳಿಗೆಯ ಕೊಳುತ (ಭರಚ. ೪೦-೬೯). 'ಗಳಿಗೆಮುರಿ' ಪರಾ. **ಗಳಿಗೆಮಾಡು, ಘಳಿಗೆಮಾಡು** = (ಮಡಿಯಾದ ಬಟ್ಟೆಗಳನ್ನು) ಮಡಿಸು; ನಲುಗದಂತೆ ಅಳವಡಿಸು; ಮಡಿಕೆಮಾಡು: ಆಕಾಶವನು ಗಳಿಗೆಮಾಡಿ ಮುಚ್ಚಿದ ಒಳಗಿಪ್ಪ ಭೇದವನು ಭೇದಿಸದ ಬೆಡಗಿಗೆ ಅನು ಬೇಡಿಕೊಂಬೆ (ದೇದಾವ. ೪೪-೮೭); ಗಾಂಧಾರಿಯು . . . ಪರಕಾಳೆ ವಸ್ತ್ರವನ್ನು ಗಳಿಗೆಮಾಡಿ ಅದರಿಂದ ಕಣ್ಣುಗಳನ್ನು ಕಟ್ಟಿಕೊಂಡಿದ್ದಳು (ಕೃವಾಅ. ೨೧೫); ಹೊಳಹನೊಪ್ಪವಿಟ್ಟು ಪರಮನಂಘ್ರಿಗಳಿಗೆ ಬಿಚ್ಚದಂತು ಮಡಿಸಿ ಘಳಿಗೆಮಾಡಿ (ತಿರುತೊಂ. ದೇ. ೨೩೩-೧೫). [ದೇ. ‖ ತುಳು. ಗಳಿಗೆ]

**ಗಳಿಗೆಬಟ್ಟಲು** 'ಗಟಿಗೆವಟ್ಟಲ್' ನೋ.

**ಗಳಿಗೆಮುರಿ** (ಕ್ರಿ). (ಹೊಸ ಬಟ್ಟೆಗಳ) ಮಡಿಕೆಯನ್ನು ಬಿಚ್ಚು; ಮೊದಲ ಸಲ ಉಡು: ಸೀರೆ ಗಳಿಗೆಮುರಿದು ಪೆಟ್ಟಿಗೆಯಲ್ಲಿಡು (ಪದ್ಮಸ. ೨೧೨). [ಗಳಿಗೆ₃ + ಮುರ್ಿ₂ (< ಮುಱು₁)]

**ಗಳಿಗೆವಟ್ಟಲು** 'ಗಟಿಗೆವಟ್ಟಲ್' ನೋ.

**ಗಳಿಜ** (ನಾ). ಒಂದು ಬಗೆಯ ಸೊಪ್ಪು: ಸೊಪ್ಪುಗಳು:— ಅಗಸೆ, ಬಿಳಿಸೂಲಿ . . . ಗಳಿಜ, ನುಚ್ಚುಗೋವಿ, ಮೆಂತೆ (ನಮ್ಮನು. ೨೩೭). [?]

**ಗಳಿತ** 'ಗಲಿತ' ನೋ.

**ಗಳಿತಕೋಪ** (ನಾ). ಕೋಪವಳಿದು ಶಾಂತನಾದವನು; ಸಿಟ್ಟು ಇಳಿದವನು: ಗಳಿಯಿಸುತಿರೆ ನಯನವಾರಿ ನಿನ್ನಾನನದಿಂ ನಳಿನಾನನೆ ನೀನಿರೆ ಕುರುಕುಳಾಂತಕಂ ಗಳಿತಕೋಪನೇ [ಕಲಿ]ಭೀಮಂ (ಗದಾಯು. ೧-೬೩). [ಗಳಿತ (= ಗಲಿತ) + ಕೋಪ]

**ಗಳಿತದಾನತೆ** (ನಾ). ೧. (ಆನೆಗಳ) ಮದಜಲ ಸೋರಿಹೋಗಿರುವಿಕೆ. ೨. ದಾನಕೊಡದಿರುವಿಕೆ; ಕೃಪಣತೆ; ಜಿಪುಣತನ. ೧, ೨: ಗಳಿತದಾನತೆ ಕುಂಜರದೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಚಂದ್ರಪು. ೩-೯ವ). [ಗಳಿತ (= ಗಲಿತ) + ದಾನತೆ]

**ಗಳಿತಧಾರೆ** (ನಾ). ಸುರಿಯುತ್ತಿರುವ ಮಳೆಯ ಧಾರೆ; ಜಡಿಮಳೆ: ಗಳಿತಧಾರೆಗಳಂತಿರೆ ಪತ್ರಿಗಳ್ ಬಳಸಿ ಕಾರ್ಗೆಣೆಯಾಯ್ತು ಮಹಾಹವಂ (ಕವಿರಾ. ೧-೧೪೪). [ಗಳಿತ (= ಗಲಿತ) + ಧಾರೆ]

**ಗಳಿತಪೌರುಷ** (ನಾ). ೧. ಪೌರುಷವನ್ನು ಕಳೆದುಕೊಂಡವನು ; ಹೇಡಿ. ೨. (ಅಲಂ) ನಪುಂಸಕ: ಆಕಟಾ ಗಳಿತಪೌರುಷನಾಗಿ ಬದುಕುವನಲ್ಲ ತಾನೆಂದ (ಕುವ್ಯಾ೯. ೮-೪೬).
[ಗಳಿತ (= ಗಲಿತ) + ಪೌರುಷ]

**ಗಳಿತಮದ** (ನಾ). ಹೋದ ಮದವುಳ್ಳವನು; ಇಳಿದ ಸೊಕ್ಕುಳ್ಳವನು; ಮದವಡಗಿದವನು; ಸೊಕ್ಕು ಇಳಿದವನು: ಧರ್ಮಪ್ರಿಯರೆಂಬಾಚಾರ್ಯರಂ ಬಂದಿಸಿ ಗಳಿತಮದಂ ದೀಕ್ಷೆಗೊಂಡು . . . ನಿರ್ಮೋಹನಾದಂ (ಶಾಂತಿಪು. ೯-೧೪).
[ಗಳಿತ (= ಗಲಿತ) + ಮದ$_1$]

**ಗಳಿತವಿಕಾರ** (ನಾ). ನಷ್ಟವಾದ ವಿಕಾರವುಳ್ಳವನು ; ನಿರ್ವಿಕಾರ; ಪರಮಾತ್ಮ: ವೀರ ದೈತ್ಯಕುಠಾರ ಗಳಿತವಿಕಾರ ಗೋಪೀಜಾರ (ಕುವ್ಯಾಭೀ. ೩-೮೭). [ಗಳಿತ (= ಗಲಿತ) + ವಿಕಾರ]

**ಗಳಿತಶರ** (ನಾ). ೧. ಜಾರಿ ಬಿದ್ದ ಬಾಣ. ೨. ಜಾರಿಬಿದ್ದ ಬಾಣವುಳ್ಳವನು; ಬಾಣವಿಲ್ಲದವನು. ೩. ಜಾರಿಬಿದ್ದ ಬಾಣವುಳ್ಳುದು; ಬಾಣವಿಲ್ಲದುದು: ಗಳಿತಶರಮಾಯ್ತು ಹಸ್ತಂ . . . ಕೌರವಕುಲತಿಲಕಂಗಾ ಕುಮಾರನಂ ಕಾಣಲೊಡಂ (ಗದಾಯು. ೪-೬೦).
[ಗಳಿತ (= ಗಲಿತ) + ಶರ]

**ಗಳಿತಾಶ್ರು** (ನಾ). ಸುರಿಯುತ್ತಿರುವ ಕಣ್ಣೀರು. ೨. ಸುರಿಯುತ್ತಿರುವ ಕಣ್ಣೀರನ್ನುಳ್ಳುದು: ನಯನಂ ಗಳಿತಾಶ್ರುವಾಯ್ತು ಕೌರವಕುಲತಿಲಕಂಗಾ ಕುಮಾರನಂ ಕಾಣಲೊಡಂ (ಗದಾಯು. ೪-೬೦).
[ಗಳಿತ (= ಗಲಿತ) + ಅಶ್ರು]

**ಗಳಿಬಿಳಿ** (ನಾ). ೧. ನಿರಾತಂಕವಾಗಿ ಮಾತನಾಡುವ ಸ್ವಭಾವ; ಸರಳತೆ; ಸಲುಗೆ: ಈಕೆಯ ನಡಾವಳಿ, ದೇವನಿಷ್ಠೆ, ಔದಾರ್ಯ, ಗಳಿಬಿಳಿ – ಮುಂತಾದುವುಗಳ ಮೂಲಕ ಅವರಾದರೂ ಈಕೆಯನ್ನು ಆದರಿಸುತ್ತಿದ್ದರು. (ಗಂಗಾಸಾ. ೨೫); ನಾಲ್ಕುದಿನ ಸಲುಗೆಯಾಗಿ ಚೇಷ್ಟೆಯ ಮಾತನಾಡುವಷ್ಟು ಗಳಿಬಿಳಿಯಿಂದಿದ್ದರೂ (ವೈನಿ. ೧೧೧). (ಗು). ೨. (ಉಕ) ನಿಸ್ಸಂಕೋಚ ಸ್ವಭಾವದ; ಸರಳವಾದ; ಸಲುಗೆಯ: ಸುಂದರಕ್ಕನ ಗಳಿಬಿಳಿಮಾತಿನಿಂದ ಅಜ್ಜಿಗೂ ಸ್ವಲ್ಪ ಸಮಾಧಾನವೆನಿಸಿತು (ವೈನಿ. ೧೪೬); ಕೃಷ್ಣತನಯನಾದರೂ ಅಂತಹ ಗಳಿಬಿಳಿ ಮನುಷ್ಯನಲ್ಲ (ಸಿವಭಾ. ೧೦೬). [← ಮರಾ. ಗಳಬಳೀತ್]

**ಗಳಿಮೆ** (ನಾ). ಗಳಿಕೆ; ಸಂಪಾದನೆ: ತಂದೆಯ ಗಳಿಮೆ ಉಳಿದೆಲ್ಲ ವೆಚ್ಚಗಳಿಗೆ ಸಾಕಾಗುತ್ತಿತ್ತು (ವೊಪಮ. ೧); ಹಣದ ಗಳಿಮೆಯಲ್ಲಿ ದಿನಕ್ಕೆ ಎಂಟು ಗಂಟೆಗಳಾದರೂ ಕಳೆಯುತ್ತದೆ (ಒಂಟದ. ೪೦); ಯಶೋದೆಯ ಗಳಿಮೆಯಿಲ್ಲ (ವಾತ್ಸಲ್ಯ. ೩೬೫).
[< ಗಳಿಸು (< ಘೞಿಯಿಸು) + – ಮೆ$_1$]

**ಗಳಿಯ** 'ಗಳಿಹ' ನೋ.

**ಗಳಿಯಾರ** 'ಘಳಿಯಾರ' ನೋ.

**ಗಳಿಯಿಸು** 'ಗಲಿಯಿಸು' ನೋ.

**ಗಳಿಲನೆ** (ಅ). ಶೀಘ್ರವಾಗಿ; ಬೇಗನೆ: ಗಳಿಲನೆ ನಾಯ್ಗೆ ಬೇಗ ಮೊಸದಿಕ್ಕಿ (ಧರ್ಮಾಮೃ. ೭-೧೬೭); ಅರಸುಗೆಲಸಮಂ ಮಱೆದು ಗಳಿಲನೇಳ್ದಿರದೆಯ್ದೆ (ಪದ್ಮರಾ. ೫-೪೭); ಗಳಿಲನೆ ಬಡಿಸಲೊಗ್ಗರಣೆಯಿಂಗಿನ ಕಂಪು ಸುಳಿದುದು (ಮೋಹತ. ೩-೫೪). [ಗಳಿಲು + –ಅನೆ$_1$]

**ಗಳಿಲಾನ್** (ಕ್ರಿ). ವೇಗವನ್ನು ಹೊಂದು; ತ್ವರೆಗೊಳ್ಳು: ಸುಳಿಗುರುಳ ಬಲೆಯ ಕೈಲಾಗುವಿಡಿದು . . . ಗಳಿಲಾಂತು ನೆಲೆನೆಲೆಗುರುಜುಗಳೊಳು ನೋಡುತಿಳಿದಳುಪ್ಪರಿಗೆಯನವಳು (ಮೋಹತ. ೨೮-೭).
[ಗಳಿಲು + ಆನ್$_1$]

**ಗಳಿಲು** (ನಾ). ಬೇಗ; ವೇಗ. 'ಗಳಿಲಾನ್' ಪರಾ. [?]

**ಗಳಿಸಾಳಿ** 'ಗೞಿಸಾಳಿ' ನೋ.

**ಗಳಿಸಾಳಿವೆಣ್** 'ಗೞಿಸಾಳಿವೆಣ್' ನೋ.

**ಗಳಿಸು** 'ಘೞಿಯಿಸು' ನೋ.

**ಗಳಿಹ, ಗಳಿಯ** (ನಾ). ಗಳಿಕೆ; ಸಂಪಾದನೆ: ಅಜ್ಜನೆಯ ಗಳಿಹವ ನಿಳುಹಿದರೆ ಬಳಿಕ ನಿಶ್ಚಿಂತವಾಯಿತ್ತು ಗುಹೇಶ್ವರ (ಅವಚಂ. ೨೫-೧೦೬); ಎನ್ನಕನ್ನಡಿ ಒಳಹೊರಗಿಲ್ಲ ಎನ್ನ ಗಳಿಹ [ಪಾಠಾಂ. ಯ] ಮುಟ್ಟನೊಳಕೊಂಡ ಚೀರ ಹಡಪಕ್ಕೆ ಆಳವಲ್ಲ . . . ಮಿಕ್ಕಾದ ಎನ್ನಯ ಮುಟ್ಟ ಸತ್ಯ ಶರಣರು ಕೊಟ್ಟರು (ಸರ್ವವ. ೧೨೬-೬೫೫); ನಮ್ಮ ಗಳಿಹಮಂ ತಾರೆನಲು ನಗುತೆಲ್ಲವಂ ತಂದು ಕುಲುಮೆಯಿಕ್ಕೂದಿ ಕೆಂಪಗೆ ಕಾದ ಕಬ್ಬುನದ ಗಳಿಹಗಳನೊಯಿರೆನಲು (ಗುರುಚಾ. ೧೩-೬೫). **ಗಳಿಯ**: ಯಿ ಮೂವರು ತುರುಸಿ ದಳದ ಕೂಡೆ ಕಾದಿ ಗಳಿಯವಕೊಂಡು ಬಾಹಲ್ಲಿ (ಕಇ. I, ೬೨-೧೪; 1481); ವಸ್ತ್ರ ನೈವದಕೆ ಗಳಿಯ ಮುಟ್ಟುಗಳಿಲ್ಲಾ ಕರ್ತೂ ನಿರ್ಮಿಸಬೇಕೆಂದೆನಲೂ (ದೇವಾಂಪು. ೩-೧೫೬).
[< ಗಳಿಸು (< ಘೞಿಯಿಸು) + – ಹ$_2$]

**ಗಳಿಹಾರ** 'ಘಳಿಯಾರ' ನೋ.

**ಗಳು** 'ಗೞ್' ನೋ.

**ಗಳುಹು** 'ಗೞ್ಪು' ನೋ.

**ಗಳೆ** 'ಗೞೆ' ನೋ.

**ಗಳೆಕಾರ** 'ಗೞೆಕಾಱ' ನೋ.

**ಗಳೆದುದಿ** (ನಾ). ಬಿದಿರಿನ ಕೊನೆ; ಗಳೆಯ ತುದಿ: ಗಳೆದುದಿಯ ಮೇಲಾಡುತಿರ್ಪ ಕೊಲ್ಲಟಿಗವೆಣ್ಣೊ ಎನಲ್ (ಚಬಪು. ೧೦-೬೨).
[ಗಳೆ (< ಗೞೆ) + ತುದಿ]

**ಗಳೆಮರ** (ನಾ). ಬಿದಿರು; ಬೊಂಬು: ಅಲ್ಲಿ ಗಳೆಮರದುದ್ದ ಬೆಳೆದಿದ್ದ ಮೊಡವೆ ಮೋರೆಯ ಮುದಿವೈದ್ಯ (ಪುನರು. ೪೯೯). [ಗಳೆ (< ಗೞೆ) + ಮರ$_1$]

**ಗಳೆಹೂಡು** (ಕ್ರಿ). (ಉಕ) ನೇಗಿಲನ್ನು ಹೂಡು, — ಕಟ್ಟು: ಗಳೆ ಹೂಡಿ ಹೊಲ ಹರಗಲನುವಾದನು (ಶರಚ. ೬೯೪).
[ಗಳೆ (< ಗೞೆ) + ಹೂಡು$_1$ (< ಪೂಡು)]

**ಗಳೆಹೊಡೆ** (ಕ್ರಿ). (ಉಕ) ನೇಗಿಲಿನಿಂದ ಉಳು: ಗಳೆಹೊಡೆದು ಮನೆಗೆ ಹೊರಟ (ಮನೆಬಿ. ೧೩೩); ಗಳೆಹೊಡೆದು ಹದಮಾಡಿದ ಹೊಲಗಳೆಲ್ಲ "ಬಿಕೊ" ಎಂದುವು (ಬರಹಾ. ೫೮).
[ಗಳೆ (< ಗೞೆ) + ಹೊಡೆ$_1$ (< ಪೊಡೆ$_1$)]

**ಗಳೋದ್ದೇಶ** 'ಗಲೋದ್ದೇಶ' ನೋ.

**ಗಳ್ದಿ** 'ಗೞ್ದಿ' ನೋ.

**ಗಳ್ದಿಗಳೆ, ಗದ್ದೆಗಳೆ** (ನಾ). ಗದ್ದೆಯನ್ನು ಅಳತೆಮಾಡುವ ಒಂದು ಅಳತೆಗೋಲು, – ಗಣೆ: ಸವಣನ ಕೆಱೆಯ ಕೆಳಗೆ ಗಳ್ದಿಗಳೆಯುಲು ಮತ್ತರು ೨ (ಎಕ. VII, ಶಿವಮೊ. ೫೭-೬೬; 1115). **ಗದ್ದೆಗಳೆ**: ಹರಕೇರಿಯ ಸೀಮೆಪರಿಯಂತ ಬಿಟ್ಟ ಗದ್ದೆಗಳೆಯ ಪುಕ್ಕಲೊಂದು (ಎಕ. VII, ಶಿವಮೊ. ೬-೧೫; ಸು. 1060).
[ಗಳ್ದಿ (< ಗೞ್ದಿ) + ಗಳೆ (< ಗೞೆ)]

**ಗಳ್ಳಿಕ್ಕು** (ಕ್ರಿ). (ನಾಯಿಯಂತೆ) ಗಳ್‌ಗಳ್ ಎಂದು ಧ್ವನಿಮಾಡು ; ಬೊಗಳು: ನಾಯಿಂ ವೇದವಾ ಮಂಡಳಾಧಿಪನ ಮುಂದೋದಿಪೆನೆನುತ್ತಾಡಿಕೊಂಡು ಬಂದದನಿಳಿಸೆ ಗಳ್ಳಿಕ್ಕೆ (ವೀಶೈಪು. ೪-೧೨-೧೫) ; ಹೊಸ ಮನುಷ್ಯರ ಗವಲಿಗೆ ಗಳ್ಳಿಕ್ಕುತ ಮುಸುಕಿ ಮುಂಬರಿವ ಶುನಿಗಳು (ಕಂಸವಿ. ೧೯-೨೪) ; ಗಳ್ಳಿಕ್ಕಿ ಕೂಗಿಡುತ ಮುಂತೈದುತಿಹ ಸಾರಮೇಯಗಳ (ವೆಂಕಶಾರಾ. ೩-೩-೩೫). [ಗಳ್ಳು$_0$ + ಇಕ್ಕು]

**ಗಱ್** (ನಾ). ಒಂದು ಅನುಕರಣ ಶಬ್ದ: ರಕ್ತಮಂ ಕುಡಿದು . . . ಗಱ್ಱೆಂದೋವದೆ ತೇಗಿಯುಂ ಮಿಡಿಗಳಂ ಕುಂಟಾಗೆ ಕೊಯ್ದುಂ ಖಳರ್ (ಧರ್ಮಾಮೃ. ೬-೧೪೯); ರಕ್ಕಸನ ರಕ್ತವ ಕುಡಿದು ಗಱ್ಱೆಂದು ತೇಗಿದವ ನೊಡಲಿಂದಲಲ್ಲಿ . . . ಸುರಿಯಲು (ವೀಶೈಪು. ೩-೬-೨೪).

**ಗಱಗ** (ನಾ). ಒಂದು ಜಾತಿಯ ಹಕ್ಕಿ: ಗರುಡ ಕೊಣಸು ಮೇಣು ಟೀವನು ಗರಗೆ ತೊಂಡಲು ಗಱಳ ಬಳಿಯಾ ಗಱಗ ಮುಕ್ಕುಟುಕ . . . ಒಪ್ಪಿದುವು (ಸಾಳ್ವಭಾ. ೫-೨೩). [?]

**ಗಱಬಱಗುಟ್ಟಿಸು** (ಕ್ರಿ). ಗರಬರ ಎಂದು ಸದ್ದಾಗುವಂತೆ ಮಾಡು: ನರಿಯ [೧]ೀತ ಬಳ್ಳು ಮೆಚ್ಚಿದ ತೆಱದಿ ಬಾಲಕಿ ಮೇಲನಱಿಯದೆ ಹಱಿಯ ಗಱಬಱಗುಟ್ಟಿಸಿದ ಹಱಿಗಾಱನನು ಕಂಡೂ (ಸಾಳ್ವಭಾ. ೮-೬೦). [ಗಱಬಱ$_0$ + ಕುಟ್ಟು$_1$ + -ಇಸು$_3$]

**ಗಱಿ, ಗರಿ** (ನಾ). ೧. (ಹಕ್ಕಿಗಳ) ರೆಕ್ಕೆ: “ಪತ್ರ ತನೂರುಹ ವಾಜ ಪತತ್ರಚ್ಛದ ಪಿಂಛ ಪಕ್ಷನಾಮಂ ಗಱಿ” (ವಸ್ತುಕೋ. ೪೧-೧೦); ಗಱಿ ಪಾರಲ್ಕಿಲ್ಲ ಕಾಲುಂ ಬಲಿಯವು (ಕಾದಂಪೂ. ೧೯೧); ನರಂಗೆ ಸ್ವರ್ಗಕ್ಕೆ ಪಾರಲೇಂ ಗಱಿಯೊಳವೆ (ಸಮುಪ. ೧೦-೧೫೭); ಗರುಡನ ಗಱಿಯ ಗಾಳಿಗೆ ಫಣಿಗಳ ಮೊತ್ತ ಮುರಿಗೆಡೆದೋಡುವಂದದಲಿ (ಕಂನವಿ. ೧೫-೧೦೪) ೨. ಬಾಣಕ್ಕೆ ವೇಗ ಬರಲೆಂದು ತುದಿಯಲ್ಲಿ ಕಟ್ಟುವ ರೆಕ್ಕೆ, — ಪುಕ್ಕ: “ಪತ್ರಶಾಳೀ, ವಾಜಃ – ಈ ೨ ಗಱಿ” (ಹಲಾಯು. ೭೬-೩೧೪); ಮುನಿದಿಸುವಿನಜನ ಸರಲಂ ಮೊನೆಯಿಂ ಗಱಿವರೆಗಮೆಯ್ದೆ ಸೀಳ್ದುವು ಕಣೆಗಳ್ (ಪಂಪಭಾ. ೧೨-೧೮೭); ಅಲರ್ಗಣೆಗೆ ಗಱಿಯಂ ಕಟ್ಟುವಂತೆ (ಉದ್ಭಟ. ೮-೨೨ ವ); ನೂಕಿದವಂಬು ಗಱಿ ಸಹಿತ (ಕುವ್ಯಾದ್ರೋ. ೩-೫೦); ಪೊಂಬರಹದ ಶುಭ್ರದೂವಟವ ಸ್ಮರಬಾಣ ಗಱಿಯಂತೆ ನಿಱಿವಿಡಿದುಡಿಸಿದರು (ಮೋಹತ. ೨೩-೧೩). ೩. ಬಾಣ; ಅಂಬು. ‘ಗಱಿತೋಱು’ ಪರಾ. ೪. ತಾಳೆ, ತೆಂಗು, ಅಡಕೆ ಮುಂತಾದ ಮರಗಳ ಎಲೆ. ೫. ಹೂವಿನ ಎಸಳು; ರೇಕು; ದಳ: ಪೊಂಗೇದಗೆಯ ಗಱಿಯ ಕಿಱುಮುಳ್ಗ (ಕಾದಂಉ. ೩೬); ಕುಮುದಿನಿಗಳೊಂದೊಂದು ಗಱಿಗಳುಳ್ಳಲರೆ (ಕಾದಂಉ. ೩೭೫). ‘ಗಱಿವೂ’ ಪರಾ. **ಗರಿ**: ೧.‘ಗರಿಗೆದರ್’ ಪರಾ. ೪. ಅದರ ಕೆಲವು, ತಾಡೋಲೆಗಳ ಗರಿಗಳು ಗದ್ದಗಿ-ಮಠದಲಿದ್ದವು (ಕನ್ನಜಾ. ೯೩); ಈಚಲು ಗರಿಯಿಂದ ಚಾಪೆಮಾಡುತ್ತಾರೆ (ರೂಢಿ). ೬. ಪುಸ್ತಕದ ಪುಟ, —ಹಾಳೆ: ಒಂದೊಂದು ಗರಿಯೂ ಕಣ್ಣುಮನಗಳನ್ನು ಸೆಳೆಯುವಂತಹದು (ಸುವಸಂ. ೪); ಇಲ್ಲಿ ನಾಲ್ಕು ಗರಿಗಳು ನಷ್ಟವಾಗಿವೆ (ಶಮುಪಾಂ.೭೩). ೭. ಮಾಸದಿರುವುದು; ಹೊಸದಾಗಿರುವುದು: ಬಿಳಿ-ಹೊಳೆ ಬಣ್ಣದ ಗರಿ-ಗರಿಯುಂಟು (ಗರಿ.೫೬-೭).

**ಗರಿಗರಿ** (ದ್ವಿರುಕ್ತಿ). ಅವನು ಧರಿಸುವ ಬಟ್ಟೆ ಸದಾ ಗರಿಗರಿಯಾಗಿರುತ್ತದೆ. (ರೂಢಿ).

[ದೇ. ‖ ತುಳು. ಗರಿ; ತೆಲು. ಗಱಿ; ಕೋಲಾ. ಗರ್]

**ಗಱಿಕೆ** ‘ಕಱುಂಕೆ’ ನೋ.

**ಗಱಿಕೆಗಾಲ** (ನಾ). ಒಂದು ಊರಿನ ಹೆಸರು: ದೋರಯ್ಯಸೆಟ್ಟಿ ಮೂಲಸ್ಥಾನ ದೇವರ್ಗ್ಗೆ ಗಱಿಕೆಗಾಲ ಕಕ್ಕುವ ಗಱ್ದೆಯ ಮೂಡಣ ದೆಸೆಯಲಿ . . . ಪೊನ್ನರಕೊಟ್ಟು (ಎಕ. III, ನಂಜನ. ೧೬೪-೨೩; 1092).

[?]

**ಗಱಿಗಂಟೆ, ಗರಿಗಂಟೆ, ಗರಿಗಂಟಿ** (ನಾ). ಒಂದು ಜಾತಿಯ ಔಷಧಿ ಸಸ್ಯ: “ವಿಷ್ಣುಮುಷ್ಟಿಃ – ಗಱಿಗಂಟೆ” (ಒಷಧಿ ೧೫೩). **ಗರಿಗಂಟೆ**: “ದುರ್ಗಂಧ-ಗರಿಗಂಟೆ, ವಿಷಪರಿಹಾರಿ” (ಒಷಧಿ. ೭೮). **ಗರಿಗಂಟಿ**: “ವಿಷಃ – ಗರಿಗಂಟಿ, ಔಷಧ” (ಒಷಧಿ. ೧೫೨). [?]

**ಗಱಿಗಟ್ಟು, ಗರಿಕಟ್ಟು, ಗರಿಗಟ್ಟು** (ಕ್ರಿ). ೧. ಬಾಣಕ್ಕೆ ಗರಿಯನ್ನು ಕಟ್ಟು; ಅಲಗನ್ನು ಬಾಣಕ್ಕೆ ಸೇರಿಸು: ಪೊಸಕೋಲಂ ಗಱಿಗಟ್ಟುವಂ ಗರುಡಪಕ್ಷಚ್ಛೇದದಿಂ ಕಿರ್ದುವಂ (ಅರ್ಧನೇ. ೩-೫೩); ಮಾರ್ಗಣಮುಂ ಗಱಿಗಟ್ಟುತಿರ್ಪ ಬಿಲ್ಗೀಸುವ . . . ವನೇಚರರಿಂ ಬಗೆಗೊಂಡುದಾವನಂ (ಜಗವಿ. ೧೬-೧೬); ಅಂಗುಲಿ ಸ್ಮರಶರಮಂಗುಲೀಯ ಮಣಿರಶ್ಮಿಗಳಿಂ ಗಱಿಗಟ್ಟವೇಕೆ (ಅನಂಪು. ೧೨-೫೮). ೨. (ಅಲಂ) ಬಲವಾಗು; ಶಕ್ತಿಯುತವಾಗು; ದಳವೇರು: ಮೆಱೆವೀ ಪೊಂಗೇದಗೆಯೊಳ್ಗಱಿಯೊಳ್ ಗಱಿಗಟ್ಟಿ ಮಾಱವೇ ಮಿಕ್ಕಲರಂ (ಜಗವಿ. ೧೪-೮೩); ಕಱಿವದನಾದ ಮುಚ್ಚು ಗಱಿಗಟ್ಟಿದ ಮೆಲ್ಪು (ಸೂಕ್ತಿಸು. ೮-೩೯೪); ಅಲಸದ ನೋಟದಿಂ ಸಡಿಲದಪ್ಪುಗೆಯಿಂ ಗಱಿಗಟ್ಟಿದೊಲ್ಮೆಯಿಂ (ದಶಕು. ೧೧-೭೫); ಗಱಿಗಟ್ಟಿದರಿ ನೀವೆ ಹಿಡಿಯಲೀವಿರೆ ಧರ್ಮನಂದನನ (ಕುವ್ಯಾದ್ರೋ. ೨-೫೨); ಹಿಮೆಟ್ಟಿದುದು ಗೆಲವೆಮಗೆ ರಣ ಗಱಿಗಟ್ಟಿತರಿಗಳಿಗೆ (ತೊರರಾ. ೬-೧೫-೩); ಜನಭಾಗ್ಯಂ ಗಱಿಗಟ್ಟಿತೋ (ಚಿಕವಿ. ೩-೧೧೩). **ಗರಿಕಟ್ಟು**: ೨. ಅಲ್ಲೊಬ್ಬ ಇಲ್ಲೊಬ್ಬ ಪಾಳೆಯಗಾರರು ಇದ್ದುದರಲ್ಲಿ ಗರಿಕಟ್ಟಿಕೊಂಡು . . . ಬೆಳೆಯುತ್ತಿದ್ದರು (ಚಿಕದೇ. ೩); ಈಗ ಅವರು ಬೆಳೆದು ಗರಿಕಟ್ಟಿಕೊಂಡು ಬೇರೆ ದೇಶದಲ್ಲಿರುವಾಗ (ವಚಭಾ. ೬೩). **ಗರಿಗಟ್ಟು**: ೨. ತಲಕಾಡಿನ ಚೋಳರು ಈಗ ಮೂಡಲತ್ತ ಗರಿಗಟ್ಟಿಕೊಂಡು ಹೊಯ್ಸಳ ರಾಜ್ಯಕ್ಕೆ ಕಣ್ಣಿನ ಒಂದು ಮಣ್ಣುಕಣ ಆಗುತ್ತಿದ್ದಾರೆ (ಸವತಿ. ೬೦); ಇದಕ್ಕಾಗಿ ಗರಿಗಟ್ಟಿದ ಪಾತಕಗಳನ್ನು ಕಟ್ಟುಕಳಚಿ ಅಟ್ಟಿದ್ದಾನೆ (ಬದ್ಧಪ್ರ. xxviii, ಪೀಠಿಕೆ).

[ಗಱಿ + ಕಟ್ಟು$_1$]

**ಗಱಿಗಡಿ** (ಕ್ರಿ). ಗರಿಯವರೆಗೆ ಕತ್ತರಿಸು; ಪೂರ್ಣವಾಗಿ ಛೇದಿಸು; ತುಂಡರಿಸು: ಗಱಿಗಡಿದಾಳ್ವಂಬುಗಳಿಂದೊಱೆವ ನವವ್ರಣದಿಂ (ಜಗವಿ. ೧೮-೧೦೪); ಕೆಂಗಱಿಯ ಮಱಿದುಂಬಿ ತಾವರೆಗಂಗವಿಸುವ ವೊಲಸುರರಿಪುವಿನ ಮಂಗಳಾನನಕಮಲದಲಿ ಶರವಾಳಿ ಗಱಿಗಡಿಯೆ (ಕುವ್ಯಾಭೀ. ೬-೨೫).

ಗಱಿಗಡಿಯಾಗು = ಗರಿ ಕತ್ತರಿಸಿಹೋಗು; ಗರಿ ಮುರಿದು ಹೋಗು: ಉರಿಯನುಗುಳುವ ಬಾಣದಲಿ . . . ಕತ್ತರಿಸಿ ಕರ್ಣನನೆಸಲು ಸಮರದಲುರವ ಕೀಲಿಸಿತಂಬು ಗಱಿಗಡಿಯಾಗಿ ಗಾಢದಲಿ (ಕುವ್ಯಾಕ. ೨೭-೧೪).

[ಗಱಿ + ಕಡಿ$_2$]

**ಗಱಿಗಣೆ** (ನಾ). ಗರಿಯನ್ನು ಕಟ್ಟಿದ ಬಾಣ: ಉಡಿಯೊಳ್ ಪೊಂಜುರಿಗೆಯಂ ಕಟ್ಟಿ ಗಱಿಗಣೆಗಳ್ತುಱುಗಿದ ಪೊನ್ನ ಬತ್ತಳಿಕೆಯಂ ಬೆನ್ನೊಳ್ ತಳೆದು (ರಾಜಶೇ. ೬-೧೧ ವ); ಗಱಿಗಣೆ ನೆಱೆ ಮೊಱೆದು ಪರಿದುದೆರಡುಂ ಬಲದೊಳ್ (ರಾಜಶೇ. ೬-೪೭).

[ಗಱಿ + ಕಣೆ$_1$]

**ಗಱಿಗಱಿನೆ** (ಅ). ಒಂದು ಅನುಕರಣಾವ್ಯಯ; ಅತಿವೇಗವಾಗಿ; ರಭಸದಿಂದ: ಭಿಕ್ಷಾಪಾಟಯೊಳ್ಪಱಿಯ ವಣದಱಗ ತಱಿಕಱಿದು ಗಱಿಗಱಿನೆ ಮೇವ ಕುಱಿಗಳ ತೆಱದೊಳು (ಷಶಿಲ. ೩-೧೫). ‘ಗರಿಗರಿಲನೆ’, ‘ಘರಿಘರಿನೆ’ ಪರಾ.

[?]

**ಗಱಿಗೂಡು** (ನಾ). (ಬಾಣಗಳ) ಗರಿಗಳ ನೆಲೆ, —ಬೀಡು, —ಆಶ್ರಯಸ್ಥಾನ: ಇರದೆ ಕಡಂಗಿ ನೂಂಕಿದ ಮದೇಭಘಟಾವಳಿ ತೊಟ್ಟಸಲ್ಕೆ ಬೆಚ್ಚರದೆ ಕುಮಾರನಸ್ತ್ರಗಣದಿಂ ಗಱಿಗೂಡುಗಳಾಗಿ ಬೀಱ್ದುವಾ ಸುರಪತಿ ಕೋಪದಿಂ ಕಿರುಪೆ ತತ್ಕುಲಿಶಾದ್ಭುತ ವಾತಘಾತದಿಂ ಧರಣಿಗೆಱಂಕೆಗೂಡಿ ಕೆಡೆದುನ್ನತ ನೀಳನಗಂಗಳೆಂಬಿನಂ (ಶಾಂತೀಶ್ವ ೩-೧೦೧).

[ಗಱಿ + ಗೂಡು]

**ಗಱಿಗೆದಱು**, ಗರಿಗೆದರ್, ಗರಿಗೆದರು (ಕ್ರಿ). ೧. ರೆಕ್ಕೆಯನ್ನು ಹರಡು, —ಬಿಚ್ಚು : ಗಱಿಗೆದಱಿ ಕೊಡೆವಿಡಿದು ನಿಂದುವು ಬಿಸಿಲ್ಗೆ ನವಿಲ್ (ಜೈಮಿಭಾ. ೨೮-೩೬) ; ಗಱಿಗೆದಱಿ ಬಿದಿರ್ದು ಕೊಕ್ಕಿಂದಿಱಿದಿಱಿದು . . . ವಿಹಗಂಗಳ್ (ರಾಜಶೇ. ೯-೨೮). **ಗರಿಗೆದರ್ :** ಗರಿಗೆದರ್ದು ಕುಣಿವುತಿಹ ಶಿಖಿಗಳಿಂ (ನವಮೋ. ೪-೨೫). **ಗರಿಗೆದರು :** ನಿನ್ನ ತೋಟದಿ ನವಿಲು ಗರಿಗೆದರಿ ಕುಣಿಯುವುದು (ನೆಲಮು. ೨೩). [ಗಱಿ + ಕೆದಱು$_1$(< ಕೆದಱ್$_1$)]

**ಗಱಿಗೋಲ್** (ನಾ). = ಗಱಿಗಣೆ: ರಕ್ಕಸರಾಯರುಗಳು . . . ಕವಿದೆಚ್ಚು ಸೂಂಕಿತು ಹೊಂಬಣ್ಣಗಱಿಗೋಲ್ಗಳಿಂದೆ (ಮೋಹತ. ೩೪-೧೦). [ಗಱಿ + ಕೋಲ್$_1$]

**ಗಱಿತೋಱು** 'ಗಱಿದೋಱು' ನೋ.

**ಗಱಿದೊಂಗಲ್** (ನಾ). ಗರಿಗಳ ಸಮೂಹ, —ಗುಂಪು : ಮನಸಿಜನ ಮೋಹಬಾಣದ ಗಱಿದೊಂಗಲಂತೆಸೆವ ರಮಣಿಯರ ನಿಱಿಯ ತುಱುಗಲಂ (ಕುಸುಮಾ. ೪-೨೯ ವ). [ಗಱಿ + ತೊಂಗಲ್]

**ಗಱಿದೋಱು**, ಗಱಿತೋಱು (ಕ್ರಿ). ೧. ಬಾಣವನ್ನು ತೋರಿಸು, —ಕಾಣಿಸು : ಮಚ್ಚು ಅಚ್ಚುಗವಾಗಿ ಒಪ್ಪಿದ ಪರಿಯ ನೋಡಾ ಎಚ್ಚರೆ ಗಱಿದೋಱದಂತೆ ನಡಬೇಕು (ಮಹಾದೇ. ಬ. ೧೪೭-೩೩೬) ; ಸಿಲ್ಕಿ ಶಬರಾಳಿಯೆಚ್ಚ ಶರಲ್ಕಿಕ್ಕಿಱಿಗಿಱಿದು ನಟ್ಟು ಗಱಿದೋಱುತ್ತುಂ ನಾಲ್ಕು ಮೆಯ್ಯೊಳ್ತೀವಿರೆ (೧೧೬.೧-೯೩); ತಾಗಿದ ಕೂರಲಗು ಗಱಿದೋಱಿದವು ನಿಜಹಯದ ಮೈಗಳಲಿ (ಕುವ್ಯಾದ್ರೋ. ೧೦-೨೩). ೨. ರೆಕ್ಕೆಪಡೆ; ಹಾರಿ ಹೋಗು: ಸೂಱೆವೋದುದು ಧೈರ್ಯದ ಪುರ ಕರಣವ ಮಾಱುಗೊಂಡನು ಪಂಚಬಾಣ ಜಾಱಿಹೋಯಿತು ನಾಣವನ ಬುದ್ಧಿಗೆ ಗಱಿದೋಱಿದವದ ನೇನೆನಲಿ(ಅಂಜಚ. ೭-೧೭೮). **ಗಱಿತೋಱು :** ೧. ಗಱಿತೋಱೆ ಗಂಡರೆಂಬವರ ಕಾಣೆ (ಬಸವ. ೧೧೨). [ಗಱಿ + ತೋಱು$_1$ (< ತೋಱ್)]

**ಗಱಿನಾಲಗೆ** (ನಾ). ಗರಿಯುಳ್ಳ ನಾಲಗೆ; ಹರಟುವ ನಾಲಗೆ : ಗಳಹತನವೇ ನಮ್ಮೊಡನೆ ತೊಟ್ಟಳುಕೆ ಗಱಿನಾಲಗೆಯ ಕೊಯ್ವೆನು ಮಾಱು ಮಾಣೆನುತ (ಕುವ್ಯಾಕ. ೪-೩). [ಗಱಿ + ನಾಲಗೆ]

**ಗಱಿಮೀನ್** (ನಾ). ಒಂದು ಜಾತಿಯ ಮೀನು ; ರೆಕ್ಕೆಯಿರುವ ಮೀನು : "ವಲ್ಗುಳಃ – ಗಱಿಮೀನ್" (ಒಷಧಿ. ೧೪೬) ; ಗಱಿಮೀನ್ ಸೀಗುಡಿ ಗೆಂಡೆಮೀನ್ ಪವಳನಾಯಂ ಬಾಳೆಮೀನ್ (ರಾಜಶೇ. ೫-೧೧೫). [ಗಱಿ + ಮೀನ್$_3$]

**ಗಱಿಮೂಡು** (ಕ್ರಿ). ೧. ರೆಕ್ಕೆಮೂಡು ; ಗರಿಯೊಡೆ : ಗಱಿಮೂಡಿದ ಬಱಿಕೆ ನೀನೆ ದಲಿ ಪೋದಪ್ಪೈ (ಕಾದಂಉ. ೬೯೭) ; ಗಾಳಿಗೆ ಗಱಿಮೂಡಿದಂತೆ (ಪಂಚತಂ. ೧೧೫-೧೫). ೨. ಎಸಳುಮೂಡು ; ದಳವೇರು ; ಆಕಾರಬರು : ಉರವಣಿಸಿ ಬೆಳೆದ ಪರಿಮಳಕ್ಕೆ ಗಱಿಮೂಡಿತೋ ಎಂದು ಕೊಂಡಾಡುತಂ (ಪುಷ್ಪರ. ೯-೧೭). [ಗಱಿ + ಮೂಡು$_1$]

**ಗಱಿಯವರೆ**, ಗರಿಯವರೆ (ನಾ). ಒಂದು ಬಗೆಯ ಅವರೆಯ ಗಿಡ ಮತ್ತು ಅದರ ಕಾಯಿ : "ಕುಕ್ಕುಟ-ಹೆಮ್ಮರ, ಗಱಿಯವರೆ, ಕಾಡ ಸಿಂಬೆ" (ಒಷಧಿ. ೩೪). **ಗರಿಯವರೆ :** "ಅವುಗಂ-ಗರಿಯವರೆ" (ಒಷಧಿ. ೧೧). [ಗಱಿ + ಅವರೆ$_1$]

**ಗಱಿಯಿಡು** (ಕ್ರಿ). = ಗಱಿಮೂಡು ೧ : ಅರಸಂ ಬರಲೌತ್ಸುಕ್ಯದೆ ಪರಿಯಲ್ಕಱಿಯಿಟ್ಟುವೆನಿಸಿ ಮಾರ್ತೊಳಗುವ ಚಾಮರದಿಂದಂ (ಕಾದಂಉ. ೨೨೬). [ಗಱಿ + ಇಡು$_1$]

**ಗಱಿವನಿ** (ನಾ). ರೆಕ್ಕೆಯಿಂದ ಉದುರುವ ನೀರಹನಿ : ಅಂಚೆಯ ಪಿಂಡೆಂಬಂತಿರೆ ಬೆಳ್ಮುಗಿಲದಱಿಂ ಬೀಳ್ವ ತುಷಾರಮುದಱ ಗಱಿವನಿಯೆನಿಕುಂ (ರಾಜಶೇ. ೬-೬). [ಗಱಿ + ಪನಿ$_2$]

**ಗಱಿವೂ**, ಗರಿಪೂ, ಗಱಿಹೂ (ನಾ). ಕೇದಗೆ; ತಾಳೆಹೂವು ; ಕೇತಕಿ : "ಗಱಿವೂಯೆಂದೆನೆ-ಗೇದಗೆ" (ರನ್ನಕಂ. ೯) ; "ಗಱಿವೂ – ಕೇದಗೆಯ ಪೂ" (ಶಮದ. ಪರಿ. ೨) ; ನಿಱಿಗೊಂಡ ಗಱಿವೂವಿನ ಬಾಱೆೀಲಿಯಿಂ ಲೀಲೆವಡೆದ ಲತಾಗೃಹಂ (ದಶಕು. ೧೦-೭೨ ವ) ; ಗಱಿವೂವಿನ ಕಿಱುಗಱಿಗಳ್ತುಱುಗಿದ ಬಹುಕಂಟಕಂಗಳೊಳ್ ನೆಲಸಿರ್ಕುಂ (ರಾಜಶೇ. ೭-೪೪). **ಗರಿಪೂ :** "ಗರಿಪೂವೆನಲ್ಕೆ ಕೇದಗೆಯಕ್ಕು" (ಕಶರ. ೩೧). **ಗಱಿಹೂ :** "ಕೇತಕಿ" (ಚತುನಿ.ಕಿ. I; ೧೦೩). [ಗಱಿ + ಪೂ$_2$]

**ಗಱಿವೆರಸು** (ಅ). ಗರಿ ಸಹಿತವಾಗಿ ; ಗರಿಪೂರ್ತಿ : ನಡುಕೋಲ್ವರಂ ನಟ್ಟ ಕೂರ್ಗಣೆಗಳಂ ಗಱಿವೆರಸು ಕೊಱೆದು ಕಳೆದು (ಪಂಪಭಾ. ೧೨-೭೪ ವ). [ಗಱಿ + ಬೆರಸು$_3$]

**ಗಱಿವೆಱು** (ಕ್ರಿ). ಗರಿಯನ್ನು ಹೊಂದು ; ರೆಕ್ಕೆಗಳನ್ನು ಪಡೆ : ಕೋಲುಗಳು ಗಱಿವೆತ್ತವೋ ಶಿವಶಿವ ಸಚೇತನದ ಅಳುಪೀಸು ಹಸಾದವೆನುತ ಬೀಳುಕೊಂಡುದು (ನಿಭಾಗ. ೭-೨-೯) ; ನಾಯ್ಗಳೋ, ನರಿಗಳೋ, ಮೇಣಿಲ್ಲ ಗಱಿವೆತ್ತ ಪಱಪೆಯೋ (ಅಂತಿಗೊ. ೪೮-೯೯೯). [ಗಱಿ + ಪೆಱು$_1$]

**ಗಱಿವೊಯ್**, ಗರಿಹೊಯ್ (ಕ್ರಿ). ೧. ರೆಕ್ಕೆ ಬಡಿ ; ಹಾರಾಡು : ಆಗಳಾಗಳೆ ಗಱಿವೊಯ್ದು ಕಂದೆಱೆವ ತುಪ್ಪುಳೊಡರ್ದುವ . . . ಶುಕಶಾಬಕಪ್ರಕರಮಂ ತೆಗೆದಂ (ಕಾದಂಪೂ. ೧೭೮) ; ಮುಖಪದ್ಮದೊಳ್ ಗಱಿವೊಯ್ವ ಪಱಮೆಯ ಮಱಿಗಳಂತಿರಮೆ ಆರಲ್ದ ಕಣ್ಮಲರ್ಗಳುಂ (ದಶಕು. ೮-೨೯೫ ವ). ೨. (ಆಲಂ) ಹೆಚ್ಚಾಗು ; ಅತಿಶಯವಾಗು : ಗಂಡಗರ್ವಂ ಗಱಿವೊಯ್ದುದು ರೌದ್ರರಸಮ ಪಲ್ಲವಿಸಿದವೊಲ್ (ಜಗವಿ. ೧೮-೧೦೪) **ಗರಿಹೊಯ್ :** ಹಾರುವುದು ಗರಿಹೊಯ್ದು ಮಿಂಚಿ ನೊಲುಮೆ (ಇಂಗೀತ. ೫೦-೯). [ಗಱಿ + ಪೊಯ್$_1$]

**ಗಱಿಸನ್ನೆ** (ನಾ). ಬಾಣದ ಗರಿಯಿಂದ ಮಾಡುವ ಸಂಜ್ಞೆ,— ಸೂಚನೆ: ಇದೊಂದಪೂರ್ವಮೃಗಯುಗಮೆಂದು ಪೆಱಗೆ ನಿಂದ ಪುಳಿಂದಿಗೆ ಗಱಿಸನ್ನೆಯಿಂ ತೋಱಿ ಮೆಲ್ಲನೆ ಬಿಲ್ಲೊಳಂಬಂ ತೊಡರ್ಚೆ (ನೇಮಿಪು. ೧-೭೫ ವ) ; ಗಱಿಸನ್ನೆಯಿಂದೆ ಕರೆಕರೆದುಱುವಾಳ್ಗಳನುಭಯ ಬಲದ ಬಿರುದರ್ ಬಿಲ್ಲುಂಬೆಱಗಾಗಿ ನೋಡೆ (ದಶಕು. ೨-೧೭). 'ಗಱಿಸನ್ನೆಗೆಯ್' ಪರಾ. [ಗಱಿ + ಸನ್ನೆ$_2$]

**ಗಱಿಸನ್ನೆಗೆಯ್** (ಕ್ರಿ). ಬಾಣದ ಗರಿಯಿಂದ ಸನ್ನೆ ಮಾಡು,— ಸೂಚಿಸು : ಗಱಿ[ಪಾತಾಂ ನೆಱೆ]ಸನ್ನೆಗೆಯ್ದು ತೆಗೆನೆಱೆದೆಱಗಿ ಪರಂ ಕಲಿಸಿ ಪರ್ವಿ ಕೂಕಿಱಿದಿಸೆ (ಪಂಪಭಾ. ೧೦-೭೩) ; ಪದಿಂಬರು ಮೋರೊರ್ವರಂ ಗಱಿಸನ್ನೆಗೆಯ್ದು ಕಾದುವಲ್ಲಿ (ಪಂರಾಮಾ. ೩-೯೭ ವ); ಅಱಿದು ಗಱಿಸನ್ನೆಗೆಯ್ದವರುಱದೋರ್ವರನೊರ್ವರಾರ್ದು ಪೊಣರ್ದಿ ಸುತಿರೆ (ನೇಮಿಪು. ೧೧-೧೭೭) ; ಕಲಿಧನಂಜಯನೊಡನೆ ಸೆಣಸಿದನು ಗಱಿಸನ್ನೆಗೆಯಿದು ರುಗುಮಿಣಿ ಭೂವರ (ಸಾಳ್ವಭಾ. ೧೫-೨೪). [ಗಱಿಸನ್ನೆ + ಕೆಯ್$_1$]

**ಗಱಿಹೂ** 'ಗಱಿವೂ' ನೋ.

**ಗಱುಂಕೆ** 'ಕಱುಂಕೆ' ನೋ.

**ಗಱುಂಕೆ** 'ಕಱುಂಕೆ' ನೋ.

**ಗಱುಗು**, ಗರಗು$_2$, ಗರುಗು (ನಾ). ೧. ಹುರಿಯುವುದರಿಂದ ಅಥವಾ ಕರಿಯುವುದರಿಂದ ಗರಿಗರಿಯಾಗಿರುವುದು ; ಗರಿಮುರಿಯಾಗಿರುವುದು : ಗಱುಗುಳ್ಳ ಬಿಳಿಯ ಹೊಸಬೆಲ್ಲಮಂ ಮಡಕೆಯೊಳು ಕರಗಿಸಿ ಯೆರಡು ಭಾಗೆಯಂ ಮಾಡಿ (ಸೂಪಶಾ. ೨-೨೯). **ಗರಗು$_2$ :** ೧. 'ಗರಗುವಡೆ', 'ಗರಗೊಬ್ಬಟ್ಟು' ಪರಾ.

೨. (ಮರಗಳ ಎಲೆ, ಹೂವು, ಹುಲ್ಲು ಮೊದಲಾದವುಗಳಂತೆ) ಶಾಖದಿಂದ ಒಣಗಿ ತರಗಾಗುವುದು ; ಪುಡಿಪುಡಿಯಾಗಿರುವುದು : ಅನಾವೃಷ್ಟಿಯಿಂದ ಗರಗಾದ ಭೂಮಿಗೆ ಸುವೃಷ್ಟಿಯಾದಂತೆ ಪರಿಣಮಿಸಿತು (ಭಜ್ಯೋತಿ. ೧೦). **ಗರುಗು :** ೧. ಆಹಾರವು ಗರುಗಾಗಿ ಹಲ್ಲಿನಿಂದ ಅಗಿದು ತಿನ್ನಲು ಹಿತವಾಗಿರುತ್ತದೆ (ಗೃಹವಿ. ೫೪). 'ಗರುಗೊಡೆ' ಪರಾ. ೨. 'ಗರುಗಲು' ಪರಾ. [ದೇ. ‖ ತಮಿ. ಕಱಗಱಪ್ಪು; ತೆಲು. ಗಱಗಱ]

**ಗಱಿ$_3$** 'ಗೆಱಿ$_3$' ನೋ.

**ಗಱ್ಱನೆ** (ಅ). ರಭಸದಿಂದ; ವೇಗವಾಗಿ : ಕಱ್ಱನೆ ಕಱಿಯವರಾಗಳೆ ಗಱ್ಱನೆ ಪರಿತಂದು ಮಾಣದಚ್ಚುಳ ಕೋಲಿಂ . . . ತೊಲಗದೆ ಬಡಿದರ್ (ಧರ್ಮಾಮೃ. ೩-೧೯೧) ; ಪರಿದೆಯ್ದಿ ಗ[ಪಾಠಾಂ. ಘ]ಱ್ಱನೆ ಕದಹನುಱಿ ತೆಱಿದು (ಬಸಪು. ೪೭-೨೪) ; ಗ[ಪಾಠಾಂ. ಘ]ಱ್ಱನೆ ಪೊರಳ್ದು ಗಾಲಿಗಳೀಳೆ ಧರಣಿಯಿಂ (ಜೈಮಿಭಾ. ೧೩-೩೫). [ಗಱ್ + -ಅನೆ$_1$]

**ಗೞಂಜವಾಗಿಲು** (ನಾ). ಒಂದು ಊರಿನ ಹೆಸರು : ದುಗ್ಗೊನೆಲ್ಮಲ್ಲಿ ಗೞಂಜವಾಗಿಲು ಸಾೞಮು ಎಟ್ಟುಕ್ಷ್ಡ ಪರವೂರು . . . ಸಹಿತಂ ಇತ್ತಂ (ಎಕ. IX, ಬೆಂಗಳೂ. ೮೩-೧೧ ; ಸು. 890) ; ಗೞಂಜವಾಗಿಲೂ (ಎಇ. I, ೩೫೦-೧೧ ; 900). [?]

**ಗೞಗೞ, ಗಳಗಳ** (ಅ). ಬೇಗ ಬೇಗನೆ, ನಿರಂತರವಾಗಿ ಎಂಬ ಅರ್ಥವನ್ನು ಸೂಚಿಸುವ ಒಂದು ಅನುಕರಣಾವ್ಯಯ : ಬಾಯೞಿದು ಕೊರಲ್ಗೆಪಾಯ್ದು ಪರಿದಾಡುವ ಬಾಲಕನಾದ ಶೋಕದಿಂ ಗೞಗೞ ಕಣ್ಣನೀರ್ ಸುರಿಯೆ (ಪಂಪಭಾ. ೩-೨೫) ; ಗೞಗೞ ಸುರಿದುವು ಕಣ್ಬನಿ (ಶಾಂತಿಪು. ೩-೧೦೬). **ಗಳಗಳ :** ಅವನು ಒಂದು ತಂಬಿಗೆ ನೀರನ್ನೂ ಗಳಗಳ ಕುಡಿದನು (ರೂಢಿ).

**ಗೞಗೞನೆ, ಗಳಗಳನೆ** (ಅ). ಬೇಗನೆ; ಕೂಡಲೆ ; ತಡೆಯಿಲ್ಲದೆ; ನಿರಂತರವಾಗಿ ; ಎಡೆಬಿಡದೆ: "ಗೞಗೞನೆನೆ ಬೇಗದಲ್ಲಿ" (ಕರ್ಣಾನಿ. ೮೨) ; ಕಣ್ಣೀರ್ ಗೞಗೞನೊರ್ಮೊದಲೆ ಸುರಿಯೆ ಪರಿತಂದಾಗಳ್ (ಪಂಪಭಾ. ೨-೨೪) ; ಸಂಜಯಂ ಗೞಗೞನೆ ಕಣ್ಣೀರಂ ನೆರಪಿ ಮನ್ಯೂದ್ಗತಕಂಠನುಮಾಗಿ (ಗದಾಯು. ೪-೧೭ ವ); ಆ ನೀರ್ವೊನಲ್ಗುೞುಗುೞನೆ ಗೞಗೞನೆ ಪರಿದತ್ತು (ಸಂಜೀವ. ೧೦). **ಗಳಗಳನೆ :** ಇದಂ . . . ಪಾಪದಿನಳಿದ ದುರಾತ್ಮಂ ನರಕತತಿಗೆ ಗಳಗಳನೀಗುಂ (ಎಕ. XII, ಶಿರಾ. ೪೦-೯೭ ; 1040) ; ಬುದ್ಧಿ ಬೞಿದಾಗಿ ನಿಲಲಾಱದೆ ಗಳಗಳನೆ ಪರಿತಂದು (ಬಸರ. ೮-೭೯) ; ಗಳಗಳನೋದಿದಂ ಕ್ಷಣದೊಳಾ ಲಿಪಿಯಂ (ವೃಷವಿ. ೫-೨೫). [ಗೞಗೞ + -ಅನೆ$_1$]

**ಗೞಗೞಸುರಿ** (ಕ್ರಿ). ತಡೆಯಿಲ್ಲದೆ ಸುರಿ; ಧಾರೆಯಾಗಿ ಬೀಳು : ಗೞಗೞಸುರಿವಶ್ರುವ ಕೊರಲೞಿವಿಗಮುಗಿಮುೞ್ಗದೞ್ವ ಮೊೞಗಿಂಗಂ (ಶಾಂತಿಪು. ೬-೮೯). [ಗೞಗೞ + ಸುರಿ$_1$]

**ಗೞಗೞಿಸು, ಗಳಗಳಿಸು** (ಕ್ರಿ). ೧. = ಗೞಗೞಸುರಿ : ಅೞಲಗ್ಗಳಿಸಲ್ಕಣ್ಣೀರ್ಗೞಗೞಿಸಿ ಕಪೋಲಯುಗಳದಿಂ . . . ಇೞಿತರ್ಪಿನಂ (ಕಾದಂಪೂ. ೮೮೫). ೨. ರಾಶಿಮಾಡು ; ಒಟ್ಟುಗೂಡಿಸು : ಪರಿದು ಬಿರ್ದ ಶುಕಸಂತತಿಯಂ ಗೞಗೞಿಸಿ ಕಟ್ಟಿ ನಡುಬೆನ್ನಿೞಿವಿನೆಗಂ ಪೊತ್ತು ಪೋದನಾ ಮುದುವೇಡಂ (ಕಾದಂಪೂ. ೧೮೮). ೩. ಮರುಗು; ವ್ಯಥೆಪಡು : ಅೞಿಪಿ ಕಿಱಿದಕ್ಕೆ ಕೆಮ್ಮನೆ ಗೞಗೞಿಸುತ್ತೇಳಿಧರ್ಕಳೊಳ್ ಬಿಡದೆ ತಗುಳ್ದೞಿಪೞಿಯಾಡುವನೆ[ಂತುಂ] ತುೞಿಯ[ಲ]ಕ್ಕುಂ ತುೞಿಲ ಸಂದನಕ್ಕುಮೆ ಧರೆಯೊಳ್ (ಬಂಹರಿ. ೧೧-೧೦೫). **ಗಳಗಳಿಸು :** ೩. ತಿಳಿಯದಹೊ ವೈಚಿತ್ರ್ಯ ಕಟಕವಾರ್ತೆಯ ಸ್ವಾಂತ ಗಳಗಳಿಸುತಿದೆಯೇನೊ (ಜಿನಮು. ೨೭-೩). [ಗೞಗೞ + -ಇಸು$_3$]

**ಗೞಪ, ಗಳಪ, ಗಳಹ, ಗೞಹ** (ನಾ). ೧. ಹೆಚ್ಚಾಗಿ ಮಾತನಾಡುವವನು ; ಬಾಯಿಗೆ ಬಂದಂತೆ ಹರಟುವವನು ; ವಾಚಾಳಿ : "ವಾಚಾಳಂ ಜಲ್ಪಾಕಂ ವಾಚಾಟಂ ವಾವದೂಕನಕ್ಕುಂ ಗೞಪಂ" (ವಸ್ತುಕೋ. ೧೦೦-೧೩); "ಗೞಪಂ = ಸೊರಹುವಂ" (ಶಮದ. ಪರಿ. ೧); ಉದಾರನಪ್ಪನಂ ಗೞಪನೆಂದಿಳಿಪಳ್ ಪುರುಡಿಂ (ಕಾದಂಪೂ. ೫೪೯) ; ಮಾರಿಯ ಮೂರಿಯಂತೆ ಬರ್ಪ ಸೊರ್ಕಿದಾನೆಯಂ ಕಂಡು ವೀರರೊಳ ಸಾರೆ ಗೞಪರೊಳಸುರ್ಕೆ (ಧರ್ಮಾಮೃ. ೧೩-೫೩) ; ಗೞಪರ್ ಪವಣಱಿಯದೆ ಬೆಸಗೊಳೆ (ಚಂದ್ರಪು. ೧-೫೭). **ಗಳಪ :** ೧. ಗಳಪಂ ಚಾರ್ವಾಕನಜ್ಞಂ ಗುಣರಹಿತನೆನಿಪ್ಪೆನ್ನಂ . . . ರಕ್ಷಿಪ್ಪುದೆನ್ನಂ (ರಕ್ಷಾಶ. ೪೮) ; ಗಳಪಗಳೆಂಬ ಇನಿವಾಡಿನಿಂದ . . . ಜಗತ್ಪ್ರಾಣವನ್ನು ಪಾವನಮಾಡಿ (ಬೆಟ್ಟಅ. ೮೫-೭). ೨. ಸುಳ್ಳು ಹೇಳುವವನು : (ಕಿ). **ಗಳಹ :** ೧. "ಮಾತಾಳಿಯೆನಲ್ಗಳಹಂ [ಪಾಠಾಂ. ಪಂ]" (ಭಾರನಿ. ೭) ; ಈ ಗಳಹನನು ಬಿಡು ಭೀಮ (ಕುಮಾವ್ಯಾದ್ರೋ. ೧೯-೨೭). **ಗೞಹ :** ೧. "ದುರ್ಮುಖಃ, ಮುಖರಃ—ಈ ೨ ಗೞಹಂ" (ಹಲಾಯು. ೬೨-೨೨೨); ಸಿಡಿದ ಸಿಡಿಯೊಂದು ಗೞಹನ ನಡೆನೊಸಲಿಂ ಪುಟ್ಟಿ ಪಾಯ್ವ ನೆತ್ತರ ಪೊನಲಿಂ (ಪುಣ್ಯಾಸ್ರ. ೧೧-೨೦). [ಗೞಪು + -ಅ$_6$]

**ಗೞಪು, ಗಡಹು$_1$, ಗಳಪು, ಗಳಹು, ಗಳುಹು, ಗೞಹು** (ಕ್ರಿ). ೧. ಬಾಯಿಗೆ ಬಂದಂತೆ ಆಡು ; ಹರಟು; ಜಲ್ಪಿಸು : "ಗೞಪು – ಬಹುಭಾಷಣೇ" (ಶಮಧಾ) ; ಪಿರಿದುಂ ಗೞಪುತ್ತುಮಿರ್ಪಳಂ ಸಾರಿಕೆಯೆಂಬರಲ್ಲದಭಿಸಾರಿಕೆಯೆಂಬರೆ ಬುದ್ಧಿಯುಳ್ಳವರ್ (ಪಂಪಭಾ. ೪-೮೩); ಅಱಿಯದೆ ಗೞಪುವರ ನುಡಿಗಳಂ ಕೈಕೊಳ್ವ (ಧರ್ಮಾಮೃ. ೫-೧೮೬). ೨. ಮತ್ತೆ ಮತ್ತೆ ಧ್ವನಿಮಾಡು ; ಕೂಗು : ಗೞಪುವ ಗಿಳಿ ಬಗ್ಗಿಪ ಪಿಕಂ (ನೇಮಿಪು. ೭-೩೨) ; ಗೞಪುವರಗಿಳಿಯ ಬಳಗಕ್ಕೆ (ಕಬ್ಬಿಕಾ. ೧೮) ; ಗೞಪುವ ಕೋೞಿ ಶಂಖಮರುಣಚ್ಛವಿ . . . ಸಲೆ ಸೂರ್ಯನ ವರ್ಣನಕ್ರಮಂ (ಸೂಕ್ತಿಸು. ೯-೨). **ಗಡಹು$_1$ :** ೧. ಗಡಹುತಿಹೆ ರಾಘವನು ಹಲಬರ ಕೆಡಹಿದನುಯೆಂದೆಲವೊ (ಕೌಶಿರಾ. ೧೪-೨೫). **ಗಳಪು :** ೧. ಪಾಪಾತ್ಮನುದ್ರೇಕದಿಂದಿಂತು ಗಳಪಿಯಾಕ್ಷೇಪಿಸುತ್ತ (ಪದ್ಮರಾ. ೯-೯) ; ಸತಿಯರ ಧರ್ಮದ ಸಾರವನಱಿಯದೆ ಖತಿಗೊಂಡು ಮುನಿ ಗಳಪಿದನು (ಹದಿಬ. ೨-೩೯). **ಗಳಹು :** ೧. ಬೇಡವೋ ಪರವಾದೀ ಗಳಹದಿರು (ಬಸವ. ೫೭೯) ; ಗಳಹು ನೀ ಬಳಿಕೆನುತ ಲಕ್ಷ್ಮಣ ಹಿಳುಕುಮೊನೆಗಳ ತೆತ್ತಿಸಿದವೋಲೆಚ್ಚ ರಾವಣನ (ಕೌಶಿರಾ. ೨೨-೨೮). ೩. ಸುಳ್ಳಾಡು ; ಅಸತ್ಯವನ್ನು ನುಡಿ : ಸತ್ಯವನು ಅಱಿದು ಗಳಹಿದರೆ ಸತ್ತವರಿಗತ್ತ ಹಾಗಕ್ಕು (ಸರ್ವಜ್ಞ. ೩೮೭). **ಗಳುಹು :** ೨. ಕನವರಿಕೆಯ ಆಶೀರ್ವಾದ ಮಂತ್ರವನ್ನು ಗಳುಹಿ (ಜಯಂತ. ೧೮೦). **ಗೞಹು :** ೩. ಈ ತೆಱದಿಂದಂ ಗೞಹುವ ಪಾತಕಿ ಸೀಂ . . . ಅದೇತರ್ಕೆ ಮನುಷ್ಯ ಜಾತಿಯೊಳ್ ಜನಿಯಿಸಿದ್ದೈ (ಕಾದಂಉ. ೫೭೫). [?]

**ಗೞಹ** 'ಗೞಪ' ನೋ.

**ಗೞಹು** 'ಗೞಪು' ನೋ.

**ಗೞಿಗೆ, ಗಣಿಗೆ$_2$, ಗಳಿಗೆ$_1$, ಘಳಿಗೆ$_1$, ಘೞಿಗೆ** (ನಾ). ೧. ಒಂದು ದಿವಸದ ಅರವತ್ತನೆಯ ಒಂದು ಭಾಗ; ಇಪ್ಪತ್ತನಾಲ್ಕು ನಿಮಿಷಗಳು; ಮುಹೂರ್ತ : "ಘಟಿಕೆಯೆನೆ ಗೞಿಗೆಯಕ್ಕುಂ" (ಮಂಗರಾ. ೨೦-೮); ಎರಡು ಗೞಿಗೆಯುಂಟೆನೆ (ಶಾಂತಿಪು. ೮-೧೧೦ ವ) ; ಮೆಯ್ವಳಗಿಂ ಕಹ್ಗೊಳಿಪೊರ್ವಳನಾನಿಂದಿನ ಬೆಳಗಪ್ಪೊಂದೆರಡು ಗೞಿಗೆಯಾಗಲ್ ಕಂಡೆಂ (ಕಬ್ಬಿಕಾ. ೭೩) ; ಏ ಗೞಿಗೆ ಪುಟ್ಟಿದಳೊ ಅಗ್ನಿಯೊಳ್ ನಾರಿ (ಅಶ್ವಶಾ. ೪೪-೮೭೬).

೨. ಗಡಿಗೆ; ಘಟವಾದ್ಯ: ಕಱಿದರ್ ಕೆರ್ಱಾದಿಗಳಿನ್ನುಱಿದುದ ನಾನಾಸೆಗೆಯ್ಕೆನೆನಗಂ ನೆರಮೇ ಗಱಿಗೆಗೆ ಕರಡೆಯ ಕಾಳದ ಪಱಿವದ ಮದ್ದಳೆಯ ಮಿಕ್ಕ ವಾದ್ಯಮುಮೊಳವೇ (ಗದಾಯು. ೩-೪೯). **ಗಣಿಗೆ$_2$** : ೩. ಘಟಿಕಾಸ್ಥಾನ; ಪಾಠಶಾಲೆ: ಶ್ರೀಮಧುಸೂದನ ದೇವರ್ಗ್ಗಂ ಅಲ್ಲಿಯ ಮಹಾಜನಂ ನಾಲ್ನೂರ್ವ್ವರ್ಗ್ಗಂ ತಾಳಕಂ ಗಣಿಗೆಯಂ ಪ್ರತಿಷ್ಠೆಂಮಾಡಿ (ಕಇಅ. ೮-೩-೨೮೫ ; 1062). **ಗಳಿಗೆ$_1$** : ೧. ಪಜ್ಜಳಿಸುವ ಗಳಿಗೆಯ ಪೊಸಪೊಂಬಟ್ಟಲ್ ಕರಮೆ ವಿರಾಜಿಸಿತು (ಜಯಕಾ. ೮-೧೮) ; ತಪ್ಪದೆ ಗಳಿಗೆಗೊಮ್ಮೊಮ್ಮೆ ಭೇರಿಯ ಹೊಯ್ಯುತಿಪ್ಪುದು (ಮೋಹತ. ೨೦-೩೦) ; ಗಳಿಗೆಗಳಿಗೆಗೆ ಪೆರ್ಚಿ ಬಳೆವ ತಮಮಂ ಕಂಡು (ಚಿಬವು. ೯-೧೦). **ಘಳಿಗೆ$_1$** : ೩. ಘಳಿಗೆಯ ಮಾಣಿಗಳ್ನಾಲ್ವರ್ಗ್ಗವೆಂಟು ಮತ್ತರ ಸವಕಟ್ಟನೊಳ್ಮತ್ತಮೂರ್ವತ್ತೆರಡು (ಸೌಇಇ. IX–i, ೧೦೧-೫೩ ; 1045) ; ಬಳಸಿದ ದೇವಾಲಯಮುಂ ಘಳಿಗೆಯುಮಾಹಾರಧಾನಿಯುಂ ಪ್ರಪೆಯುಂ (ಎಇ XIII, ೩೩೧-೪೦; ?). **ಘಱಿಗೆ** : ೧. "ನಾಡಿ ನಾಱಿಯೆನೆ ಘಱಿಗೆಯಕ್ಕುಂ" (ಕಬ್ಬಿಕೈ. ೫೬) ; "ನಾಱಿ ನಾಡಿಗಾಯ್ತುವು ಘಱಿಗೆ" (ಸಂಜೀವ.೨೨); ಅದೊಂದೆರಬ್ಬಱಿಗೆ ಪೋಪಿನವುಲ್ಲಿಯೆ ನಿಂದು (ಸುಕುಮಾ. ೪-೬೩). ೪. ಕುಂಭ: ಸರ್ವ್ವನಮಸ್ಯವಗ್ರಹಾರಂ ಮಾಡಿ ಶಾಸನಂ ಬೆಳ್ಗೊಡೆ ಘಱಿಗೆವೆರಸು ಪಡೆದು ಕುಡಿಸೆ (ಎಇ. XX, ೬-೧೩; 1012).

**ಗಱಿಗೆಯಭಟ್ಟ** = ಮುಹೂರ್ತದ ಸಮಯವನ್ನು ತಿಳಿಸಲು ನಿಯುಕ್ತನಾಗಿರುವ ಭಟ್ಟ, —ಬ್ರಾಹ್ಮಣ : ವನವಿಹಾರ ಪರಿಶ್ರಮಂ ಪೋಗೆ ಮೂಱುಜಾವಂ ಪೋದುದೆಂದು ಗಱಿಗೆಯಭಟ್ಟಂ ಬಿನ್ನಪಂಗೆಯ್ವುದುಂ (ಶಾಂತಿಪು. ೮-೨೪ವ). **ಘಱಿಗೆಯುಮನೆ** = ವಾದ್ಯಗಳಿರುವ ಮನೆ; ವಾದ್ಯಶಾಲೆ: ಘಱಿಗೆಯುಮನೆಯ ನೆಯ್ವರೆ ತೊಟ್ಟನೆ ಕಟ್ಟಿದಿರೊಳ್ (ಶಾಂತಿಪು. ೩-೧೬ ವ). **ಘಳಿಗೆಯಮಾಣಿ** = ಘಟಿಕಾಸ್ಥಾನದಲ್ಲಿದ್ದುಕೊಂಡು ಅಭ್ಯಾಸಮಾಡುವ ಹುಡುಗ, —ವಿದ್ಯಾರ್ಥಿ: ಘಳಿಗೆಯಮಾಣಿಗಳ್ನಾಲ್ವರ್ಗ್ಗವೆಂಟು ಮತ್ತರ ಸವಕಟ್ಟನೊಳ್ಮತ್ತಮೂರ್ವತ್ತೆರಡು (ಸೌಇಇ. IX–i, ೧೦೧-೫೩ ; 1045).

[< ಸಂ. ಘಟಿಕಾ]

**ಗಱಿಗೆವಟ್ಟಲ್**, ಗಳಿಗೆಬಟ್ಟಲು, ಗಳಿಗೆವಟ್ಟಲು, ಘಳಿಗೆಬಟ್ಟಲು, ಘಳಿಗೆವಟ್ಟಲು (ನಾ). ಸಣ್ಣ ತೂತುಮಾಡಿ ನೀರಿನಲ್ಲಿ ಇಟ್ಟು, ಅದರಲ್ಲಿ ನೀರುತುಂಬಿಕೊಳ್ಳುವಷ್ಟು ಕಾಲಕ್ಕೆ ಒಂದು ಗಳಿಗೆಯೆಂದು ನಿಶ್ಚಯಿಸಲು ಉಪಯೋಗಿಸುತ್ತಿದ್ದ ಬಟ್ಟಲು, —ಪಾತ್ರೆ: ಅಂಬುಜಪೀಠನೆಂದೆನಿಪ ಜೋಯಿಸನಾ ರಜನೀಪ್ರಮಾಣಮಂ ತಾಂ ಬಗೆದೀಕ್ಷಿಸಲ್ ಗಱಿಗೆವಟ್ಟಲನಿಕ್ಕಿದ ಬಟ್ಟಲೈದೆ ಕಾಲಂಬಡೆದಂದು ನೀರೊಳಿರದಾಱ್ವವೊಲಾಱ್ದುದು ಪಶ್ಚಿಮಾಬ್ಧಿಯೊಳ್ . . . ಚಂದ್ರಮಂಡಲಂ (ಉದ್ಭಟ. ೧೦-೧೦೪); ಶಂಕುಶಲಾಕೆಯುಂ ಗಱಿಗೆವಟ್ಟಲುಮೊಪ್ಪಿರೆ ವೇದನಾದದೊಳ್ ಸಂಕರಮಾಗಿ ಪಾಠಕಪಟುಸ್ವನಮಂಗಳಗೀತತೂರ್ಯಘೋಷಂ ಕಡಲೂರ್ಮಿಯಂತುಲಿಯೆ . . . ಸಾರ್ಕೆ ಲಗ್ನಂ ಕರೆಯಿಂ ವಧೂವರರನೆಂದುಸಿದರ್ ಹಿತದೊಳ್ ಪುರೋಹಿತರ್ (ಸೂಕ್ತಿಸು. ೬-೫೬) ; ಜೋಯಿಸರ್ ಗಱಿಗೆವಟ್ಟಲನೆಟ್ಟಱದೊಳ್ ಕಾದಿರ್ಪುದೆಂದು ಪೇಱಿಂದುಂ . . . ನುಡಿಯುತ್ತಮತ್ತಲುಮಿತ್ತಲುಂ ಪರಿಯುತ್ತಿರ್ದಪರ್ (ಚಿಕವಂ. ೧೪೮-೬). **ಗಳಿಗೆಬಟ್ಟಲು** : ಗಳಿಗೆಬಟ್ಟಲ ನೀರು ತಿಳಿದು ತಿಳಿಯದೆ, ಎಲವೊ, ಇಳಿದು ಪೋಪುದು ಹೊತ್ತು ಗಳಿಗಳಿಗೆಯಾಗಿ (ಕಎಪು. ೫೧-೧). **ಗಳಿಗೆವಟ್ಟಲು** : ಗಳಿಗೆವಟ್ಟಲಪಾರ್ವರ ಮೇಲೆ ಕೆಡೆದನು ಮೂರ್ಛೆ ವೋದವನಂತೆ (ತ್ರಿಭುತಿ. ೯-೨೫) ; ಗಳಿಗೆವಟ್ಟಲನಾರ್ಪವ ಜೋಯಿಸರಿಂ (ರಾಜಶೇ. ೮-೫ವ) ; ಪುರೋಹಿತನು ಗಳಿಗೆವಟ್ಟಲನ್ನು ಪರೀಕ್ಷಿಸುತ್ತಲಿರುವನು (ಸುಗುಗಂ. ೧೧೨-೩) ; ಗಳಿಗೆವಟ್ಟಲನ್ನು ನೋಡಿ . . . ಗಂಟೆಯನ್ನು ಬಾರಿಸಿದಾಗ (ಸವತಿ. ೫). **ಘಳಿಗೆಬಟ್ಟಲು** : ಜಲವನಪಹರಿಸುವ ಘ[ಪಾಠಾಂ. ಗ]ಳಿಗೆಬಟ್ಟಲನುಳಿದು ಜೈಗಂಟೆ ಕೈಪಿಡಿದೆಳೆದು ಹೊಡೆವಂದದಲಿ ಸಂತತ ಕರ್ತೃತಾನಾಗಿ (ಹಸಾರ. ೩-೨೫). **ಘಳಿಗೆವಟ್ಟಲು** : ೧. ನಿಲಲಾಱದೆ ಹಳಿಲನೆ ಘಳಿಗೆವಟ್ಟಲ ಮೇಲೆ ಬೀಳೆ ಕಳಸಿಗೆಯೊಡೆದು ಘಳಿಗೆವಟ್ಟಲು ಮುಱಿದು . . . ಜೋಯಿಸರೆಲ್ಲಂ ಕೆದಱಿಪೋಗೆ (ನಂಬಿರ. ೬-೪೬); ಘಳಿಗೆವಟ್ಟಲ ಸೌಮುಹೂರ್ತಿಕರಾಯತ ಧ್ವನಿ (ಕುವ್ಯಾಅ. ೭-೨೧).

**ಗಳಿಗೆಬಟ್ಟಲು ತುಂಬು** = ೧. ಕಾಲ ಸನ್ನಿಹಿತವಾಗು ; ವೇಳೆ ಒದಗಿಬರು. ೨. (ಉಕ) ಸಾವು ಹತ್ತಿರಬರು,—ಸನ್ನಿಹಿತವಾಗು : ದಾದಾನ ಗಳಿಗೆಬಟ್ಟಲ ತುಂಬೇತಂತ ತಿಳೀರೆಲೆ (ಗ್ರಾಮಾಯ. ೧೪೨).

[ಗಱಿಗೆ + ಬಟ್ಟಲ್]

**ಗಱಿಯಿಸು** 'ಘಟಿಯಿಸು' ನೋ.

**ಗಱಿಲ್** (ನಾ). ಒಂದು ಅನುಕರಣ ಶಬ್ದ: ಬಹುವರ್ಣ್ಣವಾಜಿರಾಜಿಗಳುಮನೆಯ್ದೆ ನೋಡಿ ಮನಂ ಮಿಕ್ಕಿ ಘಱಿಲ್ಲನೆ ಸತ್ತು (ಎಕ. VII, ಶಿಕಾರಿ. ೧೫೧-೩೪ ; 1047).

**ಗಱಿಸಾಳಿ**, ಗಳಿಸಾಳಿ, ಘಳಿಸಾಳಿ (ನಾ). ೧. ಗಳಿಸುವ ವ್ಯಕ್ತಿ ; ಸಂಪಾದಿಸುವ ವ್ಯಕ್ತಿ. 'ಗಱಿಸಾಳಿವೆಣ್' ಪರಾ. ೨. ಸೂಳೆ ; ವೇಶ್ಯೆ. 'ಗಱಿಸಾಳಿವೆಣ್' ಪರಾ. **ಗಳಿಸಾಳಿ** : ೧. ಈಗ ನೀನು ಗಳಿಸಾಳಿಯಾದಾಗ ಮಾತ್ರ . . . ಅವರಿಗೆ ಕೊಡುವ ಪರಿಸ್ಥಿತಿ ಇರಲಿಲ್ಲ (ಕವಲು. ೯೪) ; ನೀನು ಗಳಿಸಾಳಿಯಾದ ಹೆಂಡತಿಯಾದರೂ ಅವನಿಗೆ ತೃಪ್ತಿಯೇಕಿಲ್ಲ (ಮುತ್ತೈದೆ. ೧೯೧). **ಘಳಿಸಾಳಿ** : ೨. ಆಡರ್ದಂದಳಮಂ ದೇಸೆ ಮಿಗಲ್ ತನ್ನೊಡವಪಾರ್ಳಿಯರುಂ ಘಳಿಸಾಳಿಯರುಂ ಸಹಿತಂ ತಳರ್ದರ್ಳ್ (ಉದ್ಭದೇ. ೫-೧೫). [ಗಱಿಸು (< ಘಟಿಯಿಸು) + -ಆಳಿ$_3$]

**ಗಱಿಸಾಳಿವೆಣ್**, ಗಳಿಸಾಳಿವೆಣ್, ಘಳಿಸಾಳಿವೆಣ್ (ನಾ). ೧. ಗಳಿಸುವವಳು; ಹಣವನ್ನು ಸಂಪಾದಿಸುವ ಹೆಣ್ಣು : "ಗಱಿಸಾಳಿವೆಣ್ಣೆನಲು ಪಡೆವುಗಾರ್ತಿಯೆನಿಕ್ಕು" (ಶಬ್ದಮಂ. ೭೫). ೨. ಸೂಳೆ ; ವೇಶ್ಯೆ : ನಾಣಱಿದು ಗಱಿಸಾಳಿವೆಣ್ಗಳೊಂದು ಮಾಱ್ಕೆಯಿನಿಂತು ನುಡಿವರೆ (ರಾಮಾಶ್ವ. ೬೧-೨೭). **ಗಳಿಸಾಳಿವೆಣ್** : ೨. ವಿವಿಧೋಪಾಯದಿಂ ವಿತ್ತಾಪಹಾರವಂ ಮಾಡುವ ಗಳಿಸಾಳಿ[ಪಾಠಾಂ. ಸಾಳೆಳ]ವೆಣ್ಗಳೋಳಿ ಬರುತಿರ್ದುದು (ವಿರೂಪಾ. ೭೦) ; ಗಳಿಸಾಳಿವೆಣ್ಗಳೆನ್ನಂ ಪಳಿವಂತಿರೆ ಮಾಣದೆಮ್ಮ ಗೃಹದೇವತೆಯುಮರ್ಳಿವಂತೆ ಮಾಡಿದೈ (ವೃಷವಿ. ೧೭-೧೭). **ಘಳಿಸಾಳಿವೆಣ್** : ೨. ಎಲ್ಲವಂ ಕವರ್ದುಕೊಂಡು ಬಱಿಗನ ಮಾಡಿ ಜಾಣ್ಮೆಯಿಂ ತೊಲಗಿಸುವ ಘಳಿಸಾಳಿವೆಣ್ಗಳ್ (ಚೇರಮ. ೮-೩೪). [ಗಱಿಸಾಳಿ + ಪೆಣ್]

**ಗಱಿಸು** 'ಘಟಿಯಿಸು' ನೋ.

**ಗಱು** 'ಗಱಿ³' ನೋ.

**ಗಱಿ³**, ಕಣೆ$_2$, ಗಡಿ$_2$, ಗಡೆ$_1$, ಗಣೆ$_1$, ಗಣೆ, ಗಣೆಯ, ಗಳ$_1$, ಗಳು, ಗಳೆ, ಗಱು, ಘಳಿ, ಘಳೆ, ಘಳೆಯ (ನಾ). ೧. ಬಿದಿರಿನ ಕೋಲು ; ಬೊಂಬು ; ದಂಡ : ಇವಂಬುನಿಧಿ ಕೂಪದಿಂದಮರನಂದನಕ್ಕೇತಮೆತ್ತುವಲ್ಲಿ ಗಱಿಯಾಗಲುಂ . . . ಬೆಳೆದುನಿಂದ ಪೆರ್ವಿದಿರಸುರ್ವಗುರ್ವೆಲ್ಲಿಯುಂ (ಕಾವ್ಯಾವ. ೧೯೩) ; ಗಱಿಯಿಂ ಗೋಳುವರಿಂದ್ರನಂ (ಸೂಕ್ತಿಸು. ೪-೧೩೧). 'ಗಱಿಗೂಸಾಡು' ಪರಾ. ೨. ಕಡೆಗೋಲು ; ಮಂತು : "ಗಱಿ = ಕಡೆಗೋಲ್ ; ಕೊಲ್ಲಟಿಗರಾಡುವ ಗಣೆ" (ಶಮುದ. ಪರಿ. ೧). ೩. ಬಾಣ ; ಸರಳು : "ಗಱಿಯೆನೆ ಸರಳಭೇದಂ" (ಸಂಜೀವ. ೩) ;

೪. ಭೂಮಿಯನ್ನು ಅಳೆಯುವ ಒಂದು ಅಳತೆ, —ಅಳತೆ ಗೋಲು : ಕಿಸುಕಾಡು ಗಟಿಯಲ್ಮತ್ತಮ್ಮೂಱು (ಇಎ. ೧೯೫೦, ಹಾನುಗಲ್. ೧೨೮-೩೨ ; 950) ; ಅವನಿಯಳತೆಗಂ ಗಟಿಯಳ್ಕ್ಕಂ . . . ಗಟಿಯುಡಿಯಂ ಕೈತಿಗೊಂಡಾ ಗಟಿಯಳತೆಯ ಕೈಯ ಕಂಭಮಂ ಗುಣಿಯಿಸಿ (ವ್ಯವಹಾ. ಕ್ಷೇತ್ರ ೧). **೫. (?)** : ವಾಯುವ್ಯದೆ ಗಟಿ ಚಿಂಚವೃಕ್ಷಮೆ (ಎಕ. I, ೧-೨೭ ; 466 ಕೃಶಾ). **ಕಣ್ಣಿ : ೧.** ಮಾತಿನಲ್ಲಿ ಬಲ್ಲವರಾದಡೆ ನೀತಿಯಲ್ಲಿ ಮಱೆದಡೆ ಕೊಡನೊಡೆದ ಏತದ ಕಣೆಯಂತೆ (ಮನುಗುಂ. ೪೪). **೬.** (ಗಾಣದಲ್ಲಿನ) ಅರೆಯುವ ಸಾಧನ, —ತಿರುಗುವ ಕೊರಡು : ಕಲ್ಲಗಾಣದ ಕಣೆಯ ಬಾಯ್ಗೆ ಬಿಟ್ಟ ಕಳಿಕೆಯ ಬೆಂಡಿನಂತೆ ನುಗ್ಗುನುಱಿಯಾಗಿರ್ದುವು (ಅನಂಪು. ೧೪-೭ವ) ; ಬಾಲೆಯ ಕೊರಲು ಹೊನ್ನೊರಲು ಸುಸ್ವರ ಕಣೆ . . . ನಿಟ್ಟೆಸಳ್ಗಣ್ಣಾಲೆಯ ಮನೆಗಳೊಪ್ಪಿರುವುದು (ಮೋಹತ. ೨-೫೦) ; ಕಬ್ಬನಿತ್ತವನುಪಕಾರಿಯೋ ಮೇಣದ ಕಣೆಯಿಂದರೆದು ಹಾಲತೆಗೆದಿತ್ತವನುಪಕಾರಿಯೋ (ಭಕ್ತಿಸ. IV, ೪೦-೧). **ಗಡ್ಡಿ : ೭.** ದೋಣಿ, ಹಡಗು ಮೊದಲಾದುವನ್ನು ನಡೆಸುವಾಗ ನೀರನ್ನು ತಳ್ಳಲು ಉಪಯೋಗಿಸುವ ಕೋಲು ; ಹುಟ್ಟುಗೋಲು : "ಅರಿತ್ರಂ, ಕೇನಿಪಾತನಃ —೨ ಹಡಗಿನ ಗಡಿಯ ಹೆಸರುಗಳು (ಸಿದ್ಧಾಂತಿ. ೭೧). **ಗಡೆ₁ : ೭.** ನೌಕಾದಂಡಃ—ಹಡಗನ್ನು ನಡೆಸುವ ಗಡೆ (ಅಮರ. ಟೀಕೆ). **ಗಣೆ₁ : ೬.** ಯೇತದ ಗಣೆ ಚಿಗಿತು ಕಾತು ಫಲವಾದಂದು . . . ಹೆಣ್ಣಿನ ಮಾತ ನಂಬುವದು (ಸರ್ವಜ್ಞ. ೧೬೭೦). **ಗಣೆ : ೧.** ಡೊಂಬರ ಸಾವು ಗಣೆಯ ಮೇಲೆ ಬಿಲ್ಲವರ ಸಾವು ಮರದ ಮೇಲೆ (ಗಾದೆ). **೩.** ಕೂರಂಬ ಮಸೆ ಕೊಂಕನನುಮಾಡಿ ಗಣೆಗೆ ಗಱಿಗಳನು ಹಸನಾಗಿ ಕಟ್ಟು (ಸಮ್ಯಕೌ. ೧೦-೩೨) ; ಪದವಿಲ್ ಕಟ್ಟಿದ ಗಣೆ ಪೊಸಪೊದೆ ಪೆಗಲೊಳ್ ಪುದಿದ ಕೊಂಬು . . . ಸಹಿತಂ ದೆಸೆದೆಸೆ ಗೊದವಿಸಿ ನಡೆದತ್ತು ಬೇಂಟೆಗಾಱರ ತಂಡಂ (ಕಾವ್ಯಸಾ. ೧೦೭೬). **೮.** (ಜೋಳ ಮೊದಲಾದುವುಗಳ) ದಂಟು; ದೇಟು; ಕಾಂಡ : ಜವೆ ಜೋಳಂ ಕೊಱೆ ಮೊದಲಾದುವರ್ಕೆ ಗಣೆವೊಂದು ತೆನೆಗಳೆರಡಾದಂದುಂ . . . ಅಱಿಗೆ ತತ್ಪತಿಯಱೆವಂ (ಲೋಕೋಪ. ೪-೫೬) ; ಕಬ್ಬಿನ ಗಣೆ ಡೊಂಕು, ಆದರ ಹಾಲದು ಡೊಂಕೆ ರಸಿಕ ಪೇಳೊ (ಗರಿ. ೩೨-೧). **ಗಣೆಯ : ೪.** ಅಂತು ಗಣೆಯ ಮೂರಕೆ ನೂರ ಐವತ್ತು ವರಹ (ಎಕ. XIV, ಗುಂಡ್ಲುಪೇ. ೧೨೮-೭೪ ; ಸು. 1410). **ಗಳ₁ : ೧.** ಎಲುಬು ಗಳವಮಾಡಿ ನರದ ಬಳ್ಳಿಯಲ್ಲಿ ಬಿಗಿಯುತ (ಪುರಂದ. ೧-೧೭೬-೨) ; ಚಿಕ್ಕ ಗಳದ ತುಂಡು ! ಆದರೂ ಅದರಲ್ಲಿ ಎಂಥ ಅದ್ಭುತ ಸಾಮರ್ಥ್ಯ ! (ಶ್ಯಾಮತಾ. ೨೦) ; ಹಗಲೂ ರಾತ್ರಿ ಹುಕ್ಕ ಸೇದಿ ಮಾಡಿನ ಗಳಾ ಎಣಿಸುವವರಿಗೆ ರತ್ನ ಪರೀಕ್ಷೆಯಂತೆ (ವಿಧಿವೈ. ೨೮). **೯.** ನೇಗಿಲನ್ನೂ ನೊಗವನ್ನೂ ಜೋಡಿಸುವ ಈಸು : ಧರ್ಮ ಗಳವನಿಕ್ಕಿ ಉತ್ತ ಭೂಮಿಯನೊಡ್ಡಿ ನೀನೆಮ್ಮನೆಲ್ಲರ ನೋಡಿ ಸಲಹಿದ್ದೆ ರಾಮನಾಥ (ದೇವಾವ. ೩೭-೭೦). **ಗಳು : ೧.** ಗಳುವಿನ ಮೇಲಿದ್ದ ಜರಿಯ ಸೀರೆಯನ್ನೇ ತೆಗೆದು ಉಟ್ಟುಕೊಳ್ಳಲು ಹೋದಳು (ನಡೆದಾ. II, ೧೦೫೩) ; ಗಳುವನ್ನೇ ಕುದುರೆಯೆಂದು ಭಾವಿಸುವುದು ಹೋ[illegible] ನಿಜವಾದ ಕುದುರೆಯೇ ಬೇಕೆಂದು ಕೇಳುವ ಕಾಲವಿದು (ಶಿಕ್ಷದ. ೧೦೯). **೮.** ತಲೆ ಹುಳಿತ ದನವಿನಂತೆ ಗಳುವಿನಾಶೆಗಾಗಿ ಇವರಿಗೆ ಲಿಂಗದ ಅನುವಿನ ಆಶೆಯಾಕೆ (ಮೋಳಿಮಾ. ೧೦೫-೪೧೯). **ಗಳೆ₁ : ೧.** ಗಳೆಯನೇಱಿದ ವಿಧಾಂತ ಲಾಗು ಬಾರದೆ ಇಳಿದಡೆ ಅವಗದೆ ಭಂಗ (ಸುಂಕಬಂ. ೮೦) ; ಗಳೆಯಂದದೆ ಸರಕನೆ ನಿಲುಕುತ್ತಂ (ಭೃಂಗೀರ. ೧೪-೨೭) ; ಗಳೆಯಾದತ್ತುರು ಮಂದರಂ ಕನಕಶೈಲಂ ಚಾಪಮಾದತ್ತು . . . ಸತತಂ ವಿಶ್ವೇಶ್ವರಂ ಕಾಶಿಯಾ ಪೊಳಲೊಳ್ಸಂತತಮಿರ್ಪನು (ವೀರವಿ. ೨-೭) ; ಕೇತನಂಗಳ ಗಳೆತಾಗಿ ತಟ್ಟುಗಿಯೆ ತಾರೆಗಳ್ . . . ತಾಂ ಪಱಿದುಬೀಳ್ವ ನಭಸ್ಥಳಖಂಡದಂತೆವೋಲ್ (ರಾಜಶೇ. ೨-೧೦೦) ; ಬಳೆಯಿಲ್ಲದವಳ ನಳಿದೋಳು ಡೊಂಬರ ಗಳೆಯಂದವಕ್ಕು (ಸರ್ವಜ್ಞ. ೧೭೧೩). **೩.** ಕಲಿತನವ ಮಾಡಿದನೆಲ್ಲರ ಕಂಡು ಅಲ್ಲಿ ಹೋಯಿತು ಗಳೆ [ಪಾಠಾಂ. ತ್ರಾಗಳೆ] ಯೆಂದರೆ ಆಸೆಮಾಡೆನು (ಬಸವ. ೪೩೬) ; ಗರುಡಿಯ ಕಟ್ಟೆ ಅಱವತ್ತು ನಾಲ್ಕು ಕೋಲಭ್ಯಾಸವ ಮಾಡಿದೆನಯ್ಯಾ . . . ಗುರುಕಳನೇಱಿಕಠಾರಿಯ ಕೊಂಡಲ್ಲಿ ಹೋಯಿತ್ತು ಗಳೆ[ಪಾಠಾಂ. ಆಗಳೆ]ಯೆಂದರೆ ಎನ್ನ ನಿನ್ನಲ್ಲಿ ನೋಡು ಕೂಡಲಸಂಗಮದೇವಾ (ಬಸವ. ೭೦೧). **೪.** ಕಜ್ಜವಿಯ ಗಡಿಂಬದ ಗಳೆಯೊಳೆಳೆದು (ಮೈಆರಿ. ೧೯೨೯, ೬೫-೮ ; 1025) ; ಇರ್ಪ್ಪತ್ತೆಂಟು ಗೇಣ ಗಳೆಯೊಳಂ ಬಿಟ್ಟ ಮತ್ತರಾಱು (ಸೌಇಇ. XI-i, ೬೩-೧೬ ; ಸು. 1026) ; ಅಂಗುಲ ಮೂವತ್ತೆರಡುಂ ಸಂಗತ ಮಾಗೊಂದು ಹಸ್ತ ಹಸ್ತಗಳೆಂಟುಂ ಹಿಂಗದೆ ಗಳೆ ತಾನಕ್ಕುಂ ತುಂಗ ಭುಜಾ ಪೇಳೆನಲ್ಕೆ ಗಣಿತಕ್ರಮದಿಂ (ಕವಿಚ. II, ೫೪೫, ಕ್ಷೇತ್ರಗಣಿತ) ; ಕೆಲವು ಹಳ್ಳಿಗಳಲ್ಲಿ "ಗಳೆ" ಎಂಬ ಹೆಸರಿನ ಮಾಪು . . . ಗಳೆಯೆಂದರೆ ಸುಮಾರು ೩೨ ಕೂರಿಗೆ ಆಗುತ್ತದೆ (ಕಭಾಗೆ. ೩೬೬). **೧೦.** (ಉಕ) ಒಕ್ಕಲುತನದ ಅಥವಾ ಬೇಸಾಯದ ಉಪಕರಣಗಳು; ನೇಗಿಲು ಮುಂತಾದುವುಗಳು: ಈ ಸಣಬಿನಿಂದ ಹಗ್ಗ, ಕಣ್ಣಿ, ಮಿಣಿ ಮೊದಲಾದ ಯಾವತ್ತೂ ಗಳೇದ ಸಾಮಾನುಗಳು ಆಗುವವು (ಕೃಷಿಪ್ರ. ೮೮) ; ಒಬ್ಬ ಬಡಗನಿಂದ ಅವುವಾನೊಂದು ಗಳೆಯ ಹಾಯಿಸಿಕೊಂಡೊಯ್ದು ಹೋಗಿ ಭೂಮಿಯಲ್ಲಿ ಹೂಡಿ ಹೊಡೆದರೆ (ವಚಶಾ. I, ೯೬) ; ನೇಗಲು ಕುಂಟೆ ಕೂರಿಗೆ ಮುಂತಾದ ಗಳೇದ ಸಾಮಾನಕ್ಕೂ ಹಣಬೇಕು (ಮುಂಬಯಿ. ೫-೨೫೦) ; ನಾಳೆ ನಮ್ಮ ಗಳೇ ಅಲ್ಲಿಗೆ ಕಳಿಸಿ ಕಬಜಾ ತಗೊಂಡು ನಿನ್ನ ಹೆಸರಲೆ ಮಾಡಿಬಿಡತೇನಿ (ಬೆಳಭಾ. ೧೩೧). 'ಗಳೆಹೂಡು', 'ಗಳೆಹೊಡೆ' ಪರಾ. **ಗಱು : ೧.** ಪಾಟ್ಯನೆಯ ಗಱುವಿನಂತೆ ಬರಿಯ ಎಲ್ವುಗಳ್ ಪೊಱಮಡಲುಂ (ಧರ್ಮಾಮೃ. ೬-೩೮) ; ತಾವರೆಯ ತೋರಗಾವುಗಳ ಗಱುಗಳೊಳಂ (ಲೀಲಾವ. ೧೧-೫೧ವ). **ಘುಳಿ : ೪.** ನಾಲ್ವತ್ತಾಱು ಗೇಣುಂ ಬಾಚವಿಡಿಯ ಘುಳಿಯಲಿಬ್ಬಡಗಲಾಗಿ ಮೂಡಗೋಡಿಯ ಮೂನೂಱು ಕಂಭ ಬೆದ್ದಲುಂ (ಎಕ. V, ಹಾಸನ. ೬೬-೪೩ ; 1170 ?). **ಘುಳೆ : ೪.** ಮೂವತ್ತು ಗೇಣಿನ ದಾನವಿನೋದನ ಘುಳೆಯೊಳ್ ಬಿಟ್ಟ ಮತ್ತರಯ್ವತ್ತು ಎಇ. XII, ೨೮೩-೨೩೯ ; 1077) ; ಹತ್ತು ಮಾರು ಘುಳೆಯಲಳೆದ ಭೂಮಿ (ಎಕ. VI, ತರೀಕೆ. ೬೧-೪೯ ; 1154) ; ಪುರಿಗೆಱೆಯ ಘುಳೆಯಲು ಮತ್ತರ್ನಾಲ್ವತ್ತು (ಸೌಇಇ. XX, ೭೪-೩೩ ; 1194). **ಘುಳೆಯ : ೪.** ಕರಡಿಕಲ್ಲಲು ಕೊಟ್ಟ ಸ್ಥಳವೃತ್ತಿ ಘುಳೆಯ ಮತ್ತರು ೫೦ (ನಾಂದೇಡ್. ೧೦-೯ ; 1079).

**ಗಣೆಮಿಣೆಯಾಟ = ದೊಂಬರಾಟ :** ಹಡಗು ಬುಗುರಿಗೆ ದಾರ ಬಿಗಿಯುವಾಟ. ಆಗ ಬಿರುಗಾಳಿ ಗಣೆಮಿಣೆಯಾಟ (ನಡೆಬಂ. ೩೯). **ಗಳಎಣಿಸು = (ಆಲಂ) ದ್ರೋಹಮಾಡು :** ನಿನ್ನ ಉಪ್ಪು ಅನ್ನ ಐದಾರು ವರುಷ ಕಾಲ ಉಂಡು ಗಳಎಣಿಸಿಹೋದನಲ್ಲ (ಹಳ್ಳಿಹಾ. ೬೨) ; ಉಂಡಮನೆ ಗಳ ಎಣಿಸಿದ (ಗಾದೆ).

[ದೇ. ‖ ತಮಿ. ಕಟ್ಟೈ, ಕಱಿ ; ಮಲ. ಕಟ, ಕಱಿ ; ತುಳು. ಕರಿ, ಕರೆ, ಗರೆ ; ಕೊಡ. ಗಳೆ ; ತೆಲು. ಗಡ]

**ಗಟಿಕಾಱ,** ಗಡೆಕಾರ, ಗಣೆಗಾರ, ಗಳೆಕಾರ (ನಾ). ೧. ಬಿದಿರು ಗಳುವಿನಲ್ಲಿ ವ್ಯವಹರಿಸುವವನು ; ಗಳುವನ್ನು ಉಪಯೋಗಿಸುವವನು ; ಡೊಂಬರವನು : ಕಾಱಕ್ಕೆ – ನಡೆವಳಿಕಾಱಂ, ನುಡಿವಳಿಕಾಱಂ, ಇಚ್ಚೆಕಾಱಂ, ಕೈದುಕಾಱಂ, ಬಂದಿಕಾಱಂ, ಗಟಿಕಾಱಂ, ಬೇಹುಕಾಱಂ (ಶಮದ. ೧೯೯ ಪ್ರಯೋ).

೨. (ಅರಮನೆಗಳಲ್ಲಿ) ಕೋಲು ಹಿಡಿದು ಸೇವೆಸಲ್ಲಿಸುವ ಸೇವಕ; ಕಟ್ಟಿಗೆಕಾರ; ವೇತ್ರಧಾರಿ: ಗಜಱುವ ಗೞಿಕಾಱರ ಚಪ್ಪರಿಸುವೊಪ್ಪ ಕಾಱರ ಕರೆವ ಪರಿಕಾಱರ (ಅನಂತಪು. ೨-೨೯ ವ). **ಗಡೆಕಾರ**: ೩. "ಅಂಬಿಗ" (ಜಾನಕೋ. ೪೫). **ಗಣೆಗಾರ**: (೬). **ಗಳೆಕಾರ**: ೧. "ಗಳೆ ಕೆಲಸಮಾಡುವವ" (ಕಸ್ತೂಕೋ. ೨೯೨). ೩. (೬).

[ಗೞಿ + -ಕಾಱ]

**ಗೞಿಗೂಸಾಡು** (ಕ್ರಿ). ೧. (ಡೊಂಬರು) ಗಣೆಯ ಮೇಲೆ ಮಗುವನ್ನು ಆಡಿಸು. ೨. (ಆಲಂ) ಮನಬಂದಂತೆ ಆಟವಾಡಿಸು: ಗೞಿಗೂಸಾಡುವರಿಂದ್ರನಂ ಗಿರಿಶನಂ ಸರ್ವಸ್ವಮಂ ಕೊಂಡು ಮುನ್ನುೞಿವರ್ (ಶಮುದ. ೬೫ ಪ್ರಯೋ).

[ಗೞಿಗೂಸು + ಆಡು$_1$]

**ಗೞಿಗೂಸು** (ನಾ). (ಡೊಂಬರ) ಗಣೆಯ ಮೇಲೆ ಜನರ ಮನರಂಜನೆಗಾಗಿ ಆಟವಾಡುವ ಮಗು; ಡೊಂಬರಾಟವಾಡುವ ಮಗು. 'ಗೞಿಗೂಸಾಡು' ಪರಾ. [ಗೞಿ + ಕೂಸು]

**ಗೞಿಗೂೞ್** (ನಾ). ಬೇಟೆಗಾರರು ಹಕ್ಕಿಗಳನ್ನು ಹಿಡಿಯುವುದಕ್ಕಾಗಿ ಗಳೆಯ ತುದಿಯಲ್ಲಿ ಹತ್ತಿಸಿದ ಅನ್ನ; "ಗಾಳದ ತುದಿಗೆ ಕಟ್ಟಿದ ಆಹಾರ" (ಪ್ರಭಣ್ಣ); ಪೞಗನ್ನಡಂ ಏವಂ ಗೞಿಗೂೞ್ (ಶಬ್ದಾನು. ೮೯ ಪ್ರಯೋ). [ಗೞಿ + ಕೂೞ್$_1$]

**ಗೞಿಯಿಕ್ಕು** (ಕ್ರಿ). ಬಾಣವನ್ನು ಪ್ರಯೋಗಿಸು: ಕೊಳದೊಂದು ಭಾಗಕ್ಕೆ ನೀರೆಲ್ಲಮುಗುಂದಲೆವೋಗೆ ತೊಲಗಿ ಗೞಿಯಿಕ್ಕಿ ತೊಲಗಿದಂಕದಂತೆ ಪೆಱಮೆಟ್ಟಿ ನಿಲ್ವುದುಂ (ಶಾಂತಿಪು. ೮-೩೪ ವ). [ಗೞಿ + ಇಕ್ಕು]

**ಗೞಿಯೆತ್ತಿಸು** (ಕ್ರಿ). (ಧ್ವಜ) ದಂಡವನ್ನು ಎತ್ತಿ ಹಿಡಿಸು; ವಿಜಯವನ್ನು ಮೆರೆ: ಪೆಂಡಿರೊಳಲ್ಲದಿಲ್ಲ ಸುಖಮೆಲ್ಲಿಯುಮೇದೊರೆಯಂಗಮಿಕ್ಷುಕೋದಂಡನನಿಕ್ಕಿಗೆಲ್ದು ಗೞಿಯೆತ್ತಿಸಿದುತ್ತಮು ವೀತರಾಗನುಂ ಕಂಡನೆ ಮುಕ್ತಿಯೊಳ್ನೆರೆಯದನ್ನೆಗಮೇಂ ಗಡನಂತಸೌಖ್ಯಮಂ (ಲೀಲಾವ. ೨-೯೯). [ಗೞಿ + ಎತ್ತಿಸು]

**ಗೞಿಯೆತ್ತು** (ಕ್ರಿ). ದಂಡವನ್ನು ಎತ್ತಿಹಿಡಿ: ವಿದ್ಯೆಗಿವಂ ವಿಧಾತ್ರನೆಂದಿನವಮೆ ಮಂತ್ರಸಿದ್ಧಿಗಸುರೇಂದ್ರನನಳ್ಕಿಜಿವಂತೆ ನೀಳ್ದಗುರ್ವಿನ ಗೞಿಯೆತ್ತಿ ಬಂದನವನೊರ್ವನಪೂರ್ವಿಗನಿಂದ್ರಜಾಲಿಗಂ (ಲೀಲಾವ. ೪-೬೫). [ಗೞಿ + ಎತ್ತು$_1$]

**ಗೞಿವಟಿಗ** (ನಾ). ಗಳೆಯನ್ನು ಹಿಡಿದು ಆಡುವವನು; ಡೊಂಬರವನು; ಕೊಲ್ಲಟಿಗ: ಕೊಲ್ಲಟಿಗಃ ಕೊಲ್ಲಟ ಇತಿ ಲಂಘನಾದ್ಯಾಶ್ಚರ್ಯಕರೀ ವಿದ್ಯಾ. ತದುಪಜೀವೀ ಭಾಷಾಯಾಂ ಡೊಂಬ ಇತಿ. ಗೞಿವಟಿಗಂ ಗೞಿ ಇತಿ ಪೂರ್ವೋಕ್ತವಿದ್ಯೋಪಕರಣಂ. ತದುಪಜೀವೀ ಸ ಏವ (ಶಬ್ದಾನು. ೪೪೧ ವ್ಯಾಖ್ಯಾ). [ಗೞಿ + -ಅಟಿಗ]

**ಗೞಿವೞಿ** (ನಾ). ಗಳೆಯ ಬಳಿ; ಕೋಲಿನ ಹತ್ತಿರ.

**ಗೞಿವೞಿಯ ಪಾವು** = ೧. ಗಳುವಿನ ಮೇಲೆ ಹಾಯ್ದು ಬರುವ ಹಾವು; ಗಳುವನ್ನು ಚಲನಕ್ಕೆ ಆಧಾರವಾಗಿಸಿಕೊಳ್ಳುವ ಹಾವು (?): ಗೞಿವೞಿಯ ಪಾವಿನಂತೆ ಚಕ್ರವ್ಯೂಹಮಂ ಪುಗಲೆಂದು ಬರ್ಪ ದ್ರುಪದ ವಿರಾಟ ಧೃಷ್ಟದ್ಯುಮ್ನ . . . ಘಟೋತ್ಕಚಾದಿಗಳೊಡನೆ ಮಲ್ಲಾಮಲ್ಲಿಯಾಗಿ ಕಾದುವ ಕುಂಭಸಂಭವನಲ್ಲಿಗೆ ದುರ್ಯೋಧನಂ ಬಂದು (ಪಂಪಭಾ. ೧೧-೯೬ ವ); "ತೆಕ್ಕೆ ಹಾಕಿಕೊಂಡಿರುವ ಹಾವು" (ಪಂಪನ); "ಬಿದಿರ ಗಣೆಯಮೇಲೆ ಬರುವ ಹಾವು" (ಪಂಪದೀ. ೪೧೩); ಚತುರಂಗಬಲ ಸಮೇತಂ ಪೊಱಮಟ್ಟು ಬೂತಟ್ಟಿದೊಡುಪೇಂದ್ರನುಮಿದಿರಿದಿರಂ ಗೞಿವೞಿಯ ಪಾವು ಬರ್ಪಂತೆ ಬಂದು ತಾಗುವುದುಂ (ಶಾಂತಿಪು. ೬-೪೧ ವ); ಸಹಸ್ರಲೋಚನಂ ತೋಯದ ವಾಹನನ ಬೞಿಯಂ ಗೞಿವೞಿಯ ಪಾವಿನಂತೆ ತಗುಳುತ್ತುಂ ಬಂದು (ಪಂಪರಾಮಾ. ೧೦-೯೧ ವ). ೨. ಗಳುವಿನಿಂದ ತಿವಿಯಲ್ಪಟ್ಟ ಹಾವು (?): ಗೞಿವೞಿಯ ಪಾವಿನಂತೆ ಮೊಗದ ಬಿಗಿಪುಂ ಕಣ್ಣಬೀಡುಂ ಬೆರಸು (ಅರ್ಧನೇ. ೫-೧೧೩ ವ); ಮಗಧಂ ಗೞಿವೞಿಯ ಪಾವಿನಂತಿರೆ ಬರ್ಪಂ (ಜಗವಿ. ೮-೬). ೩. ಹಾವಾಡಿಗನ ಕೋಲಿಗೆ ಸುತ್ತಿಕೊಂಡಿರುವ ಹಾವು (?): (೬). ℙ ಇದರ ಅರ್ಥ ಅಸ್ಪಷ್ಟವಾಗಿದೆ.

[ಗೞಿ + ಬೞಿ$_3$]

**ಗೞಿವಿಡಿ** (ಕ್ರಿ). ಗಳೆಯನ್ನು ಹಿಡಿದುಕೊಳ್ಳು.

**ಗೞಿವಿಡಿದಾಡು** = ಗಳೆಯನ್ನು ಹಿಡಿದು ಆಡು; ಡೊಂಬರಾಟವಾಡು: ಗೞಿವಿಡಿದಾಡುವ ದೀವಿಗೆವಿಡಿವ ಎಲೆವಿಡಿದಾಡುವನೊಳಂ ಆಟಗಪ್ರತ್ಯಯಮುಕ್ಕುಂ (ಶಮುದ. ೨೦೪ ವೃತ್ತಿ). [ಗೞಿ + ಪಿಡಿ$_1$]

**ಗೞ್ಕನೆ** 'ಕೞ್ಕನೆ' ನೋ.

**ಗೞ್ದುಗರಯ್ಯ** (ನಾ). ಒಬ್ಬಾತನ ಹೆಸರು: ವಾರಿನಿಧಿವಳಯಪರಿವೃತಧಾರಿಣಿ ನಿಳ್ಪಿನೆಗಮುಡಪ ಕರಿಗಣತತಿಯುಂ ತಾರಕೆಯುಳ್ಳಿನಮಿಕ್ಕಿರ್ಕಂತೋರಂತಿರೆ ಬೆಂಗಿ ಗೞ್ದುಗರಯ್ಯನ ಧರ್ಮ್ಮಂ (ಸೌಇಇ. XI-i, ೪೨-೩೨; 971). [? + ಅಯ್ಯ$_1$]

**ಗೞ್ದುಗು**, ಗದುಗ್ಗು$_2$ (ನಾ). ಒಂದು ಊರಿನ ಹೆಸರು. ℙ ಈಗಿನ ಗದಗು: ತೆಂಕಣ ದೆಸೆಯೊಳ್ಸೆರ್ದ್ದಿಯ ಬಾವಿಯಂ ಕೋಲೆಯ ಮೇಳೆ ಗೞ್ದುಗಿನ ಪಳ್ಳದಿಂ ತೆಂಕಲ್ಮುಗ್ಗುಡ್ಡೆ ಪಡುವಲ್ಲಗ್ಗಿಲ ಮೇಳೆ (ಸೌಇಇ. XI-i, ೧೧೬-೨೭; 1075); ಬೆಳ್ವೊಲನಾಡೊಳಗಣಾಗ್ರಹಾರಂ ಗೞ್ದುಗಿನ ಶ್ರೀ ಸ್ವಯಂಭು ತ್ರಿಕೂಟೇಶ್ವರ (ಸೌಇಇ. XI-ii, ೧೫೦-೩೦; 1102). **ಗದುಗ್ಗು$_2$**: ದಂಡನಾಯಕ ಶಿಖಾಮಣಿಯಪ್ಪ ಮಿತಂ ಸಮುದ್ರಮಿಶಾತೆಱನೆನಿಪಂದದಿಂ ಗದುಗಿನೊಳ್ ನೆಱೆ ಕಟ್ಟಿಸಿದಂ ತಟಾಕಮಂ (ಎಕ. VI, ತರೀಕೆ. ೪೫-೬೩; 1196); ಕಾವುದಾನತಜನವ ಗದುಗಿನ ವೀರನಾರಯಣ(ಕುವ್ಯಾಅ. ೧-೧). [?]

**ಗೞ್ದೆ**, ಗದ್ದೆ, ಗರ್ದೆ, ಗಳ್ದೆ (ನಾ). ಬತ್ತ, ಕಬ್ಬು ಮೊದಲಾದ ನೀರಾವರಿ ಪೈರುಗಳನ್ನು ಬೆಳೆಯುವ ಭೂಮಿ; ತರಿ ಜಮೀನು: ಭಟ್ಟಗ್ಗಿರ್ಗೆಗೞ್ದೆ ಒಡ್ಡಲಿ ಆಪತ್ತೊನ್ದಿವಿಟ್ಟಾರಕರ (ಮೈಆರಿ. ೧೯೩೬, ೧೬-೧೬; ಸು. 450); ಪಾಡುವಗ್ಗರ್ಗಂ ಗೞ್ದೆ ಮತ್ತರೊನ್ದು (ಇಎ. ೧೯೫೦, ೧೨೪-೩೫; 950); ಅಂತು ಗೞ್ದೆ ಸಲಗೆ ೬ (ಎಕ. VI, ಕಡೂರು. ೩೦-೪೬; 1170). **ಗದ್ದೆ**: ಸರ್ಬ ನಮಸ್ಯ ದತ್ತ ಭೂಮಿ ೪[೦]೦೦ ಗದ್ದೆ ಸಲಗೆ ಗೃಹಹಸ್ತ ೧೦೦೦ (ಇಆ. VIII, ೯೫-೧; 444); ವಿಣ್ಣಗರ ದೇವಗ್ಗ್ಗೆ ಒನ್ದು ನನ್ದಾದೀವಿಗೆ . . . ನಡೆವನ್ನಾಗೆ ತಮ್ಮ ಮೊದಲೊಕ್ಕದೊಳ್ಪತ್ತು ಕೊಳಗ ಗದ್ದೆ (ಎಕ. XIV, ಮಳವ. ೧೨೪-೧; 1014); ಗದ್ದೆ[ಪಾಠಾಂ. ಟ್ದೆ]ಯ ಪಾೞಿಯನೞಿದು ಬೆಳೆವೆನೆಂಬನುಂ ಧರ್ಮದ ಪಾೞಿಯನೞಿದು ಸುಖಮುಂ ಪಡೆವೆನೆಂಬನುಂ ಬೇಳಪ್ಪರ್ (ಜೀವಸಂ. ೨೨೩-೧೮); ಹೋಗಿ ಗದ್ದೆ [ಪಾಠಾಂ. ರ್ದೆ]ಯೊಳಿರ್ದ ಮೊಳೆವಿತ್ತನೆತ್ತಿದಂ (ಇಳಿರ. ದೇ. ೫೪-೫). **ಗರ್ದೆ**: ಎಜ್ಜೊಳ ಗಜ್ದಿಗೆ ನೆಲನುಂ ಚನ್ನನು ಉಳ್ಳನ್ನೆಗಂ (ಎಕ. XIV, ಮಳವ. ೧೨೫-೧; 1014); ಗರ್ದ್ದೆಯುಂ ಪೞಗೆಲುಮಂ ಬಿಟ್ಟಂ (ಸೌಇಇ. XI-i, ೬೮-೯೯; ಸು. 1045); ತೀವಿ ಮೇಣ್ಪೆಳೆದ ಗರ್ದೆಯೊಪ್ಪುಗುಂ (ಉದ್ಭಟ. ೩-೧೩); ಒದವಿದ ಶಾಲಿಗರ್ದೆಗಳ ಪಾೞಿ (ಪುಷ್ಪಪು. ೨-೨೦). **ಗಳ್ದೆ**: ಜೀಯಂಗೆ ಬಿಟ್ಟ ಗಳ್ದೆ (ಸೌಇಇ. IX-i, ೯೪-೧೫; 1039); ಸವಣನ ಕೆಱೆಯ ಕೆಳಗೆ ಗಳ್ದೆಗಳೆಯಲು ಮತ್ತರು ೨ (ಎಕ. VII, ಶಿವಮೊ. ೫೭-೬೬; 1115). 'ಕಟನಿ' ಪರಾ. [ದೇ. II ಕೊಡ. ಗದ್; ಕುಯಿ. ಗದೊ]

**ಗೆಬ್ಬೆಒಡ್ಡು** (ನಾ). ಗದ್ದೆಯಲ್ಲಿ ಬೆಳೆದ ಧಾನ್ಯದ ರಾಶಿ, —ಉತ್ಪತ್ತಿ, —ಆದಾಯ (?): ಭಟ್ಟಗ್ಗಿರ್ಗೀಗಬ್ಬೆಒಡ್ಡಲಿ ಆಪತ್ತೊನ್ದಿವಿಟ್ಟಾರಕರ (ಮೈಅರಿ. ೧೯೩೬; ೧೬–೧೭, ಸು. 450).

[ಗಬ್ಬೆ + ಒಡ್ಡು₂]

**ಗಾಂಗ** (ಗು). ೧. ಗಂಗಾನದಿಗೆ ಸಂಬಂಧಿಸಿದ; ಗಂಗೆಯ: ಗಾಂಗ ತುಂಗ ನಿರ್ಮಳ ಪುಳಿನಾಗ್ರದೊಳ್ ಮಿಸುಪ ನೀಳ ಸರೋಜ ವನಾಳಿಯಂದದಿಂ (ಜಗವಿ. ೧–೩೯). (ನಾ). ೨. ಭೀಷ್ಮ. ೩. ಕಾರ್ತಿಕೇಯ. ೪. ಚಿನ್ನ. ೫. ದೇವಗಂಗೆಯಿಂದ ಬೀಳುವುದೆಂದು ಭಾವಿಸಲಾದ ಮಳೆಯ ನೀರು: ಬೆಳ್ಳಿಯ ಪಾತ್ರೆಯಲ್ಲಿದ್ದ ಸ್ವಚ್ಛವಾದ ಅನ್ನದ ಮೇಲೆ ಯಾವ ಮಳೆನೀರನ್ನು ಹಾಕಲು ಆ ಅನ್ನವು ಗಿಜಕಳಿ ಆಗದೆ ಬೇರೆವರ್ಣ ಬಾರದೆ ಹಾಗೆಯೇ ಉಳಿಯುವುದೋ ಆ ಮಳೆಯ ನೀರು ಗಾಂಗವು (ಅಷ್ಟಾಂಗ. ೮೨). [ಸಂ.]

**ಗಾಂಗತೋಯ** (ನಾ). ಗಂಗಾನದಿಯ ನೀರು; ಗಂಗಾಜಲ: ಗಾಂಗತೋಯದೆ ಸಖಿಯರ್ ನೃಪಾಂಗನೆಗೆ ಮಂಗಳಮಜ್ಜನಮಂ ನಿಮಿರ್ಚಿದರ್ (ಪುಷ್ಪವು. ೩–೧೧೭). [ಗಾಂಗ + ತೋಯ]

**ಗಾಂಗೆಜಿ** (ನಾ). ಒಂದು ಕೆರೆಯ ಹೆಸರು: ತೀರ್ಥದಿಂ ತೆಂಕ ಗಾಂಗೆಜಿಯೇರಿಯ ಕೆಳಗೆ ಸತ್ತಿಗಾಲ ಬಯಲೊಳ್ (ಎಕ. VII, ಶಿಕಾರಿ. ೩೦–೨೪; 1031). [? + ಕೆಜಿ]

**ಗಾಂಗೇಯ** (ನಾ). ೧. ಗಂಗಾನದಿಯ ಮಗ. ೨. ಭೀಷ್ಮ: ಕೌರವಬಲದ ಸೇನಾನಾಯಕಂ ಗಾಂಗೇಯನಪ್ಪನಾಗೆ (ಪಂಪಭಾ. ೧೧–೫೨ವ); ಹರಿಸಿದರು ಕೌಬೇರ ಮಾರುತ ನಿರುತಿ ಯಮ ಪುರುಹೂತ ಶಂಕರ ಪರಿಪರಿಯ ಪ್ರತ್ಯಸ್ತ್ರವನು ಗಾಂಗೇಯ ಫಲುಗುಣರು (ಕುವ್ಯಾವಿ. ೮–೬೦). ೩. ಷಣ್ಮುಖ; ಕುಮಾರಸ್ವಾಮಿ: "ಗೌರೀಪುತ್ರಃ, ಷಣ್ಮುಖಃ ... ಗಾಂಗೇಯಃ, ಬ್ರಹ್ಮಚಾರೀ ... ಈ ೨೦ ಕಾರ್ತಿಕೇಯನ ಪೆಸರ್" (ಹಲಾಯು. ೫–೨೧). ೪. ಕರ್ಣ; ರಾಧೇಯ. ೫. ಚಿನ್ನ; ಸುವರ್ಣ; ಬಂಗಾರ: "ಹೇಮ, ಸ್ವರ್ಣಂ ... ಗಾಂಗೇಯಂ, ಗೈರಿಕಂ ... ತಪನೀಯಂ – ಈ ೨೫ ಹೊನ್ (ಪೊನ್)" (ಹಲಾಯು. ೨೯–೧೯); ತೋಯವಂ ಪರಿಹರಿಸಿ ತೆರೆ ಗಾಂಗೇಯವಿಲ್ಲದೆ ಕಟಕಮಕುಟ (ಸದ್ಗುರು. ೯–೮); ಶೃಂಗಾರವಸ್ತು ತೀವಿದ ಗಾಂಗೇಯಕರಂಡಮೆನಿಸಿ ಮೊಲೆಚೂಚುಕಮೇಂ ಕಂಗೊಳಿಸಿದುದೊ (ರಾಜಶೇ. ೪–೩೪). ೬. ಬಿಳಿಯ ಬಣ್ಣ. ೭. ನೀಲವರ್ಣ. ೮. ಬಂಗಾರದ ಗೊಂಬೆ, —ಪ್ರತಿಮೆ: "ಕರ್ಣಂ ಭೀಷ್ಮಂ ಬಿಳಿದು ಸುವರ್ಣಂ ಭಂಗಾರದ ಸ್ವಾಮಿ ಕಾರ್ತಿಕೇಯ ನೀಲವರ್ಣದೊಳೆಸೆದಿಹ ನುಡಿ ಸಂಪೂರ್ಣದಿ ಗಾಂಗೇಯ ಶಬ್ದಮೆನಿಕುಂ ಜಗದೊಳ್" (ನಾನಾಕಂ. ೯); "ಕರ್ಣ ಗಂಗಾಸುತ ಹೈರಣ್ಯಂ ಮಯೂರಧ್ವಜ ಧವಳಮಿವಿಂತೈದೆ ಗಾಂಗೇಯನಾಮಂ" (ನಾನಾರ. ೪೫). ೯. ಭದ್ರಮುಸ್ತೆ. ೧೦. ಉಮ್ಮತ್ತಿಗಿಡ; ದತ್ತೂರ. [ಸಂ.]

**ಗಾಂಗೇಯಕ** (ನಾ). ೧. ಭೀಷ್ಮ. ೨. ಷಣ್ಮುಖ. ೩. ಚಿನ್ನ. ೧, ೨, ೩: ಲೀಲಾಕ್ರಮೋದಂಚಿತ ನಿರವಧಿ ಗಾಂಗೇಯಕಂ ... ರಕ್ಷಿಸುಗೆ ವಸುಧೆಯಂ ಯುದ್ಧರಂಗ ತ್ರಿಣೇತ್ರಂ (ಜಗವಿ. ೧–೩). [ಸಂ.]

**ಗಾಂಗೇರುಕಿ** (ನಾ). ಹೀರೆಗಿಡ: "ಗಾಂಗೇರುಕೀ, ನಾಗಬಲಾ, ಝುಷಾ, ಹ್ರಸ್ವಗವೇಧುಕಾ ೪ ಹೀರೇಗಿಡದ ಹೆಸರು. ಇವು ಹೀರೆ, ತುಪ್ಪಹೀರೆ, ಕಾಡುಹೀರೆ, ಇವುಗಳೆಲ್ಲಕ್ಕೂ ಹೆಸರುಗಳು" (ಸಿದ್ಧಾಂತಿ. ೧೨೧).

[ಸಂ. ಗಾಂಗೇರುಕೀ]

**ಗಾಂಜಾ**, ಗಂಜಿ₂, ಗಾಂಜಿ (ನಾ). ಅಮಲೇರಿಸುವ ಒಂದು ಬಗೆಯ ವನಸ್ಪತಿ; ಭಂಗಿಸೊಪ್ಪು; ಆ ಸೊಪ್ಪನ್ನು ಒಣಗಿಸಿ ಮಾಡಿದ ಮಾದಕ ಪದಾರ್ಥ: ಶುದ್ಧಿಮಾಡಿದ ಗಾಂಜಾ ಎಲೆಯ ರಸದಲ್ಲಿ (ಸಕವೈ. ೪೮೨); ಗಾಂಜಾ ಸೇದುವವರಿಗೆ ಗಾಂಜಾದಿಂದ ನಿಷಾ ಏರದಿದ್ದರೆ, ಅದರಲ್ಲಿ ಎರಡು ದತ್ತೂರ ಬೀಜಗಳನ್ನು ಸೇರಿಸಿದ ರಾಯಿತು. (ಕಮುಕ. ೧೭). **ಗಂಜಿ₂**: (೬). **ಗಾಂಜಿ**: ಸುರೆ ಮಾಂಸಗಳಂ ಭುಂಜಿಸುತ್ತ ಭಂಗಿ ದತ್ತೂರಿ ಅಪು ಗಾಂಜಿ ಮೊದಲಾದ ಅಮಲಿನಲ್ಲಿ (ಕೃಷಿಪ್ರ. ೩೧೧); ಆಗಾಗ ಗಾಂಜಿಯ ಸೇವನೆಯೂ ನಡೆಯುತ್ತಿತ್ತು (ಬಾನಾನೀ. ೩೮).

[← ಹಿಂ. ಮರಾ. ಗಾಂಜಾ. / ಸಂ. ಪ್ರಾ. ಗಂಜಾ].

**ಗಾಂಜಿ** 'ಗಾಂಜಾ' ನೋ.

**ಗಾಂಡಿವ** (ನಾ). = ಗಾಂಡೀವ: "ಗಾಂಡೀವಃ, ಗಾಂಡಿವಃ –೨ ... ಅರ್ಜುನನೆನಿಸಿರ್ದವನ ಬಿಲ್ಲಿಗೆ ಹೆಸರುಗಳು" (ಸಿದ್ಧಾಂತಿ. ೨೨೫); ಬವರ ಗೆಲುವರೆ ಹರಿಗೆ ಕೊಡು ಗಾಂಡಿವವ ಸಾರಥಿಯಾಗು ನೀನೆಂದ ವಗಡಿಸಿದನು ವೀರನಾರಾಯಣನ ಮೈದುನನ (ಕುವ್ಯಾಕ. ೧೬–೩೪). [ಸಂ.]

**ಗಾಂಡಿವಿ** (ನಾ.) = ಗಾಂಡೀವಿ: ಸವಣಂ ಬಳಪಂಗೊಳೆ ಗಾಂಡಿವಿ ಬಿಲ್ಗೊಳೆ ಬಲವಿರೋಧಿ ವಜ್ರಂಗೊಳೆ ... ಪೊಣರ್ಕೆಗಾವಂ ನಿಲ್ವಂ (ಶಮದ. ೧೬೭ ಪ್ರಯೋ); ಅಭವಂ ಕಾಣುತದಂ ಸೈರಿಸುತಂ ಕೇಣಂ ಬಡೆದೊತ್ತಿ ಮೆಟ್ಟಿದಂ ಗಾಂಡಿವಿಯಂ (ಶಬಶಂ. ೪–೮೭). [ಸಂ. ಗಾಂಡಿವಿನ್]

**ಗಾಂಡೀವ** (ನಾ). ಅರ್ಜುನನ ಬಿಲ್ಲು; ಖಾಂಡವದಹನ ಕಾಲದಲ್ಲಿ ಅಗ್ನಿದೇವನು ಅರ್ಜುನನಿಗೆ ಪಾರಿತೋಷಿಕವಾಗಿ ಕೊಟ್ಟ ಧನುಸ್ಸು: ಗಾಂಡೀವದ ಕೊಪ್ಪುಗಳೊಳ್ ಖಂಡಿಸಿ (ಪಂಪಭಾ. ೬–೩೧); ಗಾಂಡೀವಮಂ ಪಿಡಿದಕ್ಷಯಕಾಂಡಧಿಯಂ ಬಿಗಿದು (ಜಗವಿ. ೧೫–೩); ಇದು ಕಣಾ ಗಾಂಡೀವವೆಂದೆಂಬುದು ಮಹಾಧನು ಪಾರ್ಥನದು (ಕುವ್ಯಾವಿ. ೬–೪೦); ಇದನ್ನು ಕೇಳಿ ಅಗ್ನಿಯು ವರುಣನನ್ನು ನೆನೆದು ಬರಮಾಡಿಕೊಂಡು ಅವನಿಂದ ಅರ್ಜುನನಿಗೆ ಗಾಂಡೀವ ಧನುಸ್ಸನ್ನೂ ಅಕ್ಷಯ ತೂಣೀರ (ಬತ್ತಳಿಕೆ)ಗಳನ್ನೂ ... ಹನುಮಂತನು ಕುಳಿತಿರುವ ಧ್ವಜವನ್ನೂ ಕೊಡಿಸಿದನು (ವಚಭಾ. ೬೩). [ಸಂ.]

**ಗಾಂಡೀವಿ** (ನಾ). ಗಾಂಡೀವವೆಂಬ ಬಿಲ್ಲನ್ನು ಹೊಂದಿರುವವನು; ಅರ್ಜುನ: "ಇಂದ್ರಜಂ ಸಿತಹಯಂ ಗಾಂಡೀವಿ ಜಿಷ್ಣು ಹರಿಬಂಧು ಫಲ್ಗುಣನೆನಲ್ಕರ್ಜುನನೆನಿಕ್ಕುಂ" (ಮಂಗರಾ. ೭೮–೩); ನಿನಗಂ ಪೇಟಿಲ್ದೊಡೆ ಪಾಂಡುರಾಜತನಯಂ ಗಾಂಡೀವಿಯೆಂ ದಾಯಿಗಂಗೆ ನೆಲಂ ಜೂದಿನೊಳೊತ್ತೆವೋಗೆ ಬನಮಂ ಪೊಕ್ಕು (ಪಂಪಭಾ. ೮–೫); ಕಾವಡೆನ್ನಳವಲ್ಲಮೇಣ್ ಗಾಂಡೀವಿ ಕೊಲುವವನಲ್ಲ ಕೃಷ್ಣನು ಕಾವರೆಯು ಕೊಲುವರೆ ಸಮರ್ಥನು ವೇದಸಿದ್ಧವಿದು (ಕುವ್ಯಾದ್ರೋ. ೮–೬೧).

[ಸಂ. ಗಾಂಡೀವಿನ್]

**ಗಾಂಡು₁** (ನಾ). ೧. ಸ್ಥೂಲಕಾಯನಾದ ಹಾಗೂ ಮೂಢನಾದ ಮನುಷ್ಯ; "ಬುದ್ಧಿಯಿಲ್ಲದ ಟೊಣಪ" (ಕಸ್ತೂಕೋ. ೨೯೩). ೨. ದೊಡ್ಡ ದೊಣ್ಣೆ; ಲಗುಡ: 'ಗಾಂಡುಗುದಿಗೆ' ಪರಾ.

[← ಹಿಂ. ಮರಾ. ಗಾಢಾ./ ಸಂ. ಗಾಢ]

**ಗಾಂಡು₂** (ನಾ). ತಿಕ; ಕುಂಡೆ; ಗುದ: ಹೆಚ್ಚು ಮಾತನಾಡದೆ ಗಾಂಡು ಮುಚ್ಚಿಕೊಂಡು ಹೋಗು (ರೂಢಿ). [← ಪಾರ. ಹಿಂ. ಮರಾ. ಗಾಂಡ್]

**ಗಾಂಡುಗುದಿಗೆ** (ನಾ). ೧. ಬಲವಾದ ದೊಣ್ಣೆ; ದೊಡ್ಡಗುದಿಗೆ: ತಂತು ಮಾತ್ರ ಪೇಳ್ವೆನಾ ಮತ್ಕಾಂತ ಜಪದೊಳಿರಲೂ ಎಂಥಾದ್ದೊಂದು ಗಾಂಡುಗುದಿಗೆಯಂತಿತ್ತ ಬೆನ್ನಿನೊಳು (ರಾವಣೋ. ೧೭). ೨. (ಕರಾ). ಫ್ಲ್ಯೂಜ್ವರ; ಗುದ್ದಪ್ಪನ ಬೇನೆ (ಉಕ). [ಗಾಂಡು₁ + ಗುದಿಗೆ₁]

**ಗಾಂತ** (ಗು). [ವ್ಯಾಕ] 'ಗ' ಎಂಬ ವರ್ಣದಿಂದ ಕೊನೆಗೊಳ್ಳುವ ಶಬ್ದ; ಗಕಾರಾಂತ: ನೆಗಟ್ಟಿರ್ದ ರೇಫಜಟಿನಾಂತಗಾಂತಸಾಂತೋತ್ವ ದಿದಿರ ವತ್ವಂ ಪತ್ವಂ (ಶಮದ. ೨೩೨). [ಗ$_1$ + ಅಂತ$_2$]

**ಗಾಂತು** (ನಾ). ಉರುಳು; ಪಾಶದ ಕುಣಿಕೆ; ಜೀರುಗುಣಿಕೆ: ಕಾಡುಪಾರಿವಾಳಗಳಿಗೆ 'ಗಾಂತು' (ಉರುಳು) ಇಡುತ್ತ ಮಳೆಗಾಲದಲ್ಲಿ ಬೊಲ್ಲು ಇಲ್ಲಿ ಎಷ್ಟು ಹೊತ್ತು ಇರುತ್ತಾನೆಂದು ಹೇಳಲಿಕ್ಕೆ ಸಾಧ್ಯವಿಲ್ಲ (ದಂಬನಾ.೧೮). [← ಮರಾ. ಗಾಂಠಣೇಂ. ಪ್ರಾ. ಗಣ್ಠ < ಸಂ. ಗ್ರಂಥಿ].

**ಗಾಂದರ**, ಗಾಂದವ (ನಾ). = ಗಾಂಧಾರ ೪: ಸುರಸುದತೀಕದಂಬಕದ ಗಾಂದರದಿಂದನಿಯೊಳ್ ದರಸ್ಮಿತಾಂಬುರುಹಮನೊತ್ತಿ ಚುಂಬಿಸುವ ತುಂಬಿಯ ಗಾವರಮಂ ಪೊಣರ್ಚೆ (ಅನಂಪು. ೪–೧೨೭). **ಗಾಂದವ**: ಅಂಚೆವೆಣ್ಣಿಸವ ಗಾಂದವದಿಂದನಿದೊಂಗಲೊಳ್ ತಡಂಗಲಿಸಿ ಮನಕ್ಕೆ ಗೋಸಗೆಯ ಬೀಸುವೆಲರ್ ಪಡೆದತ್ತಲರ್ಕೆಯಂ (ಚಂದ್ರಪು. ೮–೯೭). ℙ. 'ಗಾಂದವ' ಇದು 'ಗಾಂದರ'ದ ಅಪಲಿಖಿತವಿರಬಹುದು. [< ಸಂ. ಗಾಂಧಾರ]

**ಗಾಂದವ** 'ಗಾಂದರ' ನೋ.

**ಗಾಂಧರ್ವ** (ಗು). ೧. ಗಂಧರ್ವರಿಗೆ ಸಂಬಂಧಿಸಿದ, —ಸೇರಿದ. 'ಗಾಂಧರ್ವಭವನ' ಪರಾ. (ನಾ). ೨. ಸಂಗೀತ; ಹಾಡು; ಗಾನ: ಗಂಧವಹಂಗಳ್ ಮಂಗಳಗಾಂಧರ್ವವನೆಸಗೆ (ಲೀಲಾವ. ೧೩–೪). ೩. ನರ್ತನ; ನಾಟ್ಯ: ಗಾಂಧರ್ವಮೆಂಬುದು ಎಮ್ಮ ಬಾಬ ವಿದ್ಯೆಯದಱೊಳೆಮ್ಮಂ ರಂಜಿಸುವನ್ನರ್ ಪ್ರೌಢರಿಲ್ಲ (ಶಾಂತಿಪು. ೨–೨೧ ವ); ಅದ್ವೈತ ಗಾಂಧರ್ವ . . . ಹೃದ್ಯ ವಿದ್ಯಾಕದಂಬಕನುಂ (ಮದಶಿ. ೧–೫೧). ೪. ಗಂಧರ್ವರ ಶ್ರೇಷ್ಠವಾದ ಕುದುರೆ, —ಅಶ್ವ: ಪೌಲಸ್ತ್ಯವಣಿಯ ಘೋಟಕವನೆಕ್ಕರಿಪ ಗಾಂಧರ್ವಮಂ ಮೈದಡವಿ ಕಿವಿಯ ನೆವರೀ (ವೆಂಕಾರಾ. ೬–೩೧–೧೦). ೫. ಗಂಧರ್ವರ ಗುಂಪು, —ಸಮೂಹ: ಆರ್ನೃಪರಂ ಭೇದಿಸಿ ಪಾಂಚಾಳರಂ ಚಾಳಿಸಿ ಗಾಂಧರ್ವರಂ ವಿರಥರ್ಮಾಡಿ (ಪಂಪಭಾ. ೬–೨೯ ವ); ಗಾಂಧರ್ವ ಪ್ಸರಾದಿಗಳು . . . ಕಮಲಜರಾವರಾದರು ಪೂಜಿಸಲಿಬೇಕೀ ಮಹಾ ಗಣಪತಿಯ (ಗಗತಾ. ೫–೧೦). [ಸಂ.]

**ಗಾಂಧರ್ವಜ್ಞ** (ನಾ). ೧. ಸಂಗೀತಶಾಸ್ತ್ರವನ್ನು ತಿಳಿದಿರುವವನು; ಸಂಗೀತವನ್ನು ಬಲ್ಲವನು. ೨. ನಾಟ್ಯಶಾಸ್ತ್ರವನ್ನು ಬಲ್ಲವನು: ಚಂದ್ರಧರನಪರಾವತಾರನು ರುಂದ್ರ ಗಾಂಧರ್ವಜ್ಞನಿಧಿ ವಿಜಿತೇಂದ್ರಿಯೋತ್ಕರನು (ಬಸವು. ೮–೪). [ಸಂ.]

**ಗಾಂಧರ್ವಭವನ** (ನಾ). ಸಂಗೀತ ಮಂದಿರ, —ಶಾಲೆ: (*). [ಗಾಂಧರ್ವ + ಭವನ]

**ಗಾಂಧರ್ವವಿದ್ಯೆ** (ನಾ). ಸಂಗೀತ ವಿದ್ಯೆ: ಭರತಪ್ರಣೀತ ನೃತ್ಯಶಾಸ್ತ್ರದೊಳಂ ನಾರದಾದಿಪ್ರಣೀತ ಗಾಂಧರ್ವವಿದ್ಯಾವಿಶೇಷಂಗಳೊಳಂ (ಪಂಪಭಾ. ೨–೩೪ ವ). [ಗಾಂಧರ್ವ + ವಿದ್ಯೆ]

**ಗಾಂಧರ್ವವಿಧಿ** (ನಾ). ಗಾಂಧರ್ವವಿವಾಹ ಕ್ರಮ; ವಧೂವರರು ಪರಸ್ಪರ ಮೆಚ್ಚಿ ತಾವೇ ಮದುವೆಮಾಡಿಕೊಳ್ಳುವ ಕ್ರಮ: ತಿಮ್ಮಪ್ಪನಾಯಕ . . . ತಾನೇ ಗಾಂಧರ್ವವಿಧಿಯಿಂದ ಲಚ್ಚಿಯನ್ನು ಮದುವೆಯಾದ (ಹೇಮಕೂ. ೯೧). [ಗಾಂಧರ್ವ + ವಿಧಿ]

**ಗಾಂಧರ್ವವಿವಾಹ** (ನಾ). = ಗಂಧರ್ವವಿವಾಹ: ಸುದತಿಯೆ ಗಾಂಧರ್ವವಿವಾಹದೆ ಬಹು ರಾಜರ್ಷಿಕನ್ಯೆಯರ್ ಕೂರ್ತವರಂ (ಶಾಕುಂತ. ೪೧–೭೪); ಗಾಂಧರ್ವವಿವಾಹವು ಧರ್ಮಸಮ್ಮತವೆಂದು ದುಷ್ಯಂತನು ಸ್ಪಷ್ಟಪಡಿಸಿದರೂ ಅವಳ ಸಂದೇಹವು ದೂರವಾಗುವುದಿಲ್ಲ (ಧರ್ಮಸಾ. ೩೮). [ಗಾಂಧರ್ವ + ವಿವಾಹ]

**ಗಾಂಧರ್ವವೇದ** (ನಾ). ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥಶಾಸ್ತ್ರ ಎಂಬ ನಾಲ್ಕು ಉಪವೇದಗಳಲ್ಲಿ ಒಂದು; ನಾಟ್ಯ ಮತ್ತು ಸಂಗೀತ ಶಾಸ್ತ್ರ: ಉಪವೇದಚತುರ್ವಿಧಂಗಳಲ್ಲಿ ಗಾಂಧರ್ವವೇದವು ಸಾಮವೇದಾದಿಗಳಲ್ಲಿ ಸರಿಗಮಪಧನಿಯೆಂಬ ಸಪ್ತಸ್ವರಗೀತ ಪ್ರಬಂಧಂಗಳಂ ಸಂಭಾವಿಸುತಿರ್ಕುಂ (ವಿವೇಕ. ೪); ಇದರ ಜತೆಗೆ ವೇದಗಳಿಗೆ ಉಪವೇದಗಳೆಂದು ಹೇಳಲ್ಪಟ್ಟ ನಾಲ್ಕರಲ್ಲಿ ನಾಟ್ಯ, ಸಂಗೀತಕ್ಕೇ ಪ್ರತ್ಯೇಕವಾದ ಗಾಂಧರ್ವವೇದ ಒಂದಿದ್ದಿತೆಂದು ಹೇಳಲ್ಪಟ್ಟಿದೆ (ಭಾರದ. ೫೩೭). [ಗಾಂಧರ್ವ + ವೇದ]

**ಗಾಂಧರ್ವಶಾಸ್ತ್ರ** (ನಾ). = ಗಾಂಧರ್ವವಿದ್ಯೆ: ವೃಷಭಸೇನಂಗೆ ಗೀತವಾದ್ಯಾರ್ಥ ಸಂಗ್ರಹಮಪ್ಪ ಗಾಂಧರ್ವಶಾಸ್ತ್ರಮುಮಂ . . . ಉಪದೇಶಂಗೆಯ್ದಂ (ಆದಿಪು. ೮–೬೦ ವ). [ಗಾಂಧರ್ವ + ಶಾಸ್ತ್ರ]

**ಗಾಂಧರ್ವಸೃಷ್ಟಿ** (ನಾ). ಸಂಗೀತಶಾಸ್ತ್ರದ ಉತ್ಪತ್ತಿ: ಈ ಸೃಷ್ಟಿಗಳಲ್ಲದೆ ಸಿದ್ಧಸಾಧ್ಯವಾದ ಗಾಂಧರ್ವಸೃಷ್ಟಿ; ಋಷಿಗಳಿಗೆ ಮೈದೋರುವ ಸತ್ಯಸೃಷ್ಟಿ ಮೊದಲಾದವುಗಳು ಇರುವವಂತೆ (ಸಾಹಿವಿ. ೧೪೨). [ಗಾಂಧರ್ವ + ಸೃಷ್ಟಿ]

**ಗಾಂಧರ್ವಿ** (ನಾ). = ಗಾಂಧರ್ವಿಗ: ವೇಮಣಯ್ಯನ ಕೆಱೆಯ ಗಟ್ಟ ಮತ್ತ ೫ ವಳಿ ಕೊಳದಲ್ಕರಿಯ ನೆಲಂ ಮತ್ತ ೬೦ ಗಾಂಧರ್ವಿಗೆ ಮತ್ತರ್ ೧೫ ಗಟ್ಟ (ಕಇಅ. ೪೯–೪೨–೫೦; 973). [ಸಂ. ಗಾಂಧರ್ವಿನ್]

**ಗಾಂಧರ್ವಿಗ** (ನಾ). ಗಂಧರ್ವ ವಿದ್ಯೆಯನ್ನು ಬಲ್ಲವನು; ಸಂಗೀತಗಾರ: ಪಱಿಕಾಱಗೆರ್ಗೆ ಮತ್ತಪ್ಪರ್ತು ಗಾನ್ಧರ್ವಿಗರ್ಗೆ ಮತ್ತರಾಱು (ಎಇ. XIII, ೧೭೨–೪೭; 1055); ಉಪ್ಪಿಂಬಾಡ ಕೆಳಗಣ ಹೊಲವೇರಿಯೊಳ್ ಗಾನ್ಧರ್ವಿಗರ್ಗ್ಗಂ ಪಾಡಾವಿಗಂಗಂ ಪಾತ್ರಕ್ಕೆ ಮದ್ದಳೆಯವಂಗಯೂ ಕೋಲ ಮ ೩೦ (ಸೌಇಇ. IX–i, ೧೫೫–೫; 1086). [ಗಾಂಧರ್ವ + -ಇಗ]

**ಗಾಂಧಾರ** (ನಾ). ೧. ಒಂದು ದೇಶದ ಹೆಸರು; ℙ. ಈಗಿನ ಕಂದಹಾರವೂ ಸೇರಿದಂತೆ ಕಾಬೂಲಿನಿಂದ ರಾವಲ್ಪಿಂಡಿವರೆಗಿನ ಪ್ರದೇಶ: ಭಾರತದ, ಅದರಲ್ಲೂ ಗಾಂಧಾರ ರೀತಿಯ ಶಿಲ್ಪ ಸ್ಫುಟವಾಗಿದೆ (ಭಾರದ. ೩೪೮). ೨. ಆ ದೇಶಕ್ಕೆ ಸೇರಿದವನು. ೩. [ಸಂಗೀತ] ಪ್ರಸಿದ್ಧವಾದ ಏಳು ಸ್ವರಗಳಲ್ಲಿ ಮೂರನೆಯದು: "ಷಡ್ಜಮಾ ಋಷಭಮಾಗಾಂಧಾರಮಾಮಧ್ಯಮಂ ಮಿಾಱಿಪ್ಪ ಪಂಚಮಂ ಧೈವತಂ ಸುನಿಷಾದಮೋರಂತೆ ಸಪ್ತಸ್ವರಂಗಳಕ್ಕು" (ಮಂಗರಾ. ೨೩–೩); ಷಡ್ಜ, ಋಷಭ, ಗಾಂಧಾರ . . . ನಿಷಾದವೆಂಬ ಸಪ್ತಸ್ವರಂಗಳುದಿಸಿದವು (ವಿವೇಕ. ೨೩೧); ಸರಿಯಾಗಿ ಶ್ರುತಿಯಾದ ತಂಬೂರಿಯು ಗಾಂಧಾರವನ್ನು ನುಡಿಯುವುದೆಂಬುದು ಸಂಗೀತಜ್ಞರಿಗೆ ತಿಳಿದ ವಿಷಯವೇ (ಭಾತವಿ. ೧೨೯). [ಸಂ.]

**ಗಾಂಧಾರಗುಪ್ತ** (ನಾ). [ಸಂಗೀತ] ಒಂದು ರಾಗದ ಹೆಸರು: ಟೀಕೆ, ಸೈಂಧವಿ, ಪಂಚಮ, ಷಾಡವ, ದೇವಗುಪ್ತ, ಗಾಂಧಾರಗುಪ್ತ, ಕೌಶಿಕಗುಪ್ತ, ಉಪಾಂಗವೆಂಬೆಂಟು ರಾಗಂಗಳುಂ ಷಟ್ಸ್ವರಜಾತೀಯಂಗಳು (ವಿವೇಕ. ೨೩೩). [ಸಂ.]

**ಗಾಂಧಾರಗ್ರಾಮ** (ನಾ). [ಸಂಗೀತ] ಗಾಂಧಾರಸ್ವರದೊಂದಿಗೆ ಸೇರಿಕೊಂಡಿರುವ ಸ್ವರಗಳ ಗುಂಪು, —ಮೇಳನ; ಸಂಗೀತಶಾಸ್ತ್ರದಲ್ಲಿ ಪ್ರಸಿದ್ಧವಾದ ಮೂರು ಸ್ವರಮೇಳಗಳಲ್ಲಿ ಒಂದು: ಆ ರಾಗೋತ್ಪತ್ತಿಗೆ ಷಡ್ಜಗ್ರಾಮ, ಮಧ್ಯಗ್ರಾಮ, ಗಾಂಧಾರಗ್ರಾಮವೆಂಬ ಗ್ರಾಮತ್ರಯವುಂಟು (ವಿವೇಕ. ೨೩೨). [ಗಾಂಧಾರ + ಗ್ರಾಮ]

**ಗಾಂಧಾರಿ** (ನಾ). ೧. ಒಂದು ಗಿಡದ ಹೆಸರು ; ದೇವದಾಳಿ ಗಿಡ; ಮಂಚಿಪತ್ರೆ; ಪಂಚಪತ್ರೆ : "ದೇವಪತ್ರಂ ಪಂಚಪತ್ರೆ ಗಾಂಧಾರಿಯದು ಸಾವಿತ್ರಿಯಕ್ಕು" (ಮಂಗರಾ. ೪೦-೩೦); ಬನ್ನಿ ಗೌರೀದರ್ಭೆ ಶ್ರೀಗಂಧ ಪತ್ರೆ ಗಾಂಧಾರಿ ಲೊಕ್ಕಿ . . . ಪತ್ರೆಗಳನರ್ಪಿಸು ಲಿಂಗಕೆ (ಗುರುಚಾ. ೬-೧೮). ೨. [ಸಂಗೀತ] ಒಂದು ರಾಗದ ಹೆಸರು : ನೀಲೋತ್ಪಲಿನಿ . . . ಗಾಂಧಾರಿ . . . ವಸಂತಬಂಗಾಳವೆಂಬಿಪ್ಪತ್ತೆರಡು ರಾಗಂಗಳುಂ ಕ್ರಿಯಾಂಗದಿಂದ ಪುಟ್ಟಿದವು (ವಿವೇಕ. ೨೩೪). ೩. [ಯೋಗ] ಶರೀರದಲ್ಲಿರುವ ಒಂದು ನಾಡಿ: ಇಡಾನಾಡಿಯಲ್ಲಿ ಮಂದಾಕಿನೀ . . . ಗಾಂಧಾರಿ ನಾಡಿಯಲ್ಲಿ ಕಾವೇರಿ . . . ಹೀಗೆ ೧೨ ನಾಡಿಗಳಲ್ಲಿ ೧೨ ನದಿಗಳನ್ನು ತಿಳಿದು ಜ್ಞಾನತೀರ್ಥದಲ್ಲಿ ಸ್ನಾನಮಾಡಿರಿ (ಹಸಾರ. ೮-೧೯ಟೀಕು). ೪. ಗಾಂಧಾರ ದೇಶದ ರಾಜನ ಮಗಳು; ಧೃತರಾಷ್ಟ್ರನ ಹೆಂಡತಿ: ಧೃತರಾಷ್ಟ್ರಂಗೆ ಗಾಂಧಾರರಾಜ ಸೌಬಲನ ಮಗಳಪ್ಪ ಗಾಂಧಾರಿಯಂ ಶಕುನಿಯೊಡವುಟ್ಟಿದಳಂ ತಂದು ಕೊಟ್ಟು (ಪಂಪಭಾ. ೧-೮೬ವ); ಕಡುರಹಸ್ಯದೊಳರಸಿಯನು ಬರಹೇಳಿದರು ಗಾಂಧಾರಿ ದೇವಿಯನು (ಕುವ್ಯಾಸ. ೧೬-೮); ತದನಂತರದೊಳಾ ಮುರಾಂತಕಂ ಧೃತರಾಷ್ಟ್ರವಿದುರಕೃಪಗಾಂಧಾರಿ ಕುಂತಿಯರ್ಗಭಿನಮಿಸಿ (ಜೈಮಿಭಾ. ೭-೧೯). ೫. (?) : ಗಾಂಧಾರಿ ಮಾಂಧಾರಿ ಎಂಬ ಹೊತ್ತಿನಣತೆ ರಟ್ಟಿಯರೆಂಬರಿರವು (ಸರ್ವವ. ೭೪-೪೧೧). [ಸಂ.]

**ಗಾಂಧಾರಿಮೆಣಸು** (ನಾ). (ಕರಾ) ಲವಂಗ ಮೆಣಸಿನಕಾಯಿ; ಗಿಡ್ಡ ಮೆಣಸಿನಕಾಯಿ. 'ಕಿರುಮೆಣಸು' ಪರಾ.

[ಗಾಂಧಾರಿ ? + ಮೆಣಸು (< ಮೆಣಸು)]

**ಗಾಂಪ**, ಗಂಪ (ನಾ). ೧. ದಡ್ಡ ; ಹೆಡ್ಡ ; ಗಾವಿಲ : "ಗಾಂಪ ಗಾವಿಲವೇಱಿಗ್ಗಂ ಹೆಡ್ಡನಕ್ಕು ಪೆಸರಿಂ ಬುಧರಿಂದಂ" (ಕವಿಕಂ. ೧೬೩); ಸಮಂತಾಪಗಂ ತಲೆಯಂ ಮೂಗುಮನೊತ್ತೆಯಿಟ್ಟು ನೆರವಂತುಂತೇನವರ್ ಗಾಂಪರೇ (ಪಂಪಭಾ. ೪-೮೪); ಮನವೆಂದುದನಾಡುತಿರ್ಪ ಮನುಜನೆ ಗಾಂಪಂ (ಧರ್ಮಾಮೃ. ೧೩-೧೮೮); ಕಡುಮೂರ್ಖನಿಗೆ ಗಾಂಪನಿಗೆ ಬಡತನದೊಳು ಬಲು ಬವಣಿಗೊಂಬವನಿಗೆ ಕೊಡಲಾಗದು ಕುವರಿಯನು (ಹದಿಬ. ೫-೧೮); ಇಚ್ಛಾಸಿರ ನಾಲಿಗೆಯಿರ್ದುಮಾ ರಾಮರಾಜ್ಯವಂ ಸೇಸಂ ಬಣ್ಣಿಸಲಾರ್ತನಿಲ್ಲಂ; ಇಂತಿರೆ ಗಾಂಪಂ ಕಾಲುರಿಚನೆನಗೊಳವೆ ! (ರಾಮಾಶ್ವ. ೮-೪); ಗಾಂಪರ ಕೈಯಲ್ಲಿ ಸಿಕ್ಕಿ ಗಾಂಪರೊಡೆಯರು ಅನ್ಯಾಯವಾಗಿ ಸತ್ತುಹೋದರು (ನಗಗಃ ೭೮). **ಗಂಪ** : ೧. ಲಂಪಟಕೊಳಗಾಗದ ಹದಿಬದೆಯಂತೆ ಗಂಪ ಷಟ್ಪದಜಾರರಿಗೆ ಇಂಪಾದ ಸೌಗಂಧ ರುಚಿದೋಱದಂತೆ ಪೆರ್ಗಂಪಗೆ ಮರಗಳೊಪ್ಪಿದುವು (ಮೋಹತ. ೨೪-೪೯). ೨. ಗಾಂಪತನ; ದಡ್ಡತನ; ಮೂಢತನ; ಬುದ್ಧಿಯಿಲ್ಲದಿರುವಿಕೆ (?) : ಗಂಪಕ್ಕೆ ಸಿಕ್ಕಿ ಬಲೆಗೊಳಗಾಗೆ ಕೊಳೆಯ ಇಱಿತದ ಡಾವರಕ್ಕೆ ನಿಲ್ಲೆ ಸೆಳೆಗೋಲಿನ ಗಾಣದ ಕೀಟಕವನೊಲ್ಲೆ ನಿನ್ನಾಟ ಅದೇತರ ಮಡುವಿನಾಟಹೇಳಾ ಕದಕತನಬೇಡ (ಸರ್ವವ. ೬೦-೩೧೫). [ಗಾಂಪು + -ಅ$_6$]

**ಗಾಂಪತನ** (ನಾ). ದಡ್ಡತನ; ಹೆಡ್ಡತನ; ಮೌಢ್ಯ: ಏನೆಂಬೆವಾಂ ನಿನ್ನ ಗಾಂಪತನಕೆಲೆ ನೃಪತಿ (ಶೇಷರಾ. ೭-೪೧); ನಾಡಿಗಿಂತ ಕಾಡೇ ಹೆಚ್ಚಾಗಿರುವಂತೆ ತಿಳಿವಿನ ಬೆಳಕಿಗಿಂತಲೂ ಗಾಂಪತನದ ಕತ್ತಲೆಯೇ ಅಧಿಕವಾಗಿತ್ತು (ಹಗಲಿ. ೧೪). [ಗಾಂಪ + -ತನ]

**ಗಾಂಪು** (ನಾ). = ಗಾಂಪತನ: "ಗಾಂಪು ಠಕ್ಕುತನಮುಂ ಬೆಳ್ತನಂ" (ಸಂಜೀವ. ೨೭); ಕಾಲೂರ್ಗಳ ಗಂಡರ ಪೆಂಡಿರ ನಡೆಯುಡೆಯ ನುಡಿಯ ಮುಡಿಯ ಗಾಂಪಿಂಗೆ ಮುಗುಳ್ನಗೆ ನಗುತ್ತುಂ (ಪಂಪಭಾ. ೨-೯೭ ವ); ಮಲಮೇಱಿದ ರಕ್ತದಂತೆ ಸೊಬಗಿಯ ಗಾಂಪಿನಂತೆ ನುಡಿಜಾಣನ ಮೋನದಂತೆ (ಧರ್ಮಾಮೃ. ೫-೯೪); ಬಂಧುಗಳ್ಗೆ ಕೆಯ್ಯಾಂಪ ಗಾಂಪೇವುದು (ನೇಮಿಪು. ೪-೬೫ ವ); ಕಂಪೋಡಿದಲರ್ಗಳನಿಂಪೋಡಿದೊಲುಮೆಯಂ ಸಂಪತ್ತು ಪೋದ ಬೊಜಗನ ಪಿಡಿದಿರ್ಪ ಗಾಂಪು ನಿನಗೇಕೆ ಬೆಲೆವೆಣ್ಣೆ (ಲೀಲಾವ. ೨-೩೮).

[ಗಾಮ + -ಪು$_2$]

**ಗಾಂಪುಗಾಣಿಸು** (ಕ್ರಿ). ದಡ್ಡತನವನ್ನು ತೋರಿಸು; ಹೆಡ್ಡತನವನ್ನು ಪ್ರಕಾಶಪಡಿಸು: ಕಂಪಿಗೆಳಸಿ ತುಂಬಿ ತಮ್ಮ ನಡುವೆ ಪೊಯ್ದು ಗಾಂಪುಗಾಣಿಸುತಿರೆ ಕಂಡು (ಭರತ. ೧೧-೧೦೯). [ಗಾಂಪು + ಕಾಣಿಸು]

**ಗಾಂಭೀರ್ಯ** (ನಾ). ೧. ಆಳವಾಗಿರುವಿಕೆ. ೨. ಸುಖದುಃಖಗಳಲ್ಲಿ ವಿಕಾರಹೊಂದದ ಚಿತ್ತವೃತ್ತಿ; ಗಭೀರತೆ: ಗಾಂಭೀರ್ಯಮಂ ಭದ್ರವೀರ ಸೌಂದರ್ಯಮುಂ ಧ್ಯಾನಿಸುತೆ . . . ಕಾಮಿಸಿದನ್ (ಶ್ರೀರಾಮಾ. ೧೨-೩೦೮); ಹುಲಿದೊವಲನುಟ್ಟು . . . ಗಾಂಭೀರ್ಯ ವೇಗ ಮಾಂದ್ಯಗಳಿಂದಲೂ ವರ್ತಿಸುತ್ತಾನೆ (ಪಾಂಚಜ. ೧೫). ೩. [ಕಾವ್ಯಮೀ] ಶಬ್ದಗುಣಗಳಲ್ಲಿ ಒಂದು : ಅಗ್ನಿಪುರಾಣದಲ್ಲಿ (ಅಧ್ಯಾಯ. ೩೪೬) ಶ್ಲೇಷ, ಲಾಲಿತ್ಯ, ಗಾಂಭೀರ್ಯ, ಸೌಕುಮಾರ್ಯ, ಉದಾರತಾ, ರೂಢಿ, ಯೌಗಿಕೀ-ಇವು ಏಳೂ 'ಶಬ್ದಗುಣ'ಗಳೆಂದೂ . . . ಹೇಳಿದೆ (ಕೈಪಿಡಿ. ೨೩೨ ಅಡಿಟ). ೪. [ದ್ವೈತ] ಜೀವಾತ್ಮದ ನಲವತ್ತು ಗುಣಗಳಲ್ಲಿ ಒಂದು : ರೂಪ, ರಸ . . . ಗಾಂಭೀರ್ಯ, ಸೌಂದರ್ಯ . . . ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಸಾ. ೨೭೫). [ಸಂ.]

**ಗಾಂವಟಿ** 'ಗಾವಟಿ' ನೋ.

**ಗಾಂವಟಿಸಾಲೆ** (ನಾ). (ಉಕ). ಹಳ್ಳಿಯ ಪಾಠಶಾಲೆ; ಕೂಲಿಮಠ: ತುಸು ಬೆಳೆದ ನಂತರ ಶ್ಯಾನುಭೋಗರು, ಹೇಳಿ ಅವನನ್ನು ಅಲ್ಲಿಯೇ ಊರ ಹೊರಗಿನ ಗಾಂವಟಿಸಾಲೆಗೆ ಹಾಕಿಸಿದ್ದರು (ಹೊಸಕ್ಷಿ. ೬೭). [ಗಾಂವಟಿ (< ಗಾವಟಿ) + ಸಾಲೆ$_3$]

**ಗಾಂವಠಾಣೆ**, ಗಾವಠಾಣ (ನಾ). (ಉಕ). ೧. ಊರಿನ ಸುತ್ತಲೂ ಇರುವ ಭೂಮಿ. ೨. ಊರಿನವರಿಗೆಲ್ಲಾ ಸಮಾನ ಹಕ್ಕು ಇರುವ ಊರೊಟ್ಟಿನ ಜಮೀನು, —ಭೂಮಿ; ಒಂದು ಗ್ರಾಮಕ್ಕೆ ಸೇರಿರುವ ಪ್ರದೇಶ; ಗ್ರಾಮಸ್ಥಾನ : ಸರಕಾರೀ ಲೆಕ್ಕದಲ್ಲಿ ಎರಡು ಊರು ಎಂದು ಗಣಿಸಲಾಗಿದ್ದರೂ ಅವೆರಡು ಒಂದೇ ಗಾಂವಠಾಣೆಯಲ್ಲಿರುವುದರಿಂದ ಒಂದೇ ಗ್ರಾಮವಾಗಿರುವುದು (ಮನೆಬೆ. ೯೮). **ಗಾವಠಾಣ** : ೨. ಊರಸುತ್ತಲಿನ ಎಲ್ಲ ಜಾಗೆ ಗಾವಠಾಣಾಕ್ಕೆ ಸಂಬಂಧಿಸಿದ್ದು (ಬೆಳಭಾ. ೧೮೫).

[← ಮರಾ. ಗಾಂವಠಾಣ./ ಸಂ. ಗ್ರಾಮಸ್ಥಾನ]

**ಗಾಂವಠೀ** 'ಗಾವಟಿ' ನೋ.

**ಗಾಂವಠೀವಕೀಲ** (ನಾ). (ಉಕ) ದೇಶಭಾಷೆಯಲ್ಲಿ ವಕೀಲಿ ಪರೀಕ್ಷೆ ಮಾಡಿಕೊಂಡಿರುವವನು; ಪೂಟುಲಾಯರು; ಒಳವಕೀಲ (ಕರಾ) : ಪ್ಲೀಡರರು ಇಲ್ಲದಿದ್ದರೂ ಗಾಂವಠೀವಕೀಲರಿದ್ದಾರೆ (ಕೈಹಿರಾ. ೨೭). [ಗಾಂವಠೀ (< ಗಾವಟಿ) + ವಕೀಲ]

**ಗಾಂವಠೀಹಂಚು** (ನಾ). (ಉಕ) ಗ್ರಾಮದ ಕುಂಬಾರರು ತಯಾರುಮಾಡಿರುವ ಹಂಚು; ನಾಡುಹಂಚು : ತಮ್ಮ ಪೂರ್ವಜರ ದೊಡ್ಡದಾದ ಹುಲ್ಲಿನ ಮನೆಯನ್ನು ಗಾಂವಠೀಹಂಚಿನಿಂದ ಹೊದಿಸಿದರು (ಅಬೋಲೀ. ೧೪೪). [ಗಾಂವಠೀ (< ಗಾವಟಿ)+ಹಂಚು$_3$ (< ಪಂಚು$_3$)]

**ಗಾಂವೆ** 'ಗಾವ' ನೋ.

**ಗಾಕ** (ನಾ). ದುಷ್ಟ; ಕೇಡಿ.

ಗಾಕರಗಂಡ = ದುಷ್ಟರನ್ನು ದಂಡಿಸುವವನು; ಒಂದು ಬಿರುದು (?) : ಬಡಗರೆನಾಡ ಕೊಳಲ್ಲೂರ ಗಾಕರಗಣ್ಡ ಬಾಣಗರ ಬೆಳ್ಳಿಗವುಣ್ಡನ ಮಗ ಬಿಟ್ಟಗಾವುಂಡನು (ಮೈಆರಿ. ೧೯೩೩, ೩೭-೬ ; 1179). [< ಕಾಕ]

**ಗಾಗರ**(ನಾ). ಕೊಡ; ಬಿಂದಿಗೆ: ಅನಂತ ಜೀವನದ ಮುಂದೆ ೩೦೦–೪೦೦ ವರ್ಷಗಳ ಜೀವನದ ಮಾತೇನು! ಸಾಗರದ ಮುಂದೆ ಗಾಗರವಿದ್ದಂತೆ ಒಂದು ಕ್ಷಣಿಕ (ಜೀವಾತ್ಮ. ೧೮೨). [← ಹಿಂ. ಮರಾ. ಗಾಗರ್ ./ ಸಂ. ಗರ್ಗರ]

**ಗಾಗಳೆ** (ನಾ). ಗದ್ದಲ; ಗಲಾಟೆ; ಕಳಕಳ: ಭೂತಗಳ ಗಾಗಳವ ಪರಿಹರಿಸಿ ನಿಂದವನ (ಪರಶು. ೧೧–೧); ಶ್ರೀರಂಗಪಟ್ಟಣವನ್ನು ಕುಂಪಣಿಯವರು ತೆಗೆದುಕೊಂಡ ಗಾಗಳದಲ್ಲಿ ನಮ್ಮ ತಾಯಿ, ನನ್ನ ಹೆಂಡತಿ ಸತ್ತು ಹೋದರು (ಮುಸುಗ. ೨೩). [← ಮರಾ. ಗಾಗಣೇಂ ./ ಸಂ. ಘರ್ಘರ]

**ಗಾಗುಳ** (ನಾ). ಒಂದು ಬಗೆಯ ಮಾದಕ ಪಾನೀಯ (?): ಈಂಟಿಸುವಗಾರ್ಗುಳಮಂ ಬೇಂಟಿಯನಿರದೆಯ್ದೆ ಸಮೆವರಾ ಮುಮ್ಮುರಿಯೊಳ್ ಬೇಂಟಂದೋರ್ಪರಲಂಪಿಂ ಕುಂಟಣಿಗಳ್ಕಲ್ಲಪಾಪೆವೋಲ್ಕೈತವದಿಂ (ವೀರವಿ. ೬–೧೨೧). [?]

**ಗಾಜರಗೆಡ್ಡೆ** (ನಾ). = ಗಾಜರು: ಕೆಂಪು ಮೂಲಂಗಿ, ಗಾಜರಗೆಡ್ಡೆ, ಕ್ಯಾರಟ್ಟು (ವ್ಯಿಔಗಿ. ೨೯–೫೫). [< ಗಾಜರು + ಗೆಡ್ಡೆ (< ಗಡ್ಡೆ)]

**ಗಾಜರಿ** 'ಗಾದರಿ' ನೋ.

**ಗಾಜರು** (ನಾ). ಒಂದು ಜಾತಿಯ ಗೆಡ್ಡೆ; ಕ್ಯಾರೆಟ್ಟು. 'ಗಾಜರಗೆಡ್ಡೆ' ಪರಾ. [← ಹಿಂ. ಮರಾ. ಗಾಜರ್]

**ಗಾಜಿ** (ನಾ). ೧. ಕನ್ನಡಿ; ದರ್ಪಣ: ಬಜ್ಜರದ ಗಾಜಿಯೋ ಎನಲ್ ರವಿಯುದಯ ಕಣ್ಗೆಸೆದುದು (ಕವಿಜ. II, ೨೩೬). ೨. ಗಾಜಿನ ಬೊಂಬೆ. [< ಕಾಜು]

**ಗಾಜಿನ** (ನಾ). = ಗಾಜರು: ಗೆಡ್ಡೆಗಳು: ಚೂರ್ಣ, ಕೆಸವೆ, ಗೆಣಸು, ಗಾಜಿನ, ಹೆಗ್ಗೆಣಸು, ಮುಳ್ಳಂಗಿ (ನಮ್ಮನು. ೨೩೭). [?]

**ಗಾಜು** 'ಕಾಜು' ನೋ.

**ಗಾಜುಕಾಗದ** (ನಾ). ಗಾಜಿನ ಪುಡಿಯನ್ನು ಅಂಟಿಸಿದ ಕಾಗದ; ಹೊಳಪು ಕಾಗದ: "ಗಾಜುದೂಳು ಅಂಟಿಸಿದ ಕಾಗದ; ಗಾಜುಕಾಗದ; ಹಂಸಪಟ್ಟಿ" (Glass Paper. ಇಂಕನಿ). [ಗಾಜು (< ಕಾಜು) + ಕಾಗದ]

**ಗಾಜುಗಾರ** (ನಾ). "(ಕಿಟಕಿ, ಮೊ.ಗಳಿಗೆ) ಗಾಜು, ಕನ್ನಡಿ, ಮೊ.ವನ್ನು ಹಾಕುವ ಕೆಲಸದವನು; ಗಾಜುಗಾರ" (Glazier. ಇಂಕನಿ). [ಗಾಜು (< ಕಾಜು) + -ಗಾರ (< -ಕಾಱ)]

**ಗಾಜುಗುಪ್ಪಿಗೆ** (ನಾ). ೧. ಗಾಜಿನ ಸೀಸೆ. ೨. ವಿಶಿಷ್ಟ ರೀತಿಯಿಂದ ತಯಾರಿಸಿರುವ ವಿದ್ಯುಚ್ಛಕ್ತಿಯ ಸಹಾಯದಿಂದ ಬೆಳಕನ್ನು ಕೊಡುವ ಗಾಜಿನ ಬುರುಡೆ; ಬಲ್ಬು: ಮಿಂಚಿನ ಗಾಜುಗುಪ್ಪಿಗೆ ಸೊಡರ್ಸಾಲ್ಗಂಬದೊಳ್ಸಾಲಿಡಲ್ (ಮೈಸೂಮ. ೫–೩).
[ಗಾಜು (< ಕಾಜು) + ಕುಪ್ಪಿಗೆ]

**ಗಾಜುಗೊಪ್ಪು** (ನಾ). ಗಾಜಿನಂತೆ ಹೊಳೆಯುವ ಕೊಪ್ಪು; ಕಿವಿಯ ಮೇಲ್ಭಾಗದಲ್ಲಿ ಧರಿಸುವ ಒಂದು ಆಭರಣ (?): ಕಪ್ಪುರದ ಮೂಗುತಿ ಮುತ್ತಿನ ಗಾಜುಗೊಪ್ಪು ಪಾಲ್ಗೊರೆಯುವೊಲಪ್ಪ ಪಟ್ಟಣಿಗೆ (ಸೂಕ್ತಿಸು. ೮–೪೦೪).
[ಗಾಜು (< ಕಾಜು) + ಕೊಪ್ಪು$_2$]

**ಗಾಜುಗೋಜು** (ನಾ). ಒಂದರೊಳಗೊಂದು ಸೇರಿಕೊಂಡಿರುವುದು, — ಬೆರೆತುಕೊಂಡಿರುವುದು; ಜಟಿಲತೆ; ಅಸ್ತವ್ಯಸ್ತತೆ: ಲಾಜಾಂಗಚೂರ್ಣವ ಕುಂಕುಮಚೂರ್ಣವ ಗಾಜುಗೋಜಾಗಿ ಸೂಸಿದನು (ಭರಜ. ೧೬–೧೦೭); ಓಜೆಯ ಪೌಜು ಗಾಜುಗೋಜಿರದಿದಿರಾಗಿ (ರಾಜಶೇ. ೬–೧೦೪). ೨. ಸುತ್ತು ಮಾತು; ಬಳಸು ನುಡಿ: ಪೂಜೆಯ ತೊಲಗಿಸಿ ಮಂಗಲಾಸನದಿ ಮತ್ತೋಜೆಯೊಳೆಲ್ಲರು ಕುಳಿತು ಭೋಜನಗೈದರೆಂದಾಡಿಬಿಡುವೆನಿನ್ನು ಗಾಜುಗೋಜಿನ ನುಡಿಯೇನು (ಭರಜ. ೪೬–೧೫೧). [< ಗೋಜು$_2$ + ಗೋಜು$_2$]

**ಗಾಜುದೊಡಿಗೆ** (ನಾ). ಗಾಜಿನಿಂದ ಮಾಡಿದ ಒಡವೆ: ಮೃಗಮದಕೆ ಕರ್ದಮಕೆ ಸಂಪಗೆಯಲರ್ಗಳ ಸರಕೆ ಸರವಿಗೊಳ್ಮುತ್ತಿನಮಾಲೆಗೆ ಗಾಜುದೊಡಿಗೆಗಾವುದು ಬಗೆವೊಡೆ ಸಂಪರ್ಕಮಾಂಪ ಭೂಷಣವಿಧಿಯೊಳ್ (ಶಬಶಂ. ೨–೮೧). [ಗಾಜು (< ಕಾಜು) + ತೊಡಿಗೆ (< ತೊಡುಗೆ)]

**ಗಾಜುಬುಡ್ಡಿ**(ನಾ). ಗಾಜಿನ ದೀಪದ ಬುರುಡೆ: ದೀಪಾಲಂಕಾರಗಳಲ್ಲಿ ಉಪಯೋಗಿಸುವ, ಎಣ್ಣೆಬತ್ತಿಗಳನ್ನುಳ್ಳ (ಸಾ. ಬಣ್ಣದ) ಗಾಜುಬುಡ್ಡಿ (Lampion. ಇಂಕನಿ). [ಗಾಜು (< ಕಾಜು) + ಬುಡ್ಡಿ (< ಬುರುಡೆ)]

**ಗಾಜುಮಣಿ** (ನಾ). ಗಾಜಿನಿಂದ ಮಾಡಿದ ಮಣಿ: ಗಾಜುಮಣಿಯಂ . . . ತೋರುವುತ್ಸಾಹದಲಿ ಕಯ್ಯಲಿಹ ರನ್ನಮಂ ಕೆರೆಗೆಸೆವ ಗಾಂಪನಂತೆ (ಶ್ರೀರಾಮಾ. ೭೯೮–೪೭೫). [ಗಾಜು (< ಕಾಜು) + ಮಣಿ$_3$]

**ಗಾಜುಲವಣ** (ನಾ). ಒಂದು ಬಗೆಯ ಉಪ್ಪು: ಗಾಜುಲವಣ ಬಿಡುಲವಣ . . . ಬಿಸಿನೀರಿನಿಂದ ಕದಡಿಕೊಡಲು ಸುಖಪ್ರವೃತ್ತಿಯಹುದು (ಸಕವೈ. ೩೦೩). [ಗಾಜು (< ಕಾಜು) + ಲವಣ]

**ಗಾಜುಲೇಪ** (ನಾ). "ಒಂದು ಲೋಹದ ಮೈಮೇಲೆ ಅದು ತುಕ್ಕು ಹಿಡಿಯದಿರುವುದಕ್ಕಾಗಲಿ ಅಥವಾ ಅಂದ ಕೊಡುವುದಕ್ಕಾಗಲಿ ಲೇಪಿಸುವ ಗಾಜಿನಂಥ ಲೇಪ" (Enamel. ಇಂಕನಿ).
[ಗಾಜು (< ಕಾಜು) + ಲೇಪ]

**ಗಾಜುವಳೆ** (ನಾ). ಗಾಜಿನಿಂದ ಮಾಡಿದ ಬಳೆ, —ಕಡಗ. 'ಗಾಜುವಳೆವೇಱು' ಪರಾ. [ಗಾಜು (< ಕಾಜು) + ಬಳೆ$_3$]

**ಗಾಜುವಳೆವೇಱು** (ನಾ). ಗಾಜಿನ ಬಳೆಗಳ ಗುಂಪು, —ರಾಶಿ, —ಹೇರು: ತದ್ರೋಮಕತಿಯ ಸೋಂಕಿಂದಾ ಮಹಾಪರ್ವತಂ ಗಾಜುವಳೆವೇಱನೆಗ್ಗಿದ ಪಾಂಗಿನಿಂದಂ ಮಹಾಜವದೆ ಶತಚೂರ್ಣಮಾದುದು (ಜಬಪು. ೪೪–೨೩). [ಗಾಜುವಳೆ + ಪೇಱು$_2$]

**ಗಾಟಳಿಸು**, ಘಾಟಳಿಸು (ಕ್ರಿ). ೧. ಬಿರುಸಾಗಿ ಬೀಸು; ವೇಗವಾಗಿ ಬೀಸು: ಗಾ[ಪಾಠಾಂ. ಘಾ]ಟಳಿಪ ಗಾಳಿಯ ಸಿಡಿಲು ಮಿಂಚಿನ ಗಲ್ಲಣೆಯ ಘೋರಾಂಧಕಾರದಲಿ (ಕುವ್ಯಾಅ. ೯–೨೬). ೨. "ತೊಂದರೆ ಪಡಿಸು; ಕಾಡು; ಪೀಡಿಸು" (ಅನಂನಾ). **ಘಾಟಳಿಸು**: ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [?]

**ಗಾಟಿ** 'ಘಾಟಿ' ನೋ.

**ಗಾಟು**$_1$ 'ಘಾಟು$_2$' ನೋ.

**ಗಾಟು**$_2$ (ನಾ). ಕಾವಲು; ರಕ್ಷಣೆ. 'ಮೇಗಾಟು' ಪರಾ. [?]

**ಗಾಠಾಯಿಸು**$_1$ (ಕ್ರಿ). (ಉಕ). ಭೇಟಿಯಾಗು; ಕಾಣು: ನಾನು ಈ ಮೊದಲು ಬಸವಂತಿಯನ್ನು ನೋಡಿರಲಿಲ್ಲವೆಂದಲ್ಲ. ಬಹಳ ಸಾರೆ ಗಾಠಾಯಿಸಿದ್ದೆ (ದೀಪಹ. II, ೧೬೫). 'ಗಂಟುಬೀಳು' ಪರಾ.
[← ಮರಾ. ಗಾಂಠಣೇಂ + -ಇಸು$_3$. / ಸಂ. ಗ್ರಥ್]

**ಗಾಠಾಯಿಸು**$_2$ (ಕ್ರಿ). ಆಚರಿಸು; ನಡೆಸು: ಸುಬ್ಬಣ್ಣಾಚಾರ್ಯರು . . . ನವರಾತ್ರಿಯನ್ನು ಮತ್ತೆಲ್ಲಿಯೋ 'ಗಾಠಾಯಿ'ಸಿರಬೇಕು! (ಸಮುಜೀ. ೨೩೫). [← ಮರಾ. ಘಾಟಣೇ + -ಇಸು$_1$]

**ಗಾಡ**$_1$, ಘಾಡ (ನಾ). ೧. ಹೆಚ್ಚು; ಅತಿಶಯ: ಮಾಡಿಕೊಂಡಲ್ಲಿಂದ ಸೇನೆಯ ಗಾಡದಲಿ ಯಮುನಲ್ಲಿಗೈದಿದ ನೋಡಿರೇ ಯಾ ದುಷ್ಟಮತಿಗಳ ಬಯಕೆಯುನ್ನತಿಯ (ಕುವ್ಯಾಅ. ಓರಿಇ. ೨೬–೭೩); ಪುರದ ಪೆರ್ಬಾಗಿಲೊಳ್ ಗಾಡದಿಂ ಧರ್ಮಗಾಳೆಯನಿರದೆ ಪಿಡಿಸಿ ತಿರುಗಿತು ವಿಜಯದುತ್ಸವದೊಳು (ಜಬಪು. ೪೪–೪೬). ೨. ನಿಶ್ಚಯ; ದೃಢತೆ: ಗಾಢ–ಗಾಡ (ಶಮುದ. ೨೫೫ ಪ್ರಯೋ). **ಘಾಡ**: ೧. ಕಡಲ ಕಡುಹಿನ ಬಹಳ ಲಹರಿಯನೊಡೆಮುಱಿವ ಮಂದರದವೋಲವಗಡಿಸಿ ಹೊಕ್ಕನು ಗಡೆಯ ಘಾಡದ ಹೊದಱ ಹೊಯ್ಲಿನಲಿ (ಕುವ್ಯಾದ್ರೋ. ೨–೬೭). [< ಸಂ. ಗಾಢ]

**ಗಾಡ$_2$** (ನಾ). ಒಂದು ಬಗೆಯ ಬಟ್ಟೆ; ಒರಟಾದ ಬಟ್ಟೆ.
[← ಹಿಂ. ಗಾಢಾ]

**ಗಾಡ$_3$** 'ಗಡ$_5$' ನೋ.

**ಗಾಡ$_4$** (ನಾ). (ಉಕ) ೧. ಕಡೆತದ ಕೆಲಸ; ಕಡಚಲು: ತೋರಾಟಿ :– ಕಟ್ವಗೆ ಗಾಡದ ಕೆಲಸಕ್ಕೆ ಬರುತ್ತದೆ (ಕಭಾಗ. ೪೧). ೨. ಕಡೆತದ ಚಕ್ರ; ಸಾಣೆಹಿಡಿಯುವ ಚಕ್ರ: ಕಂಬಗಳೆಲ್ಲ ಕರೆ ಕಲ್ಲಿನವು. ಗಾಡಕ್ಕೆ ಹಚ್ಚಿ ನುಣುಪುಮಾಡಲ್ಪಟ್ಟಿರುತ್ತವೆ (ಕಭಾಗ. ೪೪೫).
[?]

**ಗಾಡಗೆ** (ನಾ). ಗಡಿಗೆ; ಕೊಡ (?): ಒಕ್ಕಲ[ಲ್ಲಿ] ಎಣ್ಣೆಗೆ ಗಾಡಗೆ ಒಂದು (ಇಅ. XI, ೨೭೪–೩೩; 1080).
[< ಗಡಿಗೆ]

**ಗಾಡದಿ** (ನಾ). ಕಾವಲುಪಡೆ; ರಕ್ಷಕದಳ: ಅವರ ಸಂಗಡ ಯರಡು ಗಾಡದಿ ಶಿಪಾಯಿಗಳ ಕೂಡಿಸಿ (ರಾಜೇಂದ್ರ. ೧೩೧); ಇಲ್ಲಿಂದ ವಂದು ಗಾಡದಿ ಶಿಪಾಯಿಗಳ ಕಳುಹಿಸಿಕೊಟ್ಟು (ರಾಜೇಂದ್ರ. ೩೨).
[← ಮರಾ. ಗಾಡದೀ./ ಇಂ. Guard]

**ಗಾಡನೆ** (ಅ). ಬೇಗನೆ; ಶೀಘ್ರವಾಗಿ; ಜಾಗ್ರತೆಯಾಗಿ: ಜೀಯ ದಿಟವು ಎನುತ ಹೇಳಲು ಗಾಡನೆದ್ದು ಗಜದ ಶಿರದಿ ರೂಢನಾಗಿ ಸೇನೆ ಸಹಿತ ಓಡಿಬರಲು (ಸುಸಾರ. ೫೬–೨). [< ಗಡನೆ]

**ಗಾಡವಲೆ** (ನಾ). ಒಂದು ಬಗೆಯ ಬಲೆ; ಒತ್ತೊತ್ತಾಗಿ ಹೆಣೆದ ಬಲೆ (?): ಬಡಿಗೆವಲೆ ಬಾಚುವಲೆ ಗಾಡ [ಪಾಠಾಂ. ಢ]ವಲೆ, ಗೂಢವಲೆ ಮಡಿಕೆವಲೆ ಮಂದಾಸುವಲೆಯ ಹೊಜೆಗಳ ಬೇಡವಡೆ ನೆರೆದುದು (ಹಚಕಾ. ೫–೮). [ಗಾಡ$_1$ + ಬಲೆ$_1$]

**ಗಾಡಾಯ್ಲ** (ಗು). ಹೆಚ್ಚಾದ; ಅತಿಶಯವಾದ; ಪ್ರಬಲವಾದ: ಗಾಡಾ[ಪಾಠಾಂ. ಢಾ]ಯ್ಲತೇಜದ ದುರುಳದಾನವ ಭಟರು ಬಂದುದು ಕೋಟಿಸಂಖ್ಯೆಯಲಿ (ಕುವ್ಯಾಅ. ೧೨–೨೯).
[ಗಾಡ$_1$ + – ಅಯ್ಲ (< – ಅಯಿಲ$_2$)]

**ಗಾಡಿ$_1$** (ನಾ). ೧. ಚೆಲುವು; ಸೊಬಗು; ಬೆಡಗು: "ಸೊಬಗು ಗಾಡಿ" (ಕರ್ಣಾನಿ.೨೯); "ದೇಸೆಯು ಗಾಡಿಯು ಸೊಬಗಹುದು"(ಕವಿಕಂ.೨೦೨); ಅತನ ರೂಪುಂ ಗಾಡಿಯುಂ ತೇಜಮುಂ ಲಾವಣ್ಯಮುಮಂಕಂಡು (ವಡ್ಡಾರಾ. ೧೧೧–೨); ನಸು ಮಾಸಿ ಪಾಡಱಿದ ರೂಪಿನೊಳುಣ್ಮುವ ಗಾಡಿ ನಾಡೆ ಕಣ್ಗೆಡಱ ತೊಡಂಕಿ ಪೀಱಿದ ಕುರುಳ್ಗಳೆ ಚಿತ್ತದೊಳಾದ ಬೇಸಱಂ ನುಡಿವವೊಲಾಗೆ (ಪಂಪಭಾ. ೧೩–೯೯); ನಾಡಾಡಿಯಲ್ತು ರೂಪಿನ ಗಾಡಿ ಯಿದೆಲ್ಲಿರ್ದು ಬಂದುದೆನುತಂ (ಕಾದಂಪೂ. ೯೮೭); ನಿಮ್ಮ ಜವ್ವನದ ಸೊಕ್ಕು ರೂಪಿನ ಗಾಡಿ ಜಾಣತನದೊಪ್ಪವೇತಕ್ಕೆ ಯೋಗ್ಯಂ (ಹಚಕಾ. ೭–೧೮). ೨. = ಗಾಡಿಕಾರ್ತಿ೧: ಜೋಗುಳವ ಹಾಡುವ ಗಾಡಿಯರಲಿ . . . ಕಪಿ ನೋಡಿದನು ಜಾನಕಿಯ (ತೊರರಾ. ೫–೨–೧೯); ನಾರಿಯರ ರೂಹುಗಳ ನಂಜಿನ ರಜದಿ ಪುಟವಿಟ್ಟು ಕಾರಮಿಂಚುಮನವರ ಕಣ್ಣೊಳು ಸೇರಿಸಿದನೆನೆ ಗಾಡಿಯರು ಕಾಂತಾರಚರ್ಯರು ಮೆಱೆದರಲ್ಲಿ ಪುಳಿಂದ ರೊಗ್ಗಿನಲಿ (ಸಾಳ್ವಭಾ. ೫–೭). [ದೇ. ‖ ತಮಿ. ಚೇಡು]

**ಗಾಡಿ$_2$** (ನಾ). ೧. ಇಂದ್ರಜಾಲ; ಗಾರುಡಿ. 'ಗಾಡಿಕಾಱ$_2$' ಪರಾ. ೨. ಮೋಸ; ವಂಚನೆ. 'ಗಾಡಿಗ$_2$' ಪರಾ.
[< ಗಾರುಡಿ]

**ಗಾಡಿ$_3$** (ನಾ). ೧. ಜನರನ್ನಾಗಲೀ ಸಾಮಾನುಗಳನ್ನಾಗಲೀ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸಲು ಉಪಯೋಗಿಸುವ ಚಕ್ರಗಳುಳ್ಳ ವಾಹನ; ಬಂಡಿ; ಶಕಟ; ಚಕ್ಕಡಿ (ಉಕ): ದಿವ್ಯಮರ ಕಳದ ಗಾಡಿಗಳೊಳಿಳಿವ ಕಿರಿವಂಚಗಳು ಬರುತಿದ್ದುವು (ಪರಶು. ೩–೫೬); ಮೊದಲು ಮಾನವನಿಗೆ ವಾಹನಗಳಿರಲಿಲ್ಲ. ಎತ್ತಿನಗಾಡಿ, ಮೋಟಾರುಬಂಡಿ . . . ಇವೆಲ್ಲ ಕ್ರಮವಾಗಿ ಬಳಕೆಗೆ ಬಂದುವು (ಶಿಕ್ಷದ. ೧೨೧); ನಾಳೀ ಐದುಗಂಟೆ ಗಾಡಿಯಲ್ಲಿ ಕಲ್ಕತ್ತೆಗೆ ಹೋಗಿ ಟ್ರೈಪ್ ಮಾಡಿಸಿಕೊಂಡು ಬಾ (ಬಾಣಅ. ೪ ಕಥಾಮುಖ). ℙ ಈಗ ಇದನ್ನು ಎಲ್ಲ ಬಗೆಯ ವಾಹನಗಳಿಗೂ ಅನ್ವಯಿಸುತ್ತಾರೆ. ೨. (ಉಕ) ಹಿಂದೆ ನಿಜಾಮರ ಆಳಿಕೆಯಲ್ಲಿ ಚಲಾವಣೆಯಲ್ಲಿದ್ದ ಒಂದು ಬೆಳ್ಳಿಯ ನಾಣ್ಯ; ನೈಜಾಮರೂಪಾಯಿ: ೧೦೦ ರೂ. ಗಾಡಿ ಹೆಚ್ಚಾಗಿ ಕೊಡುವರು ಪೋಷಕರು . . . ೨೫ ರೂ. ಗಾಡಿ ಕೊಡುವರು, ಆಜೀವಸದಸ್ಯರು (ಮೋಕ್ಷದೀ. vi). ೩. ಹೆಂಗಸರು ಮೂಗಿನಲ್ಲಿ ಧರಿಸುವ ದುಂಡಾದ ಆಭರಣ; ನತ್ತು: ಸಖಾರಾಮ ಪಂತರು . . . ಮುತ್ತು ಕೋದ ತೋಡೆ,ಡಬ್ಬೂ, ಎರಡು ದುಡ್ಡಿನಾಕಾರದ ಗಾಡೀ ಕೊಟ್ಟರು (ದೀಪಹ. I, ೭೩). 'ಗಾಡಿನತ್ತು' ಪರಾ.
[← ಹಿಂ. ಮರಾ. ಗಾಡಾ, ಗಾಡೀ]

**ಗಾಡಿ$_4$** (ನಾ). ಒಂದು ಮರದ ತುಂಡನ್ನು ಇನ್ನೊಂದು ಮರದ ತುಂಡಿನ ಜೊತೆ ಸೇರಿಸಲು ಅದರಲ್ಲಿ ತೋಡುವ ಹಳ್ಳ: ಗಾಡಿ ತೋಡದೆ ಕಿಟಕಿ ಮಾಡಲಾಗದು (ರೂಢಿ). [? / ತೆಲು. ಗಾಡಿ]

**ಗಾಡಿಕಟ್ಟು** (ಕ್ರಿ). ೧. ಗಾಡಿಯನ್ನು ಪ್ರಯಾಣಕ್ಕೆ ಸಿದ್ಧಗೊಳಿಸು; ಬಂಡಿಹೂಡು: ಮೂರಕ್ಕೆ ಎದ್ದು ಗಾಡಿಕಟ್ಟಿಕೊಂಡು ಹೋಗು (ಮುನಿಮಾ. ೧). ೨. (ಆಲಂ) ಸಾಯು: ಅವನು ಸಣ್ಣವಯಸ್ಸಿನಲ್ಲೇ ಗಾಡಿಕಟ್ಟಿದ (ರೂಢಿ). [ಗಾಡಿ$_3$ + ಕಟ್ಟು$_1$]

**ಗಾಡಿಕತ್ತರಿ** (ನಾ). ಬಂಡಿಹೊಡೆಯುವವನು ಬಂಡಿಯಲ್ಲಿ ಕುಳಿತುಕೊಳ್ಳುವ ಸ್ಥಳ; ಸಿಪಾಯಿದೆಬ್ಬೆ; ಮೂಕಿ: ಸಾಲಂಕೃತನಾಗಿದ್ದ ಸಾರಥಿ ಬಚ್ಚನು ಗಾಡಿಕತ್ತರಿಯಿಂದ ಕೆಳಕ್ಕೆ ನೆಗೆದು, ಎತ್ತಿನ ಕೊರಳು ಬಿಚ್ಚಿ . . . ಸಮಾಚಾರ ತಿಳಿಸಿದನು (ಮಲೆಮ. ೪೫೭).
[ಗಾಡಿ$_3$ + ಕತ್ತರಿ$_2$]

**ಗಾಡಿಕಾತಿ** 'ಗಾಡಿಕಾರ್ತಿ' ನೋ.

**ಗಾಡಿಕಾರ** 'ಗಾಡಿಕಾಱ$_2$' ನೋ.

**ಗಾಡಿಕಾರ್ತಿ, ಗಾಡಿಕಾತಿ, ಗಾಡಿಕಾಱತಿ, ಗಾಡಿಗಾತಿ, ಗಾಡಿಗಾರ್ತಿ** (ನಾ). ೧. ಸೊಗಸುಗಾರ್ತಿ; ಚೆಲುವೆ; ಬೆಡಗಿ: ರಿಪುಕುರಂಗ ಕಂಠೀರವನ ಕಟಿತಟಮೊಲ್ದು ನೋಡುವ ಗಾಡಿಕಾರ್ತಿಯರ ಕಣ್ಗೆ ಕಾಮ[ನ]ಡ್ಡಣದಂತೆ ದೊಡ್ಡಿತ್ತಾಗಿ ಮಿಱುವುದ್ವೃತ್ತ ವೃತ್ತತೆಯ [ನೀಱು]ಕೊಂಡಂತುದ್ವೃತ್ತಂಗಳಾದುವು(ಪಂಪಭಾ.೨–೩೯ ವ); ಬಾಗಿಲ ಕೆಲದೊಳ್ ಸೊಗಯಿಪ ಗುಣನೆಗಳೊಳ್ ನಿಂದ ಗಾಡಿಕಾರ್ತಿಯರದೇಂ ಮನಂಗೊಳಿಸಿದರೋ (ಶಾಂತಿಪು. ೩–೧೮); ಜಲಕೇಳಿಯಾಡುವ ಗಾಡಿಕಾರ್ತಿಯರಂ ಕಾಡಲೆಂದೊಳ್ಳೆಗಳಂ ತಂದು ಬಿಡಿಸಿ (ಪಂಚತಂ.೧೨೩–೧೯); ಗಾಡಿಕಾರ್ತಿ, ಬೇಟಕಾರ್ತಿ (ಶಮದ. ೨೦೮ ಪ್ರಯೋ). **ಗಾಡಿಕಾತಿ**: ೧. ಜಾತಿಪದ್ಮಿನಿ ನಿನ್ನ ಮೊಮ್ಮನ ವಧು ಗಾಡಿಕಾತಿಯ ನೋಡವ್ವ ತಾಯೆ (ನೋಹತ. ೪೨–೬೦). ೨. ವೇಶ್ಯೆ; ಗಣಿಕೆ: ಮುದ್ದುಮೊಲೆಯ ದೂಡಿಪ ಬೆಳಗಾಯಿ ಬೊಗರಿಮೊಲೆಯ ಚೆಲ್ವ ಗಾಡಿಕಾತಿಯರ್ಕೈದಿದರು (ಕಂಸವಿ. ೯–೮೦); ಪಾಡುವಕುಣಿವ ಬಾಜಿಪ [ಬಣ್ಣನೆ]ವಾತಾಡುವ ಪರಿಹಾಸಗೈವ ಗಾಡಿಕಾತಿಯರು ಗಣನೆಯಿಲ್ಲದೆ ಜೋಡುಗೂಡಿರುವರು ಕೂರ್ಮೆಯೊಳು (ಹದಿಬ. ೧–೧೭). **ಗಾಡಿಕಾಱತಿ**: ೧. ಭಾರತಿ ಮೊದಲಾದ ಸುರವೆಣ್ಗಳೊಳು ಗಾಡಿಕಾಱತಿ ರೂಪಯೌವನದಿ ಕೀರ್ತಿವಡೆದಿರ್ದ ರತಿ ಜಗನ್ಮೋಹನಮೂರುತಿ ಕಂಗೊಳಿಸಿದಳು (ಮೋಹತ. ೧೩–೨೨). **ಗಾಡಿಗಾತಿ**: ೨. ತಮ್ಮ ಗಾಡಿಗಾತಿಯ ಸಂಗ ಜೋಕೆ(ಪಾಂಡಚ.೩೧–೮); ಆಕೆ ಚೆಲುವೆ, ಮಾತುಗಾರ್ತಿ, ಗಾಡಿಗಾತಿ–ಎಲ್ಲ ನಿಜವೇ (ಗೊಂಚಕು.೪೪);

ಗಾಡಿಗಾತಿ ನೋಡೆ ಮಗುಳು ನಾಡುದೊರೆಗೆ ಬೇಡ ಪೊಗಳು (ಕೋಹಿನೂ. ೫೪). **ಗಾಡಿಗಾರ್ತಿ :** ೨. ರಂಜಿಸುವರಲ್ಲಿಯ ರೂಢಿಯು ಗಾಡಿಗಾರ್ತಿಯರ್ (ಪುಷ್ಪಪು. ೨–೭೭).

[ಗಾಡಿಕಾಱ$_1$ + – ತಿ$_1$ (< – ಇತ್ತಿ)]

**ಗಾಡಿಕಾಱ$_1$**, ಗಾಡಿಗಾರ, ಗಾಡಿಗಾಱ$_1$ (ನಾ). ೧. ಸೊಗಸುಗಾರ; ಚೆಲುವ; ಸುಂದರ: "ನೀಱರೊಳ್ ಗಾಡಿಕಾಱರ್" (ಕರ್ಣಾನಿ. ೪೦); ಹಾಡಿ ಹೊಗಳಿ ಹರಸಿಕೊಂಡು ಮಾಡಲೊಬ್ಬ ಮಡಕೆಗಳನು ನೋಡ ನೋಡನೊಬ್ಬ ಗಾಡಿಕಾಱನು (ಅವಚಂ. ೨೯೯–೧೩೧೪); ಆಡಿದ ಶಿವನ ವಾಕ್ಯವ ಕಾಣಬೇಕೆಂದು ನೋಡಿದಳಾತ್ಮದೃಷ್ಟಿಯಲಿ ಗಾಡಿಕಾಱನ ಕಂಡು ಘನಪರಿತೋಷವ ಮಾಡಿದಳಂತರಂಗದಲಿ (ಮೋಹತ. ೮–೪೧); ಮುಂಬಾಯು ಕರ್ಪೂರದ ವೀಳೆಯದಿಂದ ಕಣ್ಣಿಂಬಾದನಾ ಗಾಡಿಕಾಱ (ಭರಚ. ೧–೩೫). ೨. ವಿಟಪುರುಷ : ಪೂಗಣೆಯ ಹೋರಟೆಗೆ ತರಹರಿಸದಬಲೆ ನೀನೀಗ ನೋಟದ ಹಂಬಲಂ ಬಿಟ್ಟು ಹೃನ್ಮಧ್ಯಕೀ ಗಾಡಿಕಾಱನಂ ತಂದು ನೆರೆದಪೆನೆಂದು ಕಣ್ಮುಚ್ಚಿ ಜಾನಿಸಿದೊಡೆ ಈ ಗಲಭೆಯೊಳಗಪ್ಪುದೇ ಚಿತ್ತಶುದ್ಧಿ (ಚಬಪು. ೧೯–೪೦). **ಗಾಡಿಗಾರ :** ೧. ಗಾಡಿಗಾರ ತಾವರೆಯ ಎಸಳಿನ ಮೋಡಿಯ ಮಾಟಕ್ಕಿಂತಲೂ ನಿನ್ನ ಕೈಕಾಲ್ ಬೆರಳುಗಳ ಮಾಟವ ನೋಡಿ ಹೊಳೆಯುವುದು–ಕೈವಾಡದವರ ಕೈಚಳಕದ ಕುಸುರಿನ ಮೇಲುಪಂಕ್ತಿ (ಉಯ್ಯಾಲೆ. ೯೭–೧೧). **ಗಾಡಿಗಾಱ$_1$ :** ೧. ನೋಡಿರಯ್ಯ . . . ವರವನೀವ ಗಾಡಿಗಾಱ ಹನುಮನ್ನ (ಪುರಂದ. ೪–೩೭ ಅನುಪಲ್ಲವಿ). [ಗಾಡಿ$_1$ + – ಕಾಱ]

**ಗಾಡಿಕಾಱ$_2$**, ಗಾಡಿಕಾರ, ಗಾಡಿಗಾಱ$_2$ (ನಾ). ೧. ಗಾರುಡಿಗ; ಐಂದ್ರಜಾಲಿಕ; ಮಾಟಗಾರ: (ಕ). ೨. ಮೋಸಗಾರ; ಕಪಟಿ; ವಂಚಕ: ಎಂಥಾ ಗಾಡಿಕಾ [ಪಾಠಾಂ. ಗಾ] ಱನೆ ಕೃಷ್ಣಯ್ಯ ಇನ್ನೆಂಥಾ ಗಾಡಿಕಾ[ಪಾಠಾಂ. ಗಾ]ಱನೆ (ಪುರಂದ. ೧–೧೭೦ ಪಲ್ಲವಿ). **ಗಾಡಿಕಾರ :** ೧. ದೇವಾ! ಕೃಷ್ಣಾ! ಅಂತಿಮವಾಗಿ ನಿನಗೆ ಅಸಾಧ್ಯವಾದುದಾವುದು? ಹೇಳಿ ಕೇಳಿ ನೀನು ಗಾಡಿಕಾರ– ಪವಾಡಪುರುಷ! (ಪರಪ. ೧೩೪). **ಗಾಡಿಗಾಱ$_2$ :** ೨. ಮೇಲಿನ 'ಪುರಂದ' ಪ್ರಯೋಗದ ಪಾಠಾಂತರವನ್ನು ನೋಡಿ. 'ಗಾಡಿಗ$_2$' ಪರಾ.

[ಗಾಡಿ$_2$ + – ಕಾಱ]

**ಗಾಡಿಕಾಱತಿ** 'ಗಾಡಿಕಾರ್ತಿ' ನೋ.

**ಗಾಡಿಕೆ** (ನಾ). ೧. ಚೆಲುವು; ಸೊಬಗು : ಗಾಡಿಕೆಯಿಂದೊಪ್ಪುವ ಭುಜಪೂಜೆಯ ವೀರನಿವಾಳಿಯ ಬಿರುದಿನೇಳ್ಗೆಯ ತರದ ಡೌಡೆಯ (೧೦ಶ. ೬–೫೫ ವ). ೨. ರೀತಿ; ಬಗೆ: ನೋಡಿರಿವರಿಗೆ ಶಿವನ ಲಾಂಛನಮದಿಲ್ಲಿವರ ಗಾಡಿಕೆಯ ಪೊಸತು ಭವಿಗಳೊ ಕಾಣಬಾರದೆಂದಾಡಲವನೆಲ್ಲವಂ ಕೇಳ್ದವರ್ ಕಡು ಕೋಪದಿಂದೆ . . . ಶಾಪಿಸುವರು (ಚಬಪು. ೬೩–೪). [ಗಾಡಿ$_1$ + – ಕೆ]

**ಗಾಡಿಗ$_1$** (ನಾ). ಸೊಗಸುಗಾರ; ಚೆಲುವ. 'ಗಾಡಿಗತನ$_1$' ಪರಾ.

[ಗಾಡಿ$_1$ + – ಗ$_2$]

**ಗಾಡಿಗ$_2$** (ನಾ). ೧. ಗಾರುಡಿಗ; ಮಾಟಗಾರ; ಮಂತ್ರವಾದಿ; ಐಂದ್ರಜಾಲಿಕ : ಮೂಡುವಟವುಟದರ್ಶನೆಗಳಂ ಮಾಡಿ ಹೋದನು ತೊಲಗವಾತನು ಮಾಡುತಿರ್ದಡಿದಕ್ಕೆ ಮುಂದಣ ಕಾರ್ಯವೇನಹುದೊ ಗಾಡಿಗನನಿರಲೀಸಲಾಗದು (ಬಸಪು. ೪೩–೫೨); ಉತ್ಸವದ ವೇಳೆ ಗಾಡಿಗನ ವೇಷವನ್ನೂ ಹಾಕುತ್ತಾರೆ (ನನ್ನೂರು. ೨). ೨. ಮೋಸಗಾರ; ವಂಚಕ : ಗಾಡಿಗರೊಡನಾಡಿ ಜೀನನಳಿದು ತುಪ್ಪವ ಮಱೆದೆ (ಅವಚಂ. ೧೯೩–೮೭೦); ತೋಡುವ ಹೆಗ್ಗಣ ಮಾಳಿಗೆಯೆಂದಡೆ ಮಾಣದು ಗಾಡಿಗ ದೂಷಕರಾಡಬೇಡ ಎಂದಡೆ ಮಾಣರು (ಬಸಹೆ. ೪೬–೧೨೨); ನೋಡಲಾಗದು ಜೂಜನಾಡುವ ಗಾಡಿಗನನೆಂದರ್ಧಚಂದ್ರಾಜೂಡನೊಲ್ಲದೆ ಬಿಟ್ಟನೇ ವ್ಯಸನಾರ್ಥದಿಂ ಜೂಜನು (ಬಸಪು. ೪೪–೬೪). ೩. ಒಂದು ಕ್ಷುದ್ರದೇವತೆಯ ಹೆಸರು : ಗಾಡಿಗ ಡಿಂಬು ಗಂಗೆ . . . ಮನುಷ್ಯರ ಪಿಡಿದು ಪೀಡಿಸಿ ತಮ್ಮ ಬಸುರ್ಗೆ ಕಾಣದೆ ಈಡಾಡಿದ ಕೂಳಂಬಲಿಯನಾಯ್ದು ಕುಱುಕುವ ಹೇಸಿದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ (ಬಸವ. ೫೫೬). [ಗಾಡಿ$_2$ + – ಗ$_2$]

**ಗಾಡಿಗತನ$_1$** (ನಾ). ಚೆಲುವು; ಸೊಬಗು : ಅಂತರಿಸುತಿದೆ ಕಾಡಿಗೆಯ ಗಾಡಿಗತನದ ಸೌಭಾಗ್ಯ (ತೊರರಾ. ೬–೧೨–೩೪).

[ಗಾಡಿಗ$_1$ + –ತನ]

**ಗಾಡಿಗತನ$_2$** (ನಾ). ೧. ಕಣ್ಕಟ್ಟು; ಇಂದ್ರಜಾಲ. ೨. ಮೋಸ; ವಂಚನೆ: ಹಿತ್ತಿಲದಲ್ಲಿನ ಗುಡಿಸಲೊಳಗೆ ಆಗೇರ ಎಂಕೂನ ಗಾಡಿಗತನ ಸುರುವಾಗಿತ್ತು (ಮೂರುದಾ. ೨೩೯). [ಗಾಡಿಗ$_2$ + - ತನ]

**ಗಾಡಿಗಲಿ** (ಕ್ರಿ). ಬೆಡಗನ್ನು ಕಲಿ: ಗಾಡಿಗಲಿವ ನಡೆ ಗನ್ನವೇಱುವ ನುಡಿ ಮೋಡಿದೋಱುವ ಮುದ್ದುನೋಟ (ಹದಿಬ. ೬–೨೧).

[ಗಾಡಿ$_1$ + ಕಲಿ$_1$ (< ಕಲ್$_1$)]

**ಗಾಡಿಗಾತಿ** 'ಗಾಡಿಕಾರ್ತಿ' ನೋ.

**ಗಾಡಿಗಾರ** 'ಗಾಡಿಕಾಱ$_1$' ನೋ.

**ಗಾಡಿಗಾರ್ತಿ** 'ಗಾಡಿಕಾರ್ತಿ' ನೋ.

**ಗಾಡಿಗಾಱ$_1$** 'ಗಾಡಿಕಾಱ$_1$' ನೋ.

**ಗಾಡಿಗಾಱ$_2$** 'ಗಾಡಿಕಾಱ$_2$' ನೋ.

**ಗಾಡಿಗಾಱ$_3$** (ನಾ). = ಗಾಡಿಯಾಳು : ಹಯವ ಪಿಡಿದು ಗಾಡಿಕಾಱನಾಗಿಪ್ಪನ ಭಯದಿಂದ ಬಲಿಯ ಬಾಗಿಲ ಕಾಯಿದವನ (ಪುರಂದ. ೧–೧೦೧–೫). [ಗಾಡಿ$_3$ + –ಕಾಱ]

**ಗಾಡಿಚಟ್ಟೆ** (ನಾ). ಗಾಡಿಯೊಳಗೆ ಒರಗಿ ಕುಳಿತುಕೊಳ್ಳುವ ಮರದ ಪಟ್ಟೆ, —ಚೌಕಟ್ಟು : ಎತ್ತಿನ ಗಾಡಿಯಲ್ಲಿ ಗಾಡಿಚಟ್ಟೆ ಪ್ರಯಾಣಕ್ಕೆ ಅನುಕೂಲಕರವಾಗಿರಬೇಕು (ರೂಢಿ).

[ಗಾಡಿ$_3$ + ಚಟ್ಟೆ$_1$]

**ಗಾಡಿದಾರಿ** (ನಾ). (ಎತ್ತಿನ) ಬಂಡಿಗಳು ಓಡಾಡುವ ದಾರಿ; ಹಳ್ಳಿ ರಸ್ತೆ : ನಮ್ಮ ಹಳ್ಳಿ ಗಾಡಿದಾರಿಯಲ್ಲಿ ನಾಲ್ಕುಮೈಲಿ ದೂರವಿದೆ (ರೂಢಿ). 'ಕಾಲುದಾರಿ' ಪರಾ. [ಗಾಡಿ$_3$ + ದಾರಿ]

**ಗಾಡಿದಿ** (ನಾ). ಕತ್ತೆ; ಗಾರ್ದಭ. 'ಗಾಡಿದಿತನು' ಪರಾ.

[← ತೆಲು. ಗಾಡಿದ]

**ಗಾಡಿದಿತನು** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ : ಹಸ್ತಗಳನ್ನು ಧ್ವನಿಪೂರ್ವಕವಾಗಿ ತಟ್ಟಿಕೊಂಡು ಯೆರಡುಪಾದಗಳ ಹಿಂದಕ್ಕೆ ಪ್ರತ್ಯೇಕವಾಗಿ ಚಾಚುವುದು ಅವುದು ಅದು ಗಾಡಿದಿತನು ಯೆಂಬುದು (ಖಡ್ಗಟೀ. ೪–೪೦). [ಗಾಡಿದಿ + ತನು]

**ಗಾಡಿನತ್ತು** (ನಾ). ಹೆಂಗಸರು ಮೂಗಿಗೆ ಹಾಕಿಕೊಳ್ಳುವ ದುಂಡಾದ ಒಂದು ಆಭರಣ; ಬೆಲೆಬಾಳುವ ಮೂಗುತಿ; "ಕಿಮ್ಮತ್ತಿನ ನತ್ತು" (ಜಾನಕೋ. ೪೭). [ಗಾಡಿ$_3$ + ನತ್ತು$_3$]

**ಗಾಡಿಯಮ್ಮ** (ನಾ). ಒಬ್ಬಾತನ ಹೆಸರು : ಗಾಡಿಯಮ್ಮನಾ ಬಾಱಿಂ ಪರಿಪಾಳಿಸಿ ನಿಲೆ ಪಡೆದೊಂ (ಎಇ. VII, ೨೧೩–೧೫ ; 874).

[ಗಾಡಿ$_1$ + ಅಮ್ಮ$_1$]

**ಗಾಡಿಯಾಳು** (ನಾ). ಬಂಡಿಹೊಡೆಯುವವನು; ಬಂಡಿಯ ಚಾಲಕ: 'ಹೊಡೆದಲ್ಲಿ ಹೋಗದಿದ್ದರೆ, ಹೋದಲ್ಲಿ ಹೊಡೆಯುವ' ಗಾಡಿಯಾಳಿನ (ಸು)ಸೂತ್ರಕ್ಕೆ ಶರಣಾಗಿ . . . ಕುಳಿತುಬಿಟ್ಟಿದ್ದರು (ರೂಪಸಂ. ೫೫). [ಗಾಡಿ$_3$ + ಆಳು$_3$ (< ಆಳ್$_3$)]

**ಗಾಡಿವಡೆ** (ಕ್ರಿ). ಸೊಬಗನ್ನು ಹೊಂದು; ಚೆಲುವಾಗು: ಗಾಡಿವಡೆದ ಬಳುಳದ ಗೂಡಾರದೊಳಂ (ಕಬ್ಬಿಗಾ. ೨೩೮); ಜಾಣ್ಗಾಡಿವಡೆದ ದಂಪತಿಗಳಿಂ ರತಿಗಳಿಂ ನಲಿವ ಚಕ್ರಂಗಳಿಂದೆ . . . ಬನಮೆಸೆದಿರ್ದುದು (ಚಿಬಪು. ೧೧-೨೪). [ಗಾಡಿ$_1$ + ಪಡೆ$_1$]

**ಗಾಡಿವತಿ** (ನಾ). = ಗಾಡಿಕಾರ್ತಿ೧: ಅಂಬೆಯಂಬಿಕೆ ಗಾಡಿವತಿಯುಂಬಾಲೆ ಸಹ ನಿಜನಾಡಿಗೈದಿದ ಭೀಷ್ಮನು (ಜನಭಾ. ೩-೩೩). [ಗಾಡಿ$_1$ + -ವತಿ$_2$]

**ಗಾಡಿವೆಱು** (ಕ್ರಿ). = ಗಾಡಿವಡೆ: ಒಂದೆಡೆ ಸುರೇಂದ್ರಸೌಂದರಿಯ ರಾಟದಿಂ ಗಾಡಿವೆತ್ತದೇಂ ಗಗನಮಂಡಲಂ ನೆಱೆಯೆ ಶೋಭೆಯಂ ಪೆತ್ತುದೋ (ಆದಿಪು. ೭-೫೮); ಆ ರಾಜಸಭೆ ಲೆಪ್ಪದೊಲ್ ಗಾಡಿವೆತ್ತಿರ್ದುದು (ಭಾವಚಂ. ೭-೮). [ಗಾಡಿ$_1$ + ಪೆಱು$_1$]

**ಗಾಡಿಸು,** ಘಾಡಿಸು (ಕ್ರಿ). ೧. ಬಿಗಿಯಾಗು; ಬಲವಾಗು; ಹೆಚ್ಚಾಗು: ಜಾಡಿಸಲು ಜಾಡಿಸಲು ಬಿಗುಹತಿಗಾಡಿ[ಪಾಠಾಂ. ಢಿ]ಸಿತು ಕೊಡಹಿದೊಡೆ ಮಿಗೆ ಮೈಗೂಡಿ ಬಿಗಿದುದು (ಕುವ್ಯಾಅ. ೧೩-೩೫); ಗಾಡಿಸಿದ ನೃಪಲಕ್ಷಣದ ಚಂದ್ರಹಾಸನಂ ನೋಡಿ ವಿಸ್ಮಿತನಾಗಿ . . . ಎಂದನಾ ದುಷ್ಟಬುದ್ಧಿ ವಿನಯದೊಳಾ ಕುಳಿಂದನೊಡನೆ (ಜೈಮಿಭಾ. ೨೯-೩೪). ೨. ಹರಡು; ವ್ಯಾಪಿಸು; ಆವರಿಸು: ಜೋಡಿಗಳ ಜಯರವದ ದೈತ್ಯವಿಭಾಡಸೂಕ್ತದ ವಿಗಡ ಬಿರುದು ಪವಾಡಗಳ ಪಾಠಕರ ಗಡಬಡೆ ಗಾಡಿಸಿತು ನಭವ (ಕುವ್ಯಾಸ. ೨-೫೩); ಅಡಲೇನದನಿಂದ್ರಜಂಭರ ಜೋಡಿ ಗಲಹವಿದೆನಲು ಗಗನವ ಗಾ[ಪಾಠಾಂ. ಘಾ]ಡಿಸಿತು ರಣರಭಸವಾ ರಣರಂಗ ಭೈರವನ (ತೊರರಾ. ೩-೧೦-೨೦). ೩. ಹೊಡೆ; ಬಾರಿಸು: ಪಂಕಜ ಮುಖಿಯರು ಗಾಡಿಸುತಿಹ ಗಂಟೆ ಸಂಕವನಾರಾಧ್ಯನಿಚಯ ಹೂಂಕಾರ ಶೋಣಿತಪುರವರ ದುರಿತಭಯಂಕರವಾಗಿ ಕೇಳಿಸಿತು (ಮೋಹತ. ೨೦-೧೯). ೪. ಮೇಲೆಬೀಳು; ಆಕ್ರಮಿಸು: ತುಡುಕುವಂಕುಶದಿಂದ ಮುನ್ನಿಳಿಯೊಡೆಯೆ ಗಜ ಗಾಡಿ[ಪಾಠಾಂ. ಢಿ]ಸಿದವರಸರ ಬಿಡುಹುತಡೆದೆಡ ಗಲಸ ಬಗೆದುವು ವಿಗಡ ಪಾಯದಳ (ಕುವ್ಯಾಭೀ. ೨-೨). **ಘಾಡಿಸು:** ೨. ರಜೋಗುಣದುರುಳಿಯಾದುದು ಲೋಕವೆನೆ ಘಾಡಿಸಿತು ಪದಧೂಳಿ (ಕುವ್ಯಾದ್ರೋ. ೪-೫೮); ಮುನಿತರ್ಕದ ಘಡಾವಣೆ ಘಾಡಿಸಿದುದಾ ಯಜ್ಞ ಮಂಟಪವ (ತೊರರಾ. ೧-೭-೪೫); ಸಡಗರದ ಸೌರಂಭದಲ್ಲಿ ಕೆನ್ನೆಯ ಮೇಲೆ ಕೈ ಎಳೆದುಕೊಂಡರೆ ಆಗಲೆ ಘಡಾವಣೆ ಘಾಡಿಸಿರುತ್ತದೆ (ಗಾಳಿಪ. ೭೭). ೫. ತುಂಬು; ಭರ್ತಿಯಾಗು: ಭೂರಿಪಟ್ಟಿಗೆ ಘಾಡಿ[ಪಾಠಾಂ. ಪೂರಿ]ಸಿತು ರಥವ (ಕುವ್ಯಾಗ. ೪-೧೩). [ಗಾಡ$_1$ + -ಇಸು$_3$]

**ಗಾಢ** (ಗು). ೧. ಹೆಚ್ಚಾದ; ಅತಿಶಯವಾದ; ಬಲವಾದ; ದೃಢವಾದ; ಭದ್ರವಾದ: ಎರಡುದೋಜದ ಗಾಢಭಕ್ತಿಯ ಭರದ ಲವಲವಿಕೆಯಲಿ ನಿಜಮಂದಿರವ ಹೊಱವಂಡುತ್ತ ಕಂಡನು ವಿದುರನಚ್ಯುತನ (ಕುವ್ಯಾಉ. ೮-೬); ಅವನುರುದೀಪ್ತಿಗೆ ಕೀರ್ತಿಗೆ ರವಿರಾಜರ್ಕಂದಿ ಬಲ್ಕಱುಂಬಿದ ದೆಸೆಯಿಂದವಧಿಯನೆಂದುಂ ಕಾಣದೆ ತವೆ ರಾಹು ಗ್ರಹಣಗಾಢಪೀಡಿತರಾದರ್ (ಹವ್ಮಿಾರ. ೨-೫೩); ಅವರು . . . ಎಂದೆಂದಿಗೂ ಅತ್ಯಂತ ಗಾಢಪ್ರೇಮದಿಂದ ನಮ್ಮೊಡನೆ ವರ್ತಿಸುವರು (ಗ್ರಂಥಾಲ. ೨). 'ಗಾಢಾಂಧಕಾರ' ಪರಾ. ೨. ಮುಳುಗಿರುವ; ಲೀನವಾದ; ಮಗ್ನವಾದ. (ನಾ). ೩. ಹೆಚ್ಚಳ; ಅತಿಶಯ: ಕಲ್ಪದ ಕಡೆಯ ಕಡಲಿನ ಗರುವಿಕೆಯ ಗಾಢದಲಿ ನಡೆದರು ತಡೆದರರಿಭಟರ (ಕುವ್ಯಾದ್ರೋ. ೨-೫೦); ತೊಡಗಿದರೊಂದು ಲೆಗ್ಗೆಗೆ ವಿಶೇಷ ವಿರೋಧ ನಿರೋಧ ಗಾಢದಿಂ (ಹವ್ಮಿಾರ. ೩-೪೬); ನಿಮ್ಮಾ ನೋಡಿ ಪೋಗುವೆನೆಂದು ಗಾಢದಿಂದಲಿ ಬಂದೆ (ಯನಳ. ೬೯). ೪. [ಸಂಗೀತ] ಒಂದು ಬಗೆಯ ಹಾಡುವ ಕ್ರಮ, —ರೀತಿ: ಲಲಿತಗಾಢಂಗಳುವೆರಸುತಂ ಕಳೆರ್ದೊಡನೆ ಲಳಿರಾಗಕಾಕುಂ ಮಿಳಿತಮಾಗಿರೆ (ಬಸವು. ೧೯-೧೪). ೫. ಗಾಢ, ಉಲ್ಲಸಿತ, ಪೇಶಲ, ಪಿತ್ತಕ, ಮುಗ್ಧ ಮತ್ತು ಪೃಥುಕವೆಂಬ ಆರುಬಗೆಯ ಪಚ್ಚೆಗಳಲ್ಲಿ ಒಂದು; ಗರಿಕೆಬಣ್ಣದ ಪಚ್ಚೆ: ಆ ಗಣಿಗಳಲ್ಲಿ ಉಂಟಾದ ಪಚ್ಚೆಗಳಲ್ಲಿ . . . ಗಾಢವೆಂಬುದು ದೂರ್ವಾದಳದ ವರ್ಣವಾಗಿ ಇರುವದು (ಸೌಗಂಧಿ. ೩೩೭-೧೨). [ಸಂ.]

**ಗಾಢಂ** (ಅ). ಅತಿಶಯವಾಗಿ; ಪ್ರಬಲವಾಗಿ; ಬಿಗಿಯಾಗಿ: ರೂಢಿ ಮಾಡಿದ ಧರ್ಮಗತಿಯಲಿ ಗಾಢಮಾಡಿದ ಸರ್ವಜನಗಳ ಮೂಢತನ ಬಯಲಾಗಿ ಹೋಯಿತು (ಸಂಭಪ. ೪-೩೪). [< ಗಾಢ]

**ಗಾಢಣೆ** (ನಾ). ಹೆಚ್ಚಳ; ಅತಿಶಯ: ರಿಪು ವಾಯುಜನ ಗಾಢಣೆ [ಪಾಠಾಂ. ಪೊಡ್ಡಣೆ]ಯ ಗರ್ವಗ್ರಹವ ಕಳಚುವೆನು (ಕುವ್ಯಾಕ. ೧೧-೫); ಲಾಳವಿಂಡಿಗೆಗಳಲಿ ಬಂಡಿಯ ಗಾಲಿಗಳ ಗಾಢ[ಪಾಠಾಂ. ಡ]ಣೆಗಳಲಿ . . . ಅಕ್ಕಜ ವಾದುದಾ ದುರ್ಗ (ತೊರರಾ. ೩-೭-೧೩). [ಗಾಢ + -ಅಣೆ$_4$]

**ಗಾಢತೆ** (ನಾ). = ಗಾಢಣೆ: ಬೂರಿಯ ಬಳಕೆಯಲಿ ನಿಸ್ಸೀಮವುಪ್ಪದೆ ಹಿಮದ ಗಾಢತೆಯು (ಗಗತಾ. ೧೭-೫೫); ಅವಳಿಗೆ ಶೈಲಜೆಯ ನೋವಿನ ಗಾಢತೆ ಬೇಗನೆ ಅರಿವಾಯಿತು (ವಿದ್ಯಾರ. ೬೯). [ಸಂ. ಗಾಢತಾ]

**ಗಾಢನಿದ್ರೆ** (ನಾ). ಬಲವಾದ ನಿದ್ದೆ; ಗಡದ್ದು ನಿದ್ದೆ: ಗಾಢನಿದ್ರೆಯಲ್ಲಿದ್ದ ತಂದೆಯವರನ್ನು ಎಬ್ಬಿಸಿದೆ (ತೇವೋಡ. ೩೬). [ಗಾಢ + ನಿದ್ರೆ]

**ಗಾಢಪ್ರತಿಜ್ಞೆ** (ನಾ). ದೃಢವಾದ ಪ್ರತಿಜ್ಞೆ: ಇರುಳು ಬೇಹಿನ ಚರರು ಪಾರ್ಥನ ನಿರುಪಮಿತ ಗಾಢಪ್ರತಿಜ್ಞಾಚರಿತವನು ಕೌರವನ ಸಭೆಯಲಿ ತಂದು ಹರಹಿದರು (ಕುವ್ಯಾದ್ರೋ. ೮-೫೦). [ಗಾಢ + ಪ್ರತಿಜ್ಞೆ]

**ಗಾಢಾಂಧಕಾರ** (ನಾ). ದಟ್ಟವಾದ ಕತ್ತಲೆ; ಕಗ್ಗತ್ತಲೆ: ಆ ಗಾಢಾಂಧಕಾರಂ ಕವಿದಿರ್ಪಿನಂ (ಹವ್ಮಿಾರ. ೩-೧೩ ವ); ಗಾಢಾಂಧಕಾರವೇ ಸುತ್ತಲೂ ಕವಿದಿದೆ (ಆತ್ಮಾರ್ಪ. ೧). [ಗಾಢ + ಅಂಧಕಾರ]

**ಗಾಢಾನುರಕ್ತತೆ** (ನಾ). ಅಧಿಕವಾದ ಪ್ರೀತಿ; ಅತಿಶಯವಾದ ಪ್ರೇಮ: ಚಂದ್ರಿಯಲ್ಲಿ ತಾನಿಟ್ಟಿರುವ ಗಾಢಾನುರಕ್ತತೆಗೆ ಕಾರಣವೂ. . . ಅವನ ಜ್ಞಾಪಕಕ್ಕೆ ಬಂದುವು (ನಿಶಿಉ. ೧೫೨). [ಗಾಢ + ಅನುರಕ್ತತೆ]

**ಗಾಢಾಭ್ಯಾಸ** (ನಾ). ಆಳವಾದ ಅಭ್ಯಾಸ: "ಒಂದು ವಿಷಯವನ್ನು ತೀವ್ರವಾಗಿ ಅಭ್ಯಾಸಮಾಡುವುದು; ಗಾಢಾಭ್ಯಾಸ" (Intensive Study. ಇಂಕನಿ). [ಗಾಢ + ಅಭ್ಯಾಸ]

**ಗಾಢಾಯಿಲ,** ಗಾಢಾಯ್ಲ (ನಾ). ೧. "ಬಲಶಾಲಿ (?)" (ಪ್ರಧಣ್ಣ): ಆಯಿಲ ಪ್ರತ್ಯಯಕ್ಕೆ-ಗಾಢಾಯಿಲಂ, ರೇಖಾಯಿಲಂ (ಶಮದ. ೨೧೫ ಪ್ರಯೋ). **ಗಾಢಾಯ್ಲ** (ಗು). ೨. "ದೃಢವಾದ" (ಪಟ್ಟನಿ.): ಕರ್ಣಭೀಮರ ಧರಧುರದ ದೆಖ್ಖಾಯ್ಲತನ ಗಬ್ಬರಿಸಿತಾಹವ ಗರ್ವಿತರ ಗಾಢಾಯ್ಲ ಚೇತನವ (ಕುವ್ಯಾಕ. ೧೪-೩). [ಗಾಢ + -ಅಯಿಲ$_2$]

**ಗಾಢಾಯ್ಲ** 'ಗಾಢಾಯಿಲ' ನೋ.

**ಗಾಢಾಲಿಂಗನ** (ನಾ). ಬಿಗಿಯಾಗಿ ಅಪ್ಪಿಕೊಳ್ಳುವುದು; ಗಟ್ಟಿಯಾಗಿ ತಬ್ಬಿಕೊಳ್ಳುವುದು: ಸುರತ ಚಂದ್ರೋದಯದೊಳ್ ಕಾಮ ಸುಖಾಬ್ಧಿಯುರ್ಕಿ ಪರಿಯೆ ಗಾಢಾಲಿಂಗನಂ ತೆಜಪುಗುಡದಿರೆ (ಗಿಂಕ. ೨-೧೦೫ ವ); ಚಂದ್ರಾಪೀಡನು . . . ಅಡ್ಡಬೀಳಲಾಗಿ ತಾರಾಪೀಡನು ಕೈಗಳ ನೀಡಿ ಸಮೀಪಕ್ಕೆ ಕರೆದು, ಗಾಢಾಲಿಂಗನವನು ಮಾಡಿಕೊಂಡು . . . ಕಳುಹಿದನು (ವಚಕಾ. ೯೧). [ಗಾಢ + ಆಲಿಂಗನ]

**ಗಾಢಿಕೆ** (ನಾ). ೧. ಉರವಣೆ; ತೀವ್ರತೆ; ಉತ್ಕಟತೆ; ರಭಸ; ಪ್ರಚಂಡತೆ: ತಗರು ತೊಲಗಿದಡೇನು ಬಲುಗಾಳಿಗದ ಗಾಢಿಕೆ ಮೇಲೆ ಶೌರ್ಯದ ಸೊಗಡ ಸೈರಿಸಲಱಿಯೆ (ಕುವ್ಯಾದ್ರೋ. ೧೩-೩೩). ೨. ಅತಿಶಯ; ಆಧಿಕ್ಯ; ಹೆಚ್ಚಳ: ಖಡುಗದ ಘಲ್ಲಣೆಯ ಖಣಿಖಣಿಲ ಗಾಢಿಕೆ ಕಂಟಿಸಿತು ನಭವ (ಕುವ್ಯಾಅ. ೧೪-೩೫). [ಗಾಢ + -ಇಕೆ]

ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ಮೂರನೆಯ ಸಂಪುಟ

"ಶಬ್ದಪಾರಮಾರ್ಗಮಶಕ್ಯಂ"
-ಕೇಶಿರಾಜ

ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : ಬೆಂಗಳೂರು - ೧೮
೧೯೭೭

ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ಮೂರನೆಯ ಸಂಪುಟ

"ಶಬ್ದಪಾರಮಾರ್ಗಮಶಕ್ಯಂ"

–ಕೇಶಿರಾಜ


ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : : ಬೆಂಗಳೂರು–೧೮

೧೯೭೭

KANNADA NIGHANTU - VOL-III
Second Edition : 2010
Published by : Kannada Sahitya Parishat
Pampa Mahakavi Road, Chamarajapet, Bangalore - 560 018
Pages : VIII+2475 to 3482, Price : Rs. 350=00

ಮೊದಲನೆಯ ಮುದ್ರಣ – ೧೯೭೭
ಎರಡನೆಯ ಮುದ್ರಣ – ೨೦೧೦
ಪ್ರತಿಗಳು : ೨೦೦೦
ಬೆಲೆ : ಮುನ್ನೂರು ಐವತ್ತು ರೂಪಾಯಿಗಳು




ಮುದ್ರಣ: **ರಾಜಾ ಪ್ರಿಂಟರ್ಸ್**
ನಂ.೫೪, ೪ನೆ ಕ್ರಾಸ್, ಲಾಲ್‌ಬಾಗ್ ರಸ್ತೆ
ಕೆ.ಎಸ್. ಗಾರ್ಡನ್, ಗಂಗಾಧರಪ್ಪ ಬ್ಲಾಕ್
ಬೆಂಗಳೂರು– ೫೬೦ ೦೨೭.

# ಕನ್ನಡ ನಿಘಂಟು ಸಂಪಾದಕ ಸಮಿತಿ

(೧೯೭೭ ನೆಯ ಆಗಸ್ಟ್ ತಿಂಗಳಿನಲ್ಲಿ ಇದ್ದಂತೆ)

**ಅಧ್ಯಕ್ಷರು**

ಪ್ರೊ. ಎಂ. ಮರಿಯಪ್ಪಭಟ್ಟ, ಎಂ.ಎ., ಎಲ್.ಟಿ.

**ಉಪಾಧ್ಯಕ್ಷರು ಮತ್ತು ಪ್ರಧಾನ ಸಂಪಾದಕರು**

ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.

ಸದಸ್ಯರು

ಶ್ರೀ ಎನ್. ಲಕ್ಷ್ಮೀನಾರಾಯಣರಾವ್, ಎಂ.ಎ.
ಪ್ರೊ. ಸ. ಸ. ಮಾಳವಾಡ, ಎಂ.ಎ.
ಪ್ರೊ. ಡಿ. ಜವರೇಗೌಡ, ಎಂ.ಎ.
ಡಾ ॥ ಆರ್. ಸಿ. ಹಿರೇಮಠ, ಎಂ.ಎ. ಪಿಎಚ್.ಡಿ.
ಡಾ ॥ ಸಿದ್ದಯ್ಯ ಪುರಾಣಿಕ., ಐ.ಎ.ಎಸ್. (ನಿವೃತ್ತ)

ಡಾ ॥ ಜಿ. ಎಸ್. ಗಾಯಿ, ಪಿಎಚ್.ಡಿ.
ಡಾ ॥ ಹಾ. ಮಾ. ನಾಯಕ, ಎಂ.ಎ. ಪಿಎಚ್.ಡಿ.
ಡಾ ॥ ಜಿ.ಎಸ್. ಶಿವರುದ್ರಪ್ಪ, ಎಂ.ಎ., ಪಿಎಚ್.ಡಿ.
ಶ್ರೀ ವಿ. ಬಿ. ನಾಯಕ, ಎಂ.ಎ., ಎಲ್ಎಲ್.ಬಿ.
ಶ್ರೀ ಬಸವರಾಜ ಕಟ್ಟೀಮನಿ.

**ಪರಿಷತ್ತಿನ ಅಧ್ಯಕ್ಷರು**

ಶ್ರೀ ಜಿ. ನಾರಾಯಣ

**ಪರಿಷತ್ತಿನ ಕಾರ್ಯದರ್ಶಿಗಳು**

ಶ್ರೀ ಜಿ.ಕೆ. ಗುಂಡುರಾವ್

**ಕೋಶಾಧಿಕಾರಿಗಳು**

ಶ್ರೀ ಎನ್. ವರದರಾಜನ್, ಬಿ.ಇ., ಎ.ಎಂ.ಐ.ಇ.

# ಸಂಪಾದಕ ವರ್ಗ

**ಪ್ರಧಾನ ಸಂಪಾದಕರು**

ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.

**ಉಪಸಂಪಾದಕರು**

ಶ್ರೀ ಹೀ. ಚಿ. ಶಾಂತವೀರಯ್ಯ ಎಂ.ಎ., ಬಿ.ಇಡಿ.
ಶ್ರೀ ಆರ್. ವಿ. ಕುಲಕರ್ಣಿ, ಎಂ.ಎ., ಬಿ.ಇಡಿ.
ಶ್ರೀ ಟಿ. ಆರ್. ಮಹದೇವಯ್ಯ, ಎಂ.ಎ.

**ಸಹಾಯಕ ಸಂಪಾದಕರು**

ವಿದ್ವಾನ್ ಎಚ್. ವಿ. ನಾರಾಯಣಶಾಸ್ತ್ರಿ
ಶ್ರೀಮತಿ ಮಂಜುಳಾರಾವ್, ಎಂ.ಎ.
ಶ್ರೀಮತಿ ಎಂ. ಎನ್. ಜಾನಕಮ್ಮ, ಎಂ.ಎ.
ಶ್ರೀಮತಿ ಬಿ. ಶಕುಂತಲ, ಎಂ.ಎ.
ಶ್ರೀಮತಿ ಉಮಾದೇವಿ, ಎಂ.ಎ
ಶ್ರೀಮತಿ ವಿಜಯಲಕ್ಷ್ಮಿ, ಎಂ.ಎ
ಶ್ರೀಮತಿ ಎಂ.ಎಸ್. ಸುಜಯ, ಎಂ.ಎ.

**ಕಚೇರಿಯ ಸಿಬ್ಬಂದಿ ವರ್ಗ**

ಬೆರಳಚ್ಚುಗಾರ್ತಿಯರು : ಶ್ರೀಮತಿ ಎ. ನೇತ್ರಾವತಿಬಾಯಿ, ಶ್ರೀಮತಿ ಸಿ. ಎನ್. ವಿಜಯಲಕ್ಷ್ಮಿ, ಶ್ರೀಮತಿ ಬಿ. ಎನ್. ಮಾಲತಿ, ಎಂ.ಎ.

ಪಟ್ಟಿಕೆ ವಿಂಗಡಣೆಕಾರರು : ಶ್ರೀ ಎನ್. ಎಸ್. ರಾಮಸ್ವಾಮಿ ಅಯ್ಯರ್, ಎಂ.ಎ., ಬಿ.ಟಿ.

ಸೇವಕರು : ರಾಘವೇಂದ್ರ, ಮಾದಪ್ಪ, ಶಂಕರಪ್ಪ, ರೇವಯ್ಯ,

# ಅಧ್ಯಕ್ಷರ ನುಡಿ

'ನಿಘಂಟು ಎಂದರೆ ಕನ್ನಡ ಸಾಹಿತ್ಯ ಪರಿಷತ್ತಿನ ಬೃಹನ್ನಿಘಂಟು' ಎಂದೇ ಖ್ಯಾತವಾಗಿರುವ ಈ ಮಹಾನಿಘಂಟಿನ ಎಂಟು ಸಂಪುಟಗಳನ್ನು ಅದು ಪ್ರಕಟವಾದ ೧೫ ವರ್ಷಗಳ ನಂತರ ಮತ್ತಷ್ಟು ಸುಂದರವಾಗಿ ಮರುಮುದ್ರಣಗೊಳಿಸಿ ಕನ್ನಡ ಕುಲಕೋಟಿಗೆ ಅರ್ಪಿಸಲು ನನಗೆ ಸಂತೋಷವೆನಿಸುತ್ತದೆ. ಕನ್ನಡ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ಪಡೆದುಕೊಂಡಿರುವುದು ಅದರ ಸಂಪನ್ನತೆ ಮತ್ತು ಅರ್ಹತೆಗಳಿಂದಾಗಿಯೇ ಎಂಬುದನ್ನು ಲೋಕದೆದುರು ಬಿಚ್ಚಿತ್ತೋರಿಸುವ ಸಾಧನಗಳಲ್ಲಿ ಮುಖ್ಯವಾದದ್ದು ಈ ಬೃಹತ್ ನಿಘಂಟು. ಕನ್ನಡದ ಸಮಸ್ತ ಜ್ಞಾನವನ್ನೂ ತನ್ನೊಳಗೆ ಐಕ್ಯಗೊಳಿಸಿಕೊಂಡಿರುವ ಈ ನಿಘಂಟಿನ ವಿವಿಧ ಸಂಪುಟಗಳಲ್ಲಿ ಶಬ್ದವೊಂದರ ಅರ್ಥ, ವಿವರಣೆ, ಉದಾಹರಣೆ ಒಮ್ಮೊಮ್ಮೆ ಅರ್ಧಪುಟವನ್ನು ದಾಟಿ ಒಂದು ಪುಟವನ್ನು ಆವರಿಸಿಕೊಂಡಿರುವುದುಂಟು.

ಕ್ರಿ.ಶ.೪೫೦ರ ಹಲ್ಮಿಡಿಶಾಸನದಿಂದ ಪ್ರಾರಂಭವಾಗಿ ಈ ಸಂಪುಟ ಯೋಜನೆ ಅನುಷ್ಠಾನಗೊಂಡ ೧೯೯೫ರವರೆಗೆ ಕನ್ನಡದಲ್ಲಿ ಪ್ರಕಟವಾದ ಎಲ್ಲ ಬಗೆಯ ಸಾಹಿತ್ಯ ಪ್ರಕಾರಗಳಿಂದಲೂ ಉಲ್ಲೇಖಗಳನ್ನು ನೀಡಲಾಗಿರುವುದು, ಕೆಲವೊಮ್ಮೆ ಒಂದೇ ಶಬ್ದಕ್ಕೆ ಬೇರೆ ಬೇರೆ ಅರ್ಥಗಳು ಪ್ರಾಪ್ತವಾಗುವ ಸಂದರ್ಭಗಳನ್ನು ಜೊತೆಗಿರಿಸಿ ಕೊಟ್ಟಿರುವುದು, ಪ್ರತಿಯೊಂದು ಶಬ್ದವನ್ನೂ ನಾಮಪದ ಅಥವಾ ಕ್ರಿಯಾಪದವೆಂದು ಖಚಿತವಾಗಿ ವಿಂಗಡಿಸಿಕೊಂಡಿರುವುದು, ಅರ್ಥ ಸ್ಪಷ್ಟೀಕರಣಕ್ಕೆಂದು ಉದಾಹರಣೆಯಾಗಿ ಕೊಟ್ಟಿರುವ ವಾಕ್ಯ ಅಥವಾ ವಾಕ್ಯತುಂಡುಗಳೇ ಮೂಲಕಾವ್ಯವನ್ನು ಓದಬೇಕೆನ್ನುವ ಆಸಕ್ತಿಯನ್ನು ಹುಟ್ಟಿಸುವುದು – ಈ ಎಲ್ಲ ಅಂಶಗಳು ಇದರ ಅಪೂರ್ವತೆಯನ್ನು ಎತ್ತಿ ಹಿಡಿಯುವ ಸಾಕ್ಷಿಕಲ್ಲುಗಳಾಗಿವೆ. ನಿಘಂಟು ಎನ್ನುವುದೇ ತುಂಬ ವೈಜ್ಞಾನಿಕವಾದ, ಒಂದು ಭಾಷೆಯ ಸೃಜನ ಸಾಹಿತ್ಯದಷ್ಟೇ ಪ್ರಮುಖವಾದ, ಭಾಷೆಯಲ್ಲಿರುವ ಶಬ್ದಗಳನ್ನು ಶುದ್ಧವಾಗಿ ಉಚ್ಚರಿಸಬೇಕೆಂದು ತಿಳಿಸಿಕೊಡುವ ರಚನೆಯಾಗಿರುವುದರಿಂದ ಜ್ಞಾನೇಂದ್ರಿಯಗಳೆಲ್ಲದರ ಎಚ್ಚರದ ದುಡಿಮೆಯನ್ನು ಬಯಸುತ್ತದೆ. ಕನ್ನಡದ ಅಭಿಮಾನವನ್ನು ಮೈತುಂಬಿಕೊಂಡ ಘನ ವಿದ್ವಾಂಸರ ಸತತ ಪರಿಶ್ರಮದಿಂದ ಈ ಯೋಜನೆ ಶಿಸ್ತುಬದ್ಧವಾಗಿ ಯಶಕಂಡಿದೆ. ಮೊದಲ ಮುದ್ರಣದ ೧೦,೦೦೦ ಪ್ರತಿಗಳು ಕೆಲವೇ ವರ್ಷಗಳಲ್ಲಿ ಕನ್ನಡಿಗರ ಮನೆಯ ಕಪಾಟುಗಳನ್ನು, ಗ್ರಂಥಭಂಡಾರಗಳನ್ನು, ಶಾಲೆಕಾಲೇಜುಗಳನ್ನು ಅಲಂಕರಿಸಿದ್ದರಿಂದ ಕನ್ನಡ ಸಾಹಿತ್ಯ ಪರಿಷತ್ತು ಧನ್ಯತಾಭಾವವನ್ನು ತಳೆಯುವಂತಾಯಿತು. ಆದರೆ ನಿಘಂಟುವಿನ ಉಪಯುಕ್ತತೆಯನ್ನು ತಡವಾಗಿ ಅರ್ಥಮಾಡಿಕೊಂಡವರು ಅಂದಿನಿಂದ ಇಂದಿನವರೆಗೆ ಸಾಹಿತ್ಯ ಪರಿಷತ್ತಿಗೆ ದೂರವಾಣಿ ಕರೆ ಮಾಡಿ, ಮಾರಾಟ ವಿಭಾಗದಲ್ಲಿ ವಿಚಾರಿಸಿ, ಪುಸ್ತಕ ಮಳಿಗೆಗಳಲ್ಲಿ ಹುಡುಕಾಡಿ ಸಿಗದೆ ನಿರಾಶರಾಗಿದ್ದಾರೆ. ಮರುಪ್ರಕಟಿಸುವಂತೆ ಒತ್ತಾಯ ಮಾಡಿದ್ದಾರೆ.

ಎಂಟು ಸಂಪುಟಗಳಲ್ಲಿ, ಒಂಬತ್ತು ಸಾವಿರಕ್ಕಿಂತಲೂ ಅಧಿಕ ಪುಟಗಳ ವಿಸ್ತಾರದಲ್ಲಿ ಹರಡಿಕೊಂಡಿರುವ, ಎಲ್ಲರ ಮನೆಯನ್ನೂ ಬೆಳಗಬೇಕಾಗಿರುವ ಈ ನಿಘಂಟನ್ನು ಮುದ್ರಿಸುವುದಾಗಲೀ, ಮುದ್ರಿತ ಪ್ರತಿಗಳನ್ನು ಒಂದೆಡೆ ಜೋಡಿಸಿಡುವುದಾಗಲೀ, ಮಾರಾಟದ ವ್ಯವಸ್ಥೆ ಮಾಡುವುದಾಗಲೀ, ಹೆಚ್ಚಿನ ಪ್ರಮಾಣದಲ್ಲಿ ಒಂದು

ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವುದಾಗಲೀ ಅಷ್ಟೊಂದು ಸುಲಭವಾದ ಕೆಲಸವಲ್ಲ. ಈ ಅಸಾಧ್ಯವನ್ನು ಸಾಧ್ಯವಾಗಿಸುವ ಧೈರ್ಯೋತ್ಸಾಹಗಳು ಪರಿಷತ್ತಿನೊಡಲಲ್ಲಿ ಚಿಮ್ಮುವುದಕ್ಕೆ ಕರ್ನಾಟಕ ರಾಜ್ಯ ಸರ್ಕಾರ ಕಾರಣವಾಯಿತೆಂದರೆ ಅದನ್ನು ಯಾರೂ ಅತಿಶಯೋಕ್ತಿಯೆಂದು ಭಾವಿಸಬೇಕಾಗಿಲ್ಲ. ಕರ್ನಾಟಕ ರಾಜ್ಯ ಸರ್ಕಾರ ಕನ್ನಡ ಸಾಹಿತ್ಯ ಪರಿಷತ್ತಿನ ಮಾತುಗಳನ್ನು ಪ್ರೀತಿಯಿಂದ ಆಲಿಸುತ್ತಿರುವುದು, ಕನ್ನಡ ಸಾಹಿತ್ಯ ಪರಿಷತ್ತನ್ನು ಕನ್ನಡದ ಸಾರ್ವಭೌಮ ಪ್ರತಿನಿಧಿಯೆಂದೇ ಭಾವಿಸುತ್ತಿರುವುದು ಕನ್ನಡದ ಭಾಗ್ಯವೆಂದೇ ಹೇಳಬೇಕು. ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಹಲವು ಒತ್ತಡಗಳ ನಡುವೆಯೂ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳಲ್ಲಿ ಅತ್ಯಂತ ಪ್ರೀತಿಯಿಂದ ಭಾಗವಹಿಸುತ್ತಿರುವುದು, ಸಮಾರಂಭಗಳಲ್ಲಿ ಕೊಟ್ಟ ಆಶ್ವಾಸನೆಗಳನ್ನು ಅತಿಶೀಘ್ರವಾಗಿ ಅನುಷ್ಠಾನಗೊಳಿಸುತ್ತಿರುವುದು, ಪರಿಷತ್ತಿನ ಎಲ್ಲಾ ಯೋಜನೆಗಳಿಗೂ ಹಸಿರು ನಿಶಾನೆ ತೋರುತ್ತಿರುವುದು, ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳು ಮುಖ್ಯಮಂತ್ರಿ – ಕನ್ನಡ ಸಂಸ್ಕೃತಿ ಮಂತ್ರಿಗಳ ಕಚೇರಿಯ ಹೊರಗೆ ಕಡತಗಳೊಂದಿಗೆ ಗಂಟೆಗಟ್ಟಲೆ ಕಾಯುತ್ತಿದ್ದುದನ್ನು ತಪ್ಪಿಸಿರುವುದು, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಿಂದ ತಾಲ್ಲೂಕು ಸಮ್ಮೇಳನಗಳವರೆಗೆ ಎಲ್ಲವೂ ಅದ್ದೂರಿಯಾಗಿ ನಡೆಯಲು ಬೇಕಾದಷ್ಟು ಪ್ರಮಾಣದಲ್ಲಿ ಹಣ ಬಿಡುಗಡೆ ಮಾಡುತ್ತಿರುವುದು – ಇಂಥವನ್ನೆಲ್ಲಾ ಕಂಡಾಗ ಪರಿಷತ್ತಿನ ಅಧ್ಯಕ್ಷನಾಗಿ ನನಗೆ ಮನಸ್ಸು ತುಂಬಿ ಬರುತ್ತದೆ. ಆರುಕೋಟಿ ಕನ್ನಡಿಗರ ಪರವಾಗಿ ಅವರಿಗೆ ಕೃತಜ್ಞತಾ ಕುಸುಮಗಳನ್ನು ಅರ್ಪಿಸಬೇಕೆನ್ನಿಸುತ್ತದೆ. 'ಕನ್ನಡದ ಮುಖ್ಯಮಂತ್ರಿ' 'ಕನ್ನಡಿಗರ ಮುಖ್ಯಮಂತ್ರಿ' ಎಂದು ಅಭಿಮಾನದಿಂದ ನುಡಿಯಬೇಕೆನ್ನಿಸುತ್ತದೆ. ಸನ್ಮಾನ್ಯ ಮುಖ್ಯಮಂತ್ರಿಗಳ ಕನ್ನಡದ ಮೇಲಿನ, ಕನ್ನಡ ಸಾಹಿತ್ಯ ಪರಿಷತ್ತಿನ ಬಗೆಗಿನ ಈ ಅಖಂಡ ಪ್ರೀತಿ ಹೀಗೇ ಮುಂದುವರಿಯಲೆಂದು ಆಶಿಸುತ್ತೇನೆ.

ಕರ್ನಾಟಕ ಸರ್ಕಾರ ನಿಘಂಟು ಯೋಜನೆಯ ಮಹತ್ವವನ್ನು ಮನಗಂಡು ಒಂದು ಕೋಟಿ ರೂಪಾಯಿಗಳನ್ನು ಸಾಹಿತ್ಯ ಪರಿಷತ್ತಿಗೆ ಉದಾರವಾಗಿ ನೀಡಿದೆ. ಸರ್ಕಾರ ಹಣ ನೀಡಿರುವುದು ಪರಿಷತ್ತಿಗಾದರೂ ಇದು ಜನತೆಯ ಹಣ ಮತ್ತು ಇದರ ಅಂತಿಮ ಫಲಾನುಭವಿಗಳೂ ಜನತೆಯೇ. ಈ ಎಚ್ಚರವನ್ನಿರಿಸಿಕೊಂಡೇ ಸಾಹಿತ್ಯ ಪರಿಷತ್ತು ಬಹುಬೇಡಿಕೆಯ ಬೃಹನ್ನಿಘಂಟಿನ ಎಂಟು ಸಂಪುಟಗಳನ್ನು ಪುನರ್ಮುದ್ರಣಗೊಳಿಸುತ್ತಿದೆ. ಸರ್ಕಾರದ ಉದಾರ ಆರ್ಥಿಕ ನೆರವಿನ ಪರಿಣಾಮವಾಗಿ ನಿಘಂಟಿನ ಬೆಲೆಯನ್ನು ಸಾಮಾನ್ಯರೂ ಕೊಳ್ಳಲು ಮನಸ್ಸು ಮಾಡುವಂತೆ ಕಡಿಮೆಗೊಳಿಸಲಾಗಿದೆ. ಭಾಷೆ ಮತ್ತು ಸಾಹಿತ್ಯಾಭಿಮಾನದ ಸಂಕೇತವೆಂಬಂತೆ ಈ ಯೋಜನೆಯ ಯಶಸ್ಸಿನಲ್ಲಿ ಪ್ರಮುಖ ಪಾತ್ರ ನಿರ್ವಹಿಸಿರುವ ರಾಜ್ಯ ಸರ್ಕಾರವನ್ನು ಹಾಗೂ ಕನ್ನಡ ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಜಯರಾಮರಾಜೇ ಅರಸ್ ಮತ್ತು ನಿರ್ದೇಶಕರಾದ ಶ್ರೀ ಮನು ಬಳಿಗಾರ್ ಅವರುಗಳನ್ನು ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ. ನಿಘಂಟು ಯೋಜನೆ ಪ್ರಾರಂಭವಾದಾಗ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣರಿಂದ ಮೊದಲಗೊಂಡು ಮುಕ್ತಾಯವಾದಾಗ ಅಧ್ಯಕ್ಷರಾಗಿದ್ದ ಡಾ. ಸಾ.ಶಿ. ಮರುಳಯ್ಯನವರವರೆಗೆ ಇದನ್ನು ಆಸಕ್ತಿಯಿಂದ ಮುನ್ನಡೆಸಿಕೊಂಡು ಬಂದ ಎಲ್ಲ ಅಧ್ಯಕ್ಷರುಗಳಿಗೂ ನಿಘಂಟು ಸಮಿತಿಯ ಅಧ್ಯಕ್ಷರು, ಸದಸ್ಯರುಗಳು, ಸಂಪಾದಕರು, ಸಿಬ್ಬಂದಿ ವರ್ಗದವರಿಗೂ ಅಂದವಾಗಿ ಮುದ್ರಿಸಿಕೊಟ್ಟ ರಾಜಾ ಪ್ರಿಂಟರ್ಸ್‌ನವರಿಗೂ ಮತ್ತು ಅವರ ಸಿಬ್ಬಂದಿ ವರ್ಗದವರಿಗೂ ಕನ್ನಡ ಸಾಹಿತ್ಯ ಪರಿಷತ್ತು ತುಂಬಾ ಆಭಾರಿಯಾಗಿದೆ. ಮರುಮುದ್ರಣದ ಈ ನಿಘಂಟಿನ ಸಂಪುಟಗಳನ್ನು ಕನ್ನಡ ಜನತೆ ಪ್ರೀತಿ ವಿಶ್ವಾಸಗಳಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಬೆಂಗಳೂರು
೫-೬-೨೦೧೦

**ಡಾ. ನಲ್ಲೂರು ಪ್ರಸಾದ್ ಆರ್.ಕೆ.**
ಅಧ್ಯಕ್ಷರು

# ಅರಿಕೆ

ಕನ್ನಡ – ಕನ್ನಡ ನಿಘಂಟುವಿನ ಎರಡನೆಯ ಸಂಪುಟ ಕಳೆದ ವರ್ಷ ಬಿಡುಗಡೆಯಾಯಿತು. ನಿಘಂಟುವಿನ ಕೆಲಸ ಅವಸರದ ಕೆಲಸವಲ್ಲ. ಆದರೂ ನಿಘಂಟು ಸಮಿತಿಯ ಅಧ್ಯಕ್ಷರಾದ ಪ್ರೊ ॥ ಎಂ. ಮರಿಯಪ್ಪಭಟ್ಟರ ಹಾಗೂ ಇತರ ಸದಸ್ಯರ ವಿಶೇಷ ಆಸಕ್ತಿ, ಪ್ರಧಾನ ಸಂಪಾದಕರಾದ ಪ್ರೊ ॥ ಜಿ. ವೆಂಕಟಸುಬ್ಬಯ್ಯನವರ ಅವಿಶ್ರಾಂತ ದುಡಿಮೆ, ನಿಘಂಟು ಕಚೇರಿಯ ಸಿಬ್ಬಂದಿವರ್ಗದ ಕಾರ್ಯತತ್ಪರತೆ, ಸರ್ಕಾರಿ ಮುದ್ರಣಾಲಯದವರ ಪೂರ್ಣ ಸಹಕಾರ ಇವುಗಳ ಫಲವಾಗಿ ಮೂರನೆಯ ಸಂಪುಟ ಕೇವಲ ಒಂದು ವರ್ಷದ ಅವಧಿಯಲ್ಲಿಯೇ, ಪರಿಷತ್ತಿನ ವಜ್ರಮಹೋತ್ಸವದ ವೇಳೆಗೆ ಹೊರ ಬಂದಿರುವುದು ಎಲ್ಲರೂ ಮೆಚ್ಚತಕ್ಕ ವಿಷಯ. ಅದಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ಈ ಎಲ್ಲಾ ಮಹನೀಯರಿಗೂ ತನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಪ್ರಧಾನ ಸಂಪಾದಕರಾದ ಪ್ರೊ. ಜಿ. ವೆಂಕಟಸುಬ್ಬಯ್ಯನವರು ವಜ್ರಮಹೋತ್ಸವದ ವೇಳೆಗೆ ಈ ಮೂರನೆಯ ಸಂಪುಟವನ್ನು ತಂದೇ ತೀರಬೇಕೆಂದು ದೃಢಸಂಕಲ್ಪ ಮಾಡಿದರು; ಈ ಸಂಪುಟದ ಮುದ್ರಣಕಾರ್ಯವನ್ನು ಸರ್ಕಾರಿ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಬಿ.ಎನ್. ರಾಮಮೂರ್ತಿಯವರು ವಹಿಸಿಕೊಂಡು ತ್ವರಿತಗತಿಯಲ್ಲಿ ಮುದ್ರಿಸಿಕೊಟ್ಟರು ; ಇಲ್ಲದಿದ್ದರೆ ಈ ಸಂಪುಟ ವಜ್ರಮಹೋತ್ಸವದ ವೇಳೆಗೆ ಖಂಡಿತ ಬಿಡುಗಡೆಯಾಗುತ್ತಿರಲಿಲ್ಲ. ಈ ಇಬ್ಬರು ಮಹನೀಯರ ವೈಯಕ್ತಿಕ ಆಸಕ್ತಿಯೇ ಇದಕ್ಕೆ ಕಾರಣ. ಪರಿಷತ್ತಿನ ಪರವಾಗಿ ಹಾಗೂ ವೈಯಕ್ತಿಕವಾಗಿ ವಿಶೇಷ ವಂದನೆಗಳನ್ನು ಅವರಿಗೆ ಸಲ್ಲಿಸುವುದು ನನ್ನ ಕರ್ತವ್ಯ.

ಸರ್ಕಾರದ ನೆರವಿಲ್ಲದಿದ್ದರೆ ಈ ನಿಘಂಟು ಕನಸಿನ ಗಂಟಾಗುತ್ತಿತ್ತು. ಸರ್ಕಾರದ ಉದಾರ ಸಹಾಯದಿಂದ ಕನ್ನಡ–ಕನ್ನಡ ನಿಘಂಟು, ಕನ್ನಡಿಗರ ಕೈ ಸೇರುವಂತಾಗಿದೆ. ಅದಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ಎಲ್ಲ ಕನ್ನಡಿಗರ ಪರವಾಗಿ ರಾಜ್ಯ ಸರ್ಕಾರಕ್ಕೆ ತನ್ನ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಕರ್ನಾಟಕ ರಾಜ್ಯ ಸರ್ಕಾರಕ್ಕೂ ಪರಿಷತ್ತಿಗೂ ಆದ ಒಪ್ಪಂದದ ಪ್ರಕಾರ ಈ ವರ್ಷದ ಮಾರ್ಚಿ ತಿಂಗಳ ಕೊನೆಯಲ್ಲಿ ಇಡೀ ನಿಘಂಟುವಿನ ಕಾರ್ಯ ಮುಗಿಯಬೇಕಾಗಿತ್ತು. ನಿಘಂಟು ರಚನೆಯ ಕಾರ್ಯ ಆರಂಭವಾದಾಗ, ಪ್ರಾರಂಭದಲ್ಲಿ ಕಂಡು ಬಂದ ತೊಡಕುಗಳು. ಕಾಗದದ ಅಭಾವ, ಮುದ್ರಣ ಸೌಕರ್ಯ ಒದಗದಿದ್ದುದು, ಈ ಕಾರಣಗಳಿಂದ ನಿಘಂಟು ಕಾರ್ಯ ತಡವಾಯಿತೆಂಬುದನ್ನು, ಎರಡನೆಯ ಸಂಪುಟದ ಬಿಡುಗಡೆಯ ಕಾಲದಲ್ಲಿಯೇ ಹೇಳಲಾಗಿದೆ. ಈಗ ಆ ಎಲ್ಲಾ ತೊಂದರೆಗಳು ನಿವಾರಣೆಯಾಗಿರುವುದರಿಂದ ನಿಘಂಟುವಿಗಾಗಿ ಸರ್ಕಾರದವರು ಮಂಜೂರು ಮಾಡಿರುವ ಹಣದಲ್ಲಿಯೇ ಉಳಿದ ನಿಘಂಟುವಿನ ಕಾರ್ಯವನ್ನು ಪೂರೈಸಲು ಮತ್ತೆ ಎರಡು ವರ್ಷಗಳ ಕಾಲಾವಧಿಯನ್ನು ನೀಡಬೇಕೆಂದು ರಾಜ್ಯ ಸರ್ಕಾರವನ್ನು ಕೇಳಿಕೊಳ್ಳಲಾಗಿದೆ. ಸರ್ಕಾರವು ಅದನ್ನು ಒಪ್ಪಬಹುದೆಂದು ಭಾವಿಸಿ ಪರಿಷತ್ತು ನಿಘಂಟುವಿನ ಕಾರ್ಯವನ್ನು ಮುಂದುವರಿಸುತ್ತಿದೆ.

ಪರಿಷತ್ತು ತನ್ನ ಜವಾಬ್ದಾರಿಯನ್ನು ಪೂರೈಸಲು ಇನ್ನೂ ಎರಡು ಸಂಪುಟಗಳು ಹೊರಬರಬೇಕಾಗಿದೆ. ನಾಲ್ಕು ಮತ್ತು ಐದನೆಯ ಸಂಪುಟದ ವಿವಿಧ ಹಂತದ ಕೆಲಸ ತೀವ್ರಗತಿಯಲ್ಲಿ ನಡೆಯುತ್ತಿದೆ.

ಸರ್ಕಾರದ ಆರ್ಥಿಕ ನೆರವಿನಿಂದ ಕಡಿಮೆ ಬೆಲೆಗೆ ಲಭ್ಯವಾಗಿರುವ ಈ ಕನ್ನಡ–ಕನ್ನಡ ನಿಘಂಟುವನ್ನು ಜನರು ಆದರದಿಂದ ಬರಮಾಡಿಕೊಂಡು ಇದರ ಪೂರ್ಣ ಪ್ರಯೋಜನವನ್ನು ಪಡೆಯಬೇಕೆಂದು ಪರಿಷತ್ತು ಆಶಿಸುತ್ತದೆ.

ಬೆಂಗಳೂರು
೨೪–೪–೧೯೭೭

ದೇಶಹಳ್ಳಿ ಜಿ. ನಾರಾಯಣ
ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

# ಮುನ್ನುಡಿ

ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವದ ಈ ಮಂಗಳ ಪ್ರಸಂಗಕ್ಕೆ ಸರಿಯಾಗಿ ಕನ್ನಡ-ಕನ್ನಡ ನಿಘಂಟಿನ ಮೂರನೆಯ ಸಂಪುಟವನ್ನು ನಾಡಿನ ಓದುಗರ ಕೈಯಲ್ಲಿ ಇಡಲು ಸಂತೋಷವಾಗುತ್ತದೆ. ಎರಡನೆಯ ಸಂಪುಟವು ಪ್ರಕಟವಾಗಿ ಒಂದು ವರುಷ ಕಳೆಯುವುದ ರೊಳಗಾಗಿ ಈ ಸಂಪುಟವು ಹೊರಬಂದಿರುವುದು ನಿಘಂಟು ಕಾರ್ಯದ ತೀವ್ರಪ್ರಗತಿಗೆ ನಿದರ್ಶನವಾಗಿದೆ. ಆರಂಭಕಾಲದಲ್ಲಿ ಇದ್ದ ತೊಂದರೆಗಳು ಬಹುಮಟ್ಟಿಗೆ ಈಗ ದೂರವಾಗಿರುವುದರಿಂದ ಮುಂದಿನ ಸಂಪುಟಗಳೂ ಕೂಡ ಸಾಧ್ಯವಾದಷ್ಟು ಶೀಘ್ರವಾಗಿ ಪ್ರಕಟಗೊಳ್ಳುವುವೆಂದು ನಾನು ನಿರೀಕ್ಷಿಸುತ್ತೇನೆ.

ಈ ಸಂಪುಟದಲ್ಲಿ 'ಗಾಢಿಸು' ಎಂಬ ಶಬ್ದದಿಂದ 'ತಿಮಿರ್$_1$' ಎಂಬ ಶಬ್ದದವರೆಗೆ (ನಿಘಂಟಿನ ೨೪೭೫ನೇ ಪುಟದಿಂದ ೩೪೮೨ನೆಯ ಪುಟದವರೆಗೆ) ನಿಘಂಟು ಮುಂದುವರಿದಿದೆ. ಮೊದಲು ಎರಡು ಸಂಪುಟಗಳಿಗೂ ಉಪಯೋಗಿಸಿಕೊಂಡ ಆಕರಗ್ರಂಥಗಳನ್ನೇ ಇಲ್ಲಿಯೂ ಬಳಸಿ ಕೊಂಡಿರುವುದರಿಂದ ಸಂಕ್ಷಿಪ್ತಸೂಚಿಯ ಪ್ರತ್ಯೇಕವಾದ ಅನುಬಂಧವನ್ನು ಕೊಟ್ಟಿಲ್ಲ.

ವಿವಿಧ ಶಾಸ್ತ್ರಗಳಿಗೆ ಸಂಬಂಧಪಟ್ಟ ಹಲವಾರು ಪಾರಿಭಾಷಿಕ ಶಬ್ದಗಳನ್ನು ಪಟ್ಟಿಮಾಡಿ ಇಡುತ್ತಿರಲಾಗಿದೆ. ಅವುಗಳೆಲ್ಲವನ್ನೂ ಕೊನೆಯ ಸಂಪುಟದಲ್ಲಿ ಅನುಬಂಧವಾಗಿ ಕೊಡಲಾಗುವುದು. ಈ ನಿಘಂಟಿನ ಎಲ್ಲ ಸಂಪುಟಗಳ ಮುದ್ರಣವು ಪೂರಯಿಸಿದರೂ ಈ ಕಾರ್ಯ ಅಲ್ಲಿಗೇ ಮುಕ್ತಾಯ ವಾಗುವುದಿಲ್ಲ. ನಿರಂತರವಾಗಿ ಬೆಳೆಯುತ್ತಿರುವ ಕನ್ನಡ ಭಾಷೆಯಲ್ಲಿ ಹೊಸ ಹೊಸ ಶಬ್ದಗಳೂ ನುಡಿಗಟ್ಟುಗಳೂ ತಲೆದೋರಿ ರೂಢವಾಗುತ್ತಲೇ ಇರುತ್ತವೆ; ಶಬ್ದಗಳಿಗೆ ಮೊದಲಿದ್ದ ಅರ್ಥಗಳು ಕಳಚಿಹೋಗಿ ಹೊಸ ಅರ್ಥಗಳು ಕೂಡಿಕೊಳ್ಳುತ್ತಲೇ ಇರುತ್ತವೆ. ನಿಘಂಟಿನ ಕಾರ್ಯ ಮುಂದು ವರಿಯುತ್ತಿರುವಾಗಲೆ ಈ ಹಿಂದಿನ ಸಂಪುಟಗಳಲ್ಲಿ ಕಣ್‌ತಪ್ಪಿ, ಕೈತಪ್ಪಿ ಬಿಟ್ಟುಹೋದ ಶಬ್ದಗಳನ್ನು ಮತ್ತು ಕವಿಪ್ರಯೋಗಗಳನ್ನು ಗುರುತಿಸಿ ಕೊಳ್ಳುತ್ತಾ ಬರಲಾಗಿದೆ. ಇತ್ತೀಚಿನ ಸಂಶೋಧನೆ ಮತ್ತು ಗ್ರಂಥಪ್ರಕಟನೆ--ಇವುಗಳ ಫಲವಾಗಿ ಎಷ್ಟೋ ಶಬ್ದಗಳ ಪುನಃಪರಿಶೀಲನೆಯೂ ಅಗತ್ಯ ವೆನಿಸುತ್ತದೆ. ಈ ಎಲ್ಲವನ್ನೂ ಕೊನೆಯ ಸಂಪುಟದಲ್ಲಿ ಅಳವಡಿಸಿಕೊಳ್ಳಬೇಕಾಗಿದೆ. ವಿದ್ವಜ್ಜನರು ಈಗ ಪ್ರಕಟವಾಗಿರುವ ಮೂರು ಸಂಪುಟಗಳಲ್ಲಿ ತಮಗೆ ಕಂಡುಬರುವ ಪ್ರಮಾದಗಳನ್ನು ಸೂಚಿಸಬೇಕಾಗಿ ಕೋರುತ್ತೇನೆ. ಸೂಚನೆಗಳನ್ನು ಕೃತಜ್ಞತೆಯಿಂದ ಸ್ವೀಕರಿಸಿ ಪರಿಶೀಲಿಸಲಾಗುತ್ತದೆ.

ಕರ್ನಾಟಕ ರಾಜ್ಯದ ಸರ್ಕಾರಿ ಮುದ್ರಣಾಲಯದವರು ಮುದ್ರಣಭಾರವನ್ನು ವಹಿಸಿಕೊಂಡು ತ್ವರಿತಗತಿಯಲ್ಲಿ ಮುದ್ರಿಸಿ ನಿಘಂಟಿನ ಎಲ್ಲ ಅಚ್ಚುಕಟ್ಟಿಗೂ ಕಾರಣರಾಗಿದ್ದಾರೆ. ನನ್ನ ಮಾನ್ಯ ಮಿತ್ರರೂ ಸರ್ಕಾರಿ ಮುದ್ರಣಾಲಯದ ನಿರ್ದೇಶಕರೂ ಆದ ಶ್ರೀ. ಬಿ. ಎನ್. ರಾಮಮೂರ್ತಿ ಅವರಿಗೂ ಅವರ ನಿರ್ದೇಶನವನ್ನೆಲ್ಲಾ ಕಾರ್ಯಗತಗೊಳಿಸಿದ ಶ್ರೀ ಎಂ. ಆರ್. ಗಣಪತಿ ಅವರಿಗೂ ಸರ್ಕಾರಿ ಮುದ್ರಣಾಲಯದ ಸಿಬ್ಬಂದಿವರ್ಗ ದವರಿಗೂ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ವೈಯಕ್ತಿಕ ಆಸಕ್ತಿಯನ್ನು ವಹಿಸಿ ಈ ಸಂಪುಟವು ಇಷ್ಟು ಬೇಗ ಪ್ರಕಟಗೊಳ್ಳುವುದಕ್ಕೆ ಪ್ರೇರಕರೂ ಸಹಾಯಕರೂ ಆಗಿದ್ದಾರೆ. ಅವರ ನಿರಂತರ ವಿಶ್ವಾಸಪೂರ್ಣ ಪ್ರೋತ್ಸಾಹಕ್ಕೆ ನನ್ನ ಕೃತಜ್ಞತೆಗಳು.

ನಿಘಂಟು ಕಚೇರಿಯ ಸಿಬ್ಬಂದಿಯವರು ಈ ಸಂಪುಟದ ಕಾರ್ಯದಲ್ಲಿ ಆತ್ಮೀಯವಾದ ಅಭಿಮಾನದಿಂದ ಅವಿರತವಾಗಿ ದುಡಿದಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರು ಎಂದಿನಂತೆ ನಿಘಂಟಿನ ಕಾರ್ಯದಲ್ಲಿ ಸಹಕರಿಸಿದ್ದಾರೆ. ಇವರೆಲ್ಲರಿಗೆ ನಿಘಂಟು ಸಂಪಾದಕ ಸಮಿತಿಯ ಅಧ್ಯಕ್ಷರ, ಸದಸ್ಯರ ಮತ್ತು ನನ್ನ ಕೃತಜ್ಞತೆಯನ್ನು ಸಮರ್ಪಿಸುತ್ತೇನೆ.

ಜಿ. ವೆಂಕಟಸುಬ್ಬಯ್ಯ,
ಪ್ರಧಾನ ಸಂಪಾದಕ.

ದಿನಾಂಕ : 24-4-77.

**ಗಾಢಿಸು** (ಕ್ರಿ). ೧. ಬಿಗಿಯಬಾಗು ; ಬಲವಾಗು : ಜಾಡಿಸಲು ಜಾಡಿಸುಬು ಬಿಗುಹತಿ ಗಾಢಿ[ ಪಾಠಾಂ. ಡಿ ]ಸಿತು ಕೊಡಹಿದೊಡೆ ಮಿಗೆ ಮೈಗೂಡಿ ಬಿಗಿದುದು (ಕುಮ್ಮಾ.ಅ. ೧೩-೩೫). ೨. ಹರಡು ; ವ್ಯಾಪಿಸು ; ಆವರಿಸು : ಜಯಧ್ವನಿ ಗಗನದಲಿ ಗಾಢಿಸಿತು (ಕುಮ್ಮಾ.ಅ. ೬-೧೦೦): ಪಾಠಕರುಗಳ ರನ್ನದ ದಡಿಯ ಕಂಚುಕಿಗಳ ಘಡಾವಣೆ ಗಾಢಿ[ ಪಾಠಾಂ. ಘಾಡಿ ]ಸಿತು ನಭವ (ಕೊರರಾ. ೬-೨೦-೨೦) ; ಗಾಢಿಸಿತು ಗಜಬಜಂ ಕುರುನೃಪತಿಭಟರು ಕೈಮಾಡಿದರು (ತುರಂಗ. ೬೨-೫). ೩. ಮೇಲೆಬೀಳು ; ಆಕ್ರಮಿಸು : ತುಡುಕುವಂಕುಶದಿಂದ ಮುನ್ನಿಳೆಯೊಡೆಯೆ ಗಜ ಗಾಢಿ[ ಪಾಠಾಂ. ಡಿ ] ಸಿದವರಸರ ಬಿಡುಹು ತಡೆದೆಡಗಲಸಬಗೆದುವು ವಿಗಡ ಪಾಯದಳ (ಕುಮ್ಮಾ.ಭೀ. ೨-೨). [ ಗಾಢ + – ಇಸು$_3$ ]

**ಗಾಢೋಕ್ತಿ** (ನಾ). ನಿಷ್ಠುರದ ಮಾತು ; ಒರಟುನುಡಿ : ಗಾಢೋಕ್ತಿ ಕುಜಾತ ಮಂಗಳ ಪುಳಿಂದರುಮಿಂತು ಕುಜಾಖ್ಯೆ (ನಾನಾರ. ೨೦) ; " ಗಾಢೋಕ್ತಿ – ನಿಷ್ಠುರದ ಮಾತು " (ನಾನಾರ. ೨೦ ಟೀಕೆ).
[ ಗಾಢ + ಉಕ್ತಿ ]

**ಗಾಣ$_1$, ಘಾಣ$_1$** (ನಾ). ಎಣ್ಣೆಯನ್ನು ಅಥವಾ ಕಬ್ಬಿನ ರಸವನ್ನು ತೆಗೆಯುವ ಯಂತ್ರ : ಒಂದು ಗಾಣದುಳ್ ಒನ್ದು ಸೊಂಟಿಗೆ ತೇ (ತೈ)ಲ ಮಸಗೆ (ಎಕ. VIII, ೨೪೫-೪ ; 706) ; ಗಾಣದೊಳಿಕ್ಕಿದ ಕಬ್ಬಿನಂತೆ ನರಕದೊಳ್ ದುಃಖಿಂಬಟ್ಟುಂ (ಧರ್ಮಾಮೃ. ೬-೧೬೫) ; ಎಳ್ಳಿಲ್ಲದ ಗಾಣವ ನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ (ಬಸವ. ೩೬೩) ; ತುಂಡುತುಂಡಾಗಿ ಕತ್ತರಿಸಿ ಗಾಣದೊಳರೆದು (ಚಬಪು. ೧೧-೧೧). **ಘಾಣ$_1$** : ದೇಗುಲದಿಂ ಬಡಗ ದೇವರೋಲಗದ ಸೂಳೆಗೇರಿಯಲ್ಲಿ ಘಾಣವೆರಡುಂ ಪಡಿಕವಳ್ಳದಿಂ ಮಾಡಿದ ಪುದೋಂಟ ಮತ್ತರೆರಡು (ಕಇಅ. ೬೮-೨-೯೬ : 1066).

**ಗಾಣದ ಎತ್ತು** = ೧. ಗಾಣಕ್ಕೆ ಹೂಡಿರುವ ಎತ್ತು : " ರಾತ್ರಿ ಹಗಲೂ ತತ್ವಜಿಜ್ಞಾಸೆ. ಆದರೆ ದೇವರ ತಿಳಿವಳಿಕೆ ಮಾತ್ರ ಅವರಿಗೆ ಗಾಣದ ಎತ್ತಿನಂತೆ " ಎಂದು ಅದರ ಆಶಯ (ಜೀವಾತ್ಮ. ೨೫೦). ೨. (ಆಲಂ) ವಿಶ್ರಾಂತಿಯಿಲ್ಲದೆ ಒಂದೇ ಸಮನೆ ದುಡಿಯುವವನು : ಅವನೊಬ್ಬ ಗಾಣದ ಎತ್ತು. ಅವನಿಗೇನು ಸುಖವಿದೆ ? (ರೂಢಿ).
**ಗಾಣದ ತೆಱೆ** = ಗಾಣವನ್ನು ಇಟ್ಟಿರುವುದಕ್ಕಾಗಿ ಕೊಡುವ ತೆರಿಗೆ,— ಕಂದಾಯಂ : ಅಲ್ಲಿಯು ಗಾಣದ ತೆಱೆಯುಂ . . . ಸರ್ವ್ವಬಾಧಾ ಪರಿಹಾರಮಾಡಿ ಕಾ[ದೊ]ಡುವರು (ಸೌಇಇ. XX, ೫೦-೩೦ : 1077) ; ಒಂದು ಗಾಣದ ತೆಱೆಯುಂ ಬಿಟ್ಟರು (ಎಕ. VII, ಶಿಕಾರಿ. ೨೬೫-೮ : 1086).
[ ದೇ ॥ ತಮಿ. ಕಾಣ ; ತುಳು. ಗಾಣ, ಗಾಣೊ ;
ತೆಲು. ಗಾತುಗ, ಗಾಮಗು./ಪ್ರಾ. ಘಾಣ ]

**ಗಾಣ$_2$** ' ಗಾಳ ' ನೋ.

**ಗಾಣ$_3$** (ನಾ). ೧. ಗಾನ ; ಗಾಯನ : ಮುನಿಪಂ ಚೌಲೋಪನಯನ ಸಂಸ್ಕೃತರಾದ ಬಾಲಕರ್ಗೆ . . . ಗಾಣದೊಳ್ ಜಾಣರಂಗೆಯ್ದಂ (ಶಾಮಾಶ್ಯ. ೦೫೦-೦೬). ೨. ಗಾಯಕ ; ಸಂಗೀತಗಾರ : ರಸವೊಸರ್ವನ್ನೆಗಂ ತಗುಳೆ ಪಾಡುವ ಗಾಣರ ಗೇಯಪುಷ್ಮಿಯಿಂ ಪೊಸಯಿಸೆ (ಪಂಪಭಾ. ೧೧-೪) ; ಅಮರರ ಗಾಣರ ಮುಖರಿಗಳೆಮರ್ದಂ ಕಿದಱಿದವೊಲೆಳಸೆ ಗಾಣತಿಗೆಯ್ದು (ಶಾಂತಿಪು. ೧೧-೩೬) ; ಓಲಗವಿತ್ತು ನರ್ತಕರ ಚಾರಣರ ಗಾಣರ ಗೇಯ ಗೋಷ್ಠಿಯೊಳ್ (ವಂಬಿರ. ೧೦ ಸೂಚನೆ).
**ಗಾಣದಂಕಕಾಱ**=ಒಂದು ಬಿರುದು : ಗಾಣದಂಕಕಾಱ ಶ್ರೀಮದಯ್ಯಪ (ಎಕ. IX, ದೇವನ. ೧೧-೫ : 948). [ <ಸಂ. ಗಾನ ]

**ಗಾಣ$_4$** (ನಾ). ಹಿಡಿಯುವುದಱ ; ಗ್ರಹಣ : (ಕ). [ <ಸಂ. ಗ್ರಹಣ ]

**ಗಾಣಕಾರ್ತಿ, ಗಾಣಗಾತಿ** (ನಾ). ಹಾಡುವವಳು ; ಗಾಯಿಕೆ : ವೀಣೆ ದಂಡಿಗೆ ಸ್ವರಮಂಡಲ ಕಿನ್ನರಿ ವೇಣುಸಂಪುಟವ ಹೊತ್ತಗೆಯ ಪಾಣಿಯೊಳಾಂತು ಬಂದರಸಗೆಱಗಿದರು ಗಾಣಕಾರ್ತಿಯರು ಗಾಡಿಯೊಳು (ಭರತ. ೫-೭). **ಗಾಣಗಾತಿ** : ಈ ಕೃತಿಯಲ್ಲಿ ನಾವು ಕಾಣುವ ' ಹೊಲೆಯರು ' ಎರಡು ಬಗೆ : ಒಂದು ' ಗಾಣಗಾತಿ 'ಯರ ಪಾತ್ರದಲ್ಲಿ ಮತ್ತೊಂದು ವೀರಬಾಹುಕನ ಪಾತ್ರದಲ್ಲಿ (ಪರಿಶೀ. ೬೪).
[ ಗಾಣಕಾಱ + – ತಿ$_1$ (< – ಇತ್ತಿ) ]

**ಗಾಣಕಾಱ** (ನಾ). ಗಾಯಕ ; ಸಂಗೀತಗಾರ. ' ಗಾಣಕಾರ್ತಿ ' ಪರಾ.
[ ಗಾಣ$_3$ + – ಕಾಱ ]

**ಗಾಣಗಂಟಲ** (ನಾ). ಗಾಳದಂತೆ ಗಂಟಲಿಗೆ ಹಿಂಸೆಯನ್ನುಂಟುಮಾಡು ವವನು ; ಘಾತಕ ; ಪ್ರಾಣಕಂಟಕ : ನೀನಡಗಿ ಪೋಗದೆ ಎನ್ನೊಳಿದ್ದು ಗಾಣಗಂಟಲರಿಗೆ ವೈರಿಯಾಗೋ (ಮೋಹನದೀ. ೫೫-೩).
[ ಗಾಣ$_2$ (<ಗಾಳ) + ಗಂಟಲು$_1$ (<ಗಂಟಲ್) + – ಅ$_7$ ]

**ಗಾಣಗತ್ತರಿ** (ನಾ). ಗಾಣದ ಈಸು ; ಗಾಣಹೊಡೆಯುವವನು ಕುಳಿತುಕೊಳ್ಳುವ ಭಾಗ : ತೋರುವುದು ಗಾಣಗತ್ತರಿಯಲಾಕಾರದಿಂ (ತುರಂಗ.೨೯-೫೨). [ ಗಾಣ$_1$ + ಕತ್ತರಿ$_2$ ]

**ಗಾಣಗಾತಿ** ' ಗಾಣಕಾರ್ತಿ ' ನೋ.

**ಗಾಣಗೊಂದೆ** (ನಾ). ಗಾಣಕ್ಕೆ ಹೂಡುವ ಎತ್ತು ; ಗಾಣದ ಎತ್ತು : ನಾಣಿಲಿಗಳ ತಲೆವಣೆ ಮಾಣ್ಮಾಣಲವೋ ಗಾಣಗೊಂದೆಯಿಂದೇ ಕಣ್ಣಂ ಕಾಣದೆ ಬಳಸುವುದೇ (ಚಕವಿ. ೬-೩೭೭). [ ಗಾಣ$_1$ + ಗೊಂದೆ$_1$ ]

**ಗಾಣತಿ$_1$** (ನಾ). = ಗಾಣಕಾರ್ತಿ : ಗಾಣತಿಯರಿರ್ವರುಂ ಮತ್ಪ್ರಾಣದಿ ನಗ್ಗಳವುವಲ್ದರಂ ಭಯವಶದಿಂ ಕ್ಷೋಣೀಶಂ ಕುಡೆ ಕೊಳ್ಳದೆ ಮಾಣೆಂ (ಶಾಂತಿಪು. ೨-೬೨). [ ಗಾಣ$_3$ + – ತಿ$_1$ (< – ಇತ್ತಿ) ]

**ಗಾಣತಿ$_2$** (ನಾ). ಗಾಯನ ; ಹಾಡುವಿಕೆ. ' ಗಾಣತಿಗೆಯ್ ' ಪರಾ.
[ <ಗಾಣ$_3$ ]

**ಗಾಣತಿಗೆಯ್** (ಕ್ರಿ). ಗಾಯನಮಾಡು ; ಹಾಡು : ಅಮರರ ಗಾಣರ ಮುಖರಿಗಳೆಮರ್ದಂ ಕಿದಱಿದವೊಲೆಳಸೆ ಗಾಣತಿಗೆಯ್ದು . . . ಪಾಡಿದರ್ ಮಂಗಳಮಂ (ಶಾಂತಿಪು. ೧೧-೩೬). [ ಗಾಣತಿ$_2$ + ಕೆಯ್$_1$ ]

**ಗಾಣತೆರಿಗೆ** ' ಗಾಣದೆಱೆ ' ನೋ.

**ಗಾಣದೆರಿಗೆ, ಗಾಣತೆರಿಗೆ** (ನಾ). = ಗಾಣದೆಱೆ : (ಕ). **ಗಾಣತೆರಿಗೆ** : (ರೈಸ್‌ಗೆ. II, ೫೪೮). [ ಗಾಣ$_1$ + ತೆರಿಗೆ (<ತೆಱಿಗೆ) ]

**ಗಾಣದೆಱೆ** (ನಾ). ಗಾಣದ ತೆರೆ ; ಗಾಣದ ಮೇಲೆ ಹಾಕುವ ತೆರಿಗೆ,– ಸುಂಕ : ಪಂಚಕಾರುಕ ಗಾಣದೆಱೆ ಆಮೆದೆಱೆ ಮಗ್ಗಮುಂದ್ರೆ ಒಳವಾಱು ಹೊರವಾಱು (ಎಕ. VII, ಶಿಕಾರಿ. ೭೦-೩೦ : 1431).
[ ಗಾಣ$_1$ + ತೆಱೆ$_2$ ]

**ಗಾಣನಾಯಕಿ** (ನಾ). ಹಾಡುಗಾತಿಯರಲ್ಲಿ ಮಿಗಿಲಾದವಳು ; ಉತ್ತಮ ಗಾಯಿಕೆ : ಜೀಯ ಸ್ಥಿರಂಜೀವಯೆಂದು ಕೀರ್ತಿಸಿ ಗಾಣನಾಯಕಿಯರೆತ್ತಿ ನಂಡಿಗೆವಿಡಿದು ಪೊಡಮಟ್ಟು ಹಾಡಲುದ್ಯೋಗಿಸಿದರು (ಹದಿಶಾ. ೬-೫).
[ ಗಾಣ$_3$ + ನಾಯಕಿ ]

**ಗಾಣಪತ್ಯ** (ನಾ). ೧. ಒಂದು ಗುಂಪಿನ ಒಡೆತನ. ೨. ಗಣಪತಿಯ ಪೂಜೆ,–ಉಪಾಸನೆ. ೩. ಪರಮೇಶ್ವರನ ಪರಿವಾರವಾದ ಪ್ರಮಥ ಗಣಗಳ ಒಡೆತನ,– ನಾಯಕತ್ವ : ಭೋಗಿಕಟಕನ ಗಾಣಪತ್ಯಕೆ ಹೋಗನೇ ತಂತ್ರಂಬೆರಸಿ ಶಿವಯೋಗದಿಂದ ಕುಮಾರಪಾಲಕ ಘೂರ್ಜರನು ಮುನ್ನ (ಬಸಪು. ೫೪-೭೫). ೪. ಗಣಪತಿಯನ್ನು ಪೂಜಿಸು ವವನು ; ಗಣಪತಿಯೇ ದೇವರೆಂದು ನಂಬಿರುವವನು ; ಗಣಪತಿಯ ಆರಾಧಕ. ೫. ಭರತಖಂಡದ ಷಣ್ಮತಗಳಲ್ಲಿ ಒಂದು ; ಗಣಪತಿಯೇ ಸರ್ವೋತ್ತಮನೆಂದು ಪ್ರತಿಪಾದಿಸುವ ಮತ : ಆದರೆ ಪ್ರಾಚೀನಕಾಲ ದಿಂದಲೂ ವೇದಗಳನ್ನು ಕುರಿತು ಮತಭೇದಗಳಾಗಿ ಬೌದ್ಧ, ಶೈವ . . .

ಗಾಣಪತ್ಯ ಮುಂತಾದ ಮತಗಳು ನೆಲೆಗೊಂಡವು (ಮುಂಬಯಿ. ೬-೧೦೯).
[ಸಂ.]

**ಗಾಣಬಿಜ್ಜೆ** (ನಾ). ಗಾನವಿದ್ಯೆ ; ಸಂಗೀತಶಾಸ್ತ್ರ : ಈ ಗಂಧರ್ವರೆನ್ನಿಂ ಗಾಣಬಿಜ್ಜೆಯನಱಿಯಲೆನುತೆಯ್ತಂದಿರಲಿವರ್ಗಾನಾಚಾರ್ಯನಾದೆಂ (ಅದ್ಭುತ. ೨೪-೦೫). [ಗಾಣ$_3$ + ಬಿಜ್ಜೆ$_2$]

**ಗಾಣರಾಣಿ** (ನಾ).=ಗಾಣನಾಯಕಿ : ಪಸಾಯಕ್ಕೆ ಮನವುಕ್ಕಿ ಸರ್ವಾಭರಣಮಂ ಗಾಣರಾಣಿಯರಿಗಿತ್ತನು (ಹರಿಕಾ. ೬-೭). [ಗಾಣ$_3$+ರಾಣಿ]

**ಗಾಣವಾಡಿಸು** (ಕ್ರಿ). ೧. ಗಾಣವು ತಿರುಗುವಂತೆ ಮಾಡು; ಗಾಣವನ್ನು ಆಡಿಸು : ಗಾಣಿಗನು ಈಶ್ವರನ ಕಾಣನೆಂಬದು ಸಹಜ ಏಣಾಂಕಧರನು ಧರೆಗಿಳಿಯಲವನಿಂದ ಗಾಣವಾಡಿಸುವ (ಸರ್ವಜ್ಞ. ೧೪೩೪). ೨. (ಆಲಂ) ಗಿರಗಿರನೆ ತಿರುಗಿಸು, – ಸುತ್ತಿಸು : ಕಣ್ಣುಕಟ್ಟಿ, ಗಿಮಿಗಿಮಿ ಗಾಣವಾಡಿಸಿತು ಗಾಳಿ ನೆನೆನೆನೆದು ನೆಲವೆ ಕುಪ್ಪರಿಸಿತ್ತು (ನಲಮು. ೧೪).
[ಗಾಣವಾಡು + – ಇಸು$_3$]

**ಗಾಣವಾಡು** (ಕ್ರಿ). ಗಾಣಕ್ಕೆ ಹಾಕಿ ಅರೆ; — ಸಾರವನ್ನು ತೆಗೆ : ತೆಲ್ಲಿಗರೊಯ್ದು ಗಾಣವಾಡೊಳ್ಳಿತೆನಿಸಿದ ತೈಲಕುಂಭಕೋಟಿಗಳ ತಂದರು (ಸಿದ್ಧರಾ. ೮-೩೦) ; ಕಬ್ಬು . . . ಪಕ್ವಕ್ಕೆ ಬಂದಮೇಲೆ ಅದನ್ನು ಕತ್ತರಿಸಿ ಗಾಣವಾಡಿ, ಹಾಲನ್ನು ಕಾಯಿಸಿ, ಬೆಲ್ಲವನ್ನೋ ಸಕ್ಕರೆಯನ್ನೋ ಮಾಡಬಹುದು (ವ್ಯವಮು. ೪೮). [ಗಾಣ$_1$ + ಆಡು$_1$]

**ಗಾಣವಾರಿ** (ನಾ).=ಗಾಣದೆಱೆ : ಊರೊಳಗೆ ಹು[ಟ್ಟು]ವ ಹಾರಿಕಾಯ ವಳವ ತೂಗುವ ಭಂಡಕೆ ಹೊಂಗೆ ಹಾಗ ೧ ಗಾಣವಾರಿ ಗಾಣಂ ಪ್ರತಿಮಾನ ೧ (ಸೌಇಇ. IX-1, ೧೪೫-೩೬ ; 1079).
[ಗಾಣ$_1$ + ವಾರಿ$_0$ (<ವರಿ$_1$)]

**ಗಾಣವಾವಿಲಿಗೆ** (ನಾ).=ಗಾಣದೆಱೆ (?) : ಕೇರಿಯ ತೆಂಕಣ[ದ]ಲು ಹದಿನೆಂಟು ಕಂ ಯಿ ಮನೆಯ ನಿವೇಶಣಮಂ ಊರೊಳಗಣ ಗಾಣಂಗಳಲ್ಲಿ ಗಾಣವಾವಿಲಿಗೆಯುಂ ಊರಲ್ಲಿ ಹರದರು ಮಾಱುಗೊಂಡ ಭತ್ತಕ್ಕೆ ಪೊಂಗೆ [ಹಾ]ಗವೊನ್ದುಮಂ . . . ಇಭ್ರೀ ಧರ್ಮಮಂ ಪ್ರತಿಪಾಳಿಸುವರ್ (ಕಇಅ. ೪೬-೪-೨೨ ; 1125). [ಗಾಣ$_1$ + ವಾವಿಲಿಗೆ?]

**ಗಾಣವಿಕ್ಕು** (ಕ್ರಿ). ಗಾಳವನ್ನು ಹಾಕು ; ಮೀನು ಹಿಡಿಯಲು ಕೊಕ್ಕೆಯನ್ನು ನೀರಿನಲ್ಲಿ ಇಳಿಬಿಡು : ಭುವನಾಪಹಾಸ್ಯಮೆನಲರ್ಣವದೊಳ್ ನೀಂ ಮತ್ಸ್ಯನಾಗಲಾನಂದು ಸಮುದ್ಭವಿಸಿದೆನಪ್ಪೊಡದಂ ಗಾಣವಿಕ್ಕಿ ಪಿಡಿದೆನ್ನ ಬಾಣಸಕ್ಕೊಪ್ಪಿಸನೇ (ಜಗವಿ. ೦೭-೩೪).
[ಗಾಣ$_2$ (<ಗಾಳ) + ಇಕ್ಕು]

**ಗಾಣವೆಣ್** (ನಾ). ಗಾಯನಮಾಡುವವಳು ; ಗಾಣಗಾತಿ ; ಗಾಯಿಕೆ : ಸುಧಾಂಶುಮಂ ನಿರ್ಮಳವಕ್ತ್ರಬಿಂಬಮಿರದೇಳಿಸೆ ಮೆಲ್ಲನೆ ಗಾಣವೆಂಗಳಿರ್ವರ್ಗೆ ಬಂದರಂದು ನೃಪಕುಂಜರನಿರ್ದೆಡೆಗೈದೆ ರಾಗದಿಂ (ಉದ್ಭಟ. ೨-೦೧೫).
[ಗಾಣ$_3$ + ಪೆಣ್]

**ಗಾಣವೆಯಿಲು**, ಗಾಣವೆಯಿಲೆ, ಗಾಣಾಯಿಲೆ (ನಾ). ಗಾಣದ ಬಯಲು ; ಗಾಣವನ್ನು ಇಡುವ ಸ್ಥಳ (?) : ಊರೊಡೆಯರ್ಗ್ಗೆ ಮಾನ್ಯದ ಕೆಯ್ಮತ್ತರಿನ್ನೂಱು ಮನೆಗೆಣ್ಣಯ್ಯಗಲವಿರ್ಪ್ಪತ್ತೈಗೈನೀಳದ ನಿವೇಶನಂ ಮೂರೂರು ಸಾಶ್ವತ ಸುಂಕಂ ಗಾಣವೆಯಿಲಿಗೆ ಕೊಣ್ಡೆ ಮುಟ್ಟಿಗೆ ಪಡಿಯುಳೆ ಯಜ್ಞದಲೊನ್ದು ಗದ್ಯಾಣಂ (ಎಇ. XX, ೬-೩೩ ; 1012). **ಗಾಣವೆಯಿಲೆ :** ದೇವರತ್ತ ಅಲ್ಲಿಯ ಗಾಣದ ತೆಱೆಯುಂ ಗಾಣವೆಯಿಲೆ ಎಂಣ್ಣೆಯುಂ ದೇವರ್ಗ್ಗೆ ಇಂತಿದೆಲ್ಲವಂ . . . ಕಾ[ದೂ]ಡುವರು (ಸೌಇಇ. XX, ೫೦-೩೦ ; 1077). **ಗಾಣಾಯಿಲೆ :** ತಮ್ಮ ಗಾಣಾಯಿಲೆಯಲ್ಲಿ ಒಂದು ಗಾಣಕ್ಕೆ (ಹೈಆಸಿ. ೪೭-೦೪೯ ; 1093).
[ಗಾಣ$_1$ + ವೆಯಿಲು?]

**ಗಾಣವೆಯಿಲೆ** 'ಗಾಣವೆಯಿಲು' ನೋ.

**ಗಾಣಸಾಸ್ತ್ರ** (ನಾ). =ಗಾಣಬಿಜ್ಜೆ : ವಾಸುದೇವಂಗೆ ಮಣಿದು ಅನುಕ್ರಮದಿಂ ಗಾಣಸಾಸ್ತ್ರಮಂ ಪೇಟಲಾರಂಭಿಸಿದಂ (ಅದ್ಭುತ. ೨೪-೨೦).
[ಗಾಣ$_3$ + ಸಾಸ್ತ್ರ]

**ಗಾಣಹಾಕು** 'ಗಾಳಹಾಕು' ನೋ.

**ಗಾಣಾಗಸಿಮಾಡು** (ಕ್ರಿ). ೧. ಹಿಂಡಿ ಹಿಪ್ಪೆಮಾಡು ; ಚೆನ್ನಾಗಿ ಅರೆ. ೨. (ಆಲಂ) ಬಹಳವಾಗಿ ಹಿಂಸಿಸು : ಬಿನುಗುತನ ಬಿಡದಿರಲನಿಬರು ಬಂದು ನಿನ್ನ ಘನತೆಯನು ಪಿಡಿದು ಯಮನಿಗೆ ಒಪ್ಪಿಸೆ ಕುವ್ಮನ್ನೆ (ಕೆವ್ಮನೆ ?) ಗಾಣಾಗಸಿಮಾಡಿ ನರಕಕ್ಕೆ ಕೆಡಹುವ ಅನುಮಾನವಿಲ್ಲ (ವಿಪ್ರಸು. ೨೮-೧). [<ಗಾಣ$_1$ + ಗಸಿ + ಮಾಡು$_1$]

**ಗಾಣಾಪತ್ಯ** (ನಾ).=ಗಾಣಪತ್ಯಳ್ : ಭಜಿಸುವರು ಗಣಪತಿಯ ಪರನೆಂದರಿದು ಗಾಣಾಪತ್ಯರೆಂಬರು (ಗಗಶಾ. ೫-೬) ; ಗಾಣಾಪತ್ಯರು ವಕ್ರತುಂಡ ಏಕದಂತಗಳ ಮುದ್ರೆಗಳನ್ನು ಧರಿಸುವರು (ಮುಂಬಯಿ. ೬-೧೧೨).
[<ಗಾಣಪತ್ಯ]

**ಗಾಣಾಯಿಲೆ** 'ಗಾಣವೆಯಿಲು' ನೋ.

**ಗಾಣಿ** (ನಾ). ಹಾಡುಗಾತಿ ; ಗಾಯಿಕೆ : ಗಾಣಿಯನು ಮೃದುಪಾಣಿಯನು ಶುಕವಾಣಿಯನು ಕಾಳಾಹಿಸನ್ನಿಭವೇಣಿಯನು . . . ವರ್ಣಿಸುವನಾರೆಂದ (ಜೀವಂಚಿ. ೮-೦೫) ; ಮಿಸುಪಮಮರಗಾಣಿಯರ ಕೊರಳಿಂ ರಸವೊಸರ್ವ ಸಂಗೀತ ಕಿವಿಗಿಂಬೆಸೆಯೆ (ಸಾಳ್ವಭಾ. ೨೦-೭೯).
[ಗಾಣ$_3$ + – ಇ$_2$]

**ಗಾಣಿಕ್ಯ** (ನಾ). ಸೂಳೆಯರ ಗುಂಪು ; ವೇಶ್ಯಾಸಮೂಹ : "ಸೂ(ಟೆ)ಳೆಯರ ಮೊತ್ತಮಂ ಗಾಣಿಕ್ಯಮೆಂಬುದು" (ಶಬ್ದಾಯು. ೮೧-೩೩೭) ; "ವಾರಸತಿಯರ ಹಿಂಡು ಗಾಣಿಕ್ಯವಕ್ಕು" (ಮಂಜರಿಶ. ೯೦-೫); ಅಳಿಧ್ವಾನಮನೆ ತುಳಿದು ಗಾಣಿಕ್ಯಹರ್ಮ್ಯಾಗ್ರಗಾಯತ್ಸ್ವದತೀಸಂಗೀತ ತಾರಸ್ವರಮನಲೆದು (ರಾಜಶೇ. ೦೨-೩). [ಸಂ.]

**ಗಾಣಿಕ್ಯಸದನ** (ನಾ). ಸೂಳೆಯರ ಮನೆ ; ವೇಶ್ಯಾಗೃಹ : ಪಲ್ಲವೋಲ್ಲಸಿತಮಪ್ಪ ಗಾಣಿಕ್ಯಸದನಪಂಕ್ತಿಗಳೊಳ್ (ಜಗವಿ. ೨-೨೪ ವ).
[ಗಾಣಿಕ್ಯ + ಸದನ]

**ಗಾಣಿಗ**, ಗಣಿಗ (ನಾ). ೧. ಗಾಣದಲ್ಲಿ ವ್ಯವಹರಿಸುವವನು ; ಎಣ್ಣೆ ತೆಗೆದು ಮಾರಿ ಜೀವಿಸುವವನು ; ತೆಲ್ಲಿಗ ; ತೈಲಿಕ : ಗಾಣಿಗರ ಪೆರುಮ್ಮಾಳಿ ಸೆಟ್ಟಿಯರ ಮಗಂ ಗಜ್ಜಿಸೆಟ್ಟಿ (ಎಕ. X, ಕೋಲಾರ. ೨೧೫-೨ ; ೯೬೬) ; ಕಪಿಯುಂ ಗಾಣಿಗ ಪಾವು ಕಾಷ್ಠ ಜಿನ ತಕ್ರಂ . . . ಧೂಮಮುಮಂ ನಿಪುಣರ್ ಕಂಡರೆ ಪೋಗರ್ಪ್ಪೆ (ಸೋಮೇಶ. ೬೮); ಅಡದರೆ ಮುಗ್ಗದರೆ ಕುಂಬರ ಗಾಣಿಗರ ನಾಯಿಂದರದೆರೆ (ಎಕ. V, ಅರಕ. ೦೧೨-೦೮; 1383); ಗಾಣಿಗರ್ ಚಿಪ್ಪಿಗರ್ ಮುಚ್ಚಿಗರ್ ಮುಖ್ಯರೊದಗಿ ಬರುತಿರ್ದರು (ಹಂಬಪು. ೪೭-೪೦); ಎಳ್ಳು ಗಾಣಿಗ ಬಲ್ಲ ಸುಳ್ಳು ಸಿಂಪಿಗ ಬಲ್ಲ ಕಳ್ಳರನು ಬಲ್ಲ ತಳವಾಱ ಬಣಜಿಗನು ಎಲ್ಲವನು ಬಲ್ಲ (ಸರ್ವಜ್ಞ. ೦೪೨೦); ಹಾರುವನಿಗೆ ಆಳಾಗಬೇಡ ಗಾಣಿಗನಿಗೆ ಎತ್ತಾಗಬೇಡ (ಗಾದೆ). ೨. ಬಿಳಿಯ ಪುಕ್ಕದಿಂದ ಕೂಡಿದ ಒಂದು ಬಗೆಯ ದೊಡ್ಡಕಾಗೆ : (ಪ).
**ಗಣಿಗ :** ೧. ಕುರ[ಬ]ರು ಗಣಿಗರು ಪೆಮ್ಮದವರು (ಇಇ. XIV, ೨೩೩೬-೫೯; ಸು. ೧೧ನೆಯ ಶತ); ಬಮ್ಮಗವುಂಡನ ಮಗಂ ಮಾದೆಗವುಂಡ ಗಣಿಗನುಂ ತುಱುಪಲಿವನ ಕಾದಿ (ಎಕ. III, ಮಳವ. ೭೦-೯ ; 1183).
[ಗಾಣ$_1$ + – ಇಗ]

**ಗಾಣಿಗಾವುಂಡ** (ನಾ). ಒಬ್ಬಾತನ ಹೆಸರು : ಗಾಣಿಗಾವುಣ್ಡ ನಾಡೆಲ್ಲ ಪಾಱಾದೊಡಂ (ಎಕ. IX, ದೇವನ. ೪೨-೮ ; ಸು. ೯೦೦ ?).
[ಗಾಣಿ? + ಗಾವುಂಡ (<ಗಾಮುಂಡ)]

**ಗಾಣಗಿತಿ** 'ಗಾಣಗಿತ್ತಿ' ನೋ.

**ಗಾಣಗಿತ್ತಿ,** ಗಾಣಗಿತಿ (ನಾ). ಗಾಣಿಗರ ಹೆಂಗಸು : ಗಾಣಗಿತ್ತಿ ಅಯ್ಯೋ ಎಂದರೆ ನೆತ್ತಿ ತಣ್ಣಗಾದೀತೆ ? (ಗಾದೆ). **ಗಾಣಗಿತಿ :** ಒಕ್ಕಲಿಗಿತಿ, ಗಾಣಗಿತಿ, ಅಸಗಿತಿ (ಶಬ್ದಾನು. ೧೯೦ ಪ್ರಯೋ). [ ಗಾಣಿಗ + – ಇತ್ತಿ ]

**ಗಾಣೆ** (ನಾ).=ಗಾಣಿ: ಗಾಣೆಯರುಗಳ ಚಿತ್ತೈಸು ನರ್ತನದ ಸುಜಾಣೆಯರುಗಳ ಚಿತ್ತೈಸು (ಮೋಹತ. ೧೭-೧೦). [ ಗಾಣ₃ + – ಎ₂ ]

**ಗಾತ₁,** ಘಾತ₁ (ಗುಂ). ೧. ಆಳವಾದ; ನಿಮ್ನವಾದ; ಗಂಭೀರವಾದ. (ನಾ). ೨. ಆಳವಾಗಿರುವುದು; ಗಭೀರತೆ. 'ಗಾತಗಳೆ' ಪರಾ. **ಘಾತ₁ :** ೨. ಇರಲಿತ್ತ ಬನ ಮುಂದೆ ಪರಿಕಾವಳೆಯುಮಿರ್ಪುದುರುತರ ಘಾತವೆಂತೆನಲು ಸರಸಿಜೋದ್ಭವನೀ ಧರೆಯ ರಚಿಸುವಂದು ಮಣಿದನೀ ಎಡೆಯನೆಂಬಂತೆ (ಭೈರವೇ. ೦-೭೮) ; ಕುಸಿದು ಪಾತಾಳದೊಳಗಿರ್ದು ಪಲ ಕಾಲಮುಂ ದ್ವಿಸಹಸ್ರನಯನಂಗಳಿಂದೆ ನೋಡಿದೊಡೆ ಕಾಣಿಸಿಕೊಳ್ಳದೀ ಪುರದಗಳ ಘಾತಮಿದನಜಂ ಬಲ್ಲನೊ (ಜೈಮಿಥಾ. ೩-೧೯). 'ಘಾತಂಗೆಡಂ' ಪರಾ. [ <ಸಂ. ಖಾತ ]

**ಗಾತ₂** (ನಾ). ೧. ಭಂಗ ; ನ್ಯೂನತೆ : (ಶ). ೨. ಕೇಡು ; ತೊಂದರೆ ; **ಅಪಾಯ :** ನೀನ ಹೇಳಿ ಗಾತಾ ಮಾಡಿಕೊಂಡೇನು? (ಗ್ರಾಮಾಯ. ೦೩೦) ; ಈ ಮೇಣೆಯಲ್ಲಿ ಏನೋ ಗಾತವಿದ್ದ ಹಾಗೆ ಕಾಣುತ್ತದೆ (ಮಾಧವ. ೨೭). [ <ಸಂ. ಘಾತ ]

**ಗಾತಗಳೆ,** ಘಾತಗಳೆ (ನಾ). ನದಿ ಅಥವಾ ಜಲಾಶಯಗಳ ನೀರಿನ ತಳವನ್ನು ಮುಟ್ಟಿ ದೋಣಿ ಮೊದಲಾದುವನ್ನು ನಡೆಸುವ **ಕೋಲು ;** ಹುಟ್ಟು : ಜ್ಞಾನವೆಂಬ ಅಂಬಿಗ ಈ ಹಱುಗೋಲೊಳಗೆ ಕುಳ್ಳಿರ್ದು ಸುಜ್ಞಾನವೆಂಬ ಸಟ್ಟುಗವ ಪಿಡಿದು ಮಹಾಜ್ಞಾನವೆಂಬ ಗಾತಗಳೆಯ ಪಿಡಿದು ನಾನೀ ಹೊಳೆಯಂ ಕಂಡು (ಶೂನ್ಯಸಂ. ೧೨೭-೩೭). **ಘಾತಗಳೆ :** ಸಂಸಾರವೆಂಬ ಸಾಗರವ ದಾಂಟುವರೆ ಅಱುಹೆಂಬ ಹಱು ಗೋಲನಿಕ್ಕಿ . . . ಮಹಾಜ್ಞಾನವೆಂಬ ಘಾತಗಳೆಯಂ ಪಿಡಿದು ನಾನೀ ಹೊಳೆಯಂ ಕಂಡು ಅಂಬಿಗನ ಕೇಳಿದರೆ ನಾ ನಿನ್ನ ಹಾಯಿಸಿಕೊಟ್ಟೇನೆಂದನು (ವಚಸಂ. ೨೪೯-೨೩). [ ಗಾತ₁ + ಗಳೆ (<ಗಱೆ) ]

**ಗಾತರ,** ಗಾತುರ, ಘಾತ್ರ (ನಾ). ೧. ಒಡಲು ; ದೇಹ. ೨. ದಪ್ಪವಾದುದು ; **ತೋರವಾದುದು :** (ಶ). **ಗಾತುರ :** ೧. ಮಾತುಮಾತಿಗೆ ಹಲ್ಲು ತೋರಲು ಬಿಡೆನೊ ಗಾತುರ ಗಗನಕ್ಕೆ ಬೆಳಸಲು ಬಿಡೆನೊ (ವಿಸ್ಮೋ . ಸು. ೭೦-೧) ; ಈತನು ನಿನ್ನಾಧೀನವಾದ ಮೇಲೆ ಗಾತುರ ನೋಯಿಪೆ ವಂದಲ್ಲದೆ ಧಾತಜನಕ ನಮ್ಮ ವಿಜಯವಿಠ್ಠಲ ಪ್ರಖ್ಯಾತ ಮೂರುತಿ ತಿರುವೆಂಗಳೇಶ ರಂಗ (ತೀರ್ಥಮ. ೮೧). **ಘಾತ್ರ :** ೨. ಮಂದರ ತಂದು ಮರ್ದಿಸಲು ಘಾತ್ರವಾದ ಮಹ ಹಲಾಹಲ ಉದುಭವಿಸೆ (ವಿಸ್ಮೋ . ಸು. ೬೩-೧) ; "ಘಾಡತರ, ಅತಿದಾರುಣ" (ವಿಸ್ಮೋ . ಸು. ಅಡಿಟಿ). [ <ಸಂ. ಗಾತ್ರ ]

**ಗಾತಿಕ** (ನಾ). [ ಸಂಗೀತ ] ಸಂಗೀತದಲ್ಲಿ ಎರಡೇ ಸ್ವರಗಳ ಪ್ರಯೋಗ: ರಾಗ, ಕ್ರಮವಾಗಿ ಸ್ವರೂಪಗೊಂಡ ರೀತಿಯಲ್ಲಿ ಆರ್ಚಿಕ (ಏಕಸ್ವರ ಪ್ರಯೋಗ), ಗಾತಿಕ (ದ್ವಿಸ್ವರ ಪ್ರಯೋಗ) . . . ಎಂಬ ಹಂತಗಳು ಕಂಡುಬಂದಿವೆ (ಸಂಗೀಚಂ. ೨೨). [ ? ]

**ಗಾತುರ** 'ಗಾತರ' ನೋ.

**ಗಾತೃ** (ನಾ). ಹಾಡುವವನು; ಗಾಯಕ. [ ಸಂ. ]

**ಗಾತ್ರ** (ನಾ). ೧. ಮೈ ; ದೇಹ ; **ಶರೀರ :** "ಗಾತ್ರಮಂಗಂ . . . ದೇಹಕ್ಕೆ ನಾಮಮಕ್ಕುಂ" (ಮಂಗರಾ. ೯೩-೧); ಯುಷ್ಮತ್ಪದಪಾಂಸುಗಳಿಂದಾಂ ಪವಿತ್ರಗಾತ್ರನೆನಾದೆಂ (ಶಂಪಭಾ. ೯-೩೨) ; ಅಮರಪತಿಗಾತ್ರದಂತೆ ನೇತ್ರಸಹಸ್ರಸಂಕುಳಮುಂ (ಕಾದಂಪೂ. ೦೦೦) ; ಪುತ್ರಶೋಕದುರಿ ಭುಗಿಲೆನೆ ನೆಗೆದು ಗಾತ್ರವನಡರೆ (ಹಚಕಾ. ೦೨-೩೦ ರಗಳೆ) ; ಸೊಗಸು ಸಿಂಗಾರವು ಗಾತ್ರಕೆ ತಕ್ಕಂತೆ ಎಲ್ಲ ಜೀವರಿಗಿಹುದಲ್ತೆ (ಇಂಜಾಪ. ೨೩೭-೭೮). ೨. **ಶರೀರದ ಭಾಗ ;** ಅಂಗ; **ಅವಯವ:** ತಲೆ ಗಾತ್ರಸ್ಫುರಣಂ ನರವುಲಿ ಕಾರೆಳ್ಳಟ್ಟಿ ಚ(೦)ಮ್ಮ ಖಿಳ್ಳೆಂದಿನಿತುಂ ಬಲದೊಳ್ ಪುರುಷಂಗೆಡದೊಳ್ ಲಲನೆಗೆ ಸಮನಿಸಿದೊಡಿಷ್ಟಫಲಮಂ ಕುಡುಗುಂ (ಲೋಕೋಪ. ೧೧-೬೪). ೩. **ಶರೀರವನ್ನು ಆವರಿಸಿರುವ ಚರ್ಮ:** ನೇತ್ರಂ ವದನಂ ಕರ್ಣಂ ಗಾತ್ರಂ ಘ್ರಾಣಂ ಗುದಂ ಪುರೀಷಂ ಸ್ವೇದಂ ಮೂತ್ರಮಿವಱಿಂದೆ ಗಂಧಂ ಚಿತ್ರವಿಧಂ ಪುಟ್ಟುಗುಂ (ಅಶ್ವಶಾ. ೩-೧೫); ಶ್ರೋತ್ರ ಶಬ್ದವ ನೇತ್ರ ರೂಪವ ಗಾತ್ರವಾ ಸ್ಪರ್ಶನವ ಜಿಹ್ವೆ ರಸೋತ್ಕರವ ಗಂಧವನು ನಾಸಿಕವಱಿವವಿಂತೈಸೆ (ಅಮೃತ. ೩-೯೭). ೪. ದಪ್ಪ ; **ಭಾಂಡೆಗಳು :** ಒಂದಕ್ಕೊಂದು ಹೊಂದಿಕೆಯಾಗುವಂತಹ ಬೇರೆಬೇರೆ ಗಾತ್ರದವು ಇರಬೇಕು (ಅಡುಸಾ. ೩೩) ; ಆ ಮರದ ಹಣ್ಣು ಒಳ್ಳೆ ಗಾತ್ರವಾಗಿದೆ (ರೂಢಿ). ೫. **ಆನೆಯ ಶರೀರದ ಮುಂಭಾಗ ;** ಆನೆಯ **ಮುಂಗಾಲು :** "ಗಾತ್ರಮುಮಪರಮುಮೆಂಬೀ ಗಾತ್ರಂ ಪೂರ್ವಾಪರಾಂಘ್ರಿಯುಗಳಮುಮಕ್ಕುಂ" (ವಸ್ತುಕೋ. ೮೮-೩೫) ; "ಗಾತ್ರಂ–ಆನೆಯ ಮುಂಗಾಲು ಮುಂತಾದ ಕೆಳಗಡೆ ಶರೀರಕ್ಕೆ ಹೆಸರು" (ಸಿದ್ಧಾಂತಿ. ೨೦೩). ೬. **ಒಂದುಸಾವಿರ ವೀಳೆಯದೆಲೆಗಳುಳ್ಳ ಕಟ್ಟು :** ಕೊಟ್ಟ ಸಾಸನಮಂ × × ಡೆಲೆಯ ಗಾತ್ರಕ್ಕೆ ಸಾಸಿರೆಲೆಯರ್ದ್ಧಗಾತ್ರಕ್ಕಯ್ಯೂಱಿಲೆ (ಸೌಇಇ. XI-ii, ೧೪೮-೨೫; 1099) ; ಗಾತ್ರಕ್ಕೆ ಯೊಂದು ಪೇಱ ನರಿ ಹೇಱನ್ನಿ ಧರ್ಮ್ಮವಮಂ (ಎಇ. XIII, ೦೯-೦೩ ; 1107) ; ಅಯ್ಯೂಱನಾಲುವರು ಒಕಲಲ್ಲಿ ಚೈತ್ರಕ್ಕೆ ಪಾಗ ೧ ಪವಿತ್ರಕ್ಕೆ ಪಾಗ ೧ ಅವರಲ್ಲಿ ಗಾತ್ರಕೆ ಪಾಗ ೧ (ಇಇ. XI, ೨೭೪-೩೭: 1158). 'ಗಾತ್ರಿಗ' ಪರಾ. [ ಸಂ. ]

**ಗಾತ್ರತ್ರ** (ನಾ). **ಶರೀರವನ್ನು ರಕ್ಷಿಸುವುದು ; ಕವಚ :** ಚೀ ನಾಣ ಪುತ್ತೆಂದು ದುರ್ಧರ ಗಾತ್ರತ್ರಮನೊಲ್ದು ನಿಲ್ಲಿಱಿವರೇ ಬಲ್ಲಾಳ್ಗಳೇಕಾಕಿಯುಂ (ಶಾಂತಿಪು. ೩-೯೮) ; ಸುರವಿಧ್ವಂಸಿಯ ಬಿಲ್ಲನೊಂದೆ ಶರದಿಂ ಗಾತ್ರತ್ರಮಂ ಕೃಷ್ಣನಾರ್ದರಡಂಬಿಂ ತಱಿದಿಕ್ಕಿ (ಜಗವಿ. ೧೮-೦೦೩). 'ತನುತ್ರ' ಪರಾ. [ ಸಂ. ]

**ಗಾತ್ರಸಂಕೋಚಿ** (ನಾ). ೧. ಶರೀರವನ್ನು ಮುದುರಿಕೊಂಡಿರುವವನು. ೨. ಇಲಿಯನ್ನು ಹಿಡಿಯಲು **ಶರೀರವನ್ನು ಮುದುರಿಕೊಂಡು ಸಿದ್ಧವಾಗಿ ಕುಳಿತಿರುವ ಬೆಕ್ಕು :** "ಜಾಹಕಃ, ಗಾತ್ರಸಂಕೋಚೀ, ಮಂಡಲೀ - ಈ ೩ ಇಲಿಯಂ ಹಿಡಿಯಲನುಗೆಯ್ವ ಬೆಕ್ಕು" (ಹಲಾಯು. ೪೦-೮೩). [ ಸಂ. ಗಾತ್ರಸಂಕೋಚಿನ್ ]

**ಗಾತ್ರಸ್ಫುರಣ** (ನಾ). ಶರೀರದ **ಯಾವುದಾದರೂ ಭಾಗವು ಅದುರುವುದು :** ತಲೆ ಗಾತ್ರಸ್ಫುರಣಂ ನರವುಲಿ ಕಾರೆಳ್ಳಟ್ಟಿ ಚ(೦)ಮ್ಮ ಖಿಳ್ಳೆಂದಿನಿತುಂ ಬಲದೊಳ್ ಪುರುಷಂಗೆಡದೊಳ್ ಲಲನೆಗೆ ಸಮನಿಸಿದೊಡಿಷ್ಟಫಲಮಂ ಕುಡುಗುಂ (ಲೋಕೋಪ. ೧೧-೬೪). [ ಗಾತ್ರ + ಸ್ಫುರಣ ]

**ಗಾತ್ರಿ** (ನಾ).=ಗಾತ್ರಿಗ : ಅಯ್ಯವೊಳೆ ಪುರಪರಮೇಶ್ವರರು ಮಪ್ಪಯ್ಯೂರ್ವರ್ ಸ್ವಾಮಿಗಳುಂ ಗವಱೆಯರುಂ ಗಾತ್ರಿಯರುಂ ಸೆಟ್ಟಿಯರುಂ ಸೆಟ್ಟಿಗುತ್ತರುಂ (ಎಇ. XIX, ೩೩-೧೯ ; 1135). [ <ಗಾತ್ರ ]

**ಗಾತ್ರಿಗ** (ನಾ). **ವೀಳೆಯದೆಲೆಯನ್ನು ಮಾರುವವನು :** ಗವಱೆಗರುಂ ಗಾತ್ರಿಗರುಂ ವೇಳಕಾಱರುಂ ಬೀರರುಂ ಬೀರವಣಿಗರುಂ . . . ಅಪ್ಪ ಶ್ರೀಮದಯ್ಯೂರ್ವ್ವರ ವಿಖ್ಯಾತಿಯನ್ತೆಂದಡೆ (ಸೌಇಇ. IX-i, ೧೦೮-೫೫ ; 1057) ; ಗಾತ್ರಿಗರು ತಾವು ಮಾಱಿದೆಲೆಗೆ ಹೊಂಗಯ್ಯತ್ತೈಲೆಯಂ ಕೊಟ್ಟರ್ (ಎಇ. V, ೦೯-೬೫ ; 1161) ; ಆ ದೇವರ ವೀಳೆಯ ನಡೆವಂತು

ಬಂದ ಗಾತ್ರಿಗರಲು ಬಿಟ್ಟ ಎಲೆ ಹೇಜುಂಗೆ ನೂಱು ಹೊಱಗಯ್ವತ್ತು (ಕೊಲ್ಹಾಶಾ. ೧೫-೪೯ : 1180). [ ಗಾತ್ರ + – ಇಗ ]

**ಗಾತ್ರಿಸು** (ಕ್ರಿ). ಶರೀರದಲ್ಲಿ ಸೇರಿಸು ; ದೇಹದೊಳಗೆ ಹೊಯ್ಯು : ಹುಸಿಯೊಳಾದ ಘಳಂ ಸವಿನೋಡಿದೆಂದು ಗಾತ್ರಿಸುವರನೇಕ ರೂಕ್ಷ ವಿಷತಿಕ್ತ ಕಠೋರವೆನಿಪ್ಪ ಖಾರವಂ (ಅನಂಪು. ೯-೩೭) : ಪುಸಿನುಡಿವನಿಗೊಂದೇ ನಾಲಗೆ ಸಾಲದೆಂದೆಸಳಿಸಳಾಗಿ ಸೀಳ್ದೊಡನೆ ಪುಸಿಯು ಘಳವ ನೋಡೆಂದು ಗಾತ್ರಿಸುವರು ಯೆಸೆವ ವಿಷದ ಕ್ಷಾರವನು (ಅನಂಜ. ೧೨-೯೪).

[ ಗಾತ್ರ + – ಇಸು$_3$ ]

**ಗಾಥ** (ನಾ). ಹಾಡು; ಶ್ಲೋಕ ; ಪದ್ಯ. 'ಜಯಗಾಥ' ಪರಾ. [ ಸಂ. ]

**ಗಾಥಿ** (ನಾ). ಸಂಗೀತಗಾರ ; ಗಾಯಕ. [ ಸಂ. ಗಾಥಿನ್ ]

**ಗಾಥೆ** (ನಾ). ೧.=ಗಾಥ : 'ವಡ್ಡಾರಾಧನೆ' ಎಂಬ ಹೆಸರು, ಅದರಲ್ಲಿ ಬಂದ ಭಗವತೀ ಆರಾಧನೆಯ ಗಾಥೆಗಳ ವಿವರಣೆ . . . ಸಾರಿ ಹೇಳುತ್ತವೆ (ಕಸಾಜ. ೭೨) ; ವ್ಯಂಗ್ಯಾರ್ಥದ ಅಸ್ತಿತ್ವವನ್ನು ಸಾಧಿಸಲೆಂದು ಕೊಟ್ಟ ಪ್ರಾಕೃತ ಗಾಥೆಗಳೇ ಉದಾಹರಣೆಗಳು (ಧ್ವನ್ಯಾಲೋ. ೧೯೨). ೨. ಕಥೆ ; ಚರಿತ್ರೆ : ಸಾನಂದಮುನಿವರನ ಪುಣ್ಯಗಾಥೆಯನು . . . ಜಪಿಸಿ (ಸಾನಂಗ. ೫೬). ೩. ನಾಣ್ಣುಡಿ ; ಗಾದೆ ; ಲೋಕೋಕ್ತಿ. ೪. [ ಛಂದ ] ಮಾತ್ರಾವೃತ್ತದ ಒಂದು ಭೇದ ; ಆರ್ಯಾವೃತ್ತ.

[ ಸಂ. ಗಾಥಾ ]

**ಗಾದರಿ, ಗಾಜರಿ, ಗಾದಿ$_2$** (ನಾ). ೧. ಚಾವಟಿ, ಕೋಲು ಮೊದಲಾದುವುಗಳ ಪೆಟ್ಟಿನಿಂದ ಮೈಮೇಲೆ ಏಳುವ ಗುರುತು ; ಬಾಸುಂಡೆ ; ಬಾಸುಳು : (ಆ). ೨. ಸೊಳ್ಳೆ ಮುಂತಾದುವುಗಳ ಕಡಿತದಿಂದ ಮೈಮೇಲೆ ಏಳುವ ಗಂದೆ,–ಗುಳ್ಳೆ : ಅವಳ ರಕ್ತಹೀನವಾದ ಕೈಗಳ ಮೇಲೆ ಗಾದರಿಗಳಿದ್ದವು (ಚೀನಜಾ. ೧೮೦). **ಗಾಜರಿ :** ೩. ಒಂದು ಬಗೆಯ ಚರ್ಮರೋಗ : ಒಮ್ಮೆಂದೊಮ್ಮೆ ಮೈತಿಂಡಿ ಬಿಟ್ಟು ಕೆರೆದು ಕೆರೆದು ತೊಗಲು ದಪ್ಪದಂತೆ ಆಗುತ್ತದೆ. ಇದಕ್ಕೆ ಗಾದಿ, ಪಿತ್ತಗಾದಿ, ಗಾಜರಿ, ಹೈತಕ ಮೊದಲಾದ ಬೇರೆಬೇರೆ ಹೆಸರುಗಳಿರುತ್ತವೆ (ಗೃಹವೈ. ೭೯). **ಗಾದಿ$_2$ :** ೩. ಮೇಲಿನ 'ಗೃಹವೈ' ಪ್ರಯೋಗವನ್ನು ನೋಡಿ. [ ? ]

**ಗಾದಾರಿ** (ನಾ). ಗೊಬ್ಬರಕ್ಕೆ ಉಪಯುಕ್ತವಾಗುವ ಎಲೆಗಳುಳ್ಳ ಹುರುಳಿ ಮುಂತಾದ ಗಿಡ : (ಆ). [ ? ]

**ಗಾದಿ$_1$** (ನಾ). ೧. ಅರಳೆ ತುಂಬಿದ ಮೆತ್ತನೆಯ ದಿಂಬು ; ಮೆತ್ತೆ : ತಿಂದು ಗಾದಿಯ ಮೇಲೆ ಬಂದು ಗೂರು ಬೀಳ್ವಂತೆ (ಸರ್ವಜ್ಞ. ೧೩೩೭) : ಕೊಠಡಿಲಿಕ್ಕೆ ರೇಶ್ಮೆಯ ಮತ್ತು ಕುತ್ನಿಯ ಗಾದಿಗಳ ಕುರ್ಚಿಗಳನ್ನೂ ಸೋಫಾ (ಮಂಚ) ಗಳನ್ನೂ ಇಡಿಸಿರುತ್ತೇನೆ! (ಮೋಹಿನೀ. ೩೪) ; ಕಂಬದ ಕೆಳಗಡೆ ಯಾವ ರತ್ನಗಂಬಳಿ ಅಥವಾ ಮೆತ್ತನೆಯ ಗಾದಿ ವಗೈರೆ ಇರಲಿಲ್ಲ (ಕಂಬಹು. ೧). ೨. (ಅಲಂ) ಅಧಿಕಾರಸ್ಥಾನ; ಗದ್ದುಗೆ ; ಸಿಂಹಾಸನ : ಈತನಿಗೆ ರಘಾನ್ಸಿಯ ಗಾದಿಯು ದೊರಕಿತು (ಝಾರಾಚ. ೨) ; ಪ್ರತಿಕ್ಷಣಕ್ಕೂ ತಮ್ಮ ರಾಜ್ಯದ ಗಾದಿ ಮುಳ್ಳಿನ ಗಾದಿಯೆಂಬ ಭಾಸವಾಯಿತು (ಶಿಲಾಮು. ೭೬). [ ←ಹಿಂ.ಗದ್ದೀ ; ಮರಾ. ಗಾದೀ ]

**ಗಾದಿ$_2$** 'ಗಾದರಿ' ನೋ.

**ಗಾದಿಂಗಾಯಿಗ** (ನಾ). ಒಬ್ಬಾತನ ಹೆಸರು: ಆತನ ಮಗ ಬೀರನೆಂಬೋನು ಗಾದಿಂಗಾಯಿಗನುಮಾ ಕಲ್ಲ ನಿಱಿಸಿದ (ಎಕ. VIII, ಸೊರಬ. ೨೦೬-೯ ; ೯೦೩). [ ? ]

**ಗಾದಿಗೆ$_1$** (ನಾ).=ಗಾದಿ$_1$ ೨ : ಹೆಂಡತಿಯು ಕನಸಣ್ಣಾ ಗಂಡನು ಕನಸಣ್ಣಾ ಗಂಡ ಮಗ ಸೊಸೆ ಸಹೋದರರು ಗಾದಿಗೆಗಳು ಕನಸಣ್ಣಾ (ಚಿದಾವ. ೩೪-೨). 'ಗದ್ದುಗೆ$_2$' ಪರಾ. [ ಗಾದಿ$_1$ + – ಗೆ ]

**ಗಾದಿಗೆ$_2$** 'ಕಾರಿಗೆ' ನೋ.

**ಗಾದೆ, ಗಾಥೆ** (ನಾ). ೧. ನಾಣ್ಣುಡಿ ; ಸಾಮತಿ ; ಲೋಕೋಕ್ತಿ : ಅರಸುಮಾನೆಯುಂ ತಿರಿಪುವರಿಟ್ಟೆ ಎಂಬ ಲೋಕಗಾದೆಯೇಕೆ ಪುಸಿಯಕ್ಕುಂ (ಪಂಚತಂ. ೯೫-೮) : ಗಾದೆಯ ಬಳಿಕ ಕೆಲಬರು ಗಳಿಸಿದೊಡೆ ಕೆಲರುಂಡು ಜಾಱುವರು (ಕುವ್ಯಾವಿ. ೩-೪೫) ; ಒಡೆಯ ಮೆಚ್ಚೆ ಕಾಲೊಳೊದೆದನೆಂಬ ಗಾದೆಯಿಂಬೆನಗೆಂದಳವಳು (ಭರಜ. ೦೦-೯೯) ; ಗಾದೆ ವೇದಕ್ಕೆ ಸಮ (ಗಾದೆ). **ಗಾಥೆ :** ೨. ಹಾಡು ; ಪದ್ಯ : ನಾನು ಕಟ್ಟಿಕೊಟ್ಟ ಗಾಥೆಗಳನ್ನು ಹಾಡುತ್ತ ಬ್ರಾಹ್ಮಣರು ನಿನ್ನನ್ನು ಹುಡುಕಲು ಎಲ್ಲೆಡೆಗಳಿಗೂ ಹೋದರು (ವಚಭಾ. ೧೪೪). 'ಗಾಹೆ' ಪರಾ. [ < ಸಂ. ಗಾಥಾ ]

**ಗಾಧೆ** 'ಗಾದೆ' ನೋ.

**ಗಾನ$_1$** (ನಾ) ೧. ಗಹನ ; ಕಷ್ಟಕರವಾದುದು ; ಕಠಿನವಾದುದು : ಗಹನ–ಗಾನ (ಶಮದ. ೨೬೭ ಪ್ರಯೊ ೧); ಆ ಸತಿ ಸಂತಸಂದಳೆದಳೀ ಹೊನ್ಮಕ್ಕಿದೇಂ ಗಾನಮೋ (ಚಂದ್ರಛಾ. ೧೪-೯೫). ೨. ಅಸಾಧ್ಯನಾದವನು: ನೀನೊರ್ವನೆ ಪೊಣರ್ವ ಗಡಾಂ ಸೇನಾನ್ವಿತನಾಗಿ ಕಾದುವಲ್ಲಿವರಂ ನೀಂ ಗಾನಮೆ ಪೇೞ್ (ಜಗವಿ. ೯-೭೮) . [ < ಸಂ. ಗಹನ ]

**ಗಾನ$_2$** (ನಾ). ೧. ಹಾಡುವಿಕೆ ; ಗಾಯನ ; ಸಂಗೀತ : "ಗೀತಮೆನೆ ಗಾನಮೆನೆ ಪಾಡೆನಿಕ್ಕುಂ" (ಮಂಗರಾ. ೨೩-೨) ; ತಾನತಾನಕೆ ರಾಯ ಹಿಗ್ಗುತಿಹನು ಗಂಡನಾನಂದಕವಳುಬ್ಬುತಿಹಳು ಗಾನವೊಪ್ಪುದುದಾಗ ಗಂಧಗಿರಿಯ ಪವಮಾನ ಕಮ್ಮನೆ ತೀಡಿದಂತೆ (ಭರಜ. ೦೦-೦೯). ೨. ಹಾಡು; ಗೀತ : ವೀಣೆಯಿಂ ಗಾನವಂ ನುಡಿಸುವಂದದೊಳೆನ್ನ ವಾಣಿಯಿಂ ಕವಿತೆಯಂ ಪೇಳಿಸಿದನು (ಜೈಮಿಭಾ. ೧-೮); ಶ್ವಾನನ ಮುಂದೆ ಗಾನ ಹಾಡಿದ ಹಾಗೆ (ಗಾದೆ). [ ಸಂ. ]

**ಗಾನಕಲೆ** (ನಾ). ಸಂಗೀತವಿದ್ಯೆ : ಪ್ರಾಚ್ಯಮಾನವನ ಮತ್ತು ವಿಶ್ವದ ವಿವಿಧಭಾಗಗಳ ಗಾನಕಲೆಯ ಮೂಲವೆಲ್ಲಾ ಇದೇ ತಾನೇ ? (ಭಾಕೆದ. ೫೩೭). [ ಗಾನ$_2$ + ಕಲೆ$_3$ ]

**ಗಾನದೇವತೆ** (ನಾ). ಸಂಗೀತಶಾಸ್ತ್ರದ ಅಭಿಮಾನಿದೇವತೆ ; ಸರಸ್ವತಿ : ಬಾಲೆ ಬಾಜಿಸುತೆ ಜಾಣಿಂ ಬೀಣೆಯಂ ಗಾನದೇವತೆವೋಲ್ ಕೇಳಿಸಿದಳ್ ಕಳಾಕುಶಲೆಯಂ (ಲೀಲಾವ. ೦೦-೦೦) ; ಬಾಲಕರ ವದನದೊಳ್ ವಾಣಿ ತಾಂ ನೆಲಸಿದಳೊ ಗಾನದೇವತೆಯ ವೈಗಾಣಿಕೆಯೊ ಮೋಹನದ ತನಿರಸವೊ . . . ಎನೆ (ಜೈಮಿಭಾ. ೨೦-೫೭). [ ಗಾನ$_2$ + ದೇವತೆ ]

**ಗಾನಪದ್ಧತಿ** (ನಾ). ಸಂಗೀತದ ಸಂಪ್ರದಾಯ,–ಕ್ರಮ : ಈಗಿನ ಗಾನಪದ್ಧತಿಯನ್ನು ಹೀಗೇ ಬಿಟ್ಟರೆ ಇನ್ನು ಕೆಲವುದಿನಗಳಲ್ಲಿ ಸಂಗೀತವೇ ಸವೆದುಹೋಗುವುದು (ಗಾನಕ. ೨೭). [ ಗಾನ$_2$ + ಪದ್ಧತಿ ]

**ಗಾನಪಾತ್ಯ** (ನಾ). ಗಾನಮಾಡಲು ಬಳಸುವ ಕೀರ್ತನೆ,–ಕೃತಿ,–ಸಾಹಿತ್ಯ : ಅಂಗೋಪಾಂಗಂಗಳೊಳೆಸೆವಾಂಗಿಕವಂ ಗಾನಪಾತ್ಯದೊಳ್ ವಾಚಕವಂ ತುಂಗಸ್ತುಚಿ ಮೆಱೆದಳಾ ದಿವಿಜಾಂಗನೆಗಾಹಾರ್ಯ ಸಾತ್ವಿಕಂ ನಿಜಮೆ ವಲಂ (ಆದಿಪು. ೯-೨೮). [ ಗಾನ$_2$ + ಪಾತ್ಯ ]

**ಗಾನಪ್ರಬಂಧ** (ನಾ). ಸಂಗೀತಕೃತಿ ; ಹಾಡು : ನಾನೇ ಗಾನಪ್ರಬಂಧ ರಚಿಸಲಾರೆನಾದರೂ, ಅಂಥ ಕೆಲಸ ಅಸಾಧ್ಯವಲ್ಲ (ಸ್ವಪ್ನಹೊ. ೨೫೭).

[ ಗಾನ$_2$ + ಪ್ರಬಂಧ ]

**ಗಾನಲೋಲ** (ನಾ). ಸಂಗೀತದಲ್ಲಿ ತೀವ್ರವಾದ ಆಸಕ್ತಿ ಹೊಂದಿರುವವನು : ಶ್ರೀನಿವಾಸ ನೀನೇ ಪಾಲಿಸೋ ಶ್ರಿತಜನಪಾಲ ಗಾನಲೋಲ ಶ್ರೀವೆಂಕಂದನೇ (ಪುರಂದ. ೧–೭ ಪಲ್ಲವಿ).

[ ಗಾನ$_2$ + ಲೋಲ ]

**ಗಾನವಾಟಿ** (ನಾ). ಹನ್ನೊಂದು ಬಗೆಯ ವೃಕ್ಷಸನ್ನಿವೇಶಗಳಲ್ಲಿ ಒಂದು : ವನವಾಟ ಚಕ್ರಾವರ್ತ ತೋಪು . . . ಗಾನವಾಟಿ ಕ್ರೀಡಾರಾಜ

ಚಿತ್ರವ್ಯೂಹ ಕೋಣಕ್ರಮಂಗಳೆಂಬ ಹನ್ನೊಂದು ವೃಕ್ಷಸನ್ನಿವೇಶಗಳುಂ ನಂದನೀಯಗಳಾಗಿರ್ಕುಂ (ವಿವೇಕ. ೨೦೦). [ ? ]

**ಗಾನಶಯ್ಯೆ** (ನಾ). [ ಸಂಗೀತ ] ಹಾಡುವ ಸಂಪ್ರದಾಯ ; ಗಾಯನ ಕ್ರಮ,-ಪದ್ಧತಿ : ಅವರದು ಪರಿಶುದ್ಧವಾದ ಕರ್ಣಾಟಕ ಗಾನಶಯ್ಯೆ ಅಲ್ಲವೆಂದೂ, ಒಂದು ವಿಮರ್ಶೆ ಹರಡುತ್ತಿದೆ (ಗಾನಕ. ೩೩).

[ ಗಾನ$_2$ + ಶಯ್ಯೆ ]

**ಗಾನಶಾಲೆ** (ನಾ). ಸಂಗೀತವನ್ನು ಹೇಳಿಕೊಡುವ ಮಂದಿರ; ಸಂಗೀತ ಗೋಷ್ಠಿ ನಡೆಯುವ ಸ್ಥಳ : ಗಾನಶಾಲೆ ಕ್ರೀಡಾಶಾಲೆ ಭೋಜನಶಾಲೆ ಮಜ್ಜನಶಾಲೆ (ವಿವೇಕ. ೨೦೩). [ ಗಾನ$_2$ + ಶಾಲೆ$_1$ ]

**ಗಾನಿ** (ನಾ). ಹಾಡುವವನು ; ಸಂಗೀತಗಾರ : ವೀಣೆಯಂ ಗಾ[ ಪಾಠಾಂ. ನಾ ]ನಿ ಬಾಜಿಸೆ ಸುತಾನಂ ತಾನತಾನವಮಾಗುಣ್ಮದೊಡೆ ಬಂದ ಕೊಜಿತೆ ಗಾನಿಗೋ ವೀಣೆಗೋ (ಪದ್ಮರಾ. ೧-೩).

[ ಸಂ. ಗಾನಿನ್ ]

**ಗಾನೆ** (ನಾ). ಹಾಡುವವಳು ; ಸಂಗೀತಗಾತಿ : ಗಾನೆಯರ ಮಧುರಾಳಾಪ ಗೀತವ ಕೇಳ್ದು ಖಳರಾಯ . . . ಮೆಯ್ಮುರಿದೆದ್ದನೊಲಿದು (ಮೋಹತ. ೨೨-೩೭). [ ಗಾನ$_2$ + – ಎ$_2$ ]

**ಗಾನೋದ್ಯೋಗ** (ನಾ). ಹಾಡುವ ಪ್ರಯತ್ನ, – ಕಾರ್ಯ : ಗಾನೋದ್ಯೋಗದೆ ಪೋಗಿ ಮೌನದೆ ವಲಂ ಜಾನಿಪ್ಪಂ . . . ಏನಂ ಪೇಟ್ವುದೊ ಮಾಣದಾ ಕುವರನಂ ಕಾಡಿತ್ತು ಕಾಮುಗ್ರಹಂ (ವರ್ಧಪು. ೩-೨೦). [ ಗಾನ$_2$ + ಉದ್ಯೋಗ ]

**ಗಾಬರಿ, ಘಾಬರಿ** (ನಾ). ಹೆದರಿಕೆ ; ಭಯ ;ಅಂಜಿಕೆ : ಅವಳಿಗೆ ಕಂಠಿಯ ಈ ಹೊಸ ನಡವಳಿಕೆ ಆಶ್ಚರ್ಯ ಗಾಬರಿಗಳೆರಡನ್ನೂ ಉಂಟು ಮಾಡಿತು (ಬಾಡಿಬ. ೮೯) ; ಸರಸ್ವತಿ ಗಾಬರಿಯಿಂದ "ಏನಾಯಿತು ?" ಎಂದು ಕೈ ತೊಳೆಯಲು ನೀರು ಕೊಟ್ಟಳು (ಮುಂಗಾಮು. ೬೪). **ಘಾಬರಿ :** ಈ ಸುದ್ದಿ ನಮ್ಮವರಲ್ಲಿ ಘಾಬರಿಯನ್ನುಂಟುಮಾಡಿತು (ಪ್ರವಾಇ. II, ೪೨೭) ; ನನಗೆ ಘಾಬರಿಯಾಗಿಬಿಟ್ಟು ನನ್ನ ಬುದ್ಧಿ ಕೆಲಸ ಮಾಡುವುದನ್ನು ನಿಲ್ಲಿಸಿಬಿಡುತ್ತದೆ (ಜಾಲಮು. ೨೭).

[ ←ಹಿಂ. ಮರಾ. ಘಾಬರಾ ]

**ಗಾಬರಿಗೊಳು, ಗಾಬರಿಗೊಳ್ಳು** (ಕ್ರಿ). ಅಂಜು ; ಹೆದರು ; ಭಯಪಡು : ಗಾಬರಿಗೊಳಬೇಡ ನಾಚಿಕೆಯನು ಬಿಡು ಪ್ರತಿವಾದಿಯನು ಕರೆಗಣಿಸು (ಅಂಜಾಪ. ೧೭೭-೭೭). **ಗಾಬರಿಗೊಳ್ಳು :** ಭಟ್ಟನಿ . . . ಬಹಳ ಮಟ್ಟಿಗೆ ಗಾಬರಿಗೊಂಡಿದ್ದಳು (ಬಾಅಳ. ೧೩೦) ; ವೃಥಾ ಏಕೆ ಗಾಬರಿ ಗೊಳ್ಳುತ್ತೀರಿ ? (ಪ್ರಕಾಪ. ೮೦). [ ಗಾಬರಿ + ಕೊಳು (<ಕೊಳ್$_1$) ]

**ಗಾಬರಿಗೊಳ್ಳು,** 'ಗಾಬರಿಗೊಳು' ನೋ.

**ಗಾಬರಿಪಡಿಸು** (ಕ್ರಿ). ಅಂಜಿಕೆಯಾಗುವಂತೆ ಮಾಡು ; ಭಯಗೊಳಿಸು : ಹೆದೆಯುಲಿಯಿಂದ ಗಾಬರಿಪಡಿಸಿ ಬೆದರಿಸಿದ (ಶ್ರೀರಾಪ. ೬೪ ಪೀಠಿಕೆ).

[ ಗಾಬರಿಪಡು + – ಇಸು$_3$ ]

**ಗಾಬರಿಪಡು** (ಕ್ರಿ).=ಗಾಬರಿಗೊಳು : ದಾಸಸಾಹಿತ್ಯದ ಸಂಖ್ಯೆಯನ್ನು ನೋಡಿ ನಾವು ಗಾಬರಿಪಡುವ ಕಾರಣವಿರುವದಿಲ್ಲ (ಕಥವಿ. I, ೬).

[ ಗಾಬರಿ + ಪಡು$_1$ ]

**ಗಾಬರಿಸು, ಘಾಬರಿಸು** (ಕ್ರಿ).=ಗಾಬರಿಗೊಳು : ಬೆದರುತಲಿ ಕಂಗೆಟ್ಟು ಗಾಬರಿಸಿದರು (ಶರಲೀ. ೪೦೪-೮) ; ಅರರೆ ಮಂಥನಕಾಲದಲಿ ಜಲಚರಗಳುರೆ ಗಾಬರಿಸಿದಂತಹ ಶರಧಿಯಿಂ ಹೊರಟಿರುವ ಶ್ರೀಸುರತರುಗಳೆಂದದಲಿ . . . ತೋರಿದರು (ರಘುವಂ. ೦೯೩-೬೯). **ಘಾಬರಿಸು :** ಅಕ್ಷಿಗಂ ಕತ್ತಲೆಯು ಕವಿವಾತಂಗೆ ಘಾಬರಿಸಿ (ಚಂದ್ರಾವ. ೩೩).

[ ಗಾಬರಿ + – ಇಸು$_3$ ]

**ಗಾಬಿ** (ನಾ). (?) : ವಿವರ ಗಾಬಿ ರೇಖೆ ನಪ್ಪದಿಂದ ಗ.೧೫ ಲ ೨೫ (ಎಕ. VIII, ತೀರ್ಥಹ. ೯೦-೩೯ ; 1709). [ ? ]

**ಗಾಬು** (ನಾ). ರಾಗಿಯ ಕಾಳಿನ ಮೇಲಿರುವ ತೆಳುವಾದ ಪದರ : ಕಣದ ತುಂಬ ಗಾಬು ಹರಡಿಕೊಂಡಿದೆ (ರೂಢಿ). 'ಮಣ್ಣುಗಾಬು' ಪರಾ. [ ? ]

**ಗಾಭಸ್ತಿ** (ನಾ). ೧. ಕಿರಣ ; ಕಾಂತಿ ; ತೇಜ. ೨. (ಆಲಂ) ಜ್ಞಾನ : ವಸ್ತುಸಾಕ್ಷಾತ್ಕಾರವೆನಿಸುವ ನಿಸ್ತರಂಗ ಚಿದಾಬ್ಧಿಯನು ಗಾಭಸ್ತಿ ಸ್ವರೂಪವನು ಕೃಪೆಮಾಡೆಂದ ಕಾರ್ತಿಕೇಯ (ಜ್ಞಾನಸಿಂ. ೩೯-೧).

[ <ಸಂ. ಗಭಸ್ತಿ ]

**ಗಾಮ, ಗಾಂವೆ, ಗಾವ, ಗಾವೆ** (ನಾ). ಹಳ್ಳಿ ; ಗ್ರಾಮಂ : ಎಡೆನಾಡ ಗಾಮಂ . . . ಆಳುತ್ತಿರೆ (ಎಕ. VIII, ಸೊರಬ. ೦-೩ ; ೯೯೭ ?). **ಗಾಂವೆ :** ಗಾಂವೆ, ಗಾವೆ ; ಕಾಂಪಂ, ಕಾಪಂ (ಭಾಷಾಭೂ. ೯ ಪ್ರಯೋ) **ಗಾವ :** ಮಕಾರಕ್ಕೆ ವಕಾರಂ . . . ಗ್ರಾಮ–ಗಾವ (ಶಮದ. ೨೬೩ ಪ್ರಯೋ) ; ಗ್ರಾಮ–ಗಾವ (ಶಬ್ದಾನು. ೦೬೪ ಪ್ರಯೋ). **ಗಾವೆ :** ಮೇಲಿನ 'ಭಾಷಾಭೂ' ಪ್ರಯೋಗವನ್ನು ನೋಡಿ. [ <ಸಂ. ಗ್ರಾಮ ]

**ಗಾಮಗಾಣೆ, ಗಾವಗಾಣೆ** (ನಾ). ಗ್ರಾಮಗಳಿಗೆ ಸಂಬಂಧಿಸಿದ ಪ್ರದೇಶ ; ಗ್ರಾಮಠಾಣೆ. 'ಗಾಮಗಾಣೆಲೆಖ್ಖ' ಪರಾ. **ಗಾವಗಾಣೆ :** ಗಾವಗಾಣೆ ಪೈಕಿ ಗದ್ದೆ ವಗೈರೆ ಪೈರು ಇಲ್ಲದೆ ಇರುವ ಚಿಕ್ಕಗ್ರಾಮಕ್ಕೆ . . . ದರಖಾಸ್ತು ಮಾಡಿದಲ್ಲಿ (ಮಹಾವಂ. II, ೬೯).

[ ಗಾಮ + ಕಾಣೆ (<ಖಾನೆ) ]

**ಗಾಮಗಾಣೆಲೆಖ್ಖ** (ನಾ). ಹಲವು ಗ್ರಾಮಗಳನ್ನೊಳಗೊಂಡ ಜಿಲ್ಲೆಯ ಭೂಕಂದಾಯದ ಲೆಕ್ಕಪತ್ರ : (ಕಿಸಂಗ್ಲಾ. ೦೪೩).

[ ಗಾಮಗಾಣೆ + ಲೆಖ್ಖ (<ಲೆಕ್ಕ) ]

**ಗಾಮಗುಡ್ಡ** (ನಾ). ಒಂದು ಊರಿನ ಹೆಸರು : ತಸ್ಯ ಸೀಮಾವ್ಯವಸ್ಥ ಈಶಾನ್ಯ ದಿಕ್ಸೀಮಾ ಗಾಮಗುಡ್ಡ ತಟಾಕಸ್ಯ (ಮೈಆರಿ. ೧೯೪೨, ೭೩-೦೦೨ ; 819 ?). [ ಗಾಮ + ಗುಡ್ಡ$_2$ ]

**ಗಾಮಬ್ಬೆ** (ನಾ). ಒಬ್ಬಾಕೆಯ ಹೆಸರು : ಮಹೇನ್ದ್ರಾಧಿರಾಜಗ್ಗೆಂ ಗಜ್ಜರ ಮಗಳ್ಗಾಮಬ್ಬೆ ಮಹಾದೇವಿಗಂ ಪುಟ್ಟಿದೊನಯ್ಯಪದೇವನ್ (ಸೌಇಇ. IX-i, ೨೩-೨೫ ; 929). [ ಗಾಮ$_0$ + ಅಬ್ಬೆ$_1$ ]

**ಗಾಮಲಗುಲಾಯಿ** (ನಾ). ಒಂದು ಬಗೆಯ ಕುಲಾಯಿ,–ಟೋಪಿ (?) : ಹಸ್ತವಲಯವುಂಗುರವಾದಿ ಭೂಷಣಗಳಂಗಿಯಗ್ರುದೊಳೊಪ್ಪುವೆಳೆಯ ಗಾಮಲಗುಲಾಯಿ (ಜನಮು. ೪-೨).

[ ಗಾಮಲ? + ಕುಲಾಯಿ (<ಕುಲಾಯ್$_2$) ]

**ಗಾಮಾಹಾರ** (ನಾ). ನಾಡಿನ ಒಂದು ವಿಭಾಗ : ಗ್ರಾಮಾಹಾರ ಅಥವಾ ಗಾಮಾಹಾರ ಎಂಬೊಂದು ನಾಡ ವಿಭಾಗವನ್ನು ಕಾಣಬಹುದು (ಶಬ್ದವಿ. ೩೮). [ <ಸಂ. ಗ್ರಾಮಾಹಾರ ]

**ಗಾಮಿಗ** (ನಾ). ಗ್ರಾಮಸ್ಥ ; ಹಳ್ಳಿಗ : ನಾಗವಳ್ಳಿಯರುಂ ಅಣ್ಣುಗಿಯಾ ಗಾಮಿಗರುಂ ನೀರಿಲ್ಲಿಯಾಸಿನ್ದೆಲ ಗಾಮಿಗರುಂ ಮುಖಿಂ ಆಗೆ (ಎಕ. VII, ಶಿಕಾರಿ. ೦೩೪-೦೦ ; ಸು. 695) ; ಬಿಟ್ಟಿಗ ಎಟಿಗಗೊಳ್ಳಿ ನಾಡನಾಬ್ಗಾಮಿಗರ್ (ಎಕ. VIII, ಸೊರಬ. ೩೪೨-೨ ; ಸು. 800). [ ಗಾಮ + – ಇಗ ]

**ಗಾಮುಂಡ, ಗಉಂಡ, ಗಉಡ, ಗಮುಂಡ, ಗವುಂಡ, ಗವುಂಡು, ಗವುಡ$_1$, ಗವುಡು, ಗಾಮುಂಡಂ$_1$, ಗಾವುಂಡ, ಗಾವುಂಡು$_1$, ಗೊಂಡ$_1$, ಗೋವುಂಡಂ$_1$, ಗೌಉಡ, ಗೌಂಡ, ಗೌಂಡು, ಗೌಡ$_1$, ಗೌಡು, ಗೌವುಂಡ** (ನಾ). ಊರಿನ ಮುಖ್ಯಸ್ಥ ; ಗ್ರಾಮಣಿ ; ಪಟೇಲ : ಶ್ರೀಚನ್ದಿಯಮ್ಮರಸರ್‌ದೇವರ್ಗೆ ಮಣ್ಣವ್ ಕೊಟ್ಟರ್ . . . ಪನ್ನೆರಡು ಗಾಮುಂಡ್ಗ ಪ್ರಜೆರ್ ಸಕ್ಷಿ (ಎಕ. XI, ಚಿತ್ರದು. ೨೪-೨ ; ಸು.

500 ?) ; ಕೌಶಳವೆಂಬೂರ ಗಾವುಂಡಂ [ಪಾಠಾಂ. ಗಲುಂಡಂ, ಗವುಂಡಂ, ಗೌಡಂ] ಜಗದ್ಗೃಹನೆಂಬೊಂ (ವಡ್ಡಾರಾ. ೨೦-೧೭) ; ನಿವೇಶನಂ ಕೊಟ್ಟ ಯಿಕ್ಕುವವರ್ಗ್ಗೆ ಗಾವುಂಣ್ಡುಗ್ಗಂ ಕೀಲ್ಬ್ಯಾತಿಯ ಮುಂಕ್ಯರ್ಗ್ಗಂ ಪ್ರತ್ಯೇಕಂ ಮನೆಯೊನ್ದು ( ಎಇ. XX, ೬-೪೩ ; 1012) ; ಹಳ್ಳಿಗಳಲ್ಲಿ " ಗಾವುಂಡ " (ಈಗಿನ ಗೌಂಡ ಅಥವಾ ಗೌಡ) ರೆ ಮುಖ್ಯರು (ಹಿಂದುಳಿ. ೯೦). **ಗಲುಂಡ :** ಮೇಲಿನ ' ವಡ್ಡಾರಾ ' ಪ್ರಯೋಗದ ಪಾಠಾಂತರವನ್ನು ನೋಡಿ. **ಗಲುಡ :** ದೀವದ ನಿತ್ಯದ ಕಾಣಿಕೆಯನು ಗಲುಡಗಳು ಸ್ವಗೆ ತೆಕ್ಕೊಂಡು (ಎಕ. III, ಮಳವ. ೯೦-೬ ; 1520). **ಗವಂಡ :** ಸಂಕರದೇವರ್ಗ್ಗೆ ಕಣ್ಣತ್ತರ ಚಾಮ ಗವಂಡನ ಮಗ ಗವುಂಡೆಯ ವಿನಾಕನಂ ನಂದಿಯುಮುಂ (ಎಕ. III, ಮೈಸೂರು. ೮-೧೬ ; 1175). **ಗವುಂಡ :** ಪೆಂಡತಿಗಾಜಿದೆ ತೊಟ್ಟುಂಗೆ ಗವುಂಡಂಗಾಜಿದೆ ಬಾರಿಕಂಗೆ ಕಳ್ಳಂಗಾಜಿದೆ ಬಟ್ಟೆವೋಪಂಗೆ . . . ಮುನಿವರೆಂಬ ನಾಟ್ಟುಡಿಯಂತೆ (ಧರ್ಮಾಮೃ. ೬-೧೧೯) ; ಒಬ್ಬ ಹೆಗ್ಗಡೆಯೋ ಗವುಂಡನೋ ಅಥವಾ ನಾಡಿಗನೋ ಹೀಗೆ ಮಾಡಿದ್ದರೆ ? (ಕಪಪು. ೬-೯೨). **ಗವುಂಡು :** ಇದು ನಿತಾಂತವೋರಂತಿರೆ ರಕ್ಷಿಪ[ರ್] ಧ್ವಜತಟಾಕದ ಪನ್ನೆರಡುಂ ಗವುಂಡುಗಳ್ (ಇಆ. XVIII, ೩೯-೧೨ ; 1077) ; ಮಲ್ಲಗಾವುಂಡನೊ ಳಾರುವೇಂ ದೊರೆಯೆ ಲೋಕದ ವರ್ತ್ತಿಸುವೀ ಗವುಂಡುಗಳ್ (ಸೌಇಇ. XX, ೧೭೫-೧೩ ; 1190) ; ಸಮಸ್ತಪ್ರಜೆ ಗವುಂಡುಗಳೂ (ಎಕ. IX, ಬೆಂಗಳೂ. ೨೦-೮ ; 1342). **ಗವುಡ$_1$ :** ಯಾರಕುಳಧ ಮಧಿಗವುಡನ ಶುಪುತ್ರ (ಇಆ. VII, ೧೭೩ ; 350 ಕ್ರಿಶ) ; ಆ ಅಜ್ಜ ಗವುಡನು ಆ ಗದ್ದೆಯನು . . . ಧಾರಾಪೂರ್ವಕವಾಗಿ ಕೊಟ್ಟನು (ಎಕ. VI, ಕಡೂರು. ೧೨-೩೫ ; 1288) ; ಮಲಣಗವುಡ ಸಂಬುವಗವುಡ (ಮ್ಯಾಆರಿ. ೧೯೪೧, ೨೬-೧೧ ; 1292) ; ಚರಲಿಂಗ ವುಂಡ ಶೇಷವ ಮಾರಗವುಡನ ತರಣಿ ಬಿಸುಡೆ (ಮೋಳಿಪು. ೩-೬೩). **ಗವುಡು :** ಕಲ್ಲಗೊಂಡ ಬೈರಗೊಂಡನೊಳಗಾದ ಗವುಡುಗಳು ಮಂಗಾಯಿ ಮಾಡಿಸಿದ ಬಸ್ತಿಗೆ ಕೊಟ್ಟ ವೊಡ್ಡರ ಕಟ್ಟೆಯ ಗದ್ದೆಬೆದ್ದಲು (ಎಕ. II, ೩೯೫-೫ ; ಸು. 1500). **ಗಾವುಂಡು$_1$ :** ಕೊಳಗ[ರ]ಸೆಟ್ಟಿ ಮೊದಲಾಗಿ ಮೂನೂರ್ವ್ವರ್ಸ್ಗೆ × × × ಗಾವುಂಡುಗಳು (ಸೌಇಇ. XI-1, ೯೬-೨೬ ; 1062). **ಗಾವುಂಡ :** ಆ ವೂರ ಗಾವುಂಡಂ ಜಿನಪಾದಿಗ ನೆಂಬೊಂ (ವಡ್ಡಾರಾ. ೧೧೦-೨೩) ; ಇ[ವ]ನ ತಮ್ಮ ಗಾವುಣ್ಡ ಷುವಿಳೆವ್ ಬೀರಕಲ್ಲ ನಿಱಿಸಿದ (ಎಕ. IV, ಹೆಗ್ಗಡ. ೬೩-೩೦ ; 1007 ?) ; ಭೋಗವತಿಯೆಂಬೂರೊಳ್ ಕಾಮವೃಷ್ಟಿಯೆಂಬ ಗಾವುಂಡಂಗಂ ಇಷ್ಟದಾನಿ ಯೆಂಬ ಗಾವುಂಡಿಗಂ ಅಕ್ರತಪುಣ್ಯನೆಂಬ ಮಗಂ ಪುಟ್ಟಲೊಡಂ (ಜೀವಸಂ. ೨೦೦-೩೯ವ). **ಗಾವುಂಡು$_1$:** ಸ್ವಸ್ತಿಶ್ರೀ ಅಯ್ವದಿವ್ಬರುಂ ಗಾವುಣ್ಡುಗಳುಂ ಪ್ರಜೆಯುಂ ಇಟ್ಟು ಮಾಡಿದ ಸ್ಥಿತಿ (ಸೌಇಇ. XI-1, ೧೨-೧೯ ; 9.87) ; ರಾಜಧಾನಿಗಳಾಗಿದ್ದ ಕೆಲವು ಪಟ್ಟಣಗಳನ್ನು 'ಗಾವುಂಡು'ಗಳು ರಕ್ಷಿಸುತ್ತಿದ್ದರೆಂದು ಒಂದೆರಡು ಶಾಸನಗಳು ತಿಳಿಸುತ್ತವೆ (ಕಶಾಅ. ೩೫೨). **ಗೊಂಡ$_1$ :** ಕೂಲಂಬಿಯ ದೊಡಿಗೊಂಡ ಕುಂಬಲೂರ ಮಲ್ಲಿಗೊಂಡ ವಿಟೂರ ಬರಮಗೊಂಡ (ಎಕ. XI, ದಾವಣ. ೧೧೭-೩೭ ; 1516). **ಗೋವುಂಡು$_1$ :** ಗೊಟ್ಟವಡ್ಡಿಯ ಗೋವುಣ್ಡುಗಳಂ ಸೆಲಾಂಭ್ಯೆಯರುಂ ಆನೆಯರು ಕೂಡಿ ಗೊವುಣ್ಡುಂಗೆಯ್ದುವದರ್ಕ್ಕೆ ಇವರ ಕೊಡಗೈ (ಎಕ. III, ನಂಜನ. ೧೯೯-೬ ; 189 ಕ್ರಿಶ). **ಗೌಉಡ :** ಬೇಟ ಗೌಂಡ ಅವನ ಮಗ ಏಚಣ ಗೌಉಡ ನಿಂಗಣ ಗೌಉಡ . . . ದೊಡಗೌಉಡ (ಎಕ. XI, ಹಿರಿಯೂ. ೪೯-೩ ; ?). **ಗೌಂಡ :** ಗೌಂಡಗಳುಂ ಬಲ್ಲೊಕ್ಕಲ್ಗಳು ಮಱಿವೊಡೆ ಸಾಲ್ವಂ (ಧರ್ಮಾಮೃ. ೯-೧೦೦) ; ಮಾರಗೌಂಡನ ಹಳ್ಳಿಯ ಗುಮ್ಮಜ್ಜ ಬೆರೆಯ (ಎಕ. II, ೩೩೫-೩೯ ; ಸು. 1185) ; ಅರಸಂ ಗೌಂಡನಿಂ ಪೊಲಮನುಱಿಸಿದಂ (ಶಬ್ದಾನು. ೨೦೫ ಪ್ರಯೋ) ; ಇದಯವಾಟಿದ್ದಿ ಗೌಣ್ಡನ್ಗಂ ಆ ಮೂಳೊಱ್ (ಎಕ. XIV, ತಿರುಮ. ೨೫೨-೮ ; ?). **ಗೌಂಡು :** ಕೋಗಳಿನಾಡ ಪ್ರಭು ಗೌಂಡುಗಳ ಮುಂದೆ . . . ಧಾರಾ ಪೂರ್ವ್ವಕ ಮಾಡಿಕೊಟರು (ಸೌಇಇ. IX-1, ೩೨೪-೮ ; 1197). 'ಗೌಂಡುಂ ಬಳಿ' ಪರಾ. **ಗೌಡ$_1$ :** ಧರೆಯ ಕುಡಿಯರ ಕುಲಶಿರೋಮಣಿಗಳೆನಿಪ ಗೌಡರ ಬಸಿಱೊಳೊಗೆ [ದ] (ಸಿದ್ಧರಾ. ೧-೩೨) ; ಯಕ್ಷದತ್ತನೆನಿಪ್ಪ ಗೌಡನ ಯಕ್ಷದತ್ತೆಯು ಪಿರಿಯ ಮಗನಹ ಯಕ್ಷಿಗಳ ತಾಂ ಯಕ್ಷದತ್ತನೆನಿಪ್ಪನು (ಸಾಳ್ವಭಾ. ೨೦-೮೨) ; ಗೌಡದೇಶದ ರಾಯನಿವನೆನೆ ಹಳ್ಳಿಯ ಗೌಡನೆಂದೆಣಿಸಿ ಸಾಗಿದಳು (ಭರತೆ. ೫೫-೯೩) ; ದುರ್ಗವನಿತ್ತಾಗ ಮನನೊಂದು ತೆರಳಿದ ಗೌಡ (ಕಂನವಿ. ೧೧-೬೦) ; ಹಾಳೂರಿಗೆ ಉಳಿದವನೇ ಗೌಡ (ಗಾದ). **ಗೌಡು :** ಸಂದಣಿಪ ಕಟಕಿಗಳನಾಡಿದರು ಗೌಡು[ಪಾಠಾಂ.ಪ್ರಭುವು]ಗಳ್ (ಹಲಾರ. ಹ. ೧೯೫-೨) ; ನಾಗಾವಿಯ ನಾಲ್ಕು ಗೌಡುಗಳು ಎಂ[ಟು] ಹಿಟ್ಟು (ಸೌಇಇ. XV, ೧೮೯-೧೪ ; 1255). **ಗೌವುಂಡ :** ಏಜಲೆ ನಾರಿಯ ಮಗ ಮಾಚಗೌವುಣ್ಡ (ಎಕ. V, ಬೇಲೂರು. ೨೦೨-೫ ; 1138). **P** ಈ ಪದ 'ಗ್ರಾಮಕೂಟ' ಎಂಬ ಪದದಿಂದ ಬಂದುದೆಂದು ಕೆಲವರು ಹೇಳುತ್ತಾರೆ.

[ <ಪ್ರಾ. ಗಾಮಉಡ, ಗಾಮಊಡ./ಸಂ. ಗ್ರಾಮವೃದ್ಧ ]

**ಗಾವುಂಡಬ್ಬೆ** (ನಾ). ಒಬ್ಬಾಕೆಯ ಹೆಸರು : ಗೋಯಿನ್ದರ ಭಟಾರರಾ ಗಾವುಂಣ್ಡಬ್ಬೆಗಳ್ ಮಹಾದೇವಿಯಾ(ಯ)ರಾಗೀ(ಗಿ) (ಇಆ. XI, ೦೨೭-೫ ; 803). [ ಗಾವುಂಡ + ಅಬ್ಬೆ$_1$ ]

**ಗಾವುಂಡಸಾಮಿ,** ಗಾವುಂಡಸ್ವಾಮಿ (ನಾ). ಒಬ್ಬಾತನ ಹೆಸರು : ತೈರೂರ ಕೌಣ್ಡಿಲ್ಯಗೋತ್ರದ ಗಾವುಂಣ್ಡಸಾಮಿಗಳ ಮಗನ್ನಾಗವ್ಮಯ್ಯ (ಎಕ. III, ಮಂಡ್ಯ. ೧೩-೭ ; 895). **ಗಾವುಂಡಸ್ವಾಮಿ :** ವೈದ್ಯರ ನಾಕಿಮಯ್ಯನ ಕಯ್ಯಲು ಅ[ವರ] ಗಾವುಣ್ಡಸ್ವಾಮಿ ಮಾನ್ಯದಲ್ಕೊಣ್ಡ ಮತ್ತರೊನ್ದು (ಸೌಇಇ. XX, ೫೫-೪೪; 1032).

[ ಗಾವುಂಡ + ಸಾಮಿ ]

**ಗಾವುಂಡು$_1$** 'ಗಾವುಂಡ' ನೋ.

**ಗಾವುಂಡು$_2$,** ಗಾವುಂಡು$_2$, ಗೋವುಂಡು$_2$ (ನಾ). ಗೌಡನ ವೃತ್ತಿ ; ಗೌಡಿಕೆ. ' ಗಾವುಂಡುಗೆಯ್ ' ಪರಾ. **ಗಾವುಂಡು$_2$ :** 'ಗಾವುಂಡಿಕೆ' ಪರಾ. **ಗೋವುಂಡು$_2$ :** ' ಗೋವುಂಡುಂಗೆಯ್ ' ಪರಾ.

[ ಗಾವುಂಡ + – ಉ$_4$ ]

**ಗಾವುಂಡುಗೆಯ್,** ಗಾವುಂಡುಗೆಯ್, **ಗೋವುಂಡುಂಗೆಯ್** (ಕ್ರಿ). ಗೌಡಿಕೆಯನ್ನು ನಡೆಸು ; ಗ್ರಾಮಾಧಿಪತ್ಯವನ್ನು ನಿರ್ವಹಿಸು : ಜೇಬುಳಗೇರಿಗೆ ಕಲಿಯುಮ್ಮ ಗಾವುಂಣ್ಡುಗೆಯ್ದಾ ಚೇದಿಯಮಾನ್ನಾ ಡಿಸಿದಾನ್ (ಸೌಇಇ. XI-1, ೫-೮ ; ಸು. 8ನೆಯ ಶತ) ; ಕಾರಿಗಾವುಂಣ್ಡನುಂ ಪೌರಿಗಾವುಂಣ್ಡನುಂ . . . ಇನ್ನಿವರ್ಗ್ಗಳ್ಗ್ರಾಮುಂಣ್ಡುಗೆಯ್ಕೆ (ಕಇ. II, ೫-೧೭ ; 859). **ಗಾವುಂಡುಗೆಯ್ :** ಚನ್ದ್ರಪ್ರಭಭಟಾರಾರ್ಪ್ಪ ಸುಣ್ಣೆಯನಭ್ಯನ್ತರಸಿದ್ಧಿಯಾಳುತ್ತಿರೆ ನಾಗಪುಲಿಗಾವುಣ್ಡಂ ಗಾವುಣ್ಡುಗೆಯ್ಯೆ (ಸೌಇಇ. XI-1, ೩೪-೧೧ ; 925). **ಗೋವುಂಡುಂಗೆಯ್ :** ಗೊಟ್ಟವಡ್ಡಿಯ ಗೋವುಣ್ಡುಗಳಂ ಸೆಲಾಂಭ್ಯೆಯರುಂ ಆನೆಯರು ಕೂಡಿ ಗೊವುಣ್ಡುಂಗೆಯ್ದುವದರ್ಕ್ಕೆ ಇವರ ಕೊಡಗೈ (ಎಕ. III, ನಂಜನ. ೧೯೯-೬ ; 189 ಕ್ರಿಶ). [ ಗಾವುಂಡು$_2$ + ಕೆಯ್$_1$ ]

**ಗಾಯ,** ಘಾಯ (ನಾ). ಆಯುಧ ಮೊದಲಾದುವುಗಳ ಹೊಡೆತದಿಂದ ದೇಹದಲ್ಲಿ ರಕ್ತ ಹೊರಬರುವಂತೆ ಉಂಟಾಗುವ ಕಚ್ಚು,–ಪೆಟ್ಟು : " ಘಟ್ಟಣೆಯೆನೆ ಗಾಯಮೆಂದು ತಿಳಿಗೆ ವಿದಗ್ಧರ್" (ಭಾರನಿ. ೬೭); ಮಲ್ಲ ಯುದ್ಧದೊಳ್ ಪೋರ್ದು ಮಲ್ಲಾಮಲ್ಲಿಯಾಗೆ ಪಲವುಂ ಗಾಯಂಗಳೊಳಾ ಯಂದಪ್ಪದೆ (ಪಂಪಭಾ. ೮-೭೬ ವ) ; ಪಾಪಿ ಹೊವನೇಱಿಸಲು ಮಸೆದಡಾ

ಯುಧದ ಗಾಯ (ಬಸವ. ೬೫೧) ; ಕೆಟ್ಟ ಹಾವು ಕಚ್ಚಿದ ಗಾಯಕೆ ಹಳೆ ಬಟ್ಟೆಯೊಳೊರೆಸೆ ವಿಷ ಹೋದೀತೆ (ಪುರಂದ. ೧-೧೫೭-೨) ; ರಣಧೀರ ರೆಚ್ಚಾಡಿದರು ಗಾಯದೊಳೊಱಲಿತುಭಯಬಲ (ನಳಚ. ೯-೨೬) ; ಸುಭಟರು . . . ಅಲಗಿನ ಗಾಯವನೆಣಿಸದೆ ಹೆಣಗಳ ತುಳಿತುಳಿದೊಡನೇಱಿದರು (ಕಂಸವಿ. ೧೪-೪೬). **ಘಾಯ :** "ಏಱಿನೆ ಘಾಯಂ" (ಭಾರನಿ. ೫೯) ; ಅಗ್ನಿಯ ಘಾಯವ ತೃಣದಲ್ಲಿ ಮಂತ್ರಿಸುವಂತಾಯಿತ್ತು (ಆದವ. ೧೮೩) ; ಸಹದೇವ ನಕುಳರು ಸರಳ ಕಿತ್ತರು ಘಾಯವನು ತೊಳೆತೊಳೆದು ಮಂತ್ರಿಸುತ (ಕುವ್ಯಾಕ. ೧೪-೩). [ <ಪ್ರಾ. ಘಾಯ. / ಸಂ. ಘಾತ ]

**ಗಾಯಂಬಡೆ**, ಗಾಯಪಡೆ, ಗಾಯವಡೆ, ಘಾಯಂಬಡೆ, ಘಾಯವಡೆ (ಕ್ರಿ). ಪೆಟ್ಟನ್ನು ಹೊಂದು ; ಗಾಯಗೊಳ್ಳು : ಅರಸಂ ಶಿರೋಭಾಗದೊಳ್ ಗಾಯಂಬಡೆದು ಮೂರ್ಛೆವೋಗೆ (ದಶಕು. ೨-೨೭ ವ). **ಗಾಯಪಡೆ :** ಗಾಯಪಡೆದವರ ಸೇವೆಗೆ ರೆಡ್‌ಕ್ರಾಸ್ ಸಂಸ್ಥೆ ಸಿದ್ಧವಾಗಿದೆ (ರೂಢಿ). **ಗಾಯವಡೆ :** ಗಾಯವಡೆಯದರಿಲ್ಲ ಸಾಯದೆ ನೋಯದವರಿಲ್ಲ (ಕುವ್ಯಾಅ. ೧೯-೪೭) ; ಗಾಯವಡೆದಾ ಹುಲಿಯು ತೆಱದಲಿ ಬಾಯಲಬ್ಬರಿಸುತ್ತ ಬರುತಿರೆ (ಕೌಶಿರಾ. ೩೩-೨೫) ; ಕೈದುಗಳ ಸೋಂಕಿಂ ಗಾಯವಡೆದು (ಚಬಪು. ೪೪-೪೪) ; ಭೀಮಾರ್ಜುನರು ಗಾಯವಡೆಯದೆ ಕ್ಷೇಮದಿಂದ ಹಿಂತಿರುಗಿ ಬಂದಿದ್ದಾರೆ ! (ವಚಭಾ. ೮೦). **ಘಾಯಂಬಡೆ :** ಘಾಯಂಬಡೆದು ಮಗ್ಗಿದರುಭಯಸೇನೆಯಲಿ (ಕುವ್ಯಾಭೀ. ೪-೩೧). **ಘಾಯವಡೆ :** ಘಾಯವಡೆದಾನೆಗಳು ಗುಳವನು ಹಾಯಿಕಲು ನೆಲಕುರುಳಿದವು (ಕುವ್ಯಾಕ. ೫-೪). [ ಗಾಯ + ಪಡೆ$_1$ ]

**ಗಾಯಕ** (ನಾ). ೧. ಗಾಯನಮಾಡುವವನು ; ಹಾಡುಗಾರ ; ಸಂಗೀತಗಾರ : ಗಾಯಕ ವಾದಕ ನರ್ತಕ ಕಥಕ ಪುಣ್ಯಪಾಠಕ ವೈತಾಳಿಕನಿಕರಮುಮಂ ಕೊಟ್ಟು (ಆದಿಪು. ೪-೫೪ ವ) ; ಪ್ರಕಟಿಸಿದತ್ತು ಪದ್ಮಜನ ಪಕ್ಕದೊಳ್ . . . ಗಾಯಕಪ್ರತತಿ ವಾದಕಮಂಡಳಿ (ಪುಷ್ಪಪು. ೫-೨೦); ವಾದ್ಯಕಾರರ ಸೂತ್ರ ಗಾಯಕನ ಕೈಯಲ್ಲಿ (ಭಾರದ. ೫೩೫). ೨. ಒಂದು ಜಾತಿಯ ಹಾಡುವ ಹಕ್ಕಿ : ಟಿಟ್ಟಿಭ ಗಾಯಕ ಗಿಡಗ ರುಕ್ಮಕ ವಾಸಕ ಮೊದಲಾದ ಚಿತ್ರರೂಪಶಕ್ತಿಗಳುಳ್ಳ ಪಕ್ಷಿಕುಲಂಗಳುಂ (ವಿವೇಕ. ೨೧೨). ೩. ಸಂಗೀತ ; ಗಾಯನ ; ಗಾಯಕದ ಲತಿಕಾಪ್ರತತಿಯೊಳು ಗಾಯಕದ ಮೃಗಸಂತತಿಗಳೊಳು ಗಾಯಕದ ಮಧುಪಂಗಳೊಳು ಗಾಯಕದ ಫಣಿಗಳೊಳು (ಬಸಪು. ೧೯-೩೯). [ ಸಂ. ]

**ಗಾಯಕತನ** (ನಾ). ಉತಾವಳಿತನ ; ಉದ್ಧಟತೆ ; ಘಾತಕತನ : ಕಾಯಾತುರದೊಳು ಆಯಾಸಗೊಳಿಸದೆ ಗಾಯಕತನವೇತಕೊ (ಪುರಂದ. ೩-೧೧೪-೮). [ ? + -ತನ. / ಮರಾ. ಘಾಯಕೂತ್ ]

**ಗಾಯಕತೆ** (ನಾ). ಹಾಡುವಿಕೆ ; ಗಾಯನ ; ಸಂಗೀತ : ಶಕುನಿರವಕ್ಕೆ ಕಂಠರುತಿ ಕೂಟದೊಡಂಬಡಿನೊಳ್ ನಿಮಿರ್ಚೆ ಗಾಯಕತೆಯನಾಡೆ ತಾಳದ ಲಯುಕ್ಕಲಕಾಳಿ ತಗುಟ್ದು ತಾಡನಾನಕಮನುವಾದಿಯಾಗಿ ಮೊಟಗುತ್ತಿರೆ (ಶಾಂತಿಪು. ೮-೧೧೧). [ ಸಂ. ಗಾಯಕತಾ ]

**ಗಾಯಕಿ**$_1$ (ನಾ). ಹಾಡುವವಳು ; ಸಂಗೀತಗಾತಿ : ಗೀತಗೋಷ್ಠಿಯನೀವ ನೂತನ ಗಾಯಕಿಯರಿಂ (ಗಿರಿಕ. ೭-೧೧ ವ).
[ ಗಾಯಕ + -ಇ$_3$ ]

**ಗಾಯಕಿ**$_2$ (ನಾ). ಗಾಯನಪದ್ಧತಿ ; ಹಾಡುವ ರೀತಿ : ಅವರಿಬ್ಬರೂ ಘನವಿದ್ವಾಂಸರು, ನಾನು ಸಂಗೀತ ಹೆಚ್ಚು ಕಲಿತವನೇ ಅಲ್ಲ — ನನ್ನದೆಲ್ಲಾ ನಾಟಕೀ ಗಾಯಕಿ (ನಟಸಾ. ೬೩೩). 'ಗಜಲ್‌ಗಾಯಕಿ' ಪರಾ.
[ ←ಹಿಂ. ಮರಾ. ಗಾಯಕೀ ]

**ಗಾಯಗಾಣಿಸು** (ಕ್ರಿ). ೧. ಗಾಯವಾಗುವಂತೆ ಮಾಡು; ಗಾಯಗೊಳಿಸು: ಶಲ್ಲಹ ಶಕ್ತಿ ಮೊದಲಾದ ಕೈದುಗಳೊಳು . . . ಬಿನ್ನಾಣದಿಂ ಗಾಯಗಾಣಿಸಿದರತಿಬಲರಲ್ಲಿ ನಾನಾಪ್ರಹಾರದಿಂದೆ (ಜೈಮಿಭಾ. ೨೨-೬) ; ಹಿಂಗದೆ ಗಾಯಗಾಣಿಸಿ ಖಾನಖಾನರ ಭಂಗಕ್ಕೆ ತಂದರಾಕ್ಷಣದೆ (ಕಂಸವಿ. ೧೫-೪೭). ೨. ಗಾಯವನ್ನು ತೋರಿಸು,-ಪ್ರದರ್ಶಿಸು : ಗಾಯಗಾಣಿಸಿ ಹಲ್ಲಕಿರಿದು ಸಲಾವೆಂದು ಬಾಯ ಬಿಡುವ ಹಂದೆಗಳಿರ (ಕಂಸವಿ. ೧೫-೩೪).
[ ಗಾಯ + ಕಾಣಿಸು ]

**ಗಾಯಗೊಳಿಸು, ಘಾಯಂಗೊಳಿಸು** (ಕ್ರಿ). ಗಾಯವನ್ನುಂಟುಮಾಡು ; ಗಾಯಮಾಡು : ಇವನು ನನ್ನನ್ನೂ ಗಾಯಗೊಳಿಸಿದ್ದಾನೆ (ಕೊತಕಾ. ೬೯). **ಘಾಯಂಗೊಳಿಸು :** ಶಂಬರವೈರಿ ಸರ್ವರುಂ ಪಿಡಿದ ಕೈದುಗಳ ಶಳಕೊಂಡು ಘಾಯಂಗೊಳಿಸಲು (ನವಮೋ. ೧೨-೪೧).
[ ಗಾಯಗೊಳ್ + -ಇಸು$_3$ ]

**ಗಾಯಗೊಳು, ಗಾಯಗೊಳ್ಳು, ಘಾಯಂಗೊಳು** (ಕ್ರಿ). ಗಾಯವನ್ನು ಹೊಂದು,-ಪಡೆ. 'ಗಾಯಗೊಳಿಸು' ಪರಾ. **ಗಾಯಗೊಳ್ಳು :** ಈ ಅಪಘಾತದಲ್ಲಿ ಗಾಯಗೊಂಡವರ ಸಂಖ್ಯೆ ಅಧಿಕವಾಗಿದೆ (ರೂಢಿ). **ಘಾಯಂಗೊಳು :** 'ಘಾಯಂಗೊಳಿಸು' ಪರಾ.
[ ಗಾಯ + ಕೊಳು (<ಕೊಳ್$_1$) ]

**ಗಾಯಗೊಳ್ಳು** 'ಗಾಯಗೊಳು' ನೋ.

**ಗಾಯಗೋವಳ** (ನಾ). = ಗಾಯಿಗೋವಾಳ : ಸ್ವಸ್ತಿ ಸಮಸ್ತಪ್ರಶಸ್ತಿ ಸಹಿತಂ ಗಾಯಗೋವಳ ಗಂಡಪೆಂಡಾರ ನನ್ನೆಯ ಜೂಬು . . . ಗೊಂಗೆಯ ದಂಣಾಯಕರು ಶ್ರೀಯಾದಿಕಲಿದೇವರಿಗೆ (ಎಕ. VI, ತರೀಕ. ೮೦-೧೮; 1278).
[ ಗಾಯ$_0$ (<ಗಾಯಿ) + ಗೋವಳ ]

**ಗಾಯತತನ** (ನಾ). (?) : ನ್ಯಾಯಕ್ಕೆ ನುಡಿವೆನೆಂದೆನಲು ಬಲು ಗಾಯತತನದಿಂದ ಕೋಣೆಯೊಳ್ಹೊಗಲು (ಪುರಂದ. ೫-೮೨-೨).
[ ☞ ಇದು 'ಗಾಯಕತನ'ದ ಅಪಲಿಖಿತ]

**ಗಾಯತ್ರಿ** (ನಾ). ೧. ಪ್ರತಿಯೊಂದು ಸಾಲಿನಲ್ಲಿಯೂ ಎಂಟು ಅಕ್ಷರಗಳುಳ್ಳ ಮೂರುಸಾಲಿನ ಒಂದು ವೈದಿಕ ಮಂತ್ರ. ☞ ಬ್ರಾಹ್ಮಣರು ತ್ರಿಸಂಧ್ಯೆಗಳಲ್ಲಿಯೂ ಜಪಿಸುವ 'ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋನಃ ಪ್ರಚೋದಯಾತ್' ಎಂಬ ಮಂತ್ರ : ಗಾಯತ್ರಿ . . . ಇತ್ಯಾದಿ ಮಹಾಮಂತ್ರಂಗಳಂ (ವಿವೇಕ. ೮೧) ; ನಾರಿಯರ ಗಾಯತ್ರಿ ಪಶುಗಳನಿತ್ತ ಫಲವಹುದು (ಹರಿಸಾ. ೧೦೭). ೨. [ಛಂದ] ಸಂಸ್ಕೃತದ ಇಪ್ಪತ್ತಾರು ಸಮವೃತ್ತಛಂದಸ್ಸುಗಳಲ್ಲಿ ಒಂದು ; ಪ್ರತಿಯೊಂದು ಚರಣದಲ್ಲಿ ಆರು ಅಕ್ಷರಗಳುಳ್ಳ ನಾಲ್ಕು ಸಾಲಿನ ವೃತ್ತ : "ವಿತತೋಕ್ತಮತ್ಯುಕ್ತ ಮಧ್ಯಮ ಪ್ರತಿಷ್ಠೆ ಸುಪ್ರತಿಷ್ಠೆ ಗಾಯತ್ರಿ . . . ಉತ್ಕೃತಿಗಳೆಂದೆನಿಪುವಿಪ್ಪತ್ತಾಱು ಛಂದಂಗಳಕ್ಕುಂ" (ಮಂಗರಾ. ೧೦೬-೧೮) ; ಮತ್ತಮಲ್ಲಿ ಉಕ್ತಾ . . . ಗಾಯತ್ರೀ . . . ಉತ್ಕೃತಿಯೆಂಬ ಇಪ್ಪತ್ತಾಱು ಛಂದಸ್ಸುಗಳನಱಿತು (ವಿವೇಕ. ೨೨೫). ೩. ಶಕ್ತಿದೇವತೆಯ ಒಂದು ಹೆಸರು. ೪. ಗಾಯತ್ರೀಮಂತ್ರದ ಅಧಿದೇವತೆ. ೫. ಕಗ್ಗಲಿ ಮರ : "ಕದರಂ ಗಾಯತ್ರಿ ದಂತಧಾವನಮದು" (ವಸ್ತುಕೋ. ೩೫-೧೫) ; ಬಹುವಾರಕ ಗಾಯತ್ರಿಯುವಿಹಿತಾರಿಷ್ಟಾಮೃತಾಗ್ನಿಮುಖಿಗಳ್ಮೆಱಗುಂ (ಹಮ್ಮಿರ. ೪-೭೧). [ ಸಂ. ಗಾಯತ್ರೀ ]

**ಗಾಯದರಿ** (ನಾ). ಕೇದಗೆಯಲ್ಲಿ ಒಂದು ಬಗೆ ; ಹುಚ್ಚುಕೇದಗೆ : ಹುಚ್ಚುಕೇದಗೆ ಎಂದರೂ ಚಾಗಮಟ್ಟೆ ಎಂದರೂ ಗಾಯದರಿ ಎಂದರೂ ಒಂದೇ ಪರ್ಯಾಯವು (ಕೃಷಿಪ್ರ. ೧೩೨). [ ? ]

**ಗಾಯದೊಪ್ಪಲು** (ನಾ). ಹೊದರಾಗಿ ಬೆಳೆಯುವ ಬೂದುಬಣ್ಣದ ಒಂದು ಸಸ್ಯಜಾತಿ ; ಸಹದೇವಿ. ☞ ಗಾಯ ವಾಸಿಮಾಡಲು ಈ ಸೊಪ್ಪನ್ನು ಉಪಯೋಗಿಸುತ್ತಾರೆ : ಕರೇಹಿಂಡಿ, ಗಾಯದೊಪ್ಪಲು, ಸಹದೇವಿ (ವ್ಯಾಜಿಗಿ. ೭೭-೧೫೮೦). [ ಗಾಯ + ತೊಪ್ಪಲು$_2$ ]

**ಗಾಯನ** (ನಾ). ೧. ಹಾಡುಗಾರಿಕೆ ; ಸಂಗೀತ : ಒಂದು ನಾದವೆ ಗಾಯಕನ ಗಾಯನದ ರಚನೆಯುಲಿ ಚಂದಚಂದದ ರಾಗವೆನಿಪಂತೆ (ಗಗತಾ. ೦೯-೭): ತುಂಬಿದಿತ್ತುಶರೀರ ಗಂಧರ್ವಗಾಯನಂ ನೀರವ ನಿಶಾನಭೋದೇಶವಂ (ಶ್ರೀರಾಮಾ. ೦೭-೯೩೪). ೨. ಹಾಡು ; ಗೀತೆ. ೩. ಹಾಡುಗಾರ ; ಗಾಯಕ. [ ಸಂ. ]

**ಗಾಯನಕಚೇರಿ** (ನಾ). ಸಂಗೀತಕಚೇರಿ ; ಗಾನಗೋಷ್ಠಿ : ಊರಿನಲ್ಲಿ ನಡೆಯುವ ಯಾವ ಗಾಯನಕಚೇರಿಗಾಗಲಿ ತಪ್ಪದೆ ಹೋಗುತ್ತಾರೆ (ದೂರಸ. ೬೦). [ ಗಾಯನ + ಕಚೇರಿ ]

**ಗಾಯನಕಲೆ** (ನಾ). ಸಂಗೀತವಿದ್ಯೆ : ನಾದಮಾರ್ಗವಿದ್ಯೆಯಾದ ಗಾಯನ ಕಲೆ (ಸಂಗೀತಂ. ೯೮). [ ಗಾಯನ + ಕಲೆ$_3$ ]

**ಗಾಯನಗಾರ** (ನಾ). = ಗಾಯಕ ೧ : (೩).
[ ಗಾಯನ + – ಕಾರ$_1$ (< – ಕಾಱ) ]

**ಗಾಯನಿ** (ನಾ). = ಗಾಯಕಿ$_1$ : ಗಾಯನಿಯರ ಸೀಯನಪ್ಪ ರಸಗೇಯ ಮನಾಲಿಸುತಿರ್ಪಳ್ (ಪಂಪಾಮಾ. ೩-೦೦೭). [ ಸಂ. ಗಾಯನೀ ]

**ಗಾಯಪಡು** (ಕ್ರಿ). = ಗಾಯಂಬಡೆ: ಯುದ್ಧ, ಮೊ. ಗಳಲ್ಲಿ ಹತರಾದವರ, ಗಾಯಪಟ್ಟವರ, ಅಶಕ್ತರಾದವರ, ಪಟ್ಟಿ ಅಥವಾ ಸಂಖ್ಯೆ (Casualty. ಇಂಕಾನಿ). [ ಗಾಯ + ಪಡು$_1$ ]

**ಗಾಯಪಡೆ** 'ಗಾಯಂಬಡೆ' ನೋ.

**ಗಾಯವಡೆ** 'ಗಾಯಂಬಡೆ' ನೋ.

**ಗಾಯಾಳಿತನ** 'ಗಯ್ಯಾಳಿತನ' ನೋ.

**ಗಾಯಾಳು, ಘಾಯಾಳು** (ನಾ). ಗಾಯಗೊಂಡವನು : ಲಾಠೀಪ್ರಹಾರ ವಾಗಿ ೬೦ ಜನರು ಗಾಯಾಳುಗಳಾದರು (ಕರವೀ. ೩೩) : ಕೊನೆಯ ಕಿಟಕಿ ಬಳಿ ಮಲಗಿದ್ದ ಗಾಯಾಳುವಿನ ಬಳಿಗೆ ಹೋದೆ (ಹಾಡುಹು. ೭೦). **ಘಾಯಾಳು** : ಘಾಯಾಳುಗಳನ್ನು ದೂರದ ದೊಡ್ಡ ಆಸ್ಪತ್ರೆಗೆ ಕಳಿಸುವುದು (ಸಮುಶಾ. ೨). [ ಗಾಯ + ಆಳು$_3$ (< ಆಳ್$_3$) ]

**ಗಾಯಿ** (ನಾ). ಹಸು ; ಗೋವು. 'ಗಾಯಿಗೋವಾಳ' ಪರಾ.
[ ←ಹಿಂ. ಗಾಯ್ ; ಮರಾ. ಗಾಈ, ಗಾಯ್./ಪ್ರಾ. ಗಾವೀ <ಸಂ. ಗೋ ]

**ಗಾಯಿಕೆ** (ನಾ). = ಗಾಯಕಿ$_1$ : ಸುರನರಗಾಯಿಕಾನಿಚಯ ಸಂಗತ ಮಂಗಳ ಗೀತನಾದದಿಂ (ಚಂದ್ರಪ್ರ. ೦೨-೦೭೩). [ ಸಂ. ಗಾಯಿಕಾ ]

**ಗಾಯಿಗ** (ನಾ). ದನಕಾಯುವವನು ; ಗೋವಳ ; ಗೊಲ್ಲ : ಕುರುಬರ ಗಾಯಿಗ ಹೊರವಯ್ಯಂ ಸತ್ತು ಸುರಲೋಕಕ್ಕೆ ಪೋದ (ಎಕ. VIII, ಸೊರಬ. ೪೫೪-ಖ ; 973). [ ಗಾಯಿ + – ಗ$_2$ ]

**ಗಾಯಿಗೋವಾಳ** (ನಾ). ಒಂದು ಬಿರುದು : ಸ್ವಸ್ತಿಶ್ರೀಮಸುಮಹಾ ಪ್ರಧಾನಂ ಗಾಯಿಗೋವಾಳ ಗಣ್ಡಪೆಂಡಾರ ಮಣ್ಣಿಕಜೂಬು ಸೋಮೆಯ ದಣ್ನಾಯಕರ (ಎಕ. XIV, ಮಂಡ್ಯ. ೩೦-೨೭ ; 1261). 'ಗಾಯಗೋವಳ' ಪರಾ
[ ಗಾಯಿ + ಗೋವಾಳ (<ಗೋವಳ) ]

**ಗಾಯಿನಿ** (ನಾ). = ಗಾಯಕಿ$_1$ : ಮಂಗಳಪಾಠಕರವಮುಂ ಮಂಗಳ ಗಾಯಿನಿಯ ಗೀತರವಮುಂ . . . ಇತ್ತುವು ಸುಖ ಪ್ರಬೋಧಮನಾಗಳ್ (ಪಂಪಾಮಾ. ೩-೮೨) ; ಅನಿಮಿಷನಾಯಕಂ . . . ಈಕ್ಷಿಸಿದಂ ಗಾಯಿನಿಯರ ಮುಖಾಬ್ಜಮಂ (ಮಲ್ಲಿಪು. ೦೩-೨೭). [ ಸಂ. ಗಾಯಿನೀ ]

**ಗಾಯಿಲೆ** (ನಾ). ಪೀಡೆಗೊಳಗಾದ ವ್ಯಕ್ತಿ ; ತೊಂದರೆಗೊಳಗಾದವನು : ಲೋಭಗುಂಟಣಿಯರ್ ಗಾಯಿಲೆಯಪ್ಪ ಮಕ್ಕಳನೋವರಿಯೊಳ್ ನೂಂಕಿ ಪಡಿಗೆತ್ತು ಪೊಡೆಕಟ್ಟಂ ಕಟ್ಟಿ ಮುಸುಂಕಿಟ್ಟು ಕುಳ್ಳಿರೆಯುಂ (ಅರ್ಥನೀ. ೩-೨ ಪ) . [ <ಪ್ರಾ. ಗಹಿಲ. / ಸಂ. ಗ್ರಹಿಲ ]

**–ಗಾರ** 'ಕಾಱ' ನೋ.

**ಗಾರಗೆ** 'ಗಾರಿಗೆ$_1$' ನೋ.

**ಗಾರಣ** (ನಾ). ೧. ಅಪವಾದ ಹೊರಿಸುವುದು ; ದೂರು : " ಗಾರಣಂ= ದೂಱು " (ಶಮದ. ಪರಿ. ೨); " ಗಾರಣಮೆ ದೂಱು " (ಕರ್ಣಾವಿ. ೩೭). ೨. ಇತರರ ದೋಷವನ್ನು ಪ್ರಕಟಪಡಿಸುವುದು : " ದೋಹಲೆಂದುಂ ಗಾರಣಮೆಂದುಂ ಪರಿವಡಿಯೆಂದುಂ ಪ್ರಕಟಂ " (ಶಶಾ. ೨೩-೯೭೮).
[ ಸಂ. ]

**ಗಾರಣೆ** 'ಕಾರಣೆ$_1$' ನೋ.

**ಗಾರಪಾಟಿ** (ನಾ). ಒಂದು ಊರಿನ ಹೆಸರು : ಪಡುವಣ್ನಾಸೀಮೆ ತಣ್ಣಾಳ್ಳಿ ಗಾರಪಾಟಿ ತೆಙ್ಕಣ್ನಾಸೀಮೆ ನೆಯ್ದುಲ್ಗೆಟಿಯಾ ಏಟಿ (ಎಇ. XXI, ೨೯-೦೨ ; ಸು. 8ನೆಯ ಶತ). [ ? ]

**ಗಾರವ$_1$** (ನಾ). ಗರ್ವ ; ಅಹಂಕಾರ. 'ತ್ರಿಗಾರವ' ಪರಾ.
[ <ಪ್ರಾ. ಗಾರವ./ಸಂ. ಗೌರವ ]

**ಗಾರವ$_2$** (ನಾ). ಒಂದು ವಂಶದ ಹೆಸರು (?) : ಮೂಡೆಕಲ್ಲಾ ಕಾಳೆ ಗದುಳ್ ಗಾರವರಾಳ್ ಅವಧೀರರಾ ಮಗನ್ ಚಾತಗುದ್ದಿಯಾರುಮ್ . . . ಅನ್ತಿಟಿದು ಸತ್ತರ್ (ಎಕ. X, ಶ್ರೀನಿವಾ. ೯೦-೨ ; ಸು. 903). [ ? ]

**ಗಾರಿಕೆ** (ನಾ). ತಂಡಸ; ಚಿಮಟ : " ಲಾಳಿ ತಂಡಸಂ ಗಾರಿ [ ಪಾಠಾಂ. ಳು ] ಕಾಖ್ಯಂ " (ಮಂಗರಾ. ೦೦೩-೮). [ <ಸಂ. ಗ್ರಾಹಿಕಾ ? ]

**ಗಾರಿಗೆ$_1$, ಗಾರಗೆ, ಘಾರಿಗೆ** (ನಾ). ತುಪ್ಪದಲ್ಲಿ ಕರಿದು ಸಿದ್ಧಪಡಿಸಿದ ಒಂದು ಸಿಹಿಭಕ್ಷ್ಯ : ನಾಡೆ ರುಚಿವೆರಸಿದ ಲಡ್ಡುಗೆ ಚಕ್ಕುಲಿ ಗಾರಿಗೆ ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮಂ (ಧರ್ಮಾಮೃ. ೦-೦೯೭); ಹರವರಿಯ ಮಂಡಗೆಗಳೊಟ್ಟಿಲುಗಳಲ್ಲಿ ಗಾರಿಗೆಯ ಅಳಸುಗಳ ಕುತ್ತಣಿಗಳಲ್ಲಿ (ಬಸರ. ೭-೯) ; ಜೇನುಸಕ್ಕರೆ ಕ್ಷೀರರಸವಪ್ಪ ಫೇಣಿ ಸುಖೀನುಂಡೆ ವಡೆ ಗಾರಿಗೆಯ . . . ಬಡಿಸಿದರೊಲಿದು (ಮೋಹತ. ೩-೩೨) ; ಗಾರಿಗೆ ಚಕ್ಕುಲಿ ಮಂಡಿಗೆ ಪೂರಿಗೆ . . . ಮಹಾರುಚಿಯುತ ಭಕ್ಷ್ಯಭೋಜ್ಯಮಂ ಸಮೆದಳ್ (ವೃಷವಿ. ೩೬-೨೩). **ಗಾರಗೆ:** ಹೂರಗೆಯು ಗಾರಗೆಯನಪ್ಪೆಯ ಸುಪೂರವದ ಲಡ್ಡುಗೆಯ (ಲಿಂಗಪು. ೮-೯). **ಘಾರಿಗೆ** : ವರ್ಗಚತುರ್ಥಾಕ್ಷರಂಗಳ್ಗೆ– ಘಟಿಯಂ, ಘಾಟಿಗೆ (ಘಾರಿಗೆ) (ಶಮದ. ೦೩ ವೃತ್ತಿ) ; ಘಾರಿಗೆ ಪಾಯಸ ಕಾಯ ಮೇಲೋಗರ (ದೇವಾಂಪು. ೩.೨೩೭); ಸಜ್ಜಿಗೆಯ ನೆನೆಯಕ್ಕಿ ಕುಟ್ಟಿ . . . ಒಂದು ಒದ್ದೆ ಪಾವಡೆಯಲಿ ಘಾರಿಗೆಯ ಹಾಗೆ ತಟ್ಟಿ ಗೇಣಗಲವಾದರೆ ನಡುವೆ ಗುಳಿಮಾಡಿ ತುಪ್ಪದಲ್ಲಿ ಹಾಕುವುದು (ಭೀಮಸೂ. ೩೦).
[ ದೇಪ್ತ ತುಳು. ಗಾರಿಗೆ ; ತೆಲು. ಘಾರಿಕ. / ಪ್ರಾ. ಘಾರಿಯಾ. / ಮರಾ. ಘಾರಗಾ ]

**ಗಾರಿಗೆ$_2$** 'ಕಾರಿಗೆ' ನೋ.

**ಗಾರಿಗೆಕಳಲೆ** 'ಗಾರಿಗೆಗಳಲೆ' ನೋ.

**ಗಾರಿಗೆಗಳಲೆ, ಗಾರಿಗೆಕಳಲೆ** (ನಾ). ಬಿದಿರಿನ ಕಳಲೆಯನ್ನು ಕರಿದು ಮಾಡುವ ಒಂದು ಬಗೆಯ ತಿನಿಸು ; ಕಳಲೆಯ ಗಾರಿಗೆ ; ಬೆರಲ ದಪ್ಪದೊಳು ಬಟುಹಾಗಿ ಕಳಲೆಯನ್ನುತ್ತರಿಸಿಕೊಂಡು . . . ಪರಿಮಳವನಿಕ್ಕಿ ಪೊಗ್ಗರಿಸಲವು ಗಾರಿಗೆಗಳ[ಪಾಠಾಂ. ಕಳ]ಲೆಯೆಂಬ ಹೆಸರಾದುವು (ಸೂಪಶಾ. ೬-೩). **ಗಾರಿಗೆಕಳಲೆ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಗಾರಿಗೆ$_1$ + ಕಳಲೆ (<ಕಱಿಲೆ) ]

**ಗಾರಿಸು** (ಕ್ರಿ). ೧. ಸಂಡಿಗೆಯಂತೆ ಕರಿ. ೨. ಒಗ್ಗರಣೆಹಾಕು : (೩).
[ <ಕರಿಸು$_1$ ]

**ಗಾರು** 'ಗಾಱು' ನೋ.

**ಗಾರುಗಲ್ಲು** (ನಾ). ನಯವಿಲ್ಲದ ಕಲ್ಲು ; ಒರಟುಗಲ್ಲು ; ಗೋರ್ಕಲ್ಲು : ನೀರೊ ನೆಳಲೋ ಇಲ್ಲಿ ಎಲ್ಲಿದೆ ? ಗಾರುಗಲ್ಲಿನ ದಾರಿಯಂ (ಚಿತಾಬಿಂ. ೬೪).
[ ಗಾರು (<ಗಾಱು) + ಕಲ್ಲು (<ಕಲ್$_3$) ]

**ಗಾರುಗಾರು** (ನಾ). ಒಂದು ಅನುಕರಣಧ್ವನಿ: ತಾರೆಗಳ ರೂಪಿಲ ವೃತಿರ್ದವು ಗಾರುಗಾರೆನುತಿರಲು ಖಗಗಳು (ಕರಿಕ. ೧೨೦-೫).

**ಗಾರುಗೆಡು** 'ಗಾಱುಂಗೆಡು' ನೋ.

**ಗಾರುಗೊಳಿಸು** (ಕ್ರಿ). ಕಷ್ಟಪಡಿಸು; ಸಂಕಟಗೊಳಿಸು: ನಾರಿಯುಳ ನಾನೋಪಚಾರದಿಂ ಕರತಂದು ಗಾರುಗೊಳಿಸಲು ದೋಷಿ ದುರ್ಗತಿಯ ಭಾಸಂ (ನಳಚ. ೯-೦೮); ವಿಚಿತ್ರ ವಿಮುಖತೆಯೇಕೆ ತೋರುತಿರುವೆ, ಭಕ್ತರನು ಇಂತೇಕೆ ಗಾರುಗೊಳಿಸುತಿಹೆ! (ವಿಸೀಗೀ. ೯೬-೦೨).

[ ಗಾರಿ (<ಗಾಱು) + ಕೊಳ್$_1$ + – ಇಸು$_3$ ]

**ಗಾರುಗೊಳ್ಳು** (ಕ್ರಿ). ಹಿಂಸೆಪಡು; ಸಂಕಟಗೊಳ್ಳು; ಪರಿತಪಿಸು: ಅಗಲಿಕೆಯ ನೋವಿನಿಂದ ಮನಸ್ಸು ಗಾರುಗೊಂಡಿತ್ತು (ಅಲಹು. ೭೮). 'ಗಾರುಗೊಳಿಸು' ಪರಾ.

[ ಗಾರು (<ಗಾಱು) + ಕೊಳ್ಳು$_1$ (<ಕೊಳ್$_1$) ]

**ಗಾರುಡ** (ನಾ). ೧. ಗರುಡನಿಗೆ ಸಂಬಂಧಿಸಿದುದು, — ಸೇರಿದುದು. ೨. ಗರುಡಮಂತ್ರ; ಹಾವುಗಳನ್ನು ವಶಪಡಿಸಿಕೊಳ್ಳುವ ಮಂತ್ರ, — ವಿದ್ಯೆ: ಸೌಂದರಿಮಹಾದೇವಿ ನುಡಿದ ನುಡಿಗಳಂ ಕೊಟಿವಾವು ಗಾರುಡಮಂ ಕೇಳದಂತೆ ಕೇಳದಿರೆ ಬೇಸತ್ತು (ಧರ್ಮಾಮೃ. ೨-೧೦೨); ಮೇದರೊಳಲ್ಲದೆ ವಂಶಚ್ಛೇದಂ ಗಾರುಡದೊಳಲ್ಲದಹಿತತ್ತ್ವಂ . . . ಇಲ್ಲಾ ನಾಡೊಳ್ (ಕಾವ್ಯಸಾ. ೯೯). ೩. ಗರುಡಮಂತ್ರವನ್ನು ಬಲ್ಲವನು; ಹಾವಾಡಿಗ: ಹಾವು ಸಾಯುದು ಕೋಲು ಮುಱಿಯದು ಹಾವು ಹೋಹ ಪರಿ ಇನ್ನೆಂತಯ್ಯಾ ಅದು ಗಾರುಡಂಗಲ್ಲದೆ ಗಾವಿಲಗಂಜದು (ಮೋಳಿಮಾ. ೦೦೯-೯೩೩). ೪. ಕಣ್ಕಟ್ಟು; ಯಕ್ಷಿಣೀವಿದ್ಯೆ; ಇಂದ್ರಜಾಲ: ಹೋರಬೇಡಿದಱಿಂದನೆ ಶಸ್ತ್ರದ ಗಾರುಡವು ಗರ್ವಿಸದು (ತೊರಠಾ. ೫-೬-೪೪); ಅನಂತಕಾಲ ಎನ್ನ ಒಡಲ ಮಱಿಯೊಳಗೆ ಅಡಗಿರ್ದು ಎನಗೆ ಕಾಣಿಸದೆ ಇದ್ದುದು ಇದೇನು ನಿಮ್ಮ ಗಾರುಡವಯ್ಯ (ಅಜಂಡೀ. ೪-೫); ಇನ್ನು ಪಲ ತೆರನಾದ ಗಾರುಡವನ್ನು ತೋರಿಸಿ . . . ಹೆಣನೆದ್ದು ನಡೆವುದ ತೋರಿದನು ಬಸವ (ಬಿಜ್ಜಪು. ೫೯-೪೪). ೫. ಯಕ್ಷಿಣಿಗಾರ; ಐಂದ್ರಜಾಲಿಕ: ಆತನೊಂದಿನದೋಲಗದೊಳನುವಾತ ಸಮಯದಿ ಬಂದ ಗಾರುಡನೋರ್ವನೆದುರಿನಲಿ (ಬಿಜ್ಜಪು. ೪೦-೦೪). ೬.=ಗಾರುಡಮಣಿ: ಪರಿಪೂರ್ಣೋಜ್ವಲ ಚಂದ್ರಬಿಂಬರುಚಿಯಿಂ ಚಂದ್ರ ಪ್ರಭಾ ಪುಷ್ಪ ದಂತರೆನಲ್ ಗಾರುಡ ನೀಲ ಶೋಣಮಣಿ ಹೇಮಚ್ಛಾಯೆಯಿಂದಿರ್ಪ ತೀರ್ಥರೆನಲ್ (ಆದಿಪು. ೧೬-೫). ೭.=ಗಾರುಡಪುರಾಣ: ವಿಷ್ಣು, ಭಾಗವತ, ನಾರದ, ಗಾರುಡ ಈ ನಾಲ್ಕು ಪುರಾಣಗಳು ವೈಷ್ಣವಗಳು (ಭಾರದ. ೦೩೬). [ ಸಂ. ]

**ಗಾರುಡಕ** (ನಾ). ವಂಚನೆ; ಮೋಸ; ಕಪಟ: ಜಾತಿಯಿಲ್ಲದೆ ಬಣಗು ಜನ ರಣಕಾತು ನಿಲುವರೆ ಗಾರುಡಕದಲಿ (ಬಿಜ್ಜಪು. ೬೦-೫೦). [ ಸಂ. ]

**ಗಾರುಡಕರ್ಮ** (ನಾ). ಗರುಡಮಂತ್ರವನ್ನು ಪ್ರಯೋಗಿಸಿ ಹಾವುಗಳನ್ನು ಹಿಡಿಯುವುದು; ಸರ್ಪಗಳನ್ನು ವಶಪಡಿಸಿಕೊಳ್ಳುವ ಕೆಲಸ,– ಮಂತ್ರಮುಗ್ಧವನ್ನಾಗಿ ಮಾಡುವುದು: ಪನ್ನಗಂಗಳು ಮೇಲೆ ಗಾರುಡಕರ್ಮದಿಂದಂ ನುಡಿಯಲಱಿಯದಡೆ (ಬಸಪು. ೪೭-೨೯).

[ ಗಾರುಡ + ಕರ್ಮ ]

**ಗಾರುಡಗೊಡು** (ಕ್ರಿ). ಮಾಯೆಯನ್ನುಂಟುಮಾಡು; ಕಣ್ಣುಕಟ್ಟು ವಿದ್ಯೆಯನ್ನು ತೋರಿಸು: ಕೆಟ್ಟೆನೆನುತಲಿ ಬಸವ ಗಾರುಡಗೊಟ್ಟು ಬಹುರೂಪಾದ (ಬಿಜ್ಜಪು. ೦೦೪-೬೦). [ ಗಾರುಡ + ಕೊಡು$_1$ ]

**ಗಾರುಡತನ** (ನಾ). ಇಂದ್ರಜಾಲ; ಯಕ್ಷಿಣೀವಿದ್ಯೆ; ಮಾಯಾವಿತನ: "ಮಾಯೆ=ಇಂದ್ರಜಾಲ, ಗಾರುಡತನ, ಸುಳ್ಳು" (ಗಂಗಾಮ. ೨೫೫).

[ ಗಾರುಡ + – ತನ ]

**ಗಾರುಡಪುರಾಣ** (ನಾ). ಹದಿನೆಂಟು ಪುರಾಣಗಳಲ್ಲಿ ಒಂದು ಗರುಡಪುರಾಣ: ಬ್ರಹ್ಮಪುರಾಣ . . . ಗಾರುಡಪುರಾಣ ಬ್ರಹ್ಮಾಂಡ; ಪುರಾಣ (ವಿವೇಕ. ೭). [ ಗಾರುಡ + ಪುರಾಣ ]

**ಗಾರುಡಮಂತ್ರ** (ನಾ). ಹಾವನ್ನು ವಶಪಡಿಸಿಕೊಳ್ಳುವ ಹಾಗೂ ಅದರ ವಿಷವನ್ನು ಪರಿಹರಿಸುವ ಮಂತ್ರ: ಗಾರುಡಮಂತ್ರೌಷಧಿಗಳ ಕಾರಣದಿಂ ಬಂದುದಲ್ತು ಮಜ್ಜೀವಂ (ದಶಕು. ೯-೧೧೫); ಗಾರುಡಮಂತ್ರ ಸಿದ್ಧನುದಾತ್ತನೊಬ್ಬನು ಬಂದಕಟಕಟೆನುತ್ತ ಮುಱುಗುತ ಸರ್ಪದಷ್ಟದ ಭಾವವಂ ನೋಡಿ (ಬಸಪು. ೪೭-೨೪).

[ ಗಾರುಡ + ಮಂತ್ರ ]

**ಗಾರುಡಮಣಿ** (ನಾ). ೧. ಒಂದು ಬಗೆಯ ವಿಷಾಪಹಾರಕ ರತ್ನ. ೨. ಪಚ್ಚೆ; ಮರಕತ: ಘನದೂರ್ವಾಸಕ್ತಿಯುಂ ಗಾರುಡಮಣಿರುಚಿಯೊಳ್ ದಾವವಿಭ್ರಾಂತಿಯುಂ ಕಾಂಚನಭಿತ್ತಿವ್ರಾತದೊಳ್ (ಚಂದ್ರಪ್ರ. ೧-೧೪೭); ಗಾರುಡಮಣಿರಚಿತ ಚತುರ್ದ್ವಾರಂ . . . ಸೊಗಯಿಸುಗುಂ (ಪಾರ್ಶ್ವಪು. ೧೬-೭೪). [ ಗಾರುಡ + ಮಣಿ$_3$ ]

**ಗಾರುಡರಕ್ಷೆ** (ನಾ). ಗರುಡಮಣಿಯಿಂದ ಒದಗುವಂಥ ರಕ್ಷಣೆ; ಬಲವಾದ ರಕ್ಷೆ: ಅಭಯ ಗಾರುಡರಕ್ಷೆ ಇಲ್ಲಿ; ಮಲ್ಲಿಗೆ ಜಾಜಿ ಸಂಪಗೆಯ ಕಂಪೊಗೆವ ಮೋಹಬೇಲಿ (ನಡಬಂ. ४೧).

[ ಗಾರುಡ + ರಕ್ಷೆ ]

**ಗಾರುಡವಾದಿ** (ನಾ).=ಗಾರುಡಿಗ: ಗಾರುಡವಾದಿ ತಾಂತ್ರಿಕರು ತವೆ ನಿವೃತ್ಯಾದಿಗಳ ತತ್ವಂಗಳಲಿ ತಾವಿರುತಿಹರು (ಗಗತಾ. ೮-೬೬).

[ ಸಂ. ಗಾರುಡವಾದಿನ್ ]

**ಗಾರುಡವಿದ್ಯ** (ನಾ).=ಗಾರುಡಿ ೨: ಚರಿಪ ಜಾತಿಯ ತೋರಿಯೆಲ್ಲೆಲ್ಲಿರುವ ದಾಗಾ ಶಿವಗೆ ದೋಷೆಂಬರಿಗೆ ದೋಷೇಂ ತೋರೆ ಗಾರುಡವಿದ್ಯದಿಂ ಬಸವ (ಬಿಜ್ಜಪು. ೫೯-೪೩). [ ಗಾರುಡ + ವಿದ್ಯ ]

**ಗಾರುಡಶಿಲೀಮುಖ** (ನಾ). ಗರುಡಾಸ್ತ್ರ: ಬೀಭತ್ಸು ತುಡುಕಿದಂ ಮುಳಿದವಂ ಗರಳವಿಶಿಖವನುಗಿದನಾ ನರಂ ಗಾರುಡಶಿಲೀಮುಖವನು (ಜೈಮಿಭಾ. ೧೩-೦೫). [ ಗಾರುಡ + ಶಿಲೀಮುಖ ]

**ಗಾರುಡಿ** (ನಾ). ೧. ಗರುಡಸಂಬಂಧವಾದ ವಿದ್ಯೆ; ಸರ್ಪವಶೀಕರಣ ವಿದ್ಯೆ. ೨ ಯಕ್ಷಿಣೀವಿದ್ಯೆ; ಇಂದ್ರಜಾಲ: ಸೌಂದರ್ಯದ ಮಾಯೆಯನ್ನು ಎಂದರೆ ಅದರ ಗಾರುಡಿಯನ್ನು . . . ವೇದದ ಋಷಿ ಗುರುತಿಸಿ ಹಾಡಿರುವುದನ್ನು ಗಮನಿಸಬಹುದು (ಸೌಂದಸ. ೯೫); ಯಾವ ಗಾರುಡಿಯಿಂದಲೊ . . . ಭಟ್ಟರ ನಿಜವಾದ ಇಂಗಿತ ಕಂಡುಕೊಂಡಳು (ಹೊಸಕ್ಷಿ. ೫೮); ನುಡಿಯ ಗಾರುಡಿಯಲ್ಲಿ . . . ಯಾವದೋ ಒಂದು ಸೆಳೆತವಿದೆ (ಕಠೀಭ. I ಮೊದಲಮಾತು). [ ಸಂ. ಗಾರುಡೀ ]

**ಗಾರುಡಿಕ** (ನಾ).=ಗಾರುಡಿಗ ೨. [ ಸಂ. ]

**ಗಾರುಡಿಗ** (ನಾ). ೧. ಗಾರುಡವಿದ್ಯೆಯನ್ನು ಬಲ್ಲವನು; ಹಾವು ಹಿಡಿಯುವ ವಿದ್ಯೆಯನ್ನು ಕಲಿತಿರುವವನು. ೨. ಹಾವು ಕಚ್ಚಿದರೆ ಗುಣಪಡಿಸುವವನು; ವಿಷವೈದ್ಯ: "ವಿಷವೈದ್ಯೋ ಜಾಂಗುಲಿಕಃ ಈ ೨ ಗಾರುಡಿಗನ ಹೆಸರು" (ನಾಚಿರಾ. ೯೯); ಗರುಡನಾಭಿಯೆಂಬ ಗಾರುಡಿಗಂ ತತ್ಕನ್ನಕೆಯಾಯುಷ್ಯಂ ಬರ್ಪಂತೆ ಬಂದು (ಸುಕುಮಾ. ೭-೮ ವ); ನಾಗಮತಮಂತ್ರದಿಂದಾನಾಗಳ್ ವಿಷವಂ ನಿರಂತರಂ ಸ್ತೋಭಿಸಿ ನಾನಾಗಾರುಡಿಗರ್ಗಸದಳಮಾಗಲ್ ಮಾಟ್ಪೆಂ (ದಶಕು. ೯-೯೩); ಒಡಲೆಂಬ ಹುತ್ತಕ್ಕೆ ನುಡಿವ ನಾಲಿಗೆ ಸರ್ಪ ಕಡುರೋಷವೆಂಬ ವಿಷವೇಱೆ ಸವಂತೆ ಗಾರುಡಿಗನಂತಕ್ಕು (ಸರ್ವಜ್ಞ. ೫೦೪). ೩. ಯಕ್ಷಿಣಿಗಾರ; ಐಂದ್ರಜಾಲಿಕ: ಮುಂದಿನ ಆಟ ಗಾರುಡಿಗರದು (ಶಾಲಿಮ. ೦೨೦).

[ ಗಾರುಡ + – ಇಗ ]

**ಗಾರುಡಿಗತನ** (ನಾ).=ಗಾರುಡಿ ೧: ಪಣದಾಸೆಗೆ ಈ ಹಸುವನಾಡಿಸಿ ಬೇಡಿಸಿ ಕೂಡಿಸುವ ಗಾರುಡಿಗತನವಂ ಕಂಡೊರೆದ ಜೋಗಿಯೆ ಜಾಣಂ (ರಾಮಾಶ್ವ. ೧೨೫-೬). [ ಗಾರುಡಿಗ + – ತನ ]

**ಗಾರುಡಿಗಿತ್ತಿ** (ನಾ). ಗಾರುಡವಿದ್ಯೆಯನ್ನು ಬಲ್ಲವಳು ; ಮಂತ್ರವಾದಿನಿ : "ಯಕ್ಷಿಣೀ–ಗಾರುಡಿಗಿತ್ತಿ" (ಕಾಶಕ್ಕ. ೨೭೨). [ ಗಾರುಡಿಗ + – ಇತ್ತಿ ]

**ಗಾರುಡಿಸು** (ಕ್ರಿ). ೧. ಹಾವಿನ ವಿಷ ಇಳಿಯುವಂತೆ ಮಂತ್ರಹಾಕು : ನಭವಂ ವಿಷಂ ಮುಂಟ್ಟಿತೆಂದು ಗಾರುಡಿಪಂತೆ (ರುದ್ರಶ. ದೇ. ೨೦೮-೪). ೨. ಮಂಕು ಕವಿಸು ; ವಶಪಡಿಸಿಕೊಳ್ಳು : ನುಡಿಯನಡಗಿಸು ಕೋಕಿಲನ ಗಾರುಡಿಸು ವಿಷಯವಿಷಾಹಿಯನು (ತೊರದಾ. ೩-೪-೧೮). ೩. ಬುದ್ಧಿ ಹೇಳು ; ಒಳ್ಳೆಯ ಮಾತನಾಡು : ಬಳಿಕವರು ಭೀಮನ ಕರೆದು ಗಾರುಡಿಸಿ ಕೇಳುವನು ಹೈಯೆಂದು (ಕುವ್ಯಾಅ. ೬-೫). [ ಗಾರುಡ + – ಇಸು$_3$ ]

**ಗಾರುಡೌಷಧ** (ನಾ). ಗಾರುಡಿಗನ ಔಷಧಿ; ಸರ್ಪವಿಷಹರವಾದ ಮೂಲಿಕೆ : ಗಾರುಡೌಷಧ ಮಂತ್ರತಂತ್ರಕ್ಕೆ ಪರವಮವ್ಯೃತ್ಯುವದುಳಿಯೆ ತದ್ವಿಷ ಪರಿಹರಿಸುವುದು (ಬಸವು. ೪೬-೨೭). [ ಗಾರುಡ + ಔಷಧ ]

**ಗಾರುಧ್ವನಿ** (ನಾ). (ಕೂಗಿಕೂಗಿ) ಒಣಗಿಹೋದ ಕಂಠದಿಂದ ಹೊರಡುವ ಕ್ಷೀಣರವ : ಮಗುವಿನ ಗಾರುಧ್ವನಿ ಮುಂಟ್ಟಿದುದು ಸುಬ್ಬುವಿನ ಕಿವಿಗೆ (ಅವತಂ. ೨೨೦). [ ಗಾರು (<ಗಾಜು) + ಧ್ವನಿ ]

**ಗಾರುಬೊಕ್ಕೆ** (ನಾ). ಉಷ್ಣಾಧಿಕ್ಯದಿಂದ ಮೈಮೇಲೆ ಏಳುವ ಗುಳ್ಳೆ; ಸೆಕೆಗುಳ್ಳೆ : ಮೈಮೇಲೆಲ್ಲಾ ಗಾರುಬೊಕ್ಕೆ ಎದ್ದಿದೆ (ರೂಢಿ). [ ಗಾರು (<ಗಾಜು) + ಬೊಕ್ಕೆ$_1$ ]

**ಗಾರುಹಪತ್ಯ** (ನಾ). = ಗಾರ್ಹಪತ್ಯ : ಅರುಹಂತಂ, ಗಾರುಹಪತ್ಯಂ (ಭಾಷಾಭೂ. ೧೧೮ ಉದಾ) ; ಆಹವನೀಯ ಗಾರುಹಪತ್ಯ ದಕ್ಷಿಣವಾಯು ಸಖರಾದರು ತ್ರಿವೇಣಿಕವಾ ರಥಾಗ್ರದಲಿ (ಕುವ್ಯಾಕ. ೬-೪). [ <ಸಂ. ಗಾರ್ಹಪತ್ಯ ]

**ಗಾರುಹಸ್ತ** (ನಾ). ಸಂಸಾರಿ ; ಗೃಹಸ್ಥ : ಗಾರುಹಸ್ತರೆನಿಸಿ ಶರಣರ್ಗರ್ಥವನ್ನವೀಯದವರ ಕಾಲು ಕಯ್ಯನಗಚಿ ತೋರಣದೊಳು ಕಟ್ಟಿ ಸೀಳಿ ನರರ ನಾಚಿಸುವರು (ಸಾನಂಡ. ೬-೧೪೭ ರಗಳೆ). [ <ಸಂ. ಗೃಹಸ್ಥ ]

**ಗಾರುಹಸ್ತ್ಯ** (ನಾ). ಗೃಹಸ್ಥಧರ್ಮ ; ಗೃಹಸ್ಥಾಶ್ರಮ : ಬಂಧುರದ ಧನವನು ಗಾರುಹಸ್ತ್ಯದ ಪರಮಧರ್ಮವನಾವ ಬಯಸುವವನು (ಕುವ್ಯಾಉ. ೩-೩೪). [ <ಸಂ. ಗಾರ್ಹಸ್ಥ್ಯ ]

**ಗಾರೆ$_1$** (ನಾ). ಸುಣ್ಣ ಹಾಗೂ ಮರಳನ್ನು ಕಲಸಿ ಅರೆದು ತಯಾರಿಸಿ ಕಟ್ಟಡಗಳಿಗೆ ಉಪಯೋಗಿಸುವ ಮಿಶ್ರಣ ; ಗಚ್ಚು : ಗಾರೆಯನು ಹಾಕಿಸಿ ಚೆಂನಾಗಿ ಕಟಿಸಿ ಜೀರ್ಣೋದ್ಧಾರವ ಮಾಡಿದ (ಸೌಇಇ. IX–ii, ೫೨೨-೧೭ ; 1527) ; ಗಾರೆಗೊದವಿಸಿದ ಹೊಸಸುಣ್ಣವೆಂತೆನಲು ಕೇಳ್ಳೆ ರಾಯ ಶಂಭುಗರ್ಪಿಸಿದ ಪಾಲುಂಬೋನದೊರೆಗೆ (ವೀಶ್ಕವು. ೮-೪-೨೦) ; ಗೋಪುರದ ಭಾರವನು ಗಾರೆಯು ರೂಪುದೋಚಿದ ಪ್ರತಿಮೆಯುಂದದಿ ಈ ಪರಿಯ ಸಂಸಾರಭಾರವನಾರು ತಾಳುವರು (ಹರಿಸಾ. ೮೨) ; ಇಟ್ಟಿಗೆ ಗಾರೆ ತೇಗ ತಾರ್ಸಿ ಸಜ್ಜೆ ಸಿಮೆಂಟು ಇತ್ಯಾದಿಗಳನ್ನು ಕುರಿತ ಪಾಂಡಿತ್ಯ ನನಗಿಲ್ಲ (ಹಂಗೂಲಿ. ೨). 'ವಜ್ರಗಾರೆ' ಪರಾ.

**ಗಾರೆಯ ಚಕ್ರ**=ಗಚ್ಚು ಅರೆಯುವ ಗಾಲಿ : ಗಾರೆಯ ಚಕ್ರದಂತೆ ಉರುಳಿಕೊಂಡು ಭೂಮಿಯು ಸೂರ್ಯಪ್ರದಕ್ಷಿಣೆ ಮಾಡುತ್ತಿದ್ದಿದ್ದರೆ . . . ಆಗುತ್ತಿದ್ದುವು (ಸ್ವಹಕ್ಕು. ೪೫).

[ ದೇಶ್ಯ ತಮಿ. ಕಾರೈ ; ತುಳು. ಗಾರೆ ; ತೆಲು. ಗಾರ ]

**ಗಾರೆ$_2$** (ನಾ). ಒಂದು ಬಗೆಯ ಗಿಡ ; ಇಂಗುಳದ ಗಿಡ ; "ಇಂಗುದೀ, ತಾಪಸತರುಃ – ೨ ಗಾರೇಗಿಡ ; ಇಂಗಳದ ಗಿಡ" (ಸಿದ್ಧಾಂತಿ. ೧೧೭). [ ದೇಶ್ಯ ತೆಲು. ಗಾರ ]

**ಗಾರೆಕಲ್ಲು** (ನಾ). ಗಾರೆಯನ್ನು ನುಣುಪುಮಾಡಲು ಉಪಯೋಗಿಸುವ ಕಲ್ಲು : ನುಣುಪಾದ ಗಾರೆಕಲ್ಲು (ರೂಢಿ). [ಗಾರೆ$_1$ + ಕಲ್ಲು(<ಕಲ್$_3$) ]

**ಗಾರೆಕೆಲಸ** (ನಾ). ಗಾರೆಯನ್ನು ಮಾಡುವುದು ; ಗಾರೆಯನ್ನು ಬಳಿಯುವುದು : ಮನೆಗೆ ಗಾರೆಕೆಲಸ ಮಾಡಿಸಬೇಕಾಗಿದೆ (ರೂಢಿ).

**ಗಾರೆಕೆಲಸದವ**=ಗಾರೆಕೆಲಸಮಾಡುವವನು : ಬಡಗಿಯರು ಕಾಮಾಟಿಯರು ಗಾರೆಕೆಲಸದವರು (ಸೌಗಂಧಿ. ೧೩೫-೧೭). [ ಗಾರೆ$_1$ + ಕೆಲಸ ]

**ಗಾರೆಗಾರ** (ನಾ). ಗಚ್ಚುಕೆಲಸ ಮಾಡುವವನು : ಒಳ್ಳೆಯ ಗಾರೆಗಾರರಿಲ್ಲದೆ ಮನೆಯ ಕೆಲಸ ಅಪೂರ್ಣವಾಗಿದೆ (ರೂಢಿ). [ ಗಾರೆ$_1$ + – ಕಾರ$_1$ (<–ಕಾಱ) ]

**ಗಾರೆಮಣೆ** (ನಾ). ಗಾರೆಯನ್ನು ಗೋಡೆಗೆ ಬಳಿಯಲು ಉಪಯೋಗಿಸುವ ಚೌಕವಾಗಿರುವ, ಹಿಡಿಯುಳ್ಳ ಮಣೆ ; ಚಕ್ಕೆ : "ಗಾರೆಕೆಲಸದವನ, ಹಿಡಿಯಿರುವ ಚೌಕಹಲಗೆ : ಗಾರೆಮಣೆ" (Hawk. ಇಂಕನಿ). [ ಗಾರೆ$_1$ + ಮಣೆ ]

**ಗಾರ್ದಪ** (ನಾ).=ಗಾರ್ದಭ : ಅದನುಪೇಕ್ಷೆಗೆಯ್ದಿಪ್ಪ ಪ್ರಭುವುಂ ಪ್ರಜೆಗಳುಂ ಮೂಲಿಗನುಂ ಸ್ವಾನ ಗಾರ್ದ್ದಪ ಚಾಂಡಳರು . . . ಪಾತಕಕ್ಕೆ ಸಲ್ವರು (ಸೌಇಇ. XX, ೫೦-೩೬ ; 1077). [ P ಇದು 'ಗಾರ್ದಭ'ದ ಅಪಲಿಖಿತ ]

**ಗಾರ್ದಭ** (ನಾ). ಕತ್ತೆ ; ರಾಸಭ : ಶುನಕ ಗಾ[ಪಾಠಾಂ. ಗ]ರ್ದಭ ಕೀರ ದರ್ದುರ ಗ ಮನಚರೋಷ್ಟ್ರ ಕುರಂಗ (ಬಸವು. ೫೭-೭೩) ; ಕೃಶಾನುವಿನ ಗಾರ್ದಭನ ವೃಷಭನ ಶಿಂಶುಮಾರಕನ . . . ಗುಣವಾ ನರೇಂದ್ರನೋಳಿರಲು ಬೇಹುದು ಭೂಪ ಕೇಳೆಂದ (ಕುವ್ಯಾಉ. ೩-೧೧೯). [ ಸಂ. ]

**ಗಾರ್ಹಪತ್ಯ** (ನಾ). ಯಜ್ಞಯಾಗಗಳಿಗೆ ಸಂಬಂಧಪಟ್ಟ ಅಗ್ನಿತ್ರಯದಲ್ಲಿ ಒಂದು : ಶರೀರ ಸಂಸ್ಕಾರಾದಿ ಗಾರ್ಹಪತ್ಯ ದಕ್ಷಿಣಾಗ್ನ್ಯಾಹವನೀಯವೆಂಬ ಪೆಸರಂ ಪಡೆದಗ್ನಿತ್ರಯಗಳೊಳ್ (ಆದಿಪು. ೦೫-೧೭ ವ) ; ಆ ವೇದಿಯ ಯಥೋಚಿತಸ್ಥಾನಂಗಳೊಳ್ ಸುಕೃತವನಿತಾಪತ್ಯಮೆನಿಪ ಗಾರ್ಹಪತ್ಯ ಮುಂಮಂ . . . ತೋಱೆ (ಜಗವಿ. ೧೭-೭ ವ) ; ಬಳಿಕ ಗಾರ್ಹಪತ್ಯವು ಪೃಥಿವಿ, ಅಗ್ನಿ, ಅನ್ನ, ಆದಿತ್ಯ–ಇವು ನನ್ನ ತನುಗಳು, ಆದಿತ್ಯನಲ್ಲಿರುವ ಈ ಪುರುಷನೇ ನಾನು (ಬೃಹ್ಮಭಾ. ೨೯೭ ಅಡಿಟಿ). [ ಸಂ. ]

**ಗಾರ್ಹಸ್ಥ್ಯ** (ನಾ). ಗೃಹಸ್ಥನಾಗಿರುವಿಕೆ ; ವಿವಾಹಾನಂತರ ಸಂಸಾರಿಯಾಗಿ ಮನೆಯಲ್ಲಿ ವಾಸಮಾಡುವಿಕೆ ; ಗೃಹಸ್ಥಾಶ್ರಮ ; ಎಲ್ಲವೂ ಯೌವನದ ಗಾರ್ಹಸ್ಥ್ಯದ ಚಟುವಟಿಕೆಯಲ್ಲಿ ಸುಖಮುಕ್ತಾಯವಾಗುತ್ತದೆ (ಮನೋನಂ. ೨೩೫) ; ಅವನು ಗಾರ್ಹಸ್ಥ್ಯದಿಂದ ಸಂನ್ಯಾಸಕ್ಕೆ ನಡೆದರೆ ಅರ್ಹನಾಗುವವನು (ಬುದ್ಧಪ. ೮೯). [ ಸಂ. ]

**ಗಾರ್ಹಿಡಕ್ಕೆ** (ನಾ). [ ಸಂಗೀತ ] ಒಂದು ಬಗೆಯ ತಾಳ : ಗಾರ್ಹಿಡಕ್ಕೆ ಎಡಡಕ್ಕೆ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮). [ ? ]

**ಗಾಲ** (ನಾ). ೧. ಹರಿಯುವುದು ; ಪ್ರವಹಿಸುವುದು. ೨. ಸೋರುವುದು ; ತೊಟ್ಟಿಕ್ಕುವುದು. ೩. ಸೋಸುವುದು. 'ವಸ್ತ್ರಗಾಲ' ಪರಾ. [ ಸಂ. ]

**ಗಾಲವ** (ನಾ). ೧. ಒಂದು ಬಗೆಯ ಗಿಡ ; ಲೋಧ್ರ : "ಗಾಲವಃ . . . ಮಾರ್ಜನಃ –೬ ಲೋಧ್ರಗಿಡದ ಹೆಸರು" (ಸಿದ್ಧಾಂತಿ. ೧೧೪). ೨. ಒಬ್ಬ ಋಷಿಯ ಹೆಸರು : ವಾಮದೇವಾತ್ರಿ ಗಾಲವ ಗುರುವಸಿಷ್ಠ ವಿಶ್ವಾಮಿತ್ರರಂ ಕರೆಸಿ (ಜೈಮಿಭಾ. ೨೦-೩). [ ಸಂ. ]

**ಗಾಲಿ, ಘಾಲಿ** (ನಾ). ಬಂಡಿ ಮೊದಲಾದ ವಾಹನಗಳ ಚಲನೆಗೆ ಮುಖ್ಯ ಸಾಧನವಾದ ಭಾಗ; ಚಕ್ರ; ರಥಾಂಗ: "ಚಕ್ರಂ, ರಥಾಂಗಂ–ಈ ೨ ಗಾಲಿ" (ಹಲಾಯು. ೬೩-೨೯೩); "ಗಾಲಿ ಚಕ್ರಂ ರಥಾಂಗವೆನಿಕ್ಕು" (ಮಂಗರಾ. ೮೪-೨೪); ವಿಶ್ವಕರ್ಮನಱುದಿಂಗಳೊಳ್ ರಥದೊಂದು ಗಾಲಿಯುಂ ಸಮೆಯಿಸಿ ತಂದು ತೋಱಿದೊಡೆ (ವಡ್ಡಾರಾ. ೧೪೭-೧೦); ಬಲವಂತಂ ಮಾರುತಿ ಗಡ ಮಹಾರಥಂ ಮಾರುತಿಯುಂ ತದ್ರಥದ ಗಾಲಿಗಳ್ ದೊಡ್ಡಿದುವೇ (ಗದಾಯು. ೩-೫೫); ಒಂದೆ ಗಾಲಿಯೊಳ್ ರಥಮಂ ನಡೆಯಿಸುವೆನೆಂಬ ನೀರಿಲ್ಲದೆ ಕೂಟಿನಡುವೆನೆಂಬ . . . ಪೆರ್ಗಾವಿಲನಂ ಪೋಲ್ಕುಂ (ಧರ್ಮಾಮೃ. ೫-೧೦೬); ಶಿಥಿಲವಾದುವು ಗಾಲಿಗಳು ಬಳಿ ರಥಿಕರೀತನ ಬಿಟ್ಟು ಹಾಯ್ದರು (ಕುವ್ಯಾಕ. ೩-೨೩). **ಘಾಲಿ:** "ಚಕ್ರಂ, ರಥಾಂಗಂ–ಈ ೨ ಘಾಲಿ" (ನಾಚಿರಾ. ೧೩೪).

**ಗಾಲಿಯಂಗದವಕ್ಕಿ = ಗಾಲಿವಕ್ಕಿ:** ಬಲು ಸ್ಥೂಲ ಕುಚಯುಗಗಳಿಗೆ ಸುಂದರಗಾಲಿಯಂಗದವಕ್ಕಿಗಳು ನಿಜವಾಗಿ ಪೋಲುವವು (ರಘುವಂ. ೧೯೩-೬೩). [ ದೇಶ್ಯ ತಮಿ. ಕಾಲಿ; ತುಳು. ಗಾಲಿ ]

**ಗಾಲಿಕುರ್ಚಿ** (ನಾ). ಗಾಲಿಗಳನ್ನು ಜೋಡಿಸಿರುವ, ನೂಕಲು ಅನುಕೂಲವಾದ ಕುರ್ಚಿ: ರೋಗಿಗಳನ್ನು ಇಲ್ಲಿಂದಲ್ಲಿಗೆ ಕರೆದುಕೊಂಡು ಹೋಗುವುದಕ್ಕಾಗಿ ಉಪಯೋಗಿಸುವ ಗಾಲಿಗಳುಳ್ಳ ಕುರ್ಚಿ; ಗಾಲಿಕುರ್ಚಿ (Bath–chair. ಇಂಕನಿ). [ ಗಾಲಿ + ಕುರ್ಚಿ ]

**ಗಾಲಿಪಲ್** (ನಾ). ಗಾಲಿಯ ಹಲ್ಲು; ಅರೆ; ಚಕ್ರಾರ: ದಿನದಿನಕೆ ಬದಲಿಸುವ ಭಾಗ್ಯನಿವಹಮದು ಗಾಲಿಪಲ್ಗಳೋಳಿವೊಲಿರ್ಕುಂ (ಸ್ವಪ್ನವಾ. ೩). [ ಗಾಲಿ + ಪಲ್ ]

**ಗಾಲಿವಂಟಿ** (ನಾ). ಕಿವಿಯ ಒಂದು ಆಭರಣ; ಗಾಲಿಯ ಆಕಾರದ ಒಂಟಿ: ಕಿವಿಯಲ್ಲಿ ಗಾಲಿವಂಟಿ, ವಂಟಿಗಳ ಭಾರದಿಂದಾಗಿ ತೂತುಗಳು ಇಳಿಬಿದ್ದಿವೆ (ಪ್ರಕಾಶ. ೮). [ ಗಾಲಿ + ವಂಟಿ ]

**ಗಾಲಿವಕ್ಕಿ** (ನಾ). ಜಕ್ಕವಕ್ಕಿ; ಚಕ್ರವಾಕ; ರಥಾಂಗ: "ಜಕ್ಕವಕ್ಕಿಯೆ ಗಾಲಿವಕ್ಕಿಯೆನಲ್ಕೆ" (ಕರ್ಣಾನಿ. ೬೨); ಅಱಿಕೆವಟ್ಟುಳ್ಳರಲೆ ನೀಳನೈದಲ್ ಮಱುಗಿ ಹೆಱಸಾರೆ ಗಾಲಿವಕ್ಕಿಗಳ್ (ಉದ್ಯದೇ. ೪-೧೦). [ ಗಾಳಿ + ಪಕ್ಕಿ₁ ]

**ಗಾಲೀಚ, ಗಾಲೀಚೆ** (ನಾ). (ಉಕ) ಚಿತ್ರರಂಜಿತವಾದ ಜಮಖಾನ: ಮೇಲೆ ಸುರಿದ ಸಾಂದ್ರಕಿರಣಗಳು . . . ರೇಸಿಮೆಯ ಪಟದ ಮೇಲೆ ಇರಾಣದ ಗಾಲೀಚಗಳನ್ನು ನಿರ್ಮಿಸುತ್ತಿದ್ದವು (ರಕ್ತಧ್ವ. ೨೬೯). **ಗಾಲೀಚೆ:** ತೋಟದಲ್ಲಿ ಸಪಾಟನೆಲದ ಮೇಲೆ ಯಾವತ್ತೂ ಕಡೆಗೆ ಹಚ್ಚಹಸರು ಗಾಲೀಚೆಗಳನ್ನು ಪಸರಿಸಿ . . . ಕಾಲದಾರಿಗಳನ್ನು ಮಾಡಿದ್ದರು (ಅಪ್ರೇಮ. ೪೯).

[ ←ಪಾರ. ಗಾಲೀಚಹ್; ಹಿಂ. ಗಲೀಚಾ; ಮರಾ. ಗಾಲಿಚಾ ]

**ಗಾಲೀಚೆ** 'ಗಾಲೀಚ' ನೋ.

**ಗಾಲು** 'ಗಾಳು' ನೋ.

**ಗಾಲುಮೇಲು** 'ಗಾಳುಮೇಳು' ನೋ.

**ಗಾಲ್ಮೇಲು** 'ಗಾಳುಮೇಳು' ನೋ.

**ಗಾವ** 'ಗಾಮ' ನೋ.

**ಗಾವಕಾರ** (ನಾ). ಗೌಡ; ಗ್ರಾಮಾಧಿಕಾರಿ. 'ಗಾವಕಾರಿಕೆ' ಪರಾ. [ ಗಾವ (<ಗಾಮ) + –ಕಾರ₁ (< –ಕಾಱ) ]

**ಗಾವಕಾರಿಕೆ** (ನಾ). ಗ್ರಾಮದ ಯಜಮಾನಿಕೆ; ಗೌಡಿಕೆ; ಪಟೇಲಿಕೆ: ವಿಶ್ವಾಮಿತ್ರ ಗೋತ್ರದವಂಗೆ ಸರ್ವಕೆಲಸದಲು ಸ್ವತಂತ್ರನಾಗಿ ಗಾವಕಾರಿಕೆ ಬಿಜೋರ ಮರ್ಯಾದೆಗಳನು . . . ಗ್ರಾಮಾನುಮತದಿಂದಾ ರಾಜರು ಕೊಟ್ಟರು (ಎಇ. XXVII, ೨೮-೮೩; 1256?). [ ಗಾವಕಾರ + –ಇಕೆ ]

**ಗಾವಕೋಸು** (ನಾ). ಗ್ರಾಮದ ಮೂಲೆ; ಊರಿನ ಒಂದು ಕೋಚು: ಗೊಬ್ಬರದ ನಿಮಿತ್ತವಾಗಿ ಊರ ಹೊರಗೆ ಗಾವಕೋಸಿನಲ್ಲಿ ಒಂದು ದೊಡ್ಡತಗ್ಗನ್ನು ತೆಗೆದು (ಕೃಷಿಪ್ರ. ೪೫). [ ಗಾವ (<ಗಾಮ) + ಕೋಸು₂ ]

**ಗಾವಗ** (ನಾ). ಒಬ್ಬಾತನ ಹೆಸರು: ಗಾವಗ ಅರಸ ಬೆಳ್ಗೆಱೆಯಂ ದಯೆಗೆಯ್ದು ಆಳುತ್ತವಿಟ್ಟು (ಎಕ. XII, ತಿಪಟೂ. ೧೦೩-೦೨; 972). [ ? ]

**ಗಾವಗಾನೆ** 'ಗಾಮಗಾನೆ' ನೋ.

**ಗಾವಟ** 'ಗಾವಟಿ' ನೋ.

**ಗಾವಟಿ, ಗಾಂವಟಿ, ಗಾಂವಠೀ, ಗಾವಟ, ಗಾವಠಿ** (ಗು). ೧. (ಉಕ) ಹಳ್ಳಿಗೆ ಸಂಬಂಧಿಸಿದ; ದೇಶೀಯವಾದ; ನಾಟಿ; ಗ್ರಾಮೀಣ: ಎಲ್ಲಿಯೋ ಗಾವಟಿ ಶಾಲೆಯಲ್ಲಿ ನಾಲ್ಕು ಅಕ್ಷರ ಕಲಿತು ಸಭಾದಲ್ಲಿ ಕೇಳಿದ ಮಾತುಗಳನ್ನು ನನ್ನ ಮುಂದೆ ಹೇಳಿ ಹೆದರಿಸಬೇಕೆಂದು ಮಾಡುತ್ತೀಯಾ? (ಜಿವಠಿ. ೫೫); ಅವರು ಯಾವುದೋ ಗಾವಟಿ ಔಷಧದ ಪ್ರಯೋಗ ಮಾಡಿಕೊಳ್ಳುವರು (ರೂಢಿ). ೨. ಸರಕಾರಕ್ಕೆ ಸಂಬಂಧವಿಲ್ಲದ; ಖಾಸಗಿ. (ನಾ). ೩. ಕಾಡುಸ್ಥಿತಿಯುಳ್ಳುದು; ಉತ್ತಮವಲ್ಲದುದು. **ಗಾಂವಟಿ:** ೧. ಅದು ಅರ್ಧಕ್ಕರ್ಧ ಎಣ್ಣೆ ಬೆರೆಸಿದ ನಾತಕೊಡುವ ಗಾಂವಟಿ ತುಪ್ಪವಾಗಿತ್ತು (ಜಾರುದಾ. ೩೦೩). ೩. ಮುಂಬಯಿಯಲ್ಲಿ ತಯಾರಾಗುವ ಕಲ್ಲುಸಕ್ಕರೆ, ಚುಮುಚುಮಿಸಕ್ಕರೆ ಗಾಂವಟಿ (ಮುಂಬವ್ಯಾ. ೩೫ ಪ್ರಸ್ತಾವನೆ). **ಗಾಂವಠೀ:** ೧. 'ಗಾಂವಠೀವಕೀಲ' ಪರಾ. **ಗಾವಟ:** ೧. "ಇಲ್ಲಿಯೇ ತಯಾರಾದ" (ಜಾನಕೋ. ೪೭). **ಗಾವಠಿ:** ೨. ಕುಂಭಕರ್ಣನ ತಂದೆ, ಮಕ್ಕಳಿಬ್ಬರನ್ನೂ ಅಪರಾತ್ರಿಯಲ್ಲಿ ಎಬ್ಬಿಸಿ ಬಹುಶಃ ಒಂದು ಗಾವಠಿ ಪಾಠಶಾಲೆಗೇ ಅಟ್ಟುತ್ತಿರಬೇಕು (ಗಾಳಿಪ. ೧೬೩); ಒಬ್ಬ ಅಯ್ಯನವರು ಗಾವಠೀ ಸಾಲೆಯನ್ನು ಹಾಕಿದ್ದರು (ಮೇದಿಮ. ೭). [ ←ಮರಾ. ಗಾಂವಟೀ ]

**ಗಾವಟೆ, ಗಾವಡೆ** (ನಾ). ಒಂದು ಬಗೆಯ ಮರ; ಸಾರಸವೃಕ್ಷ: "ಸಾರಸಮೆನಲ್ಕೆ ಗಾವಟೆ" (ಮಂಗರಾ. ೪೨-೪೦); ಗಾವಟೆ ಬೆಲ್ಲವತ್ತ ವರೆಮಾದಲವಂಬಟೆ ಚಿಳ್ಳ ಚಿಲ್ಲಕಾಯ್ ಮಾವಿನಕಾಯ್ಗಳ್ (ನಳಚಂ. ೧೭೬೨); ಬೆಲ್ಲವತ್ತ ಕಪಿತ್ಥ ಚಿಕ್ಕಣೆ ಚಿಲ್ಲ ಗುಗ್ಗುಳ ಗೇರು ಗಾವಟೆ . . . ಇಲ್ಲಿ ನೋಡಿವೆ (ತೊರರಾ. ೩-೧-೨೯); ಅಲ್ಲಂ ಮೆಣಸೇಲಕ್ಕಿಯು ನೆಲ್ಲಿಯು ಗಾವಟೆಯುಂ ಭಾಗ್ಯಹೀನರಿಗುಂಟೇ (ನೀತಿಸಾ. ೬೪೭). **ಗಾವಡೆ:** "ಮಹಾಮುನಿಃ– ಗಾವಡೆ, ತುಂಬುರು" (ಓಷಧಿ. ೧೧೭). [ ? ]

**ಗಾವಠಾಣ** 'ಗಾಂವಠಾಣೆ' ನೋ.

**ಗಾವಠಿ** 'ಗಾವಟಿ' ನೋ.

**ಗಾವಡಿವಾಡ, ಗಾವರಿವಾಡ** (ನಾ). ಒಂದು ಊರಿನ ಹೆಸರು: ಗಾವಡಿವಾಡದ ಮಹಾಜನ (ಅ)ಐವ[ದಿ]ನ್ಬ × [ಕಾ]ಲಂ ಕರ್ಚಿ ತುಪ್ಪದ [ ತೆ ] ಱೆಯ . . . ದಾನಗೊಟ್ಟ (ಸೌಇಇ. XI – i, ೦೩-೧೦; 869). **ಗಾವರಿವಾಡ:** ಇಟ್ಟಗೆ ಗಾವರಿವಾಡವೆಂಬ ಬಾಡಂಗಳನ್ (ಎಇ. XV, ೩೪೦-೦೮; 1071). [ ಗಾವಡಿ? + ಬಾಡ₁ ]

**ಗಾವಡೆ** 'ಗಾವಟೆ' ನೋ.

**ಗಾವಣ₁** (ನಾ). ನೆಲೆ; ಆಶ್ರಯಸ್ಥಾನ; ಕಾವಣ; ಮಂಟಪ: ಅಂಬುಜಸೌರಭಂ ತನಗೆ ಗಾವಣ ಜೀವಣಮತ್ಯಪೂರ್ವಮಾಸ್ಯಾಂಬುಜ ಗಂಧಮೆಂದೆಱಗಿ ಬಗ್ಗಿಸೆ (ಶಾಂತಿಪು. ೮-೮೭); ವನಮಿಂದು ಶೂನ್ಯಮೆಳವೆಂಡಿರ ಗಾವಣ [ ಪಾಠಾಂ. ಗೋವರ ]ಮಿಂದು ಶೂನ್ಯಂ (ಅರ್ಧನೇ. ೫-೫೨). [ <ಕಾವಣ ]

**ಗಾವಣ₂** (ನಾ). ಹಳ್ಳಿಯವನು; ಗ್ರಾಮೀಣ ಪ್ರದೇಶದವನು (?): ಗದೆ ಮುಂಡೆ ೪ ಬಯಿದೂರ ಗಾವಣರ ಬಟಯ ಬೈಂದೂಱ (ಸೌಇಎ. ೦೯೩೦, ಮಂಗಳೂ. ೫೩೪-೨೩; 1278). [ <ಸಂ. ಗ್ರಾಮೀಣ ? ]

**ಗಾವಣಿಗ**(ನಾ).೧. ಹಳ್ಳಿಗ ; ಗ್ರಾಮೀಣ: "ಸಾದಂ ವೃಷಲನಜಿ ಕುಂಚಡಿಗನ ವದ್ಯಂ ಗಾವಣಿಗನಂತ್ಯನಜಿಯೆ ಗಂಗಡಿಕಾಣನಕ್ರಮನಭೀರನೆಂದೆನೆ ಮಹಾ ಶೂದ್ರನಕ್ಕುಂ" (ಮಂಗರಾ. ೧೦೦-೬). ೨. ಒಂದು ವಂಶದ ಹೆಸರು: ಕಾಯ್ಪರ ಗಣ್ಣಂ ಅಡಿತುರಗತಟ್ಟಸಂಘಟ್ಟಂ ಬಿರುದ ಗಾವಣಿಗ ಶರಭ ಭೇರುಣ್ಣಂ (ಸೌಇಇ. XI-i, ೭೮-೮೦; 1045); ಅರಿಬಿರುದ ಗಾವಣಿಗ ದಿಶಾಪಟ್ಟ . . . ಬಿರುದ ಗಾವಣಿಗ ಸೂಜಿಕಾರ (ಸೌಇಇ. XI-ii, ೧೬೬-೬೯; 1125); ಗಾವಣಿಗರ ಬಳಿಯ ರಾಜಗುರು ಜಕ್ಕಂಣನಾಯಕ (ಕಇ. I, ೩೩-೭; 1398). [ಗಾವಣ₂ + – ಇಗ]

**ಗಾವದ** 'ಗಾವುದ' ನೋ.

**ಗಾವದಿ, ಗಾವುದಿ** (ಗು). ೧. ಹೆಡ್ಡತನದಿಂದ ಕೂಡಿದ; ದಡ್ಡತನದ: ಸಾವಂ ತಿಳಿಯದೆ ಬಱಿದೆ ಗಾವದಿ ಕೆಲಸಕ್ಕೆ ಯೋಗ್ಯನಾದಂ ಭಕ್ತಂ (ಹಮ್ಮಿರ. ೬-೪೯). (ನಾ). ೨. ದಡ್ಡ; ಮೂಢ; ಮೂರ್ಖ: ಮುನ್ನ ಭವಿನಿಳಯದೊಳು ತಲೆಮಟ್ಟು ದುಡಿದ ಗಾವದಿಯ್ಯಸೆ ಭೂಪಾಲ ನಲ್ಲೆಂದನು (ಹಡಕಾ. ೧೦-೩೩). **ಗಾವುದಿ**: ೨. ಗಾವುದಿಯಾದನೊ ಗಂಭೀರದವನೊ ಸಾವಹುಟ್ಟುಗಳ ಗೆದ್ದವನೊ (ಬಿಜ್ಜ. ರಾ. ४-೨೩).
[←ಪಾರ. ಹಿಂ. ಮರಾ. ಗಾವದೀ]

**ಗಾವದಿಗ** (ನಾ). ಗಾವದಿ ೨: ಬಲು ಸುಳ್ಳು ಕೂಲಿಕಾಱನು ಗಾವದಿಗ ನೆಂದು ಹಲವು ಬಗೆಯಲಾಡುತಿಹರು (ಅಮುಸಾಂ. ೩-೭೩).
[ಗಾವದಿ + – ಗ₂]

**ಗಾವದಿತನ** (ನಾ). ಮಂಕುತನ; ದಡ್ಡತನ (ಕ್ಯಾಂಡರ್).
[ಗಾವದಿ + – ತನ]

**ಗಾವನ್ನ** (ನಾ). ೧. ಬಲಿಗಾಗಿ ಹಾಕುವ ಅನ್ನ. ೨. ಕರಗದ ಉತ್ಸವ ಕಾಲದಲ್ಲಿ ಮಾಡುವ ಒಂದು ಸಾಂಪ್ರದಾಯಿಕವಾದ ವಿಧಿ; ದೇವತೆಗಳಿಗೆ ನಾಲ್ಕು ದಿಕ್ಕುಗಳಲ್ಲೂ ಅರಿಸಿನದ ಅನ್ನದಿಂದ ಬಲಿಹಾಕುವ ಕರ್ಮ: (ಎಸಮ್ಮ. IX, ೧೧). [ಗಾವು + ಅನ್ನ₃]

**ಗಾವಯ್ಯ** (ನಾ). ಒಬ್ಬಾತನ ಹೆಸರು: ಆ ಕಲ್ಲಂ ಬರೆದ ಗಾವಯ್ಯನ ಸೇನಬೋವ ಕಾಮಯ್ಯ (ಎಕ. XII, ತಿಪಟೂ. ೧೦೩-೧೯; 972).
[ಗಾವ (<ಗಾಮ) + ಅಯ್ಯ₁]

**ಗಾವರ** (ನಾ). ೧. ಗದ್ದಲ; ಗಲಾಟೆ; ಅಬ್ಬರ: "ಗಾವರ ಸರದನಿ ಸಪ್ಪಳುಲಿಯುಂ ಗಾವಳಿ ಮಿಗೆಯುಬ್ಬರಮುಂ ಧ್ವನಿ" (ಕವಿಕಂ. ೦೦೭); ಪರಮಮಂಗಳಪಾಠಕರ ಗಾವರದ ಘನಸಂಭ್ರಮದಲ್ಲೆತಹ ಪರಮಶಿವನನು ರಾಜಪುತ್ರರು ಕಂಡರಿದಿರಿನಲಿ (ಸಿಭಾಗ. ४-೧೬-೩). ೨. ಗುಂಜಾರವ; ಝೇಂಕಾರ: ತಣ್ಪಿಡಿದಲರೂಡೆ ಗಾವರದ ಮೆಲ್ಲುಲಿ ತುಂಬಿಯ ಗಾವರಂಗಳಂ ಗೆಡೆಗೊಳೆ (ಶಂಪಭಾ. ४-೦೦೦); ನುಣ್ಣನಿಯ ಸುವ್ವಿಯ ಗಾವರದೊಳ್ ಕೊಡರ್ಚಿದೋಪನಿಗೆ ಪುಳಿಂದಿ ಪಾಡಿದಳ್ (ಲೀಲಾವ. ೮-೩೦); ತಾವರೆವೂಗಳೊಳ್ ಪಲವು ತುಂಬಿಯ ಗಾವರಮುಣ್ಮೆ (ನಳಹಂ. ೦೩೭). 'ಗಾವಳಿ' ಪರಾ. [?]

**ಗಾವರಂಬೊರೆ** (ಕ್ರಿ). ಗಾವರದಿಂದ ಕೂಡು; ಝೇಂಕರಿಸು: ಪೆಣ್ದುಂಬಿಯ ಗಾವರಂಬೊರೆದು ಪೊಣ್ಮುತಿರ್ದ ಪುಷ್ಪಾಸ್ರುಚಾಪಲತಾ ಜ್ಯಾರವದಂತೆ (ಕಾದಂಪೂ. ೬೩೨). [ಗಾವರ + ಪೊರೆ₂]

**ಗಾವರದುಂಬಿ** (ನಾ). ಝೇಂಕರಿಸುವ ದುಂಬಿ; ಮೊರೆಯುತ್ತಿರುವ ಭ್ರಮರ: ಕವಿವ ಗಾವರದುಂಬಿಯಿನಾದ ಗಾವರಂ ತೆಕ್ಕನೆ ತೀವಿ ಕೂಡೆ ಬಗೆಗೊಂಡುದು ಕೂಡೆ ಬನಂ ಬಸಂತದೊಳ್ (ಸೂಕ್ತಿಸು. ೧೧-೧೦).
[ಗಾವರ + ತುಂಬಿ₁]

**ಗಾವರಸ** (ನಾ). [ಸಂಗೀತ] ಆಲಾಪನೆಯ ಸ್ವಾರಸ್ಯ: ಪೂರ್ವಪದಂ ತದ್ಭವಮಾದುದರ್ಕೆ – ಗ್ರಾಮರಸ – ಗಾವರಸ (ಶಮದ. ೨೮೯ ಪ್ರಯೋ); ಗಾವರಸಂ, ಗ್ರಾಮರಸಃ. ಗ್ರಾಮೋನಾಮ ಸರಿಗಮಾದಿ ಸ್ವರಸಮೂಹಃ (ಶಬ್ದಾನು ೨೯೬ ವ್ಯಾಖ್ಯಾ).
[<ಸಂ. ಗ್ರಾಮರಸ]

**ಗಾವರಿವಾಡ** 'ಗಾವಡಿವಾಡ' ನೋ.

**ಗಾವರಿಸು**(ಕ್ರಿ). ೧. ಗದ್ದಲಮಾಡು; ಸದ್ದುಮಾಡು; ಆರ್ಭಟಿಸು: (ಕಿ). ೨. ಝೇಂಕಾರಮಾಡು; ಧ್ವನಿಮಾಡು: ಒಳ್ಪನಾಳ್ದ ಪೆರ್ಗ್ಗಟಿಗಳಿನೊಂದಿ ಗಾವರಿಸುತಿರ್ಪ್ಪ ಮದಾಳಿಯಿಂ (ಎಇ. XIII, ೩೩೧-೩೭; 929); ಅರಗಿಳಿಯಾಗಿ ಮಂಗಳಮನೋದುವ ತುಂಬಿಯ ಬಂಬಲಾಗಿ ಗಾವರಿಸುವ (ಪುಷ್ಪವು. ೧೨-೭೦); ಆಸ್ಯಾಬ್ಜಗಂಧಕ್ಕೆ ಮಂಡಳಿಗೊಂಡಾಱಿವಿಂಡು ಗಾವರಿಸದಂತೋರಂತೆ ಚಾಣ್ಮೆಕ್ಕು ಪುಂಶ್ಚಳಿಯರ್ . . . ನಿಶಾಂತಾಂತಂಗಳಂ ಪೊರ್ದಿದರ್ (ರಾಜಶೇ. ೧೦-೨೪); ತೀಟದ ಕಂಪೆತ್ತಲತ್ತಲ್ ಮೋಹರಿಸಿ ಗಾವರಿಸಿ ತಂಡತಂಡದಿಂ ತೇಂಕುತ್ತೈತಂದು (ರಾಮಾಶ್ವ. ೩४-೩).
[ಗಾವರ + – ಇಸು₃]

**ಗಾವಸಿಂಗ** (ನಾ). ಗ್ರಾಮಸಿಂಹ; ನಾಯಿ: ತುಂಗಗಜಂಗಳ್ಗಳ್ಕಿ ಮೃಗಂಗಳನಾಯ್ದು ಱಿಸಿ ತಿಂಬುದಪ್ಪೊಡೆ ಪೆಱತೇಂ ಸಿಂಗಮದಲ್ಲದು ಪೋಗಾ ಸಿಂಗಂ ತಾಂ ಗಾವಸಿಂಗಮೆಂದುದು ನಿನ್ನಂ (ಪಂಚತಂ. ೯೦-೮).
[ಗಾವ (<ಗಾಮ) + ಸಿಂಗ₁]

**ಗಾವಳ** 'ಕಾವಳ' ನೋ.

**ಗಾವಳಿ, ಗಾವುಳಿ** (ನಾ). ೧. ಸದ್ದು; ಗದ್ದಲ; ಅಬ್ಬರ: "ಗಾವರ ಸರದನಿ ಸಪ್ಪಳುಲಿಯುಂ ಗಾವಳಿ ಮಿಗೆ ಅಬ್ಬರಮುಂ ಧ್ವನಿ" (ಕವಿಕಂ. ೦೦೭); ಭ್ರಮೆಯಾಯ್ತು ವಿದುರಂಗೆಂಬ ಗಾವಳಿಯ ಕೂಡೆ ಕುಣಿದನು (ಕುಮ್ಯಾಊ. ೮-೧೧); ಗಾವಳಿಯನೆಬ್ಬಿಸದೆ ಬಿಡೆನು (ಅಂದಿಕಾ. ೩೩-೩). ೨. ದೊಂಬಿ; ರಂಪ; ಹಾವಳಿ: ಬಂದ ಗಾವಳಿಗೆ ಹೆದಱಿ ರಂಜಣೆಗೆಯೊಳಡಗಲು (ಹಡಕಾ. ೧೦-४೩); ದಿನಪನಿದಿರಲಿ ತಮದ ಗಾ[ಪಾಕಾಂ. ಹಾ]ವಳಿಯೇ (ನಳಚ. ४-८); ಕೊಲೆ ಪಾದರಂ ಪುಸಿ ನುಸುಳು ವೈರಮಟ್ಟುಳಿ ತೋಹು ಬೆದಱು ಬೆಜ್ಜರ ಕಷ್ಟ ನಿಷ್ಠುರಂ ಗಜಱು ಗಾವಳಿ ವಿವಾದ (ಜೈಮಿಭಾ. ೨-೩). ೩. ಗುಂಪು; ಸಮೂಹ: ಪುದಿದ ಕುರುಳ್ . . . ಪೂತ ಕಿಂಕಿರಾತದೋಳೆಱಗುತ್ತುಮಿರ್ಪಳಿಯ ಗಾವಳಿಯಂದದಿನೊಪ್ಪಿ ತೋಱುಗುಂ (ಶಾಂತಿಪು. ೧೦-೧೦೯); ಕರೆದರಿ ತಂದರು ಕವಿದ ಗಾವಳಿಯ ಗಜಬಜದ ಮೊಱಿಕಾಱರಂ (ಸಿದ್ಧರಾ. ೮-೭); ಸಂದಣಿಸಿ ಕುರುಭೂಮಿಯಲಿ ತಾ ಮುಂದಿ ಬಿಟ್ಟುದು ನಾಡ ಗಾವಳಿ ಬಂದುದಲ್ಲಿಗೆ (ಕುಮ್ಯಾಭೀ. ೧-೩); ಆಜಿರಂಗದೊಳು . . . ಗಾವಳಿಯನು ಬಂದು ಪೊಗು ವ ರಾಹುತರ್ (ಕುರಾಸಾಂ. ೧೦-೬೩). ४. ಕಷ್ಟ; ತೊಂದರೆ; ಹಿಂಸೆ: ದೇವರವರ ಮನಸಿನ ಚಿಂತೆಯ ಬಲು ಗಾವಳಿಯನು ಮಿಗೆ ಪಱಿದು ತೀವಿದ ಮುಂದವ ನಿಮಗೆ ಬೇಱದಿದ್ದೊಡೆ ನಾವಿದ್ದು ಫಲವೇನು (ಕಂಸವಿ. ೧೯-೧೧); ಕರುಣಾ ಸಮುದ್ರ ನೀನೆಮ್ಮ ಮುಖವಾಗು ದೇವಾಸುರರ ಬಿನ್ನಪದ ಗಾವಳಿಯ ನೊಂದು ಕ್ಷಣಂ ಸೈರಿಸು (ಭಕ್ತಿಸ. II, ೬-೩); ಗಾವಳಿಯ ಪರಿಹರಿಸು ಜಯಿಸೀ ಭೂವರರನುರೆ ಸಪ್ತವಾರದಲ್ಲಿ ವಸುಧೆಯನು (ಅಧ್ಯಾರಾ. ೧-೮-೧೨). ೫. ಠೀವಿ; ಗತ್ತು: ಆ ವನದೊಳ್ತುಂಬೆಲರೆಡೆಯಾಟದ ಗಾವಳಿ ಪೆಣ್ದುಂಬಿಗಳ ಗಾವರ (ಕುರಾಸಾಂ. ೩-೨೮); ಮುತ್ತಿನ ದಗಲೆ ವಜ್ರದ ಜೋಡು ಸಿರದಲಿ ಬಿತ್ತರವಹ ಸೀಸಕದ ಪುಸ್ತಂಗ ತೊಡರಾ ಗಾವಳಿಯಿಂದ ಭೂಪೋತ್ತಮ ನಡೆದನುಬ್ಬಿನಲಿ (ಕಂಸವಿ. ೧೩-೧೨); ಬೇಱಿವನಾರ್ಪು ಬೇಱಿವನ ಗಾವಳಿ . . . ಎಲ್ಲರಂ ಮಿಱುವ ಕೂರ್ತನಪ್ರತಿಮವೀರನಿವಂ ಚಿಕದೇವಭೂವರಂ (ಚಿಕವಿ. ೩-೮೦). **ಗಾವುಳಿ**: ೫. ಬಳಸಿ ತನ್ನೊಡನೊಯ್ಯನೊಯ್ಯನೆ ಬರ್ಪ ದೇವರದೊಂದು ಗಾವುಳಿಯನಿನ್ನಿರಿಮೆಂದು . . . ಧಾತ್ರಿಗೆ ವರ್ಪ ಗಂಗೆವೊಲೊಪ್ಪಿದಂ ಮುನಿಪುಂಗವಂ (ಶಂಪಭಾ. ೩-೭).

**ಗಾವಳಿಮಾಡು** = **ಗಲಾಟೆಯುನ್ನು ಎಬ್ಬಿಸು ; ಗಲಭೆಮಾಡು :** ಈ ಊರಿನವರೆಲ್ಲಾ ಬುದ್ಧಿಯುವರನ್ನ ಇಲ್ಲಿಂದ ಬಿಡಿಸಿಕೊಳ್ಳಬೇಕು–ಎನ್ನುತ **ಗಾವಳಿ**ಮಾಡುತ್ತ ಇದ್ದಾರೆ, ಮಾಸ್ವಾಮಿ (ವಿಗಡ. ೬೩-೦೩).
[ <ಸಂ. ಕಾಹಲ ]

**ಗಾವಳಿಗ** (ನಾ). ೧. **ಗಲಾಟೆಮಾಡುವವನು ; ಗದ್ದಲಮಾಡುವವನು ; ಗಲಭೆಕಾರ :** ನೀನೀ ಪರಿಯು ಗಾವಳಿಗಂಗೆ ಕೂರ್ತಡೆ [ಪಾಠಾಂ. ಕೌತುಕಗಳನು ಮಾಡಲು, ಕೌಳಿಕವುನುಜಗೋತಡೆ] ಮರಳುಗುಟ್ಟದೆ ಮಾಣ್ಬರೇ ಹೇಳೆಂದಳಾ ಸಕಳೆ (ಪ್ರಭುಲೀ. ೫-೬೫) ; ಕಲುಮರನ ತುಂಬುವೆನು ಹಿಂದಣ ಗಲಬೆಗಲಹದ ಗಾವಳಿಗ[ಪಾಠಾಂ. ಯ]ರೊಳು ಜುಳುಕಿನಾಹವದವನೆ ತಾನೆಂದುಬ್ಬಣವ ಜಡಿದ (ತೊರಠಾ. ೬-೩೫-೯). ೨. **ನಾಡಾಡಿ ; ಸಾಮಾನ್ಯನಾದವನು :** ದೇವರುಪಿ ನೀನೆಂದು ತಾಳಿ ದೆನು ಮತ್ತೊಬ್ಬ ಗಾವಳಿಗ ಯತಿಯಾಗಲವನ . . . ದಿಗ್ಬಲಿಯ ಚಲ್ಲಿ ಸುವೆನು (ನವಮೋ. ೨೬-೬೪). [ ಗಾವಳಿ + – ಗ$_2$ ]

**ಗಾವಳಿವಡೆ** (ಕ್ರಿ). **ಗುಂಪುಗೂಡು ; ಸಮೂಹವಾಗು :** ಸೋರ್ಕಿರುವರಗಿಳಿ ಗಾವಳಿವಡೆದು ಕಾಗೆಗಳೆಱಗುವ ಬೇವಿನ ಪಣ್ಣಾಸೆವೆತ್ತೆಱಗುವುದೇ (ಗೀತಗೋ. ೬೬-೫). [ ಗಾವಳಿ + ಪಡೆ$_1$ ]

**ಗಾವಳಿಸು** (ಕ್ರಿ). **ಗುಂಪುಗೂಡು :** ಉದ್ಭ್ರಮರಮುದ್ಭ್ರಮರಂಗಳ ಗಾವರಕ್ಕೆ ಗಾ[ ಪಾಠಾಂ. ಚಾ, ಜಾ, ಬಾ ]ವಳಿಸಿ ಭಡಾಳದೊಳ್ ಮೊರೆವುವು (ಅನಂಪು. ೧-೬೬ ; ಸೂಕ್ತಿಸು. ೪-೪೪ ನೋ) ; ತೊಲಗಿಂ ಗಾವಳಿಸಿ ಗಲಭೆಗೆಯ್ವೊಡೆ ಠಾವಲ್ತು (ಅಪ್ರತಿ. ೧೨೬-೨೨). [ ಗಾವಳಿ + – ಸು$_1$ ]

**ಗಾವಿತಿ** (ನಾ). **ಗೌಡಿತಿ :** ಕಾಳಬ್ಬೆ ಗಾವಿತಿಗೆ ಗುಜ್ಜಣಂ ಪುಟ್ಟಿ ತಂದೆಗೆ ಪದಿಮ್ಮಡಿಯಾಗಿ ಪೆಮ್ಮಾಡಿ ಗಾವುಣ್ಡನೆಂಬ ಪೆಸರಂ ಪಡೆದಂ (ಎಕ. VII, ಶಿವಮೊ. ೧೦-೩೨ ; 1085 ?).
[ ? ಇದು 'ಗೌಡಿತಿ' ಎಂಬುದರ ಅಪಲಿಖಿತ ]

**ಗಾವಿಲ, ಗಾವಿಳ** (ನಾ). ೧. **ಹಳ್ಳಿಯವನು ; ಗ್ರಾಮಪ್ರದೇಶದವನು :** ಗ್ರಾಮೀಣ–ಗಾವಿಲ (ಶಮದ. ೨೫೦ (೩) ಪ್ರಯೋ). ೨. **ಹಳ್ಳಿಯ ಅಧಿಕಾರಿ ; ಗ್ರಾಮಾಧಿಕಾರಿ ; ಪಟೇಲ ; ಗ್ರಾಮಣಿ :** . "ಗಾವಿಲನೆಂದು ಗ್ರಾಮಣಿ" (ಕಬ್ಬಿಕೈ. ೫೭) ; "ಗಾಂಪ ಗ್ರಾಮಾಧಿಪತಿಗಳೊಳು ಗಾವಿಲ ಶಬ್ದ" (ಶಬ್ದಮಂ. ೦೦೮). ೩. **ತಿಳಿವಳಿಕೆಯಿಲ್ಲದವನು ; ಹೆಡ್ಡ ; ದಡ್ಡ ; ಅನಾಗರಿಕ :** "ಎಗ್ಗನೆನೆ ಗಾವಿಲಂ" (ಚಕುನಿ. ೮೨) ; "ಗಾಂಪ ಗಾವಿಲ ಮೇಣೆಗ್ಗಂ ಹೆಡ್ಡನಕ್ಕು" (ಕವಿಕಂ. ೦೬೩) ; ತಲೆಸೂಡಿ ಮುನ್ನೆ ಕಜ್ಜದ ಫಲವಂ ಬೆಸಗೊಂಡುಮೆ[ೞ]ವನಲ್ಲಿಂ ಬೞಿಯಂ ತಲೆಯಂ ಕಿರಿಱುಸಿ ದಿವಸಮನಲಸದೆ ಬೆಸಗೊಳ್ವನಂತು ಗಾವಿಲನಕ್ಕುಂ (ಕವಿರಾ. ೩-೦೪೪) ; ಬೇವಿನಾರವೆಯನಿಟ್ಟು ಮಾವಿನಪಣ್ಣನಱಸುವ ಗಾವಿಲನುಮಂ (ಧರ್ಮಾಮೃ. ೬-೦೬೮) ; ಪೆಣ್ಣುಪೆಣ್ಣೆಂದೇತಕೆ ಬೀಳುಗಳೆವರು ಕಣ್ಣುಕಾಣದ ಗಾವಿಲರು (ಹರಿಬ. ೫-೭) ; ಗಾವಿಲನ ಧನವು ಘನವಾಗಿ ಬಯ್ಚಿಟ್ಟ ಠಾವಿಲೇ ಪೋಕು (ಸರ್ವಜ್ಞ. ೬೮೪). **ಗಾವಿಳ :** ೧. ಬಡವರಿಗೂ ಬಲ್ಲಿದರಿಗೂ ಹುಡುಗರಿಗೂ ಹೆಂಗಸರಿಗೂ ಗಾವಿಳನಿಗೂ ಗಂಡಸಿಗೂ . . . ಸಕಲರಿಗೂ ಸಮವಾದ ಸ್ವಾತಂತ್ರ್ಯ (ಹರಿಜ. ೬೫).
[ <ಪ್ರಾ. ಗಾಮಿಲ್ಲ./ಸಂ. ಗ್ರಾಮೀಣ ]

**ಗಾವಿಲತನ** (ನಾ). **ದಡ್ಡತನ ; ಹೆಡ್ಡತನ :** ಗಾವಿಲತನದಿಂ ಪೊಕ್ಕೊಡೆ ಸಾವಪ್ಪುದು ಪುಸಿಯೆ ಬರ್ದುಕಿದೆಂ ಪುಣ್ಯದಿಂ (ಧರ್ಮಾಮೃ. ೬-೫೦) ; ವನಜಸಂಭವ ತನ್ನ ಗಾವಿಲತನವ ನೋಡದೆ ನೀವು ನಿಮ್ಮಯ ಘನತೆಯನು ಮೊಱೆದೀಗ ಕೊಡುವುದು (ಕುಮಾ.ಆ. ೦೧೪. ಪರಿ. ೩೩೯) ; ವರಶುಭವಿಲ್ಲದ ವಧುಗಳ ಗರುವಿಕೆಯಂ ಪೇಳ್ವರೇಕೆ ಗಾವಿಲತನದಿಂ (ಹಮ್ಮಿರ. ೨-೩೮).
[ ಗಾವಿಲ + – ತನ ]

**ಗಾವಿಲತ್ವ** (ನಾ). = ಗಾವಿಲತನ : ದೇವ ಯಿದು ದಲು ಕಾರಣಂ ನಿನಗಾವ ತೆಱದೊಳಗಂಜುವೆಂ ಮುಂ ಗಾವಿಲತ್ವದೊಳೆಂದು ಪಡೆದಾ ಲಾಭವದೆ ಸಾಲ್ಗುಂ (ಸಾನಂಚ. ೭-೬೩). [ < ಸಂ. ಗ್ರಾಮೀಣತ್ವ ]

**ಗಾವಿಲನುಡಿ** (ನಾ). **ದಡ್ಡತನದ ಮಾತು ; ಮೂಢತನದ ನುಡಿ :** ದೈವ ವೆಂದವನನೀಶಕೃತವೇದಂ ಸ್ವಯಂಭುವೆಂಬಾ ಗಾವಿಲನುಡಿಯು (ಪದ್ಮರಾ. ೧೦-೦೯೩). [ ಗಾವಿಲ + ನುಡಿ$_2$ ]

**ಗಾವಿಲಿ** (ನಾ). **ಗಾವಿಲತನವನ್ನು ಹೊಂದಿರುವವಳು ; ದಡ್ಡಳಾದ ಹೆಂಗಸು ; ಹೆಡ್ಡಿ :** ಕಂತು ಬಿಲ್ಲಿಗೆಯ ಬೞಿಕ್ಕೆ ಕೈದೆಗೆವ ಗಾವಿಲಿ [ ಪಾಠಾಂ. ಲೆ ]ಗೇವುದೋ ಬೇಟದಚ್ಚಿಗಂ (ಲೀಲಾವ. ೧೪-೩೭).
[ ಗಾವಿಲ + – ಇ$_2$ ]

**ಗಾವಿಲಿಕೆ** (ನಾ). = ಗಾವಿಲತನ : ಪೆಱರ ವಿಭವಕ್ಕೆ ಬಯಸುವ ಮಱುಗುವ ಗಾವಿಲಿಕೆಯೇಕೆ (ಅಜಿಪು. ೧೦-೪೨) ; ಹೋಮಮಂ ಮಾಡುವ ಬ್ರಾಹ್ಮಣಂ ನೊಣವು ಬೆನ್ನನೂಱಿದೊಡೆ ಸೈರಿಸಲಾಱದೆ ಬೆನ್ನಂ ಪೊಯ್ದುಕೊಳ್ವುದುಂ ಕೆಲದೊಳಿರ್ದವರೆಲ್ಲಂ ಕೊಡನ ತುಪ್ಪದೊಳ್ ಕೈಯನದ್ದಿಕೊಂಡು ತಮ್ಮ ಬೆನ್ನಳಂ ಪೊಯ್ದುಕೊಂಡರೆಂಬ ಗಾವಿಲಿಕೆಯಂ ಮಾಡಿ (ಧರ್ಮಾಮೃ. ೧೦-೫೨). [ ಗಾವಿಲ + – ಇಕೆ ]

**ಗಾವಿಲೆ** (ನಾ). = ಗಾವಿಲಿ : ಕಂತು ಬಿಲ್ಲಿಗೆಯ ಬೞಿಕ್ಕೆ ಕೈದೆಗೆವ ಗಾವಿಲೆ [ ಪಾಠಾಂ. ಲಿ ] ಗೇವುದೋ ಬೇಟದಚ್ಚಿಗಂ (ಲೀಲಾವ. ೧೪-೩೭).
[ ಗಾವಿಲ + – ಎ$_2$ ]

**ಗಾವಿಳ** 'ಗಾವಿಲ' ನೋ.

**ಗಾವು** (ನಾ). **ಗ್ರಾಮದೇವತೆ ಮೊದಲಾದ ದೇವರುಗಳ ಮುಂದೆ ಪೂಜಾರಿಯು ಬಲಿಗಾಗಿ ಕುರಿಯನ್ನು ಹಲ್ಲಿನಿಂದ ಕಚ್ಚಿ ಕೊಲ್ಲುವುದು.** 'ಗಾವುಗುೞಿ', 'ಗಾವುಮರಿ' ಪರಾ.

**ಗಾವಿನಮರಿ**=**ಗ್ರಾಮದೇವತೆಯ ಮುಂದೆ ಪೂಜಾರಿ ಹಲ್ಲಿನಿಂದ ಕಚ್ಚಿ ಕೊಲ್ಲುವ ಕುರಿ :** ಗಾವಿನಮರಿ ಅರಚಿಕೊಳ್ಳುವುದನ್ನು ಕೇಳಲಾಗುವುದಿಲ್ಲ (ರೂಢಿ). **ಗಾವುಕಟ್ಟು** = **ಗ್ರಾಮದೇವತೆ ಮೊದಲಾದ ಕ್ಷುದ್ರಶಕ್ತಿಗಳಿಗಾಗಿ ಬಾಯಿಯಲ್ಲಿ ಕಚ್ಚಿ ಕುರಿಯನ್ನು ಬಲಿಕೊಡು :** ಇವನು ಕಗ್ಗಲಿಯಮ್ಮನ ಪೂಜಾರಿ. ಊರ ದೊಡ್ಡ ಹಬ್ಬದಲ್ಲಿ ಇವನು ಗಾವು ಕಟ್ಟುತ್ತಾನೆ (ನನ್ನೂರು. ೧೦) ; ಶಕ್ತಿದೇವತೆಗಳ ಆರಾಧನೆಯಲ್ಲಿ ಆವೇಶಗೊಂಡ ಪೂಜಾರಿ ಕುರಿಯ ಕುತ್ತಿಗೆಯನ್ನು ಕಚ್ಚಿ ರಕ್ತಹೀರುವುದು. ಇಡೀ ಆಚರಣೆಗೆ 'ಗಾವುಕಟ್ಟುವುದು' ಎನ್ನುತ್ತಾರೆ (ನನ್ನೂರು. ಟಿಪ್ಪಣಿ). **ಗಾವುಸಿಗಿ** = **ಗಾವಿನ ಮರಿಯನ್ನು ಹಲ್ಲಿನಿಂದ ಕಚ್ಚಿ ಸಿಗಿ, – ಸೀಳು:** ಗಾವುಸಿಗಿದಾದ ಮೇಲೆ ಎಲ್ಲರೂ ದೇವರನ್ನು ಹೊರಡಿಸಿಕೊಂಡು ಊರಿಗೆ ಬಂದು ಗುಡಿದುಂಬಿಸುತ್ತಾರೆ (ನನ್ನೂರು. ೬೫).
[ ದೇಶ ತಮಿ. ಕಾವು; ತೆಲು. ಗಾವು ]

**ಗಾವುಂಡ** 'ಗಾಮುಂಡ' ನೋ.

**ಗಾವುಂಡಪಂತ** (ನಾ). **ಗೌಡನ ಅಧಿಕಾರ,—ಪದವಿ :** ಶ್ರೀಕಲಿವಿಟ್ಟರಸರ ಬೆಸದೊಳೆತೀತನಾದೊಡಾತನ ಗಾವುಣ್ಡಿಗರಸರ್ನಾಟ್ಗಾವುಣ್ಡಾಪಂತಮನಿತ್ತೊಡೆ ಜಕ್ಕಿಯಬ್ಬೆ ನಾಟ್ಗಾವುಣ್ಡಗೆಯ್ಯುತ್ತಿರೆ (ಎಕ. VII, ಶಿಕಾರಿ, ೨೦೯-೦೦ ; 918). [ ಗಾವುಂಡ (<ಗಾಮುಂಡ) + ಪಂತ$_2$ ]

**ಗಾವುಂಡವಸದಿ** (ನಾ). **ಒಂದು ಬಸದಿಯ ಹೆಸರು :** ವಾಯುವ್ಯದ ಗೋಂಟಿನಲ್ ಸೋಭನೇಶ್ವರದ ಗಾವುಣ್ಡವಸದಿಯ [ಕೆಯ್ಯುಮೋ]ರೆಯುಲು (ಸೌಇಇ. XX, ೫೫-೫೩ ; 1082).
[ ಗಾವುಂಡ (<ಗಾಮುಂಡ) + ಬಸದಿ ]

**ಗಾವುಂಡವೃತ್ತಿ** (ನಾ). ೧. **ಗೌಡಿಕೆಯ ವೃತ್ತಿ, – ಕೆಲಸ :** ಕೀಳೂರು ಅೞಿಯೂರು . . . ಹೆನ್ನವುರದ ಗಾವುಣ್ಡವೃತ್ತಿಯುಮಂ . . . ಇತ್ತು

(ಎಕ. VII, ಶಿವಮೊ. ೧೧–೫೦ ; 1086 ?). ೨. ಗೌಡನಿಗೆ ಬಿಟ್ಟಿರುವ ವೃತ್ತಿ,–ಉಂಬಳಿ ; ಗ್ರಾಮಾಧಿಕಾರ ನಿರ್ವಹಣೆಗಾಗಿ ಬಿಟ್ಟಿರುವ ಜಮೀನು. [ ಗಾವುಂಡ (<ಗಾಮುಂಡ) + ವೃತ್ತಿ₂ ]

**ಗಾವುಂಡಸುಂಕ** (ನಾ). **ತೆರಿಗೆಯಲ್ಲಿ ಗ್ರಾಮಾಧಿಪತಿಯ ಪಾಲು** : ಸಿರಿಯಮ್ಮಗಾವುಣ್ಡಂ ಭೋಗೇಶ್ವರ ದೇವರ್ಗ್ಗೆ ತೋಂಟದಲಾದ ಗಾವುಣ್ಡ ಸುಂಕಮಂ ಬಿಟ್ಟಂ (ಎಕ. XI, ಚಿತ್ರದು. ೭೮-೩೩ ; 1060) ; ಗಾವುಂಡನಿಗೂ . . . ತೆರಿಗೆಯ ಒಂದು ಭಾಗವನ್ನು ‘ **ಗಾವುಂಡಸುಂಕ** ’ ವೆಂದು ಬಿಟ್ಟು ಕೊಡುತ್ತಿದ್ದರು (ಕಶಾಅ. ೪೩೪). [ ಗಾವುಂಡ (<ಗಾಮುಂಡ)+ಸುಂಕ ]

**ಗಾವುಂಡಸ್ವಾಮಿ** ‘ ಗಾಮುಂಡಸಾಮಿ ’ ನೋ.

**ಗಾವುಂಡಿ, ಗವುಂಡಿ, ಗವುಡಿ₁, ಗೌಂಡಿ₁, ಗೌಡಿ₁, ಗೌವುಂಡಿ** (ನಾ). ೧. ಗಾವುಂಡನ ಹೆಂಡತಿ ; ಗ್ರಾಮಾಧಿಕಾರಿಯ ಪತ್ನಿ ; ಗೌಡಿತಿ : ಆಪೂರ ಗಾವುಂಡಂ ಜಿನವಾದಿಕನೆಂಬೊನಾತನ ಗಾವುಂಡಿ ಜಿನಮತಿಯೆಂಬೊಳ್ (ವಡ್ಡಾರಾ. ೧೧೧-೨೪) ; ಆತನ ಗಾವುಣ್ಡಿಗರಸನ್ನಾರ್ಟೌಗ್ವುಣ್ಡಪಂತಮನಿತ್ತೊಡೆ (ಎಕ. VII, ಶಿಕಾರಿ. ೨೧೯–೧೧ ; 918) ; ಅವರ ಶ್ರಾವಕಿ ಚನ್ದಿಯಬ್ಬೆ **ಗಾವುಣ್ಡಿ** (ಎಕ. IX, ಕೊಡಗು. ೩೧-೧೧ ; ಸು. 1050 ?) ; ಕಾಮವೃಷ್ಟಿಯೆಂಬ ಗಾವುಂಡಂಗಂ ಇಷ್ಟದಾನಿಯೆಂಬ ಗಾವುಂಡಿಗಂ ಅಕೃತಪುಣ್ಯನೆಂಬ ಮಗಂ ಪುಟ್ಟಲೊಡಂ(ಜೀವಸಂ. ೨೦೧-೩೯ ವ). **ಗವುಂಡಿ:** ೧. ನಣಬ್ಬೆ ಗವುಣ್ಡಿಯ ಮಗ ಅಮ್ಮಣ್ಣ ಗವುಣ್ಡ ತನ್ನೂರೞಿವ ಕಣ್ಡು (ಎಕ. VIII, ಸೊರಬ. ೨೩೪–೯ ; 939). **ಗವುಡಿ₁** : ೧. ಸೋಮನಹಳ್ಳಿಯ ಮಾಯಿಂದೆಯ ಬಮ್ಮಗಾವುಂಣ್ಡಗಂ ಮಾದಿಗವುಡಿಗಂ ಪುಟ್ಟಿದ ಗೋತ್ರಪವಿತ್ರ ಸಾಮನ್ತ ಬೀಳೆಯನಾಯಕ (ಎಕ. VI, ಕಡೂರು. ೧೧೪–೬೨ ; 1141 ?) ; ಸೋವಗೌವುಂಡಂಗಂ ನಾಗವ್ವೆಗವುಡಿಗಂ ಪುಟ್ಟಿದ ಪುತ್ರರು (ಎಕ. VI, ಕಡೂರು. ೩೦–೪೦ ; 1170). ೨. ಊಳಿಗದವಳಂ; ಸೇವಕಿ ; **ತೊತ್ತು** ; ದಾಸಿ : ಅವನು ಅವಳ ಕೂಡ ೧೮ ವರ್ಷ ಸಂಸಾರ ಮಾಡಿದ ಮೇಲೆ, ಅವಳ ಗವುಡಿಯರಲ್ಲಿ ಒಬ್ಬಳಾದ ಆನ್-ಬುಲೀನಳೆಂಬವಳಿಗೆ ಮನಸೋತನು (ಇಂಗ್ಲಂಡ. ೧೧೩) ; ಗವುಡಿ ಹಾಡಿಗೆ ತವುಡೇ ತ್ಯಾಗ (ಗಾದೆ). **ಗೌಂಡಿ₁** : ೧. ಕೇತಗವುಣ್ಡಗಂ ಎಱಕಲುವೆಗೌಣ್ಡಿಗಂ ಸುಪುತ್ರಃ ಕುಲದೀಪಕಂ ಪುಟ್ಟಿ (ಎಕ. VI, ತರೀಕೆ. ೫೭–೨೩ ; 1097 ?) ; ದೇಕಬ್ಬೆ ಗೌಣ್ಡಿಯುಂ ಕೊಸಿಗವಳ್ಳಿಯ (ಬೊಂಕಶಾ. ೧೯೪೦, ಸಿರಸಿ. ೬೨–೧೨ ; ?). **ಗೌಡಿ₁** : ೧. ಬೊಮ್ಮಗೌಡಂಗಂ ಮಸಣಗೌಡಿಗಂ ಪುಟ್ಟಿದ ಸು[ಪು]ತ್ರರು (ಎಕ. XII, ಚಿಕ್ಕನಾ. ೦೩–೨೯ ; 1181). ೨. ನನ್ನಂತ ಗೌಡಿಯರು ನಿನ್ನ ಪಾದಪದ್ಮಸಮೀಪದೊಳ್ ಬಿದ್ದಿರುವರು (ಸೌಗಂಧಿ. ೩೪೭–೫) ; ದುಶ್ಯಾಸನನು ಕುರುಳನ್ನು ಹಿಡಿದು ಸಭಾಮಧ್ಯಕ್ಕೆ ಎಳೆದುಕೊಂಡು ಬಂದು ಗೌಡಿಯಂತೆ ಎಣಿಸಿ ಅಪಮಾನಪಡಿಸಲು (ಕೃಪಾಉ. ೦೩೭) ; ಈ ಮಾತು ಗೌಡಿಯಿಂದ ಗೌಡಿಗೆ ಹೋಗಿ ಆ ಗೌಡಿಯಿಂದ ರಾಣಿಗೆ ಮುಟ್ಟಿ (ಸಣ್ಣಕ. VIII, ೫೩) ; ಉಪಚಾರಕ್ಕೂ ಕೆಲಸಕ್ಕೂ ಇಬ್ಬರು ಗೌಡಿಯರು ಬಂದರು (ಹೇಟೀಮಾ. ೧೮). **ಗೌವುಂಡಿ** : ೧. ಮಾಚಗೌವುಣ್ಡನಾತನ ಮನೋವಲ್ಲಭೆ ಮಾಚಗೌವುಣ್ಡಿಯ ಮಗಂ ಕಾಳಗಾವುಣ್ಡ (ಎಕ. V, ಬೇಲೂರು. ೨೦೨–೫ ; 1138). [ ಗಾವುಂಡ ( <ಗಾವುಂಡ) + – ಇ₂ ]

**ಗಾವುಂಡಿಕೆ, ಗಳುಡಿಕೆ, ಗವುಂಡಿಕೆ, ಗವುಡಿಕೆ, ಗಾವುಂಡಿಗೆ, ಗೌಡಿಕೆ, ಗೌವುಂಡಿಕೆ** (ನಾ). ಗಾವುಂಡನ ಕೆಲಸ ; ಗ್ರಾಮಾಧಿಪತ್ಯ : ರಾಜಧಾನಿಯಣ್ಣಿಗೆಱೆಯ × × × ರಿಯ ಗಾವುಣ್ಡಿಕೆ × × × ಡೆಯರೆನಿಸಿ (ಬೊಂಕಶಾ. ೧೯೨೯, ನವಲಗುಂದ. ೨೦೭–೩೯ ; 1172). **ಗಳುಡಿಕೆ** : ಹಾನಗಲ ಲಿಂಗೇಗಳುಡರಿಗೆ ಹಾ × × × ಟ್ಟ ಗಳುಡಿಕೆ (ಎಕ. IX, ಕೊಡಗು. ೬೩–೬ ; ?). **ಗವುಂಡಿಕೆ** : ಹಲವುಕಾಲಂ ಗವುಂಡಿಕೆಯಂ ಮಾಡುತ್ತಿರ್ದಡವರ (ಬೊಂಕಶಾ. ೧೯೪೦, ಸಿರಸಿ. ೬೨–೧೩ ; ?). **ಗವುಡಿಕೆ** : ಆ ಬಲ್ಲಗವುಡ ಕಾಮಗವುಡ ಬೊಮ್ಮಗವುಡಂಗಳ ಗವುಡಿಕೆಯ ಪ್ರಸಿದ್ಧ ಸೀಮಾಸಮನ್ವಿತವಹ ಎಸಗೂರ ಕ್ಷೇತ್ರ (ಎಕ. XI, ಚಿತ್ರದು. ೩೨–೪೦ ; 1286). **ಗಾವುಂಡಿಗೆ** : ‘ ಗಾವುಂಡಿಗೆನಿಲ್ ’ ಪರಾ. **ಗೌಡಿಕೆ** : ಚಂದಿಮಯ್ಯಂ ಕುರುಂಳಿಯ ತಂಮ ಗೌಡಿಕೆಯಂ ಕಲಿಯರ ಮಲ್ಲಿಸೆಟ್ಟಿ ಮಾಱಿಂ ಕೊಂಡು (ಎಕ. VII, ಶಿವಮೊ. ೭೪–೯೭ ; 1112 ?). ; ಶ್ರೀ ಕೇಶವದೇವರಿಗೆ ಗರ್ದ್ದೆ ಮತ್ತರು ಒಂದು ಗೌಡಿಕೆಯನುಳಿಹಿ (ಎಕ. VII, ಶಿಕಾರಿ. ೧೨೩–೭೫ ; 1159) ; ಮಂಚವಿರನ ಗೌಡಿಕೆಯಲು ಮಂಡಳಿಕಚಾರಿಗೆ ಕೊಟ್ಟ ಕೊಡಂಗೆ (ಮ್ಯಆರಿ. ೧೯೨೯ , ೪೦–೨೪ ; 1191) ; ಯಾತರ ಗೌಡಿಕೆ ಇದು ಮುಟ್ಟಾಳ ಗೌಡಿಕೆ (ಸಣ್ಣಕ. VI, ೬೨). **ಗೌವುಂಡಿಕೆ** : ತಂಮಪ್ಪ ಗೌಂಡರಿಗೆ ಗೌವುಂಡಿಕೆಯ ದಂಡಿಗೆ ಉಂಬಳಿ ಸರ್ವಮಾನ್ಯವಾಗಿ ಕೊಟ್ಟೆವು (ಎಕ. X, ಶಿಡ್ಲಘ. ೦೫–೦೭ ; 1528).

[ ಗಾವುಂಡ (<ಗಾಮುಂಡ) + – ಇಕೆ ]

**ಗಾವುಂಡಿಗೆ** ‘ ಗಾವುಂಡಿಕೆ ’ ನೋ.

**ಗಾವುಂಡಿಗೆನಿಲ್** (ಕ್ರಿ). ಗೌಡನ ವೃತ್ತಿಯನ್ನು ವಹಿಸಿಕೊಳ್ಳು ; **ಗೌಡಿಕೆ**ಯನ್ನು **ಹೊಂದು** : ಆತನಿಂ ಬಳಿಕ ಗಾವುಣ್ಡಿಗೆನಿನ್ದನಾಹವಶೌಣ್ಡಂ ತೊಣ್ಡಂ (ಸೌಇಇ. XI–I, ೪೫–೧೩ ; ‘80).

[ ಗಾವುಂಡಿಗೆ (<ಗಾವುಂಡಿಕೆ) + ನಿಲ್ ]

**ಗಾವುಂಡಿತಿ, ಗವುಡಿತಿ, ಗೌಡಿತಿ** (ನಾ).=**ಗಾವುಂಡಿ** : ದೇವಿಲನೆಂಬ ಗಾವುಂಡಂಗಂ ಸುದತಿಯೆಂಬ ಗಾವುಂಡಿತಿಗಂ ಧನಶ್ರೀಯೆಂಬ ಮಗಳಾಗಿ ನೀನಾಡುವೆಡೆಯೊಳ್ (ಚಾವುಂಪು. ೨೭–೦೫). **ಗವುಡಿತಿ** : (+). **ಗೌಡಿತಿ** : ಗೌಡಿತಿಯು ಒಳಗಿಂದ ಬಂದವಳೆ (ಹುಟ್ಟಿಹ. ೦೩೯).

[ ಗಾವುಂಡ ( < ಗಾಮುಂಡ) + – ಇತಿ₁ ( < – ಇತ್ತಿ) ]

**ಗಾವುಂಡು₁** ‘ ಗಾಮುಂಡ ’ ನೋ.

**ಗಾವುಂಡು₂** ‘ ಗಾಮುಂಡು₂ ’ ನೋ.

**ಗಾವುಂಡುಗೆಯ್** ‘ ಗಾಮುಂಡಂಗೆಯ್ ’ ನೋ.

**ಗಾವುಂಡುತನ** (ನಾ).=**ಗಾವುಂಡಿಕೆ** : ಕರಿವಿಡಿ ಹಿರೂರಲು **ಗಾವುಂಡು**ತನಂಗೆಯ್ಯುತ್ತಮಿರೆ (ಎಕ. XII, ತಿಪಟೂ. ೮೧–೭ ; 1114).

[ ಗಾವುಂಡು₂ (<ಗಾಮುಂಡು₂) + – ತನ ]

**ಗಾವುಗುರಿ** ‘ ಗಾವುಗುಱಿ ’ ನೋ.

**ಗಾವುಗುಱಿ, ಗಾವುಗುರಿ** (ನಾ). **ಗ್ರಾಮದೇವತೆಯ ಬಲಿಗಾಗಿ ಮೀಸಲಾಗಿರುವ ಕುರಿ** ; **ಗಾವುಕಟ್ಟಲು ಸಿದ್ಧವಾದ ಕುರಿ** : ಪಿಡಿವರು ದಿಗ್ಗಜಗಳ ಗಾವ[ವು]ಗುಱಿಯಾಗೆ (ಮೋಹತ. ೩೨–೪). **ಗಾವುಗುರಿ** : ವೈರಿಯನ್ನು ಕಂಡುಹಿಡಿದು ಅರೆದರೆದು ಕುಡಿದು ಬಿಡುತ್ತೇನೆ, ಗಾವುಗುರಿ ಹಾಯುತ್ತೇನೆ . . . ಅನಂತರ ಈ ಘಟಕ್ಕೇನಾದರೇನಂತೆ (ತುಂಗಭ. ೫೫).

[ ಗಾವು + ಕುಱಿ₃ ]

**ಗಾವುದ, ಗಾವುದು** (ನಾ). **ದೂರವನ್ನು ಅಳೆಯುವ ಒಂದು ಅಳತೆ** ; ಎರಡು ಹರಿದಾರಿ ; ಸುಮಾರು ಆರುಮೈಲಿ : ಮುನ್ದೆ ನಿನ್ದು ಕೂಱೂ ತೊಱಿದು ಮೂವತ್ತು ಗಾವುದ ××× ದೆವಸದೊಳೆಯ್ದಿ (ಸೌಇಇ. XI–I, ೧೧-೧೭ ; 865); ದೇಶದೇಶದ ಪತ್ತೆಂಟು ಗಾವುದದ ಮಾಹೇಶ್ವರರ್ ಕರುಣಿಸಿ ಬಂದು ಮುಂದೆ ನೆರೆದಿರೆ (ಬಸರ. ೬–೪೧) ; ಆ ಸ್ಥಳದ ನಾಲ್ಕೈದು ಗಾವುದದಳತೆಯೊಳಗಾರುಮಂ ಪೊರ್ದಲೀಯದೆ (ಪದ್ಮರಾ. ೩-೦೬) ; ವರ ಸುವರ್ಣಸುರತ್ನ ಸರ್ವಾಭರಣಭವನಂಗಳಿಗೆ ಗಾವುದವೆರಡೞಲಿ ಹವಣಿಸಿ ದನಖಿಳಾಂಬರ ಸುವಸ್ತುಗಳ (ತೊರರಾ. ೦–೭-೫) ; ಸಲೆ ಮೂಱು ಗಾವುದ ಪರಿಯಂತ ರಿಪುಗಳ ಬಲವ ಮುಱಿದು ಬೆನ್ನಟ್ಟಿ (ಕಂನವಿ. ೦೭–೫೯). **ಗಾವುದು** : ನರರಥಂ ತೂಳ್ದಾ ಕುರುಕ್ಷೇತ್ರದಿಂ ಪಡುವಣ್ಗಾವುದು ಪೋಗೆ ಪೋಗಡಿಸುವೆಂ (ಪಂಪಭಾ. ೧೧–೨೫). [ <ಸಂ. ಗವ್ಯೂತ ]

**ಗಾವುದಳವಿ** (ನಾ). ಒಂದು ಗಾವುದದ ಅಳತೆ; ಗಾವುದ ಪ್ರಮಾಣ; ಸುಮಾರಾಂ ಆರುಂಮೈಲಿ: ಕಡುಕೋಪದಿಂದೆ ಪೊಱಮಟ್ಟು ದಡದಡ ಸುತಂ ಗಾವುದಳವಿಯು ಬಟ್ಟೆಯಿಂದುರ್ಗ ನಡೆತಂದು (ಬಸರ. ೧೧-೫೯). [ಗಾವುದ + ಅಳವಿ]

**ಗಾವುದಿ** ‘ಗಾವದಿ’ ನೋ.

**ಗಾವುದು** ‘ಗಾವುದ’ ನೋ.

**ಗಾವುಮರಿ** (ನಾ). ಗ್ರಾಮದೇವತೆಯ ಬಲಿಗಾಗಿ ಮೀಸಲಾಗಿರುವ ಕುರಿಮರಿ: ಗಾವಿಗೆ ಅರ್ಪಿಸುವ ಮರಿಯನ್ನು ‘ಗಾವುಮರಿ’ ಎನ್ನುತ್ತಾರೆ (ನನ್ನೂರು. ಟಿಪ್ಪಣಿ). [ಗಾವು + ಮರಿ (<ಮಱಿ)]

**ಗಾವುಳಿ** ‘ಗಾವಳಿ’ ನೋ.

**ಗಾವೆ** ‘ಗಾವು’ ನೋ.

**ಗಾಸಡಿ, ಗಾಸಿಡಿ** (ನಾ). ಗಂಟು; ಮೂಟೆ; ಗದಡಿ: ಗಾಸಡಿಯ (ಗಂಟುಗಳ)ಮೇಲೆ ಧಾರಣೆ ಇರತಕ್ಕ ಜಿನಸುಗಳು (ಮುಂಬಪ್ರಾ. ೧೩೪). **ಗಾಸಿಡಿ:** ತಂಬಾಕಾ ಗಾಸಿಡಿಯಲ್ಲಿ ಮುಂಬಯಿ ೧೪ ಮಣ ತಂಬಾಕ ಇರುತ್ತದೆ (ಮುಂಬಪ್ರಾ. ೧೩೪). [←ಮರಾ. ಗಾಂಸಡೀ]

**ಗಾಸಿ$_1$, ಘಾಸಿ$_1$** (ನಾ). ತೊಂದರೆ; ಹಿಂಸೆ; ಆಯಾಸ: ಸೋನೆಗಳ ಜಿನುಂಗಿಗಂ ಬಿಱುಗಾಳಿಯ ಗಾಸಿಗಂ . . . ಕೋಡದೆ (ಗಿರಿಕ. ೯-೫೮ ವ); ಮಳೆಯುಂ ಚಳಿಯುಂ ಗಾಸಿ ಗಾಳಿ ನಿಲಿಸವೆಮ್ಮನು (ವಿಸೀಗೀ. ೮೩-೫); ಲಲಿತೆಯು ವಿಕಟಪರಿಸ್ಥಿತಿಯಲ್ಲಿ ಸಿಕ್ಕಿ ಗಾಸಿಯಾಗುತ್ತಿದ್ದಳು (ಪರಿಜೀ. ೧೬); ಈ ಮೊನೆಯು ತಿವಿತದಿಂದ ಶಂಭುರಾಯರು ಗಾಸಿಯಾದರು (ಅನ್ನ. ೪೧). **ಘಾಸಿ$_1$:** ಅಂತು ಬಟ್ಟೆವಯಣದಾಯಾಸದಿಂ ಘಾಸಿಯಾಗಿಯುಂ (ಪಾರ್ಶ್ವಪು. ೯-೨೮ ವ); ಇಂದಿಂದಿರಂಗಳ ಘಾಸಿಯಿಂ ಸ್ಯಂದಮಾನ ಮಕರಂದ ಬಿಂದು ಸಂದೋಹದ ತಂದಲಂ ಸುರಿವುದಱಿಂ (ಬಾಧಪು. ೧-೧೦೯ ವ); ಅಹಿತನ ಘಾಸಿಯಿಂದನಿಲಜನನುಗಿದನು ಬಗಿದು ರಿಪುಶರವ (ಕುಮ್ಯಾಕ. ೨೦-೨೫).

**ಗಾಸಿಮಾಡು, ಘಾಸಿಮಾಡು** = ತೊಂದರೆಗೊಳಿಸು; ಹಿಂಸಿಸು; ಕ್ಲೇಶಕ್ಕೆ ಗುರಿಮಾಡು; ಆಯಾಸಪಡಿಸು: ಕುಲವಳಿಯ ದೇಶವ ಗಾಸಿ ಮಾಡುವುದೈಸೆ (ಸಂಭಪ. ೦೫-೫೯); ಗಾಸಿಮಾಡುವನು ಮಕ್ಕಳನೇನು ಕೆಡಿಕನೊ ಕೂಸಾಟದೊಳು ಕೇಶವನು (ನೇಮಿಸಂ. ೦೫-೧೦೦); ಬಡಕಲಾಗಿ ಸೊರಗಿಹೋದ ಗೋಪಿಯ ದೇಹ ಆಕೆಯನ್ನು ಗಾಸಿಮಾಡಿತು (ಈಜಸೂ. ೦೦೪); ಘಾಸಿಮಾಡುವ ದೇಹ ಹೇಸಿಕೆಗೆ ನಾನಾಱೆ (ದೀಕ್ಷಾದೋ. ೮೫-೦೩); ವೈರಿಬಲವನು ಘಾಸಿಮಾಡಿದರೊಗ್ಗಿನಲಿ ಹಮ್ಮೀರ ರಾವುತರು (ಕುಮ್ಯಾಭೀ. ೯-೬೨). **ಗಾಸಿಯಾಗು, ಘಾಸಿಯಾಗು**=ತೊಂದರೆಗೊಳ್ಳು; ಕಷ್ಟಪಡು; ಆಯಾಸಪಡು; ಬಳಲು: ಕಿಡಿ ಸೂಸಿ ಸುಯ್ದು ಗಾಸಿಯಾಗಿ ಮೆದೆಗೆಡೆದು ಮದವಳಿದಿರ್ದ ಮಾತಂಗವ್ರಾತದಿಂ (ಗಿರಿಕ. ೯-೨೭ ವ); ಭೂಸುರರು ಚೋರರು ಗಳಿಂದವೆ ಗಾಸಿಯಾಗಿ (ಕುಮ್ಯಾಸ. ಒರಿ೮. ೦೫-೦೪೧); ಈಸು ದಿನಮೆನ್ನೊಡನೆ ಕಾಳಿಗದೊಳಿದಿರಾಗಿ ಗಾಸಿಯಾಗದ ದೈತ್ಯರಿಲ್ಲ (ಜೈಬಪು. ೨೫-೦೪); ಆಸೆಯಿಂದ ಘಾಸಿಯಾಗಲೇಕಯ್ಯಾ (ಅವಜಂ. ೦೦೬-೪೮೪); ಅಭಿಮನ್ಯುವೀ ದುಶ್ಶಾಸನನ ಮಗನಿಂದ ರಣದಲಿ ಘಾಸಿಯಾದನು (ಕುಮ್ಯಾದ್ರೋ. ೮-೫೦); ಅನುಜರು ಘಾಸಿಯಾದರು ಹಿಂದೆ ಭೀಷ್ಮಾದಿಗಳ ಬವರದಲಿ (ಕುಮ್ಯಾಶ. ೦-೬೨). **ಗಾಸಿವೀಸಿ** = ಗಾಸಿ$_1$; ನೀಲವ್ವನ ಒಡಲು ಕುದಿದಿದ್ದಿತು; ಮನಸ್ಸು ‘ಗಾಸಿವೀಸಿ’ ಯಾಯಿತು (ಬರಹಾ. ೧೧೪); ಇಬ್ಬರ ಕೈಯಲ್ಲಿ ಸಿಕ್ಕು ಗಾಸಿವೀಸಿಯಾದಂತೆ (ಸಾಹಿತ್ಯಾಂ. ೪೬). [ದೇಶ್ಯ ತಮಿ. ಕಾಚಿ; ತುಳು. ತೆಲು. ಗಾಸಿ]

**ಗಾಸಿ$_2$, ಗಾಸೆ$_1$** (ನಾ). ೧. ಕುದುರೆಯ ಜೀನಿನ ಮೇಲೆ ಅಲಂಕಾರಕ್ಕಾಗಿ ಹಾಕುವ ವಸ್ತ್ರ: (ಶಿ). **ಗಾಸೆ$_1$:** ೨. ತೆಳುವಾದ ಹೊದಿಕೆ: ರೇಶಿಮೆಯ ಮೆತ್ತಗಾದ ಗಾಸೆಗಳನ್ನು ಹಾಸಿ (ಮುಂಜುಳ. ೦೮೮). [←ಅರ. ಗಾಶಿಯಾ; ಹಿಂ. ಗಾಸಿಯಾ; ಮರಾ. ಗಾಶಾ]

**ಗಾಸಿಗೆಯ್, ಗಾಸಿಗೈ** (ಕ್ರಿ). ತೊಂದರೆಯನ್ನುಂಟುಮಾಡು; ಹಿಂಸಿಸು: ಲೇಸುಲೇಸೈ ಕೃಷ್ಣ ನಮ್ಮನು ಗಾಸಿಗೆಯ್ಯುತೆ ಪೋಗುವರೆ (ಅಕ್ರೂಚ. ೯-೬೧); ಮೊಗದೊಳ್ ಮೊಗವಿಟ್ಟು ಮುಂದ್ದಿಪ ನೆವದಿಂ ಗಾಸಿಗೆಯ್ದಂ (ಚಿಕವಂ. ೬೯-೧೬). **ಗಾಸಿಗೈ:** ಕಟ್ಟಾಸುರದ ಬೇಸಗೆಯೊಳೋಸರಿಸದೆ ಗಾಸಿಗೈದನೆನುತೆಯ? (ರಾಮಾಶ್ವ. ೦-೯). [ಗಾಸಿ$_1$ + ಕೆಯ್$_1$]

**ಗಾಸಿಗೈ** ‘ಗಾಸಿಗೆಯ್’ ನೋ.

**ಗಾಸಿಗೊಳಿಸು, ಘಾಸಿಗೊಳಿಸು** (ಕ್ರಿ). ತೊಂದರೆಯನ್ನುಂಟುಮಾಡು; ಕ್ಲೇಶಪಡಿಸು; ನೋವನ್ನುಂಟುಮಾಡು: ಆ ಹಾವುಗಳು ನನಗೆ ಅಪ್ತರೆನಿಸಿದವರನ್ನೆಲ್ಲಾ ಕಡಿದು ಗಾಸಿಗೊಳಿಸಿದುವು (ಜಾಡುಕ್ತ. ೦೦೦); ಸುಮ್ಮನೆ ಮನಸ್ಸನ್ನು ಗಾಸಿಗೊಳಿಸಬೇಡಿ (ತೀಮೋಡ. ೫). **ಘಾಸಿಗೊಳಿಸು:** ಯೌವನದ ಗಾಂಭೀರ್ಯ ಘಾಸಿಗೊಳಿಸದೇ ಇದ್ದ ಮುಗ್ಧಸೌಂದರ್ಯ (ಏಕಾಂಗಿ. ೮). [ಗಾಸಿ$_1$ + ಕೊಳ್$_1$ + - ಇಸು$_3$]

**ಗಾಸಿಗೊಳ್ಳು** (ಕ್ರಿ). ತೊಂದರೆಪಡು; ಕ್ಲೇಶಪಡು: ಮನಸ್ಸು ಗಾಸಿಗೊಂಡಿದೆ (ನನ್ನಜೊ. ೩೩). ‘ಗಾಸಿಗೊಳಿಸು’ ಪರಾ. [ಗಾಸಿ$_1$ + ಕೊಳ್ಳು (<ಕೊಳ್$_1$)]

**ಗಾಸಿಡಿ** ‘ಗಾಸಡಿ’ ನೋ.

**ಗಾಸಿವಡೆ** (ಕ್ರಿ). ಬಳಲು; ದಣಿ; ಆಯಾಸಗೊಳ್ಳು: ಲೇಸಿನ ವಿಟರ ವಯವದಲಿ ಮೋದದ ಚೌಶೀತಿ ಬಂಧದ ಕೂಡಿ ಗಾಸಿವಡೆದು ಚಂದ್ರಶಾಲೆಯೊಳ್ ತಂಗಾಳಿ ಬೀಸಿದೊಡೆದೆಯನೊಡ್ಡುವರು (ಮೋಹತ. ೦೮-೪೯); ಗಾಸಿವಡೆದ ಮೂಸೆಯಂತೆ ಎಂತು ಬಾಳ್ವೆನಕಟ! (ಕವಿಕಾ. ೮೪-೧೧). [ಗಾಸಿ$_1$ + ಪಡೆ$_1$]

**ಗಾಸೆ$_1$** ‘ಗಾಸಿ$_2$’ ನೋ.

**ಗಾಸೆ$_2$** ‘ಕಾಸೆ$_1$’ ನೋ.

**ಗಾಹ** (ನಾ). ೧. ಮುಳುಗುವಿಕೆ; ಜಳಕ; ಸ್ನಾನ. ೨. ಅಡಗಿಕೊಳ್ಳುವುದು. ‘ಅವಗಾಹ’ ಪರಾ. ೩. ಆಳ. [ಸಂ.]

**ಗಾಹನ** (ನಾ).=ಗಹನತೆ: ಮೋಹಮೋಹ ಬಿಡದೆ ಆಹಾರ ಇಂದ್ರಿಯಂಗಳ ಗಾಹನದೊಳಗೆ ಬಿದ್ದು ಆಹಸ್ಸು ಕಳೆವೇನೊ (ಮೋಕ್ಷದೀ. ೩೫-೨). [ಸಂ.]

**ಗಾಹಿ** (ನಾ). ಮೋಸಗಾರ; ಕಪಟಿ: ಗಾಹಿ ಕೌಶಿಕನ ಕೃತ್ರಿಮಸರ್ಪ ದಷ್ಟದಿಂ ನಿದ್ರೆ ತಿಳಿದೇಳುವಂತೆ (ಹಡಕಾ. ೦೪-೯). [ಗಾಹು$_1$ + -ಇ$_3$]

**ಗಾಹಿಲ** (ನಾ). ಇಲ್ಲದಾಗುವಿಕೆ; ಮರೆಯಾಗುವಿಕೆ; ನಾಶವಾಗುವಿಕೆ. **ಗಾಹಿಲಾಗು**=ಇಲ್ಲವಾಗು; ಮರೆಯಾಗು: ಬಾಹುಮುರಿದಂತಸುರ ನಾಯಕಗಾಹವದ ರಣಶೂರ ಕೈಬಿಟ್ಟೈದೆ ಗುರುಬಲವೇ ಗಾಹಿಲಾದಂತೂರೆ ಹ್ಯಾಗೆಂದಾಹಗೊಳುವಾಗ ಪರದಿಗ್ಗಧು ಮೋಹಕ್ಕೆದಿದ ಬಿಟ್ಟು ಪದ್ಮಿನಿ ಪದ್ಮಬಾಂಧವನೂ (ಜರಾಮಾ. ೨೩೮-೨). [←ಮರಾ. ಗಾಹಾಳ್]

**ಗಾಹಿಲಂಬಡು** (ಕ್ರಿ). ಕಷ್ಟಪಡು; ತೊಂದರೆಯನ್ನನುಭವಿಸು (?): ದೇಹದೊಳಗಿರಲಾತ್ಮಧರ್ಮದ ನೇಹದಿಂ ಸ್ವರ್ಗಾದಿ ಭೋಗವನಾಹನಲದ ನ್ಯಾಯ ನಡತೆಯೊಳೊಕ್ಕು ನರಕವನು ಗಾಹಿಲಂಬಡುತಿಹನು (ಬಿಜ್ಜಪು. ೮೫-೪೨). [ಗಾಹಿಲ? + ಪಡು$_1$]

**ಗಾಹಿಸು$_1$** (ಕ್ರಿ). ೧. ಹರಡು; ವ್ಯಾಪಿಸು: ಸೀರೆಯೊಟ್ಟಲು ಗಗನವನು ಗಾಹಿಸಿತು (ಕುಮ್ಯಾಸ. ೦೫-೨); ಗಾಹಿಸಿತು ನಿನ್ನಾಜ್ಞೆ ಜಗದಲಿ ಮುಂ[illegible] ಗೆಟ್ಟಿನಲ (ನಿಭಾಗ. ೦-೦೨-೨೬). ೨. ಮುಳುಗು: ಮೋಹ ಸರ್ವಸ್ವಗಳ ರಾಗಾಬ್ಧಿಯೋ ಬ್ರಹ್ಮ ಗಾಹಿಸದರೊಳಗೆ ನೀಂ ಮಂಕುತಿಮ್ಮ (ಮಂಕುಳ. ೯೩೨). [ಗಾಹು$_1$ + - ಇಸು$_3$]

**ಗಾಹಿಸು₂** (ಕ್ರಿ). **ಮೋಸಮಾಡು ; ವಂಚಿಸು :** ಆಹಾಹ ಹಸನಾಯ್ತು ಕೊಡಿರೇಕೆ ಪಾತ್ರೆಯಂ ಗಾಹಿಸಿಯೆ [ ಪಾಠಾಂ. ಓಹೋಹೊ, ಗಹಗಹಿಸಿ ] ಇಂತು ಕೊಂಡವರುಂಟೆ ಪಾತ್ರೆಯಂ (ತಿರುರ. ದೇ. ೧೩-೮).

[ ಗಾಹು₃ + – ಇಸು₃ ]

**ಗಾಹು₁** (ನಾ). ೧. **ಆಳ ; ಅತಿಶಯಂತೆ ; ಆಧಿಕ್ಯ :** ಹೇಳ್ವೆ ಪಾರ್ಥ ಮೋನದೊಳಿರದಿರೆನ್ನಾಣೆನಲು ಬೆಜಗಿನ ಗರದ ಗಾಹಿನಲದ್ದು ಮೋನದೊಳಿದ್ದನಾ ಪಾರ್ಥ (ಕುವ್ಯಾ.ಕ. ೧೭-೭). ೨. (ಆಳವಾದ) **ತಿಳಿವು ; ಅರಿವು.** ' ಗಾಹುಗೊಳ್ ' ಪರಾ. [ < ಸಂ. ಗಾಹ ]

**ಗಾಹು₂** (ನಾ). **ಹಿಡಿತ ; ಪ್ರಭಾವ ; ಕೈವಾಡ :** ಹೂಹೆಗಳು ಹೊಯ್ದಾಡವೇ ನಿರ್ವಾಹಸೂತ್ರದ ಕುಣಿಕೆಗಾಚಿನ ಗಾಹಿನಲಿ (ಕುವ್ಯಾ.ಸ. ೯-೯). [ < ಪ್ರಾ. ಗಾಹ./ಸಂ. ಗ್ರಾಹ ]

**ಗಾಹು₃** (ನಾ). ೧. **ಮೋಸ ; ಮಾಯೆ ; ವಂಚನೆ ; ಠಕ್ಕು :** " ಕಪಟಂಗಳೆ ಗನ್ನಗಾಹುಗಳ್ " (ಕರ್ಣಾನಿ. ೨೭) ; " ಗಾಹನೆ ಕಪಟಕ್ಕೆ ನಾಮಂ " (ಭಾರನಿ. ೩೦) ; ಲೋಲಶ್ಮಶ್ರುಮುಖಂ ತೆಜಂಬೊಳೆವಿನಂ ಗಾಹಿಂಗೆ ಬೀಟ್ವನ್ನಮಾಭೀಳಾಲೋಕದೆ ಸಾರ್ದು (ಸೂಕ್ತಿಸು. ೩-೩೧) ; ಗಾಹುಕೊಳ್ವದ ಭೀಮಪಾರ್ಥರ ಸಾಹಸವನೆಣಿಸುತ (ಕುವ್ಯಾ.ದ್ರೋ. ೧-೧೨) ; ಮೋಹದಲಿ ಮಾಯಾಪ್ರಪಂಚಿನ ದೇಹಸಿದ್ಧಿಯ ಪಡೆದೆನೆಂಬೀ ಗಾಹಿನಿಂದಲಿ ವಜ್ರಪಿಂಡ ಶರೀರ ಫಲಿಸಿದೊಡೆ (ಪ್ರಭುಲೀ. ೧೯-೩೦). ೨. **ಗುರಿ ; ಉದ್ದೇಶ :** ಪೆರ್ದೊಡೆಯಂ ಕಡಿಖಂಡವಪ್ಪಿನಂ ತುಡುಕುವ ಗಾಹು ತಪ್ಪಿದೊಡೆ ಬೆಂಬಿಡದೆಯ್ದುವ . . . ನಾಯ್ಗಳಿಂ ಪಿಡಿದು (ನಳಚಂ. ೩೮) ; ಗಾಹು ಬೇಜುಹುದೀ ಜಗದ ವೈಗಾಹಿಗೋಸುಗ ಜನ್ಮವೆಂಬಿವು ಚೋಹವೈಸಲ್ಲದೆ ವಿಚಾರಿಸೆ ಮಗನೆ ನಿನಗೆಂದ (ತೊರರಾ. ೦-೯-೩೭). [ ? ]

**ಗಾಹುಕಂಡಿ** (ನಾ). **ಮೋಸದಿಂದ ನಂಸುಳಿಹೋಗುವ ಕಂಡಿ ; ಕಳ್ಳಗಂಡಿ ; ತಪ್ಪಿಸಿಕೊಳ್ಳುವ ಮಾರ್ಗ :** ಈ ಮಾಯೆಯು ಗಾಹುಕಂಡಿಯೊಳು ನುಸುಳುವ ಮಾಯಾವಾದಿಗಳಂತಲ್ಲ ನೋಡಾ (ಅದವ. ೧೯೭). [ ಗಾಹು₃ + ಕಂಡಿ₁ ]

**ಗಾಹುಕಾಜ** (ನಾ). (ಆಳವನ್ನು) **ತಿಳಿದವನು ; ಜ್ಞಾನಿ :** ಮೋಹವಿಲ್ಲದೆ ಸಕಲಜೀವಸ್ನೇಹವುಳ್ಳಾ ವೀರಶೈವದ ಗಾಹುಕಾಜರು ಪರಮಸುಖಿಗಳು ಗಿರಿಜೆ ಕೇಳೆಂದ (ಪ್ರಭುಲೀ. ೨೫-೧೩). [ ಗಾಹು₁ + – ಕಾಜ ]

**ಗಾಹುಗತಕ, ಗಾಹುಗದುಂಕು** (ನಾ). ೧. **ಮೋಸಗಾರಿಕೆ ; ಕಪಟ ; ಮೋಸ :** ಲಂಳಿತ ಮಾಯೆಯು ಗಾಹುಗತಕದ ಬಳೆಯುನಳವಡಿಸುವುದು . . . ಎಂದು ಸಾಜುದರಬ್ಧಿಘೋಷದಲಿ (ಜೀವಂಚ. ೭-೪೭) ; ಗಾಹುಗತಕದಲೆವ್ವ ಶಿಷ್ಯಂಗೀ ಹದನ ವಿರಚಿಸಿದೆ ನಿನ್ನಯ ಮೋಹದವರೇಗೆಲಲಿಯೆಂದನು ಹರಿಗೆ ಬಲರಾಮ (ಕುವ್ಯಾ.ಗ. ೭-೪). ೨. **ಭ್ರಮೆ ; ಭ್ರಾಂತಿ :** ದೇಹವೇ ದೀವಿಗೆಯು ಕಂಬವದಾ ಹಣಿತೆಯೇ ಬಾಹ್ಯಕರಣಗಳೂಹಿಸಲು ಪ್ರಾಣಾದಿವಾಯುವೆ ತೈಲದಂತದಕೆ ಗಾಹುಗತಕದ ಸೂಕ್ಷ್ಮತನುವೇ ಮೂಹುರಿಯದಹ ವತಿ೯ಯಲ್ಲಿಯ ದೇಹಿಯೇ ಚಿದ್ದೀಪವದು ನೀನೆಂದು ನಿಶ್ಚಯಿಸು (ಅಮೃತ. ೩-೭೭). **ಗಾಹುಗದುಕು :** ೧. ಗಾಹುಗದುಕ [ ಪಾಠಾಂ. ದಕ, ದುಕು ] ನುಳಿದೇಜುದರಶ್ವಾರೋಹಕರಾ ಸಮಯದಲಿ (ಕುರಾಸಾಂ. ೧೨-೮೮). ' ಗನ್ನಗತಕ ' ಪರಾ.

[ ಗಾಹು₃ + ಗತಕ₁ ]

**ಗಾಹುಗದುಕು** ' ಗಾಹುಗತಕ ' ನೋ.

**ಗಾಹುಗಳ್ಳ** (ನಾ). **ವಂಚಿಸುವುದರಲ್ಲಿ ಕದೀಮನಾದ ಕಳ್ಳ ; ಪಕ್ಕಾ ಚೋರ :** ಇಂತೀ ಗಾಹುಗಳ್ಳರಂತೆ ಮಾತಿನಲ್ಲಿ ಬ್ರಹ್ಮವ ನಂಡಿದು ಸರ್ವ ಸಂಸಾರದಲ್ಲಿ ಏಳುತ್ತ ಮುಳುಗುತ್ತ . . . ಸುಖಿಗಳೆಂತಪ್ಪರೋ (ಕವಿಜ. I, ೨೩೩ ಕೀಲಾರದ ಭೀಮಣ್ಣನ ವಚನ). [ ಗಾಹು₃ + ಕಳ್ಳ₁ ]

**ಗಾಹುಗಾತಿ** (ನಾ). **ಮೋಸಗಾತಿ ; ವಂಚಕಿ :** ಬರೆ ಲಗ್ನಂ ಶಶಿ ಸೂನೆಗೇಹದ ಕುಜತ್ರಿಂಶಾಂಶದೊಳ್ ರೋಹಿಣೀವರನಲ್ಲಿರ್ದೊಡೆ ಗಾಹುಗಾತಿ (ಜಾತತಿ. ೨೨-೫). [ ಗಾಹು₃ + – ಕಾತಿ₆ ]

**ಗಾಹುಗೊಳ್** (ಕ್ರಿ). **ಆಳವನ್ನು ತಿಳಿ, — ಕಾಣು, — ಅರಿತುಕೊಳ್ಳು :** ಆಹ ಶಿವಶಿವ ಬಹಳಜನ್ಮವ್ಯೂಹಚಿಂತಿತಯೋಗನಿಷ್ಠರು ಗಾಹುಗೊಳ್ಳದ ಗುರುವ ದೈವವನಕಟ ನಿಂದಿಸುತ (ನಿಭಾಗ. ೭-೦-೧೧).

[ ಗಾಹು₁ + ಕೊಳ್₁ ]

**ಗಾಹುರ** (ನಾ). **ಆತುರ ; ವೇಗ ; ರಭಸ :** ಬೇಹರವುನೆಸಗಿಕೊಳುತಂ ಗಾಹುರದಿಂ ದಾರಿವಿಡಿದು ಬರ್ಪವಸರದೊಳ್ (ಹಾಲಾಸ್ಯ. ೦-೯-೨೫).

[ ಕಾಹುರ₁ ( < ಕಾವರ₂ ) ]

**ಗಾಹೆ** (ನಾ). **ಶ್ಲೋಕ ; ಹಾಡು :** ತವ್ಮಯ್ಯಂ ಪೇಟ್ದ ಗಾಹೆಯುಂ ಕಟ್ಟಿ ಪಂಜರದ ನಡುವಣ ನಾಗವೇದಿಕೆಯೊಳ್ ವಿನೋದದಿಂ ಬರೆದಿಟ್ಟಂ (ಪಂಚತಂ. ೧೯೯-೨೦) ; ಲೇಖಮಂ ಪಾವುಡಮನಭಿಜ್ಞನ ಗಾಹೆಯಂತಿರ ಲೋದಿಸದೆಯುಂ ಶೋಧಿಸದೆಯುಂ (ಅನಂಪು. ೧೩-೯೫ ವ) ; ಗಾಥಾ–ಗಾಹೆ (ಶಮದ. ೨೫೭ ಪ್ರಯೋ) ; ಆ ಹರಿಯ ವರಮಹಿಮೆಯು . . . ಗಾಹೆ ವೇದಗಳಜಿಯವೈ (ಸಂಭಪ. ೪-೩೦) ; ಈ ಕಾರಣಗಳಿಂದ ನಾನು ಹೀಗೆ ಮಾಡಿದೆ ಎಂದು, ಅದನ್ನು ಸ್ಪಷ್ಟಪಡಿಸಲು ಈ ಗಾಹೆಗಳನ್ನು ಹೇಳಿತು (ಬುದ್ಧಪ. ೧೫). ' ಗಾದೆ ' ಪರಾ. [ < ಪ್ರಾ. ಗಾಹಾ./ಸಂ. ಗಾಥಾ ]

**ಗಾಳ, ಗಾಣ₂** (ನಾ). ೧. (ಮೀನು ಹಿಡಿಯುವ) **ಕೊಕ್ಕೆ, — ಕೊಂಡಿ :** ಖೇಚರಕನ್ಯೆಯರ್ಕಳ ಕಣ್ಗಳೆಂಬ ಮೀನ್ಗಳ್ ಕುಮಾರನ ರೂಪೆಂಬ ಗಾಳದಿಂ ತೆಗೆಯೆಪಟ್ಟು (ವಡ್ಡಾರಾ. ೫೭-೧೧) ; ಗಡಿಯರ ಸಿಂಗಂ ತೊಡರ್ದ್ದರ ಗಾಳಂ (ಸೌಇಇ. XI-II, ೧೩೩-೩೮ ; 1037) ; ಸೂಳೆಯರ್ ಗಾಳದ ಮೀನಂತಳವಟೆಯೆ (ಧರ್ಮಾಮೃ. ೨-೬೯) ; ಗಾಳದಲ್ಲಿರುವ ಮಾಂಸವನ್ನು ಭಕ್ಷಿಸುವುದಕ್ಕೆ ಹೋದ ಮತ್ಸ್ಯದೋಪಾದಿಯಲ್ಲಿ (ಕೃಪಾಸ. ೧೩೦) ; ಒಕ್ಕಲಿಗರು ಗಾಳದ ಗಣೆಗಳನ್ನು ತೆಗೆದುಕೊಂಡು ಬಂದು ಹೆಂಗಸರ ಕಡವಿನಲ್ಲಿ ಕೂರುತ್ತಾರೆ (ಜಿಸ್ತಕ. ೧೨). ೨. (ಆಲಂ) **ಕುತಂತ್ರ ; ಹೂಟ :** ಅವನು ಆಕೆಯ ಗಾಳದಲ್ಲಿ ಸಿಕ್ಕಿಬಿದ್ದ (ರೂಢಿ). **ಗಾಣ₂ :** ೧. ದನುಜರೆರೆಗಳ ಹಾಯ್ಕಿ ಗಾಣದಲನಿಮಿಷರನೀಡಾಡಿ ಕೊಂಡರು ದುರ್ಗವನು ಸುರರ (ಕುವ್ಯಾ.ಕ. ೭-೧೧) ; ಎಳೆದು ತರಿಸೆನೆ ತನ್ನ ಬಾಲವ ಕಳುಹಿ ಗಾಣ[ ಪಾಠಾಂ. ಳ ]ದ ಬಲೆಗೆ ಸಿಲುಕಿದ ಮೀನಿನಂದದಲಿ (ತೊರರಾ. ೪-೪-೯೫) ; ಖಳರ ಗಂಟಲ ಗಾಣನೋ ಜಗದೊಳಗೆ ಪ್ರವೀಣನೋ (ಪುರಂದ. ೦-೨೦೩-೦).

[ ದೇ ■ ತುಳು. ಗಾಳ, ಗಾಳೋ ; ತೆಲು. ಗಾಲ, ಗಾಲಾ ; ಪರ್ಜಿ. ಗೇಲ./ಪ್ರಾ. ಗಲಅ ]

**ಗಾಳಕ** (ನಾ). **ಪ್ರೌಢ ; ವ್ಯವಹಾರಚತುರ :** ಸಾತ್ವಿಕನಾದ ಧರ್ಮರಾಯನು, ಸಿಟ್ಟಿನ ಸ್ವಭಾವದ ಭೀಮಸೇನನನ್ನೂ–ತೇಜಸ್ವಿಯಾದ ಅರ್ಜುನನನ್ನೂ–ಗಾಳಕರಲ್ಲದ ನಕುಲ ಸಹದೇವರನ್ನೂ ಸಮದೃಷ್ಟಿಯಿಂದ ನೋಡಿ (ಕುಟುಂಬ. ೪೯). [ ←ತೆಲು. ಗಾಳಕು ]

**ಗಾಳಗಟ್ಟಿಗೆ** (ನಾ). **ಮೀನು ಹಿಡಿಯುವ ಗಾಳದ ಕಡ್ಡಿ, — ಕೋಲು :** ಇಟ್ಟಣಿಸಿದ ಮೀನನಿಳಿಗೆ ಸಳಿವ ಗಾಳಗಟ್ಟಿಗೆಗಳೊ ದೇಪತೆಗಳ ಮುಟ್ಟಿತಿವಿವ ಸಬಳಗಳೊಯೆಂದೆನಲಲ್ಲಿ ನೆಟ್ಟ ಡೆಂಕಣಿಗಳೆಸೆದವು (ಕುರಾಸಾಂ. ೧೭-೧೪). [ ಗಾಳ + ಕಟ್ಟಿಗೆ₁ ]

**ಗಾಳಗಾರ** (ನಾ). **ಗಾಳದಿಂದ ಮೀನನ್ನು ಹಿಡಿಯುವವನು ; ಬೆಸ್ತ :** ಗಾಳಗಾರನಾ ಕೊಂಡಿಯೆರೆಯಂ ತಿಂದ ಬಾಳೆಮೀನಂ . . . ಸೋಲಿಸುವ ಮಾಳ್ಕೆಯಿಂದ (ಶ್ರೀರಾಮಾ. ೪೧೪-೨೯೩).

[ ಗಾಳ + – ಗಾರ ( < – ಕಾಜ ) ]

**ಗಾಳನ** (ನಾ). ಸೋಸುವುದು ; ಶೋಧನ. 'ಗಾಳಿಸಂ' ಪರಾ. [ ಸಂ. ಗಾಲನ ]

**ಗಾಳಬ್ಬೆ** (ನಾ). ಒಬ್ಬಾಕೆಯ ಹೆಸರು : ಗಜ್ಜವೆಡಙ್ಗ ಶ್ರೀಮತ್ ರಾಚೆಯರಸರ ಅರಸಿ ಗಾಳಬ್ಬೆಯರ್ ದೇಗುಲವ ಮಾಡಿಸಿ (ಎಕ. V, ಹೊಳೆನ. ೧೪-೧೨ ; ಸು. 960).
[ ಗಾಳ ?+ ಅಬ್ಬೆ$_1$ ]

**ಗಾಳಹಾಕು, ಗಾಣಹಾಕು** (ಕ್ರಿ). ೧. ಮೀನು ಹಿಡಿಯಲು ಗಾಳವನ್ನು ನೀರಿಗೆ ಬಿಡು : ಅವನು ಮೀನು ಹಿಡಿಯಲು ಗಾಳ ಹಾಕಿದ್ದಾನೆ (ರೂಢಿ). ೨. (ಆಲಂ) ಆಸೆ ತೋರಿಸು ; ಮರುಳುಗೊಳಿಸು : ಇಂಥ ಸಮಕಾಲೀನ ಶಬ್ದಗಳನ್ನು ಬಳಸಿ, ಜನರ ಮೆಚ್ಚಿಕೆಗೆ ಗಾಳಹಾಕತೊಡಗಿದರು (ಯಕ್ಷಬ. ೧೨೭). **ಗಾಣಹಾಕು :** ೨. ಇದೊಂದು ಆಷಾಡಭೂತಿ, ಹಳ್ಳಿಯವರಿಗೆ ಏನೋ ಗಾಣಹಾಕುವುದಕ್ಕೆ ಬಂದಿದೆ (ಸುವಸಂ. ೧).
[ ಗಾಳ + ಹಾಕು (<ಪಾಯ್ಕು$_1$) ]

**ಗಾಳಿ$_1$, ಘಾಳಿ** (ನಾ). ೧. ಎಲರು ; ವಾಯು ; ಮಾರುತ : "ಗಾಳಿಯೆ ವಾತದೊಳ್" (ಕರ್ಣಾನಿ. ೩೫) ; "ಗಾಳಿಯೆನೆ ಮಾತರಿಶ್ವಂ" (ಕಶರ. ೩೨) ; ಪಾಯ್ವ ಶೀಕರದೊಳೆ ನಾಂದು ಸೇಡುಗೊಳುತಂ ಸುಟಿದೂದುವ ಗಾಳಿ ಬರ್ಪ ದೇವರ ವರಕಾಂತೆಯರ್ಕಳ ಪರಿಶ್ರಮಮಂ ಕಳೆದತ್ತು (ಕಾವ್ಯಸಾ. ೭೮ ಶೂದ್ರಕ) ; ಗಾಳಿಯೆತ್ತಲು ಘಾಡಿಸುವ ಮೇಘಾಳಿಯೆತ್ತಲು (ಕುವ್ಯಾಕ. ೧೦-೨೩) ; ಗರುಡನ ಗಱಿಯ ಗಾಳಿಗೆ ಫಣಿಗಳ ಮೊತ್ತ ಮುರಿಗೆಡೆದೋಡುವಂದದಲಿ (ಕಂನವಿ. ೧೫-೧೦೪) ; ಸ್ವಚ್ಛವಾದ ಗಾಳಿ ಬರಲಿಕ್ಕೆ ಮಾರ್ಗವಿರಬೇಕು (ಮುಂಬಯಿ. ೪-೨೫). ೨. ದೆವ್ವ ; ಪಿಶಾಚಿ : ಪೊಡೆದುದು ಗರವತಿಕೋಪದೆ ಪಿಡಿದುದು ಪುಲಿ ಗಾಳಿ ಸೋಂಕಿದತ್ತು (ಕಾದಂಪೂ. ೫೭೩) ; ಮಾನಿನಿ ಒಬ್ಬ ಸಂನ್ಯಾಸಿಯ ಕಂಡು ಧೇನಿಸಿ ಕೂಸೆಂದತ್ತ ಬರಲು ಏನು ಗಾಳಿ ಅವರಿಗೆ ಸೋಕಿತೆ ಎಂದು ಪುರಂದರ ವಿಠಲ ತನ್ನೊಳು ನಗುತಿದ್ದನು (ಪುರಂದ. ೧-೧೧೧-೯) : 'ಆಚಾರ್ರು ಗಾಳಿಯಾಗಿದ್ದಾರೆ !' ಎಂದು ಜನರಾಡಿಕೊಳ್ಳಲಾರಂಭಿಸಿದರು (ನನ್ನೂರು. ೧೯೭). ೩. ವಾಸನೆ ; ಸುಳಿವು : ನಾಯಿಗಳಿಗೆ ಯಾವುದೋ ಪ್ರಾಣಿಯ ಗಾಳಿ ಸಿಕ್ಕಿದೆಯೆಂದು ಎಲ್ಲರಿಗೂ ಗೊತ್ತಾಯಿತು (ಕಾನೂರು. ೧೪೦). 'ಗಾಳಿಹಿಡಿ' ಪರಾ. ೪. (ಆಲಂ) ವ್ಯಗ್ರವಾದುದು : ಪ್ರತಿಭಾನ ಮನಸ್ಸು ಗಾಳಿಯಾಗಿತ್ತು (ಮಾಲತಿ. ೧೪೩). ೫. (ಆಲಂ) ಪ್ರಭಾವ ; ವರ್ಚಸ್ಸು : ನಿನಗೆ ಅವರ ಗಾಳಿ ಚೆನ್ನಾಗಿ ಬೀಸಿದೆ (ರೂಢಿ). **ಘಾಳಿ :** ೧. ಮದದಾನೆ ಕಂಭಮಂ ಮುಱಿದು ಘಾಳಿಯಂತೆ ವೇಗಿಯುಂ ಕಲಿಯಂತೆ ನಿಶ್ಶಂಕನುಂ . . . ಆಗಿರ್ಪುದಂ ಕಂಡು (ಧರ್ಮಾಮೃ. ೧೩-೫೫ ಅಡಿಟ) ; ಘಾಳಿಯೊಳು ನಿಂದು ಧೂಳಿಯ ಹೊಯ್ಯುತಿದೆ (ಅದವ. ೧೫-೩೨) ; ಘಾ[ಪಾಠಾಂ. ಗಾ]ಳಿ ಬಂದ ಕೈಯಲ್ಲಿ ತೂಱಿಕೊಳ್ಳಿರೊ (ಪುರಂದ. ೨-೨೦ ಪಲ್ಲವಿ) ; ನಿಂದು ಕಣ್ಮುಚ್ಚಿ ಘಾಳಿಯ ಬೀಸುತೇ (ನವಪೋ. ೬-೭).

**ಗಾಳಿಗೆ ತೂರು** = ಉದಾಸೀನ ಮಾಡು ; ಕಡೆಗಣಿಸು ; ಎಸೆದು ಬಿಡು : ತಮ್ಮ ಭಾವನೆಯಾದರೋ ಸುಲಭವಾಗಿ ಗಾಳಿಗೆ ತೂರಿಬಿಡತಕ್ಕುದಾಗಿಲ್ಲ (ಚಿನ್ನಚೀ. ೧೪೪). **ಗಾಳಿಬಂದಲ್ಲಿ ಕೊಡೆ ಹಿಡಿ**=ಸಮಯಕ್ಕೆ ತಕ್ಕಂತೆ ವರ್ತಿಸು ; ಸಂದರ್ಭೋಚಿತವಾಗಿ ವ್ಯವಹರಿಸು : ಅಂತೂ ಗಾಳಿಬಂದಲ್ಲಿ ಕೊಡೆಹಿಡಿಯುವ ಜಾತಿಯವಳು (ಶೀಮೋಡ.೩೫). **ಗಾಳಿಬಂದಾಗ ತೂರಿಕೊ**= ಅವಕಾಶವೊದಗಿದಾಗ ಕಾರ್ಯಸಾಧನೆ ಮಾಡಿಕೊಳ್ಳು : ಈ ಬೆರಳಿನಲ್ಲಿ ಒಂದು ಉಂಗುರ ಇಲ್ಲದಿರುವುದು ಮಾತ್ರ ದೊಡ್ಡ ಕೊರತೆಯೇ ಸರಿ ಎಂದು ಹೇಳಿ ಗಾಳಿಬಂದಾಗಲೇ ತೂರಿಕೊಂಡಳು (ಕೂನಪ್ಪ. ೮೩) ; ಗಾಳಿಬಂದಾಗ ತೂರಿಕೊ (ಗಾದೆ). **ಗಾಳಿಯಸೊಡರು**=ನಶ್ವರವಾದುದು : ಸಂಸಾರಮೆಂಬುದೊಂದು ಗಾಳಿಯಸೊಡರು ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯಾ (ಬಸವ. ೧೬೪). [ ದೇಶ ತಮಿ. ಕಾಲಿ ; ತುಲು. ಗಾಲಿ, ಗಾಳಿ ; ತೆಲು. ಕೊಲಾ. ಗಾಲಿ ; ನಾಯ್ಕಿ. ಘಾಳಿ ]

**ಗಾಳಿ$_2$** (ನಾ). ನಿಂದೆ; ಬೈಗಂಳು. 'ಗಾಳಿವಾತು$_2$' ಪರಾ. [<ಸಂ. ಗಾಲಿ]

**ಗಾಳಿಕೊಳ** 'ಗಾಳಿಗೂಳ' ನೋ.

**ಗಾಳಿಕೊಡೆ** (ನಾ). ವೈಮಾನಿಕರು ವಿಮಾನದಿಂದ ಭೂಮಿಗೆ ಧುಮುಕಬೇಕಾದ ಸಂದರ್ಭದಲ್ಲಿ ಉಪಯೋಗಿಸುವ ಕೊಡೆ; ಧುಮುಕುಕೊಡೆ; ಪ್ಯಾರಾಚೂಟು : ಧುಮುಕಿದರೂ ಪ್ರಾಣಕ್ಕೆ ಹಾನಿಯಾಗದಂತೆ ಕೈಯಲ್ಲಿ ಹಿಡಿದುಕೊಳ್ಳಲು 'ಪೆರಾಚ್ಯೂಟ್'ಗಳೆಂಬ ಗಾಳಿಕೊಡೆಗಳನ್ನು ಉಪಯೋಗಿಸುತ್ತಾರೆ (ವಿಜ್ಞಾವಿ. ೭೯) ; ಆಗಾಗ ಆಕಾಶದಿಂದ ಬೆಳಕಿನ ಗಾಳಿಕೊಡೆ (Parachute)ಗಳನ್ನು ಹಾರಿಸಿ ಅವು ವೈರಿಪಾಳೆಯಗಳನ್ನು ಬೆಳಗುವಂತೆ ಮಾಡುವರು (ಬಾಲಪ್ರ. I, ೫೮೮).
[ ಗಾಳಿ$_1$ + ಕೊಡೆ$_2$ ]

**ಗಾಳಿಕೋವಿ** (ನಾ). "ಗಾಳಿಯ ಬಲದಿಂದ ಹೊಡೆಯುವ ತುಪಾಕಿ ; ಗಾಳಿಕೋವಿ ; ಗಾಳಿಬಂದೂಕು" (Air-gun. ಇಂಕನಿ).
[ ಗಾಳಿ$_1$ + ಕೋವಿ$_1$ ]

**ಗಾಳಿಕೋಳಿ** (ನಾ). ಗಾಳಿ ಬೀಸುವ ದಿಕ್ಕನ್ನು ತೋರಿಸುವುದಕ್ಕಾಗಿ ಎತ್ತರವಾದ ಕಟ್ಟಡಗಳ ಮೇಲೆ ನಿಲ್ಲಿಸಿದ ಸಾಧನ ; ವಾಯುದಿಕ್ಸೂಚಿ : ನೆಲದ ಮಟ್ಟದಲ್ಲಿ ಗಾಳಿಯು ಯಾವ ಕಡೆಗೆ ಬೀಸುತ್ತದೆ ಎಂಬುದನ್ನು ಎತ್ತರದಲ್ಲಿ ಹಾರುವ ವೈಮಾನಿಕನಿಗೆ ತಿಳಿಸುವುದಕ್ಕೆ ಕತ್ತಲಲ್ಲಿ ಮಿನುಗುವ ಗಾಳಿಕೋಳಿ (Weather-cock)ಗಳನ್ನು ಇರಿಸುವರು (ಬಾಲಪ್ರ. II, ೮೮೩). [ ಗಾಳಿ$_1$ + ಕೋಳಿ$_1$ (<ಕೋೞಿ$_1$) ]

**ಗಾಳಿಗ** (ನಾ). ೧. ಗಾಳಿಯಲ್ಲಿ ಸಂಚರಿಸುವಂಥದು ; ದೆವ್ವ, ಭೂತ, ಪಿಶಾಚಿ ಮುಂತಾದುವು: ಗಾಳಿಗರುಂ ನೆಲವುಂಕ ಜಕ್ಕಿಯುಂ ಬೊರ್ಮನುನೆಂದು ಜೀವವಧೆಗೈದರೆ ಕುತ್ತದ ದುಃಖದಿಂದ ಸಾಸಿರ್ಮಡಿ ದುಃಖಮಂ ಪಡೆವ ನಾರಕ ದುಃಖಮನೈದದಿರ್ಪರೇ (ಶಾಸ್ತ್ರಟೀ. ೨೪-೩). ೨. ಒಬ್ಬಾತನ ಹೆಸರು : ಓಲೆಯ ಚನ್ನಿಗನುಂ ಗಾಳಿಗನುಂ ಮೊದಲಾಗೆ ಅಯ್ನೂರ್ಬರ್ರುಂ ತುಪ್ಪವನುಟಿದೋರ್ (ಸೌಇಇ. XI-i, ೧೨-೧೪ ; 867).
[ ಗಾಳಿ$_1$ + - ಗ$_2$ ]

**ಗಾಳಿಗಂಟು** (ನಾ). ೧. (ಆಲಂ) ಗಾಳಿಯನ್ನು ಬಂಧನಮಾಡುವಂತೆ ಅಸಾಧ್ಯವಾದುದನ್ನು ಮಾಡುವ ಪ್ರಯತ್ನ ; ಅತಿಯಾದ ಸಾಹಸ ; ಅಸಾಧಾರಣ ಕಾರ್ಯ : ಏನೇನೊ ಗಾಳಿಗಂಟು ಮಾಡಿ ನೀರೆರೆದು ಈ ತೋಟ ಬೆಳೆಸಿದ್ದೇನೆ (ಮುಗಮೂಂ. ೬೦). ೨. (ಆಲಂ) ಮೋಸ ; ವಂಚನೆ : ಗಾಳಿಗಂಟು ಮಾತುಗಳಿಂದ ನಂಟರಂತೆ ತೋರುವ ಕಂಟರಂ (ಸೌಗಂಧಿ. ೧೩೪-೪). [ ಗಾಳಿ$_1$ + ಗಂಟು ]

**ಗಾಳಿಗಿರಣಿ** (ನಾ). ಗಾಳಿಯ ಸಹಾಯದಿಂದ ನಡೆಯುವ ಯಂತ್ರ : ಭೂಮಿ ಇಲ್ಲವೆ ಸಮುದ್ರದ ಮಗ್ಗುಲಲ್ಲಿ ಸದಾ ಬೀಸುತ್ತಿರುವ ಗಾಳಿಗಳಿಂದ 'ಗಾಳಿಗಿರಣಿ' (Wind-mill)ಗಳನ್ನು ಮಾಡುತ್ತಾರೆ (ಬಾಲಪ್ರ. I, ೧೦೮) : ಅಲ್ಲಲ್ಲಿ . . . ಗಾಳಿಗಿರಣಿಗಳಿವೆ (ಅಪೂಪ. ೧೯೦).
[ ಗಾಳಿ$_1$ + ಗಿರಣಿ$_1$ ]

**ಗಾಳಿಗುದುರಾಂಕ** (ನಾ). ಜಿಂಕೆಯನ್ನು ಗುರುತಾಗಿ ಉಳ್ಳವನು ; ಚಂದ್ರ ; ಮೃಗಾಂಕ : ಸುಚರಿತ್ರ ನಿಟಲನೇತ್ರಾ ಗಾಳಿಗುದುರಾಂಕನೆ [ ನ ] ರೆವಾಳಿ (ನವಪೋ. ೨೩-೧). P ಇದು ಅಶುದ್ಧ ಶಬ್ದ.
[ ಗಾಳಿಗುದುರೆ + ಅಂಕ$_2$ ]

**ಗಾಳಿಗುದುರೆ** (ನಾ). ವಾಯುದೇವನಿಗೆ ವಾಹನವಾದುದು ; ಜಿಂಕೆ ; ಮೃಗ. 'ಗಾಳಿಗುದುರಾಂಕ' ಪರಾ.
[ ಗಾಳಿ$_1$ + ಕುದುರೆ ]

**ಗಾಳಿಗುದ್ದು** (ಕ್ರಿ). ೧. ಗಾಳಿಯನ್ನು ಗುದ್ದು,-ತಿವಿ: ತಲೆಯ ಮೇಲೆ ಎಲ್ಲಿಂದೊ ಬಂತೊ ಈ ನಾದ ಗಾಳಿಗುದ್ದಿ. ಗೆಳೆಯ, ನೀವು ವ್ಯೆಗರೆದಿರೆಂದು, ಛೀ! ನಂಬಬರದ ಸುದ್ದಿ (ಹೃದಸ. ೬೩-೪). ೨. (ಆಲಂ) ಉಪಯೋಗವಿಲ್ಲದ ಕೆಲಸವನ್ನು ಮಾಡು; ನಿರರ್ಥಕವಾದ ಕೃತ್ಯದಲ್ಲಿ ತೊಡಗು: ಇದೇನಾಟ, ಗಾಳಿಗುದ್ದಿ ವ್ಯೆನೋಯಿಸಿಕೊಳ್ಳುವುದು (ಕಸಬು. ೬೨); ಈಗಾಗಲೇ ಸರಕಾರದಿಂದ ರದ್ದುಮಾಡುವ ನೋಟೀಸು ಮುನಸೀಪಾಲಿಟಿಯ ಕೈಸೇರಿಹೋಗಿದೆ. ಇಂಥದರಲ್ಲಿ ಗಾಳಿಗುದ್ದುವದರಲ್ಲಿ ಯಾವ ಪುರುಷಾರ್ಥವೂ ಇಲ್ಲ (ಅಪನಾ. ೨೩೨); ಗಾಳಿಗುದ್ದಿ ವ್ಯೆನೋಯಿಸಿಕೊಂಡಂತೆ (ಗಾದೆ). [ ಗಾಳಿ$_1$ + ಗುದ್ದು$_1$ (<ಗುರ್ದು$_1$) ]

**ಗಾಳಿಗೊಳ, ಗಾಳಿಕೊಳ** (ನಾ). ೧. ಗಾಳಿಯನ್ನೇ ಆಹಾರವಾಗಿ ಉಳ್ಳ ಪ್ರಾಣಿ; ಎಲರುಣಿಗ; ಹಾವು; ಸರ್ಪ: ಒಂದು ರಾತ್ರಿಯುಲಿ ಬೋಧಿಸಿದಳಾ ಖದ್ರು ಗಾಳಿಗೊಳರ್ಗೆ ಸಾಸಿರಫಣೆಗಳೊಪ್ಪದಿರೆ ಶಪಿಸಿದಳ್ (ರುಕ್ಮಾಂಗ. ೧೭-೪); ಗಾಳಿಗೊಳನ ಶತ್ರುವಾಳುವನ ಸನ್ಮಿತ್ರ (ನವಮೋ. ೨೩-೧). ೨. (ಆಲಂ) ಹಾವಿನಂತಿರುವವನು; ಕುಟಿಲ; ವಕ್ರ: ಪೇಳೆ ವೃದ್ಧರ ನುಡಿಯ ಕೇಳ್ವನಲ್ಲಂ ನಿನಗೆ ಗಾಳಿಗೊಳರ ಮಾತು ಸೊಗಸು (ಜೀರಮ. ೨-೧). **ಗಾಳಿಕೊಳ**: ೧. ಗಾಳಿಕೊಳನ ಪಗೆಯ ವನಯ್ಯನಣುಗನನಾಳಿದನಣುಗನಾತ್ಮಜನ (ಅಮುಸಾಂ. ೬-೧೧೪).

**ಗಾಳಿಗೊಳನ ಹಗೆ=ಹಾವಿನ ಶತ್ರು; ಗರುಡ, ನವಿಲು ಮೊದಲಾದುವು**: ಗಾಳಿಗೊಳನ ಹಗೆಗೊಳಗಾದ ಶಿಬಿರವ ಕೇಳಿ ನಂದೀಶನ್ನೈತರಲು . . . ಹೀಯಾಳಿಸಿ ಬಿಟ್ಟುದಾ ನವಿಲ (ಪೋಹತ. ೩೮-೩೦).

[ ಗಾಳಿ$_1$ + ಕೊಳ್ (<ಕೊಟುಳ್$_1$) + - ಅ$_7$ ]

**ಗಾಳಿಗೊಳ್ಗೊಳ್** (ಕ್ರಿ). ಗಾಳಿಯನ್ನೇ ಆಹಾರವಾಗಿ ತೆಗೆದುಕೊಳ್ಳು; ನಿರಾಹಾರವಾಗಿರು: ಪಲಗಾಲಂ ಗಾಳಿಗೊಳ್ಗೊಂಡಲಸದೆ . . . ಒಂದು ಕಾಲೊಳ್ ಸಲೆ ನಿಂದು (ವೀರಶ. ೧೩೦).

[ ಗಾಳಿ$_1$ + ಕೊಳ್ (<ಕೊಟುಳ್$_1$) + ಕೊಳ್$_1$ ]

**ಗಾಳಿಗೊಳ್** (ಕ್ರಿ). ದೆವ್ವ ಮೆಟ್ಟಿದಂತೆ ಆವೇಶಗೊಳ್ಳು; ಪರವಶವಾಗು: ಪಂದಿಯ ಬಟಿಯಂ ತಗುಳ್ದೊಡದು ಗಾಳಿಗೊಂಡೊಂದು ದೆಸೆಗೆವರಿದು (ವರ್ಧಮಾ. ೧೬೨-೧೭); ಗಾರ್ದಭಿಯೆಂಬ ದೇವತೆ ಕತ್ತೆಯ ರೂಪಾಗಿ ಗಾಳಿಗೊಂಡಂತೆ ಮುಸಗಿ . . . ಪರಿತರೆ (ಬಂಹರಿ. ೬-೧೮ ವ); ಚೆಲ್ವನಪ್ಪ ವಾಜಿಯ ರೂಪನಳವಡಿಸಿ ಗಾ [ ಪಾಠಾಂ. ನಾ ]ಳಿಗೊಂಡು ಮುಂದಿಯುಂ ತುಳಿವುತ್ತಂ ಬಂದು ಪುರವಂ ಪುಗೆ (ಪುಣ್ಯಾಸ್ರ. ೫-೬೦ ವ).

[ ಗಾಳಿ$_1$ + ಕೊಳ್$_1$ ]

**ಗಾಳಿಗೋಪುರ, ಘಾಳಿಗೋಪುರ** (ನಾ). ಗಾಳಿಯಂತೆ ಆಕಾರವಿಲ್ಲದ ವಸ್ತುವಿನಿಂದ ಕಟ್ಟುವ ಗೋಪುರ; ಕೈಗೂಡದ ಮನೋರಥ; ಈಡೇರದ ಆಸೆ: ಅದು ದಿಟದಿನಿರ್ಪುದೋ ಮೇಣ್ ಬರಿಯ ಆಸೆ ಬೀಸಿದ ಗಾಳಿಗೋಪುರವೊ ಎಂಬೊಂದು ಶಂಕೆಯುಯ್ಯಲೆಯಲ್ಲಿ ತೊನೆದಪ್ಪುದಯ್ ಶ್ರದ್ಧೆ (ಶ್ರೀರಾಮಾ. ೪೪೬-೪೦); ನನ್ನ ಸಂಕಲ್ಪ ಗಾಳಿಗೋಪುರವಾದಂತಿದೆ (ಹರಿಕೋ. ೬೦); ಗಾಳಿಗೋಪುರ ಕಟ್ಟುವಂತೆ ರಾಜ್ಯರಚನೆಯಲ್ಲಿ ಕೇವಲ ಮಾತಿನಿಂದ ಏನೂ ನಡೆಯುವುದಿಲ್ಲ (ಪ್ರಶಾಪ. ೮೮); ಆದರೆ ವಾಸ್ತವತೆಯ ಅರಿವು ಬಂದಾಗ ತನ್ನ ಕೆಲಸವೆಲ್ಲವೂ ಬರೀ ಗಾಳಿಗೋಪುರವೆಂದು ಅವಳು ನಿಟ್ಟುಸಿರು ಬಿಡುವಳು (ದೂರಸ. ೨೯೦). **ಘಾಳಿಗೋಪುರ**: ಘಾಳಿಗೋಪುರದ ಮುಂದೆ ಧಾಳಿಯಾಡುವಂತೆ ಸುತ್ತ ಧೂಳುಗಳನೆಬ್ಬಿಸಿ (ವಾದಿಕೀ. ೪೦-೨). [ ಗಾಳಿ$_1$ + ಗೋಪುರ ]

**ಗಾಳಿಚೆಂಡು** (ನಾ). ಗಾಳಿಯಲ್ಲಿ ಹಾರುವಂತೆ ರಚಿಸಿರುವ ಚೆಂಡಿನಾಕಾರದ ಹಾರುವ ಸಾಧನ; ಬಲೂನು: ದೊಡ್ಡದೊಂದು ಚೀಲದಲ್ಲಿ, ಬಿಸಿಗಾಳಿಯನ್ನು ತುಂಬಿಸಿ ಅದು ಗಾಳಿಯಲ್ಲಿ ಏರುವಂತೆ ಮಾಡಿ ಅದಕ್ಕೆ ತೂಗಿದ ಒಂದು ಬುಟ್ಟಿಯಲ್ಲಿ ತಾವು ಕುಳಿತು ಆಕಾಶವನ್ನು ಏರಿದರು. 'ಗಾಳಿಚೆಂಡು' (Baloon) ಎಂದು ಇದಕ್ಕೆ ಹೆಸರು (ಬಾಲಪ್ರ. II, ೧೦೨೬).

[ ಗಾಳಿ$_1$ + ಚೆಂಡು (<ಸೆಂಡು) ]

**ಗಾಳಿತುಂಬಿಸು** (ಕ್ರಿ). ೧. ಗಾಳಿ ತುಂಬುವಂತೆ ಮಾಡು. ಸೈಕಲ್ ಚಕ್ರಕ್ಕೆ ಗಾಳಿ ತುಂಬಿಸು (ರೂಢಿ). ೨. (ಆಲಂ) ಪ್ರೇರಿಸು; ಹುರಿದುಂಬಿಸು; ಪ್ರೋತ್ಸಾಹಿಸು: ಕೆಲಸದವಳ ಮೂಲಕ ಬೀಬಿಯನ್ನು ಚೆನ್ನಾಗಿ ಗಾಳಿ ತುಂಬಿಸಿಬಿಟ್ಟಿದ್ದೇನೆ (ಪ್ರೇಮಾಶ್ರ. ೨೩).

[ ಗಾಳಿ$_1$ + ತುಂಬಿಸು ]

**ಗಾಳಿತೇರು** 'ಗಾಳಿದೇರ್' ನೋ.

**ಗಾಳಿದೇರ್, ಗಾಳಿತೇರು** (ನಾ). ವಾಯುಮಂಡಲದಲ್ಲಿ ಚಲಿಸುವ ತೇರು,—ರಥ; ವಿಮಾನ: ಗಾಳಿದೇರೊಳ್ ಬೆಂಗದಿರನಂತೊಪ್ಪಿ ವೈದಿಕನೊರ್ವನೆಯ್ತರುತಿರಲ್ (ಅದ್ಭುತ. ೨೪-೧); ದೂರವೊಯ್ದು ಮರೆಯಾದುದಾ ಬಣ್ಣಬಣ್ಣದ ಗಾಳಿದೇರ್ (ಶ್ರೀರಾಮಾ. ೨೧೭-೧೮೭). **ಗಾಳಿತೇರು**: ಪ್ರೀತಿಯು ಮೊದಲು ಗಾಳಿತೇರಿನಲ್ಲಿಯೂ ಆಮೇಲೆ ಎತ್ತಿನ ಗಾಡಿಯಲ್ಲಿಯೂ ಕೊನೆಗೆ ಹೊರೆಹೊತ್ತೂ, ಓಡುವುದೆನ್ನುವಂತೆ ದೊಡ್ಡನು ಅವಸರದಲ್ಲಿಯೇ ಹೊರಟನು (ಕಾಲೂರ. ೪ ಕಥಾಸಾರ).

[ ಗಾಳಿ$_1$ + ತೇರ್$_2$ ]

**ಗಾಳಿಪಟ** (ನಾ). ಕಾಗದ, ಕಡ್ಡಿ, ದಾರಗಳಿಂದ ಮಾಡಿ ಗಾಳಿಯಲ್ಲಿ ಹಾರಿಸುವ ಆಟದ ಪಟ; ಪತಂಗ: ಪಸುರ್ವಟ್ಟೆಯ ತೊಳಗುವ ಗಾಳಿಪಟಕೆ ಕಟ್ಟಿದ ರಜ್ಜುವಿದೋ ಎಂಬಂತೆ (ಜಯಕಾ. ೧-೪೧); ಪಟಗಾಜಿನುಚಿ ಸೂತ್ರವಿಡಿದಿದ್ದರಾ ಗಾಳಿಪಟ ಗಗನ ದೊಳಾಡುವಂತೆ (ಭರಜ. ೨-೪೩).

**ಗಾಳಿಪಟದ ಹಬ್ಬ=ಆಷಾಢಮಾಸದ ಮೊದಲ ಏಕಾದಶಿಯ ದಿನ ಗಾಳಿಪಟಗಳನ್ನು ಆಡಿಸಿ ಆಚರಿಸುವ ಹಬ್ಬ**: ಈ ಸಲ ನಾನು ಗಾಳಿಪಟದ ಹಬ್ಬಕ್ಕೆ ಒಳ್ಳೆಯ ಪತಂಗವನ್ನು ಕಟ್ಟಿದ್ದೇನೆ (ರೂಢಿ).

[ ಗಾಳಿ$_1$ + ಪಟ$_3$ ]

**ಗಾಳಿಪಟಂಬಿಡು** (ಕ್ರಿ). ಗಾಳಿಪಟವನ್ನು ಬಿಡು,—ಹಾರಿಸು: ಕಡೆಗಣ್ಣಳ ರಂಚಿ . . . ಎನಸುಂ ಸೊಗಯಿಸಿದುದು ನರರೂಪದ ಮಿನುಗುವ ಗಾಳಿಪಟಂಬಿಟ್ಟಂಗಜನನುರಾಗದಿ ಪಿಡಿಯಲ್ಪಟ್ಟೊಪ್ಪುವ ರಜ್ಜುವಿದೆಂಬಂತೆ (ಜಯಕಾ.೪-೨೮). [ ಗಾಳಿಪಟ + ಬಿಡು$_1$ ]

**ಗಾಳಿಪೂಜೆ** (ನಾ). ೧. ಶಕ್ತಿದೇವತೆಯ ಪೂಜೆ; ಪ್ರಾಣಿಬಲಿಯನ್ನು ಕೊಡುವ ಮಾರಿ ಪೂಜೆ,—ಕಾಳೀಪೂಜೆ: (೬). ೨. ದೆವ್ವಗಳಿಗೆ ಪೂಜೆಮಾಡುವುದು: (೬). [ ಗಾಳಿ$_1$ + ಪೂಜೆ$_3$ ]

**ಗಾಳಿಬಂದೂಕು** (ನಾ). ಗಾಳಿಯ ಒತ್ತಡದಿಂದ ಶಬ್ದಮಾಡುವ, ಗುಂಡಿಲ್ಲದ ಬಂದೂಕು,—ಕೋವಿ: ಹೆದರಬ್ಯಾಡ, ಸಣ್ಣಕಾಕಾ, ಇದು ಗಾಳಿಬಂದೂಕು (ನಿಜಾಥ. ೬೧). 'ಗಾಳಿಕೋವಿ' ಪರಾ.

[ ಗಾಳಿ$_1$ + ಬಂದೂಕು ]

**ಗಾಳಿಬಡಿ** (ಕ್ರಿ). ೧. ದೆವ್ವ, ಪಿಶಾಚಿ ಮೊದಲಾದ ದುಷ್ಟಶಕ್ತಿಗಳು ಮೆಟ್ಟಿಕೊಳ್ಳು; ದೆವ್ವಹಿಡಿ: ಎದುರು ಮನೆಯ ಹುಡುಗಿಗೆ ಗಾಳಿ ಬಡಿದಿದೆ (ರೂಢಿ). ೨. (ಆಲಂ) ಆಪತ್ತು ಒದಗು: ನನ್ನ ವಿಷಯಕ್ಕೆ ಬಿಂದೂನ ಭಯ ಮುರಿದಿತ್ತು ಎನ್ನುವಷ್ಟರಲ್ಲಿ ಅವಳಿಗೆ ಮತ್ತೊಂದು ಗಾಳಿಬಡಿದುಕೊಂಡಿತು (ಇಪ್ಪಕ. ೪೩೫).

[ ಗಾಳಿ$_1$ + ಬಡಿ$_1$ ]

**ಗಾಳಿಬಯಲು** (ನಾ). ಆವರಣವಿಲ್ಲದ ಬಯಲು; ಬಟ್ಟಬಯಲು: ಗಾಳಿಬಯಲಿನ ಬೀದಿ ಹೆಜ್ಜೆಮೂಡದ ಹಾದಿಯಲ್ಲಿ ಕುರುಹನು ಕಾಂಬ ಕಣ್ಣುಬರಲಿ (ಗರಿ. ೮೭-೧೧). [ ಗಾಳಿ$_1$ + ಬಯಲು (<ಬಯಲ್) ]

**ಗಾಳಿಬಾಳೆ** (ನಾ). ಒಂದು ಬಗೆಯ ಬಾಳೆ; ಕಪ್ಪುರಬಾಳೆ; ಪಾಟ ಬಾಳೆ: ತಾಮ್ರದ ಹರಿವಾಣದಲ್ಲಿ ಎರಡು ಹಣತೆ ಗಾಳಿಬಾಳೆ ಹಣ್ಣುಗಳನ್ನಿರಿಸಿದ (ಜಗುಕ. ೯೬). [ ಗಾಳಿ$_1$ + ಬಾಳೆ$_1$ (<ಬಾೞೆ) ]

**ಗಾಳಿಬಿಡಿಸು** (ಕ್ರಿ). ೧. ಪಿಶಾಚಿಯನ್ನು ಬಿಡಿಸು: ಯಾರೋ ಒಬ್ಬ ಮಂತ್ರವಾದಿ ಬಂದು ಆಕೆಗೆ ಗಾಳಿಬಿಡಿಸಿದ (ರೂಢಿ). ೨. (ಆಲಂ) ಶಿಕ್ಷಿಸು; ಬುದ್ಧಿಕಲಿಸು: ಆ ಕಳ್ಳನಿಗೆ ಚೆನ್ನಾಗಿ ಗಾಳಿಬಿಡಿಸಿದರು (ರೂಢಿ). [ ಗಾಳಿ$_1$ + ಬಿಡಿಸು ]

**ಗಾಳಿಬುಡ್ಡೆ** ‘ ಗಾಳಿಬುರುಂಡೆ ’ ನೋ.

**ಗಾಳಿಬುರುಡೆ, ಗಾಳಿಬುಡ್ಡೆ** (ನಾ). ೧. ಗಾಳಿಯನ್ನು ತುಂಬುವ ಬುರುಡೆ. ೨. (ಆಲಂ) ಸತ್ವಹೀನವಾದುದು: ಅವನದು ಸ್ಥೂಲ ದೇಹ, ಆದರೆ ಬರೀ ಗಾಳಿಬುರುಡೆ (ರೂಢಿ). **ಗಾಳಿಬುಡ್ಡೆ**: ೧. ವಿಭುವೊಬ್ಬನೀ ಗಾಳಿಬುಡ್ಡೆಗಳನೂದುವನು ಹಬೆಗುಳ್ಳೆಯೋ ಸೃಷ್ಟಿ (ಮಂಕುಕ. ೮೫). [ ಗಾಳಿ$_1$ + ಬುರುಡೆ ]

**ಗಾಳಿಮಂಟಪ, ಘಾಳಿಮಂಟಪ** (ನಾ). ೧. ನಾಲ್ಕು ಕಡೆಯೂ ಗಾಳಿ ಬೀಸುವಂತೆ ತೆರೆದಿರುವ ಮಂಟಪ: (+). **ಘಾಳಿಮಂಟಪ**: ೨. ದೇವಸ್ಥಾನದ ಒಂದುಭಾಗ: ಮಹಾಲಕ್ಷ್ಮೀದೇವಿ ಅಂಮನವರಿಗೆ ತಾವೂ ಮಾಡಿಸಿದಂಥಾ ಶೇವೆ . . . ತೆಂಕಣಗೋಪುರ ಆ ಬಾಗಿಲ ವಾಡಗಳು ಅಡಿಗೆಮನೆ ಆ ಮುಂದಣ ಚಪ್ಪರ ಪೋಲಗದ ಘಾಳಿಮಂಟಪ (ಸೌಇಇ. IX–ii, ೫೮೫–೧೪ ; 1538). [ ಗಾಳಿ$_1$ + ಮಂಟಪ ]

**ಗಾಳಿಮಳೆ** (ನಾ). ಗಾಳಿಯಿಂದ ಕೂಡಿದ ಮಳೆ; ರಭಸದ ಮಳೆ: ಗಾಳಿಮಳೆ, ಹನಿಹನಿಮಳೆ, ಜಡಿಮಳೆ, ಜಿರಾವರ್ತಿಮಳೆಯೂ ಸುರಿಯತೊಡಗಿತು (ಬಾಳಿಗಿ. ೭೬). [ ಗಾಳಿ$_1$ + ಮಳೆ (<ಮೞೆ) ]

**ಗಾಳಿಮಾತು** ‘ ಗಾಳಿವಾತು$_1$ ’ ನೋ.

**ಗಾಳಿಮೆಟ್ಟು** (ಕ್ರಿ). = ಗಾಳಿಹಿಡಿ ೧: ಹಾಳುಬಾವಿಯ ಬಳಿಗೆ ಹೋದಾಗ ಅವಳಿಗೆ ಗಾಳಿಮೆಟ್ಟಿಕೊಂಡಿತಂತೆ (ರೂಢಿ). [ ಗಾಳಿ$_1$ + ಮೆಟ್ಟು$_1$ ]

**ಗಾಳಿಯಂತ್ರ** (ನಾ). =ಗಾಳಿಗಿರಣಿ: ಆಮೇಲೆ ಈ ಊರಿನಲ್ಲಿ ಮೊದಲಾಗಿ ನಾನು ಗಾಳಿಯಂತ್ರ(Wind mill)ವನ್ನು ಕಂಡೆ (ಪ್ರವಾಸಿ. ೧೨೬).
[ ಗಾಳಿ$_1$ + ಯಂತ್ರ ]

**ಗಾಳಿಯಮ್ಮ** (ನಾ). ಒಂದು ಬಗೆಯ ದನದ ರೋಗ; ದನಗಳ ಕಾಲು ಮತ್ತು ಬಾಯಿಗೆ ಬರುವ ಬೇನೆ: (ಎಸಮ್ಯು. XV, ೩೯).
[ ಗಾಳಿ$_1$ + ಅಮ್ಮ$_2$ ]

**ಗಾಳಿಯಿಕ್ಕು** (ಕ್ರಿ). ಗಾಳಿಯನ್ನು ಬೀಸು,—ಹಾಕು: ಬಿಜ್ಜಣಿಗೆಗೊಂಡು, ಮಹಾರಾಜನಿಗೆ ಮೆಲ್ಲಗೆ ಗಾಳಿಯಿಕ್ಕಲಾರಂಭಿಸುವಳು (ಬಿಟ್ಟಿಅ. ೧೬-೧೬).
[ ಗಾಳಿ$_1$ + ಇಕ್ಕು ]

**ಗಾಳಿವಟ್ಟೆ, ಘಾಳಿವಟ್ಟೆ** (ನಾ). ಗಾಳಿ ಸಂಚರಿಸುವ ಹಾದಿ; ವಾಯು ಮಾರ್ಗ; ಆಕಾಶ: “ ಆಗಸ . . . ಗಾಳಿವಟ್ಟೆಯೆನಲ್ಕಂದಾಗಲಾಕಾಶವೆಸರದು ” (ಕವಿಕಂ. ೪೬) ; ಭಾಸ್ಕರಂ ಬಟಿಕ ಗಾಳಿವಟ್ಟೆಯಿನಿೞಿದು ಕಡಲ ನೀರ್ವುಗೆ ತಾರೆಗಳ್ ತೋರ್ದುವಂಬರದೊಳು (ಶ್ರೀರಾಮ. ೫ ೩೦). **ಘಾಳಿವಟ್ಟೆ**: “ ಮಿಾಂಬಟ್ಟೆಯೆನೆ ಘಾ[ಪಾಠಾಂ. ಗಾ]ಳಿವಟ್ಟೆ ” (ಕಬ್ಬಿಕ್ಕಿ. ೧೦) [ ಗಾಳಿ$_1$ + ಬಟ್ಟೆ$_1$ ]

**ಗಾಳಿವಟ್ಟೆಗ** (ನಾ). ಆಕಾಶದಲ್ಲಿ ಸಂಚರಿಸುವವನು; ದೇವತೆ; ಖಚರ: “ ಅಮರ್ದುಣಿಸುಗಳ್ . . . ಗಾಳಿವಟ್ಟೆಗರ್, ಅಚ್ಚರರ್, (ಬೋಳೆಯರ್)–ಈ ೯ ದೇವರ್ಕಳ ಪೆಸರ್ ” (ಕಶಸಾ. ೨-೧೯); “ ಕನಸಿಲ್ಲದ ರೆಮೆಯಿಕ್ಕದರನುನಯದಿಂ ಗಾಳಿವಟ್ಟೆಗರುಮಚ್ಚರರೆಂದೆನುತುಂ . . . ದೇವವ್ರಾತಕಮರ್ದ ನಾಮಮಿವಕ್ಕುಂ ” (ಕವಿಕಂ. ೩೨) ; ಏಳಡಿಭೂವರರೇಳಡಿಖೇಚರರ್ ಗಾ[ಪಾಠಾಂ. ಘಾ]ಳಿವಟ್ಟೆಗ ಸುರರಸುರಜಾಲಮಲ್ಲಿಂದ ಸುರೇಂದ್ರರೊಯ್ದರು ನಾಥ ಕೇಳೀವನದ ಮಂಟಪಕೆ (ವರ್ಧಚ. ೧೧-೫೧.)
[ ಗಾಳಿವಟ್ಟೆ + – ಗ$_2$ ]

**ಗಾಳಿವಟ್ಟೆದಲೆಯ** (ನಾ). ಆಕಾಶವೇ ತಲೆಯಾಗುಳ್ಳವನು; ವ್ಯೋಮಕೇಶ; ಶಿವ: ಗಾರುಡಧ್ವಜನತಾ ಗಾಳಿವಟ್ಟೆದಲೆಯಾ . . . ವಿರಾಗಾ ಸರಾಗಾ ಜಯ (ಉದ್ಭದೇ. ೬-೨೭). [ ಗಾಳಿವಟ್ಟೆ + ತಲೆ$_1$ + – ಅ$_7$ ]

**ಗಾಳಿವರು** (ಕ್ರಿ). ಗಾಳಿಯಂತೆ ಬರು; ವೇಗವಾಗಿ ಬರು: ಸರ್ವಸ್ವವನ್ನೂ ಕೊಳ್ಳೆಯಿಂದ ಕೊಂಡು ನಿರ್ಮೂಲ ಮಾಡಿಬಿಡಲು ಇಲ್ಲಿಗೆ ಗಾಳಿವರುತ್ತಿರುವನು (ಮಂತ್ರಶ. ೭೫-೨೦). [ ಗಾಳಿ$_1$ + ಬರು$_1$ (<ಬರ್$_1$) ]

**ಗಾಳಿವರ್ತಮಾನ** (ನಾ). “ (ನಿಜವೆಂದು ತಿಳಿಯದ) ಕೇಳಿಕೆಯ ಮಾತು; ಗಾಳಿವರ್ತಮಾನ; ಬೀದಿಸುದ್ದಿ ” (Hear-say. ಇಂಕನಿ) ; ಬೇರೆ ಮದುವೆಮಾಡಿಸುವುದಕ್ಕೆ ಪ್ರಯತ್ನಿಸುತ್ತಿದಾಳೆ ಎಂಬುದಾಗಿ ಗಾಳಿವರ್ತಮಾನ ಕೇಳುತ್ತ ಬಂತು (ಮಹಾಗ. ೬೨).
[ ಗಾಳಿ$_1$ + ವರ್ತಮಾನ ]

**ಗಾಳಿವಾತು$_1$, ಗಾಳಿಮಾತು** (ನಾ). ಗಾಳಿಯಲ್ಲಿ ಹರಡುವ ವರ್ತಮಾನ; ಸುಳ್ಳುಸುದ್ದಿ: ಜಾಣರ್ ಭಾವಿಸಿ ಬಗೆದು ನೋಡೆ ನೆಲೆಗೊಟ್ಟುಸಿರೆಂಬುದೆ ಗಾಳಿವಾತದಂ ನಂಬುವುದೇ (ಧರ್ಮನಾ. ೫-೮೯) ; ಗಾಳಿವಾತೆಲ್ಲವ ಮಱೆಯೆಂದು ತಾಂ ಮುನ್ನ ಕೇಳಿದಂತೊರೆದನೆಲ್ಲವನು (ಭರಚ. ೫೬-೯೪). **ಗಾಳಿಮಾತು**: ಸುಮ್ಮನೆ ಗಾಳಿಮಾತು ನಂಬಿಕೊಂಡು ಮಾತನಾಡಬಾರದು (ರೂಢಿ). [ ಗಾಳಿ$_1$ + ಮಾತು$_1$ ]

**ಗಾಳಿವಾತು$_2$** (ನಾ). ನಿಂದೆ; ಬಯ್ಗಳು: “ ಗಾಳಿವಾತು = ಬೈಗುಳ್ ” (ಶಮದ. ಪರಿ. ೨) ; “ ತಿಟ್ಟೆಂದೊಡಂ ಗಾಳಿವಾತೆಂದೊಡಂ ಬೈಗುಳಕ್ಕುಂ ” (ಶಬ್ದಮಂ. ೫೪) ; “ ಗಾಳಿವಾತೆಂದು ತಿಟ್ಟೆಂದು ಬೈಗುಳ್ ” (ಕಬ್ಬಿಕ್ಕಿ. ೮೯).
[ ಗಾಳಿ$_2$ + ಮಾತು$_1$ ]

**ಗಾಳಿವಾರ** (ನಾ). (ಉಕ) ಗಾಳಿಪಟ: ಬಾಲಾಗಸಿಯಿಲ್ಲದೆ ಗಾಳಿವಾರವು ಇರುವ ಬಗೆ ಹೇಗೆ (ಬಿಟ್ಟಿಚೊ. ೧೬). [ ಗಾಳಿ$_1$ + ವಾರ ? ]

**ಗಾಳಿವಿಡಿ** (ಕ್ರಿ). ೧. “ ದೆವ್ವಹಿಡಿ ” (ಪ್ರಭಣ್ಣ) ೨. “ ವಾಸನೆ ಹಿಡಿ ” (ಪ್ರಭಣ್ಣ) ; ಗಾಳಿವಿಡಿದಳ್ಳೆಂಕಗೊಂಡು . . . ಹಿಂದೆ ಮರಳ್ದಿಕ್ಕಲಂ (ಹಚಕಾ. ೬-೧೦). [ ಗಾಳಿ$_1$ + ಪಿಡಿ$_1$ ]

**ಗಾಳಿವೆಱಗು** (ನಾ). ಗಾಳಿ ಬೀಸುವ ಸ್ಥಳ: ಅಂತು ಮಡಿಪಿ ಶರೀರ ಸಮೇತಂ ನಿರಾದಾನವಿಧಾನದಿಂ ಗಾಳಿವೆಱಗಿನೊಳಿರ್ದಮಳದೀಪಿಕೆಯಂತಿರ್ವರುಮೊಡನದೃಶ್ಯರಾಗಿ ಬಂದು (ಶಾಂತಿಪು. ೬-೮೧ ವ) ; ಆ ಗಾಳಿವೆಱ[ಪಾಠಾಂ. ಸ]ಗಿನಿಂದಮೆ ಪೋಗಿ ಪರಿಶ್ರಮವಶಾತುರಂ ವಸುದೇವಂ ನಾಗೇಂದ್ರನಂತೆ ಮದಲೀಲಾಗಮನಂ ಕಂಡನೊಂದು ಕಮಳಾಕರಮಂ (ಅರ್ಧನೇ. ೫-೯೯) ; ಕಿಱಿದು ಬೇಗಮಾ ಗಾಳಿವೆಱಗಿನೊಳೆ ರಥಮಂ ನಿಲಿಸಿ ವಿಸ್ಮಯಂಬಡುತ್ತೆ (ಪುಷ್ಪಪು. ೫-೧೦೪ ವ).
[ ಗಾಳಿ$_1$ + ಪೆಱಗು ? ]

**ಗಾಳಿವೇಗ** (ನಾ). ಗಾಳಿಯ ವೇಗ; ವಾಯುವೇಗ: ಗಾಳಿವೇಗದೊಳೆಯ್ದಿ ಕೈಲಾಸಗಿರಿಯ ನಿರಾಲಸ್ಯದಿಂದೇಱಿ . . . ಭೂಲಲನೇಶ ಪೊರ್ದಿದನು (ಭರಚ. ೪೪-೬೩). [ ಗಾಳಿ$_1$ + ವೇಗ]

**ಗಾಳಿಶಂಕೆ** (ನಾ). ದೆವ್ವದ ಭೀತಿ; ಪಿಶಾಚಿಯ ಕಾಟ; ಭೂತಭಯ: (+). [ ಗಾಳಿ$_1$ + ಶಂಕೆ ]

**ಗಾಳಿಸಮಾಚಾರ** (ನಾ).=ಗಾಳಿವರ್ತಮಾನ: “ವದಂತಿ, ಗಾಳಿಸಮಾಚಾರ, ಬೀದಿಸುದ್ದಿ ” (Cry. ಇಂಕನಿ). [ ಗಾಳಿ$_1$ + ಸಮಾಚಾರ ]

**ಗಾಳಿಸವಾರಿ** (ನಾ). ಗಾಳಿಯಲ್ಲಿ ಸಂಚಾರಮಾಡುವುದು; ಬಯಲ ತಿರುಗಾಟ; ಶುದ್ಧವಾದ ಗಾಳಿಬೀಸುವ ಕಡೆ ತಿರುಗಾಡುವುದು: ನೀನು ಕುದುರೆಯ ಮೇಲೆ ಗಾಳಿಸವಾರಿ ಹೊರಟರೆ ನಾನೂ ನಿನ್ನ ಪಕ್ಕದಲ್ಲಿ

ರುತ್ತೀನೆ (ಅರ್ಯಾಕ. ೮೦) ; ಒಂದು ದಿನ ಬೆಳಗ್ಗೆ ನಾನು ಗಾಳಿಸವಾರಿಗೆ ಹೊರಡಬೇಕೆಂದಿದ್ದೆ (ಬರಬಾ. ೧೫೨). [ ಗಾಳಿ$_1$ + ಸವಾರಿ ]

**ಗಾಳಿಸು$_1$** (ಕ್ರಿ). **ಮೆಟ್ಟಿಕೊಳ್ಳು ; ಅಡರು :** ತಾಳತಪ್ಪೀ ರೀತಿ ಬೇತಾಳ ದಂತನ್ನ ಗಾಳಿಸುವ ಗೋಳಿಸುವ ಖಲರು ಕೆಲರು (ನನಲ್ಲ. ೮).

[ ಗಾಳಿ$_1$ + – ಸು$_1$ ]

**ಗಾಳಿಸು$_2$** (ಕ್ರಿ). ೧. **ಹೋಗಲಾಡಿಸು ; ದೂರಮಾಡು :** ಆ ಮುನಿರಾಜಂ ಕರ್ಮಂಗಳಂ ಗಾಳಿ[ ಪಾಠಾಂ. ಘಾತಿ ]ಸಿದಂ ಈ ರಾಜರಾಜಂ ಷಟ್ಖಂಡಮಂಡಳಮಂ ಬಾಯ್ಕೇಳಿಸಿದಂ (ಆದಿಪು. ೬-೨೪ ವ) ; ೨. **ಶೋಧಿಸು ; ಸೋಸು ; ಒಂದರಿಯಾಡು :** ಶರ್ಕರೆ ಶುಂಠಿ ಮಾತುಳುಂಗದ ಪುಳಿಯೆಂಬಿವಂ ಮೊಸರೊಳಿಕ್ಕಿ ಸಿತಾಂಬರದಿಂದೆ ಗಾಳಿಸಿಟ್ಟು (ಲೋಕೋಪ. ೮-೫೩) ; ಸಲೆ ಕಳ್ಳಂ ಗಾಳಿಸುವರ ನೆಣದ ನೆತ್ತರಂ ಗಾಳಿಸುವರ್ (ಸುಕುಮಾ. ೧೧-೪೬) ; ಹಾಲನ್ನು ಕುದಿಸಿ, ಚೆನ್ನಾಗಿ ಗಾಳಿಸಿದ ಹಿಟ್ಟನೊಡನೆ ಬೆರಸಿ ಮುದ್ದೆಯಾಗುವವರೆಗೆ ಕಲಸುವುದು (ಅಡುಸಾ. ೯೪); ಇದನ್ನು ಕಡಲುತೀರಗಳಿಂದಲೂ, ನದಿತೀರ ಗಳಿಂದಲೂ ತಂದು ಸಂಗ್ರಹಿಸಿ ಗಾಳಿಸು(sift)ತ್ತಾರೆ (ಬಾಲಪ್ರ. I, ೨೩೩). ೩. **ಸೋರು ; ಸುರಿ :** ಮೇಘ ಸಂತತಿಗಾದ ಗರ್ಭಮೆಲ್ಲಂ ತುಂಬಲ್ ಮಾತೇನೊ ಗಾಳಿಸಲೆಂದಱಿಗೆ ಚಟ್ಟಕಂದರ್ಪನ ಸೂತ್ರೇಷ್ಟದಿಂ (ಚಟ್ಟಮು. ೮-೬೦). ೪. (ಆಲಂ) **ಸೂರೆಮಾಡು :** ಗಾಳಿಸು ಗೆಲ್ವನಂ ಹರಹು ಹೊಡೆಗನಂ ಸುಲಿ ಸುತ್ತುಗಾಱನಂ (ಲೀಲಾವ. ೨-೧೦೨).

[ ಗಾಳನ + – ಇಸು$_2$ ]

**ಗಾಳಿಸುದ್ದಿ** (ನಾ). ಗಾಳಿ ವರ್ತಮಾನ ; **ನಿರಾಧಾರವಾದ ವಾರ್ತೆ :** ಅವರ ದಸ್ತಗಿರಿಯಾದ ಬಗ್ಗೆ ಗಾಳಿಸುದ್ದಿ ಕೇಳಿದೆ (ರೂಢಿ).

[ ಗಾಳಿ$_1$ + ಸುದ್ದಿ ]

**ಗಾಳಿಸೆಟಿ** (ನಾ). = ಗಾಳಿಯಮ್ಮ : (ಎಸಮ್ಯು. XV , ೩೯).

[ ಗಾಳಿ$_1$ + ಸೆಟಿ ? ]

**ಗಾಳಿಸೊಂಕು** ' ಗಾಳಿಸೋಂಕು ' ನೋ.

**ಗಾಳಿಸೋಂಕು**, ಗಾಳಿಸೊಂಕು (ನಾ). ಭೂತ, ಪಿಶಾಚಿ ಮೊದಲಾದುವು ಗಳ ಆಕ್ರಮಣ, –ಪೀಡೆ : ಗಾಳಿಸೋಂಕಾಯ್ತೆಂದು ಬೇಗಡಿಗಳಂ ಕರೆದು ಬೇಳುವೆಯನೆಸಗಿದರ್ (ಕಾಲೂರ. ೦೪೩-೩೦೦). **ಗಾಳಿಸೊಂಕು :** ಅವರ ಮನೆಯಲ್ಲಿ ಗಾಳಿಸೊಂಕು ಆಗಿದೆ ಎಂಬ ಸುದ್ದಿ ಹರಡಿತು (ರೂಢಿ).

[ ಗಾಳಿ$_1$ + ಸೋಂಕು$_2$ ]

**ಗಾಳಿಹಡಗು** (ನಾ). ಗಾಳಿಯಲ್ಲಿ ತೇಲುವ ಚೀಲ ; **ಆಕಾಶಬುಟ್ಟಿ :** "(ಫಲಕವಿಮಾನವಲ್ಲದ) ಗಾಳಿಹಡಗು, ಆಕಾಶಬುಟ್ಟಿ" (Gas-bag. ಇಂಕನಿ). [ ಗಾಳಿ$_1$ + ಹಡಗು (< ಪಡಂಗು) ]

**ಗಾಳಿಹಾಕು** (ಕ್ರಿ). ೧. **ಗಾಳಿ ಬೀಸು :** ಮಗುವಿಗೆ ಸ್ವಲ್ಪ ಗಾಳಿಹಾಕು (ರೂಢಿ). ೨. (ಆಲಂ) **ಉಬ್ಬಿಸು ; ಹುರಿದುಂಬಿಸು :** ಉದ್ಯಮ ಹೂಡಬೇಕೆಂದು ಅವನಿಗೆ ಗಾಳಿಹಾಕಿದೆ (ರೂಢಿ).

[ ಗಾಳಿ$_1$ + ಹಾಕು (< ಪಾಯ್ಕು$_1$) ]

**ಗಾಳಿಹಿಡಿ** (ಕ್ರಿ). ೧. **ದೆವ್ವ ಹಿಡಿ ; ಪಿಶಾಚಿ ಮೆಟ್ಟು ; ಭೂತಾವೇಶ ವುಂಟಾಗು :** ಆಕೆಗೆ ಗಾಳಿಹಿಡಿದಿದೆ (ರೂಢಿ). ೨. **ವಾಸನೆ ಹಿಡಿ ; ಸುಳಿವು ಹಿಡಿ :** ಜೊತೆಯಲ್ಲಿ ಬರುತ್ತಿದ್ದ ನಾಯಿಗಳು ಇದ್ದಕ್ಕಿದ್ದಂತೆ ನೆಲವನ್ನು ಮೂಸಿ 'ಗಾಳಿಹಿಡಿಯುತ್ತ' . . . ತಿರುಗತೊಡಗಿದುವು ! (ಕಾನೂರು. ೦೪೦). [ ಗಾಳಿ$_1$ + ಹಿಡಿ$_1$ (< ಪಿಡಿ$_1$) ]

**ಗಾಳಿಹೋಗು** (ಕ್ರಿ). ೧. **ಗಾಳಿ ಹೊರಬರು :** ಕಾರಿನ ಚಕ್ರದಲ್ಲಿ ಗಾಳಿ ಹೋಗಿದೆ (ರೂಢಿ). ೨. **ಭೂತಾವೇಶವು ನಿಂತುಹೋಗು ; ಮೈಮೇಲೆ ಬಂದಿದ್ದ ದೆವ್ವ, ಪಿಶಾಚಿ ಮೊದಲಾದುವು ಬಿಟ್ಟು ಹೋಗು :** ಗಾಳಿ ಹೋದಮೇಲೆ ಏನೇನಾಯಿತೆಂದು ಮಾವ ಕೇಳಿದರು (ಸ್ಮ್ರತಿಚಿ. ೩೨). [ ಗಾಳಿ$_1$ + ಹೋಗು$_1$ (< ಪೋಗು$_1$) ]

**ಗಾಳು$_1$**, ಗಾಲು (ನಾ). ೧. **ಒರಟಾದುದು ; ಸೊಕ್ಕಿದುದು.** ' ಗಾಳುಗೆಡು ', ' ಗಾಳುತನ ' ಪರಾ. ೨. **ಸಾಮಾನ್ಯವ್ಯಕ್ತಿ ; ಕೆಲಸಕ್ಕೆ ಬಾರದ ವ್ಯಕ್ತಿ ; ನಾಡಾಡಿ:** ಆಟವಂಟಿಗಂ ಗಾಳುವಿವಂ ಕುಟಿಲಂ ಲಂಪಟನೆನಿಪ್ಪವಂ ಮಾನಸನೇ (ಕಾವ್ಯಾವ. ೩೬) ; ಬೀದಿಯೊಳ್ಪುಗಿದು ಮುಂದಲೆಯೊಳ್ ಕಿಱುನೆಕ್ಕನಿಕ್ಕಿದಲ್ಲದೆ ಮುಱಿದಾಕೆ ನಕ್ಕುಱಿವಳೇ ಸುಡು ವಳ್ ಗಳ ಗಾಳು ಗಂಡನಂ (ಲೀಲಾವ. ೨-೧೦೦) ; ಕೀರ್ತ್ಯಂಗನೆ . . . ನರ್ತಿಸುತವಿರ್ಪಳ್ ಗಾಳುವಿಂತಾವಳೋ (ಎಕ. V, ಅರಸೀ. ೭೯-೫೮ ; 1183). (ಗು). ೩. **ಅಸಂಸ್ಕೃತ ; ಒರಟಾದ ; ಕೀಳಾದ.** ' ಗಾಳು ಗುಂಟಣಿ ', ' ಗಾಳುಗೊರವ ' ಪರಾ. **ಗಾಲು :** (ಕ).

**ಗಾಳಾಗು = ಗಣನೆಗೆ ಬಾರದಾಗು ; ಅಪ್ರಯೋಜಕವಾಗು ; ಹಾಳಾಗು :** ರಥದ ಗಾಲಿಯು ಗರುವತನ ಗಾಳಾಯ್ತಲೇ ಬೊಪ್ಪರಿಸಿ ತಗ್ಗಿತು ತೇರು (ಕುವ್ಯಾಕ. ೨೬-೧೩); ಮೂಗಿಲಿಯೆಸವಂತಂ ಮನೆವಾಗಿಲ್ವಾಗೆ ಜೋಗಿ ಬಂದನೆಂದೆಳಮಕ್ಕಳ್ ಕೂಗಿಡೆ ಬಿಗುರ್ತದೇಂ ಗಾಳಾಗರೆ ಚಿಕ ದೇವರಾಯನೊಳ್ಸೆಣಸಿದವರ್ (ಅಪ್ರತಿ. ೦೪೦-೨೦); ಕಾನೂರುಮನೆ ತಾನು ಬಿಟ್ಟು ಹೋದಾಗ ಇದ್ದುದಕ್ಕಿಂತಲೂ ಈಗ ಹೆಚ್ಚು ಪಾಳಾಗಿ, ಗಾಳಾಗಿ ತೋರಿತು (ಕಾನೂರು. ೫೬೮). [ < ಕಾಟು$^1$$_1$ ]

**ಗಾಳು$_2$** (ನಾ). **ಕರಿಯ ಬಣ್ಣ ; ಕಪ್ಪು.** ' ಗಾಳುಗಣ್ ' ಪರಾ.

[ < ಕಾಟು$^1$$_2$ ]

**ಗಾಳುಗಂಡಿಕೆ** (ನಾ). ೧. **ಕೀಳಾದ ಪುರುಷತ್ವ ; ಸೊಕ್ಕಿನ ಗಂಡುತನ :** ನಿನ್ನ ಸೊರ್ಕುಜವ್ವನದ ಸೊಬಗನ್ನೊಡ್ಡಿ ಹೀಗೆ ಬೀಸಿರುವ ಕೆಣಕು ಕಣ್ಣುಳ್ಳ ವನನ್ನು ಎರ್ದೆಗಲಂಕಿ ಗಾಳುಗಂಡಿಕೆಗುಬ್ಬಿಸುತ್ತಿದೆ (ಬಿಟ್ಟಆ. ೧೦-೨೦). ೨. **ಧೂರ್ತಸಾಹಸ :** ಗಂಗರಾಜನು ಅವನ ಗಾಳುಗಂಡಿಕೆಗೆ ಅಚ್ಚರಿ ವಟ್ಟನು (ಶವತಿ. ೬೮). [ ಗಾಳು$_1$ + ಗಂಡಿಕೆ ]

**ಗಾಳುಗಜಱು** (ನಾ). **ಬಲವಾದ ಗದ್ದಲ ; ಪ್ರಬಲವಾದ ಗರ್ಜನೆ ; ದೊಡ್ಡಕೋಲಾಹಲ :** ಕೊಂಬಿನ ಗಾಳುಗಜಱಿನ ಕಹಳೆಗಳ ಕಳಕಳದ ಬೊಗ್ಗುಗಳ ಮೇಳವಣೆ ಭುಗಿಲಿಡಲು (ಕುವ್ಯಾಭೀ. ೬-೯).

[ ಗಾಳು$_1$ + ಗಜಱು$_2$ ]

**ಗಾಳುಗಣ್** (ನಾ). **ಕಪ್ಪಾದ ಕಣ್ಣು ; ಕಾಂತಿಯುತವಾದ ಕಣ್ಣು ; ಆಕರ್ಷಕವಾದ ನೇತ್ರ :** ಚಾವಳ ಹರಿಣೀ ವಿಲೋಕನವುನೀಳ್ಕುಱಿಗೊಂಡ ಳೆನಲ್ಕೆ ಗಾಳುಗಣ್ಪೊಳೆಯೆ ಪುಳಿಂದಿ ಬೀರಸಿರಿಯಂತಿರೆ ಬೆನ್ನನೆ ಬಂದಳೋ ಪವನಾ(ಅರ್ಜುನೇ. ೩-೬೦) ; ನೆತ್ತದ ಸಾರಿಯಂತೆ ವೊಲೆ ಮೂಡಲೊಡಂ ಗುಣವೇಱಿ ಲಜ್ಜೆ ನಾಣ್ ಪತ್ತುವು ಗಾಳುಗಣ್ಬರಿದುವಾಸೆಯ ಪಾಸಗೆ ಯಂತೆ (ಅನಂಪು. ೮-೧೫). [ ಗಾಳು$_2$ + ಕಣ್ ]

**ಗಾಳುಗುಂಟಣಿ** (ನಾ). **ಕ್ಷುದ್ರೆಯಾದ ಕುಂಟಣಿ ; ಧೂರ್ತಳಾದ ತಲೆಹಿಡುಕಿ :** ಡಾವರಡಾಕಿನಿ ಶಾಕಿನಿದೇವತೆ ಕತೆವೇಟಲತಿಶಯಂ ಬಲ್ಲಳ್ ನಾನಾ ವಿಧದ ಗಾಳುಗುಂಟ[ ಪಾಠಾಂ. ಕೂಂಠ]ಣಿ ಭೂವಳಯದೊಳೆಸೆವ ಕನ್ನೆಯುಜ್ಜಯಿನಿಯೊಳಂ (ಪಂಚತಂ. ೦೫೨-೪). ' ಕಾಳುಗುಂಟಣಿ ' ಪರಾ.

[ ಗಾಳು$_1$ + ಕುಂಟಣಿ ]

**ಗಾಳುಗೂಟ** (ನಾ). **ದಂಡುಕು ಸ್ವಭಾವದ ಮೂರ್ಖ ; ಒರಟನಾದ ಪೆದ್ದ :** ಗಾಳುಗೂಟರೊಳ್ ಪೊಣರ್ವ ಗನ್ನನಿಟ್ಟುರದ ಸೆಣಸಾಟವುಂ ರಾವಣಸೇನೆಗೆ ಮುಡಿದುದು(ರಾಮಾಶ್ವ. ೦೬೩-೨೩).

[ ಗಾಳು$_1$ + ಕೂಟ ]

**ಗಾಳುಗೆಡು** (ಕ್ರಿ). **ಒರಟುತನದಿಂದ ವರ್ತಿಸು :** ಗ್ರಾಸ ವಸನ ಪರಿಕರ ವಿಲ್ಲದಿರೆ ಕಟ್ಟಾಸುರದೊಳು ಗಾಳುಗೆಡದೆ ಓಸರಿಸುತ್ತೊಯ್ಯನೇಕಾಂತ

ದೊಳೊವ್ಮೆ ಬೇಸಱಿಸದೆ ಬಿನ್ನವಿಪುದು (ಹರಿಬ. ೬-೨೦). 'ಕಾಳಂಗೆಡು' ಪರಾ. [ಗಾಳು$_1$ + ಕೆಡು$_1$]

**ಗಾಳಂಗೊರವ** (ನಾ). ಕೀಳಾದ ತಪಸ್ವಿ : ಗಾಳಂಗೊರವಂ ತಗುಳ್ದು ಪಳಾಳವುನೇನೊಂದನಪ್ಪೊಡಂ ಗಟಿಪಿದೊಡಾ ಬೀಱುನುಡಿಗೇಳ್ದು ಕೆವ್ಮನೆ ಬೇಳಲ್ ನಿವುಗಂತು ರಾಜಸೂಯಂ ಪೊಗ್ಗೇ (ಪಂಪಭಾ. ೬-೨೪); "ಗಣನೆಗೆ ಬಾರದ ತಪಸ್ವಿ" (ಪಂಪನಿ) : "ಕಪಟಿಯಾದ ಸಂನ್ಯಾಸಿ" (ಪಂಪದೀ. ೨೨೦). [ಗಾಳು$_1$ + ಗೊರವ]

**ಗಾಳುತನ** (ನಾ). ಒರಟು ಸ್ವಭಾವ ; ದುಡುಕು : ಗಾಳುತನದಿಂ ಪುರುಷರನೇಳಿದರಂ ಪೂಳ್ವ ದುಶ್ಚರಿತ್ರೆಯರಂ (ಮುಂಬರಾ. X, ೨೬೬-೪೪ ; 1229) ; ಮತ್ತವಾರಣದೊಳೊತ್ತಿಗೆ ಕುಳ್ಳಿರ್ದೊಡನೆಯ ಸೂಳಿಗೆ ತನ್ನ ತಂಗಿಯ ಬೇಳಾದ ಗಾಳುತನವುನಿಂತೆಂದಳ್ (ಅನಂಪು. ೮-೧೩ ಪ) ; ಕರ್ಣನಾಯುಃಷ ಕೋಳುವೋಯಿತ್ತೆಂಬ ಗರ್ವನ ಗಾಳುತನವನು ನಂಬಲಱಿವೆನೆ ಪಾರ್ಥ (ಕುವ್ಯಾ.ಕ. ೧೭-೧೭). [ಗಾಳು$_1$ + – ತನ]

**ಗಾಳುದೊಟ್ಟು** 'ಗಾಳ್ದೊಟ್ಟು' ನೋ.

**ಗಾಳುಮಂದಿ** (ನಾ). ನಾಡಾಡಿಜನ ; ಸಾಮಾನ್ಯರು : ಬೀದಿಯ ಗಾಳು ಮಂದಿಯ ನಡುವೆ ಕುರುಭೂಪಾಲನರಸಿಯರಳುತ ಹರಿದರು ಬಿಟ್ಟಮಂಡೆಯಲಿ (ಕುವ್ಯಾ.ಅ. ೨೦-೩). [ಗಾಳು$_1$ + ಮಂದಿ$_1$]

**ಗಾಳುಮೂಳ** (ನಾ). ಕನಿಷ್ಠನಾದವನು ; ನೀಚತರಗತಿಯ ವ್ಯಕ್ತಿ : ಈ ಗಾಳುಮೂಳ ಬಾಳರೆತ್ತಾನುಂ ಭಂಗಿಸಿದರೆ ? (ರಾಮಾಶ್ವ. ೧೮೫-೨೭). 'ಕಾಳಂಮೂಳ' ಪರಾ. [ಗಾಳು$_1$ + ಮೂಳ]

**ಗಾಳುಮೇಳು**, ಗಾಲುಮೇಲು, ಗಾಲ್ಮೇಲು (ನಾ). ೧. ಅಸ್ತವ್ಯಸ್ತತೆ ; ಅವ್ಯವಸ್ಥೆ ; ಕ್ಷೋಭೆ : ಕೇಸುರಿಯ ಕಟ್ಟೊಗೆಯ ಶಿಖಿ ಪೆಡ್ಡೈಸಿತಬುಧಿಯ ಮದದ ಘಾಡಿಕೆ ಘಾಸಿಯಾದುದು ಗಾಳುಮೇಳುಪ್ಪರಿಸಿತಂಬರವ (ತೊರರಾ. ೬-೪-೩೬) ; ಲಂಕಾನಗರದಲಿ ಗಾಳುಮೇಳಾಯ್ತಿಕ್ಕಿದವು ಹೊಂಗದಗಳರಮನೆಯ (ತೊರರಾ. ೬-೫೦-೮೭). ೨. ಆತುರ ; ತರಾತುರಿ ; ಸಂಭ್ರಮ : (+). **ಗಾಲುಮೇಲು** : ೧. "ತಿರುವುಮುರುವಾಗುವುದು, ಹಾಳಾಗುವುದು" (ಜಾನಕೋ. ೪೭). **ಗಾಲ್ಮೇಲು** : ೧. ಪಕ್ಕನೆ ಏನಾದರೂ ಬಹಳ ಗಾಲ್ಮೇಲಾದರೆ ನನಗೆ ಜನ ಕಳುಹಿಸು (ಕೃಮಾಂಸ. ೪೨). [←ಹಿಂ. ಮರಾ. ಫಾಲ್‌ಮೇಲ್]

**ಗಾಳುವರಿ** (ಕ್ರಿ). ಮಿತಿಯಿಲ್ಲದೆ ಓಡಾಡು ; ಸಿಕ್ಕಿದಂತೆ ಅಲೆದಾಡು : ಸದ್ಧರ್ಮಸಾಧು ವಿಶಾಲಮರ್ಯಾದೆಯನು ಕಾಣದೆ ಗಾಳುವರಿವುತ್ತಿಹನು ಭವವಿಪಿನಾಂತರದಲಿ (ನಿಭಾಗ. ೫-೮-೬). [ಗಾಳು$_1$ + ಪರಿ$_1$]

**ಗಾಳುವೆಣ್** (ನಾ). ಪಾಮರಿ ; ವನಚರಿ : ತಾವರೆಗಣ್ಣಳ ಗಾಳು [ಪಾಠಾಂ ಱು]ವೆಣ್ಣಳೇಂ ಮೆಱೆದರೊ (ಅಂಪು. ೭-೧೭).
[ಗಾಳು$_1$ + ಪೆಣ್]

**ಗಾಳ್ದೊಟ್ಟು**, **ಗಾಳುದೊಟ್ಟು** (ನಾ). ಕೆಟ್ಟಸ್ವಭಾವದ ದಾಸಿ ; ದುಷ್ಟೆಯಾದ ಸೇವಕಿ : ಒಂದೆಡೆಯೊಳ್ನಲ್ವರಯ್ಯರ್ಗಾಳ್ದೊಟ್ಟಿರ್ದಲ್ಲಿ ಗೊರ್ವನೆಗ್ಗಂ ಗೊಟ್ಟಿಗೆವಂದು (ಪಂಪಭಾ. ೪-೯೫ ಪ). **ಗಾಳುದೊಟ್ಟು** : ಬುದ್ಧಿಮತಿಯೆಂಬ ಮೇಳದ ಗಾಳುದೊಟ್ಟು (ಗದಾಯು. ೨-೮ ಪ).
[ಗಾಳು$_1$ + ತೊಟ್ಟು]

**–ಗಾಱ** '–ಕಾಱ' ನೋ.

**ಗಾಱಗೊನಿ** (ನಾ). ಒಂದು ವಂಶದ ಅಥವಾ ಊರಿನ ಹೆಸರು (?) : ಬಡಗಣ ಗದೆ [ಗಾ]ಱಗೊನಿ ಪೊರಬನ ಗದ್ದೆ (ಸೌಇಎ. ೧೯೩೨, ಉಡುಪಿ. ೩೨೩-೨೨ ; 1364). [?]

**ಗಾಱು**, ಗಾರು (ನಾ). ೧. ಅಲ್ಪ ; ಹೀನ. 'ಗಾಱುತನ', 'ಗಾಱುಬುದ್ಧಿ' ಪರಾ. ೨. ಗಾಸಿ ; ಗಾಬರಿ. 'ಗಾಱುಗೆಡಱು' ಪರಾ. ೩. ಕೇಡು ; ಕೆಡಕು. 'ಗಾಱುಪಟ್ಟು', ಪರಾ. ೪. ಗಾಯ ; ಪೆಟ್ಟು. 'ಗಾಱೇಟು' ಪರಾ. ೫. ಅಲ್ಪನಾದವನು ; ತಂಟವ್ಯಕ್ತಿ : ತೋಱುವೀ ತೋಱಿಕೆಯೊಳಗೆ ಸಲೆಮಾಱಿ ತೋಱುವ ನಿಜವನಱಿಯದ ಗಾಱುಗಳು ನೀವ್ ಪಶುಗಳೆಂದರೆ ಖೇದವೇಕೆಂದ (ಕುವ್ಯಾ.ಕ. ೬-೨೮) ; ಗಾಱಹೆವು [ಪಾಠಾಂ. ದೂರವಹ] ನಾವಿನ್ನು ನೀತಿಯ ವಿಚಾರದಿರ ಬೇಕಂತು ಕಾರಣ ಬೇಱೆ (ಪ್ರಭುಲೀ. ೫-೬೬). ೬. ಒಣಗಿಹೋದುದಂ; ಒರಟಾದುದು ; ಬಿರುಸು. 'ಗಾಱುವಡೆ' ಪರಾ. (ಗು). ೭. ಕೆಟ್ಟ ; ನೀಚ. 'ಗಾಱುಗೆಲಸ', 'ಗಾಱುನುಡಿ' ಪರಾ. ೮. ಒಣಗಿಹೋದ ; ಒರಟಾದ ; ದ್ರವವಿಲ್ಲದ ; ನಿಸ್ಸತ್ವವಾದ. 'ಗಾಱುಗಲಿ' ಪರಾ. **ಗಾರು** : ೨. ಬಲ್ಲಂಹಿಡಿದು ಕಾದಿ ಅರ್ಜುನ ನನ್ನು ಗಾರುಮಾಡಬೇಡ (ಬಿರುಕ. ೧೨೦). ೯. ಉಷ್ಣದಿಂದ ಮೈಮೇಲೆ ಏಳುವ ಬೊಕ್ಕೆ. 'ಗಾರುಬೊಕ್ಕೆ' ಪರಾ.

**ಗಾಱಾಗಿಸು=ತೊಂದರೆಪಡಿಸು ; ಹಿಂಸೆಪಡಿಸು ; ಕಾಟಕೊಡು** : ಹರಿವಿಧಿಗಳಂ ಗಾಱಾಗಿಸಿದ ವಿಕ್ರಮಂ ಸಲ್ಲದೆಮಗೆ (ಜಬಪು. ೪೯-೫೦). **ಗಾಱಾಗು**, **ಗಾರಾಗು**=೧. ಗಾಬರಿಗೊಳ್ಳು ; ಗಾಸಿಯಾಗು : ಅರಮನೆಯ ಬಾಗಿಲ್ಗಾಗಿ ನಡೆದು ನೆಱೆ ಗಾಱಾಗಿ . . . ಶಿವಧೋ ಎಂದು ಮೊಱೆಯಿಟ್ಟಳು (ಭಾವಚಿಂ. ೮-೩೦) ; ಗಾಱಾದ ಶಂಬರಾಸುರನೆಂದು ಕರ್ಪಿಲ್ಲಂಗಾಱಿನ ಕೊಂಡಾಡಿದಳು (ಪೋಹಕ. ೧೧-೭೬) ; ಗಾರಾಗಿ ಕೇಗಿದುದು ಸಾಕಿದ ನವಿಲ್ (ಶ್ರೀರಾಮಾ. ೪೫೦-೧೩೧) ; ಗಾರಾದ ಕೋಳಿಗಳು ಮನೆಯ ಹಿಂದುಗಡೆ ಕೂಗಿಕೊಳ್ಳುತ್ತಿದ್ದವು (ಕಾನೂರು. ೩೨೩). ೨. ಒಣಗಿಹೋಗು: ಶುಷ್ಕವಾಗು : ಇಂತೀ ಗಾಱಾದ ಮನಕ್ಕೆ ಇನ್ನಾರು ಹೇಳುವರಯ್ಯ (ಏಲೇಶ್ವ. ೨೦) ; ಎಲೆಲೆ ಮದನನ ಗಜವು ತೊತ್ತಳದುಳಿದುದೊ ಕಾಮು ಕರನೆನೆ ಗಾವಳಿಯೊಳಗೆ ಗಾಱಾಯ್ತು ಗರುವಿಕೆ ವಿಟವಿದೂಷಕರ (ಕುವ್ಯಾ.ವಿ. ೧-೨೬) ; ಅವರ ಶರೀರವು ಬಹಳ ಗಾರಾಗಿ ಬಿಟ್ಟಿತು (ಜಂಗಾಳ್ಕ. ೧೯೨) ; ಮಳೆಗಾಲದಲ್ಲಿ ನೆನೆದು ಕೆಸರು ಕೆಸರಾಗಿದ್ದ ಅಂಗಳ ಈಗ ಗಾರಾಗಿದೆ (ಅನಾಥ. ೨೩೮) ; ಅದರ ಉರುಬೆಗೆ ಎಪ್ಪೋಜನರ ನಾಲಗೆಯು ಒಣಗಿ ಎದೆಯು ಸೀದು ಗಾರಾಯಿತು (ನೀಗಟ್ಟು. ೯೫). **ಗಾಱುಮಾಡು**, **ಗಾರುಮಾಡು**=೧. ಹಿಂಸಿಸು ; ತೊಂದರೆಪಡಿಸು : ವಾರುವ ಮುಗ್ಗಿದಡೆ ವಾಗೆಯಲಿ ಆದರಿಸಬೇಕಲ್ಲದೆ ಅದ ಗಾಱುಮಾಡಿ ಹೊಯ್ಯುವರೇ ಮಿಡಿಯನು (ಪೋಲಿಪಚಾ. ೫೨-೨೦೪) ; ಅಱಿಡಿಕಾಱನೆನಿಪ ಕಂಸನ ಕಟ್ಟು ಕೂರಿನ ಮಧು ಕೈಟಭರ ಗಾಱುಮಾಡಿ ಕೊಂದ ನಿನ್ನ ಬಲುಮೆಯಲ್ಲಿ ಸೂಱೆಹೋದುದೊ (ನೇಮಿಸಂ. ೩೪-೧೮೨) ; ಪಾಱುಂಬಳೆ ಶೂಲದಿಂದೆ ಏಱುಗಾಣಿಸಿ ಕುವರರ ಕೊರ್ಗಣೆಯಿಂದೆ ಗಾಱುಮಾಡಿದರು ರಕ್ಕಸರು (ಪೋಹಕ. ೩೪-೨೩) ; ಕೌಂತೇಯನಂ ಗಾಱುಮಾಡದಿರರ್ಜುನಂಗೆ ಸಾರಥಿಯಾಗು (ಕೃಮಿಭಾ. ೨೫-೪೪). ೨. ಕೀಳುಮಾಡು ; ಇಳಿಕೆಗೆಯ್ಯು : ಊರ ನಾರಿಯರ ಸೂಱೆಗೊಳ್ಳುತ ಪರನಾರಿಯರಭಿಮಾನ ಗಾಱುಮಾಡಿದೆಯೆಂದು (ಪುರಂದ. ೧-೧೧-೨). ೩. ಒಣಗಿಸು ; ಶುಷ್ಕಗೊಳಿಸು : ಸಿಗರೇಟನ್ನು . . . ಸೇದಿ ಸೇದಿ ಗಂಟಲನ್ನೆಲ್ಲಾ ಗಾರುಮಾಡಿಕೊಳ್ಳುತ್ತಿದ್ದೆ (ಕುಟುಮಿ. ೪೭).
[ದೇಶಿ ಮಲ. ಕಾರ್, ಕಾರು ; ತುಳು. ಗಾರ ; ತೆಲು. ಕಾಱು]

**ಗಾಱುಂಗೆಡು**, ಗಾರುಗೆಡು, ಗಾಱುಗಿಡು, ಗಾಱುಗೆಡು (ಕ್ರಿ). ೧. ಒಣಗು ; ರಸಹೀನವಾಗು. ೨. (ಅಲಂ) ಕೆಟ್ಟದಾಗಿ ಕೊಗು : ಸೀಱುಡುವಿನಂತೆ ಕೆಲದೊಳ್ ಗಾಱುಂಗೆಡದಲ್ಲಿ ಫಲವೆ ಬಲ್ಲರ ಸಭೆಯೊಳ್ (ಪುಣ್ಯಾಸ್ರ. ೧-೨೩). ಈ ಇದು 'ಗಾಱುಂಗೆಡೆ' ಎಂಬುದರ ಅಪಲಿಖಿತ ವಿರಬಹುದು. **ಗಾರುಗೆಡು** : ೩. ಗಾಸಿಯಾಗು ; ಗಾಬರಿಯಾಗು : ಸೂರೆಯಾದುದು ಮತ್ತೆ ಸುರಬಲ ಗಾರುಗೆಟ್ಟುದು ಕಿನ್ನರವ್ರಜ ತಾರು

ಥಟ್ಟಾಯ್ತಖಿಳ ಪ್ರಮಥರ ಸೇನೆ ಸಾವಿನಲಿ (ಅಂಬಿಕಾ. ೪೧-೧೫). **ಗಾಱುಗಿಡು :** ಕಿ. ಕವಲಂಬಿನಿಸುಗೆಗೆ ಗಾಱುಗಿಡದ ಮುನ್ನಂ (ರಾಮಾಶ್ವ. ೧೪೩-೬). **ಗಾಱುಗೆಡು :** ಕಿ. ವಾಯುಪುತ್ರನ ಕರಹತಿಗೆ ಗಾಱುಗೆಟ್ಟು ನಿದ್ದೆಪೋದ ಸುಭುಜಂ ಕನಸಿನೊಳ್ ಶ್ರೀರಾಘವಂ ಮೈದೋಱಿದುದಂ ಕಂಡನಪ್ಪುದಂ (ರಾಮಾಶ್ವ. ೯೮-೧೩). ೪. (ಆಲಂ) ಧಿಕ್ಕರಿಸು ; ಹೀಯಾಳಿಸು : ಹಿರಿದು ನಮ್ಮೊಡನಂಜಿಕೆಯ ನೀ ಹರಹಿ ಮಾತಾಡುವುದು ತಾನಿದು ಗರುವರಂಗವೆ ಗಾಱುಗೆಡುವುದು ಗುಣವೆ ನಿನಗೆಂದ (ತೊರರಾ. ೬-೨-೨೬). [ ಗಾಱು + ಕೆಡು$_1$ ]

**ಗಾಱುಗತಮಾಡು** (ಕ್ರಿ). ಹಾಳುಮಾಡಂ : ರತಿಯ ಬಾಳಂ ಕೆಡಿಸುವತ್ಯಂತ ರೂಪು ಭಾರತಿಯ ಬದುಕಂ ಬಯಲುಮಾಳ್ಪ ಕಡುಜಾಣ್ಮೆ ಪಾರ್ವತಿಯೇಳ್ಗೆಯಂ ಗಾಱುಗತಮಾಳ್ಪ ಗಾಡಿ (ಸಮ್ಯಕಾ. ೮-೯).
[ ಗಾಱುಗತ ? + ಮಾಡು$_1$ ]

**ಗಾಱುಗತ್ತಲೆ** (ನಾ). ಕಗ್ಗತ್ತಲೆ ; ದಟ್ಟವಾದ ಇರುಳು : (+).
[ ಗಾಱು + ಕತ್ತಲೆ$_1$ (<ಕಟ್ತಲೆ) ]

**ಗಾಱುಗಲಿ** (ನಾ). ಪೊಳ್ಳುವೀರ ; ಅಲ್ಪಸಾಮರ್ಥ್ಯವುಳ್ಳವನು : ಪಾರ್ಥಗೆ ಭೂಲೋಕದ ಗಾಱುಗಲಿಗಳು ಪಾಸಟಿಯೆ (ನೇಮಿಸಂ. ೨೮-೧೦).
[ ಗಾಱು + ಕಲಿ$_2$ ]

**ಗಾಱುಗಿಡು** 'ಗಾಱುಂಗೆಡು' ನೋ.

**ಗಾಱುಗೆಡಿಸು** (ಕ್ರಿ). ಹೀಯಾಳಿಸು ; ತಿರಸ್ಕರಿಸಂ : ಆರಿಗೆರಡೆಣಿಸಿದೆನೊ ಹಿರಿಯರ ಗಾಱುಗೆಡಿಸಿದೆನೊ ವೃಥಾ ಮುನ್ನಾರ ನೋಂಪಿಗಪಾರವಿಘ್ನವ ಮಾಡಿ ಕೆಡಿಸಿದೆನೊ (ನಳಚ. ೮-೫).
[ ಗಾಱುಗೆಡು (<ಗಾಱುಂಗೆಡು) + – ಇಸು$_3$ ]

**ಗಾಱುಗೆಡು** 'ಗಾಱುಂಗೆಡು' ನೋ.

**ಗಾಱುಗೆಡೆ** (ಕ್ರಿ). ಹೀಯಾಳಿಸು ; ತಿರಸ್ಕರಿಸಂ ; ನಿಂದಿಸು : ಗಾಱುಗೆಡೆಯಂದಿರಲವೊ ಸತ್ಯವ ಮಿಱಲಮ್ಮದೆ ಲೋಕ ನಿನ್ನನು ದೂಱಬೇಕೆಂದಡವಿಯೊಕ್ಕೆವು (ಕುವ್ಯಾವಿ. ೮-೭೨). [ ಗಾಱು + ಕೆಡೆ$_2$ ]

**ಗಾಱುಗೆದಱು** (ಕ್ರಿ). ಗಾಸಿಗೊಳಿಸಿ ಚೆಲ್ಲಾಪಿಲ್ಲಿ ಮಾಡು : ತೋಱಿರ್ಯೈಗುಣವನಸುರರ ಗಾಱುಗೆದಱಿದ ಗರ್ವಿತರ ಮೈದೋಱ ಹೇಳಾ ಕಾಣಬಹುದೆನುತುಱುಬಿದರು ಭಟರು (ಕುವ್ಯಾಆ. ೧೨-೩೬).
[ ಗಾಱು + ಕೆದಱು$_1$ (<ಕೆದಱ್$_1$) ]

**ಗಾಱುಗೆಲಸ** (ನಾ). ಕೆಟ್ಟಕೆಲಸ ; ನೀಚಕೃತ್ಯ : ಆತನ ಗಾಱುಗೆಲಸಕ್ಕೆ ಶಂಕರಂ ಮನಮೂಱಿ ನಿಚ್ಚಂ ಪಡಿಯನಿಕ್ಕುವನಹುದೆ ಲೇಸಾಯ್ತು (ಬಸಪು. ೨೬-೨೨). [ ಗಾಱು + ಕೆಲಸ ]

**ಗಾಱುತನ** (ನಾ). ಅಲ್ಪತನ ; ಹೀನತ್ವ : ಏಱ ಸೂಱೆಯ ಕಟ್ಟಿ ಹಿಂಗುವ ಗಾಱುತನ ತಾನೇನು ಸುಡು ಮುಮ್ಮಾಱಿಗಳೆ ಮಾತೆತ್ತಲಡಸಿತು (ಕುವ್ಯಾಭೀ. ೮-೨೯). [ ಗಾಱು + – ತನ ]

**ಗಾಱುನುಡಿ$_1$** (ಕ್ರಿ). = ಗಾಱುಗೆಡೆ : ಗಾಱುನುಡಿದರೆಂದು ನೋಯದಿರೆಂದಾಯಕಾಱನಪ್ಪಿದನು ಮೈದುನನ (ಭರಚ. ೩೩-೬೨). [ಗಾಱು+ನುಡಿ$_1$]

**ಗಾಱುನುಡಿ$_2$** (ನಾ). ಕೆಟ್ಟಮಾತು ; ಬಯ್ಗುಳು ; ನಿಂದೆಯ ನುಡಿ : ಗಾಱುನುಡಿಗಳನೇಕೆ ನುಡಿವಿರಿ (ಬಸಪು. ೫೬-೨೦). [ ಗಾಱು + ನುಡಿ$_2$ ]

**ಗಾಱುಪಟ್ಟು** (ನಾ). ಹಿಂಸೆಯನ್ನುಂಟುಮಾಡುವ ಪಟ್ಟು ; ತೊಂದರೆಯನ್ನುಂಟುಮಾಡುವ ಹಿಡಿತ : ಜವನ ಗಾಱುಪಟ್ಟಿಗೊಳಗಾಗದ ಮುನ್ನ ಶರಣೆಂದೊಡೆ ಕಾವ ನಮ್ಮ ಶ್ರೀಮಲ್ಲಿಕಾರ್ಜುನಯ್ಯನು (ಸರ್ವವ. ೫೮-೩೦೬). [ ಗಾಱು + ಪಟ್ಟು$_1$ ]

**ಗಾಱುಬುದ್ಧಿ** (ನಾ). ಅಲ್ಪಬುದ್ಧಿ ; ಕೀಳುಮನಸ್ಸು : ಎನ್ನ ಮಾತು ಮೀಱಿ ಕಳುಹಿದೆ ಮತ್ತಕರಿಯಂ ಗಾಱುಬುದ್ಧಿಯೊಳ್ (ಬಸಪು. ೨೨-೨೨) ; ಗಾಱುಬುದ್ಧಿಯ ಹೊದ್ದದುತ್ತಮನೆ ಕೇಳಯ್ಯ ನೀಂ ತತ್ವಭೇದಂಗಳ (ವೀಶೈಪು. ೧-೮-೨೩). [ ಗಾಱು + ಬುದ್ಧಿ ]

**ಗಾಱುಮಾತು** 'ಗಾಱುಂಪಾತು' ನೋ.

**ಗಾಱುಮಾನವ** (ನಾ). ತುಚ್ಛ ಮಾನವ ; ಹೀನಮನುಷ್ಯ : ಕರಿತುರಗ ರಥಗಳನೇಱಿ ನಡೆವುದು ಭೋಗವತಿಗಾ ಗಾಱುಮಾನವನವನ ಹಿಡಿತಹುದೆಂದು ನೇಮಿಸಿದ (ಸಂಭಪ. ೧೬-೨೮). [ ಗಾಱು + ಮಾನವ ]

**ಗಾಱುವಡೆ** (ಕ್ರಿ). ಬಿರುಸಾಗು ; ಕಠಿನವಾಗು : ಮುನಿದಿನಿಯನ ಕಡುಮೊನೆವಾತಿಗೆ ನೊಂದು ಕನಲದೆ ಗಾಱುವಡೆಯದೆ ತನುಮನಗಳೆ ತನ್ನ ಬಸಗೈದು (ಹದಿಬ. ೩-೨೩). [ ಗಾಱು + ಪಡೆ$_1$ ]

**ಗಾಱುವಾತು,** ಗಾಱುಮಾತು (ನಾ). = ಗಾಱುನುಡಿ$_2$ : ಗಾಱುವಾತೇ ಕೆಲವೋ ಗೋವಳ (ನೇಮಿಸಂ. ೩೧-೭೧). **ಗಾಱುಮಾತು:** ಆರೆಂದು ನುಡಿವಾ ಗಾಱುಮಾತು ತಾನಲ್ಲ (ಅವಚಂ. ೮೦-೩೫೭).
[ ಗಾಱು + ಮಾತು$_1$ ]

**ಗಾಱೇಳು** 'ಗಾಱೇಱ್' ನೋ.

**ಗಾಱೇಱ್,** ಗಾಱೇಳು (ಕ್ರಿ). ಗಾಯವಾಗು ; ಪೆಟ್ಟಾಗು : ಮನಮಂ ತಂದ ವಿಯೋಗಿಜಾಲದೆರ್ದೆಯಂ ನಟ್ಟುರ್ಚೆ ಗಾ [ ಪಾಠಾಂ. ಜಾ ] ಱೇಱೆ ಬೆಚ್ಚನೆ ಪಾಯ್ತೆಂದು (ಲೀಲಾವ. ೨-೪). **ಗಾಱೇಳು :** ನಿನ್ನ ಗಾಱಿದ್ದ ತುಟಿಯಾಣೆ ನೀನೆ ಗೆದ್ದವಳೆಂದು ನೀಱೆಯರೊಪ್ಪಿದರೊಸೆದು (ಭರಚ. ೪೨-೨೮). [ ಗಾಱು + ಏಱ್$_1$ ]

**ಗಾಱೇಱಿಸು** (ಕ್ರಿ). ಗಾಬರಿಯನ್ನುಂಟುಮಾಡು ; ಗಾಸಿಯನ್ನುಂಟುಮಾಡು: ಅಯ್ಯಯ್ಯಯಿದೇನಿದೇನಾರಯ್ಯದೆ ಗಲಭೆಗೆಯ್ದು ಗಾಱೇಱಿಪರೇ (ಚಕವಿ. ೬-೧೩೬). [ ಗಾಱೇಱ್ + – ಇಸು$_3$ ]

**ಗಿಂಗಿಟಿ** (ನಾ). ಒಂದು ಊರಿನ ಹೆಸರು : ಶ್ರೀ ಬಟ್ಟಗಂ . . . ಜಿಡ್ಡಾರಾಳ್ಗೆಯೆಟ್ಟಿತ್ತರ್ಕ್ಕಂ ಬಳ್ಳಿಗಾವೆಯ ಬಾಱಿಗೆ ಸಹಿತ ನಾಱ್ಗಾವುಣ್ಡುಗೆಯ್ಯೆ ಗಿಂಗಿಟಿಯೂರ್ಗ್ಗಾವುಣ್ಡುಗೆಯ್ಯೆ (ಎಪಿಕರ್ನಾ. ೧೯೨೯, ೭೮-೮ ; 964).
[ ? ]

**ಗಿಂಚಲು** (ನಾ). ಒಂದು ಜಾತಿಯ ಹಕ್ಕಿ : ಮರಕುಟಿಗ ಕಬ್ಬಕ್ಕಿ ಕೊಟ್ಟುಗವರಲೆ ಕೊಂಚೆ ಕಪಿಂಜ ಗಿಂಚಲು ಗರಿಗ ಮೊದಲಾದಖಿಳ ಖಗಕುಲ ಬಿದ್ದುದುರಿಯೊಳಗೆ (ಕುವ್ಯಾಅ. ೨೦-೫೩). [ ? ]

**ಗಿಂಚು** (ನಾ). (ಕರಾ) ಗಂಟು ; ಜಂಟಿ. ಜಿಡ್ಡಿ. 'ಗಿಂಚುಹಾಕು' ಪರಾ. [ ? ]

**ಗಿಂಚುಹಾಕು** (ಕ್ರಿ). ಕೂಡಿಸಿ ಕಟ್ಟು ; ಜೋಡಿಸು ;ಜಿಡ್ಡಿಹಾಕು : ತೆಂಗಿನ ಕಾಯಿ ಜುಂಗು ತೆಗೆದು ಗಿಂಚುಹಾಕು (ರೂಢಿ).
[ ಗಿಂಚು + ಹಾಕು ( <ಪಾಯ್ಕು$_1$) ]

**ಗಿಂಜಲು** (ನಾ). ಮುದ್ದೆಯಾದುದಂ ; ತುಂಬ ಬೆಂದುದು : ಅನ್ನ ಗಿಂಜಲಾಗಿದೆ (ರೂಢಿ). [ ಗಿಂಜು$_2$ + – ಅಲು (< – ಅಲ್$_2$) ]

**ಗಿಂಜಾಟ** (ನಾ). ಕೊಸರಿಕೆ ; ಹಿಂದೆಗೆಯುವಿಕೆ ; ಸುಲಭವಾಗಿ ಒಪ್ಪದಿರುವಿಕೆ : ಒಂದು ಸ್ವಲ್ಪ ಹೊತ್ತು ಗಿಂಜಾಟ ನಡೆಸಿ ಯಮುನಾ, ಲಲಿತಾ ಇಬ್ಬರೂ ಹಾಡಿದರು (ಅಲಹೂ. ೮೯). [ ಗಿಂಜು$_1$ + ಆಟ ]

**ಗಿಂಜು$_1$,** ಗೀಜು$_1$ (ಕ್ರಿ). ೧. (ಹಲ್ಲು) ಕಿಸಿ,–ಕಿರಿ,–ಅಗಲವಾಗಿ ಬಿಡಂ : ಹಲ್ಲು ಗಿಂಜುತ್ತ ಏನೋ ಕೆಲಸವಿದ್ದವನಂತೆ ಮುಂದೆ ಸಾಗಿದ (ಎದರೇ. ೩೬) ; ಶ್ರೀನಿವಾಸರಾಯ ಹಲ್ಲು ಗಿಂಜುತ್ತಾ 'ನಮಸ್ಕಾರ' ಎಂದ (ನಾಡಿಗೇ. ೦೭೦) ; ಹಾಡಬೇಕೆಂದು ಹಲ್ಲು ಗಿಂಜಿದಳು (ದೌಲತ್. ೫೨೦). ೨. ಎಳೆ ; ಜಗ್ಗು. 'ಗಿಂಜಾಟ' ಪರಾ. **ಗೀಜು :** ೧. ತಂಗಿಯನು ಕೊಟ್ ಗೀಜುವರೆ ಬತ್ತೀಶರದನಗಳೇನ ಬೇಡಿದರು ಸಾಜವಾಗುವದು (ಬಿಜ್ಜಪು. ೩೫-೩೭). [ ದೇಶ ತೆಲು. ಗಿಂಜ. ]

**ಗಿಂಜು₂** (ನಾ). ೧. ತಿರುಳು ; ಕೆಚ್ಚು ; ಸಾರ : ಕರಿಯಾಡಿನ ತುಪ್ಪಮುಮಂ ಬಱಿವದಣೆಯ ಪಣ್ಣ ಗಿಂಜುಮಂ ಸೇವಿಸೆ ಸಂಹರಿಸುಗುಮದು ಕೆಮ್ಮಂ (ಲೋಕೋಪ. ೯-೯೪). ೨. ಬೀಜ ತುಂಬಿರುವಿಕೆ. 'ಗಿಂಜು ಬದನೆಕಾಯಿ' ಪರಾ. ೩. ಮುದ್ದೆ ; ಗಿಂಜಲು : ಬಾಳ್ವಣ್ಣು ಗಿಂಜು ಆಯ್ತೀ ? (ಗರಿ. ೫೩-೧೩).

[ ದೇ॥ ತೆಲು. ಗಿಂಜ ]

**ಗಿಂಜುಬದನೆಕಾಯಿ** (ನಾ). ಬೀಜಗಳಿಂದ ತುಂಬಿದ ಬದನೆಕಾಯಿ : ವಾಂಗೀಭಾತಿಗೆ ಗಿಂಜುಬದನೆಕಾಯಿ ಉಪಯೋಗವಿಲ್ಲ (ರೂಢಿ).

[ ಗಿಂಜು₂ + ಬದನೆ (<ಬದಣೆ) + ಕಾಯಿ₄ (<ಕಾಯ್₄) ]

**ಗಿಂಟ** (ನಾ). ಜೋಡಿಹೆಣಿಗೆಯಿಂದ ನೆಯ್ದ ಬಟ್ಟೆ : ಇಮ್ಮಡಿಕೆ ನೂಲಿನಿಂದ ಮಾಡಿದ ಒರಟುಬಟ್ಟೆ : ಸೀತ ವಾತಗಳ ನಿವಾರಿಸಲೆಂದು ಮಾಡಿದ ಹೊದಿಕೆಯಲ್ಲಿ ನಿಶಾರಃ ಎನಿಸುಗು ದೂವಡಿಗೆ ಗಿಂಟ ಬೂವರಡೆ ಮೊದಲಾದುವು (ನಾಚಿರಾ. ೧೨೪) ; ಹಯಾತನ ಕೈಗೆ ನನ್ನ ಗಿಂಟ, ಪಂಚೆ ಮತ್ತು ಜುಬ್ಬಗಳನ್ನು ಕೊಟ್ಟೆ (ಜೆಂಗಾಳ್ಕ. ೩೩೧).

[ ದೇ॥ ತಮಿ. ಕಿಣ್ಡ ; ತೆಲು. ಗಿಂಟೆ, ಗೆಂಟೆ ]

**ಗಿಂಡಿ** (ನಾ). ಕಿರಿದಾದ ಬಾಯುಳ್ಳ ನೀರಿನ ಪಾತ್ರೆ ; ಕೊಂಬು ಅಥವಾ ಸೊಂಡಿಲಿರುವ ಸಣ್ಣಪಾತ್ರೆ : "ಗಿಂಡಿ ತಂಬುಗೆ ಘೇಳಿ ಪಾತ್ರೆಯೆನೆ ಪಡಿಗಮೆನಿಸಿಕ್ಕು" (ಮಂಗರಾ. ೬೩-೨೫) ; ಬೀದಿಬೀದಿಯೊಳೆಲ್ಲ ಮೋಕುಳಿಯ ಗಿಂಡಿಯುಂ (ಅಜಿಪು. ೪-೭) ; ಕುಡಿನೀರ ಗಿಂಡಿಯುನರಸ ನೀಡಲು (ಕುಮ್ಯಾಭೀ. ೧೦-೨೫) ; ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣಜಲವ ಕೊಂಡು (ಕಂನವಿ. ೫-೫೫) ; ಗಿಂಡಿಯಲ್ಲಿ ತೀರ್ಥವನ್ನು ತುಂಬಿಕೊಂಡು ಉದ್ಧರಣೆಯನ್ನು ಕೈಲಿ ಹಿಡಿದು ಶ್ರೀನಿವಾಸಯ್ಯನು ಗರ್ಭಗುಡಿಯ ಹೊಸ್ತಿಲನ್ನು ದಾಟಿ ಹೆಜ್ಜೆ ಹಾಕುತ್ತಾನೆ (ಒಡಕ. ೧೬).

**ಗಿಂಡಿಪ್ರಸ್ತ**=ಕೆಲವು ಜನಾಂಗಗಳಲ್ಲಿ ಮದುವೆಯ ಮಾರನೆಯ ದಿನ ಮಾಡುವ ಒಂದು ಶಾಸ್ತ್ರ ; ಮದುಮಗನು ಬಟ್ಟಲು ಕದಿಯುವ ಶಾಸ್ತ್ರ : (ಎಸಮ್ಮ. XXVIII, ೪). **ಗಿಂಡಿಶಾಸ್ತ್ರ**=ಗಿಂಡಿಪ್ರಸ್ತ : ಸಾಯಂ ಕಾಲ ಗಿಂಡಿಶಾಸ್ತ್ರ, ಮದಲಿಂಗ ಆಗ ಮದುವೆಯ ಮನೆಯಿಂದ ಗಿಂಡಿಯನ್ನು ಕದ್ದುಕೊಂಡು ಹೋಗಿ ಬೇರ್ಮನೆಯಲ್ಲಿರುತ್ತಾನೆ (ಸುವಸಂ. ೫೫).

[ ದೇ॥ ತಮಿ. ಮಲ. ಕಿಣ್ಡಿ ; ತುಳು. ಗಿಂಡಿ ; ಕೊಡ. ಕಿಂಡಿ ;
ತೆಲು. ಗಿಂಡಿ./ಮರಾ. ಗಿಂಡೀ ]

**ಗಿಂಡಿಮಾಣಿ** (ನಾ). (ಕರಾ) (ಮಠಾಧಿಪತಿಗಳಿಗೆ) ಗಿಂಡಿ ಹಿಡಿದು ಸಮೀಪದಲ್ಲಿದ್ದು ಊಳಿಗಮಾಡುವವನು. [ ಗಿಂಡಿ + ಮಾಣಿ ]

**ಗಿಂಡಿಯೂಳಿಗ** (ನಾ). (ಅಪೇಕ್ಷಿಸಿದಾಗ ನೀರು ಕೊಡಲು) ನೀರಿನ ಗಿಂಡಿಯನ್ನು ಹಿಡಿದುಕೊಂಡು ಸದಾ ಬಳಿಯಲ್ಲಿದ್ದು ಮಾಡುವ ಸೇವೆ : ಗಂಡಗರ್ವವ ಬಿಟ್ಟು ನಡೆದನು ಗುರುವಿಗೆ ಗಿಂಡಿಯೂಳಿಗದವನಾಗಿ (ಭರಚ. ೩-೯). [ ಗಿಂಡಿ + ಊಳಿಗ (<ಊಱಿಗ) ]

**ಗಿಂಡಿವಿಡಿ** (ಕ್ರಿ). ನೀರಿನ ಚೊಂಬನ್ನು ಹಿಡಿಯುವ ಸೇವೆಮಾಡು : ಹಡಪಮಂ ಪಿಡಿದು ಧನದಂ ರಾಜಿಸಲ್ ಗಿಂಡಿವಿಡಿಯೆ ವರುಣಂ (ಚಿಬಪು. ೨-೩೧) ; ಚಮರಮಂ ಪಿಡಿದು ಡಾಳಿಸುವರಂ ಗಿಂಡಿವಿಡಿವರ ಮುಖ್ಯ ವಿನಿಯೋಗದೆಳೆವಕ್ಕಳ ಕಡುವಿಲಾಸದೊಳಮರ್ಚಿಸಿ ಕೊಟ್ಟು (ಚಿಬಪು. ೫-೪೫). [ ಗಿಂಡಿ + ಪಿಡಿ₁ ]

**ಗಿಂಡಿವೆಣ್** (ನಾ). ಗಿಂಡಿಯನ್ನು ಹಿಡಿದು ಸೇವೆಮಾಡುವ ಹೆಣ್ಣು : ಚಮರಗಳು ಲಾಮಂಚ ಬಿಜ್ಜಣದಾಲವಟ್ಟ ಕಾಂಚನ ಸೌಖ್ಯ ಸಗ್ಗಳೆ ಗಿಂಡಿವೆಣ್ಗಳು ಚಂಚಲಾಕ್ಷಿಯೊಳ್ಳೆದಿದರು (ಮೋಹತ. ೨೪-೯).

[ ಗಿಂಡಿ + ಪೆಣ್ ]

**ಗಿಂಡು, ಗೆಂಡು** (ಕ್ರಿ). (ಉಗುರಿನಿಂದ) ಜಿಗುಟು ; ಚಿವುಟು : ಮೂಸಿ ನೋಡದ ಮಲ್ಲಿಗೆಯ ಪೂವಾಸುರದೊಳುಗುರಿಂದ ಗಿಂಡದ ಲೇಸಿನೆಳೆಚಿಗುರ್ . . . ಈ ಸುದತಿಯತಿರೂಪನು . . . ಸೃಷ್ಟಿಸಿದನೋ (ಅರ್ಜಾವಿ. ೧೩-೩೧). **ಗೆಂಡು** : ಈ ಹುಡುಗ ಪಕ್ಕದವರನ್ನೆಲ್ಲ ಸುಮ್ಮನೆ ಗೆಂಡುತ್ತಾನೆ (ರೂಢಿ).

**ಗೆಂಡಿಕೊಳ್**=ಉಗುರಿನಿಂದ ಚಿವುಟು,—ಜಿಗುಟು : ನಖದಿಂದ ಲಹಿತನ ಗೆಂಡಿಕೊಂಡಱುಹಿದಪ್ರಕಟಿತ ಬಲುಹ ತೋಱಿನಗೆ (ಮೋಹತ. ೪೦-೨೨). [ ದೇ॥ ತುಳು. ಕಿಣ್ಯು, ಕಿನ್ಯು ]

**ಗಿಂಬಳ** (ನಾ). ಅನ್ಯಾಯದಿಂದ ಸಂಪಾದಿಸುವ ಹಣ ; ಅಕ್ರಮ ಸಂಪಾದನೆ ; ಲಂಚ : ಸಂಬಳ ವಿಶೇಷ ಹೆಚ್ಚಾಗಲಿಲ್ಲ. ಗಿಂಬಳ ತಿನ್ನಲು ಅವನದು ಆಫೀಸರ್ ಕೆಲಸವಲ್ಲ (ಬಾಳಿಗಿ. ೧೩೦) ; ಸಂಬಳವಲ್ಲ ಬಾಬು, ನಾನು ಕೇಳಿದ್ದು ಗಿಂಬಳ (ಸಾಹೇಬ್. ೬೨೬) ; 'ಗಿಂಬಳ' ಇಲ್ಲದ ಹೊರತು 'ನ್ಯಾಯಸಂಧ'ರಾಗಿ ಬದುಕುವವರೇ . . . ಇಲ್ಲ (ಅನ್ನಪೂ. ೧೨) ; ಸರಕಾರ ಸಂಬಳ ಕೊಡುತಿತ್ತು, ದೇವನು ಅಷ್ಟಿಷ್ಟು ಗಿಂಬಳ ಕೊಡುತ್ತಿದ್ದ ! (ಬೆಂಗಬ. ೬೧). ☞ 'ಗಿಂಬಳ' ಎನ್ನುವುದು ಅನೇಕ ದ್ವಂದ್ವಪದಗಳಂತೆ 'ಸಂಬಳ'ದ ಜೊತೆಯಲ್ಲಿ ಬರುವ ಪದ ; ತಿಂಡಿ ಗಿಂಡಿ, ಊಟಗೀಟ ಎಂಬಂತೆ. ಆದರೆ ಈಚೆಗೆ 'ಲಂಚ' ಎಂಬ ಅರ್ಥದಲ್ಲಿ ಸ್ವತಂತ್ರ ಪದವಾಗಿ ಉಪಯೋಗವಾಗುತ್ತಿದೆ.

**ಗಿಕ್ಕು** 'ಗೇಕು' ನೋ.

**ಗಿಗ್ಗರಿ** (ನಾ). ಕಿರಿಚಾಟ ; ಚೀರಾಟ (?) : ಲಗ್ಗೆಯೊಳ್ ಮೊಗ್ಗರದ ಗಿಗ್ಗರಿಗೆ ನಡೆವಂದರೆಂಬಿನವನಿಱುಂಕೆ ತೆಗೆವಂಕುಶಂಗಳನಳಂಕೆಗೊಳಿಸಿಯುಂ (ಪುಷ್ಪಪು. ೬-೬೯ ವ). [ <ಕಿಕ್ಕಱ್₂ ? ]

**ಗಿಚಕಳಿ** (ನಾ).=ಗಿಂಜಲು : ಬೆಳ್ಳಿಯ ಪಾತ್ರೆಯಲ್ಲಿದ್ದ ಸ್ವಚ್ಛವಾದ ಅನ್ನದ ಮೇಲೆ ಯಾವ ಮಳೆನೀರನ್ನು ಹಾಕಲು ಆ ಅನ್ನವು ಗಿಚಕಳಿ ಆಗದೆ ಬೇರೆ ವರ್ಣ ಬಾರದೆ ಹಾಗೆಯೇ ಉಳಿಯುವುದೋ ಆ ಮಳೆಯ ನೀರು ಗಾಂಗವು (ಅಷ್ಟಾಂಗ. ೮೨ ಅರ್ಥ). [ ? ]

**ಗಿಚ್ಚಳ** (ನಾ). ( ? ) : ಚಳಿಯಿಸುವ ಚಾಮರಂಗಳ ಕರಮೆಸೆವ ಕರ್ನ ಚಾಮರಂಗಳ ಯೆಳಲಿಕ್ಕಿದ ದೂವೆಯದ ನೆವಳಂಗಳ ಗಿಚ್ಚಳಂಗಳ ಪೊನ್ನ ಕಿವರಕಂಗಳ ಜಾಯಿಲಮೆನಿಪ ಜಾತ್ಯಶ್ವಂಗಳನೇಱಿ (ಮಹಾನೇ. ೧೨-೩೩ ವ). [ ? ]

**ಗಿಚ್ಚಿ** (ನಾ). ೧. ಒಂದು ಬುಗುರಿಗೆ ಮತ್ತೊಂದು ಬುಗುರಿಯಿಂದ ಹೊಡೆಯುವುದು. 'ಗಿಚ್ಚಿಹೊಡೆ' ಪರಾ. ೨. ಕವಡೆಯಾಟದಲ್ಲಿ ಎಣಿಕೆಯ ಒಂದು ಹಂತ ; (ಸಾಮಾನ್ಯವಾಗಿ) ಇಪ್ಪತ್ತು ಅಂಶಗಳ ಮೊತ್ತ : ಅವರು ಹತ್ತು ಗಿಚ್ಚಿಯವರೆಗೆ ಆಟ ಆಡುತ್ತಿದ್ದಾರೆ (ರೂಢಿ).

[ <ಗೀಚು₂ ]

**ಗಿಚ್ಚಿಹೊಡೆ** (ಕ್ರಿ). ಮತ್ತೊಬ್ಬರ ಬುಗುರಿಯ ಮೇಲೆ ಕಚ್ಚುಬೀಳುವಂತೆ ಬುಗುರಿಯನ್ನು ಆಡಿಸು : (+). [ಗಿಚ್ಚಿ+ಹೊಡೆ₁ (<ಪೊಡೆ₁)]

**ಗಿಜಗಾರ್ಲಹಕ್ಕಿ** (ನಾ). ಒಂದು ಜಾತಿಯ ಪಕ್ಷಿ : ಹಕ್ಕಿ ಗಿಜಗಾರ್ಲ ಹಕ್ಕಿ; ತಾನು ಹಿಂದಿನ ದಿನ ಸಂಜೆಯಲ್ಲಿ ಹೊಡೆದಿದ್ದು ! (ಕಾನೂರು. ೬೬).

[ ಗಿಜಗಾರ್ಲ₀ + ಹಕ್ಕಿ (<ಪಕ್ಕಿ₁) ]

**ಗಿಜಟೆ₁** (ನಾ). ಮುಟ್ಟಿದರೆ ಕೈಗೆ ಮೆತ್ತಿಕೊಳ್ಳುವಷ್ಟು ಜಿಗುಟಾಗಿಯೂ ಅಂಟಾಗಿಯೂ ಇರುವಿಕೆ : (+). [ <ಜಿಗಟು₃ ? ]

**ಗಿಜಟೆ₂** (ನಾ). ಪೊದರಾಗಿ ಬೆಳೆಯುವ ಒಂದು ಬಗೆಯ ಗಿಡ : (+).

[ ? ]

**ಗಿಜರು, ಗಿಜಿರು** (ನಾ). ೧. ಕೆಸರು ; ರಾಡಿ ; ಕೊಚ್ಚೆ : ದೂರದಲ್ಲಿ ಹುಳಿಚೊ.ವನ ಪೊದೆಗಳೂ ಬಿಮ್ಮರಲ ಮಟ್ಟುಗಳೂ ಅರಮರಲ ಗಿಜರು

ಗಳೂ ಇದ್ದವು (ಮಲೆಮ. ೧೫೦) ; ಆ ಹೆಳುವಿನ ಗಿಜರಿನಾಗೆ ಇಂವ ನನ್ನ ಅಟ್ಟಿ ಹಿಡಿಯಾದು ಅಷ್ಟರೊಳಗೇ ಅದೆ ! (ಮಲೆಮ. ೫೯೨). ೨. (ಆಲಂ) ಹೊಲಸು ನಂಗೆ ಬ್ಯಾರ ಆರ್ತಾಗದಿಲ್ಲಪ್ಪಾ ದೊಡ್ನೋರ ಮನೇ ಗಿಜರು (ಕಾನೂರು. ೫೭೫). **ಗಿಜಿರು :** ೧. ಗೊರಬು ಸೂಡಿಕೊಂಡು ಬರ ಬೇಕಾಗಿತ್ತೇನೊ, ಆ ಕಾಡಿನ ಗಿಜರಾಗೆ ? (ಮಲೆಮ. ೭೫೦).

[ ದೇಃ ತುಳು. ಗಿಜರ್, ಗಿಜ್ಜರ್ ]

**ಗಿಜವಾಯಿ,** ಗಿಜಿವಾಯಿ (ನಾ). ತೆರೆದ ಬಾಯಿ ; **ಕಿಸಿಬಾಯಿ :** ಬಟ್ಟೆ ಬಟ್ಟೆಯೊಳಿಲ್ಲ ಹೊಟ್ಟೆ ಜಾಲಿಯ ಮುಳ್ಳು ಹುಟ್ಟಿದವರೆಲ್ಲ ಗಿಜವಾಯಿ ಮೂಡಲ ಬಟ್ಟೆ ಬೇಡೆಂದ (ಸರ್ವಜ್ಞ. ೧೬೦೮). **ಗಿಜಿವಾಯಿ :** (+).

[ ಗಿಜ$_0$ (<ಗಿಂಜು$_1$) + ಬಾಯಿ$_1$ (<ಬಾಯ್) ]

**ಗಿಜಿ** (ನಾ). ಒಂದು ಅನುಕರಣ ಶಬ್ದ. 'ಗಿಜಿಗಿಡಿ', 'ಗಿಜಿಗುಟ್ಟು' ಪರಾ. **ಗಿಜಗಿಜಿ** = ೧. ಅಸಹ್ಯಬರುವಂತೆ ಅಂಟಂಟಾಗಿರುವುದು: ಮಾವಿನ ಹಣ್ಣು ಹೆಚ್ಚು ಮಾಗಿ ಗಿಜಗಿಜಿ ಎನ್ನುತಿದೆ (ರೂಢಿ). ೨. ದಟ್ಟಣೆ, ನಿಬಿಡತೆ ಗಳನ್ನು ಸೂಚಿಸುವ ಪದ: ಊರು ತುಂಬ ಹುಡುಗರು ಗಿಜಗಿಜಿ ಅನ್ನು ತ್ತಿವೆ(ನನ್ನೂರು. ೩೦೫). **ಗಿಜಿಗಿಜಿಮಾಡು**=ಜಜ್ಜಿ ಹೋಗುವಂತೆ ಮಾಡು ; ಕಳಿತಹಣ್ಣಿನ ಸ್ಥಿತಿಗೆ ಬರುವಂತೆ ಮಾಡು : ಭವದೂರುಯುಗಂಗಳ ನಾಜಿರಂಗದೊಳ್ ಗಿಜಿಗಿಜಿಮಾಡಲೆಂದವನ ಪೂಣ್ದುದು ನಿಕ್ಕುವಮಾಗ ದಿರ್ಕುಮೇ (ಪಂಪಭಾ. ೯-೫೨). **ಗಿಜಿಗಿಜಿಯಾಗಿರು**=ಜಜ್ಜಿ ಹೋಗಿ ಮುದ್ದೆ ಯಾಗಿರು ; ಕಳಿತಹಣ್ಣಿನಂತೆ ಮೆತ್ತಗಾಗು: ಜೋದರಂ ಬೆರಸು ಗಜೆಯಿನರಿಗಜಘಟೆಯುಂ ಗಿಜಿಗಿಜಿಯಾಗಿರೆ ಪೊಯ್ದೊಡೆ (ಪಂಪಭಾ. ೧೧-೧೦೭). **ಗಿಜಿಗಿಜಿಯಾಗು**=ಜಜ್ಜಿ ಹೋಗು; ನಜ್ಜುಗುಜ್ಜಾಗು : ಸುರ ವಿರೋಧಿಯ ಮುಂಡ ಕೊಂದುದು ಪೊರೆಳಿ ಕಪಿಗಳ ನೆರವಿಯನು ಬಲವರದ ಹೂರಣದಂತೆ ಗಿ[ಪಾಠಾಂ. ಅ]ಜಗಿಜಿಯಾದುದಗಲದಲಿ (ತೊರವೆ. ೬-೨೮-೬೨).

**ಗಿಜಿಗ** 'ಗೀಜಗ' ನೋ.

**ಗಿಜಿಗಿಜಿಗಿಡ** (ನಾ). ಒಂದು ಬಗೆಯ ಗಿಡ : (ವ್ಯಾಜಿಗಿ. ೨೬-೪೮೦).

[ ಗಿಜಗಿಜಿ ? + ಗಿಡ (<ಗಿಡು) ]

**ಗಿಜಿಗಿಜಿಸು** (ಕ್ರಿ). ದಟ್ಟವಾಗಿರು ; ನಿಬಿಡವಾಗಿರು : ಎದೆಯ ಮೇಲಿನ ಕರಿಮಣಿಗಳ ಸರಗಳು ಗಿಜಿಗಿಜಿಸಿದುವು (ಮೂರುದಾ. ೨೬೦).

[ < ಗಿಜಿ + - ಇಸು$_3$ ]

**ಗಿಜಿಗಿಡಿ** (ಕ್ರಿ). ನಿಬಿಡವಾಗಿ ಸೇರಿರು; ಒತ್ತರಿಸು : ಮುಂಬಾಗಿಲೆಡೆ ಯೊಂದು ಕಾರಾವಾಸದಿ ಗಿಜಿಗಿಡಿದು ಹಸ್ತ ಕಂದರಕೊತ್ತಿ ಶೋಕ ವನಿಯುದಿರಿಸುತಲಧೋವಕ್ತ್ರದಿಂದ ಕುಳಿತಿಹ (ಜಿನಮು. ೩೨-೧೯).

[ ಗಿಜಿ + ಗಿಡಿ$_1$ ]

**ಗಿಜಿಗು,** ಗಿಜುಗು (ನಾ). ಕಣ್ಣಿನಿಂದ ಬರುವ ಪಿಸುರು,—ಗೀಜು : ನಡು ಮುಚಿದು ಗುಡುಗೂಚಿ ಗಿಜಿ[ಪಾಠಾಂ. ಜು]ಗೆದ್ದು ಕಣ್ಬಾಯಿ ಮೂಗೊಚಿತು (ಶುದೇಪು. ೩೦-೨೦). **ಗಿಜುಗು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ <ಗೀಜು$_3$ ]

**ಗಿಜಿಗುಟ್ಟು** (ಕ್ರಿ). ೧. ಜುಗುಪ್ಸೆಯಾಗುವಂತೆ ಜಿಗುಟಾಗಿರು,— ಕೆಸರಾಗಿರು : ಮಳೆಬಂದು ಓಣಿಯೆಲ್ಲ ಗಿಜಿಗುಟ್ಟುತ್ತಿದೆ (ರೂಢಿ). ೨. ಗದ್ದಲದಿಂದ ಕೂಡಿರು ; ನಿಬಿಡವಾಗಿರು : ಮನೆಯಲ್ಲಿ ಬೇಕಾದಷ್ಟು ಹಸು, ಎಮ್ಮೆ, ಕರು, ಎತ್ತುಗಳು ಗಿಜಿಗುಟ್ಟುತ್ತಿದ್ದುವು (ಹುಟ್ಟಿಹ. ೭೦) ; ಅವರ ಮನೆಯಲ್ಲಿ ಜನ ಯಾವಾಗಲೂ ಗಿಜಿಗುಟ್ಟುತ್ತಿರುತ್ತಾರೆ (ರೂಢಿ).

[ ಗಿಜಿ + ಕುಟ್ಟು$_1$ ]

**ಗಿಜಿಬಿಜಿ** (ನಾ). ಗದ್ದಲ ; ಗಲಾಟೆ : ಆ ಓಲಗದ ಸದ್ದು ಹತ್ತಿರವಾದ ಹಾಗೆ ಜನಗಳ ಗಿಜಿಬಿಜಿ ಹೆಚ್ಚಿತು (ಕಣ್ಣಿಡಿ. ೪೭). [ < ಗಜಬಜ ]

**ಗಿಜಿಬಿಜಿಗುಟ್ಟು** (ಕ್ರಿ). ಗದ್ದಲಮಾಡು ; ಗಲಾಟೆಮಾಡು : ಹೇಗಿದ್ದ ಎಂದು ಕೇಳಿದರೆ, ಆತ 'ಕಣ್ಣೆದುರಿಗೆ ಗಿಜಿಬಿಜಿಗುಟ್ಟುತ್ತಿದ್ದ !' ಎನ್ನುತ್ತಿದ್ದ (ನಿಬಂಧ. II, ೮೯). [ ಗಿಜಬಿಜಿ + ಕುಟ್ಟು$_1$ ]

**ಗಿಜಿರು** 'ಗಿಜರು' ನೋ.

**ಗಿಜಿವಾಯಿ** 'ಗಿಜವಾಯಿ' ನೋ.

**ಗಿಜುಗ** 'ಗೀಜಗ' ನೋ.

**ಗಿಜುಗು** 'ಗಿಜಿಗು' ನೋ.

**ಗಿಟಕು,** ಗಿಟುಕು (ನಾ.) ೧. ಒಳಗೆ ಇರುವ ನೀರು ಇಂಗಿ ಒಣಗಿದ ತೆಂಗಿನಕಾಯಿಯ ತಿರುಳು ; ಕೊಬ್ಬರಿ : ಕಾಯೊಳಗಿನ ನೀರು ಆರಿದರೆ ಗಿಟಕು ಅನ್ನುತ್ತಾರೆ (ಮುಂಬಯಿ. ೨-೫೦). ೨. ನೆಲಗಡಲೆ, ಮಾವಿನ ಕಾಯಿ ಮೊದಲಾದುವುಗಳ ಒಳಗಿರುವ ಒಣಗಿದ ಬೀಜ ; **ಗೋಟು.** 'ಗಿಟಕುಹಾಯು' ಪರಾ. **ಗಿಟುಕು :** ೧. ಬಕುಳೆಯರಿಸಿನ ಕಂಪಿನಲರ್ ಕುಂಕುಮವು ಕೊಪ್ಪರಿಗಿಟುಕು ಹುರಿಗಡಲೆ . . . ಇಂಪಿನಿಂ ತರಿಸಿತ್ತು (ಅರ್ಜುವಿ. ೧೭-೭೧). [ ? ]

**ಗಿಟಕುಹಾಯು** (ಕ್ರಿ). ೧. ತೆಂಗಿನಕಾಯಿ ಹಣ್ಣಾಗಿ ಅದರ ಒಳಗಣ ತಿರುಳಿನ ನೀರಾರಿ ಒಣಗಿ ಕೊಬ್ಬರಿಯಾಗು ; ಗಿಟಕಾಗು. ೨. ನೆಲಗಡಲೆ, ಮಾವಿನ ಓಟೆ ಮೊದಲಾದುವುಗಳು ಒಣಗಿ ಒಳಗಿನ ಬೀಜವು ಅಲ್ಲಾಡುವ ಸ್ಥಿತಿಗೆ ಬರು ; **ಗೋಟಾಗು :** ಆ ಬೀಜವು ಹನಿಯಾರಿ ಗಿಟಕುಹಾಯುವುದಕ್ಕಿಂತ ಮೊದಲೆ . . . ಹಾಕಿ ಬಿಡಬೇಕು (ಕೃಷಿಪ್ರ. ೧೩೫). [ ಗಿಟಕು + ಹಾಯು (<ಪಾಯ್$_1$) ]

**ಗಿಟಗಿರಿ** 'ಗಿಡಿಗಿರಿ' ನೋ.

**ಗಿಟಗಿಟಜಂತ್ರ** 'ಗಿಡಿಗಿಡಿಜಂತ್ರ' ನೋ.

**ಗಿಟಗಿಜ್ಜನೆ** (ಅ). ಜೋರಾದ ಶಬ್ದದೊಡನೆ : ತುಟಬಟ್ಟಲೊಂದಿ ರಸಾ ಯನಗಳ ಗುಟುಗುಟನೆ ತಾನೀಂಟುವ ಗಾಡಿ ಗಿಟಗಿಜ್ಜನೊಡನೆ ತೇಗುವ ಭಾವ ತುತ್ತ ಪಲ್ಲಟಿಸಿಕೊಂಬಂದ ರಂಜಿಸಿತು (ಭರತ. ೪ ೧೧೧).

[ ? + ಗಿಜ್ಜನೆ ]

**ಗಿಟುಕು** 'ಗಿಟಕು' ನೋ.

**ಗಿಟ್ಟಗಿರಿ** 'ಗಿಡಿಗಿರಿ' ನೋ.

**ಗಿಟ್ಟಿಗಿರಿ** 'ಗಿಡಿಗಿರಿ' ನೋ.

**ಗಿಟ್ಟಿಸು** (ಕ್ರಿ). ದೊರಕಿಸಿಕೊಳ್ಳು ; ಸಂಪಾದಿಸು ; ಗಳಿಸು : ಅವಳೂ ಒಮ್ಮೊಮ್ಮೆ ನಮ್ಮಲ್ಲಿ ಚಹಾ, ಒಮ್ಮೊಮ್ಮೆ ಊಟ ಗಿಟ್ಟಿಸುತ್ತಿದ್ದಳು (ಸ್ಮೃತಿಚಿ. ೪೨೨) ; ಉಪಾಧ್ಯಾಯರುಗಳೇ ಸ್ವತಃ ಅಂಥವರ ಮನೆಗೆ ಹೋಗಿ ಖಾಸಗಿಯಾಗಿ ಮಕ್ಕಳಿಗೆ ಕಲಿಸಿ ಹಣ ಗಿಟ್ಟಿಸಿಕೊಳ್ಳುತ್ತಿದ್ದರು (ನಿಸುತ. ೪) ; ಬಚ್ಚಶೆಟ್ಟಿಗೆ ನಾಳೆ ಸಣ್ಣಯ್ಯನ ಮೆಚ್ಚಿಗೆ ಪಡೆದು ಏನಾದರೂ ಇನಾಮು ಗಿಟ್ಟಿಸಬೇಕೆನ್ನುವ ಆಶೆ (ಗಿರಿಜಾ. ೨೩) ; ಹಿಂದಿನದಕ್ಕಿಂತ ನೂರು ರೂಪಾಯಿ ಹೆಚ್ಚಾಗಿ ಗಿಟ್ಟಿಸುತ್ತಾ ಇದ್ದೀಯೆ (ರಂಗಳ. ೩).

[ ಗಿಟ್ಟು (<ಕಿಟ್ಟು$_1$) + - ಇಸು$_3$ ]

**ಗಿಟ್ಟು** 'ಕಿಟ್ಟು$_1$' ನೋ.

**ಗಿಡ** 'ಗಿಡು' ನೋ.

**ಗಿಡಕಾವಲು** 'ಗಿಡಗಾವಲು' ನೋ.

**ಗಿಡಗ** 'ಗಿಡಿಗ' ನೋ.

**ಗಿಡಗಂಟಿ,** ಗಿಡಗಂಟೆ (ನಾ). ಗಿಡ ಮತ್ತು ಪೊದರು,—ಪೊದೆ: ಅಲ್ಲಲ್ಲಿ ಪೊದೆಯಾಗಿ ಬೆಳೆದ ಈ ಗಿಡಗಂಟಿ (ನವ್ಯಧ್ವ. ೪) ; ಅಡವಿಯ ಗಿಡಗಂಟಿ ಗಳನೆಲ್ಲ ಸುಡುವವನು ಬೆಂಕಿಹೊತ್ತಿದ ಒಣಮರನು (ಇಂಚಾಪ. ೧೫೯-೮೧). **ಗಿಡಗಂಟೆ :** ಗಿಡಗಂಟೆಯಾ ಕೊರಳೊಳಗಿಂದ ಹಕ್ಕಿಗಳ ಹಾಡು ಹೊರ ಟಿತು (ಗರಿ. ೨-೭). [ ಗಿಡ (<ಗಿಡು) + ಕಂಟಿ$_2$ ]

**ಗಿಡಗಂಟೆ** ' ಗಿಡಗಂಟಿ ' ನೋ.

**ಗಿಡಗಕಣ್ಣು** (ನಾ). ೧. ಗಿಡಿಗನ ಕಣ್ಣು. ೨. (ಅಲಂ) ಬಹಳ ಸೂಕ್ಷ್ಮ ದೃಷ್ಟಿ: ಪೂಜೆ, ಜಪ, ವ್ರತಗಳಲ್ಲಿ ತೊಡಗಿದ್ದ ಅಪ್ಪನನ್ನು ಗಿಡಗ-ಕಣ್ಣಿನಿಂದ ಈ ಶೂನ್ಯ ಮೊದಲಿನಿಂದಲೂ ಕಾದಿರಬಹುದೆ ? (ಹೊಸಕ್ಕ. ೨೮೪).
[ ಗಿಡಗ (<ಗಿಡಿಗ) + ಕಣ್ಣು (<ಕಣ್) ]

**ಗಿಡಗಾರ** (ನಾ). ೧. ಗಿಡಮೂಲಿಕೆಗಳ ಪ್ರಯೋಗವನ್ನು ಬಲ್ಲವನು; ಆಯುರ್ವೇದ ಪಂಡಿತ,—ವೈದ್ಯ: ಅವನಿಗಾದ ಗಾಯವನ್ನು ಕುಶಲರಾದ ಗಿಡಗಾರರು ಬೇಗನೆ ನೆಟ್ಟಗೆ ಮಾಡಿದರು (ಯುದುರಾ. ೧೦೨). ೨. " ವಿಷಗಾರ, ಮಾಟಗಾರ " (ಜಾನಕೋ. ೪೮).
[ ಗಿಡ (<ಗಿಡು) + – ಕಾರ₁ (< – ಕಾಱ) ]

**ಗಿಡಗಾವಲು,** ಗಿಡಕಾವಲು (ನಾ). ೧. ಅರಣ್ಯಸಂರಕ್ಷಣೆ. ೨. ಅರಣ್ಯ ರಕ್ಷಣೆಗಾಗಿ ಇರುವ ಅಧಿಕಾರಿ: (ವ್ಯಗಜ. IV, ೭೭೯). ೩. ಕಾಡಿನಲ್ಲಿರುವ ಹುಲ್ಲುಗಾವಲುಗಳಲ್ಲಿ ದನಕರುಗಳನ್ನು ಮೇಯಿಸುವುದಕ್ಕಾಗಿ ಅಥವಾ ಗಿಡಮರ ಮೊದಲಾದ ಉತ್ಪನ್ನಗಳನ್ನು ಉಪಯೋಗಿಸಿಕೊಳ್ಳುವುದಕ್ಕಾಗಿ ಸರ್ಕಾರಕ್ಕೆ ಕೊಡಬೇಕಾದ ತೆರಿಗೆ,— ಸುಂಕ: ಸುಂಕ ಗಿಡಗಾವಲು ಬಿಡುಮಣೆಯು ಅರಮನೆ[ಗೆ] ಕಾರಣವಿಲ (ಎಕ. IX, ಮಾಗಡಿ. ೨-೨೯ ; 1669) ; ಈ ವೃತ್ತಿಗೆ ಸಲ್ಲುವ . . . ಚರಾದಾಯ ಹೊರಾದಾಯ ಶೀಗೇಮಡಿ ಪತಂಗ ಪೊಪ್ಪಳೀ ಗಿಡಗಾವಲು ಬ್ರಾಹ್ಮಣನಿವೇಶನ ಶೂದ್ರನಿವೇಶನ (ಹುಟ್ಟುಹ. ೩). **ಗಿಡಕಾವಲು:** ೩. ರೈತರನ್ನು ತಗ್ಗಿಸುವ ನಿಮಿತ್ತವಾಗಿಯೂ, ಅರಮನೆಗೆ ಕೂಡಿ ಬರುವಂತೆಯೂ, ಹೆಚ್ಚಾಗಿ ಮನೆದೆರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು. (೧) ಮನೆದೆರಿಗೆ . . . (೧೩) ಗಿಡಕಾವಲು . . . (೧೯) ಕೌದಿಯ ತೆರಿಗೆ (ಮಹಾವಂ. I, ೧೨೪).
[ ಗಿಡ (<ಗಿಡು) + ಕಾವಲು (<ಕಾವಲ್₁) ]

**ಗಿಡಗುನಿ** (ನಾ). ತೆನೆಯ ಕುನಿಯನ್ನು ತಂಳಿಸಿದ ಮೇಲೆ ಉಳಿಯುವ ಊಬು ಸಹಿತವಾದ ಧಾನ್ಯ: ನನಗೆ ಗಿಡಗುನಿ ರಾಗಿ ಹತ್ತು ಸೇರು ಬಂತು (ರೂಢಿ). ' ಬಡಗುನಿ ' ಪರಾ. [ ಗಿಡ (<ಗಿಡು) + ಕುನಿ₃ ]

**ಗಿಡಪಕ್ಕೆ** (ನಾ). ಒಂದು ಜಾತಿಯ ಮೀನು: ಮೀನು . . . ಕರೀಮೀನು, ಗಿಡಪಕ್ಕೆ, ಕೊರವ (ನಮ್ಮನು. ೨೪೦).
[ ? ]

**ಗಿಡಪತ್ರಿಕೆ** (ನಾ). ಗ್ರಾಮಾಂತರ ಪ್ರದೇಶಗಳಲ್ಲಿ ಬೆಳೆದಿರುವ ಮರಗಳ ವಿವರವನ್ನೂ ಅವು ಯಾರಿಗೆ ಸೇರಿವೆ ಎಂಬ ವಿಚಾರವನ್ನೂ ತಿಳಿಸುವ ವಿವರಣ ಪತ್ರ ; ಗಿಡಮರಗಳ ದಾಖಲೆ (ವ್ಯಗಜ. IV, ೭೭೯).
[ ಗಿಡ ( <ಗಿಡು ) + ಪತ್ರಿಕೆ ]

**ಗಿಡಬೀಳು** (ಕ್ರಿ). ಕಾಡಿನ ಮರೆಯಲ್ಲಿ ಅಡಗಿಕೊಳ್ಳು; ತಲೆಮರೆಸಿಕೊಳ್ಳು: ಟೀಪುಸುಲ್ತಾನರು ಮುಖಭಂಗಿತರಾಗಿ ಆ ಕಂದಕದಿಂದ ಗಿಡಬಿದ್ದು ಬಂದು ತಮ್ಮ ತಂಬಿಗೆ ಸೇರಿದರು (ರಾಜೇಂದ್ರ. ೨೮).
[ ಗಿಡ (<ಗಿಡು) + ಬೀಳು₁ (<ಬೀೞ್₁) ]

**ಗಿಡಮಂಗ** (ನಾ). (ಉಕ) (ಕೋತಿಯಂತೆ) ಮರದ ಮೇಲೆ ಹತ್ತುವ ಮತ್ತು ಹತ್ತಿರುವವರನ್ನು ಹಿಡಿದಾಡುವ ಒಂದು ಬಗೆಯ ಆಟ; ಮರಕೋತಿ ಆಟ: ನಾನು ಇವೊತ್ತು ಗದುಗಿನಲ್ಲಿ ಗಿಡಮಂಗ ಆಡುವುದಿದೆ (ಗಾಳಿಪ. ೫೩) ; ಇಂದು ಅಷ್ಟೊಂದು ಕಣ್ಣಿಗೆ ಕಂಡುಬರದ 'ಗಿಡಮಂಗ' ಆಗ ಪ್ರಿಯವಾದ ಆಟವಾಗಿತ್ತು (ಸಮಜೀ. ೮ ಟೀಕೆ).
[ ಗಿಡ(<ಗಿಡು) + ಮಂಗ₁ ]

**ಗಿಡಮಾಡು** (ಕ್ರಿ). ಮೂಲಿಕೆಯ ಮೂಲಕ ವಶೀಕರಣಮಾಡು; ಮದ್ದುಹಾಕು: ರಾವಜೀಕಾಕಾನಿಗೆ ಏನೋ " ಗಿಡ " ಮಾಡಿರಬೇಕು, ಅಂತೇ ಅವರು ಗಿರಿಜಾನ ಎಲ್ಲ ಮಾತಿಗೆ ರೀ ಎಳೆಯುತ್ತಾರೆಂದು ಬರೆದಿದ್ದರು (ದೀಪಹ. I, ೧೪೬). ' ಮರಮಾಡು ' ಪರಾ.
[ ಗಿಡ (<ಗಿಡು) + ಮಾಡು₁ ]

**ಗಿಡಮೂಲಿಕೆ** (ನಾ). ಔಷಧಿಗೆ ಉಪಯುಕ್ತವಾದ ಮೂಲಿಕೆ; ಬೇರು, ನಾರು ಮುಂತಾದುವು: " ಓಷಧಿ– . . . ಗಿಡಮೂಲಿಕೆ" (ಗಂಗಾಮ. ೬೦) ; ಇಲ್ಲಿಂದ ಒಂದು ಒಂದೂವರೆ ಹರದಾರೀ ಮೇಲೆ ಒಂದು ತೋಟದಲ್ಲಿ ಈ ಬೇನೆಗೆ ಕೊಡತಕ್ಕ ಗಿಡಮೂಲಿಕೆಯದೆ (ಮುಂಬಯಿ. ೪-೧೦೯)
[ ಗಿಡ (<ಗಿಡು) + ಮೂಲಿಕೆ ]

**ಗಿಡಮೆಳೆ** (ನಾ).=ಗಿಡಗಂಟಿ: ಎಸಲು ಗಜದವಯವದೊಳಗೆ ಕೀಲಿಸಿದ ಪುರಾತರದ ಪರ್ವತ[ದ] ಮೇಲೊಸೆದು ತೋರುವ ಗಿಡಮೆಳೆಗಳಂದದಲಿ ಶರಜಾಲ (ದೇವೀಮ. ೨-೪೨). [ ಗಿಡ (<ಗಿಡು) + ಮೆಳೆ ]

**ಗಿಡವಿಡಿ** (ಕ್ರಿ). ಗಿಡವನ್ನು ಆಶ್ರಯಿಸು: ಇಷ್ಟಲಿಂಗ ಪ್ರಾಣಲಿಂಗವೆಂದು ವಿಭೇದಿಸುವಲ್ಲಿ ಕುಸುಮದ ಗಿಡುವಿಗೆ ವಾಸನೆ ಉಂಟೇ ಕುಸುಮಕ್ಕಲ್ಲದೆ ಅದು ಗಿಡವಿಡಿದಾದರೂ ಕುಸುಮವೆಂಬುದನಱಿತು ಗಿಡುವಿನ ಹೆಚ್ಚುಗೆ . . . ನಿಶ್ಚಯವಾಗಿಪ್ಪುದು (ಪ್ರೋಳವಚ. ೨೭೨-೧೦).
[ ಗಿಡ (<ಗಿಡು) + ಪಿಡಿ₁ ]

**ಗಿಡಸೀಮೆ** (ನಾ). ಕಾಡುಗಳೇ ಹೆಚ್ಚಾಗಿರುವ ದೇಶ; ಕಾಡುಗಳಿಂದ ತುಂಬಿಕೊಂಡಿರುವ ನಾಡು ; ಮಲೆನಾಡು: ನಮ್ಮ ಸೀಮೆಯು ಗಿಡಸೀಮೆ. ಬಹುಚಿಕ್ಕದು (ರಾಜೇಂದ್ರ. ೧೦೦). ' ಬಯಲುಸೀಮೆ ' ಪರಾ.
[ ಗಿಡ (<ಗಿಡು) + ಸೀಮೆ ]

**ಗಿಡಹೇನು** (ನಾ). ಗಿಡಗಳಿಗೆ ಅಂಟಿ ಅವುಗಳನ್ನು ಹಾಳುಮಾಡುವ ಒಂದು ಜಾತಿಯ ಹುಳು,–ಕೀಟ: ಒಂದು ಜಾತಿಯ ಹುಳಕ್ಕೆ ಆಹಾರವಾಗಿಯೂ, ಇರುವೆಗಳಿಗೆ ಮಕರಂದ ಕೊಡುವುವಾಗಿಯೂ, ಆದುದರಿಂದ ಇರುವೆಗಳ ರಕ್ಷಣೆಗೆ ಒಳಪಟ್ಟುವಾಗಿಯೂ ಇರುವ ಸಸ್ಯನಾಶಕ ಕೀಟಜಾತಿ: ಗಿಡಹೇನು (Aphis. ಇಂಕನಿ). [ ಗಿಡ (<ಗಿಡು)+ಹೇನು (<ಪೇನ್₂) ]

**ಗಿಡಿ₁** (ಕ್ರಿ). ೧. ತುರುಕು; ಒತ್ತಿ ತುಂಬು; ಜಡಿ: ದಿಕ್ಕಿನೊಳಂ ವಿಯತ್ತಲದೊಳಂ ಗಿಡಿದಂತಿರೆ ನಿಂದ . . . ಪರಮಾತ್ಮನ ಶಕ್ತಿಗದಾವ ಕೌತುಕಂ (ಅನಂಪು. ೫-೨೬) ; ಚೆಲ್ಲೆಯದಿಂ ಕದುಕೇಱನಿಱಿದು ಕಣ್ಣಲ್ಲಿ ಮಣಲ್ಸುಣ್ಣಮನೆ ಗಿಡಿದು (ಜಯುಕಾ. ೧೩-೪೦); ಮರದ ಸೊಪ್ಪು ಕತ್ತರಿಸಿ ಪೊಟರೆಯ ಬಾಯಿಗೆ ಗಿಡಿದರು (ನನ್ನೂರು. ೨೦೦) ; ತಮಿಳಿನಲ್ಲೋ ಹಿಂದುಸ್ತಾನಿಯಲ್ಲೋ ಮಾತಾಡುತ್ತಾ ಅದರ ತುಂಬ ಇಂಗ್ಲಿಷನ್ನು ಗಿಡಿದರೂ ನಮ್ಮ ಕೈ ತಡೆಯುವವರು ಯಾರು ? (ನಂಟರು. ೨೯). ೨. ಆಹಾರದ ತುತ್ತುಗಳನ್ನು ಬಲಾತ್ಕಾರವಾಗಿ ಬಾಯೊಳಗೆ ಹಾಕು,–ತುರುಕು: "ಗಿಡಿ–ಕಬಳಪ್ರವೇಶೇ " (ಶಮುಧಾ) ; ಅಡಗಿನ ಬಸನಿಗನೈ ತಿನ್ ಪಿಡಿಯೆಂದ ವನಡಗನವನ ಬಾಯೊಳ್ ಗಿಡಿವರ್ (ಆದಿಪು. ೫-೮೬) ; ಕೊಯ್ದಾತನ ಬರಿಯಡಗುಗಳಂ ಬಾಯೊಳಡಸಿ ಗಿಡಿಯುತ್ತಿರ್ಪರ್ (ಶಾಂತೀಶ್ವ. ೯-೯೨) ; ಸೇರದಿದ್ದರೆ ನೀನು ಬಿಡುತ್ತೀಯಾ. ಗಂಟಲು ಬಿಡಿಸಿ ಗಿಡಿದು ತುಂಬುತ್ತೀ (ನಟಸಾ. ೪೫). ೩. ಬಾಯಿತುಂಬ ಆಹಾರವನ್ನು ನುಂಗು; ಮುಕ್ಕು; ಕಬಳಿಸು: ಕೂರ್ವೆಯೊಡೆಯನಗ್ಗಿಯುಂ ಅಂತು ಪಿಡಿದುದುಂ ಗಿಡಿದುಂ ಮಡಿಯೆನಿಸೆಂದು ಸೈತಿಟ್ಟು ಬೀಟಿಕ್ಕೊಟ್ಟಂ (ರಾಮಾಶ್ವ. ೬೫-೧೩). **ಗಿಡಿಗಿಡಿ** (ದ್ವಿರುಕ್ತಿ): ಕೊಕ್ಕಿಂದೆ ಕಚ್ಚಿಡಿದ ಕಾಳಿಜಮನಗಿಡಗಿದು ತಿನ್ನುತ್ತೆ, ಗಿಡಿಗಿಡಿದು ಅಡಸುವುದು ಬರಿವುದನೆ ಪೊಡೆಯನ್ (ಬದ್ಧ ಪ್ರ. ೫೫-೧೧೮೪)
[ ದೇ॥ ತುಳು. ಗಿಡಿ ]

**ಗಿಡಿ₂** (ನಾ). ಬಿರಡೆ ; ಬೆಣೆ: (ಕಂಡಿಯಲ್ಲಿ ಸಂದುಬಿಡದೆ ಬಿಗಿಯಾಗಿ ಹೊಂದಿಕೊಳ್ಳುವ) ಮರದ ಗೂಟ . . . ಬಿರಡೆ ; ಬೆಣೆ; ಗಿಡಿ (Plug. ಇಂಕನಿ).
[ <ಗಿಡಿ₁ ]

**ಗಿಡಿ$_3$** (ನಾ). ಒಂದು ಜಾತಿಯ ಪಕ್ಷಿ : ಕಾರಂಡಂ ಕೆಂಗಣ್ಣಂ ಭೇರುಂಡಂ ಪೊಱಸು ಕಾಗೆಗಂಬೊಂದುರಿಗಂ ಕಾಱ ಕೆಱುವೀಳೆ ಕೊಯ್ಕಂ ಕೀರಂಜಂ ಹರಡೆ ಸುರಗಿ ಗಿಡಿ ಪೆರ್ಗಿಡುಗಂ (?) (ಕಾವ್ಯಸಾ. ೧೦೪೩). [P ಇದು 'ಗಿಡಿಗ' ಎಂಬುದರ ಸವಕಳಿರೂಪವಿರಬಹುದು]

**ಗಿಡಿಕಿರಿ** 'ಗಿಡಿಗಿರಿ' ನೋ.

**ಗಿಡಿಗ**, ಗಿಡಗ, ಗಿಡುಗ (ನಾ). ಮಾಂಸಾಹಾರಿಯಾದ ಒಂದು ಜಾತಿಯ ಪಕ್ಷಿ ; ಡೇಗೆ : "ಪ್ರಾಜಿಕಾಃ, ಶ್ಯೇನಾಃ – ಈ ೨ ಗಿಡಗಂ" (ಹಲಾಯು. ೪೨-೯೯) ; ಪಾರಾವತಮಂ ಗಿಡಿಗಂ ಭೋರೆಂದೋರಂತೆ ಮುಟ್ಟೆ ಬೆನ್ನಟ್ಟೆ (ಶಾಂತಿಪು. ೯-೮೪) ; ಕಳಹಂಸೆಗೆ ಗಿಡಿ[ಪಾಠಾಂ. ಡ]ಗನೆಱಗಿ ದಂತಿರೆ ಬಡಿದಂ (ಯಶೋಚ. ೨-೯೯) ; ಗಿಳಿಯ ಹಿಂಡುಗಳೆತ್ತ ಗಿಡಿಗನ ದಳದುಳವು ತಾನೆತ್ತ (ಕುಮಾರವ್ಯಾ. ೨-೮೧). **ಗಿಡಗ :** ಗಿಡಗನಡಸಿ ಬಿಡ ದಟ್ಟುತ್ತುಂ ಬರೆ (ಶಾಂತೀಶ್ವ. ೧೩-೨೦) ; ಬೀಸಿದ ಬಲೆಗೆ ಬಿದ್ದವು ಗಿಡ[ಪಾಠಾಂ. ಡು]ಗ ಗೀಜಗ ಗೌಜು ಗುಬ್ಬಿಗಳು (ತೊರರಾ. ೩-೩-೧೭). **ಗಿಡುಗ :** "ಶಶಾದನಃ, ಶ್ಯೇನಃ, ಪತ್ರಿನ್ ಈ ೩ ಗಿಡುಗ" (ನಾಚಿರಾ. ೧೦೪) ; "ಶ್ಯೇನವೆನೆ ಗಿಡುಗನಕ್ಕುಂ" (ಮಂಗರಾ. ೫೨-೮) ; ಅರಗಿಳಿಯನೊಂದು ಗಿಡುಗನೆಡೆಗೊಂಡು ಜಗುನೆಯಂ ಪಾಯ್ವಾಗಳಿಗಬಗಿಮಾಡಿದಾಗಳ್ (ಪಂಪಭಾ. ೧-೭೪ವ) ; ಗಿಡುಗಂ ತಂದತ್ತೊ ಮೋಣ್ ಪೆರ್ವರ್ಗರನ ತುದಿಯಿ ನೇಱ ಬಿರ್ದುದೊ (ಕಾದಂಪೂ. ೨೦೯) ; ಅಂಚೆ ಕೊಂಚೆ ತಿತ್ತಿರಿ ಗಿಡುಗಂಗಳೆಂಬ ಖಗವೃಂದದಿನಲ್ಲಿಯರಣ್ಯಮೊಪ್ಪುಗುಂ (ಗಿರಿಕ. ೧-೭೪) ; ಆ ಕುದುರೆಗಳು ಗಿಡುಗಗಳಂತೆ ಶೀಘ್ರವಾಗಿ ಹಾರಿಬಂದು (ಕೃವಾಉ. ೩೩೦).

ಗಿಡಗನವ=ಹಕ್ಕಿಬೇಟೆಗಾಗಿ ಪಳಗಿದ ಡೇಗೆಯನ್ನು ಹಿಡಿದುಕೊಂಡಿರುವವನು : ಬೇಟೆನಾಯಿಗಳವರೂ ಗಿಡಗನವರೂ ಮುಂದೆ ಮುಂದೆ ಹೋಗುತಿರಲಿ (ಪೀಟಿಮಾ. ೩).

[ದೇ॥ ತುಳು. ಗಿಡಿ ; ಕೊಡ. ಕೀಡುವ ; ತೆಲು. ಗಿಡ್ಡ]

**ಗಿಡಿಗಿಡಿಜಂತ್ರ**, ಗಿಟಗಿಟಿಜಂತ್ರ (ನಾ). ತೊಗಲುಂ ಪುತ್ತು ಎಲುಬಿನ ಗೂಡು ಮಾತ್ರವುಳ್ಳ ಒಡಲು ; ಶಿಥಿಲವಾದ ಶರೀರ ; ಸವಕಲಾಗಿ ಕ್ಷೀಣಿಸಿದ ದೇಹ : ಏಟ್ಟೂರ್ವರರಸಿಯರ್ಕಳ್ . . . ತಪಂಬಟ್ಟು ಗಿಡಿಗಿಡಿ ಜಂತ್ರ[೦] ಮಿಳಿಮಿಳಿನೇತ್ರಮಾಗಿ ಘೋರವೀರ ತಪಶ್ಚರಣದೊಳ್ ನೆಗಟುತ್ತಿರ್ದರ್ (ವಡ್ಡಾರಾ. ೧೩೪-೩) ; ಒಡಲೆಲ್ಲಂ ಬಡತನದಿಂ ಗಡ ಗಿಡಿಗಿಡಿ ಜಂತ್ರಮಾಗೆ . . . ಕಡುಗಲಿ ನಿತ್ಯೋಪವಾಸದೊಳ್ಪೆಱ ನೆಗಟ್ದಂ (ಧರ್ಮಾಮೃ. ೬-೩೭) ; ಗಿಡಿಗಿಡಿಜಂತ್ರಮಾಯ್ತೊಡಲ್ಬಿಡಿದಿರ್ದಖಿಳೇಂದ್ರಿಯಂಗಳುಂ ಮಿಡುಕದೆ . . . ಪಱಪಟ್ಟುವು ಪಾಪಪಾಂಶುಗಳ್ (ಚಂದ್ರಪ್ರ. ೧೧-೧೭). **ಗಿಟಗಿಟಿಜಂತ್ರ :** ರುದ್ರಾಕ್ಷಿಯ ಹಂಗು ಬೇಡವೆಂದು ಹೊದ್ದ ಚರ್ಮದ ಹೊದಿಕೆಯಂ ತೆಗೆದ ಗಿಟಗಿಟಜಂತ್ರದ ನಿಲವೋ (ಅವಚಂ. ೨೨೭-೧೦೩೦). [ಗಿಡಿಗಿಡಿ$_0$ + ಜಂತ್ರ]

**ಗಿಡಿಗಿರಿ**, ಗಿಟಗಿರಿ, ಗಿಟ್ಟಗಿರಿ, ಗಿಟ್ಟಗಿರಿ, ಗಿಡಿಕಿರಿ (ಕ್ರಿ). ೧. ಹಲ್ಲುಗಳ ಎರಡು ಸಾಲುಗಳನ್ನೂ ಬಲವಾಗಿ ಕಚ್ಚಿಕೊಂಡು ಹಲ್ಲು ಬಿಡು,–ಹಲ್ಲು ಕಿರಿ : ಅಂತಾ ವಾನರಂ ಕೇದಗೆಯನೇಱದ ಕೋಡಗದಂತೆ ಗೂಡುಗೊಂಡು ಪಲ್ಲಂ ಗಿಡಿಗಿರಿದು (ಪಂಚತಂ. ೨೭೯-೨೨) ; ಕಡುನೋವಿಂದಂ ಪಲ್ಲಂ ಗಿಡಿಗಿರಿದಟುತುಂ ನಿಲ್ಲದೆ ನೆತ್ತರನೆ ಕಾಱ ಕೆಡೆದರ್ ನೆಲದೊಳ್ (ಧರ್ಮಾಮೃ. ೩-೨೦೩) ; ಗಿಡಿಗಿರಿದ ಹಲುಗಿರುಕುಗಳ ಹೊಡಗೆಡೆದು ಹೊರಳುವ ಹೆಣನ ರಾಶಿಯಲಿಡಿದುದಿಳೆ ಕಲಿಕುಂಭಕರ್ಣನ ಕರದ ಕದನದಲಿ (ತೊರರಾ. ೬-೨೮-೫೧). **ಗಿಟಗಿರಿ :** ೨. ಬಿಗಿಯಾಗು ; ಕಚ್ಚಿಕೊಳ್ಳು : ಸೆಳವು ಬಂದು ಆ ಹುಡುಗನ ಹಲ್ಲುಗಳು ಗಿಟಗಿರಿದಿವೆ (ರೂಢಿ). ೩. ಸಂಕುಚಿಸು ; ಹಿಸಂಕು ; ಅದುಮು : ತೋರಗಿರಿಯಂದದಲಿ ಬಳಿದನು ವೀರನುದರದೆ ಹನುಮನಾ ಜಲಚಾರಕಪಿ ಗಿಟಗಿರಿಯೆ ಮುರಿದುವು ವಜ್ರಲೋಮಗಳು (ಮೈರಾಕಾ. ೩-೭೩). **ಗಿಟ್ಟಗಿರಿ :** ೪. ತುಂಬು ; ಕಿಕ್ಕಿರಿ ; ಸಂದಣಿಸು : ಮಂದಿ ಬಂದು ಸೇರಿ ಭಜನೆಯನ್ನು ಮಾಡುತ್ತ ವಾಯುಮಂಡಲವೆಲ್ಲಾ ರಾಮಶಬ್ದದಿಂದ ಗಿಟ್ಟಗಿರಿಯುವಂತೆ ಮಾಡಿತು (ಭಜ್ಯೋತಿ. ೧೯೭). **ಗಿಟ್ಟಗಿರಿ :** ೪. ಬೀದಿ ಬೀದಿಗಳೆಲ್ಲ ಜನಗಳಿಂದ ಗಿಟ್ಟಗಿರಿದು ಹೋಗಿತ್ತು (ಭೀಮುಕಾ. ೨೪೮). **ಗಿಡಿಕಿರಿ :** ೧. ಗಿಡಿಕಿರಿದ ಹಲ್ಲುಗಳ ಹಾಹೆಗಳಡಸಿ ನಸುದೆಱದಿರ್ದ ಕಂಗಳ ಕಡಿದ ಕೊನೆನಾಲಿಗೆಯ (ಉತ್ತರಾ. ೩-೫೯). [ಗಿಡಿ$_1$ + ಕಿರಿ$_2$]

**ಗಿಡಿಗು** (ಕ್ರಿ). ತುರುಕು ; ಬಲವಂತವಾಗಿ ತುಂಬು ; ಜಡಿ : ಫಡಫಡಲವೆಂದೆರಗಿ ಕಣೆಗಳಂ ಚಣೆಗಳಂ ಅಡಕಿದರ್ ಗಿಡಿಗಿದರ್ ಅಂಗಾಂಗಕೆಲ್ಲ ಮಾಹೀಕುಳಿಸಿ ಬಾಯ್ಬಿಡುವೊಲು (ಜಿನಮು. ೨೭-೮) ; ಹಣ್ಣನ್ನು ಗಿಡಿಗಿ ಅವನನ್ನು ನಿಶ್ಶಬ್ದಗೊಳಿಸಿದನು (ಬಾಳಹೂ. ೦೦೯). [<ಗಿಡಿ$_1$]

**ಗಿಡಿಬಡಿ** 'ಗಿಡಿಬಿಡಿ' ನೋ.

**ಗಿಡಿಬಿಡಿ**, ಗಿಡಿಬಡಿ, ಗಿಡುಬಿಡಿ (ನಾ). ಒಂದು ಬಗೆಯ ವಾದ್ಯ : ಚಿನ್ನತಿತ್ತಿಱ ಬೊಗ್ಗಿನ ಹೆಱ ಕಹಳೆಗಳುನ್ನತ ಡೌಡೆ ನಿಸ್ಸಾಳ ಸನ್ನೆಡೋಳು ನಾಗಸರ ರಾಯ ಗಿಡಿಬಿಡಿ ಸನ್ನುತಮೆನಲೊದಱದವು (ಅಂಜಚ. ೬-೭೫) ; ಬೊಂಬುಳಿ ಗಿಡಿಬಿಡಿ ವೀರವೃಂದದ ನಾದ ತುಂಬಿತೀರ್ದುದಿಕ್ಕಿನೊಳು (ಭರತ. ೩೦-೫೯) ; ಪಟಹ ನಿಸ್ಸಾಳ ಗಿಡಿಬಿಡಿ ಭೇರಿ ಡವುಡೆ ಜೇಗಟೆ ಕರಡೆ ಕಂಸಾಳ ಡೊಳ್ಳಾರಿ ಟುಮುಕು ತಂಬಟಂ (ಚಬಪು. ೫-೭) ; ಭೇರಿ ತಮ್ಮಟ ಡೌಡೆ ಗಿಡಿಬಿಡಿಯು ಬೂರುಗಂ ಭೋರಿಡಲು (ನವಮೋ. ೦೪-೨೯). **ಗಿಡಿಬಡಿ :** ವಿವಿಧ ತಂಬಟೆ ಪಟಹ ಮೃದಂಗ ಗಿಡಿಬಡಿ ಮೌರಿ (ಸಮುಮು. ೩೭). **ಗಿಡುಬಿಡಿ :** ಡೋಳು ಡಮರು ಗಿಡುಬಿಡಿ ವೀರವಂದ ನಿಸ್ಸಾಳ ಡವುಡೆ . . . ಮೊಳಗಲಾ ವಾದ್ಯದ ಮೇಳದೊಳ್ಸೆದಿದನಂದು (ರಾಮವಿ. ೮-೭೨). [ದೇ॥ ತಮಿ. ಕಿಟುಪಿಟಿ ; ಮಲ. ಕಿಡುಬಿಡಿ ; ತುಳು. ಗಿಡಿಬಿಡಿ ; ತೆಲು. ಗಿಡಿ]

**ಗಿಡಿವು** (ನಾ). ರಾಶಿ ; ಒಡ್ಡು : ನೆಣನ ಬಣಂಬೆಗಳೊಳಗೆ ಕೈದುಗುತ್ತಿ ನೋಡಿಯುಂ ಅಡಗಿನ ಗಿಡಿವಿನೊಳ್ಸುಱದು ನೋಡಿಯುಂ ನರವಿನ ನೆರವಿಯೊಳ್ತೊಟಲ್ದು ನೋಡಿಯುಂ (ಗದಾಯು. ೬-೨೯ ವ).

[ಗಿಡಿ$_1$ + – ವು]

**ಗಿಡು**, ಗಿಡ (ನಾ). ೧. ಸಣ್ಣಮರ : ಈ ಮರಗಳ ಗಿಡು[ಪಾಠಾಂ. ರಿ]ಗಳ ಪೊದಱುಗಳ ಮಱಗಳೊಳೀ ಪೊಟಲಂ ಕಂಡೆವಿಲ್ಲ (ವಡ್ಡಾರಾ. ೮೯-೨೨) ; ಹಿತ್ತಲ ಗಿಡು ಮರ್ದಲ್ಲ (ಪಂಚತಂ. ೨೮೦-೮) ; ಬೇವಿನ ಗಿಡುವಂ ತಂದಿಟ್ಟಾವಿನ ನೊರೆವಾಲನೆಱದು ನಡಪಿದೊಡಂ ಕೇಳ್ ಬೇವಿಂಗೆ ಕೈಪೆ ಪಿಂಗದು (ಧರ್ಮಾಮೃ. ೫-೧೫೭) ; ಗಿಡುಗಿಡು ತಪ್ಪದೆ ಬೇಡಿದೆ ನನ್ನಂಗಕ್ಕೆಂದು (ಮಹಾದೇ. ಬ. ೨೮-೫೯) ; ಪಡೆಯ ಕಾಲ್ದುಳಿಗಾಗ ಗಿಡುಬಳ್ಳಿ ಪೆರ್ಮ್ಮರ ಪುಡಿಯಾಗೆ (ಕಂಸವಿ. ೧೨-೬). **ಗಿಡ :** ೧. ಗಿಡ ವೃಕ್ಷಂಗಳಿಗಾರು ನೀರನೆಱವರ್ ನಿತ್ಯಂ ಮಹಾರಣ್ಯದೊಳ್ (ಸೋಮೇಶ. ೩೪) ; ಗಿಡ[ಪಾಠಾಂ. ಡು] ಲತಾಳಿ ವಸಂತದಲಿ ತಳಿರೊಡೆದು (ತೊರರಾ. ೧-೧೧-೧೪) ; ಬಿಡದೆ ಕುತ್ತುಱುಗಳಂ ಸೋವಿದರ್ತೀವಿದರ್ಗಿಡಗಳ ಪೊದರ್ಗಳಿಂದೆಬ್ಬಿಸಿದರ್ . . . ಖಗಮೃಗವ್ರಾತಮಂ (ಜೈಮಿಭಾ. ೨೮-೪೭). ೨. ಮರ ; ವೃಕ್ಷ : ಕಾಡಿನಲ್ಲಿ ನಿಬಿಡವಾಗಿ ಗಿಡಗಳು ಬೆಳೆದಿರುತ್ತವೆ (ರೂಢಿ). ೩. ಕಾಡು ; ಅಡವಿ : 'ಅವರು' ಗಿಡಕ್ಕೆ ಎತ್ತು ಹೊಡಕೊಂಡು ಹೋದವರು ತಿರುಗಿ ಬರೋದು ರಾತ್ರಿ ಹೊತ್ತಿಗೆ (ಬೆಳುಮು. ೦೯) ; ನಮ್ಮೂರ ಪಕ್ಕದ ಗಿಡದಲ್ಲಿ ಚಿರತೆ ಇದೆ (ರೂಢಿ). 'ಗಿಡಸೀಮೆ' ಪ್ರಾ. ೪. ಮರದ ಎಳೆಯ ಅವಸ್ಥೆ ; ಸಸಿ : ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ ? (ಗಾದೆ). ೫. ಮೂಲಿಕೆಯ ಮೂಲಕ ವಶೀಕರಣ ಮಾಡಿಕೊಳ್ಳುವುದು ; ಮದ್ದುಹಾಕುವುದು. 'ಗಿಡಮಾಡು' ಪರಾ. [ದೇ॥ ತುಳು. ಕೊಡ. ಗಿಡ]

**ಗಿಡುಂಗಡಿ**, ಗಿಡುಗಡಿ (ಕ್ರಿ). ಗಿಡವನ್ನು ಕಡಿ,—ಕತ್ತರಿಸು : ಗಿಡುಂಗಡಿದಂ, ಗಿಡುಗಡಿದಂ (ಶಬ್ದಾನು. ೩೮೦ ಪ್ರಯೋ). **ಗಿಡುಗಡಿ :** ಗಿಡು

ಗಡಿವ ಹರಗುವ . . . ಆರಂಭೋಪದೇಶಮಕ್ಕುಂ (ಶ್ರಾವಕಾ. ೧೩೦-೩).
[ ಗಿಡು + ಕಡಿ₂ ]

**ಗಿಡುಕು** (ನಾ). ೧. (ಕರಾ) ಬಿರಡೆ ; ಬೆಣೆ ; ಬೂಚು. ೨. ಗಿಡಿದಂದು; ತುಂಬಿರುವ ವಸ್ತು. [ <ಗಿಡಿ₂ ]

**ಗಿಡುಗ** 'ಗಿಡಿಗ' ನೋ.

**ಗಿಡುಗಡಿ** 'ಗಿಡುಂಗಡಿ' ನೋ.

**ಗಿಡುಗದೃಷ್ಟಿ** (ನಾ). = ಗಿಡಗಕಣ್ಣು ೨ : ಗ್ರಿಯರ್ಸನ್ನನ ಗಿಡುಗದೃಷ್ಟಿಯಿಂದಲೂ ಮೆಲ್ಲಗೆ ತಪ್ಪಿಸಿಕೊಂಡ ಈ ಕೊಂಡಭಾಷೆಯನ್ನು . . . ಪತ್ತೆಹಚ್ಚಿದರು (ದ್ರಾವಿವಿ. ೧೯೦). [ ಗಿಡುಗ (< ಗಿಡಿಗ) + ದೃಷ್ಟಿ ]

**ಗಿಡುಗಳ್ಳಿ** (ನಾ). ಗಿಡವಾಗಿ ಬೆಳೆಯುವ ಕಳ್ಳಿ ; ಕೋಲುಗಳ್ಳಿ : ತೊಡೆದು ಪ್ಪಳಿದುಪ್ಪಮ ತಾಂ ಗಿಡುಗ [ಪಾಠಾಂ. ಕ]ಳ್ಳಿಯ ತೊವಡು ಕಟ್ಟಿ ನಿರ್ವಿಷಮಕ್ಕುಂ (ಖಮದ. ೧೭-೭೯). 'ಮರಗಳ್ಳಿ' ಪರಾ. [ ಗಿಡು + ಕಳ್ಳಿ₂ ]

**ಗಿಡುಗಾಡು** (ನಾ). ಕುರುಚಲುಗಿಡಗಳಿಂದಲೂ ಪೊದರುಗಳಿಂದಲೂ ಕೂಡಿದ ಕಾಡು,—ಅರಣ್ಯ : ಕಾನನದೊಳಗಿರ್ದ ಬೆಟ್ಟದ ಗಿಡುಗಾಡು ತಾನೆನ್ನ ಮುಟ್ಟಿದೊಟಗಿಸಿತು (ಮೋಹತ. ೧೮-೯೧). [ ಗಿಡು + ಕಾಡು₂ ]

**ಗಿಡುತಿಂಗಿ** (ನಾ). ಒಂದು ಬಗೆಯ ವನಸ್ಪತಿ : ಶ್ರೀಮುಂದ್ರಗಿಡ, ತುತ್ತಿ, ಕಿಸಂಗಿ, ತುರುಬೀಗಿಡ, ಗಿಡುತಿಂಗಿ (ವೃಜಿಗಿ. ೧-೬). [ ಗಿಡು+ತಿಂಗಿ? ]

**ಗಿಡುದುಱುಗಲ್** (ನಾ). ಗಿಡಗಳ ಗುಂಪು, – ಸಮೂಹ : ನೆಳಲುಮಂ ಕಳಲುಮನೆಱುಗಲುಮಂ ಗಿಡುದುಱುಗಲುಮಂ ದರಿಯುಮಂ ಕುಮ್ಮರಿಯುಮಂ (ಲೀಲಾವ. ೬-೨೦).
[ ಗಿಡು + ತುಱುಗಲ್ ( <ತುಱುಂಗಲ್) ]

**ಗಿಡುದೇರಣ** (ನಾ). ಒಂದು ಬಗೆಯ ವನಸ್ಪತಿ : "ಕರಂಜಕಃ –ಗಿಡುದೇರಣ" (ಔಷಧಿ. ೨೪) [ ಗಿಡು + ತೇರಣ₁ ]

**ಗಿಡುಬಿಡಿ** 'ಗಿಡಿಬಿಡಿ' ನೋ.

**ಗಿಡ್ಡ** (ನಾ). ೧. ಕುಳ್ಳಾದುದು ; ಗುಜ್ಜು : ಜಿಹ್ವೆ ಅತಿದೀರ್ಘವಾಗಿ ಅತಿ ಗಿಡ್ಡನಾಗಿ ಇದ್ದರೆ ದೀರ್ಘರೋಗದಿಂದ ಮರಣವಹುದು (ವೃದ್ಧಸಾ. I, ೯) ; ಅವನ ಕೈಕಾಲು ಸ್ವಲ್ಪ ಗಿಡ್ಡವಾಗಿದ್ದವು (ಮಹಾತ್ಮಾ. ೧೯) ; ಅದರ ಕಾಲು ಗಿಡ್ಡ ಇದ್ದಾಗ್ಯೂ ಗಡುತರವಾಗಿ ಬಲವುಳ್ಳವಿರುತ್ತವೆ (ಮುಂಬಯಿ. ೪-೪೬). ೨. ಹೆಚ್ಚು ಎತ್ತರವಿಲ್ಲದವನು; ಕುಳ್ಳಾದ ವ್ಯಕ್ತಿ : "ಖರ್ವ, ವಾಮನ, ಹ್ರಸ್ವ" (ನಾಜಿರಾ. ೬) : ಗಿಡ್ಡನಾಗಿ ಬೆಳೆದು ಅಳಿವುದೇನು ನ್ಯಾಯವೆ (ಪುರಂದ. ೨-೭೩-೫). ೩. ಕುಳ್ಳಾದ ಎತ್ತು : ಇನ್ನೂ ರಾಜಕೀಯ ಬಾಲ್ಯಾವಸ್ಥೆಯಲ್ಲಿರುವ ಸಂಸ್ಥಾನಗಳ ಗಿಡ್ಡಗಳನ್ನು ಸಂಯುಕ್ತ ರಾಜ್ಯದ ಬಂಡಿಗೆ ಹೂಡಿದರೆ ಹಿಗ್ಗಾಲಿ ಒಗ್ಗಾಲಿ ಆದೀತೆಂದು ಹೆದರಬೇಕಾಗಿಲ್ಲ (ಏಕೀಸಾ. ೭೦) ; ಈ ವರ್ಷ ನಾನು ಇಪ್ಪತ್ತು ರೂಪಾಯಿ ಕೊಟ್ಟು ಒಂದು ಜತೆ ಗಿಡ್ಡಗಳನ್ನು ಕೊಂಡುಕೊಂಡೆನು (ತಿಂಕಥ. ೦೮). ೪. ಒಂದು ಬಗೆಯ ವನಸ್ಪತಿ : ಕಾಡುಜನಗಲು, ಬಿಳಿಗಣಗಲು, ಗಿಡ್ಡ (ವೃಜಿಗಿ. ೭೮-೧೬೦೪). (ಗು). ೫. ಕುಳ್ಳಾದ; ಎತ್ತರವಲ್ಲದ : ಗಿಡ್ಡ ಹೆಂಡತಿ ಲೇಸು ಮುಡ್ಡಿ ಕುದುರೆಗೆ ಲೇಸು ಬಡ್ಡಿಯ ಸಾಲ ಕೊಡೆ ಲೇಸು ಹಿರಿಯರಿಗೆ ಗಡ್ಡ ಲೇಸು (ಸರ್ವಜ್ಞ. ೧೧೩೩). ೬. ಮೋಟಾದ ಮತ್ತು ದಪ್ಪವಾದ. 'ಗಿಡ್ಡಕುಂಪಣಿ', 'ಗಿಡ್ಡದುಡ್ಡು' ಪರಾ.
[ ದೇ ॥ ತುಳು. ಗಿಡ್ಡ, ಗಿಡ್ಡು, ಗಿಡ್ಡೆ ; ತೆಲು. ಗಿಡ್ಡಿ, ಗಿಡ್ಡು ]

**ಗಿಡ್ಡಂಗಡಿ** (ನಾ). ಹೆಂಡದ ಅಂಗಡಿ : "ಶುಂಡಾ, ಪಾನಂ, ಮದಸ್ಥಾನಂ– ಇ ಮದ್ಯಪಾನಮಾಡುವ ಮನೆಯ ಹೆಸರು, ಗಿಡ್ಡಂಗಡಿ" (ಸಿದ್ಧಾಂತಿ. ೨೭೪).
[ <ಗಿಡ್ಡಂಗಿ₂ ]

**ಗಿಡ್ಡಂಗಿ₁** (ನಾ). ಚಿಕ್ಕಅಂಗಿ ; ವಾಸಕೋಟು ; ಜಾಕೀಟು ; ನಡುವಿನವರೆಗೆ ಮಾತ್ರ ಇರುವ ಹುಡುಗನ ಗಿಡ್ಡಂಗಿ (Eton–Jacket. ಇಂಕನಿ) ; ಇವರು ನಿಲುವಂಗಿಗಳನ್ನು ಹಾಕಿಕೊಂಡು ಮೇಲೆ ಅಂದವಾದ ರೇಶಿಮೆಯ ಗಿಡ್ಡಂಗಿಗಳನ್ನು ಧರಿಸುವರು (ಕಥಾಗಿ. ೩೩೦) ; ದೊಡ್ಡ ಮುಂಡಾಸ ಗಿಡ್ಡಂಗಿ ಜನಿವಾರ (ಜನಗೀ. ೪೮). [ ಗಿಡ್ಡ + ಅಂಗಿ₂ ]

**ಗಿಡ್ಡಂಗಿ₂** (ನಾ). ೧. ಗಡಂಗು ; ಗೋದಾಮು. ೨. ಹೆಂಡದ ಅಂಗಡಿ ; ಪಡಖಾನೆ : ಬರುವ ಗಿರಾಕಿಗಳಲ್ಲಿ ಬಹಳ ಜನರು ಗಿಡ್ಡಂಗಿಯ ಗೆಣೆಯರು (ಜೀನಬಾ. ೨೪). ೩. ಕಾರಾಗೃಹ ; ಸೆರೆಮನೆ : ಸಣ್ಣ ಗಿಡ್ಡಂಗಿಯ ಒಳ ಬಾಗಿಲ ಹತ್ತಿರ ಕಾದಿರುವಂತೆ ಹೇಳು (ಕೃಷ್ಣಭೂ. ೪೪) ; ಪುರರಕ್ಷಕದಳವನ್ನೂ . . . ಸೈನಿಕರ ಒಡ್ಡುಗಳನ್ನೂ ಹಿಡಿದು ದೊಡ್ಡ ಗಿಡ್ಡಂಗಿಗೆ ಕೂಡಿ (ವಿಗಡ. ೬೬-೨೧). 'ಗಡಂಗು' ಪರಾ.
[ ದೇ ॥ ತಮಿ. ಕಿಡಙ್ಗು ; ತೆಲು. ಗಿಡ್ಡಂಗಿ. / ಮರಾ. ಗಿಡಂಗೀ ]

**ಗಿಡ್ಡಕಾಳು** (ನಾ). ಒಂದು ಬಗೆಯ ಬತ್ತ : ಗಿಡ್ಡಕಾಳು ಧಮ್ಮಕಾಳು ಮೊದಲಾದ ಕನಿಷ್ಠಪ್ರತಿಯ ನೆಲ್ಲುಬೀಜವನ್ನು ಬಿತ್ತಿ ಅಕ್ಕಿಯನ್ನು ಕಡಿಸಿಕೊಳ್ಳುತ್ತಾರೆ (ಕೃಷಿಪ್ರ. ೬೪). [ ಗಿಡ್ಡ + ಕಾಳು₂ (<ಕಾೞ್₂) ]

**ಗಿಡ್ಡಕುಂಪಣಿ** (ನಾ). ಒಂದು ಬಗೆಯ ನಾಣ್ಯ ; ಹಿಂದೆ ಸುಲ್ತಾನರ ಕಾಲದಲ್ಲಿದ್ದ ಚಿಕ್ಕದಾದ ಹಾಗೂ ದಪ್ಪವಾಗಿದ್ದ ಬೆಳ್ಳಿನಾಣ್ಯ,— ರೂಪಾಯಿ : (೬). [ ಗಿಡ್ಡ + ಕುಂಪಣಿ ? ]

**ಗಿಡ್ಡತನ** (ನಾ). ಕುಳ್ಳುತನ ; ಕುಬ್ಜತೆ : ಜೆಡ್ಡುದೇಹದ ಗುಜ್ಜುಗೊರಲಿನ ಗಿಡ್ಡರೂಪಿನ ಹರುಕುಗಡ್ಡದ ಗಿಡ್ಡತನದ[ಪಾಠಾಂ. ಹೆಡ್ಡನಾದ] ಕುರೂಪಿಯಾದನು ನೃಪತಿ ವಿಷದಿಂದ (ನಳಚ. ೬-೧೪). [ ಗಿಡ್ಡ + – ತನ ]

**ಗಿಡ್ಡದುಡ್ಡು** (ನಾ). ಒಂದು ಬಗೆಯ ನಾಣ್ಯ ; ಹಿಂದೆ ಕೃಷ್ಣರಾಜಒಡೆಯರ ಕಾಲದಲ್ಲಿ ಚಲಾವಣೆಯಲ್ಲಿದ್ದ ಆಕಾರದಲ್ಲಿ ಸಣ್ಣದಾಗಿದ್ದರೂ ದಪ್ಪವಾಗಿದ್ದ ನಾಣ್ಯ : (೬). [ ಗಿಡ್ಡ + ದುಡ್ಡು₁ ]

**ಗಿಡ್ಡರಾಗಿ** (ನಾ). ರಾಗಿಯಲ್ಲಿ ಒಂದು ಬಗೆ ; ಕುಳ್ಳಾಗಿ ಬೆಳೆಯುವ ಒಂದು ಬಗೆಯ ರಾಗಿ ; ಅಲ್ಪಾವಧಿಯಲ್ಲಿ ಫಲಬಿಡುವ ರಾಗಿ : ಹೊಲಗಳಲ್ಲಿ ಗಿಡ್ಡರಾಗಿಯು ಬಂದು, ದೊಡ್ಡರಾಗಿಯು ನಾಟಿಯನ್ನು ಹಾಕಿದ್ದರು (ಹುಟ್ಟಿಹ. ೬೨). 'ದೊಡ್ಡರಾಗಿ' ಪರಾ.
[ ಗಿಡ್ಡ + ರಾಗಿ₁ ]

**ಗಿಡ್ಡರಾಸಿ** (ನಾ). ಕುಳ್ಳುಜಾತಿಗೆ ಸೇರಿದುದು ; ಗಿಡ್ಡಜಾತಿಯದು : ಮಲೆಯಾಳದಲ್ಲಿ ಇರುವ ಯೆತ್ತುಗಳು ಗಿಡ್ಡರಾಸಿ ಆಗಿ ಗಾಡಿಯೆಳೆಯುವ ಲಾಯಕು ಅಲ್ಲವಾದ್ದರಿಂದ (ರಾಜೇಂದ್ರ. ೩೦).
[ ಗಿಡ್ಡ + ರಾಸಿ₁ (<ರಾಸು) ]

**ಗಿಡ್ಡಹಾಗಲ** (ನಾ). ಒಂದು ಬಗೆಯ ಹಾಗಲ : ಮಡ್ಡಿಹಾಗಲ, ಗಿಡ್ಡಹಾಗಲ, ಕಾರ್ತಿಕಾಯಿ, ಕಾರ್ಚಬಳ್ಳಿ (ವೃಜಿಗಿ. ೫೪-೧೦೯೩) ; ಕಾಯಿಗಳು . . . ನುಗ್ಗೆ, ಹಾಗಲ, ಗಿಡ್ಡಹಾಗಲ, ಬಾಳೆ, ಬದನೆ (ನಮ್ಮನು. ೨೩೭).
[ ಗಿಡ್ಡ + ಹಾಗಲ(<ಪಾಗಲ್₁) ]

**ಗಿಡ್ಡಿ** (ನಾ). ಕುಳ್ಳಗಿರುವ ಹೆಂಗಸು ; ಕುಳ್ಳಿ ; ಕುಬ್ಜೆ : ಬೇಲೂರ ಚೆನ್ನ ಬೆಲೆಮಾಡೊ ಕೊಟ್ಟರೆ ಬೇಡಾವೆ ಗಿಡ್ಡಿ ಕೊರಳೀಗೆ (ಹಳ್ಳಿಯ. ೨೩) ; ಅಡ್ಡಾ ಗುಡ್ಡಾ ಚೆಂದ ದೊಡ್ಡರಳಿಮರ ಚೆಂದ ಗಿಡ್ಡಿ ನಿನ ಕೈಗೆ ಬಳೆ ಚೆಂದ (ಹಳ್ಳಿಯ. ೫೮). [ ಗಿಡ್ಡ + – ಇ₂ ]

**ಗಿಡ್ಡು** (ನಾ). ೧. ಎತ್ತರ ಕಡಮೆಯಾಗಿರುವಿಕೆ ; ಕುಳ್ಳು ; ಗುಜ್ಜು ; ಕುರುಚು : "ಹ್ರಸಿತಂ, ಹ್ರಸಿಃ, ಹ್ರಸಃ, ಹ್ರಸ್, ಹ್ರಸುಃ ಈ ೫ ಗಿಡ್ಡು" (ಶಾಶಕ್ಕ. ೬೨) ; ಗುಡ್ಡ ಬೆರಳೊಳಿತ್ತಿ ದೊಡ್ಡಿ ಗೋವ್ಗಳ ಕಾಯ್ದು ಒಡ್ಡಿ ಜಗನ್ನಾಥ ಗಿಡ್ಡಾಗಿದ್ದನೆ (ಪುರಂದ. ೨-೩೨-೩). 'ಗುಡ್ಡು₁' ಪರಾ. ೨. ಗಿಡ್ಡಾಗಿರುವ ವ್ಯಕ್ತಿ ; ಕುಳ್ಳ : ಸರ್ಕಸ್ಸಿನ ಗಿಡ್ಡುನಂತೆ ಹಲ್ಲುಕಿರಿಸಿ ಮಂದೆಗೆ ಕಳಿಸುವುದು ತಿಂಮನ ಕಸುಬಲ್ಲ (ತಿಂಮತ. ೮). ೩. ಕುಳ್ಳಾದ ಪ್ರಾಣಿ ; ಗಿಡ್ಡ : ನಲವತ್ತೈದು ಹಣಕ್ಕೆ ಎರಡು ಎತ್ತಿನ ಗಿಡ್ಡುಗಳನ್ನು ಕ್ರಯಕ್ಕೆ

ತೆಕ್ಕೊಂಡನು (ಕಥಾಮಂ. IV, ೧೯). ೪. ಊದುಕಡ್ಡಿ ಮೊದಲಾದುವನ್ನು ಸಿಕ್ಕಿಸಲು ಉಪಯೋಗಿಸುವ) ಒಂದು ಬಗೆಯ ಲೋಹದ ಅಥವಾ ಮರದ ಸಾಧನ: ಊದುಬತ್ತಿಯ ಗಿಡ್ಡಗಳು, ಕಯ್ಗನ್ನಡಿಗಳು . . . ಮುಂತಾದುವನ್ನು ಇಡಹುತ್ತ (ಮಂತ್ರಶ. ೬೩-೨೨).
[ ಗಿಡ್ಡ + – ಉ₄ ]

**ಗಿಡ್ಡೆ₁** (ನಾ). = ಗಿಡ್ಡಿ : ಆ ಹೆಣ್ಣು ಈತನಿಗೆ ಸಮವಾಗುವುದಿಲ್ಲ. ಬಹಳ ಗಿಡ್ಡೆ (ರೂಢಿ). [ ಗಿಡ್ಡ + – ಎ₂ ]

**ಗಿಡ್ಡೆ₂** (ನಾ). (ಕರಾ) ಹೊಯ್ಗಡುಬು. [ ದೇ॥ ತುಳು. ಗಿಡ್ಡೆ ]

**ಗಿಣಿ** 'ಗಿಳಿ' ನೋ.

**ಗಿಣಿಕೋಲು** (ನಾ). ಗಿಣಿಯ ಕೊಕ್ಕಿನಂತೆ ಬಾಗಿರುವ ಕೋಲು : (+).
[ ಗಿಣಿ(< ಗಿಳಿ) + ಕೋಲು₁(<ಕೋಲ್₁) ]

**ಗಿಣಿಗಡಕ** 'ಗಿಳಿಗಡಿಕ' ನೋ.

**ಗಿಣಿಗಿಣಿ** (ನಾ). ಗೆಜ್ಜೆ ಮೊದಲಾದುವುಗಳ ಧ್ವನಿಯನ್ನು ಸೂಚಿಸುವ ಅನುಕರಣ ಶಬ್ದ: ಗೆಜ್ಜೆಗಳು ಗಿಣಿಗಿಣಿಎಂದು ಧ್ವನಿಮಾಡುತ್ತವೆ (ರೂಢಿ). 'ಗಿಲಿಗಿಲಿ' ಪರಾ.

**ಗಿಣಿಗಿಣಿಕೆ** (ನಾ). ಒಂದು ಬಗೆಯ ಗಿಡ; ಗಿಲಗಿಂಚೆ: "ಗಿಣಿಗಿಣಿಕೆ ವರುಣಿ [ಪಾಠಾಂ ಯವಮನಿ] ಯಕ್ಕು" (ಮಂಗರಾ. ೪೨-೬೭); ಹಿರಿಯ ಮದ್ದು, ಗಿಣಿಗಿಣಿಕೆ, ರಾಸ್ನೆ, ಜವೆ . . . ಮೆಲ್ಲ ಮುಟ್ಟುಕಟ್ಟು ಮಾಣ್ಗುಂ (ವಿವೈವಿ. ೮೮). [ ? ]

**ಗಿಣಿಗಿಣಿಲು** (ನಾ). ಒಂದು ಅನುಕರಣ ಶಬ್ದ: ಗಿಣಿಗಿಣಿಲು ಗಂಟೆ ಮಧುರಸವನೀಂಟಿ ಗಂಧರ್ವಲೋಕದಲ್ಲಿ (ಹೃದಸ. ೪೯-೨೦).

**ಗಿಣಿನುಡಿ** 'ಗಿಳಿನುಡಿ' ನೋ.

**ಗಿಣಿಮಾವು** 'ಗಿಳಿಮಾವು' ನೋ.

**ಗಿಣಿಮೂಗ** 'ಗಿಳಿಮೂಗ' ನೋ.

**ಗಿಣಿಮೂಗಿ** 'ಗಿಳಿಮೂಗಿ' ನೋ.

**ಗಿಣಿಮೂಗು** (ನಾ). ೧. ಗಿಣಿಯ ಕೊಕ್ಕು. ೨. ಗಿಣಿಯ ಕೊಕ್ಕಿನಂತೆ ಬಾಗಿರುವ ಮೂಗು: ಅವನದು ಗಿಣಿಮೂಗು (ರೂಢಿ). ೩. = ಗಿಳಿಮೂಗ ೨: ಸುರವಾರುಣಿ ಗಿಣಿಮೂಗೀಶ್ವರಿ ಖರಕರ್ಣಿಕೆಯೆನಿಪ್ಪಿವಂ ಕಿಱಿದಾನುಂ ಸೋರೆಯ ತಿರುಳ್ ರಸದೊಡನೆಱೆಗುರಗೋತ್ತರ ವಿಷಮನಲೆಯಲಿಂತಿದೆ ಸಾಲ್ಗುಂ (ಲೋಕೋಪ. ೧೦-೧೭); ಗಿಣಿಮೂಗಿನ ಗಡ್ಡೆಯ ನೀರಿಂದ ಅರೆದು ಕೊಡಿಸಲು ಹಾವುಮೆಕ್ಕೆಯ ವಿಷ ಶಮನವಹುದು (ವೈದ್ಯಸಾ. II, ೨೩೬). [ ಗಿಣಿ (<ಗಿಳಿ) + ಮೂಗು₁ ]

**ಗಿಣಿಮೂತಿ** (ನಾ). ೧. ಗಿಣಿಯ ಕೊಕ್ಕು: ಗಿಣಿಮೂತಿಗೆಣೆಯಾದ ಮುತ್ತುಗದ ಹೂಗಳು ಉದುರಿ ಬಿದ್ದಿವೆ ನೆಲದ ಮೇಲೆ (ಗಾಥಾಸ. ೪-೮). ೨.=ಗಿಳಿಮಾವು: ತೋಟದಲ್ಲಿ ಗಿಣಿಮೂತಿ ಹೇರಳವಾಗಿ ಬೆಳೆದಿದೆ (ರೂಢಿ). [ ಗಿಣಿ (<ಗಿಳಿ) + ಮೂತಿ ]

**ಗಿಣಿಮೂತಿಮಾವು** (ನಾ). = ಗಿಳಿಮಾವು: ಗಿಣಿಮೂತಿಮಾವು ತಿನ್ನಲು ತುಂಬ ರುಚಿ (ರೂಢಿ). [ ಗಿಣಿಮೂತಿ + ಮಾವು ]

**ಗಿಣಿಲು** 'ಗಿಣ್ಣಲ್' ನೋ.

**ಗಿಣಿವಿಂಡು** 'ಗಿಳಿವಿಂಡು' ನೋ.

**ಗಿಣಿವೋದು** 'ಗಿಳಿಯೋದು₂' ನೋ.

**ಗಿಣ್ಣಲ್, ಗಿಣಿಲು, ಗಿಣ್ಣಿಲ್, ಗಿಣ್ಣಿಲು, ಗಿಳಿಲು** (ನಾ). ಸಣ್ಣ ಪಾತ್ರೆ; ಗಿಂಡಿ; ಮಿಳ್ಳೆ: ತಳಿಗೆ ಕನ್ನಡಿ ಸಿಪ್ಪು ಕಂಚಿನ ಸಟ್ಟುಗಂ ತೆಱುವಟ್ಟಲಗ್ಗಳದ ಕೈಮಳೆ ತಾಳಮೊಪ್ಪುವ ಗಿಣ್ಣಲೆಂಬಿವನಾವಗಂ . . . ಕುಡುವಂ ನೃಪಾತ್ಮಜನರ್ತಿಯಿಂ (ಧರ್ಮಾಮೃ. ೨-೨೬); ಗಿಳಿಯ ಶಿಶುಗೆ ಪಣ್ಗಳ ರಸದಿಂ ಬಾಯ್ಗಿಣ್ಣಲಾಗಿ ಮಾಣದೆ ತಾಯ್ಗಿಳಿ ತಂದೆಱೆದುದು (ಸೂಕ್ತಿಸು. ೧೦-೫೭). **ಗಿಣಿಲು:** ಕೊಳಗ ದೈವ ಗಿಣಿ [ಪಾಠಾಂ. ಣ್ಣಿ]ಲು ದೈವ ಕಾಣಿರೋ (ಬಸವ. ೫೬೩); ಜನಕ ಭಕ್ಷಮುಮನಾಜ್ಯದೊಳಗದ್ದುವೆನೆನುತ್ತ ಗಿಣಿಲಾ ನೋಡೆ (ನವಮೋ. ೯-೨೬). **ಗಿಣ್ಣಿಲ್**: ಕರಂ ಮುಂಗಿದು ಹೊಡವಟ್ಟು ಗಿಣ್ಣಿ[ಪಾಠಾಂ. ಣ್ಣ]ಲನಂತು ನೂಕುಗು ಮತ್ತೆ ಮುಂದಿಡುಗು (ಬಸಪು. ೦೪-೦೮); ಇಂಗಡಲ ಸುರರು ಕಡೆವಲ್ಲಿ ಚಿಮ್ಮಿದ ತುಷಾರಂಗಳೊಳ್ದಿರುಳೆಂದೊಳಿಗಳಂ ತಂದು ಜೋಡಿಸುತ್ತಂಗಜಾಮಾತ್ಯ ನುಱೆ ಚೆಂಬೊನ್ನ ಗಿಣ್ಣಿಲ್ಗಳೊಳ್ಕೊಡೆ ಮದನಗೆಂದು (ಜೀರಮ. ೭-೦೩); ಬಹು ಕಂಡದಣದ ಗಿಣ್ಣಿಲಂದದ ಮೊಲೆಯ ಕೋಕನದಪೀನಕೋರಕವೊಲೆಯರು (ಪ್ರಭುಪು. ೪-೮೦). **ಗಿಣ್ಣಿಲು**: ಕೊಳಗ ದೈವ ಗಿಣ್ಣಿ[ಪಾಠಾಂ. ಣಿ]ಲು ದೈವ ಕಾಣಿರೋ ದೈವ ದೈವವೆಂದು ಕಾಲಿಡಲಿಂಬಿಲ್ಲಾ (ಬಸವ. ೫೬೩); ಮಿಗೆ ರಮ್ಯವಡೆದ ಹೊಂಬರಿಯಣ ತಳಿಗೆ ತಂಬಿಗೆ ಗಿಂಡಿಗಿಣ್ಣಿಲುಗಳನು . . . ಇತ್ತನೊಲಿದು (ಮೋಹತ. ೦೫-೦೮); ಭಸ್ಮ ಗಿಣ್ಣಿಲು ವಾಮಕರದಲ್ಲಿ (ಗುರುಚಾ. ೩-೩೫); ಎಸೆವೆಂಟುದಿಕ್ಕಿನಲಿ ಮಿಸುನಿ ಗಿಣ್ಣಿಲು ಗಿಂಡಿ ಹುಸಿದು ಮಾಡುವನ ಶಿವಪೂಜೆ ಬೋಗಾರ ಹಸರವಿಟ್ಟಂತೆ (ಸರ್ವಜ್ಞ. ೦೭೦). **ಗಿಳಿಲು:** ಶಂಖ ಗಿಳಿಲು ದಂಡಾಗ್ರುವ ಪಿಡಿದು ಕಾವಿ ಕಾಷಾಯಾಂಬರವ ಹೊದ್ದು . . . ಕುಳಿತಿರ್ದನು ಕಾಣಾ ನಿಮ್ಮ ಶರಣ (ಮಡಿಮಾ. ೯೭-೬೪). 'ಕಿಣ್ಣ₁' ಪರಾ.
[ ದೇ॥ ತಮಿ. ಮಲ. ಕಿಣ್ಣ ; ತುಳು. ಕಿಣ್ಣಲ್, ಗಿಣ್ಣಲ್; ತೆಲು. ಗಿನ್ನೆ ]

**ಗಿಣ್ಣಿಕ್ಕು** (ಕ್ರಿ).=ಗಿಣ್ಣಿಡು : ನಾಟಿರುವ ಕಬ್ಬು ಈಗ ಗಿಣ್ಣಿಕ್ಕುತ್ತಿದೆ (ರೂಢಿ).
[ಗಿಣ್ಣು₂ (<ಗೆಣ್ಣು) + ಇಕ್ಕು]

**ಗಿಣ್ಣಿಡು** (ಕ್ರಿ). (ಕಬ್ಬು ಮೊದಲಾದ ಗಿಡಗಳು ಬೆಳೆಯುವಾಗ) ಗಿಣ್ಣು ಉಂಟಾಗು: ನಿಮಿರ್ದು ಗಿ[ಪಾಠಾಂ. ಗೆ]ಣ್ಣಿಟ್ಟು ಕವಲಿಡುತ ತೆನೆದೋಱೆ (ಜೀರಮ. ೨-೦೩). [ಗಿಣ್ಣು₂ (<ಗೆಣ್ಣು) + ಇಡು₁ ]

**ಗಿಣ್ಣಿಲ್** 'ಗಿಣ್ಣಲ್' ನೋ.

**ಗಿಣ್ಣಿಲು** 'ಗಿಣ್ಣಲ್' ನೋ.

**ಗಿಣ್ಣು₁** (ನಾ). ೧. ಹಸು, ಎಮ್ಮೆ ಮೊದಲಾದುವು ಈದ ಹೊಸದರಲ್ಲಿ ಕೊಡುವ ಹಾಲು; ಎಳಗಂದಿ ಹಾಲು: ಪಣ್ಣುಂ ಗಿಣ್ಣುಮಾಳಂಬೆಯುಂ ಇಂತಿವೆಲ್ಲಮಂ ತಿನ್ನದ ಬ್ರತಂಗಳುಮಂ ಕೈಕೊಂಡು (ವಡ್ಡಾರಾ. ೦೫೦-೧); ನವನೀತಮನಾಣಂಬೆಯನನಾರತಂ ಬೆಳ್ಗಂಬಳಮಂ ಗಿಣ್ಣನುಣ್ಣದಿರ್ಪು ದಮೋಘಂ (ಸುಕುಮಾ. ೬-೪೩); ಹೆಬ್ಬಲಿಯ ಗಿಣ್ಣು ಆಸಱೆಯ ಗೋಸನ್ನೆ × × ಬಿದಿ ಬೈಚಡವಂ ಪಿಡಿದು ಪಾದಮಾರ್ಗ್ಗ ಜಲಮಾರ್ಗ್ಗಲಿ ನಾನಾಪಟ್ಟಣಮಂ ಪೊಕ್ಕು (ಎಕ. VIII, ಸೊರಬ. ೨೬೮-೩೯ ; ಸು. 1245); ಒಂದು ಪಿಂಡ ಬೆಣ್ಣೆಯನಿಕ್ಕಿ ಕಾಸಲದು ನೀರಿಂಗಿ ಪೊಸಗಿಣ್ಣನ ಪರಿಯಾಗಲು (ಸೂಪಶಾ. ೪-೭); ಜೇನು ಗಿಣ್ಣತ್ತಿವಣ್ಗಳ್ಬಾವಿಸಲ್ಕೆ ಮತ್ತೇನು ಸತತಂ ದ್ರುಮ್ಯದೋಷತ್ರಯಗಳವಂ ಜೈನರೊಲ್ಲದೆ ಬಿಡುವುದೇ ಸದ್ವ್ರತಂ (ಪಾಸೋಪು. ೯-೦೦೬). ೨. ಗಿಣ್ಣುಹಾಲನ್ನು ಕಾಯಿಸಿ ಮಾಡಿದ ಒಂದು ಬಗೆಯ ಸಿಹಿತಿಂಡಿ : ನಿನ್ನೆ ನಮ್ಮ ಮನೆಯಲ್ಲಿ ಗಿಣ್ಣು ಮಾಡಿದ್ದರು (ರೂಢಿ)
[ ದೇ॥ ತೆಲು. ಜುನ್ನು ]

**ಗಿಣ್ಣು₂** 'ಗೆಣ್ಣು' ನೋ.

**ಗಿಣ್ಣುಗೊಳ್** (ಕ್ರಿ). ಗೆಣ್ಣುಗಳನ್ನು ಹೊಂದು; ಗೆಣ್ಣುಮೂಡು: ಕಣ್ಣ ಮನವನಿರ್ಕುಳಿಗೊಳ್ವ ಕಡುಜಾಣವೆಣ್ಣುಗಳಧಿದೇವಿ ಕೇಳು ಗಿಣ್ಣುಗೊಳ್ಳದ ಬೆಳ್ಗಬ್ಬಿನ ರಸದಂತೆ ಬಣ್ಣಿಸುವೆನು ಕಥಾಮೃತವ (ಮೋಹತ. ೪-೨).
[ ಗಿಣ್ಣು₂ (<ಗೆಣ್ಣು) + ಕೊಳ್₁ ]

**ಗಿಣ್ಣುನೆಲ್ಲವರೆ** (ನಾ). ಒಂದು ಬಗೆಯ ನೆಲ್ಲವರೆ; ಪ್ರತಿ ಗಿಣ್ಣಿಗೂ ಕಾಯಿಬಿಡುವ ಅವರೆ: ನೆಲ್ಲವರೆ, ಗಿಣ್ಣುನೆಲ್ಲವರೆ (ಮೃಜಿಗಿ. ೦೦-೦೭೮).
[ ಗಿಣ್ಣು₂(<ಗೆಣ್ಣು) + ನೆಲ್ಲವರೆ ]

**ಗಿಣ್ಣುವಾಲು,** ಗಿಣ್ಣುಹಾಲು (ನಾ). ಹೊಸದಾಗಿ ಕರುಹಾಕಿದ ಹಸು, ಎಮ್ಮೆ ಮೊದಲಾದುವುಗಳ ಹಾಲು; ಎಳಗಂದಿಹಾಲು; ಗಿಣ್ಣುಮಾಡಂವ ಹಾಲು : "ಪೀಯೂಷ- ಈದ ಆವಿನ ಗಿಣ್ಣುವಾಲು" (ನಾಚಿರಾ. ೬). **ಗಿಣ್ಣುಹಾಲು :** "ಪೀಯೂಷಃ ಅಭಿನವಂ ಪಯಃ ಈದ ಏಳುದಿನಗಳ ಒಳಗಾಗಿ ಹಸುವಿನ ಗಿಣ್ಣುಹಾಲು." (ಸಿದ್ಧಾಂತಿ. ೨೪೯).

[ ಗಿಣ್ಣು$_1$ + ಪಾಲು$_1$ (<ಪಾಲ್$_1$) ]

**ಗಿಣ್ಣುಹಂಚಿ** (ನಾ). ಒಂದು ಬಗೆಯ ಹಂಚಿಕಡ್ಡಿ : ಭದ್ರಮುಸ್ತೆ, ಗಿಣ್ಣುಹಂಚೀತನೆ, ಹಿಪ್ಪಲಿ . . . ಲೇಹ್ಯಪಾಕವಾಗಿ ಅಟ್ಟು (ಸಕವೈ. ೧೩೮).

[ ಗಿಣ್ಣು$_2$ (<ಗೆಣ್ಣು) + ಹಂಚಿ$_1$ ]

**ಗಿಣ್ಣುಹಾಲು** 'ಗಿಣ್ಣುವಾಲು' ನೋ.

**-ಗಿತ್ತಿ** (ಪ್ರ). ಒಂದು ಸ್ತ್ರೀವಾಚಕ ತದ್ಧಿತ ಪ್ರತ್ಯಯ : -ಇತಿ, -ಇತ್ತಿ, -ಗಿತ್ತಿ, -ಎ, -ಇ ಮೊದಲಾದ ಸ್ತ್ರೀವಾಚಕಪ್ರತ್ಯಯಗಳು ಸೇರಿ ಆಗತಕ್ಕ 'ಬ್ರಾಹ್ಮಣಿತಿ, ಒಕ್ಕಲಗಿತ್ತಿ . . . ಕುರುಡಿ' ಮೊದಲಾದ ಶಬ್ದಗಳು (ಮಧ್ಯಮ. ೧೩೮).

**ಗಿದ್ಗಾಣಿ** 'ಗಿದ್ದಗಾಣಿ' ನೋ.

**ಗಿದ್ದ** 'ಗಿರ್ಧ' ನೋ.

**ಗಿದ್ದಗಾಣಿ,** ಗಿದ್ಗಾಣಿ (ನಾ). ೧. ಅತಿ ಕನಿಷ್ಠ ಬೆಲೆಯ ದುಡ್ಡು; ಚಕ್ಕಾಸು : ಕಾಳು ದವಸವಿಲ್ಲ ಗಿದ್ದಗಾಣಿ ರೊಕ್ಕವಿಲ್ಲ (ಜಟ್ಟಿಅ. ೧೫೬-೭). 'ಅದ್ದಗಾಣಿ' ಪರಾ. ೨. ಹಿಂದೆ ಚಲಾವಣೆಯಲ್ಲಿದ್ದ ಒಂದು ತೂಕ; ಕಾಣಿಯ ನಾಲ್ಕನೆಯ ಒಂದು ಭಾಗದ (ಒಂದು ಹಣದ $\frac{1}{256}$ ಭಾಗದ) ಅಥವಾ ಒಂದು ಹೊನ್ನಿನ $\frac{1}{640}$ ಭಾಗದ ತೂಕ: ಪೊನ್ನಿಂಗೆ ಗಿದ್ದಗಾಣಿಯ ಸಂಖ್ಯೆಯು ಚೆನ್ನಾಗಿಯೆ ತಿಳಿಯೆ ಪೇಟ ಲೆಕ್ಕ ಕ್ರಮದಿಂ ಮೂನ್ನೂಱಯಿಪ್ಪತ್ತು ಹತ್ತುಗಳಕ್ಕುಂ (ವ್ಯವಹಾ. ಅನು. ೧-೨೭). **ಗಿದ್ಗಾಣಿ :** (೬). [ ಗಿದ್ದ(<ಗಿರ್ಧ) + ಕಾಣಿ$_1$ ]

**ಗಿದ್ದಗೆ,** ಗಿದ್ದುಗೆ (ನಾ). ಒಂದು ಅಳತೆ; ಒಂದು ಸೊಲಿಗೆಯ ನಾಲ್ಕನೆಯ ಒಂದು ಭಾಗ : "೧ ಸೊಲ್ಲಿಗೆ=೪ ಗಿದ್ದಗೆ" (ವ್ಯವಹಾ. ೮ ಮುನ್ನುಡಿ). **ಗಿದ್ದುಗೆ :** ಎರಡು ಪೊಟ್ಟುಂ ಸಂಕ × × × ಗೆಯ್ದ ಕಾಸಿಯ ನುಟ್ಟು ತ್ರಿಪುಣ್ಡ್ರಮನಿಟ್ಟು ಪನ್ನಿರಂಡು ಗಿದ್ದುಗೆಗೊಟ್ಟು ಸ್ತಿತಿಗಳೊಳ್ ಪೂಜೆಗಟ್ಟುವೊಂ (ಎಕ. X, ಚಿಂತಾಮ. ೩೪-೩; 955).

[ ಗಿದ್ದ(<ಗಿರ್ಧ) + -ಗೆ ]

**ಗಿದ್ದನ,** ಗಿದ್ನ$_1$ (ನಾ). = ಗಿದ್ದಗೆ : ಗಿದ್ದನ ೧ಕ್ಕೆ ಹೆಸಱುಕಾಳು ೯೦೦ (ವ್ಯವಹಾ ಅನು. ೧-೩೭ ಟೀಕ); ದೇವರ ನಂದಾದೀವಿಗೆಗೆ ಕೊಟ್ಟದು . . . ಗಾಣಕ್ಕೆಣ್ಣೆ ಗಿದ್ದನ ೧ (ಎಕ. XII, ಪಾವುಗ. ೫೦-೫೦; 1248); ಗತಿ ಗಿದ್ದನೊಂದು ಸೊಲ್ಲಿಗೆ (ಪಸಾರ. ೯೪); ಆವರಿಕೆ ಬೀಜ ೧ ಗಿದ್ದನ . . . ಇವು ಪ್ರತ್ಯೇಕ ಗಳ ತೂಕವಂ ಚೂರ್ಣಿಸಿ (ಸಕವೈ. ೫೫). **ಗಿದ್ನ$_1$ :** ಪ್ರಸ್ಥೈಃ - ಗಿದ್ನ, ಚಟಾಕು, ಪಾವು, ಪಡಿ, ಸೇರು, ಬಳ್ಳ, ಕೊಳಗ, ಖಂಡಿ ಮುಂತಾದುವುಗಳಿಂದಲೂ (ಸಿದ್ಧಾಂತಿ. ೨೫೭); ನಿತ್ಯವು ಐದು ಗಿದ್ನ (ಸುಮಾರು ೨೦ ಸೇರು) ದವಸವನ್ನು ಬೀಸುವುದು, ಗಿಡಗಳಿಗೆ ನೀರುಹಾಕುವುದು (ಮಲ್ಲಮ್ಮ. ೧೪). [ <ಗಿರ್ಧ ]

**ಗಿದ್ದುಗೆ** 'ಗಿದ್ದಗೆ' ನೋ.

**ಗಿದ್ನ$_1$** 'ಗಿದ್ದನ' ನೋ.

**ಗಿದ್ನ$_2$** (ನಾ). ಸೀಸೆ ಮೊದಲಾದುವುಗಳಿಗೆ ಮುಚ್ಚುವ ಬಿರಡೆ; ಮುಚ್ಚಳ: ಇನ್ನೊಂದು ಸೀಸೆಯ ಗಿದ್ನ ತೆರೆಯುತ್ತಿದ್ದಂತೆ (ಸಂಸ್ಕಾರ. ೭೭). [ ? ]

**ಗಿನಿಗು** (ಕ್ರಿ). ಗಿಟ್ಟಿಸು; ಸಂಪಾದಿಸು : ಈ ಸಂದರ್ಭವನ್ನೇ ಉಪಯೋಗಿಸಿಕೊಂಡು ನಾಲ್ಕು ಕಾಸು 'ಗಿನಿಗಿ'ಕೊಳ್ಳಬೇಕೆಂಬ ಆಕಾಂಕ್ಷೆಯೂ ಅವರಲ್ಲಿ ಮನೆಮಾಡಿತು (ತಾಯಿಕ. ೧೩). [ ? ]

**ಗಿನಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಗಿನಿಹುಲ್ಲು, ಆನೆಹುಲ್ಲು ಮೊದಲಾದುವನ್ನು ಕೃಷಿಕನು ಇತರ ಬೆಳೆ ಬೆಳೆಯುವಂತೆಯೇ ಬೆಳೆಯಬೇಕು (ಬಾಲಪ್ರ. II, ೭೭೭). [ ಗಿನಿ$_0$ + ಹುಲ್ಲು (<ಪುಲ್) ]

**ಗಿಬರು$_1$,** ಗಿವುರು, ಗೆಬರು, ಗೆವರು (ಕ್ರಿ). ೧. ಗೀರು; ಪರಚು : ಹಾಳು ಕರ್ಕ . . . ನಾಯಿ ಮೈನೆಲ್ಲ ಗಿಬರಿ ಗಾಯಮಾಡಿಬಿಟ್ಟಿದೆ (ಮಲಮ. ೨೫೯). **ಗಿವುರು :** ೧. ಮಗು ಮುಖವನ್ನೆಲ್ಲಾ ಗಿವುರಿಕೊಂಡುಬಿಟ್ಟಿದೆ (ರೂಢಿ). **ಗೆಬರು :** ೨. ಒರಸು; ತೆಗೆದುಹಾಕು : ಅದನ್ನು ಹೇಗೆ ಗೆಬರಿಹಾಕಲಿ? (ನಡೆದಾ. II, ೧೨೦೮). **ಗೆವರು :** ೧. ಮೈಕೈಯನೆಲ್ಲವ ಉಗುರಿಂದ ಗೆವರ್ಯಾಳೆ (ನಾಪದ. ೦೬೫).

**ಗೆಬರಾಡು** = ೧. ಗೋರು; ಕವರು; ಸವರು : ಊರಿಗೆ ಬಂದ ಪಿಡುಗು ಎಲ್ಲಾ ಮನೀನೂ ಗೆಬರಾಡಿಬಿಟ್ಟಿತು (ಅಮುನಿ. ೯). ೨. ಹುಡುಕು; ತಡಕಾಡು : ತನ್ನ ಮನಸ್ಸಿನ ಮಾತುಗಳನ್ನೇ ಏನೂ ಹೇಳಬೇಕಾದರೂ ಅತ್ತಿತ್ತ ಶಬ್ದಗಳಿಗಾಗಿ ಗೆಬರಾಡಬೇಕಾಗುವದು (ಜೀನಬಾ. ೩೧೨).

[ ದೇ ॥ ತೆಲು. ಗಿವುಜು ]

**ಗಿಬರು$_2$** (ನಾ). ಕಣ್ಣಿನ ಮಲ; ಪಿಸುರು; ಗೀಜು : ಮಗುವಿನ ಮುಖ ತೊಳೆದಿಲ್ಲ, ಕಣ್ಣಿನ ಗಿಬರು ಕೂಡ ಒರೆಸಿಲ್ಲ (ರೂಢಿ). [ ? ]

**ಗಿಬ್ಬನ್** (ನಾ). ಒಂದು ಜಾತಿಯ ಕಪಿ: ಜೀವನಕ್ರಮಗಳೂ ಬುದ್ಧಿಯೂ ಗೋರಿಲ್ಲಾ, ಗಿಬ್ಬನ್ ಮೊದಲಾದ ಕಪಿಗಳಷ್ಟೇ ಇದ್ದಿರಬೇಕು (ಬಾಲಪ್ರ. I, ೨೯). [ ←ಇಂ. Gibbon ]

**ಗಿಬ್ಬು** (ಕ್ರಿ). (ಕರಾ) ಕೆದರು; ಹರಡು; ಕೆದಕು : ನೀನು ಹೀಗೆಲ್ಲ ಗಿಬ್ಬಿದರೆ ಅವನ್ನು ಸರಿಮಾಡುವವರಾರು? (ರೂಢಿ). 'ಗೆಬ್ಬು' ಪರಾ.

[ <ಗಿಬರು$_1$ ]

**ಗಿಮಿಗಿಮಿ** (ಅ). ಗಿರ್ರನೆ; ರಭಸವಾಗಿ : ಗಿಮಿಗಿಮಿ ಗಾಣವಾಡಿಸಿತಂಗಾಳಿ (ನಲಮು. ೦೪).

**ಗಿಮಿಗಿಮಿ ತಿರುಗಿಸು**=ಗಿರ್ರನೆ ಸುತ್ತಿಸು; ರಭಸದಿಂದ ತಿರುಗಿಸು : ಸುಮ್ಮಿ ಬಂದು ಅವಳು ಹೊರಡುವ ಪೂರ್ವದಲ್ಲಿ ಅವಳನ್ನು ಗಿಮಿಗಿಮಿ ತಿರುಗಿಸಿ ಕೈಬಿಡುವಳು (ಅಮುನಿ. ೪೭). **ಗಿಮಿಗಿಮಿ ತಿರುಗು**=ರಭಸದಿಂದ ಸುತ್ತು; ಗಿರಿಗಿರಿ ತಿರುಗು : ತಲೆ ಗಿಮಿಗಿಮಿತಿರುಗುತ್ತಿದೆ (ರೂಢಿ). **ಗಿಮಿಗಿಮಿಯಾಗು**=ಅಪ್ಪಾಲೆತಿಪ್ಪಾಲೆಯಾಗು : ಚಿಕ್ಕಮಕ್ಕಳು ಗಿಮಿಗಿಮಿಯಾಗಿ ಕಾಳಮಾಳೆಯಾಡಲು ಅವರಿಗೆ ಸುತ್ತುಮುತ್ತಲಿನ ಎಲ್ಲ ಪದಾರ್ಥಗಳು ತಿರುಗಿದಂತೆ ಕಾಣುವುದಿಲ್ಲವೆ (ಜ್ಯೋತಿಶ್ಶಾ. ೨೫) **ಗಿಮಿಗಿಮಿ ಸುತ್ತಿಸು**=ಅಪ್ಪಾಲೆತಿಪ್ಪಾಲೆ ಸುತ್ತಿಸು: ಬರೀ ಗಿಮಿಗಿಮಿಸುತ್ತಿಸುವ ಚಕ್ರವ್ಯೂಹದಂತೆ ಮತ್ತೆಮತ್ತೆ ಎಡರುತೊಡರುಗಳನ್ನೇ ಎದುರಿಸಹತ್ತಿದನು (ಇಪ್ಪಕ. ೩೪೮).

**ಗಿಮ್ಮನೆ** (ಅ). ಗಿರ್ರನೆ; ವೇಗವಾಗಿ : ಉಮ್ಮಡಿಕೆಯಿಂದ ಹಮ್ಮತಿಯೊಳಗಿದ್ದು ಗಿಮ್ಮನೆ ಸುತ್ತಿದೆ ಮಮ್ಮಾಡಿಯಲಿ (ತೀರ್ಥಮ. ೧೪೮).

[ ಗಿಮ್$_0$ + -ಅನೆ$_1$ ]

**ಗಿಮ್ಮೆನ್ನು** (ಕ್ರಿ). ಒಂದೇ ಸಮನೆ ತಿರುಗು; ಗಿರ್ರನೆ ತಿರುಗು : ಇಡಿಯ ದಿನ ಅದರ ವಿಚಾರದಲ್ಲೇ ತಲೆ ಗಿಮ್ಮೆಂದಿತ್ತು (ಮೂರುದಾ. ೨೪೪).

[ ಗಿಮ್$_0$ + ಎನ್ನು (<ಎನ್$_1$) ]

**ಗಿರ್** (ಅ). ವೇಗವಾಗಿ; ರಭಸದೊಡನೆ : ಚಕ್ರವು ಗಿರ್‌ಎಂದು ತಿರುಗಿ ನಿಂತಿತು (ರೂಢಿ).

**ಗಿರ$_1$** 'ಗಿರ್ಧ' ನೋ.

**ಗಿರ$_2$** (ನಾ). ೧. ಗ್ರಹ. ೨. ಉತ್ಕಟವಾದ ಬಯಕೆ; ಹೆಬ್ಬಯಕೆ; ಅತ್ಯಾಸಕ್ತಿ. 'ಗಿರಹಿಡಿ' ಪರಾ. [ <ಗ್ರಹ ]

**ಗಿರಕಾಲು** (ನಾ). ಹದಿನಾರನೆಯ ಒಂದು ಭಾಗ : (೬).

[ ಗಿರ$_1$ (<ಗಿರ್ಧ) + ಕಾಲು$_3$ (<ಕಾಲ್$_3$) ]

**ಗಿರಕಾಲೆ** (ನಾ). ಒಂದು ಬಗೆಯ ಆಟದ ಯಂತ್ರ; ಆನೆ, ಕುದುರೆ, ಒಂಟೆ ಮುಂತಾದ ಆಕಾರದ ಆಸನಗಳಿಂದ ಕೂಡಿದ್ದು, ಅವುಗಳ ಮೇಲೆ ಮಕ್ಕಳನ್ನು ಕೂರಿಸಿ ಗುಂಡಗೆ ತಿರುಗಿಸುವ ಯಂತ್ರ; ರಾಟವಾಳ: ಗಿರಕಾಲೆಯಲ್ಲಿ ಕುಳಿತ ಮಕ್ಕಳು ಸಂತೋಷದಿಂದ ಕೂಗುತ್ತಿದ್ದರು (ರೂಢಿ). [ ಗಿರಕಿ$_1$ + ಅಲೆ$_2$ ]

**ಗಿರಕಿ$_1$**, ಗಿರಕೆ (ನಾ). ೧. ತಲೆಕೆಳಗಾಗಿ ಬೀಳುವಿಕೆ; ಲಾಗ; ದಿಂಡುರುಳು. 'ಗಿರಕಿಹೊಡೆ' ಪರಾ. ೨. ಚಕ್ರಾಕಾರವಾಗಿ ಸುತ್ತುವಿಕೆ. 'ಗಿರಕಾಲೆ' ಪರಾ. **ಗಿರಕೆ:** ೧. 'ಗಿರಕೆಹೊಡೆ' ಪರಾ. [ ← ಮರಾ. ಗಿರಕಾ ]

**ಗಿರಕಿ$_2$** (ನಾ). ನಾಲ್ಕನೆಯ ಒಂದು ಭಾಗ; ಗಿದ್ದ. 'ಗಿರಕಿಕಾಗದ' ಪರಾ. [ ? ]

**ಗಿರಕಿಕಾಗದ** (ನಾ). ಫುಲ್‌ಸ್ಕೇಪ್‌ಅಳತೆಯ ಕಾಗದದ ನಾಲ್ಕನೆಯ ಒಂದು ಭಾಗ: ಗಿರಕಿಕಾಗದದ ಮ್ಯಾಲ ಗೀಚಿಕೊಟ್ಟನ್ರೀ ರಾಜೀನಾಮೆ! (ಭಾಗ್ಯಶ್ರೀ. ೩೯). [ ಗಿರಕಿ$_2$ + ಕಾಗದ ]

**ಗಿರಕಿಚಡಾವು** (ನಾ). ಗಿರಕ್ ಗಿರಕ್ ಎಂದು ಶಬ್ದಮಾಡುವ ಜೋಡು, —ಪಾದರಕ್ಷೆ: ವೈಗೆ ಬಿಳಿಯ ಮಲ್ಲಿನ ಜುಬ್ಬ ಕಾಲಿಗೆ ಗಿರಕಿಚಡಾವು ಬಂದಿತ್ತು (ಘಾಟೀಮು. ೬೮). [ <ಗಿಜಿಕ್ + ಚಡಾವು ]

**ಗಿರಕಿಮೆಟ್ಟು**, **ಗಿರ್ಕಿಮೆಟ್ಟು** (ನಾ). = ಗಿರಕಿ ಚಡಾವು: ಅವನು ಹಾಕಿಕೊಂಡಿದ್ದ ಗಿರಕಿಮೆಟ್ಟು ಸುಂದರವಾಗಿತ್ತು (ರೂಢಿ). **ಗಿರ್ಕಿಮೆಟ್ಟು:** ಅವರು ಕಾಲಿಗೆ ಹಾಕಿಕೊಂಡಿದ್ದ ಕೆಂಪುಹೂ ಕೂರಿಸಿದ ಕನ್ನಡ ಜಿಲ್ಲೆಯ ಗಿರ್ಕಿಮೆಟ್ಟು ಗಿರಕು ಬರಕು ಸದ್ದುಮಾಡುತ್ತಾ ಅವರ ಆಗಮನಕ್ಕೆ ಒಂದು ರೀತಿಯ ಪರಾಕು ಹೇಳುವಂತಿತ್ತು (ಮಲಮ. ೧೬೭).
[ <ಗಿಜಿಕ್ + ಮೆಟ್ಟು$_2$ ]

**ಗಿರಕಿರೋಗ** (ನಾ). ಒಂದು ಬಗೆಯ ರೋಗ; ತಲೆ ತಿರುಗುವ ರೋಗ: (ಮು.ಕುದುರೆಗಳಿಗೂ ದನಕರುಗಳಿಗೂ ಬರುವ) ಒಂದು ಮಿದುಳುರೋಗ, ಗಿರಕಿರೋಗ (Blind Staggers. ಇಂಕನಿ). [ ಗಿರಕಿ$_1$ + ರೋಗ ]

**ಗಿರಕಿಹೊಡೆ**, ಗಿರಕೆಹೊಡೆ (ಕ್ರಿ). ೧. ಸುತ್ತುಹಾಕು; ತಿರುಗು: ಒಂದು ಮಿಂಚಿನಾಗ ಹತ್ತ ಇಚಾರ ಗಿರಕಿಹೊಡೀತಾವು (ಜಾಬಲ. ೩೨); ಆನಂದದಿಂದ ಗಿರಕಿಹೊಡೆದಿತ್ತು ಹೃದಯ (ಮುಕ್ತ ೭೯). ೨. (ಆಲಂ) ಪರೀಕ್ಷೆಯಲ್ಲಿ ಅನುತ್ತೀರ್ಣನಾಗು: ಮತ್ತಮತ್ತ ಅದ ಇಯತ್ತಾದಾಗ ಗಿರಕಿಹೊಡೀತಾನ ಈ ಮೂರ್ಖಾ (ಸಮಜೀ. ೨೦೯). **ಗಿರಕೆಹೊಡೆ:** ೩. (ಪಾರಿವಾಳದಂತೆ) ಲಾಗಹಾಕು; ಪಲ್ಟಿಹೊಡೆ: (ಕ).
[ ಗಿರಕಿ$_1$ + ಹೊಡೆ$_1$ (<ಪೊಡೆ$_1$) ]

**ಗಿರಕು** 'ಗಿಜಿಕ್' ನೋ.

**ಗಿರಕೆ** 'ಗಿರಕಿ$_1$' ನೋ.

**ಗಿರಕೆಹೊಡೆ** 'ಗಿರಕಿಹೊಡೆ' ನೋ.

**ಗಿರಕ್ಕನೆ** (ಅ). ಸರ್ರನೆ; ಸರಕ್ಕನೆ: ನಿನಗಾದ ಅಪಮಾನವನ್ನೆಲ್ಲ ಮರೆತು ಗಿರಕ್ಕನೆ ಅವಳ ಕಡೆ ತಿರುಗಿಬಿಟ್ಟೆ (ಮಹಾಗ. ೧೯೭).
[ ಗಿರಕು (<ಗಿಜಿಕ್) + – ಅನೆ$_1$ ]

**ಗಿರಗಟ್ಟೆ** 'ಗಿರುಗಟೆ' ನೋ.

**ಗಿರಡಿ** (ನಾ). ೧. [ಸಂಗೀತ] ಒಂದು ಬಗೆಯ ಧ್ವನಿಕಂಪನ: ಕೇದಾರ ರಾಗದಲ್ಲಿ ಅನಂತ ಆಲಾಪ ಗಿರಡಿಗಳೊಂದಿಗೆ ಶಾಸ್ತ್ರೋಕ್ತವಾಗಿಯೇ ಅಂದನು (ಜೀದಾನ. ೧೭); ತಾನಿನ ಮೇಲೆ ತಾನು ಗಿರಡಿಯ ಮೇಲೆ ಗಿರಡಿ (ಹುಚ್ಚಾಟ. ೨೦). ೨. ಕೋಲಿನಿಂದ ಗಿರಗಿರನೆ ಸದ್ದುಮಾಡುತ್ತಾ ಬಾರಿಸುವ ಒಂದು ಬಗೆಯ ಚರ್ಮವಾದ್ಯ: ಅವುಗಳಲ್ಲಿ ದಿಮ್ಮ, ಜಗ್ಗಲಿಗೆ ಮೊದಲಾದ ದಿಮ್ಮುಗುಡುವ ವಾದ್ಯಗಳನ್ನೂ ಕರಡೆ, ಕಣೆ, ಮೊದಲಾದ 'ಗಿರಡಿ'ಯ ವಾದ್ಯಗಳನ್ನೂ . . . ಮೇಳಮಾಡಿ (ಕನ್ನಜಾ. ೩೦). 'ಕರಡಿ$_2$' ಪರಾ. [ ? ]

**ಗಿರಣಿ$_1$** (ನಾ). ಹತ್ತಿಯನ್ನು ಬಿಡಿಸುವ, ನೂಲು ಮಾಡುವ, ಧಾನ್ಯ ಬೀಸುವುದೇ ಮೊದಲಾದ ಯಂತ್ರ ಮತ್ತು ಇಂತಹ ಯಂತ್ರಗಳಿಂದ ಕೂಡಿದ ಕಟ್ಟಡ; ಮಿಲ್ಲು: ಈ ಗಿರಣಿಯ ಮಾಲೀಕರು ಹೇಡಿಗಳು (ಭಾರತಿ. ೭೭); ಈ ದಿನ ಗಿರಣಿಗಳೆಲ್ಲವೂ ಮುಚ್ಚಿವೆ (ರಕ್ತಧ್ವ. ೧೪೪); ಗಿರಣಿಯಲ್ಲಿ ತಯಾರಿಸಿದ ಅಕ್ಕಿಯಾದರೆ ಹೀಗಾಗುವುದು (ಅಡುಸಾ. ೭೪).
[ ←ಮರಾ. ಗಿರಣ, ಗಿರಣೀ ]

**ಗಿರಣಿ$_2$** (ನಾ). ಒಂದು ಬಗೆಯ ವ್ರಣರೋಗ; ರಕ್ತಪಿತ್ತದಿಂದ ಕಾಲು, ಕೈಬೆರಳು ಹಾಗೂ ಮೂಗನ್ನು ನಾಶಪಡಿಸುವ ಒಂದು ಹುಣ್ಣು; ಮಹಾರೋಗ; ಹಿರಿಯಬೇನೆ: ಶವಗಳನ್ನು ಹೂಳಿದ್ದಲ್ಲಿ ಮಳೆಗಾಲ ಸಮಯಕ್ಕೆ ಸಮಾಧಿಯ ನೀರು ಬಸಿದು ಬಾವಿಯಲ್ಲಿ ಬಂದರೆ ಗಿರಣಿ ಮೊದಲಾದ ರೋಗಗಳು ಹುಟ್ಟುತ್ತವೆ (ಕೃಷಿಪ್ರ. ೨೬೯).
[ ?. / ಮರಾ. ಗಿರಾಣೀ = ನೋವು ]

**ಗಿರಣಿಬಂಬು** (ನಾ). ಗಿರಣಿಯಲ್ಲಿ ಯಂತ್ರದ ಹೊಗೆ ಹೊರಗೆ ಹೋಗಲು ಮಾಡಿರುವ ಕೊಳವೆ; ಚಿಮಣಿ: ಅಲ್ಲಿ ಗಿರಣಿಬಂಬುಗಳ ಧೂಮ ಬಾನೆಲ್ಲ ಕಪ್ಪು ಕಲೆಯು (ನೆಲಮು. ೩೭).
[ ಗಿರಣಿ$_1$ + ಬಂಬು ]

**ಗಿರಣಿರೋಗ** (ನಾ).=ಗಿರಣಿ$_2$: ಭೃಮಿಪ್ಪರು ಗಿರಣೀರೋಗದವರು ಈ ಪ್ರಕಾರದ ದುರ್ಬಲರ ವಿವರವನ್ನು ಈ ಕೆಳಗಿನ ಕೋಷ್ಟಕದಲ್ಲಿ ವಿವರಿಸಿದ್ದೇವೆ (ಕಥಾಗ. ४०೭). [ ಗಿರಣಿ$_2$ + ರೋಗ ]

**ಗಿರದೆ**, **ಗಿರ್ದೆ** (ನಾ). (ಉಕ) ದುಂಡನೆಯ ಪುಟ್ಟ ದಿಂಬು: ಗಾದಿ, ಗಿರದೆ, ಯಥೇಷ್ಟ ನಿದ್ದೆ ಇವುಗಳಲ್ಲಿಯೇ ನೀವು ಸಂತುಷ್ಟರಾಗಿರುವಿರಿ (ತುಳಸಿ. ೧೦೬); ಪ್ರತಿಯೊಂದು ಗಾದಿಯ ಮೇಲೆ ಒಂದು ತಕ್ಕೆಯನ್ನೂ ಎರಡು ಗಿರದೆಗಳನ್ನೂ ಅತ್ಯಂತವ್ಯವಸ್ಥೆಯಿಂದ ಇಟ್ಟಿದ್ದರು (ದೇವೀಪ್ರ. ೦೩). **ಗಿರ್ದೆ:** ಕೆಲವರು ಹಗಲಿರುಳು ದುಡಿಯುವವರು, ಉಳಿದವರು ಗಾದಿ ಗಿರ್ದೆಗಳ ಮೇಲೆ ಬಿದ್ದು ಆರಾಮ ತೆಗೆದುಕೊಳ್ಳುವರು (ಭಾರಸಂ. ೩೦)
[ ←ಪಾರ. ಹಿಂ. ಗಿರ್ದಾ; ಮರಾ. ಗಿರದೀ, ಗಿರ್ದೀ ]

**ಗಿರಪಾವು** (ನಾ). ಒಂದು ಸೇರಿನ ಹದಿನಾರನೆಯ ಒಂದು ಭಾಗ; ಚಟಾಕು: (ಕ). [ ಗಿರ$_1$ (<ಗಿರ್ಧ) + ಪಾವು$_2$ ]

**ಗಿರಬ್ದಾರಿ** (ನಾ). ೧. ಕಷ್ಟ; ಸಂಕಟ. ೨. ದುರದೃಷ್ಟ; ಬಡತನ; ದಾರಿದ್ರ್ಯ: (ಕ). [ ←ಪಾರ. ಮರಾ. ಗಿರಿಬ್‌ದಾರೀ ]

**ಗಿರಮಿಟ್**, ಗಿರಿಮಿಟ್ಟು (ನಾ). ಮರದಲ್ಲಿ ತೂತುಕೊರೆಯುವ ಒಂದು ಸಾಧನ; ಆಕರ; ಬೈರಿಗೆ: ಗಿರಮಿಟ್‌ದ ಹಾಗೆ ತಿರುಗಿ ಅಲ್ಲಿಗೇ ಬರುವವ (ರಕ್ತಧ್ವ. ೧೨೦). **ಗಿರಿಮಿಟ್ಟು:** ನಿನ್ನ ಗಿರಿಮಿಟ್ಟಗೆ ಏನೂ ತೊಂದರೆಯಿಲ್ಲ (ಗಾಳಿಪ. ೨೦೩).
[ ←ಅರ. ಗಿಮಲೆಟ್; ಹಿಂ. ಗಿರಮಿಟ್; ಮರಾ. ಗಿರಮಾಟ್. /ಇಂ. Gimlet ]

**ಗಿರಲುಮಿಾಸೆ**, **ಗಿರಿಲುಮಿಾಸೆ**, **ಗಿರ್ಲುಮಿಾಸೆ** (ನಾ). ಒಂದು ಬಗೆಯ ಮಿಾಸೆ; ಪೊದೆಯಾದ ಮಿಾಸೆ: ಉಬ್ಬಿದ ಹಣೆ, ತೇಜಃಪುಂಜ ಕಣ್ಣುಗಳು, ಗಿರಲುಮಿಾಸೆ (ಸಂಗೀತಂ. ೨೬೭); ಕೆಲವರು ಗಿರಲುಮಿಾಸೆ ಬಿಟ್ಟು ತಲೆಯ ಜುಟ್ಟನ್ನು ಗಂಟುಹಾಕುತ್ತಾರೆ (ಪ್ರವಾಇ. I, ೧೯೮). **ಗಿರಿಲುಮಿಾಸೆ:** ಅವನ ಕಪ್ಪು ದಪ್ಪದೇಹ, ಗಿರಿಲುಮಿಾಸೆ,ಕರಿ ಕಂಬಳಿ, ದೊಣ್ಣೆಗಳು ನೋಡಿದವರ ಮನದಲ್ಲಿ ಭಯಭೀತಿಗಳನ್ನು ಹುಟ್ಟಿಸುತ್ತಿದ್ದವು (ಶರಜ. ೮೦೮). **ಗಿರ್ಲುಮಿಾಸೆ:** ಗಿರ್ಲುಮಿಾಸೆಯ ಪೋಲೀಸಿನವನು (ಮಲಮ. ೩೩೭). [ ಗಿರಲು? + ಮಿಾಸೆ ]

**ಗಿರವಿ** (ನಾ). ಅಡವು ; ಒತ್ತೆ : ಕೊನೆಗೆ ತನ್ನ ಕಿರೇಮಗಳ ವಿವಾಹಕ್ಕಾಗಿ ತನ್ನ ಭೂಮಿಯನ್ನೇ ಗಿರವಿಹಾಕಿದ್ದನು (ಕಲಿಕ. ೮೦) : ಅದನ್ನು ಗಿರವಿ ಇಟ್ಟು ನಾನೇ ತಿಂದುಹಾಕಿದ್ದೆ (ಜಂಗೂಲಿ. ೯೫).

**ಗಿರವಿಮಾಲು** = ಒತ್ತೆ ಇಟ್ಟ ವಸ್ತು ; ಅಡವು ಇಟ್ಟ ಸಾಮಾನು : ಗಿರವಿಮಾಲನ್ನು ಬಿಡಿಸಿಕೊಂಡು ಬಾ (ರೂಢಿ).

[ ←ಪಾರ. ಹಿಂ. ಗಿರವೀ./ತೆಲು. ಗಿರವು ]

**ಗಿರಹಿಡಿ** (ಕ್ರಿ). ೧. ಗೃಹಹಿಡಿ ; ಗರಹೊಡೆ : ಅವರಿಗೂ ಈಗ ದುಡ್ಡಿನ ಗಿರಹಿಡಿದಿದೆ ಅನ್ನುತ್ತಾರೆ (ಮುಗಿಯು. ೩೭೭). 'ಗರಹಿಡಿ' ಪರಾ. ೨. ಗೀಳು ಹತ್ತು ; ಉತ್ಕಟೇಚ್ಛೆಯುಂಟಾಗು : ಅವನಿಗೆ ತನ್ನ ತಂದೆಯನ್ನು ಎಂದಿಗೆ ನೋಡೇನು? ಎಂದಿಗೆ ಮುಟ್ಟಯೇನು ? ಎಂದಿಗೆ ಮಾತಾಡಿಸಿಯೇನು? ಎಂದು ಮೊದಲಾಗಿ ಗಿರಹಿಡಿದಿತ್ತು (ಕಾನೂರು. ೫೩೭).

[ ಗಿರ$_2$ + ಹಿಡಿ$_1$ (<ಪಿಡಿ$_1$) ]

**ಗಿರಾಕಿ**, ಗಿರಾಯಿಕ (ನಾ). ೧. (ಅಂಗಡಿ ಮೊದಲಾದ ವ್ಯಾಪಾರಸ್ಥಳಗಳಲ್ಲಿ ಸಾಮಾನುಗಳನ್ನು ಕೊಂಡುಕೊಳ್ಳುವವನು ; ಗ್ರಾಹಕ : ಕೊಳ್ಳುವ ಗಿರಾಕಿಗಳ್ ತತ್ತರಿಸಿ ನಿಂತಿಹರ್ (ಅರ್ಚಾವಿ. ೩೦-೩೫) ; ಸಾಮಾನ್ಯವಾಗಿ ಗಿರಾಕಿಗಳೆಲ್ಲ ಅವನ ಅಂಗಡಿಗೇ ಬಂದು ಒಯ್ಯುವವರು (ಮಹಾತ್ಮಾ. ೩೩) ; ಕೊಳ್ಳಲು ಗಿರಾಕಿ ಯಾರೂ ಮುಂದೆ ಬರಲಿಲ್ಲ (ಅಲಿಮ. ೯೨). ೨. ಆಸಾಮಿ; ವ್ಯಕ್ತಿ : ಈ ಮಧ್ಯೆ ಅದೇಕೋ ನನ್ನ ಲೋಕಕ್ಕೆ ಗಿರಾಕಿಗಳೇ ಬರುತ್ತಿಲ್ಲ (ಹನ್ನೊಂದ. ೧೩೭). ೩. ಬೇಡಿಕೆ ; ಮಾರಾಟಕ್ಕೆ ಒಳ್ಳೆಯ ಅವಕಾಶ : ತುಟ್ಟಿಬೆಲೆ : ಈಗ ಅವರ ಪುಸ್ತಕಗಳಿಗೆ ಒಳ್ಳೆಯ ಗಿರಾಕಿ ಇದೆ (ರೂಢಿ). **ಗಿರಾಯಿಕ** : ೧. ಕಿರಕೋಳ ಜೀನಸಿಗೆ ಗಿರಾಯಿಕರೂ ಯೋಗ್ಯಧಾರಣೆಯೂ ಶಿಕ್ಕುವದಿಲ್ಲ (ಮುಂಬವ್ಯಾ. ೩).

[ ←ಮರಾ. ಗಿಹ್ರಾಯಿಕ್.ಸಂ/. ಗ್ರಾಹಕ ]

**ಗಿರಾಯಿಕ** 'ಗಿರಾಕಿ' ನೋ.

**ಗಿರಾಯಿಸು** 'ಫೇರಾಯಿಸು' ನೋ.

**ಗಿರಿ$_1$** (ನಾ). ೧. ನುಂಗುವುದು : "ಗೀರ್ಣಿಃ, ಗಿರಿಃ – ೨ ನುಂಗುವಿಕೆ" (ಸಿದ್ಧಾಂತಿ. ೩೦೯). ೨. ಬೆಟ್ಟ ; ಪರ್ವತ : "ಧರಮದ್ರಿಕಂಧರಂ . . . ಗಿರಿ ಶೈಲಂ . . . ಗೋತ್ರಮೆನಲು ಬೆಟ್ಟಕ್ಕೆ ನಾಮಂ" (ಮಂಗರಾ. ೨೯-೧) ; ಗಿರಿಗಳೆ ಪರಮಾಣುಗಳೆನೆ ಸರೋಜಭವನೀ ಕರೀಂದ್ರಮಂ ಮಾಡಿದಂ (ಪಂಪಾಮಾ. ೧೩-೧೩೭) ; ಗಿರಿಗಳ್ ಜಂಗಮವಪುಗಳ್ ಸಿರದೊಳ್ ಸಸಿದರಲೆಯಂತೆ ಮುಸುಕಿದ ಮಂಜಿಂ ನರೆಯಂ ಪೊತ್ತವೊಲಿರ್ದುವು (ಲೀಲಾವ. ೯-೨೪); ತಡೆದುದಾ ಗಿರಿಗರುವಭಟನುಗ್ಗಡದ ದಿವ್ಯವಿಮಾನವನು (ತೊರರಾ. ೧-೮ ೩೨) ; ಒರ್ವ್ವೆ ಆ ಹೂಹಗುರ ಶಿಶುವಿದ್ದಕಿದ್ದಂತೆ ಗಿರಿಭಾರವಾಗಿ ಬರೆ (ಶ್ರೀರಾಮಾ. ೧೮-೪೭೨). ೩. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : "ಗಿರಿಮುನಿ ಋಷಿ . . . ಸ್ವರಸಾಗರ ಪರ್ವತಾದ್ರಿ ಏಟರ ನಾಮಂ" (ವ್ಯವಹಾ. ೯-೭); ಗಿರಿಯೊಳೆ ಯತಿಗಳ್ ದೊರೆಕೊಳೆ ಲಲಿತಾಕ್ಷರಪದ ರಚನೆಗಳಿಂದಂ ಪರೆದುದು ಲಲಿತಂ (ಛಂದೋಂಬು. ೨-೧೯೦) ; ಅಗ್ನಿ ಗಿರಿ ಶರಗಜೇಂದ್ರಿಯ ಶಶಲಾಂಛನ ಮುನೀಶರೆಂದು . . . ನರಪಾಲ ಕಂಠಿಕಾಭರಣಂ (ಭಾಸ್ಕರ. ೩-೪). ೪. ಒಂದು ಬಗೆಯ ವನಸ್ಪತಿ : "ಶ್ರೀಫಲಾ– ಗಿರಿ" (ಒಷಧಿ. ೧೭೭). [ ಸಂ. ]

**–ಗಿರಿ$_2$** (ಪ್ರ). ಹುದ್ದೆ, ಉದ್ಯೋಗ, ಅಧಿಕಾರ ಮುಂತಾದುವನ್ನು ತಿಳಿಸುವ ಒಂದು ಪ್ರತ್ಯಯ. 'ಅಮಲ್ದಾರಗಿರಿ' ಪರಾ.

[ ←ಪಾರ. ಹಿಂ. ಮರಾ. ಗೀರ್ ]

**ಗಿರಿಕ** (ನಾ). ಸುಂಡಿಲಿ ; ಚಿಟ್ಟಿಲಿ : ಹರಿ ಕರಿಗಳೊಂದಾಗಿ ವಿಹರಿಪುವಿರದೆ ಹುಲಿ ಹುಲ್ಲೆಗಳು ಬೆರೆವುವು ಗಿರಿಕ ಮಾರ್ಜಾಲಂಗಳೊಡೆವೆರೆದಿಹುವು (ಕೋಗಯ. ೧೪-೭). [ <ಸಂ. ಗಿರಿಕಾ ]

**ಗಿರಿಕನ್ನೆ** (ನಾ). ಒಂದು ಬಗೆಯ ವನಸ್ಪತಿ; ವಿಷ್ಣುಕ್ರಾಂತಿ : ಗಿರಿಕನ್ನೆಯ ಸೀವನ್ನಿಯ ಯೆರಡುಂ ಗುಳ್ಳೆಂಗಳ್ (ಖಮುದ. ೧೩-೧೩೯).

[ <ಸಂ. ಗಿರಿಕರ್ಣೀ ]

**ಗಿರಿಕರ್ಣಿ** (ನಾ). = ಗಿರಿಕನ್ನೆ : "ಆಸ್ಫೋಟಾ, ಗಿರಿಕರ್ಣೀ, ವಿಷ್ಣುಕ್ರಾಂತಾ, ಅಪರಾಜಿತಾ–೪ ವಿಷ್ಣುಕ್ರಾಂತದ ಹೆಸರುಗಳು" (ಸಿದ್ಧಾಂತಿ. ೦೧೯) ; ಗಿರಿ(ಸಿರ)ಕರ್ಣಿ ನೀಲಿ . . . ಕೂಡಿ ತಿಂದೊಡಾತನೆ ಗರುಡಂ (ಲೋಕೋಪ. ೧೦-೧೮). [ ಸಂ. ಗಿರಿಕರ್ಣೀ ]

**ಗಿರಿಕರ್ಣಿಕೆ** (ನಾ). ೧.=ಗಿರಿಕನ್ನೆ : "ಗಿರಿಕರ್ಣಿಕೆಯುದಪರಾಜಿತಂ" (ಮಂಗರಾ. ೩೪-೧೦) ; ಗಿರಿಕರ್ಣಿಕೆ ಕಟುತ್ರಯಮರಿಸಿನಮುತ್ತರಣೆಯೆಕ್ಕೆ ಮಧುವೆಂಬಿವಱಿಂ ವಿರಚಿಸಿದ ಗುಟಿಗೆಯಂ ಕೊಂಡರೆದೆಚ್ಚುಗೆ ನಯನದೊಳ್ ವಿಷೂಚಿಕೆ ಕಿಡುಗುಂ (ಲೋಕೋಪ. ೯-೧೨೨) ; ಗಿರಿಕರ್ಣಿಕೆಯ ಬೇರ ನೀರಿಂದ ಅರೆದು ಕುಡಿಯ ಕೊಡಿಸಲು ಕಾಗೆದೊಂಡೆಯ ವಿಷ ಪರಿಹರವಹುದು (ವೈದ್ಯಸಾ. II, ೨೨೭). ೨. ಒಂದು ಬಗೆಯ ಮರ : ಗಿರಿಕರ್ಣಿಕಾ ತಿತ್ತಿರಿಯೆಂಬ ವೃಕ್ಷಗಳು ಫಲವಾಗದೆಯಿರುವ ಮರಗಳು (ಸೌಗಂಧಿ. ೪೨೭-೧೦). [ ಸಂ. ಗಿರಿಕರ್ಣಿಕಾ ]

**ಗಿರಿಕಾಂತ** (ನಾ). ಬೆಟ್ಟವೇ ಮನೆಯಾಗಿರುವವನು ; ಕೈಲಾಸನಿಲಯ; ಶಿವ : ಇರ್ವರುಂ ಕೂಡಿ ಗಿರಿಕಾಂತನಾಲಯದ ರಜಮಂ ಗುಡಿಸಿ (ಗುರುಚಾ. ೫-೨೩). [ ಗಿರಿ$_1$ + ಕಾಂತ$_2$ ]

**ಗಿರಿಕಾರೂಢ** (ನಾ). ಇಲಿಯನ್ನು ವಾಹನವನ್ನಾಗಿ ಉಳ್ಳವನು : ಗಿರಿಕಾರೂಢಂ ಗದಾಖೇಟಕ ಫಲಕ ಮಹಾಖಡ್ಗಹಸ್ತಂ . . . ಸಂಹಾರಾಕ್ಷು ನಿರ್ಪಂ (ಶಬಶಂ. ೧-೭೪). [ ಗಿರಿಕ + ಆರೂಢ ]

**ಗಿರಿಕುಲ** (ನಾ). ಬೆಟ್ಟಗಳ ಗುಂಪು–ಸಮೂಹ : ಗಿರಿಕುಲಮಂ ತೆರಳ್ದಟುರೆ ಪಾರಿಸುವಬ್ಧಿಯನೊಂದನೊಂದಱೊಳ್ ಬೆರಸುವ (ಜಗವಿ. ೧೩-೭೦) ; ಗಿರಿಕುಲದವೋಲ್ ನೆರೆದ ಗಜಘಟಾಪಟಲದಿಂ (ಸಂಬಿರ. ೧೦-೧೪೭) ; ಗಿರಿಕುಲದ ಮೇಲೆ ಪೆರ್ಮಳೆ ಸುರಿಯಲ್ (ತ್ರಿಪುವಿ. ೨೪-೩೩೪).

[ಗಿರಿ$_1$ + ಕುಲ]

**ಗಿರಿಕೂಟ** (ನಾ). ಬೆಟ್ಟದ ಶಿಖರ ; ಪರ್ವತದ ತುದಿ : ಗಿರಿಕೂಟೋನ್ನತಮಪ್ಪ ಸೌಧತಳದೊಳ್ (ಅರ್ಧನೇ. ೭-೩೭) ; ಗಿರಿಕೂಟದ ಮೇಲಾಡುವ ಹರಿಣಿಗಳಂ ಕಂಡು (ತ್ರಿಪುವಿ. ೨೭-೭). [ ಗಿರಿ$_1$ + ಕೂಟ$_3$ ]

**ಗಿರಿಕೆ$_1$** 'ಗಿಲಿಕೆ' ನೋ.

**ಗಿರಿಕೆ$_2$** (ನಾ).=ಗಿರಿಕ : "ಗಿರಿಕಾ, ಬಾಲಮೂಷಿಕಾ—ಈ ೨ ಚಿಟ್ಟಲಿಗಳ ಹೆಸರು" (ಸಿದ್ಧಾಂತಿ. ೧೩೭). [ ಸಂ. ಗಿರಿಕಾ ]

**ಗಿರಿಕೆ$_3$** 'ಗಿರಿಗೆ$_2$' ನೋ.

**ಗಿರಿಗಟ** 'ಗಿರುಗಟೆ' ನೋ.

**ಗಿರಿಗಿರಿ** 'ಗಿಱಿಗಿಱಿ' ನೋ.

**ಗಿರಿಗಿರಿಗಣ್ಣು** (ನಾ). (ಒಂದು ಬಗೆಯ ರೋಗದಿಂದ) ದೋಷಯುಕ್ತವಾದ ಕಣ್ಣು ; ಸುತ್ತುವ ಕಣ್ಣು ; ಹೊರಳುವ ಕಣ್ಣು : (ಕ).

[ ಗಿರಿಗಿರಿ (<ಗಿಱಿಗಿಱಿ) + ಕಣ್ಣು (<ಕಣ್) ]

**ಗಿರಿಗೆ$_1$** 'ಗಿಲಿಕೆ' ನೋ.

**ಗಿರಿಗೆ$_2$**, ಗಿರಿಕೆ$_3$ (ನಾ). ಕಾಲಿನ ಹರಡು : (ಕ). **ಗಿರಿಕೆ$_3$** : ಒಂದು ಕಡೆ ಬೆರಳು . . . ಗಿರಿಕೆ ಮೇಗಾಲು (ಕಥಾಮಂ. IV, ೧೧೫). [ ? ]

**ಗಿರಿಚಕ್ರವರ್ತಿ** (ನಾ). ೧. ಪರ್ವತಗಳ ಚಕ್ರವರ್ತಿ : ಹಿಮಾಲಯ. ೨. [ಜೈನ] ಭರತಕ್ಷೇತ್ರದ ಮಧ್ಯದಲ್ಲಿ ಪೂರ್ವಪಶ್ಚಿಮಸಮುದ್ರಗಳವರೆಗೆ ಹಬ್ಬಿರುವ ಬೆಟ್ಟ ; ವಿಜಯಾರ್ಧಪರ್ವತ : ವಿಜಯಾರ್ಧಂ ಗಿರಿಚಕ್ರವರ್ತಿ ವಿಜಯಪ್ರಾರಂಭದಿಂ ಗೆಯ್ವ ದಿಗ್ವಿಜಯಾರ್ಧಂ ತನಗಿಕ್ಕೆಯಾಗೆ ಪೆಸರಂ ಪೋಲ್ತಿರ್ದುದು (ಶಾಂತಿಪು. ೫-೧೧). [ ಗಿರಿ$_1$+ಚಕ್ರವರ್ತಿ ]

**ಗಿರಿಜ** (ಗು). ೧. ಬೆಟ್ಟದಲ್ಲಿ ಹುಟ್ಟಿದ. (ನಾ). ೨. ಬೆಟ್ಟದಲ್ಲಿ ಹುಟ್ಟಿದ ಮನುಷ್ಯ; ಗುಡ್ಡಗಾಡಿಗೆ ಸೇರಿದವನು; ಮಲೆನಾಡಿನವನು. ೩. ಕಾಗೆಬಂಗಾರ; ಅಭ್ರಕ. ೪. ಕೆಂಪು ಬಣ್ಣದ ಕಲ್ಲು; ಕಾವಿ ಕಲ್ಲು. ೫. ಒಂದು ಬಗೆಯ ಕೆಂಪು ಖನಿಜ; ಶಿಲಾಜಿತು. ೬. ಕಬ್ಬಿಣ. [ ಸಂ. ]

**ಗಿರಿಜನ** (ನಾ). ೧. ಗುಡ್ಡಗಾಡಿನಲ್ಲಿ ವಾಸಮಾಡುವ ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ. ೨. (ಭಾರತಸರ್ಕಾರದಿಂದ ಅಧಿಕೃತವಾಗಿ ಪರಿಗಣಿಸಲ್ಪಟ್ಟಿರುವ) ಒಂದು ಹಿಂದುಳಿದ ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ: ಹರಿಜನ ಗಿರಿಜನರಿಗೆ ಸ್ಥಾನ ಮೀಸಲು (ರೂಢಿ). 'ಹರಿಜನ' ಪರಾ. [ ಗಿರಿ$_1$ + ಜನ ]

**ಗಿರಿಜಾಕಾಂತ** (ನಾ). ೧. ಪಾರ್ವತಿಯ ಪತಿ; ಶಿವ. ೨. [ಛಂದ] ರುದ್ರಗಣದ ಹದಿನಾರು ಭೇದಗಳಲ್ಲಿ ಒಂದು: ರುದ್ರಗಣಮವೆಂತೆಂದೊಡೆ :– ೧. ಗಂಗಾಧೀಶಂ, ೨. ಗಿರಿಜಾಕಾಂತಂ[ಪಾಠಾಂ. ನಾಥಂ] . . . ೧೬. ಮದನರಿಪು (ಛಂದೋಂಬು. ೩-೨೫೦ ವ).
[ ಸಂ. (ಗಿರಿಜಾ + ಕಾಂತ) ]

**ಗಿರಿಜಾತೆ** (ನಾ). ಪರ್ವತರಾಜನ ಮಗಳು; ಪಾರ್ವತಿ; ಅಗಜಾತೆ: ಜಲಕೇಳಿಯೊಳೋತು ಮನಂಗೂಡಿ ನೋಡಿಯಾಡುತ್ತೆ ಜಗನ್ಮಾತೆಗಿರಿಜಾತೆ ಸುಖಸಂಭೂತೆ ನುತಖ್ಯಾತೆ ಸರಸಿಯಂ ಪೊಱಮಟ್ಟಳ್ (ಗಿರಿಕ. ೪-೩೩); ಗಿರಿಜಾತೆಗೊಲ್ಮೆಯಿಂದಂ ಪರಿವಮಳಿಸುವ ಕುಸುಮಮಾಲೆಯಂ ನೀಡುವ ತತ್‌ತರುಣಿಯರ್ (ತ್ರಿಪುವಿ. ೨-೮); ಗಿರಿಜಾತಾಗುರುತರಕುಚಭರಕಾಶ್ಮೀರಾಂಗರಾಗರಾಗಾಂಕ ಪರಿಸ್ಫುರಿತಭುಜಮಜಿತಮಿಳಿಪುದು (ರಾಜಶೇ. ೦೪-೧೩೦). [ ಗಿರಿ$_1$ + ಜಾತೆ ]

**ಗಿರಿಜಾಮೀಸೆ** (ನಾ).=ಗಿರಲುಮೀಸೆ: ಓಬನಾಯಕನಂತೆ ಗಿರಿಜಾಮೀಸೆ, ಕಸ್ತೂರಿತಿಲಕ, ಬಣ್ಣದ ಪಾಗು . . . ವಿಭೂಷಿತನಾದ ಪೊನ್ನಮರಸ (ರೂಲೇಖಾ. ೧೭೬). [ <ಗುಜುಂಬು ? + ಮೀಸೆ ]

**ಗಿರಿಜಾಸಹಾಯ** (ನಾ). ಪಾರ್ವತಿಯನ್ನು ಸಹಚರಿಯಾಗಿ ಹೊಂದಿರುವವನು; ಪಾರ್ವತಿಯ ಜೊತೆಯಲ್ಲೇ ಇರುವವನು; ಶಿವ: ಶ್ರೀ ವಿಶ್ವನಾಥನು ಗಿರಿಜಾಸಹಾಯನು ನಮ್ಮನು ಸಲಹಲಿ ಶಿವನು (ಇಂಚಾಪ. ೮೩-೧). [ ಸಂ. (ಗಿರಿಜಾ + ಸಹಾಯ) ]

**ಗಿರಿಜೆ** (ನಾ).=ಗಿರಿಜಾತೆ: ಗಿರಿಜೆಯ ಮೆಚ್ಚಿಕೊಟ್ಟ ನಿಶಿತಾಸ್ತ್ರಮಂ (ಪಂಪಭಾ. ೧೨-೨೦೨); ಗಿರಿಜೆಯ ವೇಷಮಂ ತಳೆದುಮೇಶನ ಮುಂತಿರೆ ಚಿತ್ರಲೇಖೆ ತತ್ಪುರಹರನಾಕೆಯಂ ಗಿರಿಜೆಯೆಂದು ಮನೋಮುದದಿಂ ನಿರೀಕ್ಷಿಸುತ್ತಿರಲ್ (ಜಗವಿ. ೧೭-೯೭); ನಡೆಗಲ್ತಳ್ ಗಿರಿಜೆ ಪರಮನರಮನೆಯುತ್ತಲ್ (ಗಿರಿಕ. ೩-೭೫); ಎಲರ್ವಟ್ಟೆದಲೆಯನವತಾರ ಶಂಕರದಾಸಿಮಯ್ಯ ಗಿರಿಜೆಯ ಶಾಪದಿಂ ಬಂದಿಹಂ (ಪ್ರಾಭರಾ. ೬-೪೨).

**ಗಿರಿಜೆಯರಸ** = ಪಾರ್ವತಿಯ ಗಂಡ; ಶಿವ: ಗಿರಿಜೆಯರಸನ ಮೆಲ್ಲಡಿಯೊಳಿಂದಿರೆಯ ನಲ್ಲನ ನಯನವಿದುರ್ಗದು (ಬಸಪು. ೫೪-೪೪).

**ಗಿರಿಜೆಯಾತ್ಮಜ** = ೧. ಪಾರ್ವತಿಯ ಮಗ; ಗಣಪತಿ. ೨. ಷಣ್ಮುಖ: ಸರಸಿಜಾತೋದ್ಭವನ ನಾಲ್ಕುಂ ಗಿರಿಜೆಯಾತ್ಮಜನಾಱು ದಶಕಂಧರನ ಹತ್ತಹಿಪತಿಯ ಸಾವಿರತಲೆಗಳೆಣಿಸಲ್ಕೆ ಸರಿಯೆ ನಿನ್ನಯ ತಲೆಯೊಡನೆ (ಬಸಪು. ೩೮-೬೩). [ ಸಂ. ಗಿರಿಜಾ ]

**ಗಿರಿಜೇಶ** (ನಾ). = ಗಿರಿಜಾಕಾಂತ ೧: "ಗಿರಿಜೇಶ ಧನಂಜಯ ವೀತರಾಗ ಜಂಭಾರಿವಿರೋಧಿಪರ್ಮರನರೊಳೊಪ್ಪುವುದಿಂತಿವು ಜಿಷ್ಣುವಾಚಕಂ" (ನಾನಾರ. ೩೯); ಗಿರಿಜೇಶಂ ಕಾಮಪಾಶಂ ನತಜನ ಸುರಭೂಜಂ (ಉದ್ಭಟ. ೧೨-೧೩೭); ಗಿರಿಜೇಶಂ ಪಾಪನಾಶಂ ಸಕಲಸುಕೃತನಾಮಂ (ತ್ರಿಪುವಿ. ೦೭-೧೦೮). [ ಸಂ. (ಗಿರಿಜಾ + ಈಶ) ]

**ಗಿರಿತಲ** (ನಾ). ಬೆಟ್ಟದ ಪ್ರದೇಶ: ಗಿರಿತಲದಾ ಮೇಲತಿ × × × ಸ್ಥಲಮಾನ್ (ಎಕ. II, ೨೯-೪; ಸು. 700).
[ ಗಿರಿ$_1$ + ತಲ$_2$ ]

**ಗಿರಿದಲೆ** (ನಾ). ಒಂದು ಬಗೆಯ ಕೇಶಾಲಂಕಾರ: ಬಡನಡು ಕಿರಿದೊಡೆ ಗಿರಿದಲೆ ತುರುಗಿವೆ ನಿಡುಹುಬ್ಬು ಥಾಳಿಪ ಕದಪು ಅಡರಿದ ಕಟ್ಟಿ ಹೆರೆನೊಸಲು ಅಂಚೆಯ ನಡೆನುಡಿಯ ಜಾಣೆಯರು ಪಾಲಗದಿ (ಸೌಂದಕಾ. ೩-೭೬). [P ಇದು 'ನಿಱಿದಲೆ' ಎಂಬುದರ ಅಪಲಿಖಿತವಿರಬಹುದು]

**ಗಿರಿದುರ್ಗ** (ನಾ). ಬೆಟ್ಟದ ಮೇಲಿರುವ ಕೋಟೆ: ಗಿರಿದುರ್ಗಂಗಳನೇಱಿಯನ್ಯಪುರದೊಳ್ ರತ್ನಾಳಿಕೇರಾಂಬುವಂ ಮರವಾಯ್ದೊಡ್ಡಿರೆ ಕೊಂಡು ಬಂದುದಪರಾಂಭೋರಾಶಿಯೊಳ್ (ಗದಾಯು. ೧-೨೭); ಅಶ್ವಾವಳೀ ಖುರ ಟಂಕಾಹತಿ ಪಾತಿತಾರಿ ಗಿರಿದುರ್ಗವ್ರಾತಂ (ಚಂದ್ರಪು. ೪-೨೭); ಗಿರಿದುರ್ಗಂ ತಿಱಿಕಲ್ ಸಮಗ್ರವನದುರ್ಗಂ ಕರ್ಬುದೋಂಟಂ . . . ಶ್ರೀ ಸೋಮ ಭೂಪಾಲನಾ (ಸೂಕ್ತಿಸು. ೧-೨೩); ವಿಂಗೆ ಗಿರಿದುರ್ಗದ ನೆಲಗೋಂಟೆಗೆ ಸಮೆಯೆ ಬಳಿಕ್ಕೆ ಸುರಂಗಂಗಳನೆರದಂ (ಹಮ್ಮೀರ. ೩-೨೭); ಹತ್ತುತಲೆಗಳು ಅವಗೆ ಸುತ್ತಲೂ ವಾರಿಧಿಯು ಮತ್ತೆ ತ್ರೈಕೂಟ ಗಿರಿದುರ್ಗ ರಾವಣನಿಗೆತ್ತಣದು ಕೇಡು (ಸರ್ವಜ್ಞ. ೮೫೭). 'ವನದುರ್ಗ' ಪರಾ.

**ಗಿರಿದುರ್ಗಮಲ್ಲ**=ಗಿರಿದುರ್ಗಗಳನ್ನು ಸಾಧಿಸುವುದರಲ್ಲಿ ಶೂರ; ಒಂದು ಬಿರುದು: ಗಿರಿದುರ್ಗ್ಗಮಲ್ಲ ಕೊಂಕಣ ಧೂಮಕೇತು (ಎಇ. XVI, ೩೩೪-೫; 1038); ಸುಭಟರಾದಿತ್ಯ ಕಲಿಗಳಂಕುಸ ಸನಿವಾರಸಿದ್ಧಿ ಗಿರಿದುರ್ಗಮ್ಮಲ್ಲ ಚಲದಂಕರಾಮ (ಕಇಅ. ೭೪-೧೨-೧೩; 1170).
[ ಗಿರಿ$_1$ + ದುರ್ಗ ]

**ಗಿರಿಧನ್ವ** (ನಾ). ಮೇರುಪರ್ವತವನ್ನೇ ಬಿಲ್ಲನ್ನಾಗಿ ಮಾಡಿಕೊಂಡಿರುವವನು; ಶಿವ: ಗಿರಿಧನ್ವನೊಳಲ್ಪಧನುರ್ಧರನಾಂ ಸೆಣಸಲ್ ಸಮರ್ಥನೆ (ಶಬಶಂ. ೪-೧೨೨). [ ಸಂ. ಗಿರಿಧನ್ವನ್ ]

**ಗಿರಿಧರ** (ನಾ). ೧. ಮಂದರಪರ್ವತವನ್ನು ಧರಿಸಿದ ವಿಷ್ಣುವಿನ ಒಂದು ಅವತಾರ; ಕೂರ್ಮ. ೨. ಗೋವರ್ಧನಪರ್ವತವನ್ನು ಎತ್ತಿ ಹಿಡಿದವನು; ಶ್ರೀಕೃಷ್ಣ: ಮಾರಸುಂದರ ಗಿರಿಧರ ನೀ ಪೋಗದಿರಯ್ಯಾ (ಗೋಕುನಿ. ೫೩). [ ಸಂ. ]

**ಗಿರಿನಂದನ** (ನಾ). ಪರ್ವತರಾಜನಾದ ಹಿಮವಂತನ ಮಗ; ಮೈನಾಕ: ಮಮದ್ವೇಷಿ ಗಿರಿನಂದನಂಗೆಡೆಗೊಟ್ಟಡಂಗಿಸಿದುದೆಂದು ಮುಳಿಸಿಂದ ಸುರಪತಿಯಿಟ್ಟಡೆ ನಿಂದುರಿಯುತಬುಧಿಗೆಯ್ದುವ ವಜ್ರಪೋ (ಹಚಕಾ. ೩-೭೨). [ ಗಿರಿ$_1$ + ನಂದನ ]

**ಗಿರಿನಿತಂಬ** (ನಾ). ೧. ಬೆಟ್ಟದ ಮಗ್ಗುಲು,–ತಪ್ಪಲು; ಪರ್ವತದ ಇಳುಕಲು ಪ್ರದೇಶ: ಅನತಿದೂರದ ಗಿರಿನಿತಂಬಸದೃಶದೊಂದೆಳ್ತರದಿ, ವೈಡೂರ್ಯಸಮ ಶಾದ್ವಲದ ಮೇಲೆ (ಶ್ರೀರಾಮಾ. ೨೫೬-೭೫೮). ೨. ನಡುಬೆಟ್ಟ. [ ಗಿರಿ$_1$ + ನಿತಂಬ ]

**ಗಿರಿಭುಜಸ್ಥಾನ** (ನಾ). ಬೆಟ್ಟದ ಭುಜದಂತಹ ಪ್ರದೇಶ; ಪರ್ವತದ ಮೇಲುಭಾಗ: ಕಟ್ಟಿದನು ಸೌಮಿತ್ರಿ, ಮಲೆಯ ಬಿರುಮಳೆ ಗಾಳಿಗಳಿಗೆ ಮಲೆತುಳಿವಂತೆ,ಪರ್ಣಶಾಲೆಯನೊಂದನೆತ್ತರದೊಳು . . . ಗಿರಿಭುಜಸ್ಥಾನದಲಿ (ಶ್ರೀರಾಮಾ. ೦೪೪-೬೪). [ ಗಿರಿ$_1$ + ಭುಜ + ಸ್ಥಾನ ]

**ಗಿರಿಮಲ್ಲ** (ನಾ). ಬೆಟ್ಟದ ಮೇಲಿರುವ ಮಲ್ಲ,—ಮಲ್ಲಿಕಾರ್ಜುನ. P ಶ್ರೀಶೈಲಕ್ಷೇತ್ರದಲ್ಲಿ ನೆಲೆಸಿರುವ ಮಲ್ಲಿಕಾರ್ಜುನ: ಉಂಡು ತಿಂದು ನಡಿಯೊ ದಂಡೀಸದಿರು ದೇಹ ಕೆಂಡಗಣ್ಣನ ಗಿರಿಮಲ್ಲನ ತೋರುವೆವು (ಸಿದ್ಧಪು. ೫-೪೮); ಮಂದೇನು ಕೊಟ್ಟೀತ ಮನವೇನು ದಣದೀತ ಮಂಜಾನದಾಗ ಗಿರಿಮಲ್ಲ ಕೊಟ್ಟರ ಮನೆತುಂಬಿ ನಮ್ಮ ಮನತುಂಬಿ (ಗರತಿ. ೪೦).
[ ಗಿರಿ$_1$ + ಮಲ್ಲ ]

**ಗಿರಿಮಲ್ಲಿಕೆ** (ನಾ). = ಗಿರಿಮಲ್ಲಿಗೆ : "ಕುಟಜಃ, ಗಿರಿಮಲ್ಲಿಕಾ–ಕೊಡಸು (ಬೆಟ್ಟಮಲ್ಲಿಗೆ)" (ಹಲಾಯು. ೩೨-೪೦). [ ಗಿರಿ$_1$ + ಮಲ್ಲಿಕೆ ]

**ಗಿರಿಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ; ಬೆಟ್ಟಮಲ್ಲಿಗೆ; ಕೊಡಸಿಗೆ: "ಸಿತದೊಳಿಂದ್ರನೊಳು ಗಿರಿಮಲ್ಲಿಗೆಯೊಳೆಲೆಗಳ್ಳಿಯೊಳು ಶಕ್ರುವಕ್ಕು" (ಮಂಗರಾ. ೧೫೦-೫೩); ಮಲ್ಲಿಗೆಯಂಬೇವುವು ಗಿರಿಮಲ್ಲಿಗೆ ಯಂಬುಳ್ಳೊಡೆನಗೆ ಬೆಳ್ಗಬ್ಬಿನ ಮೆಲ್ಬಿಲ್ಲೇವುದೊಗೆದ ಕಾಮನ ಬಿಲ್ಲುಳ್ಳೊಡೆನುತ್ತೆ ಕಂತು ಮುಯ್ಯಾಂತಿರ್ಪಂ (ಚಂದ್ರಪು. ೮-೪೫).

[ ಗಿರಿ$_1$ + ಮಲ್ಲಿಗೆ ]

**ಗಿರಿಮಿಟಪ್ಪು** 'ಗಿರಮಿಟ್' ನೋ.

**ಗಿರಿಯಜ್ಞ** (ನಾ). ಬೆಟ್ಟಕ್ಕೆ ಮಾಡುವ ಪೂಜೆ; ಪರ್ವತಪೂಜೆ: ಇನ್ನೆಮಗೆ ಗಿರಿಯಜ್ಞಮುಂ ಗೋಪಯಜ್ಞಮುಂ ಪ್ರಧಾನಮಂಗಳಂ (ಜಗವಿ. ೪-೭೭ ವ). [ ಗಿರಿ$_1$ + ಯಜ್ಞ ]

**ಗಿರಿಯಾರತಿ** (ನಾ). ಒಂದು ಬಗೆಯ ಆರತಿ; ಗೋಪುರಾಕಾರದ ಆರತಿ; ನೆಲೆಯಾರತಿ (ಕರಾ): ಮಧ್ಯ ಮಾಣಿಕವಿಕ್ಕಿದ ಸಂತಥಾರೆಯ ಚಿಂನದ ಬಟ್ಟಲು ೧ಕ್ಕೆ ತೂಂಕ ೨೫೬: ಚಿಂನದ ಪುರುಷಾಮೃಗದ ಆರತಿ ೧ ಗಿರಿಯಾರತಿ × × × ಕೆಂಪು ೨೪ (ಸೌಇಇ. IX–II, ೪೪೭-೪ : 1513).

[ ಗಿರಿ$_1$ + ಆರತಿ$_1$ ]

**ಗಿರಿರಾಜ** (ನಾ). ೧. ದೊಡ್ಡಬೆಟ್ಟ. ೨. ಹಿಮವಂತ: ಓರಂತು ಪೋಪ ದಿವಿಜರ ಹಾರಿ ತಟಂಬಿಡಿದು ಪೊಕ್ಕು ಪೊಱಮಡುವೊಂದಾಕಾರಂ ಗಿರಿರಾಜನ ನವಹಾರದ ಲಂಬಣಮನೇನದನುಕರಿಸಿದುದೋ (ಶಾಂತಿಪು. ೧೦-೨೭); ಗಿರಿರಾಜಂ ಗೌರಿಯುನಾ ಹರಂಗೆ ಶುಶ್ರೂಷೆಗೆಯಿಸಲೊಡಗೊಂಡೊಯ್ವಂತಿರೆ . . . ಕೈಲಾಸನೆಂಬ ಕಂಚುಕಿ ಬಂದಂ (ಕಾದಂಪೂ. ೫೦೯); ಭೂದಾನಂ ಧನದಾನಂ ಶ್ರೀದಾನಂಗುಡುತುಮೊಪ್ಪಿದಂ ಗಿರಿರಾಜಂ (ಗಿರಿಕ. ೩-೭೩).

[ ಗಿರಿ$_1$ + ರಾಜ ]

**ಗಿರಿರಿಪು** (ನಾ). ಬೆಟ್ಟಗಳ ಹಗೆ; ಇಂದ್ರ: "ಗಿರಿನಮುಚಿಬಲವೃತ್ರ ಜಂಭರಿಪುವೆನೆ . . . ಶಕ್ರನಕ್ಕುಂ" (ಮಂಗರಾ. ೧೨-೨).

[ ಗಿರಿ$_1$ + ರಿಪು ]

**ಗಿರಿಲುಮಿಸೆ** 'ಗಿರಲುಮಿಸೆ' ನೋ.

**ಗಿರಿವರ** (ನಾ). ಬೆಟ್ಟಗಳಲ್ಲಿ ಶ್ರೇಷ್ಠವಾದುದು; ದೊಡ್ಡ ಪರ್ವತ: ಗಿರಿವರಮಿದು ಕರಿವರಮೆಂದರಿದಱಿಯಲ್ ಗಹನದೊಳಗೆ ಗಿರಿಯಂ ಕರಿಯಂ (ಕಾವ್ಯಸಾ. ೧೦೫೭ ಶೂದ್ರಕ). [ ಗಿರಿ$_1$ + ವರ$_3$ ]

**ಗಿರಿವಿದಾರಣ** (ನಾ). ಕೊಬ್ಬಿದ ಆನೆ ಅಥವಾ ಗೂಳಿಯು ಬೆಟ್ಟದ ಬುಡದ ಮಣ್ಣನ್ನು ಕೊಂಬಿನಿಂದ ತಿವಿದು ಎಸೆಯುವ ಆಟ; ವಪ್ರಕ್ರೀಡೆ: ನೆತ್ತಿ ಬಿರಿದರು ಚಂದ ದಂತ ಮುರಿದರು ಚಂದ ಗಿರಿವಿದಾರಣದೊಳು ಕರಿಗೆ (ಇಂಜಾಪ. ೭೦-೩೭). [ ಗಿರಿ$_1$ + ವಿದಾರಣ ]

**ಗಿರಿವ್ರಾತ** (ನಾ). ಬೆಟ್ಟಗಳ ಸಮೂಹ. 'ಗಿರಿವ್ರಾತನಾಥ' ಪರಾ.

[ ಗಿರಿ$_1$ + ವ್ರಾತ ]

**ಗಿರಿವ್ರಾತನಾಥ** (ನಾ). ಬೆಟ್ಟಗಳ ಸಮೂಹಕ್ಕೆ ಒಡೆಯ; ಪರ್ವತ ರಾಜ: ಚಂಡಾಸಿಧಾರಾಶ್ರಾಂತಂ ಪ್ರಾತರ್ಕ್ಷ ವೈರಿವ್ರಜಧರನೆನಿಸಿರ್ದಂ ಗಿರಿವ್ರಾತನಾಥಂ (ಗಿರಿಕ. ೩-೨). [ ಗಿರಿವ್ರಾತ + ನಾಥ ]

**ಗಿರಿಶ** (ನಾ). ೧. ಪರ್ವತವನ್ನೇ ತನ್ನ ವಸತಿಯಾಗುಳ್ಳವನು; ಶಿವ: ಹೇಮಪ್ರಭಾಪ್ರಸ್ಫುರಿತ ಗಿರಿಶ ಚಂಚಜ್ಜಟಾಜಾಲಜೂಟವ್ಯೋಮಪ್ರೋದ್ಭಾಸಿಚಂದ್ರಂ ತ್ರಿಭುವನಜನಕಾನಂದಮಂ ಮಾಡುಗೆಂದುಂ (ಕಾದಂಪೂ. ೧); ಗಿರಿಶಂ ವಟುವೇಷಮಂ ವಿರಾಜಿಸೆ ತಳೆದಂ (ಗಿರಿಕ. ೯-೮೫); ಮತ್ಪ್ರಾಣೇಶ ಗಿರಿಶ ನಿಮ್ಮಂ ಪೊಗಳ್ವತ್ತೈಕ್ಷೆಯನಕ್ಷಯಭಕ್ತಿಯನು ದೃಷ್ಟಿಪ್ರೀತಿಯನೆನ್ನೆರ್ದೆಗೊಲ್ದೀ (ಉದ್ಭಟದೇ. ೧-೨೦). ೨. ಬೆಟ್ಟದಲ್ಲಿ ವಾಸಮಾಡುವ ಪ್ರಾಣಿ. ೧, ೨ : ಮಂದಜಳನೀಳಕಂಠಕಳಿತಂ ವಿಷಮಾನಳ ಭೀಮಲೋಚನಂ ಪದನತದಾನವಾರಿ ಗಿರಿಶಂ ಗಿರಿಜಾತವಿನೂತಕೇಳಿ ಕಣ್ಗೊಡವಿದ ಶೋಭೆಯಂ ಕುಡುತಮಿರ್ಪುದು ನಾಗಶಿರೋವಿಭೂಷಣಂ . . . ಉಗ್ರನಿಭೇಂದ್ರನಾದವೋಲ್ (ಪಾರ್ಶ್ವಪು. ೪-೧೩೨). [ ಸಂ. ]

**ಗಿರಿಶಿಲೀಮುಖ** (ನಾ). ಪರ್ವತಗಳನ್ನು ಸುರಿಸುವ ಬಾಣ,–ದಿವ್ಯಾಸ್ತ್ರ,–ಮಂತ್ರಾಸ್ತ್ರ : ಗಿರಿಶಿಲೀಮುಖಿಕಿವರು ವಜ್ರವ ಹರಿಸಿದರು (ಕುಮಾ್ಯಭೀ. ೯-೪೪). [ ಗಿರಿ$_1$ + ಶಿಲೀಮುಖ ( = ಶಿಲೀಮುಖ) ]

**ಗಿರಿಶೃಂಗ** (ನಾ). ಬೆಟ್ಟದ ಕೋಡುಗಲ್ಲು,–ತುದಿ: ಗಿರಿಶೃಂಗಾಗ್ರದೆ ನಿಂದು ನೆಟ್ಟನಿದಿರೊಳ್ತೋರ್ಪಿಂದುವಂ ನೋಡಿ (ರಾಜಶೇ. ೧-೧೨೨).

[ ಗಿರಿ$_1$ + ಶೃಂಗ ]

**ಗಿರಿಶ್ರೇಣಿ** (ನಾ). ಬೆಟ್ಟದ ಸಾಲು; ಪರ್ವತಪಂಕ್ತಿ: ಕೋಕಸಸ್ ಗಿರಿಶ್ರೇಣಿಯಲ್ಲಿ ಅವನನ್ನು ಬಂಧಿಸಲು ಸ್ಯೂಸ್ ಅಪ್ಪಣೆಕೊಟ್ಟಂತೆಯೇ ನಡೆಯುತ್ತದೆ (ಬದ್ಧಪ್ರ. ೩೯ ಪೀಠಿಕೆ). [ ಗಿರಿ$_1$ + ಶ್ರೇಣಿ ]

**ಗಿರಿಸ** (ನಾ). = ಗಿರಿಶ ೧ : "ಗಿರಿಶ–ಗಿರಿಸ" (ಶಮುಧ. ೨೫೩ ಪ್ರಯೋ).

[ < ಸಂ. ಗಿರಿಶ ]

**ಗಿರಿಸಾನು** (ನಾ). ಪರ್ವತದ ತಪ್ಪಲು,–ಸಮಭೂಮಿ: ಗಿರಿಸಾನುಪ್ರಸರದ್ದುರೋತ್ಕರ ತರಂಗಾಕೀರ್ಣವಾರ್ಬಿಂದು ಬಂಧುರಮುಕ್ತಾಫಲಮಾಲಿಕಾಲಸಿತರ್ . . . ಮುನೀಶ್ವರರಿರ್ದರ್ಪರಮುಕ್ತಿಕಾಂತೆಯೊಲಿಸಲ್ಪಾಳ್ದಂತೆ ನೈಪಥ್ಯಮಂ (ರಾಜಶೇ. ೯-೩೪); ಹೊಸಬಿಸಿಲ ಸೋಂಕಿಂಗೆ ಸೊಗಸಿ ಮೆಯಾಟ್ ಕಾಯಿಸುತೆ ಗಿರಿಸಾನುಶಾದ್ವಲದಿ ನಿಂತು (ಶ್ರೀರಾಮಾ. ೩೪೫-೧೫೪).

[ ಗಿರಿ$_1$ + ಸಾನು ]

**ಗಿರಿಸಾರ** (ನಾ). ಕಬ್ಬಿಣ: "ಗಿರಿಸಾರಂ ಶಿಲಾಸಾರಮಾಯಸಂ ಲೋಹಮೆನೆ ಕರ್ಬೊನ್ನಿಗಕ್ಕು ನಾಮಂ" (ಮಂಗರಾ. ೩೦-೩). [ ಗಿರಿ$_1$ + ಸಾರ$_3$ ]

**ಗಿರಿಸಿಂಪಿ** (ನಾ). (ಬೆಟ್ಟದ ಮೇಲಿನ ಜಾತ್ರೆಗೆ ಹೋಗಿ ತಂದ) ಒಳಲೆ,–ಗಿಂಡಿ (?): ಹಾಲ ಕುಡಿ ಎಂದರೆ ಹನ್ನೆರಡು ಬಟ್ಟಲ ಕೀಲ ರಂಜಣಿಗಿ ಗಿರಿಸಿಂಪಿ ಕಂದಗ ಹಗಲೆಲ್ಲಿ ತರಲೆ ನೊರೆಹಾಲು (ಹಳ್ಳಿಹಾ. ೭೭).

[ ಗಿರಿ$_1$ + ಸಿಂಪಿ$_1$ (< ಸಿಂಪು$_1$) ]

**ಗಿರಿಸುತ** (ನಾ). ೧. ಮೈನಾಕಪರ್ವತ. ೨. ಆನೆ; ಗಜ (?). ೧, ೨ : ಗರಳವನುಗುಳ್ವ ಲೋಚನದಿ ಶ್ರುತಿಪನಂತಚಲಾದ್ರಿವೃತ್ತದಿಂ ಕೃಷ್ಣಗಿರಿ (?) ಸುತ[ಪಾಠಾಂ. ವೃತ್ತ]ರನೊಳಕೊಂಡು ತದ್ವೈರಿಗಳ ಗರ್ಜಿಸುವ ತೆಱದೊಳೊಪ್ಪಿತು ಸಮುದ್ರಂ (ಭಾವಚಿಂ. ೧-೨೩). [ ಗಿರಿ$_1$ + ಸುತ$_2$ ]

**ಗಿರಿಸುತೆ** (ನಾ). ಪರ್ವತರಾಜನ ಮಗಳು; ಪಾರ್ವತಿ: "ಗಿರಿಸುತೆ ಖಡ್ಗ ಕಾಮಿನಿ ಬಲಾನ್ವಿತರೆಂಬಿವು ಶಕ್ತಿಶಬ್ದಮುಂ" (ನಾನಾರ. ೬೧); ಗಿರಿಸುತೆ ಚುನ್ನವಾಡಿ ನಗುತಿರ್ದಪಳ್ (ಜಗವಿ. ೧೭-೯೮); ಗಿರಿಸುತೆಯಂ ಕಾಣ್ಬನ್ನಂ . . . ಗಿರಿಶಂ ವಟುವೇಷಮಂ ವಿರಾಜಿಸೆ ತಳೆದಂ (ಗಿರಿಕ. ೯-೮೫).

[ ಗಿರಿ$_1$ + ಸುತೆ ]

**ಗಿರೀಂದ್ರ** (ನಾ). = ಗಿರಿರಾಜ ೨ : ಸುರಕೇಳೀಲೀಲೆಯಿಂ ತಳ್ತ ಪೆಂಪು ಗಿರೀಂದ್ರಾಹ್ವಯಮಾದ ಪೆಂಪು ಮಿಗೆ ಪೆಂಪಂ ಪೆತ್ತುದಾ ಪರ್ವತಂ (ಸುಕುಮಾ. ೧-೭೭); ಗಿರೀಂದ್ರಾತ್ಮಜಾತೇ ಕರೀಂದ್ರಾಸ್ಯಮಾತೇ . . . ವರಾಂಭೋಜಪಾಣೇ ಜಯಶ್ರೀ ಮೃಡಾಣೀ (ವೃಷವಿ. ೫-೯೯)

[ ಗಿರಿ$_1$ + ಇಂದ್ರ ]

**ಗಿರೀಂದ್ರಮಹ** (ನಾ). ಪರ್ವತಪೂಜೆ; ಪರ್ವತೋತ್ಸವ: ಗೋಪವೃದ್ಧರ್ . . . ಮಹೇಂದ್ರಮಹಮಂ ಮಾಣ್ದು ಗಿರೀಂದ್ರಮಹಮ ನೊಡಂಬಟ್ಟು (ಜಗವಿ. ೪-೭೯ ವ). [ ಗಿರೀಂದ್ರ + ಮಹ ]

**ಗಿರೀಶ** (ನಾ). ೧. ಹಿಮಾಲಯ. ೨. ಪರ್ವತದ ಒಡೆಯ; ಕೈಲಾಸದ ಅಧಿಪತಿ; ಶಿವ. [ ಗಿರಿ$_1$ + ಈಶ ]

**ಗಿರೀಶ್ವರ** (ನಾ). =ಗಿರೀಶ ೨ : ಶಾಶ್ವತಾಯ ಮಹೇಶ್ವರಾಯ ಗಿರೀಶ್ವರಾಯ . . . ನ ಮೋ ನ ಮೋ ಗುರುಸಂಗಮೇಶಾಯ (ಬಸಪು. ೬೧-೪೬). [ ಗಿರಿ$_1$ + ಈಶ್ವರ ]

**ಗಿರು** ' ಗಿಜು ' ನೋ.

**ಗಿರುಕಿಸು** (ಕ್ರಿ). ಸುತ್ತಿಸು ; ತಿರುಗಿಸು : ದಿನಬೆಳಗೂ ನಿರುಕಿಸುವೆ, ದೆಸೆ ದೆಸಗೂ ಗಿರುಕಿಸುವೆ (ಉದ್ಯಾ.ಲ. ೬೩-೬). [ < ಗಿರಕಿ$_1$ + – ಇಸು$_3$ ]

**ಗಿರುಗಟೆ,** ಗಿರಗಟ್ಟೆ, ಗಿರಿಗಟ, ಗಿರ್ಗಟ (ನಾ). ೧. ಒಂದು ಬಗೆಯ ವಾದ್ಯ : ಕಱುಕುಂಚಿಗ ಬಾಚಯ್ಯನಗ್ಗದ ಗಿರುಗಟೆಯ ಶಿವದೇವನು (ಸಾನಂಚ. ೯-೬೮) ; ಗಿರುಗಟೆಯ ಸಿವುರ ಸಿಪ್ಪಿನ ಕೊರಗಿನ ಕಿನ್ನರದ ಸರಮೆ ಸರಮಾ ಪೊಟಲೊಳ್ (ಸೂಕ್ತಿಸು. ೮-೧೦೪) ; ಗಿಱ್ಗಿಂಬ ಗಿರುಗಟೆಯ ನಿಬಿಡತರ ಪಟುರಟನದೊಡನೆ (ರಾಜಶೇ. ೬-೧೧ ವ) ; ಬೀದಿವಾಡಿಂಗೆ ತಾರೆಲೆಲೆ ತಾರೆಲೆಯೆಂಬ ಪೋದಿಂಗೆ ಕುರುಬುವಾಡಿಂಗೆ ಗಿರುಗಟೆಯುಂ ಮೊದಲಾದವಂ ನುಡಿಸಿವಾಡುವ (ಟಕೋಪು. ೧-೩೩). ೨. ಕಡ್ಡಿಗೆ ಕಾಗದದ ಅಥವಾ ಗರಿಯ ತುಂಡುಗಳನ್ನು ಹೂವಿನಾಕಾರವಾಗಿ ಜೋಡಿಸಿ, ಗಾಳಿಗೆ ಎದುರಾಗಿ ಹಿಡಿದರೆ ಗಿರಗಿರನೆ ತಿರುಗುವ ಒಂದು ಆಟದ ವಸ್ತು : ತಿರುತಿರುಗಿ ಬಿರಿವುದೀ ಗಿರುಗಟೆಯ ಬಳಲು ! (ಗೀವಿಂ. ೫೦-೯). **ಗಿರಗಟ್ಟೆ :** ೨. ನಾನು ಶಿಶ್ನಿನನಂಥಾ ದೃಢನಿರ್ಧಾರವಿಲ್ಲದ ಗಾಳಿಗಿರಗಟ್ಟೆಯಾಗಿದ್ದೆ (ಶಾಲಮ. ೬೪). **ಗಿರಿಗಟ :** ೧. ಗೀರ್ಗಟ –ಗಿರಿಗಟ (ಶಮದ. ೨೫೪ ಪ್ರಯೋ). **ಗಿರ್ಗಟ :** ೧. ಮೇಳೈಷ ಕಂಸಾಳದ ಗರ್ಗರಿಪ ಗಿರ್ಗಟಂಗಳ ಪೊಣ್ಮುವ ತಾಳದ ಉಣ್ಮುವ ಗಾನದ ಭೃಂಗಿಯ ನರ್ತನದ (ಗಿರಿಕ. ೧೦-೭೯ವ) ; ಶ್ರುತಿಕಷ್ಟಂ ಬರೆ ಸಂಧಿ ಮಾಡಲಾಗದು ಕರಡೆಯ ಗಿರ್ಗಟದ ದನಿವೊಲವುರವವೆಂದುಂ (ಶಮದ. ೬೩).

[ ದೇಶ ತುಳು. ಗಿರಿಗಿಟ್ಟ ; ತೆಲು. ಗಿರಿಗಿಟ, ಗಿರ್ಗಿಟ ]

**ಗಿರುಗೇಣು** (ನಾ). ಒಂದು ಬಗೆಯ ತೆರಿಗೆ : ಕಂಮ ಗಿರುಗೇಣುವಡದ ತಲೆ × × × ಬರಣ ಸರ್ಬಾಯ ಸಹಿತವಾಗಿ ಕೊಟ್ಟ ಕೊಡಗಿ (ಎಕ. IX, ಬೆಂಗಳೂ. ೯೭-೦೪ ; 1347). [ ? ]

**ಗಿರುಜೆ** (ನಾ). ಒಂದು ಜಾತಿಯ ಪಕ್ಷಿ (?) : ಪಿಕ್ಕಳ ದ್ವಿತಯ ಲಾವುಗೆ ತೋರಗಿರುಜೆಯು ಕುಕ್ಕುಟ ತಗರು ಕೋಣಗಳ ಸೊಕ್ಕಾನೆಗಳ ಕಾದಿಸು ತಿರ್ದ ದೊರೆಗಳ ಮಕ್ಕಳೆ ಕೂಡೆ ಬೀದಿಯಲಿ (ಮೋಹತ. ೧೭-೮೨). [?]

**ಗಿರೆ** (ನಾ). ವಾಣಿ ; ಸರಸ್ವತಿ : ಮೇಣೆಂಬುದಱಿಂ ಗೀರ್ ಎಂಬುದಕ್ಕೆ ಗಿರೆ ಎಂದೆತ್ವಮುಮುಂಟು (ಶಮದ. ೮೭ ಪ್ರಯೋ). [ < ಸಂ. ಗಿರ್ ]

**ಗಿರೇಬಾಜ** (ನಾ). ಒಂದು ಜಾತಿಯ ಪಾರಿವಾಳ ; ಪಲ್ಟಿಹೊಡೆಯುವ ಪಾರಿವಾಳ : ಗಿರೇಬಾಜ ಪಾರಿವಾಳಗಳು ಹಾರುವಾಗ ಲಾಗಹೊಡೆಯುತ್ತವೆ (ಮುಂಬಯಿ. ೩-೦೧೦). [ ←ಮರಾ. ಗಿರೇಬಾಜ್ ]

**ಗಿರ್ಕಿ** ' ಗಿರಕಿ$_1$ ' ನೋ.

**ಗಿರ್ಕಿಮೊಟ್ಟು** ' ಗಿರಕಿಮೊಟ್ಟು ' ನೋ.

**ಗಿರ್ಗಟ** ' ಗಿರುಗಟೆ ' ನೋ.

**ಗಿರ್ದ** ' ಗಿರ್ಧ ' ನೋ.

**ಗಿರ್ದು** (ನಾ). ಸುತ್ತುಗಟ್ಟುವಿಕೆ ; ಆಕ್ರಮಣ : ಪಾದುಷಾಸಾಹೇಬರವರು ಆ ನರಪತಿಗೆ ಗಿರ್ದುಮಾಡಿ ಯಾವತ್ತು ಕರ್ಣಾಟಕದೇಶದಲ್ಲೆಲ್ಲಾ ಠಾಣ್ಯ ಹಾಕಿ ಅಮಲು ಬಂದೋಬಸ್ತು ಮಾಡಿದರೆ ಮಾನ ಉಳಿದೀತು (ಬಖೈರು. ೪). [ ←ಪಾರ. ಹಿಂ. ಮರಾ. ಗಿರ್ದ್ ]

**ಗಿರ್ದೆ** ' ಗಿರದೆ ' ನೋ.

**ಗಿರ್ಧ,** ಗಿದ್ದ, ಗಿರ$_1$, ಗಿರ್ದ (ನಾ). ೧. ನಾಲ್ಕರಲ್ಲಿ ಒಂದು ಪಾಲು ; ಕಾಲುಭಾಗ : ಅರ್ಧಕ್ಕಿಯ ಪರಿಭಾಗವ ಮಾಡಿದಲ್ಲಿ ಗಿರ್ಧವೆನಿಸಿತ್ತು (ಅಖಂಡೇ. ೨೭೮-೨೦) ; ಉಪ್ಪಿನೊಡನೆ ತಿಂದ ಗಿರ್ಧ ಬಕ್ಕರಿಯಲ್ಲದೆ ಮೂರು ದಿನದಿಂದ ನನ್ನ ಹೊಟ್ಟೆಗೆ ಅನ್ನವಿದ್ದಿಲ್ಲ (ಸ್ಮೃತಿಚಿ. ೨೫೩). **ಗಿದ್ದ :** ೧. " ಗಿದ್ದ–ಗಿರ್ದ (೪) " (ಜಾನಕೋ. ೪೮). ' ಗಿದ್ದಗಾಣೆ ' ಪರಾ. **ಗಿರ$_1$ :** ೧. 'ಗಿರಕಾಲು', 'ಗಿರಪಾವು' ಪರಾ. **ಗಿರ್ದ :** ೨. (ಆಲಂ) ಸ್ವಲ್ಪ ; ಅಲ್ಪಭಾಗ : ಗಾರ್ಧಪದ ಮರಿಯ ತಂದಾವಿನ ಪಾಲಿಟ್ಟು ನಿರ್ಧರವಾಗಿ ತುರಗವ ಮಾಡುವೆನೆಂದು ಮೂರ್ಧನ್ಯನಾಗಿ ನಿದ್ರೆಗೆಟ್ಟು ಕಾಯಲು ಗಿರ್ದವಾದರೂ ತೋರಿ ಕಾಣೆಪೋದೆ (ವಿಶಾಸು. ೪೯-೪). 'ಅರ್ಧ' ಪರಾ. [ ಇದು 'ಅರ್ಧ' ಎನ್ನುವ ಪದದ ಸಾಮ್ಯದ ಮೇಲೆ ಮಾಡಿಕೊಂಡ ರೂಪ ]

**ಗಿರ್ಯಾ** (ನಾ). (ಕರಾ) ಒಂದು ಜಾತಿಯ ಮೀನು. [ ? ]

**ಗಿರ್ರನೆ** ' ಗಿಜ್ಜನೆ ' ನೋ.

**ಗಿರ್ಲುಮಿಸಾಸೆ** ' ಗಿರಲುಮಿಸಾಸೆ ' ನೋ.

**ಗಿರ್ವಂದಿ** (ನಾ). ಅಗುಳಿ ; ಕೀಲು (?) : " ಸಂಕು=ಕೊಱಡು, ಗಿ[ಪಾಠಾ. ನಿ]ರ್ವಂದಿ (ಶಮದ. ೨೫೩ ಅಡಿಟಿ). [ ಇದು ' ನಿರ್ವಂದಿ ' ಎಂಬುದರ ಅಪಲಿಖಿತವಿರಬಹುದು ]

**ಗಿಲ್** (ನಾ). ಒಂದು ಅನುಕರಣಶಬ್ದ : ಘೋರಗೆಜ್ಜೆ ಗಿಲ್ಲಂದಾವೇಳಯ್ಯಾ ಸಿದ್ಧರಾಮಾ (ಮಲ್ಲಿಗ. ೪).

**ಗಿಲಕು** (ನಾ). ಗೆಜ್ಜೆ ಮೊದಲಾದುವುಗಳ ಸದ್ದನ್ನು ಸೂಚಿಸುವ ಒಂದು ಅನುಕರಣಶಬ್ದ. 'ಗಿಲಕುಮರ' ಪರಾ.

**ಗಿಲಕುಮರ** (ನಾ). ಅಲ್ಲಾಡಿದಾಗ ಗಿಲಕುಗಿಲಕು ಎಂದು ಶಬ್ದ ಮಾಡುವ ಕಾಯಿಗಳುಳ್ಳ ಒಂದು ಬಗೆಯ ಮರ ; ಗಿಲಗಂಚಿಯ ಮರ : " ಘಂಟಾರವಾ, ಶಣಪುಷ್ಪಿಕಾ–೨ ಗಿಲಿಗಿಂಚಿಯ ಗಿಡದ ಹೆಸರುಗಳು, ಗಿಲಕುಮರ " (ಸಿದ್ಧಾಂತಿ. ೧೦೯). [ ಗಿಲಕು + ಮರ$_1$ ]

**ಗಿಲಕೆ** ' ಗಿಲಿಕೆ ' ನೋ.

**ಗಿಲಗಂಚಿ$_1$** ' ಗಿಲಿಗಿಂಚಿ ' ನೋ.

**ಗಿಲಗಂಚಿ$_2$** ' ಗಿಲಿಗಿಂಚೆ ' ನೋ.

**ಗಿಲನ,** ಗಿಳನ (ನಾ). ನುಂಗುವಿಕೆ ; ನೋಣೆಯುವಿಕೆ : " ನುಂಗು–ಗಿಲನೇ " (ಶಮಧಾ). **ಗಿಳನ :** ರಾಜ ಚಾಂಡಾಲನ ಬಾಹುರಾಹುಗಿಳನಂ ನಿನಗೆತ್ತಣನೆತ್ತ ಬಂದುದೋ (ಅನಂಪು. ೧೧–೬೫) ; ದನುಜನೊಡಲಂ ಸೀಳ್ದು ಮೂಲವಹ್ನಿಯನದಂ ಗಿಳನಮಂ ಗೆಯ್ಸಲಕಟ (ಘೋರಾಸು. ೧೫–೩೪).

[ ಸಂ. ]

**ಗಿಲಾಯ** ' ಗಿಲಾವು ' ನೋ.

**ಗಿಲಾಯಿ** ' ಗಿಲಾವು ' ನೋ.

**ಗಿಲಾವು,** ಗಿಲಾಯ, ಗಿಲಾಯಿ (ನಾ). ಗೋಡೆ ಮೊದಲಾದುವುಗಳ ಲೇಪನಕ್ಕೆ ಅನುಕೂಲವಾದ ಒಂದು ಬಗೆಯ ಮಿಶ್ರಣ; ಮೆಂದುಗಾರೆ: ಮಾನವ ಶರೀರಗಳೆಂಬ ಗೋಡೆಗಳಿಂದ ದುರ್ಗುಣಗಳ ಗಿಲಾವನ್ನು ಕೆದರಿ ಹಾಕುವರು (ಪರಪ. ೨೬೪). **ಗಿಲಾಯ :** ಇದಂ (ಚಾಣಕ್ಯಿಯು) ಒಂದು ತರ ಗಿಲಾಯವನ್ನು ಸಿದ್ಧಮಾಡಿ . . . ಚಲೋ ಗಟ್ಟಿಮುಟ್ಟ ಗೂಡನ್ನು ಕಟ್ಟಿಕೊಳ್ಳುತ್ತದೆ (ಮುಂಬಯ. ೫-೧೧೦). **ಗಿಲಾಯಿ :** ರಾಯರ ಮುಖದ ಮೇಲೆ, ಮನದ ಸಂಶಯ ಸೋಜಿಗವೆಲ್ಲ 'ಗಿಲಾಯಿ' ಮಾಡಿದಂತಿತ್ತು (ಕೋಚನೀ. ೫೯) ; ಗೋಡೆಗಳಿಗೆ ಗಿಲಾಯಿ ಮಾಡಿಸುವುದು, ಫರಸು ಮಾಡುವದು . . . ಇತ್ಯಾದಿ ಕೆಲಸ ಪ್ರಾರಂಭವಾಯಿತರಿ (ಚಂದುಟ.೯೩). [ ← ಪಾರ. ಗಿಲಾಬ್ ; ಹಿಂ. ಗಿಲಾವ್, ಗಿಲಾವಾ ; ಮರಾ. ಗಿಲಾವಾ ]

**ಗಿಲಿ** (ನಾ). ಗೀಳು ; ಹಂಬಲ : ನಾಟಕಗಳಲ್ಲಿ ಪಾತ್ರವಹಿಸಲು ಅವನಿಗೆ ಇದ್ದ ಗಿಲಿ, ಆಸೆ ಮತ್ತಾವ ಕೆಲಸದ ಮೇಲೂ ಇರಲಿಲ್ಲ (ಮಗಮೂಂ. ೯) ; ಅವನಿಗೆ ಎಲ್ಲ ಹೊತ್ತಲು ಇದೆ ಗಿಲಿ (ಮೂಳಮ. ೦೯).

[ ದೇಶ ತಮಿ. ಕಿಲಿ ; ಮಲ. ಕಿಲ್ಲು ; ತೆಲು. ಗಿಲಿ ]

**ಗಿಲಿಕೆ,** ಗಿರಿಕೆ$_1$, ಗಿರಿಗೆ$_1$, ಗಿಲಕೆ, ಗಿಲುಕಿ (ನಾ). ೧. ಗಿಲಿಗಿಲಿ ಎಂದು ಸದ್ದುಮಾಡುವ ಒಂದು ಬಗೆಯ ಮಕ್ಕಳ ಆಟಿಕೆ: ಸಖರಾಯು ನೆಂಬೊಂದೆಳಗೂಸು ಕೈಯೊಳು ಪಿಡಿದು ಗಿಲಿಕೆಯ ಕೋಲನಿತ್ತಯ್ಯ ಗೆಬಗಿತಿದು ಬಲಿಕೆಯ ಮೆಚ್ಚಲ್ಲೆಯೆಂದ (ಭರತ. ೪೬-೧೨೬) : ನೀಲಮೇಘ ಶ್ಯಾಮಲಕಾಯನು ಲೋಲ ಗಿಲಿಕೆಯ ಧರಿಸಿ (ಅರ್ಜುವಿ. ೧೬-೨೯) : ಹೊಸ ಅಂಗಿ, ಕುಪ್ಪಾಲಿ, ಗಿಲಿಕೆ, ಕಡ್ಲೇಪುರಿ, ರಾಗಮಾಲಿಕೆ ತೆಗೆದುಕೊಡದಿದ್ದರೆ ಮೂರುದಿನವಾಗಲಿ ಅಳುವುದನ್ನು ಬಿಡುತ್ತಿರಲಿಲ್ಲ (ಹುಟ್ಟಿಹ. ೧೩೩). ೨. ಎತ್ತಿನ ಕೋಡಿನ ತುದಿಗೆ ಅಳವಡಿಸುವ, ಗಿಲಿಗಿಲಿ ಎಂದು ಸದ್ದುಮಾಡುವ ಒಂದು ಅಲಂಕಾರ: ಉಭಯದ ಕೋಡ ಕಿತ್ತು ನಲಿದೊಲವಿನ ಹೊಲನ ಬಿಟ್ಟು ಕೊಂಬಿನ ಗಿಲಿಕೆಯಲ್ಲೊಲದಾಡುವ (ಸರ್ವಜ. ೬೬-೯೩೦). **ಗಿರಿಕೆ$_1$**: ೧. ಎನ್ನ ಕಯ್ಯೊಳಾರ್ ಮರಸಿಟ್ಟರೀ ಗಿರಿಕೆಯನ್ನ (ಗಿರಿವಿಂ. ೫೦-೬). **ಗಿರಿಗೆ$_1$**: ೨. ಬಳಸುವೇಱುವ ಸುಟಿಲವಗಲ್ವಿನ್ನಪ್ಪ ಚಾರಣದೋಷವಲ್ಲದೆ ಪೊಟ್ಟವಟ್ಟಳಿಗೆ ಸವುನಾಗೆ ಗಿರಿಗೆಯು ಕೋಲ್ಮುಟ್ಟಿ ವಿಗಲುಂ (ಎಕ. II, ೧೩೩-೯೦ ; 982). **ಗಿಲಕೆ**: ೧. ಗಾರುಡಿಗರು ಉಪಯೋಗಿಸುವ ರಟರಟ ಗಿಲಕೆಯೇ ಇವರ ವಾದ್ಯಗಳು (ಪ್ರವಾಇ. I, ೫೯). **ಗಿಲುಕಿ**: ೧. ಕ್ಯಾಬಿನಿನ ಒಳಗಿದ್ದರೆ, ಗಿಲುಕಿಯೊಳಗಿನ ಕಾಳುಗಳ ಹಾಗೆ ಅಲ್ಲಾಡುತ್ತಿರಬೇಕು (ನಿಬಂಧ. II. ೧೮೩).

[ ದೇ॥ ತಮಿ. ಕಿಲುಕಿಲಿ ; ತುಳು. ಗಿಲಿಕಿಟ್ಟ ; ತೆಲು. ಗಿಲಕ, ಗಿಲ್ಕ ]

**ಗಿಲಿಗಿಂಚಿ,** ಗಿಲಗಂಚಿ$_1$ (ನಾ). (ಉಕ) ಒಂದು ಬಗೆಯ ಭಕ್ಷ್ಯ; ಕರ್ಜಿಕಾಯಿ: ಹುರಿಟ್ಟ ಬಾನದ್ದಿಟ್ಟ ಕರದಂಟ ಕೋಡಬೇಳಿ ಬುರುಬುರಿ ಚಕ್ಕಲಿ ಗಿಲಿಗಿಂಚಿ ಮಾಡಿದರು (ಸಿದ್ಧಪು. ೧೬-೩೫). **ಗಿಲಗಂಚಿ$_1$**: ದೀಪಾವಳಿ ಫಳಾರಕ್ಕೆ ಚಕ್ಕುಲಿ ಗಿಲಗಂಚಿ ಇಲ್ಲದಿದ್ದರೆ ಹೇಗೆ ? (ರೂಢಿ) [ ? ]

**ಗಿಲಿಗಿಂಚಿ, ಗಿಲಗಂಚಿ$_2$,** ಗಿಲಿಗಿಚ್ಚಿ (ನಾ). ೧.=ಗಿಲಕುಮರ: "ಘಂಟಾರವಾ, ಶಣಪುಷ್ಪಿಕಾ– ೨ ಗಿಲಿಗಿಂಚಿಯ ಗಿಡದ ಹೆಸರುಗಳು, ಗಿಲಕುಮರ" (ಸಿದ್ಧಾಂತಿ. ೧೧೯). ೨. ಮಕ್ಕಳ ಆಟಿಕೆ; ಗಿಲಿಕೆ : (೬). **ಗಿಲಗಂಚಿ$_2$**: ೨. ಬಾಲರ ತಕ್ಕ ಹೊಸ ಗಿಲಗಂಚಿ (ಲೋಕಗೀ. ೦೩೩). **ಗಿಲಿಗಿಚ್ಚಿ**: ೨. ಕುಣಿವ ಅಣುಗನ ಕಯ್ಯ ಗಿಲಿಗಿಚ್ಚಿಯಾದುದಾ ಶೈಲವನಭೂಮಿ (ಶ್ರೀರಾಮಾ. ೪೦೩-೨೦) : ಅವೆಲ್ಲವೂ ಒಟ್ಟುಲಿದು ಕಾಡೆಲ್ಲಾ ಗಿಲಿಗಿಚ್ಚಿ ಆಡಿಸಿದ ಹಾಂಗಿದೆಯಲ್ಲಾ ! (ಮಲಮ. ೨೭೬).

[ ದೇ॥ ತೆಲು. ಗಿಲಿಗಿಂತ, ಗಿಲಿಗಿಚ್ಚ ]

**ಗಿಲಿಗಿಚ್ಚಿ** ' ಗಿಲಿಗಿಂಚಿ ' ನೋ.

**ಗಿಲಿಗಿಲಿ** (ನಾ). ಒಂದು ಅನುಕರಣಧ್ವನಿ: ಗಿಲಿಗಿಲಿ ಎಂಬೊ [ ಪಾಠಾಂ. ಘಲುಘಲು ಘಲುರೆಂಬ ] ಹೊನ್ನ ಕಡಗ ಗೆಜೆ (ಪುರಂದ. ೨-೬೫-೧) : ನಿಂದಾರ ಗಿಲಿಗಿಲಿಯು ನಾದದಲಿ ನೀರೇರು (ಬಾಸಿಗ. ೨೦).

**ಗಿಲಿಗಿಲಿಗಂಬ** ' ಗಿಲಿಗಿಲಿಗಂಭ ' ನೋ.

**ಗಿಲಿಗಿಲಿಗಂಬವಾಡಿಸು** (ಕ್ರಿ). ೧. ಗಿಲಿಗಿಲಿಗಂಬದಾಟವನ್ನು ಆಡುವಂತೆ ಮಾಡು ; ಒಂದು ಕಂಬದಿಂದ ಮತ್ತೊಂದು ಕಂಬಕ್ಕೆ ಓಡಿಹೋಗುವಂತೆ ಮಾಡು. ೨. (ಅಲಂ) ಸ್ಥಾನಪಲ್ಲಟವನ್ನುಂಟುಮಾಡು ; ಬೇರೆ ಬೇರೆ ರಕ್ಷಕರನ್ನು ಹುಡುಕುವಂತೆ ಮಾಡು : ವಿರೋಧಿಬಲಕ್ಕೆ . . . ದೋಃಪ್ರತಾಪದಿಂ ಗಿಲಿಗಿಲಿಗಂಬವಾಡಿಸುವನಾಹವದೊಳ್‌ಕಲಿಬಿಟ್ಟಿದೇವಂ (ಎಕ. XII, ಚಿಕ್ಕನಾ. ೨೦-೩೪ ; 1160).

[ ಗಿಲಿಗಿಲಿಗಂಬ (< ಗಿಲಿಗಿಲಿಗಂಭ) + ಆಡಿಸು ]

**ಗಿಲಿಗಿಲಿಗಂಭ,** ಗಿಲಿಗಿಲಿಗಂಬ (ನಾ). ೧. ಆಟವಾಡಲು ಬಳಸುವ ಕಂಬ : ಬಾಲಕಂ ನಲಿನಲಿದಾಡುವ ಗಿಲಿಗಿಲಿಗಂಭಂಗಳಪ್ಪುರುದಂಡಂಗಳ (ಬಸರ. ೨-೩೩). ೨. ಒಂದು ಕಂಬದಿಂದ ಮತ್ತೊಂದು ಕಂಬಕ್ಕೆ ಓಡಿಹೋಗಿ ಮುಟ್ಟುವ ಒಂದು ಆಟ. **ಗಿಲಿಗಿಲಿಗಂಬ**: ೨. ಪರನೃಪರ ಭುಜಸ್ತಂಭಾಂತರಂಗಳೊಳು ವಿಜಯಲಕ್ಷ್ಮಿ ಗಿಲಿಗಿಲಿಗಂಬಂ ಪಿರಿದಲಸಿ ವಿಕ್ರಮಾಂಕಸ್ಥಿರಬಾಹುಸ್ತಂಭ ಶಾಳಭಂಜಿಕೆಯಾದಳು (ಸೌಇಇ. IX-1, ೧೯೬-೦೦; 1119). 'ನಿಱುನಿಱುಗಂಬ' ಪರಾ. ▯ ಈ ಆಟದಲ್ಲಿ ಒಂದು ಕಂಬವನ್ನು ಬಿಟ್ಟು ಮತ್ತೊಂದು ಕಂಬವನ್ನು ಮುಟ್ಟುವ ಮಧ್ಯೆ ಎದುರುಪಕ್ಷದವರು ಆಟಗಾರರನ್ನು ಮುಟ್ಟಿದರೆ ಅವರು ಸೋತರೆಂದು ಅರ್ಥ. ಇದು ವಿಶೇಷವಾಗಿ ಹೆಣ್ಣುಮಕ್ಕಳು ಆಡುವ ಆಟ.

[ ಗಿಲಿಗಿಲಿ ? + ಕಂಭ ]

**ಗಿಲಿಗಿಲಿಮಂಚ** (ನಾ). ಗಿಲಿಗಿಲಿ ಎಂದು ಶಬ್ದ ಮಾಡುವ ಗೆಜ್ಜೆಗಳಿಂದ ಕೂಡಿದ ಮಂಚ: ಮುತ್ತಿನ ಸೆರಗಾಗೊರಸ್ಯಾಳು ಚಾಮುಂಡಿ ಗಿಲಿಗಿಲಿ ಮಂಚ ಕೊಡವ್ತಾಸಿ ಚಾಮುಂಡಿ (ನಾಪದ. ೧೦೨). [ಗಿಲಿಗಿಲಿ+ಮಂಚ]

**ಗಿಲಿಗಿಲಿಸು** (ಕ್ರಿ). ಗಿಲಿಗಿಲಿ ಎಂದು ಶಬ್ದಮಾಡು : ಗಾಡಿ . . . ಓಡಹತ್ತಿದ್ದರಿಂದ ಗಿಲಿಗಿಲಿಸಿದ ಎತ್ತಿನ ಗಂಟೆಗಳ ನಿನಾದ (ಮೂರುದಾ. ೧೧೪).

[ ಗಿಲಿಗಿಲಿ + – ಇಸು$_3$ ]

**ಗಿಲಿಗಿಸು** (ಕ್ರಿ). ಚಕ್ಕಳಗುಳಿಯಿಡು : ಹುಲಿ ನಲಿದು ಗಿಲಿಗಿಸಿ ಗೆಜ್ಜೆಗಟ್ಟಿ ಒಲಿದಾಡಿತ್ತು (ಆದವ. ೩೮-೦೦೩). [ ಗಿಲಿಗು + – ಇಸು$_3$ ]

**ಗಿಲಿಗು** (ನಾ). ಕಚಗುಳಿ ; ಚಕ್ಕಳಗುಳಿ : ಕರಡಿಯ ಗಿಲಿಗಿನಲ್ಲಿ ಸತ್ತು ಕೋಡಗದ ಚೇಷ್ಟೆಯಲ್ಲಿ ಸಿಕ್ಕಿ (ಅಣ್ಣಿಮಾ. ೧೫೫-೧೯೨). [?]

**ಗಿಲಿತ,** ಗಿಳಿತ (ಗುಂ). ನುಂಗಿದ ; ನೊಣೆದ ; ತಿಂದ. **ಗಿಳಿತ**: ಮುಳುಗಿತಾಶಾಸಮುದ್ರದಿ ಲಜ್ಜೆ ದಾಕ್ಷಿಣ್ಯಮಿಳಿತಮಾಯಿತ್ತೆತಪ್ಪ ಸಿರಿಬಿಸಿಲ್ದೊರೆಯೊಳಗೆ ಗಿಳಿತಮೆನಿಸಿತು ಮನೋರಥ ಕಾಳಕೂಟನಿಭ ಕಾಸಾರದೊಳ್ (ವೆಂಕಾರಾ. ೨-೮-೮). [ ಸಂ. ]

**ಗಿಲಿಬಿಲಿ$_1$** (ನಾ). ಒಂದು ಅನುಕರಣಶಬ್ದ : ಗಿಲಿಬಿಲಿಯೆನೆ ಬಟ್ಟಮುತ್ತಿನ ಸರಗಳು (ಚಂಪ್ರಸಾಂ. ೧೬-೬೪).

**ಗಿಲಿಬಿಲಿ$_2$** (ನಾ). (ಉಕ) ತೊಂದರೆ; ಹಿಂಸೆ ; ಕಾಟ. [ <ಗಲಿಬಿಲಿ ]

**ಗಿಲೀಟ್** ' ಗಿಲೀಟು ' ನೋ.

**ಗಿಲೀಟು,** ಗಿಲೀಟ್ (ನಾ). ೧. ತಾಮ್ರ ಮೊದಲಾದ ಲೋಹಗಳಿಗೆ ಮೆರುಗಿಗಾಗಿ ಬಳಿಯುವ ಚಿನ್ನ ಅಥವಾ ಬೆಳ್ಳಿಯ ಮುಲಾಮು,– ಲೇಪನ: "ಚಿನ್ನದ ಮುಲಾಮು; ಸ್ವರ್ಣಲೇಪ; ಗಿಲೀಟು" (GIIt. ಇಂಕನಿ) : ಗಿಲೀಟನ ಪದಾರ್ಥಕ್ಕೆ ಒಳಗು–ಹೊರಗು : ಹೇಮಕ್ಕುಂಟೇ ಆ ಭೇದ ? (ಕರ್ಣಾಕ. ೪೮) ; ಆಭರಣಗಳೆಲ್ಲಾ ಗಿಲೀಟನವಾಗಿದ್ದವು (ನಟಸಾ. ೨೪೦) ; ಅದೇ ತರಹ ಗಿಲೀಟಿನ ಚೈನು ಕುತ್ತಿಗೆಗೆ ಹಾಕಿಕೊಂಡೆ (ಸಾವಿಸ. ೦೫). ೨. **ಹೊಳಪು**; ಥಳಕಿನಿಂದ ಕೂಡಿರುವುದು : ಹಿಂದಿನಂತೆ ಈಗ ಒಳ್ಳೆ ಗಟ್ಟಿಮಾಲು ಎಲ್ಲಿ ಬರುತ್ತದೆ? ಎಲ್ಲಾ ಗಿಲೀಟಿನ ಪದಾರ್ಥಗಳೇ (ರೂಢಿ). ೩. (ಅಲಂ) ನಯವಾದ ಮಾತುಗಾರಿಕೆ ; ಪುಸಲಾವಣೆ : ಈ ಗಿಲೀಟು ಎಲ್ಲ ಯಾರಿಗೆ ಹೇಳಿಕೊಡತೀ ಹಾರವಯ್ಯ (ಚಂದಕೋ. ೧೬೪). **ಗಿಲೀಟ್**: ೩. ತಮಗೇ ಗೊತ್ತಿಲ್ಲದೆ ಹೋದರೆ ಇನ್ನು ಯಾರಿಗೆ ಗೊತ್ತು ಸಾರ್ ಎಂದು ಮಣಿ ಸ್ವಲ್ಪ ಗಿಲೀಟ್ ಹೊಡೆದ (ಸ್ವಾಮಿಸ್ನೇ. ೬೦).

**ಗಿಲೀಟುಮಾಡು**=೧. ಲೇಪಕೊಡು; ಹೊಳಪುಕೊಡು. ೨. (ಅಲಂ) ಮುಖಸ್ತುತಿಮಾಡು ; ಹೊಗಳು : ಎಂಥವರಿಗೂ ' ಗಿಲೀಟುಮಾಡಿ ' ತನ್ನ ಕಾರ್ಯ ಸಾಧಿಸಿಕೊಳ್ಳುವ ಸಾಮೋಪಾಯಗಳು ಅವನಲ್ಲಿದ್ದವು (ಕಂಬಹು. ೧೩). [ ←ಇಂ. GIIt ]

**ಗಿಲೀಟುಕೆಲಸ** (ನಾ). ೧. ಲೇಪಕೊಡುವ ಕೆಲಸ ; ಹೊಳಪುಮಾಡುವ ಕೆಲಸ : ಅಕ್ಕಸಾಲಿ ಗಿಲೀಟುಕೆಲಸ ಚೆನ್ನಾಗಿ ಮಾಡಿದ್ದಾನೆ (ರೂಢಿ). ೨. (ಅಲಂ) ಮೋಸದ ಕೆಲಸ; ಹೊರನೋಟಕ್ಕೆ ಮಾತ್ರ ಚೆನ್ನಾಗಿರುವ ಕೆಲಸ : ಅವರು ಮಾಡುವುದೆಲ್ಲ ಬರೀ ಗಿಲೀಟುಕೆಲಸ (ರೂಢಿ).

[ ಗಿಲೀಟು + ಕೆಲಸ ]

**ಗಿಲೀಟುಮಾಲು** (ನಾ). ಥಳಕಿನ ಸರಕು ; ಉತ್ತಮವಸ್ತುವಿನ ಹಾಗೆ ಕಾಣುವಂತೆ ಮಾಡಿರುವ ಸಾಧಾರಣವಸ್ತು : ಆ ಗಿಲೀಟುಮಾಲಿಗೆ ಬೆಲೆ ಇಲ್ಲವಾಗಿದೆ (ಹೇಮುಕೂ. ೧೫). [ ಗಿಲೀಟು + ಮಾಲು$_4$ ]

**ಗಿಲುಕಿ** 'ಗಿಲಿಕೆ' ನೋ.

**ಗಿಲುಕು** (ನಾ). ಒಂದು ಅನುಕರಣಶಬ್ದ : ಉಲಿವ ಪದದಂದುಗೆಯ ಬೆರಳಿನ ಗಿಲುಕಿನುಂಗರ ವೀರಮುದ್ರಿಕೆ (ಅನಂರಾ. ೬-೭-೧೮) ; ಗಿಲುಕೆಂಬೊ ಬಳಿಗೆ ಕೆಲಸೊಂದು ಗಳಿಗೆ (ಗಂಗಾಪ. ೩೨-೧೮) ; ಗೆಜ್ಜೆಪಟ್ಟಿ ಗಿಲುಕಿನಿಸಿ, ಬಿಡವಿ, ಸುಳಿನಾಭಿ ತೋರಿ ನಲಿಸಿ (ಕಮೇಘ. ೮-೨೮).

**ಗಿಲುಕೆ** (ನಾ). ಒಂದು ಅನುಕರಣಶಬ್ದ. 'ಗಿಲುಕೆಮಂಚ' ಪರಾ.

**ಗಿಲುಕೆಮಂಚ** (ನಾ).=ಗಿಲಿಗಿಲಿಮಂಚ : ಅಕ್ಕಾ ಚಾಮುಂಡಿ ಗಿಲುಕೇ ಮಂಚದ ಮೇಲೇ ಸ್ವಾಮಿ ನಂಜುಂಡೂ ವರೀಗ್ಯವನೆ (ಹುಟ್ಟಿಹ. ೪೦).
[ ಗಿಲುಕೆ + ಮಂಚ ]

**ಗಿಲುಬು** (ಕ್ರಿ). ಕಾಡಿಬೇಡಿ ಸಂಪಾದಿಸು ; ಕೊಡುವವರಿಗೆ ಇಷ್ಟವಿಲ್ಲದಿದ್ದರೂ ಒತ್ತಾಯಮಾಡಿ ಗಿಟ್ಟಿಸಿಕೊಳ್ಳು ; ಕವರು : ಅವನೇ ಆಗಾಗ್ಗೆ ಸಿಗರೇಟಿಗೆ ಕಾಸು ಬೇಕಾದರೆ, ಬಸ್ಸಿಗೆ ಚಿಲ್ಲರೆ ಬೇಕಾದರೆ ಹೆಂಡತಿಯಿಂದ ನಿರ್ದಾಕ್ಷಿಣ್ಯವಾಗಿ ಗಿಲುಬುವುದಕ್ಕೆ ಆರಂಭಿಸಿದ (ತಾಯಿಕ. ೧೪೬).
[ ದೇ॥ ತೆಲು. ಗಿಲುಬು=ಕದಿ ]

**ಗಿಲ್ಲಾ** 'ಗಿಲ್ಲೆ' ನೋ.

**ಗಿಲ್ಲು, ಗಿಳ್ಳು** (ಕ್ರಿ). ಜಿಗುಟು ; ಚಿವುಟು : ಯಾರೋ ಮಗುವಿನ ಕೆನ್ನೆಯನ್ನು ಗಿಲ್ಲಿದ್ದಾರೆ (ರೂಢಿ). **ಗಿಳ್ಳು :** ಅವಳು ಮಗುವನ್ನು ಗಿಳ್ಳಿದಳು (ರೂಢಿ). 'ಕಿಳ್ಳು$_1$' ಪರಾ.
[ ದೇ॥ ತಮಿ. ಮಲ. ಕಿಳ್ಳು ; ತೆಲು. ಗಿಲ್ಲು ]

**ಗಿಲ್ಲೆ, ಗಿಲ್ಲಾ** (ನಾ). ೧. ದೂರು ; ಅಪವಾದ : "ಗಿಲ್ಲೆ–ಅವಮಾನ" (ಜಾನಕೋ. ೪೮). **ಗಿಲ್ಲಾ :** ೧. ಅದ್ರು ಸಮಾಜ್ದಾಗ ಮಾತ್ರ ಇವೆಲ್ಲಾ "ಗಿಲಾನೂ" ಇರ್ತಾವಂಬೊ ಗಿಲ್ಲಾ ಇವೊತ್ತ ಹೊರಬಿತ್ತು (ಮಿಂಚಿಹು. ೧೯೩). ೨. (ಉಕ) ಗುಲ್ಲು ; ಪುಕಾರು : ಅವರ ಬಗ್ಗೆ ಊರ ತುಂಬ ಗಿಲ್ಲಾ ಎಬ್ಬಿಸಿಬಿಡಬೇಕು (ಪರಿಲ. ೪೭). [ ←ಹಿಂ. ಗಿಲಾ ]

**ಗಿವುಚು** 'ಕಿವುಚು$_1$' ನೋ.

**ಗಿವುರು** 'ಗಿಬರು$_1$' ನೋ.

**ಗಿಳಂಕರಿಸು** (ಕ್ರಿ). ೧. ನುಂಗು ; ಕಬಳಿಸು : ಮನುಷ್ಯರನ್ನು ಗಿಳಂಕರಿಸಿ ಬಿಡುವ ಹುಲಿ ಕರಡಿ ಸಿಂಹಗಳ ತಾಯ್ಮನೆಯದು (ವೀರಬಂ. ೨೪) ; ಆಂಧ್ರರು ವೆಂಗಿಪಳುವನ್ನೆಂದೋ ಗಿಳಂಕರಿಸಿಬಿಟ್ಟಿರು (ನಾಡೋಜ. ೧೨). ೨. (ಆಲಂ) (ಗುಟ್ಟು ಮೊದಲಾದುದುವನ್ನು) ಮುಚ್ಚಿಟ್ಟುಕೊಳ್ಳು ; ಹೊರಗೆಡಹದಿರು : ತಾನು ಪ್ರತ್ಯಕ್ಷದರ್ಶಿಯಾಗಿ ನೋಡಿದ್ದನ್ನೂ ಗಿಳಂಕರಿಸಿದ್ದ (ದೀಪಹ. II, ೧೪೦). [ ಗಿಳಂಕರಣ$_0$ + – ಇಸು$_9$ ]

**ಗಿಳಂಕೃತ** (ಗು). ನುಂಗಿದ ; ಕಬಳಿಸಿದ.

**ಗಿಳಂಕೃತಮಾಡು**=೧. ನುಂಗು ; ಕಬಳಿಸು : ಆ ಭೂತವು ಆತನನ್ನೂ ಬಾಯೊಳಗೆ ಹಾಕಿಕೊಂಡು ಗಿಳಂಕೃತಮಾಡಿಬಿಟ್ಟಿತು (ಬ್ರಹ್ಮಣೀ. ೭೮). ೨. (ಆಲಂ) ಎತ್ತಿಹಾಕು ; ಲಪಟಾಯಿಸು : ಇನಾಮಿ ಜಮೀನು, ಗಿಳಂಕೃತಮಾಡುವ ಹಾಗಿಲ್ಲ (ದೀಪಹ. I, ೩೬). [ ಸಂ. ಗಿಲಂಕೃತ ]

**ಗಿಳನ** 'ಗಿಲನ' ನೋ.

**ಗಿಳಿ, ಗಿಣಿ** (ನಾ). ಹಸಿರುಬಣ್ಣದ ಗರಿ ಮತ್ತು ಕೆಂಪಾದ ಕೊಕ್ಕು ಇವುಗಳಿಂದ ಕೂಡಿದ ಒಂದು ಜಾತಿಯ ಪಕ್ಷಿ ; ಶುಕ ; ಕೀರ : "ಕನ್ನಡವಕ್ಕಿ ಪುರುಳಿ ಪಂಡಿತವಕ್ಕಿಯೆನಲು ಗಿಳಿ" (ಕಬ್ಬಿಕ್ಕೆ. ೨೩) ; ಕಲ್ತೊಡನೋದುವುದಲ್ತೆ ಗಿಳಿಗಳುಂ ಪುರುಳಿಗಳುಂ (ಕವಿರಾ. ೧-೧೧) ; ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೇ (ಮಹಾದೇ. ಬ. ೩೩-೭೩) ; ಗಿಳಿಯ ಹಿಂಡುಗಳೆತ್ತ ಗಿಡಿಗನ ದಳದುಳವು ತಾನೆತ್ತ (ಕುವ್ಯಾದ್ರೋ. ೨-೮೧) ; ಗಿಳಿಯು ಪಂಜರದೊಳಿಲ್ಲ . . . ಬಟ್ಟೇ ಪಂಜರವಾಯ್ತಲ್ಲ (ಪುರಂದ. ೧-೧೧೨ ಪಲ್ಲವಿ) ; ಗಿಳಿಯನ್ನು ಸಾಕಿ ಬೆಕ್ಕಿಗೆ ಕೊಟ್ಟ ಹಾಗೆ (ಗಾದೆ). **ಗಿಣಿ :** "ಕೀರಃ, ಶುಕಃ–ಈ ೨ ಗಿಣಿ" (ನಾಚಿರಾ. ೧೧೪) ; ಅಂಜುವೆವು ನಿಮಗರಸರೇ ಬಲಪಂಜರದ ಗಿಣಿ ನೀವು (ಕುವ್ಯಾಕ. ೧೧-೪೨) ; ದೊಡ್ಡದಾದ ಎಲವದ ಮರದ ಮೇಲೆ ಅನೇಕ ಗಿಣಿಗಳಿರುವುವು (ವಡಭಾ. ೨). P ಗಿಳಿಯು ಜಾತಿಗೆ ಸೇರಿದ ಇತರ ಬಣ್ಣದ ಪಕ್ಷಿಗಳೂ ಉಂಟು.
[ ದೇ॥ ತಮಿ. ಕಿಳಿ, ಕಿಳ್ಳೈ ; ಮಲ. ಕಿಳಿ ; ತುಳು. ಗಿಣಿ, ಗಿಳಿ ; ಕೊಡ. ಗಿಣಿ ; ಪರ್ಜಿ. ಕಿಲ್ ]

**ಗಿಳಿಗಡಿಕ, ಗಿಣಿಗಡಕ** (ಗು). ಗಿಳಿ ಕಚ್ಚಿದ,–ಕಡಿದ : ತೋಟದಲ್ಲಿ ಅನೇಕ ಗಿಳಿಗಡಿಕ ಹಣ್ಣುಗಳು ಬಿದ್ದಿರುತ್ತವೆ (ರೂಢಿ). **ಗಿಣಿಗಡಕ :** ತುಂಬ ಕೆಂಪು ಗಿಣಿಗಡಕ ಹಣ್ಣಿನ ಹಾಂಗ ಇದ್ದಂಥ ತುಟಿಯ ಬಣ್ಣೆತ್ತ ಹಾರಿತು ? (ನಾದಲೀ.೫೮-೭). [ ಗಿಳಿ + ಕಡಿಕ$_0$ (<ಕಡಿಕು$_2$) ]

**ಗಿಳಿಗರ್ಚು** (ಕ್ರಿ). ೧. ಗಿಳಿಯಂತೆ ಕಚ್ಚು. ೨. (ಆಲಂ) ಸ್ವಲ್ಪ ಮಾತ್ರ ರುಚಿ ನೋಡು : ಮರ್ಚದಿರು ಬಸನಮಂ ಗಿಳಿಗರ್ಚದಿರು ಖಳಸ್ವಭಾವಮಂ (ಕಾವ್ಯಾವ. ೩೭೮). [ ಗಿಳಿ + ಕರ್ಚು$_1$ ]

**ಗಿಳಿಗೆಡಪ** (ನಾ). ಗಿಳಿಯ ಮಾತು ; ಶುಕಧ್ವನಿ : ಆಗಳಾ ಗಿಳಿಯ ಗಿಳಿಗೆಡಪಕ್ಕೆ ಮಂಗುಳ್ದುಗೆ ನಗುತ್ತುಮಿಾಪದಾನತಾನನೆಯಾದೋಪಳಂ ಭೂಪಾಳಂ ಚಾಳಿಸಿ (ಚಂದ್ರಪು. ೭-೮೭ ವ). [ ಗಿಳಿ + ಗೆಡಪ ]

**ಗಿಳಿತ** 'ಗಿಲಿತ' ನೋ.

**ಗಿಳಿದಾಲಿ, ಗಿಳಿದಾಳಿ** (ನಾ). ಗಿಳಿಯ ಚಿತ್ರದಿಂದ ಕೂಡಿರುವ ತಾಳಿ : ಪದಕಂ ಗಿಳಿದಾಲಿ ತೋಳಬಂದಿ . . . ಪಿಲ್ಲಿ ಮಿಂಚು ಮೊದಲಾದ ಪೊಸಮಿಸುನಿದೊಡವುಗಳಿಂ (ಹಾಲಾಸ್ಯ. ೩-೯-೬೪ ವ). **ಗಿಳಿದಾಳಿ :** ನೆತ್ತಿಯ ಜುಂಜು ಮೇಗಣ ಳಿಮಾಲೆ ಕರಾಸಿಯ ನೀಳ್ದ ಕೊಂಬು ಮೈವೊತ್ತಿದ್ದ ಪುಷ್ಪರೇಣು ಪೊಸರಕ್ಕೆ ಶುಕಂ ಗಿಳಿದಾಳಿ (ವೃಷವಿ. ೪-೩೭).
[ ಗಿಳಿ + ತಾಲಿ$_1$ ]

**ಗಿಳಿದಾಳಿ** 'ಗಿಳಿದಾಲಿ' ನೋ.

**ಗಿಳಿದೇರ** (ನಾ). ಗಿಳಿಯನ್ನೇ ತೇರು ಮಾಡಿಕೊಂಡಿರುವವನು ; ಕಾಮ ; ಮನ್ಮಥ : "ಇಂಗೋಲ್ವಿಲ್ಲಂ . . . ಐಸರಲಂ, ಗಿಳಿದೇರಂ – ಇವು ೧೩ ಕಾಮದೇವಂಗೆ ಪೆಸರ್" (ಕಶಸಾ. ೨-೧೩) ; ಇದು ಗಿಳಿದೇರನ ದಾಳಿಯ ಭೀತಿಗೆ ಪುದುಗಿದ ನಡುಕಮೊಯೆನಲು (ಜಯಚಾ. ೪-೧೯).
[ ಗಿಳಿ + ತೇರ್$_2$ + – ಅ$_7$ ]

**ಗಿಳಿನುಡಿ, ಗಿಣಿನುಡಿ** (ನಾ). ೧. ಗಿಳಿಯ ಮಾತು. ೨. ಗಿಳಿಯ ಮಾತಿನಂತೆ ಮುದ್ದಾದ ನುಡಿ ; ಮಧುರವಾದ ಮಾತು : ಸೋಗೆದುಱುಬಿನ ಗಿಳಿನುಡಿಯ ಪೊಣರ್ವಕ್ಕಿಮೊಲೆಗಳ ಕೆಂಪುದಳಿರಡಿಯ . . . ನಂದನಲಕ್ಷ್ಮಿ ಶೋಭಿಪಳು (ಸಾಳ್ವಭಾ. ೨-೨). **ಗಿಣಿನುಡಿ :** ೨. ಗಿಣಿನುಡಿಯುಬಲೆಯು ಕೂಟದಿ ಮುತ್ತಿನ ಮಣಿಯಂತೆ ಬೆಮರಾಂತಿರುವ ಹಣೆಯ ನಿವಾರಿಸಬೇಕೆಂದು ಹೊಂಬೀಸಣಿಗೆಯ ಹಿಡಿದೊರ್ವೆಯಿಹಳು (ಮೋಹತ. ೪-೧೧).
[ ಗಿಳಿ + ನುಡಿ$_2$ ]

**ಗಿಳಿಪಾಠ** (ನಾ). ಗಿಳಿಯಂತೆ (ಅರ್ಥಮಾಡಿಕೊಳ್ಳದೆ ಬೇರೆಯವರು ಹೇಳಿದ್ದನ್ನೇ) ಹೇಳುವುದು : ಕಲೆಯೆಂದರೆ ಗುರುವು ಹೇಳಿಕೊಟ್ಟಿರುವ ಗಿಳಿಪಾಠವನ್ನು ಒಪ್ಪಿಸುವುದಲ್ಲ (ಆಧಾನ್ಯ. ೬).
[ ಗಿಳಿ + ಪಾಠ ]

**ಗಿಳಿಬಾಗಿಲು** (ನಾ). ಗುಬ್ಬಿಬಾಗಿಲು ; "ಚಿಕ್ಕಕಿಟಕಿ" (ಗೀವಿಂ. ಕೋಶ) : ಗಿಳಿಬಾಗಿಲ ತೆರೆಯೆಯಾ? ಹೊದನಿಯನೆನ್ನ ಕರೆಯೆಯಾ . . . ತಾರಾ ಕಟಾಕ್ಷ ಬೀರೆಯಾ? (ಗೀವಿಂ.೩೮-೧) [ ಗಿಳಿ + ಬಾಗಿಲು (<ಬಾಗಿಲ್) ]

**ಗಿಳಿಬಾವಲಿ** (ನಾ). ಹೆಂಗಸರು ಕಿವಿಗೆ ಹಾಕಿಕೊಳ್ಳುವ ಗಿಣಿಯಾಕಾರದ ಒಂದು ಬಗೆಯ ಆಭರಣ : ಹರಳು ವಜ್ರದೊಳೆ ಬುಗುಡಿಯು ಚಳಕು ಗಿಳಿಬಾವಲಿ (ಕರ್ಣಾಕ. ೨೮೭). [ ಗಿಳಿ + ಬಾವಲಿ₂ (<ಬಾವುಲಿ₂) ]

**ಗಿಳಿಮಾತು** 'ಗಿಳಿವಾತು' ನೋ.

**ಗಿಳಿಮಾವು,** ಗಿಣಿಮಾವು (ನಾ). ಒಂದು ಬಗೆಯ ಮಾವು ; ಗಿಣಿಮೂತಿ ಮಾವು ; ತೋತಾಪುರಿ : ಮಾವು ಗೆರ್ಮಾವು . . . ಅಡಿಕೆಮಾವು ಗಿಳಿ ಮಾವು ಬೈತಲೆಮಾವು (ನವಮೋ. ೨೪-೪೯). **ಗಿಣಿಮಾವು** : ತನಿಮಾವು ಗಿಣಿಮಾವು . . . ತರುನಿಕರಂಗಳುಂ (ವಿವೇಕ. ೨೧೦) ; ಕಣ್ಣು ಕವಳಿಯ ಹಣ್ಣು ಗಿಣಿಮಾವಿನೊಲು ಮೂಗು (ಅರಳು. ೨೫೩-೩). [ ಗಿಳಿ + ಮಾವು ]

**ಗಿಳಿಮೂಗ,** ಗಿಣಿಮೂಗ (ನಾ). ೧. ಗಿಳಿಯ ಕೊಕ್ಕಿನಂತೆ ಬಾಗಿದ ಮೂಗುಳ್ಳವನು. ೨. ಒಂದು ಬಗೆಯ ಮರ ; ಅಗಸೆಮರ ; ಚೊಗಚೆ : "ಶುಕನಾಸ–ಹೆಮ್ಮರ, ಅಗಸೆ,ಗಿಳಿಮೂಗ" (ಓಷಧಿ. ೧೬೯). **ಗಿಣಿಮೂಗ :** ೨. "ಅನುವಹಿತಾ–ಗಿಣಿಮೂಗ" (ಓಷಧಿ. ೮).
[ ಗಿಳಿ + ಮೂಗು₁ + – ಅ₇ ]

**ಗಿಳಿಮೂಗಿ,** ಗಿಣಿಮೂಗಿ (ನಾ). ೧. ಗಿಣಿಯ ಕೊಕ್ಕಿನಂತೆ ಬಾಗಿದ ಮೂಗುಳ್ಳವಳು. ೨. ಒಂದು ಬಗೆಯ ಔಷಧಿಸಸ್ಯ : ಗಿಳಿಮೂಗಿ ಯರಿಸಿನಂ ಪಿಪ್ಪಲಿಮೂಲಂ (ಅಶ್ವಶಾ. ೧೨-೭) ; ಚಿತ್ರಕಮತಿಬಜೆ ದಂತಿ ಕಟುತ್ರಿತಯಂ ಕಾಗೆದೊಂಡೆ ಗಿಳಿಮೂಗಿಯುಮಂ ಮೂತ್ರಸಮೇತಂ ಬುಧ ಜನಮಿತ್ರನವಂ ತಂದು ಪೂಸೆ ಶೋಫಂ ಕೆಡುಗುಂ (ಅಶ್ವಶಾ. ೧೪-೧೧). **ಗಿಣಿಮೂಗಿ :** ೨. ಮೊಲನಾಗರಕ್ಕೆ :– ಕಾಚತೊಂಡೆಯ ಬೇರು . . . ಗಿಣಿ ಮೂಗಿ . . . ಇವಂ ಸಮಾನಂಗೊಂಡು ಚೂರ್ಣವಂ ಮಾಡಿ (ವಿಷ್ಯವಿ. ೯೯).
[ ಗಿಳಿ + ಮೂಗು₁ + – ಇ₂ ]

**ಗಿಳಿಯ** (ನಾ). ಮದುವೆ, ದೀಪಾವಳಿ ಮೊದಲಾದ ಸಮಾರಂಭಗಳಲ್ಲಿ ಅಳಿಯನ ಜೊತೆಯಲ್ಲಿರುವ ಅವನ ಗೆಳೆಯ : "ಮದುವೆಯಲ್ಲಿ ಮದು ವಣಿಗನ ಜೊತೆಯಲ್ಲಿರುವ ಗೆಳೆಯ : ಗಿಳಿಯ" (Best-man. ಇಂಕನ್) : 'ಅಳಿಯನ ಹಿಂದೆ ಗಿಳಿಯ' ಎಂಬ ಸಾಮತಿಗೆ ಸರಿಯಾಗಿ ತನ್ನ ಸಮವಯಸ್ಕ ನಾದ ಒಬ್ಬ ಸಂಗಾತಿಯನ್ನು ಕರೆದುಕೊಂಡು (ಕಥಾಮಂ. IV, ೦೨). 'ತೋಳ್₂' ಪರಾ. [ P 'ಅಳಿಯ ಗಿಳಿಯ' ಎಂಬ ಜೋಡಿ ಪದಗಳಲ್ಲಿ ಒಂದನ್ನೇ ತೆಗೆದು ಬೇರೆಯಾಗಿ ಉಪಯೋಗಿಸಿರುವ ಪದ. 'ಗೆಳೆಯ' ಎಂಬ ಪದದಿಂದ ಬಂದಿರಬಹುದು. ಸಾಮಾನ್ಯವಾಗಿ ಇದು ಹೀನಾರ್ಥ ದಲ್ಲಿಯೇ ಉಪಯೋಗವಾಗಂತ್ತದೆ ]

**ಗಿಳಿಯೋದು₁** (ಕ್ರಿ). ಗಿಳಿಯಂತೆ (ಸ್ವಂತ ವಿವೇಚನೆ ಇಲ್ಲದೆ) ಪರರ ನುಡಿಯನ್ನು ಅನುಕರಿಸು ; ಆಳವಾಗಿ ತಿಳಿಯದೆ ಓದು ; ಇನ್ನೊಬ್ಬ ರಿಂದ ಕಲಿತುದನ್ನು ಮಾತ್ರ ಹೇಳು : ವೇದವೇದಾಂಗ ಉಪನಿಷತ್ ಶಾಸ್ತ್ರ ಪುರಾಣೇತಿಹಾಸಗಳಲ್ಲಿರುವ ಬಾಲಶಿಕ್ಷೆಯ ನೀತಿರೀತಿಗಳು – ಅವನ್ನೆಲ್ಲಾ ಗಿಳಿಯೋದಿ ಕೇಳಿಸಿ (ಜಟ್ಟಪ. ೧೧೫-೧೨). [ ಗಿಳಿ + ಓದು₁ ]

**ಗಿಳಿಯೋದು₂,** ಗಿಣಿವೋದು (ನಾ).=ಗಿಳಿಪಾಠ : ಶಿವ ಎಂದೋದದನ ಓದು ಗಿಳಿಯೋದು (ಸರ್ವವ. ೧೬೮-೭೯೩). **ಗಿಣಿವೋದು** : ನಿನ್ನೋದು ಗಿಣಿವೋದಾಗುವಂತಾಯ್ತುಕಟ ಕಟ್ಟೆಯ ಬಸವನೆನಲರಸು (ಬಿ ಜ್ಞ ಪು. ೬೨-೪೨). [ ಗಿಳಿ + ಓದು₂ ]

**ಗಿಳಿಲು** 'ಗಿಣ್ಣಲ್' ನೋ.

**ಗಿಳಿವಣ್ಣ** (ನಾ). ಗಿಳಿಯ ಬಣ್ಣ ; ಹಸಿರು : ಅಳಿವಣ್ಣದಾಕಾಶ ಗಿಳಿವಣ್ಣದ ಮುಗಿಲು ಅಳಿದಳಿದುಮರ್ಕನುದಯಿಸಲು ಮಳೆಯು ತಾ ತಳುವದೇ ಬಕ್ಕು (ಸರ್ವಜ್ಞ. ೧೫೭೭). [ ಗಿಳಿ + ಬಣ್ಣ ]

**ಗಿಳಿವಳಗ** (ನಾ).=ಗಿಳಿವಿಂಡು : ಗಿಳಿವಳಗ ಮೆಲ್ಲುಲಿಯ ಒಸಗೆಯೆನೆ ಬರಲು (ಕಾಲೂರ. ೫೭-೯೨). [ ಗಿಳಿ + ಬಳಗ ]

**ಗಿಳಿವಱಿ** (ನಾ). ಗಿಳಿಯ ಮರಿ : ಬಿರುದಿನ ಸಾಳ್ವನ ನೀಡವನುಱಿ ಗಿಳಿವಱಿಗಳು ತುಡುಕುವಂದದಲಿ (ಕಂನವಿ. ೧೪-೪೫) ; ಗಿಳಿವಱಿ ಮೆಱಿ ಯದ ನಂದನಂ . . . ಅರ್ಭಕನಾಡದಂಗಳಂ ಮಂಜುಳಿಮೇ (ರಾಜಶೇ. ೩-೭೪). [ ಗಿಳಿ + ಮಱಿ ]

**ಗಿಳಿವಾಣತಿ** (ನಾ). ಮೊಟ್ಟೆಯನ್ನು ಮರಿ ಮಾಡಿದ ಗಿಣಿ ; ಬಾಣಂತಿ ಯಾಗಿರುವ ಗಿಳಿ : ತಳುವದೆ ಕುಟುಕೀವ ಗಿಳಿವಾಣತಿಯನಾ ನಳಿನವದನೆ ಕಂಡಳಾಗ (ಕುರಾಸಾಂ. ೭-೫೮). [ ಗಿಳಿ + ಬಾಣತಿ (<ಬಾಳಂತಿ) ]

**ಗಿಳಿವಾತು,** ಗಿಳಿಮಾತು (ನಾ). ೧. ಗಿಳಿಯ ಮಾತು ; ಮುದ್ದುಮಾತು: "ತೊಂಡುಗೆಡದುದೆನಲ್ಕೆ ಸಾರುಗುಂ ಗಿಳಿವಾತು" (ಶಬ್ದಮಂ. ೩೦) ; ಗಿಳಿ ವಾತಿಂದುಪಚಾರಮಾಡಿ ತಳಿರ್ಗೈಯಿಂದಿತ್ತ ಬಾರೆಂದು (ರಾಜಶೇ. ೯-೭೧). **ಗಿಳಿಮಾತು :** ೨. ಮತ್ತೊಬ್ಬರು ಹೇಳಿಕೊಟ್ಟ ಮಾತು : ಆಧುನಿಕ ಕವಿತೆ ಈಗ ಆಡುತ್ತಿರುವುದು – ಎಲ್ಲಿಯೋ ಗಿಳಿಮಾತು, ಗುಹಾಧ್ವನಿ (ಸಾಹಿವಿ. ೯೬). [ ಗಿಳಿ + ಮಾತು₁ ]

**ಗಿಳಿವಿಂಡು,** ಗಿಣಿವಿಂಡು (ನಾ). ಗಿಳಿಗಳ ಹಿಂಡು, – ಗುಂಪು : ಪಣ್ಗೊಲೆಯಂ ಗಿಳಿವಿಂಡು ಚುಂಚುವಿಂದಿಱಿದಡೆ (ಎಇ. XIII, ೩೩೧-೨೯ : 929) ; ಬೆಳೆದು ಮಗಮಗಿಪ ಗಂಧಶಾಳಿಯಿಂದಲ್ಲಿ ಸುಱಿವ ಗಿಳಿವಿಂಡಿ ನೋಳಿಯಿಂ (ಶಂಪಭಾ. ೩-೨೧ ರಗಳೆ); ನತ್ತಿಯೊಳ್ಪಱುವ ಗಿಳಿವಿಂಡು ಪಚ್ಚೆಯ ಸತ್ತಿಗೆಯಂತೆ ಮಂಡಲಿಸೆ (ಪೋಹಚ. ೨-೪೬). **ಗಿಣಿವಿಂಡು :** ಗಿಣಿ [ಪಾಠಾಂ. ಳಿ] ವಿಂಡಿಗೆಱುಗುವ ಗಿಡಿಗನವೊಲು (ತೊರರಾ. ೫-೩-೬೧).
[ ಗಿಳಿ + ಪಿಂಡು₂ ]

**ಗಿಳಿವಿಂಡುಗೆಡೆ** (ಕ್ರಿ). ಗಿಳಿಯಂತೆ ಗಳಹು ; ಅರ್ಥ ತಿಳಿಯದೆ ಮಾತನಾಡು : ಇವರೆತ್ತಲೆಂದಱಿಯರು ಗಿಳಿವಿಂಡುಗೆಡೆವರು ನಿಮ್ಮ ನೆತ್ತ ಬಲ್ಲರು ಗುಹೇಶ್ವರ (ಅವಚಂ. ೧೧೪೦-೬೪೧) ; ಉಲಿವ ತರುವಲಿಗಳೆಲ್ಲ ಗಿಳಿವಿಂಡುಗೆಡೆದಿಹರು (ಅವಚಂ. ೧೬೭-೭೯೩). [ ಗಿಳಿವಿಂಡು + ಕೆಡೆ₂ ]

**ಗಿಳಿವೆಣ್** (ನಾ). ಹೆಣ್ಣುಗಿಳಿ ; ಪುರಂಳಿ : ಗಿಳಿ ಗಿಳಿವೆಣ್ಗೆ ಪೂಗಫಳಮಂ ಕಳಹಂಸಿಗೆ ಹಂಸನಬ್ಜಕಂದಳಮಂ . . . ಈವ ಚಿತ್ರಮಂ ತಳೆದು (ಮಲ್ಲಿಪು. ೨-೭೩). [ ಗಿಳಿ + ಪೆಣ್ ]

**ಗಿಳ್ಳು** 'ಗಿಲ್ಲಂ' ನೋ.

**ಗಿಱಕ್,** ಗಿರಕು (ನಾ). ಒಂದು ಅನುಕರಣಶಬ್ದ : ತಱಗೆಲೆ ಗಿಱಕೆಂದೊಡೆ ಹೊಱಗನಾಲಿಸುವೆ (ಬಸವ. ೩೭೪). **ಗಿರಕು :** ಹಳೆಯ ಬಾಗಿಲು ತೆರೆದಾಗ ಗಿರಕು ಕೇಳಿಸುತ್ತದೆ (ರೂಢಿ).

**ಗಿಱಿಕ್,** ಗಿಱಿಕು (ನಾ). ಒಂದು ಅನುಕರಣಶಬ್ದ : ಗಾಳಿ ಗಿಱಿಕೆಂದಡಂ ಲೋಹಿತಾಶ್ವಾ ಎಂದು ಕರೆಕರೆದು (ಹಚಕಾ. ೦೨-೧೭) ; ಮಾರುತ ಗಿಱಿಕೆ ನಲು ನೃಪನೆನುತ (ಜೀವಂಚ. ೫-೧೯). **ಗಿಱಿಕು** : 'ಗಿಱಿಕುಗುಟ್ಟು' ಪರಾ.

**ಗಿಱಿಕು** 'ಗಿಱಿಕ್' ನೋ.

**ಗಿಱಿಕುಗುಟ್ಟು** (ಕ್ರಿ). ಗಿರಿಕ್ ಎಂದು ಶಬ್ದಮಾಡು : ಕಿಱಿಕಿಱಿನೆ ಹಲು ಗಿರಿದು ಹಣುಗುತ ಗಿಱಿಕುಗುಟ್ಟುತ ಮಿಣಿಕಿ ನೋಡುತ (ತೊರರಾ. ೫-೭-೧೧). [ ಗಿಱಿಕು (<ಗಿಱಿಕ್) + ಕುಟ್ಟು₁ ]

**ಗಿಱಿಗಿಱಿ, ಗಿರಿಗಿರಿ** (ನಾ). ಒಂದು ಅನುಕರಣಶಬ್ದ. 'ಗಿಱಿಗಿಱಿ ಗುಟ್ಟು' ಪರಾ. **ಗಿರಿಗಿರಿ :** ಗಾಳಿಪಟ ಗಿರಿಗಿರಿ ಎಂದು ತಿರುಗಿ ಬಿದ್ದಿತು (ರೂಢಿ).

**ಗಿರಿಗಿರಿತಿರುಗು**=ರಭಸದಿಂದ ಸುತ್ತು : ರಾಟವಾಳ ಗಿರಿಗಿರಿತಿರುಗು ತ್ತಿದೆ (ರೂಢಿ).

**ಗಿಱಿಗಿಱಿಗುಟ್ಟು** (ಕ್ರಿ). (ಗಾಬರಿಯಿಂದ) ತಿರುಗು, – ಉರುಳು : ಪುಟದ ಕಂತುಕದಂತೆ ಫಣಿ ಲಟಕಟಿಸಲೌಕಿತು ಗಿಡಗನೆಱಕೆಯ ಪುಟದ

ಗಿಳಿಯಂದದಲಿ ಗಿಟಿಗಿಟಿಗುಟ್ಟಿದನು ಭೀಮ (ಕುಮಾ.ಭಾ. ೧೩-೩೪).
[ ಗಿಟಿಗಿಟಿ + ಕುಟ್ಟು$_1$ ]

**ಗಿಟಿಲು** (ನಾ). ಒಂದು ಜಾತಿಯ ಮೀನು: ಕೊರವೆ ಸೀಗುಡಿ ಗಂಡೆ ಕುಚ್ಚು ಹಣ್ಣಲು ಬಸಿಗ ಗಿಟಿಲು ಬಂಗಡೆ ಹಾವು . . . ಪರಿಪರಿಯ ಮೀನ್ಗಳಂ ಗುದಿಗೆಯ್ದುರು (ಹಚಕಾ. ೫-೪೫). [ ? ]

**ಗಿಱು, ಗಿರು** (ಕ್ರಿ). ಗೆತ್ತು$_2$ (ಭೂತಕಾಲ). ಭಾ ವಿ ಸಂ ; ಎಣಿಸು ; ಭ್ರಮಿಸು : "ಗಿಱು–ಪರಿಭಾವನೇ" (ಶಮುಧಾ) ; ಸುಸಾಳಭಂಜಿಕೆ ಗೆತ್ತುದು ಕೆಳದಿಯರ ತಂಡವಮಾಕೆಯ ರೂಪಂ (ಪಂಪಭಾ. ೪-೫೪) ; ಕಾಳಗತ್ತಲೆ ತಗುಳ್ದಿರುಳಾದುದೆ ಗೆತ್ತು (ಕಾದಂಪೂ. ೭೩೯) : ಮರುಳ್ದುಂಬಿಯೊಂದಲರ್ದ ಪೊಂದಾವರೆಯ ಸಿರಿ ಗೆತ್ತು ಮೊಗಕೆಱಗೆ (ಪದ್ಮರಾ. ೮-೪೭) ; ಮಳೆ ಗೆತ್ತು ತಲೆಯ ಮೇಲಾನೆಗಳ್ಗೊಂಡಿಲಿಂ ತಳಿವ ನೀರ್ವನಿಸಿಗಳಂ ಚಾದಗೆ ಗಳೀಂಟಿದುವು (ಶೀಷರಾ. ೨೭-೧೪); ಮುದ್ದುಮೊಗಮಂ ಪಡಿಗೂಸು ಗೆತ್ತು (ರಾಮಾಶ್ವ. ೧೯-೨). **ಗಿರು :** "ಗಿರು = ಪರಿಭಾವಿಸು ; ಯೋಚಿಸು" (ಸಿರಿಕೋ. ೧೬೦). [ ? ]

**ಗಿಱುಕ್** (ನಾ). ಒಂದು ಅನುಕರಣಶಬ್ದ: ತಱಗೆಲೆ ಗಿಱುಕೆನೆ ಬೇಡಂ ಪೊಱಗೆಯ್ದುದನೆಂದು ಭಯದೆ ಮಱುಗಿದೆನಾಗಳ್ (ಕಾದಂಪೂ. ೧೯೦) ; ಕಣ್ಮುಚ್ಚಿ ಕಂಪಿಸುತ್ತೊಱಲುತಂ ಅಯ್ಯ ಬಾರ್ಯೆಯೆನುತೆ ಗಿಱುಕೆನಲು ಹೆದಱುತಂ (ಮಱಿರ. ದೇ. ೭೪-೨೨) ; ಗಾಳಿಯದು ಗಿಱುಕೆಂದೊಡಳುಕುತ ಬಳುಕುತಂ (ಬಸವು. ೨೬-೩೦).

**ಗಿಱ್ಱಗೆ** (ಅ).=ಗಿಱ್ಱನೆ : ಗಿಱ್ಱನೆ, ಗಿಱ್ಱಗೆ, ತಿಱ್ಱನೆ, ತಿಱ್ಱಗೆ (ಶಬ್ದಾನು. ೪೯ ಪ್ರಯೋ). [ ಗಿಱ್$_0$ + – ಅಗೆ$_3$ ]

**ಗಿಱ್ಱತಿಱ್ಱನೆ** (ಅ). ಬೇಗನೆ ; ಜಾಗ್ರತೆಯಾಗಿ : ಭೋಂಕಲ್ ಚಱುವುದನೆ ಗಿಱ್ಱತಿಱ್ಱನೆಯುಂ . . . ಒದವುಗುಂ ಶೀಘ್ರಾರ್ಥಂ (ಶಮದ. ೩೦೫).
[<ಗಿಱ್ಱನೆ + ತಿಱ್ಱನೆ]

**ಗಿಱ್ಱನೆ, ಗಿರ್ರನೆ** (ಅ). ಬೇಗನೆ ; ಶೀಘ್ರವಾಗಿ ; ರಭಸವಾಗಿ: ಗಿಱ್ಱನೆ ಪರಿತರೆ ಬಡಗಿಯುಂ ಸುಱ್ಱನೆ ಸುಗಿದಂಜಿ ನಡುಗಿ(ಧರ್ಮಾಮೃ. ೧೨-೦೫೫) ; ಗಂಟೆನೊಳಗಿರ್ದು ಕೂಗುವ ನುಡಿಗೆ ಗಿಱ್ಱನೆಯುದ್ದವ ಸೊರ್ಕಾನೆಗಳ ಕಾಲ ಸಂಕಲೆಯ ಗೋಸದೊಳಂ (ಚಿಬ್ಬಿಕಾ. ೪೪) ; ಸ್ಮರನ ಕೈಯೊಳಗಾಡುತ ತಾವೆ ಗಿಱ್ಱನೆ ತಿರುಗುಣ ಬೊಗರಿಗಳೆನೆ ಯೆ (ಚಂಪ್ರಸಾಂ. ೨೫-೫೬). **ಗಿರ್ರನೆ :** ತಲೆ ಗಿರ್ರನೆ ಸುತ್ತುತ್ತಿದೆ (ರೂಢಿ).

**ಗಿಱ್ಱನೆವೋಗು**=ಗಿರ್ರೆಂಬ ಧ್ವನಿಯುಂಟಾಗು : ಒಡಲುರಿಗುಂ ಮನಂ ಮಱುಗುಗುಂ ಕಿವಿ ಗಿಱ್ಱನೆವೋಕು ಮತ್ತೆ ಕಣ್ಬಡಿಗುಗುಂ (ಆದಿಪು. ೧೨-೯೦).
[ ಗಿಱ್$_0$ + – ಅನೆ$_1$ ]

**ಗಿಱ್ಱಿನ್** (ಕ್ರಿ). ೧. ಗಿರ್ರೆಂದು ಶಬ್ದ ಮಾಡು. ೨. ಜಾಗ್ರತೆಮಾಡು ; ತ್ವರಿತಗೊಳ್ಳು: ಭುಱ್ಱಿಂದೆಣ್ಣೆಯೊಳಿಕ್ಕಿಯುಂ ತ್ವರಿತದಿಂ ಕೈಗಾಯದೋ ರೊರ್ವರಂ ಗಿಱ್ಱಿಂದಾರ್ದಿದಿರಾಗಿ ಬಂದು ತಲೆ ಜೇಱೀಟಿ ಪೊಯ್ದುಗ್ರದಿಂ (ಧರ್ಮಾಮೃ. ೬-೧೮೯). [ ಗಿಱ್$_0$ + ಎನ್$_1$ ]

**ಗಿಟಿ** (ಕ್ರಿ). (?) : ಅವಗಟಿಯಾದಿ ಗಣಸ್ತು ಪ್ರದರ್ಶ್ಯತೇ. ಯಥಾ – ಅವಗಟಿಯ . . . ಗಿಟಿ, ಅಟಿ, ಉಟಿ (ಶಬ್ದಾನು. ೧೪೦ ವ್ಯಾಖ್ಯಾ). [?]

**ಗೀಂಕಾರ** (ನಾ). ಆನೆಯ ಕೂಗು ; ಬೃಂಹಿತ ; ಗೀಳಿಡುವುದು : (ಈ).
[ <ಸಂ. ಘೀಂಕಾರ ]

**ಗೀಕು$_1$** (ಕ್ರಿ). "ಮಂಒಸವನಂತೆ ಕೂಗು" (ಜಾನಕೋ. ೪೮). [ ? ]

**ಗೀಕು$_2$** 'ಗೇಕು' ನೋ.

**ಗೀಕುಚಾಪೆ** (ನಾ). ಒಂದು ಬಗೆಯ ಜೊಂಡಿನ ಚಾಪೆ ; ಗೇಕಿನಿಂದ ಹೆಣೆದ ಚಾಪೆ: ಗೀಕುಚಾಪೆಯ ಮಱೆಗಳಂ ಕುಳಿತುಕೊಳಲಿಕ್ಕಿ (ಶ್ರೀರಾಮಾ. ೨೭೧-೨೦೭). [ ಗೀಕು$_2$ (<ಗೇಕು) + ಚಾಪೆ ]

**ಗೀಗೀಪದ** (ನಾ). (ಉಕ) ನುಡಿಗೊಂದು ಸಲ ಪಲ್ಲವಿಯೊಡನೆ ಹಿಮ್ಮೇಳದವರು ಗೀಗೀಗೀ ಎಂದು ಹಾಡುವ ಒಂದು ಬಗೆಯ ಜಾನಪದ ಗೀತೆ : ಗೀಗೀಪದಗಳ, ಲಾವಣಿಗಳ ಚೆಲುವನ್ನು ಸವಿದಿದ್ದಾಳೆ (ಮೋಹಬ. ೨೦೪) : ಉತ್ತರಕರ್ನಾಟಕದಲ್ಲಿ ಈಗ ಹೆಚ್ಚಾಗಿ ಪ್ರಚಾರದಲ್ಲಿರುವ 'ಶಾಹೀರಕೀ ಹಾಡು' ಅಥವಾ 'ಗೀಗೀಪದ' ಗಳ ಮೇಳಗಳು, ಮಹಾರಾಷ್ಟ್ರದ 'ಶಾಹೀರ್ ಗಾಣಾ' ಪರಂಪರೆಯ ಪಡಿನೆಳಲಾಗಿವೆ (ಕರ್ನಾಜ. ೧೦೦). [ ಗೀಗೀ$_0$ + ಪದ$_3$ ]

**ಗೀಚಲು** (ನಾ).=ಗೀಚು$_2$ : (ಈ). [ ಗೀಚು$_1$ + – ಅಲು (<–ಅಲ್$_2$) ]

**ಗೀಚು$_1$** (ಕ್ರಿ). ೧. (ಉಗುರಿನ ಮೊನೆ ಮೊದಲಾದುವುಗಳಿಂದ) ಗೀರು ; ಗೆರೆಎಳೆ. ೨. ಅವಸರವಸರವಾಗಿ ಬರೆ ; ಅಡ್ಡಾದಿಡ್ಡಿಯಾಗಿ ಬರೆ ; ಸೊಗಸಿನ ಕಡೆಗೆ ಗಮನವಿಡದೆ ಬರೆ : ಒಂದು ಓಲೆ ಗೀಚಲು ನಿಮಗೆ ಸಮಯ ಸಾಲದೆ ? (ಹಂದುಟ. ೧೬) ; ವರದಿಗಳನ್ನು ಗೀಚಿ ಮೇಲಕ್ಕೆ ಕಳಿಸಿಬಿಡುವುದು (ರಂಗಳ. ೬) ; ನಾನೊಬ್ಬ ಸಾಮಾನ್ಯ ಪದ್ಯ ಗೀಚುವವನು (ಅಲಹೂ. ೧೨೦). ೩. ಈಚಲು, ತೆಂಗು ಮೊದಲಾದ ಮರಗಳಿಂದ ಹೆಂಡ ಇಳಿಸಲು ಉಚಿತವಾದ ಸ್ಥಳದಲ್ಲಿ ಶಸ್ತ್ರದಿಂದ ಕೆರೆ,– ಕಚ್ಚು ಹಾಕು : (ಈ).
[ ದೇಱ ತುಳು. ಗೀಚ್, ಗೀಚು ; ಕೊಡ. ಗೀಚ್, ಗೀಚಿ, ಗೀಚು ; ತೆಲು. ಗೀಚು ]

**ಗೀಚು$_2$** (ನಾ). ಗೀಚಿದುದು ; ಗೆರೆ ; ಗೀಟು : ಕನ್ನಡಿಯ ಮೇಲೆ ಗೀಚುಗಳು ಇದ್ದರೆ ಅವು ಕಂಡುಬರುತ್ತವೆ (ಭೌತವಿ. ೧೫೪) ; ಬೆಳ್ಳಿಲೋಟ, ತಟ್ಟೆ, ಪಾತ್ರೆಗಳ ಮೇಲೆ ಗೀಚು ಗರಸುಗಳು ಆಗದಂತೆ . . . ಸಾಬೂನು ನೀರಿನಲ್ಲಿ ತೊಳೆದರೂ ಅವು ಹಸನಾಗುವುವು (ಗೃಹವಿ. ೧೬೬).

**ಗೀಚುಗೀಚು** (ದ್ವಿರುಕ್ತಿ) : ಪಾತ್ರೆ ಗೀಚುಗೀಚಾಗಿದೆ (ರೂಢಿ).
[ <ಗೀಚು$_1$ ]

**ಗೀಚುಗೆರೆ** (ನಾ). ಅಡ್ಡಾದಿಡ್ಡಿಯಾದ ಗೆರೆ,–ರೇಖೆ : ಧೂಪ ಧೂಮದ ಗೀಚುಗೆರೆ (ಹೂಹಾದಿ. ೨೬-೨). [ ಗೀಚು$_1$ + ಗೆರೆ (<ಗೆಱೆ) ]

**ಗೀಜಗ, ಕೀಜಿಗ, ಗಿಜಿಗ, ಗಿಜುಂಗ, ಗೀಜಿಗ, ಗೀಜುಂಗ** (ನಾ). ೧. ಒಂದು ಜಾತಿಯ ಹಕ್ಕಿ ; ಖಂಜರೀಟ ; ಖಂಜನ : "ಮುಂ [ಪಾಠಾಂ. ಮಂ]ಜಕ್ಷಯಂ ಗೀಜಗಮೆನಿಕ್ಕುಂ" (ಮಂಗರಾ. ೫೨-೯) ; ಮತ್ತೊಂದು ಗೀಜಗ ನವಬಿಲ್ಲಿಗೆ ಬಂದು (ಧರ್ಮಾಮೃ. ೨-೨೨೦) ; ಸೊಕ್ಕಿದೆಕ್ಕಲಂ ದಾಡೆಯುನಿತ್ತಿದ ಬಿದಿರ ಸುರ್ವಿನೊಳ್ ತೋರ್ಪುದಲ್ಲಿ ಗೀಜಗನ ಗೂಡಿನಂತೆಬಿಂಬಂ (ಸೂಕ್ತಿಸು. ೩-೩೦) ; ಬೀಸಿದ ಬಲೆಗೆ ಬಿದ್ದವು ಗಿಡಗ ಗೀಜಗ ಗೌಜು ಗುಬ್ಬಿಗಳು (ತೊರರಾ. ೩-೩-೧೭). **ಕೀಜಿಗ :** ೨. ಒಬ್ಬ ರಾಕ್ಷಸನ ಹೆಸರು. ೧, ೨ : ದುರ್ಯೋಧನವಾಡಿಯಂತೆ ಕೀಜಿಗ ಜಾವದೋತನಂತೊಱಗಂ ಪಾಱು ವೆಂಡತಿಯಂತೆ ಪೊಱಸು ಬಡಗಿಯಂತೆ ಮರಕುಟಿಗಂ . . . ಎಂದಿಂತು ಮನೇಕ ಪಕ್ಷಿಜಾತಿಗಳಿಂ ತೆಕ್ಕನೆ ತೀವಿದ ಪಟುವಂ (ಬಂಹರಿ. ೨-೩೮ ವ). 'ಕೀಚಕ' ಪರ್ಯಾ. P 'ಕೀಚಕ' ಪದಕ್ಕೆ 'ಕೀಜಿಗ' ಎಂಬ ತದ್ಭವ ರೂಪವನ್ನು ಮಾಡಿಕೊಂಡು ಕವಿ ಶ್ಲೇಷೆಯನ್ನು ತಂದಿದ್ದಾನೆ. **ಗಿಜಿಗ :** ೧. ನೆಲ್ಲ ಮುಡಿಗೆ ಬರ್ಪ ಗಿಳಿ ಗಿಜಿ [ಪಾಠಾಂ. ಟಿ]ಗನ ತಳುಗಿಲ್ಲದೆ ಪಿಂಡಿವಿಲ್ಲಿಂದ . . . ಸೋವುತಲ್ಲಲ್ಲಿ ಗೊಲ್ಲವೆಣ್ಗಳ ತಂಡಮಿಹುದು (ರಾಮವಿ. ೨-೫೮). **ಗಿಜುಂಗ :** ೧. ಹರಡೆ ಚಿಲುಮಿಲಿಗನು ಚಿಲುವೆ ಗಿಜುಂಗಿ [ಗೆ]ರಳೆ . . . ಹೊಡೆಗಳೆಂಬ ಪಕ್ಕಿಗಳವಟಿಒಪ್ಪಿದವು (ಸಾಳ್ವಭಾ. ೫-೨೦). **ಗೀಜಿಗ :** ೧. ಗಾಜಿನ ಮನೆಯ ಮಾಡಿಕೊಂಡು ವಿರಾಜಿಸುವ ಗೀಜಿಗನು ಓಜನ ಕೈಯಲ್ಲಿ ಸಿಲ್ಕಿ ಗಾಜುಗೋಜಾಗುತ್ತಿದೆ (ಸಿದ್ಧೇವ. ೧೦೨-೩೪೭). **ಗೀಜುಂಗ :** ೧. ಶುಕ ನವಿಲು ಜಿಲಿಬಿಲಿಗ ಗೀಜುಂಗ ಬಕ ಹಸುಬ ಗೊರವಂಕ ಟಿಟ್ಟಿಭ ಪಿಕ ಚಕೋರಕ ಮೀನ್ಬುಲಿಗ ಪಕ್ಷಿಗಳು ರಂಜಿಸಿತು (ನಳಚ. ೦-೪೨ .
[ ದೇಱ ]

**ಗೀಜಗವಕ್ಕಿ**, ಗೀಜಗಹಕ್ಕಿ, ಗೀಜಿಗವಕ್ಕಿ, ಗೀಜುಂಗಹಕ್ಕಿ (ನಾ).=ಗೀಜಗ ೧ : ಎರಡು ಗೀಜಗವಕ್ಕಿಗಳಂ ವಿಗುರ್ವಿಸಿಯಾ ತಪಸಿಯ ಗಡ್ಡದೊಳವು ಗೂಡನಿಟ್ಟಿರ್ಪುದಂ (ಧರ್ಮಾಮೃ. ೨-೨೨೦). **ಗೀಜಗಹಕ್ಕಿ :** ಗೀಜಗಹಕ್ಕಿ ಗೂಡನ್ನು ಕಟ್ಟುತ್ತದೆ (ಜೀವಾತ್ಮ. ೧೯೪). **ಗೀಜಿಗವಕ್ಕಿ :** ಗೀಜಿಗವಕ್ಕಿಯ ಮಿಥುನವುಮಂ ತಪಂಗೆಯ್ಯುತಿರ್ದ ಜಮದಗ್ನಿರಾಮನ ನಿಡಿಯ ಗಡ್ಡ ದೊಳ್ಗೂಡಿಟ್ಟಿರ್ದು (ಚಾವುಂಪು. ೨೭೩). **ಗೀಜುಂಗಹಕ್ಕಿ :** "ಖಂಜರೀಟಃ, ಖಂಜನಃ – ೨ ಗೀಜುಂಗಹಕ್ಕಿ" (ಸಿದ್ಧಾಂತಿ. ೧೩೮). [ ಗೀಜಗ + ಪಕ್ಕಿ$_1$ ]

**ಗೀಜಗಹಕ್ಕಿ** 'ಗೀಜಗವಕ್ಕಿ' ನೋ.

**ಗೀಜಿಗ** 'ಗೀಜಗ' ನೋ.

**ಗೀಜಿಗವಕ್ಕಿ** 'ಗೀಜಗವಕ್ಕಿ' ನೋ.

**ಗೀಜು$_1$** 'ಗಿಂಜು$_1$' ನೋ.

**ಗೀಜು$_2$** (ನಾ). ಕಣ್ಣಿನ ಕೊಳೆ ; ಪಿಸಂರು ; ಪಿಚ್ಚು : "ದೂಷಿಕಾ, ನೇತ್ರಯೋಃ ಮಲಂ–ಕಣ್ಣಿನ ಸಿಡ್ಲು, ಗೀಜು" (ಸಿದ್ಧಾಂತಿ. ೧೬೪). [ ? ]

**ಗೀಜುಂಗ** 'ಗೀಜಗ' ನೋ.

**ಗೀಜುಂಗಹಕ್ಕಿ** 'ಗೀಜಗವಕ್ಕಿ' ನೋ.

**ಗೀಜುಂಗಾರ** (ನಾ).=ಗೀಜಗ ೧ : "ಖಂಜರೀಟಃ, ಖಂಜನಃ–೨ ಗೀಜುಂಗ ಹಕ್ಕಿ . . . ಗೀಜುಂಗಾರಹಕ್ಕಿ, ಗಾಜಲಹಕ್ಕಿ" (ಸಿದ್ಧಾಂತಿ. ೧೩೮).

[ ದೇಙ ತೆಲು. ಗಿಜಿಗಾಡು, ಗಿಜ್ಜಿಗಾಡು ]

**ಗೀಜುವಾಯ** (ನಾ). ಕಿಸಿಬಾಯಿಯವನು; ಜೊಲ್ಲು ಸುರಿಯುತ್ತಿರುವ ಬಾಯುಳ್ಳವನು : ಈ ಶಾರಿನಲ್ಲಿ ಹೇಸಿಗೆಯಾದ ಗೀಜುವಾಯನ ನೋಡಿ ಕರೆದುಕೊಂಡು ಬಾ (ಬತ್ತೀಸ. ೭೩). 'ಗಿಜವಾಯಿ' ಪರಾ.

[ ಗೀಜು$_1$ (<ಗಿಂಜು$_1$) + ಬಾಯಿ$_1$ (<ಬಾಯ್) + – ಅ$_7$ ]

**ಗೀಟು$_1$** 'ಕಿಟ್ಟು$_1$' ನೋ.

**ಗೀಟು$_2$** (ನಾ). ೧. ಗೆರೆ ; ರೇಖೆ ; ಗೀರು : ಗಂಧದ ಕಲ್ಲನ್ನು ತೆಗೆದು ಕೊಂಡು ಮಾತ್ರೆಯ ಮತ್ತೊಂದು ಗೀಟನ್ನು ರಸದ ಬಟ್ಟಲಿಗೆ ತೊಳೆದು ಹಾಕಿ ಅದನ್ನು . . . ಕುಡಿಸಿ (ಜಂಗಾಳ್ಳೆ. ೧೨೫) ; ತಪ್ಪಾಗಿರುವುದನ್ನು ಗೀಟು ಗಳ ಮೂಲಕ ತೋರಿಸಬೇಕಾಗಿತ್ತು (ಕನ್ನಸಂ. ೪೪) : ತೀರ ಹಿಂದೆ ಪಗಡೆಯ ಮಣೆಗೆ ಗೀಟೆಳೆಯುವಂತೆ ಬೀದಿಗಳನ್ನು ನಿರ್ಮಿಸುತ್ತಿದ್ದರು (ಬಾಲಪ್ರ. I, ೨೯೯). ೨. (ಅಲಂ) ಮಿತಿ ; ಮೇರೆ : ಮಡಿವಾಳಯ್ಯನವರು ಎಲ್ಲಿಂದ ಹೊರಟಿದ್ದರೂ ಮತ್ತೂ ಅವರ ಗೀಟಿಗೇ ಬಂದು ನಿಲ್ಲಬೇಕು (ಬೆಳುವಾ. ೩೦) ; ಅವನ ಗೀಟಿಗೆ ಬರದಿದ್ದರೆ ಅವನು ಖಂಡಿತ ಒಪ್ಪುವುದಿಲ್ಲ (ಅದೇ); ಅಪ್ಪ ಹಾಕಿದ ಗೀಟು ದಾಟುವುದಿಲ್ಲ (ಅದೇ).

[ ದೇಙ ತುಳು. ಗೀಟ್; ತೆಲು. ಗೀಟು ]

**ಗೀತ** (ಗು). ೧. ಹಾಡಿದ. (ನಾ). ೨. ಹಾಡುಗಾರಿಕೆ ; ಗಾನ : ಅಲಸಿಕೆ ಯಾ ಗದಂತು ಗೀತದ್ಯೂತಸಾಹಿತ್ಯನಿತ್ಯವಾದ್ಯವಾದಿತ್ರವಿಶಾರದೆಯರಪ್ಪ ವಿಳಾಸಿನೀಜನಂಗಳುಂ (ಚಂದ್ರಪ್ರ. ೫-೧೨೨ ವ) : ಗೀತದ ವಾದ್ಯದ ರೀತಿಯ ಚಾತುರ್ಯಂ ಮೂರ್ತಿವೆತ್ತುದೆನಿಸಿದ ವಿಬುಧವ್ರಾತದೆ . . . ಪರಿವೇಷ್ಟಿತಂ ನೃಪಂ ರಂಜಿಸಿದಂ (ವರ್ಧಪು. ೩-೫೦) ; ಮಣಿದುಂಬಿಗಳ ಗೀತವನು ಸಲೆ ಸೊಗಸಿ . . . ಸುಳಿದುದ್ಯೆ ತಂಗಾಳಿ (ಕುಮಾವ್ಯಾ. ೭-೨೫). ೩. ಹಾಡು; ಪದ : ಬಸವರಾಜನ ಗೀತದೊಳು ಬೇಡಿ ಬೇಡಿದ ಶರಣಂಗೆ ನೀಡದಿರ್ದಡೆ ತಲೆದಂಡ ಕೂಡಲಸಂಗ ಅವಧಾರು ಎಂಬ ಗೀತಮಂ ಪಾಡೆ (ಬಸರ. ೧೨-೧೦) ; ಗೀತದ ಪರಿಚ್ಛೇದದುರವಣೆಗೆ ಸಂಗಂ ನಿಲಲಮ್ಮದೆ ಮಗನ ನಿಷ್ಠೆಗೆ ಮೆಚ್ಚಿ ಅಂತರ್ಧಾನಕ್ಕೆ ಸಂದು (ಬಸರ. ೧೨-೩೦). ೪. ಮಂಗುಸಿ. ೫. ಆಕಾಶ. ೬. ಒಬ್ಬ ದೈತ್ಯ. ೭. ಖಂತಂ. ೮. ಧ್ವನಿಭೇದ : "ದೈತ್ಯ ಖುತು ಮುಂಗಿಸಿಗಳು ಪ್ರಣುತಾಕಾಶಂ ಧ್ವನಿಯ್ಯೆದೆಣಿಕೆಯ ನುಡಿ ಗೀತ ಶಬ್ದಮೆನಿಕುಂ" (ನಾನಾಕಂ. ೭೮). [ ಸಂ. ]

**ಗೀತಕಾರ** (ನಾ). ಹಾಡುಗಳನ್ನು ಬರೆಯುವವನು, – ರಚಿಸುವವನು : ಭಾವಗೀತೆಯ ಹಾಗೆ ಹಳ್ಳಿಯ ಜೀವನ ದೇವನೆ ಈ ಗೀತಕಾರ (ಇಂಚಾಪ. ೧೦೬-೨೮). [ ಸಂ. ]

**ಗೀತಕ್ರಮ** (ನಾ). ೧. ಹಾಡಿನ ರೀತಿ, – ಬಗೆ. ೨. ಸ್ತೋತ್ರಮಾಡುವಿಕೆ; ಸ್ತುತಿ : (ಕ). [ ಗೀತ + ಕ್ರಮ ]

**ಗೀತಗೋಷ್ಠಿ** (ನಾ). ೧. ಸಂಗೀತಕಚೇರಿ. ೨. ಕೀರ್ತನಪ್ರಸಂಗ: ಪುರಾಂ ನರ ಗೀತಗೋಷ್ಠೀ [ಪಾಠಾಂ. ಗೊಟ್ಟಿ] ರಸತರಂಗಿಣಿಯೊಳು ಬೆಳಗಪ್ಪನ್ನ ವೀಸಾಡಿ (ಬಸರ. ೬-೪೯). [ ಗೀತ + ಗೋಷ್ಠಿ ]

**ಗೀತಜ್ಞ** (ನಾ). ಸಂಗೀತವನ್ನು ಬಲ್ಲವನು ; ಸಂಗೀತವಿದ್ವಾಂಸ : ವೇದ ಶಾಸ್ತ್ರದವರ ಹಿರಿಯರೆನ್ನೆ ಮಾಯಾಭ್ರಾಂತಿ ಕವಿದ ಗೀತಜ್ಞರ ಹಿರಿಯರೆನ್ನೆ (ಬಸವ. ೬೦೩). [ ಸಂ. ]

**ಗೀತನಾಟಕ** (ನಾ).=ಗೀತರೂಪಕ : ಗೀತನಾಟಕ, ಒಪೆರಾ . . . ಎಲ್ಲವೂ ಇಂದು ಕನ್ನಡದಲ್ಲಿ ನೆಲೆಗೊಂಡಿವೆ (ನವ್ಯಕಾ. ೨೪). [ ಗೀತ + ನಾಟಕ ]

**ಗೀತಪ್ರಬಂಧ** (ನಾ). ಒಂದು ಕಾವ್ಯಭೇದ ; ಹಾಡುಗಳನ್ನು ಒಳಗೊಂಡಿ ರುವ ಕಾವ್ಯ : ಗದ್ಯಕಾವ್ಯ ಪದ್ಯಕಾವ್ಯ ಚಂಪೂಕಾವ್ಯ ಗೀತಪ್ರಬಂಧ ಕ್ಷುದ್ರಪ್ರಬಂಧಗಳೆಂಬ ಪಂಚವಿಧ ಕಾವ್ಯಪ್ರಬಂಧಗಳಂ (ವಿವೇಕ. ೨೨೬).

[ ಗೀತ + ಪ್ರಬಂಧ ]

**ಗೀತರೂಪಕ** (ನಾ). ಛಂದೋಬದ್ಧವಾದ ಹಾಡುಗಳಲ್ಲಿ ಸಂಭಾಷಣೆಗಳ ನ್ನೊಳಗೊಂಡಿರುವ ದೃಶ್ಯಕಾವ್ಯ ; ಗೀತನಾಟಕ : ಗೀತರೂಪಕವು ಕನ್ನಡಕ್ಕೆ ಹೊಸದೆಂದರೆ ಹೊಸದು ; ಹಳೆಯದೆಂದರೆ ಹಳೆಯದು (ಛಂದೋವಿ. ೩೧೨) ; ಮುಂಗಿಯಿಂದಿಗೀ ಗೀತರೂಪಕ (ಅಹಲ್ಯೆ. iii).

[ ಗೀತ + ರೂಪಕ ]

**ಗೀತವಾತು** (ನಾ). ಭಗವದ್ಗೀತೆಯೇ ಮೊದಲಾದ ಗೀತೆಗಳ ವಚನ : ವೇದದಂತುಟಲ್ಲ ಶಾಸ್ತ್ರದಂತುಟಲ್ಲ ಗೀತವಾತಿನಂತುಟಲ್ಲ ಕೇಳಿರಯ್ಯ (ಬಸವ. ೨೦೯) ; "ಗೀತೆಗಳ ವಚನ ಅಥವಾ ಹೇಳಿಕೆ" (ಬಸವ. ಕೋಶ).

[ ಗೀತ + ಮಾತು$_1$ ]

**ಗೀತಾನುಗಂತ** (ನಾ). [ ಸಂಗೀತ ] ತಂತೀವಾದ್ಯಗಳಲ್ಲಿರುವ ಪಂಚರೀತಿ ಗಳಲ್ಲಿ ಒಂದು : ಮೂವತ್ತುಮೂರು ತಂತ್ರೀವಾದ್ಯಂಗಳಲ್ಲಿ ಮಕ್ಕಡಿ ಗೀತಾನುಗಂತ ಶ್ರಿತಾನುಗಂತ ಉಭಯಾನುಗಂತ ವೀಣಾನುಗಂತವೆಂಬ ಪಂಚರೀತಿಗಳೊಳಗೆ (ವಿವೇಕ. ೨೩೭). [<ಸಂ. ಗೀತಾನುಗಂತೃ ]

**ಗೀತಾಭೋಗ** (ನಾ). ೧. ಸಂಗೀತದ ಸುಖಾನುಭವ. ೨. ಹಾಡಿನ ಧ್ವನಿಯ ವಿಸ್ತಾರ, – ಹಬ್ಬುಗೆ : ಮಾಗಧಮಂಗಳಗೀತಾಭೋಗದಿ ನುನ್ನಿದ್ರನಾಗಿ (ಪುಷ್ಪಪು. ೮-೨೪). [ ಗೀತ + ಆಭೋಗ ]

**ಗೀತಾರಾವ** (ನಾ). ಹಾಡಿನ ಧ್ವನಿ ; ಗಾಯನಧ್ವನಿ : ಉದ್ಯದುದ್ಯಾನ ಮೆತ್ತುಣ್ಮುವ ಗೀತಾರಾವವೆತ್ತುಜ್ವಳಿಸುವ ಪೊಸವೆಳ್ದಿಂಗಳೆತ್ತ(ಚಂದ್ರಪ್ರ. ೮-೭೮). [ ಗೀತ + ಆರಾವ ]

**ಗೀತಿ** (ನಾ). ೧. ಹಾಡುವಿಕೆ ; ಹಾಡು ; ಗಾನ : ಪಾಸಟಿ ಸಿಂಹಪೀಠವಮಳಿ ನೀರುತಿ ಮಂಗಳಗೀತಿ (ಶಂಪಥಾ. ೭-೨೯). 'ಗೀತಿವಿದ' ಪರಾ. ೨.= ಗೀತಿಕೆ ೨ : "ನಾಕ, ಗೀತ, ಗೀತಿವಿಧ" (ನಾನಾರ. ಕ. ೧೨೮). ೩. [ಸಂಗೀತ] ವಾದ್ಯವನ್ನು ನುಡಿಸುವುದರಲ್ಲಿ ಒಂದು ಗತ್ತು : ಗೀ[ಪಾಠಾಂ. ರೀ]ತಿ ಜತಿ ಜೋಕೆ . . . ಪೆಲ್ಲಣೆ ಕಳೆಯೆಂಬಿವಂ ಮೆಚ್ಚಿದು ಬಾಜಿಸಿದಂ ಮುರ ವೈರಿ ವಾಸವಂ (ಜಗವಿ. ೫-೩). ೪. [ ಸಂಗೀತ ] ರಾಗಗಳಲ್ಲಿ ಒಂದು : ನೀಲೋತ್ಪಲಿನಿ . . . ಗೀತಿ . . . ವಸಂತಬಂಗಾಳವೆಂಬಿಪ್ಪತ್ತೆರಡು ರಾಗಂಗಳುಂ (ವಿವೇಕ. ೨೩೪). [ ಸಂ. ]

**ಗೀತಿಕಾವ್ಯ** (ನಾ). ಒಂದು ಬಗೆಯ ಖಂಡಕಾವ್ಯ ; ಭಾವಗೀತೆ : ಗೀತಿ ಕಾವ್ಯವೆಂಬುದು ಖಂಡಕಾವ್ಯದ ಒಂದು ಬಗೆ . . . ಭಾವಾಭಿವ್ಯಕ್ತಿಯೇ

ಉದ್ದೇಶವಾಗಿ ಉಳ್ಳ ಕವಿತೆ ಭಾವಗೀತೆ ಅಥವಾ 'ಗೀತಿ' ಕಾವ್ಯವೆನ್ನಿಸಿಕೊಂಡಿದೆ (ಬಂಕಿಮ. ೪೫೮). [ ಗೀತಿ + ಕಾವ್ಯ ]

**ಗೀತಿಕೆ** (ನಾ). ೧. ಸಣ್ಣಹಾಡು ; ಕವನ : ಅವಳೇಕೆ ಅವನನ್ನು ಸಂತೋಷಗೊಳಿಸಲು ಗೀತಿಕೆಗಳನ್ನು ಹಾಡಿದಳು ? (ಹಾಹುತ್ತ. ೩೧). ೨. [ ಛಂದ ] ಒಂದು ಬಗೆಯ ಅಚ್ಚಕನ್ನಡದ ಅಂಶಗಣಬದ್ಧವಾದ ವೃತ್ತ ; ಎರಡನೆಯ ಸಾಲಿನಲ್ಲಿ ಆರನೆಯ ಗಣವು ಬ್ರಹ್ಮಗಣವಾಗಿದ್ದು ಉಳಿದ ಗಣಗಳನ್ನು ಎರಡೆರಡು ಸಾಲುಗಳಲ್ಲಿ ಮನಸ್ಸಿಗೆ ಒಪ್ಪುವಂತೆ ಇರಿಸಿರುವ ನಾಲ್ಕು ಸಾಲಿನ ಪದ್ಯ : ಎರಡಱೊಳಾಱಿಂಬ ಸಂಖ್ಯೆಯೊಳ್ ಬರೆ ಪದ್ಮಭವನುಱಿದುವು ಮೆಚ್ಚುವ ತೆಱದಿಂದಿರೆ ಮುಂದಣ ಪದಂ ಮುನ್ನಿನಂತಿರೆ ಕರಂ ಗೀತಿಕೆಯಿಂತಕ್ಕುಂ ಸಖೀ [ಪಾಠಾಂ. ಬಱಿಕವೆರಡುಂ ಮುನ್ನಿನಂತೆ ಕರಮೆಸೆದೊಪ್ಪುವ ಗೀತಗಣಂ] (ಛಂದೋಂಬು. ೫-೨೫೭). ೩. [ಛಂದ] ಮಾತ್ರಾಛಂದಸ್ಸಿನಲ್ಲಿ ಒಂದು ವೃತ್ತ; ಆರ್ಯಾವೃತ್ತದ ಪೂರ್ವಾರ್ಧದಂತೆಯೇ ಉತ್ತರಾರ್ಧವೂ ಇರುವ ವೃತ್ತ : ವಿಪುಳಾರ್ಯೆಯ ಪೂರ್ವಾರ್ಧ ದ್ವಿಪಾದದಂತಾಗಿ ಬರ್ಕು ಗೀತಿಕೆ (ಛಂದೋಂಬು. ೪-೨೩೩). [ ಸಂ. ಗೀತಿಕಾ ]

**ಗೀತಿಗೆ** (ನಾ).=ಗೀತಿಕೆ ೩ : ಚವುಪದಿ ಮತ್ತಂದಲ್ಲಿ (ಲ್ಗೀ)ತಿಗೆ [ಪಾಠಾಂ. ಕೆ] ತಿಪದಿಗಳಂದಂಬೆತ್ತಸೆಯೆ ಪೇಱಿಡ್ದುದು ಚತ್ತಾಣಂ (ಕವಿರಾ. ೧-೩೫). [ <ಸಂ. ಗೀತಿಕಾ ]

**ಗೀತಿವಿದ** (ನಾ). ಸಂಗೀತವನ್ನು ಬಲ್ಲವನು ; ಸಂಗೀತವಿದ್ವಾಂಸ : ಚಾಂದ್ರಿಯೊಳೊಡಗೂಡಿದ . . . ಸುರೇಂದ್ರಾರ್ಚಿತನಿಂದೆ ಗೀತಿ [ಪಾಠಾಂ. ಗೀತ, ನೀತಿ] ವಿದನಕ್ಕುಮವಂ (ಜಾತಕ. ೧೫-೪). [ ಸಂ. ಗೀತಿವಿದ್ ]

**ಗೀತೆ** (ನಾ). ೧. ಹಾಡುವ ಪದ್ಯ ; ಕವನ. ೨. ಮಹಾಭಾರತದಲ್ಲಿ ಅರ್ಜುನನಿಗೆ ಶ್ರೀಕೃಷ್ಣನು ಉಪದೇಶಮಾಡಿದ ಭಾಗ; ಭಗವದ್ಗೀತೆ: ಫಲುಗುಣಗೆ ಕೊಳುಗುಳದಿ ಗೀತೆಯೊರೆವಂದು (ಗಿಳಿವಿಂ. ೨೨-೩೯). ೩. [ಸಂಗೀತ] ಸಂಗೀತಶಾಸ್ತ್ರದ ಶಿಕ್ಷಣದಲ್ಲಿ ಹೇಳಿಕೊಡುವ ಹಾಡುಗಳಲ್ಲಿ ಒಂದು ಪ್ರಕಾರ : ಸ್ವರಾವಳಿ, ಜಂಟಿವರಸೆ, ಅಲಂಕಾರಗಳು ಮತ್ತು ಗೀತೆಗಳು – ಅವು ಸಂಗೀತ ಶಿಕ್ಷಣತ್ರಯದ ಪ್ರಥಮ ಪಾಠಗಳಷ್ಟೆ (ಹೇಮಕೂ. ೧೧೪). ▷ ಹಿಂದೂ ಧರ್ಮಗ್ರಂಥಗಳಲ್ಲಿ ಬರುವ ಸಂವಾದರೂಪವಾದ ತತ್ತ್ವಾತ್ಮಕ ಪದ್ಯರಚನೆಗೂ 'ಗೀತೆ' ಎಂದು ಹೆಸರು. ಉದಾ: ರಾಮಗೀತೆ, ಶಿವಗೀತೆ ಇತ್ಯಾದಿ. [ ಸಂ. ಗೀತಾ ]

**ಗೀರಲಂಕಾರ** (ನಾ). ಗೋಡೆಯ ಮೇಲೆ ಗೀರುಗಳಿಂದ ಬರೆಯುವ ಒಂದು ಬಗೆಯ ಅಲಂಕಾರ : ಬಗೆಬಗೆಯ ಬಣ್ಣಗಳ ಒಳಪದರಗಳು ಕಾಣುವಂತೆ ಗೋಡೆಯ ಗಿಲಾವಿನಲ್ಲಿ ಮಾಡಿದ ಗೀರುಗಳ ಅಲಂಕಾರ : ಗೀರಲಂಕಾರ (Graffito. ಇಂಕನಿ). [ ಗೀರು$_2$ (<ಗೀಱು$_2$) + ಅಲಂಕಾರ ]

**ಗೀರು$_1$** 'ಕೀಱು$_3$' ನೋ.

**ಗೀರು$_2$** 'ಗೀಱು$_2$' ನೋ.

**ಗೀರು$_3$** (ನಾ). ಒಂದು ಬಗೆಯ ಸಸ್ಯ : ಬಾಗುಂಜಿ ಬೀಜ, ಗೀರಗೊಟ್ಟೆ, ಬಾಳಂಗಣಸೆ . . . ಇವಂ ಸರಿಯಾಗಿ ತೂಗಿಕೊಂಡು ಚೂರ್ಣವ ಮಾಡಿ (ವಿವ್ಯವಿ. ೪೦). [ ? ]

**ಗೀರುಗಂಧ** 'ಕೀಱುಗಂಧ' ನೋ.

**ಗೀರುಬಳೆ** 'ಗೀರ್ಬಳೆ' ನೋ.

**ಗೀರುಹಾದಿ** (ನಾ). ಗೆರೆಹಾಕಿ ಗುರುತಿಸಿದ ದಾರಿ ; ನೇರವಾದ ದಾರಿ : ಬೆಳಕು ಕತ್ತಲೆಯ ಎರಡು ಗೋಲಗಳು ಒಂದನೊಂದು ದೂಡೆ, ಮೇರೆಗೆರೆಯಲ್ಲಿ ಆತ್ಮಚರಿತಕ್ಕೆ ಗೀರುಹಾದಿ ಮಾಡೆ ಕ್ಷಣಿಕ ಘಟನೆಗಳ ರಾಜ್ಯದಲ್ಲಿ ; ಜೀವ ಪ್ರಪಂಚದಲ್ಲಿ (ಅರಳು. ೨೨೮-೨೧). [ ಗೀರು$_2$ (<ಗೀಱು$_2$) + ಹಾದಿ (<ಪಾದಿ$_1$) ]

**ಗೀರ್ಣ** (ಗು). ೧. ಕೊಂಡಾಡಿದ ; ಸ್ತುತಿಸಿದ. ೨. ವರ್ಣಿಸಿದ. ೩. ನುಂಗಿದ. [ ಸಂ. ]

**ಗೀರ್ಬಳೆ**, ಗೀರುಬಳೆ (ನಾ). ಗೆರೆಗಳನ್ನು ಕೆತ್ತಿರುವ (ಚಿನ್ನದ) ಬಳೆ ; ಗೆರೆಗೆರೆಯಾಗಿರುವ ಬಳೆ : ಕಡಗ ಪಟ್ಟಿಯು ಡಾಬು ಬುಗುಡಿ ಗೀರ್ಬಳೆ ಸರಿಗೆ (ಸಿದ್ಧಕಾ. ೮-೧೨). ಗೀರುಬಳೆ : "ಅವಾಪಕಃ, ಪಾರಿಹಾರ್ಯಃ– ೨ . . . ಗೀರುಬಳೆ, ವಾಕು, ತೋಡ, ಬಳೆ" (ಸಿದ್ಧಾಂತಿ. ೧೭೪). [ ಗೀರು$_2$ (<ಗೀಱು$_2$) + ಬಳೆ$_3$ ]

**ಗೀರ್ವ** (ನಾ).=ಗೀರ್ವಾಣ : ಗೀರ್ವ [ಪಾಠಾಂ. ನಿರ್ವಿ] ಕಮಲಾದಿತ್ಯನಸುರರ ಗರ್ವವನದಾವಾಗ್ನಿ . . . ಶರ್ವನಂಗಜಮದಭಯಂಕರ ಪಾರ್ವತೀಪತಿ ಶಂಕರಂ ಶ್ರೀಪರ್ವತಾಧಿಪ ಮಲ್ಲಿಕಾರ್ಜುನದೇವ ಶರಣಾಗು (ಶಂಕದಾ. ೧-೨). [<ಸಂ. ಗೀರ್ವಾಣ ? ]

**ಗೀರ್ವರ** (ನಾ). ೧. ಸರಸ್ವತಿಯ ಪತಿ ; ಬ್ರಹ್ಮ : ಗೀರ್ವರ ಸಮರ್ಚಿತೇ ಯಜುರ್ವಿನುತ ಸತ್ಪದೇ . . . ಪಾಲಿಪುದು ಪರ್ವತತನೂಜೇ (ರಾಜಶೇ. ೮-೧೨೭). ೨. ವಾಙ್ಮಯದ ಮೇಲೆ ಪ್ರಭುತ್ವವನ್ನು ಹೊಂದಿರುವವನು ; ಮಾತುಗಳ ಒಡೆಯ ; ಬೃಹಸ್ಪತಿ : ಮುನಿಪಂ ಗೀರ್ವರಗೆಣೆಯಪ್ಪ (ವಿಷ್ಣುಪು. ೪-೫೧). [ ಸಂ. ]

**ಗೀರ್ವಾಣ** (ನಾ). ದೇವತೆ ; ಸುರ ; ಅಮರ : "ಆದಿತ್ಯಃ . . . ಗೀರ್ವಾಣಃ, ಋಭುಃ, ಅಮರಃ . . . ದೈವತಂ – ಈ ೨೧ ದೇವರ್ಕಳ ಪೆಸರ್" (ಹಲಾಯು. ೨-೪) ; ಪ್ರವಿಲಸದ್ಗೀರ್ವಾಣ ದಾತವ್ಯಸಾಯಕಸಂಪೂರ್ಣ ಕಳಾಪ್ರವೀಣನಂ (ಪಂಪಭಾ. ೧-೧೩೪) ; ಗೀರ್ವಾಣಸಂಚಯಂ ಗಂಧರ್ವಗಣಂ . . . ಪಾರ್ವತಿಯಾಣ್ಮನ ಸಭಾಂತರಾಳದೊಳೆಸೆಗುಂ (ಉದ್ಭಟ. ೧೨-೧೨೮) ; ಅವನಿಪಾಲನ ಗವಿಯ ಘಾಡಿಕೆ ಜೋಡಿಸಿತು ಗೀರ್ವಾಣರಾಲಿಗಳ (ಕುಮಾಕ. ೧೫-೧೬). [ ಸಂ. ]

**ಗೀರ್ವಾಣತ್ವ** (ನಾ). ದೇವತ್ವ ; ಅಮರತ್ವ : ಬ್ರಾಹ್ಮಣಾದಿ ವರ್ಗಗಳಲ್ಲಿ ಸಂಸ್ಕೃತ ಭಾಷೆಯು ಗೀರ್ವಾಣತ್ವದ ಕಲ್ಪನೆಯಿದ್ದುದರಿಂದ (ಭಾಷಾಶಾ. ೪೩). [ ಸಂ. ]

**ಗೀರ್ವಾಣನಾಥ** (ನಾ). ೧. ದೇವತೆಗಳ ಒಡೆಯ ; ಇಂದ್ರ ; ಸುರಪತಿ : ಸರ್ವ ಗೀರ್ವಾಣನಾಥಂ (ಶಾಂತಿಪು. ೧೨-೪೩ ವ). ೨. [ಜೈನ] ತೀರ್ಥಂಕರ; ಅರ್ಹಂತ : "ಗೀ[ಪಾಠಾಂ. ನಿ] ರ್ವಾಣನಾಥನರುಹಂ" (ಮಂಗರಾ. ೭-೨೩). [ ಗೀರ್ವಾಣ + ನಾಥ ]

**ಗೀರ್ವಾಣಭಾಷೆ** (ನಾ). ದೇವತೆಗಳ ಭಾಷೆ ; ಸಂಸ್ಕೃತ : ಗೀರ್ವಾಣ ಭಾಷೆಯ ಮೇಲೆ ವ್ಯಾಮೋಹವಿಟ್ಟುಕೊಂಡು ಪ್ರಾಂತಭಾಷೆಯ ಬೆಳವಣಿಗೆಗೆ ಕಂಟಕ ಒಡ್ಡಬಾರದು (ದಾನಚಿಂ. ೧೭೮). [ ಗೀರ್ವಾಣ + ಭಾಷೆ ]

**ಗೀರ್ವಾಣವಾಣಿ** (ನಾ).=ಗೀರ್ವಾಣಭಾಷೆ : ಗೀರ್ವಾಣವಾಣಿ, ಪವಿತ್ರ–ವೇದಗಳ–ಭಾಷೆ, ಎಂಬ ಕಾರಣದಿಂದ ಅದು ಯಾಜಕರಿಗೆ ಪೂಜ್ಯವೆನಿಸಿತ್ತು (ಕರ್ನಾಟ. ೧೭೫). [ ಗೀರ್ವಾಣ + ವಾಣಿ ]

**ಗೀರ್ವಾಣಿ** (ನಾ). ೧. ದೇವತಾಸ್ತ್ರೀ. ೨. ಸರಸ್ವತಿ : ನಿಗಮನುತೆ ಗೀರ್ವಾಣಿ ರಕ್ಷಿಸು (ನಳಚ. ೩-೬೫) ; ವಾಣಿ ಜಗತ್ತ್ರಿತಾಮಹನ ರಾಣಿ . . . ಗೀರ್ವಾಣಿ (ನಾನಾರ. ೨). [ ಸಂ. ಗೀರ್ವಾಣೀ ]

**ಗೀಷ್ಪತಿ** (ನಾ). ನುಡಿಯ ಒಡೆಯ ; ಬೃಹಸ್ಪತಿ : ಸತಿಯರ ಧರ್ಮಕ್ಕೆ ಸರಿಯಿಲ್ಲೆಂದು ಗೀಷ್ಪತಿಯಗಸ್ತ್ಯನೊಳಾಡಿದನು (ಹರಿಬ. ೨-೪೫). [ ಸಂ. (ಗಿರ್ + ಪತಿ) ]

**ಗೀಳ್$_1$, ಗೀಳು$_1$** (ಕ್ರಿ). ೧. ಹರಿ ; ತುಂಡುಮಾಡು; ಸೀಳು. 'ಗೀಳಿಡು$_1$' ಪರಾ. ಗೀಳು$_1$: ೧. ಸುದತಿ ಕಾಣುತ ತನ್ನ ಮೇಲಣ ಹೊದಕೆಯಂಚನು ಗೀಳುತದರೊಳು ಹುದುಗಿಸುತ ತೊಡವುಗಳನು (ರಾಮಾಸಂ. ೩-೪-೨೬);

ಕರೀಂ ಹೋಗಿ ಅವನ ಅಂಗಿಯನ್ನು ಗೀಳಿದ (ಭೀಮಕಾ. ೮೬). ೨. ಗೀರು; ಕೆರೆ; ಗೀಚು: ಕೀಲಿಸಿರೆ ನೇತ್ರಗಳು ಲಜ್ಜೆಯೊಳಾಳಿ ಪದದುಂಗುಟದಿ ನೆಲವನು ಗೀಳಿದಳು (ಜನಧಾ. ೧೯-೫೩). 'ಕೀಟ್$_1$' ಪರಾ.

[ದೇ॥ ತಮಿ. ಕೀಟ್]

**ಗೀಳ್$_2$** 'ಗೀಟ್' ನೋ.

**ಗೀಳಿಡು$_1$** (ಕ್ರಿ). ಹರಿದುಹಾಕು; ತುಂಡುಮಾಡು; ಛೇದಿಸು: ದುಃಖದೊಳ್ ಗೀಳಿಟ್ಟ ಬಟ್ಟೆಯೊಳ್ ಬರ್ಪವನ ಸಂತೈಸು ಮೆಲ್ಲನುಡಿಗಳಿನ್ (ಪಾರಸಿ. ೩೧-೬೨೧). [ಗೀಳ್$_1$ + ಇಡು$_1$]

**ಗೀಳಿಡು$_2$** 'ಗೀಟಿಡು' ನೋ.

**ಗೀಳು$_1$** 'ಗೀಳ್$_1$' ನೋ.

**ಗೀಳು$_2$** 'ಕೀಟ್$_2$' ನೋ.

**ಗೀಳು$_3$** (ನಾ). ಹಂಬಲ; ಉತ್ಕಟವಾದ ಬಯಕೆ; ಚಟ; ಗಿಲಿ: ರಜದಲ್ಲಿ ಊರಿಗೆ ಹೋಗಬೇಕೆನ್ನಿಸುತ್ತದೆ. ಹೆಂಡತಿಯ ಮೇಲಿನ ಗೀಳು ಎಳೆಯುತ್ತದೆ (ದೂರಸ. ೬೫). 'ಗೀಳುಹಿಡಿ' ಪರಾ. [?]

**ಗೀಳುಹಿಡಿ** (ಕ್ರಿ). ಹಂಬಲವುಂಟಾಗು; ಉತ್ಕಟವಾದ ಬಯಕೆ ಮೂಡು: ಸಂಗೀತ ಕಲಿತು ಮಹಾರಾಜರಲ್ಲಿ ಖಿಲ್ಲತ್ತು ಪಡೆಯಬೇಕೆಂದು ಸುಬ್ಬಣ್ಣನಿಗೆ ಅಂದಿನಿಂದ ಒಂದು ಗೀಳುಹಿಡಿಯಿತು (ಸುಬ್ಬಣ್ಣ. ೫).

[ಗೀಳು$_3$ + ಹಿಡಿ$_1$ (<ಪಿಡಿ$_1$)]

**ಗೀಱ್** (ನಾ). ಒಂದು ಅನುಕರಣ ಶಬ್ದ.

**ಗೀಱನಲ್=ಬೇಗನೆ:** ವನಿತಾನೀಕದ ಮುಂಂನ್ನ ಪೊಟ್ಟಳಿಸಿ ಗೇಣಂ ಕಿತ್ತುರ್ಗ ತೂರ್ದ್ದಟ್ಟಿ ಗೀಱನಲೀಡಾಡಿ ಕುರುಳ್ಚಿ ಕಪ್ಪುಳ್ಚಿ ಪಿಂನ್ನಾ ಮುಂನ್ನುಮಂ ನೋಡಿ ಭೊಂಕೆನೆ ಸಿಂಘಧ್ವನಿ ಮಾಡಿಹಂ (ಸೌಇಇ. XI-ii, ೧೭೮-೨೩; 1127).

**ಗೀಱು$_1$** 'ಕೀಱು$_3$' ನೋ.

**ಗೀಱು$_2$**, ಗೀರು$_2$ (ನಾ). ೧. ಗೆರೆ; ರೇಖೆ; ಗೀಟು. ೨. ಗಾಯದ ಗೆರೆ; ಬಾಸುಂಡೆ (?): ತೂಱುವಂಬಿನ ತುಂಡಿಸುವ ಬಿಟ್ಟೇಱುಗಳ ಚೂರಿಸುವ ಸಬಳದ ಗೀಱುಗಳ ಕಾಲಾಳು ಕವಿದುದು ಶಲ್ಯನಳವಿಯಲಿ (ಕುವ್ಯಾಶ. ೨-೨೪). **ಗೀರು$_2$:** ೧. ನಖದೊಳು ರೇಖೆ ಗೀರಿದೆಲ್ಲವು ಕುಲ್ಯ ವಹವೈಸೆ (ಜನಮು. ೫-೧); ನನ್ನ ಬಲಗೈ ಮಣಿಕಟ್ಟಿನಲ್ಲಿ ಮೂರು ಕಂಕಣದ ಗೀರು ಇದೆ ಎಂದು ಸಾಮುದ್ರಿಕಾಲಕ್ಷಣಜ್ಞರು ಹಿಂದಕ್ಕೆ ಹೇಳಿದ್ದರು (ಪೇಟಿಮಾ. ೭).

**ಗೀರುಬಾರು=ಗೀರುಗೀರಾಗಿರುವುದು; ಗೀಚಲಾಗಿರುವುದು:** ತಟ್ಟೆಯೆಲ್ಲಾ ಗೀರುಬಾರಾಗಿದೆ (ರೂಢಿ). [<ಕೀಱು$_3$]

**ಗೀಟ್**, ಗೀಳ್$_2$, **ಘೀಳ್**, **ಘೀಟ್** (ನಾ). ೧. (ಹೆದರಿಕೆ, ನೋವು ಮೊದಲಾದುವುಗಳಿಂದ) ಕಿರಿಚುವ ಧ್ವನಿ; ಅರಚುವಿಕೆ; ಚೀತ್ಕಾರ. 'ಗೀಟಿಡು' ಪರಾ. ೨. ಅಬ್ಬರಿಸುವಿಕೆ; ಗರ್ಜನೆ; ಆರ್ಭಟ: ಕೀಟ್, ಗೀಟ್, ಬೀಟ್, ಸೂಟ್ ಇತಿ ಅವಗಟಿಯಾದಯಃ (ಶಬ್ದಾನು. ೦೪೦ ವ್ಯಾಖ್ಯಾ). **ಗೀಳ್$_2$:** ೨. ವ್ಯಾಳಪತಿ ದಿಗ್ದಂತಿ ಶಕ್ತಿ ಕಮಠಂಗಳತಿ ಗೀಳಿಂದೊಡಂ ಬಸವರಾಜಂಗೆ ಚಿತ್ತ ಪಲ್ಲಟಿಸುವದೆ (ಪ್ರಭುಪು. ೭-೨೬೦). 'ಗೀಳಿಡು$_2$' ಪರಾ. **ಘೀಳ್$_2$:** 'ಘೀಳಿಡು' ಪರಾ. **ಘೀಟ್:** 'ಘೀಟಿಡು' ಪರಾ. [?]

**ಗೀಟಿಡು**, ಗೀಳಿಡು$_2$, **ಘೀಳಿಡು**, **ಘೀಟಿಡು** (ಕ್ರಿ). ೧. ಕಿರಿಚು; ಅರಚು; ಚೀರು: ಗೋಟಿಟ್ಟಂ, ಗೀಟಿಟ್ಟಂ, ಗಟಗಟನೆ (ಶಮದ. ಪರಿ. ೧). **ಗೀಳಿಡು$_2$:** ೧. "ಗೀಳಿಡುವುದೆನೆ ಕೂಗು" (ಕಶರ. ೩೨); ಕುದುರೆಗಳಂ ಗೀಳಿಡೆ ಪೊಯಲಿ ರಣಮಣ್ಡಳದೊಳು ತಳ್ತಿಱಿದು ಮೆಱಿದು × × × ಇರ್ದ್ದಂ (ಎಕ. VIII, ಸೊರಬ. ೪೬೭-೯; 960); ಅದು ಗೀ[ಪಾಠಾಂ. ಘೀ]ಳಿಡುತ ಕೆಡೆದುದು ಪೊಡವಿಯಲ್ಲಿ (ಬಸವು. ೨೨-೦೬). ೨. ಆರ್ಭಟಿಸು; ಅಬ್ಬರಿಸು; ಗಟ್ಟಿಯಾಗಿ ಕೂಗು: ನಾನಾವಾದ್ಯ ಗೀಳಿಡುತಿರ್ದುದಂಬುಧಿಧ್ವಾನಘೋಷಣೆಯೆಂಬ ತೆಱದಿ (ವೊ೬ಹತ. ೨೦-೦೫). **ಘೀಳಿಡು:** ೧. ನೆಲಕಾನೆ ಸುಂಡಿಲಂ ಹರಹಿ ಮೊಳಕಾಲಿಕ್ಕಿ ಬಲವಳಿದು ಘೀಳಿಟ್ಟು (ಹಚಕಾ. ೫-೩೫). ೨. ಲೋಹದ ಗಾಲಿ ಘೀಳಿಡೆ ರಥವನೇಱಿದನನಿಲಸುತಸೂನು (ಕುವ್ಯಾದ್ರೋ. ೦೫-೪೭); ಘೀಳಿಡಲ್ ದಿಕ್ಕುಗಳ್ ಸಿಂಜಿನಿ ನಿನಾದದಿಂ (ಚಬಪು. ೩೨-೫). **ಘೀಟಿಡು:** ೧. "ಘೀಟಿಡುವುದೆನಲ್ ಚೀಱುವುದೆನಿಕುಂ" (ಕವಿಕಂ. ೦೯೫); ಪಿಡಿದು ಬಡಿದೊಡಂ ಕೊಂದೊಡವಾಂ ನುಡಿಯದೆ ಕಿವಿ ಘೀಟಿನೆ ಘೀಟಿಡುತಿರ್ದಂ ಕುಟುಕನೊಲ್ಲೆನೆಂತಿಕ್ಕಿದೊಡಂ (ಕಾದಂಬ. ೭೫೬); ಆರ್ಜಿನಿಂ ಗಜಂ ಘೀಟಿಡಲ್ (ದಶಕು. ೯-೨೬). ೨. ಕೊಂತಂಗಳಿಂ ಕುತ್ತಿ ಶಸ್ತ್ರೋತ್ಕರದಿಂ ಘೀಟಿಟ್ಟು ತೈರಂದಱಿದು (ಧರ್ಮಾಮೃ. ೦೩-೦೫೬); ಆರವಮಿಕ್ಕಿ ಡೊಕ್ಕರಿಸೆ ಬಾಯ್ದೆಱೆದುವರ್ರೆ ಘೀಟಿಡುತ್ತುಮುದ್ಗಾರಿಸಿದತ್ತು ಗರ್ಭಗತ ಷಟ್ಟುರಸೇನೆಯನೆಂಬಿನಂ (ಜಗವಿ. ೦೫-೧೨).

[ಗೀಟ್ + ಇಡು$_1$]

**ಗುಂ** (ನಾ). ೧. ಒಂದು ಅನುಕರಣ ಧ್ವನಿ; ದುಂಬಿ ಮೊದಲಾದುವು ಮಾಡುವ ಶಬ್ದ. 'ಗುಂಗು$_2$' ಪರಾ. ೨. ಮೌನವಾಗಿರುವಿಕೆ; ಮಾತನಾಡದಿರುವಿಕೆ: ಅಮ್ಮ ಅಪ್ಪಗಳನ್ನು ಗುಮ್ಮಾಡಿ ಬಿಟ್ಟಾಳು ಕೇಡ ನೋಡಿ (ಕಾಲಸಂ. ೯೧-೫).

**ಗುಂಗುಂ** (ದ್ವಿರುಕ್ತಿ): ಏನು ಏನು? ಜೇನು ಜೇನು? ಎನೆ ಗುಂಗುಂ ಗಾನಾ (ನಾದಲೀ. ೮೪-೫).

**ಗುಂಕ**, ಗುಂಗ$_1$ (ನಾ). ೧. ಕೆಲಸದವನು; ಊಳಿಗದವನು; ಸೇವಕ: "ಗುಂಕರೆನಲ್ ಬೆಸದವರೊಳ್" (ಕರ್ಣಾನಿ. ೭೭); ಬಡವರೆಲ್ಲಂ ಭೋಗಿಗಳ್ ಗುಂಕರುಂ ಚದುರರ್ಲೆಂಕರುಮಾಯುಗಾಱರ್ (ಅನಂಪು. ೦೦-೧೨). **ಗುಂಗ$_1$:** ೧. ಈ ಕುಂಬಾರರು ಗುಡಿಗಳಲ್ಲಿ ಹಲ ಕೆಲವು ಸೇವೆಯನ್ನು ಮಾಡುವರು.ಆ ಸೇವೆ ಮಾಡುವವರಿಗೆ ಗುಂಗರೆಂದೆನ್ನುವರು(ಕಭಾಗ. ೦೯೪). ೨. ಭೂತ, ದೆವ್ವ ಮೊದಲಾದ ಕ್ಷುದ್ರದೇವತೆಗಳನ್ನು ಉಪಾಸನೆ ಮಾಡುವವನು,–ವಶಪಡಿಸಿಕೊಂಡಿರುವವನು: ಭೂತಗಳನ್ನು ಸೆರೆ ಹಿಡಿಯುವ ಮಾಂತ್ರಿಕರಿಗೆ ಗುಂಗರೆಂದೆನ್ನುವರು (ಕಭಾಗ. ೦೯೦)

[?]

**ಗುಂಕರಿಸು**(ಕ್ರಿ). ಗುಂ ಎಂದು ಶಬ್ದ ಮಾಡು: "ಮಂಶತಿ=ಗುಂಕರಿಸಿದಪುದು" (ಕಾಶಕ್ಕ. ೬೩). [ಗುಂಕರಣ$_0$ + – ಇಸು$_3$]

**ಗುಂಕಿಸು** (ಕ್ರಿ). ಸೆಳೆ; ಎಳೆ; ಜಗ್ಗು (?): ಪೇರಂಬಲವಂ ಗುಂಕಿಸಿ ನೋಡುತೆ ಹಾರೈಸುತೆ ಹರುಷಂ ದಳವೇಱುತೆ (ತಿರುನಾ.ದೇ. ೨೦೯-೧); ತೂಗಿ ತೊನೆದು ಮತ್ತೆ ಗುಂ[ಪಾಠಾಂ. ಝುಂ]ಕಿಸಿ ತೆಗೆದನು ಲಾಗಿಸುವೆತ್ತು ಬೀರ್ವಂತೆ ಮೂಗಡಿಯಾಗಿ ಬಿದ್ದಿತು ಸೇನೆ ಸಾಷ್ಟಾಂಗವಾಗಿ ವಂದಿಸುವಂತೆ ತನಗೆ (ಭರತ. ೪೯-೦೨೪). [ಗುಂಕು$_0$(<ಕೊಂಕು$_1$) + – ಇಸು$_3$]

**ಗುಂಗ** 'ಗುಂಕ' ನೋ.

**ಗುಂಗರ** 'ಗುಂಗುಱು' ನೋ.

**ಗುಂಗಾಡಿ** 'ಗುಂಗಾಡು' ನೋ.

**ಗುಂಗಾಡು**, ಗುಂಗಾಡಿ, ಗುಂಗಾಣಿ (ನಾ). ೧. ಒಂದು ಜಾತಿಯ ಸೊಳ್ಳೆ; ಬಹಳ ಸಣ್ಣ ಆಕಾರದ ರೆಕ್ಕೆಹುಳು: ಶಿಶುವಿರಲು ಗುಂಗಾಡು ತಗುಣೆಯು ಯೆಸಗಿ ಕಡಿಯಲು (ಜ್ಞಾನಸಿಂ. ೩೧-೫೩); ನಿದ್ದೆ ಬರಲಿಲ್ಲ. ಗುಂಗಾಡಿನಂತೆ ಕುವಿಚಾರಗಳು ಅವನನ್ನು ಸುತ್ತುವರಿದು ನೋಯಿಸುತ್ತಿದ್ದವು (ಸಮುಜೀ. ೦೬೫); ಸಾವಿರಾರು ನೊಣಗಳಿರಬೇಕು. ಗುಂಗಾಡುಗಳನ್ನು ಎಣಿಸಲಾಗಿಲ್ಲ (ಜಯಂತ. ೩೪). **ಗುಂಗಾಡಿ:** ೧. ಮಲಗಿ ಶಿಶುವು

ಯಿರುತಿರಲು ತಗಣಿ ಗುಂಗಾಡಿ ಕಚ್ಚೆ (ಜದಾವ. ೦೦೭-೭). **ಗುಂಗಾಣಿ :** ೨. (ಆಲಂ) ತೀರ ಕ್ಷುದ್ರವಾದುದು : ಎಂಥೆಂಥವರಿಗೂ ಶಾಶ್ವತವಿಲ್ಲ. ಈ ಗುಂಗಾಣಿ. ಒಂದು ಪದಾರ್ಥವೆಂತ ಮಾತನಾಡುತೀಯೆ ? (ಮುಸುಗ. ೩).

**ಗುಂಗಾಡದಕೋಣೆ, ಗುಂಗಾಡಿನ ಕೋಣೆ**=(ಆಲಂ) ಸೆರೆಮನೆ; ಜೈಲು; ಕಾರಾಗಾರ : ನೀನು ಅವಳನ್ನು . . . ಇಲ್ಲಿ ಇಟ್ಟರೆ ಕೂಡಲೇ ಗುಂಗಾಡದ ಕೋಣೆ (ಸೆರೆಮನೆ)ಯನ್ನು ಕಾಣಬೇಕಾಗುವುದೆಂಬುದನ್ನು ನೀನು ಬಲ್ಲೆ (ದಲಿಕು. ೪೩); ಎಷ್ಟೋ ಸಾರೆ ಗುಂಗಾಡಿನಕೋಣೆಯನ್ನು ನೋಡಿ ಬಂದಿದ್ದ (ಕೂತಕಾ. ೦೯). ' ಗುಂಗುಱು ' ಪರಾ. [ ? ]

**ಗುಂಗಾಣಿ** ' ಗುಂಗಾಡು ' ನೋ.

**ಗುಂಗಿ,ಗುಂಗೆ** (ನಾ). ಕರಿಯ ಬಣ್ಣದ ದೊಡ್ಡ ದುಂಬಿ : ಮೂಸಬಂದಂತೆ ಗುಂಗಿಗಳು ಹೂಗಳಿಗೆ ರಾಶಿ ಜನ ಬಂತು ಮಂಟಪಕೆ (ಶರಜ. ೩೨೭) ; ಮುಂಗಲಿ ಮುಂಗಲಿಯನ್ನು ಬೆನ್ನು ಹತ್ತುವದೂ, ಗುಂಗಿ ಹೊನ್ನರಿಕೆಯನ್ನು ಮುತ್ತಿಡುವದೂ . . . ಇವೆಲ್ಲವೂ–ನಿಸರ್ಗದ ತ್ರಿಕಾಲಧರ್ಮ (ಗಂಗಾಸಾ. ೧೧೦). **ಗುಂಗೆ :** ಪುಷ್ಪದ ಪರಿಮಳವ ಭೃಂಗ ಬಲ್ಲುದಲ್ಲದೆ ಮರ ಕಡಿಯುವ ಗುಂಗೆಯು ಹುಳ ಎತ್ತ ಬಲ್ಲುದಯ್ಯಾ (ಅಖಂಡೇ. ೦೯೮-೩).

[ <ಗುಂಗು$_2$./ಮರಾ. ಘುಂಗ್ ]

**ಗುಂಗಿಮಾವು,** ಗುಂಗೆಮಾವು (ನಾ). (ಉಕ) ಒಂದು ಜಾತಿಯ ಮಾವು. **P** ಬೀಜದ ಒಳಗೆ ಗುಂಗೆಹುಳು ಇರುವ ಮಾವಿನ ಹಣ್ಣು : (+). **ಗುಂಗೆಮಾವು :** ಮಾವಿನ ಜಾತಿಗಳು : ಗೋಳಕಾಯಿ . . . ಕರೀಕಾಯಿ, ಗಿಣೀಮೂತಿ, ಗುಂಗೇಮಾವು, ಅಮಿನಿ (ನಮ್ಮನು. ೨೩೭). [ಗುಂಗಿ+ಮಾವು]

**ಗುಂಗಿಸು** (ಕ್ರಿ). ಪಕ್ಕಕ್ಕೆ ಸರಿಸು ; ಜಾರಿಸು ; ತಳ್ಳು : ದಯಾವತಿಯಲ್ಲಿ ಒಂದು ವಿಶೇಷಗುಣವಿದ್ದಿತು. ಯಾವ ಒಜ್ಜೆಗೂ ಅವಳು ಮಣಿಯುತ್ತಿದ್ದಿಲ್ಲ. ಶೀಘ್ರದಲ್ಲಿಯೇ ಗುಂಗಿಸಿಕೊಂಡು, ಅದನ್ನು ತೆಗೆದೊಗೆದು ಮೇಲಕ್ಕೇಳಲು ಯತ್ನಿಸುತ್ತಿದ್ದಳು (ಜಮಿನ್ದಾ. ೮೭). [ ಗುಂಗು$_0$ + – ಇಸು$_3$ ]

**ಗುಂಗಿಹುಳು,** ಗುಂಗೆಹುಳು (ನಾ). = ಗುಂಗಿ : ಒಂದು ಗುಂಗೀಹುಳು ಒಂದು ಎಲೆಯ ಮೇಲೆ ತುಸು ತುಪ್ಪ, ರೇಶಿಮೆಯದೊಂದು ಸಣ್ಣಎಳೆ . . . ಇಷ್ಟು ಸಾಹಿತ್ಯ ತೆಗೆದು ಕೊಂಡು (ಮುಂಬಯಿ. ೪-೦೭೧). **ಗುಂಗೆಹುಳು :** ಗುಂಗೆಹುಳು ತೊಲೆಗಳಲ್ಲಿ ತೂತು ಮಾಡಿದೆ (ರೂಢಿ).

[ ಗುಂಗಿ + ಹುಳು$_2$ (<ಪುೞು$_1$) ]

**ಗುಂಗು$_1$** (ನಾ). ೧. ಮಾದಕ ಪದಾರ್ಥಗಳ ಸೇವನೆಯಿಂದ ಉಂಟಾಗುವ ಜೊಂಪು ; ಅಮಲು ; ಮತ್ತು : ಭಂಗಿಯನು ಸೇದುವನ ಭಂಗವನು ಏನೆಂಬೆ ಭಂಗಿಯ ಗುಂಗು ತಲೆಗೇಱಲಾಡುತಿಹ ಮುಂಗನಂತಿಹನು (ಸರ್ವಜ್ಞ. ೧೩೦೫) ; ಕಾಮಬಕ್ಷ ಶಹಾಜಾದರು ಹೆಗಲೆಲ್ಲ ಸೆರೆಯ ಗುಂಗಿನಲ್ಲಿರುತ್ತಾರೆ (ಹಂಸಾ. ೧೩೦). ೨. ಪರವಶತೆ; ತನ್ಮಯತೆ : ಇನ್ನೂ ಆ ರಾಗದ ಗುಂಗಿನಲ್ಲಿಯೇ ಇಬ್ಬರೂ ಸಮರಸರಾಗಿದ್ದರೇನೋ ! (ಕಲಾಜ್ಯೋ. ೧೦೦) ; ಚಂದ್ರುವಿನಿಂದ ಕಾಗದ ಬರುತ್ತಿದ್ದ ದಿನ . . . ಅವಳು ಹೊಸದೊಂದು ಗುಂಗಿನಲ್ಲಿರುವಳು (ಕುಸುಸಂ. ೦೯೭). ೩. ಹವ್ಯಾಸ; ಗೀಳು; ಚಟ : ಸಂಪಾದಕತ್ವದ ಗುಂಗು ನಿನಗೆ ಏನು ಮಾಡಿದರೂ ಕಡಿಮೆ ಆಗಲಿಲ್ಲ (ಇಪ್ಪಳ. ೨೯೪) ; ಅವನಿಗೆ ಸಂಗೀತದ ಗುಂಗು ಬಹಳಿತ್ತು (ಫಲಸಂ. ೩೩). [ ←ಮರಾ. ಗುಂಗ್ ]

**ಗುಂಗು$_2$** (ನಾ). ದುಂಬಿಯ ಧ್ವನಿ ; ಗುಂಜಾರವ : ಕೋಕಿಲಕೆ ಕುಕಿಲು ನವಿಲಿಗೆ ಕೇಕೆ, ಭೃಂಗಕ್ಕೆ ಗುಂಗು ಗುಂಗುಂಗಾನ (ಮುಕ್ತಕಂ. ೫೫-೩).

[ <ಗುಂ ? ]

**ಗುಂಗು$_3$,** ಗೂಗು (ನಾ). ಬತ್ತ, ನವಣೆ ಮುಂತಾದ ಧಾನ್ಯಗಳ ಮೇಲಿನ ಹೊಟ್ಟು,—ಉಬ್ಬಲು,—ಉಮಿ : ಕೊಂಗಗಳಲ್ಲಿ ಗುಂಗು ತುಂಬಿಸಿದ ರಾಗಿಯನ್ನು, ಕೈಗಳ ಮೇಲೆ ಎತ್ತಿಕೊಂಡು ನಾಲ್ಕಾರು ಆಳುಗಳು ಕೂಗಿಕೊಳ್ಳುತ್ತಾರೆ (ಮೂಲಾನ. ೫೯). **ಗೂಗು:** "ಗೂಗು=ಹೊಟ್ಟು ; ತವಡು " (ಜಾನಕೋ. ೫೦). [ ? ]

**ಗುಂಗುಣಿಸು** ' ಗುಣಗುಣಿಸು ' ನೋ.

**ಗುಂಗುದಿ** (ನಾ). ಸಂತಾಪ ; ಬೇಗೆ : ಗುರುವಿನ ಗೊತ್ತನಱಿದು ಜಗದೊಳಗಣ ಗುಂಗುದಿಯನೆಲ್ಲವ ಹಱಿದು (ವಚಸಂ. ೩೦೮-೫೨) ; ಪಿಂಗದೆ ಪಿರಿದು ದುಃಖವನೀವ ಯೋನಿಮುಖಂಗಳೊಳಗೆ ಹುಟ್ಟಿಯಳಿವಾ ಗುಂಗುದಿಯನು ನೀಗಲೆಂದುಸುರಿದೆನು ಮನಂಗೊಳಿಪೀ ಸಂಗತಿಯನು (ಪ್ರಭಂಜ. ೧-೦೭). **P** ಇದು ಸಂಸ್ಕೃತದ ' ತುಷಾಗ್ನಿ 'ಯ ಅನುವಾದವಿರಬಹುದು. [ ಗುಂಗು$_3$ + ಕುದಿ$_3$ ]

**ಗುಂಗುದಿಗೊಳು** (ಕ್ರಿ). ಸಂತಾಪಗೊಳ್ಳು ; ಬೇಗೆಪಡು : ತುಂಗವಿಕ್ರಾಂತ ಕರ್ಣನ ಕಾಪಿನ ಚತುರಂಗ ವಾಹಿನಿಯುರವಣೆಗೆ ಗುಂಗುದಿಗೊಳುತಿರ್ದುದಾ ರಿಪುಸೇನೆಯ ಜಂಗುಳಿಯು (ನೇಮಿಸಂ. ೨೯-೧೦೯).

[ ಗುಂಗುದಿ + ಕೊಳು (<ಕೊಳ್$_1$) ]

**ಗುಂಗುದಿಬಡು** (ಕ್ರಿ).=ಗುಂಗುದಿಗೊಳು : ತೀವ್ರಮಪ್ಪಸಮಶರಶಿಖಿ ಮುಖದಿ ಸಿಲುಕಿ ಗುಂಗುದಿಬಟ್ಟು ನಸುಬಲಂಬಡೆಯಲಾ ಮಗನ ಮೊಗಮಂ ನೋಡಿ (ಸಮ್ಯಕೌ. ೯-೦೫). [ ಗುಂಗುದಿ + ಪಡು$_1$ ]

**ಗುಂಗುಮಿಸು** (ಕ್ರಿ). ಅನುರಣನವಾಗು; ಪ್ರತಿಧ್ವನಿಸು : ನಾದಾನುಸಾರವಾಗಿ ಗಮಕದ ಗುಂಪು ಗುಂಗುಮಿಸುವಂತೆ ಹಾಡನ್ನೆತ್ತುವ (ಪಾರ್ತಿಸು. ೪೨).

[ <ಗುಂ + – ಇಸು$_3$ ]

**ಗುಂಗುರು$_1$** (ಗು). ಸುರುಳಿಯಾದ; ಕೊಂಕಾದ; ವಕ್ರವಾದ : ಹಿಲ್ಡಾನ ಗುಂಗುರು ಕರಿಯ ಕೂದಲನ್ನು ಬಾಚಿ ಜಡೆಕಟ್ಟುವುದೆಂದರೆ ಅವಳಿಗೆ ಅದೆಷ್ಟೋ ಆನಂದ (ತೇಮೋಡ. ೦೯); ಗೌರವರ್ಣದ ಮುಖ, ಹೆಗಲ ಮೇಲೆ ಬೀಳುತ್ತಿದ್ದ ಗುಂಗುರುಗುಂಗುರಾದ ಅಪಾರ ಕೇಶರಾಶಿ (ಯೋಧಪು. ೧೧). [ < ಉಂಗುರ ]

**ಗುಂಗುರು$_2$** ' ಗುಂಗುಱು ' ನೋ.

**ಗುಂಗುರುಕೂದಲು** ' ಗುಂಗುರುಗೂದಲು ' ನೋ.

**ಗುಂಗುರುಗೂದಲು,** ಗುಂಗುರುಕೂದಲು (ನಾ). ಸುರುಳಿಸುರುಳಿಯಾದ ಕೂದಲು : ಆತನ ತಲೆಯ ಮೇಲೆ ಕೆಂಪು ಗುಂಗುರುಗೂದಲು ಗಳಿದ್ದವು (ಮಹಾತ್ಮಾ. ೮೮). **ಗುಂಗುರುಕೂದಲು :** (+).

[ ಗುಂಗುರು$_1$ + ಕೂದಲು (<ಕೂಂದಲ್) ]

**ಗುಂಗುರುತಲೆ** ' ಗುಂಗುರುದಲೆ ' ನೋ.

**ಗುಂಗುರುದಲೆ,** ಗುಂಗುರುತಲೆ(ನಾ). ಸುರುಳಿಸುರುಳಿಯಾದ ಕೂದಲುಗಳಿಂದ ಕೂಡಿರುವ ತಲೆ; ಗುಂಗುರುಕೂದಲುಳ್ಳ ತಲೆ: (+). **ಗುಂಗುರುತಲೆ :** ಕೂದಲುಟೋಪಿ, ಗುಂಗುರುತಲೆ, ಎಲಾ ನೀನೋ ನಾಗ (ಪಡುಕ್ಕೆ. ೧೩೦). [ ಗುಂಗುರು$_1$ + ತಲೆ$_1$ ]

**ಗುಂಗುಹಿಡಿಸು** (ಕ್ರಿ). ಪರವಶವಾಗುವಂತೆ ಮಾಡು : ಅತಿಮಾನುಷವಾದ ಸತ್ತ್ವ ಆಧುನಿಕ ವಾತಾವರಣದಲ್ಲಿ ಪ್ರತ್ಯಕ್ಷವಾಗುತ್ತ ಗುಂಗುಹಿಡಿಸುತ್ತದೆ (ಹೊಸಕ್ಕೆ. ೨೮೯). [ ಗುಂಗು$_1$ + ಹಿಡಿಸು (<ಪಿಡಿಸು) ]

**ಗುಂಗುಱು,** ಗುಂಗರ, ಗುಂಗುರು$_2$, ಗುಗ್ಗುರು$_1$, ಘುಂಘುಱು (ನಾ). ೧. ಸೊಳ್ಳೆಯ ಜಾತಿಗೆ ಸೇರಿದ ಸಣ್ಣಹುಳು ; ಗುಂಗಾಡು : " ಮಸಕೇಹಿ ಯ – ಗುಂಗುಱುಗಳಿಂದಂ " (ಪದ್ಮಾರಾ. ೧೨೨-೪) ; ಬೆಟ್ಟಮಂ ಗುಂಗುಱು ಕಾಡಿತ್ತೆಂಬ ಗಜಮಂ ನರಿ ನುಂಗಿತ್ತೆಂಬ . . . ಮಾತಿನಂತೆ (ಧರ್ಮಾಮೃ. ೧೩-೧೨೨) ; ಮುಸುಱುವ ಗುಂಗುಱುಱುವ ಪಿಪೀಲಿಕೆ ಮುತ್ತುವ ಮಕ್ಷಿಕಂಗಳ್ (ಮಹಾನೇ. ೩-೦೫) ; ಕರಗಮಂ ಮುಸುಱಿ ಗುಂಗುಱುಗಳಿರ್ಪೊಡಂ . . . ಮಱಿಯಧಿಕ (ಜಟ್ಟಿಮ. ೨-೦) ; ಅದ್ರಿ ಗುಂಗುಱಿನೂಱಿಕೆಗೆ ವ್ಯಯಳುಕುವುದೆ (ತೊರರಾ. ೬-೨೭-೩೨).

**೨.** (ಆಲಂ) ಕ್ಷುದ್ರನಾದವನು; ಅಲ್ಪ: ರಂಗ ನಿನ್ನೊಳ್ನಡುವಿನ ಚೆಲ್ವಿಗೆ ತ್ರೈಜಗಂಗಳು ನೆರೆಯವೆಂದೆನಲು ಗುಂಗುಜಾ ನೇಸಱವನು ಪೊಗಳ್ವಡೆ (ಶತಸಾಂ. ೧-೫). **ಗುಂಗರ**: ೧. "ಮಶಕಂ=ಗುಂಗರಂ" (ಕಾಶಕ್ಕೆ. ೬೩).

**ಗುಂಗುರ್ಱು**: ೧. ಕೆಸರಿನ ಕೂಟದಲಿ ಗುಂಗುರುಗಳಿದ್ದಲ್ಲಿಯೆ ಚರಿಸುವಂತೆ (ವಿವೇಥ. ೫-೩೨); ಸೊಳ್ಳೆಗಳೂ ಗುಂಗುರುಗಳೂ ಹಳ್ಳಿಯಲ್ಲೆಲ್ಲಾ ಪ್ರಬಲವಾದವು (ಮಲೆನಾ. ೦೫೭); ನುಸಿ, ಗುಂಗುರು, ಜಿರಲೆ ಮೊದಲಾದ ಇನ್ನೂ ಏನೇನೋ ಇವೆ (ನಂಟರು. ೪೨); ಆನೆಗೆ ಗುಂಗುರು ಕಾಡಿದ ಹಾಗೆ (ಗಾದೆ). **ಗುಗ್ಗುರ್ಱು**: ೧. ಎಲ್ಲವೂ ಪತಂಗಗಳಲ್ಲ; ಹಲವು ಭ್ರಮರಗಳೂ, ಗುಗ್ಗುರುಗಳೂ ಇದ್ದವು (ಅಪೂಪ. ೧೦). **ಘುಂಘುಱು**: ೧. ಶಿವಮಹಿಮೆಯೆಂಬಾ ಸೊಗಸಿನತ್ತಿಯ ಮರದ ಹಣ್ಣೊಳಗೆ ಘುಂಘುಱಾದಿಗಳಂತೆ ಹರಿಯಜಾದ್ಯಖಿಳ ಜೀವರ್ಕಳೆನೆ (ವೀಶೈಪು. ೪-೦೫-೪೪).

**ಗುಂಗುರಿಯ ಮಾವು**=ಗುಂಗಿಮಾವು: ಮಾವು ಗೆರ್ಮಾವು . . . ಜೈತಲೆ ಮಾವು ಗುಂಗುರಿಯ ಮಾವು (ನವಮೋ. ೨೪-೪೯).

[ ದೇಜ ತುಳು. ಗುಗ್ಗುರು ]

**ಗುಂಗೆ** 'ಗುಂಗಿ' ನೋ.

**ಗುಂಗೆಮಾವು** 'ಗುಂಗಿಮಾವು' ನೋ.

**ಗುಂಗೆಹುಳು** 'ಗುಂಗಿಹುಳು' ನೋ.

**ಗುಂಚಕ್ಕಿ**, ಗುಮಚಕ್ಕಿ (ನಾ). ಒಂದು ಜಾತಿಯ ಪಕ್ಷಿ; ಗುಬ್ಬಿ; ಚಟಕ: ಬತ್ತದ ಗದ್ದೆಗಳಲ್ಲಿ ಗುಂಚಕ್ಕಿಗಳು ಹಾರಾಡುತ್ತಿವೆ (ರೂಢಿ). **ಗುಮಚಕ್ಕಿ**: ಬೆಳಗಾಯಿತೆಂದು ಮಲಗೆದ್ದ ಕಾಳಿಂಗಗೆ ದಂಡೆ ಕಟ್ಟಿದ್ದೋ ಗುಮಚಕ್ಕಿ (ಜಗೀತೆ. ೧೨೦). [ ಗುಂಚಿ + ಹಕ್ಕಿ (<ಪಕ್ಕಿ$_1$) ]

**ಗುಂಚಿ** (ನಾ). ಗುಬ್ಬಚ್ಚಿ; ಗುಬ್ಬಿ: ಅಕ್ಕಾತಂಗೀರ ಹುದಗೀನ ಭತ್ತಾಕೆ ಮಾಯಾದಾ ಗುಂಚೀ ಕೌದಾವೋ (ಹುಟ್ಟುಹ. ೦೪೭). [<ಗುಬ್ಬಚ್ಚಿ ]

**ಗುಂಜ$_1$** (ನಾ). ಒಂದು ಅನುಕರಣಶಬ್ದ; ದುಂಬಿಯ ಗುಂಯಿ ಗುಂಯಿ ಧ್ವನಿ. 'ಗುಂಜಗಾನ' ಪರಾ.

**ಗುಂಜ$_2$** 'ಗುಂಜಿ' ನೋ.

**ಗುಂಜ$_3$** (ನಾ). ಭಂಡಾರ; ಆಶ್ರಯ; ಗಣಿ: "ಖನಿಗುಂಜಮಾಕರಂ ಕಣಿಯಕ್ಕು" (ಮಂಗರಾ. ೩೦-೫). [ <ಸಂ. ಗಂಜ ]

**ಗುಂಜಗಾನ** (ನಾ). ಮಧುರವಾದ ಧ್ವನಿ,—ಗಾನ: ಅರಳಿದ ತಾವರೆಯ ಬಳಿ ಗುಂಜಗಾನವನ್ನು ಮಾಡುತ್ತ ತುಂಬಿಯು ಬಂದು (ಭಾರಸಂ. ೦೩೯). [ ಗುಂಜ$_1$ + ಗಾನ ]

**ಗುಂಜತ್ಕುಂಜ** (ನಾ). ಮರ್ಮರಧ್ವನಿ ಬರುತ್ತಿರುವ ಪೊದರು: ಗುಂಜತ್ಕುಂಜದೊಳಂ . . . ಅತಿಮನೋಹರಮಾದ ಯಮುನಾಹ್ರದ ಪರಿಸರ ಪ್ರದೇಶದೊಳಕ್ರೂರಂ ನಿಜವರೂಥಮಂ ನಿಲಿಸಿ (ಜಗವಿ. ೫-೧೦೨ ವ). [ ಸಂ. (ಗುಂಜತ್ + ಕುಂಜ) ]

**ಗುಂಜನ** (ನಾ). ಮಧುರವಾದ ಧ್ವನಿ: ಒಂದು ಕಡೆಯಿಂದ ಸ್ವರ್ಣಭೂಷಣಗಳ ಗುಂಜನ (ಇಪ್ಪಕ. ೧೪೭); ಎಲ್ಲಿ ಕುಳಿತರು ಬಂದು ಕಿವಿಗೆ ಝೇಂಕರಿಸುವುದು ಮನೆ ತುಂಬ ಹರಿದಾಡಿ ಮರಿದುಂಬಿ ಗುಂಜನ (ನಲಮು. ೫-೨). [ ಸಂ. ]

**ಗುಂಜನ್ಮದಾಳಿ** (ನಾ). ಇಂಪಾಗಿ ಧ್ವನಿಗೈಯುತ್ತಿರುವ ಮದವೇರಿದ ದುಂಬಿ: ಗುಂಜನ್ಮದಾಳಿ ಮಾಲಾಮಂಜರಿ ಬೆನ್ನಟ್ಟಿ ಬಂದ ನವಸೌರಭಮಂ (ಕಾದಂಪೂ. ೭೪೨). [ ಸಂ. (ಗುಂಜತ್ + ಮದಾಲಿ) ]

**ಗುಂಜರಿಸು** (ಕ್ರಿ). ಗುಂಯ್ ಗುಂಯ್ ಎಂದು ಧ್ವನಿಮಾಡು: ಆದರೆ ಅವಳ ಕಿವಿಯ ಬಳಿ ಸುಳಿಸುಳಿದು ಗುಂಜರಿಸುವ ಮಂದಾಕ್ರಾಂತಾ ಛಂದಕ್ಕೆ ಮಾತ್ರ ಒಂದು ಮಾತ್ರೆಯ ಕೊರತೆ ಸಹ ಘಟಿಸದು (ಇಪ್ಪಕ. ೪೦೪). [ ಗುಂಜರ$_1$ + – ಇಸು$_3$ ]

**ಗುಂಜವಣ** (ನಾ). (?): ಹಿರಿಯ ಗುಂಜವಣ ಚಕ್ರ[ವ] × × × ಮಾರಾಧರಪ್ಪ ತ್ರಿಳೋಚನ ಪಂಡಿತದೇ × × × ನಂ ಮಾಡಿ (ಸೌಇಇ. XX, ೧೬೭-೨೦: 1179). [ ? ]

**ಗುಂಜಾಟ** (ನಾ). ಒಬ್ಬರನ್ನೊಬ್ಬರು ಎಳೆದಾಡುವುದು; ಜಗಳ; ಸೆಣಸಾಟ: ಸಂಜೆಯಲಿ ಉಣ ಹೊಲ್ಲ ಎಂಜಲನು ತಿನ ಹೊಲ್ಲ ನಂಜು ಒಡಲೊಳಗೆ ಇರ ಹೊಲ್ಲ ಮನೆಯೊಳಗೆ ಗುಂಜಾಟ ಹೊಲ್ಲ (ಸರ್ವಜ್ಞ. ೦೭೪೪). [ ಗುಂಜು$_1$ + ಆಟ ]

**ಗುಂಜಾಡು** (ಕ್ರಿ). ಎಳೆದಾಡು; ಸೆಳೆದುಬಿಡು; ಗುಂಜು: ಜಗಳದಲ್ಲಿ ಪರಸ್ಪರ ತಲೆಯನ್ನು ಗುಂಜಾಡಿದರು (ರೂಢಿ). [ ಗುಂಜು$_1$ + ಆಡು$_1$ ]

**ಗುಂಜಾಪ್ರಮಾಣ** (ಗು). ಒಂದು ಗುಲಗಂಜಿಯಷ್ಟು ಗಾತ್ರದ; ಗುಲಗಂಜಿಯಾಕಾರದ: ಬಿಳುಗಾರ, ಗಂಧಕ . . . ನಿಂಬೇಹಣ್ಣಿನ ರಸದಿಂದ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯಂ ಮಾಡಿ ಶುಂಠಿರಸದಿಂದ ತೆಗೆದುಕೊಳ್ಳಲು ಶೀತಜ್ವರಂ ಗುಣಮಕ್ಕುಂ (ಸಕವೈ. ೬೪). [ ಸಂ. (ಗುಂಜಾ + ಪ್ರಮಾಣ) ]

**ಗುಂಜಾಫಳ** (ನಾ). ಗುಲಗಂಜಿ ಬೀಜ: ನಿಂಬಫಲಂ ಬಜೆ ಗುಂಜಾಫಳಮಿವಂ ಪರಿಕಲ್ಪನ್ನಂ ಮಾಡಿಟ್ಟು (ಲೋಕೋಪ. ೬-೪೫); ಗುಂಜಾಫಳಮೆನೆ ತಳೆದಿಭಮುಕ್ತಾವಳಿಯಂ ಮರುಳಮಮ ಶಬರಿಯೆನಿಸಿತ್ತದೞ್ಕೊಳ್ (ರಾಜಶೇ. ೬-೦೯೯). [ ಸಂ. ಗುಂಜಾಫಲ ]

**ಗುಂಜಾಭರಣ** (ನಾ). ಗುಲಗಂಜಿಗಳಿಂದ ಮಾಡಿದ ಆಭರಣ: ಗುಂಜಾಭರಣಮಂ ತೊಟ್ಟು . . . ಪುಳಿಂದಿಯರು ಪಾಡಿ ಚಳಿಸಿದರು ಬಿದಿರಕ್ಕಿಗಳನು (ಹಚಕಾ. ೫-೩೩). [ ಸಂ. (ಗುಂಜಾ + ಆಭರಣ) ]

**ಗುಂಜಾಯಿಷಿ** (ನಾ). ೧. ಲಾಭ; ಫಾಯಿದೆ: (ಕ). **೨.** ರೈತನ ದಾಖಲೆಯಲ್ಲಿ ನಮೂದಿಸಿರುವುದಕ್ಕಿಂತ ಹೆಚ್ಚಾಗಿರುವ ಜಮೀನು: (ಕ). **೩.** ಹರಾಜುಮಾಡುವಾಗ ಹೆಚ್ಚು ಹಣ ಕೊಡುವುದಾಗಿ ಹೇಳುವುದು; ಛಡಸವಾಲು (ಮೈಗೆಜ. IV, ೭೭೦). **೪.** (ಆಲಂ) ಗೋಗರೆಯಂವಿಕೆ: ಅಲ್ಪ ಸ್ವಲ್ಪ 'ಗುಂಜಾಯಿಷಿ' ಯಲ್ಲೇ ಪ್ರಸನ್ನಯ್ಯನವರಿಂದ ಹಣ ದೊರೆಯುತ್ತಿತ್ತು (ಅವತಂ. ೦೪೧). [ ←ಪಾರ. ಹಿಂ. ಗುಂಜಾಯಿಷ್; ಮರಾ. ಗುಂಜಾಇಶ್ ]

**ಗುಂಜಾರವ** (ನಾ). ೧. ದುಂಬಿಯ ನಾದ,–ಧ್ವನಿ: ಭ್ರಮರಗಳ ಸಮುದಾಯವು ಮಧುವನ್ನು ಸೇವಿಸುವುದಕ್ಕೆ ಗುಂಜಾರವವನ್ನು ಮಾಡಹತ್ತಿವೆ (ಮುಂಜುಕ. ೨). **೨.** ಮೆಲುದನಿ; ಮಧುರ ನಾದ: ಈ ಚತುರ್ದಳ ಮಧ್ಯಬೀಜ ಕರ್ನಾಟಕವು ಧರ್ಮಗುಂಜಾರವದ ಕವಿಯ ಬೀಡು (ಅರಳು. ೩೦೭-೦೭). [ ಸಂ. (ಗುಂಜಾ + ರವ) ]

**ಗುಂಜಾಲಯ** (ನಾ). ಹೆಂಡದಂಗಡಿ; ಪಡಖಾನೆ: ಪಾಪಂಗಳಸತಿಯರು ಗುಂಜಾಲಯದೊಳಗಿಹರು (ತರ್ಕಕೌ. ೧-೯೧). [ ಗುಂಜ$_2$ (<ಗುಂಜಿ) + ಆಲಯ ]

**ಗುಂಜಾಲಾಡು** (ನಾ). ಒಂದು ಬಗೆಯ ಭಕ್ಷ್ಯ; ಗುಲಗಂಜಿ ಆಕಾರದ ಕಾಳುಗಳುಳ್ಳ ಲಾಡು; ಬೂಂದಿಲಾಡು: ಮುತ್ತಿನ ಬುಗುಡಿಯೆ, ಈ ಗುಂಜಾಲಾಡುವನ್ನು ತಿನ್ನು . . . ಎಂದು ಇಡುತ್ತಿದ್ದಳು (ನೀತಿಚಂ. XIV, ೭). [ ←ಮರಾ. ಗುಂಜಲಾಡೂ ]

**ಗುಂಜಿ**, ಗುಂಜ$_2$(ನಾ). ೧. ಗುಲಗಂಜಿ ಗಿಡ ಮತ್ತು ಅದರ ಬೀಜ: "ಕಾಕಚಿಂಚೀ, ಗುಂಜಾ, ಕೃಷ್ಣಲಾ ಈ ೩ ಗುಂಜಿ" (ನಾಚಿರಾ. ೦೧೯); "ಆ ಕೃಷ್ಣಲಾ [ಪಾಠಾಂ. ವಾ] ಗುಂಜಿಯೆನಲು ಗುರುಗುಂಜಿ" (ಮಂಗರಾ. ೩೮-೨೫); ಗುಂಜಿಯ ಕುಂಜಮಂ ಮಿಸುಪಶೋಕೆಯ ಪಲ್ಲವಮಂ . . . ವನದೊಳೀಕ್ಷಿಸಿ (ಉದ್ಭಟ. ೧-೯೫); ನಿಱಿದಳಿರ್ದೊಂಗಲಂ ಕೆಗೆಯೆ ಬಾರುಳಿಯಂ ದನಿಗೆಯ್ದೆ ಶೋಕೆಯೊಳ್ಕಿಱುಮುಂಗುಳ್ಗುಂಜಿಯಂ ತಳೆದು (ಅನಂಪು.

೭-೧೭) : ಧರೆಯುಂ ಗುಂಜಿಯ ಕಪ್ಪಿನಂತಿಹುದು (ಸಂಭಪ. ೭-೨). ೨. ಚಿನ್ನ, ವಜ್ರ ಮೊದಲಾದುವನ್ನು ತೂಗುವ ಸಣ್ಣ ತೂಕದ ಪ್ರಮಾಣ; ಒಂದು ಗುಲಗಂಜಿ ತೂಕ : ನಿಮ್ಮ ಭಕ್ತರ ಮನೆಯಂಗಳ ಪ್ರಯಾಗ ದಿಂದ ಗುಂಜಿಯಧಿಕ ನೋಡಾ (ಗಣಭಾ. ೪೩೨-೧) ; ಅಂಜದೆ ಪೇಳ್ವೆಂ ಭಕ್ತಿಯೊಳೊಂದಂ ಗುಂಜಿಯನರ್ಪಿಪವೋಲಾಂ ಕಂಜಾಕ್ಷನ ಕೃಪೆಯ ಮಹಿಮೆಯಿಂದೀ ಕಥೆಯಂ (ದಿವ್ಯಚ. ೧-೩೧) ; ಶಾನುಭೋಗರ ಮೇಳ ದವರಿಗೆ ಸರಿಸಮಾನವಾಗಿಯೋ ಅದಕ್ಕೂ ಒಂದು ಗುಂಜಿ ತೂಕ ಮಿಗಿಲಾ ಗಿಯೋ ಇನ್ನೊಂದು ಮೇಳವಿತ್ತು (ಬಿಟ್ಟಹೊ. ೩) ; ಮಂಜಿಯೊಡೆದರೆ ಗುಂಜಿಗಿಂತ ಕಡೆಯೇ(ಗಾದೆ). **ಗುಂಜಿ₂**: ೧. "ಲತಿಕಾಸಮೂಹ ಗುರುಗುಂಜಿ ಧನಾಶ್ರಯ ಗುಂಜವಾಚಕಂ" (ನಾನಾರ. ೧೩೪) ೩. ಹೆಂಡದ ಅಂಗಡಿ ; ಪಡಖಾನೆ. 'ಗುಂಜಾಲಯ' ಪರಾ. [ <ಸಂ. ಗುಂಜಾ ]

**ಗುಂಜಿಗೆ** (ನಾ). ಕರಿಯ ಜೀರಿಗೆ : "ಕುಂಚಿಕಾ-ಗುಂಜಿಗೆ, ಕರಿಯ ಜೀರಗೆ" (ಒಷಧಿ. ೩೫). [ ? ]

**ಗುಂಜಿದೊಡವು** (ನಾ). = ಗುಂಜಾಭರಣ : ಮುಡಿಯೊಳ್ಮೊಲ್ಲೆಯ ಸೂಡಿ ಗುಂಜಿದೊಡವಂ ಕೈಗೆಯ್ದು (ರಾಜಶೇ. ೫-೧೧೨).
[ ಗುಂಜಿ + ತೊಡವು₁ ]

**ಗುಂಜಿಬೀಜ** (ನಾ). ಗುಲಗಂಜಿಬೀಜ : "ಕುಂಚಿಕಾ-ಗುಂಜಿಬೀಜ, ವೇಣ" (ಒಷಧಿ. ೩೫). [ ಗುಂಜಿ + ಬೀಜ ]

**ಗುಂಜಿಯಊರ್** (ನಾ). ಒಂದು ಊರಿನ ಹೆಸರು : ಮಯ್ದುನ ಗಣ್ಣಯ್ಯನ ಕನ್ನೇಶ್ವರಕ್ಕೆ ಗುಣ್ಜಿಯಊರ ನೂಱಯ್ವತ್ತಾಱ × × × ಜಾಮುರವಂ ಬಿಟ್ಟುಕೊಟ್ಟ (ಎಕ. XI, ಹೊಳಲ್ಕೆ. ೩೩-೧೨ ; 965).
[ ಗುಂಜಿ? + ಊರ್ ]

**ಗುಂಜಿಸರಿ** (ನಾ). ಗುಲಗಂಜಿಯಿಂದಾದ ಒಂದು ಬಗೆಯ ಅಂಟು : (ಕ).
[ ಗುಂಜಿ + ಸರಿ₃ (<ಸಜ್ಜಿ) ]

**ಗುಂಜಿಸು** (ಕ್ರಿ). ಧ್ವನಿಸು ; ದನಿಮಾಡು : ಅವಳ ಹೃದಯವೀಣೆ ಒಂದು ಅಜ್ಞಾತ ಆಕಾಂಕ್ಷೆಯನ್ನು ಗುಂಜಿಸುತ್ತಿತ್ತು (ಪ್ರೇಮಾಶ್ರ. ೧೭೮).
[ ಗುಂಜನ + -ಇಸು₃ ]

**ಗುಂಜು₁, ಗೊಂಜು** (ಕ್ರಿ). ೧. ತೊಡಕಿಕೊಳ್ಳು ; ಸಿಕ್ಕುಸಿಕ್ಕಾಗು : ಗುಂಜಿದಳಕತತಿ ಗುಜ್ಜುವಡೆದ ಮೊಲೆ ರಂಜಿಸೆ (ಜಯಕಾ. ೮-೬೮). ೨. ಎಳೆ; ಜಗ್ಗು : ಮಹರ್ಷಿಯಂ ಱೋಡಾಡಿ ಕಾಡಿ ಪೆಗಲನೇಱಿರ್ದು ತಲೆಯಂ ಗುಂಜಿ ಗುರ್ದಿ[ಪಾಠಾಂ. ಊಂಜೆಯುರ್ದುತ್ತುಂ] (ಜೀವಸಂ. ೧೪೪-೨೧ ವ) ; ಅಂಜದಿರೆಂದೆನ್ನ ಮುಂಜೆರಗನು ಪಿಡಿದು ಅಂಜಿಸುವ ಖಳರ ಗುಂಜಿ ಕಡೆಗೆ ಹಾಕೋ (ಮೋಕ್ಷದೀ. ೪೪-೨) ; ಅಂಜಿಸುವರಾ ವಚನದಲಿ ಛಲದಿಂ ಜಲವ ನೀನೊಯ್ದು ಸರಿ ಪಿಂ ಗುಂಜು ಬೇಗಲ್ಲದಲೆ ಬೇಡುವುದೆನಲು ಶತಭಟರೂ (ಜರಾಮಾ. ೧೧೩-೨೩) ; ಚಂದ್ರಮತಿ ಪಾರ್ವಗೆ ಮಾರಿಸಿ ಕೊಂಡು ದಾಸಿಯಂತೆಂಜಲನೆತ್ತಿ ಕಾಲ್ದೊಳೆದು ನೀರ ತರಲ್ ಮನೆಯಾಕೆ ಬೈವುತಂ ಗುಂಜಳೆ (ಪಂಚಕ. ೭೭-೬೮). ೩. ಆಕುಂಚನವಾಗು ; ಮುದುಡಿ ಕೊಳ್ಳು ; ಮುರುಟಿಕೊಳ್ಳು : (ಕ). **ಗೊಂಜು** : ೧. ತಮ್ಮ ತಲೆಗಳ ಮೇಲೆ ಮುಂದಕ್ಕೆ ಗೊಂಜಿಕೊಂಡಿದ್ದ ಕೂದಲನ್ನು ಸರಿಪಡಿಸಿಕೊಳ್ಳುತ್ತ (ಪುನರು. ೧೭೮). [ ದೇ॥ ತೆಲು. ಗುಂಜು, ಗಿಂಜು ]

**ಗುಂಜು₂** (ನಾ). ೧. ತೊಡಕು ; ಸಿಕ್ಕುಸಿಕ್ಕಾಗಿರುವುದು ; ಸಿಕ್ಕು : "ಗಂಟು, ಗುಂಜು, ತೊಡಕು, ಮಲಕು" (ಕಂನುಹು. ೮೨) ; ಮದುವೆ ಯೇಳ್ಗೆಯ ಕಂಡು ನಾಣ್ಚಿ ರಾಣಿಯರು ಗರ್ವದ ಗುಂಜ ಬಿಟ್ಟೆಯ್ದುತಿದ್ದು (ಭರತ. ೪೨-೬೨) ; ಗೃಹವಿದು ನನ್ನದು ನಾನೆಂದೆಂಬನ ಗುಂಜನು ಬಿಡಿಪನ ಚಿಂತಿಸಿರಿ (ಚಿದಾವ. ೧೪೭-೨). ೨. ತೆಂಗು, ಅಡಕೆ ಮೊದಲಾದುವು ಗಳಿಂದ ಕೀಸಿ ತೆಗೆದ ಎಳೆಗಳ ರಾಶಿ; ನಾರು: ಶ್ಮಶ್ರುಸಂಕಟವಾದರೋ . . . ಕರಂಗಿ ಕಳ್ಗಿದ ಕದಬೆಯ ಗುಂಜಿನಂತೆ-ರೂಕ್ಷತೆಯ ಕಡುಗಪ್ಪಾಗಿ ಗೋಳಾಡುತ್ತಿರುವುದು (ಮಂತ್ರಶ. ೯೨-೧೩). ೩. ಸಿಪ್ಪೆ ; ಕಸ : ವೇಮಯ್ಯನು ಕಸವನುಡುಗುವಾಗ ಬಿದಿರ ಕೀಸಿದ ಗುಂಜುಗಳ ಕೂಡೆ ಉಡುಗಿ ತಿಪ್ಪೆಗೆ ಬಿಸುಟು ಕಾಯಕವಂ ಮಾಡುತ್ತಿರಲು (ಭೈರಸೂ. ೩೪೪). ೪. ಮುದ್ದೆ ; ಉಂಡೆ : ಆ ಸ್ಫಟಿಕಗಳು (ಬರ್ಫದ) ಒಂದಕ್ಕೊಂದು ಕೂಡಿ ದೊಡ್ಡ ಗುಂಜುಗಳಾಗಿ ಕೆಳಗೆ ಬೀಳುತ್ತವೆ (ಮುಂಬಯಿ. ೭-೧೪೧).

**ಗುಂಜಾಗು**=ತೊಡಕಾಗು ; ಸಿಕ್ಕಾಗು : ನೂಲೆಲ್ಲಾ ಗುಂಜಾಗಿದೆ (ರೂಢಿ). [ <ಗುಂಜು₁ ]

**ಗುಂಜು₃** 'ಗುಜ್ಜು₂' ನೋ.

**ಗುಂಜುಂಗ** (ನಾ). ಒಂದು ಬಗೆಯ ವನಸ್ಪತಿ : "ಜೀವಬುದ್ಧಕಂ-(ವ) ಪರಿವೇಲ, ಗುಂಜುಂಗ, ಮುಷ್ಟಿ" (ಒಷಧಿ. ೬೩). [ ? ]

**ಗುಂಜುಗಂಟು**(ನಾ). ತೊಡಕಾಗಿ, ಬಿಚ್ಚಲು ಕಷ್ಟಕರವಾಗಿರುವ ಗಂಟು; ತೊಡಕು ಬಿದ್ದ ಗಂಟು ; ಕಗ್ಗಂಟು : (ಕ). [ ಗುಂಜು₂ + ಗಂಟು ]

**ಗುಂಜುಬಿಡಿಸು** (ಕ್ರಿ). ಸಿಕ್ಕು ಬಿಡಿಸು ; ತೊಡಕಿಕೊಂಡಿರುವುದನ್ನು ಸರಿ ಪಡಿಸು : ದಾದಾ ಬಂದ ಅಂದರ . . . ಇದರ ಗುಂಜುಬಿಡಿಸೋ ಕೆಲಸಾ ಅಷ್ಟು ಮಾಡ್ತಾನ ಅಂತ (ಜೂಜು. ೧೭). [ ಗುಂಜು₂ + ಬಿಡಿಸು ]

**ಗುಂಜುಬೀಳು** (ಕ್ರಿ). ತೊಡಕಿಕೊಳ್ಳು ; ಸಿಕ್ಕುಸಿಕ್ಕಾಗು : (ಕ).
[ ಗುಂಜು₂ + ಬೀಳು₁ (<ಬೀೞ್₁) ]

**ಗುಂಜೆ** (ನಾ). ೧.=ಗುಂಜಿ ೧: "ಕೃಷ್ಣಲಾ, ಗುಂಜಾ-ಈ ೨ ಗುರುಗುಂಜಿ" (ಹಲಾಯು. ೩೪-೫೦) ; ಸಮನಿಸೆ ಪಕುಳದ ಬೇರಿಂದವರ್ಕೆ ಮೇಣ್ ಗುಂಜೆ ನುಗ್ಗೆಯಜ್ಜುಗೆಯೆಂಬಿಂತಿವಱಿಂದವರ್ಕೆ ಬೇವಿನ ತೊವಲಿಂ ತೆಗಪಿದೊಡೆ ಕೈಪೆಗೆಟ್ಟನಿದಕ್ಕುಂ (ಲೋಕೋಪ. ೮-೨೫) ; ಜಳಜಭವಂ ಮಾನಸುರಾಚಳದ ಸುರಾಚಳದ ಮ್ಮೈಮೆಯಂ ತೂಗೆ ಸುರಾಚಳದಿದರ್ದ ಕೊಱತೆಗಿಕ್ಕಿದ ತೊಳಗುವ ಗುಂಜೆಯೆನೆ ರಂಜಿಸಿದನುದಯಾರ್ಕಂ (ಪುಷ್ಪಪು. ೮-೧೧೯) ; ವಾನರಸಂಚಯಂ ನೆರೆದು ಸ್ವೈರಿಸಲಾಱದೆ ತೀವ್ರ ಶೀತವಂ ಕಾನನದಲ್ಲಿ ರಂಜಿಸುವ ಗುಂಜೆಯ ಪುಂಜಮನಗ್ನಿಯೆಂದು ಸನ್ಮಾನಿಸಿ ಪತ್ತೆ ಸಾರ್ದು (ಬಾಧವು. ೪-೭೩). ೨. = ಗುಂಜಿ ೨ : ಪ್ರತಿಮಾನಮೆಂತೆನೆ ಧಾನ್ಯಂ ಗುಂಜೆ ಮಾಷಕಟ್ಟಲೆ ಮೊದಲಾದುವಕ್ಕುಂ (ಶ್ರಾವಕಾ. ೫೮-೨೦).
[ ಸಂ. ಗುಂಜಾ ]

**ಗುಂಟ₁** 'ಗೂಂಟ' ನೋ.

**ಗುಂಟ₂, ಗಂಟ₁** (ಅ). ೧. ಉದ್ದಕ್ಕೂ ; ಪಕ್ಕದಲ್ಲಿ; ಜೊತೆಯಲ್ಲಿ : ತುಂಗಳ ಮಾಸ್ತರರು ಆಟದ ಬಯಲಿನ ಅಂಚಿನ ಗುಂಟ ಸಾಗಿದ್ದರು (ರಂಗರೋ. ೧೨) ; ಇನ್ನು ಕೆಲವರು ಗುಡ್ಡಗಳ ಓರೆ ಗುಂಟ ಪುಟ್ಟ ಪುಟ್ಟ ಹೊಲಗಳನ್ನು ಸಿದ್ಧಗೊಳಿಸಿ . . . ಧಾನ್ಯಗಳನ್ನು ಬೆಳೆಯುವ ಕಾಯಕ ಕೈಗೊಂಡಿದ್ದರು (ಅಶ್ರಮ. ೨) ; ನಿಲ್ದಾಣದ ಪಶ್ಚಿಮಬದಿಯಲ್ಲಿಯ ದೊಡ್ಡ ಬೀದಿ ಗುಂಟ ಇಬ್ಬರೂ ಜೊತೆಯಾಗಿ ನಡೆದರು (ಕಮನ. ೫). **ಗಂಟ₁** : ೨. ವರೆಗೆ ; ತನಕ : ಪಟ್ಟೇಶೀರೇಯಾ ಎತ್ತಿನ್ಮೇಲೆ ಹೇರಿಕೊಂಡು ಹೋಗಿ ಬನ್ನಿ ಅವ್ರು ಮನೆ ಗಂಟಾ ನೀವು ಶಾಲೂ ಶೀರೇಯಾ ಹೋರಿ ಮೇಲೆ ಹೇರಿಕೊಂಡು ಹೋಗಿ ಬನ್ನಿ ಅವರ ಮನೆ ಗಂಟಾ (ಹುಟ್ಟಿಹ. ೪೭).
[ ? ]

**ಗುಂಟವಲೆ** 'ಗೂಂಟವಲೆ' ನೋ.

**ಗುಂಟಿಕೆ₁** 'ಗುಂಡಿಗೆ₂' ನೋ.

**ಗುಂಟಿಕೆ₂** (ನಾ). (?) : ತನು ಪುಳಕದಿಂದ ಗುಡಿಗಟ್ಟೆ ನಯನಾಂತದೊಳ್ಪನ ಹರ್ಷವಾರಿ ಪೂಸಲ್ಕಾಲ್ಗೆ ವಂದಿಸುತೆ ಮನೆಗೆ ಕರೆದೊಯ್ದು ಮಣಿವೊರೆ ಯುವಮಂ ಗುಂಟಿಕೆಯೊಳಿರಿಸಿ ನೆಱೆ ಕೆಯ್ಯೊಳೆಸೆವ (ಆರಾಜ. ೭-೧೨).
[ ? ]

**ಗುಂಟಿಗೆ$_1$** (ನಾ). ಮದ್ದಳೆ ಮೊದಲಾದ ವಾದ್ಯಗಳ ಚರ್ಮವನ್ನು ಬಿಗಿಗೊಳಿಸುವುದಕ್ಕಾಗಿ ಪಕ್ಕದಲ್ಲಿ ಸೇರಿಸುವ ಬೆಣೆ,–ಗೂಟ: ಶ್ರುತಿಯ ನಾರೈವುತ್ತೆ ಗುಂಟಿಗೆಯುಂ ಬೆಟ್ಟಿ ಬಾರನೋರಣದಿಂ ಬಿಗಿದು ಕಟ್ಟಳಿಗೆ ತಂದು (ವಿರೂಪಾ. ೮೦). [ <ಗೂಂಟ ]

**ಗುಂಟಿಗೆ$_2$** (ನಾ). ಹೆಜ್ಜೆಯ ಮೇಲೆ ಎರಡುಕಡೆಯಲ್ಲೂ ಇರುವ ಗಂಟು; ಗುಲ್ಫ; ಹರಡು: "ಘುಂಟಿಕಾ – ಗುಂಟಿಗೆ" (ಶಮದ. ೨೫೫ ಪ್ರಯೋ); "ಗುಂಟಿಗೆ (ಗುಳಿಗೆ) – ಘುಂಟಿಕಾ=ಗುಲ್ಫ" (ತದ್ಭಕೋ. ೧೧) [ <ಸಂ. ಘುಂಟಿಕಾ ]

**ಗುಂಟಿಸು** (ಕ್ರಿ). ಆಳವಾಗು; ಮಡುಗಟ್ಟು (?): ಮೊದಲಂ ಬಳಸಿರ ಗುಂಟಿಸಿದುದಕದವೋಲಭಿಷವಾಂಬು ಮೇರುನಗಂ ಸ್ಕಂಧದವೊಲಿರೆ ತೀರ್ಥಕರನಗ್ರದೊಳಿಂದ್ರನ ಪುಣ್ಯಕುಜದ ಫಲದವೊಲಿರ್ದಂ (ಚಂದ್ರಪ್ರ. ೧೩-೧೪೦). [ ಗುಂಟು + – ಇಸು$_3$ ]

**ಗುಂಟು** (ನಾ). ಆಳ; ಗಂಭೀರ್ಯ: ವಾಲಿಯ ಬಲುಹು ಸುಗ್ರೀವಾಜ್ಞೆ ಸೂರ್ಯನ ಶೌರ್ಯಸಮುದ್ರನ ಗುಂಟು ಕಾಲನ ದಂಡಣೆ ಭೀಮನಗ್ಗಳಿಕೆ ಭೂಪಾಲನ ಕೀರ್ತಿದಿಗ್ವಿಜದಿ (ಸೌಂದಕಾ. ೨-೫೭). [ <ಗುಂಡಿತ್ತು ]

**ಗುಂಟೆ** (ನಾ). ೧. ವ್ಯವಸಾಯದ ಒಂದು ಉಪಕರಣ,—ಕುಂಟೆ: ಅವನು ಗುಂಟೆಯಿಂದ ನೇರವಾದ ಸಾಲುಗಳನ್ನು ಮಾಡುತ್ತಾ ಹೋದನು (ಕಿಂಕಡ. ೧೬೦). ೨. ಭೂಮಿಯ ಒಂದು ಅಳತೆ; ೧೨೧ ಚದರ ಗಜ; ಒಂದು ಎಕರೆಯ ನಲವತ್ತನೆಯ ಒಂದು ಭಾಗ: ತುಂಗವ್ವನವರ ಕಾಲಕ್ಕೆ ಈ ಎಕರೆ ಗುಂಟೆ ಗೊತ್ತಿರಲಿಲ್ಲ (ಬೆಳಭಾ. ೧೮); ಹನ್ನೊಂದು ಮಾರು ಉದ್ದ ಹನ್ನೊಂದು ಮಾರು ಅಗಲ ಇಷ್ಟು ಭೂಮಿಗೆ ಒಂದು ಗುಂಟೆ ಎಂಬರು (ಕೃಷಿಪ್ರ. ೯೩); ೪೦ ಗುಂಟೆಗಳು ಒಂದು ಯೇಕರೆ ಯಾಗುವವದೆಂದೂ ತಿಳಿದುಕೊಳ್ಳತಕ್ಕದ್ದು (ಪಾಶ್ಚಾವಿ. ೪೩೮). [ <ಕುಂಟೆ$_1$ ]

**ಗುಂಡ$_1$** (ನಾ). ಒನಪುಗಾರ; ವಿಟ: ಜೂಜುಗಾಱಿನ ಮಾತು ಬೀದಿಯ ಗುಂಡನ ಸೊಬಗು ಓಡಿನೊಳಗಗೆಯ ಹೊಯ್ದಂತೆ ಕಾಣಿರೋ (ಬಸವ. ೬೩೬).

**ಗುಂಡಕಂದರ್ಪ**= ಒಂದು ಬಿರುದು: ಫಣಿಧ್ವಜವಿರಾಜಮಾನ ಕೂಡಲೂರ್ಪುರಾಧಿನಾಥಂ ಜೀಮೂತವಾಹನಂ ಗುಣ್ಡಕನ್ದರ್ಪ್ಪಂ (ಎಕ. VI, ಚಿಕ್ಕಮ. ೯೫-೬; ಸು. 1025 ?). **ಗುಂಡಚಕ್ರ** = ಒಂದು ಬಿರುದು: ಪರನಾರೀಪುತ್ರಕ . . . ಬಾವನ ಬಣ್ಣ ಗುಣ್ಡಚಕ್ರ ಜೆಡ್ಡುಗಂ (ಎಕ. II, ೩೦೭; ಸು. 950). **ಗುಂಡನ ಗಂಡ**=ಒಂದು ಬಿರುದು: ವೈರಿಮಾರ್ತ್ತಣ್ಡಂ ಗುಣ್ಡನಗಣ್ಡಂ ವಿಕ್ರಮಸಿಂಗ ರಣರಂಗ ತುಂಗ (ಎಕ. VIII, ಸೊರಬ. ೪೭೭–೯; 999). [ <ಪ್ರಾ. ಗುಂಡ ]

**ಗುಂಡ$_2$** (ನಾ). ೧. ಗುಂಡಿ; ತೋಡಿದ ತಗ್ಗು: ಬರಗಾಲದ ಝಳಕ್ಕೆ ಆ ಕೆರೆಯೂ ಬತ್ತಿತ್ತು . . . ಅದರ ಮಧ್ಯದಲ್ಲಿ ನೀರಿಗಾಗಿ ಹಳ್ಳಿಗರು 'ಗುಂಡ' ತೋಡಿ ನೀರನ್ನು ಪಡೆಯುತ್ತಿದ್ದರು (ಬರಹಾ. ೦೬೦); ಆದಯ್ಯನು ಆ ಗುಂಡದ ನೀರನ್ನು ಕುಡಿದನು (ಶರಚ. ೬೯೬). ೨. ಕೊಳ: ಆ ಪಶ್ಚಿಮ ದಿಗ್ಭಾಗದಲ್ಲಿ ಚತುರ್ವಿಂಶತಿ ತೀರ್ಥಕರ ಪ್ರತಿಮೆಗಳನೂ ಆ ಬಹಿರ್ವ್ವಳಯದ ಗುಂಡಂಗಳೊಳಗೆ ಜಿನಬಿಂಬಂಗಳನೂ . . . ಸಂಸ್ಥಾಪಿಸಿ (ಎಇ. VIII, ೦೩೨-೨೦; 1586). [ < ಸಂ. ಕುಂಡ./ತಮಿ. ಕುಟ್ಟ, ಕುಟ್ಟೈ, ಕುಣ್ಣು ]

**ಗುಂಡಂಚು** (ನಾ). (ಪಂಚೆಯ) ದಪ್ಪನೆಯ ಅಂಚು; ದುಂಡಂಚು: ಅವರು ಗುಂಡಂಚಿನ ಪಂಚೆ ಹೊದ್ದುಕೊಂಡಿದ್ದಾರೆ (ರೂಢಿ). [ ಗುಂಡು + ಅಂಚು$_2$ ]

**ಗುಂಡಕಲ್ಲು** 'ಗುಂಡುಗಲ್' ನೋ.

**ಗುಂಡಕ್ರಿ** (ನಾ). ೧. = ಗುಂಡಕ್ರಿಯೆ: ಸಪ್ತಸಾಳಂಗ ಕುರಂಗಿ ಗುಂಡಕ್ರಿಯು ಸಪ್ತಪವಕ ಸಪ್ತಧವಳ (ದೇವಾಂಪು. ೪-೨೨೫). ೨. (?): ಮಿಕ್ಕ ದಾಸರು ರಚಿಸಿರುವಂತೆ ಸುಳಾದಿ, ಉಗಾಭೋಗ, ಗುಂಡಕ್ರಿಗಳನ್ನು ಇವರು ರಚಿಸಿಲ್ಲ (ಕರ್ನಾಜ. ೬೭). [ ಸಂ. ಗುಂಡಕ್ರೀ ]

**ಗುಂಡಕ್ರಿಯೆ** (ನಾ). [ಸಂಗೀತ] ಒಂದು ರಾಗದ ಹೆಸರು: ಸಮಸ್ತ ರಾಗಂಗಳೊಳಗೆ ರಾಮಕ್ರಿಯೆ . . . ಗುಂಡಕ್ರಿಯೆ . . . ಮಧ್ಯಮಾವತಿಯೆಂಬ ಮೂವತ್ತಾಱು ರಾಗಂಗಳೇ ಮುಖ್ಯಮಾಗಿ . . . ಪ್ರಸಿದ್ಧಗೊಂಡಿರ್ಪವು (ವಿವೇಕ. ೨೩೪). [ ಸಂ. ಗುಂಡಕ್ರಿಯಾ ]

**ಗುಂಡಗಪ್ಪರ** 'ಗುಂಡುಗಪ್ಪರ' ನೋ.

**ಗುಂಡಗಳಿಗೆ** (ನಾ). (ಉಕ) ವೀರಶೈವರು ಕೊರಳಲ್ಲಿ ಧರಿಸುವ ಕರಡಿಗೆ; ಲಿಂಗದ ಕಾಯಿ; ಚೌಕ. [ ಗುಂಡು + ಗಳಿಗೆ$_0$ ( <ಕರಡಿಗೆ) ]

**ಗುಂಡಗೆ$_1$** (ಅ). ದುಂಡಗೆ; ವರ್ತುಲಾಕಾರವಾಗಿ: ಅದರ (ಹುಲಿಯ) ತಲೆ ದೊಡ್ಡದಾಗಿ ಗುಂಡಗೆ ಇರುತ್ತದೆ (ಮುಂಬಯಿ. ೪-೩೫): ಕೆಲವು ಗಿಡಗಳನ್ನು ಗುಂಡಗೂ, ಕೆಲವನ್ನು ನವಿಲಿನಂತೆಯೂ . . . ಕತ್ತರಿಸಿ ಅಂದಮಾಡಿದ್ದರು (ಕಲಾಸಾ. ೩೭). [ ಗುಂಡು + – ಅಗೆ$_3$ ]

**ಗುಂಡಗೆ$_2$** 'ಗುಂಡಿಗೆ$_2$' ನೋ.

**ಗುಂಡಬಾವಿ** (ನಾ). ನದಿ ಅಥವಾ ಕೆರೆಯ ಪಾತ್ರದಲ್ಲಿ ನೀರಿಗಾಗಿ ಬೇಸಿಗೆಯಲ್ಲಿ ತೋಡುವ ಗುಂಡಾದ ಕುಳಿ; ಒರತೆ ಬಾವಿ: (ಕಿ). [ ಗುಂಡ$_2$ + ಬಾವಿ ]

**ಗುಂಡಯ್ಯ** (ನಾ). ಒಬ್ಬಾತನ ಹೆಸರು: ಕೊಟ್ಟಾರದ ಮಾರಪುಲಿಯುಂ ಗುಣ್ಡಯ್ಯನುಂ ಇನ್ತಿವರ್ನ್ನಡದರ್ (ಎಕ. XII, ಶಿರಾ. ೨೮-೫೨; 943); ಶ್ರೀಮತ್ಪಂಚಾಲದೇವನ ಪೆರ್ಗ್ಗಡೆ ಗುಣ್ಡಯ್ಯಂ (ಎಕ. XI, ಹಿರಿಯೂ. ೧-೧೧; 975). [ ಗುಂಡು + ಅಯ್ಯ$_1$ ]

**ಗುಂಡರ** (ನಾ). ಗುಂಡಾದ ಅರ; ಉಕ್ಕಿನಿಂದ ಮಾಡಿದ ಉಜ್ಜುವ ಸಾಧನ: (ಕಿ). [ ಗುಂಡು + ಅರ$_1$ ]

**ಗುಂಡಲ** 'ಗುಂಡಲಿ' ನೋ.

**ಗುಂಡಲಿ**, ಗುಂಡಲ, ಗುಂಡಾಲ್$_2$, ಗುಂಡಿಲ$_1$ (ನಾ). ಒಂದು ಬಗೆಯ ನೃತ್ಯ: ಗುಂಡಲಿಯನಾಡಿದಳೀಶಸಮ್ಮುಖದೊಳ್ (ರೇವಣ. ೩೨-೪೮). **ಗುಂಡಲ**: ಲಕ್ಷಣಯುಕ್ತ ಪದದೊಡನೆ ಪೇರಣಂ ಪೆಕ್ಕಣಂ ಗುಂಡಲಂ ಸದಮಲದ ದಂಡಲಂ ಲಾಸ್ಯವೆಂದೆಂಬವಂ ತೋಱುತಿರ್ದಂ ಮಹೇಶಂ (ಚೀರಮ. ೦೦-೩೯). **ಗುಂಡಾಲ$_2$**: ಗುಂಡಾಲ ಮೊದಲಾದವಂ ತೋಱಿ ನರ್ತಿಸಿದಳಾ ಬಾಲೆ (ಸೌಂದಪು. ೮-೧೧); ದಿಟ ಮಂಡಿ ಗುಂಡಾಲ ಸುಟಿ ಲಾಗ ವೇಗ ಸಂಪುಟಿತವಜ್ಜಡಗಳ್ಕಳಾಸ (ಭೈರಸೂ. ೨೫೪). **ಗುಂಡಿಲ$_1$**: ತಾಂಡವ ನಾಟ್ಯ ನೃತ್ತ ಲಾಸ್ಯ ಗುಂಡಿಲ ಪೆಕ್ಕಣ . . . ಸರ್ವತೋಭದ್ರವೆಂಬ ದಶವಿಧ ಪಾತ್ರಂಗಳಂ ಬೀಱಿ (ವಿವೇಕ. ೨೩೯). 'ಕುಂಡಲೀನೃತ್ಯ' ಪರಾ. [ <ಸಂ. ಕುಂಡಲೀ ]

**ಗುಂಡಲಿಗೆ** 'ಗುಂಡಳಿಗೆ' ನೋ.

**ಗುಂಡಲೂರ್** (ನಾ). ಒಂದು ಊರಿನ ಹೆಸರು: ಪದಿಕ್ಕೊರ್ಳಗಾಟ್ಸಿಸೆಗೆ ಗುಣ್ಡಲೂರಾಳಿಯುಮೊಕ್ಕಲು ಸಲಿಪೊ (ಎಕ. X, ಗೋರೀಬಿ. ೫-೫; ಸು. 900). [ ಗುಂಡಲ$_0$ + ಊರ್ ]

**ಗುಂಡವಟ್ಟಲ್** 'ಗುಂಡುವಟ್ಟಲ್' ನೋ.

**ಗುಂಡವೇಷ** (ನಾ). ವಿಟನ ವೇಷ: ಆ ರೂಪಂ ಪಲ್ಲಟಿಸಿ ಕಿರಕುಂ ತುಱುಬಿಯುಂ ಬೋಳದಲೆಯುಂ ಪಱಿದ ಕಪ್ಪಡಮುಂ ಬಡಮೆಯ್ಯುಂ ಕೋಲುಂ ಕರಂಕೆಯುಂ ಬೆರಸು ಗುಂಡವೇಷಂ ತನಗಪುರೆ (ಬಂಹರಿ ೯-೩೦ ವ). [ ಗುಂಡ$_1$ + ವೇಷ ]

**ಗುಂಡಳಿಗೆ,** ಗುಂಡಲಿಗೆ (ನಾ). ಬಾಯಿ ಅಗಲವಾದ, ದುಂಡಾದ ಪಾತ್ರೆ ; ಗುಂಡಾಲಿ : ಆಡೋ ಗುಂಡಳಿಗೆಗಿಂತ ಬಡಿಸೋ ಬೀಸಳಿಗೆ ಘನ (ಗಾದ). **ಗುಂಡಲಿಗೆ :** (೩). ' ಗುಂಡಾಲ$_1$ ' ಪರಾ.

[ ಗುಂಡು + ಅಳಿಗೆ (< ಅಳಗೆ$_1$) ]

**ಗುಂಡಾ** ' ಗೂಂಡಾ ' ನೋ.

**ಗುಂಡಾಂತರ** (ನಾ). ೧. ಅಸ್ತಿಭಾರ ; ತಳಪಾಯ ; ತಳಹದಿ : (೩). ೨. (ಆಲಂ) ನಾಶ; ಹಾಳು : ಯುದ್ಧಕಾಲದಲ್ಲಿ ಅನೇಕರ ಮನೆಮಠಗಳು ಗುಂಡಾಂತರವಾಗಿ ಹೋಗುತ್ತವೆ (ರೂಢಿ).

**ಗುಂಡಾಂತರಮಾಡು**=(ಆಲಂ) ನಾಶಪಡಿಸು ; ಹಾಳುಮಾಡು : ಎಲ್ಲ ಆಸ್ತಿಯನ್ನು ಗುಡಿಸಿ ಗುಂಡಾಂತರಮಾಡಿಬಿಟ್ಟ (ರೂಢಿ).

[ <ಸಂ. ಗಂಡಾಂತರ ? ]

**ಗುಂಡಾಕ್ರಿ** (ನಾ).=ಗುಂಡಕ್ರಿಯೆ: ಶ್ರೀರಾಗ . . . ಗುಂಡಾಕ್ರೀ ರಕ್ತದೇಶೀ . . . ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹಮ್ಮೀರ. ೨-೯೦). [ < ಸಂ. ಗುಂಡಕ್ರೀ ]

**ಗುಂಡಾಕ್ರಿಯೆ** (ನಾ).=ಗುಂಡಕ್ರಿಯೆ : ಗೌಳಪಂಚಕ ಮುಂ ಬಹುಳಿ ಬಂಗಾಳಮುಂ ಗುಂಡಾಕ್ರಿಯೆಯುಂ ವೇಣ್ ಓಳಿಯಿಂ ಘಳಮಂಜರಿಯುಂ ರಾಮಾಕ್ರಿಯೆಗಳಿಲ್ಲ (ಬಸವು. ೧೯-೧೭). [ < ಸಂ. ಗುಂಡಕ್ರಿಯಾ ]

**ಗುಂಡಾಗಿರಿ** ' ಗೂಂಡಾಗಿರಿ ' ನೋ.

**ಗುಂಡಾಗುಂಡಿ** (ನಾ). [ಸಂಗೀತ] ಒಂದು ರಾಗದ ಹೆಸರು : ಆಯತದ ಹಳು ವಾಯಿದರ ಹಳು ವಾಯು ಗುಂಡಾಗುಂಡಿ ಮಾನಸಜೇಯಮೆನಿಪ ಭ್ರಮರ ಲೀಲೆಯುಂ ಕೂಡಿ ರಂಜಿಸಲು ಧರೆಯೊಳಿವು ಮೊದಲಾಗಿ ಚರಿಸುವ ಹಿರಿಯ ರಾಗಂಗಳು (ಬಸವು. ೧೯-೦೫). [ ? ]

**ಗುಂಡಾಟ** (ನಾ). ೧. ಗೋಲಿಯ ಆಟ. ೨. ಒಂದು ಬಗೆಯ ಪಗಡೆ ಜೂಜು : (೩). [ ಗುಂಡು + ಆಟ ]

**ಗುಂಡಾಡಿಸು** (ಕ್ರಿ). ೧. (ಗಾರೆ ಮೊದಲಾದುದನ್ನು ಅರೆಯಲು)ಗುಂಡು ಕಲ್ಲನ್ನು ತಿರುಗಿಸು ; ರೋಣಗಲ್ಲನ್ನು ಹರಿಸು : (೩). ೨. ಯಾವುದಾದರೂ ಒಂದು ವಸ್ತುವನ್ನು ಗುಂಡಗೆ ತಿರುಗಿಸು : ಸುಜನಕೀರಿತಿಯೊಪ್ಪಿದಂ ಸದ್ವಿಜಯಕೀರ್ತಿ ವಿನೋದಿಸಿದ ನಿಜವೆನುತೆ ಗುಂಡಾಡಿಸಿದನ ಪಕೀರ್ತಿನುಣ್ಣಲೆಯ (ಮದೇಪು. ೨೭-೨೭). ೩. (ಬಾಲವನ್ನು) ಗುಂಡಗೆ ಅಳ್ಳಾಡಿಸು ; ಬಾಲ ಬಡಿ : ಬೆಕ್ಕು ನಾಯಿಗಳು ಪರಾನ್ನಕ್ಕೆ ಆಸೆಮಾಡಿ ಬಾಲವ ಗುಂಡಾಡಿಸುತ್ತ ಧನಪಾಲರ ಕಾಲಲ್ಲಿ ಸುಳಿದಾಡುವಂತೆ (ಕೃಷ್ಣ. ೦೨) ; ಶ್ಯಾನುಭೋಗರು ಇಲ್ಲಿ ಬಾಲ ಗುಂಡಾಡಿಸುವ ನಾಯಿಯಾಗಿದ್ದರು (ರಂಗರೋ. ೦೧೯). [ ಗುಂಡು + ಆಡಿಸು ]

**ಗುಂಡಾರ** ' ಗೂಡಾರ ' ನೋ.

**ಗುಂಡಾಲ$_1$,** ಗುಂಡಾಲಿ, ಗುಂಡಾಲು (ನಾ).=ಗುಂಡಳಿಗೆ : ಮರದ ಕೈ ಬಟ್ಟಲಲ್ಲಿ ರಾಸಿ ಕಡುಬನ್ನೂ ದೊಡ್ಡದೊಂದು ಮಣ್ಣಿನ ಗುಂಡಾಲದಲ್ಲಿ ತುಂಬಿ ತುಳುಕುವಷ್ಟಿದ್ದ ಮಾಂಸದ ಪಲ್ಯವನ್ನೂ ತಂದಳು (ಮಲಮ. ೨೦).

**ಗುಂಡಾಲಿ:** ಈ ಗುಂಡಾಲಿ ತುಂಬ ಸಾರು ಹಾಕು (ರೂಢಿ). **ಗುಂಡಾಲು :** ಶಂಕರ . . . ಗಾಡಿಯಲ್ಲಿದ್ದ ನಾಲ್ಕಾರು ಗುಂಡಾಲುಗಳನ್ನು ಹೊರಲಾರದೆ ಹೊತ್ತು ತಂದು ಅವುಗಳನ್ನು ಎತ್ತುಗಳ ಮುಂದಿಟ್ಟನು (ದಿನಾರಿ. ೯೧).

[ ಗುಂಡು + ? ]

**ಗುಂಡಾಲ$_2$** ' ಗುಂಡಲಿ ' ನೋ.

**ಗುಂಡಾಲ$_3$** (ನಾ). ಒಂದು ಬಗೆಯ ಜಲಸಸ್ಯ (?) : " ಜಲಾಶ್ರಯಂ- ಗುಂಡಾಲ " (ಓಷಧಿ. ೭೦). [ ? ]

**ಗುಂಡಾಲಿ** ' ಗುಂಡಾಲ$_1$ ' ನೋ.

**ಗುಂಡಾಲು** ' ಗುಂಡಾಲ$_1$ ' ನೋ.

**ಗುಂಡಾಸಿನಿ** (ನಾ). ಒಂದು ಬಗೆಯ ಸಸ್ಯ : " ಗುಂಡಾ-ಗುಂಡಾಸಿನಿ " (ಓಷಧಿ. ೪೯). [ ? ]

**ಗುಂಡಾಳಿಸು** (ಕ್ರಿ). ೧. ಸುತ್ತಿಕಟ್ಟು : ಅವನು ಸಾಮಾನುಗಳನ್ನು ಗುಂಡಾಳಿಸಿಕೊಂಡು ಹೋಗಿಬಿಟ್ಟ (ರೂಢಿ). ೨. " ಉದ್ರೇಕಿಸು ; ಕೆಣಕು " (ಜಾನಕೋ. ೪೯).

[ ಗುಂಡಾಳ$_0$ + - ಇಸು$_3$. P ಗುಂಡಾಳ ← ಮರಾ. ಗುಂಡಾಳಣೇ ]

**ಗುಂಡಿ$_1$** (ನಾ). ೧. ಎದೆ ; ಗುಂಡಿಗೆ : ಲಂಡಮಾಯಿಗಳ ಗುಂಡಿ ಒಡೆಯಲುದ್ದಂಡ ಮಾರುತಿ ಪದಕೆ ಬರುವನ (ಪುರಂದ. ೧-೨೦೨ ಅನುಪಲ್ಲವಿ). ೨. (ಆಲಂ) ಧೈರ್ಯ : ಕೆಚ್ಚು : ನೋಡು ಎಂತಹ ಗುಂಡಿ (ಮಲನಾ. ೦೬೩). [ ದೇಣಿ ತಮಿ. ಕುಣ್ಟೆ ; ತೆಲು. ಗುಂಡೆ, ಗುಂಡಿಯ ]

**ಗುಂಡಿ$_2$** (ನಾ). ೧. ಗುಂಡಾಗಿರುವ, ದೊಡ್ಡದಾದ ಮಣ್ಣಿನ ಅಥವಾ ಲೋಹದ ಪಾತ್ರೆ : ಅಪ್ರಾಶ್ಯ ನೀರ ಮಂ ಗುಂಡಿಯೊಳ್ತೀವಿ ತಂದು ಕುಡುವುದುಂ (ಧರ್ಮಾಮೃ. ೫-೧೬೫). ೨. ಬಿಲ ; ಡೊಗರು ; ಗುಣಿ : ಕೊಲತೂರ ದ್ವಿಸನ್ಧಿ ಕೊಲದ ಗುಣ್ಡಿಯ ತೆಂಕ ನೋಡಿ (ಎಕ. III, ನಂಜನ. ೦೨೨-೦೮ ; 266ಕ್ರಿಶ) ; ಹಾಸರಿಯ ಗುಂಡಿಯಲಿ ನೂಕಿಯೆ ರೋಷವನು ಬಿಟ್ಟೈದೆ ಮರಳಿಯೆ ಭಾಷೆಗಳ ಕೈಕೊಂಡುಬಂದರು ಪಾಂಡುಸುತರೆಡೆಗೆ (ಸಂಭವ. ೦೭-೨೦) ; ಆ ನೀರ ತೊಟ್ಟನ ಬಳಿಯ ತೋಡಿ ಗುಂಡಿಯಂ ಮಾಡಿ (ಸೂಪಶಾ. ೫-೨೩) ; ತೋಳ ಗುಂಡಿಗೆ ಬಿದ್ದರೆ ಆಳಿಗೊಂದು ಕಲ್ಲು (ಗಾದ). ೨. (ಉಡುಪಿನ ಎರಡು ಕಡೆಗಳನ್ನು ಸೇರಿಸಿಕೊಳ್ಳಲು ಉಪಯೋಗಿಸುವ) ಒಂದು ಸಾಧನ ; ಬಟನ್ನು ; ಬಿರಡೆ : ಅಂಗಿಯ ಗುಂಡಿ ಬಿದ್ದುಹೋಗಿದೆ (ರೂಢಿ). ೪. ಯಂತ್ರ ಮೊದಲಾದುವುಗಳನ್ನು ನಡೆಸಲು ಒತ್ತುವ ಗುಬುಟು,-ಹಿಡಿಕೆ : ಯಾವಾಗ ಬೇಕೊ ಆಗ ತಮ್ಮ ಒಳಗಿನ ಯಾವುದೊ ಒಂದು ಗುಂಡಿ (Button) ಒತ್ತಿಕೊಂಡು ಆರಂಭಿಸಿಬಿಡುತ್ತಾರೆ (ಗಾಳಿಪ. ೦೦೫.) [ <ಗುಂಡು./ತುಳು. ಗುಂಡಿ ]

**ಗುಂಡಿ$_3$** (ನಾ). ದುಷ್ಟೆ ; ನೀಚಸ್ತ್ರೀ ; ವೇಶ್ಯೆ : ರಂಡೆಯೊಳಂ ಭ್ರಷ್ಟೆಯೊಳಂ ಮುಂಡೆಯೊಳಂ ವ್ಯಾಧಿಯುತೆಯೊಳಂ ಲಲನೆ ಮರುಳ್ಗೊಂಡಳೊಳಂ ಲಿಂಗಿಯೊಳಂ ಗುಂಡ[ಡಿ]ಯೊಳಂ ನೆರೆದೊಡಳಿಗುವಪಾಯುಂ ಶ್ರೀಯುಂ (ಮದಶಿ. ೯-೪). [ ಗುಂಡ$_1$ + - ಇ$_8$ ]

**ಗುಂಡಿಂಗಲ್** (ನಾ). ಒಂದು ಊರಿನ ಹೆಸರು : ಶ್ರೀ ಗುಣ್ಡಿಙ್ಗಲಾ ಸಿಯ ಕೊಲ್ಲ ಅಸಿ ಉನ್ನತನ್ ಎನ್ಬೊನ್ ಕೆಳೀಇನಿತ್ತನ್ (ಎಕ. XVI, ತುಮಕೂ ೯೫-೭ ; ?). [ ? ]

**ಗುಂಡಿಕಾಯಿ** (ನಾ). ಎದೆ ; ಹೃದಯ : (೩). ' ಗುಂಡಿಗೆ$_1$ ' ಪರಾ.

[ ದೇಣಿ ತಮಿ. ಕುಣ್ಟಿಕ್ಕಾಯ್ ; ಮಲ. ಕುಣ್ಡಿಕಾಯಿ ; ತುಳು. ಗುಂಡೆಕಾಯಿ ; ತೆಲು. ಗುಂಡೆಕ್ಕಾಯ ]

**ಗುಂಡಿಕ್ಕು** (ಕ್ರಿ). (ಬಂದೂಕಿನಿಂದ) ಗುಂಡುಹಾರಿಸು : ಗೋಲಿಬಾರು ಮಾಡು : ಆ ಮಹಾತ್ಮರನ್ನೇ ಈ ಲೋಕ ಗುಂಡಿಕ್ಕಿ ಕೊಂದುಹಾಕಿತು (ಭಾರದ. ೦೭೫). [ ಗುಂಡು + ಇಕ್ಕು ]

**ಗುಂಡಿಗೆ$_1$** (ನಾ).೧.ಎದೆ; ಹೃದಯ: "ಏರ್ದ ಕಮಂಡಲು ಗುಂಡಿಗೆಯೆನಿಕ್ಕು" (ಶಬ್ದಮಂ. ೮೫) ; ಮಣಿವಡೆ ಶಿವಭಕ್ತಿ ಮಣಿಯ ಕಟ್ಟಲೇಬೇಕು ಮಣಿಯ ದಿದ್ದರೆ ಪಣಾಪಣಿ ದೇವರ ಮಣಿಮುಕುಟ ತಲೆದೆಚಿದು ಶಬ್ದ ಗುಂಡಿಗೆ ಮಣಿಯಲ್ಲಿರ್ದೇನು ಹೇಳಾ (ದೇದಾವ. ೩೭-೬೮) ; ಗುಂಡಿಗೆಯನೊಡೆದುಚ್ಚಳಿಸಿದುದು ಕೋಪಶಿಖಿ (ತೊರರಾ. ೫-೬-೩); ಎತ್ತಿಕೊಂಡಾ ತಲೆಯನೆರ್ದೆಯ ಗುಂಡಿಗೆಯೊಳಮರ್ದೊತ್ತಿ (ಭಾವಚಿಂ. ೮-೨೬) ; ಖಂಡವಿದೆ ಕೋ ಮಾಂಸವಿದೆ ಕೋ ಗುಂಡಿಗೆಯ ಬಿಸಿರಕ್ತವಿದೆ ಕೋ (ಗೋಹಾಡು. ೯೩). ೨. (ಆಲಂ) ಧೈರ್ಯ : ಆ ಕೆಲಸ ಮಾಡಲು ಅವನಿಗೆಷ್ಟು ಗುಂಡಿಗೆಯೊ (ರೂಢಿ). [ ಗುಂಡಿ$_1$ + - ಗೆ/.ತುಳು. ಗುಂಡಿಗೆ ]

**ಗುಂಡಿಗೆ₂**, ಗುಂಟಿಕೆ₁, ಗುಂಡಗೆ₂ (ನಾ). ನೀರಿನ ಪಾತ್ರೆ ; ಜಲಪಾತ್ರೆ ; ಕಮಂಡಲು : " ಗುಂಡಿಗೆಯೆನಲ್ ಜಲಪಾತ್ರೆಯಕ್ಕುಂ " (ಶಬ್ದಕೈ. ೩೦); " ಜಲಪಾತ್ರೆ ಗುಂಡಿಗೆ ಎಲಂ " (ಶಬ್ದಮಂ. ೩೫); ಕಾಲಂ ಕರ್ಚಲ್ ಗುಂಡಿಗೆಯಂ ಕೊಂಡು ಬನ್ನಿಮೆಂದೊಡೆ ಬ್ರಹ್ಮಯ್ಯನೆಂದಂ ಗುಂಡಿಗೆಯನುಂಡ ಮನೆಯೊಳ್ ಮಱೆದು ಬಂದೆಂ (ವಡ್ಡಾರಾ. ೯೧-೮) ; ಗುಂಡಿಗೆ ದೋಷಮೆಂಬೊಡೆ ಗುಂಡಿಗೆಯಪ್ಪುದು ತೆಂಗಿನಕಾಯ್ (ಧರ್ಮಾಮೃ. ೯-೮೯) ; ಈ ಸೋರೆಯ ಗುಂಡಿಗೆಯೊಳ್ ರಸಮಂ ಮುಟ್ಟದೋಸರಿಸಿ ನೀಡುವುದು (ನೇಮಿಪು. ೪-೮೭ ವ). **ಗುಂಟಿಕೆ₁ :** ಜಪಮಾಲೆ ಗುಂಟಿಕೆ ಸಹಿತಲು ತ್ವರಿತದಿಂ ಕಂಗೆಟ್ಟು ಕೆಲಸಾರುತಿರೆ (ಪ್ರಭುಪು. ೫-೧೪೩). **ಗುಂಡಗೆ₂:** ಗಿಡದ ಕೊಂಬಿನೊಳ್ನೇಲಿರ್ದ ಗುಂಡಗೆಯಂ ಕೊಂಡು ಬಂದು ಆ ಪ್ರಪಂಚಮಂ ವಿಶಾಲಾಚಾರ್ಯರ್ಗೆ ಪೇಳೆ (ಕಗವಿ. ೯೯-೫ ರಾಜಾವಳೀ ಕಥೆ).

[ <ಸಂ. ಕುಂಡಿಕಾ ]

**ಗುಂಡಿಗೆಗುಳ್ಳ** (ನಾ). ಒಬ್ಬಾತನ ಹೆಸರು : ಮಹಾರಾಜರುಂ ಬಾಣರಸರುಂ ಸೋರೆಮಱೆ ಕೋಟೆಯಿಂಯಿಟ್ಟಲ್ಲಿ ನೊಳಂಬಿದಡಿಗ ರಾಚಮಲ್ಲಂ ಮಯಿನ್ದಡಿ ಗುಣ್ಡಿಗೆಗುಳ್ಳ ಎನೆಬರು ಸಮಸ್ತ ಬಲ ಬೆಱಸಿ ಬಿಟ್ಟೊಡೆ (ಎಇ. XXVI, ೨೬-೭ ; ಸು. 885). [ ? ]

**ಗುಂಡಿಗೆಗೊಳ್** (ಕ್ರಿ). ಎದೆಗೆ ಸೇರಿಸು ; ತಬ್ಬಿಕೊಳ್ಳು ; ಆಲಿಂಗಿಸು : ಕೋಮಲೆಯಾ ಗುರುಕುಚಗಳ ಗುಂಡಿಗೆಗೊಂಡು ನೃಪವರನುರದೊಳ ಮರ್ಚಿದನು (ಶ್ರೀಪಾಲ. ೨-೫೮).

[ ಗುಂಡಿಗೆ₁ + ಕೊಳ್₁ ]

**ಗುಂಡಿಗೆನೋವು** (ನಾ). ಎದೆನೋವು; ಹೃದಯಂದ ನೋವು: ಚೌಳುಪ್ಪನ್ನು ನೆನೆಯಿಕ್ಕಿ ಹಸುವಿನ ತುಪ್ಪವನ್ನು ಕಲಸಿ ದಿನ ದುಡ್ಡು ೩ ತೂಕ ಕುಡಿಯಲು ಗುಂಡಿಗೆನೋವು ನಿಲ್ಲುವುದು (ಸಕವೈ. ಪರಿ. ೪೬೧).

[ ಗುಂಡಿಗೆ₁ + ನೋವು ]

**ಗುಂಡಿಗೆವಾಟ** (ನಾ). ಒಬ್ಬಾತನ ಹೆಸರು (?) : ಸ್ವಸ್ತಿಶ್ರೀ ವಲ್ಲವ ಪೃಥುವೀರಾಜ್ಯಂ ಕೆಯೆ ಸಿಯಗೆಲ್ಲ ಕೆಸುಮಾಣ್ಣುನಾಡಾಳೆ ಗುಣ್ಡಿಗೆವಾಟಕ್ಕ ತೊಟ್ಟಲಾಳುತ್ತುಮ್ ಕಾಡುಪಟ್ಟೆ ಬೋಳದುಳ್ಳೆ ಪೆಬ್ಬೀಳ ನಲ್ಲಕ್ಕಳ್ ಎಱೆದುವಿಟ್ಟಾರ್ (ಎಕ. XVI, ತುಮಕೂ. ೯೭-೧ ; ?). [ ? ]

**ಗುಂಡಿಗೆವಿಡಿ** (ಕ್ರಿ). ಕಮಂಡಲುವನ್ನು ಹಿಡಿ : ಆಚಾರವಿಹುದೆಂದು ಲೋಚ ಗುಂಡಿಗೆವಿಡಿದು ಭೂಚರದಿ ಸತ್ತ ನವಿಲಗಱಿ ಪಿಡಿಯುವುದು ನೀಚವಲ್ಲೇನು (ಸರ್ವಜ್ಞ. ೧೧೦೯). [ ಗುಂಡಿಗೆ₂ + ಪಿಡಿ₁ ]

**ಗುಂಡಿಗೆವೊಗು** (ಕ್ರಿ). ಎದೆಯನ್ನು ಸೇರು; ಹೃದಯಂವನ್ನು ಪ್ರವೇಶಿಸು: ಕೊಂದೆನ್ನ ಮಗನನಿಂ ಭಯದಿಂದಂ ರಸೆವೊಕ್ಕುಮಜನ ಗುಂಡಿಗೆವೊಕ್ಕುಂ . . . ಮೇಣವಂ ಬರ್ದುಕುವನೇ (ಪಂಪಭಾ. ೧೧-೧೨೧).

[ ಗುಂಡಿಗೆ₁ + ಪೊಗು ]

**ಗುಂಡಿತ** (ಗು). ೧. ಪುಡಿಮಾಡಿದ; ಅರೆದ. ೨. ಧೂಳಿನಿಂದ ಮುಚ್ಚಿದ: " ರೂಷಿತಂ, ಗುಂಡಿತಂ [ ಪಾಠಾಂ. ಕುಂಠಿತಂ ]–ಈ ೨ ಮುಸುಕಿದುದು " (ಹಲಾಯು. ೧೨೭- ೮೩). [ ಸಂ. ]

**ಗುಂಡಿತು** ' ಗುಂಡಿತ್ತು ' ನೋ.

**ಗುಂಡಿತ್ತು**, ಗುಂಡಿತು, ಗುಣ್ಣಿತು, ಗುಣ್ಣಿತ್ತು (ನಾ). ಆಳವಾದುದು ; ಗಂಭೀರವಾದುದು : ಆದಲೆ ನೀರ್ ಗುಂಡಿತ್ತೆಂದೀದಲೆಯೊಳೆ ನಿಂದು ಸತಿಗೆ ಹರಿಗಂ ತೋಱುತ್ತಾದರದೆ . . . ಕಂಠದಘ್ನಮೆಂಬಳವಿಗಳಂ (ಪಂಪಭಾ. ೫-೭೨); ತಣ್ಣಿತ್ತು; ಬಿಣ್ಣಿತ್ತು; ಗುಂಡಿತ್ತು [ಪಾಠಾಂ. ಗುಣ್ಣಿತ್ತು] (ಶಮದ. ೭೭ ಪ್ರಯೋ ೯). **ಗುಂಡಿತು :** "ಅತಳಸ್ಪರ್ಶಂ, ಅಗಾಧಃ, ಗಂಭೀರಂ, ಗಭೀರಂ, ಅಸ್ಥಾಗಂ–ಈ ೫ ಗುಂಡಿತು" (ಹಲಾಯು. ೧೧೭-೨೭); ಗುಂಡಿತಪ್ಪುದೊಂದು ನಾಡೆ ಕೆಸಱನೊಡೆಯ ಪಱಿವಾವಿಯ ತಡಿಯೊಳಿಱಿದು ಕೊಂದು (ವಡ್ಡಾರಾ. ೧೮೧-೨೩). **ಗುಣ್ಣಿತು :** (ಕ). **ಗುಣ್ಣಿತ್ತು :** ಮೇಲಿನ 'ಶಮದ' ಪ್ರಯೋಗದ ಪಾಠಾಂತರವನ್ನು ನೋಡಿ. [ <ಗುಂಡಿ₂ ]

**ಗುಂಡಿದುಳ್ಕಾಡು** (ಕ್ರಿ). ಗುಂಡಿಯಲ್ಲಿ (ನೀರು ಮೊದಲಾದುದು) ತುಳುಕಾಡು,–ಚೆಲ್ಲು : ಗುಂಡಿದುಳ್ಕಾಡಿ ಸರ್ವರು ಹೊಕ್ಕು ಕೂಡೆ ಹೊನ್ನಂಡೆ ಜೀರ್ಕೊಳವೆಯೊಳ್ಮೊಗೆದು (ಭರಜ. ೪೦-೨೯).

[ ಗುಂಡಿ₂ + ತುಳ್ಕಾಡು ]

**ಗುಂಡಿಬೆಸಣಿಗೆ** ' ಗುಂಡಿಬೆಸಳಿಗೆ ' ನೋ.

**ಗುಂಡಿಬೆಸಳಿಗೆ**, ಗುಂಡಿಬೆಸಣಿಗೆ (ನಾ). ಗುಂಡಾಗಿ ಆಳವಿರುವ ಪಾತ್ರೆ : ಉಂಡೆ ಹಲಸಿನ ಕಾಯ ಮೇಲಣತೋಟೆಯ ಕೆತ್ತಿ ಗುಂಡಿಬೆಸಳಿಗೆಯ ಮಧ್ಯದೊಳು ಹಗಱಂ ಹರಹಿಕೊಂಡದಂ ಮಡಗಿ (ಸೂಪಶಾ. ೫-೪೩). **ಗುಂಡಿಬೆಸಣಿಗೆ :** ಉಂಡೆಗುಂಬಳಕಾಯ ಮೇಲಣ ಹಸುರ ಕೆತ್ತಿಕೊಂಡು ಕರ್ಬೊನ್ನ ಸಲಿಗೆಯೊಳದಂ ಕದುಕಿಱಿದು ಗುಂಡಿಬೆಸಣಿಗೆಯಲ್ಲಿ ನೀರ ಹೊಯಿದದನಿರಿಸಿ ಕುದಿಸಿ (ಸೂಪಶಾ. ೫-೨೩). [ ಗುಂಡಿ₂ + ಬೆಸಳಿಗೆ ]

**ಗುಂಡಿಲ₁** ' ಗುಂಡಲಿ ' ನೋ.

**ಗುಂಡಿಲ₂** (ನಾ). ಒಂದು ನದಿಯ ಹೆಸರು : ಪೊನ್ನಱ ಕೊಟ್ಟು ಮಣ್ಣಱ ಕೊಣ್ಡ ಭೂಮಿ ಗುಂಡಿಲದಿಂ ಪಡುವ ಸೀಮೆಯಲ್ (ಎಕ. IV, ಗುಂಡ್ಲುಪೇ. ೯೩-೩೨ ; 1049). [ ? ]

**ಗುಂಡಿವಟ್ಟಲ್** (ನಾ). ಗುಂಡಾದ ಬಟ್ಟಲು ; ದುಂಡುಬಟ್ಟಲು : " ಅನುಕರಂ ಗರ್ಶ [ ಹರ್ ] ಕಂ ಗುಂಡಿ [ ಪಾಠಾಂ. ಡ ] ವಟ್ಟಲಕ್ಕುಂ " (ಮಂಗರಾ. ೭೩-೨೫). [ ಗುಂಡಿ₂ + ಬಟ್ಟಲ್ ]

**ಗುಂಡು** (ನಾ). ೧. ವರ್ತುಲ ; ಗೋಳಾಕಾರ : ಭೂಮಿ ಗುಂಡಾಗಿದೆ (ರೂಢಿ). ೨. ರುಬ್ಬುವುದಕ್ಕೆ ಉಪಯೋಗಿಸುವ ಕಲ್ಲು ; ರುಬ್ಬುಗುಂಡು : " ಅಸು ಶಿಲಾಪಟ್ಟಮೆನಲಸಿಯಕಲ್ ಗುಂಡಿಂಗೆ ಪೆಸರು ಮುಂಡಾಶ್ಮಮೆನಿಸಿಕ್ಕು " (ಮಂಗರಾ. ೬೧-೧೯). ೩. ದಪ್ಪವಾಗಿರುವ ಕಲ್ಲು ; ದೊಡ್ಡ ಕಲ್ಲು : ಬಡಿಯಿಂ ಗುಂಡಿಂ ಕಲ್ಲಿಂದಿಡುತುಂ ಬೆನ್ನಟ್ಟೆ ಬೆರ್ಚಿ ಭಯವಶದಿಂ ಮೈ ನಡುಗೆ (ಧರ್ಮಾಮೃ. ೭-೮೪) ; ಕಾಲಲಿ ಕಟ್ಟಿದ ಗುಂಡು ಕೊರಳಲಿ ಕಟ್ಟಿದ ಬೆಂಡು ತೇಲಲೀಯದು ಗುಂಡು ಮುಳುಗಲೀಯದು ಬೆಂಡು ಇಂತಪ್ಪ ಸಂಸಾರಶರಧಿಯ ದಾಂಟಿಸಿ ಕಾಲಾಂತಕನೆ ಕಾಯೋ (ಬಸಹೆ. ೧೧೭–೩೫೦) ; ಕಲ್ಲಾದರೇನು ಗುಂಡಾದರೇನು ತಲೆ ಬಡಿಯಲಿಕ್ಕೆ (ಗಾದೆ). ೪. ತುಪಾಕಿಯ ಗೋಲಿ ; ಬಂದೂಕಿಗೆ ಹಾಕುವ ಗೋಲಿ : ನೂಱಾಱು ಪೆಟಲ ಗುಂಡುಗಳ ಜೋಡಿಸಿ ಕಂಚಗಾಱರ ಪಸರಕಿಟ್ಟಂತೆ ಸೀಱಿ ಸಿಡಿಲು ಬೀಳುತಿಪೆ (ಭರಜ. ೩೪-೭೪) ; ಘಟಶತಘ್ನಿಗಳ ಗುಂಡುಗಳುಱಿ ಮೇಲಕೆ ಪುಟವೆದ್ದು ನಡೆದುವೇವೇಳ್ವೆ (ಕಂನವಿ. ೧೨-೧೮); ತುಫಾಕದಿಂ ನೆಗೆವ ಗುಂಡಿನ ಪೋಲ್ (ರಾಜಶೇ. ೫-೭೯). ೫. ಗಾರೆಕೆಲಸ ಮಾಡುವವನು ಸಮಮಟ್ಟ ನೋಡಲು ಉಪಯೋಗಿಸುವ ತೂಗುವ ಕಲ್ಲು ; ತೂಗುಗುಂಡು : (ಕ). ೬. ಬಾಲಕರು ಆಟಕ್ಕೆ ಉಪಯೋಗಿಸುವ ಗೋಲಿ : (ಕ). ೭. ಚಿನ್ನದಿಂದ ಮಾಡಿದ ಮಣಿ ಮತ್ತು ಅದರಿಂದ ಮಾಡಿದ ಆಭರಣ : ಅವಳ ಕತ್ತಿನಲ್ಲಿ ಗುಂಡಿನ ಸರವಿತ್ತು (ರೂಢಿ). ೮. ಪ್ರಾಣಿಗಳ ವೃಷಣ. ೯. ಗುಂಪು ; ನೆರವಿ ; ಸಮೂಹ : " ಗುಂಡು=ನೆರವಿ " (ಶಮದ. ಪರಿ. ೨) ; ಗುಂಡೆಂದು ಸಂದೋ [ಪಾಠಾಂ. ದೇ]ಹದೊಳ್ " (ಕರ್ಣಾನಿ. ೬೬) ; ಗುಂಡೆಲ್ಲಂ ಪೊಗೞೆ ಗುಂಡಮುಚ್ಚೆ . . . ನೆಗೞೆ (ಅಜಿಪು. ೧-೪೭ ವ) ; ನಾಯುಮಂ ಪಂದಿಯುಮಂ ಮಿಂಡರುಮಂ ಪೆಂಡಿರುಮಂ ಗುಂಡೆಲ್ಲಂ ನೆರೆದು ನೋಡೆ ಕಾದಿಸುತಿರ್ಪಂ (ಧರ್ಮಾಮೃ. ೨-೧೭) ; ಏಱಿಸಿಕೊಂಡು ಹಸ್ತಿ ನಿಜಮಸ್ತಕಮಂ ಬರೆ ಕಂಡು ಗುಂಡು ನೀರೇಱೆ ಪುರಪ್ರಧಾನ ಜನಮುಂ ಗುಡಿಗಟ್ಟೆ (ನೇಮಿಪು. ೨-೯೪) ; ಹಿಂಡೊಡೆದು ಕಾಡಿನೊಳಗಂಡಲೆವ ಕುರಿಮರಿಯ ಕಂಡುಬ್ಬಿ ತೋಳಗಳ ಗುಂಡೂಳುವಂತೆ

(ಗೊಲ್ಲಭಾ. ೯-೨೨೮). (ಗು). ೧೧. ಗುಂಡಗಿರುವ ; ದುಂಡಾದ. ಗುಂಡುಕಟ್ಟಿಗೆ', 'ಗುಂಡುಗಪ್ಪರ' ಪರಾ.

**ಗುಂಡುರುಳಿಸು** = (ಆಲಂ) ಸುಳ್ಳುಹೇಳು: ಅವನು ಈಚೆಗೆ ಬಹಳ ಗುಂಡುರುಳಿಸುವುದನ್ನು ಕಲಿತಿದ್ದಾನೆ (ರೂಢಿ).

[ ದೇಶ್ಯ ತಮಿ. ಕುಣ್ಡು ; ತುಳು. ತೆಲು. ಗುಂಡು ; ಕೊಲಾ. ಗುಂಡ್ ; ನಾಯ್ಕಿ. ಘುಂಡ್./ಮರಾ. ಗುಂಡ್ ]

**ಗುಂಡುಕಟ್ಟಿಗೆ** (ನಾ). ದುಂಡಾದ ಮರದ ತುಂಡು,–ಉರುಳಿ : ಕುಲಗಳ ಬಣ್ಣದ ಭೂತವಂತೂ ಸರ್ಕಸ್ಸಿನ ಹೆಣ್ಣು, ಗುಂಡುಕಟ್ಟಿಗೆಯನ್ನು ಕಾಲ್ಕೆಳಗೆ ಉರುಳಿಸಿ ಹೊರಳಿಸುವಂತೆ ಇಡಿಯ ಭೂಮಿಯನ್ನೇ ಉರುಳಾಡಿಸುತ್ತಿದೆ (ವಿಜಾಮಂ. ೨೮). [ ಗುಂಡು + ಕಟ್ಟಿಗೆ$_1$ ]

**ಗುಂಡುಕಲ್ಲು** 'ಗುಂಡುಗಲ್' ನೋ.

**ಗುಂಡುಗಪ್ಪರ,ಗುಂಡಗಪ್ಪರ**(ನಾ). ಗುಂಡಾದ ಕಪ್ಪರ,– ಭಿಕ್ಷಾಪಾತ್ರೆ : ಶಿವನು . . . ಕಂತೆ ಕಮಂಡಲ ದಂಡಿಗೋಲು ಗುಂಡುಗಪ್ಪರವೆರಸಿ ಭಿಕ್ಷುಕ ಮೂರ್ತಿಯಾಗಿ ಬಂದು (ಭೃಂಸೂ. ೩೮೦). **ಗುಂಡಗಪ್ಪರ :** ಮಹಾ ಮಹತ್ತಿಗೆ ವಿಭೂತಿ ಮುಂತಾಗಿ ದಣ್ಡಕೋಲು ಗುಣ್ಡಗಪ್ಪರಕ್ಕೆ ಶರಣು ಮಾಡಿ (ಎಕ. XIV, ಎಳಂದೂ. ೧೮೮-೧೧ ; 1647).

**ಗುಂಡುಗಪ್ಪರದ ಕಾಯಕ** = ಕೈಯಲ್ಲಿ ದುಂಡನೆಯ ಪಾತ್ರೆಯನ್ನು ಹಿಡಿದುಕೊಂಡು ಭಿಕ್ಷೆಗಾಗಿ ತಿರುಗುವ ಜಂಗಮನ ವೃತ್ತಿ: (+).

[ ಗುಂಡು + ಕಪ್ಪರ$_2$ ]

**ಗುಂಡುಗಲ್**, ಗುಂಡಕಲ್ಲು, ಗುಂಡುಕಲ್ಲು, ಗುಂಡುಗಲ್ಲು (ನಾ). ೧. ಗುಂಡಾಗಿರುವ ಕಲ್ಲು ; ದುಂಡುಗಲ್ಲು : ತೂಳುವ ಗುಂಡುಗಲ್ಗಳ ರಾಶಿ ಪಟ್ಟಣದಾಳುವೇರಿಯು ತುಂಬಿಹುವು (ಕಂನವಿ. ೬-೨೦). **ಗುಂಡಕಲ್ಲು: ೨.** ಒರಳಿನಲ್ಲಿ ರುಬ್ಬಲು ಉಪಯೋಗಿಸುವ ದುಂಡಾದ ಕಲ್ಲು ; ರುಬ್ಬು ಗಲ್ಲು : ಗುಂಡಕಲ್ಲಿಗೆ ಕುಲಿಶದಂಡ ಮುರಿದಂತೆ ಹೆಂಡಗುಡುಹ ಕೈಯ ಗುಂಡುಗಲಿಯಳಿದೆ (ಕರಿಕ. ೦೨೬-೩) ; ಉಂಡವರಿಗೆ ಉಂಡದ್ದೇ ಬಂತು ಗುಂಡಕಲ್ಲಿಗೆ ಅರೆದದ್ದೇ ಬಂತು (ಗಾದ). **ಗುಂಡುಕಲ್ಲು: ೧.** ಗುಂಡುಕಲ್ಲಿನ ಲಟ್ಟೆ ದನುಜರ ತಂಡ ಸಾವುದೆ (ಕಾಶಿರಾ. ೨೧-೫೨) ; ಅಲ್ಲಿ ಮೂರು ಗುಂಡು ಕಲ್ಲುಗಳನ್ನು ಹೂಡಿ, ಒಲೆ ಮಾಡಿ ಹುರುಳಿ ಬೇಯಿಸಬಹುದು (ಸ್ವಪ್ನಹೂ. ೪೪). ೨. ಉಂಡವನಿಗೆ ಊಟ ಬೇಡ ಗುಂಡುಕಲ್ಲಿಗೆ ಎಣ್ಣೆ ಬೇಡ (ಗಾದ) ; ಗಂಡನಿಗೆ ಬೇಡಾದವಳು ಗುಂಡುಕಲ್ಲಿಗಿಂತ ಕಡೆ (ಗಾದ). **ಗುಂಡುಗಲ್ಲು :** ೧. ಮೊನೆಗಲ್ಲು ಗುಂಡುಗಲ್ಲುಗಳರೆಗಲ್ಲುಗಳ್ . . . ವನಮಾರ್ಗವ ತುಂಬಿಹುವು (ಕಂನವಿ. ೦೮-೪೪). [ ಗುಂಡು + ಕಲ್$_3$ ]

**ಗುಂಡುಗಲ್ಲು** 'ಗುಂಡುಗಲ್' ನೋ.

**ಗುಂಡುಗಾಳಗ** (ನಾ). ಗುಂಪುಗಳಿಗೆ ನಡೆಯುವ ಯುದ್ಧ,–ಕಾಳಗ ; ಸಾಮೂಹಿಕ ಕದನ : ಒಂದೆ ಕ್ಷಣದೊಳು ನಿನ್ನ ಕೊಲದಿರುವಂದನಲ್ಲಾ ನಸ್ತ್ರಸರಸಿಗಳಿಂದ ಕಾದಿರಿಸಿದರೆ ತಿಳಿಯದೆ ಗುಂಡುಗಾಳಗವ (ಜರಾಮಾ. ೨೮೫-೩೭). [ ಗುಂಡು + ಕಾಳಗ (<ಕಾಳೆಗ) ]

**ಗುಂಡುಗಿಡಿ** (ನಾ). ಗುಂಪುಗುಂಪಾಗಿ ಸಿಡಿಯುವ ಕಿಡಿ : ತುಂಡುಗಿಡಿಗಳ ತೂಱುಗಿಡಿಗಳ ಗುಂಡುಗಿಡಿಗಳ ಘಾಡಣೆಯ ಕಿಡಿ ಚಂಡಿಯಾಯ್ತು (ತೊರರಾ. ೫-೮-೮೨). [ ಗುಂಡು + ಕಿಡಿ ]

**ಗುಂಡುಗುಱುಚಾಡು** (ಕ್ರಿ). ಕಣ್ಣುಮುಚ್ಚಾಲೆ ಆಟವನ್ನು ಆಡು : ತನಿಗೊರ್ವಿದೆಲೆವಳ್ಳಿಯೊಳ್ ಗುಂಡುಗುಱುಚಾಡಿ (ಪುಷ್ಪಪು. ೨-೪೪ ರಗಳೆ).

[ <ಅಡಂಗುಱುಚಾಡು ]

**ಗುಂಡುಗೊಲೆ** (ನಾ). ಗುಂಡುಹಾಕಿ ಕೊಲ್ಲುವುದು,–ಸಾಯಿಸುವುದು : ಗುಂಡುಗೊಲೆ ನೇಣುಗೊಲೆಗಳು ಇಂಥ ಅಸಂಖ್ಯಾತ ಅತ್ಯಾಚಾರಗಳಿಗೆ ಸರ್ಕಾರವೇ ಹೊಣೆ (ಪುನರು. ೫೫೦). [ ಗುಂಡು + ಕೊಲೆ$_2$ ]

**ಗುಂಡುಗೊಳ್** (ಕ್ರಿ). ೧. (ಹೊಡೆಯುವುದಕ್ಕಾಗಿ) ಕಲ್ಲನ್ನು ತೆಗೆದುಕೊಳ್ಳು ; ದುಂಡಿ ತೆಗೆದುಕೊಳ್ಳು : ತೊಲಗದೆ ಗೋವುಗಳ್ ನೆರೆದು ನಾಯ್ಗಳನುರ್ಚುವ ಕಂಡು ಗುಂಡುಗೊಂಡಲಸದೆ ನಿಚ್ಚಮಾರ್ದಿಡುವ . . . ಬಾರಿಗೆ ಮೆಯ್ಯನೊಡ್ಡಿ ಕೋಟಲೆಗೊಳಗಾಗಿ ಪಂದಿ ನವೆವಂದವದಾರ್ಗ ಮಸೇವ್ಯವರ್ಣನಂ (ಸುಕುಮಾ. ೫-೧೮) ; ಬೆದಱಿ ಪುಲಿ ಬಾವಿಯೊಳ್ ಬಿರ್ದುದನಱಿದೊಡೆ ಗುಂಡುಗೊಂಡು [ಕೊಂದಿ]ಕ್ಕುಗುಮಲ್ಲದೆ ಪಿಡಿದು ತೆಗೆವರಾರ್ (ಸುಕುಮಾ. ೬-೩೭). ೨. ಗುಂಪಾಗು ; ಸಮೂಹವಾಗು : ಮಂಡಳಿಸಿರೆ ಗಿಳಿಗಳವೋಲಯಷಂಡಂಗಳ ಮೇಲೆ ಗುಂಡುಗೊಂಡೀಕ್ಷಿಸುವು ದ್ದಂಡೆಯರನಯನರುಚಿ ಮಾರ್ತಂಡಗೋಲಗಿಪುದಿಂದುಮಂಡಳರುಚಿಯಂ (ಮಹಾನೇ. ೧-೫೯) ; ಪೆಂಡವಾಸವಮುಮೆನಲ್ಕೆಯಂತಃಪುರದೊಳ್ ಗುಂಡುಗೊಂಡಿರ್ಪ ಸತಿಯರ್ (ಕವಿಕಂ. ೧೪೭) ; ದೆಸೆದೆಸೆಯ ಕಟ್ಟಲೆಯ ಬಿಂದ ಮೊಂದುಗೂಡಿ ಗುಂಡುಗೊಂಡು (ರಾಮಾಶ್ವ. ೬೨-೧೨).

[ ಗುಂಡು + ಕೊಳ್$_1$ ]

**ಗುಂಡುಗೋವಿ$_1$** (ನಾ). ಗುಂಡುಗಳನ್ನು ತುಂಬಿ ಹಾರಿಸುವ ಕೋವಿ ; ಬಂದೂಕು: ಪರಿಪರಿಯ ಗುಂಡುಗೋವಿಯ ಕುದಿವ ಸುಣ್ಣಗಳ ಪಿರಿದಾದ ಗುಂಡುಗಳ . . . ಮೊತ್ತಂಗಳಾಳ್ವೇರಿಯೊಳ್ ಪಸರಿಸಿದುವು (ಜಬಪು. ೪೨-೧೧) ; ಗಂಡುಗಲಿಗಳ ಗುಂಡುಗೋವಿ ಸರಗೋವಿಗಳಿಂ ಬೋದಿಗೆ ತೊಲೆಗಳಿಂ . . . ಅನುಗೆಯ್ದು (ಚಕವಂ. ೫೪-೧೩).

[ ಗುಂಡು + ಕೋವಿ$_1$ ]

**ಗುಂಡುಗೋವಿ$_2$** (ನಾ). ಮದುವೆ ಇಲ್ಲದವನು ; ಯಾವ ವಿಧವಾದ ಕಟ್ಟುಪಾಡೂ ಇಲ್ಲದವನು ; ಏಕಾಂಗಿ : ಮನೇಲಿ ನಾನೊಬ್ಬನೇ ಆದೆ ಗುಂಡುಗೋವಿ, ಹಿಂದಿಲ್ಲ ಮುಂದಿಲ್ಲ (ಬದುಕ್ಕ. ೨೭) ; ಗುಂಡುಗೋವಿ ಹಾಗೆ ತಿರುಗಿಕೊಂಡಿದ್ದ ಆತನಿಗೆ ಲಗ್ನಮಾಡಿದಿರಿ (ನನ್ನರ. ೨೭) ; ನಂಜಪ್ಪ ಸಂಸಾರಿಯೋ ಗುಂಡುಗೋವಿಯೋ ? (ಶನಿಸಂ. ೦೫೯). [ ? ]

**ಗುಂಡುಜಾಜಿ** (ನಾ). ಗುಂಡಾದ ಹೂವುಗಳನ್ನು ಬಿಡುವ ಒಂದು ಬಗೆಯ ಜಾಜಿ : (+). [ ಗುಂಡು + ಜಾಜಿ ]

**ಗುಂಡುತೋಪು** (ನಾ). ದಟ್ಟವಾದ ಮರಗಳ ಗುಂಪು ; ತೋಪು : ಗುಂಡುತೋಪುಗಳನ್ನು ಜನ ಸೌದೆಗಾಗಿ ಕಡಿದು ಹಾಳುಮಾಡಿದರು (ಕಳಹು. ೧೦೧). [ ಗುಂಡು + ತೋಪು$_1$ ]

**ಗುಂಡುದೀವು** (ಕ್ರಿ). ಕಲ್ಲುಗಳಿಂದ ತುಂಬು : ಅದೇಂ ನೆಱೆ ಪೋಲ್ತುದೊ ಚಂಡಹುಂಡಸಂಸ್ಥಾನದೆ ಗುಂಡುದೀವಿದ ತಡಂಗವುನಂಗದ ಪಾಂಗ ಮಂದಿರಾ (ಆದಿಪು. ೫-೯೦). [ ಗುಂಡು + ತೀವು ]

**ಗುಂಡುನಾಲೆಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೈಜಿಗಿ. ೭೪-೧೫೧೮). [ ಗುಂಡುನಾಲ್ಕೆ$_0$ + ಹುಲ್ಲು (<ಪುಲ್) ]

**ಗುಂಡುಪಿನ್ನು** (ನಾ).=ಗುಂಡುಸೂಜಿ : ಮನೆಯಲ್ಲಿ ಗುಂಡುಪಿನ್ನಿಗೆ ಬಹಳ ಅಭಾವ (ರೂಢಿ). [ ಗುಂಡು + ಪಿನ್ನು ]

**ಗುಂಡುಬಟ್ಟಲು** 'ಗುಂಡುವಟ್ಟಲ್' ನೋ.

**ಗುಂಡುಬದನಿಕೆ** (ನಾ). ಒಂದು ಬಗೆಯ ಸಸ್ಯ : (ಮೈಜಿಗಿ. ೫೧-೧೦೧೯).

[ ಗುಂಡು + ಬದನಿಕೆ ]

**ಗುಂಡುಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ ; ದುಂಡುಮಲ್ಲಿಗೆ : ಗುಂಡುಮಲ್ಲಿಗೆ, ಏಳುಸುತ್ತಿನ ಮಲ್ಲಿಗೆ (ಮೈಜಿಗಿ. ೪೭-೯೪೦).

[ ಗುಂಡು + ಮಲ್ಲಿಗೆ ]

**ಗುಂಡುಮುಂಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಬೆಟ್ಟಂಚಿಹುಲ್ಲು . . . ಗುಂಡುಮುಂಚಿಹುಲ್ಲು, ಗಂಟುಕಾಚಿ (ಮೈಜಿಗಿ. ೭೪-೧೫೧೯).

[ ಗುಂಡುಮುಂಚಿ$_0$ + ಹುಲ್ಲು (<ಪುಲ್) ]

**ಗುಂಡುಮುಳುಗ** 'ಗುಂಡುಮುಳುಕ' ನೋ.

**ಗುಂಡುಮುಟುಕ, ಗುಂಡುಮುಳುಗ** (ನಾ). ಒಂದು ಜಾತಿಯ ಹಕ್ಕಿ ; **ಸಳೆಕುಟಿಹಕ್ಕಿ** : " ಆತಾಪೀ, ಶಕುನಿಃ, ಚಿಲ್ಲಃ—ಈ ೩ ಗುಂಡುಮುಟುಕ (ನ ಹಕ್ಕಿ)ಯು " (ಹ ಲಾ ಯು. ೪೨-೯೭). **ಗುಂಡುಮುಳುಗ** : (ಕ). [ ಗುಂಡು? + ಮುಟುಗು (<ಮುಟುಂಗು) + – ಕ$_3$ ]

**ಗುಂಡುಮೊಗೆ** (ನಾ). ಒಂದು ಬಗೆಯ ಭೂಮಿ : ಗುಣ್ಡುಮೊಗೆ ಯೊಮ್ಮತ್ತರ್ ಮಣಲಿಯೊಮ್ಮತ್ತರ್ (ಎಕ. VII, ಶಿಮೊ. ೧೧೫-೧೧ ; ?). [ ಗುಂಡು + ಮೊಗೆ$_3$ ]

**ಗುಂಡುವಟ್ಟಲ್, ಗುಂಡವಟ್ಟಲ್, ಗುಂಡುಬಟ್ಟಲು** (ನಾ). = ಗುಂಡಿ ವಟ್ಟಲ್ : (ಕ). **ಗುಂಡವಟ್ಟಲ್** : "ಅನುಕರಂ ಗರ್ಶ[ ರ್ಹ ]ಕಂ ಗುಂಡ [ಪಾಠಾಂ. ಡಿ] ವಟ್ಟಲಕ್ಕುಂ " (ಮಂಗರಾ. ೭೩-೨೫). **ಗುಂಡುಬಟ್ಟಲು** : ನಾನು ಪ್ರತಿದಿನವೂ ಈ ಗುಂಡುಬಟ್ಟಲು ತುಂಬ ಹಾಲು ಕುಡಿಯುತ್ತೇನೆ (ರೂಢಿ). [ ಗುಂಡು + ಬಟ್ಟಲ್ ]

**ಗುಂಡುವಡೆ** (ಕ್ರಿ). ಶಿಲಾರೂಪವನ್ನು ಪಡೆ ; ಕಲ್ಲಾಗಿರು : ನಮ್ಮ ಹೆಣ್ಣು ಮಗಳು ಚಿಕ್ಕಮಲ್ಲಕ್ಕನು ಈ ದೇವಸ್ಥಾನದ ಮುನ್ದೆ ಅಗ್ನಿಪ್ರವೇಶವನ್ನು ಹೊಂದಿದಳು ಅವಳ ರೂಪು ಈ ಬೆಟ್ಟದಲ್ಲಿ ಬಂಡೆಗೆ ಸ್ಥಾಪಿಸಿ ಇರುತ್ತೆ ಗುಂಡುವಡೆದು ಇರುತ್ತೆ ಶಾಸನ ಇರುತ್ತೆ (ಎಕ. XVI, ಮದ್ದಗಿ. ೧೦೭-೫೦ ಪುಟ ; 1612). [ ಗುಂಡು + ಪಡೆ$_1$ ]

**ಗುಂಡುವಲೆ** (ನಾ). ಒಂದು ಬಗೆಯ ಬಲೆ : ಪಾಸುವಲೆ ಗುಂಡಿ[ ಡು ] ವಲೆ . . . ತಟ್ಟೆಬಲೆಗಳೆಂಬಿವನು (ಪುಣ್ಯಾಸ್ರ. ೯-೩೩) ; ಗುಂಡುವಲೆಗಳ ಬೀಸುವಲೆಗಳ . . . ಮಂಡವಿಗೆಬಲೆಗಳ ಕಿರಾತರು ಕೆದಱಿತಗಲದಲಿ (ಕುಮಾವ್ಯಾಅ. ೧೩-೨೩) : ಸೊಡರ್ಗಿಡಿಗಂಗಳ್ಗಳೆಯೆಂಟು ಗುಂಡುವಲೆ ಖಡ್ಗಂ (ಯಾದವ. ೪-೫೮). [ ಗುಂಡು + ಬಲೆ$_1$ ]

**ಗುಂಡುಸೂಜಿ** (ನಾ). ಗುಂಡಾದ ತಲೆಯುಳ್ಳ ಸಣ್ಣಸೂಜಿ ; ಗುಂಡು ಪಿನ್ನು ; ಟಾಚಣಿ (ಉಕ) : ಸೂಜಿ, ಗುಂಡುಸೂಜಿ . . . ಚಿಲ್ಲರೆನಾಣ್ಯ ಇತ್ಯಾದಿಗಳು ಸಹ ಹೇಗೋ ಕಸದ ಗುಡ್ಡೆಯನ್ನು ಸೇರುತ್ತವೆ (ನಾಡಿಗೇ. ೨೩) : ಈ ಸಣ್ಣಚುಕ್ಕೆಯು ಚಿನ್ನದ ಗುಂಡುಸೂಜಿಯ ತಲೆಯಂತೆ ಹೊಳೆಯುತ್ತ . . . ಅದರ ಗಾತ್ರವು ಬೆಳೆಯುತ್ತ ಬರುವುದು (ಜ್ಯೋತಿರ್ವಿ. ೮೪). [ ಗುಂಡು + ಸೂಜಿ ]

**ಗುಂಡುಹಾಕು** (ಕ್ರಿ). ೧. ಬಂದೂಕು, ಫಿರಂಗಿ ಮೊದಲಾದುವುಗಳಿಗೆ ಗುಂಡನ್ನು ಸೇರಿಸು, –ಭರ್ತಿಮಾಡು : (ಕ). ೨. ಬಂದೂಕು ಮೊದಲಾದುವುಗಳಿಂದ ಗುಂಡನ್ನು ಹಾರಿಸು ; ಗೋಲಿಬಾರುಮಾಡು : ಒಬ್ಬ ದ್ರೋಹಿ ಮಹಾತ್ಮಾಗಾಂಧೀಜಿಯವರನ್ನು ಗುಂಡುಹಾಕಿ ಕೊಂದನು (ರೂಢಿ). [ ಗುಂಡು + ಹಾಕು (< ಪಾಯ್ಕು$_1$) ]

**ಗುಂಡುಹಾರಿಸು** (ಕ್ರಿ). ಫಿರಂಗಿ, ಬಂದೂಕು ಮೊದಲಾದುವುಗಳಿಂದ ಗುಂಡನ್ನು ಉಡಾಯಿಸು, –ಹೊಡೆ : ಸಂಚುಗಾರರಲ್ಲೊಬ್ಬ ಗುಂಡು ಹಾರಿಸಿದನು (ಪುನರು. ೨೪೧). [ ಗುಂಡು + ಹಾರಿಸು ( <ಪಾಱಿಸು ) ]

**ಗುಂಡುಹೊಡೆ** (ಕ್ರಿ). = ಗುಂಡುಹಾಕು ೨ : ದೊಡ್ಡನು ಗುಂಡುಹೊಡೆದು ಹುಲಿಯನ್ನು ಕೊಂದನು (ಕಾಲೂರ. ೭ ಕಥಾಸಾರ). [ ಗುಂಡು + ಹೊಡೆ$_1$ (< ಪೊಡೆ$_1$) ]

**ಗುಂಡುಳಿ** (ನಾ). ಗುಂಡಾದ ಉಳಿ ; ದುಂಡುಳಿ : (ಕ). [ ಗುಂಡು + ಉಳಿ$_5$ ]

**ಗುಂಡೆಗಾಱ** (ನಾ). (?) : ಉಂಡುಬಾರದ ಊಟವನ್ನು ಕಾಣಬಾರದ ಕರ್ಮವನ್ನು ಗುಂಡೆಗಾಱರ ಕೇರಿಗೆ ಸಿಕ್ಕಿ ಚೆಂಡಿಗಿಂತ ಹಗುರವಾದೆ (ಪುರಂದ. ೪-೯-೩). [ ? + – ಗಾಱ (< – ಕಾಱ) ]

**ಗುಂಡೇಱು** (ನಾ). ಒಂದು ಪ್ರದೇಶದ ಹೆಸರು : ಸಿಡಿಲಯ್ಯಂ ಕಾಲಂ ಕರ್ಚ್ಚಿ ಕೂರವಾಡಿ ಮೂನೂಱರ ಬಳಿಯ ಲೋಕಾಯ್ತ್ವಪೊಟಲುಂ ಗುಂಡೇಱುಳಿರ್ಪ್ಪತ್ತನಾಲ್ಕುಮತ್ತರ್ಕ್ಕರಿಯ ಕೆಯ್ಯುಂ . . . ಕೊಟ್ಟರ್ (ಎಕ. XI, ಹೊಳಲ್ಕೆ. ೨೩-೧೮ ; 968). [ ? ]

**ಗುಂಡೊಲೆ** (ನಾ). ೧. ದುಂಡಾದ ಬಾಯುಳ್ಳ ಒಂಟೊಲೆ : (ಕ). ೨. ಮೂರು ಗುಂಡುಗಳನ್ನು ಹೂಡಿ ಮಾಡಿದ ಒಲೆ : ಪ್ರವಾಸದಲ್ಲಿ ಗುಂಡೊಲೆ ಹೂಡಿ ಕಾಫಿ ಮಾಡಿದರು (ರೂಢಿ). [ ಗುಂಡು + ಒಲೆ$_4$ ]

**ಗುಂಡೋತ್ತರ** (ನಾ) := ಗುಂಡಾಂತರ ೧ (?) : ನೆಲಗಟ್ಟಿನ ಮೇಲೆ ಕಲಶವ ನಿಡುವ ಗುಂಡೋತ್ತರ[ಪಾಠಾಂ. ಗುಂಡವತ್ತ]ದ ಮೇಲೆ ಸೊದೆಯುಂ ಬಱಿವ (ಧರ್ಮಾಮೃ. ೦೨-೨೪). [ ? ]

**ಗುಂಡೋದರ** (ನಾ). ಗುಡಾಣದಂತಹ ಹೊಟ್ಟೆಯುಳ್ಳವನು ; ಡೊಳ್ಳು ಹೊಟ್ಟೆಯವನು : ಲಕ್ಷೋಪಲಕ್ಷ ಕಿಸೆ ಕಿಸಿದು ನಿಂತರು ಬಾಯಿ ಗುಂಡೋದರಗೆ ಮಾತ್ರ ದಕ್ಕುತ್ತಿದೆ (ನಡಬಂ. ೧೦೩-೮). [ <ಸಂ. ಕುಂಡೋದರ ]

**ಗುಂತು** ' ಗೊತ್ತು ' ನೋ.

**ಗುಂದ** ' ಕುಂದ$_3$ ' ನೋ.

**ಗುಂದುಗುಡೆ** (ನಾ). ಒಂದು ಊರಿನ ಹೆಸರು : ಸಿಮ್ಮನೂರ ಕಿಳ್ಳಮ್ಮನ್ . . . ಬಳ್ಳಿಗ್ಗಮಯ ಗಾಮುಣ್ಡನ್ ಗುಂದುಗುಡೆಯಾ ಸಾತ್ತುಗಾಮುಣ್ಡ ಇನ್ನಿ ಎನಿಬ್ಬರು ಶ್ರೀಕರಣ ಸಹಿತಂ ಬಿಟ್ಟಾರ್ (ಎಕ. VIII, ಸೊರಬ.೧೦-೧೩ ; ಸು. 800). [ ? ]

**ಗುಂದೆ** ' ಕುಂದ$_3$ ' ನೋ.

**ಗುಂದ್ರ** (ನಾ). ಒಂದು ಬಗೆಯ ಹುಲ್ಲು ; ಕಾಗೆಬಿದಿರು : " ಗುಂದ್ರಃ, ತೇಜನಕಃ, ಶರಃ–೩ ಕಾಗಿಬಿದರು " (ಸಿದ್ಧಾಂತಿ. ೧೩೦). [ ಸಂ. ]

**ಗುಂದ್ರಯಿಸು** (ಕ್ರಿ). ದಟ್ಟೈಸು ; ಸಾಂದ್ರವಾಗು : ಅತ್ತ ಘನಸಾಂದ್ರದಿಂ ಕರ್ಣಸೌಬಲಶಲ್ಯದ್ರೋಣನಶ್ವತ್ಥಾಮರ್ಮೈದಿ ರಣದಿ ಗುಂದ್ರಯಿಸಿ ಯಿಳಿದ ರಣಭೂಮಿಯಂ ಪೊಕ್ಕು (ಲಕ್ಷ್ಮಭಾ. ೭-೬-೦೫). [ ? + – ಇಸು$_3$ ]

**ಗುಂಪನ** (ನಾ). ೧. (ಶಬ್ದಾರ್ಥಗಳ) ಜೋಡಣೆ. ೨. ಕಟ್ಟುವಿಕೆ ; ರಚನೆ : ಗುಂಫನ–ಗುಂಪನ (ಶಮದ. ೨೫೫ ಪ್ರಯೋ) ; ಗುಂಫನ–ಗುಂಪನ (ಶಬ್ದಾನು. ೦೪೨ ಪ್ರಯೋ). [ < ಸಂ. ಗುಂಫನ ]

**ಗುಂಪಲು** (ನಾ). ಗುಂಪು ; ಸಂದಣಿ. ' ಗುಜುಂಗುಂಪಲು, ನಾರುಗುಂಪಲು ' ಪರಾ. [ ಗುಂಪು$_1$ (<ಗುಣ್ಪು$_1$)+–ಅಲು (<-ಅಲ್$_2$). /ತಮಿ. ಕುವ್ವಲ್ ]

**ಗುಂಪಳಿ** ' ಗುಣ್ಪಳಿ ' ನೋ.

**ಗುಂಪಿತ** (ನಾ). ತೊಡಕಿಗೆ ಸಿಕ್ಕಿದವನು ; ಕಟ್ಟುಬಿದ್ದವನು (?) : ತನ್ನ ಗುಣವ ಹೊಗಳಬೇಡ ಇದಿರ ಗುಣವ ಹಳಿಯಬೇಡ ಕೆಮ್ಮನೊರ್ಬರ ನುಡಿಯಬೇಡ ನುಡಿದು ಗುಂಪಿತನಾಗಬೇಡ (ವಚಶಾ. I, ೧೮೧). [ <ಸಂ. ಗುಂಫಿತ ? ]

**ಗುಂಪು$_1$** ' ಗುಣ್ಪು$_1$ ' ನೋ.

**ಗುಂಪು$_2$** ' ಗುಣ್ಪು$_2$ ' ನೋ.

**ಗುಂಪುಕಟ್ಟು** (ಕ್ರಿ). ೧. ಒಟ್ಟಿಗೆ ಸೇರು ; ಗುಂಪುಗೂಡು : ಆ ಕಾರಿನ ಸುತ್ತಲೆಲ್ಲ ವಠಾರದ ಹುಡುಗರು ಗುಂಪುಕಟ್ಟಿಕೊಂಡು ಆಡುತ್ತಿದ್ದರು (ಕಂಬಹು. ೦೩೨). ೨. ಗುಂಪುಗೂಡಿಸು ; ಬಣಕಟ್ಟು : ಅವರೆಲ್ಲರೂ ಸೇರಿ ಗುಂಪು ಕಟ್ಟಲು ಪ್ರಯತ್ನಿಸುತ್ತಿದ್ದಾರೆ (ರೂಢಿ). [ಗುಂಪು$_1$ (<ಗುಣ್ಪು$_1$)+ಕಟ್ಟು$_1$]

**ಗುಂಪುಕೂಡು** ' ಗುಂಪುಗೂಡು ' ನೋ.

**ಗುಂಪುಗಾರ** (ನಾ). ಗುಂಪುಗಟ್ಟುವವನು. ' ಗುಂಪುಗಾರಿಕೆ ' ಪರಾ. [ ಗುಂಪು$_1$ (<ಗುಣ್ಪು$_1$) + – ಗಾರ (<–ಕಾಱ) ]

**ಗುಂಪುಗಾರಿಕೆ** (ನಾ). ಗುಂಪುಕಟ್ಟುವಿಕೆ : ಪಾರ್ಟಿ, ಪಕ್ಷ, ಗುಂಪುಗಾರಿಕೆ, ಪಕ್ಷಾಂತರ ನನ್ನೂರಿನಲ್ಲಿಯೂ ಯೋಗ್ಯತಾನುಸಾರ ಇವೆ (ನನ್ನೂರು. ೩೦೬). [ ಗುಂಪುಗಾರ + – ಇಕೆ ]

**ಗುಂಪುಗುಳಿ** (ನಾ).=ಗುಂಪುಗಾರ. 'ಗುಂಪುಗುಳಿತನ' ಪರಾ.
[ ಗುಂಪು$_1$ (<ಗುಣ್ಪು$_1$) + – ಕುಳಿ$_2$ ]

**ಗುಂಪುಗುಳಿತನ** (ನಾ).=ಗುಂಪುಗಾರಿಕೆ: ರಾಜಕೀಯಕ್ಷೇತ್ರದಲ್ಲಿ-ಗುಂಪುಗುಳಿತನ ತಲೆದೋರಬಾರದು (ಋಾ). [ ಗುಂಪುಗುಳಿ + – ತನ ]

**ಗುಂಪುಗೂಡು,** ಗುಂಪುಕೂಡು (ಕ್ರಿ). ಒಟ್ಟಿಗೆ ಸೇರು; ಏಕತ್ರವಾಗು: ಪಲವು ಸುಕೃತಮಿಂತು ಪರಿಣತಿವೆತ್ತುದೊ ಕುಲದೇಳ್ಗೆ ಗುಂಪುಗೂಡಿದುದೊ (ಹರಿಬ. ೨-೧೮). **ಗುಂಪುಕೂಡು:** ಕಾರಣವಿಲ್ಲದೆ ಜಗಳಕ್ಕೆ ಕರೆಯುವುದು ಗುಂಪುಕೂಡಿ ಹೊಡೆಯುವುದು (ಕಳಹು. ೧೦).
[ ಗುಂಪು$_1$ (<ಗುಣ್ಪು$_1$) + ಕೂಡು$_1$ ]

**ಗುಂಪುಗೊಳ್ಳು** (ಕ್ರಿ).=ಗುಂಪುಗೂಡು: (ಕ).
[ಗುಂಪು$_1$ (< ಗುಣ್ಪು$_1$) + ಕೊಳ್ಳು$_1$ (<ಕೊಳ್$_1$) ]

**ಗುಂಪುದೆಗೆ** (ಕ್ರಿ). ಕೂಡಲು ಹಿಂದೆಗೆ: ಹೆಂಪಳಿದ ತನುಲತೆಯು ಹರುಷದ ಸೊಂಪು ಸಡಿಲಿದ ಮುಖದ ನೋಟದ ಗುಂಪುದೆಗೆದಕ್ಷಿಗಳ ಕೋಡಿಯ ಲೊಗುವ ಕಿಬುವನಿಯ . . . ಲಜ್ಜೆಯಲಂಪಿನಂಬುಜವದನೆ ಮೈಯಿಕ್ಕಿದಳು ನಿಜಪತಿಗೆ (ತೊರಿಡಾ. ೬-೫೩-೬೭). [ ಗುಂಪು$_1$ (<ಗುಣ್ಪು$_1$) + ತೆಗೆ$_1$ ]

**ಗುಂಪುಬಸರೇಸೊಪ್ಪು** (ನಾ). ಒಂದು ಬಗೆಯ ಸೊಪ್ಪು: ಗುಂಪುಬಸರೇಸೊಪ್ಪು ಹಾಲಲ್ಲಿ ತೆಗೆದುಕೊಳ್ಳೆ ರಕ್ತಪ್ರಮೇಹ ಮಾಣ್ಗುಂ (ವಿಷ್ಣವಿ. ೬೨).
[ ? + ಸೊಪ್ಪು$_3$ ]

**ಗುಂಪುಲಿ** (ನಾ). (ಪಕ್ಷಿ ಮೊದಲಾದುವುಗಳು) ಒಟ್ಟಾಗಿ ಮಾಡುವ ಶಬ್ದ,–ಸಾಮೂಹಿಕವಾದ ಧ್ವನಿ: ಬಿದಿರ್ವೆಳೆಯ ತುದಿಗಣೆಯೊಳಿರ್ದೊಂದು ಕಾಮಳ್ಳಿಗಳ ಹಿಂಡು ಹಾರಿದುದು ಗುಂಪುಲಿಯನೆಸೆದು (ಶ್ರೀರಾಮಾ. ೨೦೩-೨೩೨). [ ಗುಂಪು$_1$ (<ಗುಣ್ಪು$_1$) + ಉಲಿ$_2$ ]

**ಗುಂಪುವಡೆ** (ಕ್ರಿ). ಗುಂಪುಗೂಡು; ಒಟ್ಟಾಗು: ತಿಂಗಳ ಸೊಂಪು ಗುಂಪುವಡೆದೆಣ್ದೆಸೆಗಂ ಪರಿಗೊಂಡುದೆಂಬಿನಂ (ಕಬ್ಬಿಗಕಾ. ೦೭).
[ಗುಂಪು$_1$ (< ಗುಣ್ಪು$_1$) + ಪಡೆ$_1$ ]

**ಗುಂಪುಸೇರು** (ಕ್ರಿ).=ಗುಂಪುವಡೆ: ಹುಡುಗರು ಹೆಚ್ಚುಹೆಚ್ಚಾಗಿ ಗುಂಪುಸೇರಿದರು (ರಾವಿಜ. ೩೦). [ಗುಂಪು$_1$ (<ಗುಣ್ಪು$_1$)+ಸೇರು$_1$ (<ಸೇರ್$_1$)]

**ಗುಂಪೊಡೆ** (ಕ್ರಿ). ಗುಂಪು ಒಡೆದುಹೋಗು,—ಚೆದರು: ತಾಮರಸ ವೆಂದು ವದನಾಬ್ಜಕ್ಕೆ ಯೆರಗಿಯಳಿ ಸೋಮನಾಸಿಕ ಚಂಪಕರಲ ನಿಟ್ಟಿಸಿ ಭಯದಿ ಪಾರ್ದು ಗುಂಪೊಡೆಯದಿರಲು (ನವಮೋ. ೨೩-೬).
[ ಗುಂಪು$_1$ (<ಗುಣ್ಪು$_1$) + ಒಡೆ$_1$ ]

**ಗುಂಫ$_1$** (ನಾ). ಆಳ; ಗಾಂಭೀರ್ಯ: ಶರಧಿಗುಂಫವನಜಿಯಲಿಳಿದನೊ ತರಣಿ ಸಂಧಿಗೆ ವರುಣನಲ್ಲಿಗೆ ತೆರಳಿದನೊ (ಕಾಶಿರಾ. ೦೫-೩೬).
[ <ಗುಣ್ಪು$_2$ ? ]

**ಗುಂಫ$_2$** (ನಾ). ೧. ಮಾಲೆಯಂತೆ ಕಟ್ಟುವುದು. ೨. ಜೋಡಣೆ; ರಚನೆ: "ಶ್ರಂಥನಂ, ಗ್ರುಂಥನಂ, ಗುಂಫಃ, ಸಂದರ್ಭಃ, ರಚನಾ–ಈ ೫ ರಚನೆ" (ಹಲಾಯು. ೦೨೦-೪೫); "ಗ್ರಂಥನಂ ಗುಂಫಮೆನೆ ರಚನೆಗಭಿಧಾನಮಕ್ಕುಂ" (ಮಂಗರಾ. ೦೨೬-೩). [ ಸಂ. ]

**ಗುಂಫನ** (ನಾ).=ಗುಂಫ$_2$ ೨: ಪದರಚನಾತಿಶಯಂ ರೀತಿದಲದುವುಂ ನಿಯತ ವರ್ಣ ಗುಂಫನ ಗುಣದೊಂದೊದವಿಂ ಮೂದೆಬಿನಕ್ಕುಂ (ಕಾವ್ಯಾವ. ೬೮೦).
[ ಸಂ. ]

**ಗುಂಫಿತ** (ಗು). ಕಟ್ಟಿದ; ಜೋಡಿಸಿದ; ರಚಿತವಾದ. [ ಸಂ. ]

**ಗುಂಬ$_1$** 'ಗುಣ್ಪು$_1$' ನೋ.

**ಗುಂಬ$_2$** 'ಗುಣ್ಪು$_2$' ನೋ.

**ಗುಂಬ$_3$,** ಗುಂಭ$_2$ (ನಾ). ೧. ಗಡಿಗೆ; ಘಟ; ಕುಂಭ; ಕಲಶ: ಗುಬ್ಬಿ ಗುಂಬವನೊಡೆದು ಒಬ್ಬುಳಿಯಾಯಿತು (ಮಧುವ. ೧೩); ಸ್ಮರನೀಟಿ ಪಿಡಿದ ಕೆಂಪಿನ ಗುಂಬದಡಿಯೋ ಅರುಣಮಣಿಯೋ ಕೆಂಬರೆಯೋ . . . ತರುಣಿ ಮಣಿಯ ಚೆಂದುಟಿಯೋ (ನೇಮಿಸಂ. ೨೩-೧೯೮); ತುಂಬಿದ ಗುಂಬಮಂ ಪೊಱಪೊಸಂತಿಲ ಪಕ್ಕದೊಳಿಟ್ಟು ಪೂಜೆಗೆಯ್ದಿಂ (ಚಿಕವಿ. ೪-೩೫): ಕುಂಬಾರ್ರ ಹುಡುಗಿ ಬಲು ಚೆಲುವೆ ಆದರೆ ಗುಂಬ ತಟ್ಟೋದ ಬಿಡಲೊಲ್ಲೆ (ಹಳ್ಳಿಯ. ೬೦). ೨. ಗಾಡಿ, ರಥ ಮುಂತಾದ ವಾಹನದ ಚಕ್ರಗಳ ನಾಭಿ,–ಮಧ್ಯದ ದಿಂಡು,–ನಡುತೂಬು: ಅಚ್ಚು ಮುಱಿದು ಮೂಕು ಗುಡುಗಿಱಿದಾ ಗುಂಬ ನುಚ್ಚುನೂಱಾಗಲಾ ಶಕಟ (ನೇಮಿಸು. ೦೫-೮೮).

**ಗುಂಭ$_2$:** ೨. ೪ ಭಂಡಿ ಚಕ್ರಕ್ಕೆ ಗುಂಭ (ಎಕ. XIV, ನಂಜನ. ೨೮೯–೫; ಸು. 1848). ೩. ಕಂಬದ ತುದಿಯ ಕಲಶಾಕಾರದ ಸಾಧನ; ಬೋದಿಗೆ: ಬಜ್ಜರದ ಕಂಬಗಳ ಸಕಲ ರುಚಿ ಗುಂಭಗಳನಾಂತು ತೋರ್ಪ ಅರಮನೆ (ವೆಂಕಾರಾ. ೨-೬-೩೬). [ <ಸಂ. ಕುಂಭ ]

**ಗುಂಬಕಟ್ಟು** (ನಾ). ಚಕ್ರದ ನಾಭಿಯ ಮೇಲಿರುವ ಕಬ್ಬಿಣದ ಪಟ್ಟಿ: ಅದು ನನ್ನೂರ ಬಡಗಿ ಗಾಡಿಯ ಗುಂಬಕಟ್ಟನ್ನು ಗಣಗಣ ಕಾಯಿಸಿ ಬಡಿಯಲು ಕುಲುಮೆಯಿಂದ ಹೊರದೆಗೆದಂತೆ ಕಾಣುತ್ತದೆ (ನನ್ನೂರು. ೦೩).
[ ಗುಂಬ$_3$ + ಕಟ್ಟು$_2$ ]

**ಗುಂಬಗುಟಿ** (ನಾ). ಆಳವಾದ ಗುಂಡಿ; ಹೊಂಡ: ಇವರ್ಗಮಾರಾಜನೃಪಂಗಂ ತಾರತಮ್ಯಂ . . . ಗುಂಬಗುಟಿಗಳ್ಗಂ ಅಂಬುಧಿಗಂ ಅಣುಗಳ್ಗಂ ಅಮರಗಿರಿಗಂ . . . ಇರ್ಪಂತಿರ್ಕುಂ (ಚಿಕವಂ. ೨೬-೧).
[ ಗುಂಬ$_2$ (<ಗುಣ್ಪು$_2$) + ಕುಟಿ$_2$ ]

**ಗುಂಬಚ್ಚು** 'ಗುಂಬಜು' ನೋ.

**ಗುಂಬಜ್** 'ಗುಂಬಜು' ನೋ.

**ಗುಂಬಜು,** ಗುಂಬಚ್ಚು, ಗುಂಬಜ್, ಗುಂಬಸ್ಸು, ಗುಮ್ಮಸು (ನಾ). ಅರ್ಧ ಗೋಳಾಕಾರದ ಗೋಪುರದಂಥ ರಚನೆ: ಈ ಕಟ್ಟಡದ ಮೈರೇಖೆ ಮೇಲಕ್ಕೆ ದುಂಡಾಗಿ ಗುಂಬಜಿನಲ್ಲಿ ಕೊನೆಗೊಳ್ಳುವುದು (ಆಬೂಬ. ೬೦).
**ಗುಂಬಚ್ಚು:** ಮಸೀದಿಯ ಗುಂಬಚ್ಚುಗಳು ಮೆರೆಯಬೇಕು (ದೌಲತ್. ೪೫).
**ಗುಂಬಜ್:** ಪ್ರಪಂಚದಲ್ಲೇ ಹಿರಿದಾದ ಈ ಗುಂಬಜ್ (Dome) ಅದ್ಭುತವಾದೊಂದು ಎಂಜಿನಿಯರಿಂಗ್ ಸಾಹಸದ ಫಲ (ಹುಮುಃ. ೦೬೩).
**ಗುಂಬಸ್ಸು:** ಗುಂಬಸ್ಸು ಸುಮಾರು ೨೫ ಮೈಲಿ ದೂರಕ್ಕೆ ಕಾಣುತ್ತದೆ (ಭಾರದ. ೪೦೩). **ಗುಮ್ಮಸು:** ಬಹುಶಃ ಪ್ರಪಂಚದ ಗುಮ್ಮಸುಗಳಲ್ಲೆಲ್ಲ ಇದು ಎರಡನೆಯ ದೊಡ್ಡದು (ಭಾರದ. ೪೦೩).
[ ←ಪಾರ. ಗುಂಬದ್; ಹಿಂ. ಗುಂಬಜ್ ]

**ಗುಂಬದಂಬಟಿ** (ನಾ). ತಮಟೆಯಂತೆ ಬಾರಿಸುವ ಕುಂಭ; ಘಟವಾದ್ಯ.

**ಗುಂಬದಂಬಟಿಯುವ**=ಗುಂಬವಾದ್ಯವನ್ನು ಬಾಜಿಸುವವನು: ಅಯ್ಯಾ ನೀಂ ಬಂದುದಂ ಕಾಣದೆ ಈ ಗುಂಬದಂಬಟಿಯುವರ್ ದೊಂಬಿಗೂಡಿ ಪಾಡುವ ಬಣ್ಣವಾಡಂ ಕೇಳುತ್ತೆ ಪತ್ರೆಸಾರ್ದು ನಿಮ್ಮನಱಿಯದಾದೆಂ (ಚಿಕವಿ. ೬-೦೩೪ ವ). [ ಗುಂಬ$_3$ + ತಂಬಟೆ (<ತಂಬಟ) ]

**ಗುಂಬಮಾತು** (ನಾ). ತಿಳಿಯದ ಮಾತು; ರಹಸ್ಯವಾದ ನುಡಿ: (ಕ).
[ ಗುಂಬ$_2$ (<ಗುಣ್ಪು$_2$) + ಮಾತು$_1$ ]

**ಗುಂಬವಾದ್ಯ** (ನಾ). ಕುಂಭವಾದ್ಯ; ಘಟವಾದ್ಯ: "ಗುಂಬವಾದ್ಯ=ಕುಂಭವಾದ್ಯ, ಗುಮತೀವಾದ್ಯ" (ಗಂಗಾಮ. ೦೦೬). [ ಗುಂಬ$_3$+ವಾದ್ಯ ]

**ಗುಂಬಸ್ಸು** 'ಗುಂಬಜು' ನೋ.

**ಗುಂಬಹೋಗು** (ಕ್ರಿ). ಆಳಕ್ಕೆ ಹೋಗು; ಅಡಗಿಹೋಗು: ಮಾತಾಡಿದರೂ ಧ್ವನಿಯು ಗುಂಬಹೋಗಿರುವದರಿಂದ ಶಬ್ದವು ಹೊರಗೇ ಬರಲಾರದು (ಜಿಷಧೀ. ೦೪).
[ ಗುಂಬ$_2$ (<ಗುಣ್ಪು$_2$) + ಹೋಗು$_1$ (<ಪೋಗು$_1$) ]

**ಗುಂಬಳಕಿ** (ನಾ). (ಕರಾ) ನೀರಿನ ಗುಳ್ಳೆ; ಬುದ್ಬುದ: ಸಂಸಾರ ನೀರ ಮೇಲಿನ ಗುಂಬಳಕಿಯು ಹಾಗೆ (ಜಾಪ). [ ? ]

**ಗುಂಬಾರತಿ** (ನಾ). ೧. ದೇವಾಲಯದ ನರ್ತಕಿಯು ಸಿದ್ಧಪಡಿಸಿದ ಮೇಲೆ ಪೂಜಾರಿಯಿಂದ ಉಪಯೋಗಿಸಲ್ಪಡುವ ದುಂಡಾದ ಆರತಿ ತಟ್ಟೆ: (ಕ). ೨. ದೇವಾಲಯದ ನರ್ತಕಿ: (ಕ).

[ ಗುಂಬು$_3$ + ಆರತಿ$_1$ ]

**ಗುಂಬು$_1$** ' ಗುಣ್ಪು$_1$ ' ನೋ.

**ಗುಂಬು$_2$** ' ಗುಣ್ಪು$_2$ ' ನೋ.

**ಗುಂಬುಟ** ' ಗುಮ್ಮಟ$_1$ ' ನೋ.

**ಗುಂಬೆ** (ನಾ). (?): ನೆಗ್ಗಿಲ ಗುಂಬೆ ನಿಡುವೆಳುಙ್ಗೆ ಪುನ ಗಜಸಲೆಯು ಗ್ರಾಮ . . . ಕೆಂತಬಿವ್ಬಿನ ದಿಣೆ ಇಂ ಪೂರ್ಬ್ಬದೆ ಕೊಡಿತ್ತು ಸೀಮಾನ್ತರಂ (ಎಕ. I, ೧–೨೮; 466 ಕ್ರಿಶ). [ ? ]

**ಗುಂಭ$_1$** ' ಗುಣ್ಪು$_2$ ' ನೋ.

**ಗುಂಭ$_2$** ' ಗುಂಬು$_3$ ' ನೋ.

**ಗುಂಭನ** (ನಾ).=ಗುಂಫ$_2$ ೨ (?): ಒಂದೆಡೆಯು ಸುಷಿರ ಕಾಂಸ್ಯಾದಿ ಧ್ವನಿ ಗುಂಭನವುದೊಂದೆಡೆಯು ಲಾಸ್ಯ ನರ್ತನ ನೃತ್ಯ ವೈಭವದಿ ವೃಂದಾರಕರ ಲೋಕಕಿವ್ಮಡಿಸಿ ತೋರಿದುದು (ವಂಕಾರಾ. ೨–೨೮–೦೩); ಆಹ್ವಾನ, ವ್ಯಾಖ್ಯಾನ, ಟಿಪ್ಪಣ, ಮನನ, ಸೀವನ, ಗುಂಭನ ಇತ್ಯಾದಿಗಳು (ಹೊಸುಗ. ೬೩). [ <ಸಂ. ಗುಂಫನ ? ]

**ಗುಂಭಮೌನ** (ನಾ). ಗಂಭೀರವಾದ ಮೌನ, – ನಿಶ್ಶಬ್ದತೆ, – ನೀರವತೆ: ಆದರೇನೆಲ್ಲಿಲ್ಲು ಗುಂಭಮೌನವೆ ತುಂಬಿ ಮೂಢನ ಸಮಾಧಿಯೊಲು ಕತ್ತಲಿಸಿದೆ (ಗಂಗಾತ. ೫೨–೦೩). [ ಗುಂಭ$_1$ (<ಗುಣ್ಪು$_2$) + ಮೌನ ]

**ಗುಂಭಾನ್** (ಕ್ರಿ). ಗುಟ್ಟನ್ನು ಹೊಂದು; ರಹಸ್ಯವಾಗಿರು (?): ಅಪ್ಪರನು ಗುಂಭಾಂತು ಕಳುಹಿದ ದಿಕ್ಕುದಿಕ್ಕಿಗೆ ಕೌರವರ ರಾಯ (ಜನಭಾ. ೫೬–೨೯). [ ಗುಂಭ$_1$ (<ಗುಣ್ಪು$_2$) + ಆನ್$_1$ ]

**ಗುಂಭಾವನೆ** (ನಾ). ಸುಮ್ಮನಿರುವಿಕೆ; ಗಾಂಭೀರ್ಯ; ಮೌನ (?): ನೀವಿಬ್ಬರು ಗಾಳಿ ತುಂಬಿದ ರಬ್ಬರ ಚೆಂಡಿನಂತೆ ಗುಂಭಾವನೆಯಿಂದಿದ್ದ ಕಾರಣವನ್ನು ತಿಳಿಯಬಹುದೇ? (ಜಯಂತ. ೯೪).

[ ಗುಂಭ$_1$ (<ಗುಣ್ಪು$_2$) + ಭಾವನೆ ]

**ಗುಂಯ‍್** (ನಾ). ಒಂದು ಅನುಕರಣಶಬ್ದ. 'ಗುಂಯುಗ್ಗುಡು' ಪರಾ.

**ಗುಂಯಿ** (ನಾ). ಒಂದು ಅನುಕರಣಧ್ವನಿ; ಸೊಳ್ಳೆ, ದುಂಬಿ ಮೊದಲಾದುವುಗಳ ಧ್ವನಿಯನ್ನು ಅನುಕರಿಸುವ ಶಬ್ದ. 'ಗುಂಯಿಗುಟ್ಟು' ಪರಾ.

**ಗುಂಯಿಗುಂಯಿ** (ದ್ವಿರುಕ್ತಿ): ಸೊಳ್ಳೆಗಳು ಗುಂಯಿಗುಂಯಿ ಎನ್ನುತ್ತಾ ಇವೆ (ಜಾಪ).

**ಗುಂಯಿಗುಟ್ಟು** (ಕ್ರಿ).=ಗುಂಯುಗ್ಗುಡು.

**ಗುಂಯಿಗುಟ್ಟಾಟ**=ಗುಂಯ‍್ ಎಂದು ಧ್ವನಿಮಾಡುವಿಕೆ: ನಾವು ನಮ್ಮ ಸುತ್ತಲಿರುವ ವಿಶ್ವದ ಕಿರುಗುಟ್ಟಾಟ – ಗುಂಯಿಗುಟ್ಟಾಟಗಳನ್ನು ಕೇಳಬಹುದು (ಆಕಾಶ. ೮). [ ಗುಂಯಿ + ಕುಟ್ಟು$_1$ ]

**ಗುಂಯಿಗುಡು** (ಕ್ರಿ). ಗುಂಯಿ ಗುಂಯಿ ಎಂದು ಧ್ವನಿಮಾಡು: ಹಾಗೇ ಗುಂಯಿಗುಡುತ್ತ ಮೃದುವಾಗಿ ಗಾಳಿಯಲ್ಲಿ ತೇಲಿ ತೇಲಿ ಸರಿವ ರಾಗ ಮಾಧುರ್ಯವೂ ಇದೆ (ಭಾರಜಾ. ೦೮).

[ ಗುಂಯಿ + ಕುಡು$_1$ (<ಕೊಡು$_1$) ]

**ಗುಂಯ್ಯ** (ನಾ). ವಿಶ್ವಾಸಘಾತಕ; ಮೋಸಗಾರ; ವಂಚಕ (?): ವಂಶದಲ್ಲಿ ಯಾರೂ ಕೋರ್ಟುಮೆಟ್ಟಿಲು ಹತ್ತದಿದ್ದಾಗ ಈ ಗುಂಯ್ಯ ನನ್ನ ಹೆಸರು ಬೀದಿಗೆಳೆದರೆ (ಪ್ರಶ್ನೆ. ೩೨). [ <ಕುಯಕ? ]

**ಗುಂಯುಗ್ಗುಡು** (ಕ್ರಿ). ೧. ಗುಂಯ‍್ ಎಂದು ಧ್ವನಿಮಾಡು: ಸುನಂದಳ ಅಂತರಂಗದಲ್ಲಿ ಗುಂಯುಗ್ಗುಡುತ್ತಿರುವ ಮಾತುಗಳು (ದೂಬಿಟ್ಟ. ೧೬೨). ೨. ಪ್ರತಿಧ್ವನಿಸು: ನೀವು ಹೇಳಿದ್ದೇ ತಲೆಯಲ್ಲಿ ಗುಂಯುಗ್ಗುಡುತ್ತಿತ್ತು (ದೂರಸ. ೯೩). ೩. ಗೊಣಗುಡು; ಪಿಸುಗುಡು: ಅವನು ಗುಂಯುಗ್ಗುಡುತ್ತಾನೆ (ಜಾಪ). [ ಗುಂಯ‍್ + ಕುಡು$_1$ (<ಕೊಡು$_1$) ]

**ಗುಕುಗುಕು** (ನಾ). ಪಾರಿವಾಳಗಳು ಮಾಡುವ ಸದ್ದನ್ನು ಅನುಕರಿಸುವ ಶಬ್ದ: ಪಾರಿವಾಳದ ಪಕ್ಕಿ ಮದನಕೈಯೊಳು ತನ್ನ ನಾರಿಗಿದಿರು ನಡೆದಾಡಿ ಗೂರುಳು ಗುಕುಗುಕು . . . ಚಾರಿಟಿಯೆಂದುವಲ್ಲಲ್ಲಿ (ಭರಜ. ೦೫–೩೨).

**ಗುಕ್ಕ, ಗುಗ್ಗ$_1$** (ನಾ). ತಡವರಿಸುತ್ತ ಮಾತನಾಡುವವನು; ಉಗ್ಗ: ಇದೇ ಇದ್ದಾನಲ್ಲ ನಿನ್ನ ತಮ್ಮ ರಾಜ, ಮೂಕನಲ್ಲದಿದ್ದರೆ ಗುಕ್ಕ (ಹನ್ನೊಂದ. ೮೨); ' ಗುಕ್ಕ ' ಮಾತನಾಡಿದ ಹಾಗೆ ಉಗ್ಗಡಿಸಿದ ಬನುವ (ಬನಸಿ. ೫೭). **ಗುಗ್ಗ$_1$**: ಪೂರಾ ಪೂರಾ ನುಡಿಯುವ ನಾಲಿಗೆ ಅರ್ಧಾ ಮಾತ್ರ ಗುಗ್ಗರ ಪಾಲಿಗೆ (ಅರರೋ. ೬೨).

**ಗುಕ್ಕರಾಯ**=ಉಗ್ಗುವ ಮನುಷ್ಯ: ಬರ್ತಾನ ಅಲ್ಲೆ ನಿನ ಗಂಡ ಆ ಗುಕ್ಕರಾಯ, ನಿನ್ನ ಸಿಂಗಾರ ನೋಡ್ಲಿಕ್ಕೆ (ಹನ್ನೊಂದ. ೦೦೫).

[ ಗುಕ್ಕು$_2$ + – ಅ$_7$ ]

**ಗುಕ್ಕರಿ** (ನಾ). ರಾಟೆಯಲ್ಲಿ ನೂತು ಕದಿರಿಗೆ ಸುತ್ತಿದ ದಾರದ ಉಂಡೆ: ಮರ್ಕಟನ ಕೈ ನೂಲು ಗುಕ್ಕರಿಯು ತೆಱನಂತೆ ಸಿಕ್ಕಿಕೊಂಡು ಕಾಮ ಕ್ರೋಧಾದಿಗಳೆನ್ನ ಹಿಕ್ಕಿ ಹೀರುತಲಿವೆ (ಪುರಂದ. ೫–೬೩ ಉಗಾಭೋಗ).

[ <ಕುಕ್ಕಡಿ ]

**ಗುಕ್ಕರಿಸು** (ಕ್ರಿ). ತುತ್ತುಮಾಡು; ನುಂಗು; ಭಕ್ಷಿಸು: ಕರೆಯದೆ ಕಾಡಿ ಕಂಟಿಸುವ ಕೂಂಟಣಿಯಂ ನೊಣಗಚ್ಚಿ ತಿಂಗೆ ಬೆಂಗುರುಟಿ ಬಳಾರಿ ಬಾಡಿಸುಗೆ ಚಂಡಿಕೆ ನುಂಗುಗೆ ಮಿಟ್ಟು ಕೂರ್ತು ಗುಕ್ಕರಿಸುಗೆ [ಪಾಠಾಂ. ತುತ್ತುಗಟ್ಟುಕುಱಸುಗೆ] ಕಾಳಿ ಕೊಳ್ಗೆ (ಲೀಲಾವ. ೨–೦೦೬).

[ ? + – ಇಸು$_3$ ]

**ಗುಕ್ಕಿಸು** (ಕ್ರಿ). ಉಗ್ಗುವಂತೆ ಮಾಡು; ಮಾತು ಹೊರಡದಂತೆ ಮಾಡು: ಮಾತಿಲಿ ಗುಕ್ಕಿಸಿ ನರಕದೊಳಗೆ ಹಾಕು ಯಾತನೆಬಡಿಸು ಯಮಪುರದಲ್ಲಿಡು (ಮೋಕ್ಷದೀ. ೨೦೨–೪). [ ಗುಕ್ಕು$_2$ + – ಇಸು$_3$ ]

**ಗುಕ್ಕು$_1$** (ಕ್ರಿ). ಮಾತನಾಡುವಾಗ ತಡವರಿಸು; ಉಗ್ಗು: ತಕ್ಕನಿಶಂ ತಕ್ಕನಲ್ತಾಂ ತಕ್ಕ ಮರಣಕೆ ಬೆಸಸೆನಲ್ಕಳುವಕ್ಕೆಯನಳರ್ಚನಲಿ ಗುಕ್ಕನೆ ಗುಕ್ಕಿ ತತ್ಸುತನ ತೆಗೆದು ಬಿಗಿಬಿಗಿದಪ್ಪಿ ಮುದ್ದಿಸಿ(ಮದೇಪು. ೬–೪೦). 'ಗುಕ್ಕ' ಪರಾ. [ ದೇ$_8$ ತೆಲು. ಗ್ರುಕ್ಕು ]

**ಗುಕ್ಕು$_2$** (ನಾ). ಗುಕ್ಕುವಿಕೆ; ಉಗ್ಗು: ಅಲ್ಲವೋ, ಗುಕ್ಕು ಇರಲಿಲ್ಲವೇ ನಿನಗೆ ಚಿಕ್ಕವನಾಗಿದ್ದಾಗ ? (ತಿಂಮತ. ೫೫); ಕುಂದಂದರ ಒಂದ ಗುಕ್ಕು! (ಪರಿಂ. ೦೪). [ <ಗುಕ್ಕು$_1$ ]

**ಗುಕ್ಕು$_3$** (ನಾ). ೧. ಒಂದುಸಲ ಬಾಯಿಗೆ ಹಾಕಿಕೊಳ್ಳುವಷ್ಟು ಆಹಾರ; ತುತ್ತು: ಹೆಂಡತಿಯ ಮೇಲೆ ರೇಗಿಕೊಂಡು ಒಂದು ಗುಕ್ಕು ಅನ್ನ ತಿಂದು ಹೊರಟ ರಾಮು (ಅನಾಮಿ. ೬೯); ಬಾಯಲ್ಲಿಯ ಗುಕ್ಕನ್ನು ನುಂಗಿರಲಿಲ್ಲ (ಹುಂದುಟ. ೦೦). ೨. (ಆಲಂ) ಹಂಗು: ಅಕ್ಕನ ಗುಕ್ಕಿನೊಳಾಗಬೇಡ (ಮಧುಮ. ೦೬).

**ಗುಕ್ಕಾಗು**=ತುತ್ತಾಗು; ಆಹುತಿಯಾಗು: ಕ್ರಮವಾಗಿ ಕೋಸಲ, ಕಲಿಂಗ . . . ಕೇರಳದೇಶಗಳೆಲ್ಲಾ ಅವನಿಗೆ ಲೀಲಾಮಾತ್ರದಿಂದ ಒಂದೊಂದು ಗುಕ್ಕಾದವು (ಭಜ್ಯೋತಿ. ೩೮). 'ಮುಕ್ಕು$_2$' ಪರಾ.

[ ದೇ$_8$ ತೆಲು. ಗ್ರುಕ್ಕ, ಗ್ರುಕ್ಕು ]

**ಗುಕ್ಕು$_4$** (ನಾ). ಕೊಕ್ಕು; ಚಂಚು (?): ಪೊಕ್ಕನು ರಣಾಂಕಣವನಿತ್ತ ದ್ರೋಣನು ಗರುಡಹಕ್ಕಿಯಾಕಾರದೋಳ್ಬಲಿಗಳಂ ನಿಲಿಸಿಯಾ ಹಕ್ಕಿತಲೆಗಂ

ಕೃಪನ ದುಶ್ಶಾಸನನ್ನಿಟ್ಟು ಶಲ್ಯನಂ ಭಗದತ್ತನ ಗುಕ್ಕಿನೊಳ್ಳಿಲಿಸಿ (ತುರಂಗ: ೯೯-೨). [ <ಕೊಕ್ಕು₂ ? ]

**ಗುಕ್ಕು₆** (ನಾ). ಎದೆಹಾರುವಿಕೆ; ಎದೆಯಂ ಬಡಿತ: "ಎರ್ದೆಹಾಱು ತುತ್ತಿಗೆ ಗುಕ್ಕು" (ಶಬ್ದಮಂ. ೮೦). 'ಎದೆಗುಕ್ಕು' ಪರಾ. [ ? ]

**ಗುಕ್ಕುಹಿಡಿ** (ಕ್ರಿ). ಮಾತು ಹೊರಡದಾಗ ತಡೆಯುಂಟಾಗು: ಸೋವಲೆಯೂ ಅಂಥದೆ ಆಭರಣಗಳನ್ನು ಈಗ ಧರಿಸಿದ್ದಳು ಪ್ರಭುಗಳಿಗೆ ಗುಕ್ಕುಹಿಡಿ ದಂತಾಯ್ತು (ಶಾಂತಲಾ. ೩೧೭).

[ ಗುಕ್ಕು₂ + ಹಿಡಿ₁ (<ಪಿಡಿ₁) ]

**ಗುಗು** (ನಾ). (?) : ಅಱು ಹೊಂಗೆ ಬ್ಯವಹಾರವಾಗಿ [ಮಾಡಿದ] ಗುಗುವಿನ ದಶಕದ ತಱೌದಾರಿಯಿಂದ × × × ಪಟುಕಂ (ಕಇ. I, ೩೩-೩೨ : 1246).

[ ? ]

**ಗುಗ್ಗ₁** 'ಗುಂಕ್ಕ' ನೋ.

**ಗುಗ್ಗ₂** (ನಾ). ಒಬ್ಬಾತನ ಹೆಸರು: ಕಲಿಯುಗನೀಱಂ ಮಱಿಪೊಕ್ಕ ರಾಶ್ರಯ ಮಾವನಕೇಸರಿ ವಿಸಿಷ್ಟ ಜನಪ್ರಿಯಮಪ್ ಅಯ್ನೂರ್ವರ ಕೋಟಿ ಶ್ರೀಮದ್ಗುಗ್ಗಂ (ಎಕ. III, ಮೈಸೂರು. ೩೬-೧೪ : ಸು. ೧೧೦?). [ ? ]

**ಗುಗ್ಗರಗೋಲು** 'ಗುಗ್ಗರಿಗೋಲು' ನೋ.

**ಗುಗ್ಗರಿ₁** 'ಗುಗ್ಗುರಿ₁' ನೋ.

**ಗುಗ್ಗರಿ₂** 'ಗುಗ್ಗುರಿ₂' ನೋ.

**ಗುಗ್ಗರಿಗಟ್ಟು** 'ಗುಗ್ಗುರಿಗಟ್ಟು' ನೋ.

**ಗುಗ್ಗರಿಗಲ್** 'ಗುಗ್ಗುರಿಗಲ್' ನೋ.

**ಗುಗ್ಗರಿಗೊಳ್ಳು** 'ಗುಗ್ಗುರಿಗೊಳ್ಳು' ನೋ.

**ಗುಗ್ಗರಿಗೋಲು, ಗುಗ್ಗರಗೋಲು** (ನಾ). (ಹಿಂದೆ ಶಾಲೆಗಳಲ್ಲಿ ತಪ್ಪು ಮಾಡಿದ ವಿದ್ಯಾರ್ಥಿಗಳಿಗೆ ವಿಧಿಸುತ್ತಿದ್ದ) ಒಂದು ಬಗೆಯ ದಂಡನೆ,–ಶಿಕ್ಷೆ: (೩). **ಗುಗ್ಗರಗೋಲು:** 'ಗುಗ್ಗರಗೋಲು': ಇದರಲ್ಲಿ, ತಪ್ಪು ಮಾಡಿದವನ ಕೈಗಳನ್ನು ಜೋಡಿಸಿ ಹುರಿಯಿಂದ ಕಟ್ಟಿ, ಅವನನ್ನು ಕುಕ್ಕುರು ಗಾಲಿನಲ್ಲಿ ನೆಲದ ಮೇಲೆ ಕೂಡಿಸಿ ಕಟ್ಟಿದ ಕೈಗಳ ಮೇಲ್ಭಾಗದಲ್ಲಿಯೂ, ಎರಡು ಮೊಣಕಾಲುಗಳ ಸಂದಿನಲ್ಲಿಯೂ ಒಂದು ದೊಡ್ಡ ಕೋಲನ್ನು ತೂರಿಸಿ ಉರುಳಿಸಿ ಬಿಡುವುದು (ಗುಡಸಾ. ೪): ಗುಗ್ಗರಗೋಲು ಹಾಕಿ ಹಿಂದುಗಡೆ ಮೊಣಸಿನಕಾಯಿ ಹೊಗೇ ಹಾಕುತಾರೆ (ಮಾಮರಾ. ೩೨).

[ ಗುಗ್ಗರಿ₂ (<ಗುಗ್ಗುರಿ₂) + ಕೋಲು₁ (<ಕೋಲ್₁) ]

**ಗುಗ್ಗರಿಸೆಟ್ಟಿ** 'ಗುಗ್ಗುರಿಸೆಟ್ಟಿ' ನೋ.

**ಗುಗ್ಗಳ** 'ಗುಗ್ಗಿಳ' ನೋ.

**ಗುಗ್ಗಿಳ, ಗುಗ್ಗಳ, ಗುಗ್ಗುರ್ಳ** (ನಾ). = ಗುಗ್ಗುಲ ೧: "ಕಂರಭೇಂ, ಉಲೂಖಲಕಂ, ಕೌಶಿಕಃ, ಗುಗ್ಗುಲುಃ, ಪುರಃ–ಶೆ ಗುಗ್ಗಿಳ ಗಿಡ, ಯರ್ಳದ ಗಿಡ, ಧೂಪದ ಗಿಡ" (ಸಿದ್ಧಾಂತಿ. ೧೦೫). **ಗುಗ್ಗಳ:** ಗುಗ್ಗಳವನ್ನು ಶುದ್ಧಿ ಮಾಡಿಕೊಂಡು ಪೊಟ್ಟಣಂ ಮಾಡಿ ತುಪ್ಪದ ಅನುಪಾನದಲಿ ಕೊಡಲು ಗುದವಾತ ಮಾಣ್ಬುದು (ವಾತಾಚಿ. ೮-೬). **ಗುಗ್ಗುರ್ಳ:** ಗುಗ್ಗುರ್ಳ ಹಾಲ ಮಡ್ಡಿಯ ಮಹಿಸಾಕ್ಷಿಯ ಮೆಗ್ಗಳಲೋಬಾನಕ ಪುರಾಳ (ದೇವಾಂಕು. ೬-೬೦): ಚಂದನಂ ಗುಗ್ಗುರ್[ಪಾಠಾಂ. ಗಗ್ಗಿ]ಳೆಮಿಾಚಲ್ ಬನ್ನಿ . . . ಪನೆಗಳೊಪ್ಪಿ ಕರ್ಪೂರ ಕಾಡೊಳೆತ್ತಂ (ಶಬಶಂ. ೩-೩೨): ಶಿವಲಿಂಗಮಂ ತೈಲ ಗುಡಸಿಕ್ಥ ಗುಗ್ಗುರ್ಳ ಸರ್ಜರಸಗಳಿಂದಷ್ಟಬಂಧನವನೆಸಗುತೆ (ಮಹಾವಿ. ೯-೧೮).

[ <ಸಂ. ಗುಗ್ಗುಲ ]

**ಗುಗ್ಗು** (ನಾ). ದಡ್ಡ; ಗಾವಿಲ; ಎಗ್ಗ; ಮೂಢವ್ಯಕ್ತಿ: ಆ ಹುಡುಗಿ 'ಇವನೆಲ್ಲೋ ಹಳ್ಳಿಯ ಗುಗ್ಗು' ಎಂದುಕೊಂಡಿರ್ತಾಳೆ (ನ ಡ ದಾ. II, ೧೧೦೦): ಅಂತೂ ಸೇತರ ಕಣ್ಣಿಗೆ ಮಣ್ಣು ಹಾಕಿದಾಳಲ್ಲ. ಅವರೆಂಥ ಗುಗ್ಗು ಇರಬೇಕು (ರಂಗನಾ. ೧೫೭); ಎಲ್ಲೋ ದೂರದ ಹಳ್ಳಿಯಿಂದ ಬಂದಾತೆ, ಏನೂ ಅರಿಯದ ಗುಗ್ಗು ಎಂದು ಆತ ತಿಳಿದಿದ್ದ (ವಾತ್ಸಲ್ಯ. ೫೯).

[ ← ಹಿಂ. ಘುಗ್ಘೂ./ಸಂ. ಘೂಕ ]

**ಗುಗ್ಗುಟುರು** (ಕ್ರಿ). ಗೂಬೆಯಂತೆ ಕೂಗು: ಗೂಬೆಯು ಗುಗ್ಗುಟುರಿದ್ದು ಅದನ್ನು ಕೊಂದಿದ್ದು, ಮಗು ಸಾಯದೆ ಉಳಿಯಲು ಸಾಧ್ಯವಿಲ್ಲವೆಂದು ಅವನು ಹೇಳಿದ್ದು . . . ಇವುಗಳನ್ನು ಹೇಳಿದೆ (ಮನೋನಂ. ೯೨).

[ ಗುರ್₀ + ಕುಟುರು₁ ]

**ಗುಗ್ಗುರಿ₁, ಗುಗ್ಗರಿ₁** (ನಾ). ೧. ಕಡಲೆಕಾಳುಗಳನ್ನು ನೆನಸಿ, ಬೇಯಿಸಿ, ಒಗ್ಗರಿಸಿ ಮಾಡುವ ತಿನಿಸು; ಉಸಲಿ: ಮಕ್ಕಳ ಕೈಯ ಮಾಣಿಕಮಾ ಗುಗ್ಗುರಿಯಂ ತೋಱಿ ನಂಬಿಸಿ ಕೊಳ್ವಂತೆ (ಧರ್ಮಾಮೃ. ೧೦-೮೩): ಸಿಲುಕು ಗಟ್ಟಿಗೆ ಬೀಸುಗಣ್ಣ ಗುಗ್ಗುರಿಯರಳು ಗೌಜು ಸುರಗಿ . . . ಸಿಂಹಪ್ರಕರ ವೆರಸಿ ಬೇಡರು ನೆರೆದರು (ಹಕಾ. ೫-೯); ಗಳೆಯೊಂ ಿ ಸೆಂಡುಕಾಲ್ಗಗ್ಗಳೆ ಗುಗ್ಗುರಿ ಮರ್ದುಮಡ್ಡಿಯರೆಗೂಳ್ಗಳಂಗಳೆನಿಪ್ಪವನಾಂತಂದದಿ ಬಲು ಲುಬ್ಧಕನಿಕರವಿರದೆ ನಡೆದತ್ತಾಗಳ್ (ತ್ರಿ ಪು ವಿ. ೨೬-೪೬); ಕುದಿಸಿದ ಕೂಳುಗಳ ಗುಗ್ಗುರಿಯ ಹೆಗ್ಗಿರಿ ಮೆಱೆದವಿದಿರಿನಲಿ (ಕೊರಶಾ. ೬-೨೬-೫೦); ಹುಗ್ಗಿ ಕಿಚ್ಚಡಿಯೆಱೆಯಪ್ಪ ಸೇವಗೆ ಹಿಂಡಿ ಗುಗ್ಗುರಿ ಸೂಸಲುಂಡಲಿಗೆ (ಭರಜ. ೨೦-೦೨೮). ೨. ಸಣ್ಣದು; ಚಿಕ್ಕದಾದುದು. 'ಗುಗ್ಗುರಿಸೆಟ್ಟಿ' ಪರಾ. **ಗುಗ್ಗರಿ₁:** ೧. "ಗುಗ್ಗರಿ ಸಂಡಮಕ್ಕು" (ಮಂಗರಾ. ೧೧೦-೬); ಬಂಧು ಬಳಗವು ಕೂಡಿ ಹೊಂದಿ ಜೋಗುಳ ಪಾಡಿ ಹಿಂದೆ ಸತ್ತವರ ಹೆಸರಿಟ್ಟು ಗುಗ್ಗರಿಯ ತಿಂದು ತೂಗುವವರಿ (ಸರ್ವಜ್ಞ. ೧೨೮೬): ಹೋಳಿಗೆ ಹುಗ್ಗಿ ಎಡೆ ಮಾಡಿದರೆ ಜೋಳದ ಗುಗ್ಗರಿ ಬೇಡುತ್ತಿದ್ದ (ಗಾದೆ).

[ ದೇಶ ತುಳು. ಗುಗ್ಗುರಿ; ತೆಲು. ಗುಗ್ಗಿಳ್ಲ ]

**ಗುಗ್ಗುರಿ₂, ಗುಗ್ಗರಿ₂, ಗುಗ್ಗುರು₂** (ನಾ). ೧. ಸುತ್ತಿಕೊಳ್ಳುವುದು; ಸುರುಳಿಯಾಗುವುದು; ಉರುಳಿಯಾಗುವಿಕೆ: (೩). ೨. ಮೈ ಗೂದಲು ನೆಟ್ಟಗೆ ನಿಲ್ಲುವುದು; ರೋಮಾಂಚನ: (೩). **ಗುಗ್ಗರಿ₂:** ೧. 'ಗುಗ್ಗರಿಗೋಲು' ಪರಾ. **ಗುಗ್ಗುರು₂:** ೨. ಅವಳು ಹಾಡಿದ ಗಾನದ ಪ್ರಸ್ತಾಪ ಎತ್ತಿದರೆ ಈಗಲೂ ಮೈಯೆಲ್ಲಾ ಗುಗ್ಗುರು ನೆಸಂಗೊಳ್ಳುವುದು (ಮುಸುಗ. ೧). [ ? ]

**ಗುಗ್ಗುರಿ₃** (ನಾ). ಒಂದು ಊರಿನ ಹೆಸರು: ಸ್ವಸ್ತಿ ಸಮಸ್ತ ಗುಣ ಸಂಪನ್ನರಪ್ಪ ಶ್ರೀಮತ್ಸಮಸ್ತಾಗಾಡದ ಪನ್ನಾಯದ ಗುಗ್ಗುರಿಯ ಮಾಚಿ ಸೆಟ್ಟಿಯ ಮಗಂ ಚಟ್ಟಯ್ಯನಾಯಕನಂ (ಸೌಇಇ. IX–1, ೦೪೯-೩ : 1081).

[ ? ]

**ಗುಗ್ಗುರಿಗಟ್ಟು, ಗುಗ್ಗರಿಗಟ್ಟು** (ಕ್ರಿ). ಮೈಗೂದಲು ನಿಮಿರಿ ನಿಲ್ಲು; ರೋಮಾಂಚನವಾಗು; ಅಕ್ಕಿಗಟ್ಟು (ಕರಾ): ಹೆಂಬೇಡಿತನದಿಂ ಪಲಸುಗಳ ಮೈಗೂಡೆ ಗುಗ್ಗುರಿಗಟ್ಟಿದವು (ಮದೇಪು. ೩-೩೨). **ಗುಗ್ಗರಿಗಟ್ಟು:** ಒಗ್ಗಿನ ಸುಗ್ಗಿಯ ಮೊಗ್ಗವು ಅರಳಿತ್ತು, ಸುಗ್ಗಲವ್ವೆಯ ಮುಖಕಮಲದಿ ಮೂಡಿತ್ತು ಗುಗ್ಗರಿಗಟ್ಟಿತ್ತು ಮೈಯೆಲ್ಲ (ಸಿದ್ಧಪು. ೩-೯೯).

[ಗುಗ್ಗುರಿ₂ + ಕಟ್ಟು₁ ]

**ಗುಗ್ಗುರಿಗಲ್, ಗುಗ್ಗರಿಗಲ್** (ನಾ). ಸಣ್ಣ ಕಲ್ಲು; ಹರಳುಗಲ್ಲು: ಬೆಳಗಾಡು ಗುಂಡು ಗುಗ್ಗು[ಪಾಠಾಂ. ಗ್ಗ]ರಿಗಲ್ಮೊರಡಿಗಳ ಬಳಗದಿಂ ಮೆಱೆದುದಾ ವಿಪಿನ (ಕುರಾಸಾಂ. ೪-೨); ಗುಗ್ಗುರಿಗಲ್ಗುಂಡುಗಲ್ಲು ಮೊರಡಿ ಬೆಟ್ಟ ನುಗ್ಗುಗಲ್ಗುದುರೆಗಲ್ಲುಗಳ ಮೊಗ್ಗರದೊಳ್ಸಾಲಪಡಬಾರದು (ಕು ರಾ ಸಾ ೦. ೨೦-೯೬). **ಗುಗ್ಗರಿಗಲ್:** ಮಣಲುಮಂ ಮಣ್ಣುಣಲಂಮಂ ತರಿವಣ ಲುಮಂ ಗುಗ್ಗರಿಗಲ್ಲುಮಂ ಗುಂಡುಗಲ್ಲುಮಂ . . . ಬಳ್ಳಿಯುಮಂ ಕಳ್ಳಿಯುಮಂ ಕಳೆದು ಪೋಗಿ (ಲೀಲಾವ. ೬-೨೦). [ ಗುಗ್ಗುರಿ₁+ಕಲ್₁ ]

**ಗುಗ್ಗುರಿಗೊಳ್ಳು, ಗುಗ್ಗರಿಗೊಳ್ಳು, ಗುಗ್ಗುರುಗೊಳ್ಳು** (ಕ್ರಿ). ಮೈ ನವಿರೇಳು; ರೋಮಾಂಚನಗೊಳ್ಳು: (೩). **ಗುಗ್ಗುರಿಗೊಳ್ಳು:** (೩).

**ಗುಗ್ಗುರುಗೊಳ್ಳು :** "ರೋಮಾಂಚಃ, ರೋಮಹರ್ಷಣಂ – ೨ ಮೈ ಕೂದಲು ಗುಗ್ಗುರುಗೊಳ್ಳುವಿಕೆ, ಪುಳಕಿತವಾಗುವಿಕೆ" (ಸಿದ್ಧಾಂತಿ. ೬೨).
[ ಗುಗ್ಗುರಿ₂ + ಕೊಳ್ಳು₁ (<ಕೊಳ್₁) ]

**ಗುಗ್ಗುರಿಮೈ** (ನಾ). ಪುಳಕಿತವಾದ ದೇಹ ; ಉತ್ಸಾಹಗೊಂಡ ಶರೀರ: ಗುಗ್ಗುರಿಮೈಯವರು ಗುಲಗಂಜಿಕಣ್ಣವರು ಒಬ್ಬರಿಲ್ಲವನ ಎಡಬಲಕೆ (ಲೋಕಗೀ. ೩೦೪). [ ಗುಗ್ಗುರಿ₂ + ಮೈ (<ಮೆಯ್) ]

**ಗುಗ್ಗುರಿಸು** (ಕ್ರಿ). ರೋಮಾಂಚನವುಂಟಾಗು ; ಮೈ ಮುಳ್ಳುಬರು : ಅಧಿಕ ರೋಮಾಂಚ ಮೈ ಗುಗ್ಗುರಿಸಲೊರೊರ್ಮೆ ವದನಕಳೆ ನಿಪ್ಪಳೆಯೊಳು ಪುದುಗಲು (ಮದೇಪು. ೨೯-೬). [ ಗುಗ್ಗುರಿ₂ + – ಇಸು₃ ]

**ಗುಗ್ಗುರಿಸೆಟ್ಟಿ, ಗುಗ್ಗರಿಸೆಟ್ಟಿ** (ನಾ). ೧. ಗುಗ್ಗುರಿ ವ್ಯಾಪಾರಮಾಡುವವನು : ಸಂಜೆಯ ವೇಳೆಯಲ್ಲಿ ಗುಗ್ಗುರಿಸೆಟ್ಟಿಗೆ ವ್ಯಾಪಾರ ಹೆಚ್ಚು (ರೂಢಿ). ಗುಗ್ಗರಿಸೆಟ್ಟಿ : ೨. ಸಣ್ಣಪುಟ್ಟ ವ್ಯಾಪಾರಮಾಡುವವನು ; ಕಿರಾಣಿವರ್ತಕ : ದೊಡ್ಡ ವ್ಯಾಪಾರಗಳಲ್ಲಿ ಲಾಭನಷ್ಟಗಳು ಎರಡೂ ದೊಡ್ಡವಾಗಿರುತ್ತವೆ. ಗುಗ್ಗರಿಸೆಟ್ಟಿಗಳಿಗೆ ಎರಡೂ ಸ್ವಲ್ಪವೇ (ಸಾಹಿಜೀ. ೬೪).
[ ಗುಗ್ಗುರಿ₁ + ಸೆಟ್ಟಿ ]

**ಗುಗ್ಗುರು₁** 'ಗುಂಗುಱು' ನೋ.

**ಗುಗ್ಗುರು₂** 'ಗುಗ್ಗುರಿ₂' ನೋ.

**ಗುಗ್ಗುರುಗೊಳ್ಳು** 'ಗುಗ್ಗುರಿಗೊಳ್ಳು' ನೋ.

**ಗುಗ್ಗುಲ, ಗುಗ್ಗಳ** (ನಾ). ೧. ಒಂದು ಬಗೆಯ ಮರ ಮತ್ತು ಅದರ ಅಂಟು ; ಲೋಬಾನ : "ಕುಂಭಃ, ಉಲೂಖಲಕಂ, ಕೌಶಿಕಃ, ಗುಗ್ಗುಲಃ, ಪುರಃ ಈ ೫ ಗುಗ್ಗುಳದ ಮರ" (ನಾಚಿರಾ. ೧೦೭); ಅಲ್ಲಿ ಒಬ್ಬ ವರ್ತಕನು ಒಂದು ಚೀಲ ಗುಗ್ಗುಲವನ್ನು ಹೊರೆದುಕೊಂಡು ಹೋಗುತ್ತಿದ್ದನು (ಪುರಾವಿ. ೮೯). **ಗುಗ್ಗುಳ :** ೧. "ಪುರಾಖ್ಯಂ, ಮಹಿಷಾಕ್ಷಃ, ಗುಗ್ಗುಳಃ, ಫಲಂಕಷಃ – ಈ ೪ ಗುಗ್ಗುಳಂ" (ಹಲಾಯು. ೦೦೦-೪೬೬) : "ಗುಗ್ಗುಳಂ ಮಹಿಷಾಕ್ಷಿ ಕೌಶಿಕಾಖ್ಯಂ" (ಮಂಗರಾ. ೪೩-೪೨) : ಸಲೆ ನಿಲೆ ಬೇವ ಗುಗ್ಗುಳದ ಕರ್ಪೂರಗೆಯಿಂದಮಗುರ್ವನಾಳ್ದು ಕತ್ತಲಿಸುವ ಚಂಡಿಕಾ ಭವನದೊಳ್ . . . ಸುವ್ರತಮಂ ಲಲಿತಾಂಗಿ ತಾಳ್ದಿದಳ್ (ಕಾದಂಪೂ. ೩.೩೫): ಶಿರೀಷವಿಂಗುಳವರಿಷ್ಟವಗೋತ್ಪಲ ಸಿಗ್ಗುಗುಗ್ಗುಳಂ ಮತ್ತಮನೇಕ ವೃಕ್ಷತತಿಯಿಂದೆಸೆದಿರ್ದುದು ತದ್ವನಾಂತರಂ (ನಳಚಂ. ೭೧); ಗುಗ್ಗುಳ – ಇದು ಒಂದು ಜಾತಿಯ ಗಿಡದ ಅಂಟು. ಧೂಪ ಹಾಕುವುದಕ್ಕೆ ಸರ್ವತ್ರವೂ ಸುಪ್ರಸಿದ್ಧವು (ಗೃಹವೈ. ೮). ೨. [ವೀಶೈ] ವೀರಭದ್ರದೇವರ ಸೇವೆಗಾಗಿ ತಲೆಯ ಮೇಲೆ ಗುಗ್ಗುಳ ಹೊತ್ತುಕೊಂಡುಹೋಗುವ ಒಂದು ಸೇವಾಕಾರ್ಯ. 'ಗುಗ್ಗುಳಕಾಯಕ' ಪರಾ. [ ಸಂ. ]

**ಗುಗ್ಗುಲು, ಗುಗ್ಗುಳು** (ನಾ).=ಗುಗ್ಗುಲ ೧ : "ಜಟಾಯಂ – ಗುಗ್ಗುಲು" (ಓಷಧಿ. ೫೯). **ಗುಗ್ಗುಳು :** "ಉಲೂಖಲಕಂ – ಗುಗ್ಗುಳು,ಗೂಗೆ" (ಓಷಧಿ. ೧೭). [ ಸಂ. ]

**ಗುಗ್ಗುಲುಧೂಪ** (ನಾ). = ಗುಗ್ಗುಳಧೂಪ : ಅವರು ಪ್ರತಿನಿತ್ಯವು ಆ ತಿರುಕ್ಕಡವೂರಲ್ಲಿ ಪ್ರಕಾಶಿಸುವ ಸ್ವಯಂಭುಲಿಂಗಕ್ಕೆ ಗುಗ್ಗುಲುಧೂಪ ಕೈಂಕರ್ಯವನ್ನು ಮಾಡುತ್ತಿದ್ದರು (ಪುರಾವಿ. ೪೯). [ಗುಗ್ಗುಲು+ಧೂಪ]

**ಗುಗ್ಗುಳ** 'ಗುಗ್ಗುಲ' ನೋ.

**ಗುಗ್ಗುಳಂಬೊತ್ತಿಸು** (ಕ್ರಿ). ಗುಗ್ಗುಳವನ್ನು ಹೊತ್ತಿಸು, – ಉರಿಸು : ಗುಗ್ಗುಳಂಬೊತ್ತಿಸೆಯುಂ ಮಸೆಗಲ್ಲಿನೊಳ್ ಮಸೆಯೆಯುಂ (ಅಜಪು. ೧೧-೧೧ ವ). [ಗುಗ್ಗುಳ (=ಗುಗ್ಗುಲ) + ಪೊತ್ತಿಸು]

**ಗುಗ್ಗುಳಕ** (ನಾ). = ಗುಗ್ಗುಲ ೧ : ನೆರಪಿ ಮಧುಕಂ ಗುಡಂ ಸಜ್ಜರಸಂ ಜೇನೆಯ್ಯೆ ಮೆಣಸು ಗುಗ್ಗುಳಕಂ ಸಿಂಧುರುಹಂ ಜಾಜೆಂಬಿವನಿಟ್ಟೊರಸುತ್ತಿರೆ ಕಾಲ ಬೀಡೆ ಬೇಗಂ ಕಿಡುಗುಂ (ಲೋಕೋಪ. ೯-೦೪೮). [ ಸಂ. ಗುಗ್ಗುಲಕ ]

**ಗುಗ್ಗುಳಕಾಯಕ** (ನಾ). ದೇವಾಲಯಂಗಳಿಂದ ಗುಗ್ಗುಳಧೂಪವನ್ನು ಮನೆಮನೆಗೆ ಕೊಂಡೊಯ್ದು ಭಿಕ್ಷೆ ಬೇಡುವ ವೃತ್ತಿ : (ಕಿ).
[ಗುಗ್ಗುಳ (=ಗುಗ್ಗುಲ) + ಕಾಯಕ ]

**ಗುಗ್ಗುಳಧೂಪ** (ನಾ). ಗುಗ್ಗುಳವನ್ನು ಹಾಕಿದ ಧೂಪ : ದೇವರಿಗೆ ಗುಗ್ಗುಳಧೂಪ ಹಾಕಿದರು (ರೂಢಿ). [ ಗುಗ್ಗುಳ (=ಗುಗ್ಗುಲ) + ಧೂಪ ]

**ಗುಗ್ಗುಳು** 'ಗುಗ್ಗುಲು' ನೋ.

**ಗುಗ್ಗೆ** 'ಕೊಗ್ಗಿ₂' ನೋ.

**ಗುಚ್ಚ, ಗುಚ್ಚಿ** (ನಾ). ೧. ಹೂವು ಮೊದಲಾದುವುಗಳ ಗೊಂಚಲು, – ಕುಚ್ಚು : "ತೊಡಂಬೆ, ತೊಡಬೆ . . . ಗುಚ್ಚಂ–ಈ ೭ ಪುಷ್ಪಮಂಜರಿ" (ಕಠಸಾ. ೧೧-೧೯೬) : "ತೊಡಬೆ ತೊಡಂಬೆ ಜೊಂಪ ಗೊಂಚಲ್ ಗುಚ್ಚಂ ಸೊಗಯಿಪ ತೊಂಗೆಯೆ ತೊಂಗಲ್ ಬಗೆಯಲ್ ಬುಧರಿಂದೆ ಗುಚ್ಛಕಕ್ಕಂ ನಾಮಂ" (ಕವಿಕಂ. ೬೪). **ಗುಚ್ಚಿ :** ೨. ಪೊದೆ ; ಪೊದರು : ಕೈಹಿಡಿದು ಕೊಂಡು ಹತ್ತಿರವೇ ಇದ್ದ ಒಂದು ಗುಚ್ಚಿಯ ನೆರಳಿಗೆ ಕರೆದುಕೊಂಡು ಹೋಗಿ ಕೂರಿಸಿದಳು (ವಂಶವೃ. ೨೮೨). [ <ಸಂ. ಗುಚ್ಛ ]

**ಗುಚ್ಚಿ** 'ಗುಚ್ಚ' ನೋ.

**ಗುಚ್ಚು** 'ಗುಜ್ಜು₂' ನೋ.

**ಗುಚ್ಚೂರಿ** (ನಾ). ಚಿಕ್ಕಚೂರಿ ; ಬಾಕು : ಅವನ ಹೃದಯದಲ್ಲಿ ಗುಚ್ಚೂರಿಯಿರಿದಂತಾಯಿತು (ಶ್ರೀರಾಪ. ೬). [ ಗುಜ್ಜು₂ + ಚೂರಿ ]

**ಗುಚ್ಛ** (ನಾ). ೧. ಹೂವು ಮೊದಲಾದುವುಗಳ ಕುಚ್ಚು, –ಗೊಂಚಲು, – ಮಂಜರಿ : "ಪುಷ್ಪಮೆಸೆವ ಗುಚ್ಛಂ ಸ್ತಬಕಂ" (ವಸ್ತುಕೋ. ೩೦-೧೧) ; ನೂತನ ಚೂತಾವನಿಜಾತ ಗುಚ್ಛ ನಿವಹ ವ್ಯಾಜಂಗಳೊಳ್ ನಿಂದು ಮೆಲ್ಲನೆ ತಣ್ಪಂ ತನಿಗಂಪುಮಂ ಪಡೆದು ತೀಡಿತ್ತೊಂದು ಮಂದಾನಿಲಂ (ಸುಕುಮಾ. ೪-೪೫) ; ಶಾಂತಲೆ . . . ಅಚ್ಚಮಲ್ಲಿಗೆಯ ಪುಷ್ಪಗುಚ್ಛವೊಂದನ್ನು ತೆಗೆದುಕೊಂಡು ಶಾರದೆಯ ಗುಡಿಗೆ ಓಡಿದಳು (ಶಾಂತಲಾ. ೪೨). ೨. ಪೊದೆ ; ಪೊದರು : "ಕ್ಷುಪಃ, ಗುಚ್ಛಃ–ಈ ೨ ಪೊದಲ್" (ಹಲಾಯು. ೯೫-೫೫). ೩. ಮೂವತ್ತೆರಡು ಅಥವಾ ಎಪ್ಪತ್ತು ಎಳೆಗಳುಳ್ಳ ಮುತ್ತಿನ ಹಾರ: ರಶ್ಮಿಕಲಾಪಗುಚ್ಛನಕ್ಷತ್ರಮಾಲಾರ್ಧಗುಚ್ಛಮಾಣವಕಾರ್ಧಮಾಣವಕಂಗಳೆಂಬ ಪನ್ನೊಂದು ನಾನಾರತ್ನ ಸುವರ್ಣಪದಕ ವಿರಚನಾದಿ ಭೇದದಿಂ (ಆದಿಪು. ೮-೫೪ ವ). 'ಗಂತ್ಸ' ಪರಾ. [ ಸಂ. ]

**ಗುಚ್ಛಕ** (ನಾ).=ಗುಚ್ಛ ೧ : ಇಂದ್ರನೀಲದ ಪಚ್ಚೆಯ ಗುಚ್ಛಕಂಗಳ ತೋರಣದಂತೆಸೆವ ದ್ರಾಕ್ಷಾಫಳದ ಪರಿಪಂಕ್ತಿಯಿಂದೊಪ್ಪಿದುದು (ಹರಿವಿಂ. ಚ. ೬-೪೫ ವ). [ ಸಂ. ]

**ಗುಚ್ಛಕಂದ** (ನಾ). ಒಂದು ಬಗೆಯ ಗೆಡ್ಡೆ : "ಗುಲುಂಚ್ಛಕಂದಃ – ಗುಚ್ಛಕಂದ" (ಓಷಧಿ. ೫೦). [ಗುಚ್ಛ + ಕಂದ₂]

**ಗುಚ್ಛದ್ರಾಕ್ಷೆ** (ನಾ). ಗೊಂಚಲು ಗೊಂಚಲಾದ ಫಲಗಳನ್ನು ಬಿಡುವ ದ್ರಾಕ್ಷೆ ; ಚಪ್ಪರದ್ರಾಕ್ಷೆ : ದ್ರಾಕ್ಷೆ . . . ಗುಚ್ಛದ್ರಾಕ್ಷೆ . . . ಸುಖಾರ್ಹ ಸಾರ್ವರ್ತುಕವಾದ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೦೦).
[ ಗುಚ್ಛ + ದ್ರಾಕ್ಷೆ ]

**ಗುಚ್ಛಬಂಧ** (ನಾ). [ಸಂಗೀತ] ಹಾಡುಗಳಲ್ಲಿ ಒಂದು ಬಂಧ: ವೆಂಕಟರಮಣದಾಸರು ಈ ಕಿರುಹೊತ್ತಗೆಯಲ್ಲಿ . . . ಬಂಧ ತಾನಗಳ ವಿವಿಧರೂಪಗಳನ್ನು (ಗುಚ್ಛಬಂಧ ಮತ್ತು ನಾಗಬಂಧ) ವಿಸ್ತಾರವಾಗಿ ವರ್ಣಿಸಿದ್ದಾರೆ (ಸಂಗೀತ. ೭೦). [ ಗುಚ್ಛ + ಬಂಧ ]

**ಗುಚ್ಛಹೊಂಗೆ** (ನಾ). ಒಂದು ಬಗೆಯ ಮರ : "ದಂಡಧಾವನಃ– ಗುಚ್ಛಹೊಂಗೆ, ಬೇಲ" (ಓಷಧಿ. ೬೪). [ ಗುಚ್ಛ + ಹೊಂಗೆ ]

**ಗುಚ್ಛಹೊನ್ನೆ** (ನಾ). ಒಂದು ಬಗೆಯ ಮರ : "ಗುಂಜಾ – ಗುಂಜಿ, ಗುಚ್ಛಹೊನ್ನೆ" (ಓಷಧಿ. ೪೯). [ ಗುಚ್ಛ + ಹೊನ್ನೆ ]

**ಗುಜಗುಂಪಲು** (ನಾ).=ಗುಜುಗುಂಪಲು : ಹೊಸ ತೆರಿಗೆಗಳ ವಿಚಾರ ಎಲ್ಲೆಲ್ಲಿಯೂ ಗುಜಗುಂಪಲು (ಜಂಗಾಳ್ಯ. ೨೭೮).
[ <ಗುಜಗುಜ + ಗುಂಪಲು ]

**ಗುಜಗುಜ** (ನಾ). ಒಂದು ಅನುಕರಣಧ್ವನಿ : ಮರಣವಿನ್ನೇನೆಂಬ ಜನದಬ್ಬರದ ಗುಜಗುಜನಚಿದು ಯಮುನಾವರನದೀತಿರಕ್ಕೆ ಬಂದನು ಭೀಷ್ಮ ವಹಿಲದಲಿ (ಸಂಭಪ. ೧೩-೨೪).

**ಗುಜಗುಜನೆ** (ಅ). ಅಸ್ಪಷ್ಟವಾಗಿ ; ತಮ್ಮತಮ್ಮಲ್ಲಿಯೇ : ಅಷ್ಟ ಪ್ರಧಾನರೂ ಪಂಚಸೇನಾಪತಿಗಳೂ ಗುಜಗುಜನೆ ಮಾತನಾಡಿ ಕೊಳ್ಳುತ್ತಿರುವರು (ಸುಗುಗಂ. ೯-೧೦). [ ಗುಜಗುಜ + – ಅನೆ₁ ]

**ಗುಜಗುಜಮಾಪುರಿ** (ನಾ). (ಉಕ). ಹೆಣ್ಣುಮಕ್ಕಳು ಹಾಡಿಕೊಂಡು ಆಡುವ ಒಂದು ಬಗೆಯ ಆಟ : ಗುಜಗುಜಮಾಪುರಿ ಆಡೋಣ ಗುಜೇರ ಮಾಪುರಿ ಆಡೋಣ ಸಾಮುದಂಡಿ ಆಡೋಣ (ಜನಗೀ. ೯೦). [ ? ]

**ಗುಜಯ್ಯ** (ನಾ). ಒಬ್ಬಾತನ ಹೆಸರು : ಕರಚುಗರ ಗುಜಯ್ಯಂಗೆ ಪೊನ್ನ ಳು ಒಮ್ಮರ್ಗ[ತ್ತ]ಲಂ ಕೊಟ್ಟ (ಎಕ. VIII, ಸೊರಬ. ೪೦೩-೧೮ ; 986).
[ ? ]

**ಗುಜರ** ' ಗುಜ್ಜರ ' ನೋ.

**ಗುಜರಾತ** ' ಗುಜರಾತು ' ನೋ.

**ಗುಜರಾತು,** ಗಂಜರಾತ (ನಾ). ಒಂದು ದೇಶದ ಹೆಸರು : ಗುಜರಾತಿನ ಮುಖ್ಯ ಪಟ್ಟಣಗಳು ಹೆಚ್ಚಾಗಿ ರೈಲುಮಾರ್ಗದಲ್ಲಿವೆ (ಭೂವಿವ. ೩೪೧). **ಗುಜರಾತ :** ಗುಜರಾತ ಮತ್ತು ರಾಜಸ್ಥಾನದಲ್ಲಿನ ಜಾನಪದನೃತ್ಯಗಳು ತುಂಬಾ ಆಕರ್ಷಣೀಯ (ಅಭಾಸ್ಮ. ೧೧೪).
[ ←ಮರಾ. ಗುಜರಾತ್, ಗುಜರಾಥ್ ; ಹಿಂ. ಗುಜರಾತ್ ]

**ಗುಜರಾಥಿ,** ಗುಜ್ಜರಾತಿ (ನಾ). ೧. ಗುಜರಾತ್‌ದೇಶದವನು : (ಕ). ೨. ಗುಜರಾತಿ ಜನರ ಭಾಷೆ. ೩. ಒಂದು ಜಾತಿಯ ಬಾಳೆ : ಬಾಳೆಯ ಕುಲದಲ್ಲಿ ಗುಜರಾಥಿ, ರಸಬಾಳೆ . . . ಎಂದು ಈ ಪ್ರಕಾರ ಹಲವು ವಿಧವಾದ ಬಾಳೆಯ ಕುಲಗಳುಂಟು (ಕೃಷಿಶ್ರ. ೧೫೬). **ಗುಜ್ಜರಾತಿ :** ೧. ಕನ್ನೋಜಿಗಳು ಪಂಡಿತರು ಖುರಾಸಾನಿ ಮನ್ನೆಯ ಗುಜ್ಜರಾತಿಗಳು (ಕಂನವಿ. ೧೨-೬೬). [ ←ಮರಾ. ಗುಜರಾಥೀ ; ಹಿಂ. ಗಂಜರಾತೀ ]

**ಗುಜರಾನ್** ' ಗುಜರಾನು ' ನೋ.

**ಗುಜರಾನು,** ಗುಂಜರಾನ್ (ನಾ). ಜೀವನೋಪಾಯ; ಜೀವನ ನಿರ್ವಹಣೆ: ನಿನ್ನ ಗುಜರಾನು ಬಗ್ಯೆ ಯಿಾ ಗ್ರಾಮದಲ್ಲಿ ಯಿನಾಮತಿ ಮಾಲ್ಸೈದ ಅಮಿಾನ (ಎಕ. IX, ದೊಡ್ಡಬ. ೧೨-೬ ; ಸು. 1785) ; ನಾವು ವೀರ ರಾಜೇಂದ್ರ ವಡೆಯರವರು ನಮ್ಮ ಹಿರಿಯರು ಸಹಾ ಗುಜರಾನು ಮಾಡಿದೆವು (ರಾಜೇಂದ್ರ. ೧೫೦). **ಗುಜರಾನ್ :** ಪರಿವಾರ ಜನರುಗಳ ಗುಜರಾನ್ ಬಗ್ಗೆ ೨,೪೦,೦೦೦ ಕಂಠೀರಾಯಿ ವರಹ ನಗದಿ ಹಣವನ್ನು ಪ್ರತ್ಯೇಕಿಸಿ (ಮಹಾವಂ. II, ೧೨). [ ←ಪಾರ. ಹಿಂ. ಗುಜರಾನ್ ]

**ಗುಜರಾಯಿಸು** (ಕ್ರಿ). ೧. ಕಳುಹಿಸು ; ತಲುಪಿಸು : ಆತನು ಅರ್ಜಿಯನ್ನು ಗುಜರಾಯಿಸುವುದಕ್ಕೆ ಪ್ರಯತ್ನಿಸಿದನು (ಖೂರಾಜ. ೧೩೩) ; ತಮ್ಮ ಅರ್ಜಿ ಯನ್ನು ಗುಜರಾಯಿಸಬೇಕೆಂದು ಹರಿದಾಸರ ಯತ್ನ (ಕಾವೇರಿ. ೯೩). ೨. ಬರೆ : ಹತ್ತಾರು ಜನ ಇದ್ದರು ಆ ಕಂಪನೀಲಿ ; ಬರೀ ಲೇಖನಿ ಹಿಡಿದು ಗರಗರ ಅಂತ ಗುಜರಾಯಿಸುವವರೇ ಆರು ಮಂದಿ (ಜಂಗೂಲಿ. ೧೨೨).
[ ಗುಜರಾ₀ + – ಇಸು₃. P ←ಹಿಂ. ಗುಜರಾನನಾ ]

**ಗುಜರಿ,** ಗುಜ್ಜರಿ₃ (ನಾ). ೧. ಸಂಜೆ ವೇಳೆಯಲ್ಲಿ ವ್ಯಾಪಾರಮಾಡುವ ಅಂಗಡಿ : (ಕ). ೨. ಚಿಕ್ಕ ವ್ಯಾಪಾರ ; ಚಿಲ್ಲರೆ ವ್ಯಾಪಾರ : ಹೊರಗಡೆ ಮೆಟ್ಟಲುವರೆಗೂ ಗುಜರಿ ಅಂಗಡಿಗಳು (ದಿಲ್ಲಿಪ. ೩೪). ೩. ಹಳೆಯ ಸಾಮಾನುಗಳನ್ನು ಮಾರುವ ಸ್ಥಳ : ಈ ಟೈರಿಗೆ ಕಂಪನಿ ಬೆಲೆ ಅರುವತ್ತು ರೂಪಾಯಿ. ಗುಜರಿಯಲ್ಲಿ ಐವತ್ತಕ್ಕೆ ಸಿಕ್ಕಬಹುದು (ರೂಢಿ). **ಗುಜ್ಜರಿ₃ :** ೪. ಸಂಜೆಯ ವೇಳೆ ಮಾಡುವ ವ್ಯಾಪಾರ : ಕಳಿಂಗ ನಗರಿಯೊಳ್ ಗುಜ್ಜರಿಯ ಹೊತ್ತಾಯಿತು (ಸೌಗಂಧಿ. ೧೮೫-೧೨).
[ ←ಪಾರ. ಹಿಂ. ಮರಾ. ಗುಜರೀ, ಗಂಜ್ಜರೀ ]

**ಗುಜರಿಹೊತ್ತು** (ನಾ). ಗುಜರಿ ವ್ಯಾಪಾರದ ಸಮಯ ; ಸಾಯಂಕಾಲ: ಈಗ ಗುಜರಿಹೊತ್ತಲ್ರೇ ? ಅಂಗಡಿಬಿಟ್ಟು ಬಂದಾರ್ರೇ ? (ಹೊಸಂಸಾ. ೪೨) : ಆ ಬೀದಿಯಲ್ಲಿ ಗುಜರೀಹೊತ್ತಿನಲ್ಲಿ ತಿರುಗಾಡುತ್ತಾ, ನೆವನೆವದಲ್ಲಿ ಆ ಹೆಂಗಸಿನ ಮನೆಯ ಮುಂದೆ ನಿಲ್ಲುತಾ . . . ಒಲವುಮಾಡುತಾ ಬಂದನು (ಮುಸುಗ. ೪). [ ಗುಜರಿ + ಹೊತ್ತು₂ (<ಪೊಟ್ಟು) ]

**ಗುಜಲು** ' ಗುಜುಲು ' ನೋ.

**ಗುಜಿಗುಜಿ** (ನಾ). ಪಿಸುಮಾತಿನಿಂದುಂಟಾಗುವ ಧ್ವನಿಯನ್ನು ಅನುಕರಿಸುವ ಶಬ್ದ. 'ಗುಂಜಿಗುಂಜಿಗೊಳ್' ಪರಾ.

**ಗುಜಿಗುಜಿಗೊಳ್** (ಕ್ರಿ). = ಗುಜುಗುಜಿಸು: ಸೌಂದರ್ಯಮೋರಂತಾ ಕಾಂತೆಗನಂತರಂ ನೆರೆಯ ತಾಯುಂ ತಂದೆಯುಂ ನಿಚ್ಚಲುಂ ಗುಜಿಗುಜಿ ಗೊಂಡು ಪರ್ಯಾಲೋಚಿಸಿ (ಶಾಂತಿಪು. ೯-೧೭ ವ) ; ಗುಜಿಗುಜಿಗೊಳುತ್ತ ಮೋರೆರೋರ್ವರೊಳ್ನುಡಿಯುತ್ತಂ (ಪಾರ್ಶ್ವಪು. ೧೧-೬೯ ವ).
[ ಗುಜಿಗುಜಿ + ಕೊಳ್₁ ]

**ಗುಜುಗುಂಪಲು** (ನಾ). ಗುಜುಗುಜು ; ಗದ್ದಲ : ರಾಜಪರಿವಾರದಲ್ಲಿಯೂ ಗುಜುಗುಂಪಲು ಆರಂಭವಾಯಿತು (ಕಲಾಧ. ೭).
[ <ಗುಜುಗುಜು + ಗುಂಪಲು ]

**ಗುಜುಗುಜನೆ** (ಅ). ಅಸ್ಪಷ್ಟವಾಗಿ ; ತಮ್ಮತಮ್ಮಲ್ಲಿಯೇ : ರಾಜರು ಗುಜುಗುಜನೆ ಮಾತನಾಡಿಕೊಳ್ಳಲು ಮೊದಲುಮಾಡಿದರು (ವಚಭಾ. ೯೩).
[ ಗುಜುಗುಜು + – ಅನೆ₁ ]

**ಗುಜುಗುಜಿ** (ನಾ). ಪಿಸುಮಾತಿನಿಂದುಂಟಾಗುವ ಧ್ವನಿಯನ್ನು ಅನುಕರಿಸುವ ಶಬ್ದ : ಅದಂ ಕಂಡು ಕೆಲದೊಳ್ ಬರ್ಪ ಮಂತ್ರಿಮಹತ್ತರರೊಳಾದ ಗುಜುಗುಜಿಯಂ ಕಿವಿಗಿವಿಗೇಳ್ದು (ಅನಂಪು. ೧೩-೮೭ ವ) ; ಪುರಜನಂಗಳ ಗುಜುಗುಜಿಯನಂತಃಪುರಮಹತ್ತರಿನಱಿದು (ಪುಷ್ಪಪು. ೦೩-೯೦ ವ).

**ಗುಜುಗುಜಿಸು** (ಕ್ರಿ). ಗುಜುಗುಜು ಮಾತನಾಡು ; ಗುಂಟ್ಟಾಗಿ ಮಾತನಾಡಿಕೊಳ್ಳು ; ಪಿಸುಮಾತನಾಡು : ವ್ಯಾಕುಲಿತಯುತಹೃದಯ ರಾಗುತನೇಕರುಂ ಗುಜುಗುಜಿಸುತಿರಲು (ಬಸಪು. ೬೦-೫) ; ಕುರುಬಲದ ಮೆಳೆಯಲ್ಲಾಡಿತಲ್ಲಿಯದಲ್ಲಿ ಗುಜುಗುಜಿಸಿ (ಕುಮ್ಯಾಳ. ೯-೩೯) ; ದಿಮ್ಮಿದರ್ ಗುಜುಗುಜಿಸದಿರಿ (ಜಬಪು. ೨-೨೬) ; ಆಕೆ ಸ್ವಸ್ಥೆಯಾಗಿಲ್ಲವೆಂದು ಅಂತಃಪುರ ಜನವೆಲ್ಲವೂ ಗುಂಜುಗುಂಜಿಸುತ್ತಿರುವುದು (ಗುರುಚ. ೮೬)
[ ಗುಜುಗುಜು + – ಇಸು₃ ]

**ಗುಜುಗುಜು** (ನಾ). ೧. ಒಂದು ಅನುಕರಣಶಬ್ದ : ತೀವಿ ಗುಜುಗುಜು ವೆಂಬ ಗೀಜಗಂ ಕೊಳರ್ವಕ್ಕಿ . . . ಜೀವಿವುವು ಭಯವನುಳಿದು (ಪ್ರಭುಪು. ೩-೧೪.) ೨. ಒಳಗೊಳಗೇ ಆಡಿಕೊಳ್ಳುವ ಮಾತು ; ಪಿಸುಮಾತು: ಗುಜುಗುಜುಯೆನ್ನುತ್ತಿರದಿರಿ ಮುನಿಗಳಿರ (ಬಸಪು. ೦-೪೪) ; ಯುವತಿಯರ ಗುಜುಗುಜಿನ ಶೂನ್ಯೋತ್ಸವದ ನೃಪಮಂದಿರದ ಜಾಡ್ಯದ ಜವನಿಕೆಯ ಜಂಜಡವ ಕಾಣುತ (ಕೊರಡಾ. ೨-೨-೨೬) ; ಶ್ರಾವಸ್ತಿಯಲ್ಲಿ ಎಲ್ಲಿ ನೋಡಿದರೂ, ಇದೇ ಗುಜುಗುಜು (ಹತ್ತುಮು. ೦೫೨). ೩. ಗುಪ್ತವಾಗಿ ನಿಂದಿಸುವಿಕೆ ; ನಿಂದಿಸಿ ಆಡಿಕೊಳ್ಳುವುದು ; ಜನಾಪವಾದ : " ಗುಜುಗುಜುಯೆನೆ ಬಿನುಗುನುಡಿಗಳೆಂದಱಿಗೆ ಬಾಧರ್ " (ಭಾರವಿ. ೫೦) ; ಚರ್ಚನೆ ಗುಜುಗುಜು ಪಾಣ್ಬರೊಳಚ್ಚುಂಬಕತಂ (ಮುದತಿ. ೮-೩೭) ; ಸಡಗರಂಗಳು ಗುಜುಗುಜುಗಳಾಜಿಡಿಗಳನುಚಿತಕಾರಣಂಗಳು (ಬಸಪು. ೪೦-೬೨) ; ಇವಳ ಕೈ ಹಿಡಿದದ್ದು ಯಾರೋ ನೋಡಿ ' ಗುಜುಗುಜು '

ಆದಾಗ ಕೇಳಿದ್ದರೆ ? (ಮೂರುದಾ. ೪೬). ೪. ಅನುಮಾನ ; ಸಂಶಯ : ಗುಜುಗುಜದೇವುದೌಷ್ಟಿಕವಿಷಂ ಪರೆಗುಂ ಜಲದಿಂದಮಿಾಂಟವಂ (ಖಮುದ. ೧೩-೬೬).

**ಗುಜುಗುಜುಗುಟ್ಟು** (ಕ್ರಿ).=ಗುಂಜುಗುಂಜಿಸು : ಜನಂಗಳ್ ಗುಜುಗುಜುಗುಟ್ಟಲದನಾ ತಪಸ್ವಿ ಕೇಳ್ದು (ಪುಣ್ಯಾಸ್ರ. ೩-೨೦ ವ) ; ಪಲವು ಪಿಸುಣರ್ ಪಾತಕರ್ ನೆರೆದು ತಾವೆಲ್ಲರೊಲವಿನಿಂ ಮಂತಣಂಗೊಳುತೆ ಗುಜುಗುಜುಗುಟ್ಟೆ (ಪದ್ಮರಾ. ೬-೨) ; ಗೂಡಿಂಗೆ ಸಾರಿ ಗುಜುಗುಜುಗುಟ್ಟಿದವು ಹಕ್ಕಿ (ಸಮ್ಯಕೌ. ೧೦-೨೪) ; ಓಹೋ ಗ್ರಾಮಕ್ಕೆ ಏನೋ ತೊಂದರೆ ಬಂತು ಎಂದು ಗುಜುಗುಜುಗುಟ್ಟುತ್ತಿದ್ದರು (ಹುಟ್ಟಿಹ. ೧೨೩).
[ ಗುಜುಗುಜು + ಕುಟ್ಟು$_1$ ]

**ಗುಜುಗುಜುಗೊಳ್** (ಕ್ರಿ). = ಗುಂಜುಗುಂಜಿಸು : ಗುಜುಗುಜುಗೊಂಡಾರ್ದರವುರರಂಬರತಳದೊಳ್ (ಶಂಪಭಾ.೧೦-೧೧೬); ದ್ರೋಹರಂತೆ ಗುಜುಗುಜುಗೊಳ್ಳದೆ ಪೆರ್ಗಣದಂತೆ [ಪೊಸಯುಷಿಗೆ] ಗುಜುಗುಜುಸದೆ (ಧರ್ಮಾಮೃ. ೫-೯೯) ; ಒಡನೆ ಗುಜುಗುಜುಗೊಳುತ್ತುಂ ನೆರವಿ ಬರುತವಿರೆ (ತಿರುರ. ದೀ. ೧೪-೪). [ ಗುಜುಗುಜು + ಕೊಳ್$_1$ ]

**ಗುಜುಗುಜುಗೋಷ್ಠಿ** (ನಾ). ತಮ್ಮತಮ್ಮಲ್ಲೇ ಆಡಿಕೊಳ್ಳುವ ಜನರ ಗುಂಪು ; ಒಳಗೊಳಗೇ ಮಾತನಾಡಿಕೊಳ್ಳುತ್ತಿರುವ ಜನರ ಗುಂಪು : ಬರಲು ಪಾರ್ಥನ ಕಂಡು ಪುರಜನ ಹರೆದುದಲ್ಲಿಯದಲ್ಲಿ ದುಗುಡದ ಭರದ ಗುಜುಗುಜುಗೋಷ್ಠಿಗಳ ಜನಜನದ ಮುಸುಕುಗಳ (ಕುಮಾ್ರ. ೧೬-೩).
[ ಗುಜುಗುಜು + ಗೋಷ್ಠಿ ]

**ಗುಜುಗುಜುಮಾತು** (ನಾ). ತಮ್ಮತಮ್ಮಲ್ಲೇ ಆಡಿಕೊಳ್ಳುವ ಮಾತು ; ಪಿಸುಮಾತು : ಆದರೆ ಅವನ ಮುಸುಕು ಚರ್ಚೆಗೆ ಮತ್ತು ಗುಜುಗುಜು ಮಾತಿಗೆ ಎಡೆಯನ್ನು ಕೊಟ್ಟಿತು (ಮುತಸ. ೪೦).
[ ಗುಜುಗುಜು + ಮಾತು$_1$ ]

**ಗುಜುಗುಟ್ಟು** (ಕ್ರಿ).=ಗುಂಜುಗುಂಜಿಸು : ಗುಜುಗುಟ್ಟುತ್ತಿದರಾಂತ ಮಾತಿನೆ ಪೆಟಗೋಂಡಂದು ಪೇಟುತ್ತಿರಲ್ (ಮ್ಯಸೂಮ. ೬-೪) ; ಮಾರ್ಗದಲ್ಲಿ ಅಲ್ಲಲ್ಲಿ ಜನರು ಗುಂಪಾಗಿ ನಿಂತು ಗುಜುಗುಟ್ಟುತ್ತಿದ್ದರು (ಜಿದೇವ. ೫೪).
[ <ಗುಜುಗುಜು + ಕುಟ್ಟು$_1$ ]

**ಗುಜುಟು, ಗುಜಟು, ಗುಜ್ಜಿರು** (ನಾ). ೧. ಗುಂಜುಗುಂಜಾಗಿರುವಿಕೆ ; ಕೆದರಿರುವುದು : ಹೊಗೆಮೊಗದ ಕಿಡಿಗಣ್ಣ ಕೆಮ್ಮಿಾಸೆಗಳ ಗುಜುಟಿನ ಜುಂಜುಗೇಶದ ವಿಗಡನೆದ್ದನು ಬಂದು ಹಿಡಿದನು ದ್ರೌಪದಿಯ ಸೆಱಗ (ಕುಮಾ್ರಸ. ೧೪-೧೦೦). ೨. ಒಂದಕ್ಕೊಂದು ಹೆಣೆದುಕೊಂಡಂತಿರುವ ಪೊದರು : ಸೀಳ್ಗಲ್ಲಿಂದೂರು ಗರ್ಭೀಕೃತದ ಕೆಸಟಿಂದೆ ಮುಳ್ಳು ಗುಜುಟಾ ಘನವಪ್ಪ ಪೇರಡವಿಯಿಂ . . . ಪಥಂ ಭಯದಿನೆಸೆಗುಂ (ವೀಶ್ಯಪು. ೪-೧೮-೧೪). **ಗುಜಟು :** ೨. ಗುಜಟು ಗುಲ್ಮದ ಕುಂಜರಾಶ್ವವ್ರಜದ ಮೆಳೆಯೊಣಗಿದುದು (ಕುಮಾ್ರಶ. ೩-೧೦). **ಗುಜ್ಜಿರು :** (ಗು). ೩. ಗುಂಗುರಾದ ; ಸುರುಳಿಗೊಂಡ. ' ಗುಜ್ಜಿರುಮಂಡೆ ' ಪರಾ.
[ ದೇ ॥ ತುಳು. ಗುಜ್ಜಿರ್ ]

**ಗುಜುಟುಗೊಂಬು** (ನಾ). ಒಂದಕ್ಕೊಂದು ಹೆಣೆದುಕೊಂಡಿರುವ ಕೊಂಬೆ : "ಕಟಲೆಯೆಂದು ಮುಳ್ಳಿರಸಿದ ಗುಜುಟುಗೊಂಬು" (ಶಮುದ. ಸ. ೩೩ ವ್ಯಕ್ತಿ). [ ಗುಜುಟು + ಕೊಂಬು$_1$ ]

**ಗುಜುಟುದಲೆ** (ನಾ). ಗುಂಜುಗುಂಜಾಗಿರುವ ಕೂದಲುಳ್ಳ ತಲೆ ; ಕೆದರುದಲೆ : ಕೆಂಗಲಿಪ ತೋರಗಣ್ಣು ಕೆಮ್ಮಿಾಸೆ ಗುಜುಟುದಲೆ ಬಳೆದ ಕಾಳೋರಗನನೇಳಿಸುವ ತೋಳ್ (ಹಚಕಾ. ೫-೨) ; ಹಿಡಿದ ಚಕ್ರದ ಗುಜುಟುದಲೆಯು ಶಂಖದ ಮಣಿಯ ತೊಡಿಗೆಗಳ . . . ನಾನಾ ಜೋಗಿವಡೆವೆರಸು . . . ಬಂದಂ (ಸಿದ್ಧರಾ. ೬-೩೭) ; ಕಾರೊಡಲ್ಕೆಮ್ಮಿಾಸೆ ನಿಡುದೋಳು ದೀರ್ಘಶರೀರ ಗುಜುಟು[ಪಾಠಾಂ. ಗುಂಜುಟಿ]ದಲೆ (ಕುರಾಸಾಂ. ೨೭-೩೬).
[ ಗುಜುಟು + ತಲೆ$_1$ ]

**ಗುಜುಟುಮಂಡೆ,** ಗುಜ್ಜಿರುಮಂಡೆ (ನಾ). ೧. = ಗುಜುಟುದಲೆ : ಗುಜುಟುಮಂಡೆಯ ತಿರಿವ ಸೊರೆಗಳಿಟ್ಟಗೆಯ ಹುಡಿಯಂ ಪೂಸಿದಂಗದ . . . ನಾನಾಪರಿಯ ಜೋಗಿಗಳ್ (ಸಿದ್ಧೇಪು. ೫-೩). **ಗುಜ್ಜಿರುಮಂಡೆ :** ೨. ಗುಂಗುರುಕೂದಲುಗಳಿಂದ ಕೂಡಿದ ತಲೆ : ಅವನದು ಗುಜ್ಜಿರು ಮಂಡೆ (ರೂಢಿ). [ ಗುಜುಟು + ಮಂಡೆ$_1$ ]

**ಗುಜುಟುಮಿಾಸೆ** (ನಾ). ಜುಂಜುಮಿಾಸೆ : ಕಮಲದಳನಿಭವಿಲೋಚನಂ ಗುಜುಟುಮಿಾಸೆ ಕರಮೆಸೆವ ಕುಂಚಿತ ಚಿಬುಕ (ಪಾಶೋಪು. ೯-೧೫).
[ ಗುಜುಟು + ಮಿಾಸೆ ]

**ಗುಜುಟೇಳ್** (ಕ್ರಿ). ಗುಂಜುಗಟ್ಟು ; ಜಡೆಗಟ್ಟು : ಮಹೋಗ್ರವಿಲೋಚನದ ಗುಜುಟೆದ್ದ ತಲೆನವಿರ . . . ರಾಕ್ಷಸ ಜನಸಹಿತ ನಡೆತಂದನಾ ರಾಕ್ಷಸ ಕುಲಾಧೀಶ (ತೊರರಾ. ೬-೫೩-೪೩).
[ ಗುಜುಟು + ಏಳ್$_1$ (<ಏೞ್$_1$) ]

**ಗುಜ್ಜ$_1$** ' ಕುಜ್ಜ ' ನೋ.

**ಗುಜ್ಜ$_2$** (ನಾ). ೧.=ಗುಜರಾತು. ' ಗುಜ್ಜರಾಷ್ಟ್ರ ' ಪರಾ. ೨. ಗುಜರಾತಿ ಜನ : ಗುಜ್ಜರೋಣಿಯಲಿ ರಾಣಿಜೋಡಿಯಲಿ ತಿರುಗಿ ತಿರುಗಿ ಬಂದೆ (ಪಲಾನ. ೩೨). [<ಗುಜ್ಜರ ]

**ಗುಜ್ಜಗೆ$_1$** ' ಗೊಜ್ಜಗೆ ' ನೋ.

**ಗುಜ್ಜಗೆ$_2$** (ನಾ). ಒಂದು ಜಾತಿಯ ಹುಳು : ಒಱಲೆ ತಗುಣೆ ಪೇನು ಸೀರು ತೇಟು ಇಂದ್ರಗೋಪ ತೇರಂಟೆ ಗುಜ್ಜಗೆ ಬೆದೆವುಟು ತುಂಬುಟು (ಪಸಾರ. ೯೫-೧೪). [ ? ]

**ಗುಜ್ಜಗೊರವ** (ನಾ). = ಗುಜ್ಜುಗೊರವ : ಜಲಧಿಯ ಗುಣ್ಪು ಗುಜ್ಜಗೊರವಂಗೆ ಕರಾಗ್ರದೊಳೆಯ್ದುದದೊಂದು ಮು × × ಳಿಗೆನೆ (ಎಕ. XI, ಹೊಳಲ್ಕೆ. ೧೨೦-೪೩ ;ಸು. 1240). [ ಗುಜ್ಜ$_1$ (<ಕುಜ್ಜ) + ಗೊರವ ]

**ಗುಜ್ಜಡಿ** (ನಾ). ೧. ಚಿಕ್ಕಕಾಲು ; ಸಣ್ಣಪಾದ : ಅಬ್ಬಕೋರಕ ವೃಕ್ಷ ಜಾತಮಿತ ಗುಣಯುತೆ ಗುಜ್ಜಡಿ ಸುಹಂಸಯಾನೆ (ನವಮೋ. ೦೯-೬). ೨. ನಿಧಾನವಾದ ನಡಗೆ ; ಮಂದಗಮನ : ಪಡಿಯಱತಿಯರೆಳ್ತಂದು ರತಿಯ ಕೈಪಿಡಿಯೊಳ್ಗುಜ್ಜಡಿ ಗಾಡಿಯೊಳಾದಂ ಪಿಡಿಯಂ ಸೋಲಿಪಳು (ಉದ್ಭದೇ. ೫-೧೫). [ ಗುಜ್ಜ$_1$ (<ಕುಜ್ಜ) + ಅಡಿ$_1$ ]

**ಗುಜ್ಜತನ** (ನಾ). ೧. ಸಣ್ಣತನ ; ಕಿರಿಯತನ. ೨. (ಅಲಂ) ವಿನಯ : ಲಜ್ಜೆ ಸೂತಕವಳಿದು ಗುಜ್ಜತನದಲಿ ಉಳಿದು ಉಜ್ಜುಗದಿ ಶಿವನ ಅಱಿದ ಶಿವಶರಣರ ಹೆಜ್ಜೆಯಲಿ ಇರಿಸೊ (ಸರ್ವಜ್ಞ. ೨೮೭).
[ ಗುಜ್ಜ$_1$ (<ಕುಜ್ಜ) + – ತನ ]

**ಗುಜ್ಜನಂದಿ** (ನಾ). ಒಬ್ಬಾತನ ಹೆಸರು: ಕದ್ದೆಱಯ್ಯನ ಮಗಂ ಗುಜ್ಜನಂದಿ (ಎಕ. XII, ತಿಪಟೂ. ೧೦-೦೭ ; ಸು. 930 ? ). [ ? ]

**ಗುಜ್ಜಮಾವು** (ನಾ). = ಗುಜ್ಜುಮಾವು : ನನೆವೆರಸು ಗುಜ್ಜಮಾವಿನ ಕೊನರ್ಗಳನುಡಿದುಡಿದು ನೀಡೆ (ಅರ್ಧನೇ. ೫-೯೪).
[ ಗುಜ್ಜ$_1$ (<ಕುಜ್ಜ) + ಮಾವು ]

**ಗುಜ್ಜರ, ಗುಜರ, ಗುಜ್ಜಾರ** (ನಾ). ೧. = ಗುಜರಾತು : ಆದಿ ದೀರ್ಘಕ್ಕೆ ಹ್ರಸ್ವಂ . . . ಗೂರ್ಜರ-ಗುಜ್ಜರ (ಶಮುದ. ೨೭೦ ಪ್ರಯೋ) ; ತತ್ತಱದಱಿದು ಹೊಯ್ದಾಡಿದರು ಗುಜ್ಜರದ ರಾವುತರು (ಕುಮಾ್ರಭೀ. ೪-೭೦) ; ಸೌರಾಷ್ಟ್ರ ಗುಜ್ಜರ ವಿಮಲ ಕಾಶ್ಮೀರಾಂಧ್ರ ಗೌಳ ಪ್ರಮುಖದೇಶಂಗಳಲಿ ನೋಡುತ ತಿರುಗಿದುದು ಸೇನೆ (ತೊರರಾ. ೪-೧೦-೨). **ಗುಜರ :** ೨. ಗುಜರಾತದ ಜನ : ಗುಜರರೆಂಬ ಜನರು ಇಲ್ಲಿ ವಾಸಮಾಡುವದರಿಂದ ಇದಕ್ಕೆ ಗುಜರಾಥ ವೆಂದೆನ್ನುತ್ತಾರೆ (ಮುಂಬಭೂ. ೭೮). **ಗುಜ್ಜಾರ:** (ಕ). [<ಸಂ. ಗುರ್ಜರ]

**ಗುಜ್ಜರಪಟ್ಟೆ** (ನಾ). ಗುಜರಾತು ದೇಶದಲ್ಲಿ ತಯಾರಿಸಿದ ರೇಷ್ಮೆ ಬಟ್ಟೆ,—ಪಟ್ಟಾವಳಿ : ಗೂರ್ಜರಪಟ್ಟೆ–ಗುಜ್ಜರಪಟ್ಟೆ (ಶಮುದ. ಸ. ೩೦೭ ಪ್ರಯೋ). [ ಗುಜ್ಜರ + ಪಟ್ಟೆ₂ ]

**ಗುಜ್ಜರಾತಿ** ' ಗುಜರಾಥಿ ' ನೋ.

**ಗುಜ್ಜರಾಷ್ಟ್ರ** (ನಾ).=ಗುಜರಾತು : ಪೊಂಬಟ್ಟೆ[ಸಿರಿಗಣ ಗುಜ್ಜರಾಷ್ಟ್ರದ ಪಟ್ಟೆ ವಾರಾಣಸಿಯ ದಸರಿಯ ಹೊತ್ತಿ ಸಿರಿವಣ್ಣ (ಬಸಪು. ೧೧–೨೬). [ ಗುಜ್ಜ₂ + ರಾಷ್ಟ್ರ ]

**ಗುಜ್ಜರಿ₁, ಗುಂಜ್ಜಾರಿ** (ನಾ). ೧. (ಮಂಚದ ಕಾಲುಗಳಲ್ಲಿರುವ) ಕುಳ್ಳಾಗಿರುವ ಬೊಂಬೆ : ಪೊಸಕುಸುಮತಳ್ಪಗಳ ಗುಜ್ಜರಿಯ ಮಂಚ ಸುತ್ತಲು ಕುಂಚ ಕಾಳಂಜ ಪಾನ ಪನ್ನೀರ ಗಿಂಡಿ (ಗುಭಜ. ೨–೩೬). **ಗುಜ್ಜಾರಿ :** ೨. ಕುಳ್ಳ ; ಗಿಡ್ಡ ; ವಾಮನ : ಈ ಕುರೂಪಿಯಾದ ದಪ್ಪ ಹೊಟ್ಟೆಯ ಗುಜ್ಜಾರಿ ಯಕ್ಷನು ದೇವೇಂದ್ರನಾದ ಶಕ್ರನ ಆಸನದಲ್ಲಿ ಕುಳಿತಿರುವನು (ಬುದ್ಧ.ಪ. ೬೪); ಅದರಲ್ಲಿ ಮಲಗಿರುವವನು ನಿಡುಮ್ಮೆಯುವ ನಾಗಲಿ ಗುಜ್ಜಾರಿಯೇ ಆಗಲಿ, ಹಾಸಿಗೆಯು ಅವನಿಗೆ ಹಾಳಿತವಾಗುವುದು (ಅಜಿತ. ೨೭).

**ಗುಜ್ಜರಿಗಾಲಮಂಚ**=ಕುಳ್ಳಾದ ವಿಗ್ರಹಗಳಿಂದ ಅಲಂಕೃತವಾದ ಕಾಲಿನ ಮಂಚ : ಸಜ್ಜೆಯ ಮನೆಗಳೊಳಗೆ ಚಿನ್ನಮಯವಾದ ಗುಜ್ಜರಿಗಾಲಮಂಚಗಳು (ಅಂಜಚ. ೩–೧೦೪) ; ಗುಜ್ಜರಿಗಾಲಮಂಚ ಮೇಲುಪ್ಪರ ಮಂಚ ಹೂಮಂಚ . . . ಸೆಳೆಮಂಚವೊಪ್ಪವಾಂತೆಸೆದು ವಲ್ಲಲ್ಲಿ (ಭರಚ. ೯೦೫–೨೬). [ <ಗುಜ್ಜು₂ ? ]

**ಗುಜ್ಜರಿ₂** (ನಾ). ೧. ಗುಜರಾತು ದೇಶ. ' ಗುಜ್ಜರಿದುಕೂಲ ' ಪರಾ. ೨. [ಸಂಗೀತ] ಒಂದು ರಾಗದ ಹೆಸರು : ದೇಶಿ ಗುಜ್ಜರಿಗಳಿಂದೀಶ ನಿಮ್ಮಂ ಹಾಡಿ ದೇಶಾಕ್ಷಿ ಗೌಳದೆ ಮಹೇಶ ನಿಮ್ಮಂ ಹಾಡಿ (ಲಿಂಗಾರ. ಹ. ೫೩೧–೫) ; ನಾಟಿ ದೇಶಿ ಗುಜ್ಜರಿಯಾ ಹಿಂದೋಳಂ ವಸಂತಭೈರವಿ ಗೌಳಮನಾ ವೀಣೆಯಲ್ಲಿ ಮುನಿ ಬಾಜಿಸಿದಂ (ವೀರವಿ. ೬–೮೪). [ <ಸಂ. ಗುರ್ಜರೀ ]

**ಗುಜ್ಜರಿ₃** ' ಗುಂಜರಿ ' ನೋ.

**ಗುಜ್ಜರಿದುಕೂಲ** (ನಾ). =ಗುಜ್ಜರಪಟ್ಟೆ : ಇಳಿಗೆ ಪೊಸತಹ ಮಂಚಟಿಕೆ ಗುಜ್ಜರಿದುಕೂಲಗಳ ಅಳವಡಿಸಿ (ಕೋಗಯು. ೩–೩೪). [ ಗುಜ್ಜರಿ₂ + ದುಕೂಲ ]

**ಗುಜ್ಜರಿಮಂಚ** (ನಾ). ಕಾಲುಗಳಲ್ಲಿ ಗಿಡ್ಡಾಗಿರುವ ಗೊಂಬೆಗಳಿರುವ ಮಂಚ : ಸಜ್ಜೆಮನೆಯೊಳಗೀರ್ವರು ಗುಜ್ಜರಿಮಂಚದೊಳು (ಕಠಿಕ. ೪೬–೯). [ ಗುಜ್ಜರಿ₁ + ಮಂಚ ]

**ಗುಜ್ಜರಿವೇಣಿ** (ನಾ). ಒಂದು ಬಗೆಯ ಫೇಣಿ : ಸಣ್ಣಗೋದುವೆಯ ಹದನಾಗಿ ಹಿಟ್ಟಂ ಮಾಡಿ ಎಣ್ಣೆಯೊಳು ಕಲಸಿ ಹಪ್ಪಳದಂತೆ ಲತೆಯಿಱಿದು . . . ಬೆರಳುದ್ದದೊಳು ಕೊಯ್ದು ಬೆಣ್ಣೆಗಾಸಿದ ತುಪ್ಪದೊಳು ಪಾಕ ಮಾಡೆ ಗುಜ್ಜರಿವೇ[ಪಾಠಾಂ. ಪೇ]ಣಿವೆಸರಾದುದು (ಸೂಪಶಾ. ೧–೪೫). [ ಗುಜ್ಜರಿ₂ + ವೇಣಿ (<ಫೇಣಿ) ]

**ಗುಜ್ಜಾನೆ** (ನಾ). ಕುಳ್ಳಾದ ಆನೆ; ಗಿಡ್ಡಾದ ಆನೆ : ಗೋಪು ಗುಜ್ಜಾನೆ ಮರಿ (ಇಚನೋ. ೪೫). [ ಗುಜ್ಜು₂ + ಆನೆ₁ ]

**ಗುಜ್ಜಾರ** ' ಗುಜ್ಜರ ' ನೋ.

**ಗುಜ್ಜಾರಿ** ' ಗುಂಜ್ಜರಿ₁ ' ನೋ.

**ಗುಜ್ಜಿ** (ನಾ). ೧. ಕುಳ್ಳಾಗಿರುವವಳು ; ಗಿಡ್ಡಿ : ಕುರುಡಿ, ಕಿವುಡಿ, ಗುಜ್ಜಿ, ಕೆಂಚಿ (ಭಾಷಾಭೂ. ೧೪೧ ಅಡಿಟಿ). ೨. (ಅಲಂ) ಪ್ರೀತಿಯಿಂದ ಪುಟ್ಟಿ, ಮುಂದ್ದಾದ ಎಂಬರ್ಥದಲ್ಲಿ ಬಳಸುವ ಪದ : ಅಹುದು ನನ್ನ ಗುಜ್ಜೀ, ನೀನೇನ ಮಾಡುವಿ (ಪಪಶೀ. ೧೦೪) ; ಗುಜ್ಜಿನನ ಕಂದಯನ ಗೆಜ್ಜೆಸಪ್ಪಳ ಕೇಳಿ ನಿಬ್ಬಣದೆತ್ತು ಬೆದರ್ಯಾವ (ಗರತಿ.೪೩). (ಗು). ೩. ಚಿಕ್ಕದಾದ ; ಸಣ್ಣ : ಗೆಜ್ಜೆ ಕಟ್ಟಿದ ಕಾಲು, ಹೆಜ್ಜೆಹಾಕುತ ಕುಣಿದು ಸಜ್ಜು ನಿನ್ನಾಡು ಬೆಳವಲಕೆ ಚೌಡಯ್ಯ ಗುಜ್ಜಿ ಕಣದೊಳಗೆ ಬೆಳತನಕ (ಕನ್ನಜಾ. ೧೩೪). [ ಗುಜ್ಜ₁ + – ಇ₂ ]

**ಗುಜ್ಜಿಗೆ** ' ಗೊಜ್ಜಗೆ ' ನೋ.

**ಗುಜ್ಜಿರು** ' ಗುಜುಜು ' ನೋ.

**ಗುಜ್ಜಿರುಮಂಡೆ** ' ಗುಜುಜುಮಂಡೆ ' ನೋ.

**ಗುಜ್ಜು₁** (ಕ್ರಿ). " ಹೆಜ್ಜೆಯ ಮೇಲೆ ಹೆಜ್ಜೆಯಿಡು " (ಶಿವಗೀ. ಕೋಶ) : ಅಜ್ಜೆಯನೆಬ್ಬಿಸಿ ಮಜ್ಜಿಗೆ ಪುಳುಕಿಸಿ ಅಜ್ಜೆಯರಾಜು ಹೊತ್ತಾಡಿಯರಾಹೋ ನಿರ್ಜರ ನಿರ್ವಾಣಪ್ರಿಯ ಬೋಳೇಶನ ಗುಜ್ಜಿ ಗುಜ್ಜಿ ಕುಣಿದಾಡಿಯರಾಹೋ (ಶಿವಗೀ. ೮೩೬) [ ? ]

**ಗುಜ್ಜು₂, ಗುಂಜು₃, ಗುಚ್ಚು, ಗುರ್ಜು** (ನಾ). ೧. ಸಣ್ಣದಾಗಿರುವಿಕೆ ; ಕುಳ್ಳಾಗಿರುವಿಕೆ ; ಗಿಡ್ಡಾಗಿರುವಿಕೆ : ಹಯಾನನಂಗೆ ಸದ್ಭಾವಮನಾಳ್ದ ಗುಜ್ಜುಪಮೊಗಪ್ಪಿನಮೊರ್ವಳನಂಗರಾಜ್ಯಲಕ್ಷ್ಮೀವಿಭವಂ ಗೃಹಾಂಗಣದ ಮುಂದೆಸೆದಿರ್ದಪೊಲೊಪ್ಪಿ ತೋಱಿದಳ್ (ಶಾಂತಿಪು. ೮–೩); ಉಕಾರಕ್ಕೆ . . . ಕೆಂಚು, ಗುಜ್ಜು, ಬೆಜ್ಜು (ಶಮುದ. ೨೦೦ ಪ್ರಯೋ). ೨. ವಾಮನ ; ಕುಳ್ಳ ; ಗಿಡ್ಡ : ಬಳಸಿದ ಗುಜ್ಜುಗಳ್ ನೆರೆದ ಮೇಳದ ಕನ್ನೆಯರ್ (ಪಂಪಭಾ. ೪–೪೦). ೩. ಬಾವಣಿ ನಿಲ್ಲುವುದಕ್ಕೆ ಕೊಡುವ ಕುಳ್ಳಾದ ಊರೆಗೋಲು ; ಮೋಟುಕಂಬ ; ಸಣ್ಣ ಊರೆಗಂಬ : ಮನೆವಾಗಿಲ ಗುಜ್ಜಂ (ಬಾಹುಬ. ೧೪೦–೧೧). ೪. ಗಾಡಿಯ ಪಾರಿಗೆ ಸಿಕ್ಕಿಸುವ ಗೂಟ : ಗಾಡಿಯ ಗುಜ್ಜನ್ನು ಹಿಡಿದು ಮೇಲೆ ಹತ್ತಿದರು (ರೂಢಿ). ೫. (?) : ಪದಸಮಿತಿಯುಂ ಹಸ್ತಂ ಗ್ರೀವಂಗಳುಂ ಕೃಶಪೊಪ್ಪೆ ದೊಡ್ಡಿದವು ನಯನಂ ಹ್ರಸ್ವಂ ತಾಳ್ಯೋಷ್ಠಮುಂ ಹನುಸಂಕುಲಂ ವದನದೆಡೆ ಕೇಶಾಲ್ಪಂ ಸಂಕ್ಷಿಪ್ತಮಾಗುವ ಗುಜ್ಜುಮಂ ನಿಧುವನ ಸಮುದ್ಭೂತಂ ನೂತಂ ಮೃಗಾನ್ವಯ ಸಿಂಧುರಂ (ಬಂಹರಿ. ೨–೪೯). (ಗು). ೬. ಸಣ್ಣದಾಗಿರುವ ; ಚಿಕ್ಕ ; ಗಿಡ್ಡ : ಗುಜ್ಜಾಗದ ಕಲ್ಲಿತ್ತಕ್ಕೆ ಮೆಯ್ಯೋರದ ಹರಿಯನಿಪಂ ವಿಷ್ಣು ಜಿಷ್ಣು ಪ್ರತಾಪಂ (ಪ್ಪುಆರಿ. ೦೯೩೭. ೨೮–೨೦; 1148). **ಗುಂಜು₃ :** (೬). **ಗುಚ್ಚು :** (೬). **ಗುರ್ಜು :** ೧. ' ಗುರ್ಜುಗೊಳ್ ' ಪರಾ. [ ಗುಜ್ಜ₁ (<ಕುಜ್ಜು) + – ಉ₁ ]

**ಗುಜ್ಜುಕತ್ತಿ** (ನಾ). ಸಣ್ಣಕತ್ತಿ ; ಬಾಕು : " ಈಳೀ, ಕರವಾಳಿಕಾ–ಎ ತಂಬುವಕತ್ತಿ, ಮೊಟಕುಕತ್ತಿ, ಗುಜ್ಜುಕತ್ತಿ " (ಸಿದ್ಧಾಂತಿ. ೨೨೮). [ ಗುಜ್ಜು₂ + ಕತ್ತಿ ]

**ಗುಜ್ಜುಕಾಲು** ' ಗುಂಜ್ಜುಗಾಲ್ ' ನೋ.

**ಗುಜ್ಜುಕೋಲು** ' ಗುಜ್ಜುಗೋಲು ' ನೋ.

**ಗುಜ್ಜುಗರೆ** (ಕ್ರಿ). ನಿಧಾನವಾಗು ; ಮಂದವಾಗು : ಹಟ್ಟುಗೆಗೆ ಗುಜ್ಜುಗರೆದು ಮೆಟ್ಟುವ ಮೆಲ್ಲಡೆ (ಅನಂಪು. ೧೨–೭೫). [ ಗುಜ್ಜು₂ + ಕರೆ₁ ]

**ಗುಜ್ಜುಗಾಲ್, ಗುಜ್ಜುಕಾಲು** (ನಾ). ಮೋಟಾದ ಕಾಲು; ಗಿಡ್ಡಕಾಲು; ಗುಜ್ಜುಗಾಲ್, ನಿಟ್ಟೊಡಲ್, ಕಟ್ಟಾಯದ ಮೆಯ್ಸಿರಿ (ರಾಮಾಶ್ವ. ೮೪–೨೬). **ಗುಜ್ಜುಕಾಲು :** ಈ ಕಿರುಕಂಗಳ ನಾನೇ ಬಗೆದೆ ಗುಜ್ಜುಕಾಲು ಪೇರುವದರ ಕ್ಕೊಲಿದೆ (ಗಜೇಶ. ೫–೦೩೦). [ ಗುಜ್ಜು₂ + ಕಾಲ್₁ ]

**ಗುಜ್ಜುಗಿಡ** (ನಾ). ಸಣ್ಣಮರ : ಯಾವುದಾದರೊಂದು ಗುಜ್ಜುಗಿಡದ ನೆರಳಿನಲ್ಲಿ ಕೂತು ಭಾಗವತ ಪಠಣೆಮಾಡುವದು ರಾಯರ ದಿನಚರ್ಯವಾಗಿತ್ತು (ಕಥವಿ. ೨೭೫). [ ಗುಜ್ಜು₂ + ಗಿಡ (<ಗಿಡು) ]

**ಗುಜ್ಜುಗುಜುಕು** (ನಾ). ೧. ಪಿಸುಂಗುಂಟ್ಟುವಿಕೆ ; ಗುಸುಂಗುಟ್ಟುವಿಕೆ : ಚಾರುಚಾಮರದಾತಪತ್ರದಲೋರಣೆವ ಸೀಗುರಿಯ ಹೊದಱಿನಲೂರ

ಹೊಱವೊಂಟಳು ಮಹೀಸುತೆ ಗುಜ್ಜುಗಱುಕಿನಲಿ (ತೊರರಾ. ೬-೫೩-೩೭): ಸಭೆಯಲ್ಲಿ ಗುಜ್ಜುಗುಱುಕಲ್ಲಿ ಗುಡ್ಡೆಣಿಕೆಯಂ ಮಾಡುತಿರ್ದರಾಗ (ಸಮ್ಯಕ್. ೨-೯೫): ಮಾಸಂಕದ ಮಡದಿಯರು ಮನೆಯೊಳಂಟೊಸರಿಸದೆ ಗುಜ್ಜುಗುಱುಕು ಆ ಸುದತಿಯರಿಂದಹುದು (ನೇಮಿಸಂ. ೧೮-೮೩). ೨. ಮನಸ್ಸಿನ ಅಳುಕು; ಸಂಶಯ; ಅನುಮಾನ: ಗುಜ್ಜುಗುಱು [ಱು] ಕಿಲ್ಲದೆನಸುಂ ಪಜ್ಜಳಿಸಿರೆ ದಿಟ್ಟಿ ನಿಪ್ಪೆಯಿಂ ಮುಕ್ತಿಪದಕ್ಕುಜ್ಜುಗಿಸಿ (ಧರ್ಮನಾ. ೧-೭): ಮಗಳೆ ಕೇಳೀ ದೊಡ್ಡ ಕಾರ್ಯಕ್ಕೆ ನಿನಗಿನಿತು ಗುಜ್ಜುಗುಱುಕೇನು ಕಾರಣ ಹೇಳು (ಸಮ್ಯಕ್. ೫-೨೫): ಕುಱುದಱಿಯದೆ ಮಾಣೆನು ಕೆಂರು ಭೂವರನಱಿಕೆಯ ಮಕ್ಕಳೆಲ್ಲರನು ಬಱಿವಾತಲ್ಲ ಪಾಲಿಸು ಬೆಸನನು ಗುಜ್ಜುಗುಱುಕ ಮಾಡದೆ ಮಾನವೇಂದ್ರ (ನೇಮಿಸಂ. ೨೮-೨೮).

[ ಗುಜ್ಜು$_2$ + ಗುಱುಕು ]

**ಗುಜ್ಜುಗೆಜ್ಜೆ** (ನಾ). ಸಣ್ಣಗೆಜ್ಜೆ: ಚರಣದ ಗುಜ್ಜುಗೆಜ್ಜೆ ಝಣೆರೆಂದೆನೆ (ವೃಷವಿ. ೩-೬೦). [ ಗುಜ್ಜು$_2$ + ಗೆಜ್ಜೆ$_1$ ]

**ಗುಜ್ಜುಗೊಂಬು** (ನಾ). ೧. ಸಣ್ಣ ಕೊಂಬೆ; ಮೋಟುರೆಂಬೆ: ನನೆಯಿಂ ಪೂಗೊಂಚಲಂ ಕಾಯನಂತೆನಸುಂ ತಾಳ್ದಿದ ಗುಜ್ಜುಗೊಂಬು (ಕಬ್ಬಿಗ. ೬೩): ಪೊಸ ಮೊಗ್ಗೆಗಳನಾಂತ ಗುಜ್ಜುಗೊಂಬಿಂದ . . . ಇಮ್ಮಾವುಗಳ ಬಳಗ ಸೊಗಯಿಸಿದುದು (ಸೌಂದಪು. ೫-೮೮). ೨. ಗಾಡಿಯ ಪಾರಿಗೆ ಸಿಕ್ಕಿಸುವ ಗೂಟ; ಗುಜರ್ಜು: ಗಾಡಿಗೆ ಗುಜ್ಜುಗೊಂಬು ಹಾಕಬೇಕು (ರೂಢಿ).

[ ಗುಜ್ಜು$_2$ + ಕೊಂಬು$_1$ ]

**ಗುಜ್ಜುಗೊಂಬೆ** (ನಾ). = ಗುಜ್ಜುಗೊಂಬು ೧: ಸವಿಯು ಣ್ಮಾವ ಗುಜ್ಜುಗೊಂಬೆಯೊಳ್ಪಿರಿದು ನುಸುಳ್ದು ಮೆಲ್ಲನೆ (ಶ್ರೀಮುಹಾ. ೯-೩೯).

[ ಗುಜ್ಜು$_2$ + ಕೊಂಬೆ$_1$ ]

**ಗುಜ್ಜುಗೊರಲ್**, ಗುಜ್ಜುಗೊರಲು (ನಾ). ಗಿಡ್ಡಾದ ಕುತ್ತಿಗೆ; ಕುಸಿಗೊರಳು: ಗುಜ್ಜುಗೊರಲ ತರಳೆ! ಕೇಳ್ (ರಾಮಾಶ್ವ. ೫೦-೧೦). **ಗುಜ್ಜುಗೊರಲು**: ಜಿಡ್ಡುದೇಹದ ಗುಜ್ಜುಗೊರಲಿನ ಗಿಡ್ಡುರೂಪಿನ ಹರುಕು ಗಡ್ಡದ ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ (ನಳಚ. ೬-೧೪).

[ ಗುಜ್ಜು$_2$ + ಕೊರಲ್ ]

**ಗುಜ್ಜುಗೊರಲು** 'ಗುಜ್ಜುಗೊರಲ್' ನೋ.

**ಗುಜ್ಜುಗೊರವ** (ನಾ). ಕುಳ್ಳನಾದ ಋಷಿ; ಅಗಸ್ತ್ಯಮಹರ್ಷಿ: ಕುಡುತೆಯೊಳೊಮ್ಮೆ ಗುಜ್ಜುಗೊರವಂ ಕಂಡಿಯಲ್ ಕುಡಿ ಪಾಱಿತೊಂದೆ ಧೀಂಕಿಡುವೆಡೆಗೆಯ್ದದಾಯ್ತು (ಧರ್ಮಪ. ೧-೧೪೮).

[ ಗುಜ್ಜು$_2$ + ಗೊರವ ]

**ಗುಜ್ಜುಗೊಳ್**, ಗುಜರ್ಜುಗೊಳ್ (ಕ್ರಿ). ೧. ಸಣ್ಣದಾಗು; ಚಿಕ್ಕದಾಗು. ೨. ಚಪ್ಪಟೆಯಾಗು: ಅಪ್ಪನೊತ್ತಿನಿಂದಂ ಬಿಡೆ ಗುಜ್ಜುಗೊಂಡ ಮೊಲೆ (ಚಂದ್ರಪ್ರ. ೮-೬೨); ನಡುಕಮಾದುದು ಮೆಯ್ಗೆ ರೋಮಾಂಚಮಾಯ್ತು . . . ನಡೆಗೆ ತಡಬಡಿಸಿದುದು ಗುಜ್ಜುಗೊಂಡುವಾ ಪೆರ್ಮೊಲೆಗಳು (ಹಬಪು. ೩೭-೭೭). ೩. ಬಾಗು; ಕೆಳಕ್ಕೆ ಬಗ್ಗು; ಕುಸಿ: ಪೂವಿನ ಕನರ್ಗಾಯ ಕಾಯ ತನಿವಣ್ಗಳ ಭಾರದೆ ಗುಜ್ಜುಗೊಂಡ ಮಾವಿನ ಮರದೊಳ್ ದಿಟ್ಟಿಗೆಸೆದಿರ್ಪುದು (ಶಾಂತೀಶ್ವ. ೦೩-೧೩೦); ಬೆಳತೆರ್ಮಲೆವ ಕಾಯ್ಗಳಿನೊಪ್ಪುವ ಪಣ್ಗಳಿಂ ಕರಂ ಪಸರಿಸಿ ಗುಜ್ಜುಗೊಂಡು . . . ಬಿಲ್ವಕುಜಮೆನ್ನಿದಿರೊಳ್ ಮೆಱೆದಿರ್ದುದು (ದಕಕು. ೮-೭). ೪. ಮಂದವಾಗು: ಗುಜ್ಜುಗೊಂಡುದು ನಡೆ ಮೆಲ್ಪುಗೊಂಡುದು ಸರಂ (ಜಗವಿ. ೨-೯೫); ಹೆಜ್ಜೆಯಿಂದೆ ಹಂಸೆ ಮುಂಚಿ ಮೆಲ್ಲಮೆಲ್ಲನಡಿಯನಿಡುತೆ ಗುಜ್ಜುಗೊಂಡ ನಡೆಗಳಡಿಗೆ ತೊಡಪೆ ನಲ್ಕೆ ನಡೆದು ನಿಲುತೆ (ಮಳೆರ. ಹ. ೨೨೩-೪). **ಗುಜರ್ಜುಗೊಳ್**: ೩. ಪಾದಪ್ರಹಾರಂಗಳಿಂ ಗುಜರ್ಜುಗೊಂಡಂ ಫಣಿಪನಗ್ಗಿದುವು ದಿಗ್ಗಜಂ (ಹಬಪು. ೨೮-೦೦). [ ಗುಜ್ಜು$_2$ + ಕೊಳ್$_1$ ]

**ಗುಜ್ಜುಗೋಲು**, ಗುಜ್ಜುಕೋಲು (ನಾ). ೧. ಗಿಡ್ಡಾದ ಕೋಲು; ಚಿಕ್ಕಕೋಲು: ಯಜಮಾನರು ಹತ್ತಿರವಿದ್ದ ಒಂದು ಗುಜ್ಜುಗೋಲನ್ನು ಹಿಡಿದುಕೊಂಡು ಬಂದರು (ಪಂಚಾತ್ರ. ೨). **ಗುಜ್ಜುಕೋಲು**: ೨. ಗಾಡಿಯ ಪಾರಿಗೆ ಕಟ್ಟುವ ಗೂಟ; ಗುಜ್ಜು: ಗಾಡಿಗೆ ಗುಜ್ಜುಕೋಲು ಕಟ್ಟಬೇಕು (ರೂಢಿ). [ ಗುಜ್ಜು$_2$ + ಕೋಲು$_1$ (<ಕೋಲ್$_1$) ]

**ಗುಜ್ಜುತಡಮೆ** (ನಾ). ಬೇಲಿ ಅಥವಾ ಪ್ರಾಕಾರದಲ್ಲಿ ಮಾಡಿರುವ ಇಕ್ಕಟ್ಟಾದ ಬಾಗಿಲು; ಕಿರುಬಾಗಿಲು; ಕಡಕಲು: ಕೋಟೆ ಚೆನ್ನಯರು ಈ ಮನೆಯ ಮುಂದಿನ ಅಡ್ಡಗಟ್ಟದ ಗುಜ್ಜುತಡಮೆ ದಾಟಿ, ಬೇಲಿಯೊಳಕ್ಕೆ ಹೋಗಿ ನಿಂತು . . . ಕರೆದರು (ಕೋಟಿಚೆ. ೨೩). [ ಗುಜ್ಜು$_2$ + ತಡಮೆ ]

**ಗುಜ್ಜುನಡೆ** (ನಾ). ಚಿಕ್ಕಚಿಕ್ಕ ಹೆಜ್ಜೆ ಇಡುವುದು; ನಿಧಾನವಾದ ನಡಗೆ; ಮಂದಗಮನ: ಪಜ್ಜಳಿಸುವ ಪಾವುಗೆ ಮೆಟ್ಟಿ ಮೆಲ್ಲನೆ ಗುಜ್ಜುನಡೆಯೊಳು ತಾ ನಡೆದು (ರಾಮವಿ. ೫-೧೨). [ ಗುಜ್ಜು$_2$ + ನಡೆ$_2$ ]

**ಗುಜ್ಜುಮಾವು**(ನಾ). ಗಿಡ್ಡಮಾವಿನ ಮರ: ಗುಜ್ಜುಮಾವಿನ ಪೂಗೊಂಚಲ ನಡಿದು ಪಿಡಿದಳಿಳೆವೆರಸೊರ್ವಳ್ (ಲೀಲಾವ. ೦೩-೮೨); ಗುಜ್ಜುಮಾವಿನ ಮರದ ಗುಂಪಿನೊಳ್ ಕುಳಿತುಯಿರುವ ದೇವಲೋಕದಿಂದ ಬಂದ ಲೀಲಾಶುಕ (ಸೌಗಂಧಿ. ೦೬೧-೫). [ ಗುಜ್ಜು$_2$ + ಮಾವು ]

**ಗುಜ್ಜುಮೆಟ್ಟು$_1$** (ಕ್ರಿ). ಮೆಲ್ಲನೆ ಹೆಜ್ಜೆ ಇಡಂ: ನಿಬಿಡನಿತಂಬಭಾರದಿಂ ಗುಜ್ಜುಮೆಟ್ಟುತಂ (ಮಲ್ಲಿಪು. ೪-೬೦): ಇಱಿದೊಡೆ ಕೂರದ ಪೆಂಡಿರ ಕೆಟಗಾದಪೆವೆಂದು ರತ್ನಸೋಪಾನಕದೊಳ್ ಗಟಗಟನಿಱಿಯದೆ ಬಾಣತಿ ಪೊಱಿಮೆಟ್ಟುವ ತೆಱದೆ ಗಂಜ್ಜುಮೆಟ್ಟಿದರರೆಬರ್ (ಅನಂಪು. ೭-೩೪); ಗೆಜ್ಜೆಗಳು ಘಲಘಲಿಸೆ ಮೆಲ್ಲನೆ ಪಜ್ಜೆಯಿಡೆ ಕೈಪಱಿಯಿನಾಡಿಸಿ ಗುಜ್ಜುಮೆಟ್ಟುತೆ ನಾಣ್ಚಿ ಹೊಂಗುತೆ ಬಂದು ನಿಱಿವಿಡಿದು (ಸಾಳ್ವಭಾ. ೩-೧೪).

[ ಗುಜ್ಜು$_2$ + ಮೆಟ್ಟು$_1$ ]

**ಗುಜ್ಜುಮೆಟ್ಟು$_2$** (ನಾ). ಸಣ್ಣಹೆಜ್ಜೆ; ನಿಧಾನವಾದ ಹೆಜ್ಜೆ; ಮಂದವಾದ ಪದವಿನ್ಯಾಸ: ಸೆಜ್ಜೆವನೆಯ ಪೊಱಮಟ್ಟು ಗುಜ್ಜುಮೆಟ್ಟಿಂದ ನಡೆದು ಪೋಗಿ ಮೆಲ್ಲನೆ ಮಜ್ಜನವನು ಮಾಡಿದಳು (ಕುರಾಸಾಂ. ೨೪-೧೬೭); ವೆಜ್ಜವಿಲ್ಲದ ಚಿತ್ತದಿಂದೆಯ್ದುತಿರ್ದನು ಗುಜ್ಜುಮೆಟ್ಟಿಂದ ಮುಂಗಡೆಗೆ (ಭರಚ. ೦೭-೨೦). [ ಗುಜ್ಜು$_2$ + ಮೆಟ್ಟು$_2$ ]

**ಗುಜ್ಜುವಜ್ಜೆ**, ಗುಜ್ಜುಹೆಜ್ಜೆ (ನಾ). = ಗುಜ್ಜುಮೆಟ್ಟು$_2$: ಪೊಱಮಟ್ಟು ಭೋಜನಮಂಟಂಗಳಿಂ ನಡೆದಿರ್ಪಾಱದ ಗುಜ್ಜುವಜ್ಜೆಗಳಿವೇನೆತ್ತಂ ಬೆಡಂಗಾದುವೋ (ಲೀಲಾವ. ೧೦-೫). **ಗುಜ್ಜುಹೆಜ್ಜೆ**: ಆ ರಾಜನು ಗುಜ್ಜುಹೆಜ್ಜೆಗಳನ್ನು ಇಕ್ಕಿ ನಡೆದನು (ಮಾಮಲ್ಲಿ. ೦೨೪). [ ಗುಜ್ಜು$_2$ + ಪಜ್ಜೆ ]

**ಗುಜ್ಜುವಡೆ** (ಕ್ರಿ). = ಗುಜ್ಜುಗೊಳ್ ೨: ಗುಂಜಿದಳಕತತಿ ಗುಜ್ಜುವಡೆದ ಮೊಲೆ ರಂಜಿಸೆ . . . ಒಪ್ಪಿದಳಾ ತರುಣಿ (ಜಯುಕಾ. ೮-೬೫); ಬೆಳೆದುರ್ಪಱಿ ಗುಜ್ಜುವಡೆದ ಮೊಲೆ . . . ಅಳವಳಿದಂಗವೆಸೆಯೆ ಸುರತಾಂತದ ನಳಿನಾಕ್ಷಿಯೊರ್ವಳೆಸೆದಳು (ಕುರಾಸಾಂ. ೨೮-೯೦). [ ಗುಜ್ಜು$_2$ + ಪಡೆ$_1$ ]

**ಗುಜ್ಜುಹೆಜ್ಜೆ** 'ಗುಜ್ಜುವಜ್ಜೆ' ನೋ.

**ಗುಜ್ಜೆ$_1$**, ಗೊಜ್ಜೆ$_2$ (ನಾ). ೧. ಗಿಡ್ಡಿ; ಕುಳ್ಳಿ; ಕುಬ್ಜೆ. ೨. ಚಿಕ್ಕ ವಯಸ್ಸಿನ ಹೆಂಗಸು; ಹುಡುಗಿ: ಇತ್ತ ಸುಪ್ರಭಾವತಿ ಗುಜ್ಜೆಯಾಗಿ ಬಂದು ಪುಷ್ಪಮಾಲೆಯ ಮೇಲಿಕ್ಕಿ ತೃಷೆಯಂ ಕಳೆದು ಕುಮಾರಂಗೆ ಕನ್ಯಾರೂಪಮಂ ಮಾಡಿದೊಡೆ (ಚಾವುಂಪು. ೦೦೭-೧೨); ಎಲೆ ಬಸವ ಗುಜ್ಜೆ ನಿಮ್ಮಕ್ಕನಾಗಲೆ ಗರ್ಭವಾದ ಬಗೆ ಪೇಳು (ಚೋರಬ. ೫-೦೦); ಗೆಜ್ಜೆ ಹೆಜ್ಜೆ ಹಾಕಿ ಗುಜ್ಜೇರು ಕುಣಿದಾರ (ಕನ್ನಜಾ. ೦೬೩). **ಗೊಜ್ಜೆ$_2$**: ೧. ಲೋಕಪಾಲ ನಿರುಳ್ ತೂಂಕಡಿಸುವಾಗಳ್ ವಕುಳಮಾಲೆಯೆಂಬ ಗೊಜ್ಜೆಯಿಂದೆ ನುಡಿಯಿಸಿದೊಡರಸನದಂ ಸ್ವಪ್ನಮೆಂದೆ ಬಗೆದು (ಚಾವುಂಪು. ೫೪).

[ ಗುಜ್ಜು$_2$ + -ಎ$_2$ ]

**ಗುಜ್ಜೆ$_2$** (ನಾ). (ಕರಾ) ಹಲಸಿನಕಾಯಿ : ಮನೆಯಲ್ಲಿ ಹಣ್ಣು ಗುಜ್ಜೆ ಇದ್ದರೆ ಅವನು ಶಾಲೆಗೇ ಹೋಗುವುದಿಲ್ಲವೆಂದು ಹಟಮಾಡುತ್ತಾನೆ (ಮೊಮಗು. ೬೩) ; ಮಳೆಗಾಲದಲ್ಲಿ ಗುಜ್ಜೆಗಳು ಹಣ್ಣಾಗಿ, ಮನೆಯ ಕೋಣೆಯಲ್ಲಿ ಗಮಗಮಿಸುತ್ತಿದ್ದರೂ (ಪರಾಪ. ೧೫೪). 'ಕುಜ್ಜೆ$_1$' ಪರಾ.
[ ←ತುಳು. ಗುಜ್ಜೆ ]

**ಗುಟಕರಿಸು** 'ಗುಟುಕರಿಸು' ನೋ.

**ಗುಟಕು** 'ಕುಟುಕು$_2$' ನೋ.

**ಗುಟಗರಿಸು** 'ಗುಟುಕರಿಸು ನೋ.

**ಗುಟರು**'ಕುಟುರು$_2$' ನೋ.

**ಗುಟಾಯಿಸು** 'ಕೊಟಾಯಿಸು' ನೋ.

**ಗುಟಿಕೆ** (ನಾ). ಗುಳಿಗೆ ; ಮಾತ್ರೆ : ಖುಕ್ಷತತಿಗಳೇನಚ್ಚರಿಯ ಬೀರಿದುವೊ ಬಾನೆಡೆಯ ಮೋಹನದ ಗುಟಿಕೆಗಳೆನೆ (ವೆಂಕಾರಾ. ೫-೨-೩೬).
[ ಸಂ. ಗುಟಿಕಾ ]

**ಗುಟಿಸು** (ಕ್ರಿ). = ಗುಟುಕರಿಸು ೧ : ನುಂಗುವಾಗ ಒಂದು ಗುಟಿಸುವಾಗ ಎರಡು (ಮೋಳಿಮಾ. ೧೮೦-೬೭೬) ; ಅರಿಸಿದರೆ ಅರಿಪೆ ಗುಣಿಸಿದರೆ ಗುಣಿಪೆ ಗುಟಿಸಿದರೆ ಗುಟಿಪೆ (ವಿಪ್ರಸು. ೨೩-೨). [ ಗುಟು$_0$ + – ಇಸು$_3$ ]

**ಗುಟುಕರಿಸು,** ಗುಟಕರಿಸು, ಗುಟಗರಿಸು (ಕ್ರಿ). ೧. (ನೀರು ಮೊದಲಾದುವನ್ನು) ಬೇಗನೆ ಕುಡಿ : ಅವರೂ ತುಸು ಉತ್ಸಾಹಿತರಾಗಿಯೇ ಚಹವನ್ನು ಗುಟುಕರಿಸಿದರು (ಅಪನಾ. ೯) : ಆ ಮುಹೂರ್ತದಲ್ಲಿ ಕಾರ್ಕೋಟಕ ವಿಷ ತುಂಬಿದ ಪ್ಯಾಲೆ ಕೊಟ್ಟಿದ್ದರೂ ಗುಟುಕರಿಸಿಬಿಡುತ್ತಿದ್ದರು (ವೃದ್ಧವಿ. ೯) ; ಅದನ್ನು ಅವಳು ಗುಟುಕರಿಸಲಿಲ್ಲ (ಜಿದೇವ. ೨೫೮). ೨. ಗುಟುಗುಟು ಎಂದು ಶಬ್ದಮಾಡು, – ಧ್ವನಿಮಾಡು ; ಗುಬ್ಬಳಿಸು : ಕಪಾಟಿನಲ್ಲಿರುವ ಪಾರಿವಾಳಗಳು ಪ್ರೇಮದಿಂದ ಗುಟುಕರಿಸುತ್ತಿದ್ದವು! (ಫಲಸಂ. ೯೬) ; ಐದು ಗಂಟೆಯ ಹೊತ್ತಿಗೆ ಒಂದು ಗೂಬೆ ಬಂದು ಒಂದಲ್ಲ ಒಂದು ಮನೆಯ ಮೇಲೆ ಕೂತು ಗುಗ್ಗೂ ಗುಗ್ಗೂ ಅಂತ ಗುಟುಕರಿಸುತ್ತಿತ್ತು (ಮನೋನಂ. ೮೩). ೩. (ಆಲಂ) ವೇದನೆಪಡು : ಸಂಕಟಪಡು ; ಪೇಚಾಡು : ಕೊನೆಯ ದಿನ ಕೆಮ್ಮು ನರಳಾಟಗಳ ನಡುವೆ ಜೀವ ಗುಟುಕರಿಸುತ್ತಿದ್ದಾಗ . . . ಸ್ಮರಿಸಿದ (ವಿಮೋಚ. ೭೮). **ಗುಟಕರಿಸು: ೧.** ಏನೋ ಕಹಿಔಷಧ ಕುಡಿಯುವವರಂತೆ ಗುಟಕರಿಸಿ 'ನಾರಾಯಣ' ಎಂದರು (ನಿರಾಭ. ೬೫) ; ನೊರೆ ಮೂಗಿಗೆ ಮೆತ್ತಿದ್ದನ್ನೂ ಮರೆತು ಗಟಗಟನೆ ಗುಟಕರಿಸಿದರು ಜೋಡೀದಾರ್ರು (ಮೂಮನೆ. ೩೭). **ಗುಟಗರಿಸು** : ೧. ಆದರೆ ದನಿ ಏಳದೆ ಮುಳುಗಹತ್ತಿದ, ನೀರನ್ನು ಗುಟಗರಿಸುತ್ತ (ಸಮುಜೀ. ೩೫೮). 'ಗುಟಿಸು' ಪರಾ. [ ಗುಟುಕರಣ$_0$ + – ಇಸು$_3$ ]

**ಗುಟುಕಿಡು** (ಕ್ರಿ). (ಪಕ್ಷಿಗಳು) ಮರಿಗಳಿಗೆ ಆಹಾರವನ್ನು ಕೊಕ್ಕಿನಿಂದ ಕೊಡು: ಇಲ್ಲಿ ಗುಟುಕಿಟ್ಟೆವಾವಿಲ್ಲಿ ಬಾಯ್ದೂಡಿದೆವು (ವೆಂಕಾರಾ. ೫-೨-೨೯).
[ ಗುಟುಕು (<ಕುಟುಕು$_2$) + ಇಡು$_1$ ]

**ಗುಟುಕಿಸು** 'ಕುಟುಕಿಸು' ನೋ.

**ಗುಟುಕೀ** (ಕ್ರಿ).=ಗುಟುಕಿಡು : ಗಿಳಿ ತನ್ನ ಸಾರಿಕೆಗೆ ಗುಟುಕೀಯಲ್ (ಉದ್ಭಟ. ೫-೭೮). [ ಗುಟುಕು (<ಕುಟುಕು$_2$) + ಈ$_2$ ]

**ಗುಟುಕು**'ಕುಟುಕು$_2$' ನೋ.

**ಗುಟುಕುಜೀವನ** (ನಾ). (ಕರಾ) ಕಷ್ಟದ ಜೀವನ ; ಒಂದು ಗುಟುಕೂ ಸಿಕ್ಕದ ಕಷ್ಟದ ಬಾಳು. [ ಗುಟುಕು (<ಕುಟುಕು$_2$) + ಜೀವನ ]

**ಗುಟುಕುತಂಬುಲ** 'ಕುಟುಕುದಂಬುಲ' ನೋ.

**ಗುಟುಕುತಾಂಬೂಲ** (ನಾ). = ಕುಟುಕುದಂಬುಲ : ನಿನ್ನ ಗುಟುಕು ತಾಂಬೂಲ ಕೊಡೆ ಚಿತ್ರಾಂಗಿ (ಸಾರಂಗ. ೧೪).
[ ಗುಟುಕು (<ಕುಟುಕು$_2$) + ತಾಂಬೂಲ ]

**ಗುಟುಕುನೀರು** (ನಾ). ಒಂದು ಸಲ ಬಾಯಿಗೆ ಹಾಕಿಕೊಂಡು ನುಂಗುವಷ್ಟು ನೀರು; ಒಂದು ಮುಕ್ಕು ನೀರು: ಆಗಿನ ಗುಟುಕುನೀರು ಈಗ ಮೊಳಕಾಲವರೆಗೆ ಬಂತು (ಸ್ಮೃತಿಚಿ. ೪೬೪) : ಗುರುವಿಗೆ ಗುಟುಕು ನೀರು ಶಿಷ್ಯನಿಗೆ ಎಣ್ಣೆಮಜ್ಜನ (ಗಾದ).

**ಗುಟುಕುನೀರು ಕುಡಿಸು** = (ಆಲಂ) ತೊಂದರೆಕೊಡು ; ಕಿರುಕುಳ ಕೊಡು ; ಹಿಂಸೆಮಾಡು : ಅವನು ಸಾಹೇಬರಿಗೇ ಗುಟುಕುನೀರು ಕುಡಿಸಿದ (ರೂಢಿ). [ ಗುಟುಕು (<ಕುಟುಕು$_2$) + ನೀರು$_1$ (<ನೀರ್$_1$) ]

**ಗುಟುಕುಪ್ರಾಣ** (ನಾ). ಸ್ವಲ್ಪಮಟ್ಟಿಗೆ ಉಳಿದುಕೊಂಡಿರುವ ಪ್ರಾಣ ; ಕಂಠಗತಪ್ರಾಣ ; ಕುಟುಕುಜೀವ : ಅವನ ಸಾಧ್ಯವದಿಂದ ಷಂಷರ್ ಖಾನನು ಮಡಿದಿರಲಿಲ್ಲ. ಇನ್ನು ಅವನಿಗೆ ಗುಟುಕುಪ್ರಾಣವಿತ್ತು (ರಾಜ್ಯೋದ. ೧೫೨). [ ಗುಟುಕು (<ಕುಟುಕು$_2$) + ಪ್ರಾಣ ]

**ಗುಟುಕ್ಕನೆ** (ಅ). ಒಂದೇ ಬಾರಿಗೆ ; ಒಂದೇ ಗುಟುಕಿಗೆ : ನಾನು ಗುಳಿಗೆಯನ್ನು ಗುಟುಕ್ಕನೆ ನುಂಗಿಬಿಟ್ಟೆನು (ರೂಢಿ). [ ಗುಟುಕ್$_0$ + – ಅನೆ$_1$ ]

**ಗುಟುಗುಟನೆ** (ಅ). ಗುಟುಗುಟು ಎಂಬ ಶಬ್ದದೊಡನೆ : ತುಟಿಬಟ್ಟಲೊಂದಿ ರಸಾಯನಗಳ ಗುಟುಗುಟನೆ ಶಾನೀಂಟುವ ಗಾಡಿ (ಭರಚ. ೪-೧೦೧).
[ ಗುಟುಗುಟು + – ಅನೆ$_1$ ]

**ಗುಟುಗುಟು** (ನಾ). ೧. ಒಂದು ಅನುಕರಣಶಬ್ದ ; ದ್ರವವಸ್ತುವನ್ನು ಒಂದೇಸಮನೆ ಕುಡಿಯುವಾಗ ಉಂಟಾಗುವ ಶಬ್ದ : ಅವಳು ಒಂದು ಚೆಂಬು ನೀರನ್ನು ಗುಟುಗುಟು ಎಂದು ಕುಡಿದುಬಿಟ್ಟಳು (ರೂಢಿ). **೨. ಪಾರಿವಾಳದ ಕೂಗು** : ಪಾರಿವಾಳದ ಪಕ್ಕಿ ಮದನಕ್ಕೆಯೊಳು ತನ್ನ ನಾರಿಗಿದಿರು ನಡೆದಾಡಿ ಗೂರುಳು ಗುಕುಗುಂಕರಿ ಗುಟುಗುಟು ಗುಟುಗುಟು ಚಾರಿಟಿಯೊಂದುವಲ್ಲಲ್ಲಿ (ಭರಚ. ೧೫-೩೨).

**ಗುಟುರಿಕ್ಕು** (ಕ್ರಿ). ಗುಟುರುಹಾಕು: ಧೂಳ ಚೆಲ್ಲುತ ಗುಟುರಿಕ್ಕುತ ಕೆರೆವುತ ಗೂಳಿ ಬಂದುದು (ಭರಚ. ೨೧-೪೫).
[ ಗುಟುರು$_2$ (< ಕುಟುರು$_2$) + ಇಕ್ಕು ]

**ಗುಟುರಿಡು** (ಕ್ರಿ).=ಗುಟುರು$_1$ : ಅದು ಸಿಂಹವೇ ಬಂತೆಂದೆಣಿಸಿ ಗುಟುರಿಡುತ್ತಾ ಹರಿಕುಲಿಶನಿದ್ದಲ್ಲಿಗೆ ಬಂತು (ಮಚಸ. ೯೫).
[ ಗುಟುರು$_2$ (<ಕುಟುರು$_2$) + ಇಡು$_1$ ]

**ಗುಟುರು$_1$** (ಕ್ರಿ). (ಗೂಳಿ ಮೊದಲಾದುವು) ಜೋರಾಗಿ ಧ್ವನಿಮಾಡು,– ಗರ್ಜಿಸು,–ಹೂಂಕಾರಮಾಡು : ಇಂಥ ದಿನಗಳಲಿ ರೇಡಿಯೋ ಕೂಡ ಗೂಳಿಯ ಹಾಗೆ ಗುಟುರುವದು (ನೆಲಮು. ೧೬-೧೮). [ <ಕುಟುರು$_1$ ]

**ಗುಟುರು$_2$** 'ಕುಟುರು$_2$' ನೋ.

**ಗುಟುರುಹಾಕು** (ಕ್ರಿ).=ಗುಟುರು$_1$ : ಒಂದು ಗೂಳಿಯು ಇನ್ನೊಂದು ಗೂಳಿಯನ್ನು ನೋಡಿ . . . ಗುಟುರುಹಾಕುವಂತೆ, ಹೂಂಕಾರ ಮಾಡಿದನು (ಎಳೆಕ. ೨೫) ; ಗೂಳಿಯಂತೆ ಗುಟುರುಹಾಕಿ ಮುಂದೆ ನುಗ್ಗಿಬರುತಿದೆ (ಭಾವಗೀ. ೦೦೪). [ಗುಟುರು$_2$ (<ಕುಟುರು$_2$)+ಹಾಕು (<ಪಾಯ್ಕು$_1$)]

**ಗುಟ್ಟ** 'ಗುಡ್ಡ$_2$' ನೋ.

**ಗುಟ್ಟರಿಕೆ** (ನಾ). ಗುಟುರು ; ಡುರುಕು : ಆಗ ಧ್ವಜದಲ್ಲಿದ್ದ ವೃಷಭವು ಗುಟ್ಟರಿಕೆ ಹಾಕಲು (ಕೃಪಾಕ. ೩೮). [ಗುಟ್ಟರು (<ಕುಟುರು$_2$)+ – ಇಕೆ]

**ಗುಟ್ಟರು** 'ಕುಟುರು$_2$' ನೋ.

**ಗುಟ್ಟಳಿ** (ಕ್ರಿ). ೧. ಗುಟ್ಟುರಟ್ಟಾಗು ; ರಹಸ್ಯ ಬಯಲಾಗು. ೨. (ಆಲಂ) ಸತ್ತ್ವಡಗು ; ಶಕ್ತಿಗುಂದು : ಗುಟ್ಟಳಿದುದು ಮುನಿವರನಿಂದೆ ಕ್ಷೇತ್ರವ ಬಿಟ್ಟುದು ಭಾರ್ಗವ ಶರಕೆ (ಮೋಹತ. ೨೦-೧೧) ; ಗುಟ್ಟಳಿದುದು ವಜ್ರ ಮಯುರಥ ನೇಗಿಲ ಪೆಟ್ಟು ಸಂಧಿಸಲು ನುಗ್ಗಾಯ್ತು (ಮೋಹತ. ೪೦-೫೯) ; ಕಟ್ಟರಸು ಕೌರವನು ಗಾಂಧರ್ವರಲಿ ಸಿಲ್ಕಿ ಗುಟ್ಟಳಿದನವ ವೀರನೇ (ಲಕ್ಷ್ಮಭಾ. ೩-೨೨). [ ಗುಟ್ಟು$_1$ + ಅಳಿ$_1$ (<ಅೞಿ$_1$) ]

**ಗುಟ್ಟಿ1** (ನಾ). ತೇದುಹಾಕುವ ಮಾತ್ರೆ,-ಗುಳಿಗೆ; ಕುಪ್ಪಿಮಾತ್ರೆ: "ಗುಟ್ಟಿಯೆನಲ್ ಘುಟಿಕೆ [ಪಾಠಾಂ. ಗುಟ್ಟಿಗೆಯೆನೆ ಘುಳಿಗೆ] ವಲಂ" (ಚಕುನಿ. ೬೦): ತಾಯಿ ಕೊಡುವ ಗುಟ್ಟಿಯಂತೆ, ವೈದ್ಯ ಕೊಡುವ ಕಹಿ ಕಷಾಯದಂತೆ (ಕಗದ್ಯ. ೧೩೦). [ < ಸಂ. ಗುಟೀ ]

**ಗುಟ್ಟಿ2, ಗೂಟಿ** (ನಾ). ೧. ಹಂದಿ; ಎಕ್ಕಲ; ಕೋಡ: "ಎಕ್ಕಲ ಕೋಡ ಗುಟ್ಟಿ ಘೃಷ್ಟಿಯೆನಿಕ್ಕುಂ" (ಕವಿಕಂ. ೬೦). **ಗೂಟಿ**: ೨. ಹಂದಿಗೆಡ್ಡೆ; ವಾರಾಹೀಗೆಡ್ಡೆ: ಕೋಟಿ ಕೊಟ್ಟು ಗೂಟಿ ತಿನ್ನು (ಗಾದ). [ < ಸಂ. ಘೃಷ್ಟಿ ]

**ಗುಟ್ಟಿಗಟ್ಟು** (ಕ್ರಿ). ಉಂಡೆಮಾಡು; ಗುಳಿಗೆಮಾಡು: ನಿಶಾಟನುಬ್ಬಿನ ಬಲಮಂ ಗೋಣ್ಮುಱಿದು ಗುಟ್ಟಿಗಟ್ಟುವೊಡಾನೆ ಸಾಲ್ವೆಂ (ರಾಮಾಶ್ವ. ೧೧೧-೧೩). [ ಗುಟ್ಟಿ1 + ಕಟ್ಟು1 ]

**ಗುಟ್ಟಿಗೆ** 'ಗುಳಿಗೆ1' ನೋ.

**ಗುಟ್ಟು1** (ನಾ). ೧. ರಹಸ್ಯವಾದ ವಿಷಯ; ಅಂತರಂಗವಿಚಾರ; ಗೌಪ್ಯ: ಗುಟ್ಟು ಪೇಳ್ವೆನಯ್ಯ ಒಂದಿಷ್ಟು ಲಾಲಿಸೊ (ಪುರಂದ. ೪-೯-೧); ಕವಿತಾಸುಲಕ್ಷಣಗಳ ಗುಟ್ಟನಱಿಯದೆ ಕಷ್ಟಸಾಧ್ಯವಹ ಕೃತಿಗೆ ಮನಗೊಟ್ಟಳಿಂದೆನ್ನ ನಗಗೇಡುಮಾಡದೆ . . . ಮನ್ನಿಪುದಿದಂ ಸರ್ವಜನರು (ಶ್ರೀರಾಮು. ೨-೪): ಇಬ್ಬರಾಡುವ ಗುಟ್ಟು ಕದ್ದು ಕೇಳುವ ಹೊಲೆಯ (ಗೀವಿಂ. ೦೫-೦೩): ನಮ್ಮ ಸಂಸಾರದ ಗುಟ್ಟು ಹೊರಜಗತ್ತಿಗೆ ಕಾಣುವುದಿಲ್ಲ (ಕಾವೇರಿ. ೧೯೦): ಸ್ವಲ್ಪ ಹತ್ತಿರ ಹೋದ ಕೂಡಲೇ ಗುಟ್ಟು ಬಯಲಾಗಿ ಹೋಯಿತು (ಬಾಣಳ. ೩೫); ಗುಟ್ಟಿಗೆ ಸಾವಿರಾಳ ಪೆಟ್ಟು (ಗಾದ). ೨. (ಅಲಂ) ಕೆಚ್ಚು; ಸತ್ವ; ಗರ್ವ: ಮುಱಿಯೆ ವಿರಹಿಯ ಗುಟ್ಟು ಬೆಱೆಯೆ ಕುಸುಮೇಷು ಕುಕಿಲಿಱಿಯೆ ಕೋಗಿಲೆ ದುಃಖವಟೆಯೆ ಸುಖಿಜನಕೆ ಕಣ್ದೆಱೆದುದು ವಸಂತಮಾಸಂ (ಪದ್ಮರಾ. ೬-೩).

**ಗುಟ್ಟುರಟ್ಟಾಗು**=ರಹಸ್ಯವು ಬಯಲಾಗು: ಗುಪ್ತಚರನು ಮುಂದಾಗಿಯೇ ಅಲ್ಲಿಗೆ ಹೋಗಿದ್ದರೆ ಗುಟ್ಟುರಟ್ಟಾಗುವುದು (ಕೂಕಶಾ. ೬). [ ದೇಶ ತಮಿ. ಕುಟ್ಟು; ತುಳು. ಗುಟ್ಟು; ಕೊಡ. ಗುಂಟ್ಟೀ; ತೆಲು. ಗುಟ್ಟು ]

**ಗುಟ್ಟು2** (ನಾ). ಹೊಗೆವಾಸನೆ (?): ಗುಟ್ಟಡರದೆ ಕಾದ ಚಿಲುಪಾಲು ಮಕ್ಷಿಕೋಚ್ಛಿಷ್ಟವಿಲ್ಲದ ಜೇನುತುಪ್ಪ ಕಟ್ಟುಬೀಳದ ಸಕ್ಕರೆಯಿಂದೆ ಸವಿವಾತ ನೆಟ್ಟನೆ ಪೇಳ್ವುದೆನ್ನೊಡನೆ (ಮೋಹತ. ೨೩-೧). [ < ಗುಪ್ಪು ]

**ಗುಟ್ಟುಗಟ್ಟು** (ಕ್ರಿ). ಗುಟ್ಟಾಗಿಡು; ರಹಸ್ಯವಾಗಿಡು: ಈಗಳಿಲ್ಲಿ ನೆರವೇರಿದ ನಡೆನುಡಿಗಳನ್ನೆಲ್ಲ . . . ಗುಟ್ಟುಗಟ್ಟಿ, ಮಾತು ಬರಹಗಳಿಗರಿವಾಗದ ಎಚ್ಚರದ ನಿಚ್ಚಟರಾಗಿರಿ (ಮುಂತ್ರಶ. ೮೪-೫). [ ಗುಟ್ಟು1 + ಕಟ್ಟು1 ]

**ಗುಟ್ಟುಗಾಣಿಸು** (ಕ್ರಿ). ಗುಟ್ಟನ್ನು ಬಹಿರಂಗಪಡಿಸು,-ಬಯಲು ಮಾಡು: ಗುಟ್ಟುಗಾಣಿಸದ ಪೊರ್ಕುಳದೀವುದುದಾತ್ತಸೌಖ್ಯಮಂ (ಹಾಳಾಸ್ಯ. ೦-೦೩-೨೬). [ ಗುಟ್ಟು1 + ಕಾಣಿಸು ]

**ಗುಟ್ಟುಗೊಲೆ** (ನಾ). ಗುಟ್ಟಾಗಿ ಮಾಡುವ ಕೊಲೆ; ರಹಸ್ಯವಧೆ: ಆ ಧೀರ ಸಮರ್ಥರಳವಾಯಿ ವಿಕ್ರಮರಾಯರೂ ಗುಟ್ಟುಗೊಲೆಯಾಗಿ . . . ಇವನಿಗೆ ರಾಜ್ಯಾಭಿಷೇಕವಾಗಬೇಕಾಯ್ತು (ಮುಂತ್ರಶ. ೬೬-೩). [ ಗುಟ್ಟು1 + ಕೊಲೆ2 ]

**ಗುಟ್ಟುನೆರೆ** (ಕ್ರಿ). ಗುಟ್ಟಾಗಿ ಸೇರು; ರಹಸ್ಯವಾಗಿ ಕೂಡು: ನಿಮ್ಮ ಆಮಂತ್ರಣದಂತೆ ಕಟ್ಟಸವಸದಿಂದ ಇಂದೂ ಗುಟ್ಟುನೆರೆದಿರುವ ಈ ಮಹಾಸಭೆಯು ನಿಮಗೆ ಸಿದ್ಧವಾಗಿರುವುದು (ಮುಂತ್ರಶ. ೬೬-೧೯). [ ಗುಟ್ಟು1 + ನೆರೆ1 ]

**ಗುಟ್ಟುಮಾಡು** (ಕ್ರಿ). ಗುಟ್ಟಾಗಿಡು; ರಹಸ್ಯವಾಗಿಡು: ಅವನದು ಗುಟ್ಟು ಮಾಡುವ ಸ್ವಭಾವ (ರೂಢಿ). [ ಗುಟ್ಟು1 + ಮಾಡು1 ]

**ಗುಟ್ಟುಮಾತು** (ನಾ). ರಹಸ್ಯವಾದ ಮಾತು: ಮಿತ್ರಗೆ ಗುಟ್ಟುಮಾತನ್ನು ಕಿವಿಯಲ್ಲಿ ಹೇಳುತ್ತಾರೆ (ಅಲಹೂ. ೪೭). [ ಗುಟ್ಟು1 + ಮಾತು1 ]

**ಗುಟ್ಟೆ** 'ಗುಡ್ಡ2' ನೋ.

**ಗುಡ** (ನಾ). ೧. ಬೆಲ್ಲ: "ಗುಳ ಗುಡಮುಮಕ್ಕುಂ" (ಕವಿಕಂ. ೨೦೮); ಪಿಷ್ಟೋದಕ ಗುಡ ಧಾತಕೀ ಸಂಯೋಗದಿಂದಮೆಂತು ಮದವಿಕಾರಮೆಸೆದಿಪ್ಪುದು (ಆದಿಪು. ೨-೯ ವ); ಬುಧಸಮಿತಿ ಮೆಚ್ಚೆ ಪೇಟ್ವೆಂ ಮಧುರ ಗುಡ [ ಪಾಠಂ. ರಸ ] ಪ್ರಚುರ ವಚನರಚನೆಗಳಿಂದಂ (ಧಂಡೋಂಬು. ೦-೩೦); ತೈಲ ಘೃತ ಗುಡಪ್ರಕರ ರಸಭಾಂಡದುಗ್ರಾಣದೊಳ್ವನೆಗಳುಂ (ಚಬಪು. ೫-೫೦); ಕರದಿ ಗುಡವಿಹುದೆಂದು ಬೇವಿನ ತಿರುಳ ಮೆಲುವರೆ (ಗಗತಾ. ೦೫-೨೦). ೨. ಚೆಂಡು, ಗೋಲಿ ಮುಂತಾದ ದುಂಡಾಗಿರುವ ವಸ್ತು. [ಸಂ.]

**ಗುಡಗತಾಣ** (ನಾ). ಒಂದು ಪ್ರದೇಶದ ಹೆಸರು: ಕಿಱುಕೆಱೆ ಗುಡಗತಾಣವಮ್ ನೊಕ್ಕಿಗೋಡು ಮಣಲಿ ಮಕ್ಕಿಯಸ್ಯ × × (ಮೈಆರಿ. ೧೯೦೮; ೧೦; 700). [ ? ]

**ಗುಡಗುಡಿ** 'ಗುಡುಗುಡಿ' ನೋ.

**ಗುಡಜೀರಿಗೆ** (ನಾ). ಮದುವೆಕಾಲದಲ್ಲಿ ವಧೂವರರು ಪರಸ್ಪರ ತಲೆಯ ಮೇಲೆ ಹಾಕುವ ಜೀರಿಗೆ ಮತ್ತು ಬೆಲ್ಲ: ಗುಡಜೀರಿಗೆಯಿತ್ತು ಕರಗಳ ಕೂಡಿಸಿ ಹೊಡೆದರು ಸನ್ನೆಭೇರಿಗಳ (ಜಿನರಾ. ೯-೧೪೯). 'ಜೀರಿಗೆಬೆಲ್ಲ' ಪರಾ. [ ಗುಡ + ಜೀರಿಗೆ ]

**ಗುಡಪಾಕ** (ನಾ). ಬೆಲ್ಲದ ಪಾಕ: ಈ ಚೂರ್ಣವನ್ನು ಹಾಕಿ ವಟಕಗಳಿಗೆ ತಕ್ಕಂತೆ ಗುಡಪಾಕ ಮಾಡಿ ಕಲಸಿ (ಸಕವೈ. ಪರಿ. ೪೪೭). [ ಗುಡ + ಪಾಕ2 ]

**ಗುಡಪಾನ** (ನಾ). ಬೆಲ್ಲ ಸೇರಿಸಿದ ಪಾನೀಯ; ಬೆಲ್ಲದ ಪಾನಕ: ಗುಡಪಾನಂಗಳೊಳದ್ದೆ ಬೇವಿನ ಫಲಂ ಸ್ವಾದಪ್ಪುದೇ (ಸೋಮೇಶ. ೯೭). [ ಗುಡ + ಪಾನ ]

**ಗುಡಪಾಲ** (ನಾ). ಒಂದು ಬಗೆಯ ಗಿಡ; ಹೂಲಿಗಿಡ; "ಪಾಂಡುಫಲೀ" (ಪಂಡಿತ). [ ಸಂ. ]

**ಗುಡಪುಷ್ಪ** (ನಾ). ಹಿಪ್ಪೆಮರ; ಮಧೂಕ: "ಮಧೂಕತರು ಗುಡಪುಷ್ಪಂ" (ವಸ್ತುಕೋ. ೩೪-೯): "ಮಧೂಕಃ, ಗುಡಪುಷ್ಪಃ, ಮಧುದ್ರುಮಃ, ವಾನಪ್ರಸ್ಥಃ, ಮಧುಷ್ಠೀಲಃ-ಶಿ ಹಿಪ್ಪೆಗಿಡ" (ಸಿದ್ಧಾಂತಿ. ೦೦೩). [ ಸಂ. ]

**ಗುಡಫಲ** (ನಾ). ಗೋಣಿಮರ; ಪೀಲುವೃಕ್ಷ: "ಪೀಲುವೆನಲ್ಗುಡಫಲಂ" (ವಸ್ತುಕೋ. ೩೪-೮); "ಪೀಲುಃ, ಗುಡಫಲಃ, ಸ್ರಂಸೀ – ಶಿ ಗೋಣುಮರ, ಗೋಗಿನಾರು ಪ್ರಸಿದ್ಧ. ಗೋಣೀಮರವೆಂದು ಕೆಲವರನ್ನುವರು" (ಸಿದ್ಧಾಂತಿ. ೦೦೩). [ ಸಂ. ]

**ಗುಡಮೋಟಕೆ** (ನಾ). ಒಂದು ಬಗೆಯ ವನಸ್ಪತಿ: (ಮೈಶಿಗಿ. ೨೦-೩೯೫). [ ? ]

**ಗುಡಯ** (ನಾ). (?): ನೀರಿಲೆಯ ಬಡವೊಳಗೆಱೆಯ ಗದೆ ಕ ೨ ಗುಡಯ ಹಳಲಗದ್ದೆ ಖ ೨ ಬಾಳೆಯ ಗದ್ದೆ ಖ ೮ ಸಲಗೆ ಭೂಮಿಯೆಂಟುನೂಱು ಮಿನು ದರ್ಮಾರ್ತವಾಗಿ ಕ್ಲೊಟ್ಟ ಕೊಡಗೆ (ಮೈಆರಿ. ೧೯೪೭, ೨೫-೬; 1492). [ ? ]

**ಗುಡಲು** 'ಗುಡಿಲ್' ನೋ.

**ಗುಡವಾಣ** 'ಗುಡಂವನ' ನೋ.

**ಗುಡವಿಕಾರ** (ನಾ). ಕಾಕಂಬಿ; ಗಡಿಗೆಬೆಲ್ಲ: "ಗುಡವಿಕಾರಂ ಫಾಣಿತಂ ಮತ್ಸ್ಯಂಡಿ [ಡಿ] ಖಂಡಶರ್ಕರೆ ಸಿತಾಹ್ವಯುಮೆನಿಕುಂ" (ವಸ್ತುಕೋ. ೯೪-೦೨). [ ಗುಡ + ವಿಕಾರ ]

**ಗುಡಸು** 'ಗುಡಂಸು' ನೋ.

**ಗುಡಾಕು,** ಗುಡಾಕೆ, ಗುಡಾಖು (ನಾ). ಬೆಲ್ಲ, ಮಾದಕ ಹಾಗೂ ಸುಗಂಧ ದ್ರವ್ಯಗಳನ್ನು ಬೆರಸಿ ಹದಗೊಳಿಸಿದ ತಂಬಾಕು: ಗುಡಾಕನ್ನು ಹೈದರಾಬಾದಿನಿಂದಲೇ ತರಿಸುತ್ತಾರೆ (ಜಾರುದಾ. ೬೨). **ಗುಡಾಕೆ:** ಆಗ ಗುಡಾಕೆಯ ಗುಳಿಗೆಯನ್ನು ಹೊರತೆಗೆದು . . . ಹೊತ್ತಿಸಿ ಒಂದೆರಡು ದಮ್ಮು ಸೇದಿ ಮುದುಕನ ಕೈಗೆ ಒಪ್ಪಿಸಿದನು (ನಿಷ್ಕಾಮ. ೬೨). **ಗುಡಾಖು:** ಆ ನಾಯಿಕಸಾನಿಯು ಹೊಗೇಸೊಪ್ಪು, ಅಡಕೆ, ಎಲೆ, ನೆಸ್ಯ, ಗುಡಾಖು, ಭಂಗಿ . . . ಇವುಗಳನ್ನು ಅಂಗಡಿ ಇಟ್ಟುಕೊಂಡು ಕೂತುಕೊಂಡಳು (ಪೀಟೀಮಾ. ೪೫). [ ← ಹಿಂ. ಮರಾ. ಗುಡಾಕೂ ]

**ಗುಡಾಕೆ** 'ಗುಡಾಕು' ನೋ.

**ಗುಡಾಕೇಶ** (ನಾ). ೧. ದಟ್ಟವಾದ ಕೂದಲುಳ್ಳವನು. ೨. ಅರ್ಜುನ. ೩. ಶಿವ. ೪. ಶ್ರೀಕೃಷ್ಣ. [ಸಂ.]

**ಗುಡಾಖು** 'ಗುಡಾಕು' ನೋ.

**ಗುಡಾಣ** 'ಗುಡುವನ' ನೋ.

**ಗುಡಾರ** 'ಗೂಡಾರ' ನೋ.

**ಗುಡಾರಗಟ್ಟು**(ನಾ). ಗುಡಾರದ ಮಾದರಿಯಲ್ಲಿ ಮೇಲ್ಛಾವಣಿಯಿರುವ ಮನೆ; ಡೇರೆಯಂತಿರುವ ಮನೆ: ಎಂಟೆಂಟು ಮನೆಗಳಿದ್ದುವು ಅವರಲ್ಲಿ ಸ್ವಲ್ಪ ತೊಟ್ಟಿಗಳು ಸ್ವಲ್ಪ ಗುಡಾರಗಟ್ಟುಗಳು (ಜಂಗಾಳ್ಕ. ೩೪೮). [ಗುಡಾರ (< ಗೂಡಾರ) + ಕಟ್ಟು₂ ]

**ಗುಡಾರು** 'ಗೂಡಾರ' ನೋ.

**ಗುಡಾರೆ** 'ಗೂಡಾರ' ನೋ.

**ಗುಡಾಳಕ** (ನಾ). ದಟ್ಟವಾಗಿರುವ ಕೂದಲುಳ್ಳವನು; ವಿಷ್ಣು: ವರಮಕುಟಮಣಿಕಾಂತಿ ಪರಿಬಂಧುರ ಗುಡಾಳಕ ನಿಚಯ ಸುಮನೋಹರ ಚತುರ್ಭುಜಮೂರ್ತಿಯಲಿ ತೊಳತೊಳಗಿ ರಂಜಿಸಿದ (ನಿಭಾಗ. ೧೦-೩-೬೬). 'ಗುಡಾಕೇಶ' ಪರಾ. [ಸಂ. ಗುಡಾಲಕ]

**ಗುಡಿ₁** (ನಾ). ೧. ಮಂಡಲ; ವೃತ್ತ; ಸುತ್ತು: ಪರಿವೇಷಃ, ಪರಿಧಿಃ– ೨ ಸೂರ್ಯ ಪರಿವೇಷವೆಂಬ ಗಗನಗುಡಿಯು ಹೆಸರುಗಳು (ಸಿದ್ಧಾಂತಿ. ೬೨). 'ಗುಡಿಗಟ್ಟು₁' ಪರಾ. ೨. ಮೊತ್ತ; ಗುಂಪು; ಸಮೂಹ: ಪವಳದ ರನ್ನದ ಗುದಿಗಳ ಗುಡಿಗಳ್ ನವಮೌಕ್ತಿಕ ರಂಗದ ದಾಂಗುಡಿಗಳ್ ಮೆಟಿದವು (ರಾಜಶೇ. ೯-೪೧ ರಗಳೆ). 'ಗುಂಡಿಯಿಂಟು₁' ಪರಾ. [ದೇ॥ ತೆಲು. ಕೊಲಾ. ಗುಡಿ]

**ಗುಡಿ₂** (ನಾ). ೧. ಬೆಟ್ಟದ ತುಂದಿ,– ಶೃಂಗ: (೬). ೨. ಧ್ವಜ; ಬಾವುಟ; **ಪತಾಕೆ:** ಗುಡಿ ಶಂಖಂ ಚಾಮರಂ ಬೆಳ್ಗೊಡೆ (ಎಇ. XIII, ೩೩೦-೦೩; 929); ಬಿಡುಮುತ್ತಿನ ರಂಗವಲಿ ಮಿಳಿರ್ವ ದುಗುಲದ ಗುಡಿ (ಪಂಪಭಾ. ೩-೨); ನಭಕೆ ನೆಗಪಿ ಪೊಳೆವ ಗುಡಿಯಿಂ ಪತಾಕಾಳಿಯಿಂ ಶೋಭಿಸುತೆ ತದ್ಗುರುವರಂ (ಪದ್ಮರಾ. ೩-೫೦); ನುಡಿಯು ಭಂಡರು ಕೆಲರು ಸಿಂಧದ ಗುಡಿಯ ಭಂಡರು ಕೆಲರು (ಕುಮ್ಮಾಕ. ೦೩-೫). ೩. ಹೊಸವರ್ಷದಂದು ಮನೆಯ ಬಾಗಿಲುಗಳಲ್ಲಿ ನೆಡುವ ಜಯಸ್ತಂಭ ಮತ್ತು ಅಂದು ಆಚರಿಸುವ ಹಬ್ಬ. 'ಗುಂಡಿಪಾಡಿವ' ಪರಾ.

[ದೇ॥ ತಮಿ. ಮಲ. ತುಳು. ಕೊಡ. ತೆಲು. ಕೊಡಿ]

**ಗುಡಿ₃** (ನಾ). ೧. ಮನೆ; ಕಂಟೀರ; ಗುಡಾರ: "ದೂಷ್ಯಂ, ಸ್ಥೂಳಂ, ಪಣಕುಟೀ, ಗುಣಲಯನೀ, ಕೇಳಿಕಾ-ಈ ೫ ಗುಡಿ" (ಹಲಾಯು. ೭೪-೨೯೬); ಬೀಡಿಂಗೆ ಬೀಡುವಿಡಲ್ ನೆಲನುಂ . . . ಗುಡಿಯು ಗೂಂಟಕ್ಕೆ ಬಲ್ಲಡವಿಗಳುಂ (ಪಂಪಭಾ. ೯-೦೦೪ ವ); ಗುಡಿಗುಡಿ ಕೇರಿಕೇರಿಯೊಳು ವಂದನಮಾಲೆಗಳೆತ್ತ ನೋಟ್ಟಿಡಂ (ಪುಣ್ಯಾಸ್ರ. ೭-೮೧). ೨. ದೇವಾಲಯ; ದೇವಸ್ಥಾನ: ಗುಡಿಯಂ ಪೊಕ್ಕಿರೆಟ್ಟುಗದೊಡೆಯಂ ಸೋಮೇಶ್ವರಂಗೆಱಗಿ . . . ತದ್ಭಕ್ತಂ (ಉದ್ಭಟ. ೧೦-೬೬); ಗುಡಿಯ ಮಾತಾಡುವಂದದೊಳೋರ್ವನೊಳಗಿರ್ದು ನುಡಿದರನ್ನರ ಕಿವಿಗೆ ಪ್ರತಿಶಬ್ದದಿಂದಾಗಲೊಡನೆ ತಾಂ ಕೇಳಬಂದಂತೆ (ಜಬಪು. ೧-೩೦); ನಳಿನದಳಾಕ್ಷನ ಗುಡಿಯ ಶಿಖರದ ಮೇಲಳವಟ್ಟುದು ಹೊನ್ನ ಕಳಸ (ಕಂಸವಿ. ೭-೭೮); ಗುಡಿ ಬಸದಿಯ ಜಿನನೆ ಜಗಕ್ಕೊಡೆಯಂ ಬೇರಿನ್ನು ದೈವಮುಂ ಗುಡಿಯುಂ ಪೇಳ್ವೊಡವಿಯೊಳಳವೆ (ವೃಷವಿ. ೩೪-೧೨). ೩. ವಿತಾನ; ಮಂಟಪ: ವಸುಧೆಗೆ ಗುಡಿ ಕವಿದಂತೆಣ್ದೆಸೆಯುಂ ಬಾಸಣಿಸಿ . . . ಎಸೆದುದು ಭುವನೈಕಭವನದಂತಾ ಭೂಜಂ (ಜಗವಿ. ೪-೪೬). ೪. ಕೆತ್ತನೆಕೆಲಸ; ಕುಶಲಕೈಗಾರಿಕೆ. 'ಗುಂಡಿಕೈಗಾರಿಕೆ' ಪರಾ. ೫. ಬಣ್ಣದ ಕೆಲಸ; ವರ್ಣ ಲೇಪಿಸುವಿಕೆ. 'ಗುಡಿಕಟ್ಟು₃' ಪರಾ.

[ದೇ॥ ತಮಿ. ಮಲ. ಕಂಡಿ; ತುಳು. ಗುಡಿ; ಕೊಡ. ಕುಡಿ; ತೆಲು. ಗುಡಿ./ಸಂ. ಕುಟಿ]

**ಗುಡಿ₄** (ನಾ). ಮಂಖಿವಾಡ; ಮುಸುಕು. 'ಗುಂಡಿಗುಮ್ಮ₁' ಪರಾ. [ದೇ.॥ ತುಳು. ಗುಡಿ]

**ಗುಡಿಕ** (ನಾ). ಧನಿಯ; ಕೊತ್ತಂಬರಿ: "ಗುಟಿಕ ಕೊತುಂಬರಿ" (ಅಕಾನಿ. ೯-೨೩). [?]

**ಗುಡಿಕಟ್ಟಿಸು** 'ಗುಡಿಗಟ್ಟಿಸು' ನೋ.

**ಗುಡಿಕಟ್ಟು₁** 'ಗುಡಿಗಟ್ಟು₁' ನೋ.

**ಗುಡಿಕಟ್ಟು₂** 'ಗುಡಿಗಟ್ಟು₂' ನೋ.

**ಗುಡಿಕಟ್ಟು₃** 'ಗುಡಿಗಟ್ಟು₃' ನೋ.

**ಗುಡಿಕಾರ** 'ಗುಡಿಗಾರ' ನೋ.

**ಗುಡಿಕೈಗಾರಿಕೆ** (ನಾ). ೧. ಕೆತ್ತನೆಯ ಕೆಲಸ,– ಉದ್ಯಮ. ೨. ಮನೆಗಳಲ್ಲಿ ಮಾಡಬಹುದಾದ ಸಣ್ಣ ಪ್ರಮಾಣದ ಕೈಗಾರಿಕೆ; ಗೃಹಕೈಗಾರಿಕೆ: ಹಳೆಗಾಲದ ಯಾವ ಗುಡಿಕೈಗಾರಿಕೆಗಳೂ ಇಂದು ಉಳಿಯುವುದು ಕಷ್ಟ (ಗೊಂದಾರ.೧೯೬); ಕಾಲಕ್ರಮೇಣ ದರಿದ್ರಾವಸ್ಥೆಗೆ ಇಳಿದುಹೋದ ಗುಡಿ ಕೈಗಾರಿಕೆ ಅದು (ನಡುಗೋ. ೧೪); ಗುಡಿಕೈಗಾರಿಕೆಗಳು ಬಲಗೊಳ್ಳುತ್ತಲೇ ಇವೆ (ಐತಿಸಂ. ४೨). [ಗುಂಡಿ₃ + ಕೈಗಾರಿಕೆ]

**ಗುಡಿಗ** (ನಾ). ಕೆತ್ತನೆ ಕೆಲಸದವನು; ಕುಶಲಕರ್ಮಿ (?): ಅಸಗನ ಮುನಿಸು ಕತ್ತೆಯ ಸ್ನೇಹ ಸರ್ಪನ ಮುನಿಸು ಕಪ್ಪೆಯ ವಿವಾಹ ಸಬರನ ಸೊಪ್ಪುಡಿಗೆ ಗುಡಿಗನ ಮನೆಯಂತೆ ಇವು ಅಡಗಿಹ ಭೇದವನಱಿ ಆತುರ ವೈರಿಮಾರೇಶ್ವರಾ (ನಗಮಾ. ೫೬). 'ಗುಡಿಗಾರ' ಪರಾ. [ಗುಡಿ₃ + –ಗ₂]

**ಗುಡಿಗಟ್ಟಿಸು,** ಗುಂಡಿಕಟ್ಟಿಸು (ಕ್ರಿ). ೧. ಉತ್ಸವಕ್ಕಾಗಿ ಊರಲ್ಲಿ ಬಾವುಟಗಳನ್ನು ಕಟ್ಟಿಸು: ಪೊಟಲ ಬೀದಿವೀದಿಗಳನಿತುಮನೋರಂತೆ ತಳಿದು ಗುಡಿಗಟ್ಟಿಸಿ (ಆದಿಪು. ೫-೮); ಗುಡಿಗಟ್ಟಿಸಿ ಬದ್ಧವಣಮನೆಡೆಯುಡುಗದೆ ಪೊಯ್ಸಿ (ನೇಮಿಪು. ೧೦-೦೬೩); ಪುರದೊಳ್ ಕೂಡೆ ಗುಡಿಗಟ್ಟಿಸಿ ಮೃದು ಮೃದಂಗ ನಿಸ್ಸಾಳ ಭೇರೀ ಶಂಖ ಕಹಳೆಗಳ ಬಹಳ ಧ್ವನಿಯುಣ್ಮೆ . . . ಪುತ್ರೋತ್ಸವಂ ಕೊಂಡಾಡಿ ಸಕಲಸಂಭ್ರಮದಿಂದರಮನೆಗೆ ಬಂದು (ನಂಬಿರ. ೨-೯೦). ೨. ರೋಮಾಂಚನವನ್ನುಂಟುಮಾಡು: ಕುಟಿಲಾಳಕಿಯರ ನುಣ್ಗಲ್ಲ ತೊಂಡೆವಣ್ದುಟಿಯ ಕರ್ದುಕಿ ಮೆಯ್ಯುಗಿರ ಸುಟಿಯಿಂದ ಗುಡಿಗಟ್ಟಿಸುವ ಚಾಗಿಯ ಹಿಮು ವಿಟನಂತೆ ಕಣ್ಗೆ ರಂಜಿಸಿತು (ಮೋಹತ. ४-४೫). **ಗುಡಿಕಟ್ಟಿಸು:** ೧. ಭೂಪತಿ ಪುರದೊಳಗೆ ಗುಡಿಕಟ್ಟಿಸಿದನತ್ಯಧಿಕಹರ್ಷದಲಿ (ಕುಮ್ಮಾಸ. ೦೩-೫). [ಗುಡಿಗಟ್ಟು₂ + –ಇಸು₃]

**ಗುಡಿಗಟ್ಟು₁,** ಗುಡಿಕಟ್ಟು₁ (ಕ್ರಿ). ೧. ಮಂಡಲಾಕಾರವಾಗು; ಚಂದ್ರ, ಸೂರ್ಯಬಿಂಬಗಳ ಸುತ್ತ ಪರಿವೇಷ ಕಟ್ಟು: ಗಗನದೊಳೊಡ್ಡುಗಟ್ಟಿ ಬೆಳಗಾ ಬರುತಿರ್ಪುದದಲ್ತು . . . ಜನಕಂ ಬರುತಿರ್ದಪನೆಂದು ಕಣ್ಪೊಲಂಬುಗೆ ನಲಿದತ್ತು ದಿಟ್ಟವೆಳಗಿಂ ಗುಡಿಗಟ್ಟಿ ಪುರಾಂಗನಾಜನಂ (ಪಂಪರಾಮಾ. ೫-೨೬); ಚಂದ್ರಂಗೆ ಗುಡಿಗಟ್ಟಿದಂತೆ (ಸೌಗಂಧಿ. ೧೩೦-೦೨)

೨. ಸುತ್ತುಹಾಕು ; ಪ್ರದಕ್ಷಿಣೆಮಾಡು : ಒರ್ವ ಶಿಶುವಂ ಮಕ್ಕಳೆಲ್ಲಂ ಬಿಟ್ಟೋಡಿ ಪೋಗಲಲ್ಲಿಗೆ ಮತ್ತಗಜಂ ಪರಿತಂದು ಬಲವಂದು ನಿಂದು ಗುಡಿಗಟ್ಟಿ ಪೊಡಮಟ್ಟು ಪೋದುದು (ಸಂಬಿರ. ೨-೪೨). ೩. ಸುತ್ತುಗಟ್ಟು ; ಸುತ್ತಲೂ ಆವರಿಸು ; ಒಟ್ಟಿಗೆ ಸೇರು : ದೂತರೆ ತರೆ ಬಂದ ಸಬ್ಬವದ ಮಾತುಗಳಂ ಗುಡಿಗಟ್ಟಿ ಕೇಳರೇ (ಪಂಪಭಾ. ४-೧೦೧) ; ಸುರರು ಗುಡಿಗಟ್ಟಿದರು ಮುತ್ತಿದ ತರುಚರರು ಹಿಮ್ಮೆಟ್ಟಿದರು (ತೊರರಾ. ೬-೩-೮); ಸಲೆ ಪ್ರಾಣಲಿಂಗಂ ಸಂಬಂಧಿಯಂ ಮಾಡಿ ಮತ್ತೊಲಿದು ನಿಜಸುಖಮಿತ್ತು ಪೋಗಲಾತನ ಮಂತ್ರಿಕುಲಮಿರದೆ ಗುಡಿಗಟ್ಟಿ ಮಿಗೆ ಸಮಾಧಿಸ್ಥಿತನ ಮಾಡಿ ಪೋಗಲ್ಕೆ (ಚಬಪು. ೫೬-೬೨) ; ಶರಣರು ಅಲ್ಲಲ್ಲಿ ಗುಡಿಗಟ್ಟಿದರು (ಭಕ್ತ.ಬ. ೯೯). ೪. ಕೊಡಿಸಿ ಕಟ್ಟು : ಕೆದರಿದ ಕೇಶಪಾಶಗಳ ಗುಡಿಗಟ್ಟಿ ಮುಖ ವಿಧುಂತುದಗೆ ಕಾಣಿಕೆಯಿತ್ತ ತೆರದಿ ಕೋಪಾಗಾರಮಂ ತಡೆಯದೊಳಪೊಕ್ಕು (ಪಂಕಾರಾ. ೨-೫-೨೯). **ಗುಡಿಕಟ್ಟು₁ :** ೩. ಗಿಡಗಿಡದಿ ಕುಳಿತ ಪಕ್ಷಿಗಳೆಲ್ಲ ನೋಡುತಲಿ ಹಿಡಿದು ಜೇನುತುಪ್ಪ ತಂದು ಬಾಯಿವಳಗ ಹಾಕಿ ಗುಡಿಕಟ್ಟಿ ನಿಂತವು ಬಿಸಿಲು ಬೀಳದೆ ಶಿಶುವಿಗೆ (ಕರ್ಹಾಳ. ೨೯೪). [ಗುಡಿ₁ + ಕಟ್ಟು₁]

**ಗುಡಿಗಟ್ಟು₂, ಗುಡಿಕಟ್ಟು₂** (ಕ್ರಿ). ೧. ಬಾವುಟವನ್ನು ಕಟ್ಟು ; ಧ್ವಜವನ್ನು ಏರಿಸು : ನೀರದಪಥದೊಳ್ ತಗುಳ್ದರಿಗನಂ ಪೊಗಟ್ಟಾಡಿದನಂದು ದಂಡಕಾಷ್ಠದ ತುದಿಯೊಳ್ ಪಳಂಚಲೆಯೆ ಕೋವಣವಂ ಗುಡಿಗಟ್ಟಿ ನಾರದಂ (ಪಂಪಭಾ. ೧೨-೨೦೯) ; ಗುಡಿಗಟ್ಟುವ ಪೌರಜನದಿಂ ಗಳಿಗೆವಟ್ಟಲ ನಾರ್ಪವ ಜೋಯಿಸರಿಂ (ರಾಜಶೇ. ೮-೫೨) ; ಸಮಾಜದ ಮನಸ್ಸಿನಲ್ಲಿ ಮಾತಿನಲ್ಲಿ ಮಾಡಿಕೆಯಲ್ಲಿ ಅವನ ಕೀರ್ತಿ ಗುಡಿಗಟ್ಟುತ್ತಿತ್ತು (ನಾಡೋಜ. ೧೨). ೨. ಮೈಗೂದಲು ನಿಮಿರು ; ನವಿರೇರು ; ರೋಮಾಂಚನವಾಗು: ಮಹೇಂದ್ರನು ಮಾಡುವ ಸತ್ಕಾರವನೂಹಿಸಿ ನೋಡಿ ಪ್ರಹ್ಲಾದಂ ದೇಹದೊಳಗೆ ಗುಡಿಗಟ್ಟ ತಳೆದನು ಪ್ರಹ್ಲಾದನನೆಂಬ ನಾಮವನು (ಅಂಜಚ. ೫-೧೪): ಪುಳಕಂ ಸಂದಣಿಸಿ ತನುವಿನೊಳ್ ಗುಡಿಗಟ್ಟೆ ಬೆಮರ್ವನಿಗಳಿಂದಂಗಯಷ್ಟಿ ತೊಪ್ಪನೆ ತೋಯೆ (ಪದ್ಮರಾ. ೭-೨೮). ೩. ಎದ್ದುನಿಲ್ಲು ; ನೆಟ್ಟಗಾಗು : ನಿಟ್ಟಸಲಕ್ಷಿಯುಂ ಬೆಂಡೆದ್ದು ನವಿರ್ಗುಡಿಗಟ್ಟಿತು (ಪೋಹತ. ೧೧-೯೨). ೪. ಸಂತೋಷಗೊಳ್ಳು ; ಉತ್ಸಾಹಗೊಳ್ಳು : ಉರಿವೆರ್ದೆಯಾಟಿ ಚಿಂತಿಪ ಮನಂ ಗುಡಿಗಟ್ಟೆ . . . ಸೈಪಿನೊಳಿಂತೆನಗೀಗಳೀ ವನಾಂತರದೊಳೆ ಕಾಣಲಕ್ಕುಮೆ ಮಹೀಯ ಮನೋರಥ ಜನ್ಮಭೂಮಿಯಂ (ಪಂಪಭಾ. ೫-೦೪) ; ಅಂತಹುಪೆ ಚಂದ್ರೋದ [ಯೋಲ್ಲಸಿತೆ]ಯುಪ್ಪುದಧಿವೇಲೆಯಂತೆ ಸಮಕರಧ್ವಜೆಯಾಗಿ ಮನದೊಳಗೆ ಗುಡಿಗಟ್ಟಿ ಮಹಾಶ್ವೇತೆಯಲ್ಲಿಗೆ ಪೋದಪ್ಪೆಂ (ಕಾದಂಬ. ೫೮೨) ; ಹಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯೇ ಎಂದೆಂದು ಅಳಿಯೆನೆಂದು ಗುಡಿಗಟ್ಟಿದೆಯಲ್ಲಾ (ಬಸವ. ೦೬೩) ; ಮನದೊಳಗೆ ಗುಡಿಗಟ್ಟಿದನು ಮಾನಿನಿಯ ಕರುಣಾಪಾಂಗ ರಸಭಾಜನವು ಪುಣ್ಯವಲಾ ಯೆನುತ ಭೀಳ್ಕೊಂಡನಗ್ರುಜೆಯ (ಕುವ್ಯಾ. ವಿ. ೨-೪೯). **ಗುಡಿಕಟ್ಟು₂ :** ೧. ಉತ್ತರೀಯವಸನದಿಂ ಗಡಿಕಟ್ಟಿಕೊಂಡತಿ ತ್ವರಿತ ಗತಿಯಿಂ ಪೋಗೆ (ಕುಸುಮಾ. ೧೫-೯೩ ವ). ೪. ಹಾರುವೆನಯ್ಯಾ ಭಕ್ತರ ಬರವ ಗುಡಿಕ[ಪಾಠಾಂ. ಗ]ಟ್ಟ (ಬಸವ. ೭೦೫). [ಗುಡಿ₂ + ಕಟ್ಟು₁]

**ಗುಡಿಗಟ್ಟು₃, ಗುಡಿಕಟ್ಟು₃** (ಕ್ರಿ). ೧. ದೇವಸ್ಥಾನವನ್ನು ನಿರ್ಮಿಸು : ನಿನ್ನ ಸೀಳಿದ ಹೋಳೆ ನಾಳೆ ಗುಡಿಗಟ್ಟುವುವು ಇಂದಿನೀ ನಿನ್ನ ಸೆರೆಗೆ (ದ್ರಾಕ್ಷಿದಾ. ೬೫-೫). ೨. ದೃಢವಾಗು : ತಮ್ಮ ನುಡಿ ಗುಡಿಗಟ್ಟಿದರೆ ಸರಿ ಜಗವೆ ನೀನೆಂದಂತೆ (ಹೃದಸು. ೪೬-೬). **ಗುಡಿಕಟ್ಟು₃ :** ೧. ಭರತಭೂಮಿ ಯಾರಿಗಾಗಿ ಗುಡಿಕಟ್ಟಿ ಪುನಃ ಪುನಃ ಪೂಜಿಸಬೇಕೋ ಆ ದೇವಿಯರಿಬ್ಬರು– ಹಿಮಗಿರಿಯ 'ಗೌರಿ' ; ವಾಲ್ಮೀಕಿಯ 'ಸೀತೆ' (ಧರ್ಮಸಾ. ೭೮). ೩. ಬಣ್ಣವನ್ನು ಬಳಿ : "ಗುಡಿಕಟ್ಟು (ಗುಡಿ + ಕಟ್ಟು) – ವರ್ಣಪೂರ ರೇಖಾಯಾಂ (ಕುಂಡಲೀಕರಣಂ)" (ಶಮಧಾ). [ಗುಡಿ₃ + ಕಟ್ಟು₁]

**ಗುಡಿಗಟ್ಟು₄** (ನಾ). ಗುಡಿಯ ರಚನೆ ; ದೇವಸ್ಥಾನದ ನಿರ್ಮಾಣ : ಇನ್ನಿಡಿಕಿರಿದ ಗುಡಿಗಟ್ಟುಗಳನು ದೇವಾಲಯದ ಗಡಣಗಳನು (ಲೀವಣ. ೫-೫). [ಗುಡಿ₃ + ಕಟ್ಟು₂]

**ಗುಡಿಗಾರ, ಗುಡಿಕಾರ** (ನಾ). ೧. ಮರದಿಂದ ಬೊಂಬೆ ಮೊದಲಾದ ಕೆತ್ತನೆ ಕೆಲಸವನ್ನು ಮಾಡುವವನು : ಸೊರಬ ಸಾಗರದ ಗುಡಿಗಾರರು ಕೆತ್ತುವ ಶ್ರೀಗಂಧದ ಮತ್ತು ದಂತದ ಸಣ್ಣಸಣ್ಣ ವಿಗ್ರಹಗಳು ಸಣ್ಣ ಪ್ರಮಾಣದಲ್ಲಿ ಸುಂದರವೆನಿಸಿಕೊಳ್ಳುತ್ತವೆ (ಮೈವಾಸು. ೫೩). ೨. ಬಣ್ಣ ಹಾಕುವವನು : ಇಷ್ಟು, ಗುಡಿಗಾರ ಬರೆಯುವುದಾದರೆ ಬರೆಯ ಬಹುದಾದ ಪಾಟಾಳಿ ಪರಮಯ್ಯನ ಚಿತ್ರ (ಹಹಸ. ೯೫) ; **ಗುಡಿಕಾರ :** ೧. ಚಿತ್ರಕಾರನ ವರ್ಣವೈಶಿಷ್ಟ್ಯವನ್ನು, ಗುಡಿಕಾರನ ಹಸ್ತಚಳಕವನ್ನು, ಶಿಲ್ಪಿಯ ಪ್ರತಿಸೃಷ್ಟಿ ಸಾಮರ್ಥ್ಯವನ್ನು ಕಾಣಬಹುದು (ಚದೇವ. ೪೯).

[ಗುಡಿ₃ + – ಕಾರ₁ (< – ಕಾಱ)]

**ಗುಡಿಗಿ** (ನಾ). = ಗುಂಡಿಗಿಚಲ್ಲಣ ; "ಉದ್ದ ಸಣ್ಣಾದ ಚೊಣ್ಣ" (ಜಾನಕೋ. ೪೯). [← ಹಿಂ. ಗಂಡಗೀ; ಮರಾ. ಗಂಡಘೀ]

**ಗುಡಿಗಿಚಣ್ಣ** 'ಗುಡಿಗಿಚಲ್ಲಣ' ನೋ.

**ಗುಡಿಗಿಚಲ್ಲಣ, ಗುಡಿಗಿಚಣ್ಣ, ಗುಳಗಿಚಣ್ಣ, ಗುಳಗಿಚೊಣ್ಣ** (ನಾ). ಮೊಳಕಾಲಿನವರೆಗೆ ಇರುವ ಚಲ್ಲಣ : ಅಮರಾವತಿ ಮತ್ತು ನಾಗಾರ್ಜುನಕೊಂಡದ ಕೆತ್ತನೆಯ ಕೆಲಸಗಳಲ್ಲಿ ಕೆಲವರು ಪುರುಷರು ಗುಡಿಗಿಚಲ್ಲಣಗಳನ್ನೂ ಅಂಗಿಗಳನ್ನೂ ಧರಿಸಿದ್ದಂತೆ ಕಾಣಿಸಲಾಗಿದೆ (ದಭಾಇ. ೫೭). **ಗುಡಿಗಿಚಣ್ಣ :** (ಈ). **ಗುಳಗಿಚಣ್ಣ :** ಗಂಡು ಉಡಗರಿ ಉಟ್ಟು ಗುಂಡಿ ಮುಂಡಾಸ ಸುತ್ತಿ ಗುಳಗಿಚಣ್ಣಾವ ತೊಡಬೇಕ (ಲೋಕಗೀ. ೨೨೦). **ಗುಳಗಿಚೊಣ್ಣ :** ಗುಳಗಿಚೊಣ್ಣದವರು ಗುಂಡೀ ಮುಂಡಾಸದವರು (ಲೋಕಗೀ. ೨೦೨). [ಗುಡಿಗಿ + ಚಲ್ಲಣ]

**ಗುಡಿಗುಂಡಾರ** 'ಗುಡಿಗೂಡಾರ' ನೋ.

**ಗುಡಿಗುಡಿ** 'ಗಂಡುಗುಡಿ' ನೋ.

**ಗುಡಿಗುಮ್ಮ₁** (ನಾ). (ಕರಾ) ಮುಸುಕು ಹಾಕಿಕೊಂಡು ಬರುವ ಗುಮ್ಮ. [ಗುಡಿ₄ + ಗುಮ್ಮ₁]

**ಗುಡಿಗುಮ್ಮ₂** (ನಾ). ಒಂದು ಜಾತಿಯ ಪ್ರಾಣಿ : ನರಿ ಬೆಕ್ಕು ಗುಡಿಗುಮ್ಮ ಕರಡಿ ಸಾರಂಗವು (ಏಬಕಾ. ೦೨೦-೦೧). [?]

**ಗುಡಿಗೂಡಾರ, ಗುಡಿಗುಂಡಾರ** (ನಾ). ಗಂಡಿಸಲು; ಗುಂಡಾರ: ಪುರದೊಳಗೆ ಹೇರಾಳ ಹಬ್ಬದ ಹರಹಿನಲಿ ಬೀಡಾರ ಭಿಕ್ಷಾಚರಿತರಿಗೆ ದೊರಕುವುದೆ ಗುಡಿಗೂಡಾರ ಸಂತತಿಗೆ (ಕುವ್ಯಾ. ಆ. ೦೨-೬). **ಗುಡಿಗುಂಡಾರ :** ಬಿಚ್ಚಿ ಗುಡಿಗುಂಡಾರವನು ಕಣಿಯ ಕೇಳಿರೊ (ಏಬಕಾ. ೦೪೩-೫೩) ; ಅಲ್ಲಿ ಗುಡಿಗುಂಡಾರ, ಪತಾಕೆ ಪಲ್ಲಕ್ಕಿ, ಮಿಾನ, ಮೊಸಳೆ ಇರಬಹುದು (ನಿರಾಥ. ೦೬೯); ಗುಡಿಗುಂಡಾರಗಳು ಜನರಿಂದ ತುಂಬಿಹೋಗಿದ್ದವು (ದೃಢನಿ. ೪) ; ಬಹುತರ ಹಾಳುದೇವಾಲಯ, ಸಾರ್ವಜನಿಕ ಗುಡಿ–ಗುಂಡಾರಗಳೇ ವಸತಿಸ್ಥಾನಗಳಾಗಿರುತ್ತಿದ್ದವು (ಶಲೀಘ. ೬೦).

[ಗುಡಿ₃ + ಗೂಡಾರ]

**ಗುಡಿಗೂಱು** 'ಗುಡುಗೂಱು' ನೋ.

**ಗುಡಿಗೆ** (ನಾ). ಒಂದು ಬಗೆಯ ಆಯುಧ : ಕೊಡಲಿಯೆಂದೂ ತ್ರಿಶೂಲವೆಂದೂ ವಜ್ರಮುಷ್ಟಿಯೆಂದೂ ಗದೆಯೆಂದೂ ಗುಡಿಗೆಯೆಂದೂ ನೇಗಿಲುಯೆಂದೂ . . . ಯಾ ಮೂವತ್ತೆರಡು ಆಯುಧಗಳ ಹೆಸರು (ಖಡ್ಗಟೀ. ೨-೩೭).

[P ಇದು 'ಗುದಿಗೆ' ಎಂಬುದರ ಅಪಲಿಖಿತವಿರಬಹುದು]

**ಗುಡಿಗೇಟ್³** (ನಾ). ಒಂದು ಊರಿನ ಹೆಸರು. P ಈಗಿನ ಧಾರವಾಡ ಜಿಲ್ಲೆಯ ಗುಡಿಗೇರಿ : ಆನೆ ಸೆಜ್ಜೆಯ ಬಸದಿಗೆ ತಾಮ್ರಶಾಸನ

ಮರ್ಯ್ಯಾದೆಯಿಂದಾಳ್ವ ಗುಡಿಗೆಱೆಯ ಭೂಮಿಯೊಳಗೆ ಪಡುವಣಪೊಲಂ (ಇಅ. XVIII, ೩೯-೨೦ ; ೨೨೨). [ ಗುಡಿ? + ಕೆಱೆ ]

**ಗುಡಿಗೊಳ್** (ಕ್ರಿ). (ಆಲಂ) ಹೆಸರಂವಾಸಿಯಾಗು; ಪ್ರಸಿದ್ಧವಾಗಂ: ನಾಡುಗಳೊಳೆಲ್ಲ ಕನ್ನಡನಾಡೆ ಮೇಲಂತೆ . . . ಅದರೊಳಗೆ ಗುಡಿಗೊಂಡ ಹಾಲುಮನೆ ಮೇಲಂತೆ (ನಡಪಾ. I, ೪೩೩).

[ ಗುಡಿ$_2$ + ಕೊಳ್$_1$ ]

**ಗುಡಿಗೊಳಿಸು** (ಕ್ರಿ). ಗುಡಿಯನ್ನಾಗಿ ಮಾಡು ; ದೇವಾಲಯವನ್ನಾಗಿ ಮಾಡಂ : ಬಯಲನೊಂದು ಗುಡಿಗೊಳಿಸುತಿಹಳು ಒಳುಬಾಳ ಹರಕೆ ಎಂದು (ಸೂರ್ಯಪಾ. ೭೪-೮). [ ಗುಡಿ$_3$ + ಕೊಳ್$_1$ + – ಇಸು$_3$ ]

**ಗುಡಿಗೋಪುರ** (ನಾ). ಗುಡಿಯಂ ಗೋಪುರ ; ದೇವಸ್ಥಾನದ ಶಿಖರ : ಗುಡಿಗೋಪುರಕ್ಕು ಬಲೆ ಬೀಸಿ ಬಂದ ಅಗೊ ಬೆಳಕು ಬೇಟೆಗಾರ (ಮುಕ್ತಕಂ. ೨೯-೪) ; ದೂರದೇಶದ ಯಾತ್ರಿಕರು . . . ಕಂಡ ಗುಡಿಗೋಪುರಕೆ ಕೈಮುಗಿಯುತ್ತ ಅಲ್ಲಿಯೆ ನಿಂದರು (ನೆಲಮು. ೧೧-೧೨).

[ ಗುಡಿ$_3$ + ಗೋಪುರ ]

**ಗುಡಿಚಾಪೆ** (ನಾ). (ಉಕ) ಗುಡಿಸಲು, ಚಾಪೆ ಮೊದಲಾದ ಎಲ್ಲ ಇದ್ದ ಬಿದ್ದ ಸಾಮಾನು.

**ಗುಡಚಾಪೆಕಟ್ಟಿಸು**=ಗಂಟುಮೂಟೆ ಸಹಿತವಾಗಿ ಸ್ಥಳ ಬಿಟ್ಟು ಹೊರಡಂವಂತೆ ಮಾಡಂ : ಉರಿಯೋ ಕಟಿಗೀ ಮ್ಯಾಲ ನನ್ನ ಹಾಕಿ ಸುಟ್ಟರ ಕೊಳ್ಳಿದೆವ್ವಾಗಿ ಜನ್ಮಜನ್ಮಾಂತರದೊಳಗ ನಿನ್ನ ಗುಡಚಾಪಿಕಟ್ಟಿಸತೇನಿ (ಸಮಜೀ. ೨೦೩). **ಗುಡಚಾಪೆಕಟ್ಟು** = ಗುಡಿಚಾಪೆಕಿತ್ತು: ಇನ್ನೇನು ಆರೇಳು ತಿಂಗಳಾದಾಗ ಅವರು ಗುಡಚಾಪಿಕಟ್ಟಿಕೊಂಡ ಹೊರಡಬೇಕಾಗ್ಯತಿ ನವ್ಮ ದೇಶಾ ಬಿಟ್ಟು (ಮಾಡಿಮ. ೬೦). **ಗುಡಿಚಾಪೆಕಿತ್ತು**=ಗಂಟುಮೂಟೆ ಸಹಿತವಾಗಿ ಸ್ಥಳಬಿಟ್ಟು ಹೊರಡಂ ; ಕಂಬಿಕೀಳು ; ಎತ್ತಂಗಡಿ ಮಾಡು : ಈ ಊರನ್ನೇ ಬಿಟ್ಟು ಗುಡಿಚಾಪೆಕಿತ್ತಿದ್ದೇವೆ (ಜನನಾ. ೫೬).

[ ಗುಡಿ$_3$ + ಚಾಪೆ ]

**ಗುಡಿದುಂಬಿಸು** (ಕ್ರಿ). ಉತ್ಸವಕ್ಕೆ ಹೋದ ದೇವರನ್ನು ಗುಡಿಗೆ ಕರೆದು ಕೊಂಡು ಬರು,–ಪ್ರವೇಶಮಾಡಿಸು : ವಾದ್ಯಸಮೇತ ವೈಭವಯುತವಾದ ಮೆರವಣಿಗೆಯಲ್ಲಿ ವಿಗ್ರಹವನ್ನು ತಂದು ಗುಡಿದುಂಬಿಸುತ್ತಾರೆ (ಪ್ರವಾಇ. I, ೪೧೧). 'ಮನೆದುಂಬಿಸು' ಪರಾ.

[ ಗುಡಿ$_3$ + ತುಂಬಿಸು ]

**ಗುಡಿದೇವ** (ನಾ). ದೇವಾಲಯದಲ್ಲಿರುವ ದೇವರು : ಬಾಲದುದಿ ಸುಟ್ಟ ಕಪಿ ಹನುಮ ಗುಡಿದೇವನ್ನೆ (ಕಪಿಪು. ೪೩-೯). [ ಗುಡಿ$_3$ + ದೇವ ]

**ಗುಡಿಪಾಡವ** 'ಗುಡಿಪಾಡಿವ' ನೋ.

**ಗುಡಿಪಾಡಿವ, ಗುಡಿಪಾಡವ** (ನಾ). ಮನೆಯ ಮುಂದೆ ಕಂಬವನ್ನು ನೆಟ್ಟು ಬಾವುಟ ಕಟ್ಟುವ ಪಾಡ್ಯ; ಚೈತ್ರಶುದ್ಧಪಾಡ್ಯ; ಯುಗಾದಿ ಪ್ರತಿಪದೆ : ಉತ್ತರಕರ್ನಾಟಕದಲ್ಲಿ ಗುಡಿಪಾಡಿವ ಹೆಚ್ಚು ಬಳಕೆಯಲ್ಲಿದೆ (ರೂಢಿ). **ಗುಡಿಪಾಡವ :** ಉಗಾದಿ ಪ್ರತಿಪದೆ ಇಂದು. 'ಗುಡಿಪಾಡವಾ' ಹಿಂದೂಜನರ ಹೊಸವರುಷ ಪ್ರಾರಂಭದ ದಿನವಿದು (ಸ್ವಪ್ನದ. ೧೦೯).

[ಗುಡಿ$_2$ + ಪಾಡಿವ ]

**ಗುಡಿಬಳಸು** (ನಾ). ದೇವಾಲಯದ ಸುತ್ತುವಳಯ : ನನ್ನೊಳಗು ಹೊರಗು ನಾ ಗುಡಿಬಳಸಿನೊಳಗಲೆದ ಚರಿತಾರ್ಥವೆಡೆಗೊಂಡಿತೀ ಕಬ್ಬದೊಳಗೆ (ಮಲೆದೇ. ೫೯-೩). [ ಗುಡಿ$_3$ + ಬಳಸು$_2$ ]

**ಗುಡಿಬಿಡು** (ಕ್ರಿ). ಗುಡಾರವನ್ನು ಹಾಕಿ ಇಳಿದುಕೊಳ್ಳು ; ಡೇರೆಹಾಕಂ ; ಬಿಡಾರ ಮಾಡು : ಕೆಸವ ಮರಿವಸೆ ಸೀಮೆಯಲು ಗುಡಿಬಿಟ್ಟದ್ದಲ್ಲಿ ಕೆಸವಯದೇವಂಗೆ ಬಿಟ್ಟ ಮಣ್ಣು (ಮ್ಯಆರಿ. ೧೯೩೯, ೪೫-೬ : 12 ನೆಯ ಶತ ?).

[ ಗುಡಿ$_3$ + ಬಿಡು$_1$ ]

**ಗುಡಿಮೊನೆ** (ನಾ). ದೇವಸ್ಥಾನದ ಕಲಶ ; ಗೋಪುರದ ಶಿಖರ : ಆಣು ವನಿತೇ ಪೂರ್ಣವೆಂಬ ತೆರದಿ ನೆಲದುಬ್ಬಿನೀ ಮಲೆಯ ತಲೆಯ ಗುಡಿಮೊನೆಯಿಂದ (ಮಲೆದೇ. ೫೨-೩). [ ಗುಡಿ$_3$ + ಮೊನೆ$_1$ ]

**ಗುಡಿಯಿಸು, ಗುಡಿಸು$_1$, ಗೂಡಿಸು, ಘುಡಿಸು** (ಕ್ರಿ). ೧. ರಾಶಿಹಾಕಂ ; ಒಟ್ಟಿಗೆ ಸೇರಿಸು : " ಗುಡಿಯಿಸು (ಗುಡಿಸು) –ಪುಂಜೀಕರಣೇ " (ಶಮದ). **ಗುಡಿಸು$_1$** : ೧. ಮಂತ್ರಮಾಸ್ಥಾನವೆಂಬ ನೀರ್ ತೆಗೆದ ರತ್ನಾಕರದೊಳಲ್ಲಲ್ಲಿ ತರತರಂಬಿಡಿದು ಗುಡಿಸಿದ ರತ್ನರಾಸಿಗಳೆಂಬಂತೆ ಮಣಿನಿಕರಖಚಿತಮಕುಟಕೋಟಿಗಳ್ ಮೆಱೆಯೆ (೧೧೪. ೨-೧೦೫ ವ) ; ಅವನಿಯಲಿ ಗುಡಿಸಿ ದೀಪಿಸುವನಿತು ದಿವ್ಯಾಂಬರವಿತಾನವನೊಯ್ದು ಬಳಿಗಿತ್ತ (ಬಸಪು. ೧೧-೩೯); ಕಡಿಕುಗಳನಾಯ್ದು ಬಿಸಿ ರಥದೊಳು ಗುಡಿಸಿ (ಕುಮಾರ್ದ್ರೋ. ೦೯-೫). ೨. ಕಸಪೊರಕೆಯಿಂದ ಕಸವನ್ನು ಉಡಂಗು, – ಬಳಿ : ಕಸಂಗಳನಿರದೆ ಗುಡಿಪ ಕೂಲಿಗಳವರ್ (ಚಿಬಪು. ೪೭-೪೨) : ಸಾಮಾನುಗಳನ್ನು ತರುವ ಹಿಂದಿನ ದಿನ ಉಗ್ರಾಣವನ್ನು ಚೆನ್ನಾಗಿ ಗುಡಿಸಿ ಚೊಕ್ಕಟಮಾಡಬೇಕು (ಅಡುಸೌ. ೦೨೪). ೩. ಕೆಡಿಸು ; ನಾಶಮಾಡಂ : ಮರೂರು ಕುನ್ನಾಡಿಯ ನೆಟಲ ಗುಡಿಸಿದ ತ್ರೈಲೋಕ್ಯವೀರಕೆ ಕೊಟ್ಟ ಮಣ್ಣು ಇರ್ಬಣ್ಣಾಗ (ಎಕ. IX, ಬೆಂಗಳೂ. ४೦-೯ ; ಸು. 820). **ಗೂಡಿಸು:** ೧. ಜನ್ಮದಿಂ ಜನ್ಮಕ್ಕೆ ಉಡುಗಿ ಗೂಡಿಸಿ ತಂದ ತೊಡಕುಗಳ ಮಾಲೆ ನಮ್ಮೆದೆಯಲ್ಲಿ ಜೋಲಾಡುತಿವೆ (ಉಯ್ಯಾಲೆ. ೭೯-೩). ೨. ಆ ಮನುಷ್ಯ ಗುಡ್ಡಗಳು ಅಡ್ಡ ಬಂದರೂ, ಅವನ್ನು ಕಸಗೂಡಿಸಿದಂತೆ ಗೂಡಿಸಿಕೊಂಡು ಮುಂದೆ ಸಾಗಬಲ್ಲ (ವಿಜಾಮಂ. ೯೭). **ಘುಡಿಸು : ೨.** ಮಾಳೆಯ ಮದಿಗೊಂಡ ಗೌಡಾರು ತೆರಗ ಘುಡಿಸಿ ಕಟಿದರು (ಎಕ. XI, ಹೊಳಲ್ಕೆ. ೭೬-೮ ; ?). 'ಉಡಂಗು$_2$' ಪರಾ.

[ <ಉಡುಗಿಸು$_2$ ]

**ಗುಡಿಯಿಱು$_1$** (ಕ್ರಿ). ರಾಶಿಯಾಗಂ ; ಸಮೂಹವಾಗು ; ದಟ್ಟೈಸಂ : ಪಡೆದರ್ದೇವತೆಯರ್ ಮಿಗೆ ಕಡುಮುಳಿಸಿಂದುರಿದು ದಹನಶಿಖಿಗಳ ಪೊಗೆಯಂ ಪಡೆವಂತೆ ಪತ್ರುದೆಸೆಗಂ ಗುಡಿಯಿ[ಪಾಠಾಂ. ೧] ಱಿದಂತಾಗೆ ನೀಳಮೇಘಾವಳಿಯಿಂ (ಅರ್ಧನೇ. ೮-೬) ; ಬೆಟ್ಟದ ಹೊರಗೆ ನಡೆತರ ಲಭ್ರದಲಿ ಗುಡಿಯಱಿದು ಮೆಱೆದುದು ಮೇಘ ಮಿಂಚಿದುದಖಿಳ ದೆಸೆದೆಸೆಗೆ (ಕುಮಾರ್ಭ.೯-೨೦) ; ಜಲಧಿಯಿಡಿಮಳಲೆತ್ತುತಿರ್ದುದು ಗುಮ್ಮಿಱಿದು ಗುಡಿಯಿಱಿದು ಗುಳ್ಳೆಗಳು (ತೊರಠಾ. ೪-೧೨-೨೪).

[ ಗುಡಿ$_1$ + ಇಱಿ$_2$ ]

**ಗುಡಿಯಿಱು$_2$** (ಕ್ರಿ). ನಿಮಿರು ; ನೆಟ್ಟಗೆ ನಿಲ್ಲು : ಜಡಿದ ಶೌರ್ಯದ ಮೈಗಳುಬ್ಬಿನ ಗುಡಿಯಿಱಿ[ಪಾಠಾಂ.ಡಿ]ದ ರೋಮಾಳಿ ರಿಪುಗಳ ಕುಡಿದ ಕಂಗಳ ಸುಭಟರೆಚ್ಚಾಡಿದರು ಚಳಕದಲಿ (ಕುಮಾರ್ಕ. ೨೩-೪).

[ ಗುಡಿ$_2$ + ಇಱಿ$_2$ ]

**ಗುಡಿಲ್**, ಗುಡಲು, ಗುಡಿಲು, ಗುಡುಲು (ನಾ). ತೆಂಗಿನ ಗರಿ, ಹುಲ್ಲು ಮೊದಲಾದುವನ್ನು ಹೊದಿಸಿದ ವಾಸಸ್ಥಾನ ; ಜೋಪಡಿ ; ಗುಡಿಸಿಲು : ಕೆಮ್ಮುಳ್ಳರಂತೆ ಮೇಲೆತ್ತುವ ಶ್ವಾಸಮುಂ ಗುಡಿಲಂತೆ ಬಾಗಿದ ಬೆನ್ನುಂ (ಧರ್ಮಾಮೃ. ४-೭೫) ; ಸಂತೆಯ ಗುಡಿಲ[ಪಾಠಾಂ. ಸಲ] ಸೂಳಿಗೆ ಕೊಂತವಳವಡುವುದೆ (ಬಸವ. ೧೧೦) ; ಚೆನ್ನಯ್ಯನಿಪ್ಪ ಗುಡಿಲಿದೆಯೆಂದು ತೋಱುತಿರೆ (ಚನ್ನರ. ೮೩-೧೨) ; ಗುಡಿಲಂ ಹಿರಿಹಿರಿದು ಧಿಕ್ಕನೆ ಸುಡಲು (ಬಸಪು. ೨೭-೪೮). **ಗುಡಲು :** ಹೆಣದಱುವೆಯ ಕಳೆಕೊಂಡು ಬಂದು ಸಾರಿದ ತನ್ನ ಗುಡಲ ಕಂದಗೆ ಈ ವಿಧಿಯಾಯಿತೆ ಶಿವ ಎಂದು ಬಂದಳು ಸುಡುಗಾಡ ಕಳದು (ಹರಿಶಾಂ. ४-೭೯) ; ದೇವರೆ, ಅಂತ ಎತ್ತಿಕೊಂಡು ಗುಡಲತ್ತ ಹೊಂಟೆ (ಚಿಕಠಾ. ೩೨೮). **ಗುಡಿಲು :** ಬೇಸಱದೆ ಹುಲುಗುಡಿಲನಿಕ್ಕುವೆ[ಪಾಠಾಂ. ಸಲಿಕ್ಕುವೆ] (ಬಸಪು. ೦೮-೭) ; ಪುದಿದ ಮಲಮೂತ್ರಾದಿ ಭಾಂಡಗಳೊಡವಿಯಾದಾ ಪುರಂಪದೇಹದ ಬಿದಿರ ಗುಡಿ

ಲಿಗೆ ಮಾಱುವೋದೆನೆನುತ್ತ ಮಱುಗಿದಳು (ನಿಘಾಗ. ೧೦-೧೫-೧೭): ಬಳಲಿದ್ದೈ ಭೂಪ ನಡೆ ನಿನಗೆ ನಾಂ ಭುಕ್ತಿಯಂ ಸಲಿಸುವೆನೆನುತ್ತ ಗಂಡಿಲಿಂಗೆ ಕರೆತಂದು (ಜಬಪು. ೫೨-೪೪); ಬಿಸಿಲು ಬೇಡವೆನೆ ಮರಗಳ ನೆರಳು, ಮಳೆ ಗಂಜದನೇ ಕಾಡಿನ ಗುಡಿಲು (ಸುನೀತ. ೦-೦೦); ಸೂರ್ಯಸದನಕೆ ಧಾವಿಸಿದ ಮನ ವೇಗಶಕ್ತಿಯನಿಳಿಸಲಾಗದೆ ತಿರುಗಿ ಗುಡಿಲಿಗೆ ಹಾರಿದೆ ಮೂಲೆ ಗತ್ತಲ ಸೇರಿದೆ (ಹೂಜಾದಿ. ೨೯-೫). **ಗುಡುಲು :** ಒಡನೆ ಪುರುಷ ಮಾತ್ರ ಸೋಂಕದಿದ್ದರೆ ತನ್ನ ಗುಡುಲಿಗೆ ಕಿಚ್ಚನಿಕ್ಕುವೆನು (ಅಮುಸಾಂ. ೩-೧೦೮).

[ ದೇ॥ ತಮಿ. ಮಲ. ಕುಡಿಲ್ ]

**ಗುಡಿಲು** ‘ ಗಂಡಿಲ್ ’ ನೋ.

**ಗುಡಿವಣ** (ನಾ). ದೇವಸ್ಥಾನಕ್ಕಾಗಿ ಕೊಡುವ ಹಣ, – ಕಾಣಿಕೆ (?): ಹಲರು ಕೊಡಿಕೊಟ್ಟುದು ಗುಡಿವಣ ಗಾಣದಲ್ಲಿ ಧಾರೆಯೆಣ್ಣೆ (ಎಕ. XII, ಪಾವುಗ. ೫೨-೬೦; 1232). [ ಗಂಡಿ$_3$ + ಪಣ$_1$ ]

**ಗುಡಿವಿಡಿ** (ಕ್ರಿ). ಬಾವುಟವನ್ನು ಎತ್ತಿಹಿಡಿ ; ಧ್ವಜವನ್ನು ಹಿಡಿ : ಗುಡಿ ವಿಡಿದು ಪಾಡುತ್ತ ಕುಣಿಯುತ ಝಡಿತೆಯಲಿ ನಲಿದಾಡುತಿರ್ದುದು ಶಾಕಿನೀ ನಿವಹ (ಕೋಗಯು. ೨೩-೪). [ ಗುಡಿ$_2$ + ಹಿಡಿ$_1$ (<ಪಿಡಿ$_1$) ]

**ಗುಡಿವಿಡಿಸು** (ಕ್ರಿ). ಬಾವುಟವನ್ನು ಎತ್ತಿಹಿಡಿಯುವಂತೆ ಮಾಡು ; ಧ್ವಜವನ್ನು ಏರಿಸು : ಅಂತು ವಿಜಯಂ . . . ವಿಜಯದ ಗುಡಿವಿಡಿಸಿ ಅರಿನೃಪರಂ ಭೇದಿಸಿ ಪಾಂಚಾಳರಂ ಚಾಳಿಸಿ ಗಾಂಧರ್ವರಂ ವಿರಥರ್ ಮಾಡಿ (ಪಂಪಭಾ. ೬-೨೯ ವ). [ ಗುಡಿವಿಡಿ + – ಇಸು$_3$ ]

**ಗುಡಿವೃತ್ತ** (ನಾ). ಒಂದು ಬಗೆಯ ಆದಾಯ (?): ಕಾಮೆಯದಂಣ್ಣಾಯ್ಯರ ಹೊದಕೆಪೂರ್ಬ್ಬಾಯ ಅಪೂಬ್ಬಯ ಗುಡಿವೃತ್ತಂ ಮದೆ ಮನೆ ೧ ಕ × × ಶಿ ಗ (ಎಕ. XIV, ಕೃಷ್ಣರಾ. ೨೮-೨೫; ?) [ ? ]

**ಗುಡಿವೊಗಿಸು** (ಕ್ರಿ). ದೇವಾಲಯಂಕ್ಕೆ ಪ್ರವೇಶಮಾಡಿಸು,–ಹೊಗಿಸು : ಭಕ್ತನಂ ಕಂಡು ಭಯಂಬಡುತೆ ಕಂದೆಗೆದಾ ತಮ್ಮಡಿಗಳ್ಗುಡಿವೊಗಿಸಿ ಪೋಗಲ್ (ಉದ್ಭಟ. ೧೧-೬೩). [ ಗುಡಿ$_3$ + ಪೊಗಿಸು ]

**ಗುಡಿವೊಱಿಸು** (ಕ್ರಿ). ಬಾವುಟವನ್ನು ಹೊರುವಂತೆ ಮಾಡು ; ಧ್ವಜವನ್ನು ಹೊರಿಸು : ಪಡೆ ನೋಡಲ್ ಬಂದವರಂ ಗುಡಿವೊಱಿಸಿದರೆಂಬುದಾಯ್ತು ನಿನ್ನೆನ್ನೆಡೆಯೊಳ್ (ಪಂಪಭಾ. ೩-೧೫). [ ಗುಡಿ$_2$ + ಪೊಱಿಸು ]

**ಗುಡಿವ್ರಜ** (ನಾ). ಗುಡಾರಗಳ ಗುಂಪು : ನೃಪಾಲಕರ ಗುಡಿವ್ರಜಮೆಲ್ಲ ಬೆಳ್ಳಿ ಪೇರ್ಗುಂಡುಗಳೋ ಯೆನೆ ಮಧ್ಯ ರಜತಾದ್ರಿಯಾಗಿ ರಾಜಿಸುತಿರ್ದುದು (ನವಮೋ. ೨೯-೬೭). [ ಗುಡಿ$_3$ + ವ್ರಜ ]

**ಗುಡಿಸಲ್** ‘ ಗುಡಿಸಿಲ್ ’ ನೋ.

**ಗುಡಿಸಲು** ‘ ಗುಡಿಸಿಲ್ ’ ನೋ.

**ಗುಡಿಸಿಲ್**, ಗುಡಿಸಲ್, ಗುಡಿಸಲು, ಗುಡಿಸಿಲು, ಗುಡುಸಲು (ನಾ). = ಗುಡಿಲ್ : ಗುಡಿಸಿಲ್ ಚೆಲ್ವಾಗಿಯುಂ ಮಾಳಿಗೆಯಲ್ಲದಂತೆ ಬೂತೊಳ್ಪಿದನಾಗಿಯುಂ ಪ್ರಭುವಲ್ಲದಂತೆ (ಧರ್ಮಾಮೃ. ೧೧-೧೮೭); ಕರುಣದಿನೊಂದು ಗುಡಿಸಿಲನೆಡೆಗೊಟ್ಟೊಡಲ್ಲಿರ್ದು ತಾಯುಮಾ ಗಾವುಂಡನ ಮನೆಯೊಳ್ ಬೆಸಕೆಯ್ದುಣ್ಗಂ (ಜೀವಸಂ. ೨೦೦-೨೦). **ಗುಡಿಸಲ್ :** ೧. ನೂಲ್ಗಟ್ಟಿ ಪೊಯ್ದು ಪೊಸಗುಡಿಸಲ್ಗಳ್ಗವೆ ನಟ್ಟ ಗಱಿಗಳಿರಿಸಿದರೋಳ್ಗಳ್ . . . ತನ್ನ ಮನೆಯೊಳೊಂದು ಗುಡಿ ಇರಲ್ಬೇಡೆಸೆದೊಂದು (ಉದ್ಭಟ. ೫-೧೦೦); ತನ್ನ ಮನೆಯೊಳೊಂದು ಗುಡಿಸಲಂ ಕಟ್ಟಿಕುಡಲ್ (ಪುಣ್ಯಾಸ್ರ. ೦೨-೨೦ ವ). **ಗುಡಿಸಲು :** ಇಳೆಯ ರಾಯರಿಗೊಬ್ಬ ಭೂಸುರ ಬಳಗ ತಿರಿಕನ ಮನೆಯ ಗುಡಿಸಲ ಹೊಳಲ ಬೀಡಿಕೆಯಾಯ್ತು ಯಿನ್ನೀ ಮನುಜರಳವೇನು (ಕುಮಾ.ಆ. ಓರಿ೩. ೨೩-೦೨); ನಮ್ಮ ಬಂಗ್ಲೆಯ ಹತ್ತಿರದಲ್ಲಿ ನಾಲ್ಕೈದು ಬಡವರ ಗುಡಿಸಲುಗಳು ಇದ್ದುವು (ಚೀಮೋಡ. ೩೨). **ಗುಡಿಸಿಲು :** ಹುಲ್ಲು ಗುಡಿಸಿಲೊಳಾಗ ಮಡಗಿದ ಬಳ್ಳವಂ ತೆಗೆ ತನ್ನಿ (ಬಸಪು. ೯-೯). **ಗುಡುಸಲು :** ಬೈಲ ಗವ್ಹಾರನ ಗಂಡುಸಲೊಳಗೆ ಹೊರಟು (ಮುಂಬಯಿ. ೨-೧೪).

[ ದೇ॥ ತಮಿ. ಕುಡಿಚಲ್ ; ತುಳು. ಗುಡಿಚಿಲ್, ಗುಡಿಸಲ್, ಗುಡಿಸಿಲ್ ]

**ಗುಡಿಸಿಲು** ‘ ಗುಡಿಸಿಲ್ ’ ನೋ.

**ಗುಡಿಸು$_1$** ‘ ಗುಡಿಯಿಸು ’ ನೋ.

**ಗುಡಿಸು$_2$** (ನಾ). = ಗುಡಿಸಿಲ್ : ಬಡಕಪ್ಪಡಿ ತನ್ನಿಪ್ಪಾ ಗುಡಿಸು ಬಲ್ಲಿತ್ತು ಮಾಟ್ಟನೆಲ್ಲಂದದಿಂ (ಸಮುಷ. ೯-೬೩).

[ ದೇ॥ ತಮಿ. ಕುಡಿಚ್ಚೈ ; ತೆಲು. ಗುಡಿಸೆ ]

**ಗುಡಿಸು$_3$** ‘ ಗುಡಂಸು ’ ನೋ.

**ಗುಡಿಸೆಟ್ಟಿ**, ಗುಡಂಸೆಟ್ಟಿ (ನಾ). ನಡತೆಗೆಟ್ಟವಳು ; ಸೂಳೆ ; ಬೆಲೆವೆಣ್ಣು : “ ವಿವೇಚನೆಯಿಲ್ಲದೆ, ಇತರರ ಸಂಭೋಗಕ್ಕಾಗಿ ದೇಹ ವಿಕ್ರಯ ಮಾಡಿಕೊಳ್ಳುವವಳು ; ಗುಡಿಸೆಟ್ಟಿ ; ಬೆಲೆವೆಣ್ಣು ; ಪಣ್ಯಾಂಗನೆ ” (Prostitute. ಇಂಕನಿ). **ಗುಡುಸೆಟ್ಟಿ :** “ ಕೆಲಸಕ್ಕೆ ಬಾರದ ಹೆಂಗಸು. ದಿಟ್ಟಹುಡುಗಿ ; ಗುಡುಸೆಟ್ಟಿ ” (Baggage. ಇಂಕನಿ).

[ದೇ॥ ತೆಲು. ಗುಡಿಸೇಟು ]

**ಗುಡಿಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಪ್ರಾಜಿಗಿ. ೨೦-೩೬೨).

[ ಗುಡಿ? + ಹುಲ್ಲು (<ಪುಲ್) ]

**ಗುಡುಂಬ, ಗುಳಂಬ** (ನಾ). ಮಾವಿನಕಾಯಿ , ನೆಲ್ಲಿಕಾಯಿ ಮೊದಲಾದುವುಗಳಿಗೆ ಸಕ್ಕರೆ ಅಥವಾ ಬೆಲ್ಲ ಸೇರಿಸಿ ಮಾಡಿದ ಪಾಕ; ಮುರಬ್ಬ: ಕಮಲಾಬಾಯಿ ಮಾಡಿಟ್ಟಿದ್ದ ಮಾವಿನಕಾಯಿ ಗುಡುಂಬ ಅರ್ಧ ಕರಗಿ ಹೋಯಿತು (ನಟಸಾ. ೩೬೪). **ಗುಳಂಬ :** ಒಲೆಯ ಮೇಲೆ ಒಂದು ದೊಡ್ಡ ಪಾತೇಲಿಯಲ್ಲಿ ಗುಳಂಬ ಬೇಯುತ್ತಿತ್ತು (ಸ್ವಾತಿಜ. ೨೫೨): ಗುಳಂಬದ ಹುಳಿಮಿಶ್ರಿತ ಸಿಹಿರುಚಿಯು ಹುರಿದ ಬ್ರೆಡ್ಡುಗಳ ರುಚಿಯನ್ನು ಹೆಚ್ಚಿಸಿತ್ತು (ಅನ್ನದಾ. ೨೦).

[ ←ಹಿಂ. ಗುಡಂಬಾ ; ಮರಾ. ಗುಡುಂಬ, ಗುಳಂಬಾ ]

**ಗುಡುಕಲು** (ನಾ). ಒಂದು ಬಗೆಯ ಕಲ್ಲು; ಗುಂಡುಕಲ್ಲು (?): ಅಲಿಂದಂ ಪಡುವ ನಡುವು ನಟ ಗುಡುಕಲು (ಎಕ. XII, ತಿಪಟೂ. ೦೩೯-೬೭; ?). [ ಗುಡು? + ಕಲು$_1$ (< ಕಲ್$_3$) ]

**ಗುಡುಗಾಟ** (ನಾ). ೧. = ಗುಡುಗು$_2$ ೧ : ರಾತ್ರಿ ಯಲ್ಲಿ ಧೋಧೋ ಮಳೆ . . . ಗುಡುಗುಗಳ ಗುಡುಗಾಟ! (ಫಲಸಂ. ೯೬). ೨. ಗುಡುಂಗುಡುಂ ಎಂದು ಒಂದೇ ಉಸಿರಿಗೆ ಗುಡುಂಗುಟ್ಟುತ್ತಾ ಓಡುವ ಆಟ ; ಕಬಡ್ಡಿ ; ಹುತುತು : ದೈಹಿಕಶಿಕ್ಷಣಕ್ಕೆ ನೆರವಾಗುವ ಚಟುವಟಿಕೆ . . . ಗುಡುಗಾಟ (ಶಿಕ್ಷದ. ೭೮). ೩. (ಅಲಂ) ಆರ್ಭಟ ; ಸದ್ದು : ನಿನ್ನ ಪಾದದ ಗುಡುಗಾಟದಿಂದ ಕೆಂಧೂಳಿ ನೆಗೆದು ನರಲೋಕ . . . ಅಸುರಲೋಕಂಗಳು ಬೂದಿಯಲ್ಲಿ ಮುಸುಕಿದವಯ್ಯಾ (ಚನ್ನವ. ಕ. ೨೩೮-೫೦೭). [ ಗುಡುಗು$_2$ + ಆಟ ]

**ಗುಡುಗಾಡಿಸು** (ಕ್ರಿ). (ಅಲಂ) ಆರ್ಭಟಿಸು ; ಗರ್ಜಿಸು : ಬಡಗಣ ಗಡಿಗಾಪಿನವರ್ ಗುಡುಗಾಡಿಸಿ ಗೋಲಕೊಂಡ ವಿಜಯಾಪುರಮಂ ಕಡಿದು ಮರಾಟರ ಪಡೆಯಂ ಪೊಡವಿಯ ಬಲ್ಮೊಱೆಯನಿಱಿಪಿ ಬಣ್ಣಿಗೆವಡೆದರ್ (ಅಪ್ರಶಿ. ೨-೦೭). [ ಗುಡುಗಾಡು + – ಇಸು$_3$ ]

**ಗುಡುಗಾಡು** (ಕ್ರಿ). (ಅಲಂ) ಗಟ್ಟಿಯಾಗಿ ಮಾತನಾಡು ; ಕೂಗಾಡು: ನೀರಿಲ್ಲದ ಬರಿಯ ಮೋಡ ಗುಡುಗುವಂತೆ ಗುಡುಗಾಡಬೇಡ ! ಯುದ್ಧದಲ್ಲಿ ನಿನ್ನ ಬಲವನ್ನು ತೋರಿಸು (ವಚಭಾ. ೩೦೭); ಗೋಪಾಲ ಒಳಗಿನಿಂದ ತನ್ನಜ್ಜಿಯೊಡನೆ ಗುಡುಗಾಡಿದ (ಒಡ್ಡಿಉ. ೦೨೪); ಗುಡುಗಾಡೊ ಗುಡುಗಾಡೊ ಲಿಂಗವೇ ನೀ ಗುಡುಗಾಡಲೊಲ್ಲೇಕೋ ಲಿಂಗವೆ (ಅರಳು. ೩೨-೫).

[ ಗಂಡುಗು$_2$ + ಆಡು$_1$ ]

**ಗುಡುಗಿಸು** (ಕ್ರಿ). ೧. ಗುಡುಗುವಂತೆ ಮಾಡು ; ಗುಡುಂಗಾಟದಲ್ಲಿ ಸೋಲಿಸಿ ಕೂಗುವಂತೆ ಮಾಡು: ಏನ್ರೋ ನೀವು ಈ ಚಿಕ್ಕ ಹುಡುಗನನ್ನು

ಚೆನ್ನಾಗಿ ಗುಡುಗಿಸುತ್ತಿದ್ದೀರಿ (ರೂಢಿ). ೨. ವಿಜೃಂಭಣೆಯಿಂದ ನಡೆಯುಂವಂತೆ ಮಾಡಂ ; ಯಂಶಸ್ವಿಯಾಗಿ ನೆರವೇರಿಸು : ಅವರು ಒಂದೇ ವರ್ಷದಲ್ಲಿ ಎರಡು ಮದುವೆಗಳನ್ನೂ ಗುಡುಗಿಸಿಬಿಟ್ಟರು (ರೂಢಿ).

[ ಗುಡುಗು$_2$ + – ಇಸು$_3$ ]

**ಗುಡುಗು$_1$** (ಕ್ರಿ). ೧. ಗುಡುಗುಡು ಎಂದು ಶಬ್ದ ಮಾಡು ; ಮೇಘಧ್ವನಿಯುಂಟಾಗು : "ಸ್ತನಯತಿ–ಗುಡುಗಿದಪ್ಪುದು" (ಶಾಶಕ್ರ. ೨೪೩) ; ಆಗಸದಲ್ಲಿ ಗುಡುಗಿತು (ಮುಗಿಮ. ೨). ೨. ಕಬಡ್ಡಿ ಆಟದಲ್ಲಿ ಗುಡು ಗುಡು ಎಂದು ಕೂಗುತ್ತ ಓಡು : ನನ್ನನ್ನು ಗುಡುಗಿಸಿದ್ದೆಯಲ್ಲಾ ಈಗ ನೀನು ಗುಡುಗು (ರೂಢಿ). ೩. (ಆಲಂ) ಅರ್ಭಟಿಸು ; ಗಟ್ಟಿಯಾಗಿ ಕೂಗು : ಮರುತನಾ ಪ ರಿ ಮ ಳ ವ ದೆಸೆದೆಸೆಗಿರದೆ ಚೆಲ್ಲಲು ಬಾಯ ಹಬ್ಬವು ಬರಲಿ ಬರಲೆನುತಸುರರಾಳಿಯು ಗುಡುಗಿ ಮುತ್ತಿದುವು (ಕೌಶಿರಾ. ೦–೮೯) ; ಆಗಸದಲ್ಲಿ ಗುಡುಗಿತು, ಪ್ರಾಯ್ಯರನೂ ಗುಡುಗಿದ (ಮುಗಿಮ. ೩) ; ಎಲ್ಲಾದರೂ ಹಾಳಾಗಿ ಹೋಗು . . . ಎಂದು ಗುಡುಗಿ ಅಲ್ಲಿ ನಿಲ್ಲದೆ ಹೊರಟುಹೋದರು (ವಿದ್ಯಾರಿ. ೨೭).

[ ದೇಶ ತುಳು. ಗುಡುಗು ]

**ಗುಡುಗು$_2$** (ನಾ). ೧. ಮೋಡಗಳು ಒಂದಕ್ಕೊಂದು ತಗುಲಿದಾಗ ಉಂಟಾಗುವ ಗುಡುಂಗುಡು ಎಂಬ ಶಬ್ದ ; ಮೇಘಧ್ವನಿ : "ಸ್ತನಿತಂ, ಗರ್ಜಿತಂ, ರಸಿತಂ–೩ ಮೇಘನಿರ್ಘೋಷಃ, ಮೇಘಗಳ ಗರ್ಜನೆ ಅಂದರೆ, ಗುಡುಗಿನ ಹೆಸರುಗಳು" (ಸಿದ್ಧಾಂತಿ. ೨೮) ; "ಗುಡುಗೆನೆ ಮೇಘದನಿಯಕ್ಕು" (ಕಶರ. ೩೩) ; ಖಡ್ಗಗಳ ತೊಳಪು ಮಿಂಚು ಸಲೆ ತುರಗದ ದನಿ ಗುಡುಗು ಖಳರವಯುವ ಕಾಲಮೇಘವಂಬಿನ ಬಲು ಮಳೆಗಳ ಕಚಿದುವೇವೇಳ್ವೆ (ಕಂನವಿ. ೧೮–೦೦೦) ; ಅವಳು ಗುಡುಗಿನ ದನಿಯಲ್ಲಿ ಗದರಿಸದೇ ಇದ್ದಿದ್ದರೆ ನಾನು ನಿಸ್ಸಂಶಯವಾಗಿ ಅವಳನ್ನು ವಿಗ್ರಹಧಾರಿಣಿಯಾದ ಚಂಡಿಯೆಂದೇ ತಿಳಿಯುತ್ತಿದ್ದೆ (ಬಾಣಅ. ೯೩). ೨. ಒಂದು ಬಗೆಯ ಆಟ ; ಗೊತ್ತಾದೆಡೆಯಿಂದ ಗುಡುಂಗುಡು ಎಂದು ಗಟ್ಟಿಯಾಗಿ ಹೇಳುತ್ತಾ ಓಡುವ ಆಟ : ಗುಡುಗು ಗುತ್ತಿನ ಚೆಂಡು ಗುಮ್ಮನ ಬಡಿವ ಕತ್ತಲೆಗುದ್ದುಗಂಬದ ಗಡಣ . . . ಆಡಿದರು ಪಂಗಡದಲೈವರು ನೂರ್ವರಿವರಿತ್ತಂಡವೊಂದಾಗಿ (ಕುಮ್ಮಾಅ. ೬–೨) ; ಗುಡುಗನಾಡುವವನು ಗೊತ್ತ ಮುಟ್ಟುವನೇ ಅಯ್ಯ (ಸಿದ್ಧೇವ. ೯೨–೨೭೬) ; ಗುಡುಗನಾಡುತ ಕೆಲರು ಪರಿಪರಿ ಹುಡುಗರೀ ಪರಿ ಕಾಡೊಳಾಡಲು (ಶರಲೀ. ೪೦೫–೭). ೩. (ಆಲಂ) ಅರ್ಭಟ ; ಗರ್ಜನೆ : ಹುಲಿಯ . . . ಗುಡುಗು ದೊಡ್ಡದು, ಆದರೆ ಸಿಂಹದ ಗರ್ಜನೆಯಷ್ಟು ಭಯಂಕರವಲ್ಲ (ಮುಂಬಯಿ. ೪–೫೬). [ <ಗುಡುಗು$_1$ ]

**ಗುಡುಗುಟ್ಟು** (ಕ್ರಿ). (ಆಲಂ) ಗುಡುಂಗುಡು ಎಂದು ಧ್ವನಿಮಾಡು ; ಗರ್ಜಿಸು : ಗುಡುಗುಟ್ಟಿ ಗುಂಡುಗಳುರುಳ್ದುವುಂಡಲಿಗೆಯ ಮಡಕೆಯು ನೊಡೆಯ ಹೊಯ್ವಂತೆ (ಭರಜ. ೨೩–೫೫) ; ಓವೋ! ಕಾಲಪುರುಷಂಗೆ ಗುಣಮಣಮಿಲ್ಲಂ ಗಡ! ನಿಸ್ತೇಜಂ ಗಡ! ಜಡಂ ಗಡ! ಒಡಲೊಳ್ ಗುಡುಗುಟ್ಟುಗುಂ ಗಡ! (ರಾಮಾಶ್ವ. ೦–೨) ; ಏನು ತಿರುಗಿ ಯೋಚನೆಮಾಡುತ್ತಿದ್ದೀಯೆ? ಎಂದು ಗುಡುಗುಟ್ಟಿತು (ಪಂಚಾಮ್ಮ. ೦೦೨). [ ಗುಡುಗು$_2$ + ಕುಟ್ಟು$_1$ ]

**ಗುಡುಗುಡನೆ** (ಅ). ಗುಡುಗುಡು ಎಂಬ ಶಬ್ದದಿಂದ ಕೂಡಿ : ನಿಡುಸುಯ್ದು ಗುಡುಗುಡನೆ ಸುರಿವ ಕಣ್ಬನಿಗಳಂ ಮಿಡಿವುತ್ತಂ (ಕಾದಂಪೂ. ೯೩೨) ; ಮಂಗನನಪ್ಪಿಕೊಂಡಶ್ರುಜಲಂ ಗುಡುಗುಡನೆ ಸುರಿಯೆ ನಾಲಗೆ ತಡತಡವರೆ ನುಡಿದನಂಥನೃಪನಾ ನೃಪನಂ (ಗದಾಯು. ೪–೦೩) ; ಕಕ್ಕೆ ಕಾರೆಲೆ ಹರಳು . . . ಪುಡಿಮಾಡಿ ಕಡಲೆಯೆಣ್ಣೆಯೊಳಾಗ ಗುಡುಗುಡನೆ ಕುದಿಸಿದನು (ಶರಲೀ. ೪೦೦–೦೨). 'ಗಟಗಟನೆ' ಪರಾ.

[ ಗುಡುಗುಡು + – ಅನೆ$_1$ ]

**ಗುಡುಗುಡಿ,** ಗುಡಗುಡಿ, ಗುಡಿಗುಡಿ (ನಾ). ಹೊಗೆಬತ್ತಿ ಸೇದುವುದಕ್ಕೆ ಮಾಡಿದ, ಉದ್ದವಾದ ಕೊಳವೆಯುಳ್ಳ ಮತ್ತು ನೀರಿನ ಪಾತ್ರೆಗೆ ಜೋಡಿಸಿದ, ಗುಡುಂಗುಡು ಎಂದು ಸದ್ದುಮಾಡುವ ಒಂದು ಬಗೆಯ ಸಾಧನ ; ಹುಕ್ಕಾ : ಗುಡುಗುಡಿಯನು ಸೇದಿ ನೋಡೊ (ಪುರಂದ. ೩–೯೭ ಪಲ್ಲವಿ) ; ಅ ವ ನು ತನ್ನ ಗುಡುಗುಡಿಯನ್ನು ತರಹೇಳಿದನು (ಮುಂಬಯಿ. ೫–೨೭೯) ; ಗುಡುಗುಡಿ ಸೇದುತ್ತ ಒಂಟಿಯಾಗಿ ಕೂತಿದ್ದ (ಸಂಸ್ಕಾರ. ೦೦೪) ; ಕೈಯಿಂದ ಗುಡುಗುಡಿಯು ನಳಿಕೆ ಕೆಳಗೆ ನೆಲದ ಮೇಲೆ ಬಿದ್ದರೂ ಅದನ್ನು ಎತ್ತಿಕೊಡಲು ರಾಮಚರಣನೇ . . . ಬರಬೇಕು (ಇಪ್ಪಕ. ೪೦೦). **ಗುಡಗುಡಿ :** ನಾರಾಯಣಮುಖ್ಯೋಪಾಧ್ಯಾಯರು ಹೊರಗೆ ಜಗುಲಿಯ ಮೇಲೆ ಕುಳಿತುಕೊಂಡು ಗುಡಗುಡಿ ಸೇದುತ್ತಿದ್ದರು (ದೇವದಾ. ೫) ; ಕೇವಲ ಧನದ ಬಡ್ಡಿಯ ದಲಾಲರು ಅವರ ಗುಡಗುಡಿ ಸೇದಿ ಹೋಗುವರು (ಇಪ್ಪಕ. ೨೩೯). **ಗುಡಿಗುಡಿ :** ಒಬ್ಬನು ಒಂದು ದೊಡ್ಡ ಗಾಜಿನ ಗುಡಿಗುಡಿಯಿಂದ ತಂಬಾಕನ್ನು ಸೇದುತ್ತಿದ್ದಾನೆ (ನಿಬಂಧ. II, ೨೨೭). [ <ಗುಡುಗುಡು/ಹಿಂ. ಮರಾ. ಗುಡಗುಡೀ ]

**ಗುಡುಗುಡಿಸು** (ಕ್ರಿ). ೧. ರೋಷದಿಂದ ಕೂಗು ; ಗರ್ಜಿಸು ; ಅರ್ಭಟಿಸು : ಗಡಣಿಸಿದ ಬಾಣಾಬ್ಧಿಯನು ಗುಡುಗುಡಿಸುತನಿಲಜ ಕಾದುತಿರುತಿರೆ (ಕುಮ್ಮಾದ್ರೋ. ೭ರಿ೩. ೦೩–೫೯ ಅಡಿಟಿ) ; ಮಿಕ್ಕ ದೊರೆರಕ್ಕಸರ್ ಮಹಾಕೋಪದಿಂ ಗುಡುಗುಡಿಸಿ ಪಲ್ಮೊರೆವುತಿಂತೆಂದರು (ಜೆಬಪು. ೨೦–೨೨) ; ಅವಳ ಕೆಲಸ ಮಾಡಲು ಒಂದಿಷ್ಟು ತಡ ಮಾಡಿದರೆ ಗುಂಡುಗುಂಡಿಸುತ್ತಾಳೆ (ನಡೆದಾ. II, ೪೪೯) ; 'ಕಡ್' 'ಕಡ್' ಎಂಬ ರೌದ್ರಧ್ವನಿ ಗುಡುಗುಡಿಸುತ್ತಿತ್ತು (ಹಳ್ಳಹಾ. ೧೨೦) ; ಈ ಮನೋಹರ ಜಲರಾಶಿಯು ಎತ್ತರವಾದ ಪರ್ವತಗಳಲ್ಲಿ ಭೋರ್ಗರೆಯುತ್ತ ಸಿಡಿಲಿನಂತೆ ಗುಡುಗುಡಿಸುತ್ತ . . . ತಡಬಡಿಸಿ ಮುಂದುಮುಂದಕ್ಕೆ ಸಂಚರಿಸಿತು (ಹಿಂಕಿರು. ೯೯). ೨. ಗುಳುಗುಳು ಎಂದು ಹರಿ ; ಜುಳುಜುಳನೆ ಹರಿ : ಮಿಡಿಯಲೊಡಂ ಸುರಿವುದು ರಸವೆಡೆಯುಡುಗದೆನಿಪ್ಪ ನುಡಿಗೆ ಕಡುಗಿನಿಸಿದವೋಲ್ ಗುಡುಗುಡಿಸೆ ಗಂಟುಗಂಟುಗಳೆಡೆಯಿಂ ರಸಮುಣ್ಣಾವಿಕ್ಷುವಾಟಿಗಳೆಸೆಗುಂ (ಕುಸುಮಾ. ೧–೧೦೦) ; ಕಡುದುಃಖದಿಂ ಕಣ್ಣೀರ್ ಗುಡುಗುಂಡಿಸುತ್ತಿರ್ಪೆಯೆ (ಪುಣ್ಯಾಸ್ರ. ೭–೬೦) ; ಜಡೆಯ ಕಟ್ಟಿದ ಮುನ್ನ ಒಡನೆ ಬಂದುದು ಮಾರಿ ಗುಡುಗುಡಿಸಿ ಹೇನು ಹರಿವಾಗ ಬೋಳಯ್ಯ ಕಡು ನಗುವನಯ್ಯ (ಸರ್ವಜ್ಞ. ೫೭೭).

[ ಗುಡುಗುಡು + – ಇಸು$_3$ ]

**ಗುಡುಗುಡು** (ನಾ). ಒಂದು ಅನುಕರಣಧ್ವನಿ : ಗುಡುಗುಡುಗುಡು ಗೊಳ್ಳೆಂದೊಡನಾರೆ ಸುಯೋಧನಂ ಕರಂ ಸಿಗ್ಗಾದಂ (ಪಂಪಭಾ. ೩–೫೯) ; ಗುಡುಗುಡೆಂಬೊಳರುಳ್ಕೆ ಮೇಯೆಂಬ ಕರೆಯಾಯ್ತು (ಕಾಲೂರ. ೭೦–೦೫೩).

**ಗುಡುಗುಹಾಕು** (ಕ್ರಿ). (ಆಲಂ) ಗಟ್ಟಿಯಾಗಿ ಮಾತನಾಡು ; ಗರ್ಜಿಸು ; ಅರ್ಭಟಿಸು : ಪರೀಕ್ಷಕರು ಮೊಟ್ಟಮೊದಲು ವಿದ್ಯಾರ್ಥಿಗಳಿಗೆ ಗುಡುಗು ಹಾಕಿದರು (ಸ್ಕೂಲಮಿ. ೭೧). [ ಗುಡುಗು$_2$ + ಹಾಕು (<ಪಾಯ್ಕು$_1$) ]

**ಗುಡುಗೂರಿಸು** (ಕ್ರಿ). ಕುಗ್ಗಿಸು ; ಕಂಪಿಸುಯುವಂತೆ ಮಾಡು : ತುರಗಗಳ ಕಡೆ ಮುಟ್ಟಿ ಸಾಗಿದವಂಬುಗಳು ಮೈತಟ್ಟಿ ಗುಡುಗೂರಿಸಿದನವನೀನಾಥ ಚಿತ್ರೈಸು (ಜಿನಭಾ. ೭೩–೧೮).

[ ಗುಡುಗೂರು (<ಗುಡುಗೂಟು) + – ಇಸು$_3$ ]

**ಗುಡುಗೂರು** 'ಗುಡುಗೂಟು' ನೋ.

**ಗುಡುಗೂಟು,** ಗುಡಿಗೂಟು, ಗುಡುಗೂರು (ಕ್ರಿ). ಕುಗ್ಗು ; ಕುಸಿ ; ನಡುಮುರಿದು ಗುಡುಗೂಟಿ ತಲೆ ನಡುಗಿ ನೆರೆತೆರೆ ಹೆಚ್ಚಿ ಮತಿಗೆಟ್ಟು ಒಂದನಾಡ ಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೆ (ಚನ್ನವ. ಕ. ೦೫೪–೩೫೩). **ಗುಡಿಗೂಟು :** ಒಡೆಯರ ಕಟ್ಟಳೆಯೆಂದು ಮಾಡಿಕೊಂಡು ಅಡ್ಡುವನ್ನ ತನಕ ಅಂಗಳ ಬಾಗಿಲಲ್ಲಿ ಗುಡಿಗೂಟಿ ಎನಬಹುದೆ (ಐಲೀಶ್ಯ. ೩೭).

**ಗುಡುಗೂರು :** ಹೊಡೆದಾಡಿ ಬಡಿದಾಡಿ ಗುಡುಗೂರಿ ಬಿದ್ದರೆಮ ಪುರಕೆದ್ದರು (ಜಿನಮು. ೧೯-೩೫). [ ? ]

**ಗುಡುಮಿ** (ನಾ). ಹೊಟ್ಟೆ ದಪ್ಪವಾಗಿರುವ ಗಡಿಗೆ; ಗುಡಾಣ ; "ಗಡಿಗಿ, ಹೊಟ್ಟೆಗಡಿಗಿ" (ಜಾನಕೋ. ೪೯) ; ಒಳ್ಳೆ ಗುಡುಮಿ ಇದ್ದಹಾಗೆ ಇದ್ದಾಳೆ (ರೂಢಿ). [ ? ]

**ಗುಡುಲು** 'ಗುಡಿಲ್' ನೋ.

**ಗುಡುವಣ** 'ಗುಡುವನ' ನೋ.

**ಗುಡುವನ,** ಗುಡವಾಣ, ಗುಡಾಣ, ಗುಡುವಣ (ನಾ). ದೊಡ್ಡ ಮಡಕೆ: "ಮಂತಣಿಯೆಂದು ಕಡೆವ ಮಡಕೆಯುಂ ಗುಡುವನಮಕ್ಕುಂ" (ಶಮದ. ಕ. ೨೫೫ ಪ್ರಯೋ) ; ಗಡಿಗೆ ಗುಡುವನ ನುಂಗಿತ್ತು, ಅಡಿಯಲ್ಲಿದ್ದ ಕುಡುಕೆ ಆ ಉಭಯವ ನುಂಗಿತ್ತು (ಗುಪ್ತಮಂ. ೨೫). **ಗುಡವಾಣ :** ಅಡಕದ ಕೊಡಗಳನಡಿಗಡಿಗಬಲೆಯರೆಡೆಯಾಡಿ ಬೇಗ ನೀಡಿದರು ಗುಡ ವಾಣದಂದದ ಕೆಲವು ಪೊಂಗೊಡಗಳ ತಡಮಾಡಿ ಕೊಡುತಿರ್ದರಾಗ (ಭರಜ. ೧೬-೯೦). **ಗುಡಾಣ :** ಮಾಳಿಗೆ ಗಿಳಿಲಾದರೆ ಕಟ್ಟುವುದಕ್ಕೆ ಅರ ವಟಗೆಗೆ ಗುಡಾಣ ಬಿಂದಿಗೆ ಕರಗ ಮೊಘೆಗಳ ಕ್ರಯಕ್ಕೆ . . . ಎರಡು ಭಾಗೆ ಸಲುಉದು (ಸೌಇಇ. IX-ii, ४೩೬-೨೪ : 1412) ; ತುಪ್ಪದಿಂದ ತುಂಬಲ್ಪಟ್ಟ ನೂರು ಗುಡಾಣಗಳನ್ನು ತರಿಸು ಎಂದು ಹೇಳಿ (ಕೃವಾಆ. ೨೦೯) ; ಗಡಿಗೆ, ಗುಡಾಣ ಪಾತ್ರೆಗೀತ್ರೆಗಳನ್ನು ದೂರ ಇಟ್ಟುಕೊ (ದೇವೀಜಾ. ೯೭) ; ಸೂಜಿಯಷ್ಟು ಬಾಯಿ ಗುಡಾಣದಷ್ಟು ಹೊಟ್ಟೆ (ಗಾದೆ) ; ಮೊಗೆ ಮಾಡದ ಕುಂಬಾರ ಗುಡಾಣ ಮಾಡ್ಯಾನೆ (ಗಾದೆ). **ಗುಡುವಣ :** ಮತ್ತೆ ಬಹು ಕೊಪ್ಪರಿಗೆಯಿಂ ತಾಂಬ್ರಕೊಲ್ಲಿ ಇರಿ ಮತ್ತೆ ಬಲ್ಗುಡುವಣದಿ ಚೆಂಬು ತುಂಬುಗೆಗಳಿಂ (ಲಿಂಗಪು. ೩೩-೧೪).

[ ದೇ॥ ತುಳು. ತೆಲು. ಗುಡಾನ ]

**ಗುಡುವೆ** (ನಾ). ಒಂದು ಊರಿನ ಹೆಸರು : ಶ್ರೀಮತ್ಕದಂಬರ ಸಾನ್ತ್ಯಯ ದೇವ ಗುಡುವೆಯನಿಱಿದು ತುಱು ಹರಿಯೆ (ಎಕ. VIII, ಸೊರಬ. ೬೦-೧೭ : 1032). [ ? ]

**ಗುಡುಸಲು** 'ಗುಡಿಸಿಲ್' ನೋ.

**ಗುಡುಸು,** ಗುಡಸು, ಗುಡಿಸು₃ (ನಾ). ೧. ಗುಂಡಾದ ವಸ್ತು; ವೃತ್ತ ; ಮಂಡಲ. ೨. [ವ್ಯಾಕ] ವ್ಯಂಜನಾಕ್ಷರಗಳಿಗೆ ಇಕಾರವನ್ನು ('ಿ') ಸೇರಿಸುವಾಗ ಬಳಸುವ ಚಿಹ್ನೆ : ಅಱಿಯೂರ್ಧ್ವಮುಖ ನಿಜಾರ್ಣಂ ಮೆಱೆವಾ ಗು[ಪಾಠಾಂ. ಗಂ]ಡುಸುಗಳೆಸೆವಧೋಮುಖವರ್ಣಂ ತಱುವಾಯ ಕೊಂಬಿನಕ್ಕರ ಪೆಱನೊಸಲಳೆ ಪಾರ್ಶ್ವಮುಖಮದೆಂಬರ್ ಕವಿಗಳ್ (ಕವಿಜ. ೩-೨೩). **ಗುಡಸು :** (ಕ). **ಗುಡಿಸು₃ :** ೨. ಕೈಬರಹದಲ್ಲಿ ಟಕಾರದ ಕೊನೆಗೆ ಗುಡಿಸು ಬರುತ್ತದೆ (ಸಂಶೋಧ. ೨೫).

[ ದೇ॥ ತೆಲು. ಗುಡುಸು ]

**ಗುಡುಸೆಟ್ಟಿ** 'ಗುಡಿಸೆಟ್ಟಿ' ನೋ.

**ಗುಡುಹ** (ನಾ). ಬೆಲ್ಲ; ಗುಡ: ಬಿಟ್ಟುಹೋಗುವ ಲಲನೆ ವಲ್ಲಭಗೆ ಬುದ್ಧಿಯಂ ಘಟ್ಟಿಸುತೆ ಹೇಳಿ ಮೇಲಟ್ಟದೊಳು ಗುಡುಹವದೆ ಬಟ್ಟಲೊಳು ಚಿಲಿಪಾಲ ಸಲಿಸೆಂದು ತಾ ತಳರ್ವಳಂತೆ (ಪ್ರಭುಪು. ೬-೨೩).

[ < ಸಂ. ಗುಡ ]

**ಗುಡೂಚಿ** (ನಾ). ಅಮೃತಬಳ್ಳಿ: "ವತ್ಸಾದನಿ ಛಿನ್ನರುಹಂ ಗುಡೂಚಿ ತಂತ್ರಿಯೆನಿಕ್ಕುಂ" (ವಸ್ತುಕೋ. ೩೬-೨೨)."ಅಮೃತಂ ಗುಡೂಚಿ ಜೀವಂತಿ ಸೋಮಮಮರ್ದುವಳ್ಳಿಯಕ್ಕುಂ" (ಮಂಗರಾ. ४೩-४೩).

[ ಸಂ. ಗುಡೂಚೀ ]

**ಗುಡೆ** (ನಾ). ೧. ಮಾತ್ರೆ ; ಗುಳಿಗೆ. ೨. ಕಳ್ಳಿಗಿಡ. ೩. ಹತ್ತಿ ಗಿಡ.

[ ಸಂ. ಗುಡಾ ]

**ಗುಡೋದಕ** (ನಾ). ಬೆಲ್ಲದ ನೀರು ; ಪಾನಕ : ಅವನು ಹುಣ್ಣುಮೆಯಲ್ಲಿ ಸಾಯಂಕಾಲದಲ್ಲಿ ಬ್ರಾಹ್ಮಣರಿಗೆ ಗುಡೋಸ [ದ] ಕ ದಾನವನು ಮಾಡಿ ದನು (ಕಕುಮೂ. ೦೫೯-४). [ ಗುಡ + ಉದಕ₂ ]

**ಗುಡ್ಡ₁,** ಗುಡ್ಡು₁ (ನಾ). ೧. ಕುಳ್ಳಾಗಿರುವವನು ; ಗಿಡ್ಡ ; ಕುಬ್ಜ : "ಕುಜ್ಜಂ ಗುಡ್ಡನೆಂದೆನಿಕ್ಕುಂ" (ಮಂಗರಾ. ೧೦೪-೬) ; "ಗುಡ್ಡನೆನಲ್ಕೆ ವಾಮನಂ" (ಕರ್ಣಾನಿ. ೧೮). ೨. ಚಿಕ್ಕವನು ; ಹುಡುಗ : ದೊಡ್ಡವಳಿಗೆ ಕಾಲು ಬಂದಾಗ ಗುಡ್ಡ ಹರಿಹರಿದಾಡಿದ (ಬಾಳಿಗಿ. ೨೬). ೩. ಶಿಷ್ಯ ; ವಿದ್ಯಾರ್ಥಿ : ಭಟ್ಟಾರಾ ನಿಮ್ಮ ಕಿಱಿಯ ಗುಡ್ಡನಂ ಪರಸಿ ಪೋಗಲ್ವೇಡ್ಕುಂ (ವಡ್ಡಾರಾ. ೬-೧೧) ; ನಿಮ್ಮ ಕಿಱಿಯ ಗುಡ್ಡಂ ವಾಯುಭೂತಿಯಾಯಿರ್ದನೆ ಪರಸಿ ಪೋಪಿರ್ (ಸುಕುಮಾ. ४-೨೩ ವ) ; ಶ್ರೀ ಅಭಯಣನ್ದಿ ಪಣ್ಡಿತರ ಗುಡ್ಡ ಕೊತ್ತಯ್ಯ ಬಸ್ದಿಲ್ಲಿ ದೇವರ ಬಸ್ದಿಸಿದ (ಎಕ. II, ४೮-೦ ; ಸು. 1100) ; ಎಮ್ಮ ರಿಸಿಯೆಮ್ಮ ಜಿನಗೃಹವೆಮ್ಮೊಡಪೆಗಳೆಮ್ಮ ಗುಡ್ಡರೆಮ್ಮರ್ಥಂ (ಧರ್ಮಾಮೃ. ೫-೧೧४) ; ದೇವರ ಗುಡ್ಡ ಹೋಗಿ ದೇವತೆಗೆ ಕೈಮುಗಿದು (ಸಣ್ಣಕ. VI, ೯). **ಗುಡ್ಡು₁ :** ೩. ಗಣ್ಡ ವಿಮುಕ್ತ ಸಿದ್ಧಾನ್ತದೇವರ ಗುಡ್ಡುಗಳಪ್ಪ ಸ್ವಸ್ತಿಶ್ರೀ ಮರಿಯಾನೆ ದಣ್ಣನಾಯಕರ್ಗ್ಗಂ (ಎಕ. XIV, ನಾಗಮಂ. ೦೩೦-೩ ; 1145) ; ಆಕೆಗವರ್ ದಯಾಮಯಂಶರೀರಿ ಗಳನ್ನದಾನಶೀಲಾಕರರಪ್ಪ ಗುಡ್ಡುಗಳ ಮಂದಿರದಿಂದಮೆ ತಂದು (ಮಹಾನೇ. ೦೬-೫). [ ದೇ॥ ತಮಿ. ಕುಟ್ಟ, ಕುಟ್ಟೈ ; ತುಳು. ಗುಡ್ಡು ; ಕುವಿ. ಗೂಟ ; ಬ್ರಾಹೂಈ. ಗುಡ್ಡೂ, ಘುಡ್ಡೂ ]

**ಗುಡ್ಡ₂,** ಗುಟ್ಟ, ಗುಟ್ಟೆ, ಗುಡ್ಡೆ₁ (ನಾ). ೧. ಚಿಕ್ಕಬೆಟ್ಟ ; ಸಣ್ಣಬೆಟ್ಟ : ಗುಡ್ಡಗಳವೆಂಬಂತೆ ರಥನಿವಹ ಕಾರ್ಮುಗಿಲಿನೊಡ್ಡಿನಂತಿಭರಾಜಿ (ಪರಶು. ೯-೨೦) ; ಬೇಡನಾಯಕರು ಗುಡ್ಡಮನೇಱಿ ಹೋಹಾಗ (ವ್ಯಆರಿ. ೦೯೨೮, ೧೧೧-४ ; ?) ; ಗುಡ್ಡಕ್ಕೆ ಕಲ್ಲು ಹೊತ್ತಹಾಗೆ (ಗಾದೆ). **ಗುಟ್ಟ :** ೧. ಗ್ರಂಥಿಯೆಲ್ಲಂ ಬೆಟ್ಟಗುಟ್ಟಗಳ್ (ಕೃಕವ. ೫-೧೨-೨) : ಸರಸಿ ಜಾನನೆ . . . ಇರದೆ ಗಿರಿಗುಟ್ಟಗಳ ತಿರುಗುತ (ಹಮುಚ. ೨೭). **ಗುಟ್ಟೆ :** ೧. ಹೊರಗೆ ಗುಟ್ಟೆ ಮೇಲೆ ತೋಪುಗಳ ಯಿಟ್ಟು ಸತ್ಯಮಂಗಲದ ಕೋಟೆಗೆ ಹೊಡೆದು (ಹೈದರ. ೭४). **ಗುಡ್ಡೆ₁ :** ೧. ಮೂಱುಂದೆಸೆಯ ಗುಡ್ಡೆ (ಸೌಇಇ. XI-i, ४೮-೦೩ ; 1002) ; ಅಲ್ಲಿಂ ಮೂಡಲತ್ತೆಯಳಿಯನ ಗುಡ್ಡೆ (ಎಕ. II, ೩೨೭-೭೮ ; 1131) ; ಗುಳಿಗಳೊಳು ಗುಡ್ಡೆಗಳ ಮಱಿಯೊಳು . . . ಸುತ್ತಿ ಸುಳಿದಱಸಿದಂ ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿ ಕಾರ್ಜುನನನು (ಸಿದ್ಧರಾ. ೨-೩೬) ; ಅಲ್ಲಿಗೆ ಸಮೀಪದಲ್ಲು ಇದ್ದ ಚಿಕ್ಕ ದೊಂದು ಗುಡ್ಡೆ ಹತ್ತಿ (ರಾಜೇಂದ್ರ. ೩೩). ೨. ರಾಶಿ ; ಸಮೂಹ : ಊರಲ್ಲಿ ಎತ್ತ ನೋಡಿದರೂ ಕಸದ ಗುಡ್ಡೆ (ಕಳಹು. ೧೦೮) ; ಧ್ಯಾನಮಗ್ನ ವಾಗಿದ್ದಂತಿದ್ದ ಕೆಮ್ಮಣ್ಣುಗುಡ್ಡೆ (ಮುಗಮಾಂ. ೩೩) ; ಅವುಗಳನ್ನೆಲ್ಲ ಗುಡ್ಡೆ ಹಾಕಿದ್ದರೆ ದೊಡ್ಡ ರಾಶಿಯಾಗುತ್ತಿತ್ತು (ಗಲಿಪ್ರ. ೩೩). 'ಇಡಂಗುಡ್ಡೆ' ಪರಾ. [ ದೇ॥ ತುಳು. ಕೊಡ. ಗುಡ್ಡೆ ; ತೆಲು. ಗುಟ್ಟ ]

**ಗುಡ್ಡಕಾಡು** 'ಗುಡ್ಡಗಾಡು' ನೋ.

**ಗುಡ್ಡಗಾಡು,** ಗುಡ್ಡಕಾಡು (ನಾ). ಗುಡ್ಡಗಳಿಂದ ತುಂಬಿದ ಕಾಡು ; ಚಿಕ್ಕಬೆಟ್ಟ ಮತ್ತು ಕಾಡುಗಳಿಂದ ಕೂಡಿರುವ ಪ್ರದೇಶ : ಗುಡ್ಡಗಾಡ ತಿರುಗಿ ಅಡ್ಡದಾರಿಲೆ ಹೋಗಿ ಗೌಡರ ಕಂದನ ತರುವೆವು (ಸಿದ್ಧಪು. ४-೬೦) ; ಗುಡ್ಡಗಾಡುಗಳಲ್ಲಿ ಸಿಗುವುದನ್ನು ಮಾರಿ ಜೀವನ ನಡೆಯಿಸುವ ಈ ಸೋಲಿಗರ ಭಾಷೆ ಕನ್ನಡದ ಉಪಭಾಷೆಯೆಂದು ಕರೆಸಿಕೊಳ್ಳಲು ಅರ್ಹ ವಾಗಿದೆ (ದ್ರಾವಿವಿ. ४೦೦). **ಗುಡ್ಡಕಾಡು :** ಘಟ್ಟದ ಕೆಳಗಡೆ ಗುಡ್ಡಕಾಡಿನ ಹಳ್ಳಿಯೊಂದು ಪೀಪಾಯಿಯ ಊರು (ಕಂಬಹು. ೨೫). [ಗುಡ್ಡ₂+ಕಾಡು₂]

**ಗುಡ್ಡಗೆಣಸು** (ನಾ). ಒಂದು ಬಗೆಯ ಗೆಡ್ಡೆ ; ನೆಲಗುಂಬಳದ ಗೆಡ್ಡೆ ; "ವಿದಾರೀಕಂದ" (ಪಂಡಿತ). [ ಗುಡ್ಡ₂ + ಗೆಣಸು ( < ಗೆಱಸು ) ]

**ಗುಡ್ಡಗೊಂಬು** (ನಾ). ೧. = ಗುಜ್ಜುಗೊಂಬು ೧ : "ಕ್ಷುಪ–ಗುಡ್ಡಗೊಂಬಿನ ಬೀಟಲು" (ನಾಚಿರಾ. ೬). ೨. ಮೋಟಾದ ಕೊಂಬು; ಗಿಡ್ಡ ಕೋಡು : ಈ ಗುಡ್ಡಗೊಂಬಿನ ಹಸು ಹೆಚ್ಚಾಗಿ ಹಾಲು ಕೊಡುತ್ತದೆ (ರೂಢಿ). [ ಗುಡ್ಡ$_1$ + ಕೊಂಬು$_2$ ]

**ಗುಡ್ಡದುಂಬೆ** (ನಾ). ಒಂದು ಬಗೆಯ ಗಿಡ; ಕಾಡುತುಂಬೆ : "ಗೌಡೇ – ಗುಡ್ಡದುಂಬೆ, ಗಂಗಸಾರ ?" (ಒಷಧಿ. ೫೦).
[ ಗುಡ್ಡ$_2$ + ತುಂಬೆ$_2$ ( < ತುಂಬಿ$_2$ ) ]

**ಗುಡ್ಡಧ್ವಜ** (ನಾ). ಹಿಂದೆ ನಮ್ಮ ನಾಡಿನಲ್ಲಿದ್ದ ವೀರಬಣಂಜು ಜನಾಂಗದವರ ಧ್ವಜ : ವೀರಬಣಂಜುಧರ್ಮ್ಮ ಪ್ರತಿಪಾಳವಿಶುದ್ಧ ಗುಡ್ಡಧ್ವಜ ವಿರಾಜಮಾನ (ಎಕ. VII, ಶಿಕಾರಿ. ೧೧೮–೨೭ ; 1054) ; ಧರ್ಮಪ್ರತಿಪಾಳನ ವಿಶುದ್ಧ ಗುಡ್ಡಧ್ವಜ ವಿರಾಜಿತಾನೂನ ಸಾಹಸಾಲಿಂಗಿತ ವಿಶಾಲ ವಕ್ಷಸ್ಥಳ (ಸೌಇಇ. XV, ೧೨೪–೩೩ ; 1174) ; ವೀರ ಬಣಂಜುಗಳ ಧ್ವಜವು 'ಗುಡ್ಡಧ್ವಜ' (ಕಶಾಅ. ೩೮೦). [ ಗುಡ್ಡ? + ಧ್ವಜ ]

**ಗುಡ್ಡನೂರ್** (ನಾ). ಒಂದು ಊರಿನ ಹೆಸರು : ಸ್ವಸ್ತಿ ಮಜ್ಜಳ್ಳಬೆಳ್ವಿಸ್ದ ಗುಡ್ಡನೂರ್ ತ್ರಿಜಿಪಾಟಿತಿ ಪ್ರಸಿದ್ಧಾ ಗ್ರಾಮಾಃ (ಇಅ. XII, ೧೭–೪೯ ; 813). [ ಗುಡ್ಡ? + ಊರ್ ]

**ಗುಡ್ಡನೇರಳೆ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ನಾಯಿನೇರಳೆ ; "ಕೃಂತಜಂಬು" (ಪಂಡಿತ) : ಕುಂಟು ನೇರಳೆ, ಗುಡ್ಡನೇರಳೆ (ವೃಜಿಗಿ. ೩೩–೬೩೫). [ ಗುಡ್ಡ$_2$ + ನೇರಳೆ(< ನೇಱಲ್) ]

**ಗುಡ್ಡಪನ್ನೇರಲು,** ಗುಡ್ಡಪನ್ನೇರಳು (ನಾ). ಚಿಕ್ಕಚಿಕ್ಕ ಕಾಯಿಬಿಡುವ ಒಂದು ಬಗೆಯ ಪನ್ನೇರಳೆ ಮರ : ಮಾನಂಗಿ, ಗುಡ್ಡಪನ್ನೇರಲು (ವೃಜಿಗಿ. ೭೩–೧೪೯೪). **ಗುಡ್ಡಪನ್ನೇರಳು :** "ರಕ್ತಕುಂಟಾಲ" (ಪಂಡಿತ).
[ ಗುಡ್ಡ$_2$ + ಪನ್ನೇರಲು ]

**ಗುಡ್ಡಪನ್ನೇರಳು** 'ಗುಡ್ಡಪನ್ನೇರಲು' ನೋ.

**ಗುಡ್ಡರೆಂಜೆಮರ** (ನಾ). ಒಂದು ಬಗೆಯ ಮರ : (೬).
[ ಗುಡ್ಡ$_2$ + ರೆಂಜೆ + ಮರ$_1$ ]

**ಗುಡ್ಡವೋಮಗಿಡ** (ನಾ) ಒಂದು ಬಗೆಯ ಗಿಡ ; ಕಾಡುವೋಮ: (೬).
[ ಗುಡ್ಡ$_2$ + ಓಮ$_1$ + ಗಿಡ ( < ಗಿಡು) ]

**ಗುಡ್ಡಶಾಸ್ತ್ರ** (ನಾ). ಹಿಂದೆ ನಮ್ಮ ನಾಡಿನಲ್ಲಿದ್ದ ವೀರ ಬಣಂಜು ಜನಾಂಗದವರ ಧರ್ಮಗ್ರಂಥ : ತ್ರೈಲೋಕ್ಯಮಂ ಸಾಧಿಸುವ ಗುಡ್ಡಶಾಸ್ತ್ರದವಯವಲಕ್ಷಣಂಗಳನಱಿದು ನುಡಿವ (ಎಕ. VII, ಶಿಕಾರಿ. ೧೧೮–೫೦ ; 1054) ; ಇವರು ತಮ್ಮ ಶಾಸ್ತ್ರವನ್ನು 'ಗುಡ್ಡಶಾಸ್ತ್ರ' ವೆಂದು ಕರೆದುಕೊಂಡಿದ್ದಾರೆ (ಕಶಾಅ. ೩೮೩). [ ಗುಡ್ಡ? + ಶಾಸ್ತ್ರ ]

**ಗುಡ್ಡಸೋಂಪು** (ನಾ). ಒಂದು ಬಗೆಯ ವನಸ್ಪತಿ: ಸೆಲರಿನ, ಅಜ್ಮೋದ, ಗುಡ್ಡಸೋಂಪು, ತೋಟದ ಸೊಪ್ಪು (ವೃಜಿಗಿ. ೮–೦೩೨).
[ ಗುಡ್ಡ$_2$ + ಸೋಂಪು ]

**ಗುಡ್ಡಿ$_1$** (ನಾ). ೧. ಕುಳ್ಳಾದುದು; ಸಣ್ಣದು. 'ಗುಡ್ಡಿಪಶು' ಪರಾ. ೨. ಶಿಷ್ಯೆ ; ವಿದ್ಯಾರ್ಥಿನಿ : ಶ್ರೀವಿಮಳಚಂದ್ರಪಣ್ಡಿತದೇವರ ಗುಡ್ಡಿ ಹವುಂಬ್ಬೆಯಾ ತಂಗೆ ಶಾಂತಿಯಬ್ಬೆ ತಮ್ಮ ಗುರುಂಗಳ್ಗೆ ಪರೋಕ್ಷ ವಿನೆಯಂಗೆಯ್ದರ್ (ಎಕ. VI, ಮೂಡಗೆ. ೧೧–೩೫ ; ಸು. 990) ; ಮುನಿಚಂದ್ರ ಸಿದ್ಧಾನ್ತದೇವರ ಗುಡ್ಡಿ ಕೇತವ್ವೆ (ಎಕ. VII, ಶಿವಮೊ. ೪೯–೨೩ ; 1111) ; ನಿಮ್ಮ ಗುಡ್ಡಿಗೆ ಬ್ರಹ್ಮಚರ್ಯವ್ರತಮಂ ಕುಡಿಮೆಂಬುದುಂ (ಧರ್ಮಾಮೃ. ೩–೧೭). [ ಗುಡ್ಡ$_1$ + – ಇ$_2$ ]

**ಗುಡ್ಡಿ$_2$** (ನಾ). (?) : ಮೂಡಲು ನಟ ಗುಡ್ಡೆ ತೆಂಕಲು ಗೌಡರಮಾನ್ಯ ಯಿನ್ತೀ ನಾಲ್ಕು ಗುಡ್ಡಿಯಿಂದೊಳ (ಇಎ. ೧೯೪೭, ಬೈಲುಹೊಂಗಲ್. ೩೪೯–೯೨ ; 1086). [ ? ]

**ಗುಡ್ಡಿಪಶು** (ನಾ). ಕುಳ್ಳಾದ ಹಸು : ಬಡವರ ಮನೆಯ ಸೊಡರು ಕಂದುವವದೆ ಗುಡ್ಡಿಪಶು [ ಪಾಠಾಂ. ಗುಡಹಸು, ನುಡಿಹಸು ] ಬಿಡದೆ ಕಱೆದಾ ಹಾಲು ಕಹಿಯಹುದೆ (ಸೋಮಜ. ೧–೨೩). [ ಗುಡ್ಡಿ$_1$ + ಪಶು ]

**ಗುಡ್ಡಿಸು** (ಕ್ರಿ). ಕುಳ್ಳಾಗು ; ಕುಗ್ಗು ; ತಗ್ಗು : ಘೊಳ್ಳನೆ ಸಭೆನಗೆ ಹಲ್ಲಂ ಕಿರಿವುತೆ ಅಡ್ಡಂ ತಿಗಟಂ ವಿಸಟಂಬರಂತಂ ಗುಡ್ಡಿಸಿ ಮುಗಿಲು ದ್ದ ಕೆ ನೆಗೆವುತ್ತಂ ಅಣತಂ ಮೆಱೆವುತೆ ಮೆಯ್ಯಿಕ್ಕುತ್ತಂ (ಭೃಂಗೀಶ. ಹ. ೪೭೩–೯).
[ ಗುಡ್ಡ$_1$ + – ಇಸು$_3$ ]

**ಗುಡ್ಡು$_1$** 'ಗುಡ್ಡ$_1$' ನೋ.

**ಗುಡ್ಡು$_2$** 'ಗುಡ್ಡೆ$_3$' ನೋ.

**ಗುಡ್ಡು$_3$** 'ಗೊಡ್ಡು$_1$' ನೋ.

**ಗುಡ್ಡುಗೊಳ್** (ಕ್ರಿ). (?) : ಪುದಿದಡೆಯಾಡಿ ನೋಡಿ ಪದವೊಂದೆರಡಂ ಸಲೆ ಕೊಂದುಮಿಂಬುಗಾಣದೆ ಬಟಿಕಂ ಮನಂ ಮಱುಗಿ ಚಿಂತಿಸಿ ಜಾನಿಸಿ ಗುಡ್ಡುಗೊಂಡು ಮಾಣದೆ ಮುಟಿಯಲ್ಲಿ ಕೇದಗೆಯನೇಱಿದ ಕೋಡಗದಂತೆ ಹಾಸ್ಯಸಂಪದಕೆಡೆಯಪ್ಪ ದುಷ್ಕವಿಗಳಿಲ್ಲದೊಡೇನಿಳೆ ಸೂನ್ಯವಪ್ಪುದೇ (ನೀತಿಸಾ. ೮೩). [ ಗುಡ್ಡು? + ಕೊಳ್$_1$ ]

**ಗುಡ್ಡುಬಿಳದು** (ನಾ). ಒಂದು ಬಗೆಯ ಬತ್ತ : (ಕಿಸಂಗ್ರಾ). [ ? ]

**ಗುಡ್ಡುಬೆದರಿಕೆ** 'ಗೊಡ್ಡುಬೆದರಿಕೆ' ನೋ.

**ಗುಡ್ಡೆ$_1$** 'ಗುಡ್ಡ$_2$' ನೋ.

**ಗುಡ್ಡೆ$_2$** (ನಾ). (ಉಡುವ ಅಥವಾ ಹೊದೆಯುವ) ಬಟ್ಟೆಯ ತುಂಡು. 'ತಲೆಗುಡ್ಡೆ' ಪರಾ.
[ ದೇ ‖ ತಮಿ. ಕುಟ್ಟೈ ; ತೆಲು. ಗುಡ್ಡ ]

**ಗುಡ್ಡೆ$_3$,** ಗುಡ್ಡು$_2$ (ನಾ). ೧. ಕಣ್ಣಿನ ಪಾಪೆ,–ಹಾಹೆ ; ಆಲಿ : ಕಣ್ಣು ಗುಡ್ಡೆಗಳಿಗೆ ಚೂಪಾದ ಪದಾರ್ಥವನ್ನು ಚುಚ್ಚಿ ಗಾಯಗೊಳಿಸುವುದು (ನಿಮ್ಮದೃ. ೯೫) ; ಹೆಣ್ಣುಮಕ್ಕಳಿಲ್ಲದ ಮನೆ ಗುಡ್ಡೆ ಇಲ್ಲದ ಕಣ್ಣಿನಂತೆ ಶೋಭಾಯಮಾನವಾಗುವುದಿಲ್ಲ (ಕೂನಥೀ. ೨೩೦) ; ಅವಳ ಕಣ್ಣುಗಳ ಕೆಂಪಡರಿದ ಗುಡ್ಡೆಗಳು (ಬಾಚಅ. ೩೭). **ಗುಡ್ಡು$_2$ :** ೧. ಪರಸತಿಯರ ನೋಡಿದವಗೆ ಪತ್ತು ಕೊಱಡು ಕೆಂಪಗೆ ಕಾಸಿ ಕುಕ್ಕಿ ಕಣ್ಗೊಳಗೆ ಎರಡು ಗುಡ್ಡನು ಪೀಕೋರವಗೆ (ಪುರಂದ. ೫–೬೮–೧) ; ಕಣ್ಣುಗುಡ್ಡುಗಳನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಹೆಚ್ಚು ಭಾಗವಾದ ಬಿಳಿಯ ಗುಡ್ಡು ಒಂದು ಗೋಳದ ಆರನೆ ಐದು ಭಾಗದಷ್ಟು ಇರುತ್ತದೆ (ನಿಮ್ಮದೃ. ೧೦೪). ೨. ಮೊಟ್ಟೆ ; ತತ್ತಿ : (೬). [ ದೇ ‖ ತೆಲು. ಗುಡ್ಡು, ಗ್ರುಡ್ಡು ]

**ಗುಡ್ಡೆಗಣ್ಣು** (ನಾ). ಮುಂದಕ್ಕೆ ಬಂದಿರುವ ಗುಡ್ಡೆಯುಳ್ಳ ಕಣ್ಣು : ಆ ಗುಡ್ಡೆಗಣ್ಣಿನ ಹುಡುಗ ಯಾರ ಮಗ ? (ರೂಢಿ).
[ ಗುಡ್ಡೆ$_3$ + ಕಣ್ಣು (< ಕಣ್) ]

**ಗುಡ್ಡೆಗಲ್ಲು** (ನಾ). ಒಂದು ಸ್ಥಳದ ಹೆಸರು : ತೆಂಙ್ಕಣದೆಸೆ ಗುಡ್ಡೆಗಲ್ಲು ತುಂಬ ಕುಣ್ಟೆ ರೇವುಕುಣ್ಟೆ ಪಾಮ್ಬುಳಕುಣ್ಟೆ (ಎಕ. XII, ಶಿರಾ. ೩೮–೩೪ ; 878). [ ? ]

**ಗುಡ್ಡೆಣಿಕೆ** (ನಾ). ಹುಸಿ ಎಣಿಕೆ ; ವ್ಯರ್ಥವಾದ ಆಶೆ ; ಕೈಗೂಡದ ಮನೋರಥ : ಪುಣಾತನುತ್ತಮ ಪರತತ್ತ್ವವಿಚಾರಿ ಸದ್ಗುಣಿ ಚರಮಾಂಗನಂಗಜನು ಬಣಗೆ ನಿನಗೆ ಕೈವಶನಪ್ಪನೆಂಬ ಗುಡ್ಡೆಣಿಕೆಯನೆಣಿಸಿ ಹುಚ್ಚಹರೆ (ನೇಮಿಸಂ. ೧೯–೬೦) ; ಎಂದಿಗೀ ಲತೆ ಬೆಳೆವುದೆಂದಿಗಿವನಿದನಡರಿಯೆಂದಿಗೆಮ್ಮಂ ಪಿಡಿವನೆಂದೆಂಬ ಗುಡ್ಡೆಣಿಕೆಯಿಂದ . . . ಬದುಕಬೇಕೆಂಬ ಬಯಲಾಸೆ ನಿನಗೆ (ಸಮ್ಯಕೌ. ೨–೩೦) ; ಸಾಕಿರ್ದ ಭಂಡಾರಾದಿಯಲ್ಲವನೂ ಪಡ್ಡೆಗಿಕ್ಕದೆ ಕಳೆದು ಕಾನನದೊಡ್ಡಿಯನು ಆಶ್ರೈಸುವಂತೀ ಗುಡ್ಡೆಣಿಕೆಗಾನೊಲ್ಲೆ ಶಕುನಿಯೆಯೆಂದ ಕುರುಪತಿಯು (ಜಿನಭಾ. ೩೭–೫೦)
[ ಗುಡ್ಡು$_3$ (<ಗೊಡ್ಡು$_1$) + ಎಣಿಕೆ ]

**ಗುಡ್ಡೆಣಿಸು** (ಕ್ರಿ). ವ್ಯರ್ಥವಾಗಿ ಆಲೋಚಿಸು ; ಸುಮ್ಮನೆ ಚಿಂತಿಸು : ಅಲ್ಲದ ಕನಸ ಕಾಂಬರು ಗುಜ್ಜುಗುಱಿಪುಗಳಲ್ಲಲ್ಲಿ ಗುಡ್ಡೆಣಿಸುವರು (ರಾಮವಿ. ೧೨-೧೭೩) ; ಅಲ್ಲಲ್ಲಿ ಗುಡ್ಡೆಣಿಸುತ್ತ ಸೀತೆಯ ತಂದುದು ಮೊದಲಾಗಿ ಪುರಕೆ ಒಂದು ದಿವಸ ಸುಖವಿಲ್ಲೆಂದು ಪೌರರು ನೊಂದು ನುಡಿವುತಿಹರಬಲೆ (ರಾಮವಿ. ೧೬-೯೨).

[ ಗುಡ್ಡು$_3$ (<ಗೊಡ್ಡು$_1$) + ಎಣಿಸು ]

**ಗುಡ್ಡೆಮಾನ್ಯ** (ನಾ). ಒಂದು ಬಗೆಯ ಮಾನ್ಯ ; ದತ್ತಿಯಾಗಿ ಬಂದ ಭೂಮಿ : ಮನ್ನೆಯಂ ವಜ್ಜರಸನ ಗುಡ್ಡೆಮಾನ್ಯ ೫೦೦ ಮತ್ತ[ರ್] ಕ್ಕೆಯ್ಯೊಳಗೆ (ಇಆ. XIX, ೨೭೩-೪೫ ; 1054) ; ಪ್ರತಿಷ್ಠಾಕಾಲದಲು ಪ್ರಭುಕೇಸರಿನಾಯಕಂ ತಂಮ ಗುಡ್ಡೆಮಾನ್ಯದೊಳಗೆ ಸಿ[ರಿ]ಗಳಬ್ಬೆ[ಯಾ] ಕೆಱೆಯಿಂ ಪಡುವಲು ಬೆಂಕೊಳವನ ಕೋಲಲು ಬಿಟ್ಟ ಕೆಯಿ ಮತ್ತರು ಹತ್ತು (ಎಇ. XXVII, ೭೩-೪೯ ; 1114). [ ಗುಡ್ಡೆ$_0$ + ಮಾನ್ಯ ]

**ಗುಡ್ಡೇಟು** (ನಾ). ಕುರಿತಏಟು ; ಸರಿಯಾದ ಹೊಡೆತ : ಅಡ್ಡೇಟಿಗೆ ಒಂದು ಗುಡ್ಡೇಟು (ಗಾದೆ). ' ಅಡ್ಡೇಟು ' ಪರಾ.

[ <ಕುಱಿ$_1$ + ಏಟು ]

**ಗುಣ** (ನಾ). ೧. ನಡತೆ ; ಸ್ವಭಾವ : ವಿಪುಳ ಯಶೋವಿತಾನ ಗುಣಮಿಲ್ಲದನಂ ಪ್ರಭುಮಾಡಿ ಪೂರ್ವಭೂಮಿಪರ ಪದಂಗಳಂ ಪುಗಿಸಿ (ಪಂಪಭಾ. ೧-೧೪) ; ಆವ ಗುಣಕ್ಕಮಿಂಬ ಗುಣಮಗ್ಗಳಮಾ ಗುಣವೊಂದೆ ಮರ್ತ್ಯದೊಳ್ ತೀವಿದೊಡೆ (ಲೀಲಾವ. ೦-೫೯). ೨. ಸತ್ತ್ವ, ರಜಸ್ಸು, ತಮಸ್ಸುಎಂಬ ಮೂರು ಮೂಲಗುಣಗಳು. 'ಗುಣತ್ರಯಂ' ಪರಾ. ೩. ಪಂಚೇಂದ್ರಿಯಂಗಳಿಗೆ ಸಂಬಂಧಪಟ್ಟ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ವಿಷಯಂಗಳು : " ರಸರೂಪಗಂಧಶಬ್ದಸ್ಪರ್ಶವೆಂದೆಂಬ ವಿಷಯದೊಳು ನೂಲಿನೊಳು ಸಾಧುಜನದೊಳು ಸಲಿಲದೊಳೆಸೆವ ಬಿಲ್ದಿರುವಿನೊಳು ಮುಖ್ಯದೊಳು ಶೌರ್ಯದೊಳು ಪರಮನೊಳು ಗುಣ ಮೆನಿಕ್ಕುಂ " (ಮಂಗರಾ. ೧೪೭-೩೭). ೪. ಸಜ್ಜನಿಕೆ, ವಿವೇಕ, ಬುದ್ಧಿಶಕ್ತಿ, ಔದಾರ್ಯ ಮುಂತಾದ ಒಳ್ಳೆಯತನ : ಕಿತ್ತಯ್ಯಂಗಳ ತಪಮುಂ ಗುಣ ಮುಮಂ ಪೊಗಟುತ್ತೆ (ವಡ್ಡಾರಾ. ೮೨-೪) ; ಅನೇಕ ಲಕ್ಷಣಗುಣಪ್ರಭವಂ ಮೃದುಪಾದಮಾದ ವಾಕ್ಶ್ರೀಸುಭಗಂ (ಪಂಪಭಾ. ೧-೯) ; ನಿಂದಿಸಿದಪ ರೆಂದಾದೊಡವೊಂದನೆ ಗುಣದೊಳ್ ದುರಾತ್ಮನೆಂದಿನಿತುಮಂ (ಲೀಲಾವ. ೧-೫೨). ೫. ದಾರ ; ನೂಲು ; ಹುರಿ. ' ಗುಣಗರ್ಭ ' ಪರಾ. ೬. ಬಿಲ್ಲಿನ ಹೆದೆ ; ತಿರುವು : " ಸಿಂಜಿನಿ ಜೀವೆ ಮೌರ್ವಿ ಗುಣಮೆಂಬಿನಿತುಂ ಜ್ಯಾನಾಮಂ " (ವಸ್ತುಕೋ. ೮೫-೧೭). ೭. ಬೆಲೆ ; ಯೋಗ್ಯತೆ : ಎಣಿಸದೆ ಗುಣಮಂ ಕಾಜಿನ ಮಣಿಯಂ ಮಾಱುವವೊಲಹಹ ನಿನಗಂ ತನಗಂ ಪಣಕೆ ಕೃತಿಯೆಂಬ ಚಿಂತಾಮಣಿಯಂ ಮಾಱುವನ ಬುದ್ಧಿಗಾಂ ಬೆಱಗಾದೆಂ (ಅರ್ಥನೀ. ೧-೪೭). ೮. ರೋಗ ಕಡಿಮೆಯಾಗುವುದು ; ವಾಸಿಯಾಗು ವುದು : ಕಾಲಪುರುಷಂಗೆ ಗುಣಮಣಮಿಲ್ಲಂ ಗಡ ! (ರಾಮಾಶ್ವ. ೦-೧) ; ಅವರಿಗೆ ಕೆಮ್ಮು ಈಗ ಗುಣವಾಗಿದೆ (ರೂಢಿ). ೯. ಊಟದಲ್ಲಿ ನಂಚಿ ಕೊಳ್ಳಲು ಒದಗಿಸುವ ವ್ಯಂಜನ ; ಚಟ್ನಿ, ಉಪ್ಪಿನಕಾಯಿ, ಹುಳಿ, ಕೂಟು ಮುಂತಾದುವು. ೧೦. ರುಚಿ : ಈ ಹೋಟೆಲ್ ಊಟದಲ್ಲಿ ಗುಣವನ್ನು ಕಾಣೆ (ರೂಢಿ). ೧೧. ಪರಿಮಾಣ ; ಆವೃತ್ತಿ ; ಸಲ : 'ದ್ವಿಗುಣ' ಪರಾ. ೧೨. ಒಳ್ಳೆಯಂದು ; ಮೇಲು ; ಉತ್ತಮ : ನಿವಗೆ ನಾವೆಲರು ಒಪ್ಪಿಯೇಳು ಹೊಂನನೂ ಭತ್ತದಿಂದ ನೂರಯೆಪ್ಪತಾರು ಬಳೆ ಆರನು ಗುಣವ ಮಾಡಿದೆವು (ಸೌಇಇ. IX-ii, ೪೬೦-೦೬ ; 1465) ; ನೀನು . . . ಈಗ ಇಲ್ಲಿಗೆ ಬಂದದ್ದು ಗುಣವಾಯಿತು. ಇನ್ನುಮೇಲೆ ಯುದ್ಧದಲ್ಲಿ ಜಯವನ್ನು ಪಡೆಯುತ್ತಲಿದ್ದಿ . . . ಅಂದನು (ಕೃಷಾಭೀ. ೨೭) ; ಕುತ್ತಿಗೆ ಕೊಯ್ಯುವ ಊರಲ್ಲಿ ಸುಲಿದುಬಿಟ್ಟದ್ದೇ ಗುಣ (ಗಾದೆ). ೧೩. ಅಂಕ : ಪರೀಕ್ಷೆಯಲ್ಲಿ ನಿನಗೆ ಎಷ್ಟು ಗುಣ ಬಂದವು ? (ರೂಢಿ). ೧೪. ಮೂರು ಎಂಬ ಸಂಖ್ಯೆಯ ಸಂಕೇತ. ೧೫. [ ಗಣಿತ ] ಗುಣಾ ಕಾರಮಾಡುವುದು. ೧೬. [ ವ್ಯಾಕ ]ವ್ಯಾಕರಣದಲ್ಲಿ ಉಕ್ತವಾದ ಗುಣಸಂಜ್ಞೆಯುಳ್ಳ ವರ್ಣಗಳು: ಸಂಸ್ಕೃತ ವ್ಯಾಕರಣದಲ್ಲಿ ಅ ಏ ಓ– ಈ ಮೂರೂ ವರ್ಣಗಳಿಗೂ ಗುಣವೆಂದು ಹೆಸರು (ಹೊನುಗ. ೦೯). ೧೭.=ಗುಣಸಂಧಿ. ೧೮. [ಕಾವ್ಯಮೀ]ಕಾವ್ಯಶಾಸ್ತ್ರದಲ್ಲಿ ಪ್ರಸಿದ್ಧವಾದ ಹತ್ತು ಪ್ರಶಸ್ತ ಲಕ್ಷಣಗಳು ಅಥವಾ ಧರ್ಮಗಳು. ₱ ಆತ್ಮನಿಗೆ ಸ್ಥೈರ್ಯ, ಔದಾರ್ಯ ಮೊದಲಾದ ಗುಣಗಳಿರುವಂತೆ ಕಾವ್ಯದ ಆತ್ಮದಂತಿರುವ ರಸವನ್ನು ಉತ್ಕರ್ಷಗೊಳಿಸುವ ಧರ್ಮವೇ ಗುಣ. ಮಾಧುರ್ಯ, ಓಜಸ್ಸು, ಪ್ರಸಾದವೆಂಬುವು ಮೂರೂ ಈ ಗುಣಗಳು ಪ್ರಾಚೀನಾಲಂಕಾರಿಕರು ಶ್ಲೇಷ, ಪ್ರಸಾದ, ಸಮತೆ, ಮಾಧುರ್ಯ, ಸುಕುಮಾರತೆ, ಅರ್ಥವ್ಯಕ್ತಿ, ಉದಾರತ್ವ, ಓಜಸ್ಸು, ಕಾಂತಿ ಮತ್ತು ಸಮಾಧಿ ಎಂಬ ಹತ್ತು ಶಬ್ದಗುಣಗಳನ್ನೂ ಅದೇ ಹೆಸರಿನ ಹತ್ತು ಅರ್ಥಗುಣಗಳನ್ನೂ ಹೇಳಿದ್ದಾರೆ. ಲಕ್ಷಣ ಮಾತ್ರ ಬೇರೆಬೇರೆ: ನಿರತಿಶಯ ಕಾವ್ಯ ಶೋಭಾಕರಂಗಳಾಗಿರ್ಪ ಧರ್ಮಮವು ಗುಣಮಕ್ಕುಂ . . . ಸಮಭಿವಂತೋದಾರಾಹ್ವಯ ಸಮಾಧಿಗಳ್ ಕೃತಿಗುಣಂಗಳೀ ರಯ್ದುಕ್ಕುಂ (ಕಾವ್ಯಾವ. ೪೯೯). ೧೯. [ಯೋಗ]ಯೋಗಮಹಿಮೆಯಿಂದ ಉಂಟಾಗುವ ಎಂಟು ಬಗೆಯ ಸಾಮರ್ಥ್ಯಗಳು ; ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ವಶಿತ್ವ, ಈಶತ್ವಗಳೆಂಬ ಅಷ್ಟಸಿದ್ಧಿಗಳು : ಅಣಿಮಾದ್ಯಷ್ಟಗುಣಂಗಳಂ ಪಡೆವುದುಂ ಜೈನೋಕ್ತಿವಾರಾಶಿ ವಾಃಕಣದಿಂದಂ ಪಡೆದಿರ್ದ ಸಿದ್ಧಪದಮಂ ಕೆಯ್ಕೊಳ್ವ ದರ್ಕೆ (ಶಾಂತಿಪು. ೧-೭) ೨೦. [ಜ್ಯೋತಿ]ಅಂಶ : ಈ ಗಂಡುಹೆಣ್ಣಿನ ಜಾತಕಗಳಲ್ಲಿ ೧೮ ಗುಣಗಳು ಕೂಡಿಬಂದಿವೆ (ರೂಢಿ). ೨೧. [ರಾಜ್ಯಶಾ] ರಾಜನೀತಿಯಲ್ಲಿ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಮಾಶ್ರಯಗಳೆಂಬ ಆರು ವಿಷಯಗಳು. ' ಷಡ್ಗುಣ ' ಪರಾ. " ನಯ ನಿಯತಬುದ್ಧಿ ಸಲೆಯಿಂದ್ರಿಯ ತೇಜೋದಾರ ನೂಲುಯತಿ ಸತ್ವಾರ್ಯಂ ಭಯ ಸಂಗರಆವಾತ್ಮಂ ಜಯ ಹೆದೆ ಪದಿನೈದು ಶಬ್ದ ಗುಣಮೆಂದಕ್ಕುಂ " (ನಾನಾಕಂ. ೧೦೮) ; " ಕದನಂ ಶಬ್ದಾದಿ ಪಂಚೇಂದ್ರಿಯ ನಯನಿಯತಂ ಬುದ್ಧಿಸತ್ವಂ ಪ್ರಧಾನಾಸ್ಪದ ತೇಜೋದಾರ ಸಂತುತ್ರಿಗುಣ ಪರಮಯೋಗೀಶ್ವರಂ ಮೌರ್ವಿಲೇಶಂ ಮುದರಕ್ಷಿತ್ವಂ ಗುಣಾಖ್ಯಂ " (ನಾನಾರ. ೭೯).

**ಗುಣಕಱುಗೊಂಡಳ್**=ಪ್ರೀತಿಪಾತ್ರಳು ; ಪ್ರೇಯಸಿ : " ಅಟ್ಟಿರ್ತ ಳೆಂದುಂ, ಗುಣಕಱುಗೊಂಡಳೆಂದುಂ . . . ಪ್ರೀತಿವಟ್ಟಳ್ಗೆ ಪೆಸರ್ " (ಕಶಸಾ. ೧೯-೩೮೮) ; ಗುಣಕಱುಗೊಂಡಳಿನೆಸ್ಯೆಯದಿರ್ಪ ಮನೆಯದು ವಿಫಲಂ (ನೀತಿಮಂ. I, ೭೫). **ಗುಣಕಱುಗೊಳ್, ಗುಣಕರಿಗೊಳ್**=ಮೆಚ್ಚು ; ಪ್ರೀತಿಸು : " ಗುಣಕಱುಗೊಂಡಂ=ಪ್ರೀತಿವಟ್ಟಂ " (ಶಮದ. ಪರಿ. ೨) ; ಅಣುಗಿನೊಳೆನ್ನ ಚಟ್ಟರೊಳಗೀತನೆ ಜೆಟ್ಟಿಗನೆಂದು ವಿದ್ದೆಯಂ ಗುಣಕಱಿ ಗೊಂಡು ಕೊಟ್ಟೆನಗೆ ಸಂತಸಮಪ್ಪಿನಮಿಂಬ ನಿನ್ನ ದಕ್ಷಿಣೆಯಂದು (ಪಂಪಭಾ. ೨-೬೧) ; ರೂಪು ಜವ್ವನಮಿದ್ದೇನು ಗುಣಮಿಲ್ಲದ ಕುಲಸತಿಗೆ ಗುಣಕಱು ಗೊಂಡಿರೆ ಕೂರ್ತೆಂದೆಂದಿಗುಮೆಣೆ ಬಿಚ್ಚದೇಕವೆನಿಪುದು (ಹದಿಬ. ೬-೪೯) ; " ಮೆಚ್ಚಿದವಳಿಗೆ ಗುಣಕರಿಗೊಂಡವಳೆಂಬುದದು " (ಕಶರ. ೩೩). **ಗುಣದಂಕಕಾರ್ತಿ** = ಸದ್ಗುಣಗಳಿಂದ ಪರಿಪೂರ್ಣಳಾದವಳು ; ಒಂದುಬಿರುದು : ಪೞಂಚಲೆದಪುದಾರ್ತರ್ ಕೂರ್ತರ್ ಪಿರಿದೀವ ಗುಣಂ ಗುಣದಂಕಕಾರ್ತಿಯಾ (ಅಜಿಪು. ೧೨-೧೭) ; ಪೆಱಱೆಯ್ದಾರೆಯೋ ಗುಣದಂಕಕಾರ್ತಿಯೊಳ್ (ಸೌಇಇ. XI – i, ೫೨-೩೦; 1007) ; ಪೊಗಳಲಾನಱಿಯೆಂ ಗುಣದಂಕಕಾರ್ತಿಯಂ ಜಿನಪದಭಕ್ತೆಯಂ (ಎಕ. II, ೧೪೩-೧೪೨ ; 1131). **ಗುಣದಬೆಡಂಗ**=

ಸದ್ಗುಣಗಳಿಂದ ಶೋಭಿಸುವವನು ; ಒಂದುಬಿರುದು : ಮಾಳವ್ವೆಯ ಮಲ್ಲಿಸೆಟ್ಟಿಯ ತಂದೆ ಗುಣದ ಬೆಡಙ್ಗ ಮಲ್ಲಿ ಸೆಟ್ಟಿಯುಂ (ಎಕ. XII, ಗುಬ್ಬಿ. ೭-೨೬ ; ಸು. 1200 ?). ಗುಣದಬೆಡಂಗಿ=ಸದ್ಗುಣಗಳಿಂದ ಶೋಭಿಸುವವಳು ; ಒಂದು ಬಿರುದು : ಗುಣದ ಬೆಡಂಗಿಯರಪ್ಪ ಶ್ರೀಮದಕ್ಕಾದೇವಿಯರ್ (ಎಇ. XV, ೮೩-೮ ; 1054). [ ಸಂ. ]

**ಗುಣಂಗೆಡು** (ಕ್ರಿ). ಗುಣವು ಕೆಟ್ಟುಹೋಗು ; ಗುಣಹೀನವಾಗು : ಮಣಿಗಾಜಿರ್ ಗುಣಂಗೆಟ್ಟ ಋಷಿಯಂತೆ ಚಿಂತಿಸೆ (ಧರ್ಮಾಮೃ. ೨-೬೯) ; ಆ ಕೂಟಂ ಮಾನಿಸರ್ಮುಟ್ಟಿದನಿತಱೊಳೆ ಗುಣಂಗೆಟ್ಟೆಂಜಲಪ್ಪುದುಂ (ಧರ್ಮಾಮೃ. ೭-೧೪೧). [ ಗುಣ + ಕೆಡು$_1$ ]

**ಗುಣಂಗೊಳ್** (ಕ್ರಿ). ೧. ಗುಣವನ್ನು ಮೆಚ್ಚು ; ಹೊಗಳು ; ಪ್ರಶಂಸಿಸು: ಆ ಸತಿ ಯಶಸ್ವತಿ ವಿಶ್ವಮಹೀತಲಂ ಗುಣಂ[ಪಾಠಾಂ. ಮನಂ]ಗೊಳೆ ಪಡೆದಳ್ ತದಗ್ರಮಹಿಷೀಪದದೋಳ್ ಪಿರಿದೊಂದು ಮೈಮೆಯಂ (ಆದಿಪು. ೮-೪೫) ; ಶ್ರೀರಾಮನಂ ಗುಣಂಗೊಂಡನೆಂಬಿನಿತಱೊಳೆ ರಾವಣಂ ವಿಭೀಷಣನನೆಂತು ಪರಿಹರಿಸಿದಂ (ಪಂಚತಂ. ೨೪೯-೨೦) ; ಭುವನಾಶ್ಚರ್ಯ್ಯಮೆನಲ್ಕೆ ಮಾಡಿಸಿದರೀ ಲೋಕಂ ಗುಣಂಗೊಳ್ವಿನಂ [ದಿ]ವಿಜೇಂದ್ರಾರ್ಚ್ಚಿತ ಶಾಂತಿನಾಥ ಜಿನಪ ಶ್ರೀ ಗೇಹಮಂ (ಕಇಇ. ೯೬-೪-೩೬ ; ಸು. 12ನೆಯ ಶತ). ೨. ಗುಣವನ್ನು ಹೊಂದು,-ಪಡೆ : (ಸ). [ ಗುಣ + ಕೊಳ್$_1$ ]

**ಗುಣಂಗೊಳಿಸು** (ಕ್ರಿ). ಮೆಚ್ಚುವಂತೆ ಮಾಡು ; ಪ್ರಶಂಸಿಸುವಂತೆ ಮಾಡು : ಮೆಯ್ಯೊಳ್ ಮಿಡುಕುಳ್ಳ ತಾಣವಣಮಿಲ್ಲೆಂಬಂತು ನಿಷ್ಪಂದನಾಗಿ ಸಮನ್ವಿತ ಮನಂ ಗುಣಂಗೊಳಿಸಿದಂ ಯೋಗೀಂದ್ರವೃಂದಂಗಳಂ (ಆದಿಪು. ೬-೩೪). [ ಗುಣಂಗೊಳ್ + – ಇಸು$_3$ ]

**ಗುಣಕ$_1$** ' ಗುಣಂಕು ' ನೋ.

**ಗುಣಕ$_2$** (ನಾ). ೧. ಲೆಕ್ಕಮಾಡುವವನು. ೨. [ಗಣಿತ]ಗುಣಿಸುವ ಸಂಖ್ಯೆ; " ಯಾವುದರಿಂದ ಗುಣಿಸಬೇಕೊ ಆ ಸಂಖ್ಯೆ ": (Multiplier. ಇಂಕನಿ). [ ಸಂ. ]

**ಗುಣಕಥನ** (ನಾ). ಗುಣವನ್ನು ಹೇಳುವುದು ; ಹೊಗಳುವುದು : ಹೋದಲ್ಲೆಲ್ಲಾ ಅವರ ಗುಣಕಥನ ಮಾಡುತ್ತಿದ್ದರು (ರೂಢಿ).
[ ಗುಣ + ಕಥನ ]

**ಗುಣಕರ** (ನಾ).=ಗುಣಕಾರ. [ ಸಂ. ]

**ಗುಣಕಾರ** (ನಾ). ೧. ಒಳ್ಳೆಯ ಗುಣವನ್ನು ಉಂಟುಮಾಡುವುದು ; ಲಾಭದಾಯಕವಾದುದು. ೨. [ಗಣಿತ] ಒಂದು ಸಂಖ್ಯೆಯನ್ನು ಮತ್ತೊಂದು ಸಂಖ್ಯೆಯಿಂದ ಗುಣಿಸುವಿಕೆ : ಪ್ರಥಮ ಗುಣಕಾರಕ್ಕೆ ಲೆಕ್ಕಸಂಜ್ಞೆ, ಲೆಕ್ಕಸ್ಥಾನ, ಗುಣಕಾರ ಪರಿಭಾಷೆ ಸಮಾಪ್ತಂ (ವ್ಯವಹಾ. ೧೨-೯). ' ಗುಣಾಕಾರ ' ಪರಾ. [ ಸಂ. ]

**ಗುಣಕು** ' ಗುಣುಂಕು ' ನೋ.

**ಗುಣಖ್ಯಾಪನ** (ನಾ). ಗುಣಗಳನ್ನು ಪ್ರಚುರಪಡಿಸುವುದು, – ಪ್ರಸಿದ್ಧಪಡಿಸುವುದು : ಗುಣಖ್ಯಾಪನಕ್ಕೀರೇಟುಂ ಭುವನಂಗಳೆಯ್ದೆ ಮೆಸಿಪಂ ಸಾಹಿತ್ಯವಿದ್ಯಾಧರಂ (ಮಲ್ಲಿಪು. ೨-೮೦). [ ಗುಣ + ಖ್ಯಾಪನ ]

**ಗುಣಗಣನೆ** (ನಾ). ೧. ಗುಣಗಳನ್ನು ಎಣಿಸುವುದು. ೨. ಗುಣಗಳನ್ನು ಗುಣಿಸುವವಳು ; ಗುಣಪಕ್ಷಪಾತವುಳ್ಳವಳು : ಗುಣನಿಳಯೆಯಹ ಗೌರಿ ಬಂದಳು ಗಣನೆಗೆಯ್ದದವನನಿರಿಸಿ ಗುಣಗಣನೆ ಬಂದಳು ಹೊಟ್ಟೆ ತುಂಬಲು ಮೊಲೆಯನೂಡಿದಳು (ಬಸವು. ೫೦-೧೧).
[ ಗುಣ + ಗಣನೆ. ಸಂ. / ಗುಣಗಣನಾ (ಗುಣ + ಗಣನ + – ) ]

**ಗುಣಗರ್ಭ** (ನಾ). ಹೊಟ್ಟೆಯಲ್ಲಿ ನೂಲುಳ್ಳುದು ; ಜೇಡರ ಹುಳು ; ಊರ್ಣನಾಭ : ನಿರುತ ನೂಲಿಂದ ಪೂಜಿಪ ತೆಱದಿ ಲಿಂಗದಾ ಶಿರಸಾಗ್ರದಲಿ ನೆಯ್ದು ಮಱೆಯಲ್ಲಿ ತಾನಿರಲು ಕರಿರಾಜ ಬಂದು ಪತ್ರಿದ್ರಳೆಗಳಂ ಕಂಡು ಹಱಿದೊರಸೆ ಗುಣಗರ್ಭನು ವರನಾಸಿಕದಿ ಪೊಕ್ಕು (ಪ್ರೌಢರಾ. ೮-೧೫).
[ ಗುಣ + ಗರ್ಭ ]

**ಗುಣಗಳ್ಳ** (ನಾ). ಸದ್ಗುಣಗಳನ್ನು ಅಪಹರಿಸುವವನು ; ಗುಣಗ್ರಾಹಿ ; ಒಂದು ಬಿರುದು: ವಿದ್ಯಾಮೂರ್ತಿ ಜಿತಾತ್ಮನಕ್ಷರಂ ಗುಣಗಳ್ಳಂ (ಎಕ. VII, ಶಿಕಾರಿ. ೧೨೯-೨೩ ; 1071) ; ಮಿಳ್ಳಂ ಸಮಸ್ತಗುಣಗಳ್ಳಂ ಪರದವ್ಯೆವೇಗನಾದೊಡಂ ತಾಂ ಕೊಳ್ಳಂ (ಕಇ. I, ೨೦-೧೮ ; ?). [ ಗುಣ + ಕಳ್ಳ$_1$ ]

**ಗುಣಗಾನ** (ನಾ). ಗುಣಗಳನ್ನು ಹೊಗಳುವುದು ; ಗುಣಕಥನ : ಕೊನೆಯಲ್ಲಿ ಆಭಾರ ಮನ್ನಣೆಯಲ್ಲಿ ನನ್ನ ಸಾಹೇಬರ ಹಾಗೂ ನನ್ನ ಗುಣಗಾನ ಮಿತಿಮೀರಿ ಆಯಿತು (ಶೀವೋಲ. ೩೫). [ ಗುಣ + ಗಾನ$_2$ ]

**ಗುಣಗು** ' ಗೊಣಗು$_1$ ' ನೋ.

**ಗುಣಗುಟ್ಟು$_1$** ' ಗೊಣಗುಟ್ಟು ' ನೋ.

**ಗುಣಗುಟ್ಟು$_2$** (ಕ್ರಿ). ಗುಂ ಎಂದು ಶಬ್ದಮಾಡು : ಗಿಳಿಗಳೊತನೆ ಗಳಪಿ ಮೊರೆವ ಅಳಿಕುಳಗಳೊಡನೆ ತಾವೂ ಗುಣಗುಟ್ಟುತ್ತಾರೆ (ಪರಿಶೀ. ೪).
[ ಗುಣ$_0$ + ಕುಟ್ಟು$_1$ ]

**ಗುಣಗುಣಿಸು** ' ಗುಣುಗುಣಿಸು ' ನೋ.

**ಗುಣಗೆಡಿಸು** (ಕ್ರಿ). ಗುಣವನ್ನು ಹಾಳುಮಾಡು : ಗಣನೇಮದ ಗುಣಗೆಡಿಸುವ ಪದವು ತುಣುಕುಶಾಸ್ತ್ರಕೆ ಮಣಿಯದ ಪದವು (ಶರೀಫ. ೧೩-೭).
[ ಗುಣ + ಕೆಡಿಸು ]

**ಗುಣಗೇಡಿ** (ನಾ). ಗುಣಹೀನ; ಗುಣವಿಲ್ಲದವನು: ಗುಣಗೇಡಿ ಗಂಡಸಾಗಿ, ತಿಳಿಗೇಡಿ ತಂದೆಯಾಗಿ, ಕಂಗೆಟ್ಟು . . . ದುಃಖದಿಂದ ದುಃಖಕ್ಕೆ ಅಲೆದು ಬಾಳಿ ಸಾಯುವದುಂಟು (ಮಾವಾದ. ೧೧). ' ತಿಳಿಗೇಡಿ ' ಪರಾ.
[ ಗುಣ + ಕೇಡಿ$_1$ ]

**ಗುಣಗ್ರಹಣ** (ನಾ). ೧. ಗುಣಗಳನ್ನು ಸ್ವೀಕರಿಸುವುದು; ಮೆಚ್ಚುವುದು: ಇದು ಅವಳ ಗುಣಗ್ರಹಣಶಕ್ತಿಗೂ ವಿವೇಕಪ್ರಜ್ಞೆಗೂ ಸಾಕ್ಷಿಯಾಗಿತ್ತು (ಪುನರು. ೨೨). ೨. [ ಜೈನ ] ಎಂಟು ರೀತಿಯ ಗರ್ಭಾನ್ವಿತಕ್ರಿಯೆಗಳಲ್ಲಿ ಒಂದು : ಗುಣಗ್ರಹಣಮುಂ . . . ದೃಢಚರ್ಯೆಮುಂ ಉಪಯೋಗಿತ್ವಮೆಂಬೆಂಟು ಗರ್ಭಾನ್ವಿತ ಕ್ರಿಯೆಯೊಳು (ಚಾವುಂಪು. ೨೩೦).
[ ಗುಣ + ಗ್ರಹಣ ]

**ಗುಣಗ್ರಾಮಣಿ** (ನಾ). ಗುಣವಂತನಾದ ಗ್ರಾಮಣಿ,–ಹಿರಿಯ : ಪಾಟಿನಿಲೆ ನೆಗೞ ಬಾಟ್ದುದು ಬಾಟೆಂಬುದು ನಿಕ್ಕುವಂ ಗುಣಗ್ರಾಮಣಿಗಳ್ (ಕವಿರಾ. ೩-೧೭೭). [ ಗುಣ + ಗ್ರಾಮಣಿ ]

**ಗುಣಗ್ರಾಹಿ** (ನಾ). ಒಳ್ಳೆಯದನ್ನು ಮೆಚ್ಚತಕ್ಕವನು ; ಒಳ್ಳೆಯ ಗುಣಗಳನ್ನು ಮಾತ್ರ ಗ್ರಹಿಸತಕ್ಕವನು : ಪ್ರಜ್ಞರುಂ ನಿರ್ಮತ್ಸರರುಂ ಗುಣಗ್ರಾಹಿಗಳುಮಪ್ಪದಱಿಂ ಸಚಿವ ಸಮೂಹಂ ಮೆಚ್ಚಿ . . . ಅಭಿವಂದಿಸಿ (ಶಾಂತಿಪು. ೨-೭೦ ವ) ; ಆಹಾ ಲೇಸುಲೇಸೆಂದದಕಾ ಗುಣಗ್ರಾಹಿಗಳೆಲ್ಲರಿಚ್ಛೈಸಿ . . . ಸಾಹಿತ್ಯಕಳೆಗೆಳೆಸಿದರು (ಭರಜ. ೭೪-೫೭). [ ಸಂ. ಗುಣಗ್ರಾಹಿನ್ ]

**ಗುಣಚ್ಛೇದಕ** (ನಾ). ಗುಣಗಳನ್ನು ಕಡಿದುಹಾಕುವವನು,–ನಾಶಪಡಿಸುವವನು : ಕಣ್ಣ ಕಸಮಂ ಸೈರಿಸದಂತೆ ತಾನೊಂದುಪಚಾರಧರನಾಗಿಯುಂ ಅಸ್ಮದ್ಗುಣಚ್ಛೇದಕ ಸಮರ್ಥಕನಾಗಿ ಬಂದೀಗಳೆಮ್ಮ ಗುಣಾಪಹಾರಾರ್ಥಂ . . . ನುಡಿವುದು (ಶಾಂತಿಪು. ೯-೯೦ ವ). [ ಗುಣ + ಛೇದಕ ]

**ಗುಣಜ್ಞ** (ನಾ). ಗುಣಗಳನ್ನು ತಿಳಿದಿರುವವನು,–ಬಲ್ಲವನು : ಅವಗುಣಿಗಳ ಗುಣಮಂ ಗುಣಜ್ಞನೇನೆಣಿಸುವುದೇ (ಸುಕುಮಾ. ೧-೪೮). [ ಸಂ. ]

**ಗುಣಣೆ, ಗುಣನೆ** (ನಾ). ೧. ನಾಟಕಮಂದಿರ ; ನೃತ್ಯಶಾಲೆ : ಗುಣಣೆಯ ಬಾಣಸಿನ ಮಜ್ಜನದ ರಾಣಿವಾಸದ ಮನೆಗಳುಮಂ (ಪಂಪಭಾ. ೫-೪೭ ವ) ; ಬೀಸಿ. ಗುಣಣೆಯ ಕಂಭಂಗಳೊಳಂ ಕೇರ್ಗಳೊಳಮಾಸ್ಫೋಟಿಸಿ ತಾಟಿಸಿದಾಗಳ್ (ಪಂಪಭಾ. ೮-೭೭ವ). ೨. ಸಂಗೀತಶಾಲೆ : ಕಂತುಕಾಂತೆಯ ಕಳ

ಕೂಜನದ ಗುಣಾ[ಣ]ಣೆಯಂತಿರ್ಪ . . . ಕಮಳಕುವಳಯ ಷಂಡಂಗಳಿಂ (ಅರ್ಧನೇ. ೪-೬೮೪). ೩. ವಿಶ್ರಾಂತಿಸ್ಥಾನ: ಮನವೊಲ್ದು ತನ್ನ ಗುಣಣೆ [ಪಾಠಾಂ. ಗಣನೆ]ಯ ಮನೆಯಂ ಗಜಗಮನೆ ಪೊಕ್ಕು (ಸುಕುಮಾ. ೭-೧೦). **ಗುಣನೆ**: ೧. ಆರೋಗಿಸುವ ಮನೆ ಮಂಡಪಂ ಗುಣನೆ ಸಾಲೆಯೆಂಬಿನಿತುಮಂ ಗೃಹಾಂಗಂ ಕುಡುಗುಂ (ಶಾಂತಿಪು. ೬-೧೧೭). ೨. ಸೊಗಯಿಪ ಗುಣನೆಗಳೊಳ್ ನಿಂದ ಗಾಡಿಕಾರ್ತಿಯರದೇಂ ಮನಂಗೊಳಿಸಿದರೋ (ಶಾಂತಿಪು. ೩-೧೮). [ <ಸಂ. ಗುಣನ ]

**ಗುಣತ್ರಯ** (ನಾ). ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಬಗೆಯ ಮೂಲಗುಣಗಳು: ಗುಣತ್ರಯಂಗಳ ಗೂಡ ಮುಚ್ಚಿ ಅಹಂಕಾರತ್ರಯಂಗಳ ಶಂಕೆಗೊಳಗುಮಾಡಿ (ಅಖಂಡೇ. ೧೯೩-೧೪); ಹೇಳುವೆನು ಮಹಾಶಾಂತಿಲಕ್ಷಣ ಹೇಳುವೆನು ಗುಣತ್ರಯವ ಜೀವಗೆ ಹೇಳುವೆನು ಜನ್ಮಗಳ ಜೀವತ್ರಯಗಳನು (ಜ್ಞಾನಸಿಂ. ೧-೧೫). [ ಗುಣ + ತ್ರಯ ]

**ಗುಣತ್ವ** (ನಾ). ೧. ಗುಣವನ್ನು ಹೊಂದಿರುವಿಕೆ: ಪ್ರಕಟ ಸತ್ಕ್ರಿಯೆಯೆನಿಸಿದಷ್ಟಾಂಗ ಕಲಿತೋನ್ನತ ಭಕ್ತಿಸಂದರುಶನಗುಣತ್ವದಲಿ ಸಕಲ ಪಾಪಕ್ಷಯಮೆನಿಸಿ (ಬಸವಪು. ೩-೬೯). ೨. ಅಧೀನವಾಗಿರುವಿಕೆ; ಅಸ್ವತಂತ್ರತೆ. ೩. ಶ್ರೇಷ್ಠತೆ. ೪. ಗುಣಿಸುವುದು. [ ಸಂ. ]

**ಗುಣದೇವ** (ನಾ). ಒಬ್ಬಾತನ ಹೆಸರು: ಶಾಸ್ತ್ರವಿದೋ ಯೇನ ಗುಣದೇವಾಖ್ಯಸೂರಿಣೇ (ಎಕ. II, ೨೩-೧; ಸು. 700). [ ಗುಣ + ದೇವ ]

**ಗುಣಧರ್ಮ** (ನಾ). ಸ್ವಭಾವ; ವಿಶಿಷ್ಟಗುಣ: ಅನುಭವ, ಗುಣಧರ್ಮ, ಮನೋಭಾವ-ಇವನ್ನು ದೊರಕಿಸುವಂತೆ ಸಮಾಜ ಪರಿಜ್ಞಾನದ ಕಾರ್ಯಕ್ರಮ ಪಠ್ಯವಿಷಯಗಳಲ್ಲಿ ಒಳಗೊಂಡಿರಬೇಕು (ಶಿಕ್ಷದ. ೧೬೫). [ ಗುಣ + ಧರ್ಮ ]

**ಗುಣಧಾಮೆ** (ನಾ). ಗುಣಗಳಿಗೆ ಆಶ್ರಯವಾದವಳು; ಗುಣವಂತೆ: ಕಾಶ್ಯಪಿಯಂಬೊಳುದಾತ್ತ ಕೀರ್ತಿಲಕ್ಷ್ಮೀವಿಭವಾಭಿರಾಮೆ ಗುಣಧಾಮೆ (ಸುಕುಮಾ. ೨-೪). [ ಸಂ. ಗುಣಧಾಮಾ ]

**ಗುಣನ** (ನಾ). ಗುಣಿಸುವುದು; ಲೆಕ್ಕ. [ ಸಂ. ]

**ಗುಣನಾಮ**(ನಾ). ಗುಣಕ್ಕೆ ಅನುಸಾರವಾದ ಹೆಸರು; ಅನ್ವರ್ಥನಾಮ: ತಂದೆಗೆ ಭಕ್ತನೆಂಬ ಗುಣನಾಮಮದೆನ್ನಯ ತಂದೆಗೆನ್ನೊಳಿಂ ತಂದೆಯ ಭಕ್ತಿಯೆಂಬ ಪೆಸರನ್ವಯಸಿದ್ಧಿಯಿನಕ್ಕುಂ (ಶಾಂತಿಪು. ಪರಿ ೧-೪). [ ಗುಣ + ನಾಮ ]

**ಗುಣನಿಧಾನ** (ನಾ). ೧. ಒಳ್ಳೆಯ ಗುಣಗಳಿಗೆ ಆಶ್ರಯ. ೨. ಒಳ್ಳೆಯ ಗುಣಗಳಿಂದ ಕೂಡಿರುವವನು: ಸಾಧುಜನ ಸಹಾಯತಾದಿ ಗುಣನಿಧಾನನಂ ನಿನ್ನನ್ನನಂ ಮತ್ತೂರ್ವನನೆಲ್ಲಿಯುಂ ಕಂಡುಂ ಕೇಳ್ದುಮರಿಯೆವು (ಶಾಂತಿಪು. ೩-೭೫ ವ). [ ಗುಣ + ನಿಧಾನ ]

**ಗುಣನಿಧಿ** (ನಾ). = ಗುಣನಿಧಾನ ೨: ಕಾನೂರ್ಗಣ ಮುನಿಪತಿ ವಿದ್ಯಾನಿಧಿ ಗುಣನಿಧಿ ದಯೈಕನಿಧಿ (ಶಾಂತಿಪು. ೧-೧೭); ಗುಣನಿಧಿಯಂ ನೋಡಲ್ಕಾ ಫಣೀಂದ್ರನುತ್ಕಂಠನಾಗೆ ತಲೆದೋರ್ಪ ಫಣಾಮಣಿರುಚಿಗಳಂತೆ ಪೊಳೆದುವು ಮಣಿಭೂಮಿಯೊಳೆಸೆವ ದೀಪಿಕಾಪ್ರಕರಂಗಳ್ (ಕಾದಂಪೂ. ೫೧೪); ಗುಣನಿಧಿ ದೇವ ಕೌಶಿಕಶಿಖಾಮಣಿ ಬುದ್ಧಿವಿಹೀನ ನಿನ್ನನೆಂ (ಪಂಚತಂ. ೨೫೪-೮); ಗುಣನಿಧಿ ಬಸವಂ . . . ತಣಿದೊಪ್ಪಿರ್ದಂ (ವೃಷವಿ. ೪೦-೮೫). [ ಗುಣ + ನಿಧಿ ]

**ಗುಣನಿಲಯೆ, ಗುಣನಿಳಯೆ** (ನಾ). ಒಳ್ಳೆಯ ಗುಣಕ್ಕೆ ನೆಲೆಯಾಗಿರುವವಳು; ಗುಣವಂತೆ: ಸಕಲ ಗುಣನಿಲ [ಪಾಠಾಂ. ಳ] ಯೆಯುಹ ಗೌರಿ ಬಂದಳು (ಬಸವಪು. ೫೦-೧೧). **ಗುಣನಿಳಯೆ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ಗುಣನಿಲಯಾ (ಗುಣ + ನಿಲಯ + –) ]

**ಗುಣನಿಳಯ** (ನಾ). ಒಳ್ಳೆಯ ಗುಣಕ್ಕೆ ನೆಲೆಯಾಗಿರುವವನು: ಗುಣನಿಳಯ ಮೇರು ಚೂಡಾಮಣಿ ಶರಣಾಗತ ಜಗತ್ತ್ರಯಿಜನ ರಕ್ಷಾಮಣಿ ವಿನಯದಾನ ಚಿಂತಾಮಣಿ ಚೂಡಾಮಣಿ ಮರೀಚಿರಂಜಿತ ಚರಣಾ (ಅಜಿಪು. ೮-೨೩). [ ಗುಣ + ನಿಳಯ (=ನಿಲಯ) ]

**ಗುಣನಿಳಯೆ** 'ಗುಣನಿಲಯೆ' ನೋ.

**ಗುಣನೆ** 'ಗುಣಣೆ' ನೋ.

**ಗುಣಪಡಿಸು** (ಕ್ರಿ). ವಾಸಿಮಾಡು; ಗುಣಮಾಡು: ರೋಗಗಳನ್ನು ಕಂಡುಹಿಡಿದು ಗುಣಪಡಿಸಲು ಅದು ಪ್ರಯೋಜನವಾಗುವುದು (ಮಚಿಸ. ೨೨); ಈ ಬಗೆಯ ರೋಗಗಳನ್ನು ಬೆನ್ನೇಟಿನಿಂದ ಗುಣಪಡಿಸಬಹುದು (ಕಾಲೂರ. ೧೭ ಕಥಾಸಾರ); 'ಎ' ಜೀವಾತಿನ ಅಂಶ ಹೆಚ್ಚಾಗಿರುವ ಆಹಾರವಸ್ತುಗಳನ್ನು ಸೇವಿಸುವುದರಿಂದ ಇದನ್ನು ಗುಣಪಡಿಸಬಹುದು (ಅದುಸೌ. ೬೦). [ ಗುಣಪಡು + – ಇಸು$_3$ ]

**ಗುಣಪಡು** (ಕ್ರಿ). ವಾಸಿಯಾಗು; ಗುಣವಾಗು: ಕಾಯಿಲೆ ಗುಣಪಟ್ಟು ಎದ್ದು ಓಡಾಡಲು ಒಂದು ತಿಂಗಳು ಬೇಕಾಯಿತು (ರೂಢಿ). [ ಗುಣ + ಪಡು$_1$ ]

**ಗುಣಪಸಾಯ** (ನಾ). ಗುಣಕ್ಕೆ ಮೆಚ್ಚಿಕೊಟ್ಟದ್ದು; ಮೆಚ್ಚಿಕೆ: ಗುಣಪಸಾಯದ ಕಾಣಿಕೆಯ ಹರಿಯಣದ ಹಂತಿಯ ದಾಯದೂಟಕೆ ಋಣಿಗಳಾದೆವೆ ಶಿವಶಿವಾ ಎಂದೊಳಲುತಿಖಿಲಬಲ (ಕುವ್ಯಾಕ. ೧೩-೨). [ ಗುಣ + ಪಸಾಯ ]

**ಗುಣಪೃಷ್ಠ** (ನಾ). = ಗುಣಗರ್ಭ: "ಮಶಕಾರಿ ಗುಣಪೃಷ್ಠಮೆನೆ ಜೇಡನೆನಿಸಿಕ್ಕು" (ಮಂಗರಾ. ೪೯-೧೪). [ ಗುಣ + ಪೃಷ್ಠ ]

**ಗುಣಪ್ರಕೃತಿ** (ನಾ). [ ವ್ಯಾಕ ] ಗುಣವಾಚಕವಾಗಿರುವ ಪ್ರಕೃತಿ, –ಪದದ ಮೂಲರೂಪ: ನಾಮಪ್ರಕೃತಿ ಆಖ್ಯಾತಪ್ರಕೃತಿ (ಧಾತು) ಗಳಿರುವಂತೆಯೇ ಗುಣಪ್ರಕೃತಿ ಸಂಖ್ಯಾಪ್ರಕೃತಿಗಳೂ ಇದ್ದುವೆಂದು ತೋರುತ್ತದೆ (ಕೃಪಿಡಿ. ೧೫). 'ನಾಮಪ್ರಕೃತಿ' ಪರಾ. [ ಗುಣ + ಪ್ರಕೃತಿ ]

**ಗುಣಪ್ರಭ** (ನಾ). ಗುಣಗಳಿಂದ ಪ್ರಕಾಶಮಾನನಾಗಿರುವವನು: ಸುತಪೋವಿಭವಂ ಶಿವಂಕರೋದ್ಯಾನದೊಳಿರ್ದಪಂ ಪರಿವೃತವ್ರತಿವೃಂದಸಭಂ ಗುಣಪ್ರಭಂ (ಚಂದ್ರಪು. ೯-೦೭). [ ಸಂ. (ಗುಣ + ಪ್ರಭಾ + –) ]

**ಗುಣಬ್ರತ** (ನಾ). = ಗುಣವ್ರತ: ಏನನೇನನೆಲೆ ಪೇಳ್ವೆನಣ್ಣ ಸನ್ಮಾನದಾನಿಯ ಗುಣಬ್ರತಂಗಳಂ (ಎಕ. V. ಚನ್ನರಾ. ೧೧೪-೪೭; 1094). [ ಗುಣ + ಬ್ರತ ]

**ಗುಣಬ್ರಾಹ್ಮಣ** (ನಾ). ತನ್ನ ಗುಣಗಳಿಂದ ಬ್ರಾಹ್ಮಣನಾದವನು: ಜಾತಿಬ್ರಾಹ್ಮಣನಿಗಿಂತಲೂ ಗುಣಬ್ರಾಹ್ಮಣನು ಪೂಜ್ಯನೆಂದು ಸಿದ್ಧಾಂತವಿರುವುದು (ಹಿಂದಸಾ. ೧೫೭). 'ಜಾತಿಬ್ರಾಹ್ಮಣ' ಪರಾ. [ ಗುಣ + ಬ್ರಾಹ್ಮಣ ]

**ಗುಣಭಾಜ** (ನಾ). ಗುಣಕ್ಕೆ ಪಾತ್ರನಾದವನು; ಗುಣವಂತ: ಗುಣಭಾಜ್ – ಗುಣಭಾಜ, ವಿಹಾಯಸ್ – ವಿಹಾಯಸ (ಶಮದ. ಸ. ೯೭ ಪ್ರಯೋ). [ ಸಂ. ಗುಣಭಾಜ್ ]

**ಗುಣಮಣಿ** (ನಾ). ೧. ಶ್ರೇಷ್ಠವಾದ ಮಣಿ; ಬೆಲೆಬಾಳುವ ರತ್ನ: ಕುರುಡನ ಮುಂದೆ ಗುಣಮಣಿ ಇದ್ದರೆ ಅದನೆಡಹುವನಲ್ಲದೆ ಕಾಣಲರಿಯ (ಮೋಳಿಮಾ. ೨೫-೧೦೦); ಎಸೆಗುಮಲ್ಲಿ ಗುಣಮಣಿವಸರಂ (ವೃಷವಿ. ೪-೮೧). ೨. ಒಳ್ಳೆಯ ಗುಣಗಳೇ ಆಭರಣವಾದವನು; ಗುಣಾಢ್ಯ: ಕೇಳ್ಗುಣಮಣಿಯೆ ಧರಣಿಪಾಗ್ರಣಿಯೆ (ಜೈಮಿಭಾ. ೧೨-೫). [ ಗುಣ + ಮಣಿ$_3$ ]

**ಗುಣಮುಖ** (ನಾ). ೧. ರೋಗವು ವಾಸಿಯಾಗುವ ಸ್ಥಿತಿ: ದಿನಗಳೆದಂತೆ ಗೋದಮ್ಮನ ಸ್ಥಿತಿ ಕಠಿಣವಾಗುತ್ತಿತ್ತು, ವಿನಹ ಗುಣಮುಖ ಕಂಡು ಬರುತ್ತಿರಲಿಲ್ಲ (ತ್ಯಾಗಮು. ೧೬೩). ೨. ರೋಗ ವಾಸಿಯಾಗುತ್ತಿರುವ ವ್ಯಕ್ತಿ: ಅವಳು ಮತ್ತೆ ಗುಣಮುಖಳಾಗುತ್ತಾಳೆಂಬ ನಂಬಿಕೆ ನನಗಿರಲಿಲ್ಲ (ಪುನರು. ೨೮೪). [ ಗುಣ + ಮುಖ ]

**ಗುಣಮೂಲಿ** (ನಾ). ಗೆಣಸು: "ಗೆಣಸು ಗುಣಮೂಲಿ" (ಮಂಗರಾ. ೪೦-೩೩). [ <ಸಂ. ಗುಣಮೂಲಿನೀ ]

**ಗುಣಯುತ** (ನಾ). ೧. ಒಳ್ಳೆಯ ಗುಣಗಳಿಂದ ಕೂಡಿರುವವನು; ಗುಣವಂತ: ಗುಣಯುತನಪ್ಪನಂ ಸುಭಟನಪ್ಪನನಾಯುಧಯುಕ್ತನಪ್ಪನಂ (ಕವಿರಾ. ೦-೧೨೨); ಆಗದು ಸಮರಂ ಗುಣ[ಪಾಠಾಂ. ಸಮ]ಯುತನಾಗು ಮಹಾಭೋಗಭಾಗಿ ನಿನ್ನಾಳ್ವ ಮಹೀಭಾಗಮುಮಂ ಸಕಲ ಮಹೀಭಾಗ ಮುಮಂ ನೀನೆ ಕೊಂಡು ಸುಖಿಮಿರಲಾಗಾ (ಗದಾಯು. ೭-೪೩); ಗುಣಯುತನಖಿಳಶಿರೋಭೂಷಣನುದಯಿಪ ತನುಜಂ (ಪಾರ್ಶ್ವಪು. ೧೩-೧೪೦). ೨. ಹೆದೆಯಿಂದ ಕೂಡಿಕೊಂಡಿರುವುದು; ಬಿಲ್ಲು. ೧, ೨: ಎಲ್ಲರುಂ ಗುಣಯುತರ್ ಕಠಿನರೆನಿಸರ್ಮನುಜರ್ (ಜೈಮಿಭಾ. ೨-೧೧). [ ಗುಣ + ಯುತ ]

**ಗುಣರತ್ನ** (ನಾ).=ಗುಣಮಣಿ ೨: ಪರಮಗುಣರತ್ನನೆನಿಸಿದ ಸಿರಿಪತಿ ದಣ್ಣಾಧಿನಾಥತಿಳಕನೆ ಸುಜನಾಭರಣನ ಮಯ್ದುನನೆಸೆದಂ (ಸೌಇಇ. XX, ೭೪-೨೦; 1112). [ ಗುಣ + ರತ್ನ ]

**ಗುಣರಹಿತೆ** (ನಾ). ೧. ಗುಣಹೀನೆ. ೨. ಹೆದೆಯಿಲ್ಲದುದು. ೧, ೨: ಲಕ್ಷ್ಮೀಮಹಾದೇವಿ . . . ಅಮರಚಾಪಲಕ್ಷ್ಮಿಯಂ ಗುಣರಹಿತೆಯೆನಿಸಿಯುಂ (ಮಲ್ಲಿಪು. ೩-೫೪). [ ಸಂ. ಗುಣರಹಿತಾ (ಗುಣ + ರಹಿತ + –) ]

**ಗುಣಲಬ್ಧ** (ನಾ). [ ಗಣಿತ ] ಎರಡು ಸಂಖ್ಯೆಗಳನ್ನು ಗುಣಿಸಿದರೆ ಬರುವ ಮೊತ್ತ: (a–b) ಮತ್ತು (c–d) ಇವುಗಳ ಗುಣಲಬ್ಧದಲ್ಲಿ . . . ಬರೆಯುತ್ತಾನೆ (ಗಣಿಚ. ೪೯). [ ಗುಣ + ಲಬ್ಧ ]

**ಗುಣಲೋಬ** (ನಾ). ಲೋಭವೇ ಗುಣವಾದವನು; ಕೃಪಣ; ಜಿಪುಣ(?): ಆ ಬಲದೇವಂಗಂ ಮೃಗಶಾಬೇಕ್ಷಣೆಯನಿಪ ಬಾಚಿಕಬೆಗವಖಿಳೋರ್ವ್ವೀಬನ್ಧು ಪುಟ್ಟಿದಂ ಗುಣಲೋಬರನದಟಲೆವ ಸಿಂಗಿಮಯ್ಯನುದಾರಂ (ಎಕ. II, ೧೪೨-೨೯; 1139).

[ ಗುಣ + ಲೋಬ ]

**ಗುಣವಂತ** (ನಾ). ಒಳ್ಳೆಯ ಗುಣಗಳಿಂದ ಕೂಡಿಕೊಂಡಿರುವವನು; ಸದ್ಗುಣಿ: ಗುಣವಂತನಪ್ಪ ಭೃತ್ಯನಾಳ್ದನೆಡರಂ ಕಡೆಗಣಿಸಿರ್ಪುದೊಪ್ಪದು (ಪಂಚತಂ. ೩೦-೨); ಸಿರಿವಂತಂ ಗುಣವಂತಂ ಆಯುವಂತಂ (ಭಾಷಾಭೂ. ೧೭೮ ಪ್ರಯೋ). 'ರೂಪವಂತ' ಪರಾ.

[ <ಸಂ. ಗುಣವತ್ ]

**ಗುಣವಂತೆ** (ನಾ). ಸದ್ಗುಣವುಳ್ಳ ಹೆಂಗಸು; ಗುಣವತಿ: ಸಿರಿವಂತೆ, ಗುಣವಂತೆ (ಶಬ್ದಾನು. ೧೯೭ ಪ್ರಯೋ); ಇವನಿಗೆ ವೇದಾವತಿಯೆಂಬ ಗುಣವಂತೆಯಾದ ಮಗಳಿದ್ದಳು (ನೀತಿಚಿಂ. VI, ೫). 'ರೂಪವಂತೆ' ಪರಾ.

[ ಗುಣವಂತ + –ಎ₂ ]

**ಗುಣವಚನ** (ನಾ). ೧. ಗುಣಗಳಿಂದ ಕೂಡಿದ ಮಾತು; ಒಳ್ಳೆಯ ಮಾತು: ಸರ್ವರ ಗುಣವಚನದೊಳು ಬೀಳ್ಕೊಟ್ಟು ಅಣುಗರ ಬೀಳ್ಕೊಟ್ಟು ಚಕ್ರೇಶ ಹೊಕ್ಕನಾಕ್ಷಣ ತನ್ನ ರಾಜಮಂದಿರವಾ (ಭರತೇ. ೪೯-೧೪೭). ೨. [ ವ್ಯಾಕ ] ಒಂದು ವಸ್ತುವಿನ ಅಥವಾ ವ್ಯಕ್ತಿಯ ಗುಣವನ್ನು ತಿಳಿಸುವ ಪದ; ವಿಶೇಷಣ: ಗುಣವಚನ ಸರ್ವನಾಮ ಬಹುವ್ರೀಹಿಗಳುಂ ಕೃತ್ತದ್ಧಿತ ಸಂಖ್ಯೆಗಳುಂ ಸಲೆ ವಾಚ್ಯಲಿಂಗಮೆಂದೀ ಕ್ರಮದಿಂ (ಶಮದ. ೮೯). [ ಗುಣ + ವಚನ ]

**ಗುಣವಜ್ಜನ** (ನಾ). ಗುಣವಂತ ಜನ; ಒಳ್ಳೆಯವರು: ಗುಣವಜ್ಜನಕಂ ಸಮಸ್ತ ಸಾಕ್ಷರಜನಕಂ . . . ಒಲ್ದುದನಿತ್ತಭಿರಕ್ಷಿಪರ್ತಿಯಿಂ (ಪುಷ್ಪಪು. ೧-೭೫). [ ಸಂ. (ಗುಣವತ್ + ಜನ) ]

**ಗುಣವತಿ** (ನಾ). ೧ = ಗುಣವಂತೆ: ಗುಣವತಿ ರಾಘವನಂ ಲಕ್ಷ್ಮಣನಂ ನೆನೆನೆನೆದು ಶೋಕಪಾವಕನೆರ್ದೆಯೊಳ್ ಮಣೆಯದೆ ದಳ್ಳಿಸೆ ಕಣ್ಗಳ ಪೊಣರಿಂ ಕಣ್ಬನಿಗಳುಣ್ಮೆ ದೆಸೆಗೆಟ್ಟಿರ್ದಳ್ (ಪಂರಾಮಾ.೧೫-೭೭); ಆ ಗುಣವತಿ ಫಲವತಿ ತಾನಾಗೆ (ಜಗವಿ. ೨-೫೩); ವಿಪ್ರನಿರ್ಪಂ ಮಾದಿರಾಜನಾತನ ಸತಿಯು ಅಪ್ರತಿಮ ಮಾದಾಂಬೆಯೆಂದೆಂಬ ಗುಣವತಿಯು (ಬಸರ. ೧-೧೦೦); ಸತಿಯರಲಿ ಗುಣವತಿಯೆ ಲೇಸು (ಸರ್ವಜ್ಞ. ೧೬೭೫). 'ರೂಪವತಿ' ಪರಾ. ೨. ದಾರವನ್ನುಳ್ಳುದು; ನೂಲು ತೆಗೆಯುವ ಸಾಧನ; ಕದಿರು: "ಕದಿರು ಗುಣವತಿಯಕ್ಕು" (ಮಂಗರಾ. ೬೧-೧೯).

[ ಸಂ. ಗುಣವತೀ ]

**ಗುಣವರ್ಮ** (ನಾ). ೧. ಒಳ್ಳೆಯ ಗುಣವೆಂಬ ಕವಚವನ್ನು ಹೊಂದಿರುವವನು; ಸದ್ಗುಣಗಳಿಂದಲೇ ರಕ್ಷಿಸಲ್ಪಡುವವನು: ತಣಿವಂತಿರೆ ರಸದಿಂ ಬುಧರಣೆಯರಮೆಸಗುವುದು ಸುಕವಿ ಸತ್ಕೃತಿಯಾನಣಂ ಗುಣವರ್ಮನಾಗಿ ಶಿತಮಾರ್ಗಣದಂತುಚ್ಚಳಿಪದಿರ್ಪನಂ ಖಳವಚನಂ (ಪುಷ್ಪಪು. ೧-೬೦). ೨. ಹರಿವಂಶ ಕಾವ್ಯವನ್ನು ಬರೆದ ಒಬ್ಬ ಕನ್ನಡ ಕವಿ: ಗುಣವರ್ಮನ ಜಾಣ್ಮವಿರತ್ನನೋಜೆ ಶೋಭಿಸೆ (ಧರ್ಮಾಮೃ. ೧-೩೯); ಗುಣವರ್ಮ ಶ್ರೀ ವಿಜಯರ . . . ಸುಮಾರ್ಗಮಿದೆಱಿಸೊಳೆ ಲಕ್ಷ್ಯಂ (ಶಮದ. ೫ ಟೀಕೆ). ೩. ಪುಷ್ಪದಂತಪುರಾಣವನ್ನು ಬರೆದ ಒಬ್ಬ ಕನ್ನಡ ಕವಿ: ಗುಣವರ್ಮಂ ಸತ್ಕವಿತಾಗುಣಮುಂ . . . ಎನೆ ಮೆಱೆದಂ (ಪಾರ್ಶ್ವಪು. ೧-೫೮).

[ ಸಂ. ಗುಣವರ್ಮನ್ ]

**ಗುಣವಾಚಕ** (ನಾ). = ಗುಣವಚನ ೨: ಯಾವುದಾದರೂ ಒಂದು ಗುಣವನ್ನು ಇವು ಎತ್ತಿ ಹೇಳುತ್ತವೆ. ಆದಕಾರಣ, ಇವಕ್ಕೆ ಗುಣವಾಚಕಗಳೆಂಬ ಹೆಸರು ಬಂದಿದೆ (ಮಧ್ಯಮ. ೨೭). 'ನಾಮವಾಚಕ' ಪರಾ.

[ ಗುಣ + ವಾಚಕ ]

**ಗುಣವಾಚಿ**(ನಾ).=ಗುಣವಚನ ೨: ಒಳ್ಳಿತು . . . ನಿಡಿದಿನಿದೆಂಬಂತುಳ್ಳುವು ತು ದು ಕಡೆಯೆನೆ ಕೈಕೊಳ್ಳಿಂ ಗುಣವಾಚಿ (ಶಮದ. ೭೭).

[ ಸಂ. ಗುಣವಾಚಿನ್ ]

**ಗುಣವಾದ** (ನಾ). ೧. ಒಳ್ಳೆಯ ಗುಣಗಳನ್ನು ಎತ್ತಿ ತೋರಿಸುವುದು. ೨. [ ತತ್ತ್ವಶಾ ] (ವಾಚ್ಯವಾದ ಅರ್ಥಕ್ಕೆ ಬಾಧಕ ಬಂದಾಗ ಅದನ್ನು ಸಮನ್ವಯಗೊಳಿಸಲು) ಬೇರೆ ಅರ್ಥವನ್ನು ಹೇಳುವಿಕೆ; ಗೌಣಾರ್ಥ ವಿವರಣೆ: ಎಲ್ಲಿ ಇನ್ನೊಂದು ಪ್ರಮಾಣಕ್ಕೆ ವಿರುದ್ಧವಾಗಿರುವುದೋ ಅಲ್ಲಿ ಗುಣವಾದದಿಂದ ಪ್ರವರ್ತಿಸುತ್ತದೆ (ಬ್ರಹ್ಮಭಾ. ೫೦೦).

[ ಗುಣ + ವಾದ₃ ]

**ಗುಣವಿತಾನ** (ನಾ). ಗುಣಗಳ ಗುಂಪು, –ಸಮೂಹ: ಏನಿದೇನು ನಿನ್ನ ನಡತೆ ಮಾನವೇಂದ್ರನೆ ದೀನರಕ್ಷಣಾದಿಗುಣವಿತಾನಸಾಂದ್ರನೇ (ಶಾಕುಂತ.೯೭ ಅಡಿಟಿ).

[ ಗುಣ + ವಿತಾನ ]

**ಗುಣವಿವೇಕ** (ನಾ). ೧. ಗುಣಗಳ ವಿಮರ್ಶೆ. ೨. [ ಕಾವ್ಯಮೀ ] ಕಾವ್ಯದ ಹತ್ತು ಗುಣಗಳ ವಿವೇಚನೆ ಅಥವಾ ಚರ್ಚೆ: ಕಾವ್ಯಾವಲೋಕನದೊಳ್ ಗುಣವಿವೇಕಾಧಿಕರಣಂ ತೃತೀಯಂ (ಕಾವ್ಯಾವ. ೭೭೯ ವ).

[ ಗುಣ + ವಿವೇಕ ]

**ಗುಣವೃಕ್ಷಕ** (ನಾ). ಹಡಗಿನ ಮಧ್ಯದ ಕಂಬ; ಕೂವೆಕಂಬ; ಧ್ವಜಸ್ತಂಭ: "ಹಡಗಿನ ಧ್ವಜಸ್ತಂಭ" (ಅಮರ. ಟೀಕೆ); "ಕೂಪಕಃ, ಗುಣವೃಕ್ಷಕಃ– ಈ ೨ ಕೂವಕಂಬಂ" (ಹಲಾಯು. ೧೧೮–೩೩). [ ಸಂ. ]

**ಗುಣವೃತ್ತಿ** (ನಾ). [ಕಾವ್ಯಮೀ] ಅರ್ಥವನ್ನು ಪ್ರತಿಪಾದಿಸುವ ಶಬ್ದವ್ಯಾಪಾರಗಳಲ್ಲಿ ಒಂದು; ಲಕ್ಷಣಾವೃತ್ತಿ: ಗುಣವೃತ್ತಿ, ವಾಚಕತ್ವ, ಇವೇ ಮೊದಲಾದ ಶಬ್ದವ್ಯಾಪಾರಗಳೆಲ್ಲವುಗಳಿಂದಲೂ ವಿಲಕ್ಷಣವಾದುದೇ ವ್ಯಂಜಕತ್ವ (ಧ್ವನ್ಯಾಲೋ. ೨೦೭). [ ಗುಣ + ವೃತ್ತಿ ]

**ಗುಣವೃದ್ಧಿ** (ನಾ). ೧. ಗುಣಗಳನ್ನು ಹೆಚ್ಚಿಸುವುದು; ಗುಣಪಡಿಸುವುದು: ಧರ್ಮದೇವನು . . . ರೇವುಗಳನ್ನೂ ಗುಹೆಯನ್ನೂ ಗುಣವೃದ್ಧಿ ಹೇಗೆಮಾಡಬಹುದೆಂದು ಯೋಚಿಸುತ್ತಲಿದ್ದನು (ರಾಜಾವು. ೧೭೦). ೨. [ವ್ಯಾಕ] ಗುಣ ಮತ್ತು ವೃದ್ಧಿ ಸಂಧಿಗಳು. ೧, ೨: ಅವರ್ಣವಾದಕ್ಕೆಡೆಯಾಗದೊಳ್ಪಿಂದವರ್ಣಕಾಮುರ್ ಗುಣವೃದ್ಧಿಧಾಮುರ್ ದಿವಾಕರರ್ ವ್ಯಾಕೃತಿನಾಮಿಗಳ್ವೋಲ್ ದಿವಕ್ಕೆ ಪನ್ನಿರ್ವರೆ ಮುಖ್ಯರಾದರ್ (ಕಾವ್ಯಾವ. ೧೩).

[ ಗುಣ + ವೃದ್ಧಿ ]

**ಗುಣವ್ಯಸನ** (ನಾ). ೧. ಗುಣಗಳಲ್ಲಿ ಅತಿ ಆಸಕ್ತಿ. ೨. ಗುಣಗಳಲ್ಲಿ ಹೆಚ್ಚು ಆಸಕ್ತಿಯುಳ್ಳವನು: ನೀಂಬರಂ ಗುಣವ್ಯಸನರೆ ನೀಂಬರಂ ಶ್ರುತವಿಳಾಸರೆ ನೀಂಬರವೇನುದಾತ್ತರೆ (ಪುಷ್ಪಪು. ೧-೭೭). [ ಗುಣ + ವ್ಯಸನ ]

**ಗುಣವ್ಯಾಪ್ತಿ** (ನಾ). ಗೌಣ ಅಥವಾ ಲಾಕ್ಷಣಿಕಾರ್ಥದ ಪ್ರಸಾರ; ಮೂಲಾರ್ಥದ ಜೊತೆಗೆ ವಿಶೇಷಾರ್ಥವನ್ನು ತಿಳಿಸುವುದು: ಯಾವುದೊಂದು ಭಾಷೆಯೊಳಗಿನ ಯಾವುದೇ ಸುಸಂಸ್ಕೃತ ಶಬ್ದದ ಜಾತಿವ್ಯಾಪ್ತಿ (Denotation) ಮತ್ತು ಗುಣವ್ಯಾಪ್ತಿ (Conotation) ಪೂರ್ಣವಾಗಿ ಸರಿಹೋಗುವ ಶಬ್ದವು ಮತ್ತೊಂದು ಭಾಷೆಯಲ್ಲಿ ದೊರೆಯುವುದು ಅಸಾಧ್ಯವೇ ಆಗಿದೆ. ಉದಾಹರಣೆ–ಯೋಗ, ಭಕ್ತಿ, ರಸ, ಧರ್ಮ (ಸಾಹಿವಿ. ೧೨೧). [ ಗುಣ + ವ್ಯಾಪ್ತಿ ]

**ಗುಣವ್ರತ** (ನಾ). [ಜೈನ] ದಿಗ್ವಿರತಿ, ದೇಶವಿರತಿ, ಅನರ್ಥದಂಡವಿರತಿ ಎಂದು ಮೂರು ಪ್ರಕಾರವಾಗಿರುವ ಒಂದು ವ್ರತ: ದೆಸೆಗಳ ಮೇರೆಯಂ ನಿಱಿಸಿ ಪೋಪುದುಂ . . . ಅಸ್ತ್ರದಂಡ ವಿಷಪಾಶ ವಿಶೇಷ ಮನೀಯದಿರ್ಪುದೊಂದೆಸಕಮುಮೆಂದು ಮೂಱು ತೆಱದಿಂ ನೆಗೞ್ದಿರ್ದ ಗುಣವ್ರತಂಗಳಂ (ಆದಿಪು. ೬-೮). [ಗುಣ + ವ್ರತ ]

**ಗುಣಶಾಲಿನಿ** (ನಾ).=ಗುಣವಂತೆ: ಅಂಥ ಗುಣಶಾಲಿನಿಯಾಗಿದ್ದದ್ದರಿಂದ . . . ಅವನನ್ನು ಪೂಜ್ಯಭಾವದಿಂದ ಕಾಣುತ್ತಿದ್ದಳು (ಬಂಕಿಮ. ೨೦೦).

[ ಸಂ. ಗುಣಶಾಲಿನೀ ]

**ಗುಣಶಾಸನ** (ನಾ). ಗುಣಸಹಿತವಾದ ನಿಬಂಧನೆ; ನೀತಿನಿಯಮಗಳ ಕಟ್ಟುಪಾಡು: ಗುಣಶಾಸನದಿನಾಳ್ವರ ಸತ್ರಕ್ಕೆ ಮತ್ತನ್ನೂಱು ಮನೆಯೆರಡು (ಎಇ. XX, ೬-೩೦; 1012); ಯಿಂತೀ ಪದಿನಾಲ್ಕು ಮತಕ್ಕೆಯ್ಯು [ಗು]ಣಶಾಸನಮಾಗಿಯಾಚಾರ್ಯ್ಯಂಗೆ ಬೆಸಗೆಯ್ದು ಸುಖ ಉ[೦]ಬರು (ಸೌಇಇ. XX, ೯೯-೭; 1128). [ ಗುಣ + ಶಾಸನ ]

**ಗುಣಶ್ರೇಣಿನಿರ್ಜರೆ** (ನಾ). [ ಜೈನ ] ಕರ್ಮಗಳನ್ನು ನಾಶಪಡಿಸುವ ವಿಧಿಗಳಲ್ಲಿ ಒಂದು: ಉೞಿದ ಕರ್ಮಂಗಳಂ ಸ್ಥಿತ್ಯನುಭಾಗಕಾಂಡಕಘಾತ ಪ್ರದೇಶ ಗುಣಶ್ರೇಣಿ ನಿರ್ಜರಾದಿ ವಿಧಿಯಿನನುಕ್ರಮಂ ಕಿಡಿಸುತ್ತುಂ (ಆದಿಪು. ೧೦-೧೪ ವ). [ ಗುಣಶ್ರೇಣಿ೦ + ನಿರ್ಜರೆ ]

**ಗುಣಸಂಗಿ** (ನಾ). ಸತ್ತ್ವರಜಸ್ತಮಂಗಳೆಂಬ ಮೂರುಗುಣಗಳ ಸಂಪರ್ಕ ಹೊಂದಿರುವವನು; ಸಂಸಾರಿ: ಲಿಂಗದಾದಿಯ ಅಂತುವನಱಿದಡೆ ಗುಣಸಂಗಿಯಲ್ಲದೆ ಯೋಗಿಯಲ್ಲ (ಮೋಳಿಮಾ. ೪-೧೧).

[ ಸಂ. ಗುಣಸಂಗಿನ್ ]

**ಗುಣಸಂಧಿ** (ನಾ). [ ವ್ಯಾಕ ] ಸಂಸ್ಕೃತ ಸ್ವರಸಂಧಿಗಳಲ್ಲಿ ಒಂದು: ಅ ಆ ಕಾರಗಳಲ್ಲಿ ಒಂದರ ಮುಂದೆ, ಇಕಾರವಾಗಲಿ ಈಕಾರವಾಗಲಿ ಬಂದರೆ ಏಕಾರವೂ, ಉಕಾರವಾಗಲಿ ಊಕಾರವಾಗಲಿ ಬಂದರೆ ಓಕಾರವೂ, ಋಕಾರವಾಗಲಿ ೠಕಾರವಾಗಲಿ ಬಂದರೆ ಅರ್ ಎಂಬುದೂ ಎರಡಕ್ಕೂ ಆದೇಶವಾಗಿ ಬರುತ್ತವೆ. ಇದಕ್ಕೆ ಗುಣಸಂಧಿಯೆಂದು ಹೆಸರು (ಮಧ್ಯಮ. ೧೭೧). [ ಗುಣ + ಸಂಧಿ ]

**ಗುಣಸಂಪನ್ನ** (ಗು). ೧. ಒಳ್ಳೆಯ ಗುಣಗಳಿಂದ ಕೂಡಿರುವ: ಅವನು ಗುಣಸಂಪನ್ನ ವ್ಯಕ್ತಿ (ರೂಢಿ).(ನಾ). ೨. ಒಳ್ಳೆಯ ಗುಣಗಳಿಂದ ಕೂಡಿರುವವನು: ಅವನು ಗುಣಸಂಪನ್ನ (ರೂಢಿ). [ ಗುಣ + ಸಂಪನ್ನ ]

**ಗುಣಸಂಪನ್ನತೆ** (ನಾ). ಒಳ್ಳೆಯ ಗುಣಗಳಿಂದ ಕೂಡಿಕೊಂಡಿರುವಿಕೆ: ತಾನು ಬಯಸಿದ ಪುರೋಭಿವೃದ್ಧಿಗೆ ಆ ಒಂದು ಗುಣಸಂಪನ್ನತೆಯೆ ಮುಖ್ಯ ಕಾರಣವಾಗಿತ್ತು (ಪುನರು. ೩೪೦). [ ಸಂ. ಗುಣಸಂಪನ್ನತಾ ]

**ಗುಣಸಮವಾಯ** (ನಾ). ಗುಣಗಳ ಸಮೂಹ; ಗುಣವ್ರಾತ: ಇದು ಸಮವಸರಣ ಸಂಸಂಗದಿನಲ್ಲದೊಡೆ . . . ಆಗದು ಸಕಲತರ್ಪುಭಿನ್ನ ಗುಣಸಮವಾಯಂ (ಚಂದ್ರಪು. ೨-೭೪). [ ಗುಣ + ಸಮವಾಯ ]

**ಗುಣಸಾಂದ್ರ** (ನಾ). ಒಳ್ಳೆಯ ಗುಣಗಳಿಂದ ತುಂಬಿರುವವನು; ಪರಿಪೂರ್ಣನಾದವನು: ಶಪಥವಗೈದುದನಪಲಾಪಿಸುವುದಿದು ನೃಪಧರ್ಮವೇನೋ ನರೇಂದ್ರಾ ಕೃಪಾಕರ ಗುಣಸಾಂದ್ರ (ಶಾಕುಂತ. ೭೮ ಅಡಿಟಿ).

[ ಗುಣ + ಸಾಂದ್ರ ]

**ಗುಣಸಾಗರ** (ನಾ). ಒಬ್ಬಾತನ ಹೆಸರು: ಇಬ್ಬು ಇತ್ತಮಣ್ಣ ಆಜಿಲೂರ ಗನಾವಟಿ ಗುಣಸಾಗರ ತಮ್ಮಡಿಗಳ್ಗೆ ಕೊಟ್ಟ (ಎಕ. IV, ಗುಂಡ್ಲುಪೇ. ೮೮-೮; ಸು. 750). [ ಗುಣ + ಸಾಗರ ]

**ಗುಣಸಾಮ** (ನಾ). (ಮೃದುವಾದ ಮಾತೇ ಮೊದಲಾದ) ಗುಣಗಳಿಂದ ಕೂಡಿದ ಸಾಮೋಪಾಯ: ಜೀಯ ಸೋಲಳು ಶಶಿವದನೆ ಗುಣಸಾಮದಲಿ (ಕುವ್ಯಾಅ. ೨೨-೧೪). [ ಗುಣ + ಸಾಮ ]

**ಗುಣಸಾಸನ** (ನಾ). = ಗುಣಶಾಸನ: ಮಠದೊಳ್ ಮುಖ್ಯರಾಗಿರ್ಪ್ಪ ತಪಸ್ವಿಗೆ ಗುಣಸಾ(ಶಾ)ಸನಂ ಬ್ರಹ್ಮಚರ್ಯಂಗೆಟ್ಟ ತಪಸ್ವಿಯರಿರಲಾಗದು (ಎಇ. XV, ೩೩೨-೩೪; 1028). [ ಗುಣ + ಸಾಸನ ]

**ಗುಣಸೇನ** (ನಾ). ಒಬ್ಬಾತನ ಹೆಸರು: ಶ್ರೀ ಅಗೞಿಯ ಮೋನಿ ಗುರವರ ಶಿಷ್ಯ ಕೊಟ್ಟುರದ ಗುಣಸೇನ ಗುರವರ್ನೋನ್ತು ಮುಡಿಪ್ಪಿದಾರ್ (ಎಕ. II, ೮-೩; ಸು. 700). [ ಸಂ. ]

**ಗುಣಸೌಂದರ** (ನಾ). [ ಛಂದ ] ಒಂದು ಅಕ್ಷರವೃತ್ತದ ಹೆಸರು; ಪ್ರತಿಯೊಂದು ಪಾದದಲ್ಲಿಯೂ ಹದಿನಾಲ್ಕು ಅಕ್ಷರಗಳಿರುವ ಶಕ್ವರೀಛಂದಸ್ಸಿನ ಒಂದು ವೃತ್ತ: ಶೀತಕರ ದ್ವಿತಯಂ ಕೃಶಾನುಮರುಲ್ಲಗೋಪೇತಮಗೇಂದ್ರದೊಳಾಗೆ ವಿಶ್ರಮಣಂ . . . ಸಾತಿಶಯೋಕ್ತಿಯಿನಾದೊಡಂ ಗುಣಸೌಂದರಂ [ಪಾಠಾಂ. ಸಾತಿಶಯೋಕ್ತಿಯೆ ಸುಂದರಂ ಬಗೆ ಸುಂದರೀ ] (ಛಂದೋಂಬು. ೨-೧೫೦). 'ಸುಂದರವೃತ್ತ' ಪರಾ.

[ ಸಂ. ]

**ಗುಣಸ್ತವ** (ನಾ). ಗುಣಗಳ ಹೊಗಳಿಕೆ; ಗುಣಗಳನ್ನು ಕುರಿತ ಸ್ತೋತ್ರ: ಫಣಿಪ್ರಭುಗಮೆತ್ತಮತ್ತಳಗಮಲ್ತೆ ರೂಪಸ್ತವಂ ಗುಣಸ್ತವಮದಾತ್ತವೃತ್ತ ಭವದೀಯ ವಸ್ತುಸ್ತವಂ ಗುಣಾಗುಣ ವಿವೇಕಮೂಕರ್ ಅತಿಮೂರ್ಖರ್ (ಆದಿಪು. ೧೩-೯೦); ಸೌಧರ್ಮೇಂದ್ರಂ ವಸ್ತುಸ್ತವಂ ಗುಣಸ್ತವಂ ಮಾಡಿ (ಮಲ್ಲಿಪು ೧೨-೧೮೯); ಅನೇಕ ವಸ್ತುಸ್ತವ ರೂಪಸ್ತವ ಗುಣಸ್ತವಂಗಳಿಂ ಸ್ತುತಿಯಿಸಿ (ಪುಷ್ಪಪು. ೧೪-೪೯ ವ). 'ರೂಪಸ್ತವ' ಪರಾ. [ ಗುಣ + ಸ್ತವ ]

**ಗುಣಸ್ಥಾನ** (ನಾ). [ ಜೈನ ] "ಮೋಹ ಹಾಗೂ ಯೋಗಗಳ ನಿಮಿತ್ತದಿಂದ ಆತ್ಮನ ದರ್ಶನ, ಜ್ಞಾನ ಮತ್ತು ಚಾರಿತ್ರ ರೂಪಗುಣಗಳ ಕ್ರಮವಿಕಾಸ ರೂಪ ಅವಸ್ಥೆಗಳಂ" (ಜೈನಪ. ೩೭೧): ಗುಣಸ್ಥಾನ ಜೀವಸ್ಥಾನ ಮಾರ್ಗಣಾಸ್ಥಾನಂಗಳುಮಂ . . . ಕೇಳ್ದು ತ್ರಿಜ್ಞಾನಧರಂ

ಕ್ಷಾಯಿಕ ಸಮ್ಯಕ್ತ್ವಾದಿ ಗುಣಸಮನ್ವಿತನಾಗಿ ಪೋದಂ (ಚಾವುಂಪು. ೭೪); ಸಕಲ ಬದ್ಧಾಶ್ರವ ನಿರೋಧದಿನಯೋಗಿಕೇವಲಿ ಗುಣಸ್ಥಾನಮಂ ಪೊರ್ದಿ (ಪಂರಾಮಾ. ೧೬-೭೯ ವ). [ ಗುಣ + ಸ್ಥಾನ ]

**ಗುಣಸ್ಥಾನಿ** (ನಾ). [ ಜೈನ ] ಗುಣಸ್ಥಾನದಲ್ಲಿ ಇರುವವನು: ಗುಣಸ್ಥಾನಿಗಳಪ್ರಮತ್ತರುಪದೇಶಕರೀಗೆವಂಗೊಳ್ಳಿನೋಳಿಯಂ (ಜೀವಸಂ. ೨-೪). [ ಸಂ. ಗುಣಸ್ಥಾನಿನ್ ]

**ಗುಣಸ್ವಭಾವಾಖ್ಯಾನ** (ನಾ). [ ಕಾವ್ಯಮೀ ] ಸ್ವಭಾವೋಕ್ತಿಯ ನಾಲ್ಕು ಪ್ರಕಾರಗಳಲ್ಲಿ ಒಂದು; ಒಂದು ವಸ್ತುವಿನ ಸ್ವಭಾವಸಿದ್ಧವಾದ ಗುಣವನ್ನು ಹೇಳುವುದು: ಗುಣಸ್ವಭಾವಾಖ್ಯಾನಕ್ಕೆ ॥ ಮನದೊಳ್ ಮುದಮಂ ಕೋಮಳತನುವಿನೊಳತ್ಯಂತ ರೋಮಹರ್ಷಣಮಂ ಕಣ್ಗೆ ನಿಸಿನಿಸಾಮಿಲನಮಂ ಜನಿಯಿಸುತುಂ ಪ್ರಿಯೆಯ ಸೋಂಕು ಪಡೆದುದಲಂಪಂ (ಕಾವ್ಯಾವ. ೭೧೨).

[ ಗುಣ + ಸ್ವಭಾವ + ಆಖ್ಯಾನ ]

**ಗುಣಹೀನ** (ನಾ). ಒಳ್ಳೆಯ ಗುಣವಿಲ್ಲದವನು: ಗುಣಹಾನಿಯಿಂದ ಧೋಗತಿ ಗುಣದಿಂ ಸ್ವರ್ಗಾಪವರ್ಗ ಸುಖಮಕ್ಕುಮೆನಲ್ ಗುಣಹೀನನ ಸಿರಿಯಿಂದಂ ಗುಣಿಗಳ ಬಡತನಮೆ ನಾಡೆಯುಂ ಲೇಸಲ್ತೆ (ಪಂರಾಮಾ. ೯-೧೮೩); ಗುಣಹೀನನೆನಿಪ ಕಮಠನ ಪಣಮುಂ ಕುಲಮುಂ ಮಹೋನ್ನತಿಯನಿಂತೇಕಕ್ಷಣಮಿರಿಸಲಾಱವದಱಿಂ ಗುಣಮೆ ಮಹೋನ್ನತಿಗೆ ಕಾರಣಂ ಪೇೞುತುಂಟೇ (ಪಾರ್ಶ್ವಪು. ೪-೩೧); ನೆಲೆಯಿಲ್ಲದವನವನಿಗಾಂ ನಿನ್ನ ಕೊಡಲು ನೀನೊಲಿದೆಯಾ ಗುಣಹೀನನಾತನೆನ್ನೊಳು ಸೊಕ್ಕಿ ಮಲೆತು ಗರ್ವಿಸಿದನು (ವೀಶ್ಮಪು. ೩-೨-೩೩). [ ಗುಣ + ಹೀನ ]

**ಗುಣಹೀನೆ** (ನಾ). ಒಳ್ಳೆಯ ಗುಣವಿಲ್ಲದವಳು: ಗುಣಹೀನೆ ಧರ್ಮಹಾನಿಯ ನೆನೆಸದೆ . . . ಪೊಟಲಿಂದತಿದಾರುಣಮತಿ ಪೊಱಮಡಿಸಿ ಕಳೆದಳಾ ಯತಿಪತಿಯಂ (ಪಂರಾಮಾ. ೨-೪೨). [ ಸಂ. ಗುಣಹೀನಾ ]

**ಗುಣಾಂಕ** (ಗು). ೧. ಹೆದೆಯೇರಿಸಿದ: ಕಣೆದೊಟ್ಟು ಹರಿಣಗಣದೊಳ್ ಮಣಿಯಿಸಲಾರೆಂ ಗುಣಾಂಕ ಚಾಪವನು (ಶಾಕುಂತ. ೨೧-೩೬). (ನಾ). ೨. ಒಳ್ಳೆಯ ಗುಣಗಳಿಂದ ಪ್ರಸಿದ್ಧನಾದವನು; ಸದ್ಗುಣಗಳಿಂದ ಖ್ಯಾತಿಯನ್ನು ಪಡೆದವನು: ಅಯ್ಯ ಬಿನ್ನಹವೀ ಗುಣಾಂಕನ ಮಹಿಮೆಯಂ ಕೇಳ್ದಱಿಯಿರೇ ಮುನ್ನ (ಬಸಪು. ೨೬-೧೬). ೩. "(ಪರೀಕ್ಷೆಯಲ್ಲಿ ಯೋಗ್ಯತೆಯನ್ನು ಸೂಚಿಸಲು ಕೊಡುವ)ಗುಣಾಂಕ" (Mark. ಇಂಕನಿ). [ ಗುಣ + ಅಂಕ₂ ]

**ಗುಣಾಂಕುಶ** (ನಾ). ಒಬ್ಬಾತನ ಹೆಸರು: ಮಹಾಸನ್ಧಿವಿಗ್ರಹ ಪದವೀ ಪ್ರತಿಷ್ಠಿತಂ ಸಮಸ್ತ ಶಾಸ್ತ್ರ ಪಾರಗಂ ಶ್ರೀಮತ್ಸನ್ಧಿವಿಗ್ರಹಿ ಗುಣಾಂಕುಶೇನ (ಕಇಳ. ೨೪-೮-೮೩; 9ನೆಯ ಶತ). [ ಸಂ. ]

**ಗುಣಾಂತರ** (ನಾ). ಬೇರೊಂದು ರೀತಿಯ ಗುಣ; ಅನ್ಯಗುಣ: ಪರಿಹರಿಸಿ ಜಾತರೂಪೋತ್ಕರಮಂ ಮತ್ತೊಂದು ಜಾತರೂಪಮನರಸಂ ಧರಿಯಿಸಿದಂ ನಾಡೆ ಗುಣಾಂತರಮಱಿವರದೆಂತು ನೆಗಟ್ಟೊಡಂ ಲೇಸಲ್ತೇ (ಚಂದ್ರಪು. ೨-೩೯). [ ಸಂ. ]

**ಗುಣಾಕಾರ** (ನಾ). ೧. [ ಗಣಿತ ] ಒಂದು ಸಂಖ್ಯೆಯನ್ನು ಮತ್ತೊಂದು ಸಂಖ್ಯೆಯಿಂದ ಗುಣಿಸುವುದು: ಗುಣಾಕಾರದಲ್ಲಿಯೂ ಬಾಯಿಲೆಕ್ಕದಲ್ಲಿಯೂ ದಾದಾಭಾಯಿ ಚತುರರಾಗಿದ್ದರು (ಸ್ವಾವೀರ. ೧); ಮೊದಲು ಒಂದಂಕಿಯ ಗುಣಾಕಾರ ಮಾಡಿಸಿ, ಅನಂತರ ಎರಡಂಕಿಯ ಗುಣಾಕಾರ ಆರಂಭಿಸಿದರೆ ಮಕ್ಕಳು ಸುಲಭವಾಗಿ ತಿಳಿದುಕೊಳ್ಳುವರು (ಶಿಕ್ಷದ. ೨೧೮). ೨. ಸಲೆ; ಚದರ: ಸಲೆ ಅಥವ ಗುಣಾಕಾರ ಅಥವ ಕ್ಷೇತ್ರಫಲ (ಭೂಮಿಅ. ೫೬). ೩. (ಆಲಂ) ಹೆಚ್ಚಳ; ಆಧಿಕ್ಯ: ದೇವರ ಸನ್ನಿಧಿಯಲ್ಲಿ ಗುಣಾಕಾರವೇ ಹೊರತು ಭಾಗಾಕಾರವಿಲ್ಲವೇ ಇಲ್ಲ (ಮಾರ್ಗದ. ೧೬).

**ಗುಣಾಕಾರ ಹಾಕು** = ಮನಸ್ಸಿನಲ್ಲಿ ಲೆಕ್ಕಾಚಾರ ಹಾಕಿಕೊಳ್ಳು; ಎಣಿಸು; ಆಲೋಚಿಸು: ಸರಿತಪ್ಪುಗಳನ್ನು ಗುಣಾಕಾರಹಾಕುತ್ತಾ ಕುಳಿತುಕೊಳ್ಳುವುದಕ್ಕೆ ಇದು ಸಮಯವಲ್ಲ (ಶ್ರೀರಾಯ. ೧೯೯); ನಿಮ್ಮೊಡನೆ ಏನೇನೋ ಹೇಳಬೇಕೆಂದು, ಮಾತಾಡಬೇಕೆಂದು ಮನಸ್ಸಿನಲ್ಲಿಯೇ ಗುಣಾಕಾರ ಹಾಕಿಕೊಂಡು ಬರುತ್ತೇನೆ (ಸುವಸಂ. ೧೨). ತಮಗಾಗುವ ನಷ್ಟವನ್ನು ಗುಣಾಕಾರ ಹಾಕಿಕೊಂಡು (ಮುನಿಮಾ. ೦೦೪). [ ಗುಣ + ಆಕಾರ ]

**ಗುಣಾಕೃತಿ** (ನಾ). ನೂಲಿನ ಆಕಾರ; ತಂತಿನರೂಪ: ಪಂಡಿತೋತ್ತಮರ ಗುಣಂ ಗುಣಾಕೃತಿಯಿನಿರ್ಕೆ ಮದೀಯಮನೋಮ್ಮಣಾಳದೊಳ್ (ಚಂದ್ರಪು. ೧-೩೬). [ ಗುಣ + ಆಕೃತಿ ]

**ಗುಣಾಗಮ** (ನಾ). ಗುಣಗಳ ಒದಗಿಂವಿಕೆ,- ಸೇರುವಿಕೆ: ಪರರಗುಣಾಗಮವ ಪತಿಕರಿಸಿ ನುಡಿವವನೀಗಳಿನ ಯುಗದಾತನೇ (ಕುಮಾ.ದ್ರೋ. ೧-೩೬). [ ಗುಣ + ಆಗಮ ]

**ಗುಣಾಢ್ಯ** (ನಾ). ೧. ಗುಣವಂತ: ಅಮರೇಜ್ಯಂ ಕುಜಗೇಹದೊಳ್ ನಿಲೆ . . . ತ್ಯಾಗಶೀಲ ಮಹೌದಾರ್ಯಗುಣಂ ಗುಣಾಢ್ಯನೆನಿಕುಂ (ಜಾತತಿ. ೧೬-೨೬). ೨. ಒಬ್ಬ ಕವಿಯ ಹೆಸರು; ಪೈಶಾಚೀ ಭಾಷೆಯ ಬೃಹತ್ಕಥೆಯ ಕರ್ತೃ: ಮಾನವಲೋಕದೊಳ್ ಪುಟ್ಟಿ ಗುಣಾಢ್ಯನೆಂಬ ಸತ್ಕವಿಯಾಗಿ . . . ಪೈಶಾಚಕ ಭಾಷೆಯೊಳ್ ಬೃಹತ್ಕಥೆಗಳಂ ಮಾಡಿ (ಪಂಚತಂ. ೧೨-೧೮); ಗುಣಾಢ್ಯನ ಬೃಹತ್ಕಥೆಯನ್ನು ಪೈಶಾಚಿ ಭಾಷೆಯಿಂದ ಸಂಸ್ಕೃತಕ್ಕೆ ಅನುವಾದಿಸಿದ್ದು ಬಹು ದೊಡ್ಡ ಸಾಹಿತ್ಯಕಾರ್ಯ (ಕಸಾಚ. ೧೬). ೧, ೨: ನವಭೂತ ಭಾಷೆಯಿಂ ಕುಱುಪುವೇಟ್ಟು ತಾಮಡ್ಡ ಗವಿತೆಯಂ ಮಾಡಿ ಮಹಾ ವ್ಯವಸಾಯಂ ಗೆಯ್ವ ಮರುಳ್ಗವಿಗಳ್ಮಾವೇಂ ಗುಣಾಢ್ಯರಂ ಮಸುಳಿಸರೇ (ಗದಾಯು. ೪-೪೦).

[ ಗುಣ + ಆಢ್ಯ ]

**ಗುಣಾಢ್ಯೆ** (ನಾ). = ಗುಣವಂತೆ: ಅವಳೆಂಥ ಗುಣಾಢ್ಯೆ, ಪರೋಪಕಾರಿ ಗೊತ್ತೆ (ಪುನರು. ೨೪೦). [ ಗುಣ + ಆಢ್ಯೆ ]

**ಗುಣಾಣು** (ನಾ). ಜೀವಕೋಶದಲ್ಲಿರುವ ವಂಶವಾಹಿಯಾದ ಗುಣಗಳನ್ನುಂಟುಮಾಡುವ ಅಣು: ಮೊದಲು ಎರಡನೆಯ ಹೆಜ್ಜೆಗಳ ಮಧ್ಯೆ ಜೀವಕೋಶದ ಸೂಕ್ಷ್ಮ ಅಂಗವಾದ ವಂಶವಾಹೀ ಅಣು ಅಥವಾ ಗುಣಾಣುವು ಸೇರಿಕೊಂಡಿರುತ್ತದೆ (ಜಗತ್ತು. ೧೬೮). [ ಗುಣ + ಅಣು ]

**ಗುಣಾತೀತ** (ನಾ). ಗುಣವನ್ನು ಬಿಟ್ಟಿರುವಿಕೆ; ಗುಣಹೀನತೆ: ತಾನೀಗಳೀ ತುರಗಮಂ ಪಿಡಿದು ಕಟ್ಟಿ ತಪ್ಪಿದೆ ಗುಣಾತೀತಮಂ ಕ್ಷಮಿಸು (ಜೈಮಿಭಾ. ೧೬-೪೯). [ ಗುಣ + ಅತೀತ ]

**ಗುಣಾಧಿಕ** (ನಾ). ಒಳ್ಳೆಯ ಗುಣದಿಂದ ಹಿರಿಯನಾದವನು; ಶ್ರೇಷ್ಠನಾದವನು: ಸನ್ಯಾಸನವಿಧಿ ಇನ್ತು ಮುಡಿಪ್ಪಿದಾರ್ ನಾಗಸೇನಮನಘ ಗುಣಾಧಿಕಂ (ಎಕ. II, ೩೪-೨; ಸು. 700); ಬಲ್ಲಿಂದದೊಳಂ ಪೋಲಿಸುವಲ್ಲಿ ಗುಣಾಧಿಕರೊಳಂತೆವೋಲೆನಲಕ್ಕುಂ (ಶಮದ. ೬೦ ಪ್ರಯೋ).

[ ಗುಣ + ಅಧಿಕ ]

**ಗುಣಾಧೇಯ** (ನಾ). ಒಳ್ಳೆಯ ಗುಣಕ್ಕೆ ಆಶ್ರಯವಾಗಿರುವವನು; ಗುಣವಂತ: ನಮಗೀ ಸರಯುಮಿ ಮಾವನೋದಿಸಿದುಪಾಧ್ಯಾಯಂ ಗುಣಾಧೇಯನುತ್ತಮಂ (ಸುಕುಮಾ. ೪-೨೯).

[ ಗುಣ + ಆಧೇಯ ]

**ಗುಣಾನುರೂಪ** (ಗು). ೧. ಗುಣಕ್ಕೆ ತಕ್ಕ,-ಉಚಿತವಾದ. (ನಾ). ೨. [ ವ್ಯಾಕ ] ಅನ್ವರ್ಥನಾಮದಲ್ಲಿ ಒಂದು ಬಗೆ; ಒಬ್ಬ ವ್ಯಕ್ತಿಯ ಗುಣವನ್ನು ನೋಡಿ ಇಟ್ಟಿರುವ ಹೆಸರು: ಅನ್ವರ್ಥನಾಮಂ ಗುಣಾನುರೂಪಮೆಂದುಂ, ಅರ್ಥಾನುರೂಪಮೆಂದುಮಿರ್ತೆಱನಾಗಿರ್ಪುದು (ಶಮದ. ೭೬ ವೃತ್ತಿ). [ ಗುಣ + ಅನುರೂಪ ]

**ಗುಣಾಭಿರಾಮ** (ಗು). ಒಳ್ಳೆಯ ಗುಣಗಳಿಂದ ಸುಂದರನಾದ, –ಮನೋಹರನಾದ : ನಿತ್ಯಾನಂದ ಗುಣಾಭಿರಾಮ ಸುತನಂ ಕಂಡುರ್ಬಿ (ಹಮ್ಮಿರ. ೨-೨೪). [ ಗುಣ + ಅಭಿರಾಮ ]

**ಗುಣಾರಿ** (ನಾ). ಹಳ್ಳಿಗಳಲ್ಲಿ ಪಟೇಲ ಮತ್ತು ಶಾನುಭೋಗರಿಗೆ ಸಹಾಯಕನಾಗಿರುವ ನೌಕರ ; ಗಣಕ : (ಕ). [ ? ]

**ಗುಣಾವಲಂಬಿ** (ಗು). ಗುಣಕ್ಕೆ ಸಂಬಂಧಿಸಿದ, –ಸೇರಿದ : ಗುಣಕ್ಕೆ ಸಂಬಂಧಿಸಿದ . . . ಗುಣಸಂಬಂಧಿ ; ಗುಣಾವಲಂಬಿ (Qualitative. ಇಂಕನಿ). [ ಸಂ. ಗುಣಾವಲಂಬಿನ್ ]

**ಗುಣಾಷ್ಟಕ** (ನಾ). ೧. [ ಜೈನ ] ಮುಕ್ತನಾದ ಜೀವನಿಗಿರುವ ಸಮ್ಯಕ್ತ್ವ, ಕೇವಲ ಜ್ಞಾನ, ಕೇವಲ ದರ್ಶನ, ಅನಂತವೀರ್ಯ, ಸೂಕ್ಷ್ಮತ್ವ, ಅವಗಾಹನತ್ವ, ಅಗುರುಲಘುತ್ವ, ಅವ್ಯಾಬಾಧತ್ವ ಎಂಬ ಎಂಟು ಗುಣಗಳು : ಉಪಶಿಷ್ಟಗುಣಾಷ್ಟಕರಾದನಶ್ವರಶ್ರೀವನಿತೇಶರೀಗೆಮಗೆ . . . ಸೌಖ್ಯಸಿದ್ಧಿಯಂ (ಚಂದ್ರಪು. ೧-೨). ' ಅಷ್ಟಗುಣ ' ಪರಾ. ೨. [ ವಿಶಿಷ್ಟಾ ] ಪರಮಾತ್ಮನಿಗಿರುವ ಅಪಹತಪಾಪ್ಮತ್ವ, ವಿಜರತ್ವ, ವಿಮೃತ್ಯುತ್ವ, ವಿಶೋಕತ್ವ, ವಿಜಿಘತ್ಸತ್ವ, ಅಪಿಪಾಸತ್ವ, ಸತ್ಯಕಾಮತ್ವ, ಸತ್ಯಸಂಕಲ್ಪತ್ವ ಎಂಬ ಎಂಟು ಗುಣಗಳು : ಪರ ಎಂಬುದು ಮೊದಲನೆಯ ವ್ಯೂಹ, ಈ ವ್ಯೂಹದಲ್ಲಿ ಪರಮಾತ್ಮನು ಗುಣಾಷ್ಟಕ ವಿಶಿಷ್ಟನಾಗಿ . . . ವಿರಾಜಿಸುತ್ತಿರುವನು (ಭಾರದ. ೨೬೨).

[ ಗುಣ + ಅಷ್ಟಕ ]

**ಗುಣಿ**$_1$ ' ಕುಟಿ$_2$ ' ನೋ.

**ಗುಣಿ**$_2$ (ನಾ). (ಉಕ) ಸಣ್ಣಕೋಲು ; " ಕೈಯಲ್ಲಿ ಹಿಡಿಯುವ ಪುಟ್ಟಕೋಲು " (ಗಂಗಾಗೌ. ಕೋಶ) ; ಈ ಜಾತಿಯ ಗಂಡಸರೂ ಹುಡುಗರೂ ಕೈಯೊಳಗೆ ಯರಡೆರಡು ಕಟ್ಟಿಗೇ ಗುಣಿಗಳನ್ನು ತಕ್ಕೊಂಡು ಬಸವಣ್ಣನ ಗುಡಿಗೆ ಹೋಗಿ ಗುಣಿಗಳನ್ನು ದೇವರಮುಂದೆ ಇಟ್ಟು ನಮಸ್ಕಾರ ಮಾಡುವರು(ಕಥಾಗ. ೦೭೯); ದೊಡ್ಡ ಲಾಲಸಾಹೇಬ . . . ಕೈಯಲ್ಲೊಂದು ಕಾಗದದ ನಿಶಾನೆ, ' ಗುಣಿ ' ಹಿಡಿದುಕೊಂಡು ಪ್ರತಿಸಲದ ಮೊಹರಮ್ಮಿನಲ್ಲಿ ಹೆಜ್ಜೆ ಆಡುತ್ತಿರುವಂತೆ ಈ ಸಲವೂ ಆಡುತ್ತಿದ್ದಾನೆ (ಗಂಗಾಗೌ. ೧೨೦). ' ಗುಣುಕು ' ಪರಾ. [ ದೇಜ ತಮಿ. ಕುಣಿಲ್ ]

**ಗುಣಿ**$_3$ (ನಾ). ಒಂದು ಬಗೆಯ ಗಿಡ : " ಗುಣಿಯೆನಲ್ ಗೊಣಗಕ್ಕು " (ಮಂಗರಾ. ೪೨-೩೭). [ < ಸಂ. ಕುಣಿ ]

**ಗುಣಿ**$_4$ (ನಾ). ೧. ಗುಣವನ್ನು ಉಳ್ಳವನು ; ಗುಣವಂತ : ಗುಣಿಗಳ ನೆಱೆ ಪೊರ್ದದೆ ನಿರ್ಗುಣರಂ ಪೊರ್ದುವೆ (ಗದಾಯು. ೯-೯) ; ಚನ್ನಿ ಕಬ್ಬೆ ಸಜ್ಜನನುತೆ ಮಾನಿ ದಾನಿ ಗುಣಿ ಮಿಕ್ಕ ಪತಿಭ್ರತೆ ಸೀಲದಿಂದೆ ಮೇದಿನಿ ಸುತೆಗಂ ಮಿಗಿಲು (ಎಕ. II, ೦೯೩-೦೯೦ ; 1131) ; ಭಕ್ತಿತ್ರಯವಿನಿಶ್ಚಲ ಗುಣಿಯೆ ಸುಜನ ಶಿರೋಮಣಿಯೆ (ಬಸಪು. ೭೦-೭೦). ೨. ಹೆದೆಯನ್ನು ಉಳ್ಳುದು ; ಬಿಲ್ಲು. [ ಸಂ. ಗುಣಿನ್ ]

**ಗುಣಿಕಟ್ಟು** (ನಾ). ಪಾತಿ ; ಆಲವಾಲ : ಮಂದಾರಮಾಲೆಯು ಬಾಲ್ಯದಿಂದ ತಾನೆ ಪಚ್ಚೆ ಪವಳಗಳ ಗುಣಿಕಟ್ಟುಗಳಂ ಮಾಡಿ (ಸೌಗಂಧಿ. ೪೪೪-೦೪).

[ ಗುಣಿ$_1$ (< ಕುಟಿ$_2$) + ಕಟ್ಟು$_2$ ]

**ಗುಣಿಕರ** (ನಾ). = ಗುಣಾರಿ (?) : ನಾಯಿಕರು ಗುಣಿಕರರು ಮುಂತಾಗಿಯಿದಕ್ಕೆ ಸಕ್ಷಿ (ಎಕ. VII, ಶಿವಮೊ. ೦೦೭-೪೨ ; 1576 ?). [ ? ]

**ಗುಣಿಕೆ**$_1$ ' ಗುಣುಕು ' ನೋ.

**ಗುಣಿಕೆ**$_2$ ' ಗುಳಿಗೆ$_1$ ' ನೋ.

**ಗುಣಿಕೆ**$_3$ (ನಾ). ಎಣಿಸುವಿಕೆ ; ಲೆಕ್ಕ ಮಾಡುವಿಕೆ : ಆದರೆ ಆತನ ಎಣಿಕೆಗಳ ಗುಣಿಕೆ ಎತ್ತಿಕೊಳ್ಳುತ್ತಲೇ ತಪ್ಪಿಹೋಗಿತ್ತು (ನಡದಾ. II, ೮೮೩).

[ < ಗುಣಿಸು + – ಇಕೆ ]

**ಗುಣಿಗ** (ನಾ). ಹೊಲ ಗದ್ದೆಗಳನ್ನು ಅಳೆಯುವ ಒಂದು ಪ್ರಮಾಣ : ಗುಣಿಗನ ಒನ್ದು ಮತ್ತಲ್ಗೆ ಪಿರಿಯ ಪಾನೆಯೊಳೆರಡುಪಾನೆ ಬತ್ತವ . . . ಕೊಟ್ಟೋರ್ (ಎಕ. VIII, ಸೊರಬ. ೮೨-೧೨ ; 941) ; ಪಱಿಕಾರರ್ಗ್ಗೆ ಗಟ್ಟಿದ್ದ ಗುಣಿಗನ ಮತ್ತರು ಮೂಱು (ಎಕ. VII, ಶಿವಮೊ. ೧೦-೫೭ ; 1085 ?). [ ? ]

**ಗುಣಿಗಣ್ಣು** ' ಕುಟಿಕಣ್ ' ನೋ.

**ಗುಣಿಗಲ್ಲ** (ನಾ). ಕುಳಿ ಇರುವ ಗಲ್ಲ ; " ಗುಂದಿಗಲ್ಲ " (ಜಾನಕೋ. ೪೯)

[ ಗುಣಿ$_1$ (< ಕುಟಿ$_2$) + ಗಲ್ಲ$_1$ ]

**ಗುಣಿಗಲ್ಲು** (ನಾ). ಗುಂಡು ಗುಂಡಾದ ಕಲ್ಲು ; ದುಂಡಿ : ಹೊಲದಲ್ಲಿ ಸಣ್ಣ ಸಣ್ಣ ಗುಣಿಗಲ್ಲುಗಳಿದ್ದರೆ ಅವುಗಳನ್ನು ಆರಿಸಿ ಹೊಲದ ಮೋರೆಗಳಿಗಾಗಲಿ, ಹಳ್ಳದ ಮುಖಕ್ಕಾಗಲಿ ಹಾಕಬೇಕು (ಕೃಷಿಪ್ರ. ೪೦).

[ < ಗುಂಡುಗಲ್ ]

**ಗುಣಿತ** (ಗು). ೧. [ ಗಣಿತ ] ಗುಣಿಸಿದ. (ನಾ). ೨. [ ಗಣಿತ ] ಗುಣಾಕಾರ : " ಇಱು ಹತಿಸು ಭಾವಿಸುತ್ತನೆ ಗುಣಿತವು " (ಮಂಗರಾ. ೦೦೪-೦೦). ೩. [ ವ್ಯಾಕ ] ವ್ಯಂಜನಗಳಿಗೆ ಸ್ವರಗಳನ್ನು ಸೇರಿಸುವಿಕೆ. ' ಕಾಗುಣಿತ ' ಪರಾ. [ ಸಂ. ]

**ಗುಣಿಯಿಸು** ' ಗುಣಿಸಂ ' ನೋ.

**ಗುಣಿಶಾಸ್ತ್ರ** (ನಾ). ಹೆರಿಗೆಯಾದಮೇಲೆ ಮೈಲಿಗೆ ಹೋಗುವುದಕ್ಕಾಗಿ ಮಾಡುವ ಒಂದು ಸಾಂಪ್ರದಾಯಿಕ ವಿಧಿ : (ಎಸಮ್ಮ. IV, ೪).

[ ಗುಣಿ$_1$ (< ಕುಟಿ$_2$) + ಶಾಸ್ತ್ರ ]

**ಗುಣಿಶಿಗ** (ನಾ). ಒಂದು ಬಗೆಯ ಹಾವು (?) : ನರಿಯ ಕಣ್ಣಾಕೆ ಬಡದೇಹದಾಕೆ ಗುಣಿಶಿಗಕಣ್ಣಿನಾಕೆ ಯಿ ಮೂವರೂ ದಾರಿದ್ರರು (ಸಾಮುಲ. ೩೦-೮). [ < ಸಂ. ಘೋಣಸ ? ]

**ಗುಣಿಸು, ಗುಣಿಯಿಸು** (ಕ್ರಿ). ೧. [ ಗಣಿತ ] ಗುಣಾಕಾರಮಾಡು : ಗುಣಿಸ್ಯೆ ಮತ್ತಂ ಕಾದಿಸು ಪೂಜಿಸು ಉತ್ತಮದಿಂ ಪೇಟಿ ಮೊದಲ ಗುಣಕಾರಂಗಳ್ (ವ್ಯವಹಾ. ೦೦-೦೦) ; ಮನದ ಬಲುಹನನಱಿವರಾರದಱಿನಿತು ಸತ್ವಕದಪ್ಪಕರಿಯದು ಗುಣಿಸಿ ಕೂಡಲು ಸಮಕೆ ಬಾರವು (ಸಂಭಪ. ೭-೬೦) ; ಯಾವ ಸಂಖ್ಯೆಯನೇನು ಸೊನ್ನೆಯಿಂ ಗುಣಿಸಿದರೆ ಲಭ್ಯ ಸೊನ್ನೆ (ಪಾಂಚಜ. ೪೮-೯). ೨. ಎಣಿಸು ; ಲೆಕ್ಕಹಾಕು : ಆತಂ ಗಣನೆಯಿಂ ಗುಣಿಸಿ ನೋಡಲೆಲ್ಲಿಯುಮಾ ಯಿರ್ವರ್ಗಂ ಕೂಟವಿಲ್ಲದೆ ಬೇಱೊಂದು ಮಹಕೂಟಕ್ಕೆ ಲಗ್ನಮಾಗಿರಲು (ನಂಬಿರ. ೪-೬೯) ; ಜಪವ ಮಾಡುವೆನೆನುತ ಕಪಟಬುದ್ಧಿಯ ಗುಣಿಸಿ ಗುಪಿತದಲಿ ಕುಳಿತು ಫಲವೇನು (ಪುರಂದ. ೨-೫೦-೨) ; ಚಿಕ್ಕ ಪಂಡಿತರು ಹಾಗೆಯೇ ಕುಂಡಲಿಯನ್ನು ನೋಡಿ ಗುಣಿಸುವುದಕ್ಕೆ ಪ್ರಾರಂಭಿಸಿದರು (ಚಂಗಾಳ್ಳ. ೬೪). **ಗುಣಿಯಿಸು :** ೨. ಸಾದರಮಿಂತಾಱಡಿಯೊಳ್ ಗುಣಿಯಿಸೆ ಶೋಧಿಸೆ ಲಘು ನೂಱಂ [ ಱಱ ] ಪದಿನಾಱು (ಛಂದೋಂಬು. ೫-೨೫೯ ಅಡಿಟಿ) ; ಮೋಹಾಗಮ ಸಿದ್ಧಾಂತದ ಗಣಿತಮನೂಹಿಸಿ ಗುಣಿಯಿಸಬೇಕು (ಜಯನೃಕಾ. ೩-೩೫). ೩. ಆವೃತ್ತಿಮಾಡು ; ಅಭ್ಯಾಸಮಾಡು ; ಸಾಧನೆಮಾಡು : ಎರಟ್ಟಂಡದ ರಾಜಕುಮಾರರೆಲ್ಲರುಮಂ ಚಾಪ ವಿದ್ಯಾಭ್ಯಾಸದೊಳಗುಬ್ಬಿದೊಡಂತು ಕುಮಾರರ್ ಬಿಲ್ಲಂ ಗುಣಿಯಿಸುತ್ತಿರೆ (ಬಂಹರಿ. ೦೦-೩೩ ವ). ೪. ಆಲಾಪನೆಮಾಡು : ಭರತಮನೋದುವ ಸಪ್ತಸ್ವರಮಂ ಗುಣಿಯಿಸುವ ಬೀಣೆವಾಜಿಪ . . . ಬಿನದಂ ಅವರ್ಗಳ ಬಿನದಂ (ಅಜಿಪು. ೩-೮).

[ ಗುಣ + – ಇಸು$_3$ ]

**ಗುಣಿಹೊಗು** (ಕ್ರಿ). ಒಳಸೇರು ; ಕುಳಿಬೀಳು : ಮೋರೆ ಬಿಳಿತುಕೊಂಡಿತ್ತು. ಕಣ್ಣು ಗುಣಿಹೊಕ್ಕಿದ್ದುವು (ಮೂರುದಾ. ೨೭೩).

[ ಗುಣಿ$_1$ (< ಕುಟಿ$_2$) + ಹೊಗು (< ಪೊಗು) ]

**ಗುಣಿಹೊಡೆ** (ಕ್ರಿ). ಗುಂಡಿ ತೋಡು ; ಹಳ್ಳಮಾಡು : ಗುಣಿಹೊಡೆದಿಳಿಯೊಳಗಿಳಿದು ಪಾತಾಳಕ್ಕೆ ಚಿನ್ನದ ಅದುರನು ತೆಗೆದು (ಇಂಜಾಪ. ೧೭೭-೭೫).
[ ಗುಣಿ$_1$ (<ಕುಟ್ಟಿ$_2$) + ಹೊಡೆ$_1$ (<ಪೊಡೆ$_1$) ]

**ಗುಣೀಕೃತ** (ಗು). ೧. ಅಪ್ರಧಾನವಾಗಿ ಮಾಡಿದ ; ಮುಖ್ಯವಲ್ಲದ ; ಗೌಣವಾದ. ೨. ಅಡಗಿಸಿದ ; ನಿವಾರಿಸಿದ : ಗುಣೀಕೃತ [ಪಾಠಾಂ. ಗುಣತ್ರಯ]ಸಂಸೃತಿದೋಷೆ ಪುಣ್ಯಭಾಗಿನಿ . . . ಸರಸ್ವತಿ ನಿಲ್ಕೆ ನಲ್ಮೆಯಿಂ (ಲೀಲಾವ. ೧-೫). [ ಸಂ. ]

**ಗುಣೀಭೂತ** (ಗು). ಅಧೀನವಾದ ; ಅಪ್ರಧಾನವಾದ ; ಮುಖ್ಯವಲ್ಲದ. 'ಗುಣೀಭೂತ ವ್ಯಂಗ್ಯ' ಪರಾ. [ ಸಂ. ]

**ಗುಣೀಭೂತವ್ಯಂಗ್ಯ** (ನಾ). [ಕಾವ್ಯಮೀ]ಮೂರು ಬಗೆಯ ಕಾವ್ಯಗಳಲ್ಲಿ ಒಂದು; ವ್ಯಂಗ್ಯಾರ್ಥವು ಅಪ್ರಧಾನವಾಗಿದ್ದು ವಾಚ್ಯಾರ್ಥಕ್ಕೆ ಅಂಗಭಾವವನ್ನು ಹೊಂದಿರುವುದು : ವಾಚ್ಯಾರ್ಥದತ್ತಣಿಂ ವ್ಯಂಗಾರ್ಥಮತಿಶಯಿತಮಲ್ಲದಿರ್ದೊಡೆ ಮಧ್ಯಮಕಾವ್ಯಂ ಇದರ್ಕೆ ಗುಣೀಭೂತವ್ಯಂಗ್ಯಮೆಂದುಂ ಪೆಸರ್ (ಅಪ್ರತಿ. ೫-೧೪); ವ್ಯಂಗ್ಯಾರ್ಥವಿದ್ದು ಅದಕ್ಕಿಂತ ವಾಚ್ಯವೇ ಅತಿಶಯವಾಗಿದ್ದರೆ 'ಗುಣೀಭೂತವ್ಯಂಗ್ಯ' ಅಥವಾ 'ಮಧ್ಯಮಕಾವ್ಯ' ವಾಗುವುದು (ಕೈಪಿಡಿ. ೧೮೨). [ ಗುಣೀಭೂತ + ವ್ಯಂಗ್ಯ ]

**ಗುಣುಕು**, ಗುಣಕ$_1$, ಗುಣಕು, ಗುಣಿಕೆ$_1$ (ನಾ). ೧. ದೊಣ್ಣೆ ; ಕೋಲು : ಈ ಸಿರಿಗೇಡಿ ಚಾರುದತ್ತನು ನಾನು ಹೇಳಿದರೆ ಅನ್ನುವುದಿಲ್ಲ. ಅದರಿಂದ ಈ ಮುರುಕು ಬಿದುರಿನ ಗುಣುಕಿನಿಂದ ಹೊಡಿಹೊಡಿದು ಅನ್ನಿಸಿರೋ (ಮುಂಬಯಿ. ೬-೨೦೪). ೨. ನಗಾರಿ, ಡೋಲು ಮೊದಲಾದ ವಾದ್ಯಗಳನ್ನು ಬಾರಿಸುವ ದಪ್ಪವಾದ ಕೋಲು; "ಕುಡುಪು, ಬೆಣೆ" (ಪ್ರಭಣ್ಣ). ೩. ಪಿಟೀಲನ್ನು ನುಡಿಸುವ ಕಮಾನು : (ಕಿ). **ಗುಣಕ$_1$ :** ೨. ಭಾರವಾದ ಡೊಳ್ಳಿನ ದಪ್ಪ ತೊಗಲಿನ ಮೇಲೆ ಭಾರವಾದ ಗುಣಕದಿಂದ ಬೀಳುವ ಪೆಟ್ಟು ಏಕತಾನವನ್ನು ಪಡೆದು, ಸುಗಂಭೀರವಾಗಿ ತೆರೆಗಳನ್ನು ಎಬ್ಬಿಸತೊಡಗಿತು (ಹಬ್ಬಿಬ. ೬೩). ೪. (ಉಕ) ಕಣಿಕ ಮೊದಲಾದುವನ್ನು ಕುಟ್ಟುವ ಸಾಧನ : **ಗುಣಕು :** ೧. "ಕೊಂತ, ಗುದಿಗೆ" (ಸಿರಿಕೋ. ೧೬೩). **ಗುಣಿಕೆ$_1$ :** ೧. ಗುಣಿಕೆಯ ಪೆಟ್ಟು ಎಚ್ಚರಿಸಿತು (ರೂಢಿ). [ ? ]

**ಗುಣುಗು**, ಗುನುಗು$_1$ (ಕ್ರಿ). ೧.=ಗುಣುಗುಟ್ಟು ೧: ಕೆಣಕಿ ಕೇಳುವ ಕೆಲರು ಗುಣಿಸಿ ಗುಣುಗುವ ಕೆಲರು (ನನಲ್ಲ. ೮-೧೭). 'ಗೊಣಗು' ಪರಾ. **ಗುನುಗು$_1$ :** ೨. ಅಸ್ಪಷ್ಟವಾಗಿ ಹಾಡು : ನಿಮ್ಮ ಗುಣ ಅವಳಿಗೇನು ಗೊತ್ತು, ಮೂರುಹೊತ್ತೂ ಸಿನಿಮಾ ನಟಿಯಂತೆ ಹಾಡು ಗುನುಗೋದೊಂದು ಬಿಟ್ಟರೆ (ನಿಂದನಿ. ೩೩); ಪ್ರಮೀಳ ನಾಟಕದ ಹಾಡು ಗುನುಗಲಿಲ್ಲ (ಮಾಮನಿ. ೬). ೩. ಸತತವಾಗಿ ಧ್ವನಿಸು,–ಶಬ್ದಮಾಡು : ಅವನ ಮನದಲ್ಲಿ, ತಲೆಯಲ್ಲಿ ವಿಕೃತ ಭಾವನೆಗಳೇ ಗುನುಗುತ್ತಿದ್ದುವು (ಪ್ರೇಮಾಶ್ರ. ೩೫); ಅವಳು ಹೇಳಿದ ಮಾತು ಅವರ ಕಿವಿಯಲ್ಲಿ ಗುನುಗುತ್ತಿತ್ತು (ವಂಶವೃ. ೯೮). [ <ಗುಣುಗುಣು ]

**ಗುಣುಗುಟ್ಟು** (ಕ್ರಿ). ೧. ಗುಣುಗುಣು ಎಂದು ಅಸ್ಪಷ್ಟವಾಗಿ ಮಾತನಾಡು ; ಗುಣುಗುಣಿಸು : ಬಿಲ್ಲೀ, ನಿನಗೆ ಯಾವ ಪಾಯ್ ಸೇರುತ್ತದೆ? ಎಂದು ಗುಣುಗುಟ್ಟಿದ (ಮಹಾತ್ಮಾ. ೧೩೫); "ನಾನು ಬಡವಿ ಆತ ಬಡವ ಒಲವೆ ನಮ್ಮ ಬದುಕು" ಎಂದು ಗುಣುಗುಟ್ಟುತ್ತ ಆನಂದಸಾಗರದಲ್ಲಿ, ಕಲ್ಪನಾ ಸಾಮ್ರಾಜ್ಯದಲ್ಲಿ ಲೀನವಾಗಿದ್ದರು (ಕುಂಕುಮ. ೩೩). ೨. ಸತತವಾಗಿ ಧ್ವನಿ ಮಾಡುತ್ತಿರು ; ಮನಸ್ಸನ್ನು ಕೊರೆಯುತ್ತಿರು : ಚಕ್ರವರ್ತಿಗಳ ಮನಸ್ಸಿನಲ್ಲಿ ಗುಣುಗುಟ್ಟುತ್ತಿರುವ ಸಂದೇಹವೆಂದರೆ ಎಂಥದೆಂಬುದು ನನಗಿಲ್ಲಿ ಸ್ಫುಟವಾಗಿದೆ (ವೀರಬಂ. ೮೩).
[ <ಗುಣುಗು + ಕುಟ್ಟು$_1$ ]

**ಗುಣುಗುಣಿಸು**, ಗುಂಗಂಗಣಿಸು, ಗುಣಗುಣಿಸು (ಕ್ರಿ). ೧. ಅಸ್ಪಷ್ಟವಾಗಿ ಮಾತನಾಡು ; ಪಿಸುಗುಟ್ಟು : ರಾಮರಾಯರು ಭಾಲೇರಾಯರ ಕಿವಿಗಳಲ್ಲಿ ಏನೋ ಗುಣುಗುಣಿಸಿದರು (ರತ್ನಗೋ. ೫೩). ೨. ತನ್ನಷ್ಟಕ್ಕೇ ಮೆಲ್ಲಗೆ ಹಾಡಿಕೊಳ್ಳು : ಕಳ್ಳದನಿಯಲ್ಲಿ ಗುಣುಗುಣಿಸುವುದು ಶಾಸ್ತ್ರಕ್ಕೆ ಸ್ಥಾನ ಮಾಡಿದಂತೆ (ಗಾಳಿಪ. ೯೧). ೩. ಸತತವಾಗಿ ನಿನದಿಸು; ಧ್ವನಿಮಾಡು: ಹಾಗೆಯೆ ಮಹಾತ್ಮರ ಮಾತುಗಳೂ ಕಿವಿಯಲ್ಲಿ ಗುಣುಗುಣಿಸತೊಡಗಿದುವು (ಪ್ರಣಸ. ೨೬). **ಗುಂಗಂಗಣಿಸು : ೨.** ಮನದಲ್ಲ ಮಾತನ್ನು ಪೌನದಿ ನೆನೆವಂತೆ ಎಳೆಯೆಣಿಸಿ ಗುಂಗುಣಿಸಿ ಬಿಡಿಸುವುದು (ಸಖೀಗೀ. ೨೮-೫೦೬).
**ಗುಣಗುಣಿಸು : ೨** ದೇವರ ಸ್ತೋತ್ರದ ಶ್ಲೋಕಗಳನ್ನು ಗುಣುಗುಣಿಸಿದ (ಬನಶಂ. ೪೮); ಏನಾದರೂ ಶ್ಲೋಕವನ್ನು ಆತ ಗುಣಗುಣಿಸುತ್ತಿದ್ದ (ರಂಗವ. ೨೩); ಆ ಭಾವನೆ ಪವಿತ್ರವಾಗಿತ್ತು, ನಾನು ಗುಣಗುಣಿಸಿದೆ (ಮುಕ್ತಿ. ೭೫). [ ಗುಣುಗುಣು + – ಇಸು$_3$ ]

**ಗುಣುಗುಣು** (ನಾ). ಒಂದು ಅನುಕರಣ ಶಬ್ದ ; ಅಸ್ಪಷ್ಟವಾದ ಧ್ವನಿ. 'ಗುಣುಗುಣುಗುಟ್ಟು' ಪರಾ.

**ಗುಣುಗುಣುಗುಟ್ಟು** (ಕ್ರಿ).=ಗುಣುಗುಟ್ಟು: ತನ್ನೊಳ್ಗುಣುಗುಣುಗುಟ್ಟುತೆ ಮನದೊಳು ಮೆಚ್ಚುತೆ ಮೊಗವಂ ನೋಡುತೆ (ತಿರುನಾ. ದೇ. ೨೨೫-೯).
[ ಗುಣುಗುಣು + ಕುಟ್ಟು$_1$ ]

**ಗುಣೋಕ್ತಿ** (ನಾ). = ಗುಣವಚನ ೨ : ಅವು ಪರಮಾಗಿರೆ ಲಿಂಗಾಂತ ವರ್ಣಲೋಪಂ ಗುಣೋಕ್ತಿಗಕ್ಕುಂ ಪ್ರಾಯಂ (ಕಾವ್ಯಾವ. ೧೦೦); ನಿಉಕ್ತ ವಿಭಕ್ತಿಗಳಿವು ಘನತರ ಸಂಸ್ಕೃತ ಗುಣೋಕ್ತಿಯೊಳಮವರ್ದಿರ್ಕುಂ (ಶಮದ. ೨೦೯). [ ಗುಣ + ಉಕ್ತಿ ]

**ಗುಣೋತ್ಕರ** (ನಾ). ಗುಣಗಳ ಸಮೂಹ,—ಗುಂಪು : ಅಣಿಮಾದಿ ಗುಣೋತ್ಕರ ಮುಳ್ಳ ಮರಂಗೆ ಭುಜಬಿಗುರ್ವಣೆ ಪಿರಿದೇ (ಶಾಂತಿಪು. ೧೦-೪೧); ತದ್ಗುಣೋತ್ಕರಮನೆರ್ವಟ್ಟಿತ್ತು ದೋಷೋತ್ಕರಂ (ಕಾದಂಉ ೪೦೦). [ ಗುಣ + ಉತ್ಕರ ]

**ಗುಣೋದಯ** (ನಾ). ೧. ಒಳ್ಳೆಯ ಗುಣಗಳ ಹುಟ್ಟುವಿಕೆ,–ಏಳಿಗೆ, –ಆವಿರ್ಭಾವ. ೨. ಒಳ್ಳೆಯ ಗುಣಗಳ ಏಳಿಗೆಯನ್ನು ಹೊಂದಿರುವವನು ; ಸುಗುಣಿ : ಮುನ್ನೊರ್ವನುಂಟು ಕೇರಳದೇಶದವನಿಪಂ ಸನ್ನುತಗುಣೋದಯಂ (ಜೈಮಿಭಾ. ೨೮-೧೪).
[ ಗುಣ + ಉದಯ ]

**ಗುಣೋದೀರ್ಣ** (ಗು). ಒಳ್ಳೆಯ ಗುಣಗಳಿಂದ ಬೆಳೆದಿರುವ,-ಅಭಿವೃದ್ಧಿ ಹೊಂದಿರುವ. 'ಗುಣೋದೀರ್ಣತೆ' ಪರಾ. [ ಗುಣ + ಉದೀರ್ಣ ]

**ಗುಣೋದೀರ್ಣತೆ** (ನಾ). ೧. ಒಳ್ಳೆಯ ಗುಣಗಳ ಬೆಳವಣಿಗೆ,–ಏಳಿಗೆ,–ಅಭಿವೃದ್ಧಿ. ೨. (ಬಿಲ್ಲು) ಹೆದೆಯಿಂದ ಬಿಗಿಯಲ್ಪಡುವಿಕೆ,—ಏರಿಸಲ್ಪಡುವಿಕೆ. ೧, ೨: ಕವಚಾನ್ವಿತ ಕರ್ಣಸಹಾಯಮಂ ಗುಣೋದೀರ್ಣತೆಯಿಂದೆ ಪೊಂದಿತೆನೆ ತನ್ನಿಕಟಸ್ಥಿತಮೇಂ ಮನೋಜ್ಞಮೋ (ರಾಜಶೇ. ೬-೯೬). [ ಗುಣ + ಉದೀರ್ಣತೆ ]

**ಗುಣೌಘ** (ನಾ).=ಗುಣೋತ್ಕರ : ಪುರಂದರನ ಸಾರಥಿ ಗುಣೌಘವನೊಂದು ನಾಲಗೆಯಿಂದ ಹೊಗಳಿದನಾ ಧನಂಜಯನ (ಕುವ್ಯಾಆ. ೬-೧೪).
[ ಗುಣ + ಓಘ ]

**ಗುಣ್ಣಿತು** 'ಗುಂಡಿತ್ತು' ನೋ.

**ಗುಣ್ಣಿತ್ತು** 'ಗುಂಡಿತ್ತು' ನೋ.

**ಗುಣ್ಬಳಿ**, ಗುಂಪಳಿ (ಕ್ರಿ). ಆಳ ಕಡಮೆಯಾಗು ; ಗಾಂಭೀರ್ಯವು ನಷ್ಟವಾಗು : ಗಂಭೀರನಾಭಿ ನೆಟಿ ಗುಣ್ಬಳಿದುದು (ಸಿದ್ಧರಾ. ೧-೪೯).
**ಗುಂಪಳಿ :** ಝೊಂಪಿಸುವ ಸಿರಿಮೊಗದ ನೋಟದ ಸೊಂಪಡಗಿದಾಲಿಗಳ ಧೈರ್ಯದ ಗುಂಪಳಿದ ನಿಜರಾಜತೇಜದ . . . ಅಗಳಿಕೆಯ ವಿಘಾತಿಯ

ಝೊಂಪಿನಲಿ ಹುದುಗಿದ ಮಹೇಶನ ಕಂಡನಾ ಪಾರ್ಥ (ಕುಪ್ವಾ.ಕ. ೧೬-೫).
[ ಗುಣ್ಪು$_2$ + ಅಳಿ$_1$ (< ಅಱಿ$_1$) ]

**ಗುಣ್ಪಱಿ** (ಕ್ರಿ). ಆಳವನ್ನು ತಿಳಿ ; ಹಿರಿಮೆಯನ್ನು ತಿಳಿ : ಪರಪ್ರತಿಭೆಯ ಗುಣ್ಪಱಿಯದೆ ತಾಮುಂ ಕೆಮ್ಮಗೆ ಡುಱುಕೆಂಬುವು ಕುಕವಿ ಕೂಪ ಮಂಡೂಕಂಗಳ್ (ಅನಂಪು. ೧-೪೨). [ ಗುಣ್ಪು$_2$ + ಅಱಿ ]

**ಗುಣ್ಪು$_1$**, ಗುಂಪು$_1$, ಗುಂಬ$_1$, ಗುಂಬು$_1$ (ನಾ). ನೆರವಿ ; ರಾಶಿ ; ಸಮೂಹ : ಪಕ್ಕಿಗಳ ಗುಣ್ಪುಗಳೆ ಚರಿಪ ನಾವೆಗಳಾಗಲು (ಶೇಷರಾ. ೨೦-೩). **ಗುಂಪು$_1$ :** ಪೊಸಮಲ್ಲಿಗೆ ಹೂವಿನ ಕಂಪಿನಂತೆ ಮಾಕಂದದ ಗುಂಪಿನಂತೆ . . . ರಸಜ್ಞಚಿತ್ತಕತಿಮೋದಮನೀಕೃತಿಯಿಾವುದಾವಗಂ ದಿವ್ಯಜ. ೧-೪೯) ; ಖೇಚರರ ಗುಂಪಿನ [ಪಾಠಾಂ. ಕೋಟಿಯ, ವಟ್ಟೆಯ] ಪನ್ನಗರ ಪಂಕ್ತಿಯಿಂ . . . ನೆರೆದಿರಲು (ಸಿದ್ಧರಾ. ೧-೨೩). **ಗುಂಬ$_1$ :** ಉರಿಯ ಗುಂಬ ಚೆದುರಿತು (ಖಳಜೀ. ೧೦೦). **ಗುಂಬು$_1$ :** ಅಂಬಿನಿಂ ಬಿಗಿವರಂಬರವರೂಥಗಳ ಮಿಗೆ ತುಂಬುವರ್ಗುಂಬಾಗಿ ನಿಂಬಾಗಿ ಶಂಬಾಗಿಳಂಬಂಬಿನಿಂ ಕೆಡಹಿ (ಜಿನಮು. ೩೯-೪೯).
[ ದೇ॥ ತಮಿ. ಕುಮ್ಪುವುಮ್, ಕುಮ್ಪಲ್, ಕುವಿಪ್ಪು, ಕುಮ್ಪು ; ಮಲ. ಕೂಮ್ಪಲ್ ; ತುಳು. ತೆಲು. ಗುಂಪು ]

**ಗುಣ್ಪು$_2$**, ಗುಂಪು$_2$, ಗುಂಬ$_2$, ಗುಂಬು$_2$, ಗುಂಭ$_1$, ಗುಮ್ಮ$_3$ (ನಾ). ೧. ಆಳ ; ಗಾಂಭೀರ್ಯ : "ಗುಣ್ಪೆಂದು ಗಾಂಭೀರ್ಯಮಕ್ಕುಂ" (ಶಬ್ದಮಂ. ೬೭) ; ಆ ಜಲನಿಧಿಯ್ಯ ಗುಣ್ಪೆಂದೆಂದಲಸದೆ ಪೇೞ್ಗುಂತು ಹೇತು ರೂಪಕ ವಿಧಿಯಿಂ (ಕವಿರಾ. ೩-೨೦) ; ಸಗರನ ಮನಮಂ ಸಾಗರದ ಗುಣ್ಪನಱಿವರುಮೊಳರೆ (ಅಜಿಪು. ೧೦-೪೭) ; ತ್ರಿವಳಿ ಮೈಗರೆಯೆ ಹೊಕ್ಕುಳ ಗುಣ್ಪು ಹೊಱಸೂಸೆ (ಬಸರ. ೧-೧೦೭). ೨. ಗೂಢವಾದುದು ; ಗುಟ್ಟು ; ರಹಸ್ಯ : (೬). ೩. ಆಧಿಕ್ಯ ; ಹೆಚ್ಚಳ : ವ್ರತಂಗಳ ಪೆಂಪುಮಂ ಹೀನಮಪ್ಪ ನೆಗೞ್ತಿಯೊಳ್ ಖತಿಯುನ್ನತಿಕ್ಕೆಯ ಗುಣ್ಪುಮಂ . . . ಪೊಗೞ್ದಂ (ಧರ್ಮಾಮೃ. ೫-೭೩) ; ಶಕಟಾಕೃತಿಯ ನಾಲ್ಕುಚ್ಚಿಂಟು ಗಾಲಿಯ ಅಪ್ಪಯೋಜನದ ಗುಣ್ಪು (ಪುಣ್ಯಾಸ್ರ.೧೦-೩೨ ವ). **ಗುಂಪು$_2$ :** ೧. ಕೊಳಚಿಯ ನೀರಿನಲ್ಲಿ ಗುಂಪನಱಿಸುವಿರಿ (ಬಸವ. ೫೭೪) ; ಅಂಬರವಿಲ್ಲದ ಮೇರು ಅಂಬುಧಿಯಿಲ್ಲದ ಗುಂಪು[ಪಾಠಾಂ. ಗುಂಪುವ]ತಂದವರಿಲ್ಲದೆ ಬಂದಿತ್ತು ನಿಜ ಒಳಕೊಂಡಿತ್ತು (ಅವಚಂ. ೧೨೬-೫೭೬). **ಗುಂಬ$_2$ :** ೧. ನೀವು ಗುಂಬ ನೀರಿಗೆ ಇಳಿಯಬೇಡಿರಿ (ಬಟ್ಟಹೊ. ೫೪); ಹೆಚ್ಚು ಗುಂಬ ನೀರಿಗೆ ಇಳಿಯಲು ನನಗೆ ಯಾಕೋ ಪ್ರವೃತ್ತಿಯೇ ಬರಲೊಲ್ಲದು (ಕಾಳರಾ. ೬೦). ೩. ಮಾತೆಯ ಪಯೋಧರವನು ಹಂಬಲಿಸಿ ಗುಂಬದಿಂದ್ಯೆದುವಂ . . . ಕ್ರತು ವೀರ್ಯ ಸಂಜಾತನು (ಪರಶು. ೪-೭). ೪. ತೊಡಕು; ಸಮಸ್ಯೆ: ಇವಳ ಮುಂದೆ ಹೇಳಬೇಕೋ ಹೇಳಬಾರದೋ ? ಎಂಬ ಗುಂಬ ಬಿತ್ತು (ಕಸಿಂಹಾ. ೫೫). **ಗುಂಬು$_2$ :** ೧. ನೆಲೆ, ಆಳ, ಉದ್ದ, ಉಣ್ಪು, ಗುಂಬು, ಮಡು (ಮಡವು) (ಕಂನುಹು. ೮೭). **ಗುಂಭ$_1$ :** ೨. ತುಂಬಿಗಳ್ ಝೇಂಕರಿಸಲೆಡೆಗೆಡೆಗೆ ತಲೆಗೊಡಳಿ ಗುಂಭದಿಂ ಕನಲುತ್ತ (ಪರಶು. ೭-೨೦) ; ಅವನು ಹೋದ ಕೆಲಸದಲ್ಲಿ ಏನೋ ಗುಂಭವಿದೆ ಎಂದು ಅವಳಿಗೆ ಸಂಶಯ ; ಸಂದೇಹ (ದೀಪನಿ. ೫೪). ೩. ಸಂತೋಷ ಶರನಿಧಿಯ ಗುಂಭ ನಾರ್ಯೆಯ್ದುತ್ತೆ ಗುರುಮೂರ್ತಿಯಂ ಪೊಗಳಲ್ (ಮಹಾವಿ. ೧೧-೨). **ಗುಮ್ಮ$_3$ :** ೧. ನೀರು ಗುಮ್ಮ ಆದ. ಬಗ್ಗಿ ನೋಡ ಬ್ಯಾಡ್ರಿ (ರಕ್ತಧ್ವ. ೦೪).
[ <ಗುಂಡಿತ್ತು + – ಪು$_2$ ]

**ಗುಣ್ಪುಗೆಡು** (ಕ್ರಿ). ಆಳ ಕಡಿಮೆಯಾಗು : ಬೀಳ್ವ ಕಮ್ಮರಿಯ ದರಿ ಗುಣ್ಪು [ಪಾಠಾಂ. ಗಂಪು, ಗುಂಪ್ಪ]ಗೆಡೆ ಪೂಳ್ದು ಬೆಳೆವೆನೋ ಎಂದು ಶಿವನನುಗೆ ಯ್ಯುತಿರ್ದನತಿ ತವಕದಿಂದ (ಸಿದ್ಧರಾ. ೨-೬೪) ; ಮಕ್ಕಳ ಪಡೆಯುದ ಮಡದಿಯ ಸಂಸಾರ ದುಕ್ಕದ ಮಡುವಿನಂತಿರ್ದ ಹೊಕ್ಕುಳು ಗುಣ್ಪು ಗೆಟ್ಟುದು ಪೊಡಲೊಳು ಶಿಶು ತೆಕ್ಕನೆ ತೀವಿ ಜೀವಿಸಲು (ಮೋಹತ. ೧೭-೭).
[ ಗುಣ್ಪು$_2$ + ಕೆಡು$_1$ ]

**ಗುಣ್ಪುವಡೆ** (ಕ್ರಿ). ಆಳವಾಗು : ಗುಣ್ಪುವಡೆದ ಪೊರ್ಕುಳಿಟೆಂಬ ತಿಳಿಗೊಳಂ ಕಮ್ಮಂಗೋಲನೆಂಬ ಜಕ್ಕವಕ್ಕಿಯನೋಲಾಡಿಸೆಯುಂ (ಕಬ್ಬಿಕಾ. ೧೨೩).
[ ಗುಣ್ಪು$_2$ + ಪಡೆ$_1$ ]

**ಗುಣ್ಪುವೆಱು** (ಕ್ರಿ). ಗಾಂಭೀರ್ಯವನ್ನು ಹೊಂದು ; ಹಿರಿಮೆಯನ್ನು ಪಡೆ : ವಿಶ್ರುತ ವೀರಸೇನ ಜಿನಸೇನಾಚಾರ್ಯ ಪರ್ಯಂತಮಾಗಿರೆ ಬಂದೀ ಕಥೆ ಗುಣ್ಪುವೆತ್ತುದು (ಆದಿಪು. ೧-೩೫). [ ಗುಣ್ಪು$_2$ + ಪೆಱು$_1$ ]

**ಗುಣ್ಮೆ** (ನಾ). ಶಕ್ತಿ ; ಸಾಮರ್ಥ್ಯ : ದಾನವರ ಕೊಚ್ಚುತಿನ್ನುಳಿದಸ್ತ್ರದ ಗುಣ್ಮೆಯಂ ಖಂಡಿಸುತ ಸವ್ಯಾಪಸವ್ಯಗ್ರಕಣ್ಮೆಸುತಲಿ (ಜಿನಮು. ೩೫-೦೯).
[ ? ]

**ಗುಣ್ಯ** (ಗು). ೧. ಗುಣಗಳಿಂದ ಕೂಡಿದ. ೨. ಲೆಕ್ಕಹಾಕಲು ಯೋಗ್ಯವಾದ. (ನಾ). ೩. [ಗಣಿತ] "ಗುಣಿಸಬೇಕಾದ ಸಂಖ್ಯೆ; ಗುಣ್ಯ" (Multiplicand. ಇಂಕನಿ). [ ಸಂ. ]

**ಗುತಗೆ** 'ಗುತ್ತಗೆ' ನೋ.

**ಗುತುಗೆ** 'ಗುತ್ತಗೆ' ನೋ.

**ಗುತ್ತ$_1$**, ಗುತ್ತು$_2$ (ನಾ). ೧. ಸಮೀಪ ; ಹತ್ತಿರ. ೨. ಬಿಗಿಯಾಗಿರುವುದು ; ಅಳತೆಗೆ ಅಡಕವಾಗಿರುವುದು : ರತ್ನದಾ ವಡ್ಯಾಣ ನಡುವೀಗೆ ಆ ವನಿತೆಯಾರೂ ಗುತ್ತವಾಗಿ ಧರಿಶೀ ಸತಿಯಾರು (ಯುನಳ. ೪೯) ; ೩. ಗಿಡ್ಡವಾದುದು ; ಚಿಕ್ಕದು : ಹೊಲಿಸಿದ ಅಂಗಿ ಗುತ್ತವಾಗಿದೆ (ರೂಢಿ). **ಗುತ್ತು$_2$ :** ೪. ಒತ್ತಾದುದು ; ದಟ್ಟವಾದಂದು : ಹಿಂದೆ ಹೊರಳಿ ನೋಡಿದಾಗ ಅದೊಂದು ದಂಡಕಾರಣ್ಯವೇ ಗುತ್ತಾಗಿ ಕಾಣುತ್ತಿತ್ತು (ಕಾಲಜ. ೨೦) ; ಮಲ್ಲಿಗೆಯ ಒಂದು ಗುತ್ತಾದ ತೋರ ತಾವಡಹಾರ ಸಿದ್ಧ (ಇಪ್ಪಕ. ೪೦೭).
[ ದೇ ॥ ತಮಿ. ಕುತ್ತೈ ; ಮಲ. ಕುದು ; ತೆಲು. ಗುತ್ತ ]

**ಗುತ್ತ$_2$** 'ಗುಪುತ' ನೋ.

**ಗುತ್ತಕಾಗದ** (ನಾ). ರಹಸ್ಯವಾದ ಕಾಗದ ; ಗುಪ್ತಪತ್ರ : ಸುತ್ತ ಸುದ್ದಿಯ ಕೇಳಿ ಗುತ್ತ ಕಾಗದ ಓದಿ . . . ಚಿತ್ತ ಒಂದಿಟ್ಟು ಮಲಸಜ್ಜ (ಲೋಕಗೀ. ೨೦೨). [ ಗುತ್ತ$_2$ (<ಗುಪುತ) + ಕಾಗದ ]

**ಗುತ್ತಗೆ**, ಗುತಗೆ, ಗುತುಗೆ, ಗುತ್ತಿಗೆ (ನಾ). ೧. ಯಾವುದಾದರೊಂದು ಆಸ್ತಿಯನ್ನು ವಹಿಸಿಕೊಂಡು ಅದರ ಬಾಬತ್ತು ಮಾಲೀಕನಿಗೆ ನಿರ್ದಿಷ್ಟವಾಗಿ ಇಷ್ಟನ್ನು ಕೊಡುತ್ತೇನೆಂದು ಗೊತ್ತು ಮಾಡಿಕೊಳ್ಳುವ ಒಪ್ಪಂದ; ಒಡಂಬಡಿಕೆಯ ಕರಾರು; ಗೊತ್ತುವಳಿ: ಬ್ರಹ್ಮದೇಯ ಗುತ್ತಗೆ (ಎಕ. XIV. ತಿರುಮ. ೨೦೪-೦೩ ; ಸು. 933) ; ಈ ಪೊನ್ನ ವೃದ್ಧಿಯೊಳಂ ಕೆಯ್ಯ ಗುತ್ತಗೆಯೊಳಂ ಗಂಧಧೂಪನಿವೇದ್ಯ ನಂದದೀವಿಗೆಗಂ ಅೞ್ಚುಸುವ ಮಾಣಿಯ ಜೀವಿತಕ್ಕಂ ಕುಡುವುದು (ಕಇ. II, ೯-೨೮ ; 1075) ; ಕುಱುಹು ಹಿಡಿದು ಕಂಡೆಹೆನೆಂದಡೆ ಅದು ಸಿಲೆ ಉಳಿಯ ಹಂಗು ಕೊಟ್ಟವನ ಹಿಡಿದಿಹೆನೆಂದಡೆ ಗುತ್ತಗೆಯ ಗೇಣಿಕಾಱ (ಕಲ್ಯಾಶಾಂ. ೫೫). ೨. ಗುತ್ತಿಗೆದಾರ ಕೊಡಬೇಕಾದ ದವಸ ಅಥವಾ ಹಣ : ಈ ವರ್ಷ ಗುತ್ತಗೆ ಸಲ್ಲಿಸಲಿಲ್ಲ (ರೂಢಿ). **ಗುತಗೆ :** ೧. ಆ ದೇವದಾನದ ಗದ್ದೆಬೆದ್ದಲನೂ ಆಧಿ ಕ್ರಯ ಹಾಲೊತೆ ಗುತಗೆ ಎಮ್ಮ ವಂಶವಾದಿಯಾಗಿ . . . ಬರಸಿದ ಶಾಸನ (ಎಕ. II, ೩೩೬-೧೫ ; 1279). **ಗುತುಗೆ :** ೧. ಮುದಲಾಪುರ(ದಲಾಪುರ)ದಲು ಗುತುಗೆ ಗದೆ (ಸೌಇಇ. IV, ೨೫೪-೮೮ ; 1513). **ಗುತ್ತಿಗೆ :** ೧. ಬಜ್ಕಿಯ ಪುರದ ಠಾಣೆಯದ ಸುಜ್ಕ ಗುತ್ತಿಗೆಯ ಮಾಡುವ ಹೊಳೆಯ ಹೊರಸುಜ್ಕ (ಎಕ. VII, ಶಿವಮೊ. ೩೦-೪೪ ; ಸು. 1413 ?) ; ಅಂದಾಜ ಬರಸಿಕೊಂಡು ಗುತ್ತಿಗೆಯ

ಮಾಡಲಿಕ್ಕೇ ಅನುಮತಿಸಿದವನನ್ನು ಶೇಕದಾರ ಶಾನುಭೋಗರನ್ನು ಕರದು ಕೊಂಡು ನಾಳಿನ ಸಂಜೆಗೈದಿರಿ (ಅರ್ಜಾವಿ. ೩೧-೪೦). ೨. ತಳವರಿಕೆ ಕೋರಾಯ ಗುತ್ತಿಗೆ ಅಪುತ್ರಿಕೆ ದಂಡ ಪುಂಡಿಗೆಗಳು (ಸಿಂಗಿರಾ. ೨೨-೨೭); ಗುತ್ತಿಗೆ ಕೊಟ್ಟು ಹೋಯಿತು ಸುತ್ತಿಗೆ ಮುಣುಗಿ ಹೋಯಿತು (ಗಾದೆ). ೩. ಏಕಸ್ವಾಮ್ಯ; ಪೂರ್ಣಾಧಿಕಾರ. ‘ ಗುತ್ತಿಗೆವಿಡಿ ’ ಪರಾ.

[ ದೇ॥ ತಮಿ. ಕುತ್ತಕೈ ; ಮಲ. ಕುತ್ತಕ ; ತುಳು. ಗುತ್ತಿಗೆ ; ತೆಲು. ಗುತ್ತ./ಹಿಂ. ಗುತ್ತಾ ]

**ಗುತ್ತನೆ** (ಅ). ಬಿಗಿಯಾಗಿ ; ಅಳತೆಗೆ ಸರಿಯಾಗಿ : ಹಸ್ತಕಡಗವನಿಟ್ಟು ಹವಳದಾ ಕೈಕಟ್ಟಿ ಗುತ್ತನಾದಾ ಸರಿಗೆ ಪಂಜಿನೋಲೆನಿಟ್ಟಳು (ಶ್ರೀಕೃಪಾ. ೧೭). [ ಗುತ್ತ$_1$ + – ಅನೆ$_1$ ]

**ಗುತ್ತಲು** (ನಾ). ಗುತ್ತಿ ; ಪೊದರು (?) : ಸುಪಾಂಡುರ ಕೃಪೆಯ ಬಣ್ಣದ ಗುತ್ತಲು(ಮ)ಪಣ್ಮಳ(ಣ)ಲ್ಗಳೆಂಬುತ್ತಮ ಚಿಹ್ನದಿಂ ನರಯುಗಾರ್ಧದೆ ತೆಂಕಣಧಾರೆ (ಜಟ್ಟಿಮ. ೧೧-೬). [ ? ]

**ಗುತ್ತಾದಾರ** ‘ ಗುತ್ತೆದಾರ ’ ನೋ.

**ಗುತ್ತಿ$_1$** (ನಾ). ೧. ಗೊಂಚಲು ; ಗೊನೆ : ಪೊಸ ಕೆಂಜಾಜಿಯ ಗುತ್ತಿಯೊಲೆಸೆದುದು ತತ್ಸತಿಗೆ ತಳತಳಿಪ ಮುಡಿರನ್ನಂ (ಉದ್ಭಟ. ೮-೨೭). ೨. ಗುಪ್ಪೆ ; ಪೊದರು ; ಕಂಟಿ : ನೈರಿತ್ಯಕ್ಕೆ ಕಲ್ಲಗುತ್ತಿ (ಎಇ. XIII, ೧೭೩-೪೩ ; 1056) ; ಮೂಡಣ ಕೋಡಿಯ ಬಡಗಣ ಗುತ್ತಿಯ ತೆಂಕ ಮುಖದೆ ಮೂಡಲ್ಮೇರೆ (ಇಆ. XVIII, ೩೦೨-೨೨ ; 11ನೆಯ ಶತ) ; ಗಂಡನ ಮನೆಯು ಚಂಡಸೀಗೆಯ ಗುತ್ತಿ (ಜಗೀತ. ೨೦). ೩. (ಕರಾ) ಗಿಡಗಳನ್ನು ಕತ್ತರಿಸಿದಾಗ ಉಳಿದ ಬುಡ ; ಕೂಳೆ ; ಮೋಟು : ಕಾಸರಕಗಳ ಗುತ್ತಿಗಳನ್ನು ಅಗೆದೊಗೆಯ ಬೇಕು (ಬಾಳಿಗಿ. ೭೬). ‘ ಕೊತ್ತು$_2$ ’ ಪರಾ.

[ ದೇ॥ ತಮಿ. ಕೊತ್ತು, ಕೊನ್ತು ; ಮಲ. ಕೊತ್ತು ; ತೆಲು. ಗುತ್ತಿ, ಗೊತ್ತು ]

**ಗುತ್ತಿ$_2$** (ನಾ). ನೆಲ ; ಭೂಮಿ ; ಗದ್ದೆ. ‘ ಎಡೆಗುತ್ತಿ ’ ಪರಾ.

[ ದೇ॥ ತಮಿ. ಕುತ್ತಿ ]

**ಗುತ್ತಿ$_3$** (ನಾ). ಒಂದು ಊರಿನ ಹೆಸರು : ಎಱೆಯಂಗಪ್ಪನ ಮಗಂ ಮಾಚಿಗಂ ಗುತ್ತಿಯ ಗಂಗನ ಬೆಸದೊಳ್ . . . ಕಾದಿಸತ್ತಂ (ಎಕ. IV, ಹೆಗ್ಗಡ. ೧೦೦-೧೦ ; 900 ?) ; ಚಲದುತ್ತರಂಗಂ ಗುತ್ತಿಯ ಗಂಗಂ (ಎಕ. II, ೫೯-೧೦೫ ; 974) ; ಗುತ್ತಿಯ ಹೆರದರ ಸೂರಯ್ಯನ ಮಗ ಚಿಂನವರದ ಗೋಯಿಂದಸೆಟ್ಟಿಯು (ಎಕ. XII, ಚಿಕ್ಕನಾ. ೨೨-೧೦೦ ; 1579). [ ? ]

**ಗುತ್ತಿಗೆ** ‘ ಗುತ್ತಗೆ ’ ನೋ.

**ಗುತ್ತಿಗೆಕರಾರು** (ನಾ). (ಜಮೀನು ಮೊದಲಾದುವನ್ನು) ಗುತ್ತಿಗೆ ಮಾಡಿಕೊಳ್ಳುವ ಒಪ್ಪಂದ,–ಕರಾರು : ಜೀತಗಾರರಿಂದ ನೆಲ ಸಾಗುವಳಿಮಾಡಿಸುವ ಬದಲಾಗಿ, ಗುತ್ತಿಗೆ ಕರಾರಿನಮೇಲೆ ರೈತರಿಗೆ ಅದನ್ನು ವಹಿಸುವುದೆಂದು ನೆಕ್ಲುದೋವ್ ಯೋಚಿಸುತ್ತಿದ್ದನು (ಪುನರು. ೨೬೨).

[ ಗುತ್ತಿಗೆ (<ಗುತ್ತಗೆ) + ಕರಾರು$_1$ (<ಕರಾರ) ]

**ಗುತ್ತಿಗೆಕಾಗದ** (ನಾ). (ಜಮೀನು ಮೊದಲಾದುವನ್ನು) ಗುತ್ತಿಗೆ ತೆಗೆದುಕೊಳ್ಳುವಾಗ ಬರೆದು ಕೊಡುವ ಪತ್ರ : ಗುತ್ತಿಗೆಕಾಗದ ಬರೆಯುವುದು, ಪ್ರಶ್ನೆ ನೋಡುವುದು . . . ಕಲಿತುಕೊಂಡು ಬಂದರು (ಹುಟ್ಟಿಹ. ೧೦). [ ಗುತ್ತಿಗೆ (<ಗುತ್ತಗೆ) + ಕಾಗದ ]

**ಗುತ್ತಿಗೆಕಾಱ** (ನಾ). ಗುತ್ತಿಗೆ ಮಾಡಿಕೊಂಡಿರುವವನು : ಗುತ್ತಿಗೆಕಾಱ ನುಡಿದು ಅದ ಒಪ್ಪವಿಡಲಱಿಯ (ಮೋಳಿಮಾ. ೨೮-೧೧೩).

[ ಗುತ್ತಿಗೆ (<ಗುತ್ತಗೆ) + – ಕಾಱ ]

**ಗುತ್ತಿಗೆಗಾತಿ** (ನಾ). ಹೊಣೆಗಾರಿಕೆ ಹೊತ್ತಿರುವ ಹೆಂಗಸು : ಅತ್ತಿಗೆಯ ಹುದಕ್ಕನಹುದು ತಾಯಹುದಕ್ಕ ಗುತ್ತಿಗೆಗಾತಿ ನೀನಹುದು (ಮೋಹತ. ೩೧-೫೭) ; “ ಎಲ್ಲಾ ಹಕ್ಕನ್ನೂ ಹೊಂದಿರುವಳು ” (ಮೋಹತ. ಅಡಿಟ).

[ ಗುತ್ತಿಗೆ (< ಗುತ್ತಗೆ) + – ಕಾತಿ$_5$ ]

**ಗುತ್ತಿಗೆದಾರ** (ನಾ). ೧.=ಗುತ್ತಿಗೆಕಾಱ : ತಂದೆ ವಿಜಯನಗರದ ರಾಜರಿಗೆ ಗುತ್ತಿಗೆದಾರನಾಗಿ ಡಣಾಯಕ ಪದವಿಯಲ್ಲಿದ್ದವನು (ಜಗದಾ. ೧೧೬) : ಢಣಾಯಕನೆಂದರೆ ಸರ್ಕಾರಕ್ಕೆ ಗುತ್ತಿಗೆದಾರ (ಕಥವಿ. I, ೩೬೧). ೨. ಗುತ್ತಿಗೆಯನ್ನು ತೆಗೆದುಕೊಳ್ಳುವವನು : ಪೈರನು ಕುಯಿದು ಒಟ್ಟಿ, ಎಕ್ಕಿ, ಕೊಚ್ಚಿ, ಕೇರಿ, ರೇಖುಮಾಡಿ ಗುತ್ತಿಗೇದಾರರಿಗೆ ಕೊಡುತ್ತಿದ್ದರು (ಹುಟ್ಟಿಹ. ೬೩). [ ಗುತ್ತಿಗೆ (< ಗುತ್ತಗೆ) + – ದಾರ$_4$ ]

**ಗುತ್ತಿಗೆವಿಡಿ, ಗುತ್ತಿಗೆಹಿಡಿ**(ಕ್ರಿ). ೧. ಒಪ್ಪಂದ ಮಾಡಿಕೊಂಡು ಜಮೀನು ಮೊದಲಾದುವನ್ನು ವಶಕ್ಕೆ ತೆಗೆದುಕೊಳ್ಳು. ೨. ಏಕಸ್ವಾಮ್ಯವುಳ್ಳವನಾಗು ; ಪೂರ್ಣಾಧಿಕಾರಿಯಾಗು : ಗುತ್ತಿಗೆವಿಡಿದಂತೆ ನೆಱೆ ಸಾಧಿಸಿದ ಱುವತ್ತುನಾಲುಕು ಬಿಜ್ಜೆಗುಱುಹ (ಮೋಹತ. ೧೬-೧೧). **ಗುತ್ತಿಗೆಹಿಡಿ**: ೨. ಒಡ್ಡರು ಬಾವಿಯನ್ನು ತೋಡಲು ಗುತ್ತಿಗೆ ಹಿಡಿದರು (ರೂಢಿ) ; ಅವರು ಕಾರ್ಯಕ್ರಮದ ಗುತ್ತಿಗೆಹಿಡಿದಂತೆ ಕಾಣಿಸುತ್ತದೆ (ರೂಢಿ).

[ ಗುತ್ತಿಗೆ (< ಗುತ್ತಗೆ) + ಪಿಡಿ$_1$ ]

**ಗುತ್ತಿಗೆಹಿಡಿ** ‘ ಗುತ್ತಿಗೆವಿಡಿ ’ ನೋ.

**ಗುತ್ತು$_1$** ‘ ಗುಱುತು ’ ನೋ.

**ಗುತ್ತು$_2$** ‘ ಗುತ್ತ$_1$ ’ ನೋ.

**ಗುತ್ತು$_3$** ‘ ಗುತ್ತೆ ’ ನೋ.

**ಗುತ್ತು$_4$** (ನಾ). ೧. (ಕರಾ) ಗೌರವಸ್ಥ ಮನೆತನ : ಪರವೂರುಗಳ ಆಢ್ಯ ಮಹನೀಯರನ್ನೂ ಗುತ್ತು ಬರ್ಕೆಗಳ ಯಜಮಾನರನ್ನೂ ಆಮಂತ್ರಿಸಿ ಚೆನ್ನಾಗಿ ಸತ್ಕರಿಸಿದ್ದರು (ಒಡ್ಡಿಉ. ೩೦). ೨. ಜಹಗೀರುದಾರರ ಭವನ, –ಮನೆ. [ ← ತುಳು. ಗುತ್ತು ]

**ಗುತ್ತು$_5$** (ನಾ). ೧. ಹೊಡೆತ ; ಏಟು : ಮೇಲಾಳನೇಱಿಸಿ ಪರಿದು ಸದೆವನು ಗುತ್ತಿನಲಿ ಕೆಡಹಿ (ಕುವ್ಯಾಆ. ೬-೫) ; ಕುಲಗಿರಿಗಳಲ್ಲಾಡುವವು ಹಿಡಿದೊಲೆದಡೀ ಕಪಿಶಿಶುಗಳಬುಧಿಯ ಕಲಕುವವು ನೀರಾಟದಲಿ ಹಾರಿಕೆಯ ಗುತ್ತಿನಲಿ ಚಲಿಸುವವು ಉದಯಾಸ್ತಮಾನದ ಕುಲಶಿಲೋಚ್ಚಯ (ತೊರರಾ. ೬-೮-೩೭). ೨. ಜಮೀನು ; ಭೂಮಿ : ಆಱೂರ್ ಅಲ್ಲ[ಣ] ಬಜಕಳದಲ್ಲಿ ಬಿಳಿಯರಸರ ಗುತ್ತುಜಂನ್ನಪ್ಪನಿಂದ ಅಕ್ಕಿ ಮೂಡೆ ೭೦ (ಎಇ. VIII, ೧೩೩-೪೪ ; 1536) ; ಅದು ಒಕ್ಕಲಿಲ್ಲದ ಗುತ್ತು. ಅಷ್ಟೇ ಅಲ್ಲ, ಆ ಗುತ್ತು ತನ್ನ ಸೀಮೆಗೆ ಸೇರಿದ್ದೆಂದು ಪಂಜದ ಕೇಮರ ಬಲ್ಲಾಳನು ಸುಳ್ಳು ಸಾಧನೆಮಾಡಿ . . . ಗುತ್ತಿನಲ್ಲಿ ಹೊಗೆ ಏಳುವುದಕ್ಕೆ ಬಿಡುವುದಿಲ್ಲ (ಕೋಟಚಿ. ೪೮); ಈಗ ಇರುವ ಗುತ್ತುಗಳ ಯಜಮಾನರ ಹಿರಿಯರಲ್ಲಿ ಪ್ರತಿಯೊಬ್ಬರು ಜೈನ ರಾಜರ ಸೇನಾಧಿಪತಿಗಳಾಗಿದ್ದರು (ತುಳುನಾ. ೪೯). [ ? ]

**ಗುತ್ತುಬಾಳಿಕೆ** (ನಾ). ಗುತ್ತಗೆಯ ಸಾಗುವಳಿ : ಒಕ್ಕಲಿಗನ ಗುತ್ತುಬಾಳಿಕೆ ಕೊಟ್ಟರೆ (ಕಗದ್ಯ. ೬೯).

[ ಗುತ್ತು$_3$ (<ಗುತ್ತೆ) + ಬಾಳಿಕೆ ? ]

**ಗುತ್ತುಮಾಲೆ** (ನಾ). ಒತ್ತಾಗಿ ಕಟ್ಟಿದ ಮಾಲೆ: ಇಲ್ಲಿಯ ವರ್ಣನೆಯು ಗುತ್ತುಮಾಲೆಯಂತೆ ಇರದೆ ಬಿಡಿಮುತ್ತಿನಂತೆ ಉದುರುವದು (ಮಸಾಹಿ. ೧೧). [ ಗುತ್ತು$_2$ (< ಗುತ್ತ$_1$) + ಮಾಲೆ ]

**ಗುತ್ತೆ, ಗಂತ್ತು$_3$** (ನಾ). ೧.=ಗುತ್ತಗೆ ೧ : ಈ ಗುತ್ತೆಗೆ ನಿಜವಾಗಿಯೂ ನಿಂತವನು ಅಥವಾ ಎದುರಿಗೆ ಇವರನ್ನು ನಿಲ್ಲಿಸಿದವನು ಮೀಸೆ ಸುಬ್ಬ (ಹಹಸ. ೨೬). ೨. ಏಕಸ್ವಾಮ್ಯ ; ಪೂರ್ಣಾಧಿಕಾರ : ಕರಿಯನ ತಮ್ಮನ ಪಾಲಿಗೆ ಈಗ ಧನಿಗಳ ಮನೆಯ ದನ ಕಾಯುವ ಕೆಲಸ ಗುತ್ತೆಯಾಗಿ ಹೋಯಿತು (ರಕ್ತರೂ. ೫೧). **ಗುತ್ತು$_3$** : ೧. ಗುತ್ತಂ ರೂವಂಗೆ ಮಾಘ ಮಾಸದುಳ್ ಕೊಡುವದು (ಎಇ. XIV, ೧೯೦-೨೨ ; 725). [ <ಗುತ್ತಗೆ ]

**ಗುತ್ತೆದಾರ,** ಗುತ್ತಾದಾರ (ನಾ). ಭೂಮಿಯನ್ನು ಏಕಸ್ವಾಮ್ಯವಾಗಿ ಪಡೆಯುವವನು ; ಪೂರ್ಣಾಧಿಕಾರವನ್ನು ಹೊಂದಿರುವವನು : ಉಳಿದ ರೊಕ್ಕವೆಲ್ಲ ಗುತ್ತಿಗೆ ಹೊತ್ತ ಗುತ್ತೆದಾರರದೇ (ವಿಜಯ. ೧೦೮) ; ಮರುದಿನದಿಂದ ಲಿಂಗನಿಗೆ ಪೇಟೆಯ ಗಡಂಗಿನ ಗುತ್ತೇದಾರನ ಸುರಿಮಳೆ (ತೆನೆ. ೧೯). **ಗುತ್ತಾದಾರ :** (೬). [ ಗುತ್ತೆ + – ದಾರ₄ ]

**ಗುತ್ತೆದಾರಿಕೆ** (ನಾ). ಗುತ್ತಗೆ ಕೊಡುವ ಪದ್ಧತಿ : ಅತ್ಯಂತ ಭಯಪ್ರದವಾದ ಗುತ್ತೇದಾರಿಕೆಯ ಪದ್ಧತಿಯಿಂದ ಭರತಖಂಡವು ಹೇಳಲಸದಳವಾದ ಕಷ ನಷ್ಟಗಳನ್ನು ಸಹಿಸಿತು (ಖಾದಿಶಾ. ೪೧). [ ಗುತ್ತೆದಾರ + – ಇಕೆ ]

**ಗುತ್ಸ** (ನಾ). ೧. ಮೂವತ್ತೆರಡು ಎಳೆಗಳುಳ್ಳ ಮುತ್ತಿನ ಸರ : "ಗುತ್ಸಃ – ೩೨ ದಂಡೆಗಳುಳ್ಳದ್ದು" (ಸಿದ್ಧಾಂತಿ. ೧೭೪). ೨. ಹುಲ್ಲಿನ ಹೊದರು ; ಗಂಟಿಕೆ : ಸ್ತಂಬಃ, ಗುತ್ಸಃ – ೨ – ತೃಣಾದಿನಃ ಹುಲ್ಲು ಮುಂತಾದವುಗಳ ಹೊದರಿನ ಹೆಸರು ಗಂಟಿಕೆ (ಸಿದ್ಧಾಂತಿ. ೨೪೦). [ ಸಂ.]

**ಗುತ್ಸಕ** (ನಾ). = ಗುತ್ಸ ೧. [ ಸಂ. ]

**ಗುದ** (ನಾ). ದೇಹದಿಂದ ಮಲವು ಹೊರಕ್ಕೆ ಬರುವ ರಂಧ್ರ ; ಮಲದ್ವಾರ ; ತಿಕ : "ಗುದಃ, ಪಾಯುಃ, ಅಪಾನಂ – ಈ ೩ ಗುದಂ" (ಹಲಾಯು. ೮೫-೩೫೯) ; ಭಗಮಲದೊಳ್ ಕೆತ್ತುಗುಂ ಗುದಮುಗಿಗುಂ (ಪುದತಿ. ೧೧-೫೭) ; ಇಳಿದು ಗುದಗುಹ್ಯಂಗಳೊಳು ಪ್ರಾಣವದು ಪೊರಮಡಲು (ಗಗತಾ. ೮-೫೭). [ ಸಂ. ]

**ಗುದಕಾಸ** (ನಾ). ಹೊಟ್ಟೆನೋವು : "ಹೊಟ್ಟೆಬೇನೆಯದು ಗುದಕಾ [ಪಾಠಾಂ. ಖಾ]ಸಮೆನಿಸಿಕ್ಕು" (ಮಂಗರಾ. ೧೧೪-೩).

[ ಗುದ + ಕಾಸ₀ ]

**ಗುದಕೀಲಕ** (ನಾ). ಮೂಲವ್ಯಾಧಿ ; ಅರಿಸೆ ; ಮೊಳೆರೋಗ : "ಅರ್ಶಃ, ಗುದಕೀಲಕಃ – ಈ ೨ ಮೂಲವ್ಯಾಧಿ" (ಹಲಾಯು. ೯೯-೪೫೧).

[ ಗುದ + ಕೀಲಕ ]

**ಗುದಗ** 'ಗುದಿಗೆ' ನೋ.

**ಗುದಗುಲಿಕಿ** (ನಾ). ೧. (ಕರಾ) ಕಚಗುಳಿ ; ಚಕ್ಕಳಗುಳಿ ; ಕಿಕ್ಕಿಲಿ. ೨. (ಆಲಂ) ಸುಖ ; ಸಂತೋಷ ; ಆನಂದ : ಆಗ ಈಗ ನೀ ಅಷ್ಟ ಬಂದು ಮಾತಾಡ್ತೀ ಅಂತ ನಮಗೂ ಗುದಗುಲಿಕಿ ಆಗತದ (ದೀಪಹ. II, ೧೦೯). [ ← ಮರಾ. ಗುದಗುಲೀ ]

**ಗುದಗೆ** (ನಾ).=ಗುತ್ತಗೆ (?) : ಯೆಂದೆಂದಿಗುಂ ನೂಱಕೆಪಳಯಿ ಗುದಗೆ ಮರಿಯಾದೆಯಲಿ ವುತರ್‍ತ್ತ ಸಿದ್ಧಾಯುವನು ಕಲ ಮೇಲೆ ಮಡಗುವರು (ಎಕ. XIV, ತಿರುಮ. ೭೨-೨೪ ; 1309). [ ? ]

**ಗುದನಾಳ** (ನಾ). ದೊಡ್ಡ ಕರುಳಿನ ಕೆಳತುದಿ : ಮಗುವು ಆಹಾರವಿಲ್ಲದೆ ಸಣ್ಣಗಾಗುತ್ತದೆ. ಗುದನಾಳ (Rectum) ಕುಸಿಯಬಹುದು (ಕೆಲರೋ. ೩೦).

[ ಗುದ + ನಾಳ₁ (= ನಾಲ₁) ]

**ಗುದಭ್ರಂಶ** (ನಾ). ಒಂದು ಬಗೆಯ ಗುದ ರೋಗ: ವಿಷೂಚಿ, ಅತಿಸಾರಗಳಿಂದ ಶರೀರ ರೂಕ್ಷಿಸಿ ಬಡವಾಗಿ ಇದ್ದಾತಂಗೆ ನನೆ ಹೊಱಡುವದು, ಅದು ಗುದಭ್ರಂಶ ಎನಿಸಿಕೊಂಬುದು (ವೈದ್ಯಸಾ. I, ೨೨೭) ; ಶುಂಠಿ, ಓವು . . . ಕಾಯಿಸಿ ಸೇವಿಸೆ ಸರ್ವಾತಿಸಾರ, ಗುದಭ್ರಂಶ, ಉದರಶೂಲೆ ಸಹ ಮಾಣ್ಗುಂ (ಸಕವ್ಯ. ೩೨೭). [ ಗುದ + ಭ್ರಂಶ ]

**ಗುದಮುರಿಗೆ** 'ಗುದ್ದುಮುರಿಗೆ' ನೋ.

**ಗುದವಾತ** (ನಾ). ಅಪಾನವಾಯು ; ಹೂಸು : "ಶರ್ದಿಃ, ಶರ್ದುಃ, ಶರ್ದನಂ, ಶರ್ದನೀಯಂ – ಈ ೪ ಗುದವಾತಂ" (ಕಾಶಕ್ಯ. ೮೫).

[ ಗುದ + ವಾತ ]

**ಗುದಸ್ತ** (ಗು). ಕಳೆದುಹೋದ ; ಆಗಿಹೋದ. 'ಗುದಸ್ತಬಾಕಿ' ಪರಾ. [ ←ಹಿಂ. ಗುಜಶ್ತಾ ; ಮರಾ. ಗುಜಸ್ತಾ ; ಪಾರ. ಗುಂಜಸ್ತಾ ]

**ಗುದಸ್ತಬಾಕಿ,** ಗುದಸ್ತಾಬಾಕಿ (ನಾ). ಕಳೆದ ವರ್ಷದ ಬಾಕಿ,–ಉಳಿಕೆ : ಚಾಲ್ತಿ ಸಾಲಿನ ಬಾಕಿಯನ್ನೂ ಗುದಸ್ತಬಾಕಿಯನ್ನೂ ಬೇರೆ ಬೇರೆ ಹಾಕಿ ಎಂದು ಹೇಳಿದರೆ ಎರಡನ್ನೂ ತಬ್ದೀಲು ಮಾಡಿ ತಲೆ ಕೆಡಿಸುತ್ತಿದ್ದರು (ನನ್ನೂರು. ೦೫೩). **ಗುದಸ್ತಾಬಾಕಿ :** ಜಮಾಬಂದಿ ಪ್ರಕಾರ . . . ಗುದಸ್ತಾಬಾಕಿ ಸುದಾ ದಾಖಲುಮಾಡಿ (ಮಹಾವಂ. II, ೭೪). ?

[ ಗುದಸ್ತ + ಬಾಕಿ₂ ]

**ಗುದಸ್ತಾಬಾಕಿ** 'ಗುದಸ್ತಬಾಕಿ' ನೋ.

**ಗುದಸ್ಥಾನ**(ನಾ). ಗುದಪ್ರದೇಶ : ವಿಲಸಿತಾಗ್ನೇಯಕಂ ಹಂಸಂ ಎನಿಪ್ಪ ಸಲ್ಲಲಿತಾಕ್ಷರಂಗಳೆರಡಾಧಾರವೆಂಬುದೇ ಸಲೆ ಗುದಸ್ಥಾನವು (ವೀಶೈಪು. ೭-೯-೫) ; ಗುದಸ್ಥಾನ, ಮೇಹಸ್ಥಾನ . . . ಈ ಸ್ಥಳಗಳಲ್ಲಿ ನೋವು ಉಂಟಾಗಿ . . . ಈ ಲಕ್ಷಣಮುಳ್ಳುದೆ ಅಸಾಧ್ಯ ಮೂಲವ್ಯಾಧಿಯೆಂದರಿವುದು (ಸಕವ್ಯ. ೨೮೮). [ ಗುದ + ಸ್ಥಾನ ]

**ಗುದಾಂಕುರ** (ನಾ). ಮೂಲವ್ಯಾಧಿ : ಮುತ್ತದ ಬೂದಿಯೂಱಲೆ ತಚ್ಚತುರ್ಗುಣಮೆನೆ ಕೊಂಡದನಟ್ಟು ಪೂಸಿದೊಡಂ ತತ್ಕ್ಷಣದೊಳೆ ಮಾಣಿಸುಗುಂ ಗುದಾ [ಪಾಠಾಂ. ಗುಂಡಾ]ಂಕುರದೇಟಿಗೆಯಂ (ಲೋಕೋಪ. ೯-೧೪೨). [ ಗುದ + ಅಂಕುರ ]

**ಗುದಾಮ** 'ಗುದಾಮು' ನೋ.

**ಗುದಾಮು,** ಗುದಾಮ, **ಗೊದಾಮು, ಗೋದಾಮು** (ನಾ). ವಸ್ತುಗಳನ್ನು ಶೇಖರಿಸಿಡುವ ಸ್ಥಳ ; ಮಳಿಗೆ : ಗುದಾಮಿನ ಕಾಳೆಲ್ಲ ತೀರ ಬೇಕೊ ಬೇಡವೊ (ಗಾಳಿಪ. ೧೨೦) ; ಅವಳ ಪರಮಾತ್ಮನ ಆರಾಧನೆ . . . ಬಿರುಗಾಳಿಯ ಹೊಡೆತಕ್ಕೆ ಕಿತ್ತುಕೊಂಡು ಹಾರಿಹೋಗುವ ಗುದಾಮಿನ ತಗಡುಗಳಂತೆ . . . ಕಾಣತೊಡಗಿದ್ದವು (ಹೇಮಂತ. ೯೩) ; ಇತ್ತ ಅವನ ಗುದಾಮಿನಲ್ಲಿ ಸಹಸ್ರಾರು ಪೌಂಡುಗಳ ಸಾಮಾನುಗಳಿರುತ್ತವೆ (ಬೆಂಜನ್. ೧೭೮). **ಗುದಾಮ :** ಊರಲ್ಲಿ, ಬಂದವರಲ್ಲಿ, ರೈಲ್ವೆ ಗುದಾಮದಲ್ಲಿ ಕಳವು ಮಾಡಿದ ಜನರಿಂದಲೇ ಹಾಂಬುರ್ಗ ಸೆರೆಮನೆಯು ಕಿಕ್ಕಿರಿದಿತ್ತು (ಬಿರುಗಾ. ೧೫). **ಗೊದಾಮು :** ತುಂಬಿದ ಡಬ್ಬಿಗಳನ್ನು ಗೊದಾಮಿನಲ್ಲಿ ಇಟ್ಟು ಬರುತ್ತಿದ್ದೆನು (ಮೀದಿಮ. ೧೭೯). **ಗೋದಾಮು :** ಕುಮಟೆಯಿಂದ ಬಂದವರೇ ಬಂದರದಲ್ಲಿ ಭಾರೀ ಅಂಗಡಿ, ಗೋದಾಮುಗಳನ್ನು ತೆರೆದರು (ದೇಜೋಶಿ. ೪೪) ; ಮಹಲ ಅಂಗಡಿಯ ಗೋದಾಮುಹೆಗ್ಗಣವುಂಡು ಬಿಸುಟ ಜಳ್ಳಿನ ಚೀಲದಂದ . . . ಬನ್ನಿರೋ ಬನ್ನಿ (ನಡಬಂ. ೭೩-೨೨).

[ ← ಹಿಂ. ಗುದಾಮ್, ಗೋದಾಮ್ ; ಮರಾ. ಗುದಾಮ್.

/ ಇಂ. Godown; ಪೋರ್ಚ್. ಗುದಾಂವ ]

**ಗುದಿ₁** 'ಕುದಿ₂' ನೋ.

**ಗುದಿ₂** (ಕ್ರಿ). ಕಾಲುಗಳನ್ನು ಕಟ್ಟು : "ಗುದಿ – ಪಾದಬಂಧನೇ" (ಶಮುಧಾ).

[ ? ]

**ಗುದಿ₃** ಗುದೆ, ಗುದ್ದಿ, ಗುದ್ದೆ (ನಾ). ೧. ತೆಂಗು, ಅಡಕೆ ಮುಂತಾದ ಮರಗಳನ್ನು ಹತ್ತುವಾಗ ಕಾಲಿಗೆ ಕಟ್ಟಿಕೊಳ್ಳುವ ಹಗ್ಗ : ಬೆಳ್ವಾರ ಬಲೆಯ ಗುದಿಯ ಸಬಳದ ಕವಲ್ಗೋಲ . . . ಕೂಡಿ ನಡೆತಂದು ನೆರೆದರ್ (ರಾಮಾಶ್ವ. ೮೩-೨೫) ; ಹತ್ತಿರದಲ್ಲಿದ್ದ ತೆಂಗಿನ ಮರಕ್ಕೆ ಗುದಿಯನ್ನು ಹಾಕಿಕೊಳ್ಳದೆ ಹತ್ತಿ ಹತ್ತು ಎಳನೀರುಗಳನ್ನು ಕೆಡವಿದೆ (ಜಿಂಗಾಳ್ಮ. ೩೪೩). ೨. (ಕಟ್ಟಿದ) ಗೊಂಚಲು ; ಮಂಜರಿ : ಹೊಂಗಿ ಮಿಡುಕುವ ಮೀನ ಗುದಿಗಳಂ . . . ಪೂತಿಬೆಕ್ಕಂ ಹರಿಶ್ಚಂದ್ರರಾಯಂಗೆ ಕಾಣಿಕೆಯನ್ನಿತ್ತು (ಹಚಕಾ. ೫-೩) ; ಬಾಳೆಯ ಗುದಿ ಬಲಗಯ್ಯೊಳ್ ಬಾಳೆಯ ಗೊನೆ ಪೆಗಲೊಳೊಪ್ಪೆ . . . ವನಚರಂ ನಡೆತಂದಂ (ಸೂಕ್ತಿಸು. ೩-೧೭೧) ; ಅಚ್ಚಮುತ್ತಿನ ಗುದಿಗಳು ಝಲ್ಲಿ ಪಟ್ಟಿಗಳ ಕುಚ್ಚುಗಳ ಸಂದಣಿಗಳಿಂ ಕೇರಿಕೇರಿಯೊಳ್ ಪೆಚ್ಚಿದವು (ಚೆಬಮ. ೫-೩); ಪವಳದ ರನ್ನದ ಗುದಿಗಳ ಗುಡಿಗಳ್

ನವವೌಕ್ತಿಕ ರಂಗದ ದಾಂಗುಡಿಗಳ್ (ರಾ ಜ ಶೇ. ೯-೧೦ ರಗಳೆ). ೩. ಒಂದು ಬಗೆಯ ಆಯುಧ; ಗದೆ: ಅವನ ಕೊರಳಿಗೆ ಬೀಳುವಸಿಯುನು ತವಕದಲ್ಲಿ ಕಬ್ಬುನದ ಗುದಿಯಿಂ ಸವರಿ ಬೀಸಲು ಅವಳ ಕೈಯಿಂ ಬಿದ್ದುದಾ ಖಡುಗಾ (ಸಾಳ್ವಭಾ. ೨೦-೪೭). ೪. ನಡಗೆಯನ್ನು ತಡೆಯುವುದಕ್ಕಾಗಿ ದನಕರುಗಳ ಮುಂಗಾಲುಗಳ ನಡುವೆ ತೊಡಕುವಂತೆ ಕಟ್ಟುವ ಮರದ ತುಂಡು; ಗುದಿಗಾಲು. 'ಗುದಿಗೆ₁' ಪರಾ. ಗುದೆ: ೨. ಎತ್ತೆತ್ತಲುಂ ನೋಡೆ ಮುತ್ತುಗಳ ಗುದೆಗಳಿಂದೆತ್ತೆತ್ತಲುಂ ನೋಡೆ ಪವಳ ಗೊಂಚಲ್ಗಳಿಂ (ಸಿದ್ಧ ಕಾ. ೧೧-೬). ಗುದ್ದಿ: ೪. ಹವಮ್ಮ ಎಂಬೊದೆ ಎಮ್ಮೆ ಗವಮ್ಮಯೆಂಬೋದೆ ಹಗ್ಗ ಹೆಮ್ಮೆಯೆಂಬೊದೆ ಅದಕೆ ಥಮ್ಮ ಗುದ್ದಿ (ಪುರಂದ. ೨-೫೫-೧); ಆ ಆಕಳ ಹೊಡೆದು ಅದರ ಕೊರಳೊಳಗೆ ದೊಡ್ಡದೊಂದು ಗುದ್ದೀಕಟ್ಟಿ ತುರವುಂದೆಗೆ ಬಿಟ್ಟನು (ಮುಂಬಯಿ. ೩-೨೪). ೫. (ಆಲಂ) ಹೊಣೆಗಾರಿಕೆ; ಭಾರ: ಇಂಥಾ ಪುಡಾರಿಗಳಿಗೆ ಒಂದೊಂದು ಗುದ್ದೀ ಕಟ್ಟಿಬಿಟ್ಟಾರ (ಅಪನಾ. ೨೦೩); ಗುದ್ದೆ: ೩. ಹಿಡಿದ ಕತ್ತೀಗುದ್ದೆಗಳಲಿ (ಸಾರಂಗ. ೧೧). ೫. ಕೊರಳಿಗೆ ಗುದ್ದೆ ಬಿದ್ದ ಮೇಲೆ ಬುದ್ಧಿ ಬಂತು ಅಲ್ಲವೆ (ಬೆಳುಮ. ೪೭); ಹೊಸಬೀಗತನ ಮಾಡಿ ಹೆಂಡತಿಯ ಗುದ್ದೆಯನ್ನು ಕೊರಳಿಗೆ ಕಟ್ಟಿಕೊಂಡೆ (ಬಟ್ಟಹೊ. ೬೩).

ಗುದಿಯ ಸರ=ಕಂಚ್ಚುಗಳಿಂದ ಕೂಡಿದ ಆಭರಣ (?): ಗುದಿಯ ಸರವು ಕನಕಸರವ ಧರಿಸಿದನು (ಕರಿಕ. ೧೬-೪).

[ <ಗುದಿ₂./ತೆಲು. ಗುದಿ, ಗುಮಿ ]

**ಗುದಿಕಟ್ಟು** (ಕ್ರಿ). ಕೂಡಿಸಿ ಕಟ್ಟು: ಮರಗಳನ್ನು ಹತ್ತಿ, ಕಾಯಿ ಕೆಡವಿ, ಅವನ್ನು ಗುದಿಕಟ್ಟಿ . . . ಮನೆಗೆ ತಂದು ಹಾಕುತ್ತಿದ್ದ (ನನ್ನೂರು. ೧೪೩).

[ ಗುದಿ₃ + ಕಟ್ಟು₁ ]

**ಗುದಿಕಾಲು** 'ಗುದಿಗಾಲ್' ನೋ.

**ಗುದಿಕೆ** 'ಗುದ್ದಿಕೆ' ನೋ.

**ಗುದಿಗಾಲ್,** ಗುದಿಕಾಲು, ಗುದಿಗಾಲು (ನಾ). ೧. ದನಕರುಗಳು ಸ್ವೇಚ್ಛೆಯಾಗಿ ತಿರುಗದಿರಲೆಂದು ಕಾಲಿಗೂ ಕೊರಳಿಗೂ ಗುದಿಯನ್ನು ಸೇರಿಸಿ ಕಟ್ಟಿರುವುದು: ಒದೆ ನೂಕು ಪೊಯ್ ವಜ್ರಪಾಶದಿಂದಿಟ್ಟು ಹಿಡಿ ಗುದಿಗಾಲ್ಗಳಿಂ ಕಟ್ಟಿ ಗೋತವುಂ ತೆಗೆ (ಸಿಂಗಿರಾ. ೩-೧೮). ಗುದಿಕಾಲು: ೧. ಈ ಹಸುವಿಗೆ ಗುದಿಕಾಲು ಹಾಕಿ ಬಿಡಬೇಕಾಗಿದೆ (ರೂಢಿ). ಗುದಿಗಾಲು: ೨. ಮರ ಹತ್ತುವುದಕ್ಕಾಗಿ ಗಂದಿಹಾಕಿಕೊಂಡಿರುವ ಕಾಲು: ಗುದಿಗಾಲಿನಿಂದ ತೆಂಗಿನಮರ ಹತ್ತಬೇಕು (ರೂಢಿ). ೩. (ಆಲಂ) ಅಡ್ಡಿ; ತಡೆ: ಅವುಗಳ ವರ್ಣನೆ ಓದುಗರ ಸಹನೆಯನ್ನು ಪರೀಕ್ಷಿಸುವಂತಿದೆ; ಕಥಾಕ್ರಿಯೆಗೆ ಗುದಿಗಾಲು ಹೂಡಿದಂತಿದೆ (ನಂಜುಂಡ. ೫೭). [ ಗುದಿ₃ + ಕಾಲ್₁ ]

**ಗುದಿಗಾಲು** 'ಗುದಿಗಾಲ್' ನೋ.

**ಗುದಿಗೆ,** ಗುದಗ, ಗುದುಗ, ಗುದುಗೆ (ನಾ). ೧. ಒನಕೆಯಂತೆ ದಪ್ಪನಾಗಿರುವ (ಲೋಹದ ಕಟ್ಟನ್ನುಳ್ಳ) ದೊಣ್ಣೆ,–ದಡಿ: ಗಟ್ಟಿ ಚಿನ್ನದ ಬೆಳ್ಳಿಯ ಗುದಿಗೆಯು ಕೆಯ್ಯ ಜಟ್ಟಿಗಳ್ . . . ಬೊಬ್ಬಿಟ್ಟುದು ರಾಯ ನೇಳ್ಗೆಯುಲಿ (ಮೋಹತ. ೨೦-೫೮); ಗುದಿಗೆ ಹಿಡಿದು ಕೊಂದಪೆನೆನುತ್ತು ರಗನಂ ಬರಲು ಬೆದರಿ ಉರಗೇಂದ್ರಂ ನುಡಿದಂ (ತುರಂಗ. ೨-೩೭); ನದಿ ದಾಟಬೇಕಾದರೆ ಗುದಿಗೆಯಿಂದ ಆದೀತೆ (ಗಾದೆ). ಗುದಗ: ೨. ಬಾಗಿಲನ್ನು ಮುಚ್ಚಿ ಭದ್ರಪಡಿಸುವುದಕ್ಕೆ ಆಧಾರವಾಗಿ ಕೊಡುವ ಊರೆ ಗೋಲು: (ಕ). ೩. (ಉಕ) ತುಂಬ ದಪ್ಪನಾದ ವ್ಯಕ್ತಿ; ಟೊಣಪ; ದಡಿಗ: ಅವನೊಬ್ಬ ಗುದಗ (ರೂಢಿ). ಗುದುಗ: ೩. ಗುಗ್ಗರಿ ಊಟಲ್ಲೋ ಗುದುಗ ಹೆಂಗಸಲ್ಲೊ ಉದ್ದೀನಬ್ಯಾಳಿ ರುಚಿಯಲ್ಲೋ (ಕಜಾಗೀ. ೬೩). ಗುದುಗೆ: ೧. ಭಾಂಡತತಿಗೊಂದು ಗುದುಗೆಯ ಪೆಟ್ಟು ಸಾಲದೇ (ಜೆಬಪು. ೫೦-೪೩). [ ಗುದಿ₃ + – ಗೆ./ತುಳು. ಗುದಿಗೆ ]

**ಗುದಿಗೆಕಲ್ಲು** (ನಾ). ಯುದ್ಧದಲ್ಲಿ ಬಳಸುವ ಒಂದು ಸಾಧನ; ಒಂದು ಯುದ್ಧಸಾಧನ: ಆಗ ಯುದ್ಧರಂಗದಲ್ಲಿ ಬಳಸುತ್ತಿದ್ದ ಸಾಮಾನು ಸರಕುಗಳಲ್ಲಿ ಮತ್ತು ಆಯುಧಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಕೊಟ್ಟಿದೆ: ಗುದಿಗೆ . . . ಮರುಳುಕೈ, ಗುದಿಗೆಕಲ್ಲು, ಗುಂಟ, ಕೊರಡು, ಬುರುಡೆ (ನಂಜುಂಡ. ೧೩೦). [ ಗುದಿಗೆ + ಕಲ್ಲು (<ಕಲ್₃) ]

**ಗುದಿಗೆಯ್** (ಕ್ರಿ). ಕೂಡಿಸಿ ಕಟ್ಟು; ಒಟ್ಟಿಗೆ ಕಟ್ಟು; ಪೋಣಿಸು: ಪರಿಪರಿಯ ವಿಮಾನ್ಗಳಂ ಗುದಿಗೆಯ್ದಿರು (ಹರಿಕಾ. ೫-೪೫); ಅಂತವೆಲ್ಲಮಂ ಗುದಿಗೆಯ್ದು ಕಾಳಮೇಘಂ ತಡಿಗೆಯ್ದು ನಿಂದಿರ್ಪಿನಂ (ರಾಜಶೇ. ೫-೧೧೫ ವ).

[ ಗುದಿ₃ + ಕೆಯ್₁ ]

**ಗುದಿಗೆಶಾಸ್ತ್ರ** (ನಾ). ದಂಡನೀತಿ; ದಂಡೋಪಾಯ: ಇವರನ್ನು ಮರ್ದನ ಮಾಡಲಿಕ್ಕೆ ಬೇಕು ಗುದಿಗೆಶಾಸ್ತ್ರ (ಬಾಳಿಗಿ. ೧೩೨). [ ಗುದಿಗೆ + ಶಾಸ್ತ್ರ ]

**ಗುದಿಗೆಹೊಯ್ಲು** (ನಾ). ದೊಣ್ಣೆಯ ಏಟು,–ಪೆಟ್ಟು: ಗುದಿಗೆಹೊಯ್ಲಲಿ ಕೆಲರು ಲಾಂಗೂಲದ ವಿಘಾತದಿ ಕೆಲರು ಮಡಿದರು (ಅನಂರಾ. ೫-೮-೩೯).

[ ಗುದಿಗೆ + ಹೊಯ್ಲು (<ಪೊಯ್ಲು) ]

**ಗುದಿಮಕ್ಷಿಕ** (ನಾ). ಬಂಧನಕ್ಕೆ ಸಿಕ್ಕಿದ ನೊಣ: ಇವರಡಿಯಲ್ಲಿ ಬಂದಡೆ ಇವರನೊಡಗೂಡಿ ನುಡಿದೆನಾದಡೆ ಜೇನಗಡಿಗೆಯಲ್ಲಿ ಬಿದ್ದ ಗುದಿಮಕ್ಷಿಕನಂತೆ (ಮೋಳಿಮಾ. ೨೨-೮೫). [ ಗುದಿ₃ + ಮಕ್ಷಿಕ ]

**ಗುದುಕು₁** (ಕ್ರಿ). ಚಿಮ್ಮು; ನೆಗೆ; ಹಾರು: ಛಟ್ಟನೆ ಬಂಡೆಯಿಂದ ಗುದುಕಿ, ಹೀಗೆಯೇ ಹೋಗಿ ಶಿನ್ನನನ್ನಾದರೂ ಮಾತನಾಡಿಸಿ ಬರೋಣ (ಮೂರುದಾ. ೧೧೦). [ <ಕುದುಕು₁ ]

**ಗುದುಕು₂** (ನಾ). ನೆಗೆತ; ಹಾರುವಿಕೆ: ಮಿಸುನ್ಮೃಗಪಕ್ಷಿಯನಾಂತುಕೊಂಡು ಕೋಸಲೆಯ ಪುಳಿಂದನೊಂದೆ ಗುದುಕಿಂ ಬರುತಿರ್ದನದೊಂದು ತಾಣದೊಳ್ (ಸೂಕ್ತಿಸು. ೩-೧೬೩). [ < ಗುದುಕು₁ ]

**ಗುದುಗ** 'ಗುದಿಗೆ' ನೋ.

**ಗುದುಗುದಿಸು** (ಕ್ರಿ). ೧. ಉತ್ಸಾಹ ಹೊಂದು; ಆತುರಪಡು: ಬಂದು ಪ್ರವೇಶಕಾಲದೊಳು ಗುದುಗುದಿಸಿ ತ[ಕ]ದುಪಿಂದಾದ ತೀಂಟೆಯುಂಗಜಗೇಹದಾಕೆಗಂ ಕಂದರಾಗರು ಬಂಜೆಯಾಗಿರ್ಪಳು (ವೀಶೈಪು. ೪-೨೦-೩೦). ೨. ಕೊರೆ: ಕಿವಿಪೊಕ್ಕ ಕೀಡಿಯಂದದಿ ಕೆಡುಕೆ ಮನದಿ ಗುದುಗುದಿಸುತಿದೆ (ಹೆಬ್ಬರ. ೨೦-೧೦೩). [ ಗುದುಗುದು₀ + – ಇಸು₃ ]

**ಗುದುಗೆ** 'ಗುದಿಗೆ' ನೋ.

**ಗುದುಮುರಿಗೆ** 'ಗುದ್ದುಮುರಿಗೆ' ನೋ.

**ಗುದುಮುರಿಗೆ** 'ಗುದ್ದುಮುರಿಗೆ' ನೋ.

**ಗುದೆ** 'ಗುದಿ₃' ನೋ.

**ಗುದ್ದ** 'ಗೋದ₁' ನೋ.

**ಗುದ್ದರಿಸು** (ಕ್ರಿ). ೧. ತಿವಿಸು; ನೂಕಿಸು: ಆನೆಗಳಿಂದ ಗುದ್ದರಿಸುವುದಕ್ಕೆ ಆಗದ ಹಾಗೆ . . . ಕಬ್ಬಿಣದ ಗಡಾರಿಗಳನ್ನು ನಾಟಿದ್ದರು (ಭಾರವೀ. ೦೦೦). ೨. ದಬ್ಬು; ತಳ್ಳು; ನೂಕು: ಕೋರ್ಟಿನಲ್ಲಿದ್ದ ಗಂಡಸರ ಕಣ್ಣುಗಳೆಲ್ಲ ಇದ್ದಕ್ಕಿದ್ದಂತೆ ಅವಳ ಕಡೆಗೆ ತಿರುಗಿ . . . ಜೈಲುಡುಪನ್ನು ಗುದ್ದರಿಸಿ ಕೊಂಡು ಮೇಲುಬ್ಬಿ ಕಾಣುತ್ತಿದ್ದ ಎದೆಯ ಮೇಲೆ ನಲಿದು ನಾಟಿ ನಿಂತುವು (ಪುನರು. ೩೪). [ ಗುದ್ದು₂ (<ಗುರ್ದು₂) + – ಇಸು₃ ]

**ಗುದ್ದಲಿ** (ನಾ). ನೆಲವನ್ನು ಅಗೆಯಲು ಉಪಯೋಗಿಸುವ ಕಬ್ಬಿಣದ ಒಂದು ಸಾಧನ,–ಮುಟ್ಟು: "ಗೋದಾರಣಂ, ಕುದ್ದಾಲಂ–ಈ ೨ ಗುದ್ದಲಿ" (ಹಲಾಯು. ೫೪-೪೨೩); ನಿನ್ನ ಗುಣಮುನಾರಯ್ವೆನೆಂಬಾತಂ ಚಾಮಿಾಕರಶೈಲಮಂ ಗುದ್ದಲಿಯಿಂದಗುಟ್ದು[ಕೆಡೆಯೆ] ನೂಂಕುವೆನೆಂಬೆಗ್ಗನಂ ಪೋಲ್ಕುಂ (ಧರ್ಮಾಮೃ. ೪-೧೮೫); ತನುವ ತೋಟವ ಮಾಡಿ ಮನವ ಗುದ್ದಲಿ [ಪಾಠಾಂ. ಲೆ]ಯ ಮಾಡಿ ಅಗಿದು ಕಳೆದೆನಯ್ಯಾ ಭ್ರಾಂತಿನ

ಬೇರೊಡೆದು (ಅವಚಂ. ೧೮೦-೮೧೨) ; (ಶೂನ್ಯಸಂ. ೧೦-೨೯ ನೋ). ಗುದ್ದರು ಗದ್ದಲಿಯನೆತ್ತಿಯುಗೆಯತೊಡಗಿದರಲಸದೆ (ಸಿದ್ಧರಾ. ೪-೧೯) ; ಮಾತಿನ ಗುದ್ದಲಿಯಿಂದ . . . ಜ್ಞಾನದ ಚಿಲುಮೆಯನ್ನು ಚಿಮ್ಮಿಸಿದ ವಾಣಿಯದು (ರಾಮಾನಿ. ೧೦೭) ; ಮುದ್ದೆಗೆ ಎದ್ದು, ಗುದ್ದಲಿಗೆ ಬಿದ್ದ (ಗಾದೆ).

[ ದೇ॥ ತಮಿ. ಕುನ್ನಾಲಿ, ಕುನ್ನಾಳಿ ;ಮಲ. ಕುನ್ನಾಲಿ ; ತುಳು. ಗುದ್ದಲಿ, ಗುದ್ದೊಲಿ ; ಕೊಡ. ಗುದ್ದಲಿ ; ತೆಲು. ಗುದ್ದಲಿ./ಸಂ. ಕುದ್ದಾಲ ]

**ಗುದ್ದಲಿಗೊಳ್** (ಕ್ರಿ). ೧. ಗುದ್ದಲಿಯನ್ನು ತೆಗೆದುಕೊಳ್ಳು ; ಅಗೆಯು ವುದಕ್ಕಾಗಿ ಗುದ್ದಲಿಯನ್ನು ಎತ್ತು ; **ಅಗೆ :** ಅಂತು ಪುಡಿಗತ್ತುರಿಯೆಂದು ಪಿಡಿಕೈಸಿ ಪೂಸಲುಂ ಪಾಸಿ ಮೊಟ್ಟಿಗಟ್ಟಲುಂ ಮಿಹಿರಂಗ ಮಿಂದುಗಂ ಗುದ್ದಲಿಗೊಂಡಗುಟ್ಟು (ಅರ್ಧನೇ. ೫-೧೮ ವ) ; ಕುಲನಾಶಕನು ಹುಟ್ಟಲು ಕುಲವಳಿದು ಪೋಕು ಕುಲದ ಬೇರಿಗೆ ನೀನೆ ಗುದ್ದಲಿಗೊಳಲದೇಕೆ ಸುಪುತ್ರನಾಗಿ (ಬಸಪು. ೩-೫೮). [ ಗುದ್ದಲಿ + ಕೊಳ್$_1$ ]

**ಗುದ್ದಲಿಪೂಜೆ** (ನಾ). ಹೊಸದಾಗಿ ಕಟ್ಟಡವನ್ನು ಕಟ್ಟಲು ಪ್ರಾರಂಭಿಸುವಾಗ ಗುದ್ದಲಿ ಮುಂತಾದವುಗಳಿಗೆ ಮಾಡುವ ಪೂಜೆ ಮತ್ತು ಅದರ **ಸಮಾರಂಭ:** ದ್ರೋಣನು . . . ಸಮತಲವಾಗಿದ್ದ ಒಂದು ಬಯಲನ್ನು ಆರಿಸಿಕೊಂಡು ಗುದ್ದಲಿಪೂಜೆಯನ್ನು ಮಾಡಿಸಿದನು (ವಚಭಾ. ೨೨).

[ ಗುದ್ದಲಿ + ಪೂಜೆ$_2$ ]

**ಗುದ್ದಲಿವಲ್** (ನಾ). ಗುದ್ದಲಿಯಂತೆ ಇರುವ ಹಲ್ಲು : ಸಲಿಕೆವಲ್ಲ ಗುದ್ದಲಿವಲ್ಲ ಭೂತ ನಮಿಸಿದವಕ್ಕಗೆ (ಮದೇಪು. ೩೩-೧೧).

[ ಗರಿದ್ದಲಿ + ಪಲ್ ]

**ಗುದ್ದಲಿಸು** (ಕ್ರಿ). ಮೋಸಮಾಡು ; ವಂಚಿಸು : "ಮಂಘತೇ = ಗುದ್ದಲಿಸಿದಪಂ" (ಕಾಶಕ್ಕ. ೯೨). [ ? ]

**ಗುದ್ದವ್ವ** (ನಾ). ಒಂದು ಕ್ಷುದ್ರದೇವತೆಯ ಹೆಸರು :

**ಗುದ್ದವ್ವನ ಬೇನೆ** = ಮೈಯಲ್ಲೆಲ್ಲಾ ಗುದ್ದಿದಂತೆ ನೋವು ಉಂಟು ಮಾಡುವ, ಜ್ವರ ಸಹಿತವಾದ ಒಂದು ರೋಗ ; ಇನ್‌ಫ್ಲುಯೆಂಜಾ: ಸಾತಾರೆಗೆ ಮೊದಲ ಸಲ ಗುದ್ದವ್ವನ ಬೇನೆ ಬಂತು (ಸ್ಮೃತಿಜಿ. ೪೩೭) ; ಓಡುಗಿನ ಜಂತುಗಳ ಹಾವಳಿಯನ್ನು ತಡೆಯಲಾರದೆ ತುತ್ತಾದರು ಅಸಂಖ್ಯ ಜನ. ಅದುವೆ ಗುದ್ದವ್ವನ (ಇನ್‌ಫ್ಲುಯೆಂಜಾ) ಬೇನೆ (ಶ್ರೀರಂಗ. ೩೦).

[ ಗುದ್ದು$_2$ (< ಗುರ್ದು$_2$) + ಅವ್ವ$_1$ (< ಅವ್ವೆ) ]

**ಗುದ್ದಾಟ** (ನಾ). ೧. ಒಬ್ಬರಿಗೊಬ್ಬರು ಗುದ್ದುವುದು ; **ಗುದ್ದಾಡುವುದು.** ೨. ಜಗಳ ; **ಕಲಹ :** ಇವನ ಕೂಡ ಯಾಕೆ ಗುದ್ದಾಟ ? (ನಡೆದಾ. I, ೩೧೯) ; ಅಸಲಿಗೆ ಮೋಸ, ಲಾಭಕ್ಕೆ ಗುದ್ದಾಟ (ಗಾದೆ).

[ ಗುದ್ದು$_2$ (< ಗುರ್ದು$_2$) + ಆಟ ]

**ಗುದ್ದಾಡು** (ಕ್ರಿ). ಹೋರಾಡು ; ಸೆಣಸಾಡು ; **ಹೆಣಗು :** ಅದ್ದಿಕದವರಾಜ್ಞೆಯಲಿ ಸಂಕಲ್ಪವ ತಿದ್ದಿಕೊಂಡೊಳಪುಗುವುದಕೆ ಗುದ್ದಾಡಿದರು (ಮೋಹತ. ೩-೪೮) ; ಮಧ್ಯಾಹ್ನದವರೆಗೆ ಗುದ್ದಾಡಿದರೂ ಆ ಬಂಡೆಗಲ್ಲು ಸರಿಯಲಿಲ್ಲ (ಮೇದಿಮ. ೧೨೨) ; ಗಾಣಿಗನ ಸಂಗಡ ಗುದ್ದಾಡಿ ಒಣ ರೊಟ್ಟಿಯನ್ನು ತಿಂದರಂತೆ (ಗಾದೆ).

[ ಗುದ್ದು$_2$ (< ಗುರ್ದು$_2$) + ಆಡು$_1$ ]

**ಗುದ್ದಿ** 'ಗುದಿ$_3$' ನೋ.

**ಗುದ್ದಿಕೆ,** ಗುದಿಕೆ (ನಾ). ಗುದ್ದುವಿಕೆ ; **ಹೊಡೆತ :** "ಸುಮ್ಮನೆ ಯಾಕೆ ಹೊಡೆಯುತ್ತೀರಿ ? " ಎಂದು ಗುದ್ದಿಕೆಯನ್ನು ಸಹಿಸಿ . . . ಪ್ರಶ್ನಿಸಿದನು (ನಿರಾಥ. ೮೭). **ಗುದಿಕೆ :** ಒಬ್ಬಳಿರ್ದೊಡೆ ಹೊದಿಕೆಯಿಬ್ಬರಾದೊಡೆ ಗುದಿಕೆ (ಮಹಾಂತೇ. ೨೮-೨೭) ; ಅಬ್ಬಬ್ಬ ! ಏನು ಆ ಗುದಿಕೆಗಳು ! ಅವನ ಹೊಡೆತಕ್ಕೆ ಇಬ್ಬರೂ ಕಂಗೆಟ್ಟರು (ಕುರಿಹಿಂ. ೧೨೨).

[ ಗುದ್ದು$_2$ (< ಗುರ್ದು$_2$) + – ಇಕೆ ]

**ಗುದ್ದು$_1$** 'ಗುರ್ದು$_1$' ನೋ.

**ಗುದ್ದು$_2$** 'ಗುರ್ದು$_2$' ನೋ.

**ಗುದ್ದು$_3$** (ನಾ). ಬಿಲ ; ಗುಳಿ; **ಪೊಟರೆ :** ಇಂತೀ ವೆಜ್ಜದಜ್ಜಿಯ ಗುದ್ದಿನಲ್ಲಿ ಬಿದ್ದವಂಗೆ ನಿರ್ಧರವಿಲ್ಲ (ನಗೆಮಾ. ४೦) ; ಬಿದ್ದ ದೇಹವನು ಗುದ್ದಿನೊಳಗಿಡುವಾಗ ಬುದ್ಧಿ ಬಂದಪುದೆ (ಸರ್ವಜ್ಞ. ೭೯೫) ; ಬಂಡೆಯುಡಿ ಗುದ್ದಿನೊಳಗೊರಗಿ ನಿದ್ದೆಯೊಳಿದ್ದ ಕಣೆಹಂದಿಗಳ್ (ಶ್ರೀರಾಮಾ. ೫೯೮-೬೦೦).

[ ? ]

**ಗುದ್ದುಕಂಬ** (ನಾ). ಕಟ್ಟಡ ಮೊದಲಾದುವುಗಳಿಗೆ ಆಧಾರಭೂತವಾದ ಕಂಭ ;**ಆನಿಕ :** ಒಂದು ಕಮಾನಿಗೆ ಅಥವಾ ಸೇತುವೆಗೆ ಆಧಾರವಾಗಿರುವ ಕಟ್ಟಡದ ಭಾಗ ; ಕಮಾನಿನ ಗುದ್ದುಕಂಬ (Abutment. ಇಂಕನಿ).

[ ಗುದ್ದು$_2$ (<ಗುದ್ದು$_2$) + ಕಂಬ$_1$ (< ಕಂಭ) ]

**ಗುದ್ದುಗಣ್ಣು** (ನಾ). ಕುಳಿಬಿದ್ದ ಕಣ್ಣು ; **ಗುಳಿಗಣ್ಣು :** ಬಿದ್ದ ಮೊಲೆಯವರು ಕೆಂಗರಿಗಣ್ಣು ಹರಿದಲೆಯು ಗುದ್ದುಗಣ್ಣಿನ ಮುದ್ದೆಮೂಗು ಹರಿಗಿವಿಗಳಿಂ (ಮರುಜಾ. ೨-೪೦); ಗುದ್ದುಗಣ್ಣಾದವಗೆ ಮುದ್ದು ಹೆಂಗಸು ಏಕೆ (ಸರ್ವಜ್ಞ. ೧೮೦೪). [ ಗುದ್ದು$_3$ + ಕಣ್ಣು (< ಕಣ್) ]

**ಗುದ್ದುಗೆಡಹು** (ಕ್ರಿ). ಹತ್ತಿಕ್ಕು ; **ಅಂಕೆಗೊಳಿಸು :** ತುಟಿ ಬಿಗಿಹಿಡಿದರೂ ಗದ್ದಗಳನ್ನು ಬಿಗಿದುಕೊಂಡು ಗುದ್ದುಗೆಡಹಿಕೊಂಡಿದ್ದರೂ ಆ ಅಳುವನ್ನು ತಡೆಯಲಾರದೆ ಬಿಕ್ಕಿ ಬಿಕ್ಕಿ ಅಳುತ್ತಾಳೆ (ಬೆಳುಮ. ೮೪).

[ <ಗುದ್ದು$_2$ + ಕೆಡಹು (< ಕೆಡಪು) ]

**ಗುದ್ದುಮಳಿ** (ನಾ). **ತುಮುಲ :** ಗಾಳಿ ಮಸೆಮಂಬುಧಿಯು ಸದ್ದೆದ್ದುದೆ ಗುದ್ದುಮಳಿ ಗದ್ದಲಂ (ಶ್ರೀರಾಮಾ. ೮೩೯-೩೩೯).

[ ಗುದ್ದು$_2$ ( < ಗುರ್ದು$_2$) + ? ]

**ಗುದ್ದುಮುರಿಗೆ,** ಗುದಮುರಿಗೆ, ಗುದುಮರಿಗೆ, ಗುದುಮುರಿಗೆ (ನಾ). ಗುದ್ದಾಟ ; **ಹೊಡೆದಾಟ :** ಬಾರದ ನಿದ್ದೆಯೊಡನೆ ಏಕೆ ಗುದ್ದುಮುರಿಗೆ ಹಾಕಬೇಕೆಂದು ಎದ್ದು ಕುಳಿತನು (ಬೆಳಭಾ. ४೦). **ಗುದಮುರಿಗೆ :** ಸಿಟ್ಟು ದುಃಖ ಎರಡೂ ಅವನ ಎದೆಯಲ್ಲಿ ಗುದಮುರಿಗೆ ಹಾಕುತ್ತಿದ್ದವು (ಗ್ರಾಮಾಯ. ೮೮). **ಗುದುಮರಿಗೆ :** ಒಂದೊಂದು ಅನ್ಯಾಯವು . . . ತನ್ನೊತನೆ ಗುದುಮರಿಗೆ ಹಾಕಲು ಕರೆಯುವದು (ಜನನಾ. ೨೯). **ಗುದುಮುರಿಗೆ :** ಗುದುಮುರಿಗೆಗೆ ಮುದಿಮರ ಬಿದ್ದಾವು (ಮುಕ್ತಕಂ. ೭೦-೨೦); ಹೀಗೆ ಒಂದೇ ಸಮನೆ ಅವರಿಬ್ಬರ ಗುದುಮುರಿಗೆಯು ನಡೆದಿರಲು ರಾಮರಾಜನ ಕಠಾರಿಯ ಇರಿತಗಳಿಂದ ಹುಲಿಯು ನೆಲಕ್ಕೆ ಉರುಳಿತು (ಕನ್ನಡಿ. ೬) ; ಕರಡಿಯ ಗುದುಮುರಿಗೆಗೆ ಗುರಿಯಾಗಬೇಕು (ವಿಜಾವಾ. ೫೯); ಈ ಗುದುಮುರಿಗೆ ಅರ್ಧತಾಸಿನಲ್ಲಿಯೆ ಕೊನೆಗಂಡಿತಾದರೂ ಒಂಭತ್ತು ಗುಡಿಸಲುಗಳು ಬೂದಿಯಾಗಿ ಮಣ್ಣುಗೂಡಿ ಬಿಟ್ಟಿದ್ದವು (ಮಥುನ. ೨೪) ; ಹೀಗೆ ರಾಮ ಕೃಷ್ಣರು ಯಾರ ಲಕ್ಷವೂ ಇಲ್ಲದೆ ಹಾಕಿದ ಗುದುಮುರಿಗೆಯನ್ನು ಕೇಳಿ ಕಂಸನು ಹೆದರಿ ಹೋದನು (ಭಾಮೃತ. ೩४३).

[ ಗುದ್ದು$_2$ (< ಗುರ್ದು$_2$) + ಮುರಿಗೆ ]

**ಗುದ್ದುಮೊಳ** (ನಾ). ಮುಷ್ಟಿಹಿಡಿದು ಅಳೆಯುವ ಮೊಳ; **ರತ್ನಿ :** ಅದರ ತಲೆಯ ಮೇಲೆ ಕಟ್ಟಿಗಿಂತ ಗುದ್ದುಮೊಳ ಎತ್ತರವಾಗಿ (ಶಭಾಗಿ. ೨೭). [ ಗುದ್ದು$_2$ (< ಗುರ್ದು$_2$) + ಮೊಳ (< ಮೊಬ) ]

**ಗುದ್ದೆ** 'ಗುದಿ$_3$' ನೋ.

**ಗುದ್ದೇಡಿ** (ನಾ). ಗುಳಿಯನ್ನು ತೋಡುವ ಏಡಿ : ಅಟ್ಟಟ್ಟಿ ಮಟ್ಟಿಯನು ಗಟ್ಟಿಯಾಗಿಯೆ ಬಡಿದು ನೆಟ್ಟನೆ ಸ್ವರ್ಗ ಪಡೆಯುವಡೆ ಗುದ್ದೇಡಿ ಕೆಟ್ಟಿ ಕೇಡೇನು (ಸರ್ವಜ್ಞ. ೯೨೫). [ ಗುದ್ದು$_2$ (<ಗುರ್ದು$_2$) + ಏಡಿ$_1$ ]

**ಗುನಗ** (ನಾ). "ಹೊಲೆಯ" (ಜಾನಕೋ. ४೯): ಅದು ಹುಲಿದೇವರ ಮನೆಯಲ್ಲಿ ಗುನಗರ ಪೂಜೆಯು ಗಂ ಎಂದು ರಾಮಿ ದೃಢಪಡಿಸಿದಳು

(ಹೊಸಕ್ಷ. ೭೦); ಒಂದು ರೋಗದ ಕುರಿತು ವೈದ್ಯಕೀಯತಜ್ಞನೇ ಅಧಿಕಾರಿಯೇ ಹೊರತು ಗುಡಿಗುಂಡಾರಗಳ ಪೂಜಾರಿ ಗುನಗರಲ್ಲ (ವಿಜಾವಾ. ೧೦೬). [ ? ]

**ಗುನಗು₁**, ಗುನುಗು₂ (ನಾ). ೧. ಪರಿವಾರ; ಕುಟುಂಬ: ಅಣ್ಣ ತಮ್ಮಂದಿರಾದ ಮೂರುಜನ ನಾಯಕರು ದಿಳ್ಳಿಯ ದೊರೆಗಳಲ್ಲಿದ್ದಂತೆಯೂ ಅಲ್ಲಿಂದ ಗುನಗು ಸಮೇತ ದಕ್ಷಿಣಕ್ಕೆ ದುರ್ಗದ ಸೀಮೆಗೆ ಬಂದಂತೆಯೂ ತಿಳಿಯಬಂದಿದೆ (ಚಿತ್ರಪಾ. ೨ ಉಪೋದ್ಘಾತ). ೨. ಸೇನೆಯ ಹಿಂಭಾಗದಲ್ಲಿರುವವರು; ಹಿಂದಳ: (ಶ). **ಗುನುಗು₂**: ೧. ನೀರ ತಡಿ ಬಳಿಯಲ್ಲಿ ಇಳಿದುಕೊಂಡಿದ್ದ ನಾಗತಿಯರು ಕುಮಾರಿಯರು ಕುಮಾರರು ಮುಂತಾದ ಸಕಲ ಗುನುಗು ಸಹಾ ದುರ್ಗಕ್ಕೆ ಬಂದರು (ಚಿತ್ರಪಾ. ೫೭). ೨. ಬಹಳ ಜನಕ್ಕೆ ಜಾಯ ಜಖಮಿ ಆದ್ದರಿಂದ ಲಾಚಾರಾಗಿ, ರಸ್ತು ಗುನುಗು ಬಿಟ್ಟು, ಅಗಾಡಿ ಇದ್ದ ಫೌಜಿಗೆ ಕೂಡತಕ್ಕ ಬಗ್ಗೆ ಧೈರ್ಯಗುಂದಿ (ರಾಜೇಂದ್ರ. ೨೩). ೩. ಮಂಸುಕಂ (?): ಪಿಚಾಡಿಗೆ ಜಾನ್‌ಕಸ್ತೂರಿ ಆಗಿಕೊಂಡು ಮಧ್ಯ ಗುನುಗು ಹಾಕಿಕೊಂಡು, ಮಲೆಯಾಳದ ಕಡೆಗೆ ಹೋಗುತ್ತ ಇದ್ದಲ್ಲಿ (ರಾಜೇಂದ್ರ. ೨೨). [ ? ]

**ಗುನಗು₂** 'ಗುನುಗು₃' ನೋ.

**ಗುನಿ₁** 'ಕುನಿ₃' ನೋ.

**ಗುನಿ₂** (ನಾ). ಕಾಗದ, ಬಟ್ಟೆಗಳನ್ನು ಛಿದ್ರಗೊಳಿಸುವ ಒಂದು ಜಾತಿಯ ಹುಳು; ನುಸಿ: ಒಂದು ಜಾತಿಯ ಗುನಿಯು ತನ್ನ ತತ್ತಿಗಳನ್ನು ಮಳೆಗಾಲದೊಳಗೆ ಹಾಕುತ್ತದೆ (ಮುಂಬಯಿ. ೫-೦೪೪).

[ <ಸಂ. ಘುಣ ]

**ಗುನಿಗಡಿ** (ಕ್ರಿ). ನುಸಿ ಹೊಡೆ; ಹುಳು ತಿನ್ನು; ಛಿದ್ರಛಿದ್ರವಾಗು: (ರೇಶಿಮೆ ಮೊನಿನಿಂದ) ಮಾಡಿದ ಪ್ರಾವರಣಗಳು . . . ಬಹುದಿವಸ ತಾಳುತ್ತವೆ; ಆದರೆ ಬೇಗ ಗುನಿಗಡಿಯುವವು (ಮುಂಬಯಿ. ೬-೩೪೯).

[ ಗುನಿ₂ + ಕಡಿ₂ ]

**ಗುನಿಗುಂಜಿ** 'ಗುರುಗುಂಜಿ' ನೋ.

**ಗುನಿದೊಣ್ಣೆ** (ನಾ). ಗುನಿಯನ್ನು ಬಿಡಿಸುವುದಕ್ಕಾಗಿ ರಾಗಿ ಬಡಿಯುವ ದಪ್ಪಕೋಲು: ರಾಗಿಯನ್ನು ಬಡಿದು ಕಾಳು ಬಿಡಿಸುವುದು ಕಷ್ಟ . . . ತುಂಡಾದ ಹಾಗೂ ಗಟ್ಟಿಯಾದ ಕೋಲು ಬೇಕು. ಅಂಥ ಕೋಲಿಗೆ ಗುನಿದೊಣ್ಣೆ ಎನ್ನುತ್ತಾರೆ (ನನ್ನೂರು. ಟಿಪ್ಪಣಿ).

[ ಗುನಿ₁ (<ಕುನಿ₃) + ದೊಣ್ಣೆ ]

**ಗುನುಗು₁** 'ಗುಣುಗು' ನೋ.

**ಗುನುಗು₂** 'ಗುನಗು₁' ನೋ.

**ಗುನುಗು₃**, ಗುನಗು₂, ಗುಲುಗು₁ (ನಾ). ತೊಂದರೆ; ಕೇಡು; ಉಪದ್ರವ: ಈತನಿಗೇನು ಗುನುಗು ? (ಮನೋರಂ. ೧೨೨); ಸ್ವಸ್ಥವಾಗಿಲ್ಲದೆ ಏನು ಗುನುಗು ? (ರೂಪಸ. ೩೫). **ಗುನಗು₂**: ಯಾಕೋ, ಅವನಿಗೇನು ಗುನಗಾಗಿತ್ತು (ರೂಢಿ). **ಗುಲುಗು₁**: ಕರಣೇಂದ್ರಿಯ ಗುಲ್ಮದ ಗುಲುಗ[ಪಾಠಾಂ. ಗಲಗ]ಕಿತ್ತು (ಅಚಿಮಾ. ೧೨೦-೫೫); ಸಂಸಾರ ನಡೆಸಿಕೊಂಡು ಸುಖವಾಗಿರಲಿ, ಅವರಿಗೇನು ಗುಲುಗು ? (ಮಹಾಗ. ೦೭೦). [ ? ]

**ಗುನುಗುನು** (ನಾ). ಒಂದು ಅನುಕರಣ ಧ್ವನಿ; ಪಿಸುಗುಂಟ್ಟುವ ಶಬ್ದ: ಗೌಹರಳು ಗುನುಗುನು ಎನ್ನ ಹತ್ತಿದಳು (ಕೊತಕಾ. ೩).

**ಗುನ್ನ₁** (ನಾ). ದಿಣ್ಣೆ; ಎತ್ತರವಾದ ಸ್ಥಳ; ಗುಡ್ಡ: (ಶ).

[ ದೇ॥ ತಮಿ. ಕುನ್ರು; ಮಲ. ಕುನ್ನ, ಕುನ್ನು ]

**ಗುನ್ನ₂** (ಗು). ಚಿಕ್ಕದಾದ; ಕಿರಿದಾದ; ಗಿಡ್ಡ. 'ಗುನ್ನಾನೆ', 'ಕುನ್ನಿ' ಪರಾ.

[ ದೇ॥ ತಮಿ. ಕುಱಿಯ; ಮಲ. ಕುಱಿಯ, ಕುಣ್ಣು; ತೆಲು. ಕೂನ, ಗುನ್ನ; ಕೊಲಾ. ಕುನ ]

**ಗುನ್ನ₃** (ನಾ). ತಿರುಗುವಿಕೆ; ಸುತ್ತುವಿಕೆ. 'ಗುನ್ನಿಸು' ಪರಾ.

[ <ಪ್ರಾ. ಘುಣ್ಣ./ಸಂ. ಘೂರ್ಣ ]

**ಗುನ್ನ₄** (ನಾ). ೧. ಕಚ್ಚುಬೀಳುವಿಕೆ; ಕುಳಿ; ತಗ್ಗು: ಈ ಬುಗುರಿಗೆ ತುಂಬ ಗುನ್ನ ಬಿದ್ದಿದೆ (ರೂಢಿ). ೨. ಮರ್ಮಸ್ಥಾನ: ಮಲೆವ ವೀರರ ಮಾರಿಯಿದೆ ನೋಡು ಎಲೆ ದೇವ ಕುನ್ನಿಗಳ ಗುನ್ನವಂ ಕೊಂಬ ಸತ್ವ ಸಮರ್ಥ ಮೃತ್ಯು ರೂಪು (ಹಡಕಾ. ೬-೨೩).

**ಗುನ್ನವಾಗು**=ಕುಳಿಬೀಳು; ಕಚ್ಚಾಗು: ಹೊಸದಾಗಿ ಗಾರೆ ಹಾಕಿದ ಈ ನೆಲಗಟ್ಟಿನಲ್ಲಿ ಆಗಲೇ ಒಂದು ಗುನ್ನವಾಗಿದೆ (ರೂಢಿ). [ ? ]

**ಗುನ್ನಂಪಟ್ಟಿ** 'ಗುನ್ನಾಂಪಟ್ಟಿ' ನೋ.

**ಗುನ್ನಂಪಟ್ಟೆ** 'ಗುನ್ನಾಂಪಟ್ಟಿ' ನೋ.

**ಗುನ್ನಾಂಪಟ್ಟಿ**, ಗುನ್ನಂಪಟ್ಟಿ, ಗುನ್ನಂಪಟ್ಟೆ, ಗುನ್ನಾಂಪಟ್ಟೆ (ನಾ). ಬಣ್ಣ ಬಣ್ಣದ ಹೊಳಪಿನ ತಗಡು; ಬೇಗಡೆ: ಚಾವಣಿಯ ಕೆಂಪು ಮಲ್ಲಿನ ಮೇಲೆ ಗುನ್ನಾಂಪಟ್ಟಿ ಬೇಲು ಅಂಟಿಸಿದ್ದಾಗಿತ್ತು' (ಕಲಿಸೆ. ೧೯೪). **ಗುನ್ನಂಪಟ್ಟಿ**: ಗುನ್ನಂಪಟ್ಟಿ ತರಿಸಿ ಅದನ್ನು ಕತ್ತರಿಸಿ ಬಿಲ್ಲಿಗೆ ತರತರ ಸುತ್ತಿದ (ನನ್ನೂರು. ೩೦೪). **ಗುನ್ನಂಪಟ್ಟೆ**: ತಲೆಗೆ ಟೋಪಿಯನ್ನೋ ಅಥವಾ ಗುನ್ನಂಪಟ್ಟೆಯ ಕಿರೀಟವನ್ನೋ ಧರಿಸಿ . . . ಹೊರಟ ಈ ಹುಡುಗರ ತಂಡವನ್ನು ನೋಡಲು ಬಹಳ ಚಂದ (ನನ್ನೂರು. ೧೦೫). **ಗುನ್ನಾಂಪಟ್ಟೆ**: (ಶ).

[ ದೇ॥ ತಮಿ. ಕುರುನಾಪಟ್ಟೈ, ಕುರ್ಣಾಪ್ಪಟ್ಟೈ, ಕುಟುನಾಪಟ್ಟೈ ]

**ಗುನ್ನಾಂಪಟ್ಟೆ** 'ಗುನ್ನಾಂಪಟ್ಟಿ' ನೋ.

**ಗುನ್ನಾನೆ** (ನಾ). ಗಿಡ್ಡಾದ ಆನೆ; ಚಿಟ್ಟಾನೆ; ಕುಳ್ಳಾನೆ; ಮರಿಯಾನೆ: (ಶ). [ ಗುನ್ನ₂ + ಆನೆ₁ ]

**ಗುನ್ನಾಮದಪಟ್ಟೆಬಳ್ಳಿ** (ನಾ). ಒಂದು ಜಾತಿಯ ಬಳ್ಳಿ:- ಹಜ್ಜಾಲ, ಹಿಟ್ಟಲೆ, ಗುನ್ನಾಮದಪಟ್ಟೆಬಳ್ಳಿ (ಮೃಜಿಗಿ. ೩೩-೬೩೦). [ ? + ಬಳ್ಳಿ ]

**ಗುನ್ನಿ** (ನಾ). ಕೆಡುಕಿ; ದುಷ್ಟೆ: ಚಿನ್ನ ಮುತ್ತಿನ ಚೆಂಡ ಗುನ್ನಿ ರತ್ನಾಲಿ ಕೊಂಡ ಗುನ್ನೆ ಮಾಡ್ಯಾಳೊ ಶಿವಶಿವ (ಕುಮಾಸಾಂ. ೨೫೭).

[ ಗುನ್ನೆ + -ಇ₂ ]

**ಗುನ್ನಿಗ** (ನಾ). ಕುನ್ನಿಯಂತೆ ವರ್ತಿಸುವವನು: ಅನ್ನವು ಯಿಲ್ಲದಲೆಯೆನ್ನ ಕೈ ಕಾಲ್ಸೊರಗುತ ಗುನ್ನಿಗನಾದೆನು ನಿನ್ನಯ ಬೆನ್ನಿನ ಹಿಂಗಡೆಯೆ ಬಿಡದೆ ತಿರುಗುತ ವನದೊಳ್ (ಹಮಜ. ೧೧೦).

[ <ಕುನ್ನಿ + -ಗ₂ ]

**ಗುನ್ನಿಲುಗೂಡು** (ನಾ). ಒಂದು ಬಗೆಯ ಬೇಟೆಯ ಸಾಧನ,-ಗೂಡು; ಬಟಸಿಡಿಲ್ವಲೆ ಕಣ್ಣಿ ಗುನ್ನಿಲು[ಪಾಠಾಂ. ಸಿಲುಕು ಗುಣಿ, ಗುಣಿಲುಗುದ್ದ, ಗಣ್ಣಿಗಣ್ಣಿ]ಗೂ[ಗೂ]ಡು ತಡಿಕೆ ಮಕ್ಕರಿ ಪಟಗಳ ತಳಿದವನೊಳು ನಡೆತಂದರು ಲುಬ್ಧಕರಾಗ (ಸೌಬಸೋ. ೦೭-೩೭). ಬಲೆ ಕಾಲ್ಕಣ್ಣಿ ಗುನ್ನಿ[ಪಾಠಾಂ. ನ್ನ]ಲು ಗೂಡಿಡಿ[ಟಿ]ಸಲು ಬಲುದಸಿಯುರುಳುಳಿಯಿಂದ ನೆಲಗಪ್ಪುಗಳಿಂದ ಮೃಗಗಳ ಹರಣವ ತೊಲಗಿಸುವರು ಬೇಡರಲ್ಲಿ (ರಾಮವಿ. ೧೫-೬೪). [ ? + ಗೂಡು ]

**ಗುನ್ನಿಸು** (ಕ್ರಿ). ಗಿರ್ರನೆ ತಿರುಗಿಸು,-ಸುತ್ತಿಸು: ದಿವ್ಯ ದಿವ್ಯಾಸ್ತ್ರಗಳ ಮುನ್ನೆಸೆದು ಗುನ್ನಿಸಿದ ಪುಷ್ಪಕಾವೃತದಿಂದಲಿನ್ನು ಕೈವೀಸೆ ಬಲಕೆ (ಜಿನಮು. ೨೯-೨೮); ಉಳಿದ ದಾನವಸೇನೆ ಶರದ ಬಿರುಸೋನೆಯನ್ನು ಉನ್ನಿಸುತ ಮನ್ನಿಸುತ ಗುನ್ನಿಸುತಲಾವೃತಕೆ ಪನ್ನಗಪತಾಕನಂ ಮರೆಗೊಳಿಸೆ ತೆರೆಗೊಳಿಸಲು (ಜಿನಮು. ೩೫-೩೭). [ ಗುನ್ನ₃ + -ಇಸು₃ ]

**ಗುನ್ನೆ** 'ಗುನ್ದೆ' ನೋ.

**ಗುನ್ಹೆಗಾರಿ** (ನಾ). ತಪ್ಪಿಗೆ ವಿಧಿಸುವ ದಂಡ ; ಜುಲ್ಮಾನೆ : (ಕ).
[ ←ಪಾರ. ಹಿಂ. ಗುನಹ್‌ಗಾರೀ, ಗುನಾಹ್‌ಗಾರೀ; ಮರಾ. ಗುನ್ಹೆಗಾರೀ ]

**ಗುನ್ಹೇಗಾರ** 'ಗುನ್ಹೇಗಾರ' ನೋ.

**ಗುನ್ಹೆ**, ಗುನ್ಹೆ, ಗುಹ್ನೆ (ನಾ). ತಪ್ಪು; ಅಪರಾಧ; ದೋಷ: ಇನ್ನೂ ಅಂಥಾ ಗುನ್ಹೆ ಏನೂ ಆಗಿಲ್ಲ (ಗಂಗಾಸಾ. ೧೩೨) ; ಒಂದು ಗುನ್ಹೆ ತಪಾಸಿಗೆ ಹೋಗಿದ್ದೆ (ಹುಚ್ಚಾಟ. ೪೦) ; ಹೇಳದೆ ಕೇಳದೆ ಓಡಿಹೋಗಲು ನಾನೇನು ಯಾವ ಗುನ್ಹೆ ಮಾಡಿಲ್ಲವಲ್ಲ (ಮುಕ್ತಿ. ೨೦೫). **ಗುನ್ಹೆ :** ಆ ಪ್ರಕರಣದ ಚೌಕಶಿಯನ್ನು ಫೌಜದಾರೀ ಗುನ್ಹೆಯಂತೆ ಮಾಡಲಿಕ್ಕೂ . . . ಅಧಿಕಾರವಿರುತ್ತದೆ (ಕಥಾಗ. ಪರಿ. ೧೯) ; ಗುನ್ಹೆ ಮಾಡುವರು ಶಿವಮತಕೆ ಕೋಟಿಗಳು (ಕನ್ನಜಾ. ೨೪೦). **ಗುಹ್ನೆ:** ಸನದೀ ಅಸಿಸ್ಟಂಟರೂ, ಡಿಸ್ಟ್ರಿಕ್ಟ ಡೆಪ್ಯುಟಿಯೂ . . . ೧ನೇ ೨ನೇ ವರ್ಗದ ಮಾಜಿಸ್ಟ್ರೇಟರಾಗಿ ಫೌಜದಾರೀ ಗುಹ್ನೆಗಳ ಚೌಕಶಿಯನ್ನು ಮಾಡುತ್ತಾರೆ (ಕಥಾಗ. ೩೭೫) ; ಕೊಲೆಯ ಬಗ್ಗೆ ಡಾಕ್ಟರರ ಅಭಿಪ್ರಾಯ ಮೊದಲಿನಂತೆಯೇ ಇದ್ದರೂ ಗುಹ್ನೆ ಮಾತ್ರ ಸ್ವಾದಹೀನವಾಗಿರಲಿಲ್ಲ (ಪ್ರೇಮಾಶ್ರ. ೧೬೫). [ ←ಪಾರ. ಹಿಂ. ಗುನಾಹ್; ಮರಾ. ಗುನ್ಹಾ ]

**ಗುನ್ಹೇಗಾರ**, ಗುನ್ಹೇಗಾರ, ಗುಹ್ನೇಗಾರ (ನಾ). ತಪ್ಪುಮಾಡಿದವನು; ಅಪರಾಧಿ ; ದೋಷಿ : ಅನೇಕ ಬಹುನಿಷ್ಣಾತ ಗುನ್ಹೇಗಾರರಂತೆ ಇವನೂ ಸಹ . . . ಹೊರಟುಹೋದನು (ಬೀಟಿನಾ. ೨೩೦). **ಗುನ್ಹೇಗಾರ :** ಇನ್ನಿತರರು ಗುನ್ಹೇಗಾರನ ಬೆನ್ನು ಹತ್ತಿ ತಿರುಗುವ ಕುನ್ನಿಗಳು (ಅಮಗಾಂ. ೪೨). **ಗುಹ್ನೇಗಾರ :** ಗುಹ್ನೇಗಾರರ ಜಾತಿಗಳು.–ಕೊರವರು, ಲಮಾಣಿಗಳು, ವೊಡ್ಡರು, ಮುಂತಾದ ಜಾತಿಗಳಲ್ಲಿ ಬಹುಜನರು ಕಳವಿನಿಂದ ಜೀವಿಸುತ್ತಾರೆ (ಕಥಾಗ. ೩೮೦).
[ ←ಪಾರ. ಹಿಂ. ಗುನಹ್‌ಗಾರ್, ಗುನಾಹ್‌ಗಾರ್; ಮರಾ. ಗುನ್ಹೆಗಾರ್ ]

**ಗುಪಟೆ** 'ಗುಬಂಟು' ನೋ.

**ಗುಪಿತ** 'ಗುಪುತ' ನೋ.

**ಗುಪಿತಕಾಱ** (ನಾ). ಗುಟ್ಟುಮಾಡುವವನು ; ವಂಚಕ : ತಪಸಿಗಳು ಕೆಲರುಂಟು ಅದಱೊಳು ಶ್ವಪಚರಧಮರು ವುಂಟು . . . ಗುಪಿತಕಾಱರು ವುಂಟು ಮಾಱಿದರುಪಮೆಯಲಿ ನೆಲೆಗೊಡದರುಂಟಾ ಚಪಳೆ ಹೊಳದಂದವನು ಕಾಂಬರು ದಿವ್ಯಯೋಗಿಗಳೂ (ನಿಭಾಗ. ೫-೮-೨೨).
[ ಗುಪಿತ (<ಗುಪುತ) + –ಕಾಱ ]

**ಗುಪಿತವೇಷಿ** (ನಾ). ನಿಜರೂಪವನ್ನು ಮಱೆಮಾಚಲು ಕೃತ್ರಿಮವೇಷವನ್ನು ತಾಳಿರುವವನು ; ವೇಷಧಾರಿ : ಕಪಟವೆಲ್ಲಿಗೆ ಸಲುವುದೆಂದೆನೆ ಗುಪಿತವೇಷಿಯನಱಿತು ವಿಭೀಷಣ ಹರಿಗೆ ಸೂಚಿಸಿದ (ಕಾಶಿರಾ. ೦೭-೫).
[ < ಸಂ. ಗುಪ್ತವೇಷಿನ್ ]

**ಗುಪುತ**, ಗುತ್ತ$_2$, ಗುಪಿತ (ಗು). ೧. ಮುಚ್ಚಿದ ; ಗುಟ್ಟಾದ : ಗುಪುತ ಮಹಿಮ ನಮ್ಮ ವಿಜಯವಿಠ್ಠಲರೇಯ (ವೋಕ್ಷದೀ. ೫-೫). (ನಾ). ೨. ರಹಸ್ಯ; ಗೌಪ್ಯ; ಗುಟ್ಟು : ನಿನಗೆ ಗುಪುತಂಗಳಂ ಪೇಳ್ದ ಗುರುವಾರೆಲವೊ (ತುರಂಗ. ೭೫-೬). **ಗುತ್ತ$_2$ :** ೧. ಮೇಲಣ ಪಕಾರಕ್ಕೆ ತಕಾರಂ–ಗುಪ್ತ–ಗುತ್ತ ; ಸಪ್ತಮಿ–ಸತ್ತಮಿ (ಶಮದ. ೨೬೪ ಪ್ರಯೋ) ; ಗುಪ್ತ, ಗುತ್ತ (ಶಬ್ದಾನು. ೧೬೦ ಪ್ರಯೋ). **ಗುಪಿತ :** ೧. ಉಪಮಾತೀತನು ವಿಪರೀತ ಚರಿತನು ಗುಪಿತಪ್ರಕಾಶನು (ಆವಜಂ. ೨೮೭-೧೨೯) ; ಅದಾವನೊಬ್ಬನ ಗುಪಿತ ನಾಮಾಕ್ಷರದ ಮಂತ್ರವ ಜಪಿಸುವನು (ನಿಭಾಗ. ೩-೦೫-೨೩). ೨. ಗುಪಿತವೆಂತಳವಡುವುದಾಶ್ರಯದಪದೆಸೆಯನೆಂತಾನುವಿರಿ (ಕು ವ್ಯಾ. ವಿ. ೦-೫) ; ಒಂದು ವಸ್ತ್ರದಲಿ ಗುಪಿತದಿಂ ಬರೆ ಮುಂದೆ ಪಕ್ಷಿಗಳುಪಮೆಯಲಿ ಕೊಂಡೊಯ್ಯೆ ವಸನವ ಕೃಪಣತನದಲಿ ತನ್ನ ಸೀರೆಯೊಳೊಯ್ದನರ್ಥವನು (ನಳಚ. ೮-೨) ; ತನ್ನ ಹೃದಯದ ಗುಪಿತ ಹೊರಬೀಳಬಹುದೆಂದು ಆಕೆ ಭಯಪಟ್ಟಳು (ಕೃತಕ್ಕ. ೬೦). [ <ಸಂ. ಗುಪ್ತ ]

**ಗುಪ್ತ** (ಗು). ೧. ಅಡಗಿರುವ ; ಕಾಣದಿರುವ ; ಗುಟ್ಟಾದ ; ರಹಸ್ಯವಾದ: ಹಿಂದಿನ ಆ ಅನುಭವಗಳೆಲ್ಲ ಗುಪ್ತ ಮಾನಸರಂಗದಲ್ಲಿ ಅಡಗಿ ಹೋಗಿರುವುದೇ ಅದಕ್ಕೆ ಕಾರಣ (ಶಿಕ್ಷದ. ೬೪೯). (ನಾ). ೨. ಗುಟ್ಟು ; ರಹಸ್ಯ : ಅವನು ಗುಪ್ತವಾದ ಆಲೋಚನೆಗಾಗಿ ತುರುಕರಿಗೆ ಹೇಳಿಕಳುಹಿಸಿದ್ದನು (ಬಂಕಿಮ. ೧೭೯) ; ರಾಯನ ಕೊಲೆಯ ಬಗ್ಗೆ ಗುಪ್ತವಾಗಿ ಪಿತೂರಿ ನಡೆಸಲಾರಂಭಿಸಿದನು (ಕೃದೇವ. ೭) ; ಚಕ್ಕಮುಕ್ಕಿಯು ಕಲ್ಲಿನಂತರಂಗದೊಳಗ್ನಿ ಗುಪ್ತವಾಗಿರ್ಪಂತೆ (ಶ್ರೀರಾಮಾ. ೨೩-೬೨೦). ೩. ಒಂದು ಅರಸುಮನೆತನ, –ರಾಜವಂಶ : ಧರ್ಮನಿಷ್ಠರೂ ರಾಷ್ಟ್ರಪ್ರೇಮಿಗಳೂ ಆದ ಗುಪ್ತರ ಸೇವೆ ಚಿರಸ್ಮರಣೀಯ (ಋಕ್ಸಾರ. ೦೦೭ ಟೀಕೆ). ೪. ವೈಶ್ಯರಲ್ಲಿ ಒಂದು ಪಂಗಡ (ಎಸಮ್ಮ. VI, ೩). [ ಸಂ. ]

**ಗುಪ್ತಕ** (ನಾ). ಬೇಹುಗಾರ ; ಗೂಢಚಾರ : ದಾನವರೊ ಮೇಣ್ ದಿವಿಜರೋ ಹರಿಸೂನುವಿನ ಗುಪ್ತಕ [ಪಾಠಾಂ. ಪ್ಲಗ]ರೊ ಬರವು ನವೀನವಾಗಿದೆ (ತೊರರಾ. ೪-೧-೪). [ ಸಂ. ]

**ಗುಪ್ತಕಾಂಡ** (ನಾ). ಸಸ್ಯಗಳಲ್ಲಿ ಹೊಸ ಮೊಳಕೆಗಳನ್ನು ಹೊಮ್ಮಿಸುವ ಕಾಂಡ : ಬಲಿತ ಶುಂಠಿಯ ಗುಪ್ತಕಾಂಡವನ್ನು ಹಸಿಯ ನೆಲದಲ್ಲಿ ಹೂಳಿದರೆ ಇದರಿಂದ ಮೊಗ್ಗೆಗಳು ಹೊರಟು ಎಲೆಗಳನ್ನು ಭೂಮಿಯಿಂದ ಹೊರಕ್ಕೆ ನೀಡುತ್ತವೆ (ಸಸ್ಯಶಾ. ೮೦). [ ಗುಪ್ತ + ಕಾಂಡ ]

**ಗುಪ್ತಗಾಮಿ** (ಗು). ಗುಟ್ಟಾಗಿ ನಡೆಯುವ; ರಹಸ್ಯವಾಗಿ ನಡೆಯುವ : ಕ್ರಾಂತಿಕಾರಿ ಗುಪ್ತಗಾಮಿ ಚಳುವಳಿಯಲ್ಲಿ ಅವರಿಗೆ ಅಪಾರ ಅನುಭವವಿದೆ (ಆತ್ಮಾರ್ಪ. ೭೫). [ ಸಂ. ಗುಪ್ತಗಾಮಿನ್ ]

**ಗುಪ್ತಗಾಮಿನಿ** (ನಾ). ೧. ಕಾಣದಂತೆ ವರ್ತಿಸುವುದು: ಭಾಕ್ತವಾರಾರ ದುಡಿತದಿನೊ ನಿನಗಾಗಿಹುದು ಗುಪ್ತಗಾಮಿನಿಯೊ ಋಣ (ಮಂಕುಕ. ೮೪೦). ೨. ಗೊತ್ತಾಗದಂತೆ ಹರಿಯುವುದು: ಸರಸ್ವತೀನದಿಯು ಗುಪ್ತಗಾಮಿನಿಯಾಗಿದ್ದಾಳೆ (ರೂಢಿ). [ ಸಂ. ಗುಪ್ತಗಾಮಿನೀ ]

**ಗುಪ್ತಚಾರ** (ನಾ). ಗೂಢಚಾರ. 'ಗುಪ್ತಚಾರಶಾಖೆ' ಪರಾ. [ ಸಂ. ]

**ಗುಪ್ತಚಾರಶಾಖೆ** (ನಾ). ಅಪರಾಧಗಳನ್ನು ಪತ್ತೆಹಚ್ಚುವ ಕಾರ್ಯವನ್ನು ಗುಟ್ಟಾಗಿ ನಿರ್ವಹಿಸುವ ಸರ್ಕಾರೀ ಇಲಾಖೆ (Intelligence Department. ಪತ್ರಿನಿ. ೪೭). [ ಗುಪ್ತಚಾರ + ಶಾಖೆ ]

**ಗುಪ್ತಜಲ** (ನಾ). ಭೂಮಿಯ ಒಳಗೆ ಅಡಗಿರುವ ನೀರು : ಭೂಗರ್ಭಜಲ (ಗುಪ್ತಜಲ) (ಭೂವಿವ. ೧೨೩). [ ಗುಪ್ತ + ಜಲ$_2$ ]

**ಗುಪ್ತದ್ವಾರ** (ನಾ). ಕೋಟೆ ಮುಂತಾದ ಸ್ಥಳಗಳಲ್ಲಿ ಯಾರಿಗೂ ತಿಳಿಯದ ಹಾಗೆ ಬಂದು ಹೋಗಲು ಏರ್ಪಡಿಸಿರುವ ಬಾಗಿಲು ; ಕಳ್ಳಬಾಗಿಲು : ಇಬ್ಬರೂ ಗುಪ್ತದ್ವಾರದಿಂದ ಅರಮನೆಯೊಳಕ್ಕೆ ಹೋದರು (ಬಂಕಿಮ. ೧೪೭). [ ಗುಪ್ತ + ದ್ವಾರ ]

**ಗುಪ್ತನಿಧಿ** (ನಾ). ಅಡಗಿಸಿಟ್ಟಿರುವ ಐಶ್ವರ್ಯ ; ಬಚ್ಚಿಟ್ಟಿರುವ ನಿಧಿ : ನೆಲನ ಗುಪ್ತನಿಧಿಗಳ್, ಎಲ್ಲಾ ಮನುಷ್ಯೋಪಯುಕ್ತಂಗಳ್ (ಬದ್ಧಪ್ರ ೨೭-೫೭೯). [ ಗುಪ್ತ + ನಿಧಿ ]

**ಗುಪ್ತಪಾತಕ** (ನಾ). ೧. ಗುಟ್ಟಾಗಿ ಮಾಡುವ ಪಾಪ. ೨. ಗುಟ್ಟಾಗಿ ಪಾಪವನ್ನು ಮಾಡುವವನು : ಗುಪ್ತಪಾತಕಂಗೆ ಅಖಂಡೇಶ್ವರನು ಒಲಿ ಎಂದೊಡೆ ಎಂತೊಲಿವನಯ್ಯ (ಅಖಂಡೇ. ೯೫-೧೨). [ ಗುಪ್ತ + ಪಾತಕ ]

**ಗುಪ್ತಪಾತಕಿ** (ನಾ). ಗುಟ್ಟಾಗಿ ಪಾಪವನ್ನು ಮಾಡುವವನು: ಏಕಾಂತ ದ್ರೋಹಿ ಗುಪ್ತಪಾತಕಿ ಯುಕ್ತಿಶೂನ್ಯಂಗೆ ಸಕಲೇಶ್ವರದೇವರು ಒಲಿ ಒಲಿ ಎಂದರೆ ಎಂತೊಲಿವನಯ್ಯಾ (ಸಮಾವ. ೨-೬).
[ ಸಂ. ಗುಪ್ತಪಾತಕಿನ್ ]

**ಗುಪ್ತಪುಷ್ಪಿ** (ನಾ). ಒಂದು ಬಗೆಯ ಸಸ್ಯ : ಕೇಸರಗಳೂ ಶಲಾಕೆಗಳೂ ಇಲ್ಲದ, ಆದ ಕಾರಣ ನಿಜವಾದ ಹೂವು ಕಾಯಿಗಳಿಲ್ಲದ, ಸಸ್ಯ(ಜರಿಗಿಡಗಳು,

ಪಾಚಿಗಳು, ಮೊ.ವು.) : ಗುಪ್ತಪುಷ್ಪಿ (Cryptogam. ಇಂಕನಿ).
[ ಗುಪ್ತ + ಪುಷ್ಪಿ$_1$ ]

**ಗುಪ್ತಮತದಾನ** (ನಾ). ಗುಟ್ಟಾಗಿ ಮತ ನೀಡುವಿಕೆ; ರಹಸ್ಯ ಮತದಾನ : ಗುಪ್ತಮತದಾನ ಪದ್ಧತಿಯಿಂದ ಆಯ್ಕೆ ನಡೆಯಬೇಕಾಗಿತ್ತು (ಭೂಮಿತಾ. ೭೪). [ ಗುಪ್ತ + ಮತದಾನ ]

**ಗುಪ್ತರೋಗ** (ನಾ). ಬಹಿರಂಗವಾಗದೆ ಅನುಭವಿಸುವ ಕಾಯಿಲೆ; ಮೇಹರೋಗ; ಗುಹ್ಯರೋಗ: ನೀನು ಗುಪ್ತರೋಗ ತಗಲಿಸಿಕೊಂಡಿರುವೆ (ಜಯಂತ. ೧೨೯). [ ಗುಪ್ತ + ರೋಗ ]

**ಗುಪ್ತಲಿಪಿ** (ನಾ). ರಹಸ್ಯವಾದ ಲಿಪಿ; ಇತರರಿಗೆ ತಿಳಿಯಬಾರದೆಂಬ ಉದ್ದೇಶದಿಂದ ಕಲ್ಪಿಸಿಕೊಂಡಿರುವ ಗೂಢಲಿಪಿ: ಗುಪ್ತಲಿಪಿಯಲ್ಲಿ ಸಾಹಿತ್ಯ ಬರೆದುದರಿಂದ . . . ಅಜ್ಞಾತವಾಸಪ್ರಾಯರಾಗಿಯೂ ಬಾಳಿದರು (ವಂಸಾಹಿ. ೮). [ ಗುಪ್ತ + ಲಿಪಿ ]

**ಗುಪ್ತವೇಷ** (ನಾ). ನಿಜವಾದ ರೂಪವನ್ನು ಮರೆಮಾಚಲು ಹಾಕಿಕೊಳ್ಳುವ ಬೇರೆ ವೇಷ; ಛದ್ಮವೇಷ: ಮಹಾಮಹಿಮನೊಂದು ಗುಪ್ತವೇಷಮಂ ಕೈಕೊಂಡಧ್ವರಕ್ಕೆ ನಡೆತಪ್ಪಾಗಳ್ (ನಂಬಿರ. ೧೬-೧೬೪).
[ ಗುಪ್ತ + ವೇಷ ]

**ಗುಪ್ತಸಲಿಲ** (ನಾ). = ಗುಪ್ತಜಲ : ಆದರೆ ಗುಪ್ತಸಲಿಲಳಾದ ಫಲ್ಗುನದಿಯ ಉಸುಕಿನ ಹಾಗೆ ಅವರು ನಮ್ಮ ಸಾಂಸಾರಿಕ ಸಂಗತಿಗಳನ್ನೆಲ್ಲ ತಮ್ಮ ಅಂತರಂಗದೊಳಗೆ ಹೀರಿಕೊಂಡು ಬಿಟ್ಟಿದ್ದಾರೆ (ಇಪ್ಪಕ. ೪೪೭). [ಗುಪ್ತ+ಸಲಿಲ]

**ಗುಪ್ತಹೇರ** (ನಾ). ಬೇಹುಗಾರ; ಗೂಢಚಾರ: ವಿಭೀಷಣನು ಶರಣಾಗತನಾದವನಾದರೂ ಆಗಿರಲಿ ಗುಪ್ತಹೇರನಾದರೂ ಆಗಿರಲಿ ಆತನನ್ನು ನನ್ನ ಬಳಿಗೆ ಕರೆದುಕೊಂಡು ಬರಬೇಕು (ತುಳಸಿ. ೨೮೫); ವೀರಮಲ್ಲನು ಕನೋಜದ ಗೃಹವರ್ಮನಿಂದ ಕಳುಹಿಸಲ್ಪಟ್ಟ ಒಬ್ಬ ಗುಪ್ತಹೇರನಿದ್ದನು (ಪರಮೇ. ೨೦). [ ಗುಪ್ತ + ಹೇರ ]

**ಗುಪ್ತಹೇರಿಗ** (ನಾ). = ಗುಪ್ತಹೇರ: "ಪ್ರಣಿಧಿಃ, ಗುಪ್ತಪೂರುಷಃ – ಈ ೨ ಗುಪ್ತಹೇರಿಗಗಳ್" (ಹಲಾಯು. ೬೦-೨೬೦). [ ಗುಪ್ತ + ಹೇರಿಗ ]

**ಗುಪ್ತಿ** (ನಾ). ೧. ಕಾಪು; ರಕ್ಷಣೆ. ೨. ಮುಚ್ಚಿಡುವುದು; ಜೋಪಾನ. ೩. ಸೆರೆಮನೆ; ಕಾರಾಗೃಹ. ೪. ನೆಲಮಾಳಿಗೆ: "ಗುಪ್ತಿಃ – ನೆಲಮಾಳಿಗೆ, ರಕ್ಷಣೆ, ಸೆರೆಮನೆ" (ಸಿದ್ಧಾಂತಿ. ೩೩೮). ೫. ನೆಲದಲ್ಲಿ ಉಂಟಾದ ಬಿಲ,–ರಂಧ್ರ. ೬. ಕೊಳೆನೀರು ಕೂಡುವ ಸ್ಥಳ; ಬಚ್ಚಲು ಗುಣಿ. ೭. ಕಲ್ಲಿನ ಪ್ರಾಕಾರ,–ಗೋಡೆ; ಪೌಳಿ: ಸೌಮಿತ್ರಿಯ ಸುತ್ತಣ ರಣಭೂಮಿಯನಿಂಬಾಗೆ ಸಮಚಿ . . . ಸುಗ್ರೀವಂ ವಿದ್ಯಾಮಯಮಂ ಸಪ್ತಗುಪ್ತಿಯಂ ನಿರ್ಮಿಸಿದಂ (ಪಂರಾಮಾ. ೧೪-೩೫). ೮. ಕತ್ತಿಯ ಅಲಗನ್ನು ಹುದುಗಿಸಿರುವ ಪೊಳ್ಳಾದ ಕೈಕೋಲು: ಯಮನಪ್ಪ . . . ಹರಿತವಾದ ಚೂರಿಯನ್ನು ಬಚ್ಚಿಟ್ಟ 'ಗುಪ್ತಿ'ಯನ್ನು ಹಿಡಿದು ದಕ್ಷಿಣಾಭಿಮುಖವಾಗಿ ಹೊರಟನು (ಮನೆಬಿ. ೧೬೪). ೯. [ಜೈನ] ಮನೋವಾಕ್ಕಾಯಗಳನ್ನು ನಿಗ್ರಹಿಸುವುದು; ಮನೋಗುಪ್ತಿ, ವಾಗ್ಗುಪ್ತಿ, ಕಾಯಗುಪ್ತಿ ಎಂಬ ತ್ರಿವಿಧಗುಪ್ತಿಗಳು: ಸಮಿತಿಯಿಂ ಗುಪ್ತಿಗಳಂ ಪಾಲಿಸಿ ಪಂಚಮಹಾವ್ರತಲೀಲೆಯಿನೆಸೆದಂ ಪ್ರಮಾದವಿಲ್ಲೆನೆ ಮುನಿಪಂ (ಮಲ್ಲಿಪು. ೧೧-೧೩); ಮತಿ ಕಂಭಂ ಘನಮಾಗುವ ಧೃತಿ ಕೇರ್ ಗುಪ್ತಿಗಳೆ ಪಡಿಗಳಾಗಿರ್ದ ಮಹಾವ್ರತಗೃಹಮಿನಿಸುಂ ಛಿದ್ರಾನ್ವಿತಮಾದೊಡೆ ವಸ್ತುವೆಲ್ಲಮುಂ ಕೋಟ್ಟಡದೇ (ಜೀವಸಂ. ೧೫೯-೨೦); ಪರಮಗುಣಮೊಂದೆ ಸಂಯಮಿಗೆರಡು ತಪಂ ಮೂಱು ಗುಪ್ತಿ (ಪುಷ್ಪಪು. ೦೩-೫೨).

ಗುಪ್ತಿಯವರು = ಕತ್ತಿಯ ಅಲಗನ್ನು ಹುದುಗಿಸಿರುವ ಕೋಲನ್ನು ಪಡೆದಿರುವವರು: ಗುಪ್ತಿಯವರೂ, ಬಡಿಗೋಲಿನವರೂ, ಹಣೆವಟ್ಟದ ದೊಣ್ಣೆಯವರೂ, ಸಿದ್ಧವಾಗಲಿ (ಪೀಟಿವಾ. ೩). [ ಸಂ. ]

**ಗುಪ್ತಿಗ** (ನಾ). = ಗುಪ್ತಹೇರ: ರಾಯನಾಯುಷ್ಯಾವಸಾನದ ರಾಯಸವ ಬರೆಸಿದರು ಕೈಕೆಯ ರಾಯನಗರಿಗೆ ಕಳುಹಿದರು ಬಳಿಕಾಪ್ತ ಗುಪ್ತಿಗರ (ತೊರರಾ. ೨-೭-೧). [ ಗುಪ್ತ + – ಇಗ ]

**ಗುಪ್ತಿಗುಪ್ತ** (ನಾ). [ಜೈನ] ಮೂರು ಬಗೆಯ ಗುಪ್ತಿಗಳಿಂದ ಕಾಪಾಡಲ್ಪಟ್ಟವನು: ಮನಮಂ ನುಡಿಯಂ ಮೆಯ್ಯಂ ತನಗೆ ವಶಂಮಾಡಿ ಗುಪ್ತಿಗುಪ್ತಂ ಮುನಿಯೆಂಬಿನೆಗಂ ನೆಗಟ್ದಂ (ಆದಿಪು. ೬-೨೯); ಗುರುಭಕ್ತರೆಂಬುದು ಗುಣಾನ್ವಿತರೆಂಬುದು ಗುಪ್ತಿಗುಪ್ತರೆಂಬುದು ನಯನಂದಿದೇವರಂ (ಸುಕುಮಾ. ೧-೨೩). [ ಗುಪ್ತಿ + ಗುಪ್ತ ]

**ಗುಪ್ತಿಗೆಯ್, ಗುಪ್ತಿಗೈ** (ಕ್ರಿ). ೧. ಕಾಪಾಡು; ರಕ್ಷಿಸು: ಬಲ್ಲನಿತನಿಂತೊ ಅವಿಯಿಪಂ ಗುಪ್ತಿಗೆಯ್ವಂ (ಸಂಸಪ. ೧೧-೨೬). **ಗುಪ್ತಿಗೈ**: ೨. ಬಚ್ಚಿಡು; ಮರೆಮಾಡು: ಉದಗ್ರಸ್ಫುರತ್ಕವಿಕಾವ್ಯಪ್ರಕಟ ಪ್ರಭಾವಮನದಂ ಕೀಳ್ಕಬ್ಬಿಗಂ ಗುಪ್ತಿಗೈದವರಾತ್ಮೀಯಕೃತಿಪ್ರಭಾವತೆಯನಾದಂ ತೋರ್ಪರ್ ಪೋಲ್ (ರಾಜಶೇ. ೮-೯೯). [ ಗುಪ್ತಿ + ಕೆಯ್$_1$ ]

**ಗುಪ್ತಿಗೈ** 'ಗುಪ್ತಿಗೆಯ್' ನೋ.

**ಗುಪ್ತಿತ್ರಯ** (ನಾ). [ಜೈನ] ಮೂರು ಬಗೆಯ ಗುಪ್ತಿಗಳು: ಮನೋಗುಪ್ತಿಯುಂ ವಾಗ್ಗುಪ್ತಿಯುಂ ಕಾಯಗುಪ್ತಿಯುಮೆಂಬ ಗುಪ್ತಿತ್ರಯದೊಳಂ (ಅಜಿಪು. ೭-೮ ವ); ಅಱಿವಿಂ ಗುಪ್ತಿತ್ರಯದಿಂ ನೆಱೆದಿರ್ದಂತ ಮುರ್ಹೂರ್ತದಿಂ ಪಿಂಗಿಸುವರ್ (ಜೀವಸಂ. ೧೬೮-೧೫). [ಗುಪ್ತಿ+ತ್ರಯ]

**ಗುಪ್ತಿವಾದ** (ನಾ). ಗುಟ್ಟಾದ ಮಾತುಕತೆ; ರಹಸ್ಯವಾದ ಮಂತ್ರಾಲೋಚನೆ: (ಕ). [ ಗುಪ್ತಿ + ವಾದ$_3$ ]

**ಗುಪ್ಪಟ್ಟೆ** (ನಾ). ಒಂದು ಬಗೆಯ ಗಿಡ: ಗುಪ್ಪಟ್ಟೆ ಗಿಡ, ಸಣ್ಣಬುಡ್ಡೆ ಗಿಡ (ಮೃಜಿಗಿ. ೬೧-೨೪೨). [ ? ]

**ಗುಪ್ಪಟ್ಟೆಸೆರಗು** (ನಾ). "ಅಂಚಿನಲ್ಲಿ ಗುಪ್ಪಟ್ಟೆಕಾಯಿನ ಚಿತ್ರವಿರುವ ಸೆರಗು" (ನಾಪದ. ಟಿಪ್ಪಣಿ): ಅಂಚು ಗುಪ್ಪಟ್ಟೆಸೆರಗಿನ ಸೀರೇನುಟ್ಟ ಕೆಂಚೀರ ಸೋಬನಕೆ ಕರಸವ್ವ (ನಾಪದ. ೧೧೪).
[ ಗುಪ್ಪಟ್ಟೆ + ಸೆರಗು$_1$ (<ಸೆಱಂಗು) ]

**ಗುಪ್ಪನೆ** (ಅ). ತಟ್ಟನೆ; ಅನಿರೀಕ್ಷಿತವಾಗಿ: ಕರಿಯ ಗುಡಾರದಂತೆ ಗುಪ್ಪನೆ ಮ್ಯಾಯಲ್ಲ ಗಪ್ಪಿ (ಸೌಗಂಧಿ. ೫೫೬-೧); ಗುಪ್ಪನೆ ಬಂದು ಕುಳಿತು ಬಿಟ್ಟ (ರೂಢಿ). [ ಗುಪ್$_1$ + – ಅನೆ$_1$ ]

**ಗುಪ್ಪು$_1$** 'ಕುಪ್ಪು$_1$' ನೋ.

**ಗುಪ್ಪು$_2$** 'ಕುಪ್ಪು$_2$' ನೋ.

**ಗುಪ್ಪು$_3$** 'ಕುಪ್ಪು$_4$' ನೋ.

**ಗುಪ್ಪು$_4$** (ನಾ). ಮುಸುಕು; ಗುಬುರು: ಸ್ನಾನ ಮಾಡಿದಾಗ ಒಂದೆರಡು ಹನಿ ನೀರು ಕಿವಿಗೆ ಹೋಗಿ . . . ಕಿವಿಯ ತಮಟೆಯು ಇತ್ತ ಅತ್ತ ಆಡಲಾಗದೆ ಗುಪ್ಪುಹಾಕಿಕೊಂಡಂತಾಗುವುದು (ಮನೋಲನಂ. ೫೯). [ ? ]

**ಗುಪ್ಪೆ$_1$** 'ಕುಪ್ಪೆ$_1$' ನೋ.

**ಗುಪ್ಪೆ$_2$** (ನಾ). ಒಂದು ಬಗೆಯ ಗಿಡ: "ಮಿಸಿಃ–ಸಬ್ಬಸಿಗೆ, ಗುಪ್ಪೆ, ಕಾಡಸಬ್ಬಸಿಗೆ" (ಔಷಧಿ. ೧೨೫). [ ? ]

**ಗುಪ್ಪೆಗೊಳ್** 'ಕುಪ್ಪೆಗೊಳ್' ನೋ.

**ಗುಬಚಿ** 'ಗುಬ್ಬಚ್ಚಿ' ನೋ.

**ಗುಬಟು** 'ಗುಬುಟು' ನೋ.

**ಗುಬರಿಸು** (ಕ್ರಿ). ಮರೆಯನ್ನು ಮಾಡಿ ರಕ್ಷಿಸು; ಮುಸುಕುಹಾಕಿ ಕಾಪಾಡು: ಹದ್ದು ಗುಬರಿಪುದೆ ಕಬ್ಬಕ್ಕಿ ಮರಿಯಂ? (ಹಬ್ಬಿರ. ೩-೩೬).
[ ಗುಬರು$_2$ (<ಗುಬುರು) + – ಇಸು$_3$ ]

**ಗುಬರು$_1$** (ಕ್ರಿ). "ತಾಯ ರೆಕ್ಕೆಗಳಲ್ಲಿ ಮರೆಯಾಗಿರು; ತುಂಬ ಅಡಗಿರು" (ಸಿರಿಕೋ. ೧೬೪). [ <ಗುಬುರು ]

**ಗುಬರು$_2$** ‘ ಗುಬುರು ’ ನೋ.

**ಗುಬರುಗಟ್ಟು$_1$** (ಕ್ರಿ). ಎಲೆಗಳಿಂದ ದಟ್ಟವಾಗು,–ಸಾಂದ್ರವಾಗು : (ಶಿ). **೨.** (ಗಾಡಿ ಮೊದಲಾದುವುಗಳಿಗೆ) ಕಮಾನು ಕಟ್ಟು,– ಮುಸುಕು ಹಾಕು: ಬೋಳುಗಾಡಿ ತರಬೇಡ. ಗುಬುರಗಟ್ಟಿಕೊಂಡು ಬಾ (ರೂಢಿ). [ ಗುಬರು$_2$ (< ಗುಬುರು) + ಕಟ್ಟು$_1$ ]

**ಗುಬರುಗಟ್ಟು$_2$** (ನಾ). ತಲೆಯಿಂದ ಮೊಳಕಾಲವರೆಗೆ ಮುಚ್ಚುವ ಒಂದು ಬಗೆಯ ಮೇಲ್ಮುಸುಕು : (ಶಿ).
[ ಗುಬರು$_2$ (< ಗುಬುರು) + ಕಟ್ಟು$_2$ ]

**ಗುಬರುಗಿಡ** (ನಾ). ದಟ್ಟವಾದ ಎಲೆಗಳಿಂದ ತುಂಬಿರುವ ಗಿಡ : (ಶಿ).
[ ಗುಬರು$_2$ (< ಗುಬುರು) + ಗಿಡ (< ಗಿಡು) ]

**ಗುಬರುದಲೆ** (ನಾ). ಸೊಂಪಾಗಿ ಬೆಳೆದಿರುವ ಕೂದಲುಳ್ಳ ತಲೆ : (ಶಿ).
[ ಗುಬರು$_2$ (< ಗುಬುರು) + ತಲೆ$_1$ ]

**ಗುಬರುಹಾಕು** ‘ ಗುಬುರುಹಾಕು ’ ನೋ.

**ಗುಬಲಕ್ಕಿ** (ನಾ). (ಉಕ) ಕುಚ್ಚಿದ ಬತ್ತದಿಂದ ಮಾಡಿದ ಅಕ್ಕಿ ; ಕುಸುಬಲಕ್ಕಿ ; ಕುಚ್ಚಲಕ್ಕಿ : ಗುಬಲಕ್ಕಿಯಿಂದ ಇಡ್ಡಲಿ ಮಾಡುತ್ತಾರೆ (ರೂಢಿ). [ < ಕುದುಪಲಕ್ಕಿ ]

**ಗುಬಳ** (ನಾ). ಒಂದು ಜಾತಿಯ ಗೂಗೆ; ಹಂದಿಗೀರನ ಹಕ್ಕಿ : ನಭ ಸುರಿದುದರುಣೋದಕವ ಚೀರ್ದವು ಗೂಬೆ ಗುಬಳಗಳೂ (ಅನಂರಾ. ೩-೫-೨೮). [ ← ಮರಾ. ಘುಬಡ್ ]

**ಗುಬಾರು$_1$** (ನಾ). ಗುಂಪಿನ ಗದ್ದಲ,–ಗಲಾಟೆ : ಇಡೀ ನಗರದಲ್ಲಿ ದೊಡ್ಡ ಗುಬಾರು ಹುಟ್ಟಿತು (ವಾಗ್ಮೆವಿ. ೨೭೭). [ ← ಅರ. ಹಿಂ. ಗುಬಾರ್ ]

**ಗುಬಾರು$_2$** (ನಾ). ಬಾವು; ಊತ : “ಗುಬಾರು=ಉಬಾರು ; ಬಾವು” (ಜಾನಕೋ. ೪೯). ‘ಗುಬುರು’ ಪರಾ. [ ? ]

**ಗುಬುಕಟ್ಟು** (ನಾ). ತಲೆಗೆ ರಕ್ಷಣಾರ್ಥವಾಗಿ ಬಟ್ಟೆ ಕಟ್ಟುವಿಕೆ : ಯುಧಿಷ್ಠಿರನು ಮೊದಲಾದ ಕೌರವಕುಮಾರಕರು ಕವಚಗಳನ್ನು ತೊಟ್ಟು, ವಸ್ತ್ರಗಳಿಂದ ಗುಬುಕಟ್ಟುಗಳನ್ನು ಕಟ್ಟಿಕೊಂಡು (ಕ್ಕವಾಆ. ೨೫೦); ಮಗುವಿಗೆ ಶೀತವಾಗದಂತೆ ಗುಬುಕಟ್ಟು ಕಟ್ಟು (ರೂಢಿ). [ < ಗುಬುರು + ಕಟ್ಟು$_1$ ]

**ಗುಬುಗುಬು** (ನಾ). ಒಂದು ಅನುಕರಣಶಬ್ದ : ಗಾಯ ನೋವಾಗಿ ಗುಬು ಗುಬು ಎನ್ನುತ್ತಿದೆ (ರೂಢಿ) ; ಡಬ್ಬಿಯ ಮುಚ್ಚಳ ತೆಗೆದ ಕೂಡಲೆ ಹುಳು ಗಳು ಗುಬುಗುಬು ಎಂದು ಎದ್ದುವು (ರೂಢಿ).

**ಗುಬುಟಿ** ‘ ಗುಬುಟು ’ ನೋ.

**ಗುಬುಟು**, ಗುಪಟೆ, ಗುಬಟು, ಗುಬುಟಿ (ನಾ). **೧. ಗುಂಡಾದ ವಸ್ತು**; ಉಬ್ಬು ; ಗುಮುಟ : ಗುಬುಟಿನ ಬಾವುಟಗಳು ಪಟಪಟಿಸುತಲೊಲೆದವು ನಲವೆರಚಿ (ನಾಪದ. ೦೬೯). **೨. ಲೋಹದ ಗುಂಡು,– ಗೋಲಿ** : “ಗುರಾಣಿಯ ಮಧ್ಯೆ ಅಥವಾ ಕೆತ್ತನೆಯ ಕೆಲಸದ ಮಧ್ಯೆ ಇರುವ ಲೋಹದ ಗುಂಡು, ಗುಬುಟು” (Boss. ಇಂಕನಿ). **೩.** ಮೈಮೇಲೆ ಪೆಟ್ಟಿನಿಂದ ಉಂಟಾಗುವ ಬೋರೆ : ಕಂಬ ತಗುಲಿ ಹಣೆಯಲ್ಲಿ ಗುಬುಟು ಎದ್ದಿದೆ (ರೂಢಿ). ಗುಪಟೆ: ೩. ನನ್ನ ಮೈಕೈ ಎಲ್ಲಾ ನೋವು. ತಲೆಯ ಹಿಂಭಾಗದಲ್ಲಿ . . . ಮುಟ್ಟಿ ನೋಡಲಾಗಿ ಗುಪಟೆ ಎದ್ದಿತ್ತು (ಸಕತ. ೭೪), **ಗುಬಟು : ೨.** ಕೀಲಿ ಕೈಯ ಮತ್ತೊಂದು ತುದಿಯಲ್ಲಿ ಒಂದು ಗುಬಟು ಇದೆ (ವಿಜ್ಞಾವಿ. ೨೩). **ಗುಬುಟಿ : ೩.** ಹಣೆಗೆ ಒಂದು ಗುಬುಟಿ ಎದ್ದಿತ್ತು (ಬಾಬಲ. ೦೦೭).
[ < ಬುಗುಟು. / ತೆಲು. ಗುಬಕ ]

**ಗುಬುರು, ಗುಬರು$_2$, ಗುಮುರು** (ನಾ). **೧.** (ಎಲೆ ಮೊದಲಾದುವು ಗಳ) ಸಮುದಾಯ,–ದಟ್ಟಣೆ: ಮಾವಿನಮರದ ಗುಬುರಿನೊಳ್ ಗುಂಪು ಮಾಡಿ (ಸೌಗಂಧಿ. ೦೭೪–೨) ; ಎಳೆಚಿಗುರುಗಳ ಗುಬುರುಗಳಂ ನೋಡಿ (ಸೌಗಂಧಿ. ೩೩೦–೦೭). **೨.** ಆಚ್ಛಾದನೆ ; ಮುಸುಕು ; ಮರೆ : ಆಕಾಶವೆಂಬ ಪಿರಿದಾದ ಗುಬುರಿನ ತಾಳವೃಕ್ಷದೊಳ್ ಬೆಳೆದು ಬಲಿತು (ಸೌಗಂಧಿ. ೧೮೪–೧೧). **ಗುಬರು$_2$: ೧.** ಗಿಡ ಗುಬರಾಗಿವೆ (ರೂಢಿ). **೨.** ಭಯದಿಂದಲೂ . . . ಬಟ್ಟೇ ಗುಬರನ್ನು ಹಾಕಿಕೊಂಡಿದ್ದದರಿಂದಲೂ ಅವಳ ಮುಖ ದಿಂದ ಬೆವರು ಹರಿಯುತಿತ್ತು (ಮುಸುಗ. ೧೯೫). ‘ ಗುಬುರುಹಾಕು ’ ಪರಾ. **ಗುಮುರು: ೧.** ಪಕ್ಷಿಗಳೆಲ್ಲ ಸಂಚಾರವಂ ಬಿಟ್ಟು ಕಲಕಲಧ್ವನಿಗಳಂ ಮಾಡುತ . . . ಗುಮುರುಗಳಲ್ಲಿ . . . ಗುಂಪುಗುಂಪಾಗಿ ಸೇರಿ (ಸೌಗಂಧಿ. ೧೮೪–೧೭). [ ← ತೆಲು. ಗುಬುರು, ಗುಮುರು ]

**ಗುಬುರುಪೊದೆ** (ನಾ). ಪೊದರುಪೊದರಾಗಿ ಬೆಳೆದಿರುವ ಪೊದೆ,– ಗುಲ್ಮ : ಇದು ಚಿಕ್ಕ ಅಡವಿ ಆದಾಗ್ಯೂ ದೊಡ್ಡದೊಡ್ಡ ಗುಬುರುಪೊದೆಗಳು ಶಾನೇ ಉಂಟು (ಕಥಾಮಂ. IV, ೧೭). [ ಗುಬುರು + ಪೊದೆ$_2$ ]

**ಗುಬುರುಭಂಡಿ** (ನಾ). ಕಮಾನು ಕಟ್ಟಿರುವ ಬಂಡಿ ; ಕಮಾನುಗಾಡಿ ; ಕೊಲ್ಲಾರಬಂಡಿ: ಬಿಸಿಲು ತಾಗದಂತೆ ಗುಬುರುಭಂಡಿಗಳಲ್ಲಿ ಮುಸುಗಿಟ್ಟು ನಲ್ಲರ ಬೆರದೂ . . . ಬಂದರು ಸೂಳೆಯರು (ಸೌಗಂಪ. ೫–೩೨).
[ ಗುಬುರು + ಭಂಡಿ$_1$ (< ಬಂಡಿ$_1$) ]

**ಗುಬುರುಹಾಕು, ಗುಬರುಹಾಕು** (ಕ್ರಿ). ಮುಸುಕುಹಾಕು ; ಮರೆ ಮಾಡು: ಮೂಲೆಯಲ್ಲಿ ಗುಬುರುಹಾಕಿಕೊಂಡು ಕುಳಿತು . . . ಗುಂಪಿನಲ್ಲಿ ಗೋವಿಂದ ಅಂದು ಮನೆಗೆ ಬರುತ್ತಿದ್ದ (ನನ್ನೂರು. ೨೪೯). **ಗುಬರುಹಾಕು:** ಒಬ್ಬ ಮನುಷ್ಯ ಕಂಬಳಿ ಗುಬರುಹಾಕಿಕೊಂಡು . . . ಹೊಲಕ್ಕೆ ಇಳಿದ (ಕಲನೆ. ೦೭೭). [ ಗುಬುರು + ಹಾಕು (< ಪಾಯ್ಸು$_1$) ]

**ಗುಬ್ಬಕ್ಕಿ** ‘ ಗುಬ್ಬಿಹಕ್ಕಿ ’ ನೋ.

**ಗುಬ್ಬಚ್ಚಿ, ಗುಬಚಿ** (ನಾ).=ಗುಬ್ಬಿ$_2$ ೧ : ಗುಬ್ಬಚ್ಚಿಯ ನೇತ್ರದಂತೆ ವರ್ಣವುಳ್ಳ ನೇತ್ರಗಳು (ಸೌಗಂಧಿ. ೨೭೮–೧೮) ; ಗುಬ್ಬಚ್ಚಿಯೊಂದು ಬಂದು ಚಿಲಿಪಿಲಿಗುಟ್ಟುತ್ತಿದ್ದರೆ (ಶಿಕ್ಷದ. ೫೩೮). **ಗುಬಚಿ :** ಗರುಡಗಸದಳವಪ್ಪ ಕಜ್ಜವ ಪರಿಹರಿಸಲಾಪುದೆ ಗುಬಚಿ (ಕೋಗಯು. ೮–೧೫).
[ ಗುಬ್ಬಿ$_2$ + ಅಚ್ಚಿ$_0$ ]

**ಗುಬ್ಬಚ್ಚಿಗಿಡ** (ನಾ). ಒಂದು ಬಗೆಯ ಗಿಡ : ಗುಬ್ಬಚ್ಚಿಗಿಡ, ಚುಳ್ಳಿ ಮುಳ್ಳಿಗಿಡ (ಮೃಶಿಗಿ. ೧೧–೧೯೮). [ ಗುಬ್ಬಚ್ಚಿ + ಗಿಡ (< ಗಿಡು) ]

**ಗುಬ್ಬಚ್ಚಿಬಾಳೆ** (ನಾ). ಒಂದು ಬಗೆಯ ಬಾಳೆ : ಗುಬ್ಬಚ್ಚಿಬಾಳೆ, ಕನ್ನೆಸೊಪ್ಪು (ಮೃಶಿಗಿ. ೨೪–೪೩೮). [ ಗುಬ್ಬಚ್ಚಿ + ಬಾಳೆ$_1$ (< ಬಾಟಿ) ]

**ಗುಬ್ಬಚ್ಚಿಹೂ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು : ಸಣ್ಣದಾಸವಾಳ, ಗುಬ್ಬಚ್ಚಿಹೂ (ಮೃಶಿಗಿ. ೪೩–೮೫೫).
[ ಗುಬ್ಬಚ್ಚಿ + ಹೂ$_2$ (< ಪೂ$_2$) ]

**ಗುಬ್ಬಳಿಕೆ** (ನಾ). ಹಕ್ಕಿಗಳ ಕೂಗು ; ಕೂಜಿತ : ಪಿಕಳಾರಗಳ ಸಿಳ್ಳಲಿ ಯಾಗಲಿ ಹೊರಸಲುಹಕ್ಕಿಗಳ ಗುಬ್ಬಳಿಕೆಗಳಾಗಲಿ . . . ಕೇಳಿಸುತ್ತಿರ ಲಿಲ್ಲ (ಮಲೆಮ. ೬೪). [ ಗುಬ್ಬಳಿಸು + – ಇಕೆ ]

**ಗುಬ್ಬಳಿಸು** (ಕ್ರಿ). **೧.** (ಪಕ್ಷಿಗಳು) ಕೂಗು,– ಧ್ವನಿಮಾಡು: ಮಾಡುಗಳ ಮೇಲೆ ಪಾರಿವಾಳಗಳು ಗುಬ್ಬಳಿಸುತ್ತಲೂ ಇವೆ (ಹಬ್ಬರ. ೦–೯) ; ಪಾರಿವಾಳಗಳು ಗುಬ್ಬಳಿಸಿಕೊಂಡು ಅರಮನೆ ಕಿರುಮನೆಯ ಮೇಲೆಲ್ಲ ಓಡಾಡುತ್ತಿದ್ದವು (ಪುಟ್ಟರ. ೯); ನನ್ನ ಚಿತ್ತವಂತೂ ಗೂಡು ಕಳೆದುಕೊಂಡು ಗುಬ್ಬಳಿಸುವ ಗುಬ್ಬಚ್ಚಿಯ ಹಾಗೆ . . . ಹಾರಾಡಿ ಸುತ್ತುತ್ತಿತ್ತು (ಇಪ್ಪಕ. ೦೮೭). **೨.** ಬಿಕ್ಕಳಿಸು ; ಬಿಕ್ಕು : ರಾಮಚಂದ್ರಂ . . . ಗದ್ಗದಿಸಿ ಗುಬ್ಬಳಿಸಿದನೆನಲ್ಕೆ ನುಡಿಸಿದನ್ (ಶ್ರೀರಾಮಾ. ೧೭೪–೩೩೩). [ ? ]

**ಗುಬ್ಬಿ$_1$, ಗುಬ್ಬೆ$_1$** (ನಾ). **೧.** ಗುಬುಟು ; ಉಬ್ಬಿಕೊಂಡಿರುವುದು. ‘ ಗುಬ್ಬಿಬೇಳೆ ’, ‘ ಗುಬ್ಬಿಮೊಳೆ ’ ಪರಾ. **೨.** ಗುಂಡಿ ; ಬಿರಡೆ : ನಿಲುವಂಗಿಯಲ್ಲಿ ವಜ್ರದ ಗುಬ್ಬಿಗಳು (ಪ್ರಕಾಶ.೩); ಕುಬುಸದ ಮಧ್ಯೆಯ ಗುಬ್ಬಿ ಕಳಚಿಹೋಗಿದ್ದಕ್ಕೆ, ಕೊರಳಲ್ಲಿಯ ಬೆಳ್ಳಿಎಳೆಯಲ್ಲಿದ್ದ ‘ಪಿನ್ನ’ನ್ನು

ಹಾಕಿ 'ಫಿಟ್' ಮಾಡಿದಳು (ಹೊಸಕ್ಕ. ೪೭.) **ಗುಬ್ಬೆ$_1$:** ೧. 'ಕಣ್ಣುಗ್ಗುಬ್ಬೆ' ಪರಾ. [ ದೇ.॥ ತುಳು. ಗುಬ್ಬಿ, ಗುಬ್ಬೆ; ತೆಲು. ಗುಬ್ಬ ]

**ಗುಬ್ಬಿ$_2$** (ನಾ). ೧. ಒಂದು ಜಾತಿಯ ಸಣ್ಣಪಕ್ಷಿ; ಗುಬ್ಬಚ್ಚಿ; ಚಟಕ: "ಕಲವಿಂಕಃ, ಚಟಕಃ, ಗೃಹಬಲಿಭುಕ್, ನೀಲಕಂಠಃ – ಈ ೪ ಗುಬ್ಬಿ(ಲು)" (ಹಲಾಯು. ೪೧-೯೦); "ಓಕಸೌಕಸಮೆನಲು ಚಟಕಮೆನೆ ಕಲವಿಂಕವಾ ಕಾಳಕಂಠಮೆನೆ ಗುಬ್ಬಿ" (ಮಂಗರಾ. ೫೧-೬); ನುಗ್ಗಿಯ ಬನಕ್ಕೆ ಗುಬ್ಬಿ ಕೋಗಿಲೆಯೆಂಬಂತೆ [ಅಗಸೆಯ ಮರಕ್ಕೆ ತೊನಸೆ ಮಚ್ಚಿ ದುಂಬಿಯೆಂಬಂತೆ] (ಧರ್ಮಾಮೃ. ೭-೩೩೯); ನಾನಾಬಲೆಗಳಲಿ ಕುಳಿಗಳಲಿ ಬೀಸಿದ ಬಲೆಗೆ ಬಿದ್ದವು ಗಿಡುಗ ಗೀಜಗ ಗೌಜು ಗುಬ್ಬಿಗಳು (ತೊರರಾ. ೩-೩-೧೭); ಕೋಳಿಯ ಕೂಟ ಗುಬ್ಬಿಯ ಕೂಟದಂತೆ ಹಂಸಾಳಿಯ ಕೂಟ ತೋಱುವುದೆ (ಭರಜ. ೧೦-೧೧೭); ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೇ? (ಗಾದ). ೨. (ಅಲಂ) ಚಿಕ್ಕದು. 'ಗುಬ್ಬಿಬಳೆ', 'ಗುಬ್ಬಿಮನೆ' ಪರಾ. ೩. ಒಂದು ಬಗೆಯ ಒಡವೆ: ವೀರ ಘಂಟೆಯ ಹೊನ್ನ ಗುಬ್ಬಿಯ ರನ್ನವಟ್ಟೆಯ ಬೆನ್ನ ಚವ್ಮಟಿಗೆಯ ಬಿಳಿಯ ಚವರದ (ಗಿರಿಕ. ೬-೫೫ ವ); ನೆಱೆ ಪುಟವಿಟ್ಟ ಮಿಸುನಿಯ ಗುಬ್ಬಿಗಳ ಕಟ್ಟಿದ ಹೊಕ್ಕುಳ ಗಂಟೆಯ ತೇಜಿಗಳಿಟ್ಟಣಿಸುತಲೈದಿದುವು (ಕಂನವಿ.೩೩-೯೪); ಇಂದ್ರನೀಲಮಾಣಿಕ್ಯ ಗಳಿಂ ಕಡೆದು ಮಾಡಿರುವ ಗುಬ್ಬಿಗಳಿಂ (ಸೌಗಂಧಿ. ೦೦೫-೧೦); ಚಿನ್ನದ ಗುಬ್ಬಿ ತಟ್ಟನೆ ಕೈಯಿಂದ ಕಳಚಿ ಕೆಳಗೆ ಬಿದ್ದು, ಅವನ ಚಿಂತೆಯನ್ನು ಅದುಮಿ ಹಿಡಿಯಿತು (ಮುಗಮೂಂ. ೧೦೮). ೪. ಮದುವೆಯ ಸಂಭ್ರಮ ದಲ್ಲಿ ಬೀಗರು ಪರಸ್ಪರರ ಬಟ್ಟೆಗಳ ಮೇಲೆ ಒತ್ತುವ ಸಣ್ಣ ಮುದ್ರೆ: ಚಿಟ್ಟಿನ ಕಂಟಕ್ಕೆ ಸುಣ್ಣ ಹಚ್ಚಿಕೊಂಡು ಬೀಗರ ಬಟ್ಟೆಯ ಮೇಲೆ ಮತ್ತು ಬೀಗತಿಯ ಸೀರೆಯ ಮೇಲೆ ಗುಬ್ಬಿ ಹಾಕುವುದು ಮತ್ತೊಂದು ತಮಾಷೆ (ನನ್ನೂರು. ೧೦೫). ೫. ಮದುವೆಕಾಲದಲ್ಲಿ ಗಂಡಹೆಂಡತಿಯರಿಂದ ಪರಸ್ಪರ ಬೆನ್ನು ಅಥವಾ ತಲೆಯ ಮೇಲೆ ಸದ್ದಾಗುವಂತೆ ತಟ್ಟಿಸು ವುದಕ್ಕಾಗಿ, ಗುಬ್ಬಚ್ಚಿಯಾಕಾರದಲ್ಲಿ ಹೋಳಿಗೆಯಂತೆ ಮಾಡಿ ಉಸಿರುತುಂಬಿದ ಗೋಧಿಹಿಟ್ಟಿನ ಲಕೋಟೆ: ಗುಬ್ಬಿ ತಟ್ಟುವ ನೆಪದಲ್ಲಿ ವರನು ಗಟ್ಟಿಯಾಗಿ ಹೊಡೆದು ಹುಡುಗಿಗೆ ಕಣ್ಣೀರು ಬರುವಂತೆ ಮಾಡಿ ದನು (ರೂಢಿ). ೬. ಒಂದು ಊರಿನ ಹೆಸರು. ☞ ಈಗಿನ ತುಮಕೂರು ಜಿಲ್ಲೆಯ ಅಮರಗೊಂಡ ಎಂಬ ಐತಿಹಾಸಿಕ ಸ್ಥಳ: ಪೂತಮಾನಸನಿಂತು ಮೆಱೆವನ್ವಯದೊಳು ಗುಬ್ಬಿಯ ಮಲ್ಲಣಾಚಾರ್ಯನು (ವೀಶೈ ಪು. ೧-೧-೫೦).

[ ದೇ.॥ ತಮಿ. ಮಲ. ಕುರುವಿ; ತುಳು. ಗುಬ್ಬಿ, ಗುರುಬಿ, ಗುರ್ಬಿ ]

**ಗುಬ್ಬಿಎಂಜಲು** (ನಾ). (ಉಕ) ಮಕ್ಕಳು ತಿಂಡಿಯನ್ನು ಹಂಚುವಾಗ ಅದನ್ನು ಬಟ್ಟೆಯಿಂದ ಮುಚ್ಚಿ ಕಚ್ಚಿ ಚೂರುಮಾಡುವುದು; ಕಾಗೆ ಯೆಂಜಲು: ಮಕ್ಕಳು ಗುಬ್ಬಿಎಂಜಲು ಮಾಡಿ ತಿನಿಸು ಹಂಚಿಕೊಳ್ಳು ತ್ತಾರೆ (ರೂಢಿ). [ ಗುಬ್ಬಿ$_2$ + ಎಂಜಲು (<ಎಂಜಲ್) ]

**ಗುಬ್ಬಿಕದ** (ನಾ). ಗುಬ್ಬಿಮೊಳೆಗಳಿರುವ ಕದ: ಹಿತ್ತಾಳೆ ಚೌಕಟ್ಟು ಗುಬ್ಬೀಕದ ಸಹಿತವಾಗಿ ಮಾಡಿಶಿ ವಪ್ಪಿಸಿದ ನಿಲುವಿನ ಸೇವಾರ್ಥ (ಎಕ. XIV, ಚಾಮರಾ. ೨೦೬-೩; 1868?). [ ಗುಬ್ಬಿ$_1$ + ಕದ (<ಕದವು$_1$) ]

**ಗುಬ್ಬಿಗಂಕಣ** (ನಾ). ಒಂದು ಬಗೆಯ ಕಂಕಣ,—ಬಳೆ; ಗುಬುಟು ಗಳಿಂದ ಕೂಡಿರುವ ಕಡಗ: ಕಂಕಣಕ್ಕೆ – ಗುಬ್ಬಿಗಂಕಣ, ಮಣಿ ಕಂಕಣ, ಹಸ್ತಕಂಕಣ (ಶಮದ. ೨೯೮ ಪ್ರಯೋ); ಗುಬ್ಬಿಗಂಕಣಮೇಕೆಯೊ ಕೆಲದೊಳೊತ್ತಿರ್ಕುಂ (ರಾಮಾಶ್ವ. ೨೦-೭). [ ಗುಬ್ಬಿ$_1$ + ಕಂಕಣ ]

**ಗುಬ್ಬಿಗೂಡು** (ನಾ). ೧. ಗುಬ್ಬಚ್ಚಿಗೂಡು: ಮನೆ ಕಟ್ಟುವಾಗ ಕೆಲವರು ಗುಬ್ಬಿಗೂಡಿಗೆ ಜಾಗ ಮಾಡಿರುತ್ತಾರೆ (ರೂಢಿ). ೨.=ಗುಬ್ಬಿಮನೆ: ಅವಳಿಗೆ ನಿರಾಶೆಯಾಗಿ ತಾನು ಕಟ್ಟಿದ್ದೆಲ್ಲ ಹುಡುಗರ ಆಟದ 'ಗುಬ್ಬಿಗೂಡು' . . . ಎಂಬ ಸಂಶಯ ಮತ್ತೆಮತ್ತೆ ಕಾಡುತ್ತಿತ್ತು (ಅಪನಾ. ೨೪೦).

[ ಗುಬ್ಬಿ$_2$ + ಗೂಡು ]

**ಗುಬ್ಬಿಚಟ್ಟು** (ನಾ). (ಉಕ) ತೊಟ್ಟಿಲ ಮೇಲ್ಭಾಗದಲ್ಲಿ ಕಟ್ಟುವ, ಬಣ್ಣಬಣ್ಣದ ಬಟ್ಟೆಯಿಂದ ಮಾಡಿದ, ತೂಗಾಡುವ ಸಣ್ಣಸಣ್ಣ ಗುಬ್ಬಿಗಳಿಂದ ಕೂಡಿದ ಒಂದು ಅಲಂಕಾರ: ತೊಟ್ಟಿಲಿಗೆ ಗುಬ್ಬಿಚಟ್ಟು ಕಟ್ಟಿದ್ದಾರೆ (ರೂಢಿ). [ ಗುಬ್ಬಿ$_2$ + ಚಟ್ಟು$_1$ (<ಚಟ್ಟು$_1$) ]

**ಗುಬ್ಬಿಚಿಮಣಿ** (ನಾ). ಚಿಕ್ಕ ಕೈದೀಪ; ಸಣ್ಣದಾದ ಚಿಮಣಿ; ಬುಡ್ಡಿ: ಇಬ್ಬರೂ ಗುಬ್ಬಿಚಿಮಣಿ ಹಚ್ಚಿಟ್ಟು ಬಾಗಿಲು ಹಾಕಿಕೊಂಡು ಮುಸುಕೆಳೆದೆವು (ವೈನಿ. ೨೧೯). [ ಗುಬ್ಬಿ$_2$ + ಚಿಮಣಿ ]

**ಗುಬ್ಬಿದೀಪ** (ನಾ). ಸಣ್ಣದೀಪ; ಕೈದೀಪ: ಕತ್ತಲಲ್ಲಿ ಗುಬ್ಬಿದೀಪ ಹಿಡಿದು ಕೊಂಡು ಹುಡುಕಾಡಿದ (ರೂಢಿ). [ ಗುಬ್ಬಿ$_2$ + ದೀಪ$_2$ ]

**ಗುಬ್ಬಿಬಳೆ**(ನಾ). = ಗುಬ್ಬಿಗಂಕಣ: (ಕಿ). [ ಗುಬ್ಬಿ$_1$ + ಬಳೆ$_3$ ]

**ಗುಬ್ಬಿಬಾಗಿಲು** (ನಾ). ಗುಬ್ಬಿಮೊಳೆಯನ್ನು ಅಲಂಕಾರವಾಗಿ ಹೊಂದಿ ರುವ ಬಾಗಿಲು: ಆ ದೊಡ್ಡ ಮನೆಯಲ್ಲಿ ಗುಬ್ಬಿಬಾಗಿಲಿದೆ (ರೂಢಿ).

[ ಗುಬ್ಬಿ$_1$ + ಬಾಗಿಲು (<ಬಾಗಿಲ್) ]

**ಗುಬ್ಬಿಬಾವುಲಿ** (ನಾ). ಒಂದು ಬಗೆಯ ಕಿವಿಯ ಆಭರಣ: ಚಂದ್ರಾ ವಳಿಯ ಸೀರೆ ಚಂದ್ರಮ್ಮ ಉಟ್ಟಿಹಳು ಚಂದ್ರಹಾರ ಮೂಗಿನಲಿ ನತ್ತು ಕಿವಿಯಾಗ ಚುದ್ರಬಾವುಲಿ ಗುಬ್ಬಿಬಾವುಲಿ (ಸಿದ್ಧಪು. ೧೯-೬೯).

[ ಗುಬ್ಬಿ$_1$ + ಬಾವುಲಿ ]

**ಗುಬ್ಬಿಬೆಳಸೆ** (ನಾ). ಒಂದು ಬಗೆಯ ಹುಲ್ಲು; ಅಂಟುಪುರಲೆ ಹುಲ್ಲು: (ಕಿ). [ ಗುಬ್ಬಿ$_2$ + ಬೆಳಸೆ ]

**ಗುಬ್ಬಿಬೇಳೆ** (ನಾ). (ಉಕ) ಕಿವಿಯ ಒಂದು ಆಭರಣ; ಗುಬುಟು ಇರುವ ಓಲೆಯಂತಹ ಆಭರಣ: ಆ ಹೆಣ್ಣುಮಗಳು ಗುಬ್ಬಿಬೇಳೆ ಹಾಕಿಕೊಂಡಿದ್ದಾಳೆ (ರೂಢಿ). [ ಗುಬ್ಬಿ$_1$ + ಬೇಳೆ ]

**ಗುಬ್ಬಿಮನೆ** (ನಾ). ಒದ್ದೆಯಾದ ಮರಳಿನಿಂದ ಹುಡುಗರು ಆಟಕ್ಕಾಗಿ ಮಾಡುವ ಸಣ್ಣ ಗೂಡು: ಮುನ್ನ – ಮುನ್ನಕೆ ಗುಬ್ಬಿಮನೆಯ ಹೂಡಿದ ಹಾಗೆ (ಗರಿ. ೧೫-೫). [ ಗುಬ್ಬಿ$_2$ + ಮನೆ ]

**ಗುಬ್ಬಿಮೊಳೆ** (ನಾ). ಬಾಗಿಲುಗಳಿಗೆ ಬಡಿಯುವ ಮೊಳೆ; ತಲೆಯ ಮೇಲೆ ಗುಮುಟವಿರುವ ಮೊಳೆ: ಬಾಗಿಲ ಮೈತುಂಬ ಹೊಡೆಯುವ ಗುಬ್ಬಿಮೊಳೆ (Door-nail. ಇಂಕನಿ).

[ ಗುಬ್ಬಿ$_1$ + ಮೊಳೆ$_2$ ]

**ಗುಬ್ಬಿವಿಂಡು** (ನಾ). ಗುಬ್ಬಚ್ಚಿಗಳ ಹಿಂಡು,–ಗುಂಪು: ಕೊಬ್ಬಿದ ದಾನವರುಬ್ಬಿ ಗದೆಯ ಪಿಡಿದಬ್ಬರಿಸಿಯೆ ಪೊಯ್ಯಲೊನೆ ನಿಬ್ಬರ ದೊಳಗೆಱಗಿದರು ಸಾಳುವನಾ ಗುಬ್ಬಿವಿಂಡಿಗೆ ಬೀಳುವಂತೆ (ತ್ರಿಪುಸಾಂ. ೨೧-೨೪೩). [ ಗುಬ್ಬಿ$_2$ + ಹಿಂಡು$_2$ (<ಪಿಂಡು$_2$) ]

**ಗುಬ್ಬಿಸವುತೆಕಾಯಿ**(ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ: (ಕಿ). [ಗುಬ್ಬಿ$_2$ + ಸವುತೆ (<ಸವುಂತೆ) + ಕಾಯಿ$_4$ (<ಕಾಯ್$_4$) ]

**ಗುಬ್ಬಿಹಕ್ಕಿ, ಗುಬ್ಬಕ್ಕಿ** (ನಾ). = ಗುಬ್ಬಿ$_2$ ೧: "ಭವನಚಟಕ–ಗುಬ್ಬಿಹಕ್ಕಿ" (ಓಷಧಿ. ೧೧೧). **ಗುಬ್ಬಕ್ಕಿ:** ಸೊಪ್ಪಿನ ಮಡಿಗಳಿಗೆ ಗುಬ್ಬಕ್ಕಿ ಕಾಟ ಬಹಳ (ರೂಢಿ). [ ಗುಬ್ಬಿ$_2$ + ಹಕ್ಕಿ (<ಪಕ್ಕಿ$_1$) ]

**ಗುಬ್ಬಿಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಕಿ).

[ ಗುಬ್ಬಿ$_2$ + ಹುಲ್ಲು (<ಪುಲ್) ]

**ಗುಬ್ಬೆ$_1$** 'ಗುಬ್ಬಿ$_1$' ನೋ.

**ಗುಬ್ಬೆ$_2$** (ನಾ). ಗೊಪ್ಪೆ; ಗೊರಗು: ಕೆರೆ ಕೆಳಗಣ ಹಲಸಿನ ಮರದ ಬಳಿಯಲ್ಲಿ ಮೂರು ಜನ ಕಂಬಳಿ ಗುಬ್ಬೆ ಕಂಬಳಿ ಟೊಪ್ಪಿ ಸಹ ಹಾಕಿಕೊಂಡು (ರಾಜೇಂದ್ರ. ೧೪೧). [ <ಕೊಪ್ಪೆ ]

**ಗುಬ್ಬೆ₃** (ನಾ). ಒಂದು ಜಾತಿಯಂ ಕ್ರಿಮಿ: ದ್ವೀಂದ್ರಿಯಂಗಳವಾವೆಂದೊಡೆ ಶಂಖ ಗುಳ್ಳೆ ಗುಬ್ಬೆ ಸಿಪ್ಪು ಕವಡೆ ಕ್ರಿಮಿ (ಪಸಾರ. ೪೮೮-೧೯). [ ? ]

**ಗುಮಚಿಕ್ಕಿ** 'ಗುಂಚಿಕ್ಕಿ' ನೋ.

**ಗುಮಟ** 'ಗುಮ್ಮಟ₁' ನೋ.

**ಗುಮಟೆ** 'ಗುಮ್ಮಡಿ₁' ನೋ.

**ಗುಮಟೆಪಾಗು**(ನಾ).=ಗುಮ್ಮಡಿ₁ : ತುಸು ತಬಲೆ ಬಾರಿಸಲು ಕಲಿತವರು, ಹಿಂದೆ ಹೇಳಿದ ಗಡಿಗೆವಾದ್ಯ ಇಲ್ಲವೆ 'ಗುಮಟೆಪಾಗು' ಬಾರಿಸುವವರು ಮುಂದಾಳುಗಳಾಗಿ ಹೊರಡಿಸುವ ಭಜನಾಕೂಟಗಳಿವೆ (ಜಾರುದಾ. ೫೨).
[ ಗುಮಟೆ (<ಗುಮ್ಮಡಿ₁)+ ಪಾಗು ]

**ಗುಮಡಿಗಿಡ** (ನಾ). ಒಂದು ಬಗೆಯ ಗಿಡ : (ವೃಜಿಗಿ. ೬೫-೧೩೨೩).
[ ಗುಮಡಿ₀ + ಗಿಡ (<ಗಿಡು) ]

**ಗುಮತಿ** 'ಗುಮ್ಮಡಿ₁' ನೋ.

**ಗುಮಸಲು** (ನಾ). (ಕರಾ) ಗಿಡಗಳ ಗುಂಪು. [ ? ]

**ಗುಮಾನ**, ಗುಮಾನಿ, ಗುಮಾನೆ (ನಾ). ೧. ಸಂಶಯ ; ಸಂದೇಹ ; ಅನುಮಾನ : ತೀಮಾನದಿಂದ ಹೋಮ ಮಾಡಿ ಗುಮಾನ ಪಟ್ಟ (ಗಾದೆ). ೨. ವಿಚಾರ ; ಯೋಚನೆ : ಇವರ ಮೇಲೆ ಆ ಜನರು ಗುಂಡು ಇಟರು. ಅದನ್ನು ಗುಮಾನಕ್ಕೆ ಹಾಕದೆ, ಮೇಲೆ ಬಿದ್ದು ಜಗಳಮಾಡಿದಲ್ಲಿ (ರಾಜೇಂದ್ರ. ೨೫) ; ಸಾಮಾನ ಇದ್ದವಗೆ ಗುಮಾನ ಏನು (ಗಾದೆ). ೩. ಜಾಗರೂಕತೆ ; ಎಚ್ಚರಿಕೆ : (+). ೪. ಗರ್ವ ; ಅಹಂಕಾರ : (+). **ಗುಮಾನಿ:** ೧. ಟೀಪು ಸುಲ್ತಾನರು . . . ಗುಮಾನಿಯ ಮೇಲೆ ಸೆರೆಯಲ್ಲಿಟ್ಟಿದ್ದ ಜನರಲ್ಲಿ ಬಹಳ ಮಂದಿಯನ್ನು ಕೊಲ್ಲಿಸಿದರು (ಮಹಾಪಂ. II, ೧೩) ; ಮಾತಾಡುತ್ತಿದ್ದಾಗ ಸ್ವಲ್ಪನೂ ಗುಮಾನಿ ಸಿಕ್ಕಲೇ ಇಲ್ಲವೆ (ವೀರಯೋ. ೭). ೫. ಅಪರಾಧವನ್ನು ಮಾಡಿರಬಹುದೆಂಬ ಸಂಶಯಕ್ಕೆ ಪಾತ್ರನಾದವನು. 'ಗುಮಾನಿ ಪಟ್ಟಿ' ಪರಾ. **ಗುಮಾನೆ :** ೧. ಇವರ ಮೇಲೆ ಕಳವಿನ ಗುಮಾನೆಯನ್ನು ಯಾರೋ ಹೇಳಿದರಂತೆ (ಕಲಿನ. ೨೨೬) ; ಪರಸ್ಥಳದವನನ್ನು ಬರೀ ಕಳವು ಗುಮಾನೆಯ ಮೇಲೆ ನೇಕುಚಾಲು ಜಾಮೀನಿಗೆ ಗುರಿಮಾಡುವುದು ಬಹಳ ಕಠಿಣಕ್ರಮ (ನಡದಾ. II, ೮೫೬). [←ಪಾರ. ಹಿಂ. ಮರಾ. ಗುಮಾನ್ ]

**ಗುಮಾನಿ** 'ಗುಮಾನ' ನೋ.

**ಗುಮಾನಿಪಟ್ಟಿ** (ನಾ). ಅಪರಾಧಿಗಳೆಂಬ ಸಂಶಯಕ್ಕೆ ಪಾತ್ರರಾದವರ ಬಗ್ಗೆ ಸರಕಾರದವರು ಇಟ್ಟುಕೊಂಡಿರುವ ದಾಖಲೆಪುಸ್ತಕ : "ತುಂಟರು, ಗುಮಾನಿಗಳು, ನ್ಯಾಯಬಹಿಷ್ಕೃತರು—ಇವರ ಹೆಸರುಗಳ ಪಟ್ಟಿ ; ಗುಮಾನಿಪಟ್ಟಿ" (Black book, list. ಇಂಕನಿ).
[ ಗುಮಾನಿ (<ಗುಮಾನ) + ಪಟ್ಟಿ₂ ]

**ಗುಮಾನಿಸು** (ಕ್ರಿ). ಸಂಶಯಪಡು ; ಅನುಮಾನಿಸು : ಅವನು ಅಷ್ಟು ಅನಾಮತ್ತಾಗಿ ಗುಮಾನಿಸಬಾರದಾಗಿತ್ತು (ಜಿಂಗಲಿ. ೫೦).
[ ಗುಮಾನ + – ಇಸು₃ ]

**ಗುಮಾನೆ** 'ಗುಮಾನ' ನೋ.

**ಗುಮಾಸ್ತ**, ಗುಮಾಸ್ತೆ, ಗುಮ್ಮಾಸ್ತ (ನಾ). ೧. ಕಾರಕೂನ ; ಲೆಕ್ಕಪತ್ರವನ್ನು ಬರೆಯುವವನು : ಸ್ವಲ್ಪ ದಿನಗಳ ನಂತರ ಗುಮಾಸ್ತರ ಅವಶ್ಯಕತೆಯು ಅನೇಕವಾಗಿ ಬರಬಹುದು (ರೂರಾಚಿ. ೧೬೩) ; ತುಳಸಿಯ ಮಗನ ಮರಣದ ಅಪರಾಧದಲ್ಲಿ ರೂಪಚಂದನ ಗುಮಾಸ್ತನ ಮೇಲೆ ವಾರಂಟು ಹೊರಟಿದ್ದವು (ಜಮೀನ್ದಾ. ೧೪೦) ; ಗುರುಚರಣರು ಒಂದು ಬ್ಯಾಂಕಿನ ಗುಮಾಸ್ತರು (ಪರಿಣೀ. ೧). ೨. ನಿಯೋಗಿ ; ಪ್ರತಿನಿಧಿ : (+). **ಗುಮಾಸ್ತೆ :** ೧. ಈಗ ನೀವು ನಮ್ಮ ಸಮಾನರಿದ್ದೀರಿ ; ಕೆಳಗಿನ ಕಚೇರಿಯ ಒಬ್ಬ ಗುಮಾಸ್ತೆಯಲ್ಲ (ಹೇಮಂತ. ೧೯೦) ; ಕಚೇರಿಯ ಗುಮಾಸ್ತೆಗಳಿಗೂ ಫೌಜದಾರರಿಗೂ ಚಹ ಬೇಕಾದಾಗ ಅಂಗಡಿಗೆ ಹೋಗಿ ಹೇಳಿ ಬರುವುದು (ನಾಪೂಲೀ. ೧೧೧). **ಗುಮ್ಮಾಸ್ತ :** ೧. ಒಮ್ಮೆ 'ಗುಮ್ಮಾಸ್ತ' ನಾಗಿದ್ದವನು ಮತ್ತೊಮ್ಮೆ ಜಿಲ್ಲಾಧಿಕಾರಿಯಾದನೆಂಬುದೂ ವಿರೋಧವೇ ಆದೀತು (ಕನ್ನಇ. ೧೮೦). [ ←ಪಾರ. ಹಿಂ. ಗುಮಾಶ್ತಾ ; ಮರಾ. ಗುಮಾಸ್ತಾ ]

**ಗುಮಾಸ್ತಗಿರಿ**, ಗುಮಾಸ್ತೆಗಿರಿ (ನಾ). ಗುಮಾಸ್ತನ ಕೆಲಸ, – ವೃತ್ತಿ : ಗುಮಾಸ್ತಗಿರಿಯ ಧರ್ಮವು ಮತ್ತೊಬ್ಬನದಾಗಿರಬಹುದು (ಅನಾಸ. ೨೦). **ಗುಮಾಸ್ತೆಗಿರಿ :** ರಂಗಪ್ಪನನ್ನೇ ಊರ ಶಾನುಭೋಗರು ಡಿಪೋ ಗುಮಾಸ್ತೆಗಿರಿಗೆ ಆರಿಸಿದ್ದರು (ಕತ್ತಬೆ. ೩೦). [ ಗುಮಾಸ್ತ + – ಗಿರಿ₂ ]

**ಗುಮಾಸ್ತಿಕೆ** (ನಾ). = ಗುಮಾಸ್ತಗಿರಿ : ಎಂಜಿನಿಯರಿಕೆ ಗುಮಾಸ್ತಿಕೆಯಲ್ಲ (ಜಗುಕ. ೯). [ ಗುಮಾಸ್ತ + – ಇಕೆ ]

**ಗುಮಾಸ್ತೆ** 'ಗುಮಾಸ್ತ' ನೋ.

**ಗುಮಾಸ್ತೆಗಿರಿ** 'ಗುಮಾಸ್ತಗಿರಿ' ನೋ.

**ಗುಮಿ** 'ಗುಮ್ಮಿ₁' ನೋ.

**ಗುಮಿಗೂಡು** (ಕ್ರಿ). ಗುಂಪುಕೂಡು ; ಒಟ್ಟಿಗೆ ಸೇರು : ದಮಯಂತಿ ದಾದಿಯರು . . . ಗುಮಿಗೂಡಿ ಯೆಲ್ಲಾರು ಕಂಬನಿಗರೆಯುತಿರಲು (ಯನಳ. ೬೨) ; ಶೀವಿಯಿಂ ನಾರದರ್ ತುಂಬುರರ್ ಗಾಂಧರ್ವ ಕೋವಿದರ್ ಗುಮಿ [ ಪಾಠಾಂ. ಗುಂಪು ] ಗೂಡಿ ಮುನಿಯೆಡೆಗೆ ಬರಲು (ವೆಂಕಾರಾ. ೨-೨೮-೧೧) ; ತರತರದಿ ಗುಮಿಗೂಡಿ ದಾನವಿಯರೆಲ್ಲ ಬಂಧುರದ ನಿಷ್ಠುರ ಗೈವರು (ವೆಂಕಾರಾ. ೫-೧೧-೧). [ ಗುಮಿ (<ಗುಮ್ಮಿ₁) + ಕೂಡು₁ ]

**ಗುಮಿಗೊಳಿಸು** (ಕ್ರಿ). ರಾಶಿಹಾಕು ; ಶೇಖರಿಸು : ಕುಂಭಕರ್ಣನಿಹ ಮನೆಯೆಡೆಗೆ ನಡೆತಂದು ನಾನಾವಿಧದ ಮಾಂಸ ಘನ ಸೀಧುರಸ ಶೋಣಿತಂಗಳಂ ಗುಮಿಗೊಳಿಸೆ ಪರವಳಯದೊಳಗಿಟ್ಟರು (ವೆಂಕಾರಾ. ೬-೨೫-೧೧).
[ ಗುಮಿ (<ಗುಮ್ಮಿ₁) + ಕೊಳ್₁ + – ಇಸು₃ ]

**ಗುಮಿತ** (ನಾ). ೧. ಗುಟ್ಟಾದ ಸುದ್ದಿ; ರಹಸ್ಯವಾದ ವದಂತಿ: "ಸಮದಲ್ಲಿ ಪ್ರತ್ಯಕ್ಷದಲ್ಲಿ ಹೊಲ್ಲಹ ನುಡಿವ ಗುಮಿತದಲಿ ವಾರ್ತೆಯೆಂಬುದು" (ಮಂಗರಾ. ೧೫೫-೭೦) ; ಒಂದು ಹುಲಿಯಂ ಕೊಲಲ್ ಮತ್ತೊಂದು ಸೇಡಿನಿಂ . . . ಕೆರೆಗಳನಳ್ಕಿಸುವುದೆಂಬ ಗುಮಿತ ಬರಲು (ಕಾಲೂರ. ೯೦-೧೭೬). ೨. ಸದ್ದು; ಧ್ವನಿ ಗುಮಿತ ಸಯ್ತಿರು ಬಂತು ನೋಡೆಂಬ ನುಡಿ ಕಿರಿದುಕಿರಿದಾಗೆ (ಕಾಲೂರ. ೮೫-೧೬೪). [ ? ]

**ಗುಮಿಪುಣಸೆ** (ನಾ). ಗುಂಪಾಗಿ ಬೆಳೆದಿರುವ ಹುಣಿಸೆ: ಅನ್ತೆ ತುಬ್ಬಿಲ ಪೆರ್ಜುಳ್ಬಿಯ ಕೆವ್ವರೆಯ ಗುಮಿಪುಣಸೆಯ ಅಲೆ ಪೊಮ್ಬುಣಸೆ ಅನ್ತೆ ಬಳಿಪುಣಶೆಯ ಅಳರಿಯ ಕಿಱುಕೆಱೆಯ (ಎಕ. XVI, ತಿಪಟೂ. ೧೧೦-೬೮ ; ಸು. 900). [ ಗುಮಿ (<ಗುಮ್ಮಿ₁) + ಪುಣಸೆ (<ಪುಣಿಸೆ) ]

**ಗುಮುಕು₁** (ಕ್ರಿ). ಹೊಡೆ; ಗುದ್ದು: ಅವಗೆ ನಾಲ್ಕು ಮಟ್ಟು ಗುಮುಕಿ, ಈಚೆಗೆ ದೂಡಿಕೊಂಡು ಬಾದಿ (ಕಲಿನ. ೩೦೬).
[ ದೇ.॥ ತಮಿ. ಕುಮುಕ್ಕು ; ಮಲ. ಕುಮೊಕ್ಕ ; ತುಳು. ಗುಮುಸು ; ತೆಲು. ಗುಬುಕು, ಗುಮುಕು ]

**ಗುಮುಕು₂** (ನಾ). ಬಗ್ಗುವಿಕ ; ತಗ್ಗುವಿಕೆ. 'ಗುಮುಕುಹಾಕು' ಪರಾ. [ ? ]

**ಗುಮುಕುಹಾಕು** (ಕ್ರಿ).ಬಗ್ಗಿಸು ; ತಗ್ಗಿಸು : ನಾನು ತಲೆಯನ್ನು ಗುಮುಕು ಹಾಕಿದೆ, ಬಿಗಿದ ಬಾಯಿ ಬಿಗಿದ ಹಾಗೆಯೇ (ಮುಗಮೂ. ೭೦).
[ ಗುಮುಕು₂ + ಹಾಕು (<ಘಾಯ್ಕು₁) ]

**ಗುಮುಗುಮಿಸು** (ಕ್ರಿ). ಗುಮುಗುಮು ಎಂದು ಧ್ವನಿಮಾಡು : ಹಟ್ಟು ಹಸಿಯ ಗುಮುಗುಮಿಸುತ ಹಾರುವ ಜೇನ್ನೊಣಗಳ ಗಜಬಜೆಯಾಗ್ತು (ನಲ್ಕ. ೨೭-೦೬). [ ಗುಮುಗುಮು + – ಇಸು₃ ]

**ಗುಮುಗುಮು** (ನಾ). ಒಂದು ಅನುಕರಣಪದ. 'ಗುಮುಗುಮಿಸು' ಪರಾ.

**ಗುಮುಟ** ' ಗುಮ್ಮಟ' ನೋ.

**ಗುಮುತಿ** ' ಗುಮ್ಮತಿ ' ನೋ.

**ಗುಮುರು** ' ಗುಬುರು ' ನೋ.

**ಗುಮ್ಮ**$_1$, ಗುರ್ಮ (ನಾ). ೧. ಭಯ ಹುಟ್ಟಿಸುವ ಒಂದು ಕಾಲ್ಪನಿಕ ಭೂತ ; ದೆವ್ವ ; ಬವ್ವ(ಉಕ): ಶಿಶುವಿಂಗೆ ಗುಮ್ಮನಲ್ಲದೆ ದೆಸೆಯ ಬಲ್ಲವರಿಗುಂಟೇ ಭೀತಿ (ವೋಳಿಮಾ. ೬೫-೨೬೫) ; ಬೊಮ್ಮನಪ್ಪನು ಆಗಿ ಬುಧರೊಳು ದಿಮ್ಮಿತಪ್ಪಖಿಳಾಗವಜ್ಞನು ಗುಮ್ಮನೆಲ್ಲಾ ವಾದಿಗಳಿಗೀ ಸೋಮಯಾಜಿಗಳು (ಬಸಪು. ೫೫-೩೩) ; ಗುಮ್ಮನ ಕರೆಯದಿರೆ ಅಮ್ಮ ನೀನು ಗುಮ್ಮನ ಕರೆಯದಿರೆ (ಪುರಂದ. ೧-೧೭೧ ಪಲ್ಲವಿ) ; ಆಂ ಗುಮ್ಮಂ ನುಂಗುವೆನಲ್ಲದೊಡೆ ತನಿವಣ್ಣನೀಯಿವೆನಗೆ (ರಾಮಾಶ್ವ. ೧೮-೨೮) ; ಗುಮ್ಮ ಬಂದನು ಸುಮ್ಮನಿರು ಕಂದ (ಉಯ್ಯಾಲೆ. ೧೪-೧). ೨. ಗೂಬೆ : ಗುಮ್ಮನಂದುದಿಪ ನೇಸಱಂ ಕಂಡು ದನಿಗುಡಲರ್ಕನೇಂ ಕಿರಣಮಡಗಿಸುವನೇ (ಶ್ರೀರಾಮ. ೨-೬) ; ನೀನಿಂತು ಗುಮ್ಮನಂತಿರೆ ಕಣ್ದೊಳಿಸಿಂ ದಿಟ್ಟಿಸದಿರ್ಪುದೇಂ (ರಾಮಾಶ್ವ. ೬೦-೮) ; ದೂರವೆಲ್ಲೋ ಹಿತ್ತಿಲಲ್ಲಿ ಗುಮ್ಮ ಕೂಗುತ್ತಿತ್ತು (ಮೂರುದಾ. ೩೨೪). **ಗುರ್ಮ** : ೧. ಧರ್ಮಕಪಜಯಮುಂಟೆ ಪರಿಕಿಸೆ . . . ಗುರ್ಮನೊಳು ಗುಣವುಂಟೆ (ಅಂಬಿಕಾ. ೪೭-೩೯). P ಕವಿಯು ಪ್ರಾಸಕ್ಕಾಗಿ ಈ ರೂಪವನ್ನು ನಿರ್ಮಿಸಿಕೊಂಡಿರಬೇಕು.

**ಗುಮ್ಮನ ಬಡಿವ**=ಒಂದು ಬಗೆಯ ಆಟ : ಗುಮ್ಮನ ಬಡಿವ ಕತ್ತಲೆಗುದ್ದು ಗಂಬದ ಗಡಣ . . . ವಿನೋದದಲಾಡಿದರು (ಕುಮಾ೯ಆ. ೬-೨).

[ ದೇ.॥ ತುಳು. ಗುಮ್ಮೆ, ಗೂಮೆ, ಗೂರ್ಮೆ ]

**ಗುಮ್ಮ**$_2$ (ನಾ). ಕೋಟೆಯ ಗೋಡೆಯನ್ನು ಒಡೆಯಲು ಉಪಯೋಗಿಸುತ್ತಿದ್ದ ಒಂದು ಬಗೆಯ ಯಂತ್ರವಿಶೇಷ: ಮಱು ದಿವಸಂ ದಿವಸಮುಖದೊಳ್ ಪಲವು ಮುಖದಿಂ ಗುಮ್ಮನಂ ಸಾರ್ಚಿಯಣ್ಮಿ ಕಾದುವರ ಗುಣ್ಪಂ ಕಿಡಿಸಿಯುಂ (ಪಾರ್ಶ್ವಪು. ೩-೧೩೯ ವ) ; ಗೆಗ್ಗೆ ಡೆಂಕಣಿ ಗುಮ್ಮಂ ಪಡಿಗೋಂಟೆಯೆಂಬ ಬಹುಕೋಟಾಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ (ಅನಂಪು. ೧೧ ೮೩). [ <ಕುಮ್ಮು$_1$ ]

**ಗುಮ್ಮ**$_3$ ' ಗುಣ್ಪು$_2$ ' ನೋ.

**ಗುಮ್ಮಂಗೊಳ** (ನಾ). ಒಂದು ಊರಿನ ಹೆಸರು. P ಧಾರವಾಡ ಜಿಲ್ಲೆಯ ನವಿಲುಗುಂದದ ಬಳಿಯ ಈಗಿನ ಗುಮ್ಮಗೋಳ : ಸಂಗತವಾಗೆ ಮಾಡಿ ತಳವೃತ್ತಿಯನಲ್ಲಿಗೆ ಮೂಡಗೇರಿ ಗುಮ್ಮಂಗೊಳನಾದಿಯಾಗೆ ನೆಗಳ್ದಿಟ್ಟಗೆ ಗಾವಡಿವಾಡವೆಂಬ ಬಾಡಂಗಳ ಶಾಸನಂಬೆರಸು (ಎಇ. XV, ೩೪೦-೧೮ ; 1071). [ ಗುಮ್ಮ? + ಕೊಳ$_2$ ]

**ಗುಮ್ಮಕಾಂಭೋಜ** (ನಾ). [ಸಂಗೀತ] ಮಿಶ್ರಕಾಂಭೋಜೀ ರಾಗಗಳಲ್ಲಿ ಒಂದು : ಗುಮ್ಮಕಾಂಭೋಜ ತೆನುಗುಕಾಂಭೋಜ ದೇಶ್ಯಕಾಂಭೋಜಯೆಂಬ ಮೂಱೀ ಕಾಂಭೋಜೀಮಿಶ್ರಂಗಳು (ವಿವೇಕ. ೨೩೫).

[← ತೆಲು. ಗುಮ್ಮಕಾಂಬೋಜಿ ]

**ಗುಮ್ಮಟ**$_1$, ಗುಂಬುಟ, ಗುಮುಟ, ಗುಮಂಟ, ಗುಮ್ಮುಟ (ನಾ). ೧. ಅರ್ಧಗೋಳಾಕಾರವಾದ ಗೋಪುರ; ಗುಂಬಜು : ಎನ್ನ ಗೂಡಿನ ಗುಮ್ಮಟನೊಡೆಯ ಅಗಮ್ಯೇಶ್ವರ ಲಿಂಗವೆ (ಮನುಗುಂ. ೧೧); ಚಿತ್ತರಿಸಿದ ಭಿತ್ತಿ ಬಾಗಿಲಮಳ್ಗಂಬದ ಹಂತಿ ಗವಾಕ್ಷಮುಪ್ಪರಿಗೆಯ ಗುಮ್ಮಟಂ ಮೆರೆಗುಂ (ಮರಾಜ. ೧೨-೫) ; ಮೇಲಿನ ಶಾಮ್ರದ . . . ಗುಮ್ಮಟಕ್ಕೆ ಚಿನ್ನದ ಮುಲಾಮನ್ನು ಮಾಡಿಸಿದರು (ಮರ್ಯಾದೆ. ೨೯೭). ' ಗೋಳ ಗುಮ್ಮಟ 'ಪರಾ. **ಗುಂಬುಟ** : ೧. " ಗುಂಬುಟ–ಮುಸಲ್ಮಾನರ ಗುಮ್ಮಟ " (ಗಂಗಾಮ. ೧೧೬). **ಗುಮುಟ** : ೧. ಅನೇಕ ಹಜಾರಗಳೂ ಗುಮುಟಗಳೂ ಇದ್ದ ದೊಡ್ಡ ಅರಮನೆಯು ಹಸೀಇಟ್ಟಿಗೆಯಿಂದ ಕಟ್ಟಿದ್ದುವು (ಇಸ್ಲಾಂಸಂ. ೧೪೮). ೨. ಗುಂಡಾಗಿರುವ ಆವರಣ,–ಮುಸುಕು : ಕಡಾಯಿಯಿಂದ ಹೊರಟ ಉಗಿಯು ಗುಮುಟಕ್ಕೇರಿ ಅಲ್ಲಿ ಒಣಗುವುದು (ವಿಜ್ಞಾವಿ. ೪೭). **ಗುಮುಟ** : ೧. ಭವ್ಯವಾದ ಕಮಾನುಗಳನ್ನೂ ಗುಮುಟಗಳನ್ನೂ ನೋಡಿ ಆಶ್ಚರ್ಯವಾಗುತ್ತದೆ (ಮುಂಬಯಿ. ೪-೧೪೨); ಅಸಂಖ್ಯ ಗುಮುಟಗಳನ್ನು ಕಟ್ಟಿ . . . ಸಂಗಮರವರೀ ಕಲ್ಲಿನ ಥರವನ್ನು ಹೊಂದಿಸಿದ್ದಾರೆ (ಮುಂಬಯಿ. ೬-೨೬). ೨. ಹೆಬ್ಬೆರಳಿಗೆ ಕಾರಿನ ಹಿಂದಿನ ಗುಮುಟ ತಾಕಿ ಜಾರಿಹೋಯಿತು (ಬಾಬಲ. ೧೧೦). **ಗುಮ್ಮುಟ** : ೧. ಬೆಳ್ಳಿಯ ಗುಮ್ಮುಟವು ಸೂರ್ಯಪ್ರಕಾಶಕ್ಕೆ ಥಳಥಳ ಹೊಳೆಯುತ್ತಿತ್ತು (ಮೇದಿಮ. ೧೩೫) ; ಆ ಶಬ್ದಬ್ರಹ್ಮದ ಗುಮ್ಮುಟಕ್ಕೇ ನೀನು ತಿರುಗಿ ಹೊರಡು (ಪ್ರವಾತೋ. ೨೧). [← ಹಿಂ. ಗುಮ್ಮಟ ; ಪಾರ. ಗುಂಬದ ]

**ಗುಮ್ಮಟ**$_2$ ' ಗೊಮ್ಮಟ ' ನೋ.

**ಗುಮ್ಮಟಚಾವಣಿ** (ನಾ). ಗುಮ್ಮಟವಿರುವ ಮೇಲುಮಹಡಿ : ಗುಮ್ಮಟಚಾವಣಿಯ ಕೋಣೆಯೊಂದರ ಬಳಿ ಕೊಂಡೊಯ್ದು . . . ಬೀಗ ಜಡಿದು ನಾನು ಏಕಾಕಿಯಾದಾಗ ನನ್ನ ಮನೋಯಾತನೆ ದುರ್ಭರವಾಯಿತು (ಪುನರು. ೩೮೯). [ ಗುಮ್ಮಟ$_1$ + ಚಾವಣಿ (<ಛಾವಣಿ) ]

**ಗುಮ್ಮಟಿಗ** (ನಾ). ಒಂದು ಜಾತಿಯ ಹಕ್ಕಿ : ಗೀಜಗನುರಗರಿಪು ಗುಮ್ಮಟಿಗ ಗೋದಿಗ ಬುಱುಲೆ ಬಲು ಹಸುಬ . . . ಪರಿಪರಿಯ ಪಕ್ಷಿಗಳು ಮೆಱೆದಿಹವು (ಪ್ರಹ್ಲಾಜ. ೪-೧೨). [ ? ]

**ಗುಮ್ಮಟೇಶ** 'ಗೊಮ್ಮಟೇಶ ' ನೋ.

**ಗುಮ್ಮಟೇಶ್ವರ** ' ಗೊಮ್ಮಟೇಶ್ವರ ' ನೋ.

**ಗುಮ್ಮಡಿ**$_1$, ಗುಮಟೆ, ಗುಮತಿ (ನಾ). ಒಂದು ಬಗೆಯ ಮದ್ದಳೆ : ಬಿಡದೆ ಮುಡುಪಿಕ್ಕುತಂ ಗುಮ್ಮಡಿ ಗೆಲವ ಕಡಂಗಿ ಕೊಂಬು ವಹೌವರಿ ಕೊಳಲಿಂ ಬಿಡದೂದುವ ಸಿಳ್ಳಿಕ್ಕುವ ಕಡುರಭಸದ ಪೆರ್ಚುಗುರ್ವಿಸಿತ್ತು (ಶ್ರೀಪುವಿ. ೧೫-೬). **ಗುಮಟೆ**: ಗುಮಟೆಯು ಒಕ್ಕಲಿಗನ ಜೀವದ ಸಂಗಾತಿಯಾಗಿದೆ (ರೂಢಿ). **ಗುಮತಿ** : " ಗುಂಬವಾದ್ಯ – ಕುಂಭವಾದ್ಯ, ಗುಮತೀ ವಾದ್ಯ " (ಗಂಗಾಮ. ೧೧೬).

[ ದೇ.॥ ತಮಿ. ಕುಮ್ಮಟ್ಟಿ : ತುಳು. ಗುಮಟೆ ; ತೆಲು. ಗುಮ್ಮೆಟ, ಗುಮ್ಮೆತ. / ಮರಾ. ಗುಮಠಾ, ಗುಮಡಾ ]

**ಗುಮ್ಮಡಿ**$_2$ (ನಾ). ಭೂತ ; ಪಿಶಾಚಿ : ಗುಮ್ಮಡಿಯಂತಪ್ಪ ತಾಯಿ ನೋಡೆನಗೆ ಕಲಕೇತನಂತಪ್ಪ ತಂದೆ ನೋಡೆನಗೆ (ಬಸವ. ೭೨೦)

[ ? ]

**ಗುಮ್ಮತನ** (ನಾ). ಹೆಚ್ಚಳ ; ಆಧಿಕ್ಯ : ವಾಯುವಾಯ್ತಹಿಪಾಶ ಪದ್ಮಜಸಾಯಕವು ಸಱಿಯಾಯ್ತು ಸದೆಸಟ್ಟಾಯಿತನುಜನ ಬಿಣ್ಪು ಬೀತುದು ಗುಮ್ಮತನ ಭಟರ[ಪಾಠಾಂ. ಬಿಗುಹು ಭಟರುಗಳ, ರದುಮ್ಮತನ ಭಟರ ] (ತೊರರಾ. ೬-೪೧-೩). [ ಗುಮ್ಮ$_3$ (<ಗುಣ್ಪು$_2$) + – ತನ ]

**ಗುಮ್ಮತಿ**, ಗುಮಂತಿ (ನಾ). ಚಿಕ್ಕ ಡೇರೆ,–ಗುಡಾರ : ದೊರೆದೊರೆಗಳಿಗೆ ಗುಡಾರ ಗುಮ್ಮತಿ ದೂತ ಸರವತ್ತಿಗೆಯು ಚಪ್ಪರಗಳು ಇರದನುಮಾಡಿಸಿ (ಅಮುಸಾಂ. ೨-೪೨) ; ಬಿಡದಾ ದೂಸ ಬಳಸಿ ಗುಱಿಕಾಱರ ಗಡಣ ಗುಮ್ಮತಿಗಳೆದ್ದಾವು (ಜ್ಞಾನಚ. ೧೨-೯೮). **ಗುಮುತಿ** : ನೆಗಳ್ದವಲ್ಲಲ್ಲಿ . . . ಬಗೆಬಗೆಯ ಗುಡಿ ಗುಮುತಿ [ಪಾಠಾಂ. ರಿ] ಗೂಡಾರ ಸಾಗರದಾನಮಗಲದೊಳ್ ಚಾವಡಿ ಹಜಾರ ಹಯಗಜಶಾಲೆ ಮುಖ್ಯಬೀಡಾರಂಗಳು (ಚಬಪು. ೪೭-೩೩). [ ←ತೆಲು. ಗುಮ್ಮೆ ]

**ಗುಮ್ಮನಾಲ** (ನಾ). ಒಂದು ಊರಿನ ಹೆಸರು (?) : ಅಲಿಂದಂ ಮೂಡಲು ಹದ ತೆಂಕಣ ಕರೆಯಲಿ ಗುಂಮನಾಲದಿಂದ ವಾಯುವ್ಯವಾಗಿ ಕೊಟ್ಟ ಸೋಗೆಯ ಹಳಿನ ಹತಿರೆ ನೆಟ್ಟ ಕಲು (ಎಕ. XIV, ಗುಂಡ್ಲುಪೇ. ೧೨೭-೨೬ ; ?). [ ? ]

**ಗುಮ್ಮನೆ** (ಅ). ಮೌನವಾಗಿ ; ತೆಪ್ಪಗೆ.

**ಗುಮ್ಮನಗುಸುಕ, ಗುಮ್ಮನಗುಸಕ** = ತನ್ನ ಒಳಗಿನ ಭಾವವನ್ನು ತೋರ್ಪಡಿಸದೆ ಯಾರೊಂದಿಗೂ ಬೆರೆಯದಿರುವವನು,-ಒಂಟಿಯಾಗಿರುವವನು : ಅವನು ಗುಮ್ಮನಗುಸುಕ (ರೂಢಿ) ; ನೀನು ಈಗೇನು ಹೊರಗೆಲ್ಲಿಗಾದರೂ ಬರ್ತೀಯೋ ಅಥವಾ ಇಲ್ಲೇ ಗುಮ್ಮನಗುಸಕನ ಹಾಗೆ ಕುಳಿತಿರ್ತೀಯೋ ಹೇಳು (ಹೊಸಕ್ಷಿ. ೧೦೫). **ಗುಮ್ಮನಗುಸುಕಿ, ಗುಮ್ಮನಗುಸಕಿ**=ತನ್ನ ಒಳಗಿನ ಭಾವವನ್ನು ತೋರ್ಪಡಿಸದೆ ಯಾರೊಂದಿಗೂ ಬೆರೆಯದಿರುವವಳು,-ಒಂಟಿಯಾಗಿರುವವಳು : ಅವಳು ಗುಮ್ಮನಗುಸುಕಿ (ರೂಢಿ) ; 'ಗುಮ್ಮನಗುಸಕಿ' ಎಂದೆನಿಸಿಕೊಂಡ . . . ದೇವಕಿ ಕೂಡ ನಿರ್ಮಲೆಯ ಬಗ್ಗೆ, ವಾಸುದೇವನ ಬಗ್ಗೆ ಒಳ್ಳೆಯ ಮಾತುಗಳನ್ನು ಆಡಹತ್ತಿದ್ದರು (ಮೂರುದಾ. ೨೬೭). **ಗುಮ್ಮನಾಗು, ಗುಮ್ಮಾಗು** = ಮೌನವಾಗು ; ತೆಪ್ಪಗಾಗು : ಗುಮ್ಮನಾದನು ಭೂಪ ಚಿತ್ರದ ಹಮ್ಮು ಮುರಿದುದು (ಅಂಬಿಕಾ. ೪೮-೩೨) ; ಹಮ್ಮು ಮುರಿದ ಮೇಲೆ ಗುಮ್ಮನಾದ (ಗಾದೆ); ಹಂಪನಕಟ್ಟೆಯಲ್ಲಿ ಅವನ ಅಂಗಡಿ ನೋಡಿ ಗುಮ್ಮಾದೆ (ಅಭಿಮಾ. ೬); ಮಿಕ್ಕವರ ಮನೋವೃತ್ತಿಯನ್ನು ನೋಡಿ ಸರಸ್ವತಿ ತಾನೂ ಗುಮ್ಮಾಗಿ ವ್ಯವಹರಿಸಬೇಕಾಗಿತ್ತು (ಪುರುಷ. ೧೦೪). [ಗುಂ + - ಅನೆ$_1$]

**ಗುಮ್ಮಯ್ಯ** (ನಾ).=ಗುಮ್ಮ$_1$ ೧ : ದೆಯ್ಯ, ಭೂತ, ಗುಮ್ಮಯ್ಯ-ಕತ್ತಲಾಳದಿಂದಲೆದ್ದು ಬೆದರಿಸುತಿವೆ ದಮ್ಮಯ್ಯ ! (ನಡಬಂ. ೨೪-೨) ; ಪರೀಕ್ಷೆಯೆಂದರೆ ಮಕ್ಕಳಿಗೆ 'ಗುಮ್ಮಯ್ಯ'ನಂತೆ (ಕನ್ನನು. ೧-೧೪).
[ಗುಮ್ಮ$_1$ + ಅಯ್ಯ$_1$]

**ಗುಮ್ಮವಕ್ಕಿ** (ನಾ). ಒಂದು ಜಾತಿಯ ಹಕ್ಕಿ ; ಕಾಡುಕೋಳಿ ; "ಕುಕ್ಕುಭ" (ನಾಚಿರಾ. ೬) : "ಕುಕ್ಕುಭಃ-ಗುಮ್ಮವಕ್ಕಿ" (ಸಿದ್ಧಾಂತಿ. ೦೪೩).
[ಗುಮ್ಮ$_1$ + ಪಕ್ಕಿ$_1$]

**ಗುಮ್ಮಸು** 'ಗುಂಬಜು' ನೋ.

**ಗುಮ್ಮಸ್ತ** 'ಗುಮಾಸ್ತ' ನೋ.

**ಗುಮ್ಮಳಿಸು** (ಕ್ರಿ). (ಒಳಗೇ) ಬೇಯು : ಹೀಗಾಗಿ ಗೃಹಕಲಹದ ಕಿಚ್ಚು ಒಳಗೊಳಗೇನೇ ಗುಮ್ಮಳಿಸಿತಲ್ಲದೆ ಹೊತ್ತಿ ಉರಿಯಲಿಲ್ಲ (ಒಡ್ಡಿಉ. ೬೭).
[<ಉಮ್ಮಳಿಸು]

**ಗುಮ್ಮಿ$_1$, ಗುಮಿ, ಗುಮ್ಮು$_2$** (ನಾ). ಗುಂಪು ; ಮೊತ್ತ ; ಸಮೂಹ : "ಬಂಬಲ್ . . . ಗುಮ್ಮಿ, ಗೊಂದಣಿ, (ಉಂದಲ್)-ಈ ೪೦ ಸಮೂಹಂ" (ಕಶಸಾ. ೧೧-೨೨೨) ; "ಜಂಗುಳಿ ತೆರಳ್ಕೆ ದೊಂದುಳಿ ನೆರವಿ . . . ತಿಂತಿಣಿ ತೆಮ್ಮಲೊರ್ಗು ತಂಡಂ ಗುಮ್ಮಿ . . . ಜಾಳಿಗೆಯುಮೆನೆ ಶ್ರೇಣಿನಾಮ್ನಂ" (ಕಬ್ಬಿಕ್ಕೆ. ೦೬). **ಗುಮಿ :** ಸಿಡಿಲಿನ ಗುಮಿಯೊ ವೈಶ್ವಾನರನ ಕೋಪದ ಹೊಗರೊ (ವಂಕಾರಾ. ೬-೭-೪೦). **ಗುಮ್ಮು$_2$ :** 'ಗುಮ್ಮುಗಟ್ಟು' ಪರಾ.
[ದೇ.॥ ತಮಿ. ಕುಮ್ಮಿ ; ಮಲ. ಕುಮಿ ; ತೆಲು. ಗುಮಿ]

**ಗುಮ್ಮಿ$_2$, ಗುಮ್ಮೆ** (ನಾ). ೧. ನೀರಿನ ಹೊಂಡ,-ಗುಂಡಿ : ಗುಮ್ಮಿಯ ನೀರಿಗೆ ಬಂದವನಷ್ಟಕ್ಕೆ ಬಿಟ್ಟನು ಕೈಯ ಬಿಂದಿಗೆಯ (ಚಂದ್ರವೀ. ೮-೩೦) ; ಮನೆ ಹಿಂದಿನ 'ಗುಮ್ಮಿ'ಗೆ ಸೀತೈತಾಳರ ಹೆಂಡತಿ ಪಾರ್ತವ್ವ ನು ಹೋಗುತ್ತಾಳೆ (ಹಹಸ. ೨). ೨. ಗುಣಿ ; ಹಳ್ಳ : ಬಾಳೆ . . . ಒಂದೇ ಗುಮ್ಮಿಯಲ್ಲಿ ಹತ್ತಾರು ಗಿಡಗಳನ್ನು ಬೆಳೆಯಬಿಟ್ಟರೆ ಗೊನೆ ಸಣ್ಣದಾಗುವುದು (ವ್ಯವಮ. ೫೭). **ಗುಮ್ಮೆ :** ೧. ನೀನು ಗುಮ್ಮೆಗೆ ಹೋಗಿ ಕೈಕಾಲು ತೊಳೆದು ಬಾ (ಪದ್ಮಸ. ೨೫೩). [ದೇ.॥ ತೆಲು. ಗುಮಿ]

**ಗುಮ್ಮಿ$_3$** (ನಾ). ೧. ಧಾನ್ಯಗಳನ್ನು ತುಂಬಿಡಲು ಉಪಯೋಗಿಸುವ ದೊಡ್ಡ ಮಡಕೆ,-ಗುಡಾಣ : ಈ ಧಾನ್ಯಗಳನ್ನು ಕಣಜದಲ್ಲಿ ಗಳಗೆಯಲ್ಲಿ ಗುಮ್ಮಿಗಳಲ್ಲಿ ಇಲ್ಲವೆ ಬುಟ್ಟಿಗಳಲ್ಲಿ ತುಂಬಿ . . . ಮೆತ್ತುಹಾಕಿ ಇಟ್ಟರೆ ಎಷ್ಟು ದಿವಸ ಇದ್ದ ಕಾಲಕ್ಕೂ ಹುಳಗಳು ಹೆತ್ತುವದಿಲ್ಲವು (ಕೃಷಿಪ್ರ. ೬೭); ಭತ್ತ ತುಂಬಲು ಗುಮ್ಮಿಲ್ಲಣ್ಣ (ಕೃಷಿಪ್ರ. ೩೨೭). ೨. ಕೊಠಡಿ ; ಕೋಣೆ: ಸಾಯಂಕಾಲವಾಗುತಾ ಬಂತು. ಖೈದಿಗಳ ಗುಮ್ಮಿಗಳಿಗೆ ಬೀಗಾ ಹಾಕಿಬಿಡುತಾರೆ (ಮುಸುಗ. ೧೨೩). [<ಕೊಮ್ಮ$_1$]

**ಗುಮ್ಮಿಕ್ಕು** (ಕ್ರಿ). ಧ್ವನಿ ತುಂಬು ; ಇಡಂಗು : ತುಱುಗಿತಿಳೆ ನಡುದೊಡೆಯ ತುಂಡಿನಗು[ಲು]ಱುಬಿನಲಿ ಗುಮ್ಮಿಕ್ಕಿದುದು ನಭವಱುಚುತಿರ್ದುದ ಜಾಂಡ ಬೊಬ್ಬೆಗೆ ರಾಮನೆಸುಗೆಯಲಿ(ತೊರರಾ. ೬-೪೫-೬೦): ಗದೆ ಘಾತದಲಿ ಗುಮ್ಮಿಕ್ಕಿತಜಾಂಡ (ಅಂಬಿಕಾ. ೯-೨೬). [ಗುಂ + ಇಕ್ಕು]

**ಗುಮ್ಮಿಡು** (ಕ್ರಿ).=ಗುಮ್ಮಿಕ್ಕು : ಗಗನತಳ ಗುಮ್ಮಿಡುತಲಿರ್ದುದು ಕುಣಿವ ಮುಷ್ಟಿನಿಘಾತದಲಿ ಭಟರ (ತೊರರಾ. ೬-೩೩-೧೬) ; ರಣವಾದ್ಯ ಚೆನ್ನಾಗಿ ದಿಗುವಳೆಯ ಗುಮ್ಮಿಡಲ್ ಗಜರಿದವು ಶತಕೋಟಿ ಸಂಖ್ಯೆಯಿಂದ (ತುರಂಗ. ೬೫-೩೪). [ಗುಂ + ಇಡು$_1$]

**ಗುಮ್ಮಿಮನೆ** (ನಾ). ಆಳುಕಾಳುಗಳು ಒಟ್ಟಿಗೆ ಕುಳಿತುಕೊಂಡು ಊಟ ಮಾಡುವ ಮನೆ : (೬). [ಗುಮ್ಮಿ$_1$ + ಮನೆ]

**ಗುಮ್ಮಿಸು** (ಕ್ರಿ).=ಗುಮ್ಮಿಕ್ಕು : ಬೊಬ್ಬುಳಿತೆರೆಯನು ದಡಕ್ಕೆ ಹೊಮ್ಮಿಸಿ, ಅಬ್ಬರದಲಿ ಭೋರ್‌ಭೋರೆನೆ ಗುಮ್ಮಿಸಿ, ಬರುತದೆ ! (ಕಏವು. ೨೭-೨).
[ಗುಂ + - ಇಸು$_3$]

**ಗುಮ್ಮಿಱು** (ಕ್ರಿ). ಆಳದಿಂದ ಹೊರಹೊಮ್ಮು : ನೆತ್ತಿಯಗ್ರುದ ತೋರ ಗುಂಡುರುಳುತ್ತಲಿರ್ದವು ಜಲಧಿಯಡಿಮಳಲೆತ್ತುತಿರ್ದುದು ಗುಮ್ಮಿಱಿದು ಗುಡಿಯಿಱಿದು ಗುಳ್ಳೆಗಳು (ತೊರರಾ. ೪-೧೨-೨೪).
[ಗುಮ್ಮ$_3$ (<ಗುಣ್ಣು$_2$) + ಇಱು$_1$]

**ಗುಮ್ಮು$_1$** 'ಕುಮ್ಮು$_1$' ನೋ.

**ಗುಮ್ಮು$_2$** 'ಗುಮ್ಮಿ$_1$' ನೋ.

**ಗುಮ್ಮು$_3$** (ನಾ). ಈಜುವಾಗ ನೀರನ್ನು ಅಪ್ಪಳಿಸುವಿಕೆ,-ಬಡಿಯುವಿಕೆ. 'ಗುಮ್ಮುಹಾಕು' ಪರಾ. [<ಕುಮ್ಮು$_1$]

**ಗುಮ್ಮುಗಟ್ಟು** (ಕ್ರಿ). ಗುಂಪಾಗಿ ಸೇರು ; ಒಟ್ಟುಗೂಡು: ಗುಮ್ಮುಗಟ್ಟಿ ಜೋಗಿಗಳಂತೆ ಇರುಳು ಕೂಡುವುದು ಹಗಲು ಅಗಲುವುದು (ಗಾದೆ).
[ಗುಮ್ಮು$_2$ (< ಗುಮ್ಮಿ$_1$) + ಕಟ್ಟು$_1$]

**ಗುಮ್ಮುಗುಸಕು** (ನಾ). ಒಂದು ಬಗೆಯ ಆಟ : ಚಿಣ್ಣಿ ಬೊಗರೆ ಚುಡು ಗುಮ್ಮುಗುಸಕು ಹಿಡಿ ಅಣಿಕಲ್ಲು (ಪ್ರಸಭಾ. ೫೦-೨೫). [?]

**ಗುಮ್ಮುಟ** 'ಗುಮ್ಮಟ$_1$' ನೋ.

**ಗುಮ್ಮುಹಾಕು** (ಕ್ರಿ). ಈಜುವಾಗ ಮುಂದಕ್ಕೆ ಹೋಗಲು ನೀರನ್ನು ಬಡಿ : (೬). [ಗುಮ್ಮು$_3$ + ಹಾಕು (< ಪಾಯ್ಯು$_1$)]

**ಗುಮ್ಮೆ** 'ಗುಮ್ಮಿ$_2$' ನೋ.

**ಗುಯಲು** 'ಗುಯ್ಯಲ್' ನೋ.

**ಗುಯಿ** (ನಾ). ಗುಂಗು ; ಉಮಿ ; ಹೊಟ್ಟು : (೬). [?]

**ಗುಯ್ಯ** (ನಾ). ಹಾವು. 'ಇರ್ತಲೆಗುಯ್ಯ' ಪರಾ. [?]

**ಗುಯ್ಯಲ್, ಗುಯಲು, ಗುಯ್ಯಲು** (ನಾ). ೧. ಕೊಳ; ನೀರೊರತೆ; ಬಾವಿ : ಪರಿನೀರೂರೂರ ತೋಂಟಕ್ಕೆ ಸಂಪದಮೂರೂರ ಗೃಹಕ್ಕೆ ಪಂಕಜದ ಚೆಲ್ವೂರೂರ ಗುಯ್ಯಲ್ಗೆ (ಕಾವ್ಯಾವ. ೨೪೯) ; ಊರಿಂ ಮೂಡ ಗುಯ್ಯಲ ತೋಂಟಂ ಗಟ್ಟಿದ್ದಿಯ ಕೋಲಲು ಕವ್ಯಂ ನೂಱು ಪದಿಮೂಱು (ಕಇಅ. ೭೯-೧೩-೨೮ ; ಸು. 1089) ; ಗುಯ್ಯಲನೆಯ್ದೆ ತೋಡುತಿರೆ ನೀರನ(ನು)ಗುಟ್ಟಿರೆ ಮಿಾಯೆ ಕಾಲುಮಂ ಕೆಯ್ಯುಮನೊತ್ತಿ ಕರ್ಚುತಿರೆ (ಅಟ್ಟಮ. ೧-೪೬). ೨. ಕೊಳದ ನೀರಿನಿಂದ ಸಾಗುವಳಿ ಮಾಡುವ ಗದ್ದೆ: ಮಾಳಿರಾಸಿಗನು ಮೊ×ಜೀಯುರ ಮೆಚ್ಚಿ ೧ ಗುಯ್ಯಲಂ ೩ ಮತ್ತ ಕೆಯ್ಯುಮಂ ಬಿಟ್ಟರ್ (ಎಕ. XI, ಮೊಳಕಾ. ೨೭-೭ ; 962) ; ಎಪ್ಪತ್ತರ ಬಳಿಯ ಎಡಿಯೂರ ಗುಯ್ಯಲೊಂದು (ಎಕ. XI, ಮೊಳಕಾ. ೪೦-೫ ; 987) ; ತಂಮಡಿಯಹಳ್ಳಿಯ ಎರೆಯ ಗುಯ್ಯಲ ತನ್ನ ಎರಡು ಭಾಗವೂ

(ಎಕ. XII, ಶಿರಾ. ೩೨-೧೯ ; 1277). **ಗುಯಲು :** ೨. ಗದ್ದೆ ಬೆದ್ದಲು ತೋಟ ತುಡಕೆ ವಿತಲು ಆಯಲು ಗುಯಲು ಅಕ್ಷೀಣ ಆಗಾಮಿ ನಿಧಿ ನಿಕ್ಷೇಪ (ಎಕ. X. ಕೋಲಾರ. ೮೩-೪ ; 1417) ; ಗದೆ ಬೆದ್ದಲು ಗುಡೆ ಗುಯಲು ತೋಟ (ಎಕ. IX, ಬೆಂಗಳೂ. ೩೦-೧೮ ; 1544).

**ಗುಯ್ಯಲು :** ೧. ಕೂಪ ಗುಯ್ಯಲು [ಪಾಠಾಂ. ಜಲವು] ಗೂಡೆ ಕೈಯಾತ ಕಪಿಲೆಯಿಂ ಪೋಪುದನೇನ ವರ್ಣಿಸುವೆ (ಅಬ್ಬಲೂ. ೩-೫೫). ೨. ೧೫ ಗುಯ್ಯಲುಗಳಲು ಒಂದೊಂದು ಗುಡಲು ದೇವಗೊಳಗ ದಂಮಗೊಳಗ ಮಾಡಿಕೊಟದು (ಮೈಆರಿ. ೧೯೩೪, ೯೨-೪೪ ; 1259).

ಗುಯ್ಯಲೆತ್ತು=ಕೊಳದಿಂದ ನೀರೆತ್ತು : ಅಯ್ಯಯ್ಯೊ ಧ್ಯಾನದ ತುಯ್ಯಲುಂಡಾತ್ಮನೊಳುಯ್ಯಲನಾಡಿ ಸುಖಿಸದೆ ಗುಯ್ಯಲೆತ್ತುವರಂತೆ ಮೆಯ್ಯ ಹೋರಟೆಯೊಳು ಹುಯ್ಯಲನುಂಡೆ ನಾನೆಂದ (ಭರಜ. ೭೬-೨೭).

[ ದೇ.॥ ತಮಿ. ಮಲ. ತುಳು. ಕಯ ; ತೆಲು. ಗ್ರೊಯ್ಯಿ? ]

**ಗುಯ್ಯಲು** ' ಗುಯ್ಯಲ್ ' ನೋ.

**ಗುರ್** (ನಾ). ಒಂದು ಅನುಕರಣಶಬ್ದ : ' ನಾನು ' ಎಂದವನ ಮೇಲೆ ' ಗುರ್ ' ಅನ್ನುವ ಶುನಕಸ್ವಭಾವ ಅವರಲ್ಲಿ ಮನೆ ಮಾಡಿತ್ತು (ನಾಡಿಗೇ. ೨).

**ಗುರಕಾಯಿಸು** ' ಗುಱುಂಕಾಯಿಸು ' ನೋ.

**ಗುರಕೆ** ' ಗುಱುಕು ' ನೋ.

**ಗುರಗಿ** ' ಗುರಿಕೆ$_1$ ' ನೋ.

**ಗುರಗಿಮಟ್ಟಿ** (ನಾ). ಗುರಗಿ ಪೊದೆ ಬೆಳೆದಿರುವ ಭೂಮಿ : ಬಿದಿರ ಮೆಳೆ, ಕೆಂಜಿಗೆಉಡಿ, ಗುರಗಿಮಟ್ಟಿ, ಇವುಗಳಿಂದ ಕೂಡಿದ ಪ್ರದೇಶದಲ್ಲಿ ಹುಲಿಯನ್ನು ಹುಡುಕಬೇಕಾಗಿತ್ತು (ಪಂಜಪಂ. ೩೧).

[ ಗುರಗಿ (< ಗುರಿಕೆ$_1$) + ಮಟ್ಟಿ ]

**ಗುರಣ$_1$** (ನಾ). ಸುತ್ತುವಿಕೆ ; ಭ್ರಮಣ : " ಗುರಣ (ಘುರಣ)–ಘೂರ್ಣ (–ನ)=ಸುತ್ತುವಿಕೆ " (ತದ್ಭಕೋ. ೫೦).

[ < ಸಂ. ಘೂರ್ಣನ ]

**ಗುರಣ$_2$** (ನಾ). ೧. ಕೈಗೊಳ್ಳುವುದು ; ಉದ್ಯೋಗ. ೨. ಶ್ರದ್ಧಾಪೂರ್ವಕವಾದ ಪ್ರಯತ್ನ ; ಶ್ರಮ. [ ಸಂ. ]

**ಗುರಪನಾಯು** (ನಾ). ಒಬ್ಬಾತನ ಹೆಸರು : ಗುರಪನಾಯುಂ ಕೊಟು ಕಲ್ಲ ನೆಟಿಸಿದನ್ (ಎಕ. VIII, ಸಾಗರ. ೧೦೦-೦೫ ; 986 ?). [ ? ]

**ಗುರಮಘಾತಕ, ಗುರುಂಘಾತಕ** (ನಾ). ೧. ಯಾವ ಕೆಟ್ಟ ಕಾರ್ಯಕ್ಕೂ ಹೇಸದವನು ; ದುಷ್ಟ ; ನೀಚ : ಆ ಗುರಮಘಾತಕನನ್ನು ನಂಬಬಾರದು (ರೂಢಿ). **ಗುರುಂಘಾತಕ :** ೧. ಅವನೊಬ್ಬ ಗುರುಂಘಾತಕ (ರೂಢಿ). (ಗು). ೨. ದುಷ್ಟತನದ ; ಕೃತ್ರಿಮದ : ಸುಬ್ಬುಕೃಷ್ಣ ಗುರುಂಘಾತಕ ನಗೆ ನಗುತ್ತ . . . ಎಂದ (ರಾಗಿಣಿ. ೨೨೪).

[ < ಕೊರಮ + ಘಾತಕ ]

**ಗುರವಡಿ, ಗೊರವಡಿ** (ನಾ). ೧. ಗುರುಗಳ ಪಾದ. ೨. (ಆಲಂ) ಪೂಜ್ಯರಾದ ಗುರುಗಳು: ಶ್ರೀ ಪೆರುಮಾಳು ಗುರವಡಿಗಳಾ ಶಿಷ್ಯ ಧಣ್ಣೆ ಕುತ್ತಾರೆವಿ ಗುರವಿ (ಎಕ. II, ೭-೧ ; ಸು. 700) ; ಸಿಙ್ಗಣನ್ದಿ ಗುರವಡಿಗಳ್ನೋನ್ತು ಕಾಲಂ ಕೆಯ್ದಾರ್ (ಎಕ. II, ೩೨ ; ಸು. 700) ; ಶ್ರೀಕಾಲಾವಿಗ್ಗುರವಡಿಗಳ ಶಿಷ್ಯರ್ . . . ಕಲಾಪಕದ ಗುರವಡಿಗಳ್ (ಎಕ. II, ೩೩-೪ ; ಸು. 700). **ಗೊರವಡಿ :** ೨. ಶ್ರೀತೀರ್ತ್ಥದ ಗೊರವಡಿಗಳ್ (ಎಕ. II, ೫ ; ಸು. 700) ; ಶ್ರೀ ಉಳ್ಳಿಕ್ಕಲ್ಗೊರವಡಿಗಳ್ನೋನ್ತು (ಎಕ. II, ೬ ; ಸು. 700). 'ತಮ್ಮಡಿ$_1$' ಪರಾ. [ < ಗುರು$_2$ + ಅಡಿ$_1$ ]

**ಗುರಳಿ** ' ಗುರುಳಿ ' ನೋ.

**ಗುರಾಣ** ' ಗುರಾಣಿ ' ನೋ.

**ಗುರಾಣಿ,** ಗುರಾಣ (ನಾ). ಅಡ್ಡಣ ; ಹರಿಗೆ ; ಢಾಲು : ಕರದಲ್ಲಿ ಪಿಡಿದ ಗುರಾಣಿ ಕೈಗತ್ತಿಯ ಗರುವ ಮನ್ನೆಯರ ಸಂದಣಿಯ ಪರಿವಿಡಿಯಿಂದಲಾ ದುರ್ಗ . . . ಭೀತಿಯನು ಪುಟ್ಟಿಸಿತು (ಕಂನವಿ. ೧೧-೯೨); ಒಬ್ಬರಿಗೊಬ್ಬರು ಗುರಾಣಿಗಳನ್ನು ಒಡ್ಡಿ ಕತ್ತಿಗಳಿಂದ ಕಾಳಗವನ್ನು ಮಾಡುತ್ತಿದ್ದರು (ಕೃವಾಭೀ. ೧೧೧); ಆನೆಗೆ ಅಲಂಕಾರಕ್ಕೆ . . . ೨ ಹಿತ್ತಾಳೆ ಗುರಾಣಿಗೆ ಚಿಂನದ ಮುಲಾಮಿನ ಗುಬ್ಬಿಳಿ ಸಹ (ಎಕ. XIV, ನಂಜನ. ೨೯೨-೧೪೨ ಪುಟ ; 1847). **ಗುರಾಣ:** ಜಗವೆಲ್ಲ ಧರ್ಮದೊಳಿದ್ದುದೆ ಆದರೆ ಕತ್ತಿ ಗುರಾಣಗಳೇಕೆ (ಇಂಚಾಪ. ೧೬೬-೧೭). [ ? ]

**ಗುರಿ$_1$** ' ಕುಱು$_2$ ' ನೋ.

**ಗುರಿ$_2$** (ನಾ).=ಗುರಿಕೆ$_1$: " ಗುರಿಯೆನೆ ಗುರಿಕೆ " (ಮಂಗರಾ. ೩೫-೦೪).

[ ದೇ.॥ ತೆಲು. ಗುರಿ ]

**ಗುರಿಕಟ್ಟು** (ಕ್ರಿ). ಗುರಿಯಿಡು ; ಲಕ್ಷ್ಯ ವಿಡು : ಕಳ್ಳರೆಲ್ಲರೂ ತುಪಾಕಿಗಳನ್ನು ಕೈಯಲ್ಲಿ ಹಿಡಿದು ಒಂದೇ ಸಾರಿ ಎದ್ದು ಮಲಯಸಿಂಹ ವೀರಸಿಂಹರಿಗೆ ಗುರಿಕಟ್ಟಿದರು (ರಾಜಾಮ. ೨೬೦) ; ಬಾಣವನ್ನು ಹೆದೆಗೆ ಏರಿಸಿ, ಅದನ್ನು ಆನೆಯ ಹಣೆಗೆ ಗುರಿಕಟ್ಟಿ ಎಡಗೈಯಲ್ಲಿ ತುಯಿದುಬಿಟ್ಟನು (ಚಿತ್ರಪಾ. ೧೨). [ ಗುರಿ$_1$ (< ಕುಱು$_2$) + ಕಟ್ಟು$_1$ ]

**ಗುರಿಕಾರ** ' ಗುಱಿಕಾಱ ' ನೋ.

**ಗುರಿಕಾರತನ** (ನಾ). ಗುರಿಕಾರನ ಅಧಿಕಾರ ; ಯಾವುದಾದರೊಂದು ಶಾಖೆಯ ಮೇಲ್ವಿಚಾರಣೆಯ ಅಧಿಕಾರ : ನಿನ್ನ ಈವರಿನ ಸಮುಖದ ಒಳವಾಗಿಲ ಗುರಿಕಾರತನಗಳು ಸರ್ವಥಾ ತೃಪ್ತಿಕರವಾಗಿರಲಿಲ್ಲ (ಬಿಟ್ಮಆ. ೪೭-೬). [ ಗುರಿಕಾರ (< ಗುಱಿಕಾಱ) + – ತನ ]

**ಗುರಿಕೆ$_1$,** ಗುರಗಿ, ಗುರಿಗೆ, ಗುರುಗು (ನಾ). ಒಂದು ಬಗೆಯ ಸಸ್ಯ, – ಪೊದೆ : " ಗುರಿಯೆನೆ ಗುರಿಕೆ " (ಮಂಗರಾ. ೩೫-೦೪). **ಗುರಗಿ :** ಕೆಲವು ಕಡೆಗಳಲ್ಲಿ ಗುರಗಿ, ಬಿದಿರು . . . ಮುಕ್ಕಡಕ ಮುಂತಾದ ಗಿಡ ಬಳ್ಳಿ ಪೊದೆಗಳಿದ್ದವು (ಪಂಜಪಂ. ೨) ; ಬಡುವನ್ನು ಕಾಡಿಗೆ ಎಳೆದುಕೊಂಡು ಹೋಗಿ, ಗುರಗಿಹಳುವಿನಲ್ಲಿ ಮುಚ್ಚಿಟ್ಟಿತು (ಮಲಮ. ೧೯೦). **ಗುರಿಗೆ :** ಗುರಿಗೆ, ಆಸನ, ಗೋಜೆ (ಮೃಡಿಗಿ. ೧೪-೨೫೭) ; ಶ್ರೀಗಂಧ, ಗುರಿಗೆ, ಜಾಪಾಲ, ಕುಪ್ಪಿ (ನಮ್ಮನು. ೨೩೪). **ಗುರುಗು :** ಲಿಂಗವೆಣಸು, ಗುರುಗು (ಮೃಡಿಗಿ. ೨೦-೩೭೫). [ ದೇ.॥ ತೆಲು. ಗುರಿಗಿ, ಗುರುಗು ]

**ಗುರಿಕೆ$_2$** (ನಾ). ಗುರಿಗಾರಿಕೆ : ನಿಮಗೆ ನಲ್ಮೆಯ ಗೊತ್ತು ನೀವೆ ನಲ್ಲರ ಸೊತ್ತು ನಿಮ್ಮ ಗುರಿಕೆಯ ಗತ್ತು ಬೇಕು ಈ ಹೊತ್ತು ! (ಕ್ರೌಂಚಪ. ೧೯). [ ಗುರಿ$_1$ (<ಕುಱು$_2$) + – ಇಕೆ ]

**ಗುರಿಗಾರ** ' ಗುಱಿಕಾಱ ' ನೋ.

**ಗುರಿಗುತ್ತು** (ನಾ). ಒಂದು ಬಗೆಯ ವಂಕ್ಕಳಾಟ : ನೂರಾರು ಮಕ್ಕಳು . . . ನಲಿದಾಡುತಿರ್ದರು ವಿನೋದದಿಂ ಚಂಡಾಟ ಚಿನ್ನಾಣೆಯಂ ಹಿಡಿಗವಡೆ ಗುರಿಗುತ್ತು ಸೆಣಸಾಟ ತಮ್ಮೊಳಗೆ (ತುರಂಗ. ೧೧-೧).

[ ಗುರಿ$_1$ (<ಕುಱು$_2$) + ಕುತ್ತು$_2$ ]

**ಗುರಿಗೆ** ' ಗುರಿಕೆ$_1$ ' ನೋ.

**ಗುರಿಗೈ** (ಕ್ರಿ). ಗುರಿಮಾಡು : ಸುರಪಂ ನಿಜಶರಕಸುರರ ಗುರಿಗೈದಿರ್ಪಂ (ಶಾಕುಂತ. ೯೭-೧೭೦) ; ಇಂದ್ರನು . . . ವೃತ್ರನನ್ನು ಗುರಿಗೈದು . . . ವಜ್ರವನ್ನು ಪ್ರಯೋಗಿಸಿದನು (ನಡದಾ. II, ೦೪೫೯).

[ ಗುರಿ$_1$ (<ಕುಱು$_2$) + ಗೈ (<ಕೆಯ್$_1$) ]

**ಗುರಿತನ** (ನಾ). = ಗುರಿಕಾರತನ: ಕೊಯಂಬುತ್ತೂರು ಆನೆಮಲೆ ಗುರಿತನ ಪಾರುಪತ್ಯ ಸುಂಕ ಪೊಂಮ್ಮು ದೇವಸ್ಥಾನ ಮೊದಲಾದ ಸಕಲಾಧಿಕಾರವು ನಡೆಯುತ್ತಾ ಯಿರುವಲ್ಲಿ (ಮೈಆರಿ. ೧೯೩೫, ೨೮-೧೦ ; 1751) ; ಆ ಹುಡುಗಿಯ ಅನ್ನಗ್ರಹಕ್ಕೆ ಅವನ ಗುರಿತನದ ಆ ನಿಡಿದಾದ ಇಟ್ಟಿ

ಗೋಲನ್ನುಯ್ಯುವುದಾಗದೆಂದೂ . . . ನೀನು ಎಚ್ಚರಿಸಲಿಲ್ಲವೆ ? (ಚಟ್ಟಅ. ೧೫-೧೬) ; ಸಾರಂಗಿ ವೆಂಕಟಗಿರ್ಯಯ್ಯನೆಂಬ ಬ್ರಾಹ್ಮಣನು ಹುಲಿಯೂರು ದುರ್ಗದ ಗುರಿತನ ಮಾಡುತ್ತಾ ಇದ್ದು (ಹೈದರ. ೧೦೦)
[ ಗುರಿ$_1$ (<ಕುಱಿ$_2$) + – ತನ ]

**ಗುರಿತಪ್ಪು** (ಕ್ರಿ). ಗುರಿಗೆ ಏಟು ಬೀಳದೆ ತಪ್ಪಿಹೋಗು ; ಲಕ್ಷ್ಯತಪ್ಪು : ಗುರಿತಪ್ಪುತೇರ್ವಡೆಯ ಕೆಂಡಕಣ್ಣಿಂದೊಳರಿ . . . ಮೇಲ್ವಾಯೆ (ಕಾಲೂರ. ೯೫-೧೮೮). [ ಗುರಿ$_1$ (<ಕುಱಿ$_2$) + ತಪ್ಪು$_1$ ]

**ಗುರಿತಾಕು** (ಕ್ರಿ). ಗುರಿಮುಟ್ಟು ; ಗುರಿಯಿಟ್ಟ ಎಡೆಗೇ ಪೆಟ್ಟು ಬೀಳು : (೬). [ ಗುರಿ$_1$ (<ಕುಱಿ$_2$) + ತಾಕು$_1$ (<ತಾಂಕು$_1$) ]

**ಗುರಿನೋಡು** (ಕ್ರಿ). = ಗುರಿಯಿಡು: ಒಡನೆ ಅವನು ಗುರಿನೋಡಿ ಗುಂಡು ಹಾರಿಸಿದನು (ಕಾಲೂರ. ೬ ಕಥಾಸಾರ). [ಗುರಿ$_1$ (<ಕುಱಿ$_2$)+ನೋಡು]

**ಗುರಿಪಡಿಸು** (ಕ್ರಿ). ಒಳಪಡಿಸು ; ಈಡುಮಾಡು : ಈ ವಿಷಯಗಳು ಒಮ್ಮೊಮ್ಮೆ ಆತನ ಕಿವಿಗೆ ಬಿದ್ದು ಆತನನ್ನು ಮರಣಾಂತಿಕವಾದ ವೇದನೆಗೆ ಗುರಿಪಡಿಸಿದ್ದುವು (ಚಿತಸ. ೧೦೭).
[ ಗುರಿ$_1$ (<ಕುಱಿ$_2$) + ಪಡು$_1$ + –ಇಸು$_3$ ]

**ಗುರಿಬಿಡು** (ಕ್ರಿ). ಗುರಿಯಿಟ್ಟು ಹೊಡೆ: ಗಿರಿಗಳಿಂ ಬಂಡೆಗಳಿಂ ್ರೆಗಳಿಂ ಪೊತ್ತೆತ್ತಿ, ಬಾನ್ಗೇರಿ, ಗುರಿಬಿಡಲ್ ಸತ್ತುವು ರಥಾಶ್ವಗಳ್ (ಶ್ರೀರಾಮಾ. ೬೪೩-೨೭). [ ಗುರಿ$_1$ (<ಕುಱಿ$_2$) + ಬಿಡು$_1$ ]

**ಗುರಿಮಾಡು** ‘ ಗುಱಿಮಾಡು ’ ನೋ.

**ಗುರಿಮುಟ್ಟು** (ಕ್ರಿ). ೧. ಹೋಗಬೇಕೆಂದಿರುವ ಸ್ಥಳವನ್ನು ತಲುಪು. ೨. ಸಾಧಿಸಬೇಕೆಂದಿರುವ ಧ್ಯೇಯವನ್ನು ಸಾಧಿಸು; ಕೃತಕೃತ್ಯನಾಗು : ಇಂದೊ ನಾಳೆಯೊ ಎಂದೊ ಒಂದು ದಿನ ಗುರಿಮುಟ್ಟಿ ಗೆಲುವೆ ನೀನು (ಪಾಂಚಜ. ೪೮-೩೦). [ ಗುರಿ$_1$ (<ಕುಱಿ$_2$) + ಮುಟ್ಟು$_1$ ]

**ಗುರಿಯರಿಲ್** (ನಾ). (ಕಣ್ಣಿಟ್ಟು) ನೋಡಬೇಕಾದ ನಕ್ಷತ್ರ ; ಮದುವೆ ಕಾಲದಲ್ಲಿ ವಧೂವರರಿಗೆ ತೋರಿಸುವ ಅರುಂಧತೀನಕ್ಷತ್ರ : ವೇದವತಿವೆಸರ ಋಷಿಪತ್ನಿ ಪುಣ್ಯಸತಿ ತಾನಿರ್ದಳಯ್, ಪಾತಿವ್ರತ್ಯ ದೊಳವಳ್ ಮೂಜಗದ ಕಣ್ಗೆ ಗುರಿಯರಿಲಾಗೆ (ಶ್ರೀರಾಮಾ. ೨೨೪-೩೬೭).
[ ಗುರಿ$_1$ (<ಕುಱಿ$_2$) + ಅರಿಲ್ (<ಅಱಿಲ್$_1$) ]

**ಗುರಿಯಾಗು** ‘ ಗುಱಿಯಾಗು ’ ನೋ.

**ಗುರಿಯಿಡು** (ಕ್ರಿ). ಏಟು ಸರಿಯಾಗಿ ಬೀಳುವಂತೆ ನೋಡು ; ಲಕ್ಷ್ಯವಿಡು : ಅವಳು . . . ಕೊತವಾಲನ ಎದೆಗೆ ಗುರಿಯಿಟ್ಟು ಬೀಸಿದಳು (ಕೊತಕಾ. ೬೬). [ ಗುರಿ$_1$ (<ಕುಱಿ$_2$) +ಇಡು$_1$ ]

**ಗುರಿಯೆಳ್ಳು** ‘ ಗುರೆಳ್ಳು ’ ನೋ.

**ಗುರಿವೆರು** (ಕ್ರಿ). ಗುರಿಯನ್ನು ಮುಟ್ಟು : ಮೆಚ್ಚಿದಂ ನೆರೆಯುಮಂ ಗುರಿವೆತ್ತುದಂ (ಕಾಲೂರ. ೮೬-೧೬೯). [ಗುರಿ$_1$ (<ಕುಱಿ$_2$)+ಪೆರು (<ಪೆಱು$_1$)]

**ಗುರಿಹಿಡಿ** (ಕ್ರಿ).=ಗುರಿಯಿಡು : ಮತ್ತೊಬ್ಬನು ತನ್ನ ಕತ್ತಿಯನ್ನು ಗುರಿ ಹಿಡಿದು ನೋಡುತ್ತಿದ್ದನು (ರಾವಿಜ. ೧೧).
[ ಗುರಿ$_1$ (<ಕುಱಿ$_2$) + ಹಿಡಿ$_1$ (<ಪಿಡಿ$_1$) ]

**ಗುರಿಹೊಡೆ** (ಕ್ರಿ). ಲಕ್ಷ್ಯವನ್ನು ಭೇದಿಸು ; ಈಡನ್ನು ಹೊಡೆ : ಅವನು ಗುರಿಹೊಡೆಯುತ್ತಾನೆ ಅನ್ನುವ ಹಾಗೆ ಚಿತ್ರವನ್ನು ಬರೆಯಿರಿ (ಮುಂಬಯಿ. ೩-೪೯). [ ಗುರಿ$_1$ (<ಕುಱಿ$_2$) + ಹೊಡೆ$_1$ (<ಪೊಡೆ$_1$) ]

**ಗುರು$_1$** ‘ ಗುಱು ’ ನೋ.

**ಗುರು$_2$** (ಗು). ೧. ಭಾರವಾದ; ತೂಕವುಳ್ಳ. ೨. ದೊಡ್ಡ ; ಅತಿಶಯವಾದ : ಜಲಮಂ ತಿರಸ್ಕರಿಸಿ ಪೊರಮಟ್ಟ ತಾವರೆಯೆರ್ದೆಗೆ ರವಿಯೆ ಗುರುವೈರಿ (ಶ್ರೀರಾಮಾ. ೧೧೪-೬೫). ೩. ಮಹತ್ವವುಳ್ಳ ; ಬೆಲೆಯುಳ್ಳ; ಘನವಾದ. ‘ ಗುರುತ್ವ ’ ಪರಾ. (ನಾ). ೪. ಕಠಿನವಾದುದು ; ದುಸ್ಸಾಧ್ಯವಾದುದು : ಲಘುವೆಣಿಸಿ ಗುರುವಾಯ್ತಲಾ ಹಾಳಿದೆಲ್ಲಿಯ ಹದ್ದು ? (ಶ್ರೀರಾಮಾ. ೨೪೯-೫೭೦). ೫. ವಿದ್ಯೆಯನ್ನು ಹೇಳಿಕೊಡುವವನು; ಉಪಾಧ್ಯಾಯ: ಕಲಿಸಿದಾತಂ ವರ್ಣಮಾತ್ರಂ ಗುರು(ಸೋಮೇಶ.೮); ಗುರುಶಿಷ್ಯ ಸಂಬಂಧವಾದುದಕ್ಕೆ ಇದು ಚಿನ್ಹ (ಬಸವ. ೯೨೮); ಗುರುವಿನಂತೆ ಶಿಷ್ಯ ತಂದೆಯಂತೆ ಮಗ (ಗಾದ). ೬. ಮಂತ್ರೋಪದೇಶ ಮಾಡುವವನು; ದೀಕ್ಷೆಕೊಡುವವನು. ೭. ಧರ್ಮವನ್ನು ಬೋಧಿಸುವವನು; ಅಧ್ಯಾತ್ಮ ವಿದ್ಯೆಯನ್ನು ಉಪದೇಶಿಸುವವನು : ತತ್ತ್ವೋಪದೇಶವಂಗೈದು ಅಜ್ಞಾನವಂ ಪರಿಹರಿಸುವನೇ ಗುರುವೆಂದೆನ್ನಿಸಿಕೊಳ್ಳುವನು (ವಿವೇಕ. ೧೬) ; ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ (ಪುರಂದ. ೩-೧೪೯ ಪಲ್ಲವಿ). ೮. ತಂದೆ : “ಗರ್ಭಾದಾನಾದಿ ಆದಿಶಬ್ದದಿಂದ . . . ಉಪನಯನಸಮಾವರ್ತನವಿವಾಹ ಸಂನ್ಯಾಸ ಎಂಬಿವನು ಮಾಡುವಾತನು ಗುರು ಎನಿಸುಗು ” (ನಾಚಿರಾ. ೧೨೬) ; ನಿನ್ನೀ ಗುರು ನುಡಿದ ನುಡಿಗೊಡಂಬಡು (ಗದಾಯು. ೪-೨). ೯. ಧಾರ್ಮಿಕ ಸಂಸ್ಕಾರಗಳನ್ನು ಮಾಡಿಸುವವನು; ಪುರೋಹಿತ : ನಮಿಸಿ ತಂದೆಗೆ ಗುರು ವಸಿಷ್ಠನ ಸುಮುಖತೆಯ ಹರಕೆಯನು ಕೈಕೊಂಡು (ತೊರರಾ. ೧-೯-೪೨). ೧೦. ಪೂಜ್ಯ; ಹಿರಿಯ: “ ಗುರುವೆನಲ್ಕುಪಚಿತನೆನಲ್ ಪೂಜೆವಡೆವಂ ” (ಮಂಗರಾ. ೭೨-೨೨) ; ಸುರರ್ಗೆ ಗುರು ವಜ್ರಿ ವಜ್ರಿಗೆ ಗುರುವಾನೆನಗಬ್ಜಗರ್ಭ ನೀಂ ಗುರು ನಿನಗಂ ಪರಮಗುರು ವಿಷ್ಣು (ಜಗವಿ. ೧-೩೩). ೧೧. ದೇವತೆಗಳ ಪುರೋಹಿತನಾದ ಬೃಹಸ್ಪತಿ. ೧೨. ದ್ರೋಣಾಚಾರ್ಯ : ಗುರುವಿಲ್ಲಾ ಕರ್ಣನಿಲ್ಲಾ ಗುರುವಿನ ಮಗನಿಲ್ಲಾ (ಪಂಪಭಾ. ೯-೫೫); ಗುರುವಿನ ನೆತ್ತರಂ ಕುಡಿವೆನಪ್ಪೊಡವಂ ದ್ವಿಜವಂಶಜಂ (ಗದಾಯು. ೪-೪೨). ‘ ಗುರುಸುತ ’ ಪರಾ. ೧೩. ಮಠಾಧಿಪತಿ : ಗುರುವಿಲ್ಲದ್ದು ಮಠವಲ್ಲ, ಹಿರಿಯರಿಲ್ಲದ್ದು ಮನೆಯಲ್ಲ (ಗಾದ). ೧೪. [ಜ್ಯೋತಿ] ನವಗ್ರಹಗಳಲ್ಲಿ ಐದನೆಯದಾದ ಬೃಹಸ್ಪತಿ ಗ್ರಹ : “ ಆಂಗಿರಸನಮರಗುರು ವಾಕ್ಪತಿ ಗುರು ಬೃಹಸ್ಪತಿ ಧಿಷಣನೆನಲು ಜೀವಂ ” (ಮಂಗರಾ. ೧೧-೬) ; ಜನನಕಾಲದಲ್ಲಿ ಗುರು ಲಗ್ನದಲ್ಲಿದ್ದರೆ ಜಾತಕನು ವಿದ್ವಾಂಸನೂ . . . ಒಂಬತ್ತನೆಯ ಸ್ಥಾನದಲ್ಲಿದ್ದರೆ ದೀಕ್ಷಿತನೂ ಆಗುತ್ತಾನೆ (ಜಾತತಿ. ೧೮-೧೧ ಟೀಕೆ) ; ಗುರುವೆ ಅತ್ಯಂತ ದೊಡ್ಡ ಗ್ರಹ (ಆಕಾಶ. ೨೧). ೧೫. [ಛಂದ] ಎರಡು ಮಾತ್ರೆಗಳನ್ನು ಹೊಂದಿರುವ ಅಕ್ಷರದ ಚಿಹ್ನೆ,– ಸಂಕೇತ(–): ಗುರು ಪಿಂತೆ ಕೊಂಕಿ ತೋರ್ಪುದು ಬರೆ ಮುಂತಣ ಸೈತನಪ್ಪ ಬರೆ ಲಘು (ಛಂದೋಂಬು. ೧-೩೩); ಕ್ರಮದೆ ಗುರುದೀರ್ಘಮೇಕಾರ ಮುಖ್ಯ ಸಂಧ್ಯಕ್ಷರಂಗಳವು (ಶಮದ. ೧೦) ; ದೀರ್ಘಸ್ವರ, ಪ್ಲುತಸ್ವರ, ಅನುಸ್ವಾರ ವಿಸರ್ಗಗಳಿಂದ ಕೂಡಿದ ಅಕ್ಷರ, ಸಂಯುಕ್ತಾಕ್ಷರಕ್ಕೆ ಹಿಂದಿರುವ ಅಕ್ಷರ– ಇವುಗಳಿಗೆ ಗುರುವೆಂತ(ಲೂ) ಸಂಜ್ಞೆ (ಕೈಪಿಡಿ. ೬೯). ‘ಗುರುತ್ವ’ ಪರಾ.
[ ಸಂ. ]

**ಗುರುಋಣ** (ನಾ). ಗುರುಗಳಿಗೆ ಒಪ್ಪಿಸಬೇಕಾದ ದಕ್ಷಿಣೆ : ಪಿತೃಋಣ, ಗುರುಋಣ, ದೇವಋಣ ಇತ್ಯಾದಿ ಎಲ್ಲ ಋಣದ ಭಾರವನ್ನು ನಿಮ್ಮೊಬ್ಬರ ತಲೆಯ ಮೇಲೆ ಹೊರಿಸಬೇಕಾಗುತ್ತದೆ (ಹೊಸಕ್ಷಿ. ೨೫೨). [ಗುರು$_2$+ಋಣ]

**ಗುರುಂಘಾತಕ** ‘ ಗುರಮಘಾತಕ ’ ನೋ.

**ಗುರುಕಟಾಕ್ಷ** (ನಾ). ಗುರುಗಳ ದಯಾದೃಷ್ಟಿ,–ಅನುಗ್ರಹ : ಶ್ರೀಗುರು ಕಟಾಕ್ಷದಿಂದಲ್ಲದೆ ತಾರಕಬ್ರಹ್ಮವು ಆರಾರಿಗೂ ಸಾಕ್ಷಾತ್ಕಾರವಾಗದಯ್ಯ (ಅಖಂಡೇ. ೨೨೩-೬೫). [ ಗುರು$_2$ + ಕಟಾಕ್ಷ ]

**ಗುರುಕರಜಾತ** (ನಾ). ಗುರುಗಳಿಂದ ಉಪದೇಶವನ್ನು ಪಡೆದು ಸಂನ್ಯಾಸ ದೀಕ್ಷೆಯನ್ನು ಕೈಕೊಂಡವನು : ಪೂರ್ವವಳಿದು ಪುನರ್ಜಾತರ ಮಾಡಿದೆವೆಂಬಿರಿ . . . ಪುನರ್ಜಾತನಾದ ಮತ್ತೆ ಪುನರಪಿ ಇಲ್ಲದಿರಬೇಕು ಹೀಗಲ್ಲದೆ ಗುರುಕರಜಾತರಾಗಬಾರದು (ವೋಳಿಮಾ. ೩೯-೧೬೩) ; ಗುರುಕರಜಾತ

ನಾದೆನಾಗಿ ಆಣವಮಲ ಹೋಯಿತ್ತಯ್ಯ ಎನಗೆ (ಅಜಂಡೇ. ೮೨-೭೫).
[ ಗುರು₂ + ಕರಜಾತ ]

**ಗುರುಕರುಣ** (ನಾ). ಗುರುಗಳ ದಯೆ: ಪೂರ್ವಜನ್ಮ ನಿವೃತ್ತಿಯಾಗಿ ಗುರುಕರುಣ[ಪಾಠಾಂ. ಕಾರುಣ್ಯ]ವಿಡಿದಂಗೆ ಬಂಧನವೆಲ್ಲಿಯದೋ (ಬಸವ. ೮೭೦). [ ಗುರು₂ + ಕರುಣ ]

**ಗುರುಕಾಣಿಕೆ** (ನಾ). = ಗುರುದಕ್ಷಿಣೆ: ಈ ವೃತ್ತಿಗೆ ಸಲ್ಲುವ . . . ಏರುಕಾಣಿಕೆ ನಾಮಕಾಣಿಕೆ ಗುರುಕಾಣಿಕೆ ಕಾಣಿಕೆ ಬೀಡಿಕೆ (ಹುಬ್ಬಹ. ೩); ಗುರುಕಾಣಿಕೆಯನ್ನೊಪ್ಪಿಸದೆ, ನನ್ನ ಬ್ರಹ್ಮಚರ್ಯವು ಕೊನೆಗಾಣದು (ಮಣಿಸ. ೬೪). [ ಗುರು₂ + ಕಾಣಿಕೆ (<ಕಾಣ್ಕೆ) ]

**ಗುರುಕಾಯಿಸು**, ಗುರಕಾಯಿಸು (ಕ್ರಿ). ೧. ಗುರುಗುಟ್ಟು; ಗುರುಗುರೆನ್ನು: ನಾಯಿ ಗುರುಕಾಯಿಸಿತು. ನರಳಿತು, ಬಿಡುಗಡೆಗೆ ಹೆಣಗಾಡಿತು (ಬಳಜೀ. ೧೦೦). **ಗುರಕಾಯಿಸು: ೨.** ಕೋಪದಿಂದ ಕೂಗಾಡು; ರೇಗಾಡು; ಪ್ರತಿಭಟಿಸು: ಈ ವಾರ್ತೆಯನ್ನು ಕೇಳಿದ ಅವನು . . . ಗುರಕಾಯಿಸಿದನು (ವಿಕಾಸ. ೨೬).
[ <ಗುರುಕು$_1$ + -ಇಸು$_3$ ]

**ಗುರುಕಾರುಣ್ಯ** (ನಾ). = ಗುರುಕರುಣ: ಗುರುಕಾರುಣ್ಯವ ಹಡೆದ ಭಕ್ತನು ಹಿಂದಣ ಪೂರ್ವಾಶ್ರಯವ ಬೆರಸಿದರೆ ಗುರುದ್ರೋಹ (ಬಸವ. ೭೬೬); ಹೊನ್ನವ್ವ . . . ಗುರುಕಾರುಣ್ಯದಿಂದ ವಿದ್ಯಾಪ್ರಸಾದವನ್ನು ಪಡೆದವಳು (ಕರ್ನಾಕ. ೧೯೩). [ ಗುರು₂ + ಕಾರುಣ್ಯ ]

**ಗುರುಕಿಡು** 'ಗುಟುಕಿಡು' ನೋ.

**ಗುರುಕು$_1$** (ಕ್ರಿ). ಗುರ್ರೆನ್ನು; ಗುರುಗುಟ್ಟು: ಘಾಟಿಯಲ್ಲಿ ಒಮ್ಮೆ ಹುಲಿರಾಯ ಗುರುಕಿದ (ಕಂಬಹು. ೧೪). [ <ಗುಟುಕು ]

**ಗುರುಕು₂** 'ಗುಟುಕು' ನೋ.

**ಗುರುಕುಚ** (ನಾ). ದೊಡ್ಡ ಮೊಲೆ: ಗುರುಕುಚಕುಂಭದ್ವಯತಟಕರಜಪದಾವನತುಗ್ರಪಲ್ಲವಮನೆ ಪಂಕರುಹದಳಯುಗಳಮಂಗಜಕರೇಣುವೋಲ್ ಕಮಲಷಂಡದಿಂ ಪೂಜಿಮಟ್ಟಳ್ (ಲೀಲಾವ. ೧೪-೬).
[ ಗುರು$_2$ + ಕುಚ ]

**ಗುರುಕುಚೆ** (ನಾ). ದೊಡ್ಡ ಮೊಲೆಗಳುಳ್ಳವಳು: ಎಸೆಗುಂ ಕಾಂಚಿ ಜಘನದೊಳ್ಗುರಂಕುಚೆಯಾ (ಕಾದಂಪೂ. ೪೬); ಗುರುಕುಚೆ ಗೋಪಿ ಬಂದು . . . ನಿಜೇಶ್ವರಂಗಜುಪಿ ಮಾಡಿಸಿದಳ್ ಬಹುಶಾಂತಿಕರ್ಮಮಂ (ಜಗವಿ. ೩-೩೦); ಗುರುಕುಚೆ ಮಲ್ಲಣಿಯುಂಡೊಳ್ವರಿವಣಮಂ ಕರ್ಚಿ ಸೂಸಿ ದೆಂಜಲನೀರ್ತದ್ವರಕವಿಮಲ್ಲಣನಂಗವಾನಿರದಂಟಲ್ ಬೆರ್ಚಿತಾಗ ಮಲ್ಲಣಿಯೆಂದಂ (ಉದ್ಭಟ. ೧೨-೫೭).
[ ಸಂ. ಗುರುಕುಚಾ (ಗುರು + ಕುಚ + -) ]

**ಗುರುಕುಲ** (ನಾ). ೧. ಗುರುಗಳ ಮನೆ; ಉಪಾಧ್ಯಾಯರ ವಸತಿ. 'ಗುರುಕುಲವಾಸ' ಪರಾ. **೨.** ವಿದ್ಯಾಭ್ಯಾಸ ಕೇಂದ್ರ; ಶಿಕ್ಷಣ ಕೇಂದ್ರ: ಗುರುಕುಲಮಂ ಬೆಳಗುವ ಭಾಸುರದೀಪಂ ಚರಿತಮೆಂಬುದಂ ಪೇಟಿವೆ ಬಂಧುರಪಾತ್ರ ಸ್ನೇಹಗುಣೋತ್ಕರವೆಂಬಿಪ್ಪ ಮಾಘನಂದಿ ಭಟ್ಟಾರಕರಾ (ಚಂದ್ರಪು. ೧-೩೬); ಆ ಗುರುಕುಲದಲ್ಲಿ ಗೆಡ್ಡೆಗೆಣಸು ತಿಂದು ಶರೀರ ಶೋಧಿಸಿ ಅವನು ಯಾವ ವಿದ್ಯೆಯನ್ನೂ ಗಳಿಸಬೇಕಾಗಿಲ್ಲ (ಹೇಮುಕೂ. ೧೧); ಸಾಮಾನ್ಯರಿಗೆ, ಅಶಿಕ್ಷಿತರಿಗೆ . . . ಲೋಕಚರಿತದ ಜ್ಞಾನವನ್ನು ಕೊಡುವ ಗುರುಕುಲವಾಗಿದೆ ರಂಗಭೂಮಿ (ಭಾರದ. ೫೭೦). **೩.** (ಅತ್ತೆಮಾವಂದಿರೇ ಮೊದಲಾದ) ಹಿರಿಯರ ಮನೆ: ಕುಸುಮಘಟಾನ್ವಿತೆ ಕೊಳೆಗೊಂಡ ಸೀರೆಯಂ ಪೊದೆದು ವಸ್ತ್ರಮಂ ಧನವಮನಪೇಕ್ಷಿಸಿ ಗುರುಕುಲಕ್ಕೆ ಮನಸಂತಸದಿಂ ಸ್ಪೋಪಳ್ (ಜಾತತಿ. ೧೯-೧೭).
[ ಗುರು₂ + ಕುಲ ]

**ಗುರುಕುಲವಾಸ** (ನಾ). ಗುರುಕುಲದಲ್ಲಿ ವಾಸಮಾಡುವಿಕೆ; ವಿದ್ಯಾಭ್ಯಾಸ: ನಾನು ಹತ್ತು ವರ್ಷ ಗುರುಕುಲವಾಸ ಮಾಡಿದ್ದೇನೆ (ರೂಢಿ).
[ ಗುರುಕುಲ + ವಾಸ₂ ]

**ಗುರುಕುಲವಾಸಿ** (ನಾ). ಗುರುಕುಲದಲ್ಲಿ ವಾಸಮಾಡುವವನು; ವಿದ್ಯಾರ್ಥಿ: ಛಾತ್ರಃ, ಅಂತೇವಾಸೀ, ಶಿಷ್ಯಃ - ೩ ಶಿಷ್ಯನ ಹೆಸರು . . . ಗುರುವಿನ ಆಜ್ಞೆಗೆ ಬದ್ಧನಾಗಿ ಸೇವೆ ಮಾಡುವವನು, ಗುರುಕುಲವಾಸಿ" (ಸಿದ್ಧಾಂತಿ. ೧೯೬). [ ಸಂ. ಗುರುಕುಲವಾಸಿನ್ ]

**ಗುರುಕೆ** 'ಗುಟುಕು' ನೋ.

**ಗುರುಕ್ರಮ** (ನಾ). ೧. ಗುರುಗಳ ಪರಂಪರೆ. **೨.** ಗುರುಪರಂಪರೆಯಿಂದ ಬಂದ ಉಪದೇಶ,-ಸಂಪ್ರದಾಯ: "ಆಮ್ನಾಯಃ, ಸಂಪ್ರದಾಯಃ, ಪಾರಂಪರ್ಯಂ, ಗುರುಕ್ರಮಃ-ಈ ೪ ಎಡೆವಟು ಯುದ ಗುರೂಪದೇಶಂ" (ಹಲಾಯು. ೬೬-೨೪೮). [ ಗುರು₂ + ಕ್ರಮ ]

**ಗುರುಗಂಜಿ** 'ಗುರುಗುಂಜಿ' ನೋ.

**ಗುರುಗಂಜಿಗಣ್ಣ** (ನಾ). ಗುರುಗಂಜಿಯಂತೆ ಕಣ್ಣುಗಳುಳ್ಳವನು; ಒಂದು ಕ್ಷುದ್ರದೇವತೆ: ಬೇಲಿಯಲಿ(ಲ್ಲಿ)ರ್ಪನ ಬೆಕ್ಕುಳುವಾಲನ ಮಾಚ್ಚಕ್ಕಿವಲ್ಲನ ಗುರುಗಂಜಿಗಣ್ಣನ ನೀ ಕಚ್ಚಿದ ಕಚ್ಚನಾ (ನವಾ) ಬಂದು ಪೋದಲ್ಲಿ ಕಲಿಕಲ್ಲ ವಿಷವಿದ್ದೆಡೆ ಭಿಲ್ಲಾದೇವಿಯಾಣೆ (ಖಮುದ. ೧೩-೫ ವ).
[ ಗುರುಗಂಜಿ (<ಗುರುಗುಂಜಿ) + ಕಣ್ + -ಅ₇ ]

**ಗುರುಗಡೆ** (ನಾ). ಒಂದು ಜಾತಿಯ ಹಕ್ಕಿ: ಕಾಡಗೌಜಲು ಕರಿಯ ಲಾವುಗೆ ಚಿಟ್ರೆಹಕ್ಕಿಯು ಚಿರತೆ ಗುರುಗಡೆ . . . ಪರಿವ ಗೀಜಗ ಮೆರೆದವು (ಗೋಹಾಡು. ೨೪ ಪುಟ). [ ? ]

**ಗುರುಗಾತ್ರ** (ನಾ). ದೊಡ್ಡದಾಗಿರುವಿಕೆ; ದೊಡ್ಡ ಆಕಾರವುಳ್ಳದು: ಕಂಡರು . . . ಮತ್ತಂತೆ ಗುರುಗಾತ್ರದೊಂದೆರಳ್ ಮೂರ್ ನಾಲ್ಕು ಐದಾರು ಗರಿಗಳಂ! (ಶ್ರೀರಾಮಾ. ೨೫೭-೭೬೯). [ ಗುರು₂ + ಗಾತ್ರ ]

**ಗುರುಗು** 'ಗುರಿಕೆ₁' ನೋ.

**ಗುರುಗುಂಜಿ**, ಗುನಿಗುಂಜಿ, ಗುರುಗಂಜಿ, ಗುರುಗುಂಜೆ, ಗುಲಗಂಜಿ, ಗುಲಗಂಜೆ, ಗುಲಗುಂಜಿ, ಗುಲಗುಂಜೆ, ಗುಲಿಗಂಜಿ, ಗುಲುಗಂಜಿ, ಗುಲುಗುಂಜಿ, ಗುಳ್ಳಗಂಜಿ(ನಾ). ಒಂದು ಬಗೆಯ ಗಿಡ ಮತ್ತು ಅರ್ಧ ಕಪ್ಪಾಗಿಯೂ, ಅರ್ಧ ಕೆಂಪಾಗಿಯೂ ಇರುವ ಅದರ ಬೀಜ; ಗುಂಜಿ: "ಕೃಷ್ಣಲಾ, ಗುಂಜಾ - ಈ ೨ ಗುರುಗುಂಜಿ" (ಹಲಾಯು. ೩೪-೫೦); ಪೊನ್ನ ಬಣ್ಣದ ಮೆಯ್ಯವಿರುಂ ಗುರುಗುಂಜಿಯ ಬಣ್ಣದಂತಿರ್ಪ ಕಣ್ಣುಂ (ಪಂಚತಂ. ೩೦೪-೧); ತಳಿರ್ಗಳ ಸೀರೆಯುಟ್ಟು ಗುರುಗುಂಜಿಯ ಹಾರಮನಾಂತು . . . ತಳಿಸಿದರ್ ವನದಲ್ಲಿ ಪುಳಿಂದಕಾಂತೆಯರ್ (ಗಿರಿಕ. ೧-೧೨೩); ಗುರುಗುಂಜಿಯ ದಂಡೆ ಮಂಡೆಯೊಳ್ (ಶಬಶಂ. ೩-೨೬). **ಗುನಿಗುಂಜಿ:** 'ನಲ್ಗುನಿಗುಂಜಿ' ಪರಾ. **ಗುರುಗಂಜಿ:** ಗುರುಗಂಜಿಯಿಂ ಸಮೆದ ದಂಡೆ ಮಂಡೆಯೊಳೊಪ್ಪೆ (ಬಸರ. ೯-೯೯). **ಗುರುಗುಂಜೆ:** ಗುರುಗುಂಜೆ ಪುನರ್ನವಿ ಪದ್ಮಪತ್ರಮೆಂಬಿನಿತುಮನಿಕ್ಕಿ (ಲೋಕೋಪ. ೮-೩೦); ನನೆಯೊಳಂ ಮುಗುಳೊಳಂ ಗುರುಗುಂಜೆಯೊಳ ಮೊಡಂಬಡೆ ಮಾಡಿದಾಭರಣಂಗಳಂ ತೊಟ್ಟು (ಬಂಹರಿ. ೨-೪೦ ವ). **ಗುಲಗಂಜಿ:** ಗುಲಗಂಜಿಯ ಗುಡ್ಡೆಯಲ್ಲಿ ಬೆಂಕಿಯಂಬ ಜ್ಞಾನಂ ಬಂದರೆ ಬೆಂಕಿಯಾಗಿ ಗುಲಗಂಜಿ ಗುಡ್ಡೆ ಯಡಬಲವಂ ಸುಡಲಿಲ್ಲ (ಅರಸಾ. ೨೨೧-೫); ಒಂದುಸೇರು ಮಾಂಸಕ್ಕಿಂತ ಸಣ್ಣ ಗುಲಗಂಜಿಯ ತೂಕವಾದರೂ ಹೆಚ್ಚಾಗಿ ಕೊಯ್ಯಕೂಡದು (೪ವಿ೪. ೦೯). **ಗುಲಗಂಜೆ:** ರಂಜಿಸುವ ಸುಕೃತಫಲ ಗುಲಗಂಜೆ ತೂಕ ಮಾಡಲಿಲ್ಲ (ವೋಕ್ಷದೀ. ೪೯-೦). **ಗುಲಗುಂಜಿ:** ಆಹಾಡೀಬೇರು, ಕೊಮ್ಮೆಬೇರು, ನೆಗ್ಗಿಲು, ಗುಲಗಂಜಿ ಬೇರು . . . ಹುರಳಿಕಟ್ಟನಲ್ಲರೆದು ಕೊಟ್ಟರೆ ಅಶ್ಮರೀರೋಗ, ಮೂತ್ರ

ಕೃಚ್ಛ್ರ, ಬಹುಮೂತ್ರ ಇವು ಮಾಣುವುವು (ಸಕವೈ. ಪರಿ. ೪೯೬).

**ಗುಲಗಂಜಿ:** (ಹ). **ಗುಲಿಗಂಜಿ:** "ಕಾಕಚಿಂಚೀ, ಗುಂಜಾ, ಕೃಷ್ಣಲಾ – ಓ ಮಣಿಗಳ ಗುಲಿ[ಪಾಠಾಂ. ಳಿ]ಗಂಜೀ ಬಳ್ಳಿ" (ಸಿದ್ಧಾಂತಿ. ೧೧೮).

**ಗುಲುಗಂಜಿ:** ಹೊಳೆವಂಥ ರನ್ನದ ತೊಟ್ಟಿಲ ಮೇಲೆ ಥಳಥಳಿಸುವ ಗುಲುಗಂಜಿ[ಪಾಠಾಂ. ಗುರುಗುಂಜಿ]ಯ ಮಾಲೆ (ಪುರಂದ. ೧-೨೩೮-೨).

**ಗುಲುಗುಂಜಿ:** ಗುರು(ಲು)ಗುಂಜಿಯ ದಂಡೆಯ ಕಟ್ಟಿ ತುತ್ತುರುತುರು ಎಂಬ ಕೊಳಲ ಬಾಜಿಸುತ್ತ (ಸರ್ವವ. ೮೭-೪೮೪); ರಂಗು ತರಂಗತಾರಾ ಮಾರ್ಗ ಗುಜ್ಜರಿ ಸಿಂಗಳ ಗುಲುಗುಂಜಿ ಮಡಿಯು (ಆಮುಸಾಂ. ४-೧೨).

**ಗುಳ್ಳಗಂಜಿ:** ಗುಳ್ಳಗಂಜಿ ತೊಡವ ತೊಟ್ಟು ಹಾವಸೆಯಾ ಉಡುಪನುಟ್ಟು (ನಾದಲೀ. ೨೫-೪).

[ದೇ.॥ ತುಳು. ಗುರುಕುಂಜಿ, ಗುರುಗುಂಜಿ, ಗುರ್ಗುಂಜಿ, ಗುರ್ಗೊಂಜಿ; ತೆಲು. ಗುರಿಗಿಂಜ, ಗುರುಗಿಂಜ]

**ಗುರುಗುಂಜಿ** 'ಗುರುಗುಂಜಿ' ನೋ.

**ಗುರುಗುಟ್ಟು** 'ಗುಱುಗುಟ್ಟು' ನೋ.

**ಗುರುಗುಮ್ಮನೆ** 'ಗುಱುಗುಮ್ಮನೆ' ನೋ.

**ಗುರುಗುರಿಸು** 'ಗುಱುಗುಱಿಸು' ನೋ.

**ಗುರುಗುಲು** (ನಾ). ಒಂದು ಬಗೆಯ ಗಿಡ; ಹಣ್ಣಿಗಿಡ: ಶ್ರೀಹಸ್ತಿಸೀ ಭೂರುಂಡೀ – ೨ ಹಣ್ಣೀಗಿಡದ ಪೆಸರುಗಳು. ಗುರುಗುಲಗಿಡ (ಸಿದ್ಧಾಂತಿ. ೧೦೨). 'ಗುರಿಕೆ$_1$' ಪರಾ. [←ತೆಲು. ಗುರುಗು]

**ಗುರುಗೇಹಿನಿ** (ನಾ). ಗುರುವಿನ ಹೆಂಡತಿ,-ಪತ್ನಿ: ಗುರುಗೇಹಿನಿಯು ಕಟ್ಟಿಗೆ ತರಲು ಕಳುಹಿದರಿರ್ವರನು (ಸುದಾಮ. ४-೨೦).

[ಗುರು$_2$ + ಗೇಹಿನಿ]

**ಗುರುಚರ** (ನಾ). ಗುರುಗಳ ಕಾಲು,-ಪಾದ: ಗುರುಜಂಗಮದ ಪಾದೋದಕವ ಲಿಂಗಕ್ಕೆ ಮಜ್ಜನವ ಮಾಡುವಲ್ಲಿ ಆ ಲಿಂಗ ಮೊದಲೋ ಗುರುಚರ ಮೊದಲೋ ಅನಾದಿಬೀಜ ಲಿಂಗ ಆದಿಬೀಜ ಗುರುಚರ (ಮೋಳಿಮಾ. ೧೫೬-೫೮೮); ಗುರುಚರಭಕ್ತಿತತ್ಪರನುಪಾತ್ತವಿಭೂತಿ ಶಿವಾಕ್ಷಮಾಲಿಕಾಭರಣನಜೇಯನಂಗಗುಣವರ್ಜಿತಂ (ವೃಷವಿ. ೧೨-೪೮).

[ಗುರು$_2$ + ಚರ]

**ಗುರುಚಿಹ್ನೆ** (ನಾ). [ಛಂದ] ಗುರುವನ್ನು ಸೂಚಿಸುವುದಕ್ಕಾಗಿ ಉಪಯೋಗಿಸುವ ಅಡ್ಡಗೀಟು (–): ಯುರೋಪಿಯನರು ಗುರುಚಿಹ್ನೆಯಾಗಿ ಅಡ್ಡಗೆರೆಯನ್ನೂ (–) . . . ಮೇಲೆ ಕಾಣಿಸಿದ ವಾಕ್ಯಗಳಲ್ಲಿ ತಿಳಿಸಿದ್ದಾರೆ (ಸಂಶೋಧ. ೯೮). [ಗುರು$_2$ + ಚಿಹ್ನೆ]

**ಗುರುಜನ** (ನಾ). ಪೂಜ್ಯರಾದವರು; ಹಿರಿಯರು: ಗುರುಜನವಿನಾಯದೆಯುಂ ಮುನ್ನೆರೆವಾತನನೆ[ಯ್ದುಯ್ಯದೆಯ]ಪ್ಪೊಡೆ ದೋಷಂ ಪರಿಭಾವಿಸಲ್ ಎನಗಿನ್ನಿದಪರಿಹಾರ್ಯಮೆನಿಪ್ಪುದೊಂದು ಮರಣಂ ಶರಣಂ (ಕಾದಂಪೂ. ೮೭೫); ಗುರುಜನಮುಮಾಪ್ತಜನಮುಂ . . . ತಿಂತಿಣಿಯಾಗಿರೆ ಸಭೆ ಪೋಲ್ತತ್ತು ರತ್ನಮೇಳಾಪಕಮಂ (ಪಂಪರಾಮಾ. ೬-೭೫); ಗುರುಜನಕಂ ಕವೀಂದ್ರಜನಕಂ . . . ಒಲ್ದುದನಿತ್ತಭಿರಕ್ಷಿಪರ್ತಿಯಿಂ (ಪುಷ್ಪ. ೧-೭೫); ಗುರುವಸಿಷ್ಠಂವೆರಸಿ ಪುರಜನರ್, ಪರಿಜನರ್, ಗುರುಜನರ್ . . . ಬಂದರಲ್ಲಿಗೆ (ಶ್ರೀರಾಮಾ. ೧೭೮-೪೩೬). [ಗುರು$_2$ + ಜನ]

**ಗುರುತನ** (ನಾ). ಹಿರಿಮೆ; ಗುರುತ್ವ: ಅವನ ಗುರುತನವೇನು ವಿಪ್ರಾಧಮನಲಾ ಶಸ್ತ್ರೋಪಜೀವನನಿವನು ಖುಷಿಯೇ (ಕುಮಾದ್ರೋ. ೧೯-೨೩). [ಗುರು$_2$ + – ತನ]

**ಗುರುತಪ್ಪುಗ** (ನಾ). ಗುರುಹಿರಿಯರಿಗೆ ತಪ್ಪುವವನು; ಗುರುದ್ರೋಹಿ: ಗುರುಶುಶ್ರೂಷೆಯನುಳಿಯಲ್ ಗುರುತಪ್ಪುಗರಪ್ಪುದಿದು ವೆ ತಪ್ಪದ ಮೋಘಂ (ಹಾಲಾಸ್ಯ. ೦-೨-೧೭). [ಗುರು$_2$ + ತಪ್ಪುಗ]

**ಗುರುತರ** (ಗು). ಬಹಳ ಹಿರಿದಾದ; ಹೆಚ್ಚಾಗಿ ಗೌರವಕ್ಕೆ ಪಾತ್ರವಾದ; ಮಹತ್ತರವಾದ: ಈ ವ್ರತಗಣ[ಮಣ]ಮಾದೊಡಣು ವ್ರತಮಾ ಶ್ರಾವಕಂಗೆ ಗುರುತರ ವಿಧಿಯಿಂ ಪ್ರವ್ರಜಿತದ ನಿಲೆ (ಶಾಂತಿಪು. ೬-೬); ಗುರುತರೋನ್ನತಮಾಗೆಸೆವ ಸಿರಿಗಿರಿಯ ಪಡುವಣ ಕಡೆಯ ಧರೆಯಲಿ (ಬಸವು. ೨-४೫); ಗುರುತರಕಾರ್ಯದೊಳಪಯಶ ಸಹ ಚಂದವಪ್ಪುದು ಮಹಿಮಾವಂತರಿಗೆ (ಇಂಡಾಪ. ೭೦-೩೭). [ಸಂ.]

**ಗುರುತಲ್ಪ** (ನಾ). ೧. ಗುರುವಿನ ಹಾಸುಗೆ. ೨. ಗುರುವಿನ ಹೆಂಡತಿ 'ಗುರುತಲ್ಪಗಮನ' ಪರಾ. [ಗುರು$_2$ + ತಲ್ಪ]

**ಗುರುತಲ್ಪಗ** (ನಾ). ಗುರುವಿನ ಹೆಂಡತಿಯೊಂದಿಗೆ ಬೆರೆಯುವವನು: ನೆರೆ ಹೊಲ್ಲ ದುರಾಚಾರಿಗಳ ನೆರೆ ಹೊಲ್ಲ ಜಾರಚೋರಕರ . . . ನೆರೆ ಹೊಲ್ಲ ಗುರುತಲ್ಪಕ[ಗ]ರ (ಅಖಂಡೇ. ೧೨೮-೯೨). [ಸಂ.]

**ಗುರುತಲ್ಪಗಮನ** (ನಾ). ಗುರುವಿನ ಹೆಂಡತಿಯೊಂದಿಗೆ ಬೆರೆಯುವುದು. P ಪಂಚಮಹಾಪಾತಕಗಳಲ್ಲಿ ಒಂದು: ಮತ್ತಮಾ ಪಾತಕ ಕೂಟಗಳೊಳು ಬ್ರಹ್ಮಹತ್ಯಾದಿವ್ಯೂಹ ಸುರಾಪಾನಾದಿವ್ಯೂಹ ಸ್ವರ್ಣಸ್ತೇಯಾದಿ ವ್ಯೂಹ ಗುರುತಲ್ಪಗಮನಾದಿವ್ಯೂಹ ತತ್ಸಂಯೋಗಿವ್ಯೂಹವೆಂಬೈದು ಮಹಾಪಾತಕವ್ಯೂಹಂಗಳಾಗಿರ್ಕುಂ (ವಿವೇಕ. ೧೮४). [ಗುರುತಲ್ಪ+ಗಮನ$_2$]

**ಗುರುತಿಡು** (ಕ್ರಿ). ಲಕ್ಷಣವನ್ನು ತಿಳಿಸು; ಗೊತ್ತಾಗುವಂತೆ ಒಂದರ ಸ್ವರೂಪವನ್ನು ತಿಳಿಸು: "ಲಕ್ಷಣೀಯಂ–ಗುರುತಿಡಲ್ತಕ್ಕುದು" (ಕಾಶಕ್ಕ. ೨೫೩). [ಗುರುತು (< ಗುಱುತು) + ಇಡು$_1$]

**ಗುರುತಿಸು** (ಕ್ರಿ). ೧. ಗೊತ್ತುಹಚ್ಚು; ಗುರುತುಹಿಡಿ: ಅವನ ಕಣ್ಣುಗಳು ತೆರೆದಿದ್ದರೂ ದಾರಿಯುದ್ದಕ್ಕೂ ಅಲ್ಲಲ್ಲಿ ನಿಂತಿದ್ದ ಪೂರ್ವಪರಿಚಿತರನ್ನು ಗುರುತಿಸಲಾರದೆ ಹೋದವು (ರಾವಿಜ. ೧೧); ಇಂದಿಗೂ ಕೆಲವು ದ್ರಾವಿಡಭಾಷೆಗಳಲ್ಲಿ ಇವುಗಳ ಇರುವಿಕೆಯನ್ನು ಗುರುತಿಸಬಹುದಾಗಿದೆ (ದ್ರಾವಿವಿ. ೨೭೮). ೨. ಬರೆದಿಡು; ಗುರುತುಹಾಕು: ಹಾಲಿನ ಲೆಕ್ಕವನ್ನು ಆಕೆ ಕ್ಯಾಲೆಂಡರಿನಲ್ಲಿ ಗುರುತಿಸಿದ್ದಳು (ರೂಢಿ).

**ಗುರುತಿಸಿಕೊಳ್ಳು** = ಬರೆದಿಟ್ಟುಕೊಳ್ಳು; ಗುರುತುಹಾಕಿಕೊಳ್ಳು: ಬೋಧಿಸಿದ ಮುಖ್ಯಾಂಶಗಳನ್ನು ಗುರುತಿಸಿಕೊಳ್ಳುವ ಈ ಪುಸ್ತಕಗಳೂ ಬೋಧನೆಗೆ ಫಲಪ್ರದವಾಗಿ ನೆರವಾಗಬಲ್ಲವು (ಶಿಕ್ಷದ. ೨೮೮); ಅದನ್ನು ಒಂದು ಪುಸ್ತಕದಲ್ಲಿ ಗುರುತಿಸಿಕೊಂಡು . . . ಕೊಂಡುಕೊಳ್ಳುವುದು ಒಳ್ಳೆಯದು (ಆಡುಸಾ. ೫೨). [ಗುರುತು (< ಗುಱುತು) + – ಇಸು$_3$]

**ಗುರುತು** 'ಗುಱುತು' ನೋ.

**ಗುರುತುಗ** (ನಾ). ಗುರುತುಳ್ಳವನು: "ಅಂಕಕಃ, ಅಂಕವಾನ್, ಅಂಕೀ ಈ ೩ ಗುರುತುಗಂ" (ಕಾಶಕ್ಕ. ೨೮೯). [ಗುರುತು (< ಗುಱುತು) + – ಗ$_2$]

**ಗುರುತುಚೀಟಿ** (ನಾ). ೧. "ಬಡ್ಡಿ, ಮೊ.ನ್ನು ಪಡೆಯುವುದಕ್ಕೂ ರೈಲುಪ್ರಯಾಣ, ಮೊ.ಗಳಲ್ಲಿ ಹಣಕ್ಕೆ ಬದಲಾಗಿ ಕೊಡುವುದಕ್ಕೂ ಹರಿದುಕೊಡಬಹುದಾದ ಚಿಹ್ನಪತ್ರ" (Coupon. ಇಂಕನಿ). ೨. ಮತದಾನ ಮೊದಲಾದ ಸಂದರ್ಭಗಳಲ್ಲಿ ಗುರುತಿಗಾಗಿ ಕೊಡುವ ಪತ್ರ: ನೀವು ಮತದಾನ ಕಟ್ಟೆಗೆ ಹೋಗುವುದಕ್ಕೆ ಮೊದಲು ಗುರುತುಚೀಟಿಯನ್ನು ಮರೆಯದೆ ತೆಗೆದುಕೊಂಡು ಹೋಗಿ (ರೂಢಿ).

[ಗುರುತು (< ಗುಱುತು) + ಚೀಟಿ$_2$ (< ಚೀಟು$_2$)]

**ಗುರುತುಪಟ್ಟಿ** (ನಾ). ೧. ಯಾವುದಾದರೊಂದು ಸಂಘದ ಅಥವಾ ಅಧಿವೇಶನದ ಪ್ರತಿನಿಧಿತ್ವವೇ ಮೊದಲಾದುವನ್ನು ಸೂಚಿಸಲು ಧರಿಸುವ ಪಟ್ಟಿ: ಸದಸ್ಯರು ತಮ್ಮ ತಮ್ಮ ಗುರುತುಪಟ್ಟಿಗಳನ್ನು ಧರಿಸಿಕೊಂಡು ಸಭೆಗೆ ಆಗಮಿಸಬೇಕಾಗಿ ವಿನಂತಿ (ರೂಢಿ). ೨. ಮುದ್ರಣ ಕಾರ್ಯದಲ್ಲಿ ಬಳಸುವ ಒಂದು ಸಾಧನ: ಕಾಗದಗಳನ್ನು ಸರಿಯಾಗಿ ಒದಗಿಸುವುದಕ್ಕೆ ಊಡುಹಲಗೆಯ ಮೇಲೆ ಇರುವ ಮುಂಭಾಗದ ಹಾಗೂ

ಪಕ್ಕದ 'ಲೇ' ಅಥವಾ ಗುರುತುಪಟ್ಟಿಗಳನ್ನು ಸರಿಯಾದ ಸ್ಥಾನದಲ್ಲಿ ಭದ್ರಪಡಿಸಬೇಕು (ಮುದ್ರಕ. ೯೭). [ಗುರುತು (<ಗುಱುತು)+ಪಟ್ಟಿ$_2$]

**ಗುರುತುಹಚ್ಚು** (ಕ್ರಿ). ತಿಳಿದುಕೊಳ್ಳು; ಪತ್ತೆಹಚ್ಚು; ಕಂಡುಹಿಡಿ: ಅವರು ಜಗತ್ತಿಗಿತ್ತಿರುವ ಸಂದೇಶ, ತಾವು ನಡೆದು, ನುಡಿದು ತೋರಿಸಿರುವ ಆದರ್ಶಮಾರ್ಗವನ್ನು ಗುರುತುಹಚ್ಚುವುದು (ಜಗದಾ. ೪). [ಗುರುತು (<ಗುಱುತು) + ಹಚ್ಚು$_1$]

**ಗುರುತುಹತ್ತು** (ಕ್ರಿ). ಗುರುತುಸಿಕ್ಕು; ಗೊತ್ತಾಗು: ಕುಂತಿಗೆ ಈ ದಿವ್ಯಲಕ್ಷಣಯುಕ್ತನಾದ ಅಂಗರಾಜನು ತನ್ನ ಮಗನೆಂದು ಗುರುತುಹತ್ತಿ ಅವನಲ್ಲಿ ಒಳಗೇ ಪ್ರೀತಿ ಬೆಳೆಯಿತು (ವಚಭಾ. ೨೬). [ಗುರುತು (<ಗುಱುತು) + ಹತ್ತು$_1$ (<ಪತ್ತು$_1$)]

**ಗುರುತುಹಲಗೆ** (ನಾ). ಇದು ಇಂಥವರ ಮನೆ ಎಂದು ತಿಳಿಸುವುದಕ್ಕಾಗಿ ಅಥವಾ ಇದು ಈ ಹೆಸರಿನ ಸಂಸ್ಥೆಯೆಂದು ತಿಳಿಸುವುದಕ್ಕಾಗಿ ಮುಂಭಾಗದಲ್ಲಿ ತಗಲುಹಾಕಿರುವ ಹೆಸರು ಬರೆದಿರುವ ಹಲಗೆ; ನಾಮಫಲಕ: ಎಡಗಡೆಗೆ ಗುರುತುಹಲಗೆಯಿದ್ದ ಎರಡು ಮಹಡಿಯ ಸೌಧವೊಂದಿತ್ತು (ಪುನರು. ೧೮೨). [ಗುರುತು (< ಗುಱುತು) + ಹಲಗೆ (< ಪಲಗೆ)]

**ಗುರುತುಹಿಡಿ** (ಕ್ರಿ).=ಗುರುತಿಸು ೧: ಅವನನ್ನು ನಾವು ಗುರುತುಹಿಡಿಯಲಾರದಷ್ಟು ಅವನು ಬದಲಾಯಿಸಿದ್ದಾನೆ (ರೂಢಿ). [ಗುರುತು (<ಗುಱುತು) + ಹಿಡಿ$_1$ (< ಪಿಡಿ$_1$)]

**ಗುರುತೆ** (ನಾ). ಹಿರಿಮೆ; ದೊಡ್ಡಸ್ತಿಕೆ; ಗೌರವ. 'ಗುರುತೆವೆಱು' ಪರಾ. [ಸಂ. ಗುರುತಾ]

**ಗುರುತೆವೆಱು** (ಕ್ರಿ). ಹಿರಿಮೆಯನ್ನು ಹೊಂದು; ಗೌರವವನ್ನು ಪಡೆ: ಸಕಲ ಪ್ರಪಂಚತೆಯಂ ಲಘುತರಂ ಮಾಡಿ ತಾಂ ಗುರುತೆವೆತ್ತುದೞಿಂ (ಎಕ. XV, ಹೊಳನ. ೧೧೨-೧೫; 1282). [ಗುರುತೆ + ಪೆಱು$_1$]

**ಗುರುತ್ವ** (ನಾ). ೧. ಭಾರವಾಗಿರುವಿಕೆ; ತೂಕವಾಗಿರುವಿಕೆ; ತೂಕ. ೨. ಗೌರವ; ಹಿರಿಮೆ; ದೊಡ್ಡತನ: ಆ ಪಂಚಮಿ ಭಯ, ಸ್ವೀಕಾರ . . . ಉದಯ, ಗುರುತ್ವಮೆಂಬಿನಿತೞೊಳಂ ವರ್ತಿಸುಗುಂ (ಶಮದ. ೧೩೦ ವೃತ್ತಿ); ಇದರೊಳಗಿನ ಆತ್ಮವೀರದ ಕತೆ ದೇಶಾಚಾರ ಕಾಲಾಚಾರಗಳನ್ನು ಮೀರಿ . . . ಗುಣವನ್ನು ಹೊಂದಿ ಗುರುತ್ವವನ್ನು ಪಡೆದಿದೆ (ವೀರಯೋ. VI, ಮುನ್ನುಡಿ); ಅದರ ವಸ್ತುವಿನಲ್ಲಿ ಸಣ್ಣಕಥೆಗೆ ಬೇಕಾದಷ್ಟು ಗುರುತ್ವ ಇಲ್ಲ ಎನಿಸುತ್ತದೆ (ಎಮುಕ. XVI, ಮುನ್ನುಡಿ). ೩. ಉಪಾಧ್ಯಾಯವೃತ್ತಿ; ಕಲಿಸುವಿಕೆ; ಶಿಕ್ಷಣ: ಅವರ ಗುರುತ್ವದಿಂದ ನನ್ನ ಮಗನು ವಿದ್ವಾಂಸನಾಗುತ್ತಾನೆಂಬುದರಲ್ಲಿ ನನಗೆ ಲೇಶಾಂಶವಾದರೂ ಸಂದೇಹವಿಲ್ಲ (ಹಂಗಾಳ್ಕ. ೪). ೪. [ಛಂದ] ಗುರು ' u' ಎಂಬ ಚಿಹ್ನೆಯನ್ನು ಹೊಂದಿದುದು; ಗುರುವಾಗಿರುವಿಕೆ: "ಕೊಂಕಿನೆ ಗುರುತ್ವಮಕ್ಕು" (ಕಬ್ಬಿಕೈ. ೬೫). P ಹಿಂದೆ ಗುರುವಿಗೆ 'u' ಚಿಹ್ನೆಯನ್ನು ಬಳಸುತ್ತಿದ್ದರು. ೫. [ವಿಜ್ಞಾ] (ಭೂಮಿಯಲ್ಲಿರುವ) ಆಕರ್ಷಣ ಶಕ್ತಿ. 'ಗುರುತ್ವಶಕ್ತಿ' ಪರಾ. [ಸಂ.]

**ಗುರುತ್ವಕೇಂದ್ರ** (ನಾ).[ವಿಜ್ಞಾ] ಒಂದು ವಸ್ತುವಿನ ಭಾರದ ಪ್ರಯೋಗ ಬಿಂದು: ಒಂದು ವಸ್ತುವಿನ ಗುರುತ್ವಕೇಂದ್ರವೆಂದರೆ ಅದರ ಭಾರದ ಪ್ರಯೋಗಬಿಂದುವೆಂದು ತಿಳಿಯಬೇಕು (ಭೌತವಿ. ೪೬); ಆದರೆ ವಸ್ತುಗಳು ಸಮತೋಲದಲ್ಲಿ ನಿಲ್ಲಬೇಕಾದರೆ, ಅವುಗಳ ಗುರುತ್ವಕೇಂದ್ರವು (Centre of gravity) ಒಂದು ನಿಶ್ಚಿತಸ್ಥಳದಲ್ಲೇ ಇರಬೇಕು (ಬಾಲಪ್ರ. I, ೨೨೬). [ಗುರುತ್ವ + ಕೇಂದ್ರ]

**ಗುರುತ್ವಮಧ್ಯ** (ನಾ).=ಗುರುತ್ವಕೇಂದ್ರ: ಪ್ರತಿಯೊಂದು ಪದಾರ್ಥದಲ್ಲಿ ಒಂದು ನಿಯಮಿತ ಸ್ಥಳವಿರುತ್ತದೆ ಆ ಸ್ಥಳವನ್ನು ಹಿಡಿದು ಎತ್ತಿದರೆ ಸಮಗ್ರಪದಾರ್ಥವು ಸಮನಾಗಿ ಎತ್ತಲ್ಪಡುತ್ತದೆ ಮತ್ತು ಆ ಸ್ಥಳದ ಸುತ್ತು ಯಾವತ್ತು ಕಣಗಳು ಸಮತೋಲಾಗಿ ನಿಲ್ಲುತ್ತವೆ. ಇಂಥಾ ಸ್ಥಳಕ್ಕೆ ಗುರುತ್ವಮಧ್ಯವೆಂದು ಹೆಸರು (ಮುಂಬಯಿ. ೫-೫೩). [ಗುರುತ್ವ+ಮಧ್ಯ]

**ಗುರುತ್ವವಡೆ** (ಕ್ರಿ). ಹಿರಿಮೆಯನ್ನು ಹೊಂದು; ಹೆಮ್ಮೆಯನ್ನು ಪಡೆ: ಬಡ ರಾವಣನಿಂದ ಲಘುವಾದುದಿಲ್ಲ ಪೆರ್ಗಡೆಗೋಲಾದುದುಮಿಲ್ಲ ಮೃಡನ ಕಾರ್ಮುಕವಾದುದಿಲ್ಲೆಂದು ಗುರುತ್ವವಡೆದಿರ್ದುದಾ ಕುಳಿರ್ವೆಟ್ಟು (ವೋಹತ. ೬-೪೭). [ಗುರುತ್ವ + ಪಡೆ$_1$]

**ಗುರುತ್ವಶಕ್ತಿ** (ನಾ). [ವಿಜ್ಞಾ] ವಸ್ತುಗಳನ್ನು ತನ್ನ ಕಡೆಗೆ ಎಳೆದುಕೊಳ್ಳುವ ಶಕ್ತಿ; ಗುರುತ್ವಾಕರ್ಷಣ ಶಕ್ತಿ: ಹೀಗೆ ಎಳೆಯುವ ಶಕ್ತಿಯು ಭೂಮಿಗಿರುವುದು. ಇದನ್ನು ಭೂಮಿಯ ಗುರುತ್ವಶಕ್ತಿಯೆನ್ನುತ್ತೇವೆ (ಬಾಲಪ್ರ. I, ೨೨೬); ಪರಮಾಣುಗಳಿಂದ ವಿದ್ಯುಚ್ಛಕ್ತಿ, ಕಾಂತಶಕ್ತಿ, ಗುರುತ್ವಶಕ್ತಿ ಮೊದಲಾದುವುಗಳುಂಟಾಗುವಂತೆ . . . ಜೀವಶಕ್ತಿ (Vital force)ಯೆಂಬ ಹೊಸ ಶಕ್ತಿಯುಂಟಾಗುತ್ತದೆ (ನಿಶಲು. ೨೩೪). [ಗುರುತ್ವ + ಶಕ್ತಿ]

**ಗುರುತ್ವಾಕರ್ಷಣ** (ನಾ). [ವಿಜ್ಞಾ] ಒಂದು ಪದಾರ್ಥವು ಮತ್ತೊಂದು ಪದಾರ್ಥವನ್ನು ತನ್ನ ಕಡೆಗೆ ಸೆಳೆಯುವಿಕೆ: ಸೃಷ್ಟಿಯೊಳಗಿನ ಯಾವತ್ತು ಸಣ್ಣ ದೊಡ್ಡ ಪದಾರ್ಥಗಳು ಎಷ್ಟೇ ಅಂತರದ ಮೇಲಿರಲಿ ಒಂದನ್ನೊಂದು ಎಳೆಯುತ್ತಿರುತ್ತವೆ. ಈ ಎಳತವೇ ಗುರುತ್ವಾಕರ್ಷಣವು (ಮುಂಬಯಿ. ೫-೪೨); ಗುರುತ್ವಾಕರ್ಷಣ ನಿಯಮವನ್ನು ನ್ಯೂಟನ್ ಕಂಡುಹಿಡಿದನು (ಭೂಹುಟ್ಟು. ೧೮). [ಗುರುತ್ವ + ಆಕರ್ಷಣ]

**ಗುರುದಕ್ಷಿಣೆ** (ನಾ). ಗುರುವಿಗೆ ಕೊಡುವ ದಕ್ಷಿಣೆ,-ಸಂಭಾವನೆ,-ಕಾಣಿಕೆ: ವಾಸುದೇವನ ಯೆನ್ನ ಗರ್ಭದಿ ಮುವ್ವರುದಿಸಿದರು ಆ ಸುತರು ತಾವಳಿದರವರನು ಲೇಸೆನಲು ತಂದೆನಗೆ ನೀ ವಿಶ್ವಾಸದಿಂದಲಿ ಯಿತ್ತಡದು ಗುರುದಕ್ಷಿಣೆಯು ತವಗೆ (ತಿಮ್ಮಸ್ತೀ. ೧-೭೬); ಆದರೆ ನಾನಿನ್ನೂ ಗುರುದಕ್ಷಿಣೆಯನ್ನು ಸಲ್ಲಿಸಲಿಲ್ಲ (ಮಜಿಸ. ೭೪). [ಗುರು$_2$ + ದಕ್ಷಿಣೆ]

**ಗುರುದೆ** (ನಾ). ಗುದಿಗೆ; ದೊಣ್ಣೆ: ಹೊಱಹಜಾರದಿ ನಿಂದು ಚಂದ್ರಿಕಾ ವಿಹರಣವ ಯೆಱಕದಿಂ ಮಾಳ್ಪರ್ತಿಯೊಳು ಗುರುದೆಯ ಕತ್ತಿಯ ಕಂಕುಳೊಳಗೆಯೌಚಿಯರಮನೆಯನು ಪೊಱಮಟ್ಟು (ಜ್ಞಾನಜ. ೩೮-೯೨). [ ←ಮರಾ. ಗುರದಾ, ಗುಡದಾ; ಪಾರ. ಗುರ್ಜ್]

**ಗುರುದೋಷ** (ನಾ). ೧. ಉಪಾಧ್ಯಾಯನಲ್ಲಿ ಕಂಡುಬರುವ ತಪ್ಪು. ೨. ಮಹತ್ತರವಾದ ತಪ್ಪು. ೩. [ಕಾವ್ಯಮೀ]ಒಂದು ಬಗೆಯ ಕಾವ್ಯದೋಷ; ಲಘುವಿರಬೇಕಾದ ಎಡೆಯಲ್ಲಿ ಗುರುವನ್ನು ಇಡುವುದು: ಕಾರಕದೋಷಮುಂ ವಚನದೋಷಮುಮಾ ಗುರುದೋಷಮುಂ ಲಘೂಚ್ಚಾರಿತ ಶಬ್ದದೋಷಮುಂ (ಕವಿರಾ. ೧-೧೧೨). 'ಗೌರವದೋಷ' ಪರಾ. [ಗುರು$_2$ + ದೋಷ]

**ಗುರುದ್ರೋಹ** (ನಾ). ಗುರುಗಳ ವಿಷಯದಲ್ಲಿ ಮಾಡುವ ಅನ್ಯಾಯ; ಗುರುಗಳಿಗೆ ಉಂಟುಮಾಡುವ ಕೆಡುಕು: ಗುರುದ್ರೋಹ ಲಿಂಗದ್ರೋಹ ಜಂಗಮದ್ರೋಹ ಆಚಾರದ್ರೋಹ ಪ್ರಸಾದದ್ರೋಹ ಇಂತೀ ಪಂಚಮಹಾಪಾತಕಂಗಳು (ಬಸವ. ೭೬೬); ಉದ್ರೇಕದಿಂ ಮುನಿವರನೊಳಾಡಿ ತಪ್ಪಿದ ಗುರುದ್ರೋಹವೊಂದು (ಜೈಮಿಭಾ. ೪-೨); ಗುರುದ್ರೋಹದಿಂದಂ ಸಮುಸ್ತಾಘವೃಂದಂ ಬರಲ್ ಕೀರ್ತಿತೇಜಃಪ್ರಭಾವಾದಿ ಕುಂದಲ್ ಸುರೇಂದ್ರಂ . . . ನಷ್ಟಸೌಭಾಗ್ಯದಿಂದಿರ್ದಂ (ಹಾ ಲಾ ಸ್ಕ. ೧-೧೨-೧೩). [ಗುರು$_2$ + ದ್ರೋಹ]

**ಗುರುದ್ರೋಹಿ** (ನಾ). ಗುರುಗಳಿಗೆ ಅನ್ಯಾಯಮಾಡುವವನು: ಕೆಟ್ಟನಾ ಗುರುದ್ರೋಹಿಯಾ ತೆರ ಇಷ್ಟನವನಿಂದಾರು ಕೆಟ್ಟರು (ಬಿಜ್ಜಪು. ೧೦೩-೫೭). [ಸಂ. ಗುರುದ್ರೋಹಿನ್]

**ಗುರುದ್ವೇಷ** (ನಾ). ಗುರುಗಳನ್ನು, ಹಿರಿಯರನ್ನು ದ್ವೇಷಿಸುವುದು : ಉತ್ತಮರಲ್ಲಿ ದ್ವೇಷ, ಅವರ ಗುಣಗಳಲ್ಲಿ ಅಸೂಯೆ, ಅವರ ಐಶ್ವರ್ಯಾಪಹಾರ–ಈ ಮೂರೂ ಗುರುದ್ವೇಷಗಳು (ಹಿಂದಸಾ. ೨೯೩). [ ಗುರು$_2$ + ದ್ವೇಷ ]

**ಗುರುಪಂಚಕ** (ನಾ). [ಜೈನ] ಪಂಚಪರಮೇಷ್ಠಿಗಳೆಂದು ಪ್ರಸಿದ್ಧರಾದ ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧುಗಳೆಂಬ ಐವರು : ಅನ್ನೆಗಮಾ ಸ್ವಯಂಪ್ರಭೆಯುಂ . . . ಗುರುಪಂಚಕಮಂ ನೆನೆಯುತ್ತೆ ಭೋಂಕೆನೆ ತನ್ನ ಶರೀರೆಯಾಗಿ ದಿವದಿಂದಿಟಿದಳ್ (ಆದಿಪು. ೩-೧೭). [ ಗುರು$_2$ + ಪಂಚಕ ]

**ಗುರುಪಥ** (ನಾ). ಗುರುಗಳು ತೋರಿಸಿಕೊಡುವ ದಾರಿ,–ಮಾರ್ಗ : ಶಿವಪಥವನಱಿವರೆ ಗುರುಪಥವೇ ಮೊದಲು (ಬಸವ. ೭೧). [ಗುರು$_2$+ಪಥ]

**ಗುರುಪದ** (ನಾ). ಗುರುಗಳ ಪಾದ : ಗುರುಪದಪದ್ಮಾಂತಿಕದೊಳ್ ಪರಮೇಶ್ವರ ದೀಕ್ಷೆಯುಂ ಮನಂಬಿಡೆ ಕೊಂಡೀ ಧರೆಯಂ ಪೊಗಟಿಸಿದಂ (ಆದಿಪು. ೧೪-೧೩೯) ; ಗುರುವಿಘಾತಕರಾವು ತಾನತಿ ಗುರುಪದೋಪಾಸಕನು (ಕುವ್ಯಾ ದ್ರೊ. ೯-೨೫) ; ಗುರುಪದಭಕ್ತಿ ದೇವತರುಗೀಶ್ವರ ಸತ್ಕೃಪೆ (ವೃಷವಿ. ೩೭-೨೦). [ ಗುರು$_2$ + ಪದ$_3$ ]

**ಗುರುಪರಂಪರೆ** (ನಾ). ಗುರುಗಳ ಪೀಳಿಗೆ : ಗುರುಪರಂಪರೆ . . . ಆತ್ಮೈಕ್ಯಗಳೆಂಬ ಪಂಚ ಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (ವಿವೇಕ. ೮೦) ; ಗುರುಪರಂಪರೆಗೆಱಗಿ ಧ್ಯಾನಿಪೆ (ಗಗತಾ. ೨-೪); ಅಭ್ಯಾಸ ಕ್ರಮದಲ್ಲಿ ಗುರುಪರಂಪರೆಯಿಂದ ಬಂದಿರುವ ಆಸನಗಳು . . . ರಹಸ್ಯವಾಗಿಯೇ ಉಳಿದಿವೆ (ಭಾರದ. ೧೫೦). [ ಗುರು$_2$ + ಪರಂಪರೆ ]

**ಗುರುಪಾತಕ** (ನಾ). ೧. ದೊಡ್ಡ ಪಾಪ; ಮಹತ್ತರವಾದ ಪಾಪ. ೨. ಮಹಾಪಾಪಿ : ಪ್ರಸಾದವ ಕೊಳಲೊಲ್ಲದೆ ತುಡುಗುಣಿ ನಾಯಂತೆ ತೊಗಲ ಗಡಿಗೆಯ ತುಂಬುವ ಗುರುಪಾತಕರಿಗೆಲ್ಲಿಯದೋ ಒಡೆಯರ ಕಟ್ಟಳೆ (ಮೋಳಿಮಾ. ೨೦-೪೪). [ ಗುರು$_2$ + ಪಾತಕ ]

**ಗುರುಪೂಜೆ** (ನಾ). ಗುರುಗಳಿಗೆ ಮಾಡುವ ಪೂಜೆ,–ಅರ್ಚನೆ,–ಆರಾಧನೆ : ನೇವುರವನೊತ್ತೆಯನಿರಿಸಿ ತಾನೀ ವನಿತೆ ಗುರುಪೂಜೆಯಂ ಮಾಡಳೆ ದವನದಲ್ಲಿ (ಬಸಪು. ೪೨-೧೧). [ ಗುರು$_2$ + ಪೂಜೆ$_3$ ]

**ಗುರುಪೂಜೋಪಲಂಭನ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು; ದೇವತೆಗಳಿಂದ ಪೂಜೆಮಾಡಿಸಿಕೊಳ್ಳುವಿಕೆ : ಗುರುಪೂಜೋಪಲಂಭನಮುಂ ಯೌವರಾಜ್ಯಮುಂ . . . ಅಪ್ಪಯ್ವತ್ತು ಮೂಱು ಗರ್ಭಾನ್ವಯಕ್ರಿಯೆಯೊಳು (ಚಾವುಂಪು. ೨೩೦). [ ಸಂ. ]

**ಗುರುಬಲ** (ನಾ). ೧. ಗುರುವಿನ ಬೆಂಬಲ,–ಸಹಾಯ. ೨. [ಜ್ಯೋತಿ] ನಿರ್ದಿಷ್ಟಸಮಯದಲ್ಲಿ ಶುಭಫಲವನ್ನು ಕೊಡಲು ಗುರುಗ್ರಹಕ್ಕೆ ಇರುವ ಶಕ್ತಿ : ಗುರುಬಲ ಶನಿಬಲದಿರವಂ ತರದಿಂದಂ ಕೇಳ್ದು ನೋಡಿ ನಡೆದರ್ ಮೊನೆಗಂ (ಹಮ್ಮೀರ. ೩-೨); ಮೂವರಿಗೂ ಗುರುಬಲವಿತ್ತು (ಸ್ಮೃತಿಚಿ. ೨೨೩). ೧, ೨ : ಗುರುಬಲವನುಳಿದದಾವಂ ಬಾಳ್ವಂ (ಹಾಲಾಸ್ಯ. ೧-೨-೧೨). [ ಗುರು$_2$ + ಬಲ ]

**ಗುರುಬು** 'ಗೊರಬು' ನೋ.

**ಗುರುಬ್ರುವ** (ನಾ). ಹಿರಿಯನೆಂದು ಕರೆಸಿಕೊಳ್ಳುವವನು ; ಹೆಸರಿಗೆ ಮಾತ್ರ ಗುರು : ನಾನು ನಿನಗೆ ನಿಮಿತ್ತಮಾತ್ರಕ್ಕೆ ಜನಕನಾದ ಕಾರಣ ನನ್ನನ್ನು ಗುರುಬ್ರುವನೆಂದು ಹೇಳುವರು (ಪುರುಜ. ೭೮). [ ಸಂ. ]

**ಗುರುಭಾರ** (ನಾ). ೧. ಹೆಚ್ಚು ಭಾರ ; ದೊಡ್ಡ ಹೊರೆ. ೨. ಗುರುತರವಾದ ಕಾರ್ಯ ; ದೊಡ್ಡ ಹೊಣೆಗಾರಿಕೆ : ಆನೆಯಾಳ್ ಗುರುಭಾರಕ್ಕಿಱಿವಾಳ್ ರಣಕ್ಕೆ ತುಱಿಲಾಳ್ ಕಟ್ಟಾಯದೊಳ್ ಮೇಳದಾಳ್ ಪರಿಹಾಸಕ್ಕೆನಿಸಿರ್ದನೆಂತು ಮಱೆವಂ ದುರ್ಯೋಧನಂ ಕರ್ಣನಂ (ಗದಾಯು. ೫-೩೫) ; ಕೌರವೇಂದ್ರನ ಮೋಹರದ ಗುರುಭಾರ ಭೀಷ್ಮಂಗಾಯ್ತು (ಕುವ್ಯಾ ಭೀ. ೧-೩೨). [ ಗುರು$_2$ + ಭಾರ ]

**ಗುರುಮಂತ್ರ** (ನಾ). ೧. ಗುರು ಹೇಳುವ ಬುದ್ಧಿವಾದ,–ಸಲಹೆ. ೨. ಬೃಹಸ್ಪತಿಯು ಉಪದೇಶಿಸಿದ ರಾಜನೀತಿ,–ಶ್ರೇಷ್ಠವಾದ ಮಂತ್ರ : ಗುರುಮಂತ್ರಜಪಪರಾಯಣನುರುತರಕವಿವಿನುತನಾಗಿಯುಂ ಬಲದೇವಂ ಗುರುಮಂತ್ರದ ಕವಿವಚನದ ಪರಿಯಂ ಪಳಿಕೆಯ್ದು ಮೆಱೆವನೇನಚ್ಚರಿಯೋ (ವೃಷವಿ. ೪-೯೭). [ ಗುರು$_2$ + ಮಂತ್ರ ]

**ಗುರುಮಠ** (ನಾ). ೧. ಧಾರ್ಮಿಕಗುರುಗಳ ವಾಸಸ್ಥಾನ ; ಮಠ. ೨. ಪಾಠಶಾಲೆ : ನಿಮ್ಮ ಗದ್ದದವ ಗುರುಮಠದಲ್ಲಿ ಇದೇ ಹೇಳಿಕೊಡುತ್ತಾನೇನು? (ಹೊಸಕ್ಕ. ೫೦). [ ಗುರು$_2$ + ಮಠ ]

**ಗುರುಮಣಿ** (ನಾ). ಒಂದು ಬಗೆಯ ವನಸ್ಪತಿ : ಗುರುಮಣಿ, ಮರತು ಗುರುಮಣಿ (ವೃಜಿಗಿ. ೩೩-೬೩೨). [ ? ]

**ಗುರುಮನೆ** (ನಾ). ಗುರುಗಳ ಮನೆ ; ಮಠ : ಅರಮನೆ, ಗುರುಮನೆಗಳ ಕಟ್ಟಾಣಿಕೆಯಲ್ಲಿಯೂ . . . ವಿಜಯನಗರದ ಪ್ರಭಾವ ಇಂದಿಗೂ ಕಂಡುಬರುತ್ತಿದೆ (ಮೈವಾಸ್ತು. ೧೭). [ ಗುರು$_2$ + ಮನೆ ]

**ಗುರುಮುಖ** (ನಾ). ಗುರುವಿನ ಮಾತು,–ಉಪದೇಶ : ನಿಮ್ಮ ಒಡತಣ ಅನುಭಾವದಿಂದ ಗುರುಮುಖ ಸಾಧ್ಯವಾದುದಯ್ಯ (ಅವಚಂ. ೨೫೫-೧೧೬೪); ಗುರುಮುಖದಿಂದ ಬರುವ ತಿಳಿವಳಿಕೆಯು ಕಾಲಬದ್ಧವಾದುದು (ಗ್ರಂಥಾಲ. ೧). [ ಗುರು$_2$ + ಮುಖ ]

**ಗುರುಯೋಷಿತೆ** (ನಾ). ೧. ಗುರುವಿನ ಹೆಂಡತಿ ; ಗುರುಪತ್ನಿ. ೨. ಮನ್ನಣೆಗೆ ಪಾತ್ರಳಾದ ಹೆಂಗಸು ; ಪೂಜ್ಯೆ. ೧ ತಾಯಿ, ಅತ್ತೆ, ಅತ್ತಿಗೆ, ಗುರುಪತ್ನಿ ಮತ್ತು ರಾಜಪತ್ನಿ ಎಂಬ ಈ ಐವರು ಪೂಜ್ಯರಾದವರು : ಪಂಚತಾ ಗುರು ಯೋಷಿತಾ ಎನುತಂ ಚದುರು ಮಿಗೆ ಹೇಳ್ವುದಾಗಿ ಸಮುಂಚಿತದ ತಮ್ಮಯ ಗುರುವಿನತ್ತಿಗೆಯ ನಾದಿನಿಯ ವಂಚಿಸದೆ (ಬಸಪು. ೪೫-೨೪). [ ಗುರು$_2$ + ಯೋಷಿತೆ ]

**ಗುರುರಾಯ** (ನಾ). ೧. ಶ್ರೇಷ್ಠನಾದ ಗುರು : ಕರುಣದಿ ವರವನಿತ್ತನು ದೇವ ವೇದವ್ಯಾಸ ಗುರುರಾಯ (ಕುವ್ಯಾ ಆ. ೧-೧೧). ೨. ಮಧ್ವಾಚಾರ್ಯ : (ಕಿ). ೩. ಮಂತ್ರಾಲಯದ ರಾಘವೇಂದ್ರಸ್ವಾಮಿ ; ಗುರುರಾಜ : ಅವರು ಗುರುರಾಯರ ಭಕ್ತರು (ರೂಢಿ). [ ಗುರು$_2$ + ರಾಯ ]

**ಗುರುಲಘುಗಣನ** (ನಾ). ೧. ದೊಡ್ಡದು ಚಿಕ್ಕದು ಎಂಬ ವಿವೇಚನೆ ; ತಾರತಮ್ಯ ವಿವೇಕ. ೨. [ಛಂದ] ಗುರು ಲಘುಗಳ ಲೆಕ್ಕಾಚಾರ. ೧, ೨ : ಗುರುಲಘುಗಣನಂ ಕೆಟ್ಟುದು ಪಿರಿದಾದುದು ವರ್ಣಸಂಕರಂ ದಾನವನಿಂ ದೊರೆಯಾದುದು ಭೂವಲಯಂ ಪರಿಣತನಲ್ಲದನ ಕವಿತೆಗಂ ಚಿತ್ರಕ್ಕಂ (ಅನಂಪು. ೧೩-೩೦). [ ಗುರು$_2$ + ಲಘು + ಗಣನ ]

**ಗುರುಲಾಘವ** (ನಾ). ಹೆಚ್ಚು ಯಾವುದು ಕಡಮೆ ಯಾವುದೆಂಬ ವಿಷಯ ; ತಾರತಮ್ಯ : ಈ ವಿಷಯದಲ್ಲಿ ಗುರುಲಾಘವವನ್ನು ತಮ್ಮನ್ನೇ ಕೇಳುವೆನು (ಶಾಕುಂತ. ೭೨-೨೮). [ ಗುರು$_2$ + ಲಾಘವ ]

**ಗುರುಲಿಂಗ** (ನಾ). [ವೀಶೈ] ಗುರುರೂಪವಾದ ಲಿಂಗ ; ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಎಂಬ ಆರುಬಗೆಯ ಲಿಂಗಗಳಲ್ಲಿ ಒಂದು : ಆಚಾರಲಿಂಗವಿಡಿದು ಗುರುಲಿಂಗವ ಕಾಣಬೇಕು ಗುರುಲಿಂಗವಿಡಿದು ಶಿವಲಿಂಗವ ಕಾಣಬೇಕು (ಅವಚಂ. ೧೬೮-೭೫೭) ; ನಿನ್ನುವಂ ಗುರುಲಿಂಗ ರೂಪಾಗಿ ಬಂದು ನಿಜ ತತ್ತ್ವಾರ್ಥಸೌಖ್ಯವನೊಂದಿಸುವೆನಾಂ (ಬಸಪು. ೨-೪೧) ; ಬಿಂದುವಾಚಾರ ರಸವೆಂದು ಗುರುಲಿಂಗ ಕಳೆಯೆಂದು ಶಿವಲಿಂಗ ಚರವೆಂದೊಡಲುಗು ಕಂದ ಕೇಳ್ (ಮಸೋವಿ. ೨-೪೨) ; ಗುರುಲಿಂಗವಾಗಿ ವಾಗೀಶ್ವರನಲ್ಲದೆ

ಪೆಱರನಱಿಯದೊಲವಿಂ ಪುತ್ರೋತ್ಕರಮಂ ಪೆಸರಿಟ್ಟತಿಭಕ್ತಿರಸದಿ ಯಃಪೂತಿಯಡಿ ಮುದಂಬಡೆದಿರ್ದಂ (ತ್ರಿಪುವಿ. ೩೦-೫). [ಗುರು₂+ಲಿಂಗ]

**ಗುರುವಚನ** (ನಾ). ೧. ಗುರುವಿನ ಬೋಧೆ: ಗುರುವಚನವಲ್ಲದೆ ಲಿಂಗವೆಂದೆನಿಸದು ಗುರುವಚನವಲ್ಲದೆ ನಿತ್ಯವೆಂದೆನಿಸದು ಗುರುವಚನವಲ್ಲದೆ ನೇಮವೆಂದೆನಿಸದು (ಬಸವ. ೬೨). ೨. ಹಿರಿಯರ ಮಾತು; ತಂದೆತಾಯಿಗಳ ಮಾತು: ತಪ್ಪದೆ ಗುರುವಚನಮುಮಂ ತಪ್ಪಲ್ ಬಸನಿಗೆ ಮದೀಯ ಕೋಪದ ಪದನೇಂ ತಪ್ಪಿದುದೆ (ಶಾಂತಿಪು. ೬-೭೮); ಗುರುವಚನಮನುಲ್ಲಂಘಿಸಿ ಚರಿಯಿಸಲಣಮಾಗದಂತೆ ಪಿರಿದುಂ ಸುಖಮಂ ಪರದೊಳ್ ಲೇಸಾಗಿರೆ ಬೆಚ್ಚರದಿಂದಂ ಪಡೆವೆನೆಂಬ ಶಿಷ್ಯಂ ಜಗದೊಳ್ (ಧರ್ಮಾಮೃ. ೫-೧೫೦); ಪರಿಹರಿಪೆಯೆಮ್ಮ ನುಡಿಯಂ ಗುರುವಚನಮಲಂಘನೀಯಮೆನ್ನದೆ (ಯಶೋಚ. ೩-೧೯). [ಗುರು₂ + ವಚನ]

**ಗುರುವರಿಯ** (ನಾ). = ಗುರುವರ್ಯ: ಗುರುವರಿಯ ಚಿತ್ತಯಿಸು ದೇಹದೊಳಿರುತಲಾ ಸುಜ್ಞಾನಿಯಾದರೆ ಪರಿಹರಿಸಲೆಂತಯ್ಯ ಮುಟ್ಟುವ ದೇಹಗುಣಗಣವ (ಸದ್ಗುರು. ೬-೫). [ <ಗುರುವರ್ಯ]

**ಗುರುವರ್ಯ** (ನಾ). ಶ್ರೇಷ್ಠನಾದ ಗುರು; ಆಚಾರ್ಯಶ್ರೇಷ್ಠ: ಅವರು ಒಬ್ಬ ಗುರುವರ್ಯರು (ರೂಢಿ). [ಸಂ.]

**ಗುರುವಾಡೆ** (ನಾ). ಒಂದು ಬಗೆಯ ವನಸ್ಪತಿ: ಗುರುವಾಡೆ, ಜಂಗಮ, ವಾಡೆಮಡಿಗೆ (ಮೃಜಿಗಿ. ೩೯-೭೮೦). [?]

**ಗುರುವಾರ** (ನಾ). ವಾರದಲ್ಲಿ ಐದನೆಯ ದಿನದ ಹೆಸರು; ಬೃಹಸ್ಪತಿವಾರ: ಗುರುವಾರ ಪ್ರಯಾಣಕ್ಕೆ ಒಳ್ಳೆಯದು (ರೂಢಿ).
[ಗುರು₂ + ವಾರ₃]

**ಗುರುವಿಘಾತಕ** (ನಾ). ಗುರುವಿಗೆ ದ್ರೋಹಮಾಡುವವನು; ಗುರುದ್ರೋಹಿ: ಗುರುವಿಘಾತಕರಾವು ತಾನತಿ ಗುರುಪದೋಪಾಸಕನು (ಕುಮಾ.ದ್ರೋ. ೧೯-೨೫). [ಗುರು₂ + ವಿಘಾತಕ]

**ಗುರುವಿಘಾತಿ** (ನಾ). = ಗುರುವಿಘಾತಕ: ಗುರುವಿಘಾತಿಯ . . . ನರಕವಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ (ಕುಮಾ.ದ್ರೋ. ೮-೩೭).
[ಸಂ. ಗುರುವಿಘಾತಿನ್]

**ಗುರುವಿಯೋಗ** (ನಾ). ಗುರುಹಿರಿಯರಿಂದ ಅಗಲುವಿಕೆ: ಆಗಳಾತ್ಮೀಯ ಗುರುವಿಯೋಗ ಶೋಕಾನಳದಹ್ಯಮಾನಮಾನಸನಾಗಿರ್ದ ಭರತಪತಿಯ ಶೋಕಾವೇಗಮಂ ವೃಷಭಸೇನಗಣಾಗ್ರಣಿಗಳಿಂತೆಂದಾಱಿಸಿದರ್ (ಆದಿಪು. ೧೬-೫೪ ವ). [ಗುರು₂ + ವಿಯೋಗ]

**ಗುರುಶೇಷ** (ನಾ). ಗುರು ಉಪಯೋಗಿಸಿದ ಬಳಿಕ ತನ್ನ ಶಿಷ್ಯರಿಗೆ ಪ್ರಸಾದರೂಪವಾಗಿ ಕೊಡುವ ಆಹಾರ, ಬಟ್ಟೆ ಮೊದಲಾದುವು; ಗುರುಪ್ರಸಾದ: (ಕ). [ಗುರು₂ + ಶೇಷ]

**ಗುರುಸತಿ** (ನಾ). ೧. ಗುರುವಿನ ಹೆಂಡತಿ; ಆಚಾರ್ಯನ ಪತ್ನಿ: ಮತಿವಿಕಲತನದಿಂದಲಾ ಗುರುಸತಿಯು ತನ್ನಯ ಮಕ್ಕಳೆಂದಾಯಿತಿವಡೆದು ತಕ್ಕೈಸಬರಲು (ತಿಮ್ಮಸ್ಕಿ. ೧-೭೦). ೨. ಬೃಹಸ್ಪತಿಯ ಹೆಂಡತಿ: ಗುರುಸತಿಗೆಳಸಿದ ದೋಷಾಕರನಳಿಪಿಂದಿದು ನೀಡುಗುಂ ಕಣ್ಗಳೆನೆಂದಿರದೇವೈಸಿಯೆ ಸುಗಿವಂತಿರೆ ಮುಗಿದುದು ಸರಸಿಜಾಳಿ ಸರಸೀಕುಲದೊಳ್ (ಕುಸುಮಾ. ೪-೧೫). [ಗುರು₂ + ಸತಿ1]

**ಗುರುಸಾರ್ವಭೌಮ** (ನಾ). ಗುರುಗಳ ಚಕ್ರವರ್ತಿ; ಸರ್ವೋತ್ತಮನಾದ ಗುರು: ಶ್ರೀರಾಘವೇಂದ್ರನೆ ಗುರುಸಾರ್ವಭೌಮನೆ . . . ರಕ್ಷಿಸು ನನ್ನನು (ಇಂಚಾಪ. ೧೮೩-೧). [ಗುರು₂ + ಸಾರ್ವಭೌಮ]

**ಗುರುಸುತ** (ನಾ). ೧. ಗುರುವಿನ ಸುತ ಉಪಾಧ್ಯಾಯನ ಮಗ: ಸಂದುಗೊಂದಱಸುತ್ತ ಗುರುಸುತರಂದವನು ನಾನಱಿಯದಂತಕಮಂದಿರವ ಪೊಕ್ಕಲ್ಲಿ ಶಮನನ ಕೇಳ್ದೆನರ್ಥಿಯಲ್ಲಿ (ತಿಮ್ಮಸ್ಕಿ. ೦-೭೭). ೨. ದ್ರೋಣನ ಪುತ್ರ; ಅಶ್ವತ್ಥಾಮ: ಗುರು ಕೃಪ[ಗುರುಸುತ] [ಪಾಠಾಂ. ನದೀಜ] ಶಲ್ಯರ ಚರಣಂಗಳ್ಗೆಱಗಿ (ಪಂಪಭಾ. ೧೦-೬೧); ರವಿಜ ಗುರುಸುತ ಶಲ್ಯ ಕಲಶೋದ್ಭವರು . . . ಅವನಿಪಾಲನ ಕಂಡರಂದೇಕಾಂತಭವನದಲಿ (ಕುಮಾ.ಭೀ. ೧-೨). [ಗುರು₂ + ಸುತ]

**ಗುರುಸೇವೆ** (ನಾ). ಗುರುವಿನ ಸೇವೆ,—ಶುಶ್ರೂಷೆ: ಉದಂಕನಿಗೆ ಮುಪ್ಪು ಬಂತು . . . ಅವನು ಗುರುಸೇವೆಯನ್ನು ಬಿಡಲಿಲ್ಲ (ನೀತಿಚಂ. IV, ೧೭). [ಗುರು₂ + ಸೇವೆ₁]

**ಗುರುಳಿ** 'ಗುರುಳೆ' ನೋ.

**ಗುರುಳೆ**, ಗುರಳಿ, ಗುರುಳಿ, ಗುಳ್ಳೆ₁ (ನಾ). ೧. ಬುದ್ಬುದ: ಕಾರ ಮಿಂಚಿನ ತೆಱದೆ ತೋಱಿ ನಿಮಿಷದೆ ತನುವು ನೀರ ಗುರುಳೆಯ ತೆಱದೆ ಮಾಯೆಯಹುದು (ಕೈಕವ. ೨-೩-೩); ಸಮುದ್ರದಲ್ಲಿ ತೆರೆ, ಉಬ್ಬರ, ಗುರುಳೆಗಳಲ್ಲದೆ ಇನ್ನೇನು ಹುಟ್ಟಿಕೊಳ್ಳುವವು? (ಬಾಳಬ. ೧೦). ೨. ಮೈಮೇಲೆ ಏಳುವ ಬೊಕ್ಕೆ, ಗಡ್ಡೆ, ಊತ ಮುಂತಾದುವು. ೩. ಸಣ್ಣ ಚಿಪ್ಪು; ಶುಕ್ತಿ; ಕಪ್ಪೆಚಿಪ್ಪು. ೪. ಕಾಲಿನ ಬೆರಳಿಗೆ ಹಾಕಿಕೊಳ್ಳುವ ಸಣ್ಣ ಉಂಗುರ. ೫. ಗೋಲಾಕಾರದ ಯಾವುದಾದರೂ ವಸ್ತು; ಗುಂಡಾಗಿರುವ ವಸ್ತು; ಬುರುಡೆ, ಬೆಲೂನು ಮೊದಲಾದುವು: (ಕ). **ಗುರಳಿ**: ೧. ನೀರ ಮೇಲಿನ ಗುರಳಿಯಂತೆ ಶರೀರಗಳ ಜೀವಿತ್ವವಿರುವುದು (ರಘುವಂ. ೮೮-೯೭). **ಗುರುಳಿ**: ೧. ನಂಬದಿರು ಈ ದೇಹ ಅಂಬುಗುರುಳಿ [ಪಾಠಾಂ. ಗುಳ್ಳೆ] ಯಂತೆ (ಪುರಂದ. ೨-೫-೩); ನೀರ ಮೇಲಣ ಗುರುಳಿಯಂತೆ ತೋರುವದೀ ಶರೀರದೊಳು ನಿಂದು ಕ್ಷಣಭಂಗುರವೆನಿಪ್ಪ ಸಂಸಾರ ಸಾಮಗ್ರಿಗಳ ಚೆಲುವಿಕೆಯ ಮೋಸಕೊಳಗಾಗಿ ಕೆಡುವರೆ ಸುಜನರು (ಮಹಾಂತೇ. ೧೧-೧೩). **ಗುಳ್ಳೆ₁**: ೧. ಒತ್ತಿ ಕಾಲಿಡಲೊಡನೆ . . . ಜಲಧಿಯಡಿಮಳಲೆತ್ತುತಿರ್ದುದು ಗುಮ್ಮಿಱಿದು ಗುಡಿಯಿಱಿದು ಗುಳ್ಳೆಗಳು (ತೊರೆರಾ. ೪-೧೨-೨೪); ನೀರ ಮೇಲಣ ಗುಳ್ಳೆಯಂದದಿ ತೋಱಿಯಡಗುವ ದೇಹವು (ಹರಿಸಾ. ೭೫); ಗುಳ್ಳೆ ಬರುವುದು ನಿಂತರೆ ಎಣ್ಣೆ ಚೆನ್ನಾಗಿ ಬಿಸಿಯಾಗಿದೆ ಎಂದು ಅರ್ಥ (ಅಡುಶಾ. ೯೦). ೨. ಅಗುರ್ವಿಸಿದುದು ತೀವಿದ ಗುಳ್ಳೆಯ ಪಸುಂಬೆಯಂ [ಸೋ]ರ್ಚಿದಂತೆ ತನು ಕೀಚಕನಾ (ಪಂಪಭಾ. ೮-೭೭); ಬಲ್ಲಿದರನೆಲ್ಲ ಗುಳ್ಳೆಲಿ ಕೊಲುವಳು (ಕಾಲಸಂ. ೧೨೮-೧೧); ಕೈಯೆಲ್ಲ ಗುಳ್ಳೆದ್ದು ಮೈಯೆಲ್ಲ ಬೆವತಿತ್ತು (ಸಿದ್ಧಪು. ೩-೮೧). ೩. "ಕ್ಷುದ್ರುಶಂಖಾಃ, ಶಂಖನಖಾಃ – ಈ ೨ ಗುಳ್ಳೆಯ ಹೆಸರು" (ನಾಚಿರಾ. ೧೦೦); ಕೆಱೆ ಹಳ್ಳ ಬಾವಿಗಳು ಮೈದೆಗೆದರೆ ಗುಳ್ಳೆ ಗೊರಜೆ ಚಿಪ್ಪುಗಳು ಕಾಣಬಹುದು (ಬಸವ. ೮೬೧); ಕೆಱೆಯೊಳಗಣ ಗುಳ್ಳೆ ಕೀಚುಕೀಚೆಂದಂತೆ (ಛನವ. ೩೩); ಎರೆಬುಳು ಗುಳ್ಳೆ[ಪಾಠಾಂ. ಗಳು] ಮುಂತಾದುವು ಕೆಲವಕೆ ಸ್ಪರುಶನ ಜಿಹ್ವೆಗಳುಂಟು (ಭರಚ. ೭೭-೯೭). ೫. ಎಲ್ಲ ಕಡೆಗೂ ಸಂತೋಷದ ಬಣ್ಣದ ಗುಳ್ಳೆಗಳು (ಭಾವಗೀ. ೫೩).

**ಗುರುಳೆಯಬೇನೆ** = ಗಡ್ಡೆಯ ರೋಗ; ಪ್ಲೇಗು: ಮುಂದಲ್ಪ ದಿನದೊಳಾವೂರ್ಗೆ ಗುರುಳೆಯಬೇನೆ ಬಂದಾಗ . . . ರೋಗದಿಂದವನ ಮನೆಮಂದಿಯೆಲ್ಲರ್ ಮಡಿದರು (ಮಹಾಂತೇ. ೧೧-೨೭).

[ದೇ.॥ ತಮಿ. ಕುಮಿಟ್ಟ್; ಮಲ. ಕುಮಿಳ, ಕುಮಿಟ್ಟ್; ತುಳು. ಗುಳ್ಳೆ, ಗುಲ್ಲೆ; ತೆಲು. ಗುಲ್ಲ]

**ಗುರೂದ್ಭವ** (ನಾ). = ಗುರುಸುತ ೨: ಬಾಗಿಲಲಿ ಕಟ್ಟಿಗೆಯ ಕೈಗಳಲಾ ಗುರೂದ್ಭವ ಕೃಪರು ನಿಂದರು (ಕುಮಾ.ಆ. ೭-೨೦). [ಗುರು₂+ ಉದ್ಭವ]

**ಗುರೂಪಧೆ** (ನಾ). [ವ್ಯಾಕ] ಯಾವುದಾದರೂ ಪದದ ಕೊನೆಯ ಅಕ್ಷರದ ಹಿಂದಿನ ಅಕ್ಷರವು ಗುರುವಾಗಿರುವ ಶಬ್ದ,–ಪದ: ನೇರ್ದಂ ಬಾರ್ದಂ ಗೋರ್ದಂ ಸೋರ್ದಂ ತಾನೆಂದೊಡಂ ಗುರೂಪಧೆಯಿನಿತಂ (ಶಮದ. ೪೦).
[ಗುರು₂ + ಉಪಧೆ]

**ಗುರೂಪರೋಧ** (ನಾ). ಹಿರಿಯರು ಮಾಡುವ ಒತ್ತಾಯ,— ಬಲಾತ್ಕಾರ: ಕಂದ ಪಸಿದ್ಪೈ ಬಾ ಎಂದು ತಾಯ್ತಿಂದೆ ಬಂದನಿವಂಗೆಯ್ಯೆ ಗುರೂಪರೋಧವಶದಿಂ ಸ್ನಾನಾನ್ನಪಾನಂ ವಿಲೇಪನಮಾಲ್ಯಾದಿಗೆ ತಾನೊಡಂಬಡುವನೇಂ ದೇವಂ ನಿರಾಪೇಕ್ಷನೋ (ಅಜಿಪು. ೫-೮೬). [ ಗುರು$_2$ + ಉಪರೋಧ ]

**ಗುರೂಪಾಂತ** (ನಾ). ಗುರುಗಳ ಹತ್ತಿರ,- ಸಮೀಪ: ವಿನೇಯ ಜನಾಭಿನಂದರಪ್ಪಭಿನಂದನ ಗುರೂಪಾಂತದೊಳ್ ನಿಶ್ಚಳಿತತಪಶ್ಚರಣ ನಿರತನಾದೊಂ (ಶಾಂತಿಪು. ೫-೬೬ ವ). [ ಗುರು$_2$ + ಉಪಾಂತ ]

**ಗುರೆಳ್ಳು, ಗುರಿಯೆಳ್ಳು, ಗೂರೆಳ್ಳು** (ನಾ). (ಉಕ) ಒಂದು ಬಗೆಯ ಕಾಯ ಎಳ್ಳು; ಹುಚ್ಚೆಳ್ಳು: ಗುರೆಳ್ಳಿನ ಹಿಂಡಿಗೆ ಮಜ್ಜಿಗೆಯ ಸೇಚನ ಮಾಡಿಸಿಕೊಂಡು,ತಿಂದು . . . ಥರಕೆಯ ಡೋಲು ಬಡಿಯುತ್ತಿದ್ದೆವು(ದೀಪಹ. II, ೧). **ಗುರಿಯೆಳ್ಳು:** (+). **ಗೂರೆಳ್ಳು:** ಬಿಳಿಜೋಳ, ಗೋದಿ . . . ಗೂರೆಳ್ಳು ಎಂಬವುಗಳೇ ಹಿಂಗಾರಿಯ ಧಾನ್ಯಗಳು (ಮುಂಬಯಿ. ೫-೧೯೬). [ ? + ಎಳ್ಳು (<ಎಳ್) ]

**ಗುರ್ಕಾರ** ' ಗುಜಿಕಾಜಿ ' ನೋ.

**ಗುರ್ಗುದ** (ನಾ). (?): ನಾಲ್ಕರೊಳು ವ್ಯಾಧಿ ಪೀಡಾಕಾರ ದಾರಿದ್ರ ಗುರ್ಗುದ ಮೂರರಲ್ಲಿ ಬೀಳಲು ಮರಣಾ (ಮನೆಲ. ೦೭-೧). [ ? ]

**ಗುರ್ಗುಳ** ' ಗುಗ್ಗುಳ ' ನೋ.

**ಗುರ್ಚಿ$_1$** (ನಾ). ಮಳೆ ತರುವುದೆಂದು ಭಾವಿಸಲಾದ ಒಂದು ದೇವತೆ: ಬೆಳುವಲದಲ್ಲಿ ಕುಂಚಿ ಕೊರವರ ಮಕ್ಕಳು ಗುರ್ಚಿಯನ್ನು ತಲೆಯ ಮೇಲೆ ಹೊತ್ತು ತಿರುಗುತ್ತಾರೆ (ಕನ್ನಜಾ. ೦೫೬); ಗುರ್ಚಿ ಗುರ್ಚಿ ಎಲ್ಲಾಡಿ ಬಂದಿ ಹಳ್ಳಕೊಳ್ಳ ತಿರುಗ್ಯಾಡಿ ಬಂದೆ (ಜನಗೀ. ೫). [ ? ]

**ಗುರ್ಚಿ$_2$** (ನಾ). ಒಂದು ಬಗೆಯ ಮರ; "ಬೀರೋಂಡ್" (ಪಂಡಿತ). [ ? ]

**ಗುರ್ಜರ** (ನಾ). ೧. ಗುಜರಾತ್‌ದೇಶ: ಅರಸುಮಕ್ಕಳು ಪರಮಮಗಧೆಯ ಗೌಡಗುರ್ಜರತುರುಕದೇಶದ ಪ್ರಭೃತಿಭೂಪರು ನೆರೆದು ಬಂದಲ್ಲಿ (ಜ್ಞಾನಚಂ. ೧-೧೧); ಬಂಗಾಳ ಚೈನ ಜೋನೆಗ ಸಗರ ಹೈವಿಗ ತೆಲುಂಗ ಗುರ್ಜರ ಗೌಳ ನೇಪಾಳ . . . ದೇಶದ ಸಕಲಶರಣರೈತರುತಿರ್ದರು (ಚಬಪು. ೬-೪೯). ೨. ಗುರ್ಜರದೇಶದ ರಾಜ. [ ಸಂ. ]

**ಗುರ್ಜು** ' ಗುಜ್ಜು$_2$ ' ನೋ.

**ಗುರ್ಜುಗೊಳ್** ' ಗುಜ್ಜುಗೊಳ್ ' ನೋ.

**ಗುರ್ದ** (ನಾ). ಒಂದು ಪ್ರದೇಶದ ಹೆಸರು (?): ಗುರ್ದ(ಟ್ಟ ?)ದ ಪಳ್ಳಿಮೆ ಮುತ್ತೈರಿಏ(ಯೆ) (ಇಅ. VIII, ೫೪-೨೫; 10ನೆಯ ಶತ). [ ? ]

**ಗುರ್ದು$_1$**, ಗುದ್ದು$_1$ (ಕ್ರಿ). ೧. ಮುಷ್ಟಿಯಿಂದ ಹೊಡೆ,- ಕುಟ್ಟು: "ಗುರ್ದು-ಮುಷ್ಟಿತಾಡನೇ" (ಶಮಧಾ); ಅಡರ್ವ ಪಿಡಿವ ಗುರ್ದುವ ಮನೆಗೆಟಿವನಿತರ್ಕಮಲಸಿ ಮರುದಾತ್ಮಜನಾ (ಪಂಪಭಾ. ೨-೬). ೨. ತಿವಿ; ಚುಚ್ಚು: ಗದಾದಂಡದಿಂ ಕೆಲರಂ ಗುರ್ದಿಯುಮರ್ದಿಯುಂ . . . ಕೊಂದಂ ಮರುನ್ನಂದನಂ (ಗದಾಯು. ೩-೧೨); ಒಜಿಲ್ವಂತುರ್ದುವರ್ಗುರ್ದುವರ್ ಸುಡುವರ್ . . . ವೈರದಿಂ (ಅನಂಪು. ೯-೩೧). **ಗುದ್ದು$_1$:** ೧. ನಗುತ ಗುದ್ದುವಳಾಕೆ ನೊಂದಿತೆಂದಾ ಕೈಯ ತೆಗೆದೆತ್ತಿ ಕಣ್ಗೊತ್ತಿ ಕೊಂಬ (ಭರಚ. ೪೧-೧೨೬); ಒದ್ದು ನೋಡವನ ಕಲೆಯ ಕ್ರಮುಗಳ ಬೆನ್ನ ಗುದ್ದಿ ನೋಡವನ ಹರುಷವ (ಕಂಸವಿ. ೬-೦೫೧); ಗಾಳಿ ಗುದ್ದಿವ್ಯೆ ನೋಯಿಸಿಕೊಂಡ ಹಾಗೆ(ಗಾದ). ೨. ಬೇಲೂರರಾ ಮಗಂ ಮಾದಪ್ಪನ್ ಪ್ರಭುಗೌಡಿ ಬೇಟೂರಾ ಎಮ್ಮೆಯ ತೊಕಳೊಳ್ ಗುದ್ದಿ ಅನ್ನಿಜಿದು ಸತ್ತನ್ (ಎಕ. X, ಕೋಲಾರ. ೨೨೬-೩; ಸು. 950 ?). 'ಕುತ್ತು$_1$' ಪರಾ. [ ದೇ.: ತಮಿ. ಮಲ. ಕುತ್ತು; ಕೊಡ. ಕುತ್; ತುಳು. ಗುದ್ದು; ತೆಲು. ಗುದ್ದು, ಗ್ರುದ್ದು ]

**ಗುರ್ದು$_2$**, ಗುದ್ದು$_2$ (ನಾ). ಮುಷ್ಟಿಯಿಂದ ಹೊಡೆಯುವಿಕೆ; ಮುಷ್ಟಿಯ ಪೆಟ್ಟು,- ಹೊಡೆತ: ಪಂಚಮದೊಳ್ ದಿನಪತಿ ನಿಲೆ ಗುರ್ದಿಂ ಬಂಧನದಿಂ ಪೊಗೆಯಿಂದಮಗ್ನಿಯಿಂ[ದಂ] ಸಾಯ್ಗುಂ (ಜಾತತಿ. ೨೩-೧೨); ಗುರ್ದು, ಗರ್ದೆ (ಶಬ್ದಾನು. ೮೦ ವ್ಯಾಖ್ಯಾ). **ಗುದ್ದು$_2$:** ಕೋಪಿಸುತ್ತವೆಯ್ದೆ ಬಂದರೆ ಬರವನನೋವದೆಂಟು ಗುದ್ದನಿಕ್ಕಿ ನೂಂಕಿದರ್ (ಧರ್ಮಪ. ೨-೩೮); ಕಲಿಭೀಮ ಗುದ್ದುಗಳ ಮಳೆಗಚಿಯೆ ಕೌರವ ದೊದ್ದೆಕಾಟನು ಕಾಣನವನನು (ಕುಮ್ಯಾಅ. ೦೧೩. ೨೩-೭೦); ಗುದ್ದಿದ ಗುದ್ದೂ ಗದ್ದೆಗೆ ಬಿಟ್ಟ ನೀರೂ ಸರಿ (ಗಾದ). [< ಗುರ್ದು$_1$ ]

**ಗುರ್ದೆ** (ನಾ). (?): ಗರ್ದೆಯುಮಾ ಗುರ್ದೆಯುಂ ಸರೇಫಪದಂಗಳ್ (ಶಮದ. ೩೬). [ ? ]

**ಗುರ್ಬು** ' ಅಗುರ್ವು ' ನೋ.

**ಗುರ್ಮು** ' ಗುಮ್ಮು$_1$ ' ನೋ.

**ಗುರ್ರೆ** (ನಾ). ತಿಂಗಳಿನ ಮೊದಲನೆಯ ದಿನ; ಒಂದನೆಯ ತಾರೀಖು: ತಾರಿಖ್ಖು ಗುರ್ರೆ ಮಾಹೆ ಮಾರ್ಚಿ ಸಂನ್ ೧೮೧೨ನೆ ಯಿಸವಿ (ಮೈಅರಿ. ೧೯೩೦, ೪೩-೪೬; 1812); ಇದು ೧೯೧೪ನೆಯ ಜನವರಿ ಗುರ್ರೆ ತಾರೀಖಿನಿಂದ ಜಾರಿಗೆ ಬರತಕ್ಕದ್ದು (ಗ್ರಾಮೂಕ. ೦೪). [ ←ಅರ. ಹಿಂ. ಗುರ್‍ರಾ ]

**ಗುರ್ವನುಗ್ರಹ** (ನಾ). ಗುರುಗಳ ಅನುಗ್ರಹ,-ಕೃಪೆ: ಅದು ದೇಶಭಾಷೆಯಲ್ಲಿ ಬರೆದ ಗ್ರಂಥಗಳ ಪಠನದಿಂದಲೂ ಗುರ್ವನುಗ್ರಹದಿಂದಲೂ ಪ್ರಾಪ್ತವಾಗುತ್ತಿರುವಾಗ ದೇಶಭಾಷೆಯನ್ನು ಬಿಡುವುದೆಂತು? (ಶಮುಪಾಂ. ೯೨). [ ಗುರು$_2$ + ಅನುಗ್ರಹ ]

**ಗುರ್ವಿ** (ನಾ). ಬಸಿರಿ; ಗರ್ಭಿಣಿ: "ಆಪನ್ನಸತ್ವಾ, ಗುರ್ವೀ, ಅಂತರ್ವತ್ನೀ, ಗರ್ಭಿಣೀ—ಈ ೪ ಬಸಿಱ ಹೆಂಡತಿ" (ಹಲಾಯು. ೬೨-೩೪೪); "ಅಂತರ್ವತ್ನಿ ಗುರ್ವಿಯೆಂದರೆ ಗರ್ಭಿಣಿಯೆನಿಕ್ಕು" (ಮಂಗರಾ. ೯೦-೭). [ ಸಂ. ಗುರ್ವೀ ]

**ಗುರ್ವಿಣಿ** (ನಾ). ಗರ್ಭಿಣಿ; ಬಸಿರಿ. [ ಸಂ. ಗುರ್ವಿಣೀ ]

**ಗುರ್ವು** ' ಅಗುರ್ವು ' ನೋ.

**ಗುರ್ವೆ** (ನಾ). ಒಂದು ಬಗೆಯ ಗಿಡ; ಗೊರಜೆ: "ಗುರ್ವೆ [ಪಾಠಾಂ.ರ್ವಿ] ಯೆನೆ ಗೊರಜೆಯದು" (ಮಂಗರಾ. ೪೫-೪೭). [ ? ]

**ಗುಲಂದಾಜ** ' ಗೋಲಂದಾಜ ' ನೋ.

**ಗುಲಕಂದ, ಗುಲ್ಕನ್ನು** (ನಾ). ಗುಲಾಬಿ ಹೂವಿನ ದಳಗಳನ್ನು ಸಕ್ಕರೆಯ ಪಾಕದಲ್ಲಿ ಸೇರಿಸಿ ಮಾಡಿದ ಒಂದು ಬಗೆಯ ಸಿಹಿಲೇಹ್ಯ: ಗುಲಾಬಿಹೂಗಳಿಂದ' ಗುಲಕಂದ ' ಎಂಬ ಸಿಹಿಪದಾರ್ಥವನ್ನು ತಯಾರಿಸುತ್ತಾರೆ (ಕಪಪು. ೬-೧೦೦೦). **ಗುಲ್ಕನ್ನು:** ಬಾಯಿಹುಣ್ಣಿಗೆ ಗುಲ್ಕನ್ನು ಒಳ್ಳೆಯದು (ರೂಢಿ). [ ←ಪಾರ. ಹಿಂ. ಮರಾ. ಗುಲಕಂದ್ ]

**ಗುಲಗಂಜಿ** ' ಗುರುಗುಂಜಿ ' ನೋ.

**ಗುಲಗಂಜೆ** ' ಗುರುಗುಂಜಿ ' ನೋ.

**ಗುಲಗುಂಜಿ** ' ಗುರುಗುಂಜಿ ' ನೋ.

**ಗುಲಗುಂಜೆ** ' ಗುರುಗುಂಜಿ ' ನೋ.

**ಗುಲಬಾಕ್ಷಿ** (ನಾ). ಒಂದು ಬಗೆಯ ಗಿಡ ಮತ್ತು ಸಂಜೆವೇಳೆಯಲ್ಲಿ ಅರಳುವ ಅದರ ಹೂವು: ಗುಲಬಾಕ್ಷಿ ಹೂಗಳು ಸುಂದರವಾಗಿರುತ್ತವೆ (ಶ್ಯಾಮತಾ. ೩೦); ಬಂಜೆ ಸಂಜೆಯ ಸುತ್ತುಮುತ್ತು ಗುಲಬಾಕ್ಷಿ (ಹೃದಸ. ೬೭-೪). [ ←ಮರಾ. ಗುಲಬಾಕ್ಷೀ, ಗುಲಬಾಶೀ ]

**ಗುಲಾಬಜಾಮ** ' ಗುಲಾಬಜಾಮೂನು ' ನೋ.

**ಗುಲಾಬಜಾಮೂನು**, ಗುಲಾಬಜಾಮ (ನಾ). ಮೈದಾಹಿಟ್ಟು ಮತ್ತು ಹಾಲುಖೋವ ಸೇರಿಸಿ ಕರಿದು ಸಕ್ಕರೆಯ ಪಾಕದಲ್ಲಿ ಹಾಕಿ ಮಾಡುವ ಒಂದು ತಿಂಡಿ,-ಸಿಹಿಭಕ್ಷ್ಯ: ಹೋಟೆಲಿಗೆ ಹೋಗಿ ಗುಲಾಬಜಾಮೂನು

ತಿಂದು ಬಂದೆ (ರೂಢಿ). **ಗುಲಾಬಜಾಮು:** ಅಂದೇ ತಯಾರಮಾಡಿದ ಗುಲಾಬಜಾಮು ಮತ್ತು ಚಕಲಿ ತೆಗೆದುಕೊಂಡು ಬಂದಳು (ಕ್ಷಿತಿಜ. ೬೧). ℙ 'ಗುಲಾಬ್‌ಜಾಮುನ್' ಎಂಬುದು ಒಂದು ಬಗೆಯ ಗಿಡ ಮತ್ತು ಅದರ ಹಣ್ಣು. ಈ ಹಣ್ಣಿನ ಆಕಾರದಲ್ಲಿ ತಯಾರಿಸಿದ ತಿಂಡಿ.
[ ←**ಪಾರ.** ಗುಲಾಬ್‌ಜಾಮುನ್ ; **ಹಿಂ.** ಗುಲಾಬ್‌ಜಾಮುನ್ ; **ಮರಾ.** ಗುಲಾಬ್‌ಜಾಮೂನ್, ಗುಲಾಬ್‌ಜಾಂಬ್ ]

**ಗುಲಾಬದಾಣಿ** 'ಗುಲಾಬದಾನಿ' ನೋ.

**ಗುಲಾಬದಾನಿ, ಗುಲಾಬದಾಣಿ** (ನಾ). ಪನ್ನೀರಿನ ಪಾತ್ರೆ: ಗುಲಾಬದಾನಿ (ನೀರು) ಸಿಂಪಡಿಸಿದ್ದಾಯಿತು (ಆಮನಿ. ೫೬). **ಗುಲಾಬದಾಣಿ:** ಗುಲಾಬದಾಣಿ; ಪೀಕದಾಣಿ . . . ಮೊದಲಾದುವುಗಳಲ್ಲಿ ಕಂಡುಬರುವ ಪ್ರತ್ಯಯಗಳೂ 'ಪಾರಸಿ' ಆಗಿವೆ (ಭಾಷಾಶಾ. ೧೬೬).
[ ←**ಪಾರ.** ಗುಲಾಬ್ದಾನ್ ; **ಮರಾ.** ಗುಲಾಬ್‌ದಾಣೀ ]

**ಗುಲಾಬಿ** (ನಾ). ೧. ಸಣ್ಣಸಣ್ಣ ಮುಳ್ಳುಗಳುಳ್ಳ, ಸುವಾಸನೆಯಾದ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ಮತ್ತು ಅದರ ಹೂವು; ರೋಜಾ: ಗುಲಾಬಿ ನಂದಿವಟ್ಟಲು ಕಲಿಗಣನಾಥ ಹಾಗೂ ದಾಶಿವಾಳದಲ್ಲಿ . . . ಕೆಲವು ಅಂಟುಗಳನ್ನು ಮಾಡಿ ಹಚ್ಚಬೇಕು (ಕೃಷಿಪ್ರ. ೨೦೧); ಸುಂದರಮ್ಮ ಗುಲಾಬಿಯ ದಂಡೆಯನ್ನು ಮುಡಿಸಿದರು (ದೂಟಿಟ್ಟ. ೧೯); ತಾವರೆಯ ಬದಲಾಗಿ ಈಗ ಗುಲಾಬಿಯು ಹೂಗಳ ರಾಣಿಯಾಗಿದೆ (ಕಪಪು. ೬-೧೦೯). ೨. ನಸುಗೆಂಪುಬಣ್ಣ; ರೋಜಾ ಬಣ್ಣ: ಅವಳು ಉಡುವ ಸೀರೆಯ ಬಣ್ಣ ಗುಲಾಬಿ (ರೂಢಿ).

**ಗುಲಾಬಿಬಣ್ಣ** = ನಸುಗೆಂಪುಬಣ್ಣ; ತಿಳಿಗೆಂಪುಬಣ್ಣ: ಗುಲಾಬೀ ಬಣ್ಣದ ಸಂಗಮರವರೀಕಲ್ಲಿನಿಂದಲೂ (ಮುಂಬಯಿ. ೬-೫೦). **ಗುಲಾಬಿಹೂ, ಗುಲಾಬಿಹೂವು** = ಗುಲಾಬಿಗಿಡದ ಹೂವು; ರೋಜಾಹೂವು: ಅವಳ ಜಡೆಯಲ್ಲಿ ಅರೆಬಿರಿದ ಗುಲಾಬಿಹೂ ಎಲೆ ಸಹಿತ ಇತ್ತೋ ಇಲ್ಲವೋ ಎಂಬುದನ್ನು ಸವಿವರವಾಗಿ ವರದಿಸುತ್ತಾರೆ (ರೂಪಸಂ. ೩೯); ಚೀನಾದೇಶದೊಳಗಿನ ಎಲ್ಲಾ ಗುಲಾಬಿ ಹೂವುಗಳನ್ನೂ ಅವಳಿಗಾಗಿ ನಾನು ಕೊಯ್ದು ತರುವೆನು (ಮಹಾತ್ಮಾ. ೯೨). ℙ ಸಾಮಾನ್ಯವಾಗಿ ಗುಲಾಬಿಯ ಬಣ್ಣ ತಿಳಿಗೆಂಪು, ಆದರೆ ಬೇರೆಬೇರೆ ಬಣ್ಣದ ಗುಲಾಬಿಗಳೂ ಉಂಟು.
[ ←**ಪಾರ. ಹಿಂ. ಮರಾ.** ಗುಲಾಬ್ ]

**ಗುಲಾಮ** (ನಾ). ೧. ಸೆರೆ ಹಿಡಿದ ಅಥವಾ ಕೊಂಡುಕೊಂಡ ಆಳು: ಗುಲಾಮರಿಗೆ ಎಲ್ಲರಂತೆ ಸಮಾನಹಕ್ಕುಗಳು ದೊರೆತವು (ಧರ್ಮಸಾ. ೪೩). ೨. ದಾಸ; ಸೇವಕ: ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ (ಪುರಂದ. ೩-೦೪೯ ಪಲ್ಲವಿ); ನೀನು ಹೇಳಿದ ಹಾಗೆ ಕೇಳಿಕೊಂಡು ನಿನ್ನ ಗುಲಾಮನಾಗಿರುತ್ತೇನೆ (ಪಂಜಾಮ್ಮ. ೮). ೩. ಕೀಳುವಂಟ್ಟದವನು; ಬೆಲೆಯಿಲ್ಲದವನು: ಎಲವೊ ಮಾಗಧ ನಿನ್ನೆ ಹಿರಿದಾಗಿ ಪಂಥವ ಕೆಲೆದೆ ಕಂಡಹುದೊ ಗುಲಾಮ (ಭರಜ. ೨೫-೬೪); ಹಂದಿ ಗುಲಾಮರಿಗೇತಕೆ ನೀ ನಿನ್ನ ಮಂದಿ ಕುದುರೆ ಮನ್ನೆಯರ ಸಂದೇಹವೇಕಟ್ಟಿಯವರಿಂದ ತುರುಕರ ಕುಂದದೆ ಕಡಿದೆಬ್ಬಿಸೆಂದ (ಕಂನವಿ. ೦೯-೩೩). ೪. ಇಸ್ಪೀಟು ಎಲೆಗಳಲ್ಲಿ ಒಂದು; ಜಾಕಿ: ಕಳಾವರ್ ಗುಲಾಮನನ್ನು ಜೋಕರ್‌ನಿಂದ ಹೊಡೆದ ನಲ್ಲ (ನಾಡಿಗೇ. ೧೩).

**ಗುಲಾಮನ ಆಟ** = ಒಂದು ಬಗೆಯ ಇಸ್ಪೀಟು ಆಟ; ಇಪ್ಪತ್ತೆಂಟರ ಆಟ: ಅವರು ಗುಲಾಮನ ಆಟ ಆಡುತ್ತಿದ್ದಾರೆ (ರೂಢಿ).
[ ←**ಅರ. ಹಿಂ. ಮರಾ.** ಗುಲಾಮ್ ]

**ಗುಲಾಮಗಿರಿ** (ನಾ). ಅಡಿಯಾಳುತನ; ದಾಸ್ಯ; ಪರಾಧೀನತೆ: ಸಾಯುವವರೆಗೂ ಪದ್ಮಾಕರ ಬಾಬೂರಾಯರ ಗುಲಾಮಗಿರಿಯಲ್ಲಿರುವ ಪ್ರಸಂಗ ಬಂದಿತ್ತು (ರತ್ನಗೋ. ೩೧); ಹಿಂದೀಯರು ಗುಲಾಮಗಿರಿಯನ್ನು ಸ್ವಾಭಾವಿಕವಾಗಿ ಪರಿಗಣಿಸಿ, ಎಲ್ಲ ಮಾರ್ಗದರ್ಶನಕ್ಕೂ ಯೂರೋಪಿನ ಕಡೆ ನೋಡುತ್ತಿದ್ದರು (ಸ್ವಾವೀರ. ೧೦೦); ಪತ್ನೀತ್ವವನ್ನು ಗುಲಾಮಗಿರಿಯೆಂದು ಹೇಳುತ್ತೀರೋ? (ಬರಬಾ. ೮೮). [ ಗುಲಾಮ + – ಗಿರಿ₂ ]

**ಗುಲಾಮಪದ್ಧತಿ** (ನಾ). ಆಳುಗಳನ್ನು ಕೊಂಡುಕೊಳ್ಳುವ ಪದ್ಧತಿ,-ಕ್ರಮ: ಗುಲಾಮಪದ್ಧತಿ ಇದ್ದು ಪಟ್ಟಣಕ್ಕೆಲ್ಲ ಬೇಕಾಗಬಹುದಾದಷ್ಟು ಹಿಟ್ಟನ್ನು ತಯಾರಿಸುತ್ತಿದ್ದರೆಂದು ಊಹಿಸಲಾಗಿದೆ (ಭಾರದ. ೧೨).
[ ಗುಲಾಮ + ಪದ್ಧತಿ ]

**ಗುಲಾಮಿ** (ಗು). ಆಳುತನದ; ದಾಸ್ಯದ. 'ಗುಲಾಮಿಪದ್ಧತಿ' ಪರಾ.
[ ←**ಅರ. ಹಿಂ. ಮರಾ.** ಗುಲಾಮಿ ]

**ಗುಲಾಮಿಪದ್ಧತಿ** (ನಾ). = ಗುಲಾಮಪದ್ಧತಿ: ರೈತ ಜಮೀನ್ದಾರರ ಗುಲಾಮಿಪದ್ಧತಿ ಮತ್ತೊಂದು ರೀತಿಯದಾಗಿತ್ತು (ಪುನರು. ೨೬೦).
[ ಗುಲಾಮಿ + ಪದ್ಧತಿ ]

**ಗುಲಾಲು** (ನಾ). ಉತ್ಸವ ಸಮಾರಂಭಗಳಲ್ಲಿ ಒಬ್ಬರ ಮೇಲೊಬ್ಬರು ಎರಚಾಡುವ ಕೆಂಪುಬಣ್ಣದ ಪುಡಿ: ಒಂದೇ ಸಮನೆ ಗುಲಾಲು ಹಾರುತ್ತಿದ್ದುದರಿಂದ ಅವರ ತಲೆಕೂದಲುಗಳು ಕೆಂಪುಬಣ್ಣಕ್ಕೆ ತಿರುಗಿದ್ದವು (ಬಾಣಅ. ೧೨); ರಾಜಾಪುರದಲ್ಲಿ ಗುಲಾಲು ದೊರೆಯುತ್ತದೆ (ಮುಂಬಭೂ. ೧೨೯). [ ←**ಹಿಂ. ಮರಾ.** ಗುಲಾಲ್, ಗುಲಾಲಾ, ಗುಲ್ಲಾಲಾ ; **ಪಾರ.** ಗುಲ್ಲಾಲಾ ]

**ಗುಲಿಕಲು** (ನಾ). ಜಮೀನುಗಳನ್ನು ಅಳತೆ ಮಾಡಿ ಎಲ್ಲೆಯನ್ನು ಸೂಚಿಸಲು ನೆಡುವ ಕಲ್ಲು; ಗಡಿಕಲ್ಲು: ಅಲಿಂದ ಪಡುವ ನಡದು ನಟ ಗುಲಿಕಲು (ಎಕ. XII, ತಿಪಟೂ. ೧೩೯-೬೫; ?).
[ <ಕುಟ್ಟಿ₂? + ಕಲು (<ಕಲ್₃) ]

**ಗುಲಿಕೆ** (ನಾ). ೧. ಗೋಲಿ; ಗುಂಡು. ೨. ಗುಳಿಗೆ; ಮಾತ್ರೆ. ೩. ಮುತ್ತು; ಮೌಕ್ತಿಕ: (+). [ **ಸಂ.** ಗುಲಿಕಾ ]

**ಗುಲಿಗಂಜಿ** 'ಗುರುಗುಂಜಿ' ನೋ.

**ಗುಲಿಮಾವು** (ನಾ). ಒಂದು ಬಗೆಯ ವನಸ್ಪತಿ: ಗುಲಿಮಾವು, ಗುಲ್ಮಾರ್ (ಮೃಜಿಗಿ. ೨೬-೪೮೪). [ ? ]

**ಗುಲುಂಛನ** (ನಾ). = ಗುಲುಂಚ್ಛ: ತೆಂಬೆಲರಲೆಪದಿನಲರ ಗುಲುಂಚ್ಛ {ಥ} ನವಂ ತೂಟಿ ತೊನೆವನಂಗಜಂಗಮಲತೆಗಳಂತೆ . . . ವಾರನಾರಿಯರ್ (ಅನಂಪು. ೬-೫೭ ವ). [ **ಸಂ.** ]

**ಗುಲುಗ** (ನಾ). ಒಬ್ಬಾತನ ಹೆಸರು: ನಾವಿದರ ಗೋಸಾಸಿ ಗುಲುಗಂ ಕಟ್ಟಿ ಸತ್ತು ಸುರಲೋಕಕ್ಕೋದ (ಎಕ. VII, ಶಿಕಾರಿ. ೧೯೫-೫; 1007). [ ? ]

**ಗುಲುಗಂಜಿ** 'ಗುರುಗುಂಜಿ' ನೋ.

**ಗುಲುಗಣ್ಣ** (ನಾ). ಒಬ್ಬಾತನ ಹೆಸರು: ಕೆಟಿಯ ಹಳ್ಳಿಯ ಗುಲುಗಣ್ಣ ನೆಟಿನೂರಟಿವಿನೊಳ್ಕಾದಿ ಸತ್ತ (ಎಕ. VIII, ಸೊರಬ. ೨೦೬-೮; 908).
[ ಗುಲುಗ + ಅಣ್ಣ₁ ]

**ಗುಲುಗು₁** 'ಗನುಗು₃' ನೋ.

**ಗುಲುಗು₂** 'ಗಲಗು₁' ನೋ.

**ಗುಲುಗುಂಜಿ** 'ಗುರುಗುಂಜಿ' ನೋ.

**ಗುಲುಗೋಜ** (ನಾ). ಒಬ್ಬಾತನ ಹೆಸರು: ಧಾರಿಣಿಯೊಳು ಗುಲುಗೋಜನಟಿವನೆಂದೆಳೆ ಪೊಗಳ್ಗುಂ (ಸೌಇಇ. IX-1, ೧೬೫-೮೦; 1099).
[ ಗುಲುಗ + ಓಜ₁ (<ಒವಝು) ]

**ಗುಲುಚ್ಛ, ಗುಲುಂಚ್ಛ** (ನಾ). ಗೊಂಚಲು; ಕುಚ್ಚು; ಗುಚ್ಛ: "ಸ್ತಬಕಃ, ಗುಚ್ಛಕಃ, ಗುಚ್ಛಃ, ಗುಲುಚ್ಛಃ – ಈ ೪ ಪೂವಿನ ಗೊಂಚಲ್" (ಹಲಾಯು. ೩೦-೩೪). **ಗುಳುಚ್ಛ:** ತನು ಮುನಿಪದರಾಜೀವದ ಕೆಲದೊಳ್ ವೇತ್ರಲತಾವೃತವೆಸೆದತ್ತು ಮಸೃಣಪಿಂಛಗುಳುಚ್ಛಂ (ಚಂದ್ರಪು. ೯-೨೬). [ **ಸಂ.** ]

**ಗುಲುಡುಮರ** (ನಾ). ಒಂದು ಬಗೆಯ ಮರ: ಗುಲುಡುಮರ, ಶಿವನ್ನಿ (ಮೈಜಿಗಿ. ೪೦-೭೮೩). [ಗುಲುಡು ? + ಮರ$_1$]

**ಗುಲುಮ** (ನಾ). = ಗುಲ್ಮ ೧: "ಗುಲುಮ-ಗುಲ್ಮ=ಹೊದರು" (ತದ್ಭಕೋ. ೧೧); ನಿಳಯಸಂಕುಳವೋ ಕುಸುಮ ಗುಲುಮಾ [ಪಾಠಾಂ. ಗುಲ್ಮಾ]ಳಿಗಳೊ ಎನಲು (ಬಸವು. ೨೭-೪೦).

[<ಸಂ. ಗುಲ್ಮ]

**ಗುಲ್ಕನ್ನು** 'ಗಂಲಕಂದ' ನೋ.

**ಗುಲ್ಫ** (ನಾ). ಹೆಜ್ಜೆಯ ಮಗ್ಗುಲಲ್ಲಿರುವ ಗಂಟು; ಕಾಲಿನ ಹರಡು: "ಘುಟಿಕಾ, ಗುಲ್ಫಃ – ಈ ೨ ಹರಡು" (ಹಲಾಯು. ೬೫-೩೭೦); "ಗುಲ್ಫಮೆನೆ ಹರಡೆನಿಕ್ಕುಂ" (ಮಂಗರಾ. ೯೮-೧೮); ನಿಜದಿಂ ಗೂಢಂಗಳ್ ಗುಲ್ಫಜಾನುಗಳ್ (ಶಾಂತಿಪು. ೩-೪೫); ಮುಸುಕಿದ ಮೆಯ್ಯಿಂ ಗುಲ್ಫಾವಸಕ್ತಮೆನಿಸಿರ್ದ ರಕ್ತನವಕಂಚುಕದಿಂ . . . ಆಕೆ ಕಣ್ಗೆಸದಿರ್ದಳ್ (ಕಾದಂಪೂ. ೩೯); ನೆಗಳ್ದಂಗುಟ ಸಂಶ್ಲಿಷ್ಟಂ . . . ಮಿಥೋಯುಕ್ತಂ ಕೇಳ್ ನಗೆಮೊಗದಳೆ ವಿಯುತಮೈದು ಗುಲ್ಫದ ಭೇದಂ (ಲಾಸ್ಕರಂ. ೩-೧೧೧). [ಸಂ.]

**ಗುಲ್ಫದ್ವಯಸ** (ಗು). ಕಾಲಿನ ಹರಡು ಮುಳುಗುವಷ್ಟು ಆಳವುಳ್ಳ: ಅಂಬುಧಿಯಿಳಿದು ಗುಲ್ಫದ್ವಯಸವಾದುದು (ಕುಮಾ್ರಳೀ. ೬-೩೦). [ಸಂ.]

**ಗುಲ್ಫಿ** (ನಾ). ಒಂದು ಬಗೆಯ ಹಕ್ಕಿ; ಹರಡೆ: "ಗುಲ್ಫಿ [ಪಾಠಾಂ. ಲ್ವಿ] ಯೆನೆ ಹರಡೆಯಕ್ಕು" (ಮಂಗರಾ. ೫೨-೯). [?]

**ಗುಲ್ಮ** (ನಾ). ೧. ಕುರುಚಲು ಗಿಡಗಳ ಅಥವಾ ಸಣ್ಣಮರಗಳ ಗುಂಪು; ಪೊದರು: "ಉಲಪಃ, ಸ್ತಂಬಃ, ಗುಲ್ಮಃ, ವೀರುತ್, ವಿಟಪಃ – ಈ ೫ ಹೊದಱು" (ಹಲಾಯು. ೩೦-೩೭); ಓರಂತೆ ಮೇಲುದಱೊಳ್ ಗುಲ್ಮಲತಾಳಿಗಳ್ನೊಡರಲ್ . . . ಮಾರ್ಗದೆ ಪೋದೆಂ (ಕಾದಂಪೂ. ೯೦೪); ಸರ್ವಸಸ್ಯದೊದವಿಂ ತರುಗುಲ್ಮ ಲತಾವನಸ್ಥಲಂ . . . ಎಸೆಯೆ ಸರ್ವಸುಖಾವಹಮಾ ಮಹೀತಲಂ (ಪಂರಾಮಾ. ೧-೧೦೨). ೨. ಒಂಭತ್ತು ಆನೆ, ಒಂಭತ್ತು ರಥ, ಇಪ್ಪತ್ತೇಳು ಕುದುರೆ ಮತ್ತು ನಲವತ್ತೈದು ಕಾಲಾಳು ಉಳ್ಳ ಸೈನ್ಯದ ಘಟಕ,–ತುಕಡಿ: "ಆನೆ ರಥ ಕುದಿರೆ ೨೭ ಕಾಲಾಳು ೪೫ ಯಿದು ಗುಲ್ಮವೆಂಬ ಬಲವೆನಿಸುಗುಂ" (ವ್ಯವಹಾ. ಅನುಬಂಧ. ೧-೯); ಪತ್ತಿಯೆಂದುಂ ಸೇನೆಯೆಂದುಂ ಸೇನಾಮುಖಮೆಂದುಂ ಗುಲ್ಮಮೆಂದುಂ . . . ಇಂತೆಂಟು ತೆಱದಿಂ ಪಡೆಗೆ ಪೆಸರಕ್ಕುಂ(ಪಂರಾಮಾ. ೧೩-೪ವ). ೩. ಪ್ಲೀಹಕೋಶ; ಪ್ಲೀಹ. ೪. ಪ್ಲೀಹರೋಗ; ಗಡ್ಡೆರೋಗ: ಹೊಂದಿ ಪೀಡಿಪ ಕುಷ್ಟ ಗಂಡಮಾಲೆಯು ಗುಲ್ಮ ಸಂಧಿಸಿದ ಶೂಲೆ ವಿಷಸರ್ಪ ವೃಶ್ಚಿಕಭೂತವೆಂದೆಂಬ ಭಯಗಳಂ ಪಾದಜಲಮಂ ತಳಿದು ತಕ್ಷಣಂ ಗುಣವ ಮಾಡಿ (ಗುರುಚಾ. ೧೦-೭೮); ಕಜ್ಜಯವರಲ್ಲಿ, ಮಹೋದರರವರಲ್ಲಿ, ಗುಲ್ಮದವರಲ್ಲಿ . . . ವಮನಕ್ರಿಯೆ ಮಾಡಲಾಗದು (ಸಕವೈ. ೨೫). [ಸಂ.]

**ಗುಲ್ಮಗಂಧಿ** (ನಾ). ಒಂದು ಬಗೆಯ ಗುಲ್ಮವ್ಯಾಧಿ: ಏಲಾದಿಚೂರ್ಣ – ಏಲಕ್ಕಿ, ಲವಂಗಚಕ್ಕೆ . . . ಇವಂ ಸಮಾಂಶವಾಗಿ ಚೂರ್ಣಿಸಿ . . . ತುಪ್ಪದಿಂ ಕಲಸಿ ಮೆಲ್ಲಲು . . . ಗುಲ್ಮಗಂಧಿ, ಶ್ವಾಸಖಾಸ, ಬಿಕ್ಕುಳು ಸಹ ಪರಿಹಾರಮಕ್ಕುಂ (ಸಕವೈ. ೨೪೯). [ಸಂ.]

**ಗುಲ್ಮಜ್ವರ** (ನಾ). ಗುಲ್ಮರೋಗದಿಂದ ಉಂಟಾಗುವ ಜ್ವರ; ಗಡ್ಡೆಜ್ವರ: ಷಟ್ಪಲಘೃತ . . . ಪ್ರಾತಃಕಾಲದಲ್ಲಿ ಸೇವಿಸಲು ಗುಲ್ಮಜ್ವರ, ಪ್ಲೀಹ . . . ಊರ್ಧ್ವಮುಖವಾದ ವಾಯು ಸಹ ಪರಿಹೃತಮಕ್ಕುಂ (ಸಕವೈ. ೧೧೪). [ಗುಲ್ಮ + ಜ್ವರ]

**ಗುಲ್ಮಲ** 'ಗುಲ್ಮಾಲ್' ನೋ.

**ಗುಲ್ಮವೃದ್ಧಿ** (ನಾ). ಒಂದು ಬಗೆಯ ಗುಲ್ಮರೋಗ; ಪ್ಲೀಹರೋಗ; ಮಲೇರಿಯಾದ ದೆಸೆಯಿಂದ ಗುಲ್ಮಗ್ರಂಥಿ ಹಿರಿದಾಗುವ ಉಪದ್ರವ: (ಕ). [ಗುಲ್ಮ + ವೃದ್ಧಿ]

**ಗುಲ್ಮಶೂಲೆ** (ನಾ). ಪ್ಲೀಹರೋಗದಿಂದ ಉಂಟಾಗುವ ವೇದನೆ,–ಯಾತನೆ: ತಾಮ್ರದ ಪಾತ್ರೆಯ ಗುಣ . . . ಶರೀರಕ್ಕೆ ಶಾಂತಿಕರವಾಗಿ, ಅಗ್ನಿಯನ್ನುಂಟುಮಾಡಿ ಗುಲ್ಮಶೂಲೆಯನ್ನು ಶಾಂತಿಮಾಡುವುದು (ಸಕವೈ. ೪೭). [ಗುಲ್ಮ + ಶೂಲೆ]

**ಗುಲ್ಮಹರ್** 'ಗುಲ್ಮೊಹೋರ್' ನೋ.

**ಗುಲ್ಮಾರ್** 'ಗುಲ್ಮೊಹೋರ್' ನೋ.

**ಗುಲ್ಮಾಲ್, ಗುಲ್ಮಲ** (ನಾ). ೧. ವಿಷಯವನ್ನು ಬಚ್ಚಿಡುವುದು,–ಅಡಗಿಸಿಡುವುದು. ೨. ಮೋಸ; ವಂಚನೆ. ೩. ಜಗಳ; ವಿವಾದ: **ಗುಲ್ಮಲ:** ೩. ಈ ಗುಲ್ಮಲವನ್ನು ಜಾಗ್ರತೆಯಿಂದ . . . ಸಮಾಧಾನಗೊಳಿಸುವುದೇ ಉತ್ತಮ (ಸೋಲು. ೩೨).

**ಗುಲ್ಮಾಲ್ಮಾಡು**=೧. ಕಾಣದಂತೆಮಾಡು; ಮರೆ ಮಾಡು. ೨. (ಅಲಂ) ಮೋಸಮಾಡು; ವಂಚಿಸು; ದ್ರೋಹಮಾಡು: ಯಾರೋ ಮೂರ್ಖರು ಸ್ವಾರ್ಥಕ್ಕಾಗಿ ಏನೇನೋ ಗುಲ್ಮಾಲ್ಮಾಡಿದ್ದಾರೆ ಎಂದಂದುಕೊಂಡರು (ಮೂಲಾಸ. ೪೮). [← ಮರಾ. ಗುಲ್‌ಮಾಲ್]

**ಗುಲ್ಮಿ** (ನಾ). ಗುಲ್ಮರೋಗವುಳ್ಳವನು. [ಸಂ. ಗುಲ್ಮಿನ್]

**ಗುಲ್ಮಿನಿ** (ನಾ). ೧. ಪೊದರು ಪೊದರಾಗಿ ಹರಡುವ ಬಳ್ಳಿ: "ವೀರುತ್, ಗುಲ್ಮಿನೀ, ಉಲಪಃ – ೩ ಲತಾಪ್ರತಾನಿನೀ ಬಳ್ಳಿಗಳ ಗುಂಪುಳ್ಳ ಪೊದೆಯ ಹೆಸರು" (ಸಿದ್ಧಾಂತಿ. ೯೯). ೨. ಗುಲ್ಮರೋಗವುಳ್ಳವಳು.

[ಸಂ. ಗುಲ್ಮಿನೀ]

**ಗುಲ್ಮೊಹೋರ್, ಗುಲ್ಮಹರ್, ಗುಲ್ಮಾರ್** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು: ಗುಲ್ಮೊಹೋರಿನಲಿ ಆರತಿ ಎತ್ತಿ ಎದೆನಾಡಿನ ಚೆಲುವು . . . ಕೂಡುತಿಹುದು (ಮುಕ್ತಕಂ. ೫೦ ೩). **ಗುಲ್ಮಹರ್:** ಸೀಮೆ ಸಂಕೇಶ್ವರ, ದೊಡ್ಡರತ್ನಗಂಧಿ, ಕೆಂಪು ತುರಾಯಿ, ಗುಲ್ಮಹರ್‌ಮರ, ಕತ್ತೀಕಾಯಿ (ಮೈಜಿಗಿ. ೨೯-೫೭೪). **ಗುಲ್ಮಾರ್:** ಗುಲಿಮಾವು, ಗುಲ್ಮಾರ್ (ಮೈಜಿಗಿ. ೨೬-೪೮೪).

[←ಮರಾ. ಗುಲ್ಮೋಹೋರ್]

**ಗುಲ್ಲ** (ನಾ). ಒಂದು ಬಗೆಯ ವನಸ್ಪತಿ: (ಮೈಜಿಗಿ. ೫೩-೧೦೫೪).

[?]

**ಗುಲ್ಲಕಂಚಿ** (ನಾ). ಒಂದು ಬಗೆಯ ವನಸ್ಪತಿ: ಗುಲ್ಲಕಂಚಿ, ಬಾಬಿಂಜಿ (ಮೈಜಿಗಿ. ೨೫-೪೭೯). [ಗುಲ್ಲ + ಕಂಚಿ$_1$]

**ಗುಲ್ಲನೆ** (ಅ). ಒಂದು ಅನುಕರಣಾವ್ಯಯ; ಶಬ್ದವಾಗುವಂತೆ: ಎನ್ನ ಕಯ್ಯೊಳಾರ್ಮುರಸಿಟ್ಟರೀ ಗಿರಿಕೆಯನ್ನ, ನಾನರಿಯೆ; ಗುಲ್ಲನೆದನಾಡಿಸುತ ನಿನ್ನ ಮರೆತೆನು (ಗಿಳಿವಿಂ. ೫೦-೭). [ಗುಲ್$_0$ + – ಅನೆ$_1$]

**ಗುಲ್ಲಿ** (ನಾ). ಹವಳ (?): ಮೆರೆವ ಎಳೆತುಳಸಿಮಾಲೆ ನವಮಲ್ಲಿಕ ಸುರಗಿ ಜಾಜಿದಂಡೆ, ಉಡಿಯಲ್ಲಿ ಗುಲ್ಲಿಯ ಚೀಲಾಸಿಸಿಕೊಂಡಾ ಗೋವಾಳಿಲ್ಲಾರು ವಂದಾಗಿ ತುರುವಿಂಡು ಕಾಯುವುತಾ (ತೀರ್ಥಮ. ೩೪೩).

[<ಪ್ರಾ. ಗುಲೀ./ಹಿಂ. ಗುಲ್ಲೀ]

**ಗುಲ್ಲು** (ನಾ). ೧. ಗಲಾಟೆ; ಗದ್ದಲ; ಕೂಗಾಟ; ದಾಂಧಲೆ: ಗುಲ್ಲು ಏಳುತ್ತಿರಲು ಅಡವಿಯಲಿ . . . ಅಲ್ಲಿ ತಿಳಿ ಭ್ರಮೆ (ಜ್ಞಾನಸಿಂ. ೬-೨೭); ಆ ಗುಲ್ಲು ಕೇಳಿ ಸ್ತ್ರೀಪಹರಿಯೂ ಜೈಲಧಿಕಾರಿಯೂ ಅಲ್ಲಿಗೆ ಬಂದರು (ಪುನರು. ೧೫೦); ವಾಲಗಿದ್ದ ರೂಗಪ್ಪ ಪಕ್ಕದ ಮನೆಯಲ್ಲಿ ಗುಲ್ಲು ಕೇಳಿ ದಡಬಡನೆ ಎದ್ದು ಹೊರನೋಡಿದ (ಚಿಗುಬ. ೩೪); "ತಿರುಗುಪ್ಪ, ಹೊಳ್ಳುಪ್ಪ" – "ಬಂತುಪ್ಪ" 'ದೇವರಾಣೆಯೆಂದರೂ ಸತ್ತಿಲ್ಲ' ಮುಂತಾದ ಗುಲ್ಲ ಬೊಬ್ಬೆಗಳು ಆಟಕ್ಕೆ ಬೇರೊಂದು ರುಚಿಯನ್ನು ತಂದಿರುವವು (ನಿರಾಳ ೯೭); ನಿತ್ಯ ಪಯಣ ಬಾತ್ತಿಗೇಡು, ಬರೀ ಗುಲ್ಲು ನಿದ್ದೆಗೇಡು (ಗಾದೆ). ೨. ಸುಳ್ಳು ಸುದ್ದಿ; ಅಡಿಕೆ ಮಾತು;

ಪುಕಾರು : ನೀವು ಮಾಡುತ್ತಿರುವ ಬೇಜವಾಬುದಾರಿ ಕೆಲಸದ ಬಗ್ಗೆ ಊರಲ್ಲಿ ಈಗಾಗಲೇ ಗುಲ್ಲು ಎದ್ದಿದೆ (ರಂಗರೋ. ೭೯).

ಗುಲ್ಲುಮಾಡು, ಗುಲ್ಮಾಡು = ೧. ಕೂಗಾಡು ; ಗದ್ದಲ ಮಾಡು ; ಗಲಾಟೆ ಮಾಡು : ಕಳ್ಳತನದಲ್ಲಿ ಗೊಲ್ಲರ ಮನೆಪೊಕ್ಕು ಗುಲ್ಲು ಮಾಡದೆಯವರ ಗಲ್ಲ ಕಚ್ಚಿದನೆಂದು (ಪುರಂದ. ೧-೯೪-೨) ; ಸುಮ್ಮನೆ ಗುಲ್ಲು ಮಾಡಿ ಫಲಗಳೇನು(ಚಂದ್ರವಾ. ೪); ಗುಲ್ಲು ಮಾಡುತ್ತಿದ್ದ ಪಾರ್ವತಿಯನ್ನು ಬೆದರಿಸಿ ಸುಮ್ಮನೆ ಕುಳ್ಳಿರಿಸಿದರು ಪಂಡಿತರು (ದೇವದಾ. ೪) ; ವಿದ್ಯಾರ್ಥಿಗಳು ಅವನ ಭಾಷಣಕ್ಕೆ ಗುಲ್ಲುಮಾಡಿ ಹುಯಿಲು ಎಬ್ಬಿಸುತ್ತಿರಲಿಲ್ಲ (ದೂರಸ. ೧೮೭) ; ಸಾಕು ಗುಲ್ಮಾಡದಿರ್ ನಡೆ ಸೇನಾಧಿಪ (ಬೀಳವಂ. ೨-೨೪೧). ೨. ಸುದ್ದಿಯನ್ನು ಹರಡು ; ವಿಚಾರವನ್ನು ಹೊರಡಿಸು : ರಹಸ್ಯ ವಿಚಾರಗಳನ್ನು ಗುಲ್ಲುಮಾಡಬಾರದು(ರೂಢಿ) .ಗುಲ್ಲೋಗುಲ್ಲು=ಗದ್ದಲವೋ ಗದ್ದಲ ; ಬಹಳ ಗಲಾಟೆ : ಗುಸುಗುಸು ಹೋಗಿ ಗುಲ್ಲೋಗುಲ್ಲಾಯಿತು (ಪಂಚಾಮ್ಮ. ೩೦). [ ದೇ॥ ತುಳು. ಗುಲ್ಲು ; ತೆಲು. ಗೊಲ್ಲು ]

**ಗುಲ್ಲುಹಬ್ಬಿಸು** (ಕ್ರಿ). ಸುಳ್ಳು ಸುದ್ದಿಯನ್ನು ಹರಡು; ಸುಳ್ಳು ವಿಚಾರವನ್ನು ಹೊರಡಿಸು : ತಂದೆತಾಯಿಯರು ಅವಳನ್ನು ಗುಟ್ಟಾಗಿ ಅಡಗಿಸಿಟ್ಟು ಅವಳಿಲ್ಲಿಯೋ ಕಾಣೆಯಾಗಿದ್ದಾಳೆ ಎಂಬ ಗುಲ್ಲುಹಬ್ಬಿಸಿದ್ದಾರೆ (ಪಾಳವು. ೩೮೯). [ ಗುಲ್ಲು + ಹಬ್ಬಿಸು (<ಪರ್ಬಿಸು) ]

**ಗುಲ್ಲೆಬ್ಬಿಸು** (ಕ್ರಿ). ಗಲಾಟೆಯನ್ನುಂಟುಮಾಡು ; ಗದ್ದಲವನ್ನುಂಟುಮಾಡು ; ಬೊಬ್ಬೆಯೆಬ್ಬಿಸು : ಬಾಗಿಲ ಬಳಿ ಇಬ್ಬರು ಖೈದಿಗಳು ಒಂದೇ ಸಮನೆ ಬಿಸಿಬಿಸಿಯಾಗಿ ಚರ್ಚಿಸುತ್ತ ಕೂಗಾಡುತ್ತ ಗುಲ್ಲೆಬ್ಬಿಸಿದುದರಿಂದ ಮಾತು ನಿಲ್ಲಿಸಬೇಕಾಯಿತು (ಪುನರು. ೩೪೧) ; ಸದಾ ಗುಂಪುಕಟ್ಟಿಕೊಂಡಿರುವುದು ಮತ್ತು ಗುಲ್ಲೆಬ್ಬಿಸುತ್ತಿರುವುದು ಈ ಹಕ್ಕಿಗಳ ಸ್ವಭಾವ (ಕಪಪು. ೩-೧೧೭). [ ಗುಲ್ಲು + ಎಬ್ಬಿಸು (<ಎಟ್ಟಿಸು) ]

**ಗುಲ್ಲೇಳು** (ಕ್ರಿ). ಪುಕಾರು ಆಗು ; ಪ್ರಚಾರವಾಗು : ಸುದ್ದಿ ತಿಳಿದ ರಾತ್ರಿಯೇ ಯಾರ ಕಿವಿಯಮೇಲೆ ಸುದ್ದಿ ಬಿದ್ದು ಗುಲ್ಲೇಳುವ ಮೊದಲೇ ಯಾರದಾದರೂ ಕೊರಳಿಗೆ ಕಟ್ಟಿಬಿಡೋಣ ಎಂದು ಇಲ್ಲಿಗೆ ಓಡಿ ಬಂದಿರಬೇಕು (ಮೂರುದಾ. ೧೩೩). [ ಗುಲ್ಲು + ಏಳು$_1$ (<ಏಟು$_1$) ]

**ಗುವಳಾಲ** (ನಾ). ಒಂದು ಸ್ಥಳದ ಹೆಸರು ; ☞ ಈಗಿನ ಕೋಲಾರ : ಗುವಳಾಲಂ ಗೊಜ್ಜುಂ ವಾಣರಸ ಆಳೆ ವೇಗೂರೂಮ್ ಪೊಂಪುಲಂ ಆಳೆ ತುಱುಕೊಳೆಪಳ್ಳಿ ಅರಕ್ಕಮನ್ ತುಱುವಿಟ್ಟುವಿಟ್ಟಿಮಾ ಮಾನಿ (ಎಕ. X, ಮುಳುಬಾ. ೨೬೩-೦ ; ಸು. ೮೬೦). [ <ಕುವಲಾಲ ]

**ಗುವಾಕ** (ನಾ). ಅಡಕೆಮರ. [ ಸಂ. ]

**ಗುವಿ** (ನಾ). ಗುಹೆ; ಗವಿ : "ಗುವಿ-ಗುಹಾ=ಬಿಲ" (ತದ್ಭಕೋ. ೦೦) ; ಸಮಿಧೆಗಳಿಗೆಂದಾರ್ಯವಾರ್ಯನು ಗವನಿಸುವ ಗುವಿ[ಪಾಠಾಂ. ಡಿ] ಯೊತ್ತಿನಲಿ ವಿಭ್ರಮಿಸಿದಲೊ ಕಲಿದೇವ ಕೇಳಿರೆ ವಿಮ್ಮ ಮನೆದಾಸಿ (ಬಸವು. ೩೩-೩೪). [ <ಸಂ. ಗುಹಾ ]

**ಗುವಿಯುಂಗ** (ನಾ). ಒಂದು ಪ್ರದೇಶದ ಹೆಸರು : ಅನ್ನೆಬರೆ ಗುವಿಯುಜ್ಗಎ ಅನ್ನೆ ಬರೆ ಪುಣಸೆಯ ಕಿಱಿಯ ಕೆಱಿ (ಮೈಆರಿ. ೧೯೨೦. ೦೦-೦೪೦ ; 967). [ ? ]

**ಗುವುಂಡಭೂಮಿ** (ನಾ). (?) : ಇಱಿಯೆ ವಿರೋಧಿ ಬಿದ್ದ ಸಮರಾಂಗಣದೊಳು ಶ್ರೀಗುವುಣ್ಡಭೂಮಿಯಿಂದೊಱಿದೊಱಿದುಕ್ಕು ಯಿಂನು ಪೊನಲೇಳ್ವುದು ಭೂತಪಿಶಾಚಕೋಟಿಯುಂ ನೆಱಿ ತಣಿಯುಣ್ಡು ಚೆಣ್ಡುಮರಲ್ದಿನ್ನುಮದಕ್ಕಿಸಲಾಱಿವೆಂದೇನ್ ಅಱಿಯಿರೆ ವಿಕ್ರಮಮುಂ ಜಸದ ಲಚ್ಚಣಮಿ ಹುಳಿಯೋಱಿ ಚಟ್ಟನಮ್ (ಎಕ. XVI, ಚಿಕ್ಕನಾ. ೯೮-೨೩ ; 1169). [ ಗುವುಂಡ$_0$ + ಭೂಮಿ ]

**ಗುಷ್ಪು** 'ಗಸಟು' ನೋ.

**ಗುಸ$_1$** 'ಕುಸಂ' ನೋ.

**ಗುಸ$_2$** (ನಾ). ೧. ಪೆಟ್ಟು ; ಏಟು : (+). ೨. ಕೋಪ ; ಸಿಟ್ಟು. [←ಅರ. ಗುಸ್ಸಹ್ ; ಹಿಂ. ಗುಸ್ಸಾ; ಮರಾ. ಘುಸ್ಸಾ ]

**ಗುಸು** 'ಕುಸು' ನೋ.

**ಗುಸುಗಾಟ** (ನಾ). ಗುಸುಗುಸು ಮಾತಾಡುವುದು ; ಪಿಸುಗುಟ್ಟುವುದು : ಇದೇನೋ ಮಾತು ಕಥೆಗಳಾಗುತ್ತಿವೆಯಲ್ಲ ಈ ಗುಸುಗಾಟಗಳೇಕೆ? ಬೀಗರ ಅಸಮಾಧಾನಕ್ಕೆ ಕಾರಣವೇನು? (ಮಹಾಗ. ೨೯೭).

[ ಗುಸುಗು$_0$ + ಆಟ ]

**ಗುಸುಗುಂಪಲು** (ನಾ).=ಗುಜುಗುಂಪಲು : ಈ ಸುದ್ದಿಯನ್ನು ಕೇಳಿ ಗ್ರಾಮದಲ್ಲಿ ಇನ್ನೊಂದು ಗುಸುಗುಂಪಲು ಹುಟ್ಟಿ ಹರಡುತ್ತಿದ್ದಿತು (ಮಾಯಾವಿ. ೦೩೧) ; ಊರಿನಲ್ಲೆಲ್ಲಾ ಗುಸುಗುಂಪಲು (ದಾಲಿಕ್. ೨೦) ; ದೇವಲೋಕದಲ್ಲೆಲ್ಲಾ ಗುಸುಗುಂಪಲಾಗಿ ಆಡಿಕೊಳ್ಳುತ್ತಿರುವ ಮಾತು ಆಕೆಯ ಕಿವಿಗೂ ಬಿದ್ದಿದೆ (ನಡದಾ. II, ೧೩೭೪).

[ ಗುಸು (<ಕುಸು) + ಗುಂಪಲು ]

**ಗುಸುಗುಂಪು** (ನಾ).=ಗುಸುಗುಂಪಲು: ನೀವು ಯಲ್ಲಿ ಬಂದರು ಗುಸಗುಂಪು ಮಾತುಗಳು ಬಿಡೋದು ಇಲ್ಲ (ಸೌಗಂಧಿ. ೩೩೨-೩).

[ ಗುಸು (<ಕುಸು) + ಗುಂಪು$_1$ (<ಗುಣ್ಪು$_1$) ]

**ಗುಸುಗುಟ್ಟು** 'ಕುಸುಗುಟ್ಟು' ನೋ.

**ಗುಸುಗುಸುಗುಟ್ಟು** (ಕ್ರಿ).=ಕುಸುಗುಂಟ್ಟು : ದಾಳಿಮಾಡುವ ವಿಚಾರವನ್ನು ಗುಸುಗುಸುಗುಟ್ಟುತ್ತಿದ್ದರು (ಪುಟ್ಟರ. ೨೯). [ಗುಸು (<ಕುಸು)+ಕುಟ್ಟು$_1$]

**ಗುಸುಟು** (ನಾ). ೧. ಗೊಣಗುಟ್ಟುವಿಕೆ; ಪಿಸುಮಾತು: ನುಡಿಯಿಂದ ನಡೆಗೆಟ್ಟಿತ್ತು ನಡೆಯಿಂದ ನುಡಿಗೆಟ್ಟಿತ್ತು ಭಾವದ ಗುಸುಟು ಅದು ತಾನೆ ನಾಚಿ ನಿಂದಿತ್ತು (ಅವಚಂ. ೦೩೦-೬೧). ೨. ಗೊಡವೆ; ಗೋಜಂ ಬೇಡ ಕೆಮ್ಮಗಮ್ಮನೆ ಗುಸುಟೇಕೆ ತನ್ನ ಸುಖಕಲ್ಲದೆ ಕೇಳಿಕೆ ಯಾರ ಬಿಟ್ಟಿಯೋ (ಲೀಲಾವ. ೨-೦೦೪); ಧ್ಯಾನಗೇನವ ನೀವು ನಿಮ್ಮರಸನು ಬಲ್ಲಿರಾನೇನ ಬಲ್ಲೆನಾ ಗುಸುಟ (ಭರಚ. ೩-೨೦). [ <ಕುಸು ]

**ಗುಸುನಗೆ** (ನಾ). ಮೆಲ್ಲನೆ ನಗುವಿಕೆ ; ನಸುನಗೆ : ಸಮ್ಮತಿಯ ಗುಸುನಗೆ ಕೋಣೆಯಲ್ಲೆಲ್ಲ ಹರಡಿತು (ಪುನರು. ೩೭೪). [ ಗುಸು (<ಕುಸು)+ನಗೆ ]

**ಗುಸುಮುಸಿ** (ನಾ). ಒಳಗೊಳಗೇ ಆಡುವ ಮಾತು,-ಹರಡುವ ವರ್ತಮಾನ : ದೇಶದಲ್ಲಿ ಗುಸುಮುಸಿಯು ನಡೆವುತೇ ಇತ್ತು (ಇಂಗ್ಲಂಡ. ೦೫೩) ; ಗುಸುಮುಸಿಯು ನಡೆಯೆ ಬಸವನಿಗೆ ವರಸಂಗ (ಕನ್ನಜಾ. ೨೩೨).

[ ಗುಸು (<ಕುಸು) + ಮುಸಿ$_1$ ]

**ಗುಹ** (ನಾ). ೧. ಕುಮಾರಸ್ವಾಮಿ ; ಷಣ್ಮುಖ : "ಅ ಸಬ್ಬಮಂಗಳೆಯಱುಗನು ಸಲೆ ನವಿಲ್ದೇರನಿಂಗಳಮಗಂ ಕುವರ . . . ಅಱುಮೊಗನೆನಲು ಗುಹನ ಪೆಸರಪ್ಪುದು" (ಶಬ್ದಮಂ. ೩) ; ಗೀರ್ವಾಣನಾಥಾತ್ಮಜನಲ್ಲಿಗೆ ಗುಹನನಹಿಭೂಷಣನಂಬಂ ಬೇಡಿಯಟ್ಟಿದೊಡಾತಂ ಬಂದು (ಪಂಪಭಾ. ೮-೧೬ವ). ೨. ರಾಮಾಯಣದಲ್ಲಿ ಬರುವ ಶೃಂಗವೇಲ ಪಟ್ಟಣದ ಅರಸು : ವೀರ ರಘುಪತಿ ವಿಮಲತರ ಭಾಗೀರಥಿಯನುತ್ತರಿಸಿ ಗುಹನಿಂ ಸಾರಿದನು ವರಚಿತ್ರಕೂಟ ಮಹಾಮಹೀಧರವ (ತೊರರಾ. ೨-೪ ಸೂಚನೆ).

[ ಸಂ. ]

**ಗುಹಜನಕ** (ನಾ). ಷಣ್ಮುಖನ ತಂದೆ ; ಶಿವ : ಅನುಪಮನನಸಮಾನನಂ ಗುಹಜನಕನಂ . . . ಅಭವನಂ ಕಂಡು (ಬಸವು. ೪೩-೧೭).

[ ಗುಹ + ಜನಕ ]

**ಗುಹಾಂಗಣ** (ನಾ). ಗುಹೆಯ ಮುಂದಣ ಪ್ರದೇಶ : ಭೋರ್ಗರೆಯಲ್ಬುರಿತರ್ಪ ನಿರ್ಝರಾಸ್ಫಾಲನ ಶೀಕರಪ್ರಸರದಿಂದೆಸೆದತ್ತು ಬೃಹದ್ಗುಹಾಂಗಣಂ (ಕಾದಂಪೂ. ೬೧). [ ಸಂ. (ಗುಹಾ + ಅಂಗಣ) ]

**ಗುಹಾಂತರ** (ನಾ). ಗುಹೆಯ ಒಳಭಾಗ: ಬೌದ್ಧರ ಕಾಲದ ಅನೇಕ ಗುಹಾಂತರ ಕಟ್ಟಡಗಳು (Rock Cut-Architecture) ಇದಕ್ಕೆ ಉದಾಹರಣೆಯಾಗಿವೆ (ಭಾರದ. ೪೯೪). [ಸಂ. (ಗುಹಾ + ಅಂತರ)]

**ಗುಹಾಧ್ವನಿ** (ನಾ). ೧. ಗುಹೆಯಿಂದ ಹೊರಡುವ ಮಾರ್ದನಿ,–ಪ್ರತಿಧ್ವನಿ: ನಗಂ ಶತಗುಹಾಧ್ವನಿಗಳಿಂ ಪ್ರತಿಘರ್ಜಿಪೋಲಂತೆ . . . ಘರ್ಜಿಸಿದುದಾ ಅದ್ವೈತಿ ತಾಂ ದ್ವೈತಿಯಪ್ಪಂತೆ (ಶ್ರೀರಾಮಾ. ೧೪೩-೯೭). ೨. (ಆಲಂ) ಒಬ್ಬರು ಹೇಳಿದ್ದನ್ನೇ ಮತ್ತೊಬ್ಬರೂ ಹೇಳುವುದು,–ಅನುಕರಣೆಮಾಡುವುದು: ವಿಚಾರವು ಗುಹಾಧ್ವನಿಯಾದರೆ ಮಂದಿಯ ಸೊತ್ತು (ವಿಜಾಮಂ. ೬೨); ಆಧುನಿಕ ಕವಿತೆ ಈಗ ಆಡುತ್ತಿರುವುದು–ಎಲ್ಲಿಯೋ ಗಿಳಿಮಾತು, ಗುಹಾಧ್ವನಿ (ಸಾಹಿವಿ. ೯೭). [ಸಂ. (ಗುಹಾ + ಧ್ವನಿ)]

**ಗುಹಾನಿಹಿತ** (ಗು). ೧. ಗುಹೆಯಲ್ಲಿ ಇರಿಸಿದ. (ನಾ). ೨. (ಆಲಂ) ಬಹಳ ಗೂಢವಾಗಿರುವುದು: ಗುಹಾನಿಹಿತ, ಅಭಾವನೀಯ ಎನ್ನಬಹುದಾದ ರಸಪ್ರಕೃತಿಯು ಯಾವುದೊಂದು ವಿಶಿಷ್ಟ ಉತ್ತೇಜನ ಪಡೆದ ಸಾಮಯಿಕತೆಯ ಕಟ್ಟು ಕಾನೂನುಗಳಿಗೂ ಅಧೀನವಲ್ಲ(ನಿಬಂಧ. II, ೨೦). [ಸಂ. (ಗುಹಾ + ನಿಹಿತ)]

**ಗುಹಾಲಯ** (ನಾ). ಗವಿಯನ್ನು ಕೊರೆದು ನಿರ್ಮಿಸಿರುವ ಕಟ್ಟಡ; ಬಂಡೆಯನ್ನೇ ಕೊರೆದು ಮಾಡಿರುವ ಮನೆ: ಪಲ್ಲವರ ಗುಹಾಲಯ ಮತ್ತು ಪ್ರತ್ಯೇಕ ದೇವಾಲಯಗಳು ಏಳನೆಯ ಶತಮಾನಕ್ಕೆ ಹಿಂದೆ ಕಂಡು ಬರುವುದಿಲ್ಲ (ಹೊಯ್ಸವಾ. ೧); ಹಿಂದೂದೇವಾಲಯ ಗಳೊಡನೆ ಜಗತ್ತಿನ ದೃಷ್ಟಿಯನ್ನು ಸೂರೆಗೊಂಡ ಬೌದ್ಧ ಗುಹಾಲಯಗಳು . . . ಅಷ್ಟೇ ಪ್ರಸಿದ್ಧವಾಗಿವೆ (ಭಾರದ. ೪೦೪). [ಸಂ. (ಗುಹಾ + ಆಲಯ)]

**ಗುಹಾಲಿಪಿ** (ನಾ). ಗುಹೆಯಲ್ಲಿ ದೊರೆಯುವ ಶಾಸನಗಳ ಲಿಪಿ: ಕನ್ನಡ ಲಿಪಿಗೂ, ಗುಹಾಲಿಪಿಗೂ ಸಂಬಂಧವುಂಟು (ಕಶಾಅ. ೨೨). [ಸಂ. (ಗುಹಾ + ಲಿಪಿ)]

**ಗುಹಾಲೇಖ** (ನಾ). ಗವಿಯ ಒಳಗಿನ ಬರೆಹ: ನಾಸಿಕದ ಬಳಿಯ ಗುಡ್ಡಗಳ ಓರೆಗಳ ಗುಹಾಲೇಖಗಳಿಂದ ಇದನ್ನು ಊಹಿಸಬಹುದು (ಕರ್ನಾಟ. ೩೦೨). [ಸಂ. (ಗುಹಾ + ಲೇಖ)]

**ಗುಹಾಹಿತ** (ಗು). ೧. ಗುಹೆಯಲ್ಲಿ ಇರಿಸಿದ. (ನಾ). ೨. ಹೃದಯದಲ್ಲಿ ಧ್ಯಾನಿಸಲ್ಪಡುವವನು,–ತೋರುವವನು; ಪರಮಾತ್ಮ: ಈ ಸಕಲ ಕರಣಗಳ ವಿೂಱಿಹ ಶೇಷಿತವ ತಿಳಿಯಾತ್ಮನವನನೆ ಆ ಶ್ರುತಿ ಗುಹಾಹಿತ ಪರಬ್ರಹ್ಮೆಂದು ಸಾರುವದು (ಅಮೃತ. ೩-೫೦). [ಸಂ. (ಗುಹ+ಆಹಿತ)]

**ಗುಹಿಲಿಕ್ಕು** (ಕ್ರಿ). ಗಹಗಹ ನಗು; ಗಹಗಹಿಸು: ಗಂಡುಗಲಿ ರಾವಣಗೆ ಬಿಲ್ಲಿನ ದಂಡೆಯನು ಹಾಯ್ಕಿದಳೆ ನಿಜದೋರ್ದಂಡದಂಗನೆಯೆನುತ ಗುಹಿಲಿಕ್ಕಿತು ಸಖೀನಿವಹ (ತೊರರಾ. ೧-೧೫-೨೫); ನಕ್ಕನಮರವಿರೋಧಿ ಮಿಗೆ ಗುಹಿಲಿಕ್ಕಿ ಶಿಶುವಿಂಗಾರು ಕಲಿಸಿದರೆಕ್ಕಸಕ್ಕವನೀ ಕುಮಾರಂಗೆನ್ನ ಕನಲಿಸಲು (ನಿಭಾಗ. ೬-೪-೧); ಬಿಸರುಹಾಕ್ಷನ ಕೂಡೆ ಕೊಂಬುದೆ ನುಸಿಗಳಿಗೆ ರಣವೆಂದು ಗುಹಿಲಿಕ್ಕಿತು ಸುರಸ್ತೋಮ (ಕೋಗೆಯ. ೨೨-೫೭). [ಗುಹಿಲು + ಇಕ್ಕು]

**ಗುಹಿಲು** (ನಾ). ಗಹಗಹ ಎಂಬ ಧ್ವನಿ; ಗಟ್ಟಿಯಾಗಿ ನಗುವಾಗ ಹೊರಡುವ ಶಬ್ದ. 'ಗುಹಿಲಿಕ್ಕು' ಪರಾ.

**ಗುಹೆ** (ನಾ). ಬೆಟ್ಟ ಮುಂತಾದ ಕಡೆಗಳಲ್ಲಿರುವ ದೊಡ್ಡ ಕಲ್ಲಿನ ಪೊಟರೆ; ಗವಿ: ಹೆಬ್ಬಾಗಿಲೊಳಡ್ಡಂ ನಿಂದು ಗುಹೆಯ ಬಾಗಿಲೊಳು ಸಿಂಹನಿರ್ಪ್ಪಂತೆ ತಾಗಿ ತಳ್ತಿಸುವಾಗಳು (ಎಕ. VIII, ಸೊರಬ. ೧೮೫ ೬; 1156); ಗುಹೆ ಗುಹೆಗಳೊಳಗೆ ಬಳಸಿದ ಬಹುಗಹ್ವರ ಗಹ್ವರಂಗಳೊಳ್ ಪರ ಸೌಖ್ಯಾವಹ ನಿರ್ಝರ ನಿರ್ಝರದೊಳಗಹರಹವೊಪ್ಪಿರ್ಪುದಧಿಕಮಾನು ಮುನಿವೃಂದಂ (ಗಿರಿಕ. ೧-೬೦); ಕುಪಿತ ಸಿಂಹದ ಗುಹೆಯ ಪ್ರಾಗಮದವೊ . . . ಎನಿಸಿತು ರೂಹು ಸುಮನೋಹರ ಭಯಂಕರವಾಯ್ತು ಸುರಸತಿಯ (ಕುವ್ಯಾಅ. ೬-೪೨); ಗುಹೆಗಳಲ್ಲಿ ವಾಸಿಸುತ್ತ ಆದಿಮಾನವನು ಆಗತಾನೆ ಕುಟುಂಬ ಜೀವನವನ್ನು ಆರಂಭಿಸಿದ್ದಾಗ . . . ಯಾವ ಶಿಕ್ಷಣ ಕ್ರಮವೂ ಇರಲಿಲ್ಲ (ಶಿಕ್ಷದ. ೩೫). ೨. ಒಂದು ವನಸ್ಪತಿ; ನರೀಹೊನ್ನೆ ಗಿಡ; ನರಿಬಾಲದ ಹುಲ್ಲು: (೩). [ಸಂ. ಗುಹಾ]

**ಗುಹ್ಣೆ** 'ಗುನ್ಣೆ' ನೋ.

**ಗುಹ್ಣೇಗಾರ** 'ಗುನ್ಣೇಗಾರ' ನೋ.

**ಗುಹ್ಯ** (ಗು). ೧. ಮುಚ್ಚಿಡತಕ್ಕ; ಅಡಗಿಸಿ ಇಡತಕ್ಕ. (ನಾ). ೨. ಮುಚ್ಚಿಡಬೇಕಾದುದು; ಗುಟ್ಟು; ರಹಸ್ಯ: ಬಾಲ ಕೇಳದರಿಂದ ನಿನಗೆನೆ ಪೇಳಿದತಿ ಗುಹ್ಯದಲಿ ನಂಬುಗೆದಾಳಿ ವಾಙ್ಮನಕಾಯಗಳಲದ್ವೈತವನೆ ಬಳಸಿ . . . ಬದುಕೆಂದ (ಗಗತಾ. ೧೭-೬೦): ಮಹಾಜ್ಯೋತಿರ್ಗೃಹದ್ದರ್ಶನಂ ಲಭಿಸಿದಾತಂಗದೇಂ ಗುರುತರಾನಂದಕರ ಗುಹ್ಯಮಾಗುವುದೇನೋ ದೇಹಯಾತ್ರೆಯ ದುರಂತಂ? (ಶ್ರೀರಾಮಾ. ೦೧೯-೨೦೩). ೩. ಮಾಡಬಾರದ ಕೆಲಸ; ಅಕಾರ್ಯ. ೪. ಪ್ರಧಾನವಲ್ಲದುದು; ಶ್ರೇಷ್ಠವಲ್ಲದುದು; ಅಲ್ಪವಾದುದು. ೫. ಮುಚ್ಚಿಕೊಳ್ಳಬೇಕಾದ ಅವಯವ; ಜನನೇಂದ್ರಿಯ: ಚರಣಂಗಳು ಅಷ್ಟದಿಕ್ಪಾಲಕರ ಸ್ಥಾನಂಗಳು ಗುಹ್ಯ ಕಾಮನ ಸ್ಥಾನ (ಬಸವ. ೯೪೪); ಗುಹ್ಯವ ಮುಟ್ಟಿ ನೋಡಿದರೆ ಕಾಮದಹನ ಕಾಣಬಂದಿತ್ತು (ಸರ್ವವ. ೦೭೩-೪೦೯). 'ಗುಹ್ಯರೋಗ' ಪರಾ ೬. ಕೌಪೀನ; ಲಂಗೋಟಿ: "ಅಕಾರ್ಯ ಕಚ್ಛಟಂ ಅನತಿಸಯಂ ಭಗಂಗಳಿವು ಗುಹ್ಯಮೆನಿಕ್ಕು" (ನಾನಾರ ೬೧). [ಸಂ.]

**ಗುಹ್ಯಕ** (ನಾ). ೧. ಕುಬೇರ: "ಐಳಬಿಳಃ . . . ಕುಬೇರಃ, ನರವಾಹನಃ, ಗುಹ್ಯಕಃ, ರಾಜರಾಜಃ, ಧನೀ, ಪುಣ್ಯಜನೇಶ್ವರಃ – ಈ ೧೭ ಕುಬೇರನ ಪೆಸರ್" (ಹಲಾಯು. ೦೪-೬೪). ೨. ದೇವತೆಗಳಲ್ಲಿ ಒಂದು ಭೇದ: ಅಂತು ತಾಮ್ರಮಯ ಗುಹ್ಯಕ ಪ್ರತಿರೂಪಂ ಕಿಚ್ಚಿಂಗೆ ತೋಱಿದರಗು ಕರಗುವಂತೆ ಕರಗಿ ಪೊನಲ್ವರಿಯೆ (ಶಾಂತಿಪು. ೬-೨೯ ವ); ಅಧ್ರುದಲ್ಲಿ ಗುಹ್ಯಕನುಲಿದನು (ಕುವ್ಯಾಅ. ೨೩-೦೮). [ಸಂ.]

**ಗುಹ್ಯಕೇಶ್ವರ** (ನಾ). ಗುಹ್ಯಕರ ಒಡೆಯ; ಕುಬೇರ: ಗುಹ್ಯಕೇಶ್ವರ ಮುಖ್ಯ ಸುರನಿಕರ ಬಂದುದು (ಕಾಶಿರಾ. ೪೩-೪೨). [ಗುಹ್ಯಕ+ಈಶ್ವರ]

**ಗುಹ್ಯರೋಗ** (ನಾ). ಜನನೇಂದ್ರಿಯಗಳಿಗೆ ಸಂಬಂಧಪಟ್ಟ ರೋಗ: ಅವನು ಯೌವ್ವನದಲ್ಲಿಯೇ ಗುಹ್ಯರೋಗದಿಂದ ನರಳುತ್ತಿದ್ದನು (ರೂಢಿ). [ಗುಹ್ಯ + ರೋಗ]

**ಗುಹ್ಯಲಂಪಟತ್ವ** (ನಾ). ಲೈಂಗಿಕ ಆಸಕ್ತಿ; ಕಾಮುಕತೆ: ಜಿಹ್ವಾಲಂಪಟ ಗುಹ್ಯಲಂಪಟತ್ವಕ್ಕೊಳಗಾಗಿರ್ದ ನಾವು ಜಿಹ್ವಾಲಂಪಟತ್ವವಿಲ್ಲದವರೆಂದರೆ ಆಗಲಱಿಯರು (ಮೋಳಿಮಾ. ೬೨-೨೫೫ ಅರ್ಥ). [ಗುಹ್ಯ + ಲಂಪಟತ್ವ]

**ಗುಹ್ಯಾಂಗ** (ನಾ). = ಗುಹ್ಯ ೫: ಗುಹ್ಯಾಂಗಗಳು; ಗೋಪ್ಯ ಭಾಗಗಳು (The (Privy) Parts. ಇಂಕನಿ). [ಗುಹ್ಯ + ಅಂಗ$_2$]

**ಗುಹ್ಯಾತ್ಮ** (ನಾ). ಅಂತರಂಗದಲ್ಲಿ ಅಡಗಿರುವ ಆತ್ಮ; ಪರಮಾತ್ಮ: ಸರ್ವದಲ್ಲಿ ಗುಹ್ಯಾತ್ಮನೆನಿಸುತ ಪರ್ವಿ ಚೇಷ್ಟಿಸುತಿರ್ಪ ಹರಿ ತಾನೋರ್ವ ಗಡ (ಗಗತಾ. ೦೩-೩೭). [ಗುಹ್ಯ + ಆತ್ಮ]

**ಗುಳ್$_1$** 'ಗೊಳ್' ನೋ.

**– ಗುಳ್$_2$** (ಪ್ರ). ಭಾವಾರ್ಥವಲ್ಲಿ ಸೇರುವ ಒಂದು ಕೃದಂತ ಪ್ರತ್ಯಯ. 'ತಿವಿಗುಳ್', 'ಪೊಯ್ಗುಳ್', 'ಬಯ್ಗುಳ್' ಪರಾ. [?]

**ಗುಳ್ಳ$_1$** 'ಗುಳ್ಳ' ನೋ.

**ಗುಳ್ಳ$_2$** 'ಕುಟು' ನೋ.

**ಗುಳ್ಳ$_3$** 'ಗುಟಿ' ನೋ.

**ಗುಳಂಬ** 'ಗುಡುಂಬ' ನೋ.

**ಗುಳಕ್** (ನಾ). ಒಂದು ಅನುಕರಣ ಶಬ್ದ: ಗುಳಿಗೆಯನ್ನು ಗುಳಕ್ ಎಂದು ಒಂದೇ ಬಾರಿಗೆ ನುಂಗಿಬಿಟ್ಟನು (ರೂಢಿ).

**ಗುಳಕವ್ವ** (ನಾ). ಮಣ್ಣಿನಿಂದ ಮಾಡಿದ ದಪ್ಪನಾದ ಗೌರೀವಿಗ್ರಹ: ಅಳಕೂತ ಬಳಕೂತ ಬಂದಾಳ ಗುಳಕವ್ವ ಬಂದು ನಿಂತಾಳ ಅಗಸ್ಯಾಗ (ಜನಗೀ. ೮). [ ? ]

**ಗುಳಗಿಚಣ್ಣ** 'ಗುಡಿಗಿಚಲ್ಲಣ' ನೋ.

**ಗುಳಗಿಚೊಣ್ಣ** 'ಗುಡಿಗಿಚಲ್ಲಣ' ನೋ.

**ಗುಳದಾಳಿ, ಗುಳುದಾಳಿ** (ನಾ). ಮಾಂಗಲ್ಯದ ತಾಳಿ; ಐದೆದಾಳಿ: ಸರದಾರ ನಿಮ್ಮಿಂದ ಸರುವೆಲ್ಲ ಮರತೇನ ಸರದಾಗ ಇರುವ ಗುಳದಾಳಿ ನಿಮ್ಮಿಂದ ಸರುವ ಬಳಗೆಲ್ಲ ಮರೆತೇನ (ಬೆಳುಮು. ೧೨೪); ಪಾರ್ವತಿಯು ಗುಳದಾಳಿಯನ್ನು ಹರಿದು ಚೆಲ್ಲಿದಳು (ಜೀವಪ್ರ. ೫೪); ತೆಗೆದುಕೋ ನಿನ್ನ ಗುಳದಾಳಿ ಒಡವೆ ತೊಡವೆ; ನಾನು ಅವನೊಡನೆ ಬಾಳು ವೆ ಮಾಡಿಕೊಂಡಿರುತ್ತೇನೆ (ಸ್ವಾಪ್ನ. ೬). **ಗುಳುದಾಳಿ:** ಕಲ್ಲವ್ವನ ಸೀರಿಯ ಮಲ್ಲವ್ವನ ಕುಪ್ಪುಸವ ಈರವ್ವ ಕಟ್ಟಿರು ಗುಳುದಾಳಿ! ಸೆ ೦ೀ! ತಕ್ಕೊಂಡು ಹೇಳಿದೆ ಬಂದಾರ ಮದುವಿಗೆ (ಲೋಕಗೀ. ೨೬).

**ಗುಳದಾಳಿ ಉಳಿಸು** = ಮುತ್ತೈದೆತನವನ್ನು ಉಳಿಸು; ಗಂಡನನ್ನು ಒದಂಕಿಸು: ನನ್ನ ಗುಳದಾಳೀ ಉಳಿಸು ನಮ್ಮವ್ವಾ ಅಂತ ಗೋದವ್ವ ಗೋಗರೆದಳು (ಮಾಡಿಮ. ೬೯). [ < ಕುಲ ? + ತಾಳಿ₁ (= ತಾಲಿ₁) ]

**ಗುಳಪಪ್ಪಡಿ, ಗುಳಪಾವಟೆ, ಗುಳ್ಳಪಟೆ** (ನಾ). ಒಂದು ಬಗೆಯ ಸಿಹಿತಿಂಡಿ; ಬೆಲ್ಲದ ಪಾಕದಲ್ಲಿ ಮಾಡಿದ ರವೆಯ ತಿಂಡಿ: (*). **ಗುಳಪಾವಟೆ:** ನೀನು ಆ ದಿನ ಮಾಡಿಕೊಟ್ಟಿದ್ದ ಗುಳಪಾವಟೆ ರುಚಿ ಇನ್ನೂ ಬಾಯಲ್ಲಿ ನೀರೂರಿಸುತ್ತಾ ಇದೆ (ಉಮಾಶಿ. ೧೫). **ಗುಳ್ಳಪಟೆ:** ಗುಳ್ಳಪಟೆ ಮೊದಲಾದ ತಿಂಡಿಗಳನ್ನು ರಾಮಚಂದ್ರನಿಗೆ ಕೊಟ್ಟರು (ಕಳಹು. ೫). [ ← ಹಿಂ. ಗುಲಪಪಡೀ; ಮರಾ. ಗೂಳಪಾಪಡೀ ]

**ಗುಳಪಾವಟೆ** 'ಗುಳಪಪ್ಪಡಿ' ನೋ.

**ಗುಳಪುಟ್ಟಿ** (ನಾ). ಚಿಕ್ಕಪುಟ್ಟಿ; ಸಣ್ಣಬುಟ್ಟಿ: ಗನ್ನವ್ವ ಪುತ್ರೇರ ತಕ್ಕ ಗುಳ ಪುಟ್ಟಿ ಕೊ ಅವ್ವ ನಿಮ್ಮ ತುಪ್ಪದ ತಕ್ಕ ಹೊಸನೆಲುವ (ಲೋಕಗೀ. ೦೫೬).
[ < ಕುಳ್ಳ + ಪುಟ್ಟಿ₂ ]

**ಗುಳಲ** (ನಾ). ಗುಳ್ಳ ಬದನೆಯ ಗಿಡ ಮತ್ತು ಅದರ ಕಾಯಿ. 'ಗುಳಲಕಾಯಿ' ಪರಾ. [ < ಗುಳ್ಳ ]

**ಗುಳಲಕಾಯಿ** (ನಾ). ಗುಳ್ಳದ ಕಾಯಿ; ಬದನೆಕಾಯಿ: (*).
[ ಗುಳಲ + ಕಾಯಿ₄ (< ಕಾಯ್₄) ]

**ಗುಳವ** (ನಾ). (?): ಬತ್ತೀಸ ಕಡಿಯ ಬಾಹರ ಪುಟದ ಗುಳವದ ಕಣಂಗಳ ಕುಳಿಶದಳಂ ಪಳಕದ ಪಾರಡದುಜ್ಜ್ವಳಿಕೆಯಿಂ (ಅನಂಪು. ೦೪-೬ ವ).
[ ಈ ಇದು 'ಗುಟ'ಶಬ್ದದ ಅಪಲಿಖಿತವಿರಬಹುದು ]

**ಗುಳವತ್ತಿ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು: ಬೆಳಲು ಬಿಲ್ಪತ್ರೆ . . . ಕಾರೆಬೋರೆ ಗುಳವತ್ತಿ ತುಂಬುರು ನಗರೆ ಮುಂತಾದ ಪಣ್ಗಳ ತಂದರಾಳ್ದನ ಬಳಿಗೆ (ವೋಹತ. ೦೯ ೫೬). [ ? ]

**ಗುಳಾಪು, ಗುಳುಪು, ಗುಳೋಪು** (ನಾ). ಗಾಜಿನ ಬುರುಡೆ, –ಗೋಳ: ಮೇಲೆ ಚಿತ್ರ ವಿಚಿತ್ರ ವರ್ಣದ ಗುಳಾಪುಗಳು ತೂಗಾಡುತ್ತಿದ್ದುವು (ಸ್ಕೂಲಮಿ. ೧೨೪); ತಾನು ಎದುರು ನಿಂತು ಅಲ್ಲಲ್ಲಿ ಕಾಗದದ ಹೂವಿನ ಕುಚ್ಚು, ಗುಳಾಪು, ತೋರಣ, ಫರಫರೆ ಇವುಗಳಿಂದ ಮಂಟಪದ ಶೋಭೆಯನ್ನು ರಚಿಸಿದಳು (ಗಂಪಾಯಿ. ೦೫೩); ಗುಳಾಪು ಮುಂತಾದವುಗಳನ್ನು ತರತರದ ಕ್ಷಾರಗಳನ್ನು ಹಾಕಿ ಸಿದ್ಧಮಾಡಿದ ಕಾಚಿನ ರಸವನ್ನು ಕೊಳವಿಯ ತುದಿಗೆ ಹಚ್ಚಿ ಊದಿ ಮಾಡುತ್ತಾರೆ (ಮುಂಬಯಿ. ೪-೩೩೦). **ಗುಳುಪು:** ದೀಪ ಹಚ್ಚುವ ಗುಳುಪು, ಬೀಲೆರು ಗ್ಲಾಸು, ದುರ್ಬಿಣಿಯ ಕನ್ನಡಿ ಮುಂತಾದುವುಗಳನ್ನು (ಮುಂಬಯಿ. ೬-೩೯). **ಗುಳೋಪು:** ಆ ಮಂಟಪದಲ್ಲಿ 'ಲಸ್ತರು', 'ಗುಳೋಪು', 'ಕಂದೀಲು', ಯಾವುದೂ ಇರಲಿಲ್ಲ (ನಗಗ. ೪೧); ಅರಮನೆಯವರೇ ಬಂದು ಅದನ್ನು ಸಿಂಗರಿಸಿ ಕಂದೀಲು ಗುಳೋಪು ಕಟ್ಟಿದ್ದಾರೆ (ಮಲ್ಲಿ. ೯೬).
[ ← ಇಂ. Globe ]

**ಗುಳಿ₁** 'ಕುಟ್ಟಿ₂' ನೋ.

**–ಗುಳಿ₂** '–ಕುಳಿ₃' ನೋ.

**ಗುಳಿಕ** (ನಾ). ೧. ಅಷ್ಟಫಣಿಗಳಲ್ಲೊಂದು; ಎಂಟು ಜನ ಸರ್ಪ ನಾಯಕರಲ್ಲಿ ಒಬ್ಬ: ಉರಗಪತಿ ಶೇಷರಾಜನ ಕೋಶದೆಡೆಯೊಳಿಹ ಸಂಜೀವಕದ ಮಣಿಯನು ತರಬಲ್ಲನಾವವಂ ಗುಳಿಕ ವಾಸುಕಿ ತಕ್ಷಕರ . . . ಭೀಕರ ವಿಷೋತ್ಕರದಿಂದೆ ಕಾಹು ಬಲಿದಿಹುದು (ಜೈಮಿಭಾ. ೨೪-೪). 'ಅಷ್ಟಫಣಿ' ಪರಾ. ೨. ಶನಿಯ ಮಗ; ಒಂದು ಉಪಗ್ರಹ. 'ಗುಳಿಕಕಾಲ' ಪರಾ. [ < ಸಂ. ಕುಲಿಕ, ಗುಲಿಕ ]

**ಗುಳಿಕಕಾಲ** (ನಾ). ಗುಳಿಕನು ಅಭಿಮಾನಿ ದೇವತೆಯಾಗಿರುವ ಕಾಲ; ಶುಭಕಾರ್ಯಗಳಿಗೆ ಪ್ರಶಸ್ತವಲ್ಲದ ಕಾಲ; ಅಶುಭಕಾಲ: ಮಾರನೆಯ ದಿನ ಆ ಜಟಕಾಗಾಡಿಯನ್ನು ನೋಡಲು ಅಪ್ಪಮಿತ್ರನೊಂದಿಗೆ ಗುಳಿಕ ಕಾಲದಲ್ಲಿಯೇ ಹೊರಟ (ನಾಡಿಗೀ. ೪೮); ರಾಹುಕಾಲ ಗುಳಿಕಕಾಲಗಳಲ್ಲಿ ಶುಭಕಾರ್ಯವನ್ನು ಮಾಡಬಾರದು (ರೂಢಿ). [ ಗುಳಿಕ + ಕಾಲ ]

**ಗುಳಿಕಲ್ಲು** 'ಗುಟುಕಲ್' ನೋ.

**ಗುಳಿಗ** (ನಾ). (ಕರಾ) ಒಂದು ದೆವ್ವದ ಹೆಸರು: ಧನಿಗಳಿಗೆ 'ಗುಳಿಗ' ಬಡಿದಿದೆ (ಕುಡಿಕೂ. ೨೫೯); ಗುಳಿಗನ ಉಪದ್ರದಿಂದ ರಕ್ತ ಕಾರಿ ಸತ್ತಳಂತೆ (ಕೋಮದು. ೭); ಸದಾಗತಿ ಒಬ್ಬನು ಕಲ್ಲಿಲ್ಲದ ಗುಳಿಗನಂತೆ ಅತ್ತಿತ್ತ ಅಲೆಯುತ್ತಿದ್ದಾನೆ (ಹಗಲಿ. ೩೮). 'ಗುಳ್ಳಕೆ' ಪರಾ. [ ← ತುಳು. ಗುಳಿಗ ]

**ಗುಳಿಗಣ್ಣು** 'ಕುಟುಗಣ್' ನೋ.

**ಗುಳಿಗದ್ದೆ** (ನಾ). ತಗ್ಗಿನ ಗದ್ದೆ: ಬಯಲ ದೊಡ್ಡ ಗದ್ದೆ ಗುಳಿ ಗದ್ದೆಯಾ ಎರಡು (ಸೌಇಇ. ೦೯೩೦, ಉಡುಪಿ. ೫೭೫-೦೭; ?).
[ ಗುಳಿ₁ (< ಕುಟ್ಟಿ₂) + ಗದ್ದೆ (< ಗಟ್ದೆ) ]

**ಗುಳಿಗೆ₁, ಗುಟ್ಟಿಗೆ, ಗುಣಿಕೆ₂** (ನಾ). ೧. ಉಂಡೆ; ಉರುಳೆ: ಪಳಿಕಂ, ಪೇಳಿಗೆ, ವೀಳಿಗೆ, ಗುಳಿಗೆ . . . ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟ್ಟಿಯುಂ ಕುಳಂಗಳಾದುವು (ಶಮದ. ೩೩ ವೃತ್ತಿ); ಪ್ರಳಯದುರಿ ಕಾಳ ಕೂಟದ ಗುಳಿಗೆ ಪುರಾಂತಕ ಲಲಾಟ ನೇತ್ರಾನಳನೊಂದಳವಿಗವುಂಗ್ಗಳವು ವರ್ಗಳ ಮುಳಿಸುಗಳುಂ (ಪಂಪಭಾ. ೭-೬೬); ವ್ಯೋಮಕೇಶನು . . . ವಿಭೂತಿಯ ಗುಳಿಗೆಯನು ನೆಗ್ಗೊತ್ತಿ ಸರ್ವಾಂಗದಲಿ ಧೂಳಿಸಿದ (ಕು ವ್ಯಾ ಕ. ೭-೧೧). ೨. ಮಾತ್ರೆ: ನಲವಿಂ ಬೆರಸದೆ ಭೀತಿಯ ಬಲದಿಂ ಬೆರಸಲ್ಕೆಕಾಂತೆಯರ್ಗನುರಾಗಂ ಪಟದಾಗೆ ಪುರುಷರೌಷಧಿ ಗುಳಿಗೆಯವೊಲ್ ಮನಕ್ಕೆ ಹೇಯಮಂ ಪುಟ್ಟಿಸುಗುಂ (ದಶಕು. ೪-೯೫); ವೈದ್ಯರು ಎರಡು ಗುಳಿಗೆ ನುಂಗಿಸಿದರು (ರೂಢಿ). ೩. ಒಂದು ನಾಣ್ಯ: ಅಕ್ಷರದಲ್ಲೂ ಯಿದೇ ನಾಣ್ಯ ಕಂಠೀರಾಯ ಗುಳಿಗೆ ವರಹ (ಎಕ. XIV, ನಂಜನ. ೨೯೬-೦೭; 1770). ೪. (ಆಲಂ) ಸುಳ್ಳುಮಾತು: ಆ ಕಕ್ಕಶಿವನ ಗುಳಿಗೆಗಳಿಗೆ ನೀನು ಒಳ್ಳೇ ಮರುಳಾದೆ? (ತುಳಸಿ. ೨೫). **ಗುಟ್ಟಿಗೆ:** ೧. ಭುಜಮೂಲದೊಳೆಸೆವ ವಿಭೂತಿಗುಟ್ಟಿಗೆಯ . . . ಭವಾನಿಯ ರಮಣನಂ ಕಾಣುತ್ತ (ವಿರೂಪಾ. ೭೦). **ಗುಣಿಕೆ₂:** (*).
[ < ಸಂ. ಗುಟಿಕಾ ]

**ಗುಳಿಗೆ₂** (ನಾ). ಮಡ; ಗುಲ್ಫ; ಹರಡು: "ಗುಳಿಗೆಯ ಘುಟಿಕೆಯಪ್ಪುದು" (ಚತುನಿ. ೦೬). [ < ಸಂ. ಘುಟಿಕಾ ]

**ಗುಳಿಗೆಗಟ್ಟು** (ಕ್ರಿ). ೧. ಉಂಡೆಮಾಡು; ಉರುಳೆಯಾಗಿ ಕಟ್ಟು; ಮುದ್ದೆಮಾಡು. ೨. (ಆಲಂ) ತುತ್ತುಮಾಡು; ನುಂಗು: ಜವನಂ ಜವಗಿಡಿಸುವ ಕುಳಿಕನಂ ಗುಳಿಗೆಗಟ್ಟುವ (ರಾಮಾಶ್ವ. ೯೪-೧೬).

[ ಗುಳಿಗೆ$_1$ + ಕಟ್ಟು$_1$ ]

**ಗುಳಿಗೆಯಿಕ್ಕು** (ಕ್ರಿ). ೧. ಉಂಡೆಮಾಡು; ಗುಳಿಗೆಕಟ್ಟು. ೨. ಗುಳಿಗೆ ಮಾಡಿ ತಿನ್ನು,–ನುಂಗು: ಹಾಲಾಹಲಮಂ ಗುಳಿಗೆಯಿಕ್ಕಲುಂ ಉರಿಲಿಂಗಮನಾಲಿಂಗಿಸಲುಂ . . . ನೆರೆವ ನಿಮ್ಮಿದಿರೊಳೊರ್ವ ಗೋಪ ಕುಟಿಲಂ ಗಂಡಗರ್ವಮಂ ಮೆಱೆದಪಂ (ಜಗವಿ. ೭-೮೪ ವ). ೩. ಗುಳಿಗೆಯನ್ನು ಹಾಕು: ವಿಯಚ್ಚರನ ಬಾಯ್ಗೆ ಗುಳಿಗೆಯಿಕ್ಕಲು (ಸಾಳ್ವ ಭಾ. ೧೭-೧೬). ೪. (ರಹಸ್ಯವಾಗಿ) ವಿಷ ಪ್ರಯೋಗಮಾಡು; ಮದ್ದು ಹಾಕು: ಆ ಹುಡುಗನಿಗೆ ಯಾರೋ ಗುಳಿಗೆಯಿಕ್ಕಿದ್ದಾರೆ, ಆರೋಗ್ಯವಿಲ್ಲ (ರೂಢಿ). [ ಗುಳಿಗೆ$_1$ + ಇಕ್ಕು ]

**ಗುಳಿಗೆಯಿಡು** (ಕ್ರಿ). =ಗುಳಿಗೆಯಿಕ್ಕು ೨: ಬಳವ್ವೈರಿಯೆಂಬ ಸಾಧಕನಿಳೆಯಂ ಪೊಸ ಮೂಸೆ ಮಾತೆ ಶಶಿಮಂಡಲಮಂ ಗುಳಿಗೆಯಿಡೆ (ಅನಂಪು. ೭-೮೫).

[ ಗುಳಿಗೆ$_1$ + ಇಡು$_1$ ]

**ಗುಳಿಗೆಯೆತ್ತು** (ಕ್ರಿ). ತುತ್ತುಮಾಡಿ ಎತ್ತು; ಕಬಳಿಸು: ಸಿಂಗದ ಪಿಂಡು ಪೂಡಿರೆ ಘನಾಧ್ವಮನೀಂಟುವ ದಿಕ್ತಟಂಗಳಂ ನುಂಗುವಜಾಂಡಮಂ ಗುಳಿಗೆಯೆತ್ತು [ಪಾಠಾಂ. ಯಿಕ್ಕು]ವ ತಕ್ಕಿನೊಳೆಟ್ಟಿರಲ್ ಕರಂ ಪಿಂಗಳನೇತ್ರನೆಯ್ದಿದನುಜಾರಿಯನಪ್ರತಿಮ ಪ್ರತಾಪನಂ (ಜಗವಿ. ೧೮-೨೦).

[ ಗುಳಿಗೆ$_1$ + ಎತ್ತು$_1$ ]

**ಗುಳಿಬೀಳು** ‘ ಕುಳಿಬೀಳು ’ ನೋ.

**ಗುಳಿಮಣೆ** (ನಾ). ಗುಳಿಗಳಿಂದ ಕೂಡಿದ ಮಣೆ; ಮಕ್ಕಳು ಒಂದು ಬಗೆಯ ಆಟದಲ್ಲಿ ಉಪಯೋಗಿಸುವ, ಕವಡೆ, ಹುಣಿಸೆ ಅಥವಾ ಹಾಲವಾಣದ ಬೀಜ ಮೊದಲಾದುವನ್ನು ಹಾಕಲು ಅನುಕೂಲವಾದ ಗುಣಿಗಳಿಂದ ಕೂಡಿದ ಮಣೆ; ಚನ್ನೆಮಣೆ: ಮನವೆಳದಿರ ಬೇಕು ಗುಳಿಮಣೆಯಾಟಕೆ ಮುದಿಯಾದರೇನಂತೆ ತನುವು (ಚಂದ್ರವೀ. ೨೭-೭). ‘ಅಟ್ಟುಗುಳಿ’ ಪರಾ. [ ಗುಳಿ$_1$ (<ಕುಟಿ$_2$) + ಮಣೆ ]

**ಗುಳು$_1$** ‘ ಕುಟು ’ ನೋ.

**ಗುಳು$_2$** ‘ ಕುಳ$_2$ ’ ನೋ.

**ಗುಳುಕ್**, ಗುಳುಕು (ನಾ). ಒಂದು ಅನುಕರಣ ಶಬ್ದ: ಔಷಧಿಯ ಗುಳಿಗೆಯನ್ನು ಗುಳುಕ್ ಎಂದು ನುಂಗಿಬಿಡು (ರೂಢಿ). **ಗುಳುಕು:** ಕುದುರೆಯ ಹೊಟ್ಟೆಯ ಗುಳುಕು, ಕೀಲಾಲ – ವಾಜಿಧ್ವನಿ (ನಾನಾರ. ೬. ೫೪).

**ಗುಳುಕನೆ**, , ಗುಳುಕ್ಕನೆ (ಅ). ೧. ಒಂದು ಅನುಕರಣಾವ್ಯಯ; ನುಂಗುವುದನ್ನು ಅನುಕರಿಸುವ ಅವ್ಯಯ: ಮಗು ಗೋಲಿಯನ್ನು ಗುಳುಕನೆ ನುಂಗಿಬಿಟ್ಟಿತು (ರೂಢಿ). ೨. ಪಕ್ಕನೆ; ಒಮ್ಮೆಲೆ: ಗುಣವುಯಿಲ್ಲದ ಗೂಗಿಯನೀಗ ಗುಳುಕನೆ ತಿಂದರೆ ಶೀಲವೂ (ಚಿದಾವ. ೭೭-೧೪). **ಗುಳುಕ್ಕನೆ:** ೧. ಒಂದೇ ಬಾರಿಗೆ ಗುಳುಕ್ಕನೆ ನುಂಗಿಬಿಟ್ಟ (ರೂಢಿ).

**ಗುಳುಗುಳಕ್ಕನೆ** (ದ್ವಿರುಕ್ತಿ): ಕಂಗಳರೆಮುಗಿವುತ್ತ ನೆಱೆ ಧೈರ್ಯಂಗಳೊಂದುತ ಗುಳುಗುಳಕ್ಕನೆ [ಪಾಠಾಂ. ಗುಳುಕುಗುಕ್ಕನೆ] ನುಂಗುತಂ (ಬಸವು. ೫೯-೨೦). [ ಗುಳುಕ್ + – ಅನೆ$_1$ ]

**ಗುಳುಕು** ‘ಗುಳುಕ್’ ನೋ.

**ಗುಳುಕ್ಕನೆ** ‘ಗುಳುಕನೆ’ ನೋ.

**ಗುಳುಗು** (ಕ್ರಿ). (?).

**ಗುಳುಗಬಿಡು** = ಮುಳುಗುವಂತೆ ಮಾಡು; “ ಮುಳುಗಿಸು ” (ಸೂಪಶಾ. ಟೀಕೆ); ನೀರಿನೊಳು ತುಪ್ಪಮೆಱೆದದ ಮರಳುವೊಲು ಕಾಸಿ ನೀರಾಱಿಸಿಯೆ ಮೇಲೆ ಹೆತ್ತ ತುಪ್ಪವ ತೆಗೆದು . . . ಹತ್ತಿಹರಳರಸಮಂ ಪೂರೈಸಿ ಕಾಸಿ ಕೆಮ್ಮಣ್ಣಳಿಯ ಗುಳುಗ [ಪಾಠಾಂ. ಗುಳಗು, ಯಳಿಯ. ಗುರುಳ]ಬಿಡಲದಱ ನಾತಂ ಕೆಡುವುದು (ಸೂಪಶಾ. ೨-೧೯). [ ? ]

**ಗುಳುಗುಳನೆ** ‘ ಗುಟುಗುಟನೆ ’ ನೋ.

**ಗುಳುಗುಳಿಸು** ‘ ಗುಟುಗುಟಿಸು ’ ನೋ.

**ಗುಳುಗುಳು** ‘ ಗುಟುಗುಟು ’ ನೋ.

**ಗುಳುಗುಳುಗುಪ್ಪಂಡಿ** (ನಾ). ಮಕ್ಕಳು ಆಡುವ ಒಂದು ಬಗೆಯ ಆಟ: ಮಕ್ಕಳಿಬ್ಬರೂ ಗುಳುಗುಳುಗುಪ್ಪಂಡಿಯಾಟಕ್ಕಾಗಿ ಮಣ್ಣು ತರಲು ಹೋಗಿ ಹುತ್ತದಲ್ಲಿ ಕೈಹಾಕಿ ಹಾವು ಕಚ್ಚಿ ಸಾಯುತ್ತಾರೆ (ಶರಜ. ೭೭೦). ‘ ಉಲುಗುಲುಗಂಪ್ಪಂಡೆ ’ ಪರಾ. [ ? ]

**ಗುಳುಚ್ಛ** ‘ ಗುಲುಚ್ಛ ’ ನೋ.

**ಗುಳುದಾಳಿ** ‘ ಗುಳದಾಳಿ ’ ನೋ.

**ಗುಳುಪು** ‘ ಗುಳಾಪು ’ ನೋ.

**ಗುಳೂಚಿ**, ಗುಳೂಚೆ (ನಾ). ಒಂದು ಬಗೆಯ ಬಳ್ಳಿ; ಅಮೃತವಳ್ಳಿ: ಜಳದೊಳ್ ರಾಸ್ನೆ ಗುಳೂಚಿ ಸಬ್ಬಸಿಗೆ ಬಿಲ್ವಂ ಪದ್ಮಕಂ ನಾಗರಂ . . . ಕುಡೆ ಕಷಾಯಂ ಮಾಡಿ ವಾಹಕ್ಕೆ ಕೇವಲ ವಿಷಾಯೋಗಮೆ ಮಾಣಿಸಲ್ಕೆ ನೆಱೆಗುಂ ನಾನಾವಿಧ ವ್ಯಾಧಿಯಂ (ಲೋಕೋಪ. ೯-೨೩೮); ಅನಲಂ ಗುಳೂಚಿ ಮೊಸರೆಳ್ಳಿನಿತುಮನೊದಗೂಡಿ ಕೊಡುವುದಿರ್ಪತೆ.ೊಂದು ದಿನವರೆಗಂ ಕುದಿರೆಗೆ (ಅಶ್ವಶಾ. ೭-೫೩). **ಗುಳೂಚೆ:** ಜಳದಂ ಶುಂಠಿ ದುರಾಲಭೆ ಗುಳೂಚೆಯೆಂಬಿನಿತುಮಂ ಕಷಾಯಂಗೊಂಡಾಗಳ್ ಕುಡಿಯೆ ವಾತದೋಷಂ ಸಲೆ ವಿಷಮಜ್ವರಂ ದಿನತ್ರಯಕ್ಕುಪಶಮಿಕುಂ (ಲೋಕೋಪ. ೯-೧೬). [<ಸಂ. ಗುಡೂಚೀ ]

**ಗುಳೂಚೆ** ‘ ಗುಳೂಚಿ ’ ನೋ.

**ಗುಳೂರಿಗೆ**, ಗುಳ್ಳೋರಿಗೆ (ನಾ). ಒಂದು ಬಗೆಯ ಸಿಹಿಯಾದ ಭಕ್ಷ್ಯ,–ಹೂರಿಗೆ: ತಂಡತಂಡದ ಪಾಕ ಷಡುರಸ ಭಕ್ಷವು ಮಂಡಿಗೆ ಫೇಣಿ ಗುಳೂರಿಗೆಯೂ ವುಂಡಲಿಗೆಯು (ಚಂದ್ರಾವ. ೫). **ಗುಳ್ಳೋರಿಗೆ:** ಗೋಲಬಾಹ್ಯ ಲೆನ್ಸದ ಆಕಾರವು ಗುಳ್ಳೋರಿಗೆಯ ಹಾಗೆ ಇರುತ್ತದೆ (ಮುಂಬಯಿ. ೬-೫೩); ಗಂಗವ್ವ ತುಪ್ಪದಲ್ಲಿ ಅನಾರಸ ಗುಳ್ಳೋರಿಗೆಗಳನ್ನು ಕರಿದು ಮಾಮಲೇದಾರರ ಮನೆಗೆ ಕಳಿಸಬಹುದಿತ್ತಲ್ಲ (ಗಂಮಾಯಿ. ೩೩); ಗುಳ್ಳೋರಿಗೆಯಂತೆ ಉಬ್ಬಲು ಪಂಡಿತನಿಗೆ ತಡೆಹಿಡಿಯಲಿಲ್ಲ (ಸಮುಜೀ. ೯೧೭)

[ ಗುಳ$_3$ (<ಗುಟ) + ಪೂರಿಗೆ ]

**ಗುಳೆ** ‘ ಗೂಳೆಯ ’ ನೋ.

**ಗುಳೆಏಳು** ‘ ಗೂಳೆಯೇಳು ’ ನೋ.

**ಗುಳೆಕಟ್ಟು** ‘ ಗುಳೆಗಟ್ಟು ’ ನೋ.

**ಗುಳೆಕಾರ** ‘ ಗೂಳೆಕಾರ ’ ನೋ.

**ಗುಳೆಕಿತ್ತಿಸು** (ಕ್ರಿ). ನೆಲೆಬಿಟ್ಟು ಹೊರಡಿಸು; ಕಂಬಿಕೀಳಿಸು; ಹೊರದಬ್ಬು: ಅವನನ್ನು ವಾಡೆಯಿಂದ ಗುಳೇಕಿತ್ತಿಸುವದಂತೂ ತೀರ ಕಠಿನವಾಗಿತ್ತು (ದೀಪಹ. II, ೧೧೦). [ ಗುಳೆ (<ಗೂಳೆಯ) + ಕಿತ್ತಿಸು$_1$ ]

**ಗುಳೆಕೀಳು** (ಕ್ರಿ). ಸ್ಥಳಬಿಡು; ಕಂಬಿಕೀಳು: ಶ್ಯಾಮರಾಯನ ಸಮ್ಮುಖದಲ್ಲಿ ವಿರಾಜಮಾನವಾದ ತಿಕಡಿ ಗುಳೇಕಿತ್ತಿತ್ತು (ದೀಪಹ. II, ೧೧).

[ ಗುಳೆ (<ಗೂಳೆಯ) + ಕೀಳು$_1$ (<ಕೀೞ್$_1$) ]

**ಗುಳೆಗಟ್ಟು**, ಗುಳೆಕಟ್ಟು (ಕ್ರಿ). ಬರಗಾಲ ಮುಂತಾದ ಕಷ್ಟ ಕಾಲದಲ್ಲಿ ವಲಸೆ ಹೋಗಲು ಗುಂಪುಕೂಡು; ಒಟ್ಟಿಗೆ ಸೇರು: ಊರ ಹೊರಗೆ ‘ ಗುಳೇಗಟ್ಟಿ ’ ಕೂಲಿಗೆಂದು ಬಂದ ಗುಳೇದಗುಡ್ಡದ ಕಡೆಯ ಅನೇಕ ಕನ್ನಡಿಗರನ್ನು ಅಂದು ನಾಟಕಕ್ಕಾಗಿ ಆಮಂತ್ರಿಸಿದ್ದೆವು (ಜನನಾಂ ಪ್ರಸ್ತಾವನೆ). **ಗುಳೆಕಟ್ಟು:** ಈಗಾಗಲೆ ಹದಿನೆಂಟು ಸಾವಿರ ಜನ ಗುಳೆಕಟ್ಟಿ ಹೋಗಿದೆಯೆಂದು ಸೂರಸಿಂಗನು ಕೇಳಿದ್ದನು (ಪ್ರಜಸ. ೬೪).

ಗುಳಿಕಟ್ಟಿಕೊಳ್ಳು=ಗೂಳಿಯೇಳು: ಯಾವ ಬೆಳೆಗಳೂ ಬರಲಿಲ್ಲ. ಜನರು ಕಂಗಾಲಾಗಿ ಗುಳೆಕಟ್ಟಿಕೊಂಡು ಹೋಗಹತ್ತಿದರು (ಚಂದ್ರಶಾ. ೮) ; ಹಳ್ಳಿಯ ಜನರು ಗುಳೇಕಟ್ಟಿಕೊಂಡು ಹೋದವರು ಈಗ ಊರಿಗೆ ತಿರುಗಿ ಬರುತ್ತಿರುವರು (ಅನ್ನ. ೭೬) ; ಎರಡು ದೇಶಗಳಿಂದಲೂ ನಿರಾಶ್ರಿತರ ತಂಡಗಳು, ಗುಳೇಕಟ್ಟಿಕೊಂಡು ಓಡಾಡತೊಡಗಿದವು (ಹೇಮಂತ. ೨೮೫). [ ಗುಳೆ (<ಗೂಳಿಯು) + ಕಟ್ಟು$_1$ ]

**ಗುಳಿತೆಗೆ** ' ಗೂಳಿಯುಂಡಗೆ ' ನೋ.

**ಗುಳಿಬೀಳು** (ಕ್ರಿ).=ಗುಳಿಗೆಟ್ಟು: ಒಂದು ಮನೆಯಲ್ಲಿ ಗರ್ಭಿಣೆ . . . ಮತ್ತೊಂದು ಮನೆಯಲ್ಲಿ ಬೇನೆಬಿದ್ದ ಮುದುಕ . . . ಇವರೆಲ್ಲ ಗುಳಿಬಿದ್ದು ಹೋಗಬೇಕು (ಮತ್ತುಮ. ೧೦೪). [ ಗುಳಿ (<ಗೂಳಿಯು) + ಬೀಳು$_1$ (<ಬೀೞ್$_1$) ]

**ಗುಳಿಯ** (ನಾ). ಸಣ್ಣ ಚಿಪ್ಪು: ಮಿಗೆ ದಿನಪದುಗ್ಧಮಂ ಗುಬ್ಬಿ(ಬಿ)ಯ ಗೂ(ಗು)ಳಿಯದೊಳ್ ತಿಃವಿ ಸುಟ್ಟು ನವನೀತದಿನೆಚ್ಚುಗೆ ಮೇಣ್ ಗುರುಗುಂಜೆಯ ಬೇರುಗಳಂ ಕೊಂಡೆಚ್ಚುಗಕ್ಷಿಪುಷ್ಪಂ ಕಿಡುಗುಂ (ಲೋಕೋಪ. ೯-೨೦೦). [ <ಗುರುಳಿ ]

**ಗುಳಿಹೋಗು** ' ಗೂಳಿಯಹೋಗು ' ನೋ.

**ಗುಳೋಪು** ' ಗುಳಾಪು ' ನೋ.

**ಗುಳ್ಕನೆ** (ಅ). ಒಂದು ಅನುಕರಣಾವ್ಯಯ; ನುಂಗುವುದನ್ನು ಅನುಕರಿಸುವ ಅವ್ಯಯ: ಗುಳ್ಕನೆ ನುಂಗಿದ ಕೂಳದು ಪಳ್ಕೆಗೆ ಬಂದಯ್ದೆ ಪೇಳ್ಕೆಗಟ್ಟುವ ಪದದೊಳ್ (ಪಸಾರ. ೯೯೭-೬) ; ಸವಿಯೂಟಕ್ಕೆ ಮನವಿಟ್ಟು . . . ನಾಲಗೆಯೊಳಿರಿಸಿ ಗುಳ್ಕನೆ ನುಂಗುವಾಃ ವೇ ಗತಿಯಾಗಿ (ವೀಶ್ವಪು. ೩ ೪-೨೦). [ ಗುಳ್ಕ್$_0$ + – ಅನೆ$_1$ ]

**ಗುಳ್ಳ**, ಗುಳ$_1$, ಗುಳ್ಳೆ$_2$ (ನಾ). ಬದನೆಯ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ: " ಗುಳ್ಳಂ, ಬೃಹತಿ " (ವಸ್ತುಕೋ. ೩೮-೩೧) ; " ನಿದಿಗ್ಧಿಕೆ, ವ್ಯಾಘ್ರೀ, ಬೃಹತೀ, ಕುಲೀ, ಕ್ಷುದ್ರಾ, ದುಃಸ್ಪರ್ಶೆ, ರಾಷ್ಟ್ರಿಕೆ " (ನಾಚಿರಾ. ೩) ; ಅಗಸೆ ಪೆಸಱವರೆ ಬಾವುಜಿಗೆ ಗುಳ್ಳ ಮೆಳ್ಳಿಟ್ಟು ಬಳ್ಳಿಸೊರೆಯೆಂಬಿವನಿಕ್ಕುಗೆ ಪಾಲೊಳ್ (ಲೋಕೋಪ. ೯-೧೯೦); ಮರುತ ಶ್ಲೇಷ್ಮಜ್ವರಮಂ ಪರಿಹರಿಸುಗುಮುಮುರ್ದುವಳ್ಳಿ . . . ಗುಳ್ಳಂ ಶುಂಠಿಗಳಿರೆ ಕಾಯ್ದ ಕಷಾಯುಮದು ದಿನತ್ರಯದಿಂದಂ (ಕಲ್ಯಾಕಾ. ೩-೩೫) ; ಮತ್ತೆಯುಂ ಕೇಳ್ಪೊನ್ನ ನೇಗಿಲಲುತ್ತು ಗುಳ್ಳದ ಬೀಜವಂ ನೆಟ್ಟ ಬಿತ್ತು ವಂದದಿ (ಬಸವು. ೬೦-೫೦) ; ಮತ್ತೆ ಕೆಲವಂ ಗುಳ್ಳದೆಳೆಗಾಯ ಹರಳಂತೆ ಕತ್ತರಿಸಿಯೊಗರುಹೋಹಂತುಕ್ಕರಿಸಿಕೊಂಡು (ಸೂಪಶಾ. ೪-೩೨). ' ನೆಲಗುಳ್ಳ ', ' ವಾದಿರಾಜಗುಳ್ಳ ' ಪರಾ. **ಗುಳ್ಳ$_2$:** " ಗುಳಂ ಬೃಹತಿಯಕ್ಕು " (ಮಂಗರಾ. ೩೯-೨೯) ; "ಹಿಂಗುಳಿ=ಗುಳದಕಾಯಿ" (ಗಂಗಾಮ. ೩೪೯.) **ಗುಳ್ಳೆ$_2$:** ಪುರಾತನರು ನುಡಿದಂತೆ ನಡೆಯದವರೆಲ್ಲ ಹಾಳೂರೊಳಗೆ ನರಿ ಗುಳ್ಳೆ[ಪಾಠಾಂ. ಗೂಳಿ]ಯ ತಿಂದು ಬಗುಳಿದಂತೆ ಕಾಣ (ಚನ್ನವ. ೫. ೦೮೦-೫೯೭). [ ದೇಶ ತುಳು. ಗುಳ್ಳ, ಗುಳ್ಳೊ ]

**ಗುಳ್ಳಕೆ** (ನಾ). ಒಂದು ಕ್ಷುದ್ರ ದೇವತೆ (?): ಶೀರಿಯಾ ಶಟವಿ ಗುಳ್ಳಕೆ ಪೊಳಕಾಯಿ . . . ಎಲ್ಲನಾ ನಾಕದಾ ಕಳ್ಳದೇವತೆಗಳನಿಲ್ಲದೆ ಒಲಿಸಿದರು ಪೊಳ್ಳಲ್ಲದೆ ಗತಿಯಲ್ಲ (ವಿಸಾಸು. ೫೮-೨). ' ಗುಳಿಗ ' ಪರಾ. [ ? ]

**ಗುಳ್ಳಗಂಜಿ** ' ಗುರುಗುಂಜಿ ' ನೋ.

**ಗುಳ್ಳಪಟಿ** ' ಗುಳಪಪ್ಪಡಿ ' ನೋ.

**ಗುಳ್ಳಿ** (ನಾ). (?): ಸಣ್ಣಕ್ಕಿ ಬೋನಾಯ್ತು ಸಲೆ ತಂಡುಲ ಬೆಣ್ಣೆಕಾಸಿದ ಘೃತ . . . ಬೋನದ ಗುಳ್ಳಿಯು ಕರುಣ ಪಂಚಭಕ್ಷ್ಯವು ಬೋನಹತ್ತೆಸರ ಪಾಯಸವು ಬೋನಕ್ಕೆ ಹಸ್ತ ಪುರುಷರ್ಪಾದಿ ನೀಡಲು ಬೋನವೆ ಷಡುರಸಾನ್ನಗಳು (ದೇವಾಂಪು. ೬-೨೨೯). [ ? ]

**ಗುಳ್ಳಿಗಣ್ಣ** ' ಗುಳ್ಳೆಗಣ್ಣ ' ನೋ.

**ಗುಳ್ಳಿಗಣ್ಣು** ' ಗುಳ್ಳೆಗಣ್ಣು ' ನೋ.

**ಗುಳ್ಳಿಱ್** (ಕ್ರಿ). ಗೊಳ್ಳೆಂದು ಬಲವಾಗಿ ಧ್ವನಿ ಹೊರಡುವಂತೆ ನಗು; ಗೊಳ್ಳೆಂದು ನಗು: ಪೊಳ್ಳೆನುತ ಸುರವಾರನಾರಿಯರಳ್ಳೆಗಳ ಹಿಡಿದುಬ್ಬಿ ನಗೆಯಲಿ ಗುಳ್ಳಿಱಿದು ಗುಹಿಲಿಕ್ಕಿದರು ಪರಿ ಲೇಸುಲೇಸೆನುತ (ತೊರರಾ. ೬-೨೨-೨೫). [ ಗುಳ್$_1$ (<ಗೊಳ್) + ಇಱ್$_1$ ]

**ಗುಳ್ಳುಗಾವಿ** (ನಾ). ಒಂದು ಬಗೆಯ ವನಸ್ಪತಿ (?): ಗುಳ್ಳುಗಾವಿಯನು ನೇರಿಲ ಕೊನರನು ಅಕ್ಕಿಗಚ್ಚಿನಲ್ಲಿ ಅರೆದು ಜೇನುವೆರಸಿ ಕುಡಿಯೆ ಹನ್ನೆತ್ತರು ಕೆಡುವುದು (ಸಕವೈ. ೦೯೬). [ ? ]

**ಗುಳ್ಳೆ$_1$** ' ಗುರುಳೆ ' ನೋ.

**ಗುಳ್ಳೆ$_2$** ' ಗುಳ್ಳ ' ನೋ.

**ಗುಳ್ಳೆ$_3$** (ಗು). ಸಣ್ಣ; ಪುಟ್ಟ. ' ಗುಳ್ಳೆನರಿ ' ಪರಾ. [ <ಕುಳ್ಳ ]

**ಗುಳ್ಳೆಗಣ್ಣ**, ಗುಳ್ಳಿಗಣ್ಣ (ನಾ). ಕಣ್ಣಿನ ಗುಡ್ಡೆಯಮೇಲೆ ಬೊಕ್ಕೆ ಎದ್ದಿರುವವನು: (೩). **ಗುಳ್ಳಿಗಣ್ಣ:** ಅರ್ಥಾನುರೂಪಾನ್ವರ್ಥಕ್ಕೆ – ಹೆಟೆಗಾಲಂ . . . ಗುಳ್ಳಿಗಣ್ಣಂ, ಹಱಿದಲೆಯಂ – ಎಂಬಂತೆ (ಶಮದ. ೭೬ ಪ್ರಯೋ). [ ಗುಳ್ಳೆಗಣ್ಣು + – ಅ$_7$ ]

**ಗುಳ್ಳೆಗಣ್ಣು**, ಗುಳ್ಳಿಗಣ್ಣು(ನಾ). ಕಣ್ಣಿನಗುಡ್ಡೆಯ ಮೇಲೆ ಬೊಕ್ಕೆ ಎದ್ದಿರುವ ಕಣ್ಣು: (೩). **ಗುಳ್ಳಿಗಣ್ಣು:** ಗುಳ್ಳಿಗಣ್ಣಿನವರ ದೃಷ್ಟಿಯಲ್ಲಿ ದೋಷವಿರುತ್ತದೆ (ಮುಂಬಯಿ. ೬-೧೪೪) ; ಇವ . . . ಗುಳ್ಳಿಗಣ್ಣಿನವ; ಮುಖ ಬಲು ರಾವು (ಮೋದಿಮ. ೪). [ ಗುಳ್ಳೆ$_1$ (<ಗುರುಳೆ) + ಕಣ್ಣು (<ಕಣ್) ]

**ಗುಳ್ಳೆಗೊಟ್ಟೆ** (ನಾ). ಒಂದು ಬಗೆಯ ಆಟ; ಅಟ್ಟುಗುಳಿಯಾಟ: ಗುಳ್ಳೆಗೊಟ್ಟೆ ಬಟ್ಟಳಿಸೆಂಡು ಪೊಡೆಸೆಂಡೆಂಬಿವನಾಡುತ್ತೊಡವಳೆದರ್ (ಶಂಪಭಾ. ೨-೩೦). ' ಗೊಟ್ಟುಗುಱಿ ' ಪರಾ. [ಗುಳ್ಳೆ ? + ಗೊಟ್ಟೆ$_1$]

**ಗುಳ್ಳೆನರಿ** (ನಾ). ೧. ಒಂದು ಬಗೆ ನರಿ; ಸಣ್ಣ ಜಾತಿಯ ನರಿ: ಅವರೆಂಥ ಪೆದ್ದರಂತೀರಿ ? ಜೊತೆಗೆ ಗುಳ್ಳೆನರಿಯಂಥ ಕುಯುಕ್ತಿವಂತರು (ಪುನರು. ೨೪೫) ; ಸಿಂಹದ ತಲೆಯ ಮೇಲೆ ಗುಳ್ಳೇನರಿಯ ನಖಿಪ್ರಹರ (ಕೋಟಿನೂ. ೩೨). ೨.(ಆಲಂ)ಒಳಗಿನ ಭಾವನೆಯನ್ನು ತೋರ್ಪಡಿಸದ ವ್ಯಕ್ತಿ; ಕಪಟಿ: ಪ್ರೊಫೆಸರು ನನ್ನ ವಿಷಯದಲ್ಲಿ ಪೂರ್ಣ ಅಂತಃಕರಣ ಉಳ್ಳವರಾಗಿದ್ದರೂ, ಅದನ್ನು ಹೊರಗೆ ತೋರ್ಪಡಿಸುತ್ತಲೇ ಇರಲಿಲ್ಲ ಆ ಗುಳ್ಳೆನರಿ (ಹೊಸಕ್ಕಿ. ೮). ಈಗಿನ ಕಾಲದಲ್ಲಿ ರಾಜಕೀಯದಲ್ಲಿ ಗುಳ್ಳೆನರಿಗಳೇ ಹೆಚ್ಚು (ರೂಢಿ). [ ಗುಳ್ಳೆ$_3$ + ನರಿ/ತಮಿ. ಕುಳ್ಳನರಿ ]

**ಗುಳ್ಳೆಮುತ್ತು** (ನಾ). ಕೃತ್ರಿಮವಾದ ಮುತ್ತು; ಟೊಳ್ಳಾದ ಮುತ್ತು: (೩). [ ಗುಳ್ಳೆ$_1$ (<ಗುರುಳೆ) + ಮುತ್ತು$_6$ ]

**ಗುಳ್ಳೆರೋಗ** (ನಾ). ಮೈಮೇಲೆ ಗಡ್ಡೆ ಬರುವ ಒಂದು ರೋಗ; ಪ್ಲೇಗು: ಭರಮಪ್ಪನಾಯಕನ ಆಳಿಕೆಯಲ್ಲಿ ಕ್ರಿ. ಶ. ೧೭೦೩-ಳ ರಲ್ಲಿ ಗುಳ್ಳೆರೋಗ ಪ್ರಾಪ್ತವಾಯಿತು (ಚಿತ್ರಪಾ. ೮ ಉಪೋದ್ಘಾತ) ; ಸ್ವಭಾನು ಸಂ॥ ದಲ್ಲಿ ಗುಳ್ಳೆರೋಗ ತಗಲಿ ಜನ ಲಯವಾದದ್ದು (ಚಿತ್ರಪಾ. ೫ ಅನುಬಂಧ ೨). [ ಗುಳ್ಳೆ$_1$(<ಗುರುಳೆ) + ರೋಗ ]

**ಗುಳ್ಳೋರಿಗೆ** ' ಗುಳೂರಿಗೆ ' ನೋ.

**ಗುಱಿ** ' ಕುಱಿ$_2$ ' ನೋ.

**ಗುಱಿಕಾಱ**, ಗುರಿಕಾರ, ಗುರಿಗಾರ, ಗುರ್ಕಾರ (ನಾ). ೧. ಗುರಿ ಹೊಡೆಯುವುದರಲ್ಲಿ ನಿಪುಣ; ಈಡುಗಾರ. ೨. ಅರಮನೆ; ಗಡಿಪ್ರದೇಶ, ಮೊದಲಾದ ಕಡೆಗಳಲ್ಲಿ ಮೇಲ್ವಿಚಾರಣೆ ಮಾಡಲು ನಿಯುಕ್ತನಾದ ಉನ್ನತಾಧಿಕಾರಿ; ಗ್ರಾಮಣಿ: ಸುರಪತಿಮುಖ್ಯರೆಣ್ದೆಸೆವಳರ್ಗಡಿಯೊಳ್ಗುಱಿಕಾಱರೆಂಬವೋಲ್ (ಅಪ್ರತಿ. ೭೦-೭) ; ದೊರೆರಾಯ

ನರಸರಾಜೇಂದ್ರ ಸಾಕಿದ ಬಲು ಗುಱಿಕಾಱ ಮನ್ನೆಯರುಗಳ ಓರಿದು ವಿಂಗಡಿಸುತಾ ಱೀಳು ಪೌಜುಗಳಿಂದರಿಬಲಾಂಬುಧಿಯನು ಪೊಗೆದ (ಕಂನವಿ. ೧೮–೯೯) ; ಓಂತಣ್ಣಾ ಗುಱಿಕಾಱರಾ ಪಡೆವಳರ್ ಬಂದಿರ್ದರ್ (ಚಿಕವಿ. ೫–೭೯). **ಗುರಿಕಾರ:** ೧. "ಕೃತಹಸ್ತಃ, ಸುಪ್ರಯೋಗ ವಿಶಿಖಃ, ಕೃತಪುಂಖಃ – ೩ ಗುರಿಕಾರನ ಹೆಸರು" (ಸಿದ್ಧಾಂತಿ. ೩೩೦). **೨.** ಅರಮನೆ ವಳಬಾಗಿಲ ಗುರಿಕಾರರ್‍ು ಚಂನಪ್ಪನವರು . . . ಮಾಡ್ಸಿದ . . . ಸೇವೆ (ಎಕ. III, ಮಂಡ್ಯ. ೯೫–೨; 1825) ; ಆ ಬೇಡರು ಪೂತಂಗನೆಂಬ ಗುರಿಕಾರ ಸಹ ಬಿಸಿಲಿಗಾರದೆ ನಾವಿರುವ ಎಲವದ ಮರದ ನೆಳಲ ಸೇರಿ ಬಳಲಿಕೆಯ ತೀರಿಸಿ ಕೊಂಡು (ವಚಕಾ. ೩); ಸೆಜ್ಜೆಯ ಗುರಿಕಾರನಿಗೆ ಮರ್‍ಯಾದೆ ಮಾಡಿದ್ದು ಗ. ೧೦೦೦ (ಬಿಟ್ಮಅ. ೫೭–೧೨); ವೆಂಕಟು ಗುರಿಕಾರನಾದರೂ ಶ್ರೀಮಂತನಲ್ಲ (ಜಾರುದಾ. ೩೩) ; ಹಳ್ಳಿಗಳಲ್ಲಿ ಪಟೇಲರು ಇರುವ ಹಾಗೆ ಆ ಕಾಲದಲ್ಲಿ ಗ್ರಾಮಕ್ಕೊಬ್ಬ ಗುರಿಕಾರನಿದ್ದನು (ಕೋಟಚಿ. ೧) ; ಕುಡಿಯರ ಸಂಸಾರಕ್ಕೆ ಅವನೇ ಗುರಿಕಾರ (ಕುಡಿಕೂ. ೧) ; ಮಾಧವ ಸೋಮಯಾಜಿ ಆ ಅಗ್ರಹಾರಗಳಿಗೆಲ್ಲ ಮೇಲಾಳು, ಅಲ್ಲವೆ ಗುರಿಕಾರನು (ನಾಡೋಜ. ೭೪); ಊರಿನ ಗುರಿಕಾರರು ಒಬ್ಬೊಬ್ಬರು ಬಂದಿರಲಿಲ್ಲ (ಮರಮ. ೩). **ಗುರಿಗಾರ:** ೧. "ಗುರಿ (ಯಿಟ್ಟು) ಹೊಡೆಯುವುದರಲ್ಲಿ ಕುಶಲನಾದವನು, ಅಭ್ಯಾಸ ಪಡೆದವನು (ಮುಖ್ಯವಾಗಿ ಬಂದೂಕು ಹೊಡೆಯುವುದರಲ್ಲಿ ಒಂದು ಗೊತ್ತಾದ ಸಾಮರ್ಥ್ಯಪಡೆದವನು); ಗುರಿಗಾರ" (Marksman. ಇಂಕನಿ) ; ಹೊತ್ತಿರುವ ಕೋವಿಗಳ ಗುರಿಗಾರರೊಡವೆರೆದು . . . ಮುತ್ತಿದರ್ ಗೋರಿಬೇಂಟೆಗೆ ಕಾಡನೊತ್ತರದಿ (ಕಾಲೂರ.೯೨–೧೮೦). **೨.** ಬಿಲ್ಲವರ ಮುಖ್ಯಸ್ಥನನ್ನು 'ಗುರಿಗಾರ' (Gurikar) ನೆಂದು ಕರೆಯುವರು (ತುಳುನಾ. ೨೨೨). **ಗುರ್ಕಾರ:** **೨.** ಹಿಂದಿನಕಾಲವಾದರೆ ತಮ್ಮ ಜಾತಿಯಲ್ಲಿ ಹೀಗೇನಾದರೂ ಆಗಿದ್ದರೆ, ನಾಲ್ಕಾರು ಮಾಗಣೆಯ ಗುರ್ಕಾರ ಕಟ್ಟುಹಾಕಿ ಬಹಿಷ್ಕಾರ ಹಾಕುತ್ತಿದ್ದ (ಹೊಸಕ್ಷಿ. ೫೯) ; ಗುರ್ಕಾರರ ದಯೆಯಿಂದ ನನ್ನ ಹೆಣ್ಣಿನಮೇಲೆ ದಿಟ್ಟಿ ನಡುವ ಧಿಮಾಕು ಈ ಮಾಗಣೆಯಲ್ಲಿ ಯಾವ ಗಂಡೆದೆಗೆ ಇದೆ ಎಂತೇನೆ (ಹೊಸಕ್ಷಿ. ೫೦). [ ಗುಱಿ (< ಕುಱಿ₂) + – ಕಾಱ ]

**ಗುಱಿಗಾಣ್** (ಕ್ರಿ). ಗುರಿಯಂನ್ನು ಮುಟ್ಟು,—ತಾಕು ; ಗುರಿಸಾಧಿಸು; ಕಾಮನೇಸು ಗುಱಿಗಂಡುದು ತಂಡದೆ ನಿಂದ ನಂದನಂ ತಳೆದುವು . . . ಕರ್ಣನ ಬೆಳ್ಪಿನಂದಮಂ (೧೧ಕ. ೭–೩೯). [ಗುಱಿ (< ಕುಱಿ₂)+ಕಾಣ್]

**ಗುಱಿಪಾಳ** (ನಾ). ಒಬ್ಬಾತನ ಹೆಸರು: ಎಱೆಗಜ್ಜ ಮಹಾಮಾತ್ಯಂ × × ಱಿದಂ ನತ ಗಂಗಮಹಿಗೆ ಸಫಳಮತೆಯಿಂ ಗುಱಿಪಾಳನ್ (ಎಕ. II, ೧೫೦–೮ ; ಸು. 950). [ ? ]

**ಗುಱಿಮಾಡಿಸು** (ಕ್ರಿ). ಗುರಿಯಾಗುವಂತೆ ಮಾಡು ; ಈಡಾಗುವಂತೆ ಮಾಡು : ಆರ್ಗೆ ಸತಿ ನೀಂ ಪೆಸರೇಂ ನಿನಗಿಂತು ತೋರ್ಪ ಜವ್ವನದೊಳಗೀ ತಪಕ್ಕೆ ಗುಱಿಮಾಡಿಸಿದುಬ್ಬೆಗಮಾವುದು (ಕಾದಂಪೂ. ೭೮೫).

[ ಗುಱಿಮಾಡು + – ಇಸು₃ ]

**ಗುಱಿಮಾಡು,** ಗುರಿಮಾಡು (ಕ್ರಿ). ಗುರಿಯನ್ನಾಗಿ ಮಾಡು ; ಈಡು ಮಾಡು : ನವಯೌವನೆ ಮರುಳಾದೆ ಈತಂಗೆ ಗುಱಿಮಾಡಿದಪೆ ನಿನ್ನ ಮನುಮತಂಗೆ (ಕಾದಂಪೂ. ೪೮೨) ; ಹಾಹಾ ಎಲೆ ಅಯ್ಯ . . . ಕೋಪದ ಕಾಡುಗಿಚ್ಚಿಗೆ ಅಡವಿಯ ಗುಱಿಮಾಡದಿರಿ (ಸಿದ್ಧವ. ಕ. ೧೮–೫೩) ; ನಿಜಪತಿ . . . ಅಂಗಜನಸಮಾಸ್ತ್ರಸಂತತಿಗೆ ತತ್ಸತಿಯಂ ಗುಱಿಮಾಡಿ ಕಾಡಿದಂ (ದಶಕು. ೧೨–೧೩೭) ; ಜಲಧಿಯಲಿ ಜಂಗುಳಿಸಿ ಕುಧರಕೆ ಕುಲಿಶ ಭೀತಿಯ ಬೀಱಿ ಕಣೆ ಬಳಿಸಲಿಸಿ ಹರಿದಾಡಿದುವು ಸುಭಟರ ಗೋಣ ಗುಱಿಮಾಡಿ (ಕುವ್ಯಾಭೀ. ೪–೧೯). **ಗುರಿಮಾಡು :** ಅದರಲ್ಲಿನ ಚರಿತ್ರಾಂಶವನ್ನು ಸೂಕ್ಷ್ಮವಿಮರ್ಶೆಗೆ ಗುರಿಮಾಡಬಾರದೆಂದು ಓದುವ ಮಹನೀಯರಲ್ಲಿ ವಿನಂತಿ (ಚೆಂಗಾಳ್ಯ. ೩ ಮುನ್ನುಡಿ).

**ಗುಱಿಮಾಡಿಕೊಳ್**=ಉದ್ದೇಶಿಸು ; ಬಯಸು : ದೆಸೆಗಳ ಮೇರೆಯಂ ನಿಱಿಸಿ ಪೋಪುದುಮಾಭರಣ ಪ್ರಸೂನ ಸದ್ವಸನ ವಿಲೇಪನಾದಿಗಳೊಳಂ ಕೆಲವಂ ಗುಱಿಮಾಡಿಕೊಂಡು ಸೇವಿಸುವುದುಂ (ಆದಿಪು. ೬–೮).

[ ಗುಱಿ (< ಕುಱಿ₂) + ಮಾಡು₁ ]

**ಗುಱಿಮಾನಿಸ** 'ಗುಱಿಪಾನಿಸ' ನೋ.

**ಗುಱಿಯಾಗು,** ಗುರಿಯಾಗು (ಕ್ರಿ). ಈಡಾಗು ; ಪಕ್ಕಾಗು ; ಪಾತ್ರವಾಗು ; ಲಕ್ಷ್ಯವಾಗು : ಮನ್ಮಥಕ್ರೀಡೆಗೆ ನೋಡೆ ನಾಡೆ ಗುಱಿಯಪ್ಪುವು ದಂಪತಿ ಭೋಗಭೂಮಿಯೊಳ್ (ಆದಿಪು. ೫–೪೦); ವೀರಸುತಜನನಿಗೀ ಗಾಂಧಾರಿಗೆ ದುಃಖಿಶತಜನನಿವೆಸರಾಯ್ತೀಗಳ್ ಕೌರವಪತಿ ದುಃಖಮಹಾಭಾರಮನಾಂತಾಯಸಕ್ಕೆ ಗುಱಿಯಾದುದಱಿಂ (ಗದಾಯು. ೪–೫); ರಣಮಹಿ ಭಯಾನಕರಸಕೆ ಗುಱಿಯಾಯ್ತು (ಕುವ್ಯಾಭೀ. ೮–೧೮) ; ಪಾಪ ಕರ್ಮಕ್ಕೆ ನಾ ಗುಱಿಯಾದೆ ಸ್ವಾಮಿ (ಪುರಂದ. ೧–೧೭೭–೯). **ಗುರಿಯಾಗು :** ಸೂರ್ಯನಷ್ಟು, ಮಾನವನ ಮನಸ್ಸನ್ನಾಕರ್ಷಿಸಿ ಲೋಕಶ್ಲಾಘನೆಗೆ ಗುರಿಯಾದುದು ಬೇರೊಂದಿಲ್ಲ (ಜ್ಯೋತಿರ್ವಿ. ೮೧).

[ ಗುಱಿ (< ಕುಱಿ₂) + ಆಗು₁ ]

**ಗುಱಿಯಾಳ್,** ಗುಱಿಯಾಳು (ನಾ). ೧. = ಗುಱಿಕಾಱ ೨ : ಪೊಸದೊರೆಯಾಳ್ಗಳಂತರಮನಿನ್ನಱಿಯಂ ಗುಱಿಯಾಳ್ಗಳೀತನೊಂದೆಸಕಮನಿಂತಿದೆಂದು ತಿಳಿಯರ್ (ಚಿಕವಿ. ೫–೧೯). **ಗುಱಿಯಾಳು: ೨.** (ಚೆಂಡಿನಿಂದ ಗುರಿಯಿಟ್ಟು ಹೊಡೆಯುವ) ಒಂದು ಬಗೆಯ ಮಕ್ಕಳಾಟ: ಬಾಲಕರು ನೂಱಾಱು ಮೆಱೆದರು . . . ಆಳಿನೇಱಿಕೆ ಹಿಡಿಗವಡೆ ಗುಱಿಯಾಳು ಚೆಂಡಿನ ಹೊಣಕೆ ಚಿಣಿಕೋಲಾಳುಗೊತ್ತಿನದಂಡೆಯೆನೆ ನಾನಾವಿನೋದದಲಿ (ಕುವ್ಯಾಆ. ೬–೧). [ ಗುಱಿ ( < ಕುಱಿ₂) + ಆಳ್₃ ]

**ಗುಱಿಯಾಳು** 'ಗುಱಿಯಾಳ್' ನೋ.

**ಗುಱಿಯಿಕ್ಕು** (ಕ್ರಿ). ಗುರಿಯಿಡು; ಈಡಿಕ್ಕು : ಅರೆಜೀವವಡೆದ ಪೆಣನಂ ಕೊರಳಂ ಕೊಯ್ಕೊಯ್ದು ಶಿರವನೊಟ್ಟುತದಱಿಂ ಗು[ ಪಾಠಾಂ. ಸು] ಱಿಯಿಕ್ಕಿ ಲಗ್ಗೆಚೆಂಡಂ ತರುಣ ಮರುಳ್ಕಂಡವಾಡುತಿರ್ದುವವೆತ್ತಂ (ಬೀಳವಂ. ೧–೮೪). [ ಗುಱಿ (< ಕುಱಿ₂) + ಇಕ್ಕು ]

**ಗುಱಿಯೆಸು** (ಕ್ರಿ). ಗುರಿಯಿಟ್ಟು ಹೊಡೆ : ಭೀಷ್ಮರಂ ಶರಶಯ್ಯಾಗತರಂ ಕಱುತ್ತು ಗುಱಿಯೆಚ್ಚು ಪೊಚ್ಚಱಿಂ . . . ಪಾಂಡುಪುತ್ರರೆ ಬಲ್ಲರ್ (ಗದಾಯು. ೩–೩೩). [ ಗುಱಿ (< ಕುಱಿ₂) + ಎಸು₁ ]

**ಗುಱಿಯೆಸೆ** (ನಾ). ಗುರಿಯನ್ನು ಲಕ್ಷಿಸಿ ಮಾಡಿದ (ಬಾಣ, ಮೊದಲಾದುವುಗಳ) ಎಸೆತ.—ಹೊಡೆತ ; ಈಡೆಸೆತ : ಧಾನುಷ್ಕನೊಂದು ಗುಱಿಯೆಸೆ ತಪ್ಪಿದೊಡೆ ಶರಕೆ ಹೀನಮೋ ಎಚ್ಚಂಗೆ ಹೀನಮೋ (ಪದ್ಮರಾ. ೧–೩). [ ಗುಱಿ (< ಕುಱಿ₂) + ಎಸೆ₃ ]

**ಗುಱಿಯೇಸು** (ನಾ). ಗುರಿಯಿಟ್ಟು ಹೊಡೆಯುವಿಕೆ ; ಗುರಿಯನ್ನು ನೋಡಿ ಬಾಣ ಬಿಡುವುದು : ಮಾಲೆವೂವಂ ನೆಗಪಿ ಸೊಗಯಿಕುಂ ನೀಱಿರೊಳ್ ಪುಷ್ಪಚಾಪಂ ಗುಱಿಯೇಸಂ ತೋಱಲಂಬಂ ಪೊದೆಗೆದಱಿದ ವೋಲ್ ಪುಷ್ಪಲಾವೀಕದಂಬಂ (ಪಂಚಾಮಾ. ೧–೧೨೦).

[ ಗುಱಿ (< ಕುಱಿ₂) + ಏಸು₂ ]

**ಗುಱಿಯೇಱಿಸು** (ಕ್ರಿ). ಗುರಿಯಿಡು ; ಲಕ್ಷ್ಯಕ್ಕೆ ಸರಿಯಾಗಿ ಹಿಡಿ : ಚೋರಕಂಡಿಗಳಂಬುಕಂಡಿಗಳೊಳು ಗುಱಿಯೇಱಿಸಿ ಮೆಱೆವ ಕೈಗೋವಿ (ಕಂನವಿ. ೧೧–೧೩೭). [ ಗುಱಿ ( < ಕುಱಿ₂) + ಏಱಿಸು ]

**ಗುಱಿಯೊಡ್ಡು** (ಕ್ರಿ). ಗುರಿಯನ್ನು ಒಡ್ಡು ; ಲಕ್ಷ್ಯವನ್ನು ಒದಗಿಸು : ಎನಗಿತ್ತಪುದೋ ವಸಂತಕಂ ಮನಸಿಜಮಾರ್ಗಣಕ್ಕೆ ಗುಱಿಯೊಡ್ಡಿದನೆಂಬ ಮನಃಪ್ರವೃತ್ತಿಯಂ (ಶಾಂತಿಪು. ೮–೮೧).

[ ಗುಱಿ(< ಕುಱಿ₂) + ಒಡ್ಡು₁ ]

**ಗುಱಿವಡೆ** (ಕ್ರಿ). ಉದ್ದಿಷ್ಟ ಸ್ಥಾನವನ್ನು ಸೇರು; ಗುರಿಯನ್ನು ಮುಟ್ಟು: ಬದಲಿಸಿ ಬರೆದಿಡು ಲಿಪಿಯಂ ತೊದಳಿಲ್ಲದ ಸುಗತಿಯೆಡೆಗೆ ಗತಿ ಗುಱಿವಡೆಯಲ್ (ವಸ್ತುವಂ. ೧೫-೧೧೭).

[ ಗುಱಿ (<ಕುಱಿ₂) + ಪಡೆ₁ ]

**ಗುಱಿಮಾನಿಸ,** ಗುಱಿಮಾನಿಸ (ನಾ). ೧. ಗುರಿಯನ್ನು ಸಾಧಿಸಲು ಬಂದ ಮನುಷ್ಯ; ರಾಜನ ಕಡೆಯ ಅಧಿಕಾರಿ; ರಾಯಭಾರಿ: ಬಂದ ಗುಱಿಮಾನಿಸನಂ ಬಂದಂತೆ ಕಳುಪಲೊಡಂ (ಜಗವಂ. ೦೭೩-೦೪). **ಗುಱಿಮಾನಿಸ:** ೨. ಮುಖಂಡ; ಅಧಿಕಾರಿ; ಗುರಿಕಾರ: ಚೆನ್ನ ಬಸವಂಗೆ ತನ್ನಾನೆ ಮುಱಿದದಱೊಡನೆ ಪಲವುಮಾನೆ ಕುದುರೆಗಳುಂ ಗುಱಿಮಾನಿಸರುಂ ಪಱಿಯಿಗೆ ಮುಂತಾದ ಬಿರುದುಗಳುಂ ಮಹಿಶೂರವರ ಬಸಮಾದುದು (ಅಪ್ರತಿ. ೮೮-೦೯).

[ ಗುಱಿ (<ಕುಱಿ₂) + ಮಾನಿಸ (<ಮಾನಸ₁) ]

**ಗುಱು,** ಗುರು₁ (ನಾ). ಒಂದು ಬಗೆಯ ಅನುಕರಣಧ್ವನಿ. 'ಗುಱುಗುಟ್ಟು' ಪರಾ. **ಗುರು₁.** 'ಗುರುಗುಟ್ಟು' ಪರಾ.

**ಗುಱುಗುಱು, ಗುರುಗುರು**(ದ್ವಿರುಕ್ತಿ): ಧುಳುಧುಳಂ ದೊಪ್ಪೆಂಬ ಗುಱು ಗುಱು ಥಳಥಳಂ ಜೋಱೆಂಬುದಱದಱ ದೊಳದೊಳೆಂಬೀ ಧ್ವನಿಗಳವನಿಗೆ ಭಯವನೀವುತಿರೆ (ಸಾನಂಜ. ೮-೦೩). ೨. ಸಂಕಟವಾದಾಗ ಗಂಟಲಿನಿಂದ ಹೊರಡುವ ಒಂದು ವಿಧವಾದ ಧ್ವನಿ: ಗಾಳಿಬೀಸಿದರು, ನಿಟ್ಟುಸಿರಿನೊಡನೆ ಗುರುಗುರು ಸದ್ದಾಗುತ್ತಿತ್ತು (ಕಾಲೂರ. ೦೭ ಕಥಾಸಾರ).

**ಗುಱುಕ** (ನಾ). ಸವಾರ (?): ಸತ್ತನಧಿಕಂ ಪಂಪಯ್ಯನುದ್ದಾಮ ಸದ್ಗುಱುಕಂ ವಾಜಿಕುಳೋ[ದಯಂ] ಬುಧನುತಂ [ಕೊ]ಣ್ಡಲ್ಯಗೋತ್ರೋನ್ನತಂ (ಸಾಇಇ. XI-1, ೩೭-೩೦ ; 942); ಕಂಬಗೂಳಿ ಕುದುರೆ ಗುಱುಕವ್ ಅಳರೆ ಬೊಂಮನು ರಣದೊಳು ಪಲಬರಂ ಕೊಂದು . . . ಸುರಲೋಕಪ್ರಾಪ್ತನಾದ (ಎಕ. VIII, ಸೊರಬ. ೫೦೨-೦೨ ; 1294).

[ ? ]

**ಗುಱುಕಿಡು,** ಗುರುಕಿಡು (ಕ್ರಿ). ೧. ಗುರುಕೆಹಾಕು; ಗೊರಕೆಹೊಡೆ: ಉಸುರ ಸಂಚದ ನಾಡಿಯುವಗಾಹಿಸಲು ಕೊರೆದರು ಗುಱುಕಿಡುತ ತಲೆಮುಸುಕಿನಲಿ (ಕುಮಾವ್ಯಾ. ೮-೮೨). **ಗುರುಕಿಡು:** ೨. ಗುರುಕ್ ಎಂದು ಶಬ್ದಮಾಡು; ಗರ್ಜಿಸು: ವರಾಹಕ್ಕೆ ಬೆಂಬತ್ತಿ ಪೋಗುತಿರಲದು ತಿರುಗಿ ಗುರುಕಿಡುತೆ ಮೇಲ್ವಾಯ್ದು ಬರುತಿರಲು (ನವಮೋ. ೦೬-೨೩); ವರಭಲ್ಲುಕಂ ವ್ಯಾಘ್ರ ಸಿಂಹ ಮದಗಜವ್ರಜಂ ಗುರುಕಿಡುವ ಕಾಡ ಸೂಕರ ಕೋಣ ಮಹಿಷಿ (ನವಮೋ. ೮-೦೦). [ ಗುಱುಕು + ಇಡು₁ ]

**ಗುಱುಕು,** ಗುರಕ್ಕೆ₃, ಗುರುಕ್ಕು₂, ಗುರುಕೆ, ಗೊರಕು, ಗೊರಕ್ಕೆ₂, ಗೊರಿಕೆ (ನಾ). ೧. ನಿದ್ರಿಸುವಾಗ ಕೆಲವರ ಮೂಗಿನಿಂದ ಮತ್ತು ಗಂಟಲಿನಿಂದ ಹೊರಡುವ ಗುರ್ ಎಂಬ ಶಬ್ದ: ಕನವರಿಲ್ಲೊಂದು ಗುಱುಕಿಲ್ಲ ಮೇಲೊಂದು ತೊನೆದಾಟವಿಲ್ಲದೊಪ್ಪಿದರು (ಭರತ. ೦೫-೦೦೭). **ಗುರಕ್ಕೆ₃:** ೧. ಗುರಕೆ ಶಬ್ದ ಕೇಳುತ್ತಿದೆ. ಆಗಲೇ ಅವನಿಗೆ ನಿದ್ರೆಬಂದುಬಿಟ್ಟಿದೆ (ರೂಢಿ). **ಗುರುಕ್ಕು₂:** ೨. ಗುರುಕ್ ಎಂದು ಶಬ್ದಮಾಡುವಿಕೆ; ಗರ್ಜಿಸುವಿಕೆ. 'ಗುರುಕಿಡು' ರಾ. **ಗುರುಕೆ:** ೧. ಅವನ ಗುರುಕೆಯಿಂದ ನನಗೆ ಎಚ್ಚರವಾಯಿತು (ರೂಢಿ). **ಗೊರಕು:** ೩. ಗಂಟಲು ಒಡೆದು ಮಾತಿನಲ್ಲಿ ಉಂಟಾಗುವ ಒಂದು ಬಗೆಯ ಒರಟುಧ್ವನಿ (?): ನಿದ್ರಾಭಂಗ, ಗಂಟಲಲ್ಲಿ ಗೊರಕು . . . ಗಂಟಲನೋವು ಇವಿಷ್ಟೂ ಉಂಟಾಗಿರುವುದೇ ಸನ್ನಿಪಾತಜ್ವರಲಕ್ಷಣವೆಂದರಿವುದು (ಸಕವೈ. ೯೭). **ಗೊರಕ್ಕೆ₂:** ೧. "ನಿದ್ದೆಯದೇ?" ನನಗೆ ಸೋಜಿಗವೆನಿಸಿತು "ಅಂದ್ರು ಗೊರಕೆಯದು" ವಿಶ್ವಶಾಂತನಾಗಿ ಉತ್ತರಿಸಿದನು (ಚಂದುಟ. ೮೫); ಇಕ್ಕಯ್‌ಕರಗಸ ಎಳೆದಾಡಿದಂತೆ ಬರುವ ಗೊರಕೆಯೊಂದನ್ನು ಬಿಟ್ಟರೆ ಅವರ ನಿದ್ದೆ ಎಷ್ಟು ಪ್ರಶಾಂತ! (ನಡದಾ. III. ೨೦೭೦). **ಗೊರಿಕೆ:** ೧. ಬಾಟ್ಲೋ . . . ತನ್ನ ಸ್ಥಳಕ್ಕೆ ಹೋಗಿ ಮಲಗಿಕೊಂಡು ಗೊರಿಕೆ ಹೊಡೆಯತೊಡಗಿದ (ಕುರಿಹಿಂ. ೦೦೯). 'ಕೊರ್ರೆ' ಪರಾ.

**ಗುಱುಗುಱುಕು**(ದ್ವಿರುಕ್ತಿ): ದೂಱುಂ ದೂರ್ಕುಂ ದುಷ್ಟುಂ ನೂಱುಂಟು ಕುರೂಪು ಕುತ್ಸು ಮುದು ಗುಱುಗುಱುಕುಂ (ಮದತಿ. ೦೦-೫).

[ ದೇ॥ ತಮಿ. ಕೊಱುಕ್ಕೈ ; ತುಳು. ಗುರುಕು, ಗುರ್ಕು ; ತೆಲು. ಗುಱಕ ]

**ಗುಱುಗುಟ್ಟು,** ಗುರುಗುಟ್ಟು (ಕ್ರಿ). ೧. (ಗಂಟಲಲ್ಲಿ) ಗೊರಗೊರ ಸದ್ದಾಗು; ಕೊನೆಗಾಲ ಸನ್ನಿಹಿತವಾಗು: ಕೊರಳೊಳು ಗುಱುಗುಟ್ಟುವಾಗ ನರಹರಿಯು ಸ್ಮರಣೆ ನಿನಗನುಗೊಡದೆಲೆ ಮನ (ಪುರಂದ. ೦-೦೪೨-೨). **ಗುರುಗುಟ್ಟು:** ೨. ಸಿಡುಕಿ ಮಾತನಾಡು: "ನೀವಿದನ್ನು ನಂಬುತ್ತೀರಾ?" ಎಂದು ದಳಪತಿ ಗುರುಗುಟ್ಟಿ, ಒಂದು ಗಳಿಗೆ ತೆಪ್ಪಗಿದ್ದನು (ಪುನರು. ೩೫೫); "ನಾವ್ಯಾರು ಗೊತ್ತೊ?" ಎಂದು ರಾಜಂ ಗುರುಗುಟ್ಟಿದ (ಸ್ವಾಮಿಸ್ನೇ. ೯೪); ವಿಚಾರಗಳು ರಾಜಒಡೆಯನ ತಲೆಯಲ್ಲಿ ಸರ್ವದಾ ಗುರುಗುಟ್ಟುತ್ತಿದ್ದವು (ಶ್ರೀರಾಯ. ೯೭).

**ಗುಱುಗುಱುಗುಟ್ಟು** (ದ್ವಿರುಕ್ತಿ): ಅತಿ ನೋವುಂಡು ಕೂಡೆ ಗುಱುಗುಱುಗುಟ್ಟಿ . . . ಕರ್ಮಗತಿಗಳ ನೆಯ್ದುವಂ (ವೀಶೈಪು. ೪-೨೫-೨೩).

[ ಗುಱು + ಕುಟ್ಟು₁ ]

**ಗುಱುಗುಮ್ಮಗೆ** (ಅ). ಸುಮ್ಮನೆ; ನಿಷ್ಕ್ರಿಯವಾಗಿ; ಏನನ್ನೂ ಮಾಡದೆ: ಪುಗುಗುಂ ಗುಱುಗುಮ್ಮಗೆ ಬಿನ್ನಗೆ ಬಿನ್ನನೆಯೆನಲೊಡಂ ಕ್ರಿಯಾಶೂನ್ಯಾರ್ಥಂ (ಶಮದ. ೩೦೨). [ ಗುಱುಗುಮ್ಮು₀ + – ಅಗೆ₃ ]

**ಗುಱುಗುಮ್ಮನೆ,** ಗುರುಗುಮ್ಮನೆ (ಅ). = ಗುಱುಗುಮ್ಮಗೆ: ಕಮ್ಮನೆ ಪಾಟ್ಮನೆಯೊಳ್ ಗುಱುಗುಮ್ಮನೆ ಸುಱಿದಿರದೆ ಪೋಪಮಜಿತನ ಬೞಿಯಂ (ಅಜಪು. ೬-೦೨೩); ನೋವುಂ ಸಾವುಮುಡಸಿದಾಗಳ್ ನೆರೆದು ಗುಱುಗುಮ್ಮನೆ ನೋಡುತಿರ್ಪ ನಂಟರುಮಂ . . . ನಂಬಿ (ಧರ್ಮಾಮೃ. ೯-೨೩); ದೆವ್ವಮಾಳ್ಡಂತಿರೆ ಗುಱುಗುಮ್ಮನೆ ಬೆಕ್ಕಸಮಾಗಿರ್ಪರೆ (ರಾಮಾಶ್ವ. ೭೦-೦೨). **ಗುರುಗುಮ್ಮನೆ:** ಅವನು ಹುಬ್ಬುಗಂಟಿಕ್ಕಿ, ಗುರುಗುಮ್ಮನೆ ಆಲೋಚನಾಭಾರದಿಂದ ತನ್ನ ಮನೆಗೆ ನಡೆತಂದು . . . ಕೊಂಬುಕಹಳೆಯವರನ್ನು ಕರೆಯಿಸಿಕೊಂಡನು (ಮಂಡಸ. ೫೪). [ ಗುಱುಗುಮ್ಮು₀ + – ಅನೆ₁ ]

**ಗುಱುಗುಮ್ಮೆನ್** (ಕ್ರಿ). ಮೌನವಾಗಿರು; ಯಾವ ಕೆಲಸವನ್ನೂ ಮಾಡದಿರು: ಮಿಂದುಂಡು ಕುಡಿದು ಮುಗುಟ್ಟುಂ ಬಂದಿರ್ಪೊಡಮಿರ್ಪ ಮಿನಿತುಮಿಲ್ಲದೆ ಗುಱುಗುಮ್ಮೆಂದು ಪಸಿದಿರ್ದು ಬೆದಬೆದ ಬೆಂದಿನಿಬರ್ ಕಟ್ಟಿಕೊಳ್ವ ಕಣಿಯೇಂ ಪೇೞಿಂ (ಆದಿಪು.೯-೯೦).

[ ಗುಱುಗುಮ್ಮು₀ + ಎನ್₁ ]

**ಗುಱುಗುಱಿಸು,** ಗುರುಗುರಿಸು (ಕ್ರಿ). ೧. ಗೊರಕೆಹೊಡೆ: ತೋಳುಗಳ ತಲೆಯೊಳಾನಿಸಿ ಗುಱುಗುಱಿಸಿ ರಥದೊಳಗೆ ಸಾರಥಿವೆರಸಿ ನಿದ್ರಾಕುಲರು ಜೊಮ್ಮಿನ ಮೇಲೆ ಮೈಮಱದಿರ್ದರತಿರಥರು (ಕುಮಾವ್ಯಾ. ೮-೮೫). ೨. ಕೋಪದಿಂದ ಆಕ್ಷೇಪಿಸು; ಗೊಣಗು; ಗುರುಗುಟ್ಟು: ದ್ರೋಹರಂತೆ ಗುಜುಗುಜುಗೊಳ್ಳದೆ ಪರ್ಗಣದಂತೆ [ಪೊಸ ಋಷಿಗೆ] ಗುಱುಗುಱಿಸದೆ (ಧರ್ಮಾಮೃ. ೫-೯೯). ೩. ಗಂಟಲಿನಲ್ಲಿ ಗುರುಗುರು ಎಂಬ ಶಬ್ದಮಾಡು; ಗೊರಗುಟ್ಟು: ಸದನವೀ ಭೂಮಿ ಯಾರಿಗೆ ಪೋಪುದೋಯೆನುತ್ತೊದಱುತ್ತ ಗುಱುಗುಱಿಸಿ ಕಂಠಗತವಾಗುತಂ ಬೆದಱುತ ಪ್ರಾಣವಂ ಬಿಡುತಿರ್ಪುದಱುಪುವನ ಚರಣಾಂಬುಜಕ್ಕೆ ಶರಣು (ಲಶಿಜಿಂ. ೩೯-೭೦); ಉಱಲ ಹತ್ತಿಸಿ ಸೆಳೆಯೆ ಗೋಣಲಿ ಗುಱುಗುಱಿಸಲಸು ಜಾಱಿದುದು (ಕುಮಾಗ. ೯-೩೨). **ಗುರುಗುರಿಸು:** ೨. ಎಂಟು ಪಾವಲಿ ಕೊಡುವುದಕ್ಕೆ ನೀವು ಗುರುಗುರಿಸುತ್ತೀರಿ (ಚಾರುದಾ. ೨೨೭). ೩. ಗುರುಗುರಿಸುವ ಜೀವದೊಡಲೊಳು ದುರುದುರಿಸುತಿಹ ರಕುತಮಯದಿ

ಮೆರೆದುದ್ದೈ ರಣಭೂಮಿ (ದೇವಿಪು. ೩-೧೪); ತಡೆಯದಿಹ ನಿಟ್ಟುಸಿರ್ ಗುರುಗುರಿಸುತಿಹುದು (ಕಾಲೂರ. ೧೭೨-೩೮೬). [<ಗುಱು + – ಇಸು$_3$]

**ಗುಱುಗೆ** (ನಾ). ಶ್ರೇಷ್ಠಳಾದವಳು; ಹಿರಿಯಳು: ಅಂತು ಮೆಱೆದು ಕೂಸಂ ನೆಱೆಯೆ ಕೆಯ್ಗೆಯ್ಸಿವೆಂದು ಮುನ್ನ [೦] ಕೆಯ್ಗೆ[ಯ್ಸುತಿರ್ದ] ತಱದ ಗುಱುಗೆಯರಪ್ಪಂತಃಪುರ ಪುರಂಧ್ರಿಯರಂ ಕರೆದು ಪೇೞ್ವುದುಂ (ಪಂಪಭಾ. ೩-೪೪ ವ). 'ಗರುವೆ' ಪರಾ.

[<ಪ್ರಾ. ಗರುಈ, ಗುರುಈ, ಗುರುಗೀ. / ಸಂ. ಗುರ್ವೀ]

**ಗುಱುತು,** ಗುತ್ತು$_1$, ಗುರುತು (ನಾ). ೧. ಕುರುಹು; ಲಕ್ಷಣ; ವಿಶಿಷ್ಟಚಿಹ್ನೆ. ೨. ಪರಿಚಯ; ಮಾಹಿತಿ. ೩. ಹೆಸರುವಾಸಿ; ಪ್ರಸಿದ್ಧಿ: ಗುಱುತಿನ ಹೊಂತಕಾಱಗಳೊಳೊರ್ವನನೊಪ್ಪಚಿ ತಾಣ ವಿಕ್ಕುವಂ (ಚಿಕವಿ. ೪-೧೪೦). ೪. ಕೊಡಬೇಕಾದ ಬಾಬತ್ತು (?): ಗುಱುತುಗಳಿಗೀ ಊರಲು ಒಕ್ಕಲು ಓಡಿಹೋದಡೆ ಅವೂರೂ ಆ ಗಉಡನೂ ಆ ಒಕ್ಕಲನಾಳ್ವೊನು ತೆಱುವನೂ (ಸೌಇಇ. IX–ii, ४೩३–३೮; 1407). **ಗುತ್ತು$_1$:** ೧. ಸೋತವರು ವಹಿಸುವರು ತತ್ಸಂಕೇತದಲ್ಲಿಗೆ ಗೆದ್ದವರನಂತಾತಗಳು ಭಾಂಡೀರಕಾಖ್ಯವಟಪ್ರದೇಶದಲಿ ಓತು ಗುತ್ತನು (ನಿಭಾಗ. ೧೦-೧೮-೨೪). ೨. ಲಕ್ಷ್ಯವಿಲ್ಲದೆ ತೊಡಚುವರೆ ನಿರ್ಲಕ್ಷ್ಯ ಶರವೇ ನೀನುಪಾರ್ಜಿಸಿದಕ್ಷಯವಲೇ ಪಾರ್ಥ ಗಣನೆಯ ಗುತ್ತಿನಂಬುಗಳೆ (ಕುವ್ಯಾಅ. ೦೩-೦೦); ಲೆತ್ತ ಪಗಡೆಯನಾಡಿ ಚಿತ್ತವನೊಲಿಸಲು ಮತ್ತೆ ಒಡ್ಡಿದೆ ಬಲಿಯೇನ !ಕೋ! ಕಾಕಾಳಿ ಹೆಣ್ಣಿನ ಗುತ್ತು ತಿಳಿಯದ (ಕನ್ನಜಾ. ३೫೦). **ಗುರುತು:** ೧. ಮನೆಯ ಮುಂದೆ ತೆಂಗಿನ ಮರ ಇರುವುದೇ ಅವರ ಮನೆಯ ಗುರುತು (ರೂಢಿ). ೨. "ಯಾವ ಗುರುತೂ ಸಿಗಲಿಲ್ಲಾ" ಅವರು ಕೇಳಿದರು (ದೇವಸಾ. ೨೫); ಗುರುತಿರ ಬಹುದು ಎನ್ನಿಸುವುದು (ಆರ್ಯಕ. ೨); ಗುರುತಂತೂ ಮೊದಲಿಂದಲೂ ಇದ್ದೇ ಇತ್ತು (ಬಿಟ್ಟಹೊ. ೧೫); ಗುರುತು ಕಂಡ ಕಳ್ಳ ಜೀವ ಸಹಿತ ಬಿಡ (ಗಾದೆ). ೫. ಒಪ್ಪ; ಹಸ್ತಾಕ್ಷರ; ಒಪ್ಪಿಗೆಯ ಮುದ್ರೆ; ರುಜು: ಋಣ ಪಡೆದುದಕ್ಕೆ ಗುರುತು ಹಾಕಿ ಕೊಟ್ಟಿದ್ದಾರೆ (ರೂಢಿ). 'ಕುಱುಪು', 'ಗೊತ್ತು' ಪರಾ.

ಗುರುತಿನವನು = ಪರಿಚಯದವನು: ಹಾದಿಯಲ್ಲಿ ಗುರುತಿನವನನ್ನು ಕಂಡರೆ . . . ಅವರಿಗೆ ನಮಸ್ಕಾರ ಮಾಡ ಬೇಕು (ಮುಂಬಯಿ. ४-३४); ತನ್ನ ತಂದೆಯ ಗುರುತಿನವನಾದ ಒಬ್ಬ ದೈವುಳ್ಳ ವರ್ತಕನ ಬಳಿಗೆ ಹೋಗಿ (ಮುಂಬಯಿ. ४-५೦). ಗುರುತುಹಾಕು = ನೆನಪಿನಲ್ಲಿಡುವುದಕ್ಕಾಗಿ ಮಾಹಿತಿಗಾಗಿ ಬರೆದುಕೊಳ್ಳು: ಹಾಲಿನ ಲೆಕ್ಕ ಗುರುತು ಹಾಕದಿದ್ದರೆ ಮರೆತುಹೋಗುತ್ತದೆ (ರೂಢಿ).

[ದೇ॥ ತುಳು. ಗುರುತ, ಗುರುತೊ, ಗುರ್ತ್ರ;
ತೆಲು. ಗುಱುತು, ಗುರ್ತು]

**ಗುಱುವ** (ನಾ). ಕೋಟೆಕಾಳಗದಲ್ಲಿ ಬಳಸುವ ಒಂದು ಸಾಧನ (?): ಸಾರಂ ವೈರಿಗಳಂ ನಿಸ್ಸಾರಂ ಮಾಡಿದುದು ಗುಱುವನೊಳವುಗುವವರಂ ವೀರರನದಟಲೆದುದು ನಿಧಾರಂ ನಿರ್ಘಾಟಿಸಿತ್ತು ವೀರರ ಧೃತಿಯಂ (ಪಾರ್ಶ್ವಪು. ३-೧४३). [?]

**ಗುಱಿಯಮ್ಮ** (ನಾ). ಒಬ್ಬಾತನ ಹೆಸರು: ಕದಲೆಕಧಿ ಪಾಣ್ಣಾ ಎಱಿ ಯಮ್ಮಂ ನಿವುದಿ ತುರುಗಳೊಳ್ ಕಾದಿ ಸತ್ತೊಂ ಈ ಕಲ್ಲ ಪುಱದಿಗಾವುಣ್ಣಾ ತಮ್ಮ ಗುಱಿಯಮ್ಮ ನಿಱಿಸಿದೊ (ಎಇ. XXI, ३५-४; 883).

[ಗುಱಿ$_0$ + ಅಮ್ಮ$_1$]

**ಗುಟ,** ಗುಳ$_3$ (ನಾ). ೧. ಗುಡ; ಬೆಲ್ಲ: "ಕೇಳು ಗುಟ ಗುಡಮುಮಕ್ಕು" (ಕವಿಕಂ. ೨೦೮); ಮೆಟಿಸಿಂ ಗುಟದಿಂ ಶರ್ಕರೆಯಿಂ ಚೆಲ್ವಾದ ಕೇರಿಯಂ ಗಡಿಯಿಂ . . . ಪುರಂ ಕಣ್ಗಂಬಾದುದು (ರಾಮಾಶ್ವ. ೦೦೩-೦೮). ೨. ಆನೆ ಕುದುರೆಗಳ ಪಕ್ಷರಕ್ಷೆ; ಹಕ್ಕರಿಕೆ: "ಗುಟಂ (ಗಟಂ) ಆನೆ ಕುದುರೆಗಳ ಪಕ್ಕಱಿಕೆ" (ಶಮದ. ಪರಿ. ೧); "ಗುಟವಾನೆಯ ಹಕ್ಕರಿಕೆಯು" (ಕವಿಕಂ. ೧೨೬); ಉಚ್ಚೈಃಕೇತನಂಗಳೊಳ್ ತೊಳಪ ಗುಟವಿಂಬಾಗೆ ಕಣ್ಗೊಂಡು ದೆತ್ತಂ . . . ದಂತಿಸೈನ್ಯಂ (ಜಗವಿ. ೭-೬೦); ಮದಗಂಧಕ್ಕೆ ಪರಸ್ಪರಂ ಮಸಗಿ ಕೋಪಾಟೋಪದಿಂ ತಳ್ತು ತಾಗಿದ ದಂತಂಗಳ ಕಿಚ್ಚು ಪತ್ತಿ ಗುಟವಮಂ[ಪಾಠಾಂ. ತಗುಳ್ದ]ದಳ್ಳಿಂಬಿನಂ . . . ಪೋರ್ದುವು ಗಜವ್ಯೂಹಂ ಗಜವ್ಯೂಹದೊಳ್ (ಅನಂಪು. ೧४-३). **ಗುಳ$_3$:** ೧. ಗೌಳ, ಗುಳಂ, ಝುಗಳೆ, ವಿಳಂಗಂ ಇವು ಕೂಡೆ ಡಕಾರಕ್ಕೆ ಪುಟ್ಟಿ ಱಟದಪಭ್ರಂಶತೆಯಂ ಪಡೆದುಂ ರೂಢಿಯ ಕುಳಂಗಳ್ (ಶಮದ. ३೦ ವೃತ್ತಿ); ಗುಡಂ–ಗುಳಂ (ಶಬ್ದಾನು. ೦४೦ ಪ್ರಯೋ). ೨: ಮಿಳಿ ಲತೆ ಗುಳವೋ ಪತ್ರಂ (ಗಿರಿಕ. ೭-४४); ಗುಳವ ಸಡಿಲಿಸಿ ಹಾಯ್ಕಿ ಜೋಧಾವಳಿಗಳಿಳಿದುದು (ಕುವ್ಯಾದ್ರೋ. ೫-೧४); ಪೊಕ್ಕಳ ಘಂಟೆಯನೆಳಲಿಕ್ಕಿ ಬಿಗಿದು ಗು[ಪಾಠಾಂ. ಗ್ರೂ]ಳವನು ತಳ ಸಂಕಲೆಯನಳವಡಿಸಿ ಕರಿಯನೇಱ ಕಲಿ ಚೋದರಳ್ಳೆಂದರಂದು (ಕುರಾಸಾಂ. ೧೧-३೫); ಥಳಥಳಿಪ ಬಹುರತ್ನಮಯವಹ ಗುಳವದೇಂ ಕಾಂಚನದ ದಂಡದ ತತಿಯೊಳ್ಳಿದುಂ ರತ್ನಮಯ ಗರುಡಧ್ವಜದಿನೆಸೆವ ತೊಳಪ ಪಲ್ಲವಸತ್ತಿಗೆಯ ತಣುನೆಳಲೊಳೀ ಗಜಕಂದರದೊಳಿದ್ದಳವಿ ಗೊಡುವವನಾರು ಬಲ್ಲಡೆ ಸೂತ ಹೇಳು (ಸಾಳ್ವಭಾ. ೧೮-೭೫).

[<ಸಂ. ಗುಡ]

**ಗುಟಿ$_1$** 'ಕುಟಿ$_1$' ನೋ.

**ಗುಟಿ$_2$** 'ಕುಟಿ$_2$' ನೋ.

**ಗುಟಿಕಲ್,** ಗುಳಿಕಲ್ಲು (ನಾ). ನಡುವೆ ಹಳ್ಳವಿರುವ ಕಲ್ಲು; ಒರಳು ಕಲ್ಲು (?): ಅವಗಟಿಯಾದಿಗಣಸ್ತು ಪ್ರದರ್ಶ್ಯತೇ ಯಥಾ-ಅವಗಟಿಯ . . . ಗುಟಿಕಲ್, ಉಟಿಕಲ್ (ಶಬ್ದಾನು. ೦४೦ ವ್ಯಾಖ್ಯಾ). **ಗುಳಿಕಲ್ಲು:** ಆ ಕಾಯವಳಗಿನ ಅವುಷಧಿಯನ್ನು ತೆಗೆದುಕೊಂಡು ಗುಳಿಕಲ್ಲಲಿ ಅಲ್ಲಿ ನಿಂತ ಹಾಲು ಕೆನೆ ಸರಿ ಸಕ್ಕರೆಯಂ ಕೂಡಿ ಮರ್ದಿಸಿ (ವಾಕಾಚಿ. ३೮-४).

[ಗುಟಿ$_2$ (<ಕುಟಿ$_2$) + ಕಲ್$_3$]

**ಗುಟಿಗಣ್** 'ಕುಟಿಗಣ್' ನೋ.

**ಗುಟು** 'ಕುಟು' ನೋ.

**ಗುಟುಗುಟನೆ,** ಗುಳುಗುಳನೆ (ಅ). = ಗುಡುಗುಡನೆ: ಆ ನೀರ್ವೊನಲ್ಗಳು ಗುಟನೆ ಗಟಿಗಟನೆ ಪರಿದತ್ತು (ಸಂಜೀವ. ೧೧). **ಗುಳುಗುಳನೆ:** ಮಾತೆತ್ತಿದರೆ ಗುಳುಗುಳನೆ ಅತ್ತುಬಿಡುತ್ತಾನೆ (ರೂಢಿ). [ಗುಟುಗುಟು + – ಅನೆ$_1$]

**ಗುಟುಗುಟಿಸು,** ಗುಳುಗುಳಿಸು (ಕ್ರಿ). ಗುಳುಗುಳು ಎಂದು ಶಬ್ದ ಮಾಡು; ಗುಳುಗುಳು ಎಂಬ ಧ್ವನಿಯನ್ನುಂಟುಮಾಡು. **ಗುಳುಗುಳಿಸು:** ಕರಗಿದ ಲೋಹರಸದುಷ್ಣ ನಂದುವಾಗಾ ನೀರೊಳಗೆ ಒಂದು ನಿಮಿಷ ಗುಳುಗುಳಿಪಂತೆ ಮಾಗಧನೆಂದೆನಿಂತೆಂದು ಘೂರ್ಣಿಸುತ (ನೇಮಿಸಂ. ३೧-೬೦); ಜಗವೆಲ್ಲ ನಗೆಯ ಹೊಳೆಯಾಗಿ ಗುಳುಗುಳಿಸೆ (ಭಾರಂಗ. ३५-೭); ಗಂಭೀರವಾದ ರಾಜಕಾರಣಭಾವನೆ ಗುಳುಗುಳಿಸುತ್ತಿದ್ದುದನ್ನು ಪರಿಜನ ದೊಡನೆ ಪುರಜನವೂ ಕಂಡುಕೊಂಡಿತ್ತು (ವೀರಬಂ. ५೭).

[ಗುಟುಗುಟು + – ಇಸು$_2$]

**ಗುಟುಗುಟು,** ಗುಳುಗುಳು (ನಾ). ಒಂದು ಅನುಕರಣ ಶಬ್ದ: ಗುಟು ಗುಟು ಗಟಿಗಟಿಯೆನುತುಂ ಪರಿವ ಪರಿವೊನಲ್ ಸೊಗಯಿಸುಗುಂ (ಶಮದ. ५४ ಪ್ರಯೋ). **ಗುಳುಗುಳು:** ಹೇಮಾವತಿಯ ಗುಳುಗುಳು ಧ್ವನಿಯು ಕಿವಿಗೆ ಇಂಪಾಗಿ ಕೇಳಿಬರುತ್ತಿತ್ತು (ರೂಢಿ).

**ಗುಟುಮ್ಮನೆ** (ಅ). ಒಂದು ಅನುಕರಣಾವ್ಯಯ: ಗುಳುಮ್ ಎಂದು ಶಬ್ದವಾಗುವಂತೆ; ಒಮ್ಮೆಗೆ; ಕೂಡಲೆ: ನೀರಜಬಂಧು ಗುಟುಮ್ಮನೆ ರಸೆಗಜಾಂಡದಿಂದಿೞಿದನಾರನಟಿಯದೊ ರಾಗಂ (ಶಾಂತಿಪು. ೮-೬೦); ಮನ

ದೊಳ್ ಕಯ್ಗ್ಗಳಿಯೆ ಗ[ಗು]ಟುಮ್ಮನೆ ರಸೆಗಿಳಿದರೆನಿಬರಾನುಮಿಳೇಶರ್ (ಅಜಿಪು. ೨-೧೦೨). 'ಘುಳುಮ್ಮನೆ' ಪರಾ. [ಗುಟುಂ$_0$ + – ಅನೆ$_1$]

**ಗುಟ್ಟಿಪಾಡಿ** (ನಾ). ಒಂದಂ ಪ್ರದೇಶದ ಹೆಸರಂ: ಗುಟ್ಟಿಪಾಡಿಯುಂ ಕಲ್ನಾಡು ಕೊಟ್ಟದು (ಎಇ. VI, ೪೩-೬; 840).

[?]

**ಗುಟ್ಟಿವೀದಿ** (ನಾ). ಒಂದು ಪ್ರದೇಶದ ಹೆಸರು (?): ಸತ್ಯವಾಕ್ಯ ಪೆರ್ಮ್ಮನಡಿಗಳ್ ಗುಟ್ಟಿವೀದಿಯ ಕಲ್ನಾಡ ಕೊಟ್ಟದು (ಎಕ. III, ತಿರುಮ. ೯೦-೬; 921?). [?]

**ಗುಟಿಪ್ಪೂರಿ** (ನಾ). ಒಂದು ಬಗೆಯ ಸಿಹಿಯಾದ ಭಕ್ಷ್ಯ: ಲಾಡು ಮಂಡಿಗೆಯು ಫೇಣಿ ಗುಟಿಪ್ಪೂರಿಗಳೂ ಮೋತೀ ಚೂರುಗಳೂ (ಅಂಜಚ. ೧-೧೪೫). [ಗುಟ + <ಪೂರಿ]

**ಗೂ** (ನಾ). ಗೂಬೆಯ ಧ್ವನಿಯನ್ನು ಅನುಕರಣೆ ಮಾಡುವ ಶಬ್ದ: ಕಾಗೆ 'ಕಾ' ಎನ್ನುತ್ತದೆ, ಗೂಬೆ 'ಗೂ' ಎನುತ್ತದೆ (ರೂಢಿ).

**ಗೂಗೂ** (ದ್ವಿರುಕ್ತಿ): ಗೂಬೆಯ ಗೂಗೂ ಶಬ್ದ ಕಿವಿಗೆ ಬಿತ್ತು (ರೂಢಿ).

**ಗೂಂಕರಿಸು** (ಕ್ರಿ). ಗೂಂಕಾರವನ್ನು ಮಾಡಂ; ಗುಂಬ್ಬಳಿಸು: ಕಾಡು ಪಾರಿವಾಳವು ತನ್ನ ಕತ್ತನ್ನುಬ್ಬಿಸಿ, ಗೂಂಕರಿಸಿ, ಹೆಣ್ಣನ್ನೊಲಿಸುವಾಗ ಕತ್ತಿನ ಬಣ್ಣದ ಅವಶ್ಯಕತೆ ಅದಕ್ಕೇಕೆ ಬಂದಿತು ಎಂದು ತೋರಿಸುವುದು (ಬಾಲಪ್ರ. III, ೧೬೯೩). 'ಘೂಂಕರಿಸು' ಪರಾ.

[ಗೂಂಕರಣ$_0$ + – ಇಸು$_3$]

**ಗೂಂಟ, ಗುಂಟ$_1$, ಗೂಟ, ಘೂಟ** (ನಾ). ಮರದ ಅಥವಾ ಲೋಹದ ಚೂಪಾದ ಬೆಣೆ; ದಸಿ: "ಗೂಂಟಂ [ಪಾಠಾಂ. ಗುಂಟಂ. ಗುಂಠಂ] ಶಂಕುವಾರಯ್ಕೆ" (ಮಂಗರಾ. ೫೯-೧೩); ಗುಡಿಯ ಗೂಂಟಕ್ಕೆ ಬಲ್ಲಡವಿಗಳುಂ ದಂಡಿಗೆಗೆ ವೇಣುವನಂಗಳುಂ . . . ಆ ಪಡೆಗೆ ನೆಱೆಯವು (ಪಂಪಭಾ. ೯-೧೦೪ ವ); ಗುಡಿಯನೆತ್ತುವರಂತೆ ಗೂಂಟವುಂ ಪೆಟ್ಟುವರ್ ಪರ್ದಿನಂತೆ ಕೀಟ್ಟುರ್ (ಧರ್ಮಾಮೃ. ೩-೭೩); ಬಲಿದು ಗೂಂಟಗಳನೆತ್ತಾನೆ ಕುದುರೆಗಳ ನೀಂ ದಳೆಯಿಕ್ಕು (ಜಬಪು. ೪೭-೩೦). **ಗುಂಟ$_1$:** "ಶಿವಕಃ ಕೀಲಕಃ–ಗುಂಟ" (ನಾಚಿರಾ. ೬); ನಟ್ಟ ಗುಂ[ಪಾಠಾಂ. ಗೂ]ಟವ ತೆಗೆದು ತಾನೆ ಬೀಸಾಡುತ್ತ ಹೊಟ್ಟೆಯಂ ಹತ್ತಿ ಮೊಲೆಗಲವರುವ ಕೊರ್ಡೆ . . . ಹಾಡಿ ಹರಸುತ್ತಿರ್ದರು (ಸಿದ್ಧರಾ. ೯-೨೬); ಗುಡಿಯ ಹೊಲಿವ ಗುಂಟವ ಕೆತ್ತುವ (ಶ್ರೀಪಾಲ. ೧೩-೫೪); ಮಿಸುಪ ಪಟ್ಟೆಯ ಗೂಡಾರಗಳನು ತೆಗೆ ಹಸವಾಡು ಹಗ್ಗ ಗುಂಟಗಳ (ಜಂಪ್ರಸಾಂ. ೧೫-೨೫). **ಗೂಟ:** ಕುಡುಗೋಲ್ ಕತ್ತಿಗೆ ದಬ್ಬಳಂ ಕೊಡಲಿ ಗೂಟಂ ಹಾರೆ ಹಾರಂಗಿ ಕೈಪಿಡಿದಾ ತಾಮ್ರಸಭಾಂಡಮೆಂಬಿವಿನಿತುಂ ದಂಡಿಂಗೆ ಸಾಮಗ್ರಿಗಳ್ (ಸೂಕ್ತಿಸು. ೧೮-೨೩); ಶೂಲ ಬರ್ಪುದ ಕಂಡು ಪರಬಲಮಸ್ತಕಶೂಲನ ಗೂಟವ ತಱಿದು . . . ಬೊಬ್ಬಿಱಿದ (ಮೋಹತ. ೩೯-೧೧); ಸುರಮ ತಂಗಜವು ಗೂಟವಂ ಕಿತ್ತುಕೊಂಡಮರಾವತೀಪುರ ಪ್ರಾಂತದಲ್ಲೀ ಭಂಗ ಪಡಿಸುತ್ತಮರಸಂತತಿಗೆ ಭೀತಿಯಂ . . . ತೋರುತಿಪ್ಪುದು (ಅರ್ಜಾವಿ. ೧-೩೭); ಗುರು ಕೊಟ್ಟ ಜೋಳಿಗೆಯೆಂದು ಗೂಟಕ್ಕೆ ಸಿಗಹಾಕಿದರೆ ಹೊಟ್ಟೆ ತುಂಬೀತೆ? (ಗಾದೆ). **ಘೂಟ:** ಅಲ್ಲೇ ಘೂಟಕ್ಕ ಇದ್ದ ಮಡೀ ಹಚಿಗೊಂಡು ವಸ್ತ್ರಾಂತರ ಆದಾ (ದೀಪಹ. II, ೨೭).

[ದೇ॥ ತುಳು. ಗೂಂಟ, ಗೂಂಟಿಗೆ, ಗೂಂಟೊ, ಗೂಟ, ಗೂಟೆ; ತೆಲು. ಗೂಟ, ಗೂಟಾ./ಪ್ರಾ. ಖುಂಟ]

**ಗೂಂಟವಲೆ, ಗುಂಟವಲೆ, ಗೂಟವಲೆ** (ನಾ). ಒಂದು ಬಗೆಯ ಬಲೆ: ತಡಿಕೆವಲೆ ಕಣ್ಣಿವಲೆ ನಿಟ್ಟಡಕಿಲ್ವಲೆ ಗೂಂಟವಲೆ (ಗಿರಿಕ. ೧-೮೦); ಪಾಸು ವಲೆ ಗೂಂಟವಲೆ [ಪಾಠಾಂ. ಗುಂಡಿವಲೆ] ಮುತ್ತಾನೆಯ ಬಲೆ ತಟ್ಟೆಬಲೆಗಳೆಂಬಿವನತ್ಯಾತುರಮಾಗಿಯೆರಸಲೆಯಲ್ಕಾ ಸಮಯದೊಳೊರ್ವ ಜೈನ ಮುನಿಪತಿ ಕಂಡಂ (ಪುಣ್ಯಾಸ್ರ. ೯-೩೭). **ಗುಂಟವಲೆ:** ತೊಟ್ಟಿವಲೆ ಗುಂ[ಪಾಠಾಂ. ಗೂ]ಟವಲೆ ಕಣ್ಣಿವಲೆ ಕಾಲುವಲೆಯ . . . ಬೇಡವಡೆ ನೆರೆದು ದೇನೆಂಬೆನು (ಹಚಕಾ. ೫-೮). **ಗೂಟವಲೆ:** ಮೇಲಿನ 'ಹಚಕಾ.' ಪ್ರಯೋಗದ ಪಾಠಾಂತರವನ್ನು ನೋಡಿ. [ಗೂಂಟ + ಬಲೆ$_1$]

**ಗೂಂಟು** (ನಾ). ಪಳಗದ ಕುದುರೆ; ಅಗಡು ಕುದುರೆ: ಒತ್ತೆಯ ಗೂಂಟಂ ಸೊಡರಿಟ್ಟೇಱುವಂತೆರವಿನ ಸಿರಿಯನಱಿದು ಪೊಟಲೊಳಂ ಪೊಟ ಪೊಟಿಲೊಳಂ . . . ಎಲ್ಲಿ ನೋಟಿಪ್ಪೊಡಂ ಕಾಮದೇವನೆ ಬವಣಿಗೆ ಬಂದಂತೆ ಬರ್ಪ ವಸುದೇವನನೆ ಕಾಣಲಕ್ಕುಂ (ಅರ್ಧನೇ. ೫-೨ ವ); ಅಂತಾ ಗೂಂಟನ ಬಾಯೊಳ್ಗೂಂಟಮಂ ಬೆಟ್ಟಿದಂತಿರ್ದ ಕೆಯ್ಯನುರ್ಚಿಕೊಂಡು (ಅರ್ಧನೇ. ೭-೭೮ ವ). [<ಪ್ರಾ. ಗುಂಠ. / ಸಂ. ಘೋಟ]

**ಗೂಂಡಾ, ಗುಂಡಾ** (ನಾ). ಪುಂಡ; ದುಷ್ಟ; ಸ್ವೇಚ್ಛಾಚಾರಿ: ಕಳ್ಳ ವ್ಯವಹಾರಿಗಳೂ, ಕೆಲವು ಗೂಂಡಾಜನರೂ ಸೇರಿಕೊಂಡಿದ್ದರು (ಪಂಜಪಂ. ೧೮೦); ಗೂಂಡಾಜನಗಳಾರೋ ಇದ್ದಿರಬಹುದು (ಸಾಹೇಬ್. ೨೦೪). **ಗುಂಡಾ:** ಇವರಿಗೂ ಗುಂಡಾಗಳಿಗೂ ಏನು ವ್ಯತ್ಯಾಸವುಳಿದಂತಾಯಿತು (ಬಲಬೀ. ೫೯); ಈತನ ಆಳಿಕೆಯಲ್ಲಿ ಗುಂಡಾಜನರ ಸಂಖ್ಯೆ ಹೆಚ್ಚಿದೆ (ಕೂತಕಾ. ೭). [← ಹಿಂ. ಮರಾ. ಗುಂಡಾ]

**ಗೂಂಡಾಗಿರಿ, ಗುಂಡಾಗಿರಿ** (ನಾ). ಪುಂಡಾಟಿಕೆ; ಪುಂಡುತನ; ಸ್ವೇಚ್ಛಾಚಾರ: ಸಾಮಾನ್ಯವಾಗಿ ಗೂಂಡಾಗಿರಿಯಲ್ಲಿ ನಿಸ್ಸೀಮರಾದವರನ್ನು ಈ ಕೆಲಸಕ್ಕೆ ನೇಮಿಸಿಕೊಳ್ಳುತ್ತಿದ್ದರು (ಪಂಜಪಂ. ೧೧). **ಗುಂಡಾಗಿರಿ:** ಈ ಗುಂಡಾಗಿರಿಯನ್ನು ನಿಲ್ಲಿಸು (ಹಬ್ಬಿಬ. ೨೦೮). [ಗೂಂಡಾ + – ಗಿರಿ$_2$]

**ಗೂಕು** (ನಾ). (ಕರಾ) ಸಣ್ಣ ಹಲಸಿನ ಮಿಡಿ; ಹಲಸಿನ ಹೀಚು; ಗಂಜ್ಜ; "ಚಿಗುರಾದ ಹಲಸಿನ ಮಿಡಿ" (ಸಿರಿಕೋ. ೧೬೫); ಹತ್ತು ಗೂಕು ಬಿಟ್ಟರೆ, ಕಾಯಿ ಆಗುವುದು ಒಂದೋ ಎರಡೋ (ರೂಢಿ). [?]

**ಗೂಗ** (ನಾ). ಒಂದು ಬಗೆಯ ಮರ: ವಲೀವರ, ಚಲ್ಲಾನೆ, ಮರದ ಎಣ್ಣೆ, ಅಣ್ಣತಮ್ಮನಮರ, ಗೂಗ (ವೃಜಿಗಿ. ೩೦-೬೦೭). [?]

**ಗೂಗರಿಸು** (ಕ್ರಿ). ತೂಕಡಿಸು; ಉತ್ಸಾಹಹೀನವಾಗು: ಬೆಳಗಾಗೆದ್ದು ಗೂಗರಿಸಿಕೊಂಡು ಕೆಲಸಮಾಡುವುದನ್ನ ನೋಡಿದರೆ ಸಾಕು ಮೈ ಬೆಂಕಿಯಾಗುತ್ತೆ (ನಿಂದನಿ. ೫೫). 'ಜೂಗರಿಸು' ಪರಾ. [?]

**ಗೂಗಿಡು** (ಕ್ರಿ). ಗೂಗೂ ಎಂದು ಕೂಗು: ಕರಿಕಾಗೆ ಕಾವ್‌ಗುಟ್ಟಲು ಕೆಂಗಾಗೆ ಗೂಗಿಡುವ ನೋಟ ನಡುಹಗಲೊಳಗೆ ಕಾಣಬಹುದು (ಸಹೀಗೀ ೫೮-೦). [<ಗೂ + ಇಡು$_1$]

**ಗೂಗು** 'ಗುಂಗು$_3$' ನೋ.

**ಗೂಗುಕ್** (ನಾ). ಒಂದು ಅನುಕರಣ ಶಬ್ದ; ಗೂಬೆಯ ಕೂಗು: ಗೂಗುಕ್ಕೆಂದು ಗೂಗುಟ್ಟದಿರಿ! (ಬೆಟ್ಟಿಅ. ೨೦೭-೧೮).

**ಗೂಗುಟ್ಟು** (ಕ್ರಿ). ಗೂಗೂ ಎಂದು ಕೂಗು; ಗೂಬೆಯಂತೆ ಕೂಗು: ಅಮಂಗಳದ ಶಂಕೆಯ ಅವಲಕ್ಷಣವನ್ನರುಚಿ ಗೂಗುಕ್ಕೆಂದು ಗೂಗುಟ್ಟದಿರಿ! (ಬೆಟ್ಟಿಅ. ೨೦೭-೧೯). [ಗೂ + ಕುಟ್ಟು$_1$]

**ಗೂಗೆ, ಗೂಬೆ** (ನಾ). ಗೂಗೂ ಎಂದು ಕೂಗುವ ಒಂದು ಬಗೆಯ ಹಕ್ಕಿ; ಘೂಕ: "ಉಲೂಕಃ, ಕೌಶಿಕಃ, ಧ್ವಾಂಕ್ಷಾರಾತಿಃ, ನಿಶಾಟನಃ– ಈ ೪ ಗೂಗೆ" (ಹಲಾಯು. ೪೧-೯೩); "ಘೂಕಂ ಗೂಗೆವೆಸರ್" (ಚತುನಿ. ೪೩); ಕಾಗೆ ಗೂಗೆ ಪರ್ದು ಚಕೋರಂ . . . ದುಃಖಂಗಳನೆಯ್ದುಗುಂ (ವಡ್ಡಾರಾ. ೯೭-೮); ಖಗಮಂ ಸಾಕುವೆನೆಂದು ಗೂಗೆಮಱಿಯಂ ಸಂಪ್ರೀತಿಯಿಂದೋವರೇ (ಸೋಮೇಶ. ೪೧); ವಾಯಸ ಕುಲವನೊಂದೇ ಗೂಗೆ ಹೊಯ್ದುಱಿಯಟ್ಟುವಂದದಲಿ ಬಲುಕಣೆಗಳಿವದಿರನು ಕರಿ ಮುಂಕೊಳಿಸಿ ಕೆಡಹಿತು (ಕುಮಾವ್ಯದ್ರೋ. ೩-೨೪); ಮಾಗಧ ನನಗೊಬ್ಬ ಪಗೆಯೆ ಸೂರ್ಯಗೆ ದೊಡ್ಡ ಗೂಗೆಯ ಯೋಚನೆಯೇಕೆ (ಭರಜ. ೨೪-೮). **ಗೂಬೆ:** ೧. ಗೂಬೆ

ಕೋಗಿಲೆ ಮುದಿನರಿಗಳಿಲ್ಲಿಗೆ ಸಭಾಸದರೆಂದನಾ ಚೈದ್ಯ (ಕುವ್ಯಾಸ. ೭೦೩. ೧೧-೩೯) ; ಗೂಬೆ ಜರೆದೊಡೆ ಲೋಕಲೋಚನಗೆ ಕೊರತೆಯುಂಟೆ (ಅರ್ಜುವಿ. ೧೦ ಪೀಠಿಕಾಸಂಧಿ) ; ಎಲ್ಲೋ ಬಳ್ಳು ಗೂಬೆಗಳು ಮಾತ್ರ ಆಗೀಗ ಕೂಗುವುದು ಕೇಳಬರುತ್ತದೆ (ವಾರಾಕ್ಸ. ೪೪) ; ಗೂಬೆ ಮುಂಗುಸಿಗಳೂ ಅತ್ತಕಡೆ ಬಂದುವು (ಕಸರಿ. ೭) ; ಇರುಳು ಕಾಗೆಗೆ ಆಗದು ಹಗಲು ಗೂಬೆಗೆ ಆಗದು (ಗಾದೆ).

**ಗೂಗೆಕೂರಿಸು, ಗೂಬೆಕೂರಿಸು** = ಅಪವಾದವನ್ನು ಹೊರಿಸು ; ತಪ್ಪುಹೊರಿಸು : ನಮ್ಮಮೇಲೂ ಗೂಗೆ ಕೂರಿಸಿಬಿಟ್ಟರಲ್ಲ ಸಾವ್ಕಾರ್ರು (ಬೆಳುಮ. ೯೭) ; ಜತೆಗೆ ನಮ್ಮತಲೆಗಳ ಮೇಲೂ ಗೂಬೆ ಕೂರಿಸುತ್ತಾನೆ (ಮಹಾಗ. ೧೮೯). [ದೇ॥ ತಮಿ. ಕೂಕೈ; ಮಲ. ಕೂಮನ್; ತುಳು. ಗೂಗೆ; ತೆಲು. ಗೂಬ/ಸಂ. ಘೂಕ ]

**ಗೂಗೆಹೂವು** (ನಾ). ಬೆಟ್ಟದಾವರೆ : " ಬೆಟ್ಟದಾವರೆ – ಗುಡ್ಡದಲ್ಲಿ ಆಗುವ ಗೂಗೇ ಹೂವು " (ಗಂಗಾಮ. ೨೩೭). [ ಗೂಗೆ ? + ಹೂವು ( < ಪೂ$_2$) ]

**ಗೂಚು, ಗೂಜು** (ನಾ). (ಕರಾ) ಹಲಸಿನ ಹಣ್ಣಿನ ನಡುವೆ ಇರುವ ದಿಂಡು: ಪುಣ್ಯಾತ್ಮ ಹಣ್ಣನ್ನು ಗೂಚಿನಿಂದಲೂ ಬಿಡ (ರೂಢಿ). **ಗೂಜು :** ಲಲಿತ . . . ಹಲಸಿನ ಕಡಿಗಳನ್ನು 'ಸೇಡೆ' ಗಳಾಗಿ ಕತ್ತರಿಸಿ ಅದರ ಗೂಜು, ಸಿಪ್ಪೆ, ಮಯಣಗಳನ್ನು ತೆಗೆದು ತೊಳೆಬಿಡಿಸಲು ಸಿದ್ಧಪಡಿಸಿದಳು (ಬಾಳೆವ್ವ. ೨೦೪). [ ←ತುಳು. ಕೂಂಜಿ, ಗೂಂಜಿ ]

**ಗೂಜು** ' ಗೂಚು ' ನೋ.

**ಗೂಟ** ' ಗೂಂಟ ' ನೋ.

**ಗೂಟಕೋಲು** (ನಾ). ಕಳಗ ; ಕಳಿಗೂಟ ; ತಡೆಗೂಟ : (ಕ).
[ ಗೂಟ ( < ಗೂಂಟ) + ಕೋಲು$_1$ ( < ಕೋಲ್$_1$) ]

**ಗೂಟಗಳ್ಳಿ** (ನಾ). ಒಂದು ಬಗೆಯ ಕಳ್ಳಿ ಗಿಡ ; ಬೇಲಿಗಳಲ್ಲಿ ನೆಡುವ ಕಳ್ಳಿ : (ಮ್ಯಾಜಿಗಿ. ೩೫-೭೯೫). ' ಕೋಲುಗಳ್ಳಿ ' ಪರಾ.
[ ಗೂಟ ( < ಗೂಂಟ) + ಕಳ್ಳಿ$_2$ ]

**ಗೂಟನಾಮ** (ನಾ). ಹಣೆಯ ಮೇಲೆ ಉದ್ದಕ್ಕೆ ಇಟ್ಟುಕೊಳ್ಳುವ ನಾಮ : ಗೂಟನಾಮವ ಹೊಡೆದು ಗುಂಡು ತಂಬಿಗೆ ಹಿಡಿದು . . . ದಾಟುಗಾಲಿಡುತ ನಾ ಧರೆಯೊಳಗೆ ಬರಲೆನ್ನ ಬೂಟಕತನ ನೋಡಿ ಭ್ರಮಿಸದಿರಿ ಜನರೆ (ಪುರಂದ. ೪-೧೭೫-೧) ; ಗೂಟನಾಮವನಿಟ್ಟು ಕೋವಿದನು ತಾನೆನುತ ಬೂಟಿಕೆಯ ಮಾಡಿದವ ಹರಿದಾಸನೇ (ಕಭವಿ. I, ೨೩೭) ; ಜೈನರ ಜಿನ್ನಪ್ಪನ ಮಗನೂ ಗೂಟನಾಮವನ್ನು ಹಣೆಯ ಮೇಲೆ ವಿರಾಜಿಸುತ್ತ ಬೇಟೆಗಾರರ ಜೊತೆಗೆ ನಡೆದಿದ್ದ (ಗ್ರಾಮಾಯ. ೨೩೮). ' ಪಂಗನಾಮ ' ಪರಾ. [ ಗೂಟ ( < ಗೂಂಟ) + ನಾಮ ]

**ಗೂಟವಲೆ** ' ಗೂಂಟವಲೆ ' ನೋ.

**ಗೂಟಿ** 'ಗಂಟ್ಟಿ$_2$' ನೋ.

**ಗೂಡ, ಗೂಳ$_1$**(ನಾ). ಗುಟ್ಟು; ರಹಸ್ಯ: ಒಂದು ಮೊಗುವ ಗೂಡದೊಳಿರಿಸಿ ನೋಡಿಸೆ ಭುಂಜಿಪುವ[ದ]ಕಂಡಾಡಿದನೆಲ್ಲರ ಕೂಡೆ ಆಡದೆ ನಾಳೆ ಗುಟ್ಟಾಗಿರ್ದು ಊಟವ ಮಾಡುವ ಸಮಯಕ್ಕೆ ಮುತ್ತಿ ಮಾಡುವಿವೀತಗೆ ತಕ್ಕ ಶಿಕ್ಷೆಯನೆಂದು ಕೂಡಿಸರ್ವರು ಮರುದಿನದಿ (ಪೂಜ್ಯಚ. ೩-೧೫೨). **ಗೂಳ$_1$** : " ಗೂಳ, ಗುಟ್ಟು – ಗೂಢ " (ಶದ್ವಕೋ. ೧೧).
[ < ಸಂ. ಗೂಢ ]

**ಗೂಡಂಬುಗೊಳ್** (ಕ್ರಿ). ಗುಂಪುಗುಂಪಾಗಿ ಬಾಣವನ್ನು ಬಿಡು : ಜಕ್ಕೆಯನಾಯಕಂ ಮೊನೆಯಿಟ್ಟು ಗೊಂಡನಾಯಕರ ಮೇಲೆವಾಯಲು ತಳಿಯ ಮಱಿವಿಡಿದು ಹಡಿಕಟ್ಟಿದಾಳೆಚ್ಚು ಗೂಡಂಬುಗೊಂಡು ಕೆಡಹಲವರ ಹೆಗಲ ಮೆಟ್ಟಿ ಸ್ವರ್ಗಸ್ಥನಾದಲ್ಲಿಗೀ ವೀರಗಲ್ಲಂ . . . ನಿಲ್ಸಿ (ಮ್ಯಾಅರಿ. ೧೯೪೦.೪೨-೨ ; 18 ನೆಯ ಶತ). [ ಗೂಡು+ಅಂಬು$_2$+ಕೊಳ್$_1$ ]

**ಗೂಡಗೊಳಿಸು** (ಕ್ರಿ). ಗುಟ್ಟಾಗಿರಿಸು; ಗೋಪ್ಯವಾಗಿ ಇಡು: ಈ ಮಾತು ಗೂಡಗೊಳಿಸದೆ ಹೋಯಿತು ಪಾಪಿ ನಾರದ ಮಗನ ಖೋಡಿ ದಾನವನ ಕೈಗಿತ್ತು . . . ಕುಟಿಲಚರನಂತಾದೆ (ನವಮೋ. ೨೯-೪೫).
[ ಗೂಡ + ಕೊಳ್$_1$ + – ಇಸು$_3$ ]

**ಗೂಡಾಡಿಸು** (ಕ್ರಿ). ಕಲಕು ; ಕದಡು ; ಕ್ಷೋಭೆಗೊಳಿಸು : ರಾಯರಾದಡವ್ವೋ ಹಬ್ಬಣನೆಂಬನೊಳ್ ಘಸಣಿಯೇಕೆಂಬಂತೆ ಗೂಡಾಡಿಪಂ ತೊಡರಲ್ . . . ಜಯಂಬಡೆವಂ ತಾನೆನಲ್ (ಮುಂಬರಾ. X, ೩-೩೧ ; 1219) ; ಕೂಡೆ ನಿಜತೇಜದಿಂದಂ ಗೂಡಾಡಿಸುತಿರ್ಪನಮರಲೋಕಮನ ಸುರಂ (ಅನಂಪು. ೧೩-೨೮). [ ಗೂಡು ? + ಆಡಿಸು ]

**ಗೂಡಾರ, ಗುಂಡಾರ, ಗುಡಾರ, ಗುಡಾರು, ಗುಡಾರೆ** (ನಾ). ೧. (ಸೈನಿಕರು ಮೊದಲಾದವರು) ಇಳಿದುಕೊಳ್ಳುವುದಕ್ಕಾಗಿ, ಬಟ್ಟೆಯಿಂದ ತಾತ್ಕಾಲಿಕವಾಗಿ ಕಟ್ಟಿರುವ ವಸತಿ; ಬಿಡಾರ ; ತಂಬು ; ಡೇರೆ: ಗೂಡಾರದ ಕವಿಯಂತಿರೆ ಮುಚ್ಚಿಪೋದ ಕವಿಯುಂ ಕವಿಯೇ (ಅಜಿಪು. ೧-೮೭) ; ಮುನಿಪತಿ . . . ತಳಿರ ಗೂಡಾರದಲಿ ಕಂಡನು ಧರ್ಮನಂದನನ (ಕುವ್ಯಾಅ. ೯-೨) ; ವೈಶ್ಯಕುಲಸಂಭವರು ಹಾಯ್ಕಿದರಲ್ಲಿ ಗೂಡಾರವನು (ನಳಚ. ೫-೪೪). ೨. ಡೇರೆಗೆ ಹೊದಿಸುವುದಕ್ಕೂ ನೆಲದ ಮೇಲೆ ಹಾಸುವುದಕ್ಕೂ ಬಳಸುವ ದಪ್ಪನಾದ ಬಟ್ಟೆ : ಕೆಂಬಟ್ಟೆಯ ಗೂ[ ಪಾಠಾಂ. ಗು ]ಡಾರಮನಿಂಬಱಿದು ಬಸಂತನೆಯ್ದೆ ಪೊಯ್ದನೊ ಮದನಂಗೆಂಬಂತೆ . . . ಬಂದುದೊ ಕಣ್ಗನೇಕಶಾಖಮಶೋಕಂ (ರಾಜಶೇ. ೨-೫೫) ; ಬಿಡದಿಮನೆಯಲ್ಲಿ ಸರಿಯಾದ ವ್ಯವಸ್ಥೆಯಿಲ್ಲ ; ಗೂಡಾರಗಳು ಇದ್ದರೆ ಚಾಪೆಯಿಲ್ಲ, ಚಾಪೆಗಳಿದ್ದರೆ ಇನ್ನೊಂದಿಲ್ಲ (ಮುಳ್ಳಹಾ. ೩೭) ; ಅಲ್ಲಲ್ಲಿ ದೊಡ್ಡ ದೊಡ್ಡ ಗೂಡಾರಗಳನ್ನು ಹಾಸಿ ಕಾಳುಗಳನ್ನು ತೆಗೆ ತೆಗೆದು ಅವುಗಳ ಮೇಲೆ ಸುರುವತೊಡಗಿದರು (ಜನಜೀ. ೧೭). **ಗುಂಡಾರ :** ೧. 'ಗುಡಿಗುಂಡಾರ' ಪರಾ. **ಗುಡಾರ :** ೧. ಕ್ಷೀರವಾರಾಸಿಪತಿ ತನ್ನ ಸುತಗೆ ಮಿತ್ರನೊಪ್ಪಂ ಸೋಂಕದಂತೆ ಧವಲಾಂಬರದ ಬಿತ್ತರದ ಪೇರ್ಗುಡಾರವನು ರಚಿಸಿದವೊಲು ಮೃತ್ಯುಂಜಯನವಾಸ ರಜತಾದ್ರಿವೊಪ್ಪಿ ರಾಜಿಸುತಿರ್ದುದು (ನವಮೋ. ೨-೧೭) ; ಮುಸುಕಿರ್ಪ ಮಂಜಿನಿಂ ಬೆಳ್ಗುಡಾರಂಗಳಂತೆಸೆಯೆ ಶೈಲಂಗಳ್ (ಶೀಷರಾ. ೨೫-೧೧) ; ಅಣ್ಣನು ಯುದ್ಧಮಾಡುವುದನ್ನು ನೋಡಬೇಕೆಂದು ಗುಡಾರದಿಂದ ಬಂದವಳು ಗಾಯಪಡೆದು ಬಿದ್ದಿದಾಳೆ (ಸಂಸಕ. ೧೦೧). ೨. ದೊಡ್ಡ ಗುಡಾರವೊಂದನ್ನು ಹಾಸಿ ಅದರ ಮೇಲೆ ಒಂದೆರಡು ಹಳೆಯ ದಿಂಬುಗಳನ್ನಿಡಲಾಗಿದೆ (ನಡೆದಾ. I, ೨೫೯) ; ನೆಲಕ್ಕೆ ಹಾಸುವ ಗುಡಾರದಷ್ಟು ದಪ್ಪಗೆ – ಒರಟು ಒರಟಾಗಿದ್ದ ಆ ಕಂಬಳಿಯನ್ನು ಹೊದೆದುಕೊಂಡು . . . ತಲೆಯೊರಗಿಸಿದ (ಅಗಸ್ಕ್ಯ. ೨೮). **ಗುಡಾರು:** ೧. ಹೆಬಸೂರು ಇಲ್ಲಿ ಉತ್ತಮ ಗುಡಾರುಗಳು ಹುಟ್ಟುತ್ತವೆ (ಧಾರಜಿ. ೨೦). **ಗುಡಾರೆ :** ೧. " ದೂಷ್ಯಂ, ವಸ್ತ್ರವೇಶ್ಮನ್ . . . ಬಟ್ಟೆಯಿಂದ ಕಟ್ಟಲ್ಪಟ್ಟ ಮನೆಗೆ ಹೆಸರುಗಳು, ಗುಡಾರ ಗುಡಾರೆ ಡೇರಾ ಆದಿ ಶಬ್ದದಿಂದ ಪಟಕುಟೀರಾದಿ ಶಬ್ದಗಳೂ ಗುಡಾರಕ್ಕೆ ಹೆಸರುಗಳು " (ಸಿದ್ಧಾಂತಿ. ೧೭೮).
[ದೇ॥ ತಮಿ. ಮಲ. ಕೂಡಾರ ; ತುಳು. ಗುಡಾರ. ತೆಲು. ಗುಡಾರ, ಗುಡಾರು, ಗೂಡಾರ, ಗೂಡಾರು. / ಸಂ. ಗೂಢಾಗಾರ ]

**ಗೂಡಾರವಿಡು**(ಕ್ರಿ). ಡೇರೆಯನ್ನು ಹೊಡೆ ; ಬೀಡುಬಿಡು : ನಾ ಗೂಡಾರವನಿಟ್ಟ ಬಳಿಯಲೊಬ್ಬ ಬೇಗದೆ ಗೂಡಾರವಿಟ್ಟು ರಾಗದೊಳಗೆ ರಾಜಕಾರ್ಯವ ನೆಱೆ ಕೊನೆಸಾಗಿಸಲಱಿದಪೆನೆಂದ (ಕಂನವಿ. ೧೭-೧೯).
[ ಗೂಡಾರ + ಇಡು$_1$ ]

**ಗೂಡಿಕ್ಕು** (ಕ್ರಿ). ಗೂಡನ್ನು ಕಟ್ಟು ; ಗೂಡುಮಾಡು : ಮೊಳಕಾಲ್ಗಳಿಡೆಯೊಳುದ್ಭವಿಸಿರ್ದ ಕಿಂಶುಕಂಗಳ ಮೇಲೆ ಗೂಡಿಕ್ಕಿ ಬಾಳ್ದಪುವು ಪಕ್ಷಿಗಳ ಬಳಗಂಗಳ್ (ಜೈಮಿಭಾ. ೩೨-೨೭). [ ಗೂಡು + ಇಕ್ಕು ]

**ಗೂಡಿಟ್ಟಿಗೊಳಿಸು** (ಕ್ರಿ). ಎದೆಗೆ ಈಟಿಹಾಕು ; ಇಟ್ಟಿಯಿಂದ ತಿವಿ : ಮುಟ್ಟಿದ ಮೋಹದಿಂ ಪಿಡಿದರೆನ್ನನು ವಿಗೆ ದಟ್ಟಿಸಿ ಹೋದ ಖೂಳನನು ಕಟ್ಟಾಳಿಂ ಕಯ್ಯ ಕಟ್ಟ ತರಿಸಿ ಗೂಡಿಟ್ಟಿಗೊಳಿ [ ಪಾಠಾಂ. ಗುಡಿಕಟ್ಟಿ ಕೊಳಿ ] ಸದೆ ಮಾಣ್ದಪೆನೆ (ಕುಠಾಸಾಂ. ೩೩-೭೭). [ ಗೂಡು + ಇಟ್ಟಿ$_2$ + ಕೊಳಿಸು ]

**ಗೂಡಿಡು** (ಕ್ರಿ). = ಗೂಡಿಕ್ಕು : ಗೂಡಿಡುವ ಗುಬ್ಬಿಗಳಂತಿರೆ ಬಾಗಿಲಲ್ಲಿ ಪುಲ್ಗಚ್ಚಿ ಪುಗುತ್ತುಮಿರ್ಪರರಿಭೂಮಿಭುಜರ್ (ಅನಂಪು. ೧೩-೪೭) ; ಮೃಗಾವಳಿ ಕೋಡ ತೀಂಟೆಗೀಡಿಱಿವುವು ಪಕ್ಕಿ ಗೂಡಿಡುವುದು . . . ಮುನೀಂದ್ರನ ನಿಶ್ಚಲಾಂಗದೊಳ್ (ರಸರ. ೩-೦೩೨). [ ಗೂಡು + ಇಡು$_1$ ]

**ಗೂಡಿರಿಸು** (ಕ್ರಿ). ಮುಂದುರಿಕೊಳ್ಳು : ಒಂದೊಂದು ಮೂಲೆಯಲ್ಲಿ ಒಬ್ಬೊಬ್ಬರು 'ಗೂಡಿರಿಸಿ' ಕೊಂಡು ಕುಳಿತುಕೊಳ್ಳುವರು (ಬಾಲಪ್ರ. II, ೦೦೬೫). [ ಗೂಡು + ಇರಿಸು ]

**ಗೂಡಿಸು** 'ಗುಡಿಯಿಂಸು' ನೋ.

**ಗೂಡು** (ನಾ). ೧. ಪಕ್ಷಿಗಳ ವಾಸಸ್ಥಾನ ; ನೆಲೆ ; ಬೀಡು : "ಗೂಡು ನೀಡಂ ಕುಲಾಯಂ" (ವಸ್ತುಕೋ. ೪೧-೧೧) ; ಗಿಳಿಗಳ ಗೂಡಿಂದುದಿರ್ದ ದಾಳಿಂಬದ ಬಿತ್ತುಗಳಿನೊಸರ್ದ ತನಿರಸದಳಿಪದೊಳಂ . . . ಲತಾಮಂಟಪಂಗಳ್ ಮನಂಗೊಳಿಪುವು (ಕಾದಂಪೂ. ೯೭). ೨. ಇರುವೆ, ಜೇನು, ಕಡಜ ಮೊದಲಾದುವು ಕಟ್ಟಿಕೊಳ್ಳುವ ಮನೆ : ತೇಱಿಂಗಂಜಿ ಕಡಂದುಱುಗೂಡು[ ಡ ]ಂ ಪುಗುವಂತಾನುಂ . . . ಮಹಾದುಃಖಮೆಂಬಗ್ಗಿಗೆ ತಮ್ಮ ಶರೀರಮೆಂಬ ಪುಳ್ಳಿಗಳನಿಕ್ಕುವರದೇಂ ಸಾಸಿಗರೋ (ಧರ್ಮಾಮೃ. ೬-೧೬೫); ಜಗವೊಂದು ಜೇನಿನ ಗೂಡು (ಇಂಚಾಪ. ೨೦೧-೪೨); ೩. (ಮನುಷ್ಯರು ವಾಸಿಸುವ) ಗುಡಿಸಲು; ಮನೆ : ಹೊಲೆಯ ನೊಮ್ಮೆಯು ಪಾಡಲಿಕೆಯರವಿಂದನಾಭನ ನಾಮಮಾತ್ರದಲಿ . . . ಚರ್ಮಕಾರರ ಗೂಡಿನಲಿ ಜನಿಸುವನು ಬ್ರಾಹ್ಮರ ನೋಡಿ ಪಾದತ್ರಾಣ ವೀಯ್ಯಲು ರಜಕಜಾತಿಯಲಿ ಕೂಡುವನು (ಕುಮ್ವಾಅ. ಓರಿಇ. ಪರಿ. ೩೪೬); ಪಕ್ಷಿಗಳಿಗೆ ಗೂಡು, ಮಕ್ಕಳಿಗೆ ತಾಯಿ(ಗಾದೆ). ೪. ಗೋಡೆಯಲ್ಲಿ ವಸ್ತುಗಳನ್ನಿಡಲು ಮಾಡಿದ ಮಾಡು: ಕೆರೆಮನೆಯೊಳು ಅವರಣ್ಣನ ಮಕ್ಕಳು ಅವರ ಕಲಾಕೃತಿಗಳನು ಜೋಡಿಸಿಟ್ಟಿರುವರು ಗಾಜಿನಗೂಡೊಳು ಬಂದವರಿಗೆ ತೋರಲವನು (ಇಂಚಾಪ. ೧೧-೫೯) ; ಬಚ್ಚಲುಮನೆ ಕಟ್ಟುವವನು ಅದರಲ್ಲಿ ತೂಬುಬಲೆ, ಗೂಡು ಇತ್ಯಾದಿಗಳನ್ನು ತನ್ನ ಅಭಿರುಚಿಗೆ ತಕ್ಕಂತೆ ನಿರ್ಮಿಸುತ್ತಾನೆ (ಜೀವಾತ್ಮ. ೧೭೨). ೫. ಪಕ್ಷಿಗಳನ್ನು ಇಡಲು ಮಾಡಿರುವ ಪಂಜರ: ಗೂಡುಗಳು ಕತ್ತಿ ಬಡಿಕೋಲ್ ಕಲ್ಲಿ ಹಿಡಿದ . . . ಬೇಡರು ನೆರೆದರು (ಹಡಕಾ. ೫-೯); ಹಕ್ಕಿಯನ್ನು ಸಾಕಲು ಗೂಡೊಂದನ್ನು ತಯಾರುಮಾಡಿದ್ದೇವೆ (ರೂಢಿ). ೬. ನ್ಯಾಯಾಲಯದಲ್ಲಿ ಖೈದಿ ನಿಲ್ಲಲು ಕಟ್ಟಿರುವ ಮರದ ಚೌಕಟ್ಟು; ಕಟಕಟೆ : ಕೈದಿಯಾದ ವಿಮಲಾನಂದನು ಬಿಚ್ಚುಕತ್ತಿಯ ಪೋಲೀಸ್ ಪಹರೆಯವರ ನಡುವೆ ಕೈದಿಯ ಗೂಡಿನೊಳಗೆ ನಿಂತಿದ್ದನು (ವಿಧಿಪ್ರ. ೧೭೩). ೭. ಇದ್ದಲಿನ ಒಲೆ : ಬಳಿಕವಾ ಗೂಡ ಬಿಸಿಮಾಡಿ ಮತ್ತದಱೊಳಗೆ ತಳಲುಗೆಂಡವ ಹಾಕಿ . . . ಆ ಕಾಯನರೆಜಾವ ಪರಿಯಂತರನುವಾಗಿ ಬೇಯಿಸುವುದು (ಸೂಪಶಾ. ೫-೨೭); ಮೊದಲನೆಯ ತೂತಿಗೆ ಸಮೀಪವೇ ಒಂದು ಬೆಂಕಿಯ ಗೂಡನ್ನಿರಿಸಿ ಅದರಲ್ಲಿ ಕೆಂಡಗಳನ್ನು ಹಾಕಿಟ್ಟುಕೊಂಡರೆ ಸುಲಭವಾಗುವುದು (ಅಡುಸಾ. ೨೮). ೮. ದೇಹ ; ಶರೀರ : "ಗೂಡೆನಲ್ಕದು ದೇಹಂ" (ಭಾರನಿ. ೩೯); ಕೂಡೆ ಹಱಿಹಂಚಾದ ತಂದೆಯ ಗೂಡ ನೋಡದ ಮುನ್ನ ಕಂಬನಿ ಮೂಡಿ ಮುಳುಗಿದವಾಲಿ ಕಾಣವು (ಕುಮ್ವಾದ್ರೋ. ೧೯-೮) ; ಒಂದೇ ಗೂಡಿನಲ್ಲಿದ್ದು ಒಂದು ಕ್ಷಣ ವಗಲದೆ ಎಂದೆಂದು ನಿನ್ನನು ಪೊಂದಿರುವೆ (ಪುರಂದ. ೦-೦೬೩-೧) ; ಮರಣಭಯಕಂಜಿ ನೀ ಹುದುಗಿರ್ದ ಕಾಯಮುಂ ನಿರಿಸಿಕೊಂಡರೆಯಿಂದಿಗಂ ಗೂಡು ನಾಳೆಗಿದು ಸ್ಥಿರವೇ (ತುರಂಗ. ೭೫-೫). ೯. ಮನಸ್ಸು ; ಅಂತರಂಗ: ಶಾರದಾಂಬಿಕೆ ತಾಯೆ ನೀಯನ್ನ ಗೂಡಿನೊಳು ನೆಲಸಿ ನುಡಿಸ್ಯಾಡೆ (ತುರಂಗ. ೧-೨). ನೋಡಿದಳು ದ್ರೌಪದಿದುರಾತ್ಮನ ವಿಚಾರವಂ ಗೂಡಿನೊಳಗಿಟ್ಟು ನುಡಿದಳು (ತುರಂಗ. ೩೫-೪೮). ೧೦. ಎಲುಬಿನ ಗೂಡು; ಅಸ್ಥಿಪಂಜರ : 'ಗೂಡುವೋಗು' ಪರಾ. ೧೧. ಉಂಗುರ, ಓಲೆ ಮೊದಲಾದುವುಗಳಲ್ಲಿ ಹರಳನ್ನು ಸೇರಿಸಲು ಮಾಡಿರುವ ಪೆಜ್ಜ : (ಕ). ೧೨. ಜೋಳ, ಸಜ್ಜೆ ಮೊದಲಾದ ಧಾನ್ಯಗಳ ದಂಟನ್ನು ಕೊಯ್ದು ಒಟ್ಟಿರುವ ಮೆದೆ : ಮತ್ತೆ ಕೆಲವರು ಅವುಗಳನ್ನು ಸಿವುಡು ಕಟ್ಟಿ ಗೂಡುಹಾಕುತ್ತಿದ್ದರು (ಕಪಪು. ೬-೭೪). ೧೩. ಇಟ್ಟಿಗೆಗಳನ್ನು ಸುಡಲು ಜೋಡಿಸಿ ಒಟ್ಟಿರುವ ಗಡ್ಡೆ : ಇಟ್ಟಿಗೆ ಸುಡುವುದಕ್ಕೆ ಇನ್ನೂ ಗೂಡೇ ಸಿದ್ಧವಾಗಿಲ್ಲ (ರೂಢಿ). 'ಇಟ್ಟಿಗೆ ಗೂಡು', 'ಗೂಡುಬಲೆ' ಪರಾ. [ ದೇ॥ ತಮಿ. ಮಲ. ಕೂಡು ; ತೋದ. ಕುಡ್ ; ತುಳು. ತೆಲು. ಗೂಡು ]

**ಗೂಡುಬಲೆ** 'ಗೂಡೊಲೆ' ನೋ.

**ಗೂಡುಕಟ್ಟು** 'ಗೂಡುಗಟ್ಟು' ನೋ.

**ಗೂಡುಗಟ್ಟು, ಗೂಡುಕಟ್ಟು** (ಕ್ರಿ) ೧. ಎದೆಯ ಮೂಳೆಗಳು ಎದ್ದು ಕಾಣು; ಸೊರಗು; ಬಡವಾಗು: ಮಗಳ ಗೂಡುಗಟ್ಟಿದ ಎದೆಯ ಮೇಲೆ ಕೈಯಾಡಿಸುತ್ತ ಹೇಳಿದರು ರಸ್ತುಂ (ಹಾಡುಹು. ೫೪). **ಗೂಡುಕಟ್ಟು :** ೨. (ಹಕ್ಕಿ ಮೊದಲಾದುವು) ಗೂಡನ್ನು ಕಟ್ಟು : ತಲೆಮೇಲೆ ಹಾರುವ ಹಕ್ಕಿಯ ಗತಿಯನು ತಪ್ಪಿಸಲಾರೆವು ನಾವು ಬಂದದು ತಲೆಯೊಳು ಗೂಡು ಕಟ್ಟುವುದನು ತಪ್ಪಿಸಿಕೊಳ್ಳಬಹುದಾವು (ಇಂಚಾಪ. ೧೯೩-೫೨). [ ಗೂಡು + ಕಟ್ಟು$_1$ ]

**ಗೂಡುಗೀಲು** (ನಾ). ಗೂಡಿನ ಕೀಲು; ಪಂಜರದ ಬಾಗಿಲ ಬೀಗ : ರನ್ನದ ಪೊಸಗೂಡುಗೀಲನುಡಿದೀಟ್ಟು ಕಟಲ್ಚಿ ತೆರಳ್ಚಿ ಕೀರಮಂ . . . ಉರ್ಬಿ ಕೊರ್ಬುಗುಂ (ಚಕವಿ. ೩-೫೮). [ ಗೂಡು + ಕೀಲು (< ಕೀಲ್) ]

**ಗೂಡುಗೊಳ್** (ಕ್ರಿ). ೧. ಆಶ್ರಯವನ್ನು ಪಡೆ ; ಗೂಡನ್ನು ಸೇರು : ಪೆರ್ಮರದನಟ್ಟಿಗೊಂಬಿನ ಕವಲ್ದಲೆಯೊಳಿಟ್ಟ ಗೂಡುಗಳೊಳ್ ಗೂಡುಗೊಂಡಿರ್ದ ಕುಱುಳಿವಱಿಗಳ್ಗೆ ಕುಟುಂಕನಿಕ್ಕಿ . . . ಪದೆದಿರ್ದ ವನವಿಹಂಗಂಗಳಂ ಕೊಂಬುವೆರಸಿ ತೂಗಿ (ಚಂದ್ರಪು. ೮-೪ವ) ; ಖಗಗಳು ಗೂಡುಗೊಳಲೆಂದು ತರಣಿಯಸ್ತಾದ್ರಿಗೆಯಿದಲಿಕೆ (ಅಂಜಿಚ. ೭-೧೪೨); ಇರದೆ ಸರಿದುವು ಬಿಸಿಲ ಬೀಡುಗಳ್ಗೂಡುಗೊಂಡುವು ಕೂಡೆ ಪಕ್ಷಿಜಾತಿ (ಜೈಮಿಭಾ. ೦೭-೨೦). ೨. ಅಡಗು ; ಮರೆಯಾಗು : ಕೊಡೆಯ ಚರ್ಮದ ಮಱಿಯೊಳ್ ಗೂಡುಗೊಳುತಿರ್ದ ಶೌರ್ಯ ಕ್ರೀಡೆಯ ದಿಗ್ವಿಜಯಮೆಸೆದು ದೆಮ್ಮಗ್ರುಜನ (ಆದಿಪು. ೦೪-೭೨) ; ಮಾಳವಂ ಮುಗ್ಗಿರ್ದನತಿಭಯದಿಂ ಗೂರ್ಜ್ಜರಂ ಗೂಡುಗೊಂಡಂ (ಸೌಇಇ. IX-1, ೧೧೮-೧೯ ; 1057); ದ್ರೋಣಾಚಾರ್ಯರ ಶಿಷ್ಯರೆಲ್ಲಂ ಬೆತ್ತಬೆಟ್ಟಾಗೆ ಗೂಡುಗೊಂಡು ನೋಡುತಿರ್ಪುದುಂ ಜಿನಭಕ್ತಂ . . . ಗಜೇಂದ್ರದ ಬೆಂಗೇಱಿದಂ (ಧರ್ಮಾಮೃ. ೧೩-೫೫) ; ಗೂಡುಗೊಂಡುದು ವಿಕ್ರಮಾನಳನಾಡಬಾರದು ಭೀಷ್ಮನನು (ಕುಮ್ವಾಭೀ. ೯-೪೧). ೩. ಮರುಗು ; ವ್ಯಥೆಪಡು ; ಕೊರಗು : ಅಂತಾ ವಾನರಂ ಕೇದಗೆಯನೇಱಿದ ಕೋಡಗದಂತೆ ಗೂಡುಗೊಂಡು ಪಲ್ಲಂ ಗಿಡಿಗಿಱಿದು ಮೆಲ್ಲನೆ ಮೊಸಳೆಗಂತರೀಪಮಿಲ್ಲಿಗವಿನ್ನೆನಿತು ದೂರಮುಂ ಎಬುದುಂ (ಪಂಚತಂ. ೨೭೯-೨೧) ; ಮೇಲುಗಾಣದೆ ಬಳಿಕಂ ಮನಂ ಜರಿದು ಜಾನಿಸಿ ಚಿಂತಿಸಿ ಗೂಡುಗೊಂಡು (ಪುಣ್ಯಾಸ್ರ. ೧-೨೦). [ ಗೂಡು + ಕೊಳ್$_1$ ]

**ಗೂಡುಗೊಳವೆ** (ನಾ). "ಮತ್ತೊಂದು ಕೊಳವೆಯನ್ನು ಒಳಗೊಳ್ಳುವುದಕ್ಕಾಗಿ ಒಂದು ತುದಿಯನ್ನು ಹಿಗ್ಗಿಸಿದ ಕೊಳವೆ" (Socket pipe. ಇಂಕನಿ). [ ಗೂಡು + ಕೊಳವೆ (< ಕೊಟವಿ) ]

**ಗೂಡುಗೊಳಿಸು** (ಕ್ರಿ). ಗೂಡಿಗೆ ಸೇರಿಸು ; ನೆಲೆಗೊಳಿಸು : ತನ್ನ ಮರಿಗಳೊಳೊವ್ಮ್ಮ ಕಟ್ಟೆರಕೆ ಮೂಡಿದನಿತುಮಂ ಪೊರಮಡಿಸಿದುಲಿವಕ್ಕಿ ಯುವ್ಮ್ಮ ಸಂಜೆಯೊಳವಂ ಗೂಡುಗೊಳಿಪಂತೆ (ಗಿಳಿವಿಂ. ೧-೭). **೨.** ಮುಚ್ಚು ವಂತೆ ಮಾಡು ; ಸಂಕೋಚಗೊಳಿಸು : ತೀಕ್ಷ್ಣಾಯುಧಂಗಳ ಪೊಳೆಪು ಗಳುಂ ಚಕ್ಷುರಿಂದ್ರಿಯುಮಂ ಮಾಣದೆ ಗೂಡುಗೊಳಿಸು[ಪಾಠಾಂ. ಅನವರತ ಮುಗಿಬಗಿ ಮಾಡು]ತ್ತಿರೆಯುಂ . . . ನರಳುತ್ತುಂ ಪುಡಿಯೊಳ್ಪೊರಳುತ್ತು ಮಿರ್ಪರ್ (ವರ್ಧಪು. ೧೧-೪೭ವ). [ ಗೂಡುಗೊಳ್ + – ಇಸು$_3$ ]

**ಗೂಡುದೀಪ** (ನಾ). ಬಣ್ಣ ಮೊದಲಾದುವುಗಳಿಂದ ಮಾಡಿದ ಗೂಡಿ ನಂತಿರುವ ದೀಪ ; ಆಕಾಶದೀಪ : ತೋರಣದ ನಡುವೆ, ಅಲ್ಲಲ್ಲಿ ಚೀನಾ ಮಾದರಿಯ ಗೂಡುದೀಪಗಳು ಉರಿಯುವ ಮೇಣದ ಬತ್ತಿಗಳೊಂದಿಗೆ ತೂಗಾಡುತ್ತಿವೆ (ಪ್ರಕಾಶ. ೧). [ ಗೂಡು + ದೀಪ$_2$ ]

**ಗೂಡುಬಡಿ** (ಕ್ರಿ). = ಗೂಡುಮುರಿ : ಗುಡ್ಡಗುಡ್ಡಕೆ ಗೂಡುಬಡಿಯುತ ಬೇರೆ ಸುಗ್ಗಿಯ ಬಗೆವುದು (ನೆಲಮು. ೧೦-೩). [ ಗೂಡು + ಬಡಿ$_1$ ]

**ಗೂಡುಮಾಡು** (ಕ್ರಿ). ಈಡುಮಾಡು ; ಗುರಿಯಾಗಿಸು : ಬೇಟದೊಳೆನ್ನ ನಂಗಜಮಹೀಶನ ಬಾಣಕೆ ಗೂಡುಮಾಡಿ ತಾಂ ಕೂಟದಲಂಪಿನಿಂಪನಿನಿಸಂ ಮಿಗೆ ತೋಱದೊಡೆಂತು ಸೈರಿಪೆಂ (ಉದ್ಭಟ. ೧೦-೭೪).

[ ಗೂಡು + ಮಾಡು$_1$ ]

**ಗೂಡುಮಿಟ್ಲಿಮರ** (ನಾ). ಒಂದು ಬಗೆಯ ಮರ : ಗೂಡುಮಿಟ್ಲಿಮರ, ಕಜ್ಜಿಗೋಲಿ (ವ್ಯಜಿಗಿ. ೩೭-೭೦೫). [ ? + ಮರ$_1$ ]

**ಗೂಡುಮುರಿ** (ಕ್ರಿ). (ಉಕ) ಗೂಡುಹಾಕಿದ ಜೋಳ, ಸೆಜ್ಜೆ ಮೊದ ಲಾದುವುಗಳ ತೆನೆಗಳನ್ನು ಕೊಯ್ಯು : ಈವೊತ್ತು ಹೊಲದಲ್ಲಿ ಗೂಡು ಮುರಿಯುತ್ತಾರೆ (ರೂಢಿ). [ ಗೂಡು + ಮುರಿ$_2$ (< ಮುಱಿ$_1$) ]

**ಗೂಡುಮುರ್ಕಿ** (ನಾ). ಒಂದು ಬಗೆಯ ವನಸ್ಪತಿ : ಉಡ್ಡಿ, ವುಡಿಗ, ಗೂಡುಮುರ್ಕಿ, ಚಿತ್ರೋಡಿ, ಉದುರೆ (ವ್ಯಜಿಗಿ. ೩೩-೭೧೧). [ ? ]

**ಗೂಡುವಲೆ** (ನಾ). ಒಂದು ಬಗೆಯ ಬಲೆ : ನಿಱಿಗರುಳ ದಾವಣಿವಲೆಗಳಲಿ ಸಂಗರದ ಸುಭಟವ್ರಜದ ಮಧ್ಯದ ಗೂಡುವಲೆಗಳಲಿ . . . ಅರಿಮೃಗ ವ್ರಾತವನು ಭೀಮ ಕಿರಾತ ಕೈಕೊಂಡ (ಕುಮ್ಯಾದ್ರೋ. ೧೩-೩೧) ; ಹುಡಿಕೆ ವಲೆ ಮರೆವಲೆಗಳಾ ಗೂಡುವಲೆ ಜಲ್ಲೆವಲೆ ಕೊಲ್ಲಿವಲೆ . . . ಬೇಡರ ಸಿರದೊಳೊಪ್ಪಿದುದು (ಸಾಳ್ವಭಾ. ೫-೧೯). [ ಗೂಡು + ಬಲೆ$_1$ ]

**ಗೂಡುಪಾಯ್** (ಕ್ರಿ). ಹೃದಯ ಬಡಿದುಕೊಳ್ಳು,–ಹೊಡೆದುಕೊಳ್ಳು : ಗೂಡುಪಾಯ್ದುರ್ದೆಯನೊತ್ತಿ ನಿಷ್ಕಂಪಪಕ್ಷ್ಮಮಾಂತು ತರಳಾಕ್ಷಿ ವಿಸ್ಮ ಯದೆ ಚಕ್ರಿಯುಂ ನೋಡಿದಳ್ (ಆದಿಪು. ೧೧-೩೦). [ಗೂಡು+ಪಾಯ್$_1$]

**ಗೂಡುವೋಗು** (ಕ್ರಿ). ಸೊರಗಿ ಶರೀರದ ಮೂಳೆಗಳು ಕಾಣುವಂತಾಗು ; ಸೊರಗು ; ಬಡವಾಗು : ನೆರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡುವೋಗದ ಮುನ್ನ . . . ಪೂಜಿಸು ನಮ್ಮ ಕೂಡಲ ಸಂಗಮದೇವನ (ಬಸವ. ೦೭೦).

[ ಗೂಡು + ಪೋಗು$_1$ ]

**ಗೂಡುಹುಳು** (ನಾ). ಪೊರೆಯೊಳಗಿರುವ ಹುಳು ; ಪೊರೆಹುಳು : ಕೆಲವು ಕೀಟಗಳು . . . ಚಲನೆಯಿಲ್ಲದ ಗೂಡುಹುಳು(Pupa)ಗಳ ರಕ್ಷಣೆಗೆ ಅನೇಕ ತರಹ ಕೋಶ ಅಥವಾ ಗೂಡುಗಳನ್ನು (Nest) ಮಾಡುತ್ತವೆ (ಕೀಟಜಿ. ೩೩). [ ಗೂಡು + ಹುಳು$_2$ (< ಪುೞು$_1$) ]

**ಗೂಡೆ$_1$**, ಗೂಳಿ$_3$ (ನಾ). ೧. ದೊಡ್ಡಬುಟ್ಟಿ ; ಮಂಕರಿ : ಗದ್ದೆ ಯೊಳಿರ್ದ ಮೊಳೆವಿತ್ತನೆತ್ತಿದಂ ರಾಗದಿಂ ತಂದವಂ ಗೂಡೆಯೊಳಗಿಕ್ಕಿದಂ (ಇಳೆರ. ದೇ. ೫೪-೬) ; ಬೆತ್ತದ ಗೂಡೆಯನು ಹಿಡಿದೂರ ಧಾನ್ಯವ ಬೇಡು ವುದು ಬರೆದಿಹುದೆ ಭಾಳದಲಿ (ಪ್ರಹ್ಲಾಚ. ೦೧-೪) : ದೊಡ್ಡಗೂಡೆಯನ್ನು ತಲೆಯಮೇಲೆ ಇಟ್ಟುಕೊಂಡು ಬರುತ್ತಿದ್ದಳು (ಮುನಿಮಾ. ೧೫) ; ಈ ಸಲ ಮನೆಯ ವಾಸದ ಕೊಠಡಿಯಲ್ಲಿ ಒಂದು ಬಿದಿರು – ಗೂಡೆಯನ್ನಿಟ್ಟಿದ್ದರು (ನಡೆದಾ. II, ೮೫೪). **೨.** ನೀರನ್ನು ಎತ್ತುವ ಸಾಧನ : ಏತ ಗೂಡೆ ಗುಯ್ಯಲು ಮನೆವಣ . . . ಮುಖ್ಯವಾಗಿ ಏನುಳ ಸರ್ವ ಸ್ವಾಮ್ಯವನು ಒಳಗಾಗಿ (ಎಕ. IX, ಮಾಗಡಿ. ೧೦-೧೦ ; 1520) ; ಅಣೆ ಅಚುಕಟ್ಟು ಮಗ್ಗ ಮನೆವಣ ಗೂಡೆ ಧೂಯ್ಯ ಮೊದಲಾದ ಆ ಸಕಲ ಸ್ವಾಂಮ್ಯ ಸಹವಾದ (ಎಕ. III, ತಿರುಮ. ೪೯-೧೩ ; 1526) ; ಆ ಹೆಂಮಡಿ ಹಾಳಗ್ರಾಮದ ಚತುಶೀಮೆಯೊಳಗಾದ . . . ಗೂಡೆ ಗುಯಲು ಅಣೆ ಅಚ್ಚುಕಟ್ಟು (ಎಕ. XI, ಹಿರಿಯೂ. ೭-೨೭ ; 1592) ; ಕೂಪ ಗುಯ್ಯಲು ಗೂಡೆ ಕೈಯಾತ ಕಪಲೆಯಿಂ ಪೋಪುದನೇನ ವರ್ಣಿಸುವೆ (ಅಬ್ಬಲೂ. ೩-೫೫). **ಗೂಳಿ$_3$ :** **೨.** ಆ ಗ್ರಾಮಕ್ಕೆ ಸಲುವ ಗದ್ದೆ ಬೆದ್ದಲು ತೋಟ ತುಡಿಕೆ ಅಣೆ ಅಚ್ಚು ಕಟ್ಟು ಗೂಳಿ ಗುಯ್ಯಲು ಕಿಱುಕುಳ ಸುವರ್ಣಾದಾಯ ಸುಂಕ (ಎಕ. IX, ಚನ್ನಪ. ೧೫೮-೮ ; 1478 ?).

**ಗೂಡೆಯ ಗದ್ದೆ** = ಗೂಡೆಯ ಸಹಾಯದಿಂದ ನೀರನ್ನು ಒದಗಿಸಿ ಕೊಂಡು ಬೆಳೆಮಾಡಬೇಕಾದ ಗದ್ದೆ : ಆ ಕೆಱೆಯೊಳಗೆ ಗೂಡೆಯ ಗದ್ದೆ ಕೊ ೧೦ (ಎಕ. XII, ತಿಪಟೂ. ೪೮-೩೦ ; 1214) ; ತಂಮತಂಮ ತತ್ತಿ ನಲ್ಲಿಯ ಕಿಱುಕಟ್ಟಂಗಳುಂ ಗೂಡೆಯ ಗದ್ದೆಗಳುಂ . . . ತವತವಗೆ ಆಗು ಮಾಡಿಕೊಂಬರು (ಎಕ. XII, ತಿಪಟೂ. ೩-೧೦ ; 1263).

[ **ದೇ॥ ತಮಿ.** ಕೂಡೈ; **ಮಲ.** ಕೂಡಾ; **ತುಳು.** ಗೂಡೆ; **ಕೊಡ.** ಕೂಟೆ; **ತೆಲು.** ಗೂಡ; **ಗೊಂಡಿ.** ಗೂಲಾ ]

**ಗೂಡೆ$_2$** (ನಾ). (ಕರಾ) "ಹುಡುಗಿ" (ಸಿರಿಕೋ. ೦೭೭). [ ? ]

**ಗೂಡೆ$_3$** (ನಾ). ಒಂದು ಬಗೆಯ ಗಿಡ ; ಬೆಳ್ಳುಚಿ : "ಗೂಡೆ ಬೆಳ್ಳುಚಿ ಯರ್ಣೆಯವನಿಯೆನೆ ಕರಿಬೇವು" (ಮಂಗರಾ. ೪೦-೩೩). [ ? ]

**ಗೂಡೆತೆಪ್ಪ** (ನಾ). ಗೂಡೆಯ ಹಾಗೆ ಗುಂಡಾದ ಒಂದು ಬಗೆಯ ತೆಪ್ಪ,–ಹರಿಗೋಲು : ವಾಡೆಯದ ಹಡಗಿನ ಸಮೂಹದ ಗೂಡೆತೆಪ್ಪದ ಭೈತ್ರಮಸಕದ ಜೋಡುಬಿಡುವತಿ ಜಾಲಗಾರರಗುಂಪುಸೊಂಪುಗಳ (ಶರಲೀ. ೦೦-೦೩). [ ಗೂಡೆ$_1$ + ತೆಪ್ಪ ]

**ಗೂಡೆಯೆಱೆ** (ಕ್ರಿ). ಗೂಡೆಯ ಮೂಲಕ ನೀರನ್ನು ಎತ್ತಿ ಹಾಯಿಸು : ಕೆಱೆಯಲಿ ನೀರು ಸಾಲದಿದರೆ ಗೂಡೆ ಯೆಱೆಯಲಾದರೆ ನೆಱೆ ಮರ್ಯಾದೆ ಯಲೂ (ಎಕ. X, ಮುಳಬಾ. ೦೭೩-೯ ; 1503). [ ಗೂಡೆ$_1$ + ಎಱೆ$_1$ ]

**ಗೂಡೊಲೆ, ಗೂಡುಒಲೆ** (ನಾ). ಬ್ರೆಡ್ಡು, ಬಿಸ್ಕತ್ತು ಮುಂತಾದುವು ಗಳನ್ನು ತಯಾರಿಸಲು ಉಪಯೋಗಿಸುವ ಒಂದು ಬಗೆಯ ಒಲೆ : ಗೂಡೊಲೆ : ಅಗಲಬಾಯಿಯಿರುವ ಮಣ್ಣಿನ ದೊಡ್ಡಮಡಕೆ ಅಥವಾ ಮುಚ್ಚಳವಿರುವ ದೊಡ್ಡಟಿನ್ನನ್ನು ಉಪಯೋಗಿಸಬಹುದು (ಅಡುಸಾ. ೩೫). **ಗೂಡುಒಲೆ :** "(ಸಾ. ಗೂಡುಒಲೆಯೂ ಕುದಿಪಾತ್ರೆಯೂ ಇರುವ ಮತ್ತು ಕೊಳಗದಪ್ಪಲೆ, ಮೊ. ನ್ನಿಡಲು ಅನುಕೂಲಿಸುವಂತೆ ತೆರಪುಗಳುಳ್ಳ ಕಬ್ಬಿಣದ ಮೇಲಿನ ತಗಡೂ ಇರುವ) ಒಂದು ಬಗೆಯ ಅಡಿಗೆಯ ಒಲೆ" (Range. ೩೦೩೭). [ ಗೂಡು + ಒಲೆ$_4$ ]

**ಗೂಢ** (ಗು). ೧. ಮುಚ್ಚಿದ ; ಅಡಗಿದ ; ಹೊರಗೆ ಕಾಣದಿರುವ : ಗೂ[ಢ]ಗುಲ್ಫ ಪಾರ್ಷ್ಣಿಗಳನೊಳಕೊಂಡ ಮನುಜಮಾಂಧಾತನ ಪೊಱಅಡಿ ಗಳ್ . . . ಕೂರ್ಮೋನ್ನತಂಗಳಾದುವು (ಪಂಪಭಾ. ೩-೩೯ ವ). **೨.** ಗುಟ್ಟಾದ ; ರಹಸ್ಯವಾದ ; ಗುಪ್ತವಾದ ; ಅಪ್ರಕಟವಾದ : ಪೆಱತೇಂ ಪ್ರತೀತಿ ಬಗೆಗೇತಱೊಳಂ ತೋಱದುದಪ್ರತೀತಂ ಗೂಢಂ (ಕಾವ್ಯಾವ. ೪೩೭) ; ಮನೋವಿಜ್ಞಾನಕ್ಕೂ ಅಧ್ಯಾತ್ಮವಾದಕ್ಕೂ ಗೂಢ ಸಂಬಂಧವಿದೆ (ಜೀವಾತ್ಮ. ೪೩) ; ಇದರಲ್ಲೊಂದು ಗೂಢಸತ್ಯವಡಗಿದೆ (ಜೀವಾತ್ಮ. ೧೫). **೩.** ವೇಷ ಮಾರ್ಪಡಿಸಿದ ; ರೂಪಾಂತರ ಹೊಂದಿದ (ನಾ). **೪.** ಗುಟ್ಟು ; ಗೋಪ್ಯ ; ರಹಸ್ಯ : ಮುಚ್ಚಂಜೆಯು ಮೈಚಾಚಿತು, ಗರಿಬಿಚ್ಚಿತು ಮೋಡ, ಹೊರಬಿದ್ದಿತು ಗೂಢ (ನೆಲಮು.

೭-೮ : ಪಾವಿತ್ರ್ಯಮುದ್ರೆಯಲ್ಲಿದ್ದ ಗೂಢ ತೆರೆದಿತ್ತು, ತನ್ನ ಫಡಕು (ಅರಳು. ೧೮೨-೭). ೫. ಕಾಣದಿರುವುದು ; ಗೋಚರಿಸದಿದ್ದುದು ; ಗೂಢವಾದುದು : ನಿಜದಿಂ ಗೂಢಂಗಳ್ ಗುಲ್ಫ ಜಾನುಗಳ್ (ಶಾಂತಿಪು. ೩-೪೫). [ಸಂ.]

**ಗೂಢಗೆಡು** (ಕ್ರಿ). ಗುಟ್ಟು ಹಾಳಾಗು; ರಹಸ್ಯವು ಹೊರಬೀಳು : ಪ್ರೌಢೆಯಾದುದಱಿಂದವಳಂಗಜಾಸ್ತ್ರದಿಂ ಗೂಢಗೆಡದೆ ವಂದಿಗಳನು ಪ್ರೌಢಿಯಿಂ ಕರೆದು ಸಂಧಿಗೆ ಕಳುಪಿದಳಾ ರೂಢವಿಕ್ರಮರಾಮನೆಡೆಗೆ (ಕುರಾಸಾಂ. ೪೪-೧೦). [ಗೂಢ + ಕೆಡು$_1$]

**ಗೂಢಚತುರ್ಥ** (ನಾ). [ಕಾವ್ಯವಿ] ಒಂದು ಶಬ್ದಾಲಂಕಾರ; ನಾಲ್ಕನೆಯ ಪಾದದಲ್ಲಿರುವ ಪದಗಳು ಇತರ ಮೂರು ಪಾದಗಳಲ್ಲಿ ಚೆದರಿರುವುದು,-ಅಡಗಿರುವುದು : ಘನಸ್ತನಿತಮುಂ ಕೇಕಿಸ್ವನಮುಂ ನೀರಧಾರೆಯುಂ ಮನಂ ಬೆರ್ಚಿಕ್ಕುಮಿಂತೆತ್ತಂ ಮನಮಿಂತು ಘನಸ್ವನಂ-ಗೂಢಚತುರ್ಥಂ (ಕವಿರಾ. ೩-೧೧೮) : ಗೂಢಚತುರ್ಥಂ – ಆತನಲ್ಲದನಂ ಮೆಚ್ಚೆಂ ಮಾತೇಂ ತಾಂ ಮಾರನಾದೊಡಂ ಕೇತನಂ ರತಿರಾಗಕ್ಕೆ ಕೇತನಂ ತಾರನಲ್ಲನಂ (ಕಾವ್ಯಾವ. ೫೯೦). [ಗೂಢ + ಚತುರ್ಥ]

**ಗೂಢಚರ** (ನಾ).=ಗೂಢಚಾರ. [ಗೂಢ + ಚರ]

**ಗೂಢಚಾರ** (ನಾ). ಬೇಹುಗಾರ; ಗುಪ್ತಚಾರ : ಮೂಡಿ ಬಂದೆನ್ನ ಹಿಡಿದನು ಸೋವಿಯಟ್ಟೊಬ್ಬ ಗೂಢಚಾರ (ಕೋಗಿಲೆ. ೫-೧೦೭) : ಗೂಢಚಾರರು ಪ್ರತ್ಯಕ್ಷವಾಗಿಯೇ ಪಾರ್ಟಿ ಸದಸ್ಯರ ಹಿಂದೆ ಸುಳಿಯಲಾರಂಭಿಸಿದರು (ಆಕ್ಸ್ಯಾರ್ಕ. ೧೯೮) : ಕಳ್ಳ ಕೊಲೆಗಡುಕ ಗೂಢಚಾರ . . . ತನ್ನ ವೃತ್ತಿ ಕೀಳಾದುದೆಂದು ಭಾವಿಸಿಕೊಂಡು ಲಜ್ಜೆಪಡಬಹುದೆಂಬ ಕಲ್ಪನೆ ಸರ್ವಸಾಧಾರಣವಾದುದು (ಪುನರು. ೧೯೭). [ಗೂಢ + ಚಾರ]

**ಗೂಢಚಾರಿ** (ನಾ). ಗೂಢಚಾರ. [ಸಂ. ಗೂಢಚಾರಿನ್]

**ಗೂಢಜ** (ನಾ). ತಂದೆ ಯಾರೆಂದು ಗೊತ್ತಿಲ್ಲದವನು; ಧರ್ಮಶಾಸ್ತ್ರಗಳಲ್ಲಿ ಹೇಳಿರುವ ಔರಸ, ಕ್ಷೇತ್ರಜ,ದತ್ತ, ಕೃತ್ರಿಮ, ಗೂಢಜ, ಅಪವಿದ್ಧ, ಕಾನೀನ, ಸಹೋಢ, ಕ್ರೀತ, ಪೌನರ್ಭವ, ಸ್ವಯಂದತ್ತ ಮತ್ತು ಶೌದ್ರ ಎಂಬ ಹನ್ನೆರಡುಬಗೆಯ ಪುತ್ರರಲ್ಲಿ ಒಬ್ಬ. [ಸಂ.]

**ಗೂಢಜತ್ರು** (ನಾ). ಮುಚ್ಚಿಕೊಂಡಿರುವ ಹೆಗಲಿನ ಸಂಧಿ ಅಥವಾ ಮೂಳೆಯುಳ್ಳವನು ; ದೃಢಕಾಯ : ಕರಂ ಬಿಂಕಂ ತೆಂಗುವ ಗೂಢಜತ್ರು ಸುದೃಢಾಯದ್ಬಾಹುಕಾಂಡಂ . . . ನಿರಾತಂಕಂ ನೆರ್ಗಿಪುದಾಸೆಯುಳ್ಕಿನಿದಿರ್ಗೊಳ್ವೆಂಡಿರಂ ಗಂಡರಂ (ಚಕವಿ. ೩-೨೦). [ಗೂಢ+ಜತ್ರು]

**ಗೂಢತೆ** (ನಾ). ೧. ಗುಟ್ಟಾಗಿರುವಿಕೆ ; ರಹಸ್ಯ. ೨. ಅರ್ಥ ಗಹನತೆ ; ಅಪ್ರಸಿದ್ಧವಾದ ಅರ್ಥ : ವರರುಚಿಯ ಜಾಣ್ಮೆ ಗೋಪಾಲಕನ ಬೆಡಗು ಭಾಗುರಿಯ ಗೂಢತೆ . . . ಇಂತಿವೆಲ್ಲವನು ಸಂವರಿಸಿಯಭಿನವಮಂಗನು ಸುರಿದಂ ಸ್ತ್ರೀಬಾಲರಱಿವಂತುಟಭಿಧಾನವಮಂ (ಮಂಗರಾ. ೨-೪).

[ಸಂ. ಗೂಢತಾ]

**ಗೂಢಪ** (ನಾ). ಹಾವು; ಸರ್ಪ : ಆ ಭೂಪನುರುರಥದೊಳಾತನ ಪತಾಕೆಯೊಳ್ ಶೋಭಿಸುವ ಗೂಢಪನೊಳಾತನ ವಿಶಾಲಾಂಗವೈಭವದೊಳ್ (ಪರಶು. ೩೦-೨೪). [☞ ಇದು ಗೂಢಪದ ಅಥವಾ ಗೂಢಪಾದ ಎಂಬುದರ ಅಶುದ್ಧರೂಪವಿರಬಹುದು]

**ಗೂಢಪದ** (ನಾ). ೧. ಸರಿಯಾಗಿ ಅರ್ಥವು ತಿಳಿಯಲಾಗದ ಪದ; ಸುಲಭವಾಗಿ ಅರ್ಥವಾಗದಿರುವ ಪದ ; ಕಠಿನ ಶಬ್ದ : ಅಪರಿಮಿತ ವಿದ್ವರೆನಿಸಿರ್ದ ಪುರಾಣಕವೀಂದ್ರರಖಿಳ ಕಾವ್ಯಂಗಳ ಗೂಢಪದ ಪ್ರಯೋಗವಮಂ . . . ಪೇಟ್ವೆಂ (ಶಮದ. ಪರಿ. ೨) ; ಮಿಸುಪ ಗೂಢಪದ ಪ್ರಯೋಗದೊಳ್ಪಂ . . . ತತ್ಸಮದ ಬಿನ್ನಣವನು ಉಸುರೆಂದು ಕೋವಿದರ್ ಬೆಸಸಲ್ (ಕಬ್ಬಿಕೈ. ೩) : ಸಂತಸದೊಳಚ್ಚಗನ್ನಡ ಗೂಢಪದ ತತ್ಸಮಂ ತದ್ಭವಗಳೆಂಬ ಶಬ್ದನಾಮಗಳನೋರಂತೆ ವಿರಚಿಸಿದೆಂ (ಶಬ್ದಮಂ. ೦೨೦). ೨. ಹಾವು ; ಸರ್ಪ. 'ಗೂಢಪದಪತಿ' ಪರಾ. [ಗೂಢ + ಪದ$_3$]

**ಗೂಢಪದಪತಿ** (ನಾ). ಹಾವುಗಳ ಒಡೆಯ ; ಆದಿಶೇಷ : ನಿಮಿಷಲಿಂಗವನು ಕೊಂಡಾಡಿ ನಿಜಪದವಡೆದ ನಿತ್ಯ ಭಜಿಸಿದ ಫಲವ ಗೂಢವದಪತಿ ಪೊಗಳಲರಿದು (ಪ್ರಾಢರಾ. ೯-೩೭). [ಗೂಢಪದ + ಪತಿ$_2$]

**ಗೂಢಪಾದ** (ನಾ). ಗುಪ್ತವಾದ ಕಾಲುಗಳುಳ್ಳದು ; ಹಾವು ; ಸರ್ಪ: ಜಂಬುಕ ಸೂಕರ ಗೂಢಪಾದ . . . ಗಂಡಕ ಮುಖ್ಯಮಾದ ಭೀಕರಮೃಗಯೂಥನಿಸ್ವನದಿನೊಪ್ಪಿತು ತನ್ನಗಸಾನು ಕಾನನಂ (ಚಕ್ಕೆದೇ. ೨೨). [ಗೂಢ + ಪಾದ]

**ಗೂಢಪುರುಷ** (ನಾ).=ಗೂಢಚಾರ : "ಅಪಸರ್ಪಂ ಚಾರಂ ಗೂಢಪುರುಷಂ ಪ್ರಣಿಧಿ ಪೇರಿಕಂ ಸ್ಪಶನೆನಿಕುಂ" (ವಸ್ತುಕೋ. ೭೦-೫೯) ; ಆ ಚಂಡಕೋದಂಡಂ ತನಗತ್ಯಾಪ್ತ ಪಟುಭಟ ಗೂಢಪುರುಷರಂ ಬಿಡಿಸಿಕೊಂಬುದಕ್ಕೆ ಚಂದ್ರಬುದ್ಧನೆಂಬ ಮಂತ್ರಿಯಂ ಕಳುಪಿದೊಡೆ (ಹಮ್ಮಿರ. ೨-೧೦೭ ವ).

[ಗೂಢ + ಪುರುಷ]

**ಗೂಢಪುಷ್ಕರ** (ನಾ). ಸೊಂಡಿಲ ತುದಿಯನ್ನು ಕಾಣಗೊಡದುದು,-ಮುಚ್ಚಿಕೊಂಡಿರುವುದು : ಗೂಢಪುಷ್ಕರನಂ ವಿಪುಳಾಯತಬಾಹುವಂ ಪೊಱಮಟ್ಟನೇಱಿ ಜಯನುಮಂ ಜಯಪರ್ವತಯಾನನಾಗಮಂ (ಶಾಂತಿಪು. ೧೦-೧೪೨ ವ). [ಗೂಢ + ಪುಷ್ಕರ]

**ಗೂಢಪ್ರಣಿಧಿ** (ನಾ). = ಗೂಢಚಾರ : ಪೃಥ್ವೀಪಾಲಭೂಪಾಲಂ . . . ಯಮಪಟಕಾದಿ ಗೂಢಪ್ರಣಿಧಿ ಪ್ರತ್ಯಕ್ಷೀಕೃತ ಕ್ಷಯವೃದ್ಧಿ ವಿಧಿತ್ರಯನುಮಾಗಿರ್ಪಂ (ಚಂದ್ರಪು. ೯-೧೧೭ ವ). [ಗೂಢ +ಪ್ರಣಿಧಿ]

**ಗೂಢಭಾಷೆ** (ನಾ). ಕೆಲವರು ತಮ್ಮನ್ನು ಬಿಟ್ಟು ಬೇರೆಯವರಿಗೆ ತಿಳಿಯದಂತೆ ರೂಪಿಸಿಕೊಂಡ ಗುಪ್ತಭಾಷೆ : ಅವರಿಬ್ಬರೂ ಗೂಢಭಾಷೆಯಲ್ಲಿ ಮಾತನಾಡುತ್ತಿದ್ದರು (ರೂಢಿ). [ಗೂಢ + ಭಾಷೆ]

**ಗೂಢಲಿಪಿ** (ನಾ)." (ರಹಸ್ಯ ತಿಳಿದಿರುವವರಿಗೆ ಮಾತ್ರ ಅರ್ಥವಾಗುವ) ಗೂಢಲಿಪಿ " (Cryptography. ಇಂಕನಿ). [ಗೂಢ + ಲಿಪಿ]

**ಗೂಢವಲೆ** (ನಾ). ಒಂದು ಬಗೆಯ ಬಲೆ: ಗಾಢವಲೆ ಗೂಢವಲೆ ಮಡಿಕವಲೆ . . . ಮಂದಸಿನವಲೆಯ ಹೊಟಿಗಳ ಬೇಡವಡೆ ನೆರೆದುದು (ಹಚಕಾ. ೫-೮).

[☞ ಇದು 'ಗೊಡುವಲೆ' ಎಂಬುದರ ಅಪಲಿಖಿತವಿರಬಹುದು]

**ಗೂಢಸಂಧಿ** (ನಾ). ೧. ಗುಪ್ತವಾಗಿ ಕೂಡಿಕೊಂಡುದು. ೨. [ವ್ಯಾಕ] ಮೂಲಾಕ್ಷರದಂತೆ ತೋರಿದರೂ ಎರಡು ಸ್ವರಗಳ ಸಂಧಿಯಾಗಿರುವ ಅಕ್ಷರ; ಸಂಧ್ಯಕ್ಷರ; ಏ,ಐ,ಓ,ಔ ಎಂಬ ಸ್ವರಗಳು: ವರಸಂಧ್ಯಕ್ಷರದಂತಿರೆ ಗುರು ದೀರ್ಘಂ ಗೂಢಸಂಧಿಯೆನೆ ತೋಳ್ ನಾಲ್ಕುಂ ಕರಮೆಸೆದಿರ್ಕುಂ ಪದ್ಮೋದರಂಗೆ ಚಕ್ರಾಸಿ ಶಂಖ ಶಾರ್ಙ್ಗಸಮೇತಂ (ಕಾವ್ಯಾವ. ೦೪) : ತಱುವಾಯಿಂ ಗುರುವುಂ ದೀರ್ಘಮುಂ ಗೂಢಸಂಧಿಯುಮಾಗಿ ಸ್ವಭಾವದಿಂದೇಕಾರಂ ಮೊದಲಾದ ಸಂಧ್ಯಕ್ಷರಂಗಳಪ್ಪುವು; ಅವಾವುವೆಂದೊಡೆ– ಏ ಐ ಓ ಔ (ಶಮದ. ೧೦ ವೃತ್ತಿ). [ಗೂಢ + ಸಂಧಿ]

**ಗೂಢಾಂಗ** (ನಾ). ಅಂಗಗಳನ್ನು ಒಳಗೆ ಅಡಗಿಸಿಕೊಳ್ಳುವ ಪ್ರಾಣಿ ; ಆಮೆ : (ಕ). [ಗೂಢ + ಅಂಗ$_2$]

**ಗೂಢೆ** (ನಾ). [ಸಂಗೀತ] ಷಡ್ಜಸ್ವರದಿಂದ ಹುಟ್ಟುವ ಮೂರನೆಯ ಶ್ರುತಿ : ಬಳಿಕ ಗಹ್ವರಿ ನಿಷ್ಕಳೆ ಗೂಢೆ ಸಕಲೆಯರೆಂಬ ನಾಲ್ಕುಶ್ರುತಿಗಳೀ ಷಡ್ಜಸ್ವರದಿಂ ಪುಟ್ಟಿದವು (ವಿವೇಕ. ೨೩೨). [ಸಂ. ಗೂಢಾ]

**ಗೂಢೋಕ್ತಿ** (ನಾ). [ಕಾವ್ಯವಿ] ಅರ್ಥಾಲಂಕಾರಗಳಲ್ಲಿ ಒಂದು : ಒಬ್ಬನಿಗೆ ಹೇಳಬೇಕಾದ ವಿಷಯವನ್ನು ನೇರವಾಗಿ ಅವನನ್ನೇ ಕುರಿತು ಹೇಳದೆ ಮತ್ತೊಬ್ಬನಿಗೆ ಹೇಳುವ ನೆಪದಲ್ಲಿ ತಿಳಿಸುವುದು

ಒರ್ವಂಗೆ ತಿಳಿಪುವುದರ್ಕೆ ಪೆಱತೊರ್ವನಂ ನೆವಂಗೆಯ್ದು ಪೇೞ್ವುದು ಗೂಢೋಕ್ತಿಯೆನಿಪುದು. ಎಂತೆನೆ: – ದೇವದ್ವೇಷಿಗಳಿರ ನೀವಿೀ ವಿಷಯ ಮನೇಕೆ ಪುಗುವಿರೀಗಳೆ ತೊಲಗಿಂ ಗಾವಳಿಸಿ ಗಲಭೆಗೆಯ್ವೊಡೆ ಠಾವಲ್ತು ರವಣಿಸಿವರ್ಪನಿದೆಕೊಳುಪೇಂದ್ರಂ (ಅಪ್ರತಿ. ೧೨೭-೦೮) ; ಅನ್ಯಗುಸುರ್ವ ವಾಕ್ಯವನ್ಯನ ಮೇಲೆ ಪೇಳೆ ಚೆನ್ನಾಗಿ ಗೂಢೋಕ್ತಿಯೆನಿಸೆ ಇನ್ನು ಪಶುವೆ ನೀ ಕೇಳ್ ಕ್ಷೇತ್ರರಕ್ಷಕ ಬರಲು ನಿನ್ನ ಕಜ್ಜೇನು ಸಾರುವದು (ಕುವಲ. ೦೫೭-೦). [ ಗೂಢ + ಉಕ್ತಿ ]

**ಗೂಣ** (ನಾ). (?) : ಆರು ತಪಿದರು ಗಂಗೆಯಲ್ಲಿ ಕಪಿಲೆಯು [ ಕೊಂದ ] ವನು ಮಧುಪಾನಂ ಮಾಡಿದವನು × ನೊಬನು ಗೂಣ (ಸೌಇಇ. IX-ii, ೪೦೩-೦೫ ; 1370). [ ? ]

**ಗೂಥ** (ನಾ). ಹೇಲು ; ಮಲ ; ಅಮೇಧ್ಯ : ಅಲ್ಲಿಗೆ ಗೂಡ[ ಥ ]ಮಂ ಭಕ್ಷಿಸಲ್ಪಂದ ಪಂದಿಗಳ್ ಮೋೞಿಯಿಂ ನೂಂಕುತ್ತಿರ್ಪವಸರದಲ್ಲಿ (ಪುಣ್ಯಾಸ್ರ. ೪-೨೦ ವ) : ರಾಜನ ಗೃಹದೊಳಿರ್ದ ಟಗರಂ ಕದ್ದು . . . ಕೊಂದವನಿಗೆ ಹಸ್ತಚ್ಛೇದವಂ ತಿಂದವನಿಗೆ ಗೂಥಭಕ್ಷಣಸಿಕ್ಷೆಯಂ ನಡೆಸುತ್ತಿರುವದಂ (ಪುರುಜ. ೨೫೦). [ ಸಂ. ]

**ಗೂದ** (ನಾ). = ಗೂಥ : ಈಗಳೆ ಗೃಹಕ್ಕೆ ನೀಂ ಪೋಪಾಗಳ್ಪೇೞ್ದ ಕರ್ಜಮೂರಗೂದಂ [ಪಾಠಾಂ. ಮುರುಗುರಂ] ನಿನ್ನ ಶಿರೋಭಾಗದೊಳದು ದಿಟಮಾದೊಡನಾಗತಮಂ ನಂಬು ಪಲವು ಮಾತಿನೊಳೇನೋ (ಜೀವಸಂ. ೦೩೩-೨೯ ವ). [ < ಸಂ. ಗೂಥ ]

**ಗೂದೆ** (ನಾ). ೧. ಮಲದ್ವಾರದಲ್ಲಿ ಕಾಣಿಸಿಕೊಳ್ಳುವ ದೊಡ್ಡ ಕರುಳಿನ ಕೊನೆಯ ಭಾಗ ; ಗುದದ್ವಾರದ ಮುಖ : ಸ್ಥೂಲಾಂತ್ರಬದ್ಧಃ ದೊಡ್ಡಕರುಳಿನಿಂ ಕಟ್ಟಲ್ಪಟ್ಟುದಾಗಿ ಗೂದೆ ಹೊರಟಿರುವಂಥಾದ್ದೆಂಬು ದರ್ಥ (ಬಾಹಟೀ. ೨-೪-೧೨ ವ) ; ಗೂದೆ ಹೊರಟು ನೆಗೆ ಹಾಯುವುದಕ್ಕೆ . . . ಹಿಡಿಹಿಡಿಕೆ ಸೊಪ್ಪಿನ ಬೀಜ, ಒಳ್ಳೆಣ್ಣೆಯಲ್ಲಿ ಕಾಸಿ ತೊಡೆಯುವುದು (ವಿವೈವಿ. ೧೨೮). ೨. ಕರುಳಂ ಹೊರಗೆ ಕಾಣಿಸಿಕೊಳ್ಳುವ ಒಂದು ಬಗೆಯ ರೋಗ : ಸಾಸುವೆಯ ತೂಕ ೧, ಶುಂಠಿಯ ತೂಕ ೧ . . . ಇಷ್ಟನ್ನೂ ಕಲಸಿ ಅಟ್ಟು ಶಾರೇಕಾಯಷ್ಟು ಮೆಲ್ಲಲು ಗೂದೆ ಮಾಣುವುದು (ವಿವೈವಿ. ೮೭). ೩. ಒಂದು ಬಗೆಯ ಸಸ್ಯ ಮತ್ತು ಅದರ ಹಣ್ಣು ; ಚಪ್ಪರಬದನೆ ; ಟೊಮೇಟೊ : (+). ' ಗೂದೆಹಣ್ಣು ' ಪರಾ. [ ದೇ॥ ತುಳು. ಗೂದೆ ; ತೆಲು. ಗೂದ. / ಸಂ. ಗುದ ]

**ಗೂದೆಹಣ್ಣು** (ನಾ). = ಗೂದೆ ೩ : ಗೂದೆಹಣ್ಣು, ಚಪ್ಪರಬದನೆ, ಟೊಮೊಟೋ, ತಕ್ಕಾಳಿ (ವೃಜಿಗಿ. ೫೦-೧೦೩೦). [ ಗೂದೆ + ಹಣ್ಣು₃ ( < ಪಣ್₃ ) ]

**ಗೂದೆಹರುಕ** (ನಾ). ಗೂದೆ ಹೊರಕ್ಕೆ ಬಂದವನು: ವಾದಿಯ ಕೂಡ ವಾದಿ ಸಲಾಸಲ್ಲ, ಗೂದೆಹರುಕನ ಕೂಡ ನಡೆಯಲಾಸಲ್ಲ (ಗಾದೆ). [ಗೂದೆ+ಹರುಕ]

**ಗೂಧ** (ನಾ). = ಗೂಥ : " ವರ್ಚಃ . . . ಗೂಧಂ . . . ವಿಷ್ಠಾ, ಪುರೀಷಂ, ಶಮಲಂ, ಮಲಂ– ಈ ೧೩ ವಿಷ್ಠೆ " (ಹಲಾಯು. ೧೦೫-೦೫) : ಅಮೇಧ್ಯಮವಸ್ಕರಂ ಶಕೃದ್ಗೂಧಂ ವಿಷ್ಠೆ ಮಳಂ (ವಸ್ತುಕೋ. ೭೨-೩೧) ; ಸಂಸ್ಕಾರ ಶತೇನಾಪಿ ನ ಗೂಧಃ ಕುಂಕುಮಾಯತೇಯೆಂಬುದಱಿಂ (ಸುಕುಮಾ. ೨-೭೦). [ ಸಂ. ]

**ಗೂಧದ್ವಾರ** (ನಾ). ಮಲದ್ವಾರ ; ಗುದ : " ಪಾಯು[ಗೂಧ]ದ್ವಾರಾಪನಂ ಗುದಂ " (ವಸ್ತುಕೋ. ೭೭-೪). [ ಗೂಧ + ದ್ವಾರ ]

**ಗೂನ₁** ' ಕೂನ₁ ' ನೋ.

**ಗೂನ₂** (ನಾ). ಬಿಡಲ್ಪಟ್ಟುದಂ ; ವಿಸರ್ಜಿಸಿದುದು ; ಮಲ : " ಗೂನಂ, ಹನ್ನಂ–೨ ಬಿಡಲ್ಪಟ್ಟ ಮಲದ ಹೆಸರು. ಸಗಣಿತೊಪ್ಪೆ ಮುಂತಾದ್ದು " (ಸಿದ್ಧಾಂತಿ. ೩೦೦) [ ಸಂ. ]

**ಗೂನಿ** ' ಕೂನಿ₁ ' ನೋ.

**ಗೂನು** ' ಕೂನ್₂ ' ನೋ.

**ಗೂನುಗಣ್ಣು** (ನಾ). ಬಾಗಿದ ಕಣ್ಣು ; ಕೆಳಮುಖವಾದ ನೋಟವುಳ್ಳ ಕಣ್ಣು : ಕಾಣಿಸಿತು ಕುಂಟುದಿಟ್ಟಿಯ ಗೂನುಗಣ್ಣಿಗದೊ ಗೆಂಟರೊಳ್ ಜ್ಯೋತಿ (ಶ್ರೀರಾಮಾ. ೧೨೩-೩೦೦). [ ಗೂನು ( < ಕೂನ್₂ ) + ಕಣ್ಣು ( < ಕಣ್ ) ]

**ಗೂನುಬೆನ್ನು** ' ಕೂನಬೆನ್ ' ನೋ.

**ಗೂನೆ** (ನಾ). ಗೂನುಬೆನ್ನುಳ್ಳವಳು ; ಕೂನಿ : ಬ್ರಹ್ಮನು . . . ದುಂದುಭಿ ಎಂಬ ಗಂಧರ್ವೆಯನ್ನು ಕರೆದು ಅವಳು ಮಂಥರೆಯೆಂಬ ಗೂನೆಯಾಗಿ ಹುಟ್ಟುವಂತೆ ಆಜ್ಞೆಮಾಡಿದನು (ಪಚಭಾ. ೪೦೪). ' ಕೂನೆ ' ಪರಾ. [ ಗೂನ₁ ( < ಕೂನ₁ ) + – ಎ₂ ]

**ಗೂಬು** (ನಾ). ತೆಂಗಿನ ಕಾಯನ್ನು ಬೀಜಕ್ಕಾಗಿ ಹೂತಾಗ, ಅದರ ಒಳಗಡೆ ಬರುವ ಬಿಳಿಯ ಮೆತ್ತನೆಯ ವಸ್ತು: ತೆಂಗಿನಕಾಯಲ್ಲಿ ಗೂಬು ಬಂದಿದೆ (ರೂಢಿ). [ ? ]

**ಗೂಬೆ** ' ಗೂಗೆ ' ನೋ.

**ಗೂಬೆಗಣ್ಣು** (ನಾ). ೧. ಗೂಬೆಯ ಕಣ್ಣು. ೨. ಗೂಬೆಯ ಕಣ್ಣಿನಂತಿರುವ ಕಣ್ಣು ; ಚಕ್ರದಂತೆ ತಿರುಗುವ ಕಣ್ಣು : (+). ೩. ಹಗಲುಹೊತ್ತಿನಲ್ಲಿ ಸರಿಯಾಗಿ ಕಾಣಿಸದ ಕಣ್ಣು : (+). [ ಗೂಬೆ ( < ಗೂಗೆ ) + ಕಣ್ಣು ( < ಕಣ್ ) ]

**ಗೂಬೆಗತ್ತಲು** (ನಾ). ಗೂಬೆಗಳಿಗೆ ಹಿತವಾಗಿರುವ ಕತ್ತಲು; ಕಗ್ಗತ್ತಲು: ಏನ್ ಗೆಯ್ವೆಯಿೀ ಗೂಬೆಗತ್ತಲೊಳ್ ನೀನೊರ್ವಳೆಯೆ (ಶ್ರೀರಾಮಾ. ೭೬೯-೬೮). [ ಗೂಬೆ ( < ಗೂಗೆ ) + ಕತ್ತಲು ( < ಕಱ್ತಲೆ ) ]

**ಗೂಬೆತಡೆಗಿಡ** (ನಾ). ಒಂದು ಬಗೆಯ ಗಿಡ : ಬೊಳಂಗಡಲೆ, ಗೂಬೆತಡೆ ಗಿಡ (ವೃಜಿಗಿ. ೭೦-೦೪೩೦). [ ? + ಗಿಡ ( < ಗಿಡು ) ]

**ಗೂಬೆಬಾಳು** (ನಾ). ೧. ಗೂಬೆಯ ಬಾಳಿನಂತಿರುವ ಬಾಳು ; ಒಂಟಿತನದಿಂದ ಕೂಡಿದ ಜೀವನ : (+). ೨. ದೀರ್ಘಕಾಲ ಬದುಕುವಿಕೆ : (+). [ ಗೂಬೆ ( < ಗೂಗೆ ) + ಬಾಳು₂ ( < ಬಾೞ್₂ ) ]

**ಗೂರಣ** (ನಾ). ೧. ಉದ್ಯಮಂ; ಪ್ರಯತ್ನ; "ಉದ್ಯೋಗಮಾಡೋಣ" (ಗಂಗಾಮ. ೧೦೯). 'ಗುರಣ' ಪರಾ. ೨. ದೂಷಣೆ ; ಬಯ್ಗುಳಂ. [ ಸಂ. ]

**ಗೂರಲು** (ನಾ). ದಮ್ಮಿನ ರೋಗ ; ಉಬ್ಬಸ ; ಕಾಸರೋಗ : ಅವರು ಗೂರಲಿನಿಂದ ಸದಾ ನರಳುತ್ತಾ . . . ಇರುವ ದೃಶ್ಯವನ್ನು ಕಂಡಳು (ಕೊನೆಭೇ. ೨೨೩) ; ಗೂರಲು ಕೆಮ್ಮು ತಲೆಹಾಕಿ (ಮುನಿಮಾ. ೨). [ ಗೂರು₁ + – ಅಲು ( < – ಅಲ್₂ ) ]

**ಗೂರಾಡು** ' ಗೂಱಾಡು ' ನೋ.

**ಗೂರು₁** (ಕ್ರಿ). ಕೆಮ್ಮು ; ಉಬ್ಬಸಪಡು : ಎದುರಿನ ಪಟಾಂಗಣದಲ್ಲಿ ಕುಳಿತು ಗೂರುತ್ತಿರುವ ಹಿರಿಯನ ನೆನಪೂ ಅವನಿಗೆ ಬರಲಿಲ್ಲ (ಬನಸಿ. ೭೭) ; ಹಾಗೆ ಗೂರಬೇಡ ಖಾತ್ರಿಯಿಂದ ಗುಣವಾಗುವದು (ಜೀನಬಾ. ೦೫). [ ದೇ॥ ]

**ಗೂರು₂** ' ಗೂಱು ' ನೋ.

**ಗೂರು₃** (ನಾ). = ಗೂರಲು : ಮೊಗಮೊಳ್ಗುಡಿಸಿ ಗೂರುವೆಗ್ಗೂರಿಡುತ್ತಮಿರೆ (ಪಿಂಡೋರ. ಹ. ೫೦೭-೨೭); ಹಾಱಿಬಿದ್ದನು ನೆಲಕೆ . . . ಕರಣೇಂದ್ರಿಯದ ಕಳಕಳದ ರ್ಶೂಮ್ಮಿನಲಿ ಗೂರು ಮಸಗಿತು (ತೊರರಾ. ೬-೨೩-೦೭) ; ಗೂರು ಹತ್ತಿ ಕೆಮ್ಮುತ್ತಿರುವ ದಶರಥನ ಮೇಲೆಮಾತ್ರ ಒಲ್ಮೆಯು ಒಡಮೂಡಲಿಲ್ಲ, ಕೈಕಯಿಗೆ (ಮುಂಗಾಪು. ೯೭) : ಮುಪ್ಪಿನಲ್ಲಿ ಗೂರು ಹತ್ತಿ ಕಾಡುತ್ತಿತ್ತು (ನದೀಪ. ೭೭). [ < ಗೂರು₁ / ತುಳು. ಗೂರು ]

**ಗೂರುಳು** (ನಾ). ಒಂದು ಅನುಕರಣ ಶಬ್ದ : ಪಾರಿವಾಳದ ಪಕ್ಕಿ ಮದನ ಕೈಯೊಳು ತನ್ನ ನಾರಿಗಿದಿರು ನಡೆದಾಡಿ ಗೂರುಳು ಗುಕುಗುಕು ಗುಟು ಗುಟು ಗುಟುಗುಟು ಚಾರಿಟಿಯೆಂದುವಲ್ಲಲ್ಲಿ (ಭರಹ. ೧೫-೩೨).

**ಗೂರೆಳ್ಳು** 'ಗುರೆಳ್ಳು' ನೋ.

**ಗೂರ್ಜರ** (ನಾ).=ಗುರ್ಜರ : ಗೂರ್ಜ್ಜರಮಾಳವ ಚೇರ ಪಾಂ^ಕ್ಯ . . . ಯಾದವ ಮಹೀಭುಜವಮೌಳಿಮಣಿಪ್ರಭುಜಪ್ರಭಾಲಿಂಗಿತ ಪಾ ದ ಪೀ ಠ ಂ (ಸೌಇಇ. XX, ೪೬-೫ : 1072).

**ಗೂರ್ಜರರಾಯಭಯಂಕರ**=ಗೂರ್ಜರ ದೇಶದ ರಾಜನಿಗೆ ಭಯ ವನ್ನುಂಟುಮಾಡುವವನು ; ಒಂದು ಬಿರುದು : ಗೂರ್ಜ್ಜರರಾಯ ಭಯಂಕರ ತೇಲುಂಗರಾಯ ಸ್ಥಾಪನಾಚಾರ್ಯೇತ್ಯಾದಿ ಬಿರುದಾವಲೀ ಸ ಮ ಲ ಂ ಕೃ ತ ಶ್ರೀಮದ್ಯಾದವನಾರಾಯಣ ಭು ಜ ಬ ಲ ಪ್ರ ತಾ ಪ ಚಕ್ರವರ್ತೀಸ ಸಿಂಹಣರಾಯಃ (ಕಇ. IV, ೫೪-೧೦ : 1245). [ಸಂ.]

**ಗೂರ್ಜರಿ** (ನಾ). [ಸಂಗೀತ] ಒಂದು ಬಗೆಯ ರಾಗ : ಮಾಳವ ಗೌಳ ಬಂಗಾಳ ಗೂರ್ಜರಿ ಕರ್ನಾಟ ಕಾಂಭೋಜಿ ಕೇತಾರಂಗಳ್ ದೇಶಿಯವಾಗಿವೆ (ಹಮ್ಮೀರ. ೨-೯೦ ವ). [ಸಂ.]

**ಗೂರ್ಣಿಸು** (ಕ್ರಿ). ಮೊರೆ ; ಭೋರ್ಗರೆ : (೬). [<ಘೂರ್ಣಿಸು]

**ಗೂವ** (ನಾ). ಪಾರಿವಾಳ : (೬). [ದೇ॥ ತೆಲು. ಗುವ್ವ]

**ಗೂವಗುತ್ತಿಗೆ** (ನಾ). ಒಂದು ಬಗೆಯ ಪರಿಮಳದ್ರವ್ಯ : "ಸುಷಿರಾ, ವಿದ್ರುಮಲತಾ, ಕಪೋತಾಂಘ್ರಿಃ, ನಟೀ, ನಲೀ, ಧಮನೀ, ಅಂಜನಕೇಶಿ – ೭ ನಳಿ ಎಂಬುವ ಗ್ರಂಥ್ಯದ್ರವ್ಯದ ಹೆಸರುಗಳು; ಗೂವಗುತ್ತಿಗೆ" (ಸಿದ್ಧಾಂತಿ. ೧೩೪). [ದೇ॥ ತೆಲು. ಗುವ್ವಗುತ್ತಿ, ಗುವ್ವಗುತ್ತುಕ]

**ಗೂವಯ** (ನಾ). ಒಬ್ಬಾತನ ಹೆಸರು : ನಿಜೇಶ್ವರ × × × ವರ್ಮ್ಮನ ಕಾದಟಿಯುಟ್ಟೆ ಗೂವಯನನೋಡಿಸಿ ಭಟ್ಟುವ[ನೆಕ್ಕಿ]ಮೆಟ್ಟಿ (ಸೌಇಇ. XI-1, ೫೦-೮ : 1006). [?]

**ಗೂವಾಕ** (ನಾ). ಅಡಕೆಮರ ; ಕ್ರಮುಕ : "ಘೊಂಟಾ, ಪೂಗಃ, ಕ್ರಮುಕಃ, ಗೂವಾಕಃ [ಪಾಠಾಂ. ಗುವಾಕಾ], ಖಪುರಃ ೫ ಅ ಡಿ ಕೆ ಮ ರ ದ ಹೆಸರು" (ಸಿದ್ಧಾಂತಿ. ೧೩೬). [ಸಂ.]

**ಗೂಶಲು** (ನಾ). ಕೆಲಸಕ್ಕೆ ಬಾರದಿರುವ ವ್ಯಕ್ತಿ : ಹುಡುಗರ ದೃಷ್ಟಿಯಲ್ಲಿ ರಮಾ, ಅಮೃತ 'ಶುದ್ಧ ಗೂಶಲುಗಳು, ಗುಗ್ಗುಗಳು' (ಕಂಕಣ. ೧೯). [?]

**ಗೂಹನ** (ನಾ). ಮುಚ್ಚಿಡುವುದು ; ಅಡಗಿಸುವುದು. [ಸಂ.]

**ಗೂಹ್ಯ** (ಗು). ಗುಟ್ಟಾದ; ರಹಸ್ಯವಾದ. 'ಗೂಹ್ಯಸಾಕ್ಷಿ' ಪರಾ. [ಸಂ.]

**ಗೂಹ್ಯಸಾಕ್ಷಿ** (ನಾ). ಗೂಢಸಾಕ್ಷಿ ; ರಹಸ್ಯವಾದ ಸಾಕ್ಷಿ : ವಿಂಚಿ ಬಾ ಮನದಲ್ಲಿ ತಮದ ಘನತಿಮಿರ ತಾ ಪರಿದು ದರ್ಶನವೀಯೆ ಗೂಹ್ಯಸಾಕ್ಷಿ (ಅನೀಲೀ. ೫೪-೬). [ಗೂಹ್ಯ + ಸಾಕ್ಷಿ]

**ಗೂಳ₁** 'ಗೂಡ' ನೋ.

**ಗೂಳ₂** (ನಾ). ಮುಳ್ಳುಗಳಿರುವ ಒಂದು ಬಗೆಯ ಮೂಲಿಕೆ : "ಕಾಶ್ಮೀರ್ಯ–ಗೂಳ" (ಬಾಹಟೀ. ೨-೨-೬೦ ವ) ; "ಅರ್ಕರೋಹಿಣಿ – ಗೂಳದ ಮರ" (ಒಷಧಿ. ೭) ; ಕಾರೆ ಮಗ್ಗಾರೆ ಗೂಳವು ಮುಳ್ಳು ಬೊಬ್ಬುಲಿ . . . ತಂಡಸಿ ಮುಳ್ಳುಬೇಲಿಗಳ್ ಸೇರಿ ಮುಟ್ಟಹುವಾಗಸವನು (ಕಂನವಿ. ೧೮-೩೮). [?]

**ಗೂಳಯ** 'ಗೂಳೆಯ' ನೋ.

**ಗೂಳಿ₁**, **ಘೂಳಿ** (ನಾ). ೧. ಎತ್ತು ; ವೃಷಭ : ತೊಡರ್ದೀ ಗಾಣದ ಗೂಳಿಯಂತೆ ತಿರಿಯುತ್ತಿಂತಿರ್ಪರೇ (ಅರ್ಥನೀ. ೩-೫) ; ಗೂಳಿಗೆ ವರ್ತಕವೇ ಸಮಜೋಳಿಯೆನಗಮರತತಿಯೊಳೆಣೆಯಗಾಣೆಂ ನೀಂ ಕಾಳಗಕೆ ಕರೆವು ದೆಂತಿದು ಪಾಟಿಯೆ ನರನಾಥ ಪೋಗು ಜೀವಿಪೊಡೆಂದಂ (ಉದ್ಭಟ. ೪-೮೮) ; ಎಟ್ಟು – ಗೂಳಿ ; ಹೊರಸಿನ ನೆಯ್ಗೆ ; ಊಕೆಯ ನುಲಿ (ಕಮದ. ಪರಿ. ೧). ೨. ಸ್ವೇಚ್ಛೆಯಿಂದ ತಿರುಗಾಡಲು ಅವಕಾಶವುಳ್ಳ, ಪಿತೃಗಳ ಪ್ರೀತ್ಯರ್ಥವಾಗಿ ಬಿ ಟ್ಟಿ ರು ವ ಹೋರಿ ; ಬಸವ ; "ಷಂಡ, ಗೋಪತಿ, ಇಡ್ವರ" (ನಾಚಿರಾ. ೬) : ಬೀಡಂ ಕಳ್ಳರ್ ಕವಿದಂತೆ ಪಸು ಮಕ್ಕಳಂ ಗೂಳಿ ತಗುಳ್ದಂತೆ (ಧರ್ಮಾಮೃ. ೨-೭೦) ; ಗೂಳಿಯೊಳಿದಿರಾಗಿ ಕಾದಬೇಕೆಂದು ಹೀಯಾಳಿಸಿ ಬಿಟ್ಟುದಾ ನವಿಲ (ವೋಹತ. ೩೮-೩೦) ; ಗೂಳಿ ನಡೆವ ಹಜ್ಜೆ ತೋಱುವುದಲ್ಲದೆ ಗಾಳಿಯ ಹಜ್ಜೆ ತೋಱುವುದೆ (ಭರಹ. ೫-೧೦೩). ೩. ದೊಡ್ಡದು ; ದಪ್ಪವಾಗಿರುವುದು. ೪. ದಪ್ಪಹೇನು: ಹೇನನು ಗೂಳಿಯೆಂದಱಿದು (ಚಬಪು. ೫೫-೪೫ ದ). **ಘೂಳಿ**: ೧. 'ಘೂಳಿ ದೇವ' ಪರಾ. [ದೇ॥ ತಮಿ. ಕೂಳಿ; ಕೊಡ. ಗೂಳಿ]

**ಗೂಳಿ₂** 'ಕೂಳೆ₁' ನೋ.

**ಗೂಳಿ₃** 'ಗೂಡೆ₁' ನೋ.

**ಗೂಳಿಕಾಳಗ** (ನಾ). ೧. ಗೂಳಿಗಳ ಹೋರಾಟ,-ಕಾಳಗ: ಗೂಳಿಕಾಳಗಗಳ ಧೂಳಿಯ ನೆಲದೊಳು ಕೇಳಿಯ ಚೌಕವ ಮಾಡಿ ಕಾ ಳ ಗ ವ ನು ಮಾಡಿಸುವ ರಾಜಪುತ್ರರ ಸಾಲುಗಳಿರುತಿರ್ಪುವಲ್ಲಿ (ಕಂನವಿ. ೭-೧೬). ೨. ಗೂಳಿಯೊಡನೆ ಮಾಡುವ ಹೋರಾಟ: ಗೂಳಿಯೊಡನೆ ಮಾಡುವ ಕಾಳಗ ; ಗೂಳಿಕಾಳಗ (Bull fight: ಇಂಕನಿ).

[ಗೂಳಿ₁ + ಕಾಳಗ (<ಕಾಳೆಗ)]

**ಗೂಳಿಗ** (ನಾ). ಒಬ್ಬಾತನ ಹೆಸರು : ಪ್ರತಿಪಾಳಿಸಿದರ್ ಗೂಳಿಗನ ಮಾರ್ಗ ನಸಗನ ಬೇಳಾದುದೆ (ಬೊಂಕೆಶಾ. ೧೯೩೮, ಇಂದಿ. ೫೮-೭೩ : 941). [?]

**ಗೂಳಿಯ** 'ಗೂಳೆಯ' ನೋ.

**ಗೂಳಿಸೆಣಸು** (ಕ್ರಿ). ಗೂಳಿಯಂತೆ ಹೋರಾಡು,-ಕಾದಾಡು : ಸುಯ್ ಸುಯ್ದು, ಮಲೆಮಲೆತು, ಗೂಳಿಸೆಣಸಿದನೋರ್ವನೋರ್ವಂಗೆ (ಶ್ರೀರಾಮಾ. ೬೪೭-೧೩೨). [ಗೂಳಿ₁ + ಸೆಣಸು₁]

**ಗೂಳಿಸೊರ್ಕು** (ಕ್ರಿ). ಗೂಳಿಯಂತೆ ಕೊಬ್ಬು,-ಮದಿಸು : ಕಡಿತಲೆಯ ನಾಯಕರ್ ಕೆಯ್ಕೊಂಡು ಬಳ್ಳುಗೆಡೆದೆಕ್ಕವಾಱುವಾಱ ಪಲಗೆವಾಡಿ ಗೂಳಿ ಸೊರ್ಕಿ[ಪಾಠಾಂ. ಪಾಡಿಗಳುರುಳೆ, ಪಾರಿಗಳುರುಳಿ, ಪಾಱಿಗರುಳಿ, ಪಾಱ ಗೂಳಿ]ಮಾರ್ಕೊಂಡು ಕಾದೆ (ಪಂಪಭಾ. ೧೦-೮೦ ವ).

[ಗೂಳಿ₁ + ಸೊರ್ಕು₁]

**ಗೂಳಿಹೋರಿ** (ನಾ). ೧.=ಗೂಳಿ₁. ೨. ಸ್ವೇ ಚ್ಛಾ ಚಾ ರಿ ; ಪುಂಡ ; ಪೋಕರಿ : ಕಾವಲ ದಂಡಿನ ಪೋರರೆಲ್ಲಾ ಗೂಳಿಹೋರಿಗಳು, ಬೀದಿ ತಿರುಗಲಿಕ್ಕೆ ನಡೆದಿದ್ದಾರೆ ! (ಬಟ್ಟಿಅ. ೧೦೫-೧೮).

[ಗೂಳಿ₁ + ಹೋರಿ (<ಪೋರಿ₁)]

**ಗೂಳೆ** 'ಗೂಳೆಯ' ನೋ.

**ಗೂಳೆಕಾರ**, **ಗುಳೆಕಾರ** (ನಾ). ಒಂದು ಕಡೆಯಿಂದ ಮತ್ತೊಂದು ಕಡೆಗೆ ವಲಸೆ ಬಂದವನು ; ವಲಸೆಗಾರ : ಕಂಡಕಂಡಹಾಗೆ ತಿರುಗಾಡುತ್ತ ನೆಲೆ ನಿಂತು ಬಾಳುವೆ ಮಾಡಿಕೊಂಡಿರದ ಈ ಜನರಿಗೆ ಗೂಳೆಕಾರ (Nomads) ರೆಂದು ಹೆಸರು (ಮಹಂಪ. ೩೯). **ಗುಳೆಕಾರ**: ದಿನನಿತ್ಯ ಸ್ಥಳ ಬದಲಿಸುವ ಅವರ ಗುಳೇಕಾರ ಜೀವನದಲ್ಲಿ ಅವರು ಎಷ್ಟು ಓದಿದರೆಂಬುದು ತಿಳಿದು ಬರುವುದಿಲ್ಲ (ಸ್ಮೃತಿಚಿ. ೧೧) ; ಓ! ನೀವು ಗುಳೇಕಾರರೇನು ? (ಕಾರವಾ. ೬).

[ಗೂಳೆ (<ಗೂಳೆಯ) + – ಕಾರ₁ (< – ಕಾಱ)]

**ಗೂಳೆಮಾನು** (ನಾ). ಒಂದು ಬಗೆಯ ವಿಮಾನ : ಗೂಳೆಮಾನು ಹಿಡಿಯು ವುದಕ್ಕೆಂದು ಮಾಡಿದ ಗರಿಸೂಡಿಗಳು ಹಾಗೆ ಇವೆ (ಪದ್ಮಸ. ೭೫).

[ಗೂಳೆ₁ + ಮಾನು₂ (<ಮಾನ್₃)]

**ಗೂಳೆಯ**, **ಗುಳೆ**, **ಗೂಳಯ**, **ಗೂಳಿಯ**, **ಗೂಳೆ**, (ನಾ). ೧. ಒಂದು ಕಡೆಯಿಂದ ಬೇರೊಂದೆಡೆಗೆ ಜನರು ವಲಸೆ ಹೋಗುವುದು

ಕೆಡಹಿದರ್ವೈನೆಗಳಂ ತೊಲೆ ಕಂಭವಮಂ ಕಿತ್ತು ಒಡನೊಡನೆ ಕಳುಹಿ ಪಟ್ಟಣ ಜನಂ ಗೂಳೆಯವನೊ[ನ]ಡೆದು ದೂರ್ಮೈತಂದು ಮತ್ತೊಂದು ಚಿಕ್ಕಪುರವಂ ರಚಿಸಿ ಯಿರುತಿರ್ದರು (ಸಿದ್ಧಕಾ. ೧೩-೩೪); ಪೋ ಗಸಣಿಯು ಗರುವಾಯ ಗೂಳೆಯದ ಜೋಹವಮಂ ಬಿಡು (ರಾಮಾಶ್ವ. ೯೨-೨೩). 'ಗೂಳೆಯಂದೆಗೆ' ಪರಾ. ೨. ರಾಶಿ; ಗುಂಪು; ಗಡಣ: ಸಿಡಿಲ ಗಡಣದಂತೆ ಕಾಳ್ಕಿಚ್ಚಿನ ಗೂಳೆಯದಂತೆ . . . ಮುಂತಿರ್ದ ರಕ್ಕಸವಡೆಯು ನಡುವೆ (ಗಿರಿಕ. ೬-೫೫ ಪ). **ಗುಳೆ:** ೧. ಎಲ್ಲಿಂದಲೋ ಗುಳೇ ಬಂದು ಊರಾಗ . . . ಮಾತಾಡುವ ಅಧಿಕಾರವಿಲ್ಲ (ಮನಪಿ. ೫). 'ಗುಳೆಕಟ್ಟು' ಪರಾ. **ಗೂಳಯ:** ೨. ಸೋಲು ಕುರುಪತಿಗಾಯ್ತು ಕಿರಣದ ಗೂಳಯವು ಪಡುವಣ ಸಮುದ್ರಕೆ ತೆಗೆಯಲಿನನಿಳಿದ (ಕುವ್ಯಾಭೀ. ೬-೭); ತಾಳಿಸಿ ತಿಂಬ ಸೀಗುಡಿ ಕರಿವಿಮಾನಿನ ಗೂಳಯವನು ಕಂಡ ರಾಯ (ಹರಿಸಾಂ. ೭೦-೨). **ಗೂಳಿಯ:** ೧. ಅಳಿಯ ಬಿಜ್ಜಳನ ಸೇನೆಯಂ ಮಡಿಪಿ ತನ್ನ ನೃಪತಿಯಂ ಕೈಸೆರೆಯ ಪಿಡಿದು ಗೂಳಿಯಕೆ ಬರೆ ನಾಗಾಂಬಿಕೆ ಕಡುನೊಂದು (ಚಬಪು. ೬೨-೨೩). **ಗೂಳೆ:** ೧. 'ಗೂಳೆಕಾರ' ಪರಾ.

**ಗುಳೇದವರು**=(ದಾಳಿ ಅಥವಾ ಕ್ಷಾಮದಿಂದ) ಬೇರೊಂದು ಸ್ಥಳಕ್ಕೆ ವಲಸೆ ಹೋಗುವವರು: (ಕ). [ದೇ.॥ ತಮಿ. ಕೂಳ್; ತುಳು. ಗೂಳ್]

**ಗೂಳೆಯಂತೆಗೆ** 'ಗೂಳೆಯಂದೆಗೆ' ನೋ.

**ಗೂಳೆಯಂದೆಗೆ, ಗುಳೆತೆಗೆ, ಗೂಳೆಯಂತೆಗೆ, ಗೂಳೆಯದೆಗೆ** (ಕ್ರಿ). ಸಾಮೂಹಿಕವಾಗಿ ವಲಸೆ ಹೋಗು; ಗಂಟುಮೂಟೆ ಕಟ್ಟಿಕೊಂಡು ಹೊರಡು: ಪಾದರೇಣುಗೆ ಪ್ರಲಯಶಿಖಿಯಂದು ಸಮವರ್ತಿ ಗೂಳೆಯಂದೆಗೆದ ಬಹಳಾಕಂಪಕಂಬರಮದೊಡೆದು ಘೀಳಿಡುವೊಲದ್ಭುತ ಮಾದುದು (ಸಿಂಗಿರಾ. ೩-೮). **ಗುಳೆತೆಗೆ:** "ಪರದೇಶಕ್ಕೆ ನೆಲೆಯಾಗಿ ನಿಲ್ಲಲು ಬರು; ವಲಸೆಬರು; ಗುಳೆತೆಗೆ" (Immigrate. ಇಂಕನ್). **ಗೂಳೆಯಂತೆಗೆ:** ಕೃತಯುಗದ ಧರ್ಮ ಗೂಳೆಯಂತೆಗೆದಿರ್ಪಂತೆ (ಕಆಶಿರ. ಹ. ೩೦೨-೨೦); ಗೂಳೆಯಂತೆಗೆದು ಹರಿಮುಖ್ಯರೆಲ್ಲರ್ ಬಂದು ಪಾಳೆಯಮನಿಳಿದರಾ ರಜತಗಿರಿಯೊಳ್ (ಚಬಪು. ೪೭-೧೨); ಮೇಲೋಕ ಗೂಳೆಯಂತೆಗೆವಂತೆ ಪೊರಮಟ್ಟು (ಪರಶು. ೯-೨೨). **ಗೂಳೆಯದೆಗೆ:** ಈ ಕಥೆಗೆ ಪೂರ್ವಪ್ರಸಂಗವೆಂತೆನಲು ಪುಣ್ಯಾಕಾರದಂತಿರ್ಪ ಸಕಲಲೋಕದ ಭಾಗ್ಯವೇಕಕಾಲದೊಳು ಗೂಳೆಯ[ಪಾಠಾಂ. ಯಂ]ದೆಗೆದ ತೆಱದೊಳೆಸೆವುದು (ಸೋಮಚ. ೦-೨೭); ನೆಲನು ತುಂಬಿರೆ ದಂತಿ ತನ್ನಯ ನೆಳಲು ಪರವರೆ ಬೇಱೆ ತೆಱಪಿಲ್ಲಳುಕಿ ಗೂಳೆಯದೆಗೆದುದಂಬರ ವ್ಯೋಮ ಧಾಳಿಯಲಿ (ತಿಮ್ಮಅ. ೫-೫೫); ಬರುತಿರೆ ಮುಂದುಕ್ಕಿ ಪರಿವ ಹೇಮಾವತಿಯೆಂಬ ಪಿರಿಯ ನದಿಯ ತಟಾಂತರದಿ ಗೊಳೆಯದೆಗದಿರುತಿರ್ದುದವನಿಯ ಜನರು (ಭೈರವೇ. ೩-೧೭೬); ಸೀಮೆಯ ನುಳಿದು ಸೀಮಾಂತರಕೆ ಗೂಳೆಯದೆಗೆಯುತೊಕ್ಕಲ್ವೋಪ ಹಕ್ಕಿಯ ಹಿಂಡು (ಶ್ರೀರಾಮಾ. ೫೪೪-೧೧೨). [ಗೂಳೆಯ + ತೆಗೆ$_1$]

**ಗೂಳೆಯದೆಗೆ** 'ಗೂಳೆಯಂದೆಗೆ' ನೋ.

**ಗೂಳೆಯದೆಗೆಸು** (ಕ್ರಿ). ವಲಸೆ ಹೋಗುವಂತೆ ಮಾಡು; ಗಂಟುಮೂಟೆ ಕಟ್ಟಿಕೊಂಡು ಹೊರಡುವಂತೆ ಮಾಡು: ಧಾರಿಣಿಯೊಳಗುಳ್ಳ ಪ್ರಜೆಯನಾ ನೃಪರಾಗ ದೂರಕೆ ಗೂಳೆಯದೆಗೆಸೆ (ಭರತ. ೩೪-೬೦). [ಗೂಳೆಯ + ತೆಗೆಸು (<ತೆಗೆಯಿಸು)]

**ಗೂಳೆಯಹೋಗು, ಗುಳೆಹೋಗು** (ಕ್ರಿ). = ಗೂಳೆಯಂದೆಗೆ: ಮುಸಲ್ಮಾನರು ಕಂಪಿಲರಾಜ್ಯದ ಮೇಲೆ ದಂಡೆತ್ತಿ ಬಂದಾಗ ಬೇಡರು . . . 'ಗೂಳೆಯ' ಹೋದ ಸಂಗತಿಯನ್ನು ಅವು ವಿವರಿಸುತ್ತವೆ (ಕೂನ್ನಕು. ೧೭). **ಗುಳೆಹೋಗು:** ಗುಳೆಹೋಗುವವರಂತೆ ಊರೂರು ತಿರುಗುವುದು ಆಕೆಗೆ ಕ್ಷೇಮಕರವಾಗಿ ಕಾಣಲಿಲ್ಲ (ಬಿನ್ನುಹಿಂ. ೧೭). [ಗೂಳೆಯ + ಹೋಗು$_1$ (<ಪೋಗು$_1$)]

**ಗೂಳೆಯೇಳು, ಗುಳೆಏಳು** (ಕ್ರಿ). = ಗೂಳೆಯಂದೆಗೆ: ಗೂಳೆಯೆದ್ದ ಜನರಲ್ಲಿಯ ಅನೇಕ ಬಸಿರಿಯರು ಗಿಡಗಳ ಬುಡದಲ್ಲಿಯೆ ಹೆತ್ತುಬಿಟ್ಟರು (ಕರ್ನಾಜ. ೧೩೪). **ಗುಳೆಏಳು:** ಈ ಜನ ಉಪಜೀವನಕ್ಕಾಗಿ ಗುಳೆಎದ್ದು ಬರಬೇಕಾಗುತ್ತಿತ್ತು (ಮಣ್ಣಮ. ೫); ಸುಖಿ ತಾನು ಬರುವಾಗ ಗುಳೆಎತ್ತಿ ಬರುವುದು ಒಂದಲ್ಲ ಎರಡಲ್ಲ, ಪರಿವಾರವೆ (ಸಪೀಗೀ. ೦೬-೨೨೫).

[ಗೂಳೆ (< ಗೂಳೆಯ) + ಏಳು$_1$ (< ಏೞ್$_1$)]

**ಗೂಱಾಡು, ಗೂರಾಡು** (ಕ್ರಿ). ೧. ಕೊಂಬಿನಿಂದ ಅಥವಾ ಕೋರೆಯಿಂದ ಮಣ್ಣನ್ನು ಕೆದರು.–ಅಡಿ ಮೇಲೆಮಾಡು: ವೃಷಭನು . . . ಹಾಯ್ಕುತ ಮೆಲುಕಿಱಿದು ತನು ಹೆಚ್ಚುತುವರಿಗೆ ನೆಗೆವುತಂ ಗೂಱಾಡುತಂ ನೆಲನ (ಬಸವು. ೩೨-೨೬); ವಾರಿಧಿಯು ಕಟ್ಟೆಗಳನೊಡದು ಗೂಱಾಡುತ್ತ . . . ವಾರಾಹನಿಂತು ಕೋಲಾಹಲಂ ಮಾಡಿ (ವೀಶೈಪು. ೩-೧೦-೧೭). **ಗೂರಾಡು:** ೨. ಚೆಲ್ಲಾಪಿಲ್ಲಿಮಾಡು; ಸಿಕ್ಕಾಪಟ್ಟೆ ಚೆಲ್ಲು: ಅನ್ವಾರಿ ಒಂದು ಟ್ರಂಕು ಎಳೆದು . . . ಆಭರಣಗಳನ್ನು ತೆಗೆದು ರಾಜನ ಮುಂದೆ ಗೂರಾಡಿದಳು (ನಟಶಾ. ೨೪೦); ಸಾಮಾನುಗಳನ್ನೆಲ್ಲ . . . ಕಿತ್ತು ಗೂರಾಡಿ ಮನೆಯಲ್ಲಿ ಅವ್ಯವಸ್ಥೆಯ ಕ್ರಾಂತಿಯನ್ನೇ ತಂದು ಮನೆಯವರಿಗೆಲ್ಲ ಯಾವಾಗಲೂ ಕೆಲಸ ಕೊಡುತ್ತಿದ್ದ (ರಂಗನಾ. ೭೯); ಬೇರುವನ್ನು ತೆಗೆದು ಗೂರಾಡಿದಳು (ದೂಬಿಟ್ಟು. ೧೩೩).

[ಗೂಱು + ಆಡು$_1$]

**ಗೂಱು, ಗೂರು$_2$** (ಕ್ರಿ). (ಕೊಂಬು, ಕೋರೆದಾಡೆ, ಪಿಕಾಸಿ, ಉಗುರು ಮೊದಲಾದುವುಗಳಿಂದ) ಅಗೆ; ತೋಡು; ಪರಚು; ಕೆರೆ: ಗೂಱಿದಂ ಹರಿವಂಬುಕ್ಕಿನಥಮವ[ರ]ಗೂಱಿದಂ ದೂಷಕರ ಶಿರವಂ ಕಿಱಿದಂ (ಸಾನಂಚ. ೯-೧೨೪). **ಗೂರು$_2$:** (ಕ). 'ಗೋರ್' ಪರಾ.

**ಗೂಱುಮಾಱಾಡು** (ಕ್ರಿ). (?): ಕಾಱಿದರು ರಕ್ತವನು ಸಗ್ಗಕೆ ಗೂಱುಮಾಱಾಡಿದರು ತಲೆಗಳ ಹೇಱಿದರು ಹರಣವ ನವೊಟ್ಟಿಗೆ ಕಾಲನರಮನೆಗೆ (ಕುವ್ಯಾವಿ. ೬-೪೬). [? + ಆಡು$_1$]

**ಗೂಱುಮಾಱಾಳಿ** (ನಾ). ಒಂದು ವಸ್ತುವನ್ನು ಕೊಟ್ಟು ಮತ್ತೊಂದು ವಸ್ತುವನ್ನು ತೆಗೆದುಕೊಳ್ಳುವವನು; ವಸ್ತುವಿನಿಮಯಗಾರ: ಈವನುಂ ಕೆವ್ವನಿತ್ತನೆ ಆತನ ಪೆಂಪಂ ಕೊಂಡಿತ್ತುಂ ಅಂತಾಯಿರ್ವರುಂ ಗೂಱುಮಾಱಾಳಿಗಳಾದರ್ (ಜೀವಸಂ. ೦೫೭-೦೫ ಪ).

[ಗೂಱುಮಾಱು + – ಆಳಿ$_2$]

**ಗೂಱುಮಾಱು** (ಕ್ರಿ). ಒಂದನ್ನು ಕೊಟ್ಟು ಮತ್ತೊಂದನ್ನು ತೆಗೆದುಕೊಳ್ಳು; ವಿನಿಮಯ ಮಾಡಿಕೊಳ್ಳು. 'ಗೂಱುಮಾಱಾಳಿ' ಪರಾ.

[?]

**ಗೃಂಜನ** (ನಾ). ಬೆಳ್ಳುಳ್ಳಿ: "ಲಶುನಂ ಗೃಂಜನ ಸಂಜ್ಞಂ" (ವಸ್ತುಕೋ. ೩೭-೨೬): "ಉಳ್ಳಿ ಗೃಂಜನಂ ಲಶುನಂ" (ಮಂಗರಾ. ४०-೩೫). [ಸಂ.]

**ಗೃಧ್ನು** (ನಾ). ಅತ್ಯಾಶೆಯುಳ್ಳವನು; ದುರಾಶೆಯುಳ್ಳವನು: "ಲುಬ್ಧನಭಿಲಾಷುಕಂ ಗೃಧ್ನು ತೃಷ್ಣಕಂ ಮೇಲೆಬಯಸುವನಕ್ಕುಂ" (ಮಂಗರಾ. ೬೯-೧೧). [ಸಂ.]

**ಗೃಧ್ರ** (ನಾ). ಹದ್ದು: "ಪಕ್ಷಿಜ್ಯೇಷ್ಠಂ ಗೃಧ್ರಮೆನೆ ಹದ್ದು" (ಮಂಗರಾ. ೫೨-೯); ಸಂಚರಚಂಡಗೃಧ್ರಗಣಂ . . . ರೌದ್ರಾವಹಂ (ಚಂದ್ರಪು. ೧೦-೮೭); ಈ ಕಾಂಡಕ್ಕೆ ವೇಗ ಬರಲು ತುದಿಗೆ ಹಾಕಿರುವ ಗರಿಯು ಗೃಧ್ರದ್ದೆ (ಬುದ್ಧಪ. ೮೦). [ಸಂ.]

**ಗೃಧ್ರಸಿ** (ನಾ). ವಾತರೋಗ; ಸಂಧಿವಾತ. [ಸಂ. ಗೃಧ್ರಸೀ]

**ಗೃಷ್ಟಿ** (ನಾ). ಚೊಚ್ಚಲು ಈದ ಹಸು: "ಗೃಷ್ಟಿಃ, ಸಕೃತ್ಪಸೂತಾ – ಈವಿ ಚೊಚ್ಚಲ ಮಣೆಕಂ" (ಹಲಾಯು. ४೬-೧೦೮); "ಚೊಚ್ಚಲದು ಗೃಷ್ಟಿಯೆನಿಕ್ಕು" (ಮಂಗರಾ. ೫४-४). [ಸಂ.]

**ಗೃಹ** (ನಾ). ೧. ಮನೆ; ಬೀಡು; ವಾಸಸ್ಥಾನ: "ಆವಾಸಃ, [ಆ]ವಸಥಂ, ಗೃಹಂ . . . ಆಲಯಃ–ಈ ೩೧ ಮನೆ" (ಹಲಾಯು. ೪೯–೧೩೭); ಮನೆ ಗೃಹವಾಗುವುದು ಇದರಲ್ಲಿ ವಾಸಿಸುವ ಜನರಿಂದ (ಗೃಹವಿ. ೦೫೩). ೨. ಹೆಂಡತಿ; ಪತ್ನಿ; ಗೃಹಿಣಿ: "ಸಹಚರಿ ಭಾರ್ಯೆ . . . ಗೃಹಿಣಿ ಗೃಹಂ ಸಜ್ಜನಕ್ಕೆ ಪೆಸರಿಂತಿನಿಸುಂ" (ವಸ್ತುಕೋ. ೩೨–೩); "ದಾರಂ ಕಳತ್ರಂ ಗೃಹಂ ಗೃಹಿಣಿ . . . ಕುಟುಂಬಿನಿ ಪತ್ನಿ ಮಹಿಳೆಯೆನೆ ಹೆಂಡಿತಿಗೆ ನಾಮಮಕ್ಕುಂ" (ಮಂಗರಾ. ೯೦–೬). [ಸಂ.]

**ಗೃಹಕಲಹ** (ನಾ). ಒಳಜಗಳ; ಅಂತಃಕಲಹ: ಗೃಹಕಲಹದ ಬೆಂಕಿ ಹೊಗೆಯಾಡತೊಡಗಿದೆ ಮನದೊಳು ಮನೆಯೊಳು ಭರದೆ (ಇಂಚಾಪ. ೧೮೫–೦೩). [ಗೃಹ + ಕಲಹ]

**ಗೃಹಕೃತ್ಯ** (ನಾ). ೧. ಮನೆಗೆಲಸ: ನಮ್ಮ ಹುಡುಗಿಯನ್ನು ಕಾಲೇಜಿಗೆ ಕಳುಹಿಸುವುದಿಲ್ಲ, ಗೃಹಕೃತ್ಯ ಮಾಡಿಕೊಂಡಿರಲಿ (ರೂಢಿ). ೨. ಮನೆಯ ಆಡಳಿತ,–ವ್ಯವಹಾರ; ಮನೆವಾರ್ತೆ: ಅವರು ಗೃಹಕೃತ್ಯದ ವಿಷಯವನ್ನು ಮಾತನಾಡಿದರು (ಮಲಿನಾ. ೦೭೯); ಒಂದು ರಾಜಮನೆತನದ ಗೃಹಕೃತ್ಯದ ಒಳತೋಟಿಯಿಂದ ಕಥೆ ಆರಂಭವಾಗುತ್ತದೆ (ಭಾರದ. ೮೮); ನಿಮ್ಮ ಗೃಹಕೃತ್ಯದ ಅಂದಾಜುಪತ್ರದಲ್ಲಿ ಪೌಷ್ಟಿಕಆಹಾರಗಳಿಗೆ ಮೊದಲನೆಯ ಸ್ಥಾನ ಸಿಗಬೇಕು (ಆಡುಸಾ. ೦೨೩). [ಗೃಹ + ಕೃತ್ಯ$_2$]

**ಗೃಹಕೈಗಾರಿಕೆ** (ನಾ). ಮನೆಯಲ್ಲಿಯೇ ಮಾಡಬಹುದಾದ ಚಿಕ್ಕಪುಟ್ಟ ಕೈಗಾರಿಕೆ; ಗುಡಿಕೈಗಾರಿಕೆ: ರಾಜ್ಯವು ಗ್ರಾಮಾಂತರಪ್ರದೇಶಗಳಲ್ಲಿ ವೈಯಕ್ತಿಕ ಆಧಾರದ ಮೇಲಾಗಲೀ ಸಹಕಾರವ್ಯವಸ್ಥೆಯ ಆಧಾರದ ಮೇಲಾಗಲಿ ಗೃಹಕೈಗಾರಿಕೆಗಳನ್ನು ಅಭಿವೃದ್ಧಿಗೊಳಿಸಲು ಪ್ರಯತ್ನಿಸತಕ್ಕುದು (ಭಾಧಾನ. ೨೪). [ಗೃಹ + ಕೈಗಾರಿಕೆ]

**ಗೃಹಕೋಕಿಳ** (ನಾ). ಮನೆಯ ಕೋಗಿಲೆ; ಹಲ್ಲಿ: ಅನ್ನೆಗಂ ಪರಸ್ಪರ ಕಲಹಕಲುಷಿತ ಗೃಹಕೋಕಿಳಂ[ಪಾಠಾಂ. ಲಂ]ಗಳೊಂದೊಂದಂ ತಿನೆ (ಆದಿಪು. ೨–೧೪ ವ). 'ಗೃಹಪಿಕ' ಪರಾ. [ಗೃಹ + ಕೋಕಿಳ (= ಕೋಕಿಲ)]

**ಗೃಹಕ್ಷಯ** (ನಾ). ಮನೆ ಹಾಳಾಗುವುದು; ಮನೆಯ ನಾಶ: ಪರನಿಂದೆ ಗೃಹಕ್ಷಯ, ಯತಿನಿಂದೆ ಕುಲಕ್ಷಯ (ಗಾದೆ). [ಗೃಹ + ಕ್ಷಯ]

**ಗೃಹಖಾತೆ** (ನಾ). [ರಾಜನೀ] ರಾಜ್ಯದ ಅಥವಾ ರಾಷ್ಟ್ರದ ಒಳಾಡಳಿತವನ್ನು ನೋಡಿಕೊಳ್ಳುವ ಖಾತೆ,–ಇಲಾಖೆ: ಗೃಹಖಾತೆಯ ಮಂತ್ರಿ ಈ ದಿನ ಪ್ರವಾಸ ಕೈಗೊಂಡಿದ್ದಾರೆ (ರೂಢಿ). 'ಗೃಹಮಂತ್ರಿ' ಪರಾ. [ಗೃಹ + ಖಾತೆ$_2$]

**ಗೃಹಗಾಹಿ** (ನಾ). ಮನೆ ಕಾಯುವುದು; ನಾಯಿ: ಸರ್ಪನ ಕಪ್ಪೆಯ ಮಕ್ಷಿಕ ನುಂಗಿತ್ತು, ಆ ಮಕ್ಷಿಕನ ಗೃಹಗಾಹಿ ನುಂಗಿತ್ತು, ಅದೇನು ಚೋದ್ಯ ಮೆಂದಡೆಯೆ (ಭಿಬ್ಬಾ. ೬೨–೩೪೭). [ಗೃಹ + ಕಾಹಿ]

**ಗೃಹಗೋಧಿಕ** (ನಾ). = ಗೃಹಕೋಕಿಳ: "ಗೃಹಗೋಧಿಕಂ ಗೃಹಪಿಕಂ ಹಲ್ಲಿಯದು" (ಮಂಗರಾ. ೪೯–೧೪). [ಸಂ. ಗೃಹಗೋಧಿಕಾ]

**ಗೃಹಗ್ರಾಮಣಿ** (ನಾ). ಮನೆಯಲ್ಲಿ ದೀಪ ಮೊದಲಾದುವನ್ನು ನೋಡಿಕೊಳ್ಳುವ ವ್ಯವಸ್ಥಾಪಕ; ಮನೆವಾರ್ತೆಯವನು: ಮಣಿಕುಟ್ಟಿಮದಿಂ ಮಣಿತೋರಣದಿಂ ಮಣಿಕಳಶದಿಂ ತಮಸ್ತೋಮನಿವಾರಣದೆಡೆಗಳಿಂ ಗೃಹಗ್ರಾಮಣಿಯನಪೇಕ್ಷಿಸವು ನೃಪಕುಮಾರಗೃಹಂಗಳ್ (ಮಲ್ಲಿಪು. ೨–೬೨). [ಗೃಹ + ಗ್ರಾಮಣಿ]

**ಗೃಹಚರ** (ನಾ). ಮನೆಯಲ್ಲಿರುವ ವ್ಯಕ್ತಿ: ಪುತ್ರಪೌತ್ರರು ನಿಜಕಳತ್ರವು ಗೋತ್ರವರ್ಗಂ ದಾಸದಾಸೀಮಿತ್ರರುಂ ಗೋಪಾಲಕರು ಪಶುಶುನಕ ಮಾರ್ಜಾಲ ಇವು ಮೊದಲು ಗೃಹಚರರನೆಲ್ಲಂ ಶಿವಸಹಿತರಂ ಮಾಡಿ (ಬಸಪು. ೬೦–೧೪). [ಗೃಹ + ಚರ]

**ಗೃಹಚಾಮರ** (ನಾ). ಮನೆಯಲ್ಲಿ ಉಪಯೋಗಿಸುವ ಚಾಮರದಂತಹ ವಸ್ತು; ಕಸಪೊರಕೆ: ಗಿರಿಜೆಯು ಪ್ರಸ್ತಾಪವೆತ್ತಿದರೆ ಗೃಹಚಾಮರ ಪುಡಿಮಾಡಿಯೇನು ಬೆನ್ನ ಮೇಲೆ (ಜೀವಮ. ೭). [ಗೃಹ + ಚಾಮರ]

**ಗೃಹಚ್ಛಿದ್ರ** (ನಾ). ಮನೆಯ ಒಡಕು; ಗೃಹಕಲಹ. [ಗೃಹ + ಛಿದ್ರ]

**ಗೃಹತ್ಯಾಗ** (ನಾ). ೧. ಮನೆಯನ್ನು ತೊರೆಯುವುದು. ೨. = ಗೃಹತ್ಯಾಗಕ್ರಿಯೆ: ಗೃಹತ್ಯಾಗದೀಕ್ಷಾ ಜಿನರೂಪಮೌನಾಧ್ಯಯನ . . . ನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೦೫–೦೫ ವ). [ಗೃಹ + ತ್ಯಾಗ]

**ಗೃಹತ್ಯಾಗಕ್ರಿಯೆ** (ನಾ). [ಜೈನ] ದೀಕ್ಷೆ ಪಡೆಯಲು ಮನೆಯನ್ನು ಬಿಟ್ಟುಹೋಗುವಿಕೆ: ಗೃಹವಾಸದೊಳ್ವಿರಕ್ತನಾಗಿ ಯೋಗ್ಯನಪ್ಪ ಮಗಂಗೆ . . . ಗೃಹತ್ಯಾಗಮನುಪದೇಶಂಗೆಯ್ದು ತಪೋವನಕ್ಕೆ ಪೋಪುದು ಗೃಹತ್ಯಾಗಕ್ರಿಯೆ (ಚಾವುಂಪು. ೨೪೩). [ಗೃಹತ್ಯಾಗ + ಕ್ರಿಯೆ]

**ಗೃಹದಾಸಿ** (ನಾ). ಮನೆಯ ತೊತ್ತು, ಸೇವಕಿ: ಶ್ರೀಭೂತಿಯುಂ ನಂದನಭೂತಿಯುಮೆಂಬರಿರ್ವರ್ ಕೂಸುಗಳೊಳರಾಗೆನ್ನ ಗೃಹದಾಸಿಯ ನೊಳಗಿಟ್ಟಲ್ಲಿ ಪುಟ್ಟಿದನಿವಂ ಕಪಿಲನೆಂಬೊಂ (ಶಾಂತಿಪು. ೬–೬೨ ವ). [ಗೃಹ + ದಾಸಿ]

**ಗೃಹದೀರ್ಘಿಕೆ** (ನಾ). ಅರಮನೆಯ ಪರಿಸರದಲ್ಲಿ ಮಾಡಿರುವ ಉದ್ದವಾದ ಕೊಳ: ಗೃಹದೀರ್ಘಿಕೆಯುಂ ಧಾರಾಗೃಹಮುಂ . . . ಪಲವಂ ಬಹುವಿದ್ಯಾಗೃಹಮುಮುತ್ತರರ್ ಸಮೆದಿತ್ತರ್ (ಜಂರಾಮಾ. ೦೨–೯೮); ಗೃಹದೀರ್ಘಿಕೆಯಿಂದೆಟ್ಟಿರ್ತ ಹಂಸರುತಿ ಮಧುರ ಮಧುಕರೀ ಝಂಕಾರಂ (ಮಲ್ಲಿಪು. ೪–೫೮). [ಸಂ. ಗೃಹದೀರ್ಘಿಕಾ]

**ಗೃಹದೇವತೆ** (ನಾ). ೧. ಮನೆಯ ದೇವರು; ಮನೆದೇವತೆ: ಗೃಹದೇವತಾಯೆಂಬುದು ವಿಶ್ವೇಶ್ವರಿ ವೈಶ್ರವಣಂ ಧರಣೇಂದ್ರ ಶ್ರೀದೇವಿಯೆಂದು ಚತುರ್ವಿಧಮಕ್ಕುಂ (ಚಾವುಂಪು. ೨೪೦). ೨. (ಆಲಂ) ಮನೆಯಲ್ಲಿ ಎಲ್ಲರ ಮನ್ನಣೆಗೂ ಪಾತ್ರಳಾದ ಮಹಿಳೆ; ಗೃಹಿಣಿ: ಗೃಹದೇವತೆಗೆ ಶಿಶುಸಂಗೋಪನೆಯೊಂದಿಗೆ ಮನೆಯ ಎಲ್ಲಾ ಕೆಲಸಗಳ ಹೊಣೆಯೂ ಸೇರಿದ್ದು (ಹೊಸಕ್ಕ. ೩೦). [ಗೃಹ + ದೇವತೆ]

**ಗೃಹಧರ್ಮ** (ನಾ). ಮನೆಯಲ್ಲಿ ಪಾಲಿಸಬೇಕಾದ ಸದಾಚಾರ, ಸತಂಪ್ರದಾಯ ಮುಂತಾದುವು: ಸ್ಮೃತಿರತ್ನ–(ಅಶ್ವಲಾಯನ ಕೃತ) . . . ಸೃಷ್ಟಿ, ಗೃಹಧರ್ಮ . . . ದ್ರವ್ಯಶುದ್ಧಿ ಮುಂತಾದ ವಿಚಾರಗಳಿವೆ (ಭಾರದ. ೬೭). [ಗೃಹ + ಧರ್ಮ]

**ಗೃಹಪತಿ** (ನಾ). ೧. ಮನೆಯ ಒಡೆಯ; ಕುಟುಂಬದ ಮುಖಂಡ: ಗೃಹಪತಿಯ ರಾಶಿಗಂ ತದ್ಗೃಹರಾಶಿಗಮಾಗೆ ರಾಶಿಕೂಟಂ . . . ಮಹಾವಿಭೂತಿಯನನಾರತಂ ಪೆರ್ಚಿಸುಗುಂ (ಲೋಕೋಪ. ೩–೨೩). ೨. ಗೃಹಸ್ಥಾಶ್ರಮವನ್ನು ಹೊಂದಿದವನು; ಗೃಹಸ್ಥ. ೩. ಯಾಗದ ಮೇಲ್ವಿಚಾರಣೆ ನೋಡಿಕೊಳ್ಳುವವನು; ಯಾಗದ ಯಜಮಾನ. ೪. ಗ್ರಾಮದ ಮುಖ್ಯಸ್ಥ; ಗೌಡ: ವೇಪುರಕಗ್ರಾಮದ ಗೃಹಪತಿಯೊಬ್ಬನು ಒಂದು ಕೆರೆಯನ್ನು ಅಗೆಸಿದನೆಂದು ಹೇಳಿದೆ (ಕರ್ನಾಇ. ೩). ೫. ಪಾರುಪತ್ಯಗಾರ; ಮನೆವೆಗ್ಗಡೆ: ಕಲ್ಪವೃಕ್ಷಂ ಪೋಗಲ್ ಸುರಲೋಕಕ್ಕುದ್ಯತಮಾಗಿರೆ ಕಂಡಂ ಸ್ವಪ್ನಸಮಯದೊಳ್ ಗೃಹಪತಿಯುಂ (ಆದಿಪು. ೦೬–೪೩); ನೃಪೋತ್ತಮನ ಗೃಹಪತಿಗೆ ರತ್ನಪ್ರಮಾಣ ಗಣಿಕೆಯರ ಬೆಸನೆ ಬೆಸನಾಯ್ತಾಗಳ್ (ಶಾಂತಿಪು. ೧೦–೫೮). ೬. [ಜೈನ] ಚಕ್ರವರ್ತಿ ಎನಿಸುವವನಿಗೆ ತಾವಾಗಿ ದೊರೆಯುವ ಸೇನಾಪತಿ, ಸ್ಥಪತಿ, ಗೃಹಪತಿ, ಪುರೋಹಿತ, ಗಜ, ವಾಜಿ, ಸ್ತ್ರೀ ಎಂಬ ಏಳು ಜೀವರತ್ನಗಳಲ್ಲಿ ಒಂದು; ಮನೆಯನ್ನು ನೋಡಿಕೊಳ್ಳುವ ಹೆಗ್ಗಡೆ; ಮೇಲ್ವಿಚಾರಕ: ನಾಮಗ್ರಹಣಮಾತ್ರದಿಂದಮೆ ಸಮಸ್ತ ವಸ್ತು

ವಿಸ್ತಾರಾಂತರ್ನಿಹಿತ ವಸ್ತುಸಮರ್ಪಣಪರಾಯಣನಪ್ಪ ಕಾಮವೃಷ್ಟಿ ಯೆಂಬ ಗೃಹಪತಿರತ್ನಮುಮಂ (ಆದಿಪು. ೧೦-೩ ವ) ; ಮತ್ತಂ ಮಣಿಕನಕವಸ್ತು ಗಳನೆನಿತೆನಿತುಂ ಬೇಯಂಗೆಯ್ದೊಡಂ ತವಿಸದಿರ್ಪ ಸಾಮರ್ಥ್ಯಮನುಳ್ಳ ಗೃಹಪತಿರತ್ನಮುಮಂ . . . ಸ್ತ್ರೀರತ್ನಮುಮಂ ಎಂಬೀ ಯೇೞುಂ ಜೀವರತ್ನಂ ಗಳ್ (ಜೀವಸಂ. ೧೭-೩೪ ವ); ಗೃಹಪತಿರತ್ನದಿಂ ಕೊಡಲ್ಪಟ್ಟ ವ್ಯಾಪ್ಯಾನ್ನಾದಿ ಭೋಜನಂಗಳಂ ಭುಂಜಿಸಿ ತಾಂಬೂಲಮಂ ಸವಿಯುತ (ಪುರುಚ. ೧೩೯).

[ ಗೃಹ + ಪತಿ₂ ]

**ಗೃಹಪಿಕ** (ನಾ). = ಗೃಹಕೋಕಿಳ : " ಗೃಹಪಿಕಂ ಹಲ್ಲಿಯದು " (ಮಂಗರಾ. ೪೯-೧೪). [ ಗೃಹ + ಪಿಕ ]

**ಗೃಹಪ್ರತಿಷ್ಠೆ** (ನಾ). ಮನೆಯ ಕಟ್ಟಡವನ್ನು ಆರಂಭ ಮಾಡುವುದು ; ಗುದ್ದಲಿಪೂಜೆ : ಗುರುದಿವಸವಾಗೆ ರಾಜಯೋಗಂ ಗೃಹಪ್ರತಿಷ್ಠೆಗೆ ಶುಭದಂ (ಲೋಕೋಪ. ೩-೪). [ ಗೃಹ + ಪ್ರತಿಷ್ಠೆ ]

**ಗೃಹಪ್ರವೇಶ** (ನಾ). ೧. ಹೊಸದಾಗಿ ಕಟ್ಟಿದ ಮನೆಯ ಪ್ರವೇಶ ; ಹೊಸ ಮನೆಗೆ ವಾಸಕ್ಕೆ ಹೋಗುವಾಗ ಮಾಡುವ ಒಂದು ಸಂಪ್ರದಾಯಪೂರ್ವಕವಾದ ಸಮಾರಂಭ : ಗೃಹಪ್ರವೇಶಕ್ಕೆ ಒಂದು ಸಾವಿರ ರೂಪಾಯಿ ಖರ್ಚಾಯಿತು(ರೂಢಿ). ೨. ಮದುಮಗಳನ್ನು ಮನೆ ತುಂಬಿಸಿಕೊಳ್ಳುವುದು : ಗೃಹಪ್ರವೇಶವಾದ ಮೇಲೆ ನವವಧು ತವರಿಗೆ ಹೋದಳು (ಸ್ಮೃತಿಚಿ. ೨೩೦). [ ಗೃಹ + ಪ್ರವೇಶ ]

**ಗೃಹಬಂಧನ** (ನಾ). ೧. ಮನೆಬಾಗಿಲನ್ನು ಮುಚ್ಚಿ ಬೀಗಹಾಕುವುದು. ೨. ಮನೆಯ ಬಾಗಿಲನ್ನು ಮುಚ್ಚಿ ಭದ್ರಪಡಿಸುವ ಒಂದು ಸಾಧನ ; ಬೀಗ : "ಗೃಹಬಂಧನಂ ಬಿಯ್ಯಗಂ" (ಮಂಗರಾ. ೫೭-೪). ೩. [ರಾಜನೀ] ಹೊರಗೆ ಹೋಗದಂತೆ ಆರೋಪಿಗಳನ್ನು ಅವರ ಮನೆಯಲ್ಲಿಯೇ ನಿರ್ಬಂಧದಲ್ಲಿರಿಸುವುದು : ಸುಭಾಸ್‌ಚಂದ್ರಬೋಸರು ಭಾರತವನ್ನು ಬಿಡುವುದಕ್ಕೆ ಮೊದಲು ಗೃಹಬಂಧನದಲ್ಲಿದ್ದರು (ರೂಢಿ).

[ ಗೃಹ + ಬಂಧನ ]

**ಗೃಹಬಲಿಭುಕ್ಕು** (ನಾ). ಗುಬ್ಬಿ ; ಗುಬ್ಬಚ್ಚಿ : " ಕಲವಿಂಕಃ, ಚಟಕಃ, ಗೃಹಬಲಿಭುಕ್, ನೀಲಕಂಠಃ – ಈ ೪ ಗುಬ್ಬ(ಲು) " (ಹಲಾಯು. ೪೧-೯೦).

[ ಸಂ. ಗೃಹಬಲಿಭುಜ್ (ಗೃಹ + ಬಲಿಭುಜ್) ]

**ಗೃಹಭಾನು** (ನಾ). ಮನೆಯ ಬೆಳಕು ; ದೀವಿಗೆ ; ದೀಪ : " ಆ ದೀವಿಗೆ ಜ್ಯೋತಿ ದೀಪ್ತಿ ಗೃಹಭಾನುವಕ್ಕು " (ಮಂಗರಾ. ೬೦-೧೮).

[ ಗೃಹ + ಭಾನು ]

**ಗೃಹಭೂಮಿ** (ನಾ). ಮನೆಯನ್ನು ಕಟ್ಟುವ ಸ್ಥಳ ; ನಿವೇಶನ : " ಗೃಹಭೂಮಿಃ, ವಾಸ್ತು – ಈ ೨ ಮನೆಯ ನೆಲೆ[ವಾಟು] " (ಹಲಾಯು. ೪೮-೦೩೫). [ ಗೃಹ + ಭೂಮಿ ]

**ಗೃಹಭೇದಿ** (ನಾ). ಮನೆಯನ್ನು ಒಡೆಯುವವನು ; ಮನೆಯವರೊಳಗೆ ಜಗಳವನ್ನು ಹುಟ್ಟಿಸುವವನು ; ಮನೆಮುರುಕ : ಬ್ರಹ್ಮಾಂಡವಾದಿ ಗೃಹಭೇದಿ ನೀನು ಕಾಂಬುದಕೆ ಅತಿ ಉದಾರ (ಸೂರ್ಯಪಾ. ೫೩-೦೫).

[ ಸಂ. ಗೃಹಭೇದಿನ್ ]

**ಗೃಹಮಂತ್ರಿ** (ನಾ). [ ರಾಜನೀ ] ರಾಷ್ಟ್ರದ ಒಳಾಡಳಿತವನ್ನು ನಿರ್ವಹಿಸುವ ಸಚಿವ : ವಲ್ಲಭಭಾಯಿಪಟೇಲರು ಸ್ವತಂತ್ರಭಾರತದ ಪ್ರಥಮ ಗೃಹಮಂತ್ರಿಯಾಗಿದ್ದರು (ರೂಢಿ). [ ಗೃಹ + ಮಂತ್ರಿ ]

**ಗೃಹಮಹತ್ತರ** (ನಾ). ಅರಮನೆಯ ಆಡಳಿತದ ಅಧಿಕಾರಿ; ಮನೆವೆಗ್ಗಡೆ: ಗೃಹಮಹತ್ತರರಂ ಕರೆದಲ್ಲಿಗೆ ತಕ್ಕ ಮಂಗಳೋಪಕರಣಂಗಳಂ ಸಮಕಟ್ಟಿ ಮೆಂದು ಬೆಸಸಿದಾಗಳ್ (ಕಾದಂಪೂ. ೫೨೭) ; ಇವಂ ಬರೆದರಾರೆನೆ ಗೃಹ ಮಹತ್ತರನಿವಂ . . . ನಿಮ್ಮ ಕುಲದವರುತ್ಸವಂಗಳೊಳಿಂತೆ ಬರೆವರೆನೆ (ಶಂರಾಮಾ. ೧೦-೧೦೭ ವ) ; ಜಯವರ್ಮಭೂಭುಜಂ ಬಗೆದಂದು ಗೃಹ ಮಹತ್ತರನಂ ಬರಿಸಿ ಬೆಸಸಿದಾಗಳ್ (ಚಂದ್ರಪ್ರ. ೬-೪೩ ವ) ; ಚಂಪಾಪುರದ ಸೂಱೆಯಿಂ ಬಂದ ಸಮಸ್ತವಸ್ತುವಾಹನ ವಧೂಸಮೂಹಮಂ ಗೃಹ ಮಹತ್ತರಂಗೆ ಕೆಯ್ಕೊಳಲ್ವೇೞ್ದು (ಪುಷ್ಪಪು. ೪-೧ ವ).

[ ಗೃಹ + ಮಹತ್ತರ ]

**ಗೃಹಮಾತೆ** (ನಾ). ಹೆಂಡತಿಯ ತಾಯಿ ; ಅತ್ತೆ : " ಹೆಣ್ಣಿನತ್ತತ್ತೆ ಗೃಹಮಾತೆಯುಕ್ಕುಂ " (ಮಂಗರಾ. ೯೨-೦೩). [ ಗೃಹ + ಮಾತೆ ]

**ಗೃಹಮುಟ್ಟು** (ನಾ). ಮನೆಯ ಸಾಮಾನು ; ಪಾತ್ರೆ, ಪಡಗ ಮುಂತಾದುವು (?): " ಅಕ್ಷರಾವಿಶೇಷ ರೇಖೆ ಗೃಹಮುಟ್ಟುಗಳುಂ ಪೊರೆ ಮಾತ್ರೆಯಕ್ಕು " (ನಾನಾರ. ೧೫೮). [ ಗೃಹ + ಮುಟ್ಟು₄ ]

**ಗೃಹಮೇಧ** (ನಾ). ಮನೆಯಲ್ಲಿ ನಡೆಯುವ ಯಜ್ಞ ; ಗೃಹಯಜ್ಞ.

[ ಸಂ. (ಗೃಹ + ಮೇಧ) ]

**ಗೃಹಮೇಧಿ** (ನಾ). = ಗೃಹಸ್ಥ : " ಗೃಹಮೇಧೀ, ಗೃಹಾಧಿಪಃ – ಈ ೨ ಗೃಹಸ್ಥಂ " (ಹಲಾಯು. ೬೦-೨೦೭) ; " ಗೃಹಮೇಧಿಯೆನೆ ಗೃಹಸ್ಥನೆನಿಕ್ಕು " (ಮಂಗರಾ. ೭೨-೨೦). [ ಸಂ. ಗೃಹಮೇಧಿನ್ ]

**ಗೃಹರಕ್ಷೆ** (ನಾ). ಮನೆಕಾವಲು ; ಅರಮನೆಯ ರಕ್ಷಣೆ : ಗೃಹರಕ್ಷೆಗೆ ಸಾತ್ಯಕಿಯಂ ಮಹೀಧರಂ ನಿಲಿಸಿ (ಜಗವಿ. ೧೦-೫೩). [ ಗೃಹ + ರಕ್ಷೆ ]

**ಗೃಹಲಕ್ಷ್ಮಿ** (ನಾ). ಮನೆಯಲ್ಲಿ ಲಕ್ಷ್ಮಿಯಂತೆ ಇರುವವಳು ; ಹೆಂಡತಿ ; ಗೃಹಿಣಿ : ತಾ ಬಂದು ಗೃಹಲಕ್ಷ್ಮಿಯಾಗಿ ಕೂತಾಳ (ಕುಂಕುಮ. ೫೭).

[ ಗೃಹ + ಲಕ್ಷ್ಮಿ₂ ]

**ಗೃಹವನ** (ನಾ). = ಗೃಹಾರಾಮ. ' ಗೃಹವನಮಹತ್ತರ ' ಪರಾ.

[ ಗೃಹ + ವನ ]

**ಗೃಹವನಮಹತ್ತರ** (ನಾ). ಅರಮನೆಯ ಸುತ್ತುಮುತ್ತು ಇರುವ ಉದ್ಯಾನವನದ ಅಧಿಕಾರಿ : ಎಳೆಯಡಕೆಯ ಫಲಮಂ . . . ಕಾಂಚನ ಕದಳೀಫಳಮಂ ಗೃಹವನಮಹತ್ತರಂ ತಂದಿತ್ತಂ (ಮಲ್ಲಿಪು. ೪-೫೩).

[ ಗೃಹವನ + ಮಹತ್ತರ ]

**ಗೃಹವಾಟಿ** (ನಾ). = ಗೃಹಾರಾಮ : " ಗೃಹವಾಟ ನಿಷ್ಕುಟಂ . . . ತಾಂ ಪೂದೋಟಂ " (ವಸ್ತುಕೋ. ೩೨-೦೨). [ ಗೃಹ + ವಾಟಿ ]

**ಗೃಹವಿಜ್ಞಾನ** (ನಾ). ಗೃಹಕೃತ್ಯಕ್ಕೆ ಸಂಬಂಧಪಟ್ಟ ವಿಜ್ಞಾನ : ಗೃಹವಿಜ್ಞಾನದ ಪಠ್ಯಪುಸ್ತಕ (ಗೃಹವಿ. V ಅರಿಕೆ); ವೈವಿಧ್ಯದ ಅಧ್ಯಯನ ಯೋಜನೆಗಳನ್ನು ಅವರು ಸಲಹೆ ಮಾಡಿರುವರು. ಅವುಗಳಲ್ಲಿ . . . ಲಲಿತಕಲೆಗಳು, ಗೃಹವಿಜ್ಞಾನ ಇವು ಮುಖ್ಯವಾದವು (ಶಿಕ್ಷದ. ೧೯೩). [ ಗೃಹ+ವಿಜ್ಞಾನ ]

**ಗೃಹವೇದಿ** (ನಾ). = ಗೃಹಮಹತ್ತರ : ನಿಚ್ಚ ಭೇರೀಘಂಟಾಸ್ವನಂಗಳಿಸೆಯೆ ತಂತಂ ವಿಭವಕ್ಕನುಸಾರಿಯಾಗೆ ಗೃಹವೇದಿಗಳಿಂ ಪ್ರಯೋಗಿಸುವುದು ಪ್ರೀತಿಕ್ರಿಯೆ (ಚಾವುಂಪು. ೨೩೦). [ ಸಂ. ಗೃಹವೇದಿನ್ ]

**ಗೃಹವೈದ್ಯ** (ನಾ). ಮನೆಯಲ್ಲೇ ಮಾಡುವ ಚಿಕಿತ್ಸೆ : ಎಷ್ಟೋ ರೋಗಗಳನ್ನು ಗೃಹವೈದ್ಯದಿಂದಲೇ ಪರಿಹರಿಸಬಹುದು (ರೂಢಿ).

[ ಗೃಹ + ವೈದ್ಯ ]

**ಗೃಹಶಾಂತಿ** (ನಾ). ಭೂತ, ಪಿಶಾಚಾದಿಗಳಿಂದ ಮನೆಗೆ ತೊಂದರೆಯುಂಟಾಗದಿರುವಂತೆ ನಡೆಸುವ ಶಾಂತಿಕರ್ಮ : ಹೊಸಮನೆಯ ಕಟ್ಟಿದೆನು ಗೃಹಶಾಂತಿ ಮನೆಯೊಳಗೆ (ಪುರಂದ. ೨-೬೦-೩).

[ ಗೃಹ + ಶಾಂತಿ ]

**ಗೃಹಶಾರಿಕೆ** (ನಾ). ಮನೆಯಲ್ಲಿ ಸಾಕಿಕೊಂಡಿರುವ ಸಾರಿಕೆ,–ಹೆಣ್ಣುಗಿಳಿ : ಕಿಚ್ಚಿನೊಳು ಕೆಡೆದ ಗೃಹಶಾರಿಕೆಯು ಮರಿಯಂತೆ . . . ವೇದನೆಗೆ ಪಕ್ಕಾಗಿರಲ್ಕೆ (ಕಿರೀಟೀ. ೫-೬೯). [ ಗೃಹ + ಶಾರಿಕೆ ]

**ಗೃಹಶಿಲ್ಪಿ** (ನಾ). ಮನೆ ಕಟ್ಟುವ ಶಿಲ್ಪಿ ; ವಾಸ್ತುವಿದ್ಯೆಯನ್ನು ಬಲ್ಲವನು: ಅವನು ಗೌರವದಿಂದ ಗೃಹಶಿಲ್ಪಿಯ ಸಲಹೆಯನ್ನಾಲಿಸುತ್ತಿದ್ದನು (ಪುನರು.

೩೦೭) : ಬ್ಲಾಂಡಿಂಗ್ಸನ ಸ್ನೇಹಿತ ಸಿವ್ಸ್ ಎಂಬವನು ಗೃಹಶಿಲ್ಪಿಯಾಗಿದ್ದ (ಯೋಧಪು. ೨೭). [ ಗೃಹ + ಶಿಲ್ಪಿ ]

**ಗೃಹಶೋಭೆ** (ನಾ). ೧. ಮನೆಯ ಕಳೆ,-ಚಂದ,-ಅಂದ. ೨. [ ಜೈನ ] ಪಾರಿವ್ರಾಜ್ಯಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು (?) : ಗೃಹಶೋಭೆಯೆಂಬುದು ಪರಮಲಕ್ಷ್ಮೀಗೃಹಶೋಭಾಕರನಪ್ಪ ಜಿನೇಂದ್ರನುಪದೇಶದಿಂ ನಿಜಶೋಭಾದಿ ತ್ಯಾಗಂಗೆಯ್ದು ತಪದೊಳ್ ನೆಗಟ್ದೊಡೆ ದಿವ್ಯಪರಮಗೃಹಶೋಭಾಧಿಪತಿತ್ವಮಕ್ಕುಂ (ಚಾವುಂಪು. ೨೫೦). [ ಗೃಹ + ಶೋಭೆ$_1$ ]

**ಗೃಹಸಂಸ್ಕಾರ** (ನಾ). ೧. ಗೃಹಶುದ್ಧಿ ಮಾಡುವ ಪುಣ್ಯಾಹವೇ ಮೊದಲಾದ ಕ್ರಿಯೆ : ಕ್ಷೇತ್ರಸಂಸ್ಕಾರವಾಗಲಿ, ಗೃಹಸಂಸ್ಕಾರವಾಗಲಿ ಚ್ಯುತಿಯಾಗದಂತೆ . . . ಕೊನೆಗಾಣಿಸಿದನು (ಜಯಂತ. ೨೭೩). ೨. ಮದುವೆಮನೆಯಲ್ಲಿ ವರನ ಬಿಡಾರಕ್ಕೆ ಏರ್ಪಾಡು ಮಾಡುವ ಸಾಮಾನು, - ಸರಂಜಾಮು, - ಲವಾಜಮೆ.
[ ಗೃಹ + ಸಂಸ್ಕಾರ ]

**ಗೃಹಸಚಿವ** (ನಾ).=ಗೃಹಮಂತ್ರಿ: ಗೃಹಸಚಿವರು ರಾಜೀನಾಮೆ ಕೊಟ್ಟರು (ರೂಢಿ). [ ಗೃಹ + ಸಚಿವ ]

**ಗೃಹಸ್ಥ** (ನಾ). ೧. ಮದುವೆಮಾಡಿಕೊಂಡವನು ; ಸಂಸಾರವಂದಿಗ : ಕಿಱಿಯಂ ಮುತ್ತುಂ . . . ಗೃಹಸ್ಥನೆನ್ನದೆ ಮುಂಬಿಟ್ಟುಱಿಸಿ ಕೊಲುತಿರ್ಪ ಜವನೆಂಬಟಿಕೆಯ ಪಗೆವಂಗದೆಂತು ಪಂಗಿಗನಪ್ಪೆಂ (ಆದಿಪು. ೪-೭೭) ; ಇನ್ನುಳಿದ ಗೃಹಸ್ಥರಾತ್ಮಭವೆಯಂ ಕಳುಪುತ್ತ ಕಟೆಂತಳಲ್ವರೋ (ಶಾಕುಂತ. ೫೨-೪). ೨. ಸಭ್ಯ ; ಶಿಷ್ಟ : ಅವರನ್ನೆಲ್ಲ ಕಳಸಾಪುರದ ಗೃಹಸ್ಥರು ಚೆನ್ನಾಗಿ ಆದರಿಸುತ್ತಿದ್ದರು (ಕಳಹು. ೨೭); ಏನೋ ಗೃಹಸ್ಥ ಎಂದು ತಿಳಿದು ಕೊಂಡು ಮನೆಯನ್ನು ಬಾಡಿಗೆಗೆ ಕೊಟ್ಟುಬಿಟ್ಟೆ (ರೂಢಿ). [ ಸಂ. ]

**ಗೃಹಸ್ಥಧರ್ಮ** (ನಾ). ಗೃಹಸ್ಥನು ಆಚರಿಸಬೇಕಾದ ಧರ್ಮ,-ಕರ್ತವ್ಯ : ಶಾಂತಾತ್ಮ ಮದುವೆನಿಲ್ ನೀನಿಂತೆನ್ನ ಗೃಹಸ್ಥಧರ್ಮದಿಂದಂ ನೀನೆಂದಂತೆ ಸಲೆ ನೆಗಟ್ ಜಗತೀಸಂತತಿ ನಿಲೆ ನಿನಗೆ ಧರ್ಮಸಂತತಿ ನಿಲ್ಕುಂ (ಆದಿಪು. ೮-೧೩) ; ಬ್ರಹ್ಮಚಾರಿಧರ್ಮ, ಗೃಹಸ್ಥಧರ್ಮ, ವಾನಪ್ರಸ್ಥಧರ್ಮ, ಯತಿಧರ್ಮ ಇವು ಆಶ್ರಮಧರ್ಮಗಳು (ಆರ್ಯಧ. ೧೧) ; ಗೃಹಸ್ಥಧರ್ಮ ಮತ್ತು ಸನ್ಯಾಸಧರ್ಮ ಇವೆರಡರಲ್ಲಿ ವೈದಿಕಧರ್ಮವು ಗೃಹಸ್ಥಧರ್ಮಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡುವುದು (ಸಾಹಿಸ. ೧೭೦). [ ಗೃಹಸ್ಥ + ಧರ್ಮ ]

**ಗೃಹಸ್ಥಾಶ್ರಮ** (ನಾ). ಬ್ರಹ್ಮಚರ್ಯೆ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸ ಎಂಬ ನಾಲ್ಕು ಆಶ್ರಮಗಳಲ್ಲಿ ಒಂದು ; ಸಾಂಸಾರಿಕಜೀವನ : ಸಂದ ನಿಗಮಾನುಷ್ಠಾಣಮಂ ಮಾಡಲಾ ಕೃತಕೃತ್ಯಾತ್ಮಕನೀ ಧರಿತ್ರಿಗೆ ಪವಿತ್ರಂ ತದ್ಗೃಹಸ್ಥಾಶ್ರಮಂ (ಕಇಆ. ೩-೨-೯೦ ; 1058) ; ಇದರಿಂದ ಛಾಂದೋಗ್ಯೋಪನಿಷತ್ತು ಗೃಹಸ್ಥಾಶ್ರಮಕ್ಕೆ ಸೇರಿದುದು (ಹಿಂದಸಾ. ೦೫೫). [ ಗೃಹಸ್ಥ + ಆಶ್ರಮ ]

**ಗೃಹಸ್ಥಿಕೆ** (ನಾ). ೧. ಗೃಹಸ್ಥನ ಧರ್ಮ ; ಮನೆವಾರ್ತೆ : ಅಲ್ಲಿ ಗೃಹಸ್ಥಿಕೆ ಯೆಂತೆಂದೊಡೆ (ಶಾಸ್ತ್ರಟೀ. ೫೩-೯) ; ದಿನಂಪ್ರತಿಯ ಸಣ್ಣಪುಟ್ಟ ಗೃಹಸ್ಥಿಕೆಯ ಕರ್ತವ್ಯಪಾಲನೆ ಮಾಡುತ್ತಿರುವುದು ಇದೇ ಮೊದಲಾದ ಸಂಗತಿಗಳಿಗೆ ಅವನು ಇನ್ನು ಮೇಲೆ ಮನಗೊಡತಕ್ಕವ (ಇಪ್ಪಳ. ೨೭೯) ; ಗೃಹಸ್ಥಿಕೆಯ ವಿಶ್ವಾಸವು ನನ್ನಲ್ಲಿ ಇನ್ನೂ ಹುಟ್ಟಿತ್ತಿಲ್ಲ (ಜಯಂತ. ೧೭೪). ೨. ಒಳ್ಳೆಯ ನಡತೆ ; ಸಂಭಾವಿತತನ ; ಸಭ್ಯತೆ: (ಕ). [ ಗೃಹಸ್ಥ + - ಇಕೆ ]

**ಗೃಹಸ್ಥೂಣ** (ನಾ). ಮನೆಯ ಕಂಭ,-ಸ್ತಂಭ. [ ಗೃಹ + ಸ್ಥೂಣ ]

**ಗೃಹಸ್ಥೆ** (ನಾ). = ಗೃಹಿಣಿ : ಇರುತ ದೇವಬ್ರಾಹ್ಮರನು ತಾ ನಿರುತ ಸತ್ಕರಿಸುತಲಂತಃಪುರದಲೆಸೆಯೆ ಗೃಹಸ್ಥೆಯೆನಿಸುವಳರಸ ಕೇಳೆಂದ (ಕುವ್ಯಾಉ. ೪-೭೯). [ ಸಂ. ಗೃಹಸ್ಥಾ ]

**ಗೃಹಾಂಗ** (ನಾ). [ ಜೈನ ] ಹತ್ತುಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; ಬಗೆಬಗೆಯ ಮನೆಗಳನ್ನು ಕೊಡುವ ಕಲ್ಪವೃಕ್ಷ : ಎಸೆವ ಪವಡಿಸುವ ಮನೆ ಚಿತ್ರಸಾಲೆ . . . ಗುಣನೆಸಾಲೆ ಎಂಬಿನಿತುಮಂ ಗೃಹಾಂಗಂ ಕುಡುಗುಂ (ಶಾಂತಿಪು. ೬-೧೦೭) ; ಗೃಹಾಂಗಮೆಂಬುದು . . . ವಿವಿಧ ಗೃಹವಿಶೇಷಂಗಳನೀವುದು (ಚಾವುಂಪು. ೮). [ ಗೃಹ + ಅಂಗ$_1$ ]

**ಗೃಹಾಂಗಣ** (ನಾ). ಮನೆಯ ಅಂಗಳ,-ಆವರಣ : " ಗೃಹಾಂಗಣಮನು ಡಿಯುತ್ತ ಚತ್ವರಮೆಂಬುದು " (ಮಂಗರಾ. ೧೪೦-೧೭) ; ಒರ್ವಳನಂಗ ರಾಜ್ಯಲಕ್ಷ್ಮೀವಿಭವಂ ಗೃಹಾಂಗಣದ ಮುಂದೆಸೆದಿರ್ದಪೊಲೊಪ್ಪಿ ತೋಱಿದಳ್ (ಶಾಂತಿಪು. ೮-೮೩) ; ತನ್ನದಟಿಂದೆ ಮಾಣದೆ ಗೃಹಾಂಗಣಮಂ ಪೊಱಮಟ್ಟು ಪೋಪಿನಂ (ಜಗವಿ. ೩-೩೭). [ ಗೃಹ + ಅಂಗಣ ]

**ಗೃಹಾಂತರಾಳ** (ನಾ). ಮನೆಯ ಒಳಭಾಗ ; ಒಳಮನೆ : ಆ ಮಹಾತ್ಮಂ ಸಕಲದುರಿತಹರಣಕರಣಕಾರಣ ತಪಶ್ಚರಣಪರಿಣತಾಂತರಂಗನಾಗಿ ತದ್ಗೃಹಾಂತರಾಳದಿಂ ಪೊಱಮಟ್ಟು ಪೋದೊಡೆ (ಸುಕುಮಾ. ೦೦-೮೩ ವ).
[ ಗೃಹ + ಅಂತರಾಳ ( = ಅಂತರಾಲ) ]

**ಗೃಹಾಕ್ಷಿ** (ನಾ). ಬೆಳಕಿಂಡಿ ; ಗವಾಕ್ಷ : ಕಂದರ್ಪ ತಜ್ಜನನಿ ಮಗ್ಗುಲೊಳು ಮಿರುಗುತಿರಲವನು . . . ವರಹಸ್ತದಿಂ ಮಿಸುಗಲೀಸದೆ ಪಿಡಿದೆತ್ತಿ ವರಗೃಹಾಕ್ಷಿಯಲಿ ಪೊರಮಟ್ಟು ಮಾರುತಮಾರ್ಗಮಡರ್ದು (ನವಮೋ. ೦೦-೩೭). [ < ಸಂ. ಗೃಹಾಕ್ಷ ]

**ಗೃಹಾಜಿರ** (ನಾ). = ಗೃಹಾಂಗಣ : " ಗೃಹಾಜಿರಂ ಪ್ರಾಂಗಣಂ " (ವಸ್ತುಕೋ. ೪೭-೧೦). [ ಗೃಹ + ಅಜಿರ ]

**ಗೃಹಾಧಿದೇವತೆ** (ನಾ). ಮನೆಯ ದೇವರು ; ಕುಲದೇವರು : ಕಿಲದೊಳೆ ಕಿಟ್ತು ಸಾರ್ಚಿದ ಕೃಪಾಣದ ಕರ್ಪು . . . ಕೋಮಲದೇಹದ ಕೆಂಪು ನಾಡೆಯುಂ ನಲವನಿಳಾಧಿಪಂಗೆ ನೆಲೆವೆರ್ಚಿಸಿದತ್ತು ಗೃಹಾಧಿದೇವತಾ ವಿಲಸದಪಾಂಗದೊಳ್ ನೆರೆದು ಮೂದೆಱೆದೊಪ್ಪುವ ಬಣ್ಣದಿಂದಂ (ಚಂದ್ರಪು. ೩-೦೦೨). [ ಗೃಹ + ಅಧಿದೇವತೆ ]

**ಗೃಹಾಧಿಪ** (ನಾ). = ಗೃಹಪತಿ. [ ಗೃಹ + ಅಧಿಪ ]

**ಗೃಹಾಧಿವಾಸ** (ನಾ). ೧. ಮನೆಯಲ್ಲಿ ವಾಸಮಾಡುವಿಕೆ. ೨. ಮನೆಯೊಳಗೆ ಕಲ್ಪಿಸಿರುವ ಸುವಾಸನೆ,-ಸೌರಭ,-ಪರಿಮಳ : ವಾಸವಪುರ ವಿಂದಱೀ ವಿನ್ಯಾಸಮನಿದಱೀ ಗೃಹಾಧಿವಾಸಮನಿದಱೀ ದೆಸೆಯನಿದಱೀ ನೆರೆದ ವಿಲಾಸಮನಿದಱೀ ಬೆಡಂಗನವಗಯಿಸುಗುಮೋ (ಶಾಂತಿಪು. ೩-೮).
[ ಗೃಹ + ಅಧಿವಾಸ$_1$ ]

**ಗೃಹಾಧ್ಯಕ್ಷ** (ನಾ). = ಗೃಹಮಹತ್ತರ : ಗೃಹಾಧ್ಯಕ್ಷನಿಂತೀ ರವಂ ದೇವಕಿ ಪೆತ್ತಾ ಕೂಸಿನೊಂದಟ್ಟಿಯ ದನಿಯನೆ ಕೇಳ್ದಲ್ಲಿಗೆಯ್ತಂದು ಕಂಸಂ (ಜಗವಿ. ೩-೦೩). [ ಗೃಹ + ಅಧ್ಯಕ್ಷ ]

**ಗೃಹಾಭ್ಯಂತರ** (ನಾ). = ಗೃಹಾಂತರಾಳ : ಆತ್ಮೀಯ ಗೃಹಾಭ್ಯಂತರ ಪ್ರಶಸ್ತಪ್ರದೇಶಂಗಳೊಳಂ . . . ಅರ್ಹತ್ಪ್ರತಿಮೆಗಳ ನಿಱಿಸಿ (ಆದಿಪು. ೦೫-೦೭ ವ). [ ಗೃಹ + ಅಭ್ಯಂತರ ]

**ಗೃಹಾರಾಮ** (ನಾ). ಮನೆಯ ಸುತ್ತಿನ ತೋಟ ; ಕೈತೋಟ : " ಗೃಹಾರಾಮಃ, ನಿಷ್ಕುಟಃ-೨ ಮನೇ ಬಳಿ ಇರುವ ತೋಟ, ಹಿತ್ತಲ ತೋಟ, ಅಂಗಳತೋಟ, ಮುಂಗಡೆತೋಟ " (ಸಿದ್ಧಾಂತಿ. ೯೭).
[ ಗೃಹ + ಆರಾಮ$_1$ ]

**ಗೃಹಾವಗ್ರಹಣಿ** (ನಾ). ಹೊಸ್ತಿಲು : " ಗೃಹಾವಗ್ರಹಣೀ, ದೇಹಲೀ-೨ ಹೊಸ್ತಲ ಹೆಸರುಗಳು, ಬಾಗಿಲ ಹೊಸ್ತಲು " (ಸಿದ್ಧಾಂತಿ. ೯೦).
[ ಸಂ. ಗೃಹಾವಗ್ರಹಣೀ ]

**ಗೃಹಾಶ್ರಮ** (ನಾ). = ಗೃಹಸ್ಥಾಶ್ರಮ: ಗೃಹಾಶ್ರಮಂ ಸುಖಮನೀಗುಮೆ ಕಾಗುಮೆ ಪೇಟು ತಪೋಧನಾ (ಜೀವಸಂ. ೩೫-೦೭). [ ಗೃಹ+ಆಶ್ರಮ ]

**ಗೃಹಿ** (ನಾ). = ಗೃಹಸ್ಥ : ಮುನಿಗಳಾದೆವಮಗು ದುಃಖವಿಂತಿರೆ ಗೃಹಿಗಳಣಾಗಿಯು ಕಳುಹಿ ಸಹಿಸಬಲ್ಲರೆ (ಶಾಕುಂತ. ೩೨ ೬೭೬) ; ಗೃಹಿಯಾಗಿ ಸಹ ಸಂದಿತಿಂದಿಗಿಪ್ಪತ್ತೈದು ಅದರಿನಿಮ್ಮಡಿಸಿದೆ ಹರ್ಷ (ಇಂಜಾಪ. ೫೬-೭೦). [ಸಂ. ಗೃಹಿನ್]

**ಗೃಹಿಣಿ** (ನಾ). ಮನೆಯ ಒಡತಿ ; ಯಜಮಾನಿ ; ಹೆಂಡತಿ : "ದಾರಂ ಕಳತ್ರಂ ಗೃಹಂ ಗೃಹಿಣಿ . . . ಮಹಿಳೆಯೆನೆ ಹೆಂಡಿತಿಗೆ ನಾಮಮಕ್ಕುಂ" (ಮಂಗರಾ. ೯೦-೬); ತಾನೇಕಕಾಲದೊಳಾವಳು ಮೆರೆವಳು ಅಳಾಗಿ ಅರಸಿತಿಯಾಗಿ ಅವಳೆಯೆ ನಿಜವಾದ ಗೃಹಿಣಿಯೆಂದೆನಿಪಳು ಪತಿಗೆ ತಾನನುಕೂಲೆಯಾಗಿ (ಇಂಜಾಪ. ೮೯೦-೩೯) ; ನಮ್ಮ ಹೆಣ್ಣುಮಕ್ಕಳು ಆದರ್ಶಗೃಹಿಣಿಯರಾಗಿದ್ದಾರೆ; ಆಗುತ್ತ ಬಂದಿದ್ದಾರೆ (ಕನ್ನಜಾ. ೪೨). [ಸಂ. ಗೃಹಿಣೀ]

**ಗೃಹಿಣೀಪದ** (ನಾ). ಪತ್ನಿಯ ಅಧಿಕಾರ ; ಮನೆಯ ಒಡತಿಯಾಗಿರುವಿಕೆ ; ಯಜಮಾನಿಯ ಸ್ಥಾನ : ನನ್ನನ್ನು ಯಾವ ಗೃಹಿಣೀಪದದಿಂದ ನೀಚನಾದ ನೀನು ಒಮ್ಮೆ ಭ್ರಷ್ಟಗೊಳಿಸಿರುವೆಯೋ, ಆ ಪೂಜ್ಯಪದವು ಜನ್ಮಜನ್ಮಾಂತರದಲ್ಲಿಯೂ ನನಗೆ ದುರ್ಲಭವಾಗಿಬಿಟ್ಟಿತು (ಅಂಬಿಕೆ. ೦೬). [ಸಂ. (ಗೃಹಿಣೀ + ಪದ)]

**ಗೃಹೀತ** (ಗು). ೧. ಹಿಡಿದ ; ಸ್ವೀಕರಿಸಿದ ; ಹೊಂದಿದ : ಗೃಹೀತಧರ್ಮನುಂ ನಿಗ್ರಹೀತಾಶೇಷದೋಷನುಮಾಗಿ ನಿಜರಾಜಧಾನಿಗೆ ವಂದು (ಶಾಂತಿಪು. ೬-೬೮ ವ); ಆ ಮಹಾವನಂ . . . ಕ್ಷೇತ್ರಾರ್ಕರ್ಷದಂತೆ ಪೋತ್ರಿಪೋತ್ರಾಹತ ಧರಣಿತಳಮುಂ ಗೃಹೀತಗೋಲಾಂಗೂಲಮುಂ (ಚಂದ್ರಪು. ೫-೫೨ ವ). ೨. ತಿಳಿದ ; ಗ್ರಹಿಸಿದ. (ನಾ). ೩. ಸ್ವೀಕರಿಸಬಹುದಾದುದು ; ಒಪ್ಪಿಕೊಳ್ಳಬಹುದಾದುದು : ಅವುಗಳಲ್ಲಿ ಇರುವ ಆಧಾರಗಳು ಅಸ್ಪಷ್ಟವಾಗಿದ್ದು ಗೃಹೀತವಾಗಲಾರವು (ದ್ರಾವಿವಿ. ೨೭೦). ೪. ಅಭಿಪ್ರಾಯ ; ಗ್ರಹಿಕೆ ; ಅನಿಸಿಕೆ : ರಾಘವಾಂಕನ ಗೃಹೀತವನ್ನೊಪ್ಪಿಕೊಂಡು ನೋಡಿದರೆ ಕೆಲವುಭಾಗಗಳಲ್ಲಿ, ವಿಶೇಷವಾಗಿ ಮೊದಲ ಸಂಧಿಗಳಲ್ಲಿ ಇದು 'ಸೊಗಸಿನ ಸುಗ್ಗಿ, ರಸದ ಮಡು' ವಾಗಿದೆ (ಕಸಾಪ. ೦೬೨); ವ್ಯಾಖ್ಯಾಕಾರರು ಕೂಡ ತಮ್ಮ ವಿವರಣೆಗಳಲ್ಲಿ . . . ವೃತ್ತಿಭಾಗವೇ ಒಂದು ಸ್ವಯಂಪೂರ್ಣಗ್ರಂಥವೆಂದೂ ಕಾರಿಕಾಭಾಗವೇ ಬೇರೆ ಸ್ವಯಂಪೂರ್ಣ ಗ್ರಂಥವೆಂದೂ ಗೃಹೀತ ಹಿಡಿದು . . . ಸ್ಪಷ್ಟಪಡಿಸುತ್ತಿದ್ದರು (ಧ್ವನ್ಯಾಲೋ. XXV, ೬೮೦೪). [ಸಂ.]

**ಗೃಹೀತದಿಶ** (ನಾ). ಭಯದಿಂದ ಓಡಿಹೋಗುವವನು ; ಹೆದರಿ ದಿಕ್ಕಾಪಾಲಾಗಿ ಓಡುವವನು : "ನಷ್ಟಃ, ಗೃಹೀತದಿಶ್, ಕಾಂದಿಶೀಕಃ, ಭಯದ್ರುತಃ-ಈ ೪ ದೆಸೆಗೆಟ್ಟವಂ" (ಹಲಾಯು. ೭೯-೩೨೫). [ಗೃಹೀತ + ದಿಶ]

**ಗೃಹೀತೇಶಿತ್ವ** (ನಾ). = ಗೃಹೀತೇಶಿತ್ವಕ್ರಿಯೆ : ಗೃಹೀತೇಶಿತ್ವಮುಂ ಪ್ರಶಾಂತಿಯುಂ . . . ಅಪ್ಪಯ್ವತ್ತುಮೂರು ಗರ್ಭಾನ್ವಯಕ್ರಿಯೆಯೊಳು (ಚಾವುಂಪು. ೨೨೯). [ಗೃಹೀತ + ಈಶಿತ್ವ]

**ಗೃಹೀತೇಶಿತ್ವಕ್ರಿಯೆ** (ನಾ). [ಜೈನ] ಐವತ್ತುಮೂರುಂ ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು "ಧರ್ಮದೊಳು ದೃಢನಾಗಿ ಗೃಹಸ್ಥಾಚಾರ್ಯನುಂ ವರ್ಣೋತ್ತಮನುಮೆನಿಸಿ . . . ತನ್ನುನ್ನತಿಯಂ ನೆಗಟ್ಟಿ ಸುಶ್ರುತನುಂ ನಿಸ್ತಾರಕೋತ್ತಮನುಮನಾರ್ಹನುಮೆನಿಸುವುದು ಗೃಹೀತೇಶಿತ್ವಕ್ರಿಯೆ" (ಚಾವುಂಪು. ೨೨೪). [ಗೃಹೀತೇಶಿತ್ವ + ಕ್ರಿಯೆ]

**ಗೃಹೋಪಕಂಠ** (ನಾ). ಮನೆಯ ಹತ್ತಿರ,-ಸಮೀಪ : ಗೃಹೋಪಕಂಠ ವನಭೂಜಮೆ ಕಲ್ಪಮಹೀಜದೊಪ್ಪಮಂ ತಳೆಯೆ (ಚಂದ್ರಪು. ೧೧-೭೨). [ಗೃಹ + ಉಪಕಂಠ]

**ಗೃಹೋಪಕರಣ** (ನಾ). ಗೃಹಕೃತ್ಯಕ್ಕೆ ಬೇಕಾಗುವ ಸಾಮಾನು ; ಮನೆಯ ಮುಟ್ಟು,-ಸಾಧನ : ಕುರ್ಚಿ, ಮೇಜು, ಅಲ್ಮೈರ, ಮಂಚ ಮುಂತಾದ ಗೃಹೋಪಕರಣಗಳಿದ್ದವು (ಭಾರದ. ೧೧). [ಗೃಹ + ಉಪಕರಣ]

**ಗೃಹೋಪಸ್ಕರ** (ನಾ). = ಗೃಹೋಪಕರಣ : ಕಪಿಲವಸ್ತುವಿನ ಅರಮನೆಯಲ್ಲಿ . . . ರಮಣೀಯ ಗೃಹೋಪಸ್ಕರಗಳು (ಶ್ರೀಂಜಧ್ಯ. ೫೫). [ಗೃಹ + ಉಪಸ್ಕರ]

**ಗೃಹ್ಯ** (ಗು). ೧. ಮನೆಗೆ ಸಂಬಂಧಪಟ್ಟ ; ಗೃಹಕ್ಕೆ ಸೇರಿದ. ೨. ತೆಗೆದುಕೊಳ್ಳತಕ್ಕ ; ಹಿಡಿಯತಕ್ಕ. ೩. ಅಂಗೀಕರಿಸತಕ್ಕ ; ಪಡೆಯತಕ್ಕ. ೪. ಸ್ವೀಕರಿಸಿದ. ೫. ಒಂದು ಕಡೆಗಿರುವ ; ಪಕ್ಷಪಾತಿಯಾದ. (ನಾ). ೬. ಗೃಹಸ್ಥನು ಮನೆಯಲ್ಲಿ ಆಚರಿಸಬೇಕಾದ ಜಾತಕರ್ಮ, ನಾಮಕರಣ, ವಿವಾಹ ಮೊದಲಾದ ಶಾಸ್ತ್ರೋಕ್ತ ಕಾರ್ಯ,-ಕರ್ಮ,-ಸಂಸ್ಕಾರ. 'ಗೃಹ್ಯಸೂತ್ರ' ಪರಾ ೭. ಮನೆಯಲ್ಲಿ ಸಾಕಿದ ಹಕ್ಕಿ, ಮೃಗ ಮೊದಲಾದುವು. ೮. ವಶವರ್ತಿಯಾದವನು ; ವಿಧೇಯ. ೯. ಗುದದ್ವಾರ. [ಸಂ.]

**ಗೃಹ್ಯಸೂತ್ರ** (ನಾ). ಗೃಹಸ್ಥನು ಮನೆಯಲ್ಲಿ ಆಚರಿಸಬೇಕಾದ ಜಾತಕರ್ಮವೇ ಮೊದಲಾದ ಕರ್ಮಗಳ ರೀತಿಯನ್ನು ವಿವರಿಸುವ ಧರ್ಮಶಾಸ್ತ್ರಗ್ರಂಥ : ಈ ಸೂತ್ರಗಳಲ್ಲಿ 'ಗೃಹ್ಯಸೂತ್ರ'ಗಳೆಂತಲೂ, 'ಧರ್ಮಸೂತ್ರ'ಗಳೆಂತಲೂ ಎರಡು ಭಾಗಗಳಾಗಿರುತ್ತವೆ (ಸುಜ್ಞಾಜಂ. ೪); ಗೃಹ್ಯಸೂತ್ರಗಳೂ ಶ್ರೌತಸೂತ್ರಗಳೂ ಪ್ರತಿಮೆಯ ಅಸ್ತಿತ್ವಕ್ಕೆ ಆಧಾರವಾಗಿವೆ (ಭಾರದ. ೫೦೦). [ಗೃಹ್ಯ + ಸೂತ್ರ]

**ಗೃಹ್ಯಾಗ್ನಿ** (ನಾ). ಮದುವೆಯಾದಂದಿನಿಂದ ಯಜಮಾನನು ಮನೆಯಲ್ಲಿ ಸ್ಥಿರವಾಗಿ ಕಾಪಾಡಿಕೊಂಡಿರಬೇಕಾದ ಅಗ್ನಿ ; ಔಪಾಸನ. ಸ್ಥಾಲೀಪಾಕ ಮೊದಲಾದ ಕರ್ಮಗಳಿಗೆ ಸಾಧಕವಾದ ಅಗ್ನಿ: ಧರ್ಮದೃಷ್ಟಿಯಲ್ಲಿ ವಿವಾಹಾಗ್ನಿಯೇ ಗೃಹ್ಯಾಗ್ನಿಯು (ಆರ್ಯಧ. ೧೯೨). [ಗೃಹ್ಯ + ಅಗ್ನಿ]

**ಗೆ** (ಪ್ರ). ಒಂದು ಭಾವವಾಚಕ ಪ್ರತ್ಯಯ : ಉದ ಭಾವದೊಳ ಮೆಯುಂ ಗೆ ಕೆ ಮೆಗಳುಂ . . . ಸಮನಿಸುಗುಂ . . . ಗೆಕಾರಕ್ಕೆ – ಉಡುಗೆ, ಪಸುಗೆ, ಪೊಲ್ಗೆ (ಶಮದ. ೨೦೦ ಪ್ರಯೋ).

**ಗೆಂಕು** 'ಗೇಕು' ನೋ.

**ಗೆಂಟಗೆ** 'ಗೊಂಟಿಕೆ' ನೋ.

**ಗೆಂಟಳವಿ** (ನಾ). ದೂರಪ್ರದೇಶ ; ದೂರದ ಸ್ಥಳ : ತುರಿಹದಿಂ ಗೆಂಟಳವಿಗ್ಯೆದಿ ಶೌಚಂಗೆಯ್ದು ಹರಪೂಜೆಯಂ ಮಾಡಿ (ಪಾಸೋಪು. ೫-೬೪). [ಗೆಂಟು + ಅಳವಿ]

**ಗೆಂಟಾಗಿಸು** (ಕ್ರಿ). ದೂರವಾಗುವಂತೆ ಮಾಡು; ಹೋಗಲಾಡಿಸು; ಕಳೆ: ತ್ರಿಭುವನತಿಲಕನ ಮನಮಂ ದಿವಿಜಿಯರ್ ನೆರೆದು ಗೆಂಟಾಗಿಸಿದರ್ (ಅಜಿಪು. ೬-೧೦೨). [ಗೆಂಟಾಗು + – ಇಸು$_3$]

**ಗೆಂಟಾಗು** (ಕ್ರಿ). ೧. ದೂರವಾಗು ; ಎರವಾಗು : ಅಲ್ಲಿರ್ದ ನಿಮ್ಮ ಮನಕ್ಕೆ ಕೊಕ್ಕರಿಕ್ಕೆಯಾಗಿಯುಂ ಪಾಟಿಗೆ ಗೆಂಟಾಗಿಯುಂ ನೆಗಟ್ಟಮಲ್ಲೆಂದು ಪೊಡವಟ್ಟು . . . ಪೋಗೆವೋಗೆ (ಪಂಪಭಾ. ೭-೩೦ ವ); ತರಳತೆಗೆ ಕೂರ್ತು ಲಜ್ಜೆಗೆ ಗೆಂಟಾಗಿ (ಕಾದಂಬ. ೫೭೭) ; ಮನೆಗೆಲ್ಲಂ ಪಗೆಯಾದೆ ನಟ್ಟಿಗೆ ಕರಂ ಗೆಂಟಾದೆನಿಂ ಮೆಚ್ಚದಂಗನೆಯರ್ಗೊಳ್ಳಿದಳಾದೆಂ (ಲೀಲಾವ. ೨-೭೦). ೨. ಕಾಲ ವಿಳಂಬವಾಗು; ತಡವಾಗು: ಮೂವತ್ತೆರಡುಕೋಟಿ ದ್ರವ್ಯಂ ಮನೆಯೊಳಿರ್ದುದಂ ಬಗೆಯದೆ ಪುತ್ರೋತ್ಪತ್ತಿ ಗೆಂಟಾದುದಕ್ಕೆ ಚಿಂತಿಸಿ (ಬಂಹರಿ. ೩-೩ ವ). [ಗೆಂಟು + ಆಗು$_1$]

**ಗೆಂಟಿಗೆ** 'ಗೊಂಟಿಕೆ' ನೋ.

**ಗೆಂಟಿಗೆಗಟ್ಟು, ಗೌಟಿಕೆಗಟ್ಟು** (ಕ್ರಿ). ೧. ಸೀಮಂತಕರ್ಮವನ್ನು ಮಾಡು : ಆಪ್ತಬಂಧುಜನಮಚ್ಚರಿಯೆಂದೆನಲುತ್ಸವಂ ಮಿಗಲ್ ತನ್ನಯ ಚಿತ್ರವಲ್ಲಭೆಗೆ

ಗೆಂಟಿಗೆಗಟ್ಟಿದನಸರ್ವರಾಧಿಪಂ (ದಶಕು. ೧-೭೭). **ಗೌಟಿಕೆಗಟ್ಟು: ೨.** ಬಸಿರಿಯಾದಾಗ ಸಂಪ್ರದಾಯದಂತೆ ತಾಯಿತವನ್ನು ಧರಿಸು : ಗರ್ಭವ ತಾಳಿ ಗೌಟಿಕೆಗಟ್ಟಿ ಚೆಲುವಾಗರ್ಭಕನನು ಪಡೆದಾನು ಕಾರ್ಬೊನ್ನ ತೊಟ್ಟಿಲೊಳಗೆ ತೂಗುವ ಭಾಗ್ಯದದ್ಭುತವಿನ್ನೆಂದಿಗಹುದೊ (ಜ್ಞಾನಚ. ೨-೫೯).
[ ಗೆಂಟಿಗೆ (< ಗೊಂಟಿಕೆ) + ಕಟ್ಟು$_1$ ]

**ಗೆಂಟಿಸು** (ಕ್ರಿ). ದೂರವಾಗಿಸು : ಸವಿನುಡಿವ ಬೇಂಟವ್ವೆಗುಳ್ಕಾತುರದ ಪೊಯ್ಗಳುಲಿಗೊರಲ್ಗೆಂಟಿಸಿದ ಲಜ್ಜೆ . . . ಪೆಂಟಣಿಸೆ ಪರವೆ ಬಿಗಿಯಪ್ಪೆ ಮೆಟ್ಟಿದಳು (ಸೌಂದಪು. ೯-೧೧) ; ಆ ವೀರಭದ್ರದುರ್ಗದ ನೆರವಿಂ ಗೆಂಟಿಪ ಡೆಂಕಣಕೋಟೆಯು ನಂಟಿಸಿಯಾ ರಾಯಗೋಂಟಿಯೆಂ ಉಂಡಿಸಿದಂ (ಚಿಕವಿ. ೨-೧೨೯). [ ಗೆಂಟು + – ಇಸು$_3$ ]

**ಗೆಂಟು** (ನಾ). ೧. ದೂರ : "ಗೆಂಟೆಂದು ದೂರಂ" (ಕಶಸಾ. ೨೭-೫೮೧) ; "ಗೆಂಟೆನಲ್ಕತಿದೂರಂ" (ಭಾರನಿ. ೧೮) ; ಸ್ವಾಧ್ಯಾಯದೊಳ್ ತಗುಳ್ದಿರ್ದೊರಂ ಸಂಛನ್ನಮಪ್ಪಡವಿಯ ಮಟಿಯೊಳ್ ಗೆಂಟಟಿಂದಂ ಲಲಿತಘಟಿ ಕಂಡು (ವಡ್ಡಾರಾ. ೯೭-೪) ; ಮನದಿಂ ಬೇಗಂ ಬರ್ಪಳ ದಿಟ್ಟಿಗಳಾಗಳೆ ಪತ್ತಿದುವು ಗೆಂಟಟಿಯೊಳ್ ಮಾರುತಿಯಂ (ಪಂಪಭಾ. ೩-೧೩) ; ಭರತ ಶತ್ರುಘ್ನರಂ ರಾಮಸ್ವಾಮಿ ಗೆಂಟಟಿಯೊಳೆ ಕಂಡು (ಪಂರಾಮಾ. ೧೫-೨೭ ವ) ; ನಿಮಗಾ ಧರ್ಮದ ಪೋದ ಪೊಲಂಬದು ನರ್ಮದೆಯಿಂ ಗೆಂಟದೇಕೆ ಕೇಳ್ದಪೆಯೆಮ್ಮಂ (ಯಶೋಚ. ೧-೭೪) ; ನಂಟರು ಸರಿಗಂಡರೊಡಗೂಡಬಹುದ ವರ್ಬಂಟರಂದದಿ ಕಾಣುವಾಗ ಗೆಂಟನೊಳಿಹುದೆ ಲೇಸು (ಭರಚ. ೩೯-೭೩). ೨. ವ್ಯತ್ಯಾಸ ; ಭೇದ ; ಅಂತರ : ಉಂಟಿಲ್ಲೆಂಬೀ ಯೆರಡಱ ಗೆಂಟಂ ಪರಿಹರಿಸಿ ಮೂಱನೆಯ ಪೊಸವಗೆಯಂ ಗಂಟಿಕ್ಕಿ ನಿರ್ವಿಶೇಷದೊಳೆಂಟಿಪುದೀ ಜಗಮನಮರೆ ತಿಮಿರಾದ್ವೈತಂ (ಚಿಕವಿ. ೬-೧೪) ; ಕಂದರ್ಪನೆಣಿಕೆಗಂ ನಿನ್ನೆಣಿಕೆಗಮಿನಿತುಂ ಗೆಂಟಿಲ್ಲಮದಱಿಂದೇಕಹೃದಯರೆನಿಸಿ ಮುಂತಣ್ಗೆ ಪೋಪಂ (ಚಿಕವಿ. ೬-೭೯ ವ). ೩. ಪರಸ್ಪರ ವಿರೋಧ ; ಹೊಂದಾಣಿಕೆ ಇಲ್ಲದಿರುವಿಕೆ : ಬಸನಿಯಿಂ ಗೆಲ್ಲಕಾಱನ ನೆಗಟ್ತೆಗೆ ಕೀಳಿಗೆ ನಾಡೆ ಗೆಂಟು (ಆದಿಪು. ೧೨-೧೮). ೪. ನಸುದೂರ ; ಅನತಿದೂರ : ಅಂತಿರ್ದಿಳಂ ಗೆಂಟನೊಳ್ಕಂಡು ವಿನಯರತ್ನಾಕರಂ ಸಾಷ್ಟಾಂಗಪ್ರಣತನಾಗೆ (ಕಾದಂಪೂ. ೪೯೮) ; ಬೇಂಟೆಗೆ ನಡೆಯೆ ಯಶೋಮತಿ ಗೆಂಟಟಿಯೊಳಾರಣ್ಯವಾಸಿಗಳ್ ನಿಲೆ ಕಂಡು (ಯಶೋಚ. ೪-೪೨) ; ಗೆಂಟಟಿಯೊಳಿರ್ದುಳ್ಳಲರ್ಗಂಪಿಂದುಱಿದಂಟಿ ಬಗೆಯು ಸೂಱಿಯ ಕೊಂಬುವೊಲಾ ತೋಂಟಗೆಲದೊಳೆಸೆದುವು ಕೇತಕಿಕಂಟಕಿ ತೊಲಗೆಸೆಯಲ್ (ಉದ್ಭಟ. ೨-೧೧೯).

**ಗೆಂಟುಗೆಂಟು** (ದ್ವಿರುಕ್ತಿ) : ಗೆಂಟುಗೆಂಟನೊಳ್ ಪೊಳೆವ ಬಳ್ಳಿಮಿಂಚು ಬೀಸುವಕೈಗೇಣ ಮೈಸಿರಿಯಂತೆ ಕಣ್ಗೆಡ್ಡಮಾದುದು (ರಾಮಾಶ್ವ. ೩-೫). **ಗೆಂಟಿದಂ** = ದೂರದವನು ; ದೂರದಲ್ಲಿರುವವನು ; ದೂರಗತ : ಇದು ಚಕ್ರವ್ಯೂಹಮಿಾ ವ್ಯೂಹಮನೊಡೆವದಟು ಪಾರ್ಥನಂತಾತನುಂ ಗೆಂಟಿದನೆಮ್ಮಾ ನಾಲ್ವರುಂ ಭೇದಿಸಲಱಿಯೆವಿದಂ ಕಂದ ನೀಂ ಬಲ್ಲೆ ಪೇೞ್ (ಪಂಪಭಾ. ೧೧-೯೭). **ಗೆಂಟುಗೆಂಟಾಗು** – ದೂರದೂರವಾಗು : ರಥವನ್ನು ಮನೋರಥದಂತೆ ಗೆಂಟುಗೆಂಟಾಗೆ (ಅಜಿಪು. ೨-೪೮) ; ಉದ್ಭ್ರಾಂತ ವಿದ್ಯಾಧರಚಕ್ರಂ ಗೆಂಟು ಗೆಂಟಾಗಿರಿಸೆ (ಗದಾಯು. ೮-೨೦). **ಗೆಂಟುಪೋಗು** = ದೂರ ಹೋಗು ; ದೂರಕ್ಕೆ ನಡೆ : ಅನ್ನೆಗಮಾತಱುಪಟ್ಟಿಯುಮಲ್ಲಿಂ ದೆರ್ದು ನಾಡೆ ಗೆಂಟುಪೋದತ್ತು (ವಡ್ಡಾರಾ. ೧೧-೩೨೩). **ಗೆಂಟುಮಾಡು** = ದೂರವಮಾಡು ; ಬಿಟ್ಟುಬಿಡು ; ತ್ಯಜಿಸು : ಪೆಂಡಿರ್ಗಳಿಪುವ ಬಂಟನಂ ಕವರಿಸುವ ನಂಟನಂ ಗೆಂಟುಮಾಡುವಂತೆ ಮಿಥ್ಯಾದೈವಂ ಮಿಥ್ಯಾಲಯಂ . . . ಮಿಥ್ಯಾವ್ರತಮೆಂಬೀ ಷಡಾಯತನ ಸೇವೆಯಂ ಗೆಂಟುಮಾಡುವುದುಂ (ಧರ್ಮಾಮೃ. ೫-೦೨೫) : ನಂಟರ ಗೆಂಟುಮಾಡದೆ ನಡೆ ತುಂಟರ ಗಂಟಲನೊತ್ತಿ ಕಳೆವುದು (ಅನಂಚ. ೩-೧೯೭).

**ಗೆಂಟುಗೆ** ' ಗೊಂಟಿಕೆ ' ನೋ.

**ಗೆಂಡು** ' ಗಿಂಡಂ ' ನೋ.

**ಗೆಂಡೆ$_1$** ' ಗಡ್ಡೆ ' ನೋ.

**ಗೆಂಡೆ$_2$** (ನಾ). ಒಂದು ಜಾತಿಯ ಮೀನು. ' ಗೆಂಡೆಮೀನ್ ' ಪರಾ.
[ ದೇ. ‖ ತಮಿ. ಕೆಣ್ಟೈ ; ಮಲ. ಕಣ್ಣ ; ತೆಲು. ಗೆಂಡೆ, ಗಂಡೆ ]

**ಗೆಂಡೆ$_3$** (ನಾ). ಪುರುಷನ ಜನನಾಂಗ ; ಶಿಶ್ನ : (ಕ). [ <ಗಡ್ಡೆ ]

**ಗೆಂಡೆಮೀನ್, ಗೆಂಡೆಮೀನು** (ನಾ). = ಗೆಂಡೆ$_2$ : ಗಱಿಮೀನ್ಸೀಗಂಡಿ ಗೆಂಡೆಮೀನ್ಪವಳವಾಯುಂ ಬಾಳೆಮೀನ್ . . . ಬಣ್ಣಮೀನೆನಿಪಿವೆಲ್ಲಂ ಬೀಳ್ದುವಾ ತಾಣದೊಳ್ (ರಾಜಶೇ. ೫-೧೧೫) ; ಗೆಂಡೆಮೀನಂ ತಂದವಂಗೆ ದಂಡಿಗೆಯನಿಕ್ಕುವರ್ (ಚಿಕವಂ. ೭-೬). **ಗೆಂಡೆಮೀನು :** "ಪಾಟಲಾಸ್ಯಾ–ಗೆಂಡೆಮೀನು" (ಓಷಧಿ. ೯೫). 'ಕಾಗೆಂಡೆ' ಪರಾ.
[ ಗೆಂಡೆ$_2$ + ಮೀನ್$_3$ ]

**ಗೆಂಡೆಮೀನು** ' ಗೆಂಡೆಮೀನ್ ' ನೋ.

**ಗೆಂಡೆಹೊಟ್ಟೆ** (ನಾ). ಒಳಗೆ ಗಡ್ಡೆ ಬೆಳೆದುಕೊಂಡಿರುವ ಹೊಟ್ಟೆ ; ಪ್ಲೀಹಬಾಧೆಯಿರುವ ಹೊಟ್ಟೆ ; ಜಲೋದರ : ಗಂಡಾನ ಕಾಣೇರೋ ಗೆಂಡ್ಹೊಟ್ಟೆ ಮರುವಾನ ಉಂಡೇಳು ಮನೆಯ ತಿರುಗೋನ (ಹಳ್ಳಿಯು. ೧೬೫). [ ಗೆಂಡೆ$_1$ (< ಗಡ್ಡೆ) + ಹೊಟ್ಟೆ$_1$ (< ಪೊಟ್ಟೆ$_1$) ]

**ಗೆಂದಾಳಿ** ' ಕೆಂದಾಳಿ ' ನೋ.

**ಗೆಂದು** (ಕ್ರಿ). ಪ್ರೀತಿಸು ; ಅನುರಾಗದಿಂದ ಕೂಡಿರು : ಉದಾತ್ತ ನಾರಾಯಣಂ ಗೆಂದುತ್ತೆ ಗೆಲ್ದೊಂ (ಮುಂಬರಾ. VI, ೧೮೮ ; ?).
[ < ಕೆಂದು$_2$ ]

**ಗೆಂಧಾಳಿ** ' ಕೆಂದಾಳಿ ' ನೋ.

**ಗೆಗ್ಗೆ, ಗಗ್ಗೆ** (ನಾ). ಕೋಟೆಕಾಳಗದಲ್ಲಿ ಕೋಟೆಯನ್ನು ಉರುಳಿಸಲು ಉಪಯೋಗಿಸುತ್ತಿದ್ದ ಒಂದು ಸಾಧನ ; "ಕೋಟೆಯನ್ನು ಹತ್ತುವ ಸಾಧನವಿಶೇಷ" (ಪ್ರಭಣ್ಣ) : ಕೊತ್ತಳದಂಬುಗಂಡಿಯಿಂದುಡುಗದೆ ಪಾಯ್ವ ಕರ್ಗಣೆಗೆ ಬದ್ದರವೊಡ್ಡಿಪ ಕೋಂಟೆಗಾವಗಂ ಕೆಡಪುವ ಗೆ[ಪಾಠಾಂ. ಗ]ಗ್ಗೆ (ಚಂದ್ರಪು. ೫-೧೦೬) ; ಕಾದುವರ ಗುಣ್ಪುಂ ಕಿಡಿಸಿಯುಂ ಗೆಗ್ಗೆಯಂ ಪೊಯ್ಸಿಯುಂ ದುರ್ಗದ ನಾಯಕನ ಗರ್ವಮಂ ನುರ್ಗಂ ಮಾಡುವಂತೆ ತೆನೆಗಳಂ ನುರ್ಗುಮಾಡಿಸಿಯುಂ (ಪಾರ್ಶ್ವಪು. ೩-೧೩೯ ವ) : ಗೆಗ್ಗೆ ಡೆಂಕಣಿ ಗುಪ್ಪಂ ಪಡಿಗೋಂಟಿಯೆಂಬ ಬಹುಕೋಟಾಯಂತ್ರ ಸಾಮಗ್ರಿ ತಿಂತಿಣಿಗೊಂಡಾಂತಿರೆ ಲಗ್ಗೆಗಾರ್ದು ವಸುಷೇಣಂ ಸಾರ್ದು ಸೂಟ್ಟೈಸಿದಂ (ಅನಂಪು. ೧೧-೮೩). **ಗಗ್ಗೆ :** ಮೇಲಿನ ' ಚಂದ್ರಪು ' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಗೆಜೆಟ್ಟು** (ನಾ). ಸರ್ಕಾರದ ವ್ಯವಹಾರಗಳನ್ನೂ ಆಡಳಿತದಲ್ಲಿ ಬಹಿರಂಗಪಡಿಸುವ ವಿಷಯಗಳನ್ನೂ ಸಾರ್ವಜನಿಕರಿಗೆ ತಿಳಿಯಪಡಿಸಲು ಸರ್ಕಾರದವರು ಹೊರಡಿಸುವ ಪತ್ರಿಕೆ : ಸರ್ಕಾರದವರಿಂದ ಈ ಬಗ್ಗೆ ಗೆಜೆಟ್ಟನಲ್ಲಿ ಇಸ್ತಿಹಾರ್ ಮೂಲಕ ಪ್ರಕಟಿಸಲ್ಪಟ್ಟ . . . ರಾಜಕೀಯ ಪೆನ್ಷನುಗಳು (ಗ್ರಾಮಾಕ. ೩೫). [ ← ಇಂ. Gazette ]

**ಗೆಜ್ಜಗ** ' ಗದರ್ಗು ' ನೋ.

**ಗೆಜ್ಜಲು** ' ಗೆದಲ್ ' ನೋ.

**ಗೆಜ್ಜಲುಭೂಮಿ** (ನಾ). ಗೆದ್ದಲು ಇರುವ ಭೂಮಿ,–ಜಮೀನು : ಅಯ್ಯನವರೊಬ್ಬರದು ಜಮೀನಿತ್ತು, ಗೆಜ್ಜಲುಭೂಮಿ (ಜಂಗೂಲಿ. ೧೦೮).
[ ಗೆಜ್ಜಲು (< ಗೆದಲ್) + ಭೂಮಿ ]

**ಗೆಜ್ಜೆ$_1$, ಗಜ್ಜೆ** (ನಾ). ೧. ಗುಂಡಾಗಿರುವ, ಕಿಣಿಕಿಣಿ ಶಬ್ದಮಾಡುವ ಚಿಕ್ಕಗಂಟೆ ; ಕಿರುಗಂಟೆ : ಮುಂದೆಸೆಯೊಳಂದುಗೆ ಘಲಿರುಘಲಿರೆನೆ ಗೆಜ್ಜೆಗಳು ಮೊರೆಯೆ (ಬಸವು. ೨೪-೪೪). ೨. ಕಿರುಗಂಟೆಗಳಿಂದ

ಮಾಡಿರುವ, ಕಾಲಿಗೆ ಕಟ್ಟಿಕೊಳ್ಳುವ ಒಂದು ಬಗೆಯ ಆಭರಣ: "ತುಲಾಕೋಟಿಃ, ನೂಪುರಃ – ಈ ಗೆಜ್ಜೆ" (ಹಲಾಯು. ೯೨-೪೦೭); ಮಣಿ ಕಿಂಕಿಣಿ ಗೆಜ್ಜೆ ರಕ್ಕೆ ಕುಂಡಲಯುಗಮುತ್ತು . . . ಮನಂಗೊಳೆ (ಅರ್ಧನೇ. ೫-೬೨); ಬಿಡೆವಿನ್ನೀ ಗಿರಿಜೆಯ ಮೆಲ್ಲಡಿಗಳನೆಂದ ಖಿಲವೇದಮುಲಿವಂತೆ ಮಲಂ ನಡೆವೆಡೆಯೊಳಗುರ್ಬಿಂ ಬೊಬ್ಬಿಡುವಂದುಗೆ ಗೆಜ್ಜೆ ಸಜ್ಜನೆಗೆ ಸೊಗಯಿಸುಗುಂ (ಗಿರಿಕ. ೩-೮೯); ಉಲಿವ ಗೆಜ್ಜೆಯ . . . ಪೊಳೆವರಳೆಲೆಯ ಮಿಸುಗುವ ಬಾಲದೊಡಿಗೆಯ ಮಾಯೆಗಿಕ್ಕಿದರು (ಪ್ರಭುಲೀ. ೩-೨೫); ಬಂದನೇನೆ ರಂಗ . . . ಪೊನ್ನಂದುಗೆ ಗೆಜ್ಜೆ ಹೊಳೆ ಹೊಳೆಯುವ ಪಾದವನೂಊತ (ಪುರಂದ. ೨-೭೨-೧). ಗಜ್ಜೆ: (ಶ).

[ದೇ.॥ ತಮಿ. ಕೆಚ್ಚ, ಕೆಚ್ಚೈ; ಮಲ. ಕೆಚ್ಚ; ತುಳು. ಗಜ್ಜೆ, ಗೆಜ್ಜ, ಗೆಜ್ಜೆ; ಕೊಡ. ಗೆಜ್ಜೆ; ತೆಲು. ಗಜ್ಜಯ, ಗಜ್ಜೆ]

**ಗೆಜ್ಜೆ$_2$** (ನಾ). ಕಿಬ್ಬೊಟ್ಟೆಯ ತಳಭಾಗಕ್ಕೂ ತೊಡೆಯ ಮೇಲ್ಭಾಗಕ್ಕೂ ಮಧ್ಯೆ ಇರುವ ಸಂದು; ತೊಡೆಸಂದು: (ಶ). 'ಗಜ್ಜಲು' ಪರಾ.

[←ತೆಲು. ಗಜ್ಜ]

**ಗೆಜ್ಜೆಅಡ್ಡಿಕೆ** (ನಾ). ಒಂದು ಬಗೆಯ ಕಂಠಾಭರಣ; ಸಣ್ಣಸಣ್ಣ ಗೆಜ್ಜೆಗಳನ್ನು ಸೇರಿಸಿ ಮಾಡಿರುವ ಒಂದು ಬಗೆಯ ಕೊರಳ ಒಡವೆ: ಕೊರಳಲ್ಲಿ ಬಂಗಾರದ ಗೆಜ್ಜೆಅಡ್ಡಿಕೆ (ಜೆಳುಮ. ೧೫೭); ಹಿಂದಿನ ಕಾಲದಲ್ಲಿ ಗೆಜ್ಜೆಅಡ್ಡಿಕೆ ಜೋಮಾಲೆ ಇಲ್ಲದೆ ಮದುವೆಯೇ ಆಗುತ್ತಿರಲಿಲ್ಲ (ರೂಢಿ). 'ಗೆಜ್ಜೆಟೀಕೆ' ಪರಾ. [ಗೆಜ್ಜೆ$_1$ + ಅಡ್ಡಿಕೆ]

**ಗೆಜ್ಜೆಕಟ್ಟು** 'ಗೆಜ್ಜೆಗಟ್ಟು' ನೋ.

**ಗೆಜ್ಜೆಕರಡ** (ನಾ). = ಗೆಜ್ಜೆಹಲ್ಲು: (ಶ). [ಗೆಜ್ಜೆ$_1$ + ಕರಡ]

**ಗೆಜ್ಜೆಗಟ್ಟು, ಗೆಜ್ಜೆಕಟ್ಟು** (ಕ್ರಿ). ೧. (ನರ್ತನ ಮೊದಲಾದ ಸಂದರ್ಭಗಳಲ್ಲಿ ಕಾಲಿಗೆ) ಗೆಜ್ಜೆಯನ್ನು ಕಟ್ಟು: ತಲೆಯಿಲ್ಲದ ಕಾಗೆ ನೆಲದಲ್ಲಿ ನಡೆಯಿತ್ತು, ಹುಲಿ ನಲಿದು ನಿಲುಗಿಸಿ ಗೆಜ್ಜೆಗಟ್ಟಿ ನಲಿದಾಡಿತ್ತು (ಆದವ. ೧೫-೩೨). **ಗೆಜ್ಜೆಕಟ್ಟು:** ೨. ಯಕ್ಷಗಾನದಲ್ಲಿ, ಮೊಟ್ಟಮೊದಲು ರಂಗ ಪ್ರವೇಶಿಸುವುದಕ್ಕಾಗಿ ಕಾಲಿಗೆ ಗೆಜ್ಜೆಯನ್ನು ಕಟ್ಟು. ೩. ವೇಶ್ಯೆಯರ ಪದ್ಧತಿಯಂತೆ ವೃತ್ತಿಯನ್ನು ಪ್ರಾರಂಭಿಸಲು ಗೆಜ್ಜೆ ಪೂಜೆಯಲ್ಲಿ ಕಾಲಿಗೆ ಗೆಜ್ಜೆಯನ್ನು ಕಟ್ಟು.

**ಗೆಜ್ಜೆಕಟ್ಟುವವಳು** = ಸೂಳೆ: ಗೆಜ್ಜೆಕಟ್ಟುವವರಿಗಿಂತ ಒಂದು ಬಣ್ಣ ಮೇಲು ಅವಳದು (ಹಹಸ. ೬೭). [ಗೆಜ್ಜೆ$_1$ + ಕಟ್ಟು$_1$]

**ಗೆಜ್ಜೆಗಾರ** 'ಗೆಜ್ಜೆಗಾಱ' ನೋ.

**ಗೆಜ್ಜೆಗಾಱ, ಗೆಜ್ಜೆಗಾರ** (ನಾ). ೧. ಗೆಜ್ಜೆಯನ್ನು ಮಾಡುವವನು: ಬಳೆಗಾಱಂ, ಗೆಜ್ಜೆಗಾಱಂ, ಮಣಿಗಾಱಂ (ಶಮದ. ೧೯೯ ಪ್ರಯೋ). **ಗೆಜ್ಜೆಗಾರ:** ೨. ಶೂದ್ರರಲ್ಲಿ ಒಂದು ಪಂಗಡ: (ಶ).

[ಗೆಜ್ಜೆ$_1$ + –ಕಾಱ]

**ಗೆಜ್ಜೆಗಿಡ** (ನಾ). ಒಂದು ಬಗೆಯ ಸಸ್ಯ: (ಮ್ಯಾಜಿಗ. ೨೫-೪೭೯).

[ಗೆಜ್ಜೆ$_1$ + ಗಿಡ (<ಗಿಡು)]

**ಗೆಜ್ಜೆಗುದಿ** (ನಾ). ಗೆಜ್ಜೆಯಂತಹ ಗುಳ್ಳೆ ಬರುವಂತೆ ಕುದಿಯುವಿಕೆ. P ವಿಶೇಷವಾಗಿ ಆಲೆಮನೆಯಲ್ಲಿ ಕಬ್ಬಿನ ಹಾಲು ಕಾಯುವಾಗಿನ ಒಂದು ಹಂತ: ಒಂದಾನೊಂದು ಸಮಯದಲ್ಲಿ ಮರಳಿ ಗೆಜ್ಜೆಗುದಿ ಹಾಯುತ್ತಿದ್ದ ಒಂದು ದೊಡ್ಡ ಹಂಡೇನೀರನ್ನು ತನ್ನ ಮೇಲೆ ಉರುಳಿಸಿಕೊಂಡು ಸತ್ತುಹೋಗುತ್ತಿದ್ದನು (ಸುಮಜ. ೪).

[ಗೆಜ್ಜೆ$_1$ + ಕುದಿ$_3$]

**ಗೆಜ್ಜೆಗೊಲಸು** (ನಾ). ಗೆಜ್ಜೆಗಳಿಂದ ಕೂಡಿರುವ, ಕಾಲಿಗೆ ಹಾಕಿಕೊಳ್ಳುವ ಒಂದು ಆಭರಣ: ಮಗುವಿಗೆ ಗೆಜ್ಜೆಗೊಲಸು ಹಾಕಿದ್ದಾರೆ (ರೂಢಿ).

[ಗೆಜ್ಜೆ$_1$ + ಗೊಲಸು (<ಗೊಟಸು)]

**ಗೆಜ್ಜೆಗೋಲು** (ನಾ). ಗೆಜ್ಜೆ ಕಟ್ಟಿದ ಕೋಲು: ಗೆಜ್ಜೆಗೋಲೂ ಇಲ್ಲದಿದ್ದರೆ, ನನಗೆ ಅದೊಂದು ಬಗೆಯಾಗಿ ಪಿಚ್ ಎನ್ನುತ್ತದೆ ಕಣಾ (ಸುಗುಗಂ. ೯೬-೧೫); ಗೆಳೆಯ–ದಂಪತಿಗಳು ರಾಸನೃತ್ಯಕೆ ನೆರೆದು ಗೆಜ್ಜೆಗೋಲುಗಳಿಂದ ತಾಳದಲಿ ಹೊಳಲುಗೊಡುತಲಿರೆ (ಸಜೀಗೀ. ೪೬-೯೪೬).

[ಗೆಜ್ಜೆ$_1$ + ಕೋಲು$_1$ (<ಕೋಲ್$_1$)]

**ಗೆಜ್ಜೆಚೈನು** (ನಾ). ಗೆಜ್ಜೆಗಳಿರುವ, ಕಾಲಿಗೆ ಧರಿಸುವ ಒಂದು ಬಗೆಯ ಆಭರಣ: ಹುಡುಗಿಗೆ ಗೆಜ್ಜೆಚೈನು ತಂದಿದ್ದಾರೆ (ರೂಢಿ).

[ಗೆಜ್ಜೆ$_1$ + ಚೈನು$_2$]

**ಗೆಜ್ಜೆಟಿಕೆ** 'ಗೆಜ್ಜೆಟೀಕೆ' ನೋ.

**ಗೆಜ್ಜೆಟಿಗೆ** 'ಗೆಜ್ಜೆಟೀಕೆ' ನೋ.

**ಗೆಜ್ಜೆಟೀಕೆ, ಗೆಜ್ಜೆಟಿಕೆ, ಗೆಜ್ಜೆಟಿಗೆ** (ನಾ). ಒಂದು ಬಗೆಯ ಕಂಠಾಭರಣ; ಚಿನ್ನದ ಗುಂಡಿನ ಟೀಕೆ: ನಾಲ್ಕು ಭಂಗಾರ ಬಳೆ ಸಾಕು ನನ ಬಲಗೈಗೆ . . . . ಗೆಜ್ಜೆಟೀಕೆ ಸಾಕು (ಹಳ್ಳಿಯ. ೯೫); ಮದುವಣಗಿತ್ತಿಯ ಕೊರಳಲ್ಲಿ ಮೆರೆಯುವ ಗೆಜ್ಜೆಟೀಕೆಯನ್ನು ನೆನಪಿಗೆ ತರುತ್ತಿದ್ದುವು (ಜೆಳುಮ. ೯೩). **ಗೆಜ್ಜೆಟಿಕೆ:** ಗೆಜ್ಜೆಟಿಕೆಯಷ್ಟು ಅಂದವಾದ ಒಡವೆ ಕಂಠಾಭರಣಗಳಲ್ಲಿ ಬೇರೊಂದಿಲ್ಲ (ರೂಢಿ). **ಗೆಜ್ಜೆಟಿಗೆ:** ಕಮ್ಮಿಗಳು 'ಗೆಜ್ಜೆಟಿಗೆ' ಎಂಬ ಸುಮಾರು ಹತ್ತುಪವನಿನ ಆಭರಣವನ್ನು ಪರೀಕ್ಷಿಸಿ, ಅದರ ತೂಕ, ಬಣ್ಣ, ಕ್ರಯ, ಬರೆದಿಡುತ್ತಿದ್ದರು (ಒಡ್ಡಉ. ೨೨). [ಗೆಜ್ಜೆ$_1$ + ಟೀಕೆ$_1$]

**ಗೆಜ್ಜೆಪಂತಿ** (ನಾ). ಚಿಕ್ಕಮಕ್ಕಳ ಊಟದ ಪಂಕ್ತಿ: ಗೆಜ್ಜೆಪಂತಿ ಮುಂತಾದ ನಾನಾಪಂಕ್ತಿಗಳು ಸಾಯಂಕಾಲದವರೆಗೆ ನಡೆವುವು (ಕಯಾತ್ರೆ. ೯೪).

[ಗೆಜ್ಜೆ$_1$ + ಪಂತಿ]

**ಗೆಜ್ಜೆಪಟ್ಟಿ** (ನಾ). ಗೆಜ್ಜೆಗಳಿಂದ ಕೂಡಿದ ನಡುಪಟ್ಟಿ; ಗೆಜ್ಜೆಡಾಬು: ಗೆಜ್ಜೆಪಟ್ಟಿ ಗಿಲುಕೆನಿಸಿ . . . ಹಾದಿಯಲ್ಲಿ ಬರೆ (ಮೋಘದೂ. ೮-೨).

[ಗೆಜ್ಜೆ$_1$ + ಪಟ್ಟಿ$_2$]

**ಗೆಜ್ಜೆಪಾಡಗ** (ನಾ). ಗೆಜ್ಜೆಗಳಿಂದ ಕೂಡಿದ ಕಾಲ್ಗಡಗ,–ನೂಪುರ,–ಅಂದುಗೆ: ಕಾಲುಗಳಲ್ಲಿ ಗೆಜ್ಜೆಪಾಡಗಗಳು (ಜೆಳುಮ. ೧೭೯).

[ಗೆಜ್ಜೆ$_1$ + ಪಾಡಗ$_2$]

**ಗೆಜ್ಜೆಪಿಲ್ಲಿ** (ನಾ). ಗೆಜ್ಜೆಗಳಿಂದ ಕೂಡಿರುವ ಪಿಲ್ಲಿ: ಕಾಲಿಗೆ ಗೆಜ್ಜೆಪಿಲ್ಲಿ ಹಾಕಿಕೊಂಡಿದ್ದಾಳೆ (ರೂಢಿ). [ಗೆಜ್ಜೆ$_1$ + ಪಿಲ್ಲಿ$_1$]

**ಗೆಜ್ಜೆಪೂಜೆ** (ನಾ). ೧. ಬಯಲಾಟವನ್ನು ಕಲಿಯಲು ಪ್ರಾರಂಭಿಸುವ ದಿನ ಕಾಲಿಗೆ ಕಟ್ಟಿಕೊಳ್ಳುವ ಗೆಜ್ಜೆಗೆ ಮಾಡುವ ಪೂಜೆ: ಹೊಸ ವೇಷಧಾರಿಗಳು ತೀರ್ಮಾನಮಾಡಿಕೊಂಡು, ಒಳ್ಳೆಯ ಒಂದು ದಿನವನ್ನೂ ನೋಡಿ ಗೆಜ್ಜೆಪೂಜೆ ಗೊತ್ತುಮಾಡಿದರು (ನನ್ನೂರು. ೩೦೩). ೨. ವೇಶ್ಯಾವೃತ್ತಿಯನ್ನು ಪ್ರಾರಂಭಿಸುವಾಗ ಮಾಡುವ ಒಂದು ಸಮಾರಂಭ; ವೇಶ್ಯೆಯು ತಾನು ಕಟ್ಟಿಕೊಂಡು ನರ್ತಿಸಲಿರುವ ಗೆಜ್ಜೆಗೆ ಪೂಜೆ ಮಾಡುವ ಸಮಾರಂಭ: ಕಾಯಸ್ಥಳಾದರೂ ಗೆಜ್ಜೆಪೂಜೆಯ ಸೂಳೆಯಲ್ಲ (ಬಾಗಿನ. ೫೩). [ಗೆಜ್ಜೆ$_1$ + ಪೂಜೆ$_2$]

**ಗೆಜ್ಜೆಪೈಜಣ** (ನಾ). = ಗೆಜ್ಜೆಪಾಡಗ: ಗೆಜ್ಜೆಪೈಜಣ ಕಟ್ಟಿ ಮಾಯೆಯ ಮೈಯೊಳಗ ಬಂಧಾಂಗ (ಸಜೀಗೀ. ೫೦-೭). [ಗೆಜ್ಜೆ$_1$ + ಪೈಜಣ]

**ಗೆಜ್ಜೆಬತ್ತಿ** (ನಾ). ೧. ಗೆಜ್ಜೆಗೆಜ್ಜೆಯಾಗಿ ಸರಪಣಿಯ ಆಕಾರದಲ್ಲಿ ಮಾಡುವ ಹತ್ತಿಯ ಹಾರ; ಗೆಜ್ಜೆವಸ್ತ್ರ: ದೇವರ ಮಂಟಪಕ್ಕೆ ಗೆಜ್ಜೆಬತ್ತಿ ಹಾಕಿದರು (ರೂಢಿ). ೨. ಗೆಜ್ಜೆಯ ಆಕಾರದಲ್ಲಿ, ತಳ ಅಗಲವಾಗಿರುವ ಹೂಬತ್ತಿ: ದೇವರ ದೀಪಕ್ಕೆ ಗೆಜ್ಜೆಬತ್ತಿಯನ್ನು ಹಾಕಿದ್ದಾರೆ (ರೂಢಿ).

[ಗೆಜ್ಜೆ$_1$ + ಬತ್ತಿ]

**ಗೆಜ್ಜೆಮೆಟ್ಟು** (ನಾ). ಗೆಜ್ಜೆಗಳಿಂದ ಕೂಡಿದ ಪಾದಗತಿ; ಗೆಜ್ಜೆ ಕಟ್ಟಿದ ಕಾಲಿನ ವಿನ್ಯಾಸ: ತದ್ಧಿತ್ಯೆ ತದಿಗಿಣ ತದ್ದಳಾಂಗುಗಳೆಂಬ ಶುದ್ಧ ಗಾಯಕ

ವರಗಳಿಗೆ ಶುದ್ಧಾಂಗದ ಗೆಜ್ಜೆಮೆಟ್ಟಿನ ಗತಿಗಳಿಂ ಬದ್ದವಣ್ಣಗಳಾಡಿದರು (ಕಂಸವಿ. ೨೦-೧೧೫). [ ಗೆಜ್ಜೆ$_1$ + ಮೆಟ್ಟು$_2$ ]

**ಗೆಜ್ಜೆಯಂದುಗೆ** (ನಾ). = ಗೆಜ್ಜೆಪಾಡಗ : ಸಿಂಗಾರವಮ್ಮ . . . ಗೆಜ್ಜೆಯಂದುಗೆಗಳನ್ನು ಕಯ್ಗಿಯ್ಸಿ, ಗೆಜ್ಜೆಯ ಬಣ್ಣಗೋಲ್ಗಳನ್ನು ಹಂಚಿಸುತ್ತಿರುವಳು (ಬಿಟ್ಟಳಿ. ೧೭೯-೨೦). [ ಗೆಜ್ಜೆ$_1$ + ಅಂದುಗೆ ]

**ಗೆಜ್ಜೆಯಲಬು** (ನಾ). ೧. ನೆಲದ ಮೇಲೆ ಉದಕ್ಕೆ ಹಬ್ಬಿಕೊಂಡು ಹೋಗುವ, ಹಳದಿಹೂವುಗಳನ್ನು ಬಿಡುವ, ಮೂರುಮೂರು ಸಣ್ಣಸಣ್ಣ ಎಲೆಗಳುಳ್ಳ ಒಂದು ಬಗೆಯ ಸಸ್ಯ : (+). ೨. ಒಂದು ಬಗೆಯ ಬಳ್ಳಿ : (+). [ ಗೆಜ್ಜೆ$_1$ + ಅಲಬು$_1$ ]

**ಗೆಜ್ಜೆವಸ್ತ್ರ** (ನಾ). ಹತ್ತಿಯಿಂದ ಮಾಡಿದ, ಗೆಜ್ಜೆಸರದಂತೆ ಕಾಣುವ ಮಾಲೆ ವಸ್ತ್ರ, ದುಂಡುಬಿಲ್ಲೆ : ಗೌರಿಗೆ ಗೆಜ್ಜೆವಸ್ತ್ರ ಏರಿಸಿ ಪೂಜೆ ಮಾಡುತ್ತಾರೆ (ಆಡು). [ ಗೆಜ್ಜೆ$_1$ + ವಸ್ತ್ರ ]

**ಗೆಜ್ಜೆವಳಯಿಗೆ** (ನಾ). ಗೆಜ್ಜೆಗಳಿಂದ ಕೂಡಿದ ಧ್ವಜ,-ಬಾವುಟ : ತಂಕಬಡಗಲುವೊಂದಿ ನಡೆಯಂದಾ ಗೃಹೇಂದಿರೆ ಅಂದು ಕೈಬೀಸುವವೊಲಾದುದು ಗೆಜ್ಜೆವಳಯಿಗೆಯು (ಸಾಳ್ವಭಾ. ೨-೧೯).

[ ಗೆಜ್ಜೆ$_1$ + ಪಳಯಿಗೆ (<ಪಟಯಿಗೆ) ]

**ಗೆಜ್ಜೆಹುಲ್ಲು** (ನಾ). ಒಂದು ಬಗೆಯ ಹುಲ್ಲು : (+).

[ ಗೆಜ್ಜೆ$_1$ + ಹುಲ್ಲು (<ಪುಲ್) ]

**ಗೆಟ್ಟಕ್ಕಿತಳ?** (ನಾ). ಒಂದು ಬಗೆಯ ಮರ : ತಡಸು ಗೆಟ್ಟಕ್ಕಿತಳ ಪಿಚು ಮಂದ . . . ತೇಗುಗಳ ವಿಸರ ನಾನಾವೃಕ್ಷಜಾತಿಯಿಂದೆಸೆವ ಘೋರಾರಣ್ಯ ಕಣ್ಗೆಸೆದುದು (ಸಿಂಗಿರಾ. ೩೦-೯). [ ? ]

**ಗೆಟ್ಟಿವಡಿ** (ನಾ). ಒಂದು ಊರಿನ ಹೆಸರು : ಶ್ರೀಮತ್ ಪೆರ್ಮ್ಮನಡಿಗಳ್ಪಟ್ಟಂಗಟ್ಟದ ಅಯ್ದನೆಯ ವರಿಷ ಗೆಟ್ಟಿವಡಿಯ ಅಣ್ಣನಾಳುತುಮಿರೆ (ಎಕ. III, ನಂಜನ. ೯೮-೪ : 898 ?) [ ? ]

**ಗೆಡಪ** (ನಾ). ೧. ಹರಟೆ ; ಗಳಹುವುದು : (+). ೨. ಗಿಳಿಯ ಮಾತು. ' ಗಿಳಿಗೆಡಪ ' ಪರಾ. [ ಗೆಡೆ$_1$ (<ಕೆಡೆ$_2$) + - ಪ$_2$ ]

**ಗೆಡೆ$_1$** ' ಕೆಡೆ$_2$ ' ನೋ.

**ಗೆಡೆ$_2$** (ನಾ). ೧. ಎಣೆ ; ಸಮ ; ಜೊತೆ : ಪಡೆವಳ ಕಾಳಂಗೊಳ್ವಿನ ಗೆಡೆ ಕಾಮುಲೆನಾರಿ ನೆಗಳ್ದ ಪೆರ್ಮ್ಮಾಡಿಯ ಪೆರ್ಮ್ಮಡದಿಯರೆನೆ ಸೊಗಯಿಸಿದ × (ಎಕ. VII, ಶಿವಮೊ. ೫೫-೬೩ ; 1167) : ತೊಡೆಗಳ್ ರಂಭಾಸ್ತಂಭದ ಗೆಡೆಗಳ್ (ಶಮುದ. ೯೫ ಪ್ರಯೋ). ' ಗೆಡೆವಕ್ಕಿ ' ಪರಾ. ೨. ಸ್ನೇಹ ; ಗೆಳೆತನ : ಗುಳ್ಳೆಗೊಟ್ಟೆ ಬಟ್ಟುಳಿಸೆಂಡುಂ ಪೊಡೆಸಂಡೆಂಬಿವನಾಡುತ್ತೊಡವಳೆದರ್ ತಮ್ಮೊಳಿಳಸೆ ತಂತಂ ಗೆಡೆಗಳ್ (ಪಂಪಭಾ. ೨-೩೦). [ <ಕೆಳೆ$_2$ ]

**ಗೆಡೆ$_3$** ' ಕೆಡೆ$_3$ ' ನೋ.

**ಗೆಡೆಗಾಟಿ** (ನಾ). ಗೆಣೆಯ ; ಗೆಣೆಕಾರ ; ನಲ್ಲ : ಕೊಲೆಯ ಅಪರಾಧದಿಂದಮಾ ಪೇಡಿತನದಪಮಾನಮೇ ಮೇಲೆಂದು ಆಯ್ದು, ಕೊಲದೆ ಬಿಟ್ಟಪಳ್ ತನ್ನ ಗೆಡೆಗಾಟಿನನ್ (ಬದ್ಧಶ್ರ. ೪೬-೯೯೬). [ ಗೆಡೆ$_2$ + - ಕಾಟಿ ]

**ಗೆಡೆಗೂಡು** (ಕ್ರಿ). ಜೊತೆಗೂಡು ; ಒಟ್ಟಾಗು ; ಸೇರು : ಕುಂಭಾಂಡ ಮಂತ್ರಿ ಸಿಂಗರಿಸಿದ ಕಮ್ಮಲರಂಬನ ಮಗನ ಮೂರ್ತಿಯನು ಹಂಬಲಿಸುವ ಕುಮಾರಾತಿ ತನ್ನ ಗೆಡೆಗೂಡಿ ಸಂಭ್ರಮದಲಿ ಕರೆಸಿದನು (ಮೋಹತ. ४೦-३೦).

[ ಗೆಡೆ$_2$ + ಕೂಡು$_1$ ]

**ಗೆಡೆಗೊಳ್** (ಕ್ರಿ). ೧. ಜೊತೆಯಾಗು ; ಒಡಗೂಡು ; ಬೆರೆ : ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಂ . . . ನೆನೆವುದೆನ್ನ ಮನಂ ವನವಾಸಿದೇಶಮಂ (ಪಂಪಭಾ. ४-३೦) : ಕಂಡೊಡನಾಡಿದಕ್ಕರಿಗನಕ್ಕರಿಗಂ ಗೆಡೆಗೊಂಡ ಪಂಡಿತಂ ಪಂಡಿತನೆಯ್ದೆ (ಶಾಂತಿಪು. ೧೨-೬೮) ; ಒಡನೊಡನಿಕ್ಕಿದರಾಗಳೆ ಗೆಡೆಗೊಂಡಮೃತಾಬ್ಧಿವೀಚಿನರ್ತನಮುಮಂ ಕಣ್ಗೊಡರಿಸೆ (ನೇಮಿಪು. ೮-೧೨೦) ; ರಾಜಹಂಸನಂ ಗೆಡೆಗೊಳಲಾರ್ಪನೆಂಬ ಬಗೆಯಿಂದಿನನ್ಯದಿದನಸ್ತಶೈಲಮಂ (ದಶಕು. ೨-೩೪) ; ಕಾಳೆಗಕೆ ಮೂದಲಿಸಿದುದು ಚಲಿಸಿದುದು ಗೆಡೆಗೊಂಡು ಹತ್ತಿರಕೆ ಸೇರಿದುದು ಪೋರಿದುದು ಚೂಳಿ ದಾನವರ ಪಡೆಯ (ಜೈಮಿ. ३೮-३४). ೨. ಹೊಂದು ; ಪಡೆ : ಸಮಸ್ತದೀಪ್ತಿಪರಮಾಣುಗಳಂ ಗೆಡೆಗೊಂಡು ಜೌವನಂ ನೆಟ್ಟಿದಿರೆ (ಆದಿಪು. ೨-೬೨) ; ಸೂರ್ಯ್ಯಶಶಾಂಕಮರೀಚಿಯಿಂದೆ ಚೆಲ್ವಂ ಗೆಡೆಗೊಂಡು (ಎಕ. XI, ದಾವಣ. ೦೬೮-೨४ ; ಸು. 1145) : ಘನಚ್ಛಾಯೆಯನಾಂತೇಂ ಗೆಡೆಗೊಂಡುದೊ ಪೃಥುಳತೆಯಂ ಗಿರಿಯ ನಿತಂಬದಂತೆ ಹರಿಯ ನಿತಂಬಂ (ವರ್ಧಪು. ४-३೮). [ ಗೆಡೆ$_2$ + ಕೊಳ್$_1$ ]

**ಗೆಡೆಯಾಟ** (ನಾ). ಸ್ನೇಹದ ಆಟ ; ಒಡನಾಟ : ಎನ್ನ ಕೈಮರ್ಚಿನ ಗೆಡೆಯಾಟದ ಮುತ್ತಿನ ಸೆಂಡೆ! (ರಾಮಾಶ್ವ. ೭೦-೨೧). [ ಗೆಡೆ$_2$ + ಆಟ ]

**ಗೆಡೆಯಿಡು** (ಕ್ರಿ). ಜೊತೆಮಾಡು ; ಜೋಡಿಹಾಕು ; ಕೂಡಿಸು : ಎಸೆಯಲಣ್ಣನು ನಿಲಲಿ ತಾನೊಂದೆಸೆಗೆ ನಿಲುವೆನು ಬನ್ನಿ ಗೋಪಪ್ರಸರವಿತ್ತೆಟನಾಗಿ ಗೆಡೆಯಿಟ್ಟಾಡಬೇಕೆಂದ [ಪಾಠಾಂ. ಗಿರಿಯಾಚಾಟವುಂಟೆಂದ] (ನಿಭಾಗ. ೧೧-೧೮-३३). [ ಗೆಡೆ$_2$ + ಇಡು$_1$ ]

**ಗೆಡೆವಕ್ಕಿ** ' ಗೆಳೆವಕ್ಕಿ ' ನೋ.

**ಗೆಡೆವಸು** (ಕ್ರಿ). ಸ್ನೇಹವನ್ನು ಕಡಿದುಕೊಳ್ಳು ; ಸ್ನೇಹಭಂಗಹೊಂದು ; ದ್ವೇಷತಾಳು : ಗೆಡೆವಚ್ಚಿ [ಪಾಠಾಂ. ವೆರ್ಚಿ] ವರ್ ಮನಗೊಂಡೊಡನೊಡನೋರಂತು ತಗುಳ್ದು ರ್ಪೋಂಕರಿಸಿದೊಡೆ (ಪಂಪಭಾ. ೨-೬३). P ಈ ಶಬ್ದವನ್ನು ' ಗೆಡೆವಚ್ಚು ' (ಗೆಡೆ+ಮಚ್ಚು) ಎಂದು ತೆಗೆದುಕೊಂಡು ' ಸಿಕ್ಕಿದ ಜೊತೆಯನ್ನು ಮೆಚ್ಚಿಕೊಳ್ಳು ' ಎಂದೂ ಅರ್ಥಮಾಡಬಹುದು.

**ಗೆಡೆವಚ್ಚುಗೊಳ್**=ಸ್ನೇಹಭಂಗ ಮಾಡಿಕೊಳ್ಳು : ಏಡೆಯೊಳ್ ಗೆಡೆವಚ್ಚು [ಪಾಠಾಂ. ವರ್ಚು, ವೆಚ್ಚು, ವೆರ್ಚು] ಗೊಂಡು ಪಾಂಡವರನಕಾರಣಂ ಕೆಣಕಿದೀ ಪೊಸಪೊಟ್ಟಟೆಯೊಳಾದ ಕಿರ್ಚು ಕೌರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳಸ್ಯೆತುಪೋಕುಮೇ (ಪಂಪಭಾ. ೨-೮೬).

[ ಗೆಡೆ$_2$+ಪಸು$_1$ ]

**ಗೆಡ್ಡೆ** ' ಗಡ್ಡೆ ' ನೋ.

**ಗೆಡ್ಡೆಗಟ್ಟು** ' ಗಡ್ಡೆಗಟ್ಟು ' ನೋ.

**ಗೆಡ್ಡೆಮೊಸರ್** ' ಗಡ್ಡೆಮೊಸರ್ ' ನೋ.

**ಗೆಣತಿ** ' ಗೆಳತಿ ' ನೋ.

**ಗೆಣತಿಕಸ** (ನಾ). ಕಳ್ಳಿಜಾತಿಯ ಒಂದು ಬಗೆಯ ಸಣ್ಣ ಗಿಡ : (+).

[ ? ]

**ಗೆಣರವ** (ನಾ). ಕುದುರೆಯ ಮೈಯನ್ನು ಮಾಲೀಸು ಮಾಡುವ ಒಂದು ಬಗೆಯ ಸಾಧನ : ಕುದುರೆಯನ್ನು ಬಿಟ್ಟು ತಂದು ಹೊಟಗೆ ಸಮನಾದ ನೆಲದಲ್ಲಿ ಹೊರಳಿಸುವುದು ಹೊರಳಿದ ಮೇಲೆ ಗೆಣರವದಿಂದ ಮೈಯನ್ನು ಚೆಂದಾಗಿ ಉಜ್ಜುತ್ತಿರಬೇಕು (ಅಶ್ವಶಾ. ४೭-४). [ ? ]

**ಗೆಣಸಂಗು** (ನಾ). ಒಂದು ಬಗೆಯ ದೊಡ್ಡ ಜಾತಿಯ ಸಾಗವಾನಿ ಮರ : (+). [ ? ]

**ಗೆಣಸು** ' ಗೆಣಸು ' ನೋ.

**ಗೆಣಸುಗೂರು** (ಕ್ರಿ). ಗೆಣಸನ್ನು ಅಗೆ,-ತೋಡು : ಗೆಣಸುಗೂರುವಂತೆಕ್ಕಲಂ ಜಾಡಿಸದೆ ಬಿಡ ನಿನ್ನ ! (ಹರಿಶ್ಚಂ. ३-३೭).

[ ಗೆಣಸು (<ಗೆಟಸು) + ಗೂರು$_2$ (<ಗೂಱು) ]

**ಗೆಣಸುಸಕ್ಕರೆ** (ನಾ). ಗೆಣಸಿನಿಂದ ತಯಾರುಮಾಡುವ ಸಕ್ಕರೆ : ಎರಡನೇ ಮಹಾಯುದ್ಧಕಾಲದಲ್ಲಿ ಯುರೋಪಿನ ಗೆಣಸು – ಸಕ್ಕರೆ (Beet-Sugar) ಕೈಗಾರಿಕೆಯು ವಿಪತ್ತಿಗೆ ಒಳಗಾದುದರಿಂದ (ಅಂತಸಂ. ೧೯३).

[ ಗೆಣಸು (<ಗೆಟಸು) + ಸಕ್ಕರೆ ]

**ಗೆಣೆ** 'ಕೆಳೆ₂' ನೋ.

**ಗೆಣೆಕಾತಿ** 'ಗೆಳೆಗಾರ್ತಿ' ನೋ.

**ಗೆಣೆಕಾರ** 'ಗೆಣೆಗಾರ' ನೋ.

**ಗೆಣೆಗಾರ, ಗೆಣೆಕಾರ** (ನಾ). ೧. ಒಡನಾಡಿ; ಗೆಳೆಯ; ಸ್ನೇಹಿತ: ತನ್ನ ಗೆಣೆಗಾರರನ್ನು ರಾಜಪುತ್ರನಲ್ಲಿಟ್ಟು . . . ಅಂತಃಪುರಕ್ಕೆ ಗಮನಿಸುವ ಸಾರಂಗಧರನಂ ನೋಡಿ (ಸಾರಂಗ. ೩); ಅವನು ಮೂರು ಹೊತ್ತೂ ಗೆಣೆಗಾರರ ಜೊತೆಯಲ್ಲಿ ಆಡುತ್ತಿರುತ್ತಾನೆ (ರೂಢಿ). **ಗೆಣೆಕಾರ:** ೧. ಪೊಡವಿಪತಿ ಚಿಂತಿಸಿದನಜ್ಞಾತವಾಸಕಾವೆಡೆಗೆ ಪೋದಪೆವೆಂದು . . . ಮೂಡಲು ಪೋಪೆನೆ ಸಡಕಿನಿಂ ಕೌರವನ ಗೆಣೆಕಾರರಾಗಿಹರು (ತುರಂಗ. ೩೫-೩). ೨. ಸೂಳೆಯಂ ಸಹವಾಸ ಮಾಡುವವನಂ; ವಿಟ: ಹಿಂದೊಂದು ದಿನ ಅವಳು ಬೆಳಗ್ಗೆ ಎರಡುಗಂಟೆಯ ಸಮಯದಲ್ಲಿ ಬಂದಿದ್ದ ಗೆಣೆಕಾರರನ್ನೆಲ್ಲ ಕಳುಹಿಸಿ . . . ಪಿಯಾನೋ ಬಳಿ ಕುಳಿತಿದ್ದಳು (ಕುಸರು. ೩೨೫). ೩. ಜೊತೆಗಾರ; ಇನಿಯಂ: ಗಣತಿಯು ಕೂಡಿದ ಗೆಣೆಕಾರನೆರಕವು ಬೆಳೆದಿಹುದು (ಚಂದ್ರವೀ. ೯೨-೬೬); ನಿನ್ನೊಂದಿಗಾಡಿ ಗೆಣೆಕಾರ ನಾನು ನಿನ್ನಿಂದ ನೀರ ತರಲಿಲ್ಲ (ಜಗೀತ. ೨೦).

[ಗೆಣೆ (<ಕೆಳೆ2) + – ಕಾರ₁ (<– ಕಾಱು)]

**ಗೆಣೆತನ** 'ಕೆಳೆತನ' ನೋ.

**ಗೆಣೆಯ** 'ಕೆಳೆಯ' ನೋ.

**ಗೆಣೆವಕ್ಕಿ** 'ಗೆಳೆವಕ್ಕಿ' ನೋ.

**ಗೆಣೆಹಕ್ಕಿ** 'ಗೆಳೆವಕ್ಕಿ' ನೋ.

**ಗೆಣ್ಣ** (ನಾ). ಗದ್ದೆಯ ಚಿಕ್ಕಭಾಗ; ಮಡಿ: ಸಸಿ ನೆಡಲು ಮೊದಲುಮಾಡಿ, ಕೆಲವು ದಿನಗಳಲ್ಲಿಯೆ ಮನೆಯ ಹತ್ತಿರದ ಹಲಸಿನ ಮರದ ಮೂಲೆಯ ಗೆಣ್ಣಗಳವರೆಗೂ ಬಂದಿದ್ದರು (ಮಲೆಮ. ೬೫೩). 'ಗಣ್ಣ' ಪರಾ. [?]

**ಗೆಣ್ಣು, ಗಿಣ್ಣು₂** (ನಾ). ೧. ಕಬ್ಬು, ಬಿದಿರು ಮೊದಲಾದವುಗಳ ಗಂಟು; ಪರ್ವ: "ಗ್ರಂಥಿ, ಪರ್ವನ್, ಪರುಷಿ[ಸ್] – ಈ ೩ ಬಿದಿರ ಗೆಣ್ಣು" (ನಾಚಿರಾ. ೧೧೨); ಕಬ್ಬಿನಾ ತುದಿಯಿಂದ ತಾಳು ತನಕ ಮೆದ್ದುಕೊಂಡು ಬರಲದು ಗೆಣ್ಣು ಗೆಣ್ಣಿಂಗೆ ಮಿಗಿಲೆನಿಸಿದಿನಿದೀವುದು (ವೀಶೈಪು. ೪-೧-೧೪). ೨. ಬೆರಳಂಗಳ ಗಂಟು: ಅಂಗುಲಿಯು ಗೆಣ್ಣುಗಳು ಕೇಶಮುಂ ಚರಣದಂತಗಳು ನಖಂಗಳ್ಳೆದಿನ್ನು ಪರಿಕಿಸಲುನ್ನತಂಗಳಂ ಪೇಳ್ವೆ (ವೀಶೈಪು. ೪-೨೩-೬). **ಗಿಣ್ಣು₂:** ೧. ಚಿಕ್ಕಚಿಕ್ಕದಾಗಿರುವ ಗಿಣ್ಣುಗಳಿಂದ ಕೂಡಿದ ಬಾಣ (ಕೃಪಾವಿ. ೬೨); ಕಬ್ಬಿನ ಕಾಂಡದಲ್ಲಿ ಅನೇಕ ಗಿಣ್ಣುಗಳಿವೆ (ಸಸ್ಯಶಾ. ೬೮). ೨. ಒಂದು "ಅಂಗುಲವು" ಪುರುಷನ ಮಧ್ಯದ ಬೆರಳಿನ ಒಂದು ಗಿಣ್ಣಿನಿಂದ ಮತ್ತೊಂದು ಗಿಣ್ಣಿನವರೆವಿಗಿರುವಷ್ಟು ಉದ್ದವಿರುತ್ತದೆ (ಭಾರದ. ೫೧೬). [ದೇ.॥ ಮಲ. ಕೆಣಿಪ್ಪು; ಕೊಡ. ಗಿಣ್ಣಿ]

**ಗೆಣ್ಬು** (ನಾ). (?): ಜಾಣ್ಬರಿಜಾಳುಗಾಡಿ ನೆಣ್ಪೋಜೆ ನಸೆ ಬರ್ದು ಬಿಣ್ಬುಳುಗಳು ಪೂಸರನಾ ಗೆಣ್ಪೋನ್ನತಿಯ ಪೇವೊರ್ಲೆ ಮೆಣ್ಪೋರೆ ದರಹಾಸಗಾಣ್ಬೇ ಜವ್ವನೆಯರೆಸೆದರು (ಭೈರವೇ. ೨-೯೬). [?]

**ಗೆತ್ತು₁** 'ಗಿಱು' ಪರಾ.

**ಗೆತ್ತು₂** (ನಾ). ಹೋಲಿಕೆ; ಸಾದೃಶ್ಯ: "ಪಾಂಗೆಂದುಂ, ಗೆತ್ತೆಂದುಂ ಸದೃಶಭಾವಂ" (ಕಶಸಾ. ೧೫-೨೯೪); "ಗೆತ್ತೆಂದು ಪಾಂಗುಮೆನೆ ಸದೃಶಾರ್ಥಂ" (ಕವಿಕಂ. ೧೩೪). [?]

**ಗೆದಲ್, ಗೆಜ್ಜಲು, ಗೆದಲಿ, ಗೆದಲು, ಗೆದಲೆ, ಗೆದ್ದಲಿ, ಗೆದ್ದಲು** (ನಾ). ಮರವಂಟ್ಟು, ಕಾಗದ ಮೊದಲಾದ ವಸ್ತುಗಳನ್ನು ತಿಂದಂ ಮಣ್ಣುಮಾಡುವ ನಸುಬಿಳಿಂಪಾದ ಇರುವೆ ಜಾತಿಯ ಹುಳು; ಒರಲೆ: ಜನಕಂ ಕುರ್ಗಿದ ಸಮಯದೆ ತನಯಂ ನಲವಿಂ ಸಹಾಯ ನಪ್ಪುದು ಪಿರಿದೇ ತಿನೆ ಬೇರಂ ಗೆದಲಾಲಮವನೀತಲಕ್ಕೊಲೆಯದಂತು ತಳೆಯದೆ ಬೀಱಲ್ (ನೀತಿಮಂ. I. ೨೪೮). **ಗೆಜ್ಜಲು:** ಗೆಜ್ಜಲ ತಿಂಬ ಕರಡಿ ಖರ್ಜೂರದ ಹಣ್ಣಿನ ಸವಿಯನೆತ್ತ ಬಲ್ಲುದಯ್ಯ (ಸಿದ್ಧೇವ. ೦೩೬-೪೦೬); ಬೀಗದಕೈ ಕೆಳಗಡೆ ಅರ್ಧ ಗೆಜ್ಜಲು ಹಿಡಿದು ಜೀರ್ಣವಾಗಿದ್ದ ಒಂದು ಪತ್ರ ಇತ್ತು (ಗೋಪುರ. ೧೫೪). **ಗೆದಲಿ:** ಗೆದಲಿ ಮನೆಯ ಮಾಡಿ ಸರ್ಪಂಗೆ ಇಂಬಾದಂತೆ (ಶೂನ್ಯಸಂ. ೨೩೫-೧೦). **ಗೆದಲು:** ಕೆಂಡವಂ ಗೆದ[ಪಾಕಾಂ. ಜ]ಲೊಂದುವುದೆ (ಬಸವು. ೦೫-೩೨). **ಗೆದಲೆ:** ತೋಂಟದೊಳ ಗೇನುವಂ ಬಗೆಯದೆ ಶಿವಧ್ಯಾನದಿಂದೆ ಪರವಶವನ್ಯೆದಿರೆ ಗೆದಲೆ ಹುತ್ತವಿಕ್ಕೆ (ಚಬಪು. ೬೩-೪೫). **ಗೆದ್ದಲಿ:** ನೆಲಧಾರೆ . . . ಅದಕ್ಕೆ ಗೆದ್ದಲಿ ಹತ್ತುವುದಿಲ್ಲ (ಕಭಾಗಿ. ೪೩); ಏನು, ಗೆದ್ದಲಿಗಳ ದಬ್ಬಾಳಿಕೆ . . . ಎಲ್ಲವೂ ಗೆದ್ದಲಿಯ ಪಾಲೇ ಆಗಿಹೋಗಿಬಿಟ್ಟಿತು (ಮುಂಗಾಪು. ೧೪); ಉದಾಹರಣೆಗಾಗಿ, ಗೆದ್ದಲಿಯ ಸಮಾಜವನ್ನು ತೆಗೆದುಕೊಳ್ಳಬಹುದು (ಕೀಟಬಿ. ೮). **ಗೆದ್ದಲು:** ಹುತ್ತಗಳು ನೆಚಿ ಮೂಡಿ ಮೈಯಲಿ ಹತ್ತಿ ಗೆದ್ದಲು ತಿಂದು (ಪ್ರಜ್ಞಾಜ. ೪-೧೯); ಗೆದ್ದಲು ಮನೆಯನ್ನು ಹಾಳುಮಾಡುವಂತೆ ಗರ್ವವು ಯಾರನ್ನಾದರೂ ಹಾಳುಮಾಡುತ್ತದೆ (ಈಕಥ. ೩); ಗೆದ್ದಲು ಹುತ್ತವಿಕ್ಕ ಹಾವಿಗೆ ಮನೆಮಾಡಿತು (ಗಾದೆ). 'ಗೊಬಲೆ' ಪರಾ.

ಗೆದ್ದಲುಹಿಡಿ=ಗೆದ್ದಲಹುಳು ತಿಂದುಹಾಕಂ: ಪುಸ್ತಕಗಳೆಲ್ಲ ಗೆದ್ದಲು ಹಿಡಿದು ಹೋಗಿದ್ದವು (ರೂಢಿ).

[ದೇ.॥ ತಮಿ. ಚಿದಲ್, ಚಿದಲೈ; ಮಲ. ಚಿದಲ್, ಚಿದಳ್, ಚಿದಳ್; ತುಳು. ಉದಲ್; ಕೊಡ. ಕೆದ; ತೆಲು. ಚೆದ, ಚೆದಲು; ಕೊಲಾ. ಸೇದಾಲ್; ನಾಯ್ಕಿ. ಸೇದಲ್]

**ಗೆದಲಿ** 'ಗೆದಲ್' ನೋ.

**ಗೆದಲಿಗೆ** (ನಾ). ಚಮರೀಮೃಗ: "ಚಮರಃ – ಚಮರೀಮೃಗ, ಗೆದಲಿಗೆ" (ಒಷಧಿ. ೫೪). [?]

**ಗೆದಲು** 'ಗೆದಲ್' ನೋ.

**ಗೆದಲೆ** 'ಗೆದಲ್' ನೋ.

△ **ಗೆದಿ, ಗೆದೆ** (ಕ್ರಿ). ಗೆಲ್ಲಂ; ಜಯಿಸಂ; ಸಾಧಿಸು: ಇಲೆಕ್ಶನ್ ಗೆದಿಯುವ ಹುಚ್ಚುಹವ್ಯಾಸದೊಳಗೆ ಖರ್ಚುಮಾಡಿಕೊಂಡದ್ದೆಲ್ಲ ತಿರುಗಿ ಹೇಗೆ ಬರಬೇಕು (ಅಪನಾ. ೩); ಇಂಥ ಸಂದರ್ಭದಲ್ಲಿ ವೈರಿಯನ್ನು ಚಾತುರ್ಯದಿಂದ ಗೆದಿಯಬೇಕು (ಪ್ರಪೂರ್ತಿ. ೨೦). **ಗೆದೆ:** ತಾನು ಗೆದೆಯಲೇ ಬೇಕು ಈ ಸಲ (ಸುತ್ತುಮು. ೨೮); ಚುನಾವಣೆಯಲ್ಲಿ ಗೆದೆಯುವದೆಂದರೆ ಅದು ಸ್ವಂತ ಖರ್ಚಿನ ವಿಷಯ (ಅಪನಾ. ೮೮); ನಿನ್ನ ಅಭಿಪ್ರಾಯದಲ್ಲಿ ಯುದ್ಧವನ್ನು ಯಾರು ಗೆದೆಯಬಹುದೆಂಬುದನ್ನು ಹೇಳು (ಹೇಮಂತ. ೧೫೦); ಸಮುದ್ರಗುಪ್ತನು . . . ಸುತ್ತಲಿನ ರಾಜ್ಯಗಳನ್ನು ಗೆದೆಯಲಾರಂಭಿಸಿದನು (ಹಿಂದುಇ. ೫೬). [<ಗೆಲ್₁]

△ **ಗೆದಿಸು** (ಕ್ರಿ).=ಗೆಲಿಸು: ಸೋತ ನಿಮ್ಮನ್ನು ಕೂಡಾ ಅವ ಗೆದಿಸಿದ (ಮುಗಿಮು. ೩೪); ತಮ್ಮ ತಮ್ಮ ಪಕ್ಷಗಳನ್ನು ಗೆದಿಸುವುದಾಗಿ ಘೋರ ಪ್ರತಿಜ್ಞೆಯನ್ನೇ ಮಾಡಿಬಿಟ್ಟರಂತೆ (ಹಾಡುಹು. ೪೫). [ಗೆದಿ + – ಸು₁]

**ಗೆದೆ** 'ಗೆದಿ' ನೋ.

**ಗೆದೆಯ** (ನಾ). ಒಂದು ಊರಿನ ಹೆಸರು: ಎಡೆನಾಡೆಪ್ಪತ್ತು ತಂದವೂರ ಪನ್ನೆರಡು ಗೆದೆಯ ಪನ್ನೆರಡು ಮೂಗುಂದ ಪನ್ನೆರಡು (ಎಕ. VIII, ಸೊರಬ. ೪೬೬-೦೩: 991). [?]

**ಗೆದ್ದಲಿ** 'ಗೆದಲ್' ನೋ.

**ಗೆದ್ದಲು** 'ಗೆದಲ್' ನೋ.

**ಗೆಪ್ತಿ** (ನಾ). ತಿಳಿವಳಿಕೆ; ಬುದ್ಧಿ; ಜ್ಞಾನ: ದೀಪ್ತನಾಗಿ ಒಪ್ಪುವ ಸರ್ವೋತ್ತುಮಾ ಗೆಪ್ತಿಗೆ ನಿಲುಕುವಾ ವಿಜಯವಿಠಲರೇಯ (ವಿಜಸು. ೩೬-೧). [<ಸಂ. ಜ್ಞಪ್ತಿ]

**ಗೆಪ್ಪಲು** (ನಾ). ಆಸ್ತಿ; ಐಶ್ವರ್ಯ: ಆ ದರಿದ್ರನಲ್ಲೇನಿದೆ ಗೆಪ್ಪಲು? (ರೂಢಿ). [ ಗೆಪ್ಪೆ + – ಅಲು (<–ಅಲ್$_2$) ]

**ಗೆಪ್ಪೆ** (ನಾ). ೧.=ಗೆಪ್ಪಲು: ತಂದೆಯ ಆಸ್ತಿಯೆಲ್ಲಾ ತನಗೇ ಆಗಿದ್ದರೂ, ತಂದೆಯು ಇನ್ನೇನೋ ಗೆಪ್ಪೆ ಇವರಿಗೆ ಕೊಟ್ಟುಹೋಗಿರಬೇಕು ಎಂದು ಅವನಿಗೊಂದು ಸಂಶಯ (ಘಾಟೀಮು. ೦೨): ಅವಳಿಗೆ ಒಂದಷ್ಟು ಗೆಪ್ಪೆ ಯಿತ್ತು. ಅದು ಕರಗದ ಹಾಗೆ . . . ಇಬ್ಬರೂ ಸಂಸಾರವನ್ನು ಸಾಗಿಸಿದ್ದರು (ಮಲ್ಲಿ. ೦೦೩). ೨. ಗಿಡವನ್ನು ಕೀಳಂವಾಗ ಬೇರಿಗೆ ಅಂಟಿಕೊಂಡಿರಂವ ಮಣ್ಣಿನ ಭಾಗ,–ಹೆಂಟೆ. 'ಗೆಪ್ಪೆಸಸಿ' ಪರಾ. [ ? ]

**ಗೆಪ್ಪೆಸಸಿ** (ನಾ). ಗೆಪ್ಪೆಯಿರಂವಂತೆ ಅಗೆದು ತೆಗೆದ (ತೆಂಗಿನ) ಸಸಿ: ಗೆಪ್ಪೆಸಸಿಗಳನ್ನು ನಾಟಿದರೆ ಅವು ಬೇಗ ಬೇರುಬಿಡುತ್ತವೆ (ರೂಢಿ). [ ಗೆಪ್ಪೆ + ಸಸಿ$_3$ ]

**ಗೆಬರು** 'ಗಿಬರಂ$_1$' ನೋ.

**ಗೆಬ್ಬು$_1$** 'ಗೆರ್ಬು$_1$' ನೋ.

**ಗೆಬ್ಬು$_2$** (ಕ್ರಿ). ಮೇಲಕ್ಕೆ ಎಬ್ಬಿಸಂ,—ಏಳಿಸಂ: ಕೆಸರು ನೆಲಕ್ಕೆ ಬಿತ್ತೆಂದರೆ ಒಣಮಣ್ಣನ್ನೂ ತುಸುವಾದರೂ ಗೆಬ್ಬಿಕೊಂಡೇ ಮೇಲೆ ಬರಂತ್ತದೆ (ದಾಸಹು. ೯೭). [ ಎಬ್ಬು (<ಎಟ್ಟು) ]

**ಗೆಬ್ಬುಗೆ** (ನಾ). ಸಂಭೋಗ; ಸಂರತ: ಸ್ವಭಾವಸಿದ್ಧವಾದ ಅವಳ ಗೆಬ್ಬುಗೆಯ ಹಂಬಲವು ಇದರಿಂದ ಮತ್ತಷ್ಟು ಬೆಳೆದಿದ್ದಿತು (ಶ್ರೀರಾಪ. ೭೭). [ ಗೆಬ್ಬು$_1$ (<ಗೆರ್ಬು$_1$) + – ಗೆ ]

**ಗೆಬ್ಬೆ** (ನಾ). ಕಪಾಲ; ಗಲ್ಲ: ಒಂದು ಗೆಬ್ಬೆಗೆ ಕೊಟ್ಟು ಚನ್ನವೀರನು ನುಡಿದನು (ಖಾಬಲ. ೯). [ <ಕೆಪ್ಪೆ$_1$ ]

**ಗೆಯ್** 'ಕೆಯ್$_1$' ನೋ.

**ಗೆಯಿಸು** 'ಕೆಯ್ಸು' ನೋ.

**ಗೆಯ್ಕ** (ನಾ). ಕೆಲಸ. 'ಚಿನ್ನಗೆಯ್ಕ' ಪರಾ. [ ಗೆಯ್ (<ಕೆಯ್$_1$) + – ಕ$_3$ ]

**ಗೆಯ್ತ$_1$** 'ಕೆಯ್ತ$_1$' ನೋ.

**ಗೆಯ್ತ$_2$** 'ಕೆಯ್ತ$_2$' ನೋ.

**ಗೆಯ್ಮೆ** 'ಕೈಮೆ$_1$' ನೋ.

**ಗೆಯ್ಯಾಳು** (ನಾ). ದುಡಿವೆಂಗಾರ; ಕೆಲಸಗಾರ: ಇಬ್ಬರು ಗೆಯ್ಯಾಳು ಗಳಿದ್ದರೂ ಕೆಲಸವಿನ್ನೂ ಮುಗಿದಿಲ್ಲ (ರೂಢಿ). [ ಗೆಯ್ (<ಕೆಯ್$_1$) + ಆಳು$_3$ (<ಆಳ್$_3$) ]

**ಗೆಯ್ಯು** 'ಕೆಯ್$_1$' ನೋ.

**ಗೆಯ್ವೊಗ** (ನಾ). ಕೆಲಸದ ರೀತಿ (?): ಬಗೆ ಮತ್ತೊಂದೆನೆಯುಂ ಗೆಯ್ವೊಗ ವಿಂತೊಂದೆನೆಯುಮುಂಗುಳೀನಖಚಯಕಾಂತಿಗಳನವಗಯ್ಸಿ ಸಲೆ ಪಾಸ ಗೆಯ ದೆಸೆದೆಸೆಗೆ ಪೊರಳ್ದಿದಂ ಮತ್ತೊರ್ವಂ (ಶಾಂತಿಪು. ೫–೦೦೫). [ ಗೆಯ್ (<ಕೆಯ್$_1$) + ವೊಗ ]

**ಗೆಯ್ವೊಲ** (ನಾ). ಬೇಸಾಯಂದ ಹೊಲ; ಸಾಗುವಳಿಯ ಭೂಮಿ: ಕರ್ಷಕಂ ಕೃಷಿಯ ಮಾಟ್ಕೊಕ್ಕಲಿಗನಕ್ಕವಂ ಗೆಯ್ವೊಲನ ಪೆಸರು ವಪ್ರಂ ಕ್ಷೇತ್ರಮುಕ್ಕು (ಮಂಗರಾ. ೧೮೯–೧). 'ಕೆಯ್ವೊಲ' ಪರಾ. [ ಗೆಯ್ (<ಕೆಯ್$_1$) + ಪೊಲ$_1$ ]

**ಗೆಯ್ಸು** 'ಕೆಯ್ಸು' ನೋ.

**ಗೆರಚು** (ಕ್ರಿ). ಮೆಂತ್ತಿಕೊಳ್ಳು; ಬಳಿದುಕೊಳ್ಳು: ಹೇಲು ಗೆರಚಿ, ಉಚ್ಚೇಲಿ ನೆಂದ ಸೊಂಟದ ಪಂಚೇನ . . . ಹಿಡಿದುಕೊಂಡು (ಮಳೆಮ. ೩೦೫). [ ? ]

**ಗೆರಟೆ** 'ಕರಂಟ' ನೋ.

**ಗೆರಸಿ** 'ಕೆರಸಿ' ನೋ.

**ಗೆರಸೆ** 'ಕೆರಸಿ' ನೋ.

**ಗೆರಿಲ್ಲಾ** (ನಾ). ೧. ವೈರಿಯಂರೆತ ಶತ್ರುವಿನ ಮೇಲೆ ಆಕಸ್ಮಿಕವಾಗಿ ಸಣ್ಣ ಸಣ್ಣ ಗುಂಪುಗಳಿಂದ ದಾಳಿನಡೆಸಂವ ಯುದ್ಧ; ಕಪಟಯುದ್ಧ: ಅವನ ಕೆಳಗೆ ನೂರಾರು ಗೆರಿಲ್ಲಾ ಕಾದಾಳುಗಳಿರುವರೆಂದೂ ಸುದ್ದಿಹಬ್ಬಿತು (ಗೂಂಡಾರ. ೩೯). ೨. ಗೆರಿಲ್ಲಾಪದ್ಧತಿಯಿಂದ ದಾಳಿಮಾಡಂವ ಯೋಧ: ಬಾಂಬುದಾಳಿಯಲ್ಲಿ ಸಾವಿರಾರು ಗೆರಿಲ್ಲಾಗಳು ಅಡಗಿ ಕುಳಿತಲ್ಲಿಯೆ ಸಾವಿಗೀಡಾದರು (ರೂಢಿ). [ ←ಇಂ. Guerilla ]

**ಗೆರಿಸೆ** 'ಕೆರಸಿ' ನೋ.

**ಗೆರೆ** 'ಗೆಱೆ' ನೋ.

**ಗೆರೆಸೆ** 'ಕೆರಸಿ' ನೋ.

**ಗೆರ್ಬು$_1$**, **ಗೆಬ್ಬು$_1$** (ಕ್ರಿ). ಕೇಯಂ; ಸಂಭೋಗಮಾಡಂ: "ಗೆರ್ಬು– ಮೈಥುನೇ" (ಶಮದ); ಸುಖಿಲ್ಲತೀತಿ ಗೆರ್ಬಿದಪನೆಂಬುದು (ಕಾಕಕ್ಕ. ೪೯). **ಗೆಬ್ಬು$_1$**: 'ಗೆಬ್ಬುಗೆ' ಪರಾ. [ ? ]

**ಗೆರ್ಬು$_2$** (ನಾ). ಕೇಯಂವಿಕೆ; ಸಂಭೋಗ; ರತಿಕ್ರೀಡೆ: "ಗೆರ್ಬು ಪ್ರದ್ಯುಮ್ನಯುದ್ಧಂ" (ಕರ್ಣಾನಿ. ೫೨). [ <ಗೆರ್ಬು$_1$ ]

**ಗೆಲ್$_1$**, **ಗೆಲಿ$_1$**, **ಗೆಲು$_1$**, **ಗೆಲ್ಲು$_1$** (ಕ್ರಿ). ಗೆಲ್ದು, ಗೆಲಿದು, ಗೆದ್ದು (ಭೂತಕೃ). ೧. ಜಯಿಸಂ; ಸಾಧಿಸಂ: ಅರಿನೃಪಬಲಮಂ ಗೆಲ್ದರು ಪರಾಕ್ರಮಕ್ರಮದೆ ಶೌರ್ಯಮಂ ಪ್ರಕಟಿಸು ನೀಂ (ಕವಿರಾ. ೧–೮೨); ಭದ್ರ ಬಾಹುವಾಣಿಯುಂ . . . ನೆಗಟ್ದ ಪಂಡಿತರ್ಕಳೊಡನೆ ವಾದಂಗೆಯ್ದು ಗೆಲ್ದು (ವಡ್ಡಾರಾ. ೭೪–೧೯); ಬಗೆ ಗೆಲಲೆಂದು ಕಾಡಿ ಪುಸಿನಿದ್ದೆಯೊಳಾನಿರೆ ಲಲ್ಲೆಗೆಯ್ದು (ಪಂಪಭಾ. ೪–೦೦೭); ಗೆಲಲಾರ್ಪೊಡಿಱಿದು ಗೆಲ್ವುದು ಗೆಲ ಲಾಱದೊಡಣ್ಮಿ ಸಾವುದಾಳ್ಗಿನಿತೆ ಗುಣಂ (ಗದಾಯು. ೨–೨೦); ಗೆಲ್ಲದ ಕಾಳೆಗ ದಿಂದೋಟವೆ ಲೇಸು (ಧರ್ಮಾಮೃ. ೦೩–೦೨೭); ಗೆದ್ದ ಎತ್ತಿನ ಬಾಲ ಹಿಡಿ (ಗಾದೆ). ೨. ಮೀಱಂ; ಅತಿಶಯವಾಗಂ: ನೆಯ್ದಲ ಕಡುಗಂಪುಮನಿವಟಿ ಕಂಪು ಗೆಲ್ದುವು ಸಾಸಿರ್ಮಡಿಯೆನೆ . . . ಸೊಗಯಿಪುವು ಗಂಧಶಾಳಿವನಂಗಳ್ (ಆದಿಪು. ೦–೭೦); ಕರ್ಬಿನ ಬಿಲ್ಲಂ ಗೆಲೆ ಪುರ್ಬು (ಗದಾಯು. ೦–೭); ಸಾರಂ ಕಂಪಿನೊಳಿವು ಕರ್ಪೂರಮುಮಂ ಗೆಲ್ವ ವೆನಿಸಿ ಕುಂಕುಮರುಚಿಯಿಂದೋರಂತೊಪ್ಪುವ . . . ಪಣ್ಗಳಂ ಕಂಡು (ಧರ್ಮಾಮೃ. ೨–೦೮೪); ಪೊಂಬಳ್ಳಿಯ ಪೊಗರಂ ಗೆಲ್ವಂಗದ ಕಂಬುಲಲಿತ ಕಂಧರೆ (ಜಯಸೇ. ೧–೪೩). ೩. ಆನಂದಿಸು; ಸಂತೋಷಗೊಳ್ಳು. 'ಗೆಲ್ದನಿ' ಪರಾ. **ಗೆಲಿ$_1$**: ೧. ಶರಣನ ಸಂಭ್ರಮ ಲಿಂಗಪೂಜೆ . . . ಅನುಭವ ಓದಿ ಭವ ಗೆಲಿಯುವದು (ಸಿದ್ಧವ. ೯೭–೫೭೦); ಕಾಮನ ಗೆಲಿದೆನು ಬಸವಾ ನಿಮ್ಮ ದಯದಿಂದ (ಮಹಾದೇ. ಬ. ೭೦–೦೭೪); ಗೆಲಿದಂ ಅಸನಬೆಸನವ ಛಲರಧಿಕಂ ಹಾಲಬಸವಿದೇವಮುನೀಸಂ (ಎಇ. XXI, ೨–೩೮; 1260); ನೆತ್ತವನಾಡಿ ಪರರಂ ಗೆಲಿದು (ಬಸವು. ೪೪–೬೦); ಸೋತೆವಾವ್ ನೀ ಗೆಲಿದೆ (ಕುವ್ಯಾದ್ರೋ. ೫–೨೩); ವ್ಯಾಧಿಗಳ ನೆಱಿ ಗೆಲಿದು . . . ಸತ್ಯಸಮಾಧಿಯಲಿ ನಿಂದವನೆ ಭಕ್ತನು (ಪ್ರಭುಲೀ. ೦೮–೦೭); ಗೆಲಿಯದಿಹ ನರ (ಕನಕ. ೦೯–೩); ಪೂಗಣೆಯ ನಿನ್ನಿನಾಟವ ಗೆಲಿದು ನೀ ಮಲಗಿದೊಡೆ ಬಿಡುವೆನೆ (ಗೀತಗೋ. ೮). **ಗೆಲು$_1$**: ೧. ಕೊಲುವಂ ಗೆಲುವಂ ಕಲಿನರಸಿಂಹಂ (ಮೈಆರಿ. ೧೯೩೦, ೧–೨೮; ಸು. 1173); ಗೆಲುವ ಸಂಗನಬಸವ ಸೋಲ್ವ ಸಂಗನಬಸವ (ಬಸರ. ೯–೮೬); ಹರಿ . . . ಪಾರ್ಥನನೊಲಿದು ವೈದಡವಿದನು ಗೆಲು ಹೋಗೆಂದು ಹರಸಿದನು (ಕುವ್ಯಾದ್ರೋ. ೯–೩೩); ಗೆಲುವನೋ ಗೆಲದಿಹನೊ ರಕ್ಕಸಗಲಹವನು ನಿಜಪೌತ್ರನಿಂದಿನ ಕೊಳುಗುಳದೊಳು (ತೊರರಾ. ೭–೨೯–೫); ಚಪಲತ್ವದೆ ಜೂಜನಾಡಿ ಗೆಲುವ ಬಲುನಿಪುಣರೊಪ್ಪಿದರು ಬೀದಿಯಲಿ (ಕಂನವಿ. ೨–೭೭). **ಗೆಲ್ಲು$_1$**: ೧. ವಿಜಯನಾಗ್ಯೆ ಕಂದ ನೀನವನಿಜೆಯ ಗಂಡನ ಗೆಲ್ಲು

(ಕಾಶಿರಾ. ೨೮-೬) ; ಕಂದ ಕೇಳ್ ನಿನ್ನ ಗೆಲ್ಲುವರುಂಟು (ಮೋಹತ. ೨೦-೬೮) ; ಮೌನದಿಂದೆ ಮನವ ಗೆಲ್ಲು (ಅನಿಕೇ. ೧೭-೬).

**ಗೆಲೆನುಡಿವವಂ** = ಚಿತ್ತಾಕರ್ಷಕವಾಗಿ ಮಾತನಾಡುವವನಂ ; ಆಸಕ್ತಿಯಿಂದ ಮಾತನಾಡುವವನಂ : "ಪ್ರಸಕ್ತಃ, ಪ್ರಸೃತಃ – ಈ ೨ ಗೆಲೆನುಡಿವವಂ" (ಹಲಾಯು. ೬೦-೨೦೯). **ಗೆಲೆವರ್** = ಸೋಲಿಸು ; ಮೀರು ; ಅಧಿಕವಾಗು : "ಅಲಗಣಸಾದುದು ಮಿಕ್ಕುದು ಗೆಲೆವಂದುದು . . . ಪೊಡೆದುದೆಯ್ದೆ ಮಾಱಿದುದೆಂದುಂ" (ಕವಿಕಂ. ೦೩೭) ; ಪಾಲ್ಗಡಲೊಳ್ ಪುಟ್ಟಿದಾನೆಯನಾನೆಗಳ್ ಗೆಲೆವರೆ (ಪಂಪಭಾ. ೫-೨೬) ; ಚಿತ್ತಜನಿಕ್ಷುಚಾಪಲತೆಯಂ ಗೆಲೆವಂದುದು ಪುರ್ವಿನೊಳ್ಪು (ಅಜಿಪು. ೨-೩೭); ತಂನಂ ಪ್ರತಿಯಿಟ್ಟ ವೀರರೊಡನೆ ತೂಗಿದೊಡೋವತ ವೀರಕ್ಕೆ ಮಾಧವಂ ಗೆಲೆವಂದಂ (ಸೌಇಇ. IX-I, ೨೪೯-೯೬ ; 1147).

[ ದೇ.॥ ತಮಿ. ಕೆಲಿ; ತುಳು. ಗೆಲಿ; ಕೊಡ. ಗೆಲ್; ತೆಲು. ಗೆಲು; ಕೊಲಾ. ಗೆಲ್ಲ್; ನಾಯ್ಕಿ. ಘೆಲ್ ]

**ಗೆಲ್₂, ಗೆಲ್ಲಿ₂, ಗೆಲ್ಲು₂** (ಕ್ರಿ). ಲೇಪಿಸಂ ; ಬಳಿ : ಬಾವನ್ನದಿಗುರಂ ಗೆಲ್ದು ಕಮ್ಮಲರ್ಗಳಂ ಸೂಡಿ . . . ಮೆಱೆದಂ ಸುಧನ್ವಂ (ಜೈಮಿಭಾ. ೦೧-೯೦). **ಗೆಲ್ಲಿ₂** : ಸಾರತರ ಸಾದಿನ ಜವಾಜಿಯ ಭೂರಿ ಪರಿಮಳದಿಂದ ನವಕಸ್ತೂರಿ ತಿಲಕವ ರಚಿಸಿ ಗೆಲಿದನು ತಿಗುರ ತವಕದಲಿ (ಕುವ್ಯಾಗ. ೫-೪೦) ; ಇತ್ತಲಾ ದಮಯಂತಿಗೆ . . . ಗೆಲಿ[ಪಾಠಾಂ. ತೀಡಿ]ದರು ತಿಗುರ ಮಿಗೆ ವಿವಿಧೋಪಚಾರದಲಿ (ನಳಚ. ೩-೫೩). **ಗೆಲ್ಲು₂** : ತಿಗುರ ಗೆಲುವುದು ವಶ್ಯ ತಿಲಕಾದಿಗಳನಿಡುವುದು (ಕುವ್ಯಾಅ. ೦೩-೨). [ ? ]

**ಗೆಲ** 'ಗೆಲ್ಲ' ನೋ.

**ಗೆಲಂಬಡೆ** 'ಗೆಲ್ಲಂಬಡೆ' ನೋ.

**ಗೆಲಪು** (ನಾ). ಗೆಲವು; ಜಯ : ತಳಿರ್ಗಣೆಗಳು ಕಡುಗೆಲಪನಾಂತವು ಕೇಳು ಕುಲಿಶೋಪಮರಮ್ಯದಂತಾ (ಚಂಪ್ರಸಾಂ. ೦೦-೨೬).

[ ಗೆಲ್₁ + – ಪು./ತಮಿ. ಕೆಲಿಪ್ಪು ; ತುಳು. ಗೆಲ್ಪು ; ತೆಲು. ಗೆಲುಪು, ಗೆಲ್ಪು ]

**ಗೆಲವಾನ್** (ಕ್ರಿ). ಸಂತಸಪಡು ; ಸಂತೋಷವನ್ನು ಹೊಂದು : ಬೀಳ್ಕೊಂಡು ಗೆಲವಾಂತು ಗುರುಪಾದವ ಕೂರ್ತು ನಡೆದಳು ಜಲಜಾಕ್ಷಿ ಗಗನವಟ್ಟೆಯಲಿ (ಮೋಹತ. ೨೯-೭). [ ಗೆಲವು (<ಗೆಲ್ವು) + ಆನ್₁ ]

**ಗೆಲವಾಳ್** (ಕ್ರಿ). = ಗೆಲವಾನ್ : ಗೆಲವಾಳ್ವ ಗೋಪಸ್ತ್ರೀರಾಜ್ಯಮೆಂದೆನೆ ಬೆಲೆವೆಣ್ಣ ಕೇರಿಯೊಪ್ಪಿದುದು (ಶ್ರೀಪಾಲ. ೦-೭೭).

[ ಗೆಲವು (<ಗೆಲ್ವು) + ಆಳ್₁ ]

**ಗೆಲವು** 'ಗೆಲ್ವು' ನೋ.

**ಗೆಲವುಗಂಬ** 'ಗೆಲುವುಗಂಬ' ನೋ.

**ಗೆಲವೆಣ್** 'ಗೆಲ್ಲವೆಣ್' ನೋ.

**ಗೆಲವೆಱು** (ಕ್ರಿ). ಜಯ ಹೊಂದಂ ; ಗೆಲ್ಲಂ : ಗೆಲವೆತ್ತ ಜಯರಾಜಗಿತ್ತನು ಮನ್ನಣೆಗಳ ಸಭೆ ತಲೆದೂಗುವಂತೆ (ಭರತೇ. ೩೫-೦೨).

[ ಗೆಲ (<ಗೆಲ್ಲ) + ಪೆಱು₁ ]

**ಗೆಲಿ₁** 'ಗೆಲ್₁' ನೋ.

**ಗೆಲಿ₂** 'ಗೆಲ್₂' ನೋ.

**ಗೆಲಿಸು, ಗೆಲ್ಲಿಸು** (ಕ್ರಿ). ಗೆಲ್ಲುವಂತೆ ಮಾಡಂ ; ಜಯಿಸುವಂತೆ ಮಾಡಂ : ಎಮ್ಮೆಮ್ಮಂ ಕೆಯ್ಕೊಂಡು ಗೆಲಿಸಲ್ವೇಟ್ಕುಂ (ಪಂಪಭಾ. ೯-೧೦೭) ; ಭಕ್ತರಂ ಗೆಲಿಸಿ ಪ್ರತ್ಯಕ್ಷಂಗಳಂ ತೋಱಿ . . . ಪರಮಸುಖದಿಂದಪ್ಪುದು (ಬಸರ. ೯-೫೪) ; ಬಿಜ್ಜಳನ ಸಭೆಯಲಿ ಗೆಲಿಸಿದನು ತನ್ನಯ ಸಮಯವಂ . . . ಬಸವಯ್ಯ (ಬಸಪು. ೫೯-೫೫) ; ಗೆಲಿದವರ ಸೋಲಿಸಿ ಗೆಲಿಸುವುದು ಸೋತವರನೀ ವಿಪರೀತಗತಿ ವಿಧಿಗೆ (ಕುವ್ಯಾಕ. ೦೨-೩) ; ಮಾಸಾಳಾದಂಗಜವೀರಗೆ ಪೂವಿನ ಬಾಳಂ ಜಳಪಿಸಿ ರತಿಯನುರಾಗದಿ ಗೆಲಿಸಿ ಕೊಡುವ ತೆಱದಿ (ಜಯುಕಾ. ೧-೫೯). **ಗೆಲ್ಲಿಸು** : ಚುನಾವಣೆಯಲ್ಲಿ ತಮ್ಮ ಅಭ್ಯರ್ಥಿಯನ್ನು ಗೆಲ್ಲಿಸಲು ಬಹಳ ಪ್ರಯತ್ನ ಮಾಡಿದರು (ರೂಢಿ). [ ಗೆಲ್₁ + – ಇಸು₃ ]

**ಗೆಲು₁** 'ಗೆಲ್₁' ನೋ.

**ಗೆಲು₂** 'ಗೆಲ್₂' ನೋ.

**ಗೆಲು₃, ಗೆಲ್ಲು₃** (ನಾ). ವಿಜಯಂ ; ಗೆಲವು : ಪೊಡವಿಯೊಳಾರದು ಗೆಲು ಸೋಲವೆಂಬುದು ಜಡಮತಿ ತಿಳಿದು ಪೇಳೆನಗೆ (ಮೋಹತ. ೪೦-೩೦). **ಗೆಲ್ಲು₃**: ಗೆಲ್ಲು ಸೋಲಿಂಗೆ ಹೋರುವವನಲ್ಲ ಶರಣ (ಅಖಂಡೇ. ೦೩೨-೦೦೩) ; ಗೆಲ್ಲಿನ ಬಿಲ್ಲೆ ಮೂಡಿತೆ ? (೧೯ವಿಂ. ೫೨-೦೦). 'ಗೆಲ್ವು' ಪರಾ.

[ ಗೆಲ್₁ + – ಉ₄ ]

**ಗೆಲುಗಯ್ಯ** (ನಾ). ಗೆಲುವನ್ನು ಪಡೆಯುವವನು ; ಜಯಶೀಲ : ಅಲರಂಬ ಸಮರೂಪ ಸಲೆ ಜಾಣ ಸಂಪನ್ನ ಗೆಲುಗಯ್ಯ (ಮುಡಿಕಾ. VI, ೦೫೩೬). [ ಗೆಲು₃ + ಕಯ್₂ (<ಕೆಯ್₂) + – ಅ₇ ]

**ಗೆಲುಗೆ** (ನಾ). ಗೆಲ್ಲುವಿಕೆ ; ಜಯಿಸುವಿಕೆ : (+).

[ ಗೆಲು₁ (<ಗೆಲ್₁) + – ಗೆ ]

**ಗೆಲುಗೈ**(ನಾ). ೧. ಗೆಲವಿನಿಂದ ಕೂಡಿದುದು; ವಿಜಯಶಾಲಿಯಾದುದು: ಹೇಳುವೆನು ನಿನಗಿನ್ನೊಮ್ಮೆ ಗೆಲುಗೈಯಹ ಮನೋರಥವ [ಪಾಠಾಂ. ವಿವರಿಸಲು ಕೇಳಿದನು ಜನಮೇಜಯ ಮಹೀಪಾಲ] (ಕುವ್ಯಾವಿ. ೬೦೫. ೪-೯೭). ೨. ಪ್ರಭುತ್ವ ; ಮೇಲುಗೈ : ಊಳಿಗವರ್ಗಕ್ಕೆ ಸಲುವಷ್ಟು ಗೆಲುಗೈಯ ತಾಳಿಕೊಂಡಿರಬೇಕು ಭಟನು (ಸೌಂದಕಾ. ೭-೦೩೫).

[ ಗೆಲು₁ (<ಗೆಲ್₁) + ಕೈ₂ (<ಕೆಯ್₂) ]

**ಗೆಲುಮುಖ** (ನಾ). ಗೆಲವಿನ ಮುಖ ; ಸಂತೋಷದ ಮುಖ ; ಉತ್ಸಾಹದ ಮುಖ : ಅವರ ಪ್ರಶ್ನೆಗೆ ಗೆಲುಮುಖದಿಂದಲೇ ನಾನು ಹೇಳಿದೆನು (ಹೇಮಂತ. ೩೦೩). [ ಗೆಲು₃ + ಮುಖ ]

**ಗೆಲುಮೊಗ** (ನಾ). = ಗೆಲುಮುಖ: (ಚಟಿಕೆ ಹೊಡೆದು, ಗೆಲುಮೊಗದಿಂದ) ಊಂ, ಒಂದು ಸೊಗಸಾದ ಉಪಾಯ (ತುಂಗಭ. ೩೦). [ಗೆಲು₃+ಮೊಗ₂]

**ಗೆಲುವಡೆ** (ಕ್ರಿ). = ಗೆಲ್ಲಂಬಡೆ : ಗೆಲುವಡೆದು ಮುನ್ನಡೆಯೆ ಪಡೆಯ ಪಾಂಗಿನಲಿ (ಕಾಲೂರ. ೦೦೦-೨೦೨). [ ಗೆಲು₃ + ಪಡೆ₁ ]

**ಗೆಲುವು** 'ಗೆಲ್ವು' ನೋ.

**ಗೆಲುವುಗಂಬ, ಗೆಲವುಗಂಬ** (ನಾ). ವಿಜಯದ ಗುರುತಿಗಾಗಿ ನಿಲ್ಲಿಸಿದ ಕಂಬ ; ಜಯಸ್ತಂಭ : ಚೆಲುವು ನೆಟ್ಟಿಹ ಗೆಲುವುಗಂಬದಂತಿಹ ತಾಜಮಹಲಲ್ಲಿ ಮಲಗಿಹರು ಇವರಿಬ್ಬರು! (ಕರುಶ್ರಾ. ೬೭-೦೯). **ಗೆಲವುಗಂಬ**: ಇಂದಿಗೂ ನನ್ನಯ್ಯನ ಚರಿತ್ರೆ ಗುರುಭಕ್ತಿಯ ಗೆಲವುಗಂಬವಾಗಿ ನಿಂತಿದೆ (ಶರಣ. ೩೪೩). 'ಗೆಲ್ಗಂಬ' ಪರಾ.

[ ಗೆಲುವು (<ಗೆಲ್ವು) + ಕಂಬ₁ (<ಕಂಭ) ]

**ಗೆಲುಹ** (ನಾ). ಗೆಲವು ; "ವಿಜಯ, ಜಯ" (ನಾಚಿರಾ. +).

[ ಗೆಲು₁ (<ಗೆಲ್₁) + – ಹ₂ ]

**ಗೆಲ್ಕೆ** (ನಾ). ಗೆಲ್ಲುವಿಕೆ ; ಜಯಿಸುವಿಕೆ ; ಗೆಲವು : "ಜಿತಿಃ = ಗೆಲ್ಕೆ" (ಕಾಶಕ್ಕ. ೭೮). [ ಗೆಲ್₁ + – ಕೆ ]

**ಗೆಲ್ಗಂಬ, ಗೆಲ್ಲಂಗಂಬ** (ನಾ).=ಗೆಲುವುಗಂಬ : ಐದುವೆ ಗೆಲ್ಗಂಬದೆಡೆಯನು ಸ್ಯಂದನಶತವನು ದೂಡಿ (ಇಂಚಾಪ. ೨೨೪-೯) ; ರಘೂದ್ವಹನ ಪೂಣ್ಕೆ ಪೂಡಿದುದು ಲಂಕೆಯ ನೆಲದಿ ತನ್ನಡಿಯ ಗೆಲ್ಗಂಬಮಂ (ಶ್ರೀರಾಮಾ. ೫೯೯-೪೨೦). **ಗೆಲ್ಲುಗಂಬ**: ನಿಲ್ಲಿಸಲು ಗೆಲ್ಲುಗಂಬ! ನಿನಗದುವೆ ಗಲ್ಲುಗಂಬ! (ನಿರೀಕ್ಷೆ. ೮೫). [ ಗೆಲ್₁ + ಕಂಬ₁ (<ಕಂಭ) ]

**ಗೆಲ್ದನಿ** (ನಾ). ಗೆಲವಿನ ಧ್ವನಿ ; ಉತ್ಸಾಹದ ಧ್ವನಿ : (ಗೆಲ್ದನಿ) ಹೂಂ . . . ಅದಕ್ಕೇ ಹೇಳಿದ್ದು (ತುಂಗಭ. ೬೦). [ ಗೆಲ್₁ + ದನಿ₂ ]

**ಗೆಲ್ನೋಟ** (ನಾ). ಗೆಲವಿನ ನೋಟ; ವಿಜಯದ ದೃಷ್ಟಿ: ಗೆಲ್ನೋಟದಿಂದ ಪ್ರೇಕ್ಷಕರ ಕಡೆಗೆ ಕಣ್ಣು ಹೊರಳಿಸಿದನು (ಪುನರು. ೩೬೨).
[ ಗೆಲ್$_1$ + ನೋಟ ]

**ಗೆಲ್ಮೆ** (ನಾ). ಗೆಲ್ಲುವಿಕೆ; ಗೆಲವು. 'ಗೆಲ್ಮೆಗೆಯ್ಮೆ' ಪರಾ.
[ ಗೆಲ್$_1$ + – ಮೆ$_1$ ]

**ಗೆಲ್ಮೆಗೆಯ್ಮೆ** (ನಾ). ಗೆಲವಿನ ಕೆಲಸ; ಜಯಪ್ರದವಾದ ಕಾರ್ಯ: ಆದುದಱಿನೆಂತಾನುಂ ಗೆಲ್ಮೆಗೆಯ್ಮೆಯಂ ಕಾಣ್ಬುದು (ಅದ್ಭುತ. ೩೦-೪).
[ ಗೆಲ್ಮೆ + ಗೆಯ್ಮೆ (<ಕೈಮೆ$_1$) ]

**ಗೆಲ್ಲ, ಗೆಲ** (ನಾ). ೧. ಗೆಲವು; ಜಯ; ವಿಜಯ: "ಜಯಮೆನೆ ಗೆಲ್ಲಂ" (ಚತುನಿ. ೩೩); ಅಟಿದುದು ಮತ್ತನೂಜಶತಮಾಜಿಯೊಳಿತ್ತಭಿಮನ್ಯುವೊರ್ವನತ್ತಟಿದನಿದಾವ ಗೆಲ್ಲಂ (ಪಂಪಭಾ. ೧೧-೧೧೯); ಕಿಱುಕುಳನೊಳ್ ಪಡೆ[ದ ಗೆಲ್ಲದಿಂದಂ] ಪಿರಿಯನೊಳ್ ಪಡೆವ ಸೋಲಮುತ್ತಮಂ (ಶಾಂತಿಪು. ೮-೧೫೦ ವ); ಭಕ್ತಂಗೆ ಸತ್ಯದ ಬಲ ನಿನಗೆ ಶಕ್ತಿಯ ಬಲ ಇಬ್ಬರ ಗೆಲ್ಲಕ್ಕೆ ಕಡೆ ಇಲ್ಲ (ಸಮೂವ. ೧೧): ಇರ್ವರ ಸೋಲಗೆಲ್ಲವರಸನ ಪುಣ್ಯಂ (ಅನಂಪು. ೧೧-೩೩); ನಾಳಿನ ಗೆಲ್ಲವೇ ಗೆಲವು (ಕುವ್ಯಾದ್ರೌ. ೯-೧೧). ೨. ಹರ್ಷ; ಸಂತೋಷ. 'ಗೆಲ್ಲಂಗೊಳ್' ಪರಾ. **ಗೆಲ:** ೧. "ಜಯನಾಮದೊಳ್ ಗೆಲಂ" (ಕರ್ಣಾನಿ. ೩೮); "ಗೆಲಮೆನೆ ಜಯ" (ಚತುನಿ. ಶಿ. I, ೮೩).

**ಗೆಲ್ಲಸೋಲ, ಗೆಲ್ಲಸೋಲು** = ಜಯಾಪಜಯ; ಗೆಲವು ಮತ್ತು ಸೋಲು: ಗೆಲ್ಲಸೋಲಕ್ಕೆ ಹಾರದೆ ತನುವಿನಿಚ್ಛೆಯಲ್ಲಿ ಸುಳಿಯದೆ . . . ಕಾಯವಿದ್ದು ಅಕಾಯರಾಗಿಪ್ಪರ್ಯ್ಯಾ (ಆದವ. ೩೦-೮೭); ಗೆಲ್ಲಸೋಲವದೇಕೆ ಸೇವಿಸು ಮೆಲ್ಲಮೆಲ್ಲನೆ ನೀವೆನುತ್ತಂ (ಬಸಪು. ೩೯-೧೧); ಉಂಟಲ್ಲವೆಂಬ ಗೆಲ್ಲಸೋಲಿನ ಮಾತಿನ ಮಾಲೆಯ ತೊಡಿಗೆಯಳಿದಂದು . . . ಆನೆಂಬುದು ನೀನೆಂಬುದು ಒಂದೆ ಕಾಣಾ (ಆದವ. ೩೦-೦೯೭).
[ ಗೆಲ್$_1$ + – ಅ$_6$ ]

**ಗೆಲ್ಲಂಕ** (ನಾ). ಗೆದ್ದ ಕಾಳಗ,—ಯುದ್ಧ: ಗೆಲ್ಲಂಕದಂತೆ ಮೆಯ್ವೆರ್ಚಿ ಮದುವೆಯ ಮನೆಯಂತೊಸಗೆಗೆ ಮರುಳ್ಗೊಂಡು (ಧರ್ಮಾಮೃ. ೮-೨೦೫).
[ ಗೆಲ್ಲ + ಅಂಕ೨ ]

**ಗೆಲ್ಲಂಗುಡು** (ಕ್ರಿ). ೧. ಸೋಲೊಪ್ಪಿಕೊಳ್ಳು: ಮಾರ್ಪಡೆ ಗೆಲ್ಲಂಗುಡೆ ತಮ್ಮುತಿರ್ವರುಮುರ್ವುರ್ವೆಟ್ಟಿನಂ ಕಾದಿದರ್ (ಶಾಂತಿಪು. ೪-೩೫); ಗೆಲ್ಲಂಗು[ಪಾಠಾಂ. ಕು]ಡದಿರ್ಕೆ ಪೊಣರ್ದೊಡಾರ್ಗಂ ಗಂಡಂ (ಕಾವ್ಯಾವ. ೨೫೩). ೨. ಗೆಲವಿನ ಕಾಣಿಕೆಯನ್ನು ಕೊಡು; ಮೆಚ್ಚುಗೆಯನ್ನು ಕೊಡು: ಗಂಟಲಂ ಮೆಟ್ಟಿದೊಡಿಟ್ಟೆಡೆಯೊಳ್ಕೊಟ್ಟಂ ಗೆಲ್ಲಂಗುಡುವಂತೆ ನರಂಗೆ ಪಾಶುಪತಮಂ ರುದ್ರಂ (ಗದಾಯು. ೩-೩೯); ಎಕ್ಕಲರಸ ಸೋವರಸ ನೋಡಿ ಮೆಚ್ಚಿ ಗೆಲ್ಲಂಗುಡೆ (ಕಇ. IV, ೨೩-೮; 1157).
[ ಗೆಲ್ಲ + ಕುಡು$_1$ (<ಕೊಡು$_1$) ]

**ಗೆಲ್ಲಂಗೊಳ್, ಗೆಲ್ಲಗೊಳ್** (ಕ್ರಿ). ೧. ಗೆಲವನ್ನು ಪಡೆ; ಜಯ ಹೊಂದು; ಸೋಲಿಸು: ವಿಸಸನದೊಳಂತೆ ನೀಮುಂ ಪೆಸರಂ ಕರ್ಣಂಗೆ ಮಾಡಿ ಗೆಲ್ಲಂಗೊಳ್ವಿಂ (ಪಂಪಭಾ. ೦೨-೯೧); ಗೆಲ್ಲಂಗೊಂಡ ಕಾಳೆಗದಂತೆ (ಧರ್ಮಾಮೃ. ೧೧-೫); ರಾಜಮೌಳಿಯಂ ಮಲ್ಲಯುದ್ಧದಿಂ ಗೆಲ್ಲಂಗೊಂಡು . . . ಅಪ್ರತಿಮಲ್ಲನೆನಿಸಲುಂ (ಜಗವಿ. ೧೫-೫ ವ). **ಗೆಲ್ಲಗೊಳ್:** ೨. ಸಂತೋಷಿಸು; ಹರ್ಷಗೊಳ್ಳು: ಗರತಿಗೆಲಸವೆಂದು ಗೆಲ್ಲಗೊಂಡುರ್ಬದೆ ಪರಿಚಾರವೆಂದು ಪಳಿಯದೆ . . . ನಿರವಿಸಿದುದನೆಸಗುವುದು (ಹದಿಬ. ೩-೩೩).
[ ಗೆಲ್ಲ + ಕೊಳ್$_1$ ]

**ಗೆಲ್ಲಂಬಡೆ, ಗೆಲಂಬಡೆ** (ಕ್ರಿ). = ಗೆಲ್ಲಂಗೊಳ್ ೧: ಗೆಲ್ಲಂಪ[ಬ]ಡೆದ ಪಂದೆಯಂತೆ ಜವ್ವನಂಬಡೆದ ಮುದುಪನಂತೆ (ಧರ್ಮಾಮೃ. ೫-೦೨೫); ಗೆಲ್ಲಂಬಡೆದರದಟಿನಿಂ ರಾಯರಾವುತ್ತರಾಗಳ್ (ಕಬ್ಬಿಗಕಾ. ೨೭೯). **ಗೆಲಂಬಡೆ:** ಅವರ ಯುಕ್ತಿಯಂ ಕೌತುಕಮೆನಿಪ್ಪಂತೆ ಖಂಡಿಸಿ ಗೆಲಂಬಡೆದು (ಪಾಸೋಪು. ೯-೦೭೮). [ ಗೆಲ್ಲ + ಪಡೆ$_1$ ]

**ಗೆಲ್ಲಕಾಱ** 'ಗೆಲ್ಲಗಾಱ' ನೋ.

**ಗೆಲ್ಲಗಂಬ** (ನಾ).=ಗೆಲುವುಗಂಬ: ಬಸಂತಂ ನಟ್ಟ ಕಾವನ ಗೆಲ್ಲಗಂಬಮೆನೆ ಕಾಯ್ಗೊನೆ ಪಣ್ಗೊನೆಯಿಂ ಕಣ್ಗೆಡ್ಡಮಾಗಿರ್ಕುಂ ಕೌಂಗುದೋಂಟಂ (ರಾಮಾಶ್ವ. ೮-೨೩). [ ಗೆಲ್ಲ + ಕಂಬ$_1$ (<ಕಂಭ) ]

**ಗೆಲ್ಲಗಾರ್ತಿ** (ನಾ). ಗೆಲ್ಲುವವಳು; ಜಯಶಾಲಿನಿ: ಬಳೆಗಾರ್ತಿ, ಗೆಲ್ಲಗಾರ್ತಿ, ಆಟಗಾರ್ತಿ (ಭಾಷಾಭೂ. ೦೮೯ ಉದಾ).
[ ಗೆಲ್ಲಗಾಱ + –ತಿ$_1$ (<–ಇತ್ತಿ) ]

**ಗೆಲ್ಲಗಾಱ, ಗೆಲ್ಲಕಾಱ** (ನಾ) ಗೆಲ್ಲುವವನು; ವಿಜಯಶಾಲಿ: ಜೊನ್ನಹರವರಿಗಾಱ ಕಾವನ ಗೆಲ್ಲಗಾಱ ಚಂದಿರನುದಿಸಿದ (ವರ್ಧಚ. ೮-೭); ಆಟಗಾಱಂ, ಗೆಲ್ಲಗಾಱಂ (ಶಬ್ದಾನು. ೩೮೩ ಪ್ರಯೋ). **ಗೆಲ್ಲಕಾಱ:** ಬಸನಿಯ[ಯ]ಗೆಲ್ಲಕಾಱನ ನೆಗಟ್ತೆಗೆ ಕೇಳಿಗೆ ನಾಡೆ ಗೆಂಟು (ಆದಿಪು. ೦೨-೦೮); ಕಟ್ಟಣ್ಮುಕಾಱಂ ವಿತತ ವಿತರಣೋತ್ಸಾಹದೊಳ್ ಗೆಲ್ಲಕಾಱಂ ಪರವಾದಿವ್ರಾತದೊಳ್ (ಅರ್ಧನೇ. ೦-೩೭); ಬಾಣಸಿಗವೇಷವನಾಂತ ಗೆಲ್ಲಕಾಱನು ಭೀಮಸೇನ (ನೇಮಿಸಂ. ೨೫-೦೦೦). [ ಗೆಲ್ಲ + –ಕಾಱ ]

**ಗೆಲ್ಲಗುಳಿ** (ನಾ). ಗೆಲ್ಲಬೇಕೆಂಬ ಛಲವುಳ್ಳವನು,–ಹಠಮಾರಿ: ಛಲಕ್ಕೆ ಬಾರವೆಂಬ ಬಾಲೋತ್ತರವ ನುಡಿದು ಬಾಲಹರಾದೆವೆಂಬ ಗೆಲ್ಲಗೂ[ಗು]ಳಿಗಳು ಕೇಳಿರೋ (ಮೋಳಿಮಾ. ೫೭-೨೫೯); ಶ್ರುದ್ಧೆ ಸನ್ಮಾರ್ಗಿಗಳಲ್ಲಿಅಲ್ಲದೆ ಗೆಲ್ಲಗುಳಿಗಳಲ್ಲಿ ಇಲ್ಲ (ಬಾಬೊಮ್ಮ. ೦೬); ತಗರಕಾಳೆಗದ ಪ್ರಭುವಾ ತೆಱದೊಳ್ಕಿದುವಂ ಮಿಗೆ ಗೆಲ್ಲಗೂ[ಗು]ಳಿಯಂಗಡಿಯ ಕಜ್ಜಾಯಗಳ ತೆಗೆತೆಗೆದು ಮೆಲುತಿರಲ್ಕಿರದವರ್ ಕೊಲ್ಲುತಿರಲು (ಚಬಪು. ೬೩-೨೮). [ ಗೆಲ್ಲ + – ಗುಳಿ$_2$ (< – ಕುಳಿ$_3$) ]

**ಗೆಲ್ಲಗುಳಿತನ** (ನಾ). ಗೆಲ್ಲಬೇಕೆಂಬ ಹಠ; ತಾನೆ ಗೆಲ್ಲಬೇಕೆಂಬ ಸ್ವಭಾವ: ಅಲ್ಲಿ ಇಲ್ಲಿ ಎಂಬ ಗೆಲ್ಲಗೂ[ಗು]ಳಿತನಬೇಡ (ಮಂದೇವ. ೨೮೭-೬೨); ತಾನೇ ಬಲ್ಲಹನೆಂದು ಇಲ್ಲದ ಹುಸಿಯ ಗೆಲ್ಲಗೂ[ಗು]ಳಿತನಕ್ಕೆ ವಲ್ಲಭನೆಂದು . . . ನಿಲ್ಲದೆ ಹೋರುವ ಖುಲ್ಲನ ನೋಡಾ (ಮೋಳಿಮಾ. ೦೭೦-೬೪೦).
[ ಗೆಲ್ಲಗುಳಿ + – ತನ ]

**ಗೆಲ್ಲಗೈಯ** (ನಾ). ಗೆಲ್ಲುವವನು; ಜಯಶೀಲ: ಗೆಲ್ಲಗೈಯರು ವೀರರು ಜಸವೆಣ್ಣೊಲವಿಲ್ಲದರಿಲ್ಲವಾ ಪುರದೊಳು (ಸೂಬಸೋ. ೦-೩೪). 'ಗೆಲುಗಯ್ಯ' ಪರಾ. [ ಗೆಲ್ಲ + ಕೈ$_2$ (<ಕೆಯ್$_2$) + – ಅ$_7$ ]

**ಗೆಲ್ಲಗೊಳ್** 'ಗೆಲ್ಲಂಗೊಳ್' ನೋ.

**ಗೆಲ್ಲತನ** (ನಾ).=ಗೆಲ್ಲಗುಳಿತನ: ಜಂಗಮ ಜಾತಿಗೊಳಗಾದ ಇವನೆಲ್ಲವ ಹೇಳಿ ಹೇಳಿ ಯೆನಗಿದು ಪೊಳ್ಳಿತ್ತೊ ಹೊಲ್ಲವೊ ಗೆಲ್ಲತನ ಬೇಡ ಆತುರವೈರಿ ಮಾರೇಶ್ವರಾ (ನಗಿಮಾ. ೮೪). [ ಗೆಲ್ಲ + – ತನ ]

**ಗೆಲ್ಲವಱೆ** (ನಾ). ಗೆದ್ದ ಉತ್ಸವದಲ್ಲಿ ಬಾರಿಸುವ ವಾದ್ಯ; ವಿಜಯದುಂದುಭಿ: ಮುಚ್ಚಿ ಮುಸುಕಿಟ್ಟು ಬಂದಂ ಗೆಲ್ಲವಱೆಯೊಳಗೆ (ಐಶಾರ. ದೇ. ೦೨೨-೨೦); ಗೆಲ್ಲವಱೆಯ ರಭಸದಿ . . . ಪಲ್ಲಕ್ಕಿಯೇಱಿ (ಭರಚ. ೫೫-೬೯). [ ಗೆಲ್ಲ + ಪಱೆ$_1$ ]

**ಗೆಲ್ಲವಾಱು** (ಕ್ರಿ).ಉತ್ಸಾಹ ಕುಂದು: ಉರಗರ್ ಜೇರೇಱೆ ಪಾತಾಳದೊಳಖಿಳದಿಶಾಚಕ್ರಮುಂ ಗೆಲ್ಲವಾಱುತ್ತಿರೆ ಪೊಯ್ದುತ್ತಬ್ಬಿ ಬಂಭಾರವಮೊಗೆಯೆ (ಜಗವಿ. ೬-೬೨). [ ಗೆಲ್ಲ + ಆಱು$_1$ ]

**ಗೆಲ್ಲವೀ** (ಕ್ರಿ).=ಗೆಲ್ಲಂಗುಡು ೧: ಕೃಷ್ಣಂ ರಿಪುಕರಿಗಿನಿಸಂ ಗೆಲ್ಲವೀವಂತೆ ಪೋರ್ದಂ ಕಿಱಿದಾನುಂ ಬೇಗದಿಂದೆ (ಜಗವಿ. ೬-೫೨).
[ ಗೆಲ್ಲ + ಈ$_2$ ]

**ಗೆಲ್ಲವೆಣ್**, ಗೆಲವೆಣ್ (ನಾ). ಜಯಲಕ್ಷ್ಮಿ; ವಿಜಯಶ್ರೀ: ಧುರದೊಳು ಗೆಲ್ಲವೆಣ್ಗೊಡೆಯ ನೀನಾಗು (ಕುರಾಸಾಂ. ೦೨-೦೯); ಅವರ್ಗಳ ನೆರಂಬಾರದಾ ಗೆಲ್ಲವೆಣ್ಣ ಮುಂದಲೆಯನ್ ಈಟ್ಟಿನ್ (ಅಶ್ವತ್ಥಾ. ೩೦-೬೨೩). **ಗೆಲವೆಣ್**: ಗೆಲವೆಣ್ಣಂಗಭವನ ನಿಡುದೋಳ್ವಲೆಯನೇಟಿ (ಸಾಳ್ವಭಾ. ೦೬-೫೩).

[ ಗೆಲ್ಲ + ಪೆಣ್ ]

**ಗೆಲ್ಲಸೇಸೆ** (ನಾ). ಗೆಲವಿನ ಸೇಸೆ; ಗೆಲವನ್ನು ಹಾರೈಸಿ ಸೂಸುವ ಶೇಷಾಕ್ಷತೆ; ಮಂತ್ರಾಕ್ಷತೆ: ತನ್ಮಾತೆಯ ಪದತಳಕ್ಕೆರಗಿ ನಲವರಕೆಗಳಂ ಗೆಲ್ಲಸೇಸೆಗಳಂ ಪಡೆದು (ವೃಷವಿ. ೪೨-೨೦ ವ). [ ಗೆಲ್ಲ + ಸೇಸೆ ]

**ಗೆಲ್ಲಾಳು** (ನಾ). ಗೆಲ್ಲುವವನು; ವಿಜಯಶಾಲಿ: ಗೆಲ್ಲಾಳುಗಳಿಲ್ಲರು ಬಿಲ್ಲನೂಟಿ ನಿಂದಿರಲಾಗಿ (ಪೋಳಿಮಾ. ೦೮೬-೬೯೯).

[ ಗೆಲ್ಲ + ಆಳು$_3$ (<ಆಳ್$_3$) ]

**ಗೆಲ್ಲಿಸು** 'ಗೆಲಿಸು' ನೋ.

**ಗೆಲ್ಲು$_1$** 'ಗೆಲ್$_1$' ನೋ.

**ಗೆಲ್ಲು$_2$** 'ಗೆಲ್ಲು$_3$' ನೋ.

**ಗೆಲ್ಲು$_3$** (ನಾ). ಕೊಂಬೆ; ರೆಂಬೆ; ಟೊಂಗೆ: ಮರಗಳಿಂದ ಉದುರಿದ ಗೆಲ್ಲುಗಳನ್ನು, ದರಗನ್ನು ಒಟ್ಟುಮಾಡಬೇಕಾಯಿತು (ಮುಗಿಯು. ೩೬೨); ನಾನು . . . ಅಶ್ವತ್ಥದ ಗೆಲ್ಲುಗಳನ್ನು ಎಣಿಕೆ ಹಾಕುತ್ತಲಿದ್ದೆ (ಮೈಲಿಮಾ. ೦೦೦); ದಾರಿಗೆ ಬಾಗಿದ ಗೆಲ್ಲುಗಳಿಗೆಲ್ಲಾ ಶಸ್ತ್ರಚಿಕಿತ್ಸೆ . . . ಮಾಡಿಸುತ್ತೇನೆ (ಗಂಗಾವ. ೫). [ ದೇ.೩ ತುಳು. ಗೆಲ್ಲ್ ]

**ಗೆಲ್ಲುಗ** (ನಾ). (?): ಗೆಲ್ಲುಗನ ಧರ್ಮಂ ಕಾವೋನುಂ ನಡಯಿಸುವೋನು × × × (ಎಕ. VIII, ನಗರ. ೯೫-೦೬; ಸು. 950). [ ? ]

**ಗೆಲ್ಲುಗಂಬ** 'ಗೆಲ್ಗಂಬ' ನೋ.

**ಗೆಲ್ಲುಮಂಕರಿ** (ನಾ). "ಜಾಲರಿ ತರ ಹೆಣೆದ ದೊಡ್ಡ ಮಂಕರಿ" (ನನ್ನೂರು. ಟಿಪ್ಪಣಿ); ಗೆಲ್ಲುಮಂಕರಿ ತುಂಬ ಮಣ್ಣನ್ನು ಒಬ್ಬೊಬ್ಬರೇ ಸಲೀಸಾಗಿ ಹೊರುತ್ತಿದ್ದರು (ನನ್ನೂರು. ೦೯೩). [ ಗೆಲ್ಲು$_3$ + ಮಂಕರಿ ]

**ಗೆಲ್ಲುಲಿ** (ಕ್ರಿ). ಗೆಲವಿನಿಂದ ಧ್ವನಿಮಾಡು; ವಿಜಯಧ್ವನಿಯನ್ನುಂಟುಮಾಡು: ಘೋರ್ಗರೆಯೆ ರಣಭೇರಿ ದುಂದುಭಿನಿನಾದಗಳ್, ಗೆಲ್ಲುಲಿಯೆ ಜನತುಮುಲ ಜಯಘೋಷಗಳ್ ದೈತ್ಯಸೇನಾನಿ ತೇರೇರಿದನು (ಶ್ರೀರಾಮಾ. ೬೪೯-೨೦೦). [ ಗೆಲ್$_1$ + ಉಲಿ$_1$ ]

**ಗೆಲ್ಲೂರ್** (ನಾ). ಒಂದು ಊರಿನ ಹೆಸರು: ಗೆಲ್ಲೂರ ಮಾರಗಾವುಣ್ಡ . . . ದೇಗುಲವ ಮಾಡಿಸಿದೊಂ (ಎಕ. VII, ಶಿವಮೊ. ೨೨-೩; 963).

[ ಗೆಲ್ಲ? + ಊರ್ ]

**ಗೆಲ್ಲೊಡೆ** (ಕ್ರಿ). ಕವಲೊಡೆ; ಶಾಖೆಯಾಗು: ನೆಲದೋರೆಗಾರನಾ ಮುಗಿದ ಪೊಗರಿನ ಕುಡಿಕೆ ಗೆಲ್ಲೊಡೆವ ಬಾಳ್ವರದೊಳಿರೆ ತೋರ್ಪಳಾಕೆ (ಕಾಲೂರ. ೩೪-೩೩); ಕೊಲ್ಲೆಯಿಂ ಗೆಲ್ಲೊಡೆವ ಬಯಲಿನೊಳ್ ಬಯಕೆಗಳ ನೆಲ್ಲಳಿದು ನೆಲ್ಲೂರ ಮೆಲ್ಲಲರ ಮಿಡಿದಂ (ಕಾಲೂರ. ೦೦೮-೨೨೨).

[ ಗೆಲ್ಲು$_3$ + ಒಡೆ$_1$ ]

**ಗೆಲ್ವು**, ಗೆಲವು, ಗೆಲುವು (ನಾ). ೧. ಗೆಲ್ಲುವಿಕೆ; ವಿಜಯಂ: "ಜೀಯಂ . . . ಜಯನೀಯಂ–ಈ ಶಿ ಗೆಲ್ವು" (ಕಾಶಕ್ಕೆ. ೭೮). ೨. ಶುಭಾಶಯ; ಹರಕೆ: ಲಕ್ಷ್ಮೀದೇವಿಯರ್ ಮೊದಲಾದ ಲಲನಾಜನಂ ವೀರವಿಭ್ರಮ ವಿಜಯಾಭವ ಎಂದು ಗೆಲ್ವನೀಯೆ (ಗಿರಿಕ. ೬-೭೨ ವ). **ಗೆಲವು**: ೧. ಭಕ್ತ ಸೋತಡೆ ಭಕ್ತನಡಿಗೆ ಗೆಲವು (ಸಮಾವ. ೦೦); ಗೆಲವೇನಿಲ್ಲದ ಯುದ್ಧ ಪಾಟುನೆಲದೊಳ್ಪೇಸಾಯ ನೀಚಾಶ್ರಯಂ . . . ಫಲದ ಭ್ರಾಂತಿಯ ತೋರ್ಪುದ್ದೈ (ಸೋಮೇಶ. ೨೩); ಕನಸಿನೊಳಂ ಪಿನಾಕಿಗೆ ಗೆಲವನೀಯದ ಭಾಷೆ ಭಕ್ತರುಗಳಿಗೆ ಗೆಲವಂ ಕೊಟ್ಟು ತಾ ಶರಣೆಂಬುದದು ಭಾಷೆ (ಬಸವು. ೬-೩); ತಪ್ಪೇನು ಸೋಲವು ಗೆಲವು ದೈವಾಧೀನ ನಿನ್ನಾಳ್ವನಕೆ ಕುಂದೇನು (ಕುಮ್ಮಾಕ. ೦೩-೨೦). ೩. ಸಂತೋಷ; ಸುಖ; ಉತ್ಸಾಹ: ಗೆಲವಂ ತೋಱದೆ ದುಃಖಮಪ್ಪ ಕಡೆಯೊಳ್ ಭೂತಂಗಳಾವಾಸದೊಳ್ ಸಲೆ ಬಲ್ಲರ್ ನಿಲೆ ಸಲ್ಲದೈ (ಸೋಮೇಶ. ೦೫). **ಗೆಲುವು**: ೧. ಗೆಲು[ಪಾಠಾಂ. ಲ]ವು ನಿಮಗಹಿತರಲಿ (ಕುಮ್ಮಾಆ. ೦೦-೩೦); ಒಂದೊಂದು ಗೆಲುವಿನಲ್ಲಿ ನೂರು ನೂರು ದನಗಳು ನೀಲನ ವಶಕ್ಕೆ ಬರಹತ್ತಿದವು (ಬಂಗಾಹೆ. ೫೨). ೩. ಧರ್ಮರಾಜನು . . . ವಿದುರನ ಮುಖದಲ್ಲಿ ಗೆಲುವು ಇಲ್ಲದ್ದನ್ನು ನೋಡಿ (ನಡಭಾ. ೯೦); ನನ್ನ ಮೈಗೂ ಗೆಲುವಿಲ್ಲ (ಮುಗಮಾಂ. ೦೦೦); ಮನೆಯೊಳು ಮೈಮರೆಯಿಸುವಂಥ ಸುಖವಿತ್ತು, ನೌಕರಿಯೊಳು ಗೆಲುವಿತ್ತು (ಇಂಚಾಪ. ೯೨-೯೭). 'ಗೆಲ್ಲು$_3$' ಪರಾ.

[ ಗೆಲ್$_1$ + – ವು./ತೆಲು. ಗೆಲುವ, ಗೆಲಿವಿ ]

**ಗೆಲ್ಸಿರಿ** (ನಾ).=ಗೆಲ್ಲವೆಣ್: ವಾಲಿ . . . ಗೆಲ್ಸಿರಿಗೆ ತನ್ನ ತೋಳೊಡ್ಡಾಣಮಂ ಮಾಡಿ ಪೊತ್ತುಯ್ವ ಮತ್ತಚಿತ್ತೋತ್ಸಾಹದಿಂ (ಶ್ರೀರಾಮಾ. ೨೮೦-೬೬).

[ ಗೆಲ್$_1$ + ಸಿರಿ ]

**ಗೆವಚು** (ಕ್ರಿ). ಹಿಂಡು; ಹಿಸುಕು: ಕವಿದು ಹೊಯ್ದು ಕಟ್ಟಿ ಕಚ್ಚಿ ಹಿಡಿದು ಒಡೆದು ತಿವಿದು ಗೆವಚಿ ರಾಕ್ಷಸರ ಚತುರಂಗಬಲವನ್ನು ಪುಡಿಪುಡಿ ಮಾಡಿದರು (ಮುಂಬಯಿ. ೬-೨೯೪). 'ಕಿವುಚು' ಪರಾ. [ ? ]

**ಗೆವರು** 'ಗಿಬರು$_1$' ನೋ.

**ಗೆವಿರ್ಗಾವುಂಡ** (ನಾ). ಒಬ್ಬಾತನ ಹೆಸರು: ಕೆಯ ಗೆವಿರ್ಗ್ಗಾವುಣ್ಡ ಕಲ್ಲ ಮಾಡಿಸಿ (ಮೈಆರಿ. ೦೯೨೩, ೦೦೫-೬; 963).

[ ಗೆವಿರ್$_0$ + ಗಾವುಂಡ (<ಗಾಮುಂಡ) ]

**ಗೆಳತಿ**, ಗೆಣತಿ (ನಾ). ೧. ಸಖಿ; ಕೆಳದಿ; ಮಿತ್ರೆ: "ಗೆಳತಿ ಹಟ್ಟುಗೆಯನಲ್ ಸಖಿ" (ಶಬ್ದಮಂ. ೭೫); "ಕೆಳದಿ ಗೆಳತಿಯೆನೆ ಸಖಿಯರ್ಕಳ್" (ಕವಿಕಂ. ೦೬೬); ಗೆಳತಿ ಮೈಮರೆತುದನ್ನು ಕಂಡು (ಹಾಹುತ್ತ. ೫೦); ಸಲುಗೆಯಿಂ ಗೆಳತಿಯರ ಕರೆಯೆ (ಕಾಲೂರ. ೦೨೩-೨೫೯); ಮೆಹರ ತನ್ನ ಗೆಳತಿಯರನ್ನೆಲ್ಲ ಚಹಕ್ಕೆ ಕರೆದಿದ್ದಳು (ಕುಂಕುಮ. ೦). **ಗೆಣತಿ**: ೧. ಗೆಣತಿ ಕೇಳೀತನ ಸುದ್ದಿಗಳನ್ನು (ಪುರಂದ. ೦-೨೦೯-೭); ಘನಮಾದ ಮುದದಿ ತನ್ನ ಗೆಣತಿಯರಿಗೆಲ್ಲ ಆ ಮಣಿಯ ತೋರಿಸಿ (ಸೌಗಂಧಿ. ೦೦೨-೦೦); ಗೆಣತಿಯರ ಮಧ್ಯದೊಳಲ್ಲಿ ಶೋಭಿಸುವಾ ಕುಂಭಕುಚ ಪದ್ಮಾವತಿಯ ಕಂಡು (ಅರ್ಜಾವಿ. ೦೬-೩೭). ೨. ಪ್ರೇಯಸಿ; ನಲ್ಲೆ: ಬಾರ ನನ ಗೆಣತಿ ತೆರಿತೆರೀ ನಿನ್ನ ಎದಿ ಕದಾ (ನಾದಲೀ. ೪೮-೦೦); ಇಂಥವನು . . . ಈ ಜೋಗಿತಿಯನ್ನು ಮೆಚ್ಚಿಬಂದು ಅವಳನ್ನು ತನ್ನ ಗೆಣತಿಯಾಗಿ ಮಾಡಿಕೊಂಡಿದ್ದಾನೆ (ಸಮಾಲೋ. ೫೦). 'ಕೆಳದಿ' ಪರಾ. ೩. =ಗೆಳತಿಎಳ್ಳು: (ಕ).

[ ಗೆಳೆ$_2$ (<ಕೆಳೆ$_2$) + – ತಿ$_1$ (< – ಇತ್ತಿ) ]

**ಗೆಳತಿಎಳ್ಳು** (ನಾ). ಚರ್ಮದ ಮೇಲೆ ಇರುವ ಕರಿಯ ಚುಕ್ಕೆ; ಕಾರೆಳ್ಳು; ಸಂಗಾತಿ: ಕಣ್ಸೆಳೆವ ಮಿಣುಮಿಣುಕು ಚುಕ್ಕೆ ಮಿಂಚುವ ಹಾಗೆ ಅಲ್ಲೊಂದು ಇಲ್ಲೊಂದು ಗೆಳತಿಎಳ್ಳು (ಅರಳು. ೨೩೩-೦).

[ ಗೆಳತಿ + ಎಳ್ಳು (<ಎಳ್) ]

**ಗೆಳಸು** 'ಗೆಟಿಸು' ನೋ.

**ಗೆಳೆ$_1$** 'ಕೆಳೆ$_1$' ನೋ.

**ಗೆಳೆ$_2$** 'ಕೆಳೆ$_2$' ನೋ.

**ಗೆಳೆಗಾರ್ತಿ**, ಗೆಣೆಕಾತಿ (ನಾ). ಜೊತೆಗಾತಿ; ಗೆಳತಿ; ಸ್ನೇಹಿತೆ: (ಕ). **ಗೆಣೆಕಾತಿ**: ನಮ್ಮ ಗೆಣೆಕಾತಿ ಹೊನ್ನೂರ ಬಣಜಿಗಿತಿ ಪುಣ್ಯಾತಗಿತ್ತಿ (ನಾಪದ. ೭೯); ವೈಯಾರಿ ಸಣ್ಣದನಿಯೊಳೆ ಗೆಣೆಕಾತಿ ವೈಯಾರ ಬಿಟ್ಟು ತೆರ ಹೇಳೆ (ಜಗೀತ. ೭೭).

[ ಗೆಳೆ$_2$ (<ಕೆಳೆ$_2$) + – ಕಾರ$_1$ (<– ಕಾಱ) + – ತಿ$_1$ (< – ಇತ್ತಿ) ]

**ಗೆಳೆಗೊಳ್** 'ಕೆಳೆಗೊಳ್' ನೋ.

**ಗೆಳೆಜೀವ** (ನಾ). ಗೆಳೆಯುಳ್ಳ ಜೀವ ; ಸ್ನೇಹಿತ : ತುಂಬಾ ಸೊಗಸಾಗಿದೆ ಎಂದು ಬೆನ್ನುತಟ್ಟಿ ಇದು ಅಚ್ಚಾಗುವಾಗ ಜೊತೆಗಿಲ್ಲದೆ ಹೋದ ಆ ಗೆಳೆಜೀವ (ಮಹಾಲ. ಬಿನ್ನಹ). [ ಗೆಳ್ಳ$_2$ (<ಕೆಳ್ಳ$_2$) + ಜೀವ ]

**ಗೆಳೆತನ** 'ಕೆಳೆತನ' ನೋ.

**ಗೆಳೆಮಾಟ** (ನಾ). ಗೆಳೆತನದ ಮಾಟ ; ಸ್ನೇಹದ ರೀತಿ : ಹುಡುಗರ ಹುಡುಗಾಟದಲ್ಲಿ ಬೆಡಗಿನ ಗೆಳೆಮಾಟದಲ್ಲಿ . . . ಕನಸುಗಳೇ ಬನ್ನಿ (ನಾದಲೀ. ೦೫-೦೭). [ ಗೆಳ್ಳ$_2$ (<ಕೆಳ್ಳ$_2$) + ಮಾಟ$_1$ ]

**ಗೆಳೆಯು** 'ಕೆಳೆಯಂ' ನೋ.

**ಗೆಳೆವಕ್ಕಿ, ಗೆಡೆವಕ್ಕಿ, ಗೆಣೆವಕ್ಕಿ, ಗೆಣೆಹಕ್ಕಿ** (ನಾ). ಜೋಡಿಹಕ್ಕಿ ; ಚಕ್ರವಾಕ : "ಪೊಣರ್ವಕ್ಕಿ ಜಕ್ಕವಕ್ಕಿಯುಮೆಣೆವಕ್ಕಿಯು ಜೋಡುವಕ್ಕಿ ಗೆಳೆವಕ್ಕಿಯುಂ . . . ಚಕ್ರವಾಕಮೆನಿಕ್ಕುಂ" (ಕವಿಕಂ. ೬೫). **ಗೆಡೆವಕ್ಕಿ :** "ಪೊಣರ್ವಕ್ಕಿ . . . ಗೆಡೆವಕ್ಕಿ, ಅವುಳ್ವಕ್ಕಿ–ಈ ೭ ಚಕ್ರವಾಕಂ" (ಕಶಸಾ. ೧೦-೨೦೦) ; ಒಡಲೆರಡಸುವೊಂದೆನೆ ಗೆಡೆವಕ್ಕಿಗಳಂತೆ ಕೂಡಿ ನಲಿಯುತ್ತಿರ್ದರ್ (ಪಂಠರಾಮಾ. ೪-೬) ; ಆ ವನದ ಮಧ್ಯದೊಳು ನಡೆವಕ್ಕಿ . . . ಕೂಗಟವಕ್ಕಿ ಗೆಡೆವಕ್ಕಿಯು . . . ಜೀವಿಪುವು ಭಯವನುಳಿದು (ಪ್ರಭುಪು. ೩-೧೪). **ಗೆಣೆವಕ್ಕಿ :** ಬೆದಱಿ ತಾ ಗೆ[ಪಾಠಾಂ. ದವುಯ]ಣೆವಕ್ಕಿ ಕೊಂಚೆಗಳೊದಱಿ ಹಾಯ್ದುವು . . . ಕಪಿಬಳದ ಕಳಕಳಕೆ (ತೊರರಾ. ೪-೦೦-೯). **ಗೆಣೆಹಕ್ಕಿ :** ಗೆಣೆಹಕ್ಕಿ ಬೆರೆದಾವೋ (ಸರ್ಪಾಗೀ. ೯೪-೪). [ ಗೆಳ್ಳ$_2$ (<ಕೆಳ್ಳ$_2$) + ಪಕ್ಕಿ$_1$ ]

**ಗೆಱೆ, ಗಱೆ, ಗೆರೆ** (ನಾ). ೧. ಗೀಟು ; ರೇಖೆ : "ಗೆಱೆ ರೇಖೆಯಕ್ಕು" (ಮಂಗರಾ. ೯೮-೦೫) ; ಕುಸುಮಾಸ್ತ್ರ ಮಂತ್ರದೇವತೆ ಗೆಱೆಯಂ ತೆಗೆವಂತೆ ಕಣ್ಗೆ ನುಣ್ಣಾಡಿಗೆಗುಡುಪಿಂ ರೇಖೆಗುಡುವಳ್ (ಲೀಲಾವ. ೦೨-೬೪). ೨. (ಉಗುರಿನಿಂದಾದ) ಗಂರುತು,–ಕೆರೆ : ನೋಡಿದಳ್ ಕುವರಿ ತನ್ನಯ ಮೊಲೆಗೆಲದಲ್ಲಿ ಮೂಡಿರ್ದ ಮೋಹನ ಗೆಱೆಯ (ಮೋಹತ. ೨೮-೦೦) ; ಕೂರುಗುರ್ಗಳ ಗೆಱೆಯ ಸೂತ್ರಬಂಧದೊಳೆಸೆವ ತೋರವೊಲೆಗಳ ಕುಂಭ ಸಂಸ್ಥಾಪನಂಗೆಯ್ದು (ಜೈಮಿಭಾ. ೦೦-೨೪). ೩. (ಆಲಂ) ಮಿಂತಿ ; ಮೇರೆ : ಎಮ್ಮಣ್ಣನಾಜ್ಞೆಯ ಗೆಱೆಯ ದಾಂಟಿದೆ (ಕುಮಾವಿ. ೩-೬೭). **ಗಱೆ :** ೧. ಗಱೆಯಿಲ್ಲದ ಕೋಲಿನಲಿ ಉದರೆಯನಿಕ್ಕಿದ ಭಂಡದ ಹರದನಂತಾದೆನಯ್ಯಾ (ಬಸವ. ೯೩೮) ; ನೊಸಲ ನಾಮದ ಗಱೆ ಪೆಱೆ ಗಜಕುಂಭದ ಪೊಸ ಮುತ್ತಿನ ಮಣಿದೊಡವೆ ಯೆಸೆವ ತಾ ರಾ ಮಾ ಲೆ (ಶ್ರೀಪಾಲ. ೭-೩೩). **ಗೆರೆ :** ೧. "ಗೆರೆಯೆನಲ್ ರೇಖೆಯಕ್ಕುಂ" (ಕಶರ. ೧೨೨) ; ಹೆಬ್ಬುಲಿಯು ನೋಡಿಲ್ಲಿ ಗು ಂ ಡೆ ಲ್ಲಿ ? ನೊಸಲಿನೊಳ್ ಹೆಬ್ಬಲ್ಲು, ಗೆರೆ (ಕಾಲೂರ. ೮೭-೦೬೮) ; ಸಾಂತಣ್ಣನ ಹಣೆಯ ಮೇಲೆ ವಿಸ್ಮಯದ ಗೆರೆ ಮೂಡಿತು (ಹಾಹುತ್. ೦).

**ಗೆರೆ ಎಳೆ=** ೧. ಗೀಟು ಹಾಕಂ ; ರೇಖೆಯನ್ನು ಮೂಡಿಸು. ೨. (ಆಲಂ) ನಿರ್ಬಂಧಪಡಿಸು ; ಸೀಮಿತಗೊಳಿಸಂ : ಆಯತ್ತವಾಗಿ ಹಿಟ್ಟಿನ ಮೇಲೆ ಗೆರೆ ಎಳೆಯುವುದಾದರೂ ಯಾಕೆ? (ಸ್ಮೃತಿಚಿ. ೬೭). **ಗೆರೆ ದಾಟು=** (ಆಲಂ) ಮಾತಂ ಮಿಾರು ; ಅಭಿಪ್ರಾಯವನ್ನು ಮಿಾರಂ : ಸೋಮು ವಿನ ತಂದೆ ತಮ್ಮ ಹೆಂಡತಿ ಹಾಕಿದ ಗೆರೆ ದಾಟುವ ಪ್ರವೃತ್ತಿಯವರಲ್ಲ (ತುಂಬಿಕೊ. ೩೬). **ಗೆರೆಯಷ್ಟು=**ಲವಲೇಶ ; ಕಿಂಚಿತ್ತು : ಸರಕಾರದ ವಿಧಿ ನಿಯಮಗಳಿಗೆ ಗೆರೆಯಷ್ಟೂ ಮಿಾರುವುದಿಲ್ಲ (ಬನ್ನಬೀ. ೦೨೫). **ಗೆರೆ ಹಾಕು=** ೧. ರೇಖೆಯನ್ನು ಮೂಡಿಸು ; ಗೆರೆಯೆಳೆ : (೬). ೨. ಮೊದಲು ಬರೆದುದರ ಮೇಲೆ ಅಡ್ಡರೇಖೆ ಎಳೆ ,–ಹೊಡೆದಂ ಹಾಕಂ : (೬). ೩. (ಆಲಂ) ಸೀಮೆಯನ್ನು ರಚಿಸಿ ನಿರ್ಬಂಧಿಸು ; ಮೇರೆ ಹಾಕಂ : ಅಂದರೆ ಗಂಡ ಗೆರೆ ಹಾಕಿದ ಕ್ಷೇತ್ರದಲ್ಲಿಯೇ ಅವಳು ತುಳಿಯಬೇಕೇನು ? (ಬಾಬಲ. ೪೦). [ ದೇ.॥ ತುಳು. ಗೆರೆ, ಗಿರೆ ; ತೆಲು. ಗೀಟ ]

**ಗೆಱೆಗೊಯ್** (ಕ್ರಿ). ಗೆರೆಯನ್ನು ಎಳೆ ; ರೇಖೆಯನ್ನು ಎಳೆ ; ಗೀಟು ಹಾಕಂ : ಇಹಪರವೆರಡಱ ಸೌಖ್ಯಾವಹಮಿಂತಿದೆ ತಾಣಮೆಂದಜಂ ಗೆಱೆ ಗೊಯ್ದಂತಿಹ ಲೋಕಕ್ಕಂತಾ ಪುರದಹಿತರ್ಗೆ ಬೆಗಟ್ಟನೀಯುತಗಟೆಸೆದಿರ್ಕುಂ (ಉದ್ಭಟ. ೧-೪೩). [ ಗೆಱೆ + ಕೊಯ್ ]

**ಗೆಱೆನಾಮ** (ನಾ). ರೇಖೆಯಾಗಿ ಎಳೆದ ನಾಮ ; ಗೀಟುನಾಮಂ : ತಳತಳಪೊಳ್ಕೊಸಲ್ಮಿಸುಪ ನುಣ್ಗೆಱೆನಾಮಮಂ . . . ಮುಟ್ಟದ ಬಟ್ಟಗಡ್ಡದಿಂ ಬಳೆಯಿಪುದೊಳ್ಳಾಗಂ ಸೊಬಗಿನಿಂ ಬಗೆಗಾರ್ತಿಯರ್ಗಾಸೆಯಟ್ಟಿಯಂ (ಚಕವಿ. ೫-೬). [ ಗೆಱೆ + ನಾಮ ]

**ಗೆಱೆಯಾಣೆ** (ನಾ). ರೇಖೆಯೆಂಳೆದಂ, ಆ ರೇಖೆಯಂ ಆಚೆಗೆ ಹೋಗದಂತೆ ನಿರ್ಬಂಧಿಸಂವ ಆಣೆ,–ಆಜ್ಞೆ : ತರದಿಂದೆ ಮೂಱುಸೂಟ್ವರಮರಲಂಬಂ ತದಧಿಪತಿಯ ಕಣ್ಗಂ ಮನಕಂ ಗೆಱೆಯಾಣೆಯಿಟ್ಟ ರೇಖೆಗಳಿರವಂ ವಳಿರೇಖೆ ಕಳೆದುವಳಿಕುಂತಳೆಯಾ (ಚಂದ್ರಪು. ೧೧-೧೦೨). [ ಗೆಱೆ + ಆಣೆ$_3$ ]

**ಗೆಟಸು, ಗೆಣಸು, ಗೆಳಸು** (ನಾ). ಗಡ್ಡೆ ; ಕಂದ : "ಕಿಟಂಗೆನೆ ಗೆಟಸು[೦]" (ರನ್ನಕಂ. ೨) ; "ಗೆಟಸು=ಗೆಡ್ಡೆ" (ಶಮದ. ಪರಿ. ೦) ; ಪೆಱೆದು, ಗೆಟಸು, ಗೊಟಸು (ಶಬ್ದಾನು. ೦೪೦ ಪ್ರಯೋ). **ಗೆಣಸು :** ಬೇರು ಗಡ್ಡೆ ಗೆಣಸು ಮೊದಲಾದವಱಲ್ಲಿ ಗಂಧವನಱಿವುದು ಆಚಾರ ಲಿಂಗದಲ್ಲಿಯ ಆಚಾರಲಿಂಗ (ಆದವ. ೫-೦೨) ; ಕಾಯಿವಣ್ಣು ಗೆಣ[ಪಾಠಾಂ. ಳ] ಸಲ್ಲದಶನವನುಣೆನೆಂದು ಬಲುವ್ರತವನು ಹಿಡಿದು (ಸೊಬಸೋ. ೮-೪೩) ; ಗಂಗೆಯೊಳು ಮಾರ್ಪೊಳೆವ ಚಂದ್ರನಂ ತಾವರೆಯ ಗೆಣಸೆಂದು ತೆಗೆಯಲುಜ್ಜುಗಿಸುವನ (ವೀಶ್ವಪು. ೫-೩-೦) ; ಮರಳು ಮಿಶ್ರವಾದ ಭೂಮಿಯಲ್ಲಿ ಗೆಣಸು ಹುಲುಸಾಗಿ ಬೆಳೆಯುತ್ತದೆ (ತರಬಿ. ೩೫). **ಗೆಳಸು :** ತಳಿರವನೆಯಲಿ ಕಂದಮೂಲದ ಗೆಳಸುಗಳ ಮೆಲುಮೆಲಿದು (ಕುಮಾಕ. ೭೦೫. ಪರಿ. ೩೯೨) ; ಗಂಗೆಯೊಳೆಳೆಯ ಚಂದಿರಂ ಇರದೆ ಬಿಂಬಿಸಲು ತಾವರೆಯ ಗೆಳಸೆಂದು ನಿಜಕರದಿಂದೆ ಬರಸೆಳೆವ ವಿಘ್ನೇಶನಂ ನೋಡಿ (ವೀಶ್ವಪು. ೭-೮-೦) ; ಬೇರೆಲೆ ಪೂಪಣ್ಕಾಯಿ ಗೆಳಸು ನೀರ್ಗಳಿಂ . . . ಅತಿಥಿಗಳನಾರಾಧನೆಯನೆಸಗುತ್ತಂ (ಭಾರಶಾಂ. ೪೦-೯) ; ಎಲೆ ಕೆಳದಿ ಈ ತಾವರೆಯಲೆ ಗೆಳಸುಗಳಂ ತೆಗೆ (ಮಿತ್ರಗೋ. ೨೦) ; ಕಾಳ್ಪಂದಿಯಿರುಳು ಗೆಳಸನೆಲ್ಲವನಗೆದು ಮುಗಿಸೆ (ಕಾಲೂರ. ೫೩-೮೩). [ ದೇ.॥ ತೆಲು. ಗೆನಸು, ಗೆನುಸು ]

**ಗೇ** 'ಕೆಯ್$_1$' ನೋ.

**ಗೇಂಟಿ, ಗೇಟಿ**(ನಾ). ಹೊಡೆಯುವ ಗೋಲಿ ; ದಪ್ಪ ಗೋಲಿ : ಮೂಱು ಗದುಗೆ ಗದ್ದುಗೆಯೆಂದು ಮೇಲಿಟ್ಟುದೆ ಲಿಂಗವೆಂದು ಗೇಂಟಿ [ಪಾಠಾಂ. ಗೇಡೆ]ಯೆ ಪುಷ್ಪದಿಂಡೆಯೆಂದು ಇಡುತ್ತೀನೆ (ಭೃರಸೂ. ೩೬೭). **ಗೇಟಿ :** ಬಟ್ಟೆ ವಿಡಿದು ಬಾಲ ಬರುತಿರೆ ಕಂಡನು ಪುಟ್ಟ ಸಾಲಿಗ್ರಾಮುಶಿಲೆಯ ಘಟ್ಟುಳ್ಳ ಗೇಟಿಯು ತನಗೆ ದೊರಕಿತೆಂದು ಅಷ್ಟುಜನರಿಗೆ ತೋರಿಸಿದ (ಚಂದ್ರಹಾ. ೧-೩೨). [ ? ]

**ಗೇಂಡ, ಘೇಂಡ** (ನಾ). ಮೂಗಿನ ಮೇಲೆ ಕೊಂಬುಳ್ಳ, ದಪ್ಪಚರ್ಮದ ಒಂದಂ ದೊಡ್ಡ ಚತುಷ್ಪಾದಿಯಾದ ಪ್ರಾಣಿ ; ಗಂಡಕ ; ಖಡ್ಗಿ : (ಮುಂಬಯಿ. ಕ. ೫-೨೪೬). **ಘೇಂಡ :** ಮೊಹರುಗಳಲ್ಲಿ ಶಿವನ ಮೂರ್ತಿ . . . ಘೇಂಡ, ಎಮ್ಮೆ, ಶಿವ, ಪಶುಪತಿ ಮುಂತಾದವುಗಳೂ ಕೆಲವು ಅಕ್ಷರಗಳೂ ಇವೆ (ಭಾರದ. ೩೭೮). [ ← ಮರಾ. ಗೇಂಡಾ. / ಸಂ. ಗಂಡ ]

**ಗೇಂಡಾಮೃಗ, ಘೇಂಡಾಮೃಗ** (ನಾ).=ಗೇಂಡ : ಆನೆ, ಹುಲಿ, ಕರಡಿ, ಗೇಂಡಾಮೃಗ, ಹಾವು–ಇವು ಕಾಡುಗಳಲ್ಲಿರುತ್ತವೆ (ಭೂಗೋಳ. ೩೭). **ಘೇಂಡಾಮೃಗ :** ಖಡ್ಗಮೃಗ, ಘೇಂಡಾಮೃಗ, ಗಂಡಕ (Rhinoceros. ಇಂಕನಿ). [ <ಗೇಂಡ + ಮೃಗ ]

**ಗೇಂಡು** (ನಾ). ಆಟವಾಡುವ ಚೆಂಡು. [ ಸಂ. ]

**ಗೇಂಡುಕ** (ನಾ).=ಗೇಂಡಂ. [ಸಂ.]

**ಗೇಂದಿ** (ಗು). ಹೊಲಸಾದ; ಅಶುದ್ಧವಾದ; ಹೀನವಾದ: ಅದು ಶುದ್ಧ ಗೇಂದಿ ಹೆಂಗಸು ಸ್ವಾಮಿ, ನಿಮ್ಮ ವಿಷಯದಲ್ಲಿ ಸತ್ಯವಾಗಿರುತ್ತಾಳೆ ಎನ್ನುವ ನಂಬಿಕೆ ನನಗಿಲ್ಲ (ಶನಿಸಂ. ೦೦೪). [←ಪಾರ. ಗಂದ; ಹಿಂ. ಗಂದಾ]

**ಗೇಕು**, ಗಿಕ್ಕು, ಗೀಕು$_2$, ಗೆಂಕು, ಜೇಕು (ನಾ). ೧. ಒಂದು ಬಗೆಯ ಸಸ್ಯ; ಭದ್ರಮುಸ್ತೆ; ಕೊನ್ನಾರಿ: "ಆ ಮುಸ್ತಕಂ ಮುಸ್ತೆ ಭದ್ರಾತಕಂ ಗೇಕು" (ಮಂಗರಾ. ೪೦-೩೬); ಇದಿರಾದ ತರುಗಳು ದಿಂಡುಗೆಡೆವವು ತೊಱೆಗೆ ಮಣೆದರೆ ಗೇಕು ಬದುಕುವುದು (ಕುಮ್ಮಾಳೀ. ೭-೦೩). ೨. ಜೊಂಡು; ಆಪು: ಮುಸಲವು . . . ಕಡಲಿನ ತಡಿಯಲದು ಗೇಕಾಗಿ ಬೆಳೆದುದು (ನಿಭಾಗ. ೦೦-೦-೪೪). **ಗಿಕ್ಕು**: ೧. (ಕ). **ಗೀಕು$_2$**: ೨. ಗೀಕಿನ ಚಾಪೆಯ ಮೇಲೆ ಕಂಬಳಿ ಹೊದೆದು ಮಲಗಿ ನರಳುತ್ತಿದ್ದ (ಮಲಮ. ೦೦೦). **ಗೆಂಕು**: ೧. ನೊ(ಮೊ)ದೆ ಗೆಂಕು[ಪಾಠಾಂ. ಕೆಂಕೆ] ಬೆಳೆಯ ನೀರಿಲ್ಲದ ನೆಲದೊಳ್ (ಅಟ್ಟಿಮ. ೦೦-೩೩). **ಜೇಕು**: ೧.ಜೇಕು ಮೊದಲಾದದ್ದು ಇದ್ದರೆ ನೇಗಿಲೆಯನ್ನು ಹೊಡೆದು ಅದರ ಗಡ್ಡೆಗಳು ಒಂದೂ ಉಳಿಯದ ಹಾಗೆ ಆರಿಸಬೇಕು (ಕೃಷಿಪ್ರ. ೦೩೪); ಮೊಳಕಾಲಿನವರೆಗೆ ಕರಿಕೆ, ಜೇಕು, ಬೆಳೆದು ನಿಂತಿತ್ತು (ಚಿಂದುಟ. ೫೭).

**ಗೇಕಿನಗಡ್ಡೆ, ಗಿಕ್ಕಿನಗಡ್ಡೆ**=ಭದ್ರಮುಸ್ತೆಗಡ್ಡೆ; ಕೊನ್ನಾರಿಗಡ್ಡೆ. ಶುಂಠಿ, ಕಳ್ಳಂಗಡಲೆಬೇರು . . . ಮುಡಿವಾಳ, ಗೇಕಿನಗಡ್ಡೆ ಇವಂ ಕಷಾಯವಿಕ್ಕಿ ಕೊಡಲು ಶೀತಜ್ವರ ಪರಿಹಾರವಾಗುವುದು (ಸಕವೈ. ೬೪); ಕುಟನ್ನಟಂ, ದಾಶಪುರಂ . . . ಠ ತುಂಗಮುಸ್ತದ ಹೆಸರುಗಳು ತುಂಗೇ ಗಡ್ಡೆಗಳು; ಗೇಕಿನಗಡ್ಡೆ ಎಂತಲೂ, ಗಿಕ್ಕಿನ ಗಡ್ಡೆಎಂತಲೂ ಅನ್ನುವರು (ಸಿದ್ಧಾಂತಿ. ೦೪೨). [?]

**ಗೇಕುಳ** (ನಾ).=ಗೇಕು ೨: ಇರದೊಗೆದ ಗೇಕುಳದ ದಂಟ ಕೀಳ್ತು (ವೀಕೃಪು. ೩-೦೦-೭೪). [< ಗೇಕು ?]

**ಗೇಟ** 'ಗೇಂಟ' ನೋ.

**ಗೇಟೀಸು** (ನಾ). ಕಣಕಾಲಿಗೆ ರಕ್ಷಣಾರ್ಥವಾಗಿ ಸುತ್ತುವ ಬಟ್ಟೆ; ಕಣಕಾಲ ಕಾಪು.

**ಗೇಟೀಸಿನವ**=ಕಣಕಾಲಿಗೆ ಬಟ್ಟೆ ಸುತ್ತಿದವನು; ಪೋಲೀಸು: ಕೋಳ ಹಾಕಿ ಹಿಡುಕೊಂಡು ಹೋಗಾಕೆ ಗೇಟೀಸಿನೋರು ಬಂದಾರಂತೆ (ಮಲಮ. ೫೩೪). [← ಇಂ. Galter]

**ಗೇಣ್**, ಗೇಣು, ಘೇಣ್ (ನಾ). ೧. ಅಗಲಿಸಿದ ಹೆಬ್ಬೆಟ್ಟಿನ ತುದಿಯಿಂದ ಕಿರುಬೆರಳ ತುದಿಯವರೆಗಿನ ಅಳತೆ; ಒಂಬತ್ತು ಅಂಗುಲದ ಅಳತೆ: "ತಾಳಮೆಂಬುದು ಗೇಣ್" (ಹಲಾಯು. ೮೪-೩೮೪): ಮಡದೆಡೆ ನಾಲ್ವೆರಲುಂ ಗುಟದೆಡೆಯೊಳ್ ಗೇಣಾಗೆ ನಿಲ್ವುದಿಚ್ಛಾಗತಂ (ಆದಿಪು. ೯-೮೪); ಶ್ರೀ ಭೋಗೇಸ್ವ[ರ]ದೇವರ್ಗ್ಗೆ ಅಂಗಭೋಗಕೆ ಯಿಪ್ಪತ್ತೆಂಟು ಗೇಣ ಗಳೆಯೊಳಂ ಬಿಟ್ಟ ಮತ್ತರಾಱು (ಸೌಇಇ. XI-1, ೬೩-೦೬; 1026); ಹೂರಣವ ಮಾಡಿಯಾವುಂಡೆಯರಡೞ ನಡುವೆ ಪೂರಯಿಸಿ ಹೞಯುದಂತೆ ಗೇಣಗಲಂ ಮಾಡಿ (ಸೂಪಶಾ. ೦-೩೬). ೨. ಸಣ್ಣಕತ್ತಿ; ಸುರಗಿ; ಕಠಾರಿ: "ಗೇಣೆನಲ್ ಸುರಗಿ" (ಚತುನಿ. ೨೦); "ಗೇಣೆಂದು ಸುರಗಿ" (ಶಬ್ದಮಂ. ೪೪); ನೆಗಳಲ್ ತೋಱುವ ಗೇಣ ಬಿನ್ನಣಕ್ಕೊದವುವ ಬಿನ್ನಣಂ (ಎಕ. VIII, ನಗರ. ೪೦-೬೭; 1077); ಕೂರ್ಪ ಕುಂದದ ಕಡೆಗಣ್ಣ ಗೇಣ್ ಪೊಳೆಯೆ (ಅರ್ಧನೇ. ೩-೦೪); ಕಣ್ಗಳ್ ಮನೋಜವೀರನ ಗೇಣ್ಗಳ್ (ಕಮದ. ೯೫ ಪ್ರಯೋ); ಮದನನ ಗೇಣಾ ಪೊಂಗರ್ಗಣ್ಗಳ ಪೊಳೆವಲರ್ಗಣ್ಗಳ ಬೆಳತಿಗೆಗಣ್ಗಳ . . . ಸುದತಿಯರೀಕ್ಷಿಸಿದರ್ ನೃಪನ (ಜಯುಕಾ. ೦೦-೫೪).

**ಗೇಣು**: ೧. ಕಪಿಯ ಬಾಲವು . . . ಮುಂದೆ ಗೇಣರಗೇಣು ಮೊಳ ತೋಳನಿತು ಬೆಳೆವುತಿರೆ (ಕಾಶಿರಾ. ೦೨-೪); ಎಂಟು ಗೇಣು ಶರೀರ ಒಂದು ಗೇಣು ಮಾಡಿಕೊಂಡು (ಪುರಂದ. ೧-೦೭೪-೨); ಎಂಟು ಗೇಣಿನ ದೇಹ ರೋಮಗಳೆಂಟುಕೋಟಿಯು (ಹರಿಸಾ. ೩೬); ಇಂಗ್ರೇಜಿಭಾಷೆಯೊಂದು ಚೆನ್ನಾಗಿ ಬಂದರಾಯಿತು. ಆ ವಿದ್ಯಾರ್ಥಿಗೆ ಮುಗಿಲು ಮೂರೇ ಗೇಣು (ಯಶ್ವಪ್ರ. ೨೩); ಗೇಣು ಬಿಟ್ಟು ಅಗಳು ದಾಟಿದ ಹಾಗೆ (ಗಾದೆ). ೨. ಸಿತೇಕ್ಷು ಚಾಪವಲರ್ದೊರ್ಪ್ಪುವ ಕೇದಗೆ ಕೀಳಗೇಣು (ಮಹಾನೇ. ೦-೬೭). **ಘೇಣ್**: ೨. ಪಲಬರಂ ಕೊನ್ದು ಬಿಲಂ ದಂಡೆಗೊಂಡು ಘೇಣ ಕಿತ್ತು ಕುದುರೆಯ ತಿವಿದು ಸುರಲೋಕ ಪ್ರಾಪ್ತನಾದ (ಎಕ. VII, ಹೊನ್ನಾಳಿ. ೨೮-೦೦; 1197).

**ಗೇಣಾಗು**=೧. ಗೇಣುದ್ದವಾಗು. ೨. ಚಿಕ್ಕದಾಗು; ಕುಗ್ಗು: ಐಕಿಲಭರದೆ ಪಡಲ್ವಟ್ಟು ಗೇಣಾಗಿ ಪಾಂಥರ್ತೊಡೆತೋಳ್ಗಳ್ಕೂಡೆ ಜಾನು ಪ್ರಹಿತ ಶಿರರದೇನಿರ್ದರೋ ಶೀತಭೀತರ್ (ರಾಜಶೇ. ೯-೨೨).

[ದ್ರಾ.॥ ತಮಿ. ಮಲ. ಚಾಣ್; ತುಳು. ಗೇಣ್, ಗೇಣ; ಕೊಡ. ಚಾಣೇ; ತೆಲು. ಜೇನ, ಜೇಣು]

**ಗೇಣಂಕ**, ಗೇಣಾಂಕ (ನಾ). ಕಠಾರಿಯುಂದ್ದ; ಸುರಗಿ ಕಾಳಗ. 'ಗೇಣಂಕ ಚಕ್ರೇಶ್ವರ' ಪರಾ. **ಗೇಣಾಂಕ**. 'ಗೇಣಾಂಕಚಕ್ರೇಸ್ವರ' ಪರಾ. [ಗೇಣ್ + ಅಂಕ$_2$]

**ಗೇಣಂಕಚಕ್ರೇಶ್ವರ**, ಗೇಣಾಂಕಚಕ್ರೇಸ್ವರ (ನಾ). ಖಡ್ಗಯುಂದ್ಧದಲ್ಲಿ ಚಕ್ರೇಶ್ವರನಂತಿರುವವನು; ಒಂದು ಬಿರುದು: ಗೇಣಂಕಚಕ್ರೇಶ್ವರಂ, ರಾವುತ್ತರಾಯಂ (ಶಬ್ದಾನು. ೨೯೫ ಪ್ರಯೋ). **ಗೇಣಾಂಕಚಕ್ರೇಸ್ವರ**: ಅರಸಂಕ ವೊನೆಗಾಱ ಗೇಣಾಂಕಚಕ್ರೇಸ್ವರ (ಮ್ಯಆರಿ. ೦೯೪೬, ೨೫-೨; 1495). [ಗೇಣಂಕ + ಚಕ್ರೇಶ್ವರ]

**ಗೇಣಂಜುರಿಗೆ** (ನಾ). ಸಣ್ಣಕತ್ತಿ (?): ಮಿಾನಂಬುಟು, ಗೇಣಂಜುರಿಗೆ (ಶಬ್ದಾನು. ೫೫ ಪ್ರಯೋ). [ಗೇಣ್ + ಸುರಿಗೆ]

**ಗೇಣಂಬು** (ನಾ). ಒಂದು ಬಗೆಯ ಬಾಣ; ಗೇಣು ಉದ್ದದ ಬಾಣ: ಮುಂದೊತ್ತುವ ನಾಯ್ಗಳ ಬೊಗಳುವ ಬಾಯ್ಗಳ ಗೇಣಂಬುಗಳಿಂ ಕಟ್ಟಿದನು (ಹರ್ಷರ. ೨೫-೦೩). [ಗೇಣ್ + ಅಂಬು2]

**ಗೇಣಾಂಕ** 'ಗೇಣಂಕ' ನೋ.

**ಗೇಣಾಂಕಚಕ್ರೇಸ್ವರ** 'ಗೇಣಂಕಚಕ್ರೇಶ್ವರ' ನೋ.

**ಗೇಣಾಯ** (ನಾ). ಕತ್ತಿವರಸೆ; ಕಠಾರಿಯ ವರಸೆ: ಅರಸಂಕ ಸೂನೆಗಾಱ ಗೇಣಾಯದ ಚಕ್ರವರ್ತಿ (ಎಕ. IX, ದನ್ನಪ. ೭೦-೨೦; 1331). [ಗೇಣ್ + ಆಯ$_1$]

**ಗೇಣಿ** 'ಕೇಣಿ$_3$' ನೋ.

**ಗೇಣಿಕಾಱ** 'ಕೇಣಿಗಾಱ' ನೋ.

**ಗೇಣಿಕೆ** 'ಧೇನಿಕೆ' ನೋ.

**ಗೇಣಿಗ** (ನಾ).=ಗೇಣಿದಾರ: ಸಾಹುಕಾರರಾಡಿದ ಮಾತುಗಳನ್ನು ಕೇಳಿದ ಮೇಲೆ ಖಂಡಿತ ಅವರ ಗೇಣಿಗನಾಗಬಾರದೆಂದು ನಿಶ್ಚಯಿಸಿದ್ದನು (ತುಂಬಿಕೊ. ೫೨). [ಗೇಣಿ (<ಕೇಣಿ$_3$) + -ಗ$_2$]

**ಗೇಣಿಗದ್ದೆ** (ನಾ). ಗೇಣಿಗೆ ಪಡೆದ ಗದ್ದೆ; ಗಂತ್ತಿಗೆ ಗದ್ದೆ: ಗೇಣಿಗದ್ದೆಯೇ ಅವನ ಜೀವನಾಧಾರ (ಜೀವನ. ೨೦). [ಗೇಣಿ (<ಕೇಣಿ$_3$) + ಗದ್ದೆ (<ಗಟ್ದೆ)]

**ಗೇಣಿಗಾರ** 'ಕೇಣಿಗಾಱ' ನೋ.

**ಗೇಣಿಗೆಯ್** (ನಾ). ಗೇಣಿಗಾಗಿ ಬಿಟ್ಟಿರುವ ಹೊಲ (?): ತೆಂಕ ಗದುಗಿನ ಹೊಲದಿಂ ಪಡುವಲು ಹಱಕಾಱ [ಗೇ]ಣಿಗೆಯಿಂ ಬಡಗಲು (ಸೌಇಇ. XV, ೦೪೦-೩೦; 1184). [ಗೇಣಿ (<ಕೇಣಿ$_3$) + ಕೆಯ್$_4$]

**ಗೇಣಿಚೀಟಿ** 'ಗೇಣಿಚೀಟು' ನೋ.

**ಗೇಣಿಚೀಟು**, ಗೇಣಿಚೀಟಿ (ನಾ). ಭೂಮಿಯ ಮಾಲೀಕನು ಗೇಣಿದಾರ ನಿಂದ ಗೇಣಿಗಾಗಿ ಬರೆಸಿಕೊಳ್ಳುವ ಚೀಟಿ; ಲಾವಣಿಪತ್ರ; (ಕ). **ಗೇಣಿಚೀಟಿ**: ಗೇಣಿಚೀಟಿಗಳಿಂದ ಪ್ರತಿವರ್ಷವೂ ಬರುವ ಸ್ವಾಮಿಸ್ವದಲ್ಲಿ

. . . ವಹಿಸಿಕೊಡತಕ್ಕುದು (ಛಾಧಾನ. ೨೬೯); ಅಡಿಗರಿಗೆ ಬರಕೊಟ್ಟ ಠಸೆ ಗೇಣಿಚೀಟಿಗೂ ಸಹ . . . ಸಂಕಯ್ಯನ ಸಾಕ್ಷಿ (ಪಾತೀಸು. ೪).
[ ಗೇಣಿ (<ಕೇಣಿ$_3$) + ಚೀಟು$_2$ ]

**ಗೇಣಿಡು** (ಕ್ರಿ). ಗೇಣಂ ಹಾಕು ; ಗೇಣಿನಿಂದ ಅಳೆ, – ಅಳತೆಮಾಡು : ಅಳೆಯಲ್ಬಾರದ ದೈತ್ಯನಾಯಕನ ದಿವ್ಯೋದಾರ್ಯಮಂ ಗೇಣಿಡಲ್ ಬಳೆದತ್ರೀ ಕರಪದ್ಮಂ (ವಿಶ್ವವಂ. ೨೯). [ ಗೇಣ್ + ಇಡು$_1$ ]

**ಗೇಣಿದಾರ** (ನಾ). ಭೂಮಿಯ ಮಾಲೀಕನಿಂದ ಭೂಮಿಯನ್ನು ಗೇಣಿಗೆ ಪಡೆಯುವವನು ; ಗುತ್ತಿಗೆದಾರ ; ಲಾವಣಿದಾರ : ದುಡ್ಡುಳ್ಳವನು ಭೂಮಿಯನ್ನು ಕೊಂಡು, ದುಡ್ಡಿಲ್ಲದ ಗೇಣಿದಾರರಿಂದ ತನಗೆ ಮನಸ್ಸು ಬಂದಂತೆ ಸುಲಿಗೆಮಾಡುತ್ತಾನೆ (ಪುನರು. ೩೦೩).
[ ಗೇಣಿ (<ಕೇಣಿ$_3$) + – ದಾರ$_4$ ]

**ಗೇಣಿಸಿದ್ಧಾಯ** (ನಾ). ಗೇಣಿಗಾಗಿ ಕೊಡುವ ತೆರಿಗೆ : ಗೇಣಿಸಿದ್ಧಾಯ ಬಡ್ಡಿಯ ಬತ್ತ (ಎಇ. VIII, ೦೩೨–೨೭ ; 1586).
[ ಗೇಣಿ (<ಕೇಣಿ$_3$) + ಸಿದ್ಧಾಯ ]

**ಗೇಣಿಸು** 'ಧೇನಿಸು' ನೋ.

**ಗೇಣಿಹಣ** (ನಾ). ಗೇಣಿದಾರರಿಂದ ಪಡೆದ ಹಣ: ರೈತರುಗಳಿಂದ ವಸೂಲು ಮಾಡಿದ್ದ ಗೇಣಿಹಣವನ್ನು ಕರಣಿಕ ಬಲರಾಮಕುಲಕರ್ಣಿ ದುರುಪಯೋಗ ಪಡಿಸಿಕೊಂಡಿದ್ದನಂತೆ (ಹೇಮುಕೂ. ೩೦).
[ ಗೇಣಿ (<ಕೇಣಿ$_3$) + ಹಣ (<ಪಣ$_1$) ]

**ಗೇಣು** 'ಗೇಣ್' ನೋ.

**ಗೇಣುಕಾಱ** (ನಾ). ಕತ್ತಿಯಿಂದ ಯುದ್ಧಮಾಡುವವನು: ಭುಜಬಳವೀರ ನಿಗಳಂಕಮಲ್ಲ ಗೇಣುಕಾಱರಾಚಾಯ್ಯಂ (ಇಇ. XII, ೯೩–೩ ; 1187).
[ ಗೇಣು (<ಗೇಣ್) + – ಕಾಱ ]

**ಗೇಣ್ಬಾಯ್** (ನಾ). ಕತ್ತಿಯ ಬಾಯಿ: ಗೇಣ್ಬಾಯ್ಗೆ [ಪಾಠಾಂ.ನೇಣ್ಬಾಯ್ಗೆ] ಏಱದೆ (ಶಮದ. ೬೭ ಪ್ರಯೋ). [ ಗೇಣ್ + ಬಾಯ್ ]

**ಗೇತೋಜ** (ನಾ). ಒಬ್ಬಾತನ ಹೆಸರು : ಸೇನಬೋವಂ ನಾಗವರ್ಮ್ಮಯ್ಯಂ ಮಾತಿಳ ಚಾವೋಜಂ ಎಡವ ಗೇತೋಜಂ ಅಯ್ಯಾವೊಳೆ ಗೇತೋಜಂ (ಸೌಇಇ. XI-1, ೫೭–೨೫ ; 1020). [ <ಕೇತೋಜ ]

**ಗೇನಿ** 'ಕೇಣಿ$_3$' ನೋ.

**ಗೇನಿಕೆ** 'ಧೇನಿಕೆ' ನೋ.

**ಗೇನಿಸು** 'ಧೇನಿಸು' ನೋ.

**ಗೇಬೆ** (ನಾ). (ರೋಗದಿಂದ ಶರೀರವು) ಊದಿಕೊಂಡಿರುವಿಕೆ ; ಊತ ; ಬಾವು. 'ಗೇಬೆಕಟ್ಟು' ಪರಾ. [ ? ]

**ಗೇಬೆಕಟ್ಟು** (ಕ್ರಿ). (ರೋಗದಿಂದ ಶರೀರವು) ಊದಿಕೊಳ್ಳು ; ಬಾತಿರು: ಯಜ್ಞೇಶ್ವರನಿಗೆ ಅಜೀರ್ಣವಾಯಿತು. ಹೊಟ್ಟೆ ದಪ್ಪವಾಯಿತು. ಮುಖ ಗೇಬೆಕಟ್ಟಿತು (ವೀಶಿಚಂ. I, ೩೦). [ ಗೇಬೆ + ಕಟ್ಟು$_1$ ]

**ಗೇಮೆ** 'ಕೈಮೆ$_1$' ನೋ.

**ಗೇಯ** (ಗು). ೧. ಹಾಡತಕ್ಕ ; ಗಾನಕ್ಕೆ ಯೋಗ್ಯವಾದ : ಮೊದಲಿನಲ್ಲಿ ಸಾಹಿತ್ಯದ ಕೃತಿಗಳು ಕೇವಲ ಗೇಯ ಅಥವಾ ಪಾಠ್ಯವಾಗಿದ್ದುವು (ಅರಿಕಾ. ೨೦೫). (ನಾ). ೨. ಹಾಡುವಿಕೆ; ಗಾಯನ; ಹಾಡು: ಇಂಪನಾಳ್ದ ಗೇಯಂಕಿ ವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಂ . . . ನೆನೆವುದೆನ್ನ ಮನಂ ವನವಾಸಿದೇಶಮಂ (ಪಂಪಭಾ. ೪–೩೦). ೩. ಹಾಡುವವನು ; ಹಾಡುಗಾರ; ಗಾಯಕ. ೪. [ಛಂದ] ಅಕ್ಷರಛಂದಸ್ಸಿನ ಅತ್ಯುಕ್ತೆಯಲ್ಲಿ ಒಂದು ವೃತ್ತ ; ಪ್ರತಿ ಪಾದದಲ್ಲಿ ಗುರುವಾದ ಎರಡು ಅಕ್ಷರಗಳಿರುವ ಸಮವೃತ್ತ : ಶ್ರೀಯಂ ದೇಯಂ ಪೇಯಂ ಗೇಯಂ (ಛಂದೋಂಬು. ೨–೫೫ ಅಡಿ). [ ಸಂ. ]

**ಗೇಯತೆ** (ನಾ). ಹಾಡಿಸಿಕೊಳ್ಳುವ ಯೋಗ್ಯತೆ ; ಗಾಯನಗುಣ : ಈ ಕಾವ್ಯಗುಣದಿಂದಾಗಿಯೆ ವಚನಗಳಲ್ಲಿ ಗೇಯತೆಯಿದೆ (ಕರ್ನಾಕ. ೬೫) ; ಇವು . . . ಗೇಯತೆಯ ಸೊಬಗನ್ನು ಹೆಚ್ಚಿಸುವಂಥವು (ಸಂಕೋಧ. ೦೨೦).
[ ಸಂ. ಗೇಯತಾ ]

**ಗೇಯನಾಟಕ** (ನಾ). ನಾಟಕದಲ್ಲಿ ಒಂದು ಪ್ರಭೇದ ; ಗೀತನಾಟಕ : ಯಕ್ಷಗಾನ . . . ಆಧುನಿಕಪ್ರಗತಿರೀತಿಯಲ್ಲಿ ಅಭಿನಯಿಸಲ್ಪಟ್ಟಾಗ ಗೇಯನಾಟಕ ಅಥವಾ ಗೀತರೂಪಕ ಎನಿಸಿಕೊಳ್ಳುತ್ತದೆ (ಸಂಗೀಚಂ. ೬೯) ; ಲಕ್ಷ್ಮಿ . . . ಯಕ್ಷಕನ್ನಿಕೆಯರ ಗೇಯನಾಟಕವನ್ನು ನೋಡುತ್ತ ಲೇ ನಿಂತಿದ್ದಳು (ಹೇಮುಕೂ. ೧). [ ಗೇಯ + ನಾಟಕ ]

**ಗೇಯರಸ** (ನಾ). ಸಂಗೀತವನ್ನು ಕೇಳುವುದರಿಂದ ಉಂಟಾಗುವ ಆನಂದ; ಸಂಗೀತದ ಸುಖ: ತಗುಳ್ದ ಗೇಯರಸವಚ್ಚಱಿದಂತಿರೆ ಬೆಚ್ಚು ಚಿತ್ರದೊಳ್ ನಿಲೆ (ಶಾಂತಿಪು. ೪–೬೮) ; ಗೇಯರಸಸುಖವ ಬಿಡದೆ ವೃಷಭನ ನೇಱುತ ಹನುಮ ಬಾ . . . ಎನಗೆ ಗಾನವ ಕೇಳಿಸೆನೆ (ಗುರುಚಾ. ೬–೫೩).
[ ಗೇಯ + ರಸ ]

**ಗೇಯವೃತ್ತ** (ನಾ). = ಗೇಯ ೪ : ಅತ್ಯುಕ್ತೆಯೆಂಬ ಛಂದಸ್ಸಿನಲ್ಲಿ ಪಾದವೊಂದಕ್ಕೆ ಎರಡುಗುರುಗಳುಳ್ಳ ಪದ್ಯವು ಗೇಯವೃತ್ತವೆನಿಸುವುದು (ಕೃಬಿಡಿ. ೬೮). [ ಗೇಯ + ವೃತ್ತ ]

**ಗೇಯಿಸು** 'ಕೆಯ್ಯಿಸು' ನೋ.

**ಗೇಯು** 'ಕೆಯ್$_1$' ನೋ.

**ಗೇರ್** 'ಕೇರ್$_2$' ನೋ.

**ಗೇರಗೊಟ್ಟೆ** (ನಾ). = ಗೇರುಬೀಜ : ಮರದರಸಿನಂ . . . ತಿಲಂ ಗೇರಗೊಟ್ಟೆ ಯಿಂತಿವನೊಂದಾಗರದೊಳ್ಸೆಣ್ಣೆಯೊಳಟ್ಟಾದರದಿಂದಂ ಪೂಸೆ (ಖ)ಕಜ್ಜಗುತ್ತಂ ತೀರ್ಗುಂ (ಅಶ್ವಶಾ. ೦೩–೦೮).
[ ಗೇರ್ (<ಕೇರ್$_2$) + ಗೊಟ್ಟೆ$_1$ (<ಕೊಟ್ಟೆ$_1$) ]

**ಗೇರಾಯಿಸು** 'ಘೇರಾಯಿಸು' ನೋ.

**ಗೇರಿ** 'ಘೇರಿ' ನೋ.

**ಗೇರಿಹೊಡೆ** (ಕ್ರಿ). ತಿರುಗು; ಸುತ್ತು : ಮೊದಲೇ ತಲೆ ಗೇರಿಹೊಡೆಯುತ್ತಾ ಇದೆ (ಮುಸ್ಸಂಜೆಸಂ. ೬೫) : ಹೀಗೆ ಗೇರಿಹೊಡೆವ ಮನಸ್ಸಿದ್ದರೆ ನಿದ್ದೆ ಎಲ್ಲಿ ಉಳಿಯಿತು ? (ಗಾಳಿಪ. ೦೨೩).
[ ಗೇರಿ (<ಘೇರಿ) + ಹೊಡೆ$_1$ (<ಪೊಡೆ$_1$) ]

**ಗೇರು** 'ಕೇರ್$_2$' ನೋ.

**ಗೇರುಕುಕ್ಕೆ** (ನಾ). ಗೇರೆಣ್ಣೆ ಬಳಿದ ಕುಕ್ಕೆ: ಗೇರುಕುಕ್ಕೆಯಲ್ಲಿ ಕಡಲೆಹಿಟ್ಟು ತುಂಬಿದ್ದಾರೆ (ರೂಢಿ). [ ಗೇರು (<ಕೇರ್$_2$) + ಕುಕ್ಕೆ$_1$ ]

**ಗೇರುಕೊಮ್ಮೆ** (ನಾ). ಗೇರೆಣ್ಣೆ ಬಳಿದ ಕೊಮ್ಮೆ,–ಕುಕ್ಕೆ : ಪಾರ್ವತಮ್ಮ ಮಂತು ತೊಳೆದುಕೊಂಡು ಮೊಸರನ್ನು ಗೇರುಕೊಮ್ಮೆಗೆ ಬಗ್ಗಿಸಿಕೊಂಡು ಕಡೆಯಲು ಆರಂಭಿಸಿದಳು (ಸರ್ವಮಂ. ೪೦).
[ ಗೇರು (<ಕೇರ್$_2$) + ಕೊಮ್ಮೆ$_1$ ]

**ಗೇರುತೈಲ** (ನಾ). ಗೇರು ಬೀಜದಿಂದ ತೆಗೆದ ಎಣ್ಣೆ ; ಗೇರೆಣ್ಣೆ : ಮಣಶಿಲೆ, ಗಂಧಕ, ತಾಳಕ, ಗೇರುತೈಲ . . . ಕೊಳ್ಳಲು ಸಕಲ ಸನ್ನಿಪಾತ ಸಮಸ್ತ ಕುಷ್ಠರೋಗ ಸಹ ಮಾಣ್ಗುಂ (ಸಳಪ್ಪ. ೦೭೮).
[ ಗೇರು (<ಕೇರ್$_2$) + ತೈಲ ]

**ಗೇರುಪಪ್ಪು** (ನಾ). ಗೇರುಬೀಜ ; ಗೋಡಂಬಿಬೀಜ ; ಗೋಡಂಬಿ, ಗೇರುಪಪ್ಪು, ಮುಂದಿರಿಪಪ್ಪು, ಜಿಡಿ (ಪ್ರುಹಿಗಿ. ೬–೦೦೫).
[ ಗೇರು (<ಕೇರ್$_2$) + ಪಪ್ಪು ]

**ಗೇರುಬೀಜ** 'ಕೇರಬೀಜ' ನೋ.

**ಗೇರುಮರ** 'ಕೇರಮರ' ನೋ.

**ಗೇರುಮಾವು** 'ಕೇರಮಾವು' ನೋ.

**ಗೇರುಹಣ್ಣು** (ನಾ). ಗೇರುಮರದ ಹಣ್ಣು; ಗೋಡಂಬಿಹಣ್ಣು: ಗೇರು ಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ ಮಿಱಿಯಾಸೆಮಾಡದಲೆ ಧೀರ ಕೃಷ್ಣನ ಭಕುತರೆಲ್ಲ (ಪುರಂದ. ೦-೦೨-೨); ಗೇರುಹಣ್ಣಿನ ಮರದಿಂದ ಹಳದಿ ತುಂಬಿದ ಕೆಲವು ಹಣ್ಣುಗಳು . . . ಕೆಳಗೆ ಬೀಳುತ್ತಿದ್ದುವು (ರಕ್ತರೂ. ೦). [ಗೇರು (<ಕೇರ್$_2$) + ಹಣ್ಣು$_3$ (<ಪಣ್$_3$)]

**ಗೇರೆ, ಗೇರೆಯ** (ನಾ). ಸುತ್ತಲೂ ಇರುವ ಗೋಡೆ; ಆವರಣ: ಅರ್ಧ ಚಂದ್ರಾಕೃತಿಯೊಳು ಸೇನೆಯೊಟ್ಟಿತು ಗೇರೆಯ ಬಳಸಿ (ನಾಗಕು. ೦೩-೦೦೩); ಸುತ್ತಲುಂ ಗೇರೆಯುಂ ನೆಗಳ್ದುವಾ ಪಾಳೆಯದೊಳ್ (ಜಬಪು. ೪೮-೩೩); "ವರ್ತುಲ" (ಜಬಪು. ಕೋಶ). **ಗೇರೆಯ**: ಗಡೆಗಳಿನೋವದೆ ಗೇರೆಯುಮಂ ಕಿತ್ತಡಸಿ ಕರಂ ಬೆಟ್ಟಿತು ಭೂತಂಗಳ ಗಡಣದ ಪಾಳೆಯಮಾ ದಾರುಣ ಮಪ್ಪಾಹವಧರಣಿಯೊಳು (ಜಯುಕಾ. ೭-೨೪). [<ಕೇರ್$_1$]

**ಗೇರೆಣ್ಣೆ** (ನಾ). = ಗೇರುತೈಲ: ಗೇರೆಣ್ಣೆಯನೊರಸುಗೆ ದುತ್ತೂರರಸಂ ಲವಣಮುಂಬಿವಂ ನೆಲದಾಟಿೞೆ ಚಾರಿಸಿ . . . ತೊಡೆಯೆ ಮೇಣ್ ಕುಱು ಕಿಡುಗುಂ (ಲೋಕೋಪ. ೯-೦೬೦); ಕೋಲಕಳ್ಳಿಬೇರು . . . ಒಳ್ಳೆಣ್ಣೆ ಗೇರೆಣ್ಣೆ ಇವನ್ನು ಹುರಿದು (ಕಾಯಿಸಿ)ಬೆಲ್ಲ ಮತ್ತು ತುಪ್ಪಗಳೊಂದಿಗೆ ಸೇವಿಸಲು ಎದೆಶೂಲೆ ಮಾಣುವುದು (ಸಕಪ್ರ. ೪೬೨ ಪರಿ). [ಗೇರು (<ಕೇರ್$_2$) + ಎಣ್ಣೆ]

**ಗೇರೆಯ** 'ಗೇರೆ' ನೋ.

**ಗೇರೈಸು** 'ಘೇರಿಸು' ನೋ.

**ಗೇಲಿ** (ನಾ). ತಮಾಷೆ; ಲೇವಡಿ: ಯನ್ನ ಗೇಲಿಯ ಮಾಡಬೇಕೆಂದು ತಾವು ನಳರಾಜಚಂದ್ರನ ಕಳೆಯ ರೂಪಿನಂತೆ ತದ್ರೂಪು ಧರಿಸಿ ಬಂದವರು ಕುಳಿತಿರಲು (ಯನಳ. ೩೦); ಗೇಲಿಯ ಮಾಡಿ ಫೊಳ್ಳೆಂದು ನಕ್ಕು ಓಡಿ ಹೋಗುವರು (ಕನ್ನಜಾ. ೪೦); ತಮ್ಮ ಅಭಿಮತವನ್ನು ಒರೆಯತಕ್ಕವರು . . . ಒಂದು ಸಮಯದಲ್ಲಿ ಹಾಸ್ಯ ಕುಚೋದ್ಯ ಗೇಲಿ ಈ ರೂಪವಾಗಿಯೂ . . . ಆಗಾಗ್ಗೆ ಹೇಳುತಾ ಬಂದರೆ (ಅದೂಟ. ೭೭).
**ಗೇಲಿಮಾಡು** = ಅಪಹಾಸ್ಯಮಾಡಂ; ತಮಾಷೆಮಾಡಂ: ಮುದುಕಿಯನ್ನು ಕಂಡು ಗೇಲಿಮಾಡಬೇಕೆನ್ನುವಿರಾ (ಪ್ರತಿಬಿಂ. ೯); ನಿಮ್ಮ ಹೆಸರನ್ನು ಹೇಳಿ ಗೇಲಿಮಾಡುತ್ತಾರೆ (ಘೂರಾತಿ. ೪೭). [ದೇ.॥ ತಮಿ. ಕೇಲಿ; ತುಳು. ತೆಲು: ಗೇಲಿ]

**ಗೇಹ** (ನಾ). ೧. ವಾಸಮಾಡುವ ಸ್ಥಳ; ಮನೆ; ನಿವಾಸ; ಗೃಹ: "ಆವಾಸಃ . . . ಗೇಹಂ . . . ಆಲಯಃ– ಈ ೩೧ ಮನೆ" (ಹಲಾಯು. ೪೯-೦೩೬); ಬೆಳ್ಗೊಡೆ ನೋಡೆ ನೋಡೆ ನಿಂದುರಿದುವು ಸಾಲಭಂಜಿಕೆಗಳಬ್ಬುವು ವೈರಿನರೇಂದ್ರ ಗೇಹದೊಳ್ (ಪಂಪಭಾ. ೬-೨೯). ೨. [ಜ್ಯೋತಿ] ಗ್ರಹಗಳು ಇರುವ ರಾಶಿ,-ಸ್ಥಾನ: ರಾಹು ನೆಲಸಿದೊಡೆ ಸಪ್ತಮ ಗೇಹದೊಳ್ . . . ಅನಲಂಗಾಹುತಿ ಪನ್ನೆರಡುವರ್ಷದಿಂದವನಕ್ಕುಂ (ಜಾತತಿ. ೬-೩೪). [ಸಂ.]

**ಗೇಹಕ್ರೀಡೆ** (ನಾ). ಮನೆಯ ಒಳಗೆ ಆಡುವ ಆಟ: ಜಲಕ್ರೀಡೆ ವನಕ್ರೀಡೆ ಗೇಹಕ್ರೀಡೆ ರಾಸಕ್ರೀಡೆ . . . ಮೊದಲಾದ ಸುಖವ್ಯಾಪಾರಂಗಳಿಂ (ವಿವೇಕ. ೨೦೪). [ಗೇಹ + ಕ್ರೀಡೆ]

**ಗೇಹಾಂಗಣ** (ನಾ). ಮನೆಯ ಅಂಗಳ,-ಆವರಣ: ಗೇಹಾಂಗಣದೊಳ್ ತಳರ್ನಡೆವುದಂ ಕಣ್ಣಾರ ನೋಡಲ್ಕೆ ನೋನೆನೊ (ಸುಕುಮಾ. ೯-೦೦೩). [ಗೇಹ + ಅಂಗಣ]

**ಗೇಹಾಜಿರ** (ನಾ). = ಗೇಹಾಂಗಣ: ಮದೌಘಕರ್ದಮಿತ ಕಾಂತಂ ರಾಜಗೇಹಾಜಿರಂ (ಚಂದ್ರಪು. ೦-೦೩೦). [ಗೇಹ + ಅಜಿರ]

**ಗೇಹಾಶ್ರಮ** (ನಾ). = ಗೃಹಸ್ಥಾಶ್ರಮಂ: ಗೇಹಾಶ್ರಮದೊಳ್ ಪಣಮಂ ಕಾಯಲಾಗದೆಂದೊಡೆ ಗುಣಮಂ ಕಾಯಲಾರ್ಕುಮೆ ಅದಱಿಂ ಗೇಹಾಶ್ರಮಮೇವುದು (ಜೀವಸಂ. ೩೩-೧೩ ವ). [ಗೇಹ + ಆಶ್ರಮ]

**ಗೇಹಿನಿ** (ನಾ). ಮನೆಯೊಡತಿ; ಹೆಂಡತಿ; ಗೃಹಿಣಿ. 'ಗಂರಂಗೇಹಿನಿ' ಪರಾ. [ಸಂ. ಗೇಹಿನೀ]

**ಗೇಹೋಪವನ** (ನಾ). ಮನೆಯ ಬಳಿಯ ತೋಟ; ಗೃಹೋಪವನ: (*). [ಗೇಹ + ಉಪವನ]

**ಗೈ** 'ಕೆಯ್$_1$' ನೋ.

**ಗೈನೆ** 'ಕೈನೆ' ನೋ.

**ಗೈಮೆ** 'ಕೈಮೆ$_1$' ನೋ.

**ಗೈಯಾಳಿ** 'ಗಯ್ಯಾಳಿ' ನೋ.

**ಗೈರ್** 'ಗೈರು' ನೋ.

**ಗೈರ್‌ವಿಲೆ** 'ಗೈರುವಿಲೆ' ನೋ.

**ಗೈರ್‌ಹಾಜರ್** 'ಗೈರುಹಾಜರು' ನೋ.

**ಗೈರ್‌ಹಾಜರಿ** 'ಗೈರುಹಾಜರಿ' ನೋ.

**ಗೈರಖರ್ಚು** (ನಾ). ಅನುಚಿತವಾದ ಖರ್ಚು; ಅನವಶ್ಯಕವಾದ ವೆಚ್ಚ: (*). [<ಗೈರು + ಖರ್ಚು (<ಕರ್ಚು$_4$)]

**ಗೈರತ್** 'ಗೈರತ್ತು' ನೋ.

**ಗೈರತ್ತು, ಗೈರತ್** (ನಾ). ಶಕ್ತಿ; ಸಾಮರ್ಥ್ಯ; ತಾಕತ್ತು: ನಮ್ಮನ್ನು ಅನುಸರಿಸಿಕೊಂಡು ಬರುವ ಗೈರತ್ತು ನಿಮಗೆ ಇಲ್ಲ (ಹುಲಿಹಾ. ೮); ಗೈರತ್ತಿದ್ದರೆ ಕುಸ್ತಿಹಾಕಲಿ (ಭೀಮಕಾ. ೮೮); ಕ್ರಾಂತಿಕಾರಿಯಾಗೂಂತ ತಾನೇ ನೀನು ಹೇಳೋದು? ಅದಕ್ಕೂ ಗೈರತ್ತು ಬೇಕು (ಜಗುಬ. ೦೯). **ಗೈರತ್**: ಸವಾಲ್‌ಗೆ ಛಡಾಸವಾಲ್ ಹಾಕೋಕೆ ತಕ್ಕ ಗೈರತ್ ಇಲ್ದೆ ಹಾಕ್ತಾರಾ? (ಭೀಮಕಾ. ೨). 'ಗತ್ತು' ಪರಾ. [←ಅರ. ಪಾರ. ಹಿಂ. ಮರಾ. ಗೈರತ್]

**ಗೈರಮರ್ಜಿ** (ನಾ). ಒಪ್ಪದಿರುವಿಕೆ; ಅಸಮ್ಮತಿ: ನಮ್ಮ ಭಾಷೆಯಲ್ಲಿ . . . ಅನ್ಯದೇಶೀಯವೆಂದು ಗುರುತಿಸಿಲಾಗದ ಶಬ್ದಗಳೆಂದರೆ . . . ಗೈರಮರ್ಜಿ; ಚೀಟ್ (ಭಾಷಾಶಾ. ೦೬೬). [<ಗೈರು + ಮರ್ಜಿ]

**ಗೈರಮಾಹಿತಿ** (ನಾ). ತಪ್ಪು ತಿಳಿವಳಿಕೆ,-ಮಾಹಿತಿ: ಇತ್ತ ಕಡಿಯ ಗೈರಮಾಹಿತಿಯಿಂದ . . . ಬರಿಯುತ್ತಾರೆ (ಮುಂಬವ್ಯಾ. ೭ ಪ್ರಸ್ತಾವನೆ). [<ಗೈರು + ಮಾಹಿತಿ]

**ಗೈರವಾಜಬಿ** 'ಗೈರುವಾಜಬಿ' ನೋ.

**ಗೈರಶಿಸ್ತ** (ಗು). ಅವ್ಯವಸ್ಥಿತವಾದ; ನಿಯಮಬಾಹ್ಯವಾದ: ಸ್ವರಾಜ್ಯ ಪಕ್ಷವು . . . ಸರಕಾರದ ಅನೇಕ ಗೈರಶಿಸ್ತ ಕರ್ತವ್ಯಗಳನ್ನು ಬೈಲಿಗೆಳೆಯಿತು (ಕಾಂಗ್ರೆಸ್. ೦೮). [←ಹಿಂ. ಮರಾ. ಗೈರ್‌ಶಿಸ್ತ್]

**ಗೈರಸಮಜೂತಿ** (ನಾ). ತಪ್ಪುತಿಳಿವಳಿಕೆ: ಅವರ ಮನಸ್ಸಿನಲ್ಲಿರುವ ಗೈರಸಮಜೂತಿಗಳನ್ನು ತೆಗೆದುಹಾಕುವದಕ್ಕೋಸ್ಕರ . . . ವಿಚಾರ ಮಾಡುವರು (ಮುಂಬವ್ಯಾ. ೮ ಪ್ರಸ್ತಾವನೆ). [<ಗೈರು + ಸಮಜೂತಿ]

**ಗೈರಹಂಗಾಮ** (ನಾ). ಸಕಾಲವಲ್ಲದುದು; ಅಕಾಲ: ಹೀಂಗೆ ಅವಕಾಶ ಆಗೋಣದರಿಂದ ಗೈರಹಂಗಾಮಕ್ಕೆ ಮಾಲು ಹೋಗಿ ನಫೆ ಬರುವದು ತಪ್ಪಿ ಲುಕಸಾನವಾಗುವ ಸಂದರ್ಭವುಂಟು (ಮುಂಬವ್ಯಾ. ೨೦೩). [<ಗೈರು + ಹಂಗಾಮ]

**ಗೈರಿ** (ನಾ). ತಪ್ಪು; ಅಪರಾಧ: ಹಾಗಾದರೆ ನನ್ನದು ಬಹಳ ಗೈರಿ ಆಯಿತು (ಶಿಭೃಮ. ೬೮). [←ಹಿಂ. ಮರಾ. ಗೈರೀ]

**ಗೈರಿಕ** (ಗು). ೧. ಬೆಟ್ಟದಲ್ಲಿ ಹುಟ್ಟಿದ. (ನಾ). ೨. ಒಂದು ಬಗೆಯ ಖನಿಜ; ಜಾದು; ಕಾವಿಕಲ್ಲು: "ಗೈರಿಕಂ, ಧಾತುಃ – ಈ ೨ ಜಾದು"

(ಹಲಾಯು. ೨೮-೧೬) ; "ತಾಮ್ರಧಾತುಃ – ಗೈರಿಕ" (ಒಷಧಿ. ೬೭) ; ಒಡಗೂಡಿ ಹೇಮ ಗೈ[ಪಾಠಾಂ. ಸೈ]ರಿಕ ಗುಡ ಸೈಂಧವ ಸರ್ಜಸಿಕ್ಥಕಂಗಳ ನಿಂಬಾಗಡುಗೆ ತಿಳತೈಳದಿಂದಂ ಕಿಡಿಸುಗುಮದು ಬಿಡದೆ ತೊಡೆದೊಡಧರ ವ್ರಣಮಂ (ಲೋಕೋಪ. ೯-೮೨). ೩. ಕೆಂಪುಬಣ್ಣ ; ಕಾವಿಬಣ್ಣ. 'ಗೈರಿಕಪರಾಗ', 'ಗೈರಿಕವಸನ' ಪರಾ. ೪. ಚಿನ್ನ; ಸುವರ್ಣ: "ಗೈರಿಕಂ ಕರ್ಬುರಂ . . . ಸ್ವರ್ಣಮೆನೆ ಹೊನ್ನಿಂಗೆ ನಾಮಮಕ್ಕುಂ" (ಮಂಗರಾ. ೩೦-೪) : ಗೈರಿಕದಿ ಮುಕ್ತಾಫಲದಿ ಸಮೆದ ಕಲಶಂಗಳೋರಣಿಪ ಪ್ರಾಸಾದ ಸೌಧ ಹರ್ಮ್ಯಂಗಳಿಂದೆಸೆದುದಾ ದ್ವಾರಾವತಿ (ಭಿಕ್ಷಾಟ. ೨-೩). [ಸಂ.]

**ಗೈರಿಕಪರಾಗ** (ನಾ). ಕೆಂಪುಬಣ್ಣದ ಧೂಳು; ಕೆಂಧೂಳು : ಕಾಡಾನೆಗಳ ಕೋಡವೊನೆಯಿನೀಡಿಱುವ ಗಿರಿಯ ದರಿಯ ಗೈರಿಕಪರಾಗಮಂ ಸಂಧ್ಯಾರಾಗಮಿಷದಿನಾಗಸಕ್ಕೆ ಪಸರಿಸಿಯುಂ (ಚಂದ್ರಪ್ರ. ೮-೪ ವ).
[ಗೈರಿಕ + ಪರಾಗ]

**ಗೈರಿಕರುಚಿ** (ನಾ). ಕೆಂಪು ಬಣ್ಣದ ಪ್ರಕಾಶ,–ಕಾಂತಿ : ಗೈರಿಕರುಚಿಯಂತೆ ಮೆಱೆಗುಮಾಯೆಡೆ ಸೊಬಗಿಂ (ವಸ್ತ್ವಂ. ೮೨). [ಗೈರಿಕ + ರುಚಿ]

**ಗೈರಿಕವಸನ** (ನಾ). ಕಾವಿ ವಸ್ತ್ರ; ಕಾಷಾಯವಸ್ತ್ರ. 'ಗೈರಿಕವಸನಧಾರಿ' ಪರಾ. [ಗೈರಿಕ + ವಸನ]

**ಗೈರಿಕವಸನಧಾರಿ** (ನಾ). ಕಾವಿವಸ್ತ್ರವನ್ನು ಧರಿಸಿದವನು : ಗೈರಿಕವಸನ ಧಾರಿಗಳಾಗಿ ಪರಿವ್ರಾಜಕರಾಗಿ ಅಲೆಯತೊಡಗಿದರು (ಭಾರದ. ೩೨೦).
[ಸಂ. ಗೈರಿಕವಸನಧಾರಿನ್]

**ಗೈರಿಕೆ** (ನಾ).=ಗೈರಿಕ ೩ : ಎಡಗಾಲಿಂದೆತ್ತಿ ಗೈರಿಕೆ ಧೂಳನು ಒಡನೆ ಕರತಳದೊಳು ತಾವಾಂತು ತೊಡೆದುಕೊಳ್ಳುತ (ಜ್ಞಾನಚ. ೩೫-೧೧೭).
[ಸಂ. ಗೈರಿಕ]

**ಗೈರು, ಗೈರ್** (ನಾ). ೧. ಇಲ್ಲದಿರುವುದು. 'ಗೈರುಹಾಜರು' ಪರಾ. ೨. ತಪ್ಪು ; ಅಪರಾಧ ; ಅಯೋಗ್ಯವಾದುದು : ಈ ಪ್ರಕಾರ ಪತ್ರ ಬರಿಯುವ ಪದ್ಧತಿಯು ಬಹಳೇ ಗೈರೆಂದು ನಮಗೆ ತೋರುತ್ತದೆ (ಮುಂಬವ್ಯಾ. ೯೮). **ಗೈರ್** : 'ಗೈರ್‌ವಿಲೆ', 'ಗೈರ್‌ಹಾಜರ್' ಪರಾ.
[←ಅರ. ಹಿಂ. ಮರಾ. ಗೈರ್]

**ಗೈರುಮಾಮೂಲು** (ನಾ). ಬಳಕೆಯಲ್ಲಿಲ್ಲದುದು ; ರೂಢಿಗೆ ವಿರುದ್ಧವಾದುದು : ತೊರೆಯರು . . . ಕುದುರೆ ಸವಾರಿಯ ಮೆರವಣಿಗೆ ಹೋಗುವುದು ಗೈರುಮಾಮೂಲು (ಕಲನ. ೨೦೬).
[ಗೈರು + ಮಾಮೂಲು]

**ಗೈರುವಾಜಿಬಿ, ಗೈರವಾಜಬಿ** (ಗು). ಅಯೋಗ್ಯವಾದ ; ಅನುಚಿತವಾದ; ಅನ್ಯಾಯದ: (ಕ). **ಗೈರವಾಜಬಿ:** ಯಾವತ್ತು ಗೈರವಾಜಬೀ ಲೆಕ್ಕಾಚಾರ ಸಾಕ್ಷಿ ರುಜು ಮೊಕಾಬಿಲೆಯಿಂದ ಕೂಲಂಕಷದರಿಯಾಫ್ತಿ ಮಾಡಿ (ಮಹಾಪಂ. II, ೩೯). [<ಗೈರು + ವಾಜಿಬಿ]

**ಗೈರುವಿಲೆ, ಗೈರ್‌ವಿಲೆ** (ನಾ). ಕಳೆದುಹೋಗುವಿಕೆ ; ತಪ್ಪಿಸಿಕೊಂಡು ಹೋಗುವುದು : ಇಟ್ಟ ಸಾಮಾನುಗಳು ಗೈರುವಿಲೆಯಾದರೆ ಮೇಲ್ವಿಚಾರಕರೇ ಜವಾಬ್ದಾರರು (ಪ್ರವಾಇ. II, ೦೬೦) ; ಯುದ್ಧಕ್ಕೆ ಹೋದ ಲಕ್ಷಾಂತರಸೈನಿಕರ ಪೈಕಿ, ಸಾವಿರಾರು ಜನ ಗೈರುವಿಲೆ ಆಗಿಬಿಟ್ಟಿದ್ದಾರೆ (ವೀರಯೋ. ೯೮). **ಗೈರ್‌ವಿಲೆ:** ನನ್ನ ದುರದೃಷ್ಟದಿಂದ ಅದು ಗೈರ್‌ವಿಲೆಯಾಗಿ ಹೋಗಬಹುದು (ವಿನೋದ. ೯); ನನ್ನ ಅದೃಷ್ಟದಿಂದ ಅದು ಗೈರ್ ವಿಲೆಯಾಗಿ ಹೋಗಬಾರದಷ್ಟೆ (ಪಂಜಿನ. ೨೦). [←ಮರಾ. ಗೈರ್‌ವಿಲ್ಹೇ]

**ಗೈರುಹಾಜರಿ, ಗೈರ್‌ಹಾಜರಿ** (ನಾ) ಹಾಜರಾಗದಿರುವಿಕೆ; ಅನುಪಸ್ಥಿತಿ : ರಾಜನು ತನ್ನ ಗೈರುಹಾಜರಿಯಲ್ಲಿ ಒಬ್ಬ ನ್ಯಾಯಾಧೀಶನನ್ನು ನೇಮಿಸಬಹುದಾಗಿತ್ತು (ಭಾರದ. ೩೬) : ತನ್ನ ಗೈರುಹಾಜರಿಯಲ್ಲಾಗುವ ಅವ್ಯವಸ್ಥೆಯನ್ನು ಸರಿಪಡಿಸಿ ಮನೆ ಸೇರೋಣ (ವಾತ್ಸಲ್ಯ. ೩೭). **ಗೈರ್‌ಹಾಜರಿ :** ಗೊತ್ತಾದ ಸ್ಥಳದಲ್ಲಿಲ್ಲದಿರುವುದು ; 'ಗೈರ್‌ಹಾಜರಿ' (Absence: ಇಂಕನಿ).
[ಗೈರು + ಹಾಜರಿ]

**ಗೈರುಹಾಜರು, ಗೈರ್‌ಹಾಜರ್** (ನಾ). ಹಾಜರಾಗದವನು ; ಅನುಪಸ್ಥಿತನು : ನಿನ್ನೆಯ ದಿವಸ ಗೈರುಹಾಜರಾಗಿದ್ದ ತಬಲಾ ಕಿಟ್ಟಯ್ಯ (ಬದುಕ್ಕಿ.೧೪); ಒಮ್ಮೊಮ್ಮೆ ಇಡೀ ವಾರವೇ ನಾವು ಗೈರುಹಾಜರಾಗುತ್ತಿದ್ದೆವು (ಕಲಕ. ೨೨). **ಗೈರ್‌ಹಾಜರ್ :** ಈ ನೌಕರರುಗಳು ಗ್ರಾಮದಿಂದ ಗೈರ್ ಹಾಜರಾಗಬೇಕಾದರೆ . . . ಡೆಪ್ಯೂಟಿ ಅಮಲ್ದಾರರ ಹುಕುಂ ವಿನಹ ಗೈರ್ ಹಾಜರಾಗತಕ್ಕದ್ದಲ್ಲವು (ಗ್ರಾಮಾಕ. ೪). [ಗೈರು + ಹಾಜರು]

**ಗೈರೇಯ** (ಗು). ೧. ಗಿರಿಯಲ್ಲಿ ಹುಟ್ಟಿದ. (ನಾ). ೨. ಗೈರಿಕ ; ಕಾವಿಕಲ್ಲು : "ಗೈರೇಯಂ, ಅರ್ಥ್ಯಂ, ಗಿರಿಜಂ, ಅಶ್ಮಜಂ, ಶಿಲಾಜಿತು–ಈ ೫ ಶಿಲಾಜತ್ತು" (ಸಿದ್ಧಾಂತಿ. ೨೬೨). [ಸಂ.]

**ಗೈಲು** (ನಾ). (?) : ತೈಲತಪ್ಪೋದಕದಲಿ ಮಿಂದರಿರ್ವರು ಶೈಲಾತ್ಮಜೆಯ ಕಾಂತನಿಗೆ ಗೈಲ ಪೂಜೆಯ ಮಾಡಿ ಮಹದುಪಚಾರವ ಕೈಲಾಗಿ ನಿಂದೊಡರ್ಚಿದರು (ಪೋಹಕ. ೩೦-೩). [?]

**ಗೈಸು** (ಕ್ರಿ). ಮಾಡಿಸು ; ನೆರವೇರಿಸಂ : ಸಕಲಲೋಕಗಳ ನಾಯಕ ಇವಗೆ ಹೇಯ ಲೌಕಿಕಮಾರ್ಗವನೆ ಬಿಡಿಸಿ ನಿತ್ಯದಲ್ಲಿ ಪ್ರಕಟವನೆ ಗೈಸು ಸದ್ಧರ್ಮ ಕರ್ಮಗಳ (ಜಗದಾ. ೩೨). [< ಕೆಯ್ಸು]

**ಗೊಂಕರು** 'ಗೊಂಕುಟು' ನೋ.

**ಗೊಂಕರುಕಪ್ಪೆ** 'ಗೊಂಕಟುಕಪ್ಪೆ' ನೋ.

**ಗೊಂಕಟುಕಟ್ಟಿ** 'ಗೊಂಕುಟುಗಟ್ಟಿ' ನೋ.

**ಗೊಂಕಟು** 'ಗೊಂಕುಟು' ನೋ.

**ಗೊಂಕಟುಕಪ್ಪೆ, ಗೊಂಕರುಕಪ್ಪೆ, ಗೋಂಕುರುಕಪ್ಪೆ** (ನಾ). (ಕರ್ಕಶವಾಗಿ ಅರಚುವ ದೊಡ್ಡ ಗಾತ್ರದ ಒರಟುಚರ್ಮದ) ಒಂದು ಬಗೆಯ ಕಪ್ಪೆ; ಮಂಹಾಮಂಡೂಕ: ಗೊಂಕಟುಕಪ್ಪೆ ದ[ಪ]ಸುಂಬಂ ತತ್ಕ್ರಮದಿಂದಮೆ ದೀಪ್ರದಿಗ್ಭಾಗದೊಳ್ ದನಿಗೆಯ್ಯೆ ಮನಸಿದ್ಧಿಯನಾಗಳೆ ಉಂಟುಮಾಡುಗುಂ (ಲೋಕೋಪ. ೦೨-೦೬). **ಗೊಂಕರುಕಪ್ಪೆ :** ಮುಂಗಾರು ಮಳೆಯ ರಾತ್ರಿಗಳಲ್ಲಿ ಗೊಂಕರುಕಪ್ಪೆಗಳ ಕಿರಿಚಾಟ ಬಹಳ (ರೂಢಿ). **ಗೋಂಕುರುಕಪ್ಪೆ :** ಅದು ಗಂಡುಹುಲಿ. ಕೆಳಗೆ ನದಿಯ ನೀರಲ್ಲಿ ಕಪ್ಪೆ ಗೋಂಕುರುಕಪ್ಪೆ ದೊಡ್ಡ ಮೀನುಗಳೇನಾದರೂ ಕಾಣಸುತ್ತವೋ ಎಂದು ಹಸಿವೆಯಿಂದ ಹುಡುಕಾಡುತ್ತಿತ್ತು (ಪರಾಟ. ೩೬).
[ಗೊಂಕಟು (< ಗೊಂಕುಟು) + ಕಪ್ಪೆ$_1$]

**ಗೊಂಕುಟಿಡು** (ಕ್ರಿ). ಕರ್ಕಶವಾದ ದೊಡ್ಡದನಿಯನ್ನು ಮಾಡಂ ; ಅರುಚು : ಬೆಳರ್ಗೆಂಪಂ ಕಿವಿ ಬೀಱೆ ಸಂಘಟಸುತಂ ಬಾಯ್ಬಿಟ್ಟು ಕಣ್ಣೀರ ಬೊಬ್ಬುಳಿಯಂತುರ್ವರೆಯುರ್ವೆ ಗೊಂಕು [ಪಾಠಾಂ. ತ] ಟಿ ಡುತುಂ ಮಿಳ್ಳಿರ್ದ ಬಾಲಂ ವಿಯತ್ತಳ ಸಮ್ಮಾರ್ಜನಿಯಂತೆ ಸಂಚರಿಸೆ ಕೋಪಾಟೋಪದಿಂ ತೊತ್ತಬಂದುಬೀಯಲ್ಕಟ್ಟಿರೆ ರಾಸಭಾಕೃತಿಯಿನಾಗಳ್ ರೌದ್ರಮಂ ಬೀಱುತುಂ (ಮಹಾನೀ. ೬-೯) ; (ಪದ್ಮಸಾ. II, ೧೬೯ ನೋ).
[ಗೊಂಕುಟು + ಇಡು$_1$]

**ಗೊಂಕುಟು, ಗೊಂಕರು, ಗೊಂಕಟು, ಗೋಂಕರು** (ನಾ). ೧. ಕರ್ಕಶವಾದದನಿ ; ದೊಡ್ಡಧ್ವನಿ. 'ಗೊಂಕಂಟುಗಟ್ಟಿ' ಪರಾ. **ಗೊಂಕರು :** (ಗು). ೨. ದೊಡ್ಡ ಗಾತ್ರದ. 'ಗೊಂಕರುಕಪ್ಪೆ' ಪರಾ. **ಗೊಂಕಟು:** ೨. 'ಗೊಂಕಟುಕಪ್ಪೆ' ಪರಾ. **ಗೋಂಕುರು:** ೨. 'ಗೋಂಕುರುಕಪ್ಪೆ' ಪರಾ. [ದೇ.೮ ತುಳು. ಗೋಂಕುರು, ಗೋಂಕ್ರು]

**ಗೊಂಕುಟುಗಟ್ಟಿ, ಗೊಂಕಟುಕಟ್ಟಿ** (ನಾ). ಕರ್ಕಶವಾಗಿ ಅರಚುವ ಕತ್ತೆ: ಆ ರಥದೊಳೊಡಂಬಡೆ ಪೂಡಿದ ನಾಲ್ಕೂಱು ಗೊಂಕುಟುಗಟ್ಟಿಯುಂ (ಪಂಪಭಾ. ೦೨-೭ ವ). **ಗೊಂಕಟುಕಟ್ಟಿ :** ಅಂತಾ ಸಿಂಹಂ ಮಱುಗುತ್ತಂ

ಬಟ್ಟು ಗೊಂಕಱಕಟ್ಟಿಯಂ ಬಯಸಿ ಬಾಯೊಱೆತು (ಪಂಪಶಂ. ೨೮೨-೧೯).
[ ಗೊಂಕುಱು + ಕಟ್ಟಿ ]

**ಗೊಂಕೆ, ಕಂಕೆ, ಗೋಕೆ** (ನಾ). ೧. ಕೊರಳು ; ಗೋಣು ; ಕುತ್ತಿಗೆ : "ಗೊಂಕೆ=ಗೋಣ್" (ಶಮದ. ಪರಿ ೨) ; "ಗೊಂಕೆ ಗೋಣೆಂಬುದು" (ಕರ್ಣಾನಿ. ೨೦); ಕಡುಮುಳಿದದಱ ಗೊಂಕೆಯಂ [ಪಾಠಾಂ. ಗೋಣಂ] ಮುಱಿದೊಡೆ (ವರ್ಧ್ಮಾ. ೧೧೯-೧); ಪಂಕಜಾಕ್ಷನಮುಂಕಿ ಗೊಂಕೆಯಂ ನುಲಿದ ಕಾಗೆಯ ಕನ್ನೆತ್ತರನುಂಡ ನೆಲನೆಲ್ಲಂಕೆಮ್ಮಣ್ಣ ನೆಲನಾಗಿ ಪಾಸಿ ದೊಡೆ (ಅರ್ಧನೇ. ೮-೨೨ ವ) ; ಪುರಾಣನಾರಕರ್ಕಂಡು ಪರಿತಂದು ಓಡಿದು ಕೊಂಡು ಗೊಂಕೆಯಂ ನುಲಿದು (ರತ್ನಕ. ೨-೪ ವ) ; ಅವನ ಗೊಂಕೆ ಮುರಿ ದಿಡುತ್ತೇನೆ (ಮೂರುದಾ. ೮೪). **ಕುಂಕೆ :** ೨. ಕತ್ತಿನ ಹಿಂಭಾಗ ; ಹೆಕ್ಕತ್ತು; ಹೆಡಕು : (೬). ೩. ಹೆಗಲು : (೬). **ಗೋಕೆ :** ೧. "ಗೋಣ್, ಕತ್ತು" (ಶ್ರಭಣ್ಣ). [ ? ]

**ಗೊಂಗಟೆ** 'ಗೊಂಗಡಿ' ನೋ.

**ಗೊಂಗಡಿ, ಗೊಂಗಟೆ, ಗೊಂಗೊಟೆ** (ನಾ). ೧. ಕಂಬಳಿ : ಕಂಗಾಣಸದೆ ಪಾರಿಯ ಪಟ್ಟೆ ಕರ್ವಣ್ಣ ಗೊಂಗಡಿ ಮುಸುಕಿಟ್ಟುಕೊಂಡು ಅಂಗಡಿ ಸೊಡರ್ಗಟ್ಟ ದೇಗುಲದೆಡೆಯ ದುಸ್ಸಂಗದಂಪತಿಗಳೊಪ್ಪಿದರು (ಮೋಹತ. ೧೮-೨೩) ; ಆತನನ್ನು ಒಳಕೋಣೆಯ ಒಂದು ಚಾಪೆಯ ಮೇಲೆ ಹಾಸಿದ ಗೊಂಗಡಿಯ ಮೇಲೆ ಮಲಗಿಸಿದಳು (ನಿಷ್ಕಾಮ. ೬೫) ; ಅಂಗಡಿ ಮಾರಿ ಗೊಂಗಡಿ ಹೊದ್ದ (ಗಾದೆ). ೨. ಕಂಬಳಿ ಮೊದಲಾದವುಗಳಿಂದ ಮಾಡಿದ, ತಲೆ, ಬೆನ್ನುಗಳನ್ನು ಮುಚ್ಚುವಂತೆ (ಮಳೆಗಾಲದಲ್ಲಿ)ಧರಿಸಿಕೊಳ್ಳುವ ಗೊಪ್ಪೆ : ಕೊಡೆ ಮೇಣಗಪ್ಪಡ ಗೊಂಗಡಿ ಬಹುರಮ್ಯವಡೆದಿರ್ದ ಸಕಲಾತಿದಳೆದು . . . ಎಡೆಯಾಡುತಿರ್ದರೂರುಗರು (ಮೋಹತ. ೪-೪೦) ; ದೃಷ್ಟಿ ಹೊಡೆದೀತೆಂದು ಬೆನ್ನುಭುಜಗಳನ್ನು ಮುಚ್ಚಿಕೊಂಡಿರುವ ಅಪ್ಪಟ ಉಣ್ಣೆಯ ಸಣ್ಣ ಗೊಂಗಡಿ (ಸುವಸಂ. ೫೨). ೩. ಚೆನ್ನಾಗಿರುವ ಮತ್ತು ಉದ್ದವಾಗಿರುವ ಹಣಿಸೆಹಣ್ಣು : (೬). **ಗೊಂಗಟೆ :** ೧. ಪುರಹರನು ತಾ ಮತ್ತೊಂದು ರೂಪನು ಧರಿಸಿದನು ಬಳಿಕ ಹರಕುಗೊಂಗಟೆ ಪಾದ ರಕ್ಷೆಯು ತೆಱದ ಹಲ್ಲಿನ ದೊಡ್ಡನಡುವಿನ ಭರದ ಗವದಿತನಾದ ಕೈಮೂಗು ವೊಡಸು ದೇಹದಲಿ (ರೇವಕಾ. ೧-೧೬). ೨. ಬೇಗನೆ ತಾರೆ ಗೊಂಗಟೆ ಗೊರಗೆ ಕೋಲ್ಗೊಗೆ ಹುಡಿಯಡಿಕೆಯಲೆಯಾ (ಅಜಾರ್ವಿ. ೩೦-೩೩). **ಗೊಂಗೊಟೆ$_1$ :** ೧. ಅಂಬಲಿಯನಿಕ್ಕಿದನು ಕೈ ತೊಳೆಯಂದೊಡೆ ಗೊಂಗೊಟೆಯುಲೊರಸಿದಾ ಬೆಂಬಳಿಯ ಸೀಮೆಯನು ತೋಱಿದನಾತ ರೇವಣಗೆ (ರೇವಕಾ. ೧-೨೨).
[ ←ತೆಲು. ಗೊಂಗಡಿ, ಗೊಂಗಳಿ. / ಮರಾ. ಘೊಂಗಡ್, ಘೊಂಗಡೀ, ಘೊಂಗಡೇ ]

**ಗೊಂಗು** (ನಾ). ಒಂದು ಸ್ಥಳದ ಹೆಸರು: ಗುವಳಾಲಂ ಗೊಙ್ಗುಂ ವಾಣರಸ ಆಳೆ (ಎಕ. X, ಮುಳಬಾ. ೨೬೫-೧ ; ಸು. ೫೬೦). [ <ಕೊಂಗು$_1$ ]

**ಗೊಂಗೆ** (ನಾ). ಒಂದು ಬಗೆಯ ಪಕ್ಷಿ : (೬). [ ? ]

**ಗೊಂಗೊಟೆ** 'ಗೊಂಗಡಿ' ನೋ.

**ಗೊಂಚಲ್, ಗೊಂಚಲು** (ನಾ). ೧. ಕುಚ್ಚು ; ಗುಚ್ಛ ; ಮಂಜರಿ : "ಭೃಶಸಂಭೃತ ನವಮಂಜರಿ ಗೊಂಚಲ್" (ವಸ್ತುಕೋ. ೩೦-೮) ; ಬಳಸಿದ ಚೆಂಬೊನ್ನ ಮಾಂಗಾಯ ಗೊಂಚಲ್ಗಳ . . . ನಡುವೆ (ಆದಿಪು. ೮-೦೫ ವ) ; ಇನಿವಣ್ಗೊಂಚಲಂ ಕಂಡರಗಿಳಿಯಂತೆ (ಉದ್ಭಟ. ೧೧-೧೧೬ ವ). ೨. ಹೂವಿನ ಗುಚ್ಛ : "ತೊಡಂಬೆ, ತೊಡಬೆ . . . ಗೊಂಚಲ್, ಗುಚ್ಛಂ—ಈ ೭ ಪುಷ್ಪಮಂಜರಿ" (ಕಶಸಾ. ೧೦-೧೯೬). ೩. ಸಮೂಹ ; ರಾಶಿ : ಮಿಂಚಿನ ಗೊಂಚಲೆನೆ ಸಂಚಳಿಸಿ ಪೊಳೆವ ರತ್ನಾಭರಣಂಗಳ ಪೊಳೆಪಂ ಕಂಡು (ಸುಕುಮಾ. ೭-೧೮ ವ) ; ಕೆಂಜೆಡೆಗಳ ಗೊಂಚಲ್ಗಳಿಂ ದೇಸಿವಡೆದುಟ್ಟ ವ್ಯಾಘ್ರ ಚರ್ಮಾಂಚಲದೊಳ್ಪಿದೆ ಸಾರೂಪ್ಯದವರು . . . ಎಸೆದಿರ್ದರು (ಚಬಪು. ೨-೨೫). 'ಗೊಂಚಲಿಸು' ಪರಾ. **ಗೊಂಚಲು :** ೧. "ಗುಚ್ಛಕಃ, ಸ್ತಬಕಃ—ಈ ೨ ಗೊಂಚಲು" (ನಾಚಿರಾ. ೦೦೬) ; "ಗೊಂಚಲುಗಳಾ ವಲ್ಲರಿಯು ಮಂಜರಿಗಳಕ್ಕುಂ" (ಮಂಗರಾ. ೩೨-೪) ; ತಳಿರ ನನೆಯಲರ ಕಾಯ ತನಿವಣ್ಣ . . . ಗೊಂಚಲುಗಳುಮಂ (ಕಾದಂಉ. ೫೨೬); ಮುತ್ತುರತ್ನಗಳ ಗೊಂಚಲು . . . ಓಲಗಶಾಲೆಯು ಸುತ್ತಲೊಪ್ಪಿದುವು (ಕಂನವಿ. ೮-೦೦) : ಮೇಜಿನ ಮೇಲೆ ನೀಲಿ ದ್ರಾಕ್ಷೆಹಣ್ಣಿನ ಗೊಂಚಲು ಇಡಲ್ಪಟ್ಟಿತ್ತು (ಮಹಾತ್ಮ. ೦೬). ೩. ನಕ್ಷತ್ರಗಳ ನಡುವೆಯೂ ಇರುವ ಗೊಂಚಲನ್ನು ಉದಾಹರಣೆಗಾಗಿ ತೆಗೆದುಕೊಳ್ಳೋಣ (ಜ್ಯೋತಿರ್ವಿ. ೬೪).
[ ದೇ.॥ ತುಳು. ಗೊಂಚಲ್ ]

**ಗೊಂಚಲಿಸು** (ಕ್ರಿ). ಗೊಂಚಲಾಗು ; ಒಟ್ಟಾಗು ; ಸಂದಣಿಸು : ಅಲರ್ವಲರ್ಗೊಂಚಲಂತಲುಗೆ ಮಿಂಚು ಓಕಂ ನಲಿವಂತೆ . . . ಗೊಂಚಲಿಸಿ [ಪಾಠಾಂ. ಗೊಂಚಲಿಸಿದಣ್ಣಸಿ, ಗೊಂದಣಿಸಿ] ಕೆಂದಳಿರೊಳ್ಗಳಿವಿಂಡು ಪಾಯ್ದುದಂ ಸಲಿಸೆ ಸುರೇಂದ್ರಚಾಪಲತೆ ಬಂದುದು ಕಾರೆಳಮಾವಿನಂದದಿಂ (ಅರ್ಧನೇ. ೬-೪೨) ; ಕಂಚಗಾಱರ ಹಸರದಿಂ ಕುಡಿಮಿಂಚುಗಳು ಬಳೆಗಾಱ ವಸರದೆ ಗೊಂಚಲಿವ ಕರಿಮುಗಿಲುಗಳು (ಸಾಳ್ವಭಾ. ೨-೧೪).
[ ಗೊಂಚಲ್ + –ಇಸು$_3$ ]

**ಗೊಂಚಲು** 'ಗೊಂಚಲ್' ನೋ.

**ಗೊಂಚಲುಗುಂಡು** (ನಾ). ಗುಂಪುಗುಂಪಾಗಿ ಒಮ್ಮೆಲೆ ಸಿಡಿಯುವ ಗುಂಡು : "ಹಲವು ಸಣ್ಣಸಣ್ಣ ಗುಂಡುಗಳನ್ನು ಚೀಲ, ಮೊ. ಗಳಲ್ಲಿ ಒಟ್ಟಿಗೆ ಇಟ್ಟು ಫಿರಂಗಿಗೆ ಹಾಕಿ ಹೊಡೆಯುವುದರಿಂದ ಸುತ್ತಲೂ ಸಿಡಿಯುವ ಗೊಂಚಲುಗುಂಡು" (Grapeshot. ಇಂಕನಿ).
[ ಗೊಂಚಲು (<ಗೊಂಚಲ್) + ಗುಂಡು ]

**ಗೊಂಚಲುದೀಪ** (ನಾ). ದೀಪಗಳ ಗೊಂಚಲು ; ಒತ್ತೊತ್ತಾಗಿ ಅಳವಡಿಸಿದ ಅನೇಕ ದೀಪಗಳ ಸಮೂಹ : ಅನೇಕ ದೀಪಗಳುಳ್ಳ ಕವಲೊಡೆದ ತೂಗುದೀಪಾಧಾರ: ಗೊಂಚಲುದೀಪ (Chandelier. ಇಂಕನಿ).
[ ಗೊಂಚಲು (<ಗೊಂಚಲ್) + ದೀಪ$_3$ ]

**ಗೊಂಚಲ್ಮಿಂಚು** (ನಾ). ಕುಚ್ಚುಕುಚ್ಚಾಗಿರುವ ಮಿಂಚು ; ಮಿಂಚುಗಳ ಗೊಂಚಲು,–ಸಮೂಹ : ಅಂತೇಳ್ಪರ್ಪಾಗಳ್ ಕಲಿಗಳ್ ಕರತಳದಿನೊಱೆ ಗಳೆದು ಕುರುಳ್ಚುವ ಕೈದುಗಳ ಬಳ್ಪಿವೆಳಗಿಂ ಗೊಂಚಲ್ಮಿಂಚುಗಳ್ಸಂ ಚಳಿಸಿದಂತೆಯುಂ (ರಾಜಶೇ. ೧೩-೭೭ ವ).
[ ಗೊಂಚಲ್ + ಮಿಂಚು$_3$ ]

**ಗೊಂಚಿ, ಗೊಂಚು, ಗೊಂಚೆ, ಗೊಚ್ಚ** (ನಾ). ೧. ಗೊಂಚಲು ; ಗುಚ್ಛ : "ಗೊಂಚಿ=ಗೊಂಚಲು" (ಜಾನಕೋ. ೫೦). ೨. ಗುಂಪು ; ಸಮೂಹ ; ರಾಶಿ : "ಬಂಬಲ್ . . . ಗೊಂಚಿ . . . ಗೊಂದಣ (ಉಂದಲ್)–ಈ ೪೦ ಸಮೂಹಂ" (ಕಶಸಾ. ೧೦-೨೨೨) : ಸೊಗಸ ಸೈಗಱೆವ ಪಾತಕರ ಗೊಂಚಿಗಳಿಂದೆ (ಚೀರಮ. ೧೧-೫೦); ತವ ನುಡಿಗೆ ಕಿವಿಗುಡೆ ಪುಡಿವಡೆದುದೆಲು ಗೊಂಚಿಯೆಮ್ಮೊಡಲ (ಸಂರಾಅಂ. ೧೬೬). **ಗೊಂಚು :** ೧. ಉರವಣಿಸಿ ಕೃತವರ್ಮನಂಬಿನ ಸರಳ ಸುರಿವುತ ಕಣಕಿ ಕೈಕೊಂಡರಿ ಭಟಾಗ್ರಣಿ ಮೆಚ್ಚಲೆಚ್ಚನು ಗೊಂಚಿನಂಬಿನಲಿ (ಕುಮಾರವ್ಯಾ. ೭ರಿಇ. ಪರಿ ೨೯೨) ; ಹಿತ್ತಿಲೊಳಗೆ ಮುತ್ತಿನ ಗಿಡ ತೋಱಿಸಿದ ಪಂಟಪಂಟಿಗೆ ಎಂಟುಎಂಟು ಗೊಂಚುಗೊಂಚು ಜೋಲುತಿರಲು ಕಡಿದುಕಡಿದು ರಾಶಿಹಾಕಿದ (ಪುರಂದ. ೩-೦೦೬-೩). ೨. ವಿದ್ಯನಿಪುಣಗೊರ್ಂಚಿನಲಿ ಬೆಳಗರಿಯಪಾಹವಗ್ಗೆಯಲು (ಜಿರಾಮಾ. ೨೩೪-೫೨). **ಗೊಂಚೆ :** ೧. ಪೊಸಬನದೇಟ್ಗೆ ಕಾರ್ಮುಗಿಲ ಪರ್ಬುಗೆ . . . ಮಿಂಚು ಚಂಪಕ ಪ್ರಸರದ ಗೊಂಚೆ (ಉದ್ಭಟ. ೯-೩೦). **ಗೊಚ್ಚ :** ೨. "ತಂಡಂ . . . ಗೊಚ್ಚಪೊಟ್ಟಲ್ ಪಂಡಿತರಿಂ ಗಡಣವಂಗಡಂ

ಕಿಕ್ಕಿಂದಂ " (ಕವಿಕಂ. ೦೦೬).

[ <ಪ್ರಾ. ಗೊಂಜೀ, ಗೋಛಿಯ./ತುಳು. ಗೊಂಚಿ ]

**ಗೊಂಚಿಗಾರ,** ಗೊಂಚುಗಾರ (ನಾ). ಊರಿನ ಮುಖಂಡ,-ಮುಂಖ್ಯಸ್ಥ : ಊರ ಸಾಹುಕಾರ ಶಿವ್ಪಣ್ಣನವರು, ಮಠದಯ್ಯನವರು, ಗೊಂಚಿಗಾರರು . . . ಎಲ್ಲರ ಎತ್ತುಗಳೂ ಕಾರುಹುಣ್ಣಿಮೆಯಲ್ಲಿ ಮೆರವಣಿಗೆ ಹೊರಡುತ್ತವೆ (ನದೀಪ. ೨೬). **ಗೊಂಚುಗಾರ:** ನಮಗ ಜ್ವಾಳ, ನವಣೆ ಕೊಡಿಸು ಗೊಂಚುಗಾರ (ಮುರಳ. ೧೨). [ ಗೊಂಚಿ + – ಕಾರ$_1$ ( < – ಕಾಱ) ]

**ಗೊಂಚು** ' ಗೊಂಚಿ ' ನೋ.

**ಗೊಂಚುಗಾರ** ' ಗೊಂಚಿಗಾರ ' ನೋ.

**ಗೊಂಚಿ** ' ಗೊಂಚಿ ' ನೋ.

**ಗೊಂಜಿ** (ನಾ). ಒಂದು ಬಗೆಯ ಮರ : ಗೌಜಲ್‌ಮರ . . . ಗೊಂಜಿ . . . ಹೆಣ್ಣುಮತ್ತಿ (ಪ್ರಜಿಗಿ. ೧೮-೩೦೯). [ದೇ.॥ ತೆಲು. ಗೊಂಜಿ ]

**ಗೊಂಜು** ' ಗುಂಜು$_1$ ' ನೋ.

**ಗೊಂಟಿಕೆ,** ಗೆಂಟಗೆ, ಗೆಂಟಿಗೆ, ಗೆಂಟುಂಗೆ, ಗೌಂಟಿಕೆ, ಗೌಂಟಿಗೆ, ಗೌಟಿಕೆ (ನಾ). (ಬೊಜ್ಜಲು ಬುರಿಗೆ ಕಟ್ಟುವ) ರಕ್ಷೆ,-ತಾಯಿತ : ಅಂತು ಗರ್ಭ ಚಿಹ್ನಂ ಪ್ರಕಟಿಸಿ ವಿರಾಜಿಸುತ್ತಿರೆ ಸಪ್ತಮಾಸಕ್ಕೆ ಗೊಂಟಿಕೆ[ಪಾಠಾಂ. ಕಂಠಿಕೆ, ಗೌಂಟಿಕೆ]ಯಂ ಕಟ್ಟಿಸಿ ನವಮಾಸಂ ತೀವಿ ಬೆಸಲೆಯಪ್ಪುದುಂ (ಧರ್ಮಪ. ೧-೬೨ ವ). **ಗೆಂಟಗೆ :** ಕ್ಷಿತಿಪನ ಕಾಂತೆಗಂ ಸಚಿವಮಾನಿನಿ ಬಂದು . . . ಅಱುದಿಂಗಳೊಳ್ಕಹೋರ್ಜಿತಮುದಮುಣ್ಮೆ ಗೆಂಟಗೆಯನೊಪ್ಪಿರೆ ಮಾಡಿಸಿ ಪೋದರರ್ಥಿಯಿಂ (ತ್ರಿಪುವಿ. ೧೭-೧೯೯). **ಗೆಂಟಿಗೆ:** 'ಗೆಂಟಿಗೆಗಟ್ಟು' ಪರಾ. **ಗೆಂಟುಗೆ :** ತನುಭವಲಾಭ ದೌಹದ ನಿಮಿತ್ತದ ಸಂಗತಿ ತಕ್ಕ ನೋಂಪಿ ಮುಂಗನಸು ಬಯಕೆ ಗೆಂಟುಗೆ[ಪಾಠಾಂ. ಗೌಂಟಿಗೆ]ದ್ಯಗುತ್ಸವ ಕಾರಣ ಗರ್ಭಚಿಹ್ನಂ (ಸುಕು.ಸು. ೬-೧). **ಗೌಂಟಿಕೆ :** ಮೇಲಿನ 'ಧರ್ಮಪ' ಪ್ರಯೋಗದ ಪಾಠಾಂತರವನ್ನು ನೋಡಿ. **ಗೌಂಟಿಗೆ :** ಮೇಲಿನ ' ಸೂಕ್ತಿಸು ' ಪ್ರಯೋಗದ ಪಾಠಾಂತರವನ್ನು ನೋಡಿ. **ಗೌಟಿಕೆ :** ' ಗೌಟಿಕೆಗಟ್ಟು ' ಪರಾ. [ ? ]

**ಗೊಂಟು,** ಗೊಂಡಂ$_1$, ಗೊಟ್ಟು$_3$, ಗೋಂಟು, ಗೋಟು$_1$ (ನಾ). ೧. ದಿಕ್ಕು ; ದಿಶೆ : "ಗೊಂಟು, ದೆಸೆ–ಈ ೨ ದಿಕ್ಕು" (ಕಕಸಾ. ೯-೪೦) ; "ಗೊಂಟುಂ ದೆಸೆಯುಂ ಕನ್ನಡದ ದಿಕ್ಕುವೆಸರಹುದು " (ಕವಿಕಂ. ೩೯) ; ಹರ ಕುಳ್ಳಿರ್ದ ಗೊಂಟಿ[ಪಾಠಾಂ. ಕೊಪ್ಪೆ]ಗೊಂದುಱ ಸತ್ರದಲಿ ಮೆಱೆಯ ಲೊಂದು . . . ಇಂತು ಹದಿನೇಳು ಯೋಗಲಿಂಗಂಗಳಂ ನಿರ್ಮಿಸಿದನು (ಸಿದ್ಧರಾ. ೩-೪೪) ; ಪೊಡೆವ ಬೀರರ ಜಂಕೆಗೆ ಗೊಂಟನಾನೆಗಳ್ ಕೋಡುವಿನಂ (ಕಬ್ಬಿಗಕಾ. ೨೦೫) ; ಎಸೆವ ಕರ್ಬಿನ ತೋಂಟದ ಗೊಂಟನೊಳ್ (ರಾಮಾಶ್ವ. ೧೦೧-೨೦). ೨. ಮೂಲೆ ; ಕೋನ ; ಸಂದಿ : ಪ್ರುಥ್ವಿಯ ಹಸುಂಬೆಯಾಗೆ ಅಷ್ಟಲೋಕ ಪಾಲಕರೇ ಗೊಂಟಾಗೆ ವಾಸುಗಿಯೇ ಬಳಸಾಗೆ (ಎಕ. VII, ಶಿಕಾರಿ. ೧೦೮-೩೦ : 1054) ; ದ್ರವ್ಯವ ಬಡ್ಡಿಯ ವ್ಯವಹಾರಕ್ಕೆ ಕೊಟ್ಟು ಮನೆಯ ಗೊಂಟಿನಲ್ಲಿ ಹೊಯ್ದುಕೊಂಡಿದ್ದನಾದರೆ ಅದು ಎನ್ನರ್ಥವಲ್ಲ ಅನರ್ಥವೆಂಬೆ (ಬಸಪ. ೩೪-೯೦) ; ಭಿಕ್ಷುವಂ ಪೊರ್ದಿ ಯಕ್ಷಂ ಮರುಳಾದಂ ಬಿಕ್ಕವಗೊಂಟನೊಳೆ ಮುದುಡಿದರ್ (ಆನಂಪು. ೧-೦೧೨) ; ಮಾದಿಗಂ . . . ತನ್ನ ಗೊಂಟಿನಲ್ಲಿ ಮನೆಯೊಳಡಂಗಿರ್ಪನ್ನೆಗಂ (ಪುಣ್ಯಾಸ್ರ. ೭-೪೪ ವ) ; ಆ ಮನೆಯಾ ಗೊಂಟನೊಳವಳ ಕೆಡಹಿ (ಪ್ರಭುಲಿ. ೩-೦೦೬). **ಗೊಂಡು$_1$ :** ೨. ಎಲ್ಲರಂ ತಣಿಪಿ ಕೆಲಬಲನುಮಂ ನೋಡುತುಂ ಅಲ್ಲಿ ಗೊಂಡಿ[ಪಾಠಾಂ. ಗೊಂಟ, ಗೋಂಟ]ನೊಳಿರ್ದ ಭಕ್ತನಂ ಕಾಣುತುಂ (ಅನೀರ. ಹ. ೬೫-೨೫). **ಗೊಟ್ಟು$_3$ :** ೨. ಅವನ ಅರ್ಜಿ ಗೊಟ್ಟಕ್ಕೆ ಬಿದ್ದಿದೆ (ರೂಢಿ). **ಗೋಂಟು :** ೧. "ದೆಸೆ ಗೋಂ[ಪಾಠಾಂ. ಗೊಂ]ಟೆನಲ್ ದಿಕ್ಕಕ್ಕು " (ಕಬ್ಬಿಗ. ೧೫). ೨. " ಅಣಿಃ, ಅಶ್ರಿಃ, ಕೋಟಿಃ, ಅಶ್ರಃ, ಕೋಣಃ–ಈ ೫ ಗೋಂ[ಪಾಠಾಂ. ಗೋ]ಟು " (ಹಲಾಯು. ೧೨೦-೪೨) : ನಾಲ್ಕುಂ ಗೋಂಟಿಂಗಂ ಲಿಂಗಮುಂ ತಪೋಧನರುಂ ಕವಿಲೆಯುಂ ಬೆರಸು ಮಾಡಿ ನಿಱಿಸಿದ ಕಿನ್ನರಿಗಲ್ಲ ಗುಡ್ಡೆ ನಾಲ್ಕು (ಸೌಇಇ. XI-II, ೦೦೯-೩೪ ; 948) ; ಬಸದಿಯ ನೈರಿತ್ಯದ ಗೋಂಟಿನ್ನಂ (ಸೌಇಇ. XI-I, ೬೮-೩೨ ; 1045) ; ಶಿವಾಲಯದೊಳಯಿಕೆಯ್ವಂದು ಅಲ್ಲಿ ಸಂಭ್ರಮಿಪ ಶರಣರನೀಕ್ಷಿಸುತೆಯ್ತಂದು ಗೋಂಟಿನೊಳು ಕುಳ್ಳಿರ್ದು (ಅನೀರ. ದೇ. ೮೬-೯) ; ತಳಾಱಂ ಮನೆಯೊಳಗಂ ಪೊಕ್ಕು ಗೋಂಟಿನೊಳಿರ್ದವನಂ ತೆಗೆದುಕೊಂಡು ಪೋಗಿ (ಪುಣ್ಯಾಸ್ರ. ೭-೪೪ ವ). **ಗೋಟು$_1$ :** ೧. ಊರಡೆ ದಡದ ಬಡಗಣ ಮೂಡ್ಲ ಗೋಟಿನಲ್ಲಿ ಬ್ರಹ್ಮದೇವ ಪಟ್ಟವರ್ಧನರು ಕೊಟ್ಟ ತೆಂಕವಾಗಿಲ ತುರುಕೆಯೊಂದು (ಸೌಇಇ. IX-I, ೩೩೩-೩೨ ; 1215) ; ನಿನ್ನ ಪುಣ್ಯದ ತೋಟವನು ತಱಿದೊಟ್ಟಿ ನಿಮ್ಮೈವರನು ಯಮಪುರದ ಗೋಟಿನಲ್ಲಿ ಗುಱಿಮಾಡುವೆನು (ಕುವ್ಯಾಗ. ೩-೦೬). ೨. " ಅಶ್ರಶ್ರಿಯೆನೆ ಗೋಟು " (ಮಂಗರಾ. ೦೩೦-೨೦) ; ಮೋಱನ ಗೋಟಿಗೆ ಬರ್ಪ ಕಿಱುಕುಳ ದೈವಕ್ಕೆ ಕುಱಿಯನಿಕ್ಕಿಹೆವೆಂದು ಕಲಿನಲಿದಾಡುವರು (ಬಸಪ. ೫೬೦) ; ಸಿರಿ ಉರಿ ಮಾದೇವಿ ಮೋಱದ ಗೋಟಿಗೊಳಗಾಯಿತ್ತು (ಚದೊಮ್ಮ. ೪೦) ; ಮಾಯಾಮೋಹವೆಂಬ ಹಾಳು ಗೇರಿಯ ಗೋಟಿನಲ್ಲಿ ಬಿದ್ದು ಸೂಕರನಂತಿಪ್ಪವರನೆಂತು ಭಕ್ತರೆಂಬೆ (ಸಿದ್ಧೇವ. ೪೨-೦೦೬) ; ಕುಟಿಲವೇಷದ ಗಿರಿಶಂ ಗೋಟಿನೊಳಿರಲ್ಕೆ ಕಂಡಂ ಭಕ್ತಂ (ತ್ರಿಪುವಿ. ೯-೪೭). ೩. ಅಂಚು; ದಡಿ: ಒಬ್ಬ ಜರದ ಗೋಟು ಕಟ್ಟಿದ ಅಂಗಿ ಹಾಕಿದ ಸಾಹೇಬ-ಮುಂದೆ ಬಂದು (ಪಹಾರ. ೦೦೨).

**ಗೊಂಟುಗೊಂಟು** (ದ್ವಿರುಕ್ತಿ): ನಿಮಿರ್ದೇಱಿ ಪಾಱುವ ಪತಾಕೆ ವಿರಾಜಿಪ ಗೊಂಟು ಗೊಂಟನೊಳ್ ಬಳಸಿದ ಕೊತ್ತಳಂ (ಗಿರಿಕ. ೨-೬೯) ; ಶಕ್ರಾದ್ಯರೆಲ್ಲಂ ಕೊರಗುತ್ತುಂ ಗೊಂಟುಗೊಂಟಂ ಪುಗುತಿರೆ (ಕುಸುಮಾ. ೮-೦೪೫).

[ ದೇ.॥ ತುಳು. ಕೋಂಟು ; ನಾಯ್ಕಿ. ಕೋಂಟ./ಹಿಂ. ಮರಾ. ಗೋಟ್ ]

**ಗೊಂಟುಗೊಳ್** (ಕ್ರಿ). ೧. ಮೂಲೆಯನ್ನು ಸೇರು: ದಿನದೊಳ್ ಮೂಡಿದೆಱಿನಾಯ್ತು ಭಾನುವಿನ ತೇಜಂ ಗೊಂಟುಗೊಂಡೆಯ್ದಿದಂತೆನಸುಂ ವಹ್ನಿಯ ತೇಜಮೆಟ್ಟಿಡವಿಯೊಳ್ ಮಟ್ಟಿಗ್ತು (ಕುಸುಮಾ. ೩-೬). ೨. ಅಂಚನ್ನು ಹೊಂದು ; (ಅಲಂಕಾರದ) ದಡಿಯನ್ನು ಹೊಂದು : ಅವಂ ಪೊಱಗುವಮಾಡಿ ರುಗ್ಮಿಕುಳಶೈಳಮಂ ಗೆಲ್ದು ರುಗ್ಮಿ ವಿಸ್ಫುರಿತಮಪ್ಪ ಕೋಂಟೆ ಸಲೆ ಗೊಂಟುಗೊಂಡಿರ್ದುದೆಂಬ ವರ್ಣನೆಗೆ ತಕ್ಕುದೇ ದಲೆ[ನಲಂ] ತದಂ ಸುತ್ತಿ ದುಗ್ಧವಾರ್ಧಿಗೆಣೆಯಾದಗಟ್ ಸೊಗಯಿಸಿ ಕುರ್ ಮಚ್ಚಾಂಬುವಿಂ (ಶಾಂತಿಪು. ೯-೦೪೫). [ ಗೊಂಟು + ಕೊಳ್$_1$ ]

**ಗೊಂಟುಗೊಳಿಸು** (ಕ್ರಿ). ಮೂಲೆಗೆ ಸೇರಿಸು : ತಲೆ ವಿಕ್ಕೆಯ್ದಿ ತಗುಳ್ದು ಗೊಂಟುಗೊಳಿಸುತ್ತುಗ್ರಾಂಧ್ಯಮಂ ಕೈರವಾವಳಿಯೊಳ್ ಪೊಕ್ಕು ವಿಕಾಸಲಕ್ಷ್ಮಿಗೆಡೆಮಾಡುತ್ತ . . . ತಣ್ಣದಿರ್ಗಳೆತ್ತಂ ಪರ್ಬಿದತ್ತುರ್ವಿಯೊಳ್ (ಕುಸುಮಾ. ೪-೪೮). [ ಗೊಂಟುಗೊಳ್ + – ಇಸು$_3$ ]

**ಗೊಂಟುವೊಗು** (ಕ್ರಿ). ಮೂಲೆಸೇರು ; ಮೂಲೆಪಾಲಾಗು ; ಮೂಲೆ ಗುಂಪಾಗು : ಪೆಸರ್ವೆತ್ತ ಹಸ್ತಿನಾಪುರಕಸಮಂ ಶಾಮಾಗಿ ನಾಣ್ಚಿ ಸುರಪುರಿ ಪೋಯ್ತಾಗಸದತ್ತಲ್ ಫಣಿ[ಪತಿ]ಪುರಿ ರಸೆಗಿೞಿದುದು ಗೊಂಟುವೊಕ್ಕುದಳಕಾನಗರಂ (ಶಾಂತೀಶ್ವ. ೦೩-೦೬೨). [ ಗೊಂಟು + ಪೊಗು ]

**ಗೊಂಡ$_1$** ' ಗಾಮುಂಡ ' ನೋ.

**ಗೊಂಡ$_2$** ' ಗೋಂಡ ' ನೋ.

**ಗೊಂಡ$_3$** (ನಾ). [ಸಂಗೀತ] ಹಾಡುವುದರಲ್ಲಿ ಒಂದು ವಿಶಿಷ್ಟವಾದ ರೀತಿ,-ಕ್ರಮ : ಗತಿ ಸಂಗತಿವಡೆಯೆ ಗಮಕಂ ಗಾರವಂಬಡೆಯೆ ಗಹಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ . . . ಬೆಡಂಗುವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೦೬-೬೭ ವ). [ ? ]

**ಗೊಂಡರಸ** (ನಾ). ಒಬ್ಬಾತನ ಹೆಸರಂ : ಸ್ವಸ್ತಿಶ್ರೀ ಗೊಣ್ಡರಸರ್ ಪ್ರಿಥಿವೀರಾಜ್ಯಂಗೆಯೆ (ಎಕ. VII, ಶಿಕಾರಿ. ೪೩ (b)-೩೨ ; ಸು. 890 ? ). [ <ಗೋವಿಂದರಸ ? ]

**ಗೊಂಡಲು** (ನಾ). ಒಂದು ಬಗೆಯ ಭೂಮಿ : ಕಲಿದೇವನಿಗೆ ಬಿಟ್ಟ ಧರ್ಮ್ಮಪೂರಿಂ ಪಡುವಲು × ೩ ಹುಣಿಸೆಯ ಕೆಯಿ ಮತ್ತರು ೨ . . . [ಗೌ]ಡಗಟ್ಟೆಯ ಕೆಳಗಣ ಗೊಂಡಲು ಎರಡು ಸಹಿತ (ಸೌಇಇ. XX, ೨೨೦-೩೮ ; 1283). [ ? ]

**ಗೊಂಡವನ** (ನಾ).=ಗೊಂಡಾರಣ್ಯ ೨ : ಕಡಲ ಮೇಲೆದ್ದಿತ್ತು ಕೂರ್ಮದಂತೀ ನೆಲವು ಗೊಂಡವನ ಪ್ರಾಚೀನ ಭೂವಿಭಾಗ (ಅರಳು. ೩೦೭-೨). [ ಗೊಂಡ$_2$ (<ಗೋಂಡ) + ವನ ]

**ಗೊಂಡಾರಣ್ಯ** (ನಾ). ೧. ವಿಂಧ್ಯಾದ್ರಿಯ ಬಳಿಯಿರುವ ಅರಣ್ಯ. ೨. ದಟ್ಟವಾದ ಅರಣ್ಯ : ಗೊಂಡಾರಣ್ಯಪ್ರಾಂತ್ಯದಲ್ಲಿ ಒಬ್ಬ ಬ್ರಾಹ್ಮಣನಿದ್ದನು (ನೀತಿಚಿಂ. XI, ೧೮) : ಹದಿನಾಲ್ಕು ವರ್ಷಗಳ ತನ್ನ ವನವಾಸದ ಅವಧಿಯಲ್ಲಿ ರಾಮನು ಕೆಲಕಾಲ ಪಂಚವಟಿಯ ಗೊಂಡಾರಣ್ಯದಲ್ಲಿ ವಾಸಮಾಡಿದನು (ರೂಢಿ). [ ಗೊಂಡ2 (<ಗೋಂಡ) + ಅರಣ್ಯ ]

**ಗೊಂಡಾಳೆ** (ನಾ). (ಉಕ) ಅಕ್ಕಿಯಲ್ಲಿ ಹುಳುವಿನಿಂದ ಉಂಟಾಗುವ ಜಡೆ,-ಗಂಟು : ಸಂಡಾಗಿ ಮಾಡ್ಯಾಳ ಗೊಂಡಾಳೆಂತಾ ಚೆಂಡಾಲೆವ್ವ ಬೀಗುತಿ (ಲೋಕಗೀ. ೩೦). [ ←ಮರಾ. ಗುಂಡಾಳೆ ]

**ಗೊಂಡಾಳೆಗಟ್ಟು** (ಕ್ರಿ). ಅಕ್ಕಿಯಲ್ಲಿ ಹುಳುವಿನಿಂದ ಜಡೆಗಟ್ಟು,-ಗಂಟುಕಟ್ಟು : ಅಕ್ಕಿ ಗೊಂಡಾಳೆಗಟ್ಟಿದೆ (ರೂಢಿ). [ ಗೊಂಡಾಳೆ + ಕಟ್ಟು$_1$ ]

**ಗೊಂಡಿ$_1$** (ನಾ). [ಸಂಗೀತ] ಹಾಡುವುದರಲ್ಲಿ ಒಂದು ಕ್ರಮ, - ರೀತಿ : ಗತಿ ಸಂಗತಿವಡೆಯೆ ಗಮಕಂ ಗಾರವಂಬಡೆಯೆ ಗಹಿಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ . . . ಬೆಡಂಗುವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೧೭-೭೭ ವ). [ ? ]

**ಗೊಂಡಿ$_2$** ' ಕೊಂಡೆ$_4$ ' ನೋ.

**ಗೊಂಡು$_1$** ' ಗೊಂಟಂ ' ನೋ.

**ಗೊಂಡು$_2$** ' ಕೊಂಡೆ$_4$ ' ನೋ.

**ಗೊಂಡೆ** ' ಕೊಂಡೆ$_4$ ' ನೋ.

**ಗೊಂಡೆಕುಚ್ಚು** (ನಾ). ಗೊಂಚಲಾಗಿರುವ ಕುಚ್ಚು : ನೆಕ್ಲೇಸ್ ಬಾಗಿಲು ದಾಟಿದ ಕೂಡಲೇ ಗೊಂಡೆಕುಚ್ಚಿನಂಥ ಕಂಠಾಭರಣ ಧರಿಸಿದ್ದ ಹುಡುಗಿಯೊಬ್ಬಳು ಅವನಿಗೆ ಅಡ್ಡವಾದಳು (ಪುನರು. ೨೭೩) : ಎತ್ತುಗಳಿಗೆ ಗೊಂಡೆಕುಚ್ಚು ಹಾಕಿದ್ದಾರೆ (ರೂಢಿ). [ಗೊಂಡೆ (<ಕೊಂಡೆ$_4$)+ಕುಚ್ಚು$_4$]

**ಗೊಂಡೆಚೌರಿ** (ನಾ). ತುದಿಯಲ್ಲಿ ಗೊಂಡೆಯಿಂದ ಕೂಡಿದ ಚವರಿ : ಹೆಂಡತಿ ನೋಡಿ ಹಲ್ಲನೆ ತೆರವೆ ಆಕೆ ಗೊಂಡೆಚೌರಿಯ ನೋಡಿ ಬೆರವೇ ಕಂಡಕಂಡಾ ವಿಷಯಕ್ಕೆ ಮನಹರಿವೆ (ಜಿದಾವ. ೩೦-೨). [ ಗೊಂಡೆ (<ಕೊಂಡೆ$_4$) + ಚೌರಿ$_1$ (<ಚವರಿ) ]

**ಗೊಂಡೆಜವರಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೈಹಿಗಿ. ೨೦-೩೭೦). [ ಗೊಂಡೆಜವರ$_0$ + ಹುಲ್ಲು (<ಪುಲ್) ]

**ಗೊಂಡೆಯ** (ನಾ). ೧. ಗೊಂಚಲು; ಕುಚ್ಚು : ಕೆಲದ ಚವರದ ಗೊಂಡೆಯದೊಳೆಸೆವ ಜವ್ವನದ ಶಬರಿಯರು . . . ಹುಲ್ಲೆಗಳನೆಸುತಿರ್ದರು (ಹದಿಕಾ. ೩-೪೭) : ಕಾವನ ಪೂವಿನ ಗೊಂಡೆಯಗಳನೊರ್ವ ಭಾವಕಿ ವಂಚಿಸಿ ತಂದು ಪೂವಿನಂಗಡಿಯೊಳಿರಿಸಿ ಮಾಱುವೊಲು ಪೊಸಸೇವಂತಿಯರಲ ಮಾಱುವಳು (ಅಂಜಕ. ೩-೭೪) : ಕಿಱುವೂಲಿಯುಗುರ್ಗಳ್ ಗೊಂಡೆಯದುಡಿವಾರಂ ಭೂಮಂಡಲಪತಿಯಾತ್ಮಜಂಗೆ ರಂಜಿಸುತಿರ್ಕುಂ (ದಶಕು. ೨-೭೩) : ಕಠಾರಿಯ ಹೊಳೆವ ಗೊಂಡೆಯ ಮೆಱೆಯೆ ಗಂಡಂದವನು ಕೈಕೊಂಡ (ಶುಪ್ಪಾವಿ. ೬-೪೯). ೨. ಒಂದು ಬಗೆಯ ದುಂಡಗಿರುವ ಗುಚ್ಛದಂತಹ ಆಭರಣ : ನಿಱಿವಿಡಿದುಟ್ಟ ದೂವಟದ ಸೀರೆಯ ಮೇಲೆ ಮೆಱೆದುದು ಹೊನ್ನ ಗೊಂಡೆಯವು (ಭರತ. ೪೦-೩೯). ೩. ರಾಶಿ ; ಸಮೂಹ : (ಶ). [ <ಕೊಂಡೆ$_4$ ]

**ಗೊಂಡೆಹುಳು** (ನಾ). " ಸಣ್ಣ ಸಸ್ಯಗಳನ್ನು ಹಾಳುಮಾಡುವ, ಚಿಪ್ಪಿಲ್ಲದ ಒಂದು ಬಗೆಯ ಬಸವನ ಹುಳು " (Slug. ಇಂಕನಿ). [ ಗೊಂಡೆ$_0$ + ಹುಳು2 (<ಪುೞು$_1$) ]

**ಗೊಂಡೆಹೂ** (ನಾ). ದುಂಡಾದ ಒಂದು ಬಗೆಯ ಗುಚ್ಛದಂತಹ ಕೆಂಪು ಹೂವು : ಚೆಂಡುಹೂ, ತುಂಬಿಹೂ, ಗೊಂಡೆಹೂ . . . ಇವುಗಳ ಸಂತೆ ನೆರೆಯಿತು (ಸಾಸಮಾ. ೯೧). [ ಗೊಂಡೆ (<ಕೊಂಡೆ$_4$) + ಹೂ$_2$ (<ಪೂ$_1$) ]

**ಗೊಂತು** ' ಗೊತ್ತು ' ನೋ.

**ಗೊಂತುಕಂಬಿ**(ನಾ). ದನಗಳ ಹಕ್ಕೆಯಲ್ಲಿ ದನಗಳನ್ನು ಕಟ್ಟಲು ಗೊಂತಿಗೆ ಅಳವಡಿಸಿರುವ ಕಂಬಿ : ಗೊಂತಿನಲ್ಲಿ ದನಕಟ್ಟಲು ಹಾಕಿರುವ (ಜೋಡಿ) ನಿಲುಗಂಬಿ : ಗೊಂತುಕಂಬಿ (Stanchion. ಇಂಕನಿ). [ ಗೊಂತು (<ಗೊತ್ತು) + ಕಂಬಿ$_1$ ]

**ಗೊಂತುಗಾರ** ' ಗೊತ್ತುಗಾರ ' ನೋ.

**ಗೊಂತುಗೊಳ್** (ಕ್ರಿ). ಸ್ಥಳಮಾಡಿಕೊಳ್ಳು ; ನೆಲೆಗೊಳ್ಳು ; ನೆಲಸು : ಇಂತೊರೆದ ಸದ್ಬೋಧೆ ಮನದೊಳು ಗೊಂತುಗೊಂಡುದು (ತಂಕದಾ. ೪-೨). [ ಗೊಂತು (<ಗೊತ್ತು) + ಕೊಳ್$_1$ ]

**ಗೊಂತುಮಾಡು** ' ಗೊತ್ತುಮಾಡು ' ನೋ.

**ಗೊಂದಣ** ' ಗೊಂದಳ ' ನೋ.

**ಗೊಂದಣಂಗುಣಿ** (ಕ್ರಿ). ಸಾಮೂಹಿಕ ನೃತ್ಯವನ್ನು ಮಾಡು ; ಮೇಳ ನೃತ್ಯವಾಡು : ಅಳವಿಗೞಿದುತ್ಸವದೆ ಗೊಂದಣಂಗುಣಿವ ಗಣಿಕೆಯರ ಪದಪ್ರಚಾರಕ್ಕೆ ಬೆರ್ಚಿ (ಚಂದ್ರಪು. ೧೨-೩೩ ವ). [ ಗೊಂದಣ (<ಗೊಂದಳ) + ಕುಣಿ$_1$ ]

**ಗೊಂದಣಂಗೂಡು** (ಕ್ರಿ). ಗುಂಪುಗೂಡು ; ಸಮೂಹವಾಗು : ಬಾವುಲಿಯ ಬಲ್ಲಾಳ್ಗಳ ಮುಂದೆತ್ತಿದ ಪರಿಪರಿಯ ಪತಾಕಾವಳಿಯ ಸೂಳಱಿದು ಮಸಗಿ ದುವ್ವಾಳಿಸುವ ಗೋವಳಗಟ್ಟಗೆಯ ಗೊಂದಣಂಗೂಡಿ ಗಗನಂ ಕವಿದಂತೆ . . . ಭೂಚಕ್ರಮಂ ತೆಕ್ಕನೆ ತೀವಿದ ಪದಾತಿಬಲದೊಳಂ (ಗಿರಿಕ. ೬-೩೩ ವ). [ ಗೊಂದಣ (<ಗೊಂದಳ) + ಕೂಡು$_1$ ]

**ಗೊಂದಣಂಗೊಳ್, ಗೊಂದಣಗೊಳ್, ಗೊಂದಣೆಗೊಳ್, ಗೊಂದಲಗೊಳ್ಳು** (ಕ್ರಿ). ೧.=ಗೊಂದಣಂಗೂಡು : ಒಂದೆಡೆಯೊಳು ಗೊಂದಣಂಗೊಂಡು ಜನಗಳು ಕೇಳುವಂತೆ ಮನಸಂದೊರ್ವನೊಂದು ಕಥೆಯಂ ಪೇಳ್ವುದನು ಕೇಳಿ (ಸಮ್ಮಿಶ್ರಾ. ೨-೪೬). **ಗೊಂದಣಗೊಳ್:** ೨. ತಬ್ಬಿಬ್ಬಾಗು ; ಗಲಿಬಿಲಿಗೊಳ್ಳು : ಎಂಬತ್ತುನಾಲ್ಕುಲಕ್ಷಯೋನಿಮುಖ ಜೀವಿಗಳಿಗೆ ಎಂಬತ್ತುನಾಲ್ಕುಲಕ್ಷಾರಾಧನೆ ಒಂದೊಂದಱಾರಾಧನೆಯ ನೊಂದೊಂದಱಿಯದೆ ಗೊಂದಣಗೊಂಡು . . . ಲಯವಾದುದೆಲ್ಲ (ಅವಚಂ. ೨೮೯-೧೩೦೦). **ಗೊಂದಣೆಗೊಳ್:** ೧. ಮಲ್ಲಿಗೆಯ ಮಕರಂದದೊಡವೆರೆದ ಪರಾಗಮೆಂಬ ಪೊಸಕೆಸರ್ವರ್ತ್ತ್ತೆ ಕರ್ಚಿ ಕಳೆಯಲೆಂದು ಸಂದಣಿಸಿ ಗೊಂದಣೆ[ಶಾ ಕಾ ೦. ಣ]ಗೊಂಡ್ಯೆದುತರವಿಂದಾಕರದರವಿಂದಬೃಂದಮರಂದರಸದೊಳ್ಮುಳುಂಗಿ (ರಾಜಶೇ. ೨-೭೭ವ). **ಗೊಂದಲಗೊಳ್ಳು:** ೨. ಆ ಗೋಡೆಯ ಮರೆಯಲ್ಲಿ ನಮ್ಮ ತಯಾರಿ ಮಾಡಿಕೊಂಡು, ಏರಿಹೋಗಿ ದಾರಿಗಾಣದೆ ಗೊಂದಲಗೊಂಡ ವೈರಿಯನ್ನು ಗೆಲ್ಲುವದು (ಅಪಸಾ. ೧೧೯) : ಮನಸ್ಸೆಲ್ಲಾ ಗೊಂದಲಗೊಂಡಿತ್ತು (ಕುಸುಸಂ. ೧೧೦). [ ಗೊಂದಣ (<ಗೊಂದಳ) + ಕೊಳ್$_1$ ]

**ಗೊಂದಣಂಮಾಡು** (ಕ್ರಿ). ಸಾಮೂಹಿಕ ನರ್ತನವನ್ನು ಮಾಡು; ಮೇಳ ನರ್ತನವನ್ನು ಮಾಡು: ಅಂತು ದೇವೇಂದ್ರಕರಸರೋಜಾಕರದೊಳ್ ಸಮುತ್ಫುಲ್ಲಮುಖಪದ್ಮಂಗಳಿಂ ಪದ್ಮಿನಿಗಳೆನಿಸಿ ಸುರೇಂದ್ರಹಾರಹಾರ ಮುಕ್ತಾಫಳ ಪ್ರತಿಬಿಂಬಿತ ತನುಗಳಿಂ ವಿದ್ಯಾದೇವತೆಗಳೆನಿಸಿ ದಿವಿಜಸೌಂದರಿಯರ್ ಗೊಂದಣಂಮಾಡುವಲ್ಲಿ (ಆದಿಪು. ೭-೨೨೫ ವ).
[ ಗೊಂದಣ (<ಗೊಂದಳ) + ಮಾಡು$_1$ ]

**ಗೊಂದಣಗೊಳ್** 'ಗೊಂದಣಂಗೊಳ್' ನೋ.

**ಗೊಂದಣದುಂಬಿ** (ನಾ). ಗುಂಪುಗುಂಪಾಗಿರುವ ದುಂಬಿ; ಹಿಂಡು ಹಿಂಡಾಗಿರುವ ದುಂಬಿ: ಎಕ್ಕಲದುಂಬಿಯಿಂ ಜವಳದುಂಬಿಯಿನಟ್ಟುವ ಮಾಲೆದುಂಬಿಯಿಂದಿಕ್ಕುವ ಕುಂಭದಂತೆಸೆವ ಗೊಂದಣದುಂಬಿಯಿನಾವ ಮೆಯ್ಯೊಳಂ ಮೊಕ್ಕಳಮೆಂಬಿನಂ ಕವಿವ ಗಾವರದುಂಬಿಯಿನಾದ ಗಾವರಂ ತೆಕ್ಕನೆ ತೀವಿ ಕೂಡೆ ಬಗೆಗೊಂಡುದು ಕೂಡೆ ಬನಂ ಬಸಂತದೊಳ್(ಸೂಕ್ತಿಸು. ೯೦-೧೦); ಗೊಂದಣ [ಪಾಠಾಂ. ಳ]ದುಂಬಿ ತುಳಿಯದ ಬಂಧೂಕಂ ಹೆಚ್ಚದ ಹೆಟಿಗಿಳಿ ತುಂಡಿಸದಾಲದ ಪಣ್ಣೆಳವೆಯನುಳಿಯದ ಚೆಂದಳಿರೆನೆಯಿನಿದುಟಿ ಸೊಗಯಿಸಿತಾ ನೃಪಸುತೆಗೆ (ಜಯಚಾ. ೩-೪೧).
[ ಗೊಂದಣ (<ಗೊಂದಳ) + ತುಂಬಿ$_1$ ]

**ಗೊಂದಣನುಡಿ** (ನಾ). ಹಲವುಮಾತು; ಬಹಳಮಾತು: ಬಂದರು ಜಯ ಜಯಯೆನುತಾಗ ದಿಕ್ಕುದಿಕ್ಕಿಂದ ನರೋರಗಸುರರು ಗೊಂದಣನುಡಿಯೇನು ಗಂಧಕುಟಿಗಳು ಚೆಲ್ವಿಂದೆರಡಾದುವಿರ್ವರಿಗೆ (ಭರತ. ೮೦-೪೮).
[ ಗೊಂದಣ (<ಗೊಂದಳ) + ನುಡಿ$_2$ ]

**ಗೊಂದಣನೃತ್ಯ** (ನಾ). ಸಾಮೂಹಿಕ ನೃತ್ಯ; ಮೇಳನೃತ್ಯ: ಬಾಳು ಗೊಂದಣನೃತ್ಯ ಉಸಿರುಸಿರು ಕೃತಕೃತ್ಯ ಕನ್ನಡದ ಮಗು ಮಾಣ ಮಾತ್ಯ ಭೃತ್ಯ (ಅರಳು. ೩೦೮-೧೪). [ ಗೊಂದಣ (<ಗೊಂದಳ) + ನೃತ್ಯ ]

**ಗೊಂದಣಪೆಕ್ಕಣ** 'ಗೊಂದಳಪೆಕ್ಕಣ' ನೋ.

**ಗೊಂದಣಬೆಳಗು** (ನಾ). ಕಾಂತಿಯ ಸಮೂಹ: ಅಂತು ಕಿಟ್ಟ ಬಾಳ್ಗಳ ಗೊಂದಣಬೆಳಗುಗಳ ಬಳಗಂಗಳೊಳಾಗಸವಳಯಮೆಲ್ಲಂ ಕುವಳಯತಮಾಗೆ ಬಂದು ತಾಗುವುದುಂ (ಶಾಂತಿಪು. ೯-೨೬ ವ).
[ ಗೊಂದಣ (<ಗೊಂದಳ) + ಬೆಳಗು$_2$ ]

**ಗೊಂದಣವೆಕ್ಕಣ** 'ಗೊಂದಳವೆಕ್ಕಣ' ನೋ.

**ಗೊಂದಣಾಸ್ಥಾನ** (ನಾ). ಗೊಂದಣನೃತ್ಯವು ನಡೆಯುವ ಆಸ್ಥಾನದಲ್ಲಿ ರಂಪವನಂ: ಚೇರಮನೃಪಂ ಬಹಳ ಗೊಂದಣಾ [ಪಾಠಾಂ. ಣ] ಸ್ಥಾನನಾಗಿ ಸೌಂದರಪೆರುಮಾಳೆಯನೋಲೈಸುತ್ತುಮಿರೆಯಿರೆ (ನಂಬಿರ. ೧೪-೧೧೩); ಸರಸ ಗಾಯಕ ಭಾವ ಚಿತ್ರಕ ಪುಣ್ಯ ಪಾಟ[ಠ]ಕ ನವ್ಯನರ್ತನ ನರ್ತಕಿಪ್ರಯುತಂ ಬಹಳ ಗೊಂದಣಾಸ್ಥಾನನಾಗಿ ಕೆಂಪಡರ್ದ ಕಂಗಳಿಂ . . . ಪೆರ್ಮಾಡಿ ರಾಯಂ ಜೊಮ್ಮಣ್ಣನಂ ಕರೆಯಲು (ಜೊಮ್ಮರ. ೧೧೦-೨೦).
[ ಗೊಂದಣ (<ಗೊಂದಳ) + ಆಸ್ಥಾನ ]

**ಗೊಂದಣೆ** 'ಗೊಂದಳ' ನೋ.

**ಗೊಂದಣೆಗೊಳ್** 'ಗೊಂದಣಂಗೊಳ್' ನೋ.

**ಗೊಂದಣಿಸು** 'ಗೊಂದಳಿಸು' ನೋ.

**ಗೊಂದಲ** 'ಗೊಂದಳ' ನೋ.

**ಗೊಂದಲಗೆಡವು** 'ಗೊಂದಲಗೆಡಹು' ನೋ.

**ಗೊಂದಲಗೆಡಹು, ಗೊಂದಲಗೆಡವು** (ಕ್ರಿ). ಗೊಂದಲದಲ್ಲಿ ಬೀಳಿಸು; ಪೇಚಿನಲ್ಲಿ ಸಿಕ್ಕಿಸು; ಪೇಚಾಡಿಸು: ಎಂದಿಗೂ ಅತಿ ಶಾಂತಚಿತ್ತನಾಗಿ ಪ್ರವಾಸದ ಸಿದ್ಧತೆಯನ್ನು ಮಾಡುವ ತನಗೆ ಹೀಗೇಕೆ ಒಂದೊಂದೇ ವಿಚಾರ . . . ಬಂದು ಗೊಂದಲಗೆಡಹುತ್ತಿದೆ? (ಹೊಸಕ್ಷ. ೧೬೩). **ಗೊಂದಲಗೆಡವು**: ಪರಜಾತಿಯ ಹುಡುಗನೊಡನೆ ತಮ್ಮ ಮಗಳು ಲಗ್ನವಾಗಲು ಹೊರಟಿರುವ ಸಂಗತಿಯು ಬಲವಾಗಿ ನೋಯಿಸಿತು . . . ಗೊಂದಲಗೆಡವಿತು (ಅಬೋಲೀ. ೧೦೧).
[ ಗೊಂದಲ (<ಗೊಂದಳ) + ಕೆಡಹು (<ಕೆಡವು) ]

**ಗೊಂದಲಗೆಡಿಸು** (ಕ್ರಿ).=ಗೊಂದಲಗೆಡಹು: ಸಾವಿರ ಘಟನೆಗಳು, ಸಾವಿರ ಮುಖಗಳು . . . ಅಸಂಬದ್ಧವಾಗಿ ನೆರೆದು ಅವಳನ್ನು ಗೊಂದಲಗೆಡಿಸಿ ಬಿಡುತ್ತಿದ್ದವು (ಹೊಸಕ್ಷ. ೨೦೨).
[ ಗೊಂದಲಗೆಡು + –ಇಸು$_3$ ]

**ಗೊಂದಲಗೆಡು** (ಕ್ರಿ) ತಬ್ಬಿಬ್ಬಾಗು; ಗಲಿಬಿಲಿ ಹೊಂದು: ಈ ಸಾರೆಯ ಪಯಣದ ಸಿದ್ಧತೆಯಲ್ಲಿ ಅವನು ಸಾಕಷ್ಟು ಗೊಂದಲಗೆಡುತ್ತಾನೆ (ಹೊಸಕ್ಷ. ೨೮೯); ನಿದ್ದೆಯಿಂದ ಎಚ್ಚೆತ್ತ ಕಣ್ಣು ಈ ನೋಟದಿಂದ ಗೊಂದಲಗೆಡುವದು ಸ್ವಾಭಾವಿಕ (ಗ್ರಾಮಾಯ. ೧). [ ಗೊಂದಲ (<ಗೊಂದಳ) + ಕೆಡು$_1$ ]

**ಗೊಂದಲಗೊಳ್ಳು** 'ಗೊಂದಣಗೊಳ್' ನೋ.

**ಗೊಂದಲಬಡಕ** (ನಾ). ಗಲಿಬಿಲಿಗೊಂಡವನು: ಸಮಾನಕರ್ತವ್ಯಗಳ ಕರೆ ಒಮ್ಮೆಲೆ ಕೇಳಿಬರಲು ಧರ್ಮಸಂಕಟದಲ್ಲಿ ಸಿಲುಕಿದ ಎಂಥ ಗಟ್ಟಿಗರೂ ಒಂದು ಕ್ಷಣವಾದರೂ ಗೊಂದಲಬಡಕರೂ ಎಬಡರೂ ಆಗುತ್ತಾರೆ (ಕಸಾಚ. ೨೫೭). [ ಗೊಂದಲ (<ಗೊಂದಳ) + ಬಡಕ (<ಬಡಿಕ) ]

**ಗೊಂದಲವೇಳು** (ಕ್ರಿ). ಗಲಿಬಿಲಿಯುಂಟಾಗು; ಗಲಭೆಯಾಗು: ಕೂಡಲೇ ಆ ಸೈನ್ಯದಲ್ಲಿ ಗೊಂದಲವೆದ್ದಿತು (ಮಹಿಶ. ೮೫).
[ ಗೊಂದಲ (<ಗೊಂದಳ) + ಏಳು$_1$ (<ಏೞ್$_1$) ]

**ಗೊಂದಲಹಾಕು** (ಕ್ರಿ). ೧. ಗಲಾಟೆಮಾಡು; ಗಲಭೆ ಎಬ್ಬಿಸು: ತಾವು ಹೆದರಬೇಡಿರಿ, ನಾವೇನು ಗೊಂದಲಹಾಕುವುದಿಲ್ಲ (ಕುರಿಹಿಂ. ೧೧). ೨. ಗೊಂದಲ ಸಮಾರಂಭದಲ್ಲಿ ಅಂಬಾಭವಾನಿಯ ನಾಮ ಸಂಕೀರ್ತನೆಯನ್ನು ಮಾಡು: ಅಲ್ಲಿ ಗೊಂದಲಿಗರು 'ಜಗದಂಬೆ' 'ಅಂಬಾಭವಾನೀ' ಎಂದು 'ಗೊಂದಲ' ಹಾಕುತ್ತಿದ್ದರು (ಸಿವಭಾ. ೧೨).
[ ಗೊಂದಲ (<ಗೊಂದಳ) + ಹಾಕು (<ಪಾಯ್ಕು$_1$) ]

**ಗೊಂದಲಹಾಡು** (ನಾ). ಗೊಂದಲಿಗರು ಹಾಡುವ ಹಾಡು; ಜಾತ್ರೆ ಮುಂತಾದ ಕಡೆಗಳಲ್ಲಿ ಪೌರಾಣಿಕ ಕಥೆಗಳನ್ನೊಳಗೊಂಡ, ಅಂಬಾಭವಾನಿಯನ್ನು ಸಂತ್ತಿಸುವ ಹಾಡು: ಕರ್ನಾಟಕದಲ್ಲಿ ಗೊಂದಲಹಾಡುಗಳನ್ನು ಹಾಡುವ ಗೊಂದಲಿಗರು ಈ ತರದ ಜನರನ್ನು ಹೋಲಬಹುದು (ಕನ್ನಜಾ. V ಪ್ರಸ್ತಾವನೆ).
[ ಗೊಂದಲ (<ಗೊಂದಳ) + ಹಾಡು$_1$ (<ಪಾಡು$_2$) ]

**ಗೊಂದಲಿಗ** (ನಾ). ಗೊಂದಲಸಮಾರಂಭದಲ್ಲಿ ಅಂಬಾಭವಾನಿಯ ನಾಮ ಸಂಕೀರ್ತನೆಯನ್ನು ಹೇಳುವವನು: ಅಲ್ಲಿ ಗೊಂದಲಿಗರು 'ಜಗದಂಬೆ' 'ಅಂಬಾಭವಾನೀ' ಎಂದು 'ಗೊಂದಲ' ಹಾಕುತ್ತಿದ್ದರು (ಸಿವಭಾ. ೧೨); ನಮ್ಮಲ್ಲಿ ವಿಶೇಷ ಸಮಾರಂಭಗಳಲ್ಲಿ 'ಹರಕೆಯ ಗೊಂದಲ'ಗಳನ್ನುಹಾಕಿಸುವ ರೂಢಿಯುಂಟು. ಈ ಗೊಂದಲಿಗರೂ ಕೀರ್ತನಕಾರರೇ (ಕಥಕ. ೩); ಗೊಂದಲಿಗರು.–ಇವರೂ ಮಹಾರಾಷ್ಟ್ರರೇ . . . ಸಂಬಾಳ, ಚೌಡಿಕಿಗಳನ್ನು ಬಾರಿಸುತ್ತ ಭವಾನಿಯ ಹಾಡುಗಳನ್ನು ಹಾಡುತ್ತ ಭಿಕ್ಷೆಬೇಡುವರು (ಕಥಾಗ. ೨೦೦); ಹಾವಾಡಿಗರು, ಗೊಂದಲಿಗರು, ಡೊಂಬರು . . . ಎಲ್ಲರೂ ಸಂದಣಿಸಿ ಒಂದಾಗಿ ಇರುವವರ ತಾಳ್ಮೆಯ ಪರೀಕ್ಷೆಯನು ಮಾಡುವರೋ? (ಅರಳು. ೩೩೪-೧೦); ಗೊಂದಲಿಗರು ಮನೆಯ ಮುಂದೆ ನಿಂತು ಹಾಡಹತ್ತಿದ್ದಾರೆ (ಮಂಜುಳ. ೮); ಜೋಗಿ–ಗೊಂದಲಿಗರ ಕಥೆ ದಾಸರ ಆಟ, ಕಿಳ್ಳಿಕೇತರ ಆಟ, ರಾಧಾನ ಆಟ ಇವೇ ಜನರಿಗೆ ಪ್ರೀತಿಯ ಮನೋರಂಜಕ ಸಾಧನಗಳಾಗಿದ್ದುವು (ಜನಜೀ. ೩೦).
[ ಗೊಂದಲ (<ಗೊಂದಳ) + –ಇಗ ]

**ಗೊಂದಲಿಸು** 'ಗೊಂದಳಿಸು' ನೋ.

**ಗೊಂದವಾಡಿ** (ನಾ). ಒಂದು ಸ್ಥಳದ ಹೆಸರು ; **P** ಈಗಿನ ರಾಯದುರ್ಗ ತಾಲ್ಲೂಕಿನ ಗೋವಿಂದವಾಡಿ : ಗೊಂದವಾಡಿಯ ಪೂಱವೀಡಿನಲ್ ಸುಖದಿಂ ರಾಜ್ಯಂಗೆಯ್ಯುತ್ತಿರೆ (ಎಇ. IV, ೨೦೫-೭ ; 1072).

[ ಗೊಂದ$_0$ + ವಾಡಿ$_1$ (<ಪಾಡಿ$_1$) ]

**ಗೊಂದಳ,** ಗೊಂದಣ, ಗೊಂದಣೆ, ಗೊಂದಲ, ಗೋಂಧಳ (ನಾ). ೧. ಗುಂಪು ; ಹಿಂಡಂ ; ಮೊತ್ತ : ಬೆಳಗುವ ಕೈದೀವಿಗೆಗಳ ಬೆಳಗುಂ ತರತರದಿನೊಗೆವ ತಾರಗೆಗಳ ಗೊಂದಳಮುಂ (ಆದಿಪು. ೧೨-೩) ; ಅನ್ನೀ ಸಾಲೆಯ ಕಂಬದ ಗೊಂದಳಮಂ ನಿಱಿಸುವನ್ನು ಕಂಬದ ರೂಪಿಂ ಪಿನ್ದಱನನ್ನಿಱಿಸುವವೋಲೊನ್ದೆರಡಂ ತಾನೆ ಪಿಡಿದು ನಿಱಿಸಿದನಾತಂ (ಎಇ. IV, ೭೪-೧೪ : 945); ಇಂದ್ರಸ್ತ್ರೀಯರಾನಂದದಿಂ ಗೊಂದಳದೆ ಕುಣಿದು ಲೀಲಾನೃತ್ಯದಿಂ (ಅಜಿಪು. ೫-೪೩) ; ಗೊಂದಳದಿಂದೆ ನರ್ತಿಸುವ ಶೇಷಜನಂಗಳ ಭಂಗಿ ಲೀಲೆಯಿಂ ಮುಂದಿಡೆ ಭಕ್ತಿಬೋಧಿತಮನಂ ಜಿನರಾಜನ ಮುಂದೆ ತಾನು ಮಾನಂದದ ನರ್ತನಕ್ಕೆ ಬಗೆದಂದು ಪುರಂದರನಂದು . . . ನಾಟಕಪೇಟಕಮಂ ನಿಮಿರ್ಚಿದಂ (ವರ್ಧಪು. ೧೪-೫೭) ; ಪೆರ್ವುಲಿಯ ಪಿಂಡಿನಂತೆಯುಂ ಕಾಡೆಮ್ಮೆವೋರಿಯ ಹಾರಿ ಯಂತೆಯುಂ ಪಂದಿಯ ಗೊಂದಳದಂತೆಯುಂ (ಪುಷ್ಪಪು. ೩-೧೨೭ ವ) ; ಅರಮನೆಗೆ ಪೋಪ ನೃಪರಂದಳದ ಗೊಂದಳ [ಪಾಠಾಂ. ಣ]ದ . . . ಪಾಳೆಯಂ ಕಣ್ಗೆಸೆದುದು (ಜಬಪು. ೪೨-೧೫). ೨. ಗಲಿಬಿಲಿ; ಸಿಕ್ಕು ; ಗೋಜು : ಅಂತಿಂತೆಂಬುದಕ್ಕೆ ಉಭಯದ ಗೊಂದಳದವನಲ್ಲ (ಮನುಗುಂ. ೭); ಹೆಚ್ಚಿದ ಪಟಹ ಪಣಹ ಮೃದಂಗ ಡಿಂಡಿಮದ ಉಲಿಯ ತೇಜಿಯ ಹೇಷಿತದ ವೆಗ್ಗಳೆಯ ಕರಿಗಳ ಬೃಂಹಿತದ ಗೊಂದಳದ ಕಳಗಚ್ಚಿರ್ಯನ್ತು ಕೌರವಸೈನ್ಯಶರಧಿಯಲಿ (ಕುಮಾವ್ಯಾಸ. ೯-೨೭). ೩. (ಉಕ) ಒಂದು ಬಗೆಯ ಧಾರ್ಮಿಕವಿಧಿ ; **P** ಮದುವೆಯ ನಂತರ ಅಂಬಾಭವಾನಿಯನ್ನು ಕುರಿತು ನಡೆಸುವ ನರ್ತನ, ಸಾಮೂಹಿಕ ಭಜನೆ, ಪೂಜೆ ಮೊದಲಾದ ಸಮಾರಂಭ ; (ಗೊಂದಲ ಸಮಾರಂಭದಲ್ಲಿ) ಗೊಂದಲಿಗರು ಹೇಳುವ ದೇವಿಯ ನಾಮಸಂಕೀರ್ತನೆ. 'ಗೊಂದಲಪೂಜೆ' ಪರಾ. ೪. ಸಾಮೂಹಿಕ ನೃತ್ಯ ; ಮೇಳನೃತ್ಯ : ಹೀಗೆ ಗೊಂದಳ ಎಂದರೆ ಮಂಡಲನೃತ್ಯವೆಂದು ಸ್ಪಷ್ಟವಾಗಿತಿಳಿವುದರಿಂದ Chorus ಎಂಬುದಕ್ಕೆಗೊಂದಳದವರು ಎನ್ನುವುದೇ ನನಗೆ ನೇರೆನಿಸಿತು (ಹಪ್ಪೈರ. VI ಮುನ್ನುಡಿ). **ಗೊಂದಣ:** ೧. "ಗೊಂದಣ ಮನೆ ನಿಕರಕ್ಕೆ ನಾಮಂ" (ಚತುನಿ. ೪೭) ; ಕೆಂದಳಿರ ಗೊಂದಣದಿಂ ಸಹಕಾರ ಭೂರುಹಾವಳಿ ಕಡು ರಯ್ಯಮಾಗೆ . . . ಬಂದನೊಱಲ್ದು ವಸಂತವಲ್ಲಭಂ (ಧರ್ಮಾಮೃ. ೧೦-೧೧೨) ; ಗಿಳಿಗಳ ಪಿಂಡು ತುಂಬಿಗಳ ಗೊಂದಣಮಂಚೆ ಗಳೊಡ್ಡರಲ್ದರಲ್ಗಳ ರಜದುರ್ವು ಬಂದೆಳಸಿ ಸಂದಣಿಸುತ್ತಿರೆ (ಚಂದ್ರಪ್ರ. ೧೧-೪೭); ಗೊಂದಣದ ದಿವಿಜರರ್ಚಿಪರಲ್ಲಿ ಶೂಲಿಯಂ (ಲಶಿಚಿಂ. ೨೬-೬೯); ಕಾಳ್ಕೋಣನ ಮೊಗ್ಗರವಿದೆ ಹುಲ್ಲೆಗಳ ಒಗ್ಗಿದೆ ಪಂದಿಯ ಗೊಂದಣವಿದೆ ಯೆಂದು ಮುಗ್ಗಿ ಕವಿದರು ಶಬರರು (ಕುರಾಸಾಂ. ೨೭-೭೦); ನಿನ್ನಂಗದಲ್ಲಿ ಗುರು ಕೊಟ್ಟ ಲಿಂಗವೆಂಬುದೊಂದು ಕುಱುಹು ಇರುತಿರಲಿಕೆ ಆ ನಿಜಲಿಂಗದ ಸಂಗವನಱಿಯದೆ ಸಂದಿಗೊಂದಿಯಲ್ಲಿ ಹೊಕ್ಕಿಹನೆಂಬ ಗೊಂದಣವೇತಕ್ಕೆ (ಮದೇವ. ೨೭೩-೧೩). ೪. ಕಿನ್ನರಿಯ ಗೊಂದಣದಿಂಚರಂ (ರೇವಣ. ೩೦-೪೫); ಮರ ಕಿತ್ತಿವೆ ಬುಡ-ತಳ ಹಾದಿ ಉಡುಗೆ ರಘುಳರಘುಳ ಕಡಲು ಕುಣಿಯೆ ಗೊಂದಣ ತೆರೆ–ಮುರಿ–ನೊರೆ ಧಂಧಣ (ಹೃದಸ. ೩೭-೧೦) ; ಗೊಂದಣದಲ್ಲಿ ನಾನಿಕ್ಕಿದ ಹೆಜ್ಜೆ . . . ಅದಕ್ಕೊಂದು ಸಾಮಾನ್ಯತೆಯಿದೆ (ಸಾಹಿವಿ. ೪ ಮುನ್ನುಡಿ). 'ಗೊಂದಣಮಾಡು' ಪರಾ. **ಗೊಂದಣೆ:** "ಬಂಬಲ್, ತುಱುಗಲ್ . . . ಗೊಂದಣೆ(ಉಂದಲ್) – ಈ ೪೦ ಸಮೂಹಂ" (ಶಶಸಾ. ೧೦-೨೨೨) ; "ಗೊಂದಣೆಯೆನಲ್ ಗೊಂಬೆಯನೆ ಸಲ್ಲುಗು ಸಮೂಹದೊಳ್" (ಶಶರ. ೩೪) ; ಈಶನಂ ಪೂಜಿಸೆಯ್ದು ಮಣಿವ ಜಲಕನ್ಯಕಾ ಜಲಪುರುಷರ ಗೊಂದಣೆಯುಂ . . . ರಂಜಿಸೆ (ವೃಷವಿ. ೧೦-೯೨ ವ). **ಗೊಂದಲ:** ೩. ಬೊಂಗಉಡನ ಮಗ ಕಲ್ಲಪ್ಪನ ಕೂಡಿಱುದು × × × ಹೆಂಡಿರ ಕುಲಕೆ × × ಗೊಂದಲಮಾಡಿಕೊಂಡಲ್ಲಿ (ಮ್ಯಆರಿ. ೧೯೨೯, ೮೨-೦೦ ; 15ನೆಯ ಶತ) ; ಗೊಂದಲದೊಳು ನೊಂದು ಬೇನೆಯನುಂಡೆನು ಬಂಧನದೊಳು ಬಳಲಿಹೆನು (ಇಂಚಾಪ. ೧೦೦-೮೪); ಅಂದು ಮುಂಬಯಿ ನಿಲ್ದಾಣದಲ್ಲಿ ಗೊಂದಲವೇ ಗೊಂದಲ (ಪ್ರಡಸ. ೭೩). 'ಗೊಂದಲಹಾಕು' ಪರಾ. ೫. "ಒಂದು ವಿನೋದಾವಳಿ ಆಟ ; ಗೊಂದಲಿಗರಾಟ" (ಜಾನಕೋ. ೫೦). **ಗೋಂಧಳ:** ೩. ಜನರಿಗೆ ಉಪದೇಶವನ್ನು ಮಾಡುವುದಾದರೆ 'ಗೋಂಧಳ ಕೀರ್ತನ'ದಂತಹ ವಸ್ತುಗಳೇ ಇಲ್ಲ. ವರ್ತಮಾನ ಪತ್ರಗಳು ಇವುಗಳ ಮುಂದೆ ಏನು ಮಾಡಲಾಪವು (ಸಿವಭಾ. ೧೩).

**ಗೊಂದಲದಲ್ಲಿ ಬೀಳು** = ತೊಡಕಿನಲ್ಲಿ ಸಿಕ್ಕಿಕೊಳ್ಳು ; ಗಲಿಬಿಲಿಗೊಳ ಗಾಗು : ಈ ಪ್ರಶ್ನೆಯ ತಲೆಬುಡ ಗೊತ್ತಾಗದೆ ಗೊಂದಲದಲ್ಲಿ ಬಿದ್ದ ವೋನಪ್ಪನಾಯ್ಕರು . . . ಕೇಳಿದರು (ಮೂರುದಾ. ೨೬೦). **ಗೊಂದಲದವ**= ಅಂಬಾಭವಾನಿಯ ಪ್ರೀತಿಗಾಗಿ ಗೊಂದಲವೆಂಬ ಧಾರ್ಮಿಕ ವಿಧಿಯನ್ನು ನಡೆಸುವವನು : ಗೊಂದಲದವರು ಬಂದು ಚೌಟಗಿ ಬಾರಿಸಿ ಕೊಂಡು 'ಜೀಜೀ' ಅಂತ ಹೇಳ್ತಾರಲ್ಲ, ಕೇಳಿದೀಯೇನು? (ಜಲುಮು. ೮೩). **ಗೊಂದಳಚತುರ್ಮುಖ** = ಸಭೆಗಳಲ್ಲಿ ಮುಖ್ಯನಾದವನು ; ಒಂದು ಬಿರುದು : ಶೌಚಾಂಜನೇಯಂ ಗೊನ್ದಳಚತುರ್ಮ್ಮುಖಂ ಸಮರಮುಖ ಷಣ್ಮುಖಂ . . . ಅರಸುಗೆಯ್ಯುತ್ತಮಿರೆ (ಎಇ. XVI, ೮೪-೧೨ ; 1067).

[ ?./ತುಳು. ಗೋಂದಳ, ಗೋಂದೋಳು ; ತೆಲು. ಕೊಂದಲ./ ಮರಾ. ಗೋಂದಳಾ, ಗೊಂಧಳ./ಪ್ರಾ. ಗುಂದಲ ಗೋಂದಲ ]

**ಗೊಂದಳಪೂಜೆ** (ನಾ). ತುಳುನಾಡಿನ ವಿಶೇಷವಾಗಿ ಮರಾಟಿಗರೆಂಬ ಜನಾಂಗದಲ್ಲಿ ಪ್ರಚಾರದಲ್ಲಿರುವ ಒಂದು ಬಗೆಯ ದುರ್ಗಾರಾಧನೆ ; ಒಳಮನೆಯಲ್ಲಿ ದೇವಿಯ ವಿಗ್ರಹವನ್ನಿಟ್ಟು ಅಲಂಕರಿಸಿ, ಹೊರ ಅಂಗಳದಲ್ಲಿ ಉರಿಯುತ್ತಿರುವ ದೀಪದ ಸುತ್ತಲು ಕೈಯಲ್ಲಿ ದೀವಟಿಗೆ ಯನ್ನು ಹಿಡಿದುಕೊಂಡು ದೇವಿಯ ಸ್ತೋತ್ರಗಳನ್ನು ಹಾಡುತ್ತ ಕುಣಿಯುತ್ತ ಭಕ್ತರು ಆಚರಿಸುವ ಒಂದು ವಿಶಿಷ್ಟರೀತಿಯ ದುರ್ಗಾ ಪೂಜೆ : ನಮ್ಮ ತುಳುನಾಡಿನಲ್ಲಿ ಹರಕೆಗಾಗಿಯೂ ಬಳಕೆಗಾಗಿಯೂ ಗೊಂದಳಪೂಜೆ ಎಂದು ಮಾಡಿಸುವುದುಂಟು (ಹಪ್ಪೈರ. VI ಮುನ್ನುಡಿ).

[ ಗೊಂದಳ + ಪೂಜೆ$_2$ ]

**ಗೊಂದಳವೆಕ್ಕಣ,** ಗೊಂದಣಪೆಕ್ಕಣ, ಗೊಂದಣವೆಕ್ಕಣ (ನಾ). ಗುಂಪಾಗಿ ಮಾಡುವ ನೃತ್ಯ ಮೊದಲಾದ ಪ್ರದರ್ಶನ : ದೇಸೆ ವಿಲಾಸಮುಂ ಪಡೆಯೆ ಗೊಂದಳವೆಕ್ಕಣವಾಗಳಾ ನೃಪಾವಾಸದೊಳಾಡಿದತ್ತು (ಪಂರಾಮಾ. ೩-೧೦೭). **ಗೊಂದಣಪೆಕ್ಕಣ:** ಗೊಂದಣಪೆಕ್ಕಣ ಕುಣಿವರು; ಗುಡಿಕಟ್ಟುವರು (ಸಾಹಿಸಂ. ೩೭). **ಗೊಂದಣವೆಕ್ಕಣ:** ವಿವಿಧಲಯಂಗಳಿಂ ಕುಣಿವ ಗೊಂದಣ [ಪಾಠಾಂ. ಳ] ವೆಕ್ಕಣವಾಗಳಂತೆ ಕಟ್ಟುವ ಗುಡಿ ಪೊಯ್ವ ಬದ್ದವಣಂ . . . ಮೆಱೆದುವುತ್ಸವಮಂ ಜಿನಜನ್ಮಗೇಹದೊಳ್ (ಮಲ್ಲಿಪು. ೦೨-೪); ಓಲಗ ಸಾಲೆಯ ಸಂಗೀತ ಸದನರಂಗದೊಳಚ್ಚರಸಿಯರ ಗೊಂದಣ ವೆಕ್ಕಣಮೆ ತೆಕ್ಕನೆ ತೀವೆ (ಅನಂಪು. ೫-೫ ವ) ; ಗೊಂದಣವೆಕ್ಕಣದಮರೀ ವೃಂದಂಗಳ ಬಿಳಿಯ ನಿಡಿಯ ಕಣ್ಗಳ ಬೆಳ್ಪಿಂ ಕೆಂದಳದ ಕೆಂಪುಮಾಂತುವು ಚಂದನ ಸಿಂಧೂರರಸದ ಪೊಸ ಕಾಟ್ಪುರಮಂ (ಪುಷ್ಪಪು. ೦೨-೪೩).

[ ಗೊಂದಳ + ಪೆಕ್ಕಣ ]

**ಗೊಂದಳಿಸು,** ಗೊಂದಣಿಸು, ಗೊಂದಲಿಸು (ಕ್ರಿ). ೧. ಗುಂಪುಗೂಡು ; ಒಟ್ಟಾಗು ; ದಟ್ಟೈಸು : ಅಂತು ದೇವರ್ ದೇವನೊಳಾವಗಮಾದ ತಂತಮ್ಮಾದರದಿಂ ಮಾಲೆಗಟ್ಟಿ ದುಗ್ಧವಾರಿಪೂರಿತ ಕನಕಕಲಶಂಗಳಂ ತಂದು

ಗೊಂದಳಿ [ಪಾಠಾಂ. ಣಿ] ಸಿ ಸಂದಣಿಸಿ ನೀಡಿದಾಗಳ್ (ಆದಿಪು. ೭-೮೪ ವ): ತೊಳಪ ದಂತಮರೀಚಿಸಂತತಿ ಪರ್ವಿ ಬಳ್ವಳ ನೀಳ್ದು ಗೊಂದಳಿಸಿ . . . ಸಭಾಂತರಾಳಮನೆಲ್ಲಮಂ ಬೆಳಗೆ ಭೂವಳಯಾಧಿಪಂ ನುಡಿಗುಂ (ಕಾವ್ಯಾವ. ೮೭೯): ಬಾಳಕಂ ನಿವ್ಮೊಳಾರ ಕೆಯ್ಗೆ ನೆಗೆದು ನಗುತ್ತುಂ ಬಂದನವಳ್ಗೆ ಕುಡುವನೆಂಬುದುಮರಸಿಯರೆಲ್ಲಮೆಮಗೆತಮಗೆಂದು ಗೊಂದಳಿಸಿ ಕರಕಿಸಲಯಂಗಳನಡಸಿ ನೀಡುವುದುಂ (ಅರ್ಥನೇ. ೪-೯೬ ವ); ತರಂತರ ದಿಂದೆನಿಸಿತ್ತು ಕಣ್ಗೆ ಗೊಂದಳಿಸಿ ಬರುತ್ತುಮಿರ್ಪ ಖಚರೀಜನಮಾಳೆ ನಭೋಂತರಾಳದೊಳ್ (ವರ್ಧಪು. ೫-೨೬). ೨. ಬಹಳವಾಗು; ಹೆಚ್ಚಾಗು; ಅತಿಶಯವಾಗು: ಪಸರಿಸಿ ಪರ್ಬಿ ಗೊಂದಳಿಸಿ ನಿಂದ ತಮಸ್ತ್ರಮುಮಂ ತೆರಳ್ಚಿ ಬಂದೊಸೆದಿನನೇಱುವಂತುದಯಪರ್ಬ್ವತಮಂ (ಎಕ. VII, ಶಿಕಾರಿ. ೦೨೫-೧೪; 1019). **ಗೊಂದಣಿಸು:** ೧. ಅತಿರಥ ಸಮರಥ ಮಹಾರಥಾರ್ಧರಥರೊಂದೆವಿಂದೆಯಲ್ಲದೊಂದೆಂದೊರ್ವರೊಳ್ ಸಂಧಿಸಿ ಗೊಂದಣಿಸಿ ನಿಂದಾಗಳ್ (ಪಂಪಭಾ. ೧೧-೧೪೬ ವ); ತಮ್ಮನಿಬರೊಂದಾಗಿ ಗೊಂದಣಿಸಿ ನಿಂದ ಪಾಂಡುನಂದನರುಮಂ . . . ಕಂಡು (ಗದಾಯು. ೭-೩೬ ವ); ಮುಂದಣ ಸಾಮಂತರಾಜಪುತ್ರೋತ್ಕರದಿಂ ಗೊಂದಣಿಸಿ ಪರ್ವಿ ರಣದೊಳ್ ನಿಂದಿರ್ಪವನೇಣವಾಹನಂ ಪವಮಾನಂ (ಗಿರಿಕ. ೬-೬೨); ಗೊಂದಣಿಸಿ ನಡೆವ ಮದಕರಿಗಳಿಂ ಹರಿಗಳಿಂ . . . ಪಡೆ ಪಡಪಾದುದು (ಜಬಪು. ೪೮-೨೩). ೨. "ಗೊಂದಣಿಸು–ಸಮೂಹೇ, ಬಾಹುಲ್ಯೇಚ" (ಶಮಧಾ). ೩. ಗದ್ದಲವೆಬ್ಬಿಸು; "ಗಲಾಟೆಮಾಡು" (ಪ್ರಭಣ್ಣ). **ಗೊಂದಲಿಸು:** ೪. ಕಕ್ಕಾಬಿಕ್ಕಿಯಾಗು; ಗಲಿಬಿಲಿಗೊಳ್ಳು: 'ಪ್ರವಾಸ' ಎಂದರೆ ಎಂದೂ ಗೊಂದಲಿಸದ ತಾನು ಇಂದು ಇಷ್ಟೇಕೆ ಗೊಂದಲಿಸುತ್ತಿದ್ದೇನೆ (ಹೊಸಕ್ಷಿ. ೧೬೬); ನಿರ್ಮಲೆಯ ಈ ಅನಪೇಕ್ಷಿತ ಸಿಟ್ಟಿನ ಅರ್ಥವಾಗದೇ ಗೊಂದಲಿಸಿದ ವಾಸುದೇವನಿಂದ ಕ್ಷಣಕಾಲ ಮಾತೇ ಹೊರಡಲಿಲ್ಲ (ಮೂರುದಾ. ೨೪೦). [ಗೊಂದಳ + – ಇಸು₃]

**ಗೊಂದಿ, ಗೊಂದು, ಗೊಂದೈ** (ನಾ). ಇಡಕು; ವಂಾುಲೆ; ಸಂದು: ಸಿದ್ಧರಾಮಾ ಎಂದು . . . ಅಬ್ಬಿಯೊಳು ಬೆಳಗೆಯ್ಯ ಸಂದಿಯೊಳು ಗೊಂದಿಯೊಳು ಗಬ್ಬರಿಸಿ ತಮತಮಗೆ ಚೀಱಿ ಕರೆದರು (ಸಿದ್ಧರಾ. ೨-೪೮); ಗೊಂದಿಯೊಳಿಹ ಜನಬಿಂಬಕೆ ಮಂದರದಂದದೆ ಜನಭವನವನೂ ರುಂದ್ರತರದೆ ಸವೆಸಿದ ವಾದಿವಿದ್ಯಾನಂದಯೋಗಿಗೆ ನಮಿಸುವೆನೂ (ಅಂಜಚ.೧-೫೧); ಪುರದ ಬಾಹ್ಯದಲೊಂದು ದೇವಾಲಯದ ಮಧ್ಯದ ಗೊಂದಿಯಲಿ ತಾ ದ್ರುಪದನೊಱಗಿರೆ (ಸಂಭಪ. ೧೬-೭೯); ದುರ್ಜನರ ಮಂದಿಯಂ ದೆಸೆದೆಸೆಯ ಗೊಂದಿಯಂ ಪೊಗಿಸಿ ಬಲು ಬಂದಿಯಂ ಮಾಡಿ ಜಯವೊಂದಿರ್ದ . . . ನಂದಿಯಂ ಬಲಗೊಂಬೆನು (ಚೀರಮು. ೦-೭). **ಗೊಂದು:** ಗಿರಿಯ ಸಂದು ಗುಹೆಯ ಗೊಂದುಗಳೊಳಗೆ ಅರಸಿಯಿಂದುಮುಖಿಯನಂದುಗಾಣದೆ . . . ಮರುಗುವಾಗ (ಹನುಮ. ೧೧೬); ಸಂದಿನೊಳ್ ಪುಡುಕುತುಂ, ಗೊಂದಿನೊಳ್ ನೋಡುತುಂ (ರಾಮಾಶ್ವ. ೦೧೧-೮). **ಗೊಂದೈ:** ಬಂದು ಮಾಮರದಡಿಗಳೊಳು ತಮಾಳದ ಗೊಂ [ಪಾಠಾಂ. ಮಂ] ದೆಗಳೊಳಗಱಿಸಿದಳು (ಕುರಾಸಾಂ. ೩೩-೪೭). [ದೇ.॥ ತಮಿ. ಕೊನ್ತು; ತೆಲು. ಗೊಂದಿ.]

**ಗೊಂದು** 'ಗೊಂದಿ' ನೋ.

**ಗೊಂದೆ₁** (ನಾ). ೧. ಎತ್ತು; ಬಸವ; ವೃಷಭ; ನಂದಿ: "ಗೊಂದೆಯ ವೃಷಭಂ" (ಕವಿಕಂ. ೨೩); "ಗೊಂದೆಯನೆ ಶಂಭುವಾಹನಮಕ್ಕು" (ಕಶರ. ೩೩); ಹೆಟವರದೊಂದು ಗೊಂದೆ [ಪಾಠಾಂ. ಗೋಡೆ] ವೊದಲಾಗೆ ಪಶುತ್ವನಿಬದ್ಧ ರೂಪಮಂ ತಳೆದ ದುರಾತ್ಮರಿಂದು ಪೆಸರ್ಗೊಂಡವರ್ಗೊಲಗ ವೀಯದೆಂದೊಡೆ (ಸಮಪ. ೧೧-೧೮೮); ಆ ಬಸವಂ ಪಾಯ್ದೊಡೆ ಕೆಸಱೊಳ್ ಬಸವಱಿದಿರ್ದೊಂದು ಗೊಂದೆ ಪೊಂದಿತ್ತಾಗಳ್ (ಚಂದ್ರಪು. ೨-೨೯). ೨. ದನ; ಕಾಲ್ನಡೆ; ಪಶು: ಗೊಂದೆಗಳಂ ಕಾಯದ ಗೋವಿಂದಂ ಕಂದುಗೊರಲನಲ್ಲದ ಮಾದೇವಂ . . . ಎಂಬಂದದಿನತಿ ವಿಭ್ರಾಜಿಸಿದು ರಾಜಪ್ರಭರಾಜಸುತಂ (ಜಯುಕಾ. ೨-೬೯); ಹಿಂದಿಂದೊಡೆದೋಡಿ ಪೋಪ ಗೊಂದೆಯನೊಂದ ಕಂಡು (ಕುರಾಸಾಂ. ೩೧-೯೦); ಅಂಕಕ್ಕೆದಿದವರು ಗೊಂದೆಗಳ ಕಾಯ್ವರೋ ಮೇಣಾನು ನಿಮಗೆ ತಕ್ಕಬ್ದ್ಧಿಯುಸುರುವ ಸೀಕ್ಷಕರ್ತ ಘಡೆಘಡೆಯೆಂದು ತಿದ್ದಿದಂ ಶಶಿಜಾಲ ಬಿರುಮಳೆಯನವನೀಶ ಕೋಮಲ ಲತಾಂಗಗಳಿಗೆ (ಜಿನಮು. ೮-೨೪).
[ದೇ.॥ ತುಳು. ಗೆಂದೆ; ತೆಲು. ಗೋದ; ಕೊಲಾ. ಕೊಂದಾ, ಕೋಂದ; ಪರ್ಜಿ. ಕೋಂದ; ಗದಬ. ಕೋಂದೆ, ಕೋಂದೇ; ಗೊಂಡಿ. ಕೋಂಡಾ, ಕೋಂದ]

**ಗೊಂದೆ₂** 'ಗೊಂದಿ' ನೋ.

**ಗೊಂದೆಗೊರವ** (ನಾ). ಎತ್ತಿನ ಗೊರವ; ವೃಷಭವಾಹನನಾದ ಈಶ್ವರ: ಗೊಂದೆಗೊರವನ ನೆಣಿಸಿ ಗೆಲಿದೆನೆಂಬಹಂಕಾರದಿಂದ ಯನ್ನಿದಿರಿನಲಿ ನಿಂದು ಕಾದುವರೆ ನಿನ್ನಿಂದಲಪ್ಪುದೆ (ನವಮೋ. ೩೨-೬).
[ಗೊಂದೆ₁ + ಗೊರವ]

**ಗೊಂದೆಬೊಂದಿ** (ನಾ). ೧. ಎತ್ತಿನ ದೇಹ. ೨. (ಆಲಂ) ಪಶುವಿನಂತಹವನು: ತನ್ನಱಿವಮಂ ಮಾಱುಗೊಟ್ಟು ಪಸುವಾಟ್ಟ ಗೊಂದೆಬೊಂದಿಗೆ . . . ಬೆಸಲಾದ ಮಡದಿಯಂ ಬಡಿವ ಮಾನಸರಕ್ಕಸಂಗೆ ಕಣ್ಗೆ ಕಾಣಲ್ಬಾರದೊಂದು ಮ್ಮೆಮವೆತ್ತು ನಿಂದಿರ್ಕುಂ (ರಾಮಾಶ್ವ. ೭೪-೧).
[ಗೊಂದೆ₁ + ಬೊಂದಿ]

**ಗೊಂದೆವಳವಿಗ** 'ಗೊಂದೆವಟವಿಗೆಯ' ನೋ.

**ಗೊಂದೆವಳವಿಗೆ** 'ಗೊಂದೆವಟವಿಗೆ' ನೋ.

**ಗೊಂದೆವಳವಿಗೆಯ** 'ಗೊಂದೆವಟವಿಗೆಯಂ' ನೋ.

**ಗೊಂದೆವಟಯಿಗೆ** 'ಗೊಂದೆವಟವಿಗೆ' ನೋ.

**ಗೊಂದೆವಟಯಿಗೆಯ** 'ಗೊಂದೆವಟವಿಗೆಯಂ' ನೋ.

**ಗೊಂದೆವಟವಿಗೆ, ಗೊಂದೆವಳವಿಗೆ, ಗೊಂದೆವಟಯಿಂಗೆ** (ನಾ). ಎತ್ತಿನ ಗುರುತುಳ್ಳ ಬಾವುಟ; ವೃಷಭಧ್ವಜ. 'ಗೊಂದೆವಟವಿಗೆಯಂ' ಪರಾ. **ಗೊಂದೆವಳವಿಗೆ:** ಗೊಂದೆವಳವಿಗೆಯವನು ಹೆಕ್ಕಳದಿಂದ ಚಿನ್ನದ ತಟ್ಟೆಯೊಳು ವೀಟಿಕೆಯ ತರಿಸಿತ್ತು (ಅರ್ಜಾವಿ. ೬-೬). 'ಗೊಂದೆವಳವಿಗೆಯ' ಪರಾ. **ಗೊಂದೆವಟಯಿಗೆ:** 'ಗೊಂದೆವಟಯಿಂಗೆಯಂ' ಪರಾ.
[ಗೊಂದೆ₁ + ಪಟವಿಗೆ]

**ಗೊಂದೆವಟವಿಗೆಯಂ, ಗೊಂದೆವಳವಿಗ, ಗೊಂದೆವಳವಿಗೆಯಂ, ಗೊಂದೆವಟಯಿಂಗೆಯ** (ನಾ). ಎತ್ತಿನ ಗಂರುತಿನ ಬಾವುಟವುಳ್ಳವನು; ವೃಷಭಧ್ವಜ; ಶಿವ: "ಎಳದೇರ . . . ಗೊಂದೆವಟವಿಗೆಯನೆಕ್ಕೆಯ್ಯವಂ . . . ಗಂದರಗಿವಿಯನೀಸರಂ ದೇಸಿಗಂ" (ಶಬ್ದಮಂ. ೩). **ಗೊಂದೆವಳವಿಗ:** ಅಮರ್ದನುಂಬರಿಂ ತುಳಿಲ್ಗೊಂಬ ಗೊಂದೆವಳವಿಗ ಗೊರವನೇ . . . ಪೊರೆಗೆಮ್ಮನು (ನವಮೋ. ೩೨-೧). **ಗೊಂದೆವಳವಿಗೆಯ:** "ಅಂಬಿಕಾಪತಿ ಗೊಂದೆವಳವಿಗೆಯ ಗೊರವನುಂ" (ಕಶರ. ೩೩). **ಗೊಂದೆವಟಯಿಗೆಯ:** "ಎಣ್ಮಯ್ಯಂ, ಗೊಂದೆವಟಯಿಗೆಯಂ . . . ಐವೊಗಂ–ಈ ೩೩ ಈಶ್ವರಂಗೆ ಪೆಸರ್" (ಕಕಸಾ. ೦-೦); "ಗೊಂದೆವಟಯಿಗೆಯ ದೇಸಿಗನೆಂದುಂ ಪೆಣ್ಣೊಡೆಯ ಕಿರ್ಚುಗಣ್ಣನೆನುತ್ತುಂ . . . ಪೆಬ್ಬರ್ ಸ್ಮರಹರಂಗೆ ನಾಮವಿದೆನುತುಂ" (ಕವಿಕಂ. ೧೬). [ಗೊಂದೆವಟವಿಗೆ + – ಅ₇]

**ಗೊಂಬಚ್ಚೆ** (ನಾ). ಒಬ್ಬಾಕೆಯ ಹೆಸರು: ಪೊಲೆಯಮ್ಮನ ಪೆಣ್ಡತಿ ಗೊಮ್ಮಬಚ್ಚೆ (ಎಕ. VIII, ಸೊರಬ. ೭೦-೦೫; 938). [ಗೊಂಬ₁+ಅಚ್ಚೆ₁]

**ಗೊಂಬುಕ್ಕಿ** (ನಾ). ಒಂದು ಸ್ಥಳದ ಹೆಸರು: ನೆಲ್ಲಿವರ ಕಾಳಕನ್ನ ಕಲಿ ಕಜ್ಜರಾನಿಱಿದೋಡಿಸಿ ಗಳ್ಚಿನಾಡಕ್ಕಲಿದೊಱಿಗಳುಂ ಗೊಂಬುಕ್ಕಿ ಅರಸರುಂ ಪಡೆದುದು (ಎಕ. X ಮಾಲೂರು. ೯೬-೨; ಕ್ರಿ. 750). [?]

**ಗೊಂಬೆ$_1$** (ನಾ). ೧. ಬೊಂಬೆ; ಪ್ರತಿಮೆ; ಪುತ್ಥಳಿ : ಗೊಂಬೆಯವು ತಾವೇತಕಿಲ್ಲವು ಅಪ್ರಯೋಜಕವು ಗೊಂಬೆಯಹ ದೇವರನೆ ಮಾರಿಯೆ ತಂಬಿಗೆಯ ತಪ್ಪಲೆಯ ಕೊಂಡರೆ ವುಂಬದಕೆ ಕುಡಿವದಕೆ ಬಾ ಹ ದು (ಜ್ಞಾನಸಿಂ. ೩೮-೧೪); ಏನು ಬೇಡ, ಗೊಂಬೆ, ತಿಂಡಿ, ಮುದ್ದು ಬೇಡ(ರಾಮಾನ. ೮೬); ಕಣ್ಣನಾಗಿನ ಗೊಂಬೀ ಹಾಂಗ ಎದ್ಯಾಗ ನಟ್ಟಾಂವಾ (ಸಖೀಗೀ. ೯೨-೨೨); ಗೊಂಬೆ ಮಾತನಾಡದು, ರಂಬೆ ಕಾಣಸಿಕ್ಕಳು (ಗಾದೆ). 'ಬೊಂಬೆ' ಪರಾ. ೨. ಕಣ್ಣಿನ ಗುಡ್ಡೆ : (ಕ). [ದೇ.॥ ತುಳು. ಗೊಂಬೆ]

**ಗೊಂಬೆ$_2$** (ನಾ). ಗುಂಪು; ಸಮೂಹ : "ಜಂಗುಳಿ . . . ಗೊಂಬೆ . . . ಜಾಳಿಗೆಯುಮೆನೆ ಶ್ರೇಣಿಕಾಖ್ಯಂ" (ಅಭಿಕ್ಕ. ೧೬): "ಗೊಂದಣೆ ತೆರಳ್ಕೆ . . . ಗೊಂಬೆ ಜಂಗುಳಿ . . . ತೊಂಬೆಯೆನೆ ಶ್ರೇಣಿಕಾಖ್ಯಂ" (ಶಬ್ದಮಂ. ೩೩). [☞ ಇದು 'ದೊಂಬೆ' ಎಂಬುದರ ಅಪಲಿಖಿತವಿರಬಹುದು.]

**ಗೊಂಬೆಮದುವೆ** (ನಾ). ಮಕ್ಕಳು ವಿನೋದಕ್ಕಾಗಿ ಬೊಂಬೆಗಳಿಗೆ ಮಾಡುವ ಮದುವೆ ಮತ್ತು ಅಂತಹ ಮದುವೆಯ ಆಟ : ಗೊಂಬೆ ಮದುವೆಯನೊಮ್ಮೆ ಮಾಡಿ, ಚೆನ್ನೆಯಕ್ಕಡಿಯೊಮ್ಮೆ ಹೂಡಿ, ಆಡಿಸುವೆ ಪಲವಾಟವಾಡಿ–ಕಣ್ಣುಮುಚ್ಚಿಕೆಯಲ್ಲದೆ (ಗೀವಿಂ. ೬೧-೧೩).
[ಗೊಂಬೆ$_1$ + ಮದುವೆ]

**ಗೊಂಬೆಯಾಟ** (ನಾ). ೧. ಆಟಗಾರರು ದಾರಗಳ ಮೂಲಕ ಬೊಂಬೆಗಳನ್ನು ಕುಣಿಸಿ ತೋರಿಸುವ ಆಟ; ಸೂತ್ರದ ಬೊಂಬೆಯಾಟ : ಜನನಮರಣಗಳ ಸೂತ್ರದಲ್ಲಿ ನಡೆಸಿರುವ ಗೊಂಬೆಯಾಟ (ಮುಕ್ತಕಂ. ೨೪-೧೬); ಕೆಲವು ವಿಗ್ರಹಗಳ ಕೈ ಕತ್ತು ಕಾಲುಗಳ ಸ್ಥಳದಲ್ಲಿ ರಂಧ್ರ ಮಾಡಿರುವದರಿಂದ ಬಹುಶಃ ಸೂತ್ರದ ಗೊಂಬೆಯಾಟವೂ ಪ್ರಚಾರದಲ್ಲಿದ್ದಿತು (ಭಾರದ. ೧೩). ೨. ಬೊಂಬೆಗಳನ್ನು ಇಟ್ಟುಕೊಂಡು ಮಕ್ಕಳು ಆಡುವ ಆಟ; ಬೊಂಬೆಆಟ : ಮಕ್ಕಳು ಗೊಂಬೆಯಾಟ ಆಡುತ್ತಿವೆ (ರೂಢಿ). [ಗೊಂಬೆ$_1$ + ಆಟ]

**ಗೊಂಬೆರಂಭ** (ನಾ). ತೊಗಲುಬೊಂಬೆಯನ್ನು ಕುಣಿಸುವವನು; ಕಿಳ್ಳಿಕೇತ : ಗೊಂಬೇರಂಭರಾದ ರಾಮ, ಸಂಜೀವ, ಗೋವಿಂದ–ಇವರು ಬಂದರಂತೂ ಗೌಡರಿಗೆ ಸಂತೋಷವೋ ಸಂತೋಷ (ನನ್ನೂರು. ೦೧೯).
[<ಗೊಂಬೆರಾಮ]

**ಗೊಂಬೆರಾಮ** (ನಾ). = ಗೊಂಬೆರಂಭ : "ಗೊಂಬೆರಂಭರು : ತೊಗಲು ಗೊಂಬೆಯನ್ನು ಕುಣಿಸುವವರು . . . ಗೊಂಬೇರಾಮರು ಎಂದೂ ಇವರನ್ನು ಕರೆಯುತ್ತಾರೆ" (ನನ್ನೂರು. ಟಿಪ್ಪಣಿ).
[ಗೊಂಬೆ$_1$ + ರಾಮ]

**ಗೊಂಬೆಹಚ್ಚಡ** (ನಾ). ಬಣ್ಣದ ಚಿತ್ರಗಳಿಂದ ಕೂಡಿದ ಹಚ್ಚಡ; ವರ್ಣಚಿತ್ರಗಳನ್ನೊಳಗೊಂಡ ಹೊದ್ದುಕೊಳ್ಳುವ ಬಟ್ಟೆ : ತಂಗೀ ಮನೇಗ್ಹೋಗಿ ತಂಗಾದೆ ಹೋಗುತವನೆ ತಂಗೀಸಿ ಕೊಡು ಮಳೆದೇವ ಅಣ್ಣಯ್ಯ ಗೊಂಬೆಹಚ್ಚಡವು ಗೂರೆಯಾದೂ ಅಂಬೂ ಕೊಡುವವನೆ ಗೊಂಬೆ ಹಚ್ಚಡದವನೆ ರಂಭೆ ತೊಡೆಮೇಲೆ ಮಲಗಿರುವ ಮಳೆದೇವ ಅಂಬಾರದಿಂದ ಕರುಣೀಸು (ಹಳ್ಳಿಯ. ೪೦). [ಗೊಂಬೆ$_1$ + ಹಚ್ಚಡ (<ಪಚ್ಚಡ)]

**ಗೊಂಯಿ** (ನಾ). ಒಂದು ಅನುಕರಣ ಶಬ್ದ : ಸೊಳ್ಳೆಗಳ ಗೊಂಯಿ ಶಬ್ದದಿಂದ ರಾತ್ರಿ ನಿದ್ದೆಯೇ ಇಲ್ಲ (ರೂಢಿ). 'ಗುಂಯಿ' ಪರಾ.

**ಗೊಗಲ್** (ನಾ). ಒಂದು ಬಗೆಯ ಔಷಧಿಸಸ್ಯ : ಉಡಿಮರ . . . ಗೊಗಲ್, ಹೆಣ್ಣುಗೊಡ್ಡ (ವೃಜಿಗಿ. ೩೬-೧೦೩೦). [?]

**ಗೊಗ್ಗ** (ನಾ). ೧. ಮೈಲಾರಲಿಂಗನ ಭಕ್ತ : (ಕ). ೨. ಮಕ್ಕಳನ್ನು ಹೆದರಿಸಲು ಕರೆಯುವ ಒಂದು ಕಾಲ್ಪನಿಕ ಭೂತ; ಗುಮ್ಮ : ಗೊಗ್ಗನನ್ನು ಕರೆಯುವೆನೆಂದು ಮಗುವನ್ನು ಹೆದರಿಸಿ ಮಲಗಿಸಿದಳು (ರೂಢಿ). [<ಗೊರವ ?]

**ಗೊಗ್ಗಯ್ಯ** (ನಾ). ೧. ಮೈಲಾರಲಿಂಗನ ಭಕ್ತ : (ಕ). ೨. = ಗೊಗ್ಗ ೨: ಗೊಗ್ಗಯ್ಯನನ್ನು ಕರೆಯುತ್ತೇನೆ ಎಂದು ಮಕ್ಕಳಿಗೆ ಹೆದರಿಸಬಾರದು (ರೂಢಿ). [ಗೊಗ್ಗ + ಅಯ್ಯ$_1$]

**ಗೊಗ್ಗರ, ಗೊಗ್ಗರು** (ನಾ). ಗಂಟಲು ಒಡೆದು ಧ್ವನಿಯಲ್ಲಿ ಉಂಟಾಗುವ ಒಂದು ಬಗೆಯ ವಿಕಾರ; ಒಡಕುಧ್ವನಿ : ವನಮಾಲಿ ಗೊಗ್ಗರದ ಏರುಧ್ವನಿ ತೆಗೆದು ಕೇಳಿದನು (ಇಪ್ಪಕ. ೪೨೪); ಹದಿನಾಲ್ಕು ವರ್ಷದ ಬಾಲಕನ ಮುಖ ಕೊಂಚ ವಿಕಾರ ಹೊಂದಿದಂತೆ ಧ್ವನಿಯೂ ಗೊಗ್ಗರವಾಗುವುದು (ಸುತ್ತುಮು. ೧೦). **ಗೊಗ್ಗರು** : 'ಗೊಗ್ಗರುಧ್ವನಿ' ಪರಾ.
[<ಗೊಂಕುಱು ?]

**ಗೊಗ್ಗರು** 'ಗೊಗ್ಗರ' ನೋ.

**ಗೊಗ್ಗರುಧ್ವನಿ** (ನಾ). ಒರಟಾದ ಧ್ವನಿ; ಕರ್ಕಶವಾದ ಸ್ವರ : ಗೊಂಟರು ಕಪ್ಪೆಗಳ ಗೊಟರಿನಂತಹ ಗಡಸು ಗೊಗ್ಗರುಧ್ವನಿ ಕೇಳಿ . . . ಭಯವಾಯಿತು (ಪ್ರಶ್ನೆ. ೨೦): ಗೊಗ್ಗರುಧ್ವನಿಯಲ್ಲಿಯೇ ಅವನು ಮತ್ತೆ ಮಾತನಾಡಿದನು (ಬಂಗಾಹ. ೭೬). [ಗೊಗ್ಗರು (<ಗೊಗ್ಗರ) + ಧ್ವನಿ]

**ಗೊಗ್ಗಿ** (ನಾ). ಒಬ್ಬಾತನ ಹೆಸರು : ಜಗಭಕ್ಷಣ ಚಕ್ರವರ್ತ್ತಿ ಗೊಗ್ಗಿಯ ಸಾವನ್ತ × × ರ (ಎಕ. II, ೧೫೨-೨ ; ಸು. 950); ಆತಂಗೆ ಚಿಕ್ಕಿಯಣ್ಣಂ ಮಾತೆ[ಗೆ]ಸತ್ಪುತ್ರನಾ ಸುಪುತ್ರಂಗೆ ಸುತಂ ನೂತಗುಣಂ ಗೊಗ್ಗಿ (ಎಕ. XI, ಚಿತ್ರದು. ೭೪-೦೦ ; 968). [?]

**ಗೊಗ್ಗಿಯಪುರ** (ನಾ). ಒಂದು ಊರಿನ ಹೆಸರು : ಗೊಗ್ಗಿಯಪುರದ ಬಾಳಚನು (ಎಕ. XI, ಚಿತ್ರದು. ೫೦-೨೨ ; 968).
[ಗೊಗ್ಗಿ ? + ಪುರ$_3$]

**ಗೊಗ್ಗಿಯಮ್ಮ** (ನಾ). ಒಬ್ಬಾತನ ಹೆಸರು : ಬಿರುದರ ಗಾಳಮುಚ್ಚನಿಯೆ ಭೊಜಂಗಂ ಶ್ರೀಮತ್ ಗೊಗ್ಗಿಯಮ್ಮ (ಎಕ. XI, ಹೊಳಲ್ಕೆ. ೩೩-೯ ; 965).
[ಗೊಗ್ಗಿ + ಅಮ್ಮ$_1$]

**ಗೊಚ್ಚಿ** 'ಗೊಂಚಿ' ನೋ.

**ಗೊಚ್ಚು** 'ಕೊಚ್ಚು$_4$' ನೋ.

**ಗೊಚ್ಚೆ** 'ಕೊಚ್ಚೆ' ನೋ.

**ಗೊಜಗು$_1$** (ಕ್ರಿ). ಅಸ್ಪಷ್ಟವಾಗಿ ಮಾತನಾಡು; ಮೆಲ್ಲಗೆ ಹೇಳು : ಒಂದಿನಂ ಮುಚ್ಚಂಜೆ ಹಸಿಮಣ್ಣಿನುಂಡೆ ಗುದ್ದುವೊರು ಪೊಡ್ಡನನು ಸಂತೆಯಲಿ ಕಂಡೆ, ನಾಲಗೆಯ ಸಾಲದುಲಿಯಿಂ ಗೊಜಗಿತಿಂತು ಮೆಲ್ಲನೆಲೆ ತಟ್ಟಣ್ಣ! ನನ್ನೊಳೀ ದಿಂಡೇ ? (ಗೀವಿಂ. ೦೨೦-೨೭). [?]

**ಗೊಜಗು$_2$** (ನಾ). ಅಸ್ಪಷ್ಟವಾಗಿ ಮಾತನಾಡುವಿಕೆ; ಮೆಲ್ಲಗೆ ಹೇಳುವಿಕೆ: (ಕ). [<ಗೊಜಗು$_1$]

**ಗೊಜಗುಟ್ಟು** (ಕ್ರಿ). = ಗೊಜಗು$_1$ : ಗೊಜಗುಟ್ಟುತ್ತಿದ್ದು ಬದ್ಧಿಳಿಗೆ ಪೊಚ್ಚೆಯಪ್ಪ ಕಡುನುಜುಗು ಮನದಜ್ಞಾನಿ ಜನರೆಲ್ಲ ಪಿರಿಯರೆ (ಮುದೇಪು ೩೦-೨೫); ಗದ್ಗದಃ ಗೊಜಗುಟ್ಟುವುದಾಗಿ (ಶಾಹಟೀ. ೨-೫-೪೦ ಪ).
[ಗೊಜಗು$_2$ + ಕುಟ್ಟು$_1$]

**ಗೊಜಡು** (ನಾ). ೧. ಹುರುಳಿಲ್ಲದ ಮಾತು : ಮಿಕ್ಕಿನ ವೇದಾಗಮಂಗಳು ಜಡ್ಡು ಗೊಜಡೆಂದು ಅವ ಬಿಟ್ಟು (ಲಿಂಗಲೀ. ೪೦೯). ೨. ಹುರುಳಿಲ್ಲದ ಮಾತನ್ನಾಡುವ ವ್ಯಕ್ತಿ: ದಾತುಗಾಣಿಸಿ ಕೊಳದ ಮಜಡುಗಳ್ಗೊಜಡುಗಳ್ ಮಾತುಮಾತಿಂಗೆ ಬಾಯಿಬಡಿಕೆಯರ್ (ಷಶಿಲ. ೨-೫೯). [?]

**ಗೊಜರಗಳೆ** (ನಾ). =ಗಜರಗಳೆ : ಅವನ ಗೊಜರಗಳೆ ಯಾವಾಗಲೂ ಇದ್ದದ್ದೇ (ರೂಢಿ). 'ಕಜರಗಳೆ' ಪರಾ. [ಗೊಜ ? + ರಗಳೆ]

**ಗೊಜಬಿಜಿ** (ನಾ). ಗೊಂದಲ; ಸಿಕ್ಕು; ಗೋಜು: ಏಳೇಳ್ಳ ನಲವತ್ತೊಂಭತ್ತು . . . ಅಲ್ಲಿಯವರೆಗೆ ನೆನಪಿತ್ತು; ಅಲ್ಲಿಂದ ಮುಂದಕ್ಕೆ ಎಲ್ಲಾ ಗೊಜಬಿಜಿಯಾಗಿತ್ತು (ಶಾಲಮ. ೦೦). [<ಗಜಬಿಜಿ]

**ಗೊಜ್ಜ** (ನಾ). ಹಿರಿಯಂ ; ಪೂರ್ವಜ (?) : ಕೊಳಗವಂತ್ಲ ಸೇ[ವೆ]ಸೊಟಿಗೆ ಹೇಟಿಂಗೆ ಸೂಟಿ‌ಲೆ ಗೊಜ್ಜ ಗೌತಳಿಗಳು ಬಿಟ್ಟ ಆಯ ಚೈತ್ರಕ್ಕೆ ವೀಸ ಪವಿತ್ರಕ್ಕೆ ವೀಸ ಅಂತು ವರುಶಕ್ಕೆ ವೊಕ್ಕಲಿಂಗೆ ಬೇಳಿ (ಸೌಇಇ. IX-i, ೩೦೭-೪೫ ; 1228). [ ? ]

**ಗೊಜ್ಜಗೆ, ಗುಜ್ಜಗೆ$_1$, ಗುಜ್ಜಿಗೆ, ಗೊಜ್ಜಿಗೆ, ಗೊಜ್ಜುಗೆ** (ನಾ). ೧. ಒಂದು ಬಗೆಯ ಸುವಾಸನೆಯ ಹೂವು ; **ಮಲ್ಲಿಗೆ:** ಅಳಿಗಳ ಬಳಗಂ ಜಗದ ಮನದೊಡನೆ ಸೇವಂತಿಗೆಗಂ ಗೊಜ್ಜಗೆಗಮಲ್ಲದೇನೆಱಗುಗುಮೇ (ಆದಿಪು. ೧೧-೧೨೫) ; ಸಜ್ಜುಕವೆನಿಸಿದ ಗೊಜ್ಜ [ಪಾಠಾಂ. ಜ್ಜು]ಗೆಯರಲ ಮಿಶ್ರದಿನು ಪಾಶ್ರಯಂಬಡೆದ ಹೇಮತಾಮರಸದ ಪೊಗ್ಗೆಯ ತೋಳ್ಗಟ್ಟುಗಳುಮಂ (ಜಗವಿ. ೬-೧೬ ವ) ; ಗಗನದೊಳಚ್ಚರಿಯೆನೆ ನೆಗೆದೊಗೆದುದು ಕೆಂಧೂಳಿ ಖಚರಿಯ ಸೋರ್ಮುಡಿಯಿಂದುಗುವಿರವಂತಿಯ ಸಂಪಗೆಯ ಗೊಜ್ಜಗೆಯ ಸುರಯಿಯರಲ ರಜದುರ್ವಿನದಿಂ (ವರ್ಧಪು. ೫-೨೬): ದವನದ ಭುವನಿಕೆಗಳಿಂ ಗೊಜ್ಜಗೆಯ ಗುಡಿಗಳಿಂ . . . ತಂಪಿನ ತಾಯ್ವನೆಯುಮೆನಿಪ ಲತಾ ಮಂಟಪಮಂ ಕಂಡು (ಶಾಂತೀಶ್ವ. ೧೧-೧೧೭ ವ) ; ಗೊಜ್ಜಗೆ ಬೀಱುಗುಮೆ ಕಂಪನಲರದ ಮುನ್ನಂ (ನೀತಿಮಂ. I. ೩೯). ೨. "ಇರುವಂತಿಗೆ" (ಪಂಪಭಾ. ಕೋಶ): ಅಗರುವ ಮೆಚ್ಚು . . . ಪೂತ ಗೊಜ್ಜಗೆಗಳ ಸಿಂದು ರಂಗಳೊಳಗೋಗರಗಂಪನೆ ಬೀಱುತಿರ್ಪ . . . ಸಂಪಗೆಯೊಳಗ್ಗಲಿಸಿತ್ತು ಬಸಂತ ಮಾಸದೊಳ್ (ಪಂಪಭಾ. ೫-೧೦). **ಗುಜ್ಜಗೆ$_1$ : ೩. ಸೇವಂತಿಗೆ :** "ಗು[ಪಾಠಾಂ. ಗೊ] ಜ್ಜಗೆಯೆನಲ್ ಸೇವಂತಿಗೆಯ ನಾಮಮಕ್ಕು" (ಕಬ್ಬಿಕ್ಕ. ೨೦). **ಗುಜ್ಜಿಗೆ: ೩.** "ಗುಜ್ಜಗೆಯೆನೆ ಸಂದೇಹವಿಲ್ಲ ಸೇವಂತಿಗೆಯ ನಾಮವು" (ಶಬ್ದಮಂ. ೨೭). **ಗೊಜ್ಜಿಗೆ: ೧.** ದವನದ ಪಸುರ್ದನೆಯ ಗೊಜ್ಜಿಗೆಯ ಜಾದಿಯ (ರಾಮಾಶ್ವ. ೪೩-೮). **೨.** ಮುಡಿಗೆ ಪೊಸ ಮಲ್ಲಿಗೆಯಂ ಗೊಜ್ಜಿಗೆ ಯುಮನೇಱಿಸಿ ಸಲೆ ಬಿಜ್ಜೋದರಿ ದಿವ್ಯಸತಿಯನಾರಾಧಿಸಿದಳ್ (ಲೀಲಾವ. ೧೧-೯). **ಗೊಜ್ಜುಗೆ: ೧.** ಪುಷ್ಪೋತ್ಕರದೊಳ್ ಗೊಜ್ಜುಗೆಯ ಕಂಪನವು ತಳೆದಿರ್ಕುಂ (ಲೋಕೋಪ. ೭-೪೪) ; ಧರಣಿಪನ ಕೀರ್ತಿವಧು ವಿಸ್ಫುರಿತ ನಭಃಕಬರಿಯಲ್ಲಿ ಗೊಜ್ಜು [ಪಾಠಾಂ. ಜ್ಜ]ಗೆಯ ಸರೋತ್ಕರವಾಂತವೊಲೆ ಸಿತಾಭ್ರಂ ನೆರೆದಿರೆ (ರಾಜಶೇ. ೯-೬). ☞ ಈ ಹೂವನ್ನು ಕೆಲವರು ಇರುವಂತಿಗೆಯೆಂದು, ಕೆಲವರು ಸೇವಂತಿಗೆಯೆಂದು ಭಾವಿಸಿರುವರು. [ ದೇ.॥ ತಮಿ. ಕೊಱುಜ್ಞಿರಿ ; ತೆಲು. ಗುಜರಿ ]

**ಗೊಜ್ಜಲ** (ನಾ). ಒಂದು ಬಗೆಯ ಮರ : ಗೊಜ್ಜಲ (ಮೊಯಿ).– ಮಧ್ಯಮ ಆಕಾರದ್ದು. ಇಮಾರತಿಗೆ ಬರುತ್ತದೆ (ಕಭಾಗಿ. ೩೯). [ ? ]

**ಗೊಜ್ಜಲು** (ನಾ). ಕೆಸರು ; ಕೊಚ್ಚೆ : ರುಧಿರ ಭಾವಿಯು ಮಜ್ಜ ಹಂಸೆಯು ಅಧಿಕ ವೀರ್ಯವು ಜೊಂಡು ಗೊಜ್ಜಲು ಅದುವೆ ಮೇದಸು ಮಾಂಸ ವೆಂಬುದು (ಜ್ಞಾನಸಿಂ. ೨೮-೨).

[ ಗೊಜ್ಜೆ$_1$ (<ಕೊಚ್ಚೆ) + – ಅಲು (< – ಅಲ್$_2$) ]

**ಗೊಜ್ಜೆಕಬ್ಬೆ** (ನಾ). ಒಬ್ಬಾಕೆಯ ಹೆಸರು : ತನ್ನಿಷ್ಟದೈವಂ ಜನೇಶ್ವರ ನಾತ್ಮಾಂಬಿಕೆ ಗೊಜ್ಜೆಕಬ್ಬೆ ಜನಕಂ ಗಂಗಾನ್ವಯ ಶ್ರೀವಧೂವರನಪ್ಪಗ್ಗಳ ದೇವನ್ (ಸೌಇಇ. XI-i, ೧೧೧-೧೪; 1071). ☞ಇದು 'ಗೋವಿಂದವ್ವೆ'ಯ ಗ್ರಾಮ್ಯರೂಪವಿರಬಹುದು. [ ಗೊಜ್ಜೆಕ$_0$ + ಅಬ್ಬೆ$_1$ ]

**ಗೊಜ್ಜೆಗದೇವ** (ನಾ). ಒಬ್ಬಾತನ ಹೆಸರು ; (ಗೋವಿಂದದೇವನೆಂದು ಪ್ರಖ್ಯಾತನಾದ) ರಾಷ್ಟ್ರಕೂಟವಂಶದ ಒಬ್ಬ ದೊರೆ : ಗೊಜ್ಜಗದೇವಂ ನೆಗಬ್ದಂ (ಎಇ. XIII ೩೨೯-೩ ; 929). [ <ಗೋವಿಂದ + ದೇವ ]

**ಗೊಜ್ಜಿಗೆ** 'ಗೊಜ್ಜಗೆ' ನೋ.

**ಗೊಜ್ಜು$_1$** (ಕ್ರಿ). (ಉಕ) ಚಿಮುಕಿಸು ; ಎರಚು ; ಸುರಿ ; ಹೊಯ್ಯು : ವಾರೀಗಿ ಗೆಳತೇರಂ ನೀರ ಮೇಲಾಡುತಲಿ ಮಾರಿಮಾರಿಗೆ ನೀರ ಗೊಜ್ಜುವರ (ಲೋಕಗೀ. ೧೯೧) ; ಇದಿರು–ಮಳೆ ರಭಸವಾಗಿ ಮುಖದಲ್ಲಿ ಕಣ್ಣಲ್ಲಿ ಗೊಜ್ಜುತ್ತಿದೆ (ಹೊಸಕ್ಕ. ೨೦೦) : ತಾಯಿ ಲಗುಬಗೆಯಿಂದ ನೀರು ತಂದು ಅವನ ಮುಖಕ್ಕೆ ನೀರು ಗೊಜ್ಜಹತ್ತಿದಳು (ಇಪ್ಪಕ. ೩೨೩) ; ಶಾನುಭೋಗರು ಉಗ್ರವಾಗಿ ಅವಾಚ್ಯಶಬ್ದಗಳಿಂದ ಹೆಂಡತಿಯನ್ನು ಬಯ್ಯುತ್ತ ಸುಡುವ ಸಾರಿನ ಬೋಗೋಣಿಯನ್ನೇ ಹೆಂಡತಿಗೆ ಗೊಜ್ಜಿಬಿಟ್ಟರು (ರಂಗರೋ. ೪೨).

[ <ಕೊಚ್ಚು$_2$? ]

**ಗೊಜ್ಜು$_2$** (ನಾ). ೧. ಅನ್ನಕ್ಕೆ ಕಲಸಿಕೊಳ್ಳಲು ಮಾಡಿದ ಒಂದು ಬಗೆಯ ಮೇಲೋಗರ : ಗೊಜ್ಜುಮಜ್ಜಿಗೆ ಪಳದ್ಯ ಸಜ್ಜಾದ ವಸ್ತು ಮೂಜಗನ್ಮಾತೆಯು ಮುದದಿ ಬಡಿಸಿದಳು (ಕಂಚೀಲೋ. ೧೦೭); ಗೊಜ್ಜು ತಿನ್ನುವ ದೃಷ್ಟಿಯಿಂದ ನಾವು ಮಾವಿನಕಾಯನ್ನು ನೋಡಿದೆವಾದರೆ ಅದನ್ನು ಸಮಗ್ರಭಾವದಿಂದ ನೋಡೆವು (ನಿಬಂಧ. I ೧೩೫) ; ಈ ಗೊಜ್ಜು, ಈ ಸಾರುಗಳನ್ನು ನಾನು ಉಣದೆ ಬಹು ದಿನಗಳಾದುವು (ಹಾಹುತ್. ೭೦). **೨. ನೀರು ಸೇರಿಸಿ ಕಲ್ಕದಂತೆ ಮಾಡಿದ ಯಾವುದಾದರೂ ವಸ್ತು :** ನಮ್ಮಲ್ಲಿನ ಒಂದು ಕಾರ್ಖಾನೆಯು ಬಿದಿರಿನ ಗೊಜ್ಜನ್ನು (Pulp) ಕಾಗದ ತಯಾರಿಯಲ್ಲಿ ಉಪಯೋಗಿಸುತ್ತಿದೆ (ಬಾಲಪ್ರ. II, ೮೨೩). **೩. ಅಮ್ಲತೆ ; ಹುಳಿ :** ಆಕಾಶ ಮುಟ್ಟುವಂತೆ ಬೆಳೆದಿದ್ದ ಗೊಜ್ಜಿನ ಮಾವಿನ ಮರದ ಹತ್ತಿರ (ಮಲೆಮ. ೪೫೪).

[ ದೇ.॥ ತಮಿ. ಕೊಚ್ಚು ; ತುಳು. ಗೊಜ್ಜಿ, ಗೊಜ್ಜು ]

**ಗೊಜ್ಜುಗೆ** 'ಗೊಜ್ಜಗೆ' ನೋ.

**ಗೊಜ್ಜೆ$_1$** 'ಕೊಚ್ಚೆ' ನೋ.

**ಗೊಜ್ಜೆ$_2$** 'ಗುಜ್ಜೆ$_1$' ನೋ.

**ಗೊಜ್ಜೆ$_3$** (ನಾ). ಒಂದು ಬಗೆಯ ಸುವಾಸನೆಯ ಹೂವು : ತಣ್ಗಂಪಿಂ ದೊಪ್ಪುವುದದಱಿಂದಲರೊಳಗೆ ಗೊಜ್ಜೆ [ಪಾಠಾಂ. ಜ್ಜ]ಗೊಜ್ಜಗೆಯೆ ವಲಂ (ಆದಿಪು. ೧೧-೧೨೬) ; ಗೊಜ್ಜೆಯ ಸಂಕಡಿಗಳಿಂ ಪನ್ನೀರ ನೀರ್ದಳಿಪದಿಂ . . . ತಣ್ಪಿನ ತಾಣಮುಮೆನಿಸಿರ್ಪ ಲತಾಮಂಟಪಮಂ ಪೊಕ್ಕು (ಕುಸುಮಾ. ೧೨-೧೫೭ ವ). 'ಗೊಜ್ಜಗೆ' ಪರಾ.

[ ? ]

**ಗೊಜ್ಜೆಗೆದಾಱ** (ನಾ). (?) : ಅವಣೂರದಮ್ಮೆಯನ ಭೂಮಿ ಆಯ್ದು ಹಣವಿನ ಬಳದೊಳಗೆ ಗೊಜ್ಜೆಗೆದಾಱ ಒಸ್ದು ಹಣವಿನ ಕೆಯ್ಯು ಅವಣೂರ ದೇವಗ್ಗೆ ಬಿಟ್ಟ ನಾಲ್ಕು ಹಣವಿನ ಕೆಯ್ಯು . . . ಸೇವೆ (ಎಕ. VI, ಚಿಕ್ಕಮ. ೬೨-೩೪ ; 1058 ?). [ ? ]

**ಗೊಟಕ್** (ನಾ). ಒಂದು ಅನುಕರಣ ಶಬ್ದ.

**ಗೊಟಕ್ ಅನ್ನು, ಗೊಟಕ್ ಎನ್ನು** = ಸಾಯು ; ಮರಣಹೊಂದು : ನನಗೂ ಪ್ರಾಣಾಂತಿಕ್ಷಯ ಬಂದು, ನಾನು ಗೊಟಕ್ ಅಂದರೆ ನೋಡಿದವರು ಏನನ್ನುತ್ತಾರೆ ಹೇಳಿ (ಶಾಯಿಕ. ४०) ; ಈಕೆ ಯಾವಾಗ ಗೊಟಕ್ ಅಂತಾಳೋ (ಮಣ್ಣುಹ. ೧) ; ನಾನೇನಾದರೂ ಗೊಟಕ್ ಎನ್ನುವುದಾದರೆ ಆ ಭೂಮಿಯ ಹಕ್ಕು ನಿನ್ನ ಮಕ್ಕಳಿಗೆ ಲಭಿಸುತ್ತದೆ (ಪುನರು. ೪೬೨).

**ಗೊಟಗುಣಿ** 'ಗೊಟ್ಟುಗುಣಿ' ನೋ.

**ಗೊಟಗೊಟ**(ನಾ). ಒಂದು ಅನುಕರಣ ಶಬ್ದ : ಬಹಳ ಬಾಯಾರಿದ ಅವನು ಒಂದು ತಂಬಿಗೆ ನೀರನ್ನೆಲ್ಲಾ ಗೊಟಗೊಟಯೆಂದು ಕುಡಿದುಬಿಟ್ಟ (ರೂಢಿ).

**ಗೊಟರ್, ಗೊಟರು$_1$** (ನಾ). ಒಂದು ಅನುಕರಣ ಶಬ್ದ. 'ಗೊಟರ್ಗುಡು' ಪರಾ. **ಗೊಟರು$_1$** : 'ಗೊಟರಂಕಪ್ಪೆ' ಪರಾ.

**ಗೊಟರುಹಾಕು**=(ಕಪ್ಪೆ ಮುಂತಾದುವುಗಳು) ಗೊಟರ್ ಗೊಟರ್ ಎಂದು ಶಬ್ದಮಾಡು ; ವಟಗುಟ್ಟು : ಗೊಟರುಹಾಕುವ ಗೊಟರು –ಕಪ್ಪೆಗಳ ಶ್ವಾಸಕೋಶ ಎಂಥದಿರಬೇಕೆಂದು ಯೋಚಿಸುತ್ತ ನಿದ್ದೆಬಾರದೆ ರಾಜಣ್ಣಾ ಎದ್ದು ಕೂತ (ಪ್ರಶ್ನೆ. ೧).

**ಗೊಟರು$_1$** 'ಗೊಟರ್' ನೋ.

**ಗೊಟರು₂, ಗೊಟರೆ** (ನಾ). ಕೊರಕಲು ; ತೂತು ; ರಂಧ್ರ ; ಪೊಟರೆ : ನಾನು ಹೋಗುತ್ತಿದ್ದ ಸ್ಥಳ ಕಲ್ಲುಗೊಟರು. ನನ್ನ ಕುದುರೆಯ ಮುಂಗಾಲು ಗೊಟರಿನಲ್ಲಿ ಸಿಕ್ಕಿಕೊಂಡಿತು (ಪ್ರವಾಇ. II, ೮೭). **ಗೊಟರೆ :** ಆ ಚೆಂಡು ಯಾವುದೋ ಗೊಟರೆಯಲ್ಲಿ ಹೋಗಿ ಬಿದ್ದಿದೆ (ರೂಢಿ).

[ <ಸಂ. ಕೋಟರ ]

**ಗೊಟರುಕಪ್ಪೆ** (ನಾ). ಗೊಟರು ಗೊಟರು ಎಂದು ಕಿರುಚುವ ಕಪ್ಪೆ ; **ಗೊಂಕರುಕಪ್ಪೆ :** ಗೊಟರುಹಾಕುವ ಗೊಟರು-ಕಪ್ಪೆಗಳ ಶ್ವಾಸಕೋಶ ಎಂಥದಿರಬೇಕೆಂದು ಯೋಚಿಸುತ್ತ ನಿದ್ದೆಬಾರದೆ ರಾಜಣ್ಣ ಎದ್ದು ಕೂತ (ಪ್ರಕ್ಕಿ. ೧). [ ಗೊಟರು₁ (<ಗೊಟರ್) + ಕಪ್ಪೆ₁ ]

**ಗೊಟರೆ** 'ಗೊಟರು₂' ನೋ.

**ಗೊಟರ್ಗುಡು** (ಕ್ರಿ). (ಕಪ್ಪೆ ಮುಂತಾದುವುಗಳು) ಗೊಟರುಗೊಟರು ಎಂದು ಶಬ್ದಮಾಡು ; ವಟಗುಟ್ಟು: ನಸುಕಿನ ಹಕ್ಕಿಯು ಚಿಲಿಪಿಲಿಯಿಲ್ಲ ಗೊಟರ್ಗುಡುತಿವೆ ಕಪ್ಪೆ (ಜೀವಲ. ೧೦೭-೬).

[ ಗೊಟರ್ + ಕುಡು₁ (<ಕೊಡು₁) ]

**ಗೊಟಾಯಿಸು** 'ಕೊಟಾಯಿಸು' ನೋ.

**ಗೊಟಾಳೆ** 'ಘೋಟಾಳಿ' ನೋ.

**ಗೊಟ್ಟ₁** 'ಕೊಟ್ಟ₁' ನೋ.

**ಗೊಟ್ಟ₂** 'ಕೊಟ್ಟೆ₁' ನೋ.

**ಗೊಟ್ಟ₃** 'ಗೊಂಟು' ನೋ.

**ಗೊಟ್ಟ₄** 'ಗೊಡ್ಡು₁' ನೋ.

**ಗೊಟ್ಟ₅** 'ಕೊಟ್ಟ₆' ನೋ.

**ಗೊಟ್ಟ₆** 'ಕೊಟ್ಟ₇' ನೋ.

**ಗೊಟ್ಟ₇** (ನಾ). ಒಂದು ಬಗೆಯ ಔಷಧಿಗಿಡ : "ತನುಚ್ಛಾಯಾ-ಗೊಟ್ಟ, ಜಾಲಿ" (ಒಷಧಿ. ೬೫); ಪಾರ್ಪಾಲಿ, ಕೊಡಚಿ, ಗೊಟ್ಟ (ವೃಕ್ಷಗಿ. ೭೯-೦೬೩೩). [ ? ]

**ಗೊಟ್ಟಂಗುಡಿ** (ಕ್ರಿ). (ಗೊಟ್ಟದಲ್ಲಿ ಹಾಕಿದಂತೆ) ಬಲವಂತದಿಂದ ಕುಡಿ; ಅತಿಯಾಗಿ ಕುಡಿ (?) : ಪುಡಿಯೊಳ್ಪೊರಳ್ಚಿಯುಂ ಮೆಯ್ಯುಡಗಂ ತಿಱಿತಿಱಿದು ತಿಂದು ಗೊಟ್ಟಂ [ಪಾಠಾಂ. ಲ್ಲಂ] ಗುಡಿದುಂ ನೆತ್ತರನೆಂತುಂ ಹಿಡಿಂಬರಿಪು ತಣಿದನಿಲ್ಲ ದುಶ್ಶಾಸನನಂ (ಗದಾಯು. ೫-೩).

[ ಗೊಟ್ಟ₁ (<ಕೊಟ್ಟ₁) + ಕುಡಿ₁ ]

**ಗೊಟ್ಟಂಗುಡಿಯಿಸು** (ಕ್ರಿ). ಗೊಟ್ಟದ ಮೂಲಕ ಕುಡಿಸು ; ಬಲವಂತವಾಗಿ ಬಾಯಿಗೆ ಹೊಯ್ಯು : ಕರಮೆ ಕರಗಿಸಿದ ಕಾಳಾಯಸರಸಮನೊಟ್ಟಯಿಸಿ ಗೊಟ್ಟಂಗುಡಿಯಿಸುತ್ತೆ (ಅಜಿಪು. ೧೧-೧೦ ವ).

[ ಗೊಟ್ಟ₁ (<ಕೊಟ್ಟ₁) + ಕುಡಿಯಿಸು ]

**ಗೊಟ್ಟಂಗೊಳ್** (ಕ್ರಿ). (ನೀರು ತುಂಬಿದ) ಮರದ ಪಾತ್ರೆಯನ್ನು ತೆಗೆದುಕೊಳ್ಳು : ಅಂತು ತೇಗಿ ಗೊಟ್ಟಂಗೊಂಡು ಕೈದೊಳೆದು ಗೃಹೀತ ತಾಂಬೂಲನಾಗಿ ಸಂತೋಷಂಬಟ್ಟು (ದಶಕು. ೧೨-೧೩೧ ವ).

[ ಗೊಟ್ಟ₁ (<ಕೊಟ್ಟ₁) + ಕೊಳ್₁ ]

**ಗೊಟ್ಟಂಗೊಱೆ** (ಕ್ರಿ). (ಗೊಟ್ಟದ ಒಳಗಿನ ರಂಧ್ರದಂತೆ) ದೊಡ್ಡ ರಂಧ್ರವಾಗುವ ಹಾಗೆ ಟೊಳ್ಳುಮಾಡು : ಸೀಳ್ವ ಪೊಟ್ವ ಪರವುವ ಗೊಟ್ಟಂಗೊಱೆವ . . . ಪೆಱವುಮುಗುರ್ವಪ್ಪ ಚಿತ್ರವಿಧ ವಧೆಯಿಂದಂ (ಶಾಂತಿಪು. ೭-೯೧) : ಪಲ್ಗಳಂ ನುರ್ಗುರ್ಗುಟ್ಟುವುದುಂ ಕೈಗಳಂ ಗೊಟ್ಟಂಗೊಱೆವುದುಂ (ಸುಕುಮಾ. ೧೧-೪೭ ವ). [ ಗೊಟ್ಟ₁ (<ಕೊಟ್ಟ₁) + ಕೊಱೆ₁ ]

**ಗೊಟ್ಟಕೆರೆ** (ನಾ). ನೀರು ಪೂರ್ತಿಯಾಗಿ ಬತ್ತಿಹೋಗಿರುವ ಕೆರೆ : ಕಟ್ಟವರಿಗೂ ಅಳಿದವರಿಗೂ ಗೊಟ್ಟಕೆರೆ ತವರಮನೆ (ಗಾದೆ).

[ ಗೊಟ್ಟ₄ (<ಗೊಡ್ಡು₁) + ಕೆರೆ₂ (<ಕೆಱೆ) ]

**ಗೊಟ್ಟಕ್ಕಿ** 'ಗೊಟ್ಟಚ್ಚಿ' ನೋ.

**ಗೊಟ್ಟಗುಣಿ₁** 'ಗೊಟ್ಟುಗುಂಟಿ' ನೋ.

**ಗೊಟ್ಟಗುಣಿ₂** (ನಾ). (ಉಕ) ನೀರು ಪೂರ್ತಿಯಾಗಿ ಒಣಗಿದ ಕುಳಿ,-ಹೊಂಡ. [ ಗೊಟ್ಟ₄ (<ಗೊಡ್ಡು₁) + ಕುಣಿ₂ (<ಕುಟ್ಟಿ) ]

**ಗೊಟ್ಟಚ್ಚಿ, ಗೊಟ್ಟಕ್ಕಿ, ಗೊಟ್ಟಚ್ಚೆ** (ನಾ). ಒಂದು ಬಗೆಯ ಗಿಡ ; ನೆಲಬೇವು : "ಗೌರಿ ಗೊಟ್ಟಚ್ಚಿ [ಪಾಠಾಂ. ಕ್ಕಿ, ಚ್ಚೆ] ಪನ್ನಂಗಿಯೆನೆ ನೆಲಬೇವು": (ಮಂಗರಾ. ೪೯-೪೫). **ಗೊಟ್ಟಕ್ಕಿ :** ಲೊಕ್ಕಿ ಗೊಟ್ಟಕ್ಕಿ ದಿಂಡಂ ಚಿರಬಿಲ್ವಂ ಬ್ರಹ್ಮವೃಕ್ಷಂ ಕಱಿಕೆ ತಱಿಯದಿಂದೊಪ್ಪುತಿರ್ದತ್ತರಣ್ಯಂ (ಗಿರಿಕ. ೧-೭೨) ತುಂಬುರ ಬನ್ನಿ ಗೊಟ್ಟಕ್ಕಿ ದಿಂಡ (ರುಕ್ಮಾಂಗ. ೯-೩೬). **ಗೊಟ್ಟಚ್ಚೆ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ ? ]

**ಗೊಟ್ಟಚ್ಚೆ** 'ಗೊಟ್ಟಚ್ಚಿ' ನೋ.

**ಗೊಟ್ಟವಾಡಿ** (ನಾ). ಒಂದು ಸ್ಥಳದ ಹೆಸರು ; ನಂಜನಗೂಡು ತಾಲ್ಲೂಕಿನ ಈಗಿನ ಗಟ್ಟವಾಡಿ: ಗೊಟ್ಟವಾಡಿಯ ಶಲಭಯರ ಹೊಯ್ಸಳಗಾವುಣ್ಣ (ಎಕ. III, ನಂಜನ. ೯೯-೫ ; 898).

[ ಗೊಟ್ಟ₀ + ವಾಡಿ₁ (<ಪಾಡಿ₁) ]

**ಗೊಟ್ಟಾಟ** 'ಗೊಡ್ಡಾಟ' ನೋ.

**ಗೊಟ್ಟಿ₁, ಗೋಷ್ಠಿ** (ನಾ). ೧. ಜೊತೆ ; ಒಡನಾಟ ; ಸಾಹಚರ್ಯ : "ಸಂಗತಿಯೊಳಕ್ಕು ಕವಿಜನಪುಂಗವರಿಂ ಗೊಟ್ಟಿ ಗೋಷ್ಠಿಯೆನುತುಂ ಬುವಿಯೊಳ್" (ಕವಿಕಂ. ೨೨೪) ; ಕೆಳೆಯುಂ ಗುಱಿಯುಂ ಗೊಟ್ಟಿಯುಮಳವಿಗೆ ಪಿರಿದಾಗೆ ತನಗೆ ದುರ್ಯೋಧನನೊಳ್ (ಪಂಪಭಾ. ೨-೫೮) ; ಬಸನಿಗಳ ಗೊಟ್ಟಿ ತನಗಾಗಿಸೆ ಸಂತಸದೊದವನುತ್ತಮರ ಗೊಟ್ಟಿ ಕರಂ ಕಸರಿಸಿದಿರ್ದೆಯನೇಂ ಸೊಗಯಿಸುಗುಮೆ ಚೋರಂಗೆ ಚಂದ್ರಿಕಾವಿಸ್ತಾರಂ (ವರ್ಧಪು. ೨-೩೫). ೨. ಕೂಟ; ರತಿಕ್ರೀಡೆ: ಒರ್ವಳ ಮೊಗದ ಸುಣ್ಣಂಗಂ ಕಣ್ಣ ಬೆಳ್ಪಿಂಗ ಮೊತ್ತೆಯಿಟ್ಟು ಗೊಟ್ಟಿಗಿರಲ್ಪೋಗಿ ಪರಿತಂದು (ಲೀಲಾವ. ೨-೧೦೭ ವ). ೩. ಗುಂಪು; ಸಮೂಹ; ಸಭೆ: ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯ ಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರ್ (ಪಂಪಭಾ. ೪-೨೯) ; ಚಟ್ಟೞಿದು ಘಟಮನರ್ಚಿಸಿ ನೆಟ್ಟನೆ ಪೊಸಪೂಗಳಿಂದಮನಿತುಂ ಮಧುವಿಂ ಬೊಟ್ಟಿಟ್ಟು ಮದ್ಯಪಾನದ ಗೊಟ್ಟಿ[ಪಾಠಾಂ. ಗೋಷ್ಠಿ]ಗೆ ಚಷಕಮನೆ ಕೊಂಡು ಕಾಂತೆಯರೆಸೆದರ್ (ಸುಕುಮಾ. ೧೧-೧೫೮); ಹುರುಡಿನ ಮನೆ ಹೋರಟೆಯ ನಿಕೇತನ ಗರುವರ ಗೊಟ್ಟಿ ಗಾವಿಲರ ನೆರವಿಯಿಲ್ಲದ ಗಣಿಕೆಯರಾವಾಸ ಗಳ್ನಿರುಪಮವೆನಲೊಪ್ಪುತಿಹವು (ಅಂಜಜ. ೩-೯೩). ೪. ಮಾತುಕತೆ ; ಸರಸಸಲ್ಲಾಪ ; ಹರಟೆ: ಅನ್ನೆಗಂ ಕಾಷ್ಠಕೂಟನೆಂಬ ಬೆಸದವಂ ಪುಳ್ಳಿಯ ಪೊಱೆಯಂ ಪೊತ್ತು ಪೊಲಲ್ಗೆ ವರ್ಪೊನಂ ಕಂಡಾತನೊಡನೆ ಗೊಟ್ಟಿಯೊಳ್ ಬಂದು (ವಡ್ಡಾರಾ. ೬೬-೨೪) ; ಕಣ್ಣಱಿದು ಗೊಟ್ಟಿಗೆಯ್ವ ಗೊಟ್ಟಿಗಂ ಬಗೆಯಱಿದು ನಗುವ ನಗೆಗಂ . . . ಮನಂಬೆಚ್ಚು ಪತ್ತೆಪೊಯ್ದಂತಾಗಿರೆ (ಶಾಂತಿಪು. ೩-೫೯ ವ) ; ನಾನಾರತ್ನದಿನೊಪ್ಪುಗುಂಪಾನಾಡಕ್ಕರದ ಗೊಟ್ಟಿಯಿಂ ಪಂಡಿತರಿಂ (ಬೊಂಕಶಾ. ೧೯೪೪. ಬಂಕಾಪುರ. ೨೧-೧೫ ; 1069). **ಗೋಷ್ಠಿ :** ೫. (ಕರಾ) ಉಸಾಬರಿ ; ಗೊಡವೆ : ನಮಗೆ ಅವರ ಗೋಷ್ಠಿಯೇ ಬೇಡ (ರೂಢಿ). ೬. ಸಾರ್ವಜನಿಕ ಕೆಲಸಗಳಿಗಾಗಿ ಕೊಟ್ಟ ದತ್ತಿ, ದಾನಗಳ ವಿನಿಯೋಗವನ್ನು ನೋಡಿಕೊಳ್ಳುವ ವ್ಯಕ್ತಿ ; ಧರ್ಮದರ್ಶಿ : ನಾಗದೇವನೀ ಧರ್ಮದೊಳ್ ಗೋಷ್ಠಿ ಆದೋವ್ (ಎಇ. VII, ೨೦೦-೨೨ ; 865).

**ಗೊಟ್ಟಿಗೆವರ್**=ಗೋಷ್ಠಿಗೆ ಬರು ; ಜತೆಗಾಗಿ ಬರು : ಒಂದೆಡೆಯೊಳ್ ನಾಲ್ವರಯ್ವರ್ ಗಾಟ್ಗೊಟ್ಟಿರ್ದಲ್ಲಿಗೊರ್ವನೆಗ್ಗಂ ಗೊಟ್ಟಿಗೆವಂದು ಕಣ್ಣೆಱಿಯದೆ ಸೋಂಕೆಯುಂ (ಪಂಪಭಾ. ೪-೯೫ ವ). [<ಸಂ. ಗೋಷ್ಠೀ]

**ಗೊಟ್ಟಿ₂** 'ಕೊಟ್ಟಿ₇' ನೋ.

**ಗೊಟ್ಟಿಗಾಣ** (ನಾ). ೧. ಮೇಳಸಂಗೀತ; ಗೋಷ್ಠಿಗಾನ: ಲತಾಗೃಹಮಿಲ್ಲದ ಗೊಟ್ಟಿಗಾಣಮಿ[ಪಾಠಾಂ. ರಿ]ಲ್ಲದ ಕಡೆಪಟ್ಟ ಸೂಳೆವನೆಯಿಲ್ಲದವಿಲ್ಲವು ಸೂಳೆಗೇರಿಯೊಳ್ (ಮಲ್ಲಿಪು. ೨-೫೭) : (ಸೂಕ್ತಿಸು. ೪-೦೩೫ ನೋ). ೨. ಗೋಷ್ಠಿಗಾನದಲ್ಲಿ ಭಾಗವಹಿಸುವವನು : ಗೊಟ್ಟಿಗಾಣರಂತಿರೆ ಮಱಿದುಂಬಿ ಮೇಳದವರಂತಿರೆ ಸಾರಿಕೆ ರಾಜಗೇಹದಂತಿರೆ ಕೊಳನಲ್ಲಿ ತಾಮರಸರಂತಿರೆ ತಾಮರಸಂಗಳೊಪ್ಪುಗುಂ (ಪಂಪಭಾ. ೩-೫೮).

[ಗೊಟ್ಟಿ₁ + ಗಾಣ₃]

**ಗೊಟ್ಟಿಗಾಳೆಗ** (ನಾ). ಗುಂಪುಗಾಳಗ; ತಂಡಯುದ್ಧ : ಪೊಳ್ತನಿತನಂತರಂ ಪೊಳ್ತೇರೆ, ಪೊಳ್ತರೆಯ ಕದಿರುಗಳೆಟ್ಟಣಿಸಿದ್ದೆಕಿಲಿಗೆ ಗೊಟ್ಟಿಗಾಳೆಗವಾಗಿ, ಸೋಲ್ದು ಮಂಜಿನ ಸೇನೆ (ಶ್ರೀರಾಮಾ. ೨೦೦-೦೬೫).

[ಗೊಟ್ಟಿ₁ + ಕಾಳೆಗ]

**ಗೊಟ್ಟಿಗಾಱ** (ನಾ). ಗೋಷ್ಠಿಗೆ ಸಂಬಂಧಿಸಿದವನು ; ಸಂಗೀತ, ನಾಟ್ಯ ಮುಂತಾದ ವಿನೋದ ಗೋಷ್ಠಿಗಳನ್ನು ಏರ್ಪಡಿಸುವವನು ಅಥವಾ ಅದರಲ್ಲಿ ಭಾಗವಹಿಸುವವನು : ಗರುವರ ಗೊಟ್ಟಿಗಾಱ [ಪಾಠಾಂ. ಣ]ರ ನೆಗಟ್ತೆಯ ಮಿಂಡರ . . . ಆಗರಮೆನೆ ಪೆಂಪು ಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್ (ಕಬ್ಬಿಗಕಾ. ೪೨).

[ಗೊಟ್ಟಿ₁ + -ಗಾಱ (<-ಕಾಱ)]

**ಗೊಟ್ಟಿಗೆ₁** (ನಾ). ೧. ಸಭೆ ; ಗೋಷ್ಠಿ : ಆಮುಮೊಂದುದಿವಸಮಾತನಂ ಪರಸಲ್ ಪೋಗಿ ಗೊಟ್ಟಿಗೆಯೊಳ್ ಕುಳ್ಳಿರೆ ಗೊಟ್ಟಿಗೇಯಮಾಗೆ (ಶಾಂತಿಪು. ೨-೨೦ ವ). ೨. ಒಂದು ಬಗೆಯ ಆಟ : ಉಯ್ಯಾಲೆ ಜೋಜೋ ಅಳವಾಳ ಗೊಟ್ಟಿಗೆ ಅಟ್ಟಿಗೆ ಮುಟ್ಟಿಗೆ (ವಿಶ್ವೋಸು. ೧೯-೩).

[<ಸಂ. ಗೋಷ್ಠಿಕ]

**ಗೊಟ್ಟಿಗೆ₂** 'ಗೋಟಿಗೆ' ನೋ.

**ಗೊಟ್ಟಿಗೆಯ್** (ಕ್ರಿ). ೧. ಸಭೆ ಸೇರು ; ಗೋಷ್ಠಿ ನಡೆಸು. ೨. ಸರಸಸಲ್ಲಾಪವನ್ನು ಮಾಡು : ಕಣ್ಣಱಿದು ಗೊಟ್ಟಿಗೆಯ್ವ ಗೊಟ್ಟಿಗಂ . . . ಮನಂಬೆಚ್ಚು ಪತ್ತೆ ಪೊಯ್ದಂತಾಗಿರೆ (ಶಾಂತಿಪು. ೩-೫೯ ವ) ; ಅಂತಾತನಂ ಮೇಳಿಸುತ್ತ ಮಂಗಡಿಗಳೊಳಮರಮನೆಗಳೊಳಮಾಟಪಾಟದೆಡೆಗಳೊಳಂ ಪರಿಚಯದಿಂ ಶೃಂಗಾರಕಥಾರಸದೊಳಂ ಗೊಟ್ಟಿ [ಪಾಠಾಂ. ಗೋಷ್ಠಿ] ಗೆಯ್ಯುತ್ತಂ (ಬಂಹರಿ. ೩-೩೦ ವ). [ಗೊಟ್ಟಿ₁ + ಕೆಯ್₁]

**ಗೊಟ್ಟಿಗೇಯ** (ನಾ). ಮೇಳಗಾನ ; ಸಮೂಹಗಾನ : ಆಮುಮೊಂದು ದಿವಸಮಾತನಂ ಪರಸಲ್ ಪೋಗಿ ಗೊಟ್ಟಿಗೆಯೊಳ್ ಕುಳ್ಳಿರೆ ಗೊಟ್ಟಿಗೇಯಮಾಗೆ (ಶಾಂತಿಪು. ೨-೨೦ ವ). [ಗೊಟ್ಟಿ₁ + ಗೇಯ]

**ಗೊಟ್ಟಿರ್** (ಕ್ರಿ). ಗೋಷ್ಠಿಯಲ್ಲಿರು; ಜತೆಯಲ್ಲಿರು ; ಸಹವಾಸಮಾಡು: ನೆರೆದೆಮ್ಮೊಳಂತು ಸದ್ಭಾವದೆ ಗೊಟ್ಟಿರಲ್ ಬಯಸಿ ಬಂದೆಯದೀಗಳಿದೊಳ್ಳಿತಾಯ್ತು (ಪಂಪಭಾ. ೪-೯೬). [ಗೊಟ್ಟಿ₁ + ಇರ್₁]

**ಗೊಟ್ಟು₁** 'ಗೊಡ್ಡು₁' ನೋ.

**ಗೊಟ್ಟು₂** 'ಕೊಟ್ಟಿ₁' ನೋ.

**ಗೊಟ್ಟುಕಾಲ** (ನಾ). ಮಳೆಯಿಲ್ಲದಿರುವ ಕಾಲ; ಅನಾವೃಷ್ಟಿ; ಬರಗಾಲ: (+). [ಗೊಟ್ಟು₁ (<ಗೊಡ್ಡು₁) + ಕಾಲ]

**ಗೊಟ್ಟುಗಟ್ಟು** (ಕ್ರಿ). ಒಣಗಿಹೋಗು ; ಮುರುಟಿಹೋಗು ; ವ್ಯರ್ಥವಾಗು : ಮದನನ ಕೆಯ್ದುಕೆಯ್ದು ಕರಶಾಪೆ ಮುರುಂಟಿದುದೆಯ್ದೆ ಗೊಟ್ಟುಗಟ್ಟಿದುದು ಸರಲ್ಗೆ ಬೀಗಿ ನನೆದೋಱುವ ಪೂಗುಡಿ . . . ರಾಮಚಂದ್ರಮುನಿನಾಥನ ಶಾಂತಿರಸಾತಿರೇಕದಿಂ (ಅನಂಪು. ೧-೨೪).

[ಗೊಟ್ಟು₁ (<ಗೊಡ್ಡು₁) + ಕಟ್ಟು₁]

**ಗೊಟ್ಟುಗುಳಿ** 'ಗೊಟ್ಟುಗುಟಿ' ನೋ.

**ಗೊಟ್ಟುಗುಟಿ**, ಗೊಟಗುಣಿ, ಗೊಟ್ಟಗುಣಿ₁, ಗೊಟ್ಟುಗುಳಿ (ನಾ). ಒಂದು ಬಗೆಯ ಆಟ ; ಅಟ್ಟುಗುಳಿ ಆಟ : ಚದುರಂಗದ ನೆತ್ತದ ಗೌರವದ ಗೊಟ್ಟುಗುಟಿಯುಂ ಮುಟ್ಟಂ ಮನೆಯೊಳ್ ಪದೆದಿರಿಸುಗೆ ತಾನುಂ ಕಲ್ತುದು ಗಣಿಕೆಗಮುದನೆ ಕಲಿಪುದತಿನಯದಿಂದಂ (ಮದತಿ. ೦೦-೩೦) ; ಅಟ್ಟುಗೂಟು ಗೊಟ್ಟುಗುಟಿ ಮೊದಲಾಗೆಸೆವೊಟ್ಟುಗೆಳೆಯನೊಡಗೂಡಿ ಪುಟ್ಟದಂದು ಮೊದಲಾಗಿ ಮಾಡುವ ಸಖಿ ನಿಟ್ಟಿಸಿ ನುಡಿದಳಿಂತೆಂದು (ಅಂಜನಾ. ೫-೦೪೬). **ಗೊಟಗುಣಿ**: ಹಗಲೆಲ್ಲ ಬೀದಿಯ ಮುಂದುಕಿಯರೊಡನೆ ಚವಂಗ, ಗೊಟಗುಣಿ ಆಡುವುದೇ ಅಜ್ಜಿಯ ಕೆಲಸ (ನದೀಪ. ೭೯). **ಗೊಟ್ಟಗುಣಿ₁** : ಹುಡುಗಾಟ ಗೊಟ್ಟಗುಣಿ ಕುರಿಕಳ್ಳ . . . ಬಲುಪರಿ ಒಂದೊಂದು ಬಾಲಾಟದಲ್ಲಿ ನಲಿದು (ವಿಶ್ವೋಸು. ೧೯-೩). **ಗೊಟ್ಟುಗುಳಿ**: ಏಣಾಕ್ಷಿಯರೊರ್ವಳಾಡುವ ಗೊಟ್ಟುಗುಳಿಯ ಕಟ್ಟಾಣಿ ಮುತ್ತುಗಳೊಪ್ಪಿದುವು (ಜಂಪ್ರಸಾಂ. ೧೮-೯೯). 'ಅಟ್ಟುಗುಳಿ' ಪರಾ.

[ಗೊಟ್ಟು₂ (<ಕೊಟ್ಟು₁) + ಕುಟಿ₂]

**ಗೊಟ್ಟುವಳ್ಳ** (ನಾ). ಒಣಗಿಹೋದ ಗುಂಡಿ,-ಹಳ್ಳ : ಅಂತವಳಣುಗನಂ . . . ಮಡಿಪಿ ಕಾಲ್ಗಿಡಿದು ಸರಸರನೆಳೆದಾರುಮಱಿಯದಂತೊಂದು ಗೊಟ್ಟುವಳ್ಳದೊ[ಪಾಠಾಂ. ಗೊಂಟಿನೊ, ಗೋಂಟುವಳ್ಳದೊ]ಳಿಕ್ಕಿ ಪುಲ್ಲಂ ಕವಿಸುತಾಗ್ನೇಯಸ್ನಾನಮೆಸಗಿ (ವೃಷಪು. ೦೪-೮೦ ವ).

[ಗೊಟ್ಟು₁ (<ಗೊಡ್ಡು₁) + ಪಳ್ಳ]

**ಗೊಟ್ಟೆ₁** 'ಕೊಟ್ಟೆ₁' ನೋ.

**ಗೊಟ್ಟೆ₂** 'ಗೊಡ್ಡು₁' ನೋ.

**ಗೊಟ್ಟೆ₃** (ನಾ). (?) : ಜಗಭಗದ ಊರ್ಧ್ವದಲ್ಲಿ ಮೋಹನದ ಗೊಟ್ಟೆ ಹುಟ್ಟಿತ್ತು, ಗೊಟ್ಟೆಯ ಪೂರ್ವದಲ್ಲಿ ಕಮಲವರಳಿತ್ತು ಕಮಲಹೃತ್ಕಮದಲ್ಲಿ ಬಿಂದುವೆ ವ್ಯಂಜನದಿಂದ ಗುರುಲಿಂಗರೂಪಾಗಿ ಪುಲ್ಲಿಂಗ ಚರಿಸಿತ್ತು (ದಾಸೋಸಂ. ೫೫). 'ಕೊಟ್ಟೆ₁' ಪರಾ. [?]

**ಗೊಟ್ಟೆಗಡಿ** (ನಾ). ಒಂದು ಗ್ರಾಮದ ಹೆಸರು: ಪಶ್ಚಿಮತಃ ಮುಕ್ಕೊಡಲ್ ನಾಮಗ್ರಾಮಃ ಉತ್ತರತಃ ಗೊಟ್ಟೆಗಡಿ ನಾಮಗ್ರಾಮಃ (ಮೈಆರಿ. ೧೯೩೫, ೪೦-೭೦ ; 951) ; ಗೊಟ್ಟೆಗಡಿಯ ಭದ್ರಯ್ಯನ ಕಾಲ ಕನ್ನಯ್ಯ ಕಟ್ಟಿದ (ಎಕ. VIII, ಸೊರಬ. ೪೪-೦೦ ; 971). [ಗೊಟ್ಟೆ₀ + ಗಡಿ₁]

**ಗೊಟ್ಟೆಗೆಱೆಪಳ್ಳ** (ನಾ). ಒಂದು ಹಳ್ಳದ ಹೆಸರು : ದಕ್ಷಿಣತಃ ಪರದಗೆಱೆಪಳ್ಳಂ . . . ಉತ್ತರತೋ ಗೊಟ್ಟೆಗೆಱೆಪಳ್ಳಂ (ಮೈಆರಿ. ೧೯೪೪, ೦೫-೪೦ ; 725). [ಗೊಟ್ಟೆಗೆಱೆ₀ + ಪಳ್ಳ]

**ಗೊಟ್ಟೆಯಣ್ಣಗಾವುಂಡ** (ನಾ). ಒಬ್ಬಾತನ ಹೆಸರು : ಗೊಟ್ಟೆಯಣ್ಣಗಾವುಣ್ಣನೂರಳವಿನೊಳು ಕಾದಿ ಸತ್ತು ಸ್ವರ್ಗಸ್ತನಾದ (ಎಕ. IX, ಚನ್ನಪ. ೦೫೯-೪ ; ಸು. 904 ?).

[ಗೊಟ್ಟೆಯಣ್ಣ₀ + ಗಾವುಂಡ (<ಗಾಮುಂಡ)]

**ಗೊಟ್ಟೆವಡ್ಡಿ** (ನಾ). ಒಂದು ಸ್ಥಳದ ಹೆಸರು: ಗೊಟ್ಟೆವಡ್ಡಿಯ ಗೋವುಣ್ಣುಗಳಂ ಸಲಾಂಭ್ಯೆಯರುಂ ಆನೆಯರು ಕೂಡಿ ಗೊವುಣ್ಣುಂಗೆಯ್ದುವದರ್ಕೆ (ಎಕ. III, ನಂಜನ. ೦೯೯-೬ ; ?). [?]

**ಗೊಟ್ಟೆಱೆಯ** (ನಾ). ತುರುಂಹಟ್ಟಿಯ ಯಜಮಾನ (?) : ಗೊಟ್ಟೆಱೆಯರಮ್ಮಲಕೆ ಕೊಟ್ಟುದು ಆಯ್ದೂಮ್ಮು ಕಟನಿ (ಮೈಆರಿ. ೧೯೨೬, ೧೦೦-೮ ; ೨ನೆಯ ಶತ). [ಗೊಟ್ಟ₆ (<ಕೊಟ್ಟ₇) + ಎಱೆಯ]

**ಗೊಡಗು**, ಗೊಡಂಗು (ನಾ). ೧. (ಬಾವಿಯ ಅಥವಾ ಹಗೇವಿನ ಒಳಗೆ ಆಗಿರುವ) ಡೊಗರು : (+). ೨. ಗುಂಡಿಯಲ್ಲಿ ನಿಂತಿರುವ ನೀರು ; ಬಗ್ಗಡ : ದನಕ್ಕೇಕೆ ತಿಳಿನೀರು ಎಂದು ರಾಡಿನೀರನ್ನೂ ಗೊಡಗನ್ನೂ ಕುಡಿಸಬಾರದು (ಗೋಗ್ರಾಸ. ೩೮). **ಗೊಡುಗು** : (+). [?]

**ಗೊಡಚಿ₁** 'ಕೊಡಂಚಿ' ನೋ.

**ಗೊಡಚಿ₂** (ನಾ). ಕಣ್ಣುಗುಡ್ಡೆಯ ಮೇಲೆ ದುರ್ಮಾಂಸ ಬೆಳೆಯುವ ಒಂದು ಬಗೆಯ ರೋಗ. 'ಗೊಡಚಿಗಣ್ಣು' ನೋಡಿ. [ ? ]

**ಗೊಡಚಿಗಣ್ಣು** (ನಾ). ದುರ್ಮಾಂಸ ಅಥವಾ ಗ್ರಂಥಿ ಬೆಳೆದ ಕಣ್ಣು : (+). [ ಗೊಡಚಿ₂ + ಕಣ್ಣು (<ಕಣ್) ]

**ಗೊಡಚಿಗಿಡ** (ನಾ). ಕೊಡಚಿಯ ಗಿಡ : (+). [ ಗೊಡಚಿ₁ (<ಕೊಡಂಚಿ) + ಗಿಡ (<ಗಿಡು) ]

**ಗೊಡಣಿಸು** (ಕ್ರಿ). ಗುಂಪುಗೂಡು ; ಗಡಣಿಸು (?) : ಪಾಂಡವಬಲಕ್ಕೆ ಸಂತೋಷ ಪೆರ್ಚಿತ್ತು ಕುರುತಂಡ ಚಿಂತಾಕ್ರಾಂತರಾಗಿ ಸರಿದರು ಮಹಾ ಮಂಡಲೇಶ್ವರರು ಮನಮುರಿಗಿ ಕಳವಳಗೊಂಡರೊಳಗೊಳಗೆ ಗೊಡಣಿಸುತ ಚಂಡಭುಜಬಲಮಹಾಟೋಪದಿಂದಾಗ ಮಾರ್ತಾಂಡಸುತನೊಗ್ಗೊಡೆದು ಬಲವ ಕೂಡಿದರು (ಲಕ್ಷ್ಮಭಾ. ೪-೩೩). [<ಗಡಣ? + – ಇಸು₃]

**ಗೊಡಬಿ** 'ಗೊಬಡಿ' ನೋ.

**ಗೊಡಬೆ** 'ಗೊಡವೆ' ನೋ.

**ಗೊಡರು** (ನಾ). ಒಂದು ಅನುಕರಣ ಶಬ್ದ.

**ಗೊಡರುಹಾಕು**=(ಗೂಳಿ ಮುಂತಾದುವುಗಳಂತೆ) ಶಬ್ದಮಾಡು : (+).

**ಗೊಡಲೆ** (ನಾ). ಇಳಿಜಾರು ; ಹಳ್ಳ (?) : ಪಸಲೆಯೊಳ್ಪಸುರೇಱ ಪರಪಿನೊಳ್ಪೊರೆಯೇಱ ಗಿಡುಗಳೊಳ್ ದನಿದೋಱ ಗೊಡಲೆಯೊಳ್ಮೊರೆವೇಱ . . . ಪರಿವ ಬಱವೊನಲೆಸೆದುವೊಱೊಂದು ತಾಣದೊಳ್ (ಅನಂಪು. ೯-೧೬ ರಗಳೆ). [ ? ]

**ಗೊಡವೆ, ಗೊಡಬೆ** (ನಾ). ತಂಟೆ ; ಗೋಜು ; ಉಸಾಬರಿ : ಅಡವಿಯಂ ಪೊಗೆದು ಸುಡುವಗ್ನಿಗಾಪೋಶನದ ಗೊಡವೆಯೇವುದು (ಹಚಕಾ. ೮-೪೫) : ಋಷಿಗೇಕಾಯುಧಂಗಳ ಗೊಡವೆ ಬೇಡೀ ಜನಕಜೆಯನೊಲಿಸುವುದು ಕುಲಯೌವನ ವಿಲಾಸವಿಚಿತ್ರವೈಭವದಿಂದ ನೀವು (ತೊರರಾ. ೧-೦೫-೩೦) : ಮಾತು ಕೇಳದ ಸೊಸೆ ಗೊಡವೆ ತಾನೇಕೆ (ಪುರಂದ. ೦-೫೦-೩) : ಅಕ್ಕಜವ ಮಾಡದಿರಿವಂ ನಿನ್ನ ಮೈವಳಿಗೆ ತಕ್ಕನಲ್ಲಂ ನೀನೊಲಿವ ಗೊಡವೆಯೇಕೆ (ಜೈಮಿಭಾ. ೬-೩೫) : ಅವನ ಗೊಡವೆಯೇಕೆ ಅವನಾರು ನೀನಾರು (ವಿದ್ಯಾಕ್ಕ. ೩೬-೦) : ಊರಿಗೆ ಹೋಗದವರಿಗೆ ದಾರಿ ಗೊಡವೆ ಯಾಕೆ ? (ಗಾದೆ).

**ಗೊಡಬೆ :** ಸಾಲು ಗೊಡಬೆಗೆ ಹೋಗದು ಆಱು ಗೊಡಬೆಗೆ ಬಾರದು ಮೂಱು ಕೂಳಿಗೆ ಸಿಕ್ಕದು ನೋಡಾ (ಸರ್ವವ. ೫೯-೩೧೪).

[ ದೇ.೫ ತುಳು. ಗೊಡವೆ ; ತೆಲು. ಗೊಡವ ]

**ಗೊಡವೆಗೊಳ್** (ಕ್ರಿ). ಯೋಚಿಸು; ಆಸಕ್ತಿ ವಹಿಸು : ನಿನ್ನನ್ನರಪ್ಪ ಕಬ್ಬಿಗರ್ ಮನವಾಱತ್ತಿಯೊಳಿನಿಸೊಂದುಂ ಗೊಡವೆಗೊಳ್ಳದೆ . . . ಏವೊಱೆತ್ತುಂ ಬೆಮೆಗೊಂಡಿರ್ಪರಲೇ (ರಾಮಾಶ್ವ. ೧೧೬-೯). [ ಗೊಡವೆ + ಕೊಳ್₁ ]

**ಗೊಡಿಗ** (ನಾ). (?) : ಗೊಡಿಗರೊಡಂ ಮೂನೂರ್ವ್ವರುಂ ಒಕ್ಕಲುಂ ನಾಱ್ಗಾಮುಣ್ಡನುಂ ಇಟ್ಟು ಕೊಟ್ಟೋರ್ (ಎಇ. XIV, ೧೯೧-೪೬; 725). [ ? ]

**ಗೊಡುಗು** 'ಗೊಡಗು' ನೋ.

**ಗೊಡುಮ** (ನಾ). ಒಬ್ಬಾತನ ಹೆಸರು : ಇದರ್ಕ್ಕೆ ಸಾಕ್ಷಿ ಅಗ್ಗಿ ಸರ್ನ್ನೆವ್ವೆಯ ಗೊರ್ಗ್ಗೆಡುಮರ್ಕ್ಕೆಣ್ಣನ್ದರ್ ಒಮುಚಾರ್ ಎನೆ (ಎಕ. XI, ಚಳ್ಳಕೆ. ೩೩-೪೬; ಶು. 815). [ ? ]

**ಗೊಡೆಗುಟ್ಟು** (ಕ್ರಿ). ಬಾಯಿಪಾಠ ಮಾಡುವುದಕ್ಕಾಗಿ ತಿರುತಿರುಗಿ ಗಟ್ಟಿಯಾಗಿ ಉಚ್ಚರಿಸು ; ಉರುಹಾಕು : ಬಡಬಡಗುಟ್ಟಿ ಬಾಯಾಱೆ ಬಹಳ ಕಾಲ ಗೊಡೆಗುಟ್ಟಿ ಶಾಸ್ತ್ರಗಳಹರ ನಡೆಯು ನಗುತ ಕ್ಷಣದೊಳು ಶಾಸ್ತ್ರವಾರ್ಧಿಯ ಕಡೆಗಂಡ ಕುಶಲನೆಯ್ದಿದನು (ಭರತ. ೭೨-೭೨). [ ಗೊಡೆ₀ + ಕುಟ್ಟು₁ ]

**ಗೊಡೆಗೊಡೆ** (ನಾ). ಒಂದು ಅನುಕರಣ ಶಬ್ದ : ಘುಡುಘುಡಿಸಿ ಎಲ್ಲರೊಂದಾಗಿ ಧೂರ್ತನ ತಲೆಯ ಪೊಡೆಯಬೇಕೆಂದವರು ನುಡಿವುತಿರೆ ಗುರು ಕೇಳಿ . . . ಗೊಡೆಗೊಡೆಯಿದೇತಕ್ಕೆ ಗುರುವಾದ ನಂಬಿರ್ದ ದೃಢಭಕ್ತರ್ರೆ ನೀವು ಗುರುಭಕ್ತಿಹೀನನಾ ಗೊಡವೆಯೇತಕೆ ಬೇಗ ನಡಿಸಿರ್ದ ಶೂಲವನು ತಡೆಯದೇಱುವುದೀಗೆನೆ (ಪ್ರಾಚೀರಾ. ೬-೮).

**ಗೊಡ್ಡು₁** (ನಾ). ೧. ಮೋಸ ; ಕಪಟ ; ಕೃತ್ರಿಮ : ಇಂತಿದು ಕುಸುಮಾಸ್ತ್ರನೆಂಬದಟನಿಕ್ಕಿದ ಸೊರ್ಕಿನ ಗೊಡ್ಡುಮಾಗದೇ (ಶಂಪಭಾ. ೪-೬೦) : ಇದು ನಮ್ಮಾತನ ಗೊಡ್ಡುಮೆಂದು ನುಡಿಯುತ್ತಿರ್ಪನ್ನಂ (ನೇಮಿಪು. ೮-೬೩) : ಶಾಲ್ಮಲಿದತ್ತೆ ನಿದ್ರೆಯಿನೆಟ್ಟಿತ್ತು ವಸುದೇವನನಲ್ಲಿ ಕಾಣದೆ ಪೆಱದಲ್ಲಿರ್ದಾತನ ಗೊಡ್ಡುಮೆಂದು ಬಾಳುಮತ್ತಪರಮುಮಂ ಕೊಂಡು ವಾಯುವೇಗದಿನೆಯ್ದೆ ಪೋಗಲ್ (ಬಂಹರಿ. ೨-೫೬ ವ): ಅಲ್ಲದ ಕುಲದವರ್ಗೀ ಚೆಲ್ವೀ ಭಾಗ್ಯಮುಲ್ಲಸಮೆತ್ತೀ ಚದುರು ಎಲ್ಲಿಯದೆಲೆ ರತಿ ನಿಮ್ಮಾತನ ಗೊಡ್ಡುವಲ್ಲದೆ ಪೆಱತೊಂದಲ್ಲ (ನೇಮಿಸಂ. ೨೦-೯೯). ೨. ತೊಂದರೆ ; ಉಪಟಳ ; ಕೇಡು : ನೋಡರಸಾ ನಿಮ್ಮ ಸವಣರ ಗೊಡ್ಡು [ಪಾಠಾಂ. ಡ್ಡಾಟ]ಮಂ ನಿನ್ನಂ ಕೊಲಲ್ ನೆರೆದಾಯುಧಂಗಳುಂ ಪೊಟ್ಟಿಟ್ಟೋರ್ (ಪದ್ಮಾ. ರಾ. ೧೬೬-೨೫) : ಆಗಳೆ ಪಾಂಡುಪುತ್ರರಯ್ವರುಮಿದು ನಮ್ಮನಾರಯಲೆ ವೈರಿಯ ಮಾಡಿದ ಗೊಡ್ಡುಮಿಲ್ಲಿ ಮಾಣ್ದಿರಲಣಮಾಗ ಪೂಣ್ದಾವಧಿಯುಂ ನೆಱೆದತ್ತು ಕಡಂಗಿ ಕಾದುವಂ ಎಂದು (ಪಂಪಭಾ. ೮-೯೦) : ಎನ್ನ ಕೂಸ ನಿನ್ನುಱೆದೊಡೆ ನಿನ್ನ ಕಯ್ಯೊಳಱೆವೆಂ ಗಡ ನೋಡಿಮಿದೊಂದು ಗೊಡ್ಡುಮಂ (ಲೀಲಾವ. ೨-೬೬).

**ಗೊಡ್ಡುಮಾಡು**=ಕೆಡುಕನ್ನುಂಟುಮಾಡು; ಬಾಧೆ ಕೊಡು: ಗೊಡ್ಡುಮಾಡಿರ್ದ್ದ ತಕ್ಕುದನೀಗಳೆ ಮಾಱ್ಪೆನೆಂದು ತೊಟ್ಟಗೆ ಪೊಱಮಟ್ಟನೇಱ ನಿಜವಾಹನಮಂ ದಿವದಿಂ ಸುರಾಧಿಪಂ (ಪಂಪಭಾ. ೫-೧೦೧).

[ ದೇ.೫ ತೆಲು. ಗೊಡ್ಡು ]

**ಗೊಡ್ಡು₂** (ನಾ). ಪ್ರಯೋಜನವಿಲ್ಲದವನು ; ಕೆಲಸಕ್ಕೆ ಬಾರದವನು ; ಕೈಲಾಗದವನು ; ಅಪ್ರಯೋಜಕ : ಪೊಲಂಬುದಪ್ಪಿ ಕೋಟಲೆಗೊಳಗಪ್ಪ ಪಾಟ್ಮನದ ಮಾನಸರುಂ ಸುಡು ಸಂದ ಗೊಡ್ಡರುಂ (ಚಂದ್ರಪು. ೮-೮೦) : ದ್ರೋಣಾದಿನಾಯಕರು ತರುಬಿ ನಿಂದು ಚಡ್ಡೆಯಿಲ್ಲದೆ ಸರಳುಗಳ್ಸುರಿದು ಬಲುಹೇರಿ ಗೊಡ್ಡಗಳ ತುಳಿದಾಡೆಯಲ್ಲಿರಿಸಿ ಮೆಟ್ಟಿಸುತಲಡ್ಡವಿಸಿ ಸಮಸೀಳುಗಳ್ಸೀಳ್ದು ಬಿಸುಡಿದವು ದಳಗಳ ಮದೇಭಂಗಳು (ತುರಂಗ. ೪೬-೨೩). [ ಗೊಡ್ಡು₁ + – ಅ₆ ]

**ಗೊಡ್ಡುಕಾರ್ತಿ** (ನಾ). ವಂಚಕಿ ; ಮೋಸಗಾತಿ : ಕಾಯದೆ ಕಣ್ಬರಿಯಂ ತಂಗಾಯದೆ ನಿಮಗರಸನಾಣೆಯೆನೆಯೆನೆ ನೃಪತಿಯ ನಾಯಕಿಯೊಳ್ ನೆರೆದಿರ್ದ ಪಸಾಯತರಂ ಗೊಡ್ಡುಕಾರ್ತಿಯರ್ ಪಿಡಿದೆಱೆವರ್ (ಸೂಕ್ತಿಸು. ೧೩-೧೬). [ ಗೊಡ್ಡು₁ + – ಕಾಱ + – ತಿ₁ (< – ಇತ್ತಿ) ]

**ಗೊಡ್ಡಾಕಳ್, ಗೊಡ್ಡಾಕಳು** (ನಾ). ಬಂಜೆಯಾದ ಹಸು ; ಗೊಡ್ಡಾದ ಹಸು : ಕಾಮಧೇನಿರ್ದುಮೂಟಕೆ ಗೊಡ್ಡಾಕಳನಾಳ್ವರೇ (ಸೋಮೇಶ. ೩).

**ಗೊಡ್ಡಾಕಳು :** ಎಲವ ಸುರಭೂಜ ಗೊಡ್ಡಾಕಳೆ ಸುಪರ್ವ ಸುಧೇನು ಪಳುಕಿನ ಶಿಲೆಯೆ ಸುಮನೋರತ್ನ ಕಿಱುಗಲ್ಲೇ ಮಹಾಮೇರು (ತೊರರಾ. ೩-೬-೩೬). [ ಗೊಡ್ಡು₁ + ಆಕಳ್ ]

**ಗೊಡ್ಡಾಕಳು** 'ಗೊಡ್ಡಾಕಳ್' ನೋ.

**ಗೊಡ್ಡಾಚಾರ** (ನಾ). ಪ್ರಯೋಜನವಿಲ್ಲದ ಆಚಾರ ; ಕಂದಾಚಾರ ; ವ್ಯರ್ಥವಾದ ಸಂಪ್ರದಾಯ : ಸೂಳಧರ್ಮ ಗೊಡ್ಡಾಚಾರವಲ್ಲ (ಇಸ್ಲಾಂಸಂ. ೨೪೯). [ ಗೊಡ್ಡು₁ + ಆಚಾರ ]

**ಗೊಡ್ಡಾಟ, ಗೊಟ್ಟಾಟ** (ನಾ). ೧. ನಿರರ್ಥಕವಾದ ಕೆಲಸ ; ನಿಷ್ಫಲವಾದ ವ್ಯವಹಾರ : ಈಗಳ್ ಪ್ರತ್ಯಕ್ಷಂ ನೋಡು ನಿನ್ನ ಮಹಾದೇವ

ಯೊಡನೆ ಗೊಡ್ಡಾಟವಾಡು [ಪಾಠಾಂ. ಗೊಡ್ಡುಮಾಡು]ವುದಂ (ಪಡ್ಮಾರಾ. ೧೭೮-೨); ಅಹುದಹುದು ಭಕ್ತನು ಕಡುಹು ಗೊಡ್ಡಾಟಂಗಳಂ ಕುಪರಿಗಳ ನಾಡಿಹನು (ಬಸಪು. ೨೮-೪೪). ೨. ಉಪದ್ರವ ; ತೊಂದರೆ ; ಕಾಟ : ಯುಧಿಷ್ಠಿರಂ ಕೊಟ್ಟ ನನ್ನಿಯು ಬಲದೊಳ್ ತನಗೆ ಲಯಮಿಲ್ಲದುದನಱಿದು ಮೇಗಿಲ್ಲದ ಗೊಡ್ಡಾ[ಪಾಠಾಂ. ಟ್ಟಾ]ಟಮಾಡಲ್ ಬಗೆದು (ಪಂಪಭಾ. ೬-೪೭); ಗೊಡ್ಡಾಟದ ಮುಸುಗಳೆಸೆದುವಾ ಮುನಿವನದೊಳ್ (ಜಗವಿ. ೧೬-೫೬); ಒರ್ವಳೀ ಬಾಲಕಿ ಬಹುರೂಪುವಡೆದಂತೆ ಸರ್ವರೆದೆಗೆ ಬಂದಳದು ತಾ ಕರ್ವುವಿಲ್ಲನ ಗೊಡ್ಡಾಟವಲಾಯೆಂದು ಉರ್ವೀಶನಚ್ಚರಿವಟ್ಟು (ನೇಮಿಸಂ. ೩-೪೯); ಎಲೆ ಮಾದೇವ ನೀನೆ ಗತಿಯೆಂದಿನ್ನೆಬರಂ ನಂಬಿದರನೀ ಪೊಟಿಸ್ತಿಂಗಿಂತು ಪೊಱ ನೂಂಕಲಕ್ಕುಮೆ! ಏಂ ಗೊಡ್ಡಾಟವೊ! (ರಾಮಾಶ್ವ. ೦೨೬-೨೪). ೩. ಮೋಸ ; ಕಪಟ : ಕಡೆಗೆ ನಿನ್ನ ಗೊಡ್ಡಾಟವೆ ಹೊಲೆಯು ನಾದವನಿನ್ನು ಸತಿಗಿತಿಯು ಕೊಲೆಗೆ ಹೇಸಿ ಬೆನ್ನೀವೆನೇ (ಹಡಕಾ. ೦೪-೦೮).

**ಗೊಟ್ಟಾಟ**: ೨. ಇದೆಲ್ಲ ವಿಾತನ ಗೊಟ್ಟಾಟವಮಲ್ಲ ದುಷ್ಕರ್ಮದ ಗೊಟ್ಟಾಟವೆಂದು ಮನದೊಳೆ ನಕ್ಕು (ಧರ್ಮಾಮೃ. ೧೨-೮೩); ನಿನ್ನ ಗೊಟ್ಟಾ [ಪಾಠಾಂ. ಡ್ಡಾ] ಟವನಱಿದೆನೀ ಗನ್ನಗದಕದೊಳಿದ್ದಡಿರು ನಿನಗುಣ್ಣಿಸಿದ ಬೋನವನದುಣ್ಣದೆ ಹೋದಡೆನ್ನಾಣೆ (ಬಸಪು. ೨೪-೭೫). ೩: (೬).

[ ಗೊಡ್ಡು$_1$ + ಆಟ ]

**ಗೊಡ್ಡಾವು** (ನಾ). =ಗೊಡ್ಡಾಕಳ್ : ಗಡ್ಡವ ಬೆಳೆಯಿಸಿಕೊಂಡು ಮಂಡೆ ಯೊಳೊಂದು ದೊಡ್ಡ ಸುತ್ತನು ಸುತ್ತಿಕೊಂಡು ಗೊಡ್ಡಾವಿನಂತೆ ತಿರುಗುವ ರಾವುತರಿವರಡ್ಡಲಾದಪರೆ ರಾಮನಿಗೆ (ಕುರಾಸಾಂ. ೪೬-೧೬).

[ ಗೊಡ್ಡು$_1$ + ಆವು ]

**ಗೊಡ್ಡಿ$_1$** (ನಾ). ಮಕ್ಕಳನ್ನು ಹೆರದವಳು ; ಬಂಜೆ : ಗೊಡ್ಡಿಗೇನು ಗೊತ್ತು ಹೆರೋ ಸಂಕಟ (ಗಾದೆ); ಗೊಡ್ಡಿ ಹೆರುವುದಿಲ್ಲ ಬೊಡ್ಡಿ ಅಳುವುದಿಲ್ಲ (ಗಾದೆ). [ ಗೊಡ್ಡು$_1$ + – ಇ$_2$ ]

**ಗೊಡ್ಡಿ$_2$** (ನಾ). ೧. ಅಸಮರ್ಥ. ೨. (ಉಕ) ವಿದೂಷಕ ; ಕೋಡಂಗಿ : ಸರ್ಕಸಿನಲ್ಲಿಯ ಗೊಡ್ಡಿಗಳ ಹಾಗೆ ನಕಲಿ ಅಭಿನಯಮಾಡುತ್ತ (ಜ್ವಾಲಾಮೀ. ೮೯). [ ಗೊಡ್ಡು$_1$ + – ಇ$_3$ ]

**ಗೊಡ್ಡಿಡು** (ಕ್ರಿ). ಜೊಳ್ಳಾಗು ; ಬರಡಾಗು ; ಫಲವಿಲ್ಲದಾಗು : ನಸಿದು ಬೆಳೆಯದೆ ಕೊಬ್ಬಿ ಗೊಡ್ಡಿಡದ [ಪಾಠಾಂ. ದೊಡ್ಡಿತಹ] ತೆನೆಗಳೊಳು ನಸುಗೆಂಪಿನಿಂ ಬೀಗಿ ಬಾಗಿ ತೂಗುವ ಚೆಲುವ ಹೊಸ ಹಾಲ ಹನಿಗಳಡದು ತೆಱದ ತೆನೆಗಳಂ ತಿಱಿತಿಱಿದು ತಂದು ತಂದು (ಸಿದ್ಧರಾ. ೨-೨೯).

[ ಗೊಡ್ಡು$_1$ + ಇಡು$_1$ ]

**ಗೊಡ್ಡು$_1$**, ಗುಡ್ಡು$_3$, ಗೊಟ್ಟ$_4$, ಗೊಟ್ಟು$_1$, ಗೊಟ್ಟೆ$_2$ (ನಾ). ೧. ಗಬ್ಬ ವಾಗದ ಹಸು, ಎಮ್ಮೆ ಮೊದಲಾದುವು : ಕಱವಾವಂ ಪೊರೆಯದೆ ಗೊಡ್ಡಂ ಪೊರೆವಂತೆ (ಧರ್ಮಾಮೃ. ೦೩-೧೧೦); ಮೂಱುಟ್ಟರಾಱಕ್ಕು ಆಱು ಹನ್ನೆರಡಕ್ಕು ಹೇಱುವ ಗೊಡ್ಡು ಹಯನಕ್ಕು ಕರ್ಮ ತಾ ಹಾಱುವ ದಿನಕೆ (ಸರ್ವಜ್ಞ. ೮೯೩).೨. ಬಂಜೆ; ಬರಡು: ಚರಿಪಾರಣ್ಯದ ಪಕ್ಷಿಗೊಂದು ತರು ಗೊಡ್ಡಾಗಲ್ ಫಲಂ ತೀವಿದಾ ಮರಗಳ್ ಪುಟ್ಟವೆ (ಸೋಮೇಶ. ೨೬); ಸುರಧೇನು ನೆಱೆ ಗೊಡ್ಡಾಯ್ತು ಸುರತರು ಕಾಡ ಮರನಾಯ್ತು (ಕುಮಾರವ್ಯಾ. ೧೯-೫೨); ನಿಮ್ಮಂಥ ಮಕ್ಕಳನ್ನು ಹೆರುವುದಕ್ಕಿಂತ ಗೊಡ್ಡಾ ಗಿದ್ದಿದ್ದರೆ ಮೇಲಾಗಿತ್ತು (ಮಹಾಗ. ೧೬೩). ೩. ಮೋಸ; ವಂಚನೆ. ‘ಗೊಡ್ಡೆಱಗು’, ‘ಗೊಡ್ಡೇಱು’ ಪರಾ. ೪. (ಆಲಂ) ಅಂತಸ್ಸಾರ ವಿಲ್ಲದವನು ; ನಿರ್ವೀರ್ಯ : ನಗೆಯೊಳಗಡ್ಡಬಿದ್ದಳು ಪಾಂಡುಪುತ್ರರ ಬೊಡ್ಡಿ ಬಿಂಕದಲವರು ಬಿರಿದರು ಭೀಮ ಫಲುಗುಣರು . . . ರೋಷದ ಗೊಡ್ಡು ನಾನಾದೆನು (ಕುಮಾರವ್ಯಾ. ೦೨-೪೩). ೫. (ಆಲಂ) ಕಂದಾಚಾರದಲ್ಲಿ ನಿಷ್ಠ : ನೀನೊಂದು ಗೊಡ್ಡು ಇದೊಂದೂ ಓದೋಲ್ಲ (ಅನಾಮಿ. ೫೨). ೬. ಹುಸಿ ; ಸುಳ್ಳು. ‘ಗೊಡ್ಡುಬೆದರಿಕೆ’ ಪರಾ.

**ಗುಡ್ಡು$_3$** : ೬. ‘ಗುಡ್ಡುಬೆದರಿಕೆ’ ಪರಾ. **ಗೊಟ್ಟ$_4$**: ೭. ಅಭಾವಸ್ಥಿತಿ; ಬರ ; ಕ್ಷಾಮ. ‘ಗೊಟ್ಟಕೆರೆ’ ಪರಾ. **ಗೊಟ್ಟು$_1$** : ೩. ‘ಗೊಟ್ಟಾಟ’ ಪರಾ. ೭. ಹೆಸರು ಮಾತ್ರ ಕ್ಷೀರಸಾಗರಭಟ್ಟರು ಮನೆಯಲ್ಲಿ ಮಜ್ಜಿಗೆ ನೀರಿಗೆ ಗೊಟ್ಟು (ಗಾದೆ) ; ಆ ಊರಿನಲ್ಲಿ ನೀರಿಗೆ ತುಂಬಾ ಗೊಟ್ಟು (ರೂಢಿ).

**ಗೊಟ್ಟೆ$_2$**: ೩. ಕಾಳುಗೋಪನ ಗೊಟ್ಟೆ[ಪಾಠಾಂ.ಟ್ಟಿ]ಯಾಟಕೆ ಗುಱಿಗಳಾದಿರಿ (ಕುಮಾರವ್ಯಾ.ಸ. ೨-೮೫). [ ದೇ.॥ ತಮಿ. ಕೊಟ್ಟು ; ತುಳು. ತೆಲು. ಗೊಡ್ಡು ]

**ಗೊಡ್ಡು$_2$** (ನಾ). (ಕರಾ) ಒಂದು ಬಗೆಯ ಆಟ : ಹಳ್ಳಿಯ ಆಟಗಳಾದ ಚಿಣಿಕೋಲು, ಜಬ್ಲಿ, ಗೊಡ್ಡು (ಒಂದು ಬಗೆಯ ಕ್ರಿಕೆಟ್), ಹುಲಿದನ-ಇವು ನಮ್ಮ ವಿನೋದಗಳಾಗಿದ್ದವು (ಹುಮುಖ. ೭೭). [ ದೇ.॥ ತೆಲು. ಗೋಟಿ ]

**ಗೊಡ್ಡುಕಥೆ** (ನಾ). ಪ್ರಯೋಜನವಿಲ್ಲದ ಕಥೆ; ನೀರಸವಾದ ಕಥೆ: ಹಿರೇರ ಕಾಲದಿಂದ ಕಟ್ಟೀ ಮೇಲೆ ಕೂತು ಹೇಳುವ ಗೊಡ್ಡುಕಥೆಗಳು (ದಾಸಹು. ೬೦). [ ಗೊಡ್ಡು$_1$ + ಕಥೆ ]

**ಗೊಡ್ಡುಕೆಲಸ** (ನಾ). ನಿಷ್ಪ್ರಯೋಜಕವಾದ ಕೆಲಸ: ಅವನು ಮಾಡು ವುದೆಲ್ಲಾ ಬರೀ ಗೊಡ್ಡುಕೆಲಸ (ರೂಢಿ). [ ಗೊಡ್ಡು$_1$ + ಕೆಲಸ ]

**ಗೊಡ್ಡುಗೊಳ್** (ಕ್ರಿ). ಕೆಲಸಕ್ಕೆ ಬಾರದೆ ಹೋಗು ; ವ್ಯರ್ಥವಾಗು : ಜಸಂ ಮಸುಳೆ ಧೃತಿ ಗತಿಗಿಡೆ ಪೊಡರ್ವಡೆಯುಡುಗೆ ಕರುಣವಪಸರಣಂಗೆಯ್ಯೆ ರೂಢಿ ಗೊಡ್ಡು [ಪಾಠಾಂ. ಗೋಡು]ಗೊಳೆ . . . ಮೆಯ್ಯ ಮಾಸಾಱದ ಕೂಸಂ ತಲೆಕೆಳಗಾಗೆ ಪಿಡಿದುಕೊಂಡು ನಡೆವನ್ನಂ (ಜಗವಿ. ೨-೫೩ ವ).

[ ಗೊಡ್ಡು$_1$ + ಕೊಳ್$_1$ ]

**ಗೊಡ್ಡುತತ್ವ** (ನಾ). ಹುರುಳಿಲ್ಲದ ತತ್ವ,-ಸಿದ್ಧಾಂತ: ದೊಡ್ಡನಾಮ ದೊಡ್ಡಮುದ್ರೆ ಅಡ್ಡಬೂದಿ ನಡೆದುವೆಷ್ಟೊ ಗೊಡ್ಡುತತ್ವ ಹೇಳಿಕೊಂಡು ಜಡ್ಡುಹಿಡಿದವು (ಕವಿಸೋ. ೪೦-೩). [ ಗೊಡ್ಡು$_1$ + ತತ್ವ$_1$ ]

**ಗೊಡ್ಡುನಂಬಿಕೆ** (ನಾ). ಮೂಢನಂಬಿಕೆ; ಕುರುಡುನಂಬಿಕೆ: ಸಂಪ್ರದಾಯ ಬದ್ಧವಾಗಿ ನಡೆದುಬಂದಿದ್ದ ಗೊಡ್ಡುನಂಬಿಕೆಯನ್ನು ಬಿಡಲಾರದ ಕಳವಳ (ಪ್ರಮುಹ. ೨೦) : ಗೊಡ್ಡುನಂಬಿಕೆಯವನೆಂದುಕೊಂಡು ನಗಬೇಡ ತಾಯಿ (ನಡದಾ. II, ೯೩೫). [ ಗೊಡ್ಡು$_1$ + ನಂಬಿಕೆ ]

**ಗೊಡ್ಡುಪುರಾಣ** (ನಾ). ಅಪ್ರಯೋಜಕ ವಿಷಯಗಳನ್ನು ಹೇಳುವ ಮಾತು ; ಸತ್ವವಿಲ್ಲದ ವಿಷಯ: “ಗೊಡ್ಡುಪುರಾಣಗಳಲ್ಲಿ ನನಗೆ ನಂಬಿಕೆಯಿಲ್ಲ” ಎಂದರು ಜನಾರ್ದನರಾಯರು (ಕಾಲಯಾ. ೩).

[ ಗೊಡ್ಡು$_1$ + ಪುರಾಣ ]

**ಗೊಡ್ಡುಬೆದರಿಕೆ**, ಗುಡ್ಡುಬೆದರಿಕೆ (ನಾ). ಪೊಳ್ಳುಬೆದರಿಕೆ ; ಹುಸಿಯಾದ ಬೆದರಿಕೆ : ಫಲಾಫಲನಿರ್ಣಯದ ಮೂಲಕವೂ ಗೊಡ್ಡುಬೆದರಿಕೆಯ ಮೂಲಕವೂ ನಮ್ಮನ್ನು ಕಲ್ಯಾಣದ ಮಾರ್ಗದಲ್ಲಿ ಪ್ರವೃತ್ತರಾಗುವಂತೆ ಮಾಡುವುದು ಬಾಹ್ಯದ ಕೆಲಸ (ನಿಬಂಧ. II, ೩೪೫). **ಗುಡ್ಡುಬೆದರಿಕೆ:** ಇನ್ನು ನಿಮ್ಮಿಂದಾಗುವದೇನು ? ನಿಮ್ಮ ಗುಡ್ಡುಬೆದರಿಕೆಗೆ ನಾವು ಅಂಜತಕ್ಕವರಲ್ಲ (ಚೆನ್ನಬೀ. ೫೫). [ ಗೊಡ್ಡು$_1$ + ಬೆದರಿಕೆ (<ಬೆದಱಿಕೆ) ]

**ಗೊಡ್ಡುವ್ಯಕ್ತಿ** (ನಾ). ಹಳೆಯ ಸಂಪ್ರದಾಯಗಳನ್ನು ಮೂಢವಾಗಿ ಅನುಸರಿಸುವವನು : ಬಂಕಿಮನೇನು ಹಿಂದಿನ ಕಾಲದ ಸಂಪ್ರದಾಯ ಬದ್ಧನಾದ ಗೊಡ್ಡುವ್ಯಕ್ತಿಯಲ್ಲ (ಬಂಕಿಮ. ೬೨). [ ಗೊಡ್ಡು$_1$ + ವ್ಯಕ್ತಿ ]

**ಗೊಡ್ಡುಸಂಪ್ರದಾಯ** (ನಾ). ಮೂಢನಂಬಿಕೆಯಿಂದ ಕೂಡಿದ ಸಂಪ್ರದಾಯ ; ವ್ಯರ್ಥವಾದ ಪದ್ಧತಿ: ಇಂದಿನ ಯುಗವು ನಿಮ್ಮ ಗೊಡ್ಡುಸಂಪ್ರದಾಯದ ಯುಗವಲ್ಲ (ದೇಶಭು. ೬೦).

[ ಗೊಡ್ಡು$_1$ + ಸಂಪ್ರದಾಯ ]

**ಗೊಡ್ಡುಸಾರು** (ನಾ). ಬೇಳೆಯನ್ನು ಹಾಕದೆ ಮಾಡಿದ ಸಾರು ; ಬರಿಯ ಹುಳಿ, ಉಪ್ಪು, ಕಾರಗಳನ್ನು ನೀರಿನಲ್ಲಿ ಕುದಿಸಿ ಒಗ್ಗರಿಸಿ ಮಾಡಿದ

ಸಾರು ; ಹುಣಿಸೆಸಾರು ; ಹುಣಿಸೆನೀರು : ಮಡ್ಡಿ ಅನ್ನಕ್ಕೆ ಗೊಡ್ಡು ಸಾರು ಜಡ್ಡುತುಪ್ಪ (ಗಾದೆ). [ ಗೊಡ್ಡು$_1$ + ಸಾರು$_3$ (<ಸಾಱು$_2$) ]

**ಗೊಡ್ಡುಹರಟೆ** (ನಾ). ಕೆಲಸಕ್ಕೆ ಬಾರದ ಮಾತು ; ನಿರರ್ಥಕವಾದ ಮಾತು : ಹೇಗೆ ಉದ್ಧಾರ ಮಾಡ್ಯಾನು . . . ಅರುಣ ಉದಯದಲೆದ್ದು ಹರಿಯ ನೆನೆಯದೆ ಗೊಡ್ಡುಹರಟೆಗೆ ಹೊತ್ತು ಏಱಿಸಿದವನ (ಪುರಂದ. ೦-೧೫೩-೦); ಈ ಗೊಡ್ಡುಹರಟೆಯಿಂದೇನು ಉಪಯೋಗ (ಹೊಸಂಸಾ. ೩೨).
[ ಗೊಡ್ಡು$_1$ + ಹರಟೆ ]

**ಗೊಡ್ಡುಹಸು** (ನಾ).=ಗೊಡ್ಡಾಕಳ್ : "ಅನದುಹಿ – ಗೊಡ್ಡುಹಸು" (ಅಕಾನಿ. ೧-೧) ; ಕೆಲವರು ಗೊಡ್ಡುಹಸುಗಳಲ್ಲಿ ಉಳುತ್ತಿದ್ದರು (ಹುಬ್ಬಹ. ೫೯). [ ಗೊಡ್ಡು$_1$ + ಹಸು$_2$ (<ಪಸು$_3$) ]

**ಗೊಡ್ಡುಹುಳಿ, ಗೊಡ್ಡುಳಿ** (ನಾ). ತರಕಾರಿ ಹಾಕದೆ ಮಾಡಿದ ಹುಳಿ ; ಬೇಳೆಹುಳಿ : ತರಕಾರಿ ಏನೂ ಸಿಗದೆ ಅನ್ನ ಗೊಡ್ಡುಹುಳಿ ಮಾಡಿದ್ದಳು (ರೂಢಿ). **ಗೊಡ್ಡುಳಿ:** ಸಣ್ಣನುಚ್ಚು ಇಟ್ಟುಕೊ ಗೊಡ್ಡುಳಿ ಕಾಸಿಕೊ (ಪುರಂದ. ೩-೧೮೭-೭). [ ಗೊಡ್ಡು$_1$ + ಹುಳಿ$_2$ (<ಪುಳಿ$_2$) ]

**ಗೊಡ್ಡುಹೆಂಡತಿ** (ನಾ). ೧. ಮಕ್ಕಳಾಗದ ಹೆಂಡತಿ ; ಬಂಜೆಯಾದ ಮಡದಿ. ೨. (ಅಲಂ) ರಸಿಕಳಲ್ಲದ ಪತ್ನಿ : ಗೆಡ್ಡೆಯ ಹೊಲ ಹೀನ ಗೊಡ್ಡುಹೆಂಡತಿ ಹೀನ ಮೆಡ್ಡೆಯ ಬೋನವೆ ಹೀನ (ಇಂಜಾಪ. ೯೭-೭೫).
[ ಗೊಡ್ಡು$_1$ + ಹೆಂಡತಿ (<ಪೆಂಡಿತಿ) ]

**ಗೊಡ್ಡುಳಿ** 'ಗೊಡ್ಡುಹುಳಿ' ನೋ.

**ಗೊಡ್ಡೆ** (ನಾ). ಪ್ರಣಯದ ರೀತಿಯನ್ನು ತಿಳಿಯದ ಮೂಢೆ; ಅರಸಿಕಳು; ಚಾತುರ್ಯವಿಲ್ಲದವಳು : ಬೇಟದ ಸುಗ್ಗಿ ನಾಲ್ಕೆ ದಿನವಾ ದೆಸೆಯೊಳ್ ಬಸವಾದ ಗಂಡರಿಂಗೂಟಮೆ ತೋಟಿಯೆಂದು ಸಮಸಂದೆಮೆಯುಂ ಮಱೆಯಾಗದಂತು ಬಾಯ್ ನಾಟಿರೆ ಬಾಯೊಳಪ್ಪುಡುಗದಂತು ತೊಡಂಕಿರದೇಕೆ ತೋಟಿಯಂ ಪಾಟಿಸೆ ತಾವೆ ತಮ್ಮಗಳನಾಱಡಿಗೊಳ್ವರೊ ನಾಡ ಗೊಡ್ಡೆ [ಪಾಠಾಂ. ಗೊಟ್ಟೆ, ದೊದ್ದೆ]ಯರ್ (ಲೀಲಾವ. ೧೪-೪೦).
[ ಗೊಡ್ಡು$_1$ + – ಎ$_2$ ]

**ಗೊಡ್ಡೆಮ್ಮೆ** (ನಾ). ಈಯದ ಎಮ್ಮೆ ; ಬಂಜೆಯಾದ ಎಮ್ಮೆ : ಗೊಡ್ಡೆಮ್ಮೆಯ ಮುಂದೆ ಬಡಿದಂಟು ಒಗೆದಂತೆ ಗಿರಾಕಿಗಳ ಮುಂದೆ ಒಂದೆರಡು ಪತ್ರಿಕೆಗಳನ್ನು ಅವರು ಒಗೆದಿರುತ್ತಾರೆ (ಗಾಳಿಪ. ೩೩).
[ ಗೊಡ್ಡು$_1$ + ಎಮ್ಮೆ (<ಎಮ್ಮೆ) ]

**ಗೊಡ್ಡೆಱಗು** (ಕ್ರಿ). ಮೋಸಮಾಡಲು ಪ್ರಯತ್ನಿಸು ; ವಂಚನೆಗೆ ಪ್ರಯತ್ನಮಾಡು : ಬದ್ಧಕತನದಲ್ಲಿ ದ್ರವ್ಯಕ್ಕೆ ಗೊಡ್ಡೆಱಗಿರುವ [ಪಾಠಾಂ. ಯರನಿಱುವ] ದೊಡ್ಡಮುದ್ರೆಯ ಕಳ್ಳರು (ಮೋಳಿಮಾ. ೧೮೮-೭೦೯).
[ ಗೊಡ್ಡು$_1$ + ಎಱಗು$_1$ ]

**ಗೊಡ್ಡೇಱು** (ನಾ). ಮೋಸದಿಂದಾದ ಪೆಟ್ಟು: ಮೊಱೆಯೊ ಮೊಱೆಯೋ ಧರ್ಮರಾಯ ಮಾನಿಯನೆನ್ನ ಕಿಱುಗೂಸ ಕಾಣಲಾಱದೆ ಪಾಪಿ ಜಿನದತ್ತ ಬಱಿದೆ ಗೊಡ್ಡೇಱಿನಿಂದಿಱಿಯಿಸಿದಳೆಂದು ತೊವಲಂ ಪಿಡಿದು ಗೋಳಿಡುತ್ತ ಮೊಱೆಯಿಡಲ್ (ಸಮ್ಯಕೌ. ೫-೫೧). [ಗೊಡ್ಡು$_1$+ಏಱು$_4$ (<ಏಱ್$_4$)]

**ಗೊಣಗ** (ನಾ). ಅಸ್ಪಷ್ಟವಾಗಿ ಧ್ವನಿಮಾಡುವವನು; ಗೊಣಗುವವನು: (ಕ). [ ಗೊಣಗು$_2$ + – ಅ$_6$ ]

**ಗೊಣಗಾಟ** (ನಾ). ಅಸಮಾಧಾನದ ಮಾತು : ಅವನ ಹೆಂಡತಿಯ ಗೊಣಗಾಟ ಹೆಚ್ಚಾಯಿತು (ನಾಡಿಗೇ. ೫೧) ; ಬೆಳಗಾದೊಡನೆಯೇ ಇನ್ನು ಹೊರಡೋಣವೇ ಎಂದು ತಾಯಿಯೊಡನೆ ಗೊಣಗಾಟ ನಡೆಸುತ್ತಿದ್ದೆ (ಮುಂಗಾಮು. ೭೮). [ ಗೊಣಗು$_2$ + ಆಟ ]

**ಗೊಣಗಾಡು** (ಕ್ರಿ). ಅಸಮಾಧಾನದ ಮಾತನಾಡು: ನನ್ನ ಜೊತೆಯಲ್ಲಿರ ತಕ್ಕವರನ್ನೂ ಗುರು ಹಿರಿಯರನ್ನೂ ಬಿಟ್ಟುಹೋಗಬೇಕಲ್ಲಾ ಎಂದು ನಾನು ಗೊಣಗಾಡದೆ ಗೋಳಾಡದೆ ಇದ್ದರೆ ಅದೂ ನ್ಯಾಯ ತಾನೇ (ಸೋಕ್ರಮ. ೬೭) ; ಅವುಗಳ ಒಪ್ಪುನೆಪ್ಪುಗಳಿಗಾಗಿ ಗೊಣಗಾಡುವಂತೆಯೇ ಇಲ್ಲ (ಶಿಕ್ಷದ. ೪೩೮). [ ಗೊಣಗು$_1$ + ಆಡು$_1$ ]

**ಗೊಣಗಿ** (ನಾ). ಗೊಣಗುವ ಸ್ವಭಾವದವಳು : (ಕ).
[ ಗೊಣಗು$_2$ + – ಇ$_2$ ]

**ಗೊಣಗು$_1$, ಗುಣಗು** (ಕ್ರಿ). ೧. ಅಸ್ಪಷ್ಟವಾದ ಧ್ವನಿಯಲ್ಲಿ ಮಾತನಾಡು; ಮೂಗಿನಲ್ಲಿ ಮಾತನಾಡು : ತೃಣಪುರುಷನಿಂದಶೇಷಾಗಮುವನೋದಿಸುತೆ ಗೊಣಗುತಿರ್ಪಳಿಯ ಗುಂಡಿಗೆಯ ಚಂಡಾಲರಂ ಟೊಣೆದು ವಿಭ್ರಾಜ ಮಾನೋದಾತ್ತಶೈವತೇಜವ ಮೂಜಗದೊಳೋಜೆಯಿಂ ಅಣಿಯರಂ ಪ್ರಕಟಮೆನಿಸಿದ ಪೊಂಗಿನಿಂ (ಕೊಟ್ಟೂಬ. ೯-೩೯) ; ಗೊಣಗುತ್ತ, ತಾಳಕ್ಕೆ ತಲೆ ತೂಗುತ್ತ ಒಂದೆರಡು ನಿಮಿಷ ಹಾಳೆಯ ಮೇಲೆ ಬರೆಯುವನು (ಅಶ್ವಮೇ. ೧೧೦). ೨. (ಅಸಮಾಧಾನ ಸೂಚಕವಾಗಿ) ತನ್ನಲ್ಲೇ ಮಾತನಾಡು : ಅಲಘುಜಂಗಮನೊರ್ವ ತನ್ನ ಮನೆಗಿದಿರಾಗಿ ಮಳಿಗೆಯೊಳು ಮಲಗಿರಲು ಪುರುಷನಂ ಕರೆದು ಹೋಗೊಲಿದು ವಾಯುಯ್ಯನಂ ಕರೆದು ತಾರೆನೆ ಗೊಣಗುತಂ ಹೋಗಿ ಕರೆಯಲು (ಗುರುಜಾ. ೧೪-೧೫) : 'ಇವನ ಮನೆ ಹಾಳಾಗ' ಎಂದು ಗೊಣಗುತ್ತ ಹೊರಗೆ ಬಂದು (ರೂಪಸಂ. ೧೩). **ಗುಣಗು:** ೧. 'ಗುಣಗುಟ್ಟು$_1$' ಪರಾ.

**ಗೊಣಗಿಕೊಳ್ಳು** = ಅಸಮಾಧಾನದಿಂದ ತನ್ನಲ್ಲಿಯೇ ಮಾತನಾಡಿಕೊಳ್ಳು; ಅಸ್ಪಷ್ಟವಾಗಿ ಮಾತನಾಡಿಕೊಳ್ಳು : ಆದರೆ ಇಲ್ಲಿಯೂ ದಿನದಂತೆ ಇಲ್ಲ ಏನೋ ಅವ್ಯವಸ್ಥೆ, ಏನಿರಬಹುದು ಎಂದು ತನ್ನಲ್ಲಿಯೇ ಗೊಣಗಿಕೊಂಡಳು (ಕೀಮೋದ. ೦೩) ; ತಾಯಿ ಗೊಣಗಿಕೊಂಡಳು (ಳಪ್ಪುಹು. ೫೨).
[ ದೇ.॥ ತಮಿ. ಕುಣಗು; ತೆಲು. ಗೊಣಂಗು, ಗೊಣಗು, ಗೊಣುಗು ]

**ಗೊಣಗು$_2$** (ನಾ). ೧. ಗೊಣಗಾಡುವಿಕೆ; ಅಸಮಾಧಾನದಿಂದ ಅಸ್ಪಷ್ಟವಾಗಿ ತನ್ನಲ್ಲಿಯೇ ಮಾತನಾಡುವಿಕೆ. ೨. ಆಕ್ಷೇಪ; ತಕರಾರು: ಆಗಲಿ, ದಿನದಪ್ಪದ ಗೊಣಗಿನ ಪುರಾಣದ ಪಾರಾಯಣ (ಮುಂತ್ರಶ. ೨೫-೦) : ತಾನು ನಿಗದಿಮಾಡಿದ ಗುತ್ತಿಗೆಗೆ ರೈತರ ಒಪ್ಪಿಗೆ ಗೊಣಗಿಲ್ಲದೆ ದೊರೆಯುತ್ತದೆಂದು ನೆಕ್ಲುದೋವ್ ಭಾವಿಸಿದ್ದನು (ಪುನರು. ೨೭೧).
[ < ಗೊಣಗು$_1$ ]

**ಗೊಣಗು$_3$** (ನಾ). ಒಂದು ಬಗೆಯ ಸಸ್ಯ ; ಗುಣಿ : "ಗುಣಿಯೆನಲ್ ಗೊಣಗಕ್ಕು" (ಮಂಗರಾ. ೪೨-೩೭). 'ಗುಣಿ$_2$' ಪರಾ.
[ ದೇ.॥ ತೆಲು. ಗುನುಕ, ಗುನುಕು=ಬರಗಾಲದಲ್ಲಿ ಉಪಯೋಗಿಸುವ ಒಂದು ಬಗೆಯ ಕಾಡುಧಾನ್ಯ ]

**ಗೊಣಗುಟ್ಟು, ಗುಣಗುಟ್ಟು$_1$** (ಕ್ರಿ). ೧. ಪಿಸುಮಾತನಾಡು : ಉಗ್ರಬಾಹುವಿಗೆ ಅಣ್ಣನಾದ ಮಹಾಬಾಹುವಿನಿಂದೊಡಗೂಡಿ ಶಂಕುಕರ್ಣನು ಗೊಣಗುಟ್ಟುವ ಮಾತುಗಳಂ ಕೇಳಿ (ಸೌಗಂಧಿ. ೫೩೨-೨). ೨. ಅಸಮಾಧಾನದಿಂದ ಅಸ್ಪಷ್ಟವಾಗಿ ತನ್ನಲ್ಲೇ ಮಾತನಾಡಿಕೊಳ್ಳು ; ಗೊಣಗು : ಅವಳಿಗೂ ಸಹ ತನ್ನಲ್ಲಿ ಅನಾದರಣೆ–ಎಂದು ಗೊಣಗುಟ್ಟುತ್ತ . . . ಹೋದನು (ಮಹಾಗ. ೦೨). **ಗುಣಗುಟ್ಟು$_1$:** ೧. ಅವನೇ ಅಪ್ಪಣೆ ಕೊಟ್ಟಿದ್ದನು ಎಂದು ಶಾಂತರೀತಿಯಿಂದ ಗುಣಗುಟ್ಟಿದಳು (ಮೊಪಾಸಾ. ೮). ೨. ರಮಾದೇವಿಯು – 'ಹೌದು, ನಾನು ಸಾಹೇಬರ ಕೊಲೆಮಾಡಿದೆನು . . .' ಎಂಬ ಮಾತನ್ನು ಗುಣಗುಟ್ಟತೊಡಗಿದ್ದಳು (ಸ್ಕೂಲಮಿ. ೨೨೫).
[ಗೊಣಗು$_2$ + ಕುಟ್ಟು$_1$ ]

**ಗೊಣಗುಡು** (ಕ್ರಿ). ಅಸ್ಪಷ್ಟವಾಗಿ ಮಾತನಾಡಿಕೊಳ್ಳು; ಗೊಣಗುಟ್ಟು: ಗೊಣಗುಡದೆ ಅವನು ಆವಘಡವ ಸಹಿಸಿ ಎದುರಿಸುವ ವೀರಜಾತ (ಅರಳು. ೧೭೬-೬) : ಅವಳು ಗೊಣಗುಡುತ್ತ . . . ಅವನ ಕಣ್ಣಲ್ಲಿ ಕಣ್ಣಿಟ್ಟು ನೋಡಿದಳು (ಪುನರು. ೫೪೫). [ ಗೊಣಗು$_2$+ಕುಡು$_1$ (<ಕೊಡು$_1$)]

**ಗೋಣಗುಮಾತು** (ನಾ). ಅಸ್ಪಷ್ಟವಾದ ಮಾತು ; ಅಸ್ಪಷ್ಟವಾಗಿ ಆಡುವ ಮಾತು : ನಾನು ಸತ್ಯವನ್ನು ಗೋಣಗುಮಾತಿನ ಮುಸುಕಿನಲ್ಲಿ ಮುಚ್ಚಿದೆ (ಮುಗಮಾಂ. ೪೯). [ ಗೋಣಗು$_2$ + ಮಾತು$_1$ ]

**ಗೋಣಗೆ** (ನಾ). ಕುದುರೆ, ದನಕರು ಮೊದಲಾದುವುಗಳ ಮೇವಿಗಾಗಿ ಕಟ್ಟುವ ತೊಟ್ಟಿ ; ಗೋದಲೆ (?) : ಕುದುರೆಯ ಎದೆಯುದ್ದವಾಗಿ ಮುಂದುಗಡೆಯಲ್ಲಿ ಗೋಣಗೆಯ ಗೂಟವನ್ನು ಕಟ್ಟುವುದು (ಅಶ್ವಟೀ. ೪೭-೮). [ ? ]

**ಗೋಣಬೆ** (ನಾ). ಬಣಬೆ ; ರಾಶಿ ; ಮೆದೆ : ಹುಲ್ಲಿನ ಗೋಣಬೆಯಂತಿಹುದು ಈ ಲೋಕವು ಅದರಾಚೆಗೀಚೆಗೆ ಕಿಲಕೆ ಕತ್ತಿಗಳಂದದೆ ಕಚ್ಚಾಡುತಿರುವುವು ದೇಶದೇಶಗಳೊಡೆತನಕೆ (ಇಂಚಾಪ. ೧೮೫-೧೪). [ <ಕೊಣಬೆ ]

**ಗೋಣಸು** ' ಗೊಟಸು ' ನೋ.

**ಗೋಣಸೇನ** (ನಾ). ಒಬ್ಬಾತನ ಹೆಸರು : ಶ್ರೀಗೋಣಸೇನ ಪಣ್ಡಿತ ಭಟ್ಟಾರಕರ (ಎಕ. I, ೪-೦೦ ; 978). [ <ಸಂ. ಗುಣಸೇನ ]

**ಗೋಣೆ** ' ಗೋಣೆಯ ' ನೋ.

**ಗೋಣೆಗಲ್** (ನಾ). (?) : ಇದು ಪಡೆದೆಮ್ಮ ಪೂರ್ವ (ಭವದುರ್ವಿಧಿಯಿಂ) ಗೋಣೆಗಲ್ಲ ಮೇಲೆ ಕಟ್ಟಿದ ಮನೆ ಪಟ್ಟಿಗೆಟ್ಟು ನೆಱೆ ಪಾಸಱೆಯ[ಯಿ]ಲ್ಲಿರುಳಾಯ್ತು ಭೀತಿಯೊಡ್ಡೊದವಿದುದೀ ಪಯೋಧರದ ಪೆರ್ಚುಗೆಯಂ ಸಲೆ ನಿಟ್ಟಿಸನ್ಯದಾಸ್ಪದವತಿ ದೂರಮಿರ್ಪೂಡಿರು ಪೋಪೊಡೆ ಪೋಗೆಲೆ ಪಾಂಥ ಕೇಳಿದಂ (ರಸರ. ಪರಿ. ೧೨೬). [ ? ]

**ಗೋಣೆಯ, ಗೋಣೆ** (ನಾ). ೧. ಬಿಲ್ಲಿನ ಹೆದೆ; ಮೌರ್ವಿ: ಪುರ್ವುಮ[ಮ]ಗಳ್ ಬಿಡದಳ್ಳಿಱಿದಿಕ್ಷುಚಾಪದೊಳ್ ಖಳ ಕುಸುಮಾಸ್ತ್ರನಿಟ್ಟ ಗೋಣೆಯಕ್ಕೆಣೆಯಾಗಿರೆ (ಪಂಪಭಾ. ೪-೩೬) ; ನೆರೆದಶ್ವಗ್ರೀವನ ಬಿಲ್ಲ ಗೋಣೆಯಮಂ ಭೋಂಕನೆ ಕುಱಿದಱಿದಱಿದನಬ್ಜಜಠರಂ ಧುರದೊಳ್ (ಶಾಂತಿಪು. ೫-೭೦) ; ಧನುವುಂ ಕರ್ಬಿನ ಬಿಲ್ ಗಡಂ ಗೋಣೆ [ಪಾಠಾಂ. ಗೊನೆ, ಗೊಲೆ, ದೋಣೆ]ಯಮುಂ ನೀರೇಜಸೂತ್ರಂ ಗಡಂ (ಕಾವ್ಯಾವ. ೭೫೩); ರಣವಿಜಯನವವಸನ ಮಣಿಭೂಷಣಪರಿಷ್ಕೃತನಾಗಿ ತಿರುವಿನ ಗೋಣೆಯವನು ನೇವರಿಸಿದನು ಸಂತೈಸಿ ಸಂಹನವ (ಕುವ್ಯಾಶ. ೩-೪೮). ೨. ಅಲಗು; ಧಾರೆ: ಕೆಣಕಿದನು ದಾನವನನಾಗಳೆ ಹಣಿದವನ ಹೊಯ್ದುಮಳಚಕ್ರದ ಗೋಣೆಯದಲಿ ಮೆಱಸಿದನು ತಲೆಯನು ದಿವಿಜನಗರಿಯಲಿ (ಕುವ್ಯಾಸ. ೯-೫೪). **ಗೋಣೆ** : ೧. " ಗೋಣೆ (ಗೋಣೆಯ)-ಗುಣ=ಬಿಲ್ಲ ಹೆದೆ " (ಶಬ್ದಕೋ. ೧೧) ; ನರನ ಬಿಲ್ಲ ಗೋಣೆಯು[ಪಾಠಾಂ. ಯ]ಮನೆಚ್ಚಿಂ (ಪಂಪಭಾ. ೧೨-೨೦೯) ; ಎಡಗೈಯೊಳೊತ್ತಿ ಬಿಲ್ಲಂ ಪಿಡಿದೊಯ್ಯನೆ ತೀಡಿ ಗೋಣೆಯುಮಂ ಕಡುಪಿಂ ಜೇವೊಡೆವಾಗಳ್ (ಅಭಿಕಾ. ೨೯೯). [ ದೇ.॥ ತೆಲು. ಗೊನೆಯ ]

**ಗೊಣ್ಣೆ, ಗೊಣ್ಣಿ** (ನಾ). ೧. ಮೂಗಿನಲ್ಲಿ ಸುರಿವ ಶ್ಲೇಷ್ಮ ; ಸಿಂಬಳ : ಕಿವಿಯೊಳಗಣ ಗುಗ್ಗೆ ಕಣ್ಣನೊಳಗಣ ಕಿಸುರು ಮೂಗಿನೊಳಗಣ ಗೊಣ್ಣೆ (ಪಾಹಟೀ. ೨-೩-೫೩ ವ) ; ಕೈಚೌಕ ತೆಗೆದುಕೊಂಡು ಮೂಗಿನ ಗೊಣ್ಣೆ ತೆಗೆದನು (ಪುನರು. ೯೬) ; ಕೊಕ್ಕಿನಿಂದ ಗೊಣ್ಣೆಯ ಹಾಗೆ ಜೊಲ್ಲು ಸುರಿಯುವುದು(ಗ್ರಾಮಾಕ. ೧೩೬). ೨. (ಉಕ)(ಮಸಿಯ) ಕರೆ; ಗುರುತು: ಒತ್ತ ಕರಡಿನೊಲು ಬಾನದ್ದಿತ್ತು ಮಶಿ ಗೊಣ್ಣೆಯವೊಲು ವನವದ್ದಿತ್ತು (ಮುಕ್ತಕಂ. ೫೭-೧೮). **ಗೊಣ್ಣಿ** : ೧.' ಗೊಣ್ಣಿಹುಳ 'ಪರಾ. [ ? ]

**ಗೊಣ್ಣೆಗ** (ನಾ). ಯಾವಾಗಲೂ ಗೊಣ್ಣೆ ಸುರಿಯುವ ಮೂಗುಳ್ಳವನು: " ಘುಣ್ಣಕಃ, ಘುಣ್ಣಾನಃ, ಈ ೨ ಗೊಣ್ಣೆಗಂ " (ಶಾಶಕ್ಕ. ೦೦೭). [ ಗೊಣ್ಣೆ + – ಗ$_2$ ]

**ಗೊಣ್ಣೆವುಟು, ಗೊಣ್ಣಿಹುಳ** (ನಾ). (ಗೊಣ್ಣೆಯಂತಿರುವ) ಗೊಬ್ಬರದಲ್ಲಿ ವಾಸಿಸುವ ಹುಳು: ಸ್ಪರ್ಶರಸಮೆರಡುಮನಱಿವ ಶಂಕ ಶುಕ್ತಿ ಗುಳ್ಳೆ ಗುಬ್ಬಿ ನಾಯಿನೊಳಲೆ ದೊಪ್ಪುಳು ಗೊಣ್ಣೆವುಟು ಕ್ರಿಮಿ ಮೊದಲಾದುವು (ಪಸಾರ. ೯೫-೦೫). **ಗೊಣ್ಣಿಹುಳ** : ಗೊಣ್ಣೀಹುಳ ಮುಂತಾದ ಹುಳಗಳು ಹುಟ್ಟಿ ಗಿಡ ವೃಕ್ಷ ಲತೆ ಮೊದಲಾದವುಗಳ ಬೇರನ್ನು ಕಡಿದು ಕೆಡಿಸುತ್ತವೆ (ಕೃಷಿಪ್ರ. ೪೪). [ ಗೊಣ್ಣೆ + ಪುಟು$_1$ ]

**ಗೊತ್ತು,** ಗುಂತಂ, ಗೊಂತು (ನಾ). ೧. ಆಶ್ರಯಸ್ಥಾನ ; ಮೂಲಸ್ಥಳ; ನೆಲೆ: "ಇಕ್ಕೆ, ಇಂಬು, ಗೊತ್ತು . . . ಆಗರಂ-ಈ ೧೫ ಆಶ್ರಯಕ್ಕೆ ಪೆಸರ್" (ಕಶಸಾ. ೧೫-೨೯೦) ; " ನೆಲೆ ತಾಣ ಗೊತ್ತುಂ ಗಕ್ಕನೆ ಚಾವಡಿಯುಂ ಮೇರೆ ಯಾಗರವಸದಂ " (ಕವಿಕಂ. ೦೩೫) ; ಜಸದ ಸಯ್ಪು ನೆಗಳ್ತೆಯ ಲೋಕದೇಳ್ಗೆ ಯೌನ್ನತ್ಯದ ಗೊತ್ತೆನುತ್ತೆ ಧರೆ ಬಣ್ಣಿಪುದೀ ಕಲಿದೇವ ಸೆಟ್ಟಿಯಂ (ಸೌಇಇ. IX-1, ೨೯೬-೩೯; 1176) ; ನನ್ನಿಗಾಗರಮುಱಿತಕ್ಕೆ ಗೊತ್ತು (ಅಭಿಕಾ. ೩) ; ಸಿಂಗರದಿಕ್ಕೆ ಮಂಗಳದ ಮೈಸಿರಿ ಜಾಣ್ಮೆಯ ಗೊತ್ತು . . . ಆತನ ಪುತ್ರಿ ಭೂವರಾ (ರಾಜಶೇ. ೭-೧೦೦); ಸೌಖ್ಯದೆಡೆ ಪುಣ್ಯದ ಗೊತ್ತು (ಹಸ್ತಿಮ.೦-೨೪); ಗೊತ್ತು ಗೊತ್ತಿರದೊತ್ತರೆಲ್ಲಿ (೧೪ವಿಂ. ೬೩-೦೯). ೨. (ಯಾವುದಾದರೊಂದು ಕೆಲಸಕ್ಕಾಗಿ) ನಿಶ್ಚಿತವಾದ ಜಾಗ ; ಕ್ಲುಪ್ತಸ್ಥಳ: ಧ್ಯಾನದಿಂದ ವಸ್ತುವ ಮನದ ಕೊನೆಯಲ್ಲಿ ಕಟ್ಟಿತಂದು ಯಿಷ್ಟಲಿಂಗದ ಗೊತ್ತಿನಲ್ಲಿ ಬೈಚಿಟ್ಟಿರಬೇಕೆಂಬುದು ಆಧಾರದೃಷ್ಟ (ಪದಗೋ. ೧೨೦-೬೫). ' **ಗೊತ್ತು ಕೂರು** ' ಪರಾ. ೩. ಮುಟ್ಟತಕ್ಕ ಸ್ಥಳ ; ಗುರಿ ; ಈಡು : ಹಾವಸೆಗಲ್ಲ ಮೆಟ್ಟಿ ಹರಿದು ಗೊತ್ತ ಮುಟ್ಟಬಾರದಯ್ಯಾ (ಬಸವ. ೨೦೦) : ಅಖಂಡೇಶ್ವರಲಿಂಗವನೊಡಗೂಡಿ ಮರಳಿ ಬಾರೆನೆಂಬುದೆ ಎನ್ನ ಅಱುಹಿನ ಗೊತ್ತು (ಅಖಂಡೇ. ೦೪೬-೦೩೭). ೪. ದನಗಳನ್ನು ಕಟ್ಟುವ ಸ್ಥಳ,–ಜಾಗ: ಹಟ್ಟಿಯ ಗೊತ್ತಿನೊಳಗೆಯನವರತಂ ಕಟ್ಟಿ ಕಱೆವ ಸಗ್ಗದ ಹಸುವಲ್ಲವೆ (ಜಯಸಾ. ೦೪-೫೦). ೫. ದನಕರುಗಳಿಗೆ ಹುಲ್ಲುಹಾಕಲು ಕೊಟ್ಟಿಗೆಯಲ್ಲಿ ಕಟ್ಟೆ ಕಟ್ಟಿ ಮಾಡಿರುವ ಸ್ಥಳ ; ಗೋದಲೆ :ಕೊಟ್ಟಗೆಯ ಹೊಕ್ಕು ಗೊತ್ತಿನ ಹತ್ತಿರವೆ ನಿಂತು (ನವರಾ. V, ೭೩). ೬. ಮೇರೆ; ಎಲ್ಲೆ; ಸೀಮೆ: ಕುಕ್ಕನೂರ ಬಟ್ಟೆಯ ಗೊತ್ತಿನ ಕಲ್ಲಿಂ ಬಡಗ (ಮುಂಬರಾ. ೨೫೫-೩೨ ; 1144) ; ಮಮ್ಮರ ಸರಳಿಯ ಗಂಡಗುಡಿಯ ಪದುಮಯ್ಯ ಬಿಟ್ಟ ಗೊತ್ತಿನ ಹುಣಸೆಯ ಕೆಂಗಾಡು ಕೆಯಿ ಮತ್ತರು ನಾಲ್ಕು (ಸೌಇಇ. IX-1, ೩೨೯-೭೪ ; 1209) ; ಧರ್ಮಾಚಾರ್ಯ ತಾಂ ಪೋಗಿ ನಿಂತೆಲವೊ ಬೊಮ್ಮರಕ್ಕಸ ನನ್ನ ಭಾಷೆಯಾ ಗೊತ್ತು ಮುಟ್ಟದೆನೆಂದೆನೆ (ಪ್ರಾಕಥಾ. ೮-೪೭). ೭. ವಿಧಿ ; ನಿಬಂಧನೆ ; ನಿಯಮ : ಶಿವಶರಣರ ಸತ್ಯಸನ್ಮಾರ್ಗದ ಗೊತ್ತಿನ ಮರಿಯಾದೆಯನಱಿಯದೆ (ಮಹಾದೇ. ೫-೦೯) ; ಆತ್ಮ ನಿಶ್ಚಯವಾದಲ್ಲಿಯೇ ಕೈವಲ್ಯ ತತ್ವವನಱಿದಲ್ಲಿಯೇ ಒಳಗು ಈ ಗುಣ ಸದಮಲಭಕ್ತನ ಮುಕ್ತಿ ಎನ್ನಯ್ಯ ಪ್ರಿಯ ಇಮ್ಮಡಿನಿಃಕಳಂಕಮಲ್ಲಿಕಾರ್ಜುನನಿಕ್ಕಿದ ಗೊತ್ತು (ಮದೀವ. ೨೮೮-೩೯) : ಕಟ್ಟಲೆ ಮಾಡಿ ಗೊತ್ತಿಗೆ ನಿಲ್ಲಿಸಿ (ಮೈಆರಿ. ೦೯೨೯, ೦೮-೨೨ ; 1402) ; ಹರಹರ ಕುನ್ನಿ ಮುಟ್ಟಿದ ಘಟವಿದು ಪ್ರಾಯಶ್ಚಿತ್ತದ ಗೊತ್ತು ಮುಟ್ಟುವೆನು (ಭೈರಸೂ. ೨೩೪) ; ಗೊತ್ತಿನ ಚಾರರನಂತಮಹೋತ್ಸವದಿಂದೆ ಧರಾತಳಮಂ ಗಮಿಸುತ್ತುತ್ತಮದಭ್ರಮುವಲ್ಲಭನಂ ಸಲೆ ಕಂಡಮರಾವತಿಗೆಯ್ದಿಸಿದರ್ (ಹಾಲಾಸ್ಯ. ೦-೩-೨೭). ೮. ತಿಳಿದುದು ; ವಿದಿತವಾದುದು :ಅಲ್ಲಿ ಕುಱುಹಿನ ದಿಣ್ಣೆಯದು ನಿಮಗೆ ಗೊತ್ತೆಂದು ಇಲ್ಲಿ ಗೂಳಿಯ ಕಲ್ಲಿದೆಮಗೆ ನೆಱೆ ಗೊತ್ತೆಂದು ಮಾತಾಡೆ (ಚಾವುಂರ. ೮೯-೦೭) ; ಪರಿಚಯವಿದ್ದವರೊದ್ದರು ಕಡುಲೇಸು ಗೊತ್ತು ತಿದ್ದುವರೆಮ್ಮನೆಂದು (ಇಂಚಾಪ. ೭೮-೭೭) ; ಅದು ಬರಿಯ ಪೊಳ್ಳುಮಾತೆಂಬುದು ಲಲಿತಳಿಗೂ ಗೊತ್ತು (ಮುರುಳು. ೫೦). ೯. ಕುರುಹು; ಗುರುತು: (+). ೧೦. ಪರಿಚಯ; ಮಾಹಿತಿ: ತತ್ವಂಗಳ ಗೊತ್ತ ಗುಟ್ಟೆಂದು ಬಿಡಬಾರದು (ತುಱುಗಾ. ೮-೩೫) ; ಐದು ತತ್ವಗಳಿಂದಾದ ದೇಹಕ್ಕೆ ರೋಗರುಜೆಯಹುದೇ ಕಾರ್ಯತತ್ವಗಳ ಗೊತ್ತಿನಲ್ಲಿ ನಿಂದು ಅವಱವಱ ಚಿಕಿತ್ಸೆಯಲ್ಲಿ ಹೊತ್ತು ನಿತ್ತರಿಸುವುದೇ ಕ್ರಮ (ಸರ್ವವ. ೨೦-೯೬). ೧೧. ಪ್ರಸಿದ್ಧವಾದುದು ; ಖ್ಯಾತಿಹೊಂದಿರುವುದು : ಏಪ್ರಂ ಸುತ್ತದ

ಪಲಬಗೆಯ ತೀರ್ಥಯಾತ್ರಾದಿಗಳಂ ಗೊತ್ತಿನ ಹಾಲಾಸ್ಯದೊಳಂ ತತ್ತ್ವಳವುಂ ಬಿಟ್ಟು ಮುಕ್ತಿಯಂ ಪಡೆದಂ (ಹಾಲಾಸ್ಯ. ೧-೦-೭೦). ೧೨. (ಆಲಂ) ಯೋನಿ ; ಜನನಾಂಗ : ಆರಿಗೂ ತೋಟಿದ ಅಂಬರದಲ್ಲಿ ಒಂದು ಎರಳೆ ಮಱಿಯನಿಕ್ಕಿ ಸತ್ತಿತ್ತು ಮಱಿಯು ಮಂಡೆಯ ದೆಸೆಯಲ್ಲಿ ಮಱಿ ತಾಯ ನೆಱೆ ನೋಡಿ ಸತ್ತುದನಱಿಯದೆ ಗೊತ್ತ ಮೂಸುತ್ತಿದ್ದಿತ್ತು (ಕೋಲಶಾಂ. ೩೮-೨೭). **ಗುಂತು :** ೯. ಗುಂತೇನ ಕೇಳ್ವುದು ಮಹಂತ ಕಾರಣತನು ವಿದೆಂತಿಹುದು ತಿಳಿಪೆನಲು (ಮನೋವಿ. ೩-೩೨) ; ಅದಱ ಗುಂತ ವಿವರಿಸಿ ನಿರೂಪಿಸುವುದೆನಲು (ಮನೋವಿ. ೫-೧೨). **ಗೊಂತು :** ೧. ತಿರುತಿರುಗಿ ಸುಳಿವ ಜಲಜಂತುಗಳ ಗೊಂ [ಪಾಠಾಂ. ಗಂ]ತುಗಳ ನೆರೆನೆರೆದು ಮುನಿಜನಂ ಸೇವಿಸುವ ಭಾವಿಸುವ ಗಂಗೆಗವನಿಜೆ ಬಂದಳು (ಜೈಮಿಭಾ. ೧೯-೫); ಕಳ್ಳರಿಹ ಗೊಂತುಗಳನರಿದರಿದು ಸಂಹರಿಸಿ (ತುರಂಗ. ೧೫-೪). ೨. ತದ್ವಿಷ್ಣು ನರನಂತೆ ಕೇಳಿದಂ ಜೀಯ ತಾಂ ತಪಿಸಲ್ಕೆ ಗೊಂತಾ [ಪಾಠಾಂ. ನೆಲನಾ] ವುದುಸು ರೆಂದನು (ಪರಶು. ೪೦-೮). ೩. ಇಂತು ಕೈಚಳಕದ ಬಿಲುಗಾಱತನ ಕಾಣ ಬಂತು ನೀನೆನಗಿದಿರ್ವಂದು ಗೊಂತಾಗಿ ನಿಲಬೇಡವೆನುತೆ ಕೂರ್ಗಣೆಯಿಂದೆ ಕಂತುವಿನೆರ್ದೆಯೊಳಿಕ್ಕಿದನು (ಮೋಹತ. ೦೨-೫೭). ೫. " ಲಾಯ, ಕೊಟ್ಟಿಗೆ, ತಬೇಲಿ (-ಯಲ್ಲಿಯ ಒಂದು ಅಂಕಣ, ಗೊಂತು) " (Stall. ಇಂಕನಿ) : ಗೊಂತಿಗೆ ಕಟ್ಟಿದ ದನಗಳು ಕೊಟ್ಟಿಗೆಯ ಗೋದಲಿಕೆಯಲ್ಲಿರುವ ಹುಲ್ಲು ತಿನ್ನುತ್ತಾ ಅಥವಾ ತಿನ್ನದೆಯೋ ನಿಂತಿವೆ (ನನ್ನೂರು. ೧೮). ೯. ಇವರ ಬಲವಂತಿಕೆಯ ನೋಳ್ಪೆನೆಂದೆನುತ ಲಕ್ಷವನೊಂದ ಗೊಂತರಿಯದಂತೆ ಶಾಖಾಗ್ರದೋಳ್ ಕಟ್ಟಿ ಧೊರೆಮಕ್ಕಳಿಗೆ ನೇಮಿಸಿದನು (ತುರಂಗ. ೧೦-೨೫); ಕರ್ಣ ನಮ್ಮೆಲ್ಲರಿಗೆ ಒಡಹುಟ್ಟಿದಾತನೆಂದು ಗೊಂತ ಹೇಳದೆ ಪೋದನು (ತುರಂಗ. ೯೫-೧೪). ೧೩. ನದಿಯಲ್ಲಿ ಆಳವಾದ ನೀರಿರುವ ಸ್ಥಳ ; ಮಡು : ಕೌರವನು ನಮ್ಮ ವಿಷಪ್ರಯೋಗದಲ್ಲಿ ಭ್ರಾಂತಿಗೊಳಿಸಿಯೆ ಗಂಗೆಯುತ್ತರ ಗೊಂತಿನಲಿ ಕೆಡಹಿದನು (ಸಂಭಪ. ೧೭-೪೨).

**ಗೊತ್ತಾಗು** = ಅರಿವಾಗು ; ತಿಳಿದುಬರು ; ಗಮನಕ್ಕೆ ಬರು : ನಮ್ಮ ತಂದೆ ನನ್ನ ಯೋಗ್ಯತೆಯನ್ನು ತೋರಿಸುವುದಕ್ಕೆ ಒಂದು ಸಮಯ ವನ್ನು ಒದಗಿಸಿಕೊಟ್ಟರೆ ಗೊತ್ತಾದೀತು (ಆರ್ಯಕ. ೩೫). **ಗೊತ್ತಾದ ಕಾಲ**= ನಿರ್ಣಯಿಸಿದ ಸಮಯ,-ಅವಧಿ : ಗೊತ್ತಾದ ಗುರಿಯನು ಗೊತ್ತಾದ ಕಾಲಕೆ ಮುಟ್ಟುವುದಾದರೆ ನೋಡು (ಇಂಚಾಪ.೯೨-೪೭). **ಗೊತ್ತಿಗೆ ಮುಟ್ಟು**= ಗುರಿಯನ್ನು ಸಾಧಿಸು : ಕನ್ನಡಕಲಿಯ ಅಮೋಘವಾದ ಸೈನ್ಯದ ಮುಂದೆ ತನ್ನ ಸೈನ್ಯವು ಗೊತ್ತಿಗೆ ಮುಟ್ಟುವದಿಲ್ಲೆಂದು ಅವನು ತಿಳಿದು ಕೊಂಡನು (ಈಶಸಂ. ೩). **ಗೊತ್ತಿಗೆ ಹಚ್ಚು, ಗೊತ್ತು ಹಚ್ಚು** = (ಉಕ) ೧. ಕೆಡಿಸು ; ನಾಶಪಡಿಸು ; "ಹಾಳುಮಾಡು" (ಜಾನಕೋ. ೫೦) : ಮುಸಲ್ಮಾನರು ಆರ್ಯಾವರ್ತವನ್ನೆಲ್ಲ ಗೊತ್ತಿಗೆ ಹಚ್ಚಿದರು (ಕಸಿಂಹಾ. ೨೨); ಮುತ್ತುರತ್ನದ ಒಡವೆಗಳನ್ನು ಗೊತ್ತಿಗೆ ಹಚ್ಚಿದನು (ಜಯಂತ. ೩೪೮) : ಇವನನ್ನೂ ಇವನ ಕಿಶೋರಿಯನ್ನೂ ಗೊತ್ತಿಗೆ ಹಚ್ಚದಿದ್ದರೆ ನನ್ನ ಹೆಸರು ಗೌಹರಳಲ್ಲ (ಕೂತಕಾ. ೪೯) ; ನೀನು ಆ ಒಡವೆಗಳನ್ನೆಲ್ಲ ಒಂದೊಂದೇ ಎಂದು ಒಂದೆರಡು ವರ್ಷಗಳಲ್ಲಿ ಗೊತ್ತುಹಚ್ಚಿಬಿಟ್ಟೆ (ಅಂಬಿಕೆ. ೧೭). ೨. ಪತ್ತೆ ಹಚ್ಚು ; ಕಂಡುಹಿಡಿ : ತಾನು ಕಂಡಿದ್ದ ಆ ಸೂಕ್ಷ್ಮಜೀವಾಣುಗಳೇ ಮಾನವನ ರೋಗಕಾರಣವೆಂದೂ, ಅವುಗಳನ್ನು ಗೊತ್ತುಹಚ್ಚುವ ಬಗೆ ಹೇಗೆಂದೂ ನಿರಂತರ ಯೋಚಿಸುತ್ತಿದ್ದನು (ವಿಕಾಸ.೫೩). **ಗೊತ್ತಿಗೆ ಹತ್ತು**= ಗೊತ್ತಿಗೆ ಮುಟ್ಟು : ಮಹಾರಾಜ, ಹೀಗೆ ಮಾಡಿದರೆ ಗೊತ್ತಿಗೆ ಹತ್ತ ಲಾರದು (ತುಳಸಿ. ೨೯೭). **ಗೊತ್ತಿನವ** = ೧. ಯಾವುದಾದರೊಂದು ಪ್ರತ್ಯೇಕ ಕೆಲಸಕ್ಕೆ ಗೊತ್ತುಮಾಡಲ್ಪಟ್ಟವನು; ನಿಯುಕ್ತನಾದ ವ್ಯಕ್ತಿ : ಗೂಢಚಾರ : ಹೊಡಸಿದ ರಣಭೇರಿ ನಡೆಸಿದರಾನೆಯ ಬಿಡದೆ ಬಂದರು ಗೊತ್ತಿನವರು (ಸೌಂದಕಾ. ೭-೫೭). ೨. ತಿಳಿವಳಿಕೆಯುಳ್ಳವನು: ಭೂವರಂ ಕೊಡಂವುದರೊಳೊಂದೊಂದು ಗೊತ್ತಿನವನೀವಗೆಯೊಳೊರದೆಯಿದರೇಳ್ಗೆ ಯತಿಶಯವನ್ನು (ಕೃಷ್ಣವಿ. ೨-೪೮). **ಗೊತ್ತಿನವು** = ಪರಿಚಿತವಾದುದು ; ತಿಳಿದುದು : ದಟ್ಟಡವಿಗಳು, ಗುಡ್ಡಗಳು, ಕಂದರಗಳು, ಓರೆಗಳು ನಮಗೆ ಪೂರಾ ಗೊತ್ತಿನವಾಗಿರುವುದರಿಂದ ನಾವು . . . ತಮ್ಮನ್ನು ಬೇಟೆಯಾಡ ಲಿಕ್ಕೆ ಕರೆದೊಯ್ಯು . . . ತೋರಿಸುವೆವು (ತುಳಸಿ. ೧೫೦). **ಗೊತ್ತಿರು** = ತಿಳಿದಿರು; ಪರಿಚಯವಾಗಿರು : ಗೊತ್ತು ಗೊತ್ತಿರದೊತ್ತಲೆಲ್ಲಿ ? (ಗೀವಿಂ. ೬೩-೧೫) ; ಆರಂಭದಲ್ಲಿ ವಚನಗಳ ವಾಙ್ಮಯದ ವಿಸ್ತಾರವು ನನಗೆ ಗೊತ್ತಿ ದ್ದಿದ್ದಿಲ್ಲ (ವಚಶಾ. I, ೮ ಪ್ರಸ್ತಾವನೆ). 'ಗಂಜುತು' ಪರಾ.

[ ದೇ.॥ ತುಳು. ಗೊತ್ತು, ಗೊಂತು ; ತೆಲು. ಗೊತ್ತು ]

**ಗೊತ್ತುಕೂರು** (ಕ್ರಿ). ಗೂಡು ಸೇರು ; ಇಕ್ಕೆಯನ್ನು ಸೇರಿಕೊಳ್ಳು : ಗೊತ್ತುಕೂರಲು ನೆರೆಯುತ್ತಿವೆ ಹಕ್ಕಿಹಿಂಡು (ಮಲೆನಾ. ೨೭೫).

[ ಗೊತ್ತು + ಕೂರು$_2$ (<ಕೂರ್$_3$) ]

**ಗೊತ್ತುಗಾತಿ** (ನಾ). ಗೂಢಚರ್ಯೆ ನಡೆಸುವವಳು ; ಗೂಢಚಾರಿಣಿ : "ಸಂಗತಿಯೇನು ಉಪಾಯವಾಗಿ ತಿಳಿದು ಬಾ" ಎಂದು ಗೊತ್ತುಗಾತಿ ಯನ್ನು ಕಳುಹಿದಳು (ಚಿಕ್ಕರಾ. ೩೪೨). [ ಗೊತ್ತು + - ಕಾತಿ$_6$ ]

**ಗೊತ್ತುಗಾರ, ಗೊಂತುಗಾರ** (ನಾ). ೧. ಪರಿಚಿತನಾದವನು : (+). ೨. ಯಜಮಾನ; ಮುಖ್ಯಸ್ಥ; ನಾಯಕ : ಸೇನೆಗಳ ಗೊತ್ತುಗಾರರಿಗೆ ಮತ್ತಿರುವ ಸೈನಿಕರಿಗೆ . . . ಕೋಟ್ಯಂತಮಾದ ಧನವಂ ಕಾಲಮೇಘದಂತೆ ವರ್ಷಿಸಿ (ಸೌಗಂಧಿ. ೧೩೨-೨೦) ; ಕತ್ತಿಯ ಕರದೊಳು ಪಿಡಿದು ಸಾಲಾಗುತ ಗೊತ್ತುಗಾರರು ಪೇಳಿದಂತೆ ವತ್ತಾಗಿ ನಿಂದಿಹ ವೀರರಾ ಪುರದೊಳು ಬಿತ್ತುವರತಿಭೀತಿಗಳನು (ಸೌಗಂಪ. ೧-೮) ; ವೀರಬಾಹುವು ಕಾಶೀಪಟ್ಟಣದ ಸುಡುಗಾಡಿಗೆ ಗೊತ್ತುಗಾರನಾಗಿದ್ದನು (ನೀತಿಚಿಂ. V, ೧೬). ೩. ಗೂಢ ಚಾರ : ಚಾವಡಿಯ ಹೆಗ್ಗಡೆ ಕರಣಿಕರು ಗೊತ್ತುಗಾರರು ಕುರಿಹಿನವರು – ಅವರಿಗೆಲ್ಲ ನಿಮ್ಮ ಗುರುತು ಮರೆಯದಿರುವುದಷ್ಟೆ ? (ಬಿಟ್ಟಿಅ. ೫೫-೭). **ಗೊಂತುಗಾರ :** ೧. ಕೊಡಗು ಮುಂದಿಗೆ ಗೊಂತುಗಾರರಾಗಿ ಇರುವಂಥ ವರು ರಾಜರ ಬಳಿಗೆ ಬಂದು (ರಾಜೇಂದ್ರ. ೩೩).

[ ಗೊತ್ತು + - ಕಾರ$_1$ (<-ಕಾಱ) ]

**ಗೊತ್ತುಗುರಿ** (ನಾ). ನಿಶ್ಚಿತವಾದ ಉದ್ದೇಶ ; ಸ್ಥಿರವಾದ ಲಕ್ಷ್ಯ : ಇಲ್ಲಿ ಬಂದಿರುವ ಹದಿನಾಲ್ಕು ಕತೆಗಳ ಅಭ್ಯಾಸದಿಂದ ಹೊಸಕತೆಗಳ ಗೊತ್ತುಗುರಿ ಏನೆಂಬುದು ಸ್ವಲ್ಪಮಟ್ಟಿಗಾದರೂ ತಿಳಿಯುವಂತಾದರೂ ಸಾಕು (ಹೊಸಕ್ಷೆ. ೨೮೦) ; ಅವನು ನನ್ನ ಸಮ್ಮತಿಗಾಗಿ ಹಾಗೂ ಸಲಹೆಗಾಗಿ ಕಾದಿದ್ದಾನೆ. ಇದರ ಗೊತ್ತುಗುರಿ ನಿನಗೆ ಸೇರಿದ್ದೆಂದು ಅವನಿಗೆ ತಿಳಿಸಿದ್ದೇನೆ (ಪುನರು. ೫೪೫). **P** ಇದು ಒಂದೇ ಅರ್ಥದ ಎರಡುಶಬ್ದಗಳು ಸೇರಿ ಆಗಿರುವ ರೂಪ. [ ಗೊತ್ತು + ಗುರಿ$_1$ (<ಕುಱಿ$_2$) ]

**ಗೊತ್ತುಗೆಡು** (ಕ್ರಿ). ಗುರಿಯಿಲ್ಲವಾಗು ; ಉದ್ದೇಶಹೀನವಾಗು : ಭಕ್ತಿ ಯಿಲ್ಲದ ಶಿಷ್ಯ ಗೊತ್ತುಗೆ[ಪಾಠಾಂ. ಗೊತ್ತಿಕೊ]ಟ್ಟುಪದೇಶ ಬತ್ತಿದ ಕೆಱೆಯ ಬಯಲಲ್ಲಿ ರಾಜಾನ್ನ ಬಿತ್ತಿ ಬೆಳೆದಂತೆ (ಸರ್ವಜ್ಞ. ೭೬).

[ ಗೊತ್ತು + ಕೆಡು$_1$ ]

**ಗೊತ್ತುಗೆಯ್** (ಕ್ರಿ). ಯಾವುದಾದರೂ ಕಾರ್ಯಕ್ಕಾಗಿ ನಿಯೋಜಿಸು: ನಾರದಂಗೆ ಪೇಳ್ ಬಿಜ್ಜೆಯಂ ಪೇಟಿ ಸತ್ಯಭಾಮೆಯಂ ಗೊತ್ತುಗೆಯ್ದಂ (ಅದ್ಭುತ. ೨೭-೨೩). [ ಗೊತ್ತು + ಕೆಯ್$_1$ ]

**ಗೊತ್ತುಪಡಿಸು** (ಕ್ರಿ). ನಿಗದಿಮಾಡು ; ನಿಷ್ಕರ್ಷಿಸು ; ನಿರ್ಧರಿಸು : ಸಾಮಾನ್ಯವಾಗಿ ಅವರಿಗೆ ಜೋಡಿಕಚೇರಿಗಳನ್ನು ಗೊತ್ತುಪಡಿಸುತ್ತಿದ್ದರು (ಸಂಗೀತ. ೬); ಆದರೆ, ಈ ಮಧ್ಯಸ್ಥಿತಿಯನ್ನು ಅಥವಾ ಮಿತಿಯನ್ನು ಗೊತ್ತುಪಡಿಸುವುದು ಬಹುಕಷ್ಟ (ಇಸ್ಲಾಂಸಂ. ೨೩೭).

[ ಗೊತ್ತು + ಪಡಿಸು ]

**ಗೊತ್ತುಪಾಡು** (ನಾ). ಏರ್ಪಾಟು ; ವ್ಯವಸ್ಥೆ : ಆಚರಣೆಯಲ್ಲಿಡಲ್ಪಟ್ಟಿರುವಂಥ ಯಾವುದಾದರೂ ಸಂಧಿ, ಕರಾರು, ಒಡಂಬಡಿಕೆ, ಗೊತ್ತುಪಾಡು, ಸನ್ನದು ಅಥವಾ ಅಂಥ ಇತರ ದಸ್ತಾವೇಜುಪತ್ರದಲ್ಲಿರುವ ಯಾವುದಾದರೂ ಉಪಬಂಧದಿಂದ ಹುಟ್ಟಿರುವುದೋ ಆ ವಿವಾದಕ್ಕೆ (ಭಾಧಾನ. ೬೧) : ಒಂದು ಗೊತ್ತುಪಾಡು ಇಲ್ಲದಿದ್ದರೆ, ಪ್ರತಿಯೊಬ್ಬನೂ ತನಗೆ ಇಷ್ಟ ಬಂದಂತೆ ನಡೆಯುತ್ತಾನೆ (ರಾಜ್ಯಶಾ. ೪೪). [ ಗೊತ್ತು + ಪಾಡು$_3$ ]

**ಗೊತ್ತುಮಾಡು, ಗೊಂತುಮಾಡು** (ಕ್ರಿ). ೧. (ವಾಸಸ್ಥಳವನ್ನಾಗಿ) ನಿರ್ಧರಿಸು ; ನಿರ್ಣಯಿಸು; ನಿಗದಿಮಾಡು : ವನಾಂತರಮನೆ ಗೊತ್ತುಮಾಡಿ ಭರದಿಂ ತ ಳ ರ್ದ ರ್ ತ್ತ ಧಿ ರಾ ಜ ಕುಂ ಜ ರಂ (ಅನಂಪು. ೩-೧೦೪). ೨. ವಿವಾಹಸಂಬಂಧವನ್ನು ಹೊಂದಿಸು : ಮಗನಿಗೆ ಸರಿಯಾದ ಕಡೆ ಹೆಣ್ಣು ಗೊತ್ತುಮಾಡಿದ್ದಾರೆ (ರೂಢಿ). **ಗೊಂತುಮಾಡು : ೨.** ನೃಪ ತಾಂ ತಿಳಿದು ಭೂಕಾಂತವತ್ಸಗೆ ಗೊಂತುಮಾಡಿಹ (ರತ್ನಾಕ. ೬).

[ ಗೊತ್ತು + ಮಾಡು$_1$ ]

**ಗೊತ್ತುಮುಟ್ಟು** (ಕ್ರಿ). ಗೊತ್ತಾದ ಸ್ಥಳವನ್ನು ಸೇರು; ಗುರಿಮುಟ್ಟು : ಉದಕದಲ್ಲಿ ತೊಳೆದು ಕಂಡಿಹೆನೆಂದಡೆ ಮಲಿನದವನಲ್ಲ ಪುಷ್ಪದಲ್ಲಿ ಹೊದಿಸಿ ಕಂಡಿಹೆನೆಂದಡೆ ಹೊ ತ್ತಿ ನ ವೇ ಳೆ ಗೆ ಬಂದು ಗೊತ್ತುಮುಟ್ಟುವನಲ್ಲ (ಮೋಳಿಮಾ. ೯೦-೩೫೮). [ ಗೊತ್ತು + ಮುಟ್ಟು$_1$ ]

**ಗೊತ್ತುಮೆಟ್ಟು** (ಕ್ರಿ).=ಗೊತ್ತುಮುಟ್ಟು: ಗೊತ್ತುಮೆಟ್ಟಿ ದಾಂಟಿ ಹುಟ್ಟದೆ ಹೋದ ಪರಿಯ ನೋಡಾ (ಅವವ. ೩೩-೯೮). [ ಗೊತ್ತು + ಮೆಟ್ಟು$_1$ ]

**ಗೊತ್ತುವಳಿ** (ನಾ). ಠರಾವು ; ನಿರ್ಣಯ : ಆದುದರಿಂದ ಗೊತ್ತುವಳಿ (ಠರಾವು)ಗಳಿಗೆ ಬೆಲೆ ಕಡಿಮೆ (ದಾಬುತ್ತಿ. ೫) ; ಈ ಕಮಿಟಿಯ ಕಾರ್ಯದರ್ಶಿಗಳಾಗಿ ಕರ್ಣಾಟಕದಲ್ಲಿ ಕೆಲಸಮಾಡಬೇಕೆಂದು ಗೊತ್ತುವಳಿ ಮಾಡಿದರು (ಸೇನಾಹ. ೪೬). [ ಗೊತ್ತು + – ವಳಿ$_1$ ]

**ಗೊತ್ತುಹಾಕು** (ಕ್ರಿ). ಪತ್ತೆಹಚ್ಚು ; ಕಂಡುಹಿಡಿ : ಬರೆದವಳ್ಳಿಯಲ್ಲಿ ಯಿಥಾರು ಯಂತ ಗೊತ್ತುಹಾಕಿ ಹಿಡಿಯಲಿಕೆ ಬಂದಲ್ಲಿ (ಎಕ. VIII, ಸಾಗರ. ೪೬-೩೨; 1646 ? ). [ ಗೊತ್ತು + ಹಾಕು (<ಪಾಯ್ಕು$_1$) ]

**ಗೊದಮ$_1$** (ನಾ). ೧. ರಥದ ವೇಗವನ್ನು ತಡೆಯಲು ಮತ್ತು ರಥವನ್ನು ಪಕ್ಕಕ್ಕೆ ತಿರುಗಿಸಲು ಬಳಸುವ ಮರದ ಸಾಧನ,– ಕೊರಡು,– ತಡೆಮರ : "(ಇಳಿಜಾರಿನಲ್ಲಿ ಬಂಡಿಯ ಗಾಲಿ ಉರುಳಿಹೋಗದಂತೆ ತಡೆಯಲು ಗಾಲಿಯ ಮುಂದೆ ಇಡುವ) ತಡೆಮರ, ಗೊದಮ " (Scotch. ಇಂಕನಿ) : ತೇರಿಗೆ ಹಿಂದುಗಡೆ ಹೆದ್ದ ಹೇಗೆ ಮುಖ್ಯವೋ ಮುಂದುಗಡೆ ಗೊದಮ ಹಾಗೆಯೇ ಮುಖ್ಯ (ಗರುಡಾ. ೬೪). ೨. ದಪ್ಪವಾಗಿರುವ ವ್ಯಕ್ತಿ: ಅವನು ಒಳ್ಳೆಯ ಗೊದಮ (ರೂಢಿ).

**ಗೊದಮಹಾಕು**=ತಡೆಯಿಡು; ಅಡ್ಡಿಮಾಡು : ಇನ್ನೇನು ಲಗ್ನಪತ್ರಿಕೆ ಆಗಬೇಕಿತ್ತು. ಸೋದರಮಾವ ಬಂದು ಗೊದಮಹಾಕಿಬಿಟ್ಟ (ರೂಢಿ).

[ ದೇ.॥ ತುಳು. ಕೊದಮೆ, ಗೊದಮೆ=ಹೆಡ್ಡ ]

**ಗೊದಮ$_2$** (ನಾ).=ಗೊದವೊಟ್ಟೆ$_2$ : ಗೊದಮ ಕಪ್ಪೆಯಾಗುತ್ತಿತ್ತು ; ಹುಳು ಚಿಟ್ಟೆಯಾಗುತ್ತಿತ್ತು (ಪುನರು. ೫೨೭). [ ? ]

**ಗೊದಮಟ್ಟೆ$_1$** ' ಗೊದವೊಟ್ಟೆ$_2$ ' ನೋ.

**ಗೊದಮಟ್ಟೆ$_2$, ಗೊದವೊಟ್ಟೆ$_1$** (ನಾ). ತೆಂಗಿನ ಗರಿಯ ಬುಡದ ತುಂಡು; ಹೆಡೆಮೊಟ್ಟೆ : ಸೌದೆಗಾಗಿ ಅವರಿಗೆ ವಿಶೇಷ ಖರ್ಚಿಲ್ಲ, ಗೊದಮಟ್ಟೆಗಳೇ ಏಳೆಂಟು ತಿಂಗಳಿಗಾಗುವಷ್ಟು ಉರುವಲಾಗುತ್ತದೆ(ರೂಢಿ). **ಗೊದವೊಟ್ಟೆ$_1$:** ಗೊದವೊಟ್ಟೆ ಒಳ್ಳೆಯ ಉರುವಲು (ರೂಢಿ). [<ಗೊದಮು$_1$+ಮಟ್ಟೆ$_1$]

**ಗೊದವೊಟ್ಟೆ$_1$** ' ಗೊದಮಟ್ಟೆ$_2$ ' ನೋ.

**ಗೊದವೊಟ್ಟೆ$_2$, ಗೊದಮಟ್ಟೆ$_1$**(ನಾ). (ಬಾಲವುಳ್ಳ) ಮರಿಗಪ್ಪೆ; ಬಾಲದ ಕಪ್ಪೆ. 'ಗೊದವೊಟ್ಟೆಮರಿ' ಪರಾ. **ಗೊದಮಟ್ಟೆ$_1$:** ಕೆಲವು ಕಪ್ಪೆಗಳು ಆಗಾಗ ವಟಗುಟ್ಟಿ ಹಾರಾಡುತ್ತಿದ್ದುವು. ಗೊದಮಟ್ಟೆಗಳ ಕರಿಹಿಂಡುಗಳೂ ಅಲ್ಲಲ್ಲಿ ಮುಲುಗುಟ್ಟುತ್ತಿದ್ದುವು (ಕಾನೂರು. ೨೦).

[ <ಗೊದಮು$_2$ + ಮೊಟ್ಟೆ$_1$ ]

**ಗೊದವೊಟ್ಟೆಮರಿ** (ನಾ). ಬಾಲದ ಕಪ್ಪೆಯ ಮರಿ : " (ಮೊಟ್ಟೆಯನ್ನು ಬಿಟ್ಟು ಹೊರಬಂದ ಕಾಲದಿಂದ ಕಿವಿರುಗಳೂ ಬಾಲವೂ ಬಿದ್ದುಹೋಗುವವರೆಗಿನ ಆದ್ಯವಸ್ಥೆಯ) ಕಪ್ಪೆ (ಜಾತಿ)ಯ ಗೊದವೊಟ್ಟೆಮರಿ " (Tadpole. ಇಂಕನಿ). [ ಗೊದವೊಟ್ಟೆ$_2$ + ಮರಿ (<ಮಱಿ) ]

**ಗೊದಳೆ** (ನಾ). ಒಂದು ಜಾತಿಯ ಮೀನು : ಸಿಸಿಲು ಬೊಂಪು ಸವಿವಾಯ ಗೊದಳೆ ./. . ಆನೆಮೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದರು (ಹಜಕಾ. ೫-೪೫) ; ಸಸಿಲ್ಗೊದಳೆಮೀನ್ಬೊಂಬೊಪ್ಪುಮೀನ್ಸಂದಿಮೀನ್ಸೆಟ್ ಮೀನ್ಬಗ್ಗಡೆ ಬಣ್ಣಮೀನೆನಿಪಿವೆಲ್ಲಂ ಬೀಳ್ದುವಾ ತಾಣದೊಳ್ (ರಾಜಶೇ. ೫-೧೦೫). ' ಗೋಜಳೆ ' ಪರಾ. [ ? ]

**ಗೊದಾಮು** ' ಗುದಾಮುಂ ' ನೋ.

**ಗೊದುರಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕೊಡಿಮರಹುಲ್ಲು, ಗೊದುರಹುಲ್ಲು, ಜರಿಹುಲ್ಲು, ನೊಸೆಹುಲ್ಲು (ವೃಜಿಗಿ. ೩೪-೬೫೪).

[ ಗೊದುರ ? + ಹುಲ್ಲು (<ಪುಲ್) ]

**ಗೊದ್ದ$_1$** ' ಗೋದ$_1$ ' ನೋ.

**ಗೊದ್ದ$_2$** (ನಾ). ಕರಿಯ ಬಣ್ಣದ ದೊಡ್ಡ ಇರುವೆ; ದಪ್ಪ ಕಟ್ಟಿರುವೆ: ಜಿಗುಳೆ ಕೆಂಜಿಗ ಕಟ್ಟಿಬುಹೆಯೋತಿಯು ಗೊದ್ದ ನೆಗೆವ ಹಾವರಣೆ . , . ವಿಗಡದೆ ಪರಿದಾಡುತಿಹುವು (ಕಂಸವಿ. ೧೮-೫೦) ; ಮಹಡಿಯ ಮೇಲೆ ನಿಂತವರ ಕಣ್ಣಿಗೆ ಕರಿಯ ಗೊದ್ದದ ಸಾಲು ಕಂಡಂತೆ ಕಿಕ್ಕಿರಿದ ಜನಗಳ ತಲೆಗಳು ಕಾಣುತ್ತಿತ್ತು (ಕೊನೆಫೀ. ೨೭೪); ಗೊದ್ದಗಳನ್ನು ಓಡಿಸಿ ಮೂರು ಸಾರೆ ಕಾಲು ತಪ್ಪಿ ಬಿದ್ದು, ಗಿಡ ಏರಿದ್ದಿರಲ್ಲವೇ? (ಕುರಿಹಿಂ. ೬೩). [ ? ]

**ಗೊದ್ದ$_3$** (ನಾ). ಒಂದು ಬಗೆಯ ಮರ : "ನಿರ್ಮಜ್ಜವೆನೆ ಗೊದ್ದ[ಪಾಠಾಂ. ಗೊಡ್ಡ, ಗೋದ]ವಕ್ಕು" (ಮಂಗರಾ. ೩೫-೧೪): ಬೂರಗ, ಅಂಬಟೆ, ಗೊದ್ದ, ಅಶ್ವತ್ಥ ಮೊದಲಾದ ಮರಗಳು ಈ ಕೆಲಸ ಮಾಡುವುವು (ಬಾಲಪ್ರ. I, ೩೭೦). [ ? ]

**ಗೊನಜಾಲಿ** (ನಾ). ಒಂದು ಬಗೆಯ ಗಿಡ : ಅಡಕುಪುಟ್ಟನಗಿಡ . . . ಗೊನಜಾಲಿ, ರಕ್ತಪುನರ್ನವ (ವೃಜಿಗಿ. ೧೩-೨೩೧).

[ ಗೊನ ? + ಜಾಲಿ$_1$ ]

**ಗೊನಮರ** ' ಗೋನುಮರ ' ನೋ.

**ಗೊನುಮರ** ' ಗೋನುಮರ ' ನೋ.

**ಗೊನೆ$_1$** ' ಕೊನೆ$_1$ ' ನೋ.

**ಗೊನೆ$_2$** ' ಕೊನೆ$_2$ ' ನೋ.

**ಗೊನೆ$_3$** ' ಗೊಲೆ$_2$ ' ನೋ.

**ಗೊನೆಕಾರ** ' ಗೊನೆಗಾರ ' ನೋ.

**ಗೊನೆಗಾರ, ಗೊನೆಕಾರ** (ನಾ). ತೆಂಗು, ಅಡಕೆ ಮೊದಲಾದ ಕಾಯಿಗಳ ಗೊನೆಗಳನ್ನು ಕೊಯ್ಯುವವನು : (ಕ). **ಗೊನೆಕಾರ :** ಅಡಕೆಮರವಾಗಿ ನಿಂತಿದ್ದಳ್ ಹುಡುಗಿ ಅಡಕೆಮರವಾಗಿ ನಿಂತಿರೋ ಹೊತ್ತಿಗೆ ಗೊನೆಕಾರನಾಗಿ ಬಂದ್ ತಲೆ ಕುಯ್ದನ್ ಹುಡುಗ (ನಾಪದ. ೩೬). ' ಕೊನೆಕಾಱ ' ಪರಾ. [ ಗೊನೆ$_3$ (<ಗೊಲೆ$_2$) + – ಗಾರ (< – ಕಾಱ) ]

**ಗೊನೆಗೊಳ್** ' ಗೊಲೆಗೊಳ್$_2$ ' ನೋ.

**ಗೊನೆಫಲ$_1$** (ನಾ). ಕೊನೆಯಲ್ಲಿರುವ ಫಲ ; ತುದಿಯಲ್ಲಿರುವ ಹಣ್ಣು : ಬೇರಿಗಿವನು, ಗೊನೆಫಲದಲಿವನು, ನಡುಮೈಯೊಳಿವನೆ ಇವನು ಮೂಲ ಮಧ್ಯಮತ್ತಗ್ರದಲ್ಲಿ ಒಂದಾದಮೂರ್ತಶಿವನು (ಮುಕ್ತಕಂ. ೬೭-೫).

[ ಗೊನೆ$_2$ (<ಕೊನೆ$_2$) + ಫಲ ]

**ಗೊನೆಫಲ₂** (ನಾ). ಗೊಂಚಲಾಗಿರುವ ಕಾಯಿ ಅಥವಾ ಹಣ್ಣು: ದೇವರ ಮುಂದೆ ಗೊನೆಫಲ ಕಟ್ಟಬೇಕು (ರೂಢಿ).
[ ಗೊನೆ₃ (<ಗೊಲ್ಲೆ₂) + ಫಲ ]

**ಗೊನೆಮಿಂಚು** (ನಾ). ಗೊಂಚಲಿನ ಆಕಾರದ ಮಿಂಚು; ಬಳ್ಳಿಮಿಂಚು: ವಜ್ರದೇಹಿಗಳೆಂದೆ ಗೊನೆಮಿಂಚೊ ಎನೆ ಕಂಡೆ (ಗಿರಿ. ೫೨-೧೭).
[ ಗೊನೆ₃ (<ಗೊಲ್ಲೆ₂) + ಮಿಂಚು₃ ]

**ಗೊನೆವಾಳೆ** (ನಾ). ಗೊನೆ ಬಿಟ್ಟಿರುವ ಬಾಳೆ: ಬೇಗಿ ಬೆಳೆದ ಗೊನೆ[ಪಾಠಾಂ. ಕೊನೆ]ವಾಳೆಯಂತೆ ಬಾಗಿಕೊಂಡಿದ್ದರೆ ಬೇಡಿದ ಪದವಿಯನೀವ ಕೂಡಲ ಸಂಗಮದೇವ (ಬಸವ. ೦೮೯).
[ ಗೊನೆ₃ (<ಗೊಲ್ಲೆ₂) + ಬಾಳೆ₁ (<ಬಾೞೆ₂) ]

**ಗೊನೆಹ** (ನಾ). ೧. ಬಿಂಕ; ಗರ್ವ; ಹೆಮ್ಮೆ: ಅನುಕಾಲ ನಿನ್ನನೆ ಬಯಸಿ ನೀ ಬಹ ದಾರಿಯನೆ ನೋಡಿ ಸಾರ್ದೀಗ ಮಣಿದ ಇನಿಯಳ ಕೈವಿಡಿಯದೆ ನೋಡುತಿಹ ನಿನ್ನ ಗೊನೆಹವೇತಱದೊ ನಿಷ್ಕರುಣಿ (ಭರಜ. ೭೮-೧೩೮). ೨. ಬಯಕೆ; ಅಪೇಕ್ಷೆ; ಆಸೆ: ಅಱದಳಾಗ ಚಿತ್ರ ಕುಸುಮಾಜಿಯೊಳು ತನಗೆಱಕವಾಯ್ತಾಕೆಯ ಮನೆಗೆ ಒಱಗಲೆಯ್ದುವೆನೆಂಬ ಗೊನೆಹವಿದೆಂದದನ ಮಱಸಿಕೊಂಡಿಂತು ನುಡಿದಳು (ಭರಜ. ೮-೬೮).
[ ಗೊನೆ₁ (<ಕೊನೆ₁) + -ಹ₂ ]

**ಗೊನೆಹಕಾತಿ** (ನಾ). ಬಿಂಕಗಾತಿ; ಗರ್ವಿಷ್ಠೆ: ಮನದೊಳುಲ್ಲಾಸ ಮೈಯೊಳಗೆ ಪರಾಕೆಂದ ತನಗೆಱಗಿದ ಪೆಣ್ಣ ನೋಡಿ ಮೊನೆಗಾತಿ ಬಲು ಮೋಡಿಗಾತಿ ಮುಱುಕಗಾತಿ ಗೊನೆಹಕಾತಿ ಮಮ್ಮಾಯೆಂದಾ (ಭರಜ. ೯-೧೩೬).
[ ಗೊನೆಹ + -ಕಾತಿ₂ ]

**ಗೊನೋರಿಯ** (ನಾ). ಒಂದು ವಿಧವಾದ ಮೇಹರೋಗ; ಶುಕ್ಲ ದೋಷ: ಇದು ಗೊನೋರಿಯ ಎನ್ನುವ ಮೇಹವ್ಯಾಧಿಯಿಂದುಂಟಾಗುವ ಕಣ್ಣಿನ ರೋಗ (ನಿಮ್ಮದ್ರ. ೧೧೩). [←ಇಂ. Gonorrhoea]

**ಗೊನ್ನಿ** 'ಗೊಣ್ಣೆ' ನೋ.

**ಗೊನ್ನಿಹುಳ** 'ಗೊಣ್ಣೆವುೞು' ನೋ.

**ಗೊನ್ನೂರು** (ಕ್ರಿ). ನೆಲಸು; ಸ್ಥಿರವಾಗಿರು; ಸ್ಥಳಬಿಡದಿರು: ಪರಮನುಂ ಸರ್ವರೊಳಗೆ ಗೊನ್ನೂರಿಕೊಂಡಿಹಂ (ಪರಶು. ೩೩-೩೯); ಸೊನ್ನಾರಿಯಂತೆ ಕೊಟ್ಟೊಡವೆಯಂ ಛಿದ್ರಿಸುತ ಗೊನ್ನೂರಿ ಜೂಜಿನವನಂತೆ ಗೆಲ್ಲಮನರಸಿ (ಲಿಂಗಪು. ೨೫-೩). [ ? + ಊರು₁ (<ಊಱು₁) ]

**ಗೊಪೆ** 'ಗೋಪೆ' ನೋ.

**ಗೊಪೆಯ** (ನಾ). (?) : ಯಿಂತಪುದಕ್ಕೆ ಶ್ರೀಮದಸೇಸಮಹಾಜನಂಗಳ ಗೊಪೆಯ (ಎಕ. XIV, ಕೃಷ್ಣರಾ. ೨೮-೪೦ : ? ) [ ? ]

**ಗೊಪ್ಪೆ₁** 'ಕೊಪ್ಪೆ' ನೋ.

**ಗೊಪ್ಪೆ₂** 'ಗೋಪೆ' ನೋ.

**ಗೊಬಡಿ, ಗೊಡಬಿ** (ನಾ). ಗುಡಿಸಲು; ಜೋಪಡಿ: ಅಡಿಗೆ ನೀರು ತೀರಿಸಿ ಯಾಕೆ ನಿನ್ನ ಗೊಬಡಿ ಸೇರುವದಿಲ್ಲ (ದೀಪನಿ. ೫೮); ದೊಡ್ಡವರ ನೆರಳಲ್ಲಿರುವುದಕ್ಕಿಂತ ತನ್ನ ಗೊಬಡಿಯೇ ಲೇಸು (ಗಾದೆ). **ಗೊಡಬಿ:** ಎಡಬಲವ ನೋಡಿ ಆರಱಯದಂತೇಕಾಂತ ಗೊಡಬಿಯೊಳಗಾತನಂ ಕರೆದೊಯ್ದು ಕಡುಗದಿಂ ಕಡಿದು ತುಂಡಿಸಿ (ಪ್ರಾರ್ಥರಾ. ೧೪-೧೧).
[ ← ಮರಾ. ಝೋಪಡೀ, ಖೋಪಟ, ಖೋಪಟೀ ]

**ಗೊಬ್ಬರ₁** (ನಾ). ೧. ಜಾನುವಾರುಗಳ ಸಗಣಿ, ಗಂಜಲ, ಮರಗಳ ಎಲೆ ಮೊದಲಾದ ಪದಾರ್ಥಗಳಿಂದ ಸಿದ್ಧಪಡಿಸಿದ, ಪೈರುಗಳಿಗೆ ಬೆಳೆಯುವ ಶಕ್ತಿಯನ್ನೀಯುವ ವಸ್ತು: ಗೊಬ್ಬರದಿಂ ಬೆಳಸು ಪೆರ್ಚುವಂತೆ . . . ತಪೋನುಷ್ಠಾನದಿಂ ಪುಣ್ಯಂ ಪೆರ್ಚುಗುಂ (ಧರ್ಮಾಮೃ. ೧೪-೧೦೪); ಶ್ರೀಗುರುವೆಂಬ ಬೀಜವ ಬಿತ್ತಿ ಅಱವೆಂಬ ಗೊಬ್ಬರವನಿಕ್ಕಿ ಜ್ಞಾನವೆಂಬ ಉದಕವನೆಱೆಯಲಿಕೆ (ಸರ್ವವ. ೧೪೭-೭೦೨); ಸುರತವೆನಿಪ ವರಲತೆಗೆ ಗೊಬ್ಬರಮನಂದಿರದಿಕ್ಕುವ ಮಾಟಕ್ಕೆಯಲಿ ಸುರುಚಿರಮೃಗನಾಭಿವೆರಸು ಚಂದನಮಂ ತಮ್ಮುರಗಳೊಳಗೆ ಚರ್ಚಿಸಿದರು (ಅಂಜಚ. ೮-೧೦೯); ಗಗನಮೆನಿಪ್ಪ ಪಾಳ್ವೊಲದೊಳ್ . . . ಸಂಜೆಯೆಂಬಗಿನಿಯನಿಟ್ಟು ಮರ್ಬೆನಿಪ ಗೊಬ್ಬರವಂ ತಳಿದು (ರಾಜಶೇ. ೧೧-೬೮); ಕೆಚ್ಚು ಕಾರುಳ್ಳವನು ಹುಬ್ಬು ನೇರುಳ್ಳವನು ಗೊಬ್ಬರದ ಗಾಡಿ ಹೊಡೆಯೋನು ಅಣ್ಣಯ್ಯ ಹುಬ್ಬಿಗಿನ್ನೊಂದು ಸರಿಯುಂಟೆ (ಹಳ್ಳಿಹಾ. ೫); ದನ ತಿಂಬುವನಿಗೆ ಗೊಬ್ಬರ ದಾಣೆ (ಗಾದೆ). ೨. ಒಣಗಿದ ಸಗಣಿ; ಬೆರಣಿ; ಕಾಡುಕುರುಳು: ಗೊಬ್ಬರದ ಕಿಚ್ಚು ಬಳಸಿಯುಂ ತಮ್ಮಂ ಸುಡೆ (ಪದ್ಮರಾ. ೧೯೨-೩); ಮರಗಳ ಮಂದಿರದಿ ಕುಳ್ಳಿರ್ದು ಗೊಬ್ಬರದಿಂದ ಬೇವುದು ಹಿಸುಣನಾಡುವ ಕೇಳ್ದಗಿದು ವಿಧಿಯು (ಸಂಭಪ. ೧೩-೭೨). ೩. ಬಳಕೆಗೆ ಬಾರದ ಕಸ, ಕಡ್ಡಿ ಮೊದಲಾದ ವಸ್ತು; ಪ್ರಯೋಜನವಿಲ್ಲದ ಪದಾರ್ಥ: ಗೊಬ್ಬರ ತುಂಬಿದ ಕಗ್ಗವಿಯಲ್ಲಿ (ಕವಿಸೋ. ೦೪-೯); ಕೆಟ್ಟು ಗೊಬ್ಬರವಾಗಿದೆ (ರೂಢಿ). [ <ಪ್ರಾ. ಗೋಬರ, ಗೋವರ. / ಸಂ. ಗೋವರ. / ತುಳು. ತೆಲು. ಗೊಬ್ಬರ ]

**ಗೊಬ್ಬರ₂** (ನಾ). ಚರ್ಮದಲ್ಲಿ ಕೆಂಪುಗುಳ್ಳೆಗಳೇಳುವ ಒಂದು ಬಗೆಯ ಅಂಟುರೋಗ; ದಡಾರ; ಗೋಣಿತಟ್ಟು: ಬೇಸಿಗೆಯಲ್ಲಿಯೂ ಚಳಿಗಾಲದಲ್ಲಿಯೂ ಮೈಲಿ, ಗೊಬ್ಬರ ಗಣಜಲಿಗಳ ಉಪದ್ರವು ಪಾಡಿಕೆಯಾಗಿ ಆಗುತ್ತದೆ (ಕಭಾಗೆ. ೪೦೫). [ ← ಮರಾ. ಗೋವರ್ ]

**ಗೊಬ್ಬರಮಚ್ಚೆ** (ನಾ). ಒಂದು ಜಾತಿಯ ದೊಡ್ಡ ಮೀನು: ಕಾನಡಾ ಜಿಲ್ಲೆಯಲ್ಲಿ ೧೯೫ ಜಾತಿಗಳ ಮೀನುಗಳು ದೊರೆಯುತ್ತವೆ. ಅವುಗಳಲ್ಲಿ ಗೊಬ್ಬರಮಚ್ಚೆಯೆಂಬ ಮೀನು ಯೆಲ್ಲಕ್ಕೂ ದೊಡ್ಡದು (ಕಭಾಗೆ. ೬೬).
[ ? ]

**ಗೊಬ್ಬಳಿ** 'ಗೊಬ್ಬುಳಿ' ನೋ.

**ಗೊಬ್ಬು₁** 'ಗಬ್ಬು₁' ನೋ.

**ಗೊಬ್ಬು₂** 'ಕೊರ್ವು₂' ನೋ.

**ಗೊಬ್ಬುನುಡಿ** (ನಾ). ಹೊಲಸುನುಡಿ; ಕೆಟ್ಟಮಾತು: ಕಂಡರ ಕಬ್ಬಲಗಿತ್ತಿ ಗೊಬ್ಬುನುಡಿ ಮಾತುಗಳು ವಿದ್ಯೇದ ಶಿವನೀಗೆ ಬುದ್ಧಿ ಹೋದೀತೆಂದು ಎದ್ದು ನಾ ಹೊಡಿಯಲೇನ ಗೌರವ್ವನಿಂತು ಬಿನ್ನವ ಮಾಡತಾಳ (ಲೋಕಗೀ. ೧೩೫). [ ಗೊಬ್ಬು₁ (<ಗಬ್ಬು₁) + ನುಡಿ₂ ]

**ಗೊಬ್ಬುಳಿ, ಗೊಬ್ಬಳಿ** (ನಾ). ಒಂದು ಬಗೆಯ ಮುಳ್ಳುಮರ; ಜಾಲಿ: ಕಲ್ಪವೃಕ್ಷವನ್ನು ಬಿಟ್ಟು ಗೊಬ್ಬುಳಿಯ ಗಿಡವನ್ನಾಶ್ರಯಿಸಿದಂತೆ ನಾರಾಯಣನನ್ನು ಬಿಟ್ಟು ಕ್ಷುದ್ರದೇವತೆಯನ್ನಾಶ್ರಯಿಸಿದಂತಾಯಿತು (ಕಭವಿ. I, ೯೫). **ಗೊಬ್ಬಳಿ:** ಮರಗಳು: ಹೆಸವ . . . ಗೊಬ್ಬಳಿ, ತೊಪ್ಪಲು (ನಮ್ಮನು. ೨೩೭). 'ಬೊಬ್ಬುಳಿ₂' ಪರಾ. [ ? ]

**ಗೊಬ್ಬೆ** (ನಾ). ಈಚಲು ಮೊದಲಾದ ಮರಗಳಿಂದ ಹೆಂಡವನ್ನು ಇಳಿಸಲು ಅವುಗಳಿಗೆ ಕಟ್ಟುವ ಗಡಿಗೆ; ಹೆಂಡದ ಗಡಿಗೆ: ಮಧ್ಯಾಹ್ನವೂ ಸಾಯಂಕಾಲದಲ್ಲಿಯೂ ಕೂಲಿಯವರು ತಮ್ಮ ಕೆಲಸ ಬಿಟ್ಟೊಡನೆ ಈ ಅಂಗಡಿಗಳಿಗೆ ಬಂದು ಒಂದು ಗೊಬ್ಬೆ ಹೆಂಡ ಕುಡಿಯುವರು (ಜೀನಪಾ. ೨೪); ಹತ್ತಿರದಲ್ಲಿ ಸುರೆಯು ತುಂಬಿದ ದೊಡ್ಡದೊಂದು ಗೊಬ್ಬೆಯಿದ್ದಿತು (ಶ್ರೀರಾಪ. ೧೦೭).
[ ಮರಾ. ಗೋಭ್. / ತಮಿ. ಕೋಪ್ಪೈ; ತೆಲು. ಕೋಪ ]

**ಗೊಬ್ಬೆಸೆರಗು** (ನಾ). ಎದೆಗೆ ಅಡ್ಡಡ್ಡಲಾಗಿ ಕಟ್ಟುವ ಸೆರಗು: ಮಂಜಮ್ಮ ಗೊಬ್ಬೆಸೆರಗು ಬಿಗಿದು ಕಟ್ಟಿ, ಸೀರೆಯ ಬಹುಭಾಗದ ವಿಸ್ತೀರ್ಣವನ್ನೆಲ್ಲಾ ಸೊಂಟಕ್ಕೆ ಸುತ್ತಿ, ಉಳಿದಿದ್ದನ್ನು ಆದಷ್ಟು ಕೃಪಣತೆಯಿಂದ ನಿರಿಮಾಡಿ . . . ಉಟ್ಟಿದ್ದಳು (ಮಲೆಮ. ೪೮). [ ಗೊಬ್ಬೆ₀ + ಸೆರಗು₁ (<ಸೆಱಂಗು) ]

**ಗೊಮ್ಮಟ,** ಗುಮ್ಮಟ$_2$, ಗೋಮಟ (ನಾ). ೧. ಸುಂದರ; ಮನ್ಮಥ; ಚೆಲುವ. ೨. [ಜೈನ] ಬಾಹುಬಲಿ; ಕಾಮದೇವರಲ್ಲಿ ಮೊದಲನೆಯವನು : ಇದಱಾಸೆಯು ಬಿಡಿಸು ಗೊಹೆಯು ಗೊಮ್ಮಟನೊಡೆಯು ಅಗಮ್ಯೇಶ್ವರಲಿಂಗ (ಮನುಗುಂ. ೪೯); ಕಾಮನ ಅನೇಕ ನಾಮಗಳಲ್ಲಿ ಒಂದಾದ ಮನ್ಮಥ ಎಂಬುದರ ತದ್ಭವವೇ ಗೊಮ್ಮಟವೆಂದಾಗಿದೆ (ಸಾಹಿಸ. ೧೬೪). ೩. [ಜೈನ] (ಶ್ರವಣಬೆಳಗೊಳದಲ್ಲಿರುವ) ಗೊಮ್ಮಟನ ವಿಗ್ರಹ,-ಪ್ರತಿಮೆ : ಶ್ರವಣಬೆಳಗುಳದಲ್ಲಿ ಒಂದುಸಾವಿರವರುಷ ನಿಂತ ಗೊಮ್ಮಟ! (ಉಯ್ಯಾಲೆ. ೬೫-೩); ಬಂಡೆ ಬಂಡೆಗಳೆದೆಯು ಗೊಮ್ಮಟಗೆ ಕುಂಭಾಭಿಷೇಕ (ನೆಲಮು. ೧೬-೨೩). ೪. ಚಾಮುಂಡರಾಯನ ಮತ್ತೊಂದು ಹೆಸರು : ಚಾಮುಂಡರಾಯ (ಗೊಮ್ಮಟ)ನು ಧರ್ಮದೇವತೆಗಳ ಆದೇಶದಂತೆ ಶ್ರವಣಬೆಳ್ಗೊಳದಲ್ಲಿ ಬಾಹುಬಲಿಯ ಮೂರ್ತಿಯನ್ನು ಕಡೆಯಿಸಿ . . . ಪೂಜಿಸುತ್ತಾನೆ (ಭಾರದ. ೧೬೩). ೫. (ಅಲಂ) ಆದರ್ಶವಾದುದು: ಗೊಮ್ಮಟದೇವ ನಿನ್ನ ತಱಿಸಂದಳವಾರ್ಯ್ಯಜನಕ್ಕೆ ಗೊಮ್ಮಟಂ (ಎಕ. II, ೨೩೪-೫೨; ಸು. 1180). **ಗುಮ್ಮಟ$_2$:** ೬. ಬೊಂಬೆ; ವಿಗ್ರಹ : ಅನ್ಯಸಮಯದ ಗುಮ್ಮಟನ ಕೈವಿಡಿದೆತ್ತಿಕೊಂಡೆ ನಿನ್ನ ಸಮಯದ ಶಿಶು ಬಾವಿಯಲ್ಲಿ ಬೀಳ್ವುದ ನೋಡುತ್ತಿಪ್ಪರೇ ಕರುಣಿ (ಛನವ. ೬೫). **ಗೋಮಟ :** ೨. ಗೋಮಟ ಗುರುವೆ . . . ನೇಮದ ಹಿರಿನೆಲೆಯೆ (ತಾವರೆ. ೪೬-೧೯).

[ <ಪ್ರಾ. ಗುಮ್ಮಡ, ಗುಮ್ಮ=ಮೋಹಗೊಳ್ಳು, ಮೋಹಗೊಳಿಸು,/
ಮರಾ. ಗೋಮಟಾ, ಗೋಮಟೇ ]

**ಗೊಮ್ಮಟೇಶ,** ಗುಮ್ಮಟೇಶ (ನಾ). = ಗೊಮ್ಮಟ ೩ : ನಿತ್ಯಂ ನಿಲಯಂ ಶ್ರೀ ಗೊಮ್ಮಟೇಶಂಗೆನಿಸಿದುದು ಜಿನೋಕ್ತಾವಳೋಕಂ ತ್ರಿಳೋಕಂ (ಎಕ. II, ೨೩೪-೨೫; ಸು. 1180). **ಗುಮ್ಮಟೇಶ :** ಈ ನಿಶ್ಚಲಮೂರ್ತಿಶ್ರೀಯ ಸಾಮರ್ಥ್ಯಮನರೆಮರುಳರ್ ಬಲ್ಲರೇ ಗುಮ್ಮಟೇಶ (ಶಬ್ದಾನು. ೧೪೦ ಪ್ರಯೋ). [ ಗೊಮ್ಮಟ + ಈಶ ]

**ಗೊಮ್ಮಟೇಶ್ವರ,** ಗುಮ್ಮಟೇಶ್ವರ, ಗೋಮಟೇಶ್ವರ (ನಾ). = ಗೊಮ್ಮಟ ೩ : ಈ ತ್ರಿಳೋಕದ ಜನಂ ತಾನೆಯ್ದೆ ಕಂಡಿದ್ರ್ದಾರ್ನ್ನೆಱಿ ವರ್ನೆಟ್ಟನೆ ಗೊಮ್ಮಟೇಶ್ವರ ಜಿನಶ್ರೀಮೂರ್ತ್ತಿಯಂ ಕೀರ್ತ್ತಿಸಲ್ (ಎಕ.II, ೨೩೪-೨೩; ಸು. 1180). **ಗುಮ್ಮಟೇಶ್ವರ :** ಶ್ರೀ ಗುಂಮಟೇಶ್ವರ ಸನಾತನ ಭೋಗ ಹೇತೋಃ (ಎಇ. VIII, ೨೦-೯೯; 1422). **ಗೋಮಟೇಶ್ವರ :** ಶ್ರೀಗೋಮಟೇಶ್ವರನು ಗಾಳಿ ಮಳೆಯಲಿ ಕರಗಿ ಹೋದರೇನುರುಳು (ಪಾಂಚಜ. ೩೨-೮); ಶ್ರವಣಬೆಳಗೊಳದ ಗೋಮಟೇಶ್ವರ ವಿಗ್ರಹವು ದೊಡ್ಡಪ್ರಮಾಣದಲ್ಲಿ ಸುಂದರವಾಗಿದೆ (ಮೈವಾಸು. ೫೩).

[ ಗೊಮ್ಮಟ + ಈಶ್ವರ ]

**ಗೊಮ್ಮಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮತ್ಪೆರ್ಮ್ಮಾನಡಿಗಳ್ ಗಂಗವಾಡಿ ಮೂ[ವ]ತ್ತಿರ್ಚ್ಛಾಸಿರವುಮಾಳೆ ××× ತ್ತನ್ನಟಿವಾಳೊಳಿಟ್ಟ ಮಯ್ದುನ ಗೊಮ್ಮಯ್ಯಗೆ ಕುಪ್ಪೆನಾಡ . . . ಗೊಮ್ಮಯ್ಯಂ ಕೊಟ್ಟ ಗ್ರಹಾರಂ (ಎಕ. IV, ಹುಣಸೂ. ೬೪-೬; 976).

[ <ಗೊಮ್ಮಟ ? + ಅಯ್ಯ$_1$ ]

**ಗೊಮ್ಮಲಯ್ಯ** (ನಾ). ಒಬ್ಬಾತನ ಹೆಸರು : ಗೊಮ್ಮಲಯ್ಯನ ಭಾವಂ ಸಿಲ್ಲಪಯ್ಯಂ (ಎಇ. XXVIII, ೫-೫೭; 1082).

[ ಗೊಮ್ಮಲ$_0$ + ಅಯ್ಯ$_1$ ]

**ಗೊಯ್** (ನಾ). ಒಂದು ಅನುಕರಣ ಶಬ್ದ. 'ಗೊಯ್‌ಗೊಯ್ ಗುಟ್ಟು' ಪರಾ.

**ಗೊಯ್‌ಗೊಯ್‌ಗುಟ್ಟು** (ಕ್ರಿ). ತೀವ್ರವಾದ ದುಃಖದಿಂದ (ಧ್ವನಿ ಮಾಡುತ್ತ) ಗೋಳಾಡು,-ಹಲುಬು,-ರೋದಿಸು : ಅನಿಶರೊಳಗತ್ತಲನುಜಾತೆ ಗೊಯ್‌ಗೊಯ್‌ಗುಟ್ಟುತಿನಿಯನಂ ನೋಡೆಂದುಯೆಳೆತಂದು (ಜಿನಮು. ೩೪-೨೭). [ <ಗೊಯ್ + ಕುಟ್ಟು$_1$ ]

**ಗೊಯ್ಕೆ** (ನಾ). (?) : ಮುಡುಹಿನ ಮುಕ್ಕೆ ಸೊಕ್ಕದಿರದೇನಭಿಮಾನದ ಜೋಡೆ ಬಾಲಮಂ ಬಡಿದಪೆಯಿತ್ತ ಚುಂಬಿ ಸುಡು ಗೊಯ್ಕೆ [ಪಾಠಾಂ. ಗೋರಿ] ಯರುಟ್ಟುದ ಱೊದ್ದೆ ಪೆಬ್ಬೆರಳ್ ಕಡಿಯದರಂಟಸುಂಟೆ ಸುಡು ಪಂಚೆಗಳೆಂಜಲ ಹಂಚೆಯೆಂದು ಬಯ್ದೊಡನೊಡನೊತ್ತಿದರ್ಮಸಗಿ ಬೇಟದ ಬನ್ನಮನಕ್ಕತಂಗಿಯರ್ (ಅನಂಪು. ೮-೩೧); (ಸೂಕ್ತಿಸು. ೮-೪೨೪ ನೋ).

[ ? ]

**ಗೊರ್** (ನಾ). ಒಂದು ಅನುಕರಣ ಶಬ್ದ : ನಾಯಿ ಗೊರ್ರೆಂದಿತು (ರೂಢಿ).

**ಗೊರ** (ನಾ). ಒಂದು ಅನುಕರಣ ಶಬ್ದ. 'ಗೊರಗುಡು' ಪರಾ.

**ಗೊರಗೊರ** (ದ್ವಿರುಕ್ತಿ): ಸುರಿವ ರಕುತದ ಗೊರಗೊರೆಂಬುತ್ಕ್ರಮಣನಿನದದ ಕೊರಗಣೆಯು ಖಗಪತಿಯು ಮುಖದಿಂದರಿಯುತೆಲ್ಲವನು (ರಾಮಾಸಂ. ೩-೫-೩೭).

**ಗೊರಕಲು** (ನಾ). ಒಂದು ಬಗೆಯ ಸಸ್ಯ (?) : ಹರಳು, ಬೆಂಡು, ಗೊರಕಲು, ಮಿಟಲಿ, ಕಂಬಳಿ, ಆಲ, ಗೋಣಿ (ನಮ್ಮನು. ೨೩೮). [ ? ]

**ಗೊರಕು** 'ಗುಱುಕು' ನೋ.

**ಗೊರಕೆ$_1$** (ನಾ). ಈಟಿಯಂತಹ ಒಂದು ಬಗೆಯ ಆಯುಧ : ಇಟ್ಟ ಗೊರಕೆಯನೆದೆಯೊಳಾಂತುಕೊಂಡು ಮೆಯ್ಬಿಟ್ಟಡಲಾ ರಾಮನಾಥ ನೆಟ್ಟನೆ ನೆಲಕೆ ಬಿದ್ದರು . . . ಕೆಲಬರು (ಕುರಾಸಾಂ. ೧೬-೪೪); ಗೊರಕೆ ಸಲ್ಲೆಹ ಪಿಂಡಿವಾಳ ಚಕ್ರಗಳನು ಸುರಿವುತ (ಕುರಾಸಾಂ. ೨೦-೨೫).

[ ದೇ.? ತೆಲು. ಗೊರಕ ]

**ಗೊರಕೆ$_2$** 'ಗುಱುಕು' ನೋ.

**ಗೊರಗ** (ನಾ). ಒಂದು ಜಾತಿಯ ಹಕ್ಕಿ : ಗಿಳಿ ಕೋಗಿಲೆ ಗೊರಗ ಮೊದಲಾದ ನಾನಾವಿಧ ಪಕ್ಷಿಸಮೂಹಗಳ ಕಲಕಲಧ್ವನಿಗಳು (ಶ್ಯಾಮಸ. ೫).

[ ? ]

**ಗೊರಗಿ** (ನಾ). (?) : ಗೊರಗಿಯ ಗಾಯತ್ರಿಯ ವರ್ನ ನಿಜಾಭರಣ ಯಜ್ಞೋಪವೀತ (ರುದ್ರಭಾ. ೮೩). [ ? ]

**ಗೊರಗು$_1$** 'ಗೊರಬು' ನೋ.

**ಗೊರಗು$_2$** (ನಾ). ಒಂದು ಬಗೆಯ ಮರ : ಗೊರಗುರಿಸೀವರ ನೆಲನಾಲರಳಿ ಬದಿರ್ವಕ್ಕೆ ಕಕ್ಕೆ ಬೇವುಂ ಬೀಟಲ್ ಸಿರಿಸ ವರನೇಱಲಂಬಟೆ ಸರಳಂ ತಱ ತಾಱಯತ್ತಿ ಮುತ್ತುಗ ಬೆತ್ತಂ (ಮುಹಾನೇ. ೪-೬೨). [ ? ]

**ಗೊರಗುಡು** (ಕ್ರಿ). (ಕೋಪ, ಭಾವಾವೇಶ ಮೊದಲಾದ ಕಾರಣಗಳಿಂದ) ಗಂಟಲಲ್ಲಿ ಒಡಕುಧ್ವನಿ ಹೊರಡು,-ಉಂಟಾಗು : 'ಯೇಸು' ಎಂಬ ಪದವನ್ನು ಉಚ್ಚರಿಸಿದಂತೆಲ್ಲ ಅವನ ಧ್ವನಿ ಗೊರಗುಡುತ್ತಿತ್ತು (ಪುನರು. ೧೬೮). [ ಗೊರ + ಕುಡು$_1$ (<ಕೊಡು1) ]

**ಗೊರಗೊರಸು** (ಕ್ರಿ). ಗೊರಗೊರ ಎಂಬ ಧ್ವನಿಮಾಡು : ಆ ಉರುಳು ಅವರ ಕುತ್ತಿಗೆಗೆ ತೊಡರಿತು. "ಆ, ಆ" ಎಂದು ಗೊರಗೊರಸಿ ಬ್ಯಾರಿಗಳು ಚೀರಿದರು (ಮುಂಗಾಮು. ೧೨). [ <ಗೊರ + -ಸು$_1$ ]

**ಗೊರಚು** 'ಗೊರಸು$_1$' ನೋ.

**ಗೊರಜಿ** 'ಗೊರಜೆ$_1$' ನೋ.

**ಗೊರಜೆ$_1$,** ಗೊರಜಿ, ಗೊರಿಜಿ (ನಾ). ಒಂದು ಬಗೆಯ ಸೊಪ್ಪಿನ ಗಿಡ : "ತುಷವರ್ಣೆ ಕಿಱುಗೋಣಿ ಗುರ್ವಿಯೆನೆ ಗೊರಜೆ [ಪಾಠಾಂ. ಡೆ] ಯದು" (ಮಂಗರಾ. ೪೫-೪೭). **ಗೊರಜಿ :** ಗೊರಜಿ . . . ತಾಳಿಸಪತ್ರೆ (ಮೈಜಿಗಿ. ೩೭-೬೩೭); ದಾರಿಯಲ್ಲಿ ಕಿರಕಸಾಲಿ ಹೊನ್ನಿಕುಕ್ಕಿ ಗೊರಜಿ ತೊಪ್ಪಲ ಸಿಕ್ಕದ್ದು ತಿಂದರು (ಅನ್ನ. ೧೫೫). **ಗೊರಿಜಿ :** ಗೊರವಿ . . . ಗೊರಿಜಿ, ಹೆಣ್ಣುಗೊರವಿ (ಮೈಜಿಗಿ. ೪೭-೯೨೫). . [ ? . / ತೆಲು. ಗುರುಜ ]

**ಗೊರಜೆ₂** (ನಾ). ಶಂಖದ ಹುಳುವಿನ ಜಾತಿಗೆ ಸೇರಿದ ಒಂದು ಬಗೆಯ ಚಿಪ್ಪಿನ ಪ್ರಾಣಿ ಮತ್ತು ಅದರ ಚಿಪ್ಪು: "ಪಡ್ಬಿಂದು – ಗೊರಜೆ" (ಒಷಧಿ. ೧೭೬); ಕೆರೆಹಳ್ಳಬಾವಿಗಳು ಪ್ಯೈದೆಗೆದರೆ ಗುಳ್ಳೆಗೊರಜೆಚಿಪ್ಪುಗಳು ಕಾಣಬಹುದು (ಬಸವ. ೮೬೧); ಸುಳ್ಳರೆಲ್ಲರು ಕೂಡಿಕೊಂಡು ಬೆಳ್ಳನ ಬೆಳತನಕ ನೀರ ತಡಿಯಲ್ಲಿ ಕುಳಿತು ಗುಳ್ಳ ಗೊರಜೆ ಕೂಡಿ ತಿಂದು ಕಳ್ಳು ಕೊಡನ ಬಜಿದು ಮಾಡಿ ಇಂಥ ಪೊಳ್ಳುದೈವದ ಗೊಡವೆ ಬೇಡ ನರಕ ತಪ್ಪದು (ಕನಕ. ೧೪೨-೪). [ ? ]

**ಗೊರಟ, ಗೊರಟು, ಗೊರಟೆ₁** (ನಾ). ೧. (ಮಾವಿನ ಹಣ್ಣಿನ ಒಳಗಿರುವ) ಬೀಜ; ಓಟೆ: ಪೂಜಿ ಪೂಜಿ ಫಲದೊಳಗೆ ಚಕ್ರಗೋಷ್ಠಿ ಗೊರಟ, ಚಕ್ರಗೋಷ್ಠಿ ಗೊರಟಕ್ಕೆ ವಕ್ರಶನೀನೋಟ (ನಿಜಾಭ. ೧೮೦-೧೮); ಪ್ರಳಯದ ಬಸಿರೊಳಗದರೊಂದು ಗೊರಟ ಸಿಕ್ಕಿತು (ನಾದಲೀ. ೩೯-೬); ಗೊರಟವನ್ನೇನು ಕಂಡು ಮೂಗು ಮುರಿಯುವಿ? ಕಾಣು ತುದಿಯು ತನಿವಣ್ಣನ್ನು! (ವಿಜಾಮಂ. ೬೯). ೨. ಗಟ್ಟಿಯಾದುದು; ಕಠಿನವಾದುದು: ಬಿದ್ದ ಮಳೆಗೆ ಮೃದುವಾಗಿ, ಒತ್ತಿದ ಮಣ್ಣಿಗೆ ಪುಳಕಿತವಾಗಿ ಓಟೆ ಒಡೆದು ಸಸಿಯಾಗುತ್ತದೆ; ಹಠ ಮಾಡಿದರೆ ಗೊರಟವಾಗಿ ಒಣಗುತ್ತದೆ (ಸಂಸ್ಕಾರ. ೮೭). ೩. (ಆಲಂ) ಬೆಲೆಯಿಲ್ಲದ ವಸ್ತು; ನಿಸ್ಸಾರ ಪದಾರ್ಥ: ದೇವರಿಗೆ ಕೂಡ ಊಟ ಇಲ್ಲ ನಿಮಗೇನದ ಗೊರಟ? (ಸಮಜೀ. ೧೪೫); ಕುಲಕರ್ಣಿಗೇನು ಸಿಕ್ಕ್ಯಾಂಗಾತು ಗೊರಟ? (ಗ್ರಾಮಾಯ. ೩೭). **ಗೊರಟು:** ೧. ಮಾವಿನ ಗೊರಟಿನಿಂದ ಬೇವಿನ ಗಿಡ ಹುಟ್ಟಲಾರದು (ನಿಷ್ಕಾಮ. ೮೭). ೩. ಅವರದು ಬರೀ ಗತಾನುಗತಿಕದ ಗೊರಟು, ನಮ್ಮದು ಇನ್ನೂ ರೂಪಕ್ಕೇ ಬಾರದ ಗರ್ಭಪಿಂಡ (ಕಾಳರಾ. ೧೧೮). **ಗೊರಟೆ₁:** ೧. ಅಡಿಕೆ ಮಾವುಗಳನ್ನು ಚೀಪಿಚೀಪಿ ಗೊರಟೆಗಳನ್ನು ಒಗೆಯುತ್ತಿರುವ ಮಕ್ಕಳಲ್ಲಿ ಭಟ್ಟರು ಬಾಲಕೃಷ್ಣನ ರೂಪವನ್ನು ಕಾಣತೊಡಗಿದರು (ಹಳ್ಳಿಬ. ೭೭). 'ಕೊಟ್ಟೆ₁' ಪರಾ. [ ದೇ.; ತುಳು. ಕೊರಂಟ್, ಕುರಂಟ್ ]

**ಗೊರಟ** 'ಗೋರಂಟೆ' ನೋ.

**ಗೊರಟಗೆ**(ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು; ಸ್ಫಟಿಕ: ನೀನೆ ಗರತಿ, ಶಿವನೊಬ್ಬ ಬಲ್ಲ ನಿನ್ನಲ್ಲಿ ಇರಲು ಬೆರೆತು ನಿನ್ನ ಮೈಯ ಮುಟ್ಟುವದು ಪಾಪ ಗೊರಟಗೆಗು ಕೂಡ ಹೊರತು (ಮುಕ್ತಕಂ. ೨೦-೪); ಪಾತರಗಿತ್ತೀ ಪಕ್ಕಾ ನೋಡಿದೇನ ಅಕ್ಕಾ . . . ಗೊರಟಗೆಗೆ ಶರಣಮಾಡಿದ ದೂರಿಂದನ (ಗರಿ. ೯೭-೧೩). [ <ಸಂ. ಕುರಂಟಕ ]

**ಗೊರಟು** 'ಗೊರಟ' ನೋ.

**ಗೊರಟೆ₁** 'ಗೊರಟ' ನೋ.

**ಗೊರಟೆ₂** 'ಗೋರಂಟೆ' ನೋ.

**ಗೊರತಿ** 'ಗೊರವಿತಿ' ನೋ.

**ಗೊರಪ** 'ಕೊರಪ₁' ನೋ.

**ಗೊರಬಿ** 'ಗೊರವಿ₁' ನೋ.

**ಗೊರಬು, ಗುರುಬು, ಗೊರಗು₁, ಗೊರಬೆ** (ನಾ). ತಲೆ ಮತ್ತು ಬೆನ್ನಿನ ಮೇಲೆ ಮಳೆನೀರು ಬೀಳದಂತೆ ಹಾಕಿಕೊಳ್ಳುವ ಮುಸುಕು: ಈ ಸಂಭ್ರಮದಲ್ಲಿ ಗೊರಬು ತೆಗೆದುಕೊಂಡವರ ಮುಖ ಎದೆ ಕಾಲುಗಳು ಒದ್ದೆಯಾದರೂ ಬೆನ್ನು ಮಾತ್ರ ಬೆಚ್ಚಗೆ ಉಳಿದಿತ್ತು (ಮರಮಾ. ೩); ಅಟ್ಟದ ಮೇಲಿದ್ದ ಗೊರಬುಗಳೆಲ್ಲ ಹೆಣ್ಣಾಳುಗಳ ತಲೆಗೇರಿ ಸಂಚರಿಸುತ್ತಿವೆ (ಮಲೆಮ. ೫೬೧); ಮಳೆಗೆ ತಲೆ ಮೈ ತೋಯದಂತೆ ಗೊರಬುಹಾಕಿಕೊಂಡು . . . ಗೋವಿಂದರಾಯರು ನಡೆದಾಗ (ಜಾಳಗಿ. ೦೦೭). **ಗುರುಬು:** ತಂಗಳೂಟ ಮಾಡಿ ತಲೆಗೆ ಗುರುಬು ಸಿಕ್ಕಿಸಿಕೊಂಡು (ಅನಾಥ. ೪). **ಗೊರಗು₁:** ಕೊಡೆ, ಗೊರಗು, ಮಾಡು . . . ಸೊಡರು ಎಂಬ ಎಣಿಸಿ ಮುಗಿಯದ ಸೊಲ್ಲುಗಳು ನಮ್ಮ ಹಿರಿಯರ ಕೈಗಾರಿಕೆಯನ್ನೂ ದುಡಿಮೆಯನ್ನೂ ಸಾರುತ್ತವೆ (ಛಾಪಾಶಾ. ೨೫೭). **ಗೊರಬೆ:** ಅಕ್ಕಮ್ಮ ಗದ್ದೆಯಿಂದ ಮೇಲೇರಿ ಹುಣಿಯಲ್ಲಿದ್ದ ತನ್ನ ಮಡಲಿನ ಗೊರಬೆಯನ್ನು ಹಿಡಿದುಕೊಂಡು ಹೊರಟಳು (ಚಿಗುಬ. ೮); ಹರುಕು ಗೊರಬೆಯೊಂದನ್ನು ಉಪಯೋಗಿಸುತ್ತಿದ್ದಾನೆ (ಮುಂಗಾಮು. ೪೦). 'ಕೊಪ್ಪೆ' ಪರಾ. [ ? ]

**ಗೊರಬೆ** 'ಗೊರಬು' ನೋ.

**ಗೊರಲೆ** 'ಗೊಬಲೆ' ನೋ.

**ಗೊರಲೆಬಡಿ** (ಕ್ರಿ). ಗೆದ್ದಲು ಹಿಡಿ; ಒರಲೆ ಹತ್ತು: ತುಕ್ಕುಹಿಡಿದು ಅಥವಾ ಗೊರಲೆಬಡಿದ ಮುಟ್ಟುಗಳು ಶುಚಿಯಾಗಿ . . . ಅಲಂಕರಿಸುವುವು (ಸುವಸಂ. ೩೩). [ ಗೊರಲೆ (<ಗೊಬಲೆ) + ಬಡಿ₁ ]

**ಗೊರವ, ಗೊರವು₁** (ನಾ). ೧. ಸಂನ್ಯಾಸಿ; ತಪಸ್ವಿ: ನೃಪನುಮಂ ಪ್ರಜೆಯುಮಂ . . . ಆ ಗೊರವರುಂ ಸುರರುಂ ಗುಣವೃದ್ಧರುಂ ವಿಪುಳರಾಗಪರರಾಗಿಸುಗೆ (ಕವಿರಾ. ೧-೧೩೨); ಗೊರವರೆ ಬೂದಿಯುಂ ಜಡೆಯುಮಕ್ಕೆ ತಪಕ್ಕೆ (ಪಂಪಭಾ. ೮-೧೭); ಆ ಪುರದೊಳ್ ದೇವಶರ್ಮನೆಂಬ ಗೊರವನುಗ್ರೋಗ್ರತಪೋನಷ್ಠಾನ ನಿಷ್ಠಿತಚಿತ್ತನಾಗಿ ಪಲಕಾಲಮಿರ್ಪಂ (ಪಂಚತಂ. ೬೯-೨೦); ವೇಸದೆ ಪಾರ್ವರಂ ಗೊರವರಂ ಗೋಬ್ರಿನ್ದಮಂ ಪೆಣ್ಣರಂ ತ [ವೆ] ಕೊನ್ದಿಕ್ಕಿದ ಪಾಪಮೆಯ್ದುಗುಂ (ಸೌಇಇ. XI-1, ೮೪-೩೭; 1049); ಬೇಳ್ವೆಯೆಂಬುದು ಪಾರ್ವಂಗೆ ಜಡೆಯೆಂಬುದು ಗೊರವಂಗೆ (ಅನಂಪು. ೨-೨೮ ವ). ೨. ತಿರುಪೆ ಎತ್ತುವವನು; ತಿರುಕ; ಭಿಕ್ಷುಕ: ಮುನ್ನಿನ ಭವದೊಳ್ ಗೊರವನಾಗಿ ಕಾಂಚೀಪುರದೊಳ್ ತಿರಿದು ಪಲವು ಕಾಲಂ ಬನ್ನಂಬಟ್ಟು (ಪಂಚತಂ. ೩೦೦-೨೦); ಸೋಕೆಯ ಬಟ್ಟಲಂ ನಂಬಿ ಕಂಚಿನ ಬಟ್ಟಲನೊಡೆವ ಗೊರವನುಮಂ (ಧರ್ಮಾಮೃ. ೮-೫೧); ಪಂಡಿತರುಂ ವಿವಿಧ ಕಳಾಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ಕಂಡರ್ ಕೇಳ್ವೊಡೆ ಗೊರವರ ಡುಂಡುಬಿಯ ಬೀದಿವರಿಯ ಬೀರನ ಕಥೆಯೇ (ಧರ್ಮನಾ. ೧-೫೭); ಸರವೆ ಸುರಲತೆಯುಕ್ಕು ಗೊರವ ಸುರಪತಿಯಕ್ಕು (ಸರ್ವಜ್ಞ. ೮೮). ೩. ಶಿವ; ಈಶ್ವರ: "ಬೆಳ್ಳಡಿಯೆಂದೆನೆ ಗೊರವ" (ಕವಿಕಂ. ೧೮೮); "ಅಂಬಿಕಾಪತಿ ಗೊಂದೆವಳವಿಗೆಯ ಗೊರವನುಂ" (ಶಕರ. ೩೩); ಉರಿಯ ಗೊರವನ ನೆರೆವ ಭರವಸದಿಂದ ಬರಲು ಬಹಳ ಮುಳ್ಳದ್ದಲಾದವಲ್ಲಾ (ಅವಚಂ. ೨೫೭-೧೧೭೦); ಅಲರಂಬಿನ ಮೊನೆಗೆ ನಿಲ್ವನೇ ಬಡಗೊರವಂ (ಕಬ್ಬಿಗಕಾ. ೧೫೭); ಗೊರವನಲ್ಲದೆ ಪೊಗಟಿಂ (ಶಮದ. ೪೭ ಪ್ರಯೋ); ತೊಟೆವೆಣ್ಗೊಲಿದಪನು ಗೊರವನೆಂದು ಶಾಂಕರಿ ಮುನಿದು ನುಡಿಯದಿರಲ್ (ಭಿಕ್ಷಾಟ. ೨-೧); ಗೊರವನ ಬೆಳ್ಗೊರಲೊಳ ಮರ್ದ ಹಾಲಾಹಲದ ಕರ್ವೆಳಗುದುಟುಗಲ ಮಾಟ್ಕೆಯಿಂ (ರಾಮಾಶ್ವ. ೪೦-೨೩). ೪. ಶಿವಭಕ್ತ; ಶರಣ; ಶಿವಧಾರಿ ಎಪ್ಪ ಗೊರವರ್ಗ್ಗೆ (ಇಅ. XI, ೧೨೭-೧೧; 803); ಆರಯ್ಯೆ ಶೈವಶಾಸ್ತ್ರದೊಳಾರಿಂದಂ ಪಿರಿಯರೆನಿಸಿದಾ ಗೊರವರ್ (ಸಮಪ. ೮-೪೦); ಚಿಕ್ಕಚಿಕ್ಕಜಡೆಗಳ ಸುಲಿಪಲ್ಲ ಗೊರವನು ಭಿಕ್ಷಕ್ಕೆ ಮನೆಗೆ ಬಂದುದ ಕಂಡೆನವ್ವ (ಮಹಾದೇ. ಬ. ೪೦-೮೭); ಒಲಿದು ಬೇಂಟೆಗೆ ಪೋಗಲಲ್ಲಿ ಲಿಂಗವ ಕಂಡು ನಲಿದು ಗೊರವರ ಪೂಜೆಯಂ ಕೆರಹುಗಾಲಲದ ಕೆಲಕೊತ್ತಿ (ಲಶಿಚಂ. ೩೫-೧೧); ಸಿರಿಯರಸ ಚಿತ್ತೈಸು ಹರಸುವ ಗೊರವನೀ ಶಿತಿಕಂಠನು (ತೊರರಾ. ೧-೮-೬೨). ೫. ಮೈಲಾರದೇವರ ಭಕ್ತ,-ಪೂಜಾರಿ,-ಅರ್ಚಕ: ಮೈಲಾರದ ಗೊರವನಂತೆ ತಂತಮ್ಮನೆ ಬಡಿದುಕೊಳ್ಳುಚ್ಚುಳಾಯಿಲರುಮಂ (ಧರ್ಮಾಮೃ. ೩-೨೦೭); ಶ್ರೀಮತ್ಸಿವಶಕ್ತಿಪಣ್ಡಿತರ ಕಾಲಂ ಕರ್ಚ್ಚಿ ಧಾರಾ ಪೂರ್ಬ್ಬಕ(ಂ)ಮ್ಮಾಡಿ ತನ್ನ ಗೊರವರೆಡೆವಣಿಯ ಮೂವತ್ತು ಕಮ್ಮ ತೋಂಟವಮಂ ಬಿಟ್ಟಳ್ (ಸೌಇಇ. IX-1, ೨೧೧-೨೦; 1126); ಮಲ್ಲಯ್ಯನ ಅರ್ಚಕರಿಗೆ 'ಗೊರವ' ರೆಂದು ಹೆಸರು, ಮರಾಠಿಪ್ರಾಂತದಲ್ಲಿ ಇವರಿಗೇ ಗುರುವರೆಂದೆನ್ನುವರು (ಕರ್ನಾಪೂ. ೨೭); ಗೊರವ, ಪೂಜಾರಿ . . . ಇಂದಿಗೂ ಕಂನಾಡವಿಭಾಗ

ದಲ್ಲಿ ಹೆಚ್ಚಾಗಿರುವುದು ಕಾಣುತ್ತದೆ (ಕರ್ನಾಟ. ೩೪೭). ೬. ಗುಡಿಗಳ ಪರಿಚಾರಕರಲ್ಲಿ ಒಂದು ಪಂಗಡ : ಗೊರವರ ಹೊನ್ನಯ್ಯಂ ತುಱುವಂ ಪಿಂತಿಕ್ಕಿ ಪಲರಂ ಕೊಂದು ತಳುತ್ತಿಱಿದು ದೇವಲೋಕಕ್ಕೆ ಸನ್ದೊಂ (ಎಕ. VIII, ಸೊರಬ. ೬೪-೧೦ ; 1032) ; ಗೊರವರು-ಇವರಿಗೆ ಕೆಲವು ಕಡೆಯಲ್ಲಿ ಜೀರರೆಂತಲೂ ಕೆಲವು ಕಡೆಯಲ್ಲಿ ಹೂಗಾರರೆಂತಲೂ ಅನ್ನುವರು (ಕಥಾಗ. ೧೧೭); ಪಹರೆಯ ಗೊರವನು ಗುಡಿಯ ಸುತ್ತಲೂ ಪಹರೆಮಾಡುವನು (ಗಂಗಾಸಾ. ೩೦). ೭. ಒಂದು ಬಗೆಯ ಹಕ್ಕಿ : ಅರಸಿ ನೋಡೀಚೆಯಲಿ ಹುದುಗಿದ ಹರಡೆ ಹಂಗ ಮಯೂರ ಟಿಟ್ಟಿಭ ಗೊರವ ಗೀಜಗ (ತೊರರಾ. ೩-೧. ೩೨) ; ಗರುಡಂ ಕರ್ಬಕ್ಕಿ ಕಂಕಂ ಗೊರವನೊಱಲೆ ಪೆರ್ಬಕ್ಕಿ . . . ಶುಕಂ ತದ್ವನಾಂತಸ್ಥಮಿರ್ಕುಂ (ಶಬಶಂ. ೩-೩೩) ; ಮರವನು ಸಾರಿ ಹೊನ್ನ ಬಾಯ ಗೊರವ ಕೊಂಬೆಯೇರಿ ಕೊರಲೆತ್ತಿ ಹಾಡಿತು (ರಾಮುನ. ೧೯-೨). **ಗೊರವು₁ :** ೬. ತಲೆವೊಱೆಗೆ ಅಯ್ವತ್ತು ಧಾನ್ಯಗೊಳಗ ದೇವರಿಗೆ × × × ಬ್ರಾಹ್ಮಣರಿಗಲ್ಲದೆ ಗೊರವುಗಳಿಗೆ ಸಲ್ಲದು ಬ್ರಾಹ್ಮಣಪೂಜೆ (ಸೌಇಇ. IX-1, ೧೫೯-೩೦ ; 1091). **[ ದೇ.॥ ]**

**ಗೊರವಂಕ, ಗೊರವಂಕೆ** (ನಾ). ಒಂದು ಜಾತಿಯ ಹಕ್ಕಿ; ಮೈನಾಹಕ್ಕಿ; ಸಾರಿಕೆ : "ವಾಗ್ವಿಲಾಸಿನೀ-ಗಿಳಿ, ಗೊರವಂಕ, ಪಾರಿವಪಕ್ಷಿ" (ಒಷಧಿ. ೧೫೦) ; ಗೊರವಂಕ ಟಿಟ್ಟಿಭ ಪಿಕ ಚಕೋರಕ ಮಿಗಾಂಬುಲಿಗಹಕ್ಕಿಗಳು ರಂಜಿಸಿತು (ನಳಚ. ೧-೪೨) ; ಸೋರೆ ಘೂಕ ಗೊರವಂಕ ಕಪಿ ಕಪೋತ (ರುಕ್ಮಾಂಗ. ೧೦-೫) ; ಕವಿಯುದಿರಲಿ ನಿನ್ನ ಗೊರವಂಕದ ಬಿಂಕ (ಚಂತನ. ೮೦-೮). **ಗೊರವಂಕೆ:** "ಶಾರಿಕಾ-ಗೊರವಂಕೇಹಕ್ಕಿ" (ಸಿದ್ಧಾಂತಿ. ೩೭೫); ಗಿಣಿ ಗೊರವಂಕೆ ಕೋಗಿಲೆಗಳ ಕೂಗುಗಳು (ಸಾಗಂಧಿ. ೨೩೦-೧೨). 'ಗೋರಿಕೆ' ಪಾ. **[ ದೇ.॥ ತಮಿ.** ಕುರಕ ; **ತೆಲು.** ಗೊರವಂಕ, ಗೊರುವಂಕ, ಗೋರಂಕ, ಗೋರಿಂಕ, ಗೋರುವಂಕ ]

**ಗೊರವಂಕೆ** 'ಗೊರವಂಕ' ನೋ.

**ಗೊರವಗೆಱೆ** (ನಾ). ಒಂದು ಸ್ಥಳದ ಹೆಸರು : ಭುಕ್ಕಯರ್ಗೆ ಗೊರವ ಗೆಱೆಯುಱ್ × ಸಾಮ್ಯ ಸಲ್ವುದು (ಎಕ. IX, (8) ಅನೆಕ. ೧೧೯-೫ ; ಸು. 900). [ ಗೊರವ + ಕೆಱೆ ]

**ಗೊರವಗೇರಿ** (ನಾ). ಗೊರವರ ಕೇರಿ-ಬೀದಿ : ಕೋಟಿ ಗುಡ್ಡೆಯಾಗಿ ಗೊರವಗೇರಿ ಧರ್ಮ್ಮಮನಳಿದವ (ಇಎ. ೧೯೫೨, ಸಂಪಗಾವಿ. ೨-೧೮ ; 992). [ ಗೊರವ + ಕೇರಿ ]

**ಗೊರವಡಿ** 'ಗುರವಡಿ' ನೋ.

**ಗೊರವತಿ** 'ಗೊರವಿತಿ' ನೋ.

**ಗೊರವದೇವ** (ನಾ). ಒಬ್ಬಾತನ ಹೆಸರು : ಶ್ರೀಮನ್ಮಹಾಮಂಡಳೇಸ್ವರ ಗೊರವದೇವಂ ಬನವಾಸಿ ಪುರವರೇಶ್ವರಂ (ಎಕ. VIII, ಸೊರಬ. ೪೬-೩ ; 1018 ? ). [ ಗೊರವ + ದೇವ ]

**ಗೊರವಬ್ಬೆ** (ನಾ). ಸಂನ್ಯಾಸಿನಿ ; ತಪಸ್ವಿನಿ : ಪೋಗಲೆ ಸಮಕಟ್ಟಿ ಕಟ್ಟಿ ಮಣಿಯಂ ಗೊರವಬ್ಬೆಯ ವೇಷದೋಜೆಯ(ಯಿ)ಂ (ಜೀವಸಂ. ೬೯-೧೨). [ ಗೊರವ + ಅಬ್ಬೆ₁ ]

**ಗೊರವವಾಡ** (ನಾ). ಶೈವಸಂನ್ಯಾಸಿಗಳಿಗೆ ಅಥವಾ ಗುರುಗಳಿಗೆ ಬಿಟ್ಟ ಗ್ರಾಮ : ಮಣ್ಣಾಳಂ ಗೊರವವಾಡಂ ಮಾಡಿ ಸರ್ವ್ವನಮಶ್ಯಂ ಬಿಟ್ಟು (ಎಕ. VIII, ಸಾಗರ. ೧೦೮-೪೨ ; 1042). [ ಗೊರವ + ಬಾಡ₁ ]

**ಗೊರವಿ₁, ಗೊರಬಿ** (ನಾ). ೧. ಸಂನ್ಯಾಸಿನಿ ; ವಿರಕ್ತೆ : ತಾಂ ತಿರಿವ ಗೊರವಿ ಬೆನಕನುಮಂ ತಿರಿಯಿಪಳೆಂಬ ತೆಱದೆ (ಶಾಂತಿಪು. ೮-೧೩೦). ೨. ದೇವಸ್ಥಾನದ ಸೇವೆಗೆ ಬಿಟ್ಟ ಹೆಣ್ಣು; ದೇವದಾಸಿ: ಶ್ರೀಸೋಭನರಸರು ಮೂಲಸ್ಥಾನದ ರೇವಬ್ಬೆಗೊರವಿಗೆ ಧಾರಾಪೂರ್ವ್ವಕಂ ಮುದ್ದಿಗೆಱೆ ಯೊಳಗಣದೊಂದು ತೋಂಟಕ್ಕಂ . . . ಅಯ್ದು ಗದ್ಯಾಣಮಂ ತಿಱುವಾ (ಸೌಇಇ. XI-i, ೫೦-೧೭ ; 1005). **ಗೊರಬಿ :** ೨. ಅಂದು ಹರಿಜನರಲ್ಲಿ 'ಗೊರಬಿ' ಬಿಡುವ ಪದ್ಧತಿಯಿತ್ತು. ಗೊರಬಿ ಎಂದರೆ ಬಸವಿ ಎಂದರ್ಥ (ಪಂಜಪಂ. ೧೦). [ ಗೊರವ + – ಇ₂ ]

**ಗೊರವಿ₂, ಗೊರವು₂, ಗೊರವೆ, ಗೊರಿವಿ** (ನಾ). ಹಸಿಯಾಗಿದ್ದರೂ ಸುಲಭವಾಗಿ ಬೆಂಕಿ ಹತ್ತಿಕೊಳ್ಳುವ ಒಂದು ಬಗೆಯ ಮರ ಮತ್ತು ಅದರ ಹೂವು : ಗೊರವಿಯು ಬನ[ಪಾಠಾಂ. ಟಿಯ ನೆಲ]ಸಂಪಗೆಯ ಸೇವಂತಿಗೆಯರಳ ತಂದಿಕ್ಕರು (ಸೊಬಸೋ. ೩-೪೪) : ಕೊಸಗಿಜೆ ಬಸಿರೀ ಹುಲಗಿಲ್ಗೊರವೀ . . . ಹೊನ್ನೆಯ ತರುಗಳ್ (ಹಮ್ಮಿರ. ೪-೬೮) ; ಕ್ಯಾರಣ ಗೊರವಿ ಗೊರಟೆಯತ್ತಗ . . . ಮೊದಲಾದ ಗಗನಂ ತುಡುಕುವ ವೃಕ್ಷಂ ಗಳೊಳ್ (ಸೌಗಂಧಿ. ೫೪-೫) ; ರಾತ್ರಿಯ ವೇಳೆ ಪ್ರಯಾಣ ಮಾಡಬೇಕಾದರೆ ಬೆಳಕಿಗೆ ಗೊರವಿಯ ಕೊಳ್ಳಿಗಳನ್ನು ಬಳಸುವರು (ಕಳಹು. ೯೩). **ಗೊರವು₂:** ಮಹೇಶ್ವರಾಲಯದಂತೆ ಗೊರವು ಮನೆಗಳಂತೆ ಕೇರು ಬಿತ್ತುವ ಕೆಯ್ಗಳಿಂ ತಾರು . . . ಮತ್ತಮೆನಿತಾನುಂ ತೆಱದ ಮರದುಱುಗಲ್ಗಳ್ (ಬಂಹರಿ. ೨-೩೮ ವ) ; ಪೆರ್ಚುಗು . . . ಬಂದುಗೆಯಿಂದೆ ವಿದ್ರುಮಗಣಂ ಗೊರವಿಂ (ವೃದ್ಧಿಯಂ) ನುತ ವಜ್ರವಿಟ್ಟ [ ಪಾಠಾಂ. ಗೊರವಾನಕ ವಜ್ರವೃಷ್ಟಿ]ಯಿಂ (ಅಟ್ಟಮಸು. ೪-೧೪). **ಗೊರವೆ :** ಗೊರವೆಯ ಕಟ್ಟಿ ಸೂಟೆಗಳು ಉರುವುತಿಹವು (ಜ್ಞಾನಚ. ೦೨-೧೦೮); ಗೊರವೇ ಕೊಳ್ಳಿಯಂತೆ ಒಂದು ಮುಹೂರ್ತವಾದರೂ ತೇಜೋವಂತನಾಗಿ ಪ್ರಜ್ವಲಿಸು (ಕ್ಷಾವಿ. ೨೧೦). **ಗೊರಿವಿ :** ಮರಗಳು : ಹೆಸವ . . . ಬಿಕ್ಕೆ, ಕರಾಚಿ, ಗೊರಿವಿ, ಹೆಣ್ಣುಗೊರಿವಿ (ನಮ್ಮನು. ೨೩೭).

**ಗೊರವಿಯ ಕೋಲು=ಗೊರವೆಕಟ್ಟಿಗೆ :** ತರಳರೆಲ್ಲರು ಪೇಳ್ದ ಕುರುಹು ಹುಡುಕುತಲಿ ಕರದಿ ಗೊರವಿಯ ಕೋಲ ಪಿಡಿದು ಯಿಂದುಮತಿ ತರಳನ ನೋಡುವರೆ ಪೊರಟಾಗ ಬರಲು (ಹಮುಚ. ೧೫೩).

**[ ದೇ.॥ ತಮಿ.** ಕೋರಾನ್ ; **ತೆಲು.** ಕೊರವಿ, ಕೊರಿವಿ, ಕೊಱವಿ ]

**ಗೊರವಿಕೆ** (ನಾ). ಭಿಕ್ಷಂಕವೃತ್ತಿ ; ತಿರುಪೆ : ಪರಶಿವನು ಭಿಕ್ಷಾಟನಂಗೈದು ಯಕ್ಷಪುರವರದಿಂದ ಮರಳಿದಂ ಗೊರವಿಕೆಯುನಳವಡಿಸಿ ತಿರುಗಿದಂ (ತುರಂಗ. ೭-೩೨). [ ಗೊರವ + – ಇಕೆ ]

**ಗೊರವಿತಿ, ಗೊರತಿ, ಗೊರವತಿ** (ನಾ). ೧. ಸಂನ್ಯಾಸಿನಿ ; ಗೊರವಿ ; ಜೋಗಿಣಿ : ರಸವಣಿಯನುಂಡ ಗೊರವಿತಿ ಪೊಸತಾಶೀರ್ವಾದವುಳ್ಳ ದೊಂದೆಂದಾಗಳ್ ಬಸಿಗಳ್ಳಿಂಗೆ ಮಹೀಶರ ಪಸಾದ ಸುರುಕವಡೆ ಕವಡೆ ಹರಿವೋ ಎಂದಳ್ (ಸೂಕ್ತಿಸು. ೧೩-೨೦) ; ಸೂಳೆ ಮುಪ್ಪಾಗಿ ಗೊರವಿತಿ ಆದಳು (ಗಾದೆ). **ಗೊರತಿ:** ೧. ಗೊರತಿಯ ಕಂತಿಯ ಕುಂಟಣಿಯರ . . . ಮುಂದಂ ನುಡಿಯಲೀಯಲಾಗದು ವಧುವಂ (ಸುದತಿ. ೮-೨೬) ; ಊರ ಹೊಱಗೊಂದು ದೇಗುಲ ದೇಗುಲದೊಳಗೊಬ್ಬ ಗೊರತಿ ನೋಡಯ್ಯ (ಅವಚಂ. ೯೬-೪೩೦). ೨.ಮುನಿಪತ್ನಿ; ಋಷಿಯ ಹೆಂಡತಿ: ಸಿಂಧುತೀರದ ರುಸಿಪಳ್ಳಿಯೊಳ್ ಮೃಗಾಯಣನೆಂಬ ಮುನಿಗಂ ವಿಶಾಖೆಯೆಂಬ ಗೊರತಿಗಂ ಗೌತಮನೆಂಬ ಮಗನಾಗಿ ಪುಟ್ಟೆ (ಅರ್ಥನೇ. ೪-೧೨೭ ವ). **ಗೊರವತಿ:** ೧. ಬೊಮ್ಮದ ಮನೆಯ ಕೋಣೆಯೊಳೊಬ್ಬ ಗೊರವತಿ ಇಮ್ಮೈಯ್ಯಾ ಸಿರಿಯ ಮಾಳಿಗೆಯೊಳಗೆ ಹಮ್ಮೈಸಿಹಳು (ಶಿವಗೀ. ೭೪೪).

[ ಗೊರವ + – ಇತಿ₁ (< –ಇತ್ತಿ) ]

**ಗೊರವು₁** 'ಗೊರವ' ನೋ.

**ಗೊರವು₂** 'ಗೊರವಿ₂' ನೋ.

**ಗೊರವು₃** (ನಾ). ಪೊಟರೆ (?) : ಈ ಮರದ ಗೊರವ ನಡುವೆ (?) ಯೊಳ ಕಾರಣದಿಂದಿಲ್ಲಿ ವಿರಕ್ತನಾಗಿರ್ದಪೆಂ (ಪಂಚತಂ. ೨೯೮-೪). [ ? ]

**ಗೊರವೆ** 'ಗೊರವಿ₂' ನೋ.

**ಗೊರವೆಕಟ್ಟಿಗೆ** (ನಾ). ಗೊರವಿಮರದ ಕಟ್ಟಿಗೆಯಿಂದ ಮಾಡಿದ ಕೊಳ್ಳಿ, –ಪಂಜು : ದೀವಟಿಗೆ, ಗೊರವೆಕಟ್ಟಿಗೆ, ಕರದೀಪ ಮುಂತಾದ ಸಾವಿರಾರು

ಬೆಳಕುಗಳು ಊರು ತುಂಬ ಓಡಾಡುತ್ತಿದ್ದವು (ಯದುರಾ. ೭೦).

[ ಗೊರವನೆ (<ಗೊರವಿ$_2$) + ಕಟ್ಟಿಗೆ$_1$ ]

**ಗೊರಸಿ** (?) (ನಾ). (?) : ಗೋಡೆ ಗೊರದಾಗಿಸಿದ ಪಲವು ಪಾರಿವದ ನಲ್ಗೂಡಿ ಗಿಣಿಪಂಜರಂ ಪಱಿದ ಬಲೆ ಮುಱಿದ ಬಿಲ್ ಬಾಡಲಿಕ್ಕಿರ್ದ ಸುಳಿವಿನಾಣಿ ಕಟ್ಟಿರ್ದ ನರ ಪರಗತಿ ಗೊರಸಿಯ ಕೂಡೆ ಕೊಯ್ದಿರ್ದ ಮೃಗಪಕ್ಷಿಗಳ ನೆತ್ತರಿನ ಜಾಡಿಯೊಳ್ (ನಂದಿಮಾ. ೧೧-೪). [ ? ]

**ಗೊರಸು$_1$, ಗೊರಚು** (ನಾ). ಪ್ರಾಣಿಗಳ ಕೊಳಗು ; ಖುರ : ಧರ್ಮವಿಲ್ಲದ ಅರಸು ಮುಱಿದ ಕಾಲಿನ ಗೊರಸು (ಕನಕ. ೫೦-೨) ; ಗೊರಸಿಂದೆಲ್ದ ಪೂತ ರಜದಿಂ (ದಿಲೀಪ. ೨-೨) ; ಜಂಬುಕದೆಡೆಯನು ಹೊಕ್ಕರೆ ಸಿಗುವುದು ಗೊರಸಿನ ಚರ್ಮದ ಹೇಸಿ (ಇಂಜಾಪ. ೧೨೯-೩೪) ; ಗೊರಸುಗಳು ಒಂಟಿಯ ಗೊರಸಿನ ಹಾಗೆ ಇಭಾಗವಾಗಿರುವವು (ಮುಂಬಯಿ. ೪-೧೮೭). **ಗೊರಚು:** ತುಂಡಿಸಿದ ಸರಳಿನಿಂ ಮುರಳಿನಿಂದಾ ಕರಿಚಿನಿಂ ವಾಜಿಗಳ ಗೊರಚಿನಿಂ (ಪರಶು. ೨೮-೨೮). [ ?. / ತಮಿ. ಕುರಚು, ಕುರಚ್ಚೈ; ತೆಲು. ಕೊರಿಜೆ, ಗೊರಿಜ, ಗೊರಿಜೆ, ಗೊರಿಸೆ./ಸಂ. ಖುರ ]

**ಗೊರಸು$_2$, ಗೊರೆಸು** (ನಾ). ೧. ಒಂದು ಬಗೆಯ ಸಸ್ಯ : ತಡಸೀಳೆ ಬಾಳೆ ಸಿರಿಸಂ ಗೊರಸಂಕೊಲೆಯಿಪ್ಪೆ ಕಪ್ಪುರಂ . . . ಇಡಿಕಿಱಿದಿರ್ದ ಪೇರಡವಿಯೊಳ್ (ಧರ್ಮಪ. ೩-೪೭). ೨. ಒಂದು ಬಗೆಯ ಹುಲ್ಲು : ನಷ್ಟೇಂದ್ರಿಯಕ್ಕೆ:-ಗೊರಸಿನ ಹೊಡಕೇಬೇರನ್ನು ಹಾಲಲ್ಲಿ ಅರೆದು ಕಡಡಿ ಸಕ್ಕರೆ ಬೆರೆಸಿ ಕೊಳ್ಳೆ ಮಾಣ್ಗುಂ (ವಿವೈವಿ. ೧೮೯). **ಗೊರೆಸು : ೨.** "ಕಾಶಂ, ಇಕ್ಷು ಗಂಧಾ, ಪೋಟಗಳ:-ಈ ೩ ಜಂಬುಹುಲ್ಲು, ಗೊರೆಸುಹುಲ್ಲು" (ಸಿದ್ಧಾಂತಿ. ೧೩೦). [ ? ]

**ಗೊರಸೆ** (ನಾ). ಒರಟಾದುದು ; ನುರಿಯದಿರುವುದು : "ಗೊರಸೆಯೆನಲವಡೆನಿಕ್ಕುಂ" (ಕಶರ. ೩೪). 'ಗರಸು' ಪರಾ. [ ? ]

**ಗೊರಿಕೆ** 'ಗುಱುಕು' ನೋ.

**ಗೊರಿಜೆ** 'ಗೊರಜೆ$_1$' ನೋ.

**ಗೊರಿವಿ** 'ಗೊರವಿ$_2$' ನೋ.

**ಗೊರೆ$_1$** 'ಕೊರೆ$_2$' ನೋ.

**ಗೊರೆ$_2$** (ನಾ). ಕೆಸರು ; ಬಗ್ಗಡ ; ರಾಡಿ : ಕಳಿತ ಮೆಕ್ಕೆಯೊ ಹುರಿಯ ಬಲೆಯೋ ರಾಗಸನ್ನೆಯೊ ಸರಿಯ ಗೊರೆಯೋ ಠಕ್ಕಿನುಂಡೆಯೊ ಸವಿಯ ಚಿತ್ರಕವೊ (ಕುಮಾ.ಆ. ೮-೭೭) ; ಬಿಸಿಲೊಳು ಕೋಣ ಗೊ[ಪಾಠಾಂ. ಗೋ]ರೆಯ ಬಿದ್ದು ಪೊರಳುತುಬ್ಬುಸಗೊಂಬಂತೆ (ಚಂಪ್ರಸಾಂ. ೫-೪೭) ; ಹೀಗೆ ಮಳೆ ಹುಯ್ದು ಗೊಂಬೆಹಚ್ಚಡ ಗೊರೆಯಾಗಿ (ಕೆಸರಾಗಿ) ರಂಭೆಯ ಸೆರಗಿಗೆ ನೀರು ಹರಿದು ಸಮೃದ್ಧಿಯಾದ ಜಲವೃಷ್ಟಿ ಉಂಟಾಗುತ್ತದೆ (ಹಳ್ಳಿಪಾ. ೩೨). [ ? ]

**ಗೊರೆಕಾಱ** (ನಾ). ಗುರಿಕಾರ (?) : ಅದಂ ಪಡಿಸಲಿಸುತ್ತಮುಣ್ಬಂ ಗೊರೆಕಾಱ ಕೋಡ (ಸೌಇಇ. IX-i, ೧೦೯-೨೮ ; 1052). [ ? + - ಕಾಱ ]

**ಗೊರೆಸು** 'ಗೊರಸು$_2$' ನೋ.

**ಗೊರ್ಲಾಟ** (?) (ನಾ). (?) : ಎಲುಮಯದ ಪಂಜರವ ಚೇತನದ ಮಂದಿರವ ಚೆಲುವ ಗೊರ್ಲಾ[ಪಾಠಾಂ. ಗೋರ್ಲಾ]ಟಸಿತಕಮಲ ಮರುತಂ ಸತತ ಚೆಲಿಪ ಜಾತಿಯ ಪುತ್ಥಳಿಯ ದಿವ್ಯಸುಧೆಯಿಂದೆ ಕಲೆತಂತೆ ಕಲೆತು ಬರುವ ಪಲಬಗೆಯ ಮಿಂಚುಗಳ (ವಂಕಾರಾ. ೨-೩೫-೪೩). [ ? ]

**ಗೊಲಗಂಡಿ** (ನಾ). ಒಂದು ಬಗೆಯ ಸಸ್ಯ : ನೇಗಲುಕನ್ನೆಸೊಪ್ಪು, ಗೊಲಗಂಡಿ (ಮೃಶಿಗಿ. ೨೬-೫೦೫). [ ? ]

**ಗೊಲಸು** 'ಗೊಟಸು' ನೋ.

**ಗೊಲೆ$_1$** (ನಾ). ೧. ಕೊನೆ; ತುದಿ: ತನ್ನ ಬಗೆದ ಕಜ್ಜಮಂ ಗೊಲೆಗೊಳಿಸುವಂತಾ ಬಿಲ್ಲ ಗೊಲೆಯನೇಱಿ ನೂಂಕಿ (ಪಂಪಭಾ. ೩-೬೨ ವ). 'ಗೊಲೆಗೊಳಿಸು' ಪರಾ. ೨. ಬಿಲ್ಲಿನ ತುದಿ ; ಕೊಪ್ಪು : "ಧನುಷ್ಕೋಟಿ ಕೊಪ್ಪು ಗೊಲೆಯೆನಿಸಿರ್ಕುಂ" (ಕವಿಕಂ. ೮೧) ; ಅಲರಂಬಿನಧಟಿಂದೆಲ್ಲಾ ಪೊಡವಿಯ ಬಲಿದೆಚ್ಚು ಜಯಸಿದ ಬಳಿಯ ಗೊಲೆಯನಿಳುಹಿ ಮಡಗಿದ ಸಿಂಗಾಡಿಯು ಗೆಲಿದುವು ಕಿವಿ ಕೋಮಲೆಯ (ನೇಮಿಸಂ. ೨೩-೨೦೩); ಅಗಳ್ ಚಂಪಕಂ . . . ಪುಂಖಾನುಪುಂಖಮಾಗೆ ಪತ್ರಂಬುಗಳಂ ಗೊಲೆ ನೆಲೆದಪ್ಪು ವಿನಂ ಸೆಳೆದಾರ್ದೆಸಾಡಿದಂ (ರಾಮಾಶ್ವ. ೧೪೫-೧೮).

**ಗೊಲೆಗಿಡು** = ಗೊಲೆಗೆತ್ತು : ನಾರಿಯನು ಗೊಲೆಗಿಟ್ಟನಾಗಲೆ ಸುರಿಯೆ ಪೂಮಳೆಯು (ಜೈರಾಮಾ. ೮೪-೩೪). **ಗೊಲೆಗೆತ್ತು**=ಬಿಲ್ಲಿನ ಕೊಪ್ಪಿಗೆ ಹೆದೆಯನ್ನು ಬಿಗಿದು ಅಳವಡಿಸು : ತೂಗುತ್ತರಲಂಬನಿಕ್ಷುಧನುವಂ ಗೊಲೆಗೆತ್ತಿ ತೊಟಿಲ್ವನಂಗನಾಚಿತ್ರದೊಳಂ ಪುರಾಂತರದೊಳಂ ವಸುದೇವಕುಮಾರ ಮನ್ಮಥಂ (ಅರ್ಧನೇ. ೪-೧೩೭) ; ಬಿಲ್ಲಂ ಗೊಲೆಗೆತ್ತಿ ಹೂಡಿದನಮೋಘಾಸ್ತ್ರಂಗಳಂ ದರ್ಪಕಂ (ಗಿರಿಕ. ೭-೩೮) ; ಧನುವನಿದನು ಗೊಲೆಗೆ[ಪಾಠಾಂ. ಗೊ]ತ್ತಿ ತೆಗೆದು ಗುಱಿಗನುಗೆಯ್ದು ಶರವನಾರ್ದೆಸೆವ ಘನಭುಜರುಂಟೆ ನಿಮ್ಮಲ್ಲಿ (ಕುರಾಸಾಂ. ೧೮-೩೮). **ಗೊಲೆಗೆವರ್** = ಬಿಲ್ಲಿನ ಕೊಪ್ಪಿಗೆ ಸೇರು ; ಧನುಷ್ಕೋಟಿಯಲ್ಲಿ ಅಳವಡಿಸಲ್ಪಡು : ಅಕ್ಕದ ಚಿತ್ತದೊಳ್ ಬೆದಱಿ ಬೆಳ್ಕುಱದುಗ್ರತಪೋನುತಾಪದಿಂ ಬಳ್ಕದೆ ನೋಂಪಿಯಿಂ ಗೊಲೆಗೆವಂದ ಶರೀರಗುಣಾನುರೋಧದೊಳ್ ತಳ್ಕಱಿದಿರ್ದು ಜೀವಶರಮಂ ಬಿಡೆ ಧಾರ್ಮಿಕಚಕ್ರವರ್ತಿ ತಾಂ ಪಿಳ್ಕು ಬಳಿಲ್ದು ಮೇಗೊಗೆದು ತಾಗಿದುದಚ್ಯುತ ಕಲ್ಪಲಕ್ಷ್ಯಮಂ (ಅನಂಪು. ೪-೩೮). **ಗೊಲೆಗೇಱಿಸು**=ಗೊಲೆಗೆತ್ತು: ಚಾಪವ ಗೊಲೆಗೇಱಿಸಿ ಕೆನ್ನೆವರ ಬಲಿದು (ಅಂಜಚ. ೧೩-೧೦೦) ; ಬಿಲ್ಲ ಗೊಲೆಗೇಱಿಸುತ ಚಾಪಟಮಲ್ಲ ಹೊಕ್ಕನು (ಕುಮಾದ್ರೋ. ೩-೨೦). **ಗೊಲೆಗೇಱು** = ಬಿಲ್ಲಿನ ಹೆದೆ ಕೊಪ್ಪಿಗೇರು ; ಬಿಲ್ಲಿನ ತುದಿಗೆ ಹೆದೆಯು ಕಟ್ಟಲ್ಪಡು: ಪುಂಡ್ರೇಕ್ಷುಚಾಪನ ಚಾಪಂ ಗೊಲೆಗೇಱಿ ಬಂದುದು ವಸಂತಂ ಸಂತತೋತ್ಸಾಹದಿಂ (ಧರ್ಮಾಮೃ. ೧೩-೧೦). **ಗೊಲೆಗೊತ್ತು**=ಗೊಲೆಗೆತ್ತು : ಗೊಲೆಗೊತ್ತಿದನೇ ಧನುವಂ ಸರಲ್ಗಳಂ ಕೊಂಡನೇ . . . ಜನಾರ್ದನಂ(ಪಂರಾಮಾ. ೭-೧೧೫) ; ಕರ್ಬುವಿಲ್ಲಂ ಗೊಲೆಗೊತ್ತುವಂತೆ ನಿಡುವುರ್ವಂ ಕುಡು ಪುರ್ವಾಗೆ ಸಮುಱಿಯುಂ (ಚಂದ್ರಪು. ೬-೬೩ ವ) ; ಪುಷ್ಪಸರ ನಿಜಚಾಪವ ಗೊಲೆಗೊತ್ತಿ ನುಡಿದ (ಅಂಜಚ. ೭-೧೫೯). [ದೇ.॥ ತಮಿ. ಕುದ್ಯೆ, ಕುಲ್ಯೆ; ಮಲ. ಕುಲ]

**ಗೊಲೆ$_2$, ಕೊನೆ$_3$, ಗೊನೆ$_3$** (ನಾ). (ಹೂವು, ಹಣ್ಣು ಮೊದಲಾದವುಗಳ) ಗೊಂಚಲು ; ಗುಚ್ಛ : "ಗೊಲೆ ಗೊನೆಯೊಳ್" (ಕರ್ಣಾನಿ. ೫೮); ಗೊಲೆಯೊಳ್ ಪಣ್ತುದು ಮ್ರಂದವಾಟ್ (ಆದಿಪು. ೧೧-೬೮) ; ಮಾಂಗಾಯ ಗೊಲೆಯನಂದಾತಂಗ್ಯೆಗೆ ಮುರಲ್ದು ಪಾಯ್ದು ಗಿಳಿ ಪಾಯಿಸಿದತ್ತಂಗನೆಯ ರೂಪಕಕ್ಕೆ ಬೆಡಂಗಂ ಗಿಳಿಯೋದಿಪಂಗನಾರೂಪಕದಾ (ಲೀಲಾವ. ೧೧-೬೬). 'ಕೆಂಗೊಲೆ', 'ಪಣ್ಗೊಲೆ' ಪರಾ. **ಕೊನೆ$_3$ :** ಅಡಕೆಯ ಕೊಯಿಲು ಬಂದಿತು. ರಾಮಯ್ಯನೇ ಮುತುವರ್ಜಿಯಿಂದ ಕೊನೆ ತೆಗೆಯುವವರನ್ನು ಗೊತ್ತುಮಾಡಿ, ಕೊನೆ ತೆಗೆಸಿದನು (ಕಾನೂರು. ೩೭೮). **ಗೊನೆ$_3$ :** ಬೆಳೆದ ಕೌಂಗಿನ ಗೊನೆ ತಳ್ಪಱಗಿರೆ . . . ಎಸೆದುದುಪವನಂ (ಪಂಪಭಾ. ೩-೪೧); ವನದ ಬಾಳೆಯ ಗೊನೆಯ ಕೊಯ್ದು (ಮಧುಪ. ೩೬-೨೯) ; ಬಾಳೆಯುರು ಗೊನೆಸಹಿತಲೊಪ್ಪಿಹುವು (ಕಂಸವಿ. ೫-೮೭) ; ಬಾಳುವವನಿಗೊಂದು ಮಾತು ಬಾಳೆಗೊಂದು ಗೊನೆ (ಗಾದೆ).

[ ದೇ.॥ ತಮಿ. ಕುಲ್ಯೆ ; ಮಲ. ಕುಲ ; ತುಳು. ಗೊನೆ ; ಕೊಡ. ಕೊಲೆ, ಕೊಲ ; ತೆಲು. ಗೊಲ ]

**ಗೊಲೆಗೆಯ್** (ಕ್ರಿ). ಬಿಲ್ಲಿನ ಕೊಪ್ಪಿಗೆ ಹೆದೆಯನ್ನು ಬಿಗಿದು ಅಳವಡಿಸು : ಶಿವನನುಜ್ಞೆಯಿಂದ ಕರಿಯ ಕಬ್ಬಿನ ಬಿಲ್ಲ ಗೊಲೆಗೆಯ್ದು ಮನಸಿಜಂ . . . ಹುಗಿಲಿಱಿದನಾಕೆಯ ಮನವನು (ಸೌಂದಪು. ೮-೧೪).

[ ಗೊಲೆ$_1$ + ಕೆಯ್$_1$ ]

**ಗೊಲೆಗೊಳ್$_1$** (ಕ್ರಿ). ೧. ಕೊನೆಮುಟ್ಟು; ತುದಿಸೇರು. ೨. ಬಿಲ್ಲಿನ ತುದಿಗೆ ಹೆದೆಯು ಕಟ್ಟಲ್ಪಡು. 'ಗೊಲೆಗೊಳಿಸು' ಪರಾ.

[ಗೊಲೆ$_1$ + ಕೊಳ್$_1$]

**ಗೊಲೆಗೊಳ್$_2$**, ಗೊನೆಗೊಳ್ (ಕ್ರಿ). (ಹೂವು, ಹಣ್ಣು ಮುಂತಾದುವುಗಳು) ಗೊನೆಯನ್ನು ಬಿಡು: ದೂತವಚನಾಮೃತದೊಳ್ ಗೊಲೆಗೊಂಡ ಬೇಟವೆಂಬಲತೆ ಕೂಟದೊಳ್ ಪದೆದು ಪಣ್ತೆರ್ದಗಿಂಪಿನಲಂಪನೀಯದೇ (ಆದಿಪು. ೧೨-೨೦). **ಗೊನೆಗೊಳ್:** ಪಣ್ಗೊನೆಗಳಿಂ ಗೊನೆಗೊಂಡ ಕವುಂಗು . . . ಶೋಭಿಪುದನಂಗನ ಮಂಗಳಗೇಹಮೆಂಬಿನಂ (ಸುಕುಮಾ. ೯-೪೭).

[ಗೊಲೆ$_2$ + ಕೊಳ್$_1$]

**ಗೊಲೆಗೊಳಿಸು** (ಕ್ರಿ). ೧. ಕೊನೆಮುಟ್ಟಿಸು; ಈಡೇರಿಸು; ತುದಿಗಾಣಿಸು: ತನ್ನ ಬಗೆದ ಕಜ್ಜಮಂ ಗೊಲೆಗೊಳಿಸುವಂತಾ ಬಿಲ್ಲ ಗೊಲೆಯ ನೇಱಿ ನೂಂಕಿ (ಪಂಪಭಾ. ೩-೬೨ ವ). ೨.=ಗೊಲೆಗೆಯ್: ಗೊಲೆಗೊಳಿಸಿದ ಪುಷ್ಪಚಾಪ . . . ಹೋಗೆಲೊ ಪಾಪಿ ಮನ್ಮಥ (ಮೋಹತ. ೭-೨೩).

[ಗೊಲೆಗೊಳ್$_1$ + – ಇಸು$_3$]

**ಗೊಲೆನೂಂಕು** (ಕ್ರಿ). ಗೊನೆಬಿಡು; ಗೊನೆಯನ್ನು ಹೊರಗೆಡಹು: ಗೊಲೆನೂಂಕಿದುವಿಂದು ಸ್ವಪುಗೌಂಗುಗಳಮಮ (ಚಳವಿ. ೬-೧೭೯).

[ಗೊಲೆ$_2$ + ನೂಂಕು$_1$]

**ಗೊಲ್ಲ$_1$** (ನಾ). ೧. ಖಜಾನೆಯಲ್ಲಿ (ನಾಣ್ಯಪರೀಕ್ಷಕನಾದ) ಸರಾಫನ ಸಹಾಯಕ; ಹಣದ ಚೀಲವನ್ನು ಒಯ್ಯುವುದು ಮೊದಲಾದ ಕೆಲಸಗಳಿಗೋಸ್ಕರ ನಿಯುಕ್ತನಾದ ಒಬ್ಬ ಅಧಿಕಾರಿ (ಮೃಗಜಿ. IV, ೭೬೯): ಪ್ರತಿ ತುಕಡಿಯ ಖಜಾನೆಗೂ ಒಬ್ಬೊಬ್ಬ ಗೊಲ್ಲನಿದ್ದನು (ಮಹಾವಂ. II, ೩೨). ೨. (ಬಾಗಿಲು ಕಾಯುವ) ಸೇವಕ: ಬಾಗಿಲ ಕಾಯ್ದಿರ್ದ ಗೊಲ್ಲಂಗೆ ವೆಚ್ಚಕ್ಕೆ ಒಡೆತನವುಂಟೆ ಅಯ್ಯಾ (ವಚನವ. ಸ. ೫೭೫-೧೨೩೮); ಬಾಗಿಲೊಳಿಹ ಗೊಲ್ಲರು ನಾ ಹೇಳಿದ ಹಾಗೆ ಬೀಗದ ಮುದ್ರೆಯವರು ಏಗೆಯ್ವೆವಮ್ಮ ಪೇಳೆನುತ ನನಗೆ ತಲೆವಾಗಿ ಕೈಮುಗಿದುಕೊಂಡಿಹರು (ಕುಠಾಸಾಂ. ೨೭-೧೪೨); ದ್ವಾರ ಗೊಲ್ಲರೊಳಾಗ ಭೋರನೀರ್ವರು ಬಂದು (ಹಮಚ. ೨೩೭). [ದೇ.॥ ತಮಿ. ಕೊಲ್ಲಾ; ತೆಲು. ಗೊಲ್ಲ]

**ಗೊಲ್ಲ$_2$** (ನಾ). ೧. ದನಕರುಗಳನ್ನು ಕಾಯುವವನು; ಗೋಪಾಲಕ; ಗೋವಳ: "ತುಱುವಳರ್ ಗೋವರ್ಕಳೆನೆ ಗೊಲ್ಲರಕ್ಕುಂ" (ಶಬ್ದಮಂ. ೩೪); ಗೊಲ್ಲರ ಮನೆಯಲ್ಲಿ ಕಳ್ಳತನದಿ ಬಂದು ಗುಲ್ಲುಮಾಡುತಲಿ (ಪುರಂದ. ೩-೦೪೪-೧); ಗೊಲ್ಲರಾ ಮನೆ ಹೊಕ್ಕು ಗುಲ್ಲುಮಾಡುವುದೇನಲ (ಕನಕ. ೧೪೭ ಪಲ್ಲವಿ); ಗೊಲ್ಲ ಗೊಲ್ಲತಿಯರಲ್ಲಿಯೆ ಸಾಕಿನೆ ಸಲ್ಲಿಸಿದೆಯೊ ಮಲ್ಲಣಿಯಲ್ಲ? (ಗಿರಿವಿಂ. ೪೪-೯); ಗೊಲ್ಲರ ಅರಸಾಗಿ ಮಜ್ಜಿಗೆಗೆ ದರಿದ್ರ (ಗಾದ). ೨. (ಆಲಂ) ಪ್ರಣಯದ ಸುಖವನ್ನು ತಿಳಿಯದವನು; ದಡ್ಡ: ಗೊಲ್ಲನಾದಡೆ ರತಿಗೆಳಸುವನೆ (ಬಸಪು. ೪೦-೩೦).

**ಗೊಲ್ಲರಹಳ್ಳಿ** = ಗೋವಳರು ವಾಸಿಸುವ ಗ್ರಾಮ: "ಗೊಲ್ಲರಹಳ್ಳಿ-ಆಭೀರಪಲ್ಲಿ, ಘೋಷ" (ನಾಚಿರಾ. ೬). [<ಸಂ. ಗೋಪಾಲ]

**ಗೊಲ್ಲ$_3$** (ನಾ). ಒಂದು ದೇಶದ ಹೆಸರು ಮತ್ತು ಅಲ್ಲಿ ವಾಸಿಸುವ ವ್ಯಕ್ತಿ: ಅಂಗ ವಂಗ ಕಳಿಂಗ ಕೊಂಗ ಕೊಂಕಣ ಗೊಲ್ಲ ಕಾಂಭೋಜ . . . ನಾನಾ ದ್ವೀಪ ದೇಶಾಧೀಶ್ವರರುಂ (ಪಂಪಭಾ. ೯-೯೫ ವ); ಮಾಳವ ಮಗಧ ಕರ್ಣಾಟ ಗೊಲ್ಲ ಕರಹಾಟ . . . ಕಳಿಂಗಾದಿ ವಿಷಯಂಗಳಂ ಸಾಧಿಸಿ (ಧರ್ಮಾಮ. ೧೦-೭೧). [<ಸಂ. ಗೋಲ್ಲ]

**ಗೊಲ್ಲಕೇರಿ** 'ಗೊಲ್ಲಗೇರಿ' ನೋ.

**ಗೊಲ್ಲಗಿತ್ತಿ** (ನಾ). ಗೊಲ್ಲಜಾತಿಯ ಹೆಂಗಸು; ಗೊಲ್ಲಿತಿ: ಗೊಲ್ಲಗಿತ್ತಿ ಮೊಸರು ಮಾರುತ್ತಾ ಹೋಗುತ್ತಿದ್ದಳು (ರೂಢಿ).

[ಗೊಲ್ಲ$_2$ + – ಗಿತ್ತಿ]

**ಗೊಲ್ಲಗೇರಿ, ಗೊಲ್ಲಕೇರಿ** (ನಾ). ಗೊಲ್ಲರ ಬೀದಿ; ಗೋವಳರ ಬೀದಿ: ಗೊಲ್ಲಗೇರಿಗೆ [ಪಾಠಾಂ. ರಲ್ಲಿಗೆ, ರೂರಿಗೆ] ಬೆಣ್ಣೆಯಂ ಕಳುವಲ್ಲಿಗೆಯ್ದಿ ಮುರಾರಿ . . . ಸಿಕ್ಕನೆ (ಬಸಪು. ೩೪-೪೦). **ಗೊಲ್ಲಕೇರಿ:** ಗೊಲ್ಲಕೇರಿಗೆ ಬಾ ಕಂಡ್ಯ ದಾಸಯ್ಯ (ಪುರಂದ. ೨-೮೭ ಅನುಪಲ್ಲವಿ).

[ಗೊಲ್ಲ$_2$ + ಕೇರಿ]

**ಗೊಲ್ಲಣಿಗೆ** (ನಾ). ಒಂದು ಬಗೆಯ ಡೇರೆ,-ಗುಡಾರ (?): ಮಾಡಮಂ ಪತ್ತಿ ಸುತ್ತಿಱಿದ ಕರಗದಡಪದ ಡವಕೆಯ ಮಡಿಯ ಪರಿಯಣದ ಬಾಣಸಿನ ಗುಣನೆಯ ಮಜ್ಜನದ ದೇಹಾರದ . . . ಗೊಲ್ಲಣಿಗೆಯ ಮಂಡವಿಗೆಯ ವಿಳಾಸನಿವಾಸಂಗಳಿಂದಂ (ಶಾಂತಿಪು. ೧೦-೧೪೭ ವ).

[ದೇ.॥ ತೆಲು. ಗೊಲ್ಲಿಯನ, ಗೊಲ್ಲೆನ]

**ಗೊಲ್ಲತನ** (ನಾ). ಗೋವಳನಾಗಿರುವಿಕೆ: ಗೊಲ್ಲತನವಂ ಬಿಡಿಸಿ . . . ಬಹುಭಾಗ್ಯವಂತೆನಿಸಿ ಎಲ್ಲರೊಳು ಸಲಿಗೆ ನಿಲಿಸಿದಳೂ ನಿಮ್ಮರಸಿ (ಕನಕ. ೮೬-೧). [ಗೊಲ್ಲ$_2$ + – ತನ]

**ಗೊಲ್ಲತಿ** 'ಗೊಲ್ಲಿತ್ತಿ' ನೋ.

**ಗೊಲ್ಲಭಾಮ** (ನಾ). ಒಂದು ಜಾತಿಯ ಹುಳು: ಸೀತಾದೇವಿಹುಳು, ಗೊಲ್ಲಭಾಮಾ (ನಮ್ಮನು. ೨೪೦). [← ತೆಲು. ಗೊಲ್ಲಭಾಮ]

**ಗೊಲ್ಲವಾಳಿಗ** (ನಾ). ಗೊಲ್ಲ; ಗೋವಳ: "ಅಳಿಯಬಿಂಬ" (ಚತುನಿ. ೬. I, ೬೦). [ಗೊಲ್ಲ$_2$ + – ವಾಳ$_1$ + – ಇಗ]

**ಗೊಲ್ಲಸ** (ನಾ). ದಣಿವು; ಆಯಾಸ (?). 'ಗೊಲ್ಲಸಂಗೊಳ್' ಪರಾ.

[?]

**ಗೊಲ್ಲಸಂಗೊಳ್** (ಕ್ರಿ). ದಣಿವನ್ನು ಹೊಂದು; ಆಯಾಸಪಡು: ಬಱಿದೆ ಗೊಲ್ಲಸಂಗೊಂಡು ದೇಹವನು ದಂಡಿಪುದು ಜಗಮೆಲ್ಲಂ (ಸಮ್ಯಕ್ತ್ವ. ೨-೫೫).

[ಗೊಲ್ಲಸ + ಕೊಳ್$_1$]

**ಗೊಲ್ಲಿ** (ನಾ). ಹೆಂಗಸಿನ ಗುಹ್ಯಾಂಗ; ಯೋನಿ: (೬). 'ಕೊಲ್ಲಿ' ಪರಾ.

[?]

**ಗೊಲ್ಲಿತಿ** 'ಗೊಲ್ಲಿತ್ತಿ' ನೋ.

**ಗೊಲ್ಲಿತ್ತಿ, ಗೊಲ್ಲತಿ, ಗೊಲ್ಲಿತಿ** (ನಾ). ಗೊಲ್ಲಜಾತಿಯ ಹೆಂಗಸು; ಕವಾಡಗಿತ್ತಿ; ಗೌಳಿಗಿತ್ತಿ: (೬). **ಗೊಲ್ಲತಿ:** "ತುಱುವಳ್ತಿಯರು ಗೊಲ್ಲತಿಯರೆನಲ್ ಗೋಪಿಯರು" (ಶಬ್ದಮಂ. ೩೪); ಅಂಗಡಿಯೊಳಳೆವೊತ್ತು ಬರುತಿರೆ ಮುಂಗಡೆಯೊಳಡಿ ಜಾಱಿ ಕೆಡೆಯದ ಹಾಂಗೆ ಹಿಡಿದನು ಬಸವನಾ ಗೊಲ್ಲ[ಪಾಠಾಂ. ಲ್ಲಿ]ತಿಯ ಹರವಿಯನು (ಬಸಪು. ೧೦ ಸೂಚನೆ); ಪ್ರಭುವಿನಿಂದ ಮಹಿಮೆಯ ಪಡೆದ ಗೊಲ್ಲತಿಯ ಕಥೆಗೆರಡುಕಾಂಡವಾದುದನೊರೆವೆನು (ವೀರಶೈಪು. ೮-೧ ಸೂಚನೆ); ನಿನ್ನ ಮುಸಿವಣ್ಣದೀ ಚೆಲುವಿನೆಡೆಗೆ ಸೋಲ್ವರು ಗೊಲ್ಲತಿಯರು (ಸಾಳ್ವಭಾ. ೨೫-೨೭); ಗೊಲ್ಲತಿಯರ ಭೂರಿಭೂಷಾರವಂ ಕಱುಗಳಂ ಕರೆವ ಗೋಪಾರವಂ ಪೂರೈಸಿತೇವೇಳ್ವೆನು (ಜೈಬಪು. ೧೧-೦೭). **ಗೊಲ್ಲಿತಿ:** ಗೊಲ್ಲಿತಿಯಾಕೃತಿಯನಾ . . . ತನಗೆ ಬಸವಂ ಹೇಳಿದಡೆ ತಾನಾಕೆಯಂ ಬರಿಸಿ ಇನಿತುಮಂ ಬೆಸಗೊಳುತಿರಲ್ಕೆ (ಬಸಪು.೧೦-೭); ಹಾಲು ಮಾರುತ ಬಂದಳಾಕೆ ಕೀಲುಕಡಗದ ಗೊಲ್ಲಿತಿ (ನಾಪದ. ೨೧೪); ಆ ಗೊಲ್ಲಿತಿಯು ಮಗುವನ್ನು ತನ್ನ ಮಕ್ಕಳಿಗಿಂತ ಅತಿಶಯವಾಗಿ ಪ್ರೀತಿಸಿ ಸಾಕುತ್ತಿದ್ದಳು (ಕವಿಕ. ೯). [ಗೊಲ್ಲ$_2$ + – ಇತ್ತಿ]

**ಗೊಲ್ಲಿಮಯ್ಯ** (ನಾ). ಒಬ್ಬಾತನ ಹೆಸರು: ಸುಜನಪವಿತ್ರಂ ಬ್ರಹ್ಮದೇವನ ಚಟ್ಟಂ ಶ್ರೀಮತು [ಗೊ]ಲ್ಲಿಮಯ್ಯಂ (ಕಇ. II, ೭-೨೦; 1030).

[ಗೊಲ್ಲಿಮ$_0$ + ಅಯ್ಯ$_1$]

**ಗೊವರ** 'ಕುವರ$_2$' ನೋ.

**ಗೊಸಬು** (ನಾ). ಕೊಚ್ಚೆ (?): ಕೆಸರಂ ತುಳಿದು ಗೊಸಬಿನೊಳ್ಳುಳುಗಿಯದ್ದು ನಡವಾಗ (ಅರಸಾ. ೫-೨೧೫). [?]

**ಗೊಸಲು** (ಕ್ರಿ). ಒಸರು ; ಸ್ರವಿಸು : ವಿಫಲವಾದ ಸಂತಾನವು ತಿರಿಗೂ ಲಭಿಸಿತೆಂದು ಸ್ತನಗಳು ಹಾಲು ಗೊಸಲಿಳಿಯಲು ಆ ರಾಜಸ್ತ್ರೀಯರೂ ಬಂದರು (ಕೃವಾಸ. ೩೦). [ ? ]

**ಗೊಸಾವಿ** 'ಗೋಸಾಯಿ' ನೋ.

**ಗೊಹೆ**$_1$ 'ಕೊಹೆ' ನೋ.

**ಗೊಹೆ**$_2$ 'ಗೋಪೆ' ನೋ.

**ಗೊಹೆಗುಟ್ಟು** (ಕ್ರಿ). ಗೊಹೆ ಎಂದು ಶಬ್ದಮಾಡು: ಸೊಕ್ಕಿದೆಕ್ಕಲ ಮೆಳೆಯ ಹೊಕ್ಕು ನಮ್ಮುಲುಹಿಂಗೆ ಗೊಹೆಗುಟ್ಟುತಿದೆ (ಹಜಕಾ. ಪರಿ ೨೧೩).

[ ಗೊಹೆ$_1$ (<ಕೊಹೆ) + ಕುಟ್ಟು$_1$ ]

**ಗೊಳ್** 'ಕೊಳ್$_2$' ನೋ.

**ಗೊಳಗುಳಿಕೆ** 'ಕೊಳಗುಳಿಕೆ' ನೋ.

**ಗೊಳಗೊಂಡೆ** (ನಾ). ಒಂದು ಬಗೆಯ ಸಸ್ಯ : ಗಂಡೆಗಂಡೆಗಳ ಹೊಯಿದಂತೊಂದಿಸಿ ಗೊಳಗೊಂಡೆ ಕಾಡುಜಿಪ್ಪೆಯ ಸೊಪ್ಪಂ (ಅಶ್ವವೈ. ೧೭-೬೩).

[ ? ]

**ಗೊಳಗೊಳಕೆ** 'ಕೊಳಗುಳಿಕೆ' ನೋ.

**ಗೊಳಗೊಳಿಕೆ** 'ಕೊಳಗುಳಿಕೆ' ನೋ.

**ಗೊಳಲು** 'ಗೊಳಲೆ' ನೋ.

**ಗೊಳಲೆ,** ಗೊಳಲು (ನಾ). ೧. ಧಾನ್ಯದ ಹೊಟ್ಟು; ಉಮಿ: ಗೊಳಲೆಯ ಒಳಗಿದೆ ಬೆಳೆಯುವ ಬೀಜ (ಸೂರ್ಯಪಾ. ೩೨-೧) ; ತಮ್ಮ ಸಲುವಾಗಿಯೇ ಭತ್ತಾ ಕುಟ್ಟಿ ಅಕ್ಕೀ ಬೇರೆಮಾಡಿ ಗೊಳಲೆ ತೆಗೆದು ಇಟ್ಟೇವಿ (ಹುಚ್ಚಾಟ. ೮೬). ೨. ಹುಣಿಸೆಹಣ್ಣಿನ ಸಿಪ್ಪೆ: ಹುಣಿಸೆಯ ಹಣ್ಣನ್ನು ತೆಗೆದು ಗೊಳಲೆಯನ್ನು ರಾಶಿ ಹಾಕಿದ್ದಾರೆ (ರೂಢಿ). **ಗೊಳಲು :** ೧. ತಿರುಳುಣಿಸಿನಲ್ಲಿ ಹಿಂಡಿ, ಕಾಳು, ನುರುಗು, ತೌಡು, ಗೊಳಲು ಹೀಗೆ ೫ ಪ್ರಕಾರಗಳೆಂದು ಹೇಳಬಹುದು . . . ಕಡಲೆ ತೊಗರೆಯ ಕಾಳಿನ ಮೇಲಿನ ಸಿಪ್ಪೆಗೆ ಗೊಳಲೆನ್ನುವರು (ಗೋಗ್ರಾಸ. ೫೦). [ ? ]

**ಗೊಳಸು** ' ಗೋಟಿಸು ' ನೋ.

**ಗೊಳಿಸೆ** (ನಾ). (ಕರಾ) ಒಂದು ಜಾತಿಯ ಮೀನು. [←ತುಳು. ಕೊಲೆಜಿ]

**ಗೊಳಿಗುದುರೆ** (ನಾ). ಒಂದು ಬಗೆಯ ಸಸ್ಯ : " ಬಂಧವಾಮಿಾ–ಗೊಳಿಗುದುರೆ " (ಔಷಧಿ. ೧೦೬). [ ? ]

**ಗೊಳೋ** (ನಾ). ಒಂದು ಅನುಕರಣ ಶಬ್ದ : ಕ್ರಂದಿತಂ, ರುದಿತಂ, ಕೃಷ್ಟಂ – ೩ ರೋದನದ ಹೆಸರುಗಳು ಅಂದರೆ ಗೊಳೋಯೆಂದಳುವದು (ಸಿದ್ಧಾಂತಿ. ೬೩).

**ಗೊಳ್ಗಲ್** (ನಾ). (?): ಜಮ್ಮಯ್ಯಂಗೆ ಸೂಚಿಸೆಂದು ಗೊಳ್ಗಲ್ಗಳಂ ಮಾಡಿಸಿ ಕಟ್ಟಿಯುಂ . . . ಇಂತನೇಕಪ್ರಕಾರಂಗಳಿಂ ರೌದ್ರದೇವತೆಗಳಂ ಪಿಡಿದು ದುರ್ಗತಿದುಃಖದಿಂದಾಳುತ್ತಮಿಪ್ಪರಿಂತು (ಶ್ರಾವಕಾ. ೧೦೭–೩). [ ? ]

**ಗೊಳ್ಳ** (ನಾ). (ಕರಾ) ಒಂದು ಜಾತಿಯ ಮೀನು.

[ ←ತುಳು. ಕೊಲ್ಲರ್ ]

**ಗೊಳ್ಳನೆ** (ಅ). ಗೊಳ್ಳೆಂದು ಶಬ್ದವಾಗುವಂತೆ : ಲೇಸೆನಲ್ ಕೇಳಿ ಕೂಡೆ ಗೊಳ್ಳನೆ ನಕ್ಕರಾ ಶರಣರು (ಚೀರಮ. ೪-೩೦) ; ಯಮುನಾ ಲಲಿತಾ ಇಬ್ಬರೂ ಗೊಳ್ಳನೆ ನಕ್ಕರು (ಅಲಹೂ. ೧೧೫).

[ ಗೊಳ್ (<ಕೊಳ್$_2$) + – ಅನೆ$_1$ ]

**ಗೊಳ್ಳನಾಡು** (ನಾ). ಒಂದು ಪ್ರದೇಶದ ಹೆಸರು : ಬಿಟ್ಟಿಗ ಎಱೆಗ ಗೊಳ್ಳನಾಡ ನಾಳ್ಗಾಮಿಗರ್ (ಎಕ. VIII, ಸೊರಬ. ೫೪೨–೨ ; ಸು. 800).

[ ಗೊಳ್ಳ ? + ನಾಡು ]

**ಗೊಳ್ಳು** (ನಾ). ೧. ಪ್ರಯೋಜನವಿಲ್ಲದುದು ; ಕೆಲಸಕ್ಕೆ ಬಾರದುದು ; ಜಳ್ಳು: ಗೊಳ್ಳುಮಾತಿಗದು ಸದರಲ್ಲ (ಕನ್ನಜಾ. ೨೭೩). ೨. ಪ್ರಯೋಜನವಿಲ್ಲದ ವ್ಯಕ್ತಿ : ಪ್ರೊಫೆಸರ್ ಅವನ್ನಲೆ! ಶುದ್ಧ ಗೊಳ್ಳು ಕಣೋ (ಮುರುಕು. ೪). 'ಗೊಡ್ಡು$_1$' ಪರಾ. [ ? ]

**ಗೊಳ್ಳೆ** (ನಾ). ಆಸನ; ಮಲದ್ವಾರ; ಕುಂಡಿ: (೬). 'ಗೊಳ್ಳೆನರ' ಪರಾ.

[ ದೇ.॥ ಕೊಡ. ಗೊಳ್ಳೆ ]

**ಗೊಳ್ಳೆನರ** (ನಾ). ಕುಂಡಿಯ ನರ : ಬುಡನ್‌ಸಾಬಿ ಗೊಳ್ಳೇನರ ಕಿತ್ತು ಹೋಗುವ ಹಾಗೆ ಕೂಗುತ್ತಲೇ ಇದ್ದ (ನನ್ನೂರು. ೨೪೮).

[ ಗೊಳ್ಳೆ + ನರ$_1$ (<ನರವು) ]

**ಗೊಱಲೆ,** ಗೊರಲೆ (ನಾ). ಒಂದು ಜಾತಿಯ ಬಿಳಿಇರುವೆ ; ಗೆದ್ದಲು : ಗೊಱಲೆ ಪುತ್ತಿಗಟ್ಟಿಡೆಗೊಡನೆ ಕಾಳುರಗನೆಡೆಗೊಂಡಂತೆ (ಮದನಪು. ೨೬–೩೨). **ಗೊರಲೆ :** ಹರನೆಂಬ ಕೆಂಡವನು ಗೊರಲಿ[ಲೆ]ಮುಟ್ಟುವದೇನೊ (ಸಿದ್ಧಪು. ೨೨–೬೦) ; ಕಬ್ಬು ಬಾಡಿದರೆ ಗೊರಲಿ[ಲೆ]ಹತ್ತುತ್ತದೆ (ಕೃಷಿಪ್ರ. ೧೮೩) ; ಕೆಂಡಕ್ಕೆ ಗೊರಲಿ[ಲೆ]ಮುಟ್ಟುವುದೇನೆ ಎಲೆ ತಾಯಿ (ಕರ್ನಾಟಕ. ೨೭೨). [ <ಒಱಲೆ$_1$ ]

**ಗೊಟಿಗೊಡು**(?) . (?) : ರಾಚಮಲ್ಲಂ ಮಯಿನ್ದಡಿ ಗುಣ್ಣಿಗೆಗುಳ್ಳ ಎನೆಬರು ಸಮಸ್ತಬಲ ಬೆಱಸಿ ಬಿಟ್ಟೊಡೆ ಗೊಟಿಗೊಟ್ಟು ಯಿಟ್ಟಱಿವಲ್ಲಿ (ಎಇ. XIV, ೨೬–೯ ; ಸು. 885). [ ? ]

**ಗೊಟಿಸು,** ಗೊಣಸು, ಗೊಲಸು, ಗೊಳಸು (ನಾ). ೧. ಕೊಂಡಿ ; ಸರಪಣಿಯ ಕುಣಿಕೆ : ಗೆಟಿಸು, ಗೊಟಿಸು, ಸೆಟಿಸು (ಶಬ್ದಾನು. ೧೪೦ ಪ್ರಯೋ). **ಗೊಣಸು:** ೧. ಮಣಿಖಚಿತ ಕಾಂಚನದ ಪೀಠದ ಗೊಣಸು ಮುಱಿದುದು (ಕುಮಾಉ. ೮–೫೯); ಕುಸುರಿಗಳಲಿ ಮುತ್ತಿನ ಚೆಂಡುಗಳು ಚೆಂಡುಗಳಿಗೆ ರತ್ನದ ಗೊಣಸುಗಳು (ಕಥವಿ. II, ೪೦೪) ; ಬೀಳಲಿನ ಗೊಣಸು ಮಾಡಿ, ಕಾಲಿಗೆ ಅದನ್ನು ಸಿಕ್ಕಿಸಿಕೊಂಡು, ಆ ಮರವನ್ನು ಏರಿಯೇ ಏರಿದ (ಕುಡಿಕೂ. ೯೨). ೨. ಹಸುಗಳ ಅಥವಾ ಎತ್ತುಗಳ ಕಾಲಿಗೆ ಹಾಕುವ ಒಂದು ಬಗೆಯ ಆಭರಣ; ಗೆಜ್ಜೆಸರಪಣಿ: ಹಸುಗಳಂ ಕರದು ಅಣಸು ಗೊಣಸುಗಳಿಂದ ಅಲಂಕರಿಸುವರು (ಸೌಗಂಧಿ. ೧೩೭–೧೫). **ಗೊಲಸು:** ೩. ಕುಣಿಕೆಯಂತಹ ರಚನೆಗಳಿಂದ ಕೂಡಿದ ಒಂದು ಬಗೆಯ ಆಭರಣ : ಅವಳ ಗೊಲಸು, ಅವಳ ಕಡಗ, ಅದನ್ನೇನು ಹೇಳುವುದು ? (ಸಣ್ಣಕ. VII, ೪೬) ; ಕುಮಾರಯ್ಯ ತನ್ನ ಬೆಳ್ಳಿ ಗೊಲಸನ್ನು ಲಪ್ಟಾಯಿಸಿದ್ದಾನೆಂದು ರುದ್ರಮ್ಮ ಆಪಾದನೆ ಹೊರಸಿದಳು (ಶನಿಸಂ. ೪೦) ; ತ್ರಿಭಂಗದಲ್ಲಿರುವ ಈ ವಿಗ್ರಹಕ್ಕೆ ಪ್ರಭಾವಳಿ . . . ರುಳಿ, ಗೊಲಸು, ಕಾಲುಬೆರಳಿನ ಉಂಗುರಗಳು ಇವೆ (ಹೊಯ್ಸವಾ. ೩೪). **ಗೊಳಸು :** ೧. ಎಂಟುಂದೆಸೆಯ ದೇವತೆಗಳೆ ಗೊಳಸಾಗೆಯುಂ ವಾಸುಗೆಯೆ ಬಳಸಾಗೆಯುಂ (ಕಇ. IV, ೫೫–೧೧ ; 1000 ? ) ; ಲಲಿತತೇಜಃಪುಂಜ ಮಿಗೆ ಥಳಥಳಿಸಿತತಿದೂರದಲಿ ಬೆಳಗಿನ ಗೊಳಸನುಡಿ[ಪಾಠಾಂ. ಗೊಳಿಸುಳಿ]ದಂತಾದುದಾಗಳೆ ತೋಱಿತಾಕಾರ (ಕುಮಾವ್ಯಾಸ. ೧–೨೩).

[ ದೇ.॥ ತಮಿ. ಕೊಲುಂಚು ; ತುಳು. ಗೊಣಸ್, ಗಣಸ್ ; ತೆಲು. ಗೊಲುಸು ]

**ಗೋ** (ನಾ). ೧. ಹಸು ; ಆವು : ಗೋಮಹಿಷೀ ಕರೇಣುತುರಗೋಷ್ಟ್ರಕುಲಕ್ಕಮಳಾಗೆ ಪೊಂದುಗುಂ (ಲೋಕೋಪ. ೪–೬೭) ; ವಿಪ್ರರ ಮಂದಿಗಿತ್ತರು ಗೋ ಹಿರಣ್ಯ ಸಮಸ್ತವಸ್ತುಗಳ (ಕುಮಾದ್ರೋ. ೨–೯). ೨. ಎತ್ತು ; ವೃಷಭ. 'ಗೋಪತಿ' ಪರಾ. ೩. ಸೂರ್ಯ. ೪. ಚಂದ್ರ. ೫. ನಕ್ಷತ್ರ. ೬. ಕಿರಣ; ರಶ್ಮಿ. ೭. ಆಕಾಶ. 'ಗೋಕೇಶ' ಪರಾ. ೮. ಸ್ವರ್ಗ. ೯. ಭೂಮಿ ; ಪೃಥ್ವಿ. ೧೦. ಬೆಟ್ಟ; ಪರ್ವತ. ೧೧. ಮರ; ವೃಕ್ಷ. ೧೨. ನೀರು. 'ಗೋಜ$_1$' ಪರಾ. ೧೩. ತೆರೆ; ಅಲೆ. ೧೪. ಹಕ್ಕಿ ; ಪಕ್ಷಿ. ೧೫. ನವಿಲು. ೧೬. ದಿಕ್ಪಾಲಕ. ೧೭. ಸರಸ್ವತಿ: " ಭಾರತಿ . . . ಗೋ ಗೀರ್ ಭಾಷೆ ಶಾರದೆಯೆನಲು ಸರಸ್ವತಿ

ಯಕ್ಕು " (ಮಂಗರಾ. ೪-೧೦). ೧೮. ನುಡಿ ; ಮಾತು. ೧೯. ಕಣ್ಣು. 'ಗೋತ್ರಯ' ಪರಾ. ೨೦. ಹೊಟ್ಟೆ; ಉದರ. ೨೧. ಮೈಗೂದಲು; ರೋಮ. 'ಗೋದಾನ' ಪರಾ. ೨೨. ಕೋಡು ; ಕೊಂಬು. ೨೩. ದಿಕ್ಕು ; ದೆಸೆ. ೨೪. ಬಾಣ. ೨೫. ವಜ್ರಾಯುಧ : " ಶಂಬ ಮಿಂದ್ರಾಯುಧಂ . . . ಗೋಯೆನಲು ವಜ್ರವೆಂಬುದಕ್ಕು " (ಮಂಗರಾ. ೧೩-೫). ೨೬. ಇಂದ್ರಿಯ. 'ಗೋಜಿತ' ಪರಾ. " ವಸುಧೆ ದಿವಂ ಪವಿ ದೀಧಿತಿ ದೆಸೆ ಬಾಣಂ ವಾರಿ ವಾಣಿ ಲೋಮಂ ನಯನಂ ಪಸುವೆಂಬಿನಿತ ಱೊಳಂ ವರ್ತಿಸುಗುಂ ಗೋಶಬ್ದಂ " (ವಸ್ತುಕೋ. ೧೩೫-೧೦೪) ; " ಶಾರದೆ ತರು ಪಶು ಭೂ ಕಣ್ವಾರಿ ನವಿಲ್ ಸ್ವರ್ಗ ಕಿರಣ ಗಿರಿ ತೆರೆ ಶೃಂಗಂ ನಾರಾಚಂ ದಿಕ್ಪತಿ ಖಗ ಶೀರ್ಷಜ ಪೊಡೆ ಸಪ್ತದಶಂ ಯಿದೆ ಗೋಶಬ್ದಂ" (ನಾನಾಕಂ.೧೨).

**ಗೋಮಕ್ಕಳು** = ಗೊಲ್ಲರು ; ಗೋಪಾಲಕರು : ಗೆಳರಾವು ಎಂದು ಗೋಮಕ್ಕಳು ಅಂದು ತಿಳಿದು ನಿನ್ನ ಪೂಜಿಸಲಿಲ್ಲವಯ್ಯಾ (ತೀರ್ಥಮ.೮೨) ; ಕರಿಯ ಸೀಳಿದೆ ರಜಕನ ಸಹಿತ ಶರಾಸನ ಮುರಿದು ಗೋಮಕ್ಕಳೊಡನುಂಡೆ (ವಿಸೂ೯ಸು. ೧೭-೫). [ ಸಂ. ]

**ಗೋಇಂದರಸ** (ನಾ). ಒಬ್ಬಾತನ ಹೆಸರು : ಶ್ರೀ ಗೋಇಂದರಸ ಪೃಥುವೀ ರಾಜ್ಯಂಕೆಯೆ (ಎಕ. VIII, ಸೊರಬ. ೯-೧ ; ಸು. 800). [ <ಗೋವಿಂದ + ಅರಸ$_1$ ]

**ಗೋಂಕುರು** 'ಗೊಂಕುಱು' ನೋ.

**ಗೋಂಕುರುಕಪ್ಪೆ** 'ಗೊಂಕಱುಕಪ್ಪೆ' ನೋ.

**ಗೋಂಟು** 'ಗೊಂಟು' ನೋ.

**ಗೋಂಡ,** ಗೊಂಡ್ವ (ನಾ). ದ್ರಾವಿಡವರ್ಗಕ್ಕೆ ಸೇರಿದ, ವಿಂಧ್ಯಪರ್ವತದ ಬಳಿಯಿರುವ ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ: ಮಧ್ಯಪ್ರದೇಶದಲ್ಲಿರುವ ಕಾಡುಗಳಲ್ಲಿ ಸಾಧಾರಣವಾಗಿ ವಾಸಿಸುವ ಗೋಂಡ ರನ್ನು ಆದಿವಾಸಿಗಳೆಂದೂ, ಕಾಡುಜನರೆಂದೂ ಕರೆಯುವರು (ದ್ರಾವಿ. ೧೫೦). **ಗೊಂಡ್ವ**: 'ಗೊಂಡಾರಣ್ಯ' ಪರಾ. [<ಪ್ರಾ. ಗೋಂಡ]

**ಗೋಂಡಿ** (ನಾ). ದ್ರಾವಿಡಭಾಷಾವರ್ಗಕ್ಕೆ ಸೇರಿದ ಒಂದು ಭಾಷೆ ; ಗೋಂಡ ಜನಾಂಗ ಆಡುವ ಭಾಷೆ : ಇನ್ನೊಂದು ದ್ರಾವಿಡಭಾಷೆಯಾದ ಗೋಂಡಿ ಭಾಷೆ ಮಧ್ಯದ್ರಾವಿಡಭಾಷೆಗಳ ವಿಭಾಗದಲ್ಲಿ ಸೇರುತ್ತದೆ (ದ್ರಾವಿ. ೧೫೦). [ <ಗೋಂಡ ]

**ಗೋಂದು** (ನಾ). ಗೊಬ್ಬಳಿ ಮೊದಲಾದ ಮರಗಳ ದ್ರವ ; ಅಂಟು : ಒಂದು ಹಲಗೆಯಲ್ಲಿ ಇಂಥ ಮೂರೋ ಐದೋ ಜೊತೆಗಳನ್ನಿಟ್ಟು ಗೋಂದಿ ನಿಂದ ಅಂಟಿಸುತ್ತಾರೆ (ಶಿಲ್ಪನಾ. ೩೨೭) ; ಗೋಂದಿನ ಉಂಡೆಯಂತೆ ಕಾಂತಿ ಹೀನ ಕಣ್ಣುಗುಡ್ಡೆಗಳು ಅಲ್ಲಿಂದಿಲ್ಲಿಗೆ ಹೊರಳುತ್ತಿದ್ದವು (ಕೀಲುಗೊಂ. ೧೯೮) ; ಒಂದು ಗೋಂದಿನ ಸೀಸೆಯೂ, ಒಂದು ಕಾಲಿಂಗ್‌ಬೆಲ್ಲೂ ಇವೆ (ವೀರಯೋ. ೧). [ ←ಹಿಂ. ಮರಾ. ಗೋಂದ್ ]

**ಗೋಂಧಳ** 'ಗೊಂದಳ' ನೋ.

**ಗೋಕಂಟಕ** (ನಾ). ೧. ನೆಗ್ಗಿಲು. ೨. ಒಂದು ಬಗೆಯ ಗಿಡ ; ಕೊಳವಂಕೆ : (ಕ). [ ಸಂ. ]

**ಗೋಕರ್ಣ** (ನಾ). ೧. ಹಸುವಿನ ಕಿವಿ ; ಆವಿನ ಕಿವಿ. ೨. ಒಂದು ಜಾತಿಯ ಜಿಂಕೆ ; ಚಮರಿಯ ಮೃಗ : " ಚಮರಂ ಗೋಕರ್ಣಂ ರುರು ಸೃಮರಾಖ್ಯಂ " (ವಸ್ತುಕೋ. ४೧-೭) ; " ಆ ರೋಮಿ ಗೋಕರ್ಣಮೆನಲು ಚಮರಿಯ ಮೃಗಂ " (ಮಂಗರಾ. ೪೯-೧೧) ; ಗೋಕರ್ಣ, ಕಾಡುಕೋಣ . . . " ಇದೇಕೆ ಹೀಗೆ ಓಡುವಿರಿ? " ಎಂದು ಕೇಳಿದುವು (ಬುದ್ಧಪ. ೧೭). ೩. ಕಣ್ಣೇ ಕಿವಿಯಾಗಿ ಉಳ್ಳುದು ; ಹಾವು; ಸರ್ಪ : ಶ್ರೀಕಾತ್ಯಾಯನಿ ಯರಸಂ ಗೋಕರ್ಣಾಧೀಶಕಟಕನನುಪಮನಭವಂ (ಶಬಶಂ. ४-೧). 'ಗೋಕರ್ಣಭೂಷಣ' ಪರಾ. ೪. ಹೆಬ್ಬೆರಳಿನ ತುದಿಯಿಂದ ಕಿರು ಬೆರಳಿನ ತುದಿಯವರೆಗಿನ ಅಳತೆ : " ಅಂಗುಷ್ಠಕ್ಕೆ ಕನಿಷ್ಠಿಕೆಯಿಂ ಗೋಕರ್ಣಂ [ವಿ]ತಸ್ತಿ " (ವಸ್ತುಕೋ. ೬೯-೧೩). ೫. ಅಂಗುಷ್ಠದಿಂದ ಉಂಗುರದ ಬೆರಳವರೆಗಿನ ಅಳತೆ : " ಗೇಣೆನೊಳು ಪವಿತ್ರಾಂಗುಲಿಗೆ ಗೋಕರ್ಣಮೆಂಗು " (ಮಂಗರಾ. ೯೭-೧೦). ೬. ಪಶ್ಚಿಮಕರಾವಳಿಯಲ್ಲಿ ರುವ ಒಂದು ಪ್ರಸಿದ್ಧವಾದ ಕ್ಷೇತ್ರ: ತಿರುಪತಿ ಕರೆವುದು ಶ್ರೀಶೈಲವನಗೊ ಉಡುಪಿಗೆ ಕಿವಿಗೊಡೆ ಗೋಕರ್ಣ (ಅರಳು. ೩೦४-೧४) ; ಎಲ್ಲರೂ ಗೋಕರ್ಣಕ್ಕೆ ಹೋದರೆ ಗೋಕರ್ಣದವರು ಗಾಳಕ್ಕೆ ಹೋದರು (ಗಾದೆ). 'ಗೋಕರ್ಣನಾಥ' ಪರಾ. ೭. ಒಂದು ಬಗೆಯ ವಿದ್ಯೆ (?) : ಅಕ್ಷರ ಲೆಕ್ಕ ಗಂಧರ್ವ . . . ಅಶ್ವಪರೀಕ್ಷೆ ಗಜಶಿಕ್ಷೆ ಗೋಕರ್ಣ ದಾಡಾಬಂಧ . . . ಇವೆಲ್ಲವ ಕಲಿತಡೇನೋ (ಮಡಿಮಾ. ४३-೬೧). [ ಸಂ. ]

**ಗೋಕರ್ಣನಾಥ** (ನಾ). ಗೋಕರ್ಣಕ್ಷೇತ್ರದ ಒಡೆಯ; ಗೋಕರ್ಣೇಶ್ವರ; ಮಹಾಬಲೇಶ್ವರ : ಗೋಕರ್ಣನಾಥನಂ ಗೌರೀನಾಥನಂ . . . ಕಂಡು ಕೆಯ್ಗಳಂ ಮುಗಿದು (ಶಂಪಥಾ. ४-೨೭ ವ). [ ಗೋಕರ್ಣ + ನಾಥ ]

**ಗೋಕರ್ಣಭೂಷಣ** (ನಾ). ಸರ್ಪವನ್ನು ಆಭರಣವನ್ನಾಗಿ ಧರಿಸಿ ದವನು ; ಶಿವ : ಗೋತ್ರವಿಶಿಖಾಸನಂ ಗೋಕರ್ಣಭೂಷಣ ಗೋಪಗರ್ವ ವಿನಾಶನ (ನವಮೋ. ೨-೧). [ ಗೋಕರ್ಣ + ಭೂಷಣ ]

**ಗೋಕರ್ಣಿ**(ನಾ). ಒಂದು ಬಗೆಯ ಸಸ್ಯ ; ಹೆಗ್ಗುರುಟಿಗೆ : " ಮೂರ್ವಾ . . . ಗೋಕರ್ಣೀ, ಪೀಲುಪರ್ಣೀ-೧೦ ಹೆಗ್ಗುರುಟಿಕೆಯ ಹೆಸರುಗಳು" (ಸಿದ್ಧಾಂತಿ. ೧೧೫). [ ಸಂ. ಗೋಕರ್ಣೀ ]

**ಗೋಕಾಗೆ** (ನಾ). ಒಂದು ಊರಿನ ಹೆಸರು ; ☞ ಈಗಿನ ಬೆಳಗಾವಿ ಜಿಲ್ಲೆಯ ಗೋಕಾಕ : ಶ್ರೀಮದ್ ಅಕ್ಕಾದೇವಿ[ಯ]ರ್ ಗೋಕಾಗೆಯ ಕೋಟೆಯ ವು(ಸು)ತ್ತಿರ್ದ್ದ ಬೀಡಿನಲು ವಿಕ್ರಮಪುರದ ಗೊಣದ ಬೆಡಂಗಿಯ ಜಿನಾಲಯಕ್ಕೆ . . . ಕುಡುವ ಭೂಮಿ (ಎಇ. XVII, ೧೨೨-೭: 1047) ; ಶ್ರೀವೇಳುಗ್ರಾಮಿಯ ಮಲ್ಲೇಶ್ವರ ಶ್ರೀಮತು ಪಿರಿಯಗ್ರಹಾರಂ ನೇಸಱಿಗೆಯ ಕಲಿದೇವರು ಗೋಕಾಗೆಯ ಬಲ್ಲೇಶ್ವರ . . . ಯಿಂತೀ ಮಠಂಗಳಿಗೆ ಇದು ಗುರುಪೀಳಿಗೆ (ಕಇ. I, ೩೦-೪೪ : 1252). [ ? ]

**ಗೋಕು** 'ಘೋಕು' ನೋ.

**ಗೋಕುಲ,** ಗೋಕುಳ (ನಾ). ೧. ದನಕರುಗಳ ಮಂದೆ ; ಗೋವುಗಳ ಹಿಂಡು : ಕಲಶ ಕನ್ನಡಿ ಕರಿತುರಗ ಗೋಕುಲ . . . ಲಲನೆಯರನೀಕ್ಷಿಸು ವುದವನಿಪತಿಲಕರುಪ್ಪವಡಿಸುವ ಸಮಯದೊಳು (ಕುಮಾ೯ಉ. ३-೧೦೬). ೨. ದನಗಳ ಹಕ್ಕೆ ; ತುರುಹಟ್ಟಿ : (ಕ). ೩. ಯಮುನಾನದೀತೀರ ದಲ್ಲಿರುವ ಒಂದು ಹಳ್ಳಿ : ತೀರದೊಳಿರ್ದ ಗೋಕುಲಮನಾನಕ ದುಂದುಭಿ ಪೊಕ್ಕು (ಜಗವಿ. ३-೧೧) ; ಗೋಕುಲದಲಿ ನಾನಿರಲಾಱೆ ಗೋಪ್ಯಮ್ಮ ಕೇಳೆ (ಪುರಂದ. ४-३೦ ಪಲ್ಲವಿ) ; ಹರಿಜನ್ಮಭೂಮಿ ಗೋಕುಲ ದಂತೆ (ಜೈಮಿಭಾ. ೧೫-೧೧). 'ನಂದಗೋಕುಲ' ಪರಾ. ೪. ಕಿರಣಗಳ ಪುಂಜ. ೧, ೪ : ಆದಿತ್ಯನಂತೆ ವಿವಿಧಗೋಕುಲಪ್ರಶಸ್ತಮುಂ (ಪುಷ್ಪಪು. ೯-३೦ ವ). **ಗೋಕುಳ** : ೧, ೩: ಗೋಕುಳರಕ್ಷಣಕಗಮನೆತ್ತಿದಂ (ಬಂಹರಿ. ೧३-೧४). ೧, ೪ : ಪ್ರಚುರಸುಧಾನಿಳಯಂ ಸಮುಪಚಿತಮನೋಹಾರಿ ಗೋಕುಳಂ . . . ತಾನೆನಿಸಿ ಚಂದ್ರಬಿಂಬಂಬೊಲೊಪ್ಪುಗುಂ ಚಂದ್ರಪುರಂ (ಚಂದ್ರಪು. ೧೧-೫೦). [ ಗೋ + ಕುಲ ]

**ಗೋಕುಲಾಷ್ಟಮಿ** (ನಾ). ಶ್ರಾವಣಮಾಸದ ಕೃಷ್ಣಪಕ್ಷದ ಅಷ್ಟಮಿ ; ಶ್ರೀಕೃಷ್ಣನ ಜನ್ಮದಿನ ಮತ್ತು ಅಂದು ವೈಷ್ಣವರು ಆಚರಿಸುವ ಒಂದು ಹಬ್ಬ : ಗೋಕುಲಾಷ್ಟಮಿಯನ್ನು ವೈಷ್ಣವರು ಸಂಭ್ರಮದಿಂದ ಆಚರಿಸುತ್ತಾರೆ (ರೂಢಿ); ಇಮಾಮ್‌ಸಾಬರಿಗೂ ಗೋಕುಲಾಷ್ಟಮಿಗೂ ಏನು ಸಂಬಂಧ ? (ಗಾದೆ). [ ಗೋಕುಲ + ಅಷ್ಟಮಿ ]

**ಗೋಕುಳ** 'ಗೋಕುಲ' ನೋ.

**ಗೋಕೆ** 'ಗೊಂಕೆ' ನೋ.

**ಗೋಕೇಶ** (ನಾ). ಆಕಾಶವೇ ತಲೆಯು ಕೂದಲಾಗಿ ಉಳ್ಳವನು; ವ್ಯೋಮಕೇಶ; ಶಿವ : ಗೋತ್ರಜಾನನ ಗೋಜ ಗೋಪಪಾವನರೂಪ . . . ಗೋಕೇಶ (ನವಮೋ. ೨-೧). [ಗೋ + ಕೇಶ]

**ಗೋಕ್ಕಾಡು** (ನಾ). ಒಂದು ಬಗೆಯ ಭೂಮಿ; ಹುಲ್ಲುಗಾವಲು; ಗೋಮಾಳ (?) : ಒನ್ದು ತೋಟ್ಟಮುಂ ಇರ್ಕ್ಕಣ್ಡುಗಂ ಮಡೆಯುಂ × × × ಕಣ್ಡುಗಂ ಗೋಕ್ಕಾಡುಂ (ಎಕ. XII, ಮ ದ್ಧ ಗಿ. ೫೦-೯ ; ಸು. 950 ?). [ಗೋ + ಕಾಡು₂]

**ಗೋಕ್ಷೀರ** (ನಾ). ಆವಿನ ಹಾಲು; ಹಸುವಿನ ಹಾಲು : ದ್ರಾಕ್ಷೆ ಮಧು ಖಂಡಶರ್ಕರೆ ಗೋಕ್ಷೀರಂ ಯಷ್ಟಿಮಧುಕಮಿವು ಪಿತ್ತಹರಂ (ಅಶ್ವಶಾ. ೭-೪೩). [ಗೋ + ಕ್ಷೀರ]

**ಗೋಕ್ಷೀರರಕ್ತತಜತ್ವ** (ನಾ). ರಕ್ತವು ಆಕಳ ಹಾಲಿನಂತೆ ಬೆಳ್ಳಗಿರುವ ಸ್ಥಿತಿ; ಈ ಜೈನರಲ್ಲಿ ತೀರ್ಥಂಕರತ್ವವನ್ನು ಹೊಂದಲಿರುವ ಜೀವನಿಗೆ ಈ ಸ್ಥಿತಿ ಬರುವುದೆಂದು ಹೇಳುತ್ತಾರೆ : ಗೋಕ್ಷೀರರಕ್ತತಜತ್ವಮುಂ ನಿಸ್ವೇದಮುಂ ಸಮಚತುರಶ್ರಮಪ್ಪ ಸಂಸ್ಥಾನ ಸಂಹನನಮುಂ ಅತಿಶಯ ರೂಪತೆಯುಂ . . . ತನಗನುಸಂಗತಮಾಗೆ ಯೌವನಪ್ರಾಪ್ತನಾಗಿ (ಶಾಂತಿಪು. ೧೧-೯೪ ವ). [ಸಂ.]

**ಗೋಕ್ಷುರ** (ನಾ). ೧. ಹಸುವಿನ ಗೊರಸು. ೨. ಒಂದು ಬಗೆಯ ಸಸ್ಯ; ನೆಗ್ಗಿಲು : "ಗೋಕ್ಷುರಃ, ಸ್ಥಳಶೃಂಗಾಟಃ, ಶ್ವದಂಷ್ಟ್ರಾ, ತ್ರಿಕಂಟಕಃ – ಈ ೪ ನೆಗ್ಗಿಲು" (ಹಲಾಯು. ೩೩-೪೮). [ಗೋ + ಕ್ಷುರ]

**ಗೋಕ್ಷುರಕ** (ನಾ).=ಗೋಕ್ಷುರ. [ಸಂ.]

**ಗೋಖುರು** (ನಾ). ಒಂದು ಬಗೆಯ ಗಿಡ; ನೆಗ್ಗಿಲುಮುಳ್ಳು : ಸೂರ್ತಿ ಚವಾಳಾ ಮಣದ ಮೇಲೆ ಕಿಮ್ಮತ್ತು ಇರತಕ್ಕ ಜಿನಸಗಳು. ೧. ಅಕ್ಕಲಕಾರ . . . ೭೭. ನೆಗ್ಗಲಿಮುಳ್ಳು, (ಗೋಖುರು) (ಮುಂಬವ್ಯಾ. ೧೨೪); ಗಂಟುಭಾರಂಗೀ, ಗಿನಿ, ಗುಲಕಂದ, ಗೋಖುರು, ಗೋಅಗರ, ಗೋರೋಜನ (ಮುಂಬವ್ಯಾ. ೨೦೪). [<ಸಂ. ಗೋಕ್ಷುರ]

**ಗೋಗರೆ** 'ಗೋಟ್ಗುಱ[1]' ನೋ.

**ಗೋಗರೆತ** (ನಾ). ದೀನವಾಗಿ ಬೇಡಿಕೊಳ್ಳುವಿಕೆ; ಗೋಗರೆಯುವಿಕೆ : (೬). [ಗೋಗರೆ (<ಗೋಟ್ಗುಱ[1]) + – ತ₂]

**ಗೋಗಲ್ಲು** (ನಾ). ಹಳ್ಳಿಗರು ಹಸುಗಳ ಕಲ್ಯಾಣಕ್ಕಾಗಿ ಪೂಜಿಸುವ ಒಂದು ಕಲ್ಲು : ಚಪ್ಪೇರೋಗದ ಉಚ್ಚಾಟ ಹೆಚ್ಚಿದಾಗ ಊರು ಮಧ್ಯ ದಲ್ಲಿರುವ ಗೋಗಲ್ಲು ಪೂಜೆ ಮಾಡುವ ವಾಡಿಕೆ. ಗೋಗಲ್ಲಿನೊಳಗೆ ಒಂದು ಯಂತ್ರವನ್ನು ಕೊರೆದಿದ್ದರು (ಹುಟ್ಟುಹ. ೭೦).
[ಗೋ + ಕಲ್ಲು (<ಕಲ್₃)]

**ಗೋಗಹಳೆ** (ನಾ). ಒಂದು ಬಗೆಯ ಕಹಳೆ; ದನದ ಕೊಂಬಿನಿಂದ ಮಾಡಿದ ಕಹಳೆ : ಏರಿದಪ್ಪ ಭೇರಿ ತಂಬಟ ಪಟಹ ನಿಸ್ಸಾಳಮುರುತರದ ಗೋಗಹಳೆ ಮುಂತಾದ ವಾದ್ಯಗಳನರರೆ ಧ್ವನಿಗೈಸುತ (ಕುಮಾರರಾಸು. ೮).
[ಗೋ + ಕಹಳೆ]

**ಗೋಗಿ** 'ಗೋಗು' ನೋ.

**ಗೋಗಿನಾರು** (ನಾ). ಗೋಣಿನಾರು : "ಪೀಲುಃ, ಗುಡಫಲಃ, ಸ್ರಂಸೀ-೩ ಗೋನುಮರ, ಗೋಗಿನಾರು ಪ್ರಸಿದ್ಧ, ಗೋಣೀಮರವೆಂದು ಕೆಲವ ರನ್ನುವರು" (ಸಿದ್ಧಾಂತಿ. ೧೧೩).
[ಗೋಗಿ (<ಗೋಗು) + ನಾರು₂ (<ನಾರ್)]

**ಗೋಗು, ಗೋಗಿ** (ನಾ). ಒಂದು ಬಗೆಯ ಸಸ್ಯ : ಪೊಲದ ಪುಂಡ್ರಿಕೆ, ಪುಂಡ್ರಿಕೆ, ಗೋಗು, ಪುಂಡಿ (ಪ್ರಜಿಗಿ. ೪೩-೮೫೦). **ಗೋಗಿ :** ''ಕೃಷಿ ಅಮ್ಲಾತಕ'' (ಪಂಡಿತ). [←ತೆಲು. ಗೋಗು]

**ಗೋಗ್ರಾಸ** (ನಾ). ೧. ಹಸುವಿನ ಮೇವು : ನಾಡಿನ ಹುಲ್ಲೆಲ್ಲ ಗೋಗ್ರಾಸ ವಾಗಿ, ಗೋಗಳೆಲ್ಲ ಸಂತತ ದುಗ್ಧವರ್ಷಣ ಮಾಡಲಿ (ಗೋಗ್ರಾಸ. ೧೦೬). ೨. ಹಸುವಿಗೆ ಸಲ್ಲಿಸುವ ಆಹಾರ,–ನೈವೇದ್ಯ : ಮೊದಲು ಸ್ವಲ್ಪ ಗೋಗ್ರಾಸ ಕೊಡು (ಕರುಳ. ೨೧); ಊಟಕ್ಕೆ ಕೂರುವ ಮುಂಚೆ ಗೋಗ್ರಾಸವನ್ನು ಬಾಳೆಲೆಯಲ್ಲಿ ಎತ್ತಿ ಹಿತ್ತಿಲಿನಲ್ಲಿ ಮೇಯುತ್ತಿದ್ದ ಗೌರಿಯ ಎದುರು ಇಟ್ಟು (ಸಂಸ್ಕಾರ. ೪). [ಗೋ + ಗ್ರಾಸ]

**ಗೋಘೃತ** (ನಾ). ಹಸುವಿನ ತುಪ್ಪ : ಜವೆ ಕಟವಂ ಮಾಷಂ . . . ಎಂಬಿವಿನಿತುಮಂ ಗೋಘೃತದಿಂದವುಗಡಿಸಿ ತಿಂದು ಸಿತದುಗ್ಧವನಿರುಳೊಳ್ ಕುಡಿಯ ವೀರ್ಯವರ್ಧನಮಕ್ಕುಂ (ಲೋಕೋಪ. ೯-೪೭). [ಗೋ+ಘೃತ]

**ಗೋಘ್ನ** (ನಾ). ಹಸುಗಳನ್ನು ಕೊಂದವನು; ಗೋಹತ್ಯೆ ಮಾಡಿದವನು: ಗೋಘ್ನನ ಪಾಪಮುಮಂ ಬ್ರಹ್ಮಘ್ನನ ಪಾಪಮುಮನೆಮಗೆ ಪೊಂಗುಡಿ ವಿಗಾಗಳ್ ನಿಘ್ನಂ ಮಾಡುವೆಂ (ಸಮುಕ. ೧೧-೮೦). [ಸಂ.]

**ಗೋಚರ** (ಗು). ೧. ದನಕರುಗಳು ಸಂಚರಿಸುವ. ೨. ಕಣ್ಣಿಗೆ ಕಾಣುವ,–ವೇದ್ಯವಾಗುವ : ಅಲ್ಲಮನಾದೊಡೆನ್ನೆಮಗೆ . . . ಸುಲಭದಲಿ ಗೋಚರ ವೆನಿಸಿ ಕಾಣಿಸುವನೇ (ಪ್ರಭುಲೀ. ೭-೨). (ನಾ). ೩. ದನಕರುಗಳು ಮೇಯುವ ಸ್ಥಳ; ಹುಲ್ಲುಗಾವಲು. ೪. ಪ್ರಾಂತ; ಪ್ರದೇಶ. ೫. ವಾಸಸ್ಥಾನ; ಮನೆ.

**ಗೋಚರದ ಬಳಿ**=ಒಂದು ಮನೆತನದ ಹೆಸರು : ಸೆಟ್ಟಿಕಾರ ವಿಠಲ ಸೆಟ್ಟಿಯ ಗಡಿಯಿಂ ಗೋಚರದ ಬಳಿಯವರ ತೋಟದ ಗಡಿಯಿಂ ತೆಂಕಲು (ಸೌಇಇ. IX-ii, ೪೪೪-೧೪; 1433). **ಗೋಚರವಾಗು**=ತಿಳಿ; ಗೊತ್ತಾಗು : ಆತನು ನಿರ್ಮಿಸಿದ ಸೃಷ್ಟಿಯನ್ನು ಮನಮುಟ್ಟಿ ಶೋಧಿಸುವುದರಿಂದ ಆತನ ಶಕ್ತಿ ಜ್ಞಾನ ದಯಗಳ ಮಹಿಮೆಯು ಗೋಚರವಾಗುವುದು (ಮುಂಬಯಿ. ೪-೬೦). [ಸಂ.]

**ಗೋಚರಾವು** (ನಾ). ೧. ಗೋಮಾಳ : ನಮ್ಮ ಹಳ್ಳಿಗೆ ಗೋಚರಾವು ಸಾಲದು (ರೂಢಿ). ೨. ದನಕರುಗಳ ಮೇವು : ಉಳಿದದ್ದೆಲ್ಲ ಸರಕಾರಕ್ಕೆ ಸೇರಿದ್ದು. ಗೋಚರಾವಿಗಾಗಿ ಬಿಟ್ಟಿರಬೇಕು (ಚಿಗುಳ. ೨೪೨).
[ಗೋ + ಚರಾವು (<ಚರಾಯಿ)]

**ಗೋಚರಿಯೆ** (ನಾ). ದನಕರುಗಳ ಚರ್ಯೆ,–ವರ್ತನೆ : ಕಾಕಮ್ಮಗ ಗೋಚರಿಯೆಯಲಿ ಜಗದೇಕವಂದಿತನಿಂತು ನಡೆದಂಗೀಕರಿಸಿದನು ಮಾಣದಿಂತಜಗರವೃತಸ್ಥಿತಿಯ (ನಿಭಾಗ. ೫-೪-೧೯). [ಗೋ + ಚರಿಯೆ]

**ಗೋಚರಿಸು** (ಕ್ರಿ). ೧. ತೋರು; ಕಾಣು; ಕಣ್ಣಿಗೆ ಕಾಣಿಸು : ಪರಮ ವೇದವ್ಯಾಸಮುನಿಪನ ಕರುಣವಾಗಲು ಕಂಗಳಿಗೆ ಗೋಚರಿಸಿತೀ ಭಾರತ ಮಹಾಸಂಗ್ರಾಮಸೌರಂಭ (ಕುವ್ಯಾಭೀ. ೧-೫೬); ಪೋದುವು ಹರಿಗಳಟಿಸಿ ದೊಡೆ ಗೋಚರಿಸವು (ಜೈಮಿಭಾ. ೨೮-೭). ೨. ತಿಳಿ; ವೇದ್ಯವಾಗು : ಅವನಿ ನಮಗಸ್ವಾಮ್ಯವೆಂಬೀ ವ್ಯವಹರಣೆ ಗೋಚರಿಸುತಿದೆ (ಕೊರರಾ. ೧-೨-೨೬); ಯತಿಗಳ ಬಗೆಗೆ ಗೋಚರಿಸದೆ ವಾಚಿಪ ಶ್ರುತಿಗಳ್ಗೆ ನಿರುಪಮ ನೆನಿಸಿ ಅತಿರೌದ್ರಾಕಾರವಡೆದಭವನ ಕಂಡು ರತಿರಾಜ ಹವಣಿಸಿ ನಿಂದ (ಮೋಹತ. ೭-೬); ಒಂದು ಸೇರು ಅಕ್ಕಿಯನ್ನು ಯಾಚಿಸುವುದು ಮಾನಹೀನನ ಕಾರ್ಯವೆಂದು ಅವನಿಗೆ ಗೋಚರಿಸಿತು (ಕಾವೇರಿ. ೨೯). ೩. ತೋರಿಸು; ಪ್ರಕಟಿಸು: ಅವರು . . . ಹುಬ್ಬಿನ ಚಲನೆಗಳಿಂದಲೇ ತಮ್ಮ ಅಸಹನೆಯನ್ನು ಗೋಚರಿಸುತ್ತಿದ್ದರು (ಚಿಂಗಾಳ್ಳ. ೧೪೯). [ಗೋಚರ + – ಇಸು₃]

**ಗೋಚಾರ** (ನಾ). ೧. ಪಶುಗಳ ಚಲನೆ. 'ಗೋಚಾರನಿಯಮ' ಪರಾ. ೨. [ಜ್ಯೋತಿ] ಗ್ರಹ ಅಥವಾ ನಕ್ಷತ್ರಗಳ ಚಲನೆ. 'ಗೋಚಾರಫಲ' ಪರಾ. [ಗೋ + ಚಾರ]

**ಗೋಚಾರನಿಯಮ** (ನಾ). [ಜೈನ]ಹಸುವಿನಂತೆ ಆಹಾರನಿಮಿತ್ತವಾಗಿ ಸಂಚರಿಸುವ ಕ್ರಮ; "ಸಾಧುವಿನ ಭಿಕ್ಷಾಕ್ರಮ. ಆಹಾರಕ್ಕಾಗಿ

ಹಸುವು ವನದ ಶೋಭೆ, ಸೌಂದರ್ಯಗಳನ್ನು ಲಕ್ಷಿಸದೆ ಚರಿಸುವಂತೆ ಸನ್ಯಾಸಿ ಭಿಕ್ಷವನ್ನು ಮಾತ್ರ ಗಮನಿಸಬೇಕು. ದಾತಾರನನ್ನಾಗಲಿ ಅವನ ಐಶ್ವರ್ಯವನ್ನಾಗಲಿ ಗಣಿಸಬಾರದು" (ವಡ್ಡಾರಾ. ಕೋಶ. ೩೨೭) : ಭಟ್ಟಾರರ್ ಬಸದಿಯಂ ಬಲಗೊಂಡು ಕಾಲಂ ಕರ್ಚೋಳಗಂ ಪೊಕ್ಕೀರ್ಯಾಪತ್ತಿಯಂ ಬಿಡಿಸಿ ಗೋಚಾರನಿಯಮಂಗೆಯ್ದುದಂ ನಂದಿಮಿತ್ರಂ ನೋಡುತ್ತಿರ್ದು (ವಡ್ಡಾರಾ. ೭೯-೨) : ಭಟ್ಟಾರರ್ . . . ಕಾರುಣ್ಯಬುದ್ಧಿಯಿಂದಾಹಾರಮಂ ಕೊಳ್ಳದೆ ಅಲಾಭಂ ಮಾಡಿಯಂತೆ ಬಸದಿಗೆ ಪೋಗಿ ಗೋಚಾರನಿಯಮಂಗೆಯ್ದು (ವಡ್ಡಾರಾ. ೮೩-೧೭).

[ ಗೋಚಾರ + ನಿಯಮ ]

**ಗೋಚಾರಫಲ** (ನಾ). [ಜ್ಯೋತಿ]ಸೂರ್ಯನೇ ಮೊದಲಾದ ಗ್ರಹಗಳು ಜಾತಕನ ಜನ್ಮರಾಶಿಯಿಂದ ದ್ವಾದಶರಾಶಿಗಳಲ್ಲಿ ಸಂಚರಿಸುವಾಗ ಕೊಡುವುವೆಂದು ನಂಬಲಾದ ಫಲ : ಶಾಸ್ತ್ರಿಗಳು ಯುಗಾದಿಹಬ್ಬದ ದಿನ ಪಂಚಾಂಗಶ್ರವಣದಲ್ಲಿ ಗೋಚಾರಫಲವನ್ನೂ ಹೇಳಿದರು (ರೂಢಿ).

[ ಗೋಚಾರ + ಫಲ ]

**ಗೋಚಿ**, ಗೋಶಿ, ಗೋಸಿ (ನಾ). ಕೌಪೀನ ; ಲಂಗೋಟಿ : (+). **ಗೋಶಿ :** ಸಂಸಾರದಿ ಗೋಶಿ ನಾರಬೇಡವೆಸಲು ನಾರುವದ ಬಿಡುವದೆ (ಚಿದಾವ. ೮೩-೧೩). **ಗೋಸಿ :** ಆಸೆಗಾರ ಹಾರುವಯ್ಯ ಗೋಸಿಯೊಳಗೆ ಮೂಗಳ ಕಟ್ಟಿದ (ಗಾದೆ). 'ಕಾಸೆ$_{1}$,' ಪುಟಗೋಸಿ', 'ಬಾಲಂಗೋಸಿ' ಪರಾ. [ ದೇ. ॥ ತಮಿ. ಕೊಚು ; ತೆಲು. ಗೋಚಿ ]

**ಗೋಚೇಸ್ವರದೇವ** (ನಾ). ಒಬ್ಬಾತನ ಹೆಸರು : ಶ್ರೀ ಗೋಚೇಸ್ವರದೇವನ ಮನೋನಯನವಲ್ಲಭೆ ನೊಳಂಬವಂಶೋದ್ಭವೆ . . . ಶ್ರೀಪ್ರಿಥುವಬ್ಬರಸೆಯರುಂ (ಎಕ. IV, ಚಾಮರಾ. ೧೦-೭ ; 999).

[ ಗೋಚಿ$_{0}$ + ಈಸ್ವರ (<ಈಸರ) + ದೇವ ]

**ಗೋಚು$_{1}$** (ಕ್ರಿ). ೧. ಗೋರು ; ಬಳಿ : ಕೆಸರನ್ನು ಬಟ್ಟಲಲ್ಲಿ ಗೋಚಿಕೊಂಡು ಮೇಲಕ್ಕೆ ಬರಬೇಕು (ಮರಮ. ೧೧೧) ; ಹಟ್ಟಿಯಲ್ಲಿನ ಗೊಬ್ಬರವನ್ನು ನೆಲದಿಂದ ಗೋಚುವಾಗ ದನ ಮೇಯಿಸಲು ಹೊರಟ ಗಂಡ ಹೊರಗಡೆ ಇದ್ದುದು ತಿಳಿಯಿತು (ಸ್ವಪ್ನಹೂ. ೧೦). ೨. ಕಸಿದುಕೊಳ್ಳು ; ಸೆಳೆ ; ಎಳೆದುಕೊಳ್ಳು : ವಾಚಕಕ್ಕಳುಕುವಂ ತಾನಲ್ಲ ಬಿಡೆನೆಂದು ಗೋಚಿ ಸುರಧೇನುವಂ ಸೆರೆಗೊಳಲ್ಕೆಲ್ಲರುಂ . . . ಗೋಳಿಟ್ಟುದು (ಪರಶು. ೨೩-೧೦) ; ಮಿಗಿಲ ನರನಾಯಕರನು ಗೋಚಿ ಬಿಸುಡೆನೆ (ಜಿನಮು. ೨೩-೩೨).

[ <ಗೋರ್ + – ಚು ]

**ಗೋಚು$_{2}$** (ನಾ). ದೋಚುವವನು ; ಸುಲಿಗೆಮಾಡುವವನು : ನೀತಿಯಿಲ್ಲದ ಪರಮನೀಚುಗಳ್ಗೋಚುಗಳ್ವಾಚಾಳರು (ಷಶಿಲ. ೨-೫೯).

[ <ಗೋಚು$_{1}$ ]

**ಗೋಜ$_{1}$** (ನಾ). ೧. ನೀರಿನಲ್ಲಿ ಹುಟ್ಟಿದುದು ; ಕಮಲ : ಮಾರಾಜಾಂಬಕ ಗೋಜರಾಜಿತ ಪದಾಂಭೋಜಂ ನಿಜಂ ಶಂಕರಂ (ಹಮ್ಮೀರ. ೧-೬೭). 'ಗೋಜರಿಪು' ಪರಾ. ೨. ಸ್ವರ್ಗದಲ್ಲಿ ಹುಟ್ಟಿದವನು ; ದೇವತೆ : ಗೋಜನುತ ಸದ್ಗುಣವಿರಾಜಯಧರ್ಾಂಗಹಿಮಗೋಜವುರುಸಖರಾಜರಾಜ ಮಾಯಾದುಷ್ಕ ಗೋಜಭಿನ್ನ (ಷಶಿಲ. ೪-೨).

[ ಸಂ. ]

**ಗೋಜ$_{2}$** (ನಾ). ಜನರ ಒಂದು ಒಳಪಂಗಡದ ಹೆಸರು ಮತ್ತು ಆ ಪಂಗಡಕ್ಕೆ ಸೇರಿದವನು (?) : ಶ್ರೀಗೋಜೇಸ್ವರದೇವರ ಪಾದಾರಾಧಕರುಮಪ್ಪ ಗೋಜರ ಮಹಿಮೋನ್ನತಿಯೆಂತೆಂದೊಡೆ . . . ಬೂವಗಾವುಂಡ ನೊಳಗಾದ ಸಮಸ್ತ ಗೋಜರುವಿರ್ದ್ದು . . . ಆ ಗೋಜೇಸ್ವರ ದೇವರ ಅಙ್ಗಭೋಗ ರಂಗಭೋಗಕ್ಕೆಂದು . . . ಬಿಟ್ಟ ದತ್ತಿ (ಮ್ಯಾಅಂ. ೧೯೨೮, ೯-೩೪ ; 1188). [ ? ]

**ಗೋಜರಿಪು** (ನಾ). ಕಮಲದ ವೈರಿ ; ಚಂದ್ರ : ಗೋಧರನಿವಾಸ ಕೃತ ಗೋಜರಿಪುಮೌಲಿ ಧೃತಗೋಧರಧರಶ್ರೀಯ . . ಗೋಧವ ಕೃಪಾಂಬುಧಿಯೆ (ಪ್ರಾಥರಾ. ೬-೧). [ ಗೋಜ$_{1}$ + ರಿಪು ]

**ಗೋಜರು** 'ಗೋಜಲು' ನೋ.

**ಗೋಜಲ** (ನಾ). ಗೋಮೂತ್ರ ; ಗಂಜಲ : "ಗೋಜಲಂ ಗೋತಮುಕ್ಕು" (ಮಂಗರಾ. ೫೪-೫). [ ಗೋ + ಜಲ$_{2}$ ]

**ಗೋಜಲು**, ಗೋಜರು (ನಾ). ತೊಡಕು ; ಗಂಟು ; ಸಿಕ್ಕು : ಕಥಾಸಂವಿಧಾನದಲ್ಲಿ ಸಿಕ್ಕುತೊಡಕುಗಳಿಲ್ಲ, ಗೋಜಲಿಲ್ಲ (ನಂಜುಂಡ. ೧೫೦). **ಗೋಜರು :** ಮುಂದೆ ಗೋಜರು ಬರದಂತೆ ತೀರ್ಮಾನವನ್ನು ಹೇಳಬೇಕೆಂದೂ ಗೌಡಗಳು ನಮ್ಮನ್ನು ಪ್ರಾರ್ಥಿಸಿದ್ದರು (ಗರುಡಾ. ೧೬೭).

[ ಗೋಜು$_{1}$ + – ಅಲು (<–ಅಲ್$_{2}$) ]

**ಗೋಜಳೆ** (ನಾ). ಒಂದು ಜಾತಿಯ ಮೀನು : ಕೊರವಂ ಗೋಜಳೆ ಸಣ್ಣಗಣ್ಣನೊರವಂ ಕಾಗೆಂಡೆ . . . ಪಂದಿಗನೆಂಬ ಮೀಂದೆಗೆದನಾ ಭಕ್ತಂ (ತ್ರಿಪುವಿ. ೫೭-೮). 'ಗೊದಳೆ' ಪರಾ. [ ← ತಮಿ. ಕೊಚ್ಚಾಳೈ ]

**ಗೋಜಾಗತ** (ನಾ). ವ್ಯೆಲಿಗೆ(?) : ಅತಿಭಕ್ತಿ ತಲೆಗೇಜ್ ಹಿರಿಯ ಮಾಹೇಶ್ವರರೆಂದು ಪೊಲೆಗಲಸಿ ಅವರ ಮನೆಯೊಳುಂಡುದಲ್ಲದೆ ಇಲ್ಲಿ ಬಂದು ಎಲ್ಲರಂ ಗೋಜಾಗತಂ ಮಾಳ್ಪುದು ಮಾರ್ಗವಲ್ಲ (ಬಸರ. ೧೦-೪೨) : ಗೋಜನ್ಮಮಂ ಕಳೆದೆವೀ ನಿಮ್ಮ ಭಕ್ತನಿಂ ಗೋಜಾಗತಂ ಮಾಣ್ದುದಭವ ನಿಜಭಕ್ತನಿಂ (ಅನಾರ. ದೀ. ೧೮೬-೮). [ ? ]

**ಗೋಜಾಟ** (ನಾ). ಗೊಡವೆ ; ಗೋಜು : "ಗೊಡವೆ, ಉಸಾಬರಿ, ಸಹವಾಸ, ಸಂಗತಿ" (ಪ್ರಭಾ). [ ಗೋಜು$_{2}$ + ಆಟ ]

**ಗೋಜಿ** 'ಗೋಜು$_{2}$' ನೋ.

**ಗೋಜಿತ** (ನಾ). ಇಂದ್ರಿಯಗಳನ್ನು ಗೆದ್ದವನು ; ಚಾಪಲ್ಯಕ್ಕೆ ವಶವಾಗದವನು : ವಿಶ್ವಜಿತನು ಧನುಜಿತನು ಸರ್ವಜಿತನು ಸುತ್ರಾಮಜಿತನು ನೃಜಿತನು ಉರ್ವರಾಜಿತನು ಅಶ್ವಜಿತನು ಗೋಜಿತನು . . . ಕೂಡಲಸಂಗಯ್ಯನು (ಬಸವ. ೯೫೪).

[ ಗೋ + ಜಿತ$_{2}$ ]

**ಗೋಜಿಸು** (ಕ್ರಿ). ಸಿಕ್ಕಿಸು ; ಗುರಿಪಡಿಸು (?) : ಲಕ್ಷ್ಮಿಮತಿ ವಿರಹಾಗ್ನಿತೇಜದೋಳ್ ಕಂದಿದಳ್ . . . ರಾಜಾನ್ನವನು ಬಡದೆ ಬೆಂಡಾಗಿ ಶುಂಡಾಗಿ ಗೋಜಿಸಲ್ ಸ್ಮರಗೀಜಗನ ಗೂಡಿನೊಳು ಸಿಕ್ಕಿ ಬಳಲಿಕ್ಕಿ ಕಳವಳಿಕ್ಕಿ (ಜಿನಮು. ೪೨-೧). [ ಗೋಜು$_{1}$ ? + – ಇಸು$_{3}$ ]

**ಗೋಜಿಹ್ವಿಕೆ** (ನಾ). ನಾಲಗೆಯ ಬುಡದಲ್ಲಿ ನೆಟ್ಟಗೆ ನಿಂತಿರುವ ಎಲೆಯಾಕಾರದ ಮೃದ್ವಸ್ಥಿ ; ಉಪಜಿಹ್ವೆ : (Epiglottis. ಪಾರಿನಿ. ೩೭).

[ ಸಂ. ಗೋಜಿಹ್ವಿಕಾ (ಗೋ + ಜಿಹ್ವಿಕಾ + –) ]

**ಗೋಜಿಹ್ವೆ**(ನಾ). ಒಂದು ಬಗೆಯ ಗಿಡ ; ಎತ್ತುನಾಲಗೆ : "ಗೋಜಿಹ್ವಾ, ದಾರ್ವಿಕಾ ೨ ಎತ್ತುನಾಲಿಗೆ ಗಿಡದ ಹೆಸರುಗಳು" (ಸಿದ್ಧಾಂಶಿ. ೧೨೨).

[ ಗೋ + ಜಿಹ್ವೆ ]

**ಗೋಜು$_{1}$** (ಕ್ರಿ). (ದಾರದ ಎಳೆಗಳಂತೆ) ತೊಡಕಿಕೊಳ್ಳು ; ಸಿಕ್ಕಾಗು ; ಅಸ್ತವ್ಯಸ್ತವಾಗು : ತೋಳ ಲತೆಯಂ ಬೀಸಲ್ಕೆ ತಾಂ ಗೋಜಿದಾ ಬಿಸಿನೀ ಪತ್ರದ ಶಯ್ಯೆ ತಾನೆ ತರುಣೀಸಂತಾಪಮಂ ಪೇಳುಗುಂ (ಧ್ವನ್ಯಾಲೋ. ೯೩); ಆತಾಪಿಯೂ ನಿಪಕನೂ ಆದ ಭಿಕ್ಷುವು [ಗೋಜಿದ ಈ ಸಂಸಾರದ] ಗೋಜನ್ನು ಬಿಡಿಸುವನು (ಬುದ್ಧಪ. ಮಿಲಿಂದ. ೪೫). 'ಗುಂಜು$_{1}$' ಪರಾ.

[ ? / ತೆಲು. ಗೋಜು=ಪೀಡಿಸು, ಬಾಧಿಸು ]

**ಗೋಜು$_{2}$**, ಗೋಜಿ (ನಾ). ೧. (ದಾರದ ಎಳೆಗಳಂತೆ) **ತೊಡಕಿಕೊಂಡಿರುವ** ಸ್ಥಿತಿ ; ಸಿಕ್ಕು ; ತೊಡಕು ; ಗಂಟು : ಈ ಕಥೆಯಲ್ಲಿನ ಘಟನೆಗಳಲ್ಲ ಗೋಜು (ರೂಢಿ). ೨. ತೊಂದರೆ ; ಕಷ್ಟ : ಪೂಜಾಫಲದಿಂ ಗುಣಸಂಪದಮಂ

ಗೋಜಿಲ್ಲದೆ ಪಡೆದಿರ್ಪುದು ಸುಗಮಂ (ಹಾಲಾಸ್ಯ. ೧-೧-೨೧ ರಗಳೆ) ; ಸೂಜಿ ಮೊನೆಯಷ್ಟು ಗೋಜಿಲ್ಲದೆ ಬೇರೆ ವ್ಯಾಜ್ಯ[ಜ]ದಿಂದ ಕಾಯ ಮಾಜಿ ಕೊಂಡು ಪೋಗೆ (ವಾದಿಕೀ. ೬೫-೧) ; ನೀ ಸಮಾಜ ನೆರಹಿಸುತ್ತಲವನ ಗೋಜು ತಪ್ಪಿಸೀ (ರಾವಣೋ. ೭೭). ೩. ಸಂಬಂಧ ; ಗೊಡವೆ : ದೇವ ರೆಂಬ ಗೋಜು ಅದು ಸಾಧಕರಿಗೆ ಅಪ್ಪಾ (ಚಿದಾವ. ೧೬೫-೧೧) ; ಆರನು ಕರೆವೆ ನೀ ಜೀವಿಸದ ಮೇಲೆ ಕಂದ ಬಾರೆಂದು ಪೂರ್ವ್ವಲಿಯನಳವಡಿಸಲೆಂಬ ಗೋಜ ಜಗಿಸಿದೆ ಸಪ್ತಸುಪ್ಪತ್ತಿಗೆಯಲಡಗೀ ಜಳಕವತ್ತಿತೆನುತಿಹೆ ಯಾಗ ಭೂಶಯನದೋಜೆಯೆಂತೆಂದು ಹಲುಬಿದರು (ಜಿನಮು. ೪೬-೩೯) ; ಇನ್ನು ಮೇಲೆ ನೀನು ಪಕ್ಷಿಗಳ ಗೋಜಿಗೆ ಹೋಗಕೂಡದು (ಕಂಕಥ. ೭೨) ; ಅದರ ಪರಿಣಾಮವೇನಾಯಿತು ಎಂದು ತಿಳಿಯುವ ಗೋಜು ಮಾತ್ರ ಅವನಿಗೆ ಬೇಕಾಗಿರಲಿಲ್ಲ (ಅಳನಿ. ೩೦). **ಗೋಜಿ :** ೩. ಇನ್ನು ಮೇಲೆ ನಿನ್ನ ಗೋಜಿ ನಮಗೆ ಬೇಡ (ಕುರುಕಾ. ೫೦).

**ಗೋಜುಗೋಜು** (ದ್ವಿರುಕ್ತಿ) : ಹರಕರುಣೋದಯವಾದರೆ . . . ಗೋಜುಗೋಜಾದುದು ನೇರಾಗಿ ಸಡಿಲುವುದೊಡನೆಯೆ ಕಗ್ಗದ ಗಂಟು (ಇಂಜಾಪ. ೫೦-೩೬) ; ಕಥೆಯು ತುಂಬ ತೊಡಕಾಗಿ ಸ್ವಲ್ಪ ಗೋಜು ಗೋಜಾಗಿದೆ (ಬಂಕಿಮ. ೦೫೩).

[ ದೇ.॥ ತುಳು. ಗೋಜ ; ತೆಲು. ಗೋಜು ]

**ಗೋಜೆ** (ನಾ). ಒಂದು ಬಗೆಯ ಔಷಧಿಗಿಡ : ಗುಂಗಿ, ಆಸನ, ಗೋಜೆ (ವೃಜಿಗಿ. ೦೮-೨೫೬). [ <ಸಂ. ಗೋಜೀ ]

**ಗೋಟಡಕೆ, ಗೋಟಡಿಕೆ** (ನಾ). ಬಲಿತು ಹಣ್ಣಾದ ಅಡಕೆ ; ಗಟ್ಟಿಯಾದ ಅಡಕೆ ; ಒಣಗಿದ ಅಡಕೆ : ಹಸುರೆಲೆ ಗೋಟಡಕೆಯ ಮೆಲ್ವರಿಗೆ ನೂಂಕಿ ಹೊಸ ಬಾಧೆವಡಿಸಬೇಕೆಂದಾ (ಭರಪ. ೪೮-೮೮) ; ತಳಿಗೆಲೆ ಚಿಪ್ಪಿನ ಸುಣ್ಣ ಗೋಟಡಕೆಯ ಭರದಿಯಡಸಿ ದಾಡೆಯೊಳು (ಜ್ಞಾನಜ. ೩೮-೪೯) ; ಎಲೆ ಅಡಕೆ ಚೀಲವನ್ನು ಸೊಂಟದಿಂದ ಕಿತ್ತಳು. ಗೋಟಡಕೆಯನ್ನು ಗಂಡನಿಗೂ ಕೊಟ್ಟು ತಾನೂ ಬಾಯಿಗೆ ಹಾಕಿಕೊಂಡಳು (ನನ್ನೂರು. ೨೫೩) ; ಆದರೆ ಒಂದು ಅಡಕೇಮರ ಹೋದರೆ ಒಂದು ಗೋಟಡಕೆ (ಗಾದೆ). **ಗೋಟಡಿಕೆ :** ಗೋಟಡಿಕೆ ಮೆಲ ಹೊಲ್ಲ (ಸರ್ವಜ್ಞ. ೧೨೪೨) ; ಗೋಟಡಿಕೆಯೊಳರ್ಥ ಕೊಡರು ಸುಜನಜನಕ್ಕಂ (ನೀತಿಸಾ. ೬೦೮). [ ಗೋಟು$_2$ + ಅಡಕೆ$_1$ ]

**ಗೋಟಡಿಕೆ** 'ಗೋಟಡಕೆ' ನೋ.

**ಗೋಟಾಡಿಸು** (ಕ್ರಿ). ತಿರುವು ; ಗೊಟಾಯಿಸು : (ಃ).

[ ಗೋಟು$_4$ + ಆಡಿಸು ]

**ಗೋಟಾಳಿ** 'ಘೋಟಾಳಿ' ನೋ.

**ಗೋಟಾಳೆ** 'ಘೋಟಾಳಿ' ನೋ.

**ಗೋಟು$_1$** 'ಗೊಂಟು' ನೋ.

**ಗೋಟು$_2$** (ನಾ). ೧. ಬಲಿತುದು ; ಬಿರುಸಾದುದು ; ಕಠಿನವಾದುದು. 'ಗೋಟಡಕೆ' ಪರಾ. ೨. ಒಣಗಿದ ಅಡಕೆ; **ಗೋಟಡಕೆ:** ಇಕ್ಕಡೆಗಳಿಂದ ಹಗೆಗಳು ಮುತ್ತಿದಾಗ ಮನೆಯವರು ಅಡಕತ್ತರಿಯ ನಡುವೆ ಸಿಕ್ಕಿದ ಗೋಟಿ ನಂತಾದರು(ಹುಲಿಹಾ. ೯೧). ೩. ಹಣಿಸೆಹಣ್ಣಿನಲ್ಲಿ ಮುಂರುಟಿದ ಭಾಗ, –ಕೊರಟು, –ಚೀಕು : (ಃ). ೪. (ಅಲಂ) ಕಠಿನಳಾದವಳು : ಠಕ್ಕಿತೆ ಯರಥಮೆಯರು ಕತ್ತಿಗೆ ಮಿಕ್ಕ ಗೋ[ಪಾಠಾಂ. ಗೊಂ]ಟುಗಳಣಕಿಗಳು ಶಠದಿಕ್ಕೆಯರು ಭಂಡಿತಿಯರು ( ಬಸಪು. ೪೧-೬೨). ೫. (ಅಲಂ) ಪ್ರಾಯ ಹೋದ ಹೆಂಗಸು ; ಮುದುಕಿ : ಯಾತಕ್ಕೆ ಅಳುಕದಿಹವೆ ಮೋಟು ಗಳ್ಗೋಟುಗಳ್ (ಹತಿಲಿ. ೨-೫೯) ; ಗೋಟು ಹೋಹುದಱಿಂದ ಹೋಟಿ ಹೋ ಹು ದು ಲೇಸು ತಾಟುತ್ತ ಮೈಯು ಬ ಡಿ ವಾ ಗ ಮುದಿಯನ ಕೋಟಲೆಯ ನೋಡ (ಸರ್ವಜ್ಞ. ೧೮೦೦).

[ ದೇ.॥ ತುಳು. ಗೋಟು, ಗೋಂಟು ; ತೆಲು. ಗೊಂಟು ]

**ಗೋಟು$_3$** (ನಾ). ೧. ಗುಂಡಾದುದು ; ವರ್ತುಲ ; "ದುಂಡು" (ಜಾನಕೋ. ೫೨). ೨. ಹೆಂಗಸರು ಧರಿಸುವ ಒಂದು ಬಗೆಯ ಚಿನ್ನದ ಕೈಬಳೆ : ನನ್ನ ಕೈಯಲ್ಲಿ ಗೋಟು, ಪಾಟ್ಲಿ ಇದ್ದಿದ್ದರೆ ಎಲ್ಲರೂ ನನ್ನನ್ನು ವಿಚಾರಿಸುತ್ತಿದ್ದರು (ಸ್ಮೃತಿಜಿ. ೭೨) ; ತಾಯಿಯ ಮೈಮೇಲೆ . . . ವಂಕಿ, ಸರಿಗೆ, ಗೋಟು, ಪಾಟಲಿ ಮೊದಲಾದ ಎಲ್ಲ ವಸ್ತುಗಳೂ ಇದ್ದವು (ಶ್ಯಾಮತಾ. ೧೦). [ ?./ತೆಲು. ಗೋಟು./ಮರಾ. ಗೋಂಟ್, ಗೋಠ್ ]

**ಗೋಟು$_4$** (ನಾ). ಮರದ ಸೌಟು, –ಹುಟ್ಟು : ನಿನಗೆ ಮಗನೇ ಪಾರ್ಥ ನಿನ್ನರಮನೆಯ ಗೋಟಿನ ನಾಯಕನೆ [ಪಾಠಾಂ. ಬಾಣಸದಾತನೇ]ಶಿಖಿ (ಕುಮ್ಯಾಆ. ೨೦-೩೦). [ ? ]

**ಗೋಟುಗೊಳಿಸು** (ಕ್ರಿ). ಮೂಲೆಗುಂಪಾಗಿಸು ; ಸತ್ವಹೀನವಾಗಿಸು ; ಸಾಮರ್ಥ್ಯವಿಲ್ಲದಂತೆ ಮಾಡು ; ಬಡವಾಗಿಸು : ಕಲೆಗಳ ಕೂಟದಲಿ ಕೀಳ್ಪಡಿಸಿ ಸರ್ವಸ್ವವನು ನೆಱೆ ಕವರಿ ಗೋಟು [ಪಾಠಾಂ. ಟಿ] ಗೊಳಿಸುವ ಬಲ್ಮೆಗಳ . . . ಬೇಟಕಾತಿಯರೊಪ್ಪಿದರು (ತೊರಬಾ. ೧-೫-೩೦) ; ದಾಟುವವು ಕಡಲೇಳನವನಿಯ ಮಿಾಟುವವು ಮುಳಿದಡೆ ಕಪರ್ದಿಯ ಗೋಟುಗೊಳಿಸುವ ಸಾಹಸವು (ತೊರಬಾ. ೬. ೮-೩೫); ಗೋಟುಗೊಳಿಸುವೆನಜ ಭವಾದ್ಯರ (ಅಂಬಿಕಾ. ೩೯-೫).

[ ಗೋಟು$_1$ (<ಗೊಂಟು) + ಕೊಳ್$_1$ + – ಇಸು$_3$ ]

**ಗೋಟುವಾದ್ಯ** (ನಾ). ನುಣುಪಾದ ಮರದ ತುಂಡಿನ ಸಹಾಯದಿಂದ ನುಡಿಸುವ ಒಂದು ಬಗೆಯ ತಂತೀವಾದ್ಯ : ಈಗ ಪ್ರಯೋಗದಲ್ಲಿರುವ ವೀಣೆ ರೂಪುಗೊಂಡ ಹಂತಗಳಲ್ಲಿ ಒಂದು ಹಂತದ ರೂಪವೇ ಗೋಟು ವಾದ್ಯ ಎಂದು ಹೇಳಬಹುದು (ಸಂಗೀಜಂ. ೧೦೮) ; ಗೋಟುವಾದ್ಯ, ಫಿಟೀಲು, ವೀಣೆ ಮೊದಲಾದ ವಾದ್ಯಗಳ ಕಾಯಗಳೊಳಗಡೆ ತಂತಿಗಳನ್ನು ಕಟ್ಟಿಸಿರುತ್ತಾರೆ (ಭೌತವಿ. ೦೪೯). [ ←ತಮಿ. ಕೋಟ್ಟುವಾತ್ತಿಯ ]

**ಗೋಟೆ** (ನಾ). ಕಂಬಳಿಯಿಂದ ಮಾಡಿದ ಟೊಪ್ಪಿಗೆ : (ಕಿ). [ ? ]

**ಗೋಡಂಬಿ, ಗೋಡಂಬೆ** (ನಾ). ರಂಜಿಯಾದ ಬೀಜಗಳನ್ನುಳ್ಳ ಹಣ್ಣು ಬಿಡುವ ಒಂದು ಬಗೆಯ ಮರ ; ಗೇರು : ಗೋಡಂಬಿ, ಗೇರುಪಪ್ಪು, ಮುಂದಿರಿಪಪ್ಪು, ಜಿಡಿ (ವೃಜಿಗಿ. ೬-೦೦೫) ; ಗೋಡಂಬಿಯ ವೃಕ್ಷಗಳು ಕೇರಗಿಡದಂತೆ ಇರುವವು (ಕೃಷಿಪ್ರ. ೧೯೧). **ಗೋಡಂಬೆ :** (ಃ).

[ ←ಮರಾ. ಗೋಡಂಬೀ, ಗೋಡಾಂಬೀ ]

**ಗೋಡಂಬೆ** 'ಗೋಡಂಬಿ' ನೋ.

**ಗೋಡರಗಪ್ಪೆ** 'ಗೋಡಾರಗಪ್ಪೆ' ನೋ.

**ಗೋಡಾರಗಪ್ಪೆ, ಗೋಡರಗಪ್ಪೆ** (ನಾ). ಒಂದು ಜಾತಿಯ ಕಪ್ಪೆ : ಏಡಿ ಹಾದರವಾಡೆ ಗೋಡಾರಗಪ್ಪೆಯ ಕೂಡಿ (ಚಿದಾವ. ೦೦-೯). **ಗೋಡರಗಪ್ಪೆ:** ಮಳೆಗಾಲದಲ್ಲಿ ಗೋಡರಗಪ್ಪೆಗಳು ಹೆಚ್ಚು (ಕಂಕಥ. ೩೫). 'ಗೊಂಕುಬು ಕಪ್ಪೆ' ಪರಾ. [ < ಗೊಡರು + ಕಪ್ಪೆ$_1$ ]

**ಗೋಡಾಹ** (ನಾ). ಕಂದುರೆ : ಅರ್ಜುನಂ ಗೋಡಾಹವೇಱಿ ಸಂಭ್ರಮ ದೊಳತಿನಿರ್ಜರ ಮಹಾಸ್ಯೈನ್ಯಮಂ ಪೌಜನಿಕ್ಕುತ್ತ ಗರ್ಜಿಸುತ ದಾನವರ್ಗಿ ದಿರಾಂತು (ಪ್ರಭುಪು. ೫-೬೮). [ <ಪ್ರಾ. ಘೋಡಯ./ಸಂ. ಘೋಟಕ ]

**ಗೋಡು** (ನಾ). ೧. ಒಂದು ಬಗೆಯ ಮಣ್ಣು ; ಕೆರೆ, ಬಾವಿ, ಕೊಳ ಮುಂತಾದುವುಗಳಿಂದ ತೆಗೆದುಹಾಕಿರುವ ಸಾರವತ್ತಾದ ಹೂಳು ಮಣ್ಣು ; ರೇವೆಮಣ್ಣು (ಉಕ) : ಕೆಂಪುಮಣ್ಣಿನಲ್ಲಿ ಜೇಡಿ, ಗೋಡು, ಮರಳು ಮಣ್ಣುಗಳೂ ಇರುವುವು (ವ್ಯವಮ. ೩). ೨. ಒಂದು ಬಗೆಯ ಭೂಮಿ : ಕೋಕುಂಬಾಳಂ ಧಾರಾಪೂರ್ವ್ವಕಂ ಮಾಡಿಕೊಟ್ಟರಾ ಗೋಡಂ ಮತ್ತರು ೪೨ (ಸೌಇಇ. IX-i, ೨೪೦-೦೨ ; 1142) ; ಕರಿಯ ಗೋಡು ಮಕ್ಕಿ ಸಹ ಚತುಸ್ಸೀಮೆಯಿಂದೊಳಗಾದ ಭೂಮಿಗೆ ಕಟ್ಟಿದ ಗುತ್ತಗೆ ಖ ೪೫ (ಎಕ. VIII, ಸಾಗರ. ೬೦-೨೮ ; 1472) ; ತಂನ ಮೂಲದ ಮೇಲೆ ಕುಳಕ್ಕೆ ಬರಸಿ

ಕೊಟ್ಟ ಭೂಮಿ ಮರಕಿ ಗೋಡಲೂ ಕಾರಗದ್ದೆ ಹಾಳಿ ೨ಕ್ಕಂ ಬೀಜವರಿ ಸ ೨ ॥ ೦ (ಮೈಆರಿ. ೧೯೩೪, ೧೪-೦೭ ; 1516). [ ? ]

**ಗೋಡುಂಬ** (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಹಣ್ಣು ; ಕಲ್ಲಂಗಡಿ: ಆದುದಿರ್ವರ ಹೊರಗೊಳಗು ಚಲ್ವನಪ್ಪ ಗೋದುಂ [ ಡುಂ ] ಬ ಫಲದಂತಲ್ಲಿ (ತರ್ಕಕಾ. ೧೪-೨೫). [ ಸಂ. ]

**ಗೋಡುಂಬೆ$_1$** (ನಾ). =ಗೋಡುಂಬ : (*). [ ಸಂ. ಗೋಡುಂಬ ]

**ಗೋಡುಂಬೆ$_2$** (ನಾ). ಒಂದು ಬಗೆಯ ಬಳ್ಳಿ ; ಹಾವುವೆಂಕ್ಕೆ: (*). [ ಸಂ. ಗೋಡುಂಬಾ ]

**ಗೋಡುಗೊಬ್ಬರ** (ನಾ). ಗೋಡುಮಣ್ಣಿನ ಗೊಬ್ಬರ; ವೆಂಕ್ಕಲು ಮಣ್ಣಿನ ಗೊಬ್ಬರ : ಸೋರೆಕಾಯಿ . . . ಮರಳುಮಿಶ್ರವಾದ ಗೋಡು ಗೊಬ್ಬರವಿರುವ ನೆಲದಲ್ಲಿ ಚೆನ್ನಾಗಿ ಬೆಳೆಯುವುದು (ತರಬೆ. ೨೬) ; ಗೋಡು ಗೊಬ್ಬರ, ಉಳುಮೆ ಬಿತ್ತನೆ, ಕಳೆಕೀಳುವುದು . . . ಕಣ ಎಲ್ಲ ಕೆಲಸವನ್ನೂ ಬಲ್ಲ (ದೇಶಾಂಕ. ೩೩) ; ಫಲವತ್ತಾದ ಕೆಂಪುಮಣ್ಣಿನ ನೆಲದಲ್ಲಿ ಗೋಡು ಗೊಬ್ಬರಗಳ ಸಾರವನ್ನು ಹೀರಿ, ಮರಗಳು ಮುಗಿಲೆತ್ತರ ಬೆಳೆದಿದ್ದವು (ಭೀಮುಕಾ. ೧೧೭). [ ಗೋಡು + ಗೊಬ್ಬರ$_1$ ]

**ಗೋಡುನೆಲ** (ನಾ). ಗೋಡುಮಣ್ಣಿನ ನೆಲ ; ವೆಂಕ್ಕಲಂ ಮಣ್ಣಿನಿಂದ ಕೂಡಿದ ಭೂಮಿ : ಗೋಡುನೆಲ ಒಳ್ಳೆಯದು ಈ ತರಕಾರಿಗೆ ( ತ ರ ಬೆ. ೨೮). [ ಗೋಡು + ನೆಲ$_1$ ]

**ಗೋಡುಮಣ್ಣು** (ನಾ). ಗೋಡಿನಿಂದ ಕೂಡಿರುವ ಮಣ್ಣು ; ಫಲ ವತ್ತಾದ ಮಣ್ಣು : ಗೋಡುಮಣ್ಣಿನ ನೆಲದಲ್ಲಿ ಬೆಳೆ ಚೆನ್ನಾಗಿ ಬರುತ್ತದೆ (ರೂಢಿ). 'ಜೇಡಿಮಣ್ಣು' ಪರಾ. [ ಗೋಡು+ಮಣ್ಣು (<ಮಣ್) ]

**ಗೋಡುವಲೆ** (ನಾ). ಒಂದು ಬಗೆಯ ಬಲೆ : ನೀರ್ವಲೆ ಮೇಲ್ವಲೆ ಸೊರ್ಕುಮುದ್ದು ಪೆರ್ಬಲೆ ಬಿಡುವಾರು ಗೋಡುವಲೆಯೆಂಬಿನಿತಂ ಪೊಟಿ ಗಟ್ಟಿ . . . ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ದಶಕು. ೨-೧೧೫). [ ಗೋಡು? + ಬಲೆ$_1$ ]

**ಗೋಡೆ** (ನಾ). ಕಟ್ಟಡಗಳಲ್ಲಿ ಮೇಲ್ಛಾವಣಿಗೆ ಆಧಾರವಾಗಿ ನಿಂತಿರುವ, ಕಲ್ಲು, ಮಣ್ಣು ಮೊದಲಾದಂವುಗಳಿಂದ ಕಟ್ಟಿದ ಭಾಗ ; ಭಿತ್ತಿ : "ಕೋಟಾ-ಗೋಡೆ" (ಶಮದ. ೨೫೫ ಪ್ರಯೋ) ; "ಭಿತ್ತಿ ಯೆಡೂಕಮೆನೆ ಕುಡ್ಯಮೆನೆ ಗೋಡೆಯಕ್ಕುಂ" (ಮಂಗರಾ. ೫೮-೭) ; ಗೋಡೆಯ ಮಱೆ ಯಲ್ಲಿ ನಿಂದು ಕಾದುವರಿಗೇನು ಭೀತಿ (ಸಗಬೊ. ೪೮) ; ಗೋಡೆಯನುಡುಗ ದೊರಸುತ್ತೊರಸುತಂ ತೊಳೆದಡೆ ಬಱೆಯ ಮಣ್ಣಪ್ಪುದಲ್ಲ (ಬ ಸ ಪು. ೬೦-೪೯) ; ಗೋಡೆಗೆ ಇದಿರಾಗಿ ನಾಟ್ಯವನಾಡಲು ನೋಡಿ ಸುಖಿಸಬಲ್ಲುದೆ (ಪುರಂದ. ೧-೧೫೭-೩) ; ಹಸಿಗೋಡೆಯಲ್ಲಿ ಹರಳು ನಟ್ಟಂತೆ (ಗಾದೆ). [ ದೇ. ; ತುಳು. ಗೋಡೆ ; ತೆಲು. ಗೋಡ ; ಕೊಲಾ. ಗೊಡಾ ]

**ಗೋಡೆಗನ್ನ** (ನಾ). ಗೋಡೆಯಲ್ಲಿ ಕೊರೆದ ರಂಧ್ರ, -ಕಿಂಡಿ : ನಿಲುಕಿ ನಿಂದು ನೋಡುತ್ತ ನೆಲಗನ್ನ ಗೋಡೆಗನ್ನ ಅಗುಳಿಗನ್ನವನಗಿದು ಮನೆಯ ಪೊಕ್ಕು ನೋಡುವಲ್ಲಿ (ಭೈರಸೂ. ೩೫೦). [ ಗೋಡೆ + ಕನ್ನ$_1$ ]

**ಗೋಡೆಯೇಱಿಸು** (ಕ್ರಿ). ಗೋಡೆಯನ್ನು ಕಟ್ಟು, -ನಿಲ್ಲಿಸು : ಮಳಯಜ ಕರ್ಪೂರರೇಣುವಂ ರಾಸಿಗೆಯ್ದು ಹಿಮುಕರ್ದಮಮಂ ಮಿದಿದು ಮುದ್ದೆ ಮಾಡಿ ಗೋಡೆಯೇಱಿಸಿ . . . ಜಗಲಿಯಿಕ್ಕಿದಂತೆಯುಂ (ಲೀಲಾವ. ೮-೪೭ ವ). [ ಗೋಡೆ + ಏಱಿಸು ]

**ಗೋಣ್**, ಗೋಣ, ಗೋಣು, ಗೋಳ್$_1$, ಗೋಳು$_4$, △ ಗೋಟ್$_2$ (ನಾ). ಕುತ್ತಿಗೆ ; ಕೊರಳಂ ; ಕತ್ತು ; ಕಂಠ : "ಗೊಂಕೆ-ಗೋಣ್" (ಶಮದ. ಪರಿ. ೨) ; ಅರಸಂ ಕಂಡು ಕಡುಮುಳಿದದಱ ಗೋಣಂ ಮುಱ ದೊಡಾ [ಪಾಠಾಂ. ಗೊಂಕೆಯಂ ನುಲಿದು ಕೊಂದನಾ] ಗಿಳಿಯುಂ ಸತ್ತು (ವಡ್ಡಾರಾ. ೧೯೯-೧) ; ಬಾಯ್ವಿಡುತ್ತಿರ್ದತ್ತಕ್ಕಟಾ ಗೋಣನಿಸು ನಿಲಲು ಮಾರ್ತವಪ್ಪುದಿಲ್ಲ . . . ಈ ಗಿಳಿಯ ಮಱಿಯನಬ್ಬಾ ಕರಕ್ಕೊಯ್ವುವಿವಾಗಳ್ (ಕಾದಂಪೂ. ೨೦೦); ಆಯೆಸಡಿ ತನ್ನ ಗೋಣನಿಱುಂಕಿ ಕೊಂದುದು (ಪಂಚತಂ. ೮೬-೩) ; ನಂಬಿದವರ ಗೋಣಂ ಕೊಯ್ವರೆ (ಬಸರ. ೪-೩೫) ; ವೀಣೆ ಯೊಳೊಮ್ಮೆ ತೋಱುವಳು ರಾಗವ ತನ್ನ ಗೋಣೊಳಗೊಮ್ಮೆ ತೋಱು ವಳು (ಭರಚ. ೧೧-೬). **ಗೋಣ** : ವೀರಭದ್ರನು . . . ಅಮರಜನನಿಯ ಗೋಣವಮಂ ಕೊಯ್ದ (ಬಸವು. ೫೪-೫೩). **ಗೋಣು** : ಸಳೆನಡು ಬಳುಕೆ ಸಡಿಲಿದ ಮುಡಿಯ ಗೋಣನೊಳೌಂಕಿ ತನು ಬೆಮರಿಡುತ ಸುರಭಿಯ ಕಱಿವಬಲೆಯರ ಕುವರನೀಕ್ಷಿಸಿದ (ಜೀವಂಚ. ೬-೨೮) ; ತನ್ನಯ ಗೋಣಿ ಗೊಡ್ಡಿದ ಕೈದುವನು ನೀ ತೆಗೆಸಿದವನೆಂದ (ಕುವ್ಯಾಕ. ೫-೧೭) ; ನಿದ್ದೆಯು ಹೊತ್ತಾಯಿತೆಂದರೆ . . . ನರಗಳು ಸಡಿಲಾಗುತ್ತವೆ. ಗೋಣು ಸೋಲು ತ್ತದೆ (ಮುಂಬಯಿ. ೪-೧೩೧). **ಗೋಳ್$_1$**: 'ಗೋಳ್ಮುರಿಗೊಳ್' ಪರಾ. **ಗೋಳು$_4$** : ಛಾಳನಯನನಂತೆ ಬಂದು ಗೋಳ ಹಿಡಿದು ಎದೆಗೊದೆದೆನ್ನ ಕೆಡಹಿದ ಕಾಳಾಗಿ ಕೆಡೆದುದೆನ್ನೊಡಲು (ಹರಿಸಾಂ. ೨-೨೨). △ **ಗೋಟ್$_2$**: 'ಗೋಟ್ಮುರಿಗೊಳ್' ಪರಾ.

**ಗೋಣ ಕೊಯ್ಯು**=ಕುತ್ತಿಗೆಯನ್ನು ಕೊಯ್ಯುವುದು ; ಕತ್ತನ್ನು ಕತ್ತರಿಸುವುದಂ : ಗೋಣಕೊ [ಪಾಠಾಂ. ಗೊ]ಯ್ಲನ ಕಾವಣಕೆ ಮುಂಗೇಣಿ ಕಾಱಿನು ಮೊಳಗಿದನು (ಕುವ್ಯಾಕ. ೨೪-೪೨). **ಗೋಣ ನೇಣು**=ಉರುಲು ; ನೇಣು : ಬಿಗಿಬಿಗಿದು ಕೊಲ್ಲುತ್ತಿರುವ ಗೋಣ ನೇಣಿಂದ ಉದ್ಧಾರವಾಗಲು ಕೊಣಕಿಟ್ಟು ಅರಚುತ್ತಿರುವ ದೀಹದ ಕೊಣಸು ಮಾತ್ರವಾಗಿದ್ದೇನೆ (ಬೆಟ್ಟಅ. ೧೩೯-೨೦). **ಗೋಣು ಬಗ್ಗಿಸು**=ಕೊರಳನ್ನು ಬಗ್ಗಿಸು ; ಬಾಗು ; ನಮಸ್ಕರಿಸು : ಇದೇ ಉಧಾಳರು, ತಿರುಗಿ ಗಾಂಧೀಟೋಪಿಯವರಿಗೆ ಕಂಡಲ್ಲಿ ಗೋಣುಬಗ್ಗಿಸುವ ದಿವಸಗಳು ಬಂದಾವು (ಜಿದಾಅ. ೩೩೩). **ಗೋಣುಮಾಡು** = ಕೊರಳನ್ನು ಕೊಂಕಿಸಂ ; ಒಯ್ಯಾರವಾಡಂ : "ಗೊಂಬೆಯನ್ನು ಕಲ್ಪಿಸಿದ್ದು ಹೇಗೆ ?" ಎಂದು ಗೋಣು ಮಾಡಿ ನಾಗಶ್ರೀ ಕೇಳಿದಳು (ನಿರಾಭ. ४೧). **ಗೋಣು ಹಾಕು**=(ಸಮ್ಮತಿ ಇಲ್ಲವೆ ಅಸಮ್ಮತಿ ಯನ್ನು ಸೂಚಿಸಲು) ಕೊರಳನ್ನು ಆಚೆ ಈಚೆ ಅಥವಾ ಮೇಲೆ ಕೆಳಗೆ ಅಲ್ಲಾಡಿಸು ; ತಲೆದೂಗು : ಅವಳು ತನಗೆ ಗೊತ್ತಿಲ್ಲವೆಂದು ಗೋಣುಹಾಕುತ್ತಾ ಅಳಹತ್ತಿದಳು (ರಂಗರೋ. ४); ರಂಗಣ್ಣ . . . ಏನೂ ಹೇಳದೆ ಗೋಣು ಹಾಕಿ ಸಮ್ಮತಿ ಸೂಚಿಸಿದ (ಅಪನಾ. ೧೬).

**ಗೋಣ** 'ಗೋಣ್' ನೋ.

**ಗೋಣಂನಾಳಿ** 'ಗೋಣ್ಣಾಳಿ' ನೋ.

**ಗೋಣಡಿಗೊಳ್** (ಕ್ರಿ). ತಲೆ ಕೆಳಗೆ ಮಾಡಂ : ಕೆಡೆಕೆಡೆಯೆಂದಾರ್ದೆಚ್ಚಂ . . . ಕೂರ್ಗಣೆಯಿಂ ಕಡುಗಲಿ ಪಾರ್ಥಂ ನೆಱನಂ ನಡೆ ಗೋಣಡಿಗೊಂಡು ಪಂದಿ ಕೆಡೆದತ್ತಾಗಳ್ (ಶಬಶಂ. ४-೨೫). [ ಗೋಣ್+ಅಡಿ$_1$+ಕೊಳ್$_1$ ]

**ಗೋಣತರ** (ನಾ). ಅಂಗಸಾಧನೆಯ ಒಂದು ಉಪಕರಣ (?) : ಗೋಣ ತರಗಳನೆತ್ತೆಂದರೆ ಮೊರಡಿಯ ತೃಣದಿಂ ತೆತ್ತಿ ನೂಂಕುವರು ಸಾಣವನುದ್ದ ಕಿಟ್ಟಾನೆನೆ ವೃಕ್ಷವ ಹೂಣಿ ಕಿತ್ತಿಟ್ಟಾನುತಿಹರು (ಭರಚ. ೬೩-೬೬). [ ? ]

**ಗೋಣಾಸವೆ** (?) (ನಾ). (?) : ಅಜಗರ ಗೋಣಾಸವೆಯೊಳಮಜಾಜಳ ಕ್ಷೀರಯುಕ್ತಮಾಗೆಱೆಯೆ ಫಳವೃಜಮೊಂದೆ ಬಳ್ಳಿಯೊಳ್ ಸಕಲ ಜನಮುಮಂ ತಣಿಸಲಾರ್ಕುಂ (ಲೋಕೋಪ. ೬-೫೯) ; "ಅರಳಿಗ?" (ಲೋಕೋಪ. ಟೀಕ). [ ? ]

**ಗೋಣಿ$_1$** 'ಗೋಳಿ$_1$' ನೋ.

**ಗೋಣಿ$_2$** (ನಾ). ೧. ಒಂದು ಬಗೆಯ ಸಸ್ಯ; ಸೆಣಬು ; (*). ೨. (ಸೆಣಬಿನ ನೂಲಿನಿಂದ ಮಾಡಿದ) ಚೀಲ : ಕನಸಿನ ಭತ್ತಕ್ಕೆ ಗೋಣಿಯಾಂಪಂತೆ (ಸಮಪ. ೧೩-೫೫) ; ಹಱಿದ ಗೋಣಿಯಲೊಬ್ಬ ಕಳವೆಯ ತುಂಬಿದ (ದೇದಾವ. ೨೪-೪೨) ; ಒತ್ಯೊತ್ತಿ ಗೋಣಿಯೊಳ್ತುಂಬುವುದಲ್ಲ (ಪುರಂದ.

೧-೧೨೬-೧) ; ವಾಣಿಯ ಧವನೆಂಬ ವ್ಯವಹಾರಿ ಪಟ್ಟಿಯ ಗೋಣಿಯೊಳ್ ತುಂಬಿದ ರತ್ನ ಓಣಿಯೊಳ್ ಚೆಲ್ಲಿದಂತಿದೆ ನಿನ್ನ ಕೃತಿಯೆಂಬ ಮಾಣಿಕ (ಮೋಹತ. ೧-೩೪). ೩. ಸೆಣಬಿನ ಬಟ್ಟೆ; ಗೋಣಿಪಟ್ಟೆ; ತಟ್ಟು : ಸಿರಿ ಮೆಯ್ಯೊಪ್ಪಂ ಮಾಡುವಂತೆ ಗೋಣಿ ಮಾಡುಗುಮೆ (ಧರ್ಮಾಮೃ. ೧೧-೧೮೮). ೪. ಧಾನ್ಯದ ಒಂದು ಅಳತೆ,-ಪ್ರಮಾಣ : ಗೋಣಿಗೆ - ಕಿಱುಗೋಣಿ, ಗೋಣಿಕಾಪುತ್ರ, ಪೆರ್ಗೋಣಿ (ಶಮದ. ೨೯೮ ಪ್ರಯೋ). 'ಗೋಣಿಕಾಪುತ್ರ' ಪರಾ.

**ಗೋಣಿಯ ಪಟ್ಟಿ** = ಗೋಣಿ ತಾಟು,-ತಟ್ಟು : ತೊಳೆದ ಗೋಣಿಯ ಪಟ್ಟೆಯಂ ಮುಚ್ಚಿ ಕೆಮ್ಮಣ್ಣ ಬಳಿದುಕೊಂಡಾ ಕಾಯುನರೆಜಾವ ಪರಿಯಂತ ರನುವಾಗಿ ಬೇಯಿಸುವದು (ಸೂಪಶಾ. ೫-೨೬). **ಗೋಣಿಯವರು** = ಕಂಚಿ ಗರಲ್ಲಿ ಒಂದು ಪಂಗಡ : (ಎಸಮ್ಮ. XXXI, ೮).

[ ದೇ.॥ ತಮಿ. ಮಲ. ಕೋಣಿ ; ತುಳು. ತೆಲು. ಗೋಣಿ. / ಸಂ. ಗೋಣೀ ]

**ಗೋಣೆ₃** (ನಾ). ಒಂದು ಜಾತಿಯ ಮೃಗ; ಹಂದಿ: ಪಿಂಗಳೆ ಗೋಣಿ ಭಲ್ಲ ಶಶ ಜಂಬುಕ . . . ಮೃಗೇಂದ್ರಮುಖ್ಯಮೃಗಸಂಚಯದುಂಚಗಾಡಿಯಿಂ ಕಂಗೆಸೆದತ್ತು ತುಂಗ ಬಹುಶೃಂಗವಿರಾಜಿತ ಭೂಧರಂ (ಉದ್ಭಟ. ೨-೪೩).

[ <ಸಂ. ಘೋಣಿನ್ ]

**ಗೋಣೆ₄**(ನಾ). ಜಟ್ಟಿಕಾಳಗದಲ್ಲಿ ಒಂದು ವರಸೆ,-ಹಿಡಿತ,-ಪಟ್ಟು(?): ಸಂದ ಕೊಕ್ಕಸ ಗುಂಡು ಗೋಣಿಯು ವಿಂದೆ ಪಟ್ಟಸುಚೇಣಪಟ್ಟಸು ವೆಂದೆನಿಪ ವಿಂದಾಣದಲಿ ಕಾದಿದರು ಜಟ್ಟಿಗಳು (ಸಾಳ್ವಭಾ. ೨೨-೭೨).

[ ? ]

**ಗೋಣಿಕಾಪುತ್ರ** (ನಾ). (ಗೋಣಿಗಿಂತ ಚಿಕ್ಕದಾದ) ಧಾನ್ಯಗಳನ್ನು ಅಳೆಯುವ ಸಣ್ಣಕೊಳಗ (?) : "ಸಂದಣಿಪ ಕಿಱುಗೋಣಿ ಗೋಣಿಕಾ ಪುತ್ರನೆಂದೊಡೆ" (ಕಬ್ಬಿಕೈ. ೯೭); ಗೋಣಿಗೆ - ಕಿಱುಗೋಣಿ, ಗೋಣಿಕಾ ಪುತ್ರ, ಪೆರ್ಗೋಣಿ (ಶಮದ. ೨೯೮ ಪ್ರಯೋ). [ ? ]

**ಗೋಣಿಚೀಲ** (ನಾ). ಸೆಣಬಿನ ನಾರಿನಿಂದ ಮಾಡಿದ ಚೀಲ; ತಟ್ಟಿನ ಚೀಲ : ಕಾಳುಗಳನ್ನು ಗೋಣಿಚೀಲಗಳಲ್ಲಿ ತುಂಬಿ ಸಾಗಿಸುತ್ತಾರೆ (ರೂಢಿ).

[ ಗೋಣಿ₂ + ಚೀಲ ]

**ಗೋಣಿತಟ್ಟು₁** (ನಾ). ಗೋಣಿಯ ಹಣ್ಣಿನಂತೆ ಕೆಂಪಾಗಿ, ಮೈಮೇಲೆಲ್ಲ ಸಣ್ಣ ಗುಳ್ಳೆಗಳೇಳುವ ಒಂದು ಬಗೆಯ ರೋಗ; ದಡಾರ: ಗೋಣಿತಟ್ಟು, ಸಣ್ಣತಟ್ಟು, ಶೀತಾಳ . . . ಮುಂತಾದ ರೋಗಗಳಿಂದ ಮರಣಹೊಂದಿದ್ದರೆ ಅಂತವುಗಳನ್ನು ಶಿಡಬಿನ ಹಡ್ಡಿಂಗಿನಲ್ಲಿ ಕಾಣಿಸ ಕೂಡದು (ಗ್ರಾಮಾಕ. ೧೫೬).

[ ಗೋಣಿ₁ (<ಗೋಳಿ₁) + ತಟ್ಟು₂. / ತಮಿ. ಕೋಣಿತ್ತಟ್ಟು ; ತುಳು. ಗೋಣಿತಟ್ಟೆ ]

**ಗೋಣಿತಟ್ಟು₂**, ಗೋಣಿತಾಟು (ನಾ). ಸೆಣಬಿನಿಂದಾದ ಬಟ್ಟೆ ; ಗೋಣಿ ಪಟ್ಟೆ : ಬಂದವರು ಕಾಲೊರಸಿಕೊಳ್ಳಲು ಬಾಗಿಲ ಬಳಿ ಒಂದು ಗೋಣಿ ತಟ್ಟು ಹಾಕಿದ್ದರು (ರೂಢಿ). **ಗೋಣಿತಾಟು** : ಎಲ್ಲಿ ನೋಡಿದರೂ ಪಾತ್ರೆ ಗಳೇ, ಬಟ್ಟೆಗಳೇ, ಗೋಣಿತಾಟೇ, ಕೆಸರೇ, ಇರಬಹುದಾದ್ದೆಲ್ಲ ಹೊರಕ್ಕೆ ಬರುವುದು (ಬಾಲಪ್ರ. II, ೧೧೬೪). [ ಗೋಣಿ₂ + ತಟ್ಟು₆ ]

**ಗೋಣಿತಾಟು** 'ಗೋಣಿತಟ್ಟು₂' ನೋ.

**ಗೋಣಿದಡಾರ** (ನಾ). = ಗೋಣಿತಟ್ಟು₁ : ಶ್ಲೇಷ್ಮಪಿತ್ತಗಳ ಪ್ರಕೋಪ ದಿಂದ ಕ್ಷುದ್ರಮಸೂರಿಕೆಗಳುಂಟಾಗುವವು. ಆ ಕ್ಷುದ್ರಮಸೂರಿಕೆಯೆಂತೆಂದರೆ ಗೋಣೀದಡಾರ ; ಅವು ಮೈಯ ಮೇಲೆ ಎಡೆಬಿಡವಿಲ್ಲದೆ ಶರೀರವನೆಲ್ಲಾ ವ್ಯಾಪಿಸಿಕೊಂಡು ಏಳುವವು (ವೈದ್ಯಸಾ. I, ೩೮೩).

[ ಗೋಣಿ₁ (<ಗೋಳಿ₁) + ದಡಾರ ]

**ಗೋಣಿಪಟ್ಟೆ** (ನಾ). = ಗೋಣಿತಟ್ಟು₂ : ಚೀಲಗಳನ್ನು ಮಾಡುವ ಗೋಣಿ ಪಟ್ಟೆ (Burlap. ಇಂಕನಿ). [ ಗೋಣಿ₂ + ಪಟ್ಟೆ₃ ]

**ಗೋಣಿಪಣ್** (ನಾ). ಗೋಣಿಮರದ ಹಣ್ಣು : ಬಡಿಗೊಂಡು ಗೋಣಿ ಪಣ್ಣಂ ಬಡಿವಂತಿರೆ ಪವನಸೂನು . . . ಬಡಿದನನಿಬರಂ ಕೌರವರಂ (ಗದಾಯು. ೩-೧೧). [ ಗೋಣಿ₁ (<ಗೋಳಿ₁) + ಪಣ್₃ ]

**ಗೋಣಿಮರ** 'ಗೋಳಿಮರ' ನೋ.

**ಗೋಣಿಸೊಪ್ಪು** 'ಗೋಳಿಸೊಪ್ಪು' ನೋ.

**ಗೋಣಿಱು** (ಕ್ರಿ). ೧. ಕುತ್ತಿಗೆಯನ್ನು ಇರಿ,-ತಿವಿ,-ಚುಚ್ಚು : ಅಳ ವಡಲೇಱಿಸಿಟ್ಟ ಸರಳಾಂತ್ರದ ಬಲ್ಪಿನ ಬಿಲ್ ಸಿಡಿಲ್ದು ಪೆರ್ಬುಲಿಯು ಪೊದಟ್ಟ ಗೋಣಿಱಿಯಲಿರ್ಬಗಿಯುಪ್ಪಿನಮುರ್ಚಿ ಪಾಯ್ತರಲ್ . . . ಮಡಿಯಿತಾ ಪುಲಿ (ದಶಕು. ೧೧-೧೫). ೨. "ಕಂತ್ರಿಗೆಯಂನ್ನು ಅಲ್ಲಾಡಿಸು" (ಪ್ರಭಣ್ಣ) : ಬೀಣೆಯುನವುರ್ಚಿ ಕರದೊಳ್ ಗೋಣಿಱಿ ಯುತ್ತಂಕೆ[ತೆ] ಕುಮುದಕಂಠಗತಾಳಿ ಕ್ವಾಣದಿನೇಂ ಕರಮೆಸೆದುದೊ ಮಾಣದೆ ಮೃದುಮಧುರನಾದದಿಂ ಪಾಡುವವೋಲ್ (ಲೀಲಾವ. ೧೧-೬೦).

[ ಗೋಣ್ + ಇಱಿ₁ ]

**ಗೋಣು** 'ಗೋಣ್' ನೋ.

**ಗೋಣುಗೊಯ್ಕ** (ನಾ). ೧. ಕುತ್ತಿಗೆ ಕೊಯ್ಯುವವನು; ಕೊಲೆಗಡಿಕ; ಘಾತಕ : (ಕಿ). ೨. (ಅಲಂ) ಮೋಸಗಾರ ; ವಂಚಕ : ಆ ಗೋಣು ಗೊಯ್ಕನನ್ನು ನಂಬಬೇಡ (ರೂಢಿ).

[ ಗೋಣು (<ಗೋಣ್) + ಕೊಯ್ಕ₂ ]

**ಗೋಣುಗೊಯ್ಕೆ** (ನಾ). ೧. ಕುತ್ತಿಗೆ ಕೊಯ್ಯುವವಳು ; ಕೊಲೆಗಡಿಕಿ ; ಘಾತಕಿ. ೨. (ಅಲಂ) ಮೋಸಗಾತಿ ; ವಂಚಕಿ : ಕೃತ್ರಿಮದ ರೂಪು ಗಳು ಬಾಹಿರಗಿತ್ತಿಯರು . . . ಗೋಣುಗೊಯ್ಕೆಯರು (ಬಸವು. ೪೦-೫೫).

[ ಗೋಣುಗೊಯ್ಕ + – ಎ₂ ]

**ಗೋಣುಮಾಱಿ** (ನಾ). ಕೊರಳನ್ನು ಹಣಕ್ಕಾಗಿ ಮಾರಿಕೊಂಡವನು : ಚೂಣಿ ತಲೆಯೊತ್ತಿದುದು ಹರಣದ ವಾಣಿ ಕೇಣಿಯ ಕುಹಕವಿಲ್ಲದೆ ಗೋಣುಮಾಱಿಗಳೋಲಗದ ಹಣರುಣವ ನೀಗಿದರು (ಕುವ್ಯಾ.ಭೀ. ೮-೧೫). 'ತಲೆಮಾಱಿ' ಪರಾ. [ ಗೋಣು (<ಗೋಣ್) + ಮಾಱು₁ + – ಇ₃ ]

**ಗೋಣುಮುರಿ** 'ಗೋಣ್ಮುರಿ₁' ನೋ.

**ಗೋಣೆತ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ (?) : ಸಂಗೊ ಗೋಣೆ ಗಳಗಳಿಂದ ತುಂಬಲು ಪಟ್ಟಂಥಾ ಗೋಣೆಯುದಕ್ಕೆ ಗೋಣೆತಯೆಂಬ ಹೆಸರು (ಖಡ್ಗಟೀ. ೨-೩೦). [ ? ]

**ಗೋಣ್ಗೊಱು** (ಕ್ರಿ). ಕುತ್ತಿಗೆಯನ್ನು ಕೊಯ್ಯು ; ಕೊರಳಂ ಕತ್ತರಿಸು : ದಕ್ಷನಂ ತುಡುಕಿ ಕಡುಪಿಂ ಕೆಡಪಿ ಗೋಣ್ಗೊಱಿದ ವೀರಭದ್ರಂ (ನಂದಿಮಾ. ೧-೮). [ ಗೋಣ್ + ಕೊಱು₁ ]

**ಗೋಣ್ಣವಿರ್** (ನಾ). ಪ್ರಾಣಿಗಳ ಕುತ್ತಿಗೆಯ ಮೇಲಿನ ಕೂದಲು ; ಅಯಾಲು ; ಕೇಸರ : ಮಱಿಸಿಂಗನೊಳ್ಗೋಣ್ಣವಿರನಿಱಿಕೆಯ್ಯೊಂದು ತೇಜಮನೊಳಕೊಂಡು ರಾಜಿಪ ಜಡೆಮುಡಿ ಸೊಗಯಿಸೆ (ರಾಮಾಶ್ವ. ೬೯-೧೮). [ ಗೋಣ್ + ನವಿರ್ ]

**ಗೋಣ್ಣಾಳಿ**, ಗೋಣಂನಾಳಿ, ಗೋನಾಳಿ (ನಾ). ಕೊರಳಿನ ನಾಳ ; ಕಂಠನಾಳ ; ಕೊರಳು ; ಕಂಠ : ಗೋಣಂನಾಳಿ, ಗೋಣ್ಣಾಳಿ (ಶಬ್ದಾನು. ೩೪೭ ಪ್ರಯೋ). **ಗೋಣಂನಾಳಿ** : ಮೇಲಿನ 'ಶಬ್ದಾನು' ಪ್ರಯೋಗ ವನ್ನು ನೋಡಿ. **ಗೋನಾಳಿ**: ಬರಿ ನೊಸಲ್ ನಿಟ್ಟೆಲ್ವು ಗೋನಾಳಿ ಬೆನ್ . . . ಕಾಲಡಿಯೆಂದಿಂತಿವನುರ್ಚಿ ಪೋದುವಿಸೆ ತತ್ಪೌಜನ್ಯಕಂದಾಂಕುರಂ (ಶಾಂತಿಪು. ೪-೧೭); ಕೊರಳ ಸೆರೆ ಗೋನಾಳಿಗೌಕಿತು (ಕುವ್ಯಾ.ವಿ. ೩-೫೪) ; ಗೋನಾಳಿ ಗುಱುಗುಱಿಸಿತ್ತು (ಕಾಶಿರಾ. ೪-೬). [ಗೋಣ್+ನಾಳಿ (=ನಾಲಿ)]

**ಗೋಣ್ಮುರಿ₁**, ಗೋಣುಮುರಿ (ಕ್ರಿ). ೧. ಕಂತ್ತಿಗೆಯನ್ನು ಹೊರಳಿಸು ; ಕೊರಳನ್ನು ಕೊಂಕಿಸು : ಕೂಡೆ ಗೋಣ್ಮುರಿದೋರೊಂದಱ ನೆತ್ತಿಯಂ ಕರ್ದುಕುತುಂ . . . ರಥಾಂಗರಾಜಿ ನೆರೆದತ್ತು (ಕುಸುಮಾ. ೧-೫೩) ; ಎಱಕೆ ಮರಲ್ದು ಗೋಣ್ಮುರಿದು ಚಂಚುಪುಟಂ ತೆಱೆದಳ್ಳಿವಾಱೆ ಬಂದೆಱಗುವುವವಲ್ಲಿ . . . ಸಾರಿಕೆ (ಅನಂಪು. ೬-೪೩). ೨. ಕುತ್ತಿಗೆಯನ್ನು ತಿರಿಚು ; ಕೊರಳನ್ನು ನುಲಿ : ತಿವಿ ಕೊಲ್ ತಱಿ ಗೋಣ್ಮುರಿ ತುತ್ತು ಸೀಳ್ . . . ಇಱಿಯೆನಿಪ್ಪ ರವಂ ಪಿರಿದಾಯ್ತು ಬೇಡರೊಳ್ (ಶಬಶಂ. ೪-೬) ; ನಿಶಾಟನುಬ್ಬಿನ ಬಲಮಂ ಗೋಣ್ಮುರಿದು ಗುಟ್ಟಿಗಟ್ಟುವೊಡಾನೆ ಸಾಲ್ವೆಂ (ರಾಮಾಶ್ವ. ೧೧೧-೦೩). **ಗೋಣುಮುರಿ :** ೧. ಅವನ ನಡತೆಗೆ ಅಸಮ್ಮತಿ ಸೂಚಿಸುವಂತೆ ಒಮ್ಮೆ ಗೋಣುಮುರಿದು (ಮೂರುದಾ. ೪೩). [ಗೋಣ್ + ಮುರಿ₁]

**ಗೋಣ್ಮುರಿ₂**, ಗೋಳ್ಮುರಿ, △ ಗೋಟ್ಮುರಿ (ನಾ). ೧. ಕತ್ತನ್ನು ತಿರಿಚುವಿಕೆ: ಕೊರಳನ್ನು ಹೊರಳಿಸುವುದು,–ಮುರಿಯುವಿಕೆ : ತಿರುಪಱಿದೊಡೆ ದಂಡಾದಂಡಿರಣಂ ಬಿಲ್ಲಿಂದ ಮಾಯ್ತು ಬಿಲ್ಮುಱಿದೊಡೆ ಗೋಣ್ಮುರಿಗೆ ತಲೆಯೊತ್ತುತಿರ್ಪೊಂದುರವಣೆಯಿಂದಾದುದಾ ಕಚಾಕಚಿಯುದ್ಧಂ (ಚಂದ್ರಪು. ೧೦-೭೦). ೨. ಹಿಂಸೆ ; ತೊಂದರೆ : "ಗೋಣ್ಮುರಿ, ಇರ್ಕುಳ್, ಒರಸು–ಈ ೩ ಹಿಂಸೆ" (ಕಶಸಾ. ೦೩-೨೬೦). ೩. ಸಾಯುವಂತೆ ಕೊರಳನ್ನು ತಿರುಚುವವನು ; ಒಂದು ಬಿರುದು : ಚೋಳನ ಜೂಬು ಮಾಳವನ ಗೋಣ್ಮುರಿ ಚೇರರನಟ್ಟಿ ತಿಂಬ ಮಾಕಾಳಿ . . . ನಡೆತಂದನೆ ವೀರ ವಿಷ್ಣುಭೂಪಾಳಕಂ (ಎಕ. VII, ಶಿವಮೊ. ೫-೭ ; 1218). **ಗೋಳ್ಮುರಿ :** ೩. ಬಿರುದರ ಜವ × × × ರ ಗೋಳ್ಮುರಿ ಮಲೆವರ ಮಾರಿ (ಸೌಇಇ. XX, ೮೭-೨೩ ; ಸು. 11ನೆಯ ಶತ); ಚೋಳನ ಜೂಬು ಮಾಳವನ ಗೋಳ್ಮುರಿ (ಎಕ. XI, ಹೊಳಲ್ಕೆ. ೧೦೪-೬ ; 1228). △ **ಗೋಟ್ಮುರಿ:** ೨. "ಗೋಟ್ಮುರಿಯೆನಲ್ ಹಿಂಸೆ" (ಕಬ್ಬಿಕೈ. ೬೯).

[ಗೋಣ್ + ಮುರಿ₃]

**ಗೋಣ್ಮುರಿಗೊಳ್**, ಗೋಳ್ಮುರಿಗೊಳ್, △ಗೋಟ್ಮುರಿಗೊಳ್ (ಕ್ರಿ). ೧. ಕತ್ತನ್ನು ತಿರಿಚು; ಕೊರಳನ್ನು ತಿರುಗಿಸು : ಸರಸತಿಯನಬಲೆಯಂ ಗೋಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನಕ್ಕರಿಗನೆ (ಅಜಿಪು. ೦-೯೦). ೨. ಹಿಂಸಿಸು ; ಬಾಧೆಪಡಿಸು ; ನೋಯಿಸು : ತಳಾಱರೀತ ನನತಿದುಃಖಾಕ್ರಂದನಮುಣ್ಕೆ ಗೋಣ್ಮುರಿಗೊಂಡು ಕೊಂದು ಕೂಗಿದಪರೆಂಬುದುಂ (ಸುಕುಮಾ. ೭-೩೭ ವ) ; ಜವನಂ ಗೋಣ್ಮುರಿಗೊಂಡು . . . ಮೂಜಗಕೆ ಕೇಡಂ ಮಾಡುವಾ ನೆತ್ತಿಗಣ್ಣನೊಳ್ ಕಾದುವ ಬಲ್ಪು ಮೊಗ್ಗೆಗರನಿಂದಾರಯ್ದು ಮೇಲೆತ್ತುವೆಂ (ಕಬ್ಬಿಕಾ. ೦೫೮). **ಗೋಳ್ಮುರಿಗೊಳ್ :** ೨. ಮಲ್ಲಾಮಲ್ಲಿಯೊಳಾನ್ತರಿಮಲ್ಲರನಾಹವದೊಳೊತ್ತಿ ಗೋಳ್ಮುರಿಗೊಳ್ವೀ ಬಲ್ಲಾಳ್ಗನದಿನ್ದಾಹವಮಲ್ಲನ ಭುಜಾದಣ್ಡಮೆನಿಸಿಧ(೦)ಲ್ಲಂ ನೆಗೞ್ದಂ (ಸೌಇಇ. XI-i, ೫೨-೭ ; ಸು. 1007) ; ಗವೇಂದ್ರನಾಗಿ ವೀರಗ್ರಹದಿಂತಿರ್ದಿರ್ಚಿ ಪಿಡಿದೀತನೆ ಗೋಳ್ಮುರಿಗೊಂಡೋಡಿದಂ (ಕಾಮಕ. ೧-೧೪ ವ). △ **ಗೋಟ್ಮುರಿಗೊಳ್ :** ೨. ಆ ಸೈನ್ಯಮುಂ ಪರ್ವಿ ಗೋಟ್ಮುರಿಗೊಂಡುರ್ವಿದುವಾ ರಸಾತಳಮುಮಂ ಗಾಂಗೇಯನಸ್ತ್ರಾಳಿಗಳ್ (ಪಂಪಭಾ. ೧೧-೪೦). [ಗೋಣ್ಮುರಿ₂ + ಕೊಳ್₁]

**ಗೋಣ್ಮೊದಲ್** (ನಾ). ಕೊರಳಿನ ಬುಡ ; ಕಂಠಮೂಲ : ಕವಲಂಬಿನಿಂದೆಚ್ಚೊಡಾ ಗೋಣ್ಮೊದಲ್ ಕತ್ತರಿಸಿ ತಲೆ ಮುಂಡಮುರುಳ್ದುವು (ಜಬಪು. ೪೯-೧೪). [ಗೋಣ್ + ಮೊದಲ್]

**ಗೋಣ್ಮೊಳಗು** (ನಾ). ಗಳಧ್ವನಿ ; ರತಕೂಜಿತ : ಸೊಗಯಿಸುವ ಗೋಣ್ಮೊಳಗಿನಿಂಚರಂಗಳನೆಸಗಿ . . . ಒಲವನಾಣ್ಮಂಗೆ ಕಾಣಿಸಿದಳವಳು (ಜೈಮಿಭಾ. ೧೧-೨೨). [ಗೋಣ್ + ಮೊಳಗು₂ (<ಮೊೞಂಗು₂)]

**ಗೋತ₁** (ನಾ). ಪಶುವಿನ ಮೂತ್ರ; ಗಬ್ಬು ನಾರುವ ಗೋಮೂತ್ರ,–ಗಂಜಲ : ತೊಳೆವುದು ಕತ್ತೆಯ ಗೋತ [ಪಾಠಾಂ. ತ್ರ]ದೊಳಂ ಮೇಘನಾದಿವೆರಸು (ಖಮದ. ೦೫-೯) ; ಗುದಿಗಾಲ್ಗಳಂ ಕಟ್ಟಿ ಗೋತಮಂ ತೆಗೆ ತೆಕ್ಕದೊಡೆ ಕುತ್ತಿ ಕೆಡಹು (ಸಿಂಗಿರಾ. ೩-೧೮). 'ಗತ₁' ಪರಾ.

[<ಸಂ. ಗೋಮೂತ್ರ]

**ಗೋತ₂**, ಗೋತಿ, ಗೋತು (ನಾ). ೧. (ಪಕ್ಷಿ ಅಥವಾ ಗಾಳಿಪಟದ) ಲಾಗ,–ಪಲ್ಟಿ. 'ಗೋತಹೊಡೆ' ಪರಾ. ೨. ನಷ್ಟದ ವ್ಯವಹಾರ ; ನಷ್ಟ : (ಕ). ೩. (ಆಲಂ) ಅನುತ್ತೀರ್ಣತೆ. 'ಗೋತಹಾಕು' ಪರಾ. **ಗೋತಿ :** ೩. 'ಗೋತಿಹೊಡೆ' ಪರಾ. **ಗೋತು :** ೩. 'ಗೋತುಹಾಕು' ಪರಾ.

[←ಅರ. ಗೋತ; ಹಿಂ. ಗೋತಾ ; ಮರಾ. ಗೋತ, ಗೋತಾ]

**ಗೋತಹಾಕು**, ಗೋತುಹಾಕು (ಕ್ರಿ). ೧. ಲಾಗಹಾಕು ; ಪಲ್ಟಿಹೊಡೆ : ಈ ಪಟಕ್ಕೆ ಬಾಲಂಗೋಸಿ ಬೇಕಿಲ್ಲ . . . ಇದು ಗೋತಹಾಕುವುದಿಲ್ಲ (ಕಪಪು. ೩-೨೯). ೨. (ಆಲಂ) ನಪಾಸಾಗು ; ಅಯಶಸ್ವಿಯಾಗು : ಅವನು ಈ ಸಲ ಪರೀಕ್ಷೆಯಲ್ಲಿ ಗೋತಹಾಕಿದ (ರೂಢಿ). ೩. (ಆಲಂ) ಸಾಯು ; ಮರಣಹೊಂದು : ಮುಂಚಿತವಾಗಿಯೇ ಕುರುಡನ ತಂದೆತಾಯಿಗಳು ಗೋತಾಹಾಕಿದರು (ಕಥಾಮಂ. IV, ೨೫). **ಗೋತುಹಾಕು:** ೨. ಎರಡೆರಡು ವರುಷ ಒಂದೇ ವರ್ಗಕ್ಕೆ ಗೋತುಹಾಕಿದವನನ್ನು ಸೋಲಿಸಿ ಜಯಂತಪ್ಪನು ಒಂದು ವರುಷದಲ್ಲಿ ಎರಡು ಎತ್ತುಗಳನ್ನು ಜಿಗಿದನು (ಜಯಂತ. ೦೩೦). [ಗೋತ₂ + ಹಾಕು (<ಪಾಯ್ಕು₁)]

**ಗೋತಹೊಡೆ**, ಗೋತಿಹೊಡೆ (ಕ್ರಿ). ೧. ಲಾಗಹಾಕು ; ತಲೆ ಕೆಳಗಾಗಿ ಬೀಳು : ಸೂರ್ಯದೇವನು ನೀರಿನಲ್ಲಿ ಗೋತಹೊಡೆಯುತ್ತ ಇದೇ ಮುಣುಗಿಬಿಟ್ಟಿದ್ದಾನೆ (ಕುರಿಹಿಂ. ೬೬). ೨. (ಆಲಂ) ಅಯುಶಸ್ವಿಯಾಗು; ಸೋಲು : ಬಹಳ ಕೇಸುಗಳು ಗೋತಾ ಹೊಡೆದುವು ! (ನನ್ನೂರು. ೦೯೪). ೩. (ಆಲಂ) ಸಾಯು ; ಮರಣ ಹೊಂದು : ಅವು ಕ್ರಮೇಣ ಹೊಟ್ಟೆಗಿಲ್ಲದೆ ನರಳಿ ಗೋತಹೊಡೆಯುತ್ತಿದ್ದುವು (ಪುನರು. ೭). **ಗೋತಿಹೊಡೆ :** ೨. ಕಳೆದ ಎರಡುವರ್ಷಗಳಿಂದ ಅದೇ ತರಗತಿಯಲ್ಲಿಯೇ 'ಗೋತಿ' ಹೊಡೆದಿದ್ದ (ಕೋಟಿನೀ. ೦೩) ; ಇವನ ಕಟುವಾದ ವಿಮರ್ಶೆಯ ಮೂಲಕ ಇವನ ಪತ್ರಿಕೆಗಳು ಎರಡು ಮೂರು ಸಲ 'ಗೋತಿ' ಹೊಡೆಯಬೇಕಾಯಿತು (ಪತ್ರಿಕಾ. ೦೦). [ಗೋತ₂ + ಹೊಡೆ₁ (<ಪೊಡೆ₁)]

**ಗೋತಿ** 'ಗೋತ₂' ನೋ.

**ಗೋತಿತಿನ್ನು** (ಕ್ರಿ). =ಗೋತಹೊಡೆ ೧ : ಬಾಲಾಗಸಿಯಿಲ್ಲದೇ ಗೋತೀ ತಿನ್ನುತ್ತಿರುವ ಗಾಳೀಪಟ (ಗೀತಾಸಂ. ೩ ಮುನ್ನುಡಿ).

[ಗೋತಿ (<ಗೋತ₂) + ತಿನ್ನು (<ತಿನ್)]

**ಗೋತಿಹೊಡೆ** 'ಗೋತಹೊಡೆ' ನೋ.

**ಗೋತು** 'ಗೋತ₂' ನೋ.

**ಗೋತುಹಾಕು** 'ಗೋತಹಾಕು' ನೋ.

**ಗೋತ್ರ₁** (ನಾ). ೧. ದನಕರುಗಳ ಮಂದೆ ; ಗೋಸಮೂಹ : "ಗೋನಿವಹಂ ಗವ್ಯ ಗೋತ್ರಸಮಜವೆಯಕ್ಕುಂ" (ವಸ್ತುಕೋ. ೯೦-೯). ೨. ದನಕರುಗಳ ಹಟ್ಟಿ,–ದೊಡ್ಡಿ ; ಕೊಟ್ಟಿಗೆ. ೩. ಭೂಮಿ ; ಪೃಥ್ವಿ ; ಇಳೆ : "ಭೂಃ . . . ಗೋತ್ರಾ, ಪೃಥಿವೀ . . . ಮಹೀ ೨೭ ಭೂಮಿಯ ಹೆಸರುಗಳು" (ಸಿದ್ಧಾಂತಿ. ೮೨). [<ಸಂ. ಗೋತ್ರಾ]

**ಗೋತ್ರ₂** (ನಾ). ೧. ವಂಶ ; ಕುಲ ; ಮನೆತನ ; ☞ ಮನುಸ್ಮೃತಿಯ ಪ್ರಕಾರ ಶಾಂಡಿಲ್ಯ, ಕಾಶ್ಯಪ, ವಾತ್ಸ್ಯ, ಸಾವರ್ಣಿಕ, ಭರದ್ವಾಜ, ಗೌತಮ, ಸೌಕಾಲೀನ, ಕಲ್ಕಿಷ, ಅಗ್ನಿಮೇಶ್ಯ, ಕೃಷ್ಣಾತ್ರೇಯ, ವಸಿಷ್ಠ, ವಿಶ್ವಾಮಿತ್ರ, ಕುಶಿಕ, ಕೌಶಿಕ, ಘೃತಕೌಶಿಕ, ಮೌದ್ಗಲ್ಯ,

ಆಲವ್ಯಾನ, ಪರಾಶರ, ಸೌಪಾಯಂನ, ಅತ್ರಿ, ವಾಸುಕಿ, ರೋಹಿತ, ವೈಯಾಘ್ರಪದ್ಯಕ ಮತ್ತು ಜಾಮದಗ್ನ್ಯ ಎಂಬ ಇಪ್ಪತ್ತುನಾಲ್ಕು ಋಷಿಗಳಿಂದ ಪ್ರವೃತ್ತವಾದ ಪೀಳಿಗೆಗಳು : "ಅನ್ವವಾಯಃ . . . ಗೋತ್ರಂ, ಅಭಿಜನಂ, ಕುಳಂ-ಈ ೭ ಕುಲಂ" (ಹಲಾಯು. ೬೬-೨೪೨); ಕೌಂಡಿನ್ಯಗೋತ್ರನನುಪಮಚರಿತಂ (ಛಂದೋಂಬು. ೧-೧೫); ತತ್ಪುರುಷನ ನೊಲ್ಲದನ್ಯರೊಡಗೂಡಿ ಗುಣೋನ್ನತಿಗೆಟ್ಟು ಗೋತ್ರಮಂ ನರಕದೊಳದ್ದಿ ಬದ್ಧವದು [ಬಂದ ವಧು] ಸಜ್ಜನಮೋ (ಮದತಿ. ೮-೬); ಜಾತಿ ವರ್ಣ ಆಶ್ರಮುಲ ಕಗೋತ್ರಂಗಳೆಂಬ ತನ್ನ ಪೂರ್ವಾಶ್ರಯಪದ್ಧತಿಯ ಮಱೆಯ ಬೇಕು (ಅಖಂಡೇ. ೧೦೩-೩೩); ಪುರೋಹಿತನು . . . ಮದುವಣಿಗನ ಗೋತ್ರ, ನಾಮುಗಳನ್ನು ಕೇಳಿದನು (ಕವಿಕ. ೫೦). ೨. ಹೆಸರು; ನಾಮಧೇಯ : "ಆಖ್ಯಾಹ್ವನಾಮ ಗೋತ್ರಾಭಿಖ್ಯಾಹ್ವಯ ಸಂಜ್ಞೆಗಳ್ ಸಮಾನಾರ್ಥಂಗಳ್" (ವಸ್ತುಕೋ. ೮೧-೩೬). 'ಗೋತ್ರಸ್ಖಲನೆ' ಪರಾ. ೩. ಬೆಟ್ಟ; ಪರ್ವತ : "ಅಚಳಃ . . . ಗೋತ್ರಃ, ಪರ್ವತಃ . . . ಭುಧ್ರಃ-ಈ ೧೪ ಬೆಟ್ಟು" (ಹಲಾಯು. ೨೭-೧೧); ಭವಂ ಭವನ ಗೋ [ಪಾಠಾಂ. ಗಾ] ತ್ರದಿಂದಜನಜಾಂಡದಿಂ . . . ಎಯ್ದೆ ಕಿಬ್ಬಿಟ್ಟಿ ತೂಳ್ದ ವಾರ್ಯಭುಜವೀರ್ಯಮಂ ನೆಱೆಯೆ ತೋರ್ಪಿನಂ ಕುಂಭಸಂಭವಂ ಮರಲೆ ತಾಗಿದಂ (ಪಂಪಭಾ. ೧೧-೧೩೩). ೧, ೩ : ಉದ್ಧೃತ ಗೋತ್ರಾಭಿ ಮುಖಂ ವಜ್ರಾಘಾತಮಾದಂತೆ ಸಿಗ್ಗಾಗಿ ತಲೆಯಂ ಬಾಗಿ (ಗದಾಯು. ೩-೬೪ ವ). ೪. ನಾಡು; ದೇಶ : "ಭೂಮಿ ಗಿರಿ ದೇಶ ಪಶುಕುಲ ನಾಮಂ ಶಿಶುನೆಂಟರೆಂಟು ಗೋತ್ರಮೆನಿಕ್ಕುಂ" (ನಾನಾಕಂ. ೪೮); "ನಾಮ ಧರಾಚಲಂ ಪಶುವ್ರಜ ಕುಲಬಂಧು ಸಂತತಿ ಜನಾಂತಗಳಿಂತಿವು ಗೋತ್ರ ವಾಚಕಂ" (ನಾನಾರ. ೧೭). ೫. ದಾರಿ; ರಸ್ತೆ. ೬. ಹೊಲ; ಕ್ಷೇತ್ರ. ೭. ಜ್ಞಾನ; ತಿಳಿವು. ೮. = ಗೋತ್ರಕರ್ಮ : ಜ್ಞಾನಾವರಣಮುಂ ದರ್ಶನಾವರಣಮುಂ ವೇದನೀಯಮುಂ ಮೋಹನೀಯಮುಮಾಯುಷ್ಯ ಮುಂ ನಾಮಮುಂ ಗೋತ್ರಮುಮಂತರಾಯಮುಮೆಂದಿಂತು ಮೂಲ ಪ್ರಕೃತಿಗಳಂ (ಗೊಮ್ಮಸಾ. ೨-೧); ಆತ್ಮನನ್ನು ಅನಾದಿಕಾಲದಿಂದಲೂ ಬಂಧಿಸಿರುವ ಕರ್ಮಗಳು ಎಂಟು ವಿಧವಾಗಿವೆ. ಅದಾವುವೆಂದರೆ (೧) ಜ್ಞಾನ ಆವರಣೀಯ . . . (೭) ನಾಮ (೮) ಗೋತ್ರ (ಭಾರದ. ೧೮೮). [ಸಂ.]

**ಗೋತ್ರಕರ್ಮ** (ನಾ). [ಜೈನ] ಜೀವನಿಗೆ ಅಂಟಿಕೊಳ್ಳುವ ಎಂಟು ಬಗೆಯ ಕರ್ಮಗಳಲ್ಲಿ ಒಂದು : ಜೀವನಿಗೆ ಗೋತ್ರವನ್ನು ಕಟ್ಟುವುದು ಗೋತ್ರಕರ್ಮವು (ಜೈನಪ. ೩೬೪): ಗೋತ್ರಕರ್ಮಮು ಮುಚ್ಚನೀಚಭೇದ ಭಿನ್ನಮಿರ್ತೆಱನಕ್ಕುಂ (ಶಾಂತಿಪು. ೧೨-೧೧ ವ).

[ಗೋತ್ರ$_2$ + ಕರ್ಮ]

**ಗೋತ್ರಕಲಹ** (ನಾ). ಮನೆತನದಲ್ಲಿ ಉಂಟಾಗುವ ಒಳಜಗಳ; ದಾಯಾದಿಗಳಲ್ಲಿ ಆಗುವ ಕಲಹ : ಭರತಾನ್ವಯದೊಳಿನ್ನೆವರೆಗಂ ಗೋತ್ರಕಲಹಮೆಂಬುದಾದುದಿಲ್ಲ (ಗದಾಯು. ೫-೪೪ ವ).

[ಗೋತ್ರ$_2$ + ಕಲಹ]

**ಗೋತ್ರಜ** (ನಾ). ೧. ಒಂದೇ ಗೋತ್ರಕ್ಕೆ ಸೇರಿದವನು : "ಸನಾಭಿಃ, ಸಗೋತ್ರಃ, ಸಪಿಂಡಃ-ಈ ೩ ಗೋತ್ರಜರ್" (ಹಲಾಯು. ೮೪-೩೫೫). ೨. ದಾಯಾದಿ; ಜ್ಞಾತಿ : ಸಕಲದತ್ತಿಯೆಂಬುದು ತನ್ನ ಸಂತತಿಯಂ ನಿಱಿಸಲೆಂದು ಪುತ್ರಂಗಕ್ಕೆ ಗೋತ್ರಜಂಗಕ್ಕೆ ಧರ್ಮಮಂ ಸರ್ವಸ್ವಮುಮ ನಪ್ಪಯಿಸಿ ಕುಡುವುದು (ಆಜಿಪು. ೧೨-೧ ವ); ಗೋತ್ರಜ ಭೀತಿ ಭೂಪಾಲರಿಗೆ ಹಿರಿದಹುದೆಂದನಾ ಶಕುನಿ (ಕುಂಪ್ರಾ.ಉ. ೮-೪೯). [ಸಂ.]

**ಗೋತ್ರಜಕಳತ್ರ** (ನಾ). ಪಾರ್ವತಿಯ ಪತಿ; ಶಿವ : ಗೋತ್ರಜಕಳತ್ರನಹಿ ಸೂತ್ರಸಿತಗಾತ್ರ (ಗುರುಚಾ. ೬-೧).

[ಸಂ. ಗೋತ್ರಜಾಕಲತ್ರ (ಗೋತ್ರಜಾ + ಕಲತ್ರ)]

**ಗೋತ್ರಧರ** (ನಾ). ಪರ್ವತವನ್ನು ಧರಿಸಿದವನು; ಶ್ರೀಕೃಷ್ಣ : ತನ್ನಯ ರೂಪಂ ಗೋತ್ರಧರಂ ತೋಱಿಲ್ (ಜಗವಿ. ೧೧-೩). 'ಅಗಧರ' ಪರಾ.

[ಸಂ.]

**ಗೋತ್ರಧವಳ** (ನಾ). ವಂಶದಿಂದ ಪರಿಶುದ್ಧನಾದವನು; ಸತ್ಕುಲದಲ್ಲಿ ಹುಟ್ಟಿದವನು : ವನವಾಸಮಲಿನನಂ ಯುಮತನಯನನುಜ್ವಳಿಸಿ ಗೋತ್ರಧವಳನನೆನ್ನಂ ಘನಮಲಿನಂ ಮಾಡಿದೆ ಕೃಷ್ಣ ನಿನ್ನವೋಲ್ ಶ್ವೇತ ಕೃಷ್ಣಕಾರಕರೊಳರೇ (ಗದಾಯು. ೭-೫೩).

[ಗೋತ್ರ$_2$ + ಧವಳ (=ಧವಲ)]

**ಗೋತ್ರಧಾತ್ರೀಧರ** (ನಾ). ಕುಲಪರ್ವತ : ಪವಿಭಯಭ್ರಾಂತಿಯಿಂದಂ ಶರಣ್ಪೊಕ್ಕುದು ತನ್ನಂ ಗೋತ್ರಧಾತ್ರೀಧರತತಿಯೆನೆ ಪೆಂಪರ್ಣವಕ್ಕೇನೊ ಚೋದ್ಯಂ (ಜಗವಿ. ೧-೪೫). [ಗೋತ್ರ$_2$ + ಧಾತ್ರೀಧರ]

**ಗೋತ್ರನಗ** (ನಾ).=ಗೋತ್ರಧಾತ್ರೀಧರ : ಗೋತ್ರನಗಂ ವಿಕಸಿತ ಶತಪತ್ರವನಂಬೆರಸು ನೆಗೆದವೊಲ್ ನೆಗೆದತ್ತಾ ಚಿತ್ರಗಜೇಂದ್ರಂ (ಮಲ್ಲಿಪು. ೧೨-೬೦). [ಗೋತ್ರ$_2$ + ನಗ$_3$]

**ಗೋತ್ರನಿಧಾನೆ** (ನಾ). ವಂಶಕ್ಕೆ ನಿಧಿಯಂತಿರುವವಳು; ಕುಲಕ್ಕೆ ಭೂಷಣಪ್ರಾಯಳಾದವಳು : ಭವ್ಯಜನಪ್ರಸಂಸೆ ಗೋತ್ರನಿಧಾನೆ ರುಗ್ಮಿಣೀಸಮಾನೆ ಲಕ್ಷ್ಮೀಮತಿ ದಂಡನಾಯಕಿತಿಯುಂ (ಎಕ. II, ೧೨೭-೧೬೦: 1115). [ಸಂ. ಗೋತ್ರನಿಧಾನಾ (ಗೋತ್ರ + ನಿಧಾನಾ + -)]

**ಗೋತ್ರನಿಸ್ತಾರ** (ನಾ). ವಂಶೋದ್ಧಾರಕ; ಕುಲಸಂರಕ್ಷಕ : ಸ್ವಾಮಿನೀ ಭೃತ್ಯಂ ಗೋತ್ರನಿಸ್ತಾರ ಪೊಜಿಪಳೆಯಗಾವುಣ್ಣ (ಎಕ. VII, ಶಿಕಾರಿ. ೬೨-೪; ಸು. 1170?). [ಗೋತ್ರ$_2$ + ನಿಸ್ತಾರ]

**ಗೋತ್ರಪತಿ** (ನಾ). ಗೋವುಗಳ ಸಮೂಹಕ್ಕೆ ಒಡೆಯ; ನಂದೀಶ; ವೃಷಭ : ಗೋತ್ರಪತಿಯಾರೂಢ ಗೋಪಶಕಲಾಚೂಡ (ನವಮೋ. ೨-೧).

[ಗೋತ್ರ$_1$ + ಪತಿ$_2$]

**ಗೋತ್ರಪತಿಪತ್ರ** (ನಾ). ನಂದಿಯನ್ನು ವಾಹನವಾಗಿ ಉಳ್ಳವನು; ಶಿವ : ಶತಪತ್ರವರಪುತ್ರಶಿರಪಾತ್ರ ಸುಚರಿತ್ರ ಘನಗೋತ್ರಪತಿಪತ್ರ (ಗುರುಚಾ. ೬-೧). [ಗೋತ್ರಪತಿ + ಪತ್ರ]

**ಗೋತ್ರಪವಿತ್ರ** (ನಾ). ವಂಶದಿಂದ ಪವಿತ್ರನಾದವನು : ದ್ವಿಜಕುಲ ತಿಲಕರ್ ಗೋತ್ರಪವಿತ್ರರ್ (ಕಇ. II, ೧೦-೧೦; 1080); ನುಡಿದು [ಮತ್ತೆ]ನ್ನಂ ಗೋತ್ರಪವಿತ್ರಂ ಸುಜನಯ್ಯಾ ಮಿತ್ರಂ (ಸೌಇಇ. XX, ೬೦-೧೧; 1088). [ಗೋತ್ರ$_2$ + ಪವಿತ್ರ]

**ಗೋತ್ರಪುತ್ರಿ** (ನಾ). ಪರ್ವತರಾಜನ ಮಗಳು; ಪಾರ್ವತಿ : ಗೋತ್ರ ಪುತ್ರೀನೇತ್ರದಶಶತಪತ್ರಮಿತ್ರಂ (ಬಸವು. ೬೧-೩೬).

[ಗೋತ್ರ$_2$ + ಪುತ್ರಿ]

**ಗೋತ್ರಪ್ರವರ** (ನಾ). ೧. ವಂಶದ ಮೂಲಪುರುಷ. ೨. ಗೋತ್ರಕ್ಕೆ ಸಂಬಂಧಪಟ್ಟ ಋಷಿಗಳ ನಾಮ; ಗೋತ್ರಕ್ಕೆ ಸಂಬಂಧಿಸಿದ ಪ್ರವರ: ನಿರ್ಣಯಸಿಂಧು-(ಕಮಲಾಕರಭಟ್ಟ) . . . ಗೋತ್ರಪ್ರವರ, ತ್ರಿಪುಂಡ್ರಾದಿ ಧಾರಣ, ಪ್ರತಿಷ್ಠಾದಿ ವಿಚಾರಗಳಿವೆ (ಭಾರದ. ೬೭).

[ಗೋತ್ರ$_2$ + ಪ್ರವರ]

**ಗೋತ್ರಪ್ರವರ್ತಕ** (ನಾ). ಗೋತ್ರದ ಮೂಲಪುರುಷನಾದ ಋಷಿ : ಧೌಮ್ಯಋಷಿಗಳು ವಾಮದೇವರಿಗೆ ವಾಜಶ್ರವಸನನ್ನು ಗೋತ್ರಪ್ರವರ್ತಕ ರಾದ ಗೌತಮಮಹಾಋಷಿಗಳ ವಂಶದವನು . . . ಎಂಬುದಾಗಿ ಪರಿಚಯ ಮಾಡಿಸಿದ್ದರು (ಬೆತಂಬಾ. ೨೯). P ವಿಶ್ವಾಮಿತ್ರ, ಜಮದಗ್ನಿ, ಭರ ದ್ವಾಜ, ಗೌತಮ, ಅತ್ರಿ, ವಸಿಷ್ಠ, ಕಶ್ಯಪ ಮತ್ತು ಅಗಸ್ತ್ಯರೆಂಬ ಎಂಟು ಮಂದಿ ಋಷಿಗಳಂ ಗೋತ್ರ ಪ್ರವರ್ತಕರು.

[ಗೋತ್ರ + ಪ್ರವರ್ತಕ]

**ಗೋತ್ರಪ್ರಿಯ** (ನಾ). ೧. (ತನ್ನ)ಕುಲದವರ ಮೇಲೆ ಪ್ರೀತಿಯುಳ್ಳವನು. ೨. ಪರ್ವತಗಳ ಮೇಲೆ ಪ್ರೀತಿಯುಳ್ಳವನು. ೧, ೨ : ಆ ನೃಪೇಂದ್ರಂ . . . ಸುಧರ್ಮಾಧಿಷ್ಠಿತನಾಗಿಯುಂ ಗೋತ್ರಪ್ರಿಯನುಂ (ರಾಜಶೇ. ೩-೯ ವ). [ ಗೋತ್ರ$_2$ + ಪ್ರಿಯ ]

**ಗೋತ್ರಭಿತ್ತು** (ನಾ). ಪರ್ವತವನ್ನು ಕತ್ತರಿಸಿದವನು,-ನಾಶಮಾಡಿದವನು; ಇಂದ್ರ: "ಇಂದ್ರಃ . . . ಗೋತ್ರಭಿತ್ . . . ಮೇಘವಾಹನಃ-ಈ ೩೯ ದೇವೇಂದ್ರನ ಪೆಸರ್" (ಹಲಾಯು. ೧೦-೫೩). [ ಸಂ. ಗೋತ್ರಭಿತ್ ]

**ಗೋತ್ರಯ** (ನಾ). ೧. ಮೂರುಕಣ್ಣುಗಳು. ೨. ಮೂರುಕಣ್ಣುಗಳುಳ್ಳವನು; ಮುಕ್ಕಣ್ಣ; ಶಿವ : ಗೋತ್ರಯನ ಕೈಯಿಂದ ಪಡೆದಾ ನಿಟಿಲನಯನವನು (ಬಸಪು. ೨೩-೧೪). [ ಗೋ + ತ್ರಯ ]

**ಗೋತ್ರವಧೆ** (ನಾ). ವಂಶದವರ ಕೊಲೆ; ಬಂಧುಗಳ ಕೊಲೆ : ಪಾಪ ನಿನಗೀ ಗೋತ್ರವಧೆಯ ವಿಳಾಪ ನಿನ್ನನು ತಾಗಲೀ ಸರ್ವಾಪರಾಧವು ನಿನ್ನದು (ಕುವ್ಯಾ.ಗ. ೮-೪೦) ; ನಾಂ ಗೋತ್ರವಧೆಗೈಸಿದೀ ಕಾಯಮುಮಂ ವನವಾಸಕೈದಿಸುವೆನು (ಜೈಮಿಭಾ. ೨-೨೦). [ ಗೋತ್ರ$_2$ + ವಧೆ ]

**ಗೋತ್ರವಿರೋಧ** (ನಾ). ೧.=ಗೋತ್ರಕಲಹ. ೨. ಬೆಟ್ಟದ ಮೇಲಿನ ದ್ವೇಷ. ೧, ೨: ಗೋತ್ರವಿರೋಧಮದೆಂದುಂ ಸುತ್ರಾಮನೊಳುತುಳಭೀತಿ ದುರಿತದೊಳ್ . . . ಅಲ್ಲದಿಲ್ಲ ಪೆಱತೊಂದೆಡೆಯೊಳ್ (ಶಾಂತೀಶ್ವ. ೧-೮೨). [ ಗೋತ್ರ$_2$ + ವಿರೋಧ ]

**ಗೋತ್ರವಿಶಿಖಾಸನ** (ನಾ). (ಮೇರು) ಪರ್ವತವನ್ನು ಬಿಲ್ಲಾಗಿ ಮಾಡಿಕೊಂಡವನು; ಶಿವ : ಗೋತ್ರವಿಶಿಖಾಸನಂ ಗೋಕರ್ಣಭೂಷಣ (ನವಮೋ. ೨-೧). [ ಗೋತ್ರ$_2$ + ವಿಶಿಖಾಸನ ]

**ಗೋತ್ರವೈರಿ** (ನಾ). ಪರ್ವತಗಳ ವೈರಿ ; ಇಂದ್ರ : ಎನ್ನೊಳೆಣೆಯೇ ಸನ್ಮಿತ್ರರಾಜಭ್ರಮಾಕಳಿತಂ ನಂದಿತ ಗೋತ್ರವೈರಿಯೆನುತುಂ ಹೇಮಾಚಳ ಶ್ರೀಶಿಲಾತಳಮಂ ಮೆಚ್ಚಿಯುಮಂದು ಮೆಚ್ಚದೆ ಬೃಹದ್ವಕ್ಷಂ ಮಹಾಪದ್ಮನಾ (ಪುಷ್ಪಪು. ೪-೬೭). [ ಗೋತ್ರ$_2$ + ವೈರಿ ]

**ಗೋತ್ರಸ್ಕಂಧ** (ನಾ). ಬೆಟ್ಟದ ತುದಿ : ಗೋತ್ರಸ್ಕಂಧಮಂ ಮೆಟ್ಟಿ, ಕಣ್ದಿಟ್ಟಿ ಮುಟ್ಟುವನ್ನೆಗಮಟ್ಟಿ ನೋಡುತಿರೆ ಸೌಮಿತ್ರಿ (ಶ್ರೀರಾಮಾ. ೧೭೪-೫೫). [ ಗೋತ್ರ$_2$ + ಸ್ಕಂಧ ]

**ಗೋತ್ರಸ್ಖಲನೆ** (ನಾ). ಒಬ್ಬರನ್ನು ಇನ್ನೊಬ್ಬರ ಹೆಸರಿನಿಂದ ತಪ್ಪಾಗಿ ಕರೆಯುವುದು : ಏಕಾಂತದೊಳ್ ನೂಪುರರವವಿಳಸದ್ವಾಮಪಾದಪ್ರಹಾರಕ್ಕಿದಱೊಳ್ ಪಕ್ಕಾಗಿ ಗೋತ್ರಸ್ಖಲನೆ ನೆಗೞ್ ಪೂಮಾಲೆಯಿಂ ಮೋದುವೆತ್ತೆಂ (ಆದಿಪು. ೪-೯); ನಳಿನದಳನಯನೆ ತನಗಾಗುಳಿವರೆ ಕರತಳದೆ ವದನಮಂ ಮುಚ್ಚುತವಗ್ಗಲಿಸಿ ಪೊಱಮಡುವ ಗೋತ್ರಸ್ಖಲನೆಯ ಭಯದಿಂದೆ ಮುಚ್ಚಿದಂತೆವೊಲಿರ್ದಳ್ (ಕಾದಂಬ. ೧೨೪). 'ಗೋತ್ರಸ್ಖಲಿತ' ಪರಾ. [ ಗೋತ್ರ$_2$ + ಸ್ಖಲನೆ ]

**ಗೋತ್ರಸ್ಖಲಿತ** (ನಾ).=ಗೋತ್ರಸ್ಖಲನೆ: ಮನೆಗೆ ಬಂದ ನಾಯಿಕೆ ನಾಯಕನ ಗೋತ್ರಸ್ಖಲಿತ (=ಅನ್ಯಸ್ತ್ರೀ ನಾಮೋಚ್ಚಾರಣ)ದಿಂದ ಕುಪಿತಳಾಗಿ ಅಲ್ಲಿಂದ ಹೊರಟುಬಿಟ್ಟಾಗ, ನಾಯಕನಾಡುವ ಅನುನಯವಾಕ್ಯವಿದು (ಧ್ವನ್ಯಾಲೋ. ೧೬ ಅಡಿಟಿ). [ ಗೋತ್ರ$_2$ + ಸ್ಖಲಿತ ]

**ಗೋತ್ರಹರ** (ನಾ). ಪರ್ವತಗಳನ್ನು ನಾಶಮಾಡಿದವನು ; ಇಂದ್ರ : "ಸುತ್ರಾಮಾಖ್ಯಂ . . . ಗೋತ್ರಹರಂ ಪಾಕ ನಮುಚಿ ಜಂಭದ್ವಿಷ್ಟಂ" (ವಸ್ತುಕೋ. ೬-೩೪). [ ಗೋತ್ರ$_2$ + ಹರ ]

**ಗೋತ್ರಾಂಕಿತ** (ಗು). ಗೋತ್ರದಿಂದ ಹೆಸರಿಸುವ : ಲಕ್ಷ್ಮಿಯನ್ನು ನೀನು ಯಾವಾಗ ವರಿಸಿದೆಯೋ ಆಗಲೇ ಅವಳು ನಿನ್ನ ಸ್ವತ್ತಾದಳು. ನಿನ್ನ ಗೋತ್ರಾಂಕಿತಳಾದಳು (ಲಕ್ಷ್ಮೀಪ್ರ. ೧೮೭). [ ಗೋತ್ರ$_2$ + ಅಂಕಿತ ]

**ಗೋತ್ರಾಂತ** (ನಾ). ೧. ಕುಲನಾಶ. ೨. ವಂಶದ ಮೂಲಪುರುಷನಿಂದ ಬಂದ ಹೆಸರು ; ವಂಶದ ಹೆಸರು : (+). [ ಗೋತ್ರ$_2$ + ಅಂತ$_2$ ]

**ಗೋತ್ರಾಚಲ, ಗೋತ್ರಾಚಳ** (ನಾ). ಕುಲಗಿರಿ; ಕುಲಪರ್ವತ : ಗೋತ್ರಾಚಲಂಗಳ್ ರಸವತ್ಸಂಗೀತ ನಾನಾಪಟುಪಟಹನಿನಾದಂಗಳಿಂ ತೀವೆ (ಸುಕುಮಾ. ೧೧-೫೩). **ಗೋತ್ರಾಚಳ**: ಎಲೆಲೆ ಜಲನಿಧಿಯ ಗೋತ್ರಾಚಳಮ ದಿಶಾವಳಿಯ ವೈರಿ ದೆಸೆಗೆಟ್ಟು ಬರಲ್ ಪೊಳಕೊಳ್ಳದಿರ್ . . . ಎಂದು ಭೇರಿ ಸಾಱಿದುದಾಗಳ್ (ಸೌಇಇ. XX, ೪೯-೧೬ ; 1076 ? ). [ ಗೋತ್ರ$_2$ + ಅಚಲ ]

**ಗೋತ್ರಾಚಳ** 'ಗೋತ್ರಾಚಲ' ನೋ.

**ಗೋತ್ರಾದ್ರಿ** (ನಾ).=ಗೋತ್ರಾಚಲ : ಗೋತ್ರಾದ್ರಿಯೊಳ್ ಸಿಂಗದ ಸಿಸು ಬಳೆವೊಂದಂದದಿಂ . . . ಬಳೆದಂ ಭಾರತೀಭಾಳನೇತ್ರಂ (ಚಂದ್ರಪು. ೩-೧೦೩). [ ಗೋತ್ರ$_2$ + ಅದ್ರಿ ]

**ಗೋತ್ರಾರಿ** (ನಾ).=ಗೋತ್ರವೈರಿ : ಕೃತಶಾಪಾನ್ವಿತನಾ ಹಿಮಾಂಶುಗುರುವಿನಿಂ ಗೋತ್ರಾರಿಯನ್ಯಾಂಗನಾರತಿಯಿಂ (ಸೋಮೇಶ. ೩೯) ; ಗೋತ್ರಾರಿ ಬೆಸಸೆ ನೆಗಟ್ದಪ ಗೋತ್ರಾರಿಯ ಶೈಶವೋಚಿತಕ್ರಿಯೆಗೆಲ್ಲಂ ಧಾತ್ರೀಜನಮಾಗಿಸಿದಂ ಧಾತ್ರೀಜನಚಾರುಚತುರ ದೇವೀಜನಮಂ (ಪುಷ್ಪಪು. ೧೨-೫೪). [ ಗೋತ್ರ$_2$ + ಅರಿ$_6$ ]

**ಗೋತ್ರಿತಯ** (ನಾ). ೧. ಮೂರುಕಣ್ಣುಗಳು. ೨. ಮೂರುಕಣ್ಣುಗಳುಳ್ಳವನು ; ಶಿವ : ಗೋತ್ರಿತಯಯಮಿಜನಸ್ತೋತ್ರಪಾತ್ರ (ನವಮೋ. ೩೪-೫೦). 'ಗೋತ್ರಯಂ' ಪರಾ. [ ಗೋ + ತ್ರಿತಯ ]

**ಗೋತ್ರೆ** (ನಾ). ೧. ಗೋವುಗಳ ಸಮೂಹ : (+). ೨. ಭೂಮಿ ; ನೆಲ : "ಸ್ಥಿರೆ ಧರಣಿ . . . ಭೂಮಿ ಭೂ ಗೋತ್ರೆ ನೆಲಂ" (ವಸ್ತುಕೋ. ೨೬-೧). [ ಸಂ. ಗೋತ್ರಾ ]

**ಗೋತ್ರೈಕಪಾಲಕ** (ನಾ). ೧. ಗೋವುಗಳನ್ನು ಪಾಲಿಸುವವನು ; ಗೋಪಾಲ ; ಕೃಷ್ಣ. ೨. ಮೈನಾಕವೆಂಬ ಪರ್ವತದ ರಕ್ಷಕ ; ಸಮುದ್ರ. ೧, ೨ : ರಮಾಧವನಂತೆ ಗೋತ್ರೈಕಪಾಲಕಂ . . . ತಾನೆಂದುದಧಿ ಮೆಱೆದುದು (ಜೈಮಿಭಾ. ೬-೫). [ ಸಂ. (ಗೋತ್ರಾ + ಏಕ + ಪಾಲಕ) ; ಗೋತ್ರ$_2$ + ಏಕ + ಪಾಲಕ ]

**ಗೋದ$_1$**, ಗುದ್ದ, ಗೊದ್ದ$_1$ (ನಾ). ದೊಡ್ಡ ಜಾತಿಯ ಹಲ್ಲಿ; ಉಡ : ಜಲವ ಕಾಣದ ಗೋದನಂತೆ ತೋಱುತ್ತ ಗೞಿಯ ಹಿಡಿದ ಅಂದೆನಂತೆ ಹಿಡಿದೊಡವೆಯ ಬಿಡಲಾಱದೆ ಬೇವುತ್ತ (ದಾಸೋಸಂ. ೩೦). **ಗುದ್ದ** : "ಗೊದ್ದ (ಗುದ್ದ) ಗೋಧಾ=ಉಡು, ಓತಿ" (ತದ್ಭಕೋ. ೧೧). **ಗೊದ್ದ$_1$** : ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. [ <ಸಂ. ಗೋಧಾ ]

**ಗೋದ$_2$** (ನಾ). ಮಿದುಳು. [ ಸಂ. ]

**ಗೋದ$_3$** (ನಾ). ಗೋದರುಡು ರೋಗವುಳ್ಳವನು ; ಹೋರಿಯ ಬೀಜದಂತೆ ದಪ್ಪವೃಷಣವುಳ್ಳವನು: ಅವನೇ ನನ್ನೂರಿನ ಪೂಜಾರಿ ಗೋದಪ್ಪ. ಗೋದನಾದ್ದರಿಂದ ಹೆಚ್ಚು ತಿರುಗಾಡಲಾರ (ನನ್ನೂರು. ೧೧). [ ಗೋದು + - ಅ$_6$ ]

**ಗೋದಂತಿಹರತಾಳ, ಗೋದಂತೀಅರದಾಳ** (ನಾ). ಒಂದು ಬಗೆಯ ಅರಿದಾಳ : ಗೋದಂತಿಹರತಾಳ . . . ಸೂರ್ತಿ ಚವಾಳ ೨೦ ಮಣದ ಖಂಡಗ (ಮುಂಬವ್ಯಾ. ೧೫೫). **ಗೋದಂತೀಅರದಾಳ** : ಸೋಮಲ ಧಾತುವಿನೊಳಗೆ ಗಂಧಕವು ಬೇರೆ ಬೇರೆ ಪ್ರಮಾಣದಿಂದ ಮಿಶ್ರವಾಗಿ ಮನಶಿಲ, ಅರದಾಳ, ಗೋದಂತೀಅರದಾಳಗಳು ಹುಟ್ಟುತ್ತವೆ (ಮುಂಬಯಿ. ೬-೨೨). [ ←ಮರಾ. ಗೋದಂತೀಹರತಾಳ ]

**ಗೋದಂತೀಅರದಾಳ** 'ಗೋದಂತಿಹರತಾಳ' ನೋ.

**ಗೋದಣ, ಗೋದಣಿ, ಗೋದನೆ, ಗೋದಲ, ಗೋದಲಿ, ಗೋದಲೆ** (ನಾ). ೧. ದನಕರುಗಳನ್ನು ಕಟ್ಟುವ ಜಾಗದಲ್ಲಿ ಮೇವು ಹಾಕಲು ಮಾಡಿರುವ ಚೌಕಾಕಾರದ ರಚನೆ; ಗೊಂತು : ಸುತನ ಸಾವಂ ಲೋಗರಜಿಯದ ಗತಿಯೊಳಾ ಗೋದಣದೊಳಗದಂ ಹಾಯ್ಕಿ ಹುಲು ಮುಚ್ಚಿ (ಬಸವು. ೨೪-೫೭). **ಗೋದಣಿ:** ೧. ಅವನಂ ವನಕೆಯಿಂದ ಕೊಂದೆಳೆದು' ಗೋದಣಿಗೆ ಹಾಕಿರಲು (ಭೈರಸೂ. ೨೩೨). **ಗೋದನೆ:** ೨. ದನಗಳ ಹಟ್ಟಿ; ಕೊಟ್ಟಿಗೆ : ಗೋದನೆಯಲ್ಲಿಯ ದನಗಳು ಸದ್ದು ಮಾಡಿದವು (ಬಾಬಲ. ೩೭). **ಗೋದಲ:** ೧. ನನ್ನ ತಾಯಿ ಸಂಜೆಯ ದೀಪ ಕೈಯಲ್ಲಿ ಹಿಡಿದು ದನದ ಹಕ್ಕೆಯಲ್ಲಿ ಗೋದಲಕ್ಕೆ ಬೆಳಕು ತೋರಿಸಲು ಹೊರಟಿದ್ದಾಳೆ (ಇಪ್ಪಕ. ೨೦೮). **ಗೋದಲಿ:** ೨. ಅವನು ಗೋದಲಿಯಲ್ಲೇ ನಿದ್ದೆ ಮಾಡಿದ (ರೂಢಿ). **ಗೋದಲೆ:** ೧. ಪೊಸಹೋರಿಗಂ ಮೇವನೊದವಿಸ ಲೆಂದು ಗೋದಲೆಯನಡರಲ್ (ಮಹಾಂತೇ. ೮-೧೩). ೨. ಎತ್ತಿನ ಗೋದಲೆ ಯನ್ನು ಸಾರಿಸಿ ಶಿಫಾರಸು ಪಡೆಯುವ ಹೊತ್ತು ಬಂದಾಗ ತಾವೇಕೆ ಹಿಂದೆ ಬೀಳಬೇಕೆಂಬ ವಿಚಾರ ಅವರನ್ನು ವಾಡೆಗೆ ಎಳೆದು ತಂದಿತ್ತು (ಗ್ರಾಮಾಯ. ೩೦೩); ನನ್ನ ಬಾಲಗೋಪಾಲನ ಗೋದಲೆಗಳವ್ವಾ ಇವು . . . ಅವನಿಗೇನು ಕಡಿಮೆ? (ಉಯ್ಯಾಲೆ. ೯೩-೧). [<ಸಂ. ಗವಾದನೀ ]

**ಗೋದಣಿ** 'ಗೋದಣ' ನೋ.

**ಗೋದಣಿಗೆ, ಗೋದನಿಕೆ, ಗೋದಲಿಕೆ** (ನಾ). = ಗೋದಣ ೧ : ಗೋದಣಿಗೆಗೆ ಹುಲ್ಲು ಹಾಕು (ರೂಢಿ). **ಗೋದನಿಕೆ:** ಅದು ತಿನ್ನುವದಕ್ಕೆ ಗೋದನಿಕೆಯಲ್ಲಿ ಹಾಕು (ಟಾಕತ. ೨೩). **ಗೋದಲಿಕೆ:** ಗೊಂತಿಗೆ ಕಟ್ಟಿದ ದನಗಳು ಕೊಟ್ಟಿಗೆಯ ಗೋದಲಿಕೆಯಲ್ಲಿರುವ ಹುಲ್ಲು ತಿನ್ನುತ್ತಾ ಅಥವಾ ತಿನ್ನದೆಯೋ ನಿಂತಿವೆ (ನನ್ನೂರು. ೧೮). [<ಸಂ. ಗವಾದನಿಕಾ ]

**ಗೋದಣೆ** (ನಾ). ಗುದ ಲಿ. 'ಗೋದಣೆವಲ್' ಪರಾ. [<ಸಂ. ಗೋದಾರಣ ]

**ಗೋದಣೆವಲ್** (ನಾ). ಗುದ್ದಲಿಯಂತೆ ಇರುವ ಹಲ್ಲು : ಜುಂಜುಬುದಲೆ ಯೂರ್ಧ್ವರೋಮ . . . ಗೋದಣೆವಲ್ಲ ಭೂತಗಳ್ ಮಂಜುಳವೆನೆ ನೆಗಹಿದುವು (ವೋಹತ. ೨೪-೧೧). [ಗೋದಣೆ + ಪಲ್ ]

**ಗೋದನಿಕೆ** 'ಗೋದಣಿಗೆ' ನೋ.

**ಗೋದನೆ** 'ಗೋದಣ' ನೋ.

**ಗೋದರುಡು** (ನಾ). ೧. ತರುಡಂ ಊದಿಕೊಳ್ಳುವ ಒಂದಂ ರೋಗ; ಅಂಡವಾತ. ೨. ಆ ರೋಗವಿರುವ ತರುಡು : ಗೋದರುಡಿಗೆ:- ಬದನೇಕಾಯಿ, ಗರುಗದ ರಸ, ಎಣ್ಣೆಯಲ್ಲಿ ಅರೆದು ಮೆಲ್ಲಲು ಗುಣ (ವಿಶ್ವವಿ. ೧೨೭). [ಗೋ + ತರುಡು ]

**ಗೋದಲ** 'ಗೋದಣ' ನೋ.

**ಗೋದಲಿ** 'ಗೋದಣ' ನೋ.

**ಗೋದಲಿಕೆ** 'ಗೋದಣಿಗೆ' ನೋ.

**ಗೋದಲೆ** 'ಗೋದಣ' ನೋ.

**ಗೋದಶಶತ** (ನಾ). ಸಾವಿರ ಕಣ್ಣುಗಳುಳ್ಳವನಂ; ಸಹಸ್ರಾಕ್ಷ; ಇಂದ್ರ : ಗೋದಶಶತಾದಿನುತ ಗೋಧವ ಕೃಪಾಂಬುಧಿಯೆ ಸಂಗಮೇಶ್ವರ ಪ್ರಸನ್ನ (ಪ್ರಾಥರಾ. ೬-೦). [ಗೋ + ದಶಶತ ]

**ಗೋದಾನ** (ನಾ). ೧. ಹಸುವನ್ನು ದಾನವಾಗಿ ಕೊಡುವುದು : ಆದರದಿಂ ಗೋದಾನಂ . . . ಶ್ರೀದಾನಂಗುಡುತುಮೊಪ್ಪಿದಂ ಗಿರಿರಾಜಂ (ಗಿರಿಕ. ೩-೬೩) : ಗೋದಾನಮಶ್ವದಾನಂ ಭೂದಾನಂ ಹೇಮದಾನಮಿವು ಮುಖ್ಯದ ನಾನಾದಾನಂಗಳನವಿರತಮಾದರದಿಂ ನೆಗಟ್ ಬಗೆದುದಾಗ ದುದುಂಟೇ (ಕುಸುಮಾ. ೩-೩೭). ೨. ಕೇಶಖಂಡನ ಸಂಸ್ಕಾರ. 'ಗೋದಾನವ್ರತ' ಪರಾ. [ಗೋ + ದಾನ ]

**ಗೋದಾನವ್ರತ** (ನಾ). ಹದಿನಾರನೆಯ ವರ್ಷದಲ್ಲಿ ಮಾಡುವ ಕೇಶ ಖಂಡನ ಸಂಸ್ಕಾರ: ಮಹಾನಾಮ್ನೀವ್ರತ, ಮಹಾವ್ರತ, ಉಪನಿಷದ್ವ್ರತ, ಗೋದಾನವ್ರತ-ಈ ನಾಲ್ಕೂ ವೇದವ್ರತಗಳು. ಇವನ್ನು ಕ್ರಮವಾಗಿ ಹದಿಮೂರನೇ . . . ಹದಿನಾರನೇ ವಯಸ್ಸಿನಲ್ಲಿ ಮಾಡುವುದು (ಆರ್ಯಧ. ೧೨೭). [ಗೋದಾನ + ವ್ರತ ]

**ಗೋದಾಮು** 'ಗುದಾಮು' ನೋ.

**ಗೋದಾಮುಖ** (ನಾ). (?) : ತರದಿಂ ತಳ್ತಿರ್ದನದ್ಧಧ್ವಜಸಮುದಯಮಂ ಚಿತ್ರಶೋಭಾಭಿರಾಮಾಜಿರಮಂ ಪ್ರೋತ್ತುಂಗಗೋದಾಮುಖಮನನುಪಮಾ ವೇಷ್ಟಿತೋದ್ಯಾನಮಂ . . . ಪೊಕ್ಕನಾಶಾಂಬರವಿಖ್ಯಾತಪ್ರಶಂಸಂ ಪರಮ ಜಿನಮತಾಂಭೋಜಿನೀರಾಜಹಂಸಂ (ಸುಕುಮಾ. ೫-೬೨).'ಗೋಪಾಮುಖ' ಪರಾ. [ ? ]

**ಗೋದಾಮೆ**$_1$ (ನಾ). ಊಸರವಳ್ಳಿ; ಗೋಸುಂಬೆ; ಹೂಸಲಿಂಗಿ (ಉಕ): ಗೋದಾಮೆಯಂತೆ ಬಗೆದ ಬಣ್ಣಮುಪ್ಪ ರಣಜೆಟ್ಟಿಗರಿಂ (ಕಾವ್ಯಸಾ. ೫೨೯ ಶೂದ್ರಕ). [<ಸಂ. ಗೋಧಾ ? ]

**ಗೋದಾಮೆ**$_2$ (ನಾ). ಗೋದಿನಾಗರಹಾವು (?) : ಗೋದಾಮೆಗಂಡ ನವಿಲಂತಾದುದು . . . ದುರ್ನಯದ ಕಾಣ್ಕೆಗೆನ್ನಯ ಚಿತ್ತಂ (ಯಶೋಚ. ೬-೧೧). [<ಸಂ. ಗೋಧೂಮಕ ]

**ಗೋದಾರಣ** (ನಾ). ೧. ನೇಗಿಲು : "ಲಾಂಗಲಂ, ಹಲಂ, ಗೋದಾರಣಂ- ಸೀರಃ, ನೇಗಲ ಹೆಸರು" (ಸಿದ್ಧಾಂತಿ.೨೩೮). ೨. ಗುದ್ದಲಿ: "ಗೋದಾರಣಂ, ಕೂ[ಕು]ದ್ದಾಲಂ-ಈ ೨ ಗುದ್ದಲಿ" (ಹಲಾಯು. ೯೪-೮೨೩). [ಸಂ. ]

**ಗೋದಾರಣಕ** (ನಾ).=ಗೋದಾರಣ ೨: "ದಾತ್ರಂ . . . ಕುದ್ದಾಲವು ದುವೆ ಗೋದಾರಣಕಂ" (ವಸ್ತುಕೋ. ೬೩-೬೯). [ಸಂ. ]

**ಗೋದಿ**$_1$ 'ಗೋದುವೆ' ನೋ.

**ಗೋದಿ**$_2$ (ನಾ). "(ಸಮುದ್ರದಲ್ಲಿ) ಹಡಗುಂಗಳನ್ನು ಭರ್ತಿ ಮಾಡುವುದಕ್ಕೂ, ಅವುಗಳಿಂದ ಸಾಮಾನು ಇಳಿಸುವುದಕ್ಕೂ ಅಥವಾ ಅವನ್ನು ದುರಸ್ತುಮಾಡುವುದಕ್ಕೂ ಅನುಕೂಲಿಸುವಂತೆ ನೀರನ್ನು ಒಳಕ್ಕೆ ಬಿಡುವುದಕ್ಕಾಗಲಿ, ಹೊರಕ್ಕೆ ಹೊರಡಿಸುವುದಕ್ಕಾಗಲಿ ತಕ್ಕ ಬಾಗಿಲುಗಳ ಏರ್ಪಾಟುಳ್ಳ ಹೊಂಡದಂಥ ಕಟ್ಟೆ : ಹಡಗುಂಕಟ್ಟೆ; ಗೋದಿ" (Dock. ಇಂಕನಿ). [ ? ]

**ಗೋದಿಗ** (ನಾ). ಒಂದು ಬಗೆಯ ಹಕ್ಕಿ: ಗೋದಿಗ ಬುಬುಲೆ ಬಲುಹಸುಬ . . . ಭೇರುಂಡವೆಂಬೀ ಪರಿಪರಿಯ ಪಕ್ಷಿಗಳು ಮೆಱೆದಿಹವಾ ಮಹಾದ್ರಿ ಯಲಿ (ಪ್ರಭುಲಿ. ೪-೧೨). [ ? ]

**ಗೋದಿಗೆಂಪು** (ನಾ). ಗೋದಿಯಂತೆ ನಸುಗೆಂಪು ಬಣ್ಣ : ಅವಳದು ಗೋದಿಗೆಂಪು ಬಣ್ಣ (ರೂಢಿ). [ಗೋದಿ$_1$ (<ಗೋದುವೆ) + ಕೆಂಪು$_1$ ]

**ಗೋದಿನಾಗರ** (ನಾ). ಗೋದಿಯ ಆಕಾರದ ಮಚ್ಚೆಗಳುಳ್ಳ ಒಂದು ಬಗೆಯ ಹಾವು; ನಾಗರಹಾವು: ಗೋದಿನಾಗರ ಬಹು ವಿಷವುಳ್ಳ ಹಾವು (ರೂಢಿ). [ಗೋದಿ$_1$ (<ಗೋದುವೆ) + ನಾಗರ$_1$ ]

**ಗೋದಿಬರ್ಸನ** (ನಾ). ಒಂದು ಬಗೆಯ ಔಷಧಿ ಗಿಡ : (+). [ ? ]

**ಗೋದಿಬಾರ್ಮೊಂಡ** (ನಾ). ಉದ್ದವಾಗಿ ಕಪ್ಪಾಗಿ ಇರುವ ಒಂದು ಬಗೆಯ ಕಾಡುಧಾನ್ಯ : ಬರಗಾಲದ ಆಹಾರ . . . ಬೀಜಗಳು. ೧ ಬಿದರಕ್ಕಿ. ೨ ಗೋದೀಬಾರ್ಮೊಂಡ (ಕಭಾಗ. ೧೧ ಪರಿ). [ ? ]

**ಗೋದು** (ನಾ). (ಹೋರಿಯ ಬೀಜದಂತೆ) ದಪ್ಪವಾದ ವೃಷಣ : ಆಗಾಗ್ಗೆ ತನ್ನ ಗೋದನ್ನು ಒಳಕ್ಕೆ ನೂಕುತ್ತಾ . . . ಕೆಲಸಗಳಲ್ಲಿ ನಿರತ ನಾಗಿರುತ್ತಾನೆ (ನನ್ನೂರು. ೧೧). [P 'ಗೋದರುಡು' ಎಂಬ ಶಬ್ದದ ಸಂಗ್ರಹರೂಪವಿರಬೇಕು ]

**ಗೋದುಮೆ** 'ಗೋದುವೆ' ನೋ.

**ಗೋದುಮೆಹಾವು** (ನಾ). = ಗೋದಿನಾಗರ : (ಕ).
[ ಗೋದುಮೆ (<ಗೋದುವೆ) + ಹಾವು (<ಪಾವು$_1$) ]

**ಗೋದುವೆ,** ಗೋದಿ$_1$, ಗೋದುಮೆ, ಗೋಧಿ$_1$, ಗೋಧುವೆ (ನಾ). ಒಂದು ಬಗೆಯ ಧಾನ್ಯ; ಗೋಧೂಮ: "ಗೋಧೂಮಂ ಗೋದುವೆ" (ವಸ್ತುಕೋ. ೯೪-೧೭); ಜವೆ ಕಟಿಮಂ ಮಾಷಂ ಗೋದುವೆ ಪಿಪ್ಪಲಿ ಯೆಂಬಿವಿನಿತುಮಂ ಗೋಘೃತದಿಂದವುಗಡಿಸಿ ತಿಂದು ಸಿತದುಗ್ಧವನಿರುಳೊಳ್ ಕುಡಿಯೆ ವೀರ್ಯವರ್ಧನಮಕ್ಕುಂ (ಲೋಕೋಪ. ೯-೪೭); ಎಳ್ಳು ಉಪ್ಪು ಗೋದುವೆ ಬಳ್ಳ ೨ (ಸೌಇಇ. XI-ii, ೧೫೮-೧೬; 1109); ಘೃತದೊಳ್ ಪುರಿದುದ್ದು ಪೆಸಱು ಗೋದುವೆವೆರಸಿರೆ ಮೇಣ್ ಕಾಯ್ದ ಗಂಜಿಯಿಂ ಜ್ವರಹರಣಂ (ಕಲ್ಯಾಕಾ. ೩-೨೬). **ಗೋದಿ$_1$ :** "ಗೋದಿ = ಗೋಧೂಮ" (ನಾಚಿರಾ. ೬); ಹಸ್ತದಲ್ಲಿ ಕೊಳಗವ ತೆಗೆದುಕೊಂಡು ಆಳಿವಲ್ಲಿ ನೆಲ್ಲಿಷ್ಟಾಯಿತು ಅಂದರೆ ಗೋದಿ ಇಷ್ಟಾಯಿತು (ವಚಶಾ. II, ೭೬); ಗೋದಿ ಕಾಯೋ ಮಗನೇ ಅಂದರೆ ಊಬು ಚುಚ್ಚಿಕೊಂಡ (ಗಾದೆ). **ಗೋದುಮೆ :** 'ಗೋದುಮೆ ಹಾವು' ಪರಾ. **ಗೋಧಿ$_1$ :** "ಗೋಧೂಮಮೆನೆ ಗೋಧಿಯಕ್ಕುಂ" (ಮಂಗರಾ. ೧೧೦-೪); ಕಳೆವೆಯಕ್ಕಿಯ ಗೋಧಿ ಕಡಲೆಯ ವಿಳಸರಾಶಿಯ ದೇಸು ಯೋಜನದಳತೆಯೆಂದಾರೆಱೆವರೆಂದನು (ಕುವ್ಯಾಸ. ೬-೧೬); ಅಮೃತ ಪಡಿಯ ಗೋಧಿಯ ಖಜಾಯದ ಹರಿವಾಣ ೧ ಕಂ (ಸೌಇಇ. IX-ii, ೫೦೫-೪; 1517); ಅಂಗಡಿಯೊಳು ಗೋಧಿ ಕಡಲೆ ನಾನಾಧಾನ್ಯಂಗಳ ರಾಸಿ ರಂಜಿಸಿತು (ಮೋಹತ. ೩-೨೧); ಗೋಧಿ ಕೆಟ್ಟುದು (ಶಬ್ದಾನು. ೩೨೦ ಪ್ರಯೋ). **ಗೋಧುವೆ:** ಆಕಳಿಗೆಮ್ಮೆಯಂ ಜವೆಗೆ ಗೋಧು[ಪಾಠಾಂ. ದು]ವೆಯಂ . . . ಪ್ರತಿಮಾಡಿದನೋರ್ವ ಜೀಯಂ (ಸಮುಪ. ೧೦-೧೨೦); ಗೋಧುವೆ ಬೆಲ್ಲ ತುಪ್ಪಕ್ಕೆ ಪ ೧ (ಎಕ. V, ಬೇಲೂರು. ೨೪೮-೯; 1298).

**ಗೋದಿಕಲ್ಲು, ಗೋಧಿಯಕಲ್ಲು** = ಗೋದಿಯನ್ನು ಬೀಸುವ ಕಲ್ಲು : ಆದ ಮುಕ್ಕಿಗೆ ಶರಣು, ಗೋದಿಕಲ್ಲಿಗೆ ಶರಣು (ಕನ್ನಜಾ. ೮೦); ಹಾರುವ ಗುಬ್ಬಿಗೆ ಗೋದಿಕಲ್ಲು ಕಟ್ಟಿದ ಹಾಗೆ (ಗಾದೆ); ಗುಬ್ಬಿಯ ಕೊರಲ್ಗೆ ಗೋಧಿಯ ಕಲ್ಲ ಕಟ್ಟಿದೊಡುಬ್ಬಿಯಾಗಸಕೆ ಪಾಱುವುದೇ (ಮೋಹತ. ೧-೩೨); ಬಿತ್ತರದಿಂದ ಗೋಧಿಯ ಕಲ್ಲ ತಿರುಗಿಸಿದತ್ಯಾವಧಾನದೊಳಾಗ (ಜ್ಞಾನಚ. ೧೧-೬೧). **ಗೋದಿಕಲ್ಲುಶಾಸ್ತ್ರ** = ಮದುವೆ ಮುಂಜಿಗಳನ್ನು ನೆರವೇರಿಸು ವಾಗ ಗೋದಿಕಲ್ಲಿಗೆ ಮಾಡುವ ಪೂಜೆ : (ಕ). **ಗೋದಿಯಸೀರೆ** = ಗೋದಿಯ ಬಣ್ಣದ ಸೀರೆ : ಹಾದೀಯ ಮನೆಯೋಳೆ ಪಾದದುಂಗುರ ದೋಳೆ ಗೋದೀಯ ಸೀರೆ ನೆರಿಯೋಳೆ (ಜಗೀತ. ೫). [<ಸಂ. ಗೋಧೂಮ]

**ಗೋದೆ** (ನಾ). ಗಂಟು; ಕಂದ; ಗೆಡ್ಡೆ: "ಗೋದೆ ಗಂಠಿ[ಪಾಠಾಂ. ಗ್ರಂಥಿ]ಯಕ್ಕು" (ಮಂಗರಾ. ೫೬-೧೯). [ ? ]

**ಗೋದೋಹನ** (ನಾ). ಹಸುವಿನ ಹಾಲನ್ನು ಹಿಂಡುವುದು,–ಕರೆಯು ವುದು: ಗೋದೋಹನಲೀಲೆಯೊಳಬ್ಜೋದರನಿರೆ ಕಂಡು (ಜಗವಿ. ೫-೭೯).
[ ಗೋ + ದೋಹನ ]

**ಗೋಧ** (ನಾ). ೧. ಹಲ್ಲಿಯ ಜಾತಿಗೆ ಸೇರಿದ ಒಂದು ದೊಡ್ಡ ಪ್ರಾಣಿ; ಉದಾ: "ಗೋಧಂ ಮುಸಲಿಕಾಖ್ಯಮೆನಲುಡುವೆನಿಕ್ಕುಂ" (ಮಂಗರಾ. ೪೮-೧೧). ೨. ಬಿಲ್ಲುಗಾರರು ಬಿಲ್ಲಿನ ಹೆದೆಯು ಹೊಡೆತದಿಂದ ಗಾಯವಾಗ ದಂತೆ ಎಡದ ಮುಂಗೈಗೆ ಕಟ್ಟಿಕೊಳ್ಳುವ ಚರ್ಮದ ಪಟ್ಟಿ: "ಗೋಧ ಮದುವೆ ದಲ್ ಕೆಯ್ಗೊಡೆಯುಂ" (ವಸ್ತುಕೋ. ೮೫-೨೦). ೩. ಸ್ನಾಯು: ಗೋಧೋತ್ಕ್ಯ[ಪಾಠಾಂ. ತ್ರಿ]ಷ್ಟನುಂ ಮೋಹಜಘನಾಪರನುಮನಿಮ್ನ ನಾಭಿಯುಂ (ಆದಿಪು. ೧೨-೫೭ವ). [ ಸಂ. ಗೋಧಾ ]

**ಗೋಧನ** (ನಾ). ೧. ದನಕರುಗಳ ರೂಪವಾದ ಸಂಪತ್ತು,–ಆಸ್ತಿ : "ಅತಿ ಗೋವೃಷಂ ಗೋಧನಂ ತುಱುವೆನಿಕ್ಕು" (ಮಂಗರಾ. ೫೬-೧೦); ಬಿಡುವೆನೇ ಗೋಧನವನೆನ್ನೊಳು ತೊಡಕಿ ಬದುಕುವನಾವನು (ಕುವ್ಯಾವಿ. ೫-೨೦). ೨. ದನಕರುಗಳ ಸಮೂಹ,–ಹಿಂಡು : "ಗೋವೃಂದಂ, ಗೋಧನಂ, ಧನಂ–ಈ ಮೂಱು ತುಱುವಿನ ಹಿಂಡು" (ಹಲಾಯು. ೪೪-೧೦೭). [ ಗೋ + ಧನ ]

**ಗೋಧರ** (ನಾ). ಬೆಟ್ಟ; ಪರ್ವತ: ಗೋಧರನಿವಾಸ ಕೃತಗೋಜರಿಪುಮೌಲಿ ಧೃತಕೃಪಾಂಬುಧಿಯೆ (ಪ್ರಾಢರಾ. ೬-೧). [ ಸಂ. ]

**ಗೋಧರಣ** (ನಾ). ಭೂಮಿಯನ್ನು ಎತ್ತಿಹಿಡಿಯುವುದು: ಹರಿ ತನ್ನಂಶಾಂಶದಿನೊಗೆದಿರೆ ತೋಱುವ ತನ್ನಹತ್ವದಂಶಾಂಶಮೆ ಗೋಧ [ಪಾಠಾಂ. ವ]ರಣಬಲಮೆಂತುಮಾತ್ಮೋದರಸ್ಥಲೋಕಂಗೆ ಪಿರಿದೆ ಶೈಲೋ ದ್ಧರಣಂ (ಜಗವಿ. ೪-೯೧). [ ಗೋ + ಧರಣ ]

**ಗೋಧರಧರ** (ನಾ). (ಗೋವರ್ಧನ) ಪರ್ವತವನ್ನು ಎತ್ತಿಹಿಡಿದವನು; ಕೃಷ್ಣ: ಗೋಧರಧರಪ್ರಿಯ ಗೋಪಕಂಕಣಗೆಯ್ಯ (ಪ್ರಾಢರಾ. ೬-೧). [ಸಂ.]

**ಗೋಧರಾತ್ಮಜೆ** (ನಾ). ಪರ್ವತರಾಜನ ಮಗಳು; ಪಾರ್ವತಿ: ಗೋಧರಾತ್ಮಜೆಯ ಸೂನೃತವಚನ ಸಲ್ಲಾಪಲಾಲಿತಶ್ರವಣ (ಪ್ರಾಢರಾ. ೬-೧). [ ಗೋಧರ + ಆತ್ಮಜೆ ]

**ಗೋಧಾಪದಿ** (ನಾ). ಒಂದು ಬಗೆಯ ಗಿಡ; ಹಂಸಪಾದಿ ಗಿಡ: "ಗೋಧಾಪದೀ, ಸುವಹಾ – ೨ ಹಂಸಪಾದೀ ಗಿಡದ ಹೆಸರುಗಳು" (ಸಿದ್ಧಾಂತಿ. ೧೨೨). [ ಸಂ. ಗೋಧಾಪದೀ ]

**ಗೋಧಿ$_1$** 'ಗೋದುವೆ' ನೋ.

**ಗೋಧಿ$_2$** (ನಾ). ೧. ಹಣೆ: "ಲಲಾಟಂ, ಅಲಿಕಂ, ಗೋಧಿಃ – ೩ ಹಣೆ, ಪಣೆ" (ಸಿದ್ಧಾಂತಿ. ೦೭೦). ೨. ಉದಾ. ೩. ಮೊಸಳೆ. [ ಸಂ. ]

**ಗೋಧಿಕೃತ** (ನಾ). ಗೋವಳ; ಗೋಪಾಲ: "ಗೋವಿಂದಂ ಗೋಧಿಕೃತಂ ಗೋವಂ" (ವಸ್ತುಕೋ. ೬೧-೫೭). [ ಗೋ + ಅಧಿಕೃತ ]

**ಗೋಧಿಕೆ** (ನಾ). ದೊಡ್ಡ ಜಾತಿಯ ಹಲ್ಲಿ; ಉದಾ: "ಗೋಧಿಕೆ ಸರಟಂ ಕೃಕಲಾಸಂ" (ವಸ್ತುಕೋ. ೪೦-೫). [ ಸಂ. ಗೋಧಿಕಾ ]

**ಗೋಧಿಸರ** (ನಾ). ಗೋದಿಯ ಕಾಳಿನಂತಿರುವ ಚಿನ್ನದ ಮಣಿಗಳ ಸರ: ಭಂಗಾರದಿಂದಲೇ ರಚಿಸಲ್ಪಟ್ಟ ಕಂಠಹಾರ . . . ಗೋಧೀಸರ ಮುಂತಾದದ್ದು (ಸಿದ್ಧಾಂತಿ. ೧೭೩). [ ಗೋಧಿ$_1$ (<ಗೋದುವೆ) + ಸರ$_6$ ]

**ಗೋಧುವೆ** 'ಗೋದುವೆ' ನೋ.

**ಗೋಧೂಮ** (ನಾ). = ಗೋದುವೆ : "ಗೋಧೂಮಂ ಗೋದುವೆ" (ವಸ್ತುಕೋ. ೯೪-೧೭); ವ್ರೀಹಿಯವಯಾವನಾಳ ಗೋಧೂಮ ಕಂಗು . . . ಜೀರಕಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ (ಆದಿಪು. ೬-೭೨ ವ). [ಸಂ.]

**ಗೋಧೂಮವರ್ಣ** (ನಾ). ೧. ಗೋದಿಯ ಬಣ್ಣ. ೨. ಗೋದಿಯ ಬಣ್ಣದ ನಾಗರಹಾವು; ಮೈಮೇಲೆ ಬಿಳಿಯ ಚುಕ್ಕೆಗಳುಳ್ಳ ನಾಗರ: "ಚಿಬ್ಬು ಸಂಜನಿಸಿರಲು ಗೋಧೂಮವರ್ಣನಕ್ಕು" (ಮಂಗರಾ. ೧೧೯-೪).
[ ಗೋಧೂಮ + ವರ್ಣ ]

**ಗೋಧೂಲಿ,** ಗೋಧೂಳಿ (ನಾ). ೧. ದನಕರುಗಳು ಮನೆಗೆ ಹಿಂದಿರುಗುವಾಗ ನೆಲದಿಂದ ಏಳುವ ಧೂಳು. ೨. ಮೇಯಲು ಹೋದ ಗೋವುಗಳು ಮರಳಿ ಬರುವ ಕಾಲ; ಸಾಯಂಸಂಧ್ಯೆ; ಸಂಧ್ಯಾಸಮಯ. ೩. [ಜ್ಯೋತಿ] ಸೂರ್ಯನಿರುವ ರಾಶಿಯಿಂದ ಏಳನೆಯ ಲಗ್ನ: ಹೊರಗಿನ ಲೋಕದಲ್ಲಿ ಈಗ ಗೋಧೂಲಿಯ ಮುಹೂರ್ತ ಬಂದಿರಬಹುದೆ? (ಇಪ್ಪಕ. ೩೫೦). **ಗೋಧೂಳಿ :** ೧. ಎಳೆಯ ಗೋಧೂಳಿಯುಂ ಮರುತನಿಂ ಕವಿಯಲಾ ಸ್ನಾನ ವಾಯವ್ಯಮೆನಿಕು (ಲಶಿಚಿಂ. ೪೧-೨೦). [ ಸಂ. ]

**ಗೋಧೂಲಿಲಗ್ನ,** ಗೋಧೂಳಿಲಗ್ನ (ನಾ). ೧. ಗೋವುಗಳು ಮನೆಗೆ ಮರಳುವ ಕಾಲದ ಮುಹೂರ್ತ; ಮುಚ್ಚಂಜೆಯ ಸಮಯ.

೨. ಸಾಯಂಕಾಲದಲ್ಲಿ ಇರುವ ಒಂದು ಪ್ರಶಸ್ತವಾದ ಮುಹೂರ್ತ: ಅವಳ ಮದುವೆ ಗೋಧೂಳಿಲಗ್ನದಲ್ಲಿ ನಡೆಯಿತು (ರೂಢಿ).
**ಗೋಧೂಳಿಲಗ್ನ:** ೧. ಎಲ್ಲರುಂ . . . ಮುರಹರನ ನೇಮದಿಂ ಬಂದರಧ್ವರಶಾಲೆಗರಸನಂ ಕಾಣಲ್ಕೆ ಗೋಧೂಳಿಲಗ್ನಮಾಗೆ (ಜೈಮಿಭಾ. ೩೩-೨೫). ೨. ಗೋಧೂಳಿಲಗ್ನಕ ಇತ್ತ ಕೈಯ ಹಿಡಿದಿತ್ತ . . . ಚಂದ್ರಿಕಿ ಚಂದ್ರಮುರ ಜೋಡ (ನಾದಲೀ. ೭೩-೭). [ಗೋಧೂಳಿ + ಲಗ್ನ]

**ಗೋಧೂಳಿ** 'ಗೋಧೂಲಿ' ನೋ.

**ಗೋಧೂಳಿಲಗ್ನ** 'ಗೋಧೂಲಿಲಗ್ನ' ನೋ.

**ಗೋಧೃತ** (ನಾ). ೧. ವೃಷಭವನ್ನು ಲಾಂಛನವಾಗಿ ಹೊಂದಿರುವವನು; ಶಿವ. ೨. ಚಂದ್ರನನ್ನು ಧರಿಸಿದವನು; ಶಿವ. ೧, ೨: ಗೋಧೃತ [ಪಾಠಾಂ. ಕೃತ]ಕರುಣದಿಂ ಪಾಲಿಪುದೆನ್ನ ಸಂಗಮೇಶ್ವರಪ್ರಸನ್ನ (ಪ್ರೌಢರಾ. ೧೧-೧). [ಗೋ + ಧೃತ]

**ಗೋಧೆ** (ನಾ). ೧. ಉಡ: "ಗೋಧಾ, ಮುಸಲಿಕಾ–ಈ ೨ ಉಡು" (ಹಲಾಯು. ೩೯-೮೦). ೨. = ಗೋಧ ೨: (+). [ಸಂ. ಗೋಧಾ]

**ಗೋನಮರ** 'ಗೋನುಮರ' ನೋ.

**ಗೋನರ್ದ** (ಗು). ೧. ಗೂಳಿಯಂತೆ ಗುಟುರು ಹಾಕುವ. (ನಾ). ೨. ಒಂದು ಬಗೆಯ ಪಕ್ಷಿ; ಸಾರಸ. ೩. ಒಂದು ಜನಾಂಗ ಮತ್ತು ಅವರು ವಾಸಿಸುವ ದೇಶದ ಹೆಸರು. ೪. ಒಂದು ಬಗೆಯ ಹುಲ್ಲು: "ಕುಟನ್ನಟಂ . . . ಗೋನರ್ದಂ, ಕೈವರ್ತೀ, ಮುಸ್ತಕಂ–೮ ತುಂಗ ಮುಸ್ತಕದ ಹೆಸರುಗಳು" (ಸಿದ್ಧಾಂತಿ. ೧೨೫). [ಸಂ.]

**ಗೋನಸ** (ನಾ). ಒಂದು ಬಗೆಯ ಹಾವು; ಹೆಬ್ಬಾವು; ಅಜಗರ: "ಗೋನಸಃ, ತಿಲಿಪ್ಸಃ . . . ಬೆಟ್ಟಗಳಲ್ಲಿ ದೂಲದಂತೆ ಬಿದ್ದಿರುವ ದೊಡ್ಡಹಾವು, ಹೆಬ್ಬಾವು" (ಸಿದ್ಧಾಂತಿ. ೬೫). [ಸಂ.]

**ಗೋನಾಸ** (ನಾ). = ಗೋನಸ: "ತ್ರಿಲಿಂಗಃ, ಗೋನಾಸಃ, ವಾಹಸಃ, ಅಜಗರಃ, ಶಯುಃ–ಈ ೫ ಪರ್ಯಾಯ (ಹೆಬ್ಬಾವು)" (ಹಲಾಯು. ೧೦೬-೨೦); "ಅಜಗರಮಾ ತ್ರಿಲಿಂಗಮಾ ಗೋನಾಸಂ . . . ಎನೆ ಹಿರಿಯಹಾವಕ್ಕು" (ಮಂಗರಾ. ೧೧೮-೨). [ಸಂ.]

**ಗೋನಾಳಿ** 'ಗೋಣ್ನಾಳಿ' ನೋ.

**ಗೋನಾಳಿಗಡಿತ** (ನಾ). ಕೊರಳನ್ನು ಕತ್ತರಿಸುವಿಕೆ; ಶಿರಚ್ಛೇದ: ಶರಾಳಿಯಲತಿರಥರ ಗೋನಾಳಿಗಡಿತವಿದೆ (ಕುಮಾರವ್ಯಾ. ೧೩-೨). [ಗೋನಾಳಿ (<ಗೋಣ್ನಾಳಿ) + ಕಡಿತ$_2$]

**ಗೋನಿಕಾಯ** (ನಾ). ಗೋವುಗಳ ಸಮೂಹ; ದನಗಳ ಮಂದೆ: ಇಂದ್ರಿಯದೊಳಾಗಸದೊಳ್ಬಲೆಯೊಳ್ಸಮೂಹದೊಳ್ ಸಿಂಗರ ಗೋನಿಕಾಯ ಪಟಲಂಗಳೊಳಿಂತಿವು ಜಾಲವಾಚಕಂ (ನಾನಾರ. ೩೫). [ಗೋ+ನಿಕಾಯ]

**ಗೋನಿಯೋಗ** (ನಾ). ದನಕಾಯುವ ಕೆಲಸ: ಗೋನಿಯೋಗ ದಂಡಧರರುಮಾಗಿ ಕೆಲಬರ್ ಕೋಡ ಕಾಳೆಗಳನೂದುತ್ತುಂ . . . ಬರೆ (ಜಗವಿ. ೪-೮೦ ವ). [ಗೋ + ನಿಯೋಗ]

**ಗೋನಿವಾಸಿ** (ನಾ). ಸ್ವರ್ಗದಲ್ಲಿ ವಾಸಮಾಡುವವನು; ದೇವತೆ: ಶತಮುಖಮುಖಾಖಿಳರುಂಡು ದಣಿದರು ಗೋನಿವಾಸಿಗಳು ಸುಖಿಯಹನು ನೃಪನು (ಕಾಶಿರಾ. ೧-೬೨). [ಗೋ + ನಿವಾಸಿ]

**ಗೋನು** (ನಾ). ಒಂದು ಬಗೆಯ ಮರ; ಗೋಣಿ: "ಗೋವಿಂಕ ಯೆನಲು ಗೋನು" (ಮಂಗರಾ. ೪೨-೩೭); ಚಿತ್ರಕ ಮೆಕ್ಕೆಗೋನು ಕಾತರಿಕೆಯೆನಿಪ್ಪಿವಂ . . . ಅಟ್ಟು ಕಟ್ಟಿ (ಲೋಕೋಪ. ೯-೦೨೯). 'ಗೋಣಿ$_1$' ಪರಾ. [<ಗೋಳಿ$_1$]

**ಗೋನುಮರ**, ಗೊನಮರ, ಗೊನುಮರ, ಗೋನಮರ (ನಾ). = ಗೋನು: "ಪೀಲುಃ, ಗುಡಫಲಃ, ಸ್ರಂಸೀ – ೩ ಗೋನುಮರ . . . ಗೋಣೇಮರವೆಂದು ಕೆಲವರನ್ನುವರು" (ಸಿದ್ಧಾಂತಿ. ೧೦೩). **ಗೊನಮರ:** "ಪೀಲುಃ – ಗೊನಮರ" (ಓಷಧಿ. ೯೯). **ಗೊನುಮರ:** "ತೀಕ್ಷ್ಣ ವೃಕ್ಷಃ – ಗೊನುಮರ, ಮುರೆ" (ಓಷಧಿ. ೭೦). **ಗೋನಮರ:** "ಪೀಲುಃ, ಗುಡಫಲಃ, ಸ್ರಂಸಿನ್ ಈ ೩ ಉಗುನಿಯ ಮರಂ, ಗೋನಮರವೆಂದೆಂಬರು" (ನಾಚಿರಾ. ೧೦೭). [ಗೋನು + ಮರ$_1$]

**ಗೋನೂರ್** (ನಾ). ಒಂದು ಊರಿನ ಹೆಸರು: ಮಾನ್ಯಖೇಟಪುರ ವರಮುಂ ಗೋನೂರುಮುಚ್ಚಂಗಿಯುಂ ಬನವಾಸಿದೇಶವುಂ (ಎಕ. II, ೫೯-೧೦೦ ; 974). [ಗೋನು? + ಊರ್]

**ಗೋಪ$_1$** (ನಾ). ೧. ವೃಷಭ; ನಂದಿ. ೨. ಗೋವುಗಳನ್ನು ಕಾಯುವವನು; ದನಗಾಹಿ; ಗೊಲ್ಲ: ಗೋಪರಿದನಿಂ ಕಂಡಂಜುಗುಂ (ಜಗವಿ. ೩-೩೦); ವಿದಿತನಾ ಗೋಪರೊಳು ಪೆಂಪಿನ ನಂದಗೋಪಾಖ್ಯ (ಸಾಳ್ವಭಾ. ೨೦-೧೯). ೧, ೨: ಶ್ರೀಮಹಿಮಾಸ್ಪದಂ ಭುಜಗ ಚಕ್ರಧರಂ ದ್ವಿಜರಾಜಭೂಷಣಂ ಕಾಮದನಙ್ಗನೋದ್ಧರುಚಿ ಗೋಪಮನೋಹರ ಮೂರ್ತ್ತಿ . . . ಸಂತತಂ ಹರಿಹರಂ ಪರಿರಕ್ಷಿಸುತಿರ್ಕೆ ಧಾತ್ರಿಯಂ(ಎಕ.XI, ದಾವಣ. ೨೫-೨ ; 1224). ೩. ಗೋವುಗಳ ಒಡೆಯ; ಕೃಷ್ಣ; ವಿಷ್ಣು: ಗೋಪನತಪದ ಭಕ್ತನಾಗಿ ಭೂಪಾಲರೊಳು ಮೆಚ್ಚಿದನುಚಿ ಪ್ರೌಢ ಭೂಪಂ(ಪ್ರೌಢರಾ. ೧ ಸೂಚನೆ); ೪. ದನಕರುಗಳ ಹಟ್ಟಿಯ ಯಜಮಾನ; "ಹಾಲು ಕರೆವವ, ದನದ ಕೊಟ್ಟಿಗೆಗೆ ಒಡೆಯ" (ಅಮರ. ಟೀಕೆ). ೫. ಕಿರಣಗಳ ಅಧಿಪತಿ; ಸೂರ್ಯ: ಕುಮುದಸಖ ಗೋಪಥೂಮಧ್ವಜಾಕ್ಷ ದುರಿತವ ಪರಿದು ಪಾಲಿಪುದು (ಪ್ರೌಢರಾ. ೦-೧); ಗೋಪನಸ್ತಮಿಸಿ ನಿಶೆ ಬಲಿದು ಭಯದೋರುತಿರೆ (ಪ್ರೌಢರಾ. ೩-೬). ೬. ನಕ್ಷತ್ರಗಳ ಒಡೆಯ; ಚಂದ್ರ. 'ಗೋಪಶಕಲ' ಪರಾ. ೭. ಸ್ವರ್ಗದ ಅಧಿಪತಿ; ಇಂದ್ರ. ೮. ದೊರೆ; ರಾಜ; ಭೂಪತಿ. ೯. ಹಲವು ಗ್ರಾಮಗಳ ಮೇಲ್ವಿಚಾರಕ; ಜಿಲ್ಲಾಧಿಕಾರಿ; "ಅನೇಕ ಗ್ರಾಮಗಳ ಅಧಿಕಾರವುಳ್ಳವನು" (ಅಮರ. ಟೀಕೆ). ೧೦. ಮೇರುಪರ್ವತ. ೧೧. ಪಕ್ಷಿಗಳ ಒಡೆಯ; ಗರುಡ. ೧೨. ನಂದಿಯ ಒಡೆಯ; ಶಿವ. ೧೩. ಸರಸ್ವತಿಯ ಪತಿ; ಬ್ರಹ್ಮ: ಮಾಪ ಗೋಪಾರ್ಚಿತ ಪದಾಂಭೋಜಂ (ಗುರುಚಾ. ೧೦-೧೦೦); "ಶಂಕರ ಮೇರು ಬಿಡೌಜಂ ಪಂಕಜ ನೃಪ ವೃಷಭ ಬೊಮ್ಮ ರವಿಯೇಣಾಂಕ ನಗೌಕಸ ಕೇಶವ ಗೋಪಂ ಶಂಕಿಸೆ ಪನ್ನೆರಡು ಗೋಪಶಬ್ದಂ ಜಗದೊಳ್" (ನಾನಾಕಂ. ೨೬). [ಸಂ.]

**ಗೋಪ$_2$** (ನಾ). ಗೋಪುರ; ಶಿಖರ (?): ಐನೂರ್ವಾಚಾರಿಯ ಮಗ ಪಳಿಯಣ್ಣ . . . ಗೋಪ ಕಟ್ಟಿ ಪಡೆದ ಸ್ತಿತಿ (ಎಕ. X, ಚಿಕ್ಕಬ. ೨೬-೧೦ ; ಸು. 880). [<ಗೋಪುರ?]

**ಗೋಪಕುಮಾರಕ** (ನಾ). ತುರುಗಾಹಿಯ ಮಗ; ಗೊಲ್ಲನ ಮಗ: ಗೋಪಕುಮಾರಕನಿಕರಂ ಚಾಪಳವಾನಂದಮುತ್ತು ನಮಗಿದೆ ಗೆಲ್ವಾಳಾಪದೊಳೇನೆನೆ (ನೇಮಿಪು. ೬-೧೩೭). [ಗೋಪ$_1$ + ಕುಮಾರಕ]

**ಗೋಪಟುತ್ವ** (ನಾ). ಮಾತಿನ ಜಾಣ್ಮೆ; ವಾಕ್ಪಟುತ್ವ: ವಿಧುಗೋಪದಂ ಪಟಗೋಪನೀವನು ಗೋಪಟುತ್ವವನು (ಬಸಪು. ೧-೬). [ಗೋ + ಪಟುತ್ವ]

**ಗೋಪಟ್ಟಿ** (ನಾ). ದನಕರುಗಳ ಹಟ್ಟಿ,–ಕೊಟ್ಟಿಗೆ; ತುರುಪಟ್ಟಿ: ನಿಶಿಯೊಳೈತಂದು ಬಾಗಿಲ ತಡಹಲಾರು ನಾಂ ಪಶುಪತಿಯ ಗೋಪಟ್ಟಿಗಂ ಸಾರು (ನವಮೋ. ೧೫-೨). [ಗೋ + ಪಟ್ಟಿ$_1$]

**ಗೋಪತಿ** (ನಾ). ೧. ಗೋವುಗಳ ಒಡೆಯ; ವೃಷಭ; ನಂದಿ: "ವೃಷಸೌರಭೇಯಗೋಪತಿ . . . ಅನಡ್ವಾಹಂ" (ವಸ್ತುಕೋ. ೬೯-೧). 'ಗೋಪತಿಧ್ವಜ' ಪರಾ. ೨. ಸ್ವೇಚ್ಛೆಯಾಗಿ ತಿರುಗಾಡಲು ಬಿಟ್ಟ ಹೋರಿ; ಬೀದಿಬಸವ: (+). ೩. ದನಕಾಯುವವನು; ತುರುಗಾಹಿ.

೪. ದೇವೇಂದ್ರ : "ಇಂದ್ರಃ . . . ಗೋಪತಿಃ . . . ಮೇಘವಾಹನಃ–ಈ ೩೯ ದೇವೇಂದ್ರನ ಪೆಸರ್" (ಹಲಾಯು. ೧೦–೫೩). ೫. ನೇಸರು; ಸೂರ್ಯ: "ಆದಿತ್ಯಃ . . . ಗೋಪತಿಃ . . . ತ್ರಯೀತನುಃ–ಈ ೪೭ ಆದಿತ್ಯನ ಪೆಸರ್" (ಹಲಾಯು. ೭–೩೫); ಮುಗಿಯಲೊಡರ್ಚಿ ನಿಂದ ಕುಮುದಾವಳಿಯಂ ಸರಸೀರುಹಂ ಮುಗುಳ್ನಗೆ ನಗುವಂತಿರಿರ್ದುವು . . . ಉದಯಾದ್ರಿಗೆ ಗೋಪತಿ ಬರ್ಪ ಪೊಳ್ತಿನೊಳ್ (ಗಿರಿಕ. ೫–೩). ೩, ೫: ರಸಾರಸಮಂ ಗೋಪತಿ ತವೆ ಕುಡಿಯಿಸಿದಂ ನಿಜಗೋಪಸಹಸ್ರಮಂ ಬೇಸಗೆಯೊಳ್ (ಜಗವಿ. ೧೭–೬೫). ೬. ಶಿವ. 'ಗೋಪತಿವಾಹನ' ಪರಾ. ೭. ಬ್ರಹ್ಮ. 'ಗೋಪತಿವಾಹನ' ಪರಾ. ೮. ನೀರಿನ ಅಧಿಪತಿ; ವರುಣ. 'ಗೋರಾಜ' ಪರಾ. ೯. [ಜ್ಯೋತಿ] ವೃಷಭರಾಶಿ: ಪರಿಯೊಳೈದು ಗೋಪತಿಯೊಳೊಂಬತ್ತು . . . ತುಲಾಧರನೊಳ್ ನಾಲ್ಕು ಭಾಗೆಯೊಳಿರೆ ಹಿಮಕರಂ ತತ್ಪ್ರಮಾಣಾಬ್ದದಿ ನರ ಮಡಿಗುಂ (ಜಾತತಿ. ೬–೩೮). [ಗೋ + ಪತಿ₂]

**ಗೋಪತಿಧ್ವಜ** (ನಾ). ಧ್ವಜದಲ್ಲಿ ಬಸವನ ಚಿಹ್ನೆಯುಳ್ಳವನು; ವೃಷಭಧ್ವಜ; ಶಿವ: ಗೋಪತಿಧ್ವಜನಜನಮಳಚಿದ್ರೂಪಂ (ಬಸಪು. ೨೪–೪೭). [ಗೋಪತಿ + ಧ್ವಜ]

**ಗೋಪತಿವಾಹನ** (ನಾ). ೧. ಇಂದ್ರನ ವಾಹನ; ಐರಾವತ. ೨. ಶಿವನ ವಾಹನ; ನಂದಿ. ೩ ಬ್ರಹ್ಮನ ವಾಹನ; ಹಂಸ. ೧, ೨, ೩: ಗೋಪತಿವಾಹನ ಪ್ರಭೆಯನೇಳಿಸಿ ಗೋಪತಿವಾಹನಾಂಶುವಂ ರೂಪುಗಿಡಲ್ಕೆ ಜಙಿದು ಗೋಪತಿವಾಹನಕಾನ್ತಿಯಂ ಮಹಾಟೋಪದೆ ತಾನೆ ನಿಂದಿಸಿ . . . ಬಹುದ್ವೀಪವುನೆಯ್ದೆ ಪರ್ವಿದುದು ಗೋಪಣನಗ್ಗದ ಕೀರ್ತಿ ಪಾಂಡುರಂ (ಎಕ. VIII, ಸೊರಬ. ೩೨೯–೪೯; 1416). ೪. ವೃಷಭವಾಹನ; ಈಶ್ವರ: ಸ್ಥೂಲಗೋಪತಿವಾಹನಂ ಮಿಗೆ ಲಾಲಿಸಲು ಸೋವಣ್ಣಗೊಲಿದನು ಲೀಲೆಯಿಂ (ಬಸಪು. ೫೦–೮೨). [ಗೋಪತಿ₁ + ವಾಹನ]

**ಗೋಪಥ** (ನಾ). ೧. ದನಕರುಗಳು ತಿರುಗಾಡುವ ದಾರಿ. ೨. ಅಥರ್ವವೇದದಲ್ಲಿ ಒಂದು ಬ್ರಾಹ್ಮಣದ ಹೆಸರು. [ಸಂ.]

**ಗೋಪಧ್ವಜ** (ನಾ).=ಗೋಪತಿಧ್ವಜ: ಆ ಪಟ್ಟಣದೊಳಗಿರ್ಪಂ ಗೋಪಧ್ವಜ ಪಾದಪೂಜಕಂ (ವೃಷವಿ. ೯–೬೮). [ಗೋಪ₁ + ಧ್ವಜ]

**ಗೋಪನ** (ನಾ). ೧. ರಕ್ಷಿಸುವುದು; ಕಾಪಾಡುವುದು: ತಾವಿಬ್ಬರೇ ಇದ್ದಾಗ ಯಾರಾದರೂ ನೋಡಿಯಾರೆಂಬ ಗೋಪನ ಬುದ್ಧಿ ಪ್ರಬುದ್ಧವಾಗಿತ್ತು (ಮಲಮ. ೯೪); ಧರ್ಮಕ್ಕೆ ತಕ್ಕ ರಕ್ಷಣಗೋಪನಗಳನ್ನು ಏರ್ಪಡಿಸುವೆನು (ಬುದ್ಧಚ. ೧೮೫). ೨. ಮುಚ್ಚಿಡುವುದು; ಬಚ್ಚಿಡುವುದು: ಮುಚ್ಚಿಡುವ ಲಜ್ಜೆಯಿಂದಲೇ ಹೃದಯವನ್ನು ಬಿಚ್ಚಿಡುತ್ತಾಳೆ. ಅವಳ ಸೌಂದರ್ಯದ ಆವಿಷ್ಕಾರಕ್ಕೆಲ್ಲ ಹೀಗೆ ಅವಳ ಗೋಪನವೇ ಕಾರಣ (ಧ್ವನ್ಯಾಲೋ. ೨೦೭ ಅಡಿಟಿ). [ಸಂ.]

**ಗೋಪನಂದನ** (ನಾ). ೧. ಗೊಲ್ಲನ ಮಗ; ಕೃಷ್ಣ. ೨. ಸೂರ್ಯನ ಮಗ; ಯಮ. ೧, ೨: ದಂತವಕ್ತ್ರಂ ನಿಸರ್ಗವೈರದಿಂದ ಸುರವೈರಿಯ ಪೆಸರ್ಗಳೆ ತನಗಸಹ್ಯಂಗಳಾಗೆ ಹರಿನಾಮಯುಕ್ತನೆಂದು ಶಕ್ರನಾಕ್ರಮಿಸಿಯುಂ . . . ಗೋಪನಂದನನೆಂದು ದಂಡಧರನನಂಡಲೆದುಂ (ಜಗವಿ. ೯–೫೩ ವ). [ಗೋಪ₁ + ನಂದನ]

**ಗೋಪರಸ** (ನಾ). ಸುಗಂಧದ್ರವ್ಯ, ಔಷಧಿ, ಧೂಪ ಮೊದಲಾದಂವುಗಳಲ್ಲಿ ಉಪಯೋಗಿಸುವ ಒಂದು ಬಗೆಯ ರಾಳ; "ಬಾಣಂತಿ ಬೋಳ" (ಅಮರ. ಟೀಕೆ). [ಸಂ.]

**ಗೋಪರಾಗ** (ನಾ). ೧. ಗೋವುಗಳ ಕಾಲಿನಿಂದೆದ್ದ ಧೂಳು; ಗೋಧೂಳಿ. ೨. ಗೋಪನಲ್ಲಿ ಇಟ್ಟಿರುವ ಅನುರಾಗ. ೧, ೨: ಗೋಪರಾಗದಿ ಕಣ್ಣು ಕುರುಡಾಗಲೇನೊಂದು ಕಾಣಿಸದೆ ಹೋದುದರಿಂದಲೆ ಜಾರಿಹೆನು ನಾಥ (ಧ್ವನ್ಯಾಲೋ. ೯೨). [ಗೋ + ಪರಾಗ; ಗೋಪ₁ + ರಾಗ]

**ಗೋಪವಧು** (ನಾ). ಗೊಲ್ಲರ ಹೆಂಗಸು; ಗೋಪಿ: ಹರಿಯುರದಲ್ಲಿ ಗೋಪವಧುವಿಂ ಮದನಂ ವಿಜಯಪ್ರಶಸ್ತಿಯಂ ಬರೆಯಿಸಿದಂ (ಮಲ್ಲಿಪು. ೭–೭೨); ಗೋಪವಧೂಜನಂ . . . ಅರ್ಚಿಸಿದರ್ (ಬಂಹರಿ. ೬–೨೮). [ಗೋಪ₁ + ವಧು]

**ಗೋಪವಲ್ಲಿ** (ನಾ). ೧. ಸೊಗದೇಬೇರಿನ ಬಳ್ಳಿ; "ಶಾಮಲತಾ" (ಪಂಡಿತ). ೨. ಒಂದು ಬಗೆಯ ಬಳ್ಳಿ; "ತೇಜನೀ" (ಪಂಡಿತ). ೩. ಒಂದು ಬಗೆಯ ಗಿಡ; ಮಾಗಿಣಿ: "ಮಾಯಿಣಿ ಗೋಪವಲ್ಲಿ ಮಾಗಧಿಯೆನಿಕ್ಕು" (ಮಂಗರಾ. ೩೯–೨೯). [ಸಂ. ಗೋಪವಲ್ಲೀ]

**ಗೋಪವಾಹನ** (ನಾ). ೧. ವಿಷ್ಣುವಿನ ವಾಹನ; ಗರುಡ. ೨. ಇಂದ್ರನ ವಾಹನ; ಐರಾವತ. ೩. ಬ್ರಹ್ಮನ ವಾಹನ; ಹಂಸ. ೧, ೨, ೩: ಗೋಪಯೋಗೋಪಾದಪಾಪ್ಯೃತ ಗೋಪವಾಹನ ಗೋಪವಾಹನ ಗೋಪವಾಹನ ಗೋಪವನಭುಗಿನಾಮಳಸ್ಮೇರ (ಬಸಪು. ೧–೬). ೪. ವೃಷಭವನ್ನು ವಾಹನವಾಗಿ ಉಳ್ಳವನು; ಶಿವ: ಗೋಪವಾಹನ ಭಕ್ತಹಿಂಸೆಯನೀ ಪರಿಯೊಳೆಲೊ ಕೇಳುತಿರ್ದುಂ ಪಾಪವೆನ್ನದೆ ಸುಮ್ಮನಿಹುದಿದು ನೀತಿಯೇ ನಿನಗೆ (ಬಸಪು. ೬೦–೧೮); ಗೋಪವಾಹನ ಪಾದಭಜಕ ಕಾಮಣ್ಣಯ್ಯ (ಪ್ರಾಭರಾ. ೧೩–೩). [ಗೋಪ₁ + ವಾಹನ]

**ಗೋಪಶಕಲ** (ನಾ). ಚಂದ್ರನ ಭಾಗ; ಅರ್ಧಚಂದ್ರ: ಗೋಪಶಕಲಾಚೂಡ ಗೋತ್ರಿತಯ ಗೋಕೇಶ (ನವಮೋ. ೨–೧). [ಗೋಪ₁+ಶಕಲ]

**ಗೋಪಸ್ತ್ರೀ** (ನಾ). ಗೊಲ್ಲತಿ: ಗೋಪಸ್ತ್ರೀ ದಧಿಮಂಥನಶ್ರಮಹರಂ . . . ಸುಟಿಯಲ್ ವಿಭಾತಪವಮಾನಂ (ಜಗವಿ. ೫–೭೭). [ಗೋಪ₁ + ಸ್ತ್ರೀ]

**ಗೋಪಳ್ಳಿ** (ನಾ). ಗೊಲ್ಲರ ಹಳ್ಳಿ; ಗೋಕುಲ; ತುರುಹಟ್ಟಿ: ಹುಡುಗನಾಗಿ ಗೋಪಳ್ಳಿಯೊಳಗೆ ಎಲ್ಲ ಪಡೆದ (ವಿಪ್ರಸು. ೦೪–೩). [ಗೋ + ಪಳ್ಳಿ₁]

**ಗೋಪಾಂಗನೆ** (ನಾ). ಗೋಪಿ; ಗೊಲ್ಲಿತಿ: ಗೋಪಾಂಗನೆಯರ ಕೂಡೆ . . . ಜಾರತ್ವದೊಂದೆಸಕದಿಂ ಬಾಳ್ದು (ಚಿಬಪು. ೫೨–೩೦). [ಗೋಪ₁ + ಅಂಗನೆ]

**ಗೋಪಾರ್ಕರ್ಟಿ** (ನಾ). ಒಂದು ಬಗೆಯ ಸಸ್ಯ: "ವನ್ಯಃ–ಗೋಪಾಕರ್ಕಟಿ, ಕಾಡಸಬ್ಬಸಿಗೆ, ಗುಂಜಿ" (ಒಷಧಿ. ೧೪೪). [<ಸಂ. ಗೋಪಕರ್ಕಟಿಕಾ]

**ಗೋಪಾನಸಿ** (ನಾ). ಮನೆಯ ಸೂರಿಗೆ ಅಥವಾ ಮೇಲ್ಛಾವಣಿಗೆ ಆಧಾರವಾದ ಮರದ ಪಟ್ಟಿ; ಲೋವೆ: "ಗೋಪಾನಸೀಯೆಂಬುದು ಲೋವೆ" (ಹಲಾಯು. ೫೦–೧೪೮). [ಸಂ. ಗೋಪಾನಸೀ]

**ಗೋಪಾನಸೀಕ** (ನಾ).=ಗೋಪಾನಸಿ: ನಾಡೆ ಚೂಡಾಮಣಿ ಕಳಶ ಶಿರೋಭಾಗದೊಳ್ ಭಾಸ್ಕರಂ ಕನ್ನಡಿಯಂ ಪೋಲ್ತೊಪ್ಪೆ ಮಧ್ಯಂದಿನದೊಳತುಳ ಗೋಪಾನಾಸೀಕಂಗಳೊಳ್ ಪೈದೊಡವಪ್ಪನ್ನಂ ಮುಗಿಲ್ ಕನ್ನಡಿಪುದು ಕರುಮಾಡಂ ನೃಪಶ್ರೀಯ ಪೆರ್ಚಂ (ಚಂದ್ರಪು. ೧–೧೪೨). [ಸಂ.]

**ಗೋಪಾಮುಖಿ** (ನಾ). ಕೋಟೆಯ ಮೇಲಿನ ಒಂದು ಬಗೆಯ ರಚನೆ; ಬುರುಜು (?): ದೇಸೆವೆತ್ತಾಳ್ವೇರಿಯ ತುಱುಗಲಿಂ ಚೆಲ್ವುವೆತ್ತಿರ್ದ ನಾಲ್ಕುಂ ಮಿಗಿಲಾಗುತ್ತಿರ್ದ ಗೋಪಾಮುಖವಿಲಸನದಿಂ ತಾನೆ ಮೇಲಾದ ಪೆಂಪಿಂ ಮುಗಿಲಂ ಮುಟ್ಟಿರ್ದುದೆಂಬಂತಿರೆ ಕರಮೆಸೆಗುಂ ವಿಶ್ರುತೋತ್ತುಂಗ ವಪ್ರಂ (ಸುಕುಮಾ. ೧೦–೫೨). 'ಗೋದಾಮುಖಿ' ಪರಾ. [?]

**ಗೋಪಾಯನ** (ನಾ). ೧. ಸಂರಕ್ಷಣೆ: ಜಾತಿವರ್ಣಾಶ್ರಮದ ಗೋಪಾಯನಂಗೈಯದತಿ ಮತ್ತತೆಯೊಳಾರ್ತರಕ್ಷಣಂಗೈಯದಿರುವ ಭೂಪಾಲನಿಗೆ ನರಯಂ (ವೆಂಕಾರಾ. ೪–೭–೭). ೨. ಬಚ್ಚಿಡುವುದು. 'ಗೋಪಾಯಿಂತ' ಪರಾ. [ಸಂ.]

**ಗೋಪಾಯಿತ** (ಗು). ೧. ರಕ್ಷಿಸಿದ ; ಕಾಪಾಡಿದ. ೨. ರಹಸ್ಯವಾಗಿ ಇಟ್ಟ ; ಬಚ್ಚಿಟ್ಟ : “ಗುಪ್ತಂ ಗೋಪಾಯಿತಂ” (ವಸ್ತುಕೋ. ೧೦೫-೪೦). [ ಸಂ. ]

**ಗೋಪಾಲ, ಗೋಪಾಳ** (ನಾ). ೧. ಗೋವುಗಳನ್ನು ಕಾಯುವವನು ; ಗೊಲ್ಲ ; ಗೋವಳ : ಬೊಬ್ಬಿಱಿದು ಗೋಪಾಲರಾಂತರೆ ಕಾದಿದರು ಕಡಿಖಂಡಮಯವಾಗೆ (ಕುವ್ಯಾವಿ. ೪-೩೭). ೨. ಕೃಷ್ಣ. ೩. ಶಿವ. ೪. ಭಿಕ್ಷೆ ; ತಿರುಪೆ. ‘ಗೋಪಾಲಪುಟ್ಟಿ’ ಪರಾ. ೫. (ಉಕ) ಭಿಕ್ಷಾವೃತ್ತಿಯಿಂದ ಜೀವಿಸುವ ಒಂದು ಪಂಗಡ: (+). **ಗೋಪಾಳ :** ೪. ಒಂದು ಹೊತ್ತುಪವಾಸವಿದ್ದು ಗೋಪಾಳವ ತಂದು ಪಾರಣೆಯ ಮಾಡುವೆನು (ಅಮುಸಾಂ. ೩-೧೧೦) ; ಈ ಪರಿಯಲುಂಬಂಥ ಅಳಿಯ ಭೋಜನಕಿಂತ ಗೋಪಾಳ ಲೇಸು ಅಭಿಮಾನಿಗಳಿಗೆ (ಕನಕ. ೧೧೧-೫); ಆ ಲಕ್ಷ್ಮೀವೆಂಕಟೇಶನ ಹೆಸರ್ಲೆ ಗೋಪಾಳಾ ಬೇಡಲಿಕ್ಕೆ ನಾಚಿಕೆ ಬರುದಿಲ್ಲ? (ಹುಚ್ಚಾಟ. ೮೯). ೫. ದಾಸಯ್ಯಗಳು, ಭಿಕ್ಷುಕರು, ಬುಡುಬುಡುಕೆಯವರು, ಗೋಪಾಳದವರು ಇವರೇ ನಿನ್ನ ಸ್ನೇಹಿತರು (ಗರುದಾ. ೧೫). ೬. ಭಿಕ್ಷಾಪಾತ್ರೆ ; “ದಾಸರ ಭಿಕ್ಷದ ಬುಟ್ಟಿ” (ಜಾನಕೋ. ೫೨) : ಹಚ್ಚನ್ನ ಹರಿನಾಮು, ಮುತ್ತಿನ ಗೋಪಾಳ ಹೊತ್ತೇರಿ ಬರುವ ಇವನ್ಯಾರೊ (ಕನ್ನಜಾ. ೧೧) : ಹರಿಸೇವೆಗೆ ಗೋಪಾಳವು ಒಕ್ಕಲಿಗನ ಕಣವನ್ನು ಸೇರಿತು. ಈಗಲೂ ಗೋಪಾಳವು ಬೆಳುವಲ ರೈತರ ಕಣದಲ್ಲಿ ಕಂಡುಬರುತ್ತದೆ (ಕನ್ನಜಾ. ೧೨).

**ಗೋಪಾಲಗ** = ಒಂದು ಬಗೆಯ ನಾಣ್ಯ. ೯ ಮುಮ್ಮಡಿಕೃಷ್ಣರಾಜಒಡೆಯರ ಕಾಲದಲ್ಲಿದ್ದ ಗೋಪಾಲ ಗದ್ಯಾಣವೆಂಬ ನಾಣ್ಯದ ಸಂಕ್ಷಿಪ್ತರೂಪ : ಅಂದುಂರಸ್ಥಳದ ಅತ್ತಾಣಿ ಗ್ರಾಮ ೧ಕ್ಕೆ ಹುಟ್ಟುವಳಿ ಗೋಪಾಲಗ ೯೦೦ (ಮೈಆರಿ. ೧೯೩೪, ೨೪-೧೧; 1820). [ಸಂ. ]

**ಗೋಪಾಲಕ, ಗೋಪಾಳಕ** (ನಾ). ದನ ಕಾಯುವವನು ; ಗೋವಳ : ವಿರಾಟನ ಪಶುಸಮೂಹವ ಮುತ್ತಿದರು ಗೋಪಾಲಕರ ಕೆಡಹಿ (ಕುವ್ಯಾವಿ. ೪-೩೬). **ಗೋಪಾಳಕ :** ಗೋಪಾಳಕನೆಂದಿಂತಾಳಾಪಿಸಿದೈ (ನೇಮಿಪು. ೧೨-೨೩೨) ; ಗೋಪಾಳಕ ಜನತತಿಯುಂ . . . ಅರ್ಚಿಸಿದರ್ (ಬಂಹರಿ. ೭-೨೮). [ ಸಂ. ]

**ಗೋಪಾಲನೆ** (ನಾ). ದನಕರುಗಳ ಸಾಕಣೆ ; ಪಶುಪಾಲನೆ : ಹಾಲೆಂಡಿನಂಥ ದೇಶಗಳು ಗೋಪಾಲನೆಯನ್ನು ದೊಡ್ಡ ವ್ಯವಸ್ಥೆಯಿಂದ ಸಾಗಿಸಿಕೊಂಡು ಹೋಗುತ್ತಿವೆ (ಬಾಲಪ್ರ. III, ೧೭೭೪). [ ಗೋ + ಪಾಲನೆ ]

**ಗೋಪಾಲಪುಟ್ಟಿ, ಗೋಪಾಲಬುಟ್ಟಿ, ಗೋಪಾಳಬುಟ್ಟಿ** (ನಾ). ಹರಿದಾಸರು ಗೋಪಾಳ ಬೇಡಲು ಹಿಡಿದಿರುವ ಬಿದಿರಿನ ಬುಟ್ಟಿ, -ಭಿಕ್ಷಾಪಾತ್ರೆ : (+). **ಗೋಪಾಲಬುಟ್ಟಿ :** ಗೋಪಾಲಬುಟ್ಟಿ ಹಿಡಿಯುವುದಕ್ಕೆ ಭೂಪತಿಯಂತೆ ಗರ್ವಿಸುತಿದ್ದೆ ಆ ಪತ್ನಿಕುಲ ಸಾವಿರವಾಗಲು ಗೋಪಾಲಬುಟ್ಟಿ ಹಿಡಿಸಿದಳಯ್ಯ (ಪುರಂದ. ೧-೯೫-೨) ; ಗೋಪಾಲಬುಟ್ಟಿ ನಿಮ್ಮ ಭಂಡಾರ (ತಿಡುಗು. ೫) ; ಗೋಪಾಲಬುಟ್ಟಿಯಲ್ಲಿ ಶನೀಶ್ವರ ಹೊಕ್ಕ ಹಾಗೆ (ಗಾದೆ). **ಗೋಪಾಳಬುಟ್ಟಿ :** ದಾಸರು ತಮ್ಮ ಜೀವಿತಕಾಲದಲ್ಲಿ ಉಪಯೋಗಿಸಿದ ಗೋಪಾಳಬುಟ್ಟಿ . . . ಶ್ರೀವೆಂಕಟೇಶದೇವರ ಮುದ್ದು ಮೂರ್ತಿಗಳನ್ನು ಈಗಲೂ ನೋಡಬಹುದು (ಜಗದಾ. ೧೩೭). [ ಗೋಪಾಲ + ಪುಟ್ಟಿ$_2$ ]

**ಗೋಪಾಲಪುಟ್ಟಿತೊಪ್ಪಲು** (ನಾ). ಒಂದು ಬಗೆಯ ಔಷಧಿ ಸಸ್ಯ ; “ಅರ್ಕಮೂಲ” (ಪಂಡಿತ) : ಈಶ್ವರೀಬೇರು, ತೊಪ್ಪಲು, ಗೋಪಾಲಪುಟ್ಟ [ ಟ್ಟಿ ] ತೊಪ್ಪಲು (ಮೈಜಿಗಿ. ೯-೧೫೩). [ ಗೋಪಾಲಪುಟ್ಟಿ + ತೊಪ್ಪಲು$_2$ ]

**ಗೋಪಾಲಬುಟ್ಟಿ** ‘ಗೋಪಾಲಪುಟ್ಟಿ’ ನೋ.

**ಗೋಪಾಳ** ‘ಗೋಪಾಲ’ ನೋ.

**ಗೋಪಾಳಕ** ‘ಗೋಪಾಲಕ’ ನೋ.

**ಗೋಪಾಳಕಾವಲಿ** (ನಾ). ದೇವಸ್ಥಾನಗಳಲ್ಲಿ ಗೋಕುಲಾಷ್ಟಮಿಯ ಉತ್ಸವದ ಕೊನೆಯಲ್ಲಿ ಹಾಲು, ಮೊಸರು ತುಂಬಿದ ಗಡಿಗೆಯನ್ನು ಒಡೆಯುವ ಒಂದು ಸಮಾರಂಭ : ಹೀಗೊಂದು ದಿನ. ಊರಪ್ರಸ್ತ. ಗೋಪಾಳಕಾವಲಿ. ಅಂದಿನ ಗೋಪಾಲ ಸುಬ್ಬಣ್ಣನೇ. ಮೊಸರು ಹಾಲಿನ ಗಡಿಗೆ ಒಡೆದು ಮೈಯೆಲ್ಲ ಹಾಲುಮೊಸರು (ಬೆಳಭಾ. ೧೫೪). [ ←ಮರಾ. ಗೋಪಾಳಕಾಲಾ ]

**ಗೋಪಾಳಬುಟ್ಟಿ** ‘ಗೋಪಾಲಪುಟ್ಟಿ’ ನೋ.

**ಗೋಪಿ** (ನಾ). ೧. ಗೊಲ್ಲಜಾತಿಯ ಹೆಂಗಸು; ಗೊಲ್ಲಿತಿ: “ತುಱುವಳ್ತಿಯರು ಗೊಲ್ಲತಿಯರೆನಲ್ ಗೋಪಿಯರು” (ಶಬ್ದಮಂ. ೩೪); ತನತನಗೆ ಗೋಪಿಯರ್ ಕೃಷ್ಣನಂಕಮಾಲೆಯನೆ ಪಾಡುತುಂ (ಜಗವಿ. ೩-೯); ಮುರಾರಿ ಗೋಪಿಯರಲ್ಲಿ ಹಾದರವಾಡಿ ಸಿಕ್ಕನೆ (ಬಸಪು. ೫೪-೪೦). ೨. ನಂದಗೋಪನ ಹೆಂಡತಿ; ಯಶೋದೆ: ಗೋಪಿಯ ಭಾಗ್ಯವಿದು ಶ್ರೀಪತಿ ತಾ ಶಿಶುರೂಪಿನಲ್ಲಿರುವುದು (ಪುರಂದ. ೨-೧೫೭ ಪಲ್ಲವಿ). ೩. ಒಂದು ಬಗೆಯ ಗಿಡ ; ಸೊಗದೆ : (+). ೪.=ಗೋಪಿಚಂದನ : (+). ೫. ಗೋಪೀಚಂದನದ ಬಣ್ಣ ; ಹಳದಿ : ಗೋಡೆಯ ಹೊರಮೈಗೆ ಗೋಪಿ ಹಚ್ಚಬೇಕು (ರೂಢಿ). [ ಸಂ. ಗೋಪೀ ]

**ಗೋಪಿಚಂದನ** (ನಾ). (ದ್ವಾರಕೆಯಿಂದ ತಂದುದೆಂದು ಹೇಳಲಾದ) ವೈಷ್ಣವರು ಮುದ್ರೆಗಳನ್ನು ಧರಿಸಲು ಬಳಸುವ ಒಂದು ಬಗೆಯ ಹಳದಿಬಣ್ಣದ ಮಣ್ಣು : ಶಿರದಲಿ ಬಂಧಿಸಿದ ಜಟೆ ಗೋಪಿಚಂದನ ನಾಮಗಳನಿಟ್ಟು (ಶ್ರೀಕೃಪಾ. ೩). [ ಗೋಪಿ + ಚಂದನ ]

**ಗೋಪಿತ** (ಗು). ೧. ರಕ್ಷಿಸಿದ. ೨. ಮರೆಮಾಡಿದ ; ಅಡಗಿಸಿಟ್ಟ. ‘ಗೋಪಿತಕ್ರಿಯ’ ಪರಾ. [ ಸಂ. ]

**ಗೋಪಿತಕ್ರಿಯ** (ನಾ). [ಕಾವ್ಯಮೀ] ಒಂದು ಬಗೆಯ ಕಾವ್ಯಬಂಧ ; ಕ್ರಿಯಾಪದವು ಗೂಢವಾಗಿರುವಂತೆ ರಚಿಸಿರುವ ಚಿತ್ರಕವಿತ್ವ : ಗೋಮೂತ್ರಿಕಂ ಸಯಮಕಂ ಪ್ರೇಮದಿಂ ಗೋಪಿತಕ್ರಿಯಂ (ಕವಿರಾ. ೨-೧೧೨). [ ಸಂ. (ಗೋಪಿತ + ಕ್ರಿಯಾ + –) ]

**ಗೋಪಿತಕ್ರಿಯಾಕಾರಕ** (ನಾ). [ಕಾವ್ಯಮೀ] ಚಿತ್ರಕವಿತ್ವದಲ್ಲಿ ಒಂದು; ಸೂಕ್ಷ್ಮವಾಗಿ ಪರಿಶೀಲಿಸಿದ ಹೊರತು ಕ್ರಿಯೆಯಾಗಲಿ ಕಾರಕವಾಗಲಿ ತಿಳಿಯದಂತೆ ಮರೆಸಿರುವ ಒಂದು ಶಬ್ದಾಲಂಕಾರವುಳ್ಳ ಚಿತ್ರಕಾವ್ಯ : ಚ್ಯುತದತ್ತಾಕ್ಷರಮುಂ ಗೋಪಿತಕ್ರಿಯಾಕಾರಕಂ ನಿಗೂಢಚತುರ್ಥಂ . . . ಎಂದಿಂತು ಪೆಱವುಮಕ್ಕುಂ ಚಿತ್ರಂ (ಕಾವ್ಯಾವ. ೫೮೭). [ ಸಂ. (ಗೋಪಿತ + ಕ್ರಿಯಾ + ಕಾರಕ) ]

**ಗೋಪಿತಾರ್ಥ** (ನಾ). ರಹಸ್ಯವಾದ ಅರ್ಥ; ಗೂಢಾರ್ಥ: ಗೋಪಿತಾರ್ಥವ ಕೊಟ್ಟು ಜನ ಸಮ್ಮಾಪರಾಹೋಲ್ ರಚಿಸುವದಕುಪಮಾಪದವ ಕೊಡು ಚಂದ್ರನಾಥನೆ ಕೋಮಲಾಕೃತಿಯೂ (ಬಿಜ್ಜಪು. ೪-೧೫). [ ಗೋಪಿತ + ಅರ್ಥ ]

**ಗೋಪಿತ್ತೆ** (ನಾ). ಗೋರೋಚನ : “ಗೌರಿ ಗೋಪಿತ್ತೆಯೆನೆ ಗೋರೋಚಮಕ್ಕು” (ಮಂಗರಾ. ೯೯-೨೦). [ <ಸಂ. ಗೋಪಿತ್ತ ]

**ಗೋಪೀಗೀತ** (ನಾ). (ವಿರಹಾಕುಲೆಯರಾದ) ಗೋಪಿಕಾಸ್ತ್ರೀಯರು ಶ್ರೀಕೃಷ್ಣನನ್ನು ಕುರಿತು ಹಾಡಿದಂತೆ ರಚಿಸಿದ ಗೀತೆ : ಶ್ರೀಪಾದರಾಜರು ರಚಿಸಿರುವ ಭ್ರಮರಗೀತ ಮತ್ತು ವೇಣುಗೀತ ಮತ್ತು ಗೋಪೀಗೀತಗಳು ತಿಳಿಗನ್ನಡ ಮಾತುಗಳ ಸುಂದರಸಾಹಿತ್ಯ (ಜಗದಾ. ೮೦). [ ಸಂ. ( ಗೋಪೀ + ಗೀತ) ]

**ಗೋಪೀಚಂದನ** (ನಾ). =ಗೋಪಿಚಂದನ: ಗೋಪೀಚಂದನದಿಂದ ದಿನದಿನ ವಹಿಸುವರ ಕೃಪಾಳು ಹರಿ ಅವರಿಗೊಲಿವ (ವೈಕುಂವ. ೪-೧೫) ; ಗೋಪೀ

ಚಂದನವನ್ನು ಧರಿಸಿದಲ್ಲಿ . . . ಪೈತ್ಯರೋಗಗಳಂ, ರಕ್ತಪಿತ್ತರೋಗಗಳಂ ಜಯಿಸುವುದು (ಸಕವೈ. ೪೧). [ ಸಂ. (ಗೋಪೀ + ಚಂದನ) ]

**ಗೋಪೀಜಾರ** (ನಾ). ಗೋಪಿಕಾಸ್ತ್ರೀಯರ ವಿಟ; ಕೃಷ್ಣ: ಗಳಿತವಿಕಾರ ಗೋಪೀಜಾರ ಲಲಿತವಿಹಾರ (ಕುವ್ಯಾಭೀ. ೩-೮೭).
[ ಸಂ. (ಗೋಪೀ + ಜಾರ) ]

**ಗೋಪು$_1$** (ನಾ). ಕಾಪಾಡುವಿಕೆ; ಸಂರಕ್ಷಣೆ. 'ಗೋಪುಕಾರ' ಪರಾ.
[ <ಸಂ. ಗೋಪ ]

**ಗೋಪು$_2$** (ನಾ). ೧. ಕೊರಳಲ್ಲಿ ಧರಿಸುವ ಒಂದು ಬಗೆಯ ಆಭರಣ: ಅಂತಃಕರಣದ ಗೋಪು ಭಾವದ ಕೋಪು ಎಲ್ಲರ ಕೊರಳೆದೆ ಸಿಂಗರಿಸಿದೆ (ಸಜೀಗೀ. ೪೫-೯೩೧). ೨. ಹಲವು ಎಳೆಗಳನ್ನು ಕೂಡಿಸಿ ಹೆಣೆದ ದಾರ. 'ಗೋಪುಹೆಣೆ' ಪರಾ. [ ←ಹಿಂ. ಗೋಪ್; ಮರಾ. ಗೋಫ್ ]

**ಗೋಪುಕಾರ** (ನಾ). ಸಂರಕ್ಷಣೆ ಮಾಡುವವನು; ರಕ್ಷಕ: ಪುಣ್ಯಕ್ಷೇತ್ರ ಪಂಡರಿಪೂರ ಪುಂಡಲೀಕ ಗೋಪುಕಾರ (ಮಲ್ಲಿಗ. ೭).
[ ಗೋಪು$_1$ + – ಕಾರ$_1$ (<–ಕಾಱ) ]

**ಗೋಪುಚ್ಛ** (ನಾ). ೧. ಆಕಳಿನ ಬಾಲ; ಹಸುವಿನ ಬಾಲ. ೨. ಎರಡು, ನಾಲ್ಕು ಅಥವಾ ಮೂವತ್ತುನಾಲ್ಕು ಎಳೆಗಳುಳ್ಳ ಹಾರ: ಅಯ್ವತ್ತು ಸರದ ಮುತ್ತು ಮಾಣವಕ ಎಂಬುದು. ಹಾರಃ, ಗುಚ್ಛಃ, ಅರ್ಧಗುಚ್ಛಃ, ಗೋಪುಚ್ಛಃ–ಎಂಬಿವು ಕ್ರಮದಿಂದಂ ಕುಂದುತ್ತಾ ಬರಲಪ್ಪುವು (ಹಲಾಯು. ೯೨-೪೦೮). [ ಗೋ + ಪುಚ್ಛ ]

**ಗೋಪುರ** (ನಾ). ೧. ಗೋವುಗಳಿರುವ ನಗರ. ೨. ನಗರದ ಹೆಬ್ಬಾಗಿಲು, –ಮಹಾದ್ವಾರ: "ಗೋಪುರಂ, ಪುರದ್ವಾರಂ–ಈ ೨ ಬಾಗಿಲುವಾಡಂ" (ಹಲಾಯು. ೪೮-೧೩೩); ನಿಜಶಸ್ತ್ರವಿದ್ಯೆಯಂ ಪರಿವಿಡಿಗೆಯ್ವ ರಾಜಸುತರೊಪ್ಪುಗುಮಾ ಪುರಗೋಪುರಂಗಳೊಳ್ (ಜಗವಿ. ೨-೧೭); ಆ ಕಡೆಗೆ ಹೋಗುತಿರೆ ಗೋಪುರದಾ ಕದವು ಕಡು ಬಲಿದಿರಲು (ಸಾಳ್ವಭಾ. ೨-೧೧). ೩. ನಗರದ ಅಥವಾ ದೇವಸ್ಥಾನದ ಪ್ರಾಕಾರದಲ್ಲಿ ಪ್ರವೇಶದ್ವಾರದ ಮೇಲೆ ಕಟ್ಟಿರುವ ಅಂತಸ್ತುಗಳನ್ನೊಳಗೊಂಡ ರಚನೆ; ಶಿಖರ: ಪರಿವೃತ ಪ್ರಾಕಾರವಂ ಗೋಪುರವನೆತ್ತಿಸಿ (ಬಸಪು. ೫೩-೩೦); ಮೇಲಿಪ್ಪ ಚಿನ್ನದ ಕಳಸದಿಂ ಗೋಪುರ ಥಾಳಿಸಿ ತುಡುಕಿತಂಬರವ (ಕಂನವಿ. ೭-೮೪); ಗೋಪುರ: ಇದು ಅನೇಕ ಅಂತಸ್ತುಗಳನ್ನೊಳಗೊಂಡು, ಚಿತ್ರಗಳೊಡನೆ ಸೂಚ್ಯಾಕಾರವಾಗಿ ಮೇಲಕ್ಕೆ ಹೋಗುತ್ತದೆ. ತುಟ್ಟತುದಿಯಲ್ಲಿ ಚಿನ್ನದ ಕಲಶಗಳಿರುತ್ತವೆ(ಮ್ಯವಾಸ್ತು. ೩೪). ೧, ೩: ಗೋಪುರದಿಂ ರಂಜಿಪಯೋಧ್ಯಾಪುರಿ ಸುಮನಃಪ್ರಕೀರ್ಣ ಪುಣ್ಯಾವಸಥಾಪ್ತಾಪದ ಕಳಶೋತ್ಕರದಿಂ ಗೋಪುರವಂ ಪೋಲ್ವುದೆಂಬುದೊಂದಚ್ಚರಿಯೇ (ನಳಚಂ. ೬೩೧). ೪. ಬಾಗಿಲು; ದ್ವಾರ. ೫. ಒಂದು ಬಗೆಯ ಸುಗಂಧದ ಹುಲ್ಲು; "ಕೊನ್ನಾರಿಯ ಭೇದ, ತುಂಗಮುಸ್ತೆ" (ಅಮರ. ಟೀಕೆ). [ ಸಂ. ]

**ಗೋಪುರಾರತಿ** (ನಾ). ಗೋಪುರಾಕಾರವಾಗಿ ಬತ್ತಿಗಳನ್ನು ಹತ್ತಿಸಿ ಮಾಡುವ ಒಂದು ಬಗೆಯ ಆರತಿ: ಪಂಚಾರತಿ, ಗೋಪುರಾರತಿ, ಕರ್ಪೂರಾರತಿ ಮುಂತಾದ ಎಲ್ಲ ಆರತಿಗಳನ್ನೂ ಮಾಡಿಸಿ ಪ್ರಸಾದ ಸ್ವೀಕರಿಸಿದ್ದಾಯಿತು (ಗಂಮಾಯಿ. ೧). [ ಗೋಪುರ + ಆರತಿ$_1$ ]

**ಗೋಪುಹೆಣೆ** (ಕ್ರಿ). ೧. ಹಲವಾರು ಬಣ್ಣದ ದಾರಗಳನ್ನು ಸೇರಿಸಿ ಹೆಣಿಗೆ ಹಾಕು. ೨. ಜಡೆಕೋಲಾಟ ಆಡು: ಎಳೆಮಕ್ಕಳು ಕೋಲ್ಚಿಣಿಗಳನ್ನು ಹಿಡಿದು ಹಾಡಿ 'ಗೋಪು' ಹೆಣೆಯುತ್ತಾರೆ (ಕನ್ನಜಾ. ೩೩).
[ ಗೋಪು$_2$ + ಹೆಣೆ$_1$ (<ಪೆಣೆ$_1$) ]

**ಗೋಪೆ, ಗೊಪೆ, ಗೊಪ್ಪೆ$_2$, ಗೊಹೆ$_2$** (ನಾ). ೧. ಗೋರಿ; ಹೆಣ ಹುಗಿಯುವ ಕುಣಿ; ಸಮಾಧಿಸ್ಥಳ: ತಂದೆ ಬಪ್ಪನ್ನಂ ಸಮಾಧಿ ನಿನಗಂಬಂತೆ ಕಂದನಂ ಗೋಪೆಯೊಳಳವಡಿಸುತಮಿರಲು (ಬೊಮ್ಮರ. ೧೭೪-೭); ಕದಿರರೇಮಂ ಪಿಂತೆ ಮರಣವಡೆದೇಳುದಿವಸದ ಮೇಲೆ ಗೋಪೆಯಕಳಿಸಿ ಹರಣವಿತ್ತು ಸೋಮಯ್ಯನ (ಸಿದ್ಧೇಪು. ೧೬-೭); ಛಲಿತದಿಂದಾ ಮಗಳ ಪೂಣ್ದು ಟಾವಿಗೆ ಪೋಗೆ ನಲವಿನಿಂ ತಿರುಜ್ಞಾನಿ ನಾಚಿ ಬಾರೆಂದೆನಲ್ ಕಲಿತದಿಂ ಗೋಪಿ[ಪೆ]ಯಿಂ ಪೊಱವೊಟ್ಟು(ಪ್ರಭುಪು. ೭-೧೫೬). **ಗೊಪೆ:** ೧. ಶುನಕನ ಶವವ ಹೆಂದದ ಮಹಾವಿಭವವೆರಸು ಗೊಪೆ[ಪಾಠಾಂ. ಗೊಪ್ಪೆ]ಯೊಳಗಿಕ್ಕಿ (ಸಿದ್ಧರಾ. ೭-೫೬); ತನಗೆ ಸೀಮಾಲಂಘನವ್ರತಮೆಸೆಯೆ ನಿಜಸದನದಲ್ಲಿಯೊಂದು ಗೊಪೆಯಂ ತೋಡಿಕೊಂಡು ತನ್ನಸುವಿಂಗೆ ಕೊಱತೆ ಬರೆಯಸು ಗಳೆವೆನೆಂಬ ನಿಷ್ಠೆಯನಾಂತು (ಪದ್ಮರಾ. ೨-೨೭); ಆತನಂ ತಂದು ಮನೆಯೊಳ್ಗೊಪೆಯೊಳಿಕ್ಕಿರಲ್ಪೂತನಾ ಕದಿರ ರೇಮಯ್ಯಂ . . . ತಿಳಿದಾ ಗೊಪೆಯನು ಕೌತುಕವೆನಿಪ್ಪಂತೆ ತೆಗಸಿಯಸುಗುಡೆ (ಪಾಸೋಪು. ೭-೭೯). ೨. ಗೋಪ್ಯವಾದ ಸ್ಥಳ; ರಹಸ್ಯಸ್ಥಳ: ಕೆಱೆಯ ಮಧ್ಯದ ಯೋಗಿನಾಥನ ಗೃಹಾಂತರದೊಳೊಂದು ಗೊಪೆ[ಪಾಠಾಂ. ಗೊಪ್ಪಿ, ಗೋಟೆ, ಗೋಪೆ]ಯಂ ಮಾಡಿ (ಸಿದ್ಧರಾ. ೯-೪೩); ತಪವ ಮಾಡುವೆನೆಂದು ಗೊಪೆಯ ಹೊಕ್ಕಿರಬೇಡ (ಸರ್ವಜ್ಞ. ೫೩೨). **ಗೊಪ್ಪೆ$_2$:** ೧. ಸ್ನೇಹಿತನಿದ್ದ ಗೊಪ್ಪೆಯನುಪಪತಿ ಬಂದು ನೇಹದಿ ನೋಡಲೆಂದಗೆಯೆ ಆ ಹೆಣನೆಳ್ದಾಯೆನೆ ಹೆಪ್ಪಳಿಸಿ ಬಿಳ್ದಾ ಹಂದೆಯಸುವ ನೀಗಿದುದು (ಶ್ರೀಪಾಲ. ೮-೨೭). **ಗೊಹೆ$_2$:** ೩. ಗುಹೆ; ಗವಿ: ಇದಱಾಸೆಯ ಬಿಡಿಸು ಗೊಹೆಯ ಗೊಮ್ಮಟನೊಡೆಯ ಅಗಮ್ಯೇಶ್ವರ ಲಿಂಗ (ಮನುಗುಂ. ೪೯). [ <ಸಂ. ಗೋಪ್ಯ ]

**ಗೋಪ್ಯ** (ಗು). ೧. ರಹಸ್ಯವಾಗಿಡಬೇಕಾದ; ಗುಟ್ಟಾಗಿಡಬೇಕಾದ; ರಕ್ಷಿಸಬೇಕಾದ. (ನಾ). ೨. ಗುಟ್ಟು; ರಹಸ್ಯ: ಗುಹ್ಯಕ್ಕೆ ಗುಹ್ಯ ಗೋಪ್ಯಕ್ಕೆ ಗೋಪ್ಯ (ಅವಚಂ. ೨೮೧-೧೨೮೭); ಲೋಭಿಯು ಧನವಂ ಗೋಪ್ಯವಂ ಮಾಡುವಂತೆ ನಾನು ಗೋಪ್ಯವೇ ಮಾಡತಕ್ಕದ್ದು (ಅರ್ಥಮಾ. ೮೭). ೩. ದಾಸಿಯ ಪುತ್ರ; ತೊತ್ತಿನ ಮಗ: "ಗೋಪ್ಯಃ, ದಾಸೀಸುತಃ– ಈ ೨ ತೊಟ್ಟಿನ ಮಗಂ" (ಹಲಾಯು. ೮೨-೩೪೭). [ ಸಂ. ]

**ಗೋಪ್ಯಕ** (ನಾ).=ಗೋಪ್ಯ ೩: "ತೊತ್ತಿಗೆ ಪುಟ್ಟಿದಂ ಗೋಪ್ಯಕನೆನಿಕ್ಕುಂ" (ಮಂಗರಾ. ೯೨-೧೧). [ ಸಂ. ]

**ಗೋಪ್ಯಮಾನತೆ** (ನಾ). ೧. ಅಡಗಿಸಿಡುವಿಕೆ; ಗೂಢವಾಗಿರಿಸುವಿಕೆ. ೨. [ಕಾವ್ಯಮೀ] ಅರ್ಥವನ್ನು ವಾಚ್ಯವಾಗಿರಿಸದೆ ವ್ಯಂಗ್ಯವಾಗಿರಿಸುವಿಕೆ: ಈ ಗೋಪ್ಯಮಾನತೆಯ ನಿಯಮವನ್ನು ಲಾಕ್ಷಣಿಕರು ಅತಿಕಠಿನವಾಗಿ ಅನ್ವಯಿಸಬಾರದು (ಭಾರಮೀ. ೩೩೨). [ ಸಂ. ಗೋಪ್ಯಮಾನತಾ ]

**ಗೋಪ್ಯರಕ್ಷಣೆ** (ನಾ). ಗುಟ್ಟು ಬಯಲಾಗದಂತೆ ನೋಡಿಕೊಳ್ಳುವುದು; ರಹಸ್ಯವನ್ನು ಕಾಪಾಡುವುದು: ಅವರಿಂದ ರಾಜ್ಯಪಾಲರು ಅವರ ಮಂತ್ರಿಪದದ ಮತ್ತು ಗೋಪ್ಯರಕ್ಷಣೆಯ ಸಂಬಂಧವಾದ ಪ್ರಮಾಣ ವಚನವನ್ನು . . . ಸ್ವೀಕಾರವಮಾಡಿಸತಕ್ಕುದು (ಭಾಧಾನ. ೮೭); ದೂರವಾದರೂ ಗೋಪ್ಯರಕ್ಷಣೆಯಾಗಲಿ (ಚಂದ್ರಸ. ೨೨).
[ ಗೋಪ್ಯ + ರಕ್ಷಣೆ ]

**ಗೋಪ್ರದಾನ** (ನಾ). ಗೋವುಗಳನ್ನು ದಾನವಾಗಿ ಕೊಡುವುದು; ಗೋದಾನ: ಧರಣಿಯಮರರಿಗೆಂಟುಲಕ್ಷದ ಗೋಪ್ರದಾನವನು ಅರಸನಿತ್ತ (ಕೌಶಿರಾ. ೪೪-೫೧). [ ಗೋ + ಪ್ರದಾನ ]

**ಗೋಭೂಮಿ** (ನಾ). ೧. ದನಕರುಗಳು ಮೇಯುವುದಕ್ಕಾಗಿ ಬಿಟ್ಟ ಭೂಮಿ; ಹುಲ್ಲುಗಾವಲು: (ವ್ಯಗಜಿ. X, ೭೭೯). ೨. ಆಕಾಶದ ಪ್ರದೇಶ; ಅಂತರಿಕ್ಷ (?): ಭವ್ಯಜನಶರಣವಾದ ಸಮವಸರಣ ಗೋಭೂಮಿಯೊಳ್ (ಶಾಂತಿಪು. ೧೨-೨೨ ವ). [ ಗೋ + ಭೂಮಿ ]

**ಗೋಮ$_1$** 'ಗೋಮು$_1$' ನೋ.

**ಗೋಮ$_2$, ಗೋಮೆ** (ನಾ). ೧. ಗೋಮಯ; ಸಗಣಿ. ೨. (ಊಟ ಮಾಡಿದ ಸ್ಥಳವನ್ನು) ಸಗಣಿ ನೀರಿನಿಂದ ಸಾರಿಸಿ ಶುದ್ಧಮಾಡುವುದು:

ಎಲೆ ತೆಗೆದು ಗೋಮ ಇಡು (ರೂಢಿ). 'ಎಂಜಲಂಗೋಮಂ' ಪರಾ. **ಗೋಮೆ:** ೨. ಊಟ ಮುಗಿದ ಮೇಲೆ ಗೋಮೆ ಬಳಿದಳು (ರೂಢಿ). 'ಎಲೆಗೋಮೆ' ಪರಾ.

**ಗೋಮಹಚ್ಚು**=ಊಟಮಾಡಿದ ಸ್ಥಳವನ್ನು ಸಗಣಿನೀರಿನಿಂದ ಸಾರಿಸು: ಊಟಾ ಮಾಡೋಣ. ಆಮೇಲೆ ಗೋಮಹಚ್ಚಿಕೊಂಡು ಹೋಗು (ತಿಡುಗು. ೧೩). [ <ಸಂ. ಗೋಮಯ ]

**ಗೋಮಂಡಲ, ಗೋಮಂಡಳ** (ನಾ). ೧. ಗೋವುಗಳ ಮಂದೆ; ದನಕರುಗಳ ಗುಂಪು. ೨. ಭೂಮಂಡಲ. ೧, ೨: ಚತುರಂಗಸ್ಸನವಿನುತಂ ಪ್ರತೀತನಯವತ್ಸವತ್ಸಲಂ ವಸ್ತುಪಯಸ್ಸ್ಥಿತಿಯಂ ಗೋಮಂಡಲಮಾ ಕ್ಷಿತಿಪತಿಗೋರಂತೆ ಕಱೆವುದಿರುಳುಂ ಪಗಲುಂ (ಚಂದ್ರಪ್ರ. ೭-೩೫). **ಗೋಮಂಡಳ:** ೧. ನಂದಿಮಿತ್ರನ ಗೋಮಂಡಳದೊಳೊರ್ಮೆ ಪೋಱಿಗಳಾಗಿ ರಾಜಮಂದಿರದ ಸೀಯಬಾರದೊಳ್ ಪೊಣರ್ದು (ಶಾಂತಿಪು.೯-೪೭ವ); ಶಕಟಾರೋಪಿತ ಸಂಶ್ರಯೋಪಕರಣಂ ಸ್ವಾರಿವ್ರಜಾರೂಢ ಬಾಳಕುಳಂ ದಾಮನಿಯುಕ್ತ ಕಂಠವಿಚಳದ್ಗೋಮಂಡಳಂ . . . ಚಕಿತಂ ತದ್ವಿಷಯ ಪ್ರಜಾಪ್ರತತಿಯೋಡುತ್ತಿರ್ದುದೆತ್ತೆತ್ತಲುಂ (ಚಂದ್ರಪ್ರ. ೫-೯೨).

[ ಗೋ + ಮಂಡಲ ]

**ಗೋಮಂಡಳ** 'ಗೋಮಂಡಲ' ನೋ.

**ಗೋಮಂಡಳಿಗ** (ನಾ). ದನಕರುಗಳ ಮಂದೆಯ ಯಜಮಾನ; ಗೋಸಮೂಹದ ಒಡೆಯ: ಶತ್ರುಂಜಯಮಹೀಪಾಲ ಗೋಮಂಡಳಿಗಂ ನಂದಿಮಿತ್ರನ ಗೋಮಂಡಳದೊಳೊರ್ಮೆ ಪೋಱಿಗಳಾಗಿ . . . ಪೊಣರ್ದು (ಶಾಂತಿಪು. ೯-೪೭ ವ). [ ಗೋಮಂಡಳ (=ಗೋಮಂಡಲ) + – ಇಗ ]

**ಗೋಮಜ್ಜಿಗೆ** (ನಾ). ಒಂದು ಬಗೆಯ ಔಷಧಿ ಗಿಡ: (ವೃಜಿಗಿ. ೩೫-೭೭೩).

[ ? ]

**ಗೋಮಟ** 'ಗೊಮ್ಮಟ' ನೋ.

**ಗೋಮಟೇಶ್ವರ** 'ಗೊಮ್ಮಟೇಶ್ವರ' ನೋ.

**ಗೋಮತಲ್ಲಿಕೆ** (ನಾ). ಶ್ರೇಷ್ಠವಾದ ಗೋವು; ಒಳ್ಳೆಯ ಹಸು: "ಒಳ್ಳೆ [ಳ್ಳಿ]ಹ ಹಸುವಂ ಗೋಮತಲ್ಲಿಕಾಯೆಂಬುದು" (ಹಲಾಯು. ೪೫-೧೧೫); "ಒಳ್ಳಿತಪ್ಪಾ ಹಸುವು ಗೋಮತಲ್ಲಿಕೆಯಕ್ಕು" (ಮಂಗರಾ. ೫೪-೩).

[ ಸಂ. ಗೋಮತಲ್ಲಿಕಾ (ಗೋ + ಮತಲ್ಲಿಕಾ) ]

**ಗೋಮನಾಳಿ** 'ಗೋಮಾಳಿ' ನೋ.

**ಗೋಮಯ** (ನಾ). ಆವಿನ ಅಥವಾ ಎತ್ತಿನ ಸಗಣಿ: "ಕರೀಷಂ, ಗೋಮಯಂ–ಈ ೨ ಸೆಗಣಿ" (ಹಲಾಯು. ೪೬-೧೧೮); "ಅಡೆ ಗೋಮಯಂ" (ಕಬ್ಬಿಕ್ಕ. ೭೧); ಅದನೊಂದು ವೃಷಭಂಗೆ ಮೇಯಲಿತ್ತೊಡನೆ ಬಳಿವಿಡಿದದಱ ಗೋಮಯವನೆತ್ತಿ ತಂದು (ಹಚಕಾ. ೧೧-೪೫); ಸುಮನಸಧೇನು ಮನೆಯೊಳಗಿರಲು ಗೋಮಯ ಬಯಸುವಂದದಲಿ (ಹಸಾರ. ೧೯-೨೦); ಕಳ ಗೋಮಯಮುಮಂ ಕಲಂಕಲ್ಕೆಂದು ತಮ್ಮ ಕರಪುಷ್ಕರದಿಂ ನೀರಂ ತಂದು ತುಟುಂಕುವ ಮಱಿಯಾನೆಗಳಿಂ (ರಾಮಾಶ್ವ. ೪೩-೩೩). [ ಸಂ. ]

**ಗೋಮಾಯಿ** (ನಾ).=ಗೋಮಾಯು ೧: ಕರಡಿ ಕಳವಳಿಸೆ ಗೋಮಾಯಿ ಗೂಂದಿಯೊಳಣಗೆ ಬೊರಗೆಯ ಮೊಲಂಬೊಗುತ್ತಿರಲು ಹವ್ವನೆ ಹಾರೆ ಹರಣ ಹಕ್ಕಿಗಳಿಗೆ (ಚಿದಾವ. ೧೩-೩೨). [ <ಗೋಮಾಯು ]

**ಗೋಮಾಯು** (ನಾ). ೧. ನರಿ; ಜಂಬುಕ: "ಶಿವೆ ಮೃಗಧೂರ್ತಂ ಗೋಮಾಯು ವಂಚಕಂ . . . ಫೇರವಮಱಿಗೆ ಬಳ್ಳು" (ವಸ್ತುಕೋ. ೪೧-೩); "ಗೋಮಾಯುಃ, ಭೂರಿಮಾಯಃ–ಈ ೨ ಬಳ್ಳು" (ಹಲಾಯು. ೩೮-೭೬); ಹಕ್ಕಿಗಳೊರಳಿದವು ಗೋಮಾಯು ರವವಬ್ಬರಿಸಿದುದು (ಕುಮ್ಮಾಅ. ೨೨-೫); ಕರಟ ಗೋಮಾಯು ಕೌಶಿಕ ಗೃಧ್ರ ಸಂತತಿಗಳ್ (ವೆಂಕಾರಾ. ೬ ೪೩-೩೧). ೨. ಒಂದು ಬಗೆಯ ಕಪ್ಪೆ. [ ಸಂ. ]

**ಗೋಮಾರಿ** (ನಾ). ದನಕರುಗಳ ಬಾಯಿ ಮತ್ತು ಕಾಲುಗಳಿಗೆ ತಗಲುವ ಒಂದು ಬಗೆಯ ರೋಗ: ವರವೈಶಾಖದ ಮಾಘಪುಷ್ಯವೆರಸಂತಾಷಾಢದೊಳ್ ಶ್ರಾವಣಾಂತರದೊಳ್ ಚಂದ್ರಸುತೋದಯಂ . . . ಸಂತಸಮಕ್ಕುಮಾವುದಯದೊಳ್ ಗೋಮಾರಿ ರೋಗೋತ್ಕಟಂ (ಜಟ್ಟಮ.೭-೭೮).

[ ಗೋ + ಮಾರಿ/ತಮಿ. ಕೋಮಾರಿ; ತೆಲು. ಗೋಮಾರಿ ]

**ಗೋಮಾರಿಕಬ್ಬು** (ನಾ). ಒಂದು ಬಗೆಯ ಕಬ್ಬು; ದನಗಬ್ಬು: ಮಲಸೀಮೆಯಲ್ಲಿ ಗೋಮಾರಿಕಬ್ಬು ಎಂದರೂ ಹೊಟ್ಟೆಯ ಕಬ್ಬುಎಂದರೂ ಒಂದೇ ಪರಿಯಾಯವು (ಕೃಷಿಪ್ರ. ೧೮೨).

[ ಗೋಮಾರಿ? + ಕಬ್ಬು$_2$ (<ಕರ್ವು$_1$) ]

**ಗೋಮಾಳ$_1$** (ನಾ). ದನಕರುಗಳ ಮೇವಿಗಾಗಿ ಬಿಟ್ಟಿರುವ ಸಾರ್ವಜನಿಕ ಹುಲ್ಲುಗಾವಲು: ಆ ಗ್ರಾಮಕ್ಕೆ ಸೇರಿದ್ದ ಗದ್ದೆ ಬೆದ್ದಲು ತೋಟ ತುಡಿಕೆ ಮನೆ × × × ಗುತ್ತಗೆ ಬಸ್ತಿ ಗೋಮಾಳ ಸುಂಕ ಸುವರ್ನಾದಾಯ (ಮೈಆರಿ. ೧೯೩೦, ೫೭-೧೪; 1429); ಹೊಲಗದ್ದೆಗಳೂ ಹಸುರು ಹುಲ್ಲಿನ ಗೋಮಾಳಗಳೂ . . . ನಮ್ಮೂರಿನ ಕಳೆಯನ್ನು ಹೆಚ್ಚಿಸಿದ್ದವು (ಹುಟ್ಟಹ. ೧).

[ ಗೋ + ಮಾಳ$_4$ ]

**ಗೋಮಾಳ$_2$** 'ಗೋಮಾಳಿ' ನೋ.

**ಗೋಮಾಳಿ, ಗೋಮನಾಳಿ, ಗೋಮಾಳ$_2$, ಗೋಮಾಳೆ** (ನಾ).= ಗೋಣ್ಣಾಳಿ: ಬಾಲತನದಲಿ ತಾಟಕಿಯ ಗೋಮಾ[ಪಾಠಾಂ. ನಾ]ಳಿಯನು ಗೋರಿದನು (ತೊರರಾ. ೧-೨-೨೦); ಮುಂದಲೆವಿಡಿದಗೆದು ಗೋಮಾಳಿಯ ನವುಕಿ (ನಿಜಸಾಂ. ೯೭-೩೪). **ಗೋಮನಾಳಿ:** ಗೋಮನಾಳಿಯನ್ನು ಹಿಡಿದು ತಳ್ಳಿದ (ರೂಢಿ). **ಗೋಮಾಳ$_2$:** ಗೋಮಾಳ ಹಿಡಿದು ಹೊರಗೆ ನೂಕು (ರೂಢಿ). **ಗೋಮಾಳೆ:** ನಾಯಿ . . . ಹಾರಿ ಕಳ್ಳನ ಗೋಮಾಳೆಯನ್ನು ಹಿಡಿದು ಕಚ್ಚಿ ಕೆಡವಿ ಗಟ್ಟಿಯಾಗಿ ಬಗುಳಿತು (ಕಥಾಮಂ. IV, ೪೨).

[ <ಗೋಣ್ಣಾಳಿ ]

**ಗೋಮಾಳಿ** 'ಗೋಮಾಳಿ' ನೋ.

**ಗೋಮಿ** (ನಾ). ದನಕರುಗಳ ಸಂಪತ್ತುಳ್ಳವನು; ಗೋವಳಿಗ; ಹಸುಗಳ ಒಡೆಯ: "ಗೋಮಿ ಬಹುಗೋಧನಂ ಗೋಸ್ವಾಮಿ ಗವಾಧಿಪತಿ ತಾನವಂ ಗೋವಳಿಗಂ" (ವಸ್ತುಕೋ. ೯೧-೧೪); "ಗೋಪತಿ ಗೋಮಿಯೆನಲು ತುಱುವಾಳನಕ್ಕು" (ಮಂಗರಾ. ೫೬-೧೧).

[ ಸಂ. ಗೋಮಿನ್ ]

**ಗೋಮಿಕೆ** (ನಾ).=ಗೋನು: "ಗೋಮಿಕೆಯೆನಲು ಗೋನು" (ಮಂಗರಾ. ೪೨-೩೭). [ ? ]

**ಗೋಮಿನಿ** (ನಾ). ೧. ವಿಷ್ಣುವಿನ ಪತ್ನಿ; ಲಕ್ಷ್ಮಿ: "ಶ್ರೀರಾಮೆ ಲಕ್ಷ್ಮಿ ಗೋಮಿನಿ . . . ಇಂದಿರಾ ನಾಮಂಗಳ್" (ವಸ್ತುಕೋ. ೫-೨೬); "ಶರಧಿಸುತೆ ರಾಮೆ ಗೋಮಿನಿ ಲಕ್ಷ್ಮಿ . . . ಮನ್ಮಥಮಾತೆಯೆನಲು ಸಿರಿಗಕ್ಕುನಾಮಂ" (ಮಂಗರಾ. ೬-೧೪); ಎಳೆವೆಣ್ಣಾ ಧವಳಾತಪತ್ರದ ನೆಳಲ್ ಸಂಪ್ರೀತಿಯೊಳ್ ಕೂಡೆ . . . ಚಾಪಳಮಂ ಗೋಮಿನಿ ಬಿಟ್ಟು ಪೇರುರದೊಳೆಂದುಂ ಲೀಲೆಯಿಂದಾಡೆ (ಎಕ. V, ಬೇಲೂರು. ೮೭-೧೭; 1177); ಅಲಸದೆ ಮನ್ನಿತಿಗೋಮಿನಿ ನೆಲಸುಗೆ ಗುಣಭದ್ರಪದಪಯೋಜಾಸನದೊಳ್ (ಧರ್ಮನಾ. ೧-೨೨). ೨. ಇಳೆ; ಭೂಮಿ. 'ಗೋಮಿನೀವಲ್ಲಭ' ಪರಾ. [ ಸಂ. ಗೋಮಿನೀ ]

**ಗೋಮಿನೀಧವ** (ನಾ). ಲಕ್ಷ್ಮೀಪತಿ; ವಿಷ್ಣು: ಆದಿವರಾಹರೂಪದೊಳೆ ನೀನಂದೆತ್ತಿದೈ ಗೋಮಿನೀಧವ . . . ಭೂಗೋಳಮಂ (ಜಗವಿ. ೧-೫೭).

[ ಸಂ. (ಗೋಮಿನೀ + ಧವ) ]

**ಗೋಮಿನೀಪತಿ** (ನಾ).=ಗೋಮಿನೀಧವ: ದಯೆಯಿಂದಸ್ಮದ್ಗರ್ಭದೊಳ್ ಗೋಮಿನೀಪತಿ ನೀಂ ಪುಟ್ಟಿದೆ (ಜಗವಿ. ೩-೫). [ಸಂ. (ಗೋಮಿನೀ+ಪತಿ) ]

**ಗೋಮಿನೀವಲ್ಲಭ** (ನಾ). ಭೂಮಿಯ ಒಡೆಯ; ರಾಜ : ತುರಗಾರೋಹಣದಿಂದಮೊರ್ಮೆ . . . ವನವಾರಿಕ್ರೀಡೆಯಿಂದೊರ್ಮೆ ಚಿತ್ರರುಚಿಪ್ರೀತಿಗಳಿಂದೆ ಪೊಟ್ತುಗಳೆವಂ ಶ್ರೀ ಗೋಮಿನೀವಲ್ಲಭಂ (ಚಂದ್ರಪು.೪-೨೮). [ಸಂ. (ಗೋಮಿನೀ + ವಲ್ಲಭ)]

**ಗೋಮಿನೀಸದನ** (ನಾ). ಲಕ್ಷ್ಮಿಗೆ ಆವಾಸವಾಗಿರುವವನು; ಶ್ರೀನಿವಾಸ; ವಿಷ್ಣು : ಪರಹಿತಬ್ಯಾಪಾರದೊಳು ಗೋಮಿನೀಸದನಂ ಶಂಕರಸೆಟ್ಟಿಯೆಂದು ಹೊಗಳ್ಗುಂ ವಿಶ್ವಂಭರಾ ಮಂಡಳಂ (ಕಇ. IV, ೧-೭೦ ; 1204). [ಸಂ. (ಗೋಮಿನೀ + ಸದನ)]

**ಗೋಮು₁**, ಗೋಮ್ಮು₁ (ನಾ). ೧. ಹಲವು ಕಾಲುಗಳುಳ್ಳ ಒಂದು ಬಗೆಯ ಹುಳು; ಜರಿ: (ಕ). ೨. ಕುದುರೆಯ ಮೈಮೇಲೆ ಕಾಣುವ ಹೀನಸುಳಿ; "ಕುದುರೆಯ ಕೆಟ್ಟಸುಳಿ" (ಜಾನಕೋ. ೫೨). ೩. "ಕುಂದು ಕೊರತೆ" (ಜಾನಕೋ. ೫೨) : ಈ ವರಮಹಾಶಯರು ಸುಂದರರೂ ವೀರರೂ . . . ಆಗಿದ್ದರೂ ಇದೊಂದು ದೊಡ್ಡ ಗೋಮು ಯಾಕಿರುವುದಾದೀತು ? (ಪವಶೀ. ೫). **ಗೋಮ್ಮು₁ :** ೨. ರೋಮ ಇದ್ದರೇಸು ಗೋಮ ತಿಳೀದೇ (ಗಾದೆ). [<ಪ್ರಾ. ಗೋಮಿಅ ; ಗೋಮಿ./ಮರಾ. ಗೋಮ]

**ಗೋಮು₂** (ನಾ). ದೊಡ್ಡಸ್ತಿಕೆಯ ನಟನೆ; ಡೋಂಗು; ಡೌಲು: (ಕ). [? / ತೆಲು. ಗೋಮು / ಮರಾ. ಗೋಮಾ]

**ಗೋಮುಖ** (ನಾ). ೧. ಗೋವಿನ ಮುಖ; ಹಸುವಿನ ಮುಖ. ೨. ಸಾರು ಮೊದಲಾದ ದ್ರವಪದಾರ್ಥಗಳನ್ನು ಬಡಿಸಲು ಉಪಯೋಗಿಸುವ ಚೂಪಾದ ಮೂತಿಯುಳ್ಳ ಪಾತ್ರೆ; ಕಾಗೆ : ಗೋಮುಖದಲ್ಲಿ ಸಾರು ಬಡಿಸಿ (ರೂಢಿ). ೩. ದೇವತಾ ವಿಗ್ರಹಗಳಿಗೆ ಮಾಡಿದ ಅಭಿಷೇಕ ಜಲವು ಹರಿದು ಹೋಗಲು ಮಾಡಿರುವ ಹರಿ; ಜಲಹರಿ; ಪಾಣಿವಟ್ಟಲು : ಇಂತೀ ತ್ರಿವಿಧಭೇದ ವರ್ತುಳ ಗೋಮುಖ ಗೋಳಕಾಕಾರ ಕೂಡಿದ ಲಿಂಗವಾದಲ್ಲಿ (ವೋಳಿವಾ. ೬-೨೫). ೪. ವಿಲೇಪನ; ಅನುಲೇಪನ : "ಅನುಲೇಪನದೊಳಾರ್ಯೆಯ ಗೋಮುಖಮೆನಿಪ್ಪುದು" (ಮಂಗರಾ. ೧೩೯-೮). ೫. ಒಂದು ಬಗೆಯ ವಾದ್ಯ : ಮೊಳಗುವ ಕಹಳಾರವದ ಡಿಂಡಿಮ ಮುರಜ ಗೋಮುಖ ಪಟಹ . . . ಢಕ್ಕೆ ಡವುಡೆಗಳ ಬಿರಿಯೆ ನೆಲನಳ್ಳಿರುವ ವಾದ್ಯದ ಹರುಷತರ ನಿರ್ಘೋಷದಬ್ಬರ (ಕುವ್ಯಾ.ಶ. ೨-೫); ಗಜರಿದವು ಡಂಗುರಂ ಪೆರ್ಗಹಳೆ ಗೋಮುಖಗಳು (ಶರಶು. ೨೯-೧೮). ೬. ಮದ್ಯಪಾನದಲ್ಲಿ ಆಸಕ್ತಿಯುಳ್ಳವನು: "ಆಸವಾಸಕ್ತನಶುದ್ಧವಾದ್ಯ ಪಶುತುಂಡ ವಿಲೇಪನ ಗೋಮುಖಾಹ್ವಯಂ" (ನಾನಾರ. ೨೦). ೭. ಕಂಡಿ; ರಂಧ್ರ : (ಕ) [ಗೋ + ಮುಖ]

**ಗೋಮುಖವ್ಯಾಘ್ರ** (ನಾ). ಮೇಲ್ನೋಟಕ್ಕೆ ಹಸುವಿನಂತೆ ಸಾಧುವಾಗಿ ಕಂಡರೂ ಒಳಗೆ ಹುಲಿಯಂತೆ ದುಷ್ಟಗುಣಗಳುಳ್ಳವನು; ಕಪಟಿ: ಲೋಕದಲ್ಲಿ ಗೋಮುಖವ್ಯಾಘ್ರಗಳು ಎಷ್ಟಿಲ್ಲ? (ಅಷಾಭೂ. ೪೪). [ಗೋಮುಖ + ವ್ಯಾಘ್ರ]

**ಗೋಮುಖಸೂತ್ರ** (ನಾ). ವಿಗ್ರಹದ ಪೀಠಗಳಿಂದ ಅಭಿಷೇಕದ ನೀರು ಹರಿದುಹೋಗುವಂತೆ ಮಾಡಿರುವ ಪ್ರಣಾಳಿಕೆ: "ಪ್ರಣಾಳೀ, ಪಯಸಃ, ಪದವ್ಯಾಂ–ಗೋಮುಖಸೂತ್ರ ಬಚ್ಚಲು ದೋಣೀ ಮುಂತಾದ ನೀರು ಹರಿಯುವ ದಾರಿಗಳು" (ಸಿದ್ಧಾಂತಿ. ೭೯). [ಗೋಮುಖ+ಸೂತ್ರ?]

**ಗೋಮುಖಾಸನ** (ನಾ). [ಯೋಗ] ಒಂದು ಬಗೆಯ ಆಸನ : ಎಂಬತ್ತುನಾಲ್ಕಾಸನಬಂಧಗಳೊಳಗೆ ಸಿದ್ಧಾಸನ ಪದ್ಮಾಸನ ಸ್ವಸ್ತಿಕಾಸನ ವೀರಾಸನ ಗೋಮುಖಾಸನ ಸುಖಾಸನಂಗಳೇ ಜಪಸಿದ್ಧಿಗೆ ಯೋಗ್ಯಗಳಾದ ಷಡಾಸನಂಗಳು (ವಿವೇಕ. ೯೫). [ಗೋಮುಖ + ಆಸನ]

**ಗೋಮುಖಿ** (ನಾ). ೧. ಜಪಸರವನ್ನು ಇಡುವ ಚೀಲ : ಗೋಮುಖಿಗಳಲ್ಲಿ ಕೈಗಳನ್ನು ಇಟ್ಟು ಜಪಮಾಡುತ್ತಲೂ ಧ್ಯಾನಸ್ಥರಾಗಿ ಕುಳಿತುಕೊಂಡಿದ್ದರು (ಮಂಜುಕ. ೬). ೨. [ಜೈನ] ಒಂದು ವ್ರತದ ಹೆಸರು: ನಂದಗೋಪನಂ ಬರಿಸಿ ತಾಮುಂ ಗೋಮುಖಿಯೆಂಬ ನೋಂಪಿಗೆ ಬಂದುದನಱಿಪಿ (ಬಂಹರಿ. ೬-೨೪ ವ). [ಸಂ. ಗೋಮುಖೀ]

**ಗೋಮುಳ್ಳು** (ನಾ). ಒಂದು ಬಗೆಯ ಸಸ್ಯ : ಗೋಮುಳ್ಳು, ರಾಜಬುರಿಹಣ್ಣು (ಮೃಜಿಗಿ. ೬೭-೧೩೬೧). [?]

**ಗೋಮೂತ್ರ** (ನಾ). ೧. ಹಸುವಿನ ಮೂತ್ರ; ಗಂಜಲ : ತಣಿಯುಂಡ ಮರ್ದಂ ಗೋಮೂತ್ರದಿಂದೆ ಬಾಯ್ಕೊಳಿಸಿದವೋಲ್ (ಪಂಪಭಾ. ೬-೪೮). ೨. ನಡೆಯುತ್ತಾ ಮೂತ್ರಿಸಿದ ದನದ ಗಂಜಲದಿಂದ ನೆಲದ ಮೇಲೆ ಉಂಟಾದ ಅಂಕುಡೊಂಕಾದ ರೇಖೆ : ವಾತನಾಡಿಯು ಗೋಮೂತ್ರದ ಹಾಗೆ ಡೊಂಕಾಗಿ ನಡೆವುದು (ಸಕವ್ಯ. ೧೩). ೩.=ಗೋಮೂತ್ರಕ: ಅಗ್ಗಳಮಾಗಿ ಕಾಲ್ಗಿಡಿಸಲುಂ ಮುರಿದು ಕಿಟ್ಟಿಡಂ ತಡಮೊಂಬಿವಱಿಂದಂ ಬಾಹುಕೈಕೊಳ್ಳೆಂಬಿವು ಮೊದಲಾಗಿ ಗೋಮೂತ್ರಮಂಡಲಮುಮಾಕಾಶಂ ಪೇಜವಿತಿಯುಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲಂ (ಶಾಂತಿಪು. ೩-೨೩ ವ). [ಗೋ + ಮೂತ್ರ]

**ಗೋಮೂತ್ರಕ** (ನಾ). ಗದಾಯುದ್ಧದಲ್ಲಿ ಒಂದು ಪಟ್ಟು,-ವರಸೆ: ಬಿಡುವ ಬಿಡಿಸುವ ಪರರ ಘಾಯವ ತಡೆವ ಗೋಮೂತ್ರಕದ ಚಿತ್ರದ . . . ಅವಗಡಿಸುವೌಕುವ ಕುಶಲದಲಿ ಕಾದಿದರು ಸಮರದಲಿ (ಕುವ್ಯಾಗ. ೬-೨೪). [ಸಂ.]

**ಗೋಮೂತ್ರಿಕೆ** (ನಾ). ೧. = ಗೋಮೂತ್ರಕ : ಭೀಮನು . . . ಮಂಡಲಗಳು ಯಮಕಗಳು ಗೋಮೂತ್ರಿಕೆ ಮುಂತಾದ ಚಿತ್ರವಿಚಿತ್ರವಾದ ಗತಿಗಳಲ್ಲಿ ಓಡಾಡುತ್ತ ಎದುರಾಳಿಯನ್ನು ಬುದ್ಧಿಭ್ರಮೆಗೊಳಿಸುವುದಕ್ಕೆ ಪ್ರಯತ್ನಪಟ್ಟನು (ವಚಭಾ. ೩೦೭). ೨. [ಕಾವ್ಯಮಿ] ಒಂದು ಬಗೆಯ ಚಿತ್ರಬಂಧ; ಒಂದು ಶ್ಲೋಕದಲ್ಲಿ ಪೂರ್ವಾರ್ಧವೂ, ಆ ಪೂರ್ವಾರ್ಧದ ವಿಷಮಾಕ್ಷರಗಳನ್ನು ಉತ್ತರಾರ್ಧದ ಸಮಾಕ್ಷರಗಳೊಡನೆ ಕ್ರಮವಾಗಿ ಸೇರಿಸಿದಾಗ ಆಗುವ ಶ್ಲೋಕಾರ್ಧವೂ ಒಂದೇ ಆಗಿರುವ, ಹಾಗೆಯೇ ಶ್ಲೋಕದ ಉತ್ತರಾರ್ಧವೂ, ಆ ಅರ್ಧದ ವಿಷಮಾಕ್ಷರಗಳನ್ನು ಪೂರ್ವಾರ್ಧದ ಸಮಾಕ್ಷರಗಳೊಡನೆ ಕ್ರಮವಾಗಿ ಸೇರಿಸಿದಾಗ ಆಗುವ ಶ್ಲೋಕಾರ್ಧವೂ ಏಕರೂಪವಾಗಿರುವ ಬಂಧ. ಇದರ ಪೂರ್ವೋತ್ತರಾರ್ಧಗಳಲ್ಲಿ ಸಮಾಕ್ಷರಗಳು ಒಂದೇ ಆಗಿರುತ್ತವೆ : ಇದು ಪಣವಬಂಧಮುಂ ಗೋಮೂತ್ರಿಕೆಯುಮಕ್ಕುಂ (ಮದತಿ. ೧-೪೦ ವ); ಮುರಜಂ ಗೋಮೂತ್ರಿಕೆ ಪುಷ್ಕರಮರ್ಧಭ್ರಮಣ ಸರ್ವತೋಭದ್ರಂಗಳ್ (ಕಾವ್ಯಾವ. ೫೭೯). ಉದಾ : ಜಲದಾಗಮದಿಂ ಚಿತ್ರಸ್ಖಲಿತಂ ಕೇಕಿನರ್ತನಂ ಜಲದಾಗಮದಿಂ ಚಿತ್ರಸ್ಖಲಿತಂ ಕೇಳನಲ್ಲನಂ (ಕವಿರಾ. ೨-೧೨೮).




[ಸಂ. ಗೋಮೂತ್ರಿಕಾ]

**ಗೋಮೆ** 'ಗೋಮ್ಮು' ನೋ.

**ಗೋಮೇದಕ** (ನಾ). ನವರತ್ನಗಳಲ್ಲಿ ಒಂದು :" ಬಂಧುರ ಪಿಶಂಗಾಶ್ಮವೆನೆ ಗೋಮೇದ[ಪಾಠಾಂ. ಧಿ]ಕಂ " (ಮಂಗರಾ. ೩೧-೬). [ಸಂ.]

**ಗೋಮೇದಿಕ** 'ಗೋಮೇಧಿಕ' ನೋ.

**ಗೋಮೇಧ** (ನಾ). ಗೋವನ್ನು ಬಲಿಕೊಡುವ ಯಜ್ಞ. [ಗೋ + ಮೇಧ]

**ಗೋಮೇಧಿಕ,** ಗೋಮೇದಿಕ (ನಾ).=ಗೋಮೇದಕ : "ಪಿಂಗಸ್ಫಟಿಕ – ಗೋಮೇಧಿಕ" (ಒಷಧಿ. ೯೮) ; ಗೋಮೇಧಿಕದ ಭಿತ್ತಿಯೊಳಂ ಚಂದ್ರಕಾಂತದ ಗವಾಕ್ಷಂಗಳೊಳಂ (ಪುಷ್ಪಪು. ೮-೫೦ ವ) : ಗೋಮೇಧಿಕಾಂಚಿತ ನವೀನ ವಿಟಂಕಪಾಳೀ (ಹಮ್ಮೀರ. ೪-೩೮) : ತೊಳಪ ವೈಡೂರಿಯದ ಮದನಕ್ಕೆ ಮಿಱುಪ ಗೋಮೇಧಿಕದ ಬೋದಿಗೆಗಳ (ಜೈಮಿಭಾ. ೧೭-೨೩). **ಗೋಮೇದಿಕ:** ಅದೊ ಅಲ್ಲಿ ಗೋಮೇದಿಕಂ (ಶ್ರೀರಾಮಾ. ೨೮೭-೨೮).

[ < ಸಂ. ಗೋಮೇದಕ ]

**ಗೋಯಿಂದ** (ನಾ).=ಗೋವಿಂದ. ೨. 'ಗೋಯಿಂದಯ್ಯ', 'ಗೋಯಿಂದರಸ' ಪರಾ. [ < ಸಂ. ಗೋವಿಂದ ]

**ಗೋಯಿಂದಪೊಡ್ಡಿ** (ನಾ). ಒಬ್ಬಾಕೆಯ ಹೆಸರು: ದೇಗುಲದ ಸೂಳೆ ಗೋಯಿನ್ದಪೊಡ್ಡಿಯ ಮಗಳು ಬಾದಿ(?ಳಿ)ಪೊಡ್ಡಿಯೆಂಬೊಳ್ (ಇಆ. XI, ೧೨೫-೪ ; 773). [ ಗೋಯಿಂದ + ಪೊಡ್ಡಿ ]

**ಗೋಯಿಂದಮ್ಮ** (ನಾ). ಒಬ್ಬಾತನ ಹೆಸರು: ಗೋಯ್ಯಿನ್ದಮ್ಮಗಳ ಬುಗಣ್ಣಗ ಬೆದೆನ್ನೆಲ್ಮಣ್ಯೊಟ್ಟರ್ (ಮೈಆರಿ. ೧೯೩೨, ೫೮-೪ ;825).

[ ಗೋಯಿಂದ + ಅಮ್ಮ$_1$ ]

**ಗೋಯಿಂದಯ್ಯ** (ನಾ). ಒಬ್ಬಾತನ ಹೆಸರು: ಇದರ್ಗೆ ಸಾಕ್ಷಿ ಗೋಯಿನ್ದಯ್ಯನುಂ (ಎಕ. IV. ಶ್ರೀರಂಗ. ೧೬೦-೧೬ ; ಸು. 800).

[ ಗೋಯಿಂದ + ಅಯ್ಯ$_1$ ]

**ಗೋಯಿಂದರ** (ನಾ). ಒಬ್ಬಾತನ ಹೆಸರು: ಶ್ರೀ ಗೋಯಿಂದರ ಬಲ್ಲಹಂ ಪ್ರಿಥುವೀರಾಜ್ಯಂಗೆಯೆ (ಎಕ. VIII, ಸೊರಬ. ೧-೧ ; 797 ?) ; [ರಾ]ಜಪರಮೇಶ್ವರ ಗೋಯಿನ್ದರ ಭಟಾರರಾ (ಇಆ. XI, ೧೨೭-೫ ; 803). 'ಕನ್ನರ' ಪರಾ. [ ಗೋಯಿಂದ + ಅರ$_4$ ]

**ಗೋಯಿಂದರಸ** (ನಾ). ಒಬ್ಬಾತನ ಹೆಸರು: ಶ್ರೀಮಾಱಗ್ಗೋಯಿನ್ದರಸರ್ ಪ್ರಭೂತುಙ್ಗ ಮರಿಯಾದೆಯಂ ದಯೆಗೆಯ್ದಂ (ಮೈಆರಿ, ೧೯೪೨, ೪೭-೮ ; 790). [ ಗೋಯಿಂದ + ಅರಸ$_1$ ]

**ಗೋಯಿತಿ** (ನಾ). (?) : ಅಕ್ಕಣಬ್ಬೆ ಗೋಯಿತಿ ಕೋಟೆಯಮ್ಮನಕ್ಕಂ (ಮೈಆರಿ. ೧೯೨೯, ೭೯-೪ ; 964). [ ? ]

**ಗೋಯಿ** (ನಾ). ಕಾವಲುಗಾರ; ಪಾಲಕ; ರಕ್ಷಕ: ಅಗುರ್ವುವೆತ್ತಱಿಕೆಯ ಬೇಡವಟ್ಟಗಳ ಬೂತುಗಬೀರುಗ ಗೋಯಿ[ಪಾಠಾಂ. ಲೆ]ಯರ್ಕಳಂ ನೆಱಿಯರೆನಿಪ್ಪೊರಂ ಕಿಡಿಸಲಂಕದ ಮುನ್ನಿನ ಚಕ್ರವರ್ತಿಗಳ್ ಪೆಱರಳವಳ್ಪುವಂ ಕಿಡಿಸಿತೊಟ್ಟಜೆ ತೈಲಪ ಚಕ್ರವರ್ತಿಯಾ. (ಕಾವ್ಯಾವ. ೨೧೨)

[ <ಪ್ರಾ. ಗೋಅ./ಸಂ. ಗೋಪ ]

**ಗೋರ್, ಗೋರು$_1$** (ಕ್ರಿ). ೧. ಎಳೆದುಕೊಳ್ಳು ; ಕೆರೆದು ತೆಗೆ : ಗಜಂ ಮಣ್ಣಂ ಗೋರೆ (ರಾಮಾಶ್ವ. ೬೬-೧೦). ೨. ಬಲೆಯಿಂದ ಮೀನು ಹಿಡಿ : "ಗೋರ್–ಜಾಲಕರಣೇ (ಬಲೆಯಿಂದ ಮೀನುಹಿಡಿ)" (ಶಮಧಾ) ; ನೇರ್ದಂ, ಬಾರ್ದಂ, ಗೋರ್ದಂ, ಸೋರ್ದಂ (ಶಮದ. ೪೦). ೩. ದೋಚು; ಕವರು: ಪೀರ್ದಮರ್ದುಟಿಯಂ ತಳ್ಕಿಗೆ ಸಾರ್ದು . . . ಒಡವೆರಸಲ್ ಕಾಮಂ ಗೋರ್ದಬಲೆಯರೊಡನೆ ತೊಱಿವರೇಕಾದಶಿಯೊಳ್ (ಮನ್ಮವಿ. ೩-೨೧). ೪. ಗೆರೆಹಾಕು ; ಕೆರೆ; ಚುಚ್ಚು ; ತಿವಿ. 'ಗೋರಿಕಲ್' ಪರಾ. **ಗೋರು$_1$ :** ೧. ಬ್ರಹ್ಮ ಮಣಿಯಾದ ವಿಷ್ಣು ಬಲೆಯಾದ ಸಕಲ ದೇವತಾ ಕುಲವೆಲ್ಲ ಗೋರುವ ದಾರವಾದರು (ಗುಪ್ತಮಂ. ೭೭) ; ಬಳಿಕವ ಗೋರಿದನು ಗುಡಿಯಿಱಿದು ಬಾಲದ ಗೋರೆಯಲಿ ತಳಮಗುಚಿದನು ತೋರಣದ ಸಾಲುಗಳ (ತೊರರಾ. ೫-೭-೧೬) : ವೆಂಕಟರಮಣಯ್ಯ ಹಂಡೆಯಿಂದ ನೀರನ್ನು ಗೋರಿ ಗೋರಿ ಮೈಮೇಲೆ ಸುರಿದುಕೊಂಡರು (ಸರಸ. ೫೮) ; ಕೆನೆಸುಣ್ಣವನ್ನು ಉಗುರಿನಲ್ಲಿ ಒಂದಿಷ್ಟು ಗೋರಿಕೊಂಡು ಎಡ ಅಂಗೈಗೆ ಹಚ್ಚಿ (ನನ್ನೂರು. ೧೮೨). ೩. ಇದೋ ಆಣತಿಯನಿತ್ತಪೆನ್ . . . ಲಂಕೆಯ ನಿರದೆ ಗೋರಿ ಸೋವಲ್ (ಶ್ರೀರಾಮಾ. ೪೭೩-೭೪೯); ಇಬ್ಬರು ಹುಡುಗರು . . . ತಮ್ಮ ಕೈಗೆ ಸಿಕ್ಕಿದುದನ್ನು ಗೋರಿಕೊಂಡರು (ಪುನರು. ೧೫೯). ೪. 'ಗೋರುಳಿ' ಪರಾ. ೫. ತೂರಿ ರಾಶಿಮಾಡುವುದರಿಂದ ಕಾಳಿನಲ್ಲಿಯ ಕಸವನ್ನು ಹೋಗಲಾಡಿಸು: (ಕ). ೬. = ಗೋರಿಸು ೨: ಗದ್ದೆ ಗೋರುವ ಹಲಗೆಯಲ್ಲಿ ಎಲೆ ಹಾಸಿ (ಕಎಪು. ೪೪-೩). ೭. ಗಾಯಗೊಳಿಸು ; ನೋಯಿಸು ; ಹಿಂಸಿಸು: ಶೋಕಪನ್ನಗಘೋರವಿಷ ಮುನಿವರನ ಹೃದಯವ ಗೋರಿತೇನೆಂಬೆನು ಲತಾಂಗಿಯರಳಲ ಕಳವಳವ (ಕುವ್ಯಾಗ. ೧೦-೯); ಬಾಲತನದಲಿ ತಾಟಕಿಯ ಗೋನಾಳಿಯನು ಗೋರಿದನು(ತೊರರಾ.೧-೨-೩೦); ಸಾರೆಯಿಹ ವೈರಿಯನೆ ಗೋರುವೀ ಕೂರಂಬು (ದಿಲೀಚ. ೧-೫೧).

[ ದೇ.॥ ತಮಿ. ಕೋರು, ಕೋಲು ; ಮಲ. ಕೋರು ;
ತುಳು. ಕೋರು, ಗೋರು ; ತೆಲು. ಗೋಕು ]

**ಗೋರ** (ನಾ). ಒಂದು ಬಗೆಯ ಗಿಡ : "ಗಂಧಾಢ್ಯಃ – ಕುಂಕುಮ, ಗೋರ, ಹೇರಿಳೆ (ಹಿರಳಿ ?)" (ಒಷಧಿ. ೪೪). [ ? ]

**ಗೋರಂಟ** 'ಗೋರಂಟೆ' ನೋ.

**ಗೋರಂಟಿ$_1$** 'ಗೋರಂಟೆ' ನೋ.

**ಗೋರಂಟಿ$_2$** (ನಾ). ಒಂದು ಬಗೆಯ ಗಿಡ ; ಮದರಂಗಿ ; ಮೆಹಂದಿ. ☞ ಇದರ ಎಲೆಯಿಂದ ತೆಗೆದ ರಸವನ್ನು ಹೆಣ್ಣುಮಕ್ಕಳು ಅಲಂಕಾರಕ್ಕಾಗಿ ಉಗುರು, ಕೈ ಮತ್ತು ಪಾದಗಳಿಗೆ ಹಚ್ಚುವರು : ಗೋರಂಟಿ ಮದರಂಗಿ (ಮೈಜಿಗಿ. ೪೯-೯೮೪) ; ಗೋರಂಟಿಯ ಬಣ್ಣದಿಂದ ರಂಜಿಸುವ ಹಸ್ತಪಾದಗಳು (ದೌಲತ್. ೫೧೨). [ ←ತೆಲು. ಗೋರಂಟ ]

**ಗೋರಂಟೆ, ಕೋರಂಟಿ, ಗೊರಟಿ, ಗೊರಟೆ$_2$, ಗೋರಂಟ, ಗೋರಂಟಿ$_1$, ಗೋರಟಿ, ಗೋರಟೆ** (ನಾ). ಕೆಂಪು, ನೀಲಿ, ಬಿಳಿ ಅಥವಾ ಹಳದಿ, ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ; ಸ್ಫಟಿಕದ ಗಿಡ ; ಕುರಂಟಕ: "ಕಿಂಕಿರಾತಂ, ಕುರಂಟಕಂ–ಈ ೨ ಗೋರಂಟೆ" (ಹಲಾಯು. ೩೫-೫೪); ಗೋರಂಟೆಯ ಬಿತ್ತಂ ಪಟನೀರಿಂ ಕುಡಿಯಿಸುವುದು(ಲೋಕೋಪ. ೯-೧೭೮) ; ಗೋರಂಟೆ ವೃಕ್ಷವಂ ಸ್ತ್ರೀಜನರು ಆಲಿಂಗನಂಗೈದರೆ ಚಿಗುರುಗಳಾಗಿ ಪುಷ್ಪಂಗಳಂ ಧರಿಸುವವು (ಸೌಗಂಧಿ. ೪೩೯). **ಕೋರಂಟಿ :** ಪಾರಿಜಾತದ ಪುಷ್ಪ ಇರುವಂತಿಗೆ ಪುಷ್ಪ . . . ಕೋರಂಟಿ ಸಿಂಹಾಚಲ ಸಂಪಿಗೆ (ಸಿದ್ಧಪು. ೧೮-೯೧). **ಗೊರಟಿ :** "ಝಿಂಟಿ – ಕರಿಯ ಗೊರಟಿ" (ಅಕಾನಿ. ೧೧-೩). **ಗೊರಟೆ$_2$ :** ಗೊರಟೆ ಸಂಪಗೆಯಾದಿಯಾದಾ ತರುಗಳಿಗೆ ಪರ್ಬಿಪರ್ಪ ವನಲತೆ (ರಾಮಾಸಂ. ೩-೫-೫೮) ; ಮುಡಿಸಿದ್ದ ಗೊರಟೆ ಹೂಗಳ ಹಳದಿಯ ನಡುವೆ ಕೆಂಪು ಪರ್ವತ ಬಾಳೆಯ ಹೂಗಳೂ . . . ರಂಜಿಸಿದ್ದುವು (ಮಲೆಮ. ೯೮). **ಗೋರಂಟ :** "ನೀಲಿ, ಝಿಂಟೀ, ಬಾಣಾ, ದಾಸೀ, ಆರ್ತಗಳ:–೫ ಕರೀಹೂವುಳ್ಳ ಗೋರಂಟದ ಹೆಸರುಗಳು" (ಸಿದ್ಧಾಂತಿ. ೧೧೩). 'ಮುಳ್ಳುಗೋರಂಟ' ಪರಾ. **ಗೋರಂಟಿ$_1$ :** "ಸಹಾ, ಕುಮಾರೀ, ತರಣೀ – ಈ ೩ ಗೋರಂಟಿ" (ನಾಚಿರಾ. ೧೦೮). **ಗೋರಟಿ :** ಅದರಗಂಟಿ ಗೋರಟಿ ರುದ್ರಗಂಟಿ ಜಾಜಿ (ಕೃಷಿಪ್ರ. ೨೦೧). **ಗೋರಟೆ:** "ಝಿಂಟಿಕೆ ಬಾಣನೀಲಿಕಂ ಗೋರಟೆಯೆನಿಕ್ಕು" (ಮಂಗರಾ. ೩೭-೨೧) ; ಕುರಂಟ – ಗೋರಟೆ (ಶಮದ. ೨೭೦ ಪ್ರಯೋ) ; ಕೊಱವಾವಿನ ತೂರ್ಯನ ವಿಷಮುಖಿಗುಂ ಗೋರಟೆಯ ಮೂಲಮಂ ಪೂಸಲೊಡಂ (ಖಮದ. ೧೦-೬೮) ; ಅರಿಸಿನ ಗೋರಟೆ ಕೆಂಜಾಜಿಯದಿರ್ಗಂತಿ ಕರಿಯ ಗೋರಟೆರಸದಿಂದ (ಜ್ಞಾನಚ. ೪೦-೫೨). [ < ಸಂ. ಕುರಂಟ ]

**ಗೋರಕ್ಷ** (ನಾ). ೧. ಗೋವುಗಳನ್ನು ರಕ್ಷಿಸುವವನು ; ಗೋಪಾಲ : ಗೋವಿಂದ ಗೋಪಿಕಾರಮಣ ಗೋಕುಲವಾಸ ಗೋವ[ಳ]ರಾಣ್ಮ ಗೋರಕ್ಷ (ಶತಸಾಂ. ೬೧-೫). ೨. ಒಂದು ಬಗೆಯ ಮರ ; ಹಾಲೆ : "ಜೀವ್ಯಾ – ಹಾಲೆ, ಗೋರಕ್ಷ, ದುಗ್ಧಿ, ಅಣಿಲೆ" (ಒಷಧಿ. ೬೨): ಗೋರಕ್ಷನ

ಮೂಲಿಕೆಯಾ ಕ್ಷೀರಮುಮಂ ಪಟ್ಟಿಯಿಂದೆ ಯೋಜಿಸಿ ಮಡಗುಗೆ (ಖಮುದ. ೬-೫೪). ೩. ನಾಥಪಂಥದ ಒಬ್ಬ ತಪಸ್ವಿ; ಗೋರಖನಾಥ: ಕೃಪೆಯಿಂದಾಗಳಾ ಗೋರಕ್ಷನಲ್ಲಿಗೆ ಬಂದ ಪ್ರಭುರಾಯ (ಪ್ರಭುಲಿ. ೧೯-೧೪). [ಸಂ.]

**ಗೋರಕ್ಷಕ** (ನಾ). ಗೋಪಾಲಕ; ಗೊಲ್ಲ: "ಗೋಪ, ಪಶುಪಾಲಕ" (ನಾನಾರ. ೬. ೫೩). [ಗೋ + ರಕ್ಷಕ]

**ಗೋರಕ್ಷಣ** (ನಾ). ಪಶುಪಾಲನೆ: "ವೈಶ್ಯನರ್ಯನೆನೆ ಪರದನವಂಗಾರಂಬಂ ವಾಣಿಜ್ಯಂ ಗೋರಕ್ಷಣಮೆಂಬ ವಾರ್ತೆ ಜೀವಿಕೆಯಕ್ಕುಂ" (ವಸ್ತುಕೋ. ೬೨-೬೨). [ಗೋ + ರಕ್ಷಣ]

**ಗೋರಕ್ಷದುಗ್ಧಿ** (ನಾ). ಸಿಹಿಹಾಲೆ ಗಿಡ (?): "ಮುನಿಃ –ಗೋರಕ್ಷದುಗ್ಧಿ, ಕುಂಬಳ . . . ಮಾಸರೋಹಿಣಿ" (ಒಷಧಿ. ೧೨೫). [ಗೋರಕ್ಷ + ದುಗ್ಧಿ]

**ಗೋರಕ್ಷಮೂಲಿ** (ನಾ).=ಗೋರಕ್ಷದಂಗ್ಧಿ (?); "ರಸಾಹ್ವಯಂ–ತವರ, ಗೋರಕ್ಷಮೂಲಿ, ಜಟಾಮಾಂಸಿ, ಬಲುಕುಣಿಕೆ" (ಒಷಧಿ. ೧೬೭). [?]

**ಗೋರಕ್ಷಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ: ಮುಖ್ಯವಾದ ಕೆಲವು ಆಸನಗಳು . . . ೪೨. ಗೋರಕ್ಷಾಸನ, ೪೩. ಉಷ್ಟ್ರಾಸನ (ಭಾರದ. ೧೬೭). [ಗೋರಕ್ಷ + ಆಸನ]

**ಗೋರಕ್ಷಿ** (ನಾ).=ಗೋರಕ್ಷ ೨. (?): "ಗೋರಕ್ಷದುಗ್ಧಿ, ಗೋರಕ್ಷೀ, ಗೋರಕ್ಷಮಂ – ಈ ಮೂಱುಂ ಗೋರಕ್ಷಿಮೂಲ" (ಒಷಧಿ. ೫೦); "ದೀರ್ಘದಂಡೀ – ಗೋರಕ್ಷಿ" (ಒಷಧಿ. ೭೬). [ಸಂ. ಗೋರಕ್ಷೀ]

**ಗೋರಕ್ಷೆ** (ನಾ). = ಗೋರಕ್ಷ ೨: "ಗಂಧಬಹುಳ – ಗೋರಕ್ಷೆ" (ಒಷಧಿ. ೪೭). [ಸಂ. ಗೋರಕ್ಷಾ]

**ಗೋರಜ** (ನಾ). ಗೋವುಗಳ ಹೆಜ್ಜೆಯಿಂದೆದ್ದ ಧೂಳು: ಗೋರಜದಿಂದ ಗೋಮೂತ್ರಾಭಿಷೇಕದಲಿ . . . ಎಸಗಿದರಂದು ರಕ್ಕೆಗಳ (ನಿಭಾಗ. ೧೧-೫-೪೭); ಹೇ ಕೃಷ್ಣ ರಾಧೆಯು ಗೋರಜವನು ನೀನು ಮುಖ ಮಾರುತವನೂದಿ ಕಳೆದೆ (ಗಾಥಾಸ ೧-೬೯). 'ಗೋರಜಮುಹೂರ್ತ' ಪರಾ. [ಗೋ + ರಜ$_1$]

**ಗೋರಜಮುಹೂರ್ತ** (ನಾ). ಸಾಯಂಕಾಲದಲ್ಲಿರುವ ಒಂದು ಪ್ರಶಸ್ತವಾದ ಮುಹೂರ್ತ; ಗೋಧೂಳಿಯ ಮುಹೂರ್ತ: ಮರುದಿವಸ ಗೋರಜಮುಹೂರ್ತದ ಮೇಲೆ ಲಗ್ನವಾಯಿತು (ವಂಜುಕ. ೧೮೯); ಸಕಲಸುಮಂಗಲಮೂಲವಾದ ಆ ಪವಿತ್ರ ಗೋರಜಮುಹೂರ್ತವನ್ನು ಬ್ರಾಹ್ಮಣರು ಜನಕರಾಜನಿಗೆ ಹೇಳಿದರು (ತುಳಸಿ. ೯೪). 'ಗೋಧೂಳಿ ಲಗ್ನ' ಪರಾ. [ಗೋರಜ + ಮುಹೂರ್ತ]

**ಗೋರಟಿ** 'ಗೋರಂಟೆ' ನೋ.

**ಗೋರಟೆ** 'ಗೋರಂಟೆ' ನೋ.

**ಗೋರಥ** (ನಾ). ೧. ಎತ್ತುಗಳನ್ನು ಹೂಡಿದ ರಥ; ಎತ್ತಿನ ಬಂಡಿ ವಿರಾಜಿಸಿರ್ದ ಗೋರಥಮಂ ಪೆಂಪಗಲದೊಡನೇಱಿ (ವೃಷವಿ. ೩೮-೭೦). ೨. ಎತ್ತನ್ನು ವಾಹನವಾಗಿ ಉಳ್ಳವನು; ವೃಷಭವಾಹನ; ಶಿವ. ೩. ಒಂದು ಪರ್ವತದ ಹೆಸರು: ಅವರು ಗೋರಥಪರ್ವತದ ಹತ್ತಿರಕ್ಕೆ ಬಂದರು (ವಚಭಾ. ೭೮). [ಸಂ. (ಗೋ + ರಥ)]

**ಗೋರಸ** (ನಾ). ೧. ಹಸುವಿನ ಹಾಲು: ಗೋರಸದೊಳ್ಕೂಡಿರ್ದಾ ಹಾರಮನಾ ಗೋಸ್ತನದಲ್ಲಿ ಗೋವಳನಿಕ್ಕಲ್ಕಾರೋಗಿಸಲಕ್ಕುಂ (ಸಮುಹ. ೬-೯೭); ಬಾಲೆಯರು ತಮ್ಮೊಳಗೆ ಗೋರಸ ತೈಲ ಕುಂಕುಮ ಗಂಧಜಲದಲಿ ಮೇಲೆ ಹೊಯ್ದಾಡಿದರು (ನಿಭಾಗ. ೧೦-೮೦-೩೭). ೨. ಮಜ್ಜಿಗೆ: "ಗೋರಸ ದಂಡಾಹತ ಮಥಿತ . . . ಅಂತದು ತಕ್ರಂ" (ವಸ್ತುಕೋ. ೯೨-೧); ಗೋರಸವಿಲ್ಲದ ಭೋಜನ ಪೂರೈಸಿಯೆ ಬರದ ವಿದ್ಯೆ (ಪಂಚಶ. ೨೮-೩೫). [ಗೋ + ರಸ]

**ಗೋರಾ** (ಗು). ಬಿಳಿಯ ಬಣ್ಣದ: ಗೋರಾ (ಬಿಳಿ) ಮಂದಿಯ ದೊಡ್ಡ ಮನಸ್ಸು ಕಾಳಾ (ಕಪ್ಪು) ಮಂದಿಗೆಲ್ಲಿಂದ ಬರಬೇಕು ಹೇಳಿರಿ (ನಾಪೋಲೀ. ೫೦). [←ಮರಾ. ಗೋರಾ./ ಪ್ರಾ.ಗೋರ. / ಸಂ. ಗೌರ]

**ಗೋರಾಗುಮ್ಮಟ** (ನಾ). ಬೆಳ್ಳಗೆ ದಷ್ಟಪುಷ್ಟವಾದುದು; ಸುಂದರವಾದುದು; ಚೆಲುವಾದುದು: ಅವನು ಅಷ್ಟೊಂದು 'ಗೋರಾಗುಮ್ಮಟ' ವಾಗಿ ಬೆಳೆದಿದ್ದಾನೆ (ಕಂಬಹು. ೪೮). [←ಮರಾ. ಗೋರಾಗೋಮಟಾ]

**ಗೋರಾಜ** (ನಾ). ೧. ಶ್ರೇಷ್ಠವಾದ ಎತ್ತು; ವೃಷಭ. ೨. ನಂದಿ. ೩. ಚಂದ್ರ. ೪. ಇಂದ್ರ. ೨, ೩, ೪: ಸಕಲಪ್ರತ್ಯರ್ಥಿ ಧಾತ್ರೀಪರಿತಲ (?) ಪರಿವೃಢ ಗೀರ್ವಾಣ ನಿರ್ವಾಣಕರಂ ಶುಭ್ರಾಭ್ರುದುಗ್ಧಾರ್ಣವ ಪುರಹರ ಗೋರಾಜ ಗೋರಾಜ ಗೋರಾಜ ಕರೀಂದ್ರ ಶ್ವೇತಪದ್ಮ ತ್ರಿದಿವಭವಧುನೀ . . . ಅರ್ಧೇಂದುಪ್ರಭಾಭಾಸುರ ವಿಶದಯಶಂ ನೀತಿಮಾಂಧಾತಭೂಪಂ (ಮಂದಶಿ. ೧-೧೨). ೫. ನೀರಿನ ಅಧಿಪತಿ; ವರುಣ. ೩, ೪, ೫: ಸಾರತರ ವಿಭವದೊಳ್ಸುಕುಮಾರತೆಯೊಳ್ಸುಜನವೃತ್ತಿಯೊಳ್ಪ್ರಹ್ವಸುತಂ ಗೋರಾಜಂ ಗೋರಾಜಂ ಗೋರಾಜಂ ಕೂಚಿರಾಜ ಸಿತಗರ ಗಂಡಂ (ಎಕ. IV, ಚಾಮರಾ. ೧೫೨-೫; ಸು. 1400 ?). [ಗೋ + ರಾಜ]

**ಗೋರಾಜಿ** (ನಾ). ಹಸುಗಳ ಹಿಂಡು; ಗೋವುಗಳ ಸಮೂಹ: ತತ್ತೀರದೆ ಕಱುಂಕೆಗಳೆಸುವ ಗೋರಾಜಿಯ ಲೀಲೆ ಕಣ್ಗೆ ಪಡೆದುದು ಚೆಲ್ವಂ (ಚಂದ್ರಪು. ೨-೨೭). [ಗೋ + ರಾಜಿ$_1$]

**ಗೋರಾಡ್ಗಮನ** (ನಾ). ವೃಷಭವಾಹನ; ಶಿವ: ಷಡ್ಗುಣೈಶ್ವರ್ಯಧನದಾಪ್ತ ಗೋರಾಡ್ಗಮನ (ಖಕೋಪು. ೮-೨೮). [ಸಂ. (ಗೋರಾಜ್ + ಗಮನ)]

**ಗೋರಿ$_1$** (ನಾ). ೧. ಆಕರ್ಷಣೆ; ಸೆಳೆತ; ಪ್ರಲೋಭನ; ಮರುಳು ಗೊಳಿಸುವಿಕೆ: ಕೆಮ್ಮನೆ ಸವಣರ ಗೋರಿಗೆ ನೀಂ ಮತಿಗೆಟ್ಟು . . . ಪರತ್ರೆಯನೆ ಕೆಡಿಸಿಕೊಂಡ್ಯೆ (ಧರ್ಮಾಮೃ. ೮-೬೯); ಆನುಮಿಾ ಗೊರವನ ಗೋರಿಯೊಳ್ ಬಿರ್ದೆಂ (ಬಂಹರಿ. ೪-೨೭ ವ). ೨. ಒಂದು ಬಗೆಯ ಬೇಟೆ: ಪಾಟಂ ಕಾಪುರುಕಗಣ ಮೃಗಕೋಟಿಗೆ ಮನಸಿಜನ ಗೋರಿಗಾಡುವ ಪಾಟಂ (ಅಜಿಪು. ೫-೪೪); ಬೇಟೆಕಾಱನು ಮೃಗವನಟ್ಟಿ ಮೃಗ ಗೋ [ಪಾಠಾಂ. ಗು] ರಿಗೊಳಗಾಗದಯ್ಯಾ (ಬಸವ. ೮೩೫); ಇಚ್ಚೆಯಿಂ ಗೋರಿಗೆ ತಂದು ಮುಗ್ಧೆಯ ಮನೋಮೃಗವಂ (ಅರ್ಧನೇ. ೪-೮೭); ಜನದ ಬೊಬ್ಬೆಗೆ ಬೆದಱುತಿಪ್ಪ ಮನವೆರಸಿ ಮರುಳಾಗಿ ಗೋರಿಗೆ ಸಿಕ್ಕಿದೆರಲೆಗಳನಕಟಕಟ ನಿಷ್ಕರುಣಲುಬ್ಧಕರು ಕೆಡೆಯೆಚ್ಚರು(ಹಚಕಾ. ೫-೨೭); ಆನುಂ ಮೃಗದಂತೆ ಗೋರಿಗೊಳಗಾಗೆ ಗಡ ತನುವ್ಯಾಧ ಬಾಣಬಾಧೆಯದಕ್ಕುಂ (ಪಾರ್ಶ್ವಪು. ೧೨-೭೭). ೩. ಜಿಂಕೆಗಳು ಬಲೆಗೆ ಬೀಳುವಂತೆ ಅವುಗಳನ್ನು ಆಕರ್ಷಿಸಲು ಬೇಟೆಗಾರರು ಹಾಡುವ ಹಾಡು; ಮೃಗಾಕರ್ಷಣೆಯನ್ನು ಮಾಡುವ ಸಂಗೀತ: ಎರಲೆಗೆ ಪಾಡುವ ಗೋರಿಯನರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ (ಆದಿಪು. ೧೮-೮೦); ಮೃಗವಮಂ ಪತಿಯಿಂದಂ ಗೋರಿಗೆ ಪತ್ತಿಸಿ ಗೋರಿಪ ಶಬರಿ (ಪಾರ್ಶ್ವಪು. ೧೨-೧೭); ಗಿಳಿ ಸೋವ ನುಣ್ದನಿಯದೆತ್ತಂ ಗೋರಿ [ಪಾಠಾಂ. ಲಿ]ಯುಂ ಪಾಡುವಂತಿರೆ (ಸೂಕ್ತಿಸು. ೪-೭೭); ಲಲಿತರಾಗದ ರಸದ ಗೋರಿಯ ಬಲುಸವಿಯ ಮೃಗದಂತೆ (ಕುವ್ಯಾಸ. ೧೭-೪೮); ಮೆಲ್ಲನುಡಿದೋಱೆ ಗೋರಿಯುಂ ಸರಸದಿ ಪಾಡಿ ಕೀರಮೃಗಸಂತತಿಗಂ ಮಱಪಿಕ್ಕಿ (ತ್ರಿಪುವಿ. ೨-೪೦).

**ಗೋರಿಯ ಮೃಗ**=ಬೇಟೆಗಾರನ ಆಕರ್ಷಣೆಗೆ ಮನಸೋತ ಮೃಗ: ಅಂತಾತಂ ಗೋರಿಯಮೃಗದಂತೆಳಸಿ ಬರ್ಪುದುಂ (ಪಂಚರಾಮಾ. ೧೦-೧೧೧ ವ). [<ಗೋರ್]

**ಗೋರಿ$_2$** (ನಾ). ಹೆಣವನ್ನು ಹೂಳುವ ಜಾಗ; ಸಮಾಧಿ: ದೌಲತಾಬಾದಿನೊಳ್ ತನಗೆ ಗೋರಿಯಂ ಕಟ್ಟಲಪ್ಪಣೆಯಿತ್ತು (ಕಳನ್ನ. ೯-೮೯); ರಾಜರಾಣಿಯರ ಗೋರಿಗಳಿಗಾಗಿ ಸುಂದರವಾದ ಕಟ್ಟಡಗಳನ್ನು ಕಟ್ಟಿರುತ್ತಾರೆ (ಮೃವಾಸ್ತು. ೧೫೬).

**ಗೋರಿಮಾಡು**= ೧. ಸಮಾಧಿಮಾಡು: ಅವನ ಹುಟ್ಟೂರಿನಲ್ಲಿ ಅವನನ್ನು ಗೋರಿಮಾಡಿದರು (ರೂಢಿ). **೨.** (ಆಲಂ) ಇಲ್ಲದಂತೆಮಾಡು; ನಿವಾರಿಸು: ನಿದ್ರೆ ಬಂದು ಆವರಿಸಿ ಈ ಚಿಂತೆಯನ್ನು ಗೋರಿಮಾಡಿತು (ಮುರುಕು. ೧೦೫). [←ಪಾರ. ಗೋರ್; ಹಿಂ. ಗೋರಿ]

**ಗೋರಿ$_3$** (ನಾ). ಒಂದು ಬಗೆಯ ಪ್ರಾಣಿ (?): ನರಿ ಭುಜಂಗನಿಲಿ ಕೊಂಕನೋತಿಯುಂ ಗೋರಿವೆರಸು ಸಾರಂಗನಿವಹಮುಂ . . . ನಲಿವೊಡಂ (ಜಟ್ಟಮ. ೨-೧). [ ? ]

**ಗೋರಿ$_4$** 'ಗೋರೆ'$_2$ ನೋ.

**ಗೋರಿಕ** (ನಾ). ಒಂದು ಬಗೆಯ **ಪಕ್ಷಿ; ಮೈನಾಹಕ್ಕಿ:** ಪ್ರಕಟಿಸಿ ತಿಂಗಳು ನಾಲ್ಕಕ್ಕನಲನ ಸೆಖೆಯಿಂ ಕುಕ್ಷಿಯ ಬಿಲದೊಳು ಲಘು ಗೋರಿಕಮಿಹ ಹಂಗೆ ವಿತಸ್ತಿಯ ಮಾನದೊಳಿಹ (ಯೋಗಾಂವಿ. ೧-೩೩). 'ಗೊರವಂಕ' ಪರಾ. [< ಸಂ. ಗೋರಿಕಾ]

**ಗೋರಿಕಲ್, ಗೋರಿಕಲ್ಲು$_1$, ಗೋರಿಗಲ್, ಗೋರ್ಕಲ್ಲು, ಗೋರ್ಗಲ್ಲು** (ನಾ). ೧. ಗಡುಸಾದ ಕಲ್ಲು; ಬೆಣಚುಗಲ್ಲು: ಗೋರಿಕಲ್ಲ ಮಾಡ ಹೋಯಿತ್ತನಗೆ ಹೂವಿನ ವಿಮಾನ ಹೋಯಿತ್ತನಗೆ (ಚನ್ನವ. ಕ. ೬೬೩-೧೫೦೨); ಚಂದ್ರಕಾಂತವೊಸರ್ವಂತಿರೆ ಗೋರಿಕಲ್ಲೊಸರ್ಗುಮೇ ಬೆಳ್ದಿಂಗಳೊಳ್ (ಜಗವಿ. ೧-೧೩). **೨. ಮೊನಚಾದ ಕಲ್ಲು:** ಗೋರಿಕಲ್ಗಳ್ ಸೋಂಕಿ ಕಾಲ್ಗಳಿಂ ಶೋಣಿತಂ ಬಸಿವುತುಂ (ಚಬಪು. ೫೬-೨೪). **ಗೋರಿಕಲ್ಲು$_1$: ೨.** ಈರಣ್ಣ ಬರುವಾಗ ದಾರಿ ತಲ್ಲಣಿಸಿತು ಗೋರಿಕಲ್ಲೊಡೆದು ಸಿಗುರೆದ್ದು (ನಾಪದ. ೨೨೦). **೩. ಸಣ್ಣಕಲ್ಲು; ಹರಳು:** ಗೋರಿಕಲ್ಲುಗಳೊಳಗೆ ಚಿಂತಾಮಣಿಯನಜಿಸುವರೇ (ಆದವ. ೧೩-೨೯); ಅಕ್ಕಿಯ ಚೀಲದಲ್ಲಿರುವ ಅಕ್ಕಿಯನ್ನೂ ಗೋರಿಕಲ್ಲನ್ನೂ ಆಯಬೇಕು (ನಿಬಂಧ. II, ೨೯೦). **ಗೋರಿಗಲ್: ೧.** ಆರ್ದೆಚ್ಚ ಮಲರಂಬುಗಳ್ ಗೋರಿಗಲ್ಗೆ ತೆತ್ತಿಸಿದ ಕಲ್ಲಂಬುಗಳಪ್ಪುದುಂ (ರಾಮಾಶ್ವ. ೫೯-೩) **ಗೋರ್ಕಲ್ಲು: ೧.** ಗೋರ್ಕಲ್ಲ ಮೇಲೆ ಮಳೆ ಹುಯಿದರಾ ಕಲ್ಲು ಹೀಕೊರ್ಳಂಬುದುಂಟೆ (ಸರ್ವಜ್ಞ. ೧೦೩೦); ಮೂರ್ಖನಿಗೆ ಹೇಳಿದ ಬುದ್ಧಿ ಗೋರ್ಕಲ್ಲ ಮೇಲೆ ಹುಯ್ದ ಮಳೆ (ಗಾದೆ). **ಗೋರ್ಗಲ್ಲು: ೨.** ಭೋರ್ಗರೆವ ಸರ್ಪಗಳು ಗೋರ್ಗಲ್ಲ ಚೂರುಗಳು ದುರ್ಘಟದೊಳಿರುತಿರ್ಪ ಮಾರ್ಗವನು ಪಿಡಿದ (ಹಮಚ. ೫೧). [< ಗೋರ್ + ಕಲ್$_3$]

**ಗೋರಿಕಲ್ಲು$_1$** 'ಗೋರಿಕಲ್' ನೋ.

**ಗೋರಿಕಲ್ಲು$_2$** (ನಾ). ಗೋರಿಯ ಅಥವಾ ಸಮಾಧಿಯ ಮೇಲೆ ನೆಟ್ಟ ಕಲ್ಲು: ಆ ಗೋರಿಕಲ್ಲಿನ ಮೇಲೆ ಅಲ್ಲಿ ಹೂತಿರುವವನ ವಿಷಯವನ್ನು ಬರೆಯಲಾಗಿದೆ (ರೂಢಿ). [ಗೋರಿ$_2$ + ಕಲ್ಲು (< ಕಲ್$_3$)]

**ಗೋರಿಕಾಯಿ** (ನಾ). ಚವಳಿಕಾಯಿ: (ಮೃಜಿಗಿ. ೨೬-೫೦೪).
[ಗೋರಿ$_0$ + ಕಾಯಿ$_4$ (< ಕಾಯ್$_4$)]

**ಗೋರಿಗಲ್** 'ಗೊರಿಕಲ್' ನೋ.

**ಗೋರಿಗೊಳ್,** ಗೋರಿಗೊಳು (ಕ್ರಿ). ೧. (ಬೇಟೆಯ ಮೃಗಗಳು) ಬೇಟೆಗಾರನ ಹಾಡಿಗೆ ಮರುಳಾಗು,–ಮೋಹಪರವಶವಾಗು: ಗೀತಮಿಶ್ರ ವಾದ್ಯದಿನತಿಮಧುರವಾಗೆ ಬಾಜಿಸೆ ಮೃಗಂಗಳೆಲ್ಲಂ ಗೋರಿಗೊಂಡು ಬಂದು ಸಭಾಮಂಡಲಮಂ ಪುಗೆ(ಚಾವುಂಪು. ೪೩೨-೧೩); ತರುಣಿಯ ಬೆನ್ನೊಳಂಗಭವ ನಾಡಿಸಿದಂದದೊಳಾಡಿ ಗೋರಿಗೊಂಡೆರಳೆವೊಲಾಗಿ ಪೋದನೊ (ಕಾದಂಪೂ. ೮೨೩): ನುಣ್ಚರವಂ ನಸುಗೇಳ್ದು ಸೋಲ್ತು ಕಣ್ಮರಲರೆಮುಚ್ಚಿ ಕಂಡು ಕೊಣಕಿಟ್ಟಪುದಲ್ಲಿಗೆ ಗೋರಿಗೊಂಡದೊಂದೆರಳೆಯನಲ್ಲಿರುಳ್ ಶಶಿ ತೊಡರ್ಚುವನಾತ್ಮವಟಪ್ರರೋಹದೊಳ್ (ಚಂದ್ರಪು. ೧-೧೨೪); ಚರಿಯಿಪ ಕಿನ್ನರಿಯರ ಮೊಗಸಿರಿಗೊಯ್ಯನೆ ಗೋರಿಗೊಂಡು ಕೂಡೆ ಕುಕಿಲ್ದಪ್ಪರಿಸಿ ರವಿರಥದ ವಾಜಿಗಳರುಣನನೋರೊರ್ಮೆ ಗಸಣಿಗೊಳ್ವುವು ನಭದೊಳ್ (ಸೂಕ್ತಿಸು. ೩-೨೧೯). **ಗೋರಿಗೊಳು: ೨.** ನೋಯು; ಹಿಂಸೆಗೊಳಗಾಗು: ಗಾಜಾಗಿ ಗುಜುಗುಟ್ಟಿ ಗೂಗೆವೊಲ್ ಗೈಮೆಯಿಂ ಗೋರಿಗೊಳುತೆ (ಶತಸಾಂ. ೬೫-೮೨); [ಗೋರಿ$_1$ + ಕೊಳ್$_1$]

**ಗೋರಿಗೊಳಿಸು$_1$** (ಕ್ರಿ). ೧. ಮರುಳುಗೊಳಿಸು; ಪ್ರಲೋಭನಕ್ಕೆ ಒಳಗಾಗುವಂತೆ ಮಾಡು: ಮುನಿದೆನ್ನನೆ ಗೋರಿಗೊಳಿಸಿದತನುವ ನನೆಗೋಲ ಮೊಗಕ್ಕೆ ತಪ್ಪಿ ಪೋದೊಡೆ ಸಾಲ್ಗುಂ (ಲೀಲಾವ. ೫-೧೩). ೨. ಬೇಟೆಯ ಮೃಗವನ್ನು ಹಾಡಿನಿಂದ ಮರುಳುಗೊಳಿಸು; ಆಕರ್ಷಿಸು: ಮಾರಿಯ ಪೂಜಿಸಿ ಮಸಣಕ್ಕೆ ಹೋಗಿ ಗೋರಿಗೊಳಿಸಿ ಕುಱಿಯ ಕೊರಳನೆ ಕೊಯಿದುಂಬ ಕ್ರೂರಕರ್ಮಿಗಳನವರ ಶಿವಭಕ್ತರೆನ್ನಬಹುದೆ (ದೇದಾವ. ೪೮-೯೫); ನೆನೆದು ಕೆಲರ್ ಮಱುಗುವರೊಡೆದ ನಿಜಧ್ವನಿ ಭಿನ್ನಕಂಠ ಗರ್ದಭ ಕರಭಧ್ವನಿಗಂ ಕರ್ಕಶವಾಗಿರೆ ವನಮೃಗಮಂ ಗೋರಿಗೊಳಿಪ ಮುನ್ನಿನ ದನಿಯಂ (ವರ್ಧಪು. ೧೦-೪೧); ಆಕೆ ದೀವವಾಗೆ ಪುಳಿಂದಂ ಸುಮನೋಬಾಣಂ ತದ್ಭೂರಮಣನನೊಲಿವಂತೆ ಗೋರಿಗೊಳಿಸುತ್ತಿರ್ಕುಂ (ಯಶೋಚ. ೨-೯). ೩. ಹಿಂಸಿಸು; ತೊಂದರೆಕೊಡು; ಕಾಡು: ತಾರಕಾಸುರನೆಂಬ ದಾನವಂ ಪೆಚ್ಚಿ ಮಿಗೆ ಪಾರಿಜಾಂಬಕ ಸುರೇಂದ್ರಾದಿ ದಿಕ್ಪಾಲಕರ ಗೋರಿಗೊಳಿಸುತ್ತವರ ದುರ್ಗಂಗಳಂ ಕೊಂಡು (ಚಬಪು. ೩೪-೩೨): ತತ್ತ್ರಿಪುರವಂ ಮಾಡಿ ಗೋರಿಗೊಳಿಪರ್ ಗಡ ಸಮಸ್ತಲೋಕಂಗಳೊಳ್ (ಚಬಪು. ೪೧-೨೫). [ಗೋರಿಗೊಳ್ + – ಇಸು$_3$]

**ಗೋರಿಗೊಳಿಸು$_2$** (ಕ್ರಿ). ಗೋರಿಮಾಡು; ಸಮಾಧಿಮಾಡು: ಅಳಲ ನಿಲಿಸಿ ಕುವರಿಯ ಗೋರಿಗೊಳಿಸಿ ಬಂದು (ಕುರಾಸಾಂ. ೪೬-೯೪).
[ಗೋರಿ$_2$ + ಕೊಳ್$_1$ + – ಇಸು$_3$]

**ಗೋರಿಗೊಳು** 'ಗೋರಿಗೊಳ್' ನೋ.

**ಗೋರಿಡು** (ಕ್ರಿ). ಒಟ್ಟುಗೂಡಿಸು; ಸಂಗ್ರಹಿಸಿಡು: ಗೋರಿಟ್ಟ ಸೈಪಂ ದುರ್ವಿಷಯಂಗಳ್ಗೆ ಸೂಱೆಗೊಟ್ಟು (ರಾಮಾಶ್ವ. ೩೬-೩೦).
[ಗೋರ್ + ಇಡು$_1$]

**ಗೋರಿಬಲೆ** 'ಗೋರಿವಲೆ' ನೋ.

**ಗೋರಿಬೇಂಟೆ** 'ಗೋರಿವೇಂಟೆ' ನೋ.

**ಗೋರಿಯಿಕ್ಕು** (ಕ್ರಿ). ಗೋರಿಮಾಡು; ಸಮಾಧಿಮಾಡು: ಇತ್ತಲಾ ರಣಧೂಳಿಖಾನ . . . ಸತ್ತವರಿಗೆ ಗೋರಿಯಿಕ್ಕದೆ ಮರಳಿದ ಚಿತ್ತದೊಳಗೆ ಧ್ಯಾನಿಸುತ (ಕಂನವಿ. ೧೫-೧೨೦). [ಗೋರಿ$_2$ + ಇಕ್ಕು]

**ಗೋರಿಲ್ಲ** (ನಾ). ದೊಡ್ಡ ಗಾತ್ರದ ಒಂದು ಬಗೆಯ ಕಪಿ: ಗೋರಿಲ್ಲವು ಬಾಯಿ ತೆರೆದು ಘರ್ಜಿಸಿದರೆ, ಆದರ ಕೂಗಿಗೆ ಸಿಂಹವು ನಾಚಬೇಕು (ಬಾಲಪ್ರ. III, ೧೬೪೦) [←ಇಂ. Gorilla]

**ಗೋರಿವರಿ** (ಕ್ರಿ). ಬೇಟೆಯ ಹಾಡನ್ನು ಮುಂದುವರಿಸು: ತಂತಮ್ಮ ಮೇಳದಾಳಿಯರ್ ತಾರಲ್ವಿಡಿದು ಗೋರಿವರಿದು[ಗು] ಮೆನೆ ಕುನುಂಗಿ ಕೆಲ್ಲಯಿಸಿ ನೋಟ್ಪ ತರಳಲೋಚನದ ಸರಳಾಪಾಂಗಂ ಹರಿಣೀಭಾವಮಂ ಮನಂಗೊಳಿಸಿ (ಆನಂಪು. ೬-೧೬ ವ). [ಗೋರಿ$_1$ + ಪರಿ$_1$]

**ಗೋರಿವಲೆ, ಗೋರಿಬಲೆ**(ನಾ). ಮೀನುಗಳನ್ನು ಬಾಚಿ ಹಿಡಿಯುವ ಒಂದು ಬಗೆಯ ಬಲೆ: ಮೂತೆಱದ ಗಾಳಂಗಳಿಂ ಗೋರಿವಲೆಗಳಿಂ . . . ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂನಾಥನು (ಹಚಕಾ. ೫-೪೪); ಬಿಚ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂಬುಗದೆ ಬಿಚ್ಚಿ ಬೀಸಿದಾಗಳ್ (ರಾಜಶೇ. ೫-೧೧೪ ವ). **ಗೋರಿಬಲೆ:** ತಮ್ಮ ಅನ್ವೇಷಣಾದ

ಗೋರಿಬಲೆಯಲ್ಲಿ ಅವರು ವಿಚಾರಸಾಗರದಿಂದ ಬಾಚಿಕೊಂಡ ಹಲವಾರು ವಿಷಯಗಳಲ್ಲಿ ಹಲಕೆಲವು . . . ಇವೆ (ಕನ್ನಇ. V, ಎರಡು ಮಾತು).

[ ಗೋರಿ$_1$ + ಬಲೆ$_1$ ]

**ಗೋರಿವೇಂಟೆ,** ಗೋರಿಬೇಂಟೆ (ನಾ). ಮೃಗಗಳನ್ನು ಮರುಳುಗೊಳಿಸಿ ಬಲೆಗೆ ಕೆಡಹುವ ಒಂದು ಬಗೆಯ ಬೇಟೆ; P ಗೋರಿವೇಂಟೆ, ಫಳಹರವೇಂಟೆ, ಪಟವೇಂಟೆ, ವಿದ್ಯಾಧರರಬೇಂಟೆ, ಚಿತ್ರವೇಂಟೆ, ಅಂಟುಜಲವೇಂಟೆ, ತೋಹಿನ ಬೇಂಟೆ, ಘನಸೋಹುವೇಂಟೆ ಎಂಬ ಎಂಟು ತರಹದ ಬೇಟೆಗಳಲ್ಲಿ ಒಂದು: ಗೋರಿವೇಂಟೆ . . . ಘನಸೋಹು ವೇಂಟಿಗಳೆನಿಪ್ಪ ಹೆಸರಂ ಹೊತ್ತು ಮೆಱೆವುತಿಪ್ಪೆಂಟುತೆಱದುಚಿತವೇಂಟೆಯು ನಾಡಿದಂ(ಹಡಕಾ. ೩-೯೯) ಸೋಪಿನ ತೋಪಿನ ಪಟಹದ ಕೋಪಿನ ಪಾಳಿವದ ಗೋರಿವೇಂಟೆಗೆ . . . ನಡೆತಂದರಲ್ಲಿ ಮುಂದೆ ಪುಳಿಂದರ್(ಸೂಕ್ತಿಸು ೩-೧೦೧); ಅಗ್ಗಳಿಕೆಯ ಗೋರಿವೇಂಟೆ . . . ಘನ ಸೋಹಿನ ವೇಂಟಿಯೆನಿಪ್ಪನಾಮುಮಂ ತಳೆದೆಸೆವೆಂಟು ಬೇಂಟೆಗಳನಾಡಿದಂ (ತ್ರಿಪುವಿ. ೨೭-೯೨). **ಗೋರಿಬೇಂಟೆ:** ಮುತ್ತಿದರ್ ಗೋರಿಬೇಂಟೆಗೆ ಕಾಡನೊತ್ತರದಿ (ಕಾಲೂರ. ೯೨-೧೮೦).

[ ಗೋರಿ$_1$ + ಬೇಂಟೆ ]

**ಗೋರಿಸು** (ಕ್ರಿ). ೧. (ಕಸವನ್ನು) ಬಳಿಯುವಂತೆ ಮಾಡು; **ಬಾಚಿಸು:** (ಹ). **೨.** ಉತ್ತ ನೆಲದ ಮೇಲೆ ಗೋರುಮಣೆಯನ್ನು ಆಡಿಸಿ ಸಮ ಮಾಡು,-ಮಟ್ಟಮಾಡು: ನಾಉ ಮಾಱಿಕೊಂಡ ಘೂಲದ ಭೂಮಿ ಒಳಗೆ ನಾಲು ಗೋರಿಸಿದ ಗದೆಗಳ ಮೇಲೆ (ಎಕ. VI, ಮೂಡಗೆ. ೩೯-೨೬; 1516?). ೩. (ಆಲಂ) ಪೂರ್ತಿಯಾಗಿ ಹುಡುಕು,-**ಶೋಧಿಸು:** ಹೆಣ್ಣಿನ ದಂಡು ಮನೆಯನ್ನೆಲ್ಲಾ ಇನ್ನೊಂದು ಸಾರಿ ಗೋರಿಸಿದರು. ವರ ಸಿಗಲಿಲ್ಲ (ಸುವಸಂ. ೩೮). [ ಗೋರು$_1$ (< ಗೋರ್) + – ಇಸು$_3$ ]

**ಗೋರು$_1$** ಗೋರ್' ನೋ.

**ಗೋರು$_2$,** ಕೋರಿ$_4$ (ನಾ). ಗೆರೆ ಹಾಕುವಿಕೆ: (ಹ). **ಕೋರಿ$_4$:** '**ಕೋರಿ** ಹಲಗೆ' ಪರಾ. [ < ಗೋರು$_1$ ]

**ಗೋರುಕೋಲು** (ನಾ). ಬಾಚುವುದಕ್ಕಾಗಿ, ತುದಿಯಲ್ಲಿ ಸಣ್ಣ ಹಲಗೆಯನ್ನು ಜೋಡಿಸಿರುವ ಕೋಲು: ಗೋರುಕೋಲು ಹಿಡಿದು ಅದರಲ್ಲಿ ಕೊತಕೊತ ಕಾಯುತ್ತಿರುವ ಪಾಕವನ್ನು ಎತ್ತಿ ಎತ್ತಿ ನೋಡುತ್ತಿರುತ್ತಾನೆ (ನನ್ನೂರು. ೨೮೭).

[ ಗೋರು$_1$ (<ಗೋರ್) + ಕೋಲು$_1$ (<ಕೋಲ್$_1$) ]

**ಗೋರುಗರೀಬ** (ನಾ). ತೀರ ಬಡವ; ದಟ್ಟದರಿದ್ರ: ಇವೆಲ್ಲ ಉಳ್ಳವನು ಗೋರುಗರೀಬನಾಗಿರಬಹುದು ಕುರೂಪಿಯಾಗಿರಬಹುದು (ಭಾರದ. ೭).

[ ←ಮರಾ. ಗೋರಗರೀಬ್ ]

**ಗೋರುಗೊಳಿಸು** (ಕ್ರಿ). ಹಿಂಸಿಸು; ತೊಂದರೆಗೊಳಿಸು: ಊರೊಳಗಣ ಪಟುಭಟರ ಪೆಟಲಗುಂಡು ಭೋರನೈತಹ ಬಾಣಗಳು ಸೇರಿದ ಹೊಱಪಾಳಯದ ಮಂದಿಯನಾಗ ಗೋರುಗೊಳಿಸಿದುವದ್ಭುತದೆ (ಕಂನವಿ. ೧೨-೨೩). 'ಗೋರಿಗೊಳಿಸು$_1$' ಪರಾ.

[ ಗೋರು$_1$ (< ಗೋರ್) + ಕೊಳ್$_1$ + – ಇಸು$_3$ ]

**ಗೋರುತ** (ನಾ). ಹಸುವಿನ ಕೂಗು ಕೇಳಿಸುವಷ್ಟು ದೂರ; "ಎರಡು ಹರದಾರಿ" (ಗಂಗಾಮ. ೧೨೨).

[ ಗೋ + ರುತ ]

**ಗೋರುಮಣೆ** (ನಾ). ೧. ನೆಲವನ್ನು ಸಮಮಾಡಲು ಅಥವಾ ಕಾಳು ಮುಂತಾದುವನ್ನು ಒಂದೆಡೆಗೆ ಸೇರಿಸಿ ರಾಶಿಮಾಡಲು ಬಳಸುವ ಒಂದು ಬಗೆಯ ಮರದ ಸಾಧನ; ಹಲುಬೆ; ಗೋರೆ: (ಹ). **೨.** ಅಚ್ಚಿಗೆ ಹಾಕಿದ ಬೆಲ್ಲದ ಪಾಕದಲ್ಲಿ ಹೆಚ್ಚಿನ ಭಾಗವನ್ನು ಬಾಚಿ ತೆಗೆಯುವ ಮಣೆ: (ಹ). [ ಗೋರು$_1$ (<ಗೋರ್) + ಮಣೆ ]

**ಗೋರುಳಿ** (ನಾ). ಒಂದು ಬಗೆಯ ಉಳಿ; ಗೆರೆಗಳನ್ನು ಗೀಚುವುದಕ್ಕಾಗಿ ಬಳಸುವ ಉಳಿ: (ಕೆತ್ತನೆಗಾರನ) ಕೊರೆಯುಳಿ, ಗೋರುಳಿ, ಉಗುರುಳಿ (Scooper. ಇಂಕನಿ). [ ಗೋರು$_1$ (<ಗೋರ್) + ಉಳಿ$_5$ ]

**ಗೋರೆ$_1$** (ನಾ) ವಕ್ರಬುದ್ಧಿಯುವನು: ಗಾಱುನುಡಿಗಳನೇಕೆ ನುಡಿವಿರಿ . . . ಶಿವನ ಭಕ್ತರ್ಗೆ ಗೋರೆಗಳಿರಾ ನೀವು ಸರಿಯೇ (ಬಸವು. ೩೩-೨೦).

[ < ಕೋರೆ$_1$ ]

**ಗೋರೆ$_2$,** ಗೋರ್ಿ$_4$ (ನಾ). ೧.=ಗೋರುಮಣೆ ೧: ಎಮಗೆ ಗುದ್ದಲಿಯೊ ಹಾರೆಯೊ ಗೋರೆಯೋ ವಸುವಿದೇಕೆಮಗೆ ತೆಗೆ (ಸಿದ್ಧರಾ. ೯-೩); ಬಳಿಕವ ಗೋರಿದನು ಗುಡಿಯಿಱಿದು ಬಾಲದ ಗೋರೆಯುಲಿ ತಳಮುಗುಚಿದನು ತೋರಣದ ಸಾಲುಗಳ (ತೊರರಾ. ೩-೭-೧೭). **೨.** ಅಚ್ಚಿಗೆ ಹಾಕಿದ ಬೆಲ್ಲದಲ್ಲಿ ಗೋರುಮಣೆಯಿಂದ ತೆಗೆದ ಬೆಲ್ಲದ ಪುಡಿ: (ಹ). **ಗೋರಿ$_4$:** ೧. ಕುದಿದ ಅರಿಶಿಣವನ್ನು ಗೋರಿಗಳಿಂದ ಎಳೆದುಕೊಂಡು ಜಾರೆಯು ಸೌಟನಿಂದ ತೆಗೆಯಬೇಕು (ಕೃಷಿಪ್ರ. ೧೮೯).

**ಗೋರೆಯಾಗು**=ವಂಟ್ಟವಾಗು; ಸಮತಲವಾಗು: ಪಟುಗಳ್ ಪೆರ್ಬುಯಲಾಗೆ ದರ್ಕಳನಿಸುಂ ಪಲ್ಗುತ್ತಲೀಲೆಂಬಿಸಂ (?) ಕುಟಿಗಳ್ ತೀವಿರೆ ಗೋರೆಯಾಯ್ತು ನೆಲನೆಂಬಾಶಂಕೆಯಂ ಮಾಟ್ಪಿನಂ . . . ಸುಟಿದಂಭೋನಿಧಿ ಮೇರೆದಪ್ಪಿದ ತೆಱಂ ಬಂದತ್ತನೀಕಾರ್ಣವಂ (ಕಾವ್ಯಾಸಾ. ೪೭೩). 'ಗೋರ್' ಪರಾ. [ ? ]

**ಗೋರೋಚ,** ಗೋರೋಜ, ಗೋರೋಜನ (ನಾ).=ಗೋರೋಚನ: "ಗೌರಿ ಗೋಪಿತ್ತೆಯೆನೆ ಗೋರೋಚಮುಕ್ಕು [ಪಾಠಾಂ. ಗೋರೋಚನ ಮೆನಿಕ್ಕು, ಗೋರೋಜನಮೆನಿಕು] (ಮಂಗರಾ. ೯೯-೨೦). **ಗೋರೋಜ:** (ಹ). **ಗೋರೋಜನ:** ಗೋವುಗಳಲ್ಲಿ ಗೋರೋಜನ ರಂಜಿಸುವಂತೆ ಶಿಲೆ ಕಾಷ್ಠಂಗಳಲ್ಲಿ ಅನಲನಡಗಿಪ್ಪಂತೆ (ವಚಸಂ. ೪೯೯-೯); ಗೋರೋಜನಂ ಲೋಳಿಸರ . . . ಸಕ್ಕರೆ ಬೆರಸಿ ತೆಗೆದುಕೊಂಡಲ್ಲಿ ಛರ್ದಿ, ದಾಹಗೂಡಿದ ಪೈತ್ಯಜ್ವರಂ ಮಾಣುವುವು (ಸಕವ್ಯ. ೭೭). [ < ಸಂ. ಗೋರೋಚನಾ ]

**ಗೋರೋಚನ** (ನಾ). ಗೋವುಗಳ ಪಿತ್ತರಸದಿಂದ ಉಂಟಾಗುವ ಹಳದಿ ಬಣ್ಣದ ಒಂದು ಗಂಧದ್ರವ್ಯ: ಗೋರೋಚನರಸದಿಂದಂ ತೊಯ್ದ ನೇತ್ರಸೂತ್ರದ ತೆಱದಿಂ ಮಿಸುಗುವ ಕೆಂಜೆಡೆಗಳ್ ರಂಜಿಸುತಿರ್ದುವು (ಕಾದಂಪೂ. ೭೩೦); ಗೋರೋಚನದಿಂ ತಿಲಕವಿಡೆ ತನ್ನ ನೋಡಿದವಳ ವಶ್ಯ (ವಿವ್ಯವಿ. ೩); ಸ್ವಾಮಿಗೆ ಸಮರ್ಪಿಸಲಿಕ್ಕೆ ಗೋರೋಚನವನು ಅರ್ಪಿಸುತ್ತಲೂ ಇದ್ದರೂ (ಪುರಾವಿ. ೧೦೨); ಶಕುಂತಳೆಗೋಸ್ಕರ ಗೋರೋಚನ, ತೀರ್ಥಮೃತ್ತಿಕೆ, ದೂರ್ವಾಕಿಸಲಯಗಳ ಮಂಗಳಾನು ಲೇಪಗಳನ್ನು ಮಾಡುವೆನು (ಶಾಕುಂತ. ೪೯-೨೦).

[ ಸಂ. ಗೋರೋಚನಾ ]

**ಗೋರೋಚಿಸೊಪ್ಪು** (ನಾ). (ಔಷಧಿಗೆ ಉಪಯೋಗಿಸುವ) ಒಂದು ಬಗೆಯ ಸೊಪ್ಪು: ಎಳಸೀಗೆ, ಅಕ್ಕಿ, ಗೋರೋಚಿಸೊಪ್ಪಂ ತಂದು ಮೊಲೆಹಾಲಿಂದ ಅರೆದು ಸರ್ವಾಂಗಲೇಪವಂ ಮಾಡುವುದು (ವಿವ್ಯವಿ. ೧೦೮).

[ ಗೋರೋಚಿ ? + ಸೊಪ್ಪು$_3$ ]

**ಗೋರೋಜ** 'ಗೋರೋಚ' ನೋ.

**ಗೋರೋಜನ** 'ಗೋರೋಚ' ನೋ.

**ಗೋರ್ಕಲ್ಲು** 'ಗೋರಿಕಲ್' ನೋ.

**ಗೋರ್ಕ್ಲ** (ನಾ). ಒಂದು ಬಗೆಯ ಗಿಡ: ಗೋರ್ಕ್ಲ, ಕರುಹಾಲೆ (ವೃಜಿಗಿ. ೭೩-೧೩೩೩). [ ? ]

**ಗೋರ್ಗಲ್ಲು** 'ಗೋರಿಕಲ್' ನೋ

**ಗೋರ್ಗಿ** (ನಾ). ಒಂದು ಬಗೆಯ ಸಸ್ಯ; ಶರಪುಂಖೆ: "ಶರಪುಂಖ ಗೋರ್ಗಿ ತಾನದು" (ವಸುಕೋ. ೩೮-೩೦). [ ? ]

**ಗೋರ್ಗುರಿಸು** (ಕ್ರಿ). ಗುಡುಗುಡಿಸು; ಅರ್ಭಟಿಸು (?): ಪಿಡಿದ ವಜ್ರ ಸ್ತಂಭದಲಿ ಗೋರ್ಗುರಿಸಿ ಹುಡಿಹುಡಿಯಾಗುವಂದದಿ ದಡಿಗರಕ್ಕಸರೆಲ್ಲರನು ಸದೆಬಡಿದನಾ ಹನುಮ (ಅನಂರಾ. ೪-೫-೧೧). 'ಗುಜುಂಗುಜುಸು' ಪರಾ. [ ? ]

**ಗೋರ್ದ** (ನಾ). ಮೆದುಳು; ಮಸ್ತಿಷ್ಕ: "ಮಸ್ತಿಷ್ಕಂ, ಗೋರ್ದಂ – ೨ ಎಲವುಗಳ ಗೂಡಿನಲ್ಲಿರುವ ಮೆದುಳ ಹೆಸರುಗಳು" (ಸಿದ್ಧಾಂತಿ. ೧೬೩). [ಸಂ.]

**ಗೋಲ$_1$**, ಗೋಳ$_2$ (ನಾ). ದುಂಡಾದುದು; ವೃತ್ತಾಕಾರವಾದುದು: ಗೋಲಭೂಮಿಯ ನೆಲಕೆ ಎಲ್ಲೆ ಎಲ್ಲಿದೆ ದಿಕ್ಕು? (ಸೂರ್ಯಪಾ. ೪೩-೩). ೨. ದುಂಡಾಗಿರುವ ವಸ್ತು: ಚಿನ್ನದ್ದೊಂದು ಪೊಳ್ಳು ಗೋಲವನ್ನು ಮಾಡಿ (ಮುಂಬಯಿ. ೫-೩೫). ೩. ವರ್ತುಳ; ಮಂಡಲ. 'ಗೋಲಾಕಾರ' ಪರಾ. ೪. ಒಂದು ಬಗೆಯ ಸಂಬಾಸ ನೆಯ ಸಸ್ಯ; ಬಾಣಂತಿ ಬೋಳ. ೫. ವಿಧವೆಗೆ ಜಾರನಿಂದ ಹುಟ್ಟಿದ ಮಗ. 'ಗೋಲಕ' ಪರಾ. **ಗೋಳ$_2$:** ೨. ಈ ಸಣ್ಣ ಗೋಳದ ಸುತ್ತಲೂ ಗಾಜಿನಂತಹ ಪಾರದರ್ಶಕ ಹೊದಿಕೆಯಿರುತ್ತದೆ (ಜೀವಾತ್ಮ. ೨೪೧). ೬. [ಜ್ಯೋತಿ] ಸಂಖ್ಯಾಯೋಗಗಳಲ್ಲಿ ಒಂದು; ಏಳುಗ್ರಹಗಳೂ ಒಂದೇ ರಾಶಿಯಲ್ಲಿರುವ ಯೋಗ: ನಿಲೆ ಸಪ್ತಗ್ರಹವೊಂದೆ ರಾಶಿಯೊಳೆ ಯೋಗಂ ಗೋಳನಾಮಂ (ಜಾತತಿ. ೧೩-೫). 'ಗೋಳಯೋಗ' ಪರಾ. [ಸಂ.]

**ಗೋಲಂಗುಡಿ** (ಕ್ರಿ). (?): ನೀರಂ ನೀರಂಧ್ರವ್ಯೋಘಂ ಸುರಿಯೆ ಪೊಜಿಯೆ ಭೀಮಾರುತಂ ಮಾರುತಂ . . . ಕಾಸಾರಾಸಾರಾರ್ಥಿ ಗೋಲಂಗು[ಪಾಠಾಂ. ಗೊಲ್ಲಂನು]ಡಿಯೆ ನಲಿವೆನೋ ಜಂಬುವಂ ಜಂಬುವಂ ಸೋಕೀರಂ ಕೀರಂ ಕರ್ದುಂಕುತ್ತಿರೆ ಕೆರಳಿಸಿದತ್ತೋವಿ ಕಾರಂ ವಿಕಾರಂ (ಅರ್ಧನೇ. ೪-೭); (ಕಾವ್ಯಸಾ. ೮೨೪ ನೋ). 'ಗೊಟ್ಟಂಗುಡಿ' ಪರಾ. [ ? + ಕುಡಿ$_1$ ]

**ಗೋಲಂದಾಜ**, ಗುಲಂದಾಜ, ಗೋಲಂದಾಜು, ಗೋಲಂದಾಸ (ನಾ). ೧. ಫಿರಂಗಿಗಳಿಂದ ಗುಂಡುಗಳನ್ನು ಹಾರಿಸುವ ಸಿಪಾಯಿ: ಪೋರ್ತು ಗೀಸ್ ಗೋಲಂದಾಜರ ಕೂಡ ಫಿರಂಗಿಗಾಡಿಗಳು ಬಂದುವು (ಭಾರವೀ. ೪೩); ಫಿರಂಗಿಯ ಹತ್ತಿರವಿದ್ದ ಗೋಲಂದಾಜರನ್ನು ಕೊಂದು (ಬಂಕಿಮ. ೨೬೪). **ಗುಲಂದಾಜ:** ೧. ಹ್ಯಾರಿಸನ ಕೈಯ್ಕೆಳಗೆ . . . ೬೦೦ ಯುರೋಪೀಯ ಗುಲಂದಾಜರೂ . . . ೧೦೦ ತೋಪುಗಳೂ ಇದ್ದವು (ಜರಿಸಂ. ೧೮೭). **ಗೋಲಂದಾಜು:** ೨. ತಂಬಾಕಿ ಸೈನ್ಯ; ಫಿರಂಗಿ ಪಡೆ: ಈ ಇಲಾಖೆಗೆ ಗೋಲಂದಾಜಿನ ೯೬ ಫಿರಂಗಿ ಮತ್ತು ಎತ್ತುಗಳೂ ಸೇರಿದ್ದುವು (ಮಹಾವಂ. II, ೧೪); ಈ ಸರದಾರನು ಫಿರಂಗಿಗಳನ್ನೂ ಗೋಲಂದಾಜುಗಳನ್ನೂ ಹುರಿಮಾಡಿ . . . ಸೇನೆಯವರಿಗೆ ಧೈರ್ಯವನ್ನು ಹೇಳುತ್ತಾ ಬಂದನು (ಮುಸುಗ. ೧೬). **ಗೋಲಂದಾಸ:** ೧. ರೈಫಲ್ ಬಂದೂಖುಗಳು, ತೋಪುಗಳು ಎಲ್ಲವನ್ನೂ ಒಂದು ಉಸಿರಿಗೆ ಗೋಲಂದಾಸರ ಮೂಲಕ ಹತ್ತಿಸಿ (ಚಿತ್ರಪಾ. ೬೫). [ ←ಪಾರ. ಹಿಂ. ಮರಾ. ಗೋಲಂದಾಜ್ ]

**ಗೋಲಂದಾಜು** 'ಗೋಲಂದಾಜ' ನೋ.

**ಗೋಲಂದಾಜು ಇಲಾಖೆ** (ನಾ). ಸೈನ್ಯದಲ್ಲಿನ ಫಿರಂಗಿ ಶಾಖೆ: (ಏರಿಸಿ ಸಿದ್ಧಪಡಿಸಿಟ್ಟ) ಫಿರಂಗಿಗಳು; ಗೋಲಂದಾಜು ಇಲಾಖೆ; ಸೈನಿಕ ಸಾಮ ಗ್ರಿಯ, ಯುದ್ಧೋಪಕರಣಗಳ ಖಾತೆ (Ordnance. ಇಂಕನಿ).
[ ಗೋಲಂದಾಜು (<ಗೋಲಂದಾಜ) + ಇಲಾಖೆ ]

**ಗೋಲಂದಾಸ** 'ಗೋಲಂದಾಜ' ನೋ.

**ಗೋಲಂದಿ** (ನಾ). ಹೆಗ್ಗಣದ ಜಾತಿಗೆ ಸೇರಿದ ಒಂದು ಪ್ರಾಣಿ: ತೋಡ, ಹೆಗ್ಗಣ, ಗೋಲಂದಿ (ನಮ್ಮನು. ೨೩೯). [ ? ]

**ಗೋಲಕ**, ಗೋಳಕ (ನಾ). ೧. ಗುಂಡಾದ ವಸ್ತು; ದುಂಡಾದುದು: ಮೇಲೆ ತೂಗಹಾಕಿದ್ದ ಕಾಜಿನ ಗೋಲಕದ ಕಡೆಗೆ ಅವರಿಗೆ ಎವೆಯಿಕ್ಕದೆ ನೋಡಹೇಳಿದರು (ಮೋಜೀವ. ೪೮). ೨. ಕಣ್ಣು, ಕಿವಿ, ಮೂಗು ಮೊದ ಲಾದ ಇಂದ್ರಿಯದ್ವಾರ: ಇಂದ್ರಿಯಗಳ ಬಾಹ್ಯಗೋಲಕಗಳು ಮಾತ್ರ ತಮ್ಮ ಕೆಲಸವನ್ನು ನಿಲ್ಲಿಸುತ್ತವೆ (ಜೀವಾತ್ಮ. ೧೩೧). ೩. ಕಣ್ಣಿನ ಪಾಪೆ,– ಗೊಂಬೆ: ಚಕ್ಷುಸ್ಸೆಂಬುದು ಗೋಲಕದಿಂದ ಅತಿರಿಕ್ತವಾದ ವಸ್ತುವಲ್ಲ (ಭಾತತ್ತ್ವ. ೨೩೪). ೪. ವಿದ್ಯುದ್ದೀಪದ ಗೋಲ; ಬಲ್ಬು: ಇಲ್ಲಿ ಬೆಳಗು ವುದು ಗೋಲಕ (Bulb)ದ ಒಳಗಿನ ಅತಿಸೂಕ್ಷ್ಮವಾದ ಒಂದು ಸರಿಗೆ (ಬಾಲಪ್ರ. III, ೧೩೦೨). ೫. ಹಣವನ್ನು ಕೂಡಿಡುವುದಕ್ಕಾಗಿ ಮಾಡಿ ರುವ, ಮುಚ್ಚಳದಲ್ಲಿ ರಂಧ್ರವಿರುವ ಡಬ್ಬಿ; ಹುಂಡಿ: ಈ ದೇವರಿಗೆ ವಿಶಾಸಲಗಂಟು . . . ಗೋಲಕದ ಪುಡಿಕಾಸು ಇವುಗಳೆಲ್ಲಾ ಹೆಚ್ಚಾಗಿ ವರ ಮಾನವಾಗಿ ಬರುತಿತ್ತು (ಮಾಮರಾ. ೪೭): ಗುಡಿಯಿಂದ ಅನ್ನ . . . ಗೋಲಕದ ಪುಡಿದುಡ್ಡು ಇದೆಲ್ಲಾ ಸೂರಯ್ಯನಿಗೆ ದೊರೆಯುತಿತ್ತು (ನೀತಿಚಿಂ. II, ೨೪). ೬. ವಿಧವೆಗೆ ಜಾರನಿಂದ ಹುಟ್ಟಿದ ಮಗ. **ಗೋಳಕ:** ೧. ಅಳಿಕುಳಸನ್ನಿಭ ಮನಸಿಜಗೋಳಕ ವಿಳಸದಳಂಕೃತಿ ಕುಟಿಳಚಳಾಳಕ (ಸುಕುಮಾ. ೫-೫೧); ಕಪಟಜೀವಿಗಳಲಂಕರಿಸಿ ಮೋಣದ ಗೋಳಕಕ್ಕೆ ಜಿನಮುದ್ರೆಯೊತ್ತಿ ಅಪವಿತ್ರಕಪ್ಪಡದೊಳವ ಕೊರಳೊಳಳ ವಡಿಸಿ (ಸಿಂಗಿರಾ. ೧೧-೨೬); ಲಿಂಗಸ್ಥಲದ ಹಸುಗೆಯಂ ಕೇಳು ಗುರುಲಿಂಗ ಜಂಗಮಮತ್ರಿವಿಧಂಗಳಂ ಲಿಂಗಗೋಮುಖಂ ಜಂಗಮಂ ವೃತ್ತಮೇ ಗುರು ಗೋಳಕವೆ ಲಿಂಗವೊರೆವೆನಾ ಸಂಬಂಧಮಂ (ವೀಶೈವು. ೮-೧೩-೮); ಭೂರಿಗೋಳಕವನೂರ್ಧ್ವಕ್ಕಾಗಿ ಧರಿಸುವದು (ಷಠಿಲ. ೫-೪೮). ೨. ಗೋಳ ಕವೆ ಕುಂಡಾಗ್ನಿ ಕರಣವು ಮೇಲೊದಗಿ ಬಹ ವಿಷಯಸಮಿಧಿಯು (ಹಸಾರ. ೫-೧೮). ೬. "ಗೋಳಕಃ, ಭರ್ತರಿ, ಮೃತೇ, ಜಾರಜಃ–ಗಂಡನು ಸತ್ತಮೇಲೆ ಮಿಂಡನ ದೆಸೆಯಿಂದ ಹುಟ್ಟಿಸಿಕೊಂಡ ಹಾದರದ ಮಗನ ಹೆಸರು" (ಸಿದ್ಧಾಂತಿ. ೫೪); ಆಕೆಯ ಗಂಡನ ಪರೋಕ್ಷದಲ್ಲಿ ಜನಿಸಿದ ಮತ್ತೆ ಗೋಳಕನು (ಕುವ್ಯಾಆ.ಓರಿಇ. ೨೭-೮೨); ಸೂಳೆ ಜೋತಿಷಿ ನೃಪತಿಗಣಿಕೆಯ ಹೇಳುವ ವ್ಯವಹಾರಿ ಕುಂಬರ ಗೋಳಕಂ ಚಿತ್ರಕನು . . . ಆಳುತಿಹ ನರಕಂಗಳಿಂದತಿ ನರಕ ಜಾರರಿಗೆ (ಶಂಕದಾ. ೭-೫೫). ೭. ಹಲವು ಔಷಧವಸ್ತುಗಳನ್ನು ಬೆರಸಿ ಮಾಡಿದ ಉಂಡೆ, – ಗೋಲಿ: ಆ ಗೋಳಕವನು ಶರಾವೆಯೊಳಗಿರಿಸಿ ಮೇಲಕ್ಕೆ ಒಂದು ಶರಾವೆಯ ಮುಚ್ಚಿ . . . ಭೂಧರಯಂತ್ರದಲ್ಲಿ ಪಾಕವ ಮಾಡುವದು (ವೃದ್ಧಸಾ. I ೮೭). ೮. ಕಡೆದ ಮೊಸರು: ಕೆನೆಯ ತೆಗೆಯದೆ ಕಡೆದ ಮಜ್ಜಿಗೆ ಗೋಳಕ ವೆಂಬುದು (ಭೀಮಸೂ. ೨೪). [ಸಂ.]

**ಗೋಲಗುಮುಟ**, ಗೋಲಗುಮ್ಮಟ, ಗೋಳಗುಮ್ಮಟ, ಗೋಳ ಗುಮ್ಮಟ (ನಾ). ೧. ಗೋಲಾಕಾರದ ಬುರುಜು. ೨. ವಿಜಾಪುರ ದಲ್ಲಿರುವ ಪ್ರಸಿದ್ಧವಾದ ಒಂದು ಐತಿಹಾಸಿಕ ಕಟ್ಟಡ: ವಿಜಾಪುರದ ಗೋಲಗುಮುಟದಂಥ ವಿಶಾಲವಾದ ಉನ್ನತವಾದ ಕಲಾಪರಿಪೂರ್ಣವಾದ ಕೃತಿ (ಗಂಗಾಸಾ. ನನ್ನಮಾತು). **ಗೋಲಗುಮುಟ:** (+). **ಗೋಳ ಗುಮುಟ:** ೨. ಗೋಳಗುಮುಟದಂತೆ ಸೃಷ್ಟಿ ನುಡಿಸುವ ಪಡಿಸಾದವ (ಅರಳು. ೪೯೫-೯). **ಗೋಳಗುಮ್ಮಟ:** ೨. ಆಡಿದ್ದನಾಡಾಡಿ ಏಳೇಳು ಸಲ ನಲಿವ ಗೋಳಗುಮ್ಮಟ (ಉಯ್ಯಾಲಿ. ೬೫-೬).
[ ಗೋಲ + ಗುಮಟ (<ಗುಮ್ಮಟ$_1$) ]

**ಗೋಲಗುಮುಟ** 'ಗೋಲಗುಮುಟ' ನೋ.

**ಗೋಲನ್** (ನಾ). ಪುಸಲಾವಣೆ; ಉಬ್ಬಿಸುವುದು.

**ಗೋಲನ್‌ಮಾಡು**=೧. ಹೊಗಳಿ ಉಬ್ಬಿಸು; ಪುಸಲಾಯಿಸು: ಅವನ್ನ ಹಿಡಿದು ಗೋಲನ್‌ಮಾಡಿ ಗಿಟ್ಟಿಸ್ಕೊಂಡು (ಶಕಾರ. ೧೫); ಹೆಂಗಸರನ್ನು ಗೋಲನ್‌ಮಾಡಿ ತುಪ್ಪದ ದೋಸೆ, ಬೋಂಡ . . . ಮುಂತಾಗಿ ತಿಂಡಿ ಗಳನ್ನು ಮಾಡಿಸುತ್ತ (ಬಾಲಪ್ರ. II, ೧೧೬೨). ೨. (ಆಲಂ) ವಂಚಕಂ

ಮಾಡು ; ಮರುಳುಗೊಳಿಸು : ಅವರ ತಲೆ ಗೋಲನ್‌ಮಾಡಿ, ಪತ್ರ ಅಬೇಸ್ ಮಾಡಿ, ಸುಳ್ಳುರುಜು ಮಾಡಿಸಿಕೊಂಡು (ಮಾಂಗಲ್ಯ. ೫೪). [ ? ]

**ಗೋಲರಸ** (ನಾ). ಒಂದು ಬಗೆಯ ರಾಳ : "ಬೋಳ, ಪಿಂಡ" (ನಾಚಿರಾ. ೬) : " (ಸುಗಂಧದ್ರವ್ಯಗಳಲ್ಲಿಯೂ ಔಷಧದಲ್ಲಿಯೂ ಧೂಪದಲ್ಲಿಯೂ ಉಪಯೋಗಿಸುವ) ಸಾಂಬ್ರಾಣಿಯಂಥ ಒಂದು ಬಗೆಯ ಗೋಂದು ರಾಳ: "ಗೋಲರಸ" (Myrrh. ಇಂಕನಿ). 'ಗೋಪರಸ' ಪರಾ. [ ? ]

**ಗೋಲಸರ** (ನಾ). ಒಂದು ಬಗೆಯ ಹೂವಿನ ಗಿಡ ; ಬಕುಲ : ಪಾದರಿ, ದೇವಗಣಗಿಲ, ಗೋಲಸರ, ಪುನ್ನಾಗ, ಸುರಿಗೆ (ಕೃಷಿಪ್ರ. ೩೦೦).
[ ←ಮರಾ. ಗೋಲಸರ್ ]

**ಗೋಲಾಂಗೂಲ,** ಗೋಲಾಂಗೂಳ, ಗೋಳಾಂಗೂಳ (ನಾ). ೧. ಹಸುವಿನ ಬಾಲ. ೨. ಹಸುವಿನ ಬಾಲದಂತೆ ಬಾಲವಿರುವ ಕಪ್ಪುಮುಖದ ಕೋತಿ; ಮುಸುವ: "ಗೋಲಾಂಗೂಲಃ, ಕೃಷ್ಣವಕ್ತ್ರಃ–ಈ ೨ ಮುಸು" (ಹಲಾಯು. ೩೯–೭೯) ; ತಾನುಂ ಬೇಡನುಂ ವ್ಯಾಳನುಂ ಗೋಲಾಂಗೂಲನುಂ ಬಿರ್ದ ಕಾರಣಮಂ ಪೇಟ್ದು (ಪಂಚತಂ. ೧೦೯–೮) ; ಹರಿ ಗೋಲಾಂಗೂಲ ಡೋಲಾಯಿತ ತರು ವಿಟಪಂ (ಜಗವಿ. ೧೬–೨೬). ೧. ೨: ಕ್ಷೇತ್ರಾಕರ್ಷದಂತೆ ಪೋತ್ರಿಪೋತ್ರಾಹತ ಧರಣಿತಳಮುಂ ಗೃಹೀತ ಗೋಲಾಂಗೂಲಮುಂ (ಚಂದ್ರಪು. ೫–೫೩ ವ). **ಗೋಲಾಂಗೂಳ : ೨.** " ಪ್ಲವಗಂ . . . ವಾನರನಂತವಱೊಳಗೆ ಜಾತಿಯಿಂ ಕೃಷ್ಣವಕ್ತ್ರನಾಗಿರ್ಪುದಱಿಗೆ ಗೋಲಾಂಗೂಳಂ " (ವಸ್ತುಕೋ. ೯೧–೬). **ಗೋಳಾಂಗೂಳ : ೨.** ದಾಳಿವೊಗೆಯ್ವೊಡನೆವರ್ಪ ಗೋಳಾಂಗೂಳಂಗಳುಮಂ ನೋಡಿ (ಪಂಪಭಾ. ೧–೧೧೫ವ); ಆ ಬಾಲಕರ್ ಬಾಲ್ಯದಿಂ ತೊಟ್ಟು ಗೋಳಾಂಗೂಳರಂತೆ ಸಹಜ ಚಾಪಲ್ಯರುಂ (ಸುಕುಮಾ. ೨–೫ ವ). [ ಗೋ + ಲಾಂಗೂಲ ]

**ಗೋಲಾಂಗೂಳ** 'ಗೋಲಾಂಗೂಲ' ನೋ.

**ಗೋಲಾಕಾರ,** ಗೋಳಾಕಾರ (ನಾ). ಗುಂಡಾದ ಆಕಾರವುಳ್ಳದು ; ವೃತ್ತಾಕಾರವಾದುದು : ಗಂಟೆಯ ನೆಂಟನೆ ಓ ಗಡಿಯಾರ ಬೆಳ್ಳಿಯ ಬಣ್ಣದ ಗೋಲಾಕಾರ (ಕಪಪು. ೩–೩೮). **ಗೋಳಾಕಾರ :** ಭೂಮಿಯು ಚೆಂಡಿನಂತೆ ಗುಂಡಾಗಿದ್ದರೂ ಸಂಪೂರ್ಣವಾಗಿ ಗೋಳಾಕಾರವಾಗಿಲ್ಲ (ಭೂವಿವ. ೪). [ ಗೋಲ + ಆಕಾರ$_2$ ]

**ಗೋಲಾಟ** (ನಾ). [ಯೋಗ] ಒಂದು ಬಗೆಯ ಯೋಗಚಕ್ರ : ಎಲುವಿನ ಪಂಜರವನು ಚೈತನ್ಯದ ನಿಲವನು ಗೋಲಾಟದ ಸಿತಪದ್ಮವ ಚಲಿಸುವ ನೀಲಜ್ಯೋತಿಯ ಪುತ್ಥಳಿಯಂ ಶೃಂಗಾಟವನ್ನು ದಳದಳನಿಳಿತಹ ಸುಧೆಯನು (ಯೋಗಾಂವಿ. ೪–೨೨). [ <ಸಂ. ಗೋಲ್ಹಾಟ ]

**ಗೋಲಾರ್ಧ,** ಗೋಳಾರ್ಧ (ನಾ). (ಭೂಮಿ ಮುಂತಾದುವುಗಳ) ಅರ್ಧಭಾಗ : ಪ್ರತಿಯೊಂದು ಗೋಲಾರ್ಧದಲ್ಲಿ ಒಣನೆಲವೂ ನೀರೂ ಉಂಟು (ಮುಂಬಯಿ. ೪–೯೪). **ಗೋಳಾರ್ಧ :** ಅರ್ಧಗೋಳ ; ಗೋಳಾರ್ಧ (ಮು; ವಿಷುವದ್ವೃತ್ತದಿಂದಾಗಲಿ ಸಂಕ್ರಾಂತಿವೃತ್ತದಿಂದಾಗಲಿ ಭಾಗಿಸಿದ) ಖಗೋಳಾರ್ಧ (Hemisphere. ಇಂಕನಿ).
[ ಗೋಲ + ಅರ್ಧ ]

**ಗೋಲಿ$_1$**(ನಾ). ೧. ಗುಂಡನೆಯ ವಸ್ತು ; ಸಣ್ಣಗೋಲ :(೬). ೨. ಮಕ್ಕಳು ಆಡುವ ಗಾಜು, ಮಣ್ಣು ಮುಂತಾದುವುಗಳಿಂದ ಮಾಡಿದ ದುಂಡನೆಯ ಸಾಧನ,–ಆಟಿಕೆ : ಮಂದಮಾರುತನೆಂಬ ಕುಮಾರನು ಆಡುವ ಗೋಲಿಗಳೋಯೆಂಬಂತೆ (ಸೌಗಂಧಿ. ೪೬೯–೨) ; ಗೋಲಿ, ಬಟ್ಟೆಯ ಚೆಂಡು, ಗೊಂಬೆಗಳು ಸಿಕ್ಕಿವೆ (ಭಾರದ. ೧೩). ೩. ಬಂದೂಕಿಗೆ ಹಾಕುವ ಗುಂಡು : ತರುವಾಯ ಕೋವಿಗಳಿಂದ ಗೋಲಿ ವಗೈರೆ ಹಾರಾಡಿದವು (ಚಿತ್ರಪಾ. ೫೭) ; ಘಾತಕನ ಕೊಲೆಕೋವಿ ಗೋಲಿ ಕಾರುತ್ತಿರಲು (ಅಮತಂ. ೨೬). [ ←ಪಾರ.'ಹಿಂ. ಗೋಲೀ ; ಮರಾ. ಗೋಳೀ ]

**ಗೋಲಿ$_2$** (ನಾ). ಚೆಂಡು ಗುರಿ ಹೊಗದಂತೆ ರಕ್ಷಣೆಗಿರುವ ಆಟಗಾರ ; ಗುರಿ ಕಾಪಿನವನಂ : ನಮ್ಮ ಕಡೆಯ ಗೋಲಿಯಿಂದಲೇ ಪಂದ್ಯದಲ್ಲಿ ಗೆಲ್ಲಲು ಸಾಧ್ಯವಾಯಿತು (ರೂಢಿ). [ ←ಇಂ. Goalie ]

**ಗೋಲಿತೇವು** (ನಾ). ಒಂದು ಬಗೆಯ ಗೋಲಿಯ ಆಟ ; ಸೋತವರು ಕೈಬೆರಳು ಮಡಿಸಿ ಗೋಲಿಯನ್ನು ಮುಂದಕ್ಕೆ ದೇಕುವ ಆಟ : ಚಕ್ಕಳ ಗುಕ್ಕಳು ಗೋಲಿತೇವು ಅಪ್ಪಚ್ಚಿಯು ತಲೆಡಿಕ್ಕಿ . . . ಬಲುಪರಿ ಒಂದೊಂದು ಬಾಲಾಟದಲಿ ನಲಿದು(ವಿಶ್ವೋಸು. ೧೯–೩). [ ಗೋಲಿ + ? ]

**ಗೋಲಿಬಾರು** 'ಗೋಲೀಬಾರು' ನೋ.

**ಗೋಲೀಢ** (ನಾ). ವಿಷಪರಿಹಾರಕವಾದ ಒಂದು ಬಗೆಯ ಮರ; ಮೊಕ್ಕೆ: "ಗೋಲೀಢಃ, ಝಾಟಲಃ, ಘಂಟಾ, ಪಾಟಲೀ, ಮೋಕ್ಷಃ,ಮುಷ್ಕಕಃ–೬ ಮೊಕ್ಕೆಮರದ ಪೆಸರು " (ಸಿದ್ಧಾಂತಿ. ೧೦೬). [ ಸಂ. ]

**ಗೋಲೀಬಾರು,** ಗೋಲಿಬಾರು, ಗೋಳೀಬಾರು (ನಾ). ಬಂದೂಕು ಮೊದಲಾದುವುಗಳಿಂದ ಗುಂಡನ್ನು ಹಾರಿಸುವುದು : ಸಿಪಾಯಿಗಳು ಗೋಲೀಬಾರು ಮಾಡಿದರು (ರೂಢಿ). **ಗೋಲಿಬಾರು :** ಗಲಾಟೆ ಗೋಲಿ ಬಾರುಗಳು ನಡೆದವು (ದ್ರಾವಿವಿ. ೬೪). **ಗೋಳೀಬಾರು :** ಚಳುವಳಿಕಾರರ ಮೇಲೆ ಗೋಳೀಬಾರು ಮಾಡಲಾಯಿತು (ಪತ್ರಿಕಾ. ೩೬).
[←ಹಿಂ. ಗೋಲಾಬಾರೀ ; ಮರಾ. ಗೋಳೀಬಾರ್ ]

**ಗೋಲೀಯ** (ಗು). ವರ್ತುಲಾಕಾರವಾದ ; ದುಂಡಾಗಿರುವ : ಗೋಲೀಯ ಕನ್ನಡಿಗಳಲ್ಲಿ ಗೋಲಾಂತರವೆಂತಲೂ ಗೋಲಬಾಹ್ಯವೆಂತಲೂ ಎರಡು ಭೇದಗಳುಂಟು (ಮುಂಬಯಿ. ೬–೮೮). [ ಸಂ. ]

**ಗೋಲು$_1$,** ಗೋಳು$_3$ (ನಾ). ೧. ಪಕ್ಕ; ಪಾರ್ಶ್ವ. 'ಬಲಗೋಲು' ಪರಾ. ೨. ಲಗಾಮಿನ ಎಳೆತ : ದಕ್ಷಿಣವಾಮದ ಗೋಲಿಂ ಕಕ್ಷದ ಮಡಸನ್ನಿಯಿಂದೆ ದೂವಾಳಿಯುಮಂ ಪಕ್ಷಿರೇಚಿತದಿ ಪೋದುದು ಲಕ್ಷ್ಮೀಧರನಂತೆ ತೋಱಿದಂ ನೃಪತಿಳಕಂ (ಬೀಳವಂ. ೨–೨೪). **ಗೋಳು$_3$:** ೧. 'ಬಲಗೋಳು' ಪರಾ. [ <ಕೋಲ್$_1$ ]

**ಗೋಲು$_2$** (ನಾ). (ಉಕ) ಕಚ್ಚೆ ಹಾಕಿಕೊಳ್ಳದೆ ಉಟ್ಟುಕೊಳ್ಳುವ ಸೀರೆ: ಸುಶಿಕ್ಷಿತಮಹಿಳೆಯರಲ್ಲಿ ಹತ್ತುಮೊಳದ 'ಗೋಲ'ನ್ನುಡುವ ಪದ್ಧತಿ ಬಂದುದು ಸರ್ವತ್ರ ಸ್ವಾಗತವನ್ನು ಪಡೆಯಬೇಕಾದ ವಿಷಯ (ಮುಂಗಾಪು. ೨೪) ; ನಿನಗೆ ಗೋಲು ಉಡುವುದು ಹೆಚ್ಚು ಪ್ರೀತಿಯಲ್ಲವೆ? (ಕಾಗಕ. ೧೨೪). [ <ಸಂ. ಗೋಲ? ]

**ಗೋಲು$_3$** (ನಾ). ೧. ಚೆಂಡು ನುಗ್ಗಲು ಇರುವ ಎರಡು ಕಂಬಗಳ ನಡುವಿನ ಸ್ಥಳ : ಚೆಂಡಾಟದಲ್ಲಿ ಚೆಂಡು ಜೋರಾಗಿ ಗೋಲಿನ ಬಳಿ ಬಂದಾಗ ಅದನ್ನು ತಡೆಯುವುದು ಕಷ್ಟ (ರೂಢಿ). ೨. "(ಗುರಿಗಂಬಗಳ ನಡುವೆ ಚೆಂಡನ್ನು ನುಗ್ಗಿಸಿ ಪಡೆದ) ಗೆಲ್ಲಂಕ(ಗಳು)" (Goal. ಇಂಕನಿ); ಆ ದಿನ ನಡೆದ ಪಂದ್ಯದಲ್ಲಿ ನಮ್ಮವರಿಗೆ ನಾಲ್ಕು ಗೋಲುಗಳು ದೊರೆತು ವಿಜಯಿಗಳಾದೆವು (ಕುಟಮಿ. ೬೬) ; ನಿಮ್ಮ ಟೀಮು ಗೆದ್ದಿತೋ ಹೇಗೆ? ಒಂದು ಗೋಲಿನಿಂದ ಗೆದ್ದಿತು (ಮಹಾಗ. ೧೬). [ ←ಇಂ. Goal ]

**ಗೋಲೆ** (ನಾ). ೧. ಗೋಲಕ ; ಹುಂಡಿ (?) : ನಾಗವರ್ಮ್ಮವಿಭು ಧರ್ಮ್ಮನಿಮಿತ್ತದೆ ಗೋಲೆಗನ್ದು ಸಜ್ಜನಜನಕರ್ಣ್ಣಪೂರನೆನಿಸಿದ್ದ ನೆಗಟ್ತೆಯ ಸೆಟ್ಟಿ ಲಕ್ಕಣಯ್ಯ (ಸೌಇಇ. XX, ೫೫–೨೮ ; 1082) ; ಈ ಧರ್ಮ್ಮಮನುಪೇಕ್ಷಿಸಿ ಕಿಡಿಸಿದವಂ ಸ್ಥಾನಗರ್ದ್ದಭ ಚಾಣ್ಡಾಲಂ ಸಮೆ(ಮು)ಯಬಾಹಿರಂ ಬಳಂಜಿಗಂ ಗೋಲಲು ಪಣಂಗೊಂಡವ ಪಂಚಮಹಾಪಾತಕನಕ್ಕು (ಇಇ. X, ೧೮೭–೩೯ ; 1095). ೨. (?). ಶ್ರೀ ಮಲ್ಲೊಕ್ಕಿಗುಣ್ಡಿಯೂರೊಡೆಯ ಪ್ರಮುಖ ಮಹಾಜನಂ ಶ್ರೀಸಾಸಿರ್ವ್ವರುಂ ಸಮಸ್ತಗೋಲೆ ಗೋಬ್ರಾಹ್ಮಣರ್ಮ್ಮೊದಲಾಗಿ ಸಬಾಲವೃದ್ಧರ್ನ್ನೆರೆದು ಧರ್ಮ್ಮಂಗಳಂ ಸ್ವಧರ್ಮ್ಮದಿಂ ರಕ್ಷಿಸುತ್ತಮಿರೆ (ಸೌಇಇ. XI-II, ೨೦೨–೧೨ ; ?). [ <ಸಂ. ಗೋಲಕ ]

**ಗೋಲೋಕ** (ನಾ). ಊರ್ಧ್ವಲೋಕಗಳಲ್ಲಿ ಒಂದು: ಗೋಲೋಕ ಸತ್ಯಲೋಕ . . . ಧ್ರುವಲೋಕವನೇಟುವನೇಟಧರಲೋಕಮಂ ನೆಟಿ ಕಂಡಂ (ಜಗವಿ. ೫-೧೦೬). P ಗೋಲೋಕವೆನ್ನುವುದು ರಾಧಾಕೃಷ್ಣರ ವಿಹಾರಸ್ಥಾನವಾದ ಬ್ರಹ್ಮಲೋಕಕ್ಕೂ ಮೇಲಿರುವ ಒಂದು ಲೋಕವೆಂದು ಪುರಾಣಗಳಲ್ಲಿ ಹೇಳಿದೆ. [ಗೋ + ಲೋಕ]

**ಗೋಲೋಮಿ** (ನಾ). ೧. ಉಗ್ರವಾದ ಗಂಧವುಳ್ಳ ಬೇರು; ಬಜೆ: "ವಚಾ, ಉಗ್ರಗಂಧಾ, ಷಡ್ಗಂಧಾ, ಗೋಲೋಮಿ . . . ಬಜೇ ಹೆಸರುಗಳು" (ಸಿದ್ಧಾಂತಿ. ೧೧೪). ೨. ಒಂದು ಬಗೆಯ ಹುಲ್ಲು; ಗಂಡಾಲಿ: "ಕಟುಕೆ ಬಿಳಿದಾದೊಡೆ ಗೋಲೋಮಿ ಶತವೀರ್ಯೆ ಎನಿಸುಗು" (ನಾಚಿರಾ. ೬); "ಗೋಲೋಮಿ, ಸತವೀರ್ಯಾ, ಬಿಳೀಗರುಕೇ ಹುಲ್ಲು" (ಸಿದ್ಧಾಂತಿ. ೧೩೦). ೩. ಒಂದು ಬಗೆಯ ಸಸ್ಯ; ಭೂತಕೇಶ: "ಗೋಲೋಮಿ, ಭೂತಕೇಶಃ – ೨ ಜಟಾಮಾಂಸಿಯ ಹೆಸರುಗಳು" (ಸಿದ್ಧಾಂತಿ. ೨೬೪).
[ಸಂ. ಗೋಲೋಮಿ]

**ಗೋಲೋಮಿಕೆ** (ನಾ). ಒಂದು ಬಗೆಯ ಸಸ್ಯ: "ಗೋಸಂಭವಾ– ಗೋಲೋಮಿಕೆ" (ಓಷಧಿ. ೫೧). [ಸಂ. ಗೋಲೋಮಿಕಾ]

**ಗೋವ** (ನಾ). ೧. ದನಗಳನ್ನು ಕಾಯುವವನು; ಗೋಪಾಲಕ: "ತುಱುವಳರ್ ಗೋವರ್ಕಳೆನೆ ಗೊಲ್ಲರಕ್ಕುಂ" (ಶಬ್ದಮಂ. ೩೪); ಪಚ್ಚನೆ ಪಸಿಯ ಗೋವನ್ಯೆ (ಪಂಪಭಾ. ೬-೫೨); ತುಱುಗಾವ ಗೋವರು . . . ಬೆಸಗೊಳುತುಂ (ಧರ್ಮಾಮೃ. ೮-೨೩). ೨. ರಕ್ಷಕ; ಒಡೆಯ; ಅಧಿಪತಿ: ವೀರವಿದ್ಯಾಧರಂ ಕಟಕದ ಗೋವನಚಳಿತ ಧೈರ್ಯ್ಯ (ಎಕ. VII, ಶಿಕಾರಿ. ೧೨೫-೨೨ : 1019). ೩. ಕುದುರೆಯ ಸವಾರ: ಪಿಡಿಯಲೊಡರ್ಚೆ ತಡೆದು ತೊಡಂಕಿ ತುಡುಂಕಿದ ಗೋವ[ಪಾಠಾಂ. ವಳ]ನಂ ಕೊಡಪಿ ಕೆಡಪಿ ಕಡೆ ವಾಯ್ದು . . . ವಿಸಟಂಬರಿವ ಸೂಕಳಾಶ್ವಂಗಳನಂಕಣಿಯಂ ಬಗೆಯದೆ ಮುಂಕೊಂಡು (ರಾಜಶೇ. ೬-೧೦೭). [< ಸಂ. ಗೋಪ]

**ಗೋವಂದನಿ** (ನಾ). (ಸುವಾಸನೆಯ ಬೀಜಗಳನ್ನು ಬಿಡುವ) ಒಂದು ಬಗೆಯ ಗಿಡ; ಪ್ರಿಯಂಗು; "ಪ್ರೇಂಕಣಗಿಡ" (ಅಮರ. ೮೮೪).
[ಸಂ. ಗೋವಂದನೀ]

**ಗೋವಗೆ** (ನಾ). ಒಂದು ಊರಿನ ಹೆಸರು; P ಈಗಿನ ಗೋವೆ: ನಿಜ ರಾಜಧಾನಿ ಗೋವಗೆಯೊಳ್ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ (ಸೌಇಇ. XI-ii, ೧೨೧-೬ : 1071). [?]

**ಗೋವಣ** (ನಾ). ಒಬ್ಬಾತನ ಹೆಸರು: ಶ್ರೀಗೋವಣಯ್ಯಾಬ್ಬಿಳ ಚತುಮ್ಮುರ್ಗಿಕಂ (ಎಕ. II, ೪೬೩: 1000), ಬ[೦]ಣ್ಣಿಪುದು ಧಾರಿಣಿ ಗೋವಣಮಣ್ಡಳೇಶನಂ (ಸೌಇಇ. XX, ೧೭೯-೨೪ : ?). [?]

**ಗೋವಣಪೊಲ** (ನಾ). (?): ಶ್ರೀಮನ್ನಗರೇಶ್ವರದೇವರ್ಗ್ಗೆ ಬಡಗಪೊಲ ದೂರೊಡೆಯು ಮಾನ್ಯಂ ಗೋವಣಪೊಲದೊಳಗೆ . . . ಬಿಟ್ಟ ನೆಲ (ಸೌಇಇ. XX, ೧೯-೩೮ : 1015). [ಗೋವಣ ? + ಪೊಲ$_1$]

**ಗೋವತಿ** (ನಾ). ಗೊಲ್ಲಿತಿ; ಗೋಪಿ: (೬).
[ಗೋವ + – ತಿ$_1$ (< – ಇತ್ತಿ).]

**ಗೋವತ್ಸ** (ನಾ). ಹಸುವಿನ ಕರು: "ಕೀಟುಂ ಕಂದುಂ ನಿರುತಂ ಗೋವತ್ಸಂ ತಾಂ" (ಕವಿಕಂ. ೮೬); ಗೋವತ್ಸಲೀಲೆ ತೊರೆಕರೆಯ ಮೇಲೆ ವನವಾಟಿ ಸಜ್ಜೆಸಾಲೆ (ಸೂರ್ಯಪಾ. ೩೫-೦) [ಗೋ + ವತ್ಸ]

**ಗೋವರ** (ನಾ). ೧. ಶ್ರೇಷ್ಠವಾದ ಗೋವು,–ಆಕಳು. ೨. ಶ್ರೇಷ್ಠವಾದ ವಾಣಿ,–ಪ್ರವಚನ. ೧, ೨: ಕರೆದಂ ಸ್ವಾತ್ಮಾರ್ಥದೆ ಗೋವರಮಂ ಯಜ್ಞೀಯ ಹವಿಯ ವಿಷಯದೊಳಾತಂ ಕರೆದಂ ವಸಿಷ್ಠಮುನಿಯಂತಿರೆ ತಪದಿಂ ಶಿಷ್ಯರಪ್ಪ ಶಿಷ್ಯರೊಳಾತಂ (ಸೌನಂದ. ೧-೩). ೩. ಪುಡಿಮಾಡಿದ ಸಗಣಿ. 'ಗೊಬ್ಬರ$_1$' ಪರಾ. [ಗೋ + ವರ$_3$]

**ಗೋವರಳಿ** (ನಾ). ಒಂದು ಬಗೆಯ ಧಾನ್ಯ (?): ಈ ಸೊಪ್ಪು ಗೋವರಳಿಯ ಹೊಟ್ಟು ಸಹ ಹೊಗೆ ಕಾಸುವುದು (ವಿಷ್ಣುವಿ. ೧೨೮). [?]

**ಗೋವರ್ಧನ** (ನಾ). ೧. ಗೋವುಗಳಿಗೆ ಏಳಿಗೆಯನ್ನುಂಟು ಮಾಡುವುದು; ಗೋವುಗಳನ್ನು ಪಾಲನೆಮಾಡುವುದು; ಗೋವರ್ಧನಪಟು ನಲಿದಂ ಗೋವರ್ಧನ ಗಿರಿಯೊಳೆಸೆವ ವೃಂದಾವನದೊಳ್ (ಜಗವಿ. ೪ ೧). ೨. ಗೋವುಗಳನ್ನು ಪಾಲನೆಮಾಡುವವನು; ಕೃಷ್ಣ: ಗೋವರ್ಧನನಂ ಪೂಜಿಸೆಂದನಱಿಯದೆ ಭೀಷ್ಮಂ (ಜಗವಿ. ೧೭-೧೯); ಗೋವರ್ಧನಂಗೆ ಮೊಲೆಗೊಟ್ಟ ಪೂತನಿಪೊಲಾಯ್ತು (ಕೃಮಿಧಾ. ೨೧-೩). ೩. ವೃಂದಾವನದಲ್ಲಿಯ ಒಂದು ಪರ್ವತದ ಹೆಸರು: ಮುನ್ನ ತಾನತುಲ ಗೋವರ್ಧನವನಾಂತು ಗೋಕುಲವನೋವಿದ ಸುಕೃತ ಫಲವನಿತ್ತು (ಕೃಮಿಧಾ. ೧೩-೩೬). ೪. ಗೋರಿಕಾಯಿ; ಚವಳಿಕಾಯಿ: ನೆಲ್ಲವರೆ ಸವತೆ ಗೋವರ್ಧನ ಬೆಂಡೆ ಮೊದಲಾದ ವ್ಯಂಜನಂಗಳ್ (ಸೌಗಂಧಿ. ೩೭-೧೪). [ಗೋ + ವರ್ಧನ]

**ಗೋವರ್ಧನಧರ** (ನಾ). ಗೋವರ್ಧನ ಪರ್ವತವನ್ನು ಎತ್ತಿ ಹಿಡಿದವನು; ಕೃಷ್ಣ. [ಸಂ.]

**ಗೋವಲೆಗಟ್ಟಿಗೆ** 'ಗೋವಳಗಟ್ಟಿಗೆ' ನೋ.

**ಗೋವಳ** 'ಗೋವಾಳ' ನೋ.

**ಗೋವಳಗಟ್ಟಿಗೆ, ಗೋವಲೆಗಟ್ಟಿಗೆ, ಗೋವಳಿಗಟ್ಟಿಗೆ** (ನಾ). ೧. ದನಗಾಹಿಗಳು ಕೈಯಲ್ಲಿ ಹಿಡಿದುಕೊಳ್ಳುವ ಕೋಲು,–ಬೆತ್ತ. ೨. ಆನೆ ಕುದುರೆಗಳನ್ನು ಚೋದಿಸುವ ಸಾಧನ: ಸೂಳಱಿದು ಮುಸಗಿ ದುವ್ವಾಳಿಸುವ ಗೋವಳಗಟ್ಟಿಗೆಯ ಗೊಂದಣಂಗೂಡಿ . . . ಭೂಚಕ್ರಮಂ ತೆಕ್ಕನೆ ತೀವಿದ ಪದಾತಿಬಲದೊಳಂ (೧೧ಶ. ೬-೫೫ ವ); ಮೇಳೈಸಿದ ಮಂದಿಯ ಮುಂದೊಲೆದಾಡುವ ಗೋವಳಗಟ್ಟಿಗೆಯಿಂದೊಪ್ಪಿತ್ತುಮರರ ಪಡೆ (ವೀರೇಚ. ೨-೩೩). **ಗೋವಲೆಗಟ್ಟಿಗೆ:** ಇಕ್ಕೆಲದೊಳೊಲೆವ ಗೋವಲೆ [ಪಾಠಾಂ. ಕೋವಳ]ಗಟ್ಟಿಗೆಗಳಲ್ಲಿ ತೆಕ್ಕೆಯಿಂದೊತ್ತರಿಪ ಜೋದ ಜೋಕೆಗಳಲ್ಲಿ (ಇಹರ. ದೇ. ೩೯-೩). **ಗೋವಳಿಗಟ್ಟಿಗೆ:** ೨. ಸಾಲು ಗೋವಳಿಗಟ್ಟಿಗೆಯ ಕುಂತಾಳಿಗಳ ತೂಗಾಟ ಮಿಗೆ ದುವ್ವಾಳಿಗಳ ದೆಖ್ಖಾಳ ಗಜರಥತುರಗ ಸೇನೆಯಲಿ (ಕುವ್ಯಾದ್ರೋ. ೧೨-೨೬). [ಗೋವಳ (<ಗೋವಾಳ)+ಕಟ್ಟಿಗೆ$_1$]

**ಗೋವಳಗಟ್ಟಲೆ** (ನಾ). ಕಗ್ಗತ್ತಲೆ; ಗಾಢಾಂಧಕಾರ: ಸಾವಿತ್ರದ್ಯುತಿ ದಾವಶಿಖಾವಳಿ ಪರಿದಟ್ಟಿ ಪೆಱಗೆ ಕರಿಕೆರ್ದವೊಲೇಂ ತೀವಿದುದೊ ಭುವನತಳಮಂ ಗೋವಳಗಟ್ಟಲೆ ಸಮಸ್ತಭುವನಾತ್ಮಕಮಂ (ಅರ್ಧನೇ. ೫-೧೬). 'ಮೊಲಗಟ್ಟಲೆ', 'ರಣಗಟ್ಟಲೆ' ಪರಾ.
[ಗೋವಳ$_0$ (<ಕಾವಳ) + ಕಟ್ಟಲೆ]

**ಗೋವಳಗೋಲ್, ಗೋವಳಿಗೋಲ್** (ನಾ). ೧.=ಗೋವಳಗಟ್ಟಿಗೆ ೧: ಗೋವಳರ್ಗಾವಳಿಗೊಂಡು ಗೋವಳಗೋಲನೆತ್ತಿಕೊಂಡೊದಱೆ (ಅರ್ಧನೇ. ೭-೯೧ ವ); ಪೊಡೆವ ಸಿಡಿಲನದಿರದೆ ಪೊಡೆಸೆಂಡನು ಪೊಡೆವಂತಾ ವನಮಾಲಿ ಪಿಡಿದ ಗೋವಳಗೋಲಿಂ ನುಗ್ಗುನುಱಿಮಾಡಿ ಪಡೆದನದೇನು ಬಲ್ಲಿದನೊ (ನೇಮಿಸಂ. ೧೫-೧೨೮). **ಗೋವಳಿಗೋಲ್:** ೧. ಬೀಸುತ್ತೆ ಮಿಂಚೆಂಬ ಗೋವಳಿಗೋಲಂ ಪೊಡೆಸೆಂಡುವೊಯ್ದು ಸಿಡಿಲಂ . . . ಬಂದೊದಱಿದಂ ಕಾರೆಂಬ ಗೋಪಾಳಕಂ (ಅರ್ಧನೇ. ೮-೪); ಪಿಡಿದ ಗೋವಳಿಗೋಲ ಮಾಲೆಗಳ ಹಾಹೆಯಿಂ (ಬಸರ. ೯-೯೭). ೨. = ಗೋವಳಗಟ್ಟಿಗೆ ೨: ಸಾಲು ಝಲ್ಲರಿಗಳ ಪತಾಕಾಜಾಲ ಸಬಳದ ಹೊದಱ ಗೋವಳಿಗೋಲ ತೂಗಾಟದಲಿ ಸಮರಕೆ ದೊಱ್ಱಣ ನಡೆತಂದ (ಕುವ್ಯಾದ್ರೋ. ೯-೧೬); ಸಾಲ ಸಿಂಧದ ಮಣಿವ ಗೋವಳಿಗೋಲ ತೂಕದ ತಳಿತ ಚೌರಿಯ ಜಾಲ ಮೋಹಿದ ಮೇಘಘಟೆಯೆನೆ ಜಡಿವ ಝಲ್ಲರಿಯ. (ಕುವ್ಯಾಕ. ೧೯-೬).
[ಗೋವಳ (<ಗೋವಾಳ)+ಕೋಲ್$_1$]

**ಗೋವಳತಿ** 'ಗೋವಳಿತಿ' ನೋ.

**ಗೋವಳಬಲ** (ನಾ). ಗೊಲ್ಲರ ಸೈನ್ಯ,-ಪಡೆ: ನಲವಿಂದೆ ನೋಡಲಾಕ್ಷಣದಲ್ಲಿ ಗೋವಳಬಲ ಬಂದು ನಮಿಸಿದುದು (ಪೋಹಕ. ೪೨-೪೫).
[ಗೋವಳ (<ಗೋವಾಳ) + ಬಲ]

**ಗೋವಳರಾಯ** (ನಾ). ಗೊಲ್ಲರ ಒಡೆಯಂ; ಕೃಷ್ಣ: ಗೋವಳರಾಯಂ ಕೊಳಲೂದಿದಂ ನೆಗೞ್ವಿನಂ ಮಾಧುರ್ಯತೂರ್ಯಸ್ವನಂ (ಜಗವಿ. ೫-೨).
[ಗೋವಳ (<ಗೋವಾಳ) + ರಾಯ]

**ಗೋವಳಿಗ** (ನಾ). ಗೋಪಾಲಕ; ಗೊಲ್ಲ: "ಗೋಸ್ವಾಮಿ ಗವಾಧಿಪತಿ ತಾನವಂ ಗೋವಳಿಗಂ" (ವಸ್ತುಕೋ. ೯೦-೧೪); ಆನಿರೆ ಗೋವಳಿಗಂಗಗ್ರ ಪೂಜೆಯಂ ನೀನ್ ಕುಡುವಾ (ಪಂಪಭಾ. ೬-೪೭); ಗೋವಳಿಗರ ಶಿಶುವೆಂದಿರಲಾ ವೈರಿಯೆ ದೇವಕೀಸುತಂ ಗಡ (ಜಗವಿ. ೫-೫೮). 'ಗವಳಿಗ' ಪರಾ. [ಗೋವಳ (<ಗೋವಾಳ) + -ಇಗ]

**ಗೋವಳಿಗಟ್ಟಿಗೆ** 'ಗೋವಳಗಟ್ಟಿಗೆ' ನೋ.

**ಗೋವಳಿಗೋಲ್** 'ಗೋವಳಗೋಲ್' ನೋ.

**ಗೋವಳಿತಿ, ಗೋವಳತಿ** (ನಾ). ಗೊಲ್ಲಿತಿ; ಗೋಪಿ: ವನಜಂ ಪಂಕಾಂಕಿತಂ ಗೋವಳಿತಿಯ ಮೊಲೆಯೊತ್ತಿಂಗೆ ಪಕ್ಕಾಯ್ತು (ಶಂರಾಮೂ. ೧-೧೨೨); ಜಾತಿ ಗೋವಳಿತಿ ರಕ್ಷಿಸೆ ನೀಂ ಪರಪುಟ್ಟನಾದೆ (ಜಗವಿ. ೧೭-೪೧). **ಗೋವಳತಿ**: ಆವ ಗೋವಳತಿಯರ ಕಣ್ಣುದೃಷ್ಟಿ ತಾಗಿತಯ್ಯ (ಪುರಂದ. ೧-೮೯ ಪಲ್ಲವಿ.). [ಗೋವಳ (<ಗೋವಾಳ) + -ಇತಿ$_1$ (<-ಇತ್ತಿ)]

**ಗೋವಾಟ** (ನಾ). ದನಕರುಗಳಂ ವಾಸಿಸುವ ಸ್ಥಳ; ಕೊಟ್ಟಿಗೆ: ನಡೆಗೆಡೆಗಳಿಲ್ಲದಿಹ ಮೂಲೆಮೂಲೆ ಮುಡುಕಳೊಳುಂ ಗೋವಾಟ ಕುಸ್ಥಲದೊಳು (ಐಕೋಪು. ೪-೭೧).
[ಗೋ + ವಾಟ]

**ಗೋವಾಹನ** (ನಾ). ಎತ್ತನ್ನು ವಾಹನವಾಗಿ ಉಳ್ಳವನು; ನಂದಿವಾಹನ; ಶಿವ. 'ಗೋಪವಾಹನ' ಪರಾ. [ಗೋ + ವಾಹನ]

**ಗೋವಾಳ, ಗೋವಳ** (ನಾ). ತುರುಕಾರ; ದನಗಾಹಿ; ಗೋಪಾಲ; ತುತ್ತೂರಿ ಜಂಗುಳಿದೈವಗಳನೆಲ್ಲವ ಹಿಂಡುಮಾಡಿ ಕಾವ (ಮ?) ನಮ್ಮ ಶಂಭು ತೆಲುಗೇಶ್ವರನ ಮನೆಯ ಗೋವಾಳನೀತ (ಸರ್ವವ. ೮೬-೪೮೪); ಗೋವಾಳ ಪೋಗೆ ಗೋವುಗಳು ಬರುವಂತೆ ಮಾಳ್ಪೆಂ (ಪ್ರಭುಪು. ೪-೩೫). **ಗೋವಳ**: ಆಗಳೊರ್ವ ಗೋವಳನನಿಬರ ಸಾವುಮಂ ಕಂಡು . . . ಉತ್ತರಂಗೆ ಪೇೞ್ದಾಗಳ್ (ಪಂಪಭಾ. ೮-೯೫ ವ); ಈ ಜಗದ ಜಂಗುಳಿಯ ಕಾವ ಗೋವಳ [ಪಾಠಾಂ. ವಾಳ] ತಾನಾಗಿ (ಅವಚಂ. ೩-೮); ಮಹ ಮನೆಯ ಗೋವಳನಲ್ಲಿ . . . ನಿಂದು ಬಸವಂಗೆ ಬಿನ್ನೈಸಿದಂ (ಬಸರ. ೯-೧೦೩); ಗೋವಳಂಗರಸುತನಮಾದಬಳಿಕ ಪೊಡವಿಯಂ ಕಂಡು ನಡೆವನೆ (ಜೈಮಿಭಾ. ೬-೫೩). [<ಪ್ರಾ. ಗೋವಾಲ$_1$./ಸಂ. ಗೋಪಾಲ]

**ಗೋವಾಳಿ$_1$** (ನಾ). ಹಸುಗಳ ಗುಂಪು; ಗೋವುಗಳ ಸಮೂಹ: ಗೋವಾಳಿಯೊಳು ಸುರಧೇನುಯುಮರರೊಳು ಶಚಿ ಗೋಪಾಲರೊಳು ಕೃಷ್ಣ . . . ಅವರೆಂತಧಿಕರವರಂದದೀ (ನವಮೋ ೨-೨೧).
[<ಸಂ. ಗೋಪಾಲಿ]

**ಗೋವಾಳಿ$_2$** (ನಾ). =ಗೋವಳಿತಿ: ಕಳ್ಳತನದಲ್ಲಿ ಬೆಣ್ಣೆ ಮೆದ್ದು ಗೋವಾಳಿಯರನಲ್ಲಿ ಬಲುಹಿಂದ ರಮಿಸಿದ ದೋಷಕಾರಿ ನೀ (ನವಮೋ. ೩೨-೧೬). [ಗೋವಾಳ + -ಇ$_2$]

**ಗೋವಿ$_1$** 'ಕೋವಿ$_1$' ನೋ.

**ಗೋವಿ$_2$** (ನಾ). ಗೊಲ್ಲಿತಿ; ಗೋಪಿ: ಗೋವುಗಾದಳವಱಿದಿರ್ದ ಕೃಷ್ಣನೊಡನಿರ್ದುದಱಿಂದವೆ ಗೋವಿಯಾದೆ (ಗದಾಯು. ೯-೫).
[ಗೋವ$_1$ + -ಇ$_2$]

**ಗೋವಿಂಡು** (ನಾ). ಹಸುಗಳ ಹಿಂಡು; ಗೋವುಗಳ ಸಮೂಹ: ನಿನ್ನ ಕಣ್ತಣವಿನೆಗಂ ಗೋವಿಂಡುಗಳಂ ಮೊಲೆ ತೊರೆದಾವುಗಳಂ . . . ಎಮ್ಮೆಯ ಪಿಂಡಂ ಭಾವಿಸಿ ನೋಡಂಬುಜಾಕ್ಷಿ (ಧರ್ಮಾಮೃ. ೩-೧೦೭ ಅಡಿಟಿ)
[ಗೋ + ಪಿಂಡು$_2$]

**ಗೋವಿಂದ** (ನಾ). ೧. ಗೋವುಗಳನ್ನು ಹೊಂದಿರುವವನು; ಗೊಲ್ಲ; ಗೋವಳ: "ಗೋವಿಂದಂ ಗೋಧಿಕೃತಂ" (ವಸ್ತುಕೋ. ೬೧-೫೭); "ಕೀಲಾರಿಯಂ ಗೋವಿಂದನೆಂಬುದು" (ಹಲಾಯು. ೪೪-೧೦೭). ೨. ಕೃಷ್ಣ; ವಿಷ್ಣು: "ವಿಷ್ಣುಃ . . . ಗೋವಿಂದಃ . . . ಗದಾಧರಃ – ಈ ೪೫ ನಾರಾಯಣನ ಪೆಸರ್" (ಹಲಾಯು. ೫-೨೩); ಗತಿಹೀನರಿಗಕಟ ನೀನೆ ಗತಿಯೆಲ್ಲೈ ಗೋವಿಂದ (ಕುವ್ಯಾಸ. ೧೪-೧೧೧); ಸ್ಮರಣೆ ಒಂದೇ ಸಾಲದೆ ಗೋವಿಂದನ ನಾಮ ಒಂದೇ ಸಾಲದೇ (ಪುರಂದ. ೧-೧೪೩ ಪಲ್ಲವಿ); ಗೋವಿಂದಂಗಾ ರುಕ್ಮಿಣಿ . . . ಎಂತೀ ದೇವಿಯಮೃತಾಂಬೆ ತಾಂ ದೊಡದೇವೇಂದ್ರಂಗಾದಳ್ (ಚಕವಿ. ೩-೨೪). ೩. ಮಾತುಗಳ ಒಡೆಯ; ಬೃಹಸ್ಪತಿ. ೪. [ಛಂದ] ವಿಷ್ಣುಗಣದ ಒಂದು ಪ್ರಕಾರ: ವಿಷ್ಣುಗಣಮೆಂತೆಂದೊಡೆ ಗೋವಿಂದಂ . . . ಮುರರಿಪು (ಛಂದೋಂಬು. ೫-೨೪೦ ವ). ೫. (ಆಲಂ) ಇಲ್ಲದಾಗುವಿಕೆ; ಮಾಯವಾಗುವಿಕೆ; ಮುಗಿದು ಹೋಗುವಿಕೆ: ನಿನಗೆ ಆ ಕೆಲಸ ಒಪ್ಪಿಸಿದರೆ ಆಯಿತು ಗೋವಿಂದ (ರೂಢಿ).
[ಸಂ.]

**ಗೋವಿಂದಗತಿ** (ನಾ). ಗಾರುಡಿ; ಇಂದ್ರಜಾಲ; ಯಕ್ಷಿಣೀ ವಿದ್ಯೆ: ಗೋವಿಂದಗತಿಯನಭ್ಯಾಸಿಸಿದಾಚಾರ್ಯನಾವವ ಗುರು ನಿನಗೆನುತ ಈ ವಿದ್ಯೆಯಿಂ ಜೀವಿಪುದು ನಿನಗಲ್ಲದೆ ಯಾವ ವೀರರಿಗುಂಟು (ರಾಮವಿ. ೧೮-೧೭೯); ತೋಱಿಕೆಗಳಂ ಬಯಲು ಮಾಡಿಯೆ ತೋಱಿದುದು ಗೋವಿಂದಗತಿಯದು ಪಾಱಿಪೋದುದೆ ಎಂದಿನಂತಾಯ್ತುದಕದೇ ಸಾಕ್ಷಿ (ಶಂಕದಾ. ೧೦-೧೬). [ಗೋವಿಂದ ? + ಗತಿ]

**ಗೋವಿಂದಪಾಡಿ** 'ಗೋವಿಂದವಾಡಿ' ನೋ.

**ಗೋವಿಂದಫಲ** (ನಾ). ಒಂದು ಬಗೆಯ ಹಣ್ಣು: ಗೋವಿಂದಫಲ, ಅಂತುಂಡಿಕಾಯಿ (ವೈಜಿಗಿ. ೧೭-೩೧೦). [ಗೋವಿಂದ + ಫಲ]

**ಗೋವಿಂದಬಕ್ಷಿ** (ನಾ). ಒಂದು ಬಗೆಯ ನಾಣ್ಯ: ಬೆಳ್ಳಿಯ ನಾಣ್ಯಗಳು.– ಬ್ರಿಟಿಶ ಸರಕಾರದ ಅಮಲು ಆದ ಬಳಿಕ ಸಹಸನ್ ೧೮೪೦ರ ವರೆಗೆ ಹದಿನಾರು ಪ್ರಕಾರದ ರೂಪಾಯಿಗಳು ನಡಿಯುತ್ತಿದ್ದವು. ಅವು ೧. ಔರಂಗಾಬಾದಿ . . . ೧೪ ಉಡವಣಿ, ೧೫ ಗೋವಿಂದಬಕ್ಷಿ (ಕಭಾಗ. ೨೮೧).
[ಗೋವಿಂದ + ಬಕ್ಷಿ]

**ಗೋವಿಂದಮಯ್ಯ** (ನಾ). ಒಬ್ಬಾತನ ಹೆಸರು: ಪರಮೋಪಕಾರಿ ಧರ್ಮ್ಮಜ್ಞಂ ಸುನ್ದರತೇಜನೆನಿಸಿ ನೆಗೞ್ದಂ ಧರೆಯೊಳ್ಗೋವಿನ್ದಮಯ್ಯನೆಂಬೋರ್ವ್ವೀಶಂ (ಎಕ. III, ತಿರುಮ. ೬೯-೨ : ಸು. 980).
[ಗೋವಿಂದ + ಅಮ (<ಅಮ್ಮ$_1$) + ಅಯ್ಯ$_1$]

**ಗೋವಿಂದರ** (ನಾ).=ಗೋವಿಂದರಸ: ಗಂಗವಾಸನ ಮಗಂ ಗೋವಿಂದರಂ (ಎಕ. IX, ದೇವನ. ೪೨-೩; ಸು. 900 ?); ಮಾರಸಿಂಗನಾತನ ಸುತಂ ಗೋವಿಂದರಂ (ಎಕ. VII, ಶಿವಮೊ. ೪-೪೯ ; 1122).
[ಗೋವಿಂದ + ಅರ$_4$]

**ಗೋವಿಂದರಸ** (ನಾ). ಒಬ್ಬಾತನ ಹೆಸರು: ಏಱಿಪ್ಪರಸರ ಗೋವಿನ್ದರಸರು ಉತ್ತಮಗಾವುಣ್ಡನ ಕೆಱೆಗೆ ಕೊಟ್ಟ ಸ್ತಿತಿ (ಎಕ. V, ಚನ್ನರಾ. ೨೫೧-೮ : ಸು. 925). [ಗೋವಿಂದ + ಅರಸ$_1$]

**ಗೋವಿಂದರಾಜಿ** (ನಾ). ಒಂದು ಬಗೆಯ ನಾಣ್ಯ: ಗೋವಿಂದರಾಜೀ ದುಡ್ಡುಗಳು ಮುಧೋಳದಲ್ಲಿ ಸನ್ ೧೮೬೦ರ ವರೆಗೆ ನಡೆಯುತ್ತಿದ್ದವು (ಕಭಾಗ. ೨೮೧). [ಗೋವಿಂದ + ರಾಜಿ$_6$]

**ಗೋವಿಂದವಾಡಿ, ಗೋವಿಂದಪಾಡಿ** (ನಾ). ಒಂದು ನಾಡಿನ ಹೆಸರು : ಚೋಳಮಹಾರಾಜರು ಗೋವಿಂದವಾಡಿಯ ರಾಜ್ಯಂಗೆಯ್ಯುತ್ತಮಿರೆ (ಎಕ. XII, ಶಿರಾ. ೩೭-೦೫ ; ಸು. 1040). 'ಗಂಗವಾಡಿ', 'ನೊಳಂಬವಾಡಿ' ಪರಾ. **ಗೋವಿಂದಪಾಡಿ :** ನವಿಲೂರ ನಾಟ್ಗಾಮುಣ್ಡರುಂ ಬೆಳ್ಗೊಳದ ಗೋವಿಂದಪಾಡಿಯ ಉ × × ಳ್ಯಾಮನ್ನುಂ ಬೆಳ್ಗೊಳದಾ ವಟಿ ಗೋವಿಂದ ಪಾಡಿಗೆ ಕೊಟ್ಟದು (ಎಕ. II, ೩೫-೮ ; ಸು ; 800).
[ ಗೋವಿಂದ + ಪಾಡಿ$_1$ ]

**ಗೋವಿಂದವೀಳ್ಯ** (ನಾ). ಒಂದು ಬಗೆಯ ತಾಂಬೂಲದ ಪೊಟ್ಟಣ ; ಕೆಳಭಾಗ ಅಗಲವಾಗಿ ಚಚ್ಚೌಕವಾಗಿದ್ದು ಮೇಲಿನ ತುದಿ ಚೂಪಾಗಿರುವಂತೆ ಕಟ್ಟಿದ ಎಂಟು ಎಲೆಗಳ ಬೀಡ : ತನ್ನ ಎಳೆಯ ಬೆರಳುಗಳನ್ನು ಹೊರಳಿಸಿ ಹೊರಳಿಸಿ, ಒಂದು ಗೋವಿಂದವೀಳ್ಯೆಯನ್ನು ಮಾಡಿ (ಪ್ರೇಮತ. ೮೧). [ ←ಮರಾ. ಗೋವಿಂದವಿಡಾ ]

**ಗೋವಿಕೆ** (ನಾ). ಗೊಲ್ಲತನ ; ದನಕಾಯುವವನ ಸ್ವಭಾವ ; ದಡ್ಡತನ: ತೊಲಗದೆ ಗೋವುಗಾದ ಕಿಱಿಯಂದಿನ ಗೋವಿಕೆ ನಿನ್ನ ಚಿತ್ತದೊಳ್ ನೆಲಸಿದುದಕ್ಕುಂ (ಪಂಪಭಾ. ೯-೪೪). [ ಗೋವ$_1$ + – ಇಕೆ ]

**ಗೋವಿಗಾವುಂಡ** (ನಾ). ಒಬ್ಬಾತನ ಹೆಸರು : ಗೋವಿಗಾವುಣ್ಡ ಕಲ್ಲ ಮಾಡಿಸಿದ (ಎಕ. VII, ಶಿವಮೊ. ೨೨-೬ ; 963).
[ ಗೋವಿ? + ಗಾವುಂಡ (<ಗಾಮುಂಡ) ]

**ಗೋವು** (ನಾ). ಆವು ; ಹಸು : ಎನ್ನನಾರ್ಬಾರಿಪರೆಂದು ಗೋವುಮನನಾ ಕುಲವಿಟ್ಟುಕೊಳಿಗೊಂಡು ಪೋದಂ (ಸುಕುಮಾ. ೭-೩೬) ; ಗೊಲ್ಲರೊಡಗೂಡಿ ನಮ್ಮೆಲ್ಲರ ಗೋವುಗಳ ಕಾಯ್ದು (ಕನಕ. ೨೦-೪) ; ಗೋವುಗಳನು ಸದೆ ಬಡಿದು ಧರೆಯೊಳಿಹ ದೇವತಾಶಿಲೆಗಳನೊಡೆದು (ಕಂನವಿ. ೪-೧೩) ; ಮಿಂದು ಪೂಜ್ಯರ್ಗೆ ಮುಂ ಪಾಲಂ ನೀಡದೇನನುಮುಣ್ಣನುಂ ಅಧರ್ಮದಿಂ ಪಾಲ್ಗೆ ಗೋವಂಬೊಲ್ ಗೋವಂ ಕರೆಯಂ ದಿಟಂ (ಸಾನಂದ. ೨-೧೯).

**ಗೋವಿನ ಅಱವಟ**=ದನಕರುಗಳಿಗಾಗಿ ಏರ್ಪಡಿಸಿದ ಅರವಟ್ಟಿಗೆ : ಯಾ ಗೋವಿನ ಅಱವಟಿಗೆ ತಪ್ಪಿದವರು ವಾರಣಾಸಿಯಲ್ಲಿ ತಂಮ ತಾಯಿ ತಂದೆ ಗುರುವ ಕೊಂದ ಪಾಪದಲಿ ಹೋಹರು (ಸೌಇಇ. IX-ii, ೫೦೩-೮ ; 1516). **ಗೋವಿನ ಜೋಳ, ಗೋವಿಂಜೋಳ**=ಒಂದು ಬಗೆಯ ಜೋಳ ; ಮುಸುಕಿನ ಜೋಳ ; ಮೆಂಕ್ಕೆಜೋಳ : ಬಟಾಟಿ (ಆಲೂಗಡ್ಡೆ), ಗೆಣಸು, ಮಕ್ಕೇಜೋಳ (ಗೋವಿನ ಜೋಳ) ಇತ್ಯಾದಿ (ಮುಂಬಯಿ. ೬-೨೯೦) ; ಗೋವಿನ ಜೋಳದ ಕಾಂಡವು ಬಹಳ ಎತ್ತರವಾಗಿ ಬೆಳೆಯುತ್ತದೆ (ಸಸ್ಯಶಾ. ೧೩೦) ; ಅವುಗಳಲ್ಲಿ ಬಾಳೆ, ಕಬ್ಬು, ಗೋವಿಂಜೋಳ, ಮುಂತಾದವು ಬರುತ್ತವೆ (ಕಭಾಗ. ೪೫೭). [ <ಸಂ. ಗೋ ]

**ಗೋವುಂಡು$_1$** 'ಗಾವುಂಡ' ನೋ.

**ಗೋವುಂಡು$_2$** 'ಗಾವುಂಡು$_2$' ನೋ.

**ಗೋವುಂಡುಂಗೆಯ್** 'ಗಾವುಂಡುಗೆಯ್' ನೋ.

**ಗೋವುಗಾ** (ಕ್ರಿ). ಗೋವುಗಳನ್ನು ಕಾಯುಂ ; ದನಕಾಯು : ನೆನೆಯೆಲವೊ ಗೋವುಗಾದುದು ಪುಸಿಯೇ (ಪಂಪಭಾ. ೬-೫೬); ಗೋವುಗಾದಳವಟಿದಿರ್ದ ಕೃಷ್ಣನೊಡನಿರ್ದುದಱಿಂದವೆ ಗೋವಿಯಾದೆ (ಗದಾಯು. ೯-೫).
[ ಗೋವು + ಕಾ$_1$ ]

**ಗೋವುಧಿ** (ನಾ). = ಗೋವುವಿಂಡು : ನಾಳಿನಲ್ಲಿ ಉತ್ತರದಿ ಗೋವುಧಿಗಳ ಪಿಡಿಯೆ ಕಾಣಬಹುದೆಂದಣಗಿಸಿದನುಚಿತದಿ (ಲಕ್ಷ್ಮಭಾ. ೪. ೩-೧೭). [**P**ಶರಧಿ, ಅಂಬುಧಿ ಮೊದಲಾದ ಶಬ್ದಸಾಮ್ಯದ ಮೇಲೆ ರೂಪಿಸಿದ ಶಬ್ದ ]

**ಗೋವುವಿಂಡು** (ನಾ). ಹಸುಗಳ ಗುಂಪು ; ಗೋವುಗಳ ಸಮೂಹ : ಗೋವುವಿಂಡಂ ಪುಲಿ ಪೊಕ್ಕಂತೆ (ಧರ್ಮಾಮೃ. ೨-೭೧).
[ ಗೋವು + ಪಿಂಡು$_2$ ]

**ಗೋವುಳಿಗ** (ನಾ). ಗೊಲ್ಲ ; ಗೋವಳ : ವಿಜಿಗೀಷುತ್ವದೊಳೊಂದಿ ಗೋವುಳಿಗನಪ್ಪಂ . . . ಹರಿಯೆಂಬ ದೊಡ್ಡಿವೆಸರಂ ಪೊತ್ತಿರ್ದ ನೀಂ ಮಂತ್ರಿಯಾಗೆ (ಪಂಪಭಾ. ೯-೪೭) ; ಅಯೋಧ್ಯಾಪುರದೊಳಿರ್ಪ ನಂದಿ ಮಿತ್ರನೆಂಬ ಗೋವುಳಿಗ[ಪಾಠಾಂ. ಗೌಳಿಗ]ನ ಮಹಿಷಿಗಳೊಳ್ ಕೋಣಂಗಳಾಗಿ ಪುಟ್ಟಿ (ಚಾವುಂಪು. ೫೦) ; ಓರ್ವಂ ಕಪಾಳದರುವರಿಯೋರ್ವಂ ಗೋವುಳಿಗನ ಸುರರಂ ಕೊಲ್ವಂ (ಸಮಪ. ೮-೧೬೫). 'ಗೋವಳಿಗ' ಪರಾ.
[ ಗೋ + – ಉಳಿಗ$_3$ ]

**ಗೋವೃಂದ** (ನಾ).=ಗೋವುವಿಂಡು : "ಗೋವೃಂದಂ, ಗೋಧನಂ, ಧನಂ– ಈ ಮೂಱು ತುಱುವಿನ ಹಿಂಡು" (ಹಲಾಯು. ೪೪-೧೦೭). [ಗೋ+ವೃಂದ]

**ಗೋವೆ$_1$** (ನಾ). ಒಂದು ಪ್ರದೇಶದ ಹೆಸರು ; **P** ಈಗಿನ ಗೋವಾ ಎಂಬ ಪ್ರಾಂತ್ಯ : ಪೊಯ್ಸಳನನಾ[ದ್ರ್ದೇ]ವ್ರ್ಪಟ್ಟಿದಂ ಗೋವೆಯಂ ಕೊಂಡಂ ಲಕ್ಷ್ಮನನಾಜಿಯೊಳ್ ತವಿಸಿದಂ (ಸೌಇಇ. XI-ii, ೦೧೯-೨೩ ; 948); ಬಂದದೆ ಗೋವೆಯೊಳೊಂದಶ್ವ (ಕುರಾಸಾಂ. ೯-೬೭).

**ಗೋವೆಯಸಣ್ಣ** = ಒಂದು ಬಗೆಯ ಭತ್ತ : ಕಣವೆಯಸಣ್ಣ ಸತ್ಕಾಗಾಲದ ಸಣ್ಣವಣಿಯಾದ ಗೋವೆಯಸಣ್ಣ ಪುಣುಗುವಾಸನೆಯನಾಂತಿಹ ಸಣ್ಣಶಾಲಿಯ ತೆನೆಗಳೊಪ್ಪಿದುದುವು (ಕಂನವಿ. ೫-೬೭). [ ? ]

**ಗೋವೆ$_2$** (ನಾ). ಗೋಡಂಬಿ ; ಗೇರು : ಮನೆಯ ಸುತ್ತಲೆಲ್ಲ ಗೋವೆಯ ಮರಗಳು (ಮರಮ. ೦). 'ಗೋವೆಬೀಜ' ಪರಾ. [ ? ]

**ಗೋವೆಬೀಜ** (ನಾ). ಗೋಡಂಬಿ ; ಗೇರುಬೀಜ : ಗೆದ್ದವರ ಕಿಸೆ ತುಂಬ ಗೋವೆಬೀಜ ಸೇರುತ್ತದೆ (ಸ್ವಪ್ನಹೊ. ೩೨) ; ಗೋವೆಬೀಜ ಮಹಾ ಗರ್ಮಿ ಅನ್ನುತ್ತಾರೆ (ಮರಮ. ೦೧೬). [ ಗೋವೆ$_2$ + ಬೀಜ ]

**ಗೋವೈದ್ಯ** (ನಾ). ೧. ಗೋವುಗಳ ಚಿಕಿತ್ಸೆ : ಇನ್ನು ಗೋವೈದ್ಯಂ–ತೆನೆಯಾಗದ ಪಸುವಿಂಗೆ . . . ಲಕ್ಷ್ಮಿಯ ಬೇರನೆಯ್ದೆ ಮೆದ್ದುಗುಟಿ ಕಟ್ಟುಗುಂ ನಿಶ್ಚಯದಿ (ಲೋಕೋಪ. ೯-೦೮೯). ೨. ಗೋವುಗಳಿಗೆ ಚಿಕಿತ್ಸೆಮಾಡುವ ವೈದ್ಯ. 'ಅಶ್ವವೈದ್ಯ', 'ಗಜವೈದ್ಯ' ಪರಾ. [ ಗೋ + ವೈದ್ಯ ]

**ಗೋವ್ರಜ** (ನಾ).=ಗೋವುವಿಂಡು : "(ಗೋಧನಂ) ಗೋವ್ರಜದೊಳ್" (ವಸ್ತುಕೋ. ೯೦-೭) ; ಎಲ್ಲಿಯುಂ ಸುಳಿವ ಗೋವ್ರಜದಿಂದೆ (ಜೈಮಿಭಾ. ೩-೨).
[ ಗೋ + ವ್ರಜ ]

**ಗೋಶ** (ನಾ). (?): ಯೇಸು ಕಲ್ಪಗಳಾದರೆಯು ಮುಗುಳೇಸು ಯಮರಿಗೆ ಸಯುಮಿನಾಯಲಿ ವಾಸಮಳವಟ್ಟುದು ಕೆಡದ ನರಕಗಳ ರಾಸಿಯಲಿ ಘಾಸಿ ತಪ್ಪದ ಪದವಿ ಬರ್ಪುದು ಗೋಶವೆಸರೀಗವರ ಕಷ್ಟಕೆ ಬೀಸಿಗೆಯನೊಂದೆಡೆಯೊಳಾದರು ಕೊಂಬರಂ ಕಾಣೆ (ವಿವೇಛ. ೧೦-೧೨). [ ? ]

**ಗೋಶಾಲೆ** (ನಾ). ದನಕರುಗಳ ಹಟ್ಟಿ ; ಕೊಟ್ಟಿಗೆ. [ ಗೋ + ಶಾಲೆ$_1$ ]

**ಗೋಶಿ** 'ಗೋಚಿ' ನೋ.

**ಗೋಶೀರ್ಷ** (ನಾ). ೧. ಗೋವಿನ ತಲೆ: (+). ೨. ಗಂಧದ ಮರ; ಚಂದನ ವೃಕ್ಷ; "ಅರಿಸಿನದ ಬಣ್ಣವುಳ್ಳ ಚಂದನ" (ಅಮರ. ಟೀಕೆ) : ಗೋಶೀರ್ಷ ಸುಚಂದನಮುಮನಾ ಶಂಬರಿಪು . . . ತಂದು (ನೇಮಿಪು. ೭-೧೬೨) ; ಗೋಶೀರ್ಷ ಚಂದನಮುಂ ರತ್ನಮಯಮಪ್ಪ ಪಲವುಂ ಪ್ರತಿಮೆಗಳಂ . . . ಅದಱೊಳಗಿಟ್ಟು (ಬಂಹರಿ. ೯-೩ ವ) ; ದಂಡವನ್ನು ಗೋಶೀರ್ಷ ಎಂಬ ಗಂಧದ ಮರದಿಂದ ಮಾಡಿದ್ದಾರೆ (ಪ್ರವಾಇ. I, ೦೬೩). ೩. ತೇದು ಮಾಡಿದ ಗಂಧ ; ಚಂದನ : ಸುರೇಂದ್ರುಸಮಿತಿ . . . ಗೋಶೀರ್ಷ ಚಂದನದ್ರುವ ಪರಿಮಳಸುಗಂಧಿಜಲಸಂಭೃತಹಾಟಕಘಟಿತ ಘಟಕೋಟಿಗಳನೆತ್ತಿಕೊಂಡು ಸುರಿದಾಗಳ್ (ಆದಿಪು. ೭-೧೦೦ ವ) ; ಸುಗಂಧಭಂಡಾರಿಗರ್ ವಿರಚಿಸಿ ತಂದು ಮುಂದಿಟ್ಟ ಘನಸಾರ ಗೋಶೀರ್ಷ ಚಂದನಸಾರ . . . ಕಸ್ತೂರಿಕಾಸಾರ ವಿವಿಧ ವಿಲೇಪನಂಗಳಿಂ ಮೆಯ್ಯಂ ತಿಮಿರ್ದು (ಸುಕುಮಾ. ೧೧-೩೨ ವ).
[ ಗೋ + ಶೀರ್ಷ ]

**ಗೋಶ್ರೋತ್ರ** (ನಾ). ಕಣ್ಣುಗಳೇ ಕಿವಿಯಾಗಿರುವ ಪ್ರಾಣಿ ; ಹಾವು : ಗೋಪಬಂಧುರಯಾತ್ರ ಗೋಶ್ರೋತ್ರಸೂತ್ರ ಕೊಡು ಗೋಸಿದ್ಧಿಯ ಭಿವೃದ್ಧಿಯಂ (ನವಮೋ. ೧-೮). [ ಗೋ + ಶ್ರೋತ್ರ ]

**ಗೋಷಾ, ಗೋಷೆ, ಘೋಷಾ** (ನಾ). ಹೆಂಗಸರು ಮುಖ ಮೈಗಳನ್ನು ಮುಚ್ಚುವಂತೆ ಧರಿಸುವ ಮುಸುಕು ; ಬುರಕಿ; ಅವಗುಂಠನ: ನಿಮ್ಮ ವಠಾರದಲ್ಲಿ ಗೋಷಾ ಹೆಂಗಸರು ಯಾರೂ ಇಲ್ಲವೇನು? (ನಿಂದನೆ. ೯೧). **ಗೋಷೆ :** ಪ್ರಫುಲ್ಲೆಯು ಗೋಷೆಯ ಬಟ್ಟೆಯನ್ನು ಮುಖದ ಮೇಲೆಳೆದು ಕೊಂಡಿದ್ದಳು (ದೇವೀಚೌ. ೬). **ಘೋಷಾ :** 'ಘೋಷಾಪದ್ಧತಿ' ಪರಾ. [ ←ಹಿಂ. ಗೋಷಾ=ಏಕಾಂತಸ್ಥಳ ]

**ಗೋಷಾಪದ್ಧತಿ, ಘೋಷಾಪದ್ಧತಿ** (ನಾ). ಬುರಕಿ ಅಥವಾ ಮುಸುಕು ಪೋಷಾಕನ್ನು ಧರಿಸುವ ಪದ್ಧತಿ: ಗೋಷಾಪದ್ಧತಿಯನ್ನು ಅನುಸರಿಸುವ ಹೆಂಗಸರಲ್ಲಿ ವಿಟಮಿನ್ 'ಡಿ' ಅಭಾವವು ಹೆಚ್ಚಾಗಿ . . . ಮೂಳೆಗಳ ರೋಗ ಪ್ರಾಪ್ತವಾಗುತ್ತದೆ (ಗೃಹವಿ. ೩೧). **ಘೋಷಾಪದ್ಧತಿ:** ಮಹಮ್ಮದೀಯರಲ್ಲಿ 'ಘೋಷಾ' ಪದ್ಧತಿಯಿರುವುದೆಂಬ ನೆಪದ ಮೇಲೆ . . . ಸ್ತ್ರೀಯರಿಗೆ ಸರಿಯಾದ ಸ್ಥಾನವಿಲ್ಲೆಂದು ಹೇಳಿಯವುದು ನ್ಯಾಯವಲ್ಲ (ಪ್ರಗಂಬ. ೧೫೭) ; ಅವರ ಮನೆಯಲ್ಲಿ ಘೋಷಾಪದ್ಧತಿಯಿದ್ದುದರಿಂದ ಆ ಹೆಣ್ಣುಮಕ್ಕಳು ನಾಟಕಗೃಹಕ್ಕೆ ಬರುವಾಗ ಬುರ್ಖಾ ಹಾಕಿಕೊಂಡು ಬಂದಿದ್ದವರು . . . ಬುರ್ಖಾ ತೆಗೆದಿರಿಸಿದರು (ನಾಪೂಲೀ. ೧೭೪). [ ಗೋಷಾ + ಪದ್ಧತಿ ]

**ಗೋಷೆ** 'ಗೋಷಾ' ನೋ.

**ಗೋಷ್ಟಿ** 'ಗೊಟ್ಟಿ$_1$' ನೋ.

**ಗೋಪ್ಪು** (ನಾ). ತೊಂದರೆ ; ಕಷ್ಟ (?) : ಕೋಟೆಯಲ್ಲಿ ಧಾನ್ಯ ಮುಗಿದು ಜನಕ್ಕೆ ಅನ್ನಕ್ಕೆ ಬಹಳ ಗೋಪ್ಪಾದ ಕಾರಣ ಪಟ್ಟಣಕ್ಕೆ ಬಂದ ವಿವರ (ಹೈದರ. ೭೭). [ ? ]

**ಗೋಷ್ಠ** (ನಾ). ೧. ದನಕರುಗಳ ಕೊಟ್ಟಿಗೆ,-ಹಟ್ಟಿ : "ಗೋಸ್ಥಾನಂ ಗೋಷ್ಠಂ" (ವಸ್ತುಕೋ. ೯೦-೯). ೨. ದನಕರುಗಳ ಮಂದೆ: "ವ್ರಜಃ, ಗೋಕುಲಂ, ಗೋಷ್ಠಂ—ಈ ೩ ತುಱುವಿನ ಮಂದೆ" (ಹಲಾಯು. ೪೪-೧೦೭) ; ವಿವಿಧಗೋಕುಲಶ್ರೇಷ್ಠಂಗಳೆನಿಪ ಗೋಷ್ಠಂಗಳುಂ ತನಗನೂನ ಶೋಭೆಯಂ ಪಡೆಯೆ (ಪುಷ್ಪಪು. ೯-೨೨ ವ). [ ಸಂ. ]

**ಗೋಷ್ಠಪತಿ** (ನಾ). ದನದ ಹಟ್ಟಿಯ ಯಜಮಾನ. [ ಗೋಷ್ಠ + ಪತಿ$_2$ ]

**ಗೋಷ್ಠಶ್ವ** (ನಾ). ೧. ಗೋದಲೆಯಲ್ಲಿರುವ ನಾಯಿ. ೨. (ಅಲಂ) ತಾನು ಅನುಭವಿಸದೆ ಇತರರಿಗೂ ಅನುಭವಿಸಲು ಅವಕಾಶ ಕೊಡದೆ ಇರುವ ವ್ಯಕ್ತಿ: "ಇರ್ದೆಡೆಯೊಳಿರ್ದು ಪೆಱರ್ಗೆ ಮುನಿವವನಂ ಗೋಷ್ಠಶ್ವ ನೆಂಬುದು" (ಹಲಾಯು. ೭೦-೨೧೩) ; "ಆರಿಗಾದೊಡಂ ಮುನಿವವಂ ಗೋಷ್ಠಶ್ವಂ" (ಮಂಗರಾ. ೭೦-೧೫). [ ಸಂ. (ಗೋಷ್ಠ + ಶ್ವನ್) ]

**ಗೋಷ್ಠಾಗಾರ** (ನಾ).=ಗೋಷ್ಠ ೧ : ಈ ಪೊಟಲೊಳ್ ಸುಪ್ರದೇಶಮಪ್ಪ ಸ್ಥಾನದೊಳ್ ಸುಧಾಧವಳಿತಮಪ್ಪ ಧವಳಾಗಾರಂ ಗೋಷ್ಠಾ [ಪಾಠಾಂ. ಶ್ರೇಷ್ಠಾ] ಗಾರಂ ಮೊದಲಾಗಿ ಪಲವುಂ ಶೋಭಾವಹಂಗಳಪ್ಪ ಗೃಹಂಗಳಂ ಮಾಡಿಸಿ (ಪಂಚತಂ. ೧೮೭-೧೧). [ ಗೋಷ್ಠ + ಆಗಾರ ]

**ಗೋಷ್ಠಾಧ್ಯಕ್ಷ** (ನಾ).=ಗೋಷ್ಠಪತಿ : (೬). [ ಗೋಷ್ಠ + ಅಧ್ಯಕ್ಷ ]

**ಗೋಷ್ಠಿ** (ನಾ). ೧. ಕೂಟ : ಸಭೆ ; ಗುಂಪು : ಎಟ್ಟಸಲ್ಲಿಂದಂ ತದ್ಗೋಷ್ಠಿ ಯನುಱಿದು ಮುನೀಂದ್ರು ಗರಿಷ್ಠಂ ಜಾಬಾಲಿನಾಮಧೇಯ ಮುನೀಂದ್ರಂ (ಕಾದಂಉ. ೭೦೫) ; ಕೂಟದಲ್ಲಿ ಗೋಷ್ಠಿ ಹರಿದಲ್ಲಿ ತಮ್ಮತಮ್ಮ ಮನೆಯ ಇರವಿನ ಹಾದಿ (ಮೋಳಿಮಾ. ೭-೨೪) ; ಚೆಂಬೊಂದಳಿರ ಪಸೆಗಳೊಳ್ ಗೋಷ್ಠಿಯಿಂ ಕುಳ್ಳಿರುತ್ತುಂ (ಜಗವಿ. ೪-೩೮) ; ಋಷಿಗೋಷ್ಠಿ ಮೌನಮಿರೆ (ಶ್ರೀರಾಮಾ. ೦೬೯-೪೬೯). ೨. ಒಡನಾಟ ; ಸಹವಾಸ ; ಸಂಯೋಗ : ದೇವರಿಂದು ನಿಮ್ಮ ತಮ್ಮನ ಗೋಷ್ಠಿಯೊಳಾರೋಗಿಸಲ್ಪಿಜಯಂಗೆಯ್ಯಿ ವೆಂದೊಡಂಬಡಿಸಿದಾಗಳ್ (ಸುಕುಮಾ. ೧೦-೨೨ ವ) ; ಸಿಂಗರಿಸಿ ನಲ್ಲರ ಗೋಷ್ಠಿಯೊಳಗಿಪ್ಪ ಮಡದಿಯರನೀಕ್ಷಿಸುತಲಿ (ಹಚಕಾ. ೪-೯) ; ಅಕ್ಕ ಗೋದಾವರಿಯ ಗೋಷ್ಠಿಯಲ್ಲಿ ಮೈಮರೆತಿದ್ದ ಸುಮಿತ್ರೆಗೆ ಬಟ್ಟೆ ಒಗೆಯಲು ಹಳ್ಳಕ್ಕೆ ಹೋಗಲು ತಡವಾಯಿತು (ಹೇಮಂತ. ೧೪೨). ೩. [ನಾಟ್ಯ] ಹದಿನೆಂಟು ಉಪರೂಪಕಗಳಲ್ಲಿ ಒಂದು: ೧. ನಾಟಿಕಾ. ೨. ತ್ರೋಟಕ. ೩. ಗೋಷ್ಠೀ . . . ೧೮ ಭಾಣಿಕಾ—ಎಂದು ಉಪರೂಪಕಗಳು ಹದಿನೆಂಟು ವಿಧ (ಸಂನಾಟ. ೩೨) ; ಗೋಷ್ಠೀ—ಇದರಲ್ಲಿ ಒಂಬತ್ತು ಅಥವಾ ಹತ್ತು ಪ್ರಾಕೃತಪುರುಷರಿರುತ್ತಾರೆ ; ರಚನೆ ಉದಾತ್ತವಾದದ್ದಲ್ಲ . . . ಒಂದೇ ಅಂಕ (ಸಂನಾಟ. ೩೩). [ ಸಂ. ಗೋಷ್ಠಿ, ಗೋಷ್ಠೀ ]

**ಗೋಷ್ಠಿಕೆ** (ನಾ). ೧. (ಗುಂಪಿನಲ್ಲಿ ಮದ್ಯವನ್ನು) ಕುಡಿಯುವಿಕೆ. ೨. ಮದ್ಯಪಾನ ಮಾಡುವ ಸ್ಥಳ ; ಹೆಂಡದಂಗಡಿ. ೩. ಮದ್ಯಪಾನ ಮಾಡುವವರ ಗುಂಪು : "ಪಾನಂ ಗೋಷ್ಠಿಕೆಯದಾಪಾನಂ ಶುಂಡಾ ಪ್ರಪಾನಂ ಕಳ್ಳಂಗಡಿಹ" (ವಸ್ತುಕೋ. ೯೩-೬). [ ಸಂ. ಗೋಷ್ಠಿಕಾ ]

**ಗೋಷ್ಠಿಗಾನ** (ನಾ). ವೃಂದಗಾನ ; ಮೇಳಗಾಯನ : ಅಲ್ಲಿನ ಸಂಗೀತ, ಗೋಷ್ಠಿಗಾನಕ್ಕೆ (Orchestra) ಪ್ರಸಿದ್ಧವಾಗಿದೆ (ಸಂಗೀಚಂ. ೧೯೦). [ ಗೋಷ್ಠಿ + ಗಾನ$_2$ ]

**ಗೋಷ್ಠಿಗೆಯ್** (ಕ್ರಿ). (ಕೆಳೆಯರೊಡನೆ) ಸರಸಸಲ್ಲಾಪ ಮಾಡು : ಪೊಱಕೈರೊಳ್ ವೋದಿ ಕಂಸಾನುಜನನಧಿಕನಂ ಕೊಂದು ಮಾರ್ಕೊಂಡ ರಂಬುಂತುಱದತ್ತಲ್ ಗೋಷ್ಠಿಗೆಯ್ವಚ್ಯುತನ ಬಿನದವುಂತೊಂದಗುರ್ವೇನ ನೆಂಬೆಂ (ಜಗವಿ. ೬-೯೪). [ ಗೋಷ್ಠಿ + ಕೆಯ್$_1$ ]

**ಗೋಷ್ಠೀಕಲ್ಯಾಣ** (ನಾ). [ಸಂಗೀತ] ನೂರೆಂಟುತಾಳಗಳಲ್ಲಿ ಒಂದು : ಚಂಚತ್ಪುಟ ಚಾಚತ್ಪುಟ ಷಡ್ಗೀತ . . . ಚಾರು ಕಲ್ಯಾಣ ಗೋಷ್ಠೀಕಲ್ಯಾಣ [ಪಾಠಾಂ. ಗೋಷ್ಠಿಯಾಣ] ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮). [ ಸಂ. ]

**ಗೋಷ್ಠೀನ** (ನಾ). ಒಂದು ಕಾಲಕ್ಕೆ ದನದ ಕೊಟ್ಟಿಗೆಯಾಗಿದ್ದ ಸ್ಥಳ : (೬). [ <ಸಂ. ಗೌಷ್ಠೀನ ]

**ಗೋಷ್ಪದ** (ನಾ). ೧. ಹಸುವಿನ ಹೆಜ್ಜೆ,-ಪಾದ. ೨. ದನಕರುಗಳು ಓಡಾಡುವ ಪ್ರದೇಶ. ೩. ಗೋವು ಕಾಲೂರಿದ ಗುಂಡಿ ; ಹಸುವಿನ ಹೆಜ್ಜೆಯಷ್ಟು ಸ್ಥಳದ ಆಳತೆ. ೨, ೩ : "ಗೋಷ್ಪದಂ—ಗೋವುಗಳು ತಿರುಗಿದ ಪ್ರದೇಶ, ಗೋವುಗಳ ಕಾಲುಗೊರಸೆಗಳೂರಿದ ಗುಂಡಿ" (ಸಿದ್ಧಾಂತಿ. ೩೪೩). ೪.=ಗೋಷ್ಪದಜಲ : ಎನಗೆ . . . ಗೋಷ್ಪದಂ ದಲೀ ವನನಿಧಿ (ಆದಿಪು. ೧೨-೭೦) ; ಸಮುದ್ರವು ಗೋಷ್ಪದದಂತಾಗಿ . . . ಸುಮೇರು ಪರ್ವತವು ರಜಃಕಣದಂತೆಯೂ ಆಗುವವು (ತುಳಸಿ. ೨೬೬). [ ಸಂ. ]

**ಗೋಷ್ಪದಜಲ** (ನಾ). ಹಸುವಿನ ಹೆಜ್ಜೆಯ ಗುಂಡಿಯಲ್ಲಿ ಹಿಡಿಸುವಷ್ಟು ಪ್ರಮಾಣದ ನೀರು ; ತೀರ ಸ್ವಲ್ಪ ನೀರು : ಅಂಥವನಿಗೆ ವಾರಿಧಿಯೆಲ್ಲ ಗೋಷ್ಪದಜಲವಾಗಿ, ಹಿಮಾಚಲವೊಂದು ಗುಡ್ಡವಾಗಿ . . . ಕಾಣುತ್ತದೆ (ನಂಜುಂಡ. ೧೩೭). [ ಗೋಷ್ಪದ + ಜಲ$_2$ ]

**ಗೋಷ್ಪಾದ** (ನಾ). ಹಸುವಿನ ಹೆಜ್ಜೆ. 'ಗೋಷ್ಪಾದಭೂಮಿ' ಪರಾ. [ <ಸಂ. ಗೋಷ್ಪದ ]

**ಗೋಷ್ಪಾದಭೂಮಿ** (ನಾ). ಗೋವಿನ ಹೆಜ್ಜೆಯಷ್ಟು ಭೂಮಿ ; ತೀರ ಸ್ವಲ್ಪ ಸ್ಥಳ : ಬೇಕೆಂದು ಬಿಕ್ಕೆ ಬೇಡಿದರೂ ಗೋಷ್ಪಾದಭೂಮಿ ಸಿಗದಂಥ ಕಾಲವಿದು (ಕಥವಿ. I, ೧೩೫) ; ಶಿವಾಜಿಯ ರಾಷ್ಟ್ರದಲ್ಲಿ ಮೊಗಲರಿಗೆ ಗೋಷ್ಪಾದಭೂಮಿಯೂ ಇಲ್ಲದಂತೆ ಮಾಡಿದರು (ಛತ್ರಶಿ. ೯೪). [ ಗೋಷ್ಪಾದ + ಭೂಮಿ ]

**ಗೋಪ್ವಾರ** 'ಗೋಪ್ವಾರೆ' ನೋ.

**ಗೋಪ್ವಾರೆ, ಗೋಪ್ವಾರ, ಘೋಷಬಾರೆ** (ನಾ). ೧. ಲೆಕ್ಕಪತ್ರಗಳ ಅಥವಾ ವರದಿಯ ವಿವರಗಳಿಂದ ಸಿದ್ಧಪಡಿಸಿದ ಹೇಳಿಕೆ,-ತಃಖ್ತೆ: ಯಾವಯಾವ ಹಾವು ಕಚ್ಚಿ ಎಷ್ಟು ಜನ ಸತ್ತರೆಂದೂ ಯಾವ ಋತುವಿನಲ್ಲಿ ಈ ಸಾವು ಹೆಚ್ಚೆಂದೂ ಗೋಪ್ವಾರೆ ಮಾಡಿ, ಇಂತಹ ಗೋಪ್ವಾರೆಗಳನ್ನು ತಾಲ್ಲೂಕುವಾರು, ಡಿಸ್ಟ್ರಿಕ್ಟುವಾರಾಗಿ ತಯಾರುಮಾಡಿ, ಪ್ರತಿವರುಷವೂ ಪ್ರಚಾರಮಾಡಬೇಕು (ವಿಜ್ಞಾನ. ೭೨); ಗೋಪ್ವಾರೆ ಹಾಕಿ ಅಂದರೆ, ಅದು ಕಷ್ಟ, ಸ್ವಾಮಿ, ಆದರೂ ಹಾಕಿಕೊಡ್ತೀನೆ . . . ಎಂದು ಹೇಳಿಬಿಡುತ್ತಿದ್ದರು (ನನ್ನೂರು. ೧೫೨); "ಎಲ್ಲಾ ಒಟ್ಟು ಸೇರಿ" (Abstract) (ನನ್ನೂರು. ಟಿಪ್ಪಣಿ). ೨. ಅಜಮಾಯಿಷಿ; ಅಂದಾಜು: ಅವನ ಮಾತೆಲ್ಲ ಗೋಪ್ವಾರೆ, ನಂಬುವ ಹಾಗಿಲ್ಲ (ರೂಢಿ). ೩. ಸಾರಾಂಶ; ಸಂಕ್ಷೇಪಿಸಲ್ಪಟ್ಟುದು: ಸಂಗ್ರಹ; ಸಾರಾಂಶ; ಗೋಪ್ವಾರೆ (Precis. ಇಂಕನಿ). **ಗೋಪ್ವಾರ:** ೩. (ಪ್ರಗೆಜ. IV, ೭೬೯). **ಘೋಷಬಾರೆ:** ೩. ತಿಂಡಿತಿಂಡಿಯೆಂದು ಘೋಷಬಾರೆಯಾಗಿ ಹೇಳಿದರೆ ಎಲ್ಲರಿಗೂ ತಿಳಿಯಲಿಕ್ಕಿಲ್ಲ (ಹಸಿವು. ೩೦).
[ ← ಪಾರ. ಹಿಂ. ಮರಾ. ಗೋಶ್ವಾರಾ ]

**ಗೋಸ$_1$, ಘೋಸ** (ನಾ). ೧. ಘೋಷ; ಶಬ್ದ: ಗಿಜ್ಜಿನೆಯ್ದುವ ಸೊರ್ಕಾನೆಗಳ ಕಾಲ ಸಂಕಲೆಯ ಗೋಸದೊಳಂ (ಕಬ್ಬಿಕಾ. ೪೪). ೨. ಗೊಲ್ಲರ ಹಳ್ಳಿ; ತುರುಹಟ್ಟಿ: (ಶ). **ಘೋಸ:** ೧. ಘೋಟಿಗೆ, ಘೋಸಂ, ಘಾಸಿ (ಶಮದ. ೧೫ ವೃತ್ತಿ). [ <ಸಂ. ಘೋಷ ]

**ಗೋಸ$_2$** (ನಾ). ಒಂದು ಬಗೆಯ ಸುಗಂಧ ದ್ರವ್ಯ; ರಕ್ತಬೋಳ: "ಗೋಸ=ರಕ್ತಬಾಳ" (ಗಂಗಾಮು. ೧೨೩). [ ಸಂ. ]

**ಗೋಸಂಖ್ಯ** (ನಾ). ಗೋವುಗಳ ವಿವರವನ್ನು ಬಲ್ಲವನು; ಗೊಲ್ಲ; ಗೋವಳ. [ ಸಂ. ]

**ಗೋಸಂಪಿಗೆ** (ನಾ). ಒಂದು ಬಗೆಯ ಗಿಡ; ದುಂಡು ಸಂಪಿಗೆಯ ಗಿಡ: ದೇವಕಣಿಗಲು, ಗೋಸಂಪಿಗೆ (ಪ್ರಜಿಗಿ. ೬೩-೧೨೭೫). [<ಗೋಳಸಂಪಿಗೆ ]

**ಗೋಸಂಭವ** (ನಾ). ಗೋವಿನಿಂದ ಉತ್ಪನ್ನವಾದುದು,-ಹುಟ್ಟಿದುದು.
[ ಗೋ + ಸಂಭವ ]

**ಗೋಸಗೆ** (ನಾ). ದನಕರಂಗಳನ್ನು ಮೇವಿಗೆ ಬಿಡುವ ಸಮಯ; ಬೆಳಗಿನ ಕಾಲ; ಸೂರ್ಯಕಿರಣಗಳು ಹೊರಹೊಮ್ಮುವ ಕಾಲ; ಉಷಃಕಾಲ: ಸಡಿಲ್ದ ತಾವರೆಯೆಸಟ್ಗುಬಿಪಿಂದೊಳವಿಟ್ಟು ನಿದ್ದೆಯಿಂ ತೊಲಗಿಸಿದಂಚೆವೆಣ್ಣೆಸೆವ ಗಾಂದವದಿಂ ದನಿದೊಂಗಲೊಳ್ ತಡಂಗಲಿಸಿ ಮನಕ್ಕೆ ಗೋಸಗೆಯ ಬೀಸುವೆಲರ್ ಪಡೆದತ್ತಲರ್ಕೆಯಿಂ (ಚಂದ್ರಪು. ೮-೯೭); ತನಿವಣ್ಣಂ ಪೊರೆ ಬಿಟ್ಟು ಕುತ್ತೆಸಟ್ಟಳೊತ್ತಿಂದೋಡಿ ನಿಂದೂಡುವಬ್ಬಿನಿ ಯೊಳ್ಗೋಸಗೆಯುಂಡು ಪಾಡುವಳಿಯಿಂ (ಅನಂಪು. ೮-೬೯).
[ <ಪ್ರಾ. ಗೋಸಗ್ಗ./ಸಂ. ಗೋಸರ್ಗ ]

**ಗೋಸಗೆಚಾಗ** (ನಾ). ಪ್ರಾತಃಕಾಲದಲ್ಲಿ ಮಾಡುವ ದಾನ (?): ಇಱಿಯಲು ಕಲಿತ ಬಳಿಕ್ಕವಿಲ್ಲ ಸರಿಭಂಗಂ ಶೌರ್ಯ್ಯದೊಳು ಚಾಗಮಂ ಮೆಱೆಯಲು ಕಲ್ತ ಬಳಿಕ್ಕವಿಲ್ಲ ಕಲಿಕಂದವುದಾರ್ಯ್ಯದೊಳು ಪೆರ್ಮ್ಮೆಯಿಂ ಪೆಱರಾರ್ಪ್ಪೊಯ್ಸಳರಾಜ್ಯದೊಳು ಪೆಸರ್ಗ್ಗೊಳಲು ದಂಡಾಧಿಪರ್ಮಾಸಲೇ ಬಿಱಿವಂ ಗೋಸಗೆಚಾಗಮಿವನಮಿತಂ ಸೌಯ್ಯಾಂಜನಾನಂದನಂ (ಸೌಇಇ. IX-i, ೩೪೩-೧೩; 1226). [ ? ]

**ಗೋಸಣೆ, ಗೋಸನೆ, ಘೋಸಣೆ, ಘೋಸನೆ** (ನಾ). ೧. ಸಾರುವಿಕೆ; ಘೋಷಣೆ; ಡಂಗುರ: "ಗೋಸಣೆ ಘೋಷಣೆಯೆನಿಕುಂ" (ಚತುನಿ. ೬೦); ಪೊಟಲೊಳಗೆ ಗೋಸಣೆಯಂ ತೊಟಲ್ಚಿದೊಡದಂ ಕೇಳ್ದು (ವಡ್ಡಾರಾ. ೧೧೮-೧೩); ಗಾವರಿಪಳಿಯೇವುವೆಂಬ ಮಧುಮಾಸದ ಗೋಸಣೆಯೇವು ವೆಂಬ ಬದ್ದರನಱಿಯಟ್ಟಿ ಸಂತವಿರಲೀಯದೆ ಬಾಳಬಸಂತವಾರಣಂ (ಅಜಿಪು. ೬-೨೬); ತಡೆಯದೆ ಧರ್ಮದೊಳ್ ನೆಗೞ್ಮೆಂಬುದು ಗೋ[ಪಾಠಾಂ. ಘೋ]ಸಣೆ ಜೈನಮಾರ್ಗದೊಳ್ (ಜೀವಸಂ. ೯-೧೧); **ಘೋಷಣಾ**-ಗೋಸಣೆ (ಶಮದ. ೨೫೫ಪ್ರಯೋ). ೨. ಪ್ರಸಿದ್ಧಿ; ಕೀರ್ತಿ; ಪ್ರಶಸ್ತಿ: ಭರತ ತ್ರಿಖಂಡದೊಳ್ ಪಸರಿಸು ನಿನ್ನ ಗೋಸಣೆಯುಂ (ಪಂಪಾಮಾ. ೯-೧೬೭); ಅತಿರಥನೆಂಬ ಗೋಸಣೆಯ ಮುದ್ರುಮಹೀತಳನಾಥನೆಂಬ ವಿಶ್ರುತಿಯಂ ಮಹಾಸ್ತ್ರಶಸ್ತ್ರವಿದನೆಂಬ ನೆಗೞ್ತಿಯ ಶಲ್ಯನೆಯ್ದಿದಂ (ಜಗವಿ. ೭-೮೫): ನೆಱೆ ಕಬ್ಬಿಗರೊಪ್ಪೆ ನಾಡೆಯುಂ ಗೋಸಣೆ[ಪಾಠಾಂ. ದೆ]ಮಿಾಱುವನ್ನಮಿದು ರಾಯನ ನಾಟ್ಕಳೊಳೆರ್ಕೆ ನಿಚ್ಚಮುಂ (ಕಬ್ಬಿಕಾ. ೩೪೮). **ಗೋಸನೆ:** ೧. ಗೋಸನೆಯಿಲ್ಲ ರಾಜಪುರುಷರ್ಗೆ ಪುಗಿಲಿಲ್ಲ (ಇಳ. X, ೧೬೭-೪; ಸು. ೩ನೆಯ ಶತ); ಪೊಟಲೊಳಗೆಲ್ಲಂ ಗೋಸನೆ[ಪಾಠಾಂ. ಘೋಷಣೆ]ಯಂ ತೊಟಲ್ಚಿದೊಡೆ (ವಡ್ಡಾರಾ. ೭೮-೩); ಪೋಚಾಗು ಬೊಲ್ಲೆಂಬ ಗೋಸನೆಯಂ ತಾಳ್ದಿತು ಗಂಡುಗೋಗಿಲೆಯ ತಂಡಂ ಪ್ರಾತಿಹಾರ್ಯಸ್ವನಂ (ಅನಂಪು. ೨-೩೨). ೨. ಭುವನದೊಳಿಂತು ನಿನ್ನೆಸೆವ ಗೋಸನೆ ಸಂದುದು (ಆದಿಪು. ೧೧-೧೦೮). **ಘೋಸಣೆ:** ೧. ಎನ್ನ ಯಜ್ಞಂ ತೀರ್ವನ್ನೆಗಂ ಋಷಿಯುಗೀ ಪೊಟಲೊಳಿರವೇಡಮೆಂದು ಘೋಸಣೆ ನೆಗೞ್ವುದುಂ (ಧರ್ಮಾಮೃ. ೯-೦೫೪). **ಘೋಸನೆ:** ೧. ಅಡಗಂ ತಿಂಬನೆ ತೊಲಗು . . . ಮಧುವಂ ಕಳ್ಳಂ ಕುಡಿವವನೆ ತೊಲಗೆನುತ್ತಂ ಪೊಡವಿಗೆ ಜಿನಧರ್ಮದೊಂದೆ ಘೋ[ಪಾಠಾಂ. ಗೋ]ಸನೆಯೆಸೆಗುಂ (ಸಮುಪ. ೦೫-೪೨).

**ಗೋಸನೆಯಂ ಪಿಡಿ** = ಆಹ್ವಾನವನ್ನು ಸ್ವೀಕರಿಸು: ಸಾಧಿಸಿದಂಗೆ ಬೇಡಿದ ವಸ್ತುವನೀವೆನೆಂದು ದೇಶದೊಳೆಲ್ಲಂ ಗೋಸನೆವಿಡಿಸಲ್ . . . ನಂದಗೋಪನಂದನಂ ಗೋಸನೆಯಂ ಪಿಡಿದಂ (ನೇಮಿಪು. ೬-೧೧೩ ವ).
[ <ಸಂ. ಘೋಷಣಾ ]

**ಗೋಸಣೆಗಳೆ, ಗೋಸನೆಗಳೆ** (ಕ್ರಿ). ಡಂಗುರ ಹೊಡೆ; ಸಾರು: ಈತನಂ ರಾಮದೂತನೆಂದು ಗೋಸಣೆಗಳೆದು ಪರಿಭವಿಸಿ ಪೊಱಮಡಿಸಿ ಕಳೆಯಿಂ (ಪಂಪಾಮಾ. ೧೧-೧೪೦ ವ); ಲಂಕಾನಗರದೊಳಂ ನಾಡೊಳಂ ಹಿಂಸೆ ಬೇಡೆಂದು ಗೋಸಣೆಗಳೆದು (ಪಂಪಾಮಾ. ೧೪-೮೨ ವ). **ಗೋಸನೆಗಳೆ:** ಜಯ ಜೀವ ನಂದ ವರ್ಧಸ್ವ ಯಥಾಕಾಮಾರವಂ ತದೈಶ್ವರ್ಯ ನವೋದಯಮುಮಂ ಗೋಸನೆಗಳೆವಂತೆಯುಮೆಸೆದುವು (ಶಾಂತಿಪು. ೭-೧೮).
[ ಗೋಸಣೆ + ಕಳೆ$_1$ ]

**ಗೋಸಣೆಗೊಳ್, ಗೋಸನೆಗೊಳು** (ಕ್ರಿ). ಸಾರಿ ಹೇಳು; ಪ್ರಕಟಿಸು. 'ಗೋಸಣೆಗೊಳಿಸು' ಪರಾ. **ಗೋಸನೆಗೊಳು:** ಕೆಳೆಯರ ಪಗೆವರ ಪೆಂಡಿರ ವಿಳೋಳಹಾರಾವನದ್ಧಕಂಠಂಗಳಿಳಾತಳನಾಥನ ಮಧ್ಯಸ್ಥಿಕೆಯಳ ವಿಯನಳವಲ್ಲದೆಳೆಗೆ ಗೋಸನೆಗೊಳುಗುಂ (ಶಾಂತಿಪು. ೯-೦೫೨); ಸಾಸಿರದೆಂಟು ಪೆಸರ್ಗಳ್ ವಾಸವನಿಡೆ ನೆಗೞ್ದುವವೆನೆ ಸುರರುಂ ಪಿರಿದುಂ ಗೋಸನೆ ಗೊಳುವಂತಾ ಜಿನವಾಸಸ್ಥಿತಿ ಶಾಂತಿನಾಥನಂ ಸ್ತುತಿಯಿಸುವರ್ (ಶಾಂತಿಪು. ೧೨-೫೨). [ ಗೋಸಣೆ + ಕೊಳ್$_1$ ]

**ಗೋಸಣೆಗೊಳಿಸು** (ಕ್ರಿ). ಡಂಗುರ ಹೊಡೆಯಿಸು; ಪ್ರಕಟಮಾಡಿಸು; ಸಾರಂ: ಬಲಿಯ ವಂಶದವರೆಲ್ಲಂ ಪೊಟಲೊಳಿರಲಾಗದೆಂದು ಗೋಸಣೆ ಗೊಳಿಸೆ (ಧರ್ಮಾಮೃ. ೯-೦೩೫). [ ಗೋಸಣೆಗೊಳ್ + - ಇಸು$_3$ ]

**ಗೋಸಣೆಮಾಡು** (ಕ್ರಿ). ಡಂಗುರ ಹೊಡೆ; ಸಾರು; ಪ್ರಕಟಮಾಡು: ಪುಟ್ಟಿದನತರ್ಕ್ಯಂ ನಂದನಂ ತಾನೆ ಲಕ್ಷ್ಮಿಗಧೀಶಂ . . . ಕಂಜಾಕ್ಷನೆಂಬಿಂತಿದಂ ಜಗದೊಳ್ ಗೋಸಣೆಮಾಡೆ (ಚಂದ್ರಪು. ೨-೧೮). [ ಗೋಸಣೆ+ಮಾಡು$_1$ ]

**ಗೋಸಣೆಯಿಡಿಸು** (ಕ್ರಿ). = ಗೋಸಣೆಗೊಳಿಸಂ: ಅಂಬರಕ್ಕೆ ಪೂವಿನ ಮಾಲೆಯಂ ಪಿಡಿದು ತಡೆಯದೆ ಬರ್ಪುದೆಂದುಭಯಶ್ರೇಣಿಯೊಳಂ ಗೋಸಣೆಯಿಡಿಸಲ್ . . . ಬಂದತ್ತು ವಿದ್ಯಾಧರೌಘಂ (ಅರ್ಧನೇ. ೩-೧೦ವ).
[ ಗೋಸಣೆಯಿಡು + - ಇಸು$_3$ ]

**ಗೋಸಣೆಯಿಡು, ಗೋಸನೆಯಿಡು**(ಕ್ರಿ).=ಗೋಸಣೆಗೊಳ್. 'ಗೋಸಣೆ ಯಿಡಿಸು' ಪರಾ. **ಗೋಸನೆಯಿಡು :** ನಿತ್ಯದಾನಕ್ಕೆಂದು ನಿಯೋಗಿಗಳ್ ತಂದು ಪುಂಜಿಸಿದ ಪಂಚರತ್ನದ ಪೊನ್ನರಾಶಿಗಳನರ್ಥಿಜನಕ್ಕೆ ಗೋಸನೆ ಯಿಟ್ಟು ಕುಡವೇಟ್ದು . . . ಜನದ ಮನಮನಲೆದಂ ಕರ್ಣಂ (ಪಂಪಭಾ. ೧೨-೫೨ ವ). [ಗೋಸಣೆ + ಇಡು$_1$]

**ಗೋಸಣೆವೇಟು**(ಕ್ರಿ). ಪ್ರಸಿದ್ಧಿಯನ್ನು ಪಡೆ ; ಕೀರ್ತಿಯನ್ನು ಹೊಂದು: ಗೋಸಣೆವೆತ್ತ ರಾಯರಿದಿರೇಟ್ಟರೆ . . . ತಳರ್ದರಂ ನನೆಯಂಬಂ (ಕಬ್ಬಿಗಕಾ. ೯೦). [ಗೋಸಣೆ + ವೇಟು$_1$]

**ಗೋಸನೆ** 'ಗೋಸಣೆ' ನೋ.

**ಗೋಸನೆಗೆಳೆ** 'ಗೋಸಣೆಗೆಳೆ' ನೋ.

**ಗೋಸನೆಗುಡುಕು** (ನಾ). ಕೂಗಿ ಕರೆದು ಕೊಡುವ ಗ್ರಾಸ,-ಆಹಾರ: ಲಯಮೆಯ್ದಿ ಯದುಬಲಂ ಪಕ್ಕಿಯ ಗೋಸನೆಗುಡುಕು ಜವನ ಕೈಬೋನಂ . . . ಎನಿಸದೆ ಗದೆಗೆ ನೀಡೆ ದನುಜಂ ಕರಮಂ (ಜಗವಿ. ೯-೬೨).
[ಗೋಸನೆ (<ಗೋಸಣೆ) + ಕುಡುಕು$_3$ (<ಕುಟುಕು$_2$)]

**ಗೋಸನೆಗೊಳು** 'ಗೋಸಣೆಗೊಳ್' ನೋ.

**ಗೋಸನೆಯಿಡು** 'ಗೋಸಣೆಯಿಡು' ನೋ.

**ಗೋಸನೆವಿಡಿಸು** (ಕ್ರಿ).=ಗೋಸಣೆಗೊಳಿಸು : ದಿವಿಜಕರೋನ್ಮುಕ್ತ ಮುಕ್ತಾದಿ ರತ್ನಂಗಳಂ ಪೊಬಲ್ಗೆಲ್ಲಂ ಗೋಸನೆವಿಡಿಸಿ ನೆಗಟ್ದ ದಾನಾತಿ ಶಯಕ್ಕೆ ವಿಸ್ಮಯಂಬಟ್ಟು (ಆದಿಪು. ೧೦-೭ ವ); ಬೇಡಿದ ವಸ್ತುವನೀವೆ ನೆಂದು ದೇಶದೊಳೆಲ್ಲಂ ಗೋಸನೆವಿಡಿಸಲ್ (ನೇಮಿಪು. ೬-೧೦೩ ವ).
[ಗೋಸನೆ (<ಗೋಸಣೆ)+ಪಿಡಿಸು]

**ಗೋಸನೆವೋಗು** (ಕ್ರಿ). ಪ್ರಸಿದ್ಧವಾಗು ; ಹೆಸರಾಗು : ಮಾಂಗಲ್ಯ ನಿಳಯನಪ್ಪನು ಮಾಂಗಲ್ಯಪ್ರದನೆನಿಕ್ಕುಮಾಶ್ರಿತರ್ಗೆಂತುಂ ಮಾಂಗಲ್ಯ ಪ್ರದನಲ್ಲನಮಾಂಗಲ್ಯಚರಿತ್ರನೆನಿಸಿ ಗೋಸನೆವೋದಂ (ಸಮುಪ. ೮-೧೨೨).
[ಗೋಸನೆ (<ಗೋಸಣೆ) + ಪೋಗು$_1$]

**ಗೋಸಮಿತಿ** (ನಾ). ಗೋವುಗಳ ಸಮೂಹ ; ದನಗಳ ಹಿಂಡು: ಗೋ ಸಮಿತಿಯನಲ್ಲಿ ಮೆಲ್ಲನಾಡಿಸಿ ಬರ್ಪಂ (ಜಗವಿ. ೪-೪೦). [ಗೋ+ಸಮಿತಿ]

**ಗೋಸಮುದಾಯ** (ನಾ). = ಗೋಸಮಿತಿ : "ಗೋಸಮುದಾಯ ವಾಕಳಿಂದಕ್ಕು" (ಶಬ್ದಮಂ. ೩೪). [ಗೋ + ಸಮುದಾಯ]

**ಗೋಸಮೃದ್ಧಿ** (ನಾ). ೧. ದನಗಳ ಸಂಪತ್ತು. ೨. ಕಿರಣಗಳ ಸಂಪತ್ತು. ೧, ೨ : ಗೋಸಮೃದ್ಧಿ ಗೋಕುಲದೊಳಂ ಮಾರ್ತಾಂಡಮಂಡಳದೊಳಂ (ಜಗವಿ. ೪-೭೫ ವ). [ಗೋ + ಸಮೃದ್ಧಿ]

**ಗೋಸರು** (ನಾ). (ಕರಾ) ಹಾವಸೆ ; ಪಾಚಿ: ಬಂಡೆಗಳ ಮೈಯಲ್ಲೂ ಅಂಥ ಗೋಸರು; ಮರಗಳ ಕಾಂಡಗಳಲ್ಲೂ ಅಂಥ ಗೋಸರು-ಅಂಟಿ ಕೊಂಡಿರುತ್ತದೆ (ಕುಡಿಕೂ. ೯೨); ಅಲ್ಲೊಂದು ಕಡೆ ಗೋಸರು ಹಿಡಿದ ಹೆಬ್ಬಂಡೆ ಕಾಣಿಸಿತು (ಸ್ವಪ್ನಹೊ. ೨೯). [?]

**ಗೋಸರ್ಗ** (ನಾ). ದನಕರುಂಗಳನ್ನು ಮೇವಿಗೆ ಬಿಡುವ ಸಮಯ.; ಬೆಳಗು; ಪ್ರಾತಃಕಾಲ: "ಉಷಃಸಮಯಂ ಪ್ರಭಾತಮದು ಗೋಸರ್ಗಂ" (ವಸ್ತುಕೋ. ೧೫-೪). [ಗೋ + ಸರ್ಗ]

**ಗೋಸಹಸ್ರ** (ನಾ). ೧. ಸಾವಿರ ಗೋವುಗಳು. ೨. ಸಾವಿರ ಕಿರಣಗಳು : ೧, ೨ : ಮಸಗಿರ್ದ ಲೋಹಿತಾಶ್ವಪ್ರಸರಂ ಕಾಟ್ಗಿರಡಮೆಲ್ಲಮಂ ಮೇಯೆ ರಸಾರಸಮಂ ಗೋಪತಿ ತವೆ ಕುಡಿಯಿಸಿದಂ ನಿಜಗೋಸಹಸ್ರಮಂ ಬೇಸಗೆ ಯೊಳ್ (ಜಗವಿ. ೧೭-೬೩). ೩. ಷೋಡಶ ಮಹಾದಾನಗಳಲ್ಲಿ ಐದನೆ ಯದು ; ಸಹಸ್ರಗೋವುಗಳ ದಾನ : ಉತ್ತರಾಯಣ ಸಂಕ್ರಾಂತಿ ಯನ್ದು ಕೋಸಿಗರ ಕೋಟೆಯಮ್ಮಂ ಗೋಸಹಸ್ರಮಾಟ್ದಿಂ (ಮೈಆರಿ.೧೯೩೯, ೭೮-೧೨ ; 964). [ಗೋ + ಸಹಸ್ರ]

**ಗೋಸಾಯಿ, ಗೊಸಾವಿ, ಗೋಸಾವಿ** (ನಾ). ವಿರಕ್ತ ; ಬೈರಾಗಿ : ರಾಧೆ ಯಾರೆಂಬುದಂ ಗೋಸಾಯಿ ಮರೆವಂ (ಗಿಳಿವಿಂ. ೯೨-೧೩) ; ಅವರನ್ನು ಗಾಂಧೀಜನ, 'ಓದಿಸೋ ಅಯ್ನೋರು' 'ದಾಗ್ದಾರು' 'ಗೋಸಾಯಿಗಳು' ಏನೆಂದಾದರೂ ಕರೆದುಕೊಳ್ಳಿ (ಸುವಸಂ. ೧). **ಗೊಸಾವಿ :** ಕಾಯತರು ಗೊಸಾವಿಯರು ಲಾಡಿಯರು (ಸೌಗಂಧಿ. ೧೩೫-೧). **ಗೋಸಾವಿ :** ಸಿದ್ಧಗಿರಿ ಗೋಸಾವಿ ಶಿಷ್ಯ ವಿಜಯಗಿರಿ ಗೋಸಾವಿ ಶಿಷ್ಯ (ಎಕ. IX, ಬೆಂಗಳೂ. ೩-೫ ; 1866) ; ತುಳಜಾಗಿರಿ, ಹರಿಣಾಗಿರಿ ಮುಂತಾದ ಗೋಸಾವಿಗಳಿಂದ ೨ ಲಕ್ಷ ವರಹಗಳವರಿಗೂ ತೆಗೆದುಕೊಂಡು . . . ಶ್ರೀರಂಗಪಟ್ಟಣಕ್ಕೆ ಬಂದು ಸೇರಿದರು (ಜಾಮುವಂ. ೨೦೨).
[← ಹಿಂ. ಗೋಸಾಈ ; ಮರಾ. ಗೋಸಾವೀ. / ಸಂ. ಗೋಸ್ವಾಮಿನ್]

**ಗೋಸಾವಿ** 'ಗೋಸಾಯಿ' ನೋ.

**ಗೋಸಾಸ$_1$** (ನಾ). ೧. ತುರುಕಾಳಗದಲ್ಲಿ ಹಸುಗಳನ್ನು ಬಿಡಿಸಿಕೊಳ್ಳು ವುದಕ್ಕಾಗಿ ತೋರುವ ಸಾಹಸ. ೨. ಗೋವುಗಳನ್ನು ಹಿಡಿಯುವಲ್ಲಿ ತೋರುವ ಪರಾಕ್ರಮ; ಗೋಗ್ರಹಣ ಸಾಹಸ. ೧, ೨: ಪರಹಿತವ್ಯಸನಿಗಳಲ್ಲದೆ ದುರ್ವ್ಯಸನಿಗಳಿಲ್ಲ ಗೋಸಾಸಮಲ್ಲದೆ ಕನ್ನೆಗೋಸಾ ಸಮಿಲ್ಲ (ಅಜಿಪು. ೧-೨೦ ವ). [ಗೋ + ಸಾಸ$_1$]

**ಗೋಸಾಸ$_2$** (ನಾ). ೧. ಸಾವಿರಹಸುಗಳು. ೨. ಸಾವಿರಹಸುಗಳ ದಾನ : ದೇಗುಲದ ಸೂಳೆ ಗೋಯಿನ್ದಪೊಡ್ಡಿಯ ಮಗಳು ಬಾದಿ(?ಳ)ಪೊಡ್ಡಿಯೆಂ ಬೊಳ್ ಉತ್ತಮ ಗೋಸಾಸಮಿಟ್ಟೊಳ್ (ಇಇ. XI, ೧೨೫-೫ ; 779) ; ಅಯ್ವತ್ತಱುವರುಂ ಮಹಾಜನದ ಕಾಲಂ ಕಟ್ಟಿಕೊಟ್ಟು ಗೋಸಾಸ(ಂ) ಮಿಟ್ಟೋ(ಂ) ಸೋದಕಪೂರ್ವ[ಕ] × × × ಱಯಮ್ಮ ಗೋಸಾಸ ಮಿಟ್ಟೋ (ಸೌಇಇ. XI-i, ೧೫-೩ : 873) ; ಪುರಿಗೆಱನಾಡ ಸರಟವುರ ದಾಯದ್ವಿಂ[ಬ]ರುಮಿಱ್ದು ನಾಡಯಿಸೆ ಮಾಸಿಗರ ಚಿದಾಣ್ಣ ಗೋಸಾಸ (ಂ)ಮಿಟ್ಟೋಂ (ಸೌಇಇ. XI-i, ೨೦-೬, ೭ ; 883). [ಗೋ + ಸಾಸ$_2$]

**ಗೋಸಾಸ$_3$** (ನಾ). ಒಂದು ಊರಿನ ಹೆಸರು; P ಪುಣೆಜಿಲ್ಲೆಯ ಬೇಡ ತಾಲ್ಲೂಕಿನ ಒಂದು ಹಳ್ಳಿ : ಇನ್ದಮ್ಮನ ಗೋಸಾಸದ ಮೇಣ್ಬೆ ದಡಿಗರ ಸನ್ನಾಡಾಳೆ (ಎಇ. VI, ೨೫೭-೨ ; 800). [?]

**ಗೋಸಾಸಿ** (ನಾ). ತುರುಕಾಳಗದಲ್ಲಿ ಹೋರಾಡಿದ ಸಾಹಸಿ ; ಒಂದು ಬಿರುದು : ಕೊಣ್ದೆಕುಲರ ಕುಪ್ಪ ಕೀರ್ತಿವರ್ಮ್ಮ ಗೋಸಾಸಿಯಾ[ನಿ] ಱಸಿದಾ ಕೀರ್ತ್ತನಂ (ಸೌಇಇ. XI-i, ೫-೧೨ ; 751) ; (ಎಇ. XXI, ೩೪-೧೨ ; 751 ನೋ) ; ಕೋಸಿಗರಾ ಕೋಟೆಯಮ್ಮ ಗೋಸಾಸಿಯ ಪೆಣ್ಣಾತಿ ಪೊನ್ನಬ್ಬೆ ಮಗಂ ತುರಾಅಮ್ಮ (ಮೈಆರಿ. ೧೯೩೯, ೭೯-೧ ; 964) ; ತುಱು ಪರಿಯೆಯು ನಾವಿದರ ಗೋಸಾಸಿ ಗುಲುಂಗಂ ಕಟ್ಟಿ ಸತ್ತು ಸುರಲೋಕಕ್ಕೋದ (ಎಕ. VII, ಶಿಕಾರಿ. ೧೯೫-೫ ; 1007). [ಗೋಸಾಸ$_1$ + – ಇ$_3$]

**ಗೋಸಾಸಿಗ** (ನಾ). = ಗೋಸಾಸಿ : ಶ್ರೀಪಾಲರಾಮ × ರೆ ಕಱುಉಂ ಬೀರವುಗ್ಗಿ ಗೋಸಿಗರುಂ ಸನ್ದ ಗೋಲಿಯರಾ ಆದಿ ಅಡಿಅರಸ ಕಾವೊಡೇಱ ಗೋಸಾಸಿಗನು ಮುಱುಕನಣ್ಣಾಉ ಅಕಟ್ಟಗವಿಲಾಕೆ ಸಂತು (ಎಕ. VIII, ಸೊರಬ. ೧೫-೧೦ ; ಸು. 600) ; ಇದಾ ಪಡೆದೊರ್ ಮುತ್ತವರರ ಸರುವಿ ಗೋಸಾಸಿಗ ಕೊಡಲಸೆಟ್ಟಿಯರಾ ಮಾದವ್ಮನ್ (ಎಇ. IX, ೨೩-೧೧ ; ಸು. 800). [ಗೋಸಾಸ$_1$ + – ಇಗ]

**ಗೋಸಿ** 'ಗೋಚಿ' ನೋ.

**ಗೋಸಿಂಬೆ** 'ಗೋಸುಂಬೆ' ನೋ.

**ಗೋಸಿಗೆ** (ನಾ). ಪ್ರಥಮ ಋತುವಾದವಳಿಗೆ ಆರತಿ ಮಾಡಿ ಕೊಡುವ ಪಡಿ,- ಆಹಾರ ಸಾಮಗ್ರಿ : ಮುನ್ನದಿವಸ ಗೋಸಿಗೆ ತಂದ ಓಣಿಕೇರಿಯ ಹೆಂಗಸರಿಗೆ ಔತಣ ಕೊಡಲೆಂದು ಹೊರಬಿದ್ದಳು (ಅಬಲಾ. ೯). 'ಒಸಗೆ' ಪರಾ. [?]

**ಗೋಸಿದ್ಧಿ** (ನಾ). ಕಾವ್ಯರಚನೆಯಲ್ಲಿ ಕಂಡುಬರುವ ಶಕ್ತಿ; ವಾಕ್ಸಿದ್ಧಿ : ಗೋಪಬಂಧುರಯಾತ್ರ ಗೋಶ್ರೋತ್ರಸೂತ್ರ ಕೊಡು ಗೋಸಿದ್ಧಿಯಭಿವೃದ್ಧಿಯಂ (ನವಪೋ. ೧-೮). [ ಗೋ + ಸಿದ್ಧಿ ]

**ಗೋಸು** (ಕ್ರಿ). ದೋಚು ; ಬಾಚು ; ಗೋರು : ಸೂಸಿದರ್ ಬೀಸಿದರ್ ಗೋಸಿದರ್ ಸುತ್ತಲಿಪ ದಳವ ಧಾಳಾಧೂಳದಿ (ಜಿನಮು. ೧೭-೨೮); ನಿಡುದೋಳ್ಪಾಶ ಬೀಸುತಂ ಗೋಸುತಂ ಕಟ್ಟಿಯಿಟ್ಟಿಟ್ಟು ಕೆಡಹಿ ಕೊಡಹಿದಲ್ (ಜಿನಮು. ೩೧-೧೭). [ <ಗೋಚು$_1$ ]

**ಗೋಸುಂಬೆ, ಗೋಸಿಂಬೆ, ಗೋಸುಬೆ**(ನಾ). ಆಗಾಗ ದೇಹದ ಬಣ್ಣವನ್ನು ಬದಲಾಯಿಸಬಲ್ಲ ಓತಿಕೇತದ ಜಾತಿಗೆ ಸೇರಿದ ಒಂದು ಪ್ರಾಣಿ ; ಊಸರವಳ್ಳಿ : "ಪ್ರತಿಸೂರ್ಯಃ, ಶಯಾನಕಃ – ಈ ೨ ಗೋಸುಂಬೆ" (ಹಲಾಯು. ೩೯-೮೧) ; ಕುಳಿತಾಗ ಭಕ್ತ ಮುನಿದಾಗ ಮಾನವ ಗೋಸುಂಬೆಯಂತೆ ಎನ್ನ ಮನವು ಗಳಿಗೆಗೊಂದು ಪರಿ (ಉರಿವ. ೩೩-೩೮) ; ಪಾತಾಳವಂ ಕಣ್ಣಿಂದ ಕಾಣದೇ ಗೋಸುಂಬೆ (ವೀಶೈಪು. ೪-೭-೬೮) ; ಗೋಸುಂಬೆಹುಳದಂತೆ ಬಹು ವೇಷಧಾರಿಯಲ್ಲ ಶರಣ (ಅಬಂಡೀ. ೨೬೫-೩) ; ಗೌಡ ಬದುಕಿದರೆ ಗುರಿಕಾರ, ಗೊದ್ದ ಬದುಕಿದರೆ ಗೋಸುಂಬೆ (ಗಾದೆ). **ಗೋಸಿಂಬೆ** : ಸಮಯಕ್ಕೆ ತಕ್ಕಂತೆ ಬಣ್ಣ ಬದಲಿಸುವ ಗೋಸಿಂಬೆ! ತೊಲಗು ಇಲ್ಲಿಂದ (ತುಂಗಭ. ೧೦೫). **ಗೋಸುಬೆ** : ವಾತಿಯು ಗೋಸುಬೆ ಮೆಲ್ಲ[ನೆ]ಕೌತುಕದಿಂ ಪರಿದು ಬಂದು ಮಸ್ತಕವೇಱಲ್ ಕಾತರಿಸಿ ಸಾಯ್ವನಾತಂ ಭೂತಳದೊ[ಳಗಾ]ಱು ತಿಂಗಳಾಗಲ್ ಬೇಗಂ (ಪಂಚಶ. ೪೭-೨೩). [ ? ]

**ಗೋಸುಗಲಿ** (ನಾ). ಕೂಗಿ ಆಡಂಬರಮಾಡುತ್ತ ನುಗ್ಗುವ ಶೂರ (?): ಕೀಲ್ಗೊಂಡ ಬಾಳಂ ಬೀಸುತ್ತುಂ ಪರಿವ ಗೋಸುಗಲಿಗಳುಮಂ (ಲೀಲಾವ. ೫-೧೩೪) ; "ಹೇಡಿ" (ಪ್ರಭಣ್ಣ). [ < ಗೋಸ$_1$ + ಕಲಿ$_2$ ]

**ಗೋಸುಬೆ** 'ಗೋಸುಂಬೆ' ನೋ.

**ಗೋಸ್ತ** (ನಾ). ದನಕರುಗಳ ಕೊಟ್ಟಿಗೆ,–ಹಟ್ಟಿ : ಗೋರಸದೊಳ್ಕೂಡಿ ದರ್ಪಹಾರಮನಾ ಗೋಸ್ತದಲ್ಲಿ ಗೋವಳನಿಕ್ಕಲ್ಕಾರೋಗಿಸಲಕ್ಕುಂ ಚಾರಿತ್ರಾನ್ವಿತರ ಮನೆಯೊಳುಣ್ಬರೆ ಪಾರ್ವರ್ (ಸಮುಪ. ೬-೯೭).
[ <ಸಂ. ಗೋಷ್ಠ ]

**ಗೋಸ್ತಂಭ** (ನಾ). ದನಕರುಗಳನ್ನು ಕಟ್ಟುವ ಕಂಬ (?) : ಇದವುಹಂ ಬುದ್ಧಿಯನು ವಹಿಸಿಯೆ ಹದುಳವಿಪ್ಪುದು ಮನವು ಗೋಸ್ತಂಭದೊಳು ಸಿಕ್ಕಿದ ಕಾಕನಂತುಟು (ಸದ್ಗುರು. ೬-೨೯). [ ಗೋ + ಸ್ತಂಭ ]

**ಗೋಸ್ತನ** (ನಾ). ೧. ಆಕಳ ಕೆಚ್ಚಲು. ೨. ಹೂವಿನ ಗೊಂಚಲು. ೩. ನಾಲ್ಕು ಎಳೆಗಳುಳ್ಳ ಸರ ; "ನಾಲ್ಕು ಸರದ ಮುತ್ತಿನ ಹಾರ" (ಗಂಗಾಮು. ೧೨೩). [ ಸಂ. ]

**ಗೋಸ್ತನಿ** (ನಾ). ೧. ದ್ರಾಕ್ಷಿಯ ಗೊಂಚಲು. ೨. ದ್ರಾಕ್ಷಿಯ ಹಣ್ಣು,– ಬಳ್ಳಿ : "ಮೃದ್ವೀಕಾ, ಗೋಸ್ತನೀ, ದ್ರಾಕ್ಷಾ, ಹಾರಹೂರಾ – ಈ ೪ ದ್ರಾಕ್ಷೆ" (ಹಲಾಯು. ೩೨-೪೦). ೩. ದ್ರಾಕ್ಷಾರಸ : (ಕ). ೪. ನಾಲ್ಕು ಎಳೆಗಳ ಸರ : (ಕ). [ ಸಂ. ಗೋಸ್ತನೀ ]

**ಗೋಸ್ಥಾನ** (ನಾ). ದನಗಳ ಕೊಟ್ಟಿಗೆ ; ಗೋಶಾಲೆ ; "ಗೋಸ್ಥಾನಂ ಗೋಷ್ಠಂ" (ವಸ್ತುಕೋ. ೯೦-೯). [ ಗೋ + ಸ್ಥಾನ ]

**ಗೋಸ್ಥಾನಕ** (ನಾ).=ಗೋಸ್ಥಾನ. [ ಸಂ. ]

**ಗೋಸ್ವಾಮಿ** (ನಾ). ೧. ಗೋವುಗಳ ಒಡೆಯ ; ಗೋವಳಿಗ ; ಗೊಲ್ಲ : "ಗೋಮಾನ್, ಗೋಮಿ, ಗೋಸ್ವಾಮಿ – ಈ ೩ ತುಱುಕಾಱರ್" (ಹಲಾಯು. ೪೪-೧೦೭). ೨. ಇಂದ್ರಿಯಗಳನ್ನು ಜಯಿಸಿದವನು ; ಬೈರಾಗಿ : ಮಹಾರಾಜನೆಂಬ ಹೆಸರಿನ ಜೊತೆಗೆ ಗೋಸಾಯಿನ್, (ಗೋಪಾಲಕ) ಗೋಸ್ವಾಮಿ, ಆಚಾರ್ಯ, ಗುರುಪ್ರಭು ಮುಂತಾದ ಬಿರುದುಗಳೂ ರೂಢಿಗೆ ಬಂದವು (ಭಾರದ. ೨೮೯). [ಸಂ. ಗೋಸ್ವಾಮಿನ್]

**ಗೋಹತಿ** (ನಾ). ೧. ಗೋವಧೆ; ಹಸುವನ್ನು ಕೊಲ್ಲುವುದು. ೨. ಗೋವಧೆಯಿಂದ ಬರುವ ಪಾಪ : ಗೋಹತಿ ಬ್ರಹ್ಮಹತ್ಯಾದ್ಯಖಿಳ ಪಾಪಗಳ ಸದೆದು . . . ಧರ್ಮಾರ್ಥವನು ಪಡೆವರು (ಕಾಶಿರಾ. ೪೪-೨೫).
[ ಗೋ + ಹತಿ ]

**ಗೋಹತ್ತು** (ನಾ).=ಗೋಹತಿ ೧ : ಯಿದು ಯಾರು ವಿಘಾತಮಾಡಿದಾಗ್ಯು ಬಾಂಹರು ವಿಘಾತಮಾಡಿದರೆ ಕಾಶಿಯಲಿ ಗೋಹತ್ತು ಮಾಡಿದ ಹಾಗೆ (ಎಕ. XVI, ಚಿಕ್ಕನಾ. ೪೫-೧೫ ; ? ). [ <ಗೋಹತ್ಯ ]

**ಗೋಹತ್ಯ** (ನಾ).೧.= ಗೋಹತಿ ೧. ೨.=ಗೋಹತಿ ೨ : ಗೌತಮಂಗಾಯಿತ್ತಲಾ ಗೋಹತ್ಯ ಜಗವಱಿಯೆ (ಬಸಪು. ೬೦-೫೨).
[ <ಸಂ. ಗೋಹತ್ಯಾ ]

**ಗೋಹನ** (ನಾ). ಕಾಪು ; ರಕ್ಷಣೆ : ಎಂದು ತತ್ವವು ಪುದರಗೋಹನವಂದು ಬೇಡುವ ಭಕ್ತಗಚ್ಯುತ ಸಂದೇಹವು ಬಿಡುವಂತೆ ತತ್ವವ . . . ನುಡಿದನು ಕರುಣದಲಿ (ನಿಭಾಗ. ೧೧-೧೨-೨೯). [<ಸಂ. ಗೋಪನ ]

**ಗೋಹಳೆ** (ನಾ). ಸಗಣಿ.

**ಗೋಹಳೆಯಡೆ** = ಸಗಣಿಯನ್ನು ಒಟ್ಟಿದ ಜಾಗ ; ತಿಪ್ಪೆ : ತುರಿಪದ ಗೋಹಳೆ[ಪಾಠಾಂ. ಳಿ]ಯೆಡೆಯೊಳ್ ಪೊರಳ್ವರುಂ ಪಾಟ್ರಂಗಳೊಳ್ ಪೊರಳುವುದುಂ ಕರಮೊಪ್ಪಿರೆ ಪಾಣ್ಬಂ ತಾಂ ನರಕಂಗಳೊಳಿಂತೆ ಪೊರಳ್ವಂ (ಸಮುಪ. ೫-೫೮); ಹಡುಕೆಯ ಕೆಲದೊಳ್ಗೋಹಳೆ[ಪಾಠಾಂ. ಳಿ] ಯೆಡೆಯೊಳ್ ಭೋರೆಂದು ಸಕಳವಿಪ್ರಜನಂಗಳ್ ಬಿಡದೋದುವರೆಂತೋ ಶುಚಿಗಡೆಯಾಯ್ತಾ ವೇದಮಪ್ಪುಡಂತೋದುವರೇ (ಸಮುಪ. ೧೧-೧೫).
[<ಸಂ. ಗೋಹಲ್ಲ ]

**ಗೋಹುರ** (ನಾ). ೧. ಪಟ್ಟಣದ ಹೆಬ್ಬಾಗಿಲು; ಅಗಸೆ; ಮಹಾದ್ವಾರ: ತೋರಣಮಣಸೆಯ ತೆಂಕಲ್ಮೋರಾರಿ ಜಿನೇಂದ್ರಭೂಮಿ ಸಹಿತಂ ಮತ್ತಂ ಕಾರಣಿಕೆ ಮಸಣಿಕಬ್ಬೆಯ ಗೋಹುರದಿಂ ತೆಂಕ[ಬ] × × ರಕ್ಕುಂದೋಟಂ (ಕಇ. I, ೩೦-೩೯ ; 1222) ; ಪತ್ತಕ್ಕೆ ಹತ್ತಂ – ಗೋಪುರ – ಗೋಹುರ (ಶಮದ. ೨೫೮ ಪ್ರಯೋ). ೨. ದೇವಾಲಯದ ಮುಂದುಗಡೆಯ ಎತ್ತರವಾದ ಮಹಾದ್ವಾರದ ಕಟ್ಟಡ ; ಶಿಖರ : ನಡೆದುದು ನಾಡುಬೀಡುಗುಡಿಗೋಹುರಗಳ್ ಪುಡಿಯೇಟಿ (ಚಳವಿ. ೨-೧೧೫) ; ಗೋಹುರಂಗಳ ಮಿಸುನಿಯ ನೆಲೆಮಾಡದ ಚೆಂಬೆಳಗು ಬಾಂದಳದೊಳ್ ಪಳಂಚುತಿಂದಿರವಿಲ್ಲನೊಡರ್ಚೆ (ರಾಮಾಶ್ವ. ೧೧೨-೧೩) ; [ < ಸಂ. ಗೋಪುರ ]

**ಗೋಳ್$_1$** 'ಗೋಣ್' ನೋ.

**ಗೋಳ್$_2$** 'ಗೋಟ್$_3$' ನೋ.

**ಗೋಳ$_1$** 'ಗೋಟ' ನೋ.

**ಗೋಳ$_2$** 'ಗೋಲ' ನೋ.

**ಗೋಳಕ** 'ಗೋಲಕ' ನೋ.

**ಗೋಳಕತ್ರಯ** (ನಾ). [ದ್ವೈತ]ಮೂರ್ತಿಪೂಜೆ ಮಾಡುವಾಗ ಚಿಂತನೆ ಮಾಡಬೇಕಾದ ಪರಮಾತ್ಮನ ಮೂರು ಪ್ರತಿಮಾರೂಪಗಳು : ಸ್ವಯಂವ್ಯಕ್ತವೆಂದು ಪ್ರಸಿದ್ಧವಾದ ಪ್ರತಿಮೆಗಳಲ್ಲಿ ಗೋಳಕತ್ರಯ ಚಿಂತನೆ ಮಾಡಬೇಕು, ಹೇಗೆಂದರೆ ಕಣ್ಣಿಗೆ ಕಾಣುವ ಪ್ರತಿಮೆ ೧. ಅದರಲ್ಲಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ವಾಯುದೇವರಿಂದ ಚಿಂತ್ಯವಾದ ಪ್ರತಿಮೆ ೧. ಲಕ್ಷ್ಮೀಆವರಣಾತ್ಮಕವಾದ ಪ್ರತಿಮೆ ೧. ಹೀಗೆ ಮೂರು ಗೋಳಕಗಳು (ಹಸಾರ. ೧೧-೨೭ ತಾತ್ಪರ್ಯ).
[ ಗೋಳಕ (=ಗೋಲಕ) + ತ್ರಯ ]

**ಗೋಳಕನಾಥ** (ನಾ). (?) : ಒಲೆಯಡಿಯನುಱುಹಿದಡೆ ಹೊಗೆ ಗೋಳಕನಾಥನ ಕೊರಳ ಸುತ್ತಿತ್ತು ಮಹೀತಳನ ಜಡೆ ಸೀಯಿತ್ತು ಮರೀಚಕನ ಸಿರ ಬೆಂದಿತ್ತು (ಬಸವ. ೯೩೦). [ ಗೋಳಕ ? + ನಾಥ ]

**ಗೋಳಕಪಂಚಕ** (ನಾ). [ದ್ವೈತ]ಮೂರ್ತಿಪೂಜೆ ಮಾಡುವಾಗ ಚಿಂತನೆ ಮಾಡಬೇಕಾದ ಪರಮಾತ್ಮನ ಐದು ಪ್ರತಿಮಾರೂಪಗಳು : ಸಾಧಾರಣ ಬಡಗಿಯವರಿಂದ ಮಾಡಲ್ಪಟ್ಟ ಪ್ರತಿಮೆಗಳಲ್ಲಿ ೫ ಗೋಳಕಗಳನ್ನೂ ಚಿಂತಿಸಬೇಕು. ಗೋಚರಿಸುವ ಪ್ರತಿಮೆ ೧. ಅದರಲ್ಲಿ ವಿಶ್ವಕರ್ಮನಿರ್ಮಿಸಿದ ಪ್ರತಿಮೆ ೧. ಅದರಲ್ಲಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರತಿಮೆ ೧. ಅದರಲ್ಲಿ ವಾಯುದೇವರ ಆವರಣರೂಪ ಪ್ರತಿಮೆ ೧. ಅದರಲ್ಲಿ ಲಕ್ಷ್ಮೀ ಆವರಣಾತ್ಮಕವಾದ ಪ್ರತಿಮೆ ೧. ಹೀಗೆ ೫ ಗೋಳಕಗಳನ್ನು ತಿಳಿಯಬೇಕು (ಹಸಾರ. ೧೧-೨೬ ತಾತ್ಪರ್ಯ).

[ ಗೋಳಕ (=ಗೋಲಕ) + ಪಂಚಕ ]

**ಗೋಳಕಾಕಾರ** (ನಾ). ಗುಂಡಾಗಿರುವುದು ; ಗೋಲಾಕಾರ : ಇಂತೀ ತ್ರಿವಿಧಭೇದ ವರ್ತುಳ ಗೋಮುಖಿ ಗೋಳಕಾಕಾರ ಕೂಡಿದ ಲಿಂಗವಾದಲ್ಲಿ . . . ಉತ್ಪತ್ತಿ ಎಲ್ಲಿ ಅಡಗಿತ್ತು (ಮೋಳಿಮಾ. ೭-೨೫).

[ ಗೋಳಕ (=ಗೋಲಕ) + ಆಕಾರ$_2$ ]

**ಗೋಳಕಾಯಿ** (ನಾ). ದುಂಡಾಗಿರುವ ಒಂದು ಬಗೆಯ ಮಾವು : ಮಾವಿನ ಜಾತಿಗಳು : ಗೋಳಕಾಯಿ, ಬಾದಾಮಿ, ರಸಪುರಿ, ಜೀರಿಗೆ (ನಮ್ಮನು. ೨೩೬) [ ಗೋಳ$_2$ (=ಗೋಲ) + ಕಾಯಿ$_4$ (<ಕಾಯ್$_4$) ]

**ಗೋಳಗುಮುಟ** 'ಗೋಲಗುಮಟ' ನೋ.

**ಗೋಳಗುಮ್ಮಟ** 'ಗೋಲಗುಮಟ' ನೋ.

**ಗೋಳಜಾತ** (ನಾ). [ಜ್ಯೋತಿ]ಗೋಳಯೋಗದಲ್ಲಿ ಹುಟ್ಟಿದವನು : ಧನಹೀನಂ ಮಲಿನಂ ಕುಶಿಲ್ಪಿ ವಿಗತಜ್ಞಾನಾತ್ಮಕಂ ಗೋಳಜಾತನೆನಿಕ್ಕುಂ (ಜಾತತಿ. ೧೩-೧೫). [ ಗೋಳ$_2$ (=ಗೋಲ) + ಜಾತ ]

**ಗೋಳಯೋಗ** (ನಾ). [ಜ್ಯೋತಿ]ಸಂಖ್ಯಾಯೋಗಗಳಲ್ಲಿ ಒಂದು : ೧ ರಾಶಿಯೊಳಗೆ ರಾಹುಕೇತು ಮೊದಲಾದ ೩ ಗ್ರಹರು ಪೊರಗಾಗಿ ಮತ್ತೆಲ್ಲಾ ಗ್ರಹರಿರಲೂ ಗೋಳಯೋಗಂ ಇದರಿಂದ ಮಹಾ ಲೇಸಕ್ಕುಂ (ಆಯುಟೀ. ೨೪-೯). P ಜ್ಯೋತಿಷ್ಯದಲ್ಲಿ ಗೋಳಯೋಗದಿಂದ ಜಗತ್ತಿಗೆ ಮಹಾ ಕ್ಷೋಭೆಯುಂಟಾಗುವುದೆಂದು ವರ್ಣಿತವಾಗಿದೆ.

[ ಗೋಳ$_2$ (=ಗೋಲ) + ಯೋಗ ]

**ಗೋಳಸಂಪಿಗೆ** (ನಾ). (ಕರಾ) ಒಂದು ಬಗೆಯ ಸಂಪಿಗೆ ; ದುಂಡುಸಂಪಿಗೆ.

[ ಗೋಳ$_2$ (=ಗೋಲ) + ಸಂಪಿಗೆ (< ಸಂಪಗೆ) . / ತುಳು. ಗೋಳಸಂಪಗೆ ]

**ಗೋಳಾಂಗೂಳ** 'ಗೋಲಾಂಗೂಲ' ನೋ.

**ಗೋಳಾಕಾರ** 'ಗೋಲಾಕಾರ' ನೋ.

**ಗೋಳಾಟ** (ನಾ). ಅಳುವುದು; ದುಃಖಿಸುವುದು : ಖಾನನಿಗೆ ಮಾಲತಿಯ ಗೋಳಾಟವನ್ನು ಕೇಳಿ ಮನಸ್ಸು ಕರಗಿದಂತಾಯಿತು (ರಾವಿಜ. ೧೧೫) ; ಗೋಳಾಟ ಗುಡುಗಿಂಗೆ, ಕಣ್ಣೀರು ಸಂತತವು . . . ಮಳೆಯ ಜಲಕೆ (ಧ್ವನ್ಯಾಲೋ. ೮೫). [ ಗೋಳು$_2$ (< ಗೋೞ್$_3$) + ಆಟ ]

**ಗೋಳಾಡಿಸು** (ಕ್ರಿ). ಕಾಡು; ಪೀಡಿಸು; ತೊಂದರೆಕೊಡು: ದಯಾಮಿದನು ಯುದ್ಧಮಾಡಿ ನೆರೆಕರೆಯ ದೇಶದ ಜನರನ್ನು ಗೋಳಾಡಿಸುತ್ತಿದ್ದನು (ಮಜಸ. ೯೬). [ ಗೋಳಾಡು (<ಗೋೞಾಡು) + – ಇಸು$_3$ ]

**ಗೋಳಾಡು** 'ಗೋೞಾಡು' ನೋ.

**ಗೋಳಾಯಿಲ** 'ಗೋೞಾಯಿಲ' ನೋ.

**ಗೋಳಾರ್ಧ** 'ಗೋಲಾರ್ಧ' ನೋ.

**ಗೋಳಿ$_1$, ಗೋಣಿ$_1$** (ನಾ). ೧. (ಆಲದ ಜಾತಿಗೆ ಸೇರಿದ) ಒಂದು ಬಗೆಯ ಮರ : "ಪಿಪ್ಪಲವೆನಲು ಗೋಳಿ [ಪಾಠಾಂ. ಣಿ]ಯಕ್ಕುಂ (ಮಂಗರಾ. ೩೬-೧೬) ; ಅತ್ತಿಯ ಬಸರಿಯ ಗೋಳಿಯ ಮತ್ತರಳಿಯ ವಟದ ಪಣ್ಣನಡಗಂ ಜೇಸಂ ಬಿತ್ತರಮದ್ಯಮನಾಗೆಂಬುತ್ತಮ ಸಂಸೇವ್ಯ ಮೂಲ ಗುಣಮಿಾಯೆಂಟುಂ (ಧರ್ಮಾಮೃ. ೫-೧೩೨) ; ಅತ್ತಿ ಅರಳಿ ಆಲ ಬಸುರಿ ಗೋಳಿಯೆಂಬಿವಯ್ದು ಪಾಲಮರದ ಪಣ್ಗಳು ಬೆರಸಿ (ಶಾಸ್ತ್ರಟೀ. ೫೫-೪) ; ಜಂಗುಳಿ ಪುತ್ತಳಿ ಗೋಳಿ ಘೇಳಿ ಜಟಿ ಸಂದೇಹಂ (ಶಮದ. ೨೫) ; ಅಲ್ಲಿಂದಂ ಪಡುವಲು ಗೋಳಿಯ ಮರನ ಪೊತ್ತಿನಲು (ಎಕ. VIII, ತೀರ್ಥಹ. ೧೨೯-೪೫ : 1404) ; ಸ್ಥೂಲ ಗೋಳಿಯಾದಿದ್ರುಮಗಳಾಳಿಯಿರುವುದು (ಕಜಾಗೀ. ೨೦೬). ೨. ಒಂದು ಬಗೆಯ ಸೊಪ್ಪು. 'ಗೋಳಿಪಲ್ಯ' ಪರಾ. **ಗೋಣಿ$_1$** : ೧. "ಪೀಲುಃ–ಗುಡಫಲಃ . . . ಗೋಣಿಮರ" (ಸಿದ್ಧಾಂತಿ. ೧೦೩) ನಿಂಬದಶೋಕೆಯ ಗೋಣಿಯಾಲದೀ [ಪಾಠಾಂ. ನೆಲ್ಲಿಯ ನೀವದ ಸೋಲೆಯಾಲದಿಂ]ಚಿಲ . . . ಇಪ್ಪೆಯ ಮರಂಗಳ ಕೊಂಬುಗಳಂಬರಂಬರಂ ಪುದಿದು ಪೊದಟ್ದು ಪುರ್ಬಡರೆ ಪರ್ಬಿರೆ (ಲೀಲಾವ. ೬-೨೬) ; (ಸೂಕ್ತಿಸು. ೩-೨೪ ಸೋ.). ೨. 'ಗೋಣಿಸೊಪ್ಪು' ಪರಾ. ೩. ಗೋಣಿಯ ಹಣ್ಣಿನ ಬಣ್ಣದಲ್ಲಿ ಮೈಮೇಲೆ ಗುಳ್ಳೆಗಳೇಳುವ ಒಂದು ಬಗೆಯ ರೋಗ. 'ಗೋಣಿತಟ್ಟು$_1$', 'ಗೋಣಿದಡಾರ' ಪರಾ.

[ ದೇ.॥ ತಮಿ. ಮಲ. ಕೋಳಿ ; ತುಳು. ಗೋಳಿ ]

**ಗೋಳಿ$_2$** 'ಕೋಳಿ$_3$' ನೋ.

**ಗೋಳಿ$_3$** (ನಾ). ಒಂದು ಬಗೆಯ ಗಿಡ; ಬಕುಳ: "ಬಕುಳ = ಗೋಳಿಹೂವು" (ಗಂಗಾಮ. ೨೨೬). [ ? ]

**ಗೋಳಿಕುಟುಮನಬಳ್ಳಿ** (ನಾ). ಒಂದು ಬಗೆಯ ಸಸ್ಯ : ಗೋಳಿಕುಟುಮನ ಬಳ್ಳಿ ವೈದ್ಯಕ್ಕೆ ಸಹಾಯವಾದ ಒಂದು ಸಸ್ಯ (ರೂಢಿ).

[ <ಕೋೞಿಕುಟುಮ + ಬಳ್ಳಿ ]

**ಗೋಳಿಗೆ** 'ಗೋೞಿಗೆ' ನೋ.

**ಗೋಳಿಡಿಸು** 'ಗೋೞಿಡಿಸು' ನೋ.

**ಗೋಳಿಡು** 'ಗೋೞಿಡು' ನೋ.

**ಗೋಳಿಪಲ್ಯ, ಗೋಳಿಪಲ್ಲೆ** (ನಾ). ಒಂದು ಬಗೆಯ ತರಕಾರಿ ಸೊಪ್ಪು : (+). **ಗೋಳಿಪಲ್ಲೆ** : ರಾಜಗಿರಿಪಲ್ಲೆ, ಮೆಂತೆಪಲ್ಲೆ, ಗೋಳೀಪಲ್ಲೆ . . . ಮುಂತಾದುವನ್ನೇ ತಿನ್ನತಕ್ಕದ್ದೆಂದು ತಾವು ಫರ್ಮಾನು ಹೊರಡಿಸಿಲ್ಲವೇ (ಹನ್ನೊಂದ. ೬೮). [ ಗೋಳಿ$_1$ + ಪಲ್ಯ ]

**ಗೋಳಿಪಲ್ಲೆ** 'ಗೋಳಿಪಲ್ಯ' ನೋ.

**ಗೋಳಿಮರ, ಗೋಣಿಮರ** (ನಾ). ಒಂದು ಬಗೆಯ ಮರ ; ಗೋಳಿ : (+). **ಗೋಣಿಮರ** : ಊರ ಗೋಣೀಮರನಿಂದ ತೆಂಕಲು (ಎಕ. VI, ಶೃಂಗೇರಿ. ೭-೬೫; 1700 ? ) ; ಗೋಣಿಮರವನ್ನು ಜಾಣನಾದರೆ ತೂನಿ ಕೋಲು ಮಾಡುವನು ಎಂಬ ಸಾಮತಿಯಾಯಿತು (ಕಥಾಮಂ. IV, ೩೨).

[ ಗೋಳಿ$_1$ + ಮರ$_1$ ]

**ಗೋಳಿಸು$_1$** (ಕ್ರಿ). = ಗೋೞಿಡಿಸು : ಬೇತಾಳದಂತೆನ್ನ ಗಾಳಿಸುವ ಗೋಳಿಸುವ ಖಲರು ಕೆಲರು (ನನಲ್ಲ. ೮-೯) ; ಪೊರಮಡು ಗೋಳಿಡಲೆಂದೇ ನೆರೆದನ್ನೀ ಕೆಟ್ಟ ಕಣ್ಗಳಂ ಗೋಳಿಸದಿರ್ (ಧ್ವನ್ಯಾಲೋ. ೧೫೭).

[ ಗೋಳು$_2$ (<ಗೋೞ್$_3$) + – ಇಸು$_3$ ]

**ಗೋಳಿಸು$_2$** 'ಘೋಳಿಸು' ನೋ.

**ಗೋಳಿಸುಂಡೆ** (ನಾ). ಒಂದು ಬಗೆಯ ಮೂಲಿಕೆ : "ಈಶ್ವರೀ–ಗೋಳಿಸುಂಡೆ, ಅವ್ವರಣೆ, ಮಡುವಾಗಲು, ರುದ್ರಜಟೆ" (ಓಷಧಿ. ೧೫). [ ? ]

**ಗೋಳಿಸೊಪ್ಪು, ಗೋಣಿಸೊಪ್ಪು** (ನಾ).=ಗೋಳಿಪಲ್ಯ: "ಗೋಲಿ(ೀ)– ಬಿಳಿಯಗಟಿಕೆ, ಗೋಳಿಸೊಪ್ಪು" (ಓಷಧಿ. ೫೦) ; ಲೋಣಿಕಾ (ಗೋಳಿಸೊಪ್ಪು) . . . ಇವೆಲ್ಲ ಮಧುರ (ಅಷ್ಟಾಂಗ. ೧೩೮). **ಗೋಣಿಸೊಪ್ಪು** : ಗೋಣಿ ಸೊಪ್ಪು, ಹಾಲಿಬಚ್ಚಲೆ (ಮೃಜಿಗ. ೬೪-೧೨೯೬); ಎಲೆಗಳು ದಪ್ಪವಾಗಿ ಕಾಂಡ ಮೃದುವಾಗಿರುವ ಗೋಣಿಸೊಪ್ಪು ಜನಪ್ರಿಯವಾಗಿದೆ (ತರಬೆ. ೧೭).

[ ಗೋಳಿ$_1$ + ಸೊಪ್ಪು$_3$ ]

**ಗೋಳೀಬಾರು** 'ಗೋಲಿಬಾರು' ನೋ.

**ಗೋಳು**$_1$ (ಕ್ರಿ). ಗೋರು ; ತಿವಿ ; ಹೊಡೆ (?) : ಗಟಿಯಿಂ ಗೋಳು ವರಿಂದ್ರನಂ ಗಿರಿಶನಂ ಸರ್ವಸ್ವಮಂ ಕೊಂಡು ಮುನ್ನುಟಿವರ ಕಂತುವ ನೀಯು[ರಂ]ತೆ ಕರೆಯರ್ (ಸೂಕ್ತಿಸು. ೪-೧೩೦). [ ? ]

**ಗೋಳು**$_2$ 'ಗೋಟ್$_3$' ನೋ.

**ಗೋಳು**$_3$ 'ಗೋಲು$_1$' ನೋ

**ಗೋಳು**$_4$ 'ಗೋಣ್' ನೋ.

**ಗೋಳುಂಡೆ** 'ಗೋಟುಂಡೆ' ನೋ.

**ಗೋಳುಂಡೆಗುಟ್ಟು** (ಕ್ರಿ). ಅಧಿಕವಾಗಿ ದುಃಖಿಸು,-ಚಿಂತಿಸು : ವ್ಯಥಾ ಗೋಳುಂಡೆಗುಟ್ಟದಿರೆನುತಲಾ ಭ ರ ತ ನ ನು ಬೀಳ್ಕೊಂಡು (ತೊರರಾ. ೩-೨-೭). [ ಗೋಳುಂಡೆ (<ಗೋಟುಂಡೆ) + ಕುಟ್ಟು$_1$ ]

**ಗೋಳುಂಡೆಗೊಳ್** 'ಗೋಟುಂಡೆಗೊಳ್' ನೋ.

**ಗೋಳುಂಡೆಗೊಳಿಸು** 'ಗೋಟುಂಡೆಗೊಳಿಸು' ನೋ.

**ಗೋಳು-ರೆ** 'ಗೋಟ್ಗಿಟಿ$_2$' ನೋ.

**ಗೋಳುಗರೆ** 'ಗೋಟ್ಗಿಟಿ$_1$' ನೋ.

**ಗೋಳುಗುಟ್ಟಿಸು** 'ಗೋಳ್ಗುಟ್ಟಿಸು' ನೋ.

**ಗೋಳುಗುಟ್ಟು** 'ಗೋಳ್ಗುಟ್ಟು' ನೋ.

**ಗೋಳುವೆ** (ನಾ).=ಗೋಳಿಪಲ್ಯ : ಲಶುನದ್ವಯಕ್ಕವರೆ ಗೋಳುವೆಗುಪ್ಪು . . . ಲವಣಕ್ಕೆ ತೊಳಂಚಿ ವಿಷಾಪಹಾರಕಂ (ಲೋಕೋಪ. ೮-೨೭) ; "ಕಿಱುಗೋಲಿ" (ಲೋಕೋಪ. ಟೀಕ). [ <ಗೋಳಿ$_1$? ]

**ಗೋಳುಹುಯ್** 'ಗೋಳುಹೊಯ್' ನೋ.

**ಗೋಳುಹೊಯ್, ಗೋಳುಹುಯ್** (ಕ್ರಿ). = ಗೋಳ್ಗುಟ್ಟಿಸು : ದೇವರ ದುಡ್ಡು ಹ್ಯಾಗಾದರೂ ಬರುವ ಹಾಗೆ ಮಾಡೀ ಅಂತ ಯಜಮಾನ ರನ್ನ ಗೋಳುಹೊಯ್ದು ಕೀಳಲಾರಂಭಿಸಿದ್ದಾರೆ (ಕಾಬಝೂ. ೪೦). **ಗೋಳು ಹುಯ್ :** ಈ ಮುಂದುಕೀನ ಯಾಕೋ ಗೋಳುಹುಯ್ಯಾಯ(ವೃದ್ಧವಿ. ೦೭). **ಗೋಳುಹೊಯ್ದುಕೊಳ್ಳು, ಗೋಳುಹುಯ್ದುಕೊಳ್ಳು** = ಕಾಡು ; ಪೀಡಿಸು : ಯಾಕೆ ಜನ ಬಂದುಬಂದು ಗೋಳುಹೊಯ್ದುಕೊಳ್ಳುತ್ತಾರೆ ? (ಗಂಮಾಯಿ. ೧೦೮) ; ಹಿಂದೆ ಅವರೆಲ್ಲರೂ ಸೀತೆಯನ್ನು ಗೋಳುಹುಯ್ದು ಕೊಂಡಿದ್ದರು (ಭಾರದ. ೯೧).

[ ಗೋಳು$_2$ (<ಗೋಟ್$_3$) + ಹೊಯ್$_1$ (<ಪೊಯ್$_1$) ]

**ಗೋಳೆ** (ನಾ). ಬಿದಿರಿನ ಮೇಲುಭಾಗ,-ತುದಿ : (+). [ ? ]

**ಗೋಳೆತ್ತು** (ಕ್ರಿ). ದುಃಖವನ್ನು ತೋಡಿಕೊಳ್ಳು ; ಗೋಳಾಡು : ಬಲ ಬೆಂಬೆತ್ತಿ ಕೊಲುತಿರೆ ಜಂಗಮರು ಗೋಳೆತ್ತಿದರು (ಬಿಜ್ಜ ಪು. ೦೦೩-೫೮).

[ ಗೋಳ್$_2$ (<ಗೋಟ್$_3$) + ಎತ್ತು$_1$ ]

**ಗೋಳ್ಗರೆ**$_1$ 'ಗೋಟ್ಗಿಟಿ$_1$' ನೋ.

**ಗೋಳ್ಗರೆ**$_2$ 'ಗೋಟ್ಗಿಟಿ$_2$' ನೋ.

**ಗೋಳ್ಗರೆತ** (ನಾ). ಗೋಳಾಟ ; ಅಳಂ : ಗೋಳ್ಗರೆತದ ಮಕ್ಕಳೊಡನಿದ್ದ ಹೆಂಗಸರು . . . ಬಂಡಿಗಳನ್ನೇರಿದರು (ಪುನರು. ४೩೭).

[ ಗೋಳ್ಗರೆ$_1$ (<ಗೋಟ್ಗಿಟಿ$_1$) + -ತ$_2$ ]

**ಗೋಳ್ಗುಟ್ಟಿಸು, ಗೋಳುಗುಟ್ಟಿಸು, ಘೋಳ್ಗುಟ್ಟಿಸು** (ಕ್ರಿ). ಕಾಡು ; ಪೀಡಿಸು ; ಗೋಳಾಡಿಸು : ಒಂದಿ ಗೋ[ಪಾಠಾಂ. ಘೋ]ಳ್ಗುಟ್ಟಿಸುವ ಕಾಳ್ಗಿಚ್ಚು ತಗುಳ್ವಲ್ಲಿ (ಸಾನಂಚ. ೪-೧೨೫ ರಗಳೆ). **ಗೋಳುಗುಟ್ಟಿಸು:** ವಿಷದ ಲಡ್ಡುಗೆ, ಅರಗಿನ ಮನೆ ಮೊದಲಾದುವುಗಳಲ್ಲಿ ಭೀಮನನ್ನು ಗೋಳು ಗುಟ್ಟಿಸಿ ಇಷ್ಟಕ್ಕೆ ತಂದೆಯಲ್ಲ (ಭಾಮುಚ. ೫೦). **ಘೋಳ್ಗುಟ್ಟಿಸು:** ಮೇಲಿನ 'ಸಾನಂಚ' ಪ್ರಯೋಗದ ಪಾಠಾಂತರವನ್ನು ನೋಡಿ.

[ ಗೋಳ್ಗುಟ್ಟು + - ಇಸು$_3$ ]

**ಗೋಳ್ಗುಟ್ಟು, ಗೋಳುಗುಟ್ಟು** (ಕ್ರಿ). ಗೋಳಾಡು ; ಅಳು : ತೊಂದರೆ ಗೊಳಗಾಗು. 'ಗೋಳ್ಗುಟ್ಟಿಸು' ಪರಾ. **ಗೋಳುಗುಟ್ಟು :** ಗೋಳು ಗುಟ್ಟಿತು ಪುರಜನಂಗಳು ಕೇಳು ಮಾತನು ಹೋದ ಬಲವದು ಸಾಲದೇ ಇನ್ನಾದರಬಲೆಯನಿತ್ತು ಬದುಕೆಂದ (ಕೌಶಿರಾ. ೨೩-೬) ; ಈ ವೇಳೆಗೆ ಅವನು ಗೋಳುಗುಟ್ಟುತ್ತಿರಬೇಕಾಗಿತ್ತು (ಸ್ವಾಮಿಸ್ಮೃ. ೯೩).

[ ಗೋಳ್$_2$ (<ಗೋಟ್$_3$) + ಕುಟ್ಟು$_1$ ]

**ಗೋಳ್ನುಡಿ** (ಕ್ರಿ). ಕಳವಳದಿಂದ ಮಾತನಾಡು ; ಗೋಳಾಡು : ಇದೇನು ಗ್ರಹಚಾರ ವಕ್ರಿಸಿತು-ಈ ಮುಂಜಾನೆಯಲ್ಲೇ ಎಂದು ಗೋಳ್ನುಡಿಯುತ್ತಾ . . . ಎದ್ದು ಕುಳಿತೆ (ರೂಪಸಂ. ೦೭).

[ ಗೋಳ್$_2$(<ಗೋಟ್$_3$) + ನುಡಿ$_1$ ]

**ಗೋಳ್ಮುರಿ** 'ಗೋಣ್ಮುರಿ$_2$' ನೋ.

**ಗೋಳ್ಮುರಿಗೊಳ್** 'ಗೋಣ್ಮುರಿಗೊಳ್' ನೋ.

**ಗೋಟ್**$_1$ (ನಾ). ಒಂದು ಅನುಕರಣ ಶಬ್ದ : ಬಸಿಱಿಂ ಮಾಣದೆ ವೋದಿ ಕೊಳ್ವ ದೆಸೆಗಳ್ ಗೋಟಿಂಬಿನಂ ವಿಪ್ಲಳಾಪಿಸುವತ್ಯಾಕುಳದಿಂ ಪೊರಳ್ವ . . . ದಾಸೀವೃಂದದಾಕ್ರಂದದೊಳ್ (ವರ್ಧಪು. ೯-೫೭).

**ಗೋಟ್**$_2$ 'ಗೋಣ್' ನೋ.

**ಗೋಟ್**$_3$, **ಗೋಳ್**$_2$, **ಗೋಳು**$_2$, **ಘೋಳ್, ಘೋಟ್** (ನಾ). ೧. ಅಳು ; ದುಃಖ : ಪಾಟ್, ಘೋಟ್, ತೋಟ್, ಗೋಟ್ (ಶಬ್ದಾನು. ೧४೦ ವ್ಯಾಖ್ಯಾ). 'ಗೋಟಿಡು' ಪರಾ. **ಗೋಳ್**$_2$ **:** ೧. ಗೋಳ್ಗರೆ', 'ಗೋಳ್ಗುಟ್ಟು' ಪರಾ. **ಗೋಳು**$_2$ **:** ೧. "ಗೋಳಿನಲ್ಕಳಲು" (ಕಶರ. ೦೨೩) ; ಎನ್ನ ಗೋಳು ತಾನೆ ನಾಶವೆಂದಿಗಹುದೊ (ಪುರಂದ. ೨-೮४-३) ; ಪೊಡವಿಪತಿ ಬಿಡು ನನ್ನ ಮನೆಯಲಿ ಮಡದಿಮಕ್ಕಳ ಗೋಳೆ [ಪಾಠಾಂ. ಸುತರುಮ್ಮಳವ] ನೋಡೆಂದೊಱಲಿತಾ ಪಕ್ಷಿ (ನಳಚ. ೨-೧೯). ೨. ಸಂಕಟ; ತೊಂದರೆ ; ವ್ಯಥೆ ; ಪೀಕಲಾಟ : ಅಂತೂ ಈ ಗೋಳು ತಪ್ಪಿದರೆ ಸಾಕು (ಕಾವೇರಿ. ೧೧೦) ; ಪ್ರೀತಿ ವಿಶ್ವಾಸಗಳೆ ಸಂಸಾರ ಸೌಖ್ಯದ ತಳಹದಿ. ಅದುವೆ ಇಲ್ಲದಿದ್ದ ಬಾಳು ಬರಿಗೋಳು (ಯಕ್ಷಪ್ರ. ೧೫೨). **ಘೋಳ್ :** ೧. 'ಘೋಳಿಡು' ಪರಾ. **ಘೋಟ್ :** ೧. 'ಘೋಟಿಡು' ಪರಾ.

[ ದೇ.॥ ತುಳು. ಗೋಳು, ಗೋಲು; ಕೊಡ. ಗೋಳಿ ; ತೆಲು. ಗೋಡು ]

**ಗೋಟ, ಗೋಳ**$_1$, **ಘೋಳ, ಘೋಟ** (ನಾ). ಕುದುರೆ. 'ಗೋಟಾ ಯಿಲ' ಪರಾ. **ಗೋಳ**$_1$ **:** 'ಗೋಳಾಯಿಲ' ಪರಾ. **ಘೋಳ :** 'ಘೋಳಾಯಿಲ' ಪರಾ. **ಘೋಟ :** 'ಘೋಟಾಯಿಲ', 'ಗೂಂಟು' ಪರಾ. [ <ಸಂ. ಘೋಟ ]

**ಗೋಟಯಿಲ** 'ಗೋಟಾಯಿಲ' ನೋ.

**ಗೋಟ್‌ಾಡು, ಗೋಳಾಡು** (ಕ್ರಿ). ಅಳು ; ದುಃಖಿಸು ; ಸಂಕಟಪಡು : ಕೋಟಿಯೊಳ್ ಮೂಢತೆಯಿಂ ಮುಟ್ಟಿಗಿ ನಿಂದು ಗುಣಮಿಲ್ಲದೆ ಗೋಟಾಡುವರಂ ಪಿಡಿದೆತ್ತುವೊಡಾಡುಂಬೊಲನಲ್ತೆ ಕರುಣೆಗೀ ವರದಕರಂ (ವಸ್ತುಮಂ. ೨-೯). **ಗೋಳಾಡು :** ಗೋಳಾಡಿ ಅಂತೂ ಇಂತೂ ಸಾಲಾ ತೀರಿಸಿ . . . ಮನೆಗೆ ಹೋದನು (ಹುಟ್ಟುಹ. ೧४೦) ; ಯಾರೂ ಇಲ್ಲವಲ್ಲಾ! ಎಂದು ಗೋಳಾಡಿದನು (ಪ್ರಮುಹ. ೫೦). [ ಗೋಟ್$_3$ + ಆಡು$_1$ ]

**ಗೋಟ್‌ಾಯಿಲ, ಗೋಳಾಯಿಲ, ಗೋಟಯಿಲ, ಗೋಟಾಯ್ಲ, ಗೋಟಿಯಿಲ, ಘೋಳಾಯಿಲ, ಘೋಳೆಯ್ಲ, ಘೋಟಯಿಲ, ಘೋಟಾಯಿಲ, ಘೋಟಾಯ್ಲ** (ನಾ). ಕುದುರೆಯ ಸವಾರ ; ರಾವುತ : "ಘೋಟಾರೂಢಂ=ಗೋಟಾಯಿಲಂ" (ಶಮದ. ೨೧ ಪ್ರಯೋ); ಜೋದರ ಗೋಟ್‌ಾಯಿಲರ ರಥಿಕರ ಕಾಲಾಳ್ಗಳ . . . ಪಡೆ ನಡೆಯುತು ವಿರ್ದುದು(ರಾಮಾಶ್ವ.೫೦-೯). **ಗೋಳಾಯಿಲ:** ಸಂಚಲಿಸದೇಱಿ ವಾಜಿಗಳ್

ತೋಱುತ್ತಿರ್ಪ ಗೋಳಾಯಿಲ ಮೆರ್ಱಿದರು (ಜೀರಮು. ೧೧-೪೪). **ಗೋಟಿಯಿಲ :** ಪಾಯಿಸಿ ಪೊಯ್ಕೆ ಗೋಟಿಯಿಲರೊರ್ವರನೊರ್ವರ್ (ಪಂಠಾಮಾ. ೧೩-೬೨). **ಗೋಟಾಯ್ಲ :** ಗೋಟಾಯ್ಲರ್ ಪರಿಯಿಪುದು ಮೊಂದೆ ನೇಱೊಳ್ ಪರಿವಂತಿರೆ ಪರಿದುವುಭಯಬಲದ ಹಯಂಗಳ್ (ಪಂಠಾಮಾ. ೧೩-೫೭); ಪರದರ ಪಾರ್ವರ ಗೋ[ಪಾಠಾಂ. ಘೋ]ಟಾಯ್ಲರ ಜೋದರ . . . ದಂಡಾಧೀಶರಾಲಯಂಗಳ್ ಮೆಱಿಗುಂ (ಜಗವಿ. ೨-೨೨). **ಗೋಟಿಯಿಲ:** ಗೋಟಿಯಿಲರ್ ಕಡುಕೆಯ್ದು ಕಾದಿದರ್(ಕಬ್ಬಿಕಾ. ೨೬೮). **ಘೋಳಾಯಿಲ:** ಸುರಮಯ ಝಲ್ಲಿಯ ಘೋಳಾಯಿಲನಲ್ಲ ಬಿರುದಿ ನುಪ್ಪುಡಿಪರ ನಡುವೆ ಮೆಱಿವಣಿಗೆಯೊಳೆಳ್ಳಪ್ಪ ಮನ್ನೆಯನಲ್ಲ (ಮದೀಪು. ೨೦-೬೨). **ಘೋಳಾಯ್ಲ :** ನಡೆವಣಿಗ ಘೋಳಾಯ್ಲ [ಪಾಠಾಂ. ಗೋಳ್ಯಾಲ] ಸೂಳಾಯ್ತಡಪವಳ ಬಳಿಗಾಱ . . . ಕಂಚುಗಾಱರ ಕೇರಿ ಮೆಱಿದಿಹವು (ಸಾಳ್ವಭಾ. ೨-೮). **ಘೋಟಿಯಿಲ :** ಒಡನೆ ಕಾಳಗ ಬಯಿಸಿದ ಘೋಟಿಯಿಲರ್ಪ್ಪಱಪಿಂಗೆ (ಎಕ. II, ೧೩೮-೬ : ಸು. 940) : ಅಱಿಕೆಯ ಗೋವರಣ್ಮಿ ಬರೆ ಪಾಯಿಸಿ ಘೋಟಿಯಿಲರ್ [ಪಾಠಾಂ. ಕಂಡು ಮಹಾರಥಕೋಟಿಗಳ್] ತಗುಳ್ದು (ಪಂಪಭಾ. ೮-೯೫). **ಘೋಟಾಯಿಲ :** "ಘೋಟಾಯಿಲನೆಂದು ರಾವುತಂ " (ಕಕಸಾ. ೧೭-೩೩೯) ; ಸಂಗ್ರಾಮಪ್ರಮುಖರಖಿಲಘೋಟಾಯಿಲರ್ ಮನೋಜವಜಾತ್ಯಶ್ವಂಗಳನೇಱಿ ಕದನ ಕ್ಷೋಣಿಗೆ ನಡೆದರ್ (ಪಂಠಾಮಾ. ೧೩-೨೯ ವ) ; ಬಲ್ಲಣಿ ಪಡಲ್ವಡೆ ಪಗೆಗಳೆಲ್ಲಂ ತಳ್ತಿಡಿದು ಮಡಿಯೆ ಘೋಟಾಯಿಲರಂತಲ್ಲಿ ಲಯಮಾಗೆ (ಪುಣ್ಯಾಸ್ರ. ೮-೨೪). **ಘೋಟಾಯ್ಲ :** ಘೋಟಾಯ್ಲರ್ ಪೊಳೆಯಿಸೆ ಬಿಸಿಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡ್ತುಗುದುರೆಗಳುಮಂ ( ಪಂಪಭಾ. ೧೦-೫೧ ವ) ; ಘೋಟಾರೂಢಂ-ಘೋಟಾಯ್ಲಂ, ಅಶ್ವೋಟಂ-ಅಶ್ವೋಟಂ (ಶಬ್ದಾನು. ೧೪೦ ವ್ಯಾಖ್ಯಾ).

[ ಗೋಟ + – ಆಯಿಲ೭ ]

**ಗೋಟಾಯ್ಲ** 'ಗೋಟಾಯಿಲ' ನೋ.

**ಗೋಟಿಗೆ, ಗೊಟ್ಟಿಗ್ಗೆ, ಗೋಳಿಗೆ, ಘೋಳಿಗೆ, ಘೋಟಿಗೆ (ನಾ).** ಹೆಣ್ಣು ಕುದುರೆ: ರಂಭೆ ಸುರಲೋಕವಮಂ ಬಿಟ್ಟು ವ್ಯತ್ತಿಕಾವತಿಯೆಂಬ ರಾಜಧಾನಿಯೊಳಿರ್ಪ ಶತಧ್ವನನೆಂಬರಸನ ಮನೆಯೊಳ್ ಗೋಟಿಗೆಯಾಗಿ ಪಲವುಕಾಲ ಮಿರ್ದಳ್ (ಕಾದಂಪೂ. ೪೬೦); ಘೋಟಿಕೆ=ಗೋಟಿಗೆ (ಶಮದ. ೨೦ ಪ್ರಯೋ); ತುರಗಕ್ಕಂ ಗೋಟಿಗೆಗಂ ಪರಿಕಿಸೆ ಬೇಱಿಲ್ಲ (ಅಶ್ವವೈ. ೫-೫೩) ; ತುರಗಕ್ಕಂ ಗೋಟಿಗೆಗಂ ಶರೀರಸಂಸ್ಥಾನಮಪ್ಪ ವಿಧಲಕ್ಷಣಮಂತೆರಡಕ್ಕಮೊಂದೆ (ಅಶ್ವಶಾ. ೧-೩೮). **ಗೊಟ್ಟಿಗ್ಗೆ₂ :** " ಗೊಟ್ಟಿಗೆ (ಘೋಳಿಗೆ) – ಘೋಟಿಕಾ = ಹೆಣ್ಣುಕುದುರೆ " (ತದ್ಭಕೋ. ೧೧). **ಗೋಳಿಗೆ :** ಗೋಳಿಗೆಯದಾಯ್ತಾ ತುರಗವಾಕ್ಷಣಕೆ (ನಿಭಾಗ. ೯-೧-೧೧) ; ಹೊಳೆವ ಗೋಳಿಗೆಯನಡರಿ ಮಿಕ್ಕ ಸ್ತ್ರೀಮ ಸೇವಕಿಯರೆಯ್ದಿದರು (ಭರಜ. ೨೦-೩೬). **ಘೋಳಿಗೆ:** "ಘೋಟಾ, ಘೋಟಿಕಾ ಈ ೨ ಘೋಳಿಗೆ" (ಕಾಶಕ್ಕ. ೨೩೦). **ಘೋಟಿಗೆ :** "ಅರ್ವಶೀ . . . ಪ್ರಸೂತಾ, ವಾಜಿನೀ–ಈ ೫ ಘೋಟಿಗೆ " (ಹಲಾಯು. ೬೨-೨೮೬).

[ < ಸಂ. ಘೋಟಿಕಾ ]

**ಗೋಟಿಡಿಸು, ಗೋಳಿಡಿಸು, ಘೋಳಿಡಿಸು (ಕ್ರಿ).** ಕಾಡು ; ಹಿಂಸಿಸು ; ತೊಂದರೆಕೊಡು; **ಗೋಳಾಡಿಸು:** ನಿಮ್ಮರಸನೇಕೆ ಗಳಾ ಮುನಿದೆನ್ನುಮಂ ಬಿಡಲ್ ಬಗೆದನಿದಲ್ತೆ ನಿಮ್ಮ ಸಮಯಂ ತಿಳಿಪಿಂ ಮೊಗಮಿತ್ತು ನೋಡಿಸಿಂ ನಗಿಸಿಮೆನುತ್ತೆ ಗೋಟಿಡಿಸಿದಂ ಮಿಗೆ ಮೇಳದ ವಂದಿವೃಂದಮಂ (ವರ್ಧಪು. ೯-೬೪) ; ವಜ್ರವೀರಂ ಧುರೋದ್ಧುರಶೌರ್ಯಂ ಬಿಡೆ ಕಾಡಿ ಗೋಟಿಡಿಸಿದಂ ಸ್ತ್ರೀಬಾಲರಂ ವೃದ್ಧರಂ (ಪಾರ್ಶ್ವಪು. ೨-೧೧). **ಗೋಳಿಡಿಸು :** ನೀವು ಸುಮ್ಮನೆ ಗೋಳಿಡಿಸಬೇಡಿ (ಕಾವೇರಿ. ೧೦೭). **ಘೋಳಿಡಿಸು :** ಸಾಲಿಡಲ್ ಶಿಬಿಕಣಂ ಬಾಣಮಂ ಪಿಡಿದಿಂತು ಘೋಳಿಡಿಸಿ ನಮ್ಮ ಬಲಮಂ ಕೊಂದು (ಜಬಪು. ೩೨-೫). [ ಗೋಟಿಡು + – ಇಸು₃ ]

**ಗೋಟಿಡು, ಗೋಳಿಡು, ಘೋಳಿಡು, ಘೋಟಿಡು (ಕ್ರಿ).** ೧. ಅಳು ; ದುಃಖಿಸು ; ಪ್ರಲಾಪಿಸು : " ಗೋಟಿಡು (ಗೋಟು + ಇಡು)– ಆಕ್ರೋಶಧ್ವನಾ " (ಶಮಧಾ) ; ದುಗುಲದ ಸೆಱಗಂ ಮೊಗಕ್ಕೆ ತೆಗೆದಾಗಳಿರದೆ ಗೋಟಿಟ್ಟಳ್ (ಕಾದಂಪೂ. ೯೫೮) ; ದಟ್ಟಡಿಯಿಡುವಂದೆ ವೈರಿಧರೆ ಗೋಟಿಡೆ (ಪುಷ್ಪಪು. ೪-೫೦). **ಗೋಳಿಡು :** ೧. ಸತಿಯರ್ವ್ವಿರೆ ಕೆಪ್ಪಂ ಕಟ್ಟಿ ಚಕ್ರವರ್ತ್ತಿಯ ಸಭೆಯೊಳು ಗೋಳಿಟ್ಟು ಸತಿಯರಂ ವೈಹಾಳಿಯ ನೇಱಿದನವಳ್ದಿರ ಡಾವಣಿಯಂ ಲೀಲೆಯೊಳೆ ಕಟ್ಟಿದಂ ಗುಣಬಳಂ ವಿಟಚಕ್ರವರ್ತ್ತಿ ವಿಭು ದೇವುರಸ (ಸೌಇಇ. IX-1, ೧೦೮-೪೩ : 1057) ; ಸಂಗನಂ ತಕ್ಕೈಸಿ ಪಳವಿಸಿ ಪಲುಂಬಿ ಗೋಳಿಟ್ಟು ಅಲಿಟ್ಟು ಸಿವದಿಟ್ಟು (ಬಸರ. ೪-೩೯) ; ಗೋಳಿಡುವ ಭಕ್ತರುಗಳಂ ಮಡಿವಾಳ ಮಾಚಯ್ಯಂ ನಿವಾರಿಸಿ (ಬಸಪು. ೩೭-೩೭) ; ಮಾದ್ರಿ ಮಿಗೆ ಹಲುಂಬಿದಳು ಗೋಳಿಡುತ (ಕುವ್ಯಾಆ. ೫-೧೯) ; ನನ್ನನ್ನು ಅನುಗ್ರಹಿಸಬೇಕು ಎಂದು ಬಹಳ ಬೇಡಿಕೊಂಡು ಗೋಳಿಟ್ಟನು (ಕಲಾಧ. ೭೭). **ಘೋಳಿಡು :** ೧. ಅಡಿಗಳಿಗೆ ತಾನೆಱಗುವಂ . . . ನಡುಗಿ ಘೋಳಿಡುತೇಳ್ವಂ (ಬಸಪು. ೪೭-೪೬) ; ಹೋಯೆಂದು ಘೋ[ಪಾಠಾಂ. ಗೋ]ಳಿಡುತಂಜಿ ಮುಟ್ಟದೇ ದೂರದಲಿ ನಿಂದಿಹರು ಹರಿಯೆ (ಪುರಂದ. ೧-೧೫೨-೧೧) ; ಮಿಗೆ ನೋವುತಲು ಘೋಳಿಡೆ ಕೇಳಿ ಬಂದುದು ಪುರಜನವ್ರಾತ (ಸಾಳ್ವಭಾ. ೧೮-೦೪). ೨. ಆರ್ಭಟಿಸು ; ಜೋರಾಗಿ ಶಬ್ದಮಾಡು ; ಗರ್ಜಿಸು : ಒದೆದು ಹಾಯ್ದುದು ಬಾಣ ಗಱಿದೋಱಿದುದು ಬದಿಯಲಿ ಕೊಡಹಿ ಘೋ[ಪಾಠಾಂ. ಗೋ]ಳಿಡುತದು ಧನಂಜಯನತ್ತ ಹೋದುದು ಹೊತ್ತ ಕಣೆ ಸಹಿತ (ಕುವ್ಯಾಆ. ೫-೪೪). **ಘೋಟಿಡು :** ೧. ನಾನಾ ವೇದನೋದ್ರೇಕಮಂ ತಳೆದಾ ನಾಯ್ ಬಡಪಟ್ಟು ದುಃಖದೊದವಿಂ ಬಾಯ್ವಿಟ್ಟು ಘೋ[ಪಾಠಾಂ. ಗೋ]ಟಿಟ್ಟು ಪೇಕುಳಿಗೊಂಡಾದ ವಿಷಾದದಿಂ ಪುಟಿಟಿತು ಸತ್ತಿತ್ತು (ಸುಕುಮಾ. ೫-೨೦) ; ಬಂದಿವಿಡಿದಡಂ ಘೋಟಿಟ್ಟಡಂ ಬೇವ ಕಿಚ್ಚಿನೊಳು ಬಿದ್ದಡಂ ಕೂಗಿಟ್ಟೊಡ ಮೆಂತುಂ ದೊರೆಕೊಳ್ಳದು (ಧರ್ಮಾಮೃ. ೬-೧೬೬ ಅಡಿಟಿ) ; ಬಳ್ಳಿ ಮೂಡ ಮೊಗದೂಳ್ದುದು ಮಂದಿರ ದೇವತಾಳಿ ಘೋಟಿಟ್ಟುದು ನಟ್ಟಿರುಳ್ ನೆಗೆದುದಿಂದ್ರುನ ಬಿಲ್ (ಜಗವಿ. ೧೨-೪) ; ತನ್ನೊಡತಿಯ ಮೊಗಕಮಲವನು ಒಡನೊಡನಿರದೆ ನಿರೀಕ್ಷಿಸಿ ಘೋಟಿಟ್ಟು ಕೆಡೆದು ಪ್ರಳಾಪಿಸುತಿರಲು (ಅಂಜಚ. ೧೦-೩೯). ೨. ಶಿರವಾಕಾಶತಳಕ್ಕೆ ಪಾಱಿ . . . ಅಟ್ಟೆ ಘೋಟಿಟ್ಟು ಮುರ್ವರೆಯೊಳ್ಪೊಟ್ಟನೆ ಬೆಟ್ಟು ಬೀಟ್ಟ ತೆಱದಿಂ ಬಿಟ್ಟಿತ್ತು ಚೇದೀಶನಾ (ಜಗವಿ. ೧೭-೫೩) ; ಬಳಗಿರ್ದ ಚಾರುದತ್ತನಾ ಕಾಲಂ ಪಿಡಿಯಲದು ಘೋಟಿಟ್ಟೊಱಲೆ (ಪುಣ್ಯಾಸ್ರ. ೪-೨೩ ವ). [ ಗೋಟ್₃ + ಇಡು₁ ]

**ಗೋಟುಂಡೆ, ಗೋಳುಂಡೆ (ನಾ).** ಮಿತಿಮೀರಿದ ದುಃಖ; ಅತಿ ಸಂಕಟ ; ಬಹಳ ಗೋಳಾಟ : ಮರಣಮನೆಯ್ದಿದ ಹರಿಣಾದಿ ವನಮೃಗಂಗಳ ಗೋಟುಂಡೆಯುಮಂ ನೆನೆನೆನೆದು ಕರಮುಟಿಲ್ದು . . . ಮುನೀಂದ್ರರಿಂತೆಂದರ್ (ವರ್ಧಪು. ೧೧-೫೪ ವ). **ಗೋಳುಂಡೆ :** 'ಗೋಳುಂಡೆಗೊಳ್' ಪರಾ. [ ಗೋಟ್₃ + ಉಂಡೆ? ]

**ಗೋಟುಂಡೆಗೊಳ್, ಗೋಳುಂಡೆಗೊಳ್ (ಕ್ರಿ).** ಬಹಳವಾಗಿ ಗೋಳಿಡು ; ಹಲುಬು ; ಪರಿತಪಿಸು : ಪ್ರತಾಪಕ್ಕಗುರ್ವಿಸೆ ಗೋಟುಂಡೆಗೊಳುತ್ತು ಮಿರ್ದುದು ದಿಶಾಚಕ್ರಂ (ಪಂಪಭಾ. ೧-೧೧೧) ; ಪೆಂಡಿರ ಪರಿಭವದಿಂದಂ ಪಾಂಡವರುಂ ರಾಮಚಂದ್ರನುಂ ವನದೊಳ್ ಗೋಟುಂಡೆಗೊಳುತಿರ್ದರವರೇಂ ಕಂಡರೆ ಮುಂ ದಿವ್ಯಮಪ್ಪ ಋಷಿಯರ ರೂಪಂ (ಧರ್ಮಾಮೃ. ೯-೪೧) ; ಅಗಣಿತ ಮೃಗನಿವಹಮನೀ ನಗರೀಮಧ್ಯಕ್ಕೆ ತಂದರಾರಿವು ಗೋಟುಂಡೆಗೊಳುತ್ತುಮಿರ್ದುವು (ನೇಮಿಪು. ೧೩-೫೬); ಪಾಂಡವರ್ ಕಂಡು ವಿರಾಟನಂ ಪೆಱಗಿಕ್ಕಿ ಮಾಱಾಂತರನಿಕ್ಕಿ ಕಾದುಘಾಗಳುಟಿದ ಬಲಂಗಳುಂ ಗೋಟುಂಡೆಗೊಂಡು ನಿಂದು ನೋಡಿ . . . ಇಂತೆಂಬರ್

(ಬಂಹರಿ. ೧೧-೪೩ ವ). **ಗೋಳುಂಡೆಗೊಳ್:** ದಿಗಧೀಶರ್ತ್ಮಮ್ಮತಮ್ಮಿರ್ದ್ದಡೆ ಯೊಳಗಿದ್ದಡಂಗಿರ್ಪ್ಪನಂ ಚೋಳಲಾಳಾದಿಗಳಾಟಂಗೊಂಡು ದುರ್ಗ್ಗಾಶ್ರಯ ದೊಳ್ ಸಕಳತ್ರಂ ಭಯಂಗೊಂಡು ಗೋಳುಂಡೆಗೊಳುತ್ತಿರ್ಪ್ಪನಂ (ಎಕ. V, ಬೇಲೂರು. ೧೭-೪೮ ; 1136) ; ತಾರಕನೂಳಿಗದಿಂದುರಗಮರ್ತ್ಯ ನಿರ್ಜರಲೋಕಂ ಗೋಳುಂಡೆಗೊಳುತುಮಿದೆ (ಗಿರಿಕ. ೬-೨೧).

[ ಗೋಟುಂಡೆ + ಕೊಳ್$_1$ ]

**ಗೋಟುಂಡೆಗೊಳಿಸು, ಗೋಳುಂಡೆಗೊಳಿಸು** (ಕ್ರಿ). ಅತಿಯಾದ ದುಃಖಕ್ಕೆ ಗುರಿಪಡಿಸು ; ಬಹಳವಾದ ಸಂಕಟಕ್ಕೀಡು ಮಾಡು : ಜವನ ಬಿಲ್ಲಾಳ್ತನವಮಂ ಪೇಟ್ವೊಡೆ . . . ರಾವಣನಂ ಧೂಮಂ ಸುತ್ತಿದಂತೆ ಜೀವಂಗಿಡಿಸಿ ಲಕ್ಷ್ಮಣನಂ ಮಕ್ಕಳ್ಗಿಟ್ಟರಂತೆ ಗೋಟುಂಡೆಗೊಳಿಸಿ . . . ನರಿಯಾಟವಾಡುವಂ (ಧರ್ಮಾಮೃ. ೬-೯೫). **ಗೋಳುಂಡೆಗೊಳಿಸು :** ಸುರರ ನೆಟ್ ಗೋಳುಂಡೆಗೊಳಿಸಿದೆ ತೊತ್ತುಗೆಯ್ಸಿದೆ ನೆರೆದ ಮರ್ಕಟರ (ಕಾಶಿರಾ. ೨೧-೫೨). [ ಗೋಟುಂಡೆಗೊಳ್ + – ಇಸು$_3$ ]

**ಗೋಟಿಯಿಲ** 'ಗೋಟಾಯಿಲ' ನೋ.

**ಗೋಟ್ಕುಱ್** 'ಗೋಟ್ಗುಱ್$_2$' ನೋ.

**ಗೋಟ್ಗುಱ್$_1$, ಗೋಗರೆ, ಗೋಳುಗರೆ, ಗೋಳ್ಗರೆ$_1$** (ಕ್ರಿ). ೧. ದುಃಖಿಸು; ಗೋಳಾಡು ; ಪ್ರಲಾಪಿಸು : ನರಲುವ ಪುಯ್ಯಲಿಡುವ ಕನವರಿಸುವ ಗೋಟ್ಗುಱಿದಟ್ಟ ಪಲುಂಬುವ ನುಡಿ (ಲೋಕೋಪ. ೦೩-೫೪) ; ನಾರಕರ್ಕಳ್ . . . ಗೋಟ್ಗುಱ್ [ಪಾಠಾಂ. ಗೋಣ್ಮುಱ್] ಯುತ್ತುಂ ಕೂಗಿಡುತ್ತುಂ ವೊಱೆಯಿಡುತುಮತಿಕ್ಲೇಶದಿಂ ಬರ್ದುಕಿರ್ಪರ್ (ವರ್ಧಪು. ೧೧-೨೮) ; ಪೊಡರ್ಪುಡುಗಿ ಕಡು ಭಯದೆ ಗೋಟ್ಗುಱಿದಡಿಮೊದಲೊಳ್ ಕೆಡೆದು ಮಾಯವಾಯ್ತಾ ವೃಷಭಂ (ಬಂಹರಿ. ೬-೨೭). **ಗೋಗರೆ: ೨.** ಮೊರೆ ಯಿಡು;ದೈನ್ಯದಿಂದ ಬೇಡಿಕೊಳ್ಳು: ರಾಜಣ್ಣ ಗೋಗರೆಯುವ ದನಿಯಲ್ಲಿ ಪ್ರಮೀಳಳನ್ನು ಪುಸಲಾಯಿಸತೊಡಗಿದ (ಮರಳಿ. ೫೭) ; ಗೋಗರೆವ ಕರೆವ ಮಾನಸವೆ ಬಾರ (ಮಾನಸ. ೨೫-೬). **ಗೋಳುಗರೆ : ೧.** ಗೋಳುಗರೆದ ಅನಂತ (ಒಡ್ಡಿಉ. ೧೨೩). **ಗೋಳ್ಗರೆ$_1$ : ೧.** ಹುಡುಗಿ ಗೋಳ್ಗರೆಯುತ್ತಿದ್ದ ತಾಯಿಯೆದುರಿಗೆ ನಿಂತುಕೊಂಡು , ಏನೋ ಸಮಾಧಾನೋಕ್ತಿಗಳನ್ನು ಸುರುತ್ತಿದ್ದಳು (ಪುನರು. ೨೪೨). [ ಗೋಟ್$_3$ + ಕಱ್$_1$ ]

**ಗೋಟ್ಗುಱ್$_2$, ಗೋಳುಕರೆ, ಗೋಳ್ಗರೆ$_2$, ಗೋಟ್ಕುಱ್** (ನಾ). ಗೋಳಿನ ಧ್ವನಿ ; ಅಳು; ಗೋಳಾಟ: ತಡೆಯಿರದ ಗೋಟ್ಗುಱಿಗಳನ್ ಆರುವೇನ್ ಕಿವಿಗುಡದ ಪುಯ್ಯಲನ್ ಮೊಗೆಮೊಗೆದು ಜಾಗರಂಗೆಯ್ವುದದು ಪಾಡು (ಬದ್ಧಪ್ರ. ೨-೩೭). **ಗೋಳುಕರೆ :** ಸಂತಸದ ರಾಗವನೆ ಎದೆಯುಲಿಯದು ಗೋಳುಕರೆಯೊಂದುಲಿವುದು (ಇಂಗೀತ. ೫೮-೦೩) ; ಎಲ್ಲೆಲ್ಲಿ ನೋಡಿದರೂ ಗೋಳುಕರೆ (ಕಲ್ಲಿಕಾ. ೫೧). **ಗೋಳ್ಗರೆ$_2$ :** ಈ ಗೋಳ್ಗರೆಯಿಂದ ಏನು ಪ್ರಯೋಜನ ? (ಪುನರು. ೨೫೭). **ಗೋಟ್ಕುಱ್ :** ನೆಲನ್ ತಾನ್ . . . ಮಾರ್ಮೊಳಗುವ ಗೋಟ್ಕುಱಿಯಿನ್ ನರಲನೆತ್ತಿ ಅಟಲ್ವುದು (ಬದ್ಧಪ್ರ. ೨೨-೪೭೦). [ < ಗೋಟ್ಗುಱ್$_1$ ]

**ಗೋಟ್ಗಿಡೆ** (ಕ್ರಿ) . ಗೋಳುಕರೆ; ಬಿಕ್ಕೋ ಎನ್ನು: ಉರುಳ್ದತ್ತು ಸಿಂಹಾಸನಂ ಗೋಟ್ಗಿಡೆದತ್ತಾಳಾನಮುಕ್ಕಿತ್ತೆಸವ ಕಸವರಂ . . . ನಡನಡನಡುಗಿತ್ತಾತ ನೇಱುರ್ದ ಮಾಡಂ (ಅರ್ಧನೇ. ೬-೭೪). [ ಗೋಟ್$_3$ + ಕೆಡೆ$_1$ ]

**ಗೋಟ್ಮುರಿ** 'ಗೋಣ್ಮುರಿ$_2$' ನೋ.

**ಗೋಟ್ಮುರಿಗೊಳ್** 'ಗೋಣ್ಮುರಿಗೊಳ್' ನೋ.

**ಗೌಉಡ** 'ಗಾಮುಂಡ' ನೋ.

**ಗೌಂಜು** (ನಾ). ಒಂದು ಬಗೆಯ ಪಕ್ಷಿ ; ಗೌಜಲಹಕ್ಕಿ : ಹರಡೆ ಗೌಂಜು ಬಕನು ಪಿಕಶಿಖಿಯಂಚೆಗಳ ಗಿರಿರಾಜನೋಲಗವೆಸೆಯೆ (ಅಮುಶಾಂ. ೧-೪೧).

[ <ಕವಿಂಜ ]

**ಗೌಂಟಿಕೆ** 'ಗೊಂಟಿಕೆ' ನೋ.

**ಗೌಂಟಿಗೆ** 'ಗೊಂಟಿಕೆ' ನೋ.

**ಗೌಂಡ** 'ಗಾಮುಂಡ' ನೋ.

**ಗೌಂಡಿ$_1$** 'ಗಾವುಂಡಿ' ನೋ.

**ಗೌಂಡಿ$_2$** (ನಾ). ಗಾರೆಕೆಲಸದವನು ; **ಉಪ್ಪಾರ :** ಹಗಲು–ರಾತ್ರಿಯೆನ್ನದೆ ಬಡಿಗರು, ಕಮ್ಮಾರರು, ಗೌಂಡಿಗಳು ತೆರಪಿಲ್ಲದೆ ದುಡಿಯುತ್ತಿದರು (ಮುಳ್ಳುಬೇ. ೧೩) ; ಈಗಿಂದೀಗ ಗೌಂಡಿಯನ್ನು ಕರೆಸಿ ಸಾರಣೆ–ಕಾರಣೆಯ ಕೆಲಸ ಪ್ರಾರಂಭಿಸಬೇಕು (ರಾಯಜಾ. ೧೨೮).

[ ← ಮರಾ. ಗೌಂಡೀ, ಗವಂಡೀ ]

**ಗೌಂಡು** 'ಗಾಮುಂಡ' ನೋ.

**ಗೌಂಡುಂಬಳಿ, ಗಉಡುಂಬಳಿ, ಗೌಡುಂಬಳಿ** (ನಾ). ಗೌಡಿಕೆಗೆ ಪ್ರತಿಫಲ ವಾಗಿ ಕೊಟ್ಟ ಮಾನ್ಯ,–ಉಂಬಳಿ : ತಳವಾರಿಕೆಗೆ ಸಲುವ ಅಂಬಲಿ ವುಡುಗೊರೆ ಗೌಂಡುಂಬಳಿ ಸಹವಾಗಿ ಆ ನಾಯಕವಾಡಿಗಳು ಕೊಡುವಹ ಹುಟ್ಟುವಳಿ (ಎಕ. VII, ಶಿವಮೊ. ೭೧-೩೦ ; 1431). **ಗಉಡುಂಬಳಿ :** ಹಣವಿನ ಸೇಸೆಯ ಲೆಖ್ಖದಲ್ಲು ಗ ೭೬೪ ಗಉಡುಂಬಳಿ॥ (ಮೈಆರಿ. ೧೯೩೪, ೨೭-೦೭ ; 1430) ; ಸಉಸಗ್ರಾಮದಲ್ಲಿ ಗಉಡುಂಬಳಿಯಾಗಿ . . . ಪಾಲಿಸಿ ಕೊಂಡದು (ಎಕ. VI, ಮೂಡಗೆ. ೮೪-೬ ; 1675). **ಗೌಡುಂಬಳಿ :** ಶುಧ ಭತ ಖ ೫೫ ಕೆ ಗ ೬ ॥ ೩ ॥ ಗೌಡುಂಬಳಿಯಿಂದ ಪ್ರಭವ ಸಂವತ್ಸರದಲು ಹೆಚಿದ (ಎಕ. VIII, ತೀರ್ಥಹ. ೬-೧೮೫ ; 1665).

[ ಗೌಂಡು (< ಗಾವುಂಡ) + ಉಂಬಳಿ ]

**ಗೌಜಲ್‌ಮರ** (ನಾ). ಒಂದು ಬಗೆಯ ಮರ: ಗೌಜಲ್‌ಮರ, ಕವುಲುಮರ . . . ಹೆಣ್ಣುಮತ್ತಿ (ಮೃಜೀಗಿ. ೧೮-೩೧೯). [ ಗೌಜಲ್? + ಮರ$_1$ ]

**ಗೌಜಲವಕ್ಕಿ, ಗೌಜಲಹಕ್ಕಿ** (ನಾ). ಒಂದು ಬಗೆಯ ಸಣ್ಣ ಹಕ್ಕಿ; ಗೌಜು: ಗೌಜಲವಕ್ಕಿಯ ಕಾಳಗವನು ಬಲುವೋಜಿನಿಂದಲಿ ಮಾಡಿಸುವರು (ಕಂನವಿ ೬-೧೪). **ಗೌಜಲಹಕ್ಕಿ :** ಪಾರಿವಾಳ, ಗೌಜಲಹಕ್ಕಿ, ಲಾವಕನಹಕ್ಕಿ . . . ಇದ್ದವು (ಒಡಕ. ೫೫): ಕೆಲವರು ಸಿಪಿಲೆ, ಗೌಜಲಹಕ್ಕಿಗಳ ಕಾಳಗವನ್ನಾಡು ತ್ತಿರುವರು (ಕರ್ನಾಜ. ೧೬೦). 'ಕವಿಂಜ' ಪರಾ.

[<ಗೌಜಲು + ಪಕ್ಕಿ$_1$]

**ಗೌಜಲಹಕ್ಕಿ** 'ಗೌಜಲವಕ್ಕಿ' ನೋ.

**ಗೌಜಲು** 'ಕವಿಂಜ' ನೋ.

**ಗೌಜಿ** 'ಗೌಜು$_1$' ನೋ.

**ಗೌಜು$_1$, ಗವುಜಿ, ಗವುಜು$_1$, ಗೌಜಿ** (ನಾ). ೧. ಸಡಗರ ; ಸಂಭ್ರಮ : ಈ ಸಾರಿ ಹಬ್ಬದ ' ಗೌಜು ' ಅಷ್ಟಿಲ್ಲವಾದರೂ ಮಾಮೂಲಾಗಿ ಕಟ್ಟಳೆಯ ಪ್ರಕಾರ ಹಬ್ಬ . . . ನಡೆಯಿತು ( ನಿಸದು . ೨೫) ; ಆಮಂತ್ರಿತ ಜನರೆಲ್ಲ ಬಂದಿದ್ದಾರೆ ; ಎಲ್ಲೆಡೆಯಲ್ಲಿಯೂ ಗೌಜೀ ಗೌಜು (ತೀವೋಡ. ೪೫). ೨. ಗದ್ದಲ ; ಗೊಂದಲ ; ಗಲಾಟೆ : ಶೇಖರನು . . .ಎಲ್ಲರೂ ಕುಳಿತಲ್ಲಿಗೆ ಹೋಗಿ ನಿಂತುಕೊಂಡ ಕೂಡಲೆ ಗೌಜು ಶಾಂತವಾಯಿತು (ಪರಿಣೀ. ೬೬) ; ಪೋಲೀಸರು ಅವನನ್ನು ದರದರ ಎಳೆದರು. ರಸ್ತೆಯಲ್ಲಿ ಗೌಜಾಗಿ ಜನರ ಗುಂಪು ಸೇರಿತು (ತಿಂಮುಕ. ೧೭). **ಗವುಜಿ: ೨.** ಆ ಕೂಸಿಂದು ಬಂಗಾರೈತೀಂತ ಊರ ಜನಕ್ಕೆ ತಿಳಿದ್ರೆ ಇಲ್ದಿದ್ದ ಗವುಜಿ ಎಬ್ಬಿಸ್ತಾವ್ರೆ (ಹಾಹುತ್. ೬೧). **ಗವುಜು$_1$ : ೨.** ಆಗ್ಗೆ ನನಗೆ ಏನಾಯಿತೊ, ಏನು ತೋಚಿತೊ ದೇವರೇ ಬಲ್ಲ. ಮತ್ತೆ ಚಪ್ಪರದ ಗವುಜು ನನಗೆ ಕೇಳಿಸಲಿಲ್ಲ (ಕಂನಾಸಾ.೧); ನರಕ ದೊಳಗೆ ಸ್ಥಳವು ಸಿಕ್ಕುವುದು ಶಕ್ಯವೇ ಇಲ್ಲ ; ಅಲ್ಲಿ ನಿಮ್ಮಂಥವರ ಗವುಜೇ ಗವುಜು (ಎರಸಿ. ೬೫); ಗವುಜು ಏನೂ ಇಲ್ಲ ಗೋವಿಂದಭಟ್ಟ ಬಾವೀಲಿ ಬಿದ್ದ (ಗಾದೆ). **ಗೌಜಿ : ೧.** ಅಂದು ಮಂಗಳೂರುಮಲ್ಲಿಗೆಯ ಗೌಜಿಯನು ನೋಡಬೇಕು ಹೆಂಗುಸರ ಗುಂಪುಗಳಲ್ಲಿ ! (ಪರಾವ. ೪೪) ; ಇನ್ನು ದಪ

ಗೌಜ ಎಂಬ ಮಾತೇ ಅವನ ಪಾಲಿಗೆ ಇಲ್ಲವಾಗಿತ್ತು (ದೇವಹಂ. ೨೪೨). ೨. ಹಾಗೆ ಬೊಬ್ಬೆಹಾಕುವಾಗ ನಾಲ್ಕು ಜನ ಇದೇನು ಗೌಜಿ ಎಂದು ನೋಡಲಿಕ್ಕೆ ಬರುತ್ತಾರೆ (ಕುರುಕಾ. ೬೫). ೩. ಗೊಡವೆ; ತಂಟೆ: ಗೋಪಿ, ಸುಮಿತ್ರೆ ತನಗೆ ಬೇಡ ಎಂದು ಹೇಳಿದರೂ, ನಿನಗೆ ಮದುವೆಯ ಗೌಜಿ ತಪ್ಪಲಿಲ್ಲ (ಅನುರ. ೬೦). 'ಗೋಜು₁' ಪರಾ. [ದೇ.॥ ತುಳು. ಗೌಜಿ ]

**ಗೌಜು₂** 'ಕವಿಂಜ' ನೋ.

**ಗೌಟಿಕೆ** 'ಗೊಂಟಿಕೆ' ನೋ.

**ಗೌಟಿಕೆಗಟ್ಟು** 'ಗೆಂಟಿಗೆಗಟ್ಟು' ನೋ.

**ಗೌಡ₁** 'ಗಾವುಂಡ' ನೋ.

**ಗೌಡ₂** (ನಾ). ೧. ಒಂದು ದೇಶದ ಹೆಸರು; P ಈಗಿನ ಬಂಗಾಳವನ್ನು ಒಳಗೊಂಡ ಉತ್ತರಭಾರತದ ಪ್ರದೇಶ: ಗೌಡ ಗುರ್ಜರ ತುರುಕದೇಶದ ಪ್ರಭೃತಿ ಭೂಪರು ನೆರೆದು ಬಂದಲ್ಲಿ (ಜ್ಞಾನಚಂ. ೩-೧೧); ಗೌಡದೇಶದ ರಾಯನಿವನೆನೆ ಹಳ್ಳಿಯ ಗೌಡನೆಂದೆಣಿಸಿ ಸಾಗಿದಳು (ಭರಚ. ೫೫-೯೩). ೨. = ಗೌಡಮಾರ್ಗ: ದಂಡಿಯ 'ಕಾವ್ಯಾದರ್ಶ' ದಲ್ಲಾದರೆ ಮೊದಲನೆಯ ಪರಿಚ್ಛೇದದ ಬಹುಭಾಗವು ವೈದರ್ಭ, ಗೌಡ ಎಂಬ ಎರಡು ಕಾವ್ಯಮಾರ್ಗಗಳ ವಿಭೇದವನ್ನು ಪ್ರತಿಪಾದಿಸುವುದಕ್ಕೇ ಮೀಸಲಾಗಿದೆ (ಭಾರಮೀ. ೨೯). 'ಗೌಡಿ₂' ಪರಾ. ೩. [ಸಂಗೀತ] ರಾಗಜಾತಿಗಳಲ್ಲಿ ಒಂದು: ಶುದ್ಧ, ಭಿನ್ನ, ಗೌಡ, ಅಷ್ಟಸಾಧಾರಣ, ಸಪ್ತಸಾಧಾರಣ, ಷಟ್ಸ್ವರವೆಂಬಾಱು ಸಾಧಾರಣಜಾತಿಗಳು (ವಿವೇಕ. ೨೩೩). [ಸಂ.]

**ಗೌಡಪಟ್ಟು** (ನಾ). ಒಕ್ಕಲಿಗರ ಜಾತಿ; ಗೌಡರ ಪಂಗಡ: ದೊರೆಗಳವರು ಆ ಸಂಗಳ ಬಂಧುಗಳಲ್ಲಿ ಕೆಲವರು ಸ್ನಾನ ಸಂಧ್ಯಾವಂದನೆಗಳನ್ನೂ ಮಾತಾ ಪಿತೃ ಶ್ರಾದ್ಧಗಳನ್ನೂ ಬಿಟ್ಟು ಗೌಡಪಟ್ಟು ಸಂಬಂಧವನ್ನು ಮಾಡಿದುದನ್ನೂ ಮತ್ತೆ ಕೆಲವರು ಇದೇ ಪರಿಯಾಗಿ ಬಡಜಾತಿ ಸಂಬಂಧವನ್ನು ಮಾಡಿ ಬೆರೆದಿರುವುದನ್ನೂ ಚೆನ್ನಾಗಿ ಪರಾಂಬರಿಸಿ ವಿಚಾರಣೆಮಾಡಿ (ಮಹಾವಂ. I, ೧೨೯). [ಗೌಡ₁ (< ಗಾವುಂಡ) + ಪಟ್ಟು₂ (< ಪಟ್ಟ)]

**ಗೌಡಬಂಗಾಲ, ಗೌಡಬಂಗಾಳ** (ನಾ). ೧. ಗೌಡದೇಶದೊಳಗಿರುವ ಬಂಗಾಲ. ೨. (ಆಲಂ) ಕೂಟರಚನೆ; ಕುಯುಕ್ತಿ; ಕುತಂತ್ರ; ಮೋಸ: ಕೊಲೆಯ ಆಧಾರಗಳು ಅವನ ಹತ್ತಿರವೇ ದೊರೆತರೆ – ಆ ಗೌಡಬಂಗಾಲದ ಬಗ್ಗೆ ಅವನಿಗೆ ಹುಚ್ಚು ಹಿಡಿಯಲಿಕ್ಕಿಲ್ಲವೆ? (ತುಬ್ಬಣ್ಣ. ೧೦೭). **ಗೌಡಬಂಗಾಳ**: ೩. "ಮೋಡಿಗಾರ; ಮಾಟಗಾರ" (ಜಾನಕೋ. ೫೨). [ಗೌಡ₂ + ಬಂಗಾಲ]

**ಗೌಡಬಂಗಾಲಿ** (ಗು). ೧. ಕುಯುಕ್ತಿಯಿಂದ ಕೂಡಿದ; ಮೋಸದ: ಈ ಬಂಗಾಲೀಚಿತ್ರಕ್ಕೆ ಈ ಗೌಡಬಂಗಾಲೀ ವಿಮರ್ಶೆ ಹೊಂದಿಕೆಯಾಗುತ್ತದೆ (ನಿರಾಳ. ೬೩). (ನಾ). ೨. ಚಮತ್ಕಾರ; ಇಂದ್ರಜಾಲ: ಇದೇನು ಗೌಡ ಬಂಗಾಲಿ ಎಂಬುದೇ ನನಗೆ ಹೊಳೆಯದಾಯಿತು (ಸ್ಮೃತಿಚಿ. ೧೫೭).

[ಗೌಡ₂ + ಬಂಗಾಲಿ]

**ಗೌಡಬಂಗಾಳ** 'ಗೌಡಬಂಗಾಲ' ನೋ.

**ಗೌಡಮಾರ್ಗ** (ನಾ). [ಕಾವ್ಯಮೀ] ಕಾವ್ಯರಚನೆಯ ಮಾರ್ಗಗಳಲ್ಲಿ ಒಂದು; ದೀರ್ಘವಾದ ಸಮಾಸಗಳಿಂದಲೂ ಶಬ್ದಾಡಂಬರದಿಂದಲೂ ಕೂಡಿದ ಕಾವ್ಯರಚನೆಯ ಶೈಲಿ: ವೈದರ್ಭಗೌಡಮಾರ್ಗವಿಭೇದಂ ಬಗೆವೊಡೆ ಗತಾನುಗತಿಕಮಿದೆಂದೊಲ್ಲಾದರಿಪರ್ (ಕಾವ್ಯಾವ. ೫೨೨).

[ಗೌಡ₂ + ಮಾರ್ಗ]

**ಗೌಡರೀತಿ** (ನಾ). = ಗೌಡಮಾರ್ಗ: ಅತಿದೀರ್ಘಸಮಾಸಾಂಚಿತಗತಿಶಬ್ದಾಡಂಬರಾನುವಿದ್ಧಂ ಕ್ರೋಧಾದ್ಭುತರೌದ್ರವೀರರಸಸಂಗತಮಂತದು ಗೌಡ ರೀತಿ ಪರುಷಪ್ರಾಯಂ (ಕಾವ್ಯಾವ. ೬೮೬). [ಗೌಡ₂ + ರೀತಿ]

**ಗೌಡಿ₁** 'ಗಾವುಂಡಿ' ನೋ.

**ಗೌಡಿ₂** (ನಾ). ೧. ಕಾಕಂಬಿಯಿಂದ ಭಟ್ಟಿಯಿಳಿಸಿದ ಮದ್ಯ. ೨. [ಕಾವ್ಯಮೀ] ಕಾವ್ಯದ ಮೂರು ರೀತಿಗಳಲ್ಲಿ ಒಂದು: ಗೌಡಿ, ವೈದರ್ಭಿ, ಪಾಂಚಾಲಿಯೆಂಬ ರೀತಿತ್ರಯಂಗೂಡಿ (ವಿವೇಕ. ೨೩೬); ಓಜೋ ವ್ಯಂಜಕವಾದ ವರ್ಣಗಳಿಂದಲೂ ದೊಡ್ಡ ದೊಡ್ಡ ಸಮಾಸಗಳಿಂದಲೂ ಕೂಡಿರುವ, ಆಡಂಬರವುಳ್ಳ ಮತ್ತು ಬಿಗಿಯಾದ ಪದರಚನೆ 'ಗೌಡಿ' (ಕೈಪಿಡಿ. ೨೨೨). [ಸಂ. ಗೌಡೀ]

**ಗೌಡಿಕೆ** 'ಗಾವುಂಡಿಕೆ' ನೋ.

**ಗೌಡಿತಿ** 'ಗಾವುಂಡಿತಿ' ನೋ.

**ಗೌಡೀರೀತಿ** (ನಾ). = ಗೌಡಮಾರ್ಗ: ಶ್ಲೇಷಪ್ರಸಾದಾದಿ ಹತ್ತು ಗುಣಗಳೂ ಇರುವುದು ವೈದರ್ಭೀರೀತಿಯೆಂದೂ, ಗೌಡೀರೀತಿ ಪ್ರಾಯಃ ಇದಕ್ಕೆ ವಿರುದ್ಧವಾಗಿರುವುದೆಂದೂ ದಂಡಿಯು ಹೇಳಿದ್ದಾನೆ (ಕೈಪಿಡಿ. ೨೨೧).

[ಸಂ. (ಗೌಡೀ + ರೀತಿ)]

**ಗೌಡು** 'ಗಾವುಂಡ' ನೋ.

**ಗೌಡುಂಕೆ** (ನಾ). = ಗೌಂಡುಂಬಳಿ: ಪ್ರಥಮಸ್ಥಳಸಂಜಾತವಾದ ಹಳಿಕಾಱ ಹರವಾಗಿ ಗೌಡುಂಕೆಯಾಗಿ ಅರಮನೆ ತೆಱುವಾರುಗಳನೂ ಉಂಡಿಗೆಯ ಕಿರುಕೊಳ ಸಲ್ಲ (ಸೌಇಇ. IX-ii, ೪೩೩-೫೬; 1408).

[ಗೌಡ₁ (<ಗಾವುಂಡ) + ಉಂಕೆ?]

**ಗೌಡುಂಬಳಿ** 'ಗೌಂಡುಂಬಳಿ' ನೋ.

**ಗೌಡುಮಾನ್ಯ** (ನಾ). = ಗೌಂಡುಂಬಳಿ: ನಾಗಗಾವುಂಡನು ಮೊದಲೂರ ಗೌಡು ಮಾನ್ಯದೊಳಗೆ ತಂನ ಗೌಡುಮಾನ್ಯಂ ಕಡಲೆಯವಳನ ಹರಳ ಹಸುಗೆಯಲಿ (ಮುಂಬರಾ. X, ೨೬೯-೭೦; 1229). [ಗೌಡು (<ಗಾವುಂಡ)+ಮಾನ್ಯ]

**ಗೌಣ** (ಗು). ೧. ಪ್ರಧಾನವಲ್ಲದ; ಅಮುಖ್ಯವಾದ: ಶಿಕ್ಷಣದಲ್ಲಿ ದಂಡನೆಗೆ ಸ್ಥಾನವಿದೆ. ಆದರೆ ಅದು ಗೌಣವಾಗಿದೆ (ರಂಗರೋ. ೫೭); ತಮ್ಮ ಇಷ್ಟಾನಿಷ್ಟಗಳು ಯಾವುವಿದ್ದರೂ ಅದಕ್ಕೆ ಗೌಣ ಸ್ಥಾನವನ್ನು ಕೊಟ್ಟು . . . ಸಮಾಜ ಮರ್ಯಾದೆಗಳಿಗೆ ಪ್ರಥಮ ಪ್ರಾಶಸ್ತ್ಯವನ್ನು ಕೊಟ್ಟು ನಡೆದು ಕೊಳ್ಳುತ್ತಿದ್ದರು (ವಾರಾಕ್ಕ. ೨೯). ೨. [ಕಾವ್ಯಮೀ] ಆಲಂಕಾರಿಕವಾಗಿ ಹೇಳಿದ; ಲಾಕ್ಷಣಿಕವಾದ; ವಾಚ್ಯಾರ್ಥದ ಸಂಬಂಧದಿಂದ ಹೊರಡುವ: ಮುಕುಳನನಿಮೀಳನಂಗಳ್ ವಿಕಾಸಹಾಸ ಪ್ರಬೋಧನೋನ್ಮೇಷಂಗಳ್ ಪ್ರಕಟಿಸುಗುಮೈಕ್ಯಮಂ ನಿರ್ವಿಕಲ್ಪದಿಂ ಗೌಣಮುಖ್ಯವೃತ್ತಿಕೃತಂಗಳ್ (ಕಾವ್ಯಾವ. ೯೧೪). (ನಾ). ೩. ಕೀಳಾದುದು; ಲೆಕ್ಕಕ್ಕಿಲ್ಲದುದು: ಸ್ತ್ರೀ ನೀರು ಕುಡಿವ ನಲ್ಲಿಯು ಸಹ ತಿಮ್ಮನಿಗೆ ಗೌಣ (ಹುಚ್ಚುಹು. ೩೮). ೪. ಕುಂದು; ಊನ; ದೋಷ: ಆ ಹುಡುಗೆಯ ಮದುವೆ ಯಾಕೆ ಆಗಲಿಲ್ಲ . . . ಅಲ್ಲಿ ಏನಾದರೂ ಗೌಣ ಇರಲೇಬೇಕು (ಈಪಸೊ. ೫೩); ಪ್ರಿಯಪತಿಯ ವಿಯೋಗದಲ್ಲಿ ಜೀವದಿಂದಿರುವದು ಸತೀಧರ್ಮಕ್ಕೆ ಗೌಣ ವಾಗಿರುವದು (ಪದ್ಮನ. ೧೦೭). [ಸಂ.]

**ಗೌಣತ್ವ** (ನಾ). ಅಮುಖ್ಯತೆ; ಮಹತ್ವವಿಲ್ಲದಿರುವಿಕೆ: ವ್ಯಕ್ರಿಯಕಾಹಾರ ಕಂಗಳ್ಗಂ . . . ಅಲೋಕಾಂತಂಬರಂ ಸಲವಿಲ್ಲಪ್ಪುದಱಿಂ ಅವಕ್ಕೆ ಗೌಣತ್ವ ಮೆಂದಱಿವುದು (ತತ್ತ್ವಾಪ್ರ. ೧೦೭); ಆದಿಶಕ್ತಿ: ಮಾತೆ ಎಂಬ ಅನುಭಾವ ದಲ್ಲಿ, ಪುರುಷಶಕ್ತಿಯ ಗೌಣತ್ವವು ಸ್ಪಷ್ಟವಿದೆ (ಕರ್ನಾಟ. ೪೩). [ಸಂ.]

**ಗೌತ** (ನಾ). ವೈಶ್ಯಜಾತಿಯ ಎಳಗ, ಗೌತ, ಇಭ್ಯ ಎಂಬ ಮೂರು ವರ್ಗಗಳಲ್ಲಿ ಒಂದು; ಭಾರಿ ಶ್ರೀಮಂತ; ತುಂಬ ಹಣವಂತ: ಉತ್ತುಂಗ ವೃಷಭಮಂ ತಾನುತ್ತಮನೇಱಿರ್ದು ಕನಕಮಂ ಪುಂಜಿಸಿ ನೋಡುತ್ತಿರೆ ರಾಶಿಯ ಮಱೆಯಿಂದತ್ತಣರು ಕಾಣದನಿತಱೊಡೆಯಂ ಗೌತಂ [ಪಾಠಾಂ. ಗೋಪಂ] (ಜೀವಸಂ. ೧೦೫-೧೯); "ವರ್ತಕವಿಶೇಷ" (ಜೀವಸಂ. ಕೋಶ). P 'ಗೋಪ' ಎನ್ನುವ ಪಾಠಾಂತರವೇ ಹೆಚ್ಚು ಸ್ವೀಕಾರಾರ್ಹ. [?]

**ಗೌತಮ** (ನಾ). ೧. ಸಪ್ತಋಷಿಗಳಲ್ಲಿ ಒಬ್ಬ : ಗೌತಮ ಭೃಗು ದಧೀಚಿ ವ್ಯಾಸ ಮುನಿವರರ ಸ್ಥೂಲ ಶಾಪಾನಲದಿನುರಿದು (ಬಸಪು. ೩-೬೭). ೨. ಬುದ್ಧ : ನಾನು ಪೂಜ್ಯ ಗೌತಮನಿಗೆ ಶಿರಸಾ ಮಾಡಿದ ಅಭಿವಾದನೆ ಯೆಂದು ಸ್ವೀಕರಿಸಬೇಕು (ಬುದ್ಧ.ಪ. ೧೨೯). [ಸಂ.]

**ಗೌತಮಿ** (ನಾ). ಗೋದಾವರಿನದಿಯ ಮತ್ತೊಂದು ಹೆಸರು : ದುರಿತ ಗಣಮಿರ್ದಪುದೆ ಗೌತಮಿಯೊಳಾಳ್ದಂಗೆ (ಜೈಮಿಭಾ. ೨೦-೧೩). [ಸಂ. ಗೌತಮೀ]

**ಗೌತಳಿ** (ನಾ). ವ್ಯಾಪಾರಸ್ಥರ ಸಂಘ : ಗೊಜ್ಜ ಗೌತಳಿಗಳು ಬಿಟ್ಟ ಆಯ ಚೈತ್ರಕ್ಕೆ ವೀಸ ಪವಿತ್ರಕ್ಕೆ ವೀಸ (ಸೌಇಇ. IX-1, ೩೦೭-೪೫ ; 1223). [<ಕೊತ್ತಟಿ]

**ಗೌದ** (ನಾ). ಒಂದು ಅಗ್ರಹಾರದ ಹೆಸರು : ಶ್ರೀಮದನಾದಿಯಗ್ರಹಾರಂ ಗೌದದ ಮೂವತ್ತಿರ್ಚ್ಛಾಸಿರ ಅಶೇಷ ಮಹಾಜನಂಗಳ್ಗೆ (ಎಕ. VII, ಶಿಕಾರಿ. ೯೬-೧೦ ; 1027). [?]

**ಗೌದಾನಿಕ** (ನಾ). ಷೋಡಶ ಸಂಸ್ಕಾರಗಳಲ್ಲಿ ಒಂದು ; ಗೋದಾನ : ಗರ್ಭಾಧಾನ, ಪುಂಸವನ, ಸೀಮಂತ, ಜಾತಕರ್ಮ . . . ಗೌದಾನಿಕ ಸ್ನಾತಕ, ವಿವಾಹ . . . ಎಂಬ ಷೋಡಶಕರ್ಮಂಗಳೊಡನೆಯುಂ (ವಿವೇಕ. ೫). [ಸಂ.]

**ಗೌದಾಳಿಕ** (ನಾ). ಬೇಸಾಯಂಗಾರ : ಕಾಲಕಾಲವನರಿತು ಮಿಗೆ ಗೌದಾಳಿಕಂ ಬೆಳೆಗೈದ ಕಬ್ಬಿನಕೋಲು ಡೊಂಕಿದಡೇನು ತದ್ರಸದಿಂಪು ಡೊಂಕಹುದೇ (ಆನಂರಾ. ೧-೦-೧೧). [<ಸಂ. ಕುದ್ದಾಲ]

**ಗೌಧಾರ** (ನಾ). ಉಡ : "ಗೌಧೇರಃ, ಗೌಧಾರಃ, ಗೌಧೇಯಃ–ಈ ೩ ಉಡುವಿನ ಹೆಸರುಗಳು, ಉಡ" (ಸಿದ್ಧಾಂತಿ. ೧೩೫) ; ವರಾಹ ವ್ಯಾಘ್ರ ಗೌಧಾರ ಸಿಂಧುರ (ಯಾದವ. ೪-೫೪). [ಸಂ.]

**ಗೌಧೂಮ** (ನಾ). ಗೋದಿಯ ಹಿಟ್ಟು : ಯವ ಗೌಧೂಮ ವ್ರೀಹಿ ತಂಡುಲ ಗುಡ (ವಿವೇಕ. ೧೩೫). [ಸಂ.]

**ಗೌಧೇಯ** (ನಾ).=ಗೌಧಾರ : "ಗೌಧೇರಃ, ಗೌಧಾರಃ, ಗೌಧೇಯಃ–ಈ ೩ ಉಡುವಿನ ಹೆಸರುಗಳು, ಉಡ" (ಸಿದ್ಧಾಂತಿ. ೧೩೫). [ಸಂ.]

**ಗೌಧೇರ** (ನಾ). ೧. ಉಡಂ. ೨. ಉಡಂವಿನ ಮರಿ : "ಗೌಧೇರಮೆಂಬುದು ಉಡುವಿನ ಮಱಿ" (ಹಲಾಯು. ೩೯-೮೦) ; "ಗೌಧೇರಮೆನೆ ಮಱಿಯುಡು ವೆನಿಕ್ಕು" (ಮಂಗರಾ. ೪೯-೧೦). [ಸಂ.]

**ಗೌನು** (ನಾ). ಅರಸು, ನ್ಯಾಯಾಧಿಪತಿ, ವಕೀಲ ಮೊದಲಾದವರು ಧರಿಸುವ ಉದ್ಯೋಗಸೂಚಕವಾದ ಬೇರೆಬೇರೆ ರೂಪಗಳ ನಿಲುವಂಗಿ : ಎಲಿಜಬೆತ್ತಳ ಗೌನು ಚುಂಗೆತ್ತಲು ಬೇಕಿಡಿ ಲಂಡನ್ ಟೌನು (ನವ್ಯಧ್ವ. ೯೦) ; ನ್ಯಾಯಾಲಯದಲ್ಲಿ ವಾದಮಾಡುವಾಗ ವಕೀಲರು ಗೌನನ್ನು ಧರಿಸಬೇಕು (ರೂಢಿ). [←ಇಂ. Gown.]

**ಗೌಪ್ಯ** (ನಾ). ಗುಟ್ಟು ; ರಹಸ್ಯ ; ಗೂಢವಾದುದಂ : ಜ್ಯೋತಿಷ್ಯಶಾಸ್ತ್ರದ ಕಲೆಯ ಗೌಪ್ಯವು ಬೇರೆಯವರಿಗೆ ಗೊತ್ತಾಗದಂತೆ ನೋಡಿಕೊಳ್ಳುವದೂ ಅವರ ಸಿದ್ಧಿಗೆ ಒಂದು ಕಾರಣವಾಗಿತ್ತು (ಹೇಮಂತ. ೧೪೦) ; ಗೌಪ್ಯವಾಗಿ ಒಂದೆಡೆ ಚಿಂತಿಸುತ್ತಾ, ತಲೆಬಾಗಿ ಕೂಡುವುದು ಕಂಡು ಬರುವುದು (ಶಿಕ್ಷದ. ೩೬೭). [ಸಂ.]

**ಗೌರ** (ಗು). ೧. ಬಿಳಿಯ ; ಬಿಳುಪಾದ : ಶಂಕನ ಕೀರ್ತಿಪ್ರಭೆಯಿಂದಂ ಕಾಮಿನಿ ಭೂಮಿ ಗೌರರುಚಿಯಿಂದೆಸೆದೇಂ ಶಂಕಿನಿಯಾದಳೊ (ಎಕ. VII, ಶಿಕಾರಿ. ೧೯೨-೨೫ ; 1182 ?). (ನಾ). ೨. ಬಿಳಿಯ ಬಣ್ಣ : "ಗೌರಃ, ಶ್ವೇತಃ . . . ಪಾಂಡುರಃ–ಈ ೧೨ ಬಿಳಿದು" (ಹಲಾಯು. ೧೨೧-೪೭); ಶ್ವೇತ ಪೀತ ಹರಿತ ಕಪೋತಕೃಷ್ಣ ಗೌರ ಮಾಂಜಿಷ್ಠ ಕಪಿಲ ಕರ್ಬುರ ಆಳಗ ಬೊಟ್ಟಳಗ ಇಂತೀ ದಶವರ್ಣದ ಪಶುನಾಮದ ಅನುವನಱಿತು (ತುಉಂಗಾ. ೫-೦೨). ೩. ನಸುಗೆಂಪು ಬಣ್ಣ. ೪. ಹೊಂಬಣ್ಣ ; "ಹಳದಿಬಣ್ಣ" (ಅಮರ. ಟೀಕ). ೫. ಚಂದ್ರ. ೬. ತಾವರೆಯ ಕುಸುರು ; ಪದ್ಮಕೇಸರ. ೭. ಬಿಳಿಯ ಸಾಸುವೆ. ೮. ಒಂದು ಬಗೆಯಂ ಎಮ್ಮೆ ; ಕಾಡೆಮ್ಮೆ. [ಸಂ.]

**ಗೌರಮ್ಮ** (ನಾ). ೧. ಪಾರ್ವತಿ ; ಗಿರಿಜೆ : ಈ ದಿವಸ ಗೌರಮ್ಮನ ಪೂಜೆ (ರೂಢಿ). ೨. ಕಣದಲ್ಲಿ ರಾಗಿ ಮೊದಲಾದ ಧಾನ್ಯದ ಜೊತೆಯಲ್ಲಿ ಬರುವ ಮಣ್ಣು : ರಾಗಿಯಲ್ಲಿ ಗೌರಮ್ಮ ಜಾಸ್ತಿ (ರೂಢಿ). 'ಬಸವಣ್ಣ' ಪರಾ. [ಗೌರಿ + ಅಮ್ಮ]

**ಗೌರವ** (ಗು). ೧. ಗುರುವಿಗೆ ಸಂಬಂಧಿಸಿದ : ಗೌರವಲ್ಯೆಂಗಿಕಾದಿ ನಿಯಮ ವ್ರತ ಧರ್ಮವೆನಿಪ್ಪ ದರ್ಪಣದ್ವಾರದಿ ನಿಟ್ಟಿಸಲ್ (ಶತಕ. ೧೭-೨೨). (ನಾ). ೨. ಭಾರ ; ಒಜ್ಜೆ. ೩. ದೊಡ್ಡತನ ; ಹಿರಿಮೆ : ಆದಂ ಪಂಚಮಿ ಯಪ್ಪುದು . . . ಹೇತುವಿನೊಳುದಯದೊಳ್ ಗೌರವದೊಳ್ (ಶಮದ. ೧೩೦). ೪. ಪ್ರಾಮುಖ್ಯತೆ ; ಶ್ರೇಷ್ಠತೆ ; ಘನತೆ : ಸುರರು ಪೂಮಳೆಯ ಗರೆಯೆ ಗೌರವವೆರೆಯುತ (ಗಗತಾ. ೧೯-೪೪). ೫. ಹಿರಿಯರನ್ನು ಸ್ವಾಗತಿಸಲು ಎದ್ದು ನಿಲ್ಲುವುದು : "ಅಭ್ಯುತ್ಥಾನಂ, ಗೌರವಂ – ಈ ೨ ಇದಿರೇಳ್ವುದು" (ಹಲಾಯು. ೧೨೮-೯೩) ; ಆತನಿಗೆ ಅರ್ಘ್ಯಪಾದ್ಯಗಳನ್ನು ಕೊಡಿಸಿ ಗೌರವಮಾಡಿ (ಪಚಭಾ. ೫೭). ೬. ಮರ್ಯಾದೆ ; ಆದರ : ವೇದಗಳು, ರಾಮಾಯಣ, ಮಹಾಭಾರತ–ಈ ಮೂರೂ . . . ಸಮಾನ ಗೌರವಪಾತ್ರಗಳೆಂದೂ ಭಾರತೀಯರು ನಂಬುವರು (ಭಾರದ. ೯೩). ೭. ಹಿರಿಯ ; ಘನತೆಯುಳ್ಳವನು : ಈ ಗಿರಿಯೊಳು ನಾವು ನಡುವಿಹೆವಿಮ್ಮಿಂದ ಮೇಗೆ ಪರ್ವತದ ಮೇಲೆಸೆವ ನಾಗೇಂದ್ರನಿಭನೀತ ವಿಜಯಾರ್ಧ ದೇವನೆಂದಾ ಗೌರವನ ಕಾಣಿಸಿದರು (ಭರತೇ. ೩೮-೨೭). ೮. [ಜೈನ] ಅಹಂಕಾರ. 'ಗೌರವತ್ರಯ' ಪರಾ. [ಸಂ.]

**ಗೌರವತ್ರಯ** (ನಾ). [ಜೈನ] ಶಬ್ದಗೌರವ, ಋದ್ಧಿಗೌರವ ಮತ್ತು ಸಾತಗೌರವ ಎಂಬ ಮೂರು ಬಗೆಯ ಅಹಂಕಾರಗಳು ; ವ್ಯಕ್ತಿಗೆ ತನ್ನ ಧ್ವನಿಯಿಂದಲೂ ಐಶ್ವರ್ಯದಿಂದಲೂ ಮತ್ತು ಆರೋಗ್ಯದಿಂದಲೂ ಬರುವ ಮೂರು ಬಗೆಯ ಅಹಂಕಾರಗಳು : ಗತಗೌರವತ್ರಯಂ . . . ಅಪಗತಶಲ್ಯತ್ರಯನನಾಪ್ತ ಗುಪ್ತಿತ್ರಿತಯಂ (ಪುಷ್ಪಪು. ೧೪-೦೫). [ಗೌರವ + ತ್ರಯ]

**ಗೌರವದೋಷ** (ನಾ). [ಛಂದ] ಲಘುವಿರಬೇಕಾದ ಕಡೆ ಗುರುವನ್ನಿಡುವುದರಿಂದಾಗುವ ದೋಷ : ಗುರುಗಳಲ್ಲದ ತಾಣದೊಳಂ ಗುರುರೂಪ್ಯೋಗದಿಂ ಬಗೆಗೆ ಗೌರವದೋಷಮಿದೆಂಬುದಂ (ಕವಿರಾ. ೧-೧೨೬). [ಗೌರವ+ದೋಷ]

**ಗೌರವಧನ** (ನಾ). ಸಂಬಳವಿಲ್ಲದೆ ಕೆಲಸಮಾಡುವವರಿಗೆ ಗೌರವಸೂಚಕವಾಗಿ ಕೊಡುವ ಹಣ ; ಸಂಭಾವನೆ : ಅವರಿಗೆ ಸಾಕಷ್ಟು ಪ್ರಮಾಣದ ಗೌರವಧನವನ್ನು ಕೊಡುವುದಾಗಿ ಕಂಪನಿಯವರು ಒಪ್ಪಿದ್ದರು (ವಂಶವೃ. ೭೧). [ಗೌರವ + ಧನ]

**ಗೌರವಪದವಿ** (ನಾ). ವಿಶ್ವವಿದ್ಯಾನಿಲಯ ಮೊದಲಾದ ಕಡೆಗಳಲ್ಲಿ ಗೌರವ ಸೂಚಕವಾಗಿ ಕೊಡುವ ಪದವಿ (Honorary Degree. ಪತ್ರಿನಿ. ೩೦). [ಗೌರವ + ಪದವಿ]

**ಗೌರವಪ್ರಶಸ್ತಿ** (ನಾ).=ಗೌರವಪದವಿ : ಟಿಸ್ಲರನ ಯಶಸ್ಸು ಮತ್ತು ಕೀರ್ತಿ ಎಲ್ಲೆಡೆಯೂ ಹಬ್ಬಿ, ಗೌರವಪ್ರಶಸ್ತಿಗಳು ಅವನ ಮೇಲೆ ಮಳೆಕರೆಯ ಲಾರಂಭಿಸಿದವು (ಸಸ್ಯಕ. ೮೦). [ಗೌರವ + ಪ್ರಶಸ್ತಿ]

**ಗೌರವರಕ್ಷೆ** (ನಾ). ಗೌರವಸೂಚಕವಾಗಿ ನೀಡುವ (ಸೈನಿಕ ರೀತಿಯ) ನಮಸ್ಕಾರ ; ಗೌರವದಿಂದ ಮಾಡುವ ವಂದನೆ : ಗದ್ದೆಯ ಬಯಲಿಗೆ ಬಂದಿಳಿದೆಮ್ಮೆಯ ನೋಡಿ . . . ಕೊಕ್ಕರೆ ದಂಡೊಂದು ಗೌರವರಕ್ಷೆಯ ಸಲಿಸುತಲಿಹುದೊಂದುಗೂಡಿ (ಇಂಚಾಪ. ೧೪೯-೩೧). [ಗೌರವ + ರಕ್ಷೆ]

**ಗೌರವರ್ಣ** (ನಾ). ೧. ಬಿಳಿಯ ಬಣ್ಣ. ೨. ಹೊನ್ನಿನ ಬಣ್ಣ; ಹೊಂಬಣ್ಣ: ರುಕ್ಮಿಣಿ, ಗೌರವರ್ಣದ . . . ಸುಂದರಳಾದ ರಮಣಿ (ಪ್ರಕಾಶ. ೨). [ಗೌರ + ವರ್ಣ]

**ಗೌರವರ್ಣಿನಿ** (ನಾ). ಬೆಳ್ಳನೆಯ ಮೈಬಣ್ಣದವಳು: ಘನತೀವ್ರತೇಜನಂ ಮಾನಿನಿ ಗರ್ಭದೊಳಾಂತು ಗೌರವರ್ಣಿನಿ ಮಧ್ಯಂದಿನರವಿಯಂ ಮಧ್ಯದೊಳಾಂತು ನಿಂದ ಶರದಭ್ರಲೇಖೆವೊಲ್ ಸೊಗಯಿಸಿದಳ್ (ಜಗವಿ. ೨-೮೪). [ಸಂ. ಗೌರವರ್ಣಿನೀ]

**ಗೌರವವಾಚಕ** (ನಾ). ಗೌರವಸೂಚಕವಾಗಿ ಪ್ರಯೋಗಿಸುವ ಬಹುವಚನ ಪದ: ಬ್ರಾಹ್ಮಣರೂ ಕೂಡ ಅರಸುಮಕ್ಕಳು ಚಿಕ್ಕವರಾದರೂ ಅವರನ್ನು ಗೌರವ ವಾಚಕದಲ್ಲಿ ಸಂಬೋಧಿಸಿ ಮಾತನಾಡುತ್ತಿದ್ದರು (ತಿಂಗಾಳ್ಕ. ೨). [ಗೌರವ + ವಾಚಕ]

**ಗೌರವಸಂಭಾವನೆ** (ನಾ). (ಸಂಬಳಕ್ಕೆ ಪ್ರತಿಯಾಗಿ) ಗೌರವಾರ್ಥವಾಗಿ ಕೊಡುವ ಹಣ,-ಸಂಭಾವನೆ: (ವೃತ್ತಿಸಂಬಂಧದ ಕೆಲಸಕ್ಕಾಗಿ ಕೊಡುವ) ಗೌರವಸಂಭಾವನೆ (Honorarium. ಇಂಕನಿ). 'ಗೌರವಧನ' ಪರಾ. [ಗೌರವ + ಸಂಭಾವನೆ]

**ಗೌರವಸದಸ್ಯ** (ನಾ). (ಸದಸ್ಯತ್ವದ ನಿಯಮಗಳು ಅನ್ವಯಿಸದಿದ್ದರೂ) ಗೌರವಾರ್ಥವಾಗಿ ಸದಸ್ಯತ್ವದ ಮನ್ನಣೆಯನ್ನು ಪಡೆದಿರುವವನು: ಅನೇಕ ದೇಶಗಳ ವಿಜ್ಞಾನ ಸಂಘ ಸಂಸ್ಥೆಗಳ ಗೌರವ ಸದಸ್ಯನಾಗಿ ಆರಿಸಲ್ಪಟ್ಟನು (ಸಸ್ಯಕ. ೮೦). [ಗೌರವ + ಸದಸ್ಯ]

**ಗೌರವಾನ್ವಿತ** (ಗು). ೧. ಗೌರವದಿಂದ ಕೂಡಿದ; ಮಾನ್ಯತೆಯುಳ್ಳ: (ನಾ). ೨. ಗೌರವದಿಂದ ಕೂಡಿದವನು; ಮಾನ್ಯ: ರಾಯರು ಅನೇಕ ಕಾರಣಗಳಿಂದ ನಮ್ಮೂರಿನಲ್ಲಿ ತುಂಬಾ ಗೌರವಾನ್ವಿತರಾಗಿದ್ದಾರೆ (ರಾಯಕ. ೧೦೦). [ಗೌರವ + ಅನ್ವಿತ]

**ಗೌರವಿಸು** (ಕ್ರಿ). ಗೌರವವನ್ನು ತೋರು; ಆದರಿಸು: ಪೈಗಂಬರನೂ ಇತರ ಮುಸ್ಲಿಮರೂ ಇವರನ್ನು ಗೌರವಿಸುತ್ತಿದ್ದರು (ಇಸ್ಲಾಂಸಂ. ೨೪೩). [ಗೌರವ + -ಇಸು$_3$]

**ಗೌರಹಂಸ** (ನಾ). ಬಿಳಿಯ ಬಣ್ಣದ ಹಂಸ: ಗೌರಹಂಸಪ್ರವರನ ಮೇಲಬ್ಜಾಗರುಚಿಯೆನಿಪಬ್ಜೋದ್ಭವನೇಂ ಬೆಳಗುತ್ತಿರ್ದನೊ (ಜಗವಿ. ೧-೩೬). [ಗೌರ + ಹಂಸ]

**ಗೌರಾಂಗ** (ನಾ). ೧. ಬಿಳಿಯ ಮೈಬಣ್ಣವುಳ್ಳವನು. ೨. ಬಂಗಾಲದ ಒಬ್ಬ ಸಂತ; ಕೃಷ್ಣಚೈತನ್ಯದೇವ. ೧, ೨: ದೇಹದ ಗೌರಕಾಂತಿಯಿಂದ ಇವನಿಗೆ ಗೌರಾಂಗನೆಂದೂ ಹೆಸರು (ಭಾರದ. ೨೮೯). [ಗೌರ + ಅಂಗ$_2$]

**ಗೌರಾಂಗಿ** (ನಾ). = ಗೌರವರ್ಣಿನಿ: ಅವಳು ಅಷ್ಟೊಂದು ಗೌರಾಂಗಿಯಲ್ಲ (ಕಪಾಕುಂ. ೪೩). [ಸಂ. ಗೌರಾಂಗೀ (ಗೌರ + ಅಂಗ + -)]

**ಗೌರಿ** (ನಾ). ೧. ಮೈನೆರೆಯದವಳು; ಎಳೆಯ ಪ್ರಾಯದವಳು: ಬಾಲತ್ವಮುಳಿದು ಗೌರಿಯರಾಗಿ ಪೊಸಜವ್ವನಂಕುರಿಸಿ ಮೊಳೆದೋರಲು (ನವಮೋ. ೨೨-೩೪). ೨. ಪಾರ್ವತಿ: "ಗಿರಿಜೆ ರುದ್ರಾಣಿಯಂಬಿಕೆ . . . ಶಿವಯುಮೆಯೆನಲು ಗೌರಿಯಕ್ಕುಂ" (ಮಂಗರಾ. ೪-೧೨); ಗೌರಿಯ ನೋನುವ ಬನ್ನಿರೆ (ಬಸವ. ೮೭). 'ಗೌರೀಕಾಂತ' ಪರಾ. ೩. ಬೆಳ್ಳನೆಯ ದೇಹಕಾಂತಿಯುಳ್ಳವಳು. ೨, ೩: ಅಲ್ಲಿ ಪ್ರಮದೆಯರು . . . ಗೌರಿಯರು ಮತ್ತು ವಿಭವಾನುರಕ್ತೆಯರು (ಭ್ರಸ್ಮಾಲೋ. ೯೪). ೪. ಗೋರೋಚನ: "ಗೌರಿ ಗೋಪಿತ್ತೆಯೆನೆ ಗೋರೋಚವುಕ್ಕು" (ಮಂಗರಾ. ೯೯-೨೦). ೫. ಒಂದು ಬಗೆಯ ಗಿಡ: "ಗೌ[ಪಾಠಾಂ. ಸೌ]ರಿ ಗೊಟ್ಟಕ್ಕೆ ಪನ್ನಂಗಿಯೆನೆ ನೆಲಬೇವು" (ಮಂಗರಾ. ೪೪-೪೫). [ಸಂ. ಗೌರೀ]

**ಗೌರಿಕುಲ** (ನಾ). ಒಂದು ಬಗೆಯ ಜೋಳ: ಪಟ್ಟಣಸಾಳಿ, ಗೌರೀಕುಲ, . . . ಹಲಕೆಲವು ಸಾಲುಗಳಾಗಿ ಬಿತ್ತುವರು (ಕಭಾಗ. ೨೭೦). [?]

**ಗೌರಿಜಡೆ, ಗೌರಿಯಜಡೆ** (ನಾ). ಒಂದು ಬಗೆಯ ಗಿಡ: "ಭೂಜಟಿಯೆನಲು ಗೌರಿಜಡೆ" (ಮಂಗರಾ. ४೦-೩३). **ಗೌರಿಯಜಡೆ:** ಮಕ್ಕಳ ರೋಗಕ್ಕೆ:- ಗೌರಿಯ ಜರ್[ಡೆ]ಯ ಹತ್ತುಬೇರು ತಂದು ಕುಟ್ಟಿ . . . ಮಗುವಿನ ಮೈತುಂಬಾ ಪೂಸಿ (ವಿಶ್ವವಿ. ೮೯). [ಗೌರಿ + ಜಡೆ$_2$]

**ಗೌರಿಣಿ** (ನಾ). ಬೆಳ್ಳಗಿರುವವಳು: ಶಾರದೆಯ ಸುಕುಮಾರಿ ಬ್ರಹ್ಮಿಣಿ ಸಾರಸೆಯ ಸುಪವಿತ್ರ ಗೌರಿಣಿ (ಬಿಜ್ಜಪು. ೩-೧೧). [ಸಂ. ಗೌರಿಣೀ]

**ಗೌರಿತದಿಗೆ** (ನಾ). ಭಾದ್ರಪದಶುದ್ಧತದಿಗೆ ಮತ್ತುಅಂದು ಆಚರಿಸುವ ವ್ರತ: ಗೌರಿತದಿಗೆಯಂದು ಪೂಜೆಮಾಡಿ ಮುತ್ತೈದೆಯರನ್ನೆಲ್ಲ ಕರೆಯಬೇಕು (ರೂಢಿ). [ಗೌರಿ + ತದಿಗೆ]

**ಗೌರಿನೋಂಪಿ** (ನಾ). ಗೌರಿಯನ್ನು ಕುರಿತು ಮಾಡುವ ಒಂದು ವ್ರತ: ಜೈನ ಮಹಿಳೆಯರು ಗೌರಿನೋಂಪಿಯನ್ನು ಮಾಡುತ್ತಾರೆ (ಭಾರದ. ೧೬೩). [ಗೌರಿ + ನೋಂಪಿ]

**ಗೌರಿಬಳ್ಳಿ** (ನಾ). ಒಂದು ಬಗೆಯ ಬಳ್ಳಿ: ಕರೇಹಂಬು, ಗೌರಿಬಳ್ಳಿ, ಹಾಲುಗೆಣಸು (ಮೃಜಿಗಿ. ೯೫-೮೮೯). [ಗೌರಿ + ಬಳ್ಳಿ]

**ಗೌರಿಬೀಜ** (ನಾ). ಒಂದು ಬಗೆಯ ಸಸ್ಯ: ಗೌರಿಬೀಜ, ಕೊಳ್ಳಿಬೀಜ (ಮೃಜಿಗಿ. ೯೬-೯೦೦). [ಗೌರಿ + ಬೀಜ]

**ಗೌರಿಮ** (ನಾ). ಬಿಳಿಯ ಬಣ್ಣ: ಗರ್ಭಸ್ಥನಪ್ಪ ಶೌರಿಯ ನಿರ್ಭರ ಸರಸಪ್ರಕಾಶಮಿಾಜನನಿಯೊಳಾವಿರ್ಭವಿಸಿದುದೆನೆ ತನುಸಂದರ್ಭಿತ ಗೌರಿಮದಿನೆಸೆದುದವೆ ದೇವಕಿಯಾ (ಜಗವಿ. ೨-೮೯). [ಸಂ. ಗೌರಿಮನ್]

**ಗೌರಿಮರ** (ನಾ). ಒಂದು ಬಗೆಯ ಮರ: ಗೌರಿಮರ, ಹಬ್ಬೆ (ಮೃಜಿಗಿ. ೬೩-೧೨೮೪). [ಗೌರಿ + ಮರ$_1$]

**ಗೌರಿಮುಡಿ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು: ಹುಚ್ಚೆಳ್ಳು, ಗೌರೀಮುಡಿ, ಚೆಂಡುಹೂಗಳಂಥ ಬಣ್ಣಬಣ್ಣದ ಹೊಗಳಿಗೆ ಬಡತನವೇ ಆ ಎರೆಯಲ್ಲಿ? (ಬೆಳುಮು. ೧೩). [?]

**ಗೌರಿಯಜಡೆ** 'ಗೌರಿಜಡೆ' ನೋ.

**ಗೌರಿಸಣ್ಣಕ್ಕಿ** (ನಾ). ಒಂದು ಬಗೆಯ ಅಕ್ಕಿ: ನೆಲ್ಲುಬೀಜದಲ್ಲಿ ಬಹಳ ಉತ್ತಮ ಪ್ರತಿಯಾದ ಸೂಜಿಯ ಹಾಗೆ ಸಣ್ಣಾದ, ಗಂಧವುಳ್ಳ ಗೌರೀಸಣ್ಣಕ್ಕಿ ಅಂಬೇಮೋರೆ ಮೊದಲಾದ ಗಂಧಸಾಲಿಯ ನೆಲ್ಲು ಬೀಜವನ್ನು . . . ತರಿಸಿ ಬಿತ್ತಿದರೆ (ಕೃಷಿಪ್ರ. ೨೦೪). [ಗೌರಿ + ಸಣ್ಣಕ್ಕಿ]

**ಗೌರಿಹಬ್ಬ** (ನಾ). (ಭಾದ್ರಪದ ಶುದ್ಧ ತದಿಗೆಯಂದು) ಗೌರಿಯನ್ನು ಪೂಜಿಸುವ ಹಬ್ಬ,-ವ್ರತ: ಮದುವೆಮನೇಲಿ ತೋವೆಗೆ ಅತ್ತರಂ, ಗೌರೀಹಬ್ಬದಲ್ಲಿ ಕಾಯಿಗೆ ಅತ್ತರು (ಗಾದೆ); ಗೌರಿಹಬ್ಬದಂದು ಹೆಣ್ಣುಮಕ್ಕಳ ಸಂಭ್ರಮವೇ ಸಂಭ್ರಮ (ರೂಢಿ). [ಗೌರಿ + ಹಬ್ಬ (<ಪಬ್ಬ)]

**ಗೌರಿಹುಣ್ಣಿಮೆ, ಗೌರಿಹುಣ್ಣಿವೆ** (ನಾ). ಕಾರ್ತಿಕಮಾಸದ ಹುಣ್ಣಿಮೆ: ಅಗಿಹುಣ್ಣಿಮೆಯ ಹಗಲು, ಗೌರಿಹುಣ್ಣಿಮೆ ಇರುಳು (ಉಮ್ಮಾಲಿ. ೭೦-೯). **ಗೌರಿಹುಣ್ಣಿವೆ:** ಗೌರಿಹುಣ್ಣಿವೆ ಬಂತು ಕಾರ ದುರ್ದಿನ ನಿಂತು (ಸಜೀಗೀ. ೫೭-೧); ಗೌರಿಹುಣ್ಣಿವೆ ಹಾಲ್ಗುಡಿದು ಬಿಳಿಜೋಳ ಧ್ವಜವನ್ನೆತ್ತಿತು (ನೆಲವು. ೧೨-೧೧). [ಗೌರಿ + ಹುಣ್ಣಿಮೆ (<ಪುಣ್ಣಿಮೆ)]

**ಗೌರಿಹುಣ್ಣಿವೆ** 'ಗೌರಿಹುಣ್ಣಿಮೆ' ನೋ.

**ಗೌರಿಹೂ** (ನಾ). ಒಂದು ಬಗೆಯ ಹೂವು: ಗೌರಿಹೂ ಬಳ್ಳಿಯಲ್ಲಿ ತೊಂಡಿಲೊಲೆವುದಾರಿಗೆಂದೊ (ಹೂಹಾದಿ. ೯-೦೯). [ಗೌರಿ + ಹೂ$_2$ (<ಪೂ$_2$)]

**ಗೌರೀಕಾಂತ** (ನಾ). ಪಾರ್ವತಿಯ ಪತಿ; ಶಿವ: ಇಂತು ವೀರಂ ಮೆರೆದು ಗೌರೀಕಾಂತನಂ ಪೂಜಿಸಲು (ಬಸಪು. ೯೯-೨೨). [ಸಂ. (ಗೌರೀ + ಕಾಂತ)]

**ಗೌರೀತೃತೀಯೆ** (ನಾ). = ಗೌರಿತದಿಗೆ. [ಸಂ. ಗೌರೀತೃತೀಯಾ (ಗೌರೀ + ತೃತೀಯಾ)]

**ಗೌರೀಧವ** (ನಾ).=ಗೌರೀಕಾಂತ: ಗೌರೀಧವನನತಿಸಾಂಗೋಚಿತಾಲಾಪಂಗಳಿಂ ತಣಿಸಿ (ಬಸಪು. ೨೪-೫೩); ಇವನ ನಿಷ್ಠೆಗೆ ಮೆಚ್ಚಿ ಗೌರೀಧವನು ವೈದೋಱಿದನು (ಕುಮ್ಮಾಅ. ೨೨-೪೪). [ಸಂ. (ಗೌರೀ + ಧವ)]

**ಗೌರೀಪಾದ** (ನಾ). ಪಾದದ ಆಕಾರದ ಒಂದು ಬಗೆಯ ಕಸೂತಿ; ಒಂದು ಬಗೆಯ ನಕ್ಷೆ(?): ಈ ಶಾಲುಗಳ ಮೇಲೆ ಈಗಿನಂತೆ 'ಗೌರೀಪಾದ' ಚಿಹ್ನೆಗಳಿವೆ (ಭಾರದ. ೧೩). [?]

**ಗೌರೀಪ್ರವರ** (ನಾ).=ಗೌರೀಕಾಂತ: ಗೌರೀಪ್ರವರನಿಪ್ಪರವಮನೆಗೆ ಮೆಱೆವ ಪ್ರತಿಮಗೋಪುರವ ನಾನೆಂದಿಂಗೆ ಕಾಯ್ದಪ್ಪೆ (ಬಸಪು. ೪೫-೪೫).
[ಸಂ. (ಗೌರೀ + ಪ್ರವರ)]

**ಗೌರೀಮನೋಹರಿ** (ನಾ). [ಸಂಗೀತ] ಒಂದು ರಾಗದ ಹೆಸರು: ಗೌರೀಮನೋಹರಿ . . . ೪ನೇ ವೇದಚಕ್ರದ ೫ನೇ ರಾಗ (ಸಂಗೀಚಂ. ೧೭೪).
[ಸಂ. ಗೌರೀಮನೋಹರೀ]

**ಗೌರೀವೀಣೆ** (ನಾ). ಒಂದು ಬಗೆಯ ವೀಣೆ: ರುದ್ರವೀಣೆಯು ಭದ್ರಗಾಯಕರಿಂ ಗೌರೀವೀಣೆಯು ಗೌರವದಿಂದಂ (ಹಮ್ಮಿರ. ೮-೪೦ ವ); ರಾವಣವೀಣೆ, ರುದ್ರವೀಣೆ ಕೂರ್ಮವೀಣೆ, ಕೈಲಾಸವೀಣೆ, ಗೌರೀವೀಣೆ (ಶರಜ. ೨೮೫).
[ಸಂ. ಗೌರೀವೀಣಾ]

**ಗೌರೀಶ** (ನಾ).=ಗೌರೀಕಾಂತ: ಘನಮಹಿಮ ನೋಡಿದನು ಗೌರೀಶನ ಲಿಖಿತ ಲೇಖಾರ್ಥವಂ (ಬಸಪು. ೫-೫೬). [ಗೌರಿ + ಈಶ]

**ಗೌರೀಹರರಸ** (ನಾ). [ವೈದ್ಯಶಾ] ಪಾದರಸ, ಗಂಧಕ ಮೊದಲಾದುವುಗಳಿಂದ ಸಿದ್ಧಪಡಿಸಿದ ಒಂದು ಔಷಧ: ಗೌರೀಹರರಸ:-ರಸ, ಗಂಧಕ, ಇವಂ ಕಜ್ಜಳಿಯಂ ಮಾಡಿ ನಿಂಬೆಯ ರಸದಿಂ ಮೂಱುದಿನಂಗಳು ಮರ್ದಿಸಿ . . . ಗರುಗದ ರಸದಲ್ಲಿ ಕೊಡಲು, ಅತಿಸಾರ, ಗ್ರಹಣಿಗಳು ಮಾಣುವುವು (ವಿವೈವಿ. ೨೫). [ಗೌರೀಹರ$_0$ + ರಸ]

**ಗೌರು** 'ಗೌಱು$_2$' ನೋ.

**ಗೌರುಗಹಳೆ** 'ಗೌಱುಗಹಳೆ' ನೋ.

**ಗೌಲಿ** 'ಗೌವಲೆ' ನೋ.

**ಗೌಲು** 'ಗವುಲು' ನೋ.

**ಗೌಲೆ** 'ಗೌವಲೆ' ನೋ.

**ಗೌವಲೆ,** ಗವಲಿ, ಗವುಲಿ, ಗೌಲಿ, ಗೌಲೆ (ನಾ). (ಉಕ) ಗೋದಿಯ ಹಿಟ್ಟು ಅಥವಾ ರವೆಯನ್ನು ಕಲಸಿ ಹದಮಾಡಿಕೊಂಡು ಹೊಸೆದು ಮಾಡಿದ ಸಣ್ಣ ಸಣ್ಣ ಚೂರು ಮತ್ತು ಅದರಿಂದ ಮಾಡಿದ ಪಾಯಸ: ಪರಡಿ ಗೌವಲೆ [ಪಾಠಾಂ. ಗೌಲೆ, ಗೌಲ]ಯಪ್ಪೆಮಣೆ ಸಣ್ಣಗೋಧೂಮ ಸರವಳಿಗೆ ದೊಡ್ಡ ಸೇವಗೆ . . . ಕಾಯ್ದ ಮೈ ಪಾಲಿನೊಳಗಿರದಿಳಿಯಬಿಟ್ಟು ಪಾಕಂ ಮಾಡಿಕೊಂಡು ಸಕ್ಕರೆಯಿಕ್ಕಿ ಯೇಲಕ್ಕಿಗೂಡಿ ಮತ್ತವಱವಱ ಹೆಸರ ಪಾಯಸವೆಂಬುದು (ಸೂಪಶಾ. ೩-೭); ರಂಜಿಪ ಪರಡಿ ಗೌವಲೆ ಸಣ್ಣ ಸಜ್ಜಿಗೆ . . . ಭುಂಜಿಸುವನಿತು ಸದ್ಭೃತ ಭಕ್ಷ್ಯಗಳ ಮೃತ್ಯುಂಜಯಾರ್ಪಿತವ ಮಾಡಿದರು (ವೋಹತ. ೨೭-೧೦). **ಗವಲಿ:** ನಮ್ಮ ಗವಲಿ ಆಯಿತು ನಿಮ್ಮ ಶಾವಿಗೆ ಆಯಿತು (ನಡುಮ. ೧೦೦). **ಗವುಲಿ:** ಈ ಸಲ ಗವುಲಿಪಾಯಸ ಚಿತ್ರಾನ್ನ ಎರಡರಲ್ಲೇ ಹಬ್ಬ ಮುಗಿಯಿತು (ರೂಢಿ). **ಗೌಲಿ:** ಶಾವಿಗೆ ಪರಡಿ ಗೌಲಿಯು ಪರಮಾನ್ನವು ದೇವ ದೇವಗೆ ನೀಡೀ ಪಾಡಿ (ಶ್ರೀಕೃಶಾ. ೧೧೧); ಹಪ್ಪಳ ಸೆಂಡಿಗಿ ಒಪ್ಪುಳ್ಳ ಉಗರೊತ್ತು ಬಟ್ಟಗೌಲಿಯ ಪರಡಿಯು ಮದುಮಗಳ ಅತ್ತಿಗಿ ಸವದಾಳೊಂದಡಗಿಯ (ಲೋಕಗೀ. ೪೩). **ಗೌಲೆ:** ಪಿರಿದು ಗೌಲೆಯ ಪಾಯಸಗಳ ತಂದಾಗ ಸರಸಿಜಾಕ್ಷಿಯರು ನೀಡಿದರು (ಕಂಸವಿ. ೮-೯೦); ಅಕ್ಕಿಯ ಪಾಯಸ ಸಜ್ಜಿಗೆಪಾಯಸ ಚೊಕ್ಕ ಗೌಲೆಯ ಪಾಯಸವನು ಇಕ್ಕಿ (ಜ್ಞಾನಪಜ. ೨-೧೩೮).
[←ಮರಾ. ಗವ್ಹಲಾ, ಗಹೂ./ಸಂ. ಗೋಧೂಮ]

**ಗೌವುಂಡ** 'ಗಾವುಂಡ' ನೋ.

**ಗೌವುಂಡಿ** 'ಗಾವುಂಡಿ' ನೋ.

**ಗೌವುಂಡಿಕೆ** 'ಗಾವುಂಡಿಕೆ' ನೋ.

**ಗೌಸಣಿಕೆ** 'ಗವಸಣಿಗೆ' ನೋ.

**ಗೌಸಣಿಗೆ** 'ಗವಸಣಿಗೆ' ನೋ.

**ಗೌಸು** 'ಗವಸು' ನೋ.

**ಗೌಳ$_1$** (ನಾ). ೧. ಒಂದು ದೇಶದ ಹೆಸರು; ಗೌಡದೇಶ: ದಾಳಿಂಬಂ, ಕುಂಬಳಂ, ಗೌಳಂ, ಗುಳಂ . . . ಇವು ಕೂಡೆ ಡಕಾರಕ್ಕೆ ಪುಟ್ಟಿ ಱಿದ ಪಭ್ರಂಶತೆಯಂ ಪಡೆದುಂ ರೂಢಿಯ ಕುಳಂಗಳ್ (ಶಮದ. ೭೦ ವೃತ್ತಿ); ಗೌಳರಾವುತರು ಗುರ್ಜರರಾವುತರು ಬಂದರಾಳುತನದ ಮಚ್ಚರದೊಳು (ಕುರಾಸಾಂ. ೧೧-೨೪); ಗುರ್ಜರ ಗೌಳ ನೇಪಾಳ . . . ಕಾಂಬೋಜದೇಶದ ಸಕಲಶರಣರೈತರುತಿರ್ದರು (ಚಿಬಪು. ೬-೪೯). ೨. ಗೌಳದೇಶದ ರಾಜ: ತಲೆಯಂ ಗೌಳನ ಗೌಳನವ್ವರಸವಂ ಪೀರ್ವ್ವಂತೆ ತಾಂ ಪೀರ್ದ್ದಪಂ (ಕೂಲ್ಲಾಶಾ. ೯-೩೩; 1147). ೩. ಕಬ್ಬಿಗೆ ಸಂಬಂಧಿಸಿದುದು: ತಲೆಯಂ ಗೌಳನ ಗೌಳನವ್ವರಸವಂ ಪೀರ್ವ್ವಂತೆ ತಾಂ ಪೀರ್ದ್ದಪಂ (ಕೂಲ್ಲಾಶಾ. ೯-೩೩; 1147). ೪. [ಸಂಗೀತ] ಒಂದು ರಾಗದ ಹೆಸರು: ವಸಂತಭೈರವಿ ಗೌಳಮನಾ ವೀಣೆಯಲ್ಲಿ ಮುನಿ ಬಾಜಿಸಿದಂ (ವೀರವಿ. ೬-೮೯); ಗುಜ್ಜರಿ ಗೌಳ ಪಳಮಂಜರಿಗಳೆಂಬ ವಿವಿಧ ರಾಗಂಗಳಿಂ ಬಳಸಿ ಪಾಡಿಸಿದಂ . . . ಕುಶಲವರನು (ಜೈಮಿಭಾ. ೨೧-೫೬). [<ಸಂ.ಗೌಡ]

**ಗೌಳ$_2$** (ನಾ).=ಗೌಳಸರ ೧: ನವಪೀತದುತ್ರಿಗೆಗಳಂ ಸ್ಫಟಿಕಮಣಿಮಾಲೆ ಗೌಳಂಗಳಂ ಕೊಟ್ಟು ಬೀಳ್ಕೊಟ್ಟನು (ಪರಶು. ೬-೮). [<ಸಂ. ಗೋಲ]

**ಗೌಳ$_3$** (ಗು). ಗಡುಸಾದ. 'ಗೌಳಶಾರೀರ' ಪರಾ. [?]

**ಗೌಳ$_4$** (ನಾ). ಒಂದು ಬಗೆಯ ಸಸ್ಯ: ಇಂಗಳದ ಹಣ್ಣು, ಮುಳ್ಳುಸೇವಂತಿಗೆ ಬೇರು, ಮುಂಡುವಾಗಲಗೆಡ್ಡೆ, ಜೀರಿಗೆ, ಗೌಳನ ಬೀಜ . . . ಇವುಗಳನ್ನೆಲ್ಲಾ ಕಷಾಯುಮಿಟ್ಟು ಸೇವಿಸಲು ಎಂಥ ದೋಷಜ್ವರಮಾದರುಂ ಕೆಡುಗುಂ (ಸಕವೈ. ೧೦೭). [?]

**ಗೌಳಪಂತು** (ನಾ). [ಸಂಗೀತ] ಒಂದು ರಾಗದ ಹೆಸರು: ಗೌರಿ ಗಾಂಧಾರಿ ಗೌಳಪಂತು . . . ಊದುತ ನಿಂತು (ವಿದಾಕ್ಕ. ೮೭-೨).
[ಗೌಳ$_1$ + ಪಂತು]

**ಗೌಳಶಾರೀರ** (ನಾ). [ಸಂಗೀತ] ಗಂಡಸಿನ ಕಂಠ,-ಶಾರೀರ: ಗಂಡು ಶಾರೀರಕ್ಕೆ 'ಗೌಳ' ಶಾರೀರವೆಂದೂ ಹೆಣ್ಣು ಶಾರೀರಕ್ಕೆ 'ಸಂಚು' ಶಾರೀರವೆಂದೂ ಹೆಸರು (ಸಂಗೀಚಂ. ೧೭೭). [ಗೌಳ$_3$ + ಶಾರೀರ]

**ಗೌಳಸರ** (ನಾ). ೧. ಗುಂಡುಮಣಿಗಳಿಂದ ಕೂಡಿರುವ ಒಂದು ಬಗೆಯ ಕಂಠಾಭರಣ: ವೀರಮುದ್ರಿಕೆ ಪಂಚಸರ ಗೌಳಸರ ಮುಕ್ತಾಹಾರ (ಶಾಂತೀಚ. ೩-೭೦); ಗೌಳಸರಗಳಿಂ ರಾರಾಜಿಸುವ ಕಂಧರಂ (ನಂದಿಮಾ. ೯-೭); ಕಾಂಚಿದಾಮ ಹಾರ ಕೇಯೂರ ಸೂಡಗ ಗೌಳಸರ ಪುಸ್ತಿಪೋರಣದ ಪದಕ (ಏಕೋಪು. ೫-೭೦). ೨. ಒಂದು ಬಗೆಯ ಹಸ್ತಾಭರಣ: ಚಳಕಿಗೆ ಭುಜಕೀರ್ತಿ ಗೌಳಸರಗಳಪ್ಪದಳವ ತರಿಸಿಕೊಟ್ಟನವನು (ರಾಮವಿ. ೮-೪೭); ಹಸ್ತಕಡಗ ಗೌಳಸರ ಬಳೆ ಭುಜಕೀರ್ತಿ . . . ಹಸ್ತಿಯ ಸುಂಡಿಲ ನಗುವ ಹಸ್ತಗಳಲ್ಲಿ ಹಸ್ತಿಗಮನೆಗೆ ಮೆಱೆದುವು (ಭರಚ. ೪೦-೫೫); ಥಳಿಥಳಿಸುವ ಹೊಸಹೊನ್ನ ಗೌಳಸರಗಳ . . . ಕಂಕಣದಿಂದ ಶಶಿಮುಖಿ ಮೆಱೆದಳು (ಕಂಸವಿ. ೯-೭೩). [ಗೌಳ$_2$ + ಸರ$_6$]

**ಗೌಳಿ$_1$** 'ಗವುಳಿ' ನೋ.

**ಗೌಳಿ$_2$** (ನಾ). [ಸಂಗೀತ] ಒಂದು ರಾಗದ ಹೆಸರು: ಗಾಂಧಾರಿ, ಗೌಳಿ, ರಾಕ್ಷಸಿ, ನಾಡೋತ್ತರಿ (ವಿವೇಕ. ೨೩೪); ಗುಡ, ಗುಳ; ವಿಡಂಗ, ವಿಳಂಗ; ಗೌಡೀ, ಗೌಳಿ (ಶಬ್ದಾನು. ೦೪೦ ಪ್ರಯೋ). [<ಸಂ. ಗೌಡೀ]

**ಗೌಳಿ₃** 'ಗವಳ್ಳಿ' ನೋ.

**ಗೌಳಿಗ** 'ಗವಳಿಗ' ನೋ.

**ಗೌಳಿಗಿತ್ತಿ** 'ಗವಳಿಗಿತ್ತಿ' ನೋ.

**ಗೌಳಿಗೆ** (ನಾ). ಒಂದು ಬಗೆಯ ಮರ: ಕಂಚವಾಳ, ಮಂಜಟ್ಟಿ, ಗೌಳಿಗೆ, ಮುಗಳಿ, ಸೀಗೆ, ಬಾಗೆ (ನಮ್ಮನು. ೨೩೮). [ ? ]

**ಗೌಳಿನುಡಿತ** (ನಾ). ಹಲ್ಲಿಯ ನುಡಿಯುವಿಕೆ,-ಶಕುನ: ಹೊಸಲಿನ ಆಚೆ ಕಾಲಿಡುವ ಸಮಯದಲ್ಲಿ ನಮಗೆ ಎಷ್ಟೊಂದು ಅಪಶಕುನ, ಎಷ್ಟು ಅವೇಳೆ, ಎಷ್ಟು ಸೀನು, ಗೌಳಿನುಡಿತ (ನಿಬಂಧ. I, ೨೩೫).
[ ಗೌಳಿ₁ (<ಗವುಳಿ) + ನುಡಿತ ]

**ಗೌಳಿಪಂತು** (ನಾ). [ಸಂಗೀತ] ಒಂದು ರಾಗದ ಹೆಸರು: ಗೌಳಿಪಂತು ೧೫ನೇ ಮೇಳಕರ್ತ ಮಾಯಾಮಾಳವಗೌಳದಲ್ಲಿ ಜನ್ಯ (ಸಂಗೀತಂ. ೦೨೯); ಪಲ್ಲವಿ ಶೇಷಯ್ಯರ್ . . . ಗೌಳಿಪಂತುರಾಗವನ್ನು ೩ ಗಂಟೆಗಳ ಕಾಲ ಹಾಡಿದರು (ಸಂಗೀತ. ೪೬). [ ಗೌಳಿ₂ + ಪಂತು ]

**ಗೌಳಿಶಕುನ** (ನಾ). ಹಲ್ಲಿಯು ನುಡಿತದಿಂದ ತಿಳಿಯುವ ಶಕುನ: ಗೌಳಿಶಕುನ ಕೇಳಿಕೊಂಡು ಕೆಲಸಕ್ಕೆ ತೊಡಗಿದನು (ರೂಢಿ).
[ ಗೌಳಿ₁ (<ಗವುಳಿ) + ಶಕುನ ]

**ಗೌಱಗಹಳೆ** 'ಗೌಱುಗಹಳೆ' ನೋ.

**ಗೌಱಿ** (ಕ್ರಿ). ಗಟ್ಟಿಯಾಗಿ ಧ್ವನಿಮಾಡು; ಕರ್ಕಶವಾಗಿ ಕೂಗು: ತಿಗಡ ಲೊದಱುವ ಹರಿಗೆಗಳ ಗೌಱಿಗಿವ [ಪಾಠಾಂ. ಗವುಱುಗಿವ] ಹೆಗ್ಗಹಳೆಗಳ . . . ಮಹಾಧ್ವನಿ ಬಗಿದುದ್ಯೆ ತಾವರೆಯ ತನಯನ ಕರ್ಣಕೋಟರವ (ಕುವ್ಯಾ.ಭೀ. ೨-೪). [ ಗೌಱು₂ + ಅಗಿ₁ ]

**ಗೌಱಿಡು** (ಕ್ರಿ). ಗಟ್ಟಿಯಾಗಿ ಧ್ವನಿಮಾಡು; ಅಬ್ಬರಿಸು: ಸಾಱಿ ಸುಭಟರ ಜಱಿವ ಕಹಳೆಯ ಗೌಱಿಡುವ [ಪಾಠಾಂ. ಗೌಱುಗಳ] ತಿತ್ತಿರಿಯ ಚಿನ್ನದ ಚೀಱುಗಳ (ಕುವ್ಯಾ.ಕ. ೨೦-೭). [ ಗೌಱು₂ + ಇಡು₁ ]

**ಗೌಱು₁** (ನಾ). (ಹುರಿಯುವುದರಿಂದ ಅಥವಾ ಕರಿಯುವುದರಿಂದ) ಗರಿಗರಿಯಾಗಿರುವುದು; ಹಗುರವಾಗಿರುವುದು; ಗರುಗು: ಒಲೆಯೊಳಗೆ ಕರ್ಬೊನ್ನ ಹಗಱಂ ಹರಹಿಯಲ್ಲಿ ಎಳೆಯ ಬದನೆಕಾಯ್ಗಳಂ ಪಾಕಮಂ ಮಾಡಿ ಸಲಗೆಯಿಂ ತಿವಿದು ತುಪ್ಪವ ಬಿಟ್ಟು ಗೌಱಾಗುವಂದದಿಂ ಕಾಸಿ (ಸೂಪಶಾ. ೪-೧೪).

**ಗೌಱುಬದನೆಯ ಕಾಯಿ**=ಬದನೆಯ ಕಾಯನ್ನು ಸುಟ್ಟು ಮಾಡಿದ ಒಂದು ಬಗೆಯ ವ್ಯಂಜನಪದಾರ್ಥ,-ಬಜ್ಜಿ: ಸುಟ್ಟು ಕಾಯ್ಗಳ ನಡುವೆ ಸೀಳಿ ಪಸರಿಸಿಯುಪ್ಪನಿಟ್ಟು . . . ತುಪ್ಪದಿ ಹುರಿದ ಹಾಲದುದ್ದುಗಳ ತುಪ್ಪದೊಳು ಗೌಱಾಗುವಂತೆ ಅಟ್ಟಿರಡುಭಾಗೆಯಂ ಮಾಡಿ . . . ತುಪ್ಪದೊಳಗಟ್ಟು ಕೆಂಪಂ ಮಾಡಿ ನರೆಗೊಡಲು ಗೌಱು [ಪಾಠಾಂ. ಱ] ಬದನೆಯ ಕಾಯಿವೆಸರಾದವು (ಸೂಪಶಾ. ೪-೨೪). [ <ಗಾಱು ]

**ಗೌಱು₂**, ಗೌರು (ನಾ). ಗಟ್ಟಿಯಾದ ಕೀರಲುದನಿ; ಕರ್ಕಶಧ್ವನಿ: ಸಾಱಿ ಸುಭಟರ ಜಱಿವ ಕಹಳೆಯ ಗೌಱುಗಳ [ಪಾಠಾಂ. ಗೌಱಿಡುವ] ತಿತ್ತಿರಿಯ ಚಿನ್ನದ ಚೀಱುಗಳ (ಕುವ್ಯಾ.ಕ. ೨೦-೭). 'ಗೌಱುಗಹಳೆ' ಪರಾ. **ಗೌರು**: 'ಗೌರುಗಹಳೆ' ಪರಾ. [ ?/ತೆಲು. ಗೌರು=ಕಹಳೆ ]

**ಗೌಱುಕಾಳೆ** 'ಗೌಱುಗಹಳೆ' ನೋ.

**ಗೌಱುಗಹಳೆ**, ಗೌರುಗಹಳೆ, ಗೌಱಗಹಳೆ, ಗೌಱುಕಾಳೆ, ಗೌಱುಗಾಳೆ (ನಾ). ಗಟ್ಟಿಯಾಗಿ ಧ್ವನಿಮಾಡುವ ಒಂದು ಬಗೆಯ ಕಹಳೆ; ರಣಕಹಳೆ: ಬಿತ್ತರಿಸಿ ಬೈಬೈದು ಸಾಱುವ ಗೌಱುಗಹಳೆಗಳ ಸತ್ತಿಗೆಯ ಸಾಲು ಗಳೊಳಂಬರ ಕೆತ್ತುದು (ಕುವ್ಯಾ.ವಿ. ೮-೨); ಕೌರವರಾಯಜೀವಘರಟ್ಟ ಬಂದನು ಸಾಯದಿರಿ ಹೆಱಸಾರಿಯೆಂದವು ಗೌಱುಗಹಳೆಗಳು (ಕುವ್ಯಾ.ದ್ರೋ. ೦೧೩. ೪-೫೨ ಅಡಿ); ನಿಬ್ಬರದ ಬಿರುದನು ಬೀಱುತಿರ್ದವು ಗೌಱುಗಹಳೆಗಳು (ಕುವ್ಯಾ.ಕ. ೮-೦೪); ಸಂಗರಕೆ ಮುಂಚುವ ಭಟರ ಗಡಣದಿ ಧುರಕೆ ನಡೆದರು ಮುಂದೆ ಸಾಱುತ ಗೌಱು[ಪಾಠಾಂ. ಱ]ಗಹಳೆಯಲಿ (ನಳಚ. ೯-೧೮). **ಗೌರುಗಹಳೆ**: ಕುರುನೃಪನ ತೊಡಕು ಲೇಸಲ್ಲೆಂದು ಪದರಿದುವು ಗೌರುಗಹಳೆ (ತುರಂಗ. ೪೮-೨೮); ಉದಯಕಾಲದೋಳ್ಬಾಳ್ಯದೊಳಗೊದರಿದವು ಗೌರುಗಹಳೆ (ತುರಂಗ. ೫೦-೦೦). **ಗೌಱಗಹಳೆ**: ವರ ಬೊಂಬುಳಿಯ ನಾಗಸರ ಗೌಱಗಹಳೆಯ ದುರುದ ಗೋಮುಖ ಡಮರುಗಳೂ (ದೇವಾಂಪು. ೩-೨೦೮). **ಗೌಱುಕಾಳೆ**: ಕಾಹಳವೆಂಬ ಗೌಱಿ[ಱು]ಕಾಳೆ (ವಿವೇಕ.೨೩೭). **ಗೌಱುಗಾಳೆ**: ನುಡಿವವೀ ರಣ ಗೌಱುಗಾಳೆ ಚಿನಗಾಳೆಗಳ್ ಶಂಖಾನಿನಾದಂಗಳಿಂ (ಪಶಿಲ.೭-೮). [ ಗೌಱು₂ + ಕಹಳೆ ]

**ಗೌಱುಗಾಳೆ** 'ಗೌಱುಗಹಳೆ' ನೋ.

**ಗೌಱೊಡೆ** (ನಾ). ಒಂದು ಬಗೆಯ ವಡೆ; ಗರುಗಾಗಿರುವ ವಡೆ; **ಗರುಗೊಡೆ**: ಬಿಳಿಯುದ್ದನೊಣಗಿಕ್ಕಿ ತರಿಮಾಡಿ ಬಿಸಿಯ ಹಾಲೊಳಗೆ ಕಲಸಿ . . . ಬಳಿಕ ಮಾಡಿದ ವಡೆಯುಮಂ ನೆಯ್ಯದ ಬಿದಿರಗಪೆಯೊಳಗಿರಿಸಿ ಕೊಂಡು ಯೆಮ್ಮೆಯ ಬೆಣ್ಣೆಯಂ ಕಾಸಿಕೊಳುತ ಬಾಳೆಲೆಯ ತುಪ್ಪದೊಳು ತಳಮುಟ್ಟದಂತಡಲು ಗೌಱೊಡೆ [ಪಾಠಾಂ. ಗಱುಗೊಡೆ] ಯಾದುದು (ಸೂಪಶಾ. ೦-೬೯). [ ಗೌಱು₁ + ಒಡೆ₃ (<ವಡೆ₂) ]

**ಗ್ಯಾಂಗು** (ನಾ). ತಂಡ; ಗುಂಪು: ಕಳ್ಳರ ಗ್ಯಾಂಗಿನವರು ಪ್ರವೇಶಿಸಿದ ವರ್ತಮಾನವು ತನಗೆ ತಿಳಿದ ಕೂಡಲೆ . . . ಪೋಲೀಸಿಗೆ ತಿಳಿಸಲು ಅವನ ಕರ್ತವ್ಯವಾಗಿರುವದು (ಗ್ರಾಮಾಕ. ೪೭); ಒಂದು ದೊಡ್ಡ ಪಾಮಲೋರರ ಗ್ಯಾಂಗು ಕಡೂರು ಡಿಸ್ಟ್ರಿಕ್ಟಿಗೆ ಬಂದಿದೆ (ನಡದಾ. II, ೮೫೯).
[ ←ಇಂ. Gang ]

**ಗ್ಯಾದಾರಿ** (ನಾ). ಒಂದು ಬಗೆಯ ಮರ: ದೇವದಾರಿ, ಗಂಧಗಿರಿ, ಗ್ಯಾದಾರಿ, ಚೆಂಬುಳುಕಾಯಿ (ವೃಜಿಗಿ. ೩೫-೬೮೩) [ ? ]

**ಗ್ಯಾರಂಟಿ** (ನಾ). ಭರವಸೆ; ನಂಬಿಕೆ; ನಿರ್ಧಾರ: ಕರ್ಮದಲಿ ಮಾತ್ರ ನಿನಗಿದೆಯಂತೆ ಅಧಿಕಾರ ಫಲ ಸಿಗುವದೆಂಬ ಗ್ಯಾರಂಟಿ ನಾಸ್ತಿ (ಅರರೋ. ೦೬); ಈಗ ನನಗೆ ಅವರು ಚೆನ್ನಾಗಿ ಪೂಜೆ ಮಾಡುವುದು ಗ್ಯಾರಂಟಿ (ಶಾಲಮ. ೯೦). [ ←ಇಂ. Guarantee ]

**ಗ್ಯಾಲನ್** (ನಾ). (ಮುಖ್ಯವಾಗಿ ದ್ರವಪದಾರ್ಥಗಳನ್ನು ಅಳೆಯುವ) ಒಂದು ಅಳತೆ: ಮನಸ್ಸಿಗೇನಾದರೂ ಕಿಂಕೃತಿಯಾದರೆ ಗ್ಯಾಲನ್‌ಗಟ್ಟಲೆ ವ್ಹಿಸ್ಕಿ ಹೀರಬೇಕೆ? (ಯೋಧಪು. ೨೬). [ ←ಇಂ. Gallon ]

**ಗ್ಯಾಲರಿ**(ನಾ).ಸೋಪಾನಮಾರ್ಗದಂತೆ ಮೆಟ್ಟಲುಮೆಟ್ಟಲಾಗಿ ಕಟ್ಟಿರುವ ಕಟ್ಟಡ ಅಥವಾ ಪೀಠಗಳನ್ನು ಜೋಡಿಸಿರುವ ಸ್ಥಳ; ಪ್ರೇಕ್ಷಕರು ಕುಳಿತುಕೊಳ್ಳುವ ಸ್ಥಳ: ಪ್ರೇಕ್ಷಕರ ಗ್ಯಾಲರಿಯಲ್ಲಿ ಇಬ್ಬರು ತರುಣರು ನಿಂತು . . . ಘೋಷಿಸಿದರು (ಆತ್ಮಾರ್ಪ. ೧೧೨). [ ←ಇಂ. Gallery ]

**ಗ್ಯಾಲಿ** (ನಾ). "(ಮುದ್ರಣ) ಜೋಡಿಸಿದ ಮುದ್ರಣದ ಮೊಳೆಗಳ ಸಾಲುಗಳನ್ನು ಇಡುವ ಮೂರಂಚುಗಳುಳ್ಳ ತಟ್ಟೆ" (Galley. ಇಂಕನಿ): ಮೊಳೆಗಳನ್ನು ಪ್ರತಿಸಾಲಿನಲ್ಲಿಯೂ ಜೋಡಿಸಿ . . . ಸ್ಟಿಕ್ಕನ್ನು ಖಾಲಿಮಾಡಿ ಗ್ಯಾಲಿ ಎಂದು ಕರೆಯಲ್ಪಡುವ ಮೂರಂಚಿನ ತಟ್ಟೆಯಲ್ಲಿಡಬೇಕು (ಮುದ್ರಕ. ೨೬). [ ←ಇಂ. Galley ]

**ಗ್ಯಾಸು** (ನಾ). ೧. ಅನಿಲ. ೨. (ಸೀಮೆಎಣ್ಣೆಯ) ಅನಿಲದಿಂದ ಉರಿಸುವ ದೀಪ; ಪೆಟ್ರೊಮ್ಯಾಕ್ಸ್: ಗ್ಯಾಸಿನ ಬೆಳಕಿನಲ್ಲಿ ಕುಳಿತವರಿಗೆ ಮೊದಮೊದಲು ಈ ಕೋಣೆಗಳಲ್ಲಿದ್ದ ಯಾವ ವಸ್ತುವೂ ಕಾಣಿಸುತ್ತಿರಲಿಲ್ಲ (ಗಂಮಾಯಿ. ೩೭). ೩. (ಆಲಂ) ಪೊಳ್ಳುಮಾತು; ಬುರುಡೆ: ಅದೆಲ್ಲ ಬರೀ ಗ್ಯಾಸು ನನಗೆ ಗೊತ್ತಿಲ್ಲವೆ? (ರೂಢಿ).

**ಗ್ಯಾಸೊಲೆ**=ಅನಿಲದ ಸಹಾಯದಿಂದ ಉರಿಯುವ ಒಲೆ: ಗ್ಯಾಸೊಲೆಯಲ್ಲಿ ಅಡಿಗೆ ಬೇಗ ಆಗುತ್ತದೆ (ರೂಢಿ). [ ←ಇಂ. Gas ]

**ಗ್ರಂತ** (ನಾ). = ಗ್ರಂಥ : "ಗ್ರಂಥ–ಗ್ರಂತ" (ಶಮದ. ೨೩೫ ಪ್ರಯೋ ೬). [<ಸಂ. ಗ್ರಂಥ]

**ಗ್ರಂಥ** (ನಾ). ೧. ಕಟ್ಟುವುದು; ಜೋಡಿಸುವುದು; ಬಂಧ. ೨. ಗದ್ಯ ಅಥವಾ ಪದ್ಯರೂಪವಾದ ರಚನೆ; ಪುಸ್ತಕ; ಹೊತ್ತಗೆ: ಗ್ರಂಥ ಕೋಟಿಗಳಲಿ ಪೇಳ್ದುದನೊರೆವೆನು ಸಾಂಗತ್ಯದರ್ಥದೊಳಾನು (ಇಂಜಾಪ. ೧೮೦–೮೮); ಗ್ರಂಥ ಎಂಬ ಶಬ್ದವನ್ನು ಸಾಧಾರಣವಾಗಿ ಪುಸ್ತಕ ಎಂಬರ್ಥದಲ್ಲಿ ಬಳಸುವುದು ರೂಢಿಯಾಗಿದೆ (ಕನ್ನಸಂ. ೩೨). ೩. ಕ್ರಮವರಿತು ವಿಷಯವನ್ನು ಪ್ರತಿಪಾದಿಸಿರುವ ಬರವಣಿಗೆ,–ಲೇಖನ: ಯಾವುದಾದರೂ ಒಂದು ವಿಷಯವನ್ನು ಕ್ರಮವರಿತು ಶಬ್ದಗಳಿಂದ ವ್ಯಕ್ತಪಡಿಸಿದರೆ ಗ್ರಂಥವಾಗುವುದು (ಕೈಪಿಡಿ. ೧೬೮); ಅರ್ಥವತ್ತಾಗಿ ರಚಿತವಾಗಿರುವ ಯಾವ ಲೇಖನವನ್ನಾದರೂ 'ಗ್ರಂಥ'ವೆನ್ನಬಹುದು (ಭಾರಪ. ೯). ೪. ಶಾಸ್ತ್ರಗಳ ಸಮೂಹ. ೫. ನಾಲ್ಕು ವೇದಗಳು. ೬. ಒಂದು ಅನುಷ್ಟುಪ್ಪು; ಶ್ಲೋಕ. ೭. ಶ್ಲೋಕದಲ್ಲಿರುವಷ್ಟು ಅಥವಾ ಮೂವತ್ತೆರಡು ಅಕ್ಷರಗಳ ಸಮುದಾಯ: ೩೨ ಅಕ್ಷರಗಳಿಗೆ ಒಂದು 'ಗ್ರಂಥ' ಎಂಬ ಅಭಿಪ್ರಾಯದಿಂದ "ಭಾರತ ಒಂದು ಲಕ್ಷ ಗ್ರಂಥಗಳುಳ್ಳದು" ಎಂದು ಹೇಳಿದ್ದಾರೆ (ಭಾರದ. ೯೫). ೮. = ಗ್ರಂಥಲಿಪಿ. 'ಗ್ರಂಥಾಕ್ಷರ' ಪರಾ. ೯. ಉತ್ಕೃಷ್ಟವಾದ ಜ್ಞಾನ. ೧೦. (ಪಿತ್ರಾರ್ಜಿತವಾದ) ಧನ,–ಐಶ್ವರ್ಯ. ೧೧. ಕೊಡುವುದು; ದಾನ. ೧೨. [ಗಣಿತ] ಭಾಜ್ಯ; ಭಾಗಿಸಬೇಕಾದ ಸಂಖ್ಯೆ: "ವರ ಶಾಸ್ತ್ರತತಿಯಲ್ಲಿ ವೇದ ನಾಲ್ಕುಬಲಿ ಅಕ್ಕರದೆಣಿಕೆಯಲ್ಲಿ ಗ್ರಂಥಮೆನಿಕ್ಕು" (ಮಂಗರಾ. ೧೧೪–೨೭); "ದಾನಂ ಶಾಸ್ತ್ರಸಮೂಹಮುಂ ಪಿತೃಧನಂ ಶೃತ್ಯಾಂಗಮುಂ ಭಾಗೆಯುಂ ಜ್ಞಾನೋತ್ಕೃಷ್ಟತೆ ವರ್ಣಸಂಖ್ಯೆಯನಿತುಂ ಗ್ರಂಥಾಖ್ಯೆ" (ನಾನಾರ. ೦೪೨). [ಸಂ.]

**ಗ್ರಂಥಕರ್ತ** (ನಾ). ಗ್ರಂಥರಚನೆ ಮಾಡುವವನು: ಗ್ರಂಥದ ಮೂಲಸ್ವರೂಪವು ಗ್ರಂಥಕರ್ತನ ಜೀವಿತಾವಧಿಯಲ್ಲಿಯೇ ವಿಕೃತಗೊಳ್ಳುವುದು ನಿಶ್ಚಯ (ಭಾರಪ. ೩೪). [ಗ್ರಂಥ + ಕರ್ತ]

**ಗ್ರಂಥಕರ್ತೃ** (ನಾ).=ಗ್ರಂಥಕರ್ತ: ಆಯಾ ಗ್ರಂಥಕರ್ತೃಗಳ ಹೆಸರುಗಳ ಬಳಿವಿಡಿದು . . . ಹೊಂದಿಸಿದ್ದರೆ ಅದು ಗ್ರಂಥಕಾರಸೂಚಿಯಾಗುವುದು (ಗ್ರಂಥಾಲ. ೪೮). [ಗ್ರಂಥ + ಕರ್ತೃ]

**ಗ್ರಂಥಕಾರ** (ನಾ). = ಗ್ರಂಥಕರ್ತ: ಗ್ರಂಥಕಾರನ 'ನಿಜನಾಮ'ವನ್ನು ಮೊದಲು ತೆಗೆದುಕೊಳ್ಳಬೇಕೆ? (ಗ್ರಂಥಾಲ. ೪೯). [ಸಂ.]

**ಗ್ರಂಥಕೀಟಕ** (ನಾ). ೧. ಪುಸ್ತಕದ ಹುಳು. ೨. (ಅಲಂ) ಕೇವಲ ಪುಸ್ತಕ ಜ್ಞಾನವನ್ನು ಅವಲಂಬಿಸುವವನು; ಲೋಕಾನುಭವ ಸಾಲದ ವ್ಯಕ್ತಿ: ಹೆಣ್ಣುಮಕ್ಕಳು ನುಡಿದದ್ದು ಇವನಿಗೆ ವೇದವಾಕ್ಯ–ಮುದ್ರಿತವಾಗಿದ್ದುದು ಸುಳ್ಳಿರಲಾರದು ಎಂದೆನ್ನುವ ಗ್ರಂಥಕೀಟಕಗಳಂತೆ (ಸಾಹಿಸಂ. ೫೭). [ಗ್ರಂಥ + ಕೀಟಕ$_2$]

**ಗ್ರಂಥನ** (ನಾ). ೧. ಜೋಡಿಸುವುದು: ಕಟ್ಟುವುದು; ಪೋಣಿಸುವುದು. ೨. (ಗ್ರಂಥ) ರಚನೆ: "ಶ್ರಂಥನಂ, ಗ್ರಂಥನಂ, ಗುಂಫಃ, ಸಂದರ್ಭಃ, ರಚನಾ–ಈ ೫ ರಚನೆ" (ಹಲಾಯು. ೧೨೦–೪೫); "ಸಂದರ್ಭಮಾ ಶ್ರಂಥನಂ ಗ್ರಂಥನಂ ಗುಂಫಮೆನೆ ರಚನೆಗಭಿಧಾನಮಕ್ಕುಂ" (ಮಂಗರಾ. ೧೨೬–೩). [ಸಂ.]

**ಗ್ರಂಥಪಾತ** (ನಾ). ಗ್ರಂಥಗಳಲ್ಲಿ ಹುಳು ತಿಂದು ಅಥವಾ ಬೇರೆ ಯಾವುದೇ ಕಾರಣದಿಂದ ಪಾಠಭಾಗ ನಷ್ಟವಾಗುವುದು: ಗ್ರಂಥಗಳಲ್ಲಿ ಪಾಠಭೇದಗಳುಂಟಾಗುವುದು, ಪ್ರಕ್ಷೇಪಗಳಾಗುವುದು, ಗ್ರಂಥಪಾತವಾಗುವುದು . . . ಇವೇ ಮುಂತಾದುವನ್ನು ಪ್ರಾಚೀನ ಭಾರತೀಯ ವಿದ್ವಾಂಸರು ಬಲ್ಲವರಾಗಿದ್ದರು (ಕನ್ನಸಂ. ೧೧); ಗ್ರಂಥಕರ್ತನು ಕಾಲವಾಗಿದ್ದರಂತೂ ಗ್ರಂಥಪಾತದ ಸಾಧ್ಯತೆಗಳಿಗೆ ಮಿತಿಯೇ ಇಲ್ಲ (ಭಾರಪ. ೩೪). [ಗ್ರಂಥ + ಪಾತ]

**ಗ್ರಂಥಪಾಲ** (ನಾ). ಗ್ರಂಥಭಂಡಾರದ ರಕ್ಷಕ; ಪುಸ್ತಕಭಂಡಾರಿ: ಗ್ರಂಥಪಾಲನು ಗ್ರಂಥಗಳ ಆಯ್ಕೆಮಾಡುವ ಮುನ್ನ ತನ್ನ ವಾಚಕರ ಅಭಿರುಚಿಗಳನ್ನು ಚೆನ್ನಾಗಿ ಅರಿತುಕೊಂಡಿರಬೇಕು (ಗ್ರಂಥಾಲ. ೯): ೪೨ ಪುಟಗಳ ಪುಟ್ಟಪುಸ್ತಕ . . . ಪ್ರಕಟವಾಗುವದೊಂದೇ ತಡ ಬಹುಜನ ಗ್ರಂಥಪಾಲರ ಮನ್ನಣೆಗೆ ಪಾತ್ರವಾಯಿತು (ಗ್ರಂಥಾಲ. ೦೮). [ಸಂ.]

**ಗ್ರಂಥಭಂಡಾರ** (ನಾ).=ಗ್ರಂಥಾಲಯ: ಗ್ರಂಥಭಂಡಾರದಲ್ಲಿ ನಡೆಯುವ ಗ್ರಂಥ ಪರಿಚಲನೆ, ಆಡಳಿತೆಗಳ ಪರಿಶೀಲನಕ್ಕಾಗಿ ಅವರನ್ನು ಇಂಗ್ಲಂಡಕ್ಕೆ ಕಳುಹಿಸಲಾಯಿತು (ಗ್ರಂಥಾಲ. ೨೮). [ಗ್ರಂಥ + ಭಂಡಾರ]

**ಗ್ರಂಥಭಂಡಾರಿ** (ನಾ).=ಗ್ರಂಥಪಾಲ: ರಂಗನಾಥನ್‌ರು . . . ಪ್ರಥಮ ಗ್ರಂಥಭಂಡಾರಿಯೆಂದು ನೇಮಿಸಲ್ಪಟ್ಟೊಡನೆಯೆ . . . ಅವರನ್ನು ಇಂಗ್ಲಂಡಕ್ಕೆ ಕಳುಹಿಸಲಾಯಿತು (ಗ್ರಂಥಾಲ. ೨೭). [ಗ್ರಂಥ + ಭಂಡಾರಿ]

**ಗ್ರಂಥರಚನೆ** (ನಾ). ಗ್ರಂಥವನ್ನು ಬರೆಯುವುದು, –ರಚಿಸುವುದು: ಗ್ರಂಥರಚನೆ ನನ್ನ ಕೈಲಾಗದ ಮಾತು ಸ್ವಾಮಿ (ದಾನಚಿಂ. ೬). [ಗ್ರಂಥ + ರಚನೆ]

**ಗ್ರಂಥಲಿಪಿ** (ನಾ). ಸಂಸ್ಕೃತವನ್ನು ಬರೆಯಲು ಅನುಕೂಲಿಸುವಂತೆ ಸುಧಾರಿಸಿದ ತಮಿಳುಲಿಪಿ: ತೆಲುಗಲಿಪಿ ನಾಗರದ ಲಿಪಿ ಗ್ರಂಥಲಿಪಿ ಹಳಗನ್ನಡದ ಲಿಪಿ . . . ಮೊದಲಾದ ಹಲವು ಲಿಪಿಗಳನೋದಬಲ್ಲಗ್ಗಳದ ಕರಣಿಕರಂ ಕರೆಸಿ (ಬಸಪು. ೫–೫೩); ದಕ್ಷಿಣದ ಬ್ರಾಹ್ಮೀಲಿಪಿಯಿಂದ ಕನ್ನಡ, ತೆಲುಗು, ತಮಿಳು ಗ್ರಂಥಲಿಪಿಗಳೂ ರೂಪುದಾಳಿದವು (ಸಂಶೋಧ. ೪). [ಗ್ರಂಥ + ಲಿಪಿ]

**ಗ್ರಂಥಲೇಖಕ** (ನಾ). ೧. ಗ್ರಂಥವನ್ನು ರಚಿಸುವವನು. ೨. ಗ್ರಂಥವನ್ನು ಪ್ರತಿಮಾಡುವವನು; ಲಿಪಿಕಾರ: "ಲಿಪಿಕನೆನೆ ಗ್ರಂಥಲೇಖಕಂ" (ಮಂಗರಾ. ೧೦೬–೧೬). [ಗ್ರಂಥ + ಲೇಖಕ]

**ಗ್ರಂಥಸಂಪಾದನೆ** (ನಾ). ಶಾಸ್ತ್ರೀಯವಾಗಿ ಗ್ರಂಥವನ್ನು ಪರಿಶೋಧಿಸಿ ಪ್ರಕಟಿಸುವುದು: ಗ್ರಂಥಸಂಪಾದನೆಯ ಮೊದಲ ಮೊದಲ ಸುಳಿವು ಇಲ್ಲಿ ಕಾಣುತ್ತದೆ (ಕನ್ನಸಂ. ೦೩); ಗ್ರಂಥಸಂಪಾದನೆಯನ್ನು ಕಲಿಯುವ ವಿದ್ಯಾರ್ಥಿಗಳಿಗೆ ಇವನು ಉತ್ತಮವಾದ ನಿಯಮಗಳನ್ನು ಹೇಳಿಕೊಟ್ಟನು (ಕನ್ನಸಂ. ೨೯); ಗ್ರಂಥಸಂಪಾದನೆಯು ಸ್ವಾಭಾವಿಕವಾಗಿಯೇ ಗ್ರಂಥಗಳಿಗೆ ಸಂಬಂಧಿಸಿದ್ದಾಗಿದೆ (ಭಾರಪ. ೯). [ಗ್ರಂಥ + ಸಂಪಾದನೆ]

**ಗ್ರಂಥಸೂಚಿ** (ನಾ). ಗ್ರಂಥಾಲಯದಲ್ಲಿ ಓದುಗನಿಗೆ ಬೇಕಾದ ಪುಸ್ತಕವನ್ನು ದೊರಕಿಸಿಕೊಳ್ಳುವುದಕ್ಕೆ ಸಹಾಯಕವಾಗುವಂತೆ ಸಿದ್ಧಪಡಿಸಿದ ಪುಸ್ತಕಗಳ ಪಟ್ಟಿ: ಗ್ರಂಥಸೂಚಿಯು ವಾಚಕರಿಗೆ ಗ್ರಂಥಕರ್ತನ ಹೆಸರು, ಶಿರೋನಾಮ ಮತ್ತು ವಿಷಯ ಇವುಗಳಲ್ಲಿ ಯಾವುದೊಂದು ಗೊತ್ತಿದ್ದರೆ ಅವನಿಗೆ ಆ ಗ್ರಂಥವನ್ನು ದೊರಕಿಸಿಕೊಡುವುದರಲ್ಲಿ ಸಹಾಯ ಮಾಡಬೇಕು (ಗ್ರಂಥಾಲ. ೩೮). [ಗ್ರಂಥ + ಸೂಚಿ]

**ಗ್ರಂಥಸ್ವಾಮ್ಯ** (ನಾ). ಗ್ರಂಥದ ಒಡೆತನ; ಪುಸ್ತಕದ ಹಕ್ಕು: ತನ್ನ ಮೂಲಕೃತಿಯ ಪ್ರತಿಗಳನ್ನು ಮುದ್ರಿಸಿ, ಪ್ರಕಟಿಸಿ, ಮಾರಲು ಮೂಲ ಕರ್ತನಿಗಾಗಲಿ, ತಾನು ತನ್ನ ಹಕ್ಕನ್ನು ವಹಿಸಿರುವವನಿಗಾಗಲಿ, ಕಾನೂನಿನ ಮೇರೆಗೆ ಒಂದು ಗೊತ್ತಾದ ವರ್ಷಗಳ ಕಾಲ ಕೊಟ್ಟಿರುವ ಏಕಬಾಧ್ಯತೆಯ ಹಕ್ಕು; ಗ್ರಂಥಸ್ವಾಮ್ಯ (Copyright. ಇಂಕನಿ). [ಗ್ರಂಥ + ಸ್ವಾಮ್ಯ]

**ಗ್ರಂಥಾಕ್ಷರ** (ನಾ).=ಗ್ರಂಥಲಿಪಿ: ನಮ್ಮ ಮನೆಯಲ್ಲಿ ಓಲೆಗರಿಯ ಮೇಲೆ ಗ್ರಂಥಾಕ್ಷರದಲ್ಲಿ ಬರೆದ ರಾಮಾಯಣವಿದೆ (ರೂಢಿ). [ಗ್ರಂಥ + ಅಕ್ಷರ]

**ಗ್ರಂಥಾಲಯ** (ನಾ). ಓದುವುದಕ್ಕಾಗಿ ಪುಸ್ತಕಗಳನ್ನು ಸಂಗ್ರಹಿಸಿ ಇಟ್ಟಿರುವ ಮನೆ; ಪುಸ್ತಕಭಂಡಾರ: ಬರೆಹಗಳನ್ನು ಓದುಗರ ಅಭಿರುಚಿಗೆ ತಕ್ಕಂತೆ ಓದಲಿಕ್ಕೆ ಒದಗಿಸಿ ಕೊಡುವುದು ಗ್ರಂಥಾಲಯದ ಮುಖ್ಯ ಕರ್ತವ್ಯವಾಗಿದೆ (ಗ್ರಂಥಾಲ. ೪೦). [ಗ್ರಂಥ + ಆಲಯ]

**ಗ್ರಂಥಿ** (ನಾ). ೧. ಗಂಟು; ಬಂಧ; ಕಟ್ಟು: ಅಜ್ಞಾನದ ಗ್ರಂಥಿಯನ್ನು ಬಿಚ್ಚುವದೇ ಗ್ರಂಥ (ಕಗದ್ಯ. ೧೩೦). **೨.** (ಕಬ್ಬು, ಬಿದಿರು ಮೊದಲಾದುವುಗಳ) ಗಿಣ್ಣು; ಗೆಣ್ಣು: "ಗ್ರಂಥಿಃ, ಪರ್ವ, ಪರುಸ್ – ಈ ೩ ಗಂಟು" (ಹಲಾಯು. ೩೦–೩೫). **೩.** ಗೆಡ್ಡೆ; ಬೇರು. **೪.** (ದೇಹದ) ಸಂಧಿ; ಕೀಲು. **೫.** ದೇಹದಲ್ಲಿ ಗಾಯ ಮುಂತಾದುವುಗಳಿಂದ ಉಂಟಾಗುವ ಬುಗುಟು.–ಗಂಟು. **೬.** ಶರೀರದಲ್ಲಿ ರಸವನ್ನು ಸ್ರವಿಸುವ ಗೆಡ್ಡೆಯಂತಿರುವ ಕೆಲವು ಅಂಗಗಳು: ಕೆಲವು ಹುಳುಗಳಲ್ಲಿ ಗ್ರಂಥಿಗಳು ಹೊರಚಾಚಿ, ದ್ರವವನ್ನು ಸ್ರವಿಸಿ, ಶತ್ರುಗಳನ್ನು ಹೆದರಿಸುತ್ತವೆ (ಕೀಟವಿ. ೨೧). **೭.** ಒಂದು ಬಗೆಯ ಉದರ ರೋಗ: ಶೂಲಗಜಾಂಕುಶರಸಂ . . . ಕೊಳ್ಳಲು ಸರ್ವಶೂಲೆ, ಪಂಚಗುಲ್ಮ, ಅರುಚಿ, ಎದೆಬಾವು, ಅಡ್ಡಗಡಿ, ಗ್ರಂಥಿ, ಎಂಟು ಉದರರೋಗಂಗಳು ಮಾಣುವುವು (ವಿವ್ವವಿ. ೫೨). **೮.** ಒಂದು ಬಗೆಯ ಮರ: "ಗಣೇಶಕುಸುಮ – ಕೆಂಗಣಿಗಿಲು, ಭದ್ರಮುಸ್ತ, ಗ್ರಂಥಿ" (ಒಷಧಿ. ೪೭). [ಸಂ.]

**ಗ್ರಂಥಿಕ** (ನಾ). ೧. ಒಂದು ಬಗೆಯ ಔಷಧದ್ರವ್ಯ; ಹಿಪ್ಪಲಿಯ ಬೇರು; ಹಿಪ್ಪಲೀಮೂಲ. **೨.** ಗ್ರಂಥಭಾಗವನ್ನು ಮಾತಿನಲ್ಲಿ ವರ್ಣಿಸುವವನು; ಕಥಕ; ನಿರೂಪಕ: "ಗ್ರಂಥಿಕ"ರು ಮಾತಿನಲ್ಲಿ ವರ್ಣಿಸುತ್ತಿದ್ದ ಕಂಸವಧ ಬಲಿಬಂಧಗಳನ್ನು "ಶೋಭನಿಕರು" (ಅಥವಾ "ಶೌಭಿಕರು") ಪ್ರತ್ಯಕ್ಷವಾಗಿ ಮಾಡಿ ತೋರಿಸುತ್ತಿದ್ದರು (ಸಂನಾಟ. ೪೧). **೩.** ಅಜ್ಞಾತವಾಸದಲ್ಲಿ ನಕುಲನು ಇಟ್ಟುಕೊಂಡಿದ್ದ ಹೆಸರು: ನಾನು ಗ್ರಂಥಿಕನೆಂಬ ಹೆಸರಿಟ್ಟು ಕೊಂಡು ವಿರಾಟರಾಜನ ಹತ್ತಿರ ಅಶ್ವಪಾಲಕನಾಗಿರುತ್ತೇನೆ (ವಚಭಾ. ೧೮೫).
[ಸಂ.]

**ಗ್ರಂಥಿಕತಗರ** (ನಾ). ಒಂದು ಬಗೆಯ ಮೂಲಿಕೆ: ನಾಣಲಬೇರು, ಗ್ರಂಥಿಕತಗರ, ನೆಲಗುಳ್ಳದ ಬೇರು . . . ಇವಿಷ್ಟನೂ ಪ್ರತ್ಯೇಕ ನಾಲ್ಕು ವರಹ ತೂಕವ ಸೇವಿಸಲು ಭೂತಗ್ರಹ . . . ಪರಿಹರವಹವು (ವೈದ್ಯಸಾ. II, ೫೩). [ಗ್ರಂಥಿಕ + ತಗರ$_2$]

**ಗ್ರಂಥಿತ** (ಗು). ೧. ಜೋಡಿಸಿ ಕಟ್ಟಿದ; ಗಂಟುಹಾಕಿದ. **೨.** ಕ್ರಮಬದ್ಧವಾಗಿ ನಿರೂಪಿಸಿದ: ಈ ಮಹತ್ವದ ಸಮಾಜವಾದೀ ಸಿದ್ಧಾಂತವು ಅದರಲ್ಲಿ ಗ್ರಂಥಿತವಾಗಿದೆ (ಪ್ರಬಂಧ. ೧೧೯). [ಸಂ.]

**ಗ್ರಂಥಿದಳ** (ನಾ).=ಗ್ರಂಥಿಪರ್ಣ: "ಗ್ರಂಥಿಪರ್ಣಃ – ಗ್ರಂಥಿದಳ" (ಒಷಧಿ. ೪೭). [ಗ್ರಂಥಿ + ದಳ$_1$ (= ದಲ)]

**ಗ್ರಂಥಿಪರ್ಣ** (ನಾ). ಒಂದು ಬಗೆಯ ಸುಗಂಧದ ಗಿಡ; ಮಾಚಿಪತ್ರೆ: ಮರಿಚ ವ್ಯಾಕೀರ್ಣಪರ್ಣಂ ಕುರರತನುವ(ನಾ) ಗ್ರಂಥಿ ಪರ್ಣಚ್ಛದಂ ಕತ್ತುರಿವೆಕ್ಕಂ ಸಲ್ಲಕೀಪಲ್ಲವಮಿಭಶಿಶುವಂ . . . ಕೊರ್ವಿಸೆ ಸೊಗಯಿಪುದೀ ಕಾನನೋದ್ದೇಶಂ (ಪುಷ್ಪಪು. ೫–೬೯). [ಸಂ.]

**ಗ್ರಂಥಿಲ** (ಗು). ೧. ಗಂಟುಗಂಟಾದ. (ನಾ). **೨.** ಒಂದು ಬಗೆಯ ಗಿಡ; "ವಿರಾಂಗತ" (ಪಂಡಿತ). **೩.** ಒಂದು ಬಗೆಯ (ಎಲೆಗಳಿಲ್ಲದ) ಗಿಡ; "ಮುಳ್ಳುಅಜ್ಜಿ" (ಅಮರ. ಟೀಕೆ). [ಸಂ.]

**ಗ್ರಂಥಿಶೂಲೆ** (ನಾ). ಸಂಧಿ ಅಥವಾ ಕೀಲಿನಲ್ಲಿ ಉಂಟಾಗುವ ನೋವು. 'ಗ್ರಂಥಿಶೂಲೆಚೂರ್ಣ' ಪರಾ. [ಗ್ರಂಥಿ + ಶೂಲೆ]

**ಗ್ರಂಥಿಶೂಲೆಚೂರ್ಣ** (ನಾ). ಕೀಲುಗಳಲ್ಲಿ ಉಂಟಾಗುವ ನೋವಿನ ಪರಿಹಾರಕ್ಕಾಗಿ ಕೊಡುವ ಒಂದು ಬಗೆಯ ಔಷಧದ ಪುಡಿ: ಗ್ರಂಥಿ ಶೂಲೆಚೂರ್ಣ:–ಮಾಂಸಭೇದಿ ಅಜಮೂತ್ರದಲ್ಲಿ ಶುದ್ಧಿಮಾಡಿ . . . ಗುಳಿಗೆ ಮಾಡಿ ತ್ರಿಫಲೆಪುಡಿ ಅನುಪಾನದಲ್ಲಿ ಕೊಡುವುದು (ವಿವ್ವವಿ. ೨೫).
[ಗ್ರಂಥಿಶೂಲೆ + ಚೂರ್ಣ$_2$]

**ಗ್ರಂದಿಗ** 'ಗಂದಿಗ' ನೋ.

**ಗ್ರಂದಿಗೆ** 'ಗಂದಿಗೆ' ನೋ.

**ಗ್ರಥನ** (ನಾ).=ಗ್ರಂಥನ ೧: ಕವಿಯ ಕೆಲಸವೇನೆಂದರೆ, ಶಬ್ದಾರ್ಥಜನ್ಯ ಭಾವಗಳ ಗ್ರಥನದಿಂದ ಒಂದು . . . ಜಾಗರವನ್ನು ತೆರೆವುದು (ಕಾವ್ಯಕು. ೬೦). [ಸಂ.]

**ಗ್ರಥಿತ** (ಗು). ಜೋಡಿಸಿ ಕಟ್ಟಿದ; ಕ್ರಮವಾಗಿ ಜೋಡಿಸಿದ: ಮಥಿತರಿಪು ಭೂಪಾಳಂ . . . ಪ್ರಥಿತಪೃಥಿವೀಪಾಲೌಘಾನಮ್ರಮೌಳಿಮಣಿಪ್ರಭಾಗ್ರಥಿತಪದಪೀಠಾಗ್ರಂ (ಕಾದಂಪೂ. ೧೭); ಒದವಿದ ತೋರಮಲ್ಲಿಗೆಯ ಹಾರದ ಸೂಸಕದಿಂದೆ . . . ಸಹಕಾರದ ಕೆಂದಳಿರಿಂದೆ ಚೆಲ್ವುವೆತ್ತುದು ಕದಳೀದ್ರುಮಗ್ರಥಿತಸುಂದರವಂದನಮಾಲಿಕಾವೃತಂ (ಕಾದಂಬ. ೨೧೩).
[ಸಂ.]

**ಗ್ರಥಿಸು**(ಕ್ರಿ).೧. ಗ್ರಂಥ, ಮಾಲೆ ಮುಂತಾದುವುಗಳನ್ನು ರಚಿಸು.–ಕಟ್ಟು: ಇಷ್ಟು ಸಂಗ್ರಹವಾಗಿ ರಸೈಕದೃಷ್ಟಿಯಿಂದ ನಾಟಕವನ್ನು ಗ್ರಥಿಸಿರುವುದರಿಂದ ವಿಸ್ತಾರವಾದ ವರ್ಣನವೈಖರಿಗಳಿಗೂ . . . ಇದರಲ್ಲಿ ಅವಕಾಶವಿಲ್ಲ (ಸಂನಾಟ. ೭೮). **೨.** ಕೂಡು; ಒಟ್ಟಾಗು: ಗ್ರಥಿಸಿ ಚೀತ್ಕಾರದಿ ನಡೆವ ಭರಕೆ ಶೈಲ ಶಿಥಿಲವ ಮಾಳ್ಪ ಪೆಂಪುಳ್ಳ ರಥಗಳೆಂಭತ್ತನಾಲ್ಕೆಂಬ ಲಕ್ಷದೊಳ್ (ಭರಜ. ೨೨–೬೨). [ಗ್ರಥನ + – ಇಸು$_3$]

**ಗ್ರಸನ** (ನಾ). ೧. ನುಂಗುವುದು; ತಿನ್ನುವುದು: ಗ್ರಸನಾಟೋಪದಿ ನೆಯ್ದಿದಂ ಹರಿಯನುತ್ಕರ್ಣಂ ವಿದೀರ್ಣಾನನಂ (ಜಗವಿ. ೫–೪೫); ಕೋರಕಾಗ್ರ ಗ್ರಸನೋತ್ಕಂಠಾನ್ಯಪುಷ್ಟೋತ್ಕರವ್ರತಧಿಟಪಂ ಚೂತಂ (ಚಂದ್ರಪು. ೦೧–೪೩). **೨.** ಚಂದ್ರ ಅಥವಾ ಸೂರ್ಯನಿಗೆ ಆಗುವ ಗ್ರಹಣ: ಚಂದ್ರಬಿಂಬಕ್ಕೆ ರಾಹುಗ್ರಸನಂ (ಕಾದಂಬ. ೫೨೯). [ಸಂ.]

**ಗ್ರಸಿಸು** (ಕ್ರಿ). ನುಂಗು; ತಿನ್ನು: ಅದು ಕೊ ಗ್ರಾಸಬುದ್ಧಿಯಿಂ ಯಡತಿಟ್ಟು ಗಳಂ ಗ್ರಸಿಸಲೆಣಿಸಿ ಪಾತಾಳಕುಹರದಂತೆ ಶವ ಬಾಯಿಗಳಂ ತೆರದು ಪಕ್ಷಘಾತದಿಂ ಸಮುದ್ರವಂ ಗ್ರಾಸಗೊಳುತ ತನ್ನಂ ಗ್ರಾಸಿಸಲು ಪಾರ್ಶ್ವದಲ್ಲಿ ಬಾಯಂ ತೆರದು ಬರುವ ಮಹಾಸರ್ಪವಂ ಪಕ್ಷದಿಂ ಖಂಡಿಸಿ (ಸೌಗಂಧಿ. ೨೮೪ ೭). [ಗ್ರಸನ + – ಇಸು$_3$]

**ಗ್ರಸ್ತ** (ಗು). ೧. ಬಾಯಿಂದ ಹಿಡಿದ. **೨.** ತಿಂದ; ನುಂಗಿದ. (ನಾ). **೩.** (ಓದುವಾಗ) ಅಕ್ಷರಗಳನ್ನೂ ಪದಗಳನ್ನೂ ನುಂಗುವುದು; ಸರಿಯಾಗಿ ಉಚ್ಚರಿಸದೆ ಇರುವುದು: ಅಕ್ಷರಗಳನ್ನು ನುಂಗುವುದು 'ಗ್ರಸ್ತ' (ಕೆಶಾಅ. ೨೩೦ ಅಡಿಟಿ). **೪.** ನುಂಗಲ್ಪಟ್ಟವನು: ನಿರ್ಭರಪೂರವಾಗಿಯು ಮತಿಸ್ನಿಗ್ಧಾಶ್ರುಧಾರಾಜಳಪ್ಲವಮುಂ ಬಾರಿಸಲೆಂತುಮಾಟವು ವಲಂ ಕಾಳೋರಗಗ್ರಸ್ತನಂ (ಅದಿಪು. ೩–೫೪). **೫.** (ದೆವ್ವ, ಪಿಶಾಚಿ, ಗ್ರಹ ಮೊದಲಾದುವುಗಳಿಂದ) ಹಿಡಿಯಲ್ಪಟ್ಟವನು.–ಆವರಿಸಲ್ಪಟ್ಟವನು: ಮತ್ತೋರ್ವನೆತ್ತುಗ್ರಮಂಡಳಾಗ್ರುಮನನುಗೆಯ್ದು ವೀರಗ್ರಹಗ್ರಸ್ತನಾಗಿ (ಪಂಪಭಾ. ೧೧–೪೧ ವ); ಕಲಿಮಲದಿಂದ ಗ್ರಸ್ತನಾಗಿರುವ ಅತ್ಯಂತ ಮೂಢನಾದ ಜಡಜೀವನು ನಾನು ಅದನ್ನು ಹೇಗೆ ತಿಳಿಯುವೆನು? (ತುಳಸಿ. ೯). [ಸಂ.]

**ಗ್ರಸ್ತಾಸ್ತ** (ನಾ). ಗ್ರಹಣವಾದಾಗ (ಸೂರ್ಯ ಅಥವಾ ಚಂದ್ರ) ಪೂರ್ತಿ ಬಿಡುಗಡೆಯಾಗುವುದರೊಳಗಾಗಿ ಮುಳುಗುವಿಕೆ.–ಅಸ್ತವಾಗುವಿಕೆ ಮತ್ತು ಹಾಗೆ ಮುಳುಗಿದ ಸೂರ್ಯ ಅಥವಾ ಚಂದ್ರ: ನಾಳೆ ಸೂರ್ಯ ಗ್ರಹಣದಲ್ಲಿ ಗ್ರಸ್ತಾಸ್ತವಾಗುವುದರಿಂದ ಹಗಲು ಊಟಮಾಡುವಂತಿಲ್ಲ (ರೂಢಿ); ನಾಳೆಯು ಗ್ರಹಣದಲ್ಲಿ ಸೂರ್ಯ ಗ್ರಸ್ತಾಸ್ತನಾಗುತ್ತಾನೆ (ರೂಢಿ).
[ಗ್ರಸ್ತ + ಅಸ್ತ]

**ಗ್ರಹ** (ನಾ). ೧. ತುಡುಕುವುದು; ಹಿಡಿಯುವುದು; ಹಿಡಿತ. **೨.** ತೆಗೆದುಕೊಳ್ಳುವುದು; ಸ್ವೀಕರಿಸುವುದು. **೩.** ಸೂರ್ಯಚಂದ್ರರ ಗ್ರಹಣಕ್ಕೆ ಕಾರಣವಾದುದೆಂದು ನಂಬಲಾದ ರಾಹು. **೪.** ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು ಎಂಬ

ಒಂಬತ್ತು ಆಕಾಶಚರಗಳು: ಪ್ರಬಲಮೆನಿಕುಂ ಗ್ರಹಂ . . . ಆಱುಬಲಮುಮಂ ಪಡೆದಾಗಳ್ (ಜಾತಕಿ. ೨-೧೩); ಆರನುಜ್ಜೆಯ ಬಲದಿ ಲೋಕದಿ ಸೂರಿಯಾದಿ ಗ್ರಹಂಗಳಿರುತಿಹವು (ಗಗತಾ. ೧೯-೧); ಐದು ಗ್ರಹಗಳು ಉಚ್ಚವಾಗಿವೆಯೆಂದೇ ಹೇಳಬೇಕು (ಜಂಗಾಳ್. ೨). 'ನವಗ್ರಹ' ಪರಾ. ೫. ದುಷ್ಟಶಕ್ತಿ; ಭೂತ; ಪಿಶಾಚಿ; ಗರ: ಗ್ರಹ ಗ್ರಹಂ ಚಲ್ವಾಗಿರಲ್ ಸೇರದೇಂ (ಸೋಮೇಶ. ೧೮); ಕಾಂತಾರದೊಳಂ ಪ್ರೇತವನಾಂತರದೊಳಂ . . . ಭಯಭ್ರಾಂತಿಯನೋಡಿದೊಡಲ್ಲಿ ದು(ತು)ರಂತ ಗ್ರಹಮಿರ್ದು ಪಿಡಿಗುಮಾ ಹಯವರನಂ (ಅಶ್ವಶಾ. ೧೬-೧೫). ೬. ಪಿಶಾಚಿಯ ಹಿಡಿತ; ಭೂತಾವೇಶ: (+). ೭. ಬ್ರಾಹ್ಮಣ. ೮. ಭೂಮಿ. ೯. ಜೀವಸಮೂಹ. ೧೦. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ: "ನಿಧಿ ಮಣಿ ಗ್ರ ಹ ರಂ ಧ್ರ ಮಿ ರ ಲು ಪೊಂಬತ್ತು" (ವಂಗರಾ. ೧೦೪-೮). ೧೧. ಮನೆ; ನಿವಾಸ: "ಆದಿತ್ಯಾದಿ ನವಗ್ರಹಂ ಧರಣಿ ಜೀವಿವ್ರಾತಮಾಕರ್ಷಣಂ ಭೂದೇವಂ ತಪಮುಂ ಗ್ರಹಾಖ್ಯಂ" (ನಾನಾರ. ೩೪). 'ಗ್ರಹಗ್ರಾಮ' ಪರಾ. ೧೨. [ಸಂಗೀತ] ಯಾವುದೇ ರಾಗವನ್ನು ಹಾಡಲು ಪ್ರಾರಂಭಿಸಬೇಕಾದ ಸ್ವರ; ರಾಗ ಪ್ರಾರಂಭವಾಗುವ ಸ್ವರ: ಒಂದೊಂದು ರಾಗಕ್ಕೂ ಹಾಡಲು ಪ್ರಾರಂಭಿಸಬೇಕಾದ ಸ್ವರ (ಗ್ರಹ) . . . ನಿಯಮ, ಕ್ರಮಗಳು ನಿಷ್ಕರ್ಷಿಸಲ್ಪಟ್ಟವು (ಭಾರದ. ೫೪೧). [ಸಂ.]

**ಗ್ರಹಕಲ್ಪ** (ನಾ). ಗ್ರಹಕ್ಕೆ ಸಮಾನವಾದುದು; ಗ್ರಹಗಳ ನಡುವೆ ಇರುವ ಸಣ್ಣಸಣ್ಣ ಗ್ರಹಗಳ ತಂಡ: ಈ ಸಣ್ಣಪುಟ್ಟ ಗ್ರಹಗಳ ತಂಡಕ್ಕೆ ಸೂಕ್ಷ್ಮ ಗ್ರಹಗಳು ಅಥವಾ ಗ್ರಹಕಲ್ಪ ಎಂದು ಹೆಸರು (ಆಕಾಶ. ೩೪). [ಸಂ.]

**ಗ್ರಹಕೂಟ** (ನಾ). ಗ್ರಹಗಳ ಸಮಾಗಮ,–ಕೂಟ: (Conjunction. ಪಾರಿಸಿ. ೩೦). [ಗ್ರಹ + ಕೂಟ$_1$]

**ಗ್ರಹಗತಿ** (ನಾ). ೧. ಗ್ರಹಗಳ ಚಲನೆ; "ಮಂದೋಚ್ಚ ಶೀಘ್ರೋಚ್ಚ ಪಾತಗಳೆಂಬ ಶಕ್ತಿಗಳಿಂದ ಉಂಟಾಗುವ ಗ್ರಹಗಳ ಸಂಚಾರದ ವೇಗ" (ಜಾತಕಿ. ಪರಿ ೩). 'ಗ್ರಹಗತಿದರ್ಶಕ' ಪರಾ. ೨. ಗ್ರಹಗಳ ಚಲನೆಯಿಂದ ಮನುಷ್ಯನ ಜೀವನದ ಮೇಲೆ ಉಂಟಾಗುವ ಪರಿಣಾಮ: ಈ ವರ್ಷ ನನ್ನ ಗ್ರಹಗತಿ ಹೇಗಿದೆ ಸ್ವಲ್ಪ ನೋಡಿ ಹೇಳಿ (ರೂಢಿ). [ಗ್ರಹ + ಗತಿ]

**ಗ್ರಹಗತಿದರ್ಶಕ** (ನಾ). "ಗ್ರಹಗಳ ಚಲನೆಯನ್ನು ತೋರಿಸುವ (ಗಡಿಯಾರದ ರಚನೆಯ) ಮಾದರಿ: ಗ್ರಹಗತಿದರ್ಶಕ". (Orrery. ಇಂಕನಿ). [ಗ್ರಹಗತಿ + ದರ್ಶಕ]

**ಗ್ರಹಗ್ರಸ್ತ** (ನಾ). ಭೂತ, ಪಿಶಾಚಿ ಮೊದಲಾದುವುಗಳ ಆವೇಶಕ್ಕೆ ಒಳಗಾದವನು; ಗರಹೊಡೆದವನು: ಗ್ರಹಗ್ರಸ್ತಂ ಮಂತ್ರದಿನಾವೇಶಂಗೊಂಡು ತನ್ನ ಮುನ್ನಿನ ಭವದ ಪೆಸರಂ ನೆಗಟ್ತೆಯುಮಂ ಪೇಟ್ದುದು ಮಾಬಾಲಗೋಪಾಲವೃದ್ಧಪ್ರಸಿದ್ಧಂ (ಶಾಂತಿಪು. ೮-೧೩೭ ವ). [ಗ್ರಹ + ಗ್ರಸ್ತ]

**ಗ್ರಹಗ್ರಾಮ** (ನಾ). ೧. ಗ್ರಹಗಳ ಸಮೂಹ,–ಗುಂಪು: ಇದು ದೀಹಾರದ ಗೇಹದಂತೆ ಹರಿಣೀರಮ್ಯಂ ಗ್ರಹಗ್ರಾಮದಂತುದಿತಕ್ರೋಡವಿಭಾಸಿ (ಪುಷ್ಪಪು. ೫-೬೮). ೨. ಮನೆಗಳ ಸಮೂಹ. ೧, ೨: ಗ್ರಹಗ್ರಾಮದಂತೆ ವಿತತಕೇತು ಶತಶೋಭೆಯುಂ (ಪುಷ್ಪಪು. ೯-೩೦ ವ). [ಗ್ರಹ + ಗ್ರಾಮ]

**ಗ್ರಹಚಾರ** (ನಾ). ೧. ಗ್ರಹಗಳ ಚಲನೆ; ಗ್ರಹಗತಿ. ೨. ಗ್ರಹಗಳ ಚಲನೆಯಿಂದ ಮನುಷ್ಯನ ಮೇಲೆ ಉಂಟಾಗುವ ಪರಿಣಾಮ: ಗ್ರಹಚಾರ ಕೆಟ್ಟಿತೆ ವಿಧಿ ಶಾಪವಿಟ್ಟಿತೆ (ಇಂಜಾಪ. ೪೫-೧೧). ೩. ಗ್ರಹಗತಿಯಿಂದ ಉಂಟಾಗುವ ದುಷ್ಪಪ್ರಭಾವ; ದುರದೃಷ್ಟ; ದುರವಸ್ಥೆ: ಅವನಿಗೂ ಮೆಟ್ಟಿಕೊಂಡಿತು ಗ್ರಹಚಾರ (ಶಾಲಿಮಾ. ೩೩); ಈ ಗ್ರಹಚಾರಕ್ಕೇ ನಾನು ನಿಮ್ಮಿಬ್ಬರನ್ನೂ ಮದುವೆಯಾದುದು (ಶಾಂತಲಾ. ೧೯೮).

**ಗ್ರಹಚಾರಬಿಡಿಸು**=ಬಯ್ಯು; ಗದರಿಸು: ವೆಂಕಮ್ಮ ಜಡಿಮಳೆ ಹಿಡಿದ ಹಾಗೆ ಹಿಡಿದು 'ತೊಗೋ ಬಿಡಬೇಡ' ಅಂತ ಗ್ರಹಚಾರ ಬಿಡಿಸಿಬಿಟ್ಟರು (ರಾಗಿಣಿ. ೩೮); ಸಮಯ ಸಿಕ್ಕಿದಾಗ ಅವನಿಗೆ ಗ್ರಹಚಾರಬಿಡಿಸಬೇಕೆಂದು ಸುಬ್ಬುಕೃಷ್ಣನೂ ಕಾಯುತ್ತಿದ್ದ (ರೂಪಸ. ೦೫೫). **ಗ್ರಹಚಾರ ವಕ್ರಿಸು**=ದುರದೃಷ್ಟ ಒದಗು; ಕೆಡುಕಾಗು: ಇದೇನು ಗ್ರಹಚಾರ ವಕ್ರಿಸಿತು (ರೂಪಸಂ. ೧೭). [ಗ್ರಹ + ಚಾರ]

**ಗ್ರಹಣ** (ನಾ). ೧. ಹಿಡಿಯುವುದು; ಸ್ವಾಧೀನಪಡಿಸಿಕೊಳ್ಳುವುದು. "ನಿಗ್ರಹಂ ಪೀಡನಂ ಸ್ಪರ್ಶನಂ ಗ್ರಹಣಮೆನಲು ಹಿಡಿಹಂ" (ವಂಗರಾ. ೦೩೦-೧೭). ೨. ತೆಗೆದುಕೊಳ್ಳುವುದು. ೩. ಭೂಮಿ, ಸೂರ್ಯ ಹಾಗು ಚಂದ್ರ ಇವು ಮೂರು ಒಂದೇ ರೇಖೆಯಲ್ಲಿ ಬಂದಾಗ ಭೂಮಿಯ ನೆರಳು ಚಂದ್ರನ ಮೇಲೆ ಬಿದ್ದು ಅಥವಾ ಸೂರ್ಯನ ಬಿಂಬಕ್ಕೆ ಚಂದ್ರ ಬಿಂಬ ಅಡ್ಡವಾಗಿ ಉಂಟಾಗುವ ಕತ್ತಲೆಯ ಆವರಣ: ಕಂಡಂ ಗ್ರಹಣಮನದನಾಖಂಡಲದಿಙ್ಮುಖದೆ ಬಂದು ಸರ್ವಗ್ರಾಸಂಗೊಂಡತ್ತಪರಾದಿತ್ಯನ ಮಂಡಲಮಂ ಬಾಹುರಾಹುಸತ್ಯಾಶ್ರಯನಾ (ಗದಾಯು. ೦-೨೬). ೪. ತಿಳಿದುಕೊಳ್ಳುವುದು; ಗ್ರಹಿಸುವುದು: ಈ ಸಂವೇದನದಲ್ಲಿ ಗ್ರಾಹ್ಯವೆಂಬ ಘಟಾದಿವಸ್ತುವೂ ಗ್ರಾಹಕನೆಂಬ ಜೀವಾತ್ಮವಸ್ತುವೂ ಗ್ರ ಹ ಣ ವೆಂ ಬ ಸಂವೇದನವೂ–ಈ ಮೂರೂ ತೋರುವುವು (ಹಿಂದಸಾ. ೧೭೭). 'ಗ್ರಹಣಶಕ್ತಿ' ಪರಾ. ೫. (ಅಲಂ) ಕೋಪ ಮೊದಲಾದುವುಗಳಿಂದ ಉಂಟಾಗುವ ಉದ್ವಿಗ್ನತೆ,–ಮಂಕು ಕವಿದಿರುವಿಕೆ: ಗ್ರಹಣವು ಬಿಟ್ಟಿತೆ ಆಗ್ರಹವಾರಿತೆ (ಇಂಜಾಪ. ೦೮೧-೪೪). ೬. [ನಾಟ್ಯ] ನಾಟ್ಯದಲ್ಲಿ ಒಂದು ಭಂಗಿ; ಬೆರಳನ್ನು ಕಚ್ಚುವುದು: ಸೊಗಯಿಪ ಬೆರಲಂ ಕಚ್ಚಲ್ ಮೃಗನಯನೇ ಗ್ರಹಣಮೆಂಬ ದಂತಮೆನಿಕ್ಕುಂ (ಲಾಸ್ಯರಂ. ೩-೯೦). [ಸಂ.]

**ಗ್ರಹಣಶಕ್ತಿ** (ನಾ). (ವಿಷಯವನ್ನು) ತಿಳಿದುಕೊಳ್ಳುವ ಶಕ್ತಿ: ಹುಟ್ಟಿದ ಮಗುವಿಗೆ ಐದುವರ್ಷಗಳ ವರೆಗೆ ಹೆಚ್ಚು ಗ್ರಹಣಶಕ್ತಿ ಇರುವುದಿಲ್ಲ (ಭಾರದ. ೦೫೮); ಗ್ರಹಣಶಕ್ತಿಗಿಂತ ನಿರ್ಮಾಣಶಕ್ತಿಯು ಹೆಚ್ಚಿನದೆಂದು ಅವನ ಅಭಿಪ್ರಾಯವಿದ್ದಹಾಗೆ ಕಾಣುತ್ತದೆ (ನವ್ಯಕಾ. ೧೦೭). [ಗ್ರಹಣ + ಶಕ್ತಿ]

**ಗ್ರಹಣಸಲ್ಲೇಖನಾಬುದ್ಧಿ** (ನಾ). ಹಿಡಿಯುವ ಮತ್ತು ಬಿಡುವ ಗುಣ: ವಾಗ್ದೇವಿಯೊಡನೆ ಪುಟ್ಟಿದುದಱಿಂ ವಾಚಾಳತೆಯುಂ ಅಮರವೈರಿಯೊಡನೆ ಪುಟ್ಟಿದುದಱಿಂ ಗ್ರಹಣಸಲ್ಲೇಖನಾಬುದ್ಧಿಯುಂ . . . ನಿನಗೆ ಸಹಜಮಾಗಿರ್ದುವು (ಗದಾಯು. ೯-೭ ವ). [ಸಂ. (ಗ್ರಹಣ + ಸಲ್ಲೇಖನಾ + ಬುದ್ಧಿ)]

**ಗ್ರಹಣಿ** (ನಾ). ೧. ಬಹಳವಾಗಿ ಭೇದಿಯಾಗುವ ಒಂದು ಬಗೆಯ ರೋಗ; ಅತಿಸಾರ: ಗ್ರಹಣಿವ್ಯಾಧಿಗಳಿಗೆಲ್ಲಾ ಶುಂಠಿಯನ್ನು ಸುಟ್ಟು ಪುಡಿಮಾಡಿ ಹಾಕಿ ಕಟ್ಟುಮೊಸರಲ್ಲಿ ಕೊಡುವುದು (ವಿಮ್ಮವಿ. ೪೩); ಆ ಲೇಹ್ಯವಂ ಉದಯದಲ್ಲಿ ಸೇವಿಸೆ ಕೆಮ್ಮು . . . ಗ್ರಹಣಿ, ಪೀನಸ, ಅರೋಚಕ, ವಾತ ಪಿತ್ತಶ್ಲೇಷ್ಮಗಳು ಸಹ ಗುಣಮಕ್ಕುಂ (ಸಕವೈ. ೨೦೭). ೨. ಮೂಳೆಗಳು ಮೆದುವಾಗುವ, ಒಂದು ಬಗೆಯ ಮಕ್ಕಳರೋಗ; ಮುರುಟು ದೋಷ. [ಸಂ.]

**ಗ್ರಹಪತಿ** (ನಾ). ಗ್ರಹಗಳ ಒಡೆಯ; ಸೂರ್ಯ. [ಗ್ರಹ + ಪತಿ$_2$]

**ಗ್ರಹಪಥ** (ನಾ). ಗ್ರಹಗಳು ಸೂರ್ಯನ ಸುತ್ತಲೂ ಸುತ್ತುವ ಮಾರ್ಗ,–ಪಥ: ಭೂಮಿಯನ್ನೂ ಗ್ರಹಪಥಗಳ ಕೇಂದ್ರಗಳು ಅನುಸರಿಸುವ ಮಾರ್ಗಗಳನ್ನೂ . . . ತೋರಿಸಿದೆ (ಭೌತವಿ. ೨೮). [ಗ್ರಹ + ಪಥ]

**ಗ್ರಹಪೀಡೆ** (ನಾ). ಗ್ರಹಗತಿಯ ಪರಿಣಾಮವಾಗಿ ಅಥವಾ ಭೂತ, ಪಿಶಾಚಿ ಮೊದಲಾದ ದುಷ್ಟಶಕ್ತಿಗಳಿಂದ ಮನುಷ್ಯನಿಗಾಗುವ ತೊಂದರೆ,–ಬಾಧೆ. [ಗ್ರಹ + ಪೀಡೆ]

**ಗ್ರಹಬಲ** (ನಾ). ಸೂರ್ಯ, ಚಂದ್ರಾದಿ ನವಗ್ರಹಗಳ ಶುಭಪ್ರದಾನ ಶಕ್ತಿ : ಗ್ರಹಬಲವಿಲ್ಲದ ಜನ್ಮಿಗನಂತೆ ಪೆರ್ಚಿಲ್ಲದೆ (ಶಾಂತಿಪು. ೪-೩೦ ವ) ; ಸಕಲಗ್ರಹಬಲ ನೀನೆ ಸರಸಿಜಾಕ್ಷ (ಪುರಂದ. ೨-೨೬ ಪಲ್ಲವಿ).
[ ಗ್ರಹ + ಬಲ ]

**ಗ್ರಹಬಾಧೆ** (ನಾ). = ಗ್ರಹಪೀಡೆ. [ ಗ್ರಹ + ಬಾಧೆ ]

**ಗ್ರಹಭೀತ** (ಗು). ಪಿಶಾಚಿಯಂ ಬಾಧೆಯಿಂದ ಹೆದರಿದ; ದೆವ್ವದ ಪೀಡೆಗೆ ಒಳಗಾದ: ಪಲ್ದಿಂಗುಮಕ್ಷಿಗಳ್ ಬಹುವರ್ಣಂ ಬೆರಸಿರ್ಕುಮಪ್ಪೊಡಂ ತಾಂ ತುರಗಂ ಗ್ರಹಭೀತನಕ್ಕುಂ (ಅಶ್ವಶಾ. ೧೬-೧೬). [ ಗ್ರಹ + ಭೀತ ]

**ಗ್ರಹಮೈತ್ರ** (ನಾ). [ಜ್ಯೋತಿ] (ವಧೂವರರ) ಜಾತಕಗಳಲ್ಲಿ ರಾಶಿಗಳ ಅಧಿಪತಿಗಳ ಸ್ನೇಹ,-ಹೊಂದಾಣಿಕೆ: ಗ್ರಹಚಾರವಲ್ಲವದು, ಗ್ರಹಮೈತ್ರ. ಅದಕ್ಕೇ ನಾವಿಬ್ಬರೂ ಒಂದು (ಶಾಂತಲಾ. ೧೯೮). [ ಗ್ರಹ + ಮೈತ್ರ ]

**ಗ್ರಹಯೋಗ** (ನಾ). [ಜ್ಯೋತಿ] (ಮನುಷ್ಯನಿಗೆ ಇಷ್ಟಾನಿಷ್ಟಗಳನ್ನುಂಟು ಮಾಡುವ) ಸೂರ್ಯಾದಿ ಗ್ರಹಗಳ ಸೇರುವಿಕೆ: ಈ ವಧೂವರರಿಗೆ ಗ್ರಹಯೋಗ ಚೆನ್ನಾಗಿದೆ (ರೂಢಿ). [ ಗ್ರಹ + ಯೋಗ ]

**ಗ್ರಹಶಂಕೆ** (ನಾ). ಭೂತ, ಪಿಶಾಚಿಗಳಿಂದುಂಟಾಗುವುದೆಂದು ನಂಬಲಾಗಿರುವ ಅಸ್ವಸ್ಥತೆ,-ಬಾಧೆ : ಗ್ರಹಶಂಕೆಗೆ ನುಗ್ಗೇಸೊಪ್ಪಿನ ರಸದಲ್ಲಿ ತೇದು ಇಕ್ಕುವುದು (ವಿಶ್ವವಿ. ೧೫೬). [ ಗ್ರಹ + ಶಂಕೆ ]

**ಗ್ರಹಶಾಂತಿ** (ನಾ). ಗ್ರಹಗಳು ದುಷ್ಟಪ್ರಭಾವವನ್ನು ಬೀರದಂತೆ ಅವುಗಳನ್ನು ಶಾಂತಗೊಳಿಸುವುದು ಮತ್ತು ಅದಕ್ಕಾಗಿ ಮಾಡುವ ಜಪ, ಹೋಮ ಮುಂತಾದುವು : ಯಾಜ್ಞವಲ್ಕ್ಯಸ್ಮೃತಿ-ಇದರಲ್ಲಿ ಆಚಾರ, ವ್ಯವಹಾರ . . . ಗ್ರಹಶಾಂತಿ, ರಾಜಧರ್ಮವೆಂಬ ೧೩ ಪ್ರಕರಣಗಳಿವೆ (ಭಾರದ. ೬೨). [ ಗ್ರಹ + ಶಾಂತಿ ]

**ಗ್ರಹಸ್ವರ** (ನಾ). = ಗ್ರಹ ೧೨ : ರಾಗಕ್ಕೆ ಮೂರು ವಿಧ ಪ್ರಧಾನಸ್ವರಗಳುಂಟು. ಕ್ರಮವಾಗಿ ಅವು-(1) ಗ್ರಹಸ್ವರ, (2) ಅಂಶಸ್ವರ, (3) ನ್ಯಾಸಸ್ವರ. ರಾಗ ಪ್ರಾರಂಭವಾಗುವ ಸ್ವರವೇ ಗ್ರಹಸ್ವರ (ಸಂಗೀಜಂ. ೨೨).
[ ಗ್ರಹ + ಸ್ವರ ]

**ಗ್ರಹಿಕೆ** (ನಾ). ತಿಳಿವಳಿಕೆ ; ಅಭಿಪ್ರಾಯ : ಹಣವಿದ್ದರೆ ಎಲ್ಲ ಸಿಕ್ಕುತ್ತವೆ ಎಂಬದು ತಪ್ಪು ಗ್ರಹಿಕೆ (ನಿಷ್ಕಾಮ. ೧೩೯) ; ತಾತ್ಕಾಲಿಕವಾಗಿ ನಾವು ಕವಿಚರಿತೆಯ ಗ್ರಹಿಕೆಯನ್ನು ಅನುಸರಿಸಿದ್ದೇವೆ (ಕಸಾಜ. ೪೭).

**ಗ್ರಹಿಕೆಯಾಗು** = ತಿಳಿ ; ಮನವರಿಕೆಯಾಗು : ನ್ಯಾಯದರ್ಶಿಗಳಿಗೆ ಮೊಕದ್ದಮೆಯ ಸ್ವರೂಪ ಸರಿಯಾಗಿ ಗ್ರಹಿಕೆಯಾಗಲಿಲ್ಲ (ಪುನರು. ೨೦೪).
[ ಸಂ. ಗ್ರಹಿಕಾ ]

**ಗ್ರಹಿತ** (ಗು). ೧. ಹಿಡಿದ ; ಆವರಿಸಿದ ; ಗ್ರಸ್ತ : ಸೊಲ್ಲಲಭಿಮಾನಂ ಗ್ರ[ಪಾಠಾಂ. ಗೃ]ಹಿತಮನನಲ್ಲದಾ ತತ್ವವನಱಿಯಲದು ದುರ್ಲಭವದಂತಾಗಿ (ಬಸಪು. ೩೯-೧೩). (ನಾ). ೨. ಗ್ರಹಿಸುವವನು ; ಗ್ರಹಣಶಕ್ತಿಯುಳ್ಳವನು : ಈ ಗುಣಗ್ರಾಹಕ ಗ್ರಹಿತನ ಉಭಯಭಾವ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಕ್ರಿಯಾನಿರ್ವಾಹಸ್ಥಲ (ಮದೇವ. ೨೭೬-೨೬). [ < ಸಂ. ಗೃಹೀತ ]

**ಗ್ರಹಿಸು** (ಕ್ರಿ). ೧. (ಕೈಯಿಂದ) ಹಿಡಿ; ತೆಗೆದುಕೊಳ್ಳು. ೨. ಸ್ವೀಕರಿಸು ; ಅಂಗೀಕರಿಸು : ಎನ್ನ ಕರಣೇಂದ್ರಿಯಂಗಳು ನಿಮ್ಮ ಪ್ರಸಾದವನೆ ಗ್ರಹಿಸುತಿರ್ಪವಯ್ಯ (ಅಖಂಡೇ. ೧೮೨-೭೭) ; ಈ ಛಂದಸ್ಸು ಬಲು ಹಿಂದಿನಿಂದ ಬೆಳೆಯುತ್ತಲೇ ಇದೆ ; ಹೊಸಹೊಸ ಸಂಬಂಧಗಳನ್ನು ಗ್ರಹಿಸುತ್ತಲೇ ಇದೆ (ಸಮಾಲೋ. ೧೬೯). ೩. ಅರಿ ; ತಿಳಿದುಕೊಳ್ಳು : ಪಗೆಯೊಳಾದೊಡಂ ಗುಣಗಣಮಿರೆ ತಾಂ ಗ್ರಹಿಸಿ ಪೊಗಳದಿರ್ಪನೆ ಸುಜನಂ (ಶಬಶಂ. ೨-೧೧೩) ; ಇಂತಹ ಅಲ್ಪವಿಷಯ ಗ್ರಹಿಸೋದಕ್ಕೆ ಬುದ್ಧಿಶಕ್ತಿಯಿಲ್ಲದಿದ್ದರೆ ನಿಮ್ಮ ಗುರುಗಳದ್ದು ತಪ್ಪು (ಚಂಗಾಳ್ಕ. ೧೪೧). [ ಗ್ರಹಣ + – ಇಸು₃ ]

**ಗ್ರಾಂ** (ನಾ). ಮೆಟ್ರಿಕ್‌ಪದ್ಧತಿಯಲ್ಲಿ ತೂಕದ ಒಂದು ಏಕಮಾನ : ತೂಕಕ್ಕೆ ಬ್ರಿಟಿಷರು ಪೌಂಡ್ (Pound) ಎಂಬ ಏಕಮಾನವನ್ನೂ ವೈಜ್ಞಾನಿಕರು ಗ್ರಾಮ್ (Gramme) ಎಂಬ ಏಕಮಾನವನ್ನೂ ಬಳಸುತ್ತಾರೆ (ಭಾಶವಿ. ೬೦). 'ಕಿಲೊಗ್ರಾಂ' ಪರಾ. [ ← ಇಂ. Gramme ]

**ಗ್ರಾಂಥಿಕ** (ಗು). ಗ್ರಂಥಕ್ಕೆ ಸಂಬಂಧಿಸಿದ,-ಬಳಸುವ : ಭಾಷೆಗಳನ್ನು ವ್ಯಾವಹಾರಿಕ, ಗ್ರಾಂಥಿಕ ಎಂದು ವಿಭಾಗಿಸಬಹುದು (ಕೃಖಿಡಿ. ೨೯೩). [ ಸಂ. ]

**ಗ್ರಾಂಥಿಕಭಾಷೆ** (ನಾ). ಗ್ರಂಥರಚನೆಗೆ ಉಪಯೋಗಿಸುವ ಭಾಷೆ ; ಗ್ರಾಮ್ಯದಿಂದ ಬೇರೆಯಾದ ಭಾಷೆ : ಗ್ರಾಂಥಿಕಭಾಷೆ ವ್ಯಾಕರಣ ಸಿದ್ಧವಾಗಿ ಶುದ್ಧವಾಗಿ ಏಕರೂಪವಾಗಿರುವುದು (ಸಂಶೋಧ. ೭೯).
[ ಗ್ರಾಂಥಿಕ + ಭಾಷೆ ]

**ಗ್ರಾಣ** (ನಾ). = ಗ್ರಹಣ ೩ : ಚೈತ್ರದ ಪುಣ್ಣಮಿ ಸೋಮವಾರ ಸೋಮಗ್ರಾಣದಂದು . . . ದೇವರಿಗೆ ಬಿಟ್ಟ ದತ್ತಿ (ಸೌಇಇ. IX-i, ೨೮೦-೨೦; 1186). 'ಗರಣ' ಪರಾ. [ < ಸಂ. ಗ್ರಹಣ ]

**ಗ್ರಾಮ** (ನಾ). ೧. ಹಳ್ಳಿ ; ಸಣ್ಣಊರು : ಭದ್ರಬಾಹುಭಟ್ಟಾರರ್ . . . ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಿರ್ಪನ್ನೆಗಂ (ವಡ್ಡಾರಾ. ೭೫-೩) ; ಯಿಾ ಗ್ರಾಮವೂ ಯಿವರಿಗೆ ಜಹಗೀರಾಯಿತು (ಹೈದರ. ೨೯). ೨. ಗುಂಪು ; ಸಮೂಹ : "ಇಂದ್ರಿಯ ಭೂತ ಶಬ್ದ ವಿಷಯ ಕರಣಂಗಳಂ ಕೂಡಿ ಪೇಟಲು ಗ್ರಾಮಮೊಂದೆಂಬುದು" (ಮಂಗರಾ. ೧೪೧-೧೩). ೩. [ಸಂಗೀತ] ಸಪ್ತಸ್ವರಗಳ ಗುಂಪು ; ಷಡ್ಜ, ಮಧ್ಯಮ ಮತ್ತು ಗಾಂಧಾರವೆಂಬ ಮೂರು ಗುಂಪು : ಆ ಸಪ್ತನಾದಕಿಪ್ಪತ್ತೆರಡು ಶ್ರುತಿಯೆನಿಕುಮಾ ಶ್ರುತಿಯೊಳಿಪ್ಪತ್ತೆರಡು ಗಮಕಮಕ್ಕುವಕೆ ದೇಶೀಯಮೋಳಮಕ್ಕುವಕೆ ಮೂಱುಗ್ರಾಮವವಕೆ ಹದಿನೆಂಟು ಜಾತಿ (ಮಂಗರಾ. ೨೩-೫) ; ಗ್ರಾಮ ಮೂಱಱ ಸಂಚರಣೆಗಳ ಸೀಮೆಯಲಿ . . . ರಾಮಣೀಯಕ ರಚನೆಗಳಲಿ ಸನಾಮನೆನಿಸುವವನೆ ಗಾಯಕನು (ಕುವ್ಯಾಸ. ಓರಿಇ. ೧-೯೬) ; ಗ್ರಾಮ ಜಾತಿ ಅಂಗವೆಂಬ ಮೂಱಱಿಂ ನೂಱೈವತ್ತೇಳು ರಾಗಂಗಳುದಿಸುವವು (ವಿವೇಕ. ೨೩೪) : ಗ್ರಾಮ ಎಂದರೆ . . . ಸಂಗೀತದಲ್ಲಿ ಮೂರ್ಛನೆಗಳ ಗುಂಪು ಎಂದರ್ಥ. ಈ ಗ್ರಾಮಗಳು ಮೂರು-ಕ್ರಮವಾಗಿ ಅವು ಷಡ್ಜಗ್ರಾಮ, ಮಧ್ಯಮಗ್ರಾಮ ಮತ್ತು ಗಾಂಧಾರಗ್ರಾಮಗಳು (ಸಂಗೀಜಂ. ೧೯). ೪. ರೇತಸ್ಸು. ೫. ಸಮುದ್ರ. ೬. ಕಿರಣ. ೭. ಶಬ್ದ ; ಧ್ವನಿ. ೮. ವಂದಿ ; ಹೊಗಳುಭಟ್ಟ. ೯. ಸಂಭೋಗ: (ಕ). ೧೦. ಸುಖಪಡುವುದು ; ಭೋಗ : "ಮಾಗಧ ಭೂತ ಶಬ್ದ ಕಿರಣಾಂಬುಧಿ ರೇತ ಜನಾಂತ ಸಂಕುಲಂ ರಾಗವಿಭೇದ ಭೋಗಮಿವು ಗ್ರಾಮಮೆನಿಕ್ಕು" (ನಾನಾರ. ೩೮).

**ಗ್ರಾಮನಾಮೋತ್ತಮ** = ಗ್ರಾಮದಲ್ಲಿ ಹೆಸರುವಾಸಿಯಾದವನು : ಕಾರ್ಯ್ಯ ಬೃಹಸ್ಪತಿಗಳೇಕೈಕಪಣ್ಡಿತಗ್ರ್ರಾಮನಾಮೋತ್ತಮವೈರ್ಷ್ಣವಗೀತಿ ಮನೋಹರರ್ . . . ಶ್ರೀಮಲ್ಲೊಕ್ಕಿಗುಣ್ಡಿಯೂರೊಡೆಯ ಪ್ರಮುಖ ಮಹಾಜನಂ (ಕಇ. II, ೧೦-೯ ; 1080). [ ಸಂ. ]

**ಗ್ರಾಮಕಾರ್ಯ** (ನಾ). ೧. ಗ್ರಾಮಕ್ಕೆ ಸಂಬಂಧಿಸಿದ ವ್ಯವಹಾರ ; ಹಳ್ಳಿಯ ಸಾಮಾಜಿಕ ಕಾರ್ಯ,-ಸೇವೆ : ಶ್ರೀಮನುಮಹಾಅಗ್ರಹಾರಂ ಹೂವಿನಹಡಂಗಿಲೆಯೂರೊಡೆಯ ಪ್ರಮುಖ ವಶೇಷ ಮಹಾಜನಂ ನೂಱಿರ್ಪ್ಪದಿಂಬರುಂ . . . ಸೋಮವಾರದಂದು ಗ್ರಾಮಕಾರ್ಯ್ಯನಿಮಿತ್ತವಾಗಿ ಶ್ರೀಸ್ವಯಂಭುಕೋಟಿ ಶಂಕರದೇವರ ಸನ್ನಿಧಾನಕ್ಕೆ ಬಂದಲ್ಲಿ (ಸೌಇಇ. IX-i, ೨೫೪-೫೯ ; 1144). ೨. ವ್ಯಭಿಚಾರ ; ಹಾದರ:ಆ ವೃತ್ತಿವಂತರೊಳಗೆ × ನ್ಯದೇಯ್ಯೋಪಾಸ್ತೆ ಅನಾಚಾರ ದುರಾನುಸಂಧಾನ ಗ್ರಾಮಕಾರ್ಯ್ಯವನಾರು ಮಾಡಿದಡಂ ಆ ಮಹಾಜನಂಗಳು ವೃತ್ತಿಚ್ಛೇದವ ಮಾಡುವರು (ಎಕ. XV, ಹೊಳೆನ. ೧೧೨-೭೪; 1282). [ಗ್ರಾಮ+ಕಾರ್ಯ]

**ಗ್ರಾಮಕೂಟ** (ನಾ). ಗ್ರಾಮದ ಮುಖ್ಯಸ್ಥ; ಗೌಡ: ದೇವಿಲನೆಂಬ ಗ್ರಾಮಕೂಟಂಗವಾತನ ಕುಟುಂಬಿನಿ ವಸುಮತಿಗಂ ಧನಶ್ರೀಯೆಂಬ ಮಗಳಾಗಿ ಪುಟ್ಟಿ (ಆದಿಪು. ೩-೩೮ ವ). 'ಗಾವುಂಡ' ಪರಾ.
[ ಗ್ರಾಮ + ಕೂಟ₃ ]

**ಗ್ರಾಮಕೂಟಕ** (ನಾ). = ಗ್ರಾಮಕೂಟ: ರಾಷ್ಟ್ರಪತಿ ವಿಷಯಪತಿ ಗ್ರಾಮಕೂಟಕಾಯುಕ್ತಕ ನಿಯುಕ್ತಾಧಿಕಾರಿಕ ಮಹತ್ತರಾದಿ ಸಮ್ಮತದಿಂ (ಎಇ. XII, ೨೩೩-೨೦೨; 1077). [ ಸಂ. ]

**ಗ್ರಾಮಕೈಗಾರಿಕೆ** (ನಾ). ಗ್ರಾಮಗಳಲ್ಲಿ ಕೈಗೊಳ್ಳುವ ಕೈಗಾರಿಕೆ,-ಕಸಬು; ಗುಡಿಕೈಗಾರಿಕೆ: ಗ್ರಾಮಕೈಗಾರಿಕೆಗಳೇ ಮೊದಲಾದ ಉಪಯುಕ್ತಕಾರ್ಯಗಳಿಗಾಗಿ . . . ಗ್ರಾಮಸ್ಥರೇ ಮುಂದೆ ನಿಂತು ಪ್ರಯತ್ನಪಟ್ಟರೆ ಕೆಲಸಗಳು ಸಫಲವಾಗುವುವು (ವ್ಯವಮು. ೬೪). [ ಗ್ರಾಮ + ಕೈಗಾರಿಕೆ ]

**ಗ್ರಾಮಚಾರ** (ನಾ). ಗ್ರಾಮದ ಸೇವಕ; ತೋಟಿ, ತಳವಾರ ಮೊದಲಾದ ಸೇವಕರು: ಗ್ರಾಮಚಾರರನ್ನು ಕರೆದುಕೊಂಡು ಹೋಗತಕ್ಕದ್ದು ಸರಿಯೆ . . . ಬೆಂಗಳೂರು, ಹೊಸೂರು ಮೊದಲಾದ ಪ್ರಾಂತದಲ್ಲಿ ಗ್ರಾಮಚಾರರ ಸಹಾಯ ಅಷ್ಟು ಹೇರಳವಾಗಿ ದೊರೆಯುವುದಿಲ್ಲ (ಅದೂಟ. ೫).
[ ಗ್ರಾಮ + ಚಾರ ]

**ಗ್ರಾಮಣಿ** (ನಾ). ೧. ಹಳ್ಳಿಯ ಮುಖ್ಯಸ್ಥ; ಜಹಗೀರುಗ್ರಾಮದ ಅಥವಾ ಜೋಡಿಗ್ರಾಮದ ಯಜಮಾನ; ಗುರಿಕಾರ: "ಗಾವಿಲನೆಂದು ಗ್ರಾಮ[ಪಾಠಾಂ. ಮಿ]ಣಿ" (ಕಬ್ಬಿಕ್ಕೈ. ೫೭); ಯದಕ್ಕೆಯರಸು ಪ್ರಧಾನರು ಯಧಿಕಾರಿ ಗ್ರಾಮಣಿಗಳು ಆರೊಬ್ಬರುಂ ಯಿಲ್ಲೆಂದರಾದಡೆ (ಸೌಇಇ. IX-i, ೩೯೬-೧೮; 1262); ಗ್ರಾಮಣಿಗೆ ಪಾಷಂಡಗಾತ್ಮವಿರಾಮಕಾರಿಗೆ . . . ನಾಮಧಾರಿಗೆ ಪಾರ್ಥ ಕೇಳ್ ಪರಲೋಕವಿಲ್ಲೆಂದ (ಕುವ್ಯಾಅ. ೪-೨೬). ೨. ಪ್ರಮುಖ; ಶ್ರೇಷ್ಠ; ಉತ್ತಮ: "ಅಗ್ರ್ಯಂ, ಪ್ರಧಾನಂ . . . ಗ್ರಾಮಣೀಃ, ಅಗ್ರಣೀಃ- ಈ ೧೩ ಮುಖ್ಯಂ" (ಹಲಾಯು. ೧೧೫-೫); ಬುಧಜನ ಪ್ರೀಣನಾಗ್ರೇಸರ ಗ್ರಾಮಣಿಯಾದಂ (ಅಜಿಪು. ೧೨-೧೫); ಕಪಿಕೇತುಕುಲ ಗ್ರಾಮಣಿ ಸುಗ್ರೀವಂ ವಿದ್ಯಾಮಯಮಂ ಸಪ್ತಗುಪ್ತಿಯಂ ನಿರ್ವಿಸಿದಂ (ಪಂರಾಮಾ. ೧೪-೩೫). ೩. ಕ್ಷೌರಿಕ; ನಾಯಿಂದ; ಕೆಲಸಿಗ. [ ಸಂ. ಗ್ರಾಮಣೀ ]

**ಗ್ರಾಮಣೀಮಣಿ** (ನಾ). ಗ್ರಾಮಾಧಿಕಾರಿಗಳಲ್ಲಿ ಶ್ರೇಷ್ಠ: ಆ ಮಹಾಬಹುಳಗ್ರಹಾರದ ಗ್ರಾಮಣೀಮಣಿ ವಿತರಣದ ಕಣಿ . . . ಮಾದಿರಾಜನೆನಲ್ಕೆ ಸನ್ನಾಮಿ (ಬಸವು. ೨-೪೬).
[ ಸಂ. (ಗ್ರಾಮಣೀ + ಮಣಿ) ]

**ಗ್ರಾಮತಕ್ಕ** (ನಾ). ಗ್ರಾಮದ ಮುಖ್ಯಸ್ಥ: ದೂರನ್ನು ಗ್ರಾಮತಕ್ಕನ ಮುಂದೆ ಒಯ್ದಾಗ, ಆತನೂ ಚಿಕ್ಕಪ್ಪನಿಗೇ ಅನುಕೂಲನಾದ (ಹುಲಿಹಾ. ೩).
[ ಗ್ರಾಮ + ತಕ್ಕ₁ ]

**ಗ್ರಾಮತಕ್ಕಾಮೆ** (ನಾ). ಗ್ರಾಮದ ಮುಖ್ಯಸ್ಥನ ಪದವಿ: ಹಾಲೇರಿವಂಶದ ಅರಸರ ಆಡಳಿತ ಪ್ರಾರಂಭವಾಗುವ ಮುನ್ನ ರೂಢಿಯಲ್ಲಿದ್ದ ನಾಡತಕ್ಕಾಮೆ ಮತ್ತು ಗ್ರಾಮತಕ್ಕಾಮೆಗಳನ್ನು ಊರ್ಜಿತಕ್ಕೆ ತಂದರು (ಹುಲಿಹಾ. ೮೪). [ ಗ್ರಾಮ + ತಕ್ಕಾಮೆ ]

**ಗ್ರಾಮತಕ್ಷ** (ನಾ). ಊರೊಟ್ಟಿನ ಬಡಗಿ; ಹಳ್ಳಿಯ ಬಡಗಿ: "ಗ್ರಾಮತಕ್ಷಃ, ಗ್ರಾಮಾಧೀನಃ-ಗ್ರಾಮ-ಊರಿಗೆ, ಅಧೀನಃ-ಅಧೀನನಾಗಿ ಗೇಯುವ ಬಡಿಗೆಯವನ ಪೆಸರು" (ಸಿದ್ಧಾಂಠಿ. ೨೬೭). [ ಗ್ರಾಮ + ತಕ್ಷ ]

**ಗ್ರಾಮತೆ** (ನಾ). ಗ್ರಾಮಗಳ ಸಮೂಹ. [ ಸಂ. ಗ್ರಾಮತಾ ]

**ಗ್ರಾಮತೆರಿಗೆ** (ನಾ). ೧. ಗ್ರಾಮದ ತೆರಿಗೆ. ೨. ಸ್ವಂತದ ಹಳ್ಳಿಯನ್ನು ಬಿಟ್ಟು ಬೇರೆ ಹಳ್ಳಿಗೆ ಹೋಗಿ ನೆಲಸಿದ ರೈತರ ಮೇಲೆ ಹೇರಲಾಗುವ ಜುಲ್ಮಾನೆ,-ದಂಡ: (ಮ್ಯಾಗೆಜಿ. IV, ೬೬೯).
[ ಗ್ರಾಮ + ತೆರಿಗೆ (<ತೆಱಿಗೆ) ]

**ಗ್ರಾಮದಾನ** (ನಾ). ಗ್ರಾಮವನ್ನೇ ದಾನಮಾಡುವುದು: ವಿನೋಬಾ ಅವರು ಭೂದಾನ ಮತ್ತು ಗ್ರಾಮದಾನ ಚಳವಳಿಯನ್ನು ಆರಂಭಿಸಿದರು (ರೂಢಿ). 'ಭೂದಾನ' ಪರಾ. [ ಗ್ರಾಮ + ದಾನ ]

**ಗ್ರಾಮದೆರೆ** (ನಾ). ಗ್ರಾಮದವರು ಕೊಡುವ ತೆರಿಗೆ; ಒಟ್ಟು ಗ್ರಾಮದ ತೆರಿಗೆ: ಕುಪಿಹಾಳ ತಿರುವೆಂಗಳನಾಥನ ಸ್ಥಾನಮಾನ್ಯಕೆ ಗ್ರಾಮದೆರೆಗಾಗಿ ತೆರುವ ತೆರಿಗೇನೂ ಯಿ ದೇವರಿಗೆ ನಂದಾದೀಪ್ತಿಗೆ ಬಿಟ್ಟುಕೊಟ್ಟು (ಎಕ. VI, ಕಡೂರು. ೬-೪; 1169?); ಬಿಳಿಚೋಡುಸೀಮೆಯ ಕೆಲಸಿಗಳಿಗೆ ಬಿಟ್ಟ ಗ್ರಾಮದೆರೆ (ಎಕ.XI, ಚಿತ್ರದು.೮೦-೧೮; 1606).
[ ಗ್ರಾಮ + ತೆರೆ₃ (<ತೆಱೆ₃) ]

**ಗ್ರಾಮದೇವತೆ** (ನಾ). ಹಳ್ಳಿಯ ಅಧಿದೇವತೆ: ಬೋಧಾಯನ ಗೃಹ್ಯಸೂತ್ರವು . . . ವಿಗ್ರಹಗಳ ಪ್ರತಿಷ್ಠಾವಿಧಾನವನ್ನೂ ವಿಧಿಸುತ್ತದೆ. ಇದೇ ಪುಸ್ತಕದಲ್ಲಿ ಅನೇಕ ಗ್ರಾಮದೇವತೆಗಳೂ ಉಕ್ತವಾಗಿದ್ದಾರೆ (ಭಾರದ. ೫೦೦).
[ ಗ್ರಾಮ + ದೇವತೆ ]

**ಗ್ರಾಮದ್ರೋಹಿ** (ನಾ). ತನ್ನ ಊರಿಗೆ ದ್ರೋಹವನ್ನು ಬಗೆಯುವವನು: ಇದಂ ಮಾಱಿದವನು ಗ್ರಾಮದ್ರೋಹಿ ಮೂವತ್ತಿಚ್ಚರ್ಸಿರಕ್ಕೆ ಹೊಱಗು (ಸೌಇಇ. IX-i, ೩೪೪-೫೯; 1228). [ ಗ್ರಾಮ + ದ್ರೋಹಿ ]

**ಗ್ರಾಮಪಂಚಾಯತಿ** (ನಾ). ಗ್ರಾಮದ ಆಡಳಿತನಿರ್ವಹಣೆಗೆ ಏರ್ಪಟ್ಟ ಚುನಾಯಿತ ಪ್ರತಿನಿಧಿಗಳ ಸಂಸ್ಥೆ,-ಸಂಘ: ಗ್ರಾಮಪಂಚಾಯತಿಗೆ ದುಡ್ಡು ಕೊಟ್ಟು ತೆಗೆದುಕೊಳ್ಳಲಿಕ್ಕೆ ಆಗಲಿಲ್ಲವೆಂದು ಗೌಡರು ಸ್ವತಃ ದುಡ್ಡು ಹಾಕಿ ಅಕ್ಕಿ ತಂದರು (ಪ್ರಜಸ. ೭); ರಾಜ್ಯವು ಗ್ರಾಮಪಂಚಾಯತಿಗಳ ಸಂಘಟನವನ್ನು ನಡೆಯಿಸಲು ಕ್ರಮ ಜರುಗಿಸತಕ್ಕದು (ಭಾಧಾನ. ೨೩). [ ಗ್ರಾಮ + ಪಂಚಾಯತಿ ]

**ಗ್ರಾಮಪ್ರತಿಷ್ಠೆ** (ನಾ). ಊರನ್ನು ಸ್ಥಾಪಿಸುವುದು; ಗ್ರಾಮಪ್ರವೇಶೋತ್ಸವ: ಅಗ್ರಹಾರಾದಿ ಗ್ರಾಮಪ್ರತಿಷ್ಠೆಯಲ್ಲಿಯೂ, ಉಪನಯನಾದಿ ಬ್ರಾಹ್ಮಣಕಾರ್ಯಗಳಲ್ಲಿಯೂ . . . ತಾಂಬೂಲಗಳನ್ನು ಬ್ರಾಹ್ಮಣರುಗಳಿಗೆ ದಾನಮಾಡಬೇಕು (ಸಕಪ್ಪ. ೫೪).
[ ಗ್ರಾಮ + ಪ್ರತಿಷ್ಠೆ ]

**ಗ್ರಾಮಬ್ರಯ** (ನಾ). ಹಳ್ಳಿಗಾಗಿ ಮಾಡತಕ್ಕ ವೆಚ್ಚ; ಗ್ರಾಮದ ಖರ್ಚು: ಯಿ ಚತುಸ್ಸೀಮಾಭ್ಯಂತರ ಕವಿಳಾಸಪುರದಲ್ಲಿ ಸುಂಕ ಸಾದ ತಳಸಾರಿಗೆ ಬಟ್ಟೆಯ ಬಾಧೆ ಗ್ರಾಮಬ್ರಯ ನಿಧಿ ನಿಕ್ಷೇಪ ಅಂಕೆ ಟಂಕ ಅಣೆ ಗೋಸನೆ . . . ಪಾರಣೆಯ ಜಂಗಮಾರಾಧನೆಗೆ ಕೊತ್ತಸಿಗೆ ಈ ಧರ್ಮಕೆ ಇದು ವಿವರ (ಎಇ. XXI, ೨-೬೨; 1260). [ ಗ್ರಾಮ + ಬ್ರಯ ]

**ಗ್ರಾಮಭೃತಕ** (ನಾ). ಹಳ್ಳಿಯ ಕೂಲಿಕಾರ,-ಚಾಕರ: ಭೂಮಿಯನ್ನು ಅದರ ಸ್ವಾಮಿಯು ಸರಿಯಾಗಿ ಆರಂಬ ಮಾಡದಿದ್ದರೆ ರಾಷ್ಟ್ರವು ಅದನ್ನು ಅವನಿಂದ ಕಿತ್ತು ತಾನೇ ಸೇರಿಸಿಕೊಂಡು ಇತರರಿಗೆ ಕೊಡಬಹುದು. ಅಥವಾ ಗ್ರಾಮಭೃತಕ(ಕೂಲಿ ಕೆಲಸಗಾರ)ರಿಗಾಗಲಿ . . . ಆರಂಬಕ್ಕೆ ಕೊಟ್ಟು ಅವರಿಂದ ಅಧಿಕಲಾಭವನ್ನು ಪಡೆಯಬಹುದು (ಭಾರದ. ೩೬೨).
[ ಗ್ರಾಮ + ಭೃತಕ ]

**ಗ್ರಾಮಭೋಜಕ** (ನಾ). ಗ್ರಾಮಾಧಿಕಾರಿ; ಗೌಡ; ಗ್ರಾಮದ ನ್ಯಾಯಾಧಿಕಾರಿ: ಆ ಗ್ರಾಮಭೋಜಕನು ಧರ್ಮದಿಂದ ಸಮವಾಗಿ ನ್ಯಾಯವನ್ನು ನಿಶ್ಚಯಮಾಡುತ್ತಿದ್ದನು (ಬುದ್ಧಪ. ೫೦).
[ ಗ್ರಾಮ + ಭೋಜಕ ]

**ಗ್ರಾಮಮರ್ಯಾದೆ** (ನಾ). ಗ್ರಾಮದ ಕಟ್ಟಳೆ,-ನಿಯಮ: ಆವ ಸಾಲಿಗರುಂ ಬೇಡ ಸಲ್ಲೆಂದು ಮಾಡಿದ ಗ್ರಾಮಮರ್ಯಾದೆಯನಾರ್ ×× ಱಿದಡಂ ಶ್ರೀಮತು ಪ್ರತಾಪಚಕ್ರವರ್ತಿ ××× (ಎಕ. V, ಅರಸೀ. ೧೨೮-೯೩; 1229). [ ಗ್ರಾಮ + ಮರ್ಯಾದೆ ]

**ಗ್ರಾಮಮೃಗ** (ನಾ). ನಾಯಿ ; ಶುನಕ : ಒರ್ವಳ್ . . . ತನ್ನಳಿಯನಂ ಗ್ರಾಮಮೃಗರೂಪದಿಂ ತನ್ನ ಮಗಳ ಕಾಲ್ಗಳೊಳ್ ಪೊರಳ್ದು ತಿಳಿವಂತೆ ಮಾಡೆ (ಜಾವುಂಪು. ೬೭-೧). 'ಗ್ರಾಮಸಿಂಹ' ಪರಾ.
[ ಗ್ರಾಮ + ಮೃಗ ]

**ಗ್ರಾಮಯಾನ** (ನಾ). ಗ್ರಾಮಗಳಿಗೆ ಹೋಗುವುದು; ಹಳ್ಳಿಗಳಲ್ಲಿ ಧರ್ಮಬೋಧೆಗಾಗಿ ಮಾಡುವ ಪ್ರಯಾಣ: ನಗರಮನೋಹರವ್ಯಾಪಾರಮನಲ್ಪಮೆನೆಯುಂ ವ್ಯೋಮಯಾನಂ ತುಚ್ಛಮೆನೆಯುಂ ಗ್ರಾಮಯಾನಮತುಚ್ಛಮೆನೆಯುಂ ಧರ್ಮೋಪದೇಶಂಗೆಯುತ್ತುಮುತ್ತಮತೀರ್ಥೇಶ್ವರಂ ವಿಹಾರಿಸೆ (ಶಾಂತಿಪು. ೧೨-೨೩ ವ). [ ಗ್ರಾಮ + ಯಾನ ]

**ಗ್ರಾಮರಾಗ** (ನಾ). = ಗ್ರಾಮ ೩ : ಅತಿಶಯ ಪರಿಣತಿಯಂ ಮೆಱೆದು ಮೂಱುಂ ಗ್ರಾಮರಾಗಂಗಳೊಳಂ . . . ಮೂವತ್ತುಂ ವಿಶುದ್ಧರಾಗದೊಳಂ (ಮಲ್ಲಿಪು. ೮-೨೩ ವ) ; ಪೊಳೆವುದ್ಯದ್ಗ್ರಾಮರಾಗಂಗಳ ಬಗೆಗಮ ವೇಳುಂ ಸ್ವರಂ ತಂನೊಳೊಪ್ಪಲು (ಕಇ. IV, ೧-೮ ; 1204).
[ ಗ್ರಾಮ + ರಾಗ ]

**ಗ್ರಾಮರುಹ** (ನಾ). ಸಾಮಾನ್ಯವಾಗಿ ಹಳ್ಳಿಯಲ್ಲಿ ಬೆಳೆಯುವ ಗಿಡ ; ಔಡಲ ; ಹರಳಿನ ಗಿಡ : "ಗ್ರಾಮರುಹಮೇರಂಡಮೆಂದೊಡವುಡಲ ಮದಕ್ಕು" (ಮಂಗರಾ. ೪೦-೩೪). [ ಸಂ. ]

**ಗ್ರಾಮವಳಿ** (ನಾ). ಗ್ರಾಮದ ನಡವಳಿಕೆ,–ವ್ಯವಹಾರ : ಧಾರೆಯನೆಱೆದು ಸಮರ್ಪಿಸಿದೆವಾಗಿ ಆ ಗ್ರಾಮಗಳ ಗ್ರಾಮವಳಿರೀತಿಗೆ ನಡವ ಪಡಿತರ (ಎಕ. XIV, ಶ್ರೀರಂಗ. ೨೫೭-೫ ; 1564). [ ಗ್ರಾಮ + – ವಳಿ$_1$ ]

**ಗ್ರಾಮವಾಸಿ** (ನಾ). ಹಳ್ಳಿಯಲ್ಲಿ ವಾಸಮಾಡುವವನು ; ಗ್ರಾಮೀಣ.
[ ಸಂ. ಗ್ರಾಮವಾಸಿನ್ ]

**ಗ್ರಾಮಶಾಂತಿ** (ನಾ). ಗ್ರಾಮದ ಅನಿಷ್ಟಪರಿಹಾರಕ್ಕಾಗಿ ಮಾಡುವ ಶಾಂತಿಕರ್ಮ, ದೇವತಾಪೂಜೆಯೇ ಮುಂತಾದ ಆಚರಣೆ : ಗ್ರಾಮಶಾಂತಿಗೆ ತಳವಾರ ತಲೆ ಬೋಳಿಸಿಕೊಂಡ (ಗಾದೆ). [ ಗ್ರಾಮ + ಶಾಂತಿ ]

**ಗ್ರಾಮಶಾರ್ದೂಲ** (ನಾ). = ಗ್ರಾಮಮೃಗ: "ಕೌಲೇಯಕಂ ರಾತ್ರಿಜಾಗರಂ ಗ್ರಾಮಶಾರ್ದೂಲಂ . . . ಶುನಕಮೆಂದೆನಲು ನಾಯೆನಿಕ್ಕುಂ" (ಮಂಗರಾ. ೫೫-೮) ; ಗ್ರಾಮಶಾರ್ದೂಲನಾಗೀಶಭಜಕರ ಗೃಹಗಳ ತಿರುತ್ತಿರು ಗಿನೋಡುತಿರೆ ದೊರೆಯದಿರೆ ಶುನಿಯಾಗಿ ಚಿರಕಾಲ ಬಾಳುತಿರಲು (ಪ್ರೌಢರಾ. ೧೯-೧೮). [ ಗ್ರಾಮ + ಶಾರ್ದೂಲ ]

**ಗ್ರಾಮಸಾರ** (ನಾ). ಹಳ್ಳಿಯ ಹೊಲಸು,–ಕೊಳೆ,–ಕಶ್ಮಲ: ಜೇಡಿಮಣ್ಣಿನ ಪಾತ್ರೆಗಳು, ಹೆಂಚುಗಳು, ಗ್ರಾಮಸಾರವನ್ನು ಸಾಗಿಸುವ ಕೊಳವಿಗಳು . . . ಇವನ್ನು ಮಾಡುತ್ತಿದ್ದರು (ಶಿಲ್ಪನಾ. ೨೮೫). [ ಗ್ರಾಮ + ಸಾರ$_2$ ]

**ಗ್ರಾಮಸಿಂಹ** (ನಾ). = ಗ್ರಾಮಮೃಗ : ಹಂದಿಯಟ್ಟುವ ಗ್ರಾಮಸಿಂಹಗಳಂದವಾದವು ಗಂಧಗಾಳಿಗೆ ಆನೆಗಳ ಹಿಂಡು (ಸಾಳ್ವಭಾ. ೧೬-೦೨).
[ ಗ್ರಾಮ + ಸಿಂಹ ]

**ಗ್ರಾಮಸೂಕರ** (ನಾ). ಗ್ರಾಮದಲ್ಲಿರುವ ಹಂದಿ ; ಊರ ಹಂದಿ : ಸಾಮಜಾರಿಗೆ ಸರಿಯೆ ಶುನಕಸ್ತೋಮವಾಶಾವಾರಣಕ್ಕಂ ಗ್ರಾಮಸೂಕರ ವಿತತಿ ಸರಿಯೇ (ಬಸವು. ೫೪-೨೨). [ ಗ್ರಾಮ + ಸೂಕರ ]

**ಗ್ರಾಮಸ್ತ** (ನಾ). ೧.= ಗ್ರಾಮಸ್ಥ. ೨. (ಉಕ) ಹಳ್ಳಿಯ ಗೌಡ, ಸೇನಬೋವ, ಪಟೇಲ ಮೊದಲಾದ ಅಧಿಕಾರಿಗಳಲ್ಲಿ ಒಬ್ಬ : ಅಲ್ಲಿಯ ಶಿಕ್ಷಕರು, ಗ್ರಾಮಸ್ತರು, ವ್ಯಾಪಾರಿಗಳು ಯಾರೇ ಇರಲಿ, ಅವರನ್ನು ಕಂಡು ತನ್ನ ಪುಸ್ತಕಗಳನ್ನು ತೋರಿಸುವನು (ಬೆಟ್ಟಹೊ. ೬೯).
[ < ಸಂ. ಗ್ರಾಮಸ್ಥ ]

**ಗ್ರಾಮಸ್ಥ** (ನಾ). ಗ್ರಾಮವಾಸಿ ; ಹಳ್ಳಿಯವನು : ಗ್ರಾಮಸ್ಥರು ಚಂದಾ ಹಾಕಿಕೊಟ್ಟರು (ಹುಟ್ಟಹ. ೧೫). [ ಸಂ. ]

**ಗ್ರಾಮಾಂತ** (ನಾ). ಹಳ್ಳಿಯ ಸೀಮೆ ; ಊರಿನ ಸುತ್ತಲಿನ ಜಮೀನು ; ಗ್ರಾಮದ ಸಮೀಪ ಪ್ರದೇಶ: "ಗ್ರಾಮಾಂತಂ, ಉಪಶಲ್ಯಂ–೨ ಗ್ರಾಮದ ಸಮೀಪ-ಪ್ರದೇಶ, ಹಳ್ಳಿಗಾಡಿನ ಪ್ರಾಂತ, ಊರುಹತ್ತಿರ" (ಸಿದ್ಧಾಂತಿ. ೯೩).
[ ಗ್ರಾಮ + ಅಂತ$_2$ ]

**ಗ್ರಾಮಾಂತರ** (ನಾ). ಒಳನಾಡಿನ ಪ್ರದೇಶ ; ನಗರದಿಂದ ದೂರವಿರುವ ಸ್ಥಳ; ಹಳ್ಳಿಗಾಡು: ಗ್ರಾಮಾಂತರ ರೇಡಿಯೋಗೋಷ್ಠಿಗಳು ನಡೆಯುತ್ತವೆ (ರೂಢಿ). [ ಗ್ರಾಮ + ಅಂತರ ]

**ಗ್ರಾಮಾಂತಿಕ** (ನಾ). ಊರಿನ ಸಮೀಪದ ಪ್ರದೇಶ : "ಗ್ರಾಮಾಂತಿಕಂ, ಉಪಶಲ್ಯಂ . . . ಕ(ಪ)ಟಃ–ಈ ೫ ಊರಹೊ(ಱ)ರೆ" (ಹಲಾಯು. ೪೩-೧೦೪). [ ಗ್ರಾಮ + ಅಂತಿಕ ]

**ಗ್ರಾಮಾದಾಯ** (ನಾ). ಗ್ರಾಮದ ಆದಾಯ ; ಊರಿನ ಹುಟ್ಟುವಳಿ : ಗ್ರಾಮಾದಾಯ ಚರಾದಾಯ ಹೊರಾದಾಯ ಊಳಿಗಮಾನ್ಯ ಇವು ಮೊದಲಾದ ಸಕಲಸ್ವಾಮ್ಯವನು . . . ನಿರುಪಾಧಿಕಮಾಗಿ ಸುಖದಿಂದನುಭವಿಸಿಕೊಂಡು ಬಹರು (ಎಕ. XIV, ನಂಜನ. ೨೯೫. ಪುಟ. ೧೫೦-೩೩ ; 1716). [ ಗ್ರಾಮ + ಆದಾಯ ]

**ಗ್ರಾಮಾಧಿಪ** (ನಾ). ಹಳ್ಳಿಯ ಒಡೆಯ,–ಯಜಮಾನ : ಕೋಟಿಕೋಟಿ ಗ್ರಾಮಾಧಿಪರೆಱಗೆ ಮುಂದೆ ನುಡಿದು ಜಗಚ್ಚೂಡಾಮಣಿಗೆ ಮಕುಟಬದ್ಧ ಮಹಾಮಂಡಳಪತಿಗಳಾದರೆಣ್ಬಾಸಿರ್ವರ್ (ಶಾಂತಿಪು. ೧೦-೧೦೫).
[ ಗ್ರಾಮ + ಅಧಿಪ ]

**ಗ್ರಾಮಾಧಿಪತಿ** (ನಾ). = ಗ್ರಾಮಾಧಿಪ : "ಗಾಂಪ ಗ್ರಾಮಾಧಿಪತಿಗಳೊಳು ಗಾವಿಲ ಶಬ್ದ" (ಶಬ್ದಮಂ. ೧೦೪) ; ಪ್ರತಿಯೊಬ್ಬ ಗ್ರಾಮಾಧಿಪತಿಯೂ, ಪಟ್ಟಣಾಧಿಪತಿಯೂ ತಮ್ಮ ತಮ್ಮ ಗ್ರಾಮ–ಪಟ್ಟಣಗಳನ್ನು ಕಣ್ಣಿಟ್ಟು ನೋಡಿಕೊಳ್ಳುತ್ತಿದ್ದರು (ಕರ್ನಾಜ. ೩). [ ಗ್ರಾಮ + ಅಧಿಪತಿ ]

**ಗ್ರಾಮಾಫೋನು** (ನಾ). ಸಂಗೀತ, ಭಾಷಣ ಮುಂತಾದುವನ್ನು ಗ್ರಹಿಸಿ ಪುನಃ ಧ್ವನಿಸುವ ಒಂದು ಬಗೆಯ ಯಂತ್ರಸಲಕರಣೆ : ಗ್ರಾಮಾಫೋನು ಸಂಗೀತವೂ ಸಿನಿಮಾ ಅಭಿನಯವೂ ಸ್ವಲ್ಪ ಹೆಚ್ಚುಕಡಮೆ ಒಂದೇ ತರಗತಿಯವು (ಸಾಹಿಜೀ. ೭೫); ಹಿಂದೆ ಗ್ರಾಮಾಫೋನುಗಳು ಜನಪ್ರಿಯವಾಗಿದ್ದಷ್ಟು ರೇಡಿಯೋ ಬಂದ ಮೇಲೆ ಜನಪ್ರಿಯವಾಗಿಲ್ಲ (ರೂಢಿ).
[ ←ಇಂ. Gramophone ]

**ಗ್ರಾಮಿಣಿ** (ನಾ). ಗ್ರಾಮದ ಮುಖ್ಯಸ್ಥ ; ಗ್ರಾಮಣಿ : ತಿಂಮಯ್ಯಸೆಟ್ಟಿಗೆ ಕಂದವರದ ಗ್ರಾಮಿಣಿ ಅಂಣಉಡುಪರು ಕೊಟ್ಟ ಬಿಡಾರುವಾರದ ಪತ್ರದ ಕ್ರಮವೆಂತೆಂದರೆ (ಸೌಇಇ. IX-ii, ೬೫೫-೧೪ ; 1554) ; ಬ್ರಹ್ಮಹತ್ಯ ಮಾಡಿದವನ ಗ್ರಾಮಿಣಿಯಾದವನ ವೈದ್ಯನ ವೈಶ್ಯವೃತ್ತಿಯಲ್ಲಿರುವವನ . . . ಶ್ರಾದ್ಧಕ್ಕೆ ಹೇಳಬಾರದು (ಶೀಷಧ. ೨೦-೦೬).
[ < ಸಂ. ಗ್ರಾಮಣೀ ]

**ಗ್ರಾಮೀಣ** (ಗುಂ). ೧. ಹಳ್ಳಿಯಲ್ಲಿ ಹುಟ್ಟಿದ ; ಹಳ್ಳಿಗೆ ಸಂಬಂಧಿಸಿದ : ಮೌಢ್ಯ, ಕೆಚ್ಚು, ಗ್ರಾಮೀಣ ರಸಿಕತೆ, ಬಲ, ದೌರ್ಬಲ್ಯ–ಎಲ್ಲವೂ ಸಮಗ್ರವಾಗಿ ದೃಗ್ಗೋಚರವಾಗಿ ನಿಮ್ಮ ಊರು 'ನನ್ನೂರು' ಆಗಿಬಿಡುತ್ತದೆ (ನನ್ನೂರು. ೯, ಮುನ್ನುಡಿ) ; ಈ ಗ್ರಾಮೀಣ ಅಕ್ಕನ ಜೊತೆಗೆ ಸಾಯಂಕಾಲ ಒಂದೆರಡು ಗಳಿಗೆ ಎಳೆದರೆ ಎಷ್ಟೋ ಒಳಿತಾದೀತು (ನವವಿ. ೨೮). (ನಾ). ೨. ಹಳ್ಳಿಗ ; ಹಳ್ಳಿಯಲ್ಲಿ ಇರುವವನು : "ಗ್ರಾಮೀಣಃ, ಗ್ರಾಮ್ಯಃ, ಗ್ರಾಮೇಯಕಃ – ಈ ೩ ಊರುಗಂ" (ಹಲಾಯು. ೪೩-೧೦೩). ೩. ಅನಾಗರಿಕವಾದುದು ; ಒರಟು : ಅವರ ಸಂಸ್ಕೃತಿಯ ಮಟ್ಟವು ನಾವೆಣಿಸಿದಷ್ಟು ಗ್ರಾಮೀಣವಾಗಿದ್ದಿರಲಾರದು (ಅಪೂಪ. ೮೩). [ ಸಂ. ]

**ಗ್ರಾಮೇಯಕ** (ನಾ). = ಗ್ರಾಮೀಣ ೨ : "ಗ್ರಾಮೀಣಃ, ಗ್ರಾಮ್ಯಃ, ಗ್ರಾಮೇಯಕಃ – ಈ ೩ ಊರುಗಂ" (ಹಲಾಯು. ೪೩-೧೦೩). [ ಸಂ. ]

**ಗ್ರಾಮೇಶ್ವರ** (ನಾ). = ಗ್ರಾಮಾಧಿಪತಿ : ಗ್ರಾಮೇಶ್ವರನಲ್ಲಿಗೆ ವಿದ್ಯಾಮೂರ್ತಿ ಸಮ × × × ಚಿನ್ತಾಮಣಿ ತೇಜೋಮಯನಮಳಿನ ಕೀರ್ತಿ ಮಹಾಮಹಿಮನ × × × ಲ ವರ್ಮ್ಮರ್ಯ್ಯಂ(ಸೌಇಇ. XI-II, ೨೦೪-೧೪; ?).
[ ಗ್ರಾಮ + ಈಶ್ವರ ]

**ಗ್ರಾಮೋದ್ಯೋಗ** (ನಾ). ಹಳ್ಳಿಗಳಲ್ಲಿ ಮಾಡಬಹುದಾದ ಉದ್ಯಮ,–ಕೈಗಾರಿಕೆ : ಈ ಎಲೀ ಹಚ್ಯಾ ಗ್ರಾಮೋದ್ಯೋಗದ ಮ್ಯಾಲ ಪ್ರಬಂಧ ಓದಲಿಕ್ಕೆ ಹತ್ತಿದೇನು ? (ದೀಪಹ. II, ೪). [ ಗ್ರಾಮ + ಉದ್ಯೋಗ ]

**ಗ್ರಾಮ್ಯ** (ಗು). ೧. ಹಳ್ಳಿಯ; ಹಳ್ಳಿಗೆ ಸಂಬಂಧಪಟ್ಟ. (ನಾ). ೨. ವಿದ್ಯೆ ಇಲ್ಲದವನು ; ಗಾವಿಲ ; ಮೂಢ; ದಡ್ಡ : "ಕಾಲುರಿಚಂ ತಾನೆ ಕೂಡೆ ಬೆಳ್ಳಕ್ಕರಿಗಂ ಪಾಟಿಯಿಡೆ ಗ್ರಾಮ್ಯನಾಮಂ" (ಕವಿಕಂ. ೧೫೬): ಬೆರಲೆರಲ್ . . . ಲಾಂತಮಿವಂ ಗ್ರಾಮ್ಯರಱಿಯದುಚ್ಚರಿಸುವರ್ ಕುಳಾಂತಭ್ರುಮೆಯಿಂ (ಶಮದ. ೨೮). ೩. ಸಂಭೋಗ. 'ಗ್ರಾಮ್ಯಧರ್ಮ' ಪರಾ. ೪. [ಕಾವ್ಯಮಿ] ಪದದೋಷಗಳಲ್ಲಿ ಒಂದು ; ವ್ಯಾಕರಣ ವಿರುದ್ಧವಾದುದು ; ಅಸಾಧುವಾದುದಂ : ಮಱಸುಂದು ಸೂಱಸುಂದೆನೆ . . . ಪದಾಂತರದಿಂದಂ ನೆಱದು ನಿಲೆ ದುಷ್ಪ್ರತೀತಿಯನಱಪುವ ಪೆಱಪೆಱವು ಮಿನ್ನವೇ ಗ್ರಾಮ್ಯಂಗಳ್ (ಕಾವ್ಯಾವ. ೪೪೭); ವ್ಯಾಕರಣಕ್ಕೆ ವಿರೋಧವಾದದ್ದು ಗ್ರಾಮ್ಯವು (ಹೊಸುಗ. ೩೪). ೫. [ಕಾವ್ಯಮಿ] ಅಸಭ್ಯವಾದ ಶಬ್ದ : ಅಸದರ್ಥಂ ವಿಪರೀತಕಲ್ಪನೆಯುಭವ್ಯಂ ದುಷ್ಕರಂ ಗ್ರಾಮ್ಯ ನೀರಸಮಪ್ರೌಢತೆ . . . ಎಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೧-೪೬ ಅಡಿಟಿ) ; ದೋಷವುಳ್ಳ ಪದಗಳನ್ನು–೧. ಶ್ರುತಿಕಟು . . . ೧೦. ಗ್ರಾಮ್ಯ, ೧೧. ಕ್ಲಿಷ್ಟ . . . ಎಂದು ವಿಭಾಗಿಸಬಹುದು (ಕೈಪಿಡಿ. ೨೨೭). [ ಸಂ. ]

**ಗ್ರಾಮ್ಯಕ** (ನಾ). ತಳವಾರ: "ತಳವಾರನಕ್ಕು ಗ್ರಾಮ್ಯಕನೆನಲ್" (ಕಶರ. ೩೨).
[ ಸಂ. ]

**ಗ್ರಾಮ್ಯತೆ** (ನಾ). ೧. ಹಳ್ಳಿಗತನ; ನಾಗರಿಕತೆ ಇಲ್ಲದಿರುವಿಕೆ; ಸುಸಂಸ್ಕೃತಿಯಿಲ್ಲದಿರುವಿಕೆ: ಗ್ರಾಮದ ವ್ಯಕ್ತಿಗಳೆಲ್ಲರೂ, ತಮ್ಮ ಗ್ರಾಮ್ಯತೆಯನ್ನು ತೊಡೆದು ಹಾಕಲು ತಮ್ಮ ಯೋಗ್ಯತೆಗೆ ಮೀರಿ ಧನವ್ಯಯ ಮಾಡಲು ಹಿಂದೆಗೆಯುತ್ತಿರಲಿಲ್ಲ (ಇಪ್ಪಕ. ೩೬೬). ೨. [ಕಾವ್ಯಮಿ] ಅರ್ಥದೋಷಗಳಲ್ಲಿ ಒಂದು: "ಗಾಮ್ಯತೆ–ಸಭ್ಯರ ಮನಸ್ಸಿಗೆ ಸಂಕೋಚವನ್ನುಂಟುಮಾಡುವುದು" (ಕೈಪಿಡಿ. ೨೨೯); ವ್ಯಾವಹಾರಿಕಭಾಷೆಯಲ್ಲಿ ಗ್ರಾಮ್ಯತೆ-ಶಬ್ದಸಂಸ್ಕಾರ ರಾಹಿತ್ಯವೇ ಹೆಚ್ಚು (ಸಂಶೋಧ. ೭೯). [ ಸಂ. ಗ್ರಾಮ್ಯತಾ ]

**ಗ್ರಾಮ್ಯಧರ್ಮ** (ನಾ). ರತಿ; ಕೂಟ; ಸಂಭೋಗ: ಸ್ತ್ರೀಪುರುಷ ಸಂಯೋಗವೆಂಬುದು ಕಾಪಥವಲಾ . . . ಹ್ರೀಪದವು ಕ್ಷಣಸುಖವಿಕಾರವು ಗೋಪ್ಯವೇಕಾಂತೈಕನಿಷ್ಠವು ಭಾಪು ಮಾಯಾಭ್ರಾಂತಿಯೆಂತುಟೊ ಗ್ರಾಮ್ಯಧರ್ಮದಲಿ (ಅಮ್ಮತ. ೨-೮೬). [ ಗ್ರಾಮ್ಯ + ಧರ್ಮ ]

**ಗ್ರಾಮ್ಯಪಶು** (ನಾ). ಪಳಗಿಸಿದ ಪ್ರಾಣಿ : ಸಾಕುಪ್ರಾಣಿ.
[ ಗ್ರಾಮ್ಯ + ಪಶು ]

**ಗ್ರಾಮ್ಯಭಾವ** (ನಾ). ಅನಾಗರಿಕ ಭಾವನೆ ; ಅಸಂಸ್ಕೃತ ಮನೋಭಾವ ; ಸಂಕುಚಿತದೃಷ್ಟಿ : ಭೂಮಿ ಹೇಗೆ ನನ್ನ ಜಮೀನು ನಿನ್ನ ಜಮೀನು ಮತ್ತು ಅವನ ಜಮೀನು ಅಲ್ಲವೋ . . . ಹಾಗೇ ಸಾಹಿತ್ಯವು ನನ್ನ ರಚನೆ ನಿನ್ನ ರಚನೆ ಮತ್ತು ಅವನ ರಚನೆ ಅಲ್ಲ ; ನಾವು ಸಾಧಾರಣವಾಗಿ ಸಾಹಿತ್ಯವನ್ನು ಹೀಗೆ ಗ್ರಾಮ್ಯಭಾವದಲ್ಲಿ ನೋಡುತ್ತಿರುತ್ತೇವೆ (ನಿಬಂಧ. II, ೨೮೧).
[ ಗ್ರಾಮ್ಯ + ಭಾವ₂ ]

**ಗ್ರಾಮ್ಯಭಾಷೆ** (ನಾ). ಸುಸಂಸ್ಕೃತವಲ್ಲದ ಭಾಷೆ ; (ಸಾಮಾನ್ಯವಾಗಿ) ಗ್ರಾಮಗಳ ಜನ ಉಪಯೋಗಿಸುವ ಭಾಷೆ ಹಳ್ಳಿಗರು ಗ್ರಾಮ್ಯಭಾಷೆಯಲ್ಲಿ ಮಾತನಾಡುತ್ತಾರೆ (ರೂಢಿ). [ ಗ್ರಾಮ್ಯ + ಭಾಷೆ ]

**ಗ್ರಾಮ್ಯವಿಷಯ** (ನಾ). ರತಿ ; ಸಂಭೋಗ ; ಇಂದ್ರಿಯ ಸುಖ : ರಾಜರಿಗೆ ಬೇಟೆ ಕುಡಿತ ಜೂಜು ಗ್ರಾಮ್ಯವಿಷಯದಲ್ಲಿ ಅತ್ಯಾಸಕ್ತಿ ಇವು ನಾಲ್ಕೂ ವ್ಯಸನಗಳೆಂದು ಶ್ರೇಷ್ಠರಾದವರು ಹೇಳುತ್ತಾರೆ (ವಚಭಾ. ೧೦೦).
[ ಗ್ರಾಮ್ಯ + ವಿಷಯ ]

**ಗ್ರಾಮ್ಯಶಬ್ದ** (ನಾ). ಸುಸಂಸ್ಕೃತವಲ್ಲದ ಶಬ್ದ ; ಅನಾಗರಿಕವಾದ ಮಾತಂ : ಶ್ರುತಿವಿರಸ ಪದಕ್ಷೇಪಸ್ಥಿತಿಕಷ್ಟಂ ಗ್ರಾಮ್ಯಶಬ್ದ ಸಂದರ್ಭ ಸಮನ್ವಿತಮುಂ . . . ನೀರಸಮೆನಿಪ್ಪುದಕ್ಕುಂ ದೋಷಂ (ಕಾವ್ಯಾವ. ೪೪೩).
[ ಗ್ರಾಮ್ಯ + ಶಬ್ದ ]

**ಗ್ರಾಮ್ಯಾಳಾಪ** (ನಾ). = ಗ್ರಾಮ್ಯೋಕ್ತಿ : ಗೋಪಾಳಬಾಳ ಲಲನಾಚಾಪಳ ವಾಚಾಲಕಿತವ ಬಾಹ್ಲೀಕಾದಿ ವ್ಯಾಪಾರಂಗಳ್ ಗ್ರಾಮ್ಯಾಳಾಪಂಗಳ್ ಮಾರ್ಗಯುಗಳ ಪರಿಹಾರ್ಯಂಗಳ್ (ಕವಿರಾ. ೨-೮೦).
[ ಗ್ರಾಮ್ಯ + ಆಳಾಪ (= ಆಲಾಪ) ]

**ಗ್ರಾಮ್ಯೆ** (ನಾ). ೧. ಹಳ್ಳಿಯ ಹೆಂಗಸು ; ಅನಾಗರಿಕ ಸ್ತ್ರೀ : ರತಿಪತಿಯ ರಾಜಧಾನಿಯ ಚತುರೆಯರೊಳ್ ಸುಖಿಪ ಬರ್ದನೀ ಗ್ರಾಮ್ಯೆಯನೇಂ ಕ್ಷಿತಿಪಾಲ ನೆನೆಗುವೋ (ಜೆಟ್ಟಿಅ. ೧೧-೦೯). ೨. [ಕಾವ್ಯಮಿ]ಲಲಿತವಾದ ಮಧುರಶಬ್ದಗಳು ಬಿಡಿಬಿಡಿಯಾಗಿ ಬಂದಿರುವ ಕಾವ್ಯದ ವೃತ್ತಿ,–ಶೈಲಿ,–ರೀತಿ : ಆ ವಿಶೇಷ ವರ್ಣರಚನಾವಿವಿಕ್ತಗತಿಮುಕ್ತ ಭೂರಿ ಸಂಯೋಗಂ ಸೌಷ್ಠವಗುಣಸಮನ್ವಿತಂ ಲಲಿತವೃತ್ತಿಯಿಂ ಲಲಿತೆಯೆಂಬ ವೃತ್ತಿಯದಕ್ಕುಂ . . . ಗ್ರಾಮ್ಯೆಯೆಂಬುದುಮಿದುವೆ(ಕಾವ್ಯಾವ. ೫೬೫ ವ).
[ ಸಂ. ಗ್ರಾಮ್ಯಾ ]

**ಗ್ರಾಮ್ಯೋಕ್ತಿ**(ನಾ). ಸುಸಂಸ್ಕೃತವಲ್ಲದ ನುಡಿ; ಅನಾಗರಿಕವಾದ ಮಾತು : ಎಂದಿಂತೀ ಗ್ರಾಮ್ಯೋಕ್ತಿಯೊಳೊಂದಾಗಿಸದದನೆ ಪೇಟ್ವುದಿಂತೀ ಸ್ಥಿತಿಯೊಳ್ (ಕವಿರಾ. ೨-೮೨). [ ಗ್ರಾಮ್ಯ + ಉಕ್ತಿ ]

**ಗ್ರಾವ** (ನಾ). ೧. ಕಲ್ಲು; ಶಿಲೆ : "ಶಿಲಾ . . . ಗ್ರಾ(ವನ್)ವಾ, ಪ್ರಸ್ತರಃ, ದೃಷತ್–ಈ ೭ ಕಲ್ಲ ಪೆಸರ್" (ಹಲಾಯು. ೨೮-೧೪) : ಭೀಮನನಡಸಿ ಪಿಡಿದು ನೂರ್ವರುಂ ಗಂಟಲಂ ಮೆಟ್ಟಿ ಪಾವುಗಳಂ ಕೊಳಿಸಿ ಮಹಾಗ್ರಾವಮನುಱದಡಸಿ ಕಟ್ಟಿ ಕೊರಲೊಳ್ ಗಂಗಾದೇವಿಯ ಮಡುವಿನೊಳಿಟ್ಟಿದರ್ (ಪಂಪಭಾ. ೨-೩೨). ೨. ಬೆಟ್ಟ ; ಗುಡ್ಡ : "ಬೆಟ್ಟದಲ್ಲಿಯುಂ ಗ್ರಾವಾಯೆಂಬುದು" (ಹಲಾಯು. ೧೩೪-೨೦). 'ಗ್ರಾವಾತ್ಮಜೆ' ಪರಾ. ೩. ಕಲ್ಲಿನಂತೆ ಗಟ್ಟಿಯಾದುದು,–ಕಠಿನವಾದುದು. ೪. ದೃಢತೆ; "ಧೈರ್ಯ, ಧೀರಪಟ್ಟತನ" (ನಾಚಿರಾ. ೬). ೫. ಮೋಡ. [ ಸಂ. ಗ್ರಾವನ್ ]

**ಗ್ರಾವಜಾನಾಥ** (ನಾ). ಪಾರ್ವತಿಯ ಪತಿ ; ಶಿವ : ಗ್ರಾವಜ[ಜಾ]ನಾಥನಾಶಾವಸನ ಕ್ಷೀಣಭಾವಭಾವಜದಾವ (ಭೈರವೇ. ೫-೧).
[ ಸಂ. (ಗ್ರಾವಜಾ + ನಾಥ) ]

**ಗ್ರಾವಣ್ಯ** (ನಾ). ಸೂಜಿಗಲ್ಲು ; ಲೋಹಚುಂಬಕ ; ಅಯಸ್ಕಾಂತ : ಗ್ರಾವಣ್ಯ ಮನೋಹರಂ ಪತಿ ನಿವಾಸಂ ಕಾಂತೆಯುಂ ಕಾಂತಶಬ್ದಂ(ನಾನಾರ. ೯೨). [ ? ]

**ಗ್ರಾವಲು** (ನಾ). ದಪ್ಪ ಮರಳು ಮತ್ತು ಜಲ್ಲಿಕಲ್ಲುಗಳ ಮಿಶ್ರಣ ; ಗರಸು : ಇದರ ಹಳಕುಗಳು ಮಾತ್ರ ಮಳೆಯಿಂದ ದೂರಕ್ಕೆ ಹೊಡೆದು ಕೊಂಡು ಹೋಗಿ, ನದಿಯ ಮರಳಿನಲ್ಲಿಯೂ ಗ್ರಾವಲಿನಲ್ಲಿಯೂ ದೊರೆಯುವುವು (ವಿಜ್ಞಾನ. ೮೪). [ ←ಇಂ. Gravel ]

**ಗ್ರಾವಾತ್ಮಜೆ** (ನಾ). ಪಾರ್ವತಿ; ಗೌರಿ: ಧೀವರರೂಪವಿಳಾಸಂ ಗ್ರಾವಾತ್ಮಜೆಯಾಣ್ಮನೀಗೆ ನಿರ್ಮಳಮತಿಯಂ (ಹಮ್ಮಿರ. ೮-೧). [ಗ್ರಾವ + ಆತ್ಮಜೆ]

**ಗ್ರಾಸ** (ನಾ). ೧. ನುಂಗುವುದು. ೨. ತುತ್ತು ; ಕವಳ : ಮೇಲೆವಾಯ್ದು ದೂಷಣನಂ ವೀರಾಗ್ರೇಸರನಸಿಯಿಂದಗ್ರಗ್ರಾಸಂ ಮಾಡಿದಂ ಜವಂಗಾಹವದೊಳ್ (ಪಂರಾಮಾ. ೯-೧೩೦). ೩. ಆಹಾರ ; ಊಟ : ಹೊಸಗೆಱೆಯ

ಮಹಾದೇವರ್ಗ್ಗೆ ನಿವೇದ್ಯಕ್ಕಂ ಪೂಜಿಸುವವ(ರ)ರ್ಗ್ಗೆ ಗ್ರಾಸಕ್ಕಂ ಬಿಟ್ಟ ಗಟ್ಟಿದ್ದೆ ಮತ್ತರೊನ್ದು (ಸೌ ಇ ಇ. IX-i, ೧೧೦-೧೫ ; 1052); ವೇಷವ ತೋಱಿ ಗ್ರಾಸಕ್ಕಾಗಿ ಆಸೆಮಾಡಿ ಲೋಗರ ಮನೆಯ ಕಾಯ್ದು ಗ್ರಾಸವ ಪಡೆದು ಉದರವ ಹೊರೆವ ವೇಷವು ವೇಶಿಯಿಂದಲು ಕರಕಷ್ಟ (ದೇದಾವ. ೬೬-೧೩೭) ; ಆ ದಿನದ ಗ್ರಾಸಕ್ಕೆ ಬೇರೆ ದಾರಿ ಇದ್ದಿರಲಿಲ್ಲ (ಜಿದಾಉ. ೧೨೫). ೪. ಗ್ರಹಣದಲ್ಲಿ ಗ್ರಸ್ತವಾದ ಸೂರ್ಯನ ಅಥವಾ ಚಂದ್ರನ ಬಿಂಬದ ಭಾಗ. [ ಸಂ. ]

**ಗ್ರಾಸಗೊಳ್**, ಗ್ರಾಸಗೊಳು (ಕ್ರಿ). ೧. ಕಬಳಿಸು; ನುಂಗು: ಮೊಗಚಂದ್ರಮನ ರಾಹು ಗ್ರಾಸಗೊಂಡಂತೆ ಕಳೆಗುಂದಿ (ನವಮೋ. ೭೫-೧೪). ೨. ಆಹಾರವನ್ನು ಪಡೆ ; ತಿನಿಸು ಹೊಂದು : ಧೇನುಚಯ ಗ್ರಾಸಗೊಂಡತಿ ಪುಷ್ಟಿಯಿಂ ಕರೆಗೆ (ನವಮೋ. ೩೩-೫೦). **ಗ್ರಾಸಗೊಳು**: ೧. ಪಾತಾಳಕುಹರದಂತೆ ಶವ ಬಾಯಿಗಳಂ ತೆರದು ಪಕ್ಷಘಾತದಿಂ ಸಮುದ್ರಮಂ ಗ್ರಾಸಗೊಳುತ ತನ್ನಂ ಗ್ರಾಸಿಸಲು ಪಾರ್ಶ್ವದಲ್ಲಿ ಬಾಯಂ ತೆರದು ಬರುವ ಮಹಾಸರ್ಪಮಂ ಪಕ್ಷದಿಂ ಖಂಡಿಸಿ (ಸೌಗಂಧಿ. ೨೮೪-೭).

[ ಗ್ರಾಸ + ಕೊಳ್$_1$ ]

**ಗ್ರಾಸಗೊಳು** 'ಗ್ರಾಸಗೊಳ್' ನೋ.

**ಗ್ರಾಸವಾಸಿ** (ನಾ). ಅನ್ನ ಬಟ್ಟೆಗಳನ್ನು ಮಾತ್ರ ಅಪೇಕ್ಷಿಸುವವನು ; ಜೀವನದಲ್ಲಿ ಉದಾತ್ತಅಪೇಕ್ಷೆಯಿಲ್ಲದವನು: ಕಾಲಕ್ಕಂಜಿ ಕರ್ಮಕ್ಕಂಜಿ ವಿಧಿವಿಧಾಂತ ನಿನಗಂಜಿ ಹಿರಿಯರೆನಿಸಿಕೊಂಬ ಗ್ರಾಸವಾಸಿಗಳು ಕೇಳಿರಯ್ಯ (ಮೋಳಿಪುರಾ. ೧೦೩-೪೧೦). [ ಸಂ. ಗ್ರಾಸವಾಸಿನ್ ]

**ಗ್ರಾಸಿಸು** (ಕ್ರಿ). ೧. ನುಂಗು ; ಕಬಳಿಸು : ತನ್ನಂ ಗ್ರಾಸಿಸಲು ಪಾರ್ಶ್ವದಲ್ಲಿ ಬಾಯಂ ತೆರದು ಬರುವ ಮಹಾಸರ್ಪಮಂ ಪಕ್ಷದಿಂ ಖಂಡಿಸಿ (ಸೌಗಂಧಿ. ೨೮೪-೧೧). ೨. (ಅಲಂ) ಆವರಿಸು; ಮುತ್ತು: ಚಿಂತೆ ಅವಳನ್ನು ಮತ್ತೆ ಗ್ರಾಸಿಸಲಿತ್ತು (ಚೀನಬಾ. ೨೩೭). [ ಗ್ರಾಸ + -ಇಸು$_3$ ]

**ಗ್ರಾಹ** (ನಾ). ೧. ಹಿಡಿಯುವುದು. ೨. ತೆಗೆದುಕೊಳ್ಳುವುದು ; ಸ್ವಾಧೀನಪಡಿಸಿಕೊಳ್ಳುವುದು. ೩. ಮೊಸಳೆ: "ನಕ್ರಮೆನೆ ಕುಂಭೀರಮೆನೆ ಮೊಸಳೆ ಗ್ರಾಹಮಾ ನಕ್ರ ಅವಹಾರಮೆನೆ ನೆಗಳಕ್ಕು" (ಮಂಗರಾ. ೧೨೦-೭) ; ಅತ್ಯುಗ್ರಗ್ರಾಹನಿವಹಸಂಕ್ಷೋಭಿತದೊಳ್ ಮತ್ತೀ ರತ್ನಾಕರದೊಳ್ ಪುತ್ರಿಕೆಯೆನೆ ಬಿಟ್ಟಳ್ (ಕವಿರಾ. ೨-೩೪) ; ಖುಷಿಯ ಶಾಪದೊಳುಗ್ರಗ್ರಾಹಸ್ವರೂಪದೊಳಿರ್ದಚ್ಚರಸೆಯರುಮಂ ವಿಶಾಪೆಯರ್ ಮಾಡಿ (ಪಂಪಭಾ. ೪-೨೦ ವ). ೪. ನೀರಾನೆ ಮೊದಲಾದ ದೊಡ್ಡ ಜಲಚರ. ೫. ಒಂದು ನರಕದ ಹೆಸರು: ಉಗ್ರ ವ್ಯಕಾಸ್ಯ ಗ್ರಾಹ ಕುಂಭಿ ನಕ್ರಮೆಂಬ್ಯೆದು ಮಂತ್ರಿನರಕಂಗಳಿಂದೊಡಗೂಡಿ (ವಿವೇಕ. ೧೮೦). [ ಸಂ. ]

**ಗ್ರಾಹಕ** (ಗು). ೧. ಹಿಡಿಯುವ. ೨. ಸ್ವೀಕರಿಸುವ; ತೆಗೆದುಕೊಳ್ಳುವ. ೩. ಒಳಗೊಂಡ; ಆವರಿಸಿದ. (ನಾ). ೪. ಗ್ರಹಿಸಬಲ್ಲವನು ; ಕೈಕೊಳ್ಳಬಲ್ಲವನು. ೫. ಹಿಡಿಯುವವನು ; ಬಂಧಿಸುವವನು : "ಪ್ರಗ್ರಹಃ, ಗ್ರಾಹಕಃ, ವಂದೀ–ಈ ೩ ಬಂದಿ" (ಹಲಾಯು. ೦೨೫-೭೪). ೬. ತಿಳಿಯುವವನು ; ಗಮನಿಸುವವನು : ಈ ಸಂವೇದನದಲ್ಲಿ ಗ್ರಾಹ್ಯವೆಂಬ ಘಟಾದಿವಸ್ತುವೂ ಗ್ರಾಹಕನೆಂಬ ಜೀವಾತ್ಮವಸ್ತುವೂ ಗ್ರಹಣವೆಂಬ ಸಂವೇದನವೂ–ಈ ಮೂರೂ ತೋರುವುವು (ಹಿಂದಸಾ. ೧೭೭). ೭. ದೂರವಾಣಿ, ರೇಡಿಯೋಗಳಲ್ಲಿ ಪ್ರಸಾರ ಮಾಡಿದ ನಿಸ್ತಂತುತರಂಗಗಳನ್ನು ಧ್ವನಿಯಾಗಿ ಪರಿವರ್ತಿಸುವ ಸಲಕರಣೆ : ಅವನು ತಯಾರಿಸಿದ ಸಾಧನದ ಪ್ರೇಷಕ ಮತ್ತು ಗ್ರಾಹಕ ಇವೆರಡೂ ಆಧುನಿಕ ಟೆಲಿಫೋನಿನ ಗ್ರಾಹಕದೋಪಾದಿಯಲ್ಲಿಯೇ ಇದ್ದುವು (ವಿಜ್ಞಾವಿ. ೩೩). ೮. (ಯಂತ್ರ ಅಥವಾ ಯಂತ್ರಸಲಕರಣೆಗಳಲ್ಲಿ) ಯಾವುದನ್ನಾದರೂ ಒಳಗೊಳ್ಳುವ ಕೋಶ ಅಥವಾ ಸಂಪುಟದಂಥ ಭಾಗ : ಈ ಬುದ್ಬುಲಿಯನ್ನು ವಾತಾಕರ್ಷಕಯಂತ್ರದ ಗ್ರಾಹಕದೊಳಗೆ . . . ಇಟ್ಟು, ಆ ಪಾತ್ರೆಯೊಳಗಿನ ಹವೆಯನ್ನು ತೆಗೆಯುತ್ತೇನೆ (ಮುಂಬಯಿ. ೫-೭೫). ೯. ಕೊಂಡುಕೊಳ್ಳುವವನು ; ಗಿರಾಕಿ : ಭೂಪತಿಯು ತನ್ನ ಪತ್ರಿಕೆಯ ಗ್ರಾಹಕರ ಚಂದಾ ಧನಪ್ರಾಪ್ತಿಯ ತಾಲಿಕೆಯ ಸಂಗಡ . . . ಲೆಕ್ಕಪತ್ರವನ್ನು ಹೊಂದಿಸಿ ಹೋಲಿಸಿ ನೋಡುತ್ತ ಕುಳಿತುಬಿಟ್ಟನು (ಇಪ್ಪಕ. ೨೬೪) ; ವೃತ್ತಪತ್ರಿಕೆಗಳ ಗ್ರಾಹಕರ ಸಂಖ್ಯೆ ಬೆಳೆಯುತ್ತಿದೆ (ರೂಢಿ). [ ಸಂ. ]

**ಗ್ರಾಹಕತ್ವ** (ನಾ). ಗ್ರಹಿಸುವ ಶಕ್ತಿ ; ಹಿಡಿಯುವ ಶಕ್ತಿ ; ಆಕರ್ಷಿಸುವ ಗುಣ : ಕಬ್ಬಿಣದ ಗ್ರಾಹಕತ್ವವು ಅಷ್ಟು ಹೆಚ್ಚಾಗಿರುವುದಕ್ಕೂ . . . ಇತರ ವಸ್ತುಗಳ ಗ್ರಾಹಕತ್ವವು ಋಣಾತ್ಮಕವಾಗಿಯೂ ಇರುವುದಕ್ಕೂ ಕಾರಣವನ್ನು ಕಂಡುಹಿಡಿದಿದ್ದಾರೆ (ಭೌತವಿ. ೩೧೯). [ ಸಂ. ]

**ಗ್ರಾಹಕಶಕ್ತಿ** (ನಾ). = ಗ್ರಾಹಕತ್ವ. [ ಗ್ರಾಹಕ + ಶಕ್ತಿ ]

**ಗ್ರಾಹಮರ** (ನಾ). ಬೇಲದ ಮರ ; ಕಪಿತ್ಥ : (೬).

[ ಗ್ರಾಹ? + ಮರ$_1$ ]

**ಗ್ರಾಹಿ$_1$** (ಗು). ೧. ಹಿಡಿಯುವ. ೨. ಅರ್ಥಮಾಡಿಕೊಳ್ಳುವ ; ಅಂಗೀಕರಿಸುವ. 'ಏಕಗ್ರಾಹಿ' ಪರಾ. ೩. ಒಳಗೊಂಡಿರುವ. (ನಾ). ೪. ಬೇಲದ ಮರ ; ಬೆಳವಲ ; ಕಪಿತ್ಥ. ೫. = ಗ್ರಾಹಕ ೭ : ಫೋನಿನ ಗ್ರಾಹಿ (Receiver) ಯನ್ನು ಕೈಗೆ ತೆಗೆದುಕೊಂಡು ಮಾತಾಡ ಹೊರಟಾಗ ಮಾತ್ರ ಥಿಯರಿ ಮರೆತುಹೋಗುತ್ತದೆ (ಅಲೆಮ. ೧೧೧). ೬. ಕಲಕಿದ ದ್ರವ ; ಕಲ್ಕ : ಇವಂ ಮೊಸರಿನೊಳರೆದು ಗ್ರಾಹಿ ಮಾಡಿ ಕಟ್ಟುಮೊಸರಿನೊಳನುಪಾನವ ಮಾಡಿ ಕೊಡೆ ಆಮಾತಿಸಾರಂ ಕೆಡುಗುಂ (ಸಕವೈ. ೩೧೫).

[ ಸಂ. ಗ್ರಾಹಿನ್ ]

**ಗ್ರಾಹಿ$_2$** (ನಾ). ೧. ಹೆಣ್ಣುದೆವ್ವ; ಸ್ತ್ರೀಪಿಶಾಚಿ. ೨. ಮೈಮರೆಯುವಿಕೆ; ಮೂರ್ಛೆ. [ ಸಂ. ]

**ಗ್ರಾಹ್ಯ** (ಗು). ೧. ಹಿಡಿಯಬಹುದಾದ. ೨. ತೆಗೆದುಕೊಳ್ಳಲು ಯೋಗ್ಯವಾದ ; ಸ್ವೀಕರಿಸತಕ್ಕ : ಪತ್ರವನ್ನು ಹತ್ತುಸಲ ಬರೆದು ಹತ್ತುಸಲ ಹರಿದುಹಾಕಿ ಕೊನೆಗೊಂದು ಅದರ ಗ್ರಾಹ್ಯರೂಪವು ಸಿದ್ಧವಾಯಿತು(ಸಮಜೀ. ೯೧೩). ೩. ಗ್ರಹಿಸಬಹುದಾದ; ತಿಳಿಯಬಹುದಾದ: ವಿರಹವೆಮಗಿಲ್ಲ ಸುರತಗ್ರಾಹ್ಯ ಮೋಹನದ ಪಂಚಬಾಣಪ್ರಯೋಗಂಗಳೇಕೀಗ (ಜೈಮಿಭಾ. ೭-೩೪). ೪. ಒಪ್ಪತಕ್ಕ ; ಮೆಚ್ಚತಕ್ಕ : ಕಾವ್ಯವೆಂಬುದು ಸಹೃದಯ ಗ್ರಾಹ್ಯ ವಿಷಯ (ಕಾವ್ಯಕು. ೧೩೪).

ಗ್ರಾಹ್ಯವಾಗು=ತಿಳಿ ; ಗೊತ್ತಾಗು : ಅವಳಿಗೆ ಆಗಿನ ಪರಿಸ್ಥಿತಿ ಗ್ರಾಹ್ಯವಾಗದೆ, ತನ್ನ ಸ್ವಭಾವದಂತೆ ವರ್ತಿಸಲನುವಾದಳು (ಪುನರು. ೧೯೩). [ಸಂ.]

**ಗ್ರಾಹ್ಯಾರ್ಥ** (ನಾ). (ಇಂದ್ರಿಯಗಳಿಂದ) ಗ್ರಹಿಸಬಹುದಾದ ವಿಷಯ: ಅರ್ಥಗಳು ಗ್ರಾಹ್ಯಾರ್ಥಗಳೆಂದೂ ಅಧ್ಯವಸೇಯಾರ್ಥಗಳೆಂದೂ ಎರಡು ವಿಧ. ಗ್ರಾಹ್ಯರೂಪವಾದ ಅರ್ಥವೇ ಇಂದ್ರಿಯಸಂಯೋಗಕ್ಕೆ ವಿಷಯವಾದದು (ಭಾತತ್ತ್ವ. ೨೨೧). [ ಗ್ರಾಹ್ಯ + ಅರ್ಥ ]

**ಗ್ರೀಕ್** (ನಾ). ಗ್ರೀಸ್‌ದೇಶದ ಭಾಷೆ : ಥೆಸ್‌ಪಿಸ್ಸನ್ನು ಗ್ರೀಕ್ ರುದ್ರನಾಟಕದ ಜನಕನೆನ್ನಬಹುದು (ಅಂತಿಗೊ. XXI, ಮುನ್ನುಡಿ).

[ ←ಇಂ. Greek ]

**ಗ್ರೀಕ** (ನಾ). ಗ್ರೀಸ್‌ದೇಶದವನು: ಜ್ಞಾನೈಕದೃಷ್ಟಿಯಿಂದ ವಿಜ್ಞಾನವನ್ನು ಬೆಳೆಸಿದವರಲ್ಲಿ ಗ್ರೀಕರು ಮೊದಲಿಗರು (ಸುಕ್ರಾ.ರ. ೭ ಪೀಠಿಕೆ) ; ಗ್ರೀಕ್ ರುದ್ರನಾಟಕ ಕೊನೆಗೆ ಎಲ್ಲಾ ಗ್ರೀಕರ ಒಡವೆಯೂ ಹೆಮ್ಮೆಯೂ ಆಗಿ ಪರಿಣಮಿಸಿತು (ಅಂತಿಗೊ. XVII, ಮುನ್ನುಡಿ). [ ಗ್ರೀಕ್ + -ಅ$_6$ ]

**ಗ್ರೀವ** (ನಾ). = ಗ್ರೀವೆ : ಉದಗ್ರಗ್ರೀವಮುದ್ಯಜ್ಜಘನಮುರುಲಲಾಟಂ . . . ಸುನಾಸಾಪುಟಮಮರ್ದ ತುರಂಗಂಗಳಂ ಕಾಣ್ಕೆಗೈದಂ (ರಾಜಶೇ. ೧೨-೧೦೧). [ಸಂ. ಗ್ರೀವಾ ]

**ಗ್ರೀವಾರೇಚಕ** (ನಾ). [ನಾಟ್ಯ] ನೃತ್ಯದಲ್ಲಿ ಒಂದು ಭಂಗಿ; ಕೊರಳನ್ನು ವರ್ತುಲಾಕಾರವಾಗಿ ಚಲಿಸುವಿಕೆ : ಒಂದು ಅಂಗದ ವರ್ತುಲಾಕಾರ ಚಲನೆಗೆ 'ರೇಚಕ'ವೆಂದು ಹೆಸರು. ಇದರಲ್ಲಿ ೪ ವಿಧಗಳಿವೆ. (೧) ಪಾದರೇಚಕ . . . (೪) ಗ್ರೀವಾರೇಚಕ (ಅಭಾನ್ಯ. ೩೩). [ ಸಂ. (ಗ್ರೀವಾ + ರೇಚಕ) ]

**ಗ್ರೀವಾರೇಚಿತ** (ನಾ). = ಗ್ರೀವಾರೇಚಕ : ಕೊರಲಂ ಪಲದೆಸೆಗುಂ ಬಿತ್ತರದಿಂದಂ ತಿರುಗಿಸಲ್ಕೆ ಗ್ರೀವಾರೇಚಿತಂ (ಲಾಸ್ಯರಂ. ೪-೨೨). [ ಸಂ. (ಗ್ರೀವಾ + ರೇಚಿತ) ]

**ಗ್ರೀವೆ** (ನಾ), ಕೊರಳು ; ಕಂಠ ; ಕುತ್ತಿಗೆ : ಗ್ರೀವೆ ಮೊಗಮಂಸಮಳಿಕಂ ಭ್ರೂ ವಕ್ಷಂ ತೋಳ್ ತೊಳಂಕು ತೊಡೆಯೆಂಬೆಡೆಯೊಳ್ ತೀವಿದುವು ಭೀಮನಿಸೆ ವಿಶಿಖಾವಲಿ ಮಾಜಾಂತರಾತಿಸೇನೆಯ ಮೆಯ್ಯೊಳ್ (ಕಾವ್ಯಾವ. ೧೬೯) ; ಗ್ರೀವಾ, ಭಿಕ್ಷಾ–ಎಂಬೆರಡು ಶಬ್ದಂಗಳ್ಗೆ ಗ್ರೀವ, ಗ್ರೀವೆ ; ಭಿಕ್ಷ, ಭಿಕ್ಷೆ–ಎಂದು ನಿಜಿಸುವುದು (ಶಮದ. ೮೨ ಪ್ರಯೋ). [ ಸಂ. ಗ್ರೀವಾ ]

**ಗ್ರೀಷ್ಮ** (ನಾ). ೧. ಆರು ಋತುಗಳಲ್ಲಿ ಎರಡನೆಯದು ; ಜ್ಯೇಷ್ಠ ಆಷಾಢಮಾಸಗಳ ಕಾಲ ; ಬೇಸಗೆ ; ಸೆಕೆಗಾಲ : "ಶುಕ್ರ ಶುಚಿ ಗ್ರೀಷ್ಮ [ಪಾಠಾಂ. ಘ್ರಿಸ್ಮ]ಮದು" (ಮಂಗರಾ. ૩೦-೧೧); ನೋಡಿದೆಮೆ ಸೀಗುಂ . . . ಮಾ ತಾ ಡಿ ದ ಬಾಯ್ ಪೊತ್ತುಗುಮೆನೆ ನಾಡೆಯಗುರ್ವಿಸಿದುದನುಗ ತೋಷ್ಮಂ ಗ್ರೀಷ್ಮಂ (ಪುಷ್ಪಪು. ೮-೭೮) ; ಮಾನಿನಿಯ ಪೀನತರ ಕುಚ ಮೀನ ಧ್ವಜ ಕುಂಭಿ ಕುಂಭಮದು ವಿರಹಗ್ರೀಷ್ಮಾನಲನಿಂ ಬಿ ರಿ ದಂ ತೆ ಪೊ ಲೀ ನೊಪ್ಪಿತೋ ಬಿರಿಯೆ ತಾಳ್ದ ಕುಂಕುಮಪಂಕಂ (ರಾಜಶೇ. ೭-೭೯). ೨. ಉಷ್ಣ; ಸೆಕೆ; ತಾಪ. [ ಸಂ. ]

**ಗ್ರೀಷ್ಮಋತು** (ನಾ).=ಗ್ರೀಷ್ಮ ೧ : ಶರತ್ಕಾಲದ ಮಳೆಗಿಂತ ಗ್ರೀಷ್ಮಋತುವಿನ ಬಿಸಿಲ ತಾಪವೇ ವಾಸಿ (ರೂಢಿ). [ ಗ್ರೀಷ್ಮ + ಋತು ]

**ಗ್ರೀಷ್ಮಕಾಲ** (ನಾ). = ಗ್ರೀಷ್ಮ ೧. [ ಗ್ರೀಷ್ಮ + ಕಾಲ ]

**ಗ್ರೀಷ್ಮಾವಾಸ** (ನಾ).ಬೇಸಗೆಯಲ್ಲಿ ವಾಸಿಸುವುದಕ್ಕಾಗಿ ನಿರ್ಮಿಸಿದ ಮನೆ: ದಾರುನಿರ್ಮಿತ ಗ್ರೀ ಷ್ಮಾ ವಾ ಸ ಗ ಳ (Chalets) ವರೆಗೂ ಇವೆ ಇಲ್ಲಿ ಮನೆಗಳು (ಭೂವಿವ. ೧೬೬). [ ಗ್ರೀಷ್ಮ+ ಆವಾಸ ]

**ಗ್ರೈವೇಯ** (ನಾ). ೧. ಕೊರಳಿನ ಪಟ್ಟಿ. ೨. ಕಂಠಾಭರಣ ; ಹಾರ : "ನೇವಳಂ ಪದಕ ಸರಪಳಿ ಪಟ್ಟಿಕಾದಿಗಳ್ ಗ್ರೈವೇಯಮಕ್ಕು" (ಮಂಗರಾ. ೧೦೦-೨೫) ; ಲಸದ್ಗ್ರೈವೇಯ ಹಾ ರಾ ನ್ವಿ ತ ಂ (ವಿಷ್ಣುಪು. ೫-೨೦೮) : ಇಂದ್ರಜಂ ಕಂಡನಾ ವಿಪಿನ ಪುಷ್ಪಲತೆ ಗ್ರೈವೇಯಮಾಗಿರ್ದ ಸುಗ್ರೀವನಂ (ಶ್ರೀರಾಮಾ. ೩೦೦-೨೬೪). [ ಸಂ. ]

**ಗ್ರೈವೇಯಕ** (ನಾ). ೧. = ಗ್ರೈವೇಯ ೨ : "ಕೊರಳಲ್ಲಿಕ್ಕುವ ತುಡುಗೆಯೆಲ್ಲಂ ಗ್ರೈವೇಯಕಮೆಂಬುದು" (ಹಲಾಯು. ೯೨-೪೦೪) ; ಬಿಸಸೂತ್ರ ತ್ರಿತಯಂ ಯವಾಂಕುರಕೃತಗ್ರೈವೇಯಕಂ ಸರ್ವಧಾನ್ಯ ಸಮುತ್ತಂಭಿತ ಪೂರ್ಣಕುಂಭಮೆಸೆದತ್ತು (ಪಂಠಾಮಾ. ೫-೧೨೪); ಹೇಮಮಯಗ್ರೈವೇಯಕ ಭಾರಮನೊಲ್ಲದೆ ತಳೆದಳರಸಿ ಮುತ್ತಿನ ಸರಮಂ (ಪುಷ್ಪಪು. ೪-೨೦). ೨. ಆನೆಯ ಕೊರಳಿಗೆ ತೊಡಿಸುವ ಸರಪಣಿ. ೩. [ಜೈನ] ಹದಿನಾರು ಸ್ವರ್ಗಗಳ ಮೇಲೆ ಇರುವ ಒಂಬತ್ತು ಕಲ್ಪಾತೀತವಾದ ಸ್ವರ್ಗಗಳು : ಆ ಪದಿನಾಱು ಕಲ್ಪಂಗಳ ಮೇಲೆ ನವಗ್ರೈವೇಯಕಂಗಳಿರ್ದುವು (ಆಜಿಪು. ೧೧-೨೯ ವ). 'ನವಗ್ರೈವೇಯಕ' ಪರಾ. [ ಸಂ. ]

**ಗ್ರೈಷ್ಮ** (ಗು). ಬೇಸಗೆಗೆ ಸಂಬಂಧಿಸಿದ; ಗ್ರೀಷ್ಮಕಾಲದ. 'ಗ್ರೈಷ್ಮಾತಪ' ಪರಾ. [ ಸಂ. ]

**ಗ್ರೈಷ್ಮಾತಪ** (ನಾ). ಬೇಸಗೆಯ ಬಿಸಿಲು ; ಗ್ರೀಷ್ಮಋತುವಿನ ಬಿಸಿಲು: ಅತಿಲವಣ ಸ್ನಿಗ್ಧ ರೂಕ್ಷವಿರುದ್ಧಾಹಾರ ಗ್ರೈಷ್ಮಾತಪ ಪಿತ್ತಜ್ವರಾನಶನಾದಿಗಳಿಂ ಪೆರ್ಚೆ ಶರೀರೇಂದ್ರಿಯಂಗಳಂ ಕ್ಷೀಣಂ ಮಾಳ್ಪ (ತತ್ತ್ವಪ್ರ. ೩೩೩). [ ಗ್ರೈಷ್ಮ + ಆತಪ ]

**ಗ್ಲಪನ** (ನಾ). ೧. ಬಾಡುವಿಕೆ ; ಕುಂದುವಿಕೆ : ಅನಿತೊಂದುರ್ಕಿನೊಳುಕಿ ಕೌರವಖಳರ್ ಪಾಂಚಾಳರಾಜಾತ್ಮಜಾನನಪದ್ಮಗ್ಲಪನೈಕ ಕಾರಣಪರರ್ ತಾವಾಗೆಯುಂ (ಪಂಪಭಾ. ೭-೯). ೨. ಬಳಲುವಿಕೆ ; ಕೃಶವಾಗುವಿಕೆ. [ ಸಂ. ]

**ಗ್ಲಪಿತ** (ಗು). ೧. ಕುಂದಿದ ; ಬಾಡಿದ. ೨. ಆಯಾಸಗೊಂಡ ; ಬಳಲಿದ : ತಪನಕರಂ ತನುಗಳನುರ್ಚಿಪೋಗೆ ಸಾರ್ದತ್ತು ಜಕ್ಕವಕ್ಕಿಯ ಪೊಣರುಂ ಗ್ಲಪಿತಮನಮಾಗಳುದ್ದಂಡಪುಂಡರೀಕೋಜ್ಜ್ವಳಾತಪತ್ರದ ನೆಟಲಂ (ಆದಿಪು. ೧೧-೫೦). [ ಸಂ. ]

**ಗ್ಲಸ್ತ** (ಗು). ತಿಂದ ; ನುಂಗಿದ. [ ಸಂ. ]

**ಗ್ಲಹ** (ನಾ). ೧. ಜೂಜಾಡುವುದು ; ದ್ಯೂತ. ೨. ಜೂಜಿನಲ್ಲಿಡುವ ಪಣ ; ಒಡ್ಡು : "ಗ್ಲಹವೆಂಬುದು ಜೂಜಿನ ಒಡ್ಡಿ" (ಹಲಾಯು. ೧೨೫-೭೪). [ ಸಂ. ]

**ಗ್ಲಾನ** (ಗು). ೧. ದಣಿದ; ಬಳಲಿದ ; ಸೊರಗಿದ. (ನಾ). ೨. [ನಾಟ್ಯ] ರೋಗ, ಬಳಲಿಕೆ ಮೊದಲಾದುವುಗಳನ್ನು ಕಣ್ಣುಗಳಿಂದ ತೋರಿಸುವ ಅಭಿನಯ : ಒಳಸರಿದಾಲಿಗಳೊಯ್ಯನೆ ಚಲಿಸುತ್ತಲಸತೆಯನೊಂದಿ ತೋಱಲ್ ಗ್ಲಾನಂ (ಲಾಸ್ಯರಂ. ೩-೩೦) ; ಉಳಿದ ೨೦ ನೋಟಗಳು ವ್ಯಭಿಚಾರಿಭಾವಯುಕ್ತವಾದುವುಗಳು : ೧. ಶೂನ್ಯ, ೨. ಮಲಿನ . . . ೫. ಗ್ಲಾನ (ಅಭಾನ್ಯ. ೪೫). [ ಸಂ. ]

**ಗ್ಲಾನಿ** (ನಾ). ೧.ಬಳಲಿಕೆ ; ಆಯಾಸ. ೨. ಚಟುವಟಿಕೆಯಿಲ್ಲದಿರುವಿಕೆ; ಜಡತ್ವ. ೩. ಬೇನೆ; ರೋಗ; ನೋವು. ೪. ಅಸಂತೋಷ; ಅತೃಪ್ತಿ: ಏನುಮನಾರೊಳಂ ನುಡಿಯದುದುಮ್ಮಳದಿಂ ವಿರಹಾಕುಲಂ ಮನೋಗ್ಲಾನಿಯನೊಂದಿ . . . ತಳೆದನಾ ಖಚರಾಗ್ರಣಿ ಮೌನಮುದ್ರೆಯಂ (ಪಂಠಾಮಾ. ೪-೯೭) ; ಗ್ಲಾನಿ ಚಿತ್ತದೊಳಿಲ್ಲಲೇ ಸುಮನೋನುರಾಗವೆ (ಕು ವ್ಯಾ. ಸ. ೧೪-೧೭). ೫. ಅವನತಿ ; ಅಧೋಗತಿ ; ನಾಶ : ಧರ್ಮಕ್ಕೆ ಗ್ಲಾನಿಯುಂಟಾದಾಗೆಲ್ಲ . . . ಈಶ್ವರನ ಅವತಾರವೆ ಆಗುತ್ತದೆಂದು ಭರತ ಖಂಡದ ಸನಾತನಶ್ರದ್ಧೆ (ಪುಕ್ಕಾರ. ೧೦೪ ಪೀಠಿಕೆ). ೬. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು ; ಆಯಾಸ ; ದಣಿವು : ಮತಿನಿರ್ವೇದಾವಹಿತ್ಥಶ್ರಮಮದಜಡತಾ ಗ್ಲಾನಿ . . . ಮೋಹಾಮಯಮೃತಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೫) ; ಅತಿಕ್ಲೇಶದಿಂದ ಶಕ್ತಿಯುಡುಗುವುದು ಗ್ಲಾನಿ (ಭಾರಮಿಾ. ೩೪೬). [ ಸಂ. ]

**ಗ್ಲಾಸು** (ನಾ). ನೀರು ಮೊದಲಾದುವುಗಳನ್ನು ಕುಡಿಯಲು ಬಳಸುವ ಉದ್ದವಾದ ಗಾಜಿನ ಲೋಟ : ಗ್ಲಾಸು, ದುರ್ಬಿಣಿಯ ಕನ್ನಡಿ ಮುಂತಾದುವುಗಳನ್ನು (ಮುಂಬಯಿ. ೭-೩೯) ; ಬಾಟ್ಲಿಯಲ್ಲಿದ್ದ ಸೆರೆಯನ್ನೆಲ್ಲ ಗ್ಲಾಸಿಗೆ ಸುರುವಿ ಒಂದೇ ಗುಟುಕಿನಲ್ಲಿ ಕುಡಿದು ಕುಳಿತ (ಬೆಂಗಬ. ೯). [ ←ಇಂ. Glass ]

**ಗ್ಲೌ** (ನಾ). ಚಂದ್ರ : ಔಕಾರಕ್ಕೆ . . . ಗ್ಲೌವೆನಲ್ ಚಂದ್ರಂ (ಶಮದ. ೬. ೫೫ ಪ್ರಯೋ). [ ಸಂ. ]

*

# ಘ



**ಘ** (ನಾ). ೧. ಕನ್ನಡ ವರ್ಣಮಾಲೆಯ ಇಪ್ಪತ್ತನಾಲ್ಕನೆಯ ಅಕ್ಷರ ; ಘಕಾರ. ೨. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : "ಘಡಭವ ನಾಲ್ಕರ ಪೆಸರು" (ಭಾಸ್ಕರ. ೭೨-೬).

**ಘಂ₁** (ನಾ). ಒಂದು ಅನುಕರಣ ಶಬ್ದ. 'ಘಮ್ಮನೆ', 'ಘಮ್ಮಿಡು' ಪರಾ.

**ಘಂಘಂ** (ದ್ವಿರುಕ್ತಿ) : ನಡೆನಡೆಗೆ ಬಾವುಲಿಯ ಪೆಂಡೆಯ ತೊಡರುಗಳು ಘಲಘಲನೆ ಮೊರೆಯಲು ಬಿಡದೆ ತಾಟಿಪ ಹಲಗೆ ಘಂಘಂ ಘಲಿಗುಘಲಿಲೆನಲು (ಬಸವು. ೦೬-೦೭).

**ಘಂ₂** (ನಾ). ಸುವಾಸನೆ ; ನರುಗಂಪು. 'ಘಮಮ್ಮ', 'ಘಮ್ಮೆನ್ನು' ಪರಾ.

**ಘಂಟ** (ನಾ). ತಾಳೆಯೋಲೆಯ ಮೇಲೆ ಅಕ್ಷರಗಳನ್ನು ಬರೆಯಲು ಬಳಸುವ ಉಕ್ಕಿನ ಲೇಖನಿ ; ಕಂಟ : ಪತ್ರಗಳ ಮೇಲೆ, ಚೂಪಾದ ಮೊನೆಯುಳ್ಳ 'ಘಂಟ' ವೆಂಬ ಕಬ್ಬಿಣದ ಕಡ್ಡಿಯಿಂದ ಬೇಗಬೇಗನೆ ಬರೆಯುವರು (ಗುಣಸಾ. ೬); ಪುಸ್ತಕದ ಪಕ್ಕದಲ್ಲಿ ಒಂದು ಘಂಟವಿದೆ–ಎಂದರೆ ಥಳಥಳಿಸುವ ಹಿತ್ತಾಳೆಯ ಲೇಖನಿ (ನಡದಾ. I, ೫೫೯).

[ P ಇದು 'ಕಂಟ' ಎಂಬುದರ ಅಪಲಿಖಿತವಿರಬಹುದು ]

**ಘಂಟಾಕರ್ಣ** (ನಾ). ಗಂಟೆಯನ್ನು ಕಿವಿಗೆ ಕಟ್ಟಿಕೊಂಡಿದ್ದ ಒಬ್ಬ ಶಿವಭಕ್ತ ; ಶಿವನ ಪ್ರಮಥಗಣದಲ್ಲಿ ಒಬ್ಬ : ಸುಮತಿ ಘಂಟಾಕರ್ಣನೊರ್ಬ ಪ್ರಮಥವರನೆಂದುವನಿತಟಿ ಶಬ್ದಮನಿನಿತುಮಂ ಕೇಳದಿಪ್ಪುದೆ ನೇಮಮಂತಾಗಿ ಅಮಿತಕರ್ಣಂಗಳೊಳನೇಕಂ ನಿಮಿರ್ದು ಘಣಘಣ ಎಂದು ಮೊರೆವಾಕ್ರಮಿಪ ಘಂಟೆಗಳಿಂದ ಘಂಟಾಕರ್ಣನೆನಲೆಸೆದ (ಬಸವು. ೫೩-೩೭).

[ ಸಂ. (ಘಂಟಾ + ಕರ್ಣ) ]

**ಘಂಟಾಗೋಪುರ** (ನಾ). ಕಾಲಕಾಲಕ್ಕೆ ಶಬ್ದಮಾಡಿ ಸಮಯವನ್ನು ಸೂಚಿಸುವಂತೆ ಗಂಟೆಯನ್ನು ಅಳವಡಿಸಿರುವ ಗೋಪುರ : "(ಸಾ. ಕ್ರೈಸ್ತದೇವಾಲಯಕ್ಕೆ ಅಥವಾ ಇತರ ಕಟ್ಟಡಕ್ಕೆ ಸೇರಿಸಿಯಾಗಲಿ, ಪ್ರತ್ಯೇಕವಾಗಿಯಾಗಲಿ, ಕಟ್ಟಿದ) ಘಂಟಾಗೋಪುರ ; ಕ್ರೈಸ್ತದೇವಾಲಯದ ಗೋಪುರದಲ್ಲಿ ಗಂಟೆ ಹಾಕುವ ಸ್ಥಳ" (Belfry. ಇಂಕನಿ); ನೆಕ್ಲುದೋವ್ . . . ಬರುತ್ತಿದ್ದಂತೆ "ದೇವರೆನಿತು ಹಿರಿಯನು" ಎಂಬ ನಾದವಾಲೆ ಘಂಟಾಗೋಪುರದ ತಿವಳಿಗಂಟೆಗಳಿಂದ ಮೂಡಿ ಬರುತ್ತಿತ್ತು (ಪುನರು. ೩೫೨).

[ ಸಂ. (ಘಂಟಾ + ಗೋಪುರ) ]

**ಘಂಟಾಘೋಷ** (ನಾ). = ಘಂಟಾನಾದ .

**ಘಂಟಾಘೋಷವಾಗಿ ಹೇಳು** = ಗಂಟೆಯ ನಾದದಂತೆ ಸ್ಪಷ್ಟವಾಗಿ ನುಡಿ,–ಸಾರು ; ಎಲ್ಲರಿಗೂ ನಿರ್ಧಾರವಾಗಿ ತಿಳಿಯಪಡಿಸು : ಇದುವರೆಗೆ ಆಂಗ್ಲಭಾಷೆ ಆಕ್ರಮಿಸಿದ್ದ ಸಿಂಹಾಸನಕ್ಕೆ ಏರಲು ಕನ್ನಡ ಅರ್ಹವಾಗಿದೆ, ಸಿದ್ಧವಾಗಿದೆ ಎಂದು ಘಂಟಾಘೋಷವಾಗಿ ಹೇಳಬಹುದು (ಗ್ರಹವಿ. III, ಮುನ್ನುಡಿ) ; ಶ್ರೀವೇದವ್ಯಾಸರು ಘಂಟಾಘೋಷವಾಗಿ ಹೇಳುತ್ತಾರೆ (ಬ್ರಹ್ಮಜೀ. ೨೭೩) ; ಶ್ರುತ್ಯಾದಿ ಪ್ರಮಾಣಗಳು ಹರಿಯ ಸರ್ವೋತ್ತಮತ್ವವನ್ನು ಘಂಟಾಘೋಷವಾಗಿ ಒತ್ತಿ ಹೇಳುತ್ತಲಿವೆ (ಭಾರದ. ೨೭೫).

[ ಸಂ. (ಘಂಟಾ + ಘೋಷ) ]

**ಘಂಟಾಜಾಲ** (ನಾ). ಗಂಟೆಗಳ ಸಮೂಹ : ಕನಕರಜತಮಣಿಮಯಘಂಟಾಜಾಲಪ್ರದೀಪಮಾಲೆಗಳಂ ನಿರ್ವರ್ತಿಸಿಯುಂ (ಆಜಿಪು. ೧೨-೪ ವ).

[ ಸಂ. (ಘಂಟಾ + ಜಾಲ) ]

**ಘಂಟಾನಾದ** (ನಾ). ಗಂಟೆಯ ನಾದ,–ಶಬ್ದ : ದೇವಾಲಯದ ಘಂಟಾನಾದ ಕೇಳಿಬರುತ್ತಿದೆ (ಲೂಧಿ). [ ಸಂ. (ಘಂಟಾ + ನಾದ) ]

**ಘಂಟಾನ್ವಿತ** (ನಾ). ಗಂಟೆಯಿಂದ ಕೂಡಿದುದು : ಇದು ಪದ್ಮಾವಸತಂ ದಿವಾಕರನ ಪೊಲ್ . . . ಘಂಟಾನ್ವಿತಂ ದಿಗ್ಗಜೇಂದ್ರದ ಪೊಲ್ ತಾನೆನಿಪನ್ನೆಗಂ ಹರಿಹರಶ್ರೀಗೇಹಮಂ ಮಾಡಿದಂ (ಎಕ. XI, ದಾವಣ. ೨೫-೭೬ : 1224). [ಸಂ. (ಘಂಟಾ + ಅನ್ವಿತ) ]

**ಘಂಟಾಪಥ** (ನಾ). ಗಂಟೆ ಕಟ್ಟಿರುವ ಆನೆ ಮೊದಲಾದ ವಾಹನಗಳ ದಾರಿ ; ಮುಖ್ಯರಸ್ತೆ ; ಹೆದ್ದಾರಿ ; ರಾಜಮಾರ್ಗ : "ಘಂಟಾಪಥಃ, ಸಂಸರಣಂ–೨ ಹತ್ತಂಬಿನ ಅಗಲವುಳ್ಳ ರಾಜಮಾರ್ಗದ ಹೆಸರು; ಹೈರೋಡ್, ಅಗಲವಾದ ಹಾದಿ ; ದೊಡ್ಡರಸ್ತೆ ; ರಾಜಬಾಟಾ" (ಸಿದ್ಧಾಂತಿ. ೮೭) ; ಇಂತನಂತಜನ ಮನಸ್ಸೂಚೀಸೂತ್ರಮಾದ ಕಳಮಕ್ಷೇತ್ರದನತಿದೂರದ ಭೂರಮೆಯ ಸಸಿಂಧೂರಸೀಮಂತರೇಖೆಯಂತೆ ಚೆಂಬುಡಿ ತಳ್ತು ಕಂಗೊಳಿಪ ಘಂಟಾಪಥದ ಪರಿಸರದಲ್ಲಿ (ರಾಜಶೇ. ೨-೨೦ ವ).

[ ಸಂ. (ಘಂಟಾ + ಪಥಿನ್ + – ) ]

**ಘಂಟಾಪಾಟಲಿ** (ನಾ). ಒಂದು ಬಗೆಯ ಮರ; "ಮೊಕ್ಕಮರ" (ಅಮರ. ೬೬೯). P ಸಂಸ್ಕೃತದಲ್ಲಿ 'ಘಂಟಾ' ಮತ್ತು 'ಪಾಟಲಿ'ಗಳು ಇದೇ ಅರ್ಥದಲ್ಲಿ ಭಿನ್ನಶಬ್ದಗಳಾಗಿಯೂ ಬಳಕೆಯಲ್ಲಿವೆ.

[ ಸಂ. (ಘಂಟಾ + ಪಾಟಲಿ) ]

**ಘಂಟಾಮಣಿ** (ನಾ). ೧. ಸಣ್ಣಗಂಟೆ. ೨. ಒಂದು ಬಗೆಯ ಔಷಧಿಗಿಡ; ಕಂಕೋಷ್ಠ : "ಪಟುಪರ್ಣೀ, ಹೈಮವತೀ, ಸ್ವರ್ಣಕ್ಷೀರೀ, ಹಿಮಾವತೀ–೪ ಕಂಕೋಷ್ಠದ ಹೆಸರು, ಘಂಟಾಮಣೀಸೊಪ್ಪು" (ಸಿದ್ಧಾಂತಿ. ೧೨೬).

[ ಸಂ. (ಘಂಟಾ + ಮಣಿ) ]

**ಘಂಟಾರವ** (ನಾ). ೧. = ಘಂಟಾನಾದ : ಅಂತಾ ತ್ರಿಲೋಕಚೂಡಾಮಣಿಯುಂದಯದೊಳ್ . . . ದೇವಲೋಕದೊಳ್ ಶಂಖಪಟಹಕಂಠೀರವಘಂಟಾರವಂಗಳೊರ್ಮೊದಲೆಸೆವುದುಂ (ಶಾಂತಿಪು. ೧೦-೧ ವ) ; ಘಂಟಾರವಮುಂ ಘನಜಯಘಂಟಾರವಮುಂ ದಿಶಾಗಜಂಗಳ ಘಳಸದ್ಘಂಟಾರವಮುಂ ಕೂರ್ವಿಸುತೆಂಟುಂ ದೆಸೆಗಳುಮನೆಯ್ದೆ ತೀವಿದುವಾಗಳ್ (ಪಾರ್ಶ್ವಪು. ೧೩-೯); ಘಂಟಾರವದ ರಭಸದ ಝಡಪದಲಿ ಜೋಡಿಸಿದ ಶಕ್ತಿಯಲಿಟ್ಟನವನೀಶ (ಕುಮ್ಯಾಶ. ೩-೭೭). ೨. [ಸಂಗೀತ] ಒಂದು ರಾಗದ ಹೆಸರು : ರಾಗ ಘಂಟಾರವ. ಕಲ್ಯಾಣಿ (ಪ್ರಸಕೀ. ೦೦). [ ಸಂ. (ಘಂಟಾ + ರವ) ]

**ಘಂಟಾರವೆ** (ನಾ). ಒಂದು ಬಗೆಯ ಗಿಡ ; ಗಜ್ಜುಗದ ಗಿಡ: "ಘಂಟಾರವಾ, ಶಣಪುಷ್ಪಿಕಾ–೨ ಗಿಲಿಗಿಂಚೆಯ ಗಿಡದ ಹೆಸರುಗಳು ; ಗಿಲಕುಮರ" (ಸಿದ್ಧಾಂತಿ. ೦೧೯). [ ಸಂ. ಘಂಟಾರವಾ (ಘಂಟಾ + ರವ + – ) ]

**ಘಂಟಾರಾಗ** (ನಾ). = ಘಂಟಾರವ ೨ : ಮಧು ಮಾಧವಿ . . . ಘಂಟಾರಾಗ ಘೂರ್ಜರಿ . . . ಕರ್ಣಾಟ ಬಂಗಾಳವೆಂಬಿಪ್ಪತ್ತುರಾಗಂಗಳೇ ರಾಗಾಂಗದಿಂದುದಿಸಿದವು (ವಿವೇಕ. ೨೩೩); ಶ್ರೀರಾಗದೊಳ್ ನಟನಾರಾಯಣಿ ಯೋಗಾವತಿಯಾಗಿರ್ಕುಂ ಘಂಟಾರಾಗಂ ನಾದವತಿಯಾಗಿರ್ದಪುದು (ಹಮ್ಮಿರ. ೨-೯೦ ವ). [ ಸಂ. (ಘಂಟಾ + ರಾಗ) ]

**ಘಂಟಾರುತಿ** (ನಾ). = ಘಂಟಾನಾದ : ಭೋರ್ಗರೆಯುತ್ತಿರ್ದುವನೇಕ ಶಂಖರವ ಭೇರೀಘೋಷ ಕಂಠೀರವಸ್ವರ ಘಂಟಾರುತಿಗಳ್ ಯಥಾಕ್ರಮ ದಿನತ್ಯಾಶ್ಚರ್ಯಮೆಂಬನ್ನೆಗಂ (ಪುಷ್ಪಪು. ೧೦-೧೩). [ಸಂ. (ಘಂಟಾ+ರುತಿ)]

**ಘಂಟಿಕಾಜಾಲ** (ನಾ). ಕಿರುಗಂಟೆಗಳ ಸಮೂಹ: ಅಲಂಬಿತ ಘಂಟಿಕಾಜಾಲ ಕುಸುಮದಾಮ ಚಾಮರೋದ್ದಾಮ ಚೀನಾಂಬರಾಚ್ಛಾದ್ಯಂಗಳೊಳಂ (ಚಂದ್ರಪು. ೮-೪೫ ವ). [ ಸಂ. (ಘಂಟಿಕಾ + ಜಾಲ) ]

**ಘಂಟಿಕಾರವ** (ನಾ). ಕಿರುಗಂಟೆಗಳ ಶಬ್ದ: ಶಿವಾರ್ಚನಾಂಗದ ಘಂಟಿಕಾರವದ . . . ಅಖಿಲಸಂಭ್ರಮಕೆ ಬೆಚಿಗಾದನು ಹರಿಶ್ಚಂದ್ರನು (ಹಚಿಕಾ. ೬-೩೯). [ ಸಂ. (ಘಂಟಿಕಾ + ರವ) ]

**ಘಂಟಿಕೆ** (ನಾ). ೧. ಕಿರುಗಂಟೆ; ಸಣ್ಣಗಂಟೆ; ಕಿಂಕಿಣಿ: ರಣತ್ಕಾರಂ ಘೋರಂ ಜನಿಸೆ ಗುಣದಿಂದಂ ಬಳೆಗಳಿಂ ಝಣತ್ಕಾರಂ ಪೊಣ್ಮಲ್ ಘಣಘಣ ರವಂ ಘಂಟಿಕೆಗಳಿಂ ಪೊಣರ್ವರ್ [ಪೊಣ್ಮಲ್] (ಉಠಾಚ. ೧೪೭). ೨. ದಶ ವಾದ್ಯಗಳಲ್ಲೊಂದು; ಗಂಟೆ: ಭದ್ರಮೆಂಬ ಕರಾಡಿ ಶಾಸಕವೆಂಬ ನಗಾರಿ . . . ಘಂಟಿಕೆಯೆಂಬ ಘಂಟೆ ಇತ್ಯಾದಿ ದಶವಾದ್ಯಂಗಳಂ ಬಾಜಿಸಲುಳ್ಳ ವಿಚಕ್ಷಣರಿಂ (ವಿವೇಕ. ೨೩೭). [ ಸಂ. ಘಂಟಿಕಾ ]

**ಘಂಟೆ** (ನಾ). ೧. ಘಣಘಣ ಎಂದು ಶಬ್ದಮಾಡುವ ಒಂದು ಸಾಧನ; ಗಂಟೆ: ಘಣಘಣಯೆನಿಪ ಘಂಟೆಗಳಂ(ಬಸವು. ೫೬-೫); ಘಂಟೆಗೆ ಒಂದೇ ಸ್ವರ (ಗಾದೆ). 'ಜಯಘಂಟೆ' ಪರಾ. ೨. ಅರುವತ್ತು ನಿಮಿಷಗಳ ಕಾಲ; ತಾಸು: ಒಂದು ತಿಂಗಳಿಗೂ ಕಡಮೆಯಾದ ವಯಸ್ಸಿನ ೬೦ ಮಕ್ಕಳನ್ನು ಡಾ॥ ರಾಬಿನ್‌ಸನ್‌ನು ಪರೀಕ್ಷಿಸಿರುತ್ತಾನೆ. ಅದರಲ್ಲೂ ೩೦ ಮಕ್ಕಳನ್ನು ಹುಟ್ಟಿದ ೧ ಘಂಟೆಯೊಳಗಾಗಿ ಪರೀಕ್ಷಿಸಿದನಂತೆ (ಜೀವಾತ್ಮ. ೧೨೫). ೩.=ಘಂಟಾಪಾಟಲಿ: "ಗೋಲೀಢಃ, ಝಾಟಲಃ, ಘಂಟಾ, ಪಾಟಲಿಃ, ಮೋಕ್ಷಃ, ಮುಷ್ಕಕಃ-೬ ಮೊಕ್ಕೀಮರದ ಹೆಸರು" (ಸಿದ್ಧಾಂತಿ. ೦೦೭). [ ಸಂ. ಘಂಟಾ ]

**ಘಕ್ಕನೆ** (ಅ). ಥಟ್ಟನೆ; ಕೂಡಲೆ; ಬಹಳ ಬೇಗ: ಘಕ್ಕನೆ ಸುರರಿಗೆ ಅಮೃತ ವಿತ್ತವನ ರಕ್ಕಸಕುಲವೈರಿ ರಾವಣಾಂತಕನ . . . ಶ್ರೀಪತಿ ಪುರಂದರ ವಿಠಲನ ಪಾಡಿ (ಪುರಂದ. ೪-೪೮-೨) ;ಸ್ಮರನು ಘಕ್ಕನೆಚ್ಚನಾತನುರಕೆ ಸಿಕ್ಕಿದೆನಾ ಶರಕೇ (ಯವಿಪ. ೧೦). 'ಗಕ್ಕನೆ' ಪರಾ. [ ಘಕ್$_0$ + -ಅನೆ$_1$ ]

**ಘಟ** (ನಾ). ೧. ಮಣ್ಣಿನ ದೊಡ್ಡ ಪಾತ್ರೆ; ಮಡಕೆ; ಕೊಡ; ಬಿಂದಿಗೆ: "ಘಟಃ, ಕರೀರಃ-ಈ ೨ ಹರವಿ" (ಹಲಾಯು. ೫೩-೧೬೦); "ಹರವಿ ಘಟಮಾ ಕರೀರಮೆನಿಕ್ಕು" (ಮಂಗರಾ. ೬೨-೨೨); ಕಾಮಂಗೆ ಮಜ್ಜನ ಕೆಂದೆತ್ತಿದ ಚಂದ್ರಕಾಂತ ಘಟದೊಳ್ (ಪಂಪಭಾ. ೪-೫೦); ಸುಳ್ಳಲ್ಲ ಕಥೆಯು ತಿರುಕನು ಕಂಡ ಸವಿಗನಸು ಚೆಲ್ಲಿತಲ್ಲವೆ ಹಿಟ್ಟು ಘಟವನವನೊದೆಯೆ? (ಮಂಕುತಿ. ೩೯೦). ೨. ತಾಳವಾದ್ಯಗಳಲ್ಲಿ ಒಂದು; ಘಟವಾದ್ಯ: ಮಣ್ಣಿನಿಂದ ಮಾಡಿದ ಮಡಕೆ 'ಘಟ' ಎಂಬ ಹೆಸರಿನಿಂದ ತಾಳವಾದ್ಯವಾಗಿ ಬಳಕೆಯಲ್ಲಿದೆ (ಸಂಗೀತಂ. ೧೨೨). ೩. ಒಡಲು; ದೇಹ; ಶರೀರ: ಶರೀರದಲ್ಲಿ ಸೋಂಕಿದ ವ್ಯಾಧಿಗಳು ಆತ್ಮಂಗಲ್ಲದೆ ಶರೀರಕ್ಕುಂಟೇ ಘಟಕ್ಕೆ ನೋವಲ್ಲದೆ ಆತ್ಮಂಗೆ ನೋವಿಲ್ಲವೆಂಬುದು ಹುಸಿ (ಮೋಳಿಮಾ. ೩೯-೧೨೦); ಘಟವೆಂಬ ಮಠದೊಳಗೆ ಮನವೆಂಬ ಮಾರ ಹುಟ್ಟಿತ್ತು (ಲಿಂಗವ. ೧೩-೫೦); ಎಲ್ಲಾದರೂ ಒಂದು ಘಟ ಉರುಳಿತೆಂದರೆ ಅಲ್ಲಿ ರಮಣಾಚಾರ್ಯರು ಹಾಜರು (ರಾಗಿಜಿ. ೧). ೪. ಜನರ ಕೂಟ; ಸಮೂಹ: "ಗೋಷ್ಠಿಯಲ್ಲಿ ನುಡಿವಂತುಟಂ ಘಟಮೆಂಬುದು" (ಮಂಗರಾ. ೧೩೯-೬). ೫. ಸೇರಿಕೆ; ಕೂಡಿಕೆ. 'ಘಟಸ್ಫೋಟ' ಪರಾ. ೬. ಕೂಡಿ ಹಾಕುವಿಕೆ; ಶೇಖರಿಸುವಿಕೆ; ಸಂಗ್ರಹ. ೭. ಮಧುಪಾನಗೋಷ್ಠಿ. ೮. ಪದಾರ್ಥ; ವಸ್ತು: "ವಸ್ತುಗಳು ಹರವಿ ದೇಹಂ ಹಸ್ತಿ ಸುರಾಪಾನ ಗೋಷ್ಠಿಯ್ಯೆದು ಘಟಶಬ್ದಂ" (ನಾನಾಕಂ. ೧೩೩); "ಸಂಗ್ರಹ ಮಧು ಗೋಷ್ಠಿಯುಂ ಪರವಿ ಕಾಯ ಗಜೋತ್ಕರಮುಂ ಘಟಾಂಕಿತಂ" (ನಾನಾರ. ೦೦೦). ೯. ಒಂದು ಅಳತೆ; ನಾಲ್ಕು ಕೊಳಗ ಅಥವಾ ಒಂದು ದ್ರೋಣ. ೧೦. ಅಂಚು; ಸೆರಗು; ತುದಿ. ೧೧. ಕಂಬದ ಒಂದು ಭಾಗ: (ಕ). ೧೨. (ಆಲಂ) ಘನವಾದ ವ್ಯಕ್ತಿ,-ಕುಳ,-ಆಸಾಮಿ: ಅವನು ಸಾಮಾನ್ಯನಲ್ಲ; ದೊಡ್ಡ ಘಟ (ರೂಢಿ). ೧೩. [ಜ್ಯೋತಿ] ಕುಂಭರಾಶಿ. 'ಘಟಗೃಹ' ಪರಾ. [ ಸಂ.]

**ಘಟಕ** (ಗುಂ). ೧. ಉಜ್ಜುಗಿಸುವ; ಪ್ರಯತ್ನಪಡುವ; ಶ್ರಮವಹಿಸುವ: (ಕ).೨. ಸೇರಿರುವ; ಅಡಕವಾದ; ಅಂತರ್ಗತವಾದ. 'ಘಟಕಾವಯವ' ಪರಾ. (ನಾ). ೩. (ಮದುವೆ, ವ್ಯಾಪಾರ ಮೊದಲಾದ ಕಾರ್ಯಗಳಲ್ಲಿ) ಎರಡು ಪಕ್ಷಗಳ ನಡುವೆ ವ್ಯವಹಾರವನ್ನು ಕುದುರಿಸುವವನು; ಮಧ್ಯಸ್ಥಗಾರ; ದಳ್ಳಾಳಿ: ನಾನು ಘಟಕರನ್ನು ಕರೆಯಿಸಿ ಒಳ್ಳೆಯದಾದ ಸಂಬಂಧವನ್ನು ಮಾಡುವೆನು (ದೇವೀಚಾ. ೧೧೭). ೪. (ಯಾವುದಾದರೂ ಸಂಘ,ಸಂಸ್ಥೆಗಳ)ವ್ಯವಸ್ಥಾಪಕ; ಪಾರಂಪತ್ಯಗಾರ. ೫.(ಸಮಗ್ರವಾದ ಒಂದು ವಸ್ತು, ದೇಶ, ಸಂಸ್ಥೆ ಮೊದಲಾದುವುಗಳ) ಅಂಶ,-ಅವಯವ,-ಪೂರಕಭಾಗ: ನಾಡವರು ನಮ್ಮ ನಾಡಿನ ಸಮಾಜದ ಪ್ರಧಾನಘಟಕವಾಗಿದ್ದುದಲ್ಲದೆ ಇಲ್ಲಿಯ ಆಡಳಿತೆದಾರರೂ ಆಗಿದ್ದರೆನ್ನಬಹುದು (ತುಳುನಾ. ೫೭); ಮರಾಠ ಸರದಾರರ ವೀರವೃತ್ತಿಯೂ, ಸಾಹಸ ಪ್ರವಣತೆಯೂ . . . ಮಹಾರಾಷ್ಟ್ರ ಮನೋಧರ್ಮದ ಕೆಚ್ಚಿನ ಘಟಕಗಳಾಗಿವೆ (ಮಸಾಹಿ. ೨೯). ೬. ಸ್ವತಂತ್ರ ಆಡಳಿತ ನಡೆಸುವ ಸಂಸ್ಥೆ; ಸ್ವಯಮಾಡಳಿತ ಸಂಸ್ಥೆ: ರಾಜ್ಯವು ಗ್ರಾಮಪಂಚಾಯಿತಿಗಳ ಸಂಘಟನವನ್ನು ನಡೆಯಿಸಲು ಕ್ರಮ ಜರುಗಿಸತಕ್ಕುದು ಮತ್ತು ಅವುಗಳ ಸ್ವಾಯತ್ತ ಶಾಸನದ ಘಟಕಗಳಾಗಿ ಕೆಲಸಮಾಡುವುದಕ್ಕೆ ಅವಶ್ಯವಾದಂಥ ಶಕ್ತಿಗಳನ್ನೂ, ಪ್ರಾಧಿಕಾರವನ್ನೂ ಅವುಗಳಿಗೆ ಕೊಡತಕ್ಕುದು (ಭಾಧಾನ. ೨೩). [ ಸಂ. ]

**ಘಟಕಾವಯವ** (ನಾ). ಸಮಗ್ರವಾದ ಒಂದು ವಸ್ತುವಿನಲ್ಲಿ ಅಡಕವಾಗಿರುವ ಬಿಡಿಭಾಗ; ಒಂದು ವಸ್ತುವಿನ ರಚನೆಗೆ ಕಾರಣವಾದ ಅಂಶ; ಮುಖ್ಯಾಂಶ: ಅಕ್ಕಿಯೊಳಗಿನ ನೀರು ಇದ್ದಲಿ ಮುಂತಾದ ಘಟಕಾವಯವಗಳಿಂದ ಶರೀರ ಪೋಷಣವಾಗುತ್ತದೆ (ಮುಂಬಯಿ. ೪-೨೭). [ ಘಟಕ + ಅವಯವ ]

**ಘಟಕ್ಷುಧೆ** (ನಾ). ಶರೀರದಲ್ಲುಂಟಾಗುವ ಹಸಿವು: ಪೃಥ್ವಿಗೆ ಹಲವು ತೆಱ ಅಪ್ಪುವಿಗೆ ನಾನಾಸಾರ ಅಗ್ನಿಗೆ ಹಲವು ಘಟಕ್ಷುಧೆ ವಾಯುವಿಗೆ ನಾನಾ ರೂಪಸಂಚಾರ . . . ಇಂತೀ ದೃಕ್ಕಿಂಗೆ ಲಕ್ಷವಿದ್ದಂತೆ ಲಕ್ಷಿಸಿ (ಮೋಳಿಮಾ. ೮-೨೭). [ ಘಟ + ಕ್ಷುಧೆ ]

**ಘಟಗೃಹ** (ನಾ). [ಜ್ಯೋತಿ] ಕುಂಭರಾಶಿ: ಸಿತನಿರೆ ಘಟಗೃಹದೊಳ್ ವಾಕ್ಪತಿ ಕರ್ಕಯೊಳಿಂದು ಮಾನದೊಳ್ . . . ಇರೆ ನೃಪನಕ್ಕುಂ (ಜಾತತಿ. ೧೨-೧೭). [ ಘಟ + ಗೃಹ ]

**ಘಟಚಕ್ರ** (ನಾ). ೧. ಬಾವಿಯಿಂದ ನೀರನ್ನು ಮೇಲೆತ್ತಲು ಮಾಡಿರುವ ಅನೇಕ ಗಡಿಗೆಗಳಿರುವ ಚಕ್ರ; ಒಂದು ಬಗೆಯ ನೀರೆತ್ತುವ ಸಾಧನ; ರಾಟೆ: ನದಿಗೆ ದೂರವಾಗಿದ್ದರೆ ಬಾವಿಗಳನ್ನು ತೋಡಿ ನೀರನ್ನು ಘಟಚಕ್ರವೆಂಬ ವಿಧಾನದಿಂದ ಎತ್ತಿ ಗದ್ದೆಗಳಿಗೆ ಹಾಯಿಸುತ್ತಿದ್ದರು (ಭಾಇಪ್ರ. ೪೦) ೨. [ವೀಶೈ] "ದೇಹದ ಗುಟ್ಟು ಗುರಿ ತಿಳಿಸುವ ಗ್ರಂಥ" (ಶರಸಾ. ೨೪-೭). [ ಘಟ + ಚಕ್ರ ]

**ಘಟಚೇಟಿ** (ನಾ). ೧. ನೀರಂ ಹೊರುವ ದಾಸಿ; ಕುಂಭದಾಸಿ: ಅಂತು ತಳವೆಳಗಾದ ಲಕ್ಷ್ಮೀಕಾಂತೆಯ ಚಳದಳಿಕುಳನಿನೀಳಕುಟಿಲಕುಂತಲಂಗಳಂ ತಳಮಾಚಿ ತೆಗೆದು ಕುರುಕುಲಕುಟುಂಬನ ಘಟಚೇಟಿಯುಂ ಕೊಂಡು ಪೋಪಂತೆ ಮಗುಟಿಚಿ ಕೊಂಡು ಪೋಗಿ (ಗದಾಯು. ೯-೧೭ ವ). ೨. ಕುಂಟಣಿ; ತಲೆಹಿಡುಕಿ. [ ಘಟ + ಚೇಟಿ ]

**ಘಟಚೇಟಿಕೆ** (ನಾ).=ಘಟಚೇಟಿ ೧: ಅಂತು . . . ಕಮಳೆಯನಶ್ವತ್ಥಾಮಂ ಮುಂಂದಿಟ್ಟು ಕುರುಕುಟುಂಬಘಟಚೇಟಿಕೆಯಂ ತರ್ಪಂತೆ ತಂದು (ಪಂಪಭಾ. ೧೩-೧೦೨ ವ). [ ಘಟ + ಚೇಟಿಕೆ ]

**ಘಟಜಾತ** (ನಾ). ೧. ಬಿಂದಿಗೆಗಳ ಸಮೂಹ. ೨. ಕೊಡದಿಂದ ಹುಟ್ಟಿದವನು ; ಅಗಸ್ತ್ಯ. ೧, ೨ : ದಿಟದಿಂ ಪಯೋಧಿಯಂ ತಳತಟಮಂ ಸಾರ್ವಿನೆಗಮುಮರಕುಳಕರಕಲಿತಂ ಘಟಜಾತಂ ಪೀರ್ದೊಡದಂ ಘಟಜಾತಂ ಪೀರ್ದನೆಂದು ನುಡಿವರ್ ಗಾಂಪರ್(ಚಂದ್ರಪ್ರ. ೧೨-೧೨೨). [ ಘಟ + ಜಾತ ]

**ಘಟಜೀವಿ** (ನಾ). ಕೇವಲ ದೇಹಭಾವದಿಂದ ಜೀವಿಸುವವನು ; ಆತ್ಮದ ಬಗೆಗೆ ಆಸಕ್ತಿಯಿಲ್ಲದವನು : ಉದಯಮುಖದಲ್ಲಿ ಹುಟ್ಟಿದ ಪ್ರಾಣಿಗಳು ಅಸ್ತಮಾನಕ್ಕೆ ಅಳಿದರಲ್ಲಾ ಅಂದಂದಿನ ಘಟಜೀವಿಗಳು ಬಂದ ಬಟ್ಟೆಗೆ ಹೋದರಲ್ಲಾ (ಅವಚಂ. ೬೦-೩೧೨). [ ಸಂ. ಘಟಜೀವಿನ್ ]

**ಘಟಣೆ** (ನಾ). ಸೇರುವಿಕೆ; ಹೊಂದುವಿಕೆ; ಪ್ರಾಪ್ತಿ : ದಿಟ ವಿಚಾರಿಸಲಿಷ್ಟಲಿಂಗದ ಘಟಣೆಯೆಂಬುದು . . . ಮಾಯೆಯ ನಟಣೆಯನು ನೈವಾರಿಸುವ ಸಂಘಟಿಕೆ ಸಾಧನವೆನಿಸುವುದು (ಪ್ರಭುಲಿ. ೧೬-೩೨). [<ಸಂ. ಘಟನಾ ]

**ಘಟನ** (ನಾ). ೧. ಸೇರಿಸುವಿಕೆ ; ಕೂಡಿಸುವಿಕೆ ; ಜೋಡಣೆ : ಇಲ್ಲಿಗಿದೆ ನಾಲ್ಕೈದು ಯೋಜನದಲ್ಲಿ ಪಟ್ಟಣವದಱೊಳೊಬ್ಬನು ಬಲ್ಲನಗ್ಗದ ಧರ್ಮ ಮುದ್ರಾಘಟನವಿಘಟನವ (ಕುಮ್ಮಾಅ. ೧೫-೬). ೨. ಉದ್ಯಮ ; ಶ್ರಮ ; ಪ್ರಯತ್ನ. ೩. ನೆರವೇರಿಸುವಿಕೆ; ಪೂರೈಸುವಿಕೆ; ಸಾಧನೆ. ೪. ಆಗುವಿಕೆ; ಸಂಭವ. ೫. ಮಾಡುವಿಕೆ ; ರೂಪಿಸುವಿಕೆ. [ ಸಂ. ]

**ಘಟನಾಕ್ರಮ** (ನಾ). ಕಾರ್ಯವು ನಡೆಯುವ ಕ್ರಮ ; ಕೆಲಸವು ನೆರವೇರುವ ವಿಧಾನ: ಘಟನಾಕ್ರಮದಲ್ಲಿ ಅವಳು ಯೋಚಿಸದಿದ್ದೊಂದು ಅನುಕೂಲವೊದಗಿತು (ಕಪಾಕುಂ. ೯೨). [ ಸಂ. (ಘಟನಾ + ಕ್ರಮ) ]

**ಘಟನಾವಳಿ** (ನಾ). ಘಟನೆಗಳ ಸಾಲು,—ಶ್ರೇಣಿ ; ಆಗುಹೋಗುಗಳ ಪಂಕ್ತಿ : ಹಿಂದಣ ಘಟನಾವಳಿಯು ನೆನಪಿಗೆ ಬಂದೊಡನೆಯೇ ದೇಹವು ಕ್ರೋಧಕಂಪಿತವಾಗುತ್ತಿದ್ದಿತು (ಮೃಗಂಬ. ೯೪) ; ಶಿಕ್ಷಣದಲ್ಲಿ ಅಶಿಸ್ತಿನ ಸಮಸ್ಯೆ . . . ಮೇಲ್ವರ್ಗದ ಶಿಕ್ಷಣಸಂಸ್ಥೆಗಳಲ್ಲಿ ಇದು ಬೃಹದ್ರೂಪವನ್ನು ತಾಳಿ, ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಘಟನಾವಳಿಗಳೇ ನಡೆದು ಹೋಗುತ್ತಿವೆ (ಶಿಕ್ಷದ. ೩೦೫). [ ಸಂ. ಘಟನಾವಲಿ (ಘಟನಾ + ಆವಲಿ) ]

**ಘಟನಾಸಭೆ** (ನಾ). (ರಾಜ್ಯಾಡಳಿತಕ್ಕೆ ಸಂಬಂಧಪಟ್ಟ) ನಿಯಮಗಳನ್ನು ಮಾಡುವ ಸಭೆ ; ವಿಧಾಯಕ ವಿಧಾನಸಭೆ : ಘಟನಾಸಭೆ ಸೇರಿ ನಿನ್ನೆಗೆ ಮೂರು ದಿನವಾಯಿತು (ದಿಲ್ಲಿಪ. ೧೪). [ಸಂ. ಘಟನಾಸಭಾ(ಘಟನಾ+ಸಭಾ)]

**ಘಟನಾಸ್ರೋತ** (ನಾ). ಘಟನೆಗಳ ಪ್ರವಾಹ ; ಘಟನಾವಳಿ : ನನ್ನ ಬಾಳ ಪವಿತ್ರತೆಯ ಉಳಿವು, ನನ್ನ ಭವಿಷ್ಯದ ಘಟನಾಸ್ರೋತದ ತಿರುಗಣೆ ಆ ಭೇಟಿಯ ಸಂಭಾಷಣೆಯ ಮೇಲೆ ನಿಂತಿತ್ತು ! (ನಿಕಲು. ೧೧೫).
[ ಸಂ. ಘಟನಾಸ್ರೋತಸ್ (ಘಟನಾ + ಸ್ರೋತಸ್) ]

**ಘಟನೆ** (ನಾ). ೧. ಜೋಡಣೆ ; ರಚನೆ ; ಸಂಯೋಜನೆ ; ಸಂಯೋಗ ; ಸೇರುವಿಕೆ : ಎತ್ತಣಪಜಯ ವಿಧಿಯ ಘಟನೆ ನೃಪಾಲ ನಿನಗೆಂದ (ಕುಮ್ಮಾಗ. ೩-೨೨). ೨. ಆಗುವುದು ; ಸಂಭವಿಸುವುದು ; ಸಂಗತಿ ; ಸಂಭವ : ನಮ್ಮ ಮನಸ್ಸಿನಲ್ಲಿ ಆಗಾಗ ಯಾವುದಾದರೊಂದು ಘಟನೆ ಉದಯವಾಗುತ್ತಿರುವುದೇ ಸ್ಮೃತಿ ಎನಿಸಿಕೊಳ್ಳಲಾರದು (ಜೀವಾತ್ಮ. ೬೫). ೩. (ರಾಜ್ಯಾಡಳಿತಕ್ಕೆ ಅಥವಾ ಸಂಘ, ಸಂಸ್ಥೆ ಮೊದಲಾದುವುಗಳಿಗೆ ಸಂಬಂಧಿಸಿದ) ರಾಜ್ಯಾಂಗ ; ಸಂವಿಧಾನ : "ವ್ಯವಸ್ಥೆ ; ರಚನೆ ; ಘಟನೆ ; ನಿಯೋಜನೆ; ನಿರ್ಮಾಣ" (Constitution. ಇಂಕನಿ); ಶಾಂತಿಬಾಯಿ ಮಾಟಂಗಿಗೆ ಬರಲೇ ಇಲ್ಲ. ಘಟನೆಯಂತೆ ವೈಸ್‌ಛೇರ್‌ಮನ್ ರುಕ್ಮಾಬಾಯಿ ಆ ದಿನದ ಮಟ್ಟಿಗೆ ಅಧ್ಯಕ್ಷಳಾದಳು (ಬದುಜ. ೧೫೨). [ ಸಂ. ಘಟನಾ ]

**ಘಟಪಟಾಧ್ಯಾಯ** (ನಾ). ೧. ತರ್ಕಶಾಸ್ತ್ರ ಗ್ರಂಥಗಳಲ್ಲಿ ಉದಾಹರಣೆಗೋಸ್ಕರ ಬಳಸುವ ಘಟ (ಕೊಡ) ಪಟ (ಬಟ್ಟೆ) ಎಂಬ ಶಬ್ದಗಳಿಂದ ತುಂಬಿದ ಭಾಗ,-ಅಧ್ಯಾಯ. ೨. (ಅಲಂ) ನೀರಸವಾದ ಪ್ರಸಂಗ ; ಶುಷ್ಕವಿಚಾರ : ಲಕ್ಷ್ಮೀಶನ ನಾದವೀಣೆಯನ್ನು ನುಡಿಸಬಲ್ಲ ಬಲ್ಲಿದನಾದ ಗಮಕಿ ಬೇಕು ಅದಕ್ಕೆ. ಇಲ್ಲದಿದ್ದರೆ ಎಲ್ಲವೂ ನೈಯಾಯಿಕರ ಘಟಪಟಾಧ್ಯಾಯವಾಗಿಯೋ ನಾಡಾಡಿಗಳ ರಂಜನೆಯ ಗುಂಜಾರವವಾಗಿಯೋ ಗಾಳಿಗೆ ಗಾಳಿ ಬಯಲಿಗೆ ಬಯಲಾಗಬಹುದು (ಸಾಹಿಸಂ. ೭೧).
[ ಘಟ + ಪಟ೩ + ಅಧ್ಯಾಯ ]

**ಘಟಪಾಕವಿಲೇಪನ** (ನಾ). ಮಡಕೆಯು ಚೆನ್ನಾಗಿ ಬೆಂದು ಗಟ್ಟಿಯಾಗಲು ಅದನ್ನು ಬೇಯಿಸುವ ಮೊದಲು ಅದರ ಸುತ್ತಲೂ ಬಳಿಯುವ ಒಂದು ಬಗೆಯ ಲೇಪನದ್ರವ್ಯ : ಅಂಗನೆಯಂಗದಂಗಜ ಮಹಾಶಿಖಿಗಾಜ್ಯಮದಾದುದಾಲಿನೀರ್ತುಂಗಕುಚಾರ್ದ್ರಚಂದನರಸಂ ಘಟಪಾಕವಿಲೇಪನಂಬೊಲಾಯ್ತು (ರಾಜಶೇ. ೭-೮೫). [ಘಟ+ಪಾಕ೨+ವಿಲೇಪನ]

**ಘಟಪ್ರದೀಪದೃಷ್ಟಾಂತ** (ನಾ). [ಕಾವ್ಯಮಿ] ದೀಪವು ಕತ್ತಲಲ್ಲಿದ್ದ ಘಟವನ್ನು ತಾನು ಇದ್ದುಕೊಂಡೇ ಪ್ರಕಾಶಪಡಿಸುತ್ತದೆ ಎಂಬ ದೃಷ್ಟಾಂತ. ☞ ವಾಚ್ಯಾರ್ಥವು ವ್ಯಂಗ್ಯಾರ್ಥವನ್ನು ಪ್ರಕಾಶಪಡಿಸಿ ತಾನೂ ಅದರ ಜೊತೆಯಲ್ಲೇ ಇರುತ್ತದೆ, ನಾಶವಾಗುವುದಿಲ್ಲ ಎಂಬುದನ್ನು ಸಮರ್ಥಿಸುವ ದೃಷ್ಟಾಂತವೇ ಘಟಪ್ರದೀಪದ ದೃಷ್ಟಾಂತ : ವ್ಯಂಗ್ಯಾರ್ಥವು ವಾಚ್ಯಾರ್ಥದೊಡನೆ ಕೂಡಿಯೇ ಅನುಭವಕ್ಕೆ ಬರುತ್ತವೆ. ಆದುದರಿಂದಲೇ ಮೂರನೆಯ ಉದ್ಯೋತದಲ್ಲಿ ಇವಕ್ಕೆ 'ಘಟ-ಪ್ರದೀಪ' ದೃಷ್ಟಾಂತ ಹೇಳಿ ವ್ಯಂಗ್ಯಪರಾಮರ್ಶಕಾಲದಲ್ಲಿ ವಾಚ್ಯಬುದ್ಧಿಯು ದೂರೀಭೂತವಾಗುವುದಿಲ್ಲವೆಂದಿರುವುದು ಸಮಂಜಸವಾಗುತ್ತದೆ (ಧ್ವನ್ಯಾಲೋ. ೨೫ ಅಡಿಟಿ). [ ಸಂ.]

**ಘಟಪ್ರೋದ್ಭವ** (ನಾ). ೧. ದ್ರೋಣ. ೨. ಅಗಸ್ತ್ಯ. ೩. [ಜ್ಯೋತಿ] ಕುಂಭರಾಶಿಯಲ್ಲಿ ಹುಟ್ಟಿದವನು : ನಿಡುಗೋಣಂ ಶಠನಂಗನಿರ್ಗತ ಶಿರಾಜಾಲಂ ಘಟಪ್ರೋದ್ಭವಂ (ಜಾತತಿ. ೧೭-೧೧). [ ಘಟ+ಪ್ರೋದ್ಭವ ]

**ಘಟಫಣಿ** (ನಾ). = ಘಟಸರ್ಪ ೧ : ತುಡುಕುವೆನು ಘಟಫಣಿಯ ಸೋತರೆ ಕಡಿಸಿಕೊಂಬೆನು (ಕೌಶಿರಾ. ೪-೧೭). [ ಘಟ + ಫಣಿ$_1$ ]

**ಘಟಮಟನ್ಯಾಯ** (ನಾ). ಘಟಾಕಾಶ, ಮಠಾಕಾಶ ಮೊದಲಾದ ದೃಷ್ಟಾಂತವನ್ನು ಒಳಗೊಂಡಿರುವ ನ್ಯಾಯ; ದೊಡ್ಡದರಲ್ಲಿ ಇದ್ದ ಬಯಲು ಚಿಕ್ಕದಾದ ಘಟದಲ್ಲಿಯೂ ಇರುವುದೆಂಬ ನ್ಯಾಯ : ಹಿಗ್ಗಿದೆ ಕುಗ್ಗಿದೆ ಜೀವ ಜಡ ದಿಟ ಸಟೆ ಘಟಮಟನ್ಯಾಯವು ಅಟಮಟವು (ಮುಕ್ತಕಂ. ೨-೫). [ < ಸಂ. ಘಟಮಠನ್ಯಾಯ ]

**ಘಟಯೋನಿ** (ನಾ). ಅಗಸ್ತ್ಯ: "ಅಗಸ್ತಿಃ, ಅಗಸ್ತ್ಯಃ, ಲೋಪಾಮುದ್ರಾಪತಿಃ, ಘಟಯೋನಿಃ-ಈ ೪ ಅಗಸ್ತ್ಯಂ" (ಹಲಾಯು. ೬೮-೨೫೯). 'ಘಟಪ್ರೋದ್ಭವ' ಪರಾ. [ ಘಟ + ಯೋನಿ ]

**ಘಟವಾದ್ಯ** (ನಾ). ಮೃದಂಗದಂತೆ ಬಾರಿಸುವ ಒಂದು ವಾದ್ಯ ; ಕುಂಭವಾದ್ಯ: ಸಂಗೀತಕಚೇರಿಯಲ್ಲಿ ಘಟವಾದ್ಯವೂ ಮುಖ್ಯ (ರೂಢಿ).
[ ಘಟ + ವಾದ್ಯ ]

**ಘಟಶ್ರವ** (ನಾ). ಬಿಂದಿಗೆಯ ಆಕಾರದ ಕಿವಿಯುಳ್ಳವನು ; ರಾವಣನ ತಮ್ಮನಾದ ಕುಂಭಕರ್ಣನೆಂಬ ರಾಕ್ಷಸ : ಎಳೆದರಿಱುವೆಗಳಹಿಯು ನೆಳೆವಂತಾ ಘಟಶ್ರವನ (ಕೌಶಿರಾ. ೧೨-೧೯).
[ ಸಂ. ಘಟಶ್ರವಸ್ (ಘಟ + ಶ್ರವಸ್ + –) ]

**ಘಟಶ್ರಾದ್ಧ** (ನಾ). ಬದುಕಿದ್ದವರೊಡನೆ ಸಂಬಂಧವನ್ನು ತ್ಯಜಿಸುವುದಕ್ಕಾಗಿ ಮಾಡುವ ಒಂದು ಬಗೆಯ ಶ್ರಾದ್ಧ. ☞ ಒಬ್ಬ ವ್ಯಕ್ತಿಯ ಸಂಬಂಧವನ್ನು ತ್ಯಜಿಸುವಾಗ ಅಮೇಧ್ಯವನ್ನು ತುಂಬಿಸಿದ ಮಣ್ಣಿನ ಬಿಂದಿಗೆಯಲ್ಲಿ ತ್ಯಾಜ್ಯವ್ಯಕ್ತಿಯನ್ನು ಆವಾಹನೆ ಮಾಡಿ, ಅದನ್ನು ಒಡೆಯಿಸಿ ಆ ಬಳಿಕ ಮಾಡುವ ಒಂದು ವಿಧವಾದ ಉತ್ತರಕ್ರಿಯೆ : 'ಘಟಶ್ರಾದ್ಧ' ದಲ್ಲಿ ಇಷ್ಟೇ ಶಕ್ತಿಪೂರ್ಣವಾದ ಆದರೆ ಇನ್ನೂ ನಿರ್ದಿಷ್ಟವಾದ ಸಾಂಕೇತಿಕತೆಯಿದೆ (ಪ್ರಶ್ನೆ. VII, ಮುನ್ನುಡಿ). [ ಘಟ + ಶ್ರಾದ್ಧ ]

**ಘಟಸರ್ಪ**(ನಾ). ೧. ಮಡಕೆಯ ಒಳಗಿರುವ ನಾಗರಹಾವು: ಘಟಸರ್ಪನಲ್ಲಿ ಕೈದುಡುಕಿದರೆ ಹಿಡಿವುದ ಮಾಣ್ಬುದೆ (ಬಸವ. ೨೧೨); ತುಡುಕಿದ ದೋಷಿಯು ನಲ್ಲದೆ ಪಿಡಿಯದು ಘಟಸರ್ಪಂ (ಜಗವಿ. ೧-೧೨); ಮಡಕೆಯ ಮೇಲೆ ಹೆಡೆಯಂ ಬಳಿದುಕೊಳುತಂ . . . ವಿಜೃಂಭಿಸುವ ತತ್ ಘಟಸರ್ಪನಂ ನೋಡಿ (ಬಸವು. ೫೦-೫೯). ೨. ಭಯಂಕರವಾದ ನಾಗರಹಾವು; ದೊಡ್ಡ ಆಕಾರದ ನಾಗರಹಾವು: ಹಸುರಿನ ಹೂವಿನ ಹೊದರಿನ ಒಳಗೆ ಬುಸು ಗುಟ್ಟದೆ ಘನ ಘಟಸರ್ಪ (ನಲವು. ೪೫-೨). ☞ ದೋಷಿಗಳನ್ನು ಪರೀಕ್ಷಿಸುವಾಗ ಹಾವಿದ್ದ ಮಡಕೆಗೆ ಕೈ ಹಾಕಿಸುವುದು ಒಂದು ದಿವ್ಯವಾಗಿತ್ತೆಂದು ಹೇಳುತ್ತಾರೆ. [ ಘಟ + ಸರ್ಪ ]

**ಘಟಸ್ಥಾಪನೆ** (ನಾ). ೧. ಪೂಜೆ ಮೊದಲಾದ ಸಂದರ್ಭದಲ್ಲಿ ಮಾಡುವ ಕಲಶಸ್ಥಾಪನೆ ; ಕಲಶಪ್ರತಿಷ್ಠೆ : ಘಟಸ್ಥಾಪನೆಯಾಯ್ತು ; ಮೋಡದ ಕೊಡವು ಬುಡಮೇಲಾಯಿತು (ನಲಮು. ೧೨-೯). ೨. (ಉಕ) ನವರಾತ್ರಿಯ ಕಾಲವಲ್ಲಿ ಪೂಜೆಗಾಗಿ ಮಾಡುವ ಕಲಶಸ್ಥಾಪನೆ. [ ಘಟ + ಸ್ಥಾಪನೆ ]

**ಘಟಸ್ಫೋಟ** (ನಾ). ೧. ಘಟಶ್ರಾದ್ಧದ ಪೂರ್ವಾಂಗವಾಗಿ ಗಡಿಗೆಯನ್ನು ಒಡೆಯುವುದು. ೨. (ಆಲಂ) ಗಂಡ ಅಥವಾ ಹೆಂಡತಿ ತಮ್ಮ ಮದುವೆಯ ಬಂಧವನ್ನು ರದ್ದುಪಡಿಸುವುದು ; ವಿವಾಹವಿಚ್ಛೇದ ; ದಾಂಪತ್ಯ ವಿಚ್ಛೇದನ : ಘಟಸ್ಫೋಟ ಬೇಕಾದವರು ಅದನ್ನು ಮಾಡಲಿ (ಗಾಳಿಪ. ೯೯೦) ; ಘಟಸ್ಫೋಟದ ಕಾನೂನು ಪಾಸಾಗಲಿ, ಅಂದರೆ ನಿಮಗೆಲ್ಲ ಕ್ಷಣಕ್ಷಣಕ್ಕೆ ಬೆದರಿಕೆ ಹಾಕಲು ನಮಗೆ ಚೆನ್ನಾದೀತು (ಹೊಂಬಿಲು. ೭೧). [ ಘಟ + ಸ್ಫೋಟ ]

**ಘಟಾಂಶ** (ನಾ). [ಜ್ಯೋತಿ] ಕುಂಭಾಂಶ ; ಕುಂಭನವಾಂಶ : ಭೃಗು ನಂದನಾಲಯಂಗಳೊಳ್ ಘಟಾಂಶದೊಳ್ ಕುಜ ಯಮರ್ ನಿಲೆ ಮೇಣ್ ಪುರುಷಸ್ವಭಾವದಿಂ ಲಲನೆ ಪರಸ್ಪರಂ ಲಲನೆಯೊಳ್ ನೆರೆಗುಂ (ಜಾತತಿ. ೨೨-೧೧). ☞ ಪ್ರತಿಯೊಂದು ರಾಶಿಯ ಕಾಲಮಾನದ ⅓ ಭಾಗಕ್ಕೆ ಹೋರೆಯೆಂದೂ, ⅓ ಭಾಗಕ್ಕೆ ದ್ರೇಕ್ಕಾಣವೆಂದೂ, ⅑ ಭಾಗಕ್ಕೆ ನವಾಂಶವೆಂದೂ ಹೆಸರು. ಈ ನವಾಂಶವನ್ನೇ ಅಂಶವೆಂದೂ ಹೇಳುತ್ತಾರೆ. ಸಿಂಹ, ಮೇಷ, ಧನುಸ್ಸು ಈ ರಾಶಿಗಳಿಗೆ ಮೊದಲನೆಯ ನವಾಂಶ ಮೇಷನವಾಂಶವೆಂದು ತಿಳಿದು ಮೇಷದಿಂದಲೂ, ಕನ್ಯಾ, ಮಕರ, ವೃಷಭ ಈ ರಾಶಿಗಳಿಗೆ ಮಕರದಿಂದಲೂ, ಮಿಥುನ ಕುಂಭ, ತುಲಾರಾಶಿಗಳಿಗೆ ತುಲಾದಿಂದಲೂ, ಕರ್ಕಾಟಕ, ಮೀನ, ವೃಶ್ಚಿಕರಾಶಿಗಳಿಗೆ ಕರ್ಕಾಟಕದಿಂದಲೂ ನವಾಂಶವನ್ನು ಎಣಿಸಲು ಪ್ರಾರಂಭಿಸಬೇಕು. ಈ ಗಣನೆಯಲ್ಲಿ ವೃಷಭ, ಕನ್ಯಾ, ಮಕರರಾಶಿಗಳ ಎರಡನೆಯ ಅಂಶವೂ, ಮಿಥುನ, ತುಲಾ, ಕುಂಭ ರಾಶಿಗಳ ಐದನೆಯ ಅಂಶವೂ, ಹಾಗೆಯೇ ಕರ್ಕಾಟಕ, ವೃಶ್ಚಿಕ, ಮೀನ ರಾಶಿಗಳ ಎಂಟನೆಯ ಅಂಶವೂ, ಘಟಾಂಶ (ಕುಂಭನವಾಂಶ)ವಾಗುತ್ತವೆ. [ ಘಟ + ಅಂಶ ]

**ಘಟಾಕಾಶ** (ನಾ). ಗಡಿಗೆಯ ಒಳಗಿನ ಆಕಾಶ,-ಅವಕಾಶ ; ಆಕಾಶ ದ್ರವ್ಯ : ಘಟವಳಿದಲ್ಲಿ ಘಟಾಕಾಶವಳಿಯದಂತೆ (ಆದವ. ೫೦-೧೪೭). [ ಘಟ + ಆಕಾಶ ]

**ಘಟಾಟೋಪ** (ನಾ). ೧. ಗುಂಪಿನ ಗಲಭೆ; ಸಾಮೂಹಿಕವಾದ ಗಲಾಟೆ. ೨. (ಆಲಂ) ಮಹತ್ತರವಾದ ಪ್ರಯತ್ನ; ಅತಿಶಯವಾದ ಉದ್ಯಮ: ಇಷ್ಟೆಲ್ಲ ಘಟಾಟೋಪ ನಡೆದ ಮೇಲೆ ಪಾತರದವರ ನಾಚಿನ ವ್ಯವಸ್ಥೆ ಯಾಪರೂ ಜಂಗೀ ಇರಬಹುದು (ದೇಯಾಸಿ. ೧೫೩); ಈ ಘಟಾಟೋಪದಿಂದ ಆಗುವ ನಿವ್ವಳಲಾಭವೇನು ಎಂದೀರಿ (ಗಾಳಿಪ. ೩೫) ; ನನಗಾದರೂ ಇಂಥ ಘಟಾಟೋಪವು ಯಾತಕ್ಕೆ ಬೇಕಾಗಿದೆ (ಮಂಜುಕ. ೭೮). 'ಅಟಾಟೋಪ', 'ಘಟಾಟೋಪ' ಪರಾ. ☞ ಸಂಸ್ಕೃತದಲ್ಲಿ 'ಸ್ಫಟಾಟೋಪ' ಎಂಬ ಒಂದು ಶಬ್ದವಿದೆ. 'ವಿಷವಿಲ್ಲದ ಹಾವು ಹೆಡೆಯಾಡಿಸುವುದು' ಎಂಬುದು ಇದರ ಅರ್ಥ. [ ಘಟ + ಆಟೋಪ./ಮರಾ. ಖಟಾಟೋಪ, ಘಟಾಟೋಪ ]

**ಘಟಾನುಘಟಕ, ಘಟಾನುಘಟಿಕ** (ನಾ). ೧. ಮಹಾವಿದ್ವಾಂಸ ; ಬಹಳ ಬಲ್ಲವನು; ದೊಡ್ಡ ವಿದ್ವಾಂಸ : ಒಬ್ಬರು ಜೋಯಿಸರಲ್ಲ-ನಾಲ್ಕುಮಂದಿ ಘಟಾನುಘಟಕರನ್ನು ವಿಚಾರಿಸಿದ್ದೇನೆ (ಮಹಾಗ. ೦೦೯). **ಘಟಾನುಘಟಿಕ :** ೨. ತುಂಬ ಗಟ್ಟಿಗ ; ಕಷ್ಟವಾದ ಕೆಲಸವನ್ನೂ ಅನಾಯಾಸವಾಗಿ ಸಾಧಿಸುವವನು ; ಕಾರ್ಯದಕ್ಷ : ಕೆಲವು ಮಂದಿ ಘಟಾನುಘಟಿಕರಿರು ವುದರಿಂದ ಈ ಸಂಸ್ಥೆ ಬಹಳ ಬೇಗನೆ ಅನೇಕ ಮಹಾಕಾರ್ಯಗಳನ್ನು ಕೈಗೂಡಿಸಿಕೊಂಡಿತು (ರೂಢಿ). [ <ಸಂ. ಘಟಿಕಾನುಘಟಕ ]

**ಘಟಾನುಘಟಿ** (ಗುಂ). ೧. ಬಹಳ ಗಟ್ಟಿಯಾದ ; ಅತಿಸಮರ್ಥವಾದ : ಚಂದ್ರು, ಭಟ್ಟರು ಒಂದು ಕಡೆ. ಗಣೇಶರಾಯರೂ, ಶಂಕರಪ್ಪ ಒಂದು ಕಡೆ. ಎರಡೂ ಒಳ್ಳೆಯ ಘಟಾನುಘಟಿ ಜತೆ (ಜೀವಯಾ. ೧೩). (ನಾ). ೨. ತುಂಬ ಗಟ್ಟಿಗ ; ಅತಿಸಮರ್ಥ ; ಕಾರ್ಯದಕ್ಷ : ಪಟ್ಟಣದ ಕಲಿತ ಮಹನ್ಮಹಾಘಟಾನುಘಟಿಗಳು . . . ಕೈಕಟ್ಟಿಕೊಂಡು ಕುಳಿತಿರುವಾಗ ನಮ್ಮಂಥ ಹಳ್ಳಿಹುಂಬರ ಪಾಡೇನು ? (ನಾಡಿಗೇ. ೨೭೪). [ <ಘಟಾನುಘಟಕ ]

**ಘಟಾನುಘಟಿಕ** 'ಘಟಾನುಘಟಕ' ನೋ.

**ಘಟಾವಣೆ** (ನಾ). ಸೇರಿಕೆ; ಹೊಂದಿಕೆ; ಕಟ್ಟುವಿಕೆ: ಆಡುವ ಖೇಚರಾಮರ ನರ ಪ್ರಮದಾಕರಲಾಸ್ಯಮೆತ್ತಲುಂ ಪಾಡುವ ಸಿದ್ಧಕಿಂಪುರುಷ ಕಿನ್ನರಕನ್ನೆಯರಿಂಪು ವಾದ್ಯದೊಳ್ ಕೂಡುವ ಯಕ್ಷರಾಕ್ಷಸರ ಕೈಯ ಘಟಾವಣೆ ದಿವ್ಯಯಾತ್ರೆಯೊಳ್ ಕೂಡೆ ಮಹೋತ್ಸವಂಬಡೆದುವಂದು ಸಹೇತುಕ ನಂದನಂಬರಂ (ಅನಂಪು. ೯-೬೭). [ ಘಟಿಸು + - ಅಣೆ₄ ]

**ಘಟಾಳಿ** (ನಾ). ಆನೆಗಳ ಗುಂಪಿನ ಸಾಲು ; ಗಜವೃಂದದ ಪಂಕ್ತಿ : ರಣ ದೊಳರಾತಿ ವಾರಣ ಘಟಾಳಿಯನೋರ್ವನೆ ಗೆಲ್ದಂ (ಗದಾಯು. ೧-೧೭) ; ಕೆಡೆದುವಯುಂತ ಘಟಾಳಿ ತೆರಂಗಳುಡಿದುಬಿದ್ದುವು (ಕೌಶಿರಾ. ೨೦-೪೩). [ ಸಂ. ಘಟಾಲಿ (ಘಟಾ + ಆಲಿ) ]

**ಘಟಿ** (ನಾ). ೧. ಸಣ್ಣಗಡಿಗೆ. ೨. ಇಪ್ಪತ್ತನಾಲ್ಕು ನಿಮಿಷಗಳ ಕಾಲಮಾನ ; ಒಂದು ಗಳಿಗೆ. ೩. ಕಾಲದ ಪ್ರಮಾಣವನ್ನು ಸೂಚಿಸುವ ಲೋಹದ ಬಟ್ಟಲು; ಗಳಿಗೆಬಟ್ಟಲು. ೪. ಕರೆ ಕೊಡುವ ಗಂಟೆ ; ಜಾಗಟೆ : (೬). ೫.=ಘಟೀಯಂತ್ರ ೧ : (೬). [ ಸಂ. ಘಟೀ ]

**ಘಟಿಕಾತ್ಮ** (ನಾ). ೧. ಗಡಿಗೆಗಳನ್ನೊಳಗೊಂಡುದು ; ಕೊಡಗಳಿಂದ ಕೂಡಿದುದು. ೨. ಗಳಿಗೆಯ ರೂಪವನ್ನುಳ್ಳುದು ; ಗಳಿಗೆಯ ಗಣನೆ ಯಿಂದ ಕೂಡಿದುದು. ೧, ೨ : ಅಹಿಯಂತೆ ವಿಷೋದ್ಗಾರಿಗಳಹರ್ನಿಶ ಪ್ರಹರದಂತೆ ಘಟಿಕಾತ್ಮಂಗಳ್ ರಹಟಘಟೀಯಂತ್ರಂಗಳ್ (ಪುಷ್ಪಪು. ೨-೫೦). [ ಸಂ. ಘಟಿಕಾತ್ಮನ್ (ಘಟಿಕಾ + ಆತ್ಮನ್) ]

**ಘಟಿಕಾಪ್ರಹಾರಿ** (ನಾ). ಗಳಿಗೆಗೆ ಸರಿಯಾಗಿ ಗಂಟೆಹೊಡೆಯುವವನು : ಘಟಿಕಾಪ್ರಹಾರಿಗೆ ಮತ್ತರ್ ೩೦ ಪಂಚಿಕೇಶ್ವರಕ್ಕೆ ಮತ್ತರ್ ೪೫ (ಕಇಅ. ೬-೨-೨೦೭ ; 1058). [ಸಂ. ಘಟಿಕಾಪ್ರಹಾರಿನ್ ]

**ಘಟಿಕಾಮಹಾಸ್ಥಾನ** (ನಾ). ೧. ಧಾರ್ಮಿಕ ವಿದ್ಯಾಪೀಠ ; ಧಾರ್ಮಿಕ ಉಚ್ಚಶಿಕ್ಷಣದ ಕೇಂದ್ರ. ೨. ಭಕ್ತರ ಇಷ್ಟಾರ್ಥವನ್ನು ನೆರವೇರಿಸುವ ಸಿದ್ಧಿಕ್ಷೇತ್ರ: ಮಾರಾರಿ . . , ಧಾರಿಣಿಯ ಮೇಲೆಸೆವ ಪುಣ್ಯತೀರ್ಥಂಗಳಂ ಚಾರುಶೈವಕ್ಷೇತ್ರವೆನಿಪ ಘಟಿಕಾಮಹಾಸ್ಥಾನಂಗಳಂ ನೋಡುತ . . . ದ್ವಾರಾವತಿಗೆ ನಡೆತಂದನು (ಭಿಕ್ಷಾಚ. ೧-೨೭). 'ಘಟಿಕಾಸ್ಥಾನ' ಪರಾ. [ ಸಂ. (ಘಟಿಕಾ + ಮಹಾಸ್ಥಾನ) ]

**ಘಟಿಕಾಯಂತ್ರ** (ನಾ). ಗಳಿಗೆಯನ್ನು ಸೂಚಿಸುವ ಯಂತ್ರ ; ಗಡಿಯಾರ: ದಲಾಮೇತರ್ ಎಂಬ ಫ್ರೆಂಚ್ ತತ್ವಜ್ಞನು ಮಾನವದೇಹವೂ ಪರಿಪೂರ್ಣವಾದ ಘಟಿಕಾಯಂತ್ರದಂತೆ ಯಂತ್ರಮಾತ್ರವೆಂದು ಹೇಳಿದನು (ಮಕ್ಕಾರ. ೨೪, ೬೮೨). [ಸಂ. (ಘಟಿಕಾ + ಯಂತ್ರ) ]

**ಘಟಿಕಾಸಾಹಸ** (ನಾ). ಧರ್ಮಶಾಸ್ತ್ರವೇ ಮೊದಲಾದ ವಿದ್ಯೆಗಳನ್ನು ಬೋಧಿಸುವುದರಲ್ಲಿ ಸಮರ್ಥ; ಒಂದು ಬಿರುದು: ಘಟಿಕಾಸಾಹಸಾಯ ಹಾರೀತಸಗೋತ್ರಾಯ ಮಾಧವಶರ್ಮಣೇ (ಎಕ.III, ಮಂಡ್ಯ. ೧೧೩-೪೦; 713) ; ಘಟಿಕೆಯೆನ್ನುವ ಪದದಿಂದ ಘಟಿಕಾಸಾಹಸ ಎಂದರೆ ಧರ್ಮಬೋಧನೆಯಲ್ಲಿ ಅಥವಾ ಧರ್ಮಶಾಸ್ತ್ರಪ್ರವಚನದಲ್ಲಿ ನಿಪುಣನೆಂಬರ್ಥವುಳ್ಳ ಪದವು ನಿಷ್ಪನ್ನವಾಗಿದೆ (ಸಂಭಾನೆ. ೨೦೬). [ಸಂ. (ಘಟಿಕಾ + ಸಾಹಸ) ]

**ಘಟಿಕಾಸ್ಥಳ** (ನಾ). = ಘಟಿಕಾಸ್ಥಾನ ೧ : ನಾನು ಪ್ರಾಚೀನ ಘಟಿಕಾಸ್ಥಳವಾದ ಆ ಸಾಲೋಟಗಿಗೆ ಹೋಗಿ ನಾಡಹಬ್ಬದ ದಿನ ವ್ಯಾಖ್ಯಾನವನ್ನು ಕೊಟ್ಟುಬಂದೆ (ಪ್ರಬಂಧ. ೯೮). [ಸಂ. ಘಟಿಕಾಸ್ಥಲ (ಘಟಿಕಾ + ಸ್ಥಲ) ]

**ಘಟಿಕಾಸ್ಥಾನ** (ನಾ). ೧. ಧರ್ಮಕ್ಕೆ ಸಂಬಂಧಿಸಿದ ವೇದ, ಶಾಸ್ತ್ರ ಮೊದಲಾದ ವಿಷಯಗಳನ್ನು ಕುರಿತು ವಿಚಾರ ಮಾಡುವ ಹಾಗು ವಿದ್ಯೆಗಳನ್ನು ಕಲಿಸುವ ಉಚ್ಚ ಸಂಸ್ಥೆ ; ಮಹಾವಿದ್ಯಾಲಯ : ನಿಜಧರ್ಮ್ಮಕಾರಿತಾಧಿಕಾರ ಪದವೀವಿರಾಜಿತನಪ್ಪ ಶಾಳೆಯ [ಕೈಂ][ಕ]ರ್ಯ್ಯನಮಂ ಮಾಡಿಸಿ ಘಟಿಕಾಸ್ಥಾನಮೆನಿಪ ಶಾಲೆಗೆ (ಕಇಆ. ೫-೨-೧೭೭ ; 1058) ; ಆ ನಾಡೊಳಖಿಳ ಘಟಿಕಾಸ್ಥಾನವಿದೆನಿಸಿತ್ತು ಪೊಟ್ಟಿಯೂರ್ (ಎಇ. XVI, ೮೪-೧೫ ; 1067) ; ಮಯೂರಶರ್ಮನು ತನ್ನ ಗುರುವಾದ ವೀರಶರ್ಮನೊಂದಿಗೆ ಪಲ್ಲವರ ರಾಜಧಾನಿಯಾಗಿದ್ದ ಕಾಂಚೀಪಟ್ಟಣದ ಘಟಿಕಾಸ್ಥಾನದಲ್ಲಿ ಅಧ್ಯಯನ ಮಾಡಲಿಕ್ಕೆ ಹೋದನು (ಕರ್ನಾಆ. ೧೭) ; ಘಟಿಕಾಸ್ಥಾನವೆಂದರೆ ವಿದ್ಯಾಪೀಠ ಅಥವಾ ಧರ್ಮಸಂಬಂಧಿಯಾದ ವಿದ್ಯೆಗಳ ಸ್ಥಾನವೆಂದು ಗೊತ್ತಾಗುತ್ತದೆ (ಸಂಭಾನೆ. ೨೦೬). ೨. (ತಪಸ್ಸನ್ನು ಆಚರಿಸಿದರೆ ಅಥವಾ ಭಕ್ತಿಯಿಂದ ಆರಾಧಿಸಿದರೆ, ಇಷ್ಟಾರ್ಥವನ್ನು ಅನುಗ್ರಹಿಸುವಂಥ) ದೇವರಂ ನೆಲಸಿರುವ ಸ್ಥಳ ; ಸಿದ್ಧಿಕ್ಷೇತ್ರ : ಇವು ಘಟಿಕಾಸ್ಥಾನಂ ಮತ್ತಿವು ತೀರ್ಥಸ್ಥಾನಮೆಂಬ ರೂಢಿಯ ಭಗವದ್ಭವನಕ್ಕಲಂಘ್ಯಮಂಟಲುಂ ತವೆ ಮುಕ್ಕೊಡೆಯೆತ್ತಿ ಬಿಟ್ಟನಾ ವಸುಷೇಣಂ (ಅನಂಪು. ೧೨-೩೦); ಈ ಕುಮಾರಿತಿ . . . ಪುರಕೆ ಘಟಿಕಾಸ್ಥಾನವೆನಿಸುವ ಪರಮಸಿದ್ಧಿಯನೀವ ಮಧುಕೇಶ್ವರನ ಪೂಜಿಸುತಿರ್ದಳಿನಿಯನ ಬಯಸಿ ಭಕ್ತಿಯಲಿ (ಪ್ರಭುಲೀ. ೩-೪೫).೩. = ಘಟಿಗೆ. 'ಘಟಿಕಾಮಹಾಸ್ಥಾನ' ಪರಾ. [ಸಂ. (ಘಟಿಕಾ + ಸ್ಥಾನ) ]

**ಘಟಿಕಾಸ್ಥಾಪನ** (ನಾ). ಧಾರ್ಮಿಕ ಶಿಕ್ಷಣಕೇಂದ್ರದ ಸ್ಥಾಪನೆ,-ನಿರ್ಮಾಣ: ಆ ಘಟಿಕಾಸ್ಥಾಪನಸಹಸ್ರಸಾಂವತ್ಸರಿಕೋತ್ಸವವೆಂಬಂತೆ ನಾನು ೧೯೪೭ರಲ್ಲಿ ಸಾಲೋಟಗಿಯಲ್ಲಿ ನಾಡಹಬ್ಬವನ್ನಾಚರಿಸಲೋಸುಗ ಅಲ್ಲಿಗೆ ಹೋದುದು ನನಗೆ ತುಂಬಾ ಸೋಜಿಗವೆನಿಸಿತು (ಪ್ರಬಂಧ. ೯೮).
[ಸಂ. (ಘಟಿಕಾ + ಸ್ಥಾಪನ) ]

**ಘಟಿಕೆ** (ನಾ). ೧. ಗಳಿಗೆ; ಇಪ್ಪತ್ತುನಾಲ್ಕು ನಿಮಿಷಗಳಷ್ಟು ಕಾಲ : "ನಾಡಿ ಘಟಿಕೆಯೆನೆ ಗಳಿಗೆಯಕ್ಕುಂ" (ಮಂಗರಾ. ೨೦-೮). ೨. ರಾಶಿ ; ಗುಂಪು ; ಸಾಹಸ್ರಕೋಟಿ ಶುಭ್ರಾಂಶುಗಳ ರುಚಿರರಸಮನಾ ಹರಂ ಹಿಳಿದು ತನ್ನಯ ಕಳೆಯ ಕೂಡಿ ಕಣ್ದಾಹಿನಿಂ ಘಟ್ಟಿಗೊಳಿಸಿದ ಪುಣ್ಯಘಟಿಕೆಯೋ . . . ಎನಲ್ ಕೈಲಾಸಪರ್ವತಂ ರಾಮಣೀಯಕಮಾದುದು (ಜಬಪು. ೨-೧೧). ೩. ವೇದಶಾಸ್ತ್ರಾದಿ ಧಾರ್ಮಿಕವಿದ್ಯೆಯನ್ನು ಕಲಿಸುವ ಉಚ್ಚಮಟ್ಟದ ವಿದ್ಯಾಲಯ ; ಧಾರ್ಮಿಕವಿದ್ಯಾಪೀಠ. 'ಘಟಿಕಾಸ್ಥಾಪನ' ಪರಾ. ೪. ವಿಶ್ವವಿದ್ಯಾಲಯ. 'ಘಟಿಕೋತ್ಸವ' ಪರಾ.೫. ಯುದ್ಧಕಾಲದಲ್ಲಿ ತೊಡುವ ಲೋಹದ ಕವಚ; ಉರಸ್ತ್ರಾಣ (?): ಘಟಿಕೆಯ ಧರಿಸಿ ರವಿಯುದಯದಲಿ ಕಾಳಗಕಸುರನನುವಾದ (ಕೌಶಿರಾ. ೩೬-೪). [ಸಂ. ಘಟಿಕಾ]

**ಘಟಿಕೋತ್ಸವ** (ನಾ). ವಿಶ್ವವಿದ್ಯಾಲಯದ ಪದವೀಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದವರಿಗೆ ಅವರವರ ಪಾಂಡಿತ್ಯದ ಶ್ರೇಣಿಗೆ ಅನುಸಾರವಾಗಿ ಪದವಿಯ ಪ್ರಶಸ್ತಿಪತ್ರವನ್ನು ನೀಡಿವುದಕ್ಕೋಸ್ಕರ ಏರ್ಪಡಿಸುವ ಉತ್ಸವ,-ಸಮಾರಂಭ ; ಪದವೀಪ್ರದಾನಸಮಾರಂಭ : ಆ ಸಲದ ನವರಾತ್ರಿಯ ಘಟಿಕೋತ್ಸವದಲ್ಲಿ ಗೆಳೆಯರಿಬ್ಬರೂ ಬಿ. ಎ. ಪದವಿಯ ಪ್ರಶಸ್ತಿಪತ್ರವನ್ನು ಪಡೆದುದಾಯಿತು (ಅನಾಮಿ. ೬೪).
[ಸಂ. (ಘಟಿಕಾ + ಉತ್ಸವ) ]

**ಘಟಿಗ** (ನಾ). ಒಬ್ಬಾತನ ಹೆಸರು (?) : ಪರನಾರೀದುರ್ಲಭಂ ಘಟಿಗನ ಗಂಧವಾರಣಂ ನಯಧಾಮಂ (ಎಇ. XVI, ೨೯-೧೯ ; 1010). [?]

**ಘಟಿಗೆ** (ನಾ). ಗ್ರಾಮದವರು ವಿಚಾರವಿನಿಮಯಕ್ಕಾಗಿ ಅಥವಾ ನ್ಯಾಯ ತೀರ್ಮಾನಕ್ಕಾಗಿ ಸೇರುವ ಸ್ಥಳ ; ಗ್ರಾಮಸಭೆ; ಚಾವಡಿ : ಈಯೂರಾ ಘಟಿಗೆಯಾ ಮಹಾಜನಮಾನ್ (ಎಇ. III, ೩೬೦-೮ ; 740).
[<ಸಂ. ಘಟಿಕಾ ]

**ಘಟಿಚಕ್ರ** (ನಾ). ಬಾವಿಯಿಂದ ನೀರನ್ನೆಳೆಯಲು ಉಪಯೋಗಿಸುವ ಒಂದು ಉಪಕರಣ ; ರಾಟೆಯ ಹಗ್ಗವನ್ನು ಸುತ್ತಿಕೊಳ್ಳುವ ಮತ್ತು ಬಿಡುವ ಅಚ್ಚುಮರದಿಂದ ಕೂಡಿದ ಒಂದು ವಿಧವಾದ ಯಂತ್ರ: ಘಟಿಚಕ್ರದಲ್ಲಿ ಹಗ್ಗವನ್ನು ಸುತ್ತಿಕೊಳ್ಳುವ ಒಂದು ಅಚ್ಚುಮರವಿದೆ (ಬಾಲಪ್ರ. I, ೩೩೯). [ಸಂ. ಘಟೀಚಕ್ರ (ಘಟೀ + ಚಕ್ರ) ]

**ಘಟಿತ** (ಗು). ೧. ಕೂಡಿದ ; ಸೇರಿದ ; ಸಂಬಂಧವನ್ನು ಹೊಂದಿದ ; ಇದು ಸಕಲ ಸುರಾಸುರೇಂದ್ರ ಮಣಿಮಕುಟಘಟಿತ ಶ್ರೀಮತ್ಪರಮೇಶ್ವರ ಚಾರುಚರಣಾರವಿಂದ (ಛಂದೋಂಬು. ೧-೫೮ ವ) ; ಪ್ರೋದ್ದಾನಧಾರಾಘಟಿತ ಕಟತಟಂ . . . ಅದೇಂ ಬಂದುದೊ ದಂತಿಜಾಳಂ (ರಾಜಶೇ. ೧೩-೬೭) ; ಸ್ವಸ್ತಿಶ್ರೀಮತ್ಸುರಾಸುರೇಂದ್ರ ನರೇಂದ್ರಮುನೀಂದ್ರ ಫಣೀಂದ್ರಮಣಿಮಕುಟತಟಘಟಿತ (ರಾಮಾಶ್ವ. ೫-೩೦). ೨. ಜೋಡಿಸಿದ ; ಸೇರಿಸಿದ : ಭೀಮಾಂಧದೈತ್ಯತನುತಟಘಟಿತನೃತ್ಯನಾ ಸೋಮೇಶನಮಲವರದಿಂದೀಗೆ ಮಂಗಂಗಭಂಗಮಂಗಳಮತಿಯನು (ಮಂಗರಾ. ೧-೧). ೩. ಏರ್ಪಾಡು ಮಾಡಿದ ; ವ್ಯವಸ್ಥೆ ಮಾಡಿದ : (+). ೪. ಉಂಟಾದ ; ಸಂಭವಿಸಿದ. 'ಅಘಟಿತ' ಪರಾ. (ನಾ). ೫. ಉಂಟಾದುದು ; ಸಂಭವಿಸಿದುದು : ಕುಟಿಲಪರಸಮಯಕ್ರಿಯಾಪ್ರವಿಘಟನ ದೇವರದಾಸಿಗಳ ತತ್ ಪಟುಕರಸ್ಥಳ ಘಟಿತಮಾಗಿ ಪ್ರಭವಿಸುತಮಿರಲು (ಬಸಪು. ೫೦-೬೨). ೬. ಆದುದು ; ನಡೆದ ವಿಷಯ : ಅಘಟಿತ ಘಟಿತವರ್ತಮಾನವ ನಾನರಿಯೆನಯ್ಯಾ (ಬಸವ. ೫೧೧). [ಸಂ. ]

**ಘಟಿತಾರ್ಥ** (ನಾ). ೧. ಆದ ವಿಷಯ ; ನಿಜವಾಗಿ ನಡೆದ ಕೆಲಸ. ೨. ಉಂಟಾದ ಪ್ರಯೋಜನ ; ಒಂದು ಕೆಲಸದಿಂದ ಆದ ಪರಿಣಾಮ. ೩. ಸಾವಧಾನವಾಗಿ ಮಾಡಿದ ವಿಚಾರದ ಅಥವಾ ಆಲೋಚನೆಯ ಫಲಿತಾಂಶ. ೪. ವಧೂವರರ ಜಾತಕಗಳ ಹೊಂದಾಣಿಕೆ : ಜೋಯಿಸರೆ, ಇನ್ನೊಂದು ಜಾತಕ ಬೇರೆ ಬಂದಿದೆ. ಇದರ ಘಟಿತಾರ್ಥ ಹೇಗಿದೆ ನೋಡಿ (ಅದೂಟ. ೩೭); ಸ್ವಯಂವರವಿಧಾನದಲ್ಲಿ ಮದುವೆಯಾಗುವಾಗ ನಕ್ಷತ್ರದ ಘಟಿತಾರ್ಥ ವಿಷಯವನ್ನು ಯೋಚಿಸಬೇಕಾದ ಅಗತ್ಯವಿರುವುದಿಲ್ಲ (ಪೇಟೀಮಾ. ೩). [ಘಟಿತ + ಅರ್ಥ ]

**ಘಟಿಯಾರ** 'ಘಳಿಯಾರ' ನೋ.

**ಘಟಿಯಿಸು** 'ಘಟಿಸು' ನೋ.

**ಘಟಿಸು, ಘಟಿಯಿಸು** (ಕ್ರಿ). ೧. ಆಗು ; ಉಂಟಾಗು ; ಸಂಭವಿಸು : ತಾಯ ಬಟಿಯ ಕ ಜು ವಿ ನ ಂ ತೆ ನಾಮಪದಂಗಳರ್ಥಾನುಗತಂಗಳಾಗೆ ಸಮಾಸಂ ಘಟಿಸುಗುಂ (ಶಮದ. ೧೬೨ ವೃತ್ತಿ) ; ದ್ರೌಪದಿ ಸುಭದ್ರಾಲಲನೆಯರಿಗನುಚಿತವು ಘಟಿಸಿತೆ (ಕುವ್ಯಾದ್ರೋ. ೭-೨೨) ; ಪಟುತನವು ದೊರಕಿದರೆ

ಶುಚಿತನ ಘಟಿಸಲರಿಯದು (ತೊರರಾ. ೫-೯-೨೬) ; ಇನ್ನು ಮುಂದೆ ನಿನ್ನಿಂದ ಸಹಸಾ ಅನ್ಯಾಯ ಘಟಿಸಲಿಕ್ಕಿಲ್ಲ ಎಂದು ಹೇಳಿದನು (ಮುಂಬಯಿ. ೪-೮೯). ೨. ಸಿಕ್ಕು ; ದೊರಕು ; ಪ್ರಾಪ್ತವಾಗು : ದಿಟಪುಟವನಱಿದಡೂ ಗುರು ಕೊಟ್ಟ ನಿಟಿಲಲೋಚನನು ಘಟಿಸಬೇಕು (ವೋಳಿಮಾ. ೨೦-೮೨) ; ಪರಮಾಣು ಮಾತ್ರಮಮೃತದ ಪರಿಸೇವನೆ ಘಟಿಸಲಮರದೇನಮರತ್ವಂ (ಪುಷ್ಪಪು. ೦-೪೪) ; ಚಾಪವೀತನ ಕೈಯಲಿರಲಿನ್ನಾ ಪಿನಾಕಿಗೆ ಗೆಲವು ಘಟಿಸದು (ಕುವ್ಯಾದ್ರೋ. ೬-೨೯) ; ಗುರುದ್ರೋಹಂಗೆ ಕೈವಲ್ಯಾಗಮವು ಘಟಿಸುವುದೆ (ತೊರರಾ. ೬-೧೬-೧೨). ೩. ಸೇರು; ಕೂಡು; ಹೊಂದಿಕೊಳ್ಳು: ಘಟಿಸದಾವಾಪೂರ ಗೊರವರೊಡನೆ ಮುನಿದು ಬಂದ್ಯೆ (ಬಸಪು. ೦೮-೯) ; ಮಾಯಾ ಪ್ರಕೃತಿಪುರುಷನಲಿ ಘಟಿಸುವುದೆ ದುರ್ನಯವು (ತೊರರಾ. ೬-೩೪-೧೫) ; ಇದೆರಡು ಘಟಿಸದಿದ್ದರೆ ಆ ಬಳಿಕ ಯಾವ ನಿಮಿತ್ತದಿಂದಲಾದರೂ ಯುದ್ಧವ ಮಾಡಿ ಕಾರ್ಯಗಳಂ ಸಾಧಿಸಬೇಕು (ಸೌಗಂಧಿ. ೨೮೫-೧೫). ೪. ಉಂಟುಮಾಡು ; ಆಗಿಸು ; ಏರ್ಪಡಿಸು : ಆ ಸುಯೋಧನಗಱುಹಿ ಸಂಧಿಯನೀ ಸಮಯದಲಿ ಘಟಿಸು (ಕುವ್ಯಾದ್ರೋ. ೦-೩೦). **ಘಟಿಯಿಸು :** ೧. ದಿಟ್ಟ ಮನಮೆಂಬಿವು ತೊಟ್ಟನೆ ನಟ್ಟು ನಟ್ಟವೊಲ್ ಘಟಿಯಿಸೆ ಸೋಲ್ತೊಱಲ್ದು (ಆದಿಪು. ೩-೯೦) ; ತನ್ನ ನುಡಿಗಳ್ಗೆ ಪ್ರತ್ಯುತ್ತರದಂತೇತೆಱದೊಳಮೀ ನುಡಿ ಘಟಿಯಿಸುವುದೆಂದು ಸಂದೇಹಡೋಲಾಧಿರೂಢಚಿತ್ತನಾಗಿ (ಕಾದಂಉ. ೨೫೩) ; ಅಂಘ್ರಾ[ಘ್ರೋ]ಬಳದಿಂ ದುರ್ವ್ಯಸನಂ ಘಟಿಯಿಸೆ (ಸುಕುಮಾ. ೨-೩೩) ; ಅದು ಕಾರಣದಿಂ ಔಪಶಮಿಕಭಾವೋಪಪತ್ತಿ ಘಟಿಯಿಸುಗುಂ (ತತ್ತ್ವಪ್ರ. ೮೫). ೨. ಪ್ರಮತ್ತಗುಣಸ್ಥಾನದೊಳುಂಬಡಾತಂಗೆ ಕೇವಳಮೆ ಘಟಿಯಿಸದೆ ಕಿಡುಗುಂ (ಪಸಾರ. ೦೦೦೩-೮). ೫. ಪಡೆ ; ಹೊಂದು ; ದೊರಕಿಸಿಕೊಳ್ಳು : (ಕಿ). ೬. ಸೇರಿಸು ; ಕೂಡಿಸು ; ಸಂಯೋಜಿಸು: ನಿಟಿಲತಟೀಪುಟದೊಳ್ ಶಶಾಂಕದ್ಯುತಿಯಿಂ ಘಟಿಯಿಸಿದ ಪುಂಡ್ರಮೊಳ್ಪಂ ಘಟಿಯಿಸುಗುಂ (ಅಶ್ವಶಾ. ೩-೭). [ಘಟನ + – ಇಸು$_3$]

**ಘಟೀಯಂತ್ರ** (ನಾ). ೧. ಬಾವಿಯಿಂದ ನೀರನ್ನು ಮೇಲಕ್ಕೆ ಎತ್ತುವ ಸಾಧನ; ನೀರೆತ್ತುವ ರಾಟೆ: "ಉದ್ಘಾಟಕಂ, ಘಟೀಯಂತ್ರಂ, ಪಾದಾವರ್ತಃ, ಅರಘಟ್ಟಕಃ–ಈ ೪ ಱಾಟಣಂ" (ಹಲಾಯು. ೧೦೩-೬೩) ; ನವ ಘಟೀಯಂತ್ರದಿಂ ವಿಷ್ಣುಯುದ್ಧಾಜಿರಮಾಪೀವೈರಿರಕ್ತಾಂಬುವನೆ ನಿಜಯಶೋವಲ್ಲಿಗೆತ್ತುತ್ತಮಿರ್ಪಂ (ಎಕ. V, ಹಾಸನ. ೧೩೦-೧೨ ; 1147 ?) ; ಮದನರಾಜವಿಜಯತಂತ್ರಂಗಳೆನಿಪ ಘಟೀಯಂತ್ರಂಗಳುಂ . . . ತನಗನೂನ ಶೋಭೆಯುಂ ಪಡೆಯೆ (ಪುಷ್ಪಪು. ೯-೨೨ ವ). ೨. ಗಳಿಗೆಯನ್ನು ಸೂಚಿಸುವ ಸಾಧನ ; ಗಳಿಗೆಬಟ್ಟಲು : ಗಲಿಲಿಯೋ ನುಣುಪಾದ ಇಳಿಜಾರು ಮಣೆಗಳನ್ನು ಮಾಡಿಸಿ ಅವುಗಳ ಮೇಲಿನಿಂದ ಉರುಳಲು ಬಿಟ್ಟ ಗುಂಡುಗಳು ಎಷ್ಟು ದೂರವನ್ನು ಕ್ರಮಿಸಲು ಎಷ್ಟು ಕಾಲವನ್ನು ತೆಗೆದುಕೊಳ್ಳುತ್ತವೆ ಎಂಬುದನ್ನು ನೀರಿನ ಗಡಿಯಾರ (ಅಥವಾ ಘಟೀಯಂತ್ರ)ಗಳ ಸಹಾಯದಿಂದ ಕಂಡುಹಿಡಿದನು (ಭೌತವಿ. ೨೫). [ಸಂ. (ಘಟೀ + ಯಂತ್ರ)]

**ಘಟೆ** (ನಾ). ೧. ಆನೆಗಳ ಗುಂಪು ; ಗಜಸಮೂಹ : "ಹಲವಾನೆ ಘಟಾಯೆಂಬುದು" (ಹಲಾಯು. ೩೭-೬೮) ; "ದಂತಿವೃಂದಂ ಘಟೆಯೆನಿಕ್ಕು" (ಮಂಗರಾ. ೪೬-೩) ; ಕುದುರೆ ಕುದುರೆಯೊಳ್ ರಥಂ ರಥದೊಳಣೆಯಣೆಯೊಳ್ ಘಟೆಯಾನೆ ಘಟೆಯಾನೆಯೊಳ್ ತಳ್ತು ತಾಗಿ ಪಲವು ದಿವಸಂ ಕಾದೆ (ವಡ್ಡಾರಾ. ೧೪೮-೮) ; ಪಕ್ಕರೆಯಿಕ್ಕಿ ಬಂದುವು ಹಯಂ ಘಟೆ ಪಣ್ಣಿದುವು (ಪಂಪಭಾ. ೩-೬೭) ; ಆರ್ದು ಸುಭಟರೆಚ್ಚರ್ ಘಟೆಯಂ (ದಶಕು. ೨-೨೪). ೨. ಗುಂಪು ; ಸಮೂಹ : ದಂತಿಘಟೆಗಳ್ ಪೆಱಗಿಟ್ಟೊಡೆ (ಪಂಪಭಾ. ೩-೭೦) ; ಜಲಮತ್ತದ್ವಿಪಘಟೆಗಳೆನಿಸಿದುವು ಘನಘಟೆಗಳ್ (ಪಂರಾಮಾ. ೭-೧೪೪) ; ಸಿಂಗಣನೃಪನ ಹಯಶ್ರೇಣಿ ಕಲ್ಪಾಂತಧಾರಾಧರ ಮಲ್ಲಾಮಲ್ಲಿಯೊಳು ಯಾದವ ಗಜಘಟೆಯೊಳು ತಳ್ತುದು (ಸೌಇಇ. IX-i, ೩೪೩-೨೫; 1226); ಸಗ್ಗಿಗರಾಣ್ಮನ ಘನಕರಿಘಟೆಗಳ್ ಬೇಸಗೆಯ ಬಿಸರಕ್ಕೆ ಬಸವೞಿದು (ರಾಮಾಶ್ವ. ೩-೭). ೩. ಸಭೆ; ಸಮಿತಿ; ಗೋಷ್ಠಿ: "ಗೋಷ್ಠಿಯಲ್ಲಿಯುಂ ಘಟಾ ಎಂಬುದು" (ಹಲಾಯು. ೦೩೩-೧೨). ೪. ಪ್ರಯತ್ನ; ಉದ್ಯಮ : (ಕಿ)

**ಘಟೆಮುಟ್ಟೆಗಂಡ**=ಯುದ್ಧದಲ್ಲಿ ಆನೆಗಳ ಮೊತ್ತವನ್ನು ಎದುರಿಸಿ ಹೋರಾಡಲು ಸ್ವಲ್ಪವೂ ಅಂಜಿಕೆಯಿಲ್ಲದ ವೀರ ; ಒಂದು ಬಿರುದು : ಅಚಲಭಕ್ತಿಪರಂ ಘಟೆಮುಟ್ಟೆಗಂಡನೊರ್ಮ್ಮೆಯೆ ನೆಱೆಗೆಯ್ಸೆ (ಸೌಇಇ. IX-i, ೦೬೦-೫೨ ; 1092). **ಘಟೆಯಂಕಕಾಱ** = ಆನೆಗಳ ಗುಂಪಿನೊಡನೆ ಯುದ್ಧ ಮಾಡುವವನು; ಒಂದು ಬಿರುದಂ: ಜೀವಿಗಳಪ್ಪ ಘಟೆ[ಯ]ಂಕಕಾಱ ನೊಳಂಬಭರ (ಬೊಂಕಶಾ. ೦೯೨೯, ಬಾದಾಮಿ. ೧೪೦-೪೪೫; 946) ; ಘಟೆಯಂಕಕಾಱಂ ಶ್ರೀಮದಿಱಿವನೊಳಂಬಾಧಿರಾಜಂ (ಎಇ. XVI, ೨೯-೦೦; 1010); ಆತನ ತಮ್ಮನಿಱಿವ ನೊಟಂಬ ಘಟೆಯಂಕಕಾಱ ಪಲ್ಲವಾದಿತ್ಯಂ ಪ್ರಿಥ್ವೀರಾಜ್ಯಂಗೆಯ್ಯುತ್ತಂ (ಸೌಇಇ. IX-i, ೪೦-೧೦ ; ?). **ಘಟೆಯೊಡೆಗಂಡ**=ಯುದ್ಧದಲ್ಲಿ ಆನೆಗಳ ಗುಂಪನ್ನು ಭೇದಿಸುವ ಅಥವಾ ಚೆದರಿಸಿ ಓಡಿಸುವ ಪರಾಕ್ರಮಿ ; ಒಂದು ಬಿರುದು : ಮಣ್ಡಳಿಕ ಲಲಾಟಲೋಚನಂ ಘಟೆಯೊಡೆಗಣ್ಡಂ ಕದನಕ[ಂ]ಣ್ಠೀರವನಮೋಘವಾಕ್ಯಂ (ಸೌಇಇ. IX-i, ೮೦-೪ ; 1013) ; ಇಱಿವಬೆಡಂಗ ನೊಳಂಬ ಘಟೆಯಂಕಕಾಱದೇವಂ ತಸ್ಯಾಗ್ರಸುತಂ ಘಟೆಯೊಡೆಗಂಡ ರಣರಂಗ ಭೀಮಂ (ಸೌಇಇ. IX-i, ೧೦೧-೬ ; 1045). [ಸಂ. ಘಟಾ]

**ಘಟ್ಟ** (ನಾ). ೧. ತಿಕ್ಕುವಿಕೆ; ಉಜ್ಜುವಿಕೆ. ೨. ಹೊಡೆತ; ತಟ್ಟುವುದು. ೩. ಒತ್ತುವಿಕೆ ; ಒತ್ತಡ. ೪. ನದಿ, ಕೆರೆ ಮುಂತಾದುವುಗಳಲ್ಲಿ ನೀರಿಗೆ ಇಳಿಯುವುದಕ್ಕಾಗಿ ಕಟ್ಟಿರುವ ಮೆಟ್ಟಲು ; ಸೋಪಾನ : ಬಂದು ಮಾಧವನ ಘಟ್ಟಕ್ಕೆ ಹೋಗುವೆ ತಾರೇ ಬಿಂದಿಗೆಯ (ಪುರಂದ. ೧-೪೯-೩). 'ಸ್ನಾನಘಟ್ಟ' ಪರಾ. ೫. ಅಂತಸ್ತು ; ಹಂತ ; ಅವಸ್ಥೆ : ಕರ್ಮ, ಜ್ಞಾನ, ಭಕ್ತಿಗಳು . . . ಮುಕ್ತಿಗೆ ಒಯ್ಯುವ ಒಂದೇ ಮಾರ್ಗದ ಮೂರು ಘಟ್ಟಗಳು (ಭಾರದ. ೨೮೦) ; ವಿಜ್ಞಾನಿಗಳ ತತ್ವಾನ್ವೇಷಣೆಯ ಪ್ರಗತಿಯಲ್ಲಿ ಸ್ಥೂಲದೃಷ್ಟಿಯಿಂದ ಮೂರು ಘಟ್ಟಗಳನ್ನು ಕಾಣಬಹುದು (ಹುಕ್ಕಾರ. ೫ ಪೀಠಿಕೆ) ; ಶ್ರೀರಂಗರಾಯನ ಅಂತ್ಯಘಟ್ಟವು ದೈವಘಟನೆಯಿಂದ ಸಂಘಟಿಸಿದ್ದು (ಶ್ರೀರಾಯ. ii, ಮುನ್ನುಡಿ). ೬. ಸಾಮಾನುಗಳನ್ನು ತುಂಬಿಸಲು ಮತ್ತು ಇಳಿಸಲು ಅನುಕೂಲವಾಗುವಂತೆ ಹಡಗು ಅಥವಾ ದೊಡ್ಡ ದೋಣಿಯನ್ನು ತಂದು ನಿಲ್ಲಿಸಲು ಸಮುದ್ರದ ಅಥವಾ ಮಹಾನದಿಗಳ ತೀರದಲ್ಲಿ ನೀರಿನೊಳಕ್ಕೆ ಚಾಚಿಕೊಂಡಿರುವಂತೆ ಕಟ್ಟಿರುವ ಕಟ್ಟೆ: (ಕಿ). ೭. ಬೆಟ್ಟದ ಇಳಿಜಾರುಪ್ರದೇಶ : ಬೆಟ್ಟದೊಳು ಘಟ್ಟದೊಳು ಸರುವಿನೊಳು . . . ಕಣ್ದಣಿವನ್ನ ನೋಡು ಬಾ (ಸಿದ್ಧರಾ. ೨-೫೪) ; ಬೆಟ್ಟಮುಂ, ಘಟ್ಟಮುಂ, ಹಳ್ಳಮುಂ, ಕೊಳ್ಳಮುಂ (ಶಮದ. ೦೦೬ ಪ್ರಯೋ); ಕಾಲಾಂತರದಿಂ ಸತ್ತು ಮದಗಜಮಾಗಿ ಪುಟ್ಟಿ ಘಟ್ಟದೊಳು ತಿರುಗುತ್ತಿರಲ್ (ಪುಣ್ಯಾಸ್ರ. ೧೦-೩೦ ವ) ; ಘಟ್ಟದ ಉಪ್ಪು ಬೆಟ್ಟದ ನೆಲ್ಲಿಕಾಯಿ (ಗಾದೆ). ೮. ಬೆಟ್ಟ: ಆಲಿಬಾಗ್–ಬೊಂಬಾಯಿಗೆ ದಕ್ಷಿಣದಲ್ಲಿ ಘಟ್ಟಗಳಿಗೂ ಮತ್ತು ಸಮುದ್ರಕ್ಕೂ ಮಧ್ಯದಲ್ಲಿರುವ ಕೊಲಾಬಾ ಡಿಸ್ಟ್ರಿಕ್ಟಿನ ಮುಖ್ಯಪಟ್ಟಣ (ಭೂಗೋಳ. ೭೩) ; ಹುಟ್ಟುಗುಣ ಘಟ್ಟ ಹತ್ತಿದರೂ ಹೋಗದು (ಗಾದೆ).

[ಸಂ. ]

**ಘಟ್ಟಣ** 'ಘಟ್ಟಣೆ' ನೋ.

**ಘಟ್ಟಣೆ, ಗಟ್ಟಣೆ, ಘಟ್ಟಣ** (ನಾ). ೧. ಅಪ್ಪಳಿಸುವಿಕೆ ; ಹೊಡೆತ ; ಜಡಿತ : "ಘಟ್ಟಣೆ (ಣ, ಗಟ್ಟನ)–ಘಟ್ಟನಾ" (ತದ್ಭಕೋ. ೧೧) ; ತೋಳ ಘಟ್ಟಣೆಗುಚ್ಚಳಿಸುತ್ತುಂ ಸೂಸುವ ಶೀಕರವಾರಿ (ಕಾವ್ಯಾವ. ೯೩೩) ; ನಿಶಾತ ದನ್ತ ಘನಘಟ್ಟಣೆಗಳ್ಕಿ ದಿಶಾಗಜವ್ರಜಂ ಬೆದಱೆ (ಸೌಇಇ.XI-1,೦೦೩-೪: ?). ೨. ತುಳಿಯುವುದು ; ಮೆಟ್ಟುವುದು : ಬಿಟ್ಟು ಕಳೆ ಬಱುಮಾತ

ಶಬ್ದಗಳೊಟ್ಟಿಲೆಂಬುವು ತನ್ನ ಪಾದದ ಘಟ್ಟಣೆಯ ಧ್ವನಿಯುವಟಿಲಾನಿನ್ನೇನ ಕೇಳುವೆನು (ಪ್ರಭುಲೀ. ೭-೫೯). ೩. ಪೆಟ್ಟು; ಏಟು; ಗಾಯ: "ಘಟ್ಟಣೆಯೆನೆ ಗಾಯವೆಂದು ತಿಳಿಗೆ" (ಭಾರನಿ. ೬೭). ೪. ದಮ್ಮಸು ಮಾಡಿ ಮಟ್ಟಮಾಡಿದ ಸ್ಥಳ: ಮುಂಕೊಂಡು ನಡೆದುದಾತುರಗದೊಡನನಿಬರ ಚತುರ್ಬಲಂ ಬಹಳಗಿರಿ ಪುರದೇಶವನಪಳ್ಳಕೊಳ್ಳಂಗಳಂ ತುಳಿದು ಕಣದ ಘಟ್ಟಣೆಯಂತೆ ಸಮಮಾಗಲು (ಜೈಮಿಭಾ. ೧೫-೬). **ಗಟ್ಟಣೆ:** ೧. "ಗಟ್ಟಣೆ (ಘಟ್ಟಣೆ)-ಘಟ್ಟನ"(ತದ್ಭಕೋ. ೯). ೫. ಮಡಿಸುವಿಕೆ: ಮಡಿಸೀರೆಯಂತೆ ಗಟ್ಟಣೆಗೆ ವಂದು ಮೈಲಗೆಯಂತೊಗೆಹಕ್ಕೆ ವಂದು (ಧರ್ಮಾಮೃ. ೩-೭೭). **ಘಟ್ಟಣ:** ೨. "ಘಟ್ಟಣ – ಘಟ್ಟಣೆ" (ಶಮದ. ೨೭೮ ಪ್ರಯೋ); ಗಜಾವಳಿಯ ಪದಘಟ್ಟಣದಿ ಜೌಗೆದ್ದ ಕೆಸಱೊಳಗೆ (ಬಸಪು.೧೦-೫).

**ಘಟ್ಟಣೆಮಾಡು**=ದಮ್ಮಸು ಮಾಡಿ ನೆಲವನ್ನು ಗಟ್ಟಿಮಾಡು: ಗಾಡಿ ಕಲ್ಲು ಚಕ್ಕೆಯೆದ್ದಿದ್ದ ರಸ್ತೆಯಿಂದ ಜಲ್ಲಿಹಾಕಿ ಗಟ್ಟಣೆಮಾಡಿ ಸಮತಟ್ಟಾಗಿದ್ದ ರಸ್ತೆಗೆ ತಿರುಗಿದಾಗ ಅವರ ಮಾತು ಸುಲಭವಾಗಿ ಕೇಳಿಸುವಂತಾಯಿತು (ಪುನರು. ೩೦೭). [ <ಸಂ. ಘಟ್ಟನ, ಘಟ್ಟನಾ ]

**ಘಟ್ಟನ** (ನಾ). ೧. ಮುಟ್ಟುವಿಕೆ; ತೀಡುವಿಕೆ. ೨. ಕುಟ್ಟುವಿಕೆ; ದಮ್ಮಸಂಮಾಡುವಿಕೆ; ಮಟ್ಟಮಾಡುವಿಕೆ. ೩. ಹೊಡೆಯುವಿಕೆ; ಬಡಿತ: ಮುಷ್ಟಿಯುಗಳ ಘಟ್ಟನದಿಂ ಕೆಂಗಿಡಿ ಕೆದಱೆ (ಶಬಶಂ. ೪-೭೭). ೪. ಮಾಲೀಸುಮಾಡುವಿಕೆ; ಚೆನ್ನಾಗಿ ತೀಡಿ ನುಣುಪು ಮಾಡುವಿಕೆ. ೫. ಅಲುಗಿಸುವಿಕೆ; ಕದಲಿಸುವಿಕೆ. ೬. ಕಡೆಯುವಿಕೆ; ಮಂಥನ. ೭. ಬಲವಾಗಿ ಒತ್ತುವಿಕೆ; ಒತ್ತಡ ಹಾಕುವಿಕೆ. ೮. ಹೋಗುವಿಕೆ; ಚಲನ. ೯. ಆಚರಣೆ; ನಡೆವಳಿ. [ ಸಂ. ]

**ಘಟ್ಟವರೆ** (ನಾ). ಅವರೆಜಾತಿಯಲ್ಲಿ ಒಂದು ಬಗೆ; ಗುಡ್ಡದಲ್ಲಿ ಬೆಳೆಯುವ ಅವರೆ: ಕಾಯಿಗಳು: ಅಗಸೆ . . . ಮನೆಅವರೆ, ಬಿಳಿಮನೆಯವರೆ, ಘಟ್ಟವರೆ, ದೊಡ್ಡಮನೆಯವರೆ (ನಮ್ಮನು. ೨೩೭). [ ಘಟ್ಟ+ ಅವರೆ$_1$ ]

**ಘಟ್ಟಾಘಟ್ಟಿ** (ನಾ). ಪರಸ್ಪರವಾಗಿ ಹೊಡೆದಾಡಿ ಮಾಡುವ ಯುದ್ಧ: ಘಟ್ಟಾಘಟ್ಟಿ, ಮಲ್ಲಾಮಲ್ಲಿ–ಇವು ತತ್ಸಮಂಗಳ್ (ಶಮದ.೧೮೫ ಪ್ರಯೋ). [ ಸಂ. ]

**ಘಟ್ಟಿ** 'ಗಟ್ಟಿ' ನೋ.

**ಘಟ್ಟಿಕೆ** (ನಾ). ಉಂಟಾಗುವಿಕೆ; ಹೊಂದಿಕೊಳ್ಳುವಿಕೆ: ಮಾತಾಪಿತರ ಮನದ ಕೊನೆಯೊಳನುರಾಗ ಘಟ್ಟಿಕೆಯಿಂ ಗುಡಿಗಟ್ಟಿದ ಸಮನಂತರಂ (ಅನಂಪು, ೬-೩೬ ವ). [ <ಸಂ. ಘಟಕ ]

**ಘಟ್ಟಿಗ** 'ಗಟ್ಟಿಗ' ನೋ.

**ಘಟ್ಟಿಗತನ** 'ಗಟ್ಟಿಗತನ' ನೋ.

**ಘಟ್ಟಿಗಾಳೆಗ** (ನಾ). ನಿಶರವಾದ ಯುದ್ಧ; ತೀವ್ರವಾದ ಕದನ; ಕಠಿನ ಸಮರ: ಉದಧಿಗಣೆಯೆನಿಸಿದಾಯುಷ್ಯದ ಕಡೆವರಮೆಯ್ದೆ ಘಟಿ ಗಾಳೆಗದವರಂದದಿನಶುಭಕರ್ಮದಾವೇಶದಿನೊರ್ವರನೊರ್ವರಿಱಿದು ಸಮೆಯುತ್ತಿರ್ಪರ್ (ವರ್ಧಪು. ೧೧-೩೨). [ ಘಟ್ಟಿ (<ಗಟಿ) + ಕಾಳೆಗ ]

**ಘಟ್ಟಿಗೆಗೋಲ್** (ನಾ). ಒಂದು ಬಗೆಯ ಆಯುಧ (?): ಅಂತುಭಯಸಾಗರಂ ಪಳಂಚುವಂತೆ ಘಟ್ಟಿಗೆಗೋಲ್ಗಳ ಹಿಡಿದನ್ಯೋನ್ಯ ನಿರೀಕ್ಷಣದಿಂ ಮೀಸೆಗಳಂ ತಿರ್ದಿ ಕೆರ್ಕಳಿಸಿರ್ಪಾಗಳ್ (ಯಾದಜಂ. ೪-೩೭). [ ?+ಕೋಲ್$_1$ ]

**ಘಟ್ಟಿಗೊಳ್** 'ಗಟ್ಟಿಗೊಳ್' ನೋ.

**ಘಟ್ಟಿಗೊಳಿಸು** (ಕ್ರಿ). ಗಟ್ಟಿಯನ್ನಾಗಿ ಮಾಡು; ಘನೀಭವಿಸುವಂತೆ ಮಾಡು; ಮುದ್ದೆಯಾಗಿಸು: ಸಾಹಸ್ರಕೋಟಿಶುಭ್ರಾಂಶುಗಳ ರುಚಿರಸಮನಾ ಹರಂ ಹಿಳಿದು ತನ್ನಯ ಕಳೆಯ ಕೂಡಿ ಕಣ್ಗಾಹಿನಿಂ ಘಟ್ಟಿಗೊಳಿಸಿದ ಪುಣ್ಯಘಟಿಕೆಯೋ . . . ಎನಲ್ ಕೈಲಾಸಪರ್ವತಂ ರಾಮಣೀಯಕ ಮಾದುದು (ಚಿಬಪು. ೨-೧೦). [ಘಟ್ಟಿಗೊಳ್ (<ಗಟ್ಟಿಗೊಳ್)+ – ಇಸು$_3$]

**ಘಟ್ಟಿತ** (ಗು). ೧. ಸೇರಿಸಿದ; ಸ್ಪರ್ಶಿಸಿದ; ತಾಕಿದ: ಶ್ರೀ ವರ್ಧಮಾನ ನಾನತದೇವಾಧಿಪಮಕುಟಕೋಟಿಘಟ್ಟಿತಚರಣಂ (ಕಾವ್ಯಾವ.೧). (ನಾ). ೨. ಹೊಡೆಯಲ್ಪಟ್ಟುದು: ಬಳಸಿದುದರ್ಕವಾಜಿಖುರಘಟ್ಟಿತ ಮಾದಪರಾದ್ರಿಯಿಂದಮುಚ್ಚಳಿಸಿದ ಧಾತುರೇಣುವೆನೆ . . . ಸಂಜೆಯ ಕೆಂಪು ಲೋಕಮಂ (ಚಂದ್ರಪು. ೮-೪). ೩. [ಕಾಮಶಾ] ಚುಂಬನಗಳಲ್ಲಿ ಒಂದು ಬಗೆ: ಮನದಾಣ್ಮನಧರಮಂ ಮಾನಿನಿ ನಾಲಗೆಗೊನೆಯೊಳ ಲೆದೆರಳ್ದುಟಿಯಂ ಚುಂಬನಮಾಗಿಸುತುಂ ತಳದಿಂದೆ ನಯನಮಂ ಮುಚ್ಚಿಯದುವೆ ಘಟ್ಟಿತಮೆನಿಕುಂ (ಮನ್ಮವಿ. ೧೨-೭). [ಸಂ.]

**ಘಟ್ಟಿತನ** 'ಗಟ್ಟಿತನ' ನೋ.

**ಘಟ್ಟಿಪಟ್ಟೆ** (ನಾ). ಉತ್ತಮವಾದ ರೇಶ್ಮೆವಸ್ತ್ರ; ದಪ್ಪ ರೇಶ್ಮೆನೂಲಿನ ಬಟ್ಟೆ: ಘಟ್ಟಿಪಟ್ಟೆಯ ಸೀಳ ಸುರಳ ತಲೆಯ ಮೇಲಿಟ್ಟಾ ಶಂಭುಕುಮಾರ (ನೇಮಿಸಂ. ೨೧-೩೧). [ ಘಟ್ಟಿ (<ಗಟ್ಟಿ) + ಪಟ್ಟೆ$_3$ ]

**ಘಟ್ಟಿಪಾಲ್** 'ಗಟ್ಟಿಪಾಲ್' ನೋ.

**ಘಟ್ಟಿಪಾವಡೆ** (ನಾ). ಗಟ್ಟಿಯಾದ ಬಟ್ಟೆ; ಉತ್ತಮವಾದ ವಸ್ತ್ರ: ಬಳಿಕ ಬೇವಾಗ ಗಂಜಿಯ ಬಸಿದುಕೊಂಡು ಮುಚ್ಚುಳನಿಕ್ಕಿ ಘ[ಪಾಠಾಂ. ಗ]ಟ್ಟಿ ಪಾವ[ ಪಾಠಾಂ. ವು ]ಡೆಗಟ್ಟಿ ತಱಿಗೆಂಡದೊಳಗೆ ಹೊಂಗಿಸಿಕೊಂಡು ಮೃದುವಾಗಿ ಮಾಡಿದುದು ತಾ ಶುದ್ಧಮಪ್ಪೋದನಂ (ಸೂಪಶಾ. ೩-೨). [ ಘಟ್ಟಿ (<ಗಟ್ಟಿ) + ಪಾವಡೆ (<ಪಾವುಡೆ) ]

**ಘಟ್ಟಿಭಿಕ್ಷ** (ನಾ). ಎಂದೂ ತಪ್ಪದ ಭಿಕ್ಷೆ; ಸ್ಥಿರವಾದ ಭಿಕ್ಷೆ (?): ವೃಷ್ಟವಾಗಲವೃಷ್ಟವಾಗಲಿ ಘಟ್ಟಿಭಿಕ್ಷವೆ ಬರಲಿ (ನಿಭಾಗ. ೧೧-೧೩-೨೮). [ ಘಟ್ಟಿ (<ಗಟ್ಟಿ) + ಭಿಕ್ಷ ]

**ಘಟ್ಟಿಮಗುಳ್ಚು** 'ಗಟ್ಟಿಮಗುಚ್ಚು' ನೋ.

**ಘಟ್ಟಿಮಗುಚ್ಚು** 'ಗಟ್ಟಿಮಗುಚ್ಚು' ನೋ.

**ಘಟ್ಟಿಮಜ್ಜಿಗೆ** 'ಗಟ್ಟಿಮಜ್ಜಿಗೆ' ನೋ.

**ಘಟ್ಟಿಮುಟ್ಟು** 'ಗಟ್ಟಿಮುಟ್ಟು' ನೋ.

**ಘಟ್ಟಿಮೊಸರ್** 'ಗಟ್ಟಿಮೊಸರು' ನೋ.

**ಘಟ್ಟಿವಳ** 'ಗಟ್ಟಿವಳ' ನೋ.

**ಘಟ್ಟಿವಳಿತಿ** 'ಗಟ್ಟಿವಳ್ತಿ' ನೋ.

**ಘಟ್ಟಿವಳ್ತಿ** 'ಗಟ್ಟಿವಳ್ತಿ' ನೋ.

**ಘಟ್ಟಿವಳ್ಳ** 'ಗಟ್ಟಿವಳ' ನೋ,

**ಘಟ್ಟಿವಾಳ$_1$** 'ಗಟ್ಟಿವಳ' ನೋ,

**ಘಟ್ಟಿವಾಳ$_2$** 'ಗಟ್ಟಿವಾಳ' ನೋ.

**ಘಟ್ಟಿವಾಳಿಕೆ** (ನಾ). ದೃಢತೆಯಿಂದ ಕೂಡಿರುವಿಕೆ; ಸ್ಥಿರತೆ; ನಿಶ್ಚಯ: ಇಟ್ಟಡೆ ಸೆಲ್ಲೆಹ ತೊಂಗಲ ಜೋಡನು ತಟ್ಟುರ್ಚಿ ಮೆಯ್ಯನುಚ್ಚಳಿಸಿ ನೆಟ್ಟಿಹುದವನಿಯನೆನೆ ರಾಮನೀಡಿನ ಘಟ್ಟಿವಾಳಿಕೆಯನೇನೆಂಬೆ (ಕುರಾಸಾಂ. ೧೩-೧೧೭). [ ಘಟ್ಟಿವಾಳ$_2$ (<ಗಟ್ಟಿವಾಳ) + – ಇಕೆ ]

**ಘಟ್ಟಿವಾಳ್ತಿ** 'ಗಟ್ಟಿವಳ್ತಿ' ನೋ.

**ಘಟ್ಟಿಸು, ಗಟ್ಟಿಸು$_2$** (ಕ್ರಿ). ೧. ಹೊಡೆ; ಬಡಿ; ಕುಟ್ಟು; ಅಪ್ಪಳಿಸು: ಗದೆಯೊಳ್ ಘಟ್ಟಿಸೆ ಪುಟ್ಟಿದುಳ್ಕತತಿ ನೀಳ್ದಾಕಾಶಮಂ ತಾಪಿನಂ ಪುದಿದು (ಪಂಪಭಾ. ೧೩-೯೪); ಗದೆ ಗದೆಯಂ ಘಟ್ಟಿಸೆ ಪುಟ್ಟಿದ ಕೆಂಡದ ಕಿಡಿಯ ತಂಡವೆಂಟುಂದೆಸೆಯಂ ಪುದಿಯೆ (ಗದಾಯು. ೮-೧೩); ಘಟ್ಟಿಸಿ ನೂಂಕಿದ ವಾಜಿಯ ಥಟ್ಟಂ (ಎಇ. V, ೨೬೩-೧೧; 1219); ಕಾಲಿಂದೆಯುಂ ಕೈಯಿಂದೆಯುಂ ಘಟ್ಟಿಸಿದಂ (ಶಮದ. ೧೨೨ ಪ್ರಯೋ); ಭೀಮನು ಕಾಲುಕಾಲುಗಳಿಂದ ಘಟ್ಟಿಸೆ ಬೀಳುತೇಳುತ ಹೋರುತಿದ್ದರು ಅಸಮಪಟುಭಟರು (ಕುವ್ಯಾವಿ. ಓರಿಇ. ೪-೬೯); ಮಡದಲುಱೆ ಘಟ್ಟಿಸಿ (ತೊರರಾ. ೫-೯-೫). ೨. ಸೇರಿಸು; ಅಳವಡಿಸು; ಸಮೆ: ಚಂದ್ರಕಾಂತ ಶಿಲಾಪಟ್ಟಕಮೆ ಘಟ್ಟಿಸಿದ ಕುಟ್ಟಿಮ

ತಲವಾಗೆ (ಅನಂಪು. ೫-೫೦ ವ) ; ಶರಣಸಂಗದಿಂದೆ ಘಟ್ಟಿಸುತ್ತೆ ಹೊಳಹನೊಪ್ಪವಿಟ್ಟು (ತಿರುತೊಂ. ದೇ. ೨೩೩-೧೪). ೩. ತೊಲಗಿಸು ; ತಪ್ಪಿಸು ; ನಿವಾರಿಸು : ಪಾಂಚಾಲಬಲ ಬಂದಾತುಕೊಂಡುದೆ ಧರ್ಮಪುತ್ರನ ಘಾತಿಯನು ಘಟ್ಟಿಸಿದರೇ ತುಷ್ಟಿಸಿದನೇ ನೃಪತಿ (ಕುವ್ಯಾಶ. ೨-೩೫). ೪. ತಿರುವು ; ತೊಳಸು : ಮತಿಯೆಂಬ ಸಟ್ಟುಗದಲ್ಲಿ ಘಟ್ಟಿಸಿ ಪಾಕಕ್ಕೆ ತಂದು ಭಾವದಲ್ಲಿ ಕುಳ್ಳಿರಿಸಿ (ಬಸವ. ೮೫೧). ೫. ಒತ್ತೊತ್ತಾಗು ; ನಿಬಿಡವಾಗು : ವಿಮಾನಯಾನ ವಾಹನವ್ಯೂಹಂ ತೇನತೇನವೊಟ್ಟುವರೆಂಬಂತೆ ಘಟ್ಟಿಸಿ ನಿಲೆ (ಅನಂಪು. ೫-೧೬ ವ). ೬. ಕೊಲ್ಲು ; ಸಂಹರಿಸು : ಕರ್ಣನ ಕಾಯಿದುಳುಹಿದೆನೊಂದುಬಾರಿ ವಿಘಾಯದಲಿ ಘಟ್ಟಿಸುವೆನೀಗಳೆ ಹಾಯ್ಕು ವೀಳೆಯವ (ಕುವ್ಯಾಕ. ೧೬-೧೫) ; ಈ ಬಿಲ್ಲಿನ ಕೊಪ್ಪಿನಿಂದಲೇ ಇವನನ್ನು ಘಟ್ಟಿಸಿ ಬಿಡುತ್ತೇನೆ (ವಚಭಾ. ೧೨೫). ೭. (ಕೈಯಿಂದ ತಟ್ಟಿ ಬಟ್ಟೆಯನ್ನು) ಮಂಡಿಸು ; ಮಡಿಕೆಮಾಡು : ಮಡಿಗಳಂ ಮೃದುವಾಗಿ ಘಟ್ಟಿಸಿ ಮಡಿಯ ಒಡೆಯರು ಬಂದು ಬೇಡಲು ಕೊಡುವನೆಂತಹ ವಸ್ತ್ರವಾದೊಡೆ ನಮಿಸಿ ಮಾಚಯ್ಯ (ಬಸಪು. ೨೦-೧೦). **ಗಟ್ಟಿಸು₂ : ೧.** ಗಟ್ಟಿಸಿ ಸಿಂಧುರದೊಳ್ ನೆಲಗಟ್ಟಿಸಿ (ಪಂಪಭಾ. ೨-೬೬) ; ಇಡಿದಿಡಿದಜಿಗಲ್ಲಿಂದಾ ಜಡನಂ ಗಟ್ಟಿಸಿದೆನಾಗಳಿಟ್ಟಿಗೆಯಿಂದ (ದಶಕು. ೧೩-೫೨); ಕಾಮುರ್ಕದರ್ಧ ಭಾಗದ ದಿಂಡನೆ ತಿರುಹಿ ಮನ್ಮಥನ ಮಂಡೆಯ ಮೇಲೆ ಗಟ್ಟಿಸಲು (ಮೋಹತ. ೧೨-೬೪) ; "ಒಳ್ಳೆಯದು" ಎಂದು ಗತ್ತಿನಿಂದ ಹೇಳಿದ ಆಂಜನಪ್ಪ, ನಿಂತಲ್ಲೇ ಕಾಲು ಗಟ್ಟಿಸಿದ (ಮರಳಿ. ೧೨೩). ೭. ಗಟ್ಟಿಸೆಂಬುದು ರಜಕರೊಳು ಧೌತವಸನಮಂ (ಪ್ರಭುಪು. ೩-೧೦). [ಘಟ್ಟನ+ – ಇಸು₃]

**ಘಟ್ಟಿಸೆಟ್ಟಿ** (ನಾ). ಸಿರಿವಂತನಾದ ವರ್ತಕ ; ತುಂಬ ಧನಿಕನಾದ ವ್ಯಾಪಾರಿ : ರತ್ನಮಂ ವಿಕ್ರಯಿಪ ಘಟ್ಟಿಸೆಟ್ಟಿಗಳವರ ನೂತ್ನತರಮಾದಂ ಗಡಿಗಳೆಸೆವವು (ಪದ್ಮರಾ. ೮-೭೮). [ಘಟ್ಟಿ (<ಗಟ್ಟಿ) + ಸೆಟ್ಟಿ]

**ಘಡಣಿಸು** 'ಗಡಣಿಸು' ನೋ.

**ಘಡಾವಣೆ** 'ಗಡಾವಣೆ₂' ನೋ.

**ಘಡಿಕೆ** (ನಾ). (?) : ಅಲ್ಲಿಯ ಘಡಿಕೇ ೧ ಬಂಡೆಯಲು ಪ [೧೦] (ಕಇಅ. ೪೫-೬೩-೩೭ ; 1229). [?]

**ಘಣ್** (ನಾ). ಒಂದು ಅನುಕರಣ ಶಬ್ದ : ಕಂಕಣಂಗಳವೆ ಘಣ್ ಘಣಿಲೆಂದಪುವು (ವರ್ಧಪು. ೫-೧೨).

**ಘಣಘಣ** (ನಾ). ಒಂದು ಅನುಕರಣಧ್ವನಿ ; ಗಂಟೆಯನ್ನು ಬಾರಿಸಿದಾಗ ಹೊರಡುವ ಶಬ್ದ : ಉಡಿಘಂಟೆ ಘಣಘಣ ಎಂದುಲಿವುತಿರಲು (ಬಸಪು. ೦೬-೧೭). 'ಗಣಗಣ' ಪರಾ.

**ಘಣಘಣಲ್** (ನಾ). ಒಂದು ಅನುಕರಣಶಬ್ದ : ಒಣಗಿಸಿ ಎನ್ನ ಘಣಘಣಲನೆ ಮಾಡಿದರೆಯೂ ಹರಣವುಳ್ಳನ್ನಕ್ಕ ನಿಮ್ಮ ಚರಣವ ನೆನೆವುದ ಮಾಣೆ (ಬಸವ. ೬೯೨).

**ಘಣಘಣಿಸು** (ಕ್ರಿ). ಘಣಘಣ ಎಂದು ಶಬ್ದಮಾಡು : ಎತ್ತುಗಳ ಕೊರಳ ಗಂಟೆಗಳು ಘಣಘಣಿಸುತ್ತಿವೆ (ರೂಢಿ). 'ಗಣಗಣಿಸು' ಪರಾ. [ಘಣಘಣ + – ಇಸು₃]

**ಘಣಮಣಿಸು** (ಕ್ರಿ). (?) : ಘಣಮಣಿಸಿದ ಕಂಸನ ತನುವಿನ ಮೇಲೆ ಅಣಕವಾಡುತ ಕುಣಿಕುಣಿದಾಡಿದ ಪಾದ (ತೀರ್ಥಮು. ೨೭-೩) : "ಬಹಳ ಕಠಿಣವಾದ, ದುಸ್ಸಾಧ್ಯ" (ತೀರ್ಥಮು. ಅಡಿಟ). [? + – ಇಸು₃]

**ಘಣಲು** (ನಾ). ಒಂದು ಅನುಕರಣ ಶಬ್ದ. 'ಘಣಲುಗುಟ್ಟು' ಪರಾ.

**ಘಣಲುಗುಟ್ಟು** (ಕ್ರಿ). ಘಣಘಣ ಎಂಬ ಶಬ್ದವನ್ನು ಮಾಡು : ಕಣದ ಮಧ್ಯದಿ ಕೋಟಿರಕ್ಕಸಗಣವು ಬಿದ್ದರೆ ಕುಣುಹಿಗೋಸುಗ ಘಣಲುಗುಟ್ಟುವುದೊಮ್ಮೆ ರಾಮನ ಬಿಲ್ಲ ಜಯಘಂಟೆ(ಕಾಶಿರಾ. ೨೨-೪೭). [ಘಣಲು + ಕುಟ್ಟು₁]

**ಘಣಿಲ್, ಘಣಿಲು** (ನಾ). ೧. ಒಂದು ಅನುಕರಣ ಧ್ವನಿ; ಗಂಟೆ, ಗೆಜ್ಜೆ ಮೊದಲಾದುವುಗಳಿಂದ ಹೊರಡುವ ನಾದ : ಕಂಕಣಂಗಳವೆ ಘಣ್ ಘಣಿಲೆಂದಪುವು (ವರ್ಧಪು. ೫-೧೨). **ಘಣಿಲು : ೧.** ಘಣಿಲು ಘಣ ಘಣ ಘಣಿಲು ಘಣಘಣ ಘಣಿಲು ಘಣಿಲೆಂದೆರಡು ಜಾವದಲೆಣಿಸಲಜಿಯೆನು ರಾಮಚಂದ್ರನು ಕೊಂದ ಪಡೆಯೆನಿತೊ (ಕಾಶಿರಾ. ೨೨-೪೭). ೨. ಭರದಿಂದ ಕೊಯ್ಯುವಾಗ ಅಥವಾ ಸೀಳುವಾಗ ಉಂಟಾಗುವ ಶಬ್ದ : ಘರಿಘರಿ ಘಣಿಲು ದೊಪ್ಪನೆ ಕೊಯ್ವ ಸೀಳುವ ಹೆಣಗೆಡಹುವಬ್ಬರಕೆ ಮಿಗಿಲೊದಗಿದರು ಬಿಲ್ಲವರು (ಕುವ್ಯಾಭೀ. ೪-೧೪).

**ಘಣಿಲು** 'ಘಣಿಲ್' ನೋ.

**ಘಣ್ಮ** (ನಾ). ಒಂದು ಅನುಕರಣಶಬ್ದ : ಸಂಧಣಿಸಿ ಕೂರಸಿಯೊಳಿಟ್ಟಣಿಸಿ ಹೊಯ್ದಲ್ಲಿ . . . ಘಳಿಲೆಂಬ ಘಣ್ಮೆಂಬ ದೊಗಹೆಂಬ ದೊಕ್ಕೆಂಬ . . . ದನಿಯುಡಸುತಂ ಪುಟ್ಟೆ (ಇಹರ. ದೇ. ೪೧-೨೨).

**ಘತಾರ** (ನಾ). ಒಂದು ಅಲಂಕರಣವಸ್ತು (?) : ಸಾಧಾರಣ ಬಿರುದುಗಳು . . . ನೃಸಿಂಹಮುಖ, ಉಡಾಸ್‌ಪಾವಡ, ಮಾಯಾಮಸ್ತಕ, ಘತಾರ, ಜಯಘಂಟೆ (ಗುರುದ. ೧೧). [?]

**ಘತ್ತೈಸು** (ಕ್ರಿ). ಕೂಡಿಡು ; ರಾಶಿಮಾಡು (?) : ಬಿಡದೆ ಘಳಿಸಿ ಘತ್ತೈಸಿ ಧನಧಾನ್ಯವ ಕೊಡದೆ ಬಚ್ಚಿಟ್ಟು ಬಲುಕೃಪಣನಾಗಿ ಮಡಿದರೆ (ಮೋಕ್ಷದೀ. ೬೪-೩). [?]

**ಘನ** (ಗು). ೧. ಭಾರವಾದ ; ತೂಕವಾದ. ೨. ಮಹತ್ವವುಳ್ಳ ; ಶ್ರೇಷ್ಠವಾದ ; ಉತ್ತಮವಾದ. ೩. ಅಧಿಕವಾದ ; ದೊಡ್ಡದಾದ ; ಅಳತೆಯನ್ನು ಮೀರಿದ : ಘನದುಷ್ಕೃತ ಬಳನಿರ್ವೇದನಕರ (ಜಿನಾಲಿ. ೫-೫). ೪. ಒತ್ತಾದ ; ದಟ್ಟವಾದ ; ಸಾಂದ್ರ ; ನಿಬಿಡ : ಘನತರು ಶಾಖಾಗ್ರಾಮಾಗ್ರ ನಿಭೃತ ಪಾಂಡುರ ಕಪೋತಪಂಕ್ತಿಪ್ರಕರಂ ನೆನೆಯಿಪುದು ಶೂನ್ಯಮಾಗಿಯುಮನೇಕ ಮುನಿಪಾಗ್ನಿಹೋತ್ರಧೂಮವನಿನ್ನುಂ (ಕಾದಂಪೂ. ೧೦೯). ೫. ಗಟ್ಟಿಯಾದ ; ದ್ರವವಿಲ್ಲದ ; ಗಡ್ಡೆಕಟ್ಟಿದ. ೬. ಪೂರ್ತಿಯಾದ ; ಸಂಪೂರ್ಣವಾದ : ವಸುಧಾಧಿಪತಿ ಹರಿಶ್ಚಂದ್ರ ಘನಸತ್ಯನೆಂದೊಸೆದು ವಾಸಿಷ್ಠನಿಂದ್ರಂಗೆನಲು (ಹಚಕಾ. ೧-೧೭). ೭. (ಸ್ವರದಲ್ಲಿ) ಗಂಭೀರವಾದ ; ಮಂದ್ರವಾದ. ೮. ಶುಭವಾದ ; ಮಂಗಳಕರವಾದ; ಶ್ರೇಯಸ್ಕರವಾದ. (ನಾ). ೯. ಶ್ರೇಷ್ಠವಾದುದು ; ಉತ್ತಮವಾದುದು: ಕರಿ ಘನ ಅಂಕುಶ ಕಿಱಿದೆನ್ನಬಹುದೇ ಬಾರದಯ್ಯಾ ಗಿರಿ ಘನ ವಜ್ರ ಕಿಱಿದೆನ್ನಬಹುದೇ ಬಾರದಯ್ಯಾ (ಬಸವ. ೬) ; ರಾಮಗಿರಿಯ ದುರ್ಗ ಮೊದಲಾದ ಘನವಹ ಸೀಮೆಯ ಖಳನಿಗೆ ಕೊಟ್ಟು (ಕಂನವಿ. ೧೧-೬೨) : ನಿಮ್ಮ ಒಲುಮೆಯಿಂದ ಘನವು ಆವುದೂ ಇಲ್ಲ ನೋಡಾ (ಅಖಂಡೇ. ೭೮-೫೯) : ಹಿರಾಯಿಕ್ ಛಂದಸ್ಸು ವಾಸ್ತವವಾಗಿಯೂ ಛಂದಸ್ಸುಗಳಲ್ಲೆಲ್ಲಾ ಅತ್ಯಂತ ಗಂಭೀರವೂ, ಘನವೂ ಆದುದು (ಅರಿಕಾ. ೧೩೩). ೧೦. ಸಾಂದ್ರವಾದುದು; ದಟ್ಟವಾದುದು ; ನಿಬಿಡವಾದುದು : "ನಿರಂತರಂ, ಘನಂ, ಸಾಂದ್ರಂ, ಬಹುಳಂ, ವಿರಳೇತರಂ–ಈ ೫ ಮಂದಂ" (ಹಲಾಯು. ೧೧೯-೩೨). ೧೧. ಮೋಡ ; ಮುಗಿಲು ; ಮೇಘ : "ಅಭ್ರಂ, ಅಬ್ದಃ, ಘನಃ , . . ಜೀಮೂತಃ, ಬಲಾಹಕಃ-ಈ ೧೦ ಮುಗಿಲ ಪೆಸರ್" (ಹಲಾಯು ೧೧-೫೮) ; ಮೌರ್ವೀನಿನದಂ ಪರ್ವಿತ್ತುಕಾಂಡ ಪ್ರಳಯ ಘನ ಘಟಾಟೋಪ ಗಂಭೀರನಾದಂ (ಪಂಪಭಾ. ೧೨-೧೩೭) ; ಶ್ರೀವಿಗ್ರಹಸ್ಥಹಸ್ತ್ಯಜಿನಂ ಘನಂ . . . ವಿಶ್ವಪತಿ ಶರಣಸಸ್ಯಮಂ ಸಲಹುಗೆ ಜಗದ್ಧಿತಾರ್ಥಂ (ಪದ್ಮರಾ. ೧-೧); ವನ ಘನರಾಶಿಯಾಶಾದಿಗಂತದೊಳ್ ವರ್ಷದಾಶೀರ್ವಾದಮುದ್ರೆಯಿಂದೇರ್ದುದೆನೆ ಬಂದನೋಲಗಕೆ ವಿಶ್ವಾಮಿತ್ರಮುನಿವರಂ (ಶ್ರೀರಾಮಾ. ೨೮-೮) ೧೨. ವಾದ್ಯದ ನಾಲ್ಕು ಪ್ರಕಾರಗಳಲ್ಲಿ ಒಂದು ; ತಾಳ, ಗೆಜ್ಜೆ, ಗಂಟೆ ಮೊದಲಾದ ಕಂಚಿನ ವಾದ್ಯ : "ಘನಂ . . . ತಾಳ ಗೆಜ್ಜೆ ಮೊದಲಾದ

ಕಂಚಿನ ವಾದ್ಯಗಳ ಹೆಸರು" (ಸಿದ್ಧಾಂತಿ. ೫೪); ಕಂಚಿನ ತಾಳಾದಿಕವೇ ಘನವೆನಿಸುವುದು (ವಿವೇಕ. ೨೩೬); ತತಗಳಾನದ್ಧಗಳು ಸುಷಿರಗಳತಿಶಯದ ಘನಗಳೆನಲೀ ನಾಲ್ಕು ತೆರ ವಾದಿತ್ರ್ಯಕ ಸಾಧನಗಳು (ಸೌನಂದ. ೧೦-೨೫). **೧೩.** ತಾಳ, ಗಂಟೆ ಮೊದಲಾದ ಕಂಚಿನ ವಾದ್ಯಗಳನ್ನು ಬಾರಿಸಿದಾಗ ಹೊರಡುವ ಶಬ್ದ: ತಂತ್ರೀಕೃತವೀಣಾಸುಘೋಷಾದಿಸಮುದ್ಭವಂ ವಿತತಮೆಂಬುದು ತಾಲಘಂಟಾಲಾಲನಾದ್ಯಭಿಘಾತಜಂ ಘನಮೆಂಬುದು (ತತ್ತ್ವಪ್ರ. ೨೪೩). **೧೪.** ಒಂದು ಬಗೆಯ ಆಯುಧ; ಮುದ್ಗರ: "ದ್ರುಘಣಃ, ಮುದ್ಗರಃ, ಘನಃ–ಈ ೩ ಕಬ್ಬಿಣದ ಕುಸೆಮಾರಿ, ದೊಡ್ಡ ಹಾರೆ, ಗುದಿಗೆ" (ಸಿದ್ಧಾಂತಿ. ೨೩೮). **೧೫.** ಗಟ್ಟಿ; ಗಡ್ಡೆ: ಲೋಹ, ಮರ ಮುಂತಾದ ಗಟ್ಟಿಪದಾರ್ಥಗಳಿಂದ ಮಾಡಿದವು ಘನದ ಗುಂಪಿನವು (ಗಾನಕ. ೯೫). 'ಘನೀಭವಿಸು' ಪರಾ. **೧೬.** ದೊಡ್ಡ ಆಕಾರವನ್ನುಳ್ಳ ವಸ್ತು; ಬೃಹತ್ಪ್ರಮಾಣದ ವಸ್ತು: ಘನಕೆ ಘನ ಅಣುವಿಂಗೆ ತಾನಣುವೆನಿಪ ಪರತರ ವಸ್ತು ನೋಡೀತ (ಶುವ್ಯಾಉ. ೯-೭೦). **೧೭.** ವೇದಪಠನದಲ್ಲಿ ಒಂದು ಬಗೆಯ ವಿಶೇಷವಾದ ಕ್ರಮ,–ರೀತಿ: ವೇದಗಳನ್ನು ಹಾಡುವ ವಿವಿಧರಚನಾವಿಶೇಷಗಳಾದ ಜಟಾ, ಘನ, ಕ್ರಮ ಮೊದಲಾದವು ಮುಂದಿನ ಪ್ರಬಂಧ, ತಾಳವರ್ಗಗಳಿಗೆ ಪೀಠಿಕೆಯೆನ್ನಬಹುದಾಗಿದೆ (ಭಾರದ. ೫೩೬). 'ಘನಪಾಠ' ಪರಾ. **೧೮.** ದೊಡ್ಡತನ; ಹಿರಿಮೆ. 'ಘನವಂತ' ಪರಾ. **೧೯.** ದೇಹ; ಶರೀರ. **೨೦.** ಆಯಸ; ಕಬ್ಬಿಣ. **೨೧.** ತವರ. **೨೨.** ಕತ್ತಲೆ. **೨೩.** ದೊಡ್ಡ ನೆರವಿ,–ಗುಂಪು,–ಸಮೂಹ. **೨೪.** ಕೊಡನಾರಿಗಡ್ಡೆ; ಮುಸ್ತೆ: ಘನಂ ಮೆಣಸು ಶುಂಠಿ ಪಿಪ್ಪಲಿ ನಿಶಾದ್ವಯಂ ಬೀಟಿಲಕ್ಕಿ ನಿಂಬಫಳಮೆಂಬಿವಂ ಸುರಭಿಮೂತ್ರದಿಂದಂ ವಿಲೋಚನದ್ವಯದೊಳೆಚ್ಚೆ ಮೇಣ್ ಕುಡಿಯೆ ಸೈಂಧವಾಜ್ಯಂಗಳಂ ಮನೋಮುದದೆ ಸರ್ವ [ವೃಶ್ಚಿಕ] ವಿಷಾಪಹಂ ನಿಶ್ಚಯಂ (ಲೋಕೋಪ. ೧೦-೨೬). **೨೫.** ಶಕ್ತಿ; ಬಲ. **೨೬.** ಹಳಿಯಂದು; ಜರಠ. **೨೭.** ನೀರು. **೨೮.** ಮೋಹ; ಅಜ್ಞಾನ. **೨೯.** ಚರ್ಮ; ತೊಗಟೆ. **೩೦.** ಕಾಳಗ; ಯುದ್ಧ. **೩೧.** ದೊಡ್ಡಪ್ರಮಾಣ; ದೊಡ್ಡದಾಗಿರುವಿಕೆ: ಹಸಿವು ಘನವಾಯ್ತೆಂದು ಕುಡಿವರೆ ವಿಷವ ಬೇಗೆಯನಿಕ್ಕೆ ಹಿಡಿವರೆ ರಸವ ನೀರಡಿಕೆಗೆ ಮರೀಚಿಕೆಯಿಂದ ತಣಿವಹುದೇ (ಕೌಶಿರಾ. ೩೮-೧೧). **೩೨.** [ನಾಟ್ಯ] ನರ್ತನದಲ್ಲಿ ಒಂದು ಬಗೆ. P ಬಹಳ ಚುರುಕೂ ಇಲ್ಲದ ನಿಧಾನವೂ ಅಲ್ಲದ ಮಧ್ಯಗತಿಯ ನರ್ತನ. **೩೩.** [ವೀಶೈ] ಪರಮಾತ್ಮ; ಪರಬ್ರಹ್ಮ; ಪರವಸ್ತು; ಪರಶಿವ: ಮೂಜಜಿಟೊಳಗಲ್ಲದ ಆಚಿಕ್ಕೆ ಅತೀತನ ತೋರವಿಲ್ಲದ ಘನವ ಮಾಜಿ ನಿಂದವರಾರೋ (ಮೋಳಿಮಾ. ೯ ೧೦); ಆ ಅನುವನಜಿದು ಘನವ ನೆಮ್ಮಿದ ಶರಣರ ಎನಗೊಮ್ಮೆ ತೋಟಿಯ್ಯ ನಿಮ್ಮ ಧರ್ಮ (ವಚಸಂ. ೨೩೩೩-೨೪); ಆಸನವು ದೃಢವಾಗಿ ನಾಸಿಕಾಗ್ರದಿ ದಿಟ್ಟಿ ಸೂಸುವ ಮನವ ಘನದಲಿರಿಸಿದನು ಜಗದೀಶನಾಗಿಕ್ಕು (ಸರ್ವಜ್ಞ. ೫೧೪). **೩೪.** [ಗಣಿತ] ಉದ್ದ, ಅಗಲ ಮತ್ತು ಎತ್ತರಗಳನ್ನು ಗುಣಿಸಿ ಬಂದ ಅಳತೆ. 'ಘನಅಡಿ' ಪರಾ. **೩೫.** [ಗಣಿತ] "ಒಂದು ಸಂಖ್ಯೆಯನ್ನು ಅದೇ ಸಂಖ್ಯೆಯಿಂದ ಗುಣಿಸಿದರೆ ಬರುವ ಲಬ್ಧಕ್ಕೆ ಆ ಸಂಖ್ಯೆಯು ವರ್ಗವೆಂದೂ, ವರ್ಗವನ್ನು ಪುನಃ ಅದೇ ಸಂಖ್ಯೆಯಿಂದ ಗುಣಿಸಿ ಬಂದ ಲಬ್ಧಕ್ಕೆ ಆ ಸಂಖ್ಯೆಯು ಘನವೆಂದೂ ಹೆಸರು" (ಭೌತವಿ. ೩೩ ಅಡಿಟಿ). **೩೬.** [ಗಣಿತ] "ಆರು ಸಮಚತುರಶ್ರಗಳಿಂದಾದ ಘನಾಕೃತಿ; ಘನ; ಘನಾಕಾರದ ದಿಮ್ಮಿ, ವಸ್ತು" (Cube. ಇಂಕನಿ); "ಲೋಹದೊಳು ಮಿಕ್ಕ ಪವನನೊಳು ಗೇಕಿನೊಳು ಮುದ್ಗರದೊಳು ವಾರಿಧರದೊಳು ಸಾಧ್ಯದೊಳು ಸಾಂದ್ರದೊಳು ಮಿಗೆ ವಿಚಾರಿಸಲು ಘನವಕ್ಕು" (ಮಂಗರಾ. ೧೪೯-೪೬); "ಘನ ಹಟದು ಕೈದು ದೊಡ್ಡಿತು ತನು ನೀರ್ ಸಂಗ್ರಾಮ ದಟ್ಟ ಮೋಹಂ ಲೋಹಂ ಘನನೆರವಿ ಸಾಧ್ಯ ಶಕ್ತಿಗಳಿನಿತುಂ ಪದಿಮೂಜುನಾಮ ಘನಶಬ್ದಂಗಳ್" (ನಾನಾಕಂ. ೪೫); "ಜೀಮೂತಂ ಜರಠ ಸಂಗ್ರಾಮಂ ಸಾಂದ್ರ ಸಮೂಹ ಲೋಹ ಜಲ ಮೋಹಂಗಳ್ ಘನಾಖ್ಯಾನ" (ನಾನಾರ. ೧೬).

[ಸಂ.]

**ಘನಅಡಿ** (ನಾ). [ಗಣಿತ] "ಪ್ರತಿಪಿಣಿನ ಉದ್ದವೂ ಒಂದು ಅಡಿಯುಳ್ಳ ಘನಾಕೃತಿಯ ಅಳತೆ" (Cubicfoot. ಇಂಕನಿ): ೧೭೨೮ ಘನಅಂಗುಲ–ಘನಅಡಿ ೧ (ಭೂಮಿಅ. ೬೮). [ಘನ + ಅಡಿ$_1$]

**ಘನಂದಾರಿ** (ಗು). ಘನವಾದ; ಶ್ರೇಷ್ಠವಾದ: ಅದು ಯಾವ ಘನಂದಾರಿ ಕೆಲಸ ಬಿಡು (ಚಂದತೋ. ೨೪೮); ಅವರ ಘನಂದಾರಿ ಸಂಗೀತದಿಂದ ನಾನು ರೋಮಾಂಚನಗೊಂಡೆನು (ರೂಢಿ). [<ಘನ]

**ಘನಕದಂಬಮುಕ್ತಕ** (ನಾ). ೧. ಕದಂಬವೃಕ್ಷದಲ್ಲಿ ಒತ್ತೊತ್ತಾಗಿ ಅರಳಿದ ಹೂವು. ೨. ಮೋಡದ ಮೊತ್ತದಿಂದ ಸುರಿದ ಮಳೆ. ೧,೨: ಮತ್ತಮಾ ವನಂ ಘನಾಗಮದಂತೆ ಘನಕದಂಬಮುಕ್ತಕವಿಲಸಿತಮುಂ (ರಾಜಶೇ. ೫-೭೮ ವ). [ಘನ + ಕದಂಬ + ಮುಕ್ತಕ; ಘನ + ಕದಂಬ + ಮುಕ್ತ + ಕ$_4$]

**ಘನಕಲ್ಪ** (ಗು). [ಗಣಿತ] "ಘನಾಕೃತಿಯ; ಘನದಂತಿರುವ" (Cuboid. ಪಾರಿನಿ. ೨೫). [ಸಂ.]

**ಘನಕಾಲ** (ನಾ). ಮಳೆಗಾಲ; ಕಾರ್ಗಾಲ: ಸಚಿವಾತ್ಮಜವೃತ್ತಕಮಿಂತು ಬಂದು ತೊಟ್ಟನೆ ಘನಕಾಲದಂತೆನಗೆ ದೈವದಿನಂತರಶೋಕಮುಕ್ಕುಮೋ (ಕಾದಂಉ. ೪೯೨). [ಘನ + ಕಾಲ]

**ಘನಗರ್ಜಿತ**(ನಾ). ೧. ಮೋಡದ ಸದ್ದು; ಗುಡುಗು. ೨. ಆಡಂಬರದ ಗರ್ಜನೆ; ದೊಡ್ಡ ಶಬ್ದ; ಆರ್ಭಟ: ಧ್ವನಿತಪ್ರತಿಧ್ವನಿತ ಮನುಜ ಜೀವಿತವೆಲ್ಲ . . . ಘನಗರ್ಜಿತಕೆ ದೈನ್ಯ (ಮಂಕುಕ. ೬೦೭).

[ಘನ + ಗರ್ಜಿತ]

**ಘನಗ್ರಾವ** (ನಾ). ಆಲಿಕಲ್ಲು; ನೀರ್ಗಲ್ಲು; ಘನೋಪಲ: ಮೌಕ್ತಿಕಾಸ್ಯಕ್ಕಣೋತ್ಕರಮೆತ್ತಂ ಸುರಿವಂತೆ ಸೂಸಿತು ಘನಗ್ರಾವೇಂದ್ರಗೋಪವ್ರಜಂ (ರಾಜಶೇ. ೮-೧೧೫). [ಘನ + ಗ್ರಾವ]

**ಘನಘಟೆ** (ನಾ). ಮೋಡಗಳ ಗುಂಪು; ಮೇಘಸಮೂಹ: ಘನಘಟೆ ನಭದಿಂದಂ ಧಾತ್ರಿಗೆತ್ತ ಬಂದತ್ತೆನಿಸಿ ಕಳೆದುದೆತ್ತಂ ಚೂತಸಪ್ತಚ್ಛದೈಳಾವನಸುರಭಿಮನಾಮೋದಾಸವಾಸಕ್ತ ಭೃಂಗೀನಿನದ ಮುಖರಿತಾಶಾಚಕ್ರ ಗಂಧೇಭಚಕ್ರಂ (ಆದಿಪು. ೧೧-೩೦); ನಿತ್ತರಿಸದೆ ನೆಗೆದುವು ಜಳಮತ್ತದ್ವಿಪ ಘಟೆಗಳೆನಿಸಿದುವು ಘನಘಟೆಗಳ್ (ಮಲ್ಲಿಪು. ೮ ೮೪); ಘನಘಟೆಯಂ ತನುಗಳ್ ಗರ್ಜನೆಯಂ ಗರ್ಜನೆಗಳಿಂದ್ರಧನುವಂ ಧನುಗಳ್ ನೆನೆಯಿಸೆ ಕಾರ್ಗಾಲದ ಮಟೆಯೆನೆ ಸುರಿದರ್ ಕೃಷ್ಣಭೌಮರಂಬಿನ ಮಟೆಯಂ (ಜಗವಿ. ೧೨-೩೭).

[ಘನ + ಘಟೆ]

**ಘನಘಟ್ಟಿ** (ನಾ). ಶ್ರೇಷ್ಠವಾದ ತಿರುಳು; ಸಾರಭೂತವಾದ ತತ್ತ್ವ; ನಿಜತತ್ತ್ವ: ಗುಹೇಶ್ವರನೆಂಬ ಲಿಂಗದ ಘನಘಟ್ಟಿಯನಜಿವಡೆ ನಿನ್ನಜಿವೆಲ್ಲವ ಹಜಿಹಂಚಮಾಡಿ ನೀನಜಿ ಮರುಳೇ (ಅವಚಂ. ೧೩೧೦-೬೦೦).

[ಘನ + ಘಟ್ಟಿ (<ಗಟ್ಟಿ)]

**ಘನಘೋಷ** (ನಾ). ೧. ಮೇಘದ ಶಬ್ದ; ಗುಡುಗು. ೨. ಅಧಿಕವಾದ ಶಬ್ದ; ದೊಡ್ಡಸದ್ದು; ಗಂಭೀರ ಧ್ವನಿ. ೧, ೨: ಅತಿಘನಘೋಷಾವಾಸ ಭಾಸನಗಪತಿ ಬಾಳ್ವಂ (ಹಮ್ಮೀರ. ೧-೪೪). [ಘನ + ಘೋಷ]

**ಘನಜ್ವಲಿತ** (ನಾ). ದೊಡ್ಡ ಜ್ವಾಲೆ; ಧಗಧಗಿಸುವ ಉರಿ: "ದಳ್ಳುರಿಯು ಪೇರುರಿಯು ಘನಜ್ವಲಿತದೊಳು ಸೊಗಯಿಪ್ಪುದು" (ಶಬ್ದಮಂ. ೧೨). [ಘನ + ಜ್ವಲಿತ]

**ಘನತತಿ** (ನಾ).=ಘನಘಟೆ: ಸಾಕಾರ ಘನತತಿ ನಿರಾಕಾರ ನಭದಿ (ಮಂಕುಕ. ೧೦೬). [ಘನ + ತತಿ$_2$]

**ಘನತನ** (ನಾ). ಘನತೆ; ಗೌರವ; ದೊಡ್ಡಸ್ತಿಕೆ: ವಿಸ್ತೀರ್ಣವಾದ ಲಂಪಟದೊಳು ಹೊರಳಿ ವಸ್ತೀಕಾರನಂತೆ ವಸ್ತಿಬಡುವೆನೆಂದು ನುಡಿವದು ಘನತನವೆ (ವಿಸಾಸು. ೪೭-೨). [ ಘನ + – ತನ ]

**ಘನತರ** (ಗು). ೧. ಬಹಳ ದೊಡ್ಡ; ಅತಿ ದೊಡ್ಡದಾದ: ಘನತರ ಕುಂಕುಮಾಂಬುಗಳಿನಂಬುರುಹಾಂಬಕನಾತ್ಮಸನ್ನಿತಂಬಿನಿಯರನಂದು . . . ತೋಱಿದರ್ (ನೇಮಿಪು. ೧೩-೩೨); ಘನತರೋರಸ್ಥಲನನಗಲ್ದು, . . ಪಾವನಚರಿತೆ ಬಂದಳು ವೃಷಭಗವುನನ ಕೆಲದೊಳಿರ್ದು (ಬಸಪು.೫೦-೧೧). ೨. ಬಹಳ ಸಾಂದ್ರವಾದ; ನಿಬಿಡವಾದ: ಘನತರ ಭದ್ರಶಾಳದಿನಿನಿತ್ತೆಡೆ ಮಾಡದೆ ನಂದನಕ್ಕೆ ನಂದನ ದಿನದೊಂದು ಬೇಗದೊಳೆ ಸೌಮನಸಕ್ಕೆ ತಗುಳ್ದು (ಚಂದ್ರಪು. ೧೨-೧೦೪). [ ಸಂ. ]

**ಘನತರಂಗಿಣಿ** (ನಾ). ದೊಡ್ಡ ಹೊಳೆ; ಮಹಾನದಿ: ಬಲಮಿದೆ ಱಂದುದದ್ರಿ ಪುಡಿಯಪ್ಪಿನಮಗ್ಗದರಣ್ಯಮೆಲ್ಲಮುಂ ನೆಲಸರಿಯಪ್ಪಿನಂ ಘನ ತರಂಗಿಣಿ ಪಂಕಿಳಮಾಗುತಿರ್ಪಿನಂ (ರಾಜಶೇ. ೬-೩೪). [ ಘನ+ತರಂಗಿಣಿ ]

**ಘನತಾಪ** (ನಾ). ೧. ಬಹಳವಾದ ಸೆಕೆ,-ಉರಿ,-ಧಗೆ. ೨. ಅತಿಸಂತಾಪ; ಅಧಿಕವಾದ ದುಃಖ: ಬಸವಣ್ಣ ಮಱವಟ್ಟು ಹಂಬಲಿಸಿ ಹಲುಬಿ ಘನತಾಪ ಮನಮಂ ನಟ್ಟು (ಬಸರ. ೧೧-೭೪). [ ಘನ + ತಾಪ₂ ]

**ಘನತೆ** (ನಾ). ೧. ಅಂತಸ್ತು; ಹಿರಿಮೆ; ಶ್ರೇಷ್ಠತೆ: ತಂದೆ ಮಱೆವರ ನಿನ್ನ ಘನತೆಯನು (ಕಾಶಿರಾ. ೪೩-೪೮); ಭೇಕಂ ಘೂಕಂ ಶಲಭಂ ಶ್ರೀಕಾಂತಮುನೀಂದ್ರಸೂರ್ಯರಂ ಜಱಿದೊಡೆ ತಾನಾಕರಿಸಿ ಘನತೆ ಪೋಕುಮೆ (ಹಮ್ಮೀರ. ೧-೧೯); ಅದರಿಂದ ಅವನ ಘನತೆಗೇನೂ ಕೊರತೆ ಯಾಗಲಿಲ್ಲ (ಆರ್ಯಕ. ೧೭). ೨. ಏಳಿಗೆ; ಉನ್ನತಿ; ಅಭಿವೃದ್ಧಿ: ಅವನ ಆಳಿಕೆಯಲ್ಲಿ ಮೈಸೂರ ಸಂಸ್ಥಾನವು ಬಹಳ ಘನತೆಗೇರಿತು (ಮುಂಬಯಿ. ೪-೮೦). ೩. ಸಾಂದ್ರತೆ; ನಿಬಿಡತೆ: ಕನಕಕವಚವ ತೊಟ್ಟು ಗಡ್ಡದ ಘನತೆಯನು ಗಂಟಿಕ್ಕಿ ವರ ಕಾಂಚನಮಯದ ಯಜ್ಞೋಪವೀತ ವನಿಳುಹಿದನು ದ್ರೋಣ (ಕುಮಾರವ್ಯಾ.ದ್ರೋ. ೯-೦೪).

ಘನತೆಗೇರಿಸು= ಉನ್ನತಸ್ಥಿತಿಯನ್ನು ಮುಟ್ಟಿಸು; ಉಚ್ಛ್ರಾಯ ದೆಸೆಯನ್ನು ಒದಗಿಸು: ಅವಳ ಒಂದೊಂದು ದರ್ಶನವು ಭಾರತೀಯ ಜೀವನವನ್ನು ಘನತೆಗೇರಿಸುವ ಸಾಧನವಾಗಿರುವುದು (ಪ್ರಬಂಧ. ೮೩). [ ಸಂ. ಘನತಾ ]

**ಘನತ್ವ** (ನಾ). ೧. ಹಿರಿಮೆ; ಮಹಿಮೆ; ದೊಡ್ಡಸ್ತಿಕೆ; ಶ್ರೇಷ್ಠತೆ: ಉರಗಕಟಕಂ ನಂಬಿಯಣ್ಣಂಗೊರೆದು ಭಕ್ತರ ಮಹಿಮೆಯಂ ಭಕ್ತರ ಘನತ್ವ ವನು . . . ವಿಸ್ತರಿಸಿ (ಬಸಪು. ೨೭-೭೪). ೨. ಸಾಂದ್ರತೆ; ನಿಬಿಡತೆ; ಒತ್ತಾಗಿರುವಿಕೆ: "ಸಾಂದ್ರತೆ, ಘನತ್ವ, ಘನತೆ" (Density. ಪಾರಿಿ. ೨೮). [ ಸಂ. ]

**ಘನದೀಪ್ತಿ** (ನಾ). ೧. ಸಾಂದ್ರವಾದ ಬೆಳಕು; ಅಧಿಕವಾದ ಪ್ರಕಾಶ. ೨. ಮೋಡದ ಬೆಳಕು; ಮಿಂಚು: "ಘನದೀಪ್ತಿ ಸೌದಾಮಿನಿ ಕ್ಷಣ ಗಭಸ್ತಿ, . . . ಚಂಚಲೆಯೆನಲು ಮಿಂಚೆನಿಕ್ಕುಂ" (ಮಂಗರಾ. ೧೩-೪). [ ಘನ + ದೀಪ್ತಿ ]

**ಘನದೃಷ್ಟಿ** (ನಾ). ವಸ್ತುವಿನ ಘನರೂಪವನ್ನು ತೋರುವ ದೃಷ್ಟಿ: ಇವುಗಳಿಗೆ ಯಾವ ಹಂತದಲ್ಲಾದರೂ ಅಡಚಣೆಯು ತಲೆದೋರಿದಲ್ಲಿ ಎರಡು ಕಣ್ಣುಗಳ ಏಕದೃಷ್ಟಿತ್ವಕ್ಕೂ ಮತ್ತು ಘನದೃಷ್ಟಿಗೂ ಭಂಗವುಂಟಾಗುವುದು (ನಿಮ್ಮದೃ. ೭೦). [ ಘನ + ದೃಷ್ಟಿ ]

**ಘನಧ್ವನಿ** (ನಾ). ೧. ಮೋಘದ ಶಬ್ದ; ಗುಡುಗು: ಕಲ್ಪಾಂತಕಠೋರ ಘನಘನಧ್ವನಿಯನೇಳಿಪಂತೆ ಗಜಱಿ ಗರ್ಜಿಸಿ (ರಾಜಶೇ. ೫-೧೨೦ವ). ೨. ಗಂಭೀರವಾದ ಧ್ವನಿ; ಗಾಢವಾದ ಧ್ವನಿ. ೧, ೨: ನುಡಿದಂ ಘನಧ್ವನಿ ಘನಧ್ವನಿಯಿಂ ಮಿಗೆ ಖೇಚರಾಧಿಪಂ (ಪಂರಾಮಾ. ೫-೧೭). [ಘನ+ಧ್ವನಿ]

**ಘನನಿನದ** (ನಾ).=ಘನಧ್ವನಿ ೧: ಘನನಿನದಕ್ಕನುರೂಪಮಿದೆನೆ ಸಂಜೀವಕ ನಳುರ್ಕೆಯಿಂ ಕೆಲೆಯೆ (ಪಂಚತಂ. ೨೭-೧); ಘನನಿನದಂ ಭಯರಸಮಂ ಜನಿಯಿಸೆ ನೆನೆಯಿಸಿದರಂದು ಕಳಹಂಸಕುಟುಂಬಿನಿಯಂ (ಮಲ್ಲಿಪು. ೮-೯೨); ಅತಿಪರುಷಘನನಿನದಯುಕ್ತಮಾಗಿಯುಂ ಅಸಾರ್ದ್ರತಾನುವಿದ್ಧಮಲ್ತು (ಚಂದ್ರಪು. ೪-೪೨ ವ). [ ಘನ + ನಿನದ ]

**ಘನಪಟಲ, ಘನಪಟಳ** (ನಾ).=ಘನಘಟೆ: ಘನಪಟಲಂ ಪಿಂಗಲ್ವನ್ನನುಪ ಮಿತ ಸಹಸ್ರಕರ ಸಮನ್ವಿತಮೆಸೆದಿರ್ಪನಂತಿರ್ದಂ (ಶಾಂತೀಶ್ವ.೧೦-೧೯೦); ಅನಿಲನಿಂ ಘನಪಟಲಂಬೊಲೆ ತದೀಯ ಕಲುಷಂ ಕೆಡುಗುಂ (ವಿಷ್ಣುಪು. ೫-೨೬೧). **ಘನಪಟಳ**: ಘನಪಟಳದ ನಿನದಮುಮಂ ವನಧಿಯ ನಿನದ ಮುಮಂನೊಂದುಮಾಡಿದ ತೆಱದಿಂ . . . ಜಯಜಯನಿನಾದಮೊದವಿದುದಾ ಗಳ್ (ವರ್ಧಪು. ೧೪-೨೩). [ ಘನ + ಪಟಲ₂ ]

**ಘನಪಟಳ** 'ಘನಪಟಲ' ನೋ.

**ಘನಪಥ** (ನಾ). ಮೋಡದ ದಾರಿ; ಆಕಾಶ: ಎಸೆದುವು ಘನಪಥದೊಳ್ ತ್ರಿದಶಕರಾಹತಿಯಿನೊಡನೆ ಸುರದುಂದುಭಿಗಳ್ (ಪಂಪಭಾ. ೧-೪೬); ಘನ ಪಥದೊಳೆಲ್ಲ ದೆಸೆಯೊಳಮೆನಿತಾನುಂ ತೆಱದ ರೂಪಮಂ ತಳೆದು (ಲೋಕೋಪ. ೪-೧೮); ಆ ವನಿತೆಯರಮನೆಗೆ ಬಂದಂ ಘನಪಥದಿಂ ಭೋಂಕನಿಱಿದು ನಾರದಮುನಿಪಂ (ಪಂರಾಮಾ. ೧೫-೧೩); ಘನಪಥವಾಹಿನೀ ಲಹರಿಕಾರವಮೆಂಬಿನಮುಣ್ಮಿದತ್ತು ಭೋರೆನೆ ದಿವಿಜೇಂದ್ರ ತೂರ್ಯರವಂ (ಜಗವಿ. ೩-೩). [ ಘನ + ಪಥ ]

**ಘನಪದವಿ** (ನಾ). ೧. ಉತ್ತಮಸ್ಥಾನ; ಉತ್ಕೃಷ್ಟವಾದ ಹುದ್ದೆ,-ಅಧಿಕಾರ. ೨. ಮೋಘದ ಪದವಿ; ಆಕಾಶ. ೧, ೨: ಉದ್ಯನ್ಮಂಡ ಲಾಗ್ರಂ ಘನಪದವೀಶೋಭೆಯಂ ಪೆರ್ಚಿಸುತ್ತಿರ್ಪಿನಮೊಳ್ಪಂ ಪೆತ್ತುದಾತ್ತಂ ಬೆಳಗುಗೆ ಜಗಮಂ ಗೋಪಮಾರ್ತಾಂಡದೇವಂ (ಜಗವಿ. ೧-೪). [ ಘನ + ಪದವಿ ]

**ಘನಪಾಟಿ** (ನಾ).=ಘನಪಾಠಿ: ಪುರೋಹಿತರ ಹೆಸರು ಅಚ್ಚಣ್ಣ ಘನಪಾಟಿ ಗಳು (ಶ್ರೀರಾಯ. ೭೦). [ <ಸಂ. ಘನಪಾಠಿನ್ ]

**ಘನಪಾಠ** (ನಾ). ವೇದವನ್ನು ಹೇಳುವ ಒಂದು ರೀತಿ. P ಗಣಾನಾಂ ತ್ವಾ ಗಣಪತಿಂ ಎಂಬ ವೇದದ ಭಾಗವನ್ನು, 'ಗಣಾನಾಂ, ತ್ವಾ, ತ್ವಾ, ಗಣಾನಾಂ, ಗಣಾನಾಂ, ತ್ವಾ, ಗಣಪತಿಂ, ಗಣಪತಿಂ, ತ್ವಾ, ಗಣಾನಾಂ, ಗಣಾನಾಂ, ತ್ವಾ, ಗಣಪತಿಂ' ಎಂಬ ರೀತಿಯಲ್ಲಿ ಹೇಳುವ ಬಗೆ; ವೇದಾಧ್ಯಯನದಲ್ಲಿ ಕೊನೆಯ ಹಂತ: ವೇದೋಚ್ಚಾರಣೆಯಲ್ಲಿ ಕ್ರಮಪಾಠ, ಪದಪಾಠ, ಜಟಾಪಾಠ, ಘನಪಾಠ ಇವೇ ಮುಂತಾದ ವಿಧಾನಗಳನ್ನು ಏರ್ಪಡಿಸಿಕೊಂಡು ಅವರು ಪಾಠಸಂರಕ್ಷಣೆ ಮಾಡಿದರು (ಕನ್ನಸಂ. ೪). [ ಸಂ. ]

**ಘನಪಾಠಿ** (ನಾ). ವೇದವನ್ನು ಘನಪಾಠದವರೆಗೆ ಅಧ್ಯಯನ ಮಾಡಿದವನು; ಘನವನ್ನು ಪಠಿಸುವವನು: ದೇಶದೇಶಗಳ ವಿದ್ವಾಂಸರೂ, ಘನಪಾಠಿಗಳೂ . . . ಗುಂಪುಗುಂಪಾಗಿ ದ್ವಾರವತಿಯಲ್ಲಿ ಬಂದಿಳಿಯಲು ಉಪಕ್ರಮಿಸಿದರು (ಶಾಂತಲಾ. ೧೦೦). [ ಸಂ. ಘನಪಾಠಿನ್ ]

**ಘನಪುಷ್ಪ** (ನಾ). ಮೋಘದ ಹೂವು; ನೀರಿನ ಹನಿ. 'ಮೋಘಪುಷ್ಪ' ಪರಾ. [ ಘನ + ಪುಷ್ಪ ]

**ಘನಫಲ** (ನಾ). [ಗಣಿತ] ಘನದ ಪರಿಮಾಣ: "ಘನಪರಿಮಾಣ; ಘನ ಫಲ" (Cubic Content. ಇಂಕನಿ). [ ಘನ + ಫಲ ]

**ಘನಬಳ** (ನಾ). ೧. ಶ್ರೇಷ್ಠಬಲ; ಹೆಚ್ಚಿನ ಬಲ. 'ಘನಬಳವಂತ' ಪರಾ. ೨. ಹೆಚ್ಚಿನ ಬಲವುಳ್ಳುದು; ಮಹಾಬಲಶಾಲಿಯಾದುದು; ಘನಬಳನಪ್ಪ ಗಂಧಗಜ ವೃಕ್ಷಮನಾರ್ದೆಸೆಯಲ್ಕೆ (ತ್ರಿಪುವಿ. ೨೬-೭೭). [ ಘನ + ಬಳ₂ (= ಬಲ) ]

**ಘನಬಳವಂತ** (ನಾ). ಹೆಚ್ಚಿನ ಬಲವುಳ್ಳವನು ; ಶ್ರೇಷ್ಠವಾದ ಬಲವುಳ್ಳವನು : ಘನಬಳವಂತನೆಂದೆನಿಸುವಚ್ಯುತಂ . . . ಶಿವಭಕ್ತರೊಳ್ಪಿರಿಯದೆ ಕೂಡಿರುತಿರ್ಪನುದಾರವೃತ್ತಿಯೊಳ್ (ತ್ರಿಪುವಿ. ೫೪-೫).
[ ಘನಬಳ + – ವಂತ ]

**ಘನಬಾಹಾಬಲ, ಘನಬಾಹಾಬಳ** (ನಾ). ೧. ಅತಿಶಯವಾದ ಬಾಹುಬಲ,–ಶಕ್ತಿ : ಘನಬಾಹಾಬಲದಿಂದಿದಿರ್ಚಿದ ಸುಹೃದ್ಭೂಪಾಳರಂ ಘುಣ್ಮುಘುಣ್ಮೆನೆ ಕೊಂದಿಕ್ಕಿ ಸಮಸ್ತರಾಜ್ಯಪದಮಂ ವಿಕ್ರಾಂತದಿಂ ತಂದು . . . ಓಲಗಿಸಿದಂ ದಂಡೇಶ ದಿಕ್ಕುಂಜರಂ (ಪುಷ್ಪಪು. ೭-೨೦); ಘನಬಾಹಾಬಲದಿಂ ಪಿರಿಯನೆನಿಪ್ಪ ಸುತೇಜನೆಂಬ ಪಿರಿಯ ಕುಮಾರಂಗನುನಯದಿಂ ಶ್ರೀ ವಿಜಯಾವನಿಪತಿ ತಾನಿತ್ತನಖಿಲರಾಜ್ಯಶ್ರೀಯಂ (ಶಾಂತೀಶ್ವ. ೭-೪೯). **ಘನಬಾಹಾಬಳ :** ೨. ಬಹಳ ಹೆಚ್ಚಾದ ಬಾಹುಬಲವುಳ್ಳವನು ; ಅತಿಶಯವಾದ ಶಕ್ತಿಯುಳ್ಳವನು : ಘನಬಾಹಾಬಳನಾ ಚಳುಕ್ಯತಿಳಕಂ ಶ್ರೀತೈಲಪಂ ಸಾರ್ವಭೌಮನೃಪಂ (ಕಇಆ. ೨-೨-೨೬ ; 1058).
[ ಸಂ. (ಘನ + ಬಾಹಾ + ಬಲ) ]

**ಘನಬಾಹಾಬಳ** 'ಘನಬಾಹಾಬಲ' ನೋ.

**ಘನಮಹಿಮ** (ನಾ). ಹಿರಿದಾದ ಮಹಿಮೆಯನ್ನು ಹೊಂದಿದವನು : ಘನಮಹಿಮನೆನಿಸುವೇಣಾಧಿನಾಥನಂ ತಿವಿದ ಪಾಪಿ ತಾನೆನುತಲಿ ಪೋದ ನಿರದೆ ಭಕ್ತ್ಯಾಕೃತಿವಿಡಿದೆನೆ ಸುಜನರ ವೈರವೇನೆನೀಯದು ಧರೆಯೊಳ್ (ತ್ರಿಪುವಿ. ೨೩-೩೨) ; ಅನಿತಱೊಳವರ ಮನೋರಥಮಂ ನಿಮಿರ್ಚಲೆಂದು ಸೈಪು ಸಾಕಾರತೆವೆತ್ತು ಬರ್ಪಂತೆ ಘನಮಹಿಮರ್ . . . ಗುರೂತ್ತಮರೆಯ್ದೆ ಸಾದರಂ (ರಾಜಶೇ. ೩-೭೯). [ ಘನ + ಮಹಿಮ ]

**ಘನಮಹಿಮೆ** (ನಾ). ಶ್ರೇಷ್ಠವಾದ ಮಹಿಮೆ ; ಹಿರಿದಾದ ಮಹಿಮೆ : ಘನಮಹಿಮೆವಡೆದ ಚೋಳಾವನಿಯೊಳ್ವಾಸವನ ಪುರವನೇಳಿಸುತಂತಾ ವಿನುತ ತಿರುವಣ್ಣಾರೆಂಬಾ ಘನಪುರಮತ್ಯಧಿಕ ಜಸಮನಾಂತೆಸೆದಿರ್ಕುಂ (ತ್ರಿಪುವಿ. ೫೮-೩). [ ಘನ + ಮಹಿಮೆ ]

**ಘನಮಾರ್ಗ** (ನಾ). ೧.= ಘನಪಥ: ಘನಮಾರ್ಗವ್ಯಾಪಿ ಚೈತ್ರಧ್ವಜವಿಜಯ ಗಜಾರೂಢಂ (ಆದಿಪು. ೧೪-೯೮) ; ಘನಮಾರ್ಗದವೊಲ್ ಮುನೀಶ್ವರಂ ನಿಂದಿರ್ದಂ (ಅಜಿಪು. ೭-೫); ಘನಮಾರ್ಗಂ ನಖಟಂಕಭಿನ್ನದಿತಿಜಾಸೃಕ್ಪಂಕದಿಂ ಕೆಂಕಮಾಗಿ ನಿಲಲ್ ಸಂಜೆಯೊಳಂದಿನಿಂ ಬೞಿಕೆ ನಿಚ್ಚಂ ಸಂಜೆಗೆಂಪೆಂಬುದಾಯ್ತು (ಜಗವಿ. ೦-೫೪). ೨. [ಕಾವ್ಯಮೀ] ಉತ್ಕೃಷ್ಟವಾದ ಮಾರ್ಗ ಶೈಲಿ. ೧, ೨ : ಸರಸಿಜದಂತೆ ಸಾರಗುಣವರ್ಣವದಂತೆ ರಸಾರ್ದ್ರಮರ್ಕನಂತಿರೆ ಘನಮಾರ್ಗಶೋಭಿ . . . ವಿಳಸತ್ಕೃತಿ ಸನ್ಮನೋಜ್ಞನಾ (ರಾಜಶೇ. ೧-೮೨). [ ಘನ + ಮಾರ್ಗ ]

**ಘನಮಾಲಿಕೆ, ಘನಮಾಳಿಕೆ** (ನಾ). ಮೋಡಗಳ ಸಾಲು ; ಮೇಘ ಪಂಕ್ತಿ: ವಿಯದವಳಂಬಿ ನೀಳಘನಮಾಲಿ[ಪಾಠಾಂ. ಳಿ]ಕೆಯಂ ಗಜರಾಜಿಯೆಂದು . . . ಇರದಂಗಜರಾಜ ಸೈನ್ಯಭೀತಿಯನೊಳಕೆಯ್ದುದಬ್ದಸಮಯೋತ್ಸವದೊಳ್ ಪಥಿಕಾಂಗನಾಜನಂ (ಚಂದ್ರಪು. ೪-೪೯). **ಘನಮಾಳಿಕೆ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಘನ + ಮಾಲಿಕೆ ]

**ಘನಮಾಳಿಕೆ** 'ಘನಮಾಲಿಕೆ' ನೋ.

**ಘನಮುಂಡಿಗೆ** (ನಾ). ದೊಡ್ಡ ಮರದ ದಿಮ್ಮಿ,–ಮುಂಡಿಗೆ : ಬಿಗಿದು ಗಳವತ್ತಿಗೆಯುನೆದೆವತ್ತಿಗೆಯು ಘನಮುಂಡಿಗೆಯು ಲಾಡಿಯು ಬಿಗಿದು (ಕುಮಾರರಾಮ. ೩-೩). [ ಘನ + ಮುಂಡಿಗೆ$_2$ ]

**ಘನಮೂಲ** (ನಾ). ೧. ಗಟ್ಟಿಯಾದ ಬುಡ,–ಬೇರು ; ತಾಯಿಬೇರು : ಇದು ಶೈವಶಾಸ್ತ್ರ ಭೂಜದ ಘನಮೂಲಂ (ರಾಜಶೇ. ೪-೮೪). ೨. [ಗಣಿತ] ಘನಸಂಖ್ಯೆಗೆ ಮೂಲಭೂತವಾದ ಸಂಖ್ಯೆ : ಘನಮೂಲ : ೨೭ರ ಘನಮೂಲ=೩ (Cubic root, ಇಂಕನಿ). [ ಘನ + ಮೂಲ ]

**ಘನರವ** (ನಾ). ಮೇಘದ ಶಬ್ದ ; ಗುಡುಗು : ಪಟಹ ಪ್ರಣಾದವಮಂ ಘನರವಮೆಂದೆ [ ಪಾಠಾಂ. ರುತಿಗೆತ್ತು ] ನರ್ತಿಸುವ ಕೇಕಿಗಳಿಂ (ಪಂಪಭಾ. ೪-೫) ; ಆ ರವಮಂ ನಿರ್ಜಿತಕಂಠೀರವರವಮಂ ನಿರಸ್ತಘನರವಮಂ ಕೋಪಾರುಣನೇತ್ರಂ ಕೇಳ್ದಾ ನೀರೊಳಗಿರ್ದುಂ ಬೆಮರ್ತನುರಗಪತಾಕಂ (ಗದಾಯು. ೭-೨೨). [ ಘನ + ರವ ]

**ಘನರಸ** (ನಾ). ೧. ಕರ್ಪೂರ: ಘನರಸ ಗಂಧಾಕ್ಷತೌಘದಿಂದಂ . . . ಇದನು ಮತಿಯೆನಗೆಂದು ಚಕ್ರಿ (ಜಗವಿ. ೪-೭೪). ೨. ಮೇಘದ ದ್ರವ; ನೀರು : "ಆಪಃ (ಪ್), ತೋಯಂ, ಘನರಸಂ . . . ಜೀವನಂ, ಜೀವನೀಯಂ– ಈ ೨೬ ನೀರ್" (ಹಲಾಯು. ೧೦೭-೨೬) ; "ಅಪಃ . . . ಮೇಘಪುಷ್ಪಂ, ಘನರಸಂ–೨೭ ಉದಕದ ಹೆಸರುಗಳು, ಅಂದರೆ ನೀರು" (ಸಿದ್ಧಾಂತಿ. ೬೪); ಘನರಸಮಂ ಪದೆದೀಂಟುವ ವಿನುತಂ ಚಾದಗೆ ಕುಮಾರಿಯಂ ಕುಡಿವುದೆ ನೂತನರಸವತ್ಕೃತಿಗೆಳಸುವ ಮನುಜಂ ಮಱಿದಾದೊಡಲ್ಪಕೃತಿಗೆಳಸುವನೇ (ಶಬಶಂ. ೦-೨೨). ೩. ಜಿಗುಟಾದ ಅಥವಾ ದಪ್ಪವಾದ ದ್ರವ. ೪. ಉತ್ತಮವಾದ ರುಚಿ : ಘನರಸಭಕ್ಷ್ಯಾನ್ನಗಳಿಂ ಘನರಸ ಗಂಧಾಕ್ಷತೌಘದಿಂದಂ (ಜಗವಿ. ೪-೭೪). 'ಷಡ್ರಸ' ಪರಾ. ೫. ಜಲನಿಧಿ; ಸಮುದ್ರ. ೬. ಶೃಂಗಾರಾದಿ ರಸಭರಿತವಾದುದು. ೫, ೬ : ಕಾವ್ಯಮೆನಿಸಿರ್ದು ವಿಬುಧಸುಸೇವ್ಯಂ ಘನರಸಮಿದೆನಿಸಿ ಭಂಗವಿರಹಿತಂ (ರಾಜಶೇ. ೦-೮೦)
[ ಘನ + ರಸ ]

**ಘನರಾಗ** (ನಾ). [ಸಂಗೀತ] "ಸ್ವರಗಳು ತರಂಗರೂಪದಲ್ಲಿ ಮೇಳೈಸಿ ತಾನರೂಪದಲ್ಲಿ ವಿಸ್ತಾರವಾಗಿ ಹಾಡಲ್ಪಟ್ಟು ವಿಶೇಷವಾದ ರಂಜನೆಯನ್ನುಂಟುಮಾಡುವ ಘನತೆ ಪಡೆಯುತ್ತವೆ. ಇಂತಹ ರಾಗಗಳೇ ಘನರಾಗಗಳು" (ಸಂಗೀಚಂ. ೩೪). [ ಘನ + ರಾಗ ]

**ಘನಲಿಂಗ** (ನಾ). ಶ್ರೇಷ್ಠವಾದ ಲಿಂಗ: ಶರಣಂ ಬಂದು ಆ ಘನಲಿಂಗವುಂ ಅಮರ್ದಪ್ಪಿ ಪುಷ್ಪಪರಿಮಳದಂತೆ ಏಕವಾಗಿ ಘನಲಿಂಗ ತಾನೆಯಾದ (ಘನವ. ೫೩) ; ಘನಲಿಂಗಾರ್ಚನೆಯಿಲ್ಲದೊರ್ಕುಡುತೆ ನೀರಂ ಕೊಳ್ಳದೀ ಮಾಳ್ಕೆಯಿಂ ತನಗಿರ್ಪತ್ತುಪವಾಸಮಾಗಲೊಲವಿಂ ನೋಡುತ್ತೆ ಬರ್ಪಲ್ಲಿ (ತ್ರಿಪುವಿ. ೫೨-೧೬). [ ಘನ + ಲಿಂಗ ]

**ಘನವಂತ** (ನಾ). ಘನತೆಯುಳ್ಳ ವ್ಯಕ್ತಿ ; ಗಣ್ಯ ; ಗೌರವಸ್ಥ : ಘನವಂತರ ಬಾಯಿಂದ ಘನವಾದ ಮಾತುಗಳೆ ಹೊರಟಾವು (ಶಾಂತಲಾ. ೮೯); ತಾನು ರಕ್ಷದ ಘನವಂತನಲ್ಲ, ಮಾಸ್ಕೋಸಮಾಜದ ಸದಸ್ಯನಲ್ಲ (ಮಲನಾ. ೧೦೦). [ ಘನ + – ವಂತ ]

**ಘನವರ್ಷ** (ನಾ). ಬಿರುಸಾದ ಮಳೆ ; ಭಾರಿಮಳೆ : ಘನವರ್ಷತೆಂ ವರದುರ್ದಿನಮಾರುದ್ಧಾರ್ಕ[ಮರು]ನೃಪಾನೀಕರಜೋವನನಿಧಿಂ ನಾಂತು ದೆನಲಧಿಪನ ಬಲವುಂ ಕಾಮರೂಪಭೂಮಿಪರಾಂತರ್ (ಶಾಂ.ಪು. ೧೧-೭೯); ಅನುರಾಗ ದು:ಖಂಗಳೊಮ್ಮೊಮ್ಮೆ ಬಿರುಬೀಸಿ ಮನದಿ ತೆರೆಗಳ ಕುಲುಕಿ ಕಡೆಯುವುದುಮೊಳಿತು ಘನವರ್ಷ ಬಿರುಗಾಳಿ ಬಡಿಯಲಿರುಳೊಳ್ ನೆಲನ ದಿನದ ಸೊಗಸಿಮ್ಮಡಿಯೊ (ಮಂಕುಕ. ೪೨೨).
[ ಘನ + ವರ್ಷ ]

**ಘನವಾತ** (ನಾ). [ಜೈನ] ಭೂಲೋಕವನ್ನು ಸುತ್ತಿರುವ ಘನೋದಧಿ, ಘನವಾತ ಮತ್ತು ತನುವಾತವೆಂಬ ಮೂರು ವಾಯುಗಳಲ್ಲೊಂದು: ಎಂಟುಂ ಪೊಡವಿಗಳಂ ತಾಳ್ದಿದುವೋಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ ಅವಱ ಪೆಸರ್ಗಳುಂ ಘನೋದಧಿ ಘನವಾತ ತನುವಾತಂ ಗಳೆಂಬುವುವು (ಶಾಂತಿಪು. ೧೨-೫೧ ವ) ; ಕೊನೆಯಿಲ್ಲದೆ ಹಬ್ಬಿರುವ ಆಕಾಶದ ಮಧ್ಯದಲ್ಲಿ ಘನೋದಧಿ, ಘನವಾತ, ತನುವಾತಗಳೆಂಬ ಮೂರು ಗಾಳಿಗಳಿರುತ್ತವೆ (ಜೈನಪ. ೪೪೭). 'ಘನೋದಧಿ' ಪರಾ.
[ ಘನ + ವಾತ ]

**ಘನವಾದಿ** (ನಾ). ತೂಕವಾದ ಮಾತನ್ನಾಡುವವನು ; ದಿಟವಾದ ಮಾತನಾಡುವವನು ; ಸತ್ಯವಾದಿ : ಘನವಾದಿಯೆಂದಾಂ ಪೊಗಳ್ದೊಡ ದಱಿಂ ಳಾತನನೀಕ್ಷಿಸುವುದು (ಹಚಕಾ. ೨-೧೬). [ ಸಂ. ಘನವಾದಿನ್ ]

**ಘನವಾರಿ** (ನಾ). ೧. ಮೋಡದ ನೀರು ; ಮಳೆ: "ಘನವಾರಿ ವೃಷ್ಟಿ ವರ್ಷಂ ಮಟಿಯೆನಿಕ್ಕು" (ಮಂಗರಾ. ೧೩-೪). ೨. ಬಹಳ ನೀರನ್ನುಳ್ಳದು; ಸಮುದ್ರ : ವೀರಸುಭಟರ ರಕ್ತಧಾರಾಸಾರಲೋಹಿತಬಿಂಬವನು ಘನ ವಾರಿಯಲಿ ತೊಳೆದಂತೆ ಪಶ್ಚಿಮಜಲಧಿಗಿನನಿಳಿದ (ಕುವ್ಯಾಭೀ. ೫-೨೭). 'ಘನರಸ' ಪರಾ. [ ಘನ + ವಾರಿ$_2$ ]

**ಘನವಿವರ** (ನಾ). ಮೋಡದಲ್ಲಿ ನಡುವೆ ಬಿಟ್ಟಿರುವ ಸ್ಥಳ,-ಬಿರುಕು,-ಕಂಡಿ : ದಿನಕರಕರನಿಕರಂಗಳ್ ಘನವಿವರ ಪ್ರಸರಮಾಗಿಯುಂ ತಮ್ಮಂ ಕಂಡನಿತಱಿಳೆ ತೆರಳ್ದೆನ್ನಾ ಮನೋಗತಧ್ವಾಂತಬಂಧಮಳಱಿತ್ತಿಲ್ಲಂ (ಕವಿರಾ. ೨-೬೫). [ ಘನ + ವಿವರ ]

**ಘನವೀರ** (ನಾ). ಮಹಾಶೂರ ; ಪರಾಕ್ರಮಿ : "ಘನವೀರನಪ್ಪವಂ ತುಱಿಲಾಳು ಬಂಟನೆಂದೆನೆ" (ಕಬ್ಬಿಗ. ೪೨) ; "ತುಱಿಲಾಳು ಬಂಟನೆನಲ್ಕೆ ಘನವೀರನಪ್ಪವಂ" (ಶಬ್ದಮಂ. ೪೩). [ ಘನ + ವೀರ ]

**ಘನವೇದ್ಯ** (ನಾ). ಚಿಚ್ಛಕ್ತಿಯಿಂದ ಮಾತ್ರ ತಿಳಿಯಲು ಸಾಧ್ಯನಾದವನು: ಅರ್ಚಿತವ ಮಾಡುವಡೆ ನೀನು ನಿತ್ಯತೃಪ್ತನು ಅಷ್ಟವಿಧಾರ್ಚನೆಯ ಮಾಡುವಡೆ ನೀನು ಮುಟ್ಟಬಾರದ ಘನವೇದ್ಯನು (ಅವಚಂ. ೯೫-೪೨೪). [ ಘನ + ವೇದ್ಯ ]

**ಘನಶ್ಯಾಮ** (ನಾ). ಮೇಘದಂತೆ ಕಪ್ಪಾದವನು; ಮೋಡದಂತೆ ಕಪ್ಪು ಬಣ್ಣವುಳ್ಳವನು ; ಶ್ರೀಕೃಷ್ಣ : ಘನಶ್ಯಾಮ ಹರಿಕೃಷ್ಣ . . . ನೃಸಿಂಹ ತ್ರಾಹಿಯೆನುತಿರ್ದನಾ ಸುಧನ್ವಂ ಮಱಿಯದೆ (ಜೈಮಿಭಾ. ೧೧-೩೭). 'ಮೇಘಶ್ಯಾಮಂ' ಪರಾ. [ ಘನ + ಶ್ಯಾಮ ]

**ಘನಶ್ರೀ** (ನಾ). ೧. ಮೋಡದ ಶೋಭೆ ; ಮೇಘಕಾಂತಿ ; ಮಿಂಚು. ೨. ಘನತೆಯುಳ್ಳ ಶ್ರೀದೇವಿ ; ಮಹಾಪ್ರಭಾವಶಾಲಿನಿಯಾದ ಲಕ್ಷ್ಮೀದೇವಿ. ೧,೨: ಮತ್ತಮಾ ಘನಸಮಯಂ ಗದಾಧರಮೂರ್ತಿಯಂತೆ ಘನಶ್ರೀ ಮನೋಜ್ಞಮುಂ . . . ಎನಿಸಿರ್ದುದು (ರಾಜಶೇ. ೮-೧೧೪ ವ). [ ಸಂ. ]

**ಘನಸಮಯ** (ನಾ). ಮೋಡಗಳ ಕಾಲ ; ಮಳೆಗಾಲ ; ಕಾರ್ಗಾಲ : ಘನಸಮಯದಂತೆ ಪುಷ್ಕರವಿರಾಜಿತಮುಂ (ಮಲ್ಲಿಪು. ೫-೬೫); ಘನಸಮಯ ಶಬರಕರಗತಕನತ್ತಟಿದ್ದಂಡಪಾತವಿಗಳನ್ನೀಳಸ್ತನಯಿತ್ನು ಕುಳತಮಾಳೀವನಪ್ರಸೂನಂಗಳೆನಿಸಿದುವು ಕರಕಂಗಳ್ (ಚಂದ್ರಪು. ೪-೩೭) ; ಘನಸಮಯ ನೃಪಾಲಕನೊಳ್ ಘನಪಾಣಿಗ್ರಹಣಮಾದ ಭೂವನಿತೆಗೆ ಮುತ್ತಿನಸೇಸೆಗಳಂ ಗಗನಾಂಗನೆ ಸೂಸಿದಳೆನಿಸೆ ಬಿಳ್ದುವಾಲಿವರಲ್ಗಳ್ (ಗಿರಿಕ. ೯-೪೭). [ ಘನ + ಸಮಯ ]

**ಘನಸಾರ** (ಗು). ೧. ಅತಿಶ್ರೇಷ್ಠವಾದ ; ಅತ್ಯುತ್ತಮವಾದ : ಘನಸಾರ ಘುಸೃಣ ಚಂದನ ಘನಸಾರ ದ್ರವದಿಂ . . . ಅನಘನಂಘ್ರಿಗಳನರ್ಚಿಸಿದಂ (ಪುಷ್ಪಪು. ೧೪-೨). ೨. ಕರ್ಪೂರ : "ಕರ್ಪೂರಃ, ಘನಸಾರಃ- ಈ ೨ ಕರ್ಪೂರಂ" (ಹಲಾಯು. ೯೦-೩೯೧) ; "ಪ್ರಾಲೇಯಮೆನಲು ಘನಸಾರಮೆನೆ ಪಚ್ಚೆ" (ಮಂಗರಾ. ೯೯-೨೨) ; ಘನಸಾರ ವಿಮಿಶ್ರಿತ ಚಂದನರಸಮಂ ತಳಿದ ರೊಂದು ಯೋಜನದನಿತಂ (ಮಲ್ಲಿಪು. ೧೪-೨೪೮) ; ಕಾಂಚನಭಾಜನದಿಂದೆ ಪಂಚರತ್ನದ ಘನಸಾರವಾರಿಯ ಮೃಗೋತ್ಥಕುಳುತ್ಥದ ಬಾಯಿನಂಗಳಂ ಮುದದೊದವಿಂದಮಿತ್ತು ಮೆಱೆದರ್ ನೆಲೆವೆರ್ಚಿದುದಾತ್ಮವೃತ್ತಿಯಂ (ಚಂದ್ರಪು. ೬-೮೦); ಮಹೀಪಾಲಂ ಸಮರ್ಪಿಸುವ ಘನಸಾರದಾಹುತಿಯನಗ್ನಿ ಮುಖದಿಂದೆ ನೀನೆನಗಿತ್ತೊಡೆ ದರ್ಪದಿಂ ತೃಪ್ತನಾದಪೆಂ (ಜೈಮಿಭಾ. ೩೪-೨೦). ೩. ಚಂದನದಂತಹ ಪರಿಮಳಪೂರ್ಣವಾದ ಒಂದು ಬಗೆಯ ಮರ : ಘನಸಾರಸರಳ ಚಂದನವನ ಮೃದುಪಲ್ಲವಮನಗ್ರ ಹಸ್ತದೆ ಕೊಂಡೊಯ್ಯನೆ ಬೀಸೆ ಚೆಲ್ವುವಡೆದುದು ಜಿನಂಗೆ ಚಾಮರಮನಿಕ್ಕು ವಂತಮರಗಜಂ (ಆದಿಪು. ೭-೭೧) ; ಚಂದನ ಘನಸಾರದ್ರವದಿಂ . . . ಅನಘನಂಘ್ರಿಗಳನರ್ಚಿಸಿದಂ (ಪುಷ್ಪಪು. ೧೪-೨). ೪. ನೀರು; ಜಲ : (ಶ).
[ ಘನ + ಸಾರ$_3$ ]

**ಘನಸುಚ್ಛಾಯ** (ಗು). ೧. ನಿಬಿಡವಾದ ಒಳ್ಳೆಯ ನೆರಳನ್ನುಳ್ಳ; ಸಾಂದ್ರವಾಗಿಯೂ ತಂಪಾಗಿಯೂ ಇರುವ ನೆರಳನ್ನೀಯುವ. ೨. ಮೇಘದಂತೆ ಒಳ್ಳೆಯ ಕಾಂತಿಯನ್ನುಳ್ಳ ; ಮೋಡದಂತೆ ನೀಲವಾದ ಮೈಬಣ್ಣದಿಂದ ಕೂಡಿದ ; ನೀಲಮೇಘಶ್ಯಾಮದ. ೧, ೨: ಘನಸುಚ್ಛಾಯವನಂತಭೋಗನಿಲಯಂ . . . ತೋಡಾಯ್ತು ಪೇಂದ್ರಂಗೆ ಮಜ್ಜನಕಂಗೀ ಮರನೆಂದು ಮಾಮರಕೆ ಕಾಮಂ ಕೊಟ್ಟನಾತಿಥ್ಯಮಂ (ಪುಷ್ಪಪು. ೮-೮೦). [ ಸಂ. (ಘನ + ಸು + ಛಾಯಾ + – ) ]

**ಘನಸ್ಥ** (ನಾ). ಘನತೆಯುಳ್ಳವನು ; ಗೌರವಸ್ಥ ; ದೊಡ್ಡವ್ಯಕ್ತಿ. 'ಘನಸ್ತಿಕೆ' ಪರಾ. [ ಘನ + – ಸ್ಥ ]

**ಘನಸ್ತನ** (ನಾ). ದೊಡ್ಡ ಸ್ತನ : ಎನಿತ್ತನಿತ್ತಂಬುಜಪತ್ರನೇತ್ರೆಯಾ ಘನ ಸ್ತನಂಗಳ್ ಬಳೆಗುಂ ಕಿರಾತೆಯಾ ಅನಿತ್ತನಿತ್ತಂ ವನದೊಳ್ ವನೇಚರಂ ತನತ್ತು ಬಿಲ್ಲಾನದನಂತೆ ಕೀಸುವಂ (ಶಮದ. ೧೧೪ ಪ್ರಯೋ). [ ಘನ+ಸ್ತನ ]

**ಘನಸ್ತನಿತ** (ನಾ). ಮೋಡದ ಗರ್ಜನೆ ; ಮೇಘರವ ; ಗುಡುಗು: ಘನಸ್ತನಿತಮುಂ ಕೇಕಿಸ್ವನಮುಂ ನೀರಧಾರೆಯುಂ ಮನಂ ಬೆಚ್ಚಿ ಕರ್ಚಿ ಮಿಂತೆತ್ತಂ (ಕವಿರಾ. ೨-೧೧೪). [ ಘನ + ಸ್ತನಿತ ]

**ಘನಸ್ತಿಕೆ** (ನಾ). ದೊಡ್ಡತನ ; ಹಿರಿಮೆ ; ಶ್ರೇಷ್ಠತೆ ; ಗೌರವ : ಕುರುರಾಯ ಮಸ್ತಕವನುಳುಹಿಕೊಂಡೈದಿದೆಯ ದುಷ್ಪರ ಘನಸ್ತಿಕೆಯ ತಿಳಿದೆಯಾ ಬುದ್ಧಿಹೀನರಿಗೆಲ್ಲ ಗುರುವೆನಿಸಿದೆಯ ಜಗದಲಿ (ಲಕ್ಷ್ಮಭಾ ೩-೨೪-೩) ; ಪಟ್ಟಣದಿಂದ ದೂರವಾದಂತೆ ಅವನ ಪ್ರತಿಷ್ಠೆ ಏರುತ್ತಿತ್ತು.. ಘನಸ್ತಿಕೆಗೆ ಕಳೆ ಬರುತ್ತಿತ್ತು (ಭ್ರಮಾನ. ೫); ಮೇಸ್ತ್ರಿಯಾದ ಬಳಿಕ ಅವನಿಗೆ ಸ್ವಲ್ಪ ಘನಸ್ತಿಕೆ ಹೆಚ್ಚಿತ್ತು (ರಕ್ತರೂ. ೯೬). [ ಘನಸ್ತ + – ಇಕೆ ]

**ಘನಸ್ವನ** (ನಾ). ೧. ಮೋಡದ ಧ್ವನಿ ; ಗುಡುಗು : ಅಕ್ಕರಮಲ್ಲವು ಘನಸ್ವನಾದಿ ಧ್ವನಿಗಳ್ (ಶಮದ. ೨). ೨. ಅಧಿಕವಾದ ಶಬ್ದ ; ದೊಡ್ಡ ಸದ್ದು. ೧, ೨ : ಜಯ ಜೀಪ ನಂದ ವರ್ಧಸ್ವ ಘನಸ್ವನಂ ನೆಗಱಿ ಬೀಸುವ ಸೀಗುರಿ ಸೋಗೆಯಾಗೆ . . . ಪೋಲ್ತೆಸೆದುದಂದು ಘನಾಗಮಮಂ ಜಿನಾಗಮಂ (ಪುಷ್ಪಪು. ೧೦-೧೯). [ ಘನ + ಸ್ವನ ]

**ಘನಾಂಧಕಾರ** (ನಾ). ನಿಬಿಡವಾದ ಕತ್ತಲೆ ; ಕಗ್ಗತ್ತಲೆ : ಆಗ ಆಕಾಶ ಮಂಡಲದಲ್ಲಿ ಘನಾಂಧಕಾರವಾಗಿ ಮುಸೀಮುಯವಾಗುತ್ತ ಬಂತು (ಕಪಾಕುಂ. ೧೧೩). [ ಘನ + ಅಂಧಕಾರ ]

**ಘನಾಂಸ** (ನಾ). ದೊಡ್ಡ ಹೆಗಲುಳ್ಳವನು: ಸುಭಟಕಟಕಸಾಮಂತಾವತಂಸಂ ಘನಾಂಸಂ (ಮದತಿ. ೦-೧೩). [ ಘನ + ಅಂಸ ]

**ಘನಾಕೃತಿ** (ನಾ). [ಗಣಿತ] ಘನದ ಆಕೃತಿ,-ಆಕಾರ : ಕಂಬಗಳು ಘನಾಕೃತಿಯುಳ್ಳವಾಗಿಯೂ ಮತ್ತು ಅಷ್ಟಮೂಲೆಯುಳ್ಳವಾಗಿಯೂ ಇವೆ (ಭಾರದ. ೫೦೦). [ ಘನ + ಆಕೃತಿ ]

**ಘನಾಗಮ** (ನಾ). ೧. ಮೋಡಗಳ ಬರವು,-ಆಗಮನ. ೨. ಮೋಡಗಳ ಕಾಲ ; ಮಳೆಗಾಲ : ಇಂದುಮಂಡಳದ ಕರ್ಪಸೆದತ್ತು ಘನಾಗಮಂ ಮೊದಲ್ಗಿಡೆ ಶರದಾಗಮಂ ನೆಱೆಯೆ ಪರ್ಬೆ ಸಮಸ್ತ ಮಹೀವಿಭಾಗಮಂ (ಪಂಪಭಾ. ೭-೬೯) ; ಘನಶೋಕ ಘನಾಗಮಜಳಜನಿತೋತ್ಕರ್ಷಮನನೂನ ಬಾಂಧವಜನಿತಾಶ್ರುನದೀಪೂರಮನುಡುಗಿಪುದಿನತೇಜ ವಸಂತದಂತೆ ಬಂದೀಕ್ಷಣದೊಳ್ (ಚಂದ್ರಪು. ೫-೧೪) ; ಮತ್ತಮಾ ವನಂ ಘನಾಗಮದಂತೆ ಘನಕದಂಬಮುಕ್ತಕವಿಲಸಿತಮುಂ . . . ಆಗಿಯುಂ (ರಾಜಶೇ. ೫-೭೪ ವ).
[ ಘನ + ಆಗಮ ]

**ಘನಾಘನ** (ಗು). ೧. ಒತ್ತೊತ್ತಾದ ; ನಿಬಿಡವಾದ ; ಸಾಂದ್ರವಾದ : ನರಸಿಂಗವೊನೆಯ ವಿಭು ಸೌಂದರನ ವಿವಾಹಕ್ಕೆ ಕರಿತುರಗಂ ಸುಭಟೋತ್ಕರ ಯುತಮಬಳಾಸಂತತಿವೆರಸು ಘನಾಘನರವಂಗಳಿಂ ಪೊಜಮಟ್ಟಂ (ತ್ರಿಪುವಿ. ೨-೭೮). (ನಾ). ೨. ಮಳೆ ಸುರಿಸುವ ಮೋಡ: ಘನಾಘನನಿನಾದದಿಂ ಬೃಂಹಿತಂಗೆಯ್ವ ವಿಜಯಗಜಮುಂ (ಪಂಪಭಾ. ೯-೯೫ ವ); ಮನವೊಸೆದು ಕೋಬಿಗಾಂಕಂಗನುನಯದಿಂ ಮಾಳ್ಕೆ ಮಹಿಮೆಯಂ ಮದನಘನಾಘನ ಪಟಳಪವನನಗಜಾನನ ನಿರೀಕ್ಷಣ ಲಂಪಟೋತ್ಕರಂ ನಿಟಿಲಾಕ್ಷಂ (ಎಕ. V, ಬೇಲೂರು. ೨೦೦-೨೬; 1073). ೩. ಮಳೆ ; ವೃಷ್ಟಿ. ೪. ದೇವೇಂದ್ರ ; ಇಂದ್ರ : "ಇಂದ್ರನಲ್ಲಿಯುಂ, ಕಱಿವ ಮುಗಿಲಲ್ಲಿಯುಂ ಘನಾಘನ ವೆಂಬುದು" (ಹಲಾಯು. ೧೩೮-೩೯); "ಕಱಿವ ಮುಗಿಲೊಳಮಿಂದ್ರನೊಳಂ ಘನಾಘನವೆನಿಪ್ಪುದು" (ಮಂಗರಾ. ೧೪೨-೧೯). ೫. ಮದ್ದಾನೆ. ೬. ಪುಣ್ಯ. "ಸಾಮಾನ್ಯಂ ಪುಣ್ಯಂ ಸುತ್ರಾಮಂ ಘನ ಬಹಳ ಪುರುಷದಂತಿಸಮೂಹಂ ಸಾಮಜ ಮಟಿಯೊಂಭತ್ತುಂ ಭೂಮಿಗೆ ಪೊಸತೆನಿಸುತಿಹ ಘನಾಘನಶಬ್ದಂ" (ನಾನಾಕಂ. ೪೬); "ಸುತ್ರಾಮಂ ಪುಣ್ಯ ಗಜಂ ಸುರೇಭ ಬಹುಮೇಘ ವ್ರಾತಮುಂ ವೃಷ್ಟಿಯುಂ ಸಾಮಾನ್ಯಾದಿ ಘನಾಘನಾಹ್ವಯಂ" (ನಾನಾರ. ೧೬). ೭. ತಿಕ್ಕಾಟ ; ಸಂಘರ್ಷ. [ ಸಂ. ]

**ಘನಾನಂದ** (ನಾ). ೧. ಶ್ರೇಷ್ಠವಾದ ಆನಂದ,- ಸಂತೋಷ. ೨. [ವೀಶೈ] ಅವಿರಳವಸ್ತುವಾದ ಪರಶಿವನ ಸಾಕ್ಷಾತ್ಕಾರದಿಂದುಂಟಾದ ಆನಂದ; ಬ್ರಹ್ಮಾನಂದ ; ಪೂರ್ಣಾನಂದ. 'ಘನಾನಂದಪ್ರಸಾದಿ' ಪರಾ.
[ ಘನ + ಆನಂದ ]

**ಘನಾನಂದಪ್ರಸಾದಿ** (ನಾ). [ವೀಶೈ] ಪರಶಿವನನ್ನು ಎಲ್ಲ ಕಡೆಯೂ ಕಾಣುತ್ತಿರುವುದರಿಂದುಂಟಾದ ಆನಂದವನ್ನು ಅನುಭವಿಸುತ್ತಿರುವ ಶರಣ ; ಬ್ರಹ್ಮಾನಂದವನ್ನು ಪಡೆದಿರುವ ಪ್ರಸಾದಿ : ದುಃಖವನಳಿದ ಘನಾನಂದಪ್ರಸಾದಿ (ಬಸವ. ೯೪೨). [ ಘನಾನಂದ + ಪ್ರಸಾದಿ ]

**ಘನಾನಕ** (ನಾ). ದೊಡ್ಡ ಪಟಹ, - ನಗಾರಿ : ಮೊಟಗಿದುವಮರರ ವಿತತತತಘನಾನಕಮವನದ್ದದೊಳಮರ್ದು(ಶಾಂತಿಪು. ೪-೫೬); ಪೊಣ್ಮಿದತ್ತು ಜಿನಮಂದಿರ ಸಾಂಧ್ಯಘನಾನಕಸ್ವನಂ (ಮಲ್ಲಿಪು. ೭-೧೮). [ ಘನ + ಆನಕ ]

**ಘನಾನಿಲ**, ಘನಾನಿಳ (ನಾ).= ಘನವಾತ: ಅಂತು ವೃಷಭೇಶ್ವರಂ . . . ಘನೋದಧಿ ಘನಾನಿಲ[ಪಾಠಾಂ.ಳ]ತನುವಾತತ್ರಿತಯ ಭಾಗದೊಳ್ವ್ಯಾಬಾಧನುಮನಂತ ಸುಖಾಂಬುಧಿನಿಳಯನುಮಾಗಿ ನೆಲಸಿರ್ದಂ (ಆದಿಪು. ೧೬-೫೦ ವ). **ಘನಾನಿಳ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಘನ + ಅನಿಲ ]

**ಘನಾನಿಳ** 'ಘನಾನಿಲ' ನೋ.

**ಘನಾರಾವ** (ನಾ). ದೊಡ್ಡ ಶಬ್ದ ; ಗಂಭೀರ ರವ: ಪ್ರೋದ್ಭಾಸಿ ವೀಚೀ ನಿಚಯ ಘನಘನಾರಾವರೌದ್ರಂ ಸಮುದ್ರಂ (ಕಾವ್ಯಸಾ. ೭೩ ಶೂದ್ರಕ).
[ ಘನ + ಆರಾವ ]

**ಘನಿ** (ನಾ). ಶ್ರೇಷ್ಠನಾದವನು; ಗಂಭೀರನಾದವನು: ಘನಗಳತಿಲಾಘವದ ಲೋಡಿದರೆ ರವಿಗಳ ಲಾಘವವು ತಾನೇನು . . . ಶಿರದಲಿ ಮೇಘವಹ ವಿಷಯಗಳ ಬಿಟ್ಟರೆ ತಾ ಘನಿಯನಿಸಿರ್ದ ಯೋಗಿಗೆ ದುಃಖವಿಲ್ಲೆಂದ(ನಿಭಾಗ. ೧೧-೩೪-೧೮). [ ಘನ + - ಇ$_3$ ]

**ಘನಿತ್ರ** (ನಾ). ಪಿಕಾಸಿ ; ಗುದ್ದಲಿ : ದ್ವಿಜಕುಳ ಪವಿತ್ರನೀಚಂ ಜಗದೊಳ್ ಪಾತ್ರಂ ರಿಪುಕುಳ ಕಂದಘನಿತ್ರಂ (ಎಕ. II, ೭೩-೧೧ ; 1118).
[ <ಸಂ. ಖನಿತ್ರ ]

**ಘನಿಷ್ಠ** (ನಾ). ಬಹಳ ನಿಬಿಡವಾದುದು,- ಸಾಂದ್ರವಾದುದು : ನೈವೇದ್ಯಕ್ಕಿಂತಲೂ ಇದರಲ್ಲಿ ಕವಿಯೊಡನೆ ಬ್ರಹ್ಮಸಂಯೋಗ ಘನಿಷ್ಠ ವಾಗಿದೆ, ಹೆಚ್ಚು ಮಧುರವಾಗಿದೆ (ಎರಸಿ. ೧೦). [ ಸಂ. ]

**ಘನಿಸು** (ಕ್ರಿ). ಗಟ್ಟಿಯಾಗು ; ಹೆಪ್ಪುಗಟ್ಟು ; ಗಡ್ಡೆಕಟ್ಟು : ಬಂಡೆ ಬಂಡೆಗಳಂತೆ ಘನಿಸಿ ಬಿದ್ದಿಹ ಮೌನ ಸೇವೆಗೈಯುತಿದೆ ಸೊಂಟಕಟ್ಟಿ (ವಿಜದ. ೭೪-೧೬) ; ತಾಪಸವೃತ್ತಿಯಲಿ ಘನಿಸಿರಲು ತೇಜ ದೀಪವೋ ದೇಹವೋ ಎನಿಸುತಿಹ ಒಡಲು (ಅಮತಂ. ೧೫-೬). [ ಘನ + - ಇಸು$_3$ ]

**ಘನೀಕರಣ** (ನಾ). ದಟ್ಟವಾಗಿಸುವುದು; ಹೆಪ್ಪುಗೊಳಿಸುವುದು ; ಗಟ್ಟಿಗೊಳಿಸುವುದು : ಇಮರುವುದು ಎಂದರೆ ದ್ರವರೂಪದ ನೀರನ್ನು ಆವಿಯ ರೂಪವಾಗಿ ಮಾರ್ಪಡಿಸುವುದು. ಇದೇ ಅನಿಲೀಕರಣ. ಇದಕ್ಕೆ ವ್ಯತಿರಿಕ್ತವಾದ ಪರಿವರ್ತನ ಘನೀಕರಣ (Condensation) (ಭೂವಿವ. ೭೦). [ ಸಂ. ]

**ಘನೀಕೃತ** (ಗು). ದಟ್ಟವಾಗಿಸಿದ; ಗಟ್ಟಿಗೊಳಿಸಿದ : ಹಾಲಿನ ಹುಡಿ ಮತ್ತು ಘನೀಕೃತಹಾಲನ್ನು ತಾಜಾಹಾಲಿಗಿಂತ ಹೆಚ್ಚುಕಾಲ ಇರಿಸಬಹುದು (ಅಡುಸಾ. ೮೦). [ ಸಂ. ]

**ಘನೀಭವಿಸು** (ಕ್ರಿ). = ಘನಿಸು : ಆ ಜ್ಯೋತಿರ್ಮೇಘ ಗರ್ಭದಿಂದ ಘನೀಭವಿಸಿದ ಸೂರ್ಯನು ಸುತ್ತುವ ವೇಗವನ್ನು ನಾವು ನಿರ್ಧರಿಸಬಹುದು (ಭೂಹುಟ್ಟು. ೨೫) ; ತನ್ಮಾತ್ರೆಗಳು ಸ್ಥೂಲತತ್ತ್ವವಲ್ಲ . . . ಕ್ರಮಕ್ರಮವಾಗಿ ಇವು ಘನೀಭವಿಸಿ . . . ಆಕಾಶಾದಿ ಸ್ಥೂಲತತ್ತ್ವಗಳಾಗಿ ಪರಿಣಮಿಸುತ್ತವೆ (ಜೀವಾತ್ಮ. ೧೫೫). [ ಘನೀಭವನ$_0$ + - ಇಸು$_3$ ]

**ಘನೀಭಾವ** (ನಾ). ಗಟ್ಟಿಯಾಗಿರುವಿಕೆ; ದಟ್ಟವಾಗಿರುವಿಕೆ; (ಕಲ್ಲಿನಂತೆ) ಸ್ವರೂಪವನ್ನು ಪಡೆದಿರುವಿಕೆ: ಬಿಸಿಲುಂ ಬೆಳ್ದಿಂಗಳುಂ ಕಟ್ಟಲೆಯುಮಿವು ಮಿಥಸ್ಸ್ಪರ್ಧೆಯಂ ಮಾಣ್ದು . . . ನೆಲಸಿದುವು ಘನೀಭಾವಮಂ ತಾಳ್ದಿ ತಾಮಿಲ್ಲಿ ಸಮಂತೆಂಬನ್ನೆಗಂ ತದ್ಗಿರಿಪರಿಸರದೊಳ್ ರಾಗಮಂ ಚಿತ್ತದೊಳ್ ಪೆರ್ಚಿಸುತಿರ್ಕುಂ ಪದ್ಮರಾಗಂ ಶಶಿಮಣಿ ಹರಿನೀಲಂ ವಿಲೋಲಾಂಶುಜಾಲಂ (ಚಂದ್ರಪು. ೧೦-೪೦). [ ಸಂ. ]

**ಘನೀಭೂತ** (ಗು). ೧. ಗಟ್ಟಿಯಾದ ; ಸಾಂದ್ರವಾದ ; ಹೆಪ್ಪುಗಟ್ಟಿದ. (ನಾ). ೨. ಮೋಡದಿಂದ ಕೂಡಿದುದು; ಮೇಘಮಯವಾದುದು : ತನತನಗೆ ತೀವಿ ತೀಡಿತು ಬಲಾಹಕಕುಲಂ ಗಗನಂ ಘನೀಭೂತಮಾದು ದೆಂಬಂದದಿಂ ಮಿಗೆ ತೀವಿ ಸೂಸಿದುವು ಸಲಿಲಮುತ್ಸಾಹದಿಂ (ಇಳರ. ದೇ. ೫೦-೨೩). [ ಸಂ. ]

**ಘನೋದಧಿ** (ನಾ). [ಜೈನ] ಅನಂತವಾದ ಲೋಕವನ್ನು ಸುತ್ತಿರುವ ಮೂರು ಗಾಳಿಗಳಲ್ಲಿ ಒಂದು: ಘನೋದಧಿ ಘನಾನಿಳ ತನುವಾತ ತ್ರಿತಯ ಭಾಗದೊಳ್ . . . ನೆಲಸಿರ್ದಂ (ಆದಿಪು. ೧೬-೫೦ ವ) ; ಅವಱ ಪೆಸರ್ಗಳುಂ ಘನೋದಧಿ ಘನವಾತ ತನುವಾತಂಗಳೆಂಬುವುವವಱೊಳಗೆ ಘನೋದಧಿ ಯೆಂಬ ಮೊದಲ ಮಹಾವಾತಮಂ ಘನವಾತಮೆಂಬೆರಡನೆಯ ಗಾಳಿಯಂ ಕಿಱಿದು ಮೇಗೆ ಪೋಗೆ (ಶಾಂತಿಪು. ೧೨-೫೦ ವ). 'ಘನವಾತ' ಪರಾ.
[ ಘನ + ಉದಧಿ ]

**ಘನೋದಯೋಪಳ** (ನಾ).=ಘನೋಪಲ : ಘನೋದಯೋಪಳಂ ಸೂಸಿದುದಿಂದ್ರಗೋಪಮಂ (ರಾಜಶೇ. ೮-೧೧೪).
[ ಘನ + ಉದಯ + ಉಪಳ (=ಉಪಲ) ]

**ಘನೋದ್ದೇಶ** (ನಾ). ಉತ್ತಮವಾದ ಗುರಿ ; ದೊಡ್ಡ ಉದ್ದೇಶ: ಘನೋದ್ದೇಶ ಸಾಧನೆಗಾಗಿ ತನ್ನ ಜೀವನವನ್ನೇ ಬಲಿದಾನಗೆಯ್ಯಲು ಸಿದ್ಧ ವಾಗಿರುವ ವೀರರಮಣಿಯೆಂದು ಅವಳು ಭಾವಿಸಿಕೊಂಡಿದ್ದಳು (ಪುನರು. ೨೪೦). [ ಘನ + ಉದ್ದೇಶ ]

**ಘನೋದ್ಭವ** (ನಾ). ೧. ಮೇಘದ ಹುಟ್ಟು,-ಉತ್ಪತ್ತಿ. ೨. ಶ್ರೇಷ್ಠವಾದ ಜನ್ಮ ; ಲೋಕೋತ್ತರವಾದ ಹುಟ್ಟು,-ಉತ್ಪತ್ತಿ. ೧,೨ : ಘನೋದ್ಭವದ ವಿಷದೇಹಿಯಾಗಿಯು ಜನಕ್ಕಮೃತದೇಹವನೀವಳಾಹಾ ವಿರುದ್ಧಸ್ವಭಾವೆ ಗಂಗಾನದಿ ಧರಾತಳದೊಳು (ಹಜಕಾ. ೧೦-೩೦).
[ ಘನ + ಉದ್ಭವ ]

**ಘನೋಪಲ,** ಘನೋಪಳ (ನಾ). ಮೋಡದಿಂದ ಮಳೆಯೊಂದಿಗೆ ಬೀಳುವ ಆಲಿಕಲ್ಲು ; ಕರಕ : ಘನೋಪಲದ ಮಾಟ್ಕೆಯಿಂ ಕರಗೆ ತೃಷ್ಣೆ ಸಾಮ್ರಾಜ್ಯದೊಳ್ (ಶಂರಾಮಾ. ೧೦-೧೨೭) ; ವರ್ಷಮಯ ಧಾರೆಯಿಂದಿಂದ್ರ ಗೋಪಗಳಿಂ ಘನೋಪಲಗಳಿಂದ ಮುಂಗಾರ್ ಬಂದುದು (ಭಾವಚಿಂ. ೬-೨).

**ಘನೋಪಳ :** “ ಕರಕಃ, ಘನೋಪಳಃ – ಈ ೨ ಆಲಿಕಲ್ ” (ಹಲಾಯು. ೧೦-೫೯) ; ಪಳಿಕಿನ ಕೊಡದೊಳ್ ಗಂಗಾಜಳಂಗಳಂ ತೀವಿ ತರ್ಪ ಸುರವನಿತೆ ಘನೋಪಳವಂಂ ತಾಳ್ದಿದ ವಿದ್ಯುದ್ವಿಳಾಸಮಂ ನಿಜವಿಳಾಸದಿಂ ಮಸುಳಿಸಿದಳ್ (ಮಲ್ಲಿಪು. ೧೪-೨೭೦); ಎಳವುಲ್ಗಳೊಳ್ ಘನೋಪಳಕುಳದಂತೆ ತೋಱಿದುವು ನವ್ಯ ಘನಚ್ಯುತ ತೋಯಬಿಂದುಗಳ್ (ಜಗವಿ. ೪-೧೯). [ ಘನ+ಉಪಲ ]

**ಘನೋಪಳ** ‘ಘನೋಪಲ’ ನೋ.

**ಘನ್ನ** (ಗು). ಶ್ರೇಷ್ಠವಾದ ; ಪವಿತ್ರವಾದ ; ಘನತೆಯನ್ನುಳ್ಳ : ಹೊನ್ನು ಹೆಣ್ಣು ಕೋಟಿ ಕನ್ಯಾದಾನವನು ಸನ್ನಿಧಾನದಿಂದ ಘನ್ನ ಜನರಿಗಿತ್ತು(ಪುರಂದ. ೩-೯೧-೧) ; ಕನ್ಯೆ ಲಕುಮಿರಮಣ ವಿಜಯವಿಠ್ಠಲರೇಯ ಘನ್ನಮಹಿಮ ನಿನ್ನ ವಾಕ್ಯ ಅಮೃತಸಿದ್ಧ (ಮೋಕ್ಷದೀ. ೩-೧೦); ಚಿನ್ನವಾಗಿ ಮನ ಘನ್ನವಾಗಿ ಬಾಳೆಂದು ಹರಸುತಿಹನು (ಅಮತಂ. ೫೭-೧೭). ‘ಗನ’ ಪರಾ.

[ <ಸಂ. ಘನ ]

**ಘಮ** (ನಾ). ಸುವಾಸನೆ ; ಕಂಪು : ಬೇಸಿಗೆಯ ದಿನಗಳಲ್ಲಿ ನದಿಯ ಮೇಲೆ ಬೀಸುವ ಗಾಳಿಯಂತಿತ್ತು ಆ ಗಾಳಿಯ ಘಮ (ಶಾಲಮ. ೨೨೫).

**ಘಮಘಮ₂** (ದ್ವಿರುಕ್ತಿ): ಮೈಸೂರಿನ ಗಂಧದ ಕಡ್ಡಿಗಳಿಂದ ತೊಟ್ಟಿಯೆಲ್ಲ ಘಮಘಮ ಎನ್ನುತ್ತಿತ್ತು (ಹುಟ್ಟಹ. ೧೪). [ <ಗಮ₁ ]

**ಘಮಘಮ₁** (ನಾ). ಒಂದು ಅನುಕರಣ ಶಬ್ದ: ಘನಕಲಶದಿಂ ತುಂಬಿ ಘಮಘಮ ನಿನದವಾದುದು ಕೇಳಿ ಕುಂಜರವೆನುತಲೆಚ್ಚನು (ಅನಂರಾ. ೨-೩-೮).

**ಘಮಘಮ₂** ‘ಘಮ’ ಪರಾ.

**ಘಮಘಮಾಟ** (ನಾ). ಸುವಾಸನೆ; ನರುಗಂಪು: ಅಂಬೆಮೋಹರ್ ಅಕ್ಕಿಯ ಅನ್ನದ ವಾಸನೆ ಓಣಿಗೇ ಘಮಘಮಾಟ ಬೀರುತ್ತಿತ್ತು (ದೀಪಹ. I, ೨೧). [ ←ಮರಾ. ಘಮಘಮಾಟ್ ]

**ಘಮಘಮಿಸು** (ಕ್ರಿ). ಬಹಳವಾಗಿ ಸುವಾಸನೆಯನ್ನು ಬೀರು ; ಕಂಪು ಬೀರು: ಘಮಘಮಿಸುವ ದೇಹಪರಿಮಳದಿಂದೊಂದು ಗಮಕದೊಳೆಸೆದನಾ ರಾಯ (ಭರಜ. ೧-೩೭) ; ಕೊನೆಗೆ ಪರಿಮಳ ತುಂಬಿದ ಹೂವೇ ಘಮ ಘಮಿಸುವದು (ಕನ್ನಜಾ. ೧೨೦). [ ಘಮಘಮ₂ + – ಇಸು₃ ]

**ಘಮಾಯಿಸು** (ಕ್ರಿ).=ಘಮಘಮಿಸು : ಜಾನಕಮ್ಮನವರು ಸಂಡಿಗೆ ಹುರಿಯುತ್ತಿದ್ದರು. ಎಣ್ಣೆವಾಸನೆ ಈಚೆಗೂ ವ್ಯಾಪಿಸಿ ಘಮಾಯಿಸುತಿತ್ತು (ಮೂಲಾನ. ೬೪). ‘ಕಮ್ಮಾಯಿಸು₁’, ‘ಗಮಾಯಿಸು’ ಪರಾ.

[ <ಘಮ + – ಇಸು₃ ]

**ಘಮೆಂಡಿ** (ನಾ). (ಉಕ) ಹೆಮ್ಮೆ ; ಮದ ; ಗರ್ವ ; ಅಹಂಕಾರ : ಇಂದಿ ಸೊಕ್ಕು–ರೊಕ್ಕದ ಘಮೆಂಡಿ, ಎಷ್ಟ ದಿನಾ ತಡದೀತು ? (ದೀಪನಿ. ೧೫೩) ; ಇವಾ ರೊಕ್ಕದ ಘಮೆಂಡ್ಯಾಗ ಅದಾನು (ನಡದಾ. I, ೨೯೦).

[ ←ಪಾರ. ಹಿಂ. ಘಮಂಡ್ ; ಮರಾ. ಘಮೆಂಡೀ, ಘಮೆಂಡ ]

**ಘಮ್ಮನ** (ನಾ). ದೊಡ್ಡ ಮನಸ್ಸು; ಉದಾರ ಮನಸ್ಸು: ರಮ್ಮೆಯರಸ ಪರಬೊಮ್ಮ ಬೊಮ್ಮನಯ್ಯಾ ತಿಮ್ಮವಿಜಯವಿಠ್ಠಲ ಮಹಮೂರುತಿ ಘಮ್ಮನದಿಂದಲಿ ಬಂದು ದುಮ್ಮನವ ಕಳೆವ (ವಿಸಾಸು. ೩೩-೨).

[ <ಘನ + ಮನ ]

**ಘಮ್ಮನೆ** (ಅ). ಬೇಗನೆ; ಕೂಡಲೆ; ತಕ್ಷಣ: “ ಘಮ್ಮನೆಯೆಂದು ಶೀಘ್ರದೊಳ್ ” (ಕರ್ಣಾನಿ. ೧೭) ; ನಿನ್ನೊಡತಿಯ ಮನೆ ಯಾವುದು ಘಮ್ಮನೆ ಪೇಱೆಂದು ನೃಪತಿ ಬೆಸಗೊಳಲ್ (ಪುಣ್ಯಾಸ್ರ. ೩-೧೮) ; ನಮ್ಮ ದೃಷ್ಟಿಗಳ ಘಮ್ಮನೆ ಸೆಳೆದುಕೊಂಬ (ವೀಶೈಪು. ೩-೧೭-೧೫) ; ಧರ್ಮವುಳ್ಳ ಮನುಷ್ಯ ನಾರಾಯಣಭಕುತನೆನಿಸಿ ಘಮ್ಮನೇ ದಾಂಟುವನು ಮಾಯೆಯ (ನಿಘಾಗ. ೧೦-೫-೨೫). [ ಘಂ₁ + – ಅನೆ₁ ]

**ಘಮ್ಮಿಡು** (ಕ್ರಿ). ಘಂ ಎಂದು ಶಬ್ದಮಾಡು,–ಮೊಳಗು : ನಿನ್ನ ಕಾವಗ್ಗಳೆಯರಿಲ್ಲಕಟೆನುತ ಮುಂದಕೆ ನಿಲುಕಿ ಹೊಯ್ದನು ಗಗನ ಘ[ಪಾಠಾಂ. ಗ, ಘು]ಮ್ಮಿಡೆ ಕಲಿ ವಿಭೀಷಣನ (ತೊರರಾ. ೬-೧೪-೨೫) ; ಪುರಹರಮುನ್ನತ ಸ್ವರಮೆತ್ತಿ ಮೊಳಗಿದ ಗಗನ ಘಮ್ಮಿಡಲು (ಅಂಬಿಕಾ. ೧೦-೫೪).

[ ಘಂ₁ + ಇಡು₁ ]

**ಘಮ್ಮು** (ನಾ). ಒಂದು ಅನುಕರಣ ಶಬ್ದ : ಘಮ್ಮು ಘಲಿಲೆನೆ ನಿರಿಸಿಳಿಲು ಗಱಿದೊಱಿಲಿದವು ಘಲುಂಗುಣನ ಶರಜಾಲ (ಕುವ್ಯಾದ್ರೋ. ೧೦-೧೯).

**ಘಮ್ಮೆನ್ನು** (ಕ್ರಿ). ಸುವಾಸನೆಯನ್ನು ಬೀರು ; ಕಂಪನ್ನು ಸೂಸು : ಅಮ್ಮಾನ ಗುಡಿ ಮುಂದೆ ಘ[ಪಾಠಾಂ. ಗ]ಮ್ಮೆನ್ನೋದಿದು ಏನೆ ಗಂಡು ಭೂತಾಳೆ ಗಜನಿಂಬೆ ಘಮನಕ್ಕೆ ಹಿಂಡುಮಾರವಲ್ಲ ಫಲಬಿಟ್ಟೊ (ಹಳ್ಳಿಯ. ೩೫) ; ನೀವು ಮುಡಿದಿರುವ ಮಲ್ಲಿಗೆ ತುಂಬಾ ಘಮ್ಮೆನ್ನುತ್ತಿದೆ (ರೂಢಿ).

[ ಘಂ₂ + ಎನ್ನು (<ಎನ್₁) ]

**ಘಯ್ಸು** ‘ಘಳಿಸಾಸ’ ನೋ.

**ಘರಖಾಯಿಸು** (ಕ್ರಿ). ಗುರುಗುಟ್ಟು ; ಗರ್ಜಿಸು : ಹದಿನಾರು ಹೆಜ್ಜೆ ಪಟಾವಳಿ ಹುಲಿ ಘರಖಾಯಿಸಿಕೊಂಡು ಬರುವುದನ್ನು . . . ಕಂಡನು (ಕಥಾಮಂ. VI, ೮೫). [<ಗುರುಕಾಯಿಸು]

**ಘರಘರನೆ** (ಅ). ಘರಘರ ಎಂಬ ಶಬ್ದದೊಡನೆ: ಭಾಳಮಧ್ಯಮಂ ತೀಕ್ಷ್ಣಕರಪತ್ರದಿಂ ಘರಘರ[ಪಾಠಾಂ. ಘರಿಘರಿ]ನೆ ಸೀಳುತಿರಲು (ಜೈಮಿಭಾ. ೨೬-೬೩). [ ಘರಘರ₀ + – ಅನೆ₁ ]

**ಘರಟಿಗೆ** ‘ಗರವಟಿಗೆ’ ನೋ.

**ಘರಟ್ಟ** (ನಾ). ೧. ಬೀಸುವ ಕಲ್ಲು ; ರಾಗಿಕಲ್ಲು : ಪರಿದುದು ಪಾಸುಂ ಪೊಕ್ಕುಂ ತಿರುಗಿದುದು ಘರಟ್ಟದಂತೆ . . . ಕೊರ್ವಿ ನಿಂದುದು ಸೌಭಂ (ಜಗವಿ.೧೪-೯೫) ; ದುರಿತಗೋಧೂಮನ [ದ] ಘರಟ್ಟನಾ ಬಸವೇಶನತ್ಯಧಿಕ ಮಹಿಮೆಯಂ ಪೊಗಳ್ವರಾರೀ ಜಗದೊಳು (ಗುರುಚಾ. ೧೪-೩೧). ೨. (ಆಲಂ) ಪುಡಿ ಮಾಡುವವನು ; ನಾಶಪಡಿಸುವವನು : ಜೆಟ್ಟಿಗನೆನೆ ನೆಗಟ್ದಹಿತ ಘರಟ್ಟಂ (ಎಇ. VI, ೨೦೭-೧೯ ; 1057) ; ರಟ್ಟಘರಟ್ಟವೆಸರ್ ಧರೆಗೆಟ್ಟಳವೆನೆ ರಾಜ್ಯಪಟ್ಟಬಂಧೋತ್ಸವದೊಳ್ (ಎಇ. V, ೧೭-೧೭; 1142); ಭಕುತರಾರ್ತಿಯನೆಱಿವ ವಿಪುಳ ಘರಟ್ಟರಾರುಂಟೆಂದಳಿಂದುಮುಖಿ (ಕುವ್ಯಾಅ. ೦೬-೨೬). ‘ದನುಜಘರಟ್ಟ’ ಪರಾ. [ ಸಂ. ]

**ಘರವಟಿ** (ನಾ). ಯಾಗಮಾಡುವವನು ; ಯಾಗದೀಕ್ಷಿತ : ಹರಿಬಲಮಂ ಕಂಡಳುಕುವ ಮದಕರಿವೊಲ್ ಪಿಂತುರವಣಿಸುವ ಹರಿಯಂ ಘರವಟಿ ಕಂಡಾಲಲು ಹರಿಚಕ್ರವ ತಿರುಹಿಸಿ ತಿರುಹುವ ಮದದಿಂ ಕಾಣದೆ ಬೊಮ್ಮನ ತಲೆಗಿಟ್ಟು (ವೀರೇಚ. ೨-೩೫). ‘ಗರವಟ್ಟ₃’ ಪರಾ. [ <ಸಂ. ಗೃಹಪತಿ ]

**ಘರವಟಿಗ** ‘ಗರವಟಿಗ₁’ ನೋ.

**ಘರವಟಿಗೆ** ‘ಗರವಟಿಗೆ’ ನೋ.

**ಘರವಟಿಗೆಬರು** ‘ಗರವಟಿಗೆವರ್’ ನೋ.

**ಘರವಟ್ಟ** ‘ಗರವಟ್ಟ₁’ ನೋ.

**ಘರವಟ್ಟಿಗೆ**‘ಗರವಟಿಗೆ’ ನೋ.

**ಘರವಟ್ಟಿಸು** ‘ಗರವಟಿಸು’ ನೋ.

**ಘರಾಣೆ,** ಗರಾಣ (ನಾ). ೧. ಮನೆತನ ; ಕುಟುಂಬ ; ವಂಶ : ನಮ್ಮ ಘರಾಣೆಗೆ ಅವರೇ ಈಗ ಉಳಿದ ಹಿರಿಯರು (ಗೀಚುಗಿ. ೪೭) ; ಏನು ಹೇಳತೀ ಶೀನಪ್ಪ . . . ಎಷ್ಟೋ ದಿವಸದಿಂದ ಬಂದ ಒಂದೇ ಘರಾಣೆ, ಇದನ್ನು ನನ್ನ ಕಣ್ಮುಟ್ಟ, ನಾನು ಬದುಕಿರುವಾಗ ಹರಿದು ಹಂಚಿಹಾಕಬೇಕೇನು ?

(ಇತಿಶ್ರೀ. ೧೫೫). ೨. [ಸಂಗೀತ] ಸಂಗೀತಕಲೆಯಲ್ಲಿ ವಿಶಿಷ್ಟರೀತಿಯ ಒಂದು ಪಂಥ,-ಸಂಪ್ರದಾಯ: ಇವನು ಆಗ್ರಾ ಘರಾಣೆಗೆ ಸೇರಿದವನು ಎಂದು ಹೇಳಲು ಸಾಧ್ಯ (ಭಾರದ. ೫೮೧); ಕರೀಂಖಾನರ ಒಂದು ಘರಾಣೆಯವರಂತೆ, ಇನ್ನೊಂದು ಘರಾಣೆಯವರು ಅದೇ ಭೈರವಿರಾಗವನ್ನು ಹಾಡುತ್ತಾರೆಂಬ ನಿಯಮವಿಲ್ಲ (ಯಕ್ಷಬ. ೬೫). **ಗರಾಣ: ೨.** ಹಿಂದೂಸ್ಥಾನಿ ಗರಾಣಗಳಂತೆ ಕರ್ನಾಟಕಸಂಗೀತದಲ್ಲೂ ಸಂಪ್ರದಾಯಗಳುಂಟು (ರೂಢಿ).

[ ← ಮರಾ. ಘರಾಣೇ, ಘರಾಣಾ ; ಹಿಂ. ಘರಾನಾ ]

**ಘರಿಕ್ಕನೆ** (ಅ). ಸರ್ರನೆ ; ತಟ್ಟನೆ : ಜಡೆಯ ತುಡುಕಿ ಪಿಡಿದೊಡನೆ ಘರಿಕ್ಕನೆ ಮಡಮುರಿದೆಸೆವೊಳ್ಮೊಗದ ಅಡವಾಯುವ ಕೊರ್ನೋಟದ ಕೊಮರಿಯ ನೊಡಬಡಿಸುವುದೊಲಿಸುವುದು (ಹದಿಬ. ೬-೩೮). [ಘರಿಕ್$_0$ + – ಅನೆ$_1$]

**ಘರಿಘರಿ** 'ಘಱಿಘಱಿ' ನೋ.

**ಘರಿಘರಿನೆ** (ಅ). ಘರಿಘರಿ ಎಂದು ಶಬ್ದ ಹೊರಡುವಂತೆ : ಘರಿಘರಿನೆ ಹಲ್ಮೊತ್ತಿ ಹೂಡಿದನೆದೆಗೆಯಕಟಾ (ತೊರರಾ. ೫-೨-೪೯); ಭಾಳಮಧ್ಯಮಂ ತೀಕ್ಷ್ಣಕರಪತ್ರದಿಂ ಘರಿಘರಿ[ ಪಾಠಾಂ. ಘರಘರ ]ನೆ ಸೀಳುತಿರಲು (ಜೈಮಿಭಾ. ೨೬-೬೩). [ < ಘಱಿಘಱಿ ]

**ಘರಿಯಲ್** (ನಾ). ಒಂದು ಅನುಕರಣ ಶಬ್ದ : ಒಡೆಯೆ ಘರಿಯಲ್ಲೆನಲ್ಕೆ ತೋಳುಡಿದು ನೆಲಕ್ಕೆ ವಿಟ್ಟು(ಛ)ದು (ಸೌಇಇ. IX–I, ೧೬೩-೧೯ ; 1093).

**ಘರಿಲ್, ಘರಿಲಂ** (ನಾ). ಒಂದು ಅನುಕರಣ ಶಬ್ದ : ಮೆಯ್ಯ ಮಸಿ ಕೊರಲ ಬಕ್ಕಳೆ ಪೊಯ್ಯೆ ಘರಿ [ಪಾಠಾಂ. ಕನ, ಪುಗಿ] ಲ್ಲರೆವ ಕೆಯ್ಯ ಕಂಕರಿಕೆ ಕರಂ ರಯ್ಯಮೆನೆ ಪಾಡುತಿರ್ದಳೆಂ (ಕಾವ್ಯಾವ. ೩೦೯) ; ಸಂದಣಿಸಿ ಪತ್ತಿದುರಿ ಘರಿಲೆಂದುರುಪಿಡೆ ಬೇಗದಿಂದೆ ಉರಿದು (ಗಿರಿಕ. ೮-೫೨) ; ಘರಿಲೆಂಬ ಗಿಟಿಲೆಂಬ . . . ಭೋರೆಂಬ ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟೆ (ಇಹರು ದೇ. ೪೦-೨೩). **ಘರಿಲು :** ಸರಳ ತೆಗೆದನು ಸರಸಿಜಪ್ರಿಯ ವರಸುತನು ತನ್ನುರವ ಬಗಿದನು ಘರಿಘರಿಲು ಘರಿಲೆನಲು ತೆಗೆದನು ನಿರ್ಮಲೋದಕವ (ಕುವ್ಯಾಕ. ೨೭-೧೮).

**ಘರಿಘರಿಲ್, ಘರಿಘರಿಲು** (ದ್ವಿರುಕ್ತಿ) : ಭರದಿಂದ ಘರಿಘರಿಲೆಂದು ಕೊಯ್ದಿಡೆ (ಭೈರವೇ. ೧-೨೨೦); ಸರಳ ತೆಗೆದನು ಸರಸಿಜಪ್ರಿಯ ವರಸುತನು ತನ್ನುರವ ಬಗಿದನು ಘರಿಘರಿಲು ಘರಿಲೆನಲು ತೆಗೆದನು ನಿರ್ಮಲೋದಕವ (ಕುವ್ಯಾಕ. ೨೭-೧೮).

**ಘರಿಲು** ' ಘರಿಲ್ ' ನೋ.

**ಘರಿಸು**(ಕ್ರಿ). ಖಚಿತವಾಗಿ ಹೇಳು (?) : ಒಂಭತ್ತುನಾಡೂರ ಕೆಣೆಗಿಲ ದೇಕಣಹೆಗಡೆಯೊಳಗಾಗಿ ಯಿಟ್ಟು ಎರಡುಂ ಸಾಯಲಾಗದೆಂದು ನಾಡುಂ ಹೆಗ್ಗಡೆ ಮುಂದೆ ಘರಿಸಿ (ಎಪಿಕ. ೧೯೩೨, ೧೨-೬ ; 1190). [ ? ]

**ಘರ್ಘರ$_1$** (ನಾ). ಒಂದು ಅನುಕರಣಶಬ್ದ : ಬೆರಸಿ ಪದಾತಿ ನೆಕ್ಕುನೆರಿಲೆಂಬ ನೆಳಿಲ್‌ನೆಳಿಲೆಂಬ ಘಾರು ಘರ್ಘರ ಘರಿಲೆಂಬ . . . , ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳ್ (ಗಿರಿಕ. ೬-೬೮); ಮಳೆ ಧಾರಾಕಾರವಾಗಿ ಸುರಿಯಿತು, ನೀರು ಚಾವಣಿಯಿಂದ ಕೆಳಗಣ ತೊಟ್ಟಿಗೆ ಘರ್ಘರ ನಿನಾದದೊಡನೆ ದುಮುಕುತ್ತಿತ್ತು (ಪುನರು. ೨೪೯).

**ಘರ್ಘರ$_2$** 'ಗರ್ಘರಿ$_1$' ನೋ.

**ಘರ್ಘರಧ್ವನಿ** (ನಾ). ಕರ್ಕಶವಾದ ಧ್ವನಿ ; ಗೊಗ್ಗರಧ್ವನಿ : ಅನಂತರಂ ಪ್ರತಿನಿನಾದಿತ ವಿಯದ್ವಿವರಮಪ್ಪ ಘೋರಘರ್ಘರಧ್ವನಿಯಿನಿಂತೆಂದಂ (ಚಂದ್ರಪು. ೫-೭೦ ವ). [ ಘರ್ಘರ$_1$ + ಧ್ವನಿ ]

**ಘರ್ಘರಿ** (ನಾ). ೧. ಆಭರಣವಾಗಿ ಧರಿಸುವ ಒಂದು ಬಗೆಯ ಗೆಜ್ಜೆ ಅಥವಾ ಗಂಟೆ. ೨. ಗೆಜ್ಜೆಗಳಿಂದ ಕೂಡಿದ ಒಡ್ಯಾಣ,-ಡಾಬು.

[ ಸಂ. ಘರ್ಘರೀ ]

**ಘರ್ಘರಿಕೆ** (ನಾ). ೧.=ಘರ್ಘರಿ ೧ : (ಛ). ೨. ಒಂದು ಬಗೆಯ ವಾದ್ಯ : ತುರಗಾರೋಹಣದಿಂದವೊರ್ಮೆ ಗಜಶಿಕ್ಷಾಲೀಲೆಯಿಂದೊರ್ಮೆ ಕಾವ್ಯರಸಾಸ್ವಾದದಿನೊರ್ಮೆ ವೈಣಿಕಕೃತಪ್ರಸ್ತಾವದಿಂದೊರ್ಮೆ ಘ[ಪಾಠಾಂ. ಗ] ರ್ಘರಿಕಾಸ್ವಾದನದಿಂದದೊರ್ಮೆ . . . ಪೊಟ್ತುಗಳೆವಂ ಶ್ರೀಗೋಮಿನೀವಲ್ಲಭಂ (ಚಂದ್ರಪು. ೪-೨೮). [ ಸಂ. ಘರ್ಘರಿಕಾ ]

**ಘರ್ಘರಿಸು** (ಕ್ರಿ). ಘರ್ಘರ ಎಂದು ಧ್ವನಿಮಾಡು : ಮಂಥರೆಯ ಕರ್ಕಶದ ಚೀತ್ಕೃತಿಕ್ರಕಚದಿಂ ಭರತಜನನಿಯ ಮೌನಶಿಲೆ ಘರ್ಘರಿಸುವಂತೆ (ಶ್ರೀರಾಮಾ. ೧೧೩-೩೦). [ ಘರ್ಘರ$_1$ + – ಇಸು$_3$ ]

**ಘರ್ಮ** (ಗು). ೧. ಉಷ್ಣವಾದ ; ಬಿಸಿಯಾದ. 'ಘರ್ಮರುಚಿ' ಪರಾ. (ನಾ). ೨. ಬಿಸುಪು ; ಕಾವು ; ಸೆಕೆ ; ಉಷ್ಣ : ಆನಿದಂ ಪೊದೆದೊಡೆ ಘರ್ಮಮಕ್ಕುಂ (ಸುಕುಮಾ. ೧೦-೧೧೯) ; ಘನಸಮಯದೊಳಗೆ ಘರ್ಮಂ ಜನಿಯಿಸುವುದಾಗಳಂತೆ ಮಟಕೆ ಕೊಳ್ವವೊಲ್ (ಪುಷ್ಪಪು. ೯-೩೮) ; ಯಮಮಥಮರ್ಮಪಘನಘರ್ಮನಿರ್ಮೂಲ . . . ಶಿವ (ಉದ್ಭದೇ. ೬-೨೯). **೩. ಉಷ್ಣಜ್ವರ ; ಮಹಾಜ್ವರ :** " ಘರ್ಮಮುಷ್ಣಂ ಮಹಾಜ್ವರಮೆಂದೆನಿಕ್ಕು " (ಮಂಗರಾ. ೧೧೪-೪). **೪. ಉಷ್ಣಕಾಲ ; ಬೇಸಗೆ ; ನಿದಾಘ :** " ಕಡುಬಿಸಿಲು ಘರ್ಮಂ ನಿದಾಘಮೆನಿಕ್ಕು " (ಮಂಗರಾ. ೧೦-೨). **೫. ಸೂರ್ಯನ ಪ್ರಖರವಾದ ಕಿರಣ; ಕಡುಬಿಸಿಲು. ೬. ಬೆವರು; ಸ್ವೇದ.** " ಪ್ರಾಲೇಯಮುಷ್ಣಂ ಬೆವರು ಮೂಱು ಘರ್ಮಾಖ್ಯಂ " (ನಾನಾಕಂ. ೮೭); " ಬೆಮರ್ ಶೀತೋಷ್ಣ ಘರ್ಮಾಂಕಿತಂ " (ನಾನಾರ. ೨೩). [ ಸಂ. ]

**ಘರ್ಮಕಣ** (ನಾ). ಬೆವರುಹನಿ : ರಥಾಂಗಕುಚಂಗಳಂ ಸರಃಸ್ಥಳದೊಳ್ ಕೂಡಿ ಘರ್ಮಕಣಮೆಂಬಿನಮಂಬುಕಣಾಳಿದಾಳ್ದದೇಂ ಸುಳಿದುದೊ . . . ಮಂದಮಾರುತಂ (ಶಬಶಂ. ೧-೫೩). [ ಘರ್ಮ + ಕಣ$_3$ ]

**ಘರ್ಮಕಾಲ** (ನಾ). ಬಿಸಿಲುಗಾಲ ; ಬೇಸಗೆ ; ನಿದಾಘ : ಇದೇಂ ಘನಕಾಲಮೋ ಘರ್ಮಕಾಲಮೋ (ಪುಷ್ಪಪು. ೧೩-೧೮) ; ಬೃಂದಾವನಂ ಗೋಪಗೋವೃದ್ಧಿಗೆ ತಾಣಂ ಘರ್ಮಕಾಲಂ ಸಮನಿಸಿರೆಯುಂ (ವಿಷ್ಣುಪು. ೫-೨-೩೫). [ ಘರ್ಮ + ಕಾಲ ]

**ಘರ್ಮಜಲ** (ನಾ). ಬೆವರು ; ಸ್ವೇದ : ಇನಿಯನ ಕೆಂದಳಂ ತಳವನೊಯ್ಯನೆ ಸೋಂಕೆ ಪೊದಟ್ದ ನಾಣ ಪೆಂಪಿನೊಳೊಗೆತರ್ಪ ಘರ್ಮಜಲ ಬಿಂದುಗಳಿಂ . . . ಒಪ್ಪಿ ತೋಱಿದಳ್ (ಆದಿಪು. ೪-೪೯) ; ಘರ್ಮಜಲ ಮುಣ್ಮಿದುದಂಗದೊಳ್ (ಶಬಶಂ. ೪-೧೧೨) [ ಘರ್ಮ + ಜಲ$_2$ ]

**ಘರ್ಮಬಿಂದು** (ನಾ).=ಘರ್ಮಕಣ : ಸ್ಮರಕಾಂತಾರತ ಘರ್ಮಬಿಂದುಚಯಮೋ (ಕಾದಂಪೂ. ೭೪೦); ಘರ್ಮಬಿಂದುಸಂತಾನದಂತುರಿತ ಗಂಡಮಂಡಳನುಂ (ಚಂದ್ರಪು. ೫-೧೧೧ ವ). [ ಘರ್ಮ + ಬಿಂದು ]

**ಘರ್ಮರುಚಿ** (ನಾ). ಉಷ್ಣವಾದ ಕಿರಣಗಳನ್ನುಳ್ಳವನು ; ಉಷ್ಣರಶ್ಮಿ ; ಸೂರ್ಯ : ಘರ್ಮರುಚಿ . . . ಪರಮೋಚ್ಚಾಂಶದೊಳೊಂದಿ ನಿಂದೊಡೆ (ಜಾತತಿ. ೮-೧೧). [ ಘರ್ಮ + ರುಚಿ ]

**ಘರ್ಮವಾರಿ** (ನಾ).=ಘರ್ಮಜಲ : ಅಡರಿ ಕಟಾಕ್ಷ ಚಂದ್ರಿಕೆ ಪಳಂಚಿ ಗವಾಕ್ಷದ ಚಂದ್ರಕಾಂತದಿಂದುಡುಗದೆ ಸೋರ್ವ ನೀರ್ವನಿಗಳುಣ್ಮಿದ ನರ್ತನ ಘರ್ಮವಾರಿಯೊಳ್ ತಡತಡಮಾಗೆ (ಮಲ್ಲಿಪು. ೨-೭೦) [ಘರ್ಮ+ವಾರಿ$_2$]

**ಘರ್ಮಸಮಯ** (ನಾ).=ಘರ್ಮಕಾಲ : ಅಂತು ಬಂದ ಘರ್ಮಸಮಯದೊಳ್ . . . ಮಹೀಪಾಲಂ ಲೀಲೆಯಿಂದಿರ್ಪನ್ನೆಗಂ (ಚಂದ್ರಪು. ೯-೮೩ ವ),

[ ಘರ್ಮ + ಸಮಯ ]

**ಘರ್ಮಾಂಬು** (ನಾ).=ಘರ್ಮಜಲ : ಸ್ಫುರಿತ ನಿಟಿಲ ಘರ್ಮಾಂಬು ಚೆಲ್ವಾಗೆ (ಜಗವಿ. ೧೭-೮೧); ಗಾಳಿ ಘರ್ಮಾಂಬುವೊತ್ತುದು ಭೂಮಿ ಬಿಕ್ಕನೆ ಸೀಳಿತು ಕೂರ್ಮನ ಬೆನ್ನು ಹೋಳಿಗೆವಡದುದು ಬಲುಬಿಸಿಲೊಂದು ಚಡಾಳಿಕೆ ಜಗವ ಭಂಗಿಸಿತು (ಮೋಹತ. ೧೯-೪೬). [ ಘರ್ಮ + ಅಂಬು$_3$ ]

**ಘರ್ಮಾಂಭಸ** (ನಾ).=ಘರ್ಮಜಲ : ಘರ್ಮಾಂಭಸಂ ಪೊಣ್ಮೆ ನುಣ್ಗೊಗದೊಳ್ (ರಾಜಶೇ. ೭-೨೦). [ಘರ್ಮ + ಅಂಭಸ]

**ಘರ್ಮಾಂಶು** (ನಾ). ೧. ಉಷ್ಣವಾದ ಕಿರಣ. ೨. ಉಷ್ಣವಾದ ಕಿರಣಗಳುಳ್ಳವನು ; ಸೂರ್ಯ. 'ಘರ್ಮಾಂಶುಪುತ್ರ' ಪರಾ.
[ ಘರ್ಮ + ಅಂಶು ]

**ಘರ್ಮಾಂಶುಪುತ್ರ** (ನಾ). ಸೂರ್ಯನ ಮಗ; ಶನಿ : ಮಱುವಾಟಿತ್ತಾನೆನಿಸುಗುಂ ಘರ್ಮಾಂಶುಪುತ್ರಾಂಶದೊಳ್ (ಜಾತತಿ. ೨೨-೪).
[ ಘರ್ಮಾಂಶು + ಪುತ್ರ ]

**ಘರ್ಮಾಗ್ನಿ** (ನಾ). ಬೇಸಗೆಯ ಕಾಲದ ಸೆಕೆ,–ತಾಪ : ದಾವಾನಲನ ಬಳಸಿನಿಂ ಕಾಯ್ದ ರವಿಕಾಂತದಾ ವಿಶೇಷಾಗ್ನಿಯಿಂದುದರಾಗ್ನಿಯಿಂ ಬಳಿಕ್ಕಾ ವಿಭಾಕರನ ತೇಜೋಗ್ನಿಯಿಂದೆಸೆವ ಘರ್ಮಾಗ್ನಿಯಿಂ ಪಂಚಾಗ್ನಿಯಿಂ (ವೀಶೈಪು. ೨-೧೨-೧೪). [ ಘರ್ಮ + ಅಗ್ನಿ ]

**ಘರ್ಮೆ** (ನಾ). [ಜೈನ] ಒಂದು ನರಕದ ಹೆಸರು : ಅಲ್ಲಿಂ ಕೆಳಗೆ ಅಶೀತಿ ಸಹಸ್ರಯೋಜನಾಂತರದ ಉದಕಭಾಗದೊಳ್ ಘರ್ಮೆಯೆಂಬ ಪೆಸರ ರತ್ನಪ್ರಭೆಯೆಂಬ ಮೊದಲ ನರಕಮಿರ್ದುದು (ಅಜಪು. ೧೧-೬ ವ) ; ಘರ್ಮೆಯೆಂಬ ಮೊದಲ ನರಕದೊಳ್ಪಡಿಮೂಱಿಂದ್ರಕಂಗಳಕ್ಕುಂ (ಶಾಸ್ತ್ರಟೀ. ೨೨-೨). [ ಸಂ. ಘರ್ಮ ]

**ಘರ್ಮೋತ್ತರ** (ನಾ). ಬೇಸಗೆಯ ಹೆಚ್ಚಳ; ಮಿತಿಮೀರಿದ ಸೆಕೆ,–ಬಿಸಿಲು : ಬಿಡದೆ ಘರ್ಮೋತ್ತರಕೆ ಮಾರುತಂ ಬೆಮರ್ದೊಡಾರ್ ಬೀಸುವರ್ ಬಳಿಕಾಲವಟ್ಟದಿಂದೆ (ಜೈಮಿಭಾ. ೨-೧೬). [ಘರ್ಮ+ಉತ್ತರ]

**ಘರ್ಮೋದಕ** (ನಾ).=ಘರ್ಮಜಲ: ಸೌಮಿತ್ರಿ ಸುಗ್ರೀವಂಗೆಂದನುದಂಚಿತ ಭ್ರುಕುಟಿಗಂಡೋದ್ಗಾರಿ ಘರ್ಮೋದಕಂ (ತಂರಾಮಾ. ೧೧-೧೬೩).
[ ಘರ್ಮ + ಉದಕ$_2$ ]

**ಘರ್ಮೋರ್ಮಿ** (ನಾ). ಬಿಸಿಲಿನ ಅಥವಾ ದಗೆಯ ಅಲೆ : ಘರ್ಮೋರ್ಮಿಹತನಿರ್ಮಳಸಮೀರನುಂ . . . ಕರವೊಪ್ಪೆ (ಶಾಂತಿಪು. ೧೨-೧೯ ವ).
[ ಘರ್ಮ + ಊರ್ಮಿ$_2$ ]

**ಘರ್ರನೆ** 'ಘಱ್ಱನೆ' ನೋ.

**ಘರ್ಷಣ** (ನಾ). ೧. ಉಜ್ಜುವಿಕೆ. ಒರಸುವಿಕೆ. ೨. ತಿಕ್ಕಾಟ ; ಜಗಳ. ೩. ಪುಡಿ ಮಾಡುವಿಕೆ ; ಅರೆಯುವಿಕೆ. ೪. ಸಾಣೆ ಹಿಡಿಯುವಿಕೆ ; ಮೆರಗು ಕೊಡುವಿಕೆ ; ಒಪ್ಪಕೊಡುವಿಕೆ. [ ಸಂ. ]

**ಘರ್ಷಣೆ** (ನಾ). ೧. ಜಗಳ ; ತಿಕ್ಕಾಟ : ಆಗಾಗ್ಗೆ ಅವರಲ್ಲಿ ಘರ್ಷಣೆಯಾಗುತ್ತಲೇ ಇರುತ್ತದೆ (ರೂಢಿ). ೨. ಯುದ್ಧ ; ಕದನ : ಅಲ್ಲಿ ಚಿತ್ರರಥ ಎಂಬ ಗಂಧರ್ವರಾಜನ ಪರಿವಾರದೊಡನೆ ಘರ್ಷಣೆಯಾಗುತ್ತದೆ (ಭಾರದ. ೧೦೪) ; ಅದೇ ಏಪ್ರಿಲ್‌ತಿಂಗಳಲ್ಲಿ ಇನ್ನೊಂದು ಘರ್ಷಣೆ ಮಿಲಿಟರಿಯವರೊಡನೆ ನಡೆದು ೧೨ ಮಂದಿ ಕ್ರಾಂತಿಕಾರರು ಹತರಾದರು (ಆತ್ಮಾರ್ಪ. ೧೪೩). [ ಸಂ. ಘರ್ಷಣ ]

**ಘಲ್‌ಘಲ್** (ನಾ). ಒಂದು ಅನುಕರಣ ಶಬ್ದ : ಬಳೆಗಳ್ ಘಲ್‌ಘಲ್ ಘಲ್ಲೆನೆ ಗಿಳಿ ಸೋವಾಕೆಗಳಿನೊಪ್ಪುಗುಂ ಕೆಲವೆಡೆಯೊಳ್ (ಕಾವ್ಯಾವ. ೨೯೩) : (ಶಮದ. ೧೯೫ ಪ್ರಯೋ. ನೋ).

**ಘಲಕ್** (ನಾ). ಒಂದು ಅನುಕರಣ ಶಬ್ದ. 'ಘಲಕನೆ' ಪರಾ.
**ಘಲಘಲಕ್** (ದ್ವಿರುಕ್ತಿ) : ಮೃದುಗತಿಯೊಳ್ ಘಲಘಲ [ಪಾಠಾಂ. ಘುಲಘುಲ]ಕೆಂದೆನುತಂ (ಭೃಂಗೀರ. ಹ. ೪೬೦-೧೨); ಉಲಿವ ತೊಡರು ಘಲಘಲಕೆನೆ ಕೈಯ ಕೂರಲಗನಾಯತಮಾಡಿ (ಭೈರವೇ. ೫-೨೬).

**ಘಲಕನೆ** (ಅ). ಘಲಕ್ ಎಂಬ ಶಬ್ದದೊಂದಿಗೆ : ಘಲಕ [ಪಾಠಾಂ. ಕೆ]ನೆ ಬೀಳ್ವ ಕನಕಧಾರಾವೃಷ್ಟಿಯನು ಕಂಡು (ಭೈರವೇ. ೨-೧೮೭).
[ ಘಲಕ್ + – ಅನೆ$_1$ ]

**ಘಲಘಲನೆ** (ಅ). ಘಲಘಲ ಎಂಬ ಶಬ್ದದೊಡನೆ : ತೊಡರುಗಳು ಘಲಘಲನೆ [ಪಾಠಾಂ. ಘಳಘಳನೆ] ಮೊರೆಯಲು (ಬಸಪು. ೧೬-೧೭) : ಘಲಘಲನೆ ಮುಗಿಲಿಂದ ನೆತ್ತರ ಮಳೆ ಸುರಿದವೆಣ್ದೆಸೆಗೆ (ಸಾಳ್ವಭಾ. ೧೧-೩೪).
[ <ಘಲ್‌ಘಲ್ + – ಅನೆ$_1$ ]

**ಘಲಘಲಿಸು** (ಕ್ರಿ). ಘಲಘಲ ಎಂಬ ಶಬ್ದವನ್ನು ಮಾಡು,–ಹೊರಸೂಸು : [ಉ]ಡೆವಣಿಯ ತೊಡವು ಘಲಘಲಿಸುವಂದುಗೆಯಾನೆ (ಬಸರ. ೧-೧೫೫); ಗೆಜ್ಜೆಗಳು ಘಲಘಲಿಸೆ ಮೆಲ್ಲನೆ ಪಜ್ಜೆಯಿಡೆ (ಸಾಳ್ವಭಾ. ೩-೧೫).
[ <ಘಲ್‌ಘಲ್ + – ಇಸು$_3$ ]

**ಘಲಿಕು** (ನಾ). ಒಂದು ಅನುಕರಣ ಶಬ್ದ : ಹೊಳೆವ ಮಣಿಮಯ ತೊಡರು ಘಲಿಕೆಂದುಲಿಯೆ (ಜೀವಂಧ. ೯-೫).

**ಘಲಿರು** (ನಾ). ಒಂದು ಅನುಕರಣ ಶಬ್ದ : ಗಗ್ಗರಿ ಘಲಿರೆಂಬ ಗಾಲಿಯ ಬಲುರವ (ಕಂನವಿ. ೨೫-೧೦೭) ; ಎತ್ತೀ ಕುಟ್ಟಿದರೆ ಘಣರೆಂದೋ ಹಾದಿಯ ಕಲ್ಗಳು ಬೀದಿಯ ಬಾವ್ಗಳು ಹಾಡಿ ಕುಟ್ಟಿದರೆ ಘಲಿರೆಂದೋ (ಹುಟ್ಟಿಹ. ೪೭).
**ಘಲಿರುಘಲಿರು** (ದ್ವಿರುಕ್ತಿ) : ಅಂದುಗೆಯ ಧ್ವನಿ ಘಲಿರುಘಲಿರೆನೆ (ರಾಮಾಸಂ. ೧-೪-೫೦).

**ಘಲಿಲು** (ನಾ). ಒಂದು ಅನುಕರಣ ಶಬ್ದ.
**ಘಲಿಲುಘಲಿಲು** (ದ್ವಿರುಕ್ತಿ) : ಬಿಡದೆ ತಾಟಿಪ ಹಲಗೆ ಘಂಘಂ ಘಲಿಲು [ಪಾಠಾಂ. ರು]ಘಲಿಲೆನಲು (ಬಸಪು. ೧೭-೧೭).

**ಘಲ್ಲಣಿ** 'ಗಲ್ಲಣಿ' ನೋ.

**ಘಲ್ಲಣೆ** 'ಗಲ್ಲಣೆ' ನೋ.

**ಘಲ್ಲಿಸು** 'ಗಲ್ಲಿಸು' ನೋ.

**ಘಸಕ್ಕನೆ** (ಅ). ತಟ್ಟನೆ ; ಕೂಡಲೆ; ಅನಿರೀಕ್ಷಿತವಾಗಿ : ಘಸಕ್ಕನ ಒಂದಿನಾ ಲೋಕಾಪುರಕ್ಕ ಹೋಗಿ ಅವ್ವನ್ನ ಈಕಡೆ ಕರಕೊಂಡ ಬರತೀನಿ (ದಾಬಲ. ೩೦). [ ಘಸಕ್$_0$ + – ಅನೆ$_1$ ]

**ಘಸಣ** 'ಗಸಣಿ' ನೋ.

**ಘಸಣಿ** 'ಗಸಣಿ' ನೋ.

**ಘಸಣಿಗೊಳ್** 'ಗಸಣಿಗೊಳ್' ನೋ.

**ಘಸಣಿಗೊಳಿಸು** (ಕ್ರಿ). ಗಾಸಿಪಡಿಸು ; ಆತಂಕಗೊಳ್ಳುವಂತೆ ಮಾಡು : ಪೊಸಮಸೆಯ ಪಗರಂಬಿನೊಳ್ , . . ಕೂಡೆ ರಥಿಕರಂ ಘಸಣಿಗೊಳಿಸಿಹ ಸರಳ ಹೊಡತದಿಂ (ತುರಂಗ. ೬೫-೪೦).
[ ಘಸಣಿಗೊಳ್ ( <ಗಸಣಿಗೊಳ್) + – ಇಸು$_3$ ]

**ಘಸಣಿವಳೆ** (ನಾ). ತೊಂದರೆ ಕೊಡುವ ಮಳೆ ; ಜಡಿಮಳೆ : ಬಿಸಿಲುವಳೆ ಸರಿಸೋನೆ ಸಿಡಿಲಿನ ಘಸಣಿವಳೆಯಲಿ ಘಾಸಿಯಾದುದು ಜಗದ ಜನನಿಕರ (ತೊರರಾ. ೪-೬-೬). [ ಘಸ ( <ಗಸಣಿ) + ವಳೆ ( <ಮಱೆ$^3$) ]

**ಘಸಣೆ** 'ಗಸಣಿ' ನೋ.

**ಘಸರಿ** (ನಾ). ಮಹಾಧ್ವನಿ ದೊಡ್ಡಶಬ್ದ : ಪರಮಾನುರಾಗದಿಂದಿರೆ ಮೆಚ್ಚುತವೆ ಮೊನೆ ಧರೆಗೀಶ ಪ್ರತ್ಯಕ್ಷವಾಗಿ ಸುರದುಂದುಭಿಗಳ ಘಸರಿಯೊಳು ಕೈಲಾಸಗಿರಿಗೆ ಕೊಂಡೊಯ್ದ ಸೋಮೇಶ (ಮಡಿಶಾ. IV, ೧೦೫೪ ; ಚೋಳರಾಜ ಸಾಂಗತ್ಯ). [ ←ಮರಾ. ಘಸರಾ ]

**ಘಸ್ಮರ** (ಗು). ೧. ಹೊಟ್ಟೆಬಾಕತನದ. (ನಾ). ೨. ಮಿತಿಮೀರಿ ತಿನ್ನುವ ಭೂತ. 'ಘಸ್ಮರಾಭರಣ' ಪರಾ. ೩. ಮಿತಿಮೀರಿ ತಿನ್ನುವವನು ; ತಿನ್ನಾಳಿ ; ಹೊಟ್ಟೆಬಾಕ: " ಭಕ್ಷಕಃ, ಘಸ್ಮರಃ, ಅದ್ಮರಃ–ಈ ೩ ತಿನ್ನಾಳಿ" (ಹಲಾಯು. ೫೮-೧೯೫) : " ಅದ್ಮರಂ ಘಸ್ಮರಂ ಭಕ್ಷಕಾರಿ ತಿನ್ನಾಳಿಯಕ್ಕುಂ " (ಮಂಗರಾ. ೬೮-೧೦). ೪. ಕೊಲ್ಲುವವನು ; ನಾಶಮಾಡುವವನು : ಪೂಜಿಸಿದಂ ಧೃತಕಾಲಕೂಟನಂ ಮನಸಿಜಘಸ್ಮರಾಂಬಕಲಲಾಟನನುಗ್ರ ಫಣೀಂದ್ರಜೂಟನಂ (ಜಗವಿ. ೧೭-೯೦). [ ಸಂ. ]

**ಘಸ್ಮರಾಭರಣ** (ನಾ). ಭೂತಪತಿ ; ಶಿವ : ಸೋಮಶೇಖರ ಘಸ್ಮರಾ [ಪಾಠಾಂ. ರಹ] ಭರಣ ಭಕ್ತಜನಪ್ರೇಮಿ (ಪ್ರೌಢರಾ. ೧-೧).

[ ಘಸ್ಮರ + ಆಭರಣ ]

**ಘಸ್ಮಿಸು** (ಕ್ರಿ). ( ? ) : ಭುವನದಿಕ್ಚಕ್ರ ವಿಸ್ಮಿಸುತ ಘಸ್ಮಿಸುತಲಾವರಿಸಿ ವ್ಯಾವರ್ಣಿಸಿ (ಜಿನಮು. ೨೬-೨೫). [ ? ]

**ಘಸ್ರ** (ನಾ). ಸೂರ್ಯೋದಯದಿಂದ ಹಿಡಿದು ಸೂರ್ಯಾಸ್ತದ ವರೆಗಿನ ಕಾಲ; ಹಗಲು; ದಿನ: " ದಿವಸಃ, ದಿವಾ . . . ಘಸ್ರಃ–ಈ ೭ ಹಗಲ್ " (ಹಲಾಯು. ೧೮-೧೦೬) ; " ಘಸ್ರಮಾ ದಿವಸಮೆನೆ ಹಗಲ ಪೆಸರೆನಿಕ್ಕುಂ " (ಮಂಗರಾ. ೨೦-೬). [ ಸಂ. ]

**ಘಳಘಳ** (ನಾ). ಒಂದು ಅನುಕರಣ ಶಬ್ದ : ಈತನು ತವೆ ಹೊಡೆಯಲಂತತ್ತಲಾ ಶಿವಪುರದ ಕದಹುಗಳು ತವತವಗೆ ಘಳಘಳವೆನುತ ಬಿದ್ದವು (ಬಸಪು. ೯-೧೫).

**ಘಳಘಳನೆ** (ಅ). ಘಳಘಳ ಎಂಬ ಧ್ವನಿಯೊಡನೆ : ತೊಡರುಗಳು ಘಳಘಳ [ಪಾಠಾಂ. ಘಲಘಲ]ನೆ ಮೊರೆಯಲು (ಬಸಪು. ೧೬-೧೭).

[ ಘಳಘಳ + –ಅನೆ$_1$ ]

**ಘಳಿ** 'ಗಟಿ³' ನೋ.

**ಘಳಿಗೆ$_1$** 'ಗಟಿಗೆ' ನೋ.

**ಘಳಿಗೆ$_2$** 'ಗಳಗೆ' ನೋ.

**ಘಳಿಗೆ$_3$** 'ಗಳಿಗೆ$_3$' ನೋ.

**ಘಳಿಗೆಬಟ್ಟಲು** 'ಗಟಿಗೆವಟ್ಟಲ್' ನೋ.

**ಘಳಿಗೆವಟ್ಟಲು** 'ಗಟಿಗೆವಟ್ಟಲ್' ನೋ.

**ಘಳಿಯ** 'ಘಟಿಯ' ನೋ.

**ಘಳಿಯವಟ್ಟಲು** (ನಾ). = ಗಟಿಗೆವಟ್ಟಲ್ : ಪಿರಿಯಗಣಕ ಘಳಿಯ ವಟ್ಟಲನು ಕೂಡಿರಿಸಿದನು (ವರ್ಧಜ. ೫-೪೭).

[ ಘಳಿಯ (<ಘಟಿಯ) + ಬಟ್ಟಲು (<ಬಟ್ಟಲ್) ]

**ಘಳಿಯಾರ, ಗಡಿಯಾರ, ಗಡಿಯಾಲ, ಗಡಿಯಾಳ, ಗಳಿಯಾರ, ಗಳಿಹಾರ, ಘಟಿಯಾಟಿ** (ನಾ). ೧. ಕಾಲವನ್ನು ತಿಳಿಸುವ ಯಂತ್ರ ; ಘಟಿಕಾಯಂತ್ರ : ಘಳಿಯಾರ ಪಾತ್ರಪಾವುಳಪರಿಗ್ರಹಕ್ಕಂ (ಎಇ. XIII, ೪೮-೭೭ ; 1112) ; ಕೋಂಟೆಗಳ ಘಳಿಯಾರ [ಪಾಠಾಂ. ಸುಳಿಯವರ] ಭದ್ರಗಳ ಗಣನೆಗಳನಾರ್ ಬಲ್ಲರ್ಪೈ (ಸಿದ್ಧರಾ. ೧-೧೫); ಜಾವಗಳನು ಸೂಚಿಪ ಘಳಿಯಾರದ ಭಾವವನದನೇನೆಂಬೆ (ಅಂಜಚ. ೩-೩೮) ; ಹತ್ತುಕೊಳಗ ಘಳಿಯಾರಕ್ಕೆ (ಸೌಇಇ. IV, ೨೫೪-೭೯ ; ಸು. 1513) ; ಘಳಿಯಾರದೊಳಗಪ್ಪ ಟಿೊಳು ಶಂಖನಾದವುಚ್ಚಳಿಸಿತಾರೋಗಣೆಗಿನ್ನು ತಳರ್ವುದುತ್ತಮವೆಂದು ಚಕ್ರೇಶ ತನ್ನಮ್ಮಗೆಳಸಿ ಬಿನ್ನವಿಸಿದನೊಡನೆ (ಭರಚ. ೪೬-೧೦೦). **ಗಡಿಯಾರ:** ೧. ಈ ಶ್ರೀರಂಗಪಟ್ಟಣಕಳವಡದ ಪುರ ತ್ರಿಜಗದ ನೆಲದೊಳಗಿಲ್ಲೆಂದು ಗಡಿಯಾರ ಜಾಗಟೆಯುಲಿವುದು ಗೋಪುರದೊಳಗೆ (ಕಂನವಿ. ೭-೧೧೫) ; ಗಡಿಯಾರವೆಂಬುದು ಒಂದು ಯಂತ್ರ. ಆ ಯಂತ್ರದ ವಿವಿಧ ಭಾಗಗಳ ಚಲನಾವಿಶೇಷವೇ ಅದರ ಜೀವನ (ಜೀವಾತ್ಮ. ೧೬೬); ಕಚೇರಿಯ ಕಾಗದಗಳ ಕಡತದಲ್ಲಿ ಮುಳುಗೇಳುತ್ತಿದ್ದ ದಿನಕರನಿಗೆ ಗಡಿಯಾರದ ಮೇಲೆಯೇ ಕಣ್ಣು (ಪಹಾರ. ೧). **ಗಡಿಯಾಲ :** ೧. ಗಡಿಯಾಲದೊಳಗೆ ಒಂಬತ್ತು ಬಡಿಯಲಾಗಿ (ಮುಂಬಯಿ. ೫-೪೮); ಕಿಸೆಯೊಳಗಿನ ಗಡಿಯಾಲವನ್ನು ತೆಗೆದು ನೋಡುತ್ತಾನೆ (ಮೋಹಿನೀ. ೭೬). **ಗಡಿಯಾಳ :** ೧. ಗಡಿಯಾಳವೆಂದರೆ ಹೊತ್ತು ತೋರಿಸುವ ಯಂತ್ರವು (ಮುಂಬಯಿ. ೩-೮೫) ; ಅವಳ ಗಡಿಯಾಳಕ್ಕೆ ಕೊಟ್ಟ ಕೀಲಿ ತೀರಿದ್ದಿಲ್ಲ (ನಿರಾಭ. ೫೦). **ಗಳಿಯಾರ:** ೧. ಪೇಳವೆ ವೇಳೆವೇಳೆಗಿಳಿವಾಯುವನೀ ಗಳಿಯಾರಸನ್ನೆಯುಂ (ಅಪಶ. ೫೭) ; ಪೂಡವಿಪ ಕಂಠೀರವೇಂದ್ರನೋಲಗದ ಬಲ್ಸಡಗರಗಳನೆಂಟುದೆಸೆಗೆ ಬಿಡದೆ ಸಾಟುವವೋಲು ಗಳಿಯಾರ ಜಾಗಟೆ ನಡೆದ ಗಳಿಗೆಯ ಪೇಳಿದುವು (ಕಂನವಿ. ೨೧-೧೨೮). **ಗಳಿಹಾರ :** ೨. ವೇಳೆಯನ್ನು ತಿಳಿಸುವವನು : ಗಳಿಹಾರರ ಘಂಟೆಯೊಲಿದು ಚೀಱಿದುದು (ಮೋಹತ. ೩೦-೪೯). △ **ಘಟಿಯಾಟಿ:** ೨. ಕಾಪಿನ ಘಟಿಯಾಟಿರು ಮೂವರ್ಗ್ಗಂ ಮತ್ತರ್ ೪೫ (ಹೈಅರಿ. ೩೪ ೩೨೩ ; 1085).

**ಗಳಿಯಾರದವ**=ಘಂಟೆಯನ್ನು ಬಾರಿಸಿ ಕಾಲವನ್ನು ಸೂಚಿಸುವವನಂ : ಗುಣಿಸಿ ಪೇಳುತ್ತಿರಲು ಗಳಿಯಾರದವರ ಕರೆಸೆನಿತು ಘಳಿಗೆಯದಾಯಿತೆನಲು (ಸಿಂಗಿರಾ. ೧೬-೨೩) ; ಬಳಪಂತನರಮನೆಯ ಗುಜ್ಜನಾ ಕುಂಭಜಂ ಎಳಸಿ ಕನಕಾದ್ರಿಯೆಂಬುಪ್ಪರಿಗೆಯೆಡೆಯಲ್ಲಿ ಗಳಿಯಾರದವರಿಂದು ಸೂರ್ಯರೆನೆ ಭೋಗಮಲ್ಲೇಶರಾಯಂ ಮೆಱೆದನು (ಚೀರಮ. ೧-೩೫).

[ <ಪ್ರಾ. ಘಡಿಆಲಯ./ಹಿಂ. ಘಡಿಯಾಲ ; ಮರಾ. ಘಡಿಯಾಲ, ಘಡ್ಯಾಳ ]

**ಘಳಿಯಿಸು** 'ಘಟಿಯಿಸು' ನೋ.

**ಘಳಿಲ್** 'ಘಟಿಲ್' ನೋ.

**ಘಳಿಲನೆ** 'ಘಟಿಲನೆ' ನೋ.

**ಘಳಿಲು** 'ಘಟಿಲ್' ನೋ.

**ಘಳಿಶಾಸ** 'ಘಳಿಸಾಸ' ನೋ.

**ಘಳಿಸ** 'ಘಳಿಸಾಸ' ನೋ.

**ಘಳಿಸಾಸ, ಘಯ್ಸ್ಸ,ಘಳಿಶಾಸ, ಘಳಿಸ, ಘೈಶಾಸ, ಘೈಸಾಸ, ಘೈಸ್ಸ**(ನಾ). ಘಟಿಕಾಸ್ಥಾನದ ಅಧಿಕಾರಿ ; ಪಾಂಡಿತ್ಯದ ಪ್ರಭಾವದಿಂದ ಮನ್ನಣೆ ಗಳಿಸಿದವನಂ ; ಧರ್ಮಶಾಸ್ತ್ರ ಪ್ರವಚನದಲ್ಲಿ ನಿಪುಣನಾದವನು ; ಘಟಿಕಾಸಾಹಸಿ. ℙ ಶಾಸನಗಳಲ್ಲಿ ಒಂದು ಪಂಗಡದ ಬ್ರಾಹ್ಮಣರ ಹೆಸರಿನ ಮುಂದೆ ಬಿರುದಾಗಿ ಇದಂ ಸೇರಿರುತ್ತದೆ: ಅಪ್ರಿತಪಟ್ಟವರ್ಧನ ವಾಸುದೇವಘಳಿಸಾಸರು (ಸೌಇಇ. XX, ೭೫-೧೮; 1117); ಗೋಪತಿ ಘಳಿಸಾಸರ ಮಗಂ ರೇಚಣಘಳಿಸಾಸರ್ (ಕೊಲ್ಹಾಶಾ. ೮-೬೫ ; 1147) ; ಪಠಮಾಶೀರ್ವ್ವಾದ ಪರಂಪರೆ ನಿಜರಾಜ್ಯಾಭಿವ್ರಿ(ವೃ)ದ್ಧಿಗುದ್ಭವವೆನಿಪೀಶ್ವರ ಘಳಿಸಾಸಂಗೆ ಜಗದ್ಗುರುಗೆ (ಎಇ. V, ೧೬-೧೬ ; 1161); ಘಳಿಸಾಸ ಅಥವಾ ಘೈಸಾಸವೆಂಬುದು ಘಟಿಕಾಸಾಹಸದ ತದ್ಭವವು (ಸಂಭಾನೆ. ೨೦೬); 'ಘಟಿಕಾ ಸಾಹಸಿ' ಎಂಬುದು ಮುಂದೆ 'ಘಳಿಸಾಸ' ಎಂದಾಗಿ 'ಘೈಸಾಸ' ಆಗಿ 'ಘೈಸ' ಆಗಿರಬೇಕು (ಕಶಾಅ. ೨೨೫). **ಘಯ್ಸ್ಸ:** ಇಪ್ಪೆಂಡಿರ ವಾಸುದೇವ ಘಯ್ಸ್ಸರ ತೋಂಟ ಮೇರೆ (ಎಇ. XIII, ೬೦-೯೫ ; 1178). **ಘಳಿಶಾಸ :** ನಾರಾಯಣ ಘಳಿಶಾ[ಸ]ರು ಹಿ[ಟ್ಟಿ]ಯ ಭಟ್ಟೋಪಾಧ್ಯಾಯರು (ಕಇಅ. ೭೬-೧೨-೬೬ ; 1170). **ಘಳಿಸ :** ಧರಾಮರಮುಖ್ಯಂ ನರಸಿಂಹದೇವ ಘಳಿಸನು ತಾನಲ್ಲಿ ಪೆಂಪುಳ್ಳನೆ (ಸೌಇಇ. VI, ೫೫೮-೧೪ ; 1205). **ಘೈಶಾಸ:** 'ಘೈಶಾಸಗೇರಿ' ಪರಾ. **ಘೈಸಾಸ:** ಮುದಿಯನೂರ ವಿಷ್ಣುಘೈಸಾಸರ ಮನೆಯಿಂ ಮೂಡ ಮುಖದೆ (ಎಇ. XIII, ೪೮-೭೯ ; 1112) ; ಘಳಿಸಾಸ ಅಥವಾ ಘೈಸಾಸ ವೆಂಬುದು ಘಟಿಕಾಸಾಹಸದ ತದ್ಭವವು (ಸಂಭಾನೆ. ೨೦೬). **ಘೈಸ್ಸ :** ಅಲ್ಲಿಂ ಮೂಡಣಮನೆ ನರಸಿಂಹಘೈಸ್ಸರಿಗೆ (ಎಇ. XVIII, ೧೮೬-೪೮ ; 1097).

[ <ಸಂ. ಘಟಿಕಾಸಾಹಸ ]

**ಘಳಿಸಾಳಿ** 'ಗಟಿಸಾಳಿ' ನೋ.

**ಘಳಿಸಾಳಿವೆಣ್** 'ಗಟಿಸಾಳಿವೆಣ್' ನೋ.

**ಘಳಿಸು** 'ಘಟಿಯಿಸಂ' ನೋ.

**ಘಳೆ** 'ಗಟಿ³' ನೋ.

**ಘಳೆಯ** 'ಗಟಿ³' ನೋ.

**ಘಟಿಘಟಿ್** (ನಾ). ಒಂದು ಅನುಕರಣ ಶಬ್ದ : ಜಾಱಿಱೆಂದು ಪೀರಿಯಾನಂದಿಸುತ ನಲಿದು ಘಟಿಘಟಿ್ಱೆಂದು ತೇಗಿದುವು (ಚೀರಮ. ೮-೧೫).

**ಘಱಿಘಱಿ, ಘರಿಘರಿ** (ನಾ). ಒಂದು ಅನುಕರಣ ಶಬ್ದ : ಘಱಿಘಱಿ ಭುಗಿಭುಗಿಲೆನೆ ನೆಱೆ ಕಾಮನುರಿದು ಕರಿಮುರಿವೋದಂ (ಗಿರಿಶ. ೮-೪೯). **ಘರಿಘರಿ:** ಖಣಿಖಟಿಲು ನಿರಿನಿಳಿಲು ಘರಿಘರಿ ಘಣಿಲು ದೊಪ್ಪನೆ ಕೊಯ್ವು ಸೀಳುವ ಹೆಣಗೆಡಹುವಬ್ಬರಕೆ ಮಿಗಿಲೊದಗಿದರು ಬಿಲ್ಲವರು (ಕುವ್ಯಾಭೀ. ೪-೧೪).

**ಘಱ್ಱನೆ, ಘರ್ರನೆ** (ಅ). ರಭಸವಾಗಿ; ವೇಗವಾಗಿ: ರಕ್ಕಸನಂತೆ ಘ[ಪಾಠಾಂ. ಘಿ]ಱ್ಱನೆಯ್ತರ್ಪ ವಿಶ್ವನಂದಿಯಂ . . . ಕಂಡು (ವರ್ಧಪು. ೨-೪೭ ವ); ಪರಿದೆಯ್ದಿ ಘ[ಪಾಠಾಂ. ಗ]ರ್ರನೆ ಕದಹನುಱೆ ತೆಱೆದು (ಬಸಪು. ೪೭-೨೪). **ಘರ್ರನೆ:** ಘ[ಪಾಠಾಂ. ಗ]ರ್ರನೆ ಪೊರಳ್ದು ಗಾಲಿಗಳೇಳೆ ಧರಣಿಯಿಂ (ಜೈಮಿಭಾ. ೧೩-೩೫); ಗಿರಣಿಯಲ್ಲಿ ಚಕ್ರವು ಘರ್ರನೆ ತಿರುಗುತ್ತಿತ್ತು (ರೂಢಿ). [ ಘಱ್$_0$ + – ಅನೆ$_1$ ]

**ಘೞಿಗೆ** 'ಗೞಿಗೆ' ನೋ.

**ಘೞಿಯಂ, ಘಳಿಯಂ**(ನಾ). ಸಮಕಟ್ಟು; ಕಟ್ಟಳೆ; ನಿಯಮ: "ಘೞಿಯಂ= ಸಮಕಟ್ಟು" (ಶಮದ. ಪರಿ. ೧); "ಘೞಿಯಮೆನೆ ಸಮಕಟ್ಟು" (ಸಂಜೀವ. ೨); ಘೞಿಯಂ, ರಘಳಂ . . . ಠಕ್ಕು (ಭಾಷಾಭೂ. ೧-೧೧ ವೃತ್ತಿ) ; ಘೞಿಯಂ, ಘಾೞಿಗೆ (ಘಾರಿಗೆ), ಘೋೞಿಗೆ (ಶಮದ. ೧೫ ವೃತ್ತಿ). **ಘಳಿಯ:** ನೀಉ ಮಾಡಿದ ಘಳಿಯಗಳು ಖಿಲವಾಗಿ ಮುಱಿದು ಹೋದವೆಂದು ಕೇಳಿ (ಎಕ. XI, ದಾವಣ. ೧೦೬-೧೪ ; 1528). [ ? ]

**ಘೞಿಯಿಸು, ಗಳಿಸು, ಗೞಿಯಿಸು, ಗೞಿಸು, ಘಳಿಯಿಸು, ಘಳಿಸು** (ಕ್ರಿ). ೧. ಸಂಪಾದಿಸು; ದೊರಕಿಸಿಕೊಳ್ಳು; ಆರ್ಜಿಸು: "ಘೞಿಯಿಸಿದನೆಂದೆನಲ್ ದೊರೆಕೊಂಡನುಂ ದೊರೆಕೊಳಿಸಿದನುಮಕ್ಕುಂ" (ಸಂಜೀವ. ೧೪). ೨. ಉಂಟಾಗು ; ಸಂಭವಿಸು ; ಘಟಿಸು : ಕಳೆದ ಭವಾಂತರದ ವೈರಿ ಪುಟ್ಟಲೊಡಂ ತಾಂ ಘೞಿಯಿಸಿದ ಕೋಪದಿಂದೀ ಪಟುವಿನೊಳಿಂತಿರಿಸಿ ಪೋದಂ (ನೇಮಿಪು. ೭-೧೧೭) ; ನಿನಗೆಂತುಂ ಘೞಿಯಿಸುವುದಶುಚಿ (ಜೀವಸಂ. ೧೨೩-೧). ೩. ಉಂಟುಮಾಡು ; ದೊರಕಿಸಿಕೊಡು : ಪೞಿ ಚಿತ್ರಾವಳಿ ಜೋಗಂ ಪೞಿಯಂ ದೇವಾಂಗಮೆಂಬ ವಸನಂಗಳನೇಂ ಘ[ಪಾಠಾಂ. ಗ]ೞಿಯಿಸುವವೊ . . . ವಿಶದ ವಸನಾಂಗ ಕುಜಂ (ಆದಿಪು. ೫-೩೪) ; ಗಭೀರ ದುಂದುಭಿ ರವಂ ಮೊೞಗಂ ಮಿಗೆ ಮೇಘಡಂಬರಂ ಘೞಿಯಿಸೆ ಮೇಘಡಂಬರಮಂ (ಚಂದ್ರಪು. ೧೦-೨೬). ೪. ಸೇರಿಸು; ಕೂಡಿಸು: ಪಸುರ್ಪುಮಂ ಪೊಳೆವ ಕೆಂಪುಮನಾಳ್ದಿರೆ ಬೇಟದೊಳ್ ಕನಲ್ದುೞಿದ ವಿಯೋಗಿಯುಳ್ಳೆರ್ದೆಯನಾಯ್ದದ[ನಾ]ಟಿಸಲೆಂದೆ ಮನ್ಮಥಂ ಘ[ಪಾಠಾಂ. ಮು]ೞಿಯಿಸಿ ಕೆಂಪುವಾಸಿದವೊಲಿರ್ದುವು ಮಾಮರಗಳ್ ಬಸಂತದೊಳ್ (ಪಂಪಭಾ. ೫-೩೨). **ಗಳಿಸು :** ೧. ಧನಮಂ ಗಳಿಸಿ ತಂದೀವೆನೆನಲು (ಹಜಕಾ. ೮-೫೬) ; ಉಣ್ಣದೊಡವೆಯ ಗಳಿಸಿ ಮಣ್ಣಿನೊಳು ತಾನಿರಿಸಿ (ಸರ್ವಜ್ಞ. ೬೫೭). **ಗೞಿಯಿಸು:** ೧. "ಗೞಿಯಿಸಿದನೆಂದು ದೊರೆಕೊಳಿಸಿದನುಂ ದೊರೆಕೊಂಡನುಮಕ್ಕು" (ಶಮದ. ನ. ೩೩ ವೃತ್ತಿ) ; ಧರ್ಮಮಂ ಗೞಿಯಿಸಿಕೊಳ್ವುದೊಂದೆ ಚದುರ್ (ಪಂಪಭಾ. ೨-೨೭) ; ನಿನ್ನ ಬಿಡುಗಡೆಯ ಗೞಿಯಿಸಲ್ ಬವಸೆಗೆಯ್ವೆನ್ (ಬಧ್ಯಪ್ರ. ೧೮-೩೮೦). ೨. ಈಯೞಿವಿನ್ನನಗಾಜಿರಂಗದೊಳ್ ಗೞಿಯಿಸುಗೆ (ಪಂಪಭಾ. ೧೧-೧೦೯) ; ಗೞಿಯಿಸುವ ತಮಂ ಮೂಡಲ್ ಪೊೞೆಗಟ್ಟುವ ಸಂಜೆಗೆಂಪು ಪಡುವಲ್ ಕೈಕೊಂಡೆೞಲೆ ಧರೆಗರ್ಧನಾರಿಯ ತೞ್ವಿಡಿದಂತಾಯ್ತು ಗಗನಮಂಡಲಮಿನಿಸುಂ (ಅನಂಪು. ೭-೭೨). ೫. ಪಡೆ ; ತಾಳು ; ಭರಿಸು : ಗೞಿಯಿಸಿದರ್ಥಂ ಸಲೆ ಪಾಂಗೞಿಯದೆಯುಂ ಶಬ್ದಮೊಂದದಿರ್ದೊಡೆ ಮುತ್ತುಂ ಮೆಟಿಸುಂ ಕೋದಂತಕ್ಕು (ಕವಿರಾ. ೨-೫); ಎಳಲತೆಯಿನೆ ಬಿದಿ ಲೋಕಮನಟಿಲಿಸಲೆಂದರ್ತಿವಟ್ಟು ವನಿತಾರೂಪಂ ಗೞಿಯಿಸಿದಂ (ಧರ್ಮಾಮೃ. ೩-೪೦) ; ಗೞಿಯಿಸಿದ ಗರ್ಭಮಂ ಮುಗಿಲೊಳ್ ಕೊಂಡಿರ್ದಂದು (ಅಟ್ಟಮ. ೮-೭೦). **ಗೞಿಸು :** ೧. ಎನಗಿಲ್ಲಿ ನೀನ್ ತೋರ್ಪ ಮೞುಕಂ, ನಿನಗಲ್ಲಿ ದ್ವೇಷಮನ್ ಗೞಿಸೀವುದಯ್ (ಬಧ್ಯಪ್ರ. ೨೧-೪೪೭). ೬. ಮಡಿಚು; ಮುಂದಂಡು: ಬಿಳಿಯೆಲೆಯಂ ಗೞಿಸಿ ನೀಡುತಿರ್ಪಮರಿ ಪಡೆದಳೀಕ್ಷಣಸುಖಮಂ (ಪುಷ್ಪಪು. ೯-೬೯). **ಘಳಿಯಿಸು :** ೧. ಪಾತಕವಾ ಘಳಿಯಿಸುವುದು ನೀತಿಯಹುದೆ (ಶ್ರೀಪಾಲ. ೫-೮೭). **ಘಳಿಸು:** ೧. ಅತಿವಿನ್ನಾಣದಿಂ ಗೆಯ್ಯೆ ಘಟವಾಗಿ ಬೆಲೆವಡೆದು ಬಹಳ ವಸ್ತುವ ಘ[ಪಾಠಾಂ. ಗ]ಳಿಸಿ ಕೊಟ್ಟು ಸಿರಿವಂತನಂ ಮಾಡಿ (ಸಮ್ಯಕೌ. ೨-೪೩) ; ಕಾಸಿಗೆ ವೀಸವ ಬಡ್ಡಿ ಘ[ಪಾಠಾಂ. ಗ]ಳಿಸಿಕೊಂಡು ಶೇಷಗಿರಿಯ ಮೇಲೆ ವಾಸವಾಗಿದ್ದನೆ (ಪುರಂದ. ೨-೩೨-೧). [<ಘಟಿಸು]

**ಘೞಿಲ್, ಘಳಿಲ್, ಘಳಿಲು** (ನಾ). ಒಂದು ಅನುಕರಣ ಶಬ್ದ: ಖಮ್ಮನೆ, ಘೞಿಲೆನೆ (ಭಾಷಾಭೂ. ೧-೧೧ ವೃತ್ತಿ). 'ಘೞಿಲನೆ' ಪರಾ. **ಘಳಿಲ್ :** ತಳಿಯಂ ದಾಟುವ ಕರಿಯಂ ಘಳಿಲೆನೆ ಪಿಡಿದುಗಿಯೆ (ಎಕ. VIII, ನಗರ. ೩೫-೪೫ ; 1077) ; ಸಂದಣಿಸಿ ಕೂರಸಿಯೊಳಿಟ್ಟಣಿಸಿ ಹೊಯ್ದಲ್ಲಿ ಖಣಿಲೆಂಬ ಖಟಿಲೆಂಬ ನಿಳಿಲೆಂಬ ನೆರ್ಕೆಂಬ ಘಳಿಲೆಂಬ ಘಣ್ಮೆಂಬ ದೊಗಹೆಂಬ ದೊಕ್ಕೆಂಬ . . . ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟೆ (ಇಹರ. ದೇ. ೪೧-೨೨). **ಘಳಿಲು:** ಭದ್ರಾಸನವನಿಳಿದುಲಿವ ತೊಡರಿನ ಘೋಷಣೆಯ ಘಳಿಲುಗಳ ಮಗಧನೃಪಾಲನೈತಂದ (ಕುವ್ಯಾಆ. ೧೪-೮).

**ಘೞಿಲನೆ, ಘಳಿಲನೆ** (ಅ). ಬೇಗನೆ ; ಶೀಘ್ರವಾಗಿ : " ತುರಿಹಂ . . . ಘೞಿಲನೆ, ಬೇಗಂ–ಈ ೮ ಶೀಘ್ರಂ " (ಕಶಸಾ. ೧೨-೨೨೯) ; ಘೞಿಲನೆ ಕೊಳೆ ಹೀನಬಲನನಧಿಕಬಲಂ ತೊತ್ತುೞಿದುೞಿದನೆಂಬ ಲೋಕದ ಪೞಿ (ಆದಿಪು. ೧೪-೧೦೨) ; ಘೞಿಲನೆ ನಡೆಯೆಂದು ಜಡಿದು ಸಾರಥಿಯಂ (ಕಾವ್ಯಾವ. ೨೬) ; ಚೋದ್ಯಂ ನಿರಭ್ರನಭದಿಂ ವಿದ್ಯುಲ್ಲತೆ ಘೞಿಲನಿೞಿದುದೆನೆ ಖಡ್ಗಂ . . . ಬಂದು ನಿಂದುದಚ್ಯುತಕರದೊಳ್ (ಜಗವಿ. ೭-೭೨); ಅನುಕರಣಕ್ಕೆ – ಖಣಿಲ್ಲನೆ . . . ಘೞಿಲನೆ (ಶಮದ. ೧೪ ಪ್ರಯೋ). **ಘಳಿಲನೆ:** "ಘಳಿಲನೆಂದು ಕ್ಷಿಪ್ರದೊಳ್ ಪತ್ತುಗುಂ" (ಕರ್ಣಾನಿ. ೪೫); ನರ್ತಕಿಯರು ಘಳಿಲನೆ ನಡೆತಂದರಾಗ (ಕಂನವಿ. ೮-೫೬) ; ಘಳಿಲನೆ ರಮಣಿಯ ಕಿವಿಯೊಳ್ ಥಳಥಳಿಪ ಮಣಿಪ್ರಕಾಶಮಂಡಿತಕನಕೋಜ್ವಲಕುಂಡಲಮಂ ತೆಗೆದಾಗಳ್ ಕೊಟ್ಟನವಂಗೆ ಭಕ್ತಜನಮಂದಾರಂ (ವೃಷವಿ. ೮-೩೯). [ ಘೞಿಲ್ + – ಅನೆ$_1$ ]

**ಘಾಟ** (ನಾ). ಕುತ್ತಿಗೆಯ ಹಿಂಭಾಗ ; ಹೆಕ್ಕತ್ತು : "ಅವಟು ಘಾಟಂ ಕೃಕಾಟಿಕಂ ಹೆಡಕೆನಿಕ್ಕುಂ" (ಮಂಗರಾ. ೯೭-೧೩); ಅಲ್ಪಘಾಟನುಮನುನ್ನತಶಿಖನುಂ . . . ಅಪ್ಪ ವಿಜಯ ಪರ್ವತಗಜೇಂದ್ರಂಬಂದು (ಆದಿಪು. ೧೨-೫೬ ವ) ; ಇಱಿಕಿ ಮೊಳಕಾಲಿಕ್ಕಿ ದಂಡೆಯೊಳೊೞಗಿ ಘಾಟದೊಳೆತ್ತಿ ಧನು ಮೈಮುಱಿಯದಿರೆ ಬೆಂಡಾಗಿ ನೃಪರಿರ್ದರು ಕುಚೇಷ್ಟೆಯಲಿ (ಜೀವಂಚ. ೧೫-೨೩). [ ಸಂ. ]

**ಘಾಟಳಿಸು** 'ಗಾಟಳಿಸು' ನೋ.

**ಘಾಟಿ$_1$, ಗಾಟಿ, ಘಾಟು$_2$** (ನಾ). ೧. ಬೆಟ್ಟಗಳ ಮಧ್ಯದಲ್ಲಿರುವ ಇಕ್ಕಟ್ಟು ದಾರಿ; ಕಣಿವೆ: ಘಾಟಿಯ ದಾರಿಯ ನಾಟದ ಲಾರಿಯ ನಡಸುವಂದಿರುಳಿನೊಳಿನಿಯ ಬೇಟದ ನಾರಿಯ ಮಾಟದ ಮಾರಿಯ ಮರೆವಂತೆ ನೀ ಬೇಡು ಉಮೆಯ (ಚಂದ್ರವೀ. ೧೦೮-೨೯) ; ಊರ ಘಾಟಿಯನೇರಿ ಇಳಿವಾಗ ಎನಿಸಿತ್ತು (ನವ್ಯಧ್ಯ. ೪) ; ಘಾಟಿಯಲ್ಲಿ ಒಮ್ಮೆ ಹುಲಿರಾಯ ಗುರುಕಿದ (ಕಂಬಹು. ೧೪) ; ನಾಗೋಡಿ ಘಾಟಿ ಹತ್ತುವುದೇ ಬಹಳ ಪ್ರಯಾಸವಾಯಿತು (ಅನಾಥ. ೨೬೪). **ಗಾಟಿ :** ೨. ತಗ್ಗು ಪ್ರದೇಶ : ಸಂಕಣ ನಾಯಕಂ ತಾನಾಸ್ಥಾನಮಂ ಸಂಪಾದಿಸಿ . . . ಜಂಗಮ ಗಾ[ಪಾಠಾಂ. ವಾ] ಟಿಯೆಂದು ಪೆಸರಿಟ್ಟು (ಕಳನ್ಯ. ೩-೬೭). **ಘಾಟು$_2$ :** ೩. ನದಿ ಮೊದಲಾದ ಜಲಾಶಯಗಳಿಗೆ ಇಳಿಯುವ ಮೆಟ್ಟಿಲುಗಳ ದಾರಿ,– ಸೋಪಾನಮಾರ್ಗ : ಅದರ ನೀರು ಸಂತರ ಹೃದಯದಂತೆ ನಿರ್ಮಲ

ವಾಗಿದ್ದು, ಅದಕ್ಕೆ ರಮಣೀಯವಾದ ಘಾಟುಗಳಿದ್ದವು (ತುಳಸಿ. ೨೪೦); ಈ ಮಂದಿರವು ತುಸು ಎತ್ತರದ ಮೇಲಿದ್ದು, ಇಲ್ಲಿಂದ ಗಂಗೆಯ ತೀರಕ್ಕೆ ಇಳಿದುಹೋಗಲು ಹಿಮ್ಮಗ್ಗಲು ಸೋಪಾನಗಳ ಮಾರ್ಗ ಮಾಡಿ ಒಂದು ಘಾಟು ಕಟ್ಟಿರುವರು (ವಿಂಧ್ಯಾಲ. ೩೯). 'ಗಟ್ಟ$_1$' ಪರಾ.

[ <ಸಂ. ಘಟ್ಟ ]

**ಘಾಟಿ$_2$** (ನಾ). ಕಿಲಾಡಿ ; ಪಟಿಂಗ : ಮನೋಹರ ಬಹಳ ಘಾಟೀ ಇದ್ದಾನೆ (ಕೊತಕಾ. ೩೯); ನೀನು ತುಂಬಾ ಘಾಟಿ (ಮಠಲೀ. ೯೭); ನವೀನರಾಯರು ನಗಲಾರಂಭಿಸಿದರು. ಅವರು ಮೊದಲನೆಯ ತರಗತಿಯ ಘಾಟಿಗಳು (ಪರಿಜೀ. ೪೪). [ ? ]

**ಘಾಟಿಸು** (ಕ್ರಿ). ಹೊಡೆ ; ಚಚ್ಚು ; ಬಡಿ : ಮಾರಿಯಂದದಿ ಜನರ ನುಂಗುವ ಕ್ರೂರೆ ಘಾಟಿಸಿ ಅಳಿದರನು ಕಣ್ಣಾರೆ ನೋಡ್ಯೋಡೇನ ಕೊಲ್ಲುವೆ (ಜಿರಾವಮಾ. ೨೭-೫೪).

[ <ಘಟ್ಟಿಸು ]

**ಘಾಟು$_1$, ಗಾಟು$_1$** (ನಾ). ತೀಕ್ಷ್ಣವಾದ ವಾಸನೆ : ಬಿಸಿಲಲ್ಲಿ ಹಾಕಿದ್ದ ಸಂಬಾರಪದಾರ್ಥಗಳ ಘಾಟು, ಅಡಕೆ, ಹೊಂಭಾಳೆಯ ಗಮಗಮ– ಇವೆಲ್ಲ ನಗರದ ಗಾಳಿಯಲ್ಲಿ ಬೆರೆತು ಹೋಗಿದ್ದುವು (ಪ್ರವಾಇ. II, ೧೪೭). **ಗಾಟು$_1$** : "ಗಾಟು = ಮೆಣಸಿನಕಾಯಿ ಹೊಗೆಸೊಪ್ಪುಗಳ ವಾಸನೆ, ಕಾರ" (ಅನಂನಾ); ತಂಬಾಕ ಅಥವಾ ಮೆಣಸಿನ ಕಾಯಿಯ ಗಾಟು (ಜಾನಕೋ. ೪೭).

[ **ದೇ.॥ ತಮಿ.** ಕಾಟ್ಟು ; **ತುಳು.** ಗಾಟ್, ಗಾಟು ; **ತೆಲು.** ಕಾಟು, ಗಾಟು ; **ಕೊಲಾ.** ಗಾಟ ]

**ಘಾಟು$_2$** 'ಘಾಟಿ$_1$' ನೋ.

**ಘಾಟುಪ್ಪು** (ನಾ). ಕಟುವಾಸನೆಯುಳ್ಳ ಒಂದು ಬಗೆಯ ಉಪ್ಪು,– ಕ್ಷಾರ : " ಅಮೋನಿಯಂ ಕಾರ್ಬೊನೇಟ್ ಲವಣ: ಘಾಟುಪ್ಪು. (ನೆಗಡಿಯಾದಾಗ, ಮೂರ್ಛೆ ಹೋದಾಗ, ಮೂಗಿಗೆ ಹಿಡಿಯುವ ಲವಣ)" (Salt of hartshorn. ಇಂಕನಿ). [ ಘಾಟು$_1$ + ಉಪ್ಪು$_1$ ]

**ಘಾಟೆ** (ನಾ). (ಉಕ) ಕಡಲೆಹಿಟ್ಟಿನಿಂದ ಮಾಡಿದ ಖಾರವಿಲ್ಲದ ಚಕ್ಕುಲಿಯಂತಹ ಒಂದು ಬಗೆಯ ಭಕ್ಷ್ಯ : ಸಮೀಪದ ಚಹಾದ ಅಂಗಡಿಯಿಂದ ಚಹಾ ಮತ್ತು ಭಯ್ಯಾನಂಗಡಿಯಿಂದ ಸಣ್ಣಾಗಿನ ಸೇವು, ಘಾಟೆ ತಂದೆ (ವ್ಯನಿ. ೨೦೫). [ ? ]

**ಘಾಡ** 'ಗಾಡ$_1$' ನೋ.

**ಘಾಡತನ** (ನಾ). ಅತಿಶಯ; ಹೆಚ್ಚಳ; ಗಾಢತೆ : ಪಾರ್ಥನುಬ್ಬಟೆ ಘಾಡ ತನವೇನೆಂಬೆನೈ ಕುರುರಾಯ ಚಿತ್ತವಿಸು (ಕುವ್ಯಾದ್ರೋ. ಒರಿಇ. ಪರಿ. ೨೯೦).

[ ಘಾಡ (<ಗಾಡ$_1$) + – ತನ ]

**ಘಾಡಿ** (ನಾ). ಆಧಿಕ್ಯ; **ಅತಿಶಯ :** ಕೋಪದಲಿ ಖಳಪತಿ ಬೆಸಸೆ ಭಟನಿಕರ ಘಲ್ಲಿಸಿದರೀತನನು ಘಾಡಿ[ಪಾಠಾಂ. ಗಾಢೆ]ಯ ಘಲ್ಲಣೆಯ ಘಾಯದಲಿ ಹನುಮನು ಹುಲ್ಲಕಡ್ಡಿಗೆ ಬಗೆಯದಿರ್ದನು ನಿಖಿಳಕೈದುಗಳ (ತೊರರಾ. ೫-೭-೨೦). [ <ಗಾಡ$_1$ ]

**ಘಾಡಿಕೆ** (ನಾ). ೧. ಉರವಣೆ ; ತೀವ್ರತೆ ; ಉತ್ಕಟತೆ : ಭುಜದ ಸಾಹಸ ಹತ್ತುಸಾವಿರ ಗಜದ ಘಾಡಿಕೆ (ಕುವ್ಯಾದ್ರೋ. ೩-೪೪); ಅವನಿಪಾಲನ ಗಫಿಯ ಘಾಡಿಕೆ ಜೋಡಿಸಿತು ಗೀರ್ವಾಣರಾಲಿಗಳ (ಕುವ್ಯಾಕ. ೧೫-೧೭); ರತಿಸುಖವಿತ್ತಗಲ್ದೊಡೆ ನಿನ್ನ ಭಾವದ ಗತಿಯು ಘಾಡಿಕೆಯೆಂತಹುದೊ (ಕಂನವಿ. ೯-೧೫೩). ೨. ಅತಿಶಯ ; ಆಧಿಕ್ಯ ; ಹೆಚ್ಚಳ : ಹರುಷದ ಘಾಡಿಕೆಯ ಘನ ಪುಳಕರಸ ಸೌರಂಭದಲಿ ಮುಳುಗಿ ನೋಡಿದರು (ನಿಭಾಗ. ೧೦-೫೭-೨೪).

[ ಘಾಡ (<ಗಾಡ$_1$) + – ಇಕೆ ]

**ಘಾಡಿಸು** 'ಗಾಡಿಸು' ನೋ.

**ಘಾಣ$_1$** 'ಗಾಣ$_1$' ನೋ.

**ಘಾಣ$_2$** (ಗು). ಕೊಳಚೆಯಾದ; ದುರ್ವಾಸನೆಯಿಂದ ಕೂಡಿದ; ನಾರುವ : ಏನು ಹೇಳುವಿ ಶರಣೆ ಗ್ನ್ಯಾನ ತಪ್ಪಿತೆ ನಿನಗೆ ಕಾಣುದಕೆ ಹರಳ ಹೊಲೆಯನವ ಅವ ಮಿಂದ ಘಾಣ ನೀರಿಂದೆ ಗುಣವಾಯ್ತು (ಕನ್ನಜಾ. ೨೪೦).

[ ←ಮರಾ. ಘಾಣ್ ]

**ಘಾತ$_1$** 'ಗಾತ$_1$' ನೋ.

**ಘಾತ$_2$** (ನಾ). ೧. ಹೊಡೆತ ; ಪೆಟ್ಟು ; ಗಾಯಗೊಳಿಸುವಿಕೆ. ೨. ಹಾಳು ; ನಾಶ ; **ಕೊಲೆ.** ೩. ಗಂಡಾಂತರ ; **ಅಪಾಯ; ಅನರ್ಥ:** ತಾಯಿಯಾ ಘಾತ ಅತು . . . ಘಾತ ಆಗಿಹೋತು ! (ಜನಜೀ. ೯೫); ಅಯ್ಯೋ! ಘಾತ! ಆ ಹಜಾಮ ನನ್ನ ಚಂಡಿಕೆಯನ್ನೇ ಕಿತ್ತುಬಿಟ್ಟಿದ್ದಾನೆ (ಮುಂಗಾಪು. ೯೦); ಇಲ್ಲಿಂದ ಮುಂದೆಯೂ ಸಹ ಅವರು ಯಾವ ಘಾತ ಸಾತಗಳೂ ಇಲ್ಲದೆ ಹೊರಟು ಹೋಗಬಹುದಾಗಿತ್ತು (ಭಾರವೀ. ೧೦೭). 'ಅಪಘಾತ' ಪರಾ. ೪. ಐದುವಿಧವಾದ ಬಾಣಪ್ರಯೋಗಗಳಲ್ಲೊಂದು: ಘಾತಃ ಲಕ್ಷ್ಯಂ ಶೀಘ್ರಂ ಘಾತಂ ಬಹುವೇಗಮೆಂಬಿವಯ್ದೇಸಿನೊಳಂತೀತನ ದೊರೆಯಿಲ್ಲೆನಿಸಿದುದಾತನ ಬಿಲ್ಬಲ್ಮೆ ಸುರರಿನಂಬರತಲದೊಳ್ (ಪಂಪಭಾ. ೧೨-೧೮೫). ೫. [ಗಣಿತ] ಒಂದು ಸಂಖ್ಯೆಯನ್ನು ಅದೇ ಸಂಖ್ಯೆಯಿಂದ ಎಷ್ಟು ಸಲ ಗುಣಿಸಬೇಕೆಂಬುದನ್ನು ಸೂಚಿಸುವ ದರ್ಶಕಸಂಖ್ಯೆ ; ಯಾವುದಾದರೊಂದು ಅಜ್ಞಾತಸಂಖ್ಯೆಯನ್ನು ಸೂಚಿಸುವ ಪದಕ್ಕೆ ಸಂಬಂಧಪಟ್ಟ ಪರಿಮಾಣವನ್ನು ಅಥವಾ ನಿರ್ದಿಷ್ಟ ಶಕ್ತಿಯನ್ನು ಸೂಚಿಸುವ ಸಂಖ್ಯೆ : "ಗುಣ್ಯಪದದ ಯಾವ ಘಾತವನ್ನು ತೆಗೆದುಕೊಳ್ಳಬೇಕೆಂದು ಸೂಚಿಸುವ ದರ್ಶಕ; ಘಾತ" (Exponent. ಇಂಕನಿ); " ಒಂದು ಪದಶ್ರೇಣಿಯಲ್ಲಿ ಅಜ್ಞಾತಪದಕ್ಕಿರುವ ಮಹತ್ತಮ ಘಾತ ಪರಿಮಾಣ ; ಘಾತ " (Degree. ಇಂಕನಿ) ; ಮೊದಲು ಬೀಜಗಣಿತದಲ್ಲಿ ಎರಡು ಪದಗಳ ಮೊತ್ತದ ಯಾವ ಘಾತವನ್ನಾದರೂ ಹೇಗೆ ಬರೆಯಬಹುದೆಂಬುದನ್ನು . . . ಕಂಡುಹಿಡಿದನು (ವಿಜ್ಞಾಕ. ೪೭).

[ ಸಂ. ]

**ಘಾತಂಗೆಡು** (ಕ್ರಿ). ಆಳ ಕಡಮೆಯಾಗು ; ಆಳವಿಲ್ಲದೆ ಹೋಗು : ಮೇಗಂಗವಿಸಿ ಕವಿದ ಭವಜಾಟಳದ ಬಾವಿ ಘಾತಂಗೆಟ್ಟು ಪೂಳ್ದಪುದೊ ಎಂಬಂತೆ ಗಂಭೀರನಾಭಿ ನೆಟಿಚಿ ಗುಣ್ಪಳಿದುದು (ಸಿದ್ಧರಾ. ೧-೪೯).

[ ಘಾತ$_1$ (<ಗಾತ$_1$) + ಕೆಡು$_1$ ]

**ಘಾತಂಬಡು** (ಕ್ರಿ). ಹಾನಿಯನ್ನು ಹೊಂದು; ತೊಂದರೆಗೊಳಗಾಗು ; ಬಾಧೆ ಪಡು (?) : ಪರ್ಯಾಪ್ತಕಮುಂ ನಿವೃತ್ತಪರ್ಯಾಪ್ತಕಮುಂ ಲಬ್ಧಿಪರ್ಯಾಪ್ತಕಮುಮೆಂಬೀ ಭೇದದಿಂ ಪೊಂದೊಂದು ಷಡ್ವಿಕಲ್ಪಮಕ್ಕುಂ ಅವಕ್ಕೆ ತಮ್ಮ ತಮ್ಮ ವರ್ಣ ರಸ ಗಂಧ ಸ್ಪರ್ಶಂಗಳೊಳು ಕೂಡಿದ ಶರೀರಂಗಳಪ್ಪವು ಘಾತಂಬಡುವ ಶರೀರನೊಡೆಯವು (ಶ್ರಾವಕಾ. ೬೪-೧೭).

[ ಘಾತ$_1$ (<ಗಾತ$_1$) + ಪಡು$_1$ ]

**ಘಾತಕ** (ಗು). ೧. ಹೊಡೆಯುವ ; ಬಡಿಯುವ . ೨. ಕೊಲೆಮಾಡುವ ; ನಾಶಮಾಡುವ ; ಹಿಂಸೆಮಾಡುವ. (ನಾ). ೩. ಕೊಲೆಗಡಿಕ ; ಕೊಲೆಗಾರ: ಇದಿರುಗಾಣದೆ ಕೊಲೆಗೆ ನಿರ್ಬಂಧದಲಿ ಬೆಸಸುವ ಕೃಷ್ಣನಕಟಾ ಮದಮುಖನೊ ದುರ್ಬೋಧಕನೊ ವಂಚಕನೊ ಘಾತಕನೊ (ಕುವ್ಯಾಭೀ. ೩-೨೮). ೪. ಹಿಂಸಕ ; ಕಿರುಕುಳ ಕೊಡುವವನು; ದುಷ್ಟ : ಮನವೊಂದು ಮಾಣಿಕ ಏನಂದ ಘಾತಕ ನಾನೊಂದು ನನ್ನ ಮನನೊಂದು ಕೈಯಾನ ಬಳಿಯೆಲಿ ಬಾಡಿ ರುಚಿ ಹಾರಿ (ಕನ್ನಜಾ. ೧೧೨). ೫. ದ್ರೋಹಿ ; ವಂಚಕ ; ಮೋಸಗಾರ. 'ವಿಶ್ವಾಸಘಾತಕ' ಪರಾ. [ ಸಂ. ]

**ಘಾತಕತನ** (ನಾ). ಹಿಂಸೆಕೊಡುವ ಸ್ವಭಾವ ; ಕೇಡು ಮಾಡುವಿಕೆ ; ತೊಂದರೆ ಕೊಡುವಿಕೆ ; ಕ್ರೂರತೆ : ಕಾಮದಲ್ಲಿ ಕಂದಿ ಕ್ರೋಧದಲ್ಲಿ ಬೆಂದು . . . ಭಾವದ ಭ್ರಮೆಯಡಗದೆ ಜೀವವಿಕಾರ ಹಿಂಗದೆ ಕೂರಲಗಿನ

ಒಪ್ಪದಂತೆ ಕಣ್ಣಿಗೆ ನೋಟ ಘಟದ ಆಸುವಿಂಗೆ ಓಟ ಅಸಿಯ ಘಾತಕತನದಂತೆ (ವೋಳಿಮಾ. ೩೫-೧೪೯). ಮಾತಿನಲ್ಲಿ ಕರ್ಕಶ ಮನದಲ್ಲಿ ಘಾತಕತನವುಳ ವನ ಕನಿಷ್ಠನೆಂಬರು (ಅಖಂಡೇ. ೯೯-೨೫); ಅವನು ಹಿಂಸಾತ್ಮಕ ಕೃತ್ಯಗಳಲ್ಲಿ ನಿಸ್ಸೀಮ ; ಘಾತಕತನ ಅವನಿಗೆಷ್ಟು ಒಗ್ಗಿಹೋಗಿತ್ತೆಂದರೆ ಅದರ ಬಗ್ಗೆ ಅವನಿಗೆ ಪರಿವೆಯೇ ಇರಲಿಲ್ಲ (ಪುನರು. ೩೩೫). [ ಘಾತಕ + – ತನ ]

**ಘಾತಕಬುದ್ಧಿ** (ನಾ). ಕೇಡನ್ನುಂಟುಮಾಡುವ ಬುದ್ಧಿ ; ಕ್ರೂರವಾದ ಸ್ವಭಾವ ; ದ್ರೋಹ ಮಾಡುವ ಬುದ್ಧಿ ; ವಂಚಕತನ : ಸರ್ವಜ್ಞಕವಿ ಸ್ತ್ರೀಯೆಂದರೆ ಘಾತಕಬುದ್ಧಿಯವಳೆಂದು ಹೇಳಿದನು (ಕರ್ನಾಕ. ೧೯೫).

[ ಘಾತಕ + ಬುದ್ಧಿ ]

**ಘಾತಕಸ್ಥಾನ** (ನಾ). ಕೊಲೆಮಾಡುವ ಸ್ಥಳ; ಕಸಾಯಿಖಾನೆ; ವಧಸ್ಥಾನ: "ಘಾತಕ[ಪಾಠಾಂ. ಘಾತನ, ಪೂತನಾ]ಸ್ಥಾನಮೆನೆ ಕೊಲುವೆಡೆಯೆನಿಕ್ಕು" (ಮಂಗರಾ. ೧೧೧-೪). [ ಘಾತಕ + ಸ್ಥಾನ ]

**ಘಾತಕಿ** (ನಾ). ೧. ಕೊಲೆಗಡಿಕಿ ; ಕೊಲೆಮಾಡುವವಳು : ಮಗುವನ್ನು ಕೊಂದ ಘಾತಕಿಯವಳು (ರೂಢಿ). ೨. ದ್ರೋಹಿ ; ವಂಚಕಿ : ಘಾತಕಿಯೆ ಮತ್ಕುಲಕರಿಷ್ಟೆ ನೀನತಿಕಷ್ಟೆ ಪೋಗು ದುಷ್ಟೆ (ಜೈಮಿಭಾ. ೯-೧೮).

[ ಘಾತಕ + – ಇ₂ ]

**ಘಾತಗಳೆ** 'ಗಾತಗಳೆ' ನೋ.

**ಘಾತನ** (ನಾ). ೧. ದ್ರೋಹವಮಾಡುವಿಕೆ ; ಹಿಂಸೆಕೊಡುವಿಕೆ : ಘಾತನ ತಾಡನ . . . ದುರ್ಭೋಗ್ಯ ನಾನಾವಿಧಾಸಂಖ್ಯಾತ ತೀವ್ರ ವೇದನಾರೂಪಂಗಳಾಗಿ (ವಿವೇಕ. ೧೮೦). 'ಚಂಚಂಘಾತನ', 'ನಖಘಾತನ' ಪರಾ. ೨. ಕೊಲ್ಲುವಿಕೆ; ವಧೆ; ಹತ್ಯೆ: "ಮಾರಣಂ, ನಿಶರಣಂ . . . ಘಾತನಂ, ಪ್ರಶಮನಂ . . . ಸಂಜ್ಞಪನಂ–ಈ ೨೧ ಕೊಲೆ" (ಹಲಾಯು. ೭೮-೩೨೩); "ವಿಶಸನಂ ಸೂದನಂ ಮಾರಣಂ ಘಾತನಂ[ಪಾಠಾಂ. ವಿಘಾತನಂ] . . . ಪ್ರಮಾಪಣಂ ಕೊಲೆಗೆ ನಾಮಂ" (ಮಂಗರಾ. ೮೮-೩೯). ೩. ಕೊಲ್ಲುವವನು ; ಕೊಲೆಗಡಿಕ. [ ಸಂ. ]

**ಘಾತನಸ್ಥಾನ** (ನಾ). = ಘಾತಕಸ್ಥಾನ : "ಸೂನಾ, ಘಾತ(ನ)ಕಸ್ಥಾನಂ-ಈ ೨ ಕೊಲುವೆಡೆ" (ಹಲಾಯು. ೯೭-೪೪೧) ; "ಘಾತನ[ಪಾಠಾಂ. ಘಾತಕ, ಪೂತನಾ]ಸ್ಥಾನಮೆನೆ ಕೊಲುವೆಡೆಯೆನಿಕ್ಕು" (ಮಂಗರಾ. ೧೧೧-೪).

[ ಘಾತನ + ಸ್ಥಾನ ]

**ಘಾತಳಿಕೆ** 'ಘಾತಾಳಿಕೆ' ನೋ.

**ಘಾತಾಘಾತಿ** (ನಾ). ಪರಸ್ಪರವಾಗಿ ಹೊಡೆದು ಮಾಡುವ ಯುದ್ಧ ; ಪರಸ್ಪರವಾಗಿ ತಾಗಿ ಮಾಡುವ ಯುದ್ಧ. 'ಘಾತಾಘಾತಿಕಾಱ' ಪರಾ. [ ಸಂ. ]

**ಘಾತಾಘಾತಿಕಾಱ** (ನಾ). ಘಾತಾಘಾತಿಯುದ್ಧವನ್ನು ಮಾಡುವವನು ; ಪೆಟ್ಟಿಗೆ ಪ್ರತಿಯಾಗಿ ಪೆಟ್ಟನ್ನು ಹೊಡೆದು ಯುದ್ಧಮಾಡತಕ್ಕವನು ; ಏಟಿಗೆ ಏಟು ಕೊಡುವವನು : ಗದೆಯ ಘಾತಾಘಾತಿಕಾಱನನಿದಿರುಗೊಂಡುದು ದೆಸೆದೆಸೆಗೆ ಹಬ್ಬಿದುದು ಬಲನೆಡಜೋಡು ಬಲುಭಾರಣೆಯ ಪಟುಭಟರು (ಕುವ್ಯಾದ್ರೋ. ೨-೭೮). [ ಘಾತಾಘಾತಿ + – ಕಾಱ ]

**ಘಾತಾಳಿ** (ನಾ). ಘಾತಕಸ್ವಭಾವದ ವ್ಯಕ್ತಿ ; ಕೇಡಾಳಿ ; ವಂಚಕ : ಹೇಳಿದೊಡೆ ಕುಂತೀಕುಮಾರರು ಕೇಳಿ ಮಾಡುವುದಾವುದೋ ವನಪಾಲಕರು ತಾವಿಂದು ಪೃಥ್ವೀಪಾಲನೆಮ್ಮೊಡೆಯ ಹೇಳಿ ಬಳಿಕರ್ಜುನನ ಭೀಮನ ಧಾಳಿಯನು ತಹುದೆನುತಲತಿ ಘಾತಾಳಿಯರು ಮುನಿಜನವ ಬೈದರು ಬಹುವಿಕಾರದಲಿ (ಕುವ್ಯಾಅ. ೧೮-೧೧) ; ಆರ ಸಿರಿಗಿವಳಿನಿತು ಕಡುಸಿಂಗಾರವನು ಕೈಕೊಂಡಳು . . . ವೀರ ನೋಡೈ ತಮ್ಮ ನೆಮ್ಮ ವುದಾರನೀಯುಪಹಾಸ ಮನಕಿದು ಸೇರುವುದೆ ಘಾತಾಳಿಯಂಗವ ನೋಡು ನೀನೆಂದ (ತೊರರಾ. ೬-೫೩-೫೨). [ ಘಾತ₂ + – ಆಳಿ₃ ]

**ಘಾತಾಳಿಕೆ, ಘಾತಳಿಕೆ** (ನಾ). ೧. ಹಿಂಸೆಮಾಡುವ ಉದ್ದೇಶ ; ಕೊಲೆಪಾತಕತನ ; ವಧೆಮಾಡುವ ಹಂಚಿಕೆ : ವ್ಯಾಳದಂಗದ ನಯವೊ ಗರ್ತಸಂಛಾದಿತ ತೃಣಾಳಿಗಳೊ . . . ಪೇಳಲರಿದೆನೆ ಸೊಗಸಿತಾ ದುಷ್ಟಬುದ್ಧಿ ಘಾತಾಳಿಕೆಯನೊಳವುದುಗಿ ಹರ್ಷಲಾಂಛನದಿಂದೆ ನಸುನಗುತೆ ನುಡಿದ ಮಾತು (ಜೈಮಿಭಾ. ೨೯-೩೫). **ಘಾತಳಿಕೆ:** ೨. ಮೋಸದ ನಡವಳಿಕೆ ; ಧೂರ್ತತೆ ; ದುಷ್ಟತನ : ಖಳನ ಕೈವಶವಾದೆನಿದು ಘಾತಳಿಕೆಯಲ್ಲವೆ ಹೆಂಗುಸಿಗೆ (ತೊರರಾ. ೬-೫೨-೧೧). [ ಘಾತಾಳಿ + – ಇಕೆ ]

**ಘಾತಿ**₁ (ಗು). ೧. ನಾಶಮಾಡುವ ; ಕೊಲ್ಲುವ. ೨. ಹಾನಿಯನ್ನುಂಟುಮಾಡುವ; ತೊಂದರೆ ಕೊಡುವ. ೩. ಪಕ್ಷಿಗಳನ್ನು ಹಿಡಿಯುವ,– ಬಂಧಿಸುವ. (ನಾ). ೪. ಕೊಲ್ಲುವವನು ; ಕೊಲೆಪಾತಕಿ. ೫.=ಘಾತಿಕರ್ಮ : ಉಗ್ರುತಪಮೆಂಬುಗ್ರಾಸಿಯಿಂ ಕೂಡೆ ಘಾತಿಗಳಂ ಘಾತಿಸಿ ತದ್ಯುಗಂಧರಮಹಾಯೋಗೀಶ್ವರಂ ಪೂರ್ವದಂ ನೆಗಱ್ದಾರ್ಹಂತಮಂ (ಆದಿಪು. ೩-೮೦) ; ಘಾತಿಗಳಂ ಕಿಡಿಸಿ ಕೇವಲಿಯಾಗಿ (ಚಾವುಂಪು. ೪೭೧-೧೫) ; ಅವ್ಯತಘಾತ್ಯಘಾತಿದುರಿತಾತ್ಮಯದೊಳ್ ಚರಮಾಂಗ ಮಾತ್ರಕರ್ (ಚಂದ್ರಪು. ೧-೨). [ ಸಂ. ಘಾತಿನ್ ]

**ಘಾತಿ**₂ (ನಾ). ೧. ಹೊಡೆತ ; ಏಟು : ಘಾತಿಯಲಿ ಘಲ್ಲಿಸಿದಡಾ ಧನು ಸೋತುದೆವೆಯಂತರಕೆ ತೊಲಗದು (ಕುವ್ಯಾಅ. ೧೪-೧೦). ೨. ಮರಣ ; ನಾಶ : ಜಾತಿ ನೀತಿ ಸಮಾಜ ವರ್ಗಭೇದದಿನೇನು? ಘಾತಿಯಿಲ್ಲಾತ್ಮಂಗೆ (ಮಂಕುಕ. ೮೯೬). ೩. ಕೊಲ್ಲುವಿಕೆ; ಸಂಹರಿಸುವಿಕೆ. ೪. ಪಕ್ಷಿಗಳನ್ನು ಹಿಡಿಯುವ ಬಲೆ. [ ಸಂ. ]

**ಘಾತಿಕರ್ಮ** (ನಾ). [ಜೈನ] ಆತ್ಮನ ಗುಣಕ್ಕೆ ಘಾತಕವಾದ ಕರ್ಮ ; ಸತ್ಕಾರ್ಯಪ್ರವೃತ್ತಿ ಮೊದಲಾದ ಉತ್ತಮಗುಣಗಳನ್ನು ಹಾಳುಮಾಡಿ ಆತ್ಮನ ಪರಿಪೂರ್ಣತೆಗೆ ಬಂಧಕವಾದ ಜ್ಞಾನಾವರಣೀಯವೇ ಮೊದಲಾದ ನಾಲ್ಕುಬಗೆಯ ಕರ್ಮ:ಘಾತಿಕರ್ಮಮಂ ಬಗೆವಡೆಯಂ ಪಡಲ್ವಡಿಸಿ ಕೀೞ್ ಕೃತಾಂತನನಿಕ್ಕಿ ವೀರಲಕ್ಷ್ಮಿಗೆ ನೆಲೆಯಾದ ಮೆಯ್ಗಲಿಯೆ ನೀನೆ ವಲಂ ಜಗದೊಳ್ ಜಿನೇಶ್ವರಾ (ಪಂಪರಾಮಾ. ೫-೪). 'ಅಘಾತಿಕರ್ಮ' ಪರಾ. [ ಘಾತಿ₁ + ಕರ್ಮ ]

**ಘಾತಿಕರ್ಮಚತುಷ್ಟಯ** (ನಾ). [ಜೈನ] ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ ಮತ್ತು ಅಂತರಾಯ ಎಂಬ ನಾಲ್ಕು ಘಾತಿಕರ್ಮಗಳು : ಬಂಧವು ಘಾತಿಕರ್ಮಚತುಷ್ಟಯ, ಅಘಾತಿಕರ್ಮಚತುಷ್ಟಯ ಎಂದು ಎಂಟುವಿಧವೆಂದು ಮತ್ತೊಂದು ವಿಭಾಗವಿರುವುದು (ಹಿಂದಸಾ. ೯೦). [ ಘಾತಿಕರ್ಮ + ಚತುಷ್ಟಯ ]

**ಘಾತಿಕ್ಷಯ** (ನಾ). [ಜೈನ] ಘಾತಿಕರ್ಮಗಳ ನಾಶ,–ಹಾನಿ,–ಸವೆದು ಹೋಗುವಿಕೆ : ದೀಕ್ಷೆಗೊಂಡೆಯ್ದಿ ಘಾತಿಕ್ಷಯಮಮಂ ಕೈವಲ್ಯಾಬೋಧಾಸ್ಪದಮುನನಘಮಂ ಗೆಲ್ದು ನಿರ್ಮೋಹನಾದಂ (ಶಾಂತಿಪು. ೯-೧೪) ; ತಪಮಂ ಕೈಕೊಂಡು ಶುಕ್ಲಧ್ಯಾನದಿಂ ಘಾತಿಕ್ಷಯಂಗೆಯ್ದು ಕೇವಳಿಯಾಗೆ (ಚಾವುಂಪು. ೧೫-೬) ; ಘಾತಿಕ್ಷಯದಿಂ ಕೈವಲ್ಯಾತಿಶಯಂಬೆತ್ತನಾ ಸುಕೌಶಲಮುನಿಪಂ (ಪಂಪರಾಮಾ. ೨-೫೬). [ ಘಾತಿ₁ + ಕ್ಷಯ ]

**ಘಾತಿಚತುಷ್ಕ** (ನಾ). = ಘಾತಿಕರ್ಮಚತುಷ್ಟಯ : ಚಮರರುಹದ್ವಯಂ ಬೆಳಪ ಬೆಳ್ಗೊಡೆ ಪೂಮಟಿ ಭಾಪ್ರತಾನಮುತ್ತಮಮಣಿಪೀಠಮಿಂದ್ರ ಸಭೆಯೆಂಬಿವು ಘಾತಿಚತುಷ್ಕಘಾತದಿಂ ಸಮನಿಸೆ (ಶಾಂತಿಪು. ೪-೬೩).

[ ಘಾತಿ₁ + ಚತುಷ್ಕ ]

**ಘಾತಿಚತುಷ್ಟಯ** (ನಾ). = ಘಾತಿಕರ್ಮಚತುಷ್ಟಯ : ಮಹಾಷ್ಟಾಪದಶೈಲದೊಳ್ವಿಜಿತಘಾತಿಚತುಷ್ಟಯಂ . . . ಇರೆ (ಆದಿಪು. ೧-೪೦) ; ಅಂತು ಘಾತಿಚತುಷ್ಟಯಕ್ಕಂ ಕದಳೀಘಾತಂ ಮಾಡಲೊಡಂ (ಚಂದ್ರಪು. ೧೪-೭೬ ವ).

[ ಘಾತಿ₁ + ಚತುಷ್ಟಯ ]

**ಘಾತಿತ್ರಿಕ** (ನಾ). [ಜೈನ] ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯಗಳೆಂಬ ಮೂರು ಘಾತಿಕರ್ಮಗಳು; ನಾಲ್ಕು ವಿಧವಾದ ಘಾತಿಕರ್ಮಗಳಲ್ಲಿ ಮೊದಲಿನ ಮೂರು : ಶುಕ್ಲಧ್ಯಾನವಿಹತಘಾತಿತ್ರಿಕನುಂ(ಜಾವುಂಪು. ೪೪೭-೨). [ ಘಾತಿ$_1$ + ತ್ರಿಕ ]

**ಘಾತಿನಿ** (ನಾ). ನಾಶಮಾಡುವವಳು ; ಕೊಲೆಗಡಿಕಿ : ಲೋಕಘಾತಿನಿಯಪ್ಪ ಪೂತನಿಯುಮಂ . . . ಕರೆದು (ಜಗವಿ. ೩-೨೨ ವ) ; ಕುಲಘಾತಿನಿಯೆ, ಪಾಪಿನಿಯೆ, ನಡೆ, ತೊಲಗು (ಶ್ರೀರಾಮಾ. ೭೦-೪೪೯). [ ಸಂ. ಘಾತಿನೀ ]

**ಘಾತಿಪ್ರಚುರೆ** (ನಾ). [ಜೈನ] ಘಾತಿಕರ್ಮಗಳಿಂದ ಕೂಡಿದವಳು : ವಿಕಟಾಂಗೋಪಾಂಗೆ ಘಾತಿಪ್ರಚುರೆ ಪೆಟವಿ . . . ಇರ್ದಳ್ (ಸುಕುಮಾ. ೫-೨೧). [ ಸಂ. ಘಾತಿಪ್ರಚುರಾ (ಘಾತಿ + ಪ್ರಚುರ + – ) ]

**ಘಾತಿಸು** (ಕ್ರಿ). ೧. ಹೊಡೆ ; ಬಡಿ ; ಚಚ್ಚು : ಘಾತಿಸಿ ಚಪೇಟಚರಣಾಘಾತದೊಳ್ ಅಟಿದು (ಆದಿಪು. ೫-೧೭); ಪಿಡಿಪಿಡಿ ಕಟ್ಟು ಕಟ್ಟಡಸಿ ಘಾತಿಸು ಘಾತಿಸು (ಅಜಿಪು. ೧೧-೧೦). ಕಲಿ ಯೌವನಾಶ್ವನಂ ಸದದು ನೀಲಧ್ವಜನನುಜಿ ಘಾತಿಸಿ (ಜೈಮಿಭಾ. ೧೪-೫). ೨. ಹಿಂಸಿಸು; ನೋಯಿಸು: ಕಠೋರವಾಣಿಗಳಿಂ ಘಾತಿಸುತಿರ್ದಮಿನ್ನೆವರೆಗಂ ನಿಮ್ಮಂ (ಸುಕುಮಾ. ೨-೩೩); ಪ್ರೀತಿಯಿಂ ಮಾಧವಸಂಗದೊಳಿರೆ ತುಂಬಿ ಘಾತಿಪುವೆಮ್ಮನೆಂದಂಜಿ ಆತನ ವರ್ಜಿಸಿ ಮಾಗಿಯ ಕೆಳೆಗೊಂಡು ಜಾತಿಯ ಪುಷ್ಪವೊಪ್ಪಿದುವು (ಕಂಸವಿ. ೭-೫೪). ೩. ಸಾಯಿಸು; ಕೊಲ್ಲು ; ನಾಶಮಾಡು : ಘಾತಿಗಳಂ ಘಾತಿಸಿ ತದ್ಯುಗಂಧರಮಹಾಯೋಗೀಶ್ವರಂ ಪೊರ್ದಿದಂ ನೆಗಟ್ದಾರ್ಹಂತಮಂ (ಆದಿಪು. ೩-೮೦) ; ಮನವಲಸದೆ ಜೀವಂಗಳನನಿಶಂ ಘಾತಿಸುವ ಪಾಪಿ ಸೂರನುಮಾದಂ (ಸಮಪ. ೩-೫೧); ಘಾತಿಯುಮನಘಾತಿಯುಮಂ ಘಾತಿಸಿ ಕೀರ್ತಿಧರಯೋಗಿ ಮುಕ್ತಿಗೆ ಸಂದಂ (ಪಂರಾಮಾ. ೨-೫೭) ; ಈತನನುಸಾಲ್ವನೆಂಬಾತನಿವನಣ್ಣನಂ ಘಾತಿಸಿದೆವು (ಜೈಮಿಭಾ. ೭-೩೩). [ ಘಾತ$_2$ + – ಇಸು$_3$ ]

**ಘಾತುಕ** (ಗು). ೧. ನಾಶಮಾಡುವ. ೨. ಹಿಂಸೆಮಾಡುವ ; ತೊಂದರೆ ಕೊಡುವ. (ನಾ). ೩.ಕೊಲ್ಲುವವನು; ಹಂತಕ: "ಶರಾರುಃ, ಘಾತುಕಃ, ಹಿಂಸ್ರಃ–ಈ ೩ ಕೊಲ್ವವಂ" (ಹಲಾಯು. ೭೧-೨೧೭) ; "ಶರಾರು ಘಾತುಕ ಹಿಂಸಕಂ ಕೊಲ್ಲುವವನಕ್ಕು" (ಮಂಗರಾ. ೭೦-೧೫). ೪. ದ್ರೋಹಿ; ಕ್ರೂರ; ದುಷ್ಟ: "ನೃಶಂಸಃ, ಘಾತುಕಃ, ಕ್ರೂರಃ, ಪಾಪಃ–೪ ಪರರಿಗೆ ಬಾಧೆ ಮಾಡುವ ಸ್ವಭಾವವುಳ್ಳವನ ಹೆಸರುಗಳು" (ಸಿದ್ಧಾಂತಿ. ೨೮೯) ; ಘಾತುಕನಾಗಿ ಪರದ್ರವ್ಯವನ್ನು ಅಪಹರಿಸುವ ಪುರುಷನು ಆಪತ್ತುಗಳನ್ನು ತಪ್ಪಿಸಿಕೊಳ್ಳಲಾರನು (ಕೃವಾಉ. ೪೩). [ ಸಂ. ]

**ಘಾತುಕತನ** (ನಾ). ಕೊಲೆಗಡಿಕನಾಗಿರುವಿಕೆ ; ಹಂತಕನ ಸ್ವಭಾವ ; ಕಟುಕತನ: ಹೀಗಿರಲು ನಾನು ಬುದ್ಧಿಪೂರ್ವಕವಾಗಿ ನನಗೋಸ್ಕರ ಒಬ್ಬ ಬ್ರಾಹ್ಮಣನನ್ನು ಕೊಲ್ಲಿಸಿದರೆ ಅದು ಘಾತುಕತನವೂ ನೀಚತನವೂ ಆಗುವುದಿಲ್ಲವೆ? (ವಚಭಾ. ೪೫). [ ಘಾತುಕ + – ತನ ]

**ಘಾತ್ರ** 'ಗಾತರ' ನೋ.

**ಘಾಬರಿ** 'ಗಾಬರಿ' ನೋ.

**ಘಾಬರಿಸು** 'ಗಾಬರಿಸು' ನೋ.

**ಘಾಯ** 'ಗಾಯ' ನೋ.

**ಘಾಯಂಗೊಳಿಸು** 'ಗಾಯಂಗೊಳಿಸು' ನೋ.

**ಘಾಯಂಗೊಳು** 'ಗಾಯಂಗೊಳು' ನೋ.

**ಘಾಯಂಬಡಿಸು** (ಕ್ರಿ). ಗಾಯಂಗೊಳಿಸು : ನಕುಳನನು ನೋಯಿಸಿದ ಸಹದೇವಕನ ಘಾಯಂಬಡಿಸಿದನು (ಕುವ್ಯಾ.ಕ. ೧೩-೪೦). [ ಘಾಯಂಬಡು + – ಇಸು$_3$ ]

**ಘಾಯಂಬಡು** (ಕ್ರಿ). ಗಾಯವನ್ನು ಹೊಂದು,–ಪಡೆ. 'ಘಾಯಂಬಡಿಸು' ಪರಾ. [ ಘಾಯ (<ಗಾಯ) + ಪಡು$_1$ ]

**ಘಾಯಂಬಡೆ** 'ಗಾಯಂಬಡೆ' ನೋ.

**ಘಾಯವಡೆ** 'ಗಾಯಂಬಡೆ' ನೋ.

**ಘಾಯಾಳು** 'ಗಾಯಾಳು' ನೋ.

**ಘಾರಾಘಾರಿ** (ನಾ). ರಭಸ ; ಆವೇಗ : ಕಂಬಿಯ ಕಡಿಯಣದ ಕೀಲಣದ ಹೋರಟೆಯ ಘಾರಾಘಾರಿಯೊಳ್ ಜೋಳಿಸುವ ಲಾಲಾಜಲಂ ಖುರಹತಿಯಿಂ ನೆಗೆವ ದೂಳ್ಗೆ ಚಳೆಯಂಗುಡೆ (ಗಿರಿಕ. ೬-೫೫ ವ); ಹರಿಯ ಕುಲಿಶದ ಧಾಳಿಯಲಿ ಕುಲಗಿರಿಗಳಿಬ್ಬಗಿಯಾದವೊಲು ಮಂದರದ ಘಾರಾಘಾರಿಯಲಿ ಬಾಯ್ಬಿಡುವ ಕಡಲಂತೆ ಹರಿವರೂಥಿನಿ ಕೆದಱಿ ತಳಿತವು (ಕುವ್ಯಾ.ದ್ರೋ. ೧೨-೧೯) ; ಆರು ನಿಲಬಹುದವರ ಘಾರಾಘಾರಿಯಲಿ (ತೊರರಾ. ೪-೩-೫); ಸರಳು ಘಾರಾಘಾರಿಯಿಂದ ಹೊಗರೇರಿ (ತುರಂಗ. ೫೮-೩೭) ; ಸದಾಶಿವ ನಾಯಕನ ಘಾರಾಘಾರಿಗಿದಿರ್ಚಿ ನಿಲಲಾಂಪೊಡಶಕ್ಯಮಾಗಿ ಪಟುತರ ಪರಾಕ್ರಮಶಾಲಿಗಳಿಂ ಪಲಾಯನಂಬಡೆದು (ಕೆಳನೃ. ೨-೪೩). [ ? ]

**ಘಾರಿಗೆ** 'ಗಾರಿಗೆ$_1$' ನೋ.

**ಘಾರು** (ನಾ). ಒಂದು ಅನುಕರಣಶಬ್ದ : ಘಾರು ಘರ್ಘರ ಘರಿಲೆಂಬ... ಗರಿಗರಿಲೆಂಬ ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳ್ (ಗಿರಿಕ. ೬-೬೮).

**ಘಾಲಿ** 'ಗಾಲಿ' ನೋ.

**ಘಾಸ** (ನಾ). ಹುಲ್ಲು ; ಮೇವು : "ಘಾಸಃ, ಯವಸಃ–ಈ ೨ ದವಸಂ" (ಹಲಾಯು. ೩೨-೩೭) ; ಗುಣಮಿದು ದೋಷವಿದೆಂಬೀ ಗಣಿದಮನೆತ್ತಱಿಗುಮಶ್ರುತಪ್ರಕೃತಿಜನಂ ತೃಣಸಸ್ಯಘಾಸವಿಷಯಪ್ರಣಯಂ ಸಮವೃತ್ತಿಯಪ್ಪವೊಲ್ಗೃಗಗಣದೊಳ್ (ಕವಿರಾ. ೧-೮) ; ಗೋವಿಗೊಲಿದೊಂದು ಹಿಡಿ ಘಾಸಮಂ ಕೊಟ್ಟವನ ಪುಣ್ಯಕೆಣೆಯಿಲ್ಲ (ಮಲ್ಲಚ. ೫-೨೨) ; ನಿಸ್ಸೀಮ ಘಾಸಸೀಮಾರ್ಣವದ ವಿಸ್ತೀರ್ಣದೊಳ್ ಮನಂ ಲಯವಾಗೆ ನೋಡಿ (ಶ್ರೀರಾಮಾ. ೨೬೭-೧೧೪). [ ಸಂ. ]

**ಘಾಸರ** (ನಾ). ಹಗಲು ; ದಿನ : ವರ್ಗಚತುರ್ಥಾಕ್ಷರಂಗಳ್ಗೆ–ಘಟಿಯಂ . . . ಘಾಸಿ, ಘಾಸರಂ (ಶಮದ. ೧೫ ವೃತ್ತಿ). [ <ಸಂ. ಘಸ್ರ ]

**ಘಾಸಿ$_1$** 'ಗಾಸಿ$_1$' ನೋ.

**ಘಾಸಿ$_2$** (ಗು). ೧. (ಎಲ್ಲವನ್ನೂ) ತಿನ್ನುವ,–ನುಂಗುವ. (ನಾ). ೨. ಬೆಂಕಿ. [ ಸಂ. ]

**ಘಾಸಿಗೊಳಿಸು** 'ಗಾಸಿಗೊಳಿಸು' ನೋ.

**ಘಾಳಿ** 'ಗಾಳಿ$_1$' ನೋ.

**ಘಾಳಿಗೋಪುರ** 'ಗಾಳಿಗೋಪುರ' ನೋ.

**ಘಾಳಿನಂದನ** (ನಾ). ವಾಯುಪುತ್ರ ; ಆಂಜನೇಯ ; ಹನುಮಂತ : ಕಾಳಿಂಗನ ಪೆಡೆಯ ತುಳಿದ ಚರಣ . . . ಘಾಳಿನಂದನನ ಕರದಿ ಮೆಱೆವ ಚರಣ (ತೀರ್ಥಮ. ೧೪೭). [ಘಾಳಿ (<ಗಾಳಿ$_1$) + ನಂದನ]

**ಘಾಳಿಮಂಟಪ** 'ಗಾಳಿಮಂಟಪ' ನೋ.

**ಘಾಳಿವಟ್ಟೆ** 'ಗಾಳಿವಟ್ಟೆ' ನೋ.

△ **ಘಾಟಿಗೆ** (ನಾ). ತುಪ್ಪದಲ್ಲಿ ಕರಿದು ಸಿದ್ಧಪಡಿಸಿದ ಒಂದು ಬಗೆಯ ಸಿಹಿಭಕ್ಷ್ಯ; ಗಾರಿಗೆ: ಘಟಿಯಂ, ಘಾಟಿಗೆ (ಘಾರಿಗೆ), ಘೋಟಿಗೆ (ಶಮದ. ೧೫ ವೃತ್ತಿ). [ <ಗಾರಿಗೆ$_1$ ]

**ಘಿಂಘಿಣಿ** (ನಾ). ಒಂದು ಅನುಕರಣಧ್ವನಿ : ಘಿಣಿಘಿಣಿ ಘಿಂಘಿಣಿ ಘಿಂಘಿಣಿ ಥಿಂಥಿಣಿ ಥಿಣಿಥಿಣಿ ರವಗಳ (ಯೋಗಾಂವಿ. ೪-೨೭).

**ಘಿಣಿಘಿಣಿ** (ನಾ). ಒಂದು ಅನುಕರಣ ಶಬ್ದ ; ಗೆಜ್ಜೆ ಮೊದಲಾದುವುಗಳಿಂದ ಹೊರಡುವ ನಾದ : ಘಿಣಿಘಿಣಿ ಘಿಂಘಿಣಿ ಘಿಂಘಿಣಿ ಥಿಂಥಿಣಿ ಥಿಣಿಥಿಣಿ ರವಗಳ (ಯೋಗಾಂವಿ. ೪-೨೭).

**ಘಿಮ್ಮಿಡು** (ಕ್ರಿ). (ದೊಡ್ಡ ಶಬ್ದದ ದೆಸೆಯಿಂದ) ಕಿವಿಯಲ್ಲಿ ಘಿಮ್ಮೆನ್ನು,-ಘಿಂ ಎಂಬ ಶಬ್ದ ತುಂಬಿಕೊಳ್ಳು; ಕಿವಿ ಕಿವುಡಾಗು : ಪೊಯ್ಸಿದರ್ ದಿಗ್ಗಜಾತುಲ ಕರ್ಣಾವಳಿ ಕೂಡೆ ಘಿಮ್ಮಿಡುವಿನಂ ಯುದ್ಧಾನಕಾನೀಕಮಂ (ಶಾಂತೀಶ್ವ. ೩-೧೩). [ ಘಿಂ$_0$ + ಇಡು$_1$ ]

**ಘಿರಟಿ** (ನಾ). ಬತ್ತ ಒಡೆಯುಂವ ಸಾಧನ; ಒಡೆಗಲ್ಲು : ಬಂಡಿಗಾಲಿಗೆ ಬೇಕಾಗುವ ಹಲಿಗೆಗಳು, ಬತ್ತವೊಡೆಯುವ ಘಿರಟಿಗೂ, ಕಬ್ಬಿನ ಗಾಣಕ್ಕೂ ಬೇಕಾಗುವ ಕಟ್ಟಿಗೆ (ಕಭಾಗ. ಪರಿ. ೧೩). [ ← ಮರಾ. ಘಿರಟ, ಘಿರಿಟ./ಸಂ. ಘರಟ್ಟ ]

**ಘಿರ್ರನೆ** (ಅ). ಘಿರ್ರೆಂದು ಶಬ್ದವಾಗುವಂತೆ : ಸರ್ವಮುದ್ರಾಧಿಕಾರ ಸಾಮರ್ಥ್ಯವು ಎಂತಹ ಮನುಷ್ಯನ ಪ್ರಭುನಿಷ್ಠೆಯನ್ನಾದರೂ ಮೆಟ್ಟಿ ಸೋಲಿಸಿ ಘಿರ್ರನೆ ತಿರುಗಿಸಿ ಅಳ್ಳಾಡಿಸಿ ಬಿಡುವುದು (ಸುಗುಗಂ. ೧೩-೬). [ ಘಿರ್$_0$ + – ಅನೆ$_1$ ]

**ಘಿಲಘಿಲ** (ನಾ). ಒಂದು ಅನುಕರಣ ಧ್ವನಿ : ಗೆಜ್ಜೆ ಹೆಜ್ಜೇ ಹಾಕಿ ಗುಜ್ಜೇರ ಕುಣಿದಾರ ವಜ್ಜರ ವಡ್ಯಾಣ ಘಿಲಘಿಲ (ಕನ್ನಜಾ. ೬೩).

**ಘಿಲಿಘಿಲಿಸು** (ಕ್ರಿ). ಘಿಲಿಘಿಲಿ ಎಂದು ಶಬ್ದಮಾಡು : ಗೆಜ್ಜೆಗಳು ಘಿಲಿ ಘಿಲಿಸುವುವು (ಕನ್ನಜಾ. ೧೪). [ <ಘಿಲಘಿಲ + – ಇಸು$_3$ ]

**ಘೀಂಕರಿಸು** (ಕ್ರಿ). (ಆನೆಯಂತೆ) ಘೀಳಿಡು; ಕೂಗು: ಮೊರೆಯೆ ನಾನಾ ವಿಧದ ವಾದ್ಯತತಿ ಘೀಂಕರಿಪ ಕರಿಗಳುರುಗೊಂದಣಂ . . . ತುಂಬಿತೆಣ್ದೆಸೆ ರಭಸದಿ (ವಂಕಾರಾ. ೧-೭-೧೩). [ ಘೀಂಕರಣ$_0$ + – ಇಸು$_3$ ]

**ಘೀಂಕೃತಿ** (ನಾ). ಆನೆಯ ಘೀಳಿಡುವಿಕೆ; ಬೃಂಹಿತ : ನಡುಗಿದತ್ತಡವಿ . . . ಗಜದ ಘೀಂಕೃತಿಯಿಂದೆ (ಶ್ರೀರಾಮಾ. ೧೫೬-೧೨೪); ಕರಿಘೀಂಕೃತಿಯ ನಾಲಿಸುವ ಸುಪ್ತೋತ್ಥಹರ್ಯಕ್ಷನೋಲಾದನಾ ವಾಲಿ (ಶ್ರೀರಾಮಾ. ೩೦೯-೨೨೭). [ ಸಂ. ]

**ಘೀಳ್** 'ಗೀಱ್' ನೋ.

**ಘೀಳಿಡಿಸು** (ಕ್ರಿ). ೧. ಆನೆಯಂ ಅರಚುವಂತೆ ಮಾಡು,-ಧ್ವನಿಗೆಯ್ಯುವಂತೆ ಮಾಡು. ೨. (ಆನೆಯಂತೆ) ಗಟ್ಟಿಯಾಗಿ ಕೂಗುವಂತೆ ಮಾಡು; ಅರಚಿಸು ; ಚೀರಾಡಿಸು. ೩. (ಆಲಂ) ಶಿಕ್ಷಿಸು ; ದಂಡಿಸು : ಪೇಳು ಧರ್ಮವ್ಯಾಧ ಸರ್ವೇಂದ್ರಿಯಂಗಳಂ ಘೀಳಿಡಿಸಿ ನಿಗ್ರಹಿಪ ತೆರನೆಂತುಟಾ ಫಲವ ಕೇಳಬೇಕೆಂಬಿಚ್ಛೆಯಾಗಿಯಿದೆ (ಲಕ್ಷ್ಮೀಭಾ. ೩-೨೨-೮). [ ಘೀಳಿಡು (<ಗೀಱಿಡು) + – ಇಸು$_3$ ]

**ಘೀಳಿಡು** 'ಗೀಱಿಡು' ನೋ.

**ಘೀಳಿಱು** (ಕ್ರಿ). ಕಿರಿಚು ; ಆರ್ಭಟಮಾಡು : ಕಾಲನ ಕೈಚಕ್ರವನೇಳಿಸಿ ತಿರುಗುವ ಮನದಾಳಾಪಂ ಪಿಂತಿರೆ ಮುಂತೈದುವ ಉಳಿಯಿಂ ಘೀಳಿಱುವ [ದ]ಲುಗುವ ಡಮರುವನಗ್ಗಿಸಿ ಕೊಡಹುವ . . . ಕರಿಘಟ[ಟೆ] ನೆರೆದುವು (ವೀರೇಜ. ೨-೨೮). [ ಘೀಳ್(<ಗೀಱ್) + ಇಱು$_1$ ]

**ಘೀಱ್** 'ಗೀಱ್' ನೋ.

**ಘೀಱಿಡು** 'ಗೀಱಿಡು' ನೋ.

**ಘುಂ** (ನಾ). ಒಂದು ಅನುಕರಣ ಶಬ್ದ : ಘುಮ್ಮೆಂಬಡವಿಯೊಳಡಂಗಿ ಚಿಂತಿಸುತಿರ್ಪಾ (ಪಂಪಭಾ. ೭-೫೦).

**ಘುಂಘುಱು** 'ಗುಂಗುಱು' ನೋ.

**ಘುಂಟ** (ನಾ). ಪಾದದ ಎರಡು ಪಕ್ಕಗಳಲ್ಲಿರುವ ಗೆಣ್ಣು,-ಗಂಟು ; ಹರಡು ; ಗುಲ್ಫ. [ ಸಂ. ]

**ಘುಂಟಕ** (ನಾ).=ಘುಂಟ. [ ಸಂ. ]

**ಘುಂಟಿಕೆ** (ನಾ).=ಘುಂಟ : ಘಕಾರಕ್ಕೆ ಗಕಾರಂ . . . ಘಂಟಾ–ಗಂಟೆ ; ಘುಂಟಿಕಾ – ಗುಂಟಿಗೆ (ಶಮದ. ೨೫೫ ಪ್ರಯೋ). [ ಸಂ. ಘುಂಟಿಕಾ ]

**ಘುಂಡಕ** (ನಾ).=ಘುಂಟ : " ಘುಂಡಕಂ ಗುಲ್ಫಮೆನೆ ಹರಡೆನಿಕ್ಕುಂ " (ಮಂಗರಾ. ೯೮-೧೮). [ <ಸಂ. ಘುಂಟಕ ]

**ಘುಕ್** (ನಾ). ಒಂದು ಅನುಕರಣ ಶಬ್ದ : ಧಡಲೆಂಬ ದಟಲೆಂಬ ದುಡು ಹೆಂಬ ಘುಕ್ಕೆ [ಪಾಠಾಂ. ಧಿಪ್ಪೆ]ಂಬ ಧುಡುಹೆಂಬ ಧುಮ್ಮೆಂಬ ಘೋರೆಂಬ ಭೋರೆಂಬ ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟೆ (ಇಹರ. ದೇ. ೯೨-೧).

**ಘುಟಿ** (ನಾ). = ಘುಂಟ. [ ಸಂ. ಘುಟ, ಘುಟೀ ]

**ಘುಟಿಕಾಸಿದ್ಧ** (ನಾ). ಘುಟಿಕಾಸಿದ್ಧಿಯನ್ನು ಪಡೆದವನು : ಘುಟಿಕಾ ಸಿದ್ಧರ ಘುಟಿಕೆಯುಂರುಳಿತ್ತು ಯಂತ್ರಿಗಳ ಯಂತ್ರ ಎದ್ದು ಹೋಯಿತ್ತು (ಅವಚಂ. ೧೫೬-೭೦೬); ಅನೇಕ ದೇವರುಗಳನುಗುಳ್ವ ಘುಟಿಕಾಸಿದ್ಧಂ ಬೀಜದೊಳು ಮರಂ ಪುಗುವಂತೆ . . . ಅಗ್ನಿಯೊಳುಷ್ಣಂ ಪುಗುವಂತೆ ಶಿವಲಿಂಗದೊಳ್ ಪುಗಲ್ (ನಂಬಿರ. ೮-೩). [ ಸಂ. ( ಘುಟಿಕಾ + ಸಿದ್ಧ) ]

**ಘುಟಿಕಾಸಿದ್ಧಿ** (ನಾ). ಒಂದು ಬಗೆಯ ಯೋಗಸಾಧನೆ; ಮಂತ್ರಿಸಿದ ಗುಳಿಗೆಯನ್ನು ಬಾಯಲ್ಲಿಟ್ಟು ಪರಕಾಯಪ್ರವೇಶ ಮುಂತಾದ ಅತಿಮಾನುಷಕಾರ್ಯವನ್ನು ಮಾಡುವ ಶಕ್ತಿ,-ಸಾಮರ್ಥ್ಯ : ಅಕ್ಷರ ಲೆಕ್ಕ . . . ಅಂಜನಾಸಿದ್ಧಿ ಘುಟಿಕಾಸಿದ್ಧಿ ಮಂತ್ರತಂತ್ರಸಿದ್ಧಿ ಇವೆಲ್ಲವ ಕಲಿತಡೇನೋ (ಮಡಿವಾ. ೪೩-೬೦) ; ಘುಟಿಕಾಸಿದ್ಧಿಯ ಸಾಧಿಸುವ ಅಣ್ಣಗಳ ಕಣ್ಣನಕ್ಕೆ ಸಟೆಯ ತೋಱಿಸಿ ಹೋಱಗಾದನು ನೋಡಾ ಪರಶಿವನು (ಅಖಂಡೇ. ೬೩-೨೦). 'ಅಂಜನಸಿದ್ಧಿ' ಪರಾ. [ ಸಂ. (ಘುಟಿಕಾ + ಸಿದ್ಧಿ) ]

**ಘುಟಿಕಾಳಿ** (ನಾ). ೧. ಗುಳಿಗೆಗಳ ಸಮೂಹ,-ರಾಶಿ. ೨. (ನೀರು ಮೊದಲಾದುವುಗಳ) ಹನಿ ; ತೊಟ್ಟು ; ಬಿಂದು : ದ್ರುಮ ಪಲ್ಲವ ತಳನಿಪತಿತ ಹಿಮಾಂಬು ಘುಟಿಕಾಳಿ ನಾಡೆ ಸೊಗಯಿಸಿದಪುದು (ಶಾಂತಿಪು. ೫-೯೯). [ ಸಂ. ಘುಟಿಕಾಲಿ (ಘುಟಿಕಾ + ಆಲಿ) ]

**ಘುಟಿಕೆ** (ನಾ). ೧. =ಘುಂಟ : " ಘುಟಿಕಾ, ಗುಲ್ಫಃ – ಈ ೨ ಹರಡು " (ಹಲಾಯು. ೮೫-೩೬೦) ; " ಘುಟಿಕಾ, ಗುಲ್ಫಃ – ೨ ತದ್ಗ್ರಂಥಿ. ಆ ಪಾದದ ಎರಡು ಪಕ್ಕಗಳಲ್ಲಿಯೂ ಇರುವ ಮೂಳೆಗೆಣ್ಣುಗಳ ಮೇಲೆ ಮಾಂಸಖಂಡದ ದಿಮ್ಮಿ, ಚೀಲ, ಮಂಡೆ, ಹೆಜ್ಜೆ, ಹರಡೆ " (ಸಿದ್ಧಾಂತಿ. ೧೭೫). ೨. ದುಂಡಗಿರುವ ಮಾತ್ರೆ ; ಉಂಡೆ ; ಗುಳಿಗೆ : ಬಾವಿಯ ಸರ್ಪನು ಸಿದ್ಧರಸದ ಘುಟಿಕೆಯ ನುಂಗಿ ಎದ್ದಾಡಿತ್ತು ನೋಡಾ (ಅವಚಂ. ೧೩೦- ೫೯೬) ; "ವಜ್ರಕಾಯ ಸಿದ್ಧಿಯನ್ನುಕೊಡುವ ಪಾದರಸದ ಗುಳಿಗೆ" (ಅವಚಂ. ಕೋಶ) ; ನಾರು ಬೇರಂಜನಂ ಘುಟಿಕೆ ಮೂಲಿಕೆ . . . ಪರಕಾಯ ಪ್ರವೇಶಮಂ ಬಯಸುವ ವಿಕಾರಿಸಿದ್ಧರು ಸರಿಯೆ ಸಿದ್ಧರಾಮಂಗೆ (ಸಿದ್ಧರಾ. ೧-೯) ; ಅಟಮಟದ ಘನದೇಹಸಿದ್ಧಿಯ ಘುಟಿಕೆ ನಿಮ್ಮಲಿ ರಣಪಲಾಯನ ಪಟುಭಟರಲಾ ಗುಣವಿಹೀನರು ಶಲ್ಯ ನೀವೆಂದ (ಕುವ್ಯಾಕ. ೯-೨೨) ; ಕಾತರಿಸುತೆದ್ದು ಜ ಪ ಸ ರ ಯೋ ಗ ದ ಂ ಡ ಶ್ರೀಭೂತಿ ಘುಟಿಕೆಯ ಕಮಂಡಲವ ವ್ಯಾಘ್ರಾಸನವ್ರಾತಗಳನುಳಿದು . . . ಅತಿಭಯದಿ ಪರಿದು (ನವಮೋ. ೬-೨೪). [ ಸಂ. ಘುಟಿಕಾ ]

**ಘುಟುರು** (ನಾ). ಒಂದು ಅನುಕರಣ ಧ್ವನಿ : ಘುಟುರು ಘುಟು ಘುಟು ಘುಟುರೆನುತಲಾರ್ಭಟಿಸಿ ಕೋರೆಯ ನೇವರಿಸಿ ಕಟಕಟನೆ ಪಲುಗಳ ಕಡಿದು (ಅನಂರಾ. ೧-೪-೨೦).

**ಘುಡಿಘುಡಿಸು** 'ಘುಡುಘುಡಿಸು' ನೋ.

**ಘುಡುಘುಡನೆ** (ಅ). ಘುಡುಘುಡು ಎಂದು ಶಬ್ದವಾಗುವಂತೆ : ಕೆಳಗುಂದಿ ಕಾವಮನ ಭುಜಸರಿತದೊಳತ್ತ ತೊಲಗಿ ನಿಂದಿತು ಚಕ್ರರತ್ನಾ ದಳ ನಡುಗಿತು ಧೂಮಕೇತುವೆದ್ದುವು ಕೂಡೆ ನೆಲ ಗುಡುಗಿತು ಘುಡುಘುಡನೆ (ಭರಜ. ೫೦-೧೧೫). [ ಘುಡುಘುಡು + – ಅನೆ$_1$ ]

**ಘುಡುಘುಡಿಸು,** ಘುಡಿಘುಡಿಸು (ಕ್ರಿ). ೧. ಘುಡುಘುಡು ಎಂದು ಶಬ್ದಮಾಡು : ವೀರವೃಂದದ ಘುಡುಘುಡಿಸುವ ದೌಡೆಯ ಕೋಳಾಹಳ ದಬ್ಬರವಾಗೆ (ಗಿರಿಕ. ೬-೫೫ವ). ೨. ರೋಷದಿಂದ ಕೂಗು ; ಗರ್ಜಿಸು ; ಆರ್ಭಟಿಸು : ಗಿರಿದುರ್ಗಂಗಳಂ ವಜ್ರಧರನಂತಡಿಸಿ ಘುಡುಘುಡಿಸಿ ಪುಡಿಗುಟ್ಟುವ . . . ವನದುರ್ಗಂಗಳಂ ದಾವಾನಳನಂತಟ್ಟಿಮುಟ್ಟಿ ಸುಟ್ಟುರಿವುವ (ಗಿರಿಕ. ೨-೧೦೫ ವ) ; ಘುಡುಘುಡಿಪ ಕೋಪದಲಿ ದುರ್ಗದ ಹೆಡಕು ಪರಿಯಂತೇಱಿ ಪುರ ಗಡಬಡಿಸಿ ಬೆಚ್ಚಿತು (ತೊರರಾ. ೪-೬-೨೦) ; ಸಿಡಿಲು ಘೋಷದಿ ಮೊರೆಯುತಾ ಹುಲಿ ಘುಡುಘುಡಿಸಿ ಭೋರಿಡುತ ವ್ಯಾಘ್ರನು ತುಡುಕಿಯೆರಗಿದ ರಭಸದಿಂದೊಗ್ಗೊಡೆದವಾಗಾ ಗೋವ್ಗಳು (ಗೋಹಾಡು. ೫೦). ೩. ಹೆಚ್ಚಾಗು ; ಅಧಿಕವಾಗು : ಕಡುಮೋಹವೆಡೆಯಲಿ ಘುಡುಘುಡಿಸೆ ಶಿಶು ಬೀಳುಕೊಂಡನು ಪಿತೃಚತುಷ್ಟಯವ (ಕುಮಾ‍ದ್ರೋ. ೪-೫೩).

**ಘುಡಿಘುಡಿಸು:** ೧. ಘುಡಿಘುಡಿಸುತೇಳ್ವ ಮತ್ತ್ಯಾಳಿಗಳ ಕೇಳಿಗಳ . . . ಪಡೆಪಿನಿಂ ಕಡಲೆಸೆದುದು (ಜಬಪು. ೨-೪). ೨. ಕೆದಱಿತೀ ಶಬರಾಳಿ ಸೀಳ್ದಿಕ್ಕಿದುದು ತುಡುಕುವ ನಾಯಿಗಳನಟ್ಟಿದ್ದುದು ಘುಡಿಘುಡಿಸುತ್ತ ಕಪಟಕಿರಾತ ಸಂತತಿಯು (ತೊರರಾ. ೩-೩-೧೯).

**ಘುಡುಘುಡುಘುಡಿಸು** (ದ್ವಿರುಕ್ತಿ) : ತಡಿ ನೆನೆದ ಬಲು ಬೆಮರ ಘುಡುಘುಡುಘುಡಿಪ ನಾಸಾಶ್ವಾಸಲಹರಿಯ ಕಡುಮನದ ರಥತುರಗ ಮಿಕ್ಕವು ಸರಳ ಸೂರಿಯಲಿ (ಕುಮಾ‍ದ್ರೋ. ೧೦-೨೪). [ಘುಡುಘುಡು + – ಇಸು₃]

**ಘುಡುಘುಡು** (ನಾ). ಒಂದು ಅನುಕರಣ ಶಬ್ದ. 'ಘುಡುಘುಡಿಸು' ಪರಾ.

**ಘುಣ** (ನಾ). ಮರಮುಟ್ಟುಗಳನ್ನು ಕೊರೆಯುವ ಒಂದು ಬಗೆಯ ಹುಳು : ಕುಂಥು ಘುಣ ಮತ್ಕುಣ . . . ಕ್ರಿಮಿಕೀಟಕಾದಿ ತ್ರೀಂದ್ರಿಯಂಗಳ್ (ತತ್ತ್ವಪ್ರ. ೯೮). [ಸಂ.]

**ಘುಣಾಕ್ಷರನ್ಯಾಯ** (ನಾ). ಘುಣವೆಂಬ ಹುಳುವಿನಿಂದ ಓಲೆಗರಿಗಳಲ್ಲಿ ಕೊರೆಯಲ್ಪಟ್ಟ ಗೆರೆಗಳು ಅಕ್ಷರದಂತೆ ಆಗುವ ದೃಷ್ಟಾಂತ. Pಘುಣವೆಂಬ ಹುಳು ಮರವನ್ನು ಕೊರೆಯುವಾಗ ಉಂಟಾಗುವ ಗೆರೆಗಳು ಕೆಲವು ವೇಳೆ ಯಾವುದಾದರೂ ಅಕ್ಷರದಂತೆ ಆಗಿಬಿಡುತ್ತವೆ. ಹಾಗೆಯೇ ಮೂಢನಿಂದ ಒಮ್ಮೊಮ್ಮೆ ಜಾತಣನದ ಕೆಲಸಗಳು ಆಗಿಬಿಡುತ್ತವೆ ಎಂಬುದು ಈ ನ್ಯಾಯದ ಅಭಿಪ್ರಾಯ.

[ಘುಣ + ಅಕ್ಷರ + ನ್ಯಾಯ]

**ಘುಣಾಕ್ಷರಪ್ರಾಯ** (ನಾ). =ಘುಣಾಕ್ಷರನ್ಯಾಯ : ಘುಣಾಕ್ಷರಪ್ರಾಯದೆ ಶಬ್ದಮೊಂದೆರಡು ಮತ್ತ ವಿಚಾರಿಸಿ ನೋಡೆ ಕಾಕತಾಳೀಯದೆ ವಾಚ್ಯಮೊಂದೆರಡು ಕೂಡೆ (ಚಂದ್ರಪು. ೧-೪೮). [ಸಂ.]

**ಘುಮ್ಮನೆ** (ಅ). ಸದ್ದಿಲ್ಲದೆ ; ಮೌನವಾಗಿ : ಆ ಕೋಲಾಹಲದಲ್ಲಿಯೂ ಅವನು ಘುಮ್ಮನೆ ಕೂತಿದ್ದನು (ರೂಢಿ). 'ಗುಮ್ಮನೆ' ಪರಾ.

[ಘುಂ + – ಅನೆ₁]

**ಘುಮ್ಮಿಕ್ಕು** (ಕ್ರಿ). =ಘುಮ್ಮಿಡು : ಧೊಕ್ಕು ಧಡ ಸಬುದಗಳಲಿಳೆ ಘುಮ್ಮಿಕ್ಕೆ [ಪಾಠಾಂ. ಕುಂಭಿಕ್ಕೆ, ಗುಮ್ಮಿಕ್ಕೆ] ಕೂರುಮನಱಿಚೆ ದಿಗ್ಗಜ ಧಿಕ್ಕು ಧಿಗಿಲೆನೆ ಧೈರ್ಯಬಲರೊದಗಿದರು (ತೊರರಾ. ೪-೪-೨೭).

[ಘುಂ + ಇಕ್ಕು]

**ಘುಮ್ಮಿಡು** (ಕ್ರಿ). ಘುಂಮ್ಮೆಂದು ಶಬ್ದಮಾಡು ; ಭಯಂಕರವಾಗಿ ಧ್ವನಿಮಾಡು : ಹಯತತಿ ಕೂಡೆ ಹಲ್ಲಣಿಸಿದವು ಗುಳದಲಿ ಜಡಿದವಾನೆಗಳು ಕೂಡೆ ಘುಮ್ಮಿಡೆ ದೆಸೆದೆಸೆಗಳಲ್ಲಾಡಿದವು ಗಿರಿನಿಕರ (ಕುಮಾ‍ದ್ರೋ. ೨-೧೪).

[ಘುಂ + ಇಡು₁]

**ಘುರುಕು** (ನಾ). ಒಂದು ಅನುಕರಣಶಬ್ದ : ಸೂಕರನಂತೆ ಘುರುಕೆಂದು ಕಾಟ್ಮೋಣನಂತೆ ಬೇಸರದೆ ದೊಂಕಿಟ್ಟು (ನಂದಿಮಾ. ೧೩-೩೬).

**ಘುರುಘುರಿಸು** (ಕ್ರಿ). ಘುರುಘುರು ಎಂದು ಶಬ್ದಮಾಡು : ಪಿರಿದೆನಿಪ ಭರದೆ ನಡೆಯಲ್ ಘುರುಘುರಿಸಲ್ ಘೋರ ಘೋಣ ವಿವರಂ (ಕಾದಂಪೂ. ೪೫೨) ; ಘುರುಘುರಿಸಿ ಪೀರ್ದು ಚುಂಬಿಸಿ ಮುಱಿದುಗುರಿಂ ಸೀಟ್ದು ಸೆಳೆದು ಕೈವಿಟ್ಟಂ ಸುಂದರಿಯುರದ ಕರಿಯ ಕಲೆವಡೆದರನೇಱುಲ ಪಣ್ಣನೊಡೆದವೊಲ್ ತೋಱುವಿನಂ (ಲೀಲಾವ. ೨-೧೩೦) ; ಘುರುಘುರಿಸುವ ಘನಹೇಷಾವಿರುತಿ ಪೊದಟ್ದು ಣ್ಮೆ ಪೊಣ್ಮುತಿರೆ ತಾಂ ಬಿಡದುರ್ವರೆಯಂ ದಕ್ಷಿಣ ಖುರದಿಂ ಬೆರಂಟುತಿರ್ದುದು ತುರಂಗಮಾಗ್ರಣಿಯಾಗಳ್ (ಕುಸುಮಾ. ೮-೬೯). [ಘುರುಘುರು + – ಇಸು₃]

**ಘುರುಘುರು** (ನಾ). ಒಂದು ಅನುಕರಣ ಶಬ್ದ. 'ಘುರುಘುರಿಸು' 'ಘುರುಘುರಂಧ್ವನಿ' ಪರಾ.

**ಘುರುಘುರುಧ್ವನಿ** (ನಾ). ಘುರುಘುರು ಎಂಬ ಶಬ್ದ : ಘುರುಘುರುಧ್ವನಿ ಹೇಷಿತಸ್ವನಂ . . . ಮೆಱೆಯೆ ಬಂದತ್ತು ತುರಗಬಲಂ (ಜಬಪು. ೪೭-೩೫). [ಘುರುಘುರು + ಧ್ವನಿ]

**ಘೂರ್ಜರ** (ನಾ). ೧. ಗುರ್ಜರದೇಶ : ವಿನುತ ಘೂರ್ಜರ [ಪಾಠಾಂ. ಗುಜ್ಜರ, ಘೂರ್ಜರ] ಗೌಳ ಕೇರಳ ಜನಪದಾದಿ ಸಮಸ್ತನೃಪರೊಗ್ಗಿನಲಿ ಬಂದುದು (ತೊರರಾ. ೧-೭-೧೭). ೨. ಗುರ್ಜರ ದೇಶದಲ್ಲಿ ವಾಸಮಾಡುವವನು. 'ಗುರ್ಜರ', 'ಘೂರ್ಜರ' ಪರಾ. [ಸಂ.]

**ಘುಲ್ಲವಿಸು** (ಕ್ರಿ). ಬೀಗು ; ಉಬ್ಬು ; ಉಕ್ಕೇರು ; ಹೊಮ್ಮು : ಇಲ್ಲಿ ಹಕ್ಕಿಗಳ ಸುಮಧುರ ಜೀವನದ ಕಡಲಿನಲ್ಲಿ ಸುಳಿವಾಮೋದ ಮಾರುತನ ತೀಟದಿಂ ಘುಲ್ಲವಿಸಿ ಘೂರ್ಣಿಪೀ ಸಂತೋಷಶೀತಲಚಲತ್ತರಂಗಾವಳಿಯೊಳು (ಭಾರಂಗ. ೩-೯).

[P ಇದು 'ಘುಲ್ಲವಿಸು' ಎಂಬುದರ ಅಪಲಿಖಿತವಿರಬಹುದು.]

**ಘುಸೃಣ** (ನಾ). ಕುಂಕುಮ ; ಕುಂಕುಮಕೇಸರಿ : "ಕುಂಕುಮಂ. ಘುಸೃಣಂ, ವರ್ಣಂ, ಲೋಹಿತಚಂದನಂ, ಕಾಶ್ಮೀರಜಂ, ಕಾಳೇಯಂ, ಜಾಪಕಂ—ಈ ೭ ಕುಂಕುಮಂ" (ಹಲಾಯು. ೬೯-೩೯) ; ಮೃಗಮದ ಘುಸೃಣಚಂದನಚರ್ಚೆಯೊಳಂ . . . ಪಸದನಂಗೆಯ್ದು (ಜಗವಿ. ೪-೮೦); ಘನಸಾರಘುಸೃಣಚಂದನಘನಸಾರದ್ರವದಿಂ . . . ಅನಘನಂಘ್ರಿಗಳ ನರ್ಚಿಸಿದಂ (ಪುಷ್ಪಪು. ೧೪-೭). [ಸಂ.]

**ಘುಳು** 'ಘುಟು' ನೋ.

**ಘುಳುಘುಳಿಸು** 'ಘುಟುಘುಟಿಸು' ನೋ.

**ಘುಳುಮ್ಮನೆ** 'ಘುಟುಮ್ಮನೆ' ನೋ.

**ಘುಳ್ಳು** (ನಾ). ಒಂದು ಅನುಕರಣ ಶಬ್ದ : ಛಿಳಿ ಛಿಮಿದ್ಧಿಮಿ ಘುಳ್ಳು ನೆಳ್ಳುಂ ಘಣಿಲು ಘಣ್‍ಘಣ್ ಧಂ ಧಗಂ ಘುಳುಘುಳು ಛಟಿಲ್‍ಛಟಿಲೆಂಬ . . . ಧ್ವನಿಗಳವನಿಗೆ ಭಯವನೀವುತಿರೆ(ಸಾನಂಜ. ೮-೦೩).

**ಘುಟು, ಘುಳು** (ನಾ). ಒಂದು ಅನುಕರಣ ಶಬ್ದ : ಖಟಿಲೆಂಬ ಘಟಿಲೆಂಬ ಘುಟುವೆಂಬ ಘಟಿಲೆಂಬ ಛಟಿಲೆಂಬ ವೋಲ್ ಮಹಾಪ್ರಾಣಾಕ್ಷರಂಗಳೊಳ್ ಸುಟಿವೃತ್ತಿರ್ಪನುಕರಣೆಯಲ್ಲವುಂ ನಿತ್ಯಜಟನೆಂಬರಾದಿಯ ಕವೀಂದ್ರರ್ (ಸಂಜೀವ. ೯). **ಘುಳಂ** : ನೀರಿನಲ್ಲಿ ಮುಳುಗಿದಾಗ ಘುಳುವೆಂಬ ಶಬ್ದ ಕೇಳಬರುತ್ತದೆ (ರೂಢಿ).

**ಘುಟುಘುಟು, ಘುಳುಘುಳು** (ದ್ವಿರುಕ್ತಿ): 'ಘುಟುಘುಟಿಸು' ಪರಾ. ಘುಳುಘುಳು ಘುಳಘುಳ . . . ಘುಡಘುಡಿಲೆಂದು ಮೊಳಗು ಮೊಳಗಿತು ನಭದೊಳ್ (ಗಿರಿಕ. ೯-೪೧) ; ಛಿಳಿ ಛಿಮಿದ್ಧಿಮಿ ಘುಳ್ಳು ನೆಳ್ಳುಂ ಘಣಿಲು ಘಣ್‍ಘಣ್ ಧಂ ಧಗಂ ಘುಳುಘುಳು ಛಟಿಲ್ ಛಟಿಲೆಂಬ . . . ಧ್ವನಿಗಳವನಿಗೆ ಭಯವನೀವುತಿರೆ (ಸಾನಂಜ. ೮-೦೩) ; ಹದಿನಾಱು ಬಣ್ಣದ ಸೊನ್ನೆಯ ಸರಳ್ಗಳ ಕುದಿಗಾಸಿ ನೀರೊಳಿಟ್ಟಂತೆ ಉದಿಸಿತು ಘುಳುಘುಳು ಧ್ವನಿ ತಂಗೊಳದೊಳು ತನು ತಾಪದಿಂದೆ (ಮೋಹತ. ೯-೪೨).

**ಘುಟುಂ** (ನಾ). ಒಂದು ಅನುಕರಣ ಶಬ್ದ. 'ಘುಟುಮ್ಮನೆ' ಪರಾ.

**ಘುಟುಘುಟಿಸು,** ಘುಳುಘುಳಿಸು (ಕ್ರಿ). ೧. ಘುಳುಘುಳು ಎಂದು ಶಬ್ದಮಾಡು. ೨. (ಆಲಂ) ವಿಜೃಂಭಿಸು; (ಕೋಪದಿಂದ) ಆರ್ಭಟಿಸು; ಆವೇಶಗೊಳ್ಳು; ಆಡಂಬರಮಾಡು : ಅಂತು ನಿರ್ಭರ ಕ್ಷುಭಿತ ಸಾಗರ ತರಂಗ ಪಟಳಮೆನೆ ಕೆಳರ್ದು ಘುಟುಘುಟಿಸಿ [ಪಾಠಾಂ. ಘಟುಘಟಿಸಿ] ಘೂರ್ಣಿಪ ನೃಪಾಳ ಸಂಕುಳದೊಳ್ (ವರ್ಧಪು. ೬-೪೨ ವ). **ಘುಳುಘುಳಿಸು:** ೧. ನೆರೆದು ಘುಳುಘುಳಿಸುತಂ ಮುಂದೆ ಪೆರ್ಬಲವಿರಲು (ಇಹರ. ದೇ. ೪೦-೨೪); ಘುಳುಘುಳಿಪ ಬೊಗ್ಗುಗಳ ರಿಪುಗಳ ಮುಳಿಯಿಸುವ ಕಹಳೆಗಳ ತುರಗಾವಳಿಯ ಗಜಬಬ್ಬರಣೆ ಮಿಗೆ ಕೈಕೊಂಡರತಿಬಳರು (ಕುವ್ಯಾಭೀ. ೪-೫೮). ೨. ಸಿಕ್ಕಿದರಂ ಸೀಳ್ದು ಬಿಸುಡುತುಂ ಘುಳುಘುಳಿಸಿ ಬರ್ಪ ಮತ್ತಗಜವಮಂ ಭೋಂಕನೆ ಕಂಡು (ನಂಬಿರ. ೨-೨೫); ಘುಳುಘುಳಿಸಿದನು ಬಲಭದ್ರನಧಿಕೋಜ್ವಲ ಮಹಾಕ್ರೋಧದಲಿ ಕೊಂಡನು ದಂಡವನು ಜಡಿದು (ನಿಭಾಗ. ೧೦-೯೮-೧೬). ೩. (ಆಲಂ) ಸಡಗರಿಸು; ಸಂಭ್ರಮಗೊಳ್ಳು; ಉತ್ಸಾಹಗೊಳ್ಳು : ಗಣಪನುಂ ಸ್ವಾಮಿಯುಂ ಕೆಲಬಲದೊಳೊಪ್ಪಿರಲು ಗಣನಿಕರ ಘುಳುಘುಳಿಸುತುರವಣಿಸಿ ಕುಳ್ಳಿರಲು (ಬಸರ. ೧-೧೬); ಘುಳುಘುಳಿಸುತ ನಡೆದುದಾ ಸೇನೆ (ಭರಜ. ೫೦-೮೪). ೪. (ಆಲಂ) ಹೊಳೆ; ಪ್ರಕಾಶಿಸು; ಶೋಭಿಸು : ಸವೆದು ಘುಳುಘುಳಿಪುದೊಂದಲಗನಿರಿಸಿದನುರದೆ (ಸೀದಿರ. ದೇ. ೬೦-೧೯); ತೊಳಗುವೆರ್ದೆದಾವರೆಯ ನಡುವೆ ಥಳಥಳಿಸಿ ಘುಳುಘುಳಿಸುವ ಪರಂಜ್ಯೋತಿರಾಕಾರ ಲಿಂಗವಮಂ ಬಳಸಿ ಬಿಗಿದೊಳಪೊಕ್ಕು (ಪದ್ಮರಾ. ೫-೩೦).

[ <ಘುಟು + – ಇಸು$_3$ ]

**ಘುಟುಮ್ಮನೆ,** ಘುಳುಮ್ಮನೆ (ಅ). ಘುಳುಂ ಎಂದು ಶಬ್ದವಾಗುವಂತೆ: ಘಟಿಲನೆ, ಘಟಿಲನೆ, ಘುಟುಮ್ಮನೆ, ಧಟಮ್ಮನೆ (ಶಬ್ದಾನು.೧೪೦ ವ್ಯಾಖ್ಯಾ). **ಘುಳುಮ್ಮನೆ:** ಧರ್ಮಕ್ಕೆತಿದ್ರೋಹನುಂ ಖಳನುಂ ಕಳ್ಳುಣಿಯುಂ ಘುಳುಮ್ಮನಿಟಿಗುಂ ಶ್ವಭ್ರಾಂತಮಂ ತಾಪಿನಂ (ಆದಿಪು. ೫-೮೧).

[ ಘುಟುಂ + – ಅನೆ$_1$ ]

**ಘೂಂಕರಿಸು** (ಕ್ರಿ). ಘೂಂ ಎಂದು ಶಬ್ದಮಾಡು; ಹೇಕರಿಸು; ಕೆನೆ : ಕ್ರಮವಾಗಿ ಹಲ್ಲಣಿಸಿ ಸಜ್ಜಾದ ಐದು ಕುದುರೆಗಳು ಘೂಂಕರಿಸುತ್ತಿದ್ದುವು (ವೀರಬಂ. ೨೦); ಜಾತಿ ಕುದುರೆಗಳು ಮೆಲ್ಲನೆ ಘೂಂಕರಿಸುತ್ತ ಓಟ ಕಿತ್ತುವು (ಪುನರು. ೩೩೮). [ ಘೂಂಕರಣ$_0$ + – ಇಸು$_3$ ]

**ಘೂಕ** (ನಾ). ಗೂಗೆ; ಗೂಬೆ: ಬೇಕಾದಡೀಗ ಹೋಗಲ್ಲದಿರ್ದಡೆ ಬಳಿಕನೇಕ ಭಲ್ಲುಕ ಜಂಬುಕಂ ಘೂಕ ವೃಕಗ[ಪಾಠಾಂ. ಬಕವೃಕಂಗ]ಳೆಳೆಯದೆ ಬಿಡವು (ಹಚಕಾ. ೧೨-೧೮); ಘೂಕ–ಗೂಗೆ (ಶಮದ. ೨೫೫ ಪ್ರಯೋ); ಮುಚ್ಚಿದಟ್ಟೆಯ ಸುರಿದ ಕರುಳ ನೆರೆದ ಕೆನ್ನೀರೆಳೆಯೊಳಿತ್ತಂ ಕಾಕಂ ಘೂಕಂ (ರಾಮಾಶ್ವ. ೧೩೨-೨೫). [ ಸಂ. ]

**ಘೂಟ** 'ಗೂಂಟ' ನೋ.

**ಘೂಡು** (ನಾ). ದಡವನ್ನು ಕೊಚ್ಚಿಕೊಂಡು ಹೋಗುವ ನದಿಗಳಲ್ಲಿ ಪ್ರವಾಹವನ್ನು ಬೇರೆ ಕಡೆ ತಿರುಗಿಸಲಿಕ್ಕಾಗಿ ವೃತ್ತಾಕಾರವಾಗಿ ಮರದಿಂದ ಮಾಡಿದ ಸಾಧನ : (ಕಿಸಂಗ್ರಾ. ೨೮). [ ←ಇಂ. Goad ]

**ಘೂತ್ಕರಿಸು** (ಕ್ರಿ). ಘೂ ಎಂದು ಧ್ವನಿಮಾಡು : ಅಲ್ಲಲ್ಲಿ ತಲೆವೆರೀದ ಪಟಯಿಗೆಗಳ ದಂಡದೊಳಿಟಗಿ ತಂಡದಿಂ ಘೂತ್ಕರಿಪ ನಿರ್ಭೀಕ ಘೂಕಾನೀಕಂಗಳ ಘೋಷಂಗಳುಂ (ವರ್ಧಪು. ೮-೪೦ ವ).

[ ಘೂತ್ಕರಣ$_0$ + – ಇಸು$_3$ ].

**ಘೂತ್ಕಾರ** (ನಾ). ಘೂ ಎಂಬ ಧ್ವನಿ; ಗೂಗೆಯ ಕೂಗು : ದೂರದಿಂದ ಗೂಬೆಯ ಘೂತ್ಕಾರವೊಂದು ಕೇಳಬರುವದು (ನಡದಾ. I, ೩೦೩).

[ ಸಂ. ]

**ಘೂರ್ಜರ** (ನಾ). ೧. ಗುರ್ಜರ ದೇಶ : ಘೂರ್ಜರ ರಾಜಧ್ವಜಿನಿಯನಿರಿದೋಡಿಸಿ ಭುಜವಿಜಯದೆ ವಿಜಯನನುಳಿಸಿದಂ (ಪಂಪಭಾ. ೧-೩೬); ಘೂರ್ಜರ ಬರ್ಬರ ಪಾರಸೀಕ . . . ತುರುಷ್ಕ ಮರು ಪ್ರಭೃತಿ ಭೂಪಾಲಕರಿಂ ಭಯಾನಕರಸಮುಂ (ಜಗವಿ. ೨-೩೯ ವ). ೨. ಗುರ್ಜರ ನಿವಾಸಿ; ಗುರ್ಜರದೇಶದಲ್ಲಿ ವಾಸಮಾಡುವವನು. 'ಗುರ್ಜರ', 'ಘುರ್ಜರ' ಪರಾ. [ ಸಂ. ]

**ಘೂರ್ಜರನಾಟಿ** (ನಾ). [ಸಂಗೀತ] ಐದು ವಿಧವಾದ ನಾಟಿರಾಗಗಳಲ್ಲೊಂದು : ನಾಟ, ಆಹರಿ, ಸಾಳಗನಾಟಿ, ಹಮೀರನಾಟಿ, ಘೂರ್ಜರನಾಟಿಯೆಂಬವೇ ಪಂಚವಿಧನಾಟಿಗಳು (ವಿವೇಕ. ೨೩೫).

[ ಘೂರ್ಜರ + ನಾಟಿ$_3$ ]

**ಘೂರ್ಜರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಆ ಸಮಯದಿ ತಾಳದಂಡಿಗೆವಿಡಿದು ಸುವಾಸಿನಿಯರು ಬಂದು ನಿಂದು ದೇಶಾಕ್ಷಿ ನಾರಾಯಣಿ ಘೂರ್ಜರಿಯಿಂ ರತೀಶನ ಪಿತನ ಪಾಡಿದರು (ಮೋಹತ. ೧೬-೬೩).

[ ಸಂ. ಘೂರ್ಜರೀ ]

**ಘೂರ್ಝರಿ** (ನಾ).=ಘೂರ್ಜರಿ : ಮಧು, ಮಾಧವಿ . . . ಘೂರ್ಝರಿ . . . ಕರ್ಣಾಟ ಬಂಗಾಳವೆಂಬಿಪ್ಪತ್ತು ರಾಗಂಗಳೇ ರಾಗಾಂಗದಿಂದುದಿಸಿದವು (ವಿವೇಕ. ೨೩೩). [ <ಸಂ. ಘೂರ್ಜರೀ ]

**ಘೂರ್ಣ** (ಗು). ೧. ಅಲುಗಾಡುವ; ಚಲಿಸುವ; ಕಂಪಿಸುವ : ಘೂರ್ಣಾರ್ಣವ [ಪಾಠಾಂ. ಘೂರ್ಣಮಾನಾರ್ಣವ, ಘೂರ್ಣಿತಾರ್ಣವ] ಘೋಷವಮಂ ಗೆಲ್ದ ಹರ್ಷದಿಂ ಪೆರ್ಚುವಂತೆ ಪೆರ್ಚಿ (ಆದಿಪು. ೧೩-೪೨ ವ). (ನಾ). ೨.=ಘೂರ್ಣನ. [ ಸಂ. ]

**ಘೂರ್ಣಕ** (ಗು). ೧. ಸುತ್ತಲೂ ತಿರುಗುವ; ತೊಳಲುವ; ಅತ್ತಿತ್ತ ಚಲಿಸುವ. (ನಾ). ೨. ತಿರುಗಾಡುವವನು; ತೊಳಲುವವನು; ಅಲೆಮಾರಿ. [ ಸಂ. ]

**ಘೂರ್ಣನ** (ನಾ). ಅಲುಗಾಡುವಿಕೆ; ಅತ್ತಿತ್ತ ಚಲಿಸುವಿಕೆ; ಸುತ್ತ ತಿರುಗುವಿಕೆ. [ ಸಂ. ]

**ಘೂರ್ಣನೀಯ** (ಗು). ೧. ತಿರುಗಿಸತಕ್ಕ; ಸುತ್ತಾಡಿಸತಕ್ಕ. (ನಾ). ೨.=ಘೂರ್ಣನ. [ ಸಂ. ]

**ಘೂರ್ಣಿತ** (ಗು). ೧. ಅತ್ತಿತ್ತ ಚಲಿಸುತ್ತಿರುವ; ಅಲ್ಲೋಲಕಲ್ಲೋಲವಾದ : ಸಮುದೀರ್ಣ ಘೂರ್ಣಿತಾರ್ಣವಸಮಮಾದುದನೂನಯಾನ ಸರಭಸಜನಸಂಭ್ರಮ ಕಳಕಳದಿಂ . . . ಕಟಕಂ (ಪುಷ್ಪಪು. ೮-೩೦). (ನಾ). ೨.=ಘೂರ್ಣನ. ೩. ದೊಡ್ಡ ಶಬ್ದ; ಅಟ್ಟಹಾಸ; ಗರ್ಜನೆ. ೪. [ನಾಟ್ಯ] ಒಂದು ಬಗೆಯ ಅಭಿನಯ; ನೂರೆಂಟು ಕರಣಗಳಲ್ಲೊಂದು : ಪಡೆದಪಕ್ರಾಂತಂ ಚಾರಿಯನೊಡರ್ಚಿ ದೆಸೆಯಲ್ಲಿ ನೀಡುತೆಡಗ್ಗೆ ಡೋಲದಿ ಕಡು ಸೊಗಸೆ ಘೂರ್ಣಿತಾಖ್ಯಮನೊಡರ್ಚಿಪ ಕರಣಮಕ್ಕುಮಂಬುಜವದನೆ (ಲಾಸ್ಯರಂ. ೪-೬೩). [ ಸಂ. ]

**ಘೂರ್ಣಿಸು** (ಕ್ರಿ). ೧. ಅಲ್ಲೋಲಕಲ್ಲೋಲವಾಗು; ಪ್ರಕ್ಷುಬ್ಧವಾಗು; ಚಲಿಸು; ಕ್ಷೋಭೆಗೊಳ್ಳು : ದೇವಕೋಟಿಯ ನಿನದಂ ಪಳಂಚಲೆಯೆ ಘೂರ್ಣಿಸಿದತ್ತು ಸಮಸ್ತದಿಕ್ತಟಂ (ಆದಿಪು. ೧೦-೨೨); ಉದಯಿಸೆ ಚಂದ್ರಂ ನೆಲೆವೆರ್ಚಿದರ್ಣವಂ ಘೂರ್ಣಿಪಂತೆ ಭೋರೆಂದೋರಂದದೆ ಭುವನಮ್ಮದೆ ಘೂರ್ಣಿಸಿದುದದೆತ್ತಂ ರಾಜಪುತ್ರ ಜನನೋತ್ಸವದೊಳ್ (ಕಾದಂಪೂ. ೪೧೧); ಛತ್ರರಾಜಿ ತಳ್ತಿರೆ ಲವಣಾಬ್ಧಿಯಂತೆ ಪಡೆ ಘೂರ್ಣಿಸೆ (ಧರ್ಮಾಮೃ. ೬-೧೬೦); ಕದಡಿದೋಲಂತೆ ಘೂರ್ಣಿಸಿದೆ ಬುದ್ಧಿ ಕಳವಳಕಾತ್ಮ ಕುದಿಯುತಿದೆ (ಶ್ರೀರಾಮಾ. ೧೦೩-೯೪). ೨. ತಿರುಗು; ಸುತ್ತು : ಕಣ್ಣುಗಳು ಕೆಂಪಡರಿ ಘೂರ್ಣಿಸುತ್ತಿದ್ದುವು (ಧೂಮಮು. ೬೧). ೩. ಘೋಷಿಸು; ಶಬ್ದಮಾಡು : ಘಳಿಯಾರದೊಳು ಶಂಖಧ್ವಾನ

ಘೂರ್ಣಿಸಿತು ಹೊತ್ತುಜಿದು (ಭರಜ. ೯-೧೦) ; ಕತ್ತಲೆಯೆಂಬೀ ಮದಿರೆಯ ಕುಡಿದು ಎತ್ತೆತ್ತಲು ಘೂರ್ಣಿಸುತಿದೆ ಕಾಡು(ನಲ್ಕ. ೭೩-೧೦). ೩. ವಿಸ್ತರಿಸು; ಹಿಗ್ಗು ; ಉಕ್ಕೇರು: "ಘೂರ್ಣಿಸು-ವಿಜೃಂಭಣೇ, (ಆಕಳಿಸು, ಹೆಚ್ಚು) " (ಶಮುಧಾ). [ ಘೂರ್ಣನ + – ಇಸು₃ ]

**ಘೂರ್ವಿಂತ** (ನಾ). ಮೊರೆತ; ಅಬ್ಬರ; ಗರ್ಜನೆ; ಆರ್ಭಟ : ನಭದಿ ನೋಡುವರಖಿಳ ಪಿತೃಸನ್ನಿಭರ ಘೂರ್ವಿಂತ ಘೋಷ ಶೂಲಿಯ ಸಭೆಗೆ ಕೇಳಲು ಬಂದುದಯ್ಯಯ್ಯಮಮ ಸಂಭ್ರಮವೆ (ಕೌಶಿರಾ. ೩೨-೨೪).
[ < ಸಂ. ಘೂರ್ಣಿತ ]

**ಘೂರ್ವಿಸು** (ಕ್ರಿ).=ಘೂರ್ಣಿಸು ೨ : ಸಿಕ್ಕಿದನಲಾ ಭೂಪನಿಂದು ನಾನಾಯ್ತು ತಾನಾಯ್ತು ಕೆಡಿಸದೆ ಮಾಣೆನೆಂದು ಘೂರ್ವಿ [ಪಾಠಾಂ. ಗರ್ಜಿ]ಸುವ ಕೌಶಿಕನ ಹೂಂಕಾರದಿಂದೊಗೆದರಿಬ್ಬರು ಸತಿಯರು (ಹಚಕಾ. ೭-೧) ; ಮಾರಿ ಮಸಗಿತ್ತೆನಲ್ ಸಂಹಾರಂ ಮಾಡುವೆನರಾತಿ ಬಲಮಂ ಪಿಡಿದಾಂ ಕೂರಸಿಯನೆಂದು ಭಾಷೆಯನೋರಂತಿರಲಿತ್ತು ಘೂರ್ವಿಸಿತ್ತು ಸ್ಥಾನಂ (ದಶಕು. ೭-೫೦); ಅಳಲ್ದೊಡಿಯೊಳಾಳ್ದನುಜನಂ ಘೂರ್ವಿಸುತೆ ನಿನಗೆ ದೋಷಮೆ ತಾನಿರಲ್ಕೆ ನಡೆ ಕಳುಹೆಂದನರಸನೇಂ ದಯೆ ದೊಡಿದನೊ (ಜೈಮಿಭಾ. ೧೮-೫೯). [ <ಘೂರ್ಣಿಸು ]

**ಘೂಳಿ** 'ಗೂಳಿ₁' ನೋ.

**ಘೂಳಿದೇವ** (ನಾ). ಶಿವನ ವಾಹನವಾದ ನಂದಿಕೇಶ್ವರ; ಬಸವ (?): ಗಾಳಿದೇವರ ಕೂಡ ಘೂಳಿದೇವರು ಬಂದ . . . ಮಾರಾಯರ ಹಿಂದೆ ಮಗ ಬಂದ (ಹಳ್ಳಿಯು. ೭೩). [ ಘೂಳಿ (<ಗೂಳಿ₁) + ದೇವ ]

**ಘೃಣ** (ನಾ). ಕೃಪೆ ; ಕರುಣೆ : "ಕರುಣಂ ಘೃಣಂ ಕೃಪೆಯನುಕ್ರೋಶಮಾ ಶೂಕಮೆನಲು ದಯೆಗಕ್ಕು ನಾಮಂ" (ಮಂಗರಾ. ೧೨೯-೧೨). [ಸಂ.ಘೃಣಾ]

**ಘೃಣಾನಿಧಿ** (ನಾ). ಕರುಣೆಗೆ ಆಶ್ರಯಸ್ಥಾನನಾದವನು; ಕರುಣಾಕರ; ದಯಾನಿಧಿ : ಅತಿಶಯದೆ ಚಂದ್ರಮೌಳಿ ಘೃಣಾನಿಧಿಯೆನುತ್ತೆ ಹಿರಣ್ಯ ಬಾಹುಮೆನುತೆ . . . ಪರತತ್ವಯೆಂದೆನುತ್ತುಂ (ಪದ್ಮರಾ. ೧೧-೩೪).
[ ಸಂ. (ಘೃಣಾ + ನಿಧಿ) ]

**ಘೃಣಿ₁** (ಗು). ಕರುಣೆಯುಳ್ಳ; ದಯಾಶಾಲಿಯಾದ; ಕರುಣಾಳು ವಾದ: ಘೃಣಿವಿನಾಯಕನನುಶಾಸನದಿಂ ನಾನು ತಣಿವಾಂತೆನತಿಶಯವಾಗಿ (ಸೌನಂದ. ೧೫-೪೨). [ ಸಂ. ಘೃಣಿನ್ ]

**ಘೃಣಿ₂** (ನಾ). ೧. ಹೇಸಿಕೆ; ಜುಗುಪ್ಸೆ. ೨. ಕಿರಣ; ಕಾಂತಿ; ತೇಜಸ್ಸು : "ಕರಮುಸ್ರಮಂಶು . . . ಶೋಚಿ ಘೃಣಿಯೆ ಪ್ರದ್ಯೋತಮಾ ರಶ್ಮಿ " (ಮಂಗರಾ. ೧೧-೩ ; ಹೇಮದಾಮ ಘೃಣಿಮೌಕ್ತಿಕ ಮಂಡಪ ಕಾಂತಿಯೆತ್ತಲುಂ ಪರಿಕಲಿಪನ್ನೆಗಂ (ಚಂದ್ರಪು. ೧೧-೭೪) ; ಲಸದ್ಘೃಣಿ ಯುತಾಖಿಲ ದಿವ್ಯಮಣಿಖಚಿತ ಹೇಮಭೂಷಣವನು (ಪದ್ಮರಾ. ೭-೨೦) ; "ಕಿರಣ ಜುಗುಪ್ಸೆಯುಂ ಕರುಣೆಯುಂ ಘೃಣಿಯಕ್ಕು" (ನಾನಾರ. ೧೦೫). ೩. ಜ್ವಾಲೆ; ಉರಿ: ಅನಲನೊಳ್ ಘೃಣಿಯುಂ ಮತ್ತಾ ಶಶಿಯೊಳ್ ಕೌಮುದಿ ಬಿತ್ತರಮಿರ್ಪಂತೆ (ವಿಷ್ಣುಪು.೨-೨೦೯). ೪. ಸೂರ್ಯನ ಕಿರಣ; ಬಿಸಿಲು. ೫. ನೇಸರು; ಸೂರ್ಯ . ೬. (ನೀರಿನ) ಅಲೆ; ತೆರೆ.
[ ಸಂ. ]

**ಘೃಣಿಪಟಲ** (ನಾ). ಕಿರಣಗಳ ಗುಂಪು,–ಸಮೂಹ : ಪಸರಿಸಿದುದು ತತ್ಕಿರೀಟಮಣಿಘೃಣಿಪಟಲಂ (ಜಗವಿ. ೧೧-೮೦). [ ಘೃಣಿ + ಪಟಲ₂ ]

**ಘೃಣೆ** (ನಾ). ೧. ದಯೆ ; ಕರುಣೆ : "ಅನುಕ್ರೋಶಃ, ಕೃಪಾ, ಶೂಕಂ, ದಯಾ, ಕರುಣಾ, ಘೃಣಾ–ಈ ೬ ಕರುಣಂ" (ಹಲಾಯು. ೧೨೦-೩೯). ೨. ಜುಗುಪ್ಸೆ ; ಬೇಸರ ; ತಿರಸ್ಕಾರ : "ಜುಗುಪ್ಸೆಯೊಂದನುವಂ ಘೃಣಾಯೆನಿಪ್ಪುದು " (ಮಂಗರಾ. ೦೩೯-೭). ೩. ನಿಂದೆ ; ಬೈಗುಳು.
[ ಸಂ. ಘೃಣಾ ]

**ಘೃತ** (ಗು). ೧. ಚಿಮುಕಿಸಲ್ಪಟ್ಟ ; ಸಿಂಪಡಿಸಿದ. (ನಾ). ೨. ತುಪ್ಪ ; ನೆಯ್ : "ಆ ತುಪ್ಪಮಾಜ್ಯಂ ಘೃತ ಸರ್ಪಿಯಕ್ಕು" (ಮಂಗರಾ. ೫೮-೬); ಸುದ್ದಗನ್ನಡದೊಳ್ ತಂದಿಕ್ಕುವುದೇ ಸಕ್ಕದಮಂ ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ (ಧರ್ಮಾಮೃ. ೧-೪೨) ; ಕಲ್ಲೊಳ್ ಪೊನ್ ಪಾಲೊಳ್ ಘೃತಮಿಲ್ಲೆನಲೆರಡುಂಟು ದೇಹದೊಳಗಾತ್ಮನದೇಕಿಲ್ಲ (ಯಶಚರಿ. ೪-೨೪) ; ಸೇದುವ ರಾಟಳಂಗಳೊಳಿಟಿವ ಘೃತ ಮಧು ತೈಲ ಧಾರಾ ರಚನೆ ಚೆಲುವಾಯ್ತು (ಕುವ್ಯಾಸ. ೭-೧೪); ಮಥಿಸಿ ಮಥಿಸಿದುದ ಯಿಪ್ಪುದು ಗಡ ದಧಿಯಲಿ ಘೃತವು (ಗಗಹಾ. ೧೭-೫೪). ೩. ನೀರು; ಜಲ. ೪. ಕ್ಷೀರ ; ಹಾಲು. ೫. ಅಮೃತ: "ಅಂಭಸ ತುಪ್ಪವಮೃತ ಮೂಱುಂ ಸುಸರದಿ ಘೃತಶಬ್ದಮಕ್ಕು " (ನಾನಾಕಂ. ೬೦) ; "ಜಲಾಜ್ಯಪಯಂ ಘೃತಾಹ್ವಯಂ" (ನಾನಾರ. ೨೫). ೬. ಹುರುಪು; ಕೆಚ್ಚು. ೭. [ವೈದ್ಯಶಾ] ಬೇರೆ ಬೇರೆ ಔಷಧಿ ದ್ರವ್ಯಗಳನ್ನು ಸೇರಿಸಿ ತುಪ್ಪದಲ್ಲಿ ಪಾಕಮಾಡಿ ತಯಾರಿಸಿದ ಬಲವರ್ಧಕ ಔಷಧ : ಸಾಮಾನ್ಯವಾಗಿ ತೈಲ ಮತ್ತು ಘೃತಗಳನ್ನು ತಯಾರಿಸಲು ಬಾಯಿ ಅಗಲವಾಗಿರುವ ಕಂಚು ಅಥವಾ ಹಿತ್ತಾಳೆ ಪಾತ್ರೆಗಳನ್ನು ಉಪಯೋಗಿಸಬೇಕು (ಸಕಪ್ರ. XII ಪ್ರಸ್ತಾವನೆ).
[ ಸಂ. ]

**ಘೃತಕುಂಭ** (ನಾ). ತುಪ್ಪದ ಕೊಡ,–ಕುಂಭ : ಗಂಡಸು ಉರಿಯುವ ಕೊಳ್ಳಿಯವೋಲಂತೆ ಹೆಂಗಸು ಘೃತಕುಂಭದಂತೆ (ಇಂಚಾಪ. ೧೦೨-೪೯).
[ ಘೃತ + ಕುಂಭ ]

**ಘೃತಯೋನಿ** (ನಾ). ತುಪ್ಪವು ಉತ್ಪತ್ತಿಸ್ಥಾನವಾಗಿರುವವನು; ಬೆಂಕಿ; ಅಗ್ನಿ: ಮೆಚ್ಚಿದನು ಘೃತಯೋನಿ ಪೂತುರೆ ನಿಚ್ಚಟನು ನೀನೆನುತ ಕಿಡಿಗಳ ಬಿಚ್ಚಲುದುರಿತು ಚಾಪಮಾರ್ಗಣ ರಥ ತುರಂಗಚಯ (ಕುವ್ಯಾಆ.೨೦-೧೯).
[ ಘೃತ + ಯೋನಿ ]

**ಘೃತವರ್ತಿ** (ನಾ). ೧. ತುಪ್ಪದ ಬತ್ತಿ ; ತುಪ್ಪದಲ್ಲಿ ನೆನೆಸಿದ ಬತ್ತಿ. ೨. ತುಪ್ಪದ ಬತ್ತಿಯಿಂದ ಕೂಡಿದ ದೀಪ: ತೈಲವರ್ತಿ ಘೃತವರ್ತಿ ಕರ್ಪೂರವೆಂಬ ತ್ರಿವಿಧದೀಪಂಗಳಂ (ವಿವೇಕ. ೧೦೫). 'ತೈಲವರ್ತಿ' ಪರಾ.
[ ಘೃತ + ವರ್ತಿ ]

**ಘೃತಸಮುದ್ರ**(ನಾ).ತುಪ್ಪದ ಸಮುದ್ರ; ಸಪ್ತಸಮುದ್ರಗಳಲ್ಲೊಂದು: ಘೃತಸಮುದ್ರದ ಸೆಟಿಗ ಸೋಂಕಿದ ಹುತವಹನ ಸೊಂಪಿನಲಿ ವೈರಿಪ್ರತತಿ ಯನು ತಱುಬಿದರು ತಱಿದರು ಸರಳ ಸಾರದಲಿ (ಕುವ್ಯಾಶ. ೩-೩). 'ಸಪ್ತ ಸಮುದ್ರ' ಪರಾ. [ ಘೃತ + ಸಮುದ್ರ ]

**ಘೃತಾಪೋಶಣ** (ನಾ). (ನೀರಾದ) ತುಪ್ಪವನ್ನು ಅಂಗೈಯಲ್ಲಿ ಹಾಕಿ ಕೊಂಡು ಹೀರುವುದು : ಭೋಜನ ಸಮಯದಲ್ಲಿ ಮೊದಲು ಘೃತಾ ಪೋಶಣಮಾಡುವುದರಿಂದ ಅಗ್ನಿಪಟು ಉಂಟಾಗಿ ಎಲ್ಲಾಕಾಲದಲ್ಲಿಯೂ ಆರೋಗ್ಯಕರವಾಗಿರುವುದು (ಸಕಪ್ರ. ೫೦). [ ಘೃತ + ಆಪೋಶಣ ]

**ಘೃತಾಹುತಿ** (ನಾ). ತುಪ್ಪದ ಆಹುತಿ ; ಮಂತ್ರಪೂರ್ವಕವಾಗಿ ತುಪ್ಪ ವನ್ನು ಅಗ್ನಿಯಲ್ಲಿ ಹೋಮ ಮಾಡುವುದು: ಘೃತಾಹುತಿವಡೆದನಲನಂತೆ ಮಿಗೆ ದಳ್ಳಿಸಿದಂ (ಶಮುದ. ೨೩೦ ಪ್ರಯೋ); ಭಟ ಭಡಾಳಿಸಿದನು ಘೃತಾಹುತಿ ಘಟಿಸಿದಗ್ನಿಯವೋಲು (ಕುವ್ಯಾದ್ರೋ. ೫-೭೦). [ ಘೃತ + ಆಹುತಿ ]

**ಘೃತೌದನ** (ನಾ). ತುಪ್ಪ ಕಲಸಿದ ಅನ್ನ; ತುಪ್ಪದನ್ನ: ವಿವಿಧ ಸತ್ಕಾರದಲಿ ದುರ್ಗಾಸ್ತವವ ಜಪಿಸಿದ ವರ ಘೃತೋ[ತೌ]ದನ ನವರುಧಿರ ಮಾಂಸೋಪಹಾರಂಗಳಲಿ ಪೂಜಿಸಿದ (ಕುವ್ಯಾದ್ರೋ. ೯-೨).
[ ಘೃತ + ಓದನ ]

**ಘೃಷ್ಟ** (ಗು). ತೀಡಿದ ; ಉಜ್ಜಿದ; ತೇದ: ನಿರುತಮಾ ಶ್ರೀಪರ್ವತಾಗ್ರ ದೊಳ್ಪ್ರಹ್ಲಾದಿ ಸುರನಿಕರಮಣಿಮಕುಟಕೋಟಿತಟಘೃಷ್ಟಪದಸರ ಸೀರುಹಂ (ಅರಾಚ. ೧-೭೭). [ ಸಂ. ]

**ಘೃಷ್ಟಕಾಶ್ಲೇಷ** (ನಾ). [ಕಾಮಶಾ] ಒಂದು ಬಗೆಯ ಆಲಿಂಗನ; ತಿಳಿಯದಂತೆ ಸೋಂಕಿ ಮಾಡುವ ಆಲಿಂಗನ : ಪೋಗಿ ಸತಿ ಕಳ್ಳಲೆ ಯೊಳನುರಾಗದೆ ತೂರ್ಯತ್ರಯಾದಿ ವೈಚಿತ್ರ್ಯವ ನೋಳ್ಪಾಗಳ್ ಪೆಱರನುಮವ ಸೋಂಕಾಗಿಸಲಂತದುವೆ ಘೃಷ್ಟಕಾಶ್ಲೇಷಾಖ್ಯಂ (ಮನ್ಮವಿ. ೧೧-೬). [ಸಂ.]

**ಘೃಷ್ಟಿ** (ನಾ). ೧. ಹಂದಿ; ಎಕ್ಕಲ; ಸೂಕರ : "ಸೂಕರಂ ಕಿಟಿ ಘೃಷ್ಟಿ ದಂಷ್ಟ್ರಿ ಪೋತ್ರಿ ಕ್ರೋಡವಮಾ ಕೋಳವಮಾ ವರಾಹಂ ಹಂದಿಯೆಕ್ಕು" (ಮಂಗರಾ. ೪೮-೯); "ಮಿಗೆಕ್ಕಲ ಕೋಡಗುಟ್ಟೆ ಘೃಷ್ಟಿಯೆನಿಕ್ಕುಂ" (ಕವಿಕಂ. ೬೧); ತರಕ್ಷುಗಳಿಲ್ಲಿಯೊಗ್ಗಿನಿಂ ಕಾಸರಮಿಲ್ಲಿ ಘೃಷ್ಟಿಚಯಮಿಲ್ಲಿ . . . ತೋರ್ಕುಂ (ವಂಕವು. ೬-೬). ೨. ಕಿರಣ; ಕಾಂತಿ: "ಕರಮುಸ್ರಮಂಶು ವಸುರೋಚಿ ದೀಧಿತಿ . . . ಘೃಷ್ಟಿ . . . ಘೃಣಿಯೆ ಪ್ರದ್ಯೋತವಮಾ ರಶ್ಮಿ" (ಮಂಗರಾ. ೧೧-೩). ೩. ಅರೆಯುವಿಕೆ; ಪುಡಿಮಾಡುವಿಕೆ. ೪. ಉಜ್ಜುವಿಕೆ; ಘರ್ಷಣ. ೫. ಒಂದು ಬಗೆಯ ಸಸ್ಯ ಮತ್ತು ಅದರ ಗಡ್ಡೆ; ವಾರಾಹಿ : "ವಿಷ್ವಕ್ಸೇನಾ-ವಾರಾಹಿ, ಪ್ರಿಯಂಗು, ಆಕ್ಕಿಹಡೆ, ಘೃಷ್ಟಿ" (ಔಷಧಿ. ೧೫೫). [ಸಂ.]

**ಘೇ** (ನಾ). ಒಂದು ಅನುಕರಣ ಶಬ್ದ; ಹೊಗಳಿಕೆಯ ನುಡಿ: ಘೇ! ಉಘೇ! ಭಲಾ! ಭಾಪುರೇ! (ಚಂದ್ರಸ. ४३).

**ಘೇಂಡ** 'ಗೇಂಡ' ನೋ.

**ಘೇಂಡಾಮೃಗ** 'ಗೇಂಡಾಮೃಗ' ನೋ.

**ಘೇಣ್** 'ಗೇಣ್' ನೋ.

**ಘೇಯೆನ್** (ಕ್ರಿ). ಘೇ ಎಂದು ಧ್ವನಿಮಾಡು; ಘೀಂಕಾರವಮಾಡು : ವನಕರಿ ಘೇಯೆನೆಯುಂ (ಶಾಂತಿಪು. ೨-೧೧೨). [ಘೇ + ಎನ್$_1$]

**ಘೇರಾಯಿಸು,** ಗಿರಾಯಿಸು, ಗೇರಾಯಿಸು, ಘೇರಿಸು (ಕ್ರಿ). ಸುತ್ತುವರಿ; ಬಳಸು; ಮುತ್ತು; ಆಕ್ರಮಿಸು: ಬೊಬ್ಬರಿದಲೆವ ಕಾರ್ವೋಡ . . . ಚಾಚಿ ತನ್ನ ಕಬಂಧ ಕೈಯ ಘೇರಾಯಿಸಿದೆ (ಚಂಡವು. ೧೬-೪); ದೊರೆಯಾದ ಲಿಂಗಣ್ಣ ಮದಕರಿನಾಯಕನು (ಮುಮ್ಮಡಿ ಮದಕರಿನಾಯಕ) ಕಸ್ತೂರಿರಂಗಪ್ಪನಾಯಕನ ಅರಮನೆಯಲ್ಲಿ ದೇವರಪೂಜೆಯನ್ನು ಮಾಡುತ್ತಿರುವಾಗ ಅರಮನೆಯನ್ನು ಘೇರಾಯಿಸಿ ಕೊಂಡರು (ಚಿತ್ರಪಾ. ೩೪); ಸಮರಾತ್ರಿ ಸುಮಾರಿಗೆ ಕಳ್ಳರ ಸುತ್ತಲೂ ಘೇರಾಯಿಸಿ ಕೊಂಡು ಎಲ್ಲರನ್ನೂ ಮಾಲು ಸಹಿತ ಹಿಡಿದು . . . ಹಾಜರು ಮಾಡಿದರು (ನಡದಾ. II, ೮೬೨). **ಗಿರಾಯಿಸು:** (೬). **ಗೇರಾಯಿಸು:** ರಾಣ್ಯೆ ಇದ್ದಂಥಾ ಮಂದಿಗೆ ಗೇರಾಯಿಸಿದಲ್ಲಿ . . . ಇಪ್ಪತ್ತಮೂರುಜನಕ್ಕೆ ಅಪಾಯವಾಯಿತು (ರಾಜೇಂದ್ರ. ೯೬); ತನ್ನ ಯಜಮಾನನನ್ನು ಗೇರಾಯಿಸಿಕೊಂಡು ಹೊಡೆಯಲು ನೋಡುತ್ತಿದ್ದಾರೆಂದು . . . ಹೇಳಿದ (ಕಲನೆ. ೩೬೮). **ಘೇರಿಸು:** ಘೇರಿಸಲ್ ಶೌರ್ಯದಿಂ ಪಟ್ಟಣವನು (ಪರಶು. ೧೦-೫); ಉರೆ ಘೇರಿಸಿ ಪೆರ್ಬಲಂ ಮಾತ್ಸರ್ಯದಿಂದೆ ತತ್ಪುರವರಮಂ (ಕೆಳನೃ. ೫-೬೨).

[<ಘೇರಾವ್ + - ಇಸು$_3$]

**ಘೇರಾವ್** (ನಾ). ಆಕ್ರಮಣ; ಮುತ್ತಿಗೆ; (ಒತ್ತಾಯದಿಂದ ಕೆಲಸ ಮಾಡಿಸಲು) ಸುತ್ತುವರಿಯುವುದು : ವಿದ್ಯಾರ್ಥಿಗಳೆಲ್ಲಾ ಮುಖಂಡನನ್ನು ಘೇರಾವ್ ಮಾಡಿದರು (ರೂಢಿ). [←ಹಿಂ. ಘೇರಾವ್, ಘಿರಾವ್]

**ಘೇರಿ,** ಗೇರಿ (ನಾ). ಸುತ್ತುವಿಕೆ; ಭ್ರಮಣ : ಕಂದಿ ಕುಂದುತ ಸ್ಮರಶರಬೃಂದತತಿಗೆ ನೊಂದು ವ್ಯೆಯ್ಯಲ್ಲ ಝುಂಝುಂಯೆಂದು ಘೇರಿ ಬಂದು ನಿಂದಿರಲಾರದಾನಂದ ಮೋಹದಿಂದ ಮರವಟ್ಟು ಮೈಮರತೊಂದು ಘಳಿಗೆ ನಿಂದು (ಸೌಗಂಧಿ. ೬-೪೦); "ಪ್ರಭಾತ ಘೇರಿ"ಯಿಂದ ಅವರಿಗ್ಯಾಕ ಘೇರಿ ಬರಬೇಕು? (ಸಮಜೀ. ೭೮೩). **ಗೇರಿ :** 'ಗೇರಿಹೊಡೆ' ಪರಾ.

[←ಮರಾ. ಘೇರೀ]

**ಘೇರಿಸು** 'ಘೇರಾಯಿಸು' ನೋ.

**ಘೇರು** (ನಾ). ಒಂದು ಅನುಕರಣ ಶಬ್ದ. 'ಘೇರುಗುಡು' ಪರಾ.

**ಘೇರುಗುಡು** (ಕ್ರಿ). ಉಸಿರು ಕಟ್ಟಿದಂತಾಗಿ ಘೇರ್ ಘೇರ್ ಎಂಬ ಶಬ್ದವನ್ನು ಮಾಡು : ಗಂಟಲು ಘೇರುಗುಡುತ್ತಿತ್ತು (ಟಾಕತಿ. ೧೩). 'ಗೊರಗುಡು' ಪರಾ.

[ಘೇರು + ಕುಡು$_1$ (<ಕೊಡು$_1$)]

**ಘೈಶಾಸ** 'ಘಳಿಸಾಸ' ನೋ.

**ಘೈಶಾಸಗೇರಿ** (ನಾ). ಘಟಿಕಾಸ್ಥಾನದ ಅಧಿಕಾರಿಗಳು ವಾಸಿಸುವ ಸ್ಥಳ,- ಕೇರಿ; ಘಳಿಸಾಸರ ಬೀದಿ : ಘೈಶಾಸಗೇರಿಗಧಿಪರು ಭಾಸುರ ತೇಜ[ರು] ಮಹಂತರೆನಿಸಿದ ನೂರ್ವ್ವರು ಕೇಶವ ಮಹೇಶ ದೇವರ ಲೇಸೆನಿಸಿದ ಪೂಜೆಗಿತ್ತರೂರ್ಜ್ಜಿತ ಧರೆಯಂ (ಎಇ. XVIII, ೧೮೫-೪೦; 1097).

[ಘೈಶಾಸ (<ಘಳಿಸಾಸ) + ಕೇರಿ]

**ಘೈಸಾಸ** 'ಘಳಿಸಾಸ' ನೋ.

**ಘೈಸ್ಸ** 'ಘಳಿಸಾಸ' ನೋ.

**ಘೈಸ್ಸಗೆಱೆ** (ನಾ). ಒಂದು ಕೆರೆಯ ಹೆಸರು; ಘಳಿಸಾಸರ ಕೆರೆ: ತಂಮೂರ ತೆಂಕಣ ಘೈಸ್ಸಗೆಱೆಯಿಂ ತೆಂಕಲ್ (ಮುಂಬರಾ. ೩೭೧-೮೨; 1229).

[ಘೈಸ್ಸ (<ಘಳಿಸಾಸ) + ಕೆಱೆ]

**ಘೊಟಾಳಿ** 'ಘೋಟಾಳಿ' ನೋ.

**ಘೊಟಾಳು** 'ಘೋಟಾಳಿ' ನೋ.

**ಘೊತ್ತಲ** (ನಾ). (ಉಕ) ಎಮ್ಮೆ, ಹಸು ಮೊದಲಾದ ಪ್ರಾಣಿಗಳು ಹಾಕುವ ಸಗಣಿಯ ಮುದ್ದೆ,-ತೊಪ್ಪೆ. [?]

**ಘೊರ** (ನಾ). ಒಂದು ಅನುಕರಣ ಶಬ್ದ. 'ಘೊರಗುಡು' ಪರಾ. **ಘೊರಘೊರ** (ದ್ವಿರುಕ್ತಿ) : ಗಂಟಲಲ್ಲಿ ಘೊರಘೊರ ಶಬ್ದ ಹೊರಡುತ್ತಿದೆ (ರೂಢಿ).

**ಘೊರಗುಡು** (ಕ್ರಿ). ಘೊರ್ ಘೊರ್ ಎಂದು ಶಬ್ದಮಾಡು; ಗೊರಕೆ ಹೊಡೆ : ಕೂಡಲೇ ಗಂಡಹೆಂಡಿರಿಬ್ಬರ ಘೊರಗುಡುವ ಹೆಚ್ಚಿನ ಸಪ್ಪಳದಲ್ಲಿ ಮೆತ್ತಗೆ ಕೇಳಿಬರುವ ಮುದುಕನ ಸಪ್ಪಳವು ಎಲ್ಲಿಯೋ ಅಡಗಿ ಮಾಯವಾಗಿತ್ತು (ಮೊಪಾಸಾ. ೭).

[ಘೊರ + ಕುಡು$_1$ (<ಕೊಡು$_1$)]

**ಘೊರಪಡಿ** (ನಾ). ಒಂದು ಸ್ಥಳದ ಹೆಸರು (?) : ಅನ್ತೆ ಬನ್ದು ಕೊಟ್ಟಲೆ ಪಳ್ಳದ ಅಲಕಿಱುಕೆಯ ಕರ್ಗ್ಗಲ್ಲೊಱೆಪ್ಪಿಯೆ ಪುಣುಶೆಪಡಿಯೆ ಘೊರಪಡಿಯೆ ಬಳಿ ಪುಣುಶೆಯೆ ಚರಪಡಿಯೆ ತುಟ್ಟಿಲೊಱೆಪ್ಪಿಯೆ (ಎಕ. XVI, ತಿಪಟೂ. ೧೧೦-೭೨; ಸು. 900). [?]

**ಘೊಳ್** (ನಾ). ಒಂದು ಅನುಕರಣ ಶಬ್ದ : ಎಲ್ಲರೆರ್ದು ಮಲ್ಲಳಿಗೊಂಡು ಘೊಳ್ಳೆಂದು ಬಿಳ್ದ ವೃದ್ಧಮಾಹೇಶ್ವರನಂ ಮುತ್ತಿಕೊಂಡೆತ್ತಲನುವಾಗಿ ಮೆಲ್ಲನೆ ನೆಗಪಿ ನಿಂದಿರಿಸಲ್ (ನಂಬಿರ. ೬-೪೩); ತಾಪಸರು ಘೊಳ್ಳೆಂದು ನಗಲು (ವೀಶೈಪು. ೪-೧೨-೧೯). 'ಗೊಳ್' ಪರಾ.

**ಘೊಳ್ಳನೆ** (ಅ). ಒಂದು ಅನುಕರಣಾವ್ಯಯ; ಘೊಳ್ ಎಂದು; ಜೋರಾದ ಶಬ್ದದೊಡನೆ : ಘೊಳ್ಳನೆ ಸತಿಯರೆಲ್ಲರು ನಕ್ಕರದಕೆ ಭೂವಲ್ಲಭ ತಾ ನಸುನಕ್ಕ (ಭರತ. ೮-೩೬). 'ಗೊಳ್ಳನೆ' ಪರಾ.

[ಘೊಳ್ + - ಅನೆ$_1$]

**ಘೋಂಟೆ** (ನಾ). ೧. ಎಲಚಿಗಿಡ; ಬೋರೇಗಿಡ: "ಕರ್ಕಂಧೂಃ, ಬದರೀ, ಕೋಲೀ, ಘೋಂಟಾ-ಳಿವಿಳಚೀಗಿಡದ ಹೆಸರುಗಳು" (ಸಿದ್ಧಾಂತಿ. ೧೦೫). ೨. ಅಡಕೆಯ ಮರ; ಪೂಗ : "ಘೋಂಟಾ, ಪೂಗಃ, ಕ್ರಮುಕಃ, ಗುವಾಕಃ, ಖಪುರಃ-೫ ಅಡಿಕೆ ಮರದ ಪೆಸರು" (ಸಿದ್ಧಾಂತಿ. ೧೩೩).

[ಸಂ. ಘೋಂಟಾ]

**ಘೋಕ** ‘ಘೋಕು’ ನೋ.

**ಘೋಕಂಪಟ್ಟಿ** (ನಾ). (ಉಕ) ಉರುಹೊಡೆಯುವಿಕೆ; ಕಂಠಪಾಠ ಮಾಡುವಿಕೆ: ಬರೀ ಘೋಕಂಪಟ್ಟಿ ಮಾಡಿದರೆ ಏನು ಅಭ್ಯಾಸವಾಯಿತು? (ರೂಢಿ). [ ←ಮರಾ. ಘೋಕಂಪಟ್ಟೀ ]

**ಘೋಕಹಾಕು** ‘ಘೋಕುಹಾಕು’ ನೋ.

**ಘೋಕು, ಗೋಕು, ಘೋಕ** (ನಾ). (ಉಕ) ಪುನರಾವೃತ್ತಿ; ಉರು; ಕಂಠಪಾಠ. ‘ಘೋಕುಹಾಕು’ ಪರಾ. **ಗೋಕು:** “ಬಾಯಿಪಠನ” (ಜಾನಕೋ. ೫೩). **ಘೋಕ:** ‘ಘೋಕಹಾಕು’ ಪರಾ.

[ ←ಹಿಂ. ಮರಾ. ಘೋಕ್ ]

**ಘೋಕುಹಾಕು, ಘೋಕಹಾಕು** (ಕ್ರಿ). (ಉಕ) ಪುನರಾವೃತ್ತಿಮಾಡು; ಉರುಹೊಡೆ; ಕಂಠಪಾಠಮಾಡು: ಸುಬ್ಬನೂ ಮುಜುಮುದಾರರ ನಿಬಂಧಗಳನ್ನೆಲ್ಲಾ ‘ಘೋಕು’ ಹಾಕಿದ್ದ (ಸಾವಿಉ. ೧೦). **ಘೋಕಹಾಕು:** ಘೋಕಹಾಕಾವಾ ಜಯಾ, ಪಾಠಾ ಆಗೋದು ಈಕಿಗೆ (ವ್ಯನಿ. ೪೮). ಘೋಕಹಾಕಿ ಹಾಕಿ ಪಾಠ ಮಾಡಿದ ವೇದವು ಮಾತ್ರ ಅವನಿಗೆ ಗೊತ್ತು (ದೇವಹ. ೩೮). [ ಘೋಕು + ಹಾಕು (<ಪಾಯ್ಕು$_1$) ]

**ಘೋಕುಹೊಡೆ** (ಕ್ರಿ).=ಘೋಕುಹಾಕು: ಅವನು ಘೋಕುಹೊಡೆದೇ ಪರೀಕ್ಷೆಗಳಲ್ಲಿ ಪಾಸಾಗುವುದು (ರೂಢಿ).

[ ಘೋಕು + ಹೊಡೆ$_1$ (<ಪೊಡೆ$_1$) ]

**ಘೋಟ** (ನಾ). ಕುದುರೆ; ಅಶ್ವ: ಉಲ್ಲಸಿತ ವಿಮಲ ಘೋಟಗಳಾಗಿ . . . ಪರಿದಾಡುತಿಹವು (ಮಲ್ಲಾರಿ. ೪-೪). ‘ಘೋಟಾರೂಢ’ ಪರಾ.

[ ಸಂ. ]

**ಘೋಟಕ** (ನಾ).=ಘೋಟ: “ಹರಿ ತುರಂಗಂ ಸಪ್ತಿ ವಾಜಿ ಯಯು ಘೋಟಕಂ . . . ಕುದುರೆಯುಕ್ಕು” (ಮಂಗರಾ. ೮೧-೧೩); ಮರಾಟ ದೇಶದ ಘೋಟಕಂಗಳು (ಸೌಗಂಧಿ. ೧೩೯-೭); ಕಟ್ಟೆಂಬ ನಿನದ ಘೋಟಕದ ಲಾಯದೊಳುಂಟು (ಪೂಜ್ಯಜ. ೪-೩೭). [ ಸಂ. ]

**ಘೋಟಾ** (ನಾ). ಕಸಕಸೆಕಾಳುಗಳನ್ನು ಅರೆದು, ಕೆಲವು ಮಾದಕ ಪದಾರ್ಥಗಳನ್ನು ಮಿಶ್ರಮಾಡಿ, ತಯಾರಿಸಿದ ಒಂದು ಬಗೆಯ ಮಾದಕವಾದ ಪಾನೀಯ: ಇಂದು ಶಿವರಾತ್ರಿ ‘ಘೋಟಾ’ ಮಾಡುವವನಿರುವೆಯಲ್ಲವೆ? (ಚಂದುಟ. ೯೭). [ ←ಮರಾ. ಘೋಟಾ ]

**ಘೋಟಾರೂಢ** (ನಾ). ಕುದುರೆ ಏರಿದವನು; ಕುದುರೆ ಸವಾರ: ಘೋಟಾರೂಢಂ=ಗೋಟಿಾಯಿಲಂ (ಶಮದ. ೨೦ ಪ್ರಯೋ).

[ ಘೋಟ + ಆರೂಢ ]

**ಘೋಟಾಳಿ, ಗೊಟಾಳೆ, ಗೋಟಾಳಿ, ಗೋಟಾಳೆ, ಘೊಟಾಳಿ, ಘೊಟಾಳು, ಘೋಟಾಳೆ** (ನಾ). (ಉಕ) ೧. ಗೊಂದಲ; ಗಲಾಟೆ; ತೊಡಕು; ಪೇಚು: ತ್ರೈರಾಶಿ ಬಲು ಚೊಕ್ಕವೆಂದು ಹೇಳಿದೆನಲ್ಲವೆ? ಅದರಲ್ಲಿಯೂ ಒಂದು “ಘೋಟಾಳಿ” ಯುಂಟು (ಗಾಳಿಪ. ೧೮೫); ಬೆರಳಿಗೆ ಮುದ್ರೆಯುಂಗುರವಿದ್ದುದರಿಂದ ಹಿಂದೂ ಮಹಿಳೆಯೆಂದುಕೊಂಡೆ. ಅಂತೇ ನನಗೆ ಘೋಟಾಳಿಯಾಯಿತು (ಸ್ಮೃತಿಚಿ. ೩೦೦); ಇಷ್ಟುಹೊತ್ತು ಯಾಕಾತಪಾ ಅಂತ ಘೋಟಾಳ್ಯಾಗ ಬಿದ್ದಿದ್ದೆ (ಮಿಂಚಿಹು. ೫). **ಗೊಟಾಳೆ:** ೧. ನೀನು ಹೀಗೆ ಸಿಟ್ಟುಗೊಂಡರೆ ಅಕ್ಕನಿಗೆ ಈ ಗೊಟಾಳೆಯೇ ಬೇಡ ಅನಿಸಿ, ಜಿಗುಪ್ಸೆ ಬಂದು, ಪ್ರಾಣ ತೆಗೆದುಕೊಂಡರೆ ಏನು ಮಾಡುತ್ತೀ? (ಸ್ವಪ್ನಹೊ. ೩೩೯). **ಗೋಟಾಳಿ:** ೨. “ಹೊಲಸು; ಗಜಬಿಜಿ” (ಜಾನಕೋ. ೫೩). **ಗೋಟಾಳೆ:** ೧. ಸದಯನ ಸಾಲದ ಗೋಟಾಳೆ ಹೇಳುವುದೇ ನನ್ನ ಸದ್ಯದ ಕೆಲಸ (ಹಸಿವು. ೫೪). **ಘೊಟಾಳಿ:** ೧. “ಮೊದಲ್ನೆಚ್ಚಿಟ್ಟೇ ಅವ್ನ್ಯಾಗೆ ಘೊಟಾಳಿ ಆಗ್ತೇತಿ ಎಲ್ಲ” ಎಂದು ಗಂಗಿ . . . ತತ್ತ್ವಜ್ಞಾನವನ್ನು ಹೊರಡಿಸಿದಳು (ಪುರುಷ. ೧೪೩). **ಘೊಟಾಳು:** ೧. ಬಾಯಿಜೀ, ಈ ಮಾತು ಸತ್ಯವಾದರೆ ನಿಮ್ಮ ಪರಿಸ್ಥಿತಿ ಘೊಟಾಳಾಗುತ್ತೆ (ನಟಸಾ. ೩೯೧). **ಘೋಟಾಳೆ:** ೧. ಇವು ಒತ್ತಟ್ಟಿ ಕೂಡಿಸಿ ರಶೀದಿಗಳು ಮಾಡಿದರೆ, ತಿರಿಗಿ ಘೋಟಾಳೆ ಆಗುವುದು (ಮುಂಬವ್ಯಾ. ೮೦); ಈ ‘ಆದರೆ’ ಯಾವಾಗಲೂ ಘೋಟಾಳೆ ಮಾಡುತ್ತದೆ (ದೀಪಹ. II, ೨೦೯); ನೀವು ಬಂದು ಎಲ್ಲಾ ಘೋಟಾಳೆ ಮಾಡಿದಿರಿ (ಜೂಜು. ೬೭).

[ ←ಹಿಂ. ಮರಾ. ಘೋಟಾಳಾ ]

**ಘೋಟಾಳೆ** ‘ಘೋಟಾಳಿ’ ನೋ.

**ಘೋಟಿ** (ನಾ). ಹೆಣ್ಣು ಕುದುರೆ: ಬೇಟೆಗಾರರನೆಲ್ಲ ನೀಟನಿಂ ಕರಸಿ ಘೋಟಿಗಳನು ಯೇರಿ ಬೇಟೆಗೆ ಬೇಗ ಪೊರಡುವುದೆನುತ (ಹಮುಜ. ೧೫).

[ ಸಂ. ಘೋಟೀ ].

**ಘೋಟಿಕೆ** (ನಾ). = ಘೋಟಿ: ಘೋಟಿಕೆ=ಗೋಟಿಗೆ (ಶಮದ. ೨೦ ಪ್ರಯೋ).

[ ಸಂ. ಘೋಟಿಕಾ ]

**ಘೋಡಾ** ‘ಘೋಡೆ’ ನೋ.

**ಘೋಡಾಬೋಳಿ** (ನಾ). ಒಂದು ಔಷಧಿ ಸಸ್ಯ: ಕೆಂಪುಹಾಗಲ, ಘೋಡಾಬೋಳಿಯ ರಸ, ಪಾದರಸ ೧ . . . ಇಷ್ಟನ್ನೂ ಸಮಗೊಂಡು ಗರುಗದ ರಸದಲ್ಲಿ ಮೂರುಸಲ ಭಾವಿಸಿ ಗುಳಿಗೆಮಾಡಿ ಜ್ವರಕ್ಕೆ ಮೆಣಸಿನ ಪುಡಿಯಲ್ಲಿ ಕೊಡವುದು (ವಿವ್ಯವಿ. ೩೬). [ ಘೋಡಾ (<ಘೋಡೆ) + ಬೋಳಿ ? ]

**ಘೋಡೆ, ಘೋಡಾ** (ನಾ). = ಘೋಟ$_1$; ಪೇಯಿಯ ಸಾಹಣ ಘೋಡೆಯ ರಾಯಂ ಪೆಸರ್ವೆತ್ತನರ್ಥಿಜನರಾಧೇಯಂ (ಎಇ. XV, ೩೫-೧೬ : 1189). **ಘೋಡಾ:** ‘ಘೋಟಕ’ (=ಘೋಡಾ) ಮತ್ತು ಕುದುರೆ ಇವುಗಳ ಬಗೆಗೆ ಚರ್ಚಿಸಿ ಕೊನೆಗೆ ಅದನ್ನು ಸಂದಿಗ್ಧ ಸ್ಥಿತಿಯಲ್ಲೆ ಕೈಬಿಟ್ಟಿದ್ದಾರೆ (ಕರ್ನಾಟ. ೧೭೯). [ <ಪ್ರಾ. ಘೋಡ./ಸಂ. ಘೋಟ./ಹಿಂ. ಮರಾ. ಘೋಡಾ ]

**ಘೋಣ** (ನಾ). ಮೂಗು; ನಾಸಿಕ: “ಮೂಗು ನಾಸಿಕಾಘ್ರಾಣ ಸಿಂಘನೀ ಘೋಣಾಖ್ಯಂ” (ವಸ್ತುಕೋ. ೭೦-೧೭); “ನಾಸಿಕಂ . . . ಘೋಣವೆನೆ ನಾಸೆಯೆನೆಮೂಗಕ್ಕು” (ಮಂಗರಾ. ೯೪-೫); ಉತ್ತುಂಗ ಘೋರ ಘೋಣನುಂ ಕರ್ಣಾಭರಣೀಕೃತ ಫಣಾಮಣಿ ಪ್ರಭಾರುಣಿಕ ವಾಮಪಾರ್ಶ್ವನುಂ (ಕಾದಂಪೂ. ೧೬೬); ಘೋಣಪವನನುದಾತ್ತಂ ಮಸಗಿತ್ತು ವಾಜಿ ಪೆರ್ಮಾರಿಯುವೋಲ್ (ಪಂಪಾಮಾ. ೪-೧೦೮); ಪ್ರೋಥದ ಕಣ್ಣೆಡೆ ಘೋಣಂ (ಅಶ್ವಶಾ. ೯-೧೩); ಮಾಣದು ಶ್ವಾಸ ನಿಶ್ವಾಸದಿಂ ದಿವಿಜರಂ ಘೋಣದೊಳ್ ಸೆಳೆವುತ್ತೆತರೆ ಕಂಡು ಭೀತಿಯಿಂ (ಚೆಬಪು. ೪೪-೪). [ ಸಂ. ಘೋಣಾ ]

**ಘೋಣಾಂಕುಶ** (ನಾ). ಮೂಗಿನ ಆಭರಣ; ಮೂಗುತಿ: “ಘೋಣಾಂಕುಶಂ ಪೇಳೆ ಮೂಕುತಿಯಕ್ಕುಂ” (ಮಂಗರಾ. ೯೯-೩೩).

[ ಸಂ. (ಘೋಣಾ + ಅಂಕುಶ) ]

**ಘೋಣಾರವ** (ನಾ). ಮೂಗಿನ ಶಬ್ದ; ಡುರುಕು: ಅತ್ಯಂತ ಭೀಕರ ಘೋಣಾರವದಿಂದೆ ಗುರ್ಘುರಿಸುತಿರ್ಪಾ ಪಾಂಡರಕ್ರೋಡಮಂ ನರಪಾಲಂ ಮಿಗೆ ನೋಡಿದಂ (ವೆಂಕಮು. ೯-೩). [ ಸಂ. (ಘೋಣಾ + ರವ) ]

**ಘೋಣಿ** (ನಾ). ಹಂದಿ; ವರಾಹ: “ವರಾಹಃ, ಸೂಕರಃ . . . ಘೋಣೀ, ಸ್ತಬ್ಧರೋಮಾ, ಕ್ರೋಡಃ, ಭೂದಾರಃ – ೧೨ ಕಾಡುಹಂದಿ” (ಸಿದ್ಧಾಂತಿ. ೧೩೪); ಬಿಗಿಯುತ ಬಿಲ್ಗಳ ನೆಗವುತ ಸರಳ್ಗಳ ಸೊಗಯಿಸಿ ಭಟರಾಗ ಬಗೆಯುತ ಘೋಣಿಯ ತೆಗೆಯುತ ಕರುಳ್ಗಳ (ಹಮುಜ. ೧೮).

[ ಸಂ. ಘೋಣಿನ್ ]

**ಘೋಣೆ** (ನಾ). = ಘೋಣ. [ ಸಂ. ಘೋಣಾ ]

**ಘೋರ್** (ನಾ). ಒಂದು ಅನುಕರಣ ಶಬ್ದ: ಧಡಲೆಂಬ ಡಟಲೆಂಬ ದುಡುಹೆಂಬ ಘುಕ್ಕೆಂಬ ಧುಡುಹೆಂಬ ಧುಮ್ಮೆಂಬ ಘೋರೆಂಬ ಭೋರೆಂಬ ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟೆ ವೀರರಂ ತಡೆಗಡಿದ ನೆತ್ತರ ಕಡಲ್ಕಟ್ಟೆ (ಇಹರ. ದೇ. ೪೨-೨).

**ಘೋರ** (ಗು). ೧. ಹೆದರಿಕೆಯನ್ನು ಹುಟ್ಟಿಸುವ; ಉಗ್ರವಾದ; ಭಯಂಕರವಾದ. 'ಘೋರತಮ' ಪರಾ. ೨. ತೀಕ್ಷ್ಣವಾದ; ಕಠಿಣವಾದ. 'ಘೋರತಪ' ಪರಾ. ೩. ಪ್ರಚಂಡವಾದ; ಉತ್ಕಟವಾದ; ಬಲವಾದ; ಅತಿಶಯವಾದ. (ನಾ). ೪. ಉಗ್ರವಾದುದು; ಭಯಂಕರವಾದುದು: ಭಾರವಾದ ಪಾಪಕ್ಕೆ ಘೋರವಾದ ನರಕ (ಗಾದೆ). ೫. ಭಯಂಕರತೆ; ಉಗ್ರತೆ: ರಾಕ್ಷಸ ಸ್ತ್ರೀಯೋರ್ವಳಾತನಂ ಪಿಡಿದೆಳೆದು ಕಿಲಕಿಲನೆ ನಕ್ಕು ಕರ್ವೊಗದೆಡೆಯ ಪಲ್ಗಳಂ ಬೆಳ್ಪನೆಯೆ ಚಿಲಿವ ಘೋರಕೆ ಬೆದರಿ ಗದಗದಿಸಿ ನೆಗೆದೆದ್ದೆನೊಡೆಯುತಾ ದುಃಸ್ವಪ್ನಮಂ (ಶ್ರೀರಾಮಾ. ೧೦೪-೧೨೬). ೬. ಭಯಂಕರನಾದವನು; ಪ್ರಚಂಡನಾದವನು: ಈ ಘೋರನೊಡನೆ ನೀನು ಹೋರಾಡಬೇಕಾಯಿತೆಂಬುದು ತಿಳಿಯಲಿಲ್ಲ (ವಡಭಾ. ೩೯). ೭. ಕಷ್ಟ; ತೊಂದರೆ; ಹಿಂಸೆ: ನೀವು ಹೇಳಿದ ಹಾಗೆ ಶಾಸ್ತ್ರ ಬರುವುದೇ ಘೋರವು (ಮುಂಬಯಿ. ४-೧೪೭); ಸುಖದ ಘೋರ ಕೊಡೊ ಸದಾಶಿವನೆ (ಗಾಳಿಪ. ೧೨). ೮. (ಕರಾ) ಕೆಂಪು ಗುಳ್ಳೆಗಳೇಳುವ ಒಂದು ಬಗೆಯ ರೋಗ; ದಡಾರ; ಗೋಣಿತಟ್ಟು: ಅಷ್ಟೇನು ಹೆದರಬೇಕಾಗಿಲ್ಲ ಕಕ್ಕೀ . . . ಅದು ಪ್ರಾಯಶಃ 'ಮೀಸಲ್ಸ್' (ಘೋರ) ಎಂದು ಕಾಣುತ್ತದೆ (ವಾತ್ಸಲ್ಯ. ೧೦೫). ೯. ಶಿವನ ಹೆಸರುಗಳಲ್ಲೊಂದು. 'ಘೋರಮೂರ್ತಿ' ಪರಾ. ೧೦. ಒಂದು ನರಕದ ಹೆಸರು: ಮತ್ತಮಾ ನರಕಂಗಳಲ್ಲಿ ರೌರವ . . . ಉಷ್ಣಂಗಳೆಂಬೈದು ಮಂತ್ರಿ ನರಕಗಳಿಂದಾವೃತಮಾಗಿ ಘೋರವೆಂಬರಸುನರಕವಿಹುದು (ವಿವೇಕ. ೦೭೯). [ಸಂ.]

**ಘೋರಂಬಡಿಸು** (ಕ್ರಿ). ಕಷ್ಟಪಡುವಂತೆ ಮಾಡು; ಹಿಂಸಿಸು; ಪೀಡಿಸು: ಆರಾನುಂ ಕಂಡಪರೆಂದೂರಿಂ ಪೊಱಗೊಯ್ದುವೊಳಜಿದಂತಿರೆ ಪಶುವಂ ಘೋರಂಬಡಿಸಿಯೆ ಕೊಂದು (ಸಮಪ. ೧೧-೧೦೭). [ಘೋರ + ಪಡಿಸು]

**ಘೋರಕರ್ಮ** (ನಾ). ಕ್ರೂರವಾದ ಕರ್ಮ; ಕಠಿಣವಾದ ಕ್ರಿಯೆ: ಕಲಿಗಳೊಳ್ ಕಲಿ ಎಂದು ನೀನಿಂತು ನಿಲ್ವೆಯಾ? . . . ಘೋರಕರ್ಮಮನ್ ಎಸಗೆ ಪೋಗಯ್ (ಅಶ್ವತ್ಥಾ. ೮-೧೭೫). [ಘೋರ + ಕರ್ಮ]

**ಘೋರಕಾಂತಾರ** (ನಾ). ಭಯಂಕರವಾದ ಕಾಡು; ಭೀಕರವಾದ ಅರಣ್ಯ: ಘೋರಕಾಂತಾರಕೆ ಕುಠಾರದಿಂ ಕಟ್ಟಿಗೆಗಳಂ ಕೈಯಾರೆ ಕಡಿಕಡಿದೊಟ್ಟಿ ಕಟ್ಟಿ (ಬಸಪು. ೩೦-४). [ಘೋರ + ಕಾಂತಾರ]

**ಘೋರತಪ** (ನಾ). ಕಠಿಣವಾದ ತಪ; ಉಗ್ರತಪಸ್ಸು: ಘೋರತಪದಿಂದೆ ನೆರಪಿದಪಾರಂ ಸರ್ವಾರ್ಥಸಿದ್ಧಿಯಾಯುಷ್ಯಂ ತದ್ದಾರುಣ ಕೋಪಂ ಪುಟ್ಟಲ್ಕೋರಂತದುಗೆಟ್ಟು ಸತ್ತು ಭುವನಾಮರದೊಳ್ (ನೇಮಿಪು. ೧೪-೭೧); ಘೋರತಪದಲ್ಲಿ ಕೋಪಿಸಬಾರದು ತಾಂ ತಪದ ಕೇಡು ಪತಿನಿಂದೆಯುಮಂ ಸ್ಮರಿಸಬಾರದೆನುತ್ತೆ (ಗಿರಿಕ. ೯-೧೧೭); ಘೋರತಪದಚಲಿತರನೀಕ್ಷಿಸಿದ ನವನೀಶನು (ಹಚಕಾ. ೭-೩೫). [ಘೋರ + ತಪ್ಪ]

**ಘೋರತಮ** (ನಾ). ದಟ್ಟವಾದ ಕತ್ತಲೆ; ಭೀಕರವಾದ ಕಗ್ಗತ್ತಲೆ: ಘೋರತಮಮೊಡ್ಡಿಸುವೊಡಾ ತಾರಕಮಂಡಳಮನೊಡ್ಡಿ ಕುಂ (ಅಜಿಪು. ೧೦-೫೦); ಘೋರತಮಮಾದೊಡಂ ಮಾರ್ಜಾರಂ ಕಾಣ್ಬಂದದಿಂದೆ (ಪಾರ್ಶ್ವಪು. ೭-೭೭); ಮಂದಯಿಸಿದ ಘೋರತಮಂ ಮುಸುಕಿತ್ತಿಳೆಯಂ (ಹಮ್ಮಿರ. ೩-೧೪). [ಘೋರ + ತಮ]

**ಘೋರದರ್ಶನ** (ನಾ). ೧. ಉಗ್ರವಾದ ನೋಟ; ಭೀಕರ ದೃಷ್ಟಿ: ಕಂಡರು ಜಟಾಯು ಮಡುಗಟ್ಟಿನಿಂದ ಕೆನ್ನೀರ ಕೆಸರೊಳ್ ಮಿಂದ ಕಡಿದೆರಂಕೆಯ ಪರಿದ ತಿಪ್ಪುಳ ಗತಾಯುವಂ . . . ಕರುಳಿರಿದುದಾ ಘೋರದರ್ಶನಂ (ಶ್ರೀರಾಮಾ. ३೫೭-೭೭೮). ೨. ಐದು ವಿಧವಾದ ಮಾಯಾಮಂತ್ರಗಳಲ್ಲೊಂದು: ಕಾಮರೂಪ, ಘೋರದರ್ಶನ, ಸಮ್ಮೋಹನ, ವಿಶ್ವರೂಪ, ಗುಲ್ಮಸೃಷ್ಟಿಗಳೆಂಬ ಪಂಚಮಾಯಾಮಂತ್ರಂಗಳಂ (ವಿವೇಕ. ೮೧). [ಘೋರ + ದರ್ಶನ]

**ಘೋರಮೂರ್ತಿ** (ನಾ). ೧. ಘೋರವಾದ ಮೂರ್ತಿ; ಭಯಂಕರವಾದ ಸ್ವರೂಪ. ೨. ಭಯಂಕರವಾದ ಆಕಾರವುಳ್ಳ ವ್ಯಕ್ತಿ; ಸೌಮ್ಯ ಸ್ವರೂಪನಲ್ಲದ ವ್ಯಕ್ತಿ: ಬಿಡದೆ ಬೆನ್ನೊಳೆ ಬಂದು, ಓ ಘೋರಮೂರ್ತಿಗಳ್, ಕಾಡುತಮ ಇರ್ಪಿರ್ (ಅಶ್ವತ್ಥಾ. ೩೮-೬೫೩). ೩. ಶಿವನ ಒಂದು ಅವತಾರ; ಭೈರವೇಶ್ವರ: "ಘೋರಮೂರ್ತಿಯು ಖಡ್ಗಹಸ್ತಂ ದಿಗಂಬರಂ ಭೈರವನ ಪೆಸರಕ್ಕು" (ಮಂಗರಾ. ೫-೧೫). [ಘೋರ + ಮೂರ್ತಿ]

**ಘೋರವಿಷ** (ನಾ). ಪ್ರಚಂಡವಾದ ವಿಷ; ತೀಕ್ಷ್ಣವಾದ ವಿಷ: ಘೋರವಿಷಮಂ ಕುಡಿದು ಬದುಕುವರಾರೆನುತ ನಡನಡುಗಿ (ಬಸಪು. ೫೮-೫೭). [ಘೋರ + ವಿಷ]

**ಘೋರಸಂಹಿತೆ** (ನಾ). [ಶೈವ] ನಿಶ್ವಾಸಾಗಮದ ಎಂಟು ಭೇದಗಳಲ್ಲೊಂದು: ನಿಶ್ವಾಸ ಉತ್ತರ ನಿಶ್ವಾಸ . . . ಘೋರಸಂಹಿತೆ ಸುಸಾಂಖ್ಯ ಗುಹ್ಯಂಗಳೆಂದು ನಿಶ್ವಾಸಾಗಮದೆಂಟು ಭೇದಂಗಳು (ವಿವೇಕ. ೭೧). [ಘೋರ₂ + ಸಂಹಿತೆ]

**ಘೋರಾಂಧಕಾರ** (ನಾ). ೧ = ಘೋರತಮ: ಘೋರಾಂಧಕಾರವಮಿತ ದುರ್ವಾರಂ ನೆಲೆವೆರ್ಚೆ ಬಯಲೊಳಂ ಜಾರಾಸಂಚಾರಕ್ಕೆದೆಗೊಟ್ಟಿತ್ತು (ಮಲ್ಲಿಪು. ೭-೨೩). ೨. (ಆಲಂ) ಮಿತಿಮೀರಿದ ಅಜ್ಞಾನ: ಎಂತಹ ಘೋರಾಂಧಕಾರ ಮುಸುಕಿದೆ ನಿನಗೆ (ವೀರಯೋ. ೫೩). [ಘೋರ + ಅಂಧಕಾರ]

**ಘೋರಾಮ್ಲಿ** (ನಾ). ಒಂದು ಬಗೆಯ ಸಸ್ಯ; ನೆಲಬೇವು: "ಘೋರಾಮ್ಲಿ [ಪಾಠಾಂ. ಘೋರಾಂಗಿ, ಘೋರಾಮ್ರಿ]ಹುಳುಕುಡಿ ದ್ರುವಣಿ ಪುಸ್ತಕವಲ್ಲಿ ಗೌರಿ ಗೊಟ್ಟಕ್ಕಿ ಪಂನ್ನಗಿಯೆನೆ ನೆಲಬೇವು" (ಮಂಗರಾ. ४४-४೫). [?]

**ಘೋರಾವಟ** (ನಾ). ಭಯಂಕರವಾದ ಕುಳಿ,–ಗರ್ತ: ಸಂಭ್ರಮಿಸುತೆ ಘೋರಾವಟದೊಳ್ ಗಮಿಸುವೆ ನಿನ್ನಯ ವಿಲೋಲ ಭಾವಮಿದೇನೇ (ನಿವೇದ. ೨೩-೭). [ಘೋರ + ಅವಟ]

**ಘೋರಿಸು** (ಕ್ರಿ). ಕಷ್ಟಪಡಿಸು; ಸಂಕಟಕ್ಕೆ ಗುರಿಮಾಡಂ; ನೋಯಿಸು; ಹಿಂಸಿಸು: ವಿಕ್ರಮದಲ್ಲಿ ಜಲಕ್ರೀಡೆ ಕರಿಯಾಡೆ ಆಕ್ರಮದಿಂದ ಬಂದು ನಕ್ರ ಘೋರಿಸುತಿರೆ (ವೇಙ್ಕಟದೀ. ೨೭-೫); ತೀರಿತೇ ನಿನ್ನಾಟ ಸಭೆಯೊಳಗೆ ಮುನ್ನೆಮ್ಮ ಘೋರಿಸಿದ ಬಗೆ ಹೇಗೆ (ತುರಂಗ. ೬೬-೩೨); ಸರ್ವಾಂಗವಂ ತೂರಿ ಗರಿ ಮುಳುಗಿ ಹಾರಿಸುತ ಘೋರಿಸುತ ದಾನವೆಯನೂನಗಯ್ಯೆ (ಜಿನಮು. ३४-२०); ಮೀರಿದ ಧನವೆಲ್ಲಿ ನಿನಗೆ ಕೊಡಲ್ಕೆ ವಿಪ್ರ ಘೋರಿಸದಿರು ಯೆನ್ನ (ಹಮಚ. ೮೭). [ಘೋರ + – ಇಸು₃]

**ಘೋಲ** (ನಾ). ನೀರುಹಾಕದೆ ಕಡೆದ ಮಜ್ಜಿಗೆ. [ಸಂ.]

**ಘೋಷ** (ನಾ). ೧. ಗಟ್ಟಿಯಾದ ಶಬ್ದ. ೨. ಸಾರುವಿಕೆ; ಕೂಗಿ ಹೇಳುವಿಕೆ: ಘೋಷಮೊಯ್ಯನೆ ನಿಂದುದಾಲಿಸಿರೆ (ಶ್ರೀರಾಮಾ. ೦೭४-೫४೮); 'ವಂದೇಮಾತರಂ' ಘೋಷ ಮುಗಿಲು ಮುಟ್ಟಿತು (ಆತ್ಮಾರ್ಪ. ३). ३. ಗೊಲ್ಲರ ಹಳ್ಳಿ; ಗೋಹಟ್ಟಿ: "ಸಂತತ ಹಟ್ಟಿಕಾಱಿಹ ಹಳ್ಳಿ ಘೋಷಂ" (ಮಂಗರಾ. ೫೫-೧೦); "ಘೋಷ ತುಱುವಳ್ಳಿಯುಂ ತಾಂ" (ಕವಿಕಂ. ೮೫); ಪೊಕ್ಕನಕ್ರೂರನಂದಾಪೊಟ್ಟುತ್ಸವದಿಂದೆ ವತ್ಸಕುಲಹಂಭಾಘೋಷಮಂ ಘೋಷಮಂ (ಜಗವಿ. ೫-೭೭). ೧, ೩: ಮತ್ತಮಾ ಜನಪದಂ . . . ಅಂತಪುರದಂತೆ ಮಹಾಮಹಿಷೀಮಂಡಿತಮುಂ ಗೋರಾಜಿತಾಂತಸ್ಥಿತಿ ಘೋಷಾಂಚಿತಮುಂ . . . ಎನಿಸಿ (ರಾಜಶೇ. ३ ೨೮ ವ). ४. ಹಳದಿ ಬಣ್ಣದ ಹೂವನ್ನು ಬಿಡುವ ಒಂದು ಬಗೆಯ ಬಳ್ಳಿ; ಕೋಶಾತಕಿ: (ಸ). ೫. [ವ್ಯಾಕ] ಮೃದು ವ್ಯಂಜನ ವರ್ಣ. ಈ ಪ್ರತಿವರ್ಗದ ३, ४, ೫ನೆಯ ಅಕ್ಷರಗಳು, ಯ ರ ಲ ವರ್ಣಗಳು ಮತ್ತು ಹಕಾರ: ಈ ವ್ಯಂಜನಗಳಲ್ಲಿ ವರ್ಗಪ್ರಥಮ ವರ್ಗದ್ವಿತೀಯ ಶ ಷ ಸ ಇವುಗಳಿಗೆ ಅಘೋಷಗಳೆಂದು ಹೆಸರು; ಕಡಮೆ ವರ್ಣಗಳಿಗೆ ಘೋಷಗಳೆಂದು ಹೆಸರು (ಹೊನುಗ. ३).

೬. [ವ್ಯಾಕ] ವರ್ಣೋಚ್ಚಾರಣೆಯ ಹನ್ನೊಂದು ವಿಧವಾದ ಬಾಹ್ಯ ಪ್ರಯತ್ನಗಳಲ್ಲೊಂದು. 'ಘೋಷವತ್ತು' ಪರಾ. ೭. [ಜೈನ] ಪಾರಿವ್ರಾಜಕ ಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರ ಪದಗಳಲ್ಲಿ ಒಂದು: ಘೋಷಮೆಂಬುದು ಪರಮ ದುಂದುಭಿ ಘೋಷಣಾಲಂಕೃತನಪ್ಪ ಗುಣನಿಧಿಯನರ್ಹದ್ದೇವನಂ ಪೊರ್ದಿ ವಿವಿಧಾನಕ ಸಂಗೀತ ಘೋಷಣಮಂ ತೊಱೆದು ತಪದೊಳೆಸಗಿದೊಡೆ ದಿವ್ಯವಿಜಯ ಪರಮದುಂದುಭಿ ಘೋಷ ಲಬ್ಧಿಯಕ್ಕುಂ (ಚಾವುಂಪು. ೨೪೯). [ಸಂ.]

**ಘೋಷಕ** (ನಾ). ಕೂಗಿ ಹೇಳುವವನು; ಸಾರುವವನು; ಡಂಗುರ ಹೊಡೆಯುವವನು. [ಸಂ.]

**ಘೋಷಣ** (ನಾ). ೧. ಕೂಗುವಿಕೆ; ಸಾರುವಿಕೆ; ಡಂಗುರ: "ಗೋಸನೆ ಘೋಷಣಮಕ್ಕು" (ಕವಿಕಂ. ೨೬೩). ೨. ಒಂದು ಬಗೆಯ ಚರ್ಮವಾದ್ಯ; ಹುಡುಕ್ಕ: ಭದ್ರವೆಂಬ ಕರಾಡಿ, ಶಾಸಕವೆಂಬ ನಗಾರಿ, ಭೀಷಣವೆಂಬ ತ್ರಾಸ, ಘೋಷಣವೆಂಬ ಹುಡುಕ್ಕಾ ಡಿಂಡಿಮವೆಂಬ ಡಿಕ್ಕಿ . . . ದುಂದುಭಿಯೆಂಬ ಘುಟ ಇತ್ತೆಱದ ದಶವಾದ್ಯಂಗಳಂ ಬಾರಿಸಲು (ವಿವೇಕ. ೨೩೭). [ಸಂ.]

**ಘೋಷಣಿಸು** (ಕ್ರಿ). ಶಬ್ದಮಾಡು; ಕೂಗಿ ಹೇಳು; ಸಾರು: ನಾರಿಯರ್ ನಿಖಿಲೋಪಚಾರವ ಮಾಡಿ ಕೈವಾರಿಸಿ ತೊಡೆದಟ್ಟಲೊಡನೆ ಪಾರಿಯ ವಾದ್ಯ ಘೋಷಣಿಸಲ್ಕೆ ದಿವ್ಯವಿಭೇರಿಯ ಹೊಡೆದರರೂರೊಳಗೆ (ವೀರೇಹತ. ೧೮-೧೦೦). [ಘೋಷಣ + - ಇಸು₃]

**ಘೋಷಣೆ**(ನಾ). ೧.=ಘೋಷಣ ೧: ಕ್ರಾಂತಿಗೆ ಜಯವಾಗಲಿ . . . ಇದೇ ಅವರ ಮೊದಲ ಘೋಷಣೆ (ಅಹ್ಮಾರ್ಪ. ೧೨೪). ೨. ಆಜ್ಞೆಮಾಡುವ ಅಧಿಕಾರ: ಚತುರಂಗ ಸೇನೆಯಂ ಸಕಲ ಭಂಡಾರವಂ . . . ಜಗದಾಣೆ ಘೋಷಣೆಯುಮಂ ಕಟಕವನು ಸಪ್ತದ್ವೀಪಂಗಳ ಆನಂದದಿಂದಿತ್ತಂ (ಹಜಕಾ. ೮-೪೭). ೩. (ಶಾಸನವನ್ನು) ಜಾರಿಗೆ ತರುವಿಕೆ; ಪ್ರಸಾರ ಮಾಡುವಿಕೆ (Promulgation. ಪತ್ರಿನಿ. ೬೩). ೪. ಚುನಾವಣೆಗಾಗಿ ಮಾಡುವ ಪ್ರಚಾರಸೂತ್ರ: ಅವರು ಘೋಷಣೆಗಳನ್ನು ಪ್ರಕಟಿಸಿದರು (ಪುನರು. ೨೪೦). [ಸಂ. ಘೋಷಣಾ]

**ಘೋಷಣೆವಡೆ** (ಕ್ರಿ). ಪ್ರಸಿದ್ಧಿಯನ್ನು ಪಡೆ; ಕೀರ್ತಿಯನ್ನು ಹೊಂದು: ತ್ರಿಣಯನಶೌರ್ಯಂ ತಾಂ ಘೋಷಣೆವಡೆವುದು ಲೋಕಲಯದೊಳಿನ್ನಂ ಪೋಲ್ತಿರ್ದನಿತಱೊಳೆನೆ ಸಾಕ್ಷಾತ್ಕಾಲನೆನಾಂ ಮತ್ತನಗೆ ಮರ್ತ್ಯ ನೀನಿದಿರಾಂಪಾ (ಜಗವಿ. ೭-೨೮). [ಘೋಷಣೆ + ಪಡೆ₁]

**ಘೋಷಬಾರೆ** 'ಗೋಷ್ವಾರೆ' ನೋ.

**ಘೋಷಯಾತ್ರೆ** (ನಾ). (ರಾಜ ಅಥವಾ ಅವನ ಅಧಿಕಾರಿ) ಗೊಲ್ಲರ ಹಳ್ಳಿಗೆ ಮಾಡುವ ಪ್ರಯಾಣ; P ಮಹಾಭಾರತದಲ್ಲಿ ಬರುವ ಒಂದು ಪ್ರಸಂಗ: ದುರ್ಯೋಧನನು . . . ಘೋಷಯಾತ್ರೆಯ ನೆಪವಾಗಿ ತನ್ನ ಪರಿವಾರದೊಡನೆ ದ್ವೈತವನದಲ್ಲಿ ಬಂದು ನೆಲಸುತ್ತಾನೆ (ಭಾರದ. ೧೦೪). [ಘೋಷ + ಯಾತ್ರೆ]

**ಘೋಷವತ್ತು** (ನಾ). [ವ್ಯಾಕ] ಉಚ್ಚಾರಣೆಯಲ್ಲಿ 'ಘೋಷ' ವೆಂಬ ಬಾಹ್ಯ ಪ್ರಯತ್ನವನ್ನುಳ್ಳ ವರ್ಣ; ಘೋಷವರ್ಣ: ದಿಶಾದೀನಾಂಕಃ- ದಿಶಾದಿಗಳ ಶಕಾರಕ್ಕೆ ಕಕಾರಮಕ್ಕುಂ, ಅಘೋಷವುಂ, ಘೋಷವತ್ತುಂ ಪರಮಾದೊಡೆ (ಶಾಶಕ್ಕ. ೬೯). [ಸಂ. ಘೋಷವತ್]

**ಘೋಷವರ್ಣ** (ನಾ).=ಘೋಷ ೫: ಪೂರ್ವದ್ರಾವಿಡ ಭಾಷೆಯಲ್ಲಿನ ಪದಗಳ ಆದಿಯಲ್ಲಿ-ಘೋಷವರ್ಣಗಳಿದ್ದುವೇ ಅಥವಾ ಅಘೋಷವರ್ಣಗಳಿದ್ದುವೇ ಎಂಬುದು ಬಹು ದೊಡ್ಡ ಸಮಸ್ಯೆ (ದ್ರಾವಿವಿ. ೨೩೪). [ಘೋಷ + ವರ್ಣ]

**ಘೋಷಸ್ಪರ್ಶ** (ನಾ). [ವ್ಯಾಕ]ವರ್ಗೀಯವಾದ ಘೋಷವರ್ಣ; ಪ್ರತಿ ವರ್ಗದ ಮೂರು, ನಾಲ್ಕು ಮತ್ತು ಐದನೆಯ ಅಕ್ಷರಗಳು: ಘೋಷ ಸ್ಪರ್ಶಗಳೂ ಮೂಲದ್ರಾವಿಡದ ಆಸ್ತಿಯಲ್ಲವೆಂಬುದನ್ನು ಸಕಾರಣವಾಗಿ ತಿಳಿಸಿದೆ (ದ್ರಾವಿವಿ. VII, ಮುನ್ನುಡಿ). [ಘೋಷ + ಸ್ಪರ್ಶ]

**ಘೋಷಾ** 'ಗೋಷಾ' ನೋ.

**ಘೋಷಾಕರ** (ನಾ). ಗೋಪಾಲಕರು ಪದಾರ್ಥಗಳನ್ನಿಡುವ ಕಣಜ,- ಕೋಠಿ; ಹುಲ್ಲು, ತೌಡು ಮೊದಲಾದುವುಗಳನ್ನು ದಾಸ್ತಾನು ಮಾಡುವ ಮಳಿಗೆ: ಘೋಷಾಕರ ಸಂಗ್ರಹಾಕರ ಗೋವ್ರಜಂಗಳುಮಂ . . . ಇಂತು ಮಾಡಿ (ಆದಿಪು. ೮-೬೩ ವ). [ಘೋಷ + ಆಕರ₃]

**ಘೋಷಾಪದ್ಧತಿ** 'ಗೋಷಾಪದ್ಧತಿ' ನೋ.

**ಘೋಷಿ** (ಗು). ೧. ಶಬ್ದಮಾಡುವ; ಕೂಗುವ; ಸಾರುವ. (ನಾ). ೨. [ವ್ಯಾಕ] ಮೃದು ವ್ಯಂಜನಾಕ್ಷರ; ಘೋಷಾಕ್ಷರ. [ಸಂ. ಘೋಷಿನ್]

**ಘೋಷಿತ** (ಗು). ೧. ಕೂಗಿ ಹೇಳಿದ; ಸಾರಿದ; ಪ್ರಕಟಿಸಿದ. (ನಾ). ೨. ಶಬ್ದ; ಧ್ವನಿ. ೩. ಕೂಗಾಟ; ಗದ್ದಲ. [ಸಂ.]

**ಘೋಷಿಸು** (ಕ್ರಿ). ಗಟ್ಟಿಯಾಗಿ ಕೂಗು; ಸಾರು; ಡಂಗುರಹೊಡೆ: ಧರ್ಮಯುದ್ಧಮನುಭಯಬಲಂಗಳೊಳಮಾನಂದಭೇರಿಯಂ ಪೊಯ್ಸಿ ಘೋಷಿಸಲ್ವೇಟ್ಟು (ಆದಿಪು. ೧೪-೧೦೪ ವ); ಸುರಮುನಿಗಳುಱೆ ಘೋಷಿಸಿದರು (ತೊರರಾ. ೧-೭-೫೭). ೨. (ಶಾಸನವನ್ನು, ಕಾನೂನನ್ನು) ಜಾರಿಗೆ ತರು; (ಸಂಘ, ಸಂಸ್ಥೆ ಮೊದಲಾದವುಗಳ ಮತ, ಸಿದ್ಧಾಂತ ಮೊದಲಾದುವನ್ನು) ಪ್ರಸಾರ ಮಾಡು: ಉಭಯಬಲಮುಮುಭಯ ಘೋಷಣೆಯಂ ಘೋಷಿಸಿ ಕಾಳಗಮನುಱೆದಿರ್ಪುದುಂ (ಪಂರಾಮಾ. ೧೪-೮೩ ವ); ಭಕ್ತರಿದ್ದಲ್ಲಿ ದೇವರು ಎಂದು ಘೋಷಿಸುವುದರಲ್ಲಿಯೂ ಜಗತ್ತಿನ ಸಂತವರ್ಗದ ಸಂದೇಶದಲ್ಲಿ ಏಕತೆಯಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು (ಜಗದಾ. ೪೦). [ಘೋಷಣ + - ಇಸು₃]

**ಘೋಸ** 'ಗೋಸ₁' ನೋ.

**ಘೋಸಣೆ** 'ಗೋಸಣೆ' ನೋ.

**ಘೋಸನೆ** 'ಗೋಸಣೆ' ನೋ.

**ಘೋಳ್** 'ಗೋಟ್₃' ನೋ.

**ಘೋಳ** 'ಗೋಟ' ನೋ.

**ಘೋಳಾಘೋಳಿ** (ನಾ). ಗದ್ದಲ; ಗಲಾಟೆ; ಲಗ್ಗೆ: ತೂಳುವಱೆಗಳ ಭಟರ ಘೋಳಾಘೋಳಿ ದೆಸೆಗಳ ಬಗಿಯೆ (ಕುವ್ಯಾಭೀ. ೮-೧); ಮೂಲಕಾಸುರ ಬಂದು ಲಂಕೆಯ ಮೇಲೆ ಮುತ್ತಿಗೆಯಿಕ್ಕಿ ಘೋಳಾಘೋಳಿಯಲಿ ಹೊಯ್ದಾಡಿ ಮುರಿದೋಡಿದ ವಿಭೀಷಣನು (ಮೂಲರಾ. ೧-೧). [←ಮರಾ ಘೋಳ]

**ಘೋಳಾಯಿಲ** 'ಗೋಟಾಯಿಲ' ನೋ.

**ಘೋಳಾಯಿಲದಳ** (ನಾ). ಕುದುರೆ ಸವಾರರ ದಳ; ಅಶ್ವದಳ: ಆರಮನೆಯ ಘೋಳಾಯಿಲದಳದ ರಾವುತನಾದ ಪುಟ್ಟಗಿರಿಯೆಂಬವನು ಒಂದು ಹೊಸ ನಾಣ್ಯವನ್ನು ಹಿಡಿದು ಹಿಗ್ಗುತ್ತ ಬರುವವನು (ಸಂಸಕ. ೧೩೨). [ಘೋಳಾಯಿಲ (<ಗೋಟಾಯಿಲ) + ದಳ₂ (=ದಲ)]

**ಘೋಳಾಯ್ತು** 'ಘೋಟಾಯ್ತು' ನೋ.

**ಘೋಳಾಯ್ಲ** 'ಗೋಟಾಯಿಲ' ನೋ.

**ಘೋಳಿಗೆ** 'ಗೋಟಿಗೆ' ನೋ.

**ಘೋಳಿಡಿಸು** 'ಗೋಟಿಡಿಸು' ನೋ.

**ಘೋಳಿಡು** 'ಗೋಟಿಡು' ನೋ.

**ಘೋಳಿಸು, ಗೋಳಿಸು₂** (ಕ್ರಿ). ಚೆನ್ನಾಗಿ ಕೂಡಿಕೊಳ್ಳುವಂತೆ ಕಲಕು; ಕದಡು; ಬೆರಸು: ಘೋಳಿಸಿದ ಕರ್ಪೂರ ಕಸ್ತೂರಿ ವೀಳೆಯವ ಕೊಂಡೆದ್ದು ಸಮರಾಭೀಳ ಗದೆಯನು ತಿರುಹಿದನು . . . ಭೂಪ (ಕುವ್ಯಾ.ಗ. ೫-೪೨). **ಗೋಳಿಸು₂:** ಕಡಲೆಹಿಟ್ಟು, ತುಪ್ಪ, ಸಕ್ಕರೆ ಬೆರೆಯುವಂತೆ ಗೋಳಿಸಬೇಕು (ರೂ೨). [ ?. /ಮರಾ. ಘೋಳಣೇಂ ]

**ಘೋಳ್ಗುಟ್ಟಿಸು** 'ಗೋಳ್ಗುಟ್ಟಿಸು' ನೋ.

**ಘೋಟ್** 'ಗೋಟ್₃' ನೋ.

**ಘೋಟ** 'ಗೋಟ' ನೋ.

**ಘೋಟಯಿಲ** 'ಗೋಟಾಯಿಲ' ನೋ.

**ಘೋಟಾಯಿಲ** 'ಗೋಟಾಯಿಲ' ನೋ.

**ಘೋಟಾಯ್ತ, ಘೋಳಾಯ್ತ** (ನಾ). ಕುದುರೆ ಸವಾರ; ಗೋಳಾಯಿಲ: ಇರದೊಗೆದುದಲ್ಲಿ ಸೂಟಾಯ್ತರ ಕಳಕಳವಚ್ಚುಳಾಯ್ತರುಲಿಪುಂ ನಾಗಾಯ್ತರ ಗಳಘರ್ಜನೆ ಘೋಟಾಯ್ತರ ಬಹಳಧ್ವಾನವಮಾ ಸಭಾಭ್ಯಂತರದೊಳ್ (ಜಗವಿ. ೧೧-೭೪); ಅಂತು ಘೋಟಾಯ್ತ[ಪಾಠಾಂ. ಯಿಲ, ಯ್ಲ]ರ ಕಾಳೆಗಮುಗುರ್ವವಡೆಯೆ (ಪಾರ್ಶ್ವಪು. ೩-೧೨೦ ವ). **ಘೋಳಾಯ್ತ:** ಗಿರಿಧರನ ತುರಗದಳವೊಡಹಾಯ್ದು ಪೊಕ್ಕು ಸಂಗರರಂಗದೊಳು ಮುಳಿದು ಘೋ[ಪಾಠಾಂ. ಹೋ]ಳಾಯ್ತರಾರ್ಭಿನಿಂದ (ಸಾಳ್ವಭಾ. ೨೬-೨೯).
[ ಘೋಟ (<ಗೋಟ) + - ಆಯ್ತ ]

**ಘೋಟಾಯ್ಲ** 'ಗೋಟಾಯಿಲ' ನೋ.

**ಘೋಟಿಗೆ** 'ಗೋಟಿಗೆ' ನೋ.

**ಘೋಟಿಡು** 'ಗೋಟಿಡು' ನೋ.

**ಘ್ರಾಣ** (ನಾ). ೧. ಮೂಗು; ನಾಸಿಕ: ಘ್ರಾಣಂ ಮಂಜುಳಮುಖಕಲ್ಯಾಣಂ ಜಗದೇಕಜೀವನೆನಿಸುವ ಪವನಪ್ರಾಣಂ ಸರ್ವಾವಯವತ್ರಾಣಂ ಪರಿಮಳಪರೀಕ್ಷೆಗಂತದು ತಾಣಂ (ಗಿರಿಕ. ೧೧-೫೦); ಕಂಡಱಿವವ್ಯೆಸಲೇ ನಯನೇಂದ್ರಿಯಂ ಘ್ರಾಣ ಕೊಂಡಱಿವವ್ಯೆಸಲೆ ವಾಸನೆಯ . . . ದೂರದಿಂದ (ಹಡಕಾ. ೭-೨೦); ಚಕ್ಷುಸ್ಸು, ಶ್ರೋತ್ರ, ಘ್ರಾಣ, ರಸನ, ಮತ್ತು ತ್ವಕ್ ಎಂಬುವು ಜ್ಞಾನೇಂದ್ರಿಯಗಳು (ಭಾತತ್ತ್ವ. ೭೦). ೨. ಮೂಸುವಿಕೆ; ವಾಸನೆ ನೋಡುವಿಕೆ. ೩. ವಾಸನೆ; ಕಂಪು. [ ಸಂ. ]

**ಘ್ರಾಣಗಹ್ವರ** (ನಾ). ಮೂಗಿನ ರಂಧ್ರ, -ಹೊಳ್ಳೆ: ಖುರದಿಂ ಬಾರಿಸುತುಂ ಧರಾವಳಯಮಂ . . . ಘ್ರಾಣಗಹ್ವರದಿಂ ಘೋರಸಮೀರಣಂ ಪಸರಿಸುತ್ತಿರ್ದತ್ತುದಾತ್ತಂ ಹಯಂ (ಮಲ್ಲಿಪು. ೮-೧೫೫).
[ಘ್ರಾಣ + ಗಹ್ವರ]

**ಘ್ರಾಣತರ್ಪಣ** (ಗು). ೧. ಮೂಗಿಗೆ ತೃಪ್ತಿಯನ್ನುಂಟುಮಾಡುವ. (ನಾ). ೨. (ಅತ್ತರು, ಪನ್ನೀರು ಮೊದಲಾದ) ಪರಿಮಳದ ದ್ರವ್ಯ: "ಸುರಭಿಃ, ಘ್ರಾಣತರ್ಪಣಃ, ಇಷ್ಟಗಂಧಃ, ಸುಗಂಧಿಃ-೪ ಪರಿಮಳ ದ್ರವ್ಯದ ಹೆಸರುಗಳು" (ಸಿದ್ಧಾಂತಿ. ೪೪). ೩. ಪರಿಮಳ; ಸುವಾಸನೆ; ಸೌರಭ.
[ ಘ್ರಾಣ + ತರ್ಪಣ ]

**ಘ್ರಾಣಿ** (ನಾ). ಒಂದು ಬಗೆಯ ಪಕ್ಷಿ; ಮೂಗಿ: "ಘ್ರಾ[ಪಾಠಾಂ. ಘ್ರ, ಘ್ರೂ]ಣಿಯೆನೆ ಮೂಗಿ" (ಮಂಗರಾ. ೫೨-೯). [ ? ]

**ಘ್ರಾಣಿಸು** (ಕ್ರಿ). ವಾಸನೆ ನೋಡು; ಮೂಸು: ಪುಷ್ಪಪರಿಮಳವು . . . ಘ್ರಾಣಿಸುವರಿಗೆ ಶಿರೋವೇದನೆಯನ್ನುಂಟುಮಾಡುತ (ಸೌಗಂಧಿ. ೩೦೩-೧); ಘ್ರಾಣಿಸೈ ಸಂತಸ ವಸಂತವೇ (ವಿಜಾಮಂ. ೬೯).
[ಘ್ರಾಣ + - ಇಸು₃]

**ಘ್ರಾಣೇಯ** (ಗು). ಮೂಸಿ ನೋಡಲು ಯೋಗ್ಯವಾದ; ಆಘ್ರಾಣಿಸಲು ತಕ್ಕುದಾದ: ಸಂದರ್ಶನೀಯಂ ದಳತ್ಪುಷ್ಪತತಿಘ್ರಾಣೇಯಂ . . . ಸತತಂ ಪೌರರ್ಗೆ ಪಂಚೇಂದ್ರಿಯಸುಖದೊದವಂ ನಂದನಂ ಮಾಟ್ಪುದೆಂದುಂ (ಚಂದ್ರಪು. ೧.೧೧೨). [ ಸಂ. ]

**ಘ್ರಾಣೇಂದ್ರಿಯ** (ನಾ). ವಾಸನೆಯನ್ನು ನೋಡತಕ್ಕ ಇಂದ್ರಿಯ; ಮೂಗು: ಘ್ರಾಣೇಂದ್ರಿಯ ವಿಷಯದಿಂದೆ ಭ್ರಮರ ಕೆಡುವುದು ಸಂಪಿಗೆಯ ಪುಷ್ಪದಲ್ಲಿ (ಅಖಂಡೇ. ೭-೪). [ ಘ್ರಾಣ + ಇಂದ್ರಿಯ ]

**ಘ್ರಾತ** (ಗು). ಮೂಸಿದ; "ಮೂಸಿ ನೋಡಲ್ಪಟ್ಟ" (ಅಮರ. ಟೀಕ).
[ ಸಂ. ]

**ಘ್ರಾತವ್ಯ**(ಗು).=ಘ್ರಾಣೇಯ: ಕ್ರಿಯಾಶಕ್ತಿಯುಕ್ತಾಚಾರ ಪರಿಲಸಿತ ಲಿಂಗದ ಸುನಾಸಿಕದ ಮುಖದೊಳು ಸುಚಿತ್ತವೆನಿಸುವ ಹಸ್ತದಿಂ ಸ್ಥಿರತೆಯಿಂ ಘ್ರಾತವ್ಯವಾದ ಸದ್ವಸ್ತುವ ಹರುಷದಿಂದಿತ್ತು (ಲಶಿಚಿಂ. ೫೩-೫೭).
[ ಸಂ. ]

*

# ಙ

**ಙ** (ನಾ). ೧. ಕನ್ನಡ ವರ್ಣಮಾಲೆಯ ಇಪ್ಪತ್ತೈದನೆಯ ಅಕ್ಷರ; ಕವರ್ಗದಲ್ಲಿ ಐದನೆಯದಾದ ಅನುನಾಸಿಕಾಕ್ಷರ; ಙಕಾರ: ವರ್ಗಂಗಳೈದನೆಯ ಅಕ್ಕರಂಗಳನುನಾಸಿಕಂಗಳಾವುವೆಂದೊಡೆ — ಙ ಞ ಣ ನ ಮಂಗಳ್ (ಶಮದ. ಸ. ೨೫ ವೃತ್ತಿ). ೨. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ: "ಙಣಮಶಮದ್ಯೆದು" (ಮಂಗರಾ. ೧೧೪-೧೦).

**ಙವನ** (ನಾ). ಶ್ರೇಷ್ಠಧ್ವನಿ; ಮಧುರವಾದ ಕಂಠ: ಙವನಂ ಭಾವಳಯಂ ಸಿಂಹವಿಷ್ಟರಂ ಚಮರಮುಮರತೂರ್ಯಮಶೋಕಂ ಧವಳಚ್ಛತ್ರಂ ಸುರಪುಷ್ಪ ಜಿನನಾಥನೆ ನಿನ್ನೊಳೆಸೆವುವು ನಿಚ್ಚಂ (ಜಿನಾಲೆ. ೬). [ ಸಂ. ]

*

**ಚ** (ನಾ). ೧. ಕನ್ನಡ ವರ್ಣಮಾಲೆಯ ಇಪ್ಪತ್ತಾರನೆಯ ಅಕ್ಷರ. ೨. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ : "ಚಷಮಾಟು" (ಮಂಗರಾ. ೧೦೪-೧೧).

**ಚಉಕ** 'ಚೌಕ$_2$' ನೋ.

**ಚಉಗ್ರಾಮ** (ನಾ). ನಾಲ್ಕು ಹಳ್ಳಿಗಳ ಕೂಟ,–ಸಮೂಹ: ಚಉಗ್ರಾಮದವರ ಕರಿಸಿಕೊಂಡು (ಮೈ ಆ ರಿ. ೧೯೨೯, ೬೧–೧೪ ; 1817) ; ನಮ್ಮ ಚಉಗ್ರಾಮದ ಗಉಡಗಳು (ಎಕ. XII, ಶಿರಾ. ೯೩-೧೫ ; ?). 'ಚೌಗಾವೆ' ಪರಾ. [ < ಸಂ. ಚತುರ್ಗ್ರಾಮ ]

**ಚಉಟ** 'ಚೌಟ' ನೋ.

**ಚಉಟ್ಟ** 'ಚೌಟ' ನೋ.

**ಚಉರ** 'ಚಪರ' ನೋ.

**ಚಊರ** (ನಾ). ಒಬ್ಬಾತನ ಹೆಸರು : ಸಿರಿಯೂರರಾ ಮಗನು ಮಾರಿಸಿಙ್ಗ ಇನ್ಬತೂರ ತುಱುಗೊಳೆ ಸತನ್ ಚಊರ ಆಳೆ ಸತ (ಎಕ. IX, ಬೆಂಗಳೂ. ೩೮-೫ ; ಸು. 1000). [ ? ]

**ಚಂ** 'ಚೆಂ$_1$' ನೋ.

**ಚಂಕತಟ** (?) (ನಾ). ಯುದ್ಧದಲ್ಲಿ ಎದುರಾಳಿಯ ಏಟನ್ನು ತಡೆಯುವ ಒಂದು ಕ್ರಮ ; ಅಡ್ಡಹೊಡೆತಗಳಲ್ಲಿ ಒಂದು ಬಗೆ (?) : ಮೊನೆಯೊಳು ಕಡುಗ ಕಾರವಟ್ಟಂ ಚಂಕ[ಪಾಠಾಂ. ಚಕಟ]ತಟವದ್ದಳಂ ಪೋರಗಂಗಳೆಂಬಡ್ಡವೊಯಿಲಿಂ ನಿವಾರಿಸುತಿರ್ದರು (ಸೋಮಚ. ೫-೧೫). [ ? ]

**ಚಂಕ್ರಮಣ** (ನಾ). ತಿರುಗಾಟ ; ಸಂಚಾರ ; ಸುತ್ತಾಟ : ಸುವಿಧಿಯೆಂಬ ಚಂ[ಪಾಠಾಂ. ಸಂ]ಕ್ರಮಣಯಷ್ಟಿಯುಂ ಗಿರಿಕೂಟಮೆಂಬ ದಿಗವಲೋಕನ ಗೃಹಮುಂ (ಶಾ ಪು ಂ ಪು. ೭೨-೩) ; ಚಕಿತಚಂಕ್ರಮಣಸ್ಖಲಿತಪದಪಲ್ಲವ ಲಾವಣ್ಯರಾಗಾರ್ಚಿತಪದಪಥದತ್ತದೃಷ್ಟಿಯುಂ (ಲೀಲಾವ. ೧೪–೪೯ ವ).
[ ಸಂ. ]

**ಚಂಗ$_1$** (ಗು). ೧. ಚುರುಕಾದ; ಸೂಕ್ಷ್ಮಬುದ್ಧಿಯುಳ್ಳ. ೨. ಚೆಲುವಾದ ; ಸುಂದರವಾದ. 'ಚಂಗಿ' ಪರಾ. [ ಸಂ. ]

**ಚಂಗ$_2$** (ನಾ). ಗಂಜೀಫಿನ ಆಟದ ಎಲೆಗಳಲ್ಲೊಂದು; ಗಂಜೀಫಿನ ಎಂಟು ಬಣ್ಣಗಳಲ್ಲಿ ಮೊದಲನೆಯ ಬಣ್ಣ : (+). ℙ ಗಂಜೀಫಿನ ಎಂಟು ಎಲೆಗಳು–ಚಂಗ, ಕಾಂಚನ, ವರಾತ, ಕುಮಾಶ, ತಾಜ, ಗುಲಾಮ, ರೂಪ ಮತ್ತು ಶಮಶೇರ. [ ←ಪಾರ. ಹಿಂ. ಚಂಗ್]

**ಚಂಗ$_3$** (ನಾ). ಒಂದು ಬಗೆಯ ಸಸ್ಯ : ಚಂಗ, ಲೋಧ್ರ (ಮ್ಯಾಜಿಗಿ. ೭೩-೧೪೯೧).
[ ? ]

**ಚಂಗಣಗಿಲೆ** 'ಚೆಂಗಣಗಿಲೆ' ನೋ.

**ಚಂಗಣಿಗಿಲ್** 'ಚೆಂಗಣಗಿಲೆ' ನೋ.

**ಚಂಗಣಿಗಿಲು** 'ಚೆಂಗಣಗಿಲೆ' ನೋ.

**ಚಂಗದಿರ್** 'ಚೆಂಗದಿರ್' ನೋ.

**ಚಂಗದಿರ** 'ಚೆಂಗದಿರ' ನೋ.

**ಚಂಗನೆ** 'ಚೆಂಗನೆ' ನೋ.

**ಚಂಗಲ** (ನಾ). ಸುವಾಸನೆಯುಳ್ಳ ಒಂದು ಬಗೆಯ ಕೆಂಬಣ್ಣದ ಹುಲ್ಲು : (+). [ ←ತೆಲು. ಚೆಂಗಲಿ ]

**ಚಂಗಲಕೋಷ್ಟ** 'ಚಂಗಲಕೋಷ್ಠ' ನೋ.

**ಚಂಗಲಕೋಷ್ಠ, ಚಂಗಲಕೋಷ್ಟ** (ನಾ). ಒಂದು ಬಗೆಯ ಸಸ್ಯ : "ವ್ಯಾಧಿಃ, ಕುಷ್ಠಂ, ಪಾರಿಭಾವ್ಯಂ, ವಾಪ್ಯಂ, ಪಾಕಲಂ, ಉತ್ಪಲಂ–೬ ಚಂಗಲಕೋಷ್ಠಂ" (ಸಿದ್ಧಾಂತಿ. ೧೨೩): ಗಂಧಿಕತಗರ, ನೈದಿಲಗಡ್ಡೆ, ಯಷ್ಟಿಮಧುಕ, ಚಂಗಲಕೋಷ್ಠ . . . ಹಸುವಿನ ಹಾಲಲ್ಲಿ ಅರೆದು ಕುಡಿಯ ಕೊಡಿಸಲು ಪಿತ್ತದೋಷಯುಕ್ತವಾದ ಯೋನಿ ಶುದ್ಧವಹುದು (ವೈದ್ಯಸಾ. II, ೪೧). **ಚಂಗಲಕೋಷ್ಟ:** ಅರಿಸಿನ, ಚಂಗಲಕೋಷ್ಟ . . . ಶ್ರೀ ತೊಳಸಿ ಬೇರು, ಇವಿಷ್ಟನ್ನೂ ಸಮಭಾಗವಾಗಿ, ಬಿಸಿನೀರಿನಿಂದರೆದು ಕೊಡಲು ಶೀತಜ್ವರ ಪರಿಹಾರವಕ್ಕುಂ (ಸಕವೈ. ೬೩).
[ ಚಂಗಲ + ಕೋಷ್ಠ$_1$. / ತೆಲು. ಚೆಂಗಲ್ವಕೋಸ್ಟು ]

**ಚಂಗಲನೀರಕೋಷ್ಠ** (ನಾ). = ಚಂಗಲಕೋಷ್ಠ : ಚಂಗಲನೀರಕೋಷ್ಠ, ಶ್ರೀಗಂಧ, ಲಾವಂಚ . . . ಇವಿಷ್ಟನು ಹಸುವಿನ ಹಾಲಿಂದ ಅರೆದು (ವೈದ್ಯಸಾ. II, ೧೩೩). [ ಚಂಗಲ + ನೀರ? + ಕೋಷ್ಠ$_1$ ]

**ಚಂಗಲವೆ** 'ಚೆಂಗಲವೆ' ನೋ.

**ಚಂಗಳವೆ** 'ಚೆಂಗಲವೆ' ನೋ.

**ಚಂಗಳ್ವನಯ್ಕ** (ನಾ). ಒಬ್ಬಾತನ ಹೆಸರು : ಶ್ರೀ ರಾಜೇನ್ದ್ರ ಚೋಳದೇವರಾಜ್ಯದಿಂ ಚಂಗಳ್ವನಯ್ಕ ಪೋಗೆ ಚಂಗಳ್ವಗಂ ಕಾದಿ (ಎಕ. IV, ಎಡತೊ. ೩೭–೮ ; 1034). [ ℙ ಇದು 'ಚಂಗಾಳ್ವ ನಾಯ್ಕ' ಎಂಬುದರ ಅಪಲಿಖಿತ. ]

**ಚಂಗಾಟ** 'ಚೆಂಗಾಟ' ನೋ.

**ಚಂಗಾವಿ** 'ಚೆಂಗಾವಿ' ನೋ.

**ಚಂಗಾಳುವ** 'ಚಂಗಾಳ್ವ' ನೋ.

**ಚಂಗಾಳ್ವ, ಚಂಗಾಳುವ, ಚಾಂಗಾಳ್ವ, ಚೆಂಗಾಳ್ವ** (ನಾ). ೧. ಒಂದು ರಾಜವಂಶದ ಹೆಸರು : ತುಂಗ ಚಂಗಾಳ್ವಾಧಿಪನು ಕದನದೆ ಸೋತು ಕಂಗೆಟ್ಟು ಕಾಣಿಕೆಯಿತ್ತ ಮಂಗಲ ಗಜಶಾಲೆ . . . ಒಪ್ಪಿದುದು (ಕಂನವಿ. ೬–೩೦). ೨. ಆ ವಂಶಕ್ಕೆ ಸೇರಿದವನು : ಶ್ರೀ ನೊಳೆನಾಡ ಕುಡಲುರ ನಿಗಳಙ್ಕಮಲ್ಲ ಚಂಗಾಳ್ವ ಪರಿವೃಢಯ್ದನ್ದು (ಎಕ. IV, ಹೆಗ್ಗಡ. ೧೦೪–೫ ; 1037) ; ಆನನ ಕಾಶ್ಮೀರದ್ರವಂ ಪತ್ತಿದ ನಿಗಳದ ಚಂಗಾಳ್ವನಂಗಕ್ಕೆ ಸೇವಾಜನಿತಾರಾಗಂಬೊಲಾಗಳ್ ಮೆಱೆವುದನುದಿನಂ ಸೋಮಭೂಮೀಶಪಾದಂ (ಎಕ. VII, ಶಿಕಾರಿ. ೧೯೭–೪೫ ; 1182 ?). **ಚಂಗಾಳುವ :** ೨. ಚಂಗಾಳುವ ನೇಱಿದ ಮಾತಂಗದ ಮೊಗದೊಡ್ಡಿನಲ್ಲಿ ಸಬಳದ ಮಸೆಗಳು ಪಿಂಗದೆ ಪೋಲ್ತೆಸೆದಿಪ್ಪವು (ಎಕ. XVI, ಚಿಕ್ಕನಾ. ೯೮–೩೪ ; 1169). **ಚಾಂಗಾಳ್ವ :** ೨. ತಿಲುಗರ ಮಾರಿ ಚಾಂಗಾಳ್ವ ಕಿಱುಸೋದರಂ ಕೂಡಿ ತುಱುವ ಕೊಣ್ಡು ಪೋಗೆ (ಮೈಆರಿ. ೧೯೪೪, ೧೩–೬ ; 1036). **ಚೆಂಗಾಳ್ವ :** ೧. ಚೆಂಗಾಳ್ವ ಮಹೀನಾರೀಧವ ನಿಜಸಚಿವರುಚಿರಕುಲದುಗ್ಧಾಂಭೋನಿಧಿಗೆ ತಾರಾತರುಣೀವಲ್ಲಭ (ಜಯುಕಾ. ೧–೧೨). [ ? ]

**ಚಂಗಿ** (ನಾ). ಚೆಲುವೆ; ಸುಂದರಿ. 'ಚಂಗಿಯಲ್ಲಮ್ಮ' ಪರಾ. [ಸಂ. ಚಂಗೀ]

**ಚಂಗಿಯಲ್ಲಮ್ಮ** (ನಾ). ಒಬ್ಬ ಗ್ರಾಮದೇವತೆಯ ಹೆಸರು : ವರವ ಪಾಲಿಸೇ ಊರ ಚಂಗಿಯಲ್ಲಮ್ಮ (ನಾಪದ. ೨೩) ; ಪರಿಪರೀಂದ ಹರ್ಕೆ ಕೊಡೆ ಚಂಗಿಯಲ್ಲಮ್ಮ (ಹುಟ್ಟಿಹ. ೩೨). ℙ ತ್ರಿಪುರಸುಂದರಿಯ ಸ್ವರೂಪವೆಂದು ಈ ದೇವತೆಯನ್ನು ಪೂಜಿಸುತ್ತಿರಬಹುದು.
[ ಚಂಗಿ + ಎಲ್ಲಮ್ಮ ]

**ಚಂಗಿಸು** ‘ಚೆಂಗಿಸು’ ನೋ.

**ಚಂಗು$_1$** ‘ಚೆಂಗು$_1$’ ನೋ.

**ಚಂಗು$_2$** ‘ಚೆಂಗು$_2$’ ನೋ.

**ಚಂಗು$_3$** ‘ಚೆಂಗು$_4$’ ನೋ.

**ಚಂಗುಡಿ** ‘ಚೆಂಗುಡಿ’ ನೋ.

**ಚಂಗುಲಾಬಿ** ‘ಚೆಂಗುಲಾಬಿ’ ನೋ.

**ಚಂಗುಪಾಱು** (ಕ್ರಿ). ಛಂಗನೆ ಹಾರು, -ನೆಗೆ : ನಭವನು ಚಂಗುಪಾಱುತ ತಾಳಮರಗಳ ಭಂಗಿಸುವ ಕಾಲ್ಗಳಲಿ ನಿಂದನು ವೀರನಭಿಮುಖಕೆ (ನಿಭಾಗ. ೧೦-೬೫-೩೭). [ ಚಂಗು$_1$ (<ಚೆಂಗು$_1$) + ಪಾಱು$_1$ ]

**ಚಂಗೂಲಿ** ‘ಚೆಂಗೂಲಿ’ ನೋ.

**ಚಂಚ** ‘ಚೆಂಚ$_1$’ ನೋ.

**ಚಂಚತ್ತು** (ನಾ). [ಜೈನ] ಋತು, ವಿಮಳ, ಚಂದ್ರ, ವಲ್ಗು, ವೀರ, ಅರುಣ, ನಂದನ, ನಳಿನ, ಕಾಂಚನ, ಲೋಹಿತ, ಚಂಚತ್ತು, ಮರುತ, ಋದ್ವಿಷ, ವೈಡೂರ್ಯ, ರುಚಿಕ, ರಂಚಿರ, ಅಂಕ, ಸ್ಫಟಿಕ, ತಪನೀಯ, ಮೇಘ, ಅಭ್ರ, ಹಾರಿದ್ರ, ಪದ್ಮ, ಲೋ[ರೋ ?]ಹಿತ, ವಜ್ರ, ನಂದ್ಯಾವರ್ತ, ಪ್ರಭಾಕರ, ಪೃಷ್ಠಕ, ಗಜ, ಮೈತ್ರ, ಪ್ರಭೆ, ಅಂಜನ, ವನಮಾಲಕ, ನಾಗ, ಗರುಡ, ಲಾಂಗಲ, ಬಲಭದ್ರ, ಚಕ್ರ, ಅರಿಷ್ಟ, ಸುರಸಮಿತ, ಬ್ರಹ್ಮ, ಬ್ರಹ್ಮೋತ್ತರ, ಬ್ರಹ್ಮಹೃದಯ, ಲಾಂತವ, ಶುಕ್ರ, ಶತಾರ, ಆನತ, ಪ್ರಾಣತ, ಪುಷ್ಪಕ, ಶತಾಕ, ಆರಣ, ಅಚ್ಯುತ, ಸುದರ್ಶನ, ಅಮೋಘ, ಸುಪ್ರಬುದ್ಧ, ಯಶೋಧರ, ಸುಭದ್ರ, ಸುವಿಶಾಲ, ಸುಮನಸ, ಸೌಮನಸ್ಯಕ, ಪ್ರೀತಿಂಕರ, ಆದಿತ್ಯ ಮತ್ತು ಸರ್ವಾರ್ಥಸಿದ್ಧಿಗಳೆಂಬ ಅರುವತ್ತುಮೂರು ಇಂದ್ರಕಗಳೆಂಬ ವಿಮಾನಗಳಲ್ಲಿ ಒಂದು : ೧. ಋತು . . . ೧೧. ಚಂಚನ್ನಾಮಂ [ಪಾಠಾಂ. ಚಂಚನಾಮಂ] . . . ೬೩. ಸರ್ವಾರ್ಥಸಿದ್ಧಿ ಎಂಬಿವು ಅನುಕ್ರಮದಿಂ ಅಱುವತ್ತಮೂಱು ಇಂದ್ರಕಂಗಳ ಪೆಸರ್ಗಳ್ (ತತ್ತ್ವಪ್ರ. ೨೧೩).

[ ಸಂ. ಚಂಚತ್ ]

**ಚಂಚತ್ಪುಟ** (ನಾ). [ಸಂಗೀತ] ನೂರೆಂಟು ತಾಳಗಳಲ್ಲಿ ಒಂದು : ಚಂಚತ್ಪುಟ . . . ಜಯತಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮). [ ಸಂ. ]

**ಚಂಚರೀಕ** (ನಾ). ದುಂಬಿ; ಭ್ರಮರ : “ ಮಧುಕರಃ . . . ಚಂಚರೀಕಃ, ಅಳೀ, ದ್ವಿರೇಫಃ – ಈ ೧೩ ತುಂಬಿ ” (ಹಲಾಯು. ೪೩-೧೧೧) ; ನೀರರುಹಂಗಳನೊಲ್ಲದೆ ಚಂಚರೀಕತತಿ ಗಂಧಹಸ್ತಿಯೊಳ್ ನೆಲಸುವವೋಲ್ (ಶಾಂತಿಪು. ೫-೯೬). [ ಸಂ. ]

**ಚಂಚಲ, ಚಂಚಳ** (ಗು). ೧. ಚಲಿಸುವ ; ಅಲುಗುವ ; ಚಪಲ ಸ್ವಭಾವದ: ಪೋಗಿನ್ನೆಲೆ ಪೋಗಲಾರ್ಪೊಡೆಲೆ ಚಂಚಲಚೇಷ್ಟಿತ ನೋಟ್ಪೆಂ (ಜಗವಿ. ೩-೩೬) ; ಮೇಲೆ ಮರ ಚಲಿಸಿದರೆ ಚಲಿಪ ಚಂಚಲ ಛಾಯೆ (ಕಲ್ಲೋಲ. ೧೫-೨) ; ಚಕಚಕ ಚಂಚಲ ಮಿಂಚಿನ ಗೊಂಚಲ ಚಕಮಕಿ ಚಲಮಲ (ಗರಿ ೧೨೩-೧೦). (ನಾ). ೨. ಕಾದಲ; ಪ್ರೇಮಿ. ೩. ವ್ಯಭಿಚಾರಿ; ಜಾರ. ೪. ಗಾಳಿ. ೫. ಒಂದು ಬಗೆಯ ಪಕ್ಷಿ ; ಪುರಲೆ : “ ಚಂಚಲಂ ಪುಱಲೆಯಕ್ಕುಂ” (ಮಂಗರಾ. ೫೨-೯). **ಚಂಚಳ:** ೧. “ಲೋಲಂ, ಚಪಳಂ . . . ಸಂ[ಚಂ]ಚಳಂ– ಈ ೧೦ ಸಂಚಳಂ” (ಹಲಾಯು. ೧೧೫-೧೦).

[ ಸಂ. ]

**ಚಂಚಲಗೊಳಿಸು** (ಕ್ರಿ). ಚಂಚಲವಾಗುವಂತೆ ಮಾಡು ; ಸ್ಥಿಮಿತವಿಲ್ಲದಂತೆ ಮಾಡು : ಪಾಠಕ್ಕೆ ಬದಲು ಆ ವಸ್ತುಗಳೇ ಮಕ್ಕಳ ಮನಸ್ಸನ್ನು ಆಕರ್ಷಿಸಿ ಚಂಚಲಗೊಳಿಸಿ ಬಿಡುತ್ತವೆ (ಶಿಕ್ಷದ. ೨೮೫).

[ ಚಂಚಲ + ಕೊಳ್$_1$ + – ಇಸು$_3$ ]

**ಚಂಚಲತನ** (ನಾ). = ಚಂಚಲತ್ವ : ಆದರೆ ಅದೇ ಚಂಚಲತನ ಕಮಲೆ ತೋರಿದರೆ ಕೇಶವನಿಗೆ ಹಿಡಿಯುವುದಿಲ್ಲ (ನವನೀ. ೩).

[ ಚಂಚಲ + – ತನ ]

**ಚಂಚಲತೆ** (ನಾ) = ಚಂಚಲತ್ವ : ಚಂಚಲತೆ ಪೊರ್ದದಿರೆ ರೋಮಾಂಚನಮಂದಲರೆ . . . ಇಳೇಶನೊಪ್ಪಿದಂ (ಉದ್ಭಟ. ೧೧-೧೨೬).

[ ಸಂ. ಚಂಚಲತಾ ]

**ಚಂಚಲತ್ವ** (ನಾ). ಚಪಲತೆ ; ಅಸ್ಥಿರತೆ ; ಚಾಂಚಲ್ಯ. [ ಸಂ. ]

**ಚಂಚಲವರ್ಣಿಕೆ** (ನಾ). ೧. ಬಣ್ಣ ಬದಲಾಯಿಸುವ ಒಂದು ಬಗೆಯ ಪ್ರಾಣಿ; ಗೋಸುಂಬೆ ; ಊಸರವಳ್ಳಿ. ೨. ನಕ್ಷತ್ರಪುಂಜಗಳಲ್ಲಿ ಒಂದರ ಹೆಸರು : ಚಂಚಲವರ್ಣಿಕೆಯಲ್ಲಿಯೂ ಕಾಂತಿಯುತ ನಕ್ಷತ್ರಗಳಿಲ್ಲ. ಅದರ ಗ್ರೀಕ್ ಹೆಸರು ಕಮಿಲಿಯನ್ – ಬಣ್ಣಬದಲಾಯಿಸುವ ಹಲ್ಲಿ ಎಂದು (ನಕ್ಷತ್ರ. ೬೫). [ ಸಂ. ಚಂಚಲವರ್ಣಿಕಾ ]

**ಚಂಚಲಾಕ್ಷಿ** (ನಾ). ಚಂಚಲವಾದ ದೃಷ್ಟಿಯುಳ್ಳವಳು : ಮುಂಚಿರಿಸಿ ಕೊಂಡಿದ್ದು ಬಿಟ್ಟು ಚಂ[ಪಾಠಾಂ. ಸಂ]ಚಲಾಕ್ಷಿಯರಂ ಬಳಿಕ ತಾನರ್ಥಿಯಂ ಮಾಳ್ಪ (ಬಸಪು. ೪೫-೨೪).

[ ಸಂ. ಚಂಚಲಾಕ್ಷೀ (ಚಂಚಲ + ಅಕ್ಷಿ + –) ]

**ಚಂಚಲಿ** ‘ಚೆಂಚಲಿ’ ನೋ.

**ಚಂಚಲಿತ** (ಗು). ಚಂಚಲಗೊಳಿಸಲ್ಪಟ್ಟ ; ಕದಲಿಸಲ್ಪಟ್ಟ. [ ಸಂ. ]

**ಚಂಚಲಿಸು** (ಕ್ರಿ). ಚಂಚಲವಾಗು ; ಅಸ್ಥಿರವಾಗು ; ಏಕಾಗ್ರತೆಯನ್ನು ಕಳೆದುಕೊಳ್ಳು : ಸರ್ವಂ ಖಲ್ವಿದಂ ಬ್ರಹ್ಮೋಕ್ತಿಯಲಿ ಚಂಚಲಿಸದಿರು (ಗಗತಾ. ೧೩-೪೭) ; ಚಂಚಲಿಸುತ್ತಿರುವ ಮನಸ್ಸನ್ನು ವಶೀಕರಿಸು (ಗುರುಡ. ೮೦) ; ತಿಳಿಗೊಳನ ತಾವರೆಯ ಸೆರೆಯ ತುಂಬಿಗಳಂತೆ ಚಂಚಲಿಪ ಕಣ್ಗಳಿಗೆ ಕವಿದು ಬರೆ ಸುರುಳಿಯುಂಗುರಗುರುಳ್ (ಶ್ರೀರಾಮಾ. ೧೭-೪೫೪).

[ ಚಂಚಲ + – ಇಸು$_3$ ]

**ಚಂಚಲೆ, ಚಂಚಳೆ** (ನಾ). ೧. ಚಂಚಲಸ್ವಭಾವದವಳು ; ಸ್ಥಿರತೆಯಿಲ್ಲದವಳು : ಲಲನೆಯೆಂದರೆ ಚಂಚಲೆಯಾಗಿ ಬಳಕುತ್ತಿರುವ ಲತಾಂಗಿ (ಧ್ವನ್ಯಾಲೋ. VIII ಮುನ್ನುಡಿ) ; ಹೆಣ್ಣು ಚಂಚಲೆಯಾಗಿ, ಧೈರ್ಯತಾಳಿ ಪ್ರಣಯಕ್ಕಾಗಿ . . . ಗಂಡಿನ ಬೆನ್ನಟ್ಟಿ ಹೋಗುವುದು (ಕನ್ನಜಾ. ೧೧೪). ೨. ಐಶ್ವರ್ಯದ ಅಧಿದೇವತೆಯಾದ ಲಕ್ಷ್ಮಿ. ೩. ಮಿಂಚು : “ ಘನದೀಪ್ತಿ ಸೌದಾಮಿನಿ . . . ಚಪಲೆ ಚಂಚಲೆಯೆನಲು ಮಿಂಚೆನಿಕ್ಕುಂ ” (ಮಂಗರಾ. ೧೩-೪). **ಚಂಚಳೆ:** ೧. ತಟಿಚ್ಚಂಚಳೆ ಲಕ್ಷ್ಮೀಕಾಂತೆ ಪೂರ್ವಸ್ಥಿತಿಯನುೞಿದತಿಸ್ಥೈರ್ಯಮಂ ತಾಳ್ದಿದಳ್ (ಮಲ್ಲಿಪು. ೩-೧೯).

[ ಸಂ. ಚಂಚಲಾ ]

**ಚಂಚಸೊಪ್ಪು** (ನಾ). ಒಂದು ಬಗೆಯ ಸಸ್ಯ : “ಚುಂಚುರಃ, ಚುಂಚುಪತ್ರ– ಈ ಯೆರಡುಂ ಚಂಚಸೊಪ್ಪು” (ಒಷಧಿ ೫೭). [ ಚಂಚ$_0$ + ಸೊಪ್ಪು$_3$ ]

**ಚಂಚಳ** ‘ಚಂಚಲ’ ನೋ.

**ಚಂಚಳೆ** ‘ಚಂಚಲೆ’ ನೋ.

**ಚಂಚಿ** ‘ಸಂಚಿ’ ನೋ.

**ಚಂಚಿತಿ** ‘ಚೆಂಚಿತಿ’ ನೋ.

**ಚಂಚು$_1$** ‘ಚೆಂಚ$_1$’ ನೋ.

**ಚಂಚು$_2$** (ನಾ). ೧. ಪಕ್ಷಿಯ ಕೊಕ್ಕು, -ಮೂತಿ : “ಚಂಚೂ ತ್ರೋಟಿ ಚಂಚು ತುಂಡಂ ” (ವಸ್ತುಕೋ. ೪೧-೧೦) ; “ ಪಕ್ಷಿಯಾ ಮುಖಮದು ತ್ರೋಟಿ ಚಂಚೂ ಚಂಚುವಕ್ಕು ” (ಮಂಗರಾ. ೫೦-೧) ; ಅಂಚೆ ಚಂಚುವಿಂ ನಲಿದು ಮೃಣಾಳಮಂ ಸವಿವುದಾಯ್ತು (ಜಗವಿ. ೪-೩೭) ; ಗಿಳಿಗಳ ಚಂಚುವಿಂದೊಡೆದ ಮಾವಿನ ಪಣ್ಣ ರಸಪ್ರವಾಹದಿಂ ಬೆಳೆವುವು . . . ಬಂಧುರಗಂಧಾಧಲಿಗಳ್ (ಪುಷ್ಪಪು. ೨-೧೫). ೨. ಹರಳಂಗಿಡ ; ಔಡಲ. [ಸಂ.]

**ಚಂಚುಕ**, ಚಚ್ಚುಕ (ನಾ). ಒಂದುು ಬಗೆಯ ಪಕ್ಷಿ ; ಹಸುಂಬ: "ಚಂಚುಕ [ಪಾಠಾಂ. ಚಚ್ಚುಕ]ಮೆನಲು ಪಸುಬನೆನಿಸಿಕ್ಕು" (ಮಂಗರಾ. ೫೨-೮).

**ಚಚ್ಚುಕ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚಂಚುಗೂಡು** (ಕ್ರಿ). ಕೊಕ್ಕಿಗೆ ಕೊಕ್ಕು ಕೂಡಿಸು,–ಸೇರಿಸು : ನೆನೆನೆನೆದು ಕಾಂತೆಯುಂ ಕಳಹಂಸಂ ಇರೆ ಸಿರಿ ಬರ್ಪಂದದೆ ಸುಂದರಿ ಬರೆ ಪರಿತಂದು ಚಂಚುಗೂಡುತೆ ಪಕ್ಷಾಂತರದೊಳ್ ಮುಸುಂಕಿ ಬಿಬ್ಬಿರಬಿರಿವಂತಪ್ಪಿದುದು ದೇಹವೊಂದೆಂಬಿನೆಗಂ (ಗಿರಿಕ. ೨-೫೯). [ ಚಂಚು₂ + ಕೂಡು₁ ]

**ಚಂಚುಘಾತ** (ನಾ). ಕೊಕ್ಕಿನಿಂದ ಕುಕ್ಕುವಿಕೆ. [ ಚಂಚು₂ + ಘಾತ₂ ]

**ಚಂಚುದೊಡ್ಡಿ** (ನಾ). ಬೇಡರ ಬೀಡು,–ಹಳ್ಳಿ: "ಪಕ್ಕಣಃ, ಶಬರಾಲಯಃ- ಬೇಟೆಗಾರರಿರುವ ಹಳ್ಳಿ, ಬೇಡರ ಪಾಳ್ಯ ಚಂಚುದೊಡ್ಡಿಗೂ ಹೆಸರು" (ಸಿದ್ಧಾಂತಿ. ೯೩). [ ಚಂಚು₁ (<ಚೆಂಚ₁) + ದೊಡ್ಡಿ₁ (<ತೊಟ್ಟಿ₁) ]

**ಚಂಚುಪುಟ** (ನಾ). ಪಕ್ಷಿಯ (ಮುಚ್ಚಿಕೊಂಡಿರುವ) ಕೊಕ್ಕು : ತದೀಯ ಚಂಚುಪುಟಕೋಟಿಗಳಿಂದಮೆಬಲ್ವ ಕಾಂಚನೋಜ್ವಳಕಣಿಶಂಗಳೊಪ್ಪಿದುವು (ಮಲ್ಲಿಪು. ೨-೧೮); ಲಲಿತ ಶುಕಚಯ ಚಂಚುಪುಟದಿಂ ದಳಿತ ಜಂಬೂ ಪಕ್ವಫಲ ರಸಲುಳಿತನವಮಕರಂದಮಧುರೋರ್ಝರ ನಿವಾತದಲಿ (ಕುವ್ಯಾಉ. ೭-೨೭); ತನಿವಣ್ಣಂ . . . ಚಂಚುಪುಟದಿಂದಂ ಮೆಲ್ಲಿನಿಂ ಸೀಳ್ದು (ಶಬಶಂ. ೨-೪೯). [ ಚಂಚು₂ + ಪುಟ₃ ]

**ಚಂಚುಮೂಗು**(ನಾ). ಪಕ್ಷಿಯ ಕೊಕ್ಕಿನಂತೆ ಇರುವ ಮೂಗು; ಚೂಪಾದ ಉದ್ದನೆಯ ಮೂಗು: ತೆಳುವಾದ ಮೈ, ಚಂಚುಮೂಗು, ತೀಕ್ಷ್ಣವಾದ ಕಣ್ಣುಗಳು (ನಿಷ್ಕಾಮ. ೨). [ ಚಂಚು₂ + ಮೂಗು₁ ]

**ಚಂಚುರ** (ಗು). ೧. ಚತುರತೆಯ ; ನಿಪುಣತೆಯಿಂದ ಕೂಡಿದ: ನಿಷ್ಣಾತವಾದ : ಸಾರವಿಚಾರ ಚಂಚುರ[ಪಾಠಾಂ. ಬಂಧುರ]ಮತಿಪ್ರಸರಂ . . . ಈತನೆಂದು ಕೆಯ್ವಾರದೆ ಬಣ್ಣಿಕುಂ ವಿಬುಧಮಂಡಳಿ (ಕಾವ್ಯಾವ. ೪೯೭). ೨. ಸುಂದರವಾದ ; ಚೆಲುವಾದ : ಸಲೆ ನಾವ್ಯಮಾಯ್ತು ಚಂಚುರ ಮುಚುಕುಂದ ಸಂಚಯದೊಳಂ . . . ಮಧುಪಮಾಳೆಗೆ ಮಾಧವದೊಳ್ ಮಧೂತ್ಕರಂ (ಚಂದ್ರಪು. ೭-೬೪). ೩. ಅತಿಶಯವಾದ ; ಹೆಚ್ಚಾದ ; ಮೇಲಾದ : ಮಿಂಚುಗಣ್ಣುಬಲೆಯರಿಗೆ ತನಗಂದಾದ ಪಂಚಸಂಪತ್ತ ತಾನುಸುರಿ ಚಂಚುರಾನಂದದೊಳಿರ್ದನಾ ನೃಪನು (ಭರತೇ. ೬೨-೯೦). [ ಸಂ. ]

**ಚಂಚುರತೆ** (ನಾ). ಜಾಣತನ ; ನಿಪುಣತೆ : ಬಳಬಳಿಕೆಯ ಚಂಚುರತೆಯಂ ಹಸ್ತಚಾರಣದ ವಿಸ್ತಾರವಮಂ . . . ತೋಱುತ್ತುಮಿರೆ (ಕುಸುಮಾ. ೭-೬೩ವ). [ ಸಂ. ಚಂಚುರತಾ ]

**ಚಂಚೂಪುಟ** (ನಾ). = ಚಂಚುಪುಟ : ಆರಕ್ತಮಾದ ನೇಱಿಲಂ ಕೊಕ್ಕಿಂ ಕರ್ದುಂಕಿ ಚಂಚೂಪುಟಮನೂಱಿ (ರಾಮಾಶ್ವ. ೨೩-೧೪). [ ಸಂ. (ಚಂಚೂ + ಪುಟ) ]

**ಚಂಡ₁** (ಗು). ೧. ಉಷ್ಣವಾದ ; ಶಾಖದಿಂದ ಕೂಡಿದ. 'ಚಂಡಾಂಶು' ಪರಾ. ೨. ತೀವ್ರವಾದ ; ಪ್ರಖರವಾದ : ಆತ್ಮಾನುರಾಗದಲಿ ಚಂಡ ತೇಜದಿ ನಡೆವುತಿರಲು (ಬಸವು. ೫-೦೪). ೩. ಕೋಪದಿಂದ ಕೂಡಿದ ; ಕ್ರುದ್ಧ. ೪. ಕ್ರೂರವಾದ ; ಕರ್ಕಶ. ೫. ದುಷ್ಟತನದ ; ತುಂಟ. 'ಚಂಡಾಳಿ₁' ಪರಾ. ೬. ಚಟುವಟಿಕೆಯಿಂದ ಕೂಡಿದ ; ಚುರುಕಾದ. 'ಪ್ರಚಂಡ' ಪರಾ. ೭. ಬಲಿಷ್ಠವಾದ; ಬಲಾಢ್ಯ : ಚಂಡವಿರೋಧಿಸಾಧನ ತಮಸ್ತಮಮೋಡೆ (ಪಂಪಭಾ. ೧-೩) ; ಚಂಡರಿಪುಬಲವಿಲಯಹರನುದ್ದಂಡ ಬಲಶಸ್ತ್ರಾಸ್ತ್ರವನು ಕೈಕೊಂಡು ಸುರಪನ ಸೂನು ನಡೆದನು (ಕುವ್ಯಾವಿ. ೭ ಸೂಚನೆ). (ನಾ). ೮. ಈಶ್ವರನ ಪ್ರಮಥ ಗಣದಲ್ಲಿ ಒಬ್ಬ; ಚಂಡೀಶ. ೯. ಕ್ರೋಧ ; ಉದ್ವೇಗ. ೧೦. ಬಹಳ ಸಿಟ್ಟುಳ್ಳವನು ; ಕೋಪಿಷ್ಠ : "ಚಂಡಃ, ಅತ್ಯಂತ ಕೋಪನಃ–೨ ಬಹಳ ಸಿಟ್ಟುಗಾರ" (ಸಿದ್ಧಾಂತಿ. ೨೮೫). ೧೧. ಶೂರ ; ಪರಾಕ್ರಮಿ: ಕುದುರೆಯು ತುಂಡುತುಂಡಾಗಿ ಮುಗುಚುತ ಬಪ್ಪ ಚಂಡನಾರು (ಕುರಾಸಾಂ. ೨೦-೯೦). ೧೨. ಶಿವ. ೧೩. ಷಣ್ಮುಖ. ೧೪. ಒಬ್ಬ ರಾಕ್ಷಸನ ಹೆಸರು. ೧೫. ಒಂದು ನರಕದ ಹೆಸರು: ನಾದ . . . ಮೋಪವೆಂಬೈದು ಮಂತ್ರಿನರಕಂಗಳ ಮಧ್ಯದಲ್ಲಿ ಚಂಡವೆಂಬರಸು ನರಕವಿಹುದು (ವಿವೇಕ. ೧೪೦). [ ಸಂ. ]

**ಚಂಡ₂** (ನಾ). (?): "ಚಂಡಂ ನಾಗಾರಿಯಿಂದ[ಡ]ಂಡೆಯುವಂ" (ವಸ್ತುಕೋ. ೬೬-೮೬). [ ? ]

**ಚಂಡಕನರಿ** 'ಚೆಂಡಕನರಿ' ನೋ.

**ಚಂಡಕರ** (ನಾ). ೧. ತೀಕ್ಷ್ಣವಾದ ಕಿರಣ. ೨. ತೀಕ್ಷ್ಣವಾದ ಕಿರಣಗಳನ್ನುಳ್ಳವನು ; ಸೂರ್ಯ : ಪರ್ವಿದ ಮಾರ್ಜಾಕ್ಷಣದೊಳೆ ಕಿಡುವಂತೆ ಚಂಡಕರ ಕರಹತಿಯಿಂ (ಸಂರಾಮಾ. ೧೩-೧೩೦) ; ಚಂಡಕರಂ ಘನಾಂತರ ದಿನೋರ್ಮೋದಲಂದುದಯಿಪ್ಪ ಮಾಟ್ಕೆಯಿಂ (ನೇಮಿಪು. ೯-೧೦೦) ; ಚಂಡಕರಂ ಪ್ರಾಕ್ಶೈಲಶಿಖಿಂಡಮನೇಱಿದೊಡೆ (ಪುಷ್ಪಪು. ೮-೨೨) ; ಚಂಡಮುನಿ ಮಂತ್ರಾಹ್ವಯದಿ ಬರೆ ಚಂಡಕರ ತತ್ತೇಜನಾಹವಚಂಡವಿಕ್ರಮನವನಿಯಲಿ ಜನಿಸಿದನು ಕಲಿಕರ್ಣ (ಕುವ್ಯಾಆ. ೩ ಸೂಚನೆ). [ ಚಂಡ₁ + ಕರ₃ ]

**ಚಂಡಕೋಲಾಹಲ** (ನಾ). ಒಂದು ನರಕದ ಹೆಸರು . ಶುನಕ . . . ಆವಿಕವೆಂಬೈದು ಮಂತ್ರಿನರಕಂಗಳ ನಡುವೆ ಚಂಡಕೋಲಾಹಲವೆಂಬರಸು ನರಕವಿಹುದು (ವಿವೇಕ. ೧೪೦). [ ಚಂಡ₁ + ಕೋಲಾಹಲ ]

**ಚಂಡಣೆ₁** (ನಾ). ಉಗ್ರತೆ; ತೀಕ್ಷ್ಣತೆ; ಉದ್ವೇಗ: ಕೆಣಕಿದುರಿಯಿಂದದಲಿ ದಂಡೆಯೊಳಣೆದ ಕಾಳೋರಗನವೊಲು ಚಂಡಣೆ [ಪಾಠಾಂ. ಚಡ್ಡಣೆ]ಯ ಚಪಳಕ್ರೋಧಶಿಖಿ ಮೋಹಿದುದು ಮೋಱಿಯಲಿ (ಕುವ್ಯಾಕ. ೨೦-೯). [ ಚಂಡ₁ + – ಅಣೆ₄ ]

**ಚಂಡಣೆ₂** (ನಾ). [ನಾಟ್ಯ] ನೃತ್ಯ ಮುಗಿದ ಮೇಲೆ ನಿಲ್ಲುವ ಭಂಗಿ : ರೂಪುರೇಖೆ ಥಾಪಣೆ ತೂಕವಣೆಯುಂಕೆ ಝುಂಕೆ ಢಾಳಡಿಳ್ಳಾಯೆ ಚಂಡಣೆ ಚಳಬಳಿಕೆ ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೧೬-೬೭ ವ). [ < ಸಂ. ಭಂಡನ ]

**ಚಂಡಣೆಗುಡು** (ಕ್ರಿ). [ನಾಟ್ಯ] ನೃತ್ಯ ಮುಗಿದ ಮೇಲೆ ನಿರ್ದಿಷ್ಟ ಭಂಗಿಯಲ್ಲಿ ನಿಲ್ಲು: ತೊಡರದ ಪಹರಣೆಯಿಂ ಪಯದೊಡನುಗ್ಗಡಿಸುವುದು ತೂಕದೆಸಕಂ ಜತಿಯುಂ ನಡೆಯಿಪುದು ಕಿತ್ತು ಚಂಡಣೆಗುಡುವುದು ನಚ್ಚಣಿಯರಾಟಮೇನಚ್ಚರಿಯೋ (ಚಂದ್ರಪು. ೧೫-೭೫). [ ಚಂಡಣೆ₂ + ಕುಡು₁ (<ಕೊಡು₁) ]

**ಚಂಡದೇವತೆ** (ನಾ). ಉಗ್ರದೇವತೆ; ಮಾರಿ: ಗಂಡನ ಕಯ್ಯಿಂದ ಕಳುಹಿಸಿಕೊಂಡು ಭೂಮಂಡಲದೊಳಗೆ ತೊಳಲುವ ಚಂಡದೇವತೆಯುಂಟವಳೊರ್ವಳ ಬಲಗೊಂಡು (ಕುರಾಸಾಂ. ೨೪-೪೦). [ ಚಂಡ₁ + ದೇವತೆ ]

**ಚಂಡದೈವ** (ನಾ). ಭಯಂಕರವಾದ ದೈವ ; ಅಂಜಿಕೆಯನ್ನುಂಟುಮಾಡುವ ದೇವರು: ಹಿರಣ್ಯಕಶಿಪುವಿನೆದೆಯನುಱಿ ಬಗಿದ ಚಂಡದೈವದ ಪೆಸರನುಸಿರುವವನ ಧೆಸೆಗಲ್ಲದೆಳುಕನಿವನು (ಜೈಮಿಭಾ. ೩೦-೫೬). [ ಚಂಡ₁ + ದೈವ ]

**ಚಂಡನಂಗೈ** (ಕ್ರಿ). ಹಿಟ್ಟುಮಾಡು: ತಂಡುಲವ ತಿಲವನುದ್ದಂ ಗೋದಿಯಂ ಜವದಿ ಚಂಡನಂಗೈವುತಂ ಸಣ್ಣಿಸುತ ನಾದಿ (ಲಿಂಗಪು. ೮-೧೧). [ ಚಂಡನ₀ + ಗೈ (<ಕೆಯ್₁) ]

**ಚಂಡಭಾಗ** (ನಾ). (ಕರಾ) ನೈವೇದ್ಯದಲ್ಲಿ ಚಂಡೀಶ್ವರನಿಗೆ ಒಪ್ಪಿಸುವ ಭಾಗ : ಚಂಡಭಾಗವನ್ನು ಕೊಡದೇ ಯಾರು ಉಣ್ಣುವನೋ ಅವನಿಗೆ ಪಾಪ ಉಂಟಾಗುತ್ತದೆ (ತುಳುನಾ. ೨೩೪). 'ಚಂಡಾಂಶ' ಪರಾ. [ ಚಂಡ₁ + ಭಾಗ ]

**ಚಂಡಭೈರವ** (ನಾ). ಪ್ರಚಂಡನಾದ ಭೈರವ : ಚಂಡಭೈರವಂ . . . ಸಲೆ ಸೇವಿಪಂ ರವಿಸುತಾಶಾದ್ವಾರಮಂ ಲೀಲೆಯಿಂ (ಶಬಶಂ. ೧-೩೯). [ ಚಂಡ$_1$ + ಭೈರವ ]

**ಚಂಡಮರೀಚಿ** (ನಾ).=ಚಂಡಕರ ೨ : ಚಂಡಮರೀಚಿಗಸ್ತಮಯಮಿಲ್ಲದು ದೊಂದೆಡೆ ನಿಮ್ಮ ಕೇಳ್ದುದುಂ ಕಂಡುದುಮುಳ್ಳೊಡಿನ್ ಬೆಸಸಿಂ (ಪಂಪಭಾ. ೪-೪೮) ; ಅನಿಳಾಧ್ವದೊಳ್ ಪೊಳೆಯುತಿರ್ದುದು ಚಂಡಮರೀಚಿಮಂಡಲಂ (ಜಗವಿ. ೪-೭೧). [ ಚಂಡ$_1$ + ಮರೀಚಿ ]

**ಚಂಡಮಾರಿ** (ನಾ).=ಚಂಡದೇವತೆ: ಪಾಪಕಳಾಪಂಡಿತೆ ಚಂಡಮಾರಿದೇವತೆ ಯಿರ್ಪಳ್ (ಯಶೋಚ. ೧-೩೪) ; ಚಂಡಮಾರಿಯಾ ನಸುದೆರೆದ ಬಹಳ ಮುಖಮಂಡಲಗಳ ಶಂಕೆಯನು ಕಂಡರ ಮನಕೆ ಪುಟ್ಟಿಸುತ ಸಾಲ್ವಿಡಿ ದಂಬುಗುಂಡಿಗಳಿಹವದರೊಳಗೆ (ಕುರಾಸಾಂ. ೪-೮೭). [ ಚಂಡ$_1$ + ಮಾರಿ ]

**ಚಂಡಮಾರುತ** (ನಾ). ಪ್ರಬಲವಾದ ಗಾಳಿ ; ಬಿರುಗಾಳಿ : ಇವು . . . ಬಹುಬಲವಾಗಿ ಬೀಸುತ್ತವೆ. ಅಲ್ಲಿ ಇವಕ್ಕೆ ಚಂಡಮಾರುತಗಳು ಅಥವಾ ಆಕ್ರೋಶಚತ್ವಾರಿಂಶಗಳು (Roaring forties) ಎಂದು ಹೆಸರು (ಭೂವಿವ. ೬೧). [ ಚಂಡ$_1$ + ಮಾರುತ ]

**ಚಂಡರುಚಿ** (ನಾ). ತೀಕ್ಷ್ಣವಾದ ಕಿರಣಗಳನ್ನುಳ್ಳವನು ; ಸೂರ್ಯ : ಶಶಿಯಂ ಘಾತಿಸಿ ಸೂರ್ಯರಂಗಶೇಷಧನಮಂ ಬಲಿಕ್ಕೆ ನೀನಿತ್ತೊಡೆ ತಚ್ಛಶಿ ಪಲವು ಯೋನಿಯೊಳ್ ನಿಂದಶಾಂತಮತಿ ಚಂಡರುಚಿ ನಿಶಾಚರನಾದಂ (ಚಂದ್ರಪು. ೫-೮೮). [ ಚಂಡ$_1$ + ರುಚಿ ]

**ಚಂಡವಾಳ**, ಚಂಡಿವಳ, **ಚಂಡಿವಾಳ** (ನಾ). ವ್ಯವಹಾರದ ಗುರಂತಾಗಿ ಮುಂಗಡ ಕೊಡುವ ಹಣ ; ಸಂಚಕಾರ : (ಕ). **ಚಂಡಿವಳ** : (ಕಿಸಂಗ್ರಾ. ೬೨). **ಚಂಡಿವಾಳ** : (ಕ). [ ? ]

**ಚಂಡವಿಕ್ರಮ** (ನಾ). ೧. ಅತಿಶಯವಾದ ಪರಾಕ್ರಮ : ಮೇಳಿಸುತುಂ ಚಂಡವಿಕ್ರಮಾಡಂಬರಮಂ . . . ಸಾರ್ತಂದಂ (ಪುಷ್ಪಪು. ೫-೫೪). ೨. ಅತ್ಯಂತ ಪರಾಕ್ರಮವನ್ನುಳ್ಳವನು ; ಮಹಾಶೂರ : ಚಂಡಮುನಿ ಮಂತ್ರಾಹ್ವಯದಿ ಬರೆ ಚಂಡಕರ ತತ್ತೇಜನಾಹವಚಂಡ ವಿಕ್ರಮನ ವನಿಯಲಿ ಜನಿಸಿದನು ಕಲಿಕರ್ಣ (ಕುವ್ಯಾಆ. ೩ ಸೂಚನೆ). [ ಚಂಡ$_1$ + ವಿಕ್ರಮ ]

**ಚಂಡವೇಗ** (ನಾ). ೧. ತೀವ್ರವಾದ ವೇಗ ; ಅತ್ಯಂತ ವೇಗ : ಆ ಕಾಂತೆ . . . ಬಾಳಮತ್ತಪರಮಾಮಂ ಕೊಂಡು ಚಂಡವೇಗದಿನೆಯ್ದಿ (ನೇಮಿಪು. ೪-೬ ವ). ೨. [ಕಾಮಶಾ] ರತಿಭೇದ ದೃಷ್ಟಿಯಿಂದ ವಿಂಗಡಿಸಿದ ಮೂರು ಪುರುಷವರ್ಗಗಳಲ್ಲಿ ಒಂದು ವರ್ಗಕ್ಕೆ ಸೇರಿದವನು : ವೇಗ ಗತಿಯಿನಾಯ್ತು ಮಂದವೇಗ ಮಧ್ಯವೇಗ ಚಂಡವೇಗವೆಂಬ ಪೆಸರು ಪುರುಷರಿಂಗೆ ಸುರತದೊಳ್ (ಜನವ. ೪-೩೬). [ ಚಂಡ$_1$ + ವೇಗ ]

**ಚಂಡವೇಗಿ** (ನಾ).=ಚಂಡವೇಗಿನಿ : ವೇಗಗತಿಯಿನಾಯ್ತು . . . ಪೆಸರು ಪುರುಷರಿಂಗೆ ಸುರತದೊಳ್ ತೂಗಿದಂದದಿಂದೆ ಮಂದವೇಗಿ ಮಧ್ಯವೇಗಿ ಚಂಡವೇಗಿಯೆಂಬುದಾದುದಬಲೆಯರ್ಗೆ ನಲ್ಲಳೆ (ಜನವ. ೪-೩೬). [ <ಸಂ. ಚಂಡವೇಗಿನೀ ]

**ಚಂಡವೇಗಿನಿ** (ನಾ). [ಕಾಮಶಾ] ರತಿಭೇದ ದೃಷ್ಟಿಯಿಂದ ವಿಂಗಡಿಸಿದ ಮೂರು ಸ್ತ್ರೀವರ್ಗಗಳಲ್ಲಿ ಒಂದು ವರ್ಗಕ್ಕೆ ಸೇರಿದವಳು; ಸುರತದಲ್ಲಿ ಅತಿವೇಗಾಸಕ್ತಿಯುಳ್ಳವಳು: ಮಂದವೇಗಿನಿ ಮಧ್ಯವೇಗಿನಿ ಚಂಡವೇಗಿನಿ ಯರೆಂಬ ತ್ರಿವಿಧ ರತಿಭೇದಕಾಂತೆಯರಿಂ (ವಿವೇಕ. ೨೨೯). [ ಸಂ. ಚಂಡವೇಗಿನೀ ]

**ಚಂಡಾಂಶ** (ನಾ).=ಚಂಡಭಾಗ : ಸರ್ವಪ್ರಯತ್ನಗಳಿಂದ ಚಂಡಾಂಶವನ್ನು ಬಿಡತಕ್ಕದ್ದು (ತುಳುನಾ. ೨೩೪). [ ಚಂಡ$_1$ + ಅಂಶ ]

**ಚಂಡಾಂಶು** (ನಾ). ೧. ತೀಕ್ಷ್ಣವಾದ ಕಿರಣ. ೨. ತೀಕ್ಷ್ಣವಾದ ಕಿರಣ ಗಳನ್ನುಳ್ಳವನು ; ಸೂರ್ಯ. ೧, ೨ : ಮದವತ್ಕಂಸಂಗಕಾಂಡ ಕ್ಷಯ ಸಮುದಿತಚಂಡಾಂಶು ಚಂಡಾಂಶುವೆಂಬಂದದಿನೊಪ್ಪುತ್ತಿರ್ಪುದು . . . ಈ ದಿವ್ಯರೂಪಂ (ಜಗವಿ. ೩-೨). [ ಚಂಡ$_1$ + ಅಂಶು ]

**ಚಂಡಾಡು** 'ಸೆಂಡಾಡು' ನೋ.

**ಚಂಡಾತ$_1$** (ನಾ).=ಚಂಡಾತಕ : " ಚಂಡಾತಮೆನೆ ನಿರಿಚಲ್ಲಣಂಗಳಕ್ಕುಂ " (ಮಂಗರಾ. ೧೦೦-೨೯). [ < ಸಂ. ಚಂಡಾತಕ ]

**ಚಂಡಾತ$_2$** (ನಾ). ಒಂದು ಬಗೆಯ ಗಿಡ ; ಕಣಗಿಲೆ : " ಪ್ರತಿಹಾಸಃ, ಶತಪ್ರಾಸಃ, ಚಂಡಾತಃ, ಹಯಮಾರಕಃ, ಕರವೀರಃ — ೫ ಗನ್ನೇರಳೆ " (ಸಿದ್ಧಾಂತಿ. ೧೧೪). [ ಸಂ. ]

**ಚಂಡಾತಕ** (ನಾ). (ಸ್ತ್ರೀಯರು ಧರಿಸುವ) ಅರೆತೊಡೆಯ ಚಣ್ಣ, -ಚಡ್ಡಿ ; ಅರ್ಧೋರುಕ ; "ವರ ಯುವತಿಯರು ಅರ್ಧತೊಡೆ ಪರಿಯಂತರ ಉಡುವಂಥಾ ಸೀರೆ" (ನಾಚಿರಾ. ಕ); " ಅರ್ಧೋರುಕಂ ಚಂಡಾತಕಂ " (ವಸ್ತುಕೋ. ೭೮-೨೦). [ ಸಂ. ]

**ಚಂಡಾಮಯ** (ನಾ). ತೀವ್ರವಾದ ರೋಗ ; ದೊಡ್ಡ ಖಾಯಿಲೆ : ಉಂಡೊಡೆ ಕಿಡುವುದು ಪಿರಿದೇಂ ಕಂಡೊಡೆ ಪೆಸರ್ಗೊಂಡೊಡೊರ್ಮೆ ನೆನೆದೊಡೆ ಕಿಡುಗುಂ ಚಂಡಾಮಯವೆನಿಪೌಷಧಮಂಡಳಿಯಿಂ ಸೇವ್ಯಮಲ್ತೆ ಗಂದಿಗವಸರಂ (ಪುಷ್ಪಪು. ೨-೮೪). [ ಚಂಡ$_1$ + ಆಮಯ ]

**ಚಂಡಾಲ**, ಚಂಡಾಳ (ನಾ). ೧. ಬ್ರಾಹ್ಮಣ ಸ್ತ್ರೀಯಲ್ಲಿ ಶೂದ್ರನಿಂದ ಹುಟ್ಟಿದವನು : "ಚಂಡಾಲಃ–ಇದು, ಯಃ–ಯಾವನು, ಬ್ರಾಹ್ಮಣ್ಯಾಂ–ಬ್ರಾಹ್ಮಣಸ್ತ್ರೀಯಲ್ಲಿ, ವೃಷಲೇನ–ಶೂದ್ರನಿಂದ, ಜನಿತಃ–ಹುಟ್ಟಿಸಲ್ಪಟ್ಟನೊ ಅವನ ಹೆಸರು" (ಸಿದ್ಧಾಂತಿ. ೨೭೫); ಪೊನ್ನ ಪಂಜರಮಂ ಪೊತ್ತಿರದೇಟ್ಟಂದಂ ಚಂಡಿಕೆವೆರಸಿದ ಚಂಡಾಲಬಾಲಕಂ (ಕಾದಂಪೂ. ೩೭). 'ಚಂಡಾಲತ್ವ' ಪರಾ. ೨. ಚಂಡಾಲ ಜಾತಿಗೆ ಸೇರಿದವನು ; ಪಂಚಮ ; ಹೊಲೆಯ : "ಚಂಡಾಲಃ . . . ಪುಲ್ಕಸಃ–೧೦ ಹೊಲೆಯವನ ಪೆಸರು" (ಸಿದ್ಧಾಂತಿ. ೨೭೧). ೩. ಕ್ರೂರಕೆಲಸ ಮಾಡುವವನು ; ಕ್ರೂರಿ : ಜಾತಿಚಂಡಾಲ ಕರ್ಮಚಂಡಾಲ ವೃತ್ತಿಚಂಡಾಲ ಸಂಕಲಿತಚಂಡಾಲರೆಂಬ ಚತುರ್ವಿಧ ಚಂಡಾಲರುಂ (ವಿವೇಕ. ೨೪೫) ; ಆ ಕುಮತಿ . . . ಭಯಾಕಾರದೊಡಲ ಚಂಡಾಲರು ಕರೆಸಿ ಬೆಸಸಿದಂ (ಜೈಮಿಭಾ. ೨೮-೨೯). **ಚಂಡಾಳ** : ೧. " ಚಂಡಾಳಂ ತಾಂ ಹೊಲೆಯಂ " (ವಸ್ತುಕೋ. ೬೬-೮೭). ಪರಿಕಿಸದೀ ಧರ್ಮ್ಮದೊಳ್ . . . ಅರೆವೀಸಮನಳಿಪಿಕೊಣ್ಡವಂ ಚಣ್ಡಾಳ (ಎಇ XXVII, ೦೫-೬೦ ; 1114). [ ಸಂ. ]

**ಚಂಡಾಲತ್ವ** (ನಾ). ಚಂಡಾಲನಾಗಿರುವಿಕೆ : ಬ್ರಾಹ್ಮಣಿಯೊಳಂತೆನಗೆ ಶೂದ್ರನ ಬೀಜದಿಂದಲಿ ಜನನವಾಯ್ತುದರಿಂದ ಚಂಡಾಲತ್ವ ಸಿದ್ಧಿಸಿತು (ತಿಮ್ಮಆ. ೨-೮). [ ಸಂ. ]

**ಚಂಡಾಲವಲ್ಲಕಿ, ಚಂಡಾಳವಲ್ಲಕಿ** (ನಾ). ಒಂದು ಬಗೆಯ ಸಾಮಾನ್ಯವಾದ ತಂತೀವಾದ್ಯ ; ಕಿನ್ನರಿಯಂತಹ ಕೀಳುಂದರ್ಜೆಯ ವಾದ್ಯ. **ಚಂಡಾಳವಲ್ಲಕಿ** : " ಚಾಂಡಾಳಿಕೆ ಚಂಡಾಳವಲ್ಲಕೀ ಪರ್ಯಾಯಂ " (ವಸ್ತುಕೋ. ೫೦-೩೮). [ ಸಂ. ಚಂಡಾಲವಲ್ಲಕೀ ]

**ಚಂಡಾಲಿ, ಚಂಡಾಳಿ$_2$** (ನಾ). ೧. ಚಂಡಾಲಸ್ತ್ರೀ ; ಹೊಲತಿ. ೨. ನೀಚಳಾದವಳು ; ದುಷ್ಟೆ ; ಕೆಡುಕಿ : ಥೂ, ಚಂಡಾಲಿ ಎಂದು ಬಯ್ದಳು (ರೂಢಿ). **ಚಂಡಾಳಿ$_2$** : ೨. ತುಂಬಾ ಕೋಪದಲ್ಲಿ ಚಂಡಾಳಿ ಎಂದುಬಿಟ್ಟಳು (ರೂಢಿ). [ ಸಂ. ಚಂಡಾಲೀ ]

**ಚಂಡಾಲೆ** (ನಾ). = ಚಂಡಾಲಿ : ವಿಶ್ರುತ ದಕ್ಷಿಣಾಪಥದಿನೊರ್ವಳ್ ಕನ್ನೆ ಚಂಡಾಲೆ ದರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ (ಕಾದಂಪೂ. ೨೪). [ ಚಂಡಾಲ + – ಎ$_2$ ]

**ಚಂಡಾಪುರ** (ನಾ). ಒಂದಂ ಬಗೆಯಂ ಅಡಕೆ : ನೆಲವತ್ತಿರ್ಗೆ ಸಾಸಿರಕ್ಕೆ ಪನ್ನೊಂದಡಕೆಯ ಸೊಜ್ಜಮುಮಂ ಚಂಡಾಪುರಂ ಬೆಳೆವೊದಲಾಗುಳಿದಡಕೆ ಗಳ್ಗೆಲ್ಲಂ ಸಾಸಿರಕ್ಕೆ ಇರ್ಪ್ಪತ್ತೊಂದಡಕೆಯ ಸೊಜ್ಜಮುಮಂ . . . ಬಿಟ್ಟರ್ (ಎಇ. XVIII, ೧೯೨-೩೪ ; 1184). [ ? ]

**ಚಂಡಾಸಿ** (ನಾ). ತೀಕ್ಷ್ಣವಾದ ಖಡ್ಗ ; ಭಯಾನಕವಾದ ಕತ್ತಿ : ಅದಟಿಂದು ಕ್ಕಿರ್ದ ವೈರಿ × × × ಜರನಾಟಂದಿಕ್ಕಿ ಚಂಡಾಸಿಯಿಂ (ಸೌಇಇ. XX, ೨೨೧-೧೦ ; 1283). [ ಚಂಡ$_1$ + ಅಸಿ$_8$ ]

**ಚಂಡಾಹಿ** (ನಾ). ಘೋರವಾದ ಸರ್ಪ: ಚಂಡಾಹಿತುಂಡಖಂಡಿತಪುಂಡರೀ ಕಾಕ್ಷವದನವಿನ್ಯಸ್ತನಿರಸ್ತತರಳತಾರನೇತ್ರರುಂ . . . ಆಗೆ (ಜಗವಿ. ೩-೯೪ ವ). [ ಚಂಡ$_1$ + ಅಹಿ ]

**ಚಂಡಾಳ** 'ಚಂಡಾಲ' ನೋ.

**ಚಂಡಾಳವಲ್ಲಕಿ** 'ಚಂಡಾಲವಲ್ಲಕಿ' ನೋ.

**ಚಂಡಾಳಿ$_1$** (ನಾ). ದುಂಬಿ; ದುಷ್ಟಭ್ರಮರ : ಚಂಡಾಳೀ ಚಂಡ ಗೀತಧ್ವನಿಯನೊದೆದು . . . ಉಣ್ಮೆ ಪೊಣ್ಮೆತ್ತು . . . ತೂರ್ಯ ಪ್ರಣಾದಂ (ಲೀಲಾವ. ೩-೬೧) ; ನಿಸದಂ ಚಂಡಾಳಿಯ ಬಾಧೆಯ ತೊಲಗಿಸೆನುತ್ತೆಱಗಿದ ಮಲ್ಲಿಗೆ ಮೊಗ್ಗೆಯೊಲೆಸಕಂಬಡೆದೊಪ್ಪಿದುದಾ ಕಾಂತೆಗೆ ಮೂಗಿನ ನುಣ್ಮುತ್ತು (ಉದ್ಭದೀ. ೨-೩೦) ; ಪಳಿಗಂಜದೆ ಪುಷ್ಪಿತಲತೆ ನಿಶಾವಧುಗಳ ನೆರೆವ ಚಂಡಾಳಿ (ಚಂಪ್ರಸಾಂ. ೧೬-೧೬). [ ಚಂಡ$_1$ + ಅಳಿ$_5$ (= ಅಲಿ$_2$) ]

**ಚಂಡಾಳಿ$_2$** 'ಚಂಡಾಲಿ' ನೋ.

**ಚಂಡಿ$_1$, ಚೆಂಡಿ$_2$** (ನಾ). ೧. ತಲೆ: ಪಾಸಿಪ್ಪ ಚರಣಕೆ ಚಂಡಿಯನೂಡುತ ಹಿತದಿ ನುತಿಸಿದ ಮಂಡಲಾಧಿಪನ ನೋಡಿ (ಹಮಚ. ೧೯). ೨. ಚೆಂಡು ; ತೆನೆ : ಬೆಳೆ ಪರಿಪಕ್ವವಾಗಿರುವಾಗ ಪಿಶುನರು ಬಂದು ಚಂಡೀ ಕೊಯ್ಯುವರು (ಸಾಲಂಸಾ. ೬೩); ಒಂದೇ ವೇಳೆಗೆ ನೂರಾರು ಕುಡುಗೋಲುಗಳು ಸರಸರನೆ ತೆನೆಯ ಚಂಡಿಗಳನ್ನು ಹಾರಿಸತೊಡಗಿದವು (ಜಿಪರಿ. ೬೬). **ಚೆಂಡಿ$_2$: ೨.** ಪುಂಡೀಯ ಪಲ್ಲೇದ ಚೆಂಡಿಯ ಕಡಿದಂಗ (ಕನ್ನಜಾ. ೧೧೧). [ ಚಂಡು$_1$ (<ಸೆಂಡು) ]

**ಚಂಡಿ$_2$** (ನಾ). ೧. ಹಟಮಾರಿತನ ; ಛಲ; ಪಂಥ: "ಚಂಡಿಯನೆ ಮಾ[ಹಾಠಾಂ. ನಾ]ಸಿಯಕ್ಕುಂ" (ಭಾರನಿ. ೩೬); ಕೊಂಡಾಡುವವರು ಕೋವಿದರು . . . ಮಿಕ್ಕವರು ಚಂಡಿಯ ಬಿಡುವರು ಮಂತ್ರಿಯ ಮಾತನು ದ್ದಂಡಿಸಲಱಿಯದ ನೃಪಗೆ (ರಾಮವಿ. ೧೩-೧೨೦); ನಾವು ಕೊಟ್ಟುದನುಂಡು ಬದುಕುವುದಲ್ಲದೇಕೀ ಚಂಡಿ (ನಿಭಾಗ. ೯-೨-೨೮). ೨. ತೀಕ್ಷ್ಣವಾದುದು ; ಉಗ್ರವಾದುದಂ : ತುಂಡುಗಿಡಿಗಳ ತೂಱುಗಿಡಿಗಳ ಗುಂಡುಗಿಡಿಗಳ ಘಾಡಣೆಯ ಕಿಡಿ ಚಂಡಿಯಾಯ್ತು ಚತುರ್ವದನನಿರ್ಮಿತ ಮಹಾಭವನ (ತೊರರಾ. ೫-೮-೮೨). ೩. ಸವಂಸ್ಯೆ ; ತೊಡಕಂ : ದಂಡನಾಯಕಗೆ ಪಟ್ಟವ ಕಟ್ಟಿದಾಗ ಮುಂಕೊಂಡೊಂದು ಲಿಪಿ ಬಿರ್ದು ಸಭೆಗೆ ಚಂ[-ಚಂ] ಡಿಯಾಗಿರಲದನೋದಿ ತೆಗೆಸಿದನುದ್ದಂಡ ಬಸವ ಬಹುಧನವ (ಮೋಳಿಪು. ೪-೧೪). ೪. ಕೀಳಂತನ. 'ಚಂಡಿಗುನ್ನಿ' ಪರಾ. ೫. ಉಗ್ರ ನಾದವನಂ ; ಪ್ರಚಂಡ ; ಛಲಚೇತನನು ಸಲೆ ಚಂಡಿಯಾದನು ಕಳನ ಚೌಕದಲಿ (ಕುವ್ಯಾಗ. ೩-೧೫). ೬. ಹಟಮಾಡುವ ವ್ಯಕ್ತಿ ; ಹಟಮಾರಿ.

**ಚಂಡಿಮಾಡು = ಹಟಹಿಡಿ** ; ಮೊಂಡುತನಮಾಡಂ : ಚಂಡಿಮಾಡಿದನು ಸಣ್ಣರಸು ದೇವರ ಸಭಾಮಂಡಲಕೆಯ್ದಿಸೆಂದೆನ್ನ (ಭರಚ. ೨೫-೨೦) ; ಅನೇಕ ಮಕ್ಕಳು ಎದೆಹಾಲನ್ನು ಬಿಡಿಸುವ ಸಮಯದಲ್ಲಿ ಚಂಡಿಮಾಡುವುವು (ಗೃಹವಿ. ೧೧೯). [ <ಸಂ. ಚಂಡ ]

**ಚಂಡಿ$_3$** (ನಾ). ೧. ಹಟಮಾರಿಯಾದ ಹೆಣ್ಣು ; ಮೊಂಡಿ. ೨. ಬಹಳ ಕೋಪವುಳ್ಳವಳು ; ಕೋಪಿಷ್ಠೆ. ೩. ಕೆಟ್ಟಹೆಣ್ಣು ; ನೀಚ ಹೆಂಗಸು : ಲೋಗರ ಪತಿಯ ಮಱಸಿಕೊಂಡಿಪ್ಪ ಚಂಡಿಯರಿಗೆ ಮತ್ತೆ ನಾಚಿಕೆಯಿಲ್ಲ ಕೇಳಾ (ಉರಿವ. ೩೧-೨೪). ೪. ಹೆಣ್ಣು ; ಹೆಂಗಸು; ಮಡದಿ ಚಂಡಿವಿತ್ತಾ ದೀಪಣ ತ್ರಯಖಂಡನಕ್ಷಮನೆಂದೆನಿಸಿದೆವ್ಯೋಪನೇ ಬಾರಾ(ಬಸಪು. ೫೪-೩೯); ಬಂಡಣವನು ಮಾಡಲಮ್ಮದೆ ತಾ ತನ್ನ ಚಂಡಿಯ ಲಂಕೆಯಿಂ ಕಳ್ದುಕೊಂಡು ಬಂದ ಗಡೆಂಬ ಪರಿಹಾಸದ ಬಲು ಭಂಡಾಟಕೀಡಾಗಬಹುದೆ (ರಾಮವಿ. ೧೪-೮೦). ೫. ದುರ್ಗಾದೇವತೆ ; ಚಾಮುಂಡಿ ; ಪಾರ್ವತಿ : "ಉಮೆ ಪಾರ್ವತಿ ಕಾತ್ಯಾಯನಿ ಹಿಮವತ್ಸುತೆ ಚಂಡಿ . . . ಕಾಳಿಯೆಂಬಿವಂಬಿಕೆಯ ಪೆಸರ್" (ವಸ್ತುಕೋ. ೩-೧೬) ; ಈಕೆಯದಾವಳೊ . . . ಚಂಡಿಯೋ ಮಹಾಭೈರವಿಯೋ (ಜಗವಿ. ೩-೧೫); ಚಂಡಿ ಚಾಮುಂಡಿ ಪೇಳ್ಬೇಕಾದು ದೇನು? (ಗರಿ. ೩೬-೯). ೬. ಉದ್ದಾಲಕ ಋಷಿಯ ಪತ್ನಿಯ ಹೆಸರು: ವಿಪ್ರನುಂಟೊರ್ವನುದ್ದಾಲಕಾಖ್ಯರ . . . ವೈವಾಹದೊಳ್ ವಧುವಾದಳಾ ತಂಗೆ ಚಂಡಿಯೆಂಬಾಕೆ (ಜೈಮಿಭಾ. ೧೦-೨೩). ೭. ಒಂದಂ ಬಗೆಯ ಮರ: ಅಲ್ಲಿಂದಂ ತೆಂಕಲು ಚಂಡಿಯ ಮರನಲಿ ನಟ್ಟಕಲು (ಎಕ. VIII, ತೀರ್ಥಹ. ೧೦೫-೫೩ ; ಸು. 1405). ೮. ಒಂದು ಬಗೆಯ ಸುಗಂಧದ್ರವ್ಯ : "ಚಂಡಾದನಂ–ಚಂಡಿಯೆಂಬ ಗಂಧದ್ರವ್ಯ" (ಒಷಧಿ. ೫೫). [ ಸಂ. ಚಂಡೀ ]

**ಚಂಡಿ$_4$** 'ತಂಡಿ' ನೋ.

**ಚಂಡಿಕಾಧ್ವಜ** (ನಾ). ದುರ್ಗೆಯ ಚಿಹ್ನೆಯುಳ್ಳ ಬಾವುಟ: ಒಪ್ಪಿತಾ . . . ರಾಕ್ಷಸಕುಲದ ಬಲದ ನೆಲದೊಲಿದ ಚಂಡಿಕಾಧ್ವಜ ಚಿತ್ರಚಿಹ್ನೆ! (ಶ್ರೀರಾಮಾ. ೨೧೭-೧೭೭). [ ಸಂ. (ಚಂಡಿಕಾ + ಧ್ವಜ) ]

**ಚಂಡಿಕಾರಮಣ** (ನಾ). ದುರ್ಗಿಯಪತಿ; ಶಿವ: ಚಂಡಿಕಾರಮಣಂಗೆ ಕೂಡಲ ಸಂಗಮೇಶಂಗೆ . . . ಸಮರ್ಪಣಂಗೆಯ್ದು (ಬಸಪು. ೫೮-೬೬೧) ; ಆ ಗಾಂಡೀವ ಕೋದಂಡವನುದ್ದಂಡ ಚಂಡಿಕಾರಮಣಂ ಸೆಳೆದುಕೊಳ್ವುದುಂ (ಶಬಶಂ. ೪-೫೯ ವ). [ ಸಂ. (ಚಂಡಿಕಾ + ರಮಣ) ]

**ಚಂಡಿಕಾರ್ಚನೆ** (ನಾ). ಚಂಡಿಕಾದೇವತೆಯ ಪೂಜೆ ; ದುರ್ಗಾಪೂಜೆ : ಚಂಡಿಕಾರ್ಚನೆಗೆ ನಡೆಯೆಂದು ಕಳುಹಿದೊಡೆ ನೀಂ ಮಾಡಿದುಜ್ಜುಗಮಿ ದೇನು (ಜೈಮಿಭಾ. ೩೧-೫೨). [ಸಂ. ಚಂಡಿಕಾರ್ಚನಾ (ಚಂಡಿಕಾ+ಅರ್ಚನಾ)]

**ಚಂಡಿಕಾಲಯ** (ನಾ). ಚಂಡಿಯ ಗುಡಿ ; ದುರ್ಗೆಯ ದೇವಸ್ಥಾನ : ಚಂಡಿಕಾಲಯಕೆ ಪೊಸಪೂಗಳಂ ತಿಱಿತಂದು ಪೂಜಿಸುವೊಡೊಳಪುಗುವ ತಾಪಸಂ (ಜೈಮಿಭಾ. ೩೧-೬೩) ; ಊರ ಹೊರಬನದೊಳಿಹ ಚಂಡಿಕಾಲಯಕ್ಕೆ ನೀಂ . . . ಪೋಗಿ ಗೌರಿಯಂ ಪೂಜಿಪುದು (ಚಂದ್ರಸ. ೯೪). [ ಸಂ. (ಚಂಡಿಕಾ + ಆಲಯ) ]

**ಚಂಡಿಕೆ$_1$** 'ಚೆಂಡಿಕೆ' ನೋ.

**ಚಂಡಿಕೆ$_2$** (ನಾ). ದುರ್ಗಾದೇವತೆ ; ಚಂಡಿಕಾದೇವಿ : ಮಂಡೋದರಿ ಲಯಸಮಯದ ಚಂಡಿಕೆಯಂತೆ ಮಾಮಸಕಂ ಮಸಗಿ (ಪಂರಾಮಾ. ೧೧-೧೦೩ವ); ಜವನ ಪೊಡವ್ವ ಚಂಡಿಕೆಯ ಕಾಯ್ಪು . . . ಅಮರೇಂದ್ರನ ವಜ್ರಭವಾನಳಾರ್ಚಿ ತಳ್ತಪೊಲ್ (ಎಕ. V, ಬೇಲೂರು. ೮೬-೧೧ ; 1177) ; ಚಂಡಿಕೆಯಂ ಸಮರ್ಚಿಸಿ ಕುಮಾರಿಕೆಯಂ ಪಡೆದು (ಉದ್ಭಟ. ೭-೧೩೫). [ ಸಂ. ಚಂಡಿಕಾ ]

**ಚಂಡಿಕೆಗಟ್ಟು** (ಕ್ರಿ). ಜುಟ್ಟನ್ನು ಕಟ್ಟು ; ಶಿಖಾಬಂಧನಮಾಡಂ : ಕುರುಳು ಪಂಕ್ತಿಯ ನುಣ್ಪುಗೊಳಿಸಿ ಚಂಡಿಕೆಗಟ್ಟಿ . . . ಕಳಿಪುವೆನು (ಗೀತಗೋ. ೭-೧೭). [ ಚಂಡಿಕೆ$_1$ (<ಚೆಂಡಿಕೆ) + ಕಟ್ಟು$_1$ ]

**ಚಂಡಿಕೆಬಿಡು** (ಕ್ರಿ). ಜುಟ್ಟನ್ನು ಬಿಡು,–ಬೆಳೆಯಿಸು : (ಶ). [ ಚಂಡಿಕೆ$_1$(<ಚೆಂಡಿಕೆ) + ಬಿಡು$_1$ ]

**ಚಂಡಿಕೆವಿಡಿ** (ಕ್ರಿ). ಜುಟ್ಟನ್ನು ಹಿಡಿದುಕೊಳ್ಳು : ನರಕದೊಳಾಳಲೀಯದೆ ಚಂಡಿಕೆವಿಡಿದುದ್ಧರಿಸಲೆಂದಾಳ್ಗೊಂಡ ಗುರುವೆ (ಬಸರ. ೪-೩೨) ; ಎಲೆ ಪೋಗದಿರೆನುತಂ ಚಂಡಿಕೆವಿಡಿದೆಳೆಯೆ (ವೃಷವಿ. ೯-೯೬). [ ಚಂಡಿಕೆ$_1$ (<ಚೆಂಡಿಕೆ) + ಪಿಡಿ$_1$ ]

**ಚಂಡಿಕೆವೆರಸು** (ಕ್ರಿ). ಜುಟ್ಟನ್ನು ಹೊಂದಿರು: ಏಟ್ಟಿಂದಂ ಚಂಡಿಕೆವೆರಸಿದ ಚಂಡಾಲಬಾಲಕಂ (ಕಾದಂಪೂ. ೩೬). [ ಚಂಡಿಕೆ$_1$ (<ಚೆಂಡಿಕೆ) + ಬೆರಸು$_1$ ]

**ಚಂಡಿಗ** (ನಾ). ಛಲವುಳ್ಳವನು ; ಹಟಮಾರಿ : ಸುಡುಗಾಡನತ್ಯಾನಂದದಿಂ ಕಾವ ಚಂಡಿ[ಪಾಠಾಂ. ದು]ಗನ ಕಯ್ಯೊಳೀ ಹೀನವನಿತೆಯು ಕೊಲಿಸುವೆಂ (ಹಚಕಾ. ೧೩-೯). [ ಚಂಡಿ$_2$ + – ಗ$_2$ ]

**ಚಂಡಿಗುನ್ನಿ** (ನಾ). ೧. ಕೀಳಾದ ನಾಯಿ. ೨. (ಆಲಂ) ಕೀಳಾದ ವ್ಯಕ್ತಿ; ಕ್ಷುದ್ರಮನುಷ್ಯ : ಬಸವರಾಜನನಾವನುಂ ಕೊಂಡಿಸಿದಡಿನ್ನಾ ಚಂಡಿ ಗುನ್ನಿಯ ರಸನೆಯುಂ ತವೆ ಕೊಯ್ದು . . . ಮಳಲಂ ತರಿಸಿ ಬಾಯ್ದುಂಬಿ ಸಿದಪೆಂ (ಬಸಪು. ೧೧-೧೯). 'ಚಂಡಿನಾಯಿ' ಪರಾ.

[ ಚಂಡಿ$_2$ + ಕುನ್ನಿ$_1$ ]

**ಚಂಡಿಗೊಳ್, ಚೆಂಡಿಗೊಳ್ಳು** (ಕ್ರಿ). ೧. ಹಟಮಾಡು ; ಮೊಂಡುಹಿಡಿ; ಚಂಡಿತನಮಾಡು : ಚಂಡಿಗೊಂಡು ನಿಲುತ್ತ ನಡವುತ . . . ಮುಂಡು ಗಾಣಿನು ದಸರಿದೇವನ ಬಳಿವಿಡಿದು ಸಾರ್ದು (ಬಸಪು. ೩೮-೧೮) ; ಚಂಡಿಗೊಂ[ಪಾಠಾಂ. ಕೊಂ]ಡರೆ ನನಗೆ ನಿನ್ನಿನ ಭಂಡತನ ಬಾರದಲೆ (ಕುವ್ಯಾಸ. ೧೬-೫೮); ಆ ನೃಪಂ ರಮಾವಲ್ಲಭನ ದರ್ಶನಕೆ ಮಾತೆಯುಂ ಕರೆಯುಲವಳೊಲ್ಲೆ ನಾನಿಲ್ಲಿರದೊಡೀ ಬದುಕ ಸಾಗಿಸುವರಾರೆಂದು ಚಂಡಿಗೊಳಲು (ಜೈಮಿಭಾ. ೪-೬೮). ೨. (ಆಲಂ) ಸ್ಥಿರವಾಗಿ ನಿಲ್ಲು ; ದೃಢವಾಗಿರು : ಕುಸುಮ ಕೋದಂಡನಂಗೋಪಾಂಗದೊಳು ಕಂಡಮಾತ್ರದೊಳು ಕಣ್ಗಳ ಪುತ್ರಿಕೆಗಳು ಚಂಡಿಗೊಂಬಂತೆ ನೋಡಿದಳು (ನೇಮಿಸಂ. ೨೧-೪೮) ; ಕಂಡಮಾತ್ರದೊಳಾ ಕುಲಟೆಯ ಕಣ್ಣೆಂಬ ಭಂಡಾಟದ ಮಧುಪಗಳು ಚಂಡಿಗೊಂಡುವು ಕುವರನ ನಿಡುದೋಳೆಂಬ ದುಂಡದಂಡೆಯ ಸರಿಸದೊಳು (ಪ್ರಭಂಜ. ೩-೬೯) ; ಕ್ಷಿತಿಯೊಳು ನಿಜಛಾಯಮಂ ಕಂಡು ಚಂಡಿಗೊಂಡತುಳತುಳ ಪ್ರತಾಪ ಮಿಗಲು (ನಂದಿಮಾ. ೧೩-೨೦). **ಚೆಂಡಿಗೊಳ್ಳು** : ೧. ಹೋರಿಯ ಕಟ್ಟಿ ಹೊಲನ ಹೊಡುವಾಗ ಅದು ಚೆಂಡಿಗೊಂಡು ಬಿದ್ದು ಬಡಿದಡೇಳದಿರಲು (ಭೈರಸೂ. ೩೬೯). [ ಚಂಡಿ$_2$ + ಕೊಳ್$_1$ ]

**ಚಂಡಿಡು** (ಕ್ರಿ). ತಲೆ ಕೊಡು ; ಬಲಿಯಾಗು : ಉಚ್ಚಂಗಿಯ ಕೋಟೆಗೆ ರಾಜಾದಿತ್ಯನ ಕಾಳೆಗಕೆ ಚಂಡಿಡೆ ಬಾಸಗಾವುಣ್ಡಂಗೆ ಕೊಟ್ಟ ಕೊಡಂಗೆ ಖ ೫ (ಎಕ. XV, ಬೇಲೂರು. ೩೦೮-೬ ; 971). [ಚಂಡು$_1$ (<ಸೆಂಡು)+ಇಡು$_1$]

**ಚಂಡಿತನ** (ನಾ). ೧. ಹಟಮಾರಿತನ; ಮೊಂಡುತನ: ಪೆಂಡತಿ ತವರ್ಮನೆಗೆ ಮುಳಿದು ಪೇಳದೆ ಪೋದ ಚಂಡಿತನಕವಳ ತಾಯ್ತಂದೆಗಳ್ಕಳುಹೆ ಬಂದು (ಜೈಮಿಭಾ. ೧೮-೪೬) ; ಕಂಡಕಂಡವರೆಲ್ಲ ಚಂಡಿತನವೆನಲಾಯ್ತು (ಕವಿಸೋ. ೩೬-೩) : ಇನ್ನು ಸುಮ್ಮನೆ ಚಂಡಿತನಮಾಡಿ . . . ಮಾತಾಡಬೇಡ (ಪತಿ. ೯೪). ೨. ಉಗ್ರತೆ ; ಪರಾಕ್ರಮ : ಶಿಖಂಡಿಯನು ಮುಂದಿರಿಸಲಾತನ ಕಂಡು ನಾವ್ ಕಾಳೆಗವ ಮಾಡೆವು ಕೈದುಗಳ ಬಿಸುಟು ಚಂಡಿತನವನು ಮಾದು ಮಿಗೆ ಕೈಕೊಂಡು ಫಲುಗುಣನೆಸಲಿ (ಕುವ್ಯಾಭೀ. ೬-೨೬). [ಚಂಡಿ$_2$+ – ತನ]

**ಚಂಡಿನಾಯಿ** (ನಾ). ೧. ಕೀಳುನಾಯಿ ; ಹೀನವರ್ಗದ ನಾಯಿ. ೨. (ಆಲಂ) ಕೀಳುನಡತೆಯ ವ್ಯಕ್ತಿ : ಕಾಳುದೈವಕ್ಕೆಱಗಿ ನಾನು ಶಿವಭಕ್ತ ನೆನಿಸಿಕೊಂಬ ಚಾಡಿನಾಯಿಗಳ ಕಂಡು ಎನ್ನ ಮನ ಹೇಸಿತ್ತು ಕಾಣಾ (ಮಡಿಮಾ. ೨೮-೪೦). [ ಚಂಡಿ$_3$ + ನಾಯಿ (<ನಾಯ್) ]

**ಚಂಡಿಪೋರು** (ಕ್ರಿ). ಹಟಮಾರಿತನವನ್ನು ಮಾಡು ; ಛಲಹಿಡಿ : ನೀನೆಂದುದಂ ಮಾಡೆನೆಂದಾ ಚಂಡಿ ಚಂಡಿಪೋರೆ (ಜೈಮಿಭಾ. ೧೦-೨೪).

[ ಚಂಡಿ$_2$ + ಪೋರು$_1$ (<ಪೋರ್$_1$) ]

**ಚಂಡಿಲ, ಚಂಡಿಳ** (ನಾ). ಕೆಲಸಿಗ ; ಕ್ಷೌರಿಕ; ಹಜಾಮ: "ದಿವಾಕೀರ್ತಿ ಚಂಡಿಲನು ನಾವಿಂದನಕ್ಕುಂ" (ಮಂಗರಾ. ೧೧೧-೧). **ಚಂಡಿಳ** : "ಕ್ಷುರಮರ್ದೀ, ದಿವಾಕೀರ್ತಿಃ, ಚಂಡಿಳಃ, ನಾಪಿತಃ—ಈ ೪ ನಾವಿದಂ" (ಹಲಾಯು. ೯೬-೪೩೫). [ ಸಂ. ]

**ಚಂಡಿವಳ** 'ಚಂಡವಾಳ' ನೋ.

**ಚಂಡಿವಾಳ** 'ಚಂಡವಾಳ' ನೋ.

**ಚಂಡಿಸು$_1$** 'ಚೆಂಡಿಸು' ನೋ.

**ಚಂಡಿಸು$_2$** (ಕ್ರಿ). ೧. ಹಟಹಿಡಿ: ಮೊಂಡಾಟಮಾಡು: ಕಂಡುದನೆ ನುಡಿದು ಕಲ್ಪಿಪ ಪೆಂಡತಿಯರ ನುಡಿಯನುಱದೆ ಮನದನುವಿಂಗಾ ಚಂಡಿಪ ಚಪಲೆಯ ನುಡಿಗೇಗೊಂಡಳ್ (ಲೀಲಾವ. ೧೪-೪೬) ; ಶ್ರೀದೇವಿಯು . . . ನಾನು ಸುಮ್ಮನೆ ಬಿಡುವುದಿಲ್ಲ ಎಂದು ಚಂಡಿಸಿದಳು (ಶ್ರೀರಾಯ. ೩೦೫). ೨. ಸಿಟ್ಟುಗೊಳ್ಳು ; ಕೋಪಿಸು : ಭೇರುಂಡನ ತುಂಡದೊಂದು ಶರಭಂ ಜಗುಟ್ಟಿರ್ದ್ದಯ್ಯನೆ ಬೀಟಿ ಬೇಗದಿಂ ಚಂ[ಪಾಠಾಂ. ಖಂ]ಡಿಸಿ ಪಾಱದೊಂದೆಱಗಲೊಂದೆಟಲುತ್ತಿರೆ ವಕ್ರಮಾ ನಭೋಮಂಡಲದಲ್ಲಿ ನಿಂದುದನಭೀಕ್ಷಿಸಿದಂ (ಲೀಲಾವ. ೮-೨೬). ೩. ಎದುರುಬೀಳು ; ಪ್ರತಿಭಟಿಸು ; ತೊಂದರೆ ಕೊಡು : ಕಪ್ಪವ ಕೊಡದೆ ಕೂಟವ ಮಾಡದೆ ಮೇರೆದಪ್ಪಿ ಚಂಡಿಸಿ ಚಲವಿಡಿದು ಇಪ್ಪುದ ಕಂಡು ಕಂಠೀರವರಾಜಕಂದಪ್ಪಸನ್ನಿಭ ಕೋಪಿಸಿದ (ಕಂನವಿ. ೧೮-೨೧) : ಚಂಡಿಪರೊಳ್ ಶೌರ್ಯಂ ಸುಗಿದಂಡಿಪರೊಳ್ ಕರುಣಮಿಟ್ಟ ಕಟ್ಟಾಜ್ಞೆಯನುದ್ದಂಡಿಪರೊಳ್ ಕ್ರೌರ್ಯಂ ನೆಲೆಗೊಂಡಿರೆ ದೊಡದೇವನವನಿಮಂಡಲಮಾಳ್ಗುಂ (ಚಿಕವಿ. ೩-೧೩೨).

[ ಚಂಡಿ$_2$ + – ಇಸು$_2$ ]

**ಚಂಡಿಹಿಡಿ** (ಕ್ರಿ). ಮೊಂಡುಹಿಡಿ ; ಹಟಮಾಡು : ಆ ರಾಯನು ಚಂಡೀ ಹಿಡಿದು ತಾನು ದಾರಿಯನ್ನು ಬಿಡದೆ . . .ಆತನನ್ನು ಬಹಳವಾಗಿ ನೋಯಿಸಲು (ಕೃವಾಆ. ೩೨೩) ; ಇದೇನು ಅನೂ—ಮಗುವಿನ ಹಾಗೆ ಚಂಡಿಹಿಡಿಯುತ್ತೀ (ನಟಸಾ. ೨೪೧) ; ಮಗು ದೀಪಕ ತಾನಿದ್ದಾಗ ಚಂಡಿಹಿಡಿದು . . . ಮನೆಗೆ ಬರಲು ಮನಸ್ಸು ತೋರಿಸಿರಲಿಲ್ಲ (ತೇಮೋಡ. ೬೬) ; ನೀನು . . . ಬರಲಾರೆನೆಂದು ಚಂಡಿಹಿಡಿದು ಕುಳಿತುಕೊಳ್ಳುವುದು ನ್ಯಾಯವೇ ? (ಪತಿ. ೬೮). [ ಚಂಡಿ$_3$ + ಹಿಡಿ$_1$ (<ಪಿಡಿ$_1$) ]

**ಚಂಡಿಳ** 'ಚಂಡಿಲ' ನೋ.

**ಚಂಡೀಶ್ವರ** (ನಾ). ೧. ದುರ್ಗೆಯ ಪತಿ; ಶಿವ. ೨. ಶಿವನ ಪ್ರಮಂಥರಲ್ಲಿ ಒಬ್ಬ : ಶಿವಾಲಯಕ್ಕೆ ಹೋದರೆ ಚಂಡೀಶ್ವರನನ್ನು ದರ್ಶನಮಾಡದೆ ಬರಬಾರದು (ರೂಢಿ). [ ಸಂ. ]

**ಚಂಡು$_1$** 'ಸೆಂಡು' ನೋ.

**ಚಂಡು$_2$** (ನಾ). ಪ್ರಸಿದ್ಧವಾದ ಮೂವತ್ತೆರಡು ಆಯುಧಗಳಲ್ಲಿ ಒಂದು: ಖಡ್ಗ . . . ಚಂಡು . . . ಜವದಾಡೆಗಳೆಂಬ ಬತ್ತೀಸಾಯುಧಗಳಿಂ (ವಿವೇಕ. ೨೬೨). [ ? ]

**ಚಂಡುಮಲ್ಲಿಗೆ** 'ಚೆಂಡುಮಲ್ಲಿಗೆ' ನೋ.

**ಚಂಡುಹಾರಿಸು** (ಕ್ರಿ). ತಲೆಯನ್ನು ಹಾರಿಸು : ರಾಮರಾಜನನ್ನು ಸೆರೆ ಹಿಡಿದು ಅಹಮ್ಮದನಗರದ ಸುಲ್ತಾನನು ಸ್ವತಃ ಅವನ ಚಂಡುಹಾರಿಸಿದನಂತೆ (ಹಿಂದುಇ. ೧೪೬).

[ ಚಂಡು$_1$ (<ಸೆಂಡು) + ಹಾರಿಸು (<ಪಾಱಿಸು) ]

**ಚಂಡುಹೂವು** 'ಚೆಂಡುವೂ' ನೋ.

**ಚಂಡೆ$_1$** 'ಚೆಂಡೆ$_1$' ನೋ.

**ಚಂಡೆ$_2$** (ನಾ). ೧. ದುರ್ಗಾದೇವತೆ; ಚಂಡಿಕಾದೇವಿ. ೨. ಒಂದು ಬಗೆಯ ಸುಗಂಧದ್ರವ್ಯ ; ಕರಿಯ ಕಚೋರ : "ರಾಕ್ಷಸೀ, ಚಂಡಾ . . . ಗಣಹಾಸಕಃ-ಓ ಕರೀಕಚೋರ" (ಸಿದ್ಧಾಂತಿ. ೧೨೪). ೩. ಒಂದು ಬಗೆಯ ಸಸ್ಯ.

[ ಸಂ. ಚಂಡಾ ]

**ಚಂಡೆಮುಳ್ಳು** (ನಾ). ಒಂದು ಬಗೆಯ ಗಿಡ : ಕೆಂಪುಸೀಗೆ, ಕಾಡುಸೀಗೆ, ಅಂತಿರಿಕೆ, ಚಂಡೆಮುಳ್ಳು (ವೃಜಿಗಿ. ೧-೯).

[ ಚಂಡೆ$_2$ + ಮುಳ್ಳು (<ಮುಳ್$_2$) ]

**ಚಂಡೇಶ** (ನಾ). ೧. ಚಂಡಿಕೆಯ ಪತಿ ; ಶಿವನ ಒಂದು ಹೆಸರು. ೨. ಶಿವನ ಪ್ರಮಥರಲ್ಲಿ ಒಬ್ಬ: ಮನದೊಳೆಳ್ಳನಿತು ಶಿವಭಕ್ತಿರದ ದುರ್ಭಾವನೆಯ್ತಂದು ಶಿವಲಿಂಗಮಂ ಮುಟ್ಟುತಿರೆ ಕಂಡು ಸಯ್ರಿರದೆ ಚಂಡೇಶನುರಿದೆದ್ದು ಕೋಲ್ಗೊಂಡು (ಚಂಡೇಶ. ದೀ. ೨೪೯-೨೪) ; ಕಡುಶಿವಾರ್ಚಕನೆಸೆವ ಚಂ[ ಪಾಠಾಂ. ತಂ ]ಡೇಶ ತಂದೆಗಳ ಚರಣಾಂಬುಜಕ್ಕೆ ಶರಣು (ಲಕಿಚಂ. ೩೫-೨೦). [ ಸಂ. (ಚಂಡಾ + ಈಶ) ]

**ಚಂಡೇಶ್ವರ** (ನಾ).=ಚಂಡೇಶ. [ ಸಂ. (ಚಂಡಾ + ಈಶ್ವರ) ]

**ಚಂಡೋಲ₁** (ನಾ). (ಇಂಪಾದ ಸ್ವರವುಳ್ಳ) ಒಂದು ಬಗೆಯ ಪಕ್ಷಿ : ಮುಂಜಾವಿನಲ್ಲಿ ನಾನು ಬಂದಕೂಡಲೇ ಚಂಡೋಲಪಕ್ಷಿಗಳು ನನ್ನೆದುರಿಗೆ ಬರಬೇಕೆಂಬ ಹವಣಿಕೆಯಿಂದ ಆಕಾಶದಲ್ಲಿ ಹಾರಿ ಇಂಪಾದ ರಾಗ ಮಾಡುತ್ತವೆ (ಮುಂಬಯಿ. ೩-೨೭). [ ←ಮರಾ. ಚಂಡೋಲ ; ಹಿಂ. ಚಂಡೂಲ ]

**ಚಂಡೋಲ₂** (ನಾ). ಅಫೀಮು ; ಅಪಿನಿ : ಅವನು ಭಾಂಗ, ಗಾಂಜಾ, ಚಂಡೋಲ ಸೇದುತ್ತಾನೆ (ಸ್ವ. ತಿಚಿ. ೬೦).
[ ←ಮರಾ. ಚಂಡೋಲ ; ಹಿಂ. ಚಂಡೂ ]

**ಚಂತಮ** (ನಾ). ಒಬ್ಬಾತನ ಹೆಸರು : ಉರ್ಬ್ಬಿಯೊಳ್ಸಕಲದೊಳೊರ್ಬ್ಬನೆ ಗಣ್ಡ ಶ್ರೀಚನ್ತಮನೆನ್ನುಮೊಳ್ಪಿಡೆಯನ್ ಗೊನ್ತಿಸುತರಿಂ ಪರಾಕ್ರಮನ್ ಬಲ್ವಡೆ ಸೂದ್ರಕನ್ (ಎಇ. XXIV, ೨೬-೬ ; ಸು. 885).
[ ಚಂತ? + ಅಮ (<ಅಮ್ಮ₁) ]

**ಚಂತ್ರಾಬ್ರೋಯ** (ನಾ). ಒಬ್ಬಾತನ ಹೆಸರು : ಚನ್ತ್ರಾಬ್ರೋಯಸ್ಯ ಕಾಶ್ಯಾ(ಶ)ಪಗೋತ್ರ ಪಾಲಶರ್ಮ್ಮರ್ಣಾ (ಇಆ. VII, ೧೮೮-೭೨ : 668).
[ ? + ಬೋಯ ]

**ಚಂದ₁, ಚೆಂದ₁** (ನಾ). ೧. ಅಂದ; ಸೊಗಸು; ಚೆಲುವು: "ಚಂದ ಲಾವಣ್ಯ ಸಸಿಗಳೋಳ್ ಚಂದ " (ಶಬ್ದಮಂ. ೧೦೦) ; ಪಲವುಮಂದದ ಚಂದದ ಚಿನ್ನ ಪೂಗಳಿಲ್ಲದೆ ಲುಳಿತಾಳಕಂ . . . ಸೊಗಯಿಪ್ಪುದೀಕೆಯಾ (ಆದಿಪು. ೩-೪೮); ರನ್ನದ ಬಾಯಿನಕ್ಕೆ ಪಲವಂದದ ಚಂದದ ಸೀರೆಗೆನ್ನವರ್ತನ್ನವರೆನ್ನದಿತ್ತು (ಮಲ್ಲಿಪು. ೪-೧೦೪) ; ಚಂದ ಮಿಗೆ ಸಾವಿರದ ಸಂಖ್ಯೆಯರಿಂದುಮುಖಿಯರ ತಳಿಗೆಯಾರತಿ ಸಂದಣಿಸಿದವು (ಕುವ್ಯಾಸ. ೧೩-೧೧) ; ನೆತ್ತಿ ಬಿರಿದರು ಚಂದ ದಂತ ಮುರಿದರು ಚಂದ ಗಿರಿವಿದಾರಣದೊಳು ಕರಿಗೆ (ಇಂಚಾಪ. ೭೦-೩೭); ತುಂಬೀ ಸ್ವರ ಚಂದ, ರಂಭೇ ಯೌವನ ಚಂದ (ಗಾದೆ). ೨. ಹೋಲಿಕೆ ; ಸಾದೃಶ್ಯ : " ಒಗೆಗುಂ ತಾವಂದ ಚಂದಮೆನೆ ಪೋಲ್ವೆಯೊಳಂ " (ಕವಿಕಂ. ೧೩೯); ಕಳವಳಿಕೆ ಮಿಗೆ ತಂದು ಕಂದನ ಕೊಲಲು ಕೆಡಹಿದ ಕುಱಿಯ ಚಂದದಿ ತಲೆಯ ಕಾಲೊಳಗಿಕ್ಕಿ ಕೈಯನು ಬಿಗಿದು ಕೆಡಹಿರಲು (ಸಂಭಪ. ೮-೪೩). ೩. ರೀತಿ ; ವಿಧ ; ಪ್ರಕಾರ: " ಸ್ವಸ್ತಿಕಃ, ವರ್ಧಮಾನಃ, ನಂದ್ಯಾವರ್ತಃ, — ಈ ೩ ಮೊದಲಾಗುಳ್ಳುವು ಅರಮನೆಯ ಚಂ[ಪಾಠಾಂ. ಛಂ]ದಂಗಳ್ " (ಹಲಾಯು. ೫೦-೧೫೦) ; ದುರ್ಬೋಧೆಗಳ ನಾನಾಚಂದದಲಿ ಬೋಧಿಸಿ ಸುನೀತಿಯನಂದಗೆಡಿಸಿ (ಕುವ್ಯಾಆ. ೮-೫೪) ; ಕರ್ಮವೆ ಮೂಱು ಚಂದದಿಂ ಸಂಚಿತಾರಬ್ಧವಾಗಾಮಿಯೆಂದು ಫಲಿಸುತ್ತಮಿಹುದಲ್ಲಿ (ಅನುಸಾ. ೭-೨-೧); ಅಂದು ವಿರಹವ್ಯಥೆಯ ನಾನಾಚಂದದಲಿ ಶೈತ್ಯೋಪಚಾರಗಳಿಂದ ಸಂತೈಸಿದರು (ನಳಚ. ೧-೪೪) ; ಒಲಿದವಳೋಪನ ಹಲವು ಚಂದದಿ ಪೊಗಳ್ದುಲಿದಳೆಂದೆನದಿರು ಗಿಳಿಯೆ (ಭರಚ. ೬-೯೧). ೪. ಸರಿಯಾದುದು; ಯೋಗ್ಯವಾದುದು ; ಒಪ್ಪವಾದುದು : ಒಂದಿಂದ್ರಿಯದ ಸುಖವ ನೊಂದು ಮುಖಕರ್ಷಿಸಲು ಚಂದವಾಗದು ಪ್ರಾಣಲಿಂಗಿಗೆ ವಿಚಾರಿಸಲು (ದೀಕ್ಷಾಬೋ. ೧೨೫-೪) ; ಮಂದರಗಿರಿಯ ಪೊತ್ತುದು ಏನು ಚಂದವೆ ಕಂದನೊಯ್ದು ಆಡವಿಯೊಳಿಡುವುದಾವ ನ್ಯಾಯವೆ (ಪುರಂದ. ೨-೭೩-೨) ; ಲಜ್ಜೆ ವಧುವಿಗೆ ಚಂದ . . . ಮಜ್ಜಿಗೆ ಊಟಕೆ ಚಂದ (ಇಂಚಾಪ. ೯೪-೫೭) ; ನಾಗರಿಕರ ಮಾತು ನಗರದಲ್ಲಿ ಚಂದ (ಗಾದೆ). ೫. ಕ್ಷೇಮ ; ಕುಶಲ ; ಸೌಖ್ಯ : ಮಂದಾಕಿನಿಯ ಚಂದವೆಯಂದು ಕುಶಲವನ್ನ ನಸುನಗುತ ಕೇಳಲು (ಸೌಗಂಧಿ. ೨೫). **ಚೆಂದ₁** : ೧. ಬೆಳ್ಳೆಲೆಗಳ . . . ಹೊಂದಾವರೆಯಂತ ಮಾಮಹಸ್ತದೊಳಾಂತ ಚೆಂದವನೇನ ಬಣ್ಣಿಸುವೆ (ಪ್ರೋಹತ. ೧೬-೩೧). ೨. " ಅಂದಂ, ಚೆಂದಂ, ಅನ್ನಂ—ಈ ೩ ಪೋಲ್ವೆ " (ಶಶಸಾ. ೧೫-೨೯೫). ೩. ಇಂದು ನಿಮಗೀ ಹದನ ನಾನೇ ತಂದು ಬಳಿಕೆನ್ನೊಡಲ ಸಲಹುವ ಚೆಂದ ಪೊಳ್ಳಿತು (ಕುವ್ಯಾಭೀ. ೧೦-೩೪). ೪. ಮಗನೆ ಕೇಳ್ಳೆ ಪಾರ್ಥ ಕೂರಂಬುಗಳ ಹಾಸಿಕೆ ಚೆಂದವಾಯಿತು ಹೊಗರಲಗ ತಲೆಗಿಂಬ ರಚಿಸು (ಕುವ್ಯಾಭೀ. ೧೦-೨೨); ಇನಿತೊಂದು ಗರ್ವದ ಬಿಱುನುಡಿ ಚೆಂದವೆ ನಿನಗೆ (ಪ್ರೋಹತ. ೧೨-೯೩). ೫. ಹರಿಶರಣರಾದರಿಗೆ ಚೆಂದವಾಗದ ಕಾರ್ಯವಾವುದು (ಕೋಗಯು. ೧೮-೫೩). ೬. ಅಭಿಲಾಷೆ ; ಇಚ್ಛೆ ; ಆಸಕ್ತಿ : ಕೃತಿಯಿದ ಚೆಂದದೆ ಬುಧರು ಲಾಲಿಪುದು (ಕಂನವಿ. ೧-೧೩).

**ಚಂದಚಂದ** (ದ್ವಿರುಕ್ತಿ) : ತಂದಡವಿ ಗಿಡು ಮರ ಹಗಿನವಂ ಚಂದಚಂದದ ಸೊಪ್ಪು ಸೊಗಡಂ ಪಲವು ಸೆಕ್ಕೆಗಳ ಹೊತ್ತುಕೊಂಡೈತಹನು (ಬಸವು. ೪೩-೩೭).

[ ದೇ.॥ ತಮಿ. ಮಲ. ಚನ್ತ ; ತುಳು. ತೆಲು. ಚಂದ./ಸಂ. ಛಂದ ]

**ಚಂದ₂, ಚಂದು₁, ಚೆಂದ₂** (ನಾ). ೧. ಚಂದ್ರ ; ಚಂದ್ರಮ; ತಿಂಗಳು: "ಜೊನ್ನೊಡಲಂ . . . ಚಂದಂ . . . ತಿಂಗಳ್—ಈ ೨೦ ಚಂದ್ರನ ಪೆಸರ್" (ಶಶಸಾ. ೨-೨೩); "ಚಳಿಗದಿರಂ . . . ಐಕಿಲ್ವೆಳಗಂ ತಣ್ಗದಿರ ಮಂಜುಗ್ಗೆಯಂ ಚಂದಂ" (ಕವಿಕಂ. ೪೩) ; ಗರಣ ತಾಗಿದ ಚಂದನಂತೆ . . . ಮನಸು ತಳ್ಕಂಕ ಗೊಡುತಂ (ಪ್ರಭುಪು. ೬-೩೦). ೨. ಒಬ್ಬಾತನ ಹೆಸರು : ಕುಪ್ಪಯ್ಯನುಂ ಚನ್ದನುಂ ಬಿಕ್ಕಿಯುಂ ತಮುತ್ತ ಮೂವರುಂ ಕಲ್ಲ ನಿಱಿಸಿದರ್ (ಎಕ. VIII, ಸೊರಬ. ೪೫೪-೭; 973). **ಚಂದು₁** : ೧. ಎಳ ಮಿಸೆಯದೇಂ ಬಳೆದುದೊ ಚಂದುಮೊಗದ ಕಟಿಗೆಟಿದೊರೆವೊಲ್ (ಚಿಕವಿ. ೪-೧೫೪). 'ಚಂದುಮಾಮು', 'ಚಂದುಮಟ್ಟು' ಪರಾ. ೩. ತೇದಿ ; ದಿನಾಂಕ ; ತಾರೀಖು: (ಕ). **ಚೆಂದ₂**: ೧. 'ಚೆಂದಗಲೆ' ಪರಾ. [ <ಸಂ. ಚಂದ್ರ ]

**ಚಂದ₃** 'ಛಂದ₁' ನೋ.

**ಚಂದ₄** 'ಚಂದಾ' ನೋ.

**ಚಂದಂಬೆಱು** (ಕ್ರಿ). ಅಂದವನ್ನು ಪಡೆ ; ಚೆಲುವಾಗು ; ಸೊಗಸಾಗು : ಹರಿದೇವಂ ಪೇಳ್ದ ಸತ್ಕಾವ್ಯಮಂ ಚಂ[ಪಾಠಾಂ. ಚೆಂ]ದಂಬೆತ್ತಿರಲೋದು ವಾರ್ತೆ ಸುಖದಿಂ ಕೇಳ್ವಾದರಿಪ್ಪರ್ಗೆ ಸಾನಂದಂ ಮಾಡುಗೆ ಪುಣ್ಯಭೋಗ ಚಯಮಂ (ಗಿರಿಕ. ೧೦-೧೧೩). [ ಚಂದ₁ + ಪೆಱು₁ ]

**ಚಂದಕಲ** (ನಾ). ಒಂದು ಬಗೆಯ ಮರ: ಚಂದಕಲ (ಚಂದೋರ).—ದೊಡ್ಡ ಮರ ; ಕಟ್ಟಿಗೆ ಕೆಲಸದ್ದಲ್ಲ. ಅಂಟು ಔಷಧಿ (ಕಥಾಗಿ. ೩೯) : ಕಂಚುಪ್ರಾಂತಿ, ಚಂದಕಲ, ಬಟ್ಟಚೆಂದ್ರಿಕೆ, ಉಪ್ಲಿಗೆ (ಮ್ಯಜಿಗಿ. ೫೦-೧೦೩೩).
[ ←ಮರಾ. ಚಂದರ ]

**ಚಂದಕಾಣಿಸು, ಚೆಂದಕಾಣಿಸು** (ಕ್ರಿ). ೧. ಚೆನ್ನಾಗಿ ಕಾಣು; ಶೋಭಿಸು: ಅವನು ಚಿತ್ರದಲ್ಲಿ ಬಹಳ ಚಂದಕಾಣಿಸುತ್ತಾನೆ (ರೂಢಿ). **ಚೆಂದಕಾಣಿಸು** : ೨. ಶೋಭಿಸುವಂತೆ ಮಾಡು : ನೀವು ನಮ್ಮ ಕಾರ್ಯಕ್ರಮಕ್ಕೆ ಬಂದು ಅದನ್ನು ಚೆಂದಕಾಣಿಸಬೇಕು (ರೂಢಿ). [ ಚಂದ₁ + ಕಾಣಿಸು ]

**ಚಂದಕಾಣು, ಚೆಂದಕಾಣು** (ಕ್ರಿ). ಚೆಲುವಾಗಿ ತೋರು : " ಒಪ್ಪು, ಅಮರು, ಎಸೆ, ಕಂಗೊಳಿಸು, ಒಡಂಬಡು, ಚಂದಕಾಣು, ಸೊಗಸು " (ಕಂನುಹು. ೮೦). **ಚೆಂದಕಾಣು** : ಉಡಿಗೆತೊಡಿಗೆಗಳಿಂದ ಹೆಂಗಸು ಚೆಂದ ಕಾಣುವಳು (ಇಂಚಾಪ. ೨೩೩-೫೩). [ ಚಂದ₁ + ಕಾಣು (<ಕಾಣ್) ]

**ಚಂದಕಾಱ** (ನಾ). ಸೊಗಸುಗಾರ; ಅಂದಗಾರ: ಅವಿಚಳಲೀಲೆಯೊಳಾಱು ಖಂಡದ ರಾಜನಿವಹದ ಸಂಪತ್ತನೆನ್ನ ತವರುಮನೆಯ ಚಂದಕಾಱ ನೀನಾಳೆಂದು ದಿವಿಜ ತಿಲಕವಿಟ್ಟಳೊಡನೆ (ಭರಚ. ೩೫-೬೨). [ಚಂದ₁+ -ಕಾಱ]

**ಚಂದಗಮುಂಡ** (ನಾ). ಒಬ್ಬಾತನ ಹೆಸರು: ಭವಗಮುಣ್ಡನು ಚನ್ದಗಮುಣ್ಡನು ಹೆಡೆವೊಟಲ್ಲಾಡು ಬನವಸಿಯ ನಗರಮುಂ ಸಾಕ್ಷಿ (ಎಕ. VIII, ಸೊರಬ. ೫೭೦-೩೭; 692). [ ಚಂದ್ರ₂ + ಗಮುಂಡ₀ (<ಗಾಮುಂಡ) ]

**ಚಂದಗಲ್** (ನಾ). ಚಂದ್ರಕಾಂತಶಿಲೆ: "ಚಂದ [ಪಾಠಾಂ. ದ್ರ]ಗಲ್ಮುಳಿರ್ಗಲ್ಲೆ ನಲೊಸರ್ಗಲ್" (ಚತುನಿ. ೧೦೦). [ ಚಂದ್ರ₂ + ಕಲ್₃ ]

**ಚಂದಗೆಡಿಸು** (ಕ್ರಿ). ಸೊಗಸನ್ನು ಕೆಡಿಸು; ಅಂದಗೆಡುವಂತೆ ಮಾಡು: ಮತ್ತೆ ಕೆಲ ಹೋಳುಗಳ ಚಂದಗೆಡಿಸದೆ ಶುಂಠಿಯುಳ್ಳಿಗಳನಿಕ್ಕಿ ಯೇಲಕ್ಕಿಯಂ ತಳಿದುಕೊಂಡು (ಸೂಪಶಾ. ೪-೭೯). [ ಚಂದಗೆಡು + – ಇಸು₃ ]

**ಚಂದಗೆಡು, ಚೆಂದಂಗೆಡು** (ಕ್ರಿ). ಸೊಗಸುಗುಂದು; ಅಂದಗೆಡು: ಇಂದು ಕೊಡುವೊಡೆಯಂ ಕೊಳುವವಂ ಚಂ[ಪಾಠಾಂ. ಛಂ]ದಗೆಟ್ಟರು ಈ ದಿನದೊಳೇನೆಂದು ನಗುವರೊ (ಬಸಪು. ೨೯-೧೫). **ಚೆಂದಂಗೆಡು:** ಚಂದಂಗೆಡದ್ಯೆಗಣೆಯಂ ನಾಲ್ದಲೆಯಾನದವಾಣೀಶಂ . . . ಎಂಬಂದದಿನತಿವಿಭ್ರಾಜಿಸಿದಂ ರಾಜಪ್ರಭಾರಾಜಸುತಂ(ಜಯಂಕಾ. ೨-೬೯). [ ಚಂದ₁ + ಕೆಡು₁ ]

**ಚಂದಗೇಡಿ, ಚೆಂದಗೇಡಿ** (ನಾ). ೧. ಅಂದವಿಲ್ಲದವನು; ಕುರೂಪಿ: "ಚಂದಗೇಡಿ-ಕುರೂಪಿ" (ಜಾನಕೋ. ೫೪); ಚಂದಗೇಡಿ ಕೊರಳಾಗೆ ಚವುಕ ಕಟ್ಟಿದರೆ ಮಂದಿ ನೋಡಲೆಂದು ಕಂಬಿಯ ಮೇಲೆ ಕೂತ (ಗಾದೆ). ೨. ಅಂದವನ್ನು ಕೆಡಿಸುವವನು. 'ಚಂದಗೇಡಿತನ' ಪರಾ. **ಚೆಂದಗೇಡಿ:** (೬). [ ಚಂದ₁ + ಕೇಡಿ₁ ]

**ಚಂದಗೇಡಿತನ, ಚೆಂದಗೇಡಿತನ** (ನಾ). ಚಂದವನ್ನು ಕೆಡಿಸುವಿಕೆ; ಅಂದವನ್ನು ಹಾಳುಮಾಡುವಿಕೆ: ಈ ಅಂದನಿಸಿಕೊಂಬೋ ಚಂದಗೇಡಿತನಾ ಯಾಕ ಬೇಕವ್ವಾ ನಮಗ ? (ಹೊಸಂಸಾ. ೭೮). **ಚೆಂದಗೇಡಿತನ:** ಪ್ರಕೃತಿಯನ್ನು ವಿಕೃತಿಗೊಳಿಸುವ ಚೆಂದಗೇಡಿತನವನ್ನು ಚಾತುರ್ಯದಿಂದ ಬದಿಗೊತ್ತಿ (ನೆಲಮು. VII ನಾಲ್ಕುಮಾತು). [ ಚಂದಗೇಡಿ + – ತನ ]

**ಚಂದಣ** (ನಾ). ಒಂದು ಬಗೆಯ ಮರ; ಚಂದನವೃಕ್ಷ; ಶ್ರೀಗಂಧ: "ಗಂಧಸಾರಃ, ಮಲಯಜಃ, ಭದ್ರಶ್ರೀಃ, ಚಂದನಃ-ಳಿ ಚಂದನಗಿಡ,ಚಂದಣ" (ಸಿದ್ಧಾಂಕಿ. ೧೮೦); ಕರಚಂಡಘಾತದೊಳ್ ತೊಂಡುಗೆಡದ ತುರಗದಳಂಗಳುಂ ಬಟಿಸಿಡಿಲ ಬಳಗಂ ಚಂದಣದ ಪೆರ್ಮರಗಾಡಂ ದಿಂಡುಗೆಡಪಿದಂತಿರ್ದುವು (ಅನಂಪು. ೧೪-೭ ವ); ಬಸುರಿ ಬಿಳುನೆತ್ತಿ ತುಂಬುರ ಬಿಕ್ಕಿ ನೆಲ್ಲ ಚಂದಣವತ್ತಿ . . . ನಾನಾವೃಕ್ಷಜಾತಿಯಿಂದೆಸವ ಘೋರಾರಣ್ಯ ಕಣ್ಗೆಸೆದುದು (ಸಿಂಗಿರಾ. ೩೦-೯). [ <ಪ್ರಾ. ಚಂದಣ./ಸಂ. ಚಂದನ ]

**ಚಂದಣಗಿತ್ತಿ** (ನಾ). ಅಡಿಗೆಯವಳು; ರಂದಣಗಿತ್ತಿ: ಬಂದ ಚಂದಣಗಿತ್ತಿಯರೆಲ್ಲರು ಓಗರವನುಂಡು ಹೋದರಲ್ಲದೆ ಮದುವಣಿಗನ ಕಂಡು ಹೋದುದಿಲ್ಲ (ಪೋಳಿಮಾ. ೧೯೫-೭೨೭).
[ ☞ ಇದು 'ರಂದಣಗಿತ್ತಿ' ಎಂಬುದರ ಅಪಲಿಖಿತವಿರಬಹುದು. ]

**ಚಂದನ** (ನಾ). ೧.=ಚಂದಣ: "ಚಂದನಂ, ಮಳಯಜಂ, ಶ್ರೀಖಂಡ (ಃ)೦, ರೋಹಿಣೀದ್ರುಮಃ – ಈ ೪ ಸಿರಿಗಂಧಂ" (ಹಲಾಯು. ೬೯-೩೯೦); ಮಲಯಮೇಖಲೆಯಂತೆ ಚಂದನಪಲ್ಲವಾವತಂಸೆಯುಂ (ಕಾದಂಪೂ. ೪೯); ಚಂದನದ ಕುಜದೊಳ್ ಕುಸುಮುವಜಿಸುವರೆ (ನಂಬಿರ. ೧೩-೭). ೨. ಶ್ರೀಗಂಧದ ಕೊರಡನ್ನು ತೇದುಮಾಡಿದ ಗಂಧ: "ರೋಹಿಣಿ ಮಲಯಜಂ ಚಂದನಂ ಗಂಧಮೆಂದೆನಿಕ್ಕುಂ" (ಮಂಗರಾ. ೯೯-೨೦); ಬೆಳಗುವ ಚಂದನದಣ್ಪಿಂ . . . ಕರಮೆಸೆದಂ (ಕಾದಂಪೂ. ೨೯); ಮೃಗಮದ ಘುಸೃಣಚಂದನಚರ್ಚೆಯೊಳಂ . . . ಪಸದನಂಗೆಯ್ದು (ಜಗವಿ. ೪-೮೦ ವ).

**ಚಂದನಚಂದ್ರ**=ತಂಪನ್ನುಂಟುಮಾಡುವ ಚಂದ್ರನಂತಿರುವವನು; ಒಂದು ಬಿರುದು: ಧರೆಯ ಪೊರೆವ ಚನ್ದನಚಂದ್ರ ಪಗೆವರಾದಿತ್ಯ ನಾಮಾದಿ ಸಮಸ್ತಪ್ರ[ಶ]ಸ್ತಿಸಹಿತ ಶ್ರೀ ಮನ್ನ ನ್ನೆ ಯ ನಾಯಿಮರಸ [ನುಂ] (ಸೌಇಇ. XX, ೨೬-೧೧; 1040). [ ಸಂ. ]

**ಚಂದನಕರ್ದಮ** (ನಾ). ಶ್ರೀಗಂಧದ ಕೊರಡನ್ನು ತೇದುಮಾಡಿದ ಕಲ್ಕ,-ಲೇಪನದ್ರವ್ಯ: ಚಂದನಕರ್ದಮದಣ್ಪು . . . ಬಗೆಗೊಂಡುದು (ಜಗವಿ. ೨-೭೦). [ ಚಂದನ + ಕರ್ದಮ ]

**ಚಂದನಕುಜ** (ನಾ). ಗಂಧದ ಮರ; ಶ್ರೀಗಂಧ: ಪಾವು ಸುತ್ತಿರಲನಾಹತ ಲೀಲೆಯೊಳಂದು ಬಾಳಚಂದನಕುಜದಂತೆ ಕೃಷ್ಣನೆಸೆದಿರ್ದೊಡಂ (ಜಗವಿ. ೩-೯೦). [ ಚಂದನ + ಕುಜ ]

**ಚಂದನಕೆಱೆ** (ನಾ). ಒಂದು ಸ್ಥಳದ ಹೆಸರು: ಆತನ ಮಗ ಹಿಟೆಯ ಚಂದನಕೆಱೆಯ ಬಡ × × ಇಱಿದು ದನವ ಕೊಂಡು ಹೋ ಹಲ್ಲಿ (ಎಕ. VII, ಶಿವಮೊ. ೭೭-೪; ?). [ ಚಂದನ? + ಕೆಱೆ ]

**ಚಂದನಕ್ಷೋದ** (ನಾ). ಚಂದನದ ಚೂರ್ಣ; ಗಂಧದ ಹುಡಿ: ಕೆಂಪಿಲ್ಲದ ಬಿಸಿಲುಣ್ಮುವ ಕಂಪಿಲ್ಲದ ಸಾಂದ್ರಚಂದನಕ್ಷೋದಂ . . . ಎಂಬೆಂ ಪೊಸಬೆಳ್ದಿಂಗಳಂ ಬಟಿಕ್ಕೇನೆಂಬೆಂ (ಚಂದ್ರಪು. ೮-೪೪). [ ಚಂದನ + ಕ್ಷೋದ ]

**ಚಂದನಗಾಡು**(ನಾ).ಗಂಧದ ಮರಗಳ ಕಾಡು: ಬದಿರ್ವೆತ್ತಗಳ ಲೋಬಾನ ಚಂದನಗಾಡಿನೊಳ್ ಪಂದಿ ಮತ್ತೇಭಂಗಳಿರೆ ಕಂಡರವರು (ಪೋಹತ. ೧೯-೨೧). [ ಚಂದನ + ಕಾಡು₂ ]

**ಚಂದನಚರ್ಚೆ** (ನಾ). ಚಂದನವನ್ನು ಬಳಿಯುವುದು; ಗಂಧದ ಲೇಪ: ದಿವ್ಯ ಭಾಷಾರಸ ಪೂರ್ಣಮಂ ಶ್ರುತಪಯೋಧಿಯನೀಸಿದ ವರ್ಧಮಾನ ಭಟ್ಟಾರಕರಂ ವಚಸ್ಸುರಭಿ ಚಂದನಚರ್ಚೆಗಳಿಂದಮರ್ಚಿಪೆಂ (ಪಂಠಾಮಾ. ೧-೦೪). [ ಚಂದನ + ಚರ್ಚೆ ]

**ಚಂದನಬಟವ** (ನಾ). ಒಂದು ಬಗೆಯ ಔಷಧಿ ಸಸ್ಯ: ಚಿಲ್ಲೀ (ಚಂದನಬಟವ) . . . ಜೇಷ್ಠಮಧು ಇವೆಲ್ಲ ಮಧುರ (ಅಷ್ಟಾಂಗ. ೧೩೮-೯೩ ಅರ್ಥ).
[ ←ಮರಾ. ಚಂದನಬಟವಾ ]

**ಚಂದನವಕ್ಕಿ** (ನಾ). ಒಂದು ಬಗೆಯ ಪಕ್ಷಿ: ಶಕುನಿ ಚಂದನ[ಪಾಠಾಂ. ಣ] ವಕ್ಕಿ ಚಕೋರಿ . . . ಗಿಡುಗಂಗಳೆಂಬ ಖಗವೃಂದದಿನಲ್ಲಿಯರಣ್ಯಮೊಪ್ಪುಗುಂ (ಗಿರಿಕ. ೧-೭೪). [ ಚಂದನ? + ಪಕ್ಕಿ₁ ]

**ಚಂದನಸಾರ** (ನಾ).=ಚಂದನಕರ್ದಮ: ಘನಸಾರ ಚಂದನಸಾರ ಪ್ರಮೃಷ್ಟ ಕರತಳನುಮಾಗಿ (ಆದಿಪು. ೧೧-೨೭ ವ). [ ಚಂದನ + ಸಾರ₃ ]

**ಚಂದನಾಚಲ** (ನಾ). ಗಂಧದ ಮರಗಳು ಬೆಳೆಯುವ ಬೆಟ್ಟ; ಮಲಯಪರ್ವತ. [ ಚಂದನ + ಅಚಲ ]

**ಚಂದನಾದಿಚೂರ್ಣ** (ನಾ). ಶ್ರೀಗಂಧವೇ ಮೊದಲಾದ ದ್ರವ್ಯಗಳಿಂದ ಸಿದ್ಧಪಡಿಸಿದ ಔಷಧಿಚೂರ್ಣ: ಚಂದನಾದಿಚೂರ್ಣ . . . ತೆಗೆದುಕೊಳ್ಳಲು ಸರ್ವಪೈತ್ಯ, ಸಕಲ ಮೂತ್ರರೋಗ, ವಾತಜ್ವರ ಮುಂತಾಗಿ ಗುಣಮಕ್ಕುಂ (ಸಕವೈ. ೦೪೩): ಚಂದನಾದಿಚೂರ್ಣಃ–ತೃಷೆಗೆ-ಶ್ರೀಗಂಧ, ಚಂಗಲಕೋಷ್ಠ . . . ದ್ರಾಕ್ಷೆಹಣ್ಣು ಇವನ್ನು ಸಮಾನತೂಕದಿಂದ ಚೂರ್ಣವ ಮಾಡಿ ಸಕ್ಕರೆ ಸಹ ಮೆಲ್ಲಲು ತೃಷೆ, ಛರ್ದಿ, ಬಿಕ್ಕಳು, ಪಿತ್ತ, ಭ್ರಮೆ, ಅರೋಚಕ, ಇವು ಗುಣ (ವಿವೈವಿ. ೨೭). [ಚಂದನ + ಆದಿ₂ + ಚೂರ್ಣ₂]

**ಚಂದನಾದಿತೈಲ** (ನಾ). ಶ್ರೀಗಂಧ ಮೊದಲಾದುವುಗಳ ಸಾರವನ್ನು ಬೆರಸಿದ ಎಣ್ಣೆ: ಚಂದನಾದಿತೈಲ–ಶ್ರೀಗಂಧ, ಯಷ್ಟಿಮಧುಕ, ಅಗಿಲು . . . ಒಂದು ಬಳ್ಳ ಎಣ್ಣೆಯನ್ನು ಹನಿಸಿ ಕಾಯಿಸಿ ಪಾಕದಲ್ಲಿಳುಹಿಕೊಂಡು ದೇಹಕ್ಕೆ ಲೇಪವನ್ನು ಮಾಡಲು ಪಿತ್ತಜ್ವರ, ದಾಹಜ್ವರ ಸಹ ಮಾಣುವುವು (ಸಕವೈ. ೮೪). [ ಚಂದನ + ಆದಿ₂ + ತೈಲ ]

**ಚಂದನೋಪಲ** (ನಾ). ಗಂಧ ತೇಯುವ ಕಲ್ಲು; ಸಾಣೆಕಲ್ಲು: "ತೇವ ಸಾಣೆಯ ಕಲ್ಲು ಚಂದನೋಪಲಮೆನಿಕ್ಕುಂ" (ಮಂಗರಾ. ೬೦-೧೯).
[ ಚಂದನ + ಉಪಲ ]

**ಚಂದಪ್ಪ** (ನಾ). ಚಂದ್ರ; ಶಶಿ: ಚಂದಪ್ಪ ಮೂಡ್ಯಾನ ಚಿಗರೀಯ ನೇರ್ಯಾನೋ (ಗಾಳಿಗು. ೦೭). [ ಚಂದ₂ + ಅಪ್ಪ₁ ]

**ಚಂದಮ**, ಚಂದವ, ಚಂದುವ, ಚೆಂದವ (ನಾ). ಚಂದ್ರ; ಶಶಿ : ಚಂದಮನಿಂ ಬಾಂದೊಱೆಯಿಂ ಪವಳದ ಚಂದಮನೇಳಿಪವೊಲ್ (ಉದ್ಭದೇ. ೬-೨೦). **ಚಂದವ:** ಬೆಳ್ಗೊಡೆಯಾಗಸಕೆಟ್ಟ ಚಂದವಂ ಗಡ (ಕಬ್ಬಿಗಕಾ. ೧೮೩). **ಚಂದುವ:** ಅರಲಂಬಿಂ ಗಱಸನ್ನೆದೋಱುವನನಂಗಂ ಚಂದುವಂ ಕೂಂಕುವಂ ಕರದಿಂ ತಂಬೆಲರೆಂಬನಡ್ಡಸುಟಿವಂ (ಅನಂಪು. ೮-೨೦). **ಚೆಂದವ:** ಇರುಳ್ಗಣ್ಣನೆಂದು ಚೆಂದವನಕ್ಕುಂ (ರಾಮಾಶ್ವ. ೮೫-೨೮). 'ಚೆಂದವಗಲ್' ಪರಾ. [ <ಪ್ರಾ. ಚಂದಮ. / ಸಂ. ಚಂದ್ರಮಸ್ ]

**ಚಂದಮಾಮ**, ಚಂದಮಾವ, ಚಂದುಮಾಮ (ನಾ). (ಮಕ್ಕಳು) ಚಂದ್ರನನ್ನು ಅಕ್ಕರೆಯಿಂದ ಸಂಬೋಧಿಸುವ ಹೆಸರು ; "ಮಕ್ಕಳು ಚಂದ್ರನಿಗೆ ಕರೆಯುವುದು" (ಜಾನಕೋ. ೩೪) : "ಚಂದಮಾಮ" ಎಂದು ಕರೆವುದಾರನು ಅಮ್ಮ? (ಕಪಪು. V, ೧೫೬). **ಚಂದಮಾವ:** ಕುವಲಯನೇತ್ರನ ಭಾವ ಕಬ್ಬುವಿಲ್ಲನ ಮಾವ ಕುಮುದಗಳ ಜೀವವೊಪ್ಪುವ ಚಂದಮಾವ (ಸಾರಂಗ. ೩೧). **ಚಂದುಮಾಮ:** ಮಗುವಿಗೆ ಚಂದುಮಾಮನನ್ನು ತೋರಿಸು (ರೂಢಿ). [ ಚಂದ$_2$ + ಮಾಮ ]

**ಚಂದಮಾವ** 'ಚಂದಮಾಮ' ನೋ.

**ಚಂದಮ್ಮ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಮಾರಿ ಮಸಣಿ ಜಕ್ಕಿ . . . ಕಚ್ಚಿನ ಗಡಿಗೆಮ್ಮ ಸುಳ್ಳು ಚಂದಮ್ಮನು ಖಂಡಿ ಕೇತಾರಯ್ಯ (ವಿಸಾಸು. ೫೮-೨). [ ಚಂದ$_2$ + ಅಮ್ಮ$_2$ ]

**ಚಂದಯ್ಯ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಚನ್ದಯ್ಯಂ (ಎಕ. X, ಗೋರೀಬಿ. ೬೦-೧ ; ಸು. ೩೦೦) ; ನಾಗಮಯ್ಯನ ಮಗಂ ಚನ್ದಯ್ಯನುಂ ಸಿರಿಯಣ್ಣನುಂ (ಎಕ. X, ಚಿಂತಾಮ. ೪೪-೧೩ ; 960 ?).

[ ಚಂದ$_2$ + ಅಯ್ಯ$_1$ ]

**ಚಂದಲದೇವಿ** (ನಾ). ಒಬ್ಬಾಕೆಯ ಹೆಸರು: ಶ್ರೀ[ನೃ]ತ್ಯವಿದ್ಯಾಧರಿ ಚಂದಲದೇವಿಯರ ಬಿಣಪದಿಂದ (ಕಇಅ. ೯೨-೧-೪೪ ; 1082) ; ನನ್ನಿಯೊಳಿನ್ನು ಗರ್ಬ್ಬಿತೆಯರಾರ್ಗ್ಗಳ ಚಂದಲದೇವಿಯಂದದಿಂ (ಎಕ. VII, ಶಿವಮೊ. ೬೪-೮೯ ; 1112 ? ). [ ಚಂದಲ$_0$ + ದೇವಿ ]

**ಚಂದವ** 'ಚಂದಮ' ನೋ.

**ಚಂದವರಿ** (ಕ್ರಿ). ಅಂದಗೆಡು; ಅಸ್ತವ್ಯಸ್ತವಾಗು: ಬಳಿಸಂದ ದಂಡೊಡೆದು ಚಂದವರಿಯಲು ಮಂದಾನಿಲನಂ ಪರಿದೈದಿ . . . ಸೂಚಿಸಲ್ಕೆ (ನವಮೋ. ೬-೫೦). [ ಚಂದ$_1$ + ಪರಿ$_1$ ]

**ಚಂದವಳಿ** (ಕ್ರಿ). ಅಂದಗೆಡು ; ಸೊಗಸುಗುಂದು : ಪರಿಮಳಿಸದಡೆ ಚಂದವಳಿದಡೆ ವಿರಸವಾದಡೆ ಬೇಱೆ ಕಂಪಾವರಿಸಿದಡೆ (ಬಸವು. ೪೪-೨೬).

[ ಚಂದ$_1$ + ಅಳಿ$_1$ (<ಅಱ$_1$) ]

**ಚಂದವಾವುಗೆ** (ನಾ). ಸೊಗಸಾದ ಪಾದುಕೆ; ಚೆನ್ನಾದ ಹಾವುಗೆ: ದೇವರ ಚಂದ[ಪಾಠಾಂ. ಚಮ್ಮ, ಸಮ್ಮ] ವಾವುಗೆಗಳಂ ಪಿಡಿದೆಂಬುದನಿಂಬುಕೆಯ್ವ ಸದ್ಭಾವಮೆ ಸಾಲ್ಗುಂ (ಪಂಚಾಮಾ. ೬-೬೮). [ ಚಂದ$_1$ + ಪಾವುಗೆ ]

**ಚಂದಸಿಗ** 'ಛಾಂದಸಿಗ' ನೋ.

**ಚಂದಳ** 'ಚೆಂದಳ' ನೋ.

**ಚಂದಳಿರ್** 'ಚೆಂದಳಿರ್' ನೋ.

**ಚಂದಾ**, ಚಂದ$_4$ (ನಾ). ವಂತಿಗೆ ; ವರ್ಗಣಿ : ಗ್ರಾಮಸ್ಥರು ಚಂದಾ ಹಾಕಿ ಕೊಟ್ಟರು (ಹುಟ್ಟಹ. ೧೫) ; ನಮ್ಮ ಸಮಿತಿಗೆ ನೀವು ಏನೂ ಚಂದಾ ಕೊಡಬೇಕಾಗಿಲ್ಲ (ಭಾರತಿ. ೫೧) ; ಚಂದಾ ವಸೂಲಿಗೆ ಬಂದಿರುವೆವೆಂದು ಹೇಳಿದ ಕೂಡಲೇ . . . ಬೈದು, ಹೊರಗೆ ಕಳುಹಿಸಿದರು (ರಾಯಕ. ೬೦). **ಚಂದ$_4$:** ಸಂಘದ ವಾರ್ಷಿಕ ಚಂದ ಎರಡುರೂಪಾಯಿ (ರೂಢಿ).

[ ←ಪಾರ. ಹಿಂ. ಮರಾ. ಚಂದಾ ]

**ಚಂದಾಉರ** 'ಚಂದಾವುರ' ನೋ.

**ಚಂದಾದಾರ** (ನಾ). ವಂತಿಗೆ ಕೊಡುವವನು ; ವರ್ಗಣಿದಾರ ; ಪತ್ರಿಕೆ, ಪುಸ್ತಕ, ಮೊದಲಾದುವುಗಳಿಗೆ ನಿಯತವಾದ ಅವಧಿಗೆ ಹಣ ಸಂದಾಯಮಾಡಿ ಆಯಾ ಪತ್ರಿಕೆ ಮೊದಲಾದುವನ್ನು ಪಡೆಯುವವನು : ಹಲವಾರು ಬಗೆಯ ದೈನಿಕ, ಸಾಪ್ತಾಹಿಕ, ಮಾಸಿಕ ಪತ್ರಿಕೆಗಳಿಗೆ ಅವರು ಕಾಯಂ ಚಂದಾದಾರರಾಗಿದ್ದರು (ರತ್ನಗೋ. ೫).

[ ಚಂದಾ + ದಾರ$_4$ ]

**ಚಂದಾಪಟ್ಟಿ** (ನಾ). ಚಂದಾ ಕೊಡುವವರ ಪಟ್ಟಿ; ವರ್ಗಣಿ ಕೊಡುವವರ ಯಾದಿ : ಕೆಲವರು ಅವನು ಬಂದೊಡನೇ ಚಂದಾಪಟ್ಟಿಗೆ ಸಹಿಹಾಕಿ ಶ್ರೀರಾಮರಕ್ಷೆ ಎಂದು ಕೈಮುಗಿದು ಬಿಡುವರು (ವೃದ್ಧವಿ. ೬೩).

[ ಚಂದಾ + ಪಟ್ಟಿ$_2$ ]

**ಚಂದಾಯ$_1$**, ಚಂದಿ (ನಾ). "ಇಪ್ಪಾರುಚಾವಣಿಯ ಕೊನೆಯಲ್ಲಿರುವ ಗೋಡೆಯ ತ್ರಿಕೋಣಾಕಾರದ ಭಾಗ ; ಚಂದಾಯ" (Gable. ಇಂಕನಿ). **ಚಂದಿ :** 'ಚಂದಿಗೋಡೆ' ಪರಾ. [ ←ಮರಾ. ಚಾಂದಈ ]

**ಚಂದಾಯ$_2$** (ನಾ). ಚಂದಾ ಮೂಲಕ ಬರುವ ಆದಾಯ : ತನ್ನ ಪಾಠಶಾಲೆಗಾಗಿ ಏನಾದರೂ ಚಂದಾಯವನ್ನು ದೊರಕಿಸಬೇಕೆಂಬುದು ಆತನ ಬಯಕೆ (ಗೌರಾಂಗ. ೩೦). [ ಚಂದಾ + ಆಯ$_7$ ]

**ಚಂದಾವುರ, ಚಂದಾಉರ** (ನಾ). ಒಂದು ಊರಿನ ಹೆಸರು : ಕಾದಂಬ ಚಕ್ರವರ್ತ್ತಿ ಚಂದಾವುರದ ತೈಲಪದೇವನ ಮಗ ಕಾವದೇವನ ಪೆಂಪೆಂತೆಂದಡೆ (ಎಕ. VIII, ಸಾಗರ. ೩೦-೧ ; ಸು. 1000 ?) ; ಸಂಕಿಯ ಸಹಣಿಯರು ಘಟ್ಟದ ಕೆಳಗಣ ಚಂದಾವುರದ ಬನವದೇವನ ಮೇಲೆ ನಡದಲ್ಲಿ (ಎಕ. VII, ಹೊನ್ನಾಳಿ. ೧೧೭-೩ ; 1319 ?). **ಚಂದಾಉರ :** ಶ್ರೀವೀರಕಾವದೇವರಸರು ರಾಜಧಾನಿ ಚಂದಾಉರದಲು ಸುಖ ಸಿಂಹಾಸನಾಧಿರೂಢರಾಗಿ (ಎಇ. XXVII, ೨೮-೨೫ ; 1256). [ ಚಂದ$_2$ ? + ಪುರ$_3$ ]

**ಚಂದಿ** 'ಚಂದಾಯ$_1$' ನೋ.

**ಚಂದಿಕಬ್ಬೆ** (ನಾ). ಒಬ್ಬಾಕೆಯ ಹೆಸರು : ಶಾನ್ತನ ಲಲಿತಶ್ರೀವನಿತೆಯಾದ ವಿಭವಮನೇವೊಗಳ್ವುದೋ ಚಂದಿಕಬ್ಬೆಯರಸಿಯ ಪೆಂಪ (ಸೌಇಇ. XX, ೧೪-೨೨ ; 980). [ ಚಂದಿಕ$_0$ + ಅಬ್ಬೆ$_1$ ]

**ಚಂದಿಗ** (ನಾ). ಒಬ್ಬಾತನ ಹೆಸರು : ಓಲೆಯ ಚನ್ದಿಗನುಂ ಗಾಳಿಗನುಂ ಮೊದಲಾಗೆ ಆಯ್ನೂರ್ಬ್ಬರುಂ ತುಪ್ಪವನುಟಿದೋರ್ (ಸೌಇಇ. XI-i, ೧೨-೧೪ ; 869) ; ಸಾನ್ತರನ ಶ್ರಿಯಾಚಳವಿ ಶ್ರಿಮತ್ ಚನ್ದಿಗಮ್ (ಎಕ. VII, ಶಿಕಾರಿ. ೨೪೪-೪ ; 902). [ <ಚಂದ$_2$ ]

**ಚಂದಿಗವೊಳಲ್** (ನಾ). ಒಂದು ಊರಿನ ಹೆಸರು : ಕೊಣ್ಡ ಚನ್ದಿಗವೊಳಲ ನಡುವಣ ಹೊಲದ ಕುಳಿಯ ಕೆಯ್ಯ ಪೊರೆಯ ಗುಣಿಗನಲು ಮತ್ತರ್ ೧ (ಎಕ. VII, ಶಿಕಾರಿ. ೨೮೬-೧೧ ; 1012).

[ ಚಂದಿಗ + ಪೊಳಲ್ (<ಪೊಟಲ್) ]

**ಚಂದಿಗೋಡೆ** (ನಾ). ಚಂದಾಯದ ಗೋಡೆ : ತಾಟು ಮಾಡಬೇಕಾದರೆ, ಮೊದಲು ಚಂದೀಗೋಡೆಗಳ ಮೇಲೆ ಬೆಲಗುಗಳನ್ನು ಅಡ್ಡಹೇರುವರು (ಮುಂಬಯಿ. ೪-೧೧೪). [ ಚಂದಿ (<ಚಂದಾಯ$_1$) + ಗೋಡೆ ]

**ಚಂದಿಯಣ್ಣ** (ನಾ). ಒಬ್ಬಾತನ ಹೆಸರು : ಚನ್ದಿಯಣ್ಣಂಕ × × × ಾದಿ ಪಲರಂ (ಎಕ. III, ನಂಜನ. ೬೫-೮ ; 870). [ <ಚಂದ$_2$ + ಅಣ್ಣ$_1$ ]

**ಚಂದಿಯಮ್ಮರಸ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಚನ್ದಿಯಮ್ಮರಸರ್ದೇವರ್ಗ್ಗೆ ಪುಣ್ಣುಮ್ ಕೊಟ್ಟರ್ (ಎಕ. XI, ಚಿತ್ರದು. ೨೪-೧ ; ಸು. 500 ? ). [ <ಚಂದ$_2$ + ಅಮ್ಮ$_1$ + ಅರಸ$_1$ ]

**ಚಂದಿಯರಸ** (ನಾ). ಒಬ್ಬಾತನ ಹೆಸರು : ಭೂಮಿಯಂ ಕೊಣ್ಡು ಸಾಹಸದಿಂ ಮಾಡಿ ಚನ್ದಿಯರಸರು ದೇವರ್ಗ್ಗೆಗೊಟ್ಟರ್ (ಎಕ. VII, ಶಿಕಾರಿ. ೨೮೬-೭ ; ಸು. 900). [ <ಚಂದ$_2$ + ಅರಸ$_1$ ]

**ಚಂದಿರ$_1$** 'ಸಂದುರ' ನೋ.

**ಚಂದಿರ$_2$** (ನಾ). ಚಂದ್ರ ; ತಿಂಗಳು : "ಜೊನ್ನೊಡಲಂ , . . ಚಂದಿರಂ ಚಂದಂ . . . ತಿಂಗಳ್ – ಈ ೨೦ ಚಂದ್ರನ ಪೆಸರ್" (ಕಕಸಾ. ೨-೨೩); ಚಂದಿರ ವೀರವಸಂತ ಮಂದಾನಿಲ ಬಂದಿರೆ ಮೂವರ ಕರೆದು (ವೋಹತ. ೫-೩೬) ; ಚಂದಿರನೊಳಗೆ ಕಪ್ಪುಂಟು ಬೆಳ್ದಿಂಗಳು ಕಂದಿ ಕುಂದಿಹುದೊ ನಿರ್ಮಲವೊ (ಭರಚ. ೧-೧೦) ; ನಂದಿಯನು ಏಱಿದನ ಚಂದಿರನ ಸೂಡಿದನ ಕಂದನ ಬೇಡಿ ನಲಿದಾನು ನೆನೆವುತ್ತ ಮುಂದೆ ಪೇಳುವೆನು (ಸರ್ವಜ್ಞ. ೧); ಚಂದಿರನಂ ರೋಹಿಣಿಯೊಡನೊಂದಿ ಪೊದಟ್ದುದಿಸಿ ಬಂದಂ (ಚಿಕವಿ. ೬-೨೩೦). [ ಸಂ. ]

**ಚಂದಿರವಟ್ಟು$_1$** (ನಾ). ಕುಂಕುಮದ ಬೊಟ್ಟು ; ಸಿಂಧೂರದ ತಿಲಕ; ಮೂಡಲ ಬಾನಿನ ಹಣೆಯ ಮೇಲೊಂದು ಚಂದಿರವಟ್ಟು (ನೂರಜ. ೬೬).
[ ಚಂದಿರ$_1$ (<ಸಂದುರ) +ಬಟ್ಟು$_1$ (<ಬಟ್ಟ$_1$) ]

**ಚಂದಿರವಟ್ಟು$_2$** (ನಾ). ಚಂದ್ರಮಂಡಲ : ಮೃಗಮದದೊಳಗೆ ನಱುಗಂ ಪೆಲರ್ವಟ್ಟೆಯೊಳಗೆ ಚಂದಿರವಟ್ಟು . . . ಎಡೆವಡೆದಂತೆ (ಉದ್ಭದೇ. ೩-೭).
[ ಚಂದಿರ$_2$ + ಬಟ್ಟು$_1$ (<ಬಟ್ಟ$_1$) ]

**ಚಂದು$_1$** 'ಚಂದ$_2$' ನೋ.

**ಚಂದು$_2$** (ನಾ). ಕಾಣಿಕೆ ; ಕೊಡುಗೆ (?) : ಚಂದ್ರಗಿರಿಯ ಮಲ್ಲಿಕಾರ್ಜುನ ದೇವರಿಗೆ ಅನಾದಿಪೂರ್ವದಲಿ ಚಂದು ಬಹದಂತಾ ತಂಮಡಿಯ ಹಳಿ(ಯ) ಯಂಬ ಪುರವನೂ ಸಿವರಾತ್ರಿ ಮೊದಲಾಗಿ ಬಹದಂತಾ ಕಾಣಿಕೆವನೂ ಆ ದೇವರಿಗೆ ಅಮ್ರುತಪಡಿಗೆ ಸರ್ವ್ವಮಾನ್ಯವಾಗಿ ಚ[ಂ]ದು ಬರಲಾಗಿ . . . ಆ ದೇವರ ಕಾಣಿಕೆ ಆ ದೇವರಿಗೆ ಚಂದು ಬಹುದೆಂದು . . . ಬಿಂನಹವ ಮಾಡಿದಕ್ಕೆ (ಸೌಇಇ. IX–ii, ೪೨೪–೧೦ ; 1405). [ ? ]

**ಚಂದುಟಿ** 'ಚೆಂದುಟಿ' ನೋ.

**ಚಂದುಮಾಮ** 'ಚಂದಮಾಮ' ನೋ.

**ಚಂದುವ** 'ಚಂದವ' ನೋ.

**ಚಂದುವಟ್ಟು** (ನಾ). = **ಚಂದಿರವಟ್ಟು$_2$** : ಮೊಸಳೆ ಮುಸುಂಕದಚ್ಚಪೊಸ ಬಾಂಬೊಟೆಯಿಂಬೊನಲ್ . . . ಕ ಱಿ ಯೊ ೦ ದ ದ ಚ ೦ ದು ವ ಟ್ಟು ಮಾಮಸಗಿತೊ ಗಂಡುಮೇಳಿಗರ ಕೈಬೆಮರೊಂದದ ಸೂಳೆಮೇಳಮೇಂ (ಚಿಕವಿ. ೬-೧೫೫). [ ಚಂದು$_1$ (<ಚಂದ$_2$) + ಬಟ್ಟು$_1$ (<ಬಟ್ಟ$_1$) ]

**ಚಂದುಳ್ಳಿ** 'ಚಂದೊಳ್ಳೆ' ನೋ.

**ಚಂದೆಂಗು** 'ಚೆಂದೆಂಗು' ನೋ.

**ಚಂದೊಳ್ಳೆ, ಚಂದುಳ್ಳಿ, ಚೆಂದುಳ್ಳಿ, ಚೆಂದುಳ್ಳೆ, ಚೆಂದೊಳ್ಳೆ** (ಗು). ಬಹಳ ಚೆಲುವಾದ,–ಅಂದವಾದ : ಗರತಿಯ ಲಕ್ಷಣಗಳಿಂದ ಕೂಡಿ ಚಂದೊಳ್ಳೆ ಹೆಣ್ಣು ಎನಿಸಿಕೊಂಡಿದ್ದಳು (ಸಂಧ್ಯಾರಾ. ೨೧). **ಚಂದುಳ್ಳಿ :** ಬಂದೆ ನಿನ ಬಳಿಗೆ ಸರಸತಿಯೇ ಚಂದುಳ್ಳಿ ಹಾಡ ಕಲಿಸಮ್ಮ (ಜಗೀತ. ೬) ; ಚಂಡಾಡಿರೊ ಚಂಡಿಟ್ಟಾಡಿರೊ ನಮ್ಮ ಚಂದುಳ್ಳಿ ರಾಮಾನ ಕೊಂಡಾಡಿರೋ (ಹುಟ್ಟಹ. ೨೭). **ಚೆಂದುಳ್ಳಿ :** ಸರಸತಿ ಚೆಂದುಳ್ಳಿ ಹಾಡ ಕಲಿಸಮ್ಮ (ಹಳ್ಳಿಬಾ. ೧೧). **ಚೆಂದುಳ್ಳೆ :** ಅವನ ಮಗಳಿಗೆ ಇಂತ ಚೆಂದುಳ್ಳೆ ಗಂಡು ಸಿಗುವುದೆಂದರೇನು (ಹೊಸಕ್ಷ. ೫೨). **ಚೆಂದೊಳ್ಳೆ :** ಲಕ್ಷ್ಮೀದೇವಮ್ಮ ತಡ ವಾದರೂ ಚೆಂದೊಳ್ಳೆ ಮಗನನ್ನೇ ಹಡದಳಮ್ಮಾ (ಹೇಮುಕೂ. ೧೮).
[ <ಚಂದ$_1$ ]

**ಚಂದ್ರ$_1$** 'ಸಂದುರ' ನೋ.

**ಚಂದ್ರ$_2$** (ಗು). ೧. ಹೊಳೆಯುವ; ಲಕಲಕಿಸುವ; ಪ್ರಕಾಶಮಾನವಾದ. (ನಾ). ೨. ತಿಂಗಳು ; ಶಶಿ : "ಇಂದುಃ, ಚಂದ್ರಃ . . . ದಾಕ್ಷಾಯಣೀ ರಮಣಃ–ಈ ೨೧ ಚಂದ್ರನ ಪೆಸರ್" (ಹಲಾಯು. ೮-೬೨) ; ಚಂದ್ರನ ಬಲದಿಂದಮೆನ್ನನಲೆದಪ್ಪುವದರ್ಕೆನಗೀಗಳೊಂದಿ ಚಂದ್ರನ ಬಲಮೊಳ್ಳಿತಾಗಿ ಸಲೆಯಿಲ್ಲದೊಡಾವುದುಮೊಳ್ಳಿಕೆಯ್ಯುಗ್ಮೇ (ಪಂಪಭಾ. ೪-೬೮) ; ಚಂದ್ರನ ಶೈತ್ಯದಲು ಬೆಳೆದ ಕಾಯಕ್ಕೆ ಬೆಳದಿಂಗಳ ಬಯಸುವ ಹಂಗೇಕಯ್ಯಾ (ಬಸವ. ೪೪೨); ಲಕ್ಷ್ಮೀರಮಣನಾಸ್ಯಚಂದ್ರನಾನಂದವಮಂ ನಮಗೀಯಲಿ (ಜೈಮಿಭಾ. ೧-೧). ೩. ಆಹ್ಲಾದಕರವಾದ ವಸ್ತು. ೪. ಚಿನ್ನ ; ಬಂಗಾರ. ೫. ಕರ್ಪೂರ. 'ಚಂದ್ರದ್ರವ' ಪರಾ. ೬. ಕೆಂಪುಬಣ್ಣ ; ಅರುಣವರ್ಣ. ೭. (ಸಮಾಸದಲ್ಲಿ ಉತ್ತರಪದವಾದಾಗ) ಮುಖ್ಯನಾದವನು ; ಶ್ರೇಷ್ಠನಾದ ವ್ಯಕ್ತಿ: ಕೃತಿಪತಿ ನರೇಂದ್ರಚಂದ್ರಂ(ಕಾದಂಪೂ. ೭). ೮. ರಜ; ಧೂಳಿ. ೯. ನವಿಲುಗರಿಯ ಮಧ್ಯದಲ್ಲಿರುವ ಕಣ್ಣು ; ಪೀಲಿ. ೧೦. ಆಸನ ; ಪೀಠ. ೧೧. ಮನೆಯ ಒಂದು ಭಾಗ. 'ಚಂದ್ರಶಾಲೆ' ಪರಾ. ೧೨. ಒಂದು ಬಗೆಯ ಸಸ್ಯ ; ಕಾಂಪಿಲ್ಲ. ೧೩. ಕಾಡು ; ಅರಣ್ಯ. ೧೪. ನೀರು ; ಜಲ. ೧೫. ಪರಮಾತ್ಮ : ಸುಖಸ್ವರೂಪನಾದುದರಿಂದ ಚಂದ್ರನೆಂದು ಪರಮಾತ್ಮನಿಗೆ ಹೆಸರು (ಹಸಾರ. ೬-೨ ತಾತ್ಪರ್ಯ) ; "ವಿಧು ವಿಪಿನ ಧೂಳಿ ಪೀಠಂ ಸದನಾರುಣ ನವಿಲುಗಱಿಯ ಕಣ್ ಕರ್ಪೂರಂ ಪುದಿದೆಂಟು ಲೆಕ್ಕದೊಳಗಿಹುದಿದು ವರಚಂದ್ರಾಖ್ಯೆಯೆನಿಕು" (ನಾನಾಕಂ. ೧೦೧) ; "ಅರಣ್ಯ ರಜಂ ಸುಧಾಕರಂ ವಿಷ್ಟರ ಮುಖ್ಯ ಬರ್ಹಭವನಾರುಣ ಮೆಂಬಿವು ಚಂದ್ರವಾಚಕಂ" (ನಾನಾರ. ೬೦). ೧೬. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : "ಏಗ, ಏಕ, ಹಿಮಗು, ಹಿಮಕರ, ಶಶಿ, ಶಶಿಧರ, ಚಂದ್ರ . . . ಸಿತಕರ ಇಂತಿನಿತುಂ ೧ಕ್ಕೆ ಹೆಸರು" (ವ್ಯವಹಾ.೧೦–೯). ೧೭. [ಛಂದ] ಒಂದು ಗುರುವಿನ ಅನಂತರ ಎರಡು ಲಘುಗಳನ್ನುಳ್ಳ ಅಕ್ಷರಗಣ ; ಭಗಣ (–UU) : "ಗುರು ಮೊದಲೊಳಿರೆ ಚಂದ್ರನಕ್ಕು" (ಮಂಗರಾ.೧೦೭–೨೦); ಮಿಂಚುವ ಚಂದ್ರಂಗಂಚಿಯ ರುದ್ರರ್ ಸಂಚಲನೇತ್ರೇ ಕಾಂಚನಮಾಲೇ (ಛಂದೋಂಬು. ೨-೬೮). ೧೮. [ಜೈನ]ಅರುವತ್ತುಮೂರು ಇಂದ್ರಕಗಳಲ್ಲಿ ಒಂದು : ತತ್ಕುಳದರಿಷ್ಟ ಪ್ರಾಗ್ದಿಗ್ದೇಶದವೋಘ . . . ಚಂದ್ರ ಸುಪ್ರತಿಷ್ಠಮೆಂಬ ಕೂಟಾಷ್ಟಕಂಗಳೊಳ್ ರಮಿಯಿಸುವ (ಆದಿಪು. ೭-೩ ವ) : ೧. ಋತು, ೨. ವಿಮಳಂ, ೩. ಚಂದ್ರಂ . . . ೬೩ ಸರ್ವಾರ್ಥ ಸಿದ್ಧಿಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್ (ತತ್ತ್ವಪ್ರ. ೨೧೩). ೧೯. = ಚಂದ್ರಸ್ವರ. 'ಚಂದ್ರೋದಯ' ಪರಾ.

**ಚಂದ್ರನ ಕಲ್** = ಚಂದ್ರನ ಚಿಹ್ನೆಯುಳ್ಳ ಗಡಿಕಲ್ಲು: ಈಶಾನ್ಯದೊಳ್ ಕವಿಲೆಯ ಕಲ್ . . . ನೈರಿತ್ಯದೊಳ್ ಚಂದ್ರನ ಕಲ್ (ಎಇ. XVI, ೫೬-೩೩; 1050). [ ಸಂ. ]

**ಚಂದ್ರಂಕಿ** (ನಾ). ರೇಶ್ಮೆಹುಳು ಗೂಡುಕಟ್ಟಲು ಬಿದಿರಿನಲ್ಲಿ ಹೆಣೆದು ಮಾಡಿದ ತಟ್ಟಿ; ☞ ಇದಕ್ಕೆ ಚಂದ್ರಿಕೆ ಎಂತಲೂ ಹೇಳುತ್ತಾರೆ : ಹಕೀಂನು ಪಾಳಿಯವನ್ನು ತೋರಿಸಿದನು. ಸುತ್ತಲೂ ಮನೆಗಳು. ಅದರ ನಡುವೆ ಸುಮಾರು ಒಂದು ಎಕರೆಯಷ್ಟು ವಿಸ್ತಾರವಾದ ಒಂದು ಬಯಲು. ಅಲ್ಲಿ ಚಂದ್ರಂಕಿಗಳು, ಅಲ್ಲಲ್ಲಿ ತಡಕೆಗಳು (ಮಲ್ಲಿ. ೧೪೦). [ ? ]

**ಚಂದ್ರಕ** (ನಾ). ೧. ನವಿಲುಗರಿಯ ಕಣ್ಣು; ಪೀಲಿ: "ಚಂದ್ರಕಃ, ಮೇಚಕಃ –ಈ ೨ ಹೀಲಿಯ ಕಣ್ಣು" (ಹಲಾಯು. ४೧–೪೯); ನಿರಂತರೋಚ್ಚ್ರಿತವಿಚಿತ್ರ ಚಂದ್ರಕಚ್ಛತ್ರಚ್ಛಾಯಾನಿರಾಕೃತಾತಪನುಂ (ಆದಿಪು. ६-೯೦ ವ). ೨.[ಜೈನ] ಒಂದು ಇಂದ್ರಕದ ಹೆಸರು: ಚಂದ್ರಕಮೆಂಬ ಮೊದಲಿಂದ್ರಕದೊಳ್ . . . ಪುಟ್ಟಿದಯ್ (ಶಾಂತಿಪು. ೭-೮೩ ವ). [ ಸಂ. ]

**ಚಂದ್ರಕತಿಲಕ** (ನಾ). ಹಣೆಗೆ ಇಟ್ಟುಕೊಳ್ಳುವ ತಿಲಕ,–ನವಿಲುಗರಿಯ ಆಕಾರದ ತಿಲಕ: ಚಂದ್ರಕತಿಲಕದ ರಾಗಂ ಚಿತ್ತದನುರಾಗಮಂ ಸೂಚಿಪಂತೆ ಸೊಗಸೆ (ಜೈಮಿಭಾ. ೧೧–೮). [ ಚಂದ್ರಕ + ತಿಲಕ ]

**ಚಂದ್ರಕಬಲ, ಚಂದ್ರಕಬಳ**(ನಾ). ಒಂದು ಬಗೆಯ ಕೆಂಪುಬಣ್ಣದ ಕರ್ಪೂರದಿಂದ ಕೂಡಿದ ಪರಿಮಳದ ಅಲಂಕಾರದ್ರವ್ಯ : ಶರನ್ನಿಶಾ ಸಮಯಸಮುದಿತತಾರಾತರಳಮುಕ್ತಾಭರಣಕಿರಣಚಂದ್ರಿಕಾಚಂದ್ರಕಬಲ

[ಪಾಠಾಂ. ಳ] ವಿಳಸಿತದಿಗಂಗನಾಮುಖನುಮಾಗಿ (ಆದಿಪು. ೩-೯೦ ವ); ಚಿನ್ನಪೂಗಳಂ ಮೆಱೆವಂತೆ ಚಂದ್ರಕಬಲ[ಪಾಠಾಂ. ಳ]ಮಂ ತೊಡೆವಂತೆ ಮಹೀಕಾಂತೆ ಸೊಗಯಿಸೆ (ಆದಿಪು. ೭-೩೬ ವ); "ಸರ್ವಗಂಧಾ" (ಆದಿಪು. ಕೋಶ); ಮಕರಂದಬಿಂದುಸಂದೋಹ ಚಂದ್ರಕಬಲ ಚಂದ್ರಕಿತ ಮುಖಚಂದ್ರರಾಗಿ (ಶಾಂತಿಪು. ೭-೨ ವ). **ಚಂದ್ರಕಬಳ:** ಮೇಲಿನ 'ಆದಿಪು' ಪ್ರಯೋಗಗಳ ಪಾಠಾಂತರವನ್ನು ನೋಡಿ. [ ? ]

**ಚಂದ್ರಕಬಳ** 'ಚಂದ್ರಕಬಲ' ನೋ.

**ಚಂದ್ರಕಬಳ್ಳಿ** (ನಾ). ಒಂದು ಬಗೆಯ ಸಸ್ಯ; ಸೂತ್ರನಾಭಿ; ಶಿವನಾಭಿ ಬಳ್ಳಿ: (ಕ). [ ಚಂದ್ರಕ? + ಬಳ್ಳಿ ]

**ಚಂದ್ರಕಲಾಪ,** ಚಂದ್ರಕಳಾಪ (ನಾ). ೧. ಚಂದ್ರನನ್ನೇ ಅಲಂಕಾರವನ್ನಾಗಿ ಮಾಡಿಕೊಂಡವನು; ಶಿವ: ಚಂದ್ರಕಲಾಪಂಗೆ . . . ತುಂಗ ವೃಷಭೇಂದ್ರವಾಹಂಗೆ ಶುಭಮಸ್ತು ಶೋಭಸಂ (ಹಾಲಾಸ್ಯ. ೧-೬-೪೨). **ಚಂದ್ರಕಳಾಪ:** ೨. ನವಿಲುಗರಿಯ ಅಲಂಕಾರವುಳ್ಳವನಂ; ಕೃಷ್ಣ: ಉದಂಚಿತಚಂದ್ರಕಳಾಪನೆಲ್ಲಿದಂ . . . ಎನುತ್ತೈದಿವಂದು (ಜಗವಿ. ೩-೯೦). [ ಚಂದ್ರ$_2$ + ಕಲಾಪ$_2$ ]

**ಚಂದ್ರಕಲೆ,** ಚಂದ್ರಕಳ (ನಾ). ೧. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು. ೨. ಒಂದು ಬಗೆಯ ಔಷಧಿಮಾತ್ರೆ: ಚಂದ್ರಕಲೆ . . . ಕಾದಾಱಿದ ನೀರು ಸಕ್ಕರೆ ಸಹ ಕೊಡಲು, ಸಕಲ ಕ್ಷಯವ್ಯಾಧಿ, ಮಹೇಶ್ವರ ವ್ಯಾಧಿ, ಮಹೇಶ್ವರಜ್ವರ ಹರ (ವಿವೈವಿ. ೨೬). ೩. [ಕಾಮಶಾ] ಕಾಮೋದ್ರೇಕವನ್ನುಂಟುಮಾಡುವ ಸ್ಥಾನ: ಕೆಳಗು ಬೊಟ್ಟಡಿ . . . ಪಣೆನೆತ್ತಿಗಳಿವಿನಿತು ಚಂದ್ರಕಲೆಯಿಪ್ಪ ತಾಣಂ (ಜನವ. ೩-೧). **ಚಂದ್ರಕಳೆ:** ೩. ಎಲ್ಲಿ ಮರ್ಮಂ ತೋರ್ಪುದಲ್ಲಿಯೇ ಚಂದ್ರಕಳೆ (ಜನವ. ೮-೬೦). ೪. ಬೆಳುದಿಂಗಳು: ಕತ್ತರಿಸಿ ಚಂದ್ರಕಳೆಯಿಂ ಪತ್ರಿಸಿದಂತೆಸೆವ ಸತಿಯ ಸುಲಿಪಲ್ (ಮಲ್ಲಿಪು. ೩-೭೫); ಚಂದ್ರಕಳೆ ಕಣ್ದೆಱೆದಂತೆ ನೆಱೆ ಮೆಱೆದು ನಡೆತಂದು ನಗತನೂಜೆ ಚಂದ್ರಧರನ ಮುಂದೆ ನಿಂದು (ಗಿರಿಕ. ೫-೭೬ ವ); ಕಾನನಾಂತರದೊಳಗೆ ಚಂದ್ರಕಳೆಯಂತೆ (ಕಎಪು. ೩೪-೪). [ ಚಂದ್ರ$_2$ + ಕಲೆ$_3$ ]

**ಚಂದ್ರಕವಾಟ** (ನಾ). [ಜೈನ] ಒಂದು ಗುರುಪರಂಪರೆ,-ಶಾಖೆ: ಅ ಚನ್ದ್ರಕವಾಟಾನ್ವಯವರಿಷ್ಠರ್ ಅಜಿತಸೇನಭಟ್ಟಾರಕರ್ (ಎಇ. XVI, ೫೫-೨೩; 1053). [ ? ]

**ಚಂದ್ರಕಳಾಪ** 'ಚಂದ್ರಕಲಾಪ' ನೋ.

**ಚಂದ್ರಕಳೆ** 'ಚಂದ್ರಕಲೆ' ನೋ.

**ಚಂದ್ರಕಾಂತ** (ನಾ). ಚಂದ್ರಪ್ರಕಾಶದಿಂದ ದ್ರವಿಸುವುದೆಂದು ಭಾವಿಸಲಾದ ಒಂದು ಬಗೆಯ ಬಿಳಿಯ ಕಲ್ಲು; ಶಶಿಕಾಂತ: "ಹಿಮಗು ಚಂದ್ರಕಾಂತಂ" (ಮಂಗರಾ. ೩೧-೭); ಚಂದ್ರಕಾಂತವೊಸರ್ವಂತಿರೆ ಗೋರಿಕಲ್ಲೊಸರ್ಗುಮೇ ಬೆಳ್ದಿಂಗಳೊಳ್ (ಜಗವಿ. ೧-೧೩); ಚಂದ್ರಕಾಂತದ ಗವಾಕ್ಷಂಗಳೊಳಂ (ಪುಷ್ಪಪು. ೮-೫೦ ವ). [ ಚಂದ್ರ$_2$ + ಕಾಂತ$_2$ ]

**ಚಂದ್ರಕಾಂತಪುತ್ರಿಕೆ** (ನಾ). ಚಂದ್ರಕಾಂತಶಿಲೆಯಿಂದ ನಿರ್ಮಿಸಿದ ಪುತ್ಥಳಿ,-ಮೂರ್ತಿ: ಇಂದುಕರಶ್ಚುತ ಚಂದ್ರಕಾಂತಪುತ್ರಿಕೆಯೊಸರ್ವಂತೆ ಝುಮ್ಮಗೆ ಬೆಮರ್ತಿರವಿಂ (ಶಾಂತಿಪು. ೮-೯೬). [ ಚಂದ್ರಕಾಂತ+ಪುತ್ರಿಕೆ ]

**ಚಂದ್ರಕಾಂತಶಿಲೆ** (ನಾ). =ಚಂದ್ರಕಾಂತ: ಚಂದ್ರಕಾಂತಶಿಲೆಯಲ್ಲಿ ವವಶ್ರೀಖಂಡಮನಿಟ್ಟು ಕರಾಬ್ಜದಿಂ . . . ಸಾಂದ್ರಚಂದನದ ಘಟ್ಟಿಗೆ ನೀರಂ ಪಾರದೆ ಮಾಳ್ಪುದನೀಕ್ಷಿಸುತ್ತ (ರಾಜಶೇ. ೨-೧೧೯); ನಿನ್ನ ಕಣ್ಣೀನು ಚಂದ್ರಕಾಂತಶಿಲೆಯೆ? ಬೆಳ್ದಿಂಗಳಿಗೆ ಇಂತು ಸೋರುವುದಕೆ? (ಚಂದ್ರಸ. ೮೪). [ ಚಂದ್ರಕಾಂತ + ಶಿಲೆ ]

**ಚಂದ್ರಕಾಸಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು: (ವ್ಯಜಿಗಿ. ೫೪-೧೦೮೪). [ ಚಂದ್ರಕಾಸಿ? + ಸೊಪ್ಪು$_3$ ]

**ಚಂದ್ರಕಾಳಿ,** ಚಂದ್ರಕಾಳಿ (ನಾ). = ಚಂದ್ರಗಾವಿ ೧: ಸ್ವರ್ಣವರ್ಣದ ಹೆಂಗಳೆಯುರಿಗೆ ಕರಿಯ ಚಂದ್ರಕಾಳಿಯ ಸೀರೆಯೂ . . . ಸೇರುವವು (ಅಂಬಿಕ. ೨೭). **ಚಂದ್ರಕಾಳಿ:** ಅವಳು ಚಂದ್ರಕಾಳಿ ಸೀರೆ ಉಟ್ಟಿದ್ದಾಳೆ (ರೂಢಿ). [ <ಚಂದ್ರಗಾವಿ ]

**ಚಂದ್ರಕಿ** (ನಾ). ಹೀಲಿಗಳನ್ನುಳ್ಳದು; ನವಿಲು: ಸಂಕ್ರುದ್ಧವೈವಸ್ವತೋಪಮವಿದ್ವಿಷ್ಟಫಣೀಂದ್ರ ಚಂದ್ರಕಿರವಂ [ಪಾಠಾಂ. ಕರೆವಂ] (ಆದಿಪು. ೧೧-೧೦). [ ಸಂ. ಚಂದ್ರಕಿನ್ ]

**ಚಂದ್ರಕಿತ** (ಗು). ಕೆಂಪುಬಣ್ಣವನ್ನು ಪಡೆದ: ಗುರುಚರಣ ಸರಸೀರುಹ ಮಕರಂದಬಿಂದುಸಂದೋಹ ಚಂದ್ರಕಬಲ ಚಂದ್ರಕಿತ ಮುಖಚಂದ್ರರಾಗಿ (ಶಾಂತಿಪು. ೭-೨ ವ). [ ಸಂ. ]

**ಚಂದ್ರಕಿರಣ** (ನಾ). ಚಂದ್ರನ ಪ್ರಕಾಶ,-ಕಾಂತಿ: ಚಂದ್ರಕಿರಣಸ್ಪರ್ಶನದಿನೊಸರ್ದುರ್ ಪರಿತರ್ಪ ಚಂದ್ರಕಾಂತದ ರಸಮನುಂಡು (ಉದ್ಭಟ. ೩-೯೯). [ಚಂದ್ರ$_2$ + ಕಿರಣ]

**ಚಂದ್ರಕಿವಾಹ** (ನಾ). ನವಿಲನ್ನು ವಾಹನವಾಗಿ ಉಳ್ಳವನು; ಕುಮಾರಸ್ವಾಮಿ; ಷಣ್ಮುಖ: ಚಾರುಚಂದ್ರಕಿವಾಹಂ ದಶಕೋಟಿಭೈರವಯುತಂ . . . ಚಂಡಭೈರವಂ . . . ಸಲೆ ಸೇವಿಪಂ (ಶಬಶಂ. ೧-೫೯). [ ಚಂದ್ರಕಿ + ವಾಹ ]

**ಚಂದ್ರಕೋರೆ** (ನಾ). ಅರ್ಧಚಂದ್ರನ ಆಕೃತಿ: ಅದರಲ್ಲಿ ಬೆರಳು ಹಿಡಿಯುವಷ್ಟು ಚಂದ್ರಕೋರೆಯಂಥ ಗೂಡು (ಸ್ಮೃತಿಚಿ. ೨೨೬). [ ಚಂದ್ರ$_2$ + ಕೋರೆ$_1$ ]

**ಚಂದ್ರಕೋಲು** (ನಾ). ಹೆಂಗಸರು ತಲೆಯ ಮೇಲೆ ಧರಿಸುವ ಒಂದು ಬಗೆಯ ಚಿನ್ನದ ಆಭರಣ: (ಕ). ℙ ಅರ್ಧಚಂದ್ರನ ಆಕೃತಿಯ ಈ ಆಭರಣದ ತುದಿಗೆ ನಾಗ, ವಿಷ್ಣು ಮುಂತಾದವರ ಚಿತ್ರವಿರುತ್ತದೆ. [ ←ಮರಾ. ಚಂದ್ರಕೋರ ]

**ಚಂದ್ರಖಂಡ** (ನಾ). ಚಂದ್ರನ ಒಂದು ಅಂಶ; ಚಂದ್ರಕಲೆ: ವಿಳಸದ್ವಿದ್ಯುಜ್ಜಟಾಮಂಡಳಮಮರನದೀಚಂದ್ರಖಂಡಾನ್ವಿತಂ (ರಾಜಶೇ. ೩-೧೦೯). [ ಚಂದ್ರ$_2$ + ಖಂಡ ]

**ಚಂದ್ರಗತಿ** (ನಾ). ೧. ಚಂದ್ರನ ಚಲನೆ. ೨. [ಜೈನ] (ಚಂದ್ರನು ತನ್ನ ಬೆಳುದಿಂಗಳನ್ನು ಪ್ರಸರಿಸುವಾಗ ಧನವಂತರ ಮತ್ತು ಬಡವರ ಮನೆಗಳನ್ನು ಕುರಿತಂ ವ್ಯತ್ಯಾಸ ಮಾಡದಿರುವಂತೆ) ಯತಿಗಳು ಎಲ್ಲರ ಮನೆಗಳಲ್ಲಿಯೂ ಮಾಡುವ ಚರಿಗೆ: ಉತ್ತಮಮಧ್ಯಮಜಘನ್ಯಾಗಾರಂಗಳೊಳ್ ಚಂದ್ರಗತಿಯಿಂ ಸಲುತ್ತುಂ (ಆದಿಪು. ೯-೧೩೦ ವ); ಪುಗಲ್ ತಕ್ಕ ಮನೆಗಳೊಳ್ ಚಂದ್ರಗತಿಯಿಂ ಚರಿಗೆವುಗುತ್ತುಂ (ಸುಕುಮಾ. ೪-೨೧ ವ). [ ಚಂದ್ರ$_2$ + ಗತಿ ]

**ಚಂದ್ರಗಲ್** (ನಾ). =ಚಂದ್ರಕಾಂತ: "ಚಂದ್ರ[ಪಾಠಾಂ. ದ]ಗಲ್ಳುಳಿರ್ಗಲ್ಲೆನಲೊಸರ್ಗಲ್" (ಚತುನಿ. ೧೧೧). [ ಚಂದ್ರ$_2$ + ಕಲ್$_3$ ]

**ಚಂದ್ರಗಾವಿ** (ನಾ). ೧. ಸಿಂಧೂರದ ಬಣ್ಣ; ಕೆಂಪುಬಣ್ಣ: ಎಳೆದು ಬಿಳಿದು ಚಂದ್ರಗಾವಿ ಸಂಪಗೆವಣ್ಣ ಹಳದಿ ತನ್ನದು ನನ್ನದೆನುತ ಕಲಹವಾಡುತ ಬಿರುದಿಗೆ ಪೊಱಮಟ್ಟರು ಕಲಿಗಳು (ಕುರಾಸಾಂ. ೧೧-೧೯); ಹಳದಿ ಪೊಪ್ಪಳಿ ಚಂದ್ರಗಾವಿ . . . ಬಿಳುವಟ್ಟೆ ನಾನಾವರ್ಣದ ಜವಳಿಯ ಮಳಿಗೆಗಳೆಸೆದುವು (ಕಂನವಿ. ೬-೭೦). ೨. ಸಿಂಧೂರಬಣ್ಣದ ಸೀರೆ,-ವಸ್ತ್ರ: ಚಂದ್ರಗಾವಿಯನುಟ್ಟು ದುಂಡುಮುತ್ತನೆ ಕಟ್ಟಿ . . . ಬಂದಳೆ ಕೇರಿಗಾಗಿ (ಪುರಂದ. ೩-೧೩೦-೧); ನೆಟ್ಟನೆ ನಿಱಿಗಳೆದುದು ಚಂದ್ರಗಾವಿಯ ಬಟ್ಟಪಾವುಡೆ ಸಹವಾಗಿ (ಮೋಹತ. ೧೬-೩೪); ಮೇಲುಮುಸುಕಿಟ್ಟ ಚಂದ್ರಗಾವಿ ಸಹವಾಗಿ ನನ್ನ ಊಳಿಗದವರು . . . ಹೋಗುವಾಗ (ವಚಕಾ. ೩೪). [ ಚಂದ್ರ$_1$ (<ಸೆಂದುರ) + ಕಾವಿ ]

**ಚಂದ್ರಗಾವಿಸೀರೆ** (ನಾ).=ಚಂದ್ರಗಾವಿ ೨ : ದ್ರೌಪದಿಯು . . . ಚಂದ್ರ ಗಾವೀಸೀರೆಯನ್ನುಟ್ಟು (ಕೃವಾವಿ. ೩೦) ; ಚಂದ್ರಗಾವೀಸೀರೆ ಚಂದ್ನಾಕಣೆ ದೊಡ್ಡಮ್ಮ (ಹುಟ್ಟುಹ. ೫೭). [ ಚಂದ್ರಗಾವಿ + ಸೀರೆ$_2$ ]

**ಚಂದ್ರಗೃಹ** (ನಾ). = ಚಂದ್ರಶಾಲ : ನಾಯಕನೂ ಸಹ . . . ತನಗಾಗಿ ಸಿದ್ಧಪಡಿಸಿದ್ದ ಚಂದ್ರಗೃಹದ ಕಡೆಗೆ ನಡೆದ (ಹೇಮುಕೂ. ೨೨).
[ ಚಂದ್ರ$_2$ + ಗೃಹ ]

**ಚಂದ್ರಗ್ರಹಣ**(ನಾ). ಚಂದ್ರನ ಮೇಲೆ ಭೂಮಿಯ ನೆರಳು ಬೀಳುವುದು; ಉಪರಾಗ: ಭೂಮಿಯ ನೆರಳು ಚಂದ್ರನ ಮೇಲೆ ಬಿದ್ದಾಗ ಚಂದ್ರಗ್ರಹಣ (ಆಕಾಶ. ೪೨) ; ಚಂದ್ರನಿಗೂ ಸೂರ್ಯನಿಗೂ ಮಧ್ಯದಲ್ಲಿ ಭೂಮಿಯಿದ್ದು ಭೂಮಿಯಿಂದ ನೆರಳು ಚಂದ್ರನ ಮೇಲೆ ಬಿದ್ದು ಅವನು ಭೂಮಿಯ ಮೇಲೆ ಕಾಣದೆ ಹೋದರೆ ಚಂದ್ರಗ್ರಹಣ (ಭೂರಹ. ೨೦). 'ಸೂರ್ಯ ಗ್ರಹಣ' ಪರಾ. [ ಚಂದ್ರ$_2$ + ಗ್ರಹಣ ]

**ಚಂದ್ರಚಾವಡಿ** (ನಾ). = ಚಂದ್ರಶಾಲ : ಅನಂಗನಾಶನನೊಪ್ಪಿ ಕುಳ್ಳಿರ್ದ ಚಂದ್ರಚಾವಡಿಗೆ ಬಂದು ನಿಲ್ಲಲು (ನಿಜಸಾಂ. ೧೨೨-೧೮೩).
[ ಚಂದ್ರ$_2$ + ಚಾವಡಿ ]

**ಚಂದ್ರಚೂಡ** (ನಾ). ತಲೆಯಲ್ಲಿ ಚಂದ್ರನನ್ನು ಧರಿಸಿದವನು ; ಶಿವ : ಚಂದ್ರಚೂಡಂ ತ್ರಿಪುರಮನಿಸಲೆಂದಿರ್ದವೋಲ್ (ಪಂರಾಮಾ. ೧೪-೧೭೬) ; ಮಗನ ಕರುಣಾಸ್ಯಮಂ ಚಂದ್ರಚೂಡಂ ಕಂಡು (ಬಸರ. ೧-೫೩) ; ಚಂದ್ರ ಚೂಡ ಶಿವಶಂಕರ ಪಾರ್ವತಿರಮಣ ನಿನಗೆ ನಮೋನಮೋ (ಪುರಂದ. ೧-೧೮೬ ಪಲ್ಲವಿ). [ ಸಂ. (ಚಂದ್ರ + ಚೂಡಾ + –) ]

**ಚಂದ್ರಜ** (ನಾ). ಚಂದ್ರನ ಮಗ ; ಬುಧ : ಶನಿಸೂರ್ಯ ಚಂದ್ರಜರ್ ಮೇಷ ಶಶಿಭಾರ್ಗವರವಿಕುಜರೇಕಾಲಯುನಿವಾಸಿಗಳೆನಿಪ್ಪೊಡಯ್ದು ವರ್ಷಂ ಬಾಳ್ಗುಂ (ಜಾತತಿ. ೬-೨೪). [ ಸಂ. ]

**ಚಂದ್ರಜೋತಿ** (ನಾ).=ಚಂದ್ರಜ್ಯೋತಿ ೧: ಪರಿಪೂರ್ಣೇಂದುಮುಖಿಯರ ನೆಟ್ ಬೆಳ್ಳಗೆ ಜೊನ್ನದುರುಳಿಗಳೆಂದೆನೆ ಮೆಟ್ಟುವು ಚಂದ್ರಜೋತಿಗಳು (ಕಂನವಿ. ೨೧-೧೧೫). [ ಚಂದ್ರ$_2$ + ಜೋತಿ ]

**ಚಂದ್ರಜ್ಞಾನ** (ನಾ). ಇಪ್ಪತ್ತೆಂಟು ಶಿವಾಗಮಗಳಲ್ಲಿ ಒಂದು : ಕಾಮಿಕ . . . ವಿಮಲ, ಚಂದ್ರಜ್ಞಾನ . . . ವಾತುಲಗಳೆಂಬ ಇಪ್ಪತ್ತೆಂಟು ಶಿವಾ ಗಮಗಳು (ಭಾರದ. ೬೨). [ ಸಂ. ]

**ಚಂದ್ರಜ್ಞಾನಾಗಮ** (ನಾ).=ಚಂದ್ರಜ್ಞಾನ: ಕಾಮಿಕಾಗಮ . . . ಚಂದ್ರ ಜ್ಞಾನಾಗಮ . . . ವಾತೂಲಾಗಮಮೆಂಬವಿಪ್ಪತ್ತೆಂಟು ದಿವ್ಯಾಗಮ ಗಳಕ್ಕುಂ (ವಿವೇಕ. ೬೮). [ಚಂದ್ರಜ್ಞಾನ + ಆಗಮ ]

**ಚಂದ್ರಜ್ಯೋತಿ** (ನಾ). ೧. ಚಂದ್ರಪ್ರಕಾಶ; ಬೆಳುದಿಂಗಳು. ೨. ಒಂದು ಬಗೆಯ ಮತಾಪು. [ ಚಂದ್ರ$_2$ + ಜ್ಯೋತಿ ]

**ಚಂದ್ರತೊಲೆ** (ನಾ). ಚಂದ್ರನಿಂದ ಕೂಡಿದ ತುಲಾರಾಶಿ : ಬುಧವಾರ ಸಿದ್ಧಯೋಗದಂದು ವಿಸಾಕೆನಕ್ಷತ್ರ ಚಂದ್ರತೊಲೆ × × × (ಸೌಇಇ. XX, ೨೮೪-೬ ; 1033). [ ಚಂದ್ರ$_2$ + ತೊಲೆ$_3$ ]

**ಚಂದ್ರದಾರ** (ನಾ). ಚಂದ್ರನ ಹೆಂಡತಿ; ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಯಾವುದಾದರೂ ಒಂದು. [ ಚಂದ್ರ$_2$ + ದಾರ$_3$ ]

**ಚಂದ್ರದ್ರವ** (ನಾ). ಕರ್ಪೂರದ ರಸ : ಸಳಿಳಂ ಚಂದ್ರದ್ರವಾಭಂ ತರುಣ ತೃಣಗಣಂ ಮುಷ್ಟಿಮಾತ್ರಂ ಸುಪತ್ರಂ (ಚಂದ್ರಪು. ೩-೩೩).
[ ಚಂದ್ರ$_2$ + ದ್ರವ ]

**ಚಂದ್ರಧರ** (ನಾ). ಚಂದ್ರನನ್ನು ಧರಿಸಿದವನು ; ಶಿವ : "ಗಂಗಾಧರಂ ಕಪಾಳಧರಂ . . . ಗಿರಿತನಯಾರ್ಧಾಂಗಧರಂ ಪೃಥುಜಟಾಧರಂ ಚಂದ್ರಧರಂ" (ವಸುಕೋ. ೩-೧೪) ; ಗಿರಿಜೆಯುಂ ಚಂದ್ರಧರನುಂ ಕಂಡು ನಸುನಗುತೆ (ನಂಬಿರ. ೧-೪೯). [ ಸಂ. ]

**ಚಂದ್ರನಾಡಿ** (ನಾ). ಸ್ತ್ರೀಯರ ಯೋನಿಯಲ್ಲಿರುವ ಒಂದು ನಾಡಿ ; ಕಾಮಚ್ಛತ್ರ : ನಯದಿಂದೆ ಚಂದ್ರನಾಡಿಯನು ತರ್ಜನಿಯೊಳಿಚ್ಛೆಯೊಳಲೆ ವುದು (ಜನವ. ೮-೩೩). [ ಚಂದ್ರ$_2$ + ನಾಡಿ$_1$ ]

**ಚಂದ್ರನೀಚ** (ನಾ). ೧. [ಜ್ಯೋತಿ]ಚಂದ್ರಗ್ರಹದ ನೀಚಸ್ಥಾನ; ವೃಶ್ಚಿಕ ರಾಶಿ. ೨. "ಒಂದು ಗ್ರಹಪಥದಲ್ಲಿ (ಮು., ಚಂದ್ರಪಥದಲ್ಲಿ) ಭೂಮಿಗೆ ಅತ್ಯಂತ ಹತ್ತಿರದ ಬಿಂದು" (Perigee. ಇಂಕನಿ).
[ ಚಂದ್ರ$_2$ + ನೀಚ ]

**ಚಂದ್ರಪಾದ** (ನಾ). ೧. ಚಂದ್ರನ ಕಿರಣ. ೨. ಒಂದು ಬಗೆಯ ಬಳ್ಳಿ : ಸಮುದ್ರಬಳ್ಳಿ, ಸಮುದ್ರಹಾಲೆ, ಚಂದ್ರಪಾದ (ವ್ಮಜಿಗಿ. ೯-೧೪೫).
[ ಚಂದ್ರ$_2$ + ಪಾದ ]

**ಚಂದ್ರಪುಷ್ಪ** (ನಾ). ಒಂದು ಬಗೆಯ ಬಳ್ಳಿ: ಚಂದ್ರಕಾಂತಿ, ಚಂದ್ರಪುಷ್ಪ (ವ್ಮಜಿಗಿ. ೧೬-೨೮೫). [ ಸಂ. ]

**ಚಂದ್ರಪ್ರಭ** (ನಾ). ೧. ಚಂದ್ರನ ಕಾಂತಿಯನ್ನುಳ್ಳದು. ೨. [ಜೈನ] ತೀರ್ಥಂಕರರಲ್ಲಿ ಎಂಟನೆಯವನು. ೧, ೨ : ವದನಂ ಚಂದ್ರಪ್ರಭಂ ವಿಕ್ರಮಭುಜಮಜಿತಂ ಪಾಣಿಪದ್ಮಪ್ರಭಂ ಸಂಪದಮೆಂದುಂ ವರ್ಧಮಾನಂ (ಲೀಲಾವ. ೧-೯೫) ; ಚಂದ್ರಪ್ರಭಚರಿತಮನಾಚಂದ್ರಾರ್ಕಸ್ಥಾಯಿಯಿಂತಿದೆನೆ ಪೇಟ್ದು ಶರಚ್ಚಂದ್ರೋಜ್ವಳಕೀರ್ತಿಗೆ ಸುಕವೀಂದ್ರಂ ನೆಲೆಯಾದನಾದ ಮಗ್ಗಳದೇವಂ (ಚಂದ್ರಪು. ೧೬-೮೩). [ ಸಂ. (ಚಂದ್ರ + ಪ್ರಭಾ + –) ]

**ಚಂದ್ರಬಲ** (ನಾ). [ಜ್ಯೋತಿ] (ಮದುವೆ ಮುಂತಾದ ಸಮಯದಲ್ಲಿ) ಚಂದ್ರನು ಒಳ್ಳೆಯ ಸ್ಥಾನದಲ್ಲಿರುವುದರಿಂದ ಉಂಟಾಗುವ ಶುಭ ; ದೈವಾನುಕೂಲ : ದಮಿತಾರಿಯ ಬಲಂ ಚಂದ್ರಬಲಮಿಲ್ಲ ದಂಕಕಾಟನಂತೆ ಸೋಲ್ತು (ಶಾಂತಿಪು. ೪-೩೦ ವ) ; ಎಮ್ಮವರು ಬೆಸಗೊಂಡರೆ . . . ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯಾ (ಬಸವ. ೮೩) ; ಸಿಂಘಣರಾಯನೆಂಬ ಯಾದವನಾರಾಯಣನ ಅವತಾರಕ್ಕೆ ತಾರಾಬಲಂ ಆಯಿಶ್ವರ್ಯಕ್ಕೆಯಾದಿತ್ಯಬಲಂ ಚತುರೋಪಾಯಕ್ಕೆ ಚಂದ್ರಬಲಂ (ಸೌಇಇ. XX, ೨೦೨-೧೦ ; 1244). 'ತಾರಾಬಲ' ಪರಾ.
[ ಚಂದ್ರ$_2$ + ಬಲ ]

**ಚಂದ್ರಬಾಲೆ** (ನಾ). ದೊಡ್ಡ ಏಲಕ್ಕಿ: "ಪೃಥ್ವೀಕಾ, ಚಂದ್ರಬಾಲಾ . . . ದೊಡ್ಡಯಾಲಕ್ಕೀ ಹೆಸರುಗಳು" (ಸಿದ್ಧಾಂತಿ. ೧೨೩). [ಸಂ. ಚಂದ್ರಬಾಲಾ]

**ಚಂದ್ರಬಾವುಲಿ** (ನಾ). ಚಂದ್ರನ ಆಕಾರದಲ್ಲಿರುವ ಒಂದು ಬಗೆಯ ಕಿವಿಯ ಆಭರಣ: ಚಂದ್ರಾವಳಿಯ ಸೀರೆ ಚಂದ್ರಮ್ಮ ಉಟ್ಟಿಹಳು . . . ಕಿವಿಯಾಗ ಚಂದ್ರಬಾವುಲಿ ಗುಬ್ಬಿಬಾವುಲಿ (ಸಿದ್ಧಪು. ೧೯-೬೯).
[ ಚಂದ್ರ$_2$ + ಬಾವುಲಿ$_2$ ]

**ಚಂದ್ರಬಾಳಿ** (ನಾ). ಕಿವಿಯಲ್ಲಿ ಧರಿಸುವ ಒಂದು ಬಗೆಯ ಮುತ್ತಿನ ಆಭರಣ: ಹರಳು ವಜ್ರದೋಲೆ ಬುಗುಡಿಯು ಚಳಕು ಗಿಳಿಬಾವಲಿ ಚಂದ್ರ ಬಾಳ್ಯದ ಥಳಕು (ಕರ್ನಾಕ. ೨೮೭). [←ಮರಾ. ಚಂದ್ರಬಾಳೀ ]

**ಚಂದ್ರಬಾಳೆ** (ನಾ). ಒಂದು ಬಗೆಯ ಬಾಳೆ; ಕೆಂಪು ಬಾಳೆ : ಬಾಳೆಯಲ್ಲಿ ಅನೇಕ ಜಾತಿಗಳಿವೆ–ರಸಬಾಳೆ, ಚಂದ್ರಬಾಳೆ, ರಾಜಬಾಳೆ (ವ್ಯವಮ. ೫೭).
[ ಚಂದ್ರ$_1$ (<ಸಿಂದುರ) + ಬಾಳೆ$_1$ (<ಬಾಟ$^3$) ]

**ಚಂದ್ರಬಿಂಬ** (ನಾ). ಚಂದ್ರನ ಬಿಂಬ,–ಆಕೃತಿ : ಅಳಿಕುಳರುಚಿಯುಂ ನೀಳೋತ್ಪಳದಳಮಂ ಚಂದ್ರಬಿಂಬಮಂ ಪೊಂಗಳಸಂಗಳ ಚೆಲ್ವನಿಭಗತಿಯ ನೀಳ್ಕುಳಿಗೊಣ್ಣುದು ರೂಪು ರೂಪವಿದ್ಯಾಧರಿಯ (ಸೌಇಇ. XX, ೪೯-೩೨; 1076 ?) ; ಇಟ್ಟಣಿಸಿದ ಬೆಳಗಿಂ ದಟ್ಟಯ್ಸಿ ತೋರ್ಪ ಚಂದ್ರಬಿಂಬಮಂ ನೋಳ್ಪಾಗಳ್ (ಗಿರಿಕ. ೪-೧೦೨ ವ); ಚಂದ್ರಬಿಂಬ ಜಾತ ನೂತ್ನ ಚಂದ್ರಿಕಾಚ್ಛ ಸಾರಮಂ ಸಾಂದ್ರಮೋದದಿಂ ಚಕೋರಿಕಾಳಿ ಸೇವಿಪಂತೆ ಪೋಲ್ (ಉದ್ಭಟ. ೫-೭೩). [ ಚಂದ್ರ$_2$ + ಬಿಂಬ ]

**ಚಂದ್ರಭುವನ** (ನಾ). = ಚಂದ್ರಲೋಕ : ಮೇಲೆ ನೆಗೆದೊತ್ತರಿಸಿ ನಡೆವ ಮುತ್ತಿನ ಸತ್ತಿಗೆಗಳಿಂ ಚಂದ್ರಭುವನಮವತರಿಸಿದಂತೆಯುಂ (ರಾಜಶೇ. ೧೩-೭೭ ವ). [ ಚಂದ್ರ$_2$ + ಭುವನ ]

**ಚಂದ್ರಮ** (ನಾ). ಚಂದ್ರ ; ತಿಂಗಳು : " ಇಂದು ಜೈವಾತೃಕಂ . . . ಚಂದ್ರಮಂ . . . ದ್ವಿಜರಾಜನೆನೆ ಸುಧಾಂಶುವೆನಿಕ್ಕು " (ಮಂಗರಾ. ೧೧-೪); ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ (ಬಸವ. ೩೭೪); ಚಂದ್ರಮನಂ ತಮಂ ವಿಮಳನಂ ನಿಃಕಾರಣಂ ಪೀಡಿಪಂತಿರೆ (ಪಾರ್ಶ್ವಪು. ೫-೪೮) ; ಶರಚ್ಚಂದ್ರಿಕೆಯ ಬಳಸಿನೊಳಗಣ ಚಂದ್ರಮನಂತಿರ್ದನನುಪಮಂ ಜಿನ ಚಂದ್ರಂ (ಪುಷ್ಪಪು. ೧೧-೩೦). [ ಸಂ. ಚಂದ್ರಮಸ್ ]

**ಚಂದ್ರಮಂಡಲ** (ನಾ). = ಚಂದ್ರಬಿಂಬ : ಪರಿಪೂರ್ಣ ಚಂದ್ರಮಂಡಲ ದಿರವಂ ಕಂಡಾಗಳವಸಿಪಂಗಿಂತೆಂದಂ (ಗಿರಿಕ. ೪-೧೦೩); ಚಂದನ ಬಹುತಂಪು ಚಂದನಕಿಂತಲು ಬಹುತಂಪು ಚಂದ್ರಮಂಡಲವು (ಇಂಚಾಪ. ೭೬-೭೦). [ ಚಂದ್ರ$_2$ + ಮಂಡಲ ]

**ಚಂದ್ರಮಯೂಖ** (ನಾ). ಚಂದ್ರನ ಕಿರಣ: ರಜನೀಸತಿ ಚಂದ್ರಮಯೂಖ ಮಹಾಹ್ರದದೊಳಗೆ ಮುಬುಂಕಿದಳ್ (ಚಂದ್ರಪು. ೮-೩೧). [ ಚಂದ್ರ$_2$ + ಮಯೂಖ ]

**ಚಂದ್ರಮಯ್ಯ** (ನಾ). ಒಬ್ಬಾತನ ಹೆಸರು: ಉಜ್ಜ(ಜ್ಜ್ವ)ಲ ಚಂದ್ರಮಯ್ಯ ಗಳ ಮಲ್ಲಂ ವೀರಗೋಪಾಳ ದ್ರೋಹರ ಸನ್ನಿಪಾತ ಕೆಱೆಯ ಭೈರವ ಪ್ರತ್ಯಂತ ಮಾರ್ತ್ತಣ್ಡ ಶ್ರೀಮತ್(ದ್)ಬಪ್ಪುವರಸ(ಸರ್)(ಇಆ.X, ೧೦೪-೩; 934). [ ಚಂದ್ರಮ + ಅಯ್ಯ$_1$ ]

**ಚಂದ್ರಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ; ಸಂಜೆಮಲ್ಲಿಗೆ : ರತಿದೇವಿಯೆನಿಪ ಪಾರ್ವತಿ ಸತತಂ ನೊಸಲೆಡೆಯೊಳಿಡುವ ಚಂದ್ರದ ಬೊಟ್ಟಿಗೆ ಪ್ರತಿಮಾನಮೆಂದೆನಿಪ ವಿಕಸಿತ ಕುಸುಮಿತ ಚಂದ್ರಮಲ್ಲಿಗೆ ಗಳೆಸೆದಿರ್ಕುಂ (ಮಲ್ಲಕಾ. ೪-೪೭೦). [ ಚಂದ್ರ$_2$ + ಮಲ್ಲಿಗೆ ]

**ಚಂದ್ರಮಾವು** (ನಾ). ಒಂದು ಬಗೆಯ ಮಾವು ; ಕೆಂಬಣ್ಣದ ಮಾವು : ಚಂದ್ರಮಾವು ವಸಂತಮಾಸದ ಫಲ : ಸುಮಧುರಫಲ (ಚಂದ್ರಮಾ. I, ಮುನ್ನುಡಿ). [ ಚಂದ್ರ$_1$ (<ಸೆಂದುರ) + ಮಾವು ]

**ಚಂದ್ರಮುರು** (ನಾ). = ಚಂದ್ರಮುರುಗು : ಬುಗುಡಿ, ಚಂದ್ರಮುರು . . . ಡಾಬು ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲೆಮಂ. ೩೪). [ ಚಂದ್ರ$_2$ + ಮುರು$_1$ (<ಮುರಿ$_3$) ]

**ಚಂದ್ರಮುರುಗು** 'ಚಂದ್ರಮುರುವು' ನೋ.

**ಚಂದ್ರಮುರುವು, ಚಂದ್ರಮುರುಗು** (ನಾ). ಕಿವಿಯಲ್ಲಿ ಧರಿಸುವ ಅರ್ಧ ಚಂದ್ರಾಕೃತಿಯಲ್ಲಿ ಮಾಡಿದ ಒಂದು ಬಗೆಯ ಮುತ್ತಿನ ಆಭರಣ : ಕರ್ಣದಿ ಚಂದ್ರಮುರುವು ಬಾವುಲಿ ಬುಗುಡಿ . . . ಶೋಭಿಸುತ (ಕುಚೇಲೋ. ೧೨೭). **ಚಂದ್ರಮುರುಗು** : (ಶಿ). [ಚಂದ್ರ$_2$+ಮುರುವು$_1$]

**ಚಂದ್ರಮೂಲ** (ನಾ). ಒಂದು ಬಗೆಯ ವನಸ್ಪತಿ : ಚಂದ್ರಮೂಲ, ಕಚೋರ (ವೃಜಿಗಿ. ೪೮-೫೫). [ ಚಂದ್ರ$_2$ + ಮೂಲ ]

**ಚಂದ್ರಮೌಲಿ, ಚಂದ್ರಮೌಳಿ** (ನಾ). ತಲೆಯಲ್ಲಿ ಚಂದ್ರನನ್ನು ಧರಿಸಿ ದವನು ; ಶಿವ : ಚಂದ್ರಮೌಲಿಮನವುತ್ಸುಕಾತಂದ್ರೈ . . . ಪೂಜ್ಯೆ ಜಯ ಪಾರ್ವತೀ (ಹಾಲಾಸ್ಯ. ೪-೭-೫೩) **ಚಂದ್ರಮೌಳಿ:** ಚಂದ್ರಮೌಳಿಗಜಾತಂಗೆ . . . ನತವ್ರಾತಂಗೆ ಬೇಡೆ ಬಂದೆವು ನೂತನಭುವನೈಕ ಭಾಗ್ಯವತಿ ಪಾರ್ವತಿ ಯುಂ (ಗಿರಿಕ. ೧೦-೨೫). [ ಚಂದ್ರ$_2$ + ಮೌಲಿ ]

**ಚಂದ್ರಮೌಳಿ** 'ಚಂದ್ರಮೌಲಿ' ನೋ.

**ಚಂದ್ರಯಾನ** (ನಾ). ಚಂದ್ರಮಂಡಲದ ಕಡೆಗೆ ಹೋಗುವ ವಾಹನ ; ರಾಕೆಟ್ಟು : ಎತ್ತು, ಚಕ್ಕಡಿ . . . ವಿಮಾನ, ಚಂದ್ರಯಾನ (ನೆಲಮು. ೨೧-೬). [ ಚಂದ್ರ$_2$ + ಯಾನ ]

**ಚಂದ್ರರಾಗ** (ನಾ). ಕೆಂಪುಬಣ್ಣ : ಚಂದ್ರರಾಗ ಸೂರ್ಯರಾಗ ವಸ್ತ್ರದ ಗುಣ–ಇದು ಕಾಂತಿಪ್ರದವಾಗಿ . . . ಐಶ್ವರ್ಯಪ್ರದವಾಗುವುದು (ಸಕವ್ಯ. ೩೫). 'ಸೂರ್ಯರಾಗ' ಪರಾ. [ ಚಂದ್ರ$_2$ + ರಾಗ ]

**ಚಂದ್ರರಿಷ್ಟ** (ನಾ). [ಜ್ಯೋತಿ] ಜಾತಕನಿಗೆ ಅಶುಭಸ್ಥಾನದಲ್ಲಿ ಚಂದ್ರನು ನಿಂತು ಉಂಟುಮಾಡುವ ಅರಿಷ್ಟ,–ಅಶುಭಫಲ : ಪೂರ್ಣನಾಗಿ ಶುಭದ್ವಾದಶಭಾಗದೊಳ್ ನಿಲೆ ಶಶಾಂಕಂ ಚಂದ್ರರಿಷ್ಟಾಪಹಂ (ಜಾತತಿ. ೭-೧). [ ಚಂದ್ರ$_2$ + ರಿಷ್ಟ ]

**ಚಂದ್ರರೋಚಿ** (ನಾ). ಚಂದ್ರನ ಕಿರಣ: ಕುರುರಾಜಾಂಬುಜಚಂದ್ರರೋಚಿ ಕುರುರಾಜಾದ್ರೀಂದ್ರ ವಜ್ರಾಯುಧಂ (ಗದಾಯು. ೧-೭೪). [ ಚಂದ್ರ$_2$ + ರೋಚಿ ]

**ಚಂದ್ರಲೇಖೆ** (ನಾ). ಚಂದ್ರನ ಕಲೆ ; ಚಂದ್ರಬಿಂಬದ ಹದಿನಾರು ಭಾಗ ಗಳಲ್ಲೊಂದು. [ಚಂದ್ರ$_2$ + ಲೇಖೆ ]

**ಚಂದ್ರಲೋಕ** (ನಾ). ಚಂದ್ರನ ಲೋಕ ; ಚಂದ್ರಮಂಡಲ ; ಚಂದ್ರ ಗ್ರಹ: ತಾರಕಾ ಚಕ್ರಮನತಿಕ್ರಮಿಸಿ ಚಂದ್ರಲೋಕಮಂ ಪೊಕ್ಕು (ಕಾದಂಪೂ. ೭೦೪); ಮನುಷ್ಯ ಚಂದ್ರಲೋಕಕ್ಕೆ ಹೋಗಿ ಬಂದಿರುವುದು ಈ ಶತಮಾನದ ಒಂದು ಮಹತ್ಸಾಧನೆ (ರೂಢಿ). [ ಚಂದ್ರ$_2$ + ಲೋಕ ]

**ಚಂದ್ರವಂಕಿ** (ನಾ). ಒಂದು ಬಗೆಯ ತೋಳಿನ ಆಭರಣ : ಸ್ತ್ರೀಪಾತ್ರ ದವರು ರಾಕುಡಿ, ಚಂದ್ರವಂಕಿ, ಜಡೆ, ಅಡ್ಡಬಾಸ ಮುಂತಾದ ಹಳೇ ಆಭರಣಗಳನ್ನು ತೊಟ್ಟು ಕೊಳ್ಳುತ್ತಾರೆ (ಆಧಾಸ್ನ. ೭೦). [ ಚಂದ್ರ$_2$ + ವಂಕಿ ]

**ಚಂದ್ರವಂಶ** (ನಾ). ಕ್ಷತ್ರಿಯರಲ್ಲಿ ಒಂದು ವಂಶ ; ಚಂದ್ರನು ಮೂಲ ಪುರುಷನಾದ ವಂಶ : ಚಂದ್ರವಂಶದ ದೊರೆಗಳು (ಮಹಾವಂ. I, ೧). 'ಸೂರ್ಯವಂಶ' ಪರಾ. [ ಚಂದ್ರ$_2$ + ವಂಶ ]

**ಚಂದ್ರವರ್ತ್ಮ** (ನಾ). [ಛಂದ] ಅಕ್ಷರಛಂದಸ್ಸಿನ ಒಂದು ಪ್ರಕಾರ; ಪ್ರತಿ ಪಾದದಲ್ಲಿಯೂ ಹನ್ನೆರಡು ಅಕ್ಷರಗಳು ಇರುವ ಜಗತೀ ಛಂದಸ್ಸಿನ ಒಂದು ವೃತ್ತ : ಚಂದ್ರವರ್ತ್ಮಕೆಲೆ ಬರ್ಪ ಗಣಚಯಂ ರುಂದ್ರವಹ್ನಿಸುರ ಚಂದ್ರಶಿಖಿಸಖಂ ಚಂದ್ರಬಿಂಬಮುಖಿ ಕೇಳ್ (ಛಂದೋಂಬು. ೩-೧೩೭). 'ಚಂದ್ರಿಕೆ' ಪರಾ. [ ಸಂ. ಚಂದ್ರವರ್ತ್ಮನ್ ]

**ಚಂದ್ರವಾದ್ಯ** (ನಾ). ೧. ಒಂದು ಬಗೆಯ ಚರ್ಮ ವಾದ್ಯ: (ಕಿಸಂಗ್ಲಾ. ೧೨೫). ೨. ಒಂದು ಬಗೆಯ ಧ್ವಜ (?) : ವಿಶೇಷ ಬಿರುದುಗಳು . . . ಬಿಳಿ, ಕೆಂಪು, ಹಸರು ಮತ್ತು ಹಳದಿ ಛತ್ರಿಗಳು, ಸೂರ್ಯವಾದ್ಯ, ಚಂದ್ರ ವಾದ್ಯ, ಒಂಟೆ ಮೇಲೆ ನಿಶಾನಿ, ಚಾಮರ ೪ (ಗುರುದ. ೧೧). [ ಚಂದ್ರ$_2$ + ವಾದ್ಯ ]

**ಚಂದ್ರವಿಮಾನ** (ನಾ). [ಜೈನ] ಸ್ವರ್ಗಗಳಲ್ಲಿ ಒಂದು: ಇನಿಸಗ್ಗಳಂ ಚಂದ್ರ ಕಾಂತಮಣಿಮಯಮಪ್ಪ ಚಂದ್ರವಿಮಾನಮುಮಂ (ಸುಕುಮಾ. ೧೧-೫೨ವ). [ ಚಂದ್ರ$_2$ + ವಿಮಾನ ]

**ಚಂದ್ರವೀಧಿ** (ನಾ). ೧. ಪಟ್ಟಣಗಳ ದಕ್ಷಿಣೋತ್ತರವಾದ ಬೀದಿ. ೨. ಬೆಳುದಿಂಗಳು ತುಂಬಿರುವ ಬೀದಿ,–ಪ್ರದೇಶ: ಈ ಚಂದ್ರವೀಧಿಗೆ ರಸಿಕರೆ ವಿಬುಧರೆ ಬನ್ನಿರಿ ಕವಿಸಹೃದಯರೆ (ಚಂದ್ರವೀ. ೧-೬). 'ಸೂರ್ಯ ವೀಧಿ' ಪರಾ. [ ಚಂದ್ರ$_2$ + ವೀಧಿ ]

**ಚಂದ್ರವೆಳಕು** (ನಾ). ಬೆಳುದಿಂಗಳು ; ತಿಂಗಳ ಬೆಳಕು : ಚಂದ್ರವೆಳಕಿ ನಂಬಲಿಯ ಶುಚಿಯ ಹುಳಿಗಂಜಿ ನಂಜಿಕೊಂಡು (ಮುಕ್ತಕಂ. ೭೮-೧೬) [ ಚಂದ್ರ$_2$ + ಬೆಳಕು$_2$ (<ಬೆಳಗು$_2$) ]

**ಚಂದ್ರಶಾಲ** (ನಾ). ಮಹಡಿಯ ಮೇಲಿರುವ ಮಚ್ಚು,–ಅಂಗಳ : ಉದ್ದಾಮಾಯುತ ಚಂದ್ರಶಾಲಮುಮಪಮಾತೀತಂ (ಶಾಂತಿಪು. ೮-೪೮). [ ಸಂ. ಚಂದ್ರಶಾಲಾ ]

**ಚಂದ್ರಶಾಲೆ** (ನಾ). ೧.=ಚಂದ್ರಶಾಲ: ಮಂದಿರದ ಚಂದ್ರಶಾಲೆಯ ಲ್ಲೊರ್ವ ಪದಸ್ಥಿ ತಿಲಕವನಿದುತಿರ್ದಳ್ (ಹಮ್ಮೀರ. ೨-೭೫ ವ); ಉಪ್ಪರಿಗೆ ದುದಿನೆಲೆಯ ಚಂದ್ರಶಾಲೆಗೆ ಬಂದಳಂಬುಜಾಕ್ಷಿ (ಜೈಮಿಥಾ ೩೦-೩೭); ಚಂದ್ರಶಾಲೆಯೊಳೊರ್ವೆಯುಂ ಶತಪಥಂಬೋಗೆ ಬಸವಟಿವ ಗರ್ಭಿಣಿ (ರಾಮಾಶ್ವ. ೩೩-೩): ನಾಲ್ಕಾರು ಅಂತಸ್ತುಗಳುಳ್ಳ ಚಂದ್ರಶಾಲೆಗಳನ್ನು ನಿರ್ಮಿಸಿ ಅವುಗಳನ್ನು ರೇಷ್ಮೆಯ ಬಟ್ಟೆಯಿಂದ ಅಲಂಕರಿಸುತ್ತಾರೆ (ಪ್ರವಾಇ. II, ೮೧) ೨. ಮೊಗಸಾಲೆ; ಪಡಸಾಲೆ: "ಲಕ್ಷಿಸಲು ಮೊದಲ ಮನೆ ಚಂದ್ರಶಾಲೆಯೆನಿಕ್ಕು" (ಮಂಗರಾ. ೬೦-೧೮); ಬ್ರಹ್ಮ ಜಿಜ್ಞಾಸುಗಳೆಲ್ಲ ಆಗ ದೇವಸ್ಥಾನದ ಚಂದ್ರಶಾಲೆಯಲ್ಲಿ ಕಲೆಯುತ್ತಾರೆ (ಹೊಸಕ್ಷ. ೧೫); ಅಗ್ರಶಾಲೇ ಊಟ ಚಂದ್ರಶಾಲೇ ನಿದ್ದೆ (ಗಾದೆ).

[ ಚಂದ್ರ$_2$ + ಶಾಲೆ$_1$ ]

**ಚಂದ್ರಶಿಲೆ** (ನಾ). ೧.= ಚಂದ್ರಕಾಂತ. ೨. ಚಂದ್ರಗ್ರಹದಲ್ಲಿ ಸಿಗುವ ಕಲ್ಲು: ಚಂದ್ರಗ್ರಹದಿಂದ ತಂದ ಚಂದ್ರಶಿಲೆಗಳನ್ನು ಪ್ರದರ್ಶನಕ್ಕಿಟ್ಟಿದ್ದಾರೆ (ರೂಢಿ). [ ಚಂದ್ರ$_2$ + ಶಿಲೆ ]

**ಚಂದ್ರಶೇಖರ** (ನಾ).=ಚಂದ್ರಮೌಳಿ: ಮಹಾದೇವಿ ಚಂದ್ರಶೇಖರಲಿಂಗ ದಾಲಯಕ್ಕೆ ಬಂದು . . . ಪೂಜಿಸುತ್ತಿರ್ದಳ್ (ಹಮ್ಮೀರ. ೨-೧೩ ವ).

[ ಚಂದ್ರ$_2$ + ಶೇಖರ ]

**ಚಂದ್ರಸಾಲೆ** (ನಾ.)=ಚಂದ್ರಶಾಲ: ಚಂದ್ರ ಸಾ[ಪಾಠಾಂ. ಶಾ]ಲೆ ಸುಚಿತ್ರ ಸಾಲೆಗಳೊಳಟಸಿದಳಾ ಲೋಲಲೋಚನೆ ರಾಮನನು (ಕುರಾಸಾಂ. ೩೩-೪೧); ಚಂದ್ರಸಾಲೆ: ಛಾವಣಿ ಇರುವ, ಅಥವಾ ಇಲ್ಲದ, ಮೇಲ್ಮಚ್ಚು; ಏನಿಲ್ಲ ವೆಂದರೆ ಮೂರುಕಡೆ ತೆರೆದಿದ್ದದ್ದು (ನಮ್ಮನು. ೨೪೨). [ಚಂದ್ರ$_2$+ಸಾಲೆ$_3$]

**ಚಂದ್ರಸೀಬೆ** (ನಾ). ಒಂದು ಬಗೆಯ ಸೀಬೆ; ಕೆಂಪು ತಿರುಳನ್ನುಳ್ಳ ಸೀಬೆ: ನಮ್ಮ ತೋಟದಲ್ಲಿ ಚಂದ್ರಸೀಬೆಯ ಮರವಿದೆ (ರೂಢಿ).

[ ಚಂದ್ರ$_1$ (<ಸೆಂದುರ) + ಸೀಬೆ ]

**ಚಂದ್ರಸ್ವರ** (ನಾ). [ಯೋಗ]ಮೂಗಿನ ಎಡ ಹೊರಳೆಯಲ್ಲಿ ಚಂದ್ರ ಎಂಬ ವಾಯುವಿನ ಸಂಚಾರ: ದೂರಪ್ರಯಾಣಕ್ಕೆ ಚಂದ್ರಸ್ವರ ಸಮೀಪ ಪ್ರಯಾಣಕ್ಕೆ ಸೂರ್ಯಸ್ವರ . . . ಮೊದಲಾದುವುಗಳಂ ತಿಳಿದು (ವಿವೇಕ. ೧೪೩); ಮತ್ತಮಾ ನಾಸಾವಾಮಭಾಗ ಸಂಚಾರಿಯಾದ ಪವನಂಗೆ ಚಂದ್ರ ಸ್ವರ ಸಂಜ್ಞೆ (ವಿವೇಕ. ೧೮೮); ಪುರುಷ ಶಿಶು ಪುಟ್ಟುವದು ಸೂರ್ಯಸ್ವರ ಸ್ತ್ರೀಯಳಿಗೆ ಪುರುಷಂಗೆ ಚಂದ್ರಸ್ವರ ನಡವಾಗ ಕ್ರೀಡಿಸಲು (ನವಮೋ. ೧೮-೪೫). 'ಸೂರ್ಯಸ್ವರ' ಪರಾ. [ ಚಂದ್ರ$_2$ + ಸ್ವರ ]

**ಚಂದ್ರಹಲಸು** (ನಾ). ಒಂದು ಬಗೆಯ ಹಲಸು; ಕೆಂಪು ತೊಳೆಗಳನ್ನುಳ್ಳ ಹಲಸು: ಚಂದ್ರಹಲಸು ತಿನ್ನಲು ಬಲು ರುಚಿ (ರೂಢಿ).

[ ಚಂದ್ರ$_1$ (<ಸೆಂದುರ) + ಹಲಸು (<ಪಲಸು) ]

**ಚಂದ್ರಹಾರ** (ನಾ). ಹೆಂಗಸರು ಕೊರಳಿನಲ್ಲಿ ಧರಿಸುವ ಒಂದು ಬಗೆಯ ಚಿನ್ನದ ಸರ: ಚಂದ್ರಾವಳಿಯ ಸೀರೆ ಚಂದ್ರಮ್ಮ ಉಟ್ಟಿಹಳು ಚಂದ್ರ ಹಾರ ಮೂಗಿನಲಿ ನತ್ತು ಕಿವಿಯಾಗ ಚಂದ್ರಬಾವುಲಿ ಗುಬ್ಬಿಬಾವುಲಿ (ಸಿದ್ಧಪು. ೧೯-೬೯). [ ಚಂದ್ರ$_2$ + ಹಾರ$_3$ ]

**ಚಂದ್ರಹಾಸ** (ನಾ). ೧. ಬೆಳುದಿಂಗಳಿನಂತಹ ನಗೆ: ಬಂತಿದೊ ಶೃಂಗಾರ ಮಾಸ ಕಂತು ನಕ್ಕ ಚುದ್ರಹಾಸ (ನಾದಲೀ. ೬೨-೨). ೨. ಚಂದ್ರನನ್ನು ನೋಡಿ ನಗುವವನು,-ಹೀಯಾಳಿಸುವವನು: ನಿರ್ಮಲಮುಖಾಂ ಬುಜದಿಂ ಶಶಾಂಕನಂ ಕಳಕಳಿಸಿ ನಗುವನದಱಿಂ ಚಂದ್ರಹಾಸನೆಂದಿಳೆಯೊಳೀ ತಂಗೆ ಪೆಸರಾಗಲಿ (ಜೈಮಿಥಾ. ೨೮-೬೦). ೩. ವಿಷ್ಣುಭಕ್ತನಾದ ಕುಂತಳ ದೇಶದ ಒಬ್ಬ ದೊರೆ: ಸಂತಾನಮಿಲ್ಲದ ಕುಳಿಂದನ ಬಾಳ್ಕೆಗುತ್ತಮ ಕುಮಾರನಾದಂ ಚಂದ್ರಹಾಸಂ (ಜೈಮಿಥಾ. ೨೮-೬೩). ೪. ಒಂದು ಬಗೆಯ ಖಡ್ಗ: "ತರವಾರಿ ಮಂಡಲಾಗ್ರಂ ಚಂದ್ರಹಾಸಂ . . . ಅಡಾಯುಧ ಮೆನಿಕ್ಕು" (ಮಂಗರಾ. ೮೮-೩೭); ಮೆಯ್ಯ ಲಿ ಪಾಯ್ದಂ ರಥದಿಂ ನೆಲಕ್ಕೆ ಜಡಿಯುತ್ತುಂ ಚಂದ್ರಹಾಸಾಸಿಯಂ (ಪಂಪರಾಮಾಂ. ೧೪-೧೮೮); ಕರಾಗ್ರದ ಚಂದ್ರಹಾಸವ ಸೂತಗಿತ್ತು . . . ಚಾಪಕೆ ನೀಡಿದನು ಕರವ (ತೊರರಾ. ೧-೧೫-೧೭); ಬಿಡಾರದ ಎರಡು ಗೋಡೆಗೂ ಕತ್ತಿ, ಚಂದ್ರಹಾಸ, ಬಿಲ್ಲು ಬಾಣಗಳು ನೇತಿದ್ದವು (ಅಳಾಕ. ೯೧). 'ಚಂದ್ರಾಯುಧ' ಪರಾ.

[ ಚಂದ್ರ$_2$ + ಹಾಸ$_2$ ]

**ಚಂದ್ರಹಿಟ್ಟು** (ನಾ). ಒಂದು ಬಗೆಯ ಮರ: ಕುಂಕುಮದ ಮರ . . . ಚಂದ್ರಹಿಟ್ಟು, ಊರಬತ್ತಿ, ನ್ಯಾಮತಿ (ಮ್ಯಜಿಗಿ. ೫೨-೧೦೩೯). [ ? ]

**ಚಂದ್ರಾಚೂಡ** (ನಾ).=ಚಂದ್ರಚೂಡ: ಹರುಷಂ ಮೂಡಿ ಚಂದ್ರಾಚೂಡ ನೆಲ್ಲರುಮಂ ಕಳುಹಿ (ಬಸಪು. ೧-೫೧). [ <ಸಂ. ಚಂದ್ರಚೂಡ ]

**ಚಂದ್ರಾತಪ**(ನಾ). ೧.ಬೆಳುದಿಂಗಳು; ತಿಂಗಳ ಬೆಳಕು: "ಚಂದ್ರಾತಪಮುಂ ಚಂದ್ರಿಕೆಯುಂ ಮೆಸೆವ ತತ್ಕೌಮುದಿಯುಂ" (ವಸ್ತುಕೋ. ೧೩-೭೦); ಶರಚ್ಚಂದ್ರಾತಪದೊಳ್ ಪಗಲಿನ ಶರದಾತಪ ಪರಿಶ್ರಮಮನಾಱಿಸಿ (ಆದಿಪು. ೧೨-೧೧ ವ); ಚಂದ್ರಾತಪಮಮೃತರಸಾಕಾರಮಾಯ್ತು (ಕಾದಂಪೂ. ೬೩೪); ಪಿಂಗಿತು ತಮಂ ಸಾಂದ್ರಚಂದ್ರಾತಪಂ ಪಸರಿಸಿತು (ಹಡಕಾ. ೩-೮೭). ೨. ಅಕ್ಕಪಕ್ಕಗಳಲ್ಲಿ ಗೋಡೆಗಳಿಲ್ಲದೆ ಮೇಲೆ ಛಾವಣಿ ಮಾತ್ರವಿರುವ ವಿಶಾಲವಾದ ಮೊಗಸಾಲೆ. ೩. ಮೇಲ್ಕಟ್ಟು;ವಿತಾನ: ಸಭಾಮಂಟಪವು ಚಂದ್ರಾತಪದಿಂದಲೂ ಸುಗಂಧಪುಷ್ಪಮಾಲೆಗಳಿಂದಲೂ ಅಲಂಕೃತ ವಾಗಿದ್ದಿತು (ಭೀಷ್ಮಜ. ೮೦); ಅದರ ಮೇಲುಗಡೆ ವಜ್ರಗಳ ಗೊಂಚಲು ಗಳಿಂದ ಖಚಿತವಾದ ಚಂದ್ರಾತಪಗಳು ಲಂಬಾಯ ಮಾನವಾಗಿವೆ (ಕೋಹಿನೂ. ೨೮). [ ಸಂ. ]

**ಚಂದ್ರಾತ್ಮಜ** (ನಾ).=ಚಂದ್ರಜ. [ ಚಂದ್ರ$_2$ + ಆತ್ಮಜ ]

**ಚಂದ್ರಾಭದೇವ** (ನಾ). [ಜೈನ]ಲೌಕಾಂತಿಕದೇವರಲ್ಲಿ ಒಂದು ವರ್ಗಕ್ಕೆ ಸೇರಿದವನು: ಸೂರ್ಯಾಭದೇವ ಸಂಖ್ಯಾನಮೊಂಬೈಸಾಸಿರದೊಂಬತ್ತು ಚಂದ್ರಾಭದೇವರ್ ಪನ್ನೊಂದುಸಾಸಿರದ ಪನ್ನೊರ್ವರ್ (ತತ್ತ್ವಪ್ರ. ೨೨೨).

[ ಸಂ. ]

**ಚಂದ್ರಾಭರಣ** (ನಾ). ಚಂದ್ರನನ್ನೇ ಆಭರಣವಾಗಿ ಧರಿಸಿದವನು; ಶಿವ: ಚಂದ್ರಾಭರಣಂ ಮನವೊಸೆದು ತಾಳಿಗಟ್ಟಿದನೆನೆ ಮೆಱೆದುದು ಕೊರ ಲೊಳೇಕಮುಖರುದ್ರಾಕ್ಷಂ (ಗಿರಿಕ. ೩-೮೭). [ ಚಂದ್ರ$_2$ + ಆಭರಣ ]

**ಚಂದ್ರಾಭಾಸ** (ನಾ).=ಚಂದ್ರಾಭದೇವ: ಆದಿತ್ಯವಹ್ನಿಮಧ್ಯದೊಳ್ ಚಂದ್ರಾಭಾಸ ಸತ್ಯಾಭಾಸರುಂ . . . ಇರ್ಪರ್ (ತತ್ತ್ವಪ್ರ. ೨೨೨).

[ ಚಂದ್ರ$_2$ + ಆಭಾಸ ]

**ಚಂದ್ರಾಮ** (ನಾ).=ಚಂದ್ರಮ: ಬಿದಿಗೆಯಲಿ ಚಂದ್ರಾಮ ಬರೆ, ನಗೆಯ ಬೀರಿ (ಪಯಣ. ೧೭-೧೪); ಒಮ್ಮೆ ತುಂಬಿದ ಚಂದ್ರಾಮನನ್ನು ನೋಡುತಿದ್ದ (ಗ್ರಾಮಾಯ. ೨೦೩); ಅವನಿಗೆ ಬಂಗಾರದಂಥ ಬಾಬು, ಚಂದ್ರಾಮನಂಥ ಬಾಬು, ಎಂದು ಹುಡುಗನನ್ನು ಕೆರಳಿಸಿಬಿಟ್ಟು ಅವನು ರೇಗಿ ಕೆಂಡವಾಗುವ ಹಾಗೆ ಮಾಡುತ್ತಿದ್ದನು (ಇಪ್ಪಕ. ೩೦೨). [<ಸಂ. ಚಂದ್ರಮಸ್ ]

**ಚಂದ್ರಾಯುಧ** (ನಾ). ಒಂದು ಬಗೆಯ ಖಡ್ಗ: ಹಂದೆಯ ಕೈಯಲ್ಲಿ ಚಂದ್ರಾಯುಧವಿರ್ದು ಫಲವೇನು (ಬಸವ. ೧೧೮); ಹರಿಕುಲಿಶನು ತನ್ನ ಚಂದ್ರಾಯುಧದಿಂದ ಸರ್ಪದ ಹೆಡೆಗಳನ್ನು ಕತ್ತರಿಸತೊಡಗಿದನು (ಮಂಡಸ. ೯೦). [ ಚಂದ್ರ$_2$ + ಆಯುಧ ]

**ಚಂದ್ರಾರ್ಧ** (ನಾ). ೧. ಅರ್ಧಚಂದ್ರ; ಚಂದ್ರನ ಅರ್ಧಭಾಗ: ಇವರು ಘಟ್ಟನು ನಿಲಿಸಿದರು ಚಂದ್ರಾರ್ಧಸದೃಶದಲಖಿಳ ಮೋಹರವ (ಕುವ್ಯಾದ್ರೋ. ೧. ೪೯). ೨. ಒಂದು ಆಯುಧ: ಬಿಲ್ಲು ತೀರು ಹದೆ . . . ನಾರಾಚ ಚಂದ್ರಾರ್ಧ ಶೂಲ . . . ಖೇಟಕ ಮುಂತಾದ ಶತ್ರುಜಯಾತ್ಮ ರಕ್ಷಾಧಿಸಾಧನವಿಶೇಷಂಗಳಿಂದಲುಂ (ವಿವೇಕ. ೨೬೩). [ಚಂದ್ರ$_2$ + ಅರ್ಧ]

**ಚಂದ್ರಾಲೋಕ** (ನಾ). ಚಂದ್ರನ ಕಾಂತಿ; ಬೆಳುದಿಂಗಳು: ಪೊದಬ್ದು ಪಜ್ಜಳಿಪ ಚಂದ್ರಾಲೋಕಮಂ ಕಂಡು ತತ್ಪೂತಾತ್ಮಂ ನೆನೆದಂ ತನತ್ತು ಜನನಸ್ನಾನಕ್ಕೆ . . . ಕವಿದಬ್ಧಿಕ್ಷೀರಪೂರೌಘಮಂ (ಪುಷ್ಪಪು. ೧೩-೨೫).
[ ಚಂದ್ರ$_2$ + ಆಲೋಕ ]

**ಚಂದ್ರಾವರ್ತ** (ನಾ). ಒಂದು ಬಗೆಯ ಸನ್ನಿಪಾತರೋಗ: ಇನಿತು ಸನ್ನಿಪಾತ ರೋಗಲಕ್ಷಣಂ . . . ಚಂದ್ರಾವರ್ತವೆಂಬುದು ಕೃಷ್ಣಪಕ್ಷದಲ್ಲಿ ಆದರೂ, ಶುಕ್ಲಪಕ್ಷದಲ್ಲಾದರೂ ಅಹುದು (ವಿಶ್ವವಿ. ೧೯೦)
[ ಚಂದ್ರ$_2$ + ಆವರ್ತ ]

**ಚಂದ್ರಾಶ್ಮ** (ನಾ). = ಚಂದ್ರಕಾಂತ: "ಚಂದ್ರಾಶ್ಮಾ-ಚಂದ್ರಕಾಂತದಶಿಲೆ" (ಒಷಧಿ. ೫೪); ನಿರ್ಜರಕಾಂತಾನನಚಂದ್ರನಿಂದೊಸರ್ದ ಚಂದ್ರಾಶ್ಮಾಂಬುವಂ ಪೀರ್ದು (ರಾಜಶೇ. ೧-೧೧೭). [ ಚಂದ್ರ$_2$ + ಅಶ್ಮ ]

**ಚಂದ್ರಾಸ** (ನಾ). ಒಂದು ಬಗೆಯ ಖಡ್ಗ; ಚಂದ್ರಹಾಸ: ರಾವಣ ತನ್ನ ಚಂದ್ರಾಸದಲಿ ವಿಹಗನ ಬೆನ್ನ ಹೊಯ್ದುರೆ ಕಡಿಗಳೆರಡರ ನೆತ್ತರುಕ್ಕುತಿರೆ (ಕೌಶಿರಾ. ೬-೪೩); ಚಂದ್ರಾಸವನು ಪರಿದೆಯಲಿ ಸನ ಗೊಳಿಸೆಂದಾಡುವರೆ (ಜನಧಾ. ೫೮-೬೩). [<ಸಂ. ಚಂದ್ರಹಾಸ ]

**ಚಂದ್ರಿ** (ಗು). ೧. ಹೊಳೆಯುವ; ಹೊನ್ನಿನ ಕಾಂತಿಯ. (ನಾ). ೨. ಚಂದ್ರನ ಮಗ; ಬುಧ. [ ಸಂ. ಚಂದ್ರಿನ್ ]

**ಚಂದ್ರಿಕಾಕಿರಣ** (ನಾ). ೧. ಬೆಳುದಿಂಗಳ ಕಾಂತಿ. ೨. (?): ವೇದಿಸಿಕೊಂಬ ಒಂದಾದಲ್ಲಿ ಆದು ಖಂಡನೆಗು ಪತ್ರದ ಚಂದ್ರಿ[ಪಾಠಾಂ. ಡಿ]ಕಾಕಿರಣದಂತೆ (ಮೋಳಿಮಾ. ೧೨೮-೯೯೫). [ ಸಂ. (ಚಂದ್ರಿಕಾ + ಕಿರಣ) ]

**ಚಂದ್ರಿಕಾತಿಮಿರ**(ನಾ). ಬೆಳುದಿಂಗಳು: ಚಂದ್ರಿಕಾತಿಮಿರಗುಣಂ-ಪಿತ್ತವನ್ನು ಶಮನಮಾಡಿ ಕಣ್ಣುರೋಗ, ದಾಹ, ಜ್ವರ ಮುಂತಾದವುಗಳನ್ನು ಹೋಗಲಾಡಿಸುವುದೇ ಬೆಳ್ದಿಂಗಳ ಗುಣಗಳು (ಸಕವೈ. ೫೮).
[ ಸಂ. (ಚಂದ್ರಿಕಾ+ ಅತಿಮಿರ) ]

**ಚಂದ್ರಿಕಾವಾಟ** (ನಾ). = ಚಂದ್ರಕವಾಟ: ಚಂದ್ರಿಕಾವಾಟೇ ಸೇನಾನ್ವಯಾನುಗಾಯ (ಎಇ. XIII, ೧೯೩-೭; 902). [<ಚಂದ್ರಕವಾಟ ]

**ಚಂದ್ರಿಕಾವಿಹರಣ**(ನಾ). ಬೆಳುದಿಂಗಳಿನಲ್ಲಿ ಮಾಡುವ ವಿಹಾರ: ನರೇಂದ್ರ ಚಂದ್ರಂ ಚಕೋರನಂತೆ ಚಂದ್ರಿಕಾವಿಹರಣವಿನೋದಕ್ಕೆ ಬಗೆದಂದು(ಚಂದ್ರಪು. ೮-೪೩ ವ). [ ಸಂ. (ಚಂದ್ರಿಕಾ + ವಿಹರಣ) ]

**ಚಂದ್ರಿಕಾಸ್ರಾವ** (ನಾ). = ಚಂದ್ರಕಾಂತ: "ಚಂದ್ರಿಕಾಸ್ರಾವಂ-ಚಂದ್ರಕಾಂತ" (ಒಷಧಿ. ೫೫). [ ಸಂ. ]

**ಚಂದ್ರಿಕೆ** (ನಾ). ೧. ಬೆಳುದಿಂಗಳು; ತಿಂಗಳ ಬೆಳಕು: "ಜ್ಯೋತ್ಸ್ನಾಭ್ಯುಪದೇಶಂಗಳ್ ಚಂದ್ರಾತಪಮುಂ ಚಂದ್ರಿಕೆಯುಮೆಸೆವ ತತ್ಕೌಮುದಿಯುಂ" (ವಸ್ತುಕೋ. ೧೩-೭೦); "ಚಂದ್ರಿಕೆ ಜ್ಯೋತ್ಸ್ನೆ ಕೌಮುದಿಯು ಬೆಳ್ದಿಂಗಳ್" (ಮಂಗರಾ. ೧೧-೪); ಶರದದ ಚಂದ್ರನಂ ವಿಮಲಚಂದ್ರಿಕೆ . . . ಪೊರ್ದುವಂತೆ (ಪಂಪಭಾ. ೨-೩೯); ಚಾರುಚಂದ್ರಿಕೆಯ ಬೀಜಂಗಳೋ . . . ಎನೆ ತರಳತಾರಾಳಿ ಕಣ್ಗೆಸೆದುದು (ಹಡಕಾ. ೩-೭೯). ೨. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಅಮೃತ, ಮಾನದ . . . ಚಂದ್ರಿಕೆ ಕಾಂತಿ ಜ್ಯೋತ್ಸ್ನೆ . . . ಕಾಮದಾಯಿನಿಯೆಂಬ ಷೋಡಶಕಲೆಗಳಿಂ ಭರಿತನಾಗಿ (ವಿವೇಕ.೨೬೭). ೩. ಬರೆಹವನ್ನುಳ್ಳ ಓಲೆಗರಿಯ ಕೋಶ–ಕೊಳವೆ: ಸುಲಭರಾಯಸ ಪತ್ರಿಕೆಯ ಚಂದ್ರಿಕೆಯೊಳಿಂ[ ಳಗಿಂ ]ದುರ್ಚಿ (ಸನತ್ಕು. ೧೨-೫೩); ಗಣಾಧಿಪನ ಕರೆದಿತ್ತು ನೀನಿದನೋದೆನಲು ಚಂದ್ರಿಕೆಯ ತೆಗೆದೋದಿದನು(ಶಂಕರದಾ. ೯-೫). ೪. ಹಣ್ಣು ಪಕ್ವವಾಗಿರುವುದನ್ನು ತಿಳಿದುಕೊಳ್ಳಲು ಕೊರೆದು ಮಾಡುವ ರಂಧ್ರ; ಉಂಡಿಗೆ: ಚಂದ್ರಿಕೆ ಹಾಕಿ ನೋಡಲಾಗಿ ಕಲ್ಲಂಗಡಿ ಹಣ್ಣು ಪೂರ್ಣ ಪಕ್ವವಾಗಿದೆಯೆಂದು ಖಾತ್ರಿಯಾಯಿತು (ರೂಢಿ). ೫. [ಛಂದ] ಪ್ರತಿಪಾದದಲ್ಲಿ ಹನ್ನೆರಡು ಅಕ್ಷರಗಳಿರುವ ಒಂದು ಸಮವೃತ್ತ: ಚಂದ್ರಿಕಾತ್ಮಕರಮಪ್ಪ ಗಣಚಯಂ ಚಂದ್ರಿಕಾಖ್ಯಮುಸಿರಾಬು ನೆಲೆಯೊಳಂ ರುಂದ್ರವಪ್ಪು ಸುರ ಚಂದ್ರ ಶಿಖಿಸಖಂ ಚಂದ್ರಬಿಂಬಮುಖಿ ಕೇಳ ಕೆಳದಿ ನೀಂ (ಛಂದೋಂಬು. ೨-೮೭ ಅಡಿಟಿ). 'ಚಂದ್ರವರ್ತ್ಮ' ಪರಾ. ೬. ಅಕ್ಷರಛಂದಸ್ಸಿನ ತ್ರಿಷ್ಟುಪ್ಪಿನಲ್ಲಿ ಒಂದು ವೃತ್ತ: ಅಮರಯುಗ ಮುಮಗ್ನಿಯುಂ ಲಗಂ ಕ್ರಮದಿನೊಡನೆ ಬಂದು ನಿಲ್ಕೆ ವಿಶ್ರಮಮದೆಸೆಯೆ ದಿಕ್ಪ್ರದೇಶದೊಳ್ ಕಮಲವದನೆ ಚಂದ್ರಿಕಾಹ್ವಯಂ (ಛಂದೋಂಬು. ೨-೧೧೪). [ ಸಂ. ಚಂದ್ರಿಕಾ ]

**ಚಂದ್ರಿಯಮ್ಮ** (ನಾ). ಒಬ್ಬಾತನ ಹೆಸರು: ಚನ್ದ್ರಿಯಮ್ಮ ಗಹಿಯ ಸಾಹಸ ಪುತ್ರಪ್ರಿಯ ಪರಮೇಶ್ವರಭಟ್ಟೋಯ (ಇಆ. VI, ೬೭-೭; 808).
[ <ಚಂದ್ರ$_2$ + ಅಮ್ಮ$_1$ ]

**ಚಂದ್ರುಟಿ**, ಚಂದ್ರೋಟಿ (ನಾ). (ಕರಾ) ಅಚ್ಚ ಕಪ್ಪುಬಣ್ಣದ ಒಂದು ಬಗೆಯ ಮೀನು. **ಚಂದ್ರೋಟಿ**: ಚಂದ್ರೋಟಿ ಸೋರಾ ಹಿರಿ ಬಣಗು ಭಾರಾ ಮತ್ಸ್ಯಾವತಾರ (ಕ್ರೌಂಚಧ್ವ. ೫-೧೫). [ ? ]

**ಚಂದ್ರೋಚ್ಚ** (ನಾ). ೧. [ಜ್ಯೋತಿ] ಚಂದ್ರಗ್ರಹದ ಉಚ್ಚಸ್ಥಾನ; ವೃಷಭರಾಶಿ. ೨. ಚಂದ್ರಪಥದಲ್ಲಿ ಭೂಮಿಯಿಂದ ಅತ್ಯಂತ ಎತ್ತರವಾಗಿರುವ ಸ್ಥಾನ: ಭೂಮ್ಯುಚ್ಚ, ಚಂದ್ರೋಚ್ಚ (Apogee. ಪಾರಿನಿ. ೫). 'ಚಂದ್ರನೀಚ' ಪರಾ. [ ಚಂದ್ರ$_2$ + ಉಚ್ಚ ]

**ಚಂದ್ರೋಟಿ** 'ಚಂದ್ರುಟಿ' ನೋ.

**ಚಂದ್ರೋದಯ** (ನಾ). ೧. ಚಂದ್ರನು ಹುಟ್ಟುವಿಕೆ,–ಮೂಡುವಿಕೆ: ಚಂದ್ರೋದಯದಬ್ಧಿಯಂತೆ (ಶಾಂತಿಪು. ೬-೫೪); ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ (ಬಸವ. ೨೫); ಚೆಲ್ವಾಯ್ತು ಚಂದ್ರೋದಯಂ (ಪುಷ್ಪಪು. ೮-೧೧೪). ೨. = ಚಂದ್ರಸ್ವರ: ಕರತಳದಿಂದ ನಾಸಿಕದೆರಲ ಚಂದ್ರೋದಯಮನೀಕ್ಷಿಸಿ ದೇವ ಹೊಱಮಂಟ (ಕುವ್ಯಾಉ. ೭-೫). ೩. ಒಂದು ಬಗೆಯ ಬತ್ತ: ಕಡುಸೊಬಗಾಂತಿಹ ಚಂದ್ರೋದಯಶಾಲಿಯೆಡೆವಿಡದೆಸೆದುವರ್ತಿಯಲಿ (ಕಂವಿ. ೫-೭೦). ೪. ಮಂಟಪದ ಮೇಲ್ಕಟ್ಟು: ವಿತಾನ: "ಚಂದ್ರೋದಯಃ, ವಿತಾನಂ, ಉಲ್ಲೋಚಃ, ಖಜಕಃ – ಈ ೪ ಮೇಲ್‌ಕಟ್ಟು" (ಹಲಾಯು. ೫೨-೧೫). [ ಚಂದ್ರ$_2$ + ಉದಯ ]

**ಚಂದ್ರೋಪಲ**, ಚಂದ್ರೋಪಳ (ನಾ). ಚಂದ್ರಕಾಂತ ಶಿಲೆ; ಇಂದೂಪಲ: ಚಾರು ಚಂದ್ರೋಪಲದ ಕರಡಿಗೆಯೊಳಾ ನಿಶಾನಾರಿ ನೀಲದ ಹಾರಮಂ ಬಯ್ಚಿದಳೊ . . . ಎನಲು ಸೂರಿಗಳು ಬಣ್ಣಿಸೆ ಸುಧಾರೋಚಿ ಕಣ್ಗೆಸೆದುದು (ಹಡಕಾ. ೩-೮೭); ಚಾರು ಚಂದ್ರೋಪಲದ ರಮ್ಯಾಗಾರದಲಿ . . . ಮಲಗುವ ಮಹೀಪತಿ ನೀರೊಳೊಱಗುವನು (ಕುವ್ಯಾಗ. ೩-೪೦). **ಚಂದ್ರೋಪಳ**: ಮಧ್ಯದೊಳ್ ಶೋಭಿಸಿ ತೆಳ್ಪಂ ತಾಳ್ದ ಚಂದ್ರೋಪಳಂ (ಪುಷ್ಪಪು. ೩-೭೬).
[ ಚಂದ್ರ$_2$ + ಉಪಲ ]

**ಚಂದ್ರೋಪಳ** 'ಚಂದ್ರೋಪಲ' ನೋ.

**ಚಂಪ** (ನಾ). ಒಂದು ಬಗೆಯ ಕಾಡುಮರ; ಕೋವಿದಾರವೃಕ್ಷ. [ ಸಂ. ]

**ಚಂಪಕ** (ನಾ). ೧. ಒಂದು ಬಗೆಯ ವೃಕ್ಷ ಮತ್ತು ಅದರ ಹೂವು; ಸಂಪಿಗೆ: "ಚಂಪಕಮೆನಲ್ ಸಂಪಗೆ" (ಮಂಗರಾ. ೩೮-೨೪); ಈ ಚಂಪಕಕ್ಕೆ ಪೂಗಳ್ ದೊರೆಯೇ (ಆದಿಪು. ೧೧-೧೧೪); ಅಲರ ಜೊಂಪದಿನಂದೆಸೆದತ್ತು ಚಂಪಕಂ (ಜಗವಿ. ೧೪-೩೨); ತಿಲಕವಶೋಕೆ ಚಂಪಕ ಪೂಗ . . . ಇಲ್ಲಿ ನೋಡಿವೆ ಭೂಮಿಸುತೆ ಭೂಜಾತಸಂತತಿಯ (ತೊರರಾ. ೩-೦-೨೯). ೨. ಒಂದು ಬಗೆಯ ಕೆಂಪುಬಣ್ಣ; ಕೇಸರಿಬಣ್ಣ: ಸಂಜೆಯ ಸೂಚಿಗೆವಂದ ಚಂದ್ರಮನ ಸೊಂಪಿನಂತೆ ಚಂಪಕಮಾಗೆ ಪೂತ ಸಂಪಗೆಯ ಸಾಲ್ಗಳ್ (ಅನಂಪು. ೧-೯೦ ವ). ೩. = ಚಂಪಕಮಾಲೆ ೨: ಗುರುವೊಂದು ಬಂದೊಡುತ್ಪಲಮಕ್ಕು . . . ನಾಲ್ಕು ಲಘುವಿರಲು ಚಂಪಕಮಕ್ಕು (ಮಂಗರಾ. ೧೧೮-೨೨). [ ಸಂ. ]

**ಚಂಪಕಚ್ಛಾಯೆ** (ನಾ). ೧. ಸಂಪಿಗೆಹೂವಿನ ಬಣ್ಣ. ೨. ಸಂಪಿಗೆಹೂವಿನಂತೆ ದೇಹಕಾಂತಿಯನ್ನು ಉಳ್ಳವಳು : ಪೊಂಬಣ್ಣ ಚಂಪಕಚ್ಛಾಯೆ ಮನೋಹರ ಮಧ್ಯಮರೂಪೆ ಸುವಿಷ್ಟರೆಯೆನಿಕುಂ ಚಾಪಮಧ್ಯಮುದ್ರೋಕ್ಯಾಣಂ (ಜಾತತಿ. ೧೯-೨೬).

[ ಸಂ. ಚಂಪಕಚ್ಛಾಯಾ (ಚಂಪಕ + ಛಾಯಾ) ]

**ಚಂಪಕಮಾಲೆ** (ನಾ). ೧. ಸಂಪಿಗೆಹೂವಿನ ಮಾಲೆ. ೨. [ಛಂದ] ಪ್ರತಿಯೊಂದು ಪಾದದಲ್ಲಿ ಇಪ್ಪತ್ತೊಂದು ಅಕ್ಷರಗಳಿರುವ ಒಂದು ಸಮಪಾದ ವೃತ್ತ : ತ್ರಿದಶರವೀಂದುಭಾಸ್ಕರಗಣತ್ರಿತಯಾಗ್ರದೊಳಗ್ಗಿ ಚೆಲ್ವುವೆತ್ತುದಯಿಪಿನಂ ತ್ರಯೋದಶದೊಳೊಂದಿರೆ ವಿಶ್ರಮಣಂ . . . , ಓದು ಗಡ ಚಂಪಕಮಾಲೆಯಂ (ಛಂದೋಂಬು. ೨-೧೭೯).

[ ಚಂಪಕ + ಮಾಲೆ$_2$ ]

**ಚಂಪಕಸ್ರಜ** (ನಾ). ಸಂಪಿಗೆಹೂವಿನ ಮಾಲೆ : ಸುರಚಾಪಚಂಪಕಸ್ರಜ ಕುರವಣಿಸುತ್ತಸಿತಜಳದ ಮದಮಧುಪ ಸಮುತ್ಕರಮೆಱಗಿದಂತೆ ಮೆಱೆದುದು ಪರಿಕಿಸದಾತ್ಮೀಯಜೀವನವ್ಯಯಭಯಮಂ (ರಾ ಜ ಶೇ. ೮-೧೧೦). [ ಚಂಪಕ + ಸ್ರಜ ]

**ಚಂಪನಚೂರು** (ನಾ). ಸಣ್ಣಸಣ್ಣ ಚೂರು ; ತುಂಡುತುಂಡು : ಇದ್ದ ಆಸ್ತಿಯನ್ನು ಹರಿದು ಹಂಚಿ ಚಂಪನಚೂರು ಮಾಡಿಕೊಳ್ಳುವ ಗಂಡುಗಲಿಗಳನ್ನು ನೋಡಿ (ಮೊಮಗು. ೨೬). 'ಚಕಣಾಚೂರು' ಪರಾ.

[ ? + ಚೂರು$_3$ ]

**ಚಂಪು** (ನಾ). [ಕಾವ್ಯಮೀ] ಗದ್ಯಪದ್ಯಮಿಶ್ರವಾದ ಒಂದು ಕಾವ್ಯರೂಪ: ಬೆರಸಿ ಬರೆ ಗದ್ಯಪದ್ಯಮವೆರಡುಂ ಕೃತಿ ಚಂಪುವೆಂಬ ಪೆಸರಂ ಪಡೆಗುಂ (ಕಾವ್ಯಾವ. ೯೫೦) ; ಗದ್ಯಪದ್ಯಗಳೆರಡೂ ಇರತಕ್ಕ 'ಮಿಶ್ರ' ಕಾವ್ಯವು 'ಚಂಪು' ಎನ್ನಿಸುತ್ತದೆ (ಕೃಬಿಡಿ. ೧೪೧). [ ಸಂ. ಚಂಪೂ ]

**ಚಂಪೂ** (ನಾ).=ಚಂಪು. 'ಚಂಪೂಕಾವ್ಯ' ಪರಾ. [ ಸಂ. ]

**ಚಂಪೂಕಾವ್ಯ** (ನಾ).=ಚಂಪು : ಗದ್ಯಕಾವ್ಯ ಪದ್ಯಕಾವ್ಯ ಚಂಪೂಕಾವ್ಯ ಗೀತಪ್ರಬಂಧ ಕ್ಷುದ್ರಪ್ರಬಂಧಗಳೆಂಬ ಪಂಚವಿಧ ಕಾವ್ಯಪ್ರಬಂಧಂಗಳಂ (ವಿವೇಕ. ೨೨೬). [ ಚಂಪೂ + ಕಾವ್ಯ ]

**ಚಂಪೆ** (ನಾ). ಕೆನ್ನೆ ; ಕಪೋಲ : ಎಷ್ಟು ಅವನ ಪೊಗರು . . . ಚಂಪೆಗೆ ಎರಡು ಕೊಡಬೇಕಾಗಿತ್ತು (ಸಣ್ಣ ಕ. VI, ೧೨೮). [ ←ತೆಲು. ಚಂಪ ]

**ಚಂಪೆಯ** (ನಾ). ಒಂದು ಬಗೆಯ ಡೇರೆ : ಪುದಿಯೆ ಕವಿಲ್ತ ಕೇಸರದ ದೂಸಮಶೋಕೆಯ ವೀಣೆಯಂ ಪ್ರಿಯಾಳದ ಗುಡಿ ನಾಗಚಂಪಕದ ಚಂಪೆಯಮಾಮ್ರದ ಕೊಂಚೆಯುಂ . . . ಒಪ್ಪಿ ತೋಱಿದುವು ಮನೋಜ ರಾಜಶಿಬಿರಂಗಳೆಂಬಿನೆಗಂ ವನಾಳಿಗಳ್ (ಚಂದ್ರಪ್ರ. ೬-೬೨) ; ಮೊಗಸಾಲೆ ಚಂಪೆಯಂ ಚೌಕಿಗೆ ಮೆಱದಿರೆ ಹರಿಸದಿಂದೆ ಬೀಡಂ ಬಿಟ್ಟು (ಕಬ್ಬಿಗಕಾ. ೧೯೯) ; ರಾಜಪಸಾಯಿತರ ಗುಡಿ ಗೂಢಚಂಪೆ[ಪಾಠಾಂ. ಪ]ಯವೇಱಿದವು ರಥವ (ಕುವ್ಯಾಗ. ೪-೧೭). [ ? ]

**ಚಂಬಕ,** ಚಂಬಿಕ, **ಚೆಂಬಕ,** ಚೆಂಬುಕ (ನಾ). ಒಂದು ಬಗೆಯ ಚರ್ಮವಾದ್ಯ : ಹೊಯ್ವ ನಿಸ್ಸಾಳದ ಭೇರಿಯ ತಂಬಟದ ಚಂಬಕದ ವೀರವ್ಯಂದದ (ಗಿರಿಕ. ೬-೬೬ ವ) ; ಚಂಬಕನ ಬೊಂಬುಳಿಯ . . . ಕಂಸಾಳರವದೊಳಗೆ ನಡೆದನು (ಸಿದ್ಧರಾ. ೬-೨೦) ; ಮೊಱೆವ ಭೇರಿಯ ರಾಯಗಿಡಿಗನ ಜಡಿವ ಚಂಬಕನ (ಕುವ್ಯಾಕ. ೧೪-೩೩) ; ಎಸೆವ ವೀರಣ ಡವಾನ ಚಂಬಕ . . . ಮದ್ದಳೆಗಳೆಂಬ ಬಹುವಾದ್ಯದುಬ್ಬಟೆ (ಜೆಬಪು. ೫-೭) ; ಚಂಬಕ ಡವುಡೆ ನಫಿರಿ . . . ನಿಸ್ಸಾಳೆಗಳಬ್ಬರ ತುಂಬಿತಾಕಾಶಮಂಡಲವ (ಕಂನವಿ. ೧೪-೨). **ಚಂಬಿಕ :** ಕಂಸಾಳ ಕರಡೆ ಚಂಬಿಕ . . . ಮೊರೆದವು (ತುರಂಗ. ೫೬-೪೭). **ಚೆಂಬಕ :** ಡವುರುಗ ಡೌಡೆ ಮದ್ದಳೆಗಳೊರಣದಿ ಚೆಂಬಕಂ ಹೆಗ್ಗಹಳೆ ಕಿಱುಗಹಳೆಯೊತ್ತೆ (ಲಶಿಚಂ. ೩೦-೬೫) ; ಚಿನ್ನದ ಚೀಱುಗಳ ನಿಡುಗೊಂಬುಗಳ ಚೆಂಬಕನ [ಪಾಠಾಂ. ನಾರಾಚ] ನಿರ್ಘೋಷ ಡೋಱುಗಳೆದವು ನೆಲನನು (ಕುವ್ಯಾಕ. ೨೦-೭) : ಚೆಂಬಕ ಕಾಳೆ ಚೀಱುತಿರಲ್ಕೆ (ಸಾಳ್ವಭಾ. ೨೫-೧೦). 'ಚೆಂಬಕವಱ' ಪರಾ. **ಚೆಂಬುಕ:** ಉಲಿವ ಕಹಳೆಯ ಚೆಂಬುಕನ ಕಳಕಳಿಕೆ ಮಿಗೆ ಕೈಕೊಂಡುದನಿಲಕುಮಾರಕನ ಸೇನೆ (ಕುವ್ಯಾದ್ರೋ. ೧೨-೮).

[ ←ತಮಿ. ಚಾಮ್ಪು ]

**ಚಂಬಕವರೆ** 'ಚೆಂಬಕವಱ' ನೋ.

**ಚಂಬಕವಱ,** ಚಂಬಕವರೆ, ಚಂಬಕಹಱ, ಚೆಂಬಕವಱ (ನಾ).= ಚೆಂಬಕ : ಮೊಱೆವ ಚಂಬಕವಱಯ ಮೊಳಗುವ ಪಳಹದ . . . ಕಳಕಳಂ (ರಾ ಜ ಶೇ. ೬-೧೧ ವ). **ಚಂಬಕವರೆ :** ಯುದ್ಧಸಮಯದಲ್ಲಿ ಬಳಸುತ್ತಿದ್ದ ವಾದ್ಯಗಳೂ ಹಲವಾರು : ಭೇರಿ, ಚಂಬಕವರೆ . . . ಶಂಖ ವಾಸ, ಇತ್ಯಾದಿ (ನಂಜುಂಡ ೧೩೦). **ಚಂಬಕಹಱ :** ಚಂಬಕಹಱ ಬುರುಸುಗಳ ಮುಂಬರಿದೆಸೆವಬ್ಬರ ಚೌದೆಸೆಯೊಳು ತುಂಬಿತು (ಕಂನವಿ. ೧೪-೯೧). **ಚೆಂಬಕವಱ :** ಭೇರಿ ಬೊಂಬುಳಿ ಗೋಮುಖ ಡೌಡೆ ಚೆಂಬಕವಱ ಡಕ್ಕೆ ಡವುರುಗಗಳ ರವ ತುಂಬಿತು ದಿಗುಮಂಡಲಮಂ (ಅಂಜಚ. ೬-೧೦೭) ; ಹತ್ತು ಚೆಂ[ಪಾಠಾಂ. ಚಂ]ಬಕವಱ ಹತ್ತು ಬೊಂಬುಳಿ ಜುಂಜೆ ಹತ್ತು ಬೀರಣವಱ ಹತ್ತು (ಕುರಾಸಾಂ. ೪೧-೬೭) ; ಹೆಗ್ಗಾಳೆ ತಿತ್ತಿಱ ಜುಂಜೆ ಚೆಂಬಕವಱಗಳ ಧನಿಯು (ಚಂಪ್ರಸಾಂ. ೨೦-೭೦) ; ತಂಬಟ ತುಡುಮು ತಿತ್ತಿಱ ಕಾಳೆ ವೀರಣ ಚೆಂಬಕವಱ ಕೊಂಬು ಡೌಡೆ ಬೊಂಬುಳಿ ಗಿಡಿಬಿಡಿ ವೀರವ್ಯಂದದ ನಾದ ತುಂಬಿತು (ಭರಜ. ೩೦-೫೯).

[ ಚಂಬಕ + ಪಱ$_1$ ]

**ಚಂಬಕಹಱ** 'ಚಂಬಕವಱ' ನೋ.

**ಚಂಬಾರ್** 'ಚಮ್ಮಾರ' ನೋ.

**ಚಂಬಾರ** 'ಚಮ್ಮಾರ' ನೋ.

**ಚಂಬಿಕ** 'ಚಂಬಕ' ನೋ.

**ಚಂಬು** 'ಚೆಂಬು$_1$' ನೋ.

**ಚಂಬುಕುಟ್ಟಗ** 'ಚೆಂಬುಕುಟಿಗ' ನೋ.

**ಚಂಬುಕುಟ್ಟಿಗ** 'ಚೆಂಬುಕುಟಿಗ' ನೋ.

**ಚಂಬುಳಾಕರವಿದ್ಯೆ** (ನಾ). ಮಾಯಾವಿದ್ಯೆ : ಚಂಬುಳಾಕರವಿದ್ಯೆಯಲಿ ಕಣ್ಣಿಂಬುಗೊಳದಂತನುಜಗೆಸಗಿ ವಿಡಂಬಿಯಿತರ ಸೇನೆ ತಾರಕ ಗುಹನ ತೆರದಿಂದಾ . . . ಪಡಲಿಡಿಸಿದನು ವಾಹಿನಿಯಾ (ಜರಾಮಾ. ೧೧೯-೫೪).

[ ? + ವಿದ್ಯೆ ]

**ಚಂಬೆ$_1$** 'ಸೆಂಬೆ' ನೋ.

**ಚಂಬೆ$_2$** (ನಾ). ಸುಗಂಧ ; ಕಂಪು (?) : ಛತ್ರಚಾಮರ ಧ್ವಜ ವಾಲಗದಿಂ ಚಂಬೆ ಕಸ್ತೂರಿ ಕಮ್ಮೆಣ್ಣೆಯವರು (ಬಿಜ್ಜಳರಾ. ೧೧-೬೬). [ ? ]

**ಚಂಬೊನ್** 'ಚೆಂಬೊನ್' ನೋ.

**ಚಂಬೋತ** 'ಚೆಂಬೋತ' ನೋ.

**ಚಕ್$_1$** (ನಾ). ಒಂದು ಅನುಕರಣ ಶಬ್ದ : ಪೇರುರಮಂ ಧೊಕ್ಕನೆ ಕುತ್ತಿ ಚಕ್ಕನೆ ಭುಜದ್ವಂದ್ವಂಗಳಿಂದೆತ್ತಿ (ಎಕ. VI, ತರೀಕೆ. ೪೫-೩೩ : 1196) ; ಜೊಱ್ಜೆಂಬ ಭುಮ್ಮೆಂಬ ಚಕ್ಕೆಂಬ . . . ಕೂರಸಿಗಳುರವಣೆಯ ದನಿಯ ಡಸುತಂ ಪುಟ್ಟೆ (ಇಹರ. ದೇ. ೪೧-೨೪).

**ಚಕ್$_2$** 'ಚೆಕ್ಕು$_2$' ನೋ.

**ಚಕಚಕ** (ನಾ). ೧. ಒಂದು ಅನುಕರಣ ಶಬ್ದ : ಚಕಚಕ ಚಂಚಲ ಮಿಂಚಿನ ಗೊಂಚಲ (ಗರಿ. ೧೨೩-೧೨) ; ಗೋಪುರದ ಕಳಸ ಬಿಸಿಲಲ್ಲಿ ಚಕಚಕ ಎಂದು ಮಿರುಗುತ್ತದೆ (ರೂಢಿ). ೨. ಹೊಳೆಯುವಿಕೆ; ಲಕಲಕಿಸುವಿಕೆ; ಕಾಂತಿ: ವ್ಯಾಕೋಚ ಪಂಕಜದ ಚಕಚಕವ ನೋಡದಂಬರಮಣಿಯ ಸಂಭ್ರಮಂ (ವೆಂಕಾರಾ. ೧-೫-೭೫). 'ಚಕಚಕಿಸು' ಪರಾ. [ ←ತೆಲು. ಚಕಚಕ ]

**ಚಕಚಕಗೊಳಿಸು** (ಕ್ರಿ). ಹೊಳೆಯುವಂತೆ ಮಾಡು ; ಲಕಲಕಿಸುವಂತೆ ಮಾಡು : ನನ್ನ ಕಿವಿಯಲ್ಲಿರುವುದು, ಮುಖವನ್ನು ಚಕಚಕಗೊಳಿಸುವ ಸಿನಿಮಾ ಫ್ಯಾಷನ್ನಿನ ಹೊಸಮಾದರಿಯ ಲೋಲಾಕಲ್ಲ (ಪತಿ. ೧೫).
[ ಚಕಚಕ + ಕೊಳ್$_1$ + – ಇಸು$_3$ ]

**ಚಕಚಕಿತ** (ಗು). ಮಿರುಗುವ ; ಲಕಲಕಿಸುವ : ಚಕಚಕಿತ ಮುಕ್ತಾಹಾರ ಭಾರ . . . ವಕ್ಷಸ್ಥಲಮಂ (ಚಂದ್ರಪು. ೪-೭೮ ವ) ; ಚಕಚಕಿತ ಕೋಟೀರ ಯುತ ಮಸ್ತಕಕೆ ಸುಳಿಶುದ್ಧಗಳನರಸುವದು ಕುಲರಾ ಮತವಲ್ಲ (ಅನಂರಾ. ೧-೧.೧೨). [ <ಚಕಚಕ ]

**ಚಕಚಕಿಸು** (ಕ್ರಿ). ಹೊಳೆ; ಪ್ರಕಾಶಿಸು; ಲಕಲಕಿಸು: ಚಕಚಕಿಸುವ ಚೆಂಬೊನ್ನ ಪಟ್ಟೆಯು . . . ಮಯೂಖಮಂಜರಿಗಳಿಂ ಮಾರ್ತಾಂಡಮಂಡಳಮಂ ಮಸುಳಿಸುತ್ತುಂ (ಮಹಾನೀ. ೧೨-೨೨ ವ) ; ಚಕಚಕಿಸುವ ಪೊನ್ನ ಕಳಸದಿಂ ದೊಪ್ಪುವ ಶಿಖರದಿಂ (ಜೀವಂಸಾಂ. ೧-೪೩); ಚಕಚಕಿಸುತ ರನ್ನಗನ್ನಡಿಯಲ್ಲಲ್ಲಿ ಮಕರಿಸೆ ಸಾಲು ಸಾಲಾಗಿ (ಭರಜ. ೧೨-೧೮) ; ಚಕಚಕಿಸಿದುವು ತಾರಾಳಿ (ಕಂನವಿ. ೯-೯೩). [ ಚಕಚಕ + – ಇಸು$_3$ ]

**ಚಕಡ** ‘ಚಕ್ಕಡಿ$_2$’ ನೋ.

**ಚಕಡಿ** ‘ಚಕ್ಕಡಿ$_2$’ ನೋ.

**ಚಕಣಾಚೂರು, ಚಕ್ಕಣಚೂರು** (ನಾ). (ಉಕ) ಪುಡಿಪುಡಿಯಾದುದು ; ಚೂರುಚೂರಾಗಿರುವುದು ; ಚಂಪನಚೂರು : ಯುದ್ಧಕ್ಕೆ ಹೋಗಿ ಬಾಂಬೇ ಬಿದ್ದು ಚಕಣಾಚೂರಾಗಿದ್ದರೂ ಪರವಾಗಿರಲಿಲ್ಲ (ದಿನಾರಿ. ೪೭). **ಚಕ್ಕಣಚೂರು :** ಮಕ್ಕಳ ಕೈಗೆ ಈ ಕಾಗದ ಸಿಕ್ಕರೆ ಚಕ್ಕಣಚೂರಾಗದೆ ಉಳಿದೀತೆ ? (ರೂಢಿ).
[ ←ಹಿಂ. ಚಕನಾಚೂರ್ ; ಮರಾ. ಚಕನಚೂರ್, ಚಕನಾಚೂರ್ ]

**ಚಕಬಂದಿ, ಚಕ್ಕುಬಂದಿ, ಚಕ್ಬಂದಿ** (ನಾ). ಮನೆ, ಹೊಲ ಮುಂತಾದ ಕ್ಷೇತ್ರಗಳ ಸೀಮಾವಿವರ ; ಗಡಿಗಳ ನಿರ್ದೇಶ : ‘ ವಾರಂಟ್ ’ ದೊರಕಿಸುವ ಮುನ್ನ ನಾವು ಮುತ್ತಿಗೆ ಹಾಕುವ ಮನೆಯ ‘ ಚಕಬಂದಿ ’ . . . ಒಪ್ಪಿಸಬೇಕಾಗುವುದು (ಬಂಗಾರ. ೨೬೩). **ಚಕ್ಕುಬಂದಿ:** ಭೂಮಿಯ ಮೇರೆಗಳ ವರ್ಣನೆ ಅಥವಾ ಚಕ್ಕುಬಂದಿಯ ನಿರೂಪಣೆಯು ಶಾಸನದಲ್ಲಿರಬೇಕು (ಕಶಾಅ. ೪೭). **ಚಕ್ಬಂದಿ :** (ರೈಸ್‌ಗೆ. II, ೫೪೫).
[ ←ಹಿಂ. ಮರಾ. ಚಕಬಂದೀ ]

**ಚಕಮಕ** (ನಾ). ಒಂದು ಅನುಕರಣ ಶಬ್ದ : ಮಿಂಚಿ ಚಕಮಕ, ಬಾಗಿ ತೂಗುತ ಮಣಿದು ಬಳಕುತ ತಡೆದಿದೆ (ಅರಳು. ೨೦೦-೧).

**ಚಕಮಕಿ, ಚಕಮುಕಿ, ಚಕ್ಕಮಕ್ಕಿ, ಚಕ್ಕಮುಕ್ಕಿ** (ನಾ). ೧. ಬೆಂಕಿ ಹೊತ್ತಿಸುವುದಕ್ಕೆಂದು ಹಿಂದಿನ ಕಾಲದಲ್ಲಿ ಬಳಸುತ್ತಿದ್ದ (ಒಂದು ಬಗೆಯ ಗಟ್ಟಿಕಲ್ಲು ಹಾಗು ಉಕ್ಕಿನ ತುಂಡುಗಳನ್ನೊಳಗೊಂಡ) ಸಾಧನ ; ಬೆಂಕಿ ಹೊತ್ತಿಸುವ ಉಪಕರಣ : ದೋತ್ರ, ರುಮಾಲ, ಗೊಂಗಡಿ, ತಂಬಾಕ, ಚಕಮಕಿ, ಇಷ್ಟು ಪದಾರ್ಥಗಳು ನಿತ್ಯದ ಚರಿತಾರ್ಥಕ್ಕೆ ಬೇಕು (ಮುಂಬಯಿ. ೫-೨೪೭) ; ಇನ್ನು ಕೆಲವರ ಕೈಯಲ್ಲಿ, ಚಕಮಕಿ ಕುಕ್ಕಿದಾಗ ಹಾರುವ ಬಂದೂಕ (ಇಪ್ಪಕ.೩೭). ೨. (ಅಲಂ)ಸಣ್ಣಪುಟ್ಟ ಜಗಳ,– ಕದನ : ಮನಸ್ತಾಪಗಳ ಚಕಮಕಿ ಕಿಡಿಗಳೆದ್ದು ದಾಂಪತ್ಯಜೀವನವು ಒಮ್ಮೊಮ್ಮೆ ಕುಂಠಿತವಾಗಬಹುದು (ಕನ್ನಜಾ. ೧೨೨) ; ಮೊಗಲ್ ದಂಡಿಗೂ ಪೋರ್ತುಗೀಸರಿಗೂ ಆಗಿಂದಾಗ ಚಕಮಕಿಗಳಾಗುತ್ತಿದ್ದವು (ಅಕ್ಕರ. ೭೭) ; ಕಟುವಾದ ಚಕಮಕಿಗಳು ಈ ತಿಂಗಳಿನಲ್ಲಿ ನಡೆದುಹೋಗಿದ್ದುವು (ಮುತ್ತ್ಯದ. ೪೫) ; ಮಾತಿನ ಚಕಮಕಿ ತಪ್ಪುವಂತಾದರೆ ಮುಂದುವರಿಸಿದರೂ ಆದೀತು (ಕಾಗೆಕ.೧೦೦). **ಚಕಮುಕಿ:** ೧. ಯರಡು ಜನರನ್ನು ಚಕಮುಕಿ ಬಂದೂಕು, ಮದ್ದುಗುಂಡು ಮುಂತಾದ್ದನ್ನು ಕೊಟ್ಟು ಇಲ್ಲಿಗೆ ಕಳುಹಿದರೆ (ರಾಜೇಂದ್ರ. ೫೫) : ಜಲದ ತರಂಗವು ಒಡಿದ ಕಡೆಯಲ್ಲಿ ಚಕಮುಕಿ ಹೊಡಿದಂತಾಗುವುದು (ದೇವೀಚಾ. ೭೬). **ಚಕ್ಕಮಕ್ಕಿ :** ೧. ಚಕ್ಕಮಕ್ಕಿಯಂತೆ ಕಿಡಿಗಳನ್ನು ಹಾರಿಸುವ, ತೀವ್ರಗತಿಯ ಸಂಭಾಷಣೆಯ ಶೈಲಿ . . . ಕಂಡುಬರುವುದಿಲ್ಲ (ಶೂನ್ಯಕು. ೯೭). ೨. ಈ ಎರಡುಪಕ್ಷಗಳಿಗೆ ಮೇಲಿಂದ ಮೇಲೆ ಯಾವುದಾದರೊಂದು ಕಾರಣದಿಂದ ಚಕ್ಕಮಕ್ಕಿ ಹಾರುತ್ತಲೇ ಇತ್ತು (ಊರುಕ. ೭೬). **ಚಕ್ಕಮುಕ್ಕಿ :** ೧. ಚಕ್ಕಮುಕ್ಕಿ ಕಲ್ಲಿನ ತುಪಾಕಿಯವರು ತಮ್ಮ ಆಯುಧಸಲಕರಣ ಸಮೇತ ತೆರಳಲಿ (ಪೇಟಮಾ. ೨); ಹಗಲೆ ಇರುಳಾಯ್ತೋ ಎನಲ್ಕೊಂದು ತೆಕ್ಕನುಕ್ಕಿತು, ಚಕ್ಕಮುಕ್ಕಿಯಿಂ ಕುಕ್ಕಿದೊಲ್, ಭಾಸ್ಕರ ಲಕ್ಷತಿಗ್ಮಖರರೋಚಿ (ಶ್ರೀರಾಮಾ. ೫೯೫-೩೦೮).

**ಚಕಮಕಿಯ ಕಲ್ಲು, ಚಕ್ಕಮುಕ್ಕಿಯ ಕಲ್ಲು**=ಚಕಮಕಿಯಲ್ಲಿ ಕಿಡಿ ಹಾರಿಸುವುದಕ್ಕೆಂದು ಬಳಸಲಾಗುವ ಕಲ್ಲು ; ಬೆಣಚುಗಲ್ಲು : ಚಕಮಕಿಯ ಕಲ್ಲು, ಇದೇ (ಬೆಣಚುಗಲ್ಲು) ಜಾತಿಯ ಶಿಲೆಯು (ಮುಂಬಯಿ. ೩-೪೫) ; ಚಕ್ಕಮುಕ್ಕಿಯ ಕಲ್ಲಿನಂತರಂಗದೊಳಗ್ನಿ ಗುಪ್ತವಾಗಿರ್ಪಂತೆ (ಶ್ರೀರಾಮಾ. ೨೩-೬೦೯). [ ←ಹಿಂ. ಮರಾ. ಚಕಮುಕ್. / ಮಲ. ಚಕ್‌ಮುಕ್ ; ತೆಲು. ಚಕುಮುಕಿ ]

**ಚಕಮಕಿಸು** (ಕ್ರಿ).=ಚಕಚಕಿಸು: ಮುಂಗಡೆಯೊಳು ಚಕಮಕಿಸುವ ಮಂಗಳ ಘನಮಂಟಪದೊಳಗಿರದೆ (ಯೋಗಾಂವಿ. ೫-೨೮). [ಚಕಮಕ+ – ಇಸು$_3$]

**ಚಕಮುಕಿ** ‘ಚಕಮಕಿ’ ನೋ.

**ಚಕರಾಲಿ** (ನಾ). ಮೋಸಗಾರ ; ವಂಚಕ : ಅಯ್ಯ ಭಾರೀ ಚಕರಾಲೀ! ಹೈಸ್ಕೂಲು ತರಿಸಿಕೊಡತ್ತೀನಿ ಅಂತ ಹೊಡಕೊಂಡುಹೋಗಲಿಲ್ಲವೇ ಎಂಟು ಹತ್ತುಸಾವಿರ ರೂಪಾಯಿಯನ್ನ ? (ಮರಳಿ. ೭೮). [ ? ]

**ಚಕಲಂಕ** (ನಾ). (?) : ಕಾಳಗ ಕಾದಲಿ ಬಂದಾಗ ಮೈಳುನಾಯಕನ ಮಗಂ ಚಕಲಂಕರಾಮನಾಯ್ಕನು ದೇವಲೋಕ ಪ್ರಾಪ್ತನಾದ (ಕಇ. V, ೩೦-೫; 1192). [ ? ]

**ಚಕಾರ** (ನಾ). ೧. ಚ ಎಂಬ ಅಕ್ಷರ : ವಾಲ್ಮೀಕಿರಾಮಾಯಣದಲ್ಲಿ . . . ಹೇಳಿರುವ ಚಕಾರ ತುಕಾರಗಳಿಗೆಲ್ಲ ಅಕ್ಷರಶಃ ಸತ್ಯವನ್ನು ಹೇಳುತ್ತ ಹೋಗುವುದು ಸರಿಯಾಗಲಾರದು (ಭಾರದ. ೮೭). ೨. ಒಂದು ಅಕ್ಷರದಷ್ಟು ಮಾತು ; ಒಂದು ಶಬ್ದದಷ್ಟಾದರೂ ಮಾತು : ಎಷ್ಟು ಪ್ರಶ್ನಿಸಿದರೂ ಅವನು ಚಕಾರವನ್ನೂ ನುಡಿಯಲಿಲ್ಲ (ರೂಢಿ).

**ಚಕಾರ ಎತ್ತು, ಚಕಾರವೆತ್ತು** = ಸ್ವಲ್ಪವಾದರೂ ಮಾತನಾಡು; ತಂಟೆಪಿಟಿಕ್ಕೆನ್ನು: ಈಗ ಚಕಾರ ಎತ್ತದ ಈ ‘ ಮಹಾಪ್ರಾಣಿ ’, ಆಮೇಲೆ ಒಂಟಿಯಾಗಿ ತೆರೆ ಚಿಮ್ಮಿಸುವ ಅಳಲ ಮೊರೆ (ಬದ್ಧಪ್ರ. LV ಮುನ್ನುಡಿ) ; ನನ್ನ ಅಭಿಪ್ರಾಯಕ್ಕೆ ವ್ಯತಿರಿಕ್ತವಾಗಿ ಅವರು ಚಕಾರವೆತ್ತುತ್ತಿರಲಿಲ್ಲ (ವಿಮೋಚ. ೧೫೮). **ಚಕಾರಶಬ್ದ**=ಒಂದಾದರೂಮಾತು : ಅವರು ಒಂದು ಚಕಾರಶಬ್ದ ಮಾತಾಡಲಿಲ್ಲ (ಮುಂಬಯಿ. ೪-೫೭) ; ತಂದೆಯ ಮುಂದೆ ಚಕಾರಶಬ್ದವನ್ನೂ ಹೇಳುತ್ತಿರಲಿಲ್ಲ (ಜಿವರಿ. ೧೩) ; ಈ ಪತ್ರದಲ್ಲಿ ಆ ಬಗ್ಗೆ ಚಕಾರಶಬ್ದವೂ ಇಲ್ಲದಿರುವದು ಅಚ್ಚರಿಯ ಸಂಗತಿಯಾಗಿದೆ(ಮುತ್ತ್ಯದ. ೧೪).
[ ಸಂ. ]

**ಚಕಾರಿಸು** (ಕ್ರಿ). ಒಂದು ಮಾತನ್ನಾದರೂ ಆಡು : ಕೊಡಹಿ ಬಿಸುಟಾ ನಾಗನಂದದಿ ಚಕಾರಿಸದೆ ಗಂಡಿಕೆಯನುಳಿದವರ ಸೊಕ್ಕು ಸೆಣಸನ್ನುಸಿಕನಾಲಿಸಿದೆ (ಹಬ್ಬರ. ೧೪-೧೦೪). [ ಚಕಾರ + – ಇಸು$_3$ ]

**ಚಕಿತ$_1$** (ಗು). ೧. ಅಲುಗುವ ; ಅಸ್ಥಿರವಾದ ; ಚಂಚಲವಾದ : ಚಕಿತ ಕುರಂಗನಯನೆಗೆ ತಂದುಡಿಸಿದರು ನವದುಕೂಲವನು (ಬಸಪು. ೪-೩೪). ೨. ಗಾಬರಿಗೊಂಡ ; ಭಯಪಟ್ಟ : ಅಳುರ್ವ ಕೋಪಶಿಖಿಗಳ ನಡುವಿರ್ತಲೆ ಪೊತ್ತಿದ ಪುಳ್ಳಿಯ ಪುಟುಪೊಲಿರ್ದನತಿಚಕಿತಚಿತ್ತನಪರಾದಿತ್ಯಂ (ಗದಾಯು. ೧-೨೩) ; ಚಕಿತಾರಾತಿಚತುರ್ಬಲಂ ಬಲಯುತಂ . . . ಲಕ್ಷ್ಮಣಂ (ಪಂರಾಮಾ. ೭-೬೨). ೩. ಬೆರಗುಗೊಂಡ ; ವಿಸ್ಮಿತವಾದ. (ನಾ). ೪.

ಗಾಬರಿಗೊಂಡವನು : ಚಕಿತನಹನೇ ಬಲ್ಲವನು ದುಃಖಿಕೆ (ತಿಮ್ಮಶಾಂ. ೭-೭೩). ೫. ಬೆರಗುಗೊಂಡವನಂ ; ವಿಸ್ಮಯಂಪಟ್ಟವನು : ಯುಕುತಿಯಿನ್ನಿದಕಿಲ್ಲ ಪಾರ್ಥನ ಶಕುತಿ ಘನವೀ ರಾಜಕಾರ್ಯಕೆ ಚಕಿತರಾದೆವು ರಾಯ ಚಿತ್ತೈಸು (ಕುಮಾ್ವ್ಯದ್ರೋ. ೮-೨೦) ; ಸಿದ್ಧನಾಥ ಚಕಿತನಾಗಿ ಆ ಪ್ರಾಣಿಯ ಮುಖವನ್ನೆ ಕೆಲಹೊತ್ತು ದಿಟ್ಟಿಸುತ್ತಿದ್ದ (ಆಶ್ರಮ. ೭) ; ಬೇರೆ ಏನೂ ಮಾತಾಡದಷ್ಟು ಅವರು ಚಕಿತರಾಗಿದ್ದರು (ಸಮಜೀ. ೨೪೨). [ ಸಂ. ]

**ಚಕಿತ₂** (ನಾ). ವೇಗ : ಶೀಘ್ರತೆ (?) : ಸಖರಜದ ಕಣಿಕವಂ ಚಕಿತದಿಂ ಶೋಧಿಸುತಲಖಿಳ ಚೊಕ್ಕಳಮಾಗಿ ಸೂಸಲಂ ಕಲಸುತಂ ವಕುಬಟ್ಟಿತಿ ನೊಳಿಟ್ಟೆರಡು ದೆಸೆಯ ನಿಟ್ಟಿಸುತ (ಲಿಂಗಪು. ೮-೧೪). [ ? ]

**ಚಕಿತಮಾನಸ** (ನಾ). ಬೆರಗುಗೊಂಡ ಮನಸ್ಸುಳ್ಳವನಂ: ಬೊಪ್ಪನ ನೋಡಿ ಚಕಿತಮಾನಸನಾಗಿ ಪಿತನದೇಂ ಕಾರಣದಿ ಭ್ರುಕುಟಿಯಂ ಬಂಧಿಸಿದನೆನ್ನ ಮನ್ನಿಸದೆಂದು ತನ್ನೊಳಾಲೋಚಿಸಿದನು (ವೆಂಕಾರಾ. ೨-೮ ೨).

[ ಚಕಿತ₁ + ಮಾನಸ₂ ]

**ಚಕಿತಲೋಚನೆ** (ನಾ). ಚಂಚಲವಾದ ಕಣ್ಣುಗಳನ್ನು ಉಳ್ಳವಳು; ಚಂಚಲಾಕ್ಷಿ : ಚಕಿತಲೋಚನೆ ನಾರಿಯಾ ನಾರಿಯಾಗಿ ಪುಟ್ಟುವಳಾ ಸಿಖಂಡಿ ಬಳಿಕ (ವೀಶೈಪು. ೪-೭-೬). [ ಸಂ. ಚಕಿತಲೋಚನಾ (ಚಕಿತ + ಲೋಚನ + –) ]

**ಚಕಿತಾಕ್ಷಿ** (ನಾ).=ಚಕಿತಲೋಚನೆ : ಕಪೋಲಮೂಲಮಂ ಮುಟ್ಟಿದುವಾ ಚಕಿತಾಕ್ಷಿಯ ಹರಿನೀಳಾಳಕಂಗಳಾನನಸರೋಜಿನೀಮಧುಪಂಗಳ್ (ಪಂರಾಮಾ. ೩-೯೪). [ ಸಂ. ಚಕಿತಾಕ್ಷೀ (ಚಕಿತ + ಅಕ್ಷಿ + – ) ]

**ಚಕಿಲ** (ನಾ). ಒಂದು ಊರಿನ ಹೆಸರು: ತಕ್ಕೆಯ ಚಕಿಲದೂರಟಿವಿನೊಳಿ ಕಾದಿ ಸತ್ತ (ಎಕ. X, ಚಿಂತಾಮ. ೧೨೦-೧ ; ಸು. 1000). [ ? ]

**ಚಕೋತ₁** 'ಚಕ್ಕವತ್ತಿ' ನೋ.

**ಚಕೋತ₂** 'ಚಕ್ಕ್ಯೋತ₂' ನೋ.

**ಚಕೋತ್ತು** 'ಚಕ್ಕವತ್ತಿ' ನೋ.

**ಚಕೋರ**(ನಾ). ೧. ಬೆಳುದಿಂಗಳನ್ನೇ ಸೇವಿಸಿ ಬದುಕುವುದೆಂದು ಪ್ರತೀತಿಯಿರುವ ಪಕ್ಷಿ ; ಬೆಳುದಿಂಗಳ ಹಕ್ಕಿ ; ಜೊನ್ನವಕ್ಕಿ : ಕೀರ ಚಕೋರ ಸಾರಸ ಮಯೂರಾರಾವದಿಂ ಬನ್ನಿಮಿತ್ತಿರಿಮೆಂಬಂತೆವೊಲಾಯ್ತು (ಸುಕುಮಾ. ೪-೪೪) ; ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ (ಬಸವ. ೩೬೪) ; ಚಂದ್ರಕಳೆಯಂ ದಳವೇಱಿಸಿ ಚಕೋರಮಾಲೆಗೆ ಸುಖಮಂ ಮಾಡುತ್ತುಂ (ಗಿರಿಕ. ೭-೪೨ ವ). ೨. ಕಪಿಂಜಲಪಕ್ಷಿ : " ಜೀವಂಜೀವಃ, ಕಪಿಂಜಳಃ, ಚಕೋರಃ, ಹಾರೀತಃ, ಮಂಜುಳಃ, ಕಪೋತಃ – ಈ ೬ ಹೊಱಸು " (ಹಲಾಯು. ೪೨-೧೦೦) ; ಕಾರಂಡೆ ಹರಡೆ ಚಕೋರ ತಿತ್ತಿರಿ (ಭೈರವೇ. ೧-೫೫). [ ಸಂ. ]

**ಚಕೋರಕ** (ನಾ). = ಚಕೋರ ೧ : ಶ್ರೀವಧುವಿನಂಬಕಚಕೋರಕಂ ಪೊರೆಯೆ (ಜ್ಞಮಿಭಾ. ೧-೧). [ ಸಂ. ]

**ಚಕೋರಾಕ್ಷಿ** (ನಾ). ಚಕೋರಪಕ್ಷಿಯ ಕಣ್ಣುಗಳಂತೆ ಕಣ್ಣುಳ್ಳವಳು ; ಚೆಲುವಾದ ಕಣ್ಣುಳ್ಳವಳು : ಚಕೋರಾಕ್ಷಿಯನಿತ್ತ ನೋಡು ನೋಡೆಂದಾಗಳ್ (ಶಾಂತಿಪು. ೫-೧೩೭ ವ). [ಸಂ. ಚಕೋರಾಕ್ಷೀ (ಚಕೋರ+ಅಕ್ಷಿ+–)]

**ಚಕೋರಾಸನ** (ನಾ). [ಯೋಗ] ಆಸನಗಳಲ್ಲಿ ಒಂದಂ : ಮುಖ್ಯವಾದ ಕೆಲವು ಆಸನಗಳು . . . ೩೧. ಚಕೋರಾಸನ ೩೨. ಟಿಟ್ಟಿಭಾಸನ (ಭಾರದ. ೧೬೭). [ ಚಕೋರ + ಆಸನ ]

**ಚಕೋರಿ** (ನಾ). ೧. ಹೆಣ್ಣುಚಕೋರಪಕ್ಷಿ : ಚಂದ್ರಂ ಬೆಳ್ದಿಂಗಳಂ ಬೀಱೆ ಚಕೋರಿಗಳ್ ನಲಿದುಲಿಯೆ (ಗಿರಿಕ. ೮-೮ ವ) ; ಚಿಲಿಮಿಲಿಗ ಜಾಣ್ವಕ್ಕಿ ಚಕೋರಿ ಕಳಿಂಗ ಕಳವಿಂಕ (ತೊರರಾ. ೩-೧-೩೩). ೨. (ಅಲಂ) ಉಪವಾಸಿ: ಉಂಡರೆ ಭೂತವೆಂಬರು ಉಣ್ಣದಿದ್ದರೆ ಚಕೋರಿಯೆಂಬರು (ಪದಗೋ. ೧೧೮-೧೩೩). [ ಸಂ. ಚಕೋರೀ ]

**ಚಕೋರಿಕೆ** (ನಾ).=ಚಕೋರಿ ೧ : ಶಕುಂತಪಾಳಿಕೆಯರ್ . . . ದೀಹದ ಚಕೋರಿಕೆಗಳಟ್ಟಱಿಂ ಮುಕ್ಕುಳಿಪ ಮುಂಡಾಡುವ ಕರ್ದುಂಕುವೊದೆವ ಚೆಲ್ಲಕೆ ವ್ಯೆಸಾರ್ಚಿಯುಂ (ಚಂದ್ರಪು. ೮-೪೩ ವ). [ ಸಂ. ಚಕೋರಿಕಾ ]

**ಚಕೋರೇಕ್ಷಣ** (ನಾ). ೧. ಚಕೋರಪಕ್ಷಿಯಂ ಕಣ್ಣು. ೨. ಚಕೋರದ ಕಣ್ಣುಗಳಂತೆ ಚೆಲುವಾದ ಕಣ್ಣು : ಚಕೋರೇಕ್ಷಣಸ್ಫುರಿತಂಗಳ್ ಮದನಾಯುಧಾಕೃತಿಗಳಾಕರ್ಣಾಂತಂಗಳ್ . . . ಕುರಂಗಾಕ್ಷಿಯಾ (ಗದಾಯು. ೮-೫೫). [ ಚಕೋರ + ಈಕ್ಷಣ ]

**ಚಕ್ಕ₁, ಜಕ್ಕ₁** (ನಾ). ಚಕ್ರ; ಗಾಲಿ; ರಥಾಂಗ. 'ಚಕ್ಕವಕ್ಕಿ' ಪರಾ. **ಜಕ್ಕ₁** : "ಜಕ್ಕ (ಚಕ್ಕ) – ಚಕ್ರ = ರಥಾಂಗ " (ತದ್ಭಕೋ. ೧೩). 'ಜಕ್ಕವಕ್ಕಿ' ಪರಾ. [ <ಸಂ. ಚಕ್ರ ]

**ಚಕ್ಕ₂, ಛಕ್ಕ** (ನಾ). ೧. ಆರು ಎಂಬ ಸಂಖ್ಯೆಯ ಸಂಕೇತ : ತಾಳ ಚವ್ವ ಚಕ್ಕ ಕುಣಿತ ತಕ್ಕ ತಕ್ಕ (ಗರಿ. ೯೯-೩). ೨. ಪಗಡೆಯಾಟದಲ್ಲಿ ಬೀಳುವ ಆರರ ಗರ : ಒಂದು ಚಕ್ಕ ಬಿದ್ದರೆ, ನಿನ್ನ ಕಾಯನ್ನು ಹೊಡೆಯಬಹುದು (ರೂಢಿ). **ಛಕ್ಕ**: ೩. ಇಸಪೇಟಿನಲ್ಲಿ ಆರಂ ಎಂಬ ಸಂಖ್ಯೆಯುಳ್ಳ ಎಲೆ. [ ←ಹಿಂ.ಮರಾ. ಛಕ್ಕಾ./ಪ್ರಾ. ಛಕ್ಕ, ಛಕ್ಕಾ./ಸಂ. ಷಟ್ಕ ]

**ಚಕ್ಕಂಡು** (ನಾ). (?) : ಹಿಂದಣ ಕಾಲ್ ಚಕ್ಕಂಡಿನೊಳಂ . . . ಸುಗು ಶಲ್ಯ ಪನ್ನೆ ಕಾಡುಂಗೊಟ್ಟಿಯ ತಂದು ನರಮೂತ್ರದಿಂ ಕುದಿಸಂದಿಕ್ಕಿಯೆ ಕಟ್ಟು ಕವಳಂ ನೆಱೆ ಪೇಟಿಷ್ಟಂ (ಅಶ್ವವೈ. ೧೮-೩). [ ? ]

**ಚಕ್ಕಂದ, ಚೆಕ್ಕಂದ** (ನಾ). ೧. ಸಂತೋಷ ; ಉಲ್ಲಾಸ ; ವಿಲಾಸ : ಶಾಲಿಯ ಪಾಲನುಂಡು ಗಿಳಿಗಳ್ ಚಕ್ಕಂದದಿಂದುಕ್ಕಿ (ಪುಣ್ಯಾಸ್ರ. ೨-೬) ; ಒಕ್ಕಲನು ನಲುಗಿಸದೆ . . . ಕಕ್ಕುಲತೆಯಿಂದ ನಡೆಯಿಸುವ ಅರಸು ತಾ ಚಕ್ಕಂದವಿರುವ (ಸರ್ವಜ್ಞ. ೭೨೭) ; ಅಂಧಕೂಪದಲಿ ಬಿದ್ದವನ ನೋಡಿ ನಿನಗೆ ಚಕ್ಕಂದವಾಗಿದೆಯೊ ಕಾಣೆ (ವಿದಾಕ್ಷ. ೮೬-೬) ; ಮತೋಪದೇಶಕರ ಜೀವನವು ಚಕ್ಕಂದದ ಜೀವನವಲ್ಲ (ಮಾನಸಾ. ೨೭). ೨. ವಿನೋದ; ಲಲ್ಲೆ; **ಸರಸ** : ಚಂದನಗಂಧಿಯ ಚದುರೆಯ ಚಕ್ಕಂದ (ಶತಸಾಂ. ೨೮-೪೨) ; ಫೌಜದಾರರು . . . ತಮ್ಮ ಪ್ರೇಯಸಿಯೊಡನೆ ಚಕ್ಕಂದ ನಡೆಸಿದ್ದರು (ನಾಪೋಲೀ. ೨೬೪); ನಿನ್ನ ಕೈಯಲ್ಲಿ ಚಕ್ಕಂದ ಆಡ್ತಾ ನಿಂತುಕೊಳ್ಳೋಕೆ ನನಗೆ ಪುರಸತ್ತಿಲ್ಲ (ಸ್ವಾಮಿಸ್ನೇ. ೧೫೧). **ಚೆಕ್ಕಂದ** : ೧. ಶಾಂತಿ ಒಂದು ವಾರದ ವರೆಗೆ ವಾಸಂತಿಯ ಜೊತೆಗೆ ಚೆಕ್ಕಂದದಿಂದ ಇದ್ದು ಮರಳಿ ತನ್ನೂರಿಗೆ ಹೊರಟು ಹೋದಳು (ತೀವೋಡ. ೧೦೧).

**ಚಕ್ಕಂದ ಮಾಡು**=ಲಲ್ಲೆಯಾಡಂ; ಸರಸವಾಡು: ನಿನಗೇನು ಸಾಲೆಯಿಲ್ಲ. ಮಾಲೆಯಿಲ್ಲ. ಮನೆಯೊಳಗ ಕುಳಿತು ಚಕ್ಕಂದ ಮಾಡತೀಯಾ ? (ರಕ್ತಧ್ವ. ೭೨) ; ನನ್ನ ಹೆಂಡತಿಯ ಮುಂದೆ ಕುಳಿತು ಚಕ್ಕಂದ ಮಾಡಿ ಜಂಬ ಕೊಚ್ಚಿಕೊಳುತ್ತೇನೆ (ಗ್ರಾಳಪ. ೫೨). **ಚಕ್ಕಂದವಾಡು** =ಚಕ್ಕಂದಮಾಡಂ : ಮಿಕ್ಕ ನಾರಿಯರೊಳ್ಮತ್ತೆ ಮನಕೆ ಬಂದ ಚಕ್ಕಂದವಾಡಿದಂತೆ (ಚಂದ್ರಾವ. ೧೧) ; ಅವನಿಗೆ ಅಲ್ಲಿದ್ದ ಹುಡುಗಿಯರ ಜತೆಯಲ್ಲೆಲ್ಲ ಚಕ್ಕಂದವಾಡುವ ಚಪಲ (ಪುನರು. ೫೦); ನಾಲ್ಕಾರು ಹುಡುಗರು ಮರದ ನೆರಳಲ್ಲಿ ಕುಳಿತು ಚಕ್ಕಂದ ವಾಡುವುದರಲ್ಲಿ ಮಗ್ನರಾಗಿದ್ದರು (ಕದಂಬ.೪೫). **ಚಕ್ಕಂದ ಹೊಡೆ**=**ಚಕ್ಕಂದ ಮಾಡಂ**: ಅವಳು ಹೇಗೆ ಚಕ್ಕಂದ ಹೊಡೀತಾಳೇ ಅಂತಿ? (ಕುಸುಸಂ. ೨೨).

[ ದೇ. ॥ ತಮಿ. ಚಕ್ಕನ್ದ ; ತುಳು. ಚಕ್ಕಂದ, ಚಕ್ಕಂದೊ ]

**ಚಕ್ಕಂಬಟ್ಟಲು** (ನಾ).=ಚಕ್ಕಳಬಕ್ಕಳ : ಅವನೂ ಕೆಲವು ಪ್ಲೇಯರುಗಳೂ ಚಕ್ಕಂಬಟ್ಟಲು ಹಾಕಿಕೊಂಡು ಕುಳಿತಿದ್ದರು (ಸ್ವಾಮಿಸ್ನೇ. ೨೦೩).

[ <ಚಕ್ಕಳಬಕ್ಕಳ ]

**ಚಕ್ಕಡಿ₁** 'ಜಕ್ಕಡಿ' ನೋ.

**ಚಕ್ಕಡಿ₂**, ಚಕಡ, ಚಕಡಿ, ಛಕಡಿ, ಛಕ್ಕಡಿ (ನಾ). (ಉಕ) ಎತ್ತಿನ ಬಂಡಿ ; ಗಾಡಿ : ಬಂಡಿಗಳೂ ಚಕ್ಕಡಿಗಳೂ ನೇಗಲುಗಳೂ ಆದವೆಂದು

ಹೇಳಿದನು (ಮುಂಬಯಿ. ೫-೨೬೯); ಸವಾರಿ ಹಾಕಿದ ನಾಲ್ಕಾರು ಚಕ್ಕಡಿಗಳಿಗೆ ಎತ್ತುಗಳನ್ನು ಹೂಡಿ ನಿಲ್ಲಿಸಿದ್ದರು (ಕರಿಹಾ. ೯); ಉರುಸಿನ ದಿನ ಸುತ್ತಲೂ ಹಳ್ಳಿಯ ಜನ ಚಕ್ಕಡಿಗಳಲ್ಲಿ ಬರತೊಡಗಿದರು (ಹಬ್ಬಿಬ. ೨೦೭). **ಚಕಡ :** "ಸಾಮಾನು ಸಾಗಿಸುವ, ಬೇಸಾಯದಲ್ಲಿ ಉಪಯೋಗಿಸುವ, ಎರಡು ಚಕ್ರದ ಬಂಡಿ, ಚಕಡ ಬಂಡಿ" (Cart. ಇಂಕನಿ). **ಚಕಡಿ :** ಆ ದೆವ್ವಗಾಳಿ ಬಿಟ್ಟು ನಾಲ್ಕು ಚಕಡಿ ಕಾಯಿ ಬಿತ್ತು (ರಕ್ತಧ್ವ. ೭). **ಛಕಡಿ:** ಕಬ್ಬಿಣದ ಕಲ್ಲುಗಳನ್ನು ಛಕಡಿಯ ಮೇಲೆ ತಂದು (ಕಥಾಗ. ೨೭). **ಛಕ್ಕಡಿ :** ಮೂರು ಮೈಲಿನ ಮೇಲಿಂದ ಲಗಳಿಗಳಲ್ಲಿ ಇಲ್ಲವೆ ಛಕ್ಕಡಿಗಳಲ್ಲಿ ನೀರು ತರುತ್ತಿರುತ್ತಾರೆ (ಕಥಾಗ ೨೬೭). [←ಹಿಂ. ಮರಾ. ಛಕಡಾ./ಪ್ರಾ. ಸಗಡ./ಸಂ. ಶಕಟ]

**ಚಕ್ಕಣ, ಚಾಕಣ** (ನಾ). ಮದ್ಯಪಾನಕ್ಕೆ ಹೆಚ್ಚು ರುಚಿ ಕೊಡುವುದಕ್ಕಾಗಿ ನಡುನಡುವೆ ನಂಚಿಕೊಳ್ಳುವ ಖಾರವಾದ (ಮಾಂಸದ) ಪದಾರ್ಥ ; **ಚಕ್ಷಣ:** ಕುಡಿಬಿದಿರ ಕುಡಿಯ ಮಾವಿನ ಮಿಡಿಯ . . . ಅಲ್ಲವಲ್ಲಣೆಗೆಯ ಚ[ಪಾಠಾಂ. ಚಿ, ಸಿ]ಕ್ಕಣಂಗಳಂ ಸವಿಸವಿದು (ಪಂಪಭಾ. ೪-೯೭ ವ); ಗೇಯದೊಳೀಕೆ ಸೊರ್ಕನಿಕ್ಕಿದಳೆನೆ ಕಳ್ಗೆ ಚಕ್ಕಣಮೆನಿಪ್ಪುದು (ಪಂಪಭಾ. ೭-೯೦). **ಚಾಕಣ :** ಚಾಕಣವಿಲ್ಲದ ಹೆಂಡ ರುಚಿಸುವುದಿಲ್ಲ (ರೂಢಿ). [<ಪ್ರಾ. ಚಕ್ಖಣ. / ಸಂ. ಚಕ್ಷಣ]

**ಚಕ್ಕಣಚೂರು** 'ಚಕಣಾಚೂರು' ನೋ.

**ಚಕ್ಕಣಮಿಕ್ಕು** (ಕ್ರಿ). ಚಕ್ಕಣವನ್ನು ಇಡು: ಹರನುರಿಗಣ್ಣ ಮೇಲೆ ನಲಿದಾಡುವರಂಗನೆಯರ್ಕಳಂಬುಜೋದರನ ಕರಾಗ್ರಚಕ್ರದೊಳೆ ಚಕ್ಕಣ ಮಿಕ್ಕುವರಬ್ಜಗರ್ಭನೊಳ್ ಸರಸಮನಾಡಿ ಪಾಶದೊಳೆ ಕಟ್ಟುವರ್ (ಕವಿಚ. III, ೩೨ ಬತ್ತೀಸ). [ಚಕ್ಕಣ + ಇಕ್ಕು]

**ಚಕ್ಕನೆ** (ಅ). ಥಟ್ಟನೆ ; ಬೇಗನೆ ; ಕೂಡಲೆ: "ಚಕ್ಕನೆಯೆನೆ ಬೇಗದೊಳಂ" (ಕರ್ಣಾನಿ. ೦೫); ಎಚ್ಚ ಶರಮಂ ಕಲಿ ಚಕ್ಕನೆ ಕಿಟ್ಟುರಃಪ್ರದೇಶಮನಿಸೆ (ಪಂಪಭಾ. ೧೨-೧೧೭) ; ಚಿಕ್ಕವೇಷವ ಬಿಟ್ಟು ದೊಡ್ಡವೇಷವ ತೋಟಿ ಚಕ್ಕನೆನ್ನೊಡನೆ ಮಾತಾಡು (ಭರಜ. ೭-೪೮). [ಚಕ್$_1$ + -ಅನೆ$_1$]

**ಚಕ್ಕಪಾರೆ** (ನಾ). ಹುಲ್ಲು ತೆಗೆಯುವ ಒಂದು ಬಗೆಯ ಸಾಧನ ; ಕೊಕ್ಕೆ ಇರುವ ಗುದ್ದಲಿ : ಬೇರು ಕಿತ್ತುಹೋಗದ ಹಾಗೆ ಚಕ್ಕಪಾರೆಯಲ್ಲಿ ಸುತ್ತ ಅಗೆದು (ಸಕಮ್ಮ. ೨೯೮). [←ತೆಲು. ಚೆಕ್ಕುಡುಪಾರ, ಚೆಕ್ಕುಡುಪಾಟಿ]

**ಚಕ್ಕಬೆರಳು** (ನಾ). ಕೊಕ್ಕೆಯಿರುವ ಬೆರಳು ; ಕೊಂಡಿಯಿರುವ ಬೆರಳು : ಬೆಳ್ಳೇಡಿಗಳನ್ನು ಹಿಡಿದು . . . ಅವುಗಳ ಕೊಂಬು ಮತ್ತು ಚಕ್ಕಬೆರಳುಗಳನ್ನು ಮುರಿದು ಬುಟ್ಟಿಯೊಳಗೆ ಹಾಕಿಕೊಳ್ಳುತ್ತಿದ್ದಳು (ಮಲಮು. ೭೫೪). [ಚಕ್ಕ$_0$ + ಬೆರಳು (<ಬೆರಲ್)]

**ಚಕ್ಕಮಂಕಿ** 'ಚಕಮಂಕಿ' ನೋ.

**ಚಕ್ಕಮುಕ್ಕಿ** 'ಚಕಮುಕಿ' ನೋ.

**ಚಕ್ಕಮುಕ್ಕಿಹತ್ತಿ** (ನಾ). (ಚಕಮುಕಿಯಲ್ಲಿ ಕಿಡಿ ಹಾರಿದಾಗ ಹೊತ್ತಿಕೊಳ್ಳುವುದಕ್ಕೆಂದು ಇಡುವ) ಒಂದು ಬಗೆಯ ಹತ್ತಿ ; ಬೂರುಗದ ಹತ್ತಿ ; ದೂದಿ : (೬).

**ಚಕ್ಕಮುಕ್ಕಿಹತ್ತಿಗಿಡ** = ಬೂರುಗದ ಗಿಡ ; ಶಾಲ್ಮಲಿ : ಪಿಚ್ಛಿಲಾ, ಪೂರಣೀ, ಮೋಚಾ, ಚಿರಾಯುಃ, ಶಾಲ್ಮಲಿಃ – ಈ ಬೂರುಗದ ಗಿಡ, ಚಕ್ಕ ಮುಕ್ಕೀಹತ್ತೀ ಗಿಡ, ಬೆಂಡುಹತ್ತೀಗಿಡ, ಎಲವದ ಮರ" (ಸಿದ್ಧಾಂತಿ. ೧೧೭). [ಚಕ್ಕಮುಕ್ಕಿ (<ಚಕಮುಕಿ) + ಹತ್ತಿ (<ಪಟ್ಟಿ)]

**ಚಕ್ಕರ್, ಚಕ್ಕರು** (ನಾ). ೧. ಸುತ್ತುವಿಕೆ; ಮಂಡಲಾಕಾರವಾಗಿ ತಿರುಗುವುದು: ಒಂದರ ಹಿಂದೊಂದು ತಿರುಗುವಿಕೆಗಳನ್ನು ಪ್ರದರ್ಶಿಸುತ್ತಾನೆ. ಇದಕ್ಕೆ ಚಕ್ಕರ್ ಎನ್ನುತ್ತಾರೆ (ಅಭಾನ್ನ. ೯೦). ೨. (ಆಲಂ) ಸೊನ್ನೆ ; ಲೋಪ; **ತಪ್ಪಿಸುವಿಕೆ :** ತನ್ನ ಕ್ಲಾಸಿಗೆ ಒಂದೆರಡು ಪೀರೀಡು ಚಕ್ಕರ್ ಹೊಡೆದರೂ ಪರವಾ ಇಲ್ಲ (ಸ್ವಾಮಿಸ್ನೇ. ೦೫೭); ಆಗ ತಪ್ಪಿದರೆ ಹೋಟೆಲಿನಲ್ಲಿ ಊಟಕ್ಕೇನೆ ಚಕ್ಕರ್ (ದಿಲ್ಲಿಪ. ೩) : ಆಫೀಸಿಗೆ ಅರ್ಧದಿನ ಚಕ್ಕರ್ ಹಾಕಿ . . . ಮನೆಗೆ ಬಂದಿದ್ದೆ (ರೂಪಸಂ. ೧೩). **ಚಕ್ಕರು:** ೨. ಬಾಯಾರಿ ಬಂದವನಿಗೆ ಎಳನೀರು 'ಚಕ್ಕರು' ಕೊಡಲಿಕ್ಕೆ ಉಪಾಯವಿದುಯೆಂದು ತೋರಿದ್ದರೂ, ಆ ದಿನ ಚಂದ್ರಯ್ಯನಾಡಿದ್ದು ಪ್ರಾಮಾಣಿಕವಾಗಿಯೆ (ಸರಸ. ೧೩) ; ಶಾಲೆಗೆ ಚಕ್ಕರು ಹಾಕಿದ್ದಾನೆ (ಶಾಲಮ. ೧೪೯). [←ಹಿಂ. ಮರಾ, ಚಕ್ಕರ್]

**ಚಕ್ಕರಿ** (ಕ್ರಿ). ಚಕ್ಕೆಂದು ಕತ್ತರಿಸು: ಇಕ್ಕಿದನು ಸೂರಿಯೊಳ್ ಕಣೆಗಳಂ ತಲೆಗಳಂ ಚಕ್ಕರಿಯೆ (ತುರಂಗ. ೬೪-೮). [ಚಕ್$_1$ + ಅರಿ$_1$]

**ಚಕ್ಕರು** 'ಚಕ್ಕರ್' ನೋ.

**ಚಕ್ಕಲಗುಲಿ** 'ಚಕ್ಕಲಗುಳಿ' ನೋ.

**ಚಕ್ಕಲಗುಳಿ, ಚಕ್ಕಲಗುಲಿ, ಚಕ್ಕಳಗುಳಿ, ಚಕ್ಕಳಿಗುಳಿ, ಚಕ್ಕುಲಗುಲಿ, ಚಕ್ಕುಳಿಗುಳಿ, ಚೆಕ್ಕುಲಗುಲಿ** (ನಾ). ೧. ಪಕ್ಕೆಗಳಲ್ಲಿ ಬೆರಳಾಡಿಸಿ ನಗಿಸುವ ಕ್ರಿಯೆ ; **ಕಚಗುಳಿ :** ಮೈಮರೆತು ಕುಳಿತಿರುವಾಗ ಯಾರಾದರೂ ಚಕ್ಕಲಗುಳಿ ಇಟ್ಟರೆ ಉಂಟಾಗುವ ರಂಜನೆಗಿಂತಲೂ ಹೆಚ್ಚು ಬೆಲೆಯುಳ್ಳದ್ದಲ್ಲ (ಗಾನಕ.೮೧). **ಚಕ್ಕಲಗುಲಿ:** ೧. ವಿಧಿಯಮ್ಮ ಚಕ್ಕಲಗುಲಿ ಆಡಸ್ತಾ ಇರಬೈದು ಮೊಗೀಗೆ (ಸರ್ವಮಂ. ೧೩). **ಚಕ್ಕಳಗುಳಿ :** ೧. ಮಗುವಿಗೆ ಚಕ್ಕಳಗುಳಿ ಇಟ್ಟು ನಗಿಸಿದಳು (ರೂಢಿ). **ಚಕ್ಕಳಿಗುಳಿ:** ೧. ಚಕ್ಕಳಿಗುಳಿಯ ನಿಕ್ಕಿದನು, ಪಕ್ಕೆ ಬಿರ್ಬಿರಿ ಬಿರಿಯುಮಂತೆ (ಶ್ರೀರಾಮಾ. ೬೯೨-೩೯೪). **ಚಕ್ಕುಲಗುಲಿ :** ೧. ಚಕ್ಕುಲಗುಲಿಯಿಡುವ ಬೆರಳುಗಳು (ನಮ್ಮೂರ. ೫, ಮುನ್ನುಡಿ). **ಚಕ್ಕುಳಿಗುಳಿ:** ೧. ವೈದ್ಯನಾಥನ ಪಾದಗಳೂ . . . ವೇದವತಿಯ ಕಾಲುಗಳೂ ಚಕ್ಕುಳಿಗುಳಿಯಿಟ್ಟ ಹಾಗೆ ಅಲುಗಿದವು (ಸುಖಿವಿ. ೮೭). **ಚೆಕ್ಕುಲಗುಲಿ :** ೨. (ಆಲಂ) ಉತ್ತೇಜನ ; ಪ್ರೋತ್ಸಾಹ; ಹುರುಪು : ಇದಕ್ಕೆ ಸಂಬಂಧಿಸಿದ ಅನೇಕ ನೆನಪುಗಳು ನನ್ನ ಮನಸ್ಸಿನಲ್ಲಿ . . . ಆಗಾಗ್ಗೆ ಚೆಕ್ಕುಲಗುಲಿಯಿಕ್ಕುತ್ತಿರುತ್ತವೆ (ಶ್ರೀಪ್ಪಪ್ಪ. ೨೦೯). 'ಕಚಕುಳಿ' ಪರಾ. [ದೇ.॥ ತೆಲು. ಚಕ್ಕಿಲಿಗಿಲಿ, ಚಕ್ಕಿಲಿಗಿಂತ]

**ಚಕ್ಕಲಿ** 'ಚಕ್ಕುಲಿ' ನೋ.

**ಚಕ್ಕಲುಬಕ್ಕಲು** 'ಚಕ್ಕಳಬಕ್ಕಳ' ನೋ.

**ಚಕ್ಕವಕ್ಕಿ, ಜಕ್ಕವಕ್ಕಿ** (ನಾ). ಚಕ್ರವಾಕಪಕ್ಷಿ ; ಎಣೆವಕ್ಕಿ : ಚಕ್ರಪಕ್ಷಿ–ಚಕ್ಕವಕ್ಕಿ (ಶಮದ. ೨೬೧ ಪ್ರಯೋ). **ಜಕ್ಕವಕ್ಕಿ :** "ಕೋಕಃ, ಚಕ್ರಃ, ಚಕ್ರವಾಕಃ, ರಥಾಂಗಃ – ಈ ೪ ಜಕ್ಕವಕ್ಕಿ" (ಹಲಾಯು. ೪೧-೯೧) ; "ಪೊಣರ್ವಕ್ಕಿ ಜಕ್ಕವಕ್ಕಿ . . . ಅಮಳ್ವಕ್ಕಿ– ಈ ೭ ಚಕ್ರವಾಕಂ" (ಕಶಸಾ. ೧೧-೨೦೦) ; ಬನಮಂ ಕೋಗಿಲೆ ಜಕ್ಕವಕ್ಕಿ ಪಗಲಂ ಪೂಗೊಂಚಲಂ ತುಂಬಿ . . . ನೆನೆವಂತಾಂ ನೆನೆವೆಂ ಸರೋಜಮುಖಿಯಂ (ಆದಿಪು. ೧೨-೩೨) ; ಚೆನ್ನಮಲ್ಲಿಕಾರ್ಜುನ ಒಂದಿರುಳಗಲಿದರೆ ತೆಕ್ಕೆ ಸಡಿಲಿದ ಜಕ್ಕವಕ್ಕಿಯಂತಾದೆನವ್ವ (ಮಹಾದೇ. ಬ. ೧೪೨-೩೨೩); ವಿರಹವ ಬೀಳುಕೊಟ್ಟುವು ಜಕ್ಕವಕ್ಕಿಗಳು (ಕುಮಾಭೀ. ೧-೨೮) ; ಜಕ್ಕವಕ್ಕಿಗಳು ಸೂರ್ಯನ ಮುಂದೆ ದುಗುಡವನಿಕ್ಕಿ ನುಣ್ದನಿ ಮಾಡುವಂತೆ (ಭರಜ. ೫-೫೯). [ಚಕ್ಕ$_1$ + ಪಕ್ಕಿ$_1$]

**ಚಕ್ಕವತ್ತ** 'ಚಕ್ಕವತ್ತಿ' ನೋ.

**ಚಕ್ಕವತ್ತಿ, ಚಕೋತ$_1$, ಚಕೋತ್ತು, ಚಕ್ಕವತ್ತ, ಚಕ್ಕೊತ್ತ, ಚಕ್ಕೊತ್ತಿ, ಚಕ್ಕೋಟಿ, ಚಕ್ಕೋತ$_1$, ಚೆಕ್ಕವತ್ತ, ಚೆಕ್ಕೆವತ್ತ** (ನಾ). ಒಂದು ಬಗೆಯ ತರಕಾರಿಸೊಪ್ಪು : "ಹಿಲಮೋಚಿಕಾ ವಾಸ್ತುಕಂ ಈ ೨ ಚಕ್ಕವತ್ತಿ" (ನಾಚಿರಾ. ೧೧೨). **ಚಕೋತ$_1$:** ಸಣ್ಣ ಎಲೆಯ ಚಿಲ್ಲಿ (ಚಕೋತ ಜಾತಿ)ಯ ಗುಣವು ಚಕೋತದಂತೆ ಇರುತ್ತದೆ (ಅಷ್ಟಾಂಗ. ೧೩೯-೯೪ ಅರ್ಥ). **ಚಕೋತ್ತು :** ಮೆಂತೆ, ಹರಿವೇಪಲ್ಲೆ, ಚಕೋತ್ತಿನ ಪಲ್ಲೆ ಹಾಗೂ ರಾಜಗಿರಿಯಪಲ್ಲೆ . . . ಕೋತಂಬರಿಯ ಬೀಜವನ್ನು ಹಾಕಬೇಕು (ಕೃಷಿಪ್ರ. ೧೪೨). **ಚಕ್ಕವತ್ತ:** "ವಾಸ್ತುಕವೆಂಬುದು ಚಕ್ಕವತ್ತ (ಇದೊಂದು ಬಗೆಯ ಸೊಪ್ಪು)" (ಹಲಾಯು. ೨೭-೧೦) ; "ವಾಸ್ತುಕಂ – ಚಕ್ಕವತ್ತ" (ಓಷಧಿ.

೧೪೯); ಚಕ್ಕವತ್ತ್ರಂ ಚಿಲಿಕಿ ರಾಜಗಿರ್ಕೆಸವು ನುಗ್ಗೆದೊಗ್ಗಳೆಯೆಲೆವಾದುರವಂ ಬಡಿಸಿದರ್ (ಧರ್ಮಪ. ೨-೫೬) ; ಕೀರೆ ನಱುವಲು ಚಕ್ಕವತ್ತ ಸೊಲೆ ಸಬ್ಬ ಸೀಗೆ ಮೊದಲಾದ ಸೊಪ್ಪುಗಳ ಬೇಱ್ ಬೇಱುಕ್ಕರಿಸಿ (ಸೂಪಶಾ. ೪-೧೬) ; ಚಕ್ಕವತ್ತ . . . ಸೈಂಧವ, ಇವಿಷ್ಟು ವಿಷ ತಾಗಿದ್ದವರಿಗೆ ಪಥ್ಯವರ್ಗ (ವೈದ್ಯಸಾ. II, ೧೮೯). **ಚಕ್ಕೊತ್ತ :** ಕೀರೆಯು ಸೊಪ್ಪು ಕೆಂಪಿನ ಚಕ್ಕೊತ್ತ . . . ಇವು ಜ್ವರ ಬಂದವರಿಗೆ ಪಥ್ಯ (ವೈದ್ಯಸಾ. I, ೫೫). **ಚಕ್ಕೊತ್ತಿ :** 'ಚಕ್ಕೊತ್ತಿಸೊಪ್ಪು' ಪರಾ. **ಚಕ್ಕೋಟಿ :** ಚಕ್ಕೋಟಿ ರಸಪಲ್ಲೆ, ಇಕ್ಕೊಂಡು ಉಣಲಿಲ್ಲ (ಜನಗೀ. ೭). **ಚಕ್ಕೋತ$_1$ :** ಚಕ್ಕೋತದ ಪಲ್ಯ ರುಚಿಯಾಗಿರುತ್ತದೆ (ರೂಢಿ). **ಚಿಕ್ಕವತ್ತ :** "ಚಿಕ್ಕವತ್ತ[ಪಾಠಾಂ. ವಂತ] ವಾಸ್ತುಕವಮುಕ್ಕು" (ಮಂಗರಾ. ೨೯-೫) ; "ತಾಮ್ರಪುಷ್ಪಃ – ಚಿಕ್ಕವತ್ತ" (ಓಷಧಿ. ೬೭). **ಚಿಕ್ಕವತ್ತ:** ಚಿಕ್ಕವತ್ತದ ಬೀಜವಂ ಹಸಿಯ ಹಾಲಿಂ ಕುಡಿಯೆ ಮೂತ್ರಕೃಛ್ರ ಹರ (ವಿವೈವಿ. ೧೫೨). [<ಸಂ. ಚಕ್ರವರ್ತಿನ್]

**ಚಕ್ಕಳ$_1$** (ನಾ). ೧. ತೊಗಲು; ಚರ್ಮ : ತೆಳುದೊಗಲ ಚಕ್ಕಳದ ಕೈಚಪ್ಪಳೆಯವರು ಹಂತಿಯಲಿ ಕುಡಿದರು ಕೆಳೆಯರಿಗೆ ಸವಿದೋಱ್ ಪೂತನಿನಿಕರ ಗಡಣದಲಿ (ಕುಮಾ.ಭೀ. ೫-೩೦) ; ಅವರು ಹೊಸ ಚಕ್ಕಳದ ಮೋಜಗಳನ್ನು ಹಾಕಿಕೊಂಡು (ಟಾಕತ. ೭) ; ಮಹಾಪ್ರಾಣಿಯೊಂದರ ಚಕ್ಕಳದಿಂದ ಅದನ್ನು ಮಾಡಿದ್ದ ಹಾಗಿತ್ತು (ಗಲಿಪ್ರ. ೨೭) ; ಒಂದೆ ಹಿಡಿ ಮೂಳೆ ಚಕ್ಕಳ ಅಷ್ಟೆ (ಅಮತಂ. ೯) ; ಆಗೊಂದು ಈಗೊಂದು ಬೀಳುತ್ತಿದ್ದ ಎಲೆ ಚಕ್ಕಂದವಾಡದೆ ಚಕ್ಕಳದ ಹಾಗೆ ನೆಲದ ಮೇಲೆ ನೆಲೆಸುತ್ತಿತ್ತು (ಹೊಸಕ್ಷಿ. ೨೭೦). ೨. ಹುಣ್ಣು ಮಾಯುವಾಗ ಮೇಲೇಳುವ ಹಕ್ಕಳೆ : "ಚಕ್ಕಳ–ಹಕ್ಕಳೆ; ಮೇಲದೊಗಲು" (ಜಾನಕೋ. ೫೩). ೩. ಸತ್ತ ಕರುವಿನೊಳಗೆ ಹುಲ್ಲು ತುಂಬಿ ಮಾಡಿದ ಕರುವಿನಾಕಾರದ ಬೊಂಬೆ : ಹಾಲು ಕರೆಯುವಾಗ ಈ ಹಸುವಿನ ಪಕ್ಕದಲ್ಲಿ ಚಕ್ಕಳವನ್ನು ನಿಲ್ಲಿಸುತ್ತಾರೆ (ರೂಢಿ).

**ಚಕ್ಕಳದ ಹಕ್ಕಿ = ತೊಗಲಬಾವಲಿ :** ಬಾವಲಿ ; ಕಪಟ ; ಕಣ್ಣಪಟ ; ಚಕ್ಕಳದಹಕ್ಕಿ (Bat. ಇಂಕನಿ).

[ದೇ.॥ ತಮಿ. ಮಲ. ಚಕ್ಕಿಲಿ=ಚಮ್ಮಾರ]

**ಚಕ್ಕಳ$_2$, ಚಕ್ಕುಲ** (ನಾ). ೧. ಬಿದಿರು, ಜೊಂಡು ಅಥವಾ ಬೆತ್ತದಿಂದ ಹೆಣೆದುಮಾಡಿದ ಸಣ್ಣ ಚಾಪೆ; ವೇತ್ರಾಸನ; ಮಂದಲಿಗೆ : "ವೇತ್ರಾಸನಂ,ಆಸಂದೀ-ಈ ೨ ಬೆತ್ತದ ಚ[ಪಾಠಾಂ. ಜ]ಕ್ಕಳಂ"(ಹಲಾಯು.೫೨-೧೫೬); "ಆಸಂದಿ ವೇತ್ರಾಸನಂ ಚಕ್ಕಳಮುಕ್ಕು" (ಮಂಗರಾ. ೬೨-೨೧) ; ಮೃಡನಂ ಜಾನಿಸುವೆಡೆಯೊಳ್ಬಿಡೆ ಚಕ್ಕಳ[ಪಾಠಾಂ. ಣ]ದಿಂದೆ ನಾಲ್ವೆರಲ್ನೆರದಿಪ್ಪಂದದ ಯೋಗಿಯೆಂದು ನುಡಿವರ ನುಡಿಯಂ ನಂಬಲ್ಕೆ ಸಲ್ಲ (ಸಮುಪ. ೧೨-೨೪); ಬ್ರಾಹ್ಮಣರಿಗೆ ಹಾಸುವ ಬಿದಿರ ಚಾಪೆ ಕುಳಿರುವ ಚಕ್ಕಳಕ್ಕೆ ವೊಂದು ಹಣ (ಎಕ. VIII, ತೀರ್ಥಹ. ೩೩-೫೮ ; ಸು. 1430) ; ಕಾಣಿಕೆಯ ಕಪ್ಪಗಳಾ ಚೊಕ್ಕರಾಯಗೆ ನೀಡುತಡ್ಡಬಿದ್ದೆದ್ದರು ಚಕ್ಕಳವೀಯೆ ಕುಳಿತರು (ಭರಜ. ೩೦-೨೨). ೨. ಒಂದು ಬಗೆಯ ಪಾತ್ರೆ : "ಚಕ್ಕಳಮಿಳನಂ ಸುಪಾತ್ರೆ ಸೊರೆಯೆಂಬಿವಕೆಯ್ದೆ ಕಟಾಹವಾಚಕಂ" (ನಾನಾರ. ೧೦೪) ; ಸಗೌರರುಚಿ ಘಟವಮಂ ಚಕ್ಕಳಮಂ ಪಿಡಿದಿರ್ಪಳ್ ಸುರಕುಳ ಗಮನಾಸಕ್ತೆ ಕನ್ಯಕಾಂತ್ಯತ್ರ್ಯಂಶಂ (ಜಾತತಿ. ೧೯-೧೪). **ಚಕ್ಕುಲ :** ೧. ಸಾಷ್ಟಾಂಗವೆಱಗಿ ಬಂದು ಚಕ್ಕುಲವಿಡಿದು ಕುಳ್ಳಿರ್ದ (ನಿಜಸಾಂ. ೩೦-೧೮೩).

[<ಪ್ರಾ. ಚಕ್ಕಲ]

**ಚಕ್ಕಳಗಂಳಿ** 'ಚಕ್ಕಲಗಂಳಿ' ನೋ.

**ಚಕ್ಕಳಗೊಂಬೆ** (ನಾ). ಚರ್ಮದಿಂದ ಮಾಡಿದ ಗೊಂಬೆ : ಊರೊಳಗೆ ಕೋಲೇಬಸವಣ್ಣನಾಟ, ಡೊಂಬರ ಆಟ, ಯಕ್ಷಿಣಿ ಆಟ, ಚಕ್ಕಳಗೊಂಬೆ ಆಟ ಮುಂತಾದವು ಕಾಯ್ದುಕೊಂಡಿದ್ದವು (ಹುಟ್ಟಿಹ. ೭೩).

[ಚಕ್ಕಳ$_1$ + ಗೊಂಬೆ$_1$]

**ಚಕ್ಕಳಬಕ್ಕಳ, ಚಕ್ಕಲುಬಕ್ಕಲು, ಚಕ್ಕಳಮಕ್ಕಳ, ಚಕ್ಕಳಮುಕ್ಕಳ, ಚಕ್ಕಳಿಮುಕ್ಕಳಿ** (ನಾ). ಕಾಲು ಮಡಿಸಿಕೊಂಡು ಕೂಡುವುದು ; ಪದ್ಮಾಸನ : ಭುಂಜಿಸಿದ ನಂತರ ಚಕ್ಕಳಬಕ್ಕಳ ಹಾಕಿ . . . ಚಿತ್ತವು ವಿಮುಕ್ತವಾಗು ವವರೆಗೆ ಈ ಚಕ್ಕಳಬಕ್ಕಳವನ್ನು ಮುರಿಯುವುದಿಲ್ಲ . . . ಎನ್ನುವನು (ತೀರ್ಥಕ. ೭೫) ; ಊಟವಾದ ಮೇಲೆ ಭಿಕ್ಷಾಪಾತ್ರೆಯೊಡನೆ ಹಿಂದಿರುಗಿ, ಚಕ್ಕಳಬಕ್ಕಳ ಹಾಕಿ . . . ಕುಳಿತುಕೊಳ್ಳುವನು (ಬುದ್ಧಪ. ೧೯೧). **ಚಕ್ಕಲುಬಕ್ಕಲು :** ಒಬ್ಬ ಪೂಗಿ ನೆಲದ ಮೇಲೆ ಚಕ್ಕಲು ಬಕ್ಕಲು ಹಾಕಿಕೊಂಡು ಕುಳಿತಿದ್ದವನು, ಕುಳಿತಿದ್ದಹಾಗೆಯೇ ಮೇಲಕ್ಕೆ ಏರಲಾರಂಭಿಸಿದನು (ಪ್ರವಾಇ. II, ೯೧). **ಚಕ್ಕಳ ಮಕ್ಕಳ :** ಕುರ್ಚಿ ಮೇಲೆ ಚಕ್ಕಳಮಕ್ಕಳ ಹಾಕಿ ಕುಂತ (ಸಾಕಾಪ್ರ. ೨೬೧) ; ಚಕ್ಕಳಮಕ್ಕಳ ಹಾಕ್ಕೊಂಡು ಕೂತ (ಹುಚ್ಚಾಟ. ೧೦೭). **ಚಕ್ಕಳಮುಕ್ಕಳ:** ಚಕ್ಕಳಮುಕ್ಕಳ ಹಾಕಿಕೊಂಡು ಕೂಡು (ರೂಢಿ). **ಚಕ್ಕಳಿಮುಕ್ಕಳಿ :** ವಾಡಿಕೆಯಂತೆ (ಕಾಲುಗಳನ್ನು) ಚಕ್ಕಳಿಮುಕ್ಕಳಿ ಹಾಕಿಕೊಂಡು ಹಸಿರುಹುಲ್ಲಿನ ಮೇಲೆ ಕುಳಿತನು (ಹಿಂಕಿರು. ೩೦). [ಚಕ್ಕಳ$_2$ + ಬಕ್ಕಳ?]

**ಚಕ್ಕಳಮಕ್ಕಳ** 'ಚಕ್ಕಳಬಕ್ಕಳ' ನೋ.

**ಚಕ್ಕಳಮುಕ್ಕಳ** 'ಚಕ್ಕಳಬಕ್ಕಳ' ನೋ.

**ಚಕ್ಕಳಿಗುಳಿ** 'ಚಕ್ಕಲಗುಳಿ' ನೋ.

**ಚಕ್ಕಳಿ** 'ಸಗ್ಗಳಿ' ನೋ.

**ಚಕ್ಕಳಿಮುಕ್ಕಳಿ** 'ಚಕ್ಕಳಬಕ್ಕಳ' ನೋ.

**ಚಕ್ಕಟು** (ಕ್ರಿ). ಚಪ್ಪಟೆಯಾಗು ; ಹತ್ತೆಬೀಳು : ಚಕ್ಕಟಿದ ಮೊಲೆಗಳುಂ ಕೈಮಿಕ್ಕಂಕುರದುಗಿಯುಂ (ಲೀಲಾವ. ೧೩-೯೨).

[ದೇ.॥ ತಮಿ. ಚಕ್ಕಳಿ ; ಮಲ. ಚಕ್ಕಟು]

**ಚಕ್ಕಾಚೂರು** (ನಾ). ಸಣ್ಣಸಣ್ಣ ಚೂರು ; ಚಿಕ್ಕಚಿಕ್ಕೆಯಾದ ಚೂರು : ಮಗು ಕಾಗದವನ್ನು ಚಕ್ಕಾಚೂರು ಮಾಡಿತು (ರೂಢಿ).

[←ಹಿಂ. ಚಕಚೂರ್]

**ಚಕ್ಕು$_1$** (ನಾ). ಒಂದು ಅನುಕರಣಶಬ್ದ. 'ಚಕ್ಕುಮೊಕ್ಕು' ಪರಾ.

**ಚಕ್ಕುಚಕ್ಕು** (ದ್ವಿರುಕ್ತಿ) : ನಿಶಾತಶರಾಳಿಗಳೆಯ್ದೆ ಚಕ್ಕುಚಕ್ಕನೆ ಕೊಳೆ ಮೊಕ್ಕುಮೊಕ್ಕನೆ ಶಿರಂಗಳುರುಳ್ದುವು ವೈರಿಭೂಪರಾ (ಪಂಪಭಾ. ೧೨-೧೧೯); ಆ ಶರಗಳು ಚಕ್ಕುಚಕ್ಕೆಂದು ತಾಗಿ ಮೊಕ್ಕುಮೊಕ್ಕೆಂದು ವೈರಿಭೂಪರ ಶಿರಗಳು ನೆಲಕ್ಕುರುಳುತ್ತಿದ್ದವು (ಭಾಮುಗ. ೨೭).

**ಚಕ್ಕು$_2$** 'ಸೆಕ್ಕೆ$_1$' ನೋ.

**ಚಕ್ಕು$_3$** 'ಚೆಕ್ಕು$_2$' ನೋ.

**ಚಕ್ಕು$_4$** 'ಚೆಕ್ಕು$_3$' ನೋ.

**ಚಕ್ಕು$_5$** (ನಾ). [ಸಂಗೀತ] ತಂತಿವಾದ್ಯದಲ್ಲಿ ನಾದವನ್ನುಂಟುಮಾಡುವ ಆರು ಬಗೆಯ ಸಾಧನಗಳಲ್ಲಿ ಒಂದು (?) : ಬಿರಟ ಚಕ್ಕು ಸನ್ನೆ ಬಿಗಿ ಜಬ್ಬು ಜೀವಾಳವೆಂಬಾಱುಬಗೆಯಾದ ನಾದಕಟ್ಟುಗಳಿಂ ತಂತ್ರಿಗಳಂ ಸವರಿಸಿ (ವಿವೇಕ. ೨೩೭). [?]

**ಚಕ್ಕುದಱ** 'ಚೆಕ್ಕುದಱ' ನೋ.

**ಚಕ್ಕುಬಂದಿ** 'ಚಕಬಂದಿ' ನೋ.

**ಚಕ್ಕುಮಲಕು** 'ಚಕ್ಕುಮಲುಕು' ನೋ.

**ಚಕ್ಕುಮಲುಕು, ಚಕ್ಕುಮಲಕು** (ನಾ). ಚಾಲಾಕು (?): ಸರಸದ ವಿರಸದ ವಿಡಿದಿ ತಿಳಿವುಮುಳುಪಿನ ತಾಣ ನೆಱನೋಟ ಬೇಟದಾಗರ ಪುಸಿ ನುಸುಳ ಹಸರ ಬೆರಸು ಬೆಲ್ಲಣಿಯಿಕ್ಕೆ ಯಾಸೆವಾಸೆಯ ದೇಶ ಚಕ್ಕುಮಲುಕಿನ ಚಾವಡಿ (ನಂದಿಮಾ. ೨೩-೧೭). **ಚಕ್ಕುಮಲಕು :** ಚಲುವೆಯೆಂದೊಬ್ಬನ ಕಳುಹಿ ಚಕ್ಕುಮಲಿ[ಲ]ಕೀಲಿ ದ್ವಾರಕಿಯಾ ನಿಲಯಾನನೊಲಿಸಿಕೊಂಡೆಲ್ಲೆ ಗಯ್ಯಾಳಿ ರುಕ್ಮಿಣಿ (ಶ್ರೀಕೃಪಾ. ४೧). [?]

**ಚಕ್ಕುಮೊಕ್ಕು**(ನಾ). ಒಂದು ಅನುಕರಣ ಶಬ್ದ : ಬೇವ ಶವಸಂಘಾತಂಗಳಂ ಚಕ್ಕುಮೊಕ್ಕೆಂದಾಗಳ್ ಕಡಿದುಗ್ರಭೂತನಿಕರಂ ಕೆಯ್ ಬೇಯೆ ಬಾಯ್ ಬೇಯೆ ತಿಂಬಂದಂ ತನ್ನ ಮನಕ್ಕಗುರ್ವಿಸುವಿನಂ ದುರ್ಯೋಧನಂ ನೋಡಿದಂ (ಪಂಪಭಾ. ೧೩-೭೧).

**ಚಕ್ಕುಲ** 'ಚಕ್ಕಳ$_2$' ನೋ.

**ಚಕ್ಕುಲಗುಲಿ** 'ಚಕ್ಕಲಗುಳಿ' ನೋ.

**ಚಕ್ಕುಲಿ, ಚಕ್ಕಲಿ, ಚೆಕ್ಕುಲಿ** (ನಾ). ಅಕ್ಕಿ, ಕಡಲೆ ಮತ್ತು ಉದ್ದಿನ ಹಿಟ್ಟಿಗೆ ಉಪ್ಪು, ಕಾರ ಮುಂತಾದುವುಗಳನ್ನು ಬೆರಸಿ ಕರಿದು ಮಾಡುವ ಒಂದು ಬಗೆಯ ಚಕ್ರಾಕಾರವಾದ ತಿಂಡಿ : ಶಷ್ಕುಲಿ – ಚಕ್ಕುಲಿ (ಶಮದ. ೨೬೩ ಪ್ರಯೋ); ನಾಡೆ ರುಚಿವೆರಸಿದ ಲಡ್ಡುಗೆ ಚಕ್ಕುಲಿ ಗಾರಿಗೆ ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮಂ . . . ಮೆಲ್ದು (ಧರ್ಮಾಮೃ. ೧-೧೪೭); ತಳಿಗು ಚಕ್ಕುಲಿ ಹೂಸಣಂಬ ಹೂರಿಗೆಗಳಂ . . . ತೆಱಹಿಲ್ಲೆನಿಸಿ ಗಡಣಿಸುತ್ತ (ಸಿದ್ಧರಾ. ೮-೮೫) : ನವಗ್ರಹ ಹೋಮಕ್ಕೆ ಸಲಗೆವೊಂದು ಫಳವಳಿಗೆಯು ಚಕ್ಕುಲಿಗೆ ಕೊಳಗ ಹನ್ನೊಂದು (ಎಕ. III, ತಿರುಮ. ೯೭-೫೩ ; 1276). **ಚಕ್ಕಲಿ :** ಬುರುಬುರಿ ಚಕ್ಕಲಿ ಗಿಲಿಗಿಂಚಿ ಮಾಡಿದರು (ಸಿದ್ಧಪು. ೧೭-೩೫). **ಚೆಕ್ಕುಲಿ :** ಚೆ[ಪಾಠಾಂ. ಚ]ಕ್ಕುಲಿ, ದೆಕ್ಕಾಳಂ (ಶಬ್ದಾನು. ೬೭ ವ್ಯಾಖ್ಯಾ). [ <ಸಂ. ಶಷ್ಕುಲೀ, ಶಸ್ಕುಲೀ ]

**ಚಕ್ಕುಹುಂಡಿ** (ನಾ). ಬ್ಯಾಂಕಿನಲ್ಲಿ ಠೇವಣಿದಾರನು ತನ್ನ ಹೆಸರಿಗಿರುವ ಹಣದಲ್ಲಿ ಇಂತಿಷ್ಟನ್ನು ಇಂಥವರಿಗೆ ಕೊಡಬೇಕೆಂದು ಬರೆದು ಕೊಡುವ ಅಧಿಕಾರಯುಕ್ತವಾದ ಪತ್ರ : ನಗದುಹಣದ ಜೊತೆಯಲ್ಲಾಗಲಿ ಅಥವಾ ಕ್ಯಾಷ್ ಆರ್ಡರ್ ಎಂಬ ಚಕ್ಕುಹುಂಡಿಗಳ ಮೂಲಕವಾಗಿಯಾಗಲೀ ಪಾವತಿ ಮಾಡುವಂತೆ ಇಂಡಾರ್ಸ್ ಷರಾ ಬರೆದು ಗ್ರಾಮಗಳಿಗೆ ರವಾನಿಸಲ್ಪಡುವುದು (ಗ್ರಾಮಾಕ. ೬).

[ ಚಕ್ಕು$_4$ (<ಚೆಕ್ಕು$_3$) + ಹುಂಡಿ$_2$ ]

**ಚಕ್ಕುಳಿ** (ಕ್ರಿ). ಚಕ್ಕೆ ಅಥವಾ ಪದರ ಕಳಚು : ಕಲುಕುಟಿಗ ಮುಟ್ಟಿ ಚಕ್ಕುಳಿವಲ್ಲಿ [ಪಾಠಾಂ. ಚಕ್ಕೇಳುವಾಗ] ಪ್ರಾಣಲಿಂಗ ಭಿನ್ನವಾಯಿತ್ತೆ . . . ಪೂಜಾಲಿಂಗ ಭಿನ್ನವಾಯಿತ್ತಲ್ಲದೆ (ಚನ್ನವ. ಕ. ೨೦೭-೪೮೪).

[ ಚಕ್ಕೆ (<ಸೆಕ್ಕೆ$_1$) + ಉಳಿ$_1$ (<ಉೞಿ$_1$) ]

**ಚಕ್ಕುಳಿಗುಳಿ** 'ಚಕ್ಕಲಗುಳಿ' ನೋ.

**ಚಕ್ಕೆ** 'ಸೆಕ್ಕೆ$_1$' ನೋ.

**ಚಕ್ಕೆಗಲ್ಲು** (ನಾ). ತೆಳ್ಳಗೆ ಚಕ್ಕೆಯಂತಿರುವ ಕಲ್ಲು : (+).

[ ಚಕ್ಕೆ (<ಸೆಕ್ಕೆ$_1$) + ಕಲ್ಲು (<ಕಲ್$_3$) ]

**ಚಕ್ಕೊತ್ತ** 'ಚಕ್ಕವತ್ತಿ' ನೋ.

**ಚಕ್ಕೊತ್ತಿ** 'ಚಕ್ಕವತ್ತಿ' ನೋ.

**ಚಕ್ಕೊತ್ತಿಸೊಪ್ಪು** 'ಚಕ್ಕೋತಸೊಪ್ಪು' ನೋ.

**ಚಕ್ಕೋಟಿ** 'ಚಕ್ಕವತ್ತಿ' ನೋ.

**ಚಕ್ಕೋತ$_1$** 'ಚಕ್ಕವತ್ತಿ' ನೋ.

**ಚಕ್ಕೋತ$_2$**, ಚಕೋತ$_2$ (ನಾ). ಈಳಿ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು : ಕಿತ್ತಳೆ ಕಿಱುಕಿತ್ತಳೆ ಚಕ್ಕೋತ ಮಾದಳ ದ್ರಾಕ್ಷಿ . . . ಸಾರ್ವರ್ತುಕಮಾದ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೦೧) : ಹುಲ್ಲೆಕರುವಲ್ಲಿ ಹುದೆ, ಕರಿಗಣಿಕೆ ಹಣ್ಣು ರಸಬಾಳೆ ದಾಳಿಂಬೆ ಚಕ್ಕೋತಹಣ್ಣು ? (ಅಹಲ್ಯ. ೪೮-೧೬) ; ಈ ಚಕ್ಕೋತದ ತೊಳೆ ಬಿಡಿಸಿ ಬಾಯಿಗೆ ಹಾಕ್ಕೋತಾ ನಿಂತಿರು (ದಿನಾರಿ. ೧). **ಚಕೋತ$_2$ :** ಚಕೋತದ ಹಣ್ಣು ಮರದ ತುಂಬಾ ಬಿಟ್ಟಿದೆ (ರೂಢಿ).

[ ←ಹಿಂ. ಚಕೋತರಾ; ಮರಾ. ಚಕೋತರಾ, ಚಕೋತ್ರ, ಚಕೋತ್ರಾ./ತುಳು. ಚಕೋತ್ರ ]

**ಚಕ್ಕೋತಸೊಪ್ಪು**, ಚಕ್ಕೊತ್ತಿಸೊಪ್ಪು (ನಾ). ಒಂದು ಬಗೆಯ ತರಕಾರಿ ಸೊಪ್ಪು ; ಚಕ್ಕವತ್ತ : (ಮ್ಯಾಜಿಗಿ. ೧೧-೧೭೫). **ಚಕ್ಕೊತ್ತಿಸೊಪ್ಪು :** ಚಕ್ಕೊತ್ತಿಸೊಪ್ಪು, ಮೆಂತ್ಯದ ಸೊಪ್ಪುಗಳನ್ನು ಸಸಿಗಳಲ್ಲೇ ಕಿತ್ತು ಅಡಿಗೆ ಮಾಡಿದರೆ ಮೇಲು (ತರಬಿ. ೧೭). [ಚಕ್ಕೋತ$_1$ (<ಚಕ್ಕವತ್ತಿ)+ಸೊಪ್ಪು$_3$]

**ಚಕ್ಬಂದಿ** 'ಚಕಬಂದಿ' ನೋ.

**ಚಕ್ಯಾರ** (ನಾ). ದೇವಾಲಯದ ನರ್ತಕಿ ; ದೇವದಾಸಿ : ತಮಿಳುನಾಡು ಆಂಧ್ರಗಳ ದೇವದಾಸಿಯರು, ಕೇರಳದ ಚಕ್ಯಾರರು ಈ ವರ್ಗಕ್ಕೆ ಸೇರಿದವರು (ಭಾರದ. ೫೫೧). [ ? ]

**ಚಕ್ರ$_1$** (ನಾ). ೧. ಗಾಲಿ : "ಚಕ್ರಂ, ರಥಾಂಗಂ– ಈ ೨ ಗಾಲಿ" (ಹಲಾಯು. ೭೩-೨೯೩) ; ಭೀಕರ ರಥಚಕ್ರಮಂ ಪಿಡಿದು ನುಂಗಿದಳೊರ್ಮೆಯೆ ಧಾತ್ರಿ ಕೋಪದಿಂ (ಪಂಪಭಾ. ೧೨-೨೦೬) ; ಅರಿಸ್ತ್ರೀನಾಚಕ್ರ ಚಕ್ರಂ ಪೊರಳೆ . . . ವೈರಿರಕ್ತಾಂಬುವನೆ ನಿಜಯಶೋವಲ್ಲಿಗೆತ್ತುತ್ತವಿಪ್ಪಂ (ಎಕ. V, ಹಾಸನ. ೧೩೦-೧೧ ; 1147 ?) ; ಸಾರಥಿ ಹೆಳವನು ಒಂದೆಯೆ ಚಕ್ರವು ಹಯವೇಳು ಕಡಿವಾಣ ಹಾವು (ಇಂಚಾಪ. ೨೨೧-೯೨). ೨. ಕುಂಬಾರನ ತಿಗುರಿ : "ಚಕ್ರಮೆನೆ ತಿಗುರಿ" (ಮಂಗರಾ. ೧೧೩-೮) ; ಕುಡಿಕೆಗೆ ಬೇಕಷ್ಟೆ ಕೋಲು ಕೈಚಳಕವು ಚಕ್ರವು ಬೆಂಕಿಯು ಕಾವು (ಇಂಚಾಪ. ೧೮೫-೧೧). ೩. ವರ್ತುಳ ; ಮಂಡಲ ; ಸುತ್ತು : ಅವರೆಲ್ಲರೂ ಒಂದು ಚಕ್ರದಲ್ಲಿ ನಮ್ಮಿಬ್ಬರನ್ನು ನಡುವೆ ಮಾಡಿ ಕುಣಿದು ತಮ್ಮ ತಮ್ಮ ಜೊತೆಗಾರರೊಡನೆ ಸೇರುವರು (ಮೋದಿಮು. ೧೧೩). ೪. ಒಂದು ಬಗೆಯ ವರ್ತುಲಾಕಾರದ ಆಯುಧ ; ಚಕ್ರಾಯುಧ : "ಪಾಱುಂಬಳೆ ಚಕ್ರಂ" (ಚತುನಿ. ೭೮). ೫. ವಿಷ್ಣುವಿನ ಕೈಯಲ್ಲಿರುವ ಆಯುಧ ; ಸುದರ್ಶನ : "ಚಕ್ರಂ ಸುದರ್ಶನಮೆನಿಕ್ಕು" (ಮಂಗರಾ. ೬-೨೦) ; ಪಿಡಿಯೆಂ ಚಕ್ರಮನೆಂಬ ಚಕ್ರಿಯನಿಳಾಚಕ್ರಂ ಭಯಂಗೊಳ್ವಿನಂ ಪಿಡಿಯಿಪ್ಪೆಂ ಕರಚಕ್ರಮಂ (ಪಂಪಭಾ. ೧೦-೨೫) ; ಮುರಾರಾತಿ ಹಸ್ತಾಗ್ರದೊಳ್ ಸಂಗತಿವೆತ್ತಿರ್ದತ್ತು ಚಕ್ರಂ (ಜಗವಿ. ೭-೭೧). 'ಚಕ್ರವರ್ತನ'ಪರಾ. ೬. ಭೂಮಿ. 'ಚಕ್ರನಾಥ' ಪರಾ. ೭. ದೇಶ; ರಾಜ್ಯ: ಈ ಪ್ರಸಂಗವನ್ನು "ಧರ್ಮಚಕ್ರಪ್ರವರ್ತನ" ಎಂದು ಕರೆದಿದ್ದಾರೆ. ಇಲ್ಲಿ 'ಚಕ್ರ' ವೆಂದರೆ 'ರಾಜ್ಯ' (ಭಾರದ. ೧೯೬). ೮. ಗುಂಪು ; ಮಂಡಲಿ ; ಸಮೂಹ : ಬೆದಱಿ ಪುಗೆ ದಿಶಾಚಕ್ರಮಂ ವೈರಿಚಕ್ರಂ (ಜಗವಿ. ೭-೭೧) ೯. ಪಡೆ; ಸೇನೆ; ಸೈನ್ಯ: "ಪೃತನಾ . . . ಚಕ್ರಂ, ಚಮೂಃ, ವರೂಥಿನೀ, ಅನೀಕಿನೀ, ಅನೀಕಂ-ಈ ೧೦ ಪಡೆ" (ಹಲಾಯು. ೭೫-೩೦೩); ಇದಱಿಂದೊಳ್ ಶ್ವೇತಾತಪತ್ರಸ್ಥಗಿತ ದಶದಿಶಾಮಂಡಲಂ ರಾಜಚಕ್ರಂ ಪುದಿದಟ್ಟಾಡಿತ್ತು (ಪಂಪಭಾ. ೧೨-೧೫೬). ೧೦. ಸೈನ್ಯವ್ಯೂಹದಲ್ಲಿ ಒಂದು ಪ್ರಕಾರ. 'ಚಕ್ರವ್ಯೂಹ' ಪರಾ. ೧೧. ಸುಳಿ; ತಿರುವು. ೧೨. ದಿಗಂತ ; ಕ್ಷಿತಿಜ ; ಆಕಾಶ. ೧೩. ಒಂದು ಬಗೆಯ ಪಕ್ಷಿ ; ಚಕ್ರವಾಕ : "ಕೋಕಂ ರಥಾಂಗಂ ಪೊಣರ್ವಕ್ಕಿ ಚಕ್ರಂ" (ವಸ್ತುಕೋ. ೪೨-೧೭) ; ಪದ್ಮವದನಂ ಕಳಪ್ಪಂಘ್ರಿ ಚಕ್ರಸ್ತನಂ . . . ಒಪ್ಪೆ ಕಂನೆಗೇಱಿಯುಂ ಚಟ್ಟಂ ಧನಂಗೊಟ್ಟು ಕಟ್ಟಿಸಿ (ಎಕ. V, ಬೇಲೂರು. ೧೯೩-೧೦೭ ; 1161) ; "ಬಿಹ್ವದೊಳು ಕ್ರೂರಾಸ್ತ್ರದೊಳು ಗಾಳಿ ತಿಗುರಿಯೊಳು ಸೇನೆಯೊಳು ಕೋಕದೊಳು ಚಕ್ರಮಕ್ಕುಂ" (ಮಂಗರಾ. ೧೬೧-೫೨). ೧೪. ಬಲೆ : "ಗಾಲಿಯೊಳುಂ ಚಕ್ರದೊಳುಂ ಕುಲಾಲನೊಳು ಚಕ್ರ ಜ[ಬಿ]ಹ್ವೆ ನಭವೃತ್ತದೊಳುಂ ಮೇಲೆ ರಥಾಂಗದಿ ಬಲೆಯೊಳು ಲಾಲಿಸಲೊಂಭತ್ತು ಚಕ್ರಶಬ್ದಂ" (ನಾನಾಕಂ. ೩೨); "ರಥಾಂಗ ಕುಲಾಲ ಚಕ್ರವ್ಯೂಹಾಗಸ ಖಡ್ಗ ವೃತ್ತ ಬಲೆ ಗಾಲಿಗಳಿಂತಿವು ಚಕ್ರವಾಚಕಂ" (ನಾನಾರ. ೫೦). ೧೫. ಒಂದು ನಾಣ್ಯದ ಹೆಸರು ; ಪಾವಲಿ : ಚಕ್ರಕ್ಕೆ ಮೊರಂಟೆಯಾದರೆ ಆರು, ಬೈಗೆಯಾದರೆ ನಾಲ್ಕು (ಹೊಸಕ್ಷಿ. ೪೯). ೧೬. [ಯೋಗ] ಶರೀರದೊಳಗಿನ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ ಎಂಬ

ಆರು ಕೇಂದ್ರಗಳು. 'ಷಟ್ಚಕ್ರ'ಪರಾ. ೧೭. [ಜ್ಯೋತಿ] ಯೋಗಗಳಲ್ಲಿ ಒಂದು : ಉದಯಾದ್ಯೇಕ ಗೃಹಾಂತರಿತದೊಳೇಟುಂ ನಿಂದೊಡದುವೆ ಚಕ್ರಂ (ಜಾತತಿ. ೧೩-೪). ೧೮. [ಕಾವ್ಯಮೀ] ಚಿತ್ರಕಾವ್ಯ ರಚನೆಯಲ್ಲಿ ಒಂದು ಭೇದ : ಶ್ರೀಮದರ್ಧಭ್ರಮಂ ಚಕ್ರನಾಮಂ ಮುರಜಬಂಧಕಂ (ಕವಿರಾ. ೨-೧೧೦) ; ಶರಶೂಲಚಾಪಚಕ್ರಾಸಿರೂಪವಿಭಿರಥ ತುರಂಗ ಪದಗತಪಾಶಂ ಮುರಜಂ ಗೋಮೂತ್ರಿಕೆ (ಕಾವ್ಯಾವ. ೫೬೯). ೧೯. [ನಾಟ್ಯ] ಸಂಯುಂತಹಸ್ತಗಳ ಇಪ್ಪತ್ತುನಾಲ್ಕು ಪ್ರಕಾರಗಳಲ್ಲಿ ಒಂದು : ೧. ಅಂಜಲಿ . . . ೧೨. ಶಂಖ, ೧೩. ಚಕ್ರ (ಅಭಾನ್ಯ. ೪೮). ೨೦. [ಜೈನ] ಪಾರಿವ್ರಾಜಕಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರ ಪದಗಳಲ್ಲಿ ಒಂದು : ಚಕ್ರಮೆಂಬುದು ಧರ್ಮಚಕ್ರಧರನಪ್ಪ ಜಿನಪತಿಯನಾರಾಧಿಸಿ . . . ದಿವ್ಯಚಕ್ರಮಂ ಪರಮಾತ್ಮಚಕ್ರಮಂ ಪಡೆಯಲಕ್ಕುಂ (ಚಾವುಂಪು. ೨೪೯). ೨೧. (ಆಲಂ) ಸೊನ್ನೆ ; ಇಲ್ಲದಂತಾಗುವಿಕೆ : ಏಳೆಂಟು ಮನೆ ಯವರು ಕೂಲಿನಾಲಿ ಮಾಡಿ ಕಾಲ ಕಳೀತಿದ್ದರು, ಬಿಟ್ಟಿಯ ದಾಳಿಯಿಂದ ಅದಕ್ಕೂ ಚಕ್ರ ಬರುತ್ತಿತ್ತು (ಪ್ರೀವಾಶ್ರ. ೨೬೬); ಘಟಿಂಗರು ನನ್ನ ನೌಕರಿಗೆ ಚಕ್ರ ತರುತ್ತಾರೆಂಬುದು ನನಗೆ ಗೊತ್ತಿದೆ (ಎಡಹೆ. ೬೯).

**ಚಕ್ರಹಾಕು** = ಇಲ್ಲವಾಗಿಸು: ಉಳಿದ ದವಸಕ್ಕೆ ಚಕ್ರಹಾಕುತಾ ಕಂಡರೆ ಸುಂಕ, ಕಾಣದಿದ್ದರೆ ಬಿಂಕ ಎಂದು ಮೆರೆಯುತಕ್ಕ ರೈತರು ಅನೇಕರಿದಾರೆ (ಅದೂಟ. ೧೮). [ಸಂ.]

**ಚಕ್ರ₂** (ನಾ). ಪಟೇಲ, ಶಾನುಭೋಗರ ಕೈಕೆಳಗೆ ಕೆಲಸಮಾಡುವ ಸೇವಕ; **ನೀರುಗಂಟಿ** : ನೀರುಗಂಟಿ . . . ಇವನಿಗೆ ಕೆಲವು ಕಡೆ ಚಕ್ರನೆಂದು ಹೆಸರುಂಟು (ಗ್ರಾಮಾಕ. ೧) ; ಆಯಾ ಗ್ರಾಮದ ತೋಟಿ, ತಳವಾರ, ಚಕ್ರ ಮೊದಲಾದವರನ್ನು ಕರೆದುಕೊಂಡು ಹೋಗಬೇಕು (ಅದೂಟ. ೫).

[<ಚಾಕರ ?]

**ಚಕ್ರ₃** (ನಾ). ಒಂದು ಬಗೆಯ ಮೀನು : ಕೂಡಿಲು ಚಕ್ರ ಗೆಂಡೆ . . . ಗಿಱಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಜಕಾ. ೫-೪೬). [?]

**ಚಕ್ರಂಗೊಳ್** (ಕ್ರಿ). ಚಕ್ರಾಯುಧವನ್ನು ಕೈಗೆತ್ತಿಕೊಳ್ಳು : ದಾನವರಿಪು ಚಕ್ರಂಗೊಳೆ ಕೌರವಾರಿ ಗದೆಗೊಳೆ ಪೊಣರ್ಕೆಗಾವಂ ನಿಲ್ವಂ (ಶಮುದ. ೧೬೬ ಪ್ರಯೋ). [ಚಕ್ರ₁ + ಕೊಳ್₁]

**ಚಕ್ರಕಾಣಿಕೆ** (ನಾ). ಒಂದು ಬಗೆಯ ತೆರಿಗೆ : ಚಕ್ರಕಾಣಿಕೆ ಕಡಾಯ ಸರ್ವ ಬಾಧ ಪರಿಹಾರವಾಗಿ ಬಿ[ಟ್ಟೆ]ವೆಂದು ಪರದತ್ತವ ಮಾಡಿ (ಸೌಇಇ. XX, ೨೬೫-೧೪; 1547). [ಚಕ್ರ₁ + ಕಾಣಿಕೆ (<ಕಾಣ್ಕೆ)]

**ಚಕ್ರಕಾರಕ** (ನಾ). ೧. ಒಂದು ಬಗೆಯ ಪರಿಮಳದ್ರವ್ಯ. ೨. "ಹುಲಿ ಯುಗುರಂ ಗಿಡ" (ಅಮರ. ಟೀಕ). [ಸಂ.]

**ಚಕ್ರಗತಿ** (ನಾ). ವರ್ತುಲಾಕಾರವಾದ ಚಲನೆ; ಸುತ್ತುಹಾಕುವಿಕೆ: ಕಥೆಯ ಬೆಳವಣಿಗೆ . . . ವರ್ತಮಾನದಿಂದ ಹಳೆಯ ನೆನಪಿಗೆ, ಹಳೆಯ ನೆನಪಿನಿಂದ ಮತ್ತೆ ವರ್ತಮಾನಕ್ಕೆ ಹೀಗೆ ಚಕ್ರಗತಿಯಲ್ಲಿ ಸುತ್ತುತ್ತದೆ (ಹೊಸಕ್ಷಿ. ೨೯೪).

[ಚಕ್ರ₁ + ಗತಿ]

**ಚಕ್ರಗಾಲು** (ನಾ). ಖಡ್ಗಯುದ್ಧದಲ್ಲಿ ಒಂದು ಭಂಗಿ: ಪಾದಗಳಿಂದ ಯೆದೆ ಯಲ್ಲಿ ಚಕ್ರಾಕಾರದಿಂದ ಪ್ರತ್ಯೇಕವಾಗಿ ತಾಡನವು ಆವುದು ಉಂಟು ಅದು ಚಕ್ರಗಾಲು (ಖಡ್ಗಟೀ. ೪-೩೧) ; ಸಮಪಾದದಿಂದ ಕುಳಿತುಕೊಂಡು ಯೇಳು ವಾಗ ಎಡದ ಪಾದದ ಪಾರ್ಶ್ವಉ ಬಲದ ಅಂಗ್ಯೆಯೊಡನೆ ಕೂಡಿಸುವದು ವಿಪರ್ಯಾಸದಿಂದ ಕೂಡಿಸುವುದಾದರೆ ಅದು ಚಕ್ರಗಾಲುಯೆಂಬುದು (ಖಡ್ಗಟೀ. ೪-೫೬). [ಚಕ್ರ₁ + ಕಾಲು₁ (<ಕಾಲ್₁)]

**ಚಕ್ರಗುತ್ತಿ, ಸಕ್ಕರೆಗಂತ್ತಿ, ಸಕ್ಕರೆಗುತ್ತು** (ನಾ). ಬಾಯಿ ಕಟ್ಟಿರಂವ ಮೂಟೆಯನ್ನು ಚುಚ್ಚಿ ಧಾನ್ಯಗಳನು (ಪರೀಕ್ಷಾರ್ಥವಾಗಿ) ಹೊರ ತೆಗೆಯುಂವ ಸಾಧನ : ಚಕ್ರಗುತ್ತಿಯಿಂದ ಸ್ವಲ್ಪಬೇಳೆ ತೆಗೆ (ರೂಢಿ). **ಸಕ್ಕರೆಗುತ್ತಿ**: ಸಕ್ಕರೆಗುತ್ತಿಯಿಂದ ಚೀಲದ ಧಾನ್ಯವನ್ನು ಪರೀಕ್ಷಿಸು (ರೂಢಿ). **ಸಕ್ಕರೆಗುತ್ತು** : ಕಾಳಿನ ಮೂಟೆಗೆ ಹಾಕುವ ಸಕ್ಕರೆ ಗುತ್ತನ್ನು ಆ ಡಾಕ್ಟರ ಮೈಯಲ್ಲಿ ಎಲ್ಲಿ ತಿ ವಿ ದ ರೂ ಒಂದು ಮೂ ಳೆ ಯೂ ಸಿಗಲಿಕ್ಕಿಲ್ಲ ! (ಹುಚ್ಚುಹು. ೩೩). [?]

**ಚಕ್ರಗೋಷ್ಠಿ** (ನಾ). ಬೇರೆಬೇರೆ ದೇಶದ ರಾಯಭಾರಿಗಳು ಅಥವಾ ಮುಖಂಡರು ಒಂದೆಡೆ ಸೇರಿ ನಡೆಯಿಸುವ ಚರ್ಚೆ; ದುಂಡುಮೇಜಿನ ಪರಿಷತ್ತು : ಚಕ್ರಗೋಷ್ಠಿಗಳು, ರಾಯಭಾರಿ ಸಭೆಗಳು . . . ಫಲಕಾರಿ ಯಾಗಲಿಲ್ಲ (ಭಾರದ. ೩೬೪) ; ೧೯೩೦-೩೨ರ ಚಕ್ರಗೋಷ್ಠಿ ಬ್ರಿಟಿಷರು ಹೂಡಿದ ಒಂದು ಕಪಟನಾಟಕವೆನ್ನಬಹುದು (ಎಚ್ಚಸಾ. ೧೧).

[ಚಕ್ರ₁ + ಗೋಷ್ಠಿ]

**ಚಕ್ರತೀರ್ಥ** (ನಾ). ಸುಳಿಗಳಿರುವ ತೀರ್ಥ; ಆವರ್ತಗಳಿಂದ ಕೂಡಿದ ಜಲಾಶಯ : ಬಗೆಬಗೆಯ ಬಯಕೆಗಳ ಚಕ್ರತೀರ್ಥವಾದ ಈ ಸಂಸಾರದಲ್ಲಿ ಸಿಲುಕಿದ ನಮ್ಮ ಸ್ಥಿತಿಯೂ ಹಾಗೆಯೇ ಆಗಿದೆ (ಬೆತಂಬಾ. ೩೩).

[ಚಕ್ರ₁ + ತೀರ್ಥ]

**ಚಕ್ರದಂಡ** (ನಾ). ತಿರುಗಿಸುತ್ತಿರುವ ದೊಣ್ಣೆ,-ಕೋಲು (?): ಕುಱು ವಿಡಿದು ಕಂಡಿಹೆನೆಂದಡೆ ಪುಣ್ಯವ ಮಾಡಬೇಕೆಂಬರು ಅಱಿದು ಕಂಡಿಹೆ ನೆಂದಡೆ ಕಾಯದ ಕರಣಂಗಳ ಬಿಡಬೇಕೆಂಬರು ಕೆಟ್ಟೆನಯ್ಯಾ ಚಕ್ರದಂಡದಲ್ಲಿ ಸಿಕ್ಕಿದ ಮರ್ಕಟನಂತೆ (ಮೋಳಿಮಾ. ೨೫-೧೦೨). [ಚಕ್ರ₁ + ದಂಡ]

**ಚಕ್ರದೃಶ್ಯ** (ನಾ). "ಪ್ರಕೃತಿದೃಶ್ಯ, ಮೊ.ಗಳ ಚಿತ್ರವು ವಿಸ್ತಾರವಾದ ಒಂದು ವರ್ತುಲನಾಳಿಯಾಕಾರದ ಅಂತಃಪ್ರದೇಶದಲ್ಲಿ ಅಳವಡಿಸಿ ರುವುದನ್ನು ಪ್ರೇಕ್ಷಕನು ಒಳಗಡೆ ಮಧ್ಯದಲ್ಲಿ ನಿಂತು ನೋಡುವ ದೃಶ್ಯ" (Cyclorama. ಇಂಕನಿ). [ಚಕ್ರ₁ + ದೃಶ್ಯ]

**ಚಕ್ರಧರ** (ನಾ). ೧. ಚಕ್ರವನ್ನು ಧರಿಸಿದವನು ; ವಿಷ್ಣು: ಚಕ್ರಧರನಾಂತ ಧರಣೀಚಕ್ರದ ಪಿರಿದಪ್ಪ ಭರಮನಾರಾಂಪರೊ (ಬಂಹರಿ. ೧೪-೧೦) ; ತಡ ವರಿಸದೆಲೆ ಚಕ್ರಧರ . . . ಪೊಱಮಟ್ಟು ಬಾರಾ (ಬಸವು. ೫೩-೬೩) ; ಸರ್ವೇಶ್ವರಂ . . . ಚಕ್ರಮಂ ಹರಿಗೆ ಕರುಣಿಸಲಾಗಿ ಚಕ್ರಧರನೆಂಬ ಪೆಸರು ಸಂದುದು (ವೀಶ್ಮಪು. ೨-೧೩-೬) ; ನಕ್ರಹರನು ಬಂದ ಚಕ್ರಧರನು ಬಂದ (ಪುರಂದ. ೧-೪೮-೪). ೨. ಸಾಮ್ರಾಟ ; **ಚಕ್ರವರ್ತಿ** : ಚಕ್ರಧರನಧರಕಿಸ ಲಯದ ಮೇಲೆ ದಂತಕಾಂತಿ ಲತಾಂತಪ್ರಭೆಗಳ್ ಪಸರಿಸೆ (ಆದಿಪು. ೪-೨೬ ವ): ದಾರಿದ್ರ್ಯದ ಮಾತಿಲ್ಲೆಲ್ಲಿಯುಂ ಬಾಱಿಸಿಗಮುಖಿಳ ಧರಾಚಕ್ರದೊಳ್ ತಾನೆ ನಿಪ್ಪಗ್ಗದ ಮಾತಂ ಮಾಡಿದಂ ಚಕ್ರಧರಂ (ಚಂದ್ರಪು. ೬-೧೦೩). ೩. ಚಕ್ರ ವಾಕ ; ರಥಾಂಗ : "ಚಕ್ರವಾಕಃ, ಚಕ್ರಧರಃ-ಈ ಯೆರಡುಂ ಚಕ್ರವಾಕ ಪಕ್ಷಿ" (ಒಷಧಿ. ೫೫). ೪. ಆದಿಶೇಷ. 'ಚಕ್ರಧರತಲ್ಪ' ಪರಾ. [ಸಂ.]

**ಚಕ್ರಧರತಲ್ಪ** (ನಾ). ವಿಷ್ಣುವಿಗೆ ಹಾಸಿಗೆಯಾದುದು ; ಆದಿಶೇಷ : ಚಕ್ರಧರತಲ್ಪರಾಜ ವಿರಾಜಿತಾಭರಣ . . . ಸಂಗಮೇಶ ರಕ್ಷಿಪುದೆನ್ನನು (ಪ್ರೌಢರಾ. ೮-೧). [ಚಕ್ರಧರ + ತಲ್ಪ]

**ಚಕ್ರಧರತ್ವ** (ನಾ). ಚಕ್ರವನ್ನು ಧರಿಸಿರುವಿಕೆ: ಚಕ್ರಧರತ್ವಮಂದು ಸಫಲಂ . . . ಆ ವಿಕ್ರಮ ಸಾಲ್ವನಂ ತವಿಸಿದಂದು (ಜಗವಿ. ೧-೬೩). [ಸಂ.]

**ಚಕ್ರಧಾರಿ** (ನಾ).೧. ಚಕ್ರವನ್ನು ಹಿಡಿದವನು; ವಿಷ್ಣು. ೨. ಸುಳಿ ಅಥವಾ ಆವರ್ತ ಉಳ್ಳದು. ೧, ೨: ವಿಷ ಚಕ್ರಧಾರಿ ಪೆಂಪಿನ ಭುಜಗೇಂದ್ರ ಮಾಪತಿಗಳಂತೆ . . . ಸರಸಿ ರಾಜಿಕುಮುನ್ನತ ನಿರ್ಮಳಾಕರಂ (ಹಮ್ಮೀರ. ೪-೧೯). '[ಸಂ. ಚಕ್ರಧಾರಿನ್]

**ಚಕ್ರಧಾರೆ** (ನಾ). ಚಕ್ರದ ಅಂಚು ; ಗಾಲಿಯ ಸುತ್ತು,- ಪಟ್ಟಿ : "ಚಕ್ರ ಧಾರಾ, ಪ್ರಧೀಃ, ನೇಮಿಃ - ಈ ೩ ನೆತ್ತಿಪಟ್ಟಿಗೆ" (ಹಲಾಯು. ೭೩-೨೯೩).

[ಚಕ್ರ₁ + ಧಾರೆ]

**ಚಕ್ರನಾಥ** (ನಾ). ಭೂಮಂಡಲದ ಒಡೆಯ ; ಚಕ್ರವರ್ತಿ : ಮೆಱೆದಂ ಭಕ್ತಿಯಂ ಚಕ್ರನಾಥಂ (ಆದಿಪು. ೧೭-೨). [ ಚಕ್ರ$_1$ + ನಾಥ ]

**ಚಕ್ರನಾಭಿ** (ನಾ). ಬಂಡಿ ಅಥವಾ ರಥದ ಗಾಲಿಯ ನಡುವಿನ ಗಡ್ಡೆ ; ಗುಂಭ : "ಅಚ್ಚನ್ನೂ ಅರೆಕಾಲುಗಳನ್ನೂ ಹಿಡಿದುಕೊಂಡಿರುವ ಚಕ್ರದ ಮಧ್ಯಭಾಗ : ಗುಂಬ ; ಚಕ್ರನಾಭಿ " (Nave ಇಂಕನಿ). [ಚಕ್ರ$_1$+ನಾಭಿ]

**ಚಕ್ರನೇಮಿ** (ನಾ).=ಚಕ್ರಧಾರೆ ೧ : ಚಟುಳಿತ ಚಕ್ರನೇಮಿ ಪರಿವರ್ತನ ಘಟ್ಟನಘಾತ ನಿರ್ಘರ ಸ್ಫುಟಿತ ಧರಾತಳಂ ವಿಜಯನುಗ್ರರಥಂ ಪರಿದತ್ತು ದಲ್ . . . ಸಂಗರರಂಗಭೂಮಿಯೊಳ್ (ಪಂಪಭಾ. ೧೧-೧೯೭) ; ಚಕ್ರನೇಮಿ ವೃತ್ತಿಯ ಈ ಜಗತ್ತು ಇದ್ದಹಾಗೆ ಇರತಕ್ಕದ್ದಲ್ಲ – ಸದಾ ಭ್ರಮಣಶೀಲ (ಎಮುಕ. III, ಮುನ್ನುಡಿ). [ ಚಕ್ರ$_1$ + ನೇಮಿ ]

**ಚಕ್ರಪಕ್ಷಿ** (ನಾ). ಚಕ್ರವಾಕ ; ರಥಾಂಗ: " ಚಕ್ರಪಕ್ಷಿ – ಚಕ್ಕವಕ್ಕಿ" (ಶಮದ. ೨೬೧ ಪ್ರಯೋ). [ ಚಕ್ರ$_1$ + ಪಕ್ಷಿ ]

**ಚಕ್ರಪರಿವರ್ತನ** (ನಾ). [ಜೈನ] ದ್ರವ್ಯಕ್ಷೇತ್ರ, ಕಾಲ, ಭವ, ಭಾವ ಪರಿವರ್ತನೆಗಳಿಗೆ ಮತ್ತೆಮತ್ತೆ ಈಡಾಗುವಿಕೆ; ಮತ್ತೆಮತ್ತೆ ಹುಟ್ಟುವಿಕೆ : ಮುನ್ನಮೆ ಕೈಕೊಂಡ ದ್ರವ್ಯಕ್ಷೇತ್ರಕಾಲಭವಭಾವಂಗಳೊಳ್ ಮಱೆದಪ್ಪೊಡಂ ಪರಿವರ್ತಿಸದೆ ಬೇಱೆವೇಱೆ ಪರಿವಡಿದಪ್ಪದೆ ಪುಟ್ಟುವುದು ಚಕ್ರಪರಿವರ್ತನಮೆಂಬುದು (ಸುಕುಮಾ. ೬-೬ ವ). [ಚಕ್ರ$_1$ + ಪರಿವರ್ತನ ]

**ಚಕ್ರಪಾಣಿ** (ನಾ). ಕೈಯಲ್ಲಿ ಚಕ್ರವನ್ನು ಹಿಡಿದಿರುವವನು ; ವಿಷ್ಣು. [ ಚಕ್ರ$_1$ + ಪಾಣಿ$_2$ ]

**ಚಕ್ರಪೂಜೆ** (ನಾ). [ಜೈನ] ಚಕ್ರರತ್ನದ ಪೂಜೆ,– ಆರಾಧನೆ : ಬೞಿಯಂ ಚಕ್ರಪೂಜೆಯಂ ಮಾಡಿ (ಶಾಂತಿಪು. ೮-೬೫ ವ). [ ಚಕ್ರ$_1$ + ಪೂಜೆ$_2$ ]

**ಚಕ್ರಬಂಧ** (ನಾ). ೧. ಒಂದು ಬಗೆಯ ಸ್ಪರ್ಧೆ ; ಅನೇಕ ಮನೆಗಳಿರುವ ಒಂದು ಆಕೃತಿಯ ಒಂದೊಂದು ಖಾನೆಯಲ್ಲಿಯೂ ಒಂದೊಂದು ಅಕ್ಷರವನ್ನು ಸೇರಿಸಿ ನಿರ್ದಿಷ್ಟವಾದ ಅರ್ಥ ಬರುವಂತೆ ಶಬ್ದಗಳನ್ನು ರಚಿಸುವಿಕೆ ; ಪದರಂಗ : ಚಕ್ರಬಂಧದ ಒಗಟ, ರಾಶಿಭವಿಷ್ಯ . . . ಬಂಧಿತರ ಕೈಬಿಸಿಯಾಟ (ಅರಳು. ೪೨೫-೨೨); ಚಕ್ರಬಂಧಸ್ಪರ್ಧೆಗೆ ಪ್ರವೇಶಿಸಿ ಹಣ ಸಂಪಾದಿಸಿದರಾಯ್ತು (ನಿಶಉ. ೧೨೯). ೨. [ಕಾವ್ಯಮೀ] ಒಂದು ಬಗೆಯ ಚಿತ್ರಕಾವ್ಯ ; ಚಕ್ರದ ಆಕೃತಿಯಲ್ಲಿ ಪದ್ಯವನ್ನು ರಚಿಸುವಿಕೆ : 'ಚಕ್ರಬಂಧ', 'ಮುರಜಬಂಧ' ಮುಂತಾದ ಚಿತ್ರಬಂಧಗಳು (ಧ್ವನ್ಯಾಲೋ. ೬೭ ಅಡಿಟ). ೩. [ಸಂಗೀತ] ವೀಣೆಯನ್ನು ನುಡಿಸುವ ಒಂದು ರೀತಿ : ವೆಂಕಟರಮಣದಾಸರು, ಚಕ್ರಬಂಧವನ್ನು ನುಡಿಸುತ್ತಿರುವಾಗ ಅವರ ಬೆರಳುಗಳು . . . ಆಡುವುದನ್ನು ನೋಡುವುದೇ ಒಂದು ಸೊಗಸಾದ ದೃಶ್ಯ (ಸಂಗೀತ. ೬೯). [ ಚಕ್ರ$_1$ + ಬಂಧ ]

**ಚಕ್ರಬಡ್ಡಿ** (ನಾ). ಬಡ್ಡಿಯ ಮೇಲೆ ಬಡ್ಡಿ : ಸರಳಬಡ್ಡಿ, ಚಕ್ರಬಡ್ಡಿಗಳನ್ನು ತೆರುವುದರಲ್ಲೇ ಅವರ ಹಣ ಬಿದ್ದುಹೋಗಿತ್ತು (ಹೇಮಕೂ. ೩೪); ಅವನು ಮೋಹನನಿಗೆ ಕೊಟ್ಟಿದ್ದ ಕಿರುಕುಳಗಳನ್ನು ಅಂದು ಅವನಿಗೆ ಪವಿತ್ರಪುರದ ಜನರು ಚಕ್ರಬಡ್ಡಿ ಸಮೇತ ಹಿಂತಿರುಗಿ ಕೊಟ್ಟಿದ್ದರು (ಪಂಜಹಂ. ೨೨೮) ; ಚಕ್ರಬಡ್ಡಿ, ಚಾಲ್ತಿಬಡ್ಡಿಗೆಂದು ಕೊಟ್ಟು ಕೊಟ್ಟು . . . "ಪ್ರಾಂಸರಿ ನೋಟು " ಬರೆಯಿಸಿಕೊಳ್ಳುತ್ತಿದ್ದರು (ಮೂಲಾನ. ೧೮೫). [ ಚಕ್ರ$_1$ + ಬಡ್ಡಿ$_2$ ]

**ಚಕ್ರಬಾಣ** (ನಾ). ಚಕ್ರಾಕಾರವಾಗಿ ಸುತ್ತುವ ಒಂದು ಬಗೆಯ ಸುಡುಮದ್ದು : " ಚಕ್ರಬಾಣ; ಸುತ್ತುವ ಚಕ್ರದಿಂದ ಹಾರಿಸುವ ಆಕಾಶಬಾಣ" (Girandole. ಇಂಕನಿ). [ ಚಕ್ರ$_1$ + ಬಾಣ$_2$ ]

**ಚಕ್ರಬಿಂಬ** (ನಾ).=ಚಕ್ರವ್ಯೂಹ ೧ : ಚಕ್ರಬಿಂಬದಿ ಘನಪರಾಕ್ರಮಿಯಾದ . . . ಅಭಿಮನ್ಯುಪನು ರಣದಿ . . . ಕೊಂದರೈ (ತಿಮ್ಮಸ್ವೀ. ೦-೫೭). [ ಚಕ್ರ$_1$ + ಬಿಂಬ ]

**ಚಕ್ರಭೃತ್ಕುಲ** (ನಾ). ಚಕ್ರವರ್ತಿಕುಲ,–ವಂಶ: ಜಗಜ್ಜನಮತಿಮುಗ್ಧಬಾಳ ನರಪಾಳಕಮಾದುದು ಚಕ್ರಭೃತ್ಕುಲಂ (ಆದಿಪು. ೪-೮೨). [ ಸಂ. (ಚಕ್ರಭೃತ್ + ಕುಲ) ]

**ಚಕ್ರಭೃತ್ತು** (ನಾ). ೧. ಚಕ್ರವನ್ನು ಹಿಡಿದಿರುವವನು : ವಿಷ್ಣು : " ಚಕ್ರಭೃದ್ದೋವಿಂದಂ ಹರಿ ಶೌರಿ . . . ಸುಪರ್ಣಧ್ವಜಂ" (ವಸ್ತುಕೋ. ೪-೨೨). ೨. ಭೂಮಂಡಲವನ್ನು ಆಳುವವನು ; ಚಕ್ರವರ್ತಿ. 'ಚಕ್ರಭೃತ್ಕುಲ' ಪರಾ. [ ಸಂ. ಚಕ್ರಭೃತ್ ]

**ಚಕ್ರಭೃತ್ತ್ವ** (ನಾ). ೧. ಚಕ್ರವನ್ನು ಧರಿಸಿರುವಿಕೆ. ೨. ಚಕ್ರವಾಕಪಕ್ಷಿಯನ್ನು ಪೋಷಿಸುವಿಕೆ. ೩. ಭೂಮಂಡಲವನ್ನು ಪಾಲಿಸುವಿಕೆ. ೨, ೩: ಎನಗಂ ಭೂಪತಿಗಂ ಸಮಾನಮೆ ಕರವ್ಯಾಪ್ತಾಖಿಲಾಶತ್ವಮತ್ಯನುರಕ್ತಪ್ರಕೃತಿತ್ವಮಭ್ಯುದಯವತ್ವಂ ಚಕ್ರಭೃತ್ತ್ವಂ ದಲೆಂದಿನಂ . . . ಅಪರಪಾರಾವಾರಮಂ ಪೊರ್ದಿದಂ (ಚಂದ್ರಪು. ೮-೨). [ ಸಂ. ]

**ಚಕ್ರಮಂಡಲ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; ಚಕ್ರದಂತೆ ತಿರುಗುತ್ತ ಮಾಡುವ ನೃತ್ಯ: ಸ್ಥಿತವೆಂಬ ಚಾರಿಯಂ ಪದಗತಿಯಿಂದಂ ಮಾಡಿ ಡೋಲಹಸ್ತಮಪ್ಪಾಗಲ್ ಸತಿ ಕೇಳ್ ಚಕ್ರದವೊಲ್ ಮೇಣತಿಶಯದಿಂ ತಿರುಗೆ ಚಕ್ರಮಂಡಲಕರಣಂ (ಲಾಸ್ಯರಂ. ೪-೧೧೩). [ ಚಕ್ರ$_1$ + ಮಂಡಲ ]

**ಚಕ್ರಮಂಡಿಗಾಲು** (ನಾ). ಖಡ್ಗಯುದ್ಧದಲ್ಲಿ ಒಂದು ಭಂಗಿ : ಮೊದಲ ಪ್ರಕಾರದಿಂದ ಯಿದ್ದವನಾಗಿ ಮೊಳಕಾಲ್ಗಳ ಹೊರಕಡೆಯ ಪಾರ್ಶ್ವ ಪ್ರದೇಶದ ಭೂಮಿಯ ಮುಟ್ಟುವದೂ ಬೀಳುವ ಹಾಗೆ ಆವದುಂಟೊ ಅದು ಚಕ್ರಮಂಡಿಗಾಲುಯೆಂಬುದು (ಖಡ್ಗಟೀ. ೪-೬೩). [ ಚಕ್ರ$_1$ + ಮಂಡಿ$_1$ + ಕಾಲು$_1$ (<ಕಾಲ್$_1$) ]

**ಚಕ್ರಮಟ್ಟ** (ನಾ). ಚಕ್ರಸದೃಶ ; ವರ್ತುಲಾಕಾರ (?) : ಪದ್ಮಾಸನ :– ಇದರಲ್ಲಿ ಪ್ರತಿಮೆಯು ಚಕ್ರಮಟ್ಟವಾಗಿ ಕುಳಿತಿರುವಂತೆ ಕೆತ್ತಲ್ಪಟ್ಟಿರುತ್ತದೆ (ಭಾರದ. ೫೦೫). [ ಚಕ್ರ$_1$ + ಮಟ್ಟ$_1$ ]

**ಚಕ್ರಮರ್ದ** (ನಾ). ಒಂದು ಬಗೆಯ ಗಿಡ ; ಚಗಚೆ : " ಕರವಸಂ ಚಕ್ರಮರ್ದಂ ಚಗಚೆಯಕ್ಕುಂ " (ಮುಂಗರಾ. ೩೯-೨೭). [ ಸಂ. ]

**ಚಕ್ರಮರ್ದಕ** (ನಾ). =ಚಕ್ರಮರ್ದ. [ ಸಂ. ]

**ಚಕ್ರಮರ್ದನ** (ನಾ).=ಚಕ್ರಮರ್ದ: "ಏಡಗಜಃ, ಪ್ರಪುನಾಟಃ, ದದ್ರುಘ್ನಃ, ಚಕ್ರಮರ್ದನಃ–ಈ ೪ ತಗ(ಚೆ)ಟೆ" (ಹಲಾಯು. ೧೧೧-೯೬೫). [ ಸಂ. ]

**ಚಕ್ರಮಾರುತ** (ನಾ). ಸುಂಟರಗಾಳಿ ; ಆವರ್ತಮಾರುತ : ಸಮುದ್ರದಲ್ಲಿ ಚಕ್ರ(ಆವರ್ತ)ಮಾರುತ (Cyclones)ಗಳಿಗೆ ಹೆದರುವಂತೆಯೇ ಮರಳು ಕಾಡುಗಳಲ್ಲಿ ಧೂಳಿಮಾರುತ(Dust storms)ಗಳಿಗೆ ಬಹಳ ಹೆದರಬೇಕು (ಭೂವಿವ. ೨೫೯). [ ಚಕ್ರ$_1$ + ಮಾರುತ ]

**ಚಕ್ರಮಿಥುನ** (ನಾ).ಚಕ್ರವಾಕ ದಂಪತಿ : ನೆನೆಯಿಸಿದತ್ತು ಮಿಥುನಂ ದಿನಮುಖಮಂ ಕಂಡ ಚಕ್ರಮಿಥುನಾಕೃತಿಯಂ (ಮಲ್ಲಿಪು. ೧೩-೩೦). [ ಚಕ್ರ$_1$ + ಮಿಥುನ ]

**ಚಕ್ರಮುದ್ರೆ** (ನಾ). ೧. ಮಂತ್ರಶಾಸ್ತ್ರದಲ್ಲಿ ಹೇಳಿರುವ ಚಕ್ರದ ಆಕೃತಿಯುಳ್ಳ ಮುದ್ರೆ; ವಿಶೇಷವಾಗಿ ಮಾಧ್ವರು ಇಟ್ಟುಕೊಳ್ಳುವ ಮುದ್ರೆಗಳಲ್ಲಿ ಒಂದು : ಚಕ್ರಮುದ್ರೆಯಲ್ಲಿ ಹಿಂಕಾರನಾಮದಿಂದಲೂ . . . ಇರುವನು (ಹಸಾರ. ೮-೨೮ ತಾತ್ಪರ್ಯ). ೨. ಮಂತ್ರಶಾಸ್ತ್ರಪ್ರಸಿದ್ಧವಾದ ಒಂದು ಬಗೆಯ ಹಸ್ತಮುದ್ರೆ : ಚಕ್ರಮುದ್ರೆ . . . ಸಂಹಾರಮುದ್ರೆಯೆಂಬಾದಿಯಾಗಿ ಸಕಲಮುದ್ರೋಪಮುದ್ರಾಬಂಧಲಕ್ಷಣಗಳಂ ಗುರುಮುಖದಿಂದಱಿತು (ವಿವೇಕ. ೧೦೩). 'ಶಂಖಮುದ್ರೆ' ಪರಾ. [ ಚಕ್ರ$_1$ + ಮುದ್ರೆ ]

**ಚಕ್ರಯಾನ** (ನಾ). ಗಾಲಿಗಳುಳ್ಳ ವಾಹನ. [ ಚಕ್ರ$_1$ + ಯಾನ ]

**ಚಕ್ರಯುಗ** (ನಾ).=ಚಕ್ರಮಿಥುನ: "ತರು ಖರ್ಜೂರ ವನಾಶ್ವ ಚಕ್ರಯುಗ ಭೇಕಂ ಶ್ರೇಷ್ಠಮುಂ ಕೋಕವಮಕ್ಕು" (ನಾನಾರ. ೧೨೯).
[ ಚಕ್ರ$_1$ + ಯುಗ ]

**ಚಕ್ರಯೋಗ** (ನಾ). [ಜ್ಯೋತಿ] ಆಕೃತಿಯೋಗಗಳಲ್ಲಿ ಒಂದು ; ಜನನ ಲಗ್ನದಿಂದ ಪ್ರಾರಂಭಿಸಿ ಒಂದು ಬಿಟ್ಟು ಒಂದು (ವಿಕಾಂತರ) ರಾಶಿಗಳಲ್ಲಿ ಏಳುಗ್ರಹಗಳು ಇರುವುದು : ೧, ೩, ೫, ೭, ೯, ೧೧ ಈ ಆರು ಸ್ಥಾನಗಳಲ್ಲಿ ಏಳುಗ್ರಹಗಳೂ ಇದ್ದರೆ ಚಕ್ರಯೋಗ (ಜಾತತಿ. ೧೩-೪ ಅಡಿಟ).
[ ಚಕ್ರ$_1$ + ಯೋಗ ]

**ಚಕ್ರರಕ್ಷಕ** (ನಾ). ಸೇನೆಯ ರಕ್ಷಕ: ಅವನ ಹಿಂದೆ ಅವನ ಚಕ್ರರಕ್ಷಕರಾದ ಯುಧಾಮನ್ಯು ಉತ್ತಮೌಜರೂ ನುಗ್ಗಿದರು (ವಚಭಾ. ೨೮೭).
[ ಚಕ್ರ$_1$ + ರಕ್ಷಕ ]

**ಚಕ್ರರತ್ನ** (ನಾ). [ಜೈನ] ಚಕ್ರವರ್ತಿಯಾಗುವವನ ಆಯುಧಾಗಾರದಲ್ಲಿ ಹುಟ್ಟುವ ಚಕ್ರಾಯುಧ: ಈ ರಾಜ್ಯಾಶ್ರಮಮುನಿಯ ಆಯುಧಾಗಾರದೊಳ್ ಚಕ್ರರತ್ನಂ ಪುಟ್ಟಿತ್ತು (ಆದಿಪು. ೬-೨೪ ವ). [ ಚಕ್ರ$_1$ + ರತ್ನ ]

**ಚಕ್ರಲಾಭ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು ; ಚಕ್ರರತ್ನವು ದೊರೆಯುವುದು: ಚಕ್ರಲಾಭ ದಿಗ್ವಿಜಯ ಚಕ್ರಾಭಿಷೇಕ . . . ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ) ; ೧೪ ರತ್ನಗಳಿಗೂ ೯ ನಿಧಿಗಳಿಗೂ ಒಡೆಯನಾಗಿ ಸಕಲರಿಂ ಅಭಿಷಿಕ್ತನಾಗಿ ಅಧಿರಾಜನೆಂಬ ಹೆಸರಂ ಪಡೆಯುವುದೇ ಚಕ್ರಲಾಭವೆಂಬ ೪೪ನೆ ಕರ್ಮವು (ಪುರುಚ. ೨೦೩). [ ಚಕ್ರ$_1$ + ಲಾಭ ]

**ಚಕ್ರಲಿಪಿ** (ನಾ). ಒಂದು ಬಗೆಯ ಲಿಪಿ: ಬಿಂದುಲಿಪಿ, ಚಕ್ರಲಿಪಿ, ಲೇಖಲಿಪಿಯಾ ಅಗಣಿತ ಲಿಪಿಗಳನೋದಲರಿಯದೆ ಬಿಜ್ಜಳರಾಯನ ಸಭೆಯೊಳ್ ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲ (ಭಾಸ್ಕರ. ೭೭-೫).
[ ಚಕ್ರ$_1$ + ಲಿಪಿ ]

**ಚಕ್ರಲೆ** (ನಾ). ಒಂದು ಬಗೆಯ ಸುವಾಸನೆಯ ಹುಲ್ಲು : "ಚೂಡಾಲಾ, ಚಕ್ರಲಾ, ಉಚ್ಚಟಾ – ೩ ಒಂದು ಗಡ್ಡೆವಳಗೆ ಅನೇಕ ಮೋತೆಗಳುಳ್ಳ ಗಂಟುಮುಸ್ತಗಳು" (ಸಿದ್ಧಾಂತಿ. ೧೩೧). [ ಸಂ. ಚಕ್ರಲಾ ]

**ಚಕ್ರವರಿಸೆ** (ನಾ). ೧. ಖಡ್ಗಯುದ್ಧದಲ್ಲಿ ಒಂದು ಬಗೆಯ ವರಸೆ: "ಒಂದು ತೆರದ ಕತ್ತಿಯ ವರಿಸೆ; ಚಕ್ರವರಿಸೆ" (Counter. ಇಂಕನಿ). ೨. ಅಂಗಸಾಧನೆಯಲ್ಲಿ ಒಂದು ಪ್ರಕಾರ: "(ಅಂಗಸಾಧನೆಯಲ್ಲಿ) ಚಕ್ರವರಿಸೆ" (Circle. ಇಂಕನಿ). [ ಚಕ್ರ$_1$ + ವರಿಸೆ ]

**ಚಕ್ರವರ್ತ** (ನಾ). ಒಂದು ಬಗೆಯ ಸೊಪ್ಪು : ಹುರುಳಿ, ಚಕ್ರವರ್ತದ ಸೊಪ್ಪು . . . ಅಂತ್ರವೃದ್ಧಿಗಳಿಗೆ ಪಥ್ಯ (ವೈದ್ಯಸಾ. I, ೩೩೦) ; ಚಕ್ರವರ್ತದ ಸೊಪ್ಪು, ಚಿಲಿಕೀರೆ ಸೊಪ್ಪು ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕವ್ಯ. ೧೦೨). [ <ಸಂ. ಚಕ್ರವರ್ತಿನ್ ? ]

**ಚಕ್ರವರ್ತನ** (ನಾ). ೧. ತಿಗುರಿಯ ಮೂಲಕ ಮಾಡುವ ಜೀವನ; ಕುಂಬಾರನ ವೃತ್ತಿ. ೨. ಸುದರ್ಶನಚಕ್ರವನ್ನು ಹೊಂದಿರುವವನು ; ವಿಷ್ಣು. ೩. ಭೂಮಂಡಲವನ್ನು ಆಳುವವನು; ಅರಸ. ೪. ಉತ್ತಮನಾದವನು ; ಪೂಜ್ಯನಾದವನು : "ಉತ್ತಮ ಕೃಷ್ಣಂ ನೃಪ ಕುಲಾಲ ಕ್ರಮದೊಳ್ ನಾಲ್ಕಾಮ ಚಕ್ರವರ್ತನಮೆನಿಕುಂ" (ನಾನಾಕಂ. ೧೫೭).
[ ಚಕ್ರ$_1$ + ವರ್ತನ ]

**ಚಕ್ರವರ್ತಿ** (ನಾ). ೧. ಕುಂಬಾರ ; ಕುಲಾಲ. ೨. ವಿಷ್ಣು ; ಕೃಷ್ಣ. ೩. ಭೂಮಂಡಲವನ್ನು ಆಳುವವನು ; ಸಾಮ್ರಾಟ ; ಸಾರ್ವಭೌಮ : "ಭುವನೈಕವಲ್ಲಭಂ ಚಕ್ರವರ್ತಿ" (ವಸ್ತುಕೋ. ೫೯-೪೭) ; "ಚಕ್ರವರ್ತೀ, ಸಾರ್ವಭೌಮಃ – ಈ ೨ ಚಕ್ರವರ್ತಿ" (ಹಲಾಯು. ೭೦-೨೭೪) : ನಿಯಮದೊಳಿರ್ದ ಭರತೇಶ್ವರ ಚಕ್ರವರ್ತಿಯಿರವನಱಿದು (ಆದಿಪು. ೧೫-೧೧ ವ) ; ಜಾರ್ ಚಕ್ರವರ್ತಿಗೂ ಅವನು ಗೊತ್ತು (ಮುಲನಾ. ೬೪). ೪. ಸಮಾಜದಲ್ಲಿ ಪ್ರಮುಖನಾದ ವ್ಯಕ್ತಿ ; ಪೂಜ್ಯವ್ಯಕ್ತಿ. ೫. = ಚಕ್ಕವತ್ತಿ : ಪ್ರತಿನಿತ್ಯವು ಪರಮಶಿವನಿಗೆ ಉತ್ತಮವ್ರೀಹಿಯ ಅಕ್ಕಿಯನ್ನು, ಚಕ್ರವರ್ತಿ ಸೊಪ್ಪನ್ನು ಪರಮಶಿವನಿಗೆ ಸಮರ್ಪಿಸುತ್ತಿದ್ದರು (ಪುರಾವಿ. ೯೪). ೬. [ಯೋಗ] ಮುಂಕ್ತಿಯೋಗ್ಯರಲ್ಲಿ ಒಂದು ವರ್ಗ : ಮುಂಕ್ತಿಯೋಗ್ಯರಲ್ಲಿ ದೇವ, ಮನುಷ್ಯ, ಪಿತೃ, ಚಕ್ರವರ್ತಿ, ಮನುಷ್ಯೋತ್ತಮ ಎಂದು ಐದು ವಿಧಗಳು. ಇವರು ನಿತ್ಯಜ್ಞಾನಾನಂದಸ್ವರೂಪಯೋಗ್ಯತೆಯುಳ್ಳವರು (ಹಿಂದಸಾ. ೨೮೬) ; "ಶೌರಿಯೊಳು ವಾಸ್ತುಕದೊಳವನೀಶನೊಳು ಕುಂಭಕಾರನೊಳು ಚಕ್ರವರ್ತಿಯೆನಿಕ್ಕು" (ಮಂಗರಾ. ೧೫೧-೫೨) ; "ಕುಲಾಲಾವನೀಶಂ ಮಾನ್ಯಂ ನಾರಾಯಣಂ ವಾಸ್ತುಕಮಿವಿನಿತು ಚಕ್ರವರ್ತ್ಯಭಿಧಾನಂ" (ನಾನಾರ. ೧೪೬).
[ ಸಂ. ಚಕ್ರವರ್ತಿನ್ ]

**ಚಕ್ರವರ್ತಿತ್ವ** (ನಾ). ಚಕ್ರವರ್ತಿಯಾಗಿರುವಿಕೆ; ಸಾಮ್ರಾಟನಾಗಿರುವಿಕೆ: ನಿಜಸಕಳಚಕ್ರವರ್ತಿತ್ವಕ್ಕಂದಡಿಯಿಡುವಂತೆ ನಿರಂತರಮಡಿಯಿಟ್ಟಂ (ಆದಿಪು. ೮-೪೧). [ ಸಂ. ]

**ಚಕ್ರವರ್ತಿನಿ** (ನಾ). ೧. ಚಕ್ರವರ್ತಿಯ ಹೆಂಡತಿ ; ಪಟ್ಟದ ರಾಣಿ. ೨. ಸಾಮ್ರಾಜ್ಯದ ಒಡತಿ ; ಸಾಮ್ರಾಜ್ಞಿ : ಈ ಚಕ್ರವರ್ತಿನಿಯವರು ಒಳ್ಳೆ ಪ್ರೀತಿವಂತರೂ ಪರೋಪಕಾರಿಗಳೂ ಇದ್ದಾರೆ (ಮುಂಬಯಿ. ೪-೩). ೩. ಸುವಾಸನೆಯುಳ್ಳ ಒಂದು ಬಗೆಯ ಗಿಡ; ಕೋರಿಂದೆ; "ಸಾರಣೆಗಿಡ, ಮುಳ್ಳಗೆಸೆ" (ಅಮರ. ೮೪೪) : "ಜನೀ, ಜತೂಕಾ, ಜನನೀ, ಜತುಕೃತ್, ಚಕ್ರವರ್ತಿನೀ, ಸಂಸ್ಪರ್ಶಾ – ೬ ಕೋರಿಂದೇ ಗಿಡದ ಪೆಸರು, ಚಕ್ರವರ್ತೀ ಸೊಪ್ಪು" (ಸಿದ್ಧಾಂತಿ. ೧೨೯). [ ಸಂ. ಚಕ್ರವರ್ತಿನೀ ]

**ಚಕ್ರವಲೆ** (ನಾ). ಗುಂಡಗಿರುವ ಒಂದು ಬಗೆಯ ಬಲೆ : ಹೊಸೆದಿಕ್ಕಣ್ಣವಲೆ ಚಕ್ರವಲೆ ಮಿಗೆ ಮುಕ್ಕಣ್ಣವಲೆ ಪೇರ್ವಲೆಯ ಪೊಱೆಗಳು ವಿಂಧಕನ ಕೂಡೆ (ಸ್ಕಾಳಭಾ. ೫-೧೮). [ ಚಕ್ರ$_1$ + ಬಲೆ$_1$ ]

**ಚಕ್ರವಲ್ಲಭ** (ನಾ). ಸಾಮ್ರಾಟ; ಚಕ್ರವರ್ತಿ: ಚಕ್ರವಲ್ಲಭನಾಸ್ಥಾನಮಂಟಪದೊಳ್ ದೂರಾವನತಮಣಿಮಕುಟನಾಗಿ ಕಂಡು (ಆದಿಪು. ೧೩-೪೦ ವ).
[ ಚಕ್ರ$_1$ + ವಲ್ಲಭ ]

**ಚಕ್ರವಾಕ** (ನಾ). ೧. ಒಂದು ಬಗೆಯ ಪಕ್ಷಿ ; ಬಿಸಿಲುಹಕ್ಕಿ ; ಜಕ್ಕವಕ್ಕಿ: "ಚಕ್ರಮಾ ಕೋಕಂ ರಥಾಂಗಮೆನೆ ಚಕ್ರವಾಕಂ" (ಮಂಗರಾ. ೫೦-೩). "ಎಣೆಸಲ್ ಬಿಸಿಲ್ವಕ್ಕಿ ಚಕ್ರವಾಕಮೆನಿಕ್ಕುಂ" (ಕವಿಕಂ. ೬೫) ; ಚೆಲ್ವುವೆತ್ತುದುದಯಮೆಂ[ಮಂ]ದು ಪದ್ಮಿನೀಚಕ್ರವಾಳ ಚಕ್ರವಾಕಚಕ್ರ ಚಕ್ರವರ್ತಿಯಾ (ಆದಿಪು. ೧೨-೫೫) ; ನದಿಯೊಳಗೆ ಚಕ್ರವಾಕಗಳು ಈಜುತ್ತಿರುವಂತೆಯೂ ಕಾಣಿಸಿತು (ಶ್ರೀಕಾಂತ. II, ೪). ೨. ಒಂದು ಬಗೆಯ ಕುದುರೆ : ಬಾಲಮುಮಂಗೋಪಾಂಗಂ ಕಾಲುಂ ಕರಿದಕ್ಕೆ ಪೀತರುಚಿಯುಪ್ಪೊಡಮಕ್ಕಾ ಲಲಿತ ಹಂಸರುಚಿಯಂ ಪೋಲೆ ತನುಚ್ಛಾಯೆ ಚಕ್ರವಾಕಂ ತುರಗಂ (ಅಶ್ವಶಾ. ೨-೨೫). ೩. [ಸಂಗೀತ] ಒಂದು ರಾಗದ ಹೆಸರು : ಚಕ್ರವಾಕ ೧೬ನೇ ಮೇಳಕರ್ತರಾಗ . . . ಭಕ್ತಿಕರುಣಾರಸ ಪ್ರಧಾನರಾಗ (ಸಂಗೀಶಂ. ೧೫೬) ; ಮಹಾವೈದ್ಯನಾಥ ಅಯ್ಯರ್ . . . ಚಕ್ರವಾಕರಾಗವನ್ನು ಹಾಡಿ ಮನಸ್ಸಿಗೆ ಆಹ್ಲಾದವನ್ನುಂಟುಮಾಡಿದರು (ಸಂಗೀತ. ೫). [ ಸಂ. ]

**ಚಕ್ರವಾಕಧ್ವಜ** (ನಾ). ಚಕ್ರವಾಕದ ಚಿಹ್ನೆಯನ್ನು ಧ್ವಜದಲ್ಲಿ ಉಳ್ಳವನು; ಮನ್ಮಥ: ಚಕ್ರೇಶನನುಜಾತ ನರಸುರನಾಗಭೂಚಕ್ರಮೋಹನಮೂಲಕರ್ತಾ ಚಕ್ರವಾಕಧ್ವಜತೇ ನಮೋನಮಯೆಂದು ಚಕ್ರಿಯ ಸಖನೆದ್ದು ನಿಂದ (ಭರಚ. ೪೭-೮೪). ℙ ಸಾಮಾನ್ಯವಾಗಿ ಮನ್ಮಥನು ಮಕರಧ್ವಜ.
[ ಚಕ್ರವಾಕ + ಧ್ವಜ ]

**ಚಕ್ರವಾಡ** (ನಾ). ೧. ವರ್ತುಳ; ಮಂಡಲಾಕೃತಿ. ೨. ದಿಗಂತ; ಕ್ಷಿತಿಜ. ೩. ಸಮೂಹ ; ರಾಶಿ. ೪. = ಚಕ್ರವಾಡಿಕೆ. [ ಸಂ. ]

**ಚಕ್ರವಾಡಿಕೆ** (ನಾ). ಭೂಮಿಯ ಸುತ್ತಲೂ ಇರುವುದೆಂದು ಭಾವಿಸಲಾದ ಪರ್ವತಶ್ರೇಣಿ: ಮತ್ತಮಾ ಚಕ್ರವಾಡಿಕೆಯ ಕೆಳಗಣ ತಪ್ಪಲುಗಳಲ್ಲಿ ಸಿದ್ಧರುಗಳು ಮೊದಲಾದವರುಗಳು ಇರುತ್ತಿಹರು (ದಶಟೀ. ೫೮-೨). [ಸಂ. ಚಕ್ರವಾಡಿಕಾ]

**ಚಕ್ರವಾತ** (ನಾ). = ಚಕ್ರಮಾರುತ: ಚಕ್ರವಾತ, ಸುಳಿಗಾಳಿ (Cyclone. ಪಾಠಿನಿ. ೨೬). [ಚಕ್ರ$_1$ + ವಾತ]

**ಚಕ್ರವಾಲ, ಚಕ್ರವಾಳ** (ನಾ). ೧. ವರ್ತುಳ; ಮಂಡಲಾಕೃತಿ. ೨. ದಿಗಂತ: ಕತ್ತಲಿಸಿತೊಡನೆ ಮುಂದಣ ಚಕ್ರವಾಲಂ (ಗೀವಿಂ. ೪೯-೪). ೩. ಸಮೂಹ; ಗುಂಪು: ರಾಘವಂ ಪೋಗೆ ಕಣ್ಗಂ ಬಗೆಗಮಿಂಟಿಕೆಯಾದತ್ತಾ ಸಭಾಚಕ್ರವಾಲಂ (ಪಂರಾಮಾ. ೬-೦೫೬). ೪. = ಚಕ್ರವಾಡಿಕೆ. **ಚಕ್ರವಾಳ**: ೧. ಭಾಸ್ಕರನು ಚಕ್ರವಾಳ (Cyclic Method) ವಿಧಾನದಿಂದ ಪೂರ್ತಿಗೊಳಿಸಿದನು (ಗಣಿಚ. ೩೦೫). ೩. ಚೆಲ್ವುವೆತ್ತುದುದಯ ಮಂ[ವಂ]ದು ಪದ್ಮಿನೀ ಚಕ್ರವಾಳ ಚಕ್ರವಾಕಚಕ್ರಚಕ್ರವರ್ತಿಯಾ (ಆದಿಪು.೧೨-೫೫). ೪. ಮ[ಹಾಕ್ಷೀ]ರಾಬ್ಧಿ ಡಿಂಡೀರಪಾಂಡುರಮಾಕ್ರಾಂತಸಿ (ಸು) ಶೈಲ ಸಾಗರ ಧರಾಶಾಚಕ್ರವಾಳಾಂಬರಂ ಪರಮಶ್ರೀವಿಜಯಪ್ರಭೂತಿಜ ಯಶ[ಂ] . . . ನೆಲೆಗೊಳ್ಗಾಚಂದ್ರತಾರಂಬರಂ (ಕವಿರಾ. ೩-೨೩೬); ನೂರು ಚಕ್ರವಾಳವಲ್ಲ, ಸಾವಿರ ಚಕ್ರವಾಳಗಳ ಆಚೆ ನಿಂತಿರಲಿ . . . ಕೇಳಿದವರು 'ಗುರು ನನ್ನನ್ನೇ ನೋಡುತ್ತಿದ್ದಾರೆ, ನನಗೇ ಬೋಧಿಸುತ್ತಿದ್ದಾರೆ' ಎನ್ನುತ್ತಾರೆ (ಹತ್ತುಮ. ೪೩). [ಸಂ.]

**ಚಕ್ರವಾಳ** 'ಚಕ್ರವಾಲ' ನೋ.

**ಚಕ್ರವಾಳಗದ್ಯ** (ನಾ). ಗದ್ಯದಲ್ಲಿ ಬರುವ ಪದಪುಂಜಗಳ ಒಂದು ಪ್ರಕಾರ: ಮುಕ್ತಪದಗ್ರಹಣ ಚಕ್ರವಾಳಗದ್ಯಂ (ಜಗವಿ.೧೨-೫೭ ವ). [ಚಕ್ರವಾಳ (= ಚಕ್ರವಾಲ) + ಗದ್ಯ]

**ಚಕ್ರವೀಟ್** (ಕ್ರಿ). ಉರುಳಿ ಬೀಳು; ಹೊರಳು: ಕರಚಕ್ರಂಗಳ ನೊರ್ವರೊರ್ವರನಿಡಲ್ಕಾಳೆರ್ದು ಪೋಟಾಯ್ಲುರಂಬರಮಿಂಬಂ ಕುಡದೆಂಬಿನಂ ಪರಿದು ಚಕ್ರಂ ಕೊಂಡವಾ ಭೋಗವಂ ತುರಗಾರೂಢರುಮಾ ತುರಂಗಮುಮುಮಂದೋರೊಂದಟಿಯೊಳ್ ಚಕ್ರವಿಟ್ಟರೆ ಯುದ್ಧಾಂಗದ ಮಧ್ಯದೊಳ್ ಮರುಳ ತಂಡಂ ತಮ್ಮೊಳೊಂದಾರ್ವಿನಂ (ಮಹಾನೇ. ೧೨-೩೭). [ಚಕ್ರ$_1$ + ಬೀಟ್$_1$]

**ಚಕ್ರವೃದ್ಧಿ** (ನಾ). = ಚಕ್ರಬಡ್ಡಿ. [ಚಕ್ರ$_1$ + ವೃದ್ಧಿ]

**ಚಕ್ರವ್ಯೂಹ** (ನಾ). ೧. (ಚಕ್ರಾಕಾರವಾಗಿದ್ದು, ಭೇದಿಸುವುದಕ್ಕೆ ತೊಡಕು ತೊಡಕಾಗಿರುವ) ಒಂದು ಬಗೆಯ ಸೈನ್ಯವ್ಯೂಹ: ಅಂತೊಡ್ಡಿದ ಚಕ್ರವ್ಯೂಹದ ನಡುವೆಡೆಯಟಿದು (ಪಂಪಭಾ. ೧೧-೮೬ ವ); ಗುರು ಪಣ್ಣಿದ ಚಕ್ರವ್ಯೂಹರಚನೆ ಪೆರ್ಗರಿದು ಪುಗಲ್ (ಗದಾಯು. ೪-೫೪); ಚಕ್ರವ್ಯೂಹವನು ನಲವಿಂದ ಬಲಿದನು ನಿಲಿಸಿದನು ಕಾಂಭೋಜಭೂಪತಿಯ (ಕುವ್ಯಾದ್ರೋ. ೯-೧೯). ೨. (ಆಲಂ) ಇಕ್ಕಟ್ಟಿನ ಪರಿಸ್ಥಿತಿ: ಈ ಚಕ್ರವ್ಯೂಹದಿಂದ ಪಾರಾಗಿ ಹೋಗಲು ಯಾವ ಕಡೆಗೂ ದಾರಿಯೇ ಇಲ್ಲ (ಇಪ್ಪಕ. ೩೨೯); ಈ ಚಕ್ರವ್ಯೂಹದಿಂದ ಪಾರಾಗುವ ದಾರಿ ನನಗೆ ಗೊತ್ತಿಲ್ಲ (ಹೊಸಕ್ಷ. ೨೦೭); ತಾನು ಆ ಘಟನಾಪರಂಪರೆಯ ಚಕ್ರವ್ಯೂಹದಲ್ಲಿ ಸಿಕ್ಕಿಕೊಂಡಂತೆ ಅವನು ಭಾವಿಸಿದ್ದನು (ಪುನರು. ೮೪). [ಚಕ್ರ$_1$ + ವ್ಯೂಹ]

**ಚಕ್ರಶಕ್ತಿ** (ನಾ). ಕುದುರೆಯ ಶರೀರದಲ್ಲಿ ಜಂಘೆಯ ಮೇಲುಗಡೆ ಇರುವ ಒಂದು ಭಾಗ: ಸ್ಫುರೆಯಿಂ ಮೇಲ್ ಚಕ್ರ(ಚಂದ್ರ)ಶಕ್ತಿ ಬೆರಸಿರ್ಕ್ (ಅಶ್ವಶಾ. ೯-೫೨); ಓರಂತೆ ಚಕ್ರಶಕ್ತಿಯ ಸಾರಣ ಕೆಟಗೆಸೆವ ಜಂಘೆಯೆಂಬಭಿಧಾನಂ (ಅಶ್ವಶಾ. ೯-೫೪). [?]

**ಚಕ್ರಶ್ಲೋಕ** (ನಾ). = ಚಕ್ರಬಂಧ ೨: ಸಂತಂ ಬಾಬ್ದುದು ಮಿಾಟಿದಾ ನರಪನೊಳ್ ಸೌಜನ್ಯಲಕ್ಷ್ಮೀಮದಾಂಧಂ ತನ್ನಿಶ್ಚಯ ಮೆಚ್ಚಿ ನೀಂ ಪರಗುಣಾದಾರ್ಯಾಭಿಮಾನಂಗಳಿಂ ಪಿಂತಂ ನೋಡದೆ ಪಾಟಿಗೆಟ್ಟಟಿಪಿನಿಂ ಬಾಬ್ವಂತೆ ಬಾಬ್ವಯ್ಯನಾ ಸಂತಂ ತಾಂ ಪಸತಂದನಟ್ತಿ ಪೆಱುಗುಂ ದಾನಂಗಳಂ ಭೂಪನಾ ॥ ಚಕ್ರಶ್ಲೋಕ ॥ (ಕವಿರಾ. ೨-೧೪೦). [ಚಕ್ರ$_1$ + ಶ್ಲೋಕ]

**ಚಕ್ರಸಂಭವ** (ನಾ). [ಜ್ಯೋತಿ] ಚಕ್ರಯೋಗದಲ್ಲಿ ಹುಟ್ಟಿದವನು: ವಸುಧಾಪತಿ ವಿನತಂ ಚಕ್ರಸಂಭವಂ (ಜಾತತಿ. ೧೩-೧೪). [ಚಕ್ರ$_1$ + ಸಂಭವ]

**ಚಕ್ರಸಹಾಯ** (ನಾ). ೧. ಸುದರ್ಶನಚಕ್ರವನ್ನು ಆಯುಧವನ್ನಾಗಿ ಹೊಂದಿರುವವನು; ವಿಷ್ಣು. ೨. ಚಕ್ರವಾಕಪಕ್ಷಿಗಳ ಮಿತ್ರ; ಸೂರ್ಯ. ೧, ೨: ಮುಸಕಂಗುಂದೆ ನಿಶಾಟಕೋಟಿ . . . ಪೀತಾಂಬರೋಲ್ಲಸಿತಂ ಚಕ್ರಸಹಾಯನಾಕ್ರಮಿಸಿದಂ ಭೂಚಕ್ರಮಂ ಪಾದದಿಂ (ಪುಷ್ಪಪು. ೮-೨೩). [ಚಕ್ರ$_1$ + ಸಹಾಯ]

**ಚಕ್ರಾಂಕ** (ನಾ). ೧. ರಥದ ಗಾಲಿಗಳ ಗುರುತು. 'ಚಕ್ರಾಂಕವ್ಯಂಜಿತ' ಪರಾ. ೨. ಚಕ್ರದ ಅಂಕಿತವುಳ್ಳವನು: ಅಖಿಲಧರಿತ್ರೀಚಕ್ರಾವನನಿಪುಣಂ ನತಶಕ್ರಾದಿಮದಿವಿಜನೆನ್ನುಮಿಾ ಚಕ್ರಾಂಕಂ (ವಸ್ತವಂ. ೧೦-೭೭). ೩. = ಚಕ್ರವಾಕ ೧: ಕೋಡಿ ಹಿಮದಿಂ ಚಕ್ರಾಂಕವುಳ್ಕಿರ್ದುವು (ಪುಷ್ಪಪು. ೬-೪೦). [ಚಕ್ರ$_1$ + ಅಂಕ$_2$]

**ಚಕ್ರಾಂಕಣ** (ನಾ). ಚಕ್ರದ ಆಕಾರದಲ್ಲಿ ಮುದ್ರೆ ಹಾಕುವಿಕೆ: (+). [<ಸಂ. ಚಕ್ರಾಂಕನ]

**ಚಕ್ರಾಂಕನ** (ನಾ). ಚಕ್ರದ ಮುದ್ರೆಯನ್ನು ಕಾಯಿಸಿ ದೇಹದಲ್ಲಿ ಮುದ್ರೆಯೊತ್ತುವಿಕೆ; P ಇದು ವೈಷ್ಣವ ಮತಸ್ಥರಲ್ಲಿ ಒಂದು ಸಂಪ್ರದಾಯ: ಅನೇಕರು ಚಕ್ರಾಂಕನ ಮಾಡಿಸಿಕೊಂಡು ವೈಷ್ಣವರಾಗಿ (ಕಥವಿ. I, ೧೩). [ಚಕ್ರ$_1$ + ಅಂಕನ]

**ಚಕ್ರಾಂಕಯುಗ** (ನಾ). = ಚಕ್ರಮಿಥುನ: ಬೆಚ್ಚದವು ಚಕ್ರಾಂಕಯುಗ (ಕುವ್ಯಾವಿ. ೨-೫೦). [ಚಕ್ರಾಂಕ + ಯುಗ]

**ಚಕ್ರಾಂಕವ್ಯಂಜಿತ** (ಗು). ೧. ರಥದ ಗಾಲಿಗಳ ಗುರುತುಗಳಿಂದ ವಿಶೇಷವಾಗಿ ಶೋಭಿಸುವ. ೨. ಚಕ್ರವಾಕಪಕ್ಷಿಗಳಿಂದ ಸೂಚಿತವಾದ. ೧, ೨: ಕಂಜವನದಂತೆ ಲಕ್ಷ್ಮೀರಂಜಿತಮುಂ ಚಿತ್ರಪತ್ರಮುಂ ಚಕ್ರಾಂಕವ್ಯಂಜಿತಮುಮಪ್ಪ ಬೀಡಂ ಮಂಜಿಷ್ಟಿವಂತಿರುಳೊಳಿಱಿದನಶ್ವತ್ಥಾಮಂ (ಗದಾಯು. ೯-೩೨). [ಚಕ್ರಾಂಕ + ವ್ಯಂಜಿತ]

**ಚಕ್ರಾಂಗ** (ನಾ). ೧. ಚಕ್ರವಾಕಪಕ್ಷಿ. ೨. ಹಂಸಪಕ್ಷಿ: ಹಂಸಃ, ಶ್ವೇತಚ್ಛದಃ, ಚಕ್ರಾಂಗಃ, ಮಾನಸೌಕಾಃ (ಕಸಃ)–ಈ ೪ ಹಂಸಂ" (ಹಲಾಯು. ೪೨-೯೪); ಚಕ್ರಾಂಗವಾಹನಾನನವಾಜಿಶಾಲಹರ ಶುಕ್ರಶಿಷ್ಯಾಧಿಪ ಶಿರೋಮಾಲ (ಪ್ರೌಢರಾ. ೮-೧). [ಚಕ್ರ$_1$ + ಅಂಗ$_2$]

**ಚಕ್ರಾಂಗಿ** (ನಾ). ೧. ಹೆಣ್ಣು ಹಂಸಪಕ್ಷಿ; ಹಂಸಿ. ೨. ಒಂದು ಬಗೆಯ ಮೂಲಿಕೆ; ಕಟುಕರೋಹಿಣಿ: ಘಟಿಲನೆ ಚಕ್ರಾಂಗಿ [ಪಾಠಾಂ. ಕಿ]ಯುಮಂ ಕಟಿಯಿಂದರೆದೀಂಟೆ ಕಿಡುಗುಮಾಖುಗಳ ವಿಷಂ (ಖಮದ. ೧೨-೨೧). [ಸಂ. ಚಕ್ರಾಂಗೀ (ಚಕ್ರ + ಅಂಗ + –)]

**ಚಕ್ರಾಂಶು** (ನಾ). ಚಕ್ರಾಯುಧದ ಕಿರಣ,–ಕಾಂತಿ: ಸಮುದಿತಾರ್ಕಾಕಾರ ಚಕ್ರಾಂಶುವಿಂ . . . ಚೆಲ್ವಾದನಬ್ಜೋದರಂ (ಜಗವಿ. ೧-೪೯). [ಚಕ್ರ$_1$ + ಅಂಶು]

**ಚಕ್ರಾಚಕ್ರಿ** (ನಾ). ಚಕ್ರಗಳನ್ನು ಪರಸ್ಪರ ಪ್ರಯೋಗಿಸಿ ಮಾಡುವ ಯುದ್ಧ: ಚಕ್ರಾಚಕ್ರಿಯುಂ ಖಟ್ಗಾಖಟ್ಗಿಯುಮಾಗೆಯುಂ ಪೆಣೆದಿರುವ ಪದದೊಳ್ (ಶಾಂತಿಪು. ೬-೮೨ ವ). [ಸಂ.]

**ಚಕ್ರಾಟ** (ನಾ). ೧. ಮಾಂತ್ರಿಕ; ಗಾರುಡಿಗ. ೨. ಖಳ; ನೀಚ. [ಸಂ.]

**ಚಕ್ರಾಣಿಕೆ** (ನಾ). ಒಂದು ಬಗೆಯ ಗಿಡ: ಚಕ್ರಾಣಿಕೆ, ನೀರುಪಾಟಿ (ಮ್ಯಾಜಿಗ. ೮-೧೩೦). [?]

**ಚಕ್ರಾತ್ಮಕ** (ನಾ). ಚಕ್ರಾಕಾರವಾದುದು; ಚಕ್ರದಂತಿರುವುದು: ಜಗತ್ಪ್ರವಾಹದಲ್ಲಿ ಸೃಷ್ಟಿಸ್ಥಿತಿಲಯಾದಿಗಳು ಚಕ್ರಾತ್ಮಕವಾಗಿರುವಂತೆ ಮಾನವನ ಇತಿಹಾಸದಲ್ಲಿ ಸಂಸ್ಕೃತಿಗಳ ಆಯುಸ್ಸೂ ಚಕ್ರಾತ್ಮಕ ಮತ್ತು ಪರಿಮಿತ (ಮುಕ್ತಾರ. ೯೭ ಟೀಕೆ). [ ಸಂ. ]

**ಚಕ್ರಾಧಾರ** (ನಾ). ಭೂಮಿಗೆ ಆಧಾರವಾಗಿರುವವನು; ಕೂರ್ಮ; ವಿಷ್ಣು: ಕ್ಷೀರವಾರುಧಿಶಯನ . . . ಚಕ್ರಾಧಾರ ಭವದೂರ (ಹರಿಸಾ. ೫). [ ಚಕ್ರ$_1$ + ಆಧಾರ ]

**ಚಕ್ರಾಧಿನಾಥ** (ನಾ).=ಚಕ್ರನಾಥ: ಚಕ್ರಾಧಿನಾಥಂಗೆ ಜಯಪ್ರಾರಂಭಗಚ್ಛ ಸ್ಫಟಿಕಕಳಶವುಂ ತೀವಿ ದಿವ್ಯಾಂಬುವಿಂ ನಾಕಜನಾಥಂ ಮಜ್ಜನಕ್ಕೆತ್ತಿದ ತೆಱದೆ ಸುಧಾಸೂತಿ ಕಣ್ಗೆಡ್ಡಮಾದಂ (ಆದಿಪು. ೧೨-೮). [ ಚಕ್ರ$_1$ + ಅಧಿನಾಥ ]

**ಚಕ್ರಾಧಿಪ** (ನಾ).=ಚಕ್ರನಾಥ: ಮಂತ್ರಪೂರ್ವಕಂ ನೆಗಟ್ಟುದೆಂದು ಚಕ್ರಾಧಿಪಂ ಮನಂಗೊಳೆ ಪೇೞ್ದಂ (ಆದಿಪು. ೧೫-೧೭). [ ಚಕ್ರ$_1$ + ಅಧಿಪ ]

**ಚಕ್ರಾಧಿಪತ್ಯ** (ನಾ). ಚಕ್ರವರ್ತಿಯು ಆಳುವ ರಾಜ್ಯ; ಸಾಮ್ರಾಜ್ಯ: ಭಾರತವು ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಸೇರಿತ್ತು (ರೂಢಿ). [ ಚಕ್ರ$_1$ + ಆಧಿಪತ್ಯ ]

**ಚಕ್ರಾಧೀಶ** (ನಾ). = ಚಕ್ರನಾಥ: ಇಲಾಚಕ್ರವಿಖ್ಯಾತ ಭೂಭೃತ್ಪ್ರಭು ಚಕ್ರಾಧೀಶನೊಳ್ ಮಚ್ಚರಿಪವೊಲೆಸೆದಿರ್ದತ್ತು ರಾಪ್ಯಾಚಲೇಂದ್ರಂ (ಆದಿಪು. ೧೩-೯೭). [ ಚಕ್ರ$_1$ + ಅಧೀಶ ]

**ಚಕ್ರಾಭಿಷೇಕ** (ನಾ.)[ಜೈನ]ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು: ಅಂತು ಚಕ್ರಾಭಿಷೇಕೋತ್ಸವಾನಂತರಂ (ಆದಿಪು. ೧೫-೩ ವ): ಚಕ್ರಲಾಭಮುಂ ಚಕ್ರಾಭಿಷೇಕಮುಂ . . . ಅಪ್ಪಯ್ವತ್ತುಮೂಱು ಗರ್ಭಾನ್ವಯಕ್ರಿಯೆಯೊಳು (ಚಾವುಂಪು. ೨೩೦): ಸಕಲರಾಜಾಧಿರಾಜರುಗಳಿಂ ಅಭಿಷೇಕವಂ ಪಡೆದು ಸಕಲರಿಂ ಪೂಜಿತನಾಗಿ ಪುನಃ ಚಕ್ರಪೂಜೆಯಂ ಮಾಡಿ ಸರ್ವರಿಂದಲೂ ವಿಶ್ವಂಜಯ ದಿಶಾಂಜಯ ದಿವ್ಯಮೂರ್ತಿಯೆಂದು ಪೊಗಳಿಸಿ ಕೊಳ್ಳುವುದೇ . . . ಚಕ್ರಾಭಿಷೇಕವೆಂಬ ೪೭ನೆ ಕರ್ಮವು (ಪುರುಚ. ೨೦೩). [ ಚಕ್ರ$_1$ + ಅಭಿಷೇಕ ]

**ಚಕ್ರಾಯುಧ** (ನಾ). ೧. ಒಂದು ಬಗೆಯ ವರ್ತುಲಾಕಾರವಾದ ಆಯುಧ,–ಅಸ್ತ್ರ; ಸುದರ್ಶನ ಚಕ್ರ. ೨. ಚಕ್ರವನ್ನು ಆಯುಧವಾಗಿ ಉಳ್ಳವನು; ವಿಷ್ಣು: ಎಲೆ ಚಕ್ರಾಯುಧ . . . ನೀನಱಿವುಗೆಟ್ಟೀತಂದ್ರಿಯಿಂ ದೊಂದಿ ಸಾಯಲಿದೇಂ ತಕ್ಕುದೆ (ಶಾಂತೀಶ್ವ. ೫-೨೩). ೩. = ಚಕ್ರರತ್ನ: ಆಯುಧಶಾಲೆಯೊಳ್ . . . ಚಕ್ರಾಯುಧಮಿಂದು ಬಂದು ನೆಲಸಿರ್ದುದು (ಶಾಂತಿಪು. ೮-೧೫೩). ೪. [ಜೈನ] ದೈವಾಯತ್ತವಾಗಿ ಚಕ್ರವನ್ನು ಪಡೆದವನು; ಚಕ್ರವರ್ತಿ: ಚಕ್ರಾಯುಧಂಗೆ ಗುರು ಪೆಱನೊಳನೇ (ಶಾಂತಿಪು. ೧೦-೯೮); ಚಕ್ರಾಯುಧನಂ ಬಿನ್ನಪಂಗೆಯ್ಯಲ್ವೇಟ್ಟುದುಂ (ಶಾಂತಿಪು. ೧೦-೧೨೨ ವ). [ ಚಕ್ರ$_1$ + ಆಯುಧ ]

**ಚಕ್ರಾರ** (ನಾ). ಗಾಲಿಯ ಅರೆ; ಚಕ್ರದ ಒಳ ಸುತ್ತಿನ ಅರೆಕೋಲು: ಚಕ್ರಾರಪಂಕ್ತಿಯುರುಳಿದಂತೆ ಇದರ ಕಥೆ (ಬಧ್ವಪ್ರ. XXVI, ಮುನ್ನುಡಿ). [ ಚಕ್ರ$_1$ + ಅರ$_9$ ]

**ಚಕ್ರಾರಾವ** (ನಾ). ಗಾಲಿಗಳ ಸದ್ದು,–ಶಬ್ದ: ಪೊಳೆವ ಬಾಳುಳ್ಮಂಗಳಂ ಪೋಲೆ ಪಾಯಿಸಲೆಂದಿರ್ದಳವಂ ಪೊದಟ್ದಿಸೆವ ಚಕ್ರಾರಾವಮೋರಂತೆ ಚೋದಿಸಲೆಂದಿರ್ದ ರಥಂ . . . ನೋಟಕ್ಕೇನಗುರ್ವಾದುದೋ (ಆದಿಪು. ೧೪-೧೦೦). [ ಚಕ್ರ$_1$ + ಆರಾವ ]

**ಚಕ್ರಾಹ್ವ** (ನಾ). ಚಕ್ರವಾಕಪಕ್ಷಿ: ಇಂದ್ರಿಯಸುಖಾರ್ಥಿ ಸಂಸಾರಗುಹಾಗಹ್ವರ ದೊಳಗಿರುಳಿನ ಚಕ್ರಾಹ್ವದವೊಲ್ ಮಱುಗದೇಂ ಸುಖಂಬಡೆದಪನೇ (ಆದಿಪು. ೩-೭೮). [ ಸಂ. ]

**ಚಕ್ರಿ** (ನಾ). ೧. ಗಾಲಿಯನ್ನು ಉಳ್ಳುದು; ಬಂಡಿ; ರಥ: "ಚಕ್ರಿಯೆಂದೆನಲ್ ಭಂಡಿಯಕ್ಕು" (ಮಂಗರಾ. ೮೪-೨೩). ೨. ಕುಂಬಾರ; ಕುಲಾಲ: "ಕುಲಾಲಾಖ್ಯಂ ಚಕ್ರಿ ಕುಂಭಕಾರನವಂ" (ವಸ್ತುಕೋ. ೬೪-೬೪): ಚಕ್ರಿ ಇಕ್ಕಿದ ಕಿಚ್ಚಿನಂತೆ ಅರ್ಕಚಂದ್ರನಂತೆ ಆರಾರ ಚಿತ್ತಕ್ಕೆ ಹೆಚ್ಚು ಕುಂದಿಲ್ಲದೆ ನಿಶ್ಚಿಂತನಾದೆಯಲ್ಲಾ (ಪ್ರೋಲಿಮಾ. ೦೩೪-೫೦೮). ೩. ಚಕ್ರಾಯುಧವನ್ನು ಉಳ್ಳವನು; ವಿಷ್ಣು; ಕೃಷ್ಣ: ಪಿಡಿಯೆಂ ಚಕ್ರಮನೆಂಬ ಚಕ್ರಿಯಿಂ . . . ಪಿಡಿಯಿಪ್ಪೆಂ ಕರಚಕ್ರಮಂ (ಪಂಪಭಾ. ೧೦-೨೫); ಪಾಂಡುತನಯರಿಗೆ ಚಕ್ರಿ ತಾ ಬಂದವರ ಸೇವಾಚಕ್ರದೊಳಗಿಹನು (ಕುಮಾವ್ಯಾ. ೩-೦೩೦). ೨, ೩: ಅಜಾಂಡಘಟಮಾಲಾಚಕ್ರಿಯೊಳ್ ಮಗನಂ ಬೇಡಿದನೊಲ್ದನಿಲ್ಲ ಗುರು ವಿದ್ಯಾವಿತ್ತಮಂ ವಿತ್ತಮಂ (ಜಗವಿ. ೭-೦೫). ೪. ಚಕ್ರವರ್ತಿ; ಸಾಮ್ರಾಟ: ಜಗದ ಬಡತನಮನೊರ್ವೆಯೆ ಬಗೆದಂತಿರೆ ಕಿಡಿಪ ಚಕ್ರಿ ತನ್ನಿರ್ದೆಡೆಯೊಳ್ ನೆಗಟ್ದ ಬಡತನಮನದೇಕೆ ಗಡಂ ಸೈರಿಸುವನೆನೆ ಪೊದಟ್ದುದು ಮಧ್ಯಂ (ಆದಿಪು. ೮-೩೦); ಚಕ್ರಿಯೊಳ್ಪಡೆದು ಶಾಸನವಂ (ಸೌಇಇ. XI-1, ೬೪-೦೫: 1028); ಶ್ರೀಮಚ್ಚಾಳುಕ್ಯಚಕ್ರಿಯ ರಾಜಧಾನಿ ಕಲ್ಯಾಣದೊಳ್ (ಸೌಇಇ. XI-1, ೦೦೩-೦೦: 1070 ?). ೫. ಚಕ್ರವಾಕಪಕ್ಷಿ ಗಳಿಂದ ಕೂಡಿದುದು. ೩, ೫: ಸಿರಿಯರಸನೆಂಬಂತೆ ಚಕ್ರಿಯೆಂದೆನಿಸಿತ್ತು . . . ಪುಂಡರೀಕಂ (ನವಮೋ. ೮-೩೩). ೬. ಕತ್ತೆ; ರಾಸಭ. ೭. ಹಾವು; ಸರ್ಪ: "ಅಹಿ ಚಕ್ರಿ ಕಾಕೋದರಂ . . . ವ್ಯಾಳನೆನಲು ಸರ್ಪಂಗೆ ನಾಮಂ" (ಮಂಗರಾ. ೦೦೮-೦): "ಆ ಹರಿ ನೃಪ ಕುಂಬಾರಂ ಊಹಿಸೆ ಗಿರಿ ಪಾವು ಪಂಚಶಬ್ದಂ ಚಕ್ರೀ" (ನಾನಾಕಂ. ೦೦೭); "ಹರಿ ಭೂಪಾಲಂ ಕುಲಾಲಂ ಫಣಿ ಕರಮಿನಿತುಂ ಚಕ್ರಿಶಬ್ದಂ" (ನಾನಾರ. ೮೦). [ ಸಂ. ಚಕ್ರಿನ್ ]

**ಚಕ್ರಿಕ** (ನಾ). ಚಕ್ರವನ್ನು ಧರಿಸಿರುವವನು. [ ಸಂ. ]

**ಚಕ್ರಿಕಾವರ್ತಿ** (ನಾ). ಕೃತ್ರಿಮವಾದ ಉಪಾಯವುಳ್ಳವನು; ಕಪಟ ವ್ಯವಹಾರದವನು: ಚಕ್ರಿ ಚಕ್ರಿಕಾವರ್ತಿಯಪ್ಪುದಱಿಂದಾ ವನಾಂತರಾಳಕ್ಕೆರ್ವನೆ ಬಂದು (ಪಂಪಭಾ. ೫-೧೯ ವ). [ ಸಂ. ಚಕ್ರಿಕಾವರ್ತಿನ್ ]

**ಚಕ್ರಿಪದ** (ನಾ). ಚಕ್ರವರ್ತಿಯ ಪದವಿ,–ಸ್ಥಾನ: ಅಡಿಯಿಡುವಂತಿರಯ್ದನೆಯ ಚಕ್ರಿಪದಕ್ಕೆ ಜನಾರ್ಭಕಂ ತಳರ್ನಡೆ ನಡೆದಂ (ಶಾಂತಿಪು. ೧೧-೮೨). [ ಚಕ್ರಿ + ಪದ$_3$ ]

**ಚಕ್ರಿಯೋಧ** (ನಾ). ಚಕ್ರವರ್ತಿಯ ಸೈನಿಕ: ಚಕ್ರಿಯೋಧರುಂ ವಿಜಯಶ್ರಮವಿನೇಯಪರರಾಗಿ . . . ವಿಶ್ರಮಿಸಿದರ್ (ಶಾಂತಿಪು. ೧೧-೨೪ ವ). [ ಚಕ್ರಿ + ಯೋಧ ]

**ಚಕ್ರಿಶಾಯಿ** (ನಾ). ಸರ್ಪದ ಮೇಲೆ ಮಲಗಿರುವವನು; ಶೇಷಶಾಯಿ; ವಿಷ್ಣು: ಹಾ ವಿಧಿಯೆ ಹಾ ಚಕ್ರಿಶಾಯಿಯಾ ಪರಿಪರಿಯ ರಕ್ಕಸರ ಭವಣೆಯಂ ಪರಿಹರಿಸಿ ರಕ್ಷಿಸಿದ ಭೀಮ (ಕುಮಾವಿ. ೯); ಚಕ್ರಿಶಾಯಿಯಪ್ಪ ಚಕ್ರಿಯುನಂ ಗ್ರಹದಿಂ ಸಹಿತಮಾ ಚಕ್ರಮಂ ಚಕ್ರವರ್ತಿ ಕೈಕೊಂಡು (ಅದ್ಭುತ. ೭-೧೨). [ ಸಂ. ಚಕ್ರಿಶಾಯಿನ್ ]

**ಚಕ್ರಿಸೈನಿಕ** (ನಾ). ಚಕ್ರವರ್ತಿಯ ಸೈನ್ಯ,–ದಂಡು: ಕುಸುಮಿತ ಮಂದಾರಚ್ಛಾಯ . . . ಪ್ರಸರಂಗಳೊಳೆಳಸಿದ ಚಕ್ರಿಸೈನಿಕಂ ನೀಗಿತಧ್ವಗಮನಶ್ರಮಮಂ (ಶಾಂತಿಪು. ೧೧-೭೫). [ ಚಕ್ರಿ + ಸೈನಿಕ ]

**ಚಕ್ರೀವತ್ತು** (ನಾ). ಕತ್ತೆ: "ಖರ ಚಕ್ರೀವದ್ಬಾಳೇಯ ರಾಸಭಾಖ್ಯಾತಿ ಗರ್ದಭಂ ತಾನದು ವೇಸರಂ" (ವಸ್ತುಕೋ. ೮೮-೩೯). [ಸಂ. ಚಕ್ರೀವತ್]

**ಚಕ್ರೇಶ** (ನಾ). ೧. ವಿಷ್ಣು. ೨. ಭೂಮಂಡಲದ ಅಧಿಪತಿ; ಚಕ್ರವರ್ತಿ. ೩. [ಜೈನ] ಚಕ್ರರತ್ನದ ಒಡೆಯ. ೨, ೩: ಚಕ್ರಂ ಪುಟ್ಟಿದೊಡೀಗಳ್ ಚಕ್ರೇಶ್ವರನೆಂಬ ಪೆಸರುಮಾಯ್ತುಕ್ಕವು ತಾಂ ಚಕ್ರೇಶನಾದೊಡಂ ತನ್ನಾ ಕ್ರಮಮಣವನೆನ್ನೊಳೇಕೆ ಕೆಮ್ಮನೆ ತೋರ್ಪಂ (ಆದಿಪು. ೦೪-೭೯). [ ಚಕ್ರ$_1$ + ಈಶ ]

**ಚಕ್ರೇಶ್ವರ** (ನಾ). ೧.=ಚಕ್ರೇಶ ೨ : ಈ ಮಾಟ್ಕೆಯಿಂ . . . ಭೂಷಣಾಂಗ ದಳವಂ ಚಕ್ರೇಶ್ವರಂ ತಾಳ್ದಿದಂ (ಆದಿಪು. ೪–೩೫) ; ಚಕ್ರೇಶ್ವರ ಮಂಡ ಳೇಶ್ವರಂ ಬೆಸಸೆ ನೆಗಟ್ದ ಕಚಿ ಕವಿರತ್ನಂ (ಅಜಿಪು. ೧೨–೪೫). ೨.=ಚಕ್ರೇಶ ೩: ಚಕ್ರಂ ಪುಟ್ಟಿದೊಡೀಗಳ್ ಚಕ್ರೇಶ್ವರನೆಂಬ ಪೆಸರು ಮಾಯ್ತು (ಆದಿಪು. ೧೪–೭೯). [ ಚಕ್ರ₁ + ಈಶ್ವರ ]

**ಚಕ್ಲಿ₁** (ನಾ). ಹುಣಿಸೆಜಾತಿಗೆ ಸೇರಿದ ಒಂದು ಬಗೆಯ ಮರ : (*). [ ←ತುಳು. ಚಕ್ಕುಲಿ ]

**ಚಕ್ಲಿ₂** (ನಾ). ಭೂಮಿಯ ಕ್ಷೇತ್ರವನ್ನು ಅಳೆಯುವ ಒಂದು ಪ್ರಮಾಣ: ಚಕ್ಲಿಯೆಂದರೆ ಅರ್ಧಕೂರಿಗೆಗಿಂತ ಹೆಚ್ಚಾಗುವದಿಲ್ಲ (ಕಭಾಗ. ೩೬೬). [ ←ಮರಾ. ಸಾಖಳೀ? ]

**ಚಕ್ಷಣ** (ನಾ). = ಚಕ್ಕಣ. [ ಸಂ. ]

**ಚಕ್ಷು** (ನಾ). ಕಣ್ಣು ; ನೇತ್ರ : "ಚಕ್ಷು ನೇತ್ರಂ ನಯನಮಂಬಕಂ . . . ಕಣ್ಗಳೆನಿಸಿಕ್ಕು" (ಮಂಗರಾ. ೯೩–೨) ; ಇಂದ್ರ ಪಾದದಲ್ಲಿ ಚಂದ್ರ ಮನದಲ್ಲಿ ಚಕ್ಷುವಿನಲ್ಲಿ ಸೂರ್ಯಜನನವು (ಬಸವ. ೫೩೬) ; ಭಗವಂತನು . . . ಮಧ್ಯಮಮಾರ್ಗವನ್ನು ಕಂಡುಕೊಂಡನು; ಇದರಿಂದ ಚಕ್ಷು ಉಂಟಾಯಿತು, ಜ್ಞಾನ ಉಂಟಾಯಿತು (ಭಾರದ. ೧೯೬). [ <ಸಂ. ಚಕ್ಷುಸ್ ]

**ಚಕ್ಷುಃಪ್ರೀತಿ** (ನಾ). ಮೊದಲಸಲ ನೋಡಿದ ಮಾತ್ರದಿಂದಲೇ ಉಂಟಾಗುವ ಪ್ರೀತಿ ; ಕಣ್ಬೇಟ . ☞ ಇದು ಚಕ್ಷುಃಪ್ರೀತಿ, ಮನಸ್ಸಂಗ, ಸಂಕಲ್ಪ, ಜಾಗರ, ಕಾರ್ಶ್ಯ, ಅರತಿ, ಲಜ್ಜಾತ್ಯಾಗ, ಮೋಹೋನ್ಮಾದ, ಮೂರ್ಛಾವಸ್ಥೆ, ಮರಣ ಎಂಬ ಹತ್ತುಬಗೆಯ ಮದನಾವಸ್ಥೆಗಳಲ್ಲಿ ಮೊದಲನೆಯದು : ಚಕ್ಷುಃಪ್ರೀತಿಯದಿನಿಯನನೀಕ್ಷಿಪುದು (ರಸರ. ೧–೪೦ ಸೂತ್ರ). [ ಸಂ. (ಚಕ್ಷುಸ್ + ಪ್ರೀತಿ) ]

**ಚಕ್ಷುಃಶ್ರವ** (ನಾ). ಕಣ್ಣುಗಳನ್ನೇ ಕಿವಿಗಳಾಗಿ ಬಳಸಿಕೊಳ್ಳುವ ಪ್ರಾಣಿ; ಸರ್ಪ. [ ಸಂ. (ಚಕ್ಷುಸ್ + ಶ್ರವಸ್) ]

**ಚಕ್ಷುಬಂಧನ** (ನಾ). ಕಣ್ಣು ತೆರೆಯದಂತೆ ಮಾಡುವಿಕೆ ; ಕಣ್ಣುಕಟ್ಟು (?) : ಚಕ್ಷುಬಂಧನಕ್ಕೆ :– ಕೋಳಿಮಿಷ್ಟೆಯ ಜೇನುತುಪ್ಪದಲ್ಲಿ ತಿಲಕವಿಡೆ ಚಕ್ಷುಬಂಧನ (ವಿಷ್ಯವಿ. ೨೦೬). [ ಚಕ್ಷು + ಬಂಧನ ]

**ಚಕ್ಷುರಿಂದ್ರಿಯ** (ನಾ). ಕಣ್ಣು ; ನೇತ್ರೇಂದ್ರಿಯ: ಶಬ್ದಾದಿಗಳೈದರಲ್ಲಿ ಅಡಗಿರುವ ರೂಪೇತರದ ಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ ಇರುವ ಇಂದ್ರಿಯವು ಚಕ್ಷುರಿಂದ್ರಿಯವೆನಿಸಿಕೊಳ್ಳುವುದು (ತತ್ತ್ವಶು. ೭). [ ಸಂ. (ಚಕ್ಷುಸ್ + ಇಂದ್ರಿಯ) ]

**ಚಕ್ಷುರೋಗ** (ನಾ). ಕಣ್ಣಿನ ರೋಗ; ನೇತ್ರರೋಗ: ಮುಳ್ಳುಮುತ್ತುಗದ ರಸದಲ್ಲಿ ಹುಲಿಗಿಲ ಬೀಜವಂ ಅರೆದು ಗುಳಿಗೆಯಂ ಮಾಡಿ ಹಚ್ಚಲು ಎಲ್ಲಾ ಚಕ್ಷುರೋಗಂ ಕೆಡುಗುಂ (ವಿಷ್ಯವಿ. ೧೩೪). [ ಚಕ್ಷು + ರೋಗ ]

**ಚಕ್ಷುರ್ಗ್ರಾಹ್ಯ** (ಗು). ಕಣ್ಣಿನಿಂದ ಗ್ರಹಿಸತಕ್ಕ ; ನಯನಕ್ಕೆ ಗೋಚರವಾಗತಕ್ಕ : ಪ್ರಾಣಲಿಂಗವು ಸಕಲ ನಿಷ್ಕಲ ಮತ್ತು ಮನೋಗ್ರಾಹ್ಯವು, ಇಷ್ಟಲಿಂಗವು ಸಕಲ ಮತ್ತು ಚಕ್ಷುರ್ಗ್ರಾಹ್ಯವು (ಭಾರದ. ೨೫೩). [ ಸಂ. (ಚಕ್ಷುಸ್ + ಗ್ರಾಹ್ಯ) ]

**ಚಕ್ಷುರ್ದರ್ಶನಿ** (ನಾ). [ಜೈನ] (?) : ದರ್ಶನಾನುವಾದದಿಂ ಚಕ್ಷುರ್ದರ್ಶನಿಗಳ್ಗೆ ಮಿಥ್ಯಾ ದೃಷ್ಟ್ಯಾದಿ ಕ್ಷೀಣಕಷಾಯಾಂತಂಬರಂ ಲೋಕಾಸಂಖ್ಯೇಯ ಭಾಗಂ (ತತ್ತ್ವಪ್ರ. ೨೭). 'ಅಚಕ್ಷುರ್ದರ್ಶನ' ಪರಾ. [ ಸಂ. ಚಕ್ಷುರ್ದರ್ಶನಿನ್ ]

**ಚಕ್ಷುರ್ವಿಜ್ಞಾನ** (ನಾ). ಕಣ್ಣುಗಳಿಂದ ಪಡೆಯುವ ಜ್ಞಾನ ; ನೇತ್ರೇಂದ್ರಿಯದಿಂದ ಗ್ರಾಹ್ಯವಾದ ಅರಿವು : ಪ್ರವೃತ್ತಿವಿಜ್ಞಾನವು– ಚಕ್ಷುರ್ವಿಜ್ಞಾನ, ಶ್ರೋತ್ರವಿಜ್ಞಾನ . . . ಮನೋವಿಜ್ಞಾನ ಎಂದು ಆರು ಪ್ರಕಾರವಾಗಿದೆ (ಹಿಂದಸಾ. ೨೯). [ ಸಂ. (ಚಕ್ಷುಸ್ + ವಿಜ್ಞಾನ) ]

**ಚಕ್ಷುಶ್ರವಣ** (ನಾ).=ಚಕ್ಷುಃಶ್ರವ: ಅತುಳ ಚಕ್ಷುಶ್ರವಣಾಭರಣ ಸುಕ್ಷ್ವೇಡನ ಗ್ರೀವ ರಕ್ಷಿಸುಗೆ (ನವಮೋ. ೧೭–೧). [ <ಸಂ. ಚಕ್ಷುಃಶ್ರವಣ ]

**ಚಕ್ಷುಶ್ರವಾಕಲ್ಪ** (ನಾ). ಸರ್ಪವನ್ನೇ ಆಭರಣವಾಗಿ ಉಳ್ಳವನು; ಶಿವ: ಚಕ್ಷುಶ್ರವಾಕಲ್ಪ ದಕ್ಷಮಖಶಿಕ್ಷ (ಉದ್ಭದೇ. ೩–೫೦). [ <ಸಂ. ಚಕ್ಷುಃಶ್ರವಾಕಲ್ಪ ]

**ಚಕ್ಷುಶ್ರೋತ್ರ** (ನಾ).=ಚಕ್ಷುಃಶ್ರವ : (*). [<ಸಂ. ಚಕ್ಷುಃಶ್ರೋತ್ರ ]

**ಚಕ್ಷುಶ್ಶ್ರವಾಶ** (ನಾ). ಹಾವನ್ನು ತಿನ್ನುವ ಪ್ರಾಣಿ; ನವಿಲು: "ಚಕ್ಷುಶ್ಶ್ರವಾಶಂ ಕಳಾಪಿ . . . ನವಿಲೆನಿಕ್ಕುಂ" (ಮಂಗರಾ. ೫೦–೨). [ ಸಂ. ]

**ಚಕ್ಷುಶ್ಶ್ರುತಿ** (ನಾ). = ಚಕ್ಷುಃಶ್ರವ : ಚಕ್ಷುಶ್ಶ್ರುತಿಗಳಂತೆ ವಾಯುಭಕ್ಷಕರಾಗಿರ್ದ ಮುಮುಕ್ಷುನಿಕರಮುಮಂ (ಶಂಕತಂ. ೧೧೯–೧೦). [ ಸಂ. (ಚಕ್ಷುಸ್ + ಶ್ರುತಿ) ]

**ಚಕ್ಷುಷ್ಮಂತ** (ನಾ). ೧. ಕಣ್ಣುಗಳುಳ್ಳವನು ; ದೃಷ್ಟಿಶಕ್ತಿಯುಳ್ಳವನು. ೨. ಮುಂದಾಲೋಚನೆಯುಳ್ಳವನು ; ದೂರದೃಷ್ಟಿಯುಳ್ಳವನು : ಕಾಂತಿಪ್ರಸಾದಗುಣದದಗುಂತಿಗಳಿಂದುಗಮಿಳೇಶ್ವರೇಂದುಗಮೊಡನತ್ಯಂತಂ ಸಮನಿಸಿ ಚಕ್ಷುಷ್ಮಂತರ ಕಣ್ಗಂ ಮನಕ್ಕಮಿತ್ತುದು ಮುದಮಂ (ಶಾಂತಿಪು. ೧೧–೧೩೭). [ ಸಂ. ಚಕ್ಷುಷ್ಮತ್ ]

**ಚಕ್ಷುಷ್ಯ** (ಗು). ೧. ಕಣ್ಣಿಗೆ ಹಿತವಾದ ; ಚೆಲುವಾದ ; ಕಂಗೊಳಿಸುವ : ಆಯುರಾರೋಗ್ಯಾಭಿವೃದ್ಧಿಯಾಗಿ, ಚಕ್ಷುಷ್ಯವಾಗಿ, ಐಶ್ವರ್ಯಪ್ರದವಾಗಿರುವುದು (ಸಕವ್ಯ. ೩೩). (ನಾ). ೨. ಚೆಲುವನಾದವನು ; ದರ್ಶನೀಯನಾದವನು: "ಚಕ್ಷುಷ್ಯಃ, ಸುಭಗಃ–ಈ ೨ ಸೊಬಗಂ" (ಹಲಾಯು. ೬೦–೨೦೨). [ ಸಂ. ]

**ಚಕ್ಷುಷ್ಯೆ** (ನಾ). ಕಣ್ಣಿಗೆ ಲೇಪಿಸುವ ಒಂದು ಬಗೆಯ ಅಂಜನ: "ಚಕ್ಷುಷ್ಯೆ ಕುಲಾಲಿ ಕುಲತ್ಥಿಕೆ ಎಂದು, ಕುಲಥಾಂಜನ, ಕಂಬೆಳಗಿನ ಬೀಜವೆಂದೂ, ಎಂಬರು" (ನಾಚಿರಾ. ೮). [ ಸಂ. ಚಕ್ಷುಷ್ಯಾ ]

**ಚಕ್ಷುಸ್ಸು** (ನಾ).=ಚಕ್ಷು : ಚಕ್ಷುಸ್ಸು, ಶ್ರೋತ್ರ, ಘ್ರಾಣ, ರಸನ ಮತ್ತು ತ್ವಕ್ ಎಂಬುವು ಜ್ಞಾನೇಂದ್ರಿಯಗಳು (ಭಾತತ್ತ್ವ. ೭೦). [ಸಂ. ಚಕ್ಷುಸ್]

**ಚಕ್ಷೂರಾಗ** (ನಾ).=ಚಕ್ಷುಃಪ್ರೀತಿ: ಯಾರಿಗಾದರೂ, ಎಲ್ಲಿಯಾದರೂ ಆನಂದಮಯವಾದ ಪ್ರೀತಿಯುಂಟಾದರೆ ಜನರು ಅದಕ್ಕೆ ತಾರಾಮೈತ್ರಿಯೆಂತಲೂ, ಚಕ್ಷೂರಾಗವೆಂತಲೂ, ಅನ್ನುತ್ತಾರೆ; ಅದನ್ನೇ ಬಲ್ಲವರು ಅಬಾಧಿತವಾದಂಥ ಅಕೃತ್ರಿಮಪ್ರಣಯವೆಂದು ತಿಳಿಯುತ್ತಾರೆ (ಉರಾಜ. ೧೩೬). [ ಸಂ. (ಚಕ್ಷುಸ್ + ರಾಗ) ]

**ಚಗಚೆ, ಚಗಚ್ಚೆ, ಚಗತೆ, ಚೊಗಚೆ** (ನಾ). ಒಂದು ಬಗೆಯ ಗಿಡ; ಚಕ್ರಮರ್ದ : "ಕರವಸಂ ಚಕ್ರಮರ್ದಂ ಚಗಚೆಯಕ್ಕುಂ" (ಮಂಗರಾ. ೩೯–೨೭) ; ಚಾರು ಚಗಚೆ ದೊಟ್ಟೆಲ್ಸೆಂಬೆಗಳ ಸುಸಾರದ ಶಾಖಾಳಿಗಳಂ ಸಲೆ ಸಂಭಾರಂ ಬೊರೆದುಪ್ಪಿನಕಾಯಿಗಳೆಡೆಮಾಡಿದಳು (ಮದೇಪು. ೨೭–೭). **ಚಗಚ್ಚೆ** : ಅರಗಾಮಳಕಫಳಂ ವೃಕ್ಷ ರಾಜಪತ್ರಂ ಚಗಚ್ಚೆ[ಪಾಠಾಂ. ಚೆ]ಯೆಕ್ಕೆಯಿಮಂ ಕೊಂಡರೆದಿಂಬಾಗಿರೆ ಪೂಸುಗೆ ಶಿರೋವ್ರಣಂ ತರ್ದು ದುಂದುಜಿಂಬಿಷ್ಟ ಕಿಡುಗುಂ (ಲೋಕೋಪ. ೯–೫೮). **ಚಗತೆ:** "ಗಜಾಖ್ಯಾ–ಚಗತೆ" (ಓಷಧಿ.೪೫). **ಚೊಗಚೆ:** ಮಲ್ಲಿಗೆ ಸೇವಂತಿಗೆ . . . ಚೊಗಚೆ ಎಂಬ ಹೂಗಳೂ (ಮುಂಬಯಿ. ೫–೧೯೬). 'ತಗಚೆ' ಪರಾ. [<ಸಂ. ಚಕ್ರಗಜ]

**ಚಗಚ್ಚೆ** 'ಚಗಚೆ' ನೋ.

**ಚಗತಳಿ** 'ಚಗತಿಳಿ' ನೋ.

**ಚಗತಿ** (ನಾ). ಒಂದು ಬಗೆಯ ಔಷಧಿ ಸಸ್ಯ (?) : ಕೆಂಪಿನ ಕಣಿಗಿಲು ಬೇರ ತೊಕ್ಕು, ಕಕ್ಕೇ ಚಿಗುರು ಚಗತಿ ಬೀಜ . . . ಇವಂ ನಿಂಬೇಹುಳಿಯಲ್ಲರೆದು ಲೇಪವಂ ಮಾಡೆ ಮೈಯ ಸರ್ವ ತಿಮಿರ ಮಾಣ್ಗುಂ (ವಿಷ್ಯವಿ. ೬೯). 'ಚಗಚೆ' ಪರಾ. [ ? ]

**ಚಗತಿಳಿ,** ಚಗತಳಿ, ಚಿಗೆತಳಿ (ನಾ). ಸಣ್ಣ ಚೂರಂ,–ತುಂಡಂ: ಹದನಾಗಿ ಕೆಂಡದೊಳು ಬೆಂದ ಬಾಳೆಯಕಾಯ ಪುದಿದ ಸಿಪ್ಪೆಯ ತೆಗೆದು ಕುಯ್ದು ಚಗತಿ[ಪಾಠಾಂ. ಚಿತ್ತ, ಸೆಗ]ಳಿಗಳುಮಸುದಕದೊಳು ತವರಾಜನಂ ಕದಡಿ (ಸೂಪಶಾ. ೪–೮೯). **ಚಗತಳಿ :** ಮೆತ್ತನುಕ್ಕರಿಸಿಕೊಂಡೀರ ಪಲಸಿನ ಕಾಯ ನೊತ್ತಿ ಹಿಳಿದದನು ಚಗ [ಪಾಠಾಂ. ಚಿಗೆ]ತಳಿ ಮಾಡಿ (ಸೂಪಶಾ. ೩–೭೯); ಸುಟ್ಟ ಬಾಳೆಯ ಕಾಯ . . . ತಿರುಳ ತೆಗೆದು ಚ[ಗ]ತಳಿಯಾಗಿ ಕೊಯ್ದು (ಭೀ ಮ ಸೂ. ೪೨). **ಚಿಗೆತಳಿ :** ಮೇಲಿನ ' ಸೂಪಶಾ. ೩–೭೯' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚಗತೆ** 'ಚಗಟೆ' ನೋ.

**ಚಗರೆ** (ನಾ). ಮೋಯುವಿಕೆ (?) : ಅರಪ ಕತ್ತೆ ಚಗರೆಗೆ ಬಿಟ್ಟ ಹಾಗೆ (ಗಾದ). 'ಚರೆಯು' ಪರಾ. [ ? ]

**ಚಗಳಿಇರುವೆ** (ನಾ). ಒಂದು ಬಗೆಯ ನಸುಕೆಂಪುಬಣ್ಣದ ಇರುವೆ : **ಕೆಂಜಿಗ :** ನಸುಗೆಂಪು ಬಣ್ಣದ ದೊಡ್ಡ ದೊಡ್ಡ ಚಗಳಿಇರುವೆಗಳು ಎಲೆಗಳ ಮೇಲೆಯೂ ಕೊಂಬೆಗಳ ಮೇಲೆಯೂ ಹರಿದಾಡುತ್ತಿದ್ದುವು (ಕಾನೂರು. ೨೯೯). 'ಚೌಳಿ$_1$' ಪರಾ. [ಚಗಳಿ$_0$+ಇರುವೆ$_1$(<ಇಱುಂಪೆ)]

**ಚಗಳಿಸು** (ಕ್ರಿ). (ಉಕ) (ತುತ್ತನ್ನು) ಅಗಿ ; ಚರ್ವಣಮಾಡು : ತುತ್ತನ್ನು ಚೆನ್ನಾಗಿ ಚಗಳಿಸಿ ತಿನ್ನಬೇಕು (ರೂಢಿ).

[ ಚಗಳಿ$_0$ (P ←ಮರಾ. ಚಘಳಣೇ) + – ಇಸು$_3$. ]

**ಚಗಳು** 'ಚಿರಳ್' ನೋ.

**ಚಗಿಸು** (ಕ್ರಿ). = ಚಗಳಿಸು (?): ಪಂಚಾಸ್ಯನಾಹವಕೆ ಸಾರಗನ ಸೇನೆ ಪುಲ್ಲಂ ಚಗಿಸಿದಂತೆ ಕೊಳದಾ ದುಷ್ಟನೊಳು ಕಾರ್ಯ ಮುಂಚಿದಳಲಿನೊಳೊರಲು ವರು ಶೋಕ ನಿನ್ನಿಂದ ತಣ್ಣಿಸುವೆವೆಂಬ ಕಿತರದಿಂ ಚಲಿಸಲಾಗದೇನಾದಡಂ ಸಾಹಸರನಂಚಿನೊಳಗರಸವರಕಾರಣದಿ ಕಾರ್ಯ ಹಸ್ತಂ ಚಗಿಸುತಾತನೆಂ ದೊತ್ತಿ ಪಾದವ ಪಿಡಿದ ಸುಕುಮಾರಿ ಕೇಳೆಂದನು (ಜನಮು. ೨೪–೪೪). 'ಜಗಿ$_1$' ಪರಾ. [ ? ]

**ಚಚು, ಚಾಚೂ** (ನಾ). ೧. ಚ ಮತ್ತು ಚು ಎಂಬ ಅಕ್ಷರಗಳು. ೨. (ಆಲಂ) ಮಾತಿನಲ್ಲಿಯ ಪ್ರತಿಯೊಂದು ಅಕ್ಷರ,–ಪ್ರತಿಯೊಂದು ವಿವರ : ಅವರ ಹಸ್ತಪ್ರತಿಗೆ ಚ–ಚು ತಪ್ಪದಂತೆ ಅಚ್ಚು ಮಾಡಿಸುವುದು ಕಷ್ಟದ ಕೆಲಸ(ಬಿಟ್ಟ.ಅ. ೪ ಆರಿಕ) ; ವಾಲ್ಮೀಕಿಯ ಮಾತುಗಳಲ್ಲಿ ಚ–ಚು ತಪ್ಪದೆ ಎಲ್ಲವೂ ನಿಜವೆಂದು ಸಂಪ್ರದಾಯ ಶರಣರು ಹೇಳುತ್ತಾರೆ (ಭಾರದ. ೮೭). **ಚಾಚೂ : ೨.** ಮಾಡಿದ್ದು ನೋಡಿದ್ದು ಆಡಿದ್ದು ಎಲ್ಲವನ್ನೂ ' ಚಾ ಚೂ ' ತಮಗೆ ವರದಿ ಒಪ್ಪಿಸಬೇಕೆಂಬ ಇಷ್ಟ (ಸುವಸಂ. ೦೨) ; ಅದರ ಚಾಚೂ ಕೂಡ ಅವರು . . . ಯಾರೊಡನೆಯೂ ಹೇಳಿಕೊಳ್ಳದಿರುವುದೂ ಒಂದು ವಿಶೇಷವೇ (ಕಾಬಟ್ಟೂ. ೨೭) ; ಪ್ರಭುಗಳು ತಮ್ಮ ನುಡಿಯನ್ನು ಚಾಚೂ ವ್ಯತ್ಯಾಸ ಪಡಿಸಲಾರರು (ಕುರುಕಾ. ೨೩).

**ಚಚ್ಚ** (ನಾ). ಗರುಡ : ಚಚ್ಚಾ [ಪಾಠಾಂ. ತಾರ್ಕ್ಷ್ಯ] ರವಕೆ ಭುಜಂಗನ ಕೊರಲಂತೆ ಬಾಗಿದಂ (ಅದಿಪು. ೦೨–೧೦೦). [ <ಸಂ. ತಾರ್ಕ್ಷ್ಯ ]

**ಚಚ್ಚಕಾರ** (ನಾ). (ನೃತ್ಯಕ್ಕೆ ಮುಂಚೆ) ಪಾದದಿಂದ ತಾಳ ಹಾಕುವಿಕೆ : " ಆಡಲನುಗೆಯ್ದು ಪದಹತಿ ಚಚ್ಚಕಾರಮಕ್ಕುಂ " (ಮಂಗರಾ. ೨೪–೮).

[ ? ]

**ಚಚ್ಚಗೊಟ್ಟಿ,** ಚಚ್ಚಗೋಷ್ಟಿ, ಚಚ್ಚಗೋಷ್ಠಿ (ನಾ). ಬೈಗಳಿಂದ ಕೂಡಿದ ಮಾತು ; ನಿಂದೆಯ ನುಡಿ : ಆಳಿ ಮೇಳ ಚಚ್ಚಗೊಟ್ಟಿ ಚೌಪಟತನಕಾಗಿ ವ್ರತದಾಳಿಯ ಮಾಡಿಕೊಳ್ಳದೆ ತನುವಿಗೆ ಕಟ್ಟು ಮನಕ್ಕೆ ವ್ರತ ಸರ್ವೇಂದ್ರಿಯ ವಿಸರ್ಜನವಾಗಿ ಮಾಡಿ ಕೊಂಬುದೆ ಸ್ವಯವ್ರತ (ಬಲೇಶ್ವ. ೪೪೦–೩೩). **ಚಚ್ಚಗೋಷ್ಟಿ :** ಸತ್ಯನಾಗಿದ್ದು ಭಕ್ತರು ಜಂಗಮದಲ್ಲಿ ಚಚ್ಚಗೋಷ್ಟಿಯನಾಡುತ ವಿಟ್ಟಿಯ ಭಂಡರಿಗೆ ಸತ್ಯ ಸದಾಚಾರ ಮುಕ್ತಿಭಾವವೊಂದೂ ಇಲ್ಲ(ಬಲೇಶ್ವ. ೬). **ಚಚ್ಚಗೋಷ್ಠಿ :** ಚಚ್ಚಗೋಷ್ಠಿಯ ಮಾಡುವ ವಿಟ್ಟಿಯ ಭಂಡರಿಗೊಪ್ಪೆ (ಅಂಬಿವ. ೪೨) ; ಚಚ್ಚಗೋಷ್ಠಿಯಿಂದ ಒಡೆಯತನ ಹುಚ್ಚಾಗಿ ಕೆಟ್ಟಿತ್ತು (ಶಿವಮಂ. ೬೩). [ < ಪ್ರಾ. ಚಚ್ಚಾರ ]

**ಚಚ್ಚಗೋಷ್ಟಿ** 'ಚಚ್ಚಗೊಟ್ಟಿ' ನೋ.

**ಚಚ್ಚಗೋಷ್ಠಿ** 'ಚಚ್ಚಗೊಟ್ಟಿ' ನೋ.

**ಚಚ್ಚಪುಟ** (ನಾ). [ಸಂಗೀತ] ಒಂದು ತಾಳ ಪ್ರಭೇದ : ವಿತತ ಘನ ಶುಷಿರ ವಾದ್ಯಲಯ ಚಚ್ಚಪುಟ ಚಾಚಪುಟ ಪರಮೇಶ್ವರ ಮುಖಕಮಳವಿ ನಿರ್ಗ್ಗತ ಸು[ಶು]ದ್ಧ ಸಾಳಂಗಬ್ರಹ್ಮವೀಣಾದಿ ಗೇಯ (ಕೊಲ್ಲಾ.ಶಾ. ೨೨–೦೪ ; 1209) ; ಅಂಬಿಕಾಪತಿ ನೃತ್ಯಕಂ ನಿಲಲುಮಾಮಹೇಶಂಬೋಲೆಸೆ ವೆರಡು ತಾಳಂಗೊಂಡು ಚಚ್ಚಪುಟವಿಂಬಿನಿಂ . . . ಸವಿ ತುಂಬಿ ತುಳ್ಕಾಡುತಿರೆ ನಂಬಿಯಿದಿರೊಳಗಭವನಿಂಬಿನಿಂ ನೆಱೆ ನಟಿಸಿದಂ (ಜೀರಮ. ೧೦–೩೩); ಚಚ್ಚು [ಚ್ಚ] ಪುಟದ ಚಾಚು [ಚ] ಪುಟದ ಸಾಂಬ್ರಾಣಿಯ ಕೆಚ್ಚು ಕೀಲಣೆಗಳ ನಡೆದು (ಭರತೆ. ೦೨–೮೩). 'ಚಾಚ ಪುಟ' ಪರಾ. [ಸಂ. ]

**ಚಚ್ಚರ,** ಚೆಚ್ಚರ, ಚೆಚ್ಚರು (ನಾ). ೧. ಬೇಗ ; ಶೀಘ್ರತೆ ; ಜಾಗ್ರತೆ : " ಚಚ್ಚರಮೆನೆ ತುರಿಪಮುಪ್ಪುದು " (ಚಕುನಿ. ೨೯) ; " ಚಚ್ಚರೆನೆ ಚದು ಪಡನೆಯೆನೆ ಬೇಗ" (ಕಶರ. ೩೩); ಪಟಿಯುಂ ತನಗುಂ ಪೊರ್ದದಿರ್ಕೆಮೆ ಚಚ್ಚರದಿಂ (ಮದತಿ. ೮–೦೪) ; ನಾವಾತನನು ರಣದೊಳು ಭರದೆ ಗೆಲಿದೀ ಕನ್ನೆಯಂ ಚಚ್ಚರದೆ ಕೊಂಬೆವೆನುತ್ತೆ (ಕುಮಾರಾ. ೨–೪೩); ಚಚ್ಚರದಿಂ ನಿದ್ರಿತ ನರನೆಚ್ಚಱಿಕೆಯನೆಯ್ದೆ ಪಡೆದವೊಲ್ (ಬಾಧಪು. ೩–೯೦). ೨. ಎಚ್ಚರಿಕೆ ; ಜಾಗರೂಕತೆ : ಅಪರಂಜಿ ಅಂಥ ಚಚ್ಚರದ ಹೆಣ್ಣೇನಲ್ಲ ತಕ್ಕಷ್ಟು ಮೈ ಮರೆದು ನಡೆವವಳೆ (ನವರಾ. III, ೩೬) ; ಈ ಜಂತುಗಳಿಗೆ ಚಚ್ಚರ ಕಡಮೆ; ಶ್ರಮಪಟ್ಟು ತಿಂಡಿಯನ್ನು ಸೇರಿಸಿ ತುಂಬಿಕೊಳ್ಳಲಿಲ್ಲ(ಸುಮಚ. ೨೬). **ಚೆಚ್ಚರ :** ೧. ಚೆಚ್ಚರದಿಂ ಬಟಿಸಂದು ಮಱುಗಿ ಬರ್ಪನ್ನ ಬಲಂ (ಕಾದಂಪೂ. ೬೨೩); ಬಾಲೆಯರಂ ಕೆಲರ್ ಪಿಡಿದು ಚೆಚ್ಚರದಿಂದದರೀಪುಟಂಗಳಂ ಕೀಲಿಸಿ (ಪಂಚಾಮಾ. ೪–೦೦೨); ಪರವೆಯರ ವಾರ್ತೆಯಂ ಕೊಂಡು ಚೆಚ್ಚರ [ಪಾಠಾಂ. ಸಂಭ್ರಮ]ದಿಂದೆ ಬರಲ್ (ನಂಬಿರ. ೧೭–೧೦೦) ; ಪಗಲಾಣ್ಮನ ಮೆಯ್ ಬಿಸುಪೇಱೆ ಮಾಗೆ ಚೆಚ್ಚರದೊಳೆ ಪಾಱೆ (ಕಲ್ಯಾ. ೩೩). ೨. ಮುರಿದು ದಂಡೆಯ ನೋಡಿ . . . ಚೆಚ್ಚರದಿ ಲಾಗಿಸಿ ವೈರಿಯುರವ ಗರ್ಜಿಸಿ ಭೈರ ವಾಂಕ ತಿವಿಯೆ (ಭೈರವೇ. ೪–೦೨೭). **ಚೆಚ್ಚರು : ೨.** ಎನ್ನೊಳಾದನಿತ ಪೇಳ್ವೆವಱಿವುದು ಚೆಚ್ಚರಿಂ (ಮನೋವಿ. ೦–೪೮).

[ ದೇ.೫ ತುಳು. ಚಚ್ಚರ ; ತೆಲು. ಚೆಚ್ಚರ./ಸಂ. ಸತ್ವರ ]

**ಚಚ್ಚರಂ,** ಚರ್ಚರಂ, ಚೆಚ್ಚರಂ (ಅ). ೧. ಬೇಗನೆ ; ಶೀಘ್ರವಾಗಿ ; ಜಾಗ್ರತೆಯಾಗಿ : ಮುರಾರಿಯ ತಂಗೆಯನಪ್ಪುಕೆಯ್ದು ಚಚ್ಚರಮೊಳ ಪೊಯ್ದು (ಪಂಪಭಾ. ೪–೩೪); ಅವಳ ದೀರ್ಘಾಪಾಂಗದೇಶಕ್ಕೆ ಚಚ್ಚರಮಾಗಳ್ ಪರಿತಂದ ಸೇದೆ [ಯೊದವಲ್] (ಕಾದಂಉ. ೪೩); ಅತುಳತರ ಗುಪ್ತಕಾರ್ಯ ಸ್ಥಿತಿಯಾಳೋಚನೆಗಳುಂಟು ನೀಂ ಚಚ್ಚರಮುಪ್ರತಿಮಂ ಕಾಮನನೊಡ ಗೊಂಡು ತರ್ಪುದು (ಗಿರಿಕ. ೭–೦೭). **ಚರ್ಚರಂ : ೨.** ಜಾಗರೂಕವಾಗಿ; ಎಚ್ಚರಿಕೆಯಿಂದ : ಮಿಡಿಯಂ ಕೊಳೆ ಮಣ್ಣಿಂದಂದರಯದವರ್ಚರ್ಚರ ಮವಜ್ಞೆಯಿಂ ನೋಡದೆ ಮಾಡಿದ ರೂಪಿನಂತೆ ನೇರ್ಪಿಲ್ಲದ ವಿಕಟಾಕೃತಿಯ ಹುಂಡ ಸಂಸ್ಥಾನಗಳುಂ (ಶ್ರಾವಕಾ. ೨೦–೨). **ಚೆಚ್ಚರಂ : ೧.** " ಝಡಿತಿ ಲಘು ಶೀಘ್ರಂ ಸತ್ವರಮಾಶು ಚೆಚ್ಚರಂ " (ವಸ್ತುಕೋ. ೦೦೩–೦೩); ಚೆಚ್ಚರಮುಪರಾಂಬುರಾಶಿಗಿಟಿವಂತಿಟಿದಂ ಕಮಳೈಕಬಾಂಧವಂ (ಪಂಪಭಾ. ೦೦–೩೦) ; ಈ ಕಜ್ಜದೊಳ್ ನೀಂ ತೊಡರ್ದು ಮರುಳೆ ಬೆಂಡಾಗದಿರ್ ಪೋಗು ನೀಂ ಚೆಚ್ಚರಂ (ಗದಾಯು. ೯–೦೩) ; ತಡೆಯಲೆಡೆಯಿಲ್ಲ ಚೆ(ಚ)ಚ್ಚರಮೊಡರ್ಚು ನಿನಗಾರ್ಮುಪ್ಪ ಧರ್ಮಮಂ (ಜೀವಸಂ. ೨೭–೩೦). ೨. ಚೆಚ್ಚರಮೆನೆ ಕಲ್ಪಲತಿಕೆಗಚ್ಚರಿಯರ್ ಮೆಲ್ಲನಮೃತರಸಮಂ ಪೊಯ್ವಂ

ತುಚ್ಚವದಿಂದಾ ಸೌಂದರಿಗೊಚ್ಚಿರೆಗಣ್ಣಬಲೆಯರ್ಕಳೆಟಿದರ್ ನೀರಂ (ಉದ್ಭಟ. ೮-೨೨). ೩. ದಿಟವಾಗಿ; ನಿಶ್ಚಯವಾಗಿ: ಚೆಚ್ಚರಮುಪನೀತಳಂ ತನಗೆ ಸಾರ್ದಪ್ಪೊಲೊರ್ವಳ್ ದಲುಣ್ಬ ಪೊಣ್ಮೆದಂ (ಧರ್ಮಾಮೃ. ೬-೮೧); ಮನಸಿಜನೆಚ್ಚೊಡಾವ ತೆಱನಕ್ಕುಮೊ ಚೆಚ್ಚರಮೆನ್ನ ಪೇಟ್ದುದಂ ತನಗಿ ವನೆಯ್ದೆ ಬಿನ್ನವಿಪನಂ ಪಿಡಿದಿರ್ಕುಮೆ ದೇವ ಜೀವಮಂ (ವರ್ಧಪು. ೪-೮೦). ೪. "ನಿರ್ನಿಮಿತ್ತವಾಗಿ" (ಕಾದಂಊ. ೭೦೬): ಪುರುಷಾರ್ಥತ್ರಿತಯಮುಮನವ ಧರಿಸದೆ ವೈರಾಗ್ಯಮೇಕೆ ಪುಟ್ಟಿದುದೊ ಚೆಚ್ಚರಮೆಂಬುದನಾಂ ಪೋಗಿಯೆ ತಿಳಿವೆಂ (ಕಾದಂಊ. ೪೩೩). [ <ಚೆಚ್ಚರ ]

**ಚಚ್ಚರಂದಳೆ** (ಕ್ರಿ). ಎಚ್ಚರಿಕೆ ವಹಿಸು; ಜಾಗರೂಕತೆಯನ್ನು ಹೊಂದು: ನಳಿನಾಕ್ಷಿಯೊರ್ವಳೀಕ್ಷಣರಜ್ಜುವಿಂ ವಿಧುವನೆಳೆತಂಸಿ ಕಣಿಸಿದಪಳೋ ಯೆನಲ್ ಚಚ್ಚರಂದಳೆದೊಳಗೆ ಮೌಕ್ತಿಕದಚೆಂಡನೊರ್ವಳ್ ಪೊಯ್ವು ತಿರ್ದಳ್ ವಿಲಾಸದಿಂದೆ (ಜಿಬಪು. ೧೦-೦೬). [ ಚೆಚ್ಚರ + ತಳೆ$_1$ ]

**ಚಚ್ಚರಿ** (ನಾ). [ಸಂಗೀತ] ಒಂದು ಬಗೆಯ ತಾಳ : ತ್ರಿವಿಡ ಚಚ್ಚರಿ ರ್ಝಂಪೆಯಟಯೇಕತಾಳವುಂ ವಿವರವಱಿತುಂ ತಾಳಧಾರಿಗಳು ನುಡಿಸೆ (ಪ್ರಭುಪು. ೨-೬೭). [ <ಪ್ರಾ. ಚಚ್ಚರೀ. / ಸಂ. ಚರ್ಚರೀ ]

**ಚಚ್ಚರಿಗ, ಚೆಚ್ಚರಿಗ** (ನಾ). ೧. ಆತುರಗಾರ ; ದುಡುಕುವವನು: (+). ೨. ದುಡುಕಿ ಮಾತಾಡುವವನು: ಚ [ಪಾಠಾಂ. ಚೆ] ಚ್ಚರಿಗಂ ಪರಿವಾಯಂ ತುಚ್ಛಳನತ್ಯುಗ್ರಕೋಪಿ ಮೂರ್ಖಂ ಕಿಸಱೊಳ್ ಕಿಚ್ಚಿಡುವನೆನಿಪ ಖಳನುಂ ಬಚ್ಚರಿಗನೆನಿಕ್ಕುಮೊಂದಿ ಜೈನರ ಕೆಲದೊಳ್ (ಸಮುಪ. ೬-೧೦೬). **ಚೆಚ್ಚರಿಗ:** ೩. ವೇಗವುಳ್ಳವನು : "ಪ್ರಪೂರ್ಣಃ, ತ್ವರಿತಃ, ತೂರ್ಣಃ, ಉತ್ಸುಕಃ, ಪ್ರಸೃತಃ—ಈ ೫ ಚೆಚ್ಚರಿಗಂ" (ಹಲಾಯು. ೫೮-೧೯೮); "ತ್ವರಿತನುತ್ಸುಕ ನೆನಲು ಪ್ರಸೃತಂ ತೂರ್ಣನೆಂದರೆ ಬೆ[ಚೆ]ಚ್ಚರಿಗನಕ್ಕು" (ತುಂಗರಾ. ೬೯-೧೨). [ ಚೆಚ್ಚರ + – ಇಗ ]

**ಚಚ್ಚಹುಚ್ಚಗೆ** (ಅ). ಅಡ್ಡತಿಡ್ಡವಾಗಿ; ಕ್ರಮತಪ್ಪಿ; ಹುಚ್ಚುಹುಚ್ಚಾಗಿ: ಚಚ್ಚಹುಚ್ಚಗೆ ನಡೆದರು ಭುಜಬಲಿರಾಜ ಮೆಚ್ಚುವನದಾಂಬರವರು ಹುಚ್ಚು ನಡೆಗೆ ನೀನು ಮೆಚ್ಚಿಯೆಂದವರೆಲ್ಲ ಬೆಚ್ಚಿ ದೂರದೊಳಿರುತಿಹರು (ಭರತೇ. ೨೦-೧೨೧). [ ಚಚ್ಚಹುಚ್ಚು + – ಅಗೆ$_3$ ]

**ಚಚ್ಚಹುಚ್ಚು** (ನಾ). ಹುಚ್ಚುಹುಚ್ಚು; ಅಸಂಬದ್ಧವಾದುದು; ವಿಕೃತಿ: ಚಚ್ಚಹುಚ್ಚಾಗದೆ ಚಂದಚಂದದೊಳು ಪಳಚ್ಚನೆ ಪಾಡಿದರೊಸೆದು (ಭರತೇ. ೧೨-೮೩); ಚಚ್ಚಹುಚ್ಚಂಗವನಂದಚಂದವ ಮಾಡಿ ಮೆಚ್ಚಿ ಕೈವಿಡಿದಿಹರುಂಟು ಉಚ್ಚಳಿಸುವ ಚೆಲ್ವನಂಗವ ತಪಸಿಗೆ ವೆಚ್ಚಿಪರಾರಿವರಂತೆ (ಭರತೇ. ೭೦-೦೧೩). [ ಚಚ್ಚ? + ಹುಚ್ಚು (<ಪುಚ್ಚು) ]

**ಚಚ್ಚು$_1$, ಚೆಚ್ಚು$_1$, ಜಜ್ಜು, ಜಜ್ಜು, ಜೆಜ್ಜು** (ಕ್ರಿ). ೧. ಹೊಡೆ ; ಬಡಿ ; ಕುಟ್ಟು ; ನುರಿಸು : ಡೊಣ್ಣೆಯೊಳು ಚಚ್ಚಿ ಕೆಲವು ಮಿಗಗಳ ಕೊಂದರು (ನೇಮಿಸಂ. ೨-೫೧) ; ಎತ್ತಿ ಕುತ್ತಿರಿ ಚಚ್ಚು ತಿವಿವತ್ತ ಹಳಚು (ಜನಮು. ೧೯-೩೫). **ಚೆಚ್ಚು$_1$:** ಅವಳು ಕೋಪದಿಂದ ಮಗುವನ್ನು ಚೆಚ್ಚಿದಳು (ರೂಢಿ). **ಜಜ್ಜು:** ೧. ಕೂರ್ಮನೆರ್ದೆಯೊಡೆದು ಬೃಹತೀಫಲವನು ಜಜ್ಜಿದಂತಾದುದೀ ವೃಷಪತಿಯ ಸಮರಜಯ(ಜಿಬಪು. ೪೪-೨೦); ಗೋಧಿಯನ್ನು ಜಜ್ಜಿ ತಾಳಗ ಳನ್ನಾಗಿಮಾಡಿ ಅಕ್ಕಿಯಂತೆ ಬೇಯಿಸಿ ನಿತ್ಯದ ಊಟಕ್ಕೆ ಉಪಯೋಗಿಸ ಬಹುದು (ಅಡುಶಾ. ೭೩); ಈ ಹಾರೆಯಿಂದಲೇ ತಲೆ ಜಜ್ಜಿ ಕೊಳ್ಳುತ್ತೇನೆ (ಚಂದ್ರಶಾ. ೨೩). △ **ಜಜ್ಝ:** ೨. ನಂಗ್ಗಾಗು ; ವೆಗ್ಗು : – ಪಾದ ಪ್ರಹಾರಂಗಳಿಂ ಗುಜ್ಝಗೊಂಡಂ ಫಣಿಪನಗ್ಗದುವು ದಿಗ್ಗಜಂ ಜರ್ಜಿದುದು ಕಚ್ಛಪಾಂಗಂ (ಜಿಬಪು. ೨೮-೧೧). ೩. ಉತ್ಸಾಹಗುಂದು ; ಕುಗ್ಗು. 'ಜರ್ಜಿಸಂ' ಪರಾ. **ಜೆಜ್ಜು:** ೧. ಮುಂಬಲ್ಲು ಬಿದ್ದು ವೀಳೆಯುವ ಕಲ್ಲೊಳು ಜೆಜ್ಜಿ ತಿಂಬರಲ್ಲದೆ ಬಿಟ್ಟರಾರು (ಭರತೇ. ೭೦-೧೧೨).

[ ದೇ.॥ ತುಳು. ಜಜ್ಜು ; ತೆಲು. ಚಚುಚು ]

**ಚಚ್ಚು$_2$** 'ಚರ್ಚು$_1$' ನೋ.

**ಚಚ್ಚುಕ** 'ಚುಂಚುಕ' ನೋ.

**ಚಚ್ಚುಮಳೆ** (ನಾ). ಚಚ್ಚುವ ಮಳೆ ; ಭಾರಿಮಳೆ ; ರಭಸದ ಮಳೆ : ಮುಂಗಾರಿನ ಚಚ್ಚುಮಳೆಗೆ ಸಿಕ್ಕಬೇಡ (ರೂಢಿ).

[ ಚಚ್ಚು$_1$ + ಮಳೆ (<ಮುಚ್) ]

**ಚಚ್ಚೌಕಮೈಲು** (ನಾ). ಚದರ ಮೈಲು ; ಚೌರಸ ಮೈಲು : ಸಿಂಹಲ ದ್ವೀಪದ ಕ್ಷೇತ್ರಫಲ ಸುಮಾರು ೨೫ ಸಾವಿರ ಚಚ್ಚೌಕ ಮೈಲು (ಮುಂಬಯಿ. ೪-೨೦೦). [ <ಚೌಕ + ಮ್ಯಾಲು$_2$ ]

**ಚಜ್ಜ** 'ಛಜ್ಜ' ನೋ.

**ಚಜ್ಜೆ$_1$** 'ಸಜ್ಜೆ$_1$' ನೋ.

**ಚಜ್ಜೆ$_2$** 'ಸಜ್ಜೆ$_2$' ನೋ.

**ಚಟ್** (ನಾ). ಒಂದು ಅನುಕರಣ ಪದ : ಬಾಣಲೆಯಿಂದ ಕಡಲೆ 'ಚಟ್' ಎಂದು ಸಿಡಿಯಿತು (ರೂಢಿ).

**ಚಟ** (ನಾ). ಗೀಳು ; ತೆವಲು ; ತೀವ್ರಾಸಕ್ತಿ : ಯಾವುದಾದರೊಂದು ಕೆಟ್ಟಚಟ ಬಿದ್ದ ಬಳಿಕ ಅದು ಬೇಗ ಬಿಡುವುದಿಲ್ಲ (ಮುಂಬಯಿ. ೩-೩) ; ಮನುಷ್ಯನೆಂದರೆ ಚಟಗಳ ಒಂದು ಮೂರ್ತಿ (ಮುಂಗಾಪು. ೩೫); ಭಾಷಾಸೇವೆ ಹಲವರಿಗೆ ಆಟವೆನಿಸಿದರೆ ಇನ್ನೂ ಕೆಲವರಿಗೆ ಚಟವಾಗಿದೆ (ಹುಚ್ಚುಹು. ೬೫); ಇನ್ನೂ ನಿಮಗೆ ದುಂದು ಖರ್ಚಿನ ಚಟ ಬಿಟ್ಟಿಲ್ಲ (ಪಂಜಾಗ. ೩೫೪).

[ ?. / ಹಿಂ. ಚಟ = ಕಳಂಕ, ದೋಷ, ಐಬು ]

**ಚಟಕ್$_1$** (ನಾ). ಒಂದು ಅನುಕರಣ ಶಬ್ದ : ಅವನು ಚಟಕ್ಕೆಂದು ಹೊರಟು ಬಿಟ್ಟನು (ರೂಢಿ). 'ಚಟಕ್ಕನೆ' ಪರಾ.

**ಚಟಕ$_1$** (ನಾ). ಗುಬ್ಬಿ ; ಗುಬ್ಬಚ್ಚಿ : ಚಟಕ ಚಾಟಣಕ ಚಕ್ರವಾಕ ಕರಟೆ ಬಳಾಹಕ ಗೃಧ್ರ ಪಿಕ ಮರಕುಟಿಕ (ಮುದೇಪು. ೫-೯). [ ಸಂ. ]

**ಚಟಕ$_2$** (ನಾ). ದರ್ಭೆಯಿಂದ ಮಾಡಿದ ಕೂರ್ಚ, –ಪ್ರತಿಮೆ. 'ಚಟಕ ಶ್ರಾದ್ಧ' ಪರಾ. [ ಸಂ. ]

**ಚಟಕಶ್ರಾದ್ಧ** (ನಾ) ಬ್ರಾಹ್ಮಣರಿಗೆ ಬದಲಾಗಿ ದರ್ಭೆಯನ್ನು ಇಟ್ಟು ಕೊಂಡು ಮಾಡುವ ಶ್ರಾದ್ಧ. [ ಚಟಕ$_2$ + ಶ್ರಾದ್ಧ ]

**ಚಟಕಾಯಿಸು** (ಕ್ರಿ). ಚಟ್ಟನೆ ಹರಿದು ಹಾಕು, –ಕತ್ತರಿಸಿಬಿಡು: (+). [?]

**ಚಟಕೆ** (ನಾ). ೧. ಹೆಣ್ಣುಗುಬ್ಬಿ, –ಗುಬ್ಬಚ್ಚಿ. ೨. ಗುಬ್ಬಿಯ ಹೆಣ್ಣುಮರಿ.

[ ಸಂ. ಚಟಕಾ ]

**ಚಟಕ್ಕನೆ** (ಅ). ಕೂಡಲೆ ; ಒಮ್ಮೆಲೆ ; ತಕ್ಷಣ : ಅವಳು ಮಾಲಗಿಕೊಂಡ ದ್ದನ್ನು ಕಂಡು . . . ಚಟಕ್ಕನೆ ಎದ್ದುನಿಂತು ಆಕಳಿಸಿದ (ಎಡಹ. ೧೧೬).

[ ಚಟಕ್ + – ಅನೆ$_1$ ]

**ಚಟಗಾರ** (ನಾ). ತೆವಲು ಉಳ್ಳವನು; ಗೀಳುವುಳ್ಳವನು: ಬೆಳಗಾಗುತ್ತಲೆ ಬಂದು ರಾತ್ರಿಯಾದ ಮೇಲೆ ಹೋಗುವ ಚಹದಂಗಡಿಯ ಚಟಗಾರರಲ್ಲಿ ಅವನು ಒಬ್ಬನೆನ್ನಬಹುದು (ಜೀಸಬಾ. ೧೩).

[ ಚಟ + – ಗಾರ (< – ಕಾಱ) ]

**ಚಟಗೊಳ್** (ಕ್ರಿ). ತೀವ್ರಾಸಕ್ತಿ ಹೊಂದು ; ಗೀಳುಹಿಡಿ : ವಟಪಕ್ವ ಫಲರುಚಿರಾಧರೆಯಾ ನಿಷ್ಕುಟಿಲಕುಮಾರ ಚಂದ್ರಮನ ಚಟುಲ ಚಕೋರ ಲೋಚನಪುತ್ರಿಕೆಗಳು ಚಟಗೊಂಬಂತೆ ನೋಡಿದಳು (ನೇಮಿಸಂ. ೧೯-೨೦೯).

[ ಚಟ + ಕೊಳ್$_1$ ]

**ಚಟಚಟ** (ನಾ). ಒಂದು ಅನುಕರಣ ಶಬ್ದ : ಚಟಚಟ ಹೆಜ್ಜೆಹಾಕು; ಕಣ್ಣೆಳಕಿನಲ್ಲೇ ಊರುಸೇರಬೇಕು (ರೂಢಿ).

**ಚಟಚಟನೆ** (ಅ). ಚಟಚಟ ಎಂಬ ಶಬ್ದದೊಡನೆ : ಹುಲ್ಲು ವಿಪ್ರನ ಕಪಾಲಕದವುಗಳಲ್ಲಿ ಚಟಚಟ[ಪಾಠಾಂ. ಚಟಚಟ]ನಪ್ಪಳಿಸಿ ಅವಳಿಲ್ಲಿಗೆಳತಹು ದೆಂದು ನುಡಿದನು (ಜೈನಭಾ. ೨೦-೪೫). [ ಚಟಚಟ + – ಅನೆ$_1$ ]

**ಚಟಪಟ** (ನಾ). ಒಂದು ಅನುಕರಣ ಪದ. 'ಚಟಪಟಗುಟ್ಟು' ಪರಾ.

**ಚಟಪಟಗುಟ್ಟು** (ಕ್ರಿ). ಚಟಪಟ ಎಂದು ಸದ್ದು ಮಾಡು : ಚಟಪಟ ಗುಟ್ಟಿ ಚಟಾಕಿಯು ಮುಂಗಡೆ ರೀವಿಯು ತೋರಂತ ಬರುತಿರಲು (ಸಮಾಲೋ. ೧೯೦). [ ಚಟಪಟ + ಕುಟ್ಟು₁ ]

**ಚಟಪಟಿಕೆ₁** 'ಚಡಪಡಿಕೆ' ನೋ.

**ಚಟಪಟಿಕೆ₂** 'ಚಟುವಟಿಕೆ' ನೋ.

**ಚಟಪಟಿಸು** 'ಚಡಪಡಿಸು' ನೋ.

**ಚಟಮಟಿಸು** (ಕ್ರಿ). ಉದ್ವೇಗಗೊಳ್ಳು; ಉದ್ವಿಗ್ನವಾಗು: ಚಟಮಟಿಸಿ ಕೋಪದಿಂ ಜನನಿಯಂ ದೂರಿದಂ (ಪರಶು. ೨-೨೮) ; ಪಟು ಪರಾಕ್ರಮಿ ಜ್ವಾಲವದನನು ಚಟಮಟಿಸಿ ಕ್ರತುಭುಜರ . . . ನೆರವಿಯು ನಿಱಿದು (ಅಂಬಿಕಾ. ೧೬-೩೭). [ <ಚಟಪಟ + – ಇಸು₂ ]

**ಚಟಮಾರಿ** (ನಾ). ಚಟಕ್ಕೆ ಅಂಟಿಕೊಂಡಿರುವವನು;–ದಾಸನಾದವನು: ಅವನೊಬ್ಬ ಬೀಡಿಯ ಚಟಮಾರಿ (ರೂಢಿ).

[ ಚಟ + – ಮಾರಿ₂ ]

**ಚಟವಟ,** ಚಟುವಟ (ನಾ). ಲಗುಬಗೆ; ತ್ವರಿತ; ಚಪಲತೆ: ಕುದುರೆಗಳು . . . ಚಟವಟದಿಂದ ಪುನರಪಿ ಎದ್ದು ತಮ್ಮಯ ಸ್ಕಂಧಗಳಿಗಂಟಿರ್ದ ಕುಂಕುಮ ರುಜಾಡಿಸಿದವಾಗ (ರಘುವಂ. ೪೨-೬೭). **ಚಟುವಟ :** ಈ ಬಳು ವಟದ, ಈ ಚಟುವಟದ ಎಲ್ಲ ಮೂರ್ತಿಗಳೂ ಅವನವೇ (ಸವತಿ. ೫೩).

[ <ಚಟಪಟ? ]

**ಚಟವಟಿಕೆ,** ಚಟಪಟಿಕೆ₂, ಚಟುವಟಿಕೆ (ನಾ). ೧. ಲಗುಬಗೆ; ಬೇಗ; ತ್ವರಿತ; "ಚಪಲತನ" (ಗಂಗಾಮ. ೧೨೭). ೨. ಪಟುತ್ವ; ಲವಲವಿಕೆ; ಉತ್ಸಾಹ: ಮಕ್ಕಳ ಚಟವಟಿಕೆ ಮುದುಕರಿಗಿಲ್ಲ (ರೂಢಿ). ೩. ಕೆಲಸ; ಕ್ರಿಯೆ; ಕಾರ್ಯಕಲಾಪ: (೩). **ಚಟಪಟಿಕೆ₂** : (೩). **ಚಟುವಟಿಕೆ :** ೨. ಬಲವಾಗಿದ್ದರೆ ಮನುಷ್ಯನು ಬಹಳ ಚಟುವಟಿಕೆಯಾಗಿರುತ್ತಾನೆ (ಜೀವಾತ್ಮ. ೦೫೩). ೩. ಉಪಾಧ್ಯಾಯರಲ್ಲಿ ಹೆಚ್ಚು ಚಟುವಟಿಕೆ, ನಿಯಮಗಳ ಪ್ರಕಾರ ನಡೆಯುವುದು . . . ಇವೆಲ್ಲ ಹೆಚ್ಚುತ್ತ ಬಂದುವು (ರಂಗಳ. ೦೦೨) ; ಶಾರದೆ . . . ಅದುವರೆಗೂ ನಡೆಸಿದ ಚಟುವಟಿಕೆಗಳ ಸಿಂಹಾವಲೋಕನ ಮಾಡಿ (ವಿದ್ಯಾರಿ. ೨೦). [ ಚಟವಟ + – ಇಕೆ ]

**ಚಟಾಕಿ** (ನಾ). ೧. ಪಟಾಕಿ: ಚಟಪಟಗುಟ್ಟಿ ಚಟಾಕಿಯು ಮುಂಗಡೆ ರೀವಿಯು ತೋರುತ ಬರುತಿರಲು (ಸಮಾಲೋ. ೧೯೦) ; ಹುಡುಗರು ಚಟಾಕಿಗಳನ್ನು ಹಾರಿಸುತ್ತಾರೆ (ರೂಢಿ). ೨. (ಆಲಂ) ಚುರುಕಾದ ಚುರುಕುಮಾತು : ಇದೊಂದು ಹಾಸ್ಯದ ಚಟಾಕಿ ಎಂಬಂತೆ ನಕ್ಕು (ನಡದಾ. I, ೩೦೪) ; ಮುಖಸ್ವಾಮಿ ನಗೆಯ ಚಟಾಕಿಗಳನ್ನು ಹಾರಿಸಿ ಅವರೆಲ್ಲರನ್ನು ನಗಿಸುವವನು (ದೇವಸಾ. ೧೨). [ <ಚಟ್ ]

**ಚಟಾಕು** (ನಾ). ಅಳತೆಯಲ್ಲಿ ಒಂದು ಪ್ರಮಾಣ; ಸೇರಿನ ಹದಿನಾರನೆಯ ಒಂದು ಭಾಗ: ಎಳ್ಳು ಚಟಾಕಿನಂತೆಯೆ ಜೋಳವನ್ನು ಅಳೆಯಿಸಿಕೊಂಡು ಅವನು ಹೊರಟು ಹೋದ (ಜನಜೀ. ೨) ; ಪೇಟೆಯಲ್ಲಿ ಹತ್ತು ಚಟಾಕಿನಂತೆ ಕೊಂಡು ತರಬೇಕಾಗುತ್ತದೆ (ಪ್ರೇಮಾಶ್ರ. ೪). 'ಚಟ್ಟ₁' ಪರಾ.

[ ←ಹಿಂ, ಮರಾ. ಛಟಾಕ್ ]

**ಚಟಿ₁** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ : ಗತಿಪಸರವಡ್ಡಾಯು ವಂಕತಿಕೆ . . . ಸಿಂಹಾನೀಕ ಚ[ಪಾಠಾಂ. ಕ]ಟಿಯೆಂಬ ಚತುರ ಠಾಣದ ತರಹರದೊಳು ಹಲಗೆಯ ಮಗ್ಗುಲೊಳು ಖಡ್ಗಮಂ ಜಡಿದರು (ಸೋಮಚ. ೫-೧೪). [ ? ]

**ಚಟಿ₂** 'ಚಟ್ಟಿ₁' ನೋ.

**ಚಟಿ₃** (ನಾ). (?) : ಪಗಲಿರುಳು ಬಿಡದೊಡರಿಚಿರ್ದರ ಚಟಿಯ ಕೊನೆಳ ಸಲ್ಲುಡನೆ ದಾಸಯ್ಯ (ಮಧುಪ. ೭-೪೩). [ ? ]

**ಚಟಿಕಾಶಿರ** (ನಾ). ಹಿಪ್ಪಲಿಯ ಬೇರು : ಗ್ರಂಥಿಕಂ, ಪಿಪ್ಪಲಿಮೂಲಂ, ಚಟಿಕಾಶಿರಃ ೩ ಹಿಪ್ಪಲಿಯ ಬೇರು (ಸಿದ್ಧಾಂತಿ. ೨೬೪).

[ ಸಂ. (ಚಟಿಕಾ + ಶಿರ) ]

**ಚಟಿಕೆ₁** 'ಚಟ್ಟಿಗೆ' ನೋ.

**ಚಟಿಕೆ₂** (ನಾ). ೧. ಹೆಣ್ಣು ಗುಬ್ಬಿ : ಕಟ್ಟಿದಿರೊಳೊಂದು ಚಟಿಕೆ ನೀಡದೊಳಿರ್ದು ಕಿಱುಮಱಿಯಂ . . . ಲಲ್ಲೆಗೆಯ್ವುದಂ (ರಾಮಾಶ್ವ. ೦೪-೦). ೨. ಹಿಪ್ಪಲಿ ಬೇರು ; ಮೋಡಿಯೆಂಬ ಔಷಧಿ ದ್ರವ್ಯ.

[ ಸಂ. ಚಟಿಕಾ ]

**ಚಟಿಗೆ** 'ಚಟ್ಟಿಗೆ' ನೋ.

**ಚಟಿದಾರ** (ನಾ). ಕುಂಬಾರನು (ತಿಗುರಿಯ ಮೇಲಿರುವ) ಮಡಕೆಯನ್ನು ಕೊಯ್ಯುವ ದಾರ: ಕನಸಿನ ಛಾಯಂ ವ್ಯಕ್ತಿಕೆಯಾಗಿರೆ ನೆನಹುಂ ಚಟಿ[ಪಾಠಾಂ. ಟಿ]ದಾರಂಗಳವಾಗಿರೆ (ಕುಂಬಾ. ೨೫೨-೬) ; ಅದರಿಂದ ತಿರುಗಿಸಿ ಮಾಡಿಥ ಮಡಕೆಗಳನ್ನು ನೆನಹೆಂಬ ಚಟಿದಾರಗಳಿಂದ ಕೊಯ್ದು ಕರಣಗಳಿಂದ ತಿದ್ದಿ ಬಡಿದು (ಶರಣ. ೦೦). [ ಚಟಿ₂ (<ಚಟ್ಟಿ₁) + ದಾರ₁ ]

**ಚಟು** (ನಾ). ೧. ಪ್ರಿಯವಾದ ಮಾತು ; ಹಿತವಾದ ನುಡಿ: "ಚಟು (೩). ಚಾಟು (೩)–ಪ್ರಿಯವಚನಂ" (ಹಲಾಯು. ೨೪–೦೪೪) ; "ಪ್ರಿಯವಪ್ಪ ನುಡಿ ಚಟು ಚಾಟುವಕ್ಕು" (ಮಂಗರಾ. ೨೬–೨). ೨. ಹೊಟ್ಟೆ. [ ಸಂ. ]

**ಚಟುಕು** (ನಾ). ಒಂದು ಅನುಕರಣ ಶಬ್ದ : ಆ ಸತಿಯನಂತೊಮ್ಮೆ ಹೊಡೆಯಲು ಚಟುಕು ಚಟುಕೆನಲು (ಬಸವು. ೫೨–೧೩).

**ಚಟುಪಡಿಕೆ** 'ಚಡಪಡಿಕೆ' ನೋ.

**ಚಟುಲ,** ಚಟುಳ (ಗು). ೧. ಚಲಿಸುವ ಸ್ವಭಾವವುಳ್ಳ; ಚಂಚಲ : ಚಟುಲಮುರಲಾನಿಲೋದ್ಧತ ಪಟುಕೃತಕ ಧೂಳಿ ಪಡೆದುದು . . . ವಿಳಾಸಮಂ ಪ್ರಯಾಣಾಂತರದೊಳ್ (ಶಾಂತಿಪು. ೦೦–೧೭) ; ಮುದ್ಗರಕುಂತ ಚಟುಲ ತೋಮರ ಗದಾಚಕ್ರ . . . ಮೊದಲಾದಾಯುಧಂಗಳಾಂತು (ಕುಮಾರರಾಮ. ೩೨–೬೦). 'ಚಟುಲನಯನ' ಪರಾ. ೨. ವೇಗದಿಂದ ಕೂಡಿದ; ತ್ವರಿತವಾದ: ಮಕುಟ ಸಂಘಟಿತ ಚಕ್ರ ಚಟುಲಗತಿ ನಿಯುದ್ಧಾಯುಧಪಾತರುಧಿರ ಕರ್ದಮಸಮ್ಮರ್ದಿತಮಂ (ಗದಾಯು. ೪–೩೭) ; ಭ್ರಾಳತಟಪಟು ಚಟುಲದಹನ ವಿಶಾಲ ನಯನಂ (ಬಸವು. ೫೦–೮೩). ೩. ಸುಂದರವಾದ ; ಚೆಲುವಾದ ; ಚೊಕ್ಕವಾದ : ಚಟುಲಸ್ವರೂಪನೊಪ್ಪಿದನಜನ ತನುವೆರಳ್ ಸೀಳಾಗೆ (ಜಬಪು. ೧೭–೩). (ನಾ). ೪. ವೇಗ; ತ್ವರಿತ; ಜಾಗ್ರತೆ: ಚಟುಲದಿ ವಿನಿಯೋಗವಿದಕೆ ಪೇಳುವೆ ಲಕ್ಷ್ಯಂ (ತತ್ತ್ವನಿ. ೦೪೩). **ಚಟುಳ :** ೧. ಧನಂಜಯರಥ ಚಟುಳ ಚಕ್ರನೇಮಿ ಧಾರಾಪರಿವೃತ (ಶಂಪಭಾ. ೦೩–೫೦ ವ). ೨. ಕೆಂಧೂಳುಪ್ಪರಿಸಿದುದು ಚಟುಳ ಚಾತುರ್ಬಲದ ಪದಹತಿಗೆ (ಕುಮಾರ. ೩–೨೮) ; ಕೊಂಡು ಹೋಗಾ ವಿಬುಧರಿಪು ವೇತಂಡ ಪಂಚಾನನನಾಹವ ಚಂಡ ಚಟುಳಪರಾಕ್ರಮನ ಮಾಯಾ ತ್ರಿವಿಕ್ರಮನ (ಕೊರಠಾ. ೧–೯–೩). ೩. ಚಟುಳ ಮಣಿ ಕಿಂಕಿಣೀ ಪರಿಘಟಿತ ನಿಜಾಯೋಗಮಾಗಿಸೆದುದು (ಧರ್ಮನಾ. ೪–೦೬). [ ಸಂ. ]

**ಚಟುಲಗಾತ್ರಿ** (ನಾ). ಚುರುಕಾದವಳು : ಸುಂದರಿ ಒಳ್ಳೆಯ ಚಟುಲ ಗಾತ್ರಿ (ಮಹಾಗ. ೦೬೭).

[ ಚಟುಲ + – ಗಾತ್ರ₁ (<–ಗಾತ್ರ) + – ಇ₁ (<– ಇತ್ರಿ) ]

**ಚಟುಲತೆ,** ಚಟುಳತೆ (ನಾ). ೧. ವೇಗ ; ಚಪಲತೆ ; ಲಗುಬಗೆ : ಖನಂ ತಳ್ವಿಲ್ಲದಾನೀಗಳೆ ಚಟುಲತೆಯಿಂ ನಿಪ್ಪನೆಯ್ದುರ್ಪೆನೆಂದೇನಾನುಂ ಸೂರುಳ್ಗಳಿಂ ನಂಬಿಸಿದೊಡೆ (ಸುಕುಮಾ. ೭–೨೦). **ಚಟುಳತೆ : ೨.** ಸೊಗಸು ; ಚೆಲುವು ; ಸೌಂದರ್ಯ : ಗಗನಾಭೋಗಮಲ್ಲಂ ಕರಂ ಚೆಲ್ವಾದತ್ತೆಂಬಂದದೇಂ ಬಂದುದೊ ಚಟುಳತೆಯಿಂ ದೇವದೇವೀನಿಕಾಯಂ (ಸುಕುಮಾ. ೮–೬೪). [ ಸಂ. ಚಟುಲತಾ ]

**ಚಟುಲನಯನ** (ನಾ). ಚಂಚಲವಾದ ಕಣ್ಣು ; ಚಪಲ ದೃಷ್ಟಿ : ಚಟುಲ ನಯನದ ಕುಟಿಲಕುಂತಳೆ ತಮ್ಮಾಳ್ದಂಗೀ ವಿವರವುನಟಿಕೆಗೆಯ್ವುದುಂ (ರಾಮಾಶ್ವ. ೧೨೪-೧೪). [ ಚಟುಲ + ನಯನ ]

**ಚಟುಲಲೋಚನೆ** (ನಾ). ಚಂಚಲವಾದ ಕಣ್ಣುಗಳುಳ್ಳವಳು ; ಚಂಚಲಾಕ್ಷಿ : ಚಟುಲಲೋಚನೆಯಂತೆ ಕುಟಿಲಕುಂತಳೆಯಂತೆ ವಿಟ ಹೆಣ್ಣನಂತೆ ಹಗಲಲ್ಲಿ ಇರುಳು ಸಂಗಟಿನ ಕಾಯಂತೆ (ಸರ್ವಜ್ಞ. ೨೦೮೨).

[ ಸಂ. ಚಟುಲಲೋಚನಾ (ಚಟುಲ + ಲೋಚನ + –) ]

**ಚಟುವಟ** 'ಚಟವಟ' ನೋ.

**ಚಟುವಟಿಕೆ** 'ಚಟವಟಿಕೆ' ನೋ.

**ಚಟುಹುಟುಗಾರ್ತಿ** (ನಾ). ಚಟುವಟಿಕೆಯುಳ್ಳವಳು; ಉತ್ಸಾಹಗಾರ್ತಿ: ಕುಟಿಲಕುಂತಳೆಯಳ ಚಟುಹುಟುಗಾರ್ತಿಯ ನಟನೆಯ ನಡೆಯ ನಾಯಕಿಯ . . . ಪೊಂದುವುದೆಂದೊ (ಶತಸಾಂ. ೨೪-೨೦).

[ ಚಟುಹುಟು? + –ಕಾಟಿ + – ತಿ$_1$ (< – ಇತ್ತಿ) ]

**ಚಟುಳ** 'ಚಟುಲ' ನೋ.

**ಚಟುಳತೆ** 'ಚಟುಲತೆ' ನೋ.

**ಚಟುಳಿತ** (ಗು). ೧. ವೇಗವಾಗಿ ಚಲಿಸುತ್ತಿರುವ : ಚಟುಳಿತ ಚಕ್ರನೇಮಿ ಪರಿವರ್ತನ ಘಟ್ಟನ ಘಾತ . . . ವಿಜಯನುಗ್ರ ರಥಂ ಪರಿದತ್ತು (ಪಂಪಭಾ. ೧೦-೧೪೬). (ನಾ). ೨. ನಡುಗುವಿಕೆ; ಕಂಪನ; ಸ್ಪಂದನ : ಪೊಟ್ಟಗೊಡೆದತ್ತು ರಟತ್ಪಟು ಪಟಹ ಶಂಖ ಭೇರಿಯ ಚಟುಳಿತದಿಂದಟಳಪಟಳವುಂಬರ ಪಟಳಂ (ಪಂಪಭಾ. ೧೦-೬೭). [ ಸಂ. ಚಟುಲಿತ ]

**ಚಟೂಕ್ತಿ** (ನಾ). ಪ್ರಿಯ ವಚನ; ಸಂತೋಷ ಪಡಿಸುವ ನುಡಿ; ಸ್ತುತಿಯ ಮಾತು: ವಿನೋದದಿಂ ಮುಳಿದನಾಂ ನೀನಂಜಲೇಕೆಂದು ಕೋಮಲೆಯುಂ ಕೋಟಿ ಚಟೂಕ್ತಿಯಿಂದೊಸೆಯಿಸುತ್ತಿರ್ದಂ (ಚಂದ್ರಪು. ೮-೩೩).

[ ಚಟು + ಉಕ್ತಿ ]

**ಚಟೂರಿಸು** (ಕ್ರಿ). ಮುಖಸ್ತುತಿ ಮಾಡಿ ಮೋಸಗೊಳಿಸು : ಲಕ್ಷ್ಮೀ ವಿಡಂಬಂ ವಿಡಂಬಿಸದಂತಾಗಿರೆ ಮಾನ್ಯರೆಲ್ಲ ತೆಱದಿಂದಂ ಪೊಕ್ಕು ನಿನ್ನಂ ಚಟೂರಿಸದಂತಾಗಿರೆ ಕಾಮಿನೀತತಿ ವಿಲಾಸಾಪಾಂಗದಿಂದಂ ಪ್ರತಾರಿಸದಂತಾಗಿರಲಾತ್ಮವಂತನೆನಿಸೆಂದುಂ (ಕಾದಂಪೂ. ೩೮೪).

[ < ಚಟು + – ಇಸು$_3$ ]

**ಚಟೆಕಾರ** 'ಚಟ್ಟೆಗಾರ' ನೋ.

**ಚಟ್ಟ$_1$, ಚಟ್ಟು$_1$, ಚಟ್ಟೆ$_2$, ಚಿಟ್ಟು$_1$** (ನಾ). ೧. ಸಮತಲವಾಗಿರುವುದು; ಮಟ್ಟವಾದುದು ; ಚಪ್ಪಟೆ : (+). ೨. ಗಾಡಿ, ಮಂಚ, ಕುರ್ಚಿ, ಚಿತ್ರಪಟ ಮೊದಲಾದುವುಗಳ ಚೌಕಟ್ಟು ಅಥವಾ ಅದರ ಭಾಗ: 'ಗಾಡಿಚಟ್ಟ' ಪರಾ. ೩. ಹೆಣವನ್ನು ಸಾಗಿಸಲು ಉಪಯೋಗಿಸುವ ಬಿದಿರಿನ ಚೌಕಟ್ಟು ; ಸಿದಿಗೆ : ಅಮ್ಮನವರು ಪಟ್ಟಕ್ಕೆ ಬಂದಾಗ ಅಯ್ಯನವರು ಚಟ್ಟಕ್ಕೆ (ಗಾದ). ೪. ಕಟ್ಟಳೆ; ನಿಯಮ; ವಿಧಿ: (+). ೫. ಅಚ್ಚುಕಟ್ಟು ; ಸೊಗಸು ; ಅಣಿ : (+). **ಚಟ್ಟು$_1$:** ೬. (ಪಲ್ಲಕ್ಕಿಯ) ಮೇಲೆ ಹೊದಿಸುವ ಬಟ್ಟೆ,– ಮೇಲ್ಕಟ್ಟು,– ಹೊದಿಕೆ : (+). 'ಗುಬ್ಬಿ ಚಟ್ಟು' ಪರಾ. ೭. ಬೀಜ ಬಲಿಯದ ಕಾಯಿ ; ಎಳೆಯ ಕಾಯಿ ; ಹೀಚು : ಅವರೇಕಾಯಿ ಚಟ್ಟು (ರೂಢಿ). ೮. ಗಡುಸುತನ ; ಗಟ್ಟಿಯಾಗಿರುವಿಕೆ : (+). ೯. ಬೀಜ ತೆಗೆದು ಒಣಗಿಸಿಟ್ಟ ಕಾಯಿ : ನೆಲ್ಲಿಚಟ್ಟು (ರೂಢಿ). **ಚಟ್ಟೆ$_2$ :** ೧. ಪಾರ್ಶ್ವಾಸ್ಥಿಗಳು ದೇಹದ ಮುಂದುಗಡೆಯ ಎದೆಯ ಚಿಪ್ಪು ಎಂಬ ಚಟ್ಟೆಯಾದ ಎಲುಬಿಗೆ ಸಂಧಿಸಲ್ಪಟ್ಟಿವೆ (ಪ್ರಾಣಿಶಾ. ೩). **ಚಿಟ್ಟು$_1$ :** ೭. ಈ ಮರದ ಹುಣಿಸೇಹಣ್ಣು ಬಹಳ ರುಚಿ, ಚಿಟ್ಟಾಗಿರಲಿ, ದೋರೆಗಾಯಾಗಿರಲಿ ಅಥವಾ ಹಣ್ಣೇ ಆಗಲಿ(ನನ್ನೂರು.೧೯೯). ೯. ತಿನ್ನಲು ಮಾಡಿಟ್ಟ ಹಲಸಿನ ಹಣ್ಣಿನ ಚಿಟ್ಟುಕೊಡುತ್ತಾಳೆ (ಎರುಳ. ೩೨).

**ಚಟ್ಟದ ತೋಳು, ಚಟ್ಟನ ತೋಳು** = ಗಾಡಿಯ ಚೌಕಟ್ಟಿಗೆ ಎರಡೂ ಮಗ್ಗುಲಲ್ಲಿ ಸಾಲಾಗಿ ನಿಲ್ಲಿಸಿದ ಕಡ್ಡಿ,– ಕೋಲು; ಗುಜ್ಜುಗೋಲು; ಕಳಗ : (+).

[ ದೇ.॥ ತಮಿ. ಮಲ. ಚಟ್ಟ; ತುಳು. ಚಟ್ಟ, ಚಟ್ಟೆ; ತೆಲು. ಚಟ್ಟ ]

**ಚಟ್ಟ$_2$** 'ಚರಟ' ನೋ.

**ಚಟ್ಟ$_3$, ಚಿಟ್ಟ$_2$** (ನಾ). ನಿಪುಣ ; ಶ್ರೇಷ್ಠ. 'ಮಾಣಿಕಚಟ್ಟ' ಪರಾ. **ಚಿಟ್ಟ$_2$ :** (+). [ < ಸಂ. ಶ್ರೇಷ್ಠ ]

**ಚಟ್ಟ$_4$, ಚಟ್ಟು$_3$** (ನಾ). ಶಿಷ್ಯ ; ಗಂಡ್ಡ : ಸಭಾವಳಯದೊಳೆನ್ನನೇಳಿಸಿದ ನಿನ್ನನನಾಕುಳಮೆನ್ನ ಚಟ್ಟರಿಂ ತಳವೆಳಗಾಗೆ ಕಟ್ಟಿಸದೆ ಮಾಣ್ದೊಡೆ ಕೆಮ್ಮ [ನೆ] ವಿಾಸೆವೊತ್ತನೇ (ಪಂಪಭಾ. ೨-೩೦) ; ಶ್ರೀ ಪಡಿಕಟ ಮೂರುಗ ಬಲರ ಚಟ್ಟ ಸುಟಬಣ್ಣರ ಸುಲ (ಎಕ. II, ೬೦-೩ ; ಸು. 1100) ; ಕಂಸಂ ವಸುದೇವಂಗೆ ಚಟ್ಟನಾಗಿ . . . ಧನುರ್ವಿದ್ಯೆಯಂ ಸಾಧಿಸುತ್ತುಮಿರ್ದಂ (ಅರ್ಧನೇ. ೬-೩೧ ವ) ; ಕಂಸಂ ನಾಂ ಬಿಲ್ಗಲ್ವೆಯ ಚಟ್ಟನೆನ್ನೀಜನನುವರದೊಳ್ ಕುಸಿದಿರಲಾಗದೆಂದು ರಥಮಂ ಬೇಡಿಕೊಂಡು ಸಮರಸನ್ನದ್ಧನಾಗಿ (ಬಂಹರಿ. ೩-೨೮ ವ). **ಚಟ್ಟು$_3$ :** ತಾನುಂ ತನ್ನ ಚಟ್ಟುಗಳುಮಾನೆಯುಸರ ಮನೆಗೆ ತಂದರಸಂಗೊಪ್ಪಿಸಿ (ಧರ್ಮಾಮ್ಮ. ೧೨-೧೩೪).

[ < ಪ್ರಾ. ಚಟ್ಟ. / ಸಂ. ಛಾತ್ರ ]

**ಚಟ್ಟ$_5$** (ನಾ). ಒಬ್ಬಾತನ ಹೆಸರು : ಬನವಸೆಯ ಚಟ್ಟನಾಗರಕಣ್ಡಕ್ಕೆ ಮುನಿದು ಪರಿಯನಟ್ಟಿದಡೆ (ಎಕ. VIII, ಸೊರಬ. ೨೩೪-೭ : 999) ; ಮನ್ನೆಯ ಚಟ್ಟಂ ಬಿಟ್ಟಂ ಮನ್ನೆಯುಮಂ (ಇಆ. XVIII, ೨೭೪-೪೦ ; 1022). [ ? ]

**ಚಟ್ಟಕಟ್ಟು** (ಕ್ರಿ). ಹೆಣ ಸಾಗಿಸುವುದಕ್ಕಾಗಿ ಬಿದಿರಿನ ಚೌಕಟ್ಟನ್ನು ಕಟ್ಟು; ಸಿದಿಗೆಯನ್ನು ರಚಿಸು : ಸತ್ತಮೇಲೆ ಹೆಣ ಸಾಗಿಸುವುದಕ್ಕೆ ಆ ದೇಶದವರು ನಮ್ಮ ಹಾಗೆ ಚಟ್ಟಕಟ್ಟುವುದಿಲ್ಲ (ಪಂಜಾಪ್ರು. ೬೭); ಅವನು ಸತ್ತೇ ಹೋಗಲಿ ಅವನ ಚಟ್ಟಕಟ್ಟಲಿ (ಜಾನಗೀ. ೦೦೩). ಲೋ ! ಕಾಮಣ್ಣನ್ನ ಚಟ್ಟ ಕಟ್ರ್ತೋಣೊ (ದಯ್ಯಮ. ೨೭) : ಮಟ್ಟುಮಿಾರಿ ಉಂಡರೆ ಚಟ್ಟಕಟ್ಟುವದೇ (ಗಾದ). [ ಚಟ್ಟ$_1$ + ಕಟ್ಟು$_1$ ]

**ಚಟ್ಟಗೆಯಿ** (ನಾ). ಶಿಷ್ಯರಿಗಾಗಿ ಕೊಟ್ಟ ಭೂಮಿ : ಭಳಾರಿಗೆ ಮತ್ತ ೬ ಭಟ್ಟಗೆಯಿ ಚಟ್ಟಗೆಯಿ ಮತ್ತ ೬ (ಸೌಇಇ. IX–1, ೭೪-೭ ; 981) ; "ಚಟ್ಟಗೆಯಿ" ಎಂದರೂ ಚಟ್ಟವೃತ್ತಿಯೆಂದೇ ಅರ್ಥ (ಕಶಾಅ. ೨೨೯).

[ ಚಟ್ಟ$_4$ + ಕೆಯಿ (< ಕೆಯ್$_4$) ]

**ಚಟ್ಟಣಿ, ಚಟ್ಣಿ, ಚಟ್ನಿ** (ನಾ). ಒಂದು ಬಗೆಯ ವ್ಯಂಜನ ; ನಂಜಿಕೊಳ್ಳುವುದಕ್ಕಾಗಿ ರುಬ್ಬಿ ಅಥವಾ ಕುಟ್ಟಿಮಾಡಿದ ಖಾರವಾದ ಪದಾರ್ಥ,– ಹಿಂಡಿ: ನಾನು . . . ಚಟ್ಟಣಿ ರುಬ್ಬಿ ಕೊಡಬೇಕು (ಗಾಳಿಪ. ೦೭೩). **ಚಟ್ಣಿ:** ಚಟ್ಣಿ ಕೋಸಂಬರಿ ಕಾಯಿರಸಗಳನ್ನು ಮಾಡುವುದರಲ್ಲಿ ನಮ್ಮ ದೇಶದವರ ಕೌಶಲ್ಯವು ವರ್ಣಸತಕ್ಕಂಥಾದ್ದಿರುತ್ತದೆ (ಮುಂಬಯಿ. ೩-೧೬೭) ; ಚಪಾತಿಗೆ ಅತ್ಯುತ್ತಮ ಕೊಬ್ಬರಿಯ ಚಟ್ಣಿಯನ್ನು ತಯಾರಿಸಿ ಇಟ್ಟಿದ್ದಳು (ಗಂಮಾಯಿ.೦೩). **ಚಟ್ನಿ:** ನಮ್ಮ ಮನೆಯಲ್ಲಿ ಇಡ್ಲಿ ಚಟ್ನಿ ಅಲ್ಲದೆ ಉಪ್ಪಿಟ್ಟೂ ಮಾಡುತ್ತಾರೆ (ಕಪಪು. ೩-೬) ; ನಂಜುವುದಕ್ಕೆ ಹುಚ್ಚೆಳ್ಳಿನ ಚಟ್ನಿ ಬಿಟ್ಟು ಇನ್ನೊಂದನ್ನು ಕಾಣ (ದಾನಚಿಂ. ೮೩) ; ಕುಶೇರ, ನುಗ್ಗಿ, ತುಳಸಿ . . . ಮುಂತಾದವುಗಳ ಚಟ್ನಿಯು ಗ್ರಾಹಕ (ಅಷ್ಟಾಂಗ. ೦೪೧-೦೦೩ ಟೀಕೆ).

**ಚಟ್ಣಿಮಾಡು ; ಚಟ್ನಿಮಾಡು** = ೧. ಚಟ್ಟಣಿ ತಯಾರಿಸು : ರೊಟ್ಟಿಗೆ ನಂಜಿಕೊಳ್ಳಲೆಂದು ಚಟ್ಣಿ ಮಾಡಿದ್ದರು (ರೂಢಿ). ೨. (ಆಲಂ) ನುಗ್ಗು ಮಾಡು ; ಅರೆದಂ ಪೀಡಿಸು : ಸಂಸಾರದೊಳಗೆ ವಿಧಿ ರುಬ್ಬುಗುಂಡಾಗಿ ಚಟ್ನಿಮಾಡಿದನೆನ್ನ ತಿರುವಿ (ಇಂಚಾಪ. ೩೯-೮೪).

[ ← ಮರಾ. ಚಟಣೀ, ಚಟನೀ; ಹಿಂ. ಚಟನೀ; ಸಿಂಧಿ. ಚಟಣೀ ]

**ಚಟ್ಟಣೆ** (ನಾ). ಪಾತ್ರೆಗಳ ಮುಚ್ಚಳ; ಝಾಕಣಿ (ಉಕ): "ಆಹಾರ ಪದಾರ್ಥಗಳನ್ನು ಬಿಸಿಯಾಗಿಟ್ಟಿರಲು ಉಪಯೋಗಿಸುವ ಲೋಹ, ಮೊ.ಗಳ ಮುಚ್ಚಳ; ಚಟ್ಟಣೆ" (Dish-Cover. ಇಂಕನಿ). [ <ಸಂ. ಛಾದನ ? ]

**ಚಟ್ಟನೆ** (ಅ). = ಚಟಕ್ಕನೆ: "ಫಕ್ಕನೆ, ಭೊಂಕನೆ . . . ಚಟ್ಟನೆ, ಚಕ್ಕನೆ, ಗಪ್ಪನೆ, ಗಕ್ಕನೆ, ಬುದಿಂಗನೆ, ಪುಸುಕನೆ" (ಕಂನುಹು. ೮೮೪); ಗಣಪತಿಯು . . . ಅದರ ಮೇಲೆ ಚಟ್ಟನೆ ಹಾರಿ ಕೂತುಕೊಂಡು ಮನೆಗೆ ಹೋದನು (ಮುಂಬಹು. ೪-೮೦); ಶ್ರೀ ಕೃಷ್ಣನು ಹೇಳಿದ ಯೋಗವು . . . ಸಂಸಾರದ ಕಟ್ಟನ್ನು ಚಟ್ಟನೆ ಕಳಚಬಲ್ಲದು (ಗೀತಾಸಂ. ೩). [ ಚಟ್ + – ಅನೆ₁ ]

**ಚಟ್ಟಬ್ಬೆ** (ನಾ). ಒಬ್ಬಾಕೆಯ ಹೆಸರು: ಪುತ್ರಿ ಗುಣಾನ್ವಿತೆ ಚಟ್ಟಬ್ಬರಸಿಗೆ ದೊರೆಯಾರ್ದಾನಧರ್ಮ್ಮಶೀಳೋನ್ನತಿಯೊಳ್ (ಮೈಆರಿ. ೧೯೩೦, ೭೪-೭೭; 1053 ?). [ ಚಟ್ಟ₅ + ಅಬ್ಬೆ₁ ]

**ಚಟ್ಟಯದೇವ** 'ಚಟ್ಟಯ್ಯದೇವ' ನೋ.

**ಚಟ್ಟಯ್ಯ** (ನಾ). ಒಬ್ಬಾತನ ಹೆಸರು: ಬಿಯಳಯ್ಯ ಮಗ ಚಟ್ಟಯ್ಯನಳಿಯ ಕನ್ನಯ್ಯ (ಎಕ. VIII, ಸೊರಬ. ೪೩೩-೭; 972); ಹೊನ್ನಯ್ಯನ ಮಗ ಚಟ್ಟಯ್ಯಂ ಕಲ್ಲಂ ನಿಱಿಸಿದ (ಎಕ. VIII, ಸೊರಬ. ೭೪-೧೩; 1032). [ ಚಟ್ಟ₅ + ಅಯ್ಯ₁ ]

**ಚಟ್ಟಯ್ಯದೇವ, ಚಟ್ಟಯದೇವ** (ನಾ). = ಚಟ್ಟಯ್ಯ: ಚಟ್ಟಯ್ಯದೇವನ ಪರಿ ಬನ್ದು ಊರನಿಱಿದಲ್ಲಿ (ಎಕ. VIII, ಸೊರಬ. ೧೭-೪; 1015). **ಚಟ್ಟಯದೇವ**: ತದಾತ್ಮಜಂ ಚಟ್ಟಯದೇವನಿಂ (ಇಆ. X, ೨೩೦-೧೩; 1108). [ ಚಟ್ಟಯ್ಯ + ದೇವ ]

**ಚಟ್ಟವೃತ್ತಿ** (ನಾ). ಶಿಷ್ಯರ ಅಥವಾ ವಿದ್ಯಾರ್ಥಿಗಳ ಉಪಭೋಗಕ್ಕಾಗಿ ಬಿಟ್ಟ ಭೂಮಿ: ದೇವರ ಅಂಗಭೋಗಕಂ ದೇ[ಗು]ಲಕಂ ಮಾಟಕ್ಕಂ ಚಟ್ಟವೃತ್ತಿ ಬಾಲಶಿಕ್ಷೆಯನಿತುಮಂ ನಡೆಯಿಸುವನ್ತಾಗಿ (ಸೌಇಇ. XI–ii, ೧೭೦-೮೮; 1121). ] ಚಟ್ಟ₄ + ವೃತ್ತಿ ]

**ಚಟ್ಟಸಮಯ** (ನಾ). ಶಿಷ್ಯರ ಸಮೂಹ, –ಗುಂಪು; ಇಪ್ಪಜನಕ್ಕೆ ಚಟ್ಟಸಮಯಕ್ಕೆ ಮಹಾಜನಭೋಜನಕ್ಕೆ ಯುತ್ತಿ ರ್ಪ್ಪ . . . ಚರಾಚರೋರ್ವ್ವಿಯೊಳು (ಎಇ. XVIII, ೧೭೪-೯; 1044). [ ಚಟ್ಟ₄ + ಸಮಯ ]

**ಚಟ್ಟಳಿಕು** (ಕ್ರಿ). (?): ಹಿಮಗಿರಿಗಳನೆಂಬ ಗುಂಡವ ಮಾಡಿದ ಕೃಪುದಪ್ಪ ಮೂರ್ತಿಯ ಚಟ್ಟಳಿಕಿ ವಿಮಲ ಶಕ್ತಿಯ ಹಾಸು ದಟ್ಟನೆ ಮಾಡಿ (ದೇವಾಂಪು. ೩-೯೯). [ ? ]

**ಚಟ್ಟಳಿ₁** 'ಚಡ್ಡಣೆ' ನೋ.

**ಚಟ್ಟಳಿ₂** (ನಾ). ಮಣ್ಣಿನ ಪಾತ್ರೆ: ಚಟ್ಟಳಿಯಲ್ಲಿ ಬಟ್ಟ ಸೊರೆಯೊಳ್ ಪೊಸಗಾಜಿನ ಪಾರು ಪಾತ್ರೆಯೊಳ್ ಬಟ್ಟಲೊಳಿಂದುಕಾಂತಮಯ ಭಾಜನದೊಳ್ಪರಲಾವಯೋಡಿನೊಳ್ . . . ತಿಳಿಗಳ್ಳನದಂ ನೆಱೆ ತುಂಬಿ ತಂದು ಮುಂದಿಟ್ಟುದು ಮಾಱದಗ್ರುಜರನುಕ್ರಮಮಂ ಶಬರೀ ಸಮೂಹಕಂ (ಬಾಧಪು. ೧೦-೧೪೦). ಚಟ್ಟಳಿಯಲ್ಲಿ ತೀವಿದ ಸುರಾರಸಮಂ ಕುಡಿಯುತ್ತು ಮರ್ದನೇರ್ಪಟ್ಟನಿಯಳ್ಗೆ ನೀಡಿ (ಬಾಧಪು. ೧೦-೧೩೩). [ <ಚಟ್ಟಿ₁ ? ]

**ಚಟ್ಟಿ₁, ಚಟ್ಟೆ, ಚಿಟ್ಟಿ₁, ಸಟ್ಟಿ** (ನಾ). ೧. (ಮಣ್ಣಿನಿಂದ ಮಾಡಿದ) ಅಗಲವಾದ ಪಾತ್ರೆ. ೨. ಮಡಕೆ: "ಭಾಂಡದೊಳು ಸಂಕಿಯೊಳ್ ಚಟ್ಟಿ" (ಕಬ್ಬಮಂ. ೯೦); ಚಟ್ಟಿಪೆಂಗಳು ಕೆಲಬರು ಸುಳಿದರು ಹೊನ್ನ ಚಟ್ಟಿ ಸಟ್ಟುಗಗಳನಾಂತು (ಭರತ. ೪-೭೧); ಸುಲಲಿತವೆನಿಪ್ಪ ಚಟ್ಟಿಯ ಮೊಸರನಿಳಿಪಿಕೊಂಡು (ಸಿದ್ಧೇಪು. ೩-೧೮); ಇವುಗಳೆಲ್ಲವನ್ನೂ ಬೇರೊಂದು ಚಟ್ಟಿಯಲ್ಲಿ ಹಸುವಿನ ಬೆಣ್ಣೆ ಸಹಿತ ಒಗ್ಗರಿಸಿ . . . ಕೊಡಲು ದಾಹಜ್ವರ ಬಿಡುವುದು (ಸಕವೈ. ೯೩); ಹುಟ್ಟು ಮೊದಲೀಗರುಹಲೀ ನರಚಟ್ಟಿ ದಿವ್ಯಶರೀರ ವಾದುದು ನಿಮ್ಮ ಕೃಪೆಯಿಂದ (ಅಂಬಿಕಾ. ೪೭-೩); ಅಟ್ಟು ಉಂಡೇನೆಂದು ಚಟ್ಟೀಕುಡಿಕೆ ತಂದೆ (ಜಗೀತ. ೦೭). **ಚಟ್ಟೆ**: ೨. 'ಚಟಿದಾರ' ಪರಾ. **ಚಿಟ್ಟಿ₁**: ೨. ಚಿಟ್ಟಿ ಮಡಕೆಗಳೊಳಗೆ ಭಿನ್ನಪರಿಮಳಂಗಳಂ ಕಟ್ಟಿಕೊಂಡು (ಸೂಪಶಾ. ೪-೪); ಚಿ[ಪಾಠಾಂ. ಚ]ಟ್ಟಿಯೊಳು ತುಪ್ಪವೆಱೆದಿಂಗಿಕ್ಕಿ ಪೊಗ್ಗರಣೆಗೊಟ್ಟು (ಸೂಪಶಾ. ೪-೩೭). **ಸಟ್ಟಿ**: ೨. 'ಕೈಸಟ್ಟಿ' ಪರಾ. [ ದೇ.೫ ತಮಿ. ಮಲ. ತುಳು. ತೆಲು. ಚಟ್ಟಿ ]

**ಚಟ್ಟಿ₂** (ನಾ). (ಕರಾ) ಅಕ್ಕಿ, ಉದ್ದು ಇತ್ಯಾದಿ ಧಾನ್ಯಗಳನ್ನು ಸೇರಿಸಿ ಒರಟಾಗಿ ಹುಡಿಮಾಡಿ ಕಲಸಿ ಕಾವಲಿಯ ಮೇಲೆ ತಟ್ಟಿ ಬೇಯಿಸಿದ ಒಂದು ಬಗೆಯ ತಿಂಡಿ, –ರೊಟ್ಟಿ: ರುಚಿಯಾದದ್ದಕ್ಕೆ ಏನೋ, ಎರಡು ಇಂಥಾ ಚಟ್ಟಿ ತಿಂದರೂ, ಹೊಟ್ಟೆಯ ತುದಿಗೂ ಮುಟ್ಟಿದ ಹಾಗೆ ಕಾಣಿರುವುದಿಲ್ಲ (ಮರಮ. ೬೨). [ <ಚಟ್ಟಿ₁ ]

**ಚಟ್ಟಿ₃** 'ತಟ್ಟಿ₁' ನೋ.

**ಚಟ್ಟಿ₄** 'ಭಟ್ಟಿ' ನೋ.

**ಚಟ್ಟಿ₅** 'ಸೆಟ್ಟಿ' ನೋ.

**ಚಟ್ಟಿಗ** (ನಾ). ಒಬ್ಬಾತನ ಹೆಸರು: ಕಟ್ಟಾನೆಮಲ್ಲನಂ ಕಡುಗಟ್ಟಿಗನುತ್ತಿಗನು ನೊಲಿಪನಂ ಚಟ್ಟಿಗನಂ ತಟ್ಟುಚಿಟ್ಟಿಱಿ (ಎಕ. XV, ಅರಸಿ. ೨೩೭-೧೪; 971); ತುಱುಂಗಳೊ[ಳ್ಪಾ][ರ್ದ್ದು]ದಂ ಕೇಟಲಾಗದು . . . ಚಟ್ಟಿಗನ ಸಿರಿಗನ (ಸೌಇಇ. XI–1, ೩೨-೩; ?). [ ಚಟ್ಟಿ₅ + – ಇಗ ]

**ಚಟ್ಟಿಗೆ, ಚಟಿಕೆ₁, ಚಟಿಗೆ** (ನಾ). = ಚಟ್ಟಿ₁ ೨: ಟ್ಯೆಚಿಟ್ಟ ಬೆಣ್ಣೆಯ ಚಟ್ಟಿಗೆಗಳ ತೆಗೆದಷ್ಟನು ಸವಿದನು (ಪ್ರಸಭಾ. ೦೭-೨೪). **ಚಟಿಕೆ₁**: ವರ ಚಿಂತಾಮಣಿಯಿರುತಿರೆ ಗಾಜಿನ ಚಟಿಕೆಯ ಹಿಡಿದಂತೆ (ಸುಸಾರ. ೧೦೧೪-೭). **ಚಟಿಗೆ**: ತುಪ್ಪದ ಚಟಿಗೆಯನ್ನು ನೆಲುವಿಗೇರಿಸು (ರೂಢಿ). [ <ಚಟ್ಟಿ₁ ]

**ಚಟ್ಟಿಮ** (ನಾ). ಒಬ್ಬಾತನ ಹೆಸರು: ನಾಗಚನ್ದ್ರಭಟ್ಟ ಪುತ್ರಾಯ ಚಟ್ಟಿಮಭಟ್ಟಾಯ . . . ರಾಜಾದಿತ್ಯೇನ ಗ್ರಾಮದ್ವಯಂ ದತ್ತಂ (ಮೈಆರಿ. ೧೯೩೩, ೪೦-೩೪; 951). [ ಚಟ್ಟಿ₅ (<ಸೆಟ್ಟಿ) + ಅಮ (<ಅಮ್ಮ₁) ]

**ಚಟ್ಟಿಸು** (ಕ್ರಿ). ತಲೆ ಬಗ್ಗಿಸು, –ತಗ್ಗಿಸು; ಹಲುಗಿರಿದು ಹುಬ್ಬೇಱಿಸುತ ಹಣುಗುತ್ತ ಹೆದಱುತ ತಲೆಯ ಚಟ್ಟಿಸುತ (ತೊರರಾ. ೩-೭-೪೩). [ ಚಟ್ಟು? + – ಇಸು₃ ]

**ಚಟ್ಟಿಱು, ಚಿಟ್ಟಿರಿ, ಚಿಟ್ಟಿಱು, ಚೆಟ್ಟಿಱು** (ಕ್ರಿ). ೧. (ಸುಗಂಧ ಮೊದಲಾದುದನ್ನು) ಲೇಪಿಸು, –ಬಳಿ, –ಹಚ್ಚು: (ಸ). ೨. = ಚಿಟ್ಟುಬಿಡಿ: "ಸ್ಥಾಸಕಂ, ಹಸ್ತಬಿಂಬಂ – ಈ ೨ ಚಟ್ಟಿಱುವುದು" (ಹಲಾಯು. ೬೯-೩೮೬); ಚಟ್ಟಿಱಿದ ಗೋಡೆಗಳ ರಕುತದ ಹೇಸಿಕೆಯನು . . . ನೆರಹಿದಂ ನಿಳಯದೊಳಗೆ (ಹಚಕಾ. ೧೦-೩೦); ಚಟ್ಟಿಱಿದು ಘಟಮನರ್ಚಿಸಿ ನೆಟ್ಟನೆ ಪೊಸ ಪೂಗಳಿಂದಂ (ಕುಸುಮಾ. ೧೧-೦೩೮); ಬಾಗಿಲರ್ಚಿಸಿ ಚಿಗುರಿಕ್ಕಿ ಚಟ್ಟಿಱಿದು (ಪಸಾರ. ೯೩೩); ದಿಗ್ಭಿತ್ತಿಯೊಳ್ಕೂಡಿ ಚಟ್ಟಿಱಿದಂತಿರ್ದ್ದ ಪುದಪ್ರತರ್ಕ್ಕರ ತೇಜಂ ದೇವರಾಜೇಂದ್ರನಾ (ಸೌಇಇ. IV, ೨೩೭-೨೮; ಸು. 1380); ನೃಪನೊಡಹುಟ್ಟಿದನ ಹೊಯ್ದರುಣಜಲದಲಿ ಚಟ್ಟಿಱಿದು (ಕುವ್ಯಾಕ. ೨೦-೨); ಚಟ್ಟಿಱಿದು ಚಪ್ಪರಿದು ನುಂಗುವ ಭೂತಕೋಟಿಗಳನಟ್ಟಿ (ತೊರರಾ. ೬-೭-೧೨). **ಚಿಟ್ಟಿರಿ**: ೨. ದರಹಾಸಂ ಜೊನ್ನಮಂ ಚಿಟ್ಟಿರಿದು ಕರೆಯೆ ತದ್ರೂಪಮಂ ನೋಡಲಾಗಳ್ (ಚಂದ್ರಪ್ರಭು. ೧೩-೪). **ಚಿಟ್ಟಿಱು**: ೨. ಅಸ್ರಾಂಬುವಿಂ ಚಿ[ಪಾಠಾಂ. ಚೆ]ಟ್ಟಿಱಿದು ಕರುಳಿನಿಂ ತೋರಣಂಗಟ್ಟಿ (ಜಗವಿ. ೬-೧೧). **ಚೆಟ್ಟಿಱು**: ಮೇಲಿನ 'ಜಗವಿ' ಪ್ರಯೋಗದ ಪಾಠಾಂತರವನ್ನು ನೋಡಿ. [ ಚಟ್ಟು₅ + ಇಱು₁ ]

**ಚಟ್ಟು₁** 'ಚಟ್ಟಿ₁' ನೋ.

**ಚಟ್ಟು₂, ಚೆಟ್ಟು₂** (ನಾ). ೧. ಅಶುದ್ಧತೆ; ಕೊಳೆ; ಹೊಲಸು. 'ಮುಟ್ಟು ಚಟ್ಟು' ಪರಾ. ೨. ನಾಶ; ಕೆಡುಕು; ಹಾಳು: ಅವನನ್ನು ಚಟ್ಟು ಮಾಡಿದರು (ರೂಢಿ). **ಚೆಟ್ಟು₂**: (ಸ).
[ ದೇ.೫ ತಮಿ. ಚಟ್ಟು; ತುಳು. ಚಟ್ಟ್; ತೆಲು. ಚೆಡು=ಕೆಡು ]

**ಚಟ್ಟು₃** 'ಚಟ್ಟು₄' ನೋ.

**ಚಟ್ಟು₄** (ನಾ). ಸಣ್ಣಕಲ್ಲಿಂ ತುಂಬಿದ ಭೂಮಿ; ಕಲ್ಲು ಭೂಮಿ: ಈ ಚಟ್ಟನಲ್ಲಿ ಏನು ಬೆಳೆ ಬಂದೀತು (ರೂಢಿ). [←ತೆಲು. ಚಟ್ಟು]

**ಚಟ್ಟು₅, ಚೆಟ್ಟು₃** (ನಾ). ೧. ಗೋಡೆಗೆ ಕೈಯಿಂದ ಒತ್ತುವ ಬಣ್ಣದ ಗುರುತು. 'ಚಟ್ಟುಬಡಿ' ಪರಾ. ೨. ಪ್ರಥಮ ಋತುಮತಿಯಾದವಳು ಗೋಡೆಗೆ ಒತ್ತುವ ಅರಿಸಿನದಿಂದ ಅಂಕಿತವಾದ ಹಸ್ತದ ಗುರುತು. ೩. ಪರಿಮಳ ದ್ರವ್ಯದ ಲೇಪನ; ಸುಗಂಧದ ಲೇಪ: "ಚರ್ಚಾ, ಚರ್ಚಿಕ್ಯಂ, ಸ್ಥಾಸಕಂ—ಈ ೩ ಗಂಧವನಿಟ್ಟು ತೊಳೆವುದರ ಪೆಸರು. ಚಟ್ಟೆಂದು ಎಂಬರು" (ನಾಚಿರಾ. ೧೨೪). ೪. ನಕಲು. 'ಚಟ್ಟುಹೊಡೆ' ಪರಾ. **ಚೆಟ್ಟು₃**: ೧. ಕೋಣವೊಂದು ಸ್ಥಾಪಿತವಾಗಿತ್ತು. ಅದರ ಶರೀರದ ಮೇಲೆಲ್ಲಾ ಭಕ್ತಜನರ ಕೈಯ ಕೆಂಪು ಚೆಟ್ಟುಗಳು ಕಾಣುತ್ತಿದ್ದವು (ಬಾಣಿ. ೪೮). ೨. ಚೆಟ್ಟು ಬಡಿಸುವಶಾಸ್ತ್ರ, ಇನ್ನೂ ಏನೇನೋ ಶಾಸ್ತ್ರಗಳು ಆದುವು (ಚಿಲುಮ. ೩೦೪). ೩. ಪುಣುಗಿನ ಚೆಟ್ಟು ಹರಿಣ ಗೋರೋಚನ ಕೃಷ್ಣಾಜಪುಲಿಚರ್ಮ ನರಿಗೊಂಬುಗಳನಿತ್ತರೊಲಿದು (ಮೋಹತ. ೧೯-೬೫).

[ದೇ.॥ ತಮಿ. ಚಟಙ್ಕು = ಹುಡುಗಿಯು ಪ್ರಥಮ ಋತುಮತಿಯಾದಾಗ ಮಾಡುವ ಸಮಾರಂಭ]

**ಚಟ್ಟು₆** (ನಾ). ಜಟ್ಟಿ ಕಾಳಗದಲ್ಲಿ ಒಂದು ವರಸೆ: ಎಸೆವ ಮುಹಗ್ಗಳಂ ಕಡಕಿ ಕಕ್ಷವಡಂ . . . ಪಾಸಗೆವನ್ನಿಮುಟ್ಟಿ ಚಟ್ಟು ಸಿರಣವಟ್ಟೆ ಬಾಹುದಣೆ ಖಮ್ಮುರಿ ಕತ್ತರಿ . . . ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (ಚಂದ್ರಪು. ೫-೭೮). [ದೇ.॥ ತಮಿ. ಚಟಙ್ಕು]

**ಚಟ್ಟುಕ** (ನಾ). ಸುಗಂಧ ದ್ರವ್ಯಗಳನ್ನು ಸಿದ್ಧಗೊಳಿಸುವವನು,-ಲೇಪಿಸುವವನು; ಘಟ್ಟಿವಳ: ತಟ್ಟುಕಂ ಚಟ್ಟುಕಂ ತಟ್ಟು ಚಟ್ಟು ಶಬ್ದೌ ಶ್ರೀಖಂಡ ಕುಂಕುಮಾದಿ ಗಂಧದ್ರವ್ಯ ಕರ್ದಮ ಕೃತ ಸ್ಥಾಸಕ ವಚನೌ ತತ್ಕುರ್ವನ್ (ಶಬ್ದಾನು. ೪೪೦ ವ್ಯಾಖ್ಯಾ). [ಚಟ್ಟು₅ + – ಕ₃]

**ಚಟ್ಟುಗ** (ನಾ). ಒಬ್ಬಾತನ ಹೆಸರು: ಬಂಟುಗ ಮದಭಂಜನಂ ಜಯಾಂಗನಾ ಮನೋರಂಜನಂ ಚಟ್ಟುಗ ಮದೇಭ ಪಞ್ಚಾನನಂ (ಎಕ. VIII, ಸಾಗರ. ೧೦೯-೪; 1042). [<ಚಟ್ಟು₆]

**ಚಟ್ಟುಬಡಿ** (ಕ್ರಿ). ಮಡಕೆ, ಗೋಡೆ, ಬಾಗಿಲು ಮುಂತಾದುವುಗಳ ಮೇಲೆ, ಕೈಯಿಂದ ಬಣ್ಣವನ್ನು ಒತ್ತು; ಗುರುತು ಮಾಡು: ಬಾಗಿಲು, ಗೋಡೆಗಳ ಮೇಲೆ ಚಟ್ಟು ಬಡಿದಿದ್ದರು (ರೂಢಿ); ಚಟ್ಟು ಬಡಿದಿದ್ದ ಮಡಕೆಗಳನ್ನು ಸಾಲಾಗಿ ಇಟ್ಟು ಪೂಜಿಸಿದ್ದರು (ರೂಢಿ).

[ಚಟ್ಟು₅ + ಬಡಿ₁]

**ಚಟ್ಟುಹೊಡೆ** (ಕ್ರಿ). ೧. ಗೋಡೆಗೆ ಕೈಯಿಂದ ಬಣ್ಣವನ್ನು ಒತ್ತು: ಹರಿಗೆ ಮನೆಗೆ ಪುಣ್ಯಾಹಕ್ಕೆ ಮೊದಲು ಚಟ್ಟುಹೊಡೆ (ರೂಢಿ). ೨. ನಕಲು ಮಾಡು; ಕಾಪಿಹೊಡೆ: ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಪುಸ್ತಕದಲ್ಲಿದ್ದುದನ್ನೇ ಚಟ್ಟು ಹೊಡೆದಿದ್ದರು (ರೂಢಿ). ೩. (ಕರಾ). ಮಂತ್ರೋಚ್ಚಾರು ಹೇಳಿದ್ದನ್ನೇ ಹೇಳು: ಏನೂ ಕೆಲಸವಿಲ್ಲ, ಸುಮ್ಮನೆ ಚಟ್ಟುಹೊಡೆಯುತ್ತಾನೆ (ರೂಢಿ). [ಚಟ್ಟು₅ + ಹೊಡೆ₁ (<ಪೊಡೆ₁)]

**ಚಟ್ಟಿ₁, ಚೊಟ್ಟಿ₁** (ನಾ). ೧. (ಯುರೋಪಿನವರ ಮಾದರಿಯ) ಉಡುಗೆ ತೊಡುಗೆ. 'ಚಟ್ಟಿಗಾರ' ಪರಾ. ೨. ಮೈಮೇಲೆ ಬೆಳ್ಳಗೆ ಸ್ವಲ್ಪ ಉಬ್ಬಿದ ಮಚ್ಚೆಗಳೇಳುವ ಒಂದು ಬಗೆಯ ಗುಹ್ಯರೋಗ; ಪರಂಗಿ ರೋಗ: (+). **ಚೊಟ್ಟಿ₁**.

**ಚೊಟ್ಟಿಯುವ** = ಯುರೋಪಿನವರ ಮಾದರಿಯ ವೇಷಧರಿಸಿದವನು; ಚಟ್ಟಿಕಾರ: ಬಾಗಿಲಿಗೆ ಬೀಗ ಹಾಕಿಸಿ ಬಿಟ್ಟರು. ಮುನಿಸಾಮಪ್ಪನವರು ಚೊಟ್ಟಿಯುವನಿಗೆ ಹೇಳಿ (ಬೆಂಗೂರಿ. ೧೩೪).

[ದೇ.॥ ತಮಿ. ಚಟ್ಟೈ; ಮಲ. ತುಳು. ತೆಲು. ಚಟ್ಟ]

**ಚಟ್ಟಿ₂** 'ಚಟ್ಟಿ₁' ನೋ.

**ಚಟ್ಟಿ₃** 'ತಟ್ಟಿ₁' ನೋ.

**ಚಟ್ಟಿಕಾರ** 'ಚಟ್ಟಿಗಾರ' ನೋ.

**ಚಟ್ಟಿಗಾರ, ಚಟಿಕಾರ, ಚಟ್ಟಿಕಾರ** (ನಾ). ೧. ಯುರೋಪಿನವರ ವೇಷವನ್ನು ಧರಿಸಿದವನು: (+). ೨. ಯುರೋಪಿನ ಹಾಗು ಏಷ್ಯಜನರ ಸಂಕರ ಜಾತಿಯವನು; ಆಂಗ್ಲೋ ಇಂಡಿಯನ್: ಚೌರ್ಗ ಎಂಬ ಚಟ್ಟೀಗಾರನು ಆ ದಿವಸ ಗಾಡಿ ಹೊಡೆಯುತ್ತಾ ಇದ್ದನು (ಮುಮುರಾ. ೧೭). **ಚಟಿಕಾರ**: ೨. ಚಟಿಕಾರರು ಚೌಕಿ ಮಾಡುತ, ನಡಿದರೊ ಹೇಳದೆ ಗುಡದಾಗ (ಕನ್ನಜಾ. ೮೮). **ಚಟ್ಟಿಕಾರ**: (+).

[ಚಟ್ಟಿ₁ + – ಕಾರ₁ (< – ಕಾಱ). / ತಮಿ. ಚಟ್ಟೈಕ್ಕಾರನ್; ಮಲ. ಚಟ್ಟಕ್ಕಾರನ್; ತುಳು. ಚಟ್ಟಿಗಾರೆ; ತೆಲು. ಚಟ್ಟಕಾರ]

**ಚಟ್ಟೋಜ** (ನಾ). ಒಬ್ಬಾತನ ಹೆಸರು: ಅರ್ಜುನೋಜನ ಮಗಂ ಚಟ್ಟೋಜ ಕಲ್ಲಂ ಮಾಡಿಸಿದ (ಎಕ. VIII, ಸೊರಬ. ೦೬-೦೦; 1016); ಗೊಯ್ದಿಸೆಟ್ಟಿಯ ಬೆಸವಗಂ ಅಕ್ಕಶಾಲೆ ಚಟ್ಟೋಜನ ತಮ್ಮಂ (ಎಕ. VII, ಶಿವಮೊ. ೪೩-೩೯; 1172 ?). [ಚಟ್ಟು₆ + ಓಜ₁ (<ಒವಝು)]

**ಚಟ್ಟಗ್ರಾಮ** (ನಾ). ಒಂದು ಊರಿನ ಹೆಸರು: ಪಾವಕದಿಶಿ ಶಮೀ ಯಿ ಕ್ರಿಷ್ಣಪಾಷಾಣಂ ಚ[ಟ್ಟಗ್ರಾ]ಮತಃ ಕ್ರಿಷ್ಣಪಾಷಣಂ (ಸೌಇಇ. XX, ೪-೧೩; 688). [ಚಟ್ಟ? + ಗ್ರಾಮ]

**ಚಟ್ನಿ** 'ಚಟ್ಟಣಿ' ನೋ.

**ಚಟ್ನಿಪುಡಿ** (ನಾ). ಕಡಲೆಬೇಳೆ, ಉದ್ದಿನಬೇಳೆ, ಕೊಬ್ಬರಿ, ಮೆಣಸಿನಕಾಯಿ ಮೊದಲಾದುವನ್ನು ಹಾಕಿ ಮಾಡಿದ ನಂಜಿಕೆಯ ಪದಾರ್ಥ: ಚಟ್ನಿಪುಡಿ ಮುಗಿದು ಹೋಗಿದೆ (ರೂಢಿ). 'ಪುಡಿಚಟ್ನಿ' ಪರಾ.

[ಚಟ್ನಿ (<ಚಟ್ಟಣಿ) + ಪುಡಿ]

**ಚಟ್ನಿ** 'ಚಟ್ಟಣಿ' ನೋ.

**ಚಡ್‌ಸಾಲ್** 'ಛಡಸಾಲ್' ನೋ.

**ಚಡ** (ನಾ). ೧. ಬೇಗ (?): ಬಂದಪನೆತ್ತಿ ವಿಕ್ರಮದಿನೇಟ್ಗೊಳಿಗೊಂಡಪನಂತೆ ಕೂಸ ನಿನ್ನಿಂದೆಮಗೊಳ್ಳಿಯಂ ಬಿಡುವೆ ಪೇೞ್ ತನಗಿಕ್ಕಿದ ಕೋಂಟೆ ತಾಂ ಚಡಂ ಬಂದು ನಿಜೇಶನಾತಕೋಟಿಯಂ ತಿೞಿವಂ ಗಟಪಲ್ಕೆ ಬೇಡ ಪೋಗೆಂದುಜಿದೊತ್ತಿ ಚಪ್ಪರಿಸೆ ಪೋದನವಂ ಪಗೆಸಾರಿ ಕೋಪದಿಂ (ಪುಷ್ಪಪು. ೭-೭೭). ೨. [ಸಂಗೀತ] ರಾಗದಲ್ಲಿ ಒಂದು ಗತ್ತು (?): ಗಹಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ ತನ್ನೆವಣೆ ನಿಸ್ಸರಣೆ ರಂಗರಕ್ತಿ ಬೇಗ ವಣಿತು ತರಹರಂ ಸುರಿಪೊಟ್ಟಜೆ . . . ಬೆಡಂಗು ವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೧೬-೬೭ ವ). [?]

**ಚಡತ** (ನಾ). ಮನೆಯ ಮುಂದಿನ ಜಗಲಿ; ಕಟ್ಟೆ: ಅವರೆಲ್ಲ ಮನೆಯ ಮುಂದಿನ ಚಡತದಲ್ಲಿ ಕುಳಿತಿದ್ದರು (ರೂಢಿ). [?]

**ಚಡತಿ** (ನಾ). ಅಸೂಯೆ; ಹೊಟ್ಟೆಕಿಚ್ಚು; ಕರುಬು: (+). [?]

**ಚಡಪಡ** (ನಾ). ೧. ಅಸಮಾಧಾನ; ಕಳವಳ. 'ಚಡಪಡಿಕೆ' ಪರಾ. ೨. ಆತುರ; ಅವಸರ; ಗಡಿಬಿಡಿ. 'ಚಡಪಡಿಸು' ಪರಾ. [?]

**ಚಡಪಡನೆ, ಚಡಪುಡನೆ, ಚಡುಂಪಡನೆ, ಚಡುಪುಡನೆ, ಚಡುಹುಡನೆ** (ಅ). ಲಗುಬಗೆಯಿಂದ; ಬೇಗನೆ; ತ್ವರಿತವಾಗಿ: "ಚಚ್ಚರಂ . . . ಚಡಪಡನೆ ಭೋರೆನೆ . . . ಶೀಘ್ರಾರ್ಥ" (ಕಬ್ಬಮಂ. ೬೨). **ಚಡಪುಡನೆ**: "ಚಟ್ಟನೆ" (ಹಾನಕೋ. ೫೪) **ಚಡುಂಪಡನೆ**: "ಭೋಂಕನೆ ಚಡು[ಪಾಠಾಂ. ಡ]ಪಡನೆ ಚಚ್ಚರಂಗಳ್ . . . ತುರಿಹವುಂ" (ಕಬ್ಬಿಕ್ಕೈ. ೪೯). **ಚಡುಪುಡನೆ**: ಭೋಂಕಲ್ ಚಡುಪುಡನೆ ಗಿಬ್ಜಿ ತಿಬ್ಜಿನೆಯುಂ . . . ಒದವುಗ್ರುಂ ಶೀಘ್ರಾರ್ಥಂ (ಶಮದ. ೩೦೫). **ಚಡುಹುಡನೆ**: ಚಡುಹುಡನುಂಡು . . . ನಡೆದರ್ (ಸೂಕ್ತಿಸು. ೧೮-೩೫). 'ಸಡುಹುಡನೆ' ಪರಾ. [ಚಡಪಡ + – ಅನೆ₁]

**ಚಡಪಡಿಕೆ,** ಚಟ್ಟುಪಟಿಕ್ಕೆ, ಚಟುಪಡಿಕೆ (ನಾ).=ಚಡಪಡ ೧: ಒಳಗಿನ ಚಡಪಡಿಕೆಯನ್ನು ಆಡಿ ತೋರಿಸುವಂತಿಲ್ಲ (ವ್ಯಿ. ೫೯); ಸಾವಿತ್ರಿಯ ಚಡಪಡಿಕೆ ಕಣ್ಣೀರ ಕೋಡಿಯಾಗಿ ಹರಿಯ ತೊಡಗಿತು (ಚಿಪರಿ. ೨೪೩); ಒಂದು ಒಂದೂವರೆ ತಾಸು ಕುಳಿತರೂ ಯಾರೂ ಬರಲಿಲ್ಲ ಅವನಿಗೆ ಚಡಪಡಿಕೆಯಾಗಹತ್ತಿತು (ಕೃತಕ್ಕೆ. ೧೬೪); ಯಶೋದೆಗೆ ತಡವಾದಂತೆ ಚಡಪಡಿಕೆ ಹೆಚ್ಚಾಯಿತು (ವಾತ್ಸಲ್ಯ. ೨೫೮). **ಚಟಪಟಿಕ್ಕೆ₁ :** (೩). **ಚಟುಪಡಿಕೆ :** ಅನಂತನ . . . ಈ ವ್ಯರ್ಥ ಚಟುಪಡಿಕೆಯನ್ನು ಕಂಡು ಕಮಾಂಡರರೇ ಹೇಳಿದರು (ಸಮುಸಾ. ೧೦೪). [ ಚಡಪಡ + – ಇಕೆ ]

**ಚಡಪಡಿಸು,** ಚಟಪಟಿಸು (ಕ್ರಿ). ೧. ಕಳವಳಗೊಳ್ಳು; ವ್ಯಥೆಪಡು : ಕರುಗಳು ಕಣ್ಣುಮರೆಯಾದ ಕೂಡಲೆ ದನಗಳು ಚಡಪಡಿಸುತ್ತವೆ (ಮುಂಬಯಿ. ೫-೫೩). ೨. ಅವಸರಪಡು ; ಆತುರಪಡು : ಯಾವಾಗ ಅವರನ್ನು ನೋಡಿಯೇನೆಂದು ಆತ ಚಡಪಡಿಸುತ್ತಿದ್ದ (ಪ್ರವಾಇ. II, ೧೯೭). ನನಗೂ ಅವರಂತೆ ಕುಣಿದಾಡಬೇಕು ಎಂದು ಕೈಕಾಲುಗಳು ಚಡಪಡಿಸುತ್ತಲೇ ಇದ್ದುವು (ಶಾಲಿಮು. ೨೨೦). ೩. ಒದ್ದಾಡು ; ಹೊರಳಾಡು : ಒಬ್ಬನು ಆ ಚಡಪಡಿಸುವ ಆತನ ಎರಡೂ ಕೈಗಳನ್ನು ಬಲವಾಗಿ ಹಿಡಿದುಕೊಂಡನು (ವೀರಬಂ. ೫೦); ಕಾಯ್ದ ಹಂಚಿನ ಮೇಲೆ ಹುರಿಯಲು ಹಾಕಿದ ಅರಳಿನ ಜೋಳದ ಕಾಳಿನಂತೆ ಚಡಪಡಿಸಿದನು (ಜಿಂಮುಟಿ. ೨೦); ನಿಮ್ಮ ಕುದುರೆ ನೆಮ್ಮದಿಯಿಲ್ಲದೆ ಚಡಪಡಿಸುತ್ತಿತ್ತು (ಶಾಲಿಮ. ೮೪). **ಚಟಪಟಿಸು :** ೩. ಅಶಾಂತಿಯಿಂದ ಅವಳು ಚಟಪಟಿಸುತ್ತಿದ್ದಳು (ವಂಶವೃ. ೦೯೯). [ ಚಡಪಡ + – ಇಸು₃ ]

**ಚಡಪುಡನೆ** 'ಚಡಪಡನೆ' ನೋ.

**ಚಡರ** (ನಾ). ಕವಚ : "ಸನ್ನಾಹಂ, ಕವಚಂ, ಚಡರಃ . . . ಜಾ(ಳಿ)ಳಕಾ– ಈ ೧೦ ಕವಚಂ" (ಹಲಾಯು. ೬೬-೩೦೫) [ ಸಂ ]

**ಚಡಲೆ** (ನಾ). ಒಂದು ಬಗೆಯ ಮರ : ಅರಿಸಿನ, ಬೂರುಗ, ಚಡಲೆ, ನಾರವಳ್ಳಿ, ನೀರವಳ (ನಮ್ಮುಸು. ೨೩೬). [ ? ]

**ಚಡಾಯ,** ಚಡಾಯಿಂ, ಛಡಾಯ (ನಾ). ೧. (ಪದವಿಯಲ್ಲಿ) ಉನ್ನತಿ ; ಬಡತಿ : ರಾಜಪುತ್ರರ್ಗೆ ಪಸಾಯುವಂಂ ಕೊಡಿಸುತ್ತಂ ವೀರಭಟರ್ಗೆ ಚಡಾಯವಂಂ ಮಾಡಿಸುತಂ (ಬಸರ. ೬-೩೪). ೨. ಅತಿಶಯ ; ಆಧಿಕ್ಯ : ರಾಯರಧಿಕರು ಚಟುಳ ಚರಣ ಚ[ಪಾಠಾಂ. ಛ]ಡಾಯ ಮಾನಿತರಿಳಿದುದಾಖಿಳರಾಯ ದುರ್ಗವ (ತೊರರಾ. ೬-೦೮-೪). **ಚಢಾಯಿ** ೩. ಮೇಲೇರಿ ಹೋಗುವುದು ; ದಾಳಿ : ನಿಂ ಚಢಾಯಿ ಮಾಡುವ ನೀತಿ ಅಸಲ್ ನಿರ್ಭೀತಿ ಹೇಳಿಕೇಳಿ (ಅರಳು. ೩೯೭-೦೦). **ಛಡಾಯ :** ಮೇಲಿನ 'ತೊರರಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ ←ಹಿಂ. ಮರಾ. ಚಢಾಈ ]

**ಚಡಾಯುತಿಕೆ** (ನಾ). (ಕಂದರೆಯನ್ನು) ಏರುವ ಕ್ರಮ,–ಆರೋಹಣ ವಿಧಿ (?): ವಾಮರಾಜ ಪ್ರಿಯ ತನೂಜಾತ ರೂಪುರೇಖೆ ಥಾಪನೆ ಬಯ್ಸಿಕೆ ತೊಡೆಮಡ ಕಯ್ದಾನಿಯೆಂಬ ಚಡಾಯುತಿಕೆಗಾಯುತಿಕೆವಡೆದಾರೂಢ ವಿದ್ಯಾ ವಿಳಾಸ (ಸೌಇಇ. IX–1, ೩೯೩–೩೦ : 1226). [ ? ]

**ಚಡಾಯಿಸು,** ಛಡಾಯಿಸು, ಛಡಾಯ್ಸು (ಕ್ರಿ). ೧. ಏರು; ಹೆಚ್ಚಾಗು; ಚಡಾಳಿಸು : (೩). ೨. ಎತ್ತರಿಸು ; ಹೆಚ್ಚಿಸು ; ಹೆಚ್ಚು ಮಾಡು: (೩). ೩. (ಹೊಡೆತ, ಏಟು ಮೊದಲಾದುವನ್ನು) ಕೊಡು; ಹಾಗಿಸು: (೩). ೪. ಚಬಕದಿಂದ ಅಥವಾ ಬೆತ್ತದಿಂದ ಥಳಿಸು: (೩). **ಛಡಾಯಿಸು:** ೨. ಜಮಾಬಂದಿಗೆ ಜಾಸ್ತಿ ಛಡಾಯಿಸಿ ತನ್ನ ಕೈಕಾಗಜಕ್ಕೆ ಕೂಡಿ ಬರಬೇಕೆಂಬದಾಗಿ (ಮಹಾವಂ. II, ೭೧). **ಛಡಾಯ್ಸು:** ೩. ಆಗ ಆಡ್ಡೇ ಇದ್ದ ಮಾತ್ನೆಲ್ಲಾ ಈಗ ಒಂದಕ್ಕೆರಡಾಗಿ ಛಡಾಯ್ಸಿದೀನ್ನೂ (ದುರಂಸಾ. ೬೩).

[ ಚಡಾಯ + – ಇಸು₃ ]

**ಚಡಾವು,** ಛಡಾವು (ನಾ). ೧. ಏರಿಕೆ ; ಉನ್ನತಿ ; ಬಡತಿ : (೩). ೨. ಏರಂನೆಲ; ದಿಣ್ಣೆ: ಚಡಾವಿನಲ್ಲಿ ಮುಂದಕ್ಕೆ ಹೋಗದೆ ನಿಂತುಬಿಡುತ್ತಿದ್ದಿತು (ಬೈಸರ್ಪ. ೦೨೦). ೩. ಒಂದು ಬಗೆಯ ಮೆಟ್ಟು : ಕೆಲವರು ತುರುಕರ ಸಂಪ್ರದಾಯದ ಚಡಾವುಗಳನ್ನು ಉಪಯೋಗಿಸುತ್ತಿದ್ದರು (ಹುಟ್ಟಿಹ. ೮); ಕಾಲೊಳಗಿನ ಹರಿದು ಹೋದ 'ಚಡಾವ'ನ್ನು ನೆಲಕ್ಕೆ ಅಪ್ಪಳಿಸಿದನು (ಸಕುಮಂ. ೪೪); ಕೆಂಪು ಬಣ್ಣದ ಸೊಗಸಾದ 'ಕಿರಿಕಿರಿ' ಚಡಾವು (ಬಾಳಹೊ.೨). **ಛಡಾವು:** ೩. ನಾನು ಜುಬ್ಬ ತೊಟ್ಟು ಪೈಜಾಮ ಹಾಕಿ ಕಾಲಿಗೆ ಪಂಜಾಬಿ ಮಾದರಿಯ ಛಡಾವನ್ನು ಮೆಟ್ಟಿದ್ದೆ (ಧರ್ಮಶ್ರೀ. ೦೦೫).

[ ←ಹಿಂ. ಚಢಾವ್, ಚಢೌವಾ ; ಮರಾ. ಚಢಾಊ, ಚಢಾವ್ ]

**ಚಡಾಳ,** ಚಢಾಳ, ಛಡಾಳ (ನಾ). ಹೆಚ್ಚಳ ; ಅತಿಶಯ ; ಆಧಿಕ್ಯ : ಭ್ರುಮರಮುದ್ರ್ಯಮರಂಗಳ ಗಾವರಕ್ಕೆ ಜಾವಳಿಸಿ ಚಡಾಳದೊಳ್ಮೊರೆವುವು (ಅನಂಪು. ೧-೬೭); ಸಿರಿಯ ಚಡಾ[ಪಾಠಾಂ. ಛಾ]ಳದಲಿ ತಂದಖಿಳ ವಸ್ತುವ ನಾಲಯದೊಳೊಪ್ಪಿಸಿದನು (ಕುವ್ಯಾಸ. ೫-೬೫) ; ಹೇಳ್ವ ಹೇಳಭಿಮಾನಭಂಗ ಚ[ಪಾಠಾಂ. ಛ]ಡಾಳವಾರಿಂದಾದುದು (ತೊರರಾ. ೩-೫-೪) ; ತೋಳ ಮೂಲಗಳೊಡೆವಂತೆ ಪೆರ್ಮೊಲೆಯ ಚಡಾಳದಿ ಮೆರೆವ ಹೆಣ್ಣುಗಳು (ಮೋಹತ. ೦೪-೬೦) ; ಗಂಧರ್ವ ವಿದ್ಯಾಚಾರ್ಯ ನೃಪಸುತರೂ ಮೇಳೈಸಿ ವೀಣೆಯನು ಕಲಿವ ಚಡಾಳವೇನು (ಸಾಳ್ವಭಾ. ೧೬-೧) ; ನಾಲಗೆದೆರೆದವ ನಂಡೆವೊಂದು ನುಡಿಯ ಚಡಾಳವನೇನ ಬಣ್ಣಿಪೆನು (ಭರತ. ೫೭-೨೪). **ಚಢಾಳ :** ಬಲ್ ಚದುರ ಚಾವಡಿ ಚಢಾಳದೋಳಿ ಜೇಟದ ಥಾಟ ಸಿಂಗರದ ರಂಗಭೂಮಿ (ಪದ್ಮರಾ. ೬-೮೬). **ಛಡಾಳ ;** ಮುನಿವ್ರಜ . . . ಕಡು ಶೋಕರಸದ ಛಡಾಳವನು ನಿಲಿಸಿದರು (ಕುವ್ಯಾಆ. ೫-೨೮); ಬಿಸಿಲ ಛಡಾಳದಿ ಬೆಂದರ್ಗೆ ಮಡುನೀರು ಸಸಿನೆಳಲಿದಿರ್ವಂದಂತೆ (ಮೋಹತ. ೨೭-೧೭).

[ <ಪ್ರಾ. ಛಡಾಲ ]

**ಚಡಾಳತೆ,** ಛಡಾಳತೆ (ನಾ). ಹೆಚ್ಚಳ ; ಆಧಿಕ್ಯ : ಚತುರಂಗದ ಚ[ಪಾಠಾಂ. ಛ]ಡಾಳತೆಯಿಂದ ಚೂರಿಸುವಸ್ತ್ರ ಶಸ್ತ್ರದಲಿ ಹೊದೆಸಿಕೊಂಡುದು ಕಟಿಬ್ಬಲವನು (ತೊರರಾ. ೬-೦೭-೩೦). **ಛಡಾಳತೆ :** ನಿಮ್ಮಾತನುಗಿದೆಬ್ಬಿಸಿದ ಹುಲಿಯೋ ನೊಂದ ಹಂದಿಯೊ ಹಸಿದ ಭುಜಗನೋ ಕಾದ ಕಟ್ಟುಕ್ಕಿನ ಛಡಾಳತೆ[ಪಾಠಾಂ. ಳಿಕೆ]ಯೊ (ಕುವ್ಯಾಆ. ೬.೬). [ ಚಡಾಳ + – ತೆ₃ ]

**ಚಡಾಳಧ್ವನಿ** (ನಾ). ಅಧಿಕವಾದ ಧ್ವನಿ ; ಅತಿಶಯವಾದ ಧ್ವನಿ : ಅದೆ ರಘುಕ್ಷಿತಿಪಾಲಕನ ಚಾಪದ ಚಡಾಳಧ್ವನಿ[ಪಾಠಾಂ. ಧ್ವಾನ]ಯ ಚಿತ್ತೈಸಿದಿರೆ ಮುಂದಿದೆ ಸಮರಭೈರವನುಗ್ರಸಿಂಹರವ (ತೊರರಾ. ೩-೬-೩೩).

[ ಚಡಾಲ + ಧ್ವನಿ ]

**ಚಡಾಳಿಕೆ,** ಛಡಾಳಿಕೆ (ನಾ). ೧. ಉಗ್ರತೆ ; ರಭಸ : ಬಲು ಬಿಸಿಲೊಂದು ಚಡಾಳಿಕೆ ಜಗವ ಭಂಗಿಸಿತು (ಮೋಹತ. ೦೯-೪೭) ; ಇವರ ಬಲುಹು ಮುತ್ತಿವರಟ್ಟುಳಿ ಮೇಣಿವರ ಚಡಾಳಿಕೆ ಇವರ ಕಿಟುಕು (ಭಕ್ತಸ. IV, ೦೪). **ಛಡಾಳಿಕೆ :** ೨. ಅತಿಶಯ ; ಆಧಿಕ್ಯ : ನಾಟ್ಟೆ ಬಸಂತನ ಕಾವು ಕಾಮದೇವನ ರತಿಯಾಜ್ಞೆ ಚಂದ್ರನ ಛಡಾಳಿಕೆ[ಪಾಠಾಂ. ತಳಾರಿಕೆ] ತಂಬೆಲರೊಂದು ಬೆಂಬಲಂ (ಅನಂಪು. ೦-೮೭). (ಸೂಕ್ತಿಸು. ೪-೨೫ ನೋ).

[ ಚಡಾಳ + – ಇಕೆ ]

**ಚಡಾಳಿಸು,** ಚಡಾಳೈಸು, ಚಢಾಳಿಸು, ಛೌಡಾಳಿಸು, ಛಡಾಳಿಸು (ನಾ). ೧. ಅಧಿಕವಾಗು ; ಮೇಲಾಗು ; ಆಧಿಕ್ಯವನ್ನು ಪಡೆ : ತೋಳು ಸಾವಿರವಮರಪತಿ ತೆಱುವಾಳಿನೊಕ್ಕಲು . . . ಶೂಲಿ ಬಾಗಿಲ ಕಾಯ್ವನೀಸು ಚಡಾಳಿಸಿದ ಸಿರಿ ಯಾರಿಗೆ (ಕುವ್ಯಾಸ. ೯-೬೨); ಮೇಲಣಾವರಣಾಂಬು ಕುದಿವುತಿರ್ದುದು ಶಿಖಿ ಚಡಾಳಿಸಲ್ (ಜಿಬಪು. ೩೦-೭). ೨. ಚಾತುರ್ಯದಿಂದ ಜೋಡಿಸು ; ಸೊಗಸಾಗಿ ಅಳವಡಿಸು : ಜಂತ್ರವೀಣೆಯ ತಂತ್ರಿಗಳನು ಚಡಾಳಿಸಿ ಕಂತುವಿನಂಕಮಾಲೆಯನು . . . ಬಾಜಿಪ ಕಾಂತೆ ಕಣ್ಣ

ಸೆದಳು (ಅಂಜನ. ೫-೧೩೨) ; ಹಸುರಂಗಿಯುನು ತೊಟ್ಟನು ಚಡಾಳಿಸಿ ಪದದೊಳೆಕ್ಕಡವ (ಕುಮಾ.ಅ. ೦೩-೦೯) ; ಪೊನ್ನ ದಂಡಿಗೆಯು ಚಡಾಳಿಸಿ ಬಿಗಿದನು (ತ್ರಿಭುತಿ. ೬-೨೬). ೩. ತುಂಬು; ವ್ಯಾಪಿಸು ; ಹಬ್ಬು : ಬಲುಗಾಳಿಗದ ಭಾರಣೆಯು ಬಲುಹು ಚ[ಪಾಠಾಂ. ಛ]ಡಾಳಿಸುತಲಿರ್ದುದು ಚತುರ್ದಶ ಭುವನವೀಧಿಗಳ (ತೊರವೆ. ೬-೦೮-೦೦) ; ಅವನ ಕೀರ್ತಿ ಚಡಾಳಿಸಿತು ತ್ರೈಜಗವನು (ನಳಚ. ೪-೦). ೪. ಪ್ರಜ್ವಲಿಸು; ಥಳಥಳಿಸು : ಬಾಲಸೂರ್ಯನವೋಲ್ . . . ತೇಜದ ವಿಕಾರ ಚಡಾಳಿಸಿತು (ಕುಮಾ.ದ್ರೋ. ೧೮-೩೦) ; ದುಕೂಲ ಮಣಿಭೂಷಣವ ಧರಿಸಿ ಚಡಾಳಿಸುವ ಕಾಂತಿಯುಲಿ ಸಿಂಹಾಸನದಿ ಕುಳ್ಳಿರ್ದ (ನಳಚ. ೯-೦). ೫. ಉರವಣಿಸು; ರಭಸಗೊಳ್ಳು : ಗುರು ಚಡಾಳಿಸಿ ಹೊಕ್ಕನೊಪ್ಪಿಂಗುರವಣಿಸಿದನು ಬಾಹ್ಲಿಕನು (ಕುಮಾ.ವಿ. ೮-೭೯) ; ಹೊಗೆ ಚಡಾಳಿಸಿ ಹಬ್ಬಿತಂಬರವ (ಕೌಶಿಕಾ. ೨೨-೩೫) ; ಕೋಳಿ ರಡನು ಕಟ್ಟಿ ಜಯರಾಜನಿತ್ತ ಚಡಾಳಿಸಿ ತರುತ್ತಿದ್ದನತ್ತ (ಭರತೇ. ೩೪-೯೬).

**ಚಡಾಳ್ಳಿಸು:** ೨. ಕರದ ಬಿಲ್ವೆದೆಯುಂ ಚಡಾಳ್ಳಿಸುತಾಗ ಶತಮಾಯನಿಂದ್ರನ ಸರಿಸದೊಳ್ ನಿಂದು (ಜಂಬೂ. ೪೯-೨೦). **ಚಥಾಳಿಸು :** ೧. ಕೀಲಿಸಿದ ಹೃದ್ವೀಜದಿಂದು ಚಥಾಳಿಸಿದ ಶೀತಾಂಶುವಾಗಲು (ಪ್ರಭುಲೀ. ೨-೧೧) : ವಿಷರಸದ ಬೊಬ್ಬುಳಿಗೆ ಚವಳತೆ ಚಥಾಳಿಸಿತು (ತುರಂಗ. ೬೯-೪೦). ೫. ಕಣೆಗಳಿಂ ಚಥಾಳಿಸಿ ಭಟರ ಕಣೆಗಳಿಂ ಮನ್ನಿಸಿದನು (ತುರಂಗ. ೬೪-೪). **ಚೌಡಾಳಿಸು :** ೫. ಚೌಡಾಳಿಸಿಯ್ಯೊಯುಂಟರೊಳಗೆ ಕಾಯನು ಕೊಂದು ಅವುಕಿ ಬೆತ್ತಿಯೊಳು ಜೋಡೆತ್ತಿ . . . ಹಳದಿ ಜೋಡ ಬವರಕ್ಕೆ ನಿಲಿಸಿಯಾಡಿದರು (ಸೌಂದರ. ೪-೪೦). **ಛಡಾಳಿಸು :** ೧. ಮನಂ ಸೋಲ್ಬು ಕಾಂತನಂ ಕಾತರದೆ ದಾವರಿದೀಕ್ಷಿಸೆ ಛಡಾಳಿಸಿದ ರಾಗದಿಂ (ಪದ್ಮರಾ. ೮-೯೪); ನಾಲಗೆಯು ನೆಣಗೊಬ್ಬು ವಿಕ್ಕು ಛಡಾಳಿಸಿದರೇನಹುದು (ಕುಮಾ.ಶ. ೧೬-೦೭) : ಉರಿ ಛಡಾಳಿಸಿಕೊಡನೆ ಧೂಮವು ಪುರವ ಮುಚ್ಚಿದುದು (ಅಂದಿನಾ. ೪೪-೩೫). ೪. ಥಾಳದ ಬೆಂಬಟವಿಡಿದು ಛಡಾಳಿಸೆ ದೃಗ್ರುಚಿ (ಉದ್ಭಟ. ೧೧-೧೬) : ಮಿತ್ರ ಕುಳಿತಳು ಕಾಂತಿ ಛಡಾಳಿಪ ಮಣಿಮಂಚದೆಡೆಯು ಆಳಿಯರ್ . . . ಪ್ರಕ್ಷಾಳಿಸಿದರು ಪದಯುಗವ (ಮೋಹನ.೩೭-೩೩). ೫. ಕೈದುಕಾಱರ ಗುರು ಛಡಾಳಿಸಿ ಮೈದೆಗೆದು ನಿರ್ಜರರ ನಗರಿಗೆ ಹಾಯ್ದನು (ಕುಮಾ.ದ್ರೋ. ೦-೩) : ಮತ್ತೆ ಖಳರು ಛಡಾಳಿಸುತ ಮೇಲೇಟಿದರು ಘನತರದ ಕೋಪದಲಿ (ಜೀವಂಧ. ೬-೦೩) ; ಈ ದೇಹ ಸುಖದನುಭವ ಛಡಾಳಿಸಿ ಮರಳಿ ನಿನ್ನೆಡೆಗೆಳೆದು ತಹುದು (ಅಕ್ರೂರ. ೪-೭೩). ೬. ವಿರೋಧಿಸು ; ಎದುರುಬೀಳು : ಕೇಳಿಯೊಳಿನಿಯಂಗೆ ಸುಖವನೆಯ್ದಿಸದೆ ಛಡಾಳಿಸಿದವಳ ಪೇರುರವ ಬಾಳಿನೊಳ್ ಸಿಗಿವಂತೆ . . . ಸೀಳಿದಳೊಂದು ಬೆಳ್ಳಿಲೆಯ (ಮೋಹನ. ೦೬-೩೩).

[ ಚಡಾಳ + – ಇಸು$_3$ ]

**ಚಡಾಳ್ಳಿಸು** 'ಚಡಾಳಿಸು' ನೋ.

**ಚಡಿ$_1$** (ನಾ). ಸಣ್ಣಮಾರ್ಗ, ಕಿರುದಾರಿ: ಈಶಾನ್ಯ ಚಡಿಯು ದಾರಿಯುನ್ನೀವಳಯ ಸೀಮೆಯುಂ (ಎಕ. V, ಹಾಸನ. ೬೦-೪೨; 1218); ಜಾಂಬೇಜಿಯಂಥ ದೊಡ್ಡ ಪ್ರವಾಹವು ನಾಲ್ಕು ಕಡೆಗಳಲ್ಲಿ ಮುರಿದು ಈ ಭೂಮಿಯ ಚಡಿಯಲ್ಲಿ ಧುಮುಕುವ ನೋಟವು ಅತಿ ಮನೋಹರವಾಗಿದೆ (ಬಾಲಪ್ರ. I, ೩೦೭). [ < ಪ್ರಾ. ಛೇಂಡೀ ]

**ಚಡಿ$_2$** 'ಛಡಿ' ನೋ.

**ಚಡಿ$_3$** (ನಾ). ಮರಗೆಲಸದಲ್ಲಿ ಎರಡು ಮರದ ತುಂಡುಗಳನ್ನು ಕೂಡಿಸುವ ಸ್ಥಳದಲ್ಲಿ ಮಾಡುವ ಪಡ ಅಥವಾ ಕೂರು ; ಕೊಲು : (ಕ).

[ ? ]

**ಚಡಿಕೆ, ಚಳಕ$_1$, ಚಳಕಿ$_1$, ಛಡಕಿ, ಛಡಿಕೆ** (ನಾ) ಜಟ್ಟಿಕಾಳಗದಲ್ಲಿ ಒಂದು ವರಸೆ : ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟ ಮುಡುಹಂ ಮುಹಡಂ ದಣುವಟ್ಟಿ ಪಟ್ಟಿಸಂ (ಅನಂಪು. ೨-೨೭) ; ಒಡೆವುುರಿವಪಟ್ಟಸಕೆ ಚಾಚುವ ಚಡಿಕೆ [ಪಾಠಾಂ. ಝುಡಿತೆ]ಗೊದಗುವ ಭಟರು ಹೆಣಗಿದರು (ಕುಮಾ.ಸ. ೨-೯೭). **ಚಳಕ$_1$** : ತವದ ನಿಜಕೋಪದಿಂ ಚಳಕವಿನ್ನಣಂಗೊಂಡು ತಕ್ಕಿನೊಳ್ . . . ಡೊಕ್ಕರಿಸಿ ಕೊಂದನಾ ಮುಷ್ಟಿಕನಂ (ಜಗವಿ. ೬ ೬೮) ; ಕೇಣವಿಲ್ಲದೆ ಚಾರಿ ಚಳಕ ಚಾಳೆಯು ಚದುರ್ ಪಾಣಲಾಘವ ಪಂಥ ಪಾಡುಗಳನಱಿದು (ಕ್ಷಮಿಧಾ. ೨೨-೭) ; ಪರಿವಿಡಿಯೊಳ್ ಚಳಕಂ ಮೆಯ್ಸುರಿಯೆಟ್ಟಱು ಕಾಣದೊಳ್ಪು ಪೆಣಗುವ ಸೈಪುಂ ದೊರೆಕೊಂಡ ಕುವರನಿರವಂ ನಿರವಿಸಿದರ್ ಗರುಡಿಯೋಜರವನೀಪತಿಯೊಳ್ (ಚಳವಿ. ೪-೦೩೩). **ಚಳಕಿ$_1$** : ಚಳಕಿ ಚಳವಾಗೆ ಪಾರಂ ಸೆಳೆವೆಳೆವಂ ಪಟ್ಟಸಂಡಿ ಪುಟಪಟ್ಟರೆ . . . ಕೊಱಗಿದಂ ಚಾಣೂರಂ (ಅರ್ಧನೇ. ೮-೧೦೮). **ಛಡಕಿ:** ಎಸೆವ ಮುಹಗ್ಗಳಂ ಛ[ಪಾಠಾಂ. ಠ] ಡಕಿ ಕಕ್ಕವಡಂ ಮುಹಡಂ . . . ಬಾಹುದಣೆ ಖಮ್ಮುರಿ ಕತ್ತರಿ ಮೋಡವಂಕುಶಂ ಸಸಿಕುಮೆನಿಪ್ಪ ಚಿಟ್ಟಗನ ನಚ್ಚಿನ ಬಿನ್ನಣವೊಪ್ಪೆ ಕಾದಿದರ್ (ಚಂದ್ರಪು. ೫-೭೮). **ಛಡಿಕೆ :** ಚೊಕ್ಕೆಯದಾಸಿಗೆ ಪೊಕ್ಕಮಲ್ಲನನಿಕ್ಕಿ ಮೆಟ್ಟವಜ್ರದ ಬಳ್ಳಿಯಂತೆ ಛಡಿಕೆಯೊಳ್ ಬಿಗಿದು ಚಾಳಿಸಿ ನೂಂಕುವ ನೂಂಕೆ ಪೋಗದೆ ನಿಂದ ಸೆಳೆಹನಂ ಸೆಳೆದು ಕೆಡಪಿ (ಗಿರಿಜಾ. ೨-೦೦೫ ವ).

[ ದೇ.? ತೆಲು. ಚಡಿಕಿ, ಚಲಿಕಿ, ಛಡಿಕಿ ]

**ಚಡಿತ$_1$, ಛಡತ, ಛಡಿತ$_2$** (ನಾ). ಮರದ ಸಾಮಾನುಗಳು ಬಿಗಿಯಾಗಿ ಹೊಂದಿಕೊಂಡಿರುವಿಕೆ ; ಹೊಂದಾಣಿಕೆ : ಗಾಜನ್ನು ಪಠದ ಚೌಕಟ್ಟನ ಚಡಿತಕ್ಕೆ ಸರಿಯಾಗಿ ಕೂಡಿಸಿ ಆಮೇಲೆ ಪಠವನ್ನು ಜೋಡಿಸಬೇಕು (ರೂಢಿ). **ಛಡತ :** ಬಾಗಿಲಿನ ಛಡತ ಸರಿಯಾಗಿಲ್ಲ (ರೂಢಿ). **ಛಡಿತ$_2$ :** ಮೇಜದ ಖಾನೆ ಯಾಕೋ ಛಡಿತಕ್ಕೆ ಸರಿಹೊಂದುವುದಿಲ್ಲ (ರೂಢಿ). [ <ಚಡಿ$_3$ ]

**ಚಡಿತ$_2$** (ನಾ). ೧. ಅಧಿಕವಾದ ಬೆಲೆ ; ಏನು ಬೆಲೆ : ಮಾರುಕಟ್ಟೆಯಲ್ಲಿ ಅಡಕೆ ೨೫೦ ರೂ ಚಡಿತಕ್ಕೆ ಹೋಗಿತ್ತು (ರೂಢಿ). (ಗು). ೨. ಹೆಚ್ಚಾದ: ಪೊದವಿಯೊಳು ಇದು ಮೊದಲು ಚಡು[ಡಿ]ತಚಾಡಿಯನಾಡೆ ಬುಡಮುಟ್ಟ ನಾಲಿಗೆಯ ಕೆಡಹಿ ಕೊಯ್ಸುವೆನು (ಶರಲೀ. ೩೩೩-೫).

[ ←ಮರಾ. ಚಢತಾ ]

**ಚಡಿತ್ತ, ಛಡಿತ$_1$** (ನಾ). ಒಂದು ಬಗೆಯ ಸುಂಕ,–ತೆರಿಗೆ (?) ಭೂದಾನದರ್ವಾದ ತಾಂಮ್ರ ಶಾಸನ . . . ೧ ಉಭಯಂ ಗ ೩೫॥೧ ಮೆಣಸಿನ ಚಡಿತ್ತದಿಂದಲೂ ಗ ೭೨॥ ಉಭಯಂ ಗ ೩೫॥೩ (ಎಕ. VIII, ತೀರ್ಥಹ. ೫೮-೦೫ ; 1630): ಮೆಣಸಿನ ಚಡಿತ್ತಗರ ೨॥ ಉಭಯಂ ೧೫೭೧ (ಮೈಆರಿ. ೦೯೩೩, ೨೮-೨೬ ; 1630). **ಛಡಿತ$_1$ :** ವಕಲ ಬಿರಾಡದಿಂದ ಗ ೧೦ ಭತ್ತ ಮೆಣಸಿನ ಛಡಿತ ಗ ೪ ಭತ್ತ ಸುಂಕದಿಂದ ಗ ೯ (ಎಕ. VIII, ತೀರ್ಥಹ. ೦೦೬-೦೯ ; 1702). [ ? ]

**ಚಡಿಘೌಜು** 'ಚಡೆಪವುಜು' ನೋ.

**ಚಡಿಬಾಣ** (ನಾ). ಒಂದು ಬಗೆಯ ಬಾಣ : ಬಾಣಕಾರರು ರಾಮಬಾಣ ಕುಮಾರಬಾಣ, ಚಡಿಬಾಣವೆಂಬ ನಾಲ್ಕಾರು ದಿನಸಿನ ಬಾಣಗಳನ್ನು ಎತ್ತುಗಳ ಮೇಲೆ ಹೇರಿಸಿಕೊಂಡು ಬಂದರು (ಬಖೈರು. ೦೪). [ಚಡಿ? + ಬಾಣ$_1$]

**ಚಡಿಮರಿ** (ನಾ). [ವೀರಶೈ] " ಸಮಾಜದ ಕಾರ್ಯಕ್ರಮ ಏರ್ಪಡಿಸುವ ವ್ಯವಸ್ಥಾಪಕನು, ಮಠಪತಿ " (ಶರಸಾ. ೨೪-೭).

[ ಚಡಿ? + ಮರಿ (<ಮಱಿ) ]

**ಚಡಿಯೇಟು** (ನಾ). ಬೆತ್ತದ ಏಟು,– ಹೊಡೆತ: ನಾನೊಮ್ಮೆ ಹಳ್ಳಿಯಲ್ಲಿ ರೈತನೊಬ್ಬನಿಗೆ ಚಡಿಯೇಟು ಬಾರಿಸುತ್ತಿದ್ದುದನ್ನು ನೋಡಿದೆ (ಪುನರು. ೨೦೯). [ ಚಡಿ$_2$ (<ಛಡಿ) + ಏಟು$_1$ ]

**ಚಡುಪಡನೆ** 'ಚಡಪಡನೆ' ನೋ.

**ಚಡುಪುಡನೆ** 'ಚಡಪಡನೆ' ನೋ.

**ಚಡುಹುಡನೆ** 'ಚಡಪಡನೆ' ನೋ.

**ಚಡೆಫೌಜು,** ಚಡಿಫೌಜು (ನಾ). ಲಷ್ಕರೀಸಾಮಗ್ರಿಗಳ ಆಡಂಬರವಿಲ್ಲದೆ ಹೊರಟ ಸೈನ್ಯ; ಚಿಕ್ಕಪುಟ್ಟ ಆಯುಧಗಳನ್ನು ಮಾತ್ರ ತೆಗೆದುಕೊಂಡು ಯುದ್ಧಕ್ಕೆ ಹೊರಟಿರುವ ಸೈನ್ಯ: (*). **ಚಡಿಫೌಜು:** ಜನರಲ್ ಫ್ಲಾಯಿಡ್ ಸಾಹೇಬರವರು ಚಡಿಫೌಜು ತೆಗೆದುಕೊಂಡು ಬಂದು ಇದ್ದಾರೆ (ರಾಜೇಂದ್ರ. ೯೩). [←ಮರಾ. ಸಡೀಫೌಜ್ ]

**ಚಡೆಸವಾರಿ** (ನಾ). ಪರಿವಾರವಿಲ್ಲದೆ ಹೊರಟ ಸವಾರಿ ; ಏಕಾಕಿಯಾಗಿ ಹೊರಟಿರುವುದು: ಏನು ನಸುಕಿನಲ್ಲಿಯೆ ಚಡೆಸವಾರಿ ಹೊರಟಿರಿ? (ರೂಢಿ). [ ←ಹಿಂ. ಛಡೀಸವಾರೀ ; ಮರಾ. ಸಡೇಸ್ವಾರೀ ]

**ಚಡ್ಡಣ** 'ಚಡ್ಡಣೆ' ನೋ.

**ಚಡ್ಡಣಿಸು** (ಕ್ರಿ). ವಿಶಾಲವಾಗಿ ಕಟ್ಟು; ವಿಸ್ತಾರವಾಗಿ ಕಟ್ಟು: ಒಡ್ಡಿದರು ದಡಿವಲೆ ಸಿಡಿವಲೆ ಕಡ್ಡಿವಲೆ ಕುಣಿವಲೆಯನಗಲಕೆ ಚಡ್ಡಣಿ[ಪಾಠಾಂ. ವಿ]ಸಿದರು ಬೀಸುವಲೆ ಬೆಳ್ಳಾರವಲೆಗಳಲಿ ಅಡ್ಡವಿಸಿ ಸೋಹಿದರು (ತೊರರಾ. ೩-೩-೦೨). [ ಚಡ್ಡಣ (<ಚಡ್ಡಣೆ) + – ಇಸು₂ ]

**ಚಡ್ಡಣೆ,** ಚಟ್ಟಳೆ₁ ಚಡ್ಡಣ (ನಾ). ಅತಿಶಯ ; ಆಧಿಕ್ಯ : ಉಪಹಾಸದ ನುಡಿಯ ವ್ಯಾಘುಲ್ಲಣೆಯ ರೋಮಾಂಚನದ ಚಡ್ಡಣೆಯ . . . ಚೌಪಟಮಲ್ಲನಿದ್ದನು ರಿಪುಬಲವ ಲೆಕ್ಕಿಸದೆ ಕಲಿದ್ರೋಣ (ಕುವ್ಯಾದ್ರೋ. ೦೭-೩೩): ದಂಡೆಯೊಳಡೆದ ಕಾಳೋರಗನವೊಲು ಚಡ್ಡಣೆಯ ಚಪಳಕ್ರೋಧಶಿಖಿ ಮೋಹಿದುದು ಮೋಟೆಯಲಿ (ಕುವ್ಯಾಕ. ೨೦-೯). **ಚಟ್ಟಳೆ₁ :** ಚಟ್ಟಳೆಯ ಚತುರಾಸ್ಯನಿವರೊಡಹುಟ್ಟಿದರ ಸಮಡೋಳಿ ಗಡ ಜಗಜಟ್ಟಿಗಳು ತಾವಿವರೆನುತ ಕಲೆದೂಗಿದನು ಮಗಧ (ಕುವ್ಯಾಸ. ೨-೮೫). **ಚಡ್ಡಣ :** ಕೋಟೆಶಾವನಮಧ್ಯದಲಿ . . . ಸಿಡಿಲಿನ ಚೀಟಿಕೆಯ ಚಡ್ಡಣದ ರವ ರಾಘವನ ಕಿವಿಗಳಿಗೆ(ತೊರರಾ. ೩-೦೨-೦೪).[ <ಪ್ರಾ. ಚಡಣ./ಹಿಂ. ಮರಾ. ಚಢನಾ ]

**ಚಡ್ಡಿ₁,** ಚೆಡ್ಡಿ (ನಾ). ೧. ಅರೆ ಚಲ್ಲಣ; ಚಣ್ಣ; ನಿಕ್ಕರು : ಚಡ್ಡಿಗಳ ತೊಟ್ಟು (ಸೌಗಂಧಿ. ೫೦-೪) ; ಚಡ್ಡಿಯ ಜೋಬಿನ ತುಂಬ ರೂಪಾಯಿಗಳು (ಬಳಜೀ. ೦೦೫) ; ಉಂಡು ಏಳುವಾಗ ಒಂದು ಲಾಡನ್ನು ಅವನು ತನ್ನ ಚಡ್ಡಿಯ ಕಿಸೆಗೆ ತುರುಕಿಕೊಂಡನು (ಕುಳಳ. ೬೨). ೨. ಗುಹ್ಯಭಾಗಗಳನ್ನು ಮಾತ್ರ ಮುಚ್ಚತಕ್ಕ ಬಿಗಿಯಾದ ಕಾಸೆ; ಕಾಚ; "ಸುತ್ತು ಲಂಗೋಟಿ" (ಜಾನಕೋ. ೫೪) : ಹಿಂಡು ಹುಡುಗರ ಸಂಗಡ ಚಡ್ಡಿಯನ್ನು ಹಾಕಿಕೊಂಡು ಈಜಲಿಕ್ಕೆಂದು ಹೋಗುತ್ತಿದ್ದಳು (ಫಲಸಂ. ೨೭). **ಚೆಡ್ಡಿ :** ೧. ಲಂಗ ಚೆಡ್ಡಿ ಹೊಲಿದು ತರುವೆ (ಕಪಪು. ೨-೫೮) ; ಅಗಸನಿಂದ ಬಂದ ಚೆಡ್ಡಿ ಪರಟಿನ ಅಲಂಕಾರ (ಮಾರ್ಗದ.೨೪) ; ಪಂಚೆಯನ್ನು ಬಿಚ್ಚಿ ಕಳಚುವಂತೆ ಚೆಡ್ಡಿಯನ್ನು ಕಳಚಲಾದೀತೆ (ರಂಗಳ. ೨೮). [ ← ತೆಲು. ಚೆಡ್ಡಿ ]

**ಚಡ್ಡಿ₂** 'ಸಡ್ಡೆ₂' ನೋ.

**ಚಡ್ಡಿಸು** (ಕ್ರಿ). ಸಿದ್ಧವಾಗು ; ಸಿದ್ಧಗೊಳ್ಳು : ಒಡ್ಡಿದ ಸಾರಿಯುಂ ತಿವಿವ ಕಯ್ಯೊಡನಿಕ್ಕುವ . . . ತಿದ್ದಿಕೊಳ್ಳನಲ್ ಚಡ್ಡಿಸಿ ನಿಲ್ವ ನೂತನ ದುರೋದರಕೇಳಿ ಪಳಾಳವಲ್ಲವೇ (ನಳಚಂ. ೭೫೭). [ ? ]

**ಚಡ್ಡೆ** 'ಸಡ್ಡೆ₁' ನೋ.

**ಚಡ್ಡೆಗೊಳ್** 'ಸಡ್ಡೆಗೊಳು' ನೋ.

**ಚಢ,** ಛಡ (ನಾ). ಏರಿಕೆ ; ಮೇಲಕ್ಕೆ ಹತ್ತುವುದು. 'ಚಢಸವಾಲು' ಪರಾ. **ಛಡ :** 'ಛಡಸವಾಲು' ಪರಾ. [<ಪ್ರಾ. ಚಡ, ಚಢ ]

**ಚಢಸವಾಲು,** ಛಡಸವಾಲು (ನಾ). ಹರಾಜಿನಲ್ಲಿ ಏರಾಟದ ಬೇಡಿಕೆ; ಹರಾಜಿನಲ್ಲಿ ಹೆಚ್ಚಿನ ಬೆಲೆಗೆ ಸವಾಲು ಹಾಕುವುದು : ಚಢಸವಾಲಿಗೆ ನೀವೆಲ್ಲ ಏರಿರಬೇಕೆಂದು ದೇವರ ಕಡೆಯಿಂದ ನಾನು ಆಶೀರ್ವಾದ ಮಾಡುತ್ತೇನೆ (ಗಂಗಾಳ. ೦೫೪). **ಛಡಸವಾಲು :** ರೈತರುಗಳ ಜಮೀನನ್ನು ತಮ್ಮವರ ಕಡೆಯಿಂದ ಛಡಸವಾಲು ಮಾಡಿಸಿ ಕೊಂಡುಕೊಳ್ಳುವುದು(ಕಲಿನ. ೨೫೫). [ ಚಢ + ಸವಾಲು ]

**ಚಢಾಯಿ** 'ಚಡಾಯಿ' ನೋ.

**ಚಢಾಳ** 'ಚಡಾಳ' ನೋ.

**ಚಢಾಳಿಸು** 'ಚಡಾಳಿಸು' ನೋ.

**ಚಣ₁** (ನಾ). ಕ್ಷಣ ; ಸ್ವಲ್ಪಹೊತ್ತು : "ಕ್ಷಣಂ ಚಣ" (ಶಬ್ದಮಂ. ೧೯). "ಕ್ಷಣಕ್ಕೆ ಬಂದವುದು ಚಣವೆಂದು" (ಕಕರ. ೩೬) ; ಶಿವನು ಭವನುಂ ದೈವವಂ ತ್ಯಜಿಸುವನು ಚಣಮಾತ್ರದೊಳೆಲವೊ ಕೇಳಾ (ಬಸಪು. ೫೦-೩೫) ; ಚಣದೆ ಕಾನ್ಯೆದುತ್ತಮಪ್ಪಳಿಸಿದನು ಸಹಭವನ (ರಾಮಾಸಂ. ೪-೧-೬೬) ; ಮಾವನ ಸ್ಥಿತಿಗತಿಯ ಬಗ್ಗೆ ಚಣವೂ ಯೋಚಿಸಿದವನಲ್ಲ (ಪದ್ಮಸ. ೨೦೭) ; ಸಾಧ್ವಿಯು ನಿಂದಳು ಚಣ ಮೈಮರೆಯುತಲಿ (ಕವಿಸೋ. ೫೭-೧೪).

**ಚಣಚಣ** (ದ್ವಿರುಕ್ತಿ): ಚಣಚಣವು ಹೊಸ ಹಸಿವು ಅದಕಾಗಿ ಇದಕಾಗಿ ಮತ್ತೊಂದಕಾಗಿ (ಮುಂಕುಳ. ೨೦೮) ; ಗೆಣೆಯನಾಡಿದ ಆಟ ಮನದಾಗ ಊರಿ ನಿಂತ್ಹಾಂಗ ಆ ಹುಡುಗಿ ಚಣಚಣಕ ನೆನಸಿ ಅಳತಾಳೊ (ಕನ್ನಜಾ. ೦೦೮). [ <ಸಂ. ಕ್ಷಣ ]

**ಚಣ₂** (ನಾ). ಸಮರ್ಥ. 'ಅಕ್ಷರಚಣ' ಪರಾ. [ ಸಂ. ]

**ಚಣಂಗ** 'ಚಣಗೆ' ನೋ.

**ಚಣಂಗಿ** 'ಚಣಗೆ' ನೋ.

**ಚಣಕ₁** (ನಾ). ಅರ್ಧತೊಡೆಯವರೆಗೆ ಮಾತ್ರ ಇರುವ ಚಲ್ಲಣ ; ಅರ್ಧೋರುಕ ; ಚಡ್ಡಿ : "ಚಣಕಂ = ಚಲ್ಲಣಂ (ಅರ್ಧೋರುಕಂ)" (ಕಮುದ. ಪರಿ. ೨). "ಚಲ್ಲಣದಲ್ಲಿ ಮಾತು ಚಣಕಂ" (ಕರ್ಣಾನಿ. ೨೭) ; ಶ್ರೀದ್ವಾರವೊಂದಕ್ಕೇ ತನ್ನ ಚಣಕವನ್ನು ಕಟ್ಟಿಸಿದ್ದನಂತೆ (ವಿಗಡ. ೪೫-೭). [<ಸಂ. ಚಂಡಾತಕ ]

**ಚಣಕ₂** (ನಾ). ಒಂದು ಬಗೆಯ ದ್ವಿದಳ ಧಾನ್ಯ ; ಕಡಲೆ ; "ಕಾಂ ಹರಿಮಂಥಂ ಚಣಕಾಖ್ಯಂ" (ವಸ್ತುಕೋ. ೯೪-೦೭): ಅಂತು ಕೊಂಡ ಪದವಟಿಗಳೊಳ್ . . . ಚಣಕ ಕುಸುಂಭ ಕಾರ್ಪಾಸ ಸರ್ಷಪ ಜೀರಕ ಧಾನ್ಯಕಾದಿ ವಿವಿಧ ಧಾನ್ಯಭೇದಂಗಳುಂ (ಆದಿಪು. ೬-೭೨ ವ) ; ಕಣಿಕಮಂ . . . ವಿದಿದಾವಿಷದಾಕೃತಿಯಾಗಿ ಕೂಡಿಕೊಂಡೊಣಗಿಸಿದಿಂ ಬಟಿಕ್ಕೆ ಚಣಕೋದಕದಿಂ ತೆಗಪಿ (ಲೋಕೋಪ. ೮-೦೫); ಚಣಕಮುದ್ಗಮಾಷ ಗೋಧೂಮ ಶಾಲಿಯೆಲ್ಲ ಧಾನ್ಯಗಳ ಸಂಪತ್ತಿ (ಶಾಂತೀಪ. ೬-೦೩). [ ಸಂ. ]

**ಚಣಕಡಿಕ** (ನಾ). ಒಂದು ಕ್ಷಣದಲ್ಲಿ ಕತ್ತರಿಸಬಲ್ಲವನು, – ಕಡಿಯುವುದರಲ್ಲಿ ನಿಪುಣನಾದವನು : ಚಣಕಡಿಕನ ಕಡುಗಮದೊರ್ಚಣಕೊಂದ್ಯೆದಾರುಕೋಟಿ ಸಬವಂ ಕೆಡೆವೊಲ್ (ಪದಳಂ. ೯೧). [ಚಣ₁ + ಕಡಿಕ₂ ]

**ಚಣಕಾಲ** (ನಾ). ಒಂದು ಕ್ಷಣದಷ್ಟು ಸಮಯ ; ಸ್ವಲ್ಪಹೊತ್ತು : ಚಣಕಾಲ ಮೈ ನಡುಗುತ್ತಿತ್ತು (ಮುರುಳು. ೪೫) ; ಅಬ್ಬಕಬ್ಬೆ ಚಣಕಾಲ ಚಿಂತಾಕ್ರಾಂತಳಾದಳು (ದಾನಚಿಂ. ೫೮) [ ಚಣ₁ + ಕಾಲ ]

**ಚಣಕಿ** (ನಾ). ಚೌಡಿಕೆಯಂತಹ ಒಂದು ವಾದ್ಯ ; ತುಣತುಣಿ : ಚಣಕಿ ನುಡಿಸುತ್ತಾ ಜೋಗಿ ಹಾಡತೊಡಗುವನು (ರೂಢಿ). [←ಮರಾ. ಚಾಣಕೀ]

**ಚಣಕು** (ಕ್ರಿ). = ಚಲಂಕು ೨: ನೆರೆದು ಬಹ ಬಲಪರಾಕ್ರಮಗಳನು ಕಲಕಿ ಚಣಕಿದನದೇನು ಸಾಹಸಿಕನೆಂದಾರು ಬಣ್ಣಿಸಲಕ್ಕುಮೋ (ವೆಂಕಾರಾ. ೬-೦೫-೪). [ <ಚಲಂಕು ]

**ಚಣಕೆ** (ನಾ). ೧. ಹೋಳುಮಾಡುವ ಸಾಧನ (?): ಉದರ ಸೀಳುವುತ್ತರಿ ಸಂಭ್ರು ಹಸ್ತ ಕತ್ತರಿಸು ಹೋಳಿಸಗು ಶಿರವರಿದೆನದಗಿದಗೆಂದು ಹೆಣಗಿದರ್ ಚಣಕೆಯಂತೆ (ಜನಮು. ೨೯-೫೬); ಸೇನೆ ಸಹಿತಭ್ರರಾಜೇಂದ್ರರಂ ಚಣಕೆಗಳ್ ಲೂನಿಸುತ ಮಾನಿಸದೆ ಲೀನಿಸುತಲಂಗಮರಿದೂನಿಸುತ . . . ಕರುಳ್ಕಚ್ಚಿ ಚಲಿವಿಲಿನೆ ಪರಿದು (ಜನಮು. ೩೦-೪೩). ೨. ಚೂರು ; ಚಕ್ಕೆ (?) : ಕಣೆಯಾ ಕಣ್ಮಾನಕೆಣೆಯಗೊಡದಿಹ ಮಿಣಾಗು ಮಿಂಚಿನ ಚಣಕೆಗಳೊ ಸಂದಣಿಯ ಮಿನ್ನಗಳೊ (ಜಿರಾಮಾ. ೨೫೦-೪೬). [ ? ]

**ಚಣಗ** 'ಚಣಗೆ' ನೋ.

**ಚಣಗಿ** 'ಚಣಗೆ' ನೋ.

**ಚಣಗೆ, ಚಣಂಗ, ಚಣಂಗಿ, ಚಣಗ, ಚಣಗಿ, ಚಣೆಗಿ, ಚನ್ನಂಗಿ₂, ಚಾಣಂಗಿ** (ನಾ). ಕಡಲೆ : "ಮಾಂಗಲ್ಯಕಃ,ಮಸೂರಃ – ಈ ೨ ಚಣಗೆ" (ಹಲಾಯು. ೯೩-೪೨೭). **ಚಣಂಗ :** "ಜಲಭಂಗಂ ವಿರಹಂ ಕವಂಂಡಲು ಚಣಂಗಂ ಕೋರಕಾವಲ್ಲಿಯುತ್ಕಲಿಕಾಖ್ಯಂ" (ನಾನಾರ. ೦೦೩). **ಚಣಂಗಿ :** "ಚಣಂಗಿ ಖಂಡಿಕಮೆನಲು ಕಡಲೆ" (ಮಂಗರಾ. ೦೦೦-೪). **ಚಣಗ:** ಅರಸಿನ ಜೀರಿಗೆ ಸಿದ್ಧಾರ್ಥ ಮೆಂಥೆಯ ಕರಿಯ ಹೆಸಱು ಎಳ್ಳು ಚಣಗ ಹರಿಮಂಥ ತೊಗರಿ ಕಲ್ಲುಪ್ಪು ಲವಂಗವು (ಜ್ಞಾ ಸ ಹ. ೩೭-೦೦೩). **ಚಣಗಿ :** ಅದಿಮೂರ್ತತ್ರಯುಂ ಪೂವಿನೆಸಳುಂ ಚಣಗಿಯುಂ ಜವೆಯ ಸುಳಿಯುಂ ಯಥಾಕ್ರಮದಿನಾಕಾರಂಗಳುಂ ಚಕ್ಷುರಿಂದ್ರಿಯಕ್ಕೆ (ತಸೂವೃ. ೪೦); ಗೋದುವೆ ಚಣಗಿ ಹೆಸಱುದ್ದುಗಳನಡಕಿದರು (ಪ್ರಭುಲೀ. ೨೩-೩೭); ಹೇಮನಗದ ಬಣ್ಣದೊಳೆಸೆವ ತೊಗರಿ ಶೋಭನ ಕೋಯ ಬಗೆವೆತ್ತ ಚಣಗಿ ಬೇಳೆಯ ಪರಿಪಿನಂ . . . ಕಲಸುತುಂಬುದು (ಲಿಂಗಪು. ೮-೨೩). **ಚಣೆಗಿ :** ವಟಾಣಿ ಧಾನ್ಯವೆಂದರೆ ಚಣೆಗಿ ಲಂಕಿ ಬಟ್ಟಗಡಲಿ ಕರಿಹೆಸರು ಮೊದಲಾದವುಗಳನ್ನು ಕೂಡಿಸಿ ಬಿತ್ತಬೇಕು (ಕೃಷಿಪ್ರ. ೮೦). **ಚನ್ನಂಗಿ₂:** ಬಟ್ಟಗಡ್ಲೆ ಚನ್ನಂಗಿ ತೊಗರಿ ಅವರಿ ವುಂಡಿ ಸಾಸಿವೆ ಈ ಧಾನ್ಯಗಳಲ್ಲಿ ತಮಗೆ ಬೇಕಾದವುಗಳನ್ನು ಅಕ್ಕಡಿಯಿಂದ ಬಿತ್ತುತ್ತಾರೆ (ಮುಂಬಯಿ. ೩-೨೦೦); ಜೋಳ, ಬಟಗಡ್ಲೆ, ಚನ್ನಂಗಿ, ಅವರಿ ಸ್ವಲ್ಪಸ್ವಲ್ಪ ಬೆಳೆಯುತ್ತವೆ (ಧಾರಜಿ. ೯). ಉದ್ದು, ಚನ್ನಂಗಿ . . . ಸರಿ–ಇವೆಲ್ಲಾ ರಾಜಸ ಆಹಾರದಲ್ಲಿ ಬರುವವು (ಬ್ರಹ್ಮಜೀ. ೦೩೩). **ಚಾಣಂಗಿ :** ಚಾಣಂಗಿ ಬೇಳೆಯ ಹಾಗೆ ಸರ್ವಾಂಗಗಳಲ್ಲಿಯೂ ಸ್ಫೋಟಕಗಳುಂಟಾಗಿಹವು (ವೈದ್ಯಸಾ. I, ೩೭೯). [ <ಸಂ. ಚಣಕ ]

**ಚಣಪುಟ** (ನಾ). ಸ್ತನಾಗ್ರ ; ಚೂಚುಕ (?) : ಪೂಣರ್ವಕ್ಕೆ ಬಸಿರಕೊಳದಿಂದಣೆಯರವೊಯ್ಯಂದು ರಂಜಿಪುವೆಂಬಾ ಅಣಕವನಾಂತುದು ಸತಿಯರ ಚಣಪುಟ ನೀರಂಧ್ರ ಬಂಧುರ ಸ್ತನಯುಗಳಂ (ಚಂದ್ರಪ್ರಭು. ೦೪-೨೩). [ ? ]

**ಚಣಯಿಗೆ** (ನಾ).=ಚಣಗೆ (?): ದ್ರವ್ಯೇಂದ್ರಿಯಂ ನಿವೃತ್ತಿಯುಮುಪಕರಣಮುಮೆಂದಿತ್ತೆಱನೆಂತೆನೆ ಚಕ್ಷುವಿಂಗೆ ಚಣಯಿಗೆಯಾಕಾರಂ ಶ್ರೋತಕ್ಕೆ ಯುವೆಯುವೆಯ ಸುಳಿಯಾಕಾರಂ (ಪಸಾರ. ೧೮೭-೦). [ ? ]

**ಚಣಾರ್ಧ** (ನಾ). ಅರ್ಧಕ್ಷಣ ; ಕ್ಷಣಾರ್ಧ ; ಸ್ವಲ್ಪಕಾಲ: ಹಿರಿಯ ಅಧಿಕಾರಿಗಳನ್ನು ಒಲಿಸಿಕೊಳ್ಳುವುದರಲ್ಲಿ ಧರಮ ಹೆಗ್ಗಡೆ ತನ್ನ ಆತ್ಮಗೌರವವನ್ನೂ ಮರೆಯಬಲ್ಲವನು,ಎಂಬುದು ಅವನಿಗೆ ಚಣಾರ್ಧದಲ್ಲಿ ಹೊಳೆಯಿತು (ಸವತಿ. ೩೪). [ <ಸಂ. ಕ್ಷಣಾರ್ಧ ]

**ಚಣಿಗಿ** 'ಚಣಗೆ' ನೋ.

**ಚಣಿಲ** (ನಾ). (ಕರಾ). ಅಳಿಲು ; ಇಣಚಿ. [ ←ತುಳು. ಚಣಿಲ್, ಚನಿಲ್ ]

**ಚಣ್ಣ** 'ಚಲ್ಲಣ' ನೋ.

**ಚತು** (ನಾ). ಒಂದು ಸಂಖ್ಯೆ ; ನಾಲ್ಕು : "ಚೌ ಚತು ಸಮುದ್ರ . . . ಜಳರಾಶಿಯೆಂದು ನಾಲ್ಕಱ ನಾಮಂ" (ಪ್ರವಣಾ. ೯-೪); ವೇದ ಚತು ವೇದಾಂಗ ಷಡುವಿಧ (ಗಗಕಾ. ೩-೦೦). [ <ಸಂ. ಚತುರ್ ]

**ಚತುಃಕಷಾಯ** 'ಚತುಷ್ಕಷಾಯ' ನೋ.

**ಚತುಃಕಷಾಯಿ** (ನಾ). [ಜೈನ] ಕ್ರೋಧ, ಮಾನ, ಮಾಯೆ, ಲೋಭ ಎಂಬ ನಾಲ್ಕು ಬಗೆಯ ಕಷಾಯಗಳನ್ನುಳ್ಳವನು : ಕಷಾಯಾನುವಾದದಿಂ ಚತುಃಕಷಾಯಿಗಳ್ಗಂ ಅಕಷಾಯಿಗಳ್ಗಂ ಸಾಮಾನ್ಯೋಕ್ತಸ್ಪರ್ಶನಂ (ತತ್ತ್ವಪ್ರ. ೨೯). [ ಸಂ. ಚತುಃಕಷಾಯಿನ್ ]

**ಚತುಃಪದಿ** 'ಚತುಷ್ಪದಿ' ನೋ.

**ಚತುರ₁** (ನಾ). ಒಂದು ಸಂಖ್ಯೆ; ನಾಲ್ಕು: ದಿವ್, ಸ್ರುಜ್, ಚತುರ್ . . . ಇವು ಮೊದಲಾದ ವ್ಯಂಜನಾಂತಕ್ಕೆ ದಿವ, ಸ್ರುಜ, ಚತುರ ಎಂಬಂತತ್ವಮಾದೊಡಂ (ಶಮದ. ೫೭ ಪ್ರಯೋ). [ ಸಂ. ಚತುರ್ ]

**ಚತುರ₂** (ಗು). ೧. ಜಾಣತನವುಳ್ಳ ; ಕುಶಲ : ಸಹಜಕವಿ ಚತುರಕವಿ ನಿಃಸಹಾಯ ಕವಿ(ಸುಕುಮಾ. ೧-೩೨); ಭಾರತೀಪತಿ ಚತುರ ಪರಿಮಿತೋದಾರ ಗಂಭೀರ ಭಾಷಿತಂಗಳಿಂ ಬಿನ್ನವಂಗೆಯ್ಯೆ (ಅಗವಿ. ೧-೬೭ ವ). ಬಿಲ್ಲೆಗಳನ್ನೂ ಗುಂಡುಗಳನ್ನೂ ಚತುರ ರೀತಿಯಲ್ಲಿ ಜೋಡಿಸುವುದು (ಶಿಕ್ಷಣ. ೮೪). ೨. ಚಟುವಟಿಕೆಯುಳ್ಳ ; ಲಗುಬಗೆಯ. (ನಾ). ೩. ದಕ್ಷನಾದವನು; ಬಲ್ಲವನು; ಜಾಣ: "ಚತುರಃ . . . ಶಿಕ್ಷಿತಃ, ಪ್ರವೀಣಃ– ಈ ೧೧ ಬಲ್ಲವಂ" (ಹಲಾಯು. ೩೩-೦೮೦); "ಚದುರಂ ಚತುರಂ" (ಶಬಿಶಂ. ೨೩೭); ಚತುರರೆರ್ದೆಯಿಂದಮಿಟಯಿಯಳ್ . . . ತನ್ನೀ ಕೃತಿಕಾಂತೆ (ಲೀಲಾವ. ೦-೮೦) ; ಚತುರಂ ನೀಱನುದಾರನುಜ್ಜ್ವಲಯಶಂ (ಅನಂತಪು. ೧-೩೦). ೪. [ನಾಟ್ಯ]ನೂರೆಂಟು ಕರಣಗಳಲ್ಲಿ ಒಂದು ; ಎಡಗೈಯನ್ನು ಅಲಪಲ್ಲವ ಹಸ್ತದಲ್ಲೂ ಬಲಗೈಯನ್ನು ಚತುರ ಹಸ್ತದಲ್ಲೂ ಎದೆಯ ಹತ್ತಿರ ಹಿಡಿದು ಒಂದು ಕಾಲಿನಿಂದ ಉದ್ವಟ್ಟಿತ ಮಾಡುವುದು : ಎಡಗಯ್ಯಲಪಲ್ಲವ[ಮು]ಂ ಪಡೆದೆರ್ದೆಯಲ್ಲಿರ್ದು ಬಲದ ಕೈ ಚತುರಾಖ್ಯಮನೊಡರ್ಚುತಲ್ಲುದ್ಧಟ್ಟಮದೊಡವೆರ್ಚರೆ ಪಾದವೊಂದು ಕರಣಂ ಚತುರಂ (ಚಾಸ್ಕರಂ. ೪-೯೪). ೫. [ನಾಟ್ಯ] ಒಂದು ಬಗೆಯ ಹಸ್ತಮುದ್ರೆ ; ಅಸಂಯುತ ಹಸ್ತಗಳಲ್ಲಿ ಒಂದು : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ –೧. ಪತಾಕ . . . ೧೭. ಚತುರ . . . ೨೪. ತಾಮ್ರಚೂಡ (ಅಭಾನ್ಯ. ೪೮). [ ಸಂ. ]

**ಚತುರಂಗ** (ನಾ). ೧. ನಾಲ್ಕು ಅಂಗಗಳನ್ನುಳ್ಳದು: ಆ ಧ್ಯಾನಯೋಗಂ . . . ಧ್ಯಾನಂಧ್ಯೇಯಂ ಧ್ಯಾತೃಫಲಮೆಂದು ಚತುರಂಗಮಕ್ಕುಂ (ಅಜಿತಪು. ೮-೨೮ ವ). ೨. ನಾಲ್ಕು ಅಂಗಗಳನ್ನುಳ್ಳ ಸೈನ್ಯ; ಆನೆ, ಕುದುರೆ, ರಥ, ಕಾಲಾಳು ಎಂಬ ನಾಲ್ಕು ಬಗೆಯ ಸೈನ್ಯದಿಂದ ಕೂಡಿದಂದಂ : ಚತುರಂಗಂ ಚತುರಂಗ ಸೈನ್ಯದೊಳಡು[ರ್ಗಂ]ತಿಱ್ಱಿನೆಯ್ತಂದು ತಾಗಿ (ಹಂಪೆಪಾ. ೧೧-೭) : ಚತುರಂಗಕ್ಕೆಡರಿಲ್ಲ ರಾಯ ನಿನಗೇನು ಮಾಡುವ ರಾಜಕಾರ್ಯವೆಂದಂ (ಪ್ರಮಿಥಾ. ೨-೩೪). 'ಚತುರಂಗಬಲ' ಪರಾ. ೩. ಚದುರಂಗದ ಆಟ: ಚತುರಂಗ . . . ಕಂತುಕ ದ್ಯೂತಾದಿ ಖೇಲನಗಳಿಂ (ವಿವೇಕ. ೨೦೪). [ ಸಂ. ( ಚತುರ್ + ಅಂಗ) ]

**ಚತುರಂಗದಂಡಾಸನ** (ನಾ). [ಯೋಗ] ಯೋಗಾಸನಗಳಲ್ಲಿ ಒಂದು : ಮುಖ್ಯವಾದ ಕೆಲವು ಆಸನಗಳು ೧. ಉತ್ತಾನಾಸನ. ೨. ಚತುರಂಗ ದಂಡಾಸನ (ಧಾರದ. ೦೬೭). [ ಚತುರಂಗ + ದಂಡ + ಆಸನ ]

**ಚತುರಂಗಬಲ** (ನಾ). ಆನೆ, ಕುದುರೆ, ರಥ ಮತ್ತು ಕಾಲಾಳು ಎಂಬ ನಾಲ್ಕು ಅಂಗಗಳನ್ನುಳ್ಳ ಸೈನ್ಯ : ಚತುರಂಗಬಲ ಸಮನ್ವಿತರ್ . . . ಅವನತರಾದರ್ ಚಕ್ರಿಗಳ್ಗೆ (ಆದಿಪು. ೦೨-೬೩); ಬೆಂಗೊಟ್ಟುದು ದಶಮುಖ ಚತುರಂಗಬಲಂ (ಪಂಪಾರಾಮಾ. ೦೦-೨೦೭). [ ಚತುರಂಗ + ಬಲ ]

**ಚತುರಂಗುಲ, ಚತುರಂಗುಳ** (ನಾ). ೧. ನಾಲ್ಕು ಅಂಗುಲ: ಚತುರಂಗುಲ ಪ್ರಮಾಣೋಳ್ಳಿತ ಋದ್ಧಿ ಪ್ರಾಪ್ತರ್ . . . ಕುಂದಾಚಾರ್ಯರ್ (ಸುಕುಮಾ. ೦-೦೩); ಚತುರಂಗುಲ ಚಾರಣ ಋದ್ಧಿ ತಮಗೆ ಸಮನಿಸಿದುದು (ಪಂಪಾರಾಮಾ. ೦-೦೨). **ಚತುರಂಗುಳ:** ೨. ಒಂದು ಬಗೆಯ ಸಸ್ಯ ; ಕಕ್ಕೆ ಗಿಡ: "ಶಮ್ಯಾಕಃ, ಚತುರಂಗುಳಃ . . . ೮ ಕಕ್ಕೇಗಿಡದ ಹೆಸರುಗಳು" (ಸಿದ್ಧಾಂತಿ. ೦೦೩); ಸರ್ವಾಂಗೀಣ ಸಾಂದ್ರ ಹರಿದ್ರ ವಿಲೇಪನ ವಿಲಿಪ್ತ ಹರಿತಾಲಿ ಪಂಕಪಿಂಗಲ ಶಿಲಾಸ್ತಂಭ ವಿಭ್ರಮ ನಿತಂಬ ಶಿಖರ ತರಂಗಿತ ಚತುರಂಗುಳಾಗ್ರ ಪಲ್ಲವ ನಿವಸನಂ (ಆದಿಪು. ೦೩-೪೩ ವ). [ ಸಂ. (ಚತುರ್ + ಅಂಗುಲ) ]

**ಚತುರಂಗುಳ** 'ಚತುರಂಗುಲ' ನೋ.

**ಚತುರಂತ** (ಗುಂ). ೧. ನಾಲ್ಕು ಎಲ್ಲೆಗಳನ್ನುಳ್ಳ; ನಾಲ್ಕುದಿಕ್ಕಿನ ಸಮುದ್ರಗಳೇ ಮೇರೆಯಾದ : ಇಂತು ಚತುರಂತ ಧಾತ್ರೀಕಾಂತೆಯ ನಳವಡಿಸಿ (ಎಕ. VII, ಶಿಕಾರಿ. ೦೩೬-೫ : 1068). (ನಾ). ೨. ಪಲ್ಲಕ್ಕಿ ; ಅಂದಣ. 'ಚತುರಂತಯಾನ' ಪರಾ. [ಸಂ (ಚತುರ್ + ಅಂತ) ]

**ಚತುರಂತಕ್ಷಿತಿ** (ನಾ). ನಾಲ್ಕು ಎಲ್ಲೆಗಳನ್ನುಳ್ಳ ಭೂಮಿ ; ನಾಲ್ಕು ಸಮುದ್ರದವರೆಗೆ ಹಬ್ಬಿರುವ ಭೂಮಿ: ಚತುರಂತಕ್ಷಿತಿ ಗರ್ಭಸ್ಥಿತನದು ಗಡಿಮೆಂದು ಮುದ್ರಿಪಂತಾಯ್ತು ಯಶಸ್ವತಿಯ ಪದನ್ಯಾಸಂ (ಆದಿಪು. ೮-೩೨) ; ಚತುರಂತಕ್ಷಿತಿಕಾಂತೆ ಕೇಳ್ ಜಲಧಿ ಕೇಳ್ ಸಪ್ತಾರ್ಚಿ ಕೇಳ್ . . . ಪಗೆವನಂ ಕೊಂದೆನ್ನ ಕೋಪಾಗ್ನಿಗಾಹುತಿಯಂ ಮಾಟ್ಪೆಂ (ಗದಾಯು. ೬-೨೩): ಚತುರಂತಕ್ಷಿತಿಭಾರಮಂ ತಳೆಯಲಾಂ ಸಾರ್ದಿದರ್ೂಡಂ (ಚಂದ್ರಪು. ೪-೦೩). [ ಚತುರಂತ + ಕ್ಷಿತಿ ]

**ಚತುರಂತಯಾನ** (ನಾ). ಪಲ್ಲಕ್ಕಿ ; ಅಂದಣ : ಕನ್ನೆಯಂ ನೆರೆಯೆ ಕೈಗೆಯ್ಸಲ್ವೇಟ್ಟು ಮನುಷ್ಯವಾಹ್ಯಮಪ್ಪ ಚತುರಂತಯಾನವನೇಱಿಸಿ (ಶಾಂತಿಪು. ೪-೯೦ ವ) : ಕೇಳು ನೃಪ ಚತುರಂತಯಾನದ ಮೇಲೆ ಕುಳ್ಳಿದ್ದು ಭಯ ಚಾಮರ ಢಾಳಿಸಲು ಶಶಿಯಂತೆ ಧವಳಚ್ಛತ್ರ ಥಳಥಳಿಸೆ (ತಿಮ್ಮಅ. ೪-೯೪). [ ಚತುರಂತ + ಯಾನ ]

**ಚತುರಕಳ್ಳಿ** 'ಚದರಗಳ್ಳಿ' ನೋ.

**ಚತುರಚೂಡಾಮಣಿ** (ನಾ). ಬುದ್ಧಿವಂತರಲ್ಲಿ ಶ್ರೇಷ್ಠನಾದವನು; ಶ್ರೇಷ್ಠಜ್ಞಾನಿ : ಮಣಿಕೂಟಮೆಂಬ ಶೈಲಾಗ್ರಣಿ ಕಣ್ಗೊಪ್ಪಲವಾಯ್ತು ಚತುರಚೂಡಾಮಣಿಯಾ (ಚಂದ್ರಪು. ೧೮-೩೦). [ ಚತುರ+ಚೂಡಾಮಣಿ ]

**ಚತುರಣ** (ಗುಂ). ಚೌಕಾಕಾರವಾದ : ಸಂಕೆಯನ ಹಳಿಯನು ಮಾಕಲ ನಾಯಕನ ಮಗ ಚಿಮೆಯ ನಾಯಕಂಗೆ ಚತುರಣ ಸೀಮೆಯೊಳಗಾಗಿ ಕೊಟ ಪೂಜೆಗೊಡಗಿಯ ಕ್ರಮವೆಂತೆಂದಡೆ (ಎಕ. XVI, ತುಮಕೂ. ೮೫-೦೪; ?). [ <ಸಂ. ಚತುರ್ಣ ]

**ಚತುರತನ** (ನಾ). ಚಾತುರ್ಯ; ಕುಶಲತೆ; ಬುದ್ಧಿವಂತಿಕೆ: ಚತುರತನದಲಿ ನುಡಿದ ನುಡಿಗಳ ಸತಿಗೆ ಮರುಳಾದವನು (ಕೌಶಿರಾ. ೧೯-೭).
[ ಚತುರ + -ತನ ]

**ಚತುರತರ** (ಗು). ಬಹಳ ಚಾತುರ್ಯವುಳ್ಳ : ಸಭಾಸದರೆಲ್ಲರ್ ಮೆಚ್ಚೆ ಚತುರತರ ಚತುರ್ವಿಧ ನರ್ತನಮಂ ಬಿತ್ತರಿಪ ರಂಭಾದಿ ದಿವ್ಯನರ್ತಕಿಯರಿಂ (ಕಬಕಥೆ. ೧-೭೯ ವ). [ ಸಂ. ]

**ಚತುರತೆ** (ನಾ). = ಚತುರತನ : ಜಗತ್ಕಾಂತ ವಚಶ್ಚತುರತೆಯೆಂದಿಂತಿವು ಭಾವಿಸುವೊಡಗ್ಗಳಂಗೆ ನಿಸರ್ಗಂ (ಚಂದ್ರಪು. ೧-೫೪) : ಚತುರತೆಯಂ ಕೀರ್ತಿಸುವೊಡಮತಿ ಶ್ರುತಾವಧಿ ವಿಬೋಧಮೊಡವುಟ್ಟಿದವು (ಪಾರ್ಶ್ವಪು. ೦೫-೮) : ಪರಿಮಿತಾಕ್ಷರತತಿಯೊಳಪರಿಮಿತಾರ್ಥ ರಚನೆಯಲಿ ವಿರಚಿಸುವುದದು ಕವಿಯ ಚತುರತೆ (ಬಸಪು. ೦-೩೨) : ನುತ ಸೊಬಗು . . . ಸೌಭಾಗ್ಯದ ಸುಲಕ್ಷಣದಲಿ ಸುಶೀಲದಲಿ ಚತುರತೆಯೊಳನುನಯದಿ ಲೋಕದ ಸತಿಯರನು ಗೆಲಿದುದು (ಜೀವಂಚ. ೩-೫೪). [ ಸಂ. ಚತುರತಾ ]

**ಚತುರತ್ವ** (ನಾ). = ಚತುರತನ: ಚಾರಿತ್ರ್ಯವಿಲ್ಲದ ಚಾರುತ್ವವೇತಕೆ ಬರಿಯ ಚತುರತ್ವವೆ ಸಾಕೆ (ಇಂಚಾಪ. ೧೭೮-೭೯). [ ಸಂ. ]

**ಚತುರಧಿಪತಿ** (ನಾ). ೧. ನಾಲ್ಕು ವಿಭಾಗಗಳ ಅಥವಾ ಜಿಲ್ಲೆಗಳ ಒಡೆಯ,-ಅಧಿಕಾರಿ. ೨. ಚತುರಂಗ ಸೇನೆಯ ಅಧಿಪತಿ.
[ ಸಂ. (ಚತುರ್ + ಅಧಿಪತಿ) ]

**ಚತುರಭಾವ** (ನಾ). ಚಾತುರ್ಯ ; ನೈಪುಣ್ಯ : ಕುಟಿಳ ನೀಳ ಕುಂತಳ ಕಳಾಪೆಯರ ಚತುರಭಾವಕ್ಕೆ ತಾಮುಂ ಸೋಲ್ತು (ಶಾಂತಿಪು. ೮-೩೦ ವ).
[ ಚತುರ₂ + ಭಾವ₂ ]

**ಚತುರವೃತ್ತಿ** (ನಾ). ಜಾಣತನ; ಚಾತುರ್ಯ: ರತಿವನಿತೆಗೆ ವಿಧವತೆಯಂ ಶ್ರುತದೇವಿಗೆ ಚತುರವೃತ್ತಿಯಂ ಮಾಟ್ಪ ತಪಶ್ರೀಗೆ ತವೆ ರಡುಂ ನಿರುಪಮಮಿಾ ಕ್ಷಿತಿಯೊಳ್ ಶ್ರುತಕೀರ್ತಿದೇವ ಭಟ್ಟಾರಕರ (ಚಂದ್ರಪು. ೦-೩೫). [ ಚತುರ₂ + ವೃತ್ತಿ ]

**ಚತುರಶೀತಿ** (ನಾ). ಎಂಬತ್ತುನಾಲ್ಕು : ಅಂಭೋದನಿನಾದಂ ಭದ್ರಮನಂ ಮನೋಜವಂ ಲಕ್ಷಪ್ರಮಿತಂ (ಆದಿಪು. ೦೦-೨೯) ; ಚತುರಶೀತಿ ಸಹಸ್ರ ಯೋಜನೋತ್ಸೇಧದೊಳ್ ಕಾಳೋದಕ ಸಮುದ್ರಮಿರ್ದುದು (ಅಜಿಪು. ೦೦-೦೩ ವ). [ ಸಂ. (ಚತುರ್ + ಅಶೀತಿ) ]

**ಚತುರಶ್ರ** (ಗು). ೧. ನಾಲ್ಕು ಮೂಲೆಗಳುಳ್ಳ ; ನಾಲ್ಕು ಕೋಣಗಳುಳ್ಳ ; ಚೌಕೋನಾಕಾರದ. ೨. ಕ್ರಮಬದ್ಧವಾದ ; ಅಚ್ಚುಕಟ್ಟಾದ. ೩. ಒಪ್ಪುವಂತಹ ; ಹಿತವಾದ. (ನಾ). ೪. ಚೌಕವಾದಂದು ; ಚೌಕಾಕಾರವಾದುದಂ : ಪಂಚರತ್ನ ಹಿರಣ್ಮಯಂ ಚತುರಶ್ರಂ ಮೂಱುಂ ಯೋಜನದಳವಿಯ ಸಭಾಮಂಟಪಮಂ . . . ತಂದು ಮುಂದಿಟ್ಟು (ಪಂಪಭಾ. ೬-೨ವ); ಶಶಿಹಾಸನಭವನರಸಿಯ ಮುಂದೆ ಚತುರಶ್ರದೊಳ್ಕುಂಡಮಂ ತೆಗಸಿ (ಜೈಮಿಭಾ. ೩೦-೭೬). ೫. ಮೇರೆ ; ಎಲ್ಲೆ ; ಸೀಮೆ: ವಿಚಿತ್ರವಾದ ಬುದ್ಧಿಗೆ ಸುಖದುಃಖಗಳ ಚತುರಶ್ರವನ್ನು ತಿಳಿಯಲು ಸಾಮರ್ಥ್ಯವಿರುವುದರಿಂದ (ಶಾಂಪೂಚ. ೪೭) ೬. [ಸಂಗೀತ] ಒಂದು ಬಗೆಯ ತಾಳ : ಚಂಚತ್ಪುಟ . . . ಚತುರಶ್ರ . . . ಜಯಾಳ ಮೆಂಬಿವು ಮೊದಲಾದ ನೂಱೆಂಟುತಾಳಂಗಳುಂ (ವಿವೇಕ. ೨೩೮) : (೧) ತ್ರಿಶ್ರ (೨) ಚತುರಶ್ರ . . . (೫) ಸಂಕೀರ್ಣ ಈ ಐದು ಜಾತಿಗಳೂ ಲಘುವಿಗೆ ಮಾತ್ರ ಸಲ್ಲುತ್ತವೆ (ಸಂಗೀಚಂ. ೫೭). [ ಸಂ. (ಚತುರ್ + ಅಶ್ರ) ]

**ಚತುರಸ, ಚದುರಸ** (ನಾ). ಚೌಕೋನ: ಚತು[ಪಾಠಾಂ. ದು]ರಸದೊಳಗಣ ನಿಲವ ಕಾಣಬೇಕು (ಅವಚಂ. ೦೨೯-೫೮೭). ಚದುರಸ : ವಿರೂಪಾಕ್ಷ ದೇವರ ಕೆಯಿಂ ಮೂಡಲಾ ಗಡಿಂಬದಿಂ ಕೆನ್ನೆಲ ಚದುರಸ ಮತ್ತ ೧ (ಸೌಇಇ. IX-I, ೨೫೩-೯೨ : 1149) : ಎಂಟರಳತೆ ಹದಿನಾಱಱ ಚದುರಸವ ಮೂವತ್ತೆರಡಱ ಮಧ್ಯದಲ್ಲಿ ಹಸ್ತ ಕಂಬಿಯನಿಕ್ಕಿ ಮೂಱಱಲ್ಲಿ ಭಾಗಿಸಲಾಗಿ ಎರಡು ಒಳಗು ನಿಂದಿತ್ತು (ಸರ್ವಪ. ೦೦೯-೬೦೬); ಬೆಲ್ಲಕ್ಕೆ ಚದುರಸ [ಪಾಠಾಂ. ಚದುರರಸ] ವಲ್ಲದೆ ಸಿಹಿಗೆ ಚದುರಸ[ಪಾಠಾಂ. ಚದುರರಸ]ಉಂಟೆ (ಅಂಬಿವ. ೩೯೧-೪೯). [ <ಸಂ. ಚತುರಸ್ರ ]

**ಚತುರಸ್ರ** (ಗು). ೧. ನಾಲ್ಕು ಮೂಲೆಗಳುಳ್ಳ; ನಾಲ್ಕು ಕೋಣಗಳುಳ್ಳ; ಚೌಕೋನಾಕಾರದ : ಚತುರಸ್ರಾಷ್ಟಾಸ್ರವೃತ್ತೋದರ ಕುಮುದ ಕಪೋತಾಂಸಕಂಠಗಳಾಲಂಬಿತ ಘಂಟಾಚಾಮರೋಜ್ಜೃಂಭಿತಮಣಿಫಳಕಂಗಳ್ (ಅನಂಪು. ೦೦-೨೮). ೨. ಕ್ರಮಬದ್ಧವಾದ ; ಅಚ್ಚುಕಟ್ಟಾದ. (ನಾ). ೩. ನಾಲ್ಕು ಮೂಲೆಗಳನ್ನು ಉಳ್ಳುದು ; ಚೌಕೋನ ; ಚೌಕ : ಚತುರಸ್ರಾಶ್ವತ್ಥದಳಪ್ರತಿಮರುಚಿಸ್ಥಗಿತಮಣಿವರಾಂಗಂ ಶುಭಂ (ಲೋಕೋಪ. ೦೦-೫೩) : ಬಳಿಕ ದೇವಿಯ ಮುಂದೆ ಚತುರಸ್ರದಲ್ಲಿ ಅವನು ಕುಂಡವನ್ನು ತೆಗೆಸಿದ (ಬಿದುರಿ. ೦೮೩) : ಶಿವಲಿಂಗ ಲಕ್ಷಣವನ್ನು . . . . ಆಯಾಯ ಲಿಂಗಗಳಿಗೆ ಆಧಾರವಾಗಿರುವ ಚತುರಸ್ರ, ಅಷ್ಟಾಸ್ರ, ವೃತ್ತಪೀಠಗಳಿಂದ ತಿಳಿಯಬಹುದಾಗಿದೆ (ಭಾರದ. ೭೯). ೪. [ಜ್ಯೋತಿ] ಲಗ್ನದಿಂದ ನಾಲ್ಕನೆಯ ಹಾಗು ಎಂಟನೆಯ ರಾಶಿಗಳು : ವ್ಯವಹರಿಪ ಸಂಜ್ಞೆ ಚತುರಸ್ರವದೆಂದಷ್ಟಮ ಚತುರ್ಥಗೃಹಕೆ (ಜಾತತಿ. ೦-೩೪). ೫. [ನಾಟ್ಯ] ಇಪ್ಪತ್ತುಮೂರು ದೇಶೀಯ ಸ್ಥಾನಕಗಳಲ್ಲಿ ಒಂದು ; ಪಾದಗಳಿಗೆ ಒಂದೂವರೆ ಗೇಣು ಅಂತರವಿರುವಂತೆ ನಂದ್ಯಾವರ್ತ ಸ್ಥಾನಕಗಳಲ್ಲಿ ನಿಂತುಕೊಳ್ಳುವುದು : ಉರು ನಂದ್ಯಾವರ್ತದೆ ಸಂದಿರು ತೊಗ್ಗೇಣರೆಯನುಳಿದು ನಿಲೆ ಚತುರಸ್ರಂ (ಶಾಸ್ತ್ರರಂ. ೭-೩೯). ೬. ಒಂದು ಬಗೆಯ ಹಸ್ತಮುದ್ರೆ : ಮೂವತ್ತು ನೃತ್ತ ಹಸ್ತಗಳಲ್ಲಿ

ಒಂದು: ಒದವಿದ ಕಟಕಾಮುಖಮೆರಡರ್ದೆಗಿದಿರಾಗೆಂಟು ಬೆರಲ ತೆಱಿಂ ನಿಂದಿರ್ದಡೆ ಭುಜಕೆ ಸಮದಿನಿರೆ ಕೇಳ್ ಚದುರೇ ಚತುರಸ್ರಹಸ್ತಮೆಂದೆನಿಸಿರ್ಕುಂ (ಲಾಸ್ಯರಂ. ೨-೪೩); ಈ ಕೆಳಗೆ ಹೇಳಿರುವ ಹಸ್ತಗಳು ನೃತ್ತಹಸ್ತಗಳು ೧. ಚತುರಸ್ರ ೨. ಉದ್ವೃತ್ತ . . . ೩೦. ವಲಿತ (ಅಭಿನ. ೯೯).
[ಸಂ. (ಚತುರ್ + ಅಸ್ರ)]

**ಚತುರಸ್ರಂಬೆಱು** (ಕ್ರಿ). ನಾಲ್ಕು ಮೂಲೆಗಳನ್ನು ಪಡೆ; ಚೌಕವಾಗು: ಚತುರಸ್ರಂಬೆತ್ತ ವೇತ್ರಾಸನಪೊಲದುಮಿರ್ಕುಂ (ಶಾಂತೀಶ್ವ. ೦-೬೬).
[ಚತುರಸ್ರ + ಪೆಱು₁]

**ಚತುರಾಂತರ** (ನಾ). ಚೌಕದ ಮಧ್ಯಭಾಗ: ಆರ್ದ್ರಮೃತ್ತಿಕಾವಿರಚಿತಮಪ್ಪ ಚತುರಾಂತರದೊಳ್ ಮುತ್ತಿನ ಚೌಕದ ನಡುವಣ . . . ದುಗುಲದ ಪಸೆಯೊಳ್ (ಪಂಪಭಾ. ೩-೭೪ ವ); "ಹಸೆಯ ಜಗುಲಿ" (ಪಂಪದೀ. ೦೨೪). [ಸಂ. (ಚತುರ್ + ಅಂತರ)]

**ಚತುರಾಕ್ಷ** (ನಾ). ಜಾಣತನವೇ ಕಣ್ಣಾಗಿರುವವನು; ಕುರುಡ; ಭಾನುವಿನ ಭಾರಣೆಯ ಪೋಲು ತ್ತಾನ ಮಂಖ ಚತುರಾಕ್ಷ [ಪಾಠಾಂ. ಚತುರಾಂಧ] ಭೂಪನ ಸೂನು ಹೊಕ್ಕನು ರಂಗವನು ಭೀಷ್ಮಾದಿಗಳಿಗೆಱಗಿ (ಕುಮಾ.ಆ. ೭-೨೭). [ಸಂ. (ಚತುರ + ಅಕ್ಷಿ + –)]

**ಚತುರಾಘಾಟ** (ನಾ). ನಾಲ್ಕು ಎಲ್ಲೆ,-ಗಡಿ,-ಮೇರೆ: ಸರ್ವಬಾಧಾಪರಿಹಾರವಾಗಿ ಬಿಟ್ಟ ಮತ್ತನ್ನೂರ್ಱಯ್ವತ್ತರಱ ಚತುರಾಘಾಟದ ಸೀಮೆಯಾವುದೆಂದಡೆ (ಸೌಇಇ. XX, ೦೮-೩೭: 980); ರಾಮನಾಥದೇವರ ಭೂಮಿಯಿಂ ಪಡುವಲು ಚತುರಾಘಾಟ ಲಿಂಗಮುದ್ರೆಯ ಕಲ್ಲಿನ ಸೀಮೆಯಿಂದೊಳಗೆ (ಕಇ. IV, ೦_೦೦೦: 1204).
[ಸಂ. (ಚತುರ್ + ಆಘಾಟ)]

**ಚತುರಾತ್ಮ** (ನಾ). ೧. ಸಂಕರ್ಷಣ, ಅನಿರುದ್ಧ, ಪ್ರದ್ಯುಮ್ನ, ವಾಸುದೇವ ಎಂಬ ನಾಲ್ಕು ರೂಪಗಳನ್ನುಳ್ಳವನು. ೨. ಚುರುಕುಬುದ್ಧಿಯುಳ್ಳವನು; ಕೌಶಲವನ್ನುಳ್ಳವನು; ಜಾಣ. ೧, ೨: ಹರಿಯೆಂಬಂತೆಯೆ ಕೃಷ್ಣನದಾವನೊ ಚತುರಾತ್ಮನು ಸಲೆ ನಿಷ್ಕ್ರಿಯನು (ಧನ್ವಾಲಿಟೀ. ೯೬).
[ಸಂ. ಚತುರಾತ್ಮನ್ (ಚತುರ್ + ಆತ್ಮನ್; ಚತುರ + ಆತ್ಮನ್)]

**ಚತುರಾನನ** (ನಾ). ೧. ನಾಲ್ಕು ಮುಖಗಳನ್ನುಳ್ಳವನು; ಬ್ರಹ್ಮ: ಚತುರಾನನನಂ ಬಿಡಿಸಿದರತಿಶಯಿತಾರ್ಥಮನೆ ತೋಱೆ ಪದದಿಂ (ಪುಷ್ಪಪು. ೦-೩೭); ಘನರಜೋಗುಣದಲ್ಲಿ ಚತುರಾನನ ತಮೋಗುಣದಲ್ಲಿ ಶಂಕರನೆನಿಸಿ ಸತ್ವಗುಣಾನುಗತಿಯಲಿ ವಿಷ್ಣುವೆಂದೆನಿಸಿ (ಕುಮಾ.ಸ. ೯-೩). ೨. ಚಾತುರ್ಯದಿಂದ ಕೂಡಿದ ಬಾಯಿ ಉಳ್ಳವನು; ಮಾತಿನಲ್ಲಿ ನಿಪುಣ: ಆ ಸರಸತಿಯಂ ಚತುರಾನನಪರಿಚಿತೆಯೆನಿಸಿದನದೇಂ ಸಮರ್ಥನೊ ಪದ್ಮಂ (ಪುಷ್ಪಪು. ೩-೨); ಅಬ್ಜಭವನಂತೆ ಚತುರಾನನಂ . . . ಎಂದು ಧರ್ಮಜನ ಧರೆ ಪೊಗಳುತಿರೆ (ಕೃಮಿಭಾ. ೨-೦೩). ೩. ಒಬ್ಬ ಕನ್ನಡ ನಿಘಂಟು ಕಾರನ ಹೆಸರು; ಚತುರಾಸ್ಯ ಬೊಮ್ಮರಸ: ಕವಿ ಚತುರಾನನನೆಂದೆನಿಸುವ ನಾಮದೆ . . . ಅಚ್ಚಗನ್ನಡ ವಿವರಣೆ ಚೆಲ್ವಾಗೆ ರಚಿಸಿದಂ ಚತುರಾಸ್ಯಂ (ಚತುನಿ. ೩). [ಸಂ. (ಚತುರ್+ಆನನ; ಚತುರ+ಆನನ)]

**ಚತುರಾಶಿಗಿಡ**(ನಾ). ಒಂದು ಬಗೆಯ ಸಸ್ಯ: ಕಾಡು ಸಬ್ಬಸಿಗೆ, ಚತುರಾಶಿಗಿಡ (ವೃಕ್ಷನಿ. ೩೮-೭೩೩). 'ಚೀತರಾಶಿ' ಪರಾ.
[ಚತುರಾಶಿ + ಗಿಡ (<ಗಿಡು)]

**ಚತುರಾಶ್ರಮ** (ನಾ). ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸವೆಂಬ ನಾಲ್ಕು ಬಗೆಯ ಆಶ್ರಮಗಳು: ಚಾತುರ್ವರ್ಣ್ಯದ ಕರ್ತವ್ಯಗಳು, ಚತುರಾಶ್ರಮದ ಕರ್ತವ್ಯಗಳು . . . ಉಕ್ತವಾಗಿವೆ (ಭಾರದ. ೭೩). [ಸಂ. (ಚತುರ್ + ಆಶ್ರಮ)]

**ಚತುರಾಶ್ರಯ** (ನಾ). ನಾಲ್ಕು ಮೇರೆ,-ಎಲ್ಲೆ: ಶ್ರೀಮನು ಮಹಾಮಹಿಮ ಕಪಿಲಸಿದ್ಧಮಲ್ಲೇಶ್ವರ ದೇವರ ಕ್ಷೇತ್ರದ ಚತುರಾಶ್ರಯದ ನಾಲ್ಕುಂ ದೆಸೆಯ ವಳೆಯದೊಳಗೆ (ಎಇ. XXIII, ೦೯೩-೪೮: 1266).
[ಸಂ. (ಚತುರ್ + ಆಶ್ರಯ)]

**ಚತುರಾಸೀತಿ** (ನಾ).=ಚತುರಶೀತಿ: ಪೆರ್ಮಟ್ಟಿ ಪಱಿಘೋಷಣಂ ಚತುರಾಸೀತಿ ನಗರಾಧಿಷ್ಠಿತಂ (ಸೌಇಇ. XX, ೪೧-೮: 1068).
[<ಸಂ. ಚತುರಶೀತಿ]

**ಚತುರಾಸ್ಯ** (ನಾ). ೧. ನಾಲ್ಕು ಮುಖಗಳನ್ನುಳ್ಳವನು; ಬ್ರಹ್ಮ: ಚತುರಾಸ್ಯಂಗಂ ನೆಗಟ್ದ ಹಿಪತಿಗಮೆಳಂಬಂ (ಜನಾಲಿ.೭-೭); ಚತುರಾಸ್ಯೇಂದ್ರಾದಿದೇವರ್ ನಡೆದು ಜಲಧಿತಲ್ಪಂಗೆ ದೈತ್ಯೇಂದ್ರರುದ್ವೃತ್ತತೆಯಂ ಪೇಳ್ವಲ್ಲಿ (ಜಗವಿ.೨-೪೪). ೨ ಸುಂದರವಾದ ಮುಖವುಳ್ಳವನು. ೩. ಜಾಣ್ಮೆಯ ಮಾತನ್ನಾಡುವವನು; ವಾಕ್ಚತುರ. ೧, ೨, ೩: ಈ ಮಹಾ ಪುರುಷಂ . . . ಚತುರಾಸ್ಯನಾಗಿಯುಂ ಹಿರಣ್ಯಗರ್ಭನಲ್ಲು (ಜಗವಿ. ೮-೦೦ ವ). ೨, ೩: ಆ ಜಿನೇಶ್ವರಂ . . . ಚತುರಾಸ್ಯನುಮಚ್ಛಾಯನುಮಕ್ಷಿಸ್ಪಂದವ್ಯಪೇತನುಂ . . . ಗಗನಗಮನಮಾಗಿ (ಸುಕುಮಾ. ೮-೬೯ ವ): ಚತುರಾಸ್ಯನತುಳ ಮತಿಯಿಂ . . . ನೆಗಟ್ದಂ ಚತುರ್ಗುಣಂ ಸಕಳ ರಾಜನೀತಿಯೊಳ್ (ಪಾರ್ಶ್ವಪು. ೭-೯೮). ೪. =ಚತುರಾನನ ೩: ಅಚ್ಚಗನ್ನಡ ವಿವರಣೆ ಚೆಲ್ವಾಗೆ ರಚಿಸಿದಂ ಚತುರಾಸ್ಯಂ (ಚತುನಿ. ೩).
[ಸಂ. (ಚತುರ್ + ಆಸ್ಯ; ಚತುರ + ಆಸ್ಯ)]

**ಚತುರಾಸ್ಯತೆ** (ನಾ). [ಜೈನ] ಕೇವಲಜ್ಞಾನಿಯಾದವನಿಗೆ ಉಂಟಾಗುವ ಹತ್ತು ಅತಿಶಯಗಳಲ್ಲಿ ಒಂದು; ಒಮ್ಮೆಲೆ ನಾಲ್ಕು ಕಡೆಯಂ ನೋಡುವ ಶಕ್ತಿ: ಚತುರ ಚತುರಾಸ್ಯತೆ . . . ಗತಚ್ಛಾಯತೆಯ ವೀರ್ಯದತಿಶಯವು ಜನನ (ಸಾಳ್ವಭಾ. ೭೦-೬೪). [ಸಂ. ಚತುರಾಸ್ಯತಾ]

**ಚತುರಾಸ್ಯತ್ವ** (ನಾ).=ಚತುರಾಸ್ಯತೆ: ಚತುರಾಸ್ಯತ್ವಮಭುಕ್ತಿಭಾವಮನಿಮೇಷತ್ವಂ . . . ಅಚ್ಛಾಯತೆಯೆಂಬ ಪತ್ತತಿಶಯಂ ತೀರ್ಥೇಶನೊಳ್ ಶೋಭಿಕುಂ (ಚಂದ್ರಪು. ೦೩-೦೦೩). [ಸಂ.]

**ಚತುರಾಸ್ಯಪ್ರಿಯೆ** (ನಾ). ಸರಸ್ವತಿ: ಪುಸ್ತಕಹಸ್ತಾನ್ವಿತೆ ಪುಣ್ಯಕಥೆಯ ನೊರ್ವಳಿ ಚತುರಾಸ್ಯಪ್ರಿಯೆ ಸುರಾಗದಿಂ ವಾಚಿಸಿದಳ್ (ಪುಷ್ಪಪು. ೯-೮೬).
[ಚತುರಾಸ್ಯ + ಪ್ರಿಯೆ]

**ಚತುರಿಂದ್ರಿಯ** (ನಾ). ೧. ನಾಲ್ಕು ಬಗೆಯ ಇಂದ್ರಿಯಗಳು; ಕಣ್ಣು, ಮೂಗು, ನಾಲಗೆ ಮತ್ತು ಚರ್ಮ. ೨. (ಕಿವಿಯನ್ನುಳಿದು) ನಾಲ್ಕು ಇಂದ್ರಿಯಗಳನ್ನು ಮಾತ್ರ ಹೊಂದಿರುವ ಜೀವಿ: ಸ್ಪರ್ಶನ ರಸನ ಘ್ರಾಣ ಚಕ್ಷುರಿಂದ್ರಿಯ ಸಮನ್ವಿತಂಗಳಪ್ಪ ಮಧುಕರಾದಿ ಚತುರಿಂದ್ರಿಯಂಗಳ್ (ಆದಿಪು. ೦೦-೬೦ವ); ದಂಶಮಶಕ ಮಕ್ಷಿಕಾ ಭ್ರಮರ ಪತಂಗಾದಿ ಚತುರಿಂದ್ರಿಯಂಗಳ್ ಸ್ಪರ್ಶನ ರಸನ ಘ್ರಾಣ ಚಕ್ಷುರಿಂದ್ರಿಯ ಪರಿಚ್ಛಿತ್ತ್ಯಪೇತಂಗಳಪ್ಪುವು (ತತ್ತ್ವಪ್ರ. ೯೮). [ಸಂ. (ಚತುರ್ + ಇಂದ್ರಿಯ)]

**ಚತುರಿಕೆ₁** (ನಾ). ಚಾತುರ್ಯ; ಚದುರು; ನೈಪುಣ್ಯ: ತತವಿತತಘನಸುಸಿರ ವಾದ್ಯದ ಚತುರಿಕೆಗೆ . . . ನಲಿದು ನರ್ತಿಪುದು (ಸಾಳ್ವಭಾ. ೭೦-೫೦); ಅಧವನು ಜಱಿವ ಚತುರಿಕೆಯ ಮಾತುಗಳನು ಸೊಲ್ಲುಸೊಲ್ಲೆಂದು ಮೂದಲಿಸುತುಂ (ಚಬಪು. ೩೩-೨೨). [ಚತುರ₂ + – ಇಕೆ]

**ಚತುರಿಕೆ₂** (ನಾ). ೧. ಚತುರೆಯಾದವಳು; ಜಾಣೆ. ೨. [ಕಾವ್ಯಮೀ] ನಾಯಿಕೆಯ ನಾಲ್ಕು ಬಗೆಯ ಪರಿಚಾರಿಕೆಯರಲ್ಲಿ ಒಬ್ಬಳು: ಇತ್ತ ಚತುರ ಚತುರಿಕೆಯರಪ್ಪ ಪರಿಚಾರಕಿಯರುಂ . . . ಮಂಗಳಪಸದನಂಗೊಳಿಸಲವಸರಂಬಡೆದು (ಪುಷ್ಪಪು. ೮-೩೩ ವ): ಅಭಿಸಾರಿಕೆ, ಚತುರಿಕೆ, ಸಹಸಂಚಾರಿಕೆ, ದೂತಿಕೆಯರೆಂಬ ಚತುರ್ವಿಧ ಸಖಿಯರಿಂ (ವಿವೇಳ. ೨೨೯).
[ಸಂ. ಚತುರಿಕಾ]

**ಚತುರುಪಧಾವಿಶುದ್ಧ** (ಗು). ೧. ಧರ್ಮ, ಅರ್ಥ, ಕಾಮಂ, ಭಯ ಈ ನಾಲ್ಕು ವಿಷಯಗಳಲ್ಲಿ ಮಾಡಿದ ಪರೀಕ್ಷೆಗಳಿಂದ ಪರಿಶುದ್ಧನೆಂದು ನಿರ್ಣಯಿಸಲ್ಪಟ್ಟ : ಚತುರುಪಧಾವಿಶುದ್ಧಮತಿಚಿತ್ರಭವ ಪ್ರತಿರೂಪ ಸುಂದರಾಕೃತಿ . . . ಕಸಪಯ್ಯನಾಯಕನೊಳೆಯ್ದೆ ಜಗನ್ನುತಿವೆತ್ತು ಕೋಟುಗುಂ (ಎಕ. XI, ದಾವಣ. ೪೨-೪೩ : ಸು. 1162) : "ರಾಜಭಕ್ತಿ, ಅಸ್ವಾರ್ಥಪರತೆ, ಜಿತೇಂದ್ರಿಯತ್ವ, ಧೈರ್ಯ-ಈ ಗುಣಗಳಲ್ಲಿ ಪರೀಕ್ಷಿತವಾಗಿ ಶುದ್ಧವಾಗಿರುವ" (ಜಶಮಂ. ೬೮೧ ಟಿಪ್ಪಣಿ). (ನಾ). ೨. ಮೇಲಿನ ಪರೀಕ್ಷೆಗಳಿಂದ ಶುದ್ಧನೆಂದು ನಿರ್ಣಯಿಸಲ್ಪಟ್ಟವನು : ಚತುರುಪಧಾವಿಶುದ್ಧನುಂ ಬುದ್ಧಿವೃದ್ಧನುಂ . . . ಭದ್ರಮೂರ್ತಿಯುಮಪ್ಪ ವಸುಭಾಗಭಟ್ಟನಿಂತೆಂದಂ (ಪಂಚತಂ. ೦೭-೧೩) : ಚತುರುಪಧಾವಿಶುದ್ಧನನವದ್ಯಚರಿತಂ . . . ನೃಪನೇಂ ವಿವೇಕಿಯೋ (ಪುಷ್ಪಪು. ೩-೭೩) : ಚತುರುಪಧಾವಿಶುದ್ಧನಧಿಕಾರಿ ಕಳಾವಿದಂ (ಸೂಕ್ತಿಸು. ೧೭-೫೪).

[ ಸಂ. (ಚತುರ್ + ಉಪಧಾ + ವಿಶುದ್ಧ) ]

**ಚತುರುಪಧಾಶುದ್ಧಿ** (ನಾ). ಧರ್ಮ, ಅರ್ಥ, ಕಾಮ, ಭಯಂಗಳೆಂಬ ನಾಲ್ಕು ಬಗೆಯ ಗುಣಗಳಲ್ಲಿ ಪರೀಕ್ಷಿತನಾಗಿ ಶುದ್ಧಿಹೊಂದುವಿಕೆ : ವಿದಿತಂ ಪಂಚಾಂಗಮಂತ್ರಸ್ಥಿತಿ ಚತುರುಪಧಾಶುದ್ಧಿ ಸಿದ್ಧಿತ್ರಯಾಸಂಪದಮಾ ಷಾಡ್ಗುಣ್ಯವೃತ್ತಂ (ಚಂದ್ರಪು. ೯-೦೧೭).

[ ಸಂ. (ಚತುರ್ + ಉಪಧಾ + ಶುದ್ಧಿ) ]

**ಚತುರುಪಾಯ** (ನಾ). (ಕಾರ್ಯಸಾಧನೆಗೆ ಪ್ರಯೋಗಿಸಲಾಗುವ) ನಾಲ್ಕು ಬಗೆಯ ಉಪಾಯಗಳು; ಸಾಮ, ದಾನ, ಭೇದ, ದಂಡ: ವಿದಿತಂ . . . ಚತುರ ಚತುರುಪಾಯಪ್ರಯೋಗಂ (ಚಂದ್ರಪು. ೯-೦೦೭).

[ ಸಂ. (ಚತುರ್ + ಉಪಾಯ) ]

**ಚತುರೋಕ್ತಿ** (ನಾ). ಚಾತುರ್ಯದ ಮಾತು; ಚಮತ್ಕಾರಪೂರ್ಣವಾದ ಮಾತು : ಸ್ತುತಿಗೆಯ್ವಂ . . . ಚತುರೋಕ್ತಿ ಪ್ರಚುರಾರ್ಥ ಕಾವ್ಯಜನಿತೋರ್ವೀಹರ್ಷನಂ ಹರ್ಷನಂ (ಜಗವಿ. ೦-೮) ; ನಾಗರಿಕನುಕ್ತಿಗೆ ಚತುರೋಕ್ತಿ ಚತುರ್ಮುಖಂ ಮೆಚ್ಚುತ್ತುಂ ಪೋಗೆ (ಚಂದ್ರಪು. ೮-೭೨ ವ).

[ ಚತುರ್ + ಉಕ್ತಿ ]

**ಚತುರೋಪಾಯ** (ನಾ). ೧. = ಚತುರುಪಾಯಂ: "ಕೊಟ್ಟು ಕೊಳ್ವುದು ದಾನಮೆನಿಸಿಕ್ಕು ವೈರಮಂ ಪುಟ್ಟಿಸಲು ಭೇದಮೆನಿಸಿಕ್ಕು ಶಿಕ್ಷಿಸಲೊಡಂಬಟ್ಟೊಡದು ದಂಡಮೆನಿಸಿಕ್ಕು ಸ್ವೈರಣೆ ಸಾಮಮಕ್ಕು ತಾವಿಂತಿವೆಯ್ದೆ ಮುಟ್ಟೆ ಚತುರೋಪಾಯಮಕ್ಕುಂ" (ಮಂಗರಾ. ೭೯-೬) : ಉಗ್ರಪಂಚಾನನಂ ಗೆಲ್ವ ಚತುರೋಪಾಯಮಂ ಬಿಟ್ಟು ಕಾನಳ್ಕಿ ಬಳ್ಕಿ ಕಡುದೈನ್ಯದಿಂದೀಗ ಮುಗ್ಧಾಂಗಮಂ ತಳೆದಿರ್ಪುದು ವಿನಿದಚ್ಚರಿಯೆಂದು (ಕೃಮಿಭಾ. ೬-೨೮). ೨. ನಾಲ್ಕು ಬಗೆಯ ಉಪಾಯಗಳನ್ನು ಬಲ್ಲವನು : ಸುರಪುರನಿಲಯ ಚೆನ್ನಿಗರಾಯ ಚತುರೋಪಾಯ ರಕ್ಷಿಸು ನಮ್ಮನನವರತ (ಹರಿಸಾ. ೦). [ <ಸಂ. ಚತುರುಪಾಯ ]

**ಚತುರ್ಗತಿ** (ನಾ). ೧. ನಾಲ್ಕುಗತಿ ; ನಾಲ್ಕು ಅವಸ್ಥೆ. ೨. [ಜೈನ] ದೇವ, ಮನುಷ್ಯ, ತಿರ್ಯಕ್, ನಾರಕ ಎಂಬ ನಾಲ್ಕು ವಿಧವಾದ ಜನ್ಮಗಳಂ: ತಪಃಪೋತದಿನಣ್ಣ ನೀಂ ತಡಿಯನೆಯ್ದಂತಲ್ಲದಿಂತೀ ಚತುರ್ಗತಿ ಸಂಸಾರ ಪಯೋಧಿಯಂ ಪೊಱಮಡಲ್ ಮತ್ತಿಲ್ಲ ನೀನಾರ್ತಪಯ್ (ಆದಿಪು. ೩-೫೭) : ಇನ್ನೆವರಂ ಚತುರ್ಗತಿಗಳೊಳ್ತಿರಿತಂದು ಜವಂಗೆ ಪೇಡಿಯಾದೆಂ (ಮಲ್ಲಿಪು. ೦೩-೯೨). [ ಸಂ. (ಚತುರ್ + ಗತಿ) ]

**ಚತುರ್ಗುಣ** (ನಾ). ೧. ನಾಲ್ಕುಮಡಿ, -ಪಟ್ಟು. 'ದ್ವಿಗುಣ' ಪರಾ. ೨. [ದ್ವೈತ] ಸತ್, ಚಿತ್, ಆನಂದ, ಆತ್ಮ ಎಂಬ ಭಗವಂತನ ನಾಲ್ಕು ಗುಣಗಳಂ. 'ಚತುರ್ಗುಣೋಪಾಸಕ' ಪರಾ.

[ ಸಂ. (ಚತುರ್ + ಗುಣ) ]

**ಚತುರ್ಗುಣಿತ** (ಗು). ನಾಲ್ಕರಿಂದ ಗುಣಿಸಿದ ; ನಾಲ್ಮಡಿಯಾದ : ಆ ಸಂಕಟಸಮಯದಲ್ಲೂ ಅವನು ದ್ವಿಗುಣಿತ ಚತುರ್ಗುಣಿತ ಬಲಿಷ್ಠನಾದನು (ಅಂಬಿಕ. ೦೦೫). [ ಸಂ. (ಚತುರ್ + ಗುಣಿತ) ]

**ಚತುರ್ಗುಣೋಪಾಸಕ** (ನಾ). [ದ್ವೈತ] ಭಗವಂತನ ನಾಲ್ಕು ಗುಣಗಳನ್ನು ಉಪಾಸನೆ ಮಾಡುವವನು : ಮನುಷ್ಯೋತ್ತಮರು ಚತುರ್ಗುಣೋಪಾಸಕರು (ಹಿಂದಸಾ. ೨೯೦).

[ ಚತುರ್ಗುಣ + ಉಪಾಸಕ ]

**ಚತುರ್ಗ್ರಾಮ** (ನಾ). ನಾಲ್ಕು ಹಳ್ಳಿಗಳು ; ಚೌಗಾವೆ.

[ ಸಂ. (ಚತುರ್ + ಗ್ರಾಮ) ]

**ಚತುರ್ಜಾತಕ** (ನಾ). [ವೈದ್ಯ] ದಾಲ್ಚಿನ್ನಿ, ಏಲಕ್ಕಿ, ನಾಗಕೇಸರಿ, ಜಾಪತ್ರೆ ಎಂಬ ನಾಲ್ಕು ಔಷಧಿದ್ರವ್ಯಗಳು : ೨ ಹಲಹಿಪ್ಪಲಿ. ತವಕ್ಷೀರ ೪ ಹಲ, ಚತುರ್ಜಾತಕ ೧ ಹಲ ಜೇನುತುಪ್ಪ ೬ ಹಲ ಸಹ ಹಾಕಿ ಕಲಸಿ ಸೇವಿಸಲು ಕ್ಷಯವ್ಯಾಧಿ . . . ಗುಣಮಕ್ಕು (ಸಕವ್ಯ. ೨೫೮). [ ಸಂ. ]

**ಚತುರ್ಜ್ಞಾನ** (ನಾ). [ಜೈನ] ಮತಿ, ಶ್ರುತ, ಅವಧಿ ಮತ್ತು ಮನಃಪರ್ಯಾಯಂಗಳೆಂಬ ನಾಲ್ಕು ಬಗೆಯ ಜ್ಞಾನಗಳು : ಅಂತೊಗೆದ ಚತುರ್ಜ್ಞಾನದೊಳಾವಗಮೆಸೆದಂ ಜ್ಞಾನರೂಪನಾದಿಬ್ರಹ್ಮಂ (ಆದಿಪು. ೯-೮೮); ದೇದೀಪ್ಯಮಾನ ಪ್ರಭಾಭಾಸುರಗಾತ್ರಂ ಚತುರ್ಜ್ಞಾನನೇತ್ರರಂ . . . ಕಂಡು (ಸುಕುಮಾ. ೮-೪೮ ವ). [ ಸಂ. (ಚತುರ್ + ಜ್ಞಾನ) ]

**ಚತುರ್ನಿಕಾಯ** (ನಾ). [ಜೈನ] ಭವನವಾಸಿ, ವ್ಯಂತರ, ಜ್ಯೋತಿಷ್ಕ ಮತ್ತು ಕಲ್ಪವಾಸಿಗಳೆಂಬ ನಾಲ್ಕು ಪ್ರಕಾರದ ದೇವತೆಗಳ ಸಮೂಹ : ಅಮರಪತಿ ಚತುರ್ನಿಕಾಯಾಮರೇಂದ್ರಪರಿವೃತಂ ಬಂದು (ಮಲ್ಲಿಪು. ೦೩-೦೭೫). [ <ಸಂ. ಚತುರ್ನಿಕಾಯ ]

**ಚತುರ್ಥ** (ಗು). ೧. ನಾಲ್ಕನೆಯ. 'ಚತುರ್ಥಾಂಶ' ಪರಾ. (ನಾ). ೨. ನಾಲ್ಕನೆಯ ವರ್ಣಕ್ಕೆ ಸೇರಿದವನು ; ಶೂದ್ರ : ಈ ಕಿಱಿಗೆ ಸಂಸ್ಕಾರ ಜಲಶುದ್ಧಿ ದೊರಕದು ಚತುರ್ಥನಿದನಗೆದಾತಂ (ಸಿದ್ಧರಾ. ೪-೭೨).

[ ಸಂ. ]

**ಚತುರ್ಥಧ್ಯಾನ** (ನಾ). [ಜೈನ] ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನಗಳಲ್ಲಿ ಕೊನೆಯದು ; ಶುಕ್ಲಧ್ಯಾನ : ಧ್ಯಾನಾನಳದಗ್ಧ ಶೇಷಾಶೇಷ ಕರ್ಮೇಂಧನನುಮಾಗಿ (ಆದಿಪು. ೦೬-೭೪ ವ).

[ ಚತುರ್ಥ + ಧ್ಯಾನ ]

**ಚತುರ್ಥಸ್ನಾನ** (ನಾ). ಮುಟ್ಟಾದವಳು ನಾಲ್ಕನೆಯ ದಿನ ಮಾಡುವ ಸ್ನಾನ : ಮರುದೇವಿ ಮಹಾದೇವಿ ಚತುರ್ಥಸ್ನಾನದೊಳ್ ಕಲ್ಪದ್ರುಮ ದುಕೂಲವಸನೆಯುಂ . . . ಆಗಿ (ಆದಿಪು. ೭-೨೬ ವ) : ದೇವಕಿದೇವಿ ಪುಷ್ಪವತಿಯಾಗಿ ಚತುರ್ಥಸ್ನಾನಾನಂತರಂ ಮಂಗಳ ಪ್ರಸಾಧನಮನಪ್ಪುಕೆಯ್ದು (ಜಗವಿ. ೨-೫೯). 'ನಾಲ್ನೀರ್' ಪರಾ.

[ ಚತುರ್ಥ + ಸ್ನಾನ ]

**ಚತುರ್ಥಾಂಶ** (ನಾ). ನಾಲ್ಕನೆಯ ಒಂದು ಭಾಗ ; ಕಾಲುಭಾಗ : ನಕ್ಷತ್ರ ತಾರಾಗಣಕ್ಕೆಯುತ್ಕೃಷ್ಟದಿಂ ಪಲ್ಯೋಪಮ ಚತುರ್ಥಾಂಶಂ ಜಘನ್ಯದಿಂ ಪಲ್ಯೋಪಮಾಷ್ಟಮ ಭಾಗಮಕ್ಕುಂ (ಸುಕುಮಾ. ೦೦-೫೯ ವ).

[ ಚತುರ್ಥ + ಅಂಶ ]

**ಚತುರ್ಥಿ** (ನಾ). ೧. ಚಾಂದ್ರಮಾನ ಮಾಸದ ಒಂದು ಪಕ್ಷದಲ್ಲಿ ನಾಲ್ಕನೆಯ ತಿಥಿ ; ಚೌತಿ : ಷಷ್ಠಿ ಅಷ್ಟಮಿ ನವಮಿ ಪಾಡ್ಯ ಚತುರ್ಥಿ ಪೌರ್ಣಮಿ ಅಮಾವಾಸ್ಯೆ ಈಸು ತಿಥಿಗಳು ಅಶುಭ (ಗಗತಾ. ೪-೬೭). ೨. [ವ್ಯಾಕ] ನಾಮ ವಿಭಕ್ತಿಗಳಲ್ಲಿ ನಾಲ್ಕನೆಯದು : ನಿನಗೆ ಯೆನಗೆ ತನಗೆಯೆಂಬೀ ನುಡಿ ಚತುರ್ಥಿಯೊಳ್ (ಶಾಪ್ಯಾವ. ೦೫೨) : ನುತಸಂಪ್ರದಾನ ರೂಢಂ ಚತುರ್ಥಿ (ಶಮದ. ೦೨೯). [ ಸಂ. ಚತುರ್ಥೀ ]

**ಚತುರ್ದಂಡಿ** (ನಾ). [ಸಂಗೀತ] ನಾಲ್ಕು ಬಗೆಯ ಸಂಗೀತ ರಚನೆಗಳು : ಗೀತ, ಆಲಾಪ, ಠಾಯ ಮತ್ತು ಪ್ರಬಂಧ ಎಂದು ನಾಲ್ಕು ವಿಧ ರಚನೆಗಳನ್ನು ತಿಳಿಸಿ ಇವನ್ನು 'ಚತುರ್ದಂಡಿ' ಎಂದು ವೆಂಕಟಮಖಿ ಕರೆದಿದ್ದಾನೆ (ಸಂಗೀಶಾ. ೬೦). [ಸಂ. ಚತುರ್ದಂಡೀ]

**ಚತುರ್ದಂತ** (ನಾ). ೧. ನಾಲ್ಕು ಹಲ್ಲು : ಗೆಲ್ದನಂಗರುಚಿಯಿಂದ್ಮ ರಾವಣನುಮಂ ಕುಮಾರಚೂಡಾಮಣಿ ಲಾಲಾಜಲದೊಳಂ ಚತುರ್ದಂತದೊಳಂ (ಪಂಚಾಮಾ. ೬-೧೩೦). ೨. ನಾಲ್ಕು ಕೋರೆಗಳನ್ನುಳ್ಳದು ; ಐರಾವತ : ಲಲಿತಾಂಗುಲಿ ಭಾಸುರಭದ್ರ ಲಕ್ಷಣಾಲಂಕೃತಂ ಚತುರ್ದಂತಂ (ಅಜಿಪು. ೫-೬೬). [ಸಂ. (ಚತುರ್ + ದಂತ)]

**ಚತುರ್ದಶ** (ಗು). ೧. ಹದಿನಾಲ್ಕನೆಯ. (ನಾ). ೨. ಹದಿನಾಲ್ಕು : ವೃಷಭಾದ್ರಿಗಳಿಂದಂ ಚತುರ್ದಶ ಮಹಾವಾಹನಗಳಿಂದಮೆಸೆದು (ಆದಿಪು. ೦-೪೮ ವ). [ಸಂ. ಚತುರ್ದಶನ್ (ಚತುರ್ + ದಶನ್)]

**ಚತುರ್ದಶಧರೆ** (ನಾ). = ಚತುರ್ದಶಲೋಕ : ಜೀವಾಂತರಾತ್ಮ ಪರಮಾತ್ಮ ಚೇತನರೂಪ ಪಾವನ ಚತುರ್ದಶಧರಾಜನಾಧೀಶ (ವೀಕ್ಕಪು. ೪-೪-೨). [ಚತುರ್ದಶ + ಧರೆ]

**ಚತುರ್ದಶಪದಿ** (ನಾ). [ಛಂದ] ಹದಿನಾಲ್ಕು ಚರಣಗಳನ್ನುಳ್ಳ ಒಂದು ಬಗೆಯ ಪದ್ಯ ; ಸುನೀತ ; ಇಂಗ್ಲಿಷಿನ ಸಾನೆಟ್‌ರೂಪದ ಪದ್ಯ : ಈವರೆಗೆ ಕೆಲಕೆಲವು ವೈಣಿಕಗೀತಗಳನ್ನೂ ಚತುರ್ದಶಪದಿಗಳನ್ನೂ . . . ರಚಿಸಿಲ್ಲದುದರಿಂದ (ಹಕ್ಕರ. ೪ನೇ ಮುನ್ನುಡಿ). [ಸಂ. ಚತುರ್ದಶಪದೀ]

**ಚತುರ್ದಶಪೂರ್ವ** (ನಾ). [ಜೈನ] ಶ್ರುತಾಂಗಗಳ ವಿವರಣೆಗಳನ್ನು ಕೊಡುವ – ಉತ್ಪಾದ, ಆಗ್ರಾಯಣೀಯ, ವೀರ್ಯಪ್ರವಾದ, ಅಸ್ತಿನಾಸ್ತಿಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಾಖ್ಯಾನ, ವಿದ್ಯಾನುವಾದ, ಕಲ್ಯಾಣ, ಪ್ರಾಣಾವಾಯ, ಕ್ರಿಯಾವಿಶಾಲ, ಲೋಕಬಿಂದುಸಾರ ಎಂಬ ಹದಿನಾಲ್ಕು ಪೂರ್ವಗ್ರಂಥಗಳು : ಗುರುವಿನನುಮತದಿಂ ದ್ವಾದಶಾಂಗ ಚತುರ್ದಶಪೂರ್ವಂಗಳಂ ಕಲ್ತು (ಆದಿಪು. ೦೪-೦೬೫ ವ) : ದ್ವಾದಶಾಂಗ ಚತುರ್ದಶಪೂರ್ವಮಂ . . . ಕಲ್ತು (ಶಾಂತಿಪು. ೯-೦೦೫ ವ). [ಚತುರ್ದಶ + ಪೂರ್ವ]

**ಚತುರ್ದಶಭುವನ** (ನಾ). = ಚತುರ್ದಶಲೋಕ : ಈ ಚತುರ್ದಶಭುವನಮ ಬೆಲೆಯೆನಿಪ ಕೃತಿಯನಮಳಾಕೃತಿಯಂ (ಅರ್ಥನೀ. ೦-೪೬) ; ಇಕ್ಷ್ವಾಕುವಂಶದೊಳಗಣ ಚತುರ್ದಶ ಭುವನಪತಿಗಳೊಳಗಿಂದುತನಿಬನಜಯ ಹುಸಿಹೊದ್ದದವರಿಲ್ಲ (ಹರಿಶ. ೨-೭) ; ಏಕಾಂತರಾಮನನಂತತೇಜೊಮಹಿಮೆಯದು ಲೋಕಾಂತವಾಯಿತ್ತೀ ಚತುರ್ದಶಭುವನಮಧ್ಯದಲಿ (ಬಸಪು. ೫೨-೪೫) ; ಈ ಕಾಳೆಗ ಚತುರ್ದಶಭುವನಜನ ಸಂಕ್ಷೋಭವಾಯ್ತೆಂದ (ಕುವ್ಯಾಕ. ೨೨-೧೦) [ಚತುರ್ದಶ + ಭುವನ]

**ಚತುರ್ದಶಮನು** (ನಾ). ೧. ಸ್ವಾಯಂಭುವ, ಸ್ವಾರೋಚಿತ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ ಮತ್ತು ಇಂದ್ರಸಾವರ್ಣಿ ಎಂಬ ಹದಿನಾಲ್ಕು ಜನ ಮನುಗಳು. ೨. [ಜೈನ] ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲವಾಹನ, ಚಕ್ಷುಷ್ಮಂತ, ಯಶಸ್ವಿ, ಅಭಿಚಂದ್ರ, ಚಂದ್ರಾಭ, ಮರುದ್ದೇವ, ಪ್ರಸೇನಜಿತು, ನಾಭಿರಾಜ ಎಂಬ ಹದಿನಾಲ್ಕು ಮನುಗಳು : ಅಜ್ಞಾನತ್ರಯರಹಿತರ್ . . . ಅಧಿಕಪ್ರಜ್ಞರ್ ಪುಟ್ಟುವರೀ ನೆಲನಾಡಜ್ಞಾಮುದ್ರಿತಮೆನಲ್ ಚತುರ್ದಶಮನುಗಳ್ (ಪಂಚಾಮಾ. ೦-೬೪). 'ಕುಲಂಕರ' ಪರಾ. [ಚತುರ್ದಶ + ಮನು]

**ಚತುರ್ದಶಮಾರ್ಗಣೆ** (ನಾ). [ಜೈನ] ಜೀವಸಮಾಸದಲ್ಲಿ ಉಂಟಾಗುವ ವಿವಿಧ ರೂಪಗಳನ್ನು ವಿವರಿಸುವ ಹದಿನಾಲ್ಕು ವಿಭಾಗ ; ಗತಿ, ಇಂದ್ರಿಯ, ಕಾಯ, ಯೋಗ, ವೇದ, ಕಷಾಯ, ಜ್ಞಾನ, ಸಂಯಮ, ದರ್ಶನ, ಲೇಶ್ಯಾ, ಭವ್ಯ, ಸಮ್ಯಕ್ತ್ವ, ಸಂಜ್ಞಾ, ಆಹಾರ ಎಂಬ ಹದಿನಾಲ್ಕು ಮಾರ್ಗಣಗಳು : ಗತೀಂದ್ರಿಯ ಕಾಯ ಯೋಗ ವೇದ ಕಷಾಯ ಜ್ಞಾನ ಸಂಯಮ ದರ್ಶನ ಲೇಶ್ಯಾ ಭವ್ಯ ಸಮ್ಯಕ್[ಕ್ತ್ವ] ಸಂಜ್ಞಾಹಾರಗಳೆಂಬ ಚತುರ್ದಶ ಮಾರ್ಗಣೆಗಳೊಳಂ . . . ಸುಖಿವ ಜೀವಂಗಳೆಲ್ಲಂ ಸಂಸಾರಿ ಜೀವಂಗಳೆಂಬುವಕ್ಕು (ಜೀವಸಂ. ೩-೭ ವ). [ಚತುರ್ದಶ + ಮಾರ್ಗಣೆ]

**ಚತುರ್ದಶರತ್ನ** (ನಾ). (ಸಮುದ್ರ ಮಂಥನದಿಂದ ಹುಟ್ಟಿದ) ಲಕ್ಷ್ಮಿ, ಕೌಸ್ತುಭ, ಪಾರಿಜಾತಕ, ಸುರೆ, ಧನ್ವಂತರಿ, ಚಂದ್ರ, ಕಾಮಧೇನು, ಐರಾವತ, ರಂಭೆ ಮೊದಲಾದ ಅಪ್ಸರೆಯರು, ಉಚ್ಚೈಃಶ್ರವಸ್ಸು, ವಿಷ, ಶಂಖ, ಅಮೃತ, ಹರಿಧನುಸ್ಸು ಎಂಬ ಹದಿನಾಲ್ಕು ರತ್ನಗಳು. ೨. [ಜೈನ] ಗೃಹಪತಿ, ಸೇನಾಪತಿ, ಶಿಲ್ಪಿ, ಪುರೋಹಿತ, ಸ್ತ್ರೀ, ಆನೆ, ಕುದುರೆ, ಚಕ್ರ, ಖಡ್ಗ, ಛತ್ರ, ದಂಡ, ಮಣಿ, ಚರ್ಮ, ಕಾಕಿಣಿ ಎಂಬ, ಚಕ್ರವರ್ತಿಗೆ ದೊರೆಯುವ ಏಳು ಜೀವ ರತ್ನಗಳು ಮತ್ತು ಏಳು ಅಜೀವ ರತ್ನಗಳು. 'ಅಜೀವರತ್ನ', 'ಜೀವರತ್ನ' ಪರಾ. [ಚತುರ್ದಶ + ರತ್ನ]

**ಚತುರ್ದಶಲೋಕ** (ನಾ). ಹದಿನಾಲ್ಕು ಲೋಕಗಳು ; ಭೂ, ಭುವ, ಸುವ, ಮಹ, ಜನ, ತಪ, ಸತ್ಯ ಎಂಬ ಏಳು ಮೇಲುಲೋಕಗಳು ಮತ್ತು ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲವೆಂಬ ಏಳು ಕೆಳಲೋಕಗಳು : ಚತುರ್ದಶಲೋಕಮನೆಯ್ದೆ ಗರ್ಭದೊಳ್ ಧರಿಯಿಸಿದಚ್ಯುತಂ ಬಳೆಯ ತನ್ನುದರಾಂತರದೊಳ್ (ಜಗವಿ. ೨-೯೪). ಪುಟ್ಟಿದರ್ದನೀಗಳ್ ಚತುರ್ದಶಲೋಕಪ್ರಭು (ಜಗವಿ. ೩-೦೯). [ಚತುರ್ದಶ + ಲೋಕ]

**ಚತುರ್ದಶವಿದ್ಯ** (ನಾ). ೧. ನಾಲ್ಕು ವೇದ, ಆರು ವೇದಾಂಗ ಮತ್ತು ಮೀಮಾಂಸೆ, ನ್ಯಾಯ, ಧರ್ಮಶಾಸ್ತ್ರ, ಪುರಾಣ ಎಂಬ ಹದಿನಾಲ್ಕು ವಿದ್ಯೆಗಳು: ವೇದ ಚತು ವೇದಾಂಗ ಷಡುವಿಧವಾದ ಸ್ಮೃತಿಪೌರಾಣದ್ವಯ ವಿನ್ನಾದ ಘನ ಮೀ ಮಾಂ ಸೆ ನ್ಯಾಯಾದ್ಯಮಿನಿತುಂಬೆರಸೆ . . . ಚತುರ್ದಶವಿದ್ಯದೊಳಗೆಯು ಸಾತಿಶಯ ಮೀಮಾಂಸೆ ವಿಂಶತಿ ರೀತಿಯಾಗಿಹುದು (ಗಗಶಾ. ೩-೦೦). ೨. [ಜೈನ] ತಂತ್ರ, ಸಾಮುದ್ರಿಕ, ಸ್ವಪ್ನ, ಜ್ಯೋತಿಷ್ಯ, ಯೋಗ, ಶಿಲ್ಪ, ಕೋಶ, ಅಶ್ವ, ಕೃಷಿ, ನಾಟ್ಯ, ವಾಸ್ತು, ರಸಾಯನ, ಧನುಷ್ಯ ಮತ್ತು ಬ್ರಹ್ಮ ಎಂಬ ಹದಿನಾಲ್ಕು ವಿದ್ಯೆಗಳು. [ಚತುರ್ದಶ + ವಿದ್ಯ]

**ಚತುರ್ದಶಿ** (ನಾ). ಚಾಂದ್ರಮಾನ ಮಾಸದ ಒಂದೊಂದು ಪಕ್ಷದ ಹದಿನಾಲ್ಕನೆಯ ತಿಥಿ : ಮಾಘ ಬ ಚತುರ್ದ್ದಶಿಯಲ್ಲು ಜಿನರಾತ್ರ ಮಹೋತ್ಸವಕ್ಕೆ (ಎಕ. XI, ಹೊಳ. ೦-೨೦ : 1164) : ಆ ಪಕ್ಷಂಗಳೊಳಗೆ ಈಶ್ವರನಧಿದೇವತೆಯಾದ ಚತುರ್ದಶಿ (ವಿವೇಕ. ೩೨೦). [ಸಂ. ಚತುರ್ದಶೀ]

**ಚತುರ್ದಿಕ್ಕು** (ನಾ). ನಾಲ್ಕು ದಿಕ್ಕುಗಳು ; ಪೂರ್ವ, ಪಶ್ಚಿಮ, ಉತ್ತರ ಮತ್ತು ದಕ್ಷಿಣ : ಅಳೆದ ಭೂಮಿಯ ಚತುರ್ದಿಕ್ಕಿನ ಮೂಲೆಗಳಲ್ಲಿಯೂ ಗುರುತು ಮಾಡುವಿಕೆ (ಭೂಮಿಅ. ೦೪). [<ಸಂ. ಚತುರ್ದಿಶ್]

**ಚತುರ್ನಿಕಾಯ** (ನಾ). = ಚತುರ್ಣಿಕಾಯ : ಕೇವಲಿಪೂಜೆಗೆ ಬಂದತ್ತು ಚತುರ್ನಿಕಾಯ ದೇವನಿಕಾಯಂ (ಪಂಚಾಮಾ. ೮-೫೦) : ಚತುರ್ನಿಕಾಯಾಃ – ಭವನವಾಸಿ ವ್ಯಂತರ ಜ್ಯೋತಿಷ್ಕ ವೈಮಾನಿಕಭೇದದಿಂ ಚತುಃಸಂಘಾತಮನುಳ್ಳರಪ್ಪರ್ (ತತ್ತ್ವಸೂ. ೦೬೪). [ಸಂ. (ಚತುರ್ + ನಿಕಾಯ)]

**ಚತುರ್ನಿಕಾಯಾಮರ** (ನಾ).=ಚತುರ್ನಿಕಾಯ: ಅಂತು ಚತುರ್ನಿಕಾಯಾಮರಜನಂಬೆರಸು . . . ಪೋದಂ (ಆಜಿಪು. ೩-೬೦ ವ) : ಈ ಗತಿ ಚತುಷ್ಟಯದೊಳುತ್ಕೃಷ್ಟಮೆನಿಸಿದ ಚತುರ್ನಿಕಾಯಾಮರರೊಳ್ (ಮಲ್ಲಿಪು. ೧೪-೧೦೧). [ ಚತುರ್ನಿಕಾಯ + ಅಮರ₂ ]

**ಚತುರ್ನೃಪವಿದ್ಯೆ** (ನಾ). ಅರಸನು ಕಲಿತುಕೊಳ್ಳಬೇಕಾದ ನಾಲ್ಕು ವಿದ್ಯೆಗಳು ; ಸಾಮ, ದಾನ, ಭೇದ, ದಂಡಗಳೆಂಬ ಉಪಾಯಗಳು: ತ್ರಿವಿಧಶಕ್ತಿಪ್ರಯುಕ್ತನುಂ ಚತುರ್ನೃಪವಿದ್ಯಾವಿಶಾರದನುಂ (ಚಂದ್ರಪು. ೭-೩೩ ವ). [ ಸಂ. ಚತುರ್ನೃಪವಿದ್ಯಾ (ಚತುರ್ + ನೃಪ + ವಿದ್ಯಾ) ]

**ಚತುರ್ಬಲ** (ನಾ). ಆನೆ, ಕುದುರೆ, ರಥ, ಮತ್ತು ಕಾಲಾಳು ಎಂಬ ನಾಲ್ಕು ಬಗೆಯ ಸೈನ್ಯ ; ಚತುರ್ಬಲಮಂ ನೆರಪುತ್ತುಂ . . . ಚಂಪಾಪುರಮಂ ಪರಿಯಿಟ್ಟು ಮುತ್ತಿದಂ (ಪುಷ್ಪಪು. ೩-೦೨೭) ; ನೆಗಹಿ ಬೀಸುವ ಚೌರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕೆ ತೋಱಿದರು ತಂತಮ್ಮಾಳು ಕುದುರೆಗಳ (ಕುಮಾ.ದ್ರೋ. ೯-೧೭): ಚತುರ್ಬಲ ನಿಜನಾಮಶಿಕ್ಷೆ ವರಚೇತನ ಸೂಚನೆಯಿಂತು ಸಂಜ್ಞೆಯಕ್ಕು (ನಾನಾರ. ೧೦೦).
[ ಸಂ (ಚತುರ್ + ಬಲ) ]

**ಚತುರ್ಭಕ್ತಿ** (ನಾ).[ಜೈನ]ನಾಲ್ಕು ಬಗೆಯ ಭಕ್ತಿ: ಅರ್ಹದ್ಭಕ್ತ್ಯಾಚಾರ್ಯಭಕ್ತಿ ಬಹುಶ್ರುತಭಕ್ತಿ ಶ್ರುತಭಕ್ತಿಯೆಂಬ ಚತುರ್ಭಕ್ತಿಯುಂ (ಚಂದ್ರಪು. ೧೦-೨೨ ವ). [ ಸಂ. (ಚತುರ್ + ಭಕ್ತಿ) ]

**ಚತುರ್ಭದ್ರ** (ನಾ). ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳು [ ಸಂ. (ಚತುರ್ + ಭದ್ರ) ]

**ಚತುರ್ಭಾವ** (ನಾ). ನಾಲ್ಕು ವಸ್ತುಗಳು : ಆ ತ್ರಿವಿಧ ಏಕವಾಗಿ ಅಪ್ಪುತತ್ತ್ವವ ಕೂಡಲಿಕ್ಕೆ ಆ ಚತುರ್ಭಾವ ಏಕವಾಗಿ ಪೃಥ್ವಿತತ್ತ್ವವ ಕೂಡಲಾಗಿ ಉತ್ಪತ್ತಿ ಎಲ್ಲಿ ಅಡಗಿತ್ತು (ಮೋಲಿಮಾ. ೭-೨೩). [ಸಂ. (ಚತುರ್+ಭಾವ)]

**ಚತುರ್ಭುಜ** (ನಾ). ೧. ನಾಲ್ಕು ತೋಳುಗಳು. ೨. ನಾಲ್ಕು ತೋಳುಗಳುಳ್ಳವನು : ಪರಶು ಫಲಾಕ್ಷಸೂತ್ರ ವರದೋಚಿತಚಿಹ್ನ ಚತುರ್ಭುಜಂ ಮನೋಹರ ವೃಷಲಾಂಛನಂ (ಆದಿಪು. ೧-೮). ೩. ಹರಿ; ವಿಷ್ಣು: ಪುಣ್ಯೋದಯದಿಂ ಚತುರ್ಭುಜನೆ ಪುಟ್ಟಿದಪಂ (ಜಗವಿ.೨-೮೪); ರತಿಕಾಂತ ಹರಭಕ್ತನೀತೆಱದಿ ನುಡಿಯಲವ ಚತುರ್ಭುಜನ ಸತಿಯು ಕಾರುಣ್ಯ ನಿನಗಿಲ್ಲ ಎಂದತಿಕೋಪದಿಂ ತಿರುಗಿ ತನ್ನ ಗೃಹಕಂ ಪೋಗೆ (ಪ್ರಾಭರಾ. ೦೩-೨೪). ೪. (ಆಲಂ) ಮದುವೆಯಾದವನು ; ವಿವಾಹಿತ : ಒಂದು ದೊಡ್ಡ ನವಕರಿಯನ್ನು ಹಿಡಿದು ಬೇಗನೆ ಚತುರ್ಭುಜನಾಗು ಎಂದು ಆಶೀರ್ವದಿಸಿದರು (ಜಯಂತ. ೨೨೮). [ ಸಂ. (ಚತುರ್ + ಭುಜ) ]

**ಚತುರ್ಮಡಿ** (ನಾ). ನಾಲ್ಕು ಮಡಿ ; ನಾಲ್ಕರಷ್ಟು : ಇದರ ಚತುರ್ಮಡಿ ಮೊಸರ ನೀರನ್ನು ಬಿಟ್ಟು ಪಾಕ ಮಾಡುವಾಗ ಹಾಕುವ ಕಲ್ಕದ್ರವ್ಯ (ಸಕವೈ. ೦೦೩). [ ಸಂ. ಚತುರ್ + ಮಡಿ₃ ]

**ಚತುರ್ಮುಖ** (ನಾ). ೧. ನಾಲ್ಕು ಮುಖಗಳನ್ನುಳ್ಳವನು ; ಬ್ರಹ್ಮ ; ಇರ್ದಂ ಜಗತ್ಪತಿಯೊಡ್ಡೋಲಗದೊಳ್ ಚತುರ್ಮುಖಂ . . . ವಾಣೀವಧೂಟೀಸಖಂ (ಜಗವಿ. ೦-೨೭) ; ಚತುರ ಚತುರ್ಮುಖನೆಲ್ಲಾ ಶ್ರುತಿಗಳ ನೊಲವಿಂದೆ ಕಲ್ತು (ಗಿರಿಕ. ೧-೯). ೨. [ಜೈನ] ಮಹಾಸಾಮಂತರಂ ಮಾಡುವ ಜಿನಪೂಜೆ ; ಸರ್ವತೋಭದ್ರ ಪೂಜೆ : ಮಹಾಮಂಡಳಿಕ ಪ್ರಮುಖಮಕುಟಬದ್ಧರ್ ಮಾಟ್ಪ ಚತುರ್ಮುಖಮುಂ (ಆದಿಪು. ೦೩-೦೩ ವ). [ <ಸಂ. (ಚತುರ್ + ಮುಖ) ]

**ಚತುರ್ಮುಖತಂತ್ರ** (ನಾ). ಬಿಂಬಾಗಮದ ಹದಿನೈದು ಭೇದಗಳಲ್ಲಿ ಒಂದು: ಚತುರ್ಮುಖತಂತ್ರ ಮಲಯತಂತ್ರ . . . ಮಹಾಸಾರಮೆಂದು ಬಿಂಬಾಗಮದ ಹದಿನೈದು ಭೇದಂಗಳು (ವಿವೇಕ. ೬೦).
[ ಚತುರ್ಮುಖ + ತಂತ್ರ ]

**ಚತುರ್ಯುಗ** (ನಾ). ಕೃತ, ತ್ರೇತಾ, ದ್ವಾಪರ ಮತ್ತು ಕಲಿ ಎಂಬ ನಾಲ್ಕು ಯುಗಗಳು : ಧರೆಯೊಳು ಚತುರ್ಯುಗಂಗಳು ಮರಳಿ ಮರಳಿ ಸಾವಿರ ಬಾರಿ ಬಂದಡಜಗೊಂದು ದಿನ (ಹರಿಕಾ. ೨-೨೩).
[ ಸಂ. (ಚತುರ್ + ಯುಗ) ]

**ಚತುರ್ವಕ್ತ್ರ** (ನಾ).=ಚತುರ್ಮುಖ ೧ (೬). [ ಸಂ.(ಚತುರ್ + ವಕ್ತ್ರ) ]

**ಚತುರ್ವರ್ಗ** (ನಾ). ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳು : ಸಮನಿಪ ಧರ್ಮಕ್ಕವಿರುದ್ಧಮರ್ಥಮರ್ಥಕ್ಕೆ ಕಾಮಮವಿರುದ್ಧಮನುಕ್ರಮದೊಳ್ ಕಾಮಕ್ಕಂ ಕಡೆಯ ಮೋಕ್ಷಮವಿರುದ್ಧಮೆನೆ ಚತುರ್ವರ್ಗಫಲಂ (ಆಜಿಪು. ೨-೪೭).
[ ಸಂ. (ಚತುರ್ + ವರ್ಗ) ]

**ಚತುರ್ವರ್ಣ** (ನಾ). ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳು : ಭರತಚಕ್ರವರ್ತಿಯು ಔದ್ಯೋಗಿಕದೃಷ್ಟಿಯಿಂದ ಜನತೆಯನ್ನು ಚತುರ್ವರ್ಣಗಳಾಗಿ ವಿಂಗಡಿಸಿದನು (ಭಾರದ. ೦೭೩).
[ ಸಂ. (ಚತುರ್ + ವರ್ಣ) ]

**ಚತುರ್ವಲ** (ನಾ). =ಚತುರ್ಬಲ : ನೆರೆದು ಚತುರ್ವಲಂಬೆರಸು ಬಂದುಱದೊಡ್ಡಿದ ಗಂಡರಾರುಮೆನ್ನಱಿಯದ ಗಂಡರೇ (ಪಂಪಭಾ. ೧೧-೮೪).
[ <ಸಂ. ಚತುರ್ಬಲ ]

**ಚತುರ್ವಲಯ, ಚತುರ್ವಳಯ** (ನಾ). (?): ಉತ್ತರೋತ್ತರ ಚತುರ್ವಲಯ[ಪಾಠಾಂ. ಚತುರ್ವಳಯ, ಛತ್ರವಳಯ]ತಾನಿದ್ದಲ್ಲಿ ಚಂದ್ರಸೂರ್ಯ ತಾರಾಮಂಡಲ ತಾನಿದ್ದಲ್ಲಿ (ಅವಿಡಂ. ೮೨-೩೬೦). **ಚತುರ್ವಳಯ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ ಸಂ. (ಚತುರ್ + ವಲಯ) ]

**ಚತುರ್ವಳಯ** 'ಚತುರ್ವಲಯ' ನೋ.

**ಚತುರ್ವಿಂಶತಿ** (ನಾ). ಇಪ್ಪತ್ತುನಾಲ್ಕು: ಚತುರ್ವಿಂಶತ್ಯರ್ಹತ್ಪ್ರತಿಮಾವಿರಾಜಮಾನ ಹೇಮದಾಮ ವಿಲಂಬಿತ ಘಂಟಾ ಸಮನ್ವಿತ ವಂದನಮಾಲೆಗಳೊಳಂ (ಆದಿಪು. ೦೭-೩೭ ವ); ಜೈನ ಪುರಾಣಗಳಲ್ಲಿ . . . ಚತುರ್ವಿಂಶತಿ ಕಾಮದೇವರೂ, ಏಕಾದಶರುದ್ರರೂ ನಿರ್ದೇಶಿಸಲ್ಪಟ್ಟಿರುವರು (ಸಾಹಿಸ. ೦೭೩). [ ಸಂ. ]

**ಚತುರ್ವಿಧ** (ಗು). ೧. ನಾಲ್ಕು ಬಗೆಯ ; ನಾಲ್ಕು ರೀತಿಯ: ವನಮಾಲಾಮಹಾದೇವಿ ಪುತ್ರಕಾಮ್ಯದಿಂದವೌಷಧಾನ್ನದಾನಾದಿ ಚತುರ್ವಿಧ ಧರ್ಮತತ್ಪರೆಯಾಗಿ (ಪುಷ್ಪಪು. ೩-೧೦೮ ವ). (ನಾ). ೨. ನಾಲ್ಕು ರೀತಿ; ನಾಲ್ಕು ಬಗೆ : ಚತುರ್ವಿಧಮಪ್ಪ ದತ್ತಿಯುಂ . . . ಆರ್ಯಷಟ್ಕರ್ಮಂಗಳು ನಿಮಗಿವು ಕುಲಾಚಾರಂಗಳೆಂದಱಿಯೆ ಪೇೞ್ದು ಕೈಕೊಳಿಸಿ (ಆದಿಪು. ೦೩-೦೩ ವ). [ ಸಂ. (ಚತುರ್ + ವಿಧ) ]

**ಚತುರ್ವಿಧಜೀವ** (ನಾ). ಸ್ವೇದಜ, ಅಂಡಜ, ಉದ್ಭಿಜ ಮತ್ತು ಜರಾಯುಜ ಎಂಬ ನಾಲ್ಕು ಬಗೆಯ ಜೀವಗಳು. [ಚತುರ್ವಿಧ+ಜೀವ]

**ಚತುರ್ವಿಧಪದ** (ನಾ). ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಹಾಗು ಸಾಯುಜ್ಯ ಎಂಬ ನಾಲ್ಕು ಬಗೆಯ ಮೋಕ್ಷಗಳು : ನಿಮ್ಮ ಶರಣರ ಚರಣದ ಭಕ್ತಿಯೇ ಎನಗೆ ಸಾಲೋಕ್ಯಪದವಯ್ಯ . . . ಇಂತೀ ಚತುರ್ವಿಧ ಪದಂಗಳಲ್ಲದೆ ಅನ್ಯವ ನಾನಱಿಯೆನಯ್ಯ (ಉರಿಪ. ೯೮-೮೦).
[ ಚತುರ್ವಿಧ + ಪದ₂ ]

**ಚತುರ್ವಿಧಪದವಿ** (ನಾ).=ಚತುರ್ವಿಧಪದ : ಚತುರ್ವಿಧಪದವಿಯ ಹಾರ ಅರಿಷಡ್ವರ್ಗಕ್ಕಳುಕ . . . ನಮ್ಮ ಬಸವಣ್ಣನು (ಮಹಾದೇ. ಬ. ೮೪-೨೦೮).
[ ಚತುರ್ವಿಧ + ಪದವಿ ]

**ಚತುರ್ವಿಧವಾದ್ಯ** (ನಾ). ತತ, ಅವನದ್ಧ, ಘನ ಮತ್ತು ಸುಷಿರ ಎಂಬ ನಾಲ್ಕು ಬಗೆಯ ವಾದ್ಯಗಳು. [ ಚತುರ್ವಿಧ + ವಾದ್ಯ₂ ]

**ಚತುರ್ವಿಧಸಂಘ** (ನಾ). [ಜೈನ] ನಾಲ್ಕು ಬಗೆಯ ಶಿಷ್ಯರ ಸಂಘ: ಮಹಾವೀರನ ಶಿಷ್ಯಸಂಘಕ್ಕೆ 'ಚತುರ್ವಿಧಸಂಘ' ವೆಂದು ಹೆಸರು : ಶ್ರಮಣರು, ಶ್ರಮಣೆಯರು, ಶ್ರಾವಕರು, ಶ್ರಾವಕಿಯರು (ತೀರ್ಥಕ. ೧೦೬). [ ಚತುರ್ವಿಧ + ಸಂಘ ]

**ಚತುರ್ವಿಧಾಮರ** (ನಾ). = ಚತುರ್ಣಿಕಾಯ : ನಿರುತಂ ಭಾವನರುಂ ವನಾವಸಥರುಂ ಜ್ಯೋತಿಷ್ಕರುಂ ಕಲ್ಪವಾಸರುಮಾಗಿರ್ದ ಚತುರ್ವಿಧಾಮರರುದಾರರ್ (ಪುಷ್ಪಪು. ೧೦-೧೩). [ ಚತುರ್ವಿಧ + ಅಮರ್ತ ]

**ಚತುರ್ವಿಧಾರಾಧನೆ** (ನಾ). [ಜೈನ] ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರ ಮತ್ತು ಸಮ್ಯಕ್ ತಪಸ್ಸು ಎಂಬ ನಾಲ್ಕು ಬಗೆಯ ಆರಾಧನೆಗಳು: ಸಮ್ಯಗ್ದರ್ಶನ ಜ್ಞಾನಚಾರಿತ್ರತಪಸಾಂ ಸ್ವೀಕರಣ ಮಾರಾಧನಾನಾಮುಮೆಂಬ ಚತುರ್ವಿಧಾರಾಧನೆಗಳನಾರಾಧಿಸಿ (ಸುಕುಮಾ. ೧೩-೪೦ ವ) : ಆನೆ ಸಜ್ಜೆಯ ಬಸದಿಯೊಳ್ ಚತುರ್ವ್ವಿಧಾರಾಧ [ನೆ] [ಯಿ] ನಾರಾಧಿಸಿ (ಸೌಇಇ. XX, ೩೨-೩೭ ; 1077). [ ಚತುರ್ವಿಧ + ಆರಾಧನೆ ]

**ಚತುರ್ವಿಧಾಹಾರ** (ನಾ). ೧. ಅನ್ನ, ಪಾನ, ಖಾದ್ಯ ಮತ್ತು ಲೇಹ್ಯ ಎಂಬ ನಾಲ್ಕು ಬಗೆಯ ಆಹಾರಗಳು. ೨. [ಜೈನ] ಲೇಪ್ಯಾಹಾರ, ಓಜಾಹಾರ, ಕಬಳಾಹಾರ ಮತ್ತು ಮಾನಸಾಹಾರ ಎಂಬ ನಾಲ್ಕು ಬಗೆಯ ಆಹಾರಗಳು : ರಾಗದ್ವೇಷವಿಲ್ಲದೆಯುಂ ಕೀರ್ತಿಕಾಮನಲ್ಲದೆಯುಂ ಚತುರ್ವಿಧಾಹಾರ ನಿವೃತ್ತಿಗೆಯ್ದು (ಮಲ್ಲಿಪು. ೧೦-೨೧). [ ಚತುರ್ವಿಧ + ಆಹಾರ ]

**ಚತುರ್ವೇದ** (ನಾ). ಋಕ್ಕು, ಯಜುಸ್ಸು, ಸಾಮ ಮತ್ತು ಅಥರ್ವಣ ಎಂಬ ನಾಲ್ಕು ವೇದಗಳು : ಸಂಖ್ಯಾವಾಚಿ ಸಮಾಸಕ್ಕೆ–ಏಕಾಂಗ . . . ತ್ರಿಲೋಕ, ಚತುರ್ವೇದ, ಪಂಚಭೂತ (ಶಮದ. ೮೨ ಪ್ರಯೋ) ; ಸದಾಶಿವ ಮುಖದಲಾ ಚತುರ್ವೇದವುದಿಸಿದವು (ಗಗತಾ. ೩-೪). [ ಸಂ. (ಚತುರ್ + ವೇದ) ]

**ಚತುರ್ವೇದಪಾಠ** (ನಾ). ನಾಲ್ಕು ವೇದಗಳ ಪಠನ : ಚತುರ್ವೇದಪಾಠ ತೀವ್ರವಾದರೇನು ಲಿಂಗಾರ್ಚನೆ ಹೀನನಾದರೆ ಶಿವಶಿವಾ ಬ್ರಾಹ್ಮಣನೆಂಬೆನೆ (ಬಸವ. ೫೮೮). [ ಚತುರ್ವೇದ + ಪಾಠ ]

**ಚತುರ್ವೇದಪಾರಂಗತ** (ನಾ). = ಚತುರ್ವೇದಪಾರಗ : ಅತಿಶಯದ ಚತುರ್ವೇದಪಾರಂಗತನತುಳ ಶಿವಧರ್ಮಮಾರ್ಗಾಯತ ಪವಿತ್ರಚರಿತ್ರನು (ಬಸವು. ೪೭-೨). [ ಚತುರ್ವೇದ + ಪಾರಂಗತ ]

**ಚತುರ್ವೇದಪಾರಗ** (ನಾ). ನಾಲ್ಕು ವೇದಗಳನ್ನು ಚೆನ್ನಾಗಿ ತಿಳಿದವನು: ಚತುರ್ವೇದಪಾರಗರ ಮನೆಯ ಮುಂದಣ ಚತುಶ್ಶಾಲೆಯೊಳ್ ಬೀಡಂ ಬಿಟ್ಟು (ಶಂಭಭಾ. ೩-೨೨ ವ) : ಸಾಸಿರ ಕವಿಲೆಯನಲಂಕಾರಸಹಿತಂ ಚತುರ್ವೇದಪಾರಗರಪ್ಪ ಸಾಸಿರ್ವ್ವರು ಬ್ರಾಹ್ಮಣರ್ಗ್ಗಂ ದಾನಂಗೊಟ್ಟ ಫಳಮಕ್ಕು (ಸೌಇಇ. XX, ೪೭-೪೩; 1072). [ ಚತುರ್ವೇದ + ಪಾರಗ ]

**ಚತುರ್ವೇದಿ** (ನಾ). ಚತುರ್ವೇದಗಳನ್ನು ಬಲ್ಲವನು : ನಿಮ್ಮ ವೇದಶಾಸ್ತ್ರಂಗಳು ಮೂರುತಿಗೊಂಡಲ್ಲಿ ಚತುರ್ವೇದಿಗಳಿಗೊಮ್ಮೆ ಅಕ್ಕಿಕ್ಕೆ ಅಯ್ಯಾ (ಬಸವ. ೫೮೫) : ಅಗಲುಂ ನಿಮ್ಮೊಲಿವ ನೋಟದಿ ಮೂಗನುಂ ಚತುರ್ವೇದಿಯಾಗನೆ ಈಗ ನಿಮ್ಮ ಕೃಪಾವಲೋಕದಿ ಹುಟ್ಟುಗುರುಡಂಗೆ ಆಗಲರವೆ ದೃಷ್ಟಿಗಳು (ಬಸವು. ೪೭-೬೩). 'ತ್ರಿವೇದಿ' ಪರಾ. [ಸಂ. ಚತುರ್ವೇದಿನ್]

**ಚತುರ್ಹಾಯಣೆ** (ನಾ). ನಾಲ್ಕು ವರ್ಷದ ಕಡಸು ; ಮಣಕ . [ ಸಂ. ಚತುರ್ಹಾಯಣೀ ]

**ಚತುಶ್ಶಾಲೆ** (ನಾ). ನಾಲ್ಕುಕಡೆಗೂ ಕೈಸಾಲೆ ಕಟ್ಟಿರುವ ಅಂಗಳ; ಚೌಕಿಗೆ: ಚತುರ್ವೇದಪಾರಗರ ಮನೆಯ ಮುಂದಣ ಚತುಶ್ಶಾಲೆಯೊಳ್ ಬೀಡಂ ಬಿಟ್ಟು (ಶಂಭಭಾ. ೩-೨೨ ವ). [ ಸಂ. ಚತುಶ್ಶಾಲ (ಚತುರ್ + ಶಾಲಾ +–) ]

**ಚತುಷ್ಕ** (ನಾ). ೧. ನಾಲ್ಕು ; ನಾಲ್ಕರ ಗುಂಪು, – ಸಮುದಾಯ : ಶುದ್ಧಾಕ್ಷರಂಗಳುಮಂ ಯೋಗವಾಹಚತುಷ್ಕಮುಮಂ ಸಂಯೋಗಾಕ್ಷರಂಗಳುಮಂ ಬ್ರಾಹ್ಮಿಗೆ ದಕ್ಷಿಣಹಸ್ತದೊಳುಪದೇಶಂಗೆಯ್ದು (ಆದಿಪು. ೮-೫೫ ವ); ಪೃಥ್ವ್ಯಪ್ತೇಜೋವಾಯುರೂಪ ಧಾತು ಚ ತು ಷ್ಕ ವಿ ರ ಹಿ ತ ನೆ ನಾಂ (ತತ್ತ್ವಪ್ರ. ೩೭೭). ೨. ಚೌಕ; ಅಂಗಳ: ಆಗಳಾ ಪುರದ್ವಾರಚತುಷ್ಕದೊಳ್ ಯದುಬಲಂ ತಳರ್ದತ್ತು (ಜಗವಿ. ೭-೪೭). [ ಸಂ. ]

**ಚತುಷ್ಕಗೋಪುರ** (ನಾ). ೧. ನಾಲ್ಕು ಗೋಪುರ. ೨. ನಾಲ್ಕು ಗೋಪುರಗಳನ್ನುಳ್ಳುದು : ವಿಭೂತಿಯನಾಂತುದಿಂತು ಕೌಶಂಬಿಪುರಂ ಜಿತಾಮರಪುರಂ ಕಮನೀಯ ಚತುಷ್ಕಗೋಪುರಂ (ಸುಕುಮಾ. ೧-೭೯). [ ಚತುಷ್ಕ + ಗೋಪುರ ]

**ಚತುಷ್ಕಷಾಯ, ಚತುಃಕಷಾಯ** (ನಾ). [ಜೈನ] ಕ್ರೋಧ, ಮಾನ, ಮಾಯಾ ಮತ್ತು ಲೋಭ ಎಂಬ ನಾಲ್ಕು ಬಗೆಯ ಕಷಾಯಗಳು : ಜನಪತಿಮತರಚಿತವಿವಿದರ್ಥಸಲಿಲ ಧೌತಮತಿಯುಂ . . . ಚತುಷ್ಕಷಾಯ ಮಥನನುಂ (ಚಾವುಂಪು. ೫-೨೦). **ಚತುಃಕಷಾಯ:** ಚತುಃಕಷಾಯ [ಪಾಠಾಂ. ಚತುಷ್ಕ,ಚತುಷ್ಕಷಾಯ] ಘಾತಿತಾಶೇಷಾನುಭಾಗಾಶ್ವಕರ್ಣಕರಣ ಪೂರ್ವಸ್ಪರ್ಧಕಾಭಿಘಾತದಿನಂತರ್ಮುಹೂರ್ತಕಾಲದಿಂ ಕಿಡಿಸಿ (ಆದಿಪು. ೧೦-೧೪ ವ): ಚತುಃಕ[ಪಾಠಾಂ. ಷ್ಕ]ಷಾಯ ದರ್ಪದಳನನುಂ (ಅಜಿಪು. ೩-೧೮). [ ಸಂ. ( ಚತುರ್ + ಕಷಾಯ) ]

**ಚತುಷ್ಕಾಲ** (ನಾ). [ಸಂಗೀತ] ನಾಲ್ಕು ಕಾಲದ ಲಯ : ಅವರ ಪ್ರತಿದಿನದ ಸಾಧನದಲ್ಲಿ ಎಲ್ಲ ಸ್ಥಾಯಿಗಳಲ್ಲಿಯೂ ಚತುಷ್ಕಾಲದಲ್ಲಿ ಅಭ್ಯಾಸ . . . ತಾನಗಳ ಅಭ್ಯಾಸ ಇವು ಕೂಡಿದ್ದುವು (ಸಂಗೀತ. ೬೩). [ ಸಂ. (ಚತುರ್ + ಕಾಲ) ]

**ಚತುಷ್ಕೋಣ** (ನಾ). ೧. ನಾಲ್ಕು ಮೂಲೆ : ವೇದಿಕೆಯೊಳ್ ರಂಜಿಸಿದು ವೆಳನೇಸಱಿಂ ನೆನೆಯಿಸುವ ಚತುಷ್ಕೋಣ ಶೋಣಮಣಿಕಲಶಂಗಳ್ (ಶಂರಾಮಾ. ೫-೧೩೬). ೨. ನಾಲ್ಕು ಮೂಲೆಗಳನ್ನುಳ್ಳ ಆಕೃತಿ ; ಚೌಕೋನ: ಹೀಗೆ ಶಂಕುವಿನ ಸಹಾಯದಿಂದ ಕಂಡುಹಿಡಿಯುವ ತ್ರಿಕೋಣ ಚತುಷ್ಕೋಣಗಳಿಗೆ "ವಸಲೆ"ಯೆಂದು ಹೇಳುವುದೂ ಉಂಟು (ಭೂಮಿಅ. ೩). [ ಸಂ. (ಚತುರ್ + ಕೋಣ) ]

**ಚತುಷ್ಟಯ** (ಗು). ೧. ನಾಲ್ಕು ವಸ್ತು ಅಥವಾ ವಿಭಾಗಗಳನ್ನು ಉಳ್ಳ. ೨. ನಾಲ್ಮಡಿಯಾದ ; ನಾಲ್ಕುಪಟ್ಟು ಇರುವ. (ನಾ). ೩. ನಾಲ್ಕರ ಸಮುದಾಯ, –ಗುಂಪು: ಮನ ಬುದ್ಧಿ ಚಿತ್ತ ಅಹಂಕಾರವೆಂಬ ಚತುಷ್ಟಯವ ಕಂಡು (ಪ್ರಭುಲಿಮಾ. ೧೫೦-೫೭೦); ಸಾಕು ಪಾರ್ಥನ ಬಿನ್ನಹವ ಕಿಡೆನೂಕದಿರು ನೆಳಲಿಂಗೆ ಬೇಱೆ ವಿವೇಕ ಬೇಪ್ಪೆಗಳೇ ಸಹೋದರರೀ ಚತುಷ್ಟಯಕೆ . . . ಬೇಱೆ ಕಾರ್ಯವ್ಯಾಕುಳತೆ ಬೇಡೆಂದು ಮುರರಿಪು ತಿರುಹಿದನು ನೃಪನ (ಕುವ್ಯಾಉ. ೧೭-೫೩). [ ಸಂ. ]

**ಚತುಷ್ಪಥ** (ನಾ). ನಾಲ್ಕು ಹಾದಿಗಳು ಕೂಡುವ ಸ್ಥಳ ; ಚೌವಟ ; ಚೌಕ : ಪೂವನೆತ್ತುವ ಪುಷ್ಪಲಾವಿಕಾ ಚತುಷ್ಪಥದೊಳ್ (ಶಾಂತಿಪು. ೮-೭೨ ವ) : ಚತುಷ್ಪಥದಲ್ಲಿ ರತ್ನರಾಶಿಯಂತೆ ಮನುಷ್ಯಜನ್ಮಂ ಪಡೆಯಲರಿದು (ತತ್ತ್ವಪ್ರ. ೩೩೨). [ ಸಂ. ]

**ಚತುಷ್ಪದ** (ನಾ). ನಾಲ್ಕು ಕಾಲುಗಳನ್ನುಳ್ಳುದು ; ಚತುಷ್ಪಾದಿ : ಪಕ್ಷಿ ಚತುಷ್ಪದ ಸರೀಸೃಪಾದಿ ತಿರ್ಯಗ್ಜಾತಿಗಳುಂ (ಆದಿಪು. ೧೭-೪೦ ವ). [ ಸಂ. ]

**ಚತುಷ್ಪದಿ, ಚತುಃಪದಿ** (ನಾ). [ಛಂದ] ನಾಲ್ಕು ಪಾದಗಳನ್ನುಳ್ಳ ಒಂದು ಪದ್ಯಜಾತಿ; ಚೌಪದಿ: ಅಂತುಂ ಯತಿಯುಂ ಪೇೞ್ದಾರ್ವರ್ಣಂತಾದ್ಯದೊಳಲಸದಾರ್ಯೆಯೊಳ್ ಕಂದದೊಳಂ ಸಂತಂ ದ್ವಿತೀಯ ಪಾದಗತಾಂತದೊಳಕ್ಕದು ಚತುಷ್ಪದೀಪದವಿಗಳೊಳ್ (ಕವಿರಾ. ೧-೭೭) : ತ್ರಿಪದಿ,

ಚತುಷ್ಪದಿ, ಷಟ್ಪದಿ, ಅಷ್ಟಪದಿ . . . ಆದಿಜಾತಿಗಳ್ [ಉಂ] ಉಂಟು (ಛಂದೋಬು. ೬. ೧-೬೭). **ಚತುಃಪದಿ :** ಉಲ್ಲಸಿತ ಜಾತಿಯಾದ ಚತುಃಪದಿ [ಪಾಠಾಂ. ಚತುಷ್ಪದಿ]ಚ್ಛಂದದೊಳ್ ಪಾಡೆ (ಅನಂಪು. ೬-೭೦ ವ).
[ ಸಂ. ಚತುಷ್ಪದೀ ]

**ಚತುಷ್ಪಾಠಿ₁** (ನಾ). ನಾಲ್ಕು ವೇದಗಳನ್ನು ಮತ್ತು ನಾಲ್ಕು ದರ್ಶನಗಳನ್ನು ಕಲಿಸುವ ಪಾಠಶಾಲೆ : ತರ್ಕ ವಾಚಸ್ಪತಿಗಳ ಚತುಷ್ಪಾಠಿಯ ಅಭಿಮುಖವಾಗಿ . . . ಪ್ರಯಾಣ ಹೊರಟರು (ನಿಬಂಧ. I, ೪೭); ಈ ಶಿಕ್ಷಣದ ವಿಶೇಷ ಅನುಶೀಲನೆ ಟೋಲ್‌ಗಳಲ್ಲಿಯೂ ಚತುಷ್ಪಾಠಿಗಳಲ್ಲಿಯೂ ನಡೆಯುತ್ತಿತ್ತು (ನಿಬಂಧ. I, ೩೦೭); ಚತುಷ್ಪಾಠೀ–ಬಂಗಾಳದಲ್ಲಿದ್ದ ವೇದ ಪಾಠಶಾಲೆಗಳು ನಾಲ್ಕು ದರ್ಶನಗಳನ್ನು ಕಲಿಸುತ್ತಿದ್ದ ಶಾಲೆಗಳು (ನಿಬಂಧ. I, ೩೦೭ ಅಡಿಟಿ). [ ಸಂ. ಚತುಷ್ಪಾಠೀ ]

**ಚತುಷ್ಪಾಠಿ₂** (ನಾ). ನಾಲ್ಕು ವೇದಗಳನ್ನು ಕಲಿತವನು; ಚತುರ್ವೇದಿ. 'ಘನಪಾಠಿ' ಪರಾ. [ ಸಂ. ಚತುಷ್ಪಾಠಿನ್ ]

**ಚತುಷ್ಪಾದ** (ನಾ). = ಚತುಷ್ಪದ : ಧರ್ಮ, ಸತ್ಯ, ದಯಾ, ದಾನವೆಂಬ ೪ ಪಾದಗಳುಳ್ಳ ಧರ್ಮವನ್ನು ಸ್ಥಾಪಿಸುತ್ತಾ ಮಾಡಿಸುತ್ತಾ ಚತುಷ್ಪಾದ ನಾಯಕನಾಗಿಯೂ . . . ಇದ್ದು ಸರ್ವಲೋಕಗಳಲ್ಲಿ ವಿಹಾರಮಾಡುತ್ತಿರುವನು (ಹಸಾರ. ೬-೬ ತಾತ್ಪರ್ಯ). [ ಸಂ. (ಚತುರ್ + ಪಾದ) ]

**ಚತುಷ್ಪಾದಿ** (ನಾ). = ಚತುಷ್ಪದ : ನಾನಾ ಭೇದ ಸತ್ವವ್ರಜದೊಳಿದು ಚತುಷ್ಪಾದಿ ತದ್ಭೇದದೊಳ್ ತಾನಿದು ಶುಂಡಾಳಂ (ಸುಕುಮಾ. ೩-೭).
[ ಸಂ. ಚತುಷ್ಪಾದಿನ್ ]

**ಚತುಷ್ಷಷ್ಟಿ** (ನಾ). ಒಂದು ಸಂಖ್ಯೆ ; ಅರುವತ್ತನಾಲ್ಕು : ಚತುಷ್ಷಷ್ಟಿ ಚಮರರುಹದ ಪೊದಟ್ದು ಪೊಳೆಪು ದೆಸೆಗೆಸೆದಿರ್ದುಂ (ಆದಿಪು. ೧೦-೪೦).
[ ಸಂ. (ಚತುರ್ + ಷಷ್ಟಿ) ]

**ಚತುಷ್ಷಷ್ಟಿಕಲೆ** (ನಾ). = ಚೌಷಷ್ಟಿಕಲೆ : ನೋಂತು ಚತುಷ್ಷಷ್ಟಿಕಲೆಗಳು ವೆಣ್ಬರಿಜಾಂತು ಸೇರಿದುವೊ ಎಂಬಂತೆ (ಹದಿಬ. ೧-೧೮).
[ ಚತುಷ್ಷಷ್ಟಿ + ಕಲೆ₃ ]

**ಚತುಸ್ಸಂಜ್ವಲನ** (ನಾ). [ಜೈನ] ಕ್ರೋಧ, ಮಾನ, ಮಾಯಾ, ಮತ್ತು ಲೋಭ ಎಂಬ ನಾಲ್ಕು ಕಷಾಯಂಗಳನ್ನುಳ್ಳ ಸ್ಥಿತಿ (?) : ತನ್ನ ಪರಿಣಾಮವಿಶೇಷದಿಂ ಚ ತು ಸ್ಸಂ ಜ್ವ ಲ ನ ನವನೋಕಷಾಯಂಗಳೆಂಬ ಪದಿಮೂಱುಂ ಪ್ರಕೃತಿಗಳನಂತರಕರಣಂ ಮಾಡಿ (ಆದಿಪು. ೧೦-೦೪ ವ).
[ ಸಂ. (ಚತುರ್ + ಸಂಜ್ವಲನ) ]

**ಚತುಸ್ಸಮಯ** (ನಾ). ಮಾಹೇಶ್ವರ, ವೈಷ್ಣವ, ಬೌದ್ಧ ಮತ್ತು ಜೈನ ಎಂಬ ನಾಲ್ಕು ಮತಗಳು . 'ಚತುಸ್ಸಮಯಸಮುದ್ಧರಣ' ಪರಾ.
[ ಸಂ. (ಚತುರ್ + ಸಮಯ) ]

**ಚತುಸ್ಸಮಯಸಮುದ್ಧರಣ** (ನಾ). ನಾಲ್ಕು ಮತಗಳನ್ನೂ ಕಾಪಾಡುವವನು : ಶರಣಾಗತ ವಜ್ರಪಂಜ[ರರುಂ ಚ]ತುಸ್ಸಮಯಸಮುದ್ಧರಣರುಂ (ಸೌಇಇ. V, ೮೪೯-೩೦; 1044); ಚತುಸ್ಸಮಯಸಮುದ್ಧರಣರೆನಿಪ್ಪ ಮಳಯಶ್ರೀಗೆ ನೋಂತರ್ (ಕೊಲ್ಹಾಶಾ. ೦೩-೪೦ ; 1186).
[ ಚತುಸ್ಸಮಯ + ಸಮುದ್ಧರಣ ]

**ಚತುಸ್ಸಮಯಾಶ್ರಯ** (ನಾ). ನಾಲ್ಕು ಮತಗಳಿಗೂ ಆಶ್ರಯ ಕೊಡುವವನು : ಚತುಸ್ಸಮಯಾಶ್ರಯ (ಹೈಅರಿ. ೦೪೩೭, ೨೪-೦೪ : 872); ಧ ಮ್ಮ್ರ ಸಾ ರ ತಿ ಚತುಸ್ಸಮಯಾಶ್ರಯಸಕಳಭುವನವಿಖ್ಯಾತಕೀರ್ತಿ (ಕಇಆ. ೦೩-೦೮-೦೩ ; ಸು. 932). [ ಸಂ. (ಚತುಸ್ಸಮಯ + ಆಶ್ರಯ) ]

**ಚತುಸ್ಸಾಗರ** (ನಾ). ನಾಲ್ಕು ದಿಕ್ಕಿನ ಮಹಾಸಮುದ್ರಗಳು : ಬಲದಿಂ ಚತುಸ್ಸಾಗರದ ವೇಳೆಯ ಧರಾಮಂಡಲಂಗಳಂ . . . ಆಳೆಯಂಥಾಸುರಂ (ಚಿಬಪು. ೪೭-೦೨). [ ಸಂ. (ಚತುರ್ + ಸಾಗರ) ]

**ಚತುಸ್ಸಾರ** (ನಾ). [ವೀಶೈ] (?) : ನವಸಾರ ಅಷ್ಟಸಾರ ದಶಸಾರ ಪಂಚಸಾರ ಚತುಸ್ಸಾರಯೇಕಸಾರಯಿಂತಿವನಶಿಗಳಿದ ಮಹಾಮಹಿಮನ ನಿಲವು ಲಿಂಗದಲ್ಲಿ ಸಂಪೂರ್ಣ (ಪದಗೋ. ೦೩-೦೭೩). [ ಸಂ. (ಚತುರ್ + ಸಾರ) ]

**ಚತುಸ್ಸೀಮೆ** (ನಾ). ನಾಲ್ಕು ದಿಕ್ಕಿನ ಮೇರೆ: ಈ ಗ್ರಾಮದ ಚತುಸ್ಸೀಮೆಯ ವಿವರ (ಮೈಆರಿ. ೧೯೪೬, ೦೮-೯ ; 1488).
[ ಸಂ. ಚತುಸ್ಸೀಮಾ (ಚತುರ್ + ಸೀಮಾ) ]

**ಚತೂರಸ** (ನಾ). ಕಟು, ತಿಕ್ತ, ಆಮ್ಲ ಮತ್ತು ಕಷಾಯ ಎಂಬ ನಾಲ್ಕು ರಸಗಳು : (೬). [ ಸಂ. (ಚತುರ್ + ರಸ) ]

**ಚತ್ತಣ** (ನಾ). ಎತ್ತು ಹೂಡಿ ಬಾವಿಯಿಂದ ನೀರೆತ್ತುವ ಸಾಧನ ; ಕಪಿಲೆ : "ಕಪಿಲೆ ಚತ್ತಣಂ" (ಕವಿಕಂ. ೨೭೧). [ ? ]

**ಚತ್ತರಿ** 'ಛತ್ರಿ₂' ನೋ.

**ಚತ್ತರಿಕೆ** 'ಚತ್ತರಿಗೆ' ನೋ.

**ಚತ್ತರಿಗೆ,** ಚತ್ತರಿಕೆ, ಛತ್ತರಿಗೆ (ನಾ). ಕೊಡೆ ; ಛತ್ರಿ : ಬೆಂಗದಿರನ ಕಿರಣ ಬೀಳದಿರಲೆಂದು ನೆಳಲಿನ ಚತ್ತರಿಗೆ ಹಿಡಿದ ಐರಾವತ (ಚಂತನ. ೩೦-೦೨); ನನ್ನ ಬೆನ್ನ ಮೇಲೆ ಒಂದೆರಡು ಬೆತ್ತದ-ಚತ್ತರಿಗೆಯ ಬೆತ್ತದ ಏಟುಗಳು ಬಿದ್ದಾಗ ತಿಳಿಯಿತು (ಶ್ರೀಕಾಂತ. I, ೩); ಈ ಹುಡುಗಿ ಹೊತ್ತು ಬಂದ ಹಾಗೆ ಚತ್ತರಿಗೆ ಹಿಡಿಯುವವಳಲ್ಲ (ಅರಗಿ. ೨೩೪). **ಚತ್ತರಿಕೆ :** ಶೇಷನು ತನ್ನ ಸಾವಿರ ಹೆಡೆಗಳನ್ನು ಪಸರಿಸಿ ಕೃಷ್ಣನ ಮೇಲೆ ಚತ್ತರಿಕೆ ಹಿಡಿದನು (ಭಾಮ್ಮುಕ. ೩೦೦); ಬರಿಗಾಲಿನಿಂದ ನಡೆಯುವ ತಲೆಯ ಮೇಲೆ ಚತ್ತರಿಕೆ ಇಲ್ಲದಿರುವ ರಾಮು (ತುಳಸಿ. ೦೬೬). **ಛತ್ತರಿಗೆ :** ತಾಳೆ . . . ಎಲೆಗಳನ್ನು ಮನೆಗೆ ಹೊಚ್ಚುವರು ; ಅವುಗಳಿಂದ ಛತ್ತರಿಗೆಗಳಾಗುತ್ತವೆ (ಕಭಾಗಿ. ೪೦).
[ <ಸಂ. ಛತ್ರಿಕಾ ]

**ಚತ್ತಾಣ** (ನಾ) [ಕಾವ್ಯವಿ] ಕಂದ ಪದ್ಯಗಳು ಹೆಚ್ಚಾಗಿದ್ದು ಕೆಲವು ವೃತ್ತಗಳು, ಚೌಪದಿ, ಅಕ್ಕರ, ಗೀತಿಕೆ ಮತ್ತು ತ್ರಿಪದಿಗಳನ್ನು ಒಳಗೊಂಡ ಒಂದು ಬಗೆಯ ಪ್ರಾಚೀನ ಕಾವ್ಯಪ್ರಭೇದ : "ಚತ್ತಾಣಂ ಕೃತಿಭೇದಂ" (ಕಣಾನಿ. ೩೩) : "ಕಬ್ಬವೆಸರ್ ಚತ್ತಾಣವೆನಿಪ್ಪುದು" (ಕಚುನಿ. ೦೦೦) ; ನುಡಿಗೆಲ್ಲಂ ಸಲ್ಲದ ಕನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀಗಡಿನ ನೆಗಟ್ಟಿಯ ಕಬ್ಬದೊಳೊಡಂಬಡಂ ಮಾಡಿದರ್ ಪುರಾತನ ಕವಿಗಳ್ (ಕವಿರಾ. ೧-೩೨) ; ಕಂದಂಗಳ್ ಪಲವಾಗಿರೆ ಸುಂದರ ವೃತ್ತಂಗಳಕ್ಕರಂ ಚವುಪದಿ ಮತ್ತಂ ದರ್ ಗೀತಿಕೆ ತಿವದಿಗಳಂದಂಬೆತ್ತಿಸೆಯೆ ವೇಟ್ಟೊಡದು ಚತ್ತಾಣಂ (ಕವಿರಾ. ೧-೩೩) : 'ಚತ್ತಾಣ'ವು ದೇಸಿಗಬ್ಬವೇ ಆದರೂ . . . ಶ್ರವ್ಯವೇ ಹೊರತು ದೃಶ್ಯಕ್ಕೊಪ್ಪುವುದಲ್ಲ (ಪಾರ್ತಿಸು. ೩೮). 'ಚಿತ್ರಾಯತನ' ಪರಾ. [ ? ]

**ಚತ್ತಾರು** (ನಾ). ಛತ್ರ ; ಸತ್ರ (?) : ಸಮರ್ಪಿಸಿ ಕೊಟ್ಟ ಧರ್ಮಸದನ ಚತ್ತಾರು ಉಂಬವೆಂತೆಂದರೆ ಕೋಳಾಲಸೀಮೆಯೊಳಗಣ ಕೊತನೂರು ಪಟ್ಟಡೆ ಸ್ಥಳದ ಕೆಂದಟ್ಟು ಗ್ರಮ ೧ (ಎಕ. X(8), ಕೋಲಾರ. ೩೦೪-೦೦ : ಸು. 17ನೆಯ ಶತ). [ ? ]

**ಚತ್ತು** 'ಛತ್ತು' ನೋ.

**ಚತ್ರ₁,** ಛತ್ರ₁(ನಾ). ಧರ್ಮಕ್ಕಾಗಿ ಉಚಿತವಾದ ವಸತಿ ಹಾಗು ಊಟಗಳನ್ನು ಒದಗಿಸುವ ಸ್ಥಳ ; ಧರ್ಮಾಲಯ ; ಧರ್ಮಸತ್ರ: ಬಾಡಿಗೆಯ ಮನೆಗೆ ತಿವಿದುಕೊಳ್ಳ ಚತ್ರದ ಕೂಟ್ಗೆ ಮೆಯ್ಯಾಂಪ ನಡುಮನೆಯೊಳ್ ಬಾವಿಯನಗಟ್ಟ . . . ಕಟ್ಟೆಗ್ಗರಂತೆ (ಧರ್ಮಾಮ್ಮ. ೯-೦೬೨) ; ಗೊಗ್ಗರಸಗೆ ಚತ್ರಕೆ ಅರಕೆರೆಯಲು ಬಿಟ್ಟ ಗಟ್ದಿ ಕಮ್ಮ ೩೫ (ಎಕ. VII, ಶಿವಮೊ. ೨೩-೦೦ : 1115). **ಛತ್ರ₁ :** ಛತ್ರದ ಗೃಹಂ ಪ್ರತಿಶ್ರಯವಕ್ಕು (ಮಂಗಳಾ. ೩೮-೯) ; ಉಭಯಂ ನಾಲ್ವತಮೂರೊನ್ನನು ನಂಮ ಛತ್ರದ ಧರ್ಮವ ನಡಸುವರಿಗೆ ತೆತ್ತು (ಎಕ. VII, ಶಿವಮೊ. ೭೦-೫೨ : 1431): ವಿನಾಯಕ

ದೇವರ ಸನ್ನಿಧಿಯಲಿ ದಿನಂಪ್ರತಿ ಆರು ಮನ್ದಿ ಬ್ರಾಂಹ್ಮರಿಗೆ ಛತ್ರುವನೂ ಇಕಿಸಿ (ಎಕ. X, ಮುಳುಬಾ. ೨೫೯–೨೩ : 1442) ; ಯಿಪ್ಪನೂ . . . ಛತ್ರಕೆ ಸಲವಾಗಿ ಜನಾರ್ದನದೇವರ ಸನ್ನಿಧಿಯಲಿ ಧಾರೆಯನೆಱೆದು ಬಿಟ್ಟೆವಾಗಿ (ಎಕ. XIV, ಶ್ರೀರಂಗ, ೧೯೮–೨೦ : 1598). [ <ಸಂ. ಸತ್ರ ]

**ಚತ್ರ₂** (ನಾ). = ಚತ್ತ್ರಿಗೆ : ಹೊಳೆವ ಮುತ್ತಿನ ಚತ್ರದ ನೆಳಲೊಳು ಬರುವಿಳೆಯಾಣ್ಮನಾರಬ್ಬನೇತ್ರೆ (ಕಂಸವಿ. ೨೫–೨೭). [ <ಸಂ. ಛತ್ರ ]

**ಚತ್ರಕೀಯ** (ನಾ). (?) : ಯತಿಯೊಳ್ ಗೋಪುಚ್ಛೆ ತನ್ನೊಳ್ ನೆಲಸಿ ನೆಗಟ್ದಿನಂ ಮಾರ್ಗದೊಳ್ ಚತ್ರಕೀಯಂ[ಪಾಠಾಂ. ಚಕ್ರಿಚಕ್ರಿ]ಕೃತಕಕೂಚಾಡಂಬರಂ ರಂಜಿಸುವಿನಮೆಸೆಗುಂ (ಅಜಪು. ೫–೦೨). [ ? ]

**ಚತ್ರಿಕೆ** 'ಛತ್ರಿ₂' ನೋ.

**ಚತ್ವ** (ನಾ). ಚ ಎಂಬ ಅಕ್ಷರ : ಇರೆ ಯಲರಹಿತ ವ್ಯಂಜನ ಪರಮಾಗಿ ಸಕಾರವಲ್ಲಿ ಬಹುಳಂ ಚತ್ವಂ (ಶಮದ. ೬೮). [ ಸಂ. ]

**ಚತ್ವರ** (ನಾ). ೧. ಚೌಕೋನಾಕಾರದ ಅಂಗಳ : "ಅಂಗಣದಲ್ಲಿಯುಂ ಚತ್ವರಮೆಂಬುದು" (ಹಲಾಯು. ೧೩೬–೩೦) : "ಗೃಹಾಂಗಣಮನುಡಿಯುತ್ತ ಚತ್ವರಮೆಂಬುದು" (ಮಂಗರಾ. ೧೧೦–೦೬). ೨. ಯಜ್ಞಕ್ಕಾಗಿ, ಸಮತಟ್ಟಾಗಿ ಸಿದ್ಧಗೊಳಿಸಿದ ಭೂಭಾಗ. ೩. ಹಲವು ದಾರಿಗಳು ಕೂಡುವ ಸ್ಥಳ : ಸೂಳೆಗೇರಿಗಳೊಳಂ ಚತ್ವರಂಗಳೊಳಂ ಧರ್ಮದ ಚಾವಡಿಗಳೊಳಂ . . . ತಮ್ಮ ಚಾರರಂ ನೆಲೆಗೊಳಿಸಿ (ಭಾರಪಾಂ. ೪೩೫–೭೦). [ ಸಂ. ]

**ಚದರ,** ಚದರಂ₂, ಚದುರಂ₃ (ನಾ). ಚಚ್ಚೌಕ ; ಚೌರಸ : ಕೋಟಿ ಸುತ್ತಳತೆ ೩ ಚದರ ಮೈಲಿ (ದಿಲ್ಲಿಪ. ೩೪) ; ವಿಷ್ಣುಖಂಡವು ಸುಮಾರು ೧ ಕೋಟಿ ೭೦ ಲಕ್ಷ ಚದರ ಮೈಲುಗಳುಳ್ಳದ್ದಾಗಿಯೂ . . . ಇದೆ (ಭೂಗೋಳ. ೨೦). **ಚದರಂ₂ :** (ಳ). **ಚದುರಂ₃ :** 'ಚದುರುಬಿಲ್ಲೆ' ಪರಾ. [ <ಚತುರ₁ ? ]

**ಚದರಗಳ್ಳಿ,** ಚತುರಕಳ್ಳಿ (ನಾ). ಒಂದು ಬಗೆಯ ಕಳ್ಳಿ : ಬೊಂತೆಗಳ್ಳಿ, ಚದರಗಳ್ಳಿ (ಮೈಜಿಗ. ೩೫–೬೯೦). **ಚತುರಕಳ್ಳಿ :** (ಳ). [ ಚದರ₀+ಕಳ್ಳಿ₂ ]

**ಚದರಡಿ** (ನಾ). ಚೌರಸ ಅಡಿ ; ಒಂದು ಅಡಿ ಉದ್ದ ಹಾಗು ಒಂದು ಅಡಿ ಅಗಲವಾಗಿರುವುದು : ಗಾಳಿಗೆ ಅದರ ಮೈಯನ್ನು ಒಡ್ಡುವಾಗ ಒಂದು ಚದರಡಿ (೧೪೪ ಚದರ ಇಂಚು) ಸ್ಥಳವು ಸಿಗುವುದು (ಬಾಲಪ್ರ. I, ೪೧). [ ಚದರ + ಅಡಿ₁ ]

**ಚದರಾಸಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : (ಮೈಜಿಗ. ೫೪–೧೦೯೦). 'ಚೀತರಾಶಿ' ಪರಾ. [ ಚದರಾಸಿ? + ಸೊಪ್ಪು₃ ]

**ಚದರಿಸು** 'ಕೆದಱಿಸು' ನೋ.

**ಚದರು₁** 'ಕೆದಱ್₁' ನೋ.

**ಚದರು₂** 'ಚದರ' ನೋ.

**ಚದಲು** 'ಕೆದಱ್₁' ನೋ.

**ಚದಱು** 'ಕೆದಱ್₁' ನೋ.

**ಚದಿ** (ನಾ). ೧. ಮೊಂಡುತನ ; ಹಟ ; ಚಂಡಿತನ. 'ಚದಿಹಿಡಿ' ಪರಾ. ೨. ಮೋಸ ; ದ್ರೋಹ : ಆವಾಗ್ಯೆ ಅಪ್ಪಾಜ್ಯೆಯನು ಈ ಗುಂಡು ಇಟ್ಟಾಡಿ ಚದಿಮಾಡಿದ ಪೂರ್ವೋತ್ತರ ಅರಿಕೆಮಾಡುವ ಬಗ್ಗೆ (ರಾಚೇಂದ್ರ. ೧೪೫) : "ನಾನು ಎಂದಿಗೂ ಚದಿಮಾಡುವುದಿಲ್ಲ" ಚೆಂಗುಮಣಿ ಪ್ರಭುಗಳ . . . ಪಾದ ಹಿಡಿದು ಪ್ರಮಾಣ ಮಾಡಿದ (ಹುಲಿಹಾ. ೧೨). [ ←ತುಳು. ಕೊಡ. ಚದಿ ]

**ಚದಿಹಿಡಿ** (ಕ್ರಿ). ಚಂಡಿತನಮಾಡು ; ಮೊಂಡು ಹಿಡಿ ; ಹಟಮಾಡು : ಮಗು ಯಾಕೋ ಚದಿಹಿಡಿದಿದೆ (ರೂಢಿ). 'ಚಂಡಿಹಿಡಿ' ಪರಾ. [ ಚದಿ + ಹಿಡಿ₁ (<ಪಿಡಿ₁) ]

**ಚದುಂಪಿಸು** 'ಚದುಪಿಸು' ನೋ.

**ಚದುಕ** (ನಾ). ನಾಲ್ಕು ಕಂಬಗಳ ಆಧಾರವುಳ್ಳ ಮಂಟಪ : ಮುದದೆಸೆದಿರ್ಪ ಬದ್ದವಣಮುದ್ದವಣಂ ರಿಚಿ ಪಾಟವಾಟವೆತ್ತಿದ ಗುಡಿ ತೋರಣಂ ಸಸಿ ಮೊಸರ್ ಪಸೆ ಸೇಸೆ ವಿಳಾಸಿನೀಜನಂ ಚದುಕಮಿವೊಡ್ಡುಗಟ್ಟೆ . . . ಕಟ್ಟಿದನಪರಾಜಿತಂಗೆ ಪರಮೋತ್ಸವದಿಂ ಯುವರಾಜಪಟ್ಟಮಂ (ಅರ್ಧನೇ. ೨–೩೯). [ <ಸಂ. ಚತುಷ್ಕ ]

**ಚದುಕು** 'ಸದಕಂ₁' ನೋ.

**ಚದುಪಿಸು,** ಚದುಂಪಿಸು (ಕ್ರಿ). ಮೋಸಮಾಡು ; ವಂಚನೆಮಾಡು ; ಮರುಳುಮಾಡು ; ನಂಬಿಸು : ಹೃದಯದ ಕಪಟವ ಕಾಣಿಸಿ ಕೊಳ್ಳದೆ ಮೃದುವಾಕ್ಯದಿಂದ ಸಜ್ಜನರಾ ಚದುಪಿಸಿ ಜೀವವ ಕೊಂಬ ಕೂಳರದೊಂದು ಚದುರು ಗೆಲುವರಳವಲ್ಲ (ಜಂಪ್ರಸಾಂ. ೧–೪೭) ; ಇದಕೆ ನಾವೊಪ್ಪಿದೆ ವಾದರಪ್ಪಾಜಿಯ ಮೃದುಪಾದಪದ್ಮಂಗಳಾಣೆ ಚದುಪಿಸಿ ನಮ್ಮನು ಮಾಱುವರಿಂತು ಮಾಡಿದರದಕೇನಾಯ್ತು ಕೇಳು (ಭರಜ. ೫೭–೭೩). **ಚದುಂಪಿಸು :** ನಾಂ ಪಡೆಗೂಡಿ ಪೋಗುವೆನೆಂದು ಮಂತ್ರಿ ಚದುಂಪಿಸಿ ಬೀಳ್ಕೊಂಡನೊಡನೆ (ಭರಜ. ೫೭–೨೦). [ ಚದುಪು + – ಇಸು₃ ]

**ಚದುಪು** (ನಾ). ೧. ಚದುರು ; ಚಾತುರ್ಯ ; ಚಮತ್ಕೃತಿ : ನಿರ್ಭಯಂ ಯುತನಾಗಿ ಕಾಳಗದ ಚದುಪನು ನಿರೀಕ್ಷಿಸೆನುತಾತನಂ ಸೈತಿಟ್ಟು (ಪರಕು. ೨೮–೦೫) ; ಬವರದೊಳು ರಥವ ಚದುಪಿಂದೆನ್ನ ಬಲವರಿದು ರಥವ ಹರಿಸು (ತುರಂಗ. ೩೭–೪೭) ; ಭೀಷ್ಮ ಚದುಪಿಂದ ಬಾಣಾಂಬುಧಿಯೊಳದ್ದಿದನು ಮಾರ್ಗವನು ಮಾರ್ಗಣಕೆ ಯಮನಗರಿಗೆ (ತುರಂಗ. ೪೭–೦೩). ೨. ವಂಚನೆ ; ಕಪಟ ; ಮೋಸ : ಈ ಮನಂ ಚದುಪು ಚಾಳೆಯವ ಮೆಯ್ಯಾಗಿರ್ಪುದು (ಮನೋವಿ. ೪–೨) ; ಗನ್ನಗದುಕು ಬಜಿಯು ಬೋಸರಣೆ ಚದುಪು ಬೆಳಕ್ಕೆ ಡಾಳಕತನ (ಜಂಪ್ರಸಾಂ. ೧೮–೮೫) ; ನಾಭೀಕರ್ಣಕಾರವ ಚದುಪಿನಿಂದವ ಮತ್ತೆ ಸಂಧಿಸಿ ಗದೆಯೊಳಪ್ಪಳಿಸಾ ರಥಾಂಗವ ನಡೆಯೆ ಮಾಯಾವಿ (ಅಂಬಿಕಾ. ೩೮–೪೭). [ <ಚದುರ್ + – ಪು₂./ತುಳು. ಚದುಪು ]

**ಚದುರ್,** ಚದುರು₂, ಚೆದುರು₂ (ನಾ). ೧. ಜಾಣತನ ; ಚಾತುರ್ಯ ; ಕೌಶಲ ; ಬುದ್ಧಿವಂತಿಕೆ : "ಚದುರೆನೆ ಚಾತುರ್ಯಮಪ್ಪುದು" (ಚತುನಿ. ೪೪) ; ಬಿಧಿ ರತ್ನವ್ರಾತಮಂತಃಪುರಂ . . . ಎಮ್ಮನೀಡಾಡಿ ಸಲ್ಗುಂ ನಿಧನಕ್ಕಂತಪ್ಪುವಂ ಮುಂ ಬಿಸುಡುವುದೆ ಚದುರ್ (ಆದಿಪು. ೪–೭೮) ; ಜಸಮಂ ಧರ್ಮಮುಮನುಪಾರ್ಜಿಸುವೊಡೆ ಚದುರದುವೆ ನಿಟ್ಟೆ ನಿಮಗೆ (ಅಜಪು. ೨–೭೮) : ಚದುರಿಂ ನಾಂಟಿ ವಿವೇಕದಿಂ ನ(ದೆ)ಡಪಿ . . . ಸಂಪದದಿಂದಂ ಫಲಮಾಯ್ತು ಸರ್ವಜನಕಂ ಶ್ರೀಶಿಷ್ಟಕಲ್ಪದ್ರುಮಂ (ಲೋಕೋಪ. ೦೨–೬೫) ; ಚಲ್ಲವಾಡುತ್ತೆ ಚದುರೊದವೆ ಬಣ್ಣಿಸುತೆ (ಪದ್ಮರಾ. ೭–೩೧). ೨. ಮೋಸದ ಮಾತು ; ಸುಳ್ಳು ನುಡಿ. 'ಚದುಪು' ಪರಾ. **ಚದುರು₂ :** ೧. ಚದುರುಮಾರ್ತೀವ ಪೆಂಪುಂ ನುಡಿಯ ಬಲ್ಮೆಯುಂ (ಪಂಚತಂ. ೨೨–೧೪) : ವಿಲಾಸದ ತಾಣಂ ಚದುರಿಂಗೆ ತಾ[ಯ್ಗ]ಱು ವಿನೋದಕ್ಕಾದಿ (ಸುಕುಮಾ. ೦–೬೮) : ಚದುರುಂ ಮಿಕ್ಕಿರ್ದ ತಕ್ಕುಂ ನೆಲಸಿದ ಸೊಬಗುಂ . . . ಕೈಮಿಗೆ ನೆಲಸನಿತಂ ಗೆಲ್ದು (ಕಬ್ಬಿಕಾ. ೧೧೯) ; ಅತಿ ಚದುರಿನಿಂ ವಾಮಲೋಚನೆ ಹೇಳುತಿರೆ (ಬಸವು. ೦೨–೩೨) ; ಹೃದಯವನಿದಿರಿಗೆ ಕಾಣಿಸದಿರಬೇಕು ಹದಿರು ಚದುರುಗಳು ಬೇಕು (ಕುರಾಸಾಂ. ೨೪–೨೦) ; ಮೆಚ್ಚಿದನಭವನವನ ಚದುರಿಂಗೆ (ಚಿಬಪು. ೨೦–೦೫). ೩. ಚಮತ್ಕಾರದ ಮಾತು ; ವಕ್ರೋಕ್ತಿ : ಹದುರಿನ ನೆಲ ಚದುರಿನ ಚಾರಚಾವಡಿ ಮುದದ ಮಂದಿರ . . . ಎನಿಪ ಸೂಳೆಗೇರಿಯು (ಅಂಜಜ. ೩–೯೦) ; ಚದುರಂ ನುಡಿದ ನಾಲಗೆಯ ಮೊಟ್ಟಮೊದಲಿಗೆ ಕೊಯ್ದು (ಬಸವು. ೪೫–೨೯) ; ವಿರಹ ಮೋಹನ ಲಲ್ಲೆ ಚಲ್ಲವು ಹದುರು ಚದುರುಗಳು (ಸಾಳ್ವಭಾ. ೦೭–೨೬) ; ಹದಿರು ಚದುರಿನಾಗರ ಠೌಳಿಯ ಪೇಟೆಯೊದವಿದ ಮೋಹನಶಾಲೆ

(ಕಂಸವಿ. ೨. ೮೭). **ಚದುರು೨:** ೧. ಗಂಡನನ್ನೂ ಕೂಡಿಕೊಂಡು ಬಂದು ಬಾಳ್ವೆ ಮಾಡುವ ಚದುರು ನಿನಗಲ್ಲದೆ ಇನ್ನಾರಿಗೆ ? (ಪವತಿ. ೮). ೩. ಅಳ್ಕಬಿಪ್ಪುಗೆ ಚೆಲ್ಲಂ ಚದುರೋಜೆ ಚಾಟುತನವುಂದಂ . . . ಎಲ್ಲಮುವರ್ಗೇಂ ಮೈಸಂದು ಮಚ್ಚಿರ್ದುದೋ (ರಾಜಶೇ. ೧೧-೮೩).

[ದೇ. ; ತಮಿ. ಚತುರ್ ; ತುಳು. ಚದುರ ; ತೆಲು. ಚದುರು. ]

**ಚದುರ** (ಗು). ೧. ಜಾಣತನದಿಂದ ಕೂಡಿದ ; ಜಾಣ್ಮೆಯ. 'ಚದುರ ಗೊಟ್ಟಿ' ಪರಾ. ೨. ಸೊಗಸಾದ ; ಮನೋಹರವಾದ. 'ಚದುರ ವಚ್ಚ', 'ಚದುರವನ' ಪರಾ. (ನಾ). ೩. ಜಾಣ ; ಬುದ್ಧಿವಂತ ; ಕುಶಲ : "ಚದುರಂ ಚತುರಂ" (ಕವಿಶಿ. ೨೫೭) ; ಆ ನಾಡವರ್ಗಳ್ ಚದುರರ್ ನಿಜದಿಂ ಕುಱಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್ (ಕವಿರಾ. ೧-೩೮) ; ಏಂ ಚದುರಂ ಗಳ ಬದ್ದ ದ ಲ್ಲ ಟ ಂ (ಪಂಪಭಾ. ೩-೮೨) ; ಓದುಗಳಂ ಬಲ್ಲ ಚದುರರೇನಾನುಮೊಂದನೆಲ್ಲಾತೆಱದಿಂ ಮಾಟ್ಪರ್ (ಪಂಚತಂ. ೭೩-೧) ; ಭುವನದಲಿ ಬಾಹಿರರಾವು ನೀವತಿ ಚದುರ ರಾದಿರಲಾ (ಕುಮ್ವ್ಯಾಕ. ೯-೧೭) ; ಚದುರರ ತಲೆವಣಿ ತದ್ಭವ ಮೋಕ್ಷ ಸಂಪದನ ಬಣ್ಣಿಸಲೆನ್ನ ಹವಣೆ (ಭರತ. ೦-೨೦). [<ಸಂ. ಚತುರ ]

**ಚದುರಂಗ೧** (ನಾ). ೧. ರಾಜ, ಮಂತ್ರಿ, ಆನೆ, ಕುದುರೆ, ಒಂಟೆ, ಕಾಲಾಳುಂಗಳೆಂಬ ಕಾಯಿಗಳನ್ನು ಇಟ್ಟುಕೊಂಡು ಅರುವತ್ತುನಾಲ್ಕು ಮನೆಗಳ ಪಟದಲ್ಲಿ ಆಡುವ ಒಂದು ಬಗೆಯ ಆಟ : ನೆಲನೊಡ್ಡಿನಿಂದ ಚತುರಂಗವುಮೊರ್ಮೊದಲೆ ನಡುಗಿದುದು ಕೂಡಿದ ಚದುರಂಗದ ಮಣೆಯನಲ್ಲಿ ದಂತಪ್ಪಿನೆಗಂ (ಪಂಪಭಾ. ೧೧-೭೦) ; ಚದುರಂಗದ ನೆತ್ತದ ಗೌರವದ ಗೊಟ್ಟುಗುಟುಱಿಯುಂ ಮುಟ್ಟಂ ಮನೆಯೊಳ್ ಪಡೆದಿರಿಸುಗೆ ಕಾನೆಂ ಕಲ್ವುದು ಗಣಿಕೆಗವುದನೆ ಕಲಿವುದತಿನಯದಿಂದಂ (ಮುದತಿ. ೦೦-೩೦) ; ಸರಿಸದ ಮೇಲೆ ಹಿಡಿಯ ಹೋದಡೆ ಚದುರಂಗದ ಮೇಲೆ ಮುಸಿಯು ಕೋಱದ (ಬಸವ. ೭೨೪) ; ಆಡುವ ಪಗಡೆ ಲೆತ್ತ ಚದುರಂಗಂಗಳಂ ಬಿಸುಟ್ಟೋಡುತಿಹ . . . ಅಖಿಳ ಸ್ತ್ರೀಯರು (ಚಬಪು. ೧೯-೨೮). ೨. [ಸಂಗೀತ] ರಾಗದ ಒಂದು ಬಂಧ (?) : ನಿಬದ್ಧ ಗಾಯನದಲ್ಲಿ (೧) ಬರೇ ರಾಗಲಯ ಪ್ರಧಾನವಾದ ಪ್ರೌಢಬಂಧಗಳೂ (ಧ್ರುವ, ಪದ, ವರ್ಣ, ಗೀತ, ಸ್ವರಜತಿ, ತಿಲ್ಲಾನ, ತ್ರಿವಟ್, ಚದುರಂಗ, ಪಲ್ಲವಿ ಇತ್ಯಾದಿ) . . . ಕೃತಿಗಳೂ ಸೇರುತ್ತವೆ (ಭಾರದ. ೩೪೨). [<ಸಂ. ಚತುರಂಗ ]

**ಚದುರಂಗ೨** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು: ಬೀದಿಯ ಬದಿ ಬದಿಗೆ ಚದುರಂಗವುದುರ್ಯಾವು (ಹೂಹಾದಿ. ೪೯-೧). [?]

**ಚದುರಂಗಕಾಱ** (ನಾ). ಚದುರಂಗದಾಟವನ್ನು ಆಡುವವನು : ಚದುರಂಗಕಾಱರ . . . ಬೀಣೆಗಾಱರಾಗರಮನೆ ಪೆಂಪು ಸೊಂಪನೊಳಕೊಂಡೆಸದಿರ್ಪುವು ಸೂಳೆಗೇರಿಗಳ್ (ಕಬ್ಬಿಗಕಾ. ೪೨). [ಚದುರಂಗ೧ + – ಕಾಱ ]

**ಚದುರಂಧರ** (ನಾ). (?): ಅದಱಿಂ ಭೃತ್ಯರ್ ನಾಲ್ವರ್ ಚದುರಂಧರರಲ್ಲಿ ಪುಸಿಯನಿನಿಸೊಲ್ಲದನುಂ ಸದಮಳ ನಿರ್ಮಳನುಮಂತೆ . . . ವಿನಯಾಸ್ಪದನುಂ (ಮುದತಿ. ೦೦-೩೩). [ ? ]

**ಚದುರಗೊಟ್ಟಿ** (ನಾ). ಜಾಣ್ಮೆಯ ಮಾತು; ಚತುರ ಸಲ್ಲಾಪ. 'ಚದುರಗೊಟ್ಟಿಗ' ಪರಾ. [ಚದುರ + ಗೊಟ್ಟಿ೧ ]

**ಚದುರಗೊಟ್ಟಿಗ** (ನಾ). ಚತುರನಾದ ಮಾತುಗಾರ : ವಿಳಾಸದ ಕಣಿಯೆಲ್ಲಿದಂ ಚದುರಗೊಟ್ಟಿಗ[ಪಾಠಾಂ. ಪುಟ್ಟಿದ]ನೆಲ್ಲಿದಂ (ಆದಿಪು. ೩-೦೩) ; (ರಸರ. ೧-೮೮ ನೋ). [ಚದುರಗೊಟ್ಟಿ + – ಗ೭ ]

**ಚದುರತನ** (ನಾ). ಜಾಣ್ಮೆ ; ಚತುರತೆ; ಚಾತುರ್ಯ: ತನಕ್ಕೆ–ಕಲಿತನಂ, ಚದುರತನಂ, ಆಳ್ತನಂ (ಶಮದ. ೨೦೦ ಪ್ರಯೋ). [ಚದುರ + – ತನ ]

**ಚದುರತೆ** (ನಾ). = ಚದುರತನ: ಆ ಹೆಣ್ಣು ನಡಿಸಿದ ಕಡು ಚದುರತೆಯನೇ ಮೇಳೈ (ಕಂಸವಿ. ೬-೦೭೩). [<ಸಂ. ಚತುರತಾ ]

**ಚದುರಭಟ** (ನಾ). ಚತುರನಾದ ಭಟ, –ಸೈನಿಕ : ಲಲಿತ ಚಿತ್ರದ ಚದುರ ಭಟರವ್ವಳಿಸಿ ಹೊಯ್ದಾಡಿದರು (ಕುಮ್ವ್ಯಾದ್ರೋ. ೧೪-೮). [ಚದುರ + ಭಟ]

**ಚದುರವಚ್ಚ** (ನಾ). ಸೊಗಸಾದ ಆಭರಣ; ಮನೋಹರವಾದ ಒಡವೆ : ಚದುರವಚ್ಚದಿ ಕಲಿತ ಮುರಜಾನುಮೋದಕರ ತರುಣಿಯರ ಕಂಡನಾಗ (ಮಂಕಾರಾ. ೩-೯-೧೦). [ಚದುರ + ವಚ್ಚ೩ ]

**ಚದುರವನ** (ನಾ). ಮನೋಹರವಾದ ಉದ್ಯಾನ ; ಸೊಗಸಾದ ವನ : ವಿಪಣಿಯನಂಗನ ಚದುರವನದೊಳೆಸೆದತ್ತು (ವರ್ಧಚ. ೦-೦೦೨).

[ಚದುರ + ವನ ]

**ಚದುರಸ** 'ಚತುರಸ' ನೋ.

**ಚದುರಸಿಕೆ** 'ಚದುರಸಿಗೆ' ನೋ.

**ಚದುರಸಿಗೆ, ಚದುರಸಿಕೆ** (ನಾ). ಚಚ್ಚೌಕವಾದ ವಸ್ತ್ರ ; ನಾಲ್ಕು ಮೂಲೆಯಿರುವ ಮೇಲಂಹೊದಿಕೆಯ ಬಟ್ಟೆ; ಚೌಕ : ಕುದುರೆಯಿಂದಿಳಿದು ಪಲ್ಲಣವುಂ ಚದುರಸಿಗೆಯುಮಂ ಕೀಲುವುಂ ಕಳೆದು (ವಡ್ಡಾರಾ.೧೭೨-೨೦). **ಚದುರಸಿಕೆ:** ಗೊಲ್ಲನು ನದಿಯ ಸ್ನಾನವ ಮಾಡಿಕೊಂಡು ಮದನ ತಿಲಕವ ಫಣೆಯೊಳಿಟ್ಟು ಚದುರಸಿಕೆಯನು ಹಾಕಿದ (ಗೋಹಾಡು. ೨೪).

[ <ಸಂ. ಚತುರಶ್ರಕ ]

**ಚದುರಾಂಗರನಯ್ಯ** (ನಾ). ಒಬ್ಬಾತನ ಹೆಸರು : ಇದಾರ್ಕ್ಕೆ ಸಾಕ್ಷಿ ಚದುರಾಂಗರನಯ್ಯ ಮಾರಸಿಜ್ಜನಾಯ್ಗ ಈಸರಯ್ಯ ಜಯಸಿ × × ಜ್ಗ (ಮೈಆರಿ. ೧೯೪೨, ೪೭-೨೭ ; ಸು. ೭೯೦). [ ? ]

**ಚದುರಿಕೆ** (ನಾ).=ಚದುರತನ: ಮುರುಳೆ ಮುರುಳ್ತನದಿಂದುರ್ವರೇಶನಾಸ್ಥಾನ ರಂಗದೊಳ್ ನೀಂ ಪಿತ್ತಜ್ವರಮಾದರಂತೆ ಗಟಪುವ ಸಿರಿಸಿಲ್ಲದೆ ನುಡಿವ ಬಡತನಂ ಚದುರಿಕೆಯೇ (ಧರ್ಮಾಮೃ. ೯-೦೦೮) [ಚದುರ್ + – ಇಕೆ ]

**ಚದುರಿಗ** (ನಾ). ಜಾಣ ; ಬುದ್ಧಿವಂತ : ಕುಡುವುದು ಕುಡದೊಡಂ ನಡೆಯುದು ಪಿರಿದೀಯದೊಡೆ ಸೊಡರ್ಗುಡಿಗೆಣ್ಣೆಯೆಱೆವಂತೆ ಬೆಲೆವೆಣ್ಗೆ ಕುಡುವುದು ಹದಕೆ ಚದುರಿಗಂ (ಅನಂಪು. ೮-೨೭).

[ಚದುರ್ + – ಇಗ ]

**ಚದುರಿಗತನ** (ನಾ).=ಚದುರತನ: ಧರಣೀಪತಿಯನುಪಚರಿಸಿದನು ಚದುರಿಗತನದಿ ಧೃತರಾಷ್ಟ್ರ (ಕುಮ್ವ್ಯಾಸ. ೧೬-೪೩). [ಚದುರಿಗ + – ತನ ]

**ಚದುರಿಸು೧** (ಕ್ರಿ). ೧. ಜಾಣತನದಿಂದ ಮುಚ್ಚು, – ಮರೆಮಾಡು : ತಕ್ಕನ ತಕ್ಕಿಪ ತೆಱನನು ಚದುರೆ ಚದುರಿಸದೆ ನೀನುಸುರಾ (ಉರಿವ. ೨೯-೧೦); ಇದನೊರ್ವ ತಸ್ಕರಂ ತದ್ಗುಣಾಂಬೋಧಿಯಂ ಚ[ಪಾಠಾಂ. ಚಿ]ದುರಿಸಿ ಬಳಿಕ್ಕ ಕಳ್ದೀಱ (ಸಮ್ಯಕ್ತ್ವ. ೧೦-೬೬). ೨. ಸೊಗಸಂಗೊಳಿಸು ; ಕೌಶಲವನ್ನು ತೋರು : ಎದೆಯಲ್ಲಿ ಕೊರಳಲ್ಲಿ ಶ್ರೀಗಂಧರೇಖೆಯ ಚದುರಿಸಿ ತಿದ್ದಿತಿಲ್ಲಾಗ (ಭರತ. ೦೬-೦೩). [ಚದುರ್ + – ಇಸು೩ ]

**ಚದುರಿಸು೨** 'ಕೆದಱಿಸು' ನೋ.

**ಚದುರು೧** 'ಕೆದಱು೧' ನೋ.

**ಚದುರು೨** 'ಚದುರ್' ನೋ.

**ಚದುರು೩** 'ಚದರ' ನೋ.

**ಚದುರುಗೆಡಿಸು** (ಕ್ರಿ). ಬುದ್ಧಿಗೆಡಿಸು ; ಮಂಕಂಗೊಳಿಸು ; ಮೋಸಗೊಳಿಸು : ಮಾಯೆಯು ಚೆಲುವಿನಂತಿರೆ ಚದುರುಗೆ[ಪಾಠಾಂ. ಕೆ]ಡಿಸಿತು ತಿಳಿಯಲರಿದೆನಿಸಿ (ಕುಮ್ವ್ಯಾಆ. ೨೩-೦೬).

[ಚದುರುಗೆಡು (<ಚದುರ್ಗಿಡು) + – ಇಸು೩ ]

**ಚದುರುಗೆಡು** 'ಚದುರ್ಗಿಡು' ನೋ.

**ಚದುರುನುಡಿ** (ನಾ). ಚಾತುರ್ಯದ ಮಾತು ; ಜಾಣ್ನುಡಿ : ಕನ್ನಡ ಸಾಹಿತ್ಯದ ಐಶ್ವರ್ಯ ಅದರ ಚದುರುನುಡಿಗಳಲ್ಲಿ ಅಡಗಿದೆ (ಕಾವ್ಯಕು. ೯೨)

[ಚದುರು೨ (<ಚದುರ್) + ನುಡಿ೨ ]

**ಚದುರುಬಿಲ್ಲೆ** (ನಾ). ಚಚ್ಚೌಕವಾದ, ನೆಲಕ್ಕೆ ಹಾಕುವ ಬಿಲ್ಲೆ,-ಹೆಂಚು: ಚದುರುಬಿಲ್ಲೆಯ ನೆಲವು ಬಹುಬೇಗ ಕೊಳೆಯಾಗಿಬಿಡುತ್ತದೆ (ಗೃಹವಿ. ೧೭೨). [ ಚದುರು$_3$ (<ಚದರ) + ಬಿಲ್ಲೆ ]

**ಚದುರುವಾತು** (ನಾ).=ಚದುರಂನುಡಿ : ಮುಂದವೆತ್ತು ಕಮಲದಳಾಯ ತಾಕ್ಷಗೆ ಹಲಾಯುಧ ಪೇಳ್ದ ಚದುರುವಾತಿನಲಿ (ಮೋಹತ. ೧೪-೩). [ ಚದುರು$_2$ (<ಚದುರ್) + ಮಾತು$_1$ ]

**ಚದುರೆ** (ನಾ). ಜಾಣೆ ; ಕುಶಲೆ; ಚತುರೆ : ಅಕ್ಕನ ಆಕ್ಕಿಪ ತೆಜನನು ಚದುರೆ ಚದುರಿಸದೆ ನೀನುಸಿರಾ (ಉಂಡಿವ. ೨೯-೧೦) ; ತಾನವಂ ಚದುರಂ, ತಾನವಳ್ ಚದುರೆ (ಶಮದ. ೧೪೩ ಪ್ರಯೋ) ; ಚದುರೆಯ ಚಟುಲ ಚಕೋರಾಕ್ಷಿಗಳೊಳಗೊದವಿದ ಮೂವಣ್ಣದ ರುಚಿಯುವಳೆಚಿವುದಕದೊ ಳೊಡವೆರೆಯಲು (ಜಯಚಾ. ೦-೬೨) ; ನುಣ್ಗೊಂತಲು ಬೆರಲೊಂದಾದುದೆನೆ ಬಾಜಿಸಿದಳಾ ಚದುರೆ(ಸಾಳ್ವಭಾ. ೧೮-೭); ಕುದುರೆಯ ಚದುರೆಯ ಹದಿರೆರಡು ಒಂದಯ್ಯ (ಸರ್ವಜ್ಞ. ೧೭೬೭). [ ಚದುರ + -ಎ ]

**ಚದುರೆವೆಣ್** (ನಾ). ಜಾಣೆಯಾದ ಹೆಂಗುಸು ; ಚತುರೆಯಾದ ಸ್ತ್ರೀ : ವದನಕ್ಕೆ ಮಸಿಸುಣ್ಣವ ಬರೆಯಿಸಿಕೊಂಡ ಚದುರೆವೆಣ್ಣಲ್ಲವೆ ನೀನು (ಕಂಠವಿ. ೬-೦೮೬). [ ಚದುರೆ + ಪೆಣ್ ]

**ಚದುರೇರು** (ಕ್ರಿ). ಜಾಣ್ಮೆ ಹೆಚ್ಚಾಗು ; ಚಾತುರ್ಯ ಹೆಚ್ಚಾಗು : ಹಿಂದಿನ ಸವಿಗೊರಳು ಕುದುರಿದ ಕೋಗಿಲೆಯದು ಚದುರೇರಿ ಹಾಡ ತೊಡಗಿದುದು (ನಾಡೋಜ. ೧೬೫). [ ಚದುರ್ + ಏರು$_1$ (<ಏಱು$_1$) ]

**ಚದುರೋಕ್ತಿ** (ನಾ).=ಚತುರೋಕ್ತಿ : ಹಿಸುಣರ ಜಾಳಿಗರ ಚದುರೋಕ್ತಿ ನಮಗೇಕೆಂದಳವರೊಡನೆ (ತೊರರಾ. ೨-೦-೨೭). [ <ಸಂ. ಚತುರೋಕ್ತಿ ]

**ಚದುರ್ಗಿಡು**, ಚದುರಂಗೆಡು (ಕ್ರಿ). ಬುದ್ಧಿ ಮಂಕಾಗು ; ಚಾತುರ್ಯ ಕೆಡು : ಕುದುಗುಳಿ ರಕ್ಕಸರ್ ಬಿಸುಗೆಗಳ್ವೆರಸುಗ್ರಮಹಾಗಜಂಗಳಂ ಚದುರ್ಗಿಡೆ [ಪಾಠಾಂ. ಗಜಂಗಳಂ ಚಲುಂಗದೆ ಬಿಡೆ] ನುಂಗಿ ಬಿಕ್ಕಿ ಕುಡಿದರ್ ಬಿಸುನೆತ್ತರ ಕಾಟ್ಟುರಂಗಳಂ(ಪಂಪಭಾ. ೧೨-೮); ಮದುವೆಯ ದಿವಸದಂದು ಬರವೇಟ್ಟುದು ನೀನೆಂದೆನ್ನನಂದು ನೀಂ ಚದುರ್ಗಿಡೆ ನುಡಿದೊಡಾಂ ನುಡಿದ ನನ್ನಿಗೆ ವಂದೆಂ (ಸುಕುಮಾ. ೭-೨೨). **ಚದುರುಗೆಡು** : ಇದನು ನೀನನು ಭವಿಸಲೊಲ್ಲದೆ ಚದುರುಗೆಡು[ಪಾಠಾಂ. ಡೆ]ವರೆ (ತೊರರಾ. ೫-೩-೩೭). [ ಚದುರ್ + ಕೆಡು (<ಕೆಡು$_1$) ]

**ಚದ್ದರು** 'ಚಾದರ' ನೋ.

**ಚನ** (ನಾ). ಕಡಲೆ : ಕಡಲೆ, ಚನ (ಮ್ಯಜಿಗಿ. ೨೦-೩೮೨). [ ←ಹಿಂ. ಚನಾ. / ಸಂ. ಚಣಕ ]

**ಚನಕು** (ಕ್ರಿ). ರೇಗಿಸು ; ಪೀಡಿಸು ; ಕೆರಳಿಸು : ಚೇಷ್ಟೆಗಳಲಖಿಳ ದೇವಾ ಸುರರನು ಚನಕಿ ನಾನಾಪರಿಯ ಕುಣಿಸಿ ಕೂಗಿಸಿ ಕೊಡಹಿ ಕಿನಿಸು ಭ್ರಾಂತಿ ವಿಕಾರಿ ಎನಿಸುತಂ (ವಂಕಾರಾ. ೨-೩೫-೨೫) : ನಿದ್ರೆಯಿಂದಿರ್ಪ ನೀ ದೈತ್ಯ ಪತಿಯಿವನ ಚನಕಿದರೆ ಕಲ್ಪಾಂತರುದ್ರನಂದದಲಸುರಪಡೆಯು ನುಂಗದೆ ಮಾಣನು (ವಂಕಾರಾ. ೬-೨೫-೦೫). [ ←ತೆಲು. ಚೆನಕು, ಚೆಣುಕು ]

**ಚನಪೌಸ** (ನಾ). ಒಬ್ಬಾತನ ಹೆಸರು : ಶ್ರೀ ಚನಪೌಸ (ಎಕ. II, ೪೫೦ ; ಸು. 1000). [ ? ]

**ಚನ್ನ**$_1$ 'ಚೆನ್ನ' ನೋ.

**ಚನ್ನ**$_2$ (ಗು). ಮುಚ್ಚಲ್ಪಟ್ಟ ; ಆಚ್ಛಾದಿಸಿದ : ಛನ್ನ, ಚನ್ನ (ಶಬ್ದಾನು. ೧೪೨ ಪ್ರಯೋ). [ <ಸಂ. ಛನ್ನ ]

**ಚನ್ನಂಗ** 'ಚೆನ್ನಂಗಿ' ನೋ.

**ಚನ್ನಂಗಿ**$_1$ 'ಚೆನ್ನಂಗಿ' ನೋ.

**ಚನ್ನಂಗಿ**$_2$ 'ಚಣಗೆ' ನೋ.

**ಚನ್ನಂಗಿನರಿ** (ನಾ). ಒಂದು ಬಗೆಯ ನರಿ : ಸೀಳುನಾಯಿ, ಕೆಂಪುನರಿ, ಚನ್ನಂಗಿನರಿ (ನಮ್ಮಸು. ೨೪೯). [ ಚನ್ನಂಗಿ$_0$ + ನರಿ ]

**ಚನ್ನಂಗಿಬಿದಿರು** 'ಚೆನ್ನಂಗಿಬಿದಿರು' ನೋ.

**ಚನ್ನಂಗಿಬೇಳೆ** (ನಾ). ಒಂದು ಬಗೆಯ ತೊಗರಿ ಬೇಳೆ : ಚನ್ನಂಗಿ ಬೇಳೆ ತುಂಬ ಬೇಗ ಬೇಯುತ್ತದೆ (ರೂಢಿ). [ ಚನ್ನಂಗಿ$_2$ (<ಚಣಗೆ) + ಬೇಳೆ ]

**ಚನ್ನಂಗಿಮರ** (ನಾ). ಒಂದು ಬಗೆಯ ಮರ : (ಮ್ಯಜಿಗಿ. ೪೯-೯೭೫). [ ಚನ್ನಂಗಿ$_1$ (<ಚೆನ್ನಂಗಿ) + ಮರ$_1$ ]

**ಚನ್ನಕಳನಿ** (ನಾ). ಕೆಂಪು ಭೂಮಿ; ಕೆಬ್ಬೆ(?) : ವೆಲ್ಲ ಸಮ್ಮಂಗೆ ಕೊಟ್ಟೋದು ಕಂಡುಗದಯ್ಗಳ ಕಳನಿಯುಂ ಚನ್ನಕಳನಿವೆಲೆತೋಟ್ಟಪಟ್ಟು . . . ಮೇಲೆ ಎಣ್ಣಣ್ಣುಗಂ (ಎಕ. X, ಮುಳುಬಾ. ೮೦-೭ ; 767). [ ಚನ್ನ$_1$ (<ಚೆನ್ನ) + ಕಳನಿ (<ಕಟನಿ) ]

**ಚನ್ನಡಿ** 'ಚೆನ್ನಡಿ' ನೋ.

**ಚನ್ನತು** 'ಚೆನ್ನಿತ್ತು' ನೋ.

**ಚನ್ನಪ್ಪೆಯ** (ನಾ). ಒಬ್ಬಾತನ ಹೆಸರು : ಶ್ರೀಮತ್(ಮಚ್)ಚ್ಛ(ಚ್ಚ)ನ್ನ ಪ್ಪೆಯ ಭಟ್ಟಾಯ (ಇಆ. XII, ೨೬೬-೫೦ ; 972). [ ಚನ್ನ$_1$ (<ಚೆನ್ನ) + ಅಪ (<ಅಪ್ಪ$_1$) + ಅಯ$_1$ (<ಅಯ್ಯ$_1$) ]

**ಚನ್ನಭಕ್ತಿ** 'ಚೆನ್ನಭಕ್ತಿ' ನೋ.

**ಚನ್ನಯ್ಯ** (ನಾ). ಒಬ್ಬಾತನ ಹೆಸರು: ಶ್ರೀಮಂ ಬಲದೇವನುಂ ಗೋವಣ್ಣ ಯ್ಯ[ನುಂ] [ಚೆ]ನ್ನಯ್ಯ × × ತದಿಟ್ಟು (ಸೌಇಇ. XI-I, ೦೩-೮ ; 869). [ ಚನ್ನ$_1$ (<ಚೆನ್ನ) + ಅಯ್ಯ$_1$ ]

**ಚನ್ನರಸಿ** (ನಾ). ಚೆಲುವೆಯಾದ ಅರಸಿ ; ಸುಂದರಳಾದ ರಾಣಿ : ನನ್ನ ಚನ್ನರಸಿ ಗೌರಿ ಸತ್ತಿಲ್ಲ (ತುಂಗಭ. ೫೭). [ ಚನ್ನ$_1$ (<ಚೆನ್ನ) + ಅರಸಿ ]

**ಚನ್ನಿ** 'ಚೆನ್ನಿ' ನೋ.

**ಚನ್ನಿಗ** 'ಚೆನ್ನಿಗ' ನೋ.

**ಚನ್ನಿಗತನ** 'ಚೆನ್ನಿಗತನ' ನೋ.

**ಚನ್ನಿಗರಾಯ** 'ಚೆನ್ನಿಗರಾಯಂ' ನೋ.

**ಚನ್ನು** 'ಚೆನ್ನು' ನೋ.

**ಚನ್ನೆ** 'ಚೆನ್ನೆ$_1$' ನೋ.

**ಚನ್ನೆಗ್ಗಿಲು** 'ಚೆನ್ನೆಗ್ಗಿಲು' ನೋ.

**ಚನ್ನೆಮಣೆ** 'ಚೆನ್ನೆಮಣೆ' ನೋ.

**ಚನ್ನೆಯ್ದಿಲ್** 'ಚೆನ್ನೆಯ್ದಿಲ್' ನೋ.

**ಚನ್ನೈದಿಲು** 'ಚೆನ್ನೆಯ್ದಿಲ್' ನೋ.

**ಚಪ** (ನಾ). ಬಿದಿರು ; ವೇಣು : "ತ್ವಚಿಸಾರಃ, ಚಪಃ, ವಂಶಃ, ವೇಣುಃ, ತ್ವಕ್ಸಾರಃ, ಮಸ್ಕರಃ-ಈ ೬ ಬಿದಿರ್" (ಹಲಾಯು. ೩೪-೫೦) ; "ವಂಶಂ ಚಪಂ ಮಸ್ಕರಂ ವೇಣು ತ್ವಕ್ಸಾರಮೆನಲುಂ ಚೆಲ್ವ ಬಿದಿರಕ್ಕು" (ಮಂಗರಾ. ೩೮-೨೩). [ ಸಂ. ]

**ಚಪಕ್** (ನಾ). ಒಂದು ಅನುಕರಣ ಶಬ್ದ : ಸಣ್ಣಸಣ್ಣ ತೆರೆಗಳು 'ಚಪಕ್ ಚಪಕ್' ಯೆಂದೆನ್ನುತ್ತ . . . ಬಂದಪ್ಪಳಿಸುತ್ತಿದ್ದವು (ಪ್ರತಿಬಿಂ. ೩೦).

**ಚಪಕಾರಕ** (ನಾ). ಬಿದಿರಿನ ಕೆಲಸಮಾಡುವವನು ; ಮೇದ : "ವಂಶ ಚ್ಛೇದಿ ಚಪಕಾರಕಂ ಮೇದಂ" (ಮಂಗರಾ. ೧೧೦-೨). [ ಸಂ. ]

**ಚಪಗಾಲು** 'ಚಪ್ಪಂಗಾಲು' ನೋ.

**ಚಪಗೊಡಲಿ** 'ಚಪ್ಪಗೊಡಲಿ' ನೋ.

**ಚಪಡಿ** (ನಾ). (ಕರಾ) ೧. ಇಂದ್ರಜಾಲ. ೨. (ಆಲಂ) ಕುಯುಕ್ತಿ ; ಮೋಸ : ಏನೆಲ್ಲ ಚಪಡಿಮಾಡಿ ಶ್ರೀಪಾದಂಗಳವರ ಮನಸ್ಸೇ ತಿರುಗಿಸಿ ಬಿಟ್ಟರೋ (ವಾಗ್ಮೀವಿ. ೩೭). [ ←ತುಳು. ಚಪ್ಪಡಿ ]

**ಚಪರಾಶಿ** 'ಚಪರಾಸಿ' ನೋ.

**ಚಪರಾಸಿ**, ಚಪರಾಶಿ, ಚಪ್ರಾಸಿ, ಛಪ್ರಾಸಿ (ನಾ). ಬಿಲ್ಲೆ ಧರಿಸಿದ ಊಳಿಗದವನು ; ಕಚೇರಿಯ ಸಿಪಾಯಿ : ಚಪರಾಸಿ ದಾದೂ ಅತ್ತ ಇತ್ತ ಅಲೆದಾಡಿ ಒಳಗೆ ಬಂದು ಹೇಳಿದ (ಜೀವರಂ. ೧೩) ; ಬೆಲ್ಲನ್ನು ಬಾರಿಸಿ ಒಮ್ಮೆಲೇ ಚಪರಾಸಿಯನ್ನು ಕೂಗಿದರು (ಕನಸಿ. ೧೨೪). **ಚಪರಾಶಿ :** ಚಪರಾಶಿಯೂ ಒಳಗೆ ಮ್ಯಾನೇಜರರಿಲ್ಲದ ಸಂಧಿ ಸಾಧಿಸಿ . . . ತನ್ನ ಪ್ರೇಮಪಾತ್ರದ ಕಡೆಗೆ ಹೋಗಿದ್ದ (ಮೋಜೀವ. ೭೨). **ಚಪ್ರಾಸಿ :** ಕಾರಕೂನ, ಗೇಟ್‌ಮನ್, ಚಪ್ರಾಸಿ, – ವ್ಯಂಜನ ವರ್ಗೀಕರಣ ! (ಚಿಂತನ. ೬೦-೧೩) ; ಚಪ್ರಾಸಿಯನ್ನು ಕರೆದು ಅಪ್ಪಣೆಕೊಟ್ಟರು (ಇಪ್ಪಕ. ೮೯). **ಛಪ್ರಾಸಿ :** ಅಂವಾ ಮಾಮಲೇದಾರ. ನಾನು ಛಪ್ರಾಸಿ (ಜೀವರಂ. ೩) ; ಏ ಛಪ್ರಾಸಿ . . . ನಿನ್ನೆ ಪಾರ್ಸಲ್ ಬಂದದಲ್ಲಾ ಅದನ್ನ ತಗೊಂಡು ಬಾ (ಫಲಸಂ. ೬೦). [←ಹಿಂ. ಚಪರಾಸೀ; ಮರಾ. ಚಪರಾಸೀ, ಚಪರಾಶೀ]

**ಚಪಲ**, ಚಪಳ$_2$ (ಗು). ೧. ಅತ್ತಿತ್ತ ಚಲಿಸುವ; ಅಸ್ಥಿರವಾದ ; ಚಂಚಲ : ಚಪಲ ಚಕೋರಲೋಚನೆಯ ವಾರ್ತೆಗೆ ಚಿತ್ತಮನೊಲ್ದು ಮಾಡಿ(ಉದ್ಭಟ. ೭-೨). 'ಚಪಲಚಿತ್ತ' ಪರಾ. ೨. ವೇಗಶಾಲಿಯಾದ ; ಚಟುವಟಿಕೆಯುಳ್ಳ; ಚುರುಕಾದ: ಕುಳಿಂದಕನೆಂಬ ಬೇಡದೊರೆ . . . ಚಪಲ ಹಯವನ್ನೇರಿ ಬಿಲ್ಲು ಹಿಡಿದು ಅತಿವೇಗದಿಂದ ಬೆಂಬತ್ತಿದ (ಬಿದುರಿ. ೧೫೮). ೩. ದುಡುಕಿನ ಸ್ವಭಾವದ ; ಹಿಂದೆ ಮುಂದೆ ನೋಡದೆ ಮುನ್ನುಗ್ಗುವ ; ವಿವೇಕವಿಲ್ಲದೆ ತಪ್ಪುಮಾಡುವ. ೪. ಕ್ಷಣಿಕವಾದ ; ಆ ಕ್ಷಣದ. ೫. ತಲ್ಲಣಗೊಂಡ ; ತಳಮಳ ಹೊಂದಿದ. (ನಾ). ೬. ಚಂಚಲತೆ ; ಅಸ್ಥಿರತೆ. ೭. ವೇಗ ; ಶೀಘ್ರತೆ. ೮. ಪಾದರಸ ; ಪಾರದ : "ಪಾರದಂ ಚಪಲಮೆನೆ ರಸಮೆನಿಕ್ಕುಂ" (ಮಂಗರಾ. ೯೭-೧೫). ೯. ತೀವ್ರವಾದ ಆಸೆ; ವಿಶೇಷಾಸಕ್ತಿ: ಯಾವ ಕರ್ಮಶೇಷ ನನ್ನಲ್ಲಿಂತಹ ಚಪಲವನ್ನು ಪ್ರೇರೇಪಿಸುತ್ತಿದೆ? (ಚಿತಂಬಾ. ೨೨); ಓಡುವ ಕುದುರೆಯನ್ನು ಕಂಡಾಗ ನಾನೂ ಸವಾರಿ ಮಾಡಬೇಕೆಂಬ ಚಪಲ ಮನಸ್ಸಿಗೆ (ಹುಚ್ಚುಹು. ೧೬) : ನೀವೂ ಕೂಡ ತೀರ ಅಜ್ಜರ ಹಾಗೆ ಚಪಲ ಪಡುತ್ತೀರಲ್ಲ (ಮಾಂಗಲ್ಯ. ೩೫). ೧೦. ಚಂಚಲ ಸ್ವಭಾವದವನು; ಚಪಲಚಿತ್ತ: ಚಪಲಂ ಮೇಳದ ಪಂದೆ ಬೆರ್ಚದಿದಿರೊಳ್ ಮಾತಾಡೆ (ಪಂಚಾಮಾ. ೦೨-೭೪). ೧೧. ವೇಗಶಾಲಿಯಾದವನು; ಚುರುಕಾದವನು: ಚಪಲನಾದ ನಾಯಕನು ಚಾತುರ್ಯದಿಂದ ಖಡ್ಗಕ್ಕೆ ತನ್ನ ಢಾಲನ್ನೊಡ್ಡಿ ಹೊಡೆತವನ್ನು ತಪ್ಪಿಸಿಕೊಂಡನು (ಕುಮುದಿ. ೧೭). ೧೨. ಒಂದು ಬಗೆಯ ಸಸ್ಯ : "ಪರ್ಪಟಃ – ಪಾಪ, ಚಪಲ, ಗೇರು" (ಓಷಧಿ. ೯೦). ೧೩. ವಾಯು. 'ಚಪಲವೇಗಿ' ಪರಾ. **ಚಪಳ$_2$ :** ೧. ಚಪಳ ಕಪಿ ವನಮದಾನೇಕಪಕ್ಕೆ ಪಕ್ಕಾಗೆ ಪೊಕ್ಕು (ಶಾಂತಿಪು. ೨-೧೦೦) ; ಚಪಳ ವಿಶಾಳಲೋಚನೆ ಜಯಾಂಗನೆ ಧಾರೆಯೊಳಿರ್ದು ನೋಡಿ ಮನ್ನಿಪಳ್ (ಅನಂಪು. ೨-೭). ೬. "ಲೋಲಂ, ಚಪಳಂ . . . ಸಂಚಳಂ– ಈ ೧೦ ಸಂಚಳಂ" (ಹಲಾಯು. ೧೦೫-೧೦). ೭. "ದ್ರಾಕ್, ಚಪಳಂ, ಲಘು . . . ಝಟಿತಿ–ಈ ೧೬ ಶೀಘ್ರಂ" (ಹಲಾಯು. ೦೧೬-೦೨). ೧೦. ಬಂಚಿಸಿ ತನ್ನನುಜೆಯ ಧನಮಂ ಚಪಳಂ ಕೊಂಡು ಪುಸಿದು ಕಳವಳಿಸಿ ಖಳಂ ಪಂಚತ್ವಮನೈದಿ . . . ಈಗಳಲ್ತೆ ವಾನರನಾದಂ (ಆದಿಪು. ೫-೦೮): ತಪಸ್ವಿಗಳುಮೆಯ್ದೆ ಮನಮಂ ತಗೆಯಲ್ಪಡೆಯರೆನೆ ಚಪಳರಕ್ಕಟ ಪಡೆದಪರೆ (ಅಜಿಪು. ೨-೯೦) ; ಚಪಳನಿವಂ ಕಡುಗಲಿಪಂ ವಿಪರೀತಮನೆನ್ನ ಮುಂದೆ ನುಡಿದಪಂ (ಧರ್ಮಾಮೃ. ೭-೦೪); ಇಂತಪ್ಪ ಚಪಳರೆಮ್ಮೂರೊಳಗೆ ಮಱದಿಲ್ಲ (ಸಂಬಿರ. ೭-೨೬). [ ಸಂ. ]

**ಚಪಲಚಿತ್ತ** (ನಾ). ಚಂಚಲವಾದ ಮನಸ್ಸುಳ್ಳವನು ; ಅಸ್ಥಿರಬುದ್ಧಿಯುಳ್ಳವನು: ನಮ್ಮ ಈ ಭೌತವಿಜ್ಞಾನಿಯೆನಿಸಿಕೊಳ್ಳಬೇಕೆಂಬ ಚಪಲಚಿತ್ತರಿಗೆ ತಮ್ಮನ್ನು ಹುಡುಕಿಕೊಳ್ಳುವ ಆಶೆಯೂ ಇಲ್ಲ (ಜೀವಾತ್ಮ. ೧೦೭).
[ ಚಪಲ + ಚಿತ್ತ ]

**ಚಪಲತನ**, ಚಪಳತನ (ನಾ). ೧. ಅತ್ತಿತ್ತ ಚಲಿಸುವಿಕೆ ; ಚಂಚಲತೆ ; ಅಸ್ಥಿರತೆ: (ಕ). **ಚಪಳತನ:** ೨. ಅವಿವೇಕ; ದುಡುಕುತನ: ಆನಪ್ಪೊಡೆ ದೇವತೆಯೆಂ ನೀನಱಿಯದೆ ಕೊರ್ವಿ ಚಪಳತನದಿಂದೆನ್ನಂ ಮಾನಿಸೆಯೆಗೆತ್ತು ನುಡಿದೈ (ಧರ್ಮಾಮೃ. ೩-೧೧೨). [ ಚಪಲ + –ತನ ]

**ಚಪಲತಾಸಂಗ** (ನಾ). ೧. ಎಳೆಯ ಬಿದಿರಿನ ಸಂಬಂಧ. ೨. ಚಂಚಲತೆಯ ಸಂಪರ್ಕ. ೧, ೨ : ಚಪಲತಾಸಂಗಂ ವಿಪತ್ಪಕ್ಷಮದ್ರಿಗಳೊಳ್ . . . ಒಪ್ಪುಗುಮುರ್ವೀಶರೊಳೊಪ್ಪದು (ಪುಷ್ಪಪು. ೫-೫೬).
[ ಸಂ. (ಚಪ + ಲತಾ + ಸಂಗ; ಚಪಲತಾ + ಸಂಗ) ]

**ಚಪಲತೆ**, ಚಪಳತೆ (ನಾ). ೧=ಚಪಲತನ ೧: ಕಪಿಗೆ ಚಪಲ [ಪಾಠಾಂ. ಳ]ತೆ ಸಹಜಂ (ಗದಾಯು. ೩-೪೦). ೨. ಹೊಂದಿಕೆ ಇಲ್ಲದಿರುವಿಕೆ; ಅಸಂಬದ್ಧತೆ. ೩. ಕಳವಳ; ಉದ್ವೇಗ. ೪. ಚುರುಕುತನ; ತೀವ್ರತೆ. ೫.[ಕಾವ್ಯವಿಮಾ] ಸಂಚಾರಿಭಾವಗಳಲ್ಲಿ ಒಂದು; ಮನಸ್ಸಿನ ಅಸ್ಥಿರತೆ,– ವ್ಯಗ್ರತೆ: ಮತಿ ನಿರ್ವೇದ . . . ಚಪಲತಾಲಸ್ಯ . . . ಮೃತಿಗಳಿವಿಂತೆಯ್ದೆ ಸಂಚಾರಿ ಭಾವಂ (ಕಾವ್ಯಾವ. ೭೯೫); ಮತಿ ಲಜ್ಜೆ . . . ಚಪಲತೆ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ (ವಿವೇಕ. ೨೨೭). **ಚಪಳತೆ :** ೧. ಸಮೂಪದೊಳಂ ಚಪಳತೆಯೊಳಂ ಪದನೆರಡು ಸೂಚುಚ್ಚರಿಪುದು (ಶಮದ. ೧೯೫ ವೃತ್ತಿ) : ಆವ ಸಾಧನದಿಂದ ಚಪಳತೆ ಭಾವ ಸಂಶಯುವಳಿದು ಮಚ್ಚಿರುವೀ ವಿಷಯಸುಖದೆಳಲನೆಂತೋ ಕರಿಸಿ ಬಿಸುಡುವುದು (ಗಗಕಾ. ೧೩-೯). [ ಸಂ. ಚಪಲತಾ ]

**ಚಪಲತ್ವ** (ನಾ).=ಚಪಲತನ ೧ : ಚಪಲತ್ವಂ ಪರಿದೆಯ್ದೆ ತನ್ಮಠಕೆ ಬಂದು (ದಿವ್ಯಚ. ೧೨-೦೦). [ ಸಂ. ]

**ಚಪಲವೇಗಿ** (ನಾ). [ಜೈನ] ಒಂದು ವಿದ್ಯೆಯ ಹೆಸರು ; ವಾಯುವಿನಂತೆ ವೇಗವಾಗಿರುವ ಸಾಮರ್ಥ್ಯ: ಮನೋವೇಗಿ ಚಂಡವೇಗಿ ಚಪಲವೇಗಿ . . . ಎಂಬಿವು ಮೊದಲಾಗಿ ಕುಲವಿದ್ಯೆ ಜಾತಿವಿದ್ಯೆಗಳೊಳ್ ಸಂಪನ್ನನಾಗಿರ್ದು (ಚಾವುಂಪು. ೨೦೦). [ <ಸಂ. ಚಪಲವೇಗಿನೀ ]

**ಚಪಲಾಕ್ಷಿ**, ಚಪಳಾಕ್ಷಿ (ನಾ). ೧. ಚಂಚಲವಾದ ಕಣ್ಣುಗಳನ್ನುಳ್ಳವಳು ; ಚಂಚಲಾಕ್ಷಿ. ೨. ಮಿಂಚನ್ನೇ ಕಣ್ಣಾಗಿ ಉಳ್ಳವಳು. ೧, ೨: ಚಪಲಾಕ್ಷಿ ಘನಾಗಮಲಕ್ಷ್ಮಿ ಕಂಡು ಹರ್ಷದಿನುಗುತಿರ್ಪ ಕಣ್ಬನಿಯ ಸೋನೆವೊಲಾದುವು ಭೂರಿವೃಷ್ಟಿಗಳ್ (ಜಗವಿ. ೪-೩೦). **ಚಪಳಾಕ್ಷಿ:** ೧. ಮೆಱೆ ಬಂದು ನೀಂ ಬನಕ್ಕಂ ಚಪಳಾಕ್ಷಿ ನಿನ್ನ ನಡೆಯಂ ನುಡಿಯಂ ಮುಡಿಯಂ ವಿನೋದದಿ (ಚಂದ್ರಪು. ೭-೭೬).
[ ಸಂ. ಚಪಲಾಕ್ಷೀ (ಚಪಲ + ಅಕ್ಷಿ + –) (ಚಪಲಾ + ಅಕ್ಷಿ + –) ]

**ಚಪಲಾವೇಗ** (ನಾ). ಮಿಂಚಿನ ವೇಗ : ಚಪಲವೇಗಂ ನೆಗೆದಂ ಗಗನಕ್ಕೆ ವಿಜಿತಚಪಲಾವೇಗಂ (ಪಂಚಾಮಾ. ೪-೧೦೩).
[ ಸಂ. (ಚಪಲಾ + ವೇಗ) ]

**ಚಪಲೆ**, ಚಪಳೆ (ನಾ). ೧. ಚಪಲ ಸ್ವಭಾವದವಳು; ಚಂಚಲೆ: ಅತಿಮನದ ಚಪಲೆ [ಪಾಠಾಂ. ಳೆ]ಯರು ಮೋಹಿಸಿತರಸನಿದಿರಿನಲಿ (ಕೊರರಾ. ೦-೫-೨೮). ೨. ಮಿಂಚು; ವಿದ್ಯುತ್ತು: "ಶಂಪಾ, ಚಪಲಾ, ಕ್ಷಣಿಕಾ . . . ಐರಾವತೀ (ಚ ವಿಜ್ಞೇಯಾ ಈ ೧೧ ಮಿಂಚು" (ಹಲಾಯು. ೧೦-೬೦) : "ಚಪಲೆ ಚಂಚಲೆಯೆನಲು ಮಿಂಚೆನಿಕ್ಕುಂ" (ಮಂಗರಾ. ೦೩-೪). ೩. ಹಿಪ್ಪಲಿ. **ಚಪಳೆ:** ೧. ಲಕ್ಷ್ಮೀಕಾಂತೆ ಕರಂ ಚಪಳೆ ಸೊಡರ ಕುಡಿಯಂ ಪೋಲ್ವಳ್ (ಕಾದಂಪೂ. ೫೫೦) ; ನಿಷ್ಠುರ ಚಪಳೆಯರು ದುರ್ವ್ಯಸನಿಯರು ಜನಮೋಹಪಾಶೆಯರು (ಬಸಪು. ೪೦-೫೪). [ ಸಂ. ಚಪಲಾ ]

**ಚಪಳ$_1$** 'ಚಪ್ಪಳ$_2$' ನೋ.

**ಚಪಳ$_2$** 'ಚಪಲ' ನೋ.

**ಚಪಳತನ** 'ಚಪಲತನ' ನೋ.

**ಚಪಳತೆ** 'ಚಪಲತೆ' ನೋ.

**ಚಪಳಾಕ್ಷಿ** 'ಚಪಲಾಕ್ಷಿ' ನೋ.

**ಚಪಳಿಕೆ** (ನಾ). = ಚಪಲತನ ೧ : "ಚಾಪಲ್ಯಂ = ಚಪಳಿಕೆಯುಂ" (ನೀತಿವಾ. ೨೩-೫೨); ಕಪಿ ಚಾವಟೆಯು ಚಪಳಿಕೆ ನವ್ಮೊಡನೆ ವಿಸ್ಫುಟವೆ (ತೊರರಾ. ೬-೨೨-೧೯). [ ಚಪಳ$_2$ (=ಚಪಲ) + – ಇಕೆ ]

**ಚಪಳಿಗ** (ನಾ). ಚಪಲನಾದವನು; ಚಂಚಲಚಿತ್ತ: ಅತಿ ಚಪಳಿಗ ಜಂಗಮ ಸಂಸಾರಿಯಾದ ಭಕ್ತ ನಿಃಸಂಸಾರಿಯಾದ ವೈರಾಗ್ಯ ಸಂಸಾರನಿಷ್ಠ ಒಂದಾದೆಡೆ ತೆಱಹಿಲ್ಲ ಕೂಡಲ ಚನ್ನಸಂಗಯ್ಯ ನಿಮ್ಮಲ್ಲಿ (ಚನ್ನವ. ೯. ೩೩೯-೬೦೨).

[ ಚಪಳ$_2$ (=ಚಪಲ) + – ಇಗ ]

**ಚಪಳೆ** 'ಚಪಲೆ' ನೋ.

**ಚಪಾಡಿಸು** (ಕ್ರಿ). (ತಿನ್ನುವಾಗ) ಬಾಯಿ ಚಪ್ಪರಿಸು; ಚಪಚಪ ಸದ್ದು ಮಾಡು : (ಕ). 'ಚಪ್ಪರಿಸು' ಪರಾ. [ ಚಪ್$_0$ + ಆಡಿಸು ]

**ಚಪಾತಿ** (ನಾ). ಲಟ್ಟಣಿಗೆಯಿಂದ ಲಟ್ಟಿಸಿ ಮಾಡಿದ ಗೋಧಿಯ ರೊಟ್ಟಿ; ಬಿಳಿಹೋಳಿಗೆ (ಉಕ) : ಮರುದಿನದಿಂದ ಮನೆಯಲ್ಲೇ ಚಪಾತಿ ಮಾಡಲಿಕ್ಕೆ ಸುರುವಾಯಿತು (ವ್ಯನಿ. ೨೦೬): ಚಪಾತಿ ಅಭ್ಯಾಸ ಮಾಡುಯಶೋದಾ, ದೇಹಕ್ಕೆ ಒಳ್ಳೆಯದು (ವಾತ್ಸಲ್ಯ. ೪೬).

[ ←ಹಿಂ. ಮರಾ. ಚಪಾತೀ./ಪ್ರಾ. ಛಪ್ಪತ್ತಿಆ ]

**ಚಪೇಟ** (ನಾ). ಬೆರಳುಗಳನ್ನು ಬಿಚ್ಚಿ ಹಿಡಿದ ಅಂಗೈ; ಬಿಚ್ಚಿದ ಕೈ : ಘಾತಿಸಿ ಚಪೇಟ ಚರಣಾಘಾತದೊಳ್ (ಆದಿಪು. ೫-೧೬); ಭೀಮಸೇನನ ಚಲಗತಿಯ ಚಾತುರ ಚಪೇಟ ಪದಪ್ರಹಾರದಲಿ (ಕುವ್ಯಾಗ. ೪-೨೩); ಚಾತುರಂಗವನುರುಚಪೇಟನಿಘಾತದಲಿ ನಿರ್ಜೈಸಿ (ತೊರರಾ. ೬-೩೯-೨೦).

[ ಸಂ. ]

**ಚಪೇಟಕ** (ನಾ).=ಚಪೇಟ : ಇಟ್ಟಣಿಸಿ ನಗುತವಳು . . . ಮುನಿಪನ ತೊಟ್ಟುಳಿಕೆಯಲಿ ಚಾಚಿದಳು ಚಾಪಳ ಚಪೇಟಕವ[ಪಾಠಾಂ.ದ ಚೇಷ್ಟೆಯಲಿ] (ತೊರರಾ. ೧-೧೦-೦೨); ಅರಿಯ ಕೊರಳಿಗೆ ಚಾಚು ಚಪಳ ಚಪೇಟಕವ ಚೂರಿಸುವ ಖಂಡೆಯವ (ತೊರರಾ. ೬-೪೫-೩೬). [ ಸಂ. ]

**ಚಪೋಡು** 'ಚಪ್ಪೋಡು' ನೋ.

**ಚಪ್ಪಂಗಾಲು**, ಚಪಗಾಲು (ನಾ).=ಚಕ್ಕಳಬಕ್ಕಳ: ತಾಯಿಯೂ ಮಗಳೂ . . . ಚಪ್ಪಂಗಾಲು ಹಾಕಿಕೊಂಡು ಕುಳಿತರು (ಮಲಿನಾ. ೧೫೯). **ಚಪಗಾಲು:** ಒಳಗೊಬ್ಬ . . . ಚಪಗಾಲು ಹಾಕಿಕೊಂಡು ಕುಳಿತಿರುವುದು ಮುಸಮುಸಕಾಗಿ ಕಾಣಿಸುತ್ತಿತ್ತು (ಪೂರ್ವರಂ. ೪).

[ ←ತಮಿ. ಚಪ್ಪಣಙ್ಕಾಲ್ ]

**ಚಪ್ಪಕೊಡಲಿ** 'ಚಪ್ಪಗೊಡಲಿ' ನೋ.

**ಚಪ್ಪಗೆ** 'ಸಪ್ಪಗೆ' ನೋ.

**ಚಪ್ಪಗೊಡಲಿ**, ಚಪಗೊಡಲಿ, ಚಪ್ಪಕೊಡಲಿ, ಚೆಪ್ಪಗೊಡಲಿ (ನಾ). ಚಪ್ಪಟೆಯಾದ ಕೊಡಲಿ; ತೆಳ್ಳಗಿರುವ ಅಲಗನ್ನುಳ್ಳ ಅರ್ಧಚಂದ್ರಾಕೃತಿಯ ಕೊಡಲಿ; ಗಂಡಂಗೊಡಲಿ : ದರ್ಪವುಳ್ಳ ಮಹಾಮಾಯಿ ಅರಣ್ಯಕ್ಕೆ ಚಪ್ಪಗೊಡಲಿಯಾಗಿ ಇರುತಿಪ್ಪದೀ ಚರಣ (ವಿಸ್ತೂ.ಆಸು. ೬೯-೪); ಕಣೆಗಳಂ ಭಾರ್ಗವನ ಚಪ್ಪಗೊಡಲಿಯನರಿಯವೇಳ್ಕೆಂದು ತುಳ್ಕುತಂ (ಪರಶು. ೨೮-೧೧). **ಚಪಗೊಡಲಿ:** ನನ್ನ ಕೈಗೆ ಒಳ್ಳೆಯ ಹದನವಾದ ಚಪಗೊಡಲಿಯನ್ನು ಕೊಟ್ಟು . . . ಟೊಂಕಕ್ಕೆ ಹಗ್ಗ ಕಟ್ಟಿದರು (ಮೇದಿಮ. ೧೩). **ಚಪ್ಪಕೊಡಲಿ:** ಪರಶುರಾಮ (ತನ್ನ ಚಪ್ಪಕೊಡಲಿಯ ಕಡೆಗೆ ನೋಡುತ್ತ) (ಕುಳಸಿ. ೮೩). **ಚೆಪ್ಪಗೊಡಲಿ :** ವೃದ್ಧನಾತ್ಮಸಂಭವ ಬಿಲ್ಲ ಬಿಸುಟು ಚೆಪ್ಪಗೊಡಲಿಯ ಕೊಂಡಾರ್ಭಟಿಸಿ ಹೊಡೆದರೆ ಬಲರಾಮನ ಕೆಯ್ಯ ಕಾರ್ಮುಕ ಕಡಿದುದು ತುಂಡಾಗಿ ನೆಲಕೆ (ಮೋಹತ. ೩೮-೫೭).

[ <ಚಪ್ಪೆ$_1$ + ಕೊಡಲಿ ]

**ಚಪ್ಪಗೋಡು** 'ಚಪ್ಪೋಡಂ' ನೋ.

**ಚಪ್ಪಟಿ** 'ಚಪ್ಪಟೆ' ನೋ.

**ಚಪ್ಪಟಿಕಲ್ಲು** 'ಚಪ್ಪಡಿಕಲ್ಲು' ನೋ.

**ಚಪ್ಪಟೆ**,ಚಪ್ಪಟಿ,ಚಪ್ಪಟ್ಟೆ, ಚಪ್ಪಡಿ,ಚಪ್ಪಡೆ (ನಾ). ೧. ಸಮಂತಲವಾಗಿರುವುದು; ಅಗಲವಾಗಿ ತಗ್ಗು ತಿಟ್ಟುಗಳಿಲ್ಲದೆ ಮಟ್ಟವಾಗಿರುವುದು; ಸಪಾಟಾಗಿರುವುದು: ಎತ್ತ ಮೆಟ್ಟಿತ್ತ ಚಪ್ಪಟೆಯೆಂದು ನಗುತಂ ಹೋಗಿ (ಶಾಂತಿಪು. ೮-೮೪ ವ); ಕುಟಿಯಪ್ಪ ನೆತ್ತಿಯಿಂ ಬಡವನನೂನ ದುಃಖ ಪರನಪ್ಪನೆ ಚಪ್ಪಟೆಯಪ್ಪ ಮಂಡೆಯಿಂ (ಲೋಕೋಪ. ೧೧-೨೪); ಮೆಟ್ಟಿತ್ತಲತ್ತ ಚಪ್ಪಟೆಯೆಂಬಂತಿರಲಾಂ ಬೇಟ್ಟನಿತರ್ಥಂ ದೊರೆಕೊಂಡಪುದು (ಧರ್ಮಾಮೃ. ೧-೧೩೦); ಒತ್ತಿ ಪಿಡಿವನುಗುರಿಡುವನು ಬಲಿದಪ್ಪಿ ಚಪ್ಪಟೆ ಮಾಳ್ಪ (ಭರತ. ೪೦-೦೫೧); ಚಿತ್ರಮಿದು ಜಗದೊಳೆತ್ತ ಮೆಟ್ಟಿತ್ತ ಚಪ್ಪಟೆಯೆಂಬ ನಾಣ್ಣುಡಿಯನಭಿನಯಿಸುವಂತಾದುದು (ಜಿಬಪು. ೩೬-೬೪); ಎತ್ತು ಮೆಟ್ಟಿತ್ತು ಚಪ್ಪಟೆಯಾಯ್ತೆಂಬಿನಂ (ಶಬ್ದಾನು. ೫೧ ಪ್ರಯೋ); ಚೀಣದೇಶದಲ್ಲಿ ಚಪ್ಪಟೆಯಾದ ಮೂಗಿಗೆ ಆದರವಿದೆ (ಕಮಳ. ೬೫). **ಚಪ್ಪಟಿ:** ೧. ಲೋಕದ ಸಕಲಜನರ ಬುಡದಲ್ಲಿ ಸಿಕ್ಕು ಚಪ್ಪಟಿಯಾಗಿ ಹೋದ ಹರಲಾಲನಿಗೇ ಗೊತ್ತಿರಲಿಲ್ಲ, ತನ್ನ ಮನೋಲೋಕದಲ್ಲಿ ಇಷ್ಟೊಂದು ಸ್ನೇಹರಸವಿತ್ತೆಂಬುದು (ಇಪ್ಪಳ. ೩೦೩). (ಗು). ೨. ಸಮತಲವಾದ; ಸಪಾಟಾದ . 'ಚಪ್ಪಟಿಕಲ್ಲು' ಪರಾ. **ಚಪ್ಪಟ್ಟೆ:** ೧. ಪೂರ್ವಸಮುದ್ರತೀರವು ಸಾಧಾರಣವಾಗಿ ಚಪ್ಪಟ್ಟೆಯಾಗಿದೆ (ಭೂಗೋಳ. ೬೮). **ಚಪ್ಪಡಿ :** ೩. ಮಟ್ಟವಾಗಿರುವ ಅಗಲವಾದ ಕಲ್ಲು; ಹಾಸುಗಲ್ಲು : ಪರಮಬಿಂದುಸ್ಥಲಂ ಕಲೆ ಪಂಚ ಚಪ್ಪಡಿಗಳ್ . . . ಚತುರ್ವಾರ್ಗಕು ತೊಲೆಗಳುಂ (ಏಕೋಪು. ೪-೨೬); ಹತ್ತಿ ಹೋಗಲು ಚಪ್ಪಡಿಯ ಮೆಟ್ಟಲು ಮಾಡಿದ್ದರು (ಪ್ರವಾಇ. II, ೨೦೦). ೪. ಫಲಕ; ಹಲಗೆ : ಗಾಜಿನ ಚಪ್ಪಡಿಯ ಮೂಲಕ ರಶ್ಮಿಗಳು ಭಂಗ ಹೊಂದಿ ಹೊರಗೆ ಬಂದರೆ . . . ಮಿಥ್ಯಾಪ್ರತಿಬಿಂಬವೆಂದು ಹಿಂದೆ ತಿಳಿದಿದ್ದೇವೆ (ಭೌತವಿ. ೨೦೬). **ಚಪ್ಪಡೆ:** ೧. 'ಚಪ್ಪಡೆವೆಱು' ಪರಾ.

**ಚಪ್ಪಡಿಎಳೆ**=೧. ಚಪ್ಪಡಿಯನ್ನು ಹಾಕು; ಹಾಸುಗಲ್ಲನ್ನು ಎಳೆ. ೨. (ಅಲಂ) ಹಾಳುಮಾಡು; ನಾಶಮಾಡು : ಮಕ್ಕಳುಮರೀ ತಲೆ ಮೇಲೆ ಚಪ್ಪಡಿ ಎಳೆಯೋಕೆ ? (ಚಂದಕೋ. ೬೦). **ಚಪ್ಪಡಿಹಾಕು**=ಚಪ್ಪಡಿ ಎಳೆ ೨. : ಒಳ್ಳೆಯ ಕೆಲಸಕ್ಕೆ ಚಪ್ಪಡಿ ಹಾಕಿದರು (ರೂಢಿ). **ಚಪ್ಪಡಿಹಾಸು**= ಚಪ್ಪಡಿಎಳೆ ೨. : ಕೊನೆಗೂ ಅವನ ಮೇಲೆ ಚಪ್ಪಡಿ ಹಾಸಿದರು (ರೂಢಿ).

[ ದೇ.॥ ತಮಿ. ಚಪ್ಪಟ್ಟೈ, ಚಪ್ಪಡಿ; ಮಲ. ಚಪ್ಪಡ; ತುಳು. ಚಪ್ಪಟೆ; ತೆಲು. ಚಪ್ಪಿಡಿ. / ಮರಾ. ಚಪಟಾ, ಚಾಪಟ್, ಸಪಾಟ್. / ಸಂ. ಚರ್ಪಟ ]

**ಚಪ್ಪಟೆಕಳ್ಳಿ** (ನಾ). ಒಂದು ಬಗೆಯ ಕಳ್ಳಿ; ಪಾಪಾಸುಕಳ್ಳಿ; ಪಾಪಾಸುಕಳ್ಳಿ, ಶಿವರಾಮಕಳ್ಳಿ, ಚಪ್ಪಟೆಕಳ್ಳಿ (ವ್ಯಾಜಿಗಿ. ೫೮-೦೧೬೦).

[ ಚಪ್ಪಟೆ + ಕಳ್ಳಿ$_2$ ]

**ಚಪ್ಪಟೆಮೂಗು**, ಚಪ್ಪಟ್ಟೆಮೂಗು (ನಾ). ಚಪ್ಪಟೆಯಾದ ಮೂಗು; ತಟ್ಟೆಯಾದ ಮೂಗು: "ಖುರಣಸ್, ಖುರಣಸ–ಚಪ್ಪಟೆಮೂಗಿನವನು" (ನಾಚಿರಾ. ೩). **ಚಪ್ಪಟ್ಟೆಮೂಗು :** "ಖುರಣಾಃ, ಖುರಣಸಃ–೨ ಗಂಟು ಮೂಗಿನವನು ಚಪ್ಪಟ್ಟೆಮೂಗಿನವನು" (ಸಿದ್ಧಾಂತಿ. ೦೫೬).

[ ಚಪ್ಪಟೆ + ಮೂಗು$_1$ ]

**ಚಪ್ಪಟೆಹಂಬು** (ನಾ). ಒಂದು ಬಗೆಯ ಬಳ್ಳಿ : (ವ್ಯಾಜಿಗಿ. ೫೫-೦೦೦೫).

[ ಚಪ್ಪಟೆ + ಹಂಬು ]

**ಚಪ್ಪಟ್ಟೆ** 'ಚಪ್ಪಟೆ' ನೋ.

**ಚಪ್ಪಟ್ಟೆಮೂಗು** 'ಚಪ್ಪಟೆಮೂಗು' ನೋ.

**ಚಪ್ಪಡಿ** 'ಚಪ್ಪಟೆ' ನೋ.

**ಚಪ್ಪಡಿಕಲ್ಲು, ಚಪ್ಪಟೆಕಲ್ಲು** (ನಾ).=ಚಪ್ಪಡಿ ೧: ಅಡಿಯಲ್ಲಿ ಒಂದು ಚಪ್ಪಡಿ ಕಲ್ಲು ಸಿಕ್ಕಿತು (ಹುಟ್ಟಿಹ. ೭೨). **ಚಪ್ಪಟೆಕಲ್ಲು:** ಕಂಬಗಳ ಮೇಲೆ ಬರುವ ಚಪ್ಪಟೆಕಲ್ಲುಗಳನ್ನು ರೇಖಾಚಿತ್ರ ಬರುವಂತೆ ಹರಡಿರುವರು (ಹೊಯ್ಸಳವಾ. ೧೮). [ ಚಪ್ಪಡಿ (<ಚಪ್ಪಟೆ) + ಕಲ್ಲು (<ಕಲ್$_3$) ]

**ಚಪ್ಪಡಿಸು** 'ಚಪ್ಪರಿಸು' ನೋ.

**ಚಪ್ಪಡೆ** 'ಚಪ್ಪಟೆ' ನೋ.

**ಚಪ್ಪಡೆವೆಱು** (ಕ್ರಿ). ಚಪ್ಪಟೆಯಾಗು ; ಸಮತಟ್ಟಾಗು : ಕೊತ್ತಿಗಣ್ಣಿಳ ಕೋತಿಮುಸುಡಿನ ಚಪ್ಪಡೆವೆತ್ತು ನಡೆವ ಹೆಜ್ಜೆಯಿಂದ . . . ಭೂತವೆ ನಡೆತಪ್ಪಂತೆ ಮನೆಗೆ ಬರಲು (ನೇಮಿಸಂ. ೭-೧೦೧).

[ ಚಪ್ಪಡೆ (<ಚಪ್ಪಟೆ) + ಪೆಱು$_1$ ]

**ಚಪ್ಪನ್ನ** 'ಛಪ್ಪನ್ನ' ನೋ.

**ಚಪ್ಪನ್ನಕೋಟಿ** (ನಾ). ಐವತ್ತಾರು ಕೋಟಿ: ಚಪ್ಪನ್ನಕೋಟಿ ಯಾದವರು ಹತ್ತಿದರು (ಪೋಹತ. ೩೬-೫೮) ; ಚಪ್ಪನ್ನಕೋಟಿ ಯಾದವರಂ ತಮ್ಮತಮ್ಮನೆ ಯೊಳೊಪ್ಪಿ (ತುರಂಗ. ೫೦-೨೦). [ ಚಪ್ಪನ್ನ (<ಛಪ್ಪನ್ನ) + ಕೋಟಿ$_1$ ]

**ಚಪ್ಪನ್ನದೇಶ** 'ಛಪ್ಪನ್ನದೇಶ' ನೋ.

**ಚಪ್ಪನ್ನಭಾಷೆ** 'ಛಪ್ಪನ್ನಭಾಷೆ' ನೋ.

**ಚಪ್ಪನ್ನೈವತ್ತಾರು** 'ಛಪ್ಪನ್ನೈವತ್ತಾರು' ನೋ.

**ಚಪ್ಪಯ್ಯ** (ನಾ). ಒಬ್ಬಾತನ ಹೆಸರು : ಕೊಟಿಯಮ್ಮನ ಅಳಿಯಂ ಚಪ್ಪಯ್ಯನ ಮಗಂ ಪುನ್ನಿ ಗೋಸಾಸಿ ಕೆಱೆಯಂ ಮ್ಮಾಡಿಸಿ (ಎಕ. VIII, ಸಾಗರ. ೦೦೦-೨; 986 ?). [ ಚಪ್ಪ$_0$ + ಅಯ್ಯ$_{\text{೬}1}$ ]

**ಚಪ್ಪರ** (ನಾ). ೧. ಚಾವಣಿ ; ಮೇಲ್ಕಟ್ಟು ; ವಿತಾನ : ಕವರೆಂಬುದು ಚಪ್ಪರದೊಳ್ (ಕಬ್ಬಿಗಕಾ. ೨೫); ಚಪ್ಪರಮಂ ಬೆಳ್ವಟ್ಟೆಗಳಿಂ ಪರುಠವಿಸಿದರು (ಚಿಕವಿ. ೪-೨೭) ; ಕನಕದ ಕಂಭಗಳು ಘನ ಚಪ್ಪರಗಳು (ಯನಳ. ೦೩) ; ಹಂಚಿನ ಚಪ್ಪರದ ತೂತುಗಳೊಳಗಿಂದೆಲ್ಲ ಸೂರ್ಯನ ಬೆಳಕು ನೇರವಾಗಿ ಸುರಿಯುತ್ತಿತ್ತು (ನಿರಾಶ. ೫೫). ೨. ಬಳ್ಳಿ ಮೊದಲಾದುವು ಹಬ್ಬು ವುದಕ್ಕೆ ಆಶ್ರಯವಾಗಿ ಎತ್ತಿಕಟ್ಟಿದ ಚೌಕಟ್ಟು ; ಕಾವಣ : " ಕಾವಣ ಪಂದರಮುಮೆನಲ್ಕಾವಗ ಚಪ್ಪರಮೆನಿಕ್ಕು " (ಕವಿಕಂ. ೦೭೭) ; ಮಧುರ ದ್ರಾಕ್ಷೆಯ ಚಪ್ಪರಂಗಳಿಂ (ಉದ್ಭಟ. ೯-೨೫); ದ್ರಾಕ್ಷೆಯ ಚಪ್ಪರ (ಸೌಗಂಧಿ. ೩೭-೦೨) ; ಪಡುವಲಕಾಯಿ ಬಳ್ಳಿಗೆ ಚಪ್ಪರವೇ ಒಳ್ಳೆಯದು (ಆಡುಸೌ. ೦೨೯) ; ೩. ಶುಭಕಾರ್ಯಗಳಿಗಾಗಿ ಹಸುರುವಾಣಿಯಿಂದ ನಿರ್ಮಿಸಿದ ಹಂದರ : ಚಪ್ಪರಂಗಳ ಚೆಲ್ವುಮಂ ಮಂಟಪಂಗಳ ವಿಳಾಸ ಮುಮಂ . . . ನೋಡುತ್ತುಂ (ಧರ್ಮಾಮ್ಮ. ೯-೧೭೦) ; ಪವಳದ ಚಪ್ಪರ ವಿಕ್ಕಿ ನಮ್ಮವರೆನ್ನ ಮದುವೆಯ ಮಾಡಿದರು (ಮಹಾದೇ. ಬ. ೭-೬); ಮದುವೆಯ ಚಪ್ಪರದ ಮುಂದಿಳಿಹಿದಂತಿರ್ದಂ (ನಂಬಿರ. ೬-೨೨) ; ಮದುವೆಗೆ ಲಗ್ನವನ್ನೂ ಇಟ್ಟರು; ಚಪ್ಪರ ತೋರಣ ಮಾಡಿಸಿದರು (ಈಕಥ. ೬೦). ೪. ಗುಡಿಸಲು ; ಜೋಪಡಿ : ಅಂಬಿಗನು ಸಮೀಪದಲ್ಲಿ ಇದ್ದ ಸಂಗನ ಚಪ್ಪರಕ್ಕೆ ನಡೆದನು (ಇಂದುಮು. ೪೫); ಚಪ್ಪರಕ್ಕೆ ಗತಿಯಿಲ್ಲದವ ಉಪ್ಪರಿಗೆ ಅಪೇಕ್ಷಿಸಿದ (ಗಾದೆ). ೫. ಅಂಗಳ ; ಪ್ರಾಂಗಣ : " ಪ್ರಾಂಗಣ ಪಂದರಂಗಳಿವು ಚಪ್ಪರಮೆಂದೆನಿಕುಂ " (ನಾನಾರ. ೧೪೪).

**ಚಪ್ಪರಕಾಣಿಕೆ**=(ಮದುವೆಯ) ಚಪ್ಪರದ ಮೇಲೆ ಹಾಕುವ ತೆರಿಗೆ : ಯಿವಿಕ್ರಿಗೆ ಚಪರಕಾಣಿಕೆಯಿಲ್ಲ ಮಗ್ರಿಕಾಣಿಕೆಯಿಲ್ಲ ಡೊಂಬಕಾಣಿಕೆಯಿಲ (ಎಕ. XVI, ಗುಬ್ಬಿ. ೬೯-೩೨ ; ?). **ಚಪ್ಪರಗಾಲಮಂಚ** = ಚಪ್ಪರಮಂಚ : (+). **ಚಪ್ಪರದ ಹಣ**=ಚಪ್ಪರಕಾಣಿಕೆ: 'ಚಪ್ಪರದ ಹಣ' ವೆಂದು ಕರೆಯುವ ಅದನ್ನು ಊರಿನ ದೇವಸ್ಥಾನಕ್ಕೆ ಬಿಟ್ಟುಕೊಡುತ್ತಾರೆ (ಕಶಾಅ. ೪೦೮ ಅಡಿಟಿ).

[ ದೇ.॥ ತಮಿ. ಮಲ. ತೆಲು. ಚಪ್ಪರ; ತುಳು. ಚಪ್ಪರ, ಚಪ್ಪರೊ. / ಹಿಂ. ಛಪ್ಪರ್ : ಮರಾ. ಛಪ್ಪರ, ಛಪರ್ ]

**ಚಪ್ಪರಣೆ** (ನಾ). ೧. (ತಿನ್ನುವಾಗ) ತುಟಿಗಳಿಂದ ಮಾಡುವ ಚಪ್ ಎಂಬ ಶಬ್ದ ; ಆಸ್ವಾದನೆ ; ಸಶಬ್ದವಾಗಿ ಸವಿಯುವಿಕೆ : ಚುಂಬನ ಮುಪ್ಪು ಚಪ್ಪರಣೆ ಬೇಡುವ ಬಕ್ಕುಡಿ ಕಾಯ್ದು ಕೊಡುವಟ್ಟುಂಬರಿ ಯೆಂಬಿವಾಗೆ ಸಲೆ ತನ್ನವು (ಅರ್ಧನೇ. ೫-೭೦); ಆತಂ . . , ಕೇರಿಯೊಳಾ ದೊಡಂ ನೆರೆಯೆಂಬುದಂ ಚಪ್ಪರಣೆಯೊಳಾದೊಡಂ ಪಣ್ಣೆಂಬುದಂ ಸ್ವೀಕರಿಸಂ (ಕಬ್ಬಿಗಕಾ. ೦೪೮). ೨. ಹೂಡಿದ ಕುದುರೆ, ಎತ್ತು ಮೊದಲಾದುವನ್ನು ವೇಗಗೊಳಿಸಲು ಅಥವಾ ನಿಲ್ಲಿಸಲು ಸಾರಥಿಗಳು ಮಾಡುವ ಶಬ್ದ ; ತಟ್ಟುವಿಕೆ : ಸೂತರ ಚಪ್ಪರಣೆಗಳ ಮಿಱೆ ಖುರದಲಿ ಚೊಪ್ಪರಿಸಿ ಹೊಯ್ದಾಡಿದವು . . . ತೇಜಿಗಳು (ಕುವ್ಯಾಕ. ೨೨-೦೭) ; ಹೇರ್ಗಳಂ ಬಿಸುಟ ಹೋರಿಗಳ ಚಪ್ಪರಣೆಯಿಂ ನಿಲಿಸಿ ಮೂಗುನೇಣಡುತೆ (ಜೆಬಪು. ೪೭-೪೬) ; ರಾವುತರ . . . ಚಪ್ಪರಣೆಯೊಳ್ ಕಿಳಿರ್ವ ಹಯದ (ರಾಮಾಶ್ವ. ೫೦-೫). ೩. ಹಕ್ಕಿಗಳ ಚಿಲಿಪಿಲಿ ಧ್ವನಿ : "ಬೆಜ್ಜೆ=ಚಪ್ಪರಣೆ" (ಶಮದ. ಪರಿ. ೨) ; " ಬಗ್ಗು ಬಿಪ್ಪಂಡಮೆನೆ ಚಪ್ಪರಣೆಯು " (ಕಬ್ಬಿಕೈ. ೭೭) ; " ಗಿಳಿವಾತು ಬೆಜ್ಜೆ ಜಡಿಪಂ ಬಗ್ಗು ಬಿಪ್ಪಂಡವೆಂದೆಂಬಿವು ಚಪ್ಪರಣೆಯೆನಿಕು " (ಶಬ್ದಮಂ. ೩೦) ; ಕಳಕುಶಂಗಳ ಬಗ್ಗಣೆ ಗಿಳಿಗಳ ಚಪ್ಪರಣೆಯಳಿಗಳಿಂಚರಮೆಸೆಗುಂ (ಶಬಶಂ. ೨-೪೫). ೪. ಹುರಿದುಂಬಿಸುವಿಕೆ ; ಪ್ರೋತ್ಸಾಹ : ಹುರುಡು ಜಾಣುಮ ಚಳಬಳಿಕೆ ಚಪ್ಪರಣೆ ವಂಚನೆ ನೇಹವೆಂಬೀ ಪರಿಯ ಮಾಯಾ ಪರಿಯುದ ಮಹಿಳಾಜನ ವಿರಾಜಿಸಿತು (ತೊರರಾ. ೧-೫-೩೨). ೫. ಗದರಿಸುವಿಕೆ ; ಜಂಕಣೆ : " ಬಿಪ್ಪಂಡ . . . ಚಪ್ಪರಣೆಯುಮನ್ನೆ ಝಂಕಣೆಯು ತಾನಕ್ಕುಂ " (ಕವಿಕಂ. ೧೨೩) ; ಅಂದಿನ ದರ್ಪಮನಂದಿ ನೊಂದು ಚಪ್ಪರಣೆಯನಿಂದು ತೋಱು ಖಳ ದುಷ್ಟ (ಶೃಂಗಾರ. ೧-೫೦).

[ ಚಪ್ಪರಿ (<ಚಪ್ಪಿರಿ) + – ಅಣೆ$_4$ ]

**ಚಪ್ಪರದವರೆ** (ನಾ). ಚಪ್ಪರದ ಮೇಲೆ ಹಬ್ಬಿ ಬೆಳೆಯುವ ಒಂದು ಬಗೆಯ ಅವರೆ: ಪಲಸು ತಡುಗಣಿ ಬಾಳೆ ಚಪ್ಪರದವರೆ ಚಂಬೆಗಳ . . . ಸವಿಯೊಪ್ಪರಣೆ ಘಮಘಮಿಸಲಿಕೆ ಬಡಿಸಿದರು (ಅನಂರಾ. ೬-೨೫-೩೯).

[ಚಪ್ಪರ + ಅವರೆ$_1$ ]

**ಚಪ್ಪರದ್ರಾಕ್ಷೆ** (ನಾ). ಚಪ್ಪರ ಹಾಕಿ ಬೆಳೆಸಿದ ದ್ರಾಕ್ಷೆ : " ಮೃದ್ವೀಕಾ, ಗೋಸ್ತನೀ, ದ್ರಾಕ್ಷಾ, ಸ್ವಾದ್ವೀ, ಮಧುರಸಾ – ಈ ದ್ರಾಕ್ಷೆ ಹೆಸರುಗಳು . . . ಚಪ್ಪರದ್ರಾಕ್ಷೆಗೂ ಹೆಸರುಗಳು " (ಸಿದ್ಧಾಂತಿ. ೦೨೦).

[ ಚಪ್ಪರ + ದ್ರಾಕ್ಷೆ ]

**ಚಪ್ಪರಬದನೆ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹಣ್ಣು ; ಟೊಮ್ಯಾಟೊ ; ತಕ್ಕಾಳಿ : ಗೂದೆಹಣ್ಣು, ಚಪ್ಪರಬದನೆ, ಟೊಮಾಟೋ, ತಕ್ಕಾಳಿ (ಮೃಜಿಗಿ. ೫೦-೦೦೩೦) ; ಅಯ್ಯನ ಚಪ್ಪರಬದನೆಯನ್ನು ಕರಿಯನ ಹಸು ಮೇದಿದ್ದಿತು (ಗರುದಾ. ೧೦೨). [ ಚಪ್ಪರ + ಬದನೆ$_1$ (<ಬದಣೆ) ]

**ಚಪ್ಪರಮಂಚ** (ನಾ). ಮೇಲ್ಕಟ್ಟು ಅಥವಾ ಸೊಳ್ಳೆಪರದೆ ಕಟ್ಟಲು ಅನುಕೂಲವಾಗುವಂತೆ ರಚಿಸಿದ ಚೌಕಟ್ಟುಳ್ಳ ಮಂಚ ; ಮೇಲು ಚಪ್ಪರವುಳ್ಳ ಮಂಚ : ಚಪ್ಪರಮಂಚದ ಮೇಲೆನ್ನನೊಲಿದು ನೀನಪ್ಪಿ ಕೊಂಡಿರೊ ಬೆಚ್ಚಂತೆ (ಕುರಾಸಾಂ. ೨೬-೬೫) ; ದಪ್ಪಕರತಿಯ ವಸಂತ ಕೇಳಿಯ ಚಿತ್ರವಿಪ್ಪುದ ನೋಡಿ ಸಂತಸದಿ ಚಪ್ಪರಮಂಚದ ಮೇಲೆ ಕುಂಕುಮದಲರ್ಸುಪ್ಪತ್ತಿಗೆಯಲಿ ಮಂಡಿಸಿದ (ಪೋಹತ. ೨೨-೦೨) ; ಚಪ್ಪರಮಂಚ ಗುಜ್ಜರಿಗಾಲಮಂಚ ಮೇಲುಪ್ಪರಮಂಚ . . . ಸೆಳೆಮಂಚ ವೊಪ್ಪವಾಂತೆಸೆದುವಲ್ಲಲ್ಲಿ (ಭರಚ. ೦೫-೨೭).

**ಚಪ್ಪರಮಂಚದಾಟ** = ಒಂದು ಬಗೆಯ ನರ್ತನ : ಚಪ್ಪರಮಂಚದಾಟ ಎಂಬುದು ಈ ಸ್ತ್ರೀಪಾತ್ರದ ನರ್ತನಗಳೊಳಗೊಂದು (ಪಾರ್ತಿಸು. ೩೩).

[ ಚಪ್ಪರ + ಮಂಚ ]

**ಚಪ್ಪರಿ** 'ಚಪ್ಪಿರಿ' ನೋ.

**ಚಪ್ಪರಿಕೆ** (ನಾ). ೧. ಚಪ್ಪರಿಸುವುದು ; ತಟ್ಟುವುದು ; ಚಪ್ಪರಣೆ : ಅದರ ಬೆನ್ನಿಗೊಂದು 'ಶಹಬಾಸಗಿರಿ'ಯ ಚಪ್ಪರಿಕೆಯನ್ನು ಕೊಟ್ಟು ಹೋಗುತ್ತಿದ್ದರು (ಗಂಗಾವ. ೧೮೪). ೨. ಹೊಗಳಿಕೆ ; ಶ್ಲಾಘನೆ : ಶಶಿಬಿಂಬದ ಪಂಗದೇಕೆ ಚ[ಪಾಠಾಂ. ಪ]ಪ್ಪರಿಕೆಯೊಳಪ್ಪದೇಂ ತನಗೆ ಪೇಟ್ ಮಧುವಿಂ ಪುರುಳುಂಟೆ (ಲೀಲಾವ. ೧೦-೬೩).

[ ಚಪ್ಪರಿ (< ಚಪ್ಪಿರಿ) + – ಕೆ ]

**ಚಪ್ಪರಿಸು**, ಚಪ್ಪಡಿಸು, ಚಪ್ಪಳಿಸು₂, ಛಪ್ಪರಿಸಂ, ತಪ್ಪಡಿಸು (ಕ್ರಿ). ೧. ತಿನ್ನುವಾಗ ನಾಲಗೆಯಿಂದ ಅಥವಾ ತುಟಿಗಳಿಂದ ಚಪ್ಪೆಂದು ಸದ್ದು ಮಾಡು ; ಚೀಪು ; ಸವಿ : ದುಷ್ಟ ಚವುೂರ ಚಪ್ಪರಿಸಿದುದೊ ಕೆಡೆದನೊ ಹಳ್ಳಕೊಳ್ಳದಲಿ (ತೊರರಾ. ೨-೫-೨೦) ; ಚದುರನಧರಸುಧೆಯೊಂಟಿ ಚಪ್ಪರಿಪಾ ವಿಧವೆನಗೆಂದಿಗಾಗುವುದೊ (ಕಂನವಿ. ೯-೨೨೦) ; ಪಲ್ಯವನ್ನು ಚಪ್ಪರಿಸುತ್ತಿದ್ದ ಹಾಗೆ ಹಳಟೆಯೂ ಸಾಗುತ್ತಿತ್ತು (ನಾಪೋಲೀ ೦೪೫) ; ನಾಲಿಗೆ ಚಪ್ಪರಿಸುವ ಆಳವಿನಲ್ಲಿ ಬರುವುದಷ್ಟೇ ಪುರಸೊತ್ತು (ದೀಪಹ. II, ೧೯೫). ೨. ಧ್ವನಿಮಾಡು ; ಕೂಗು : ಅಳ್ಳಂ ಬಳ್ಳಂ ಚಳವಳಿಸಂ ಚಪ್ಪರಿಸಂ ತಳವಳಿಸಂ (ಅಜಿಪು. ೫-೯೦) ; ಕಡು ಕೊಬ್ಬಿ ಚಪ್ಪರಿಪ ರಾಜಶುಕಾಳಿಯಿನಾವುವೊಪ್ಪುಗುಂ (೧೧ಕ. ೨-೩೩) ; ಕುಪ್ಪಳಿಸಿದೊಡಂ ಬೀಟದೆ ಚಪ್ಪರಿಸುತೆಚ್ಚರೆಕ್ಕೆಯಿಂ ಬಿಲ್ಲಾಳ್ಗಳ್ (ಕಬ್ಬಿಕಾ. ೨೭೯) ; ಅಬ್ಬರಣೆಯಲಿ ಚಪ್ಪರಿಸಿ ನೆಗಹಿದರು ಬಲು[ಪಾಠಾಂ. ಚಪ್ಪರಣೆಯಲಿ ಮುಸುಕಿದರು] ಮುಷ್ಟಿಗಳ ನೆಗಹಿನಲಿ (ತೊರರಾ. ೬-೭-೨೬). ೩. ಚಪ್ಪೆಂದು ಸದ್ದಾಗುವಂತೆ ತಟ್ಟು,–ಬಡಿ,–ಅಪ್ಪಳಿಸಂ : ಉಪ್ಪಿಲ್ಲಣಂಗು ಸಾಸವೆ ತಪ್ಪಿಲ್ಲದ ಮೆಣಸು ಸುಂಟಿ ಪೊಸಸುಣ್ಣಮಿವಂ ಚಪ್ಪರಿಸಿ ಬಡಿದು ಮೆಯ್ಯಂ ಸೊಪ್ಪಾಗಿರೆ ಮೋದಿ ಪೂಸುವರ್ ನಿರ್ದಯೆಯಿಂ (ಧರ್ಮಾಮೃ. ೩-೭೦) ; ಸೊಳ್ಳೆಯ ಹುಳುಗಳ ಕಾಟದಿಂದ ಅವನು ಮೈಯನ್ನೆಲ್ಲ ಚಪಚಪನೇ ಚಪ್ಪರಿಸಿಕೊಳ್ಳಹತ್ತಿದನು (ಇಪ್ಪಕ. ೩೩೭). ೪. (ಪ್ರೋತ್ಸಾಹಿಸುವಂತೆ) ಮೈದಡಹು ; ನೇವರಿಸಂ : ಕರಂ ರಯ್ಯಮೆನೆ ಪಾಡುತಿರ್ದಳನೊಯ್ಯನೆ ಕಡೆಗಣ್ಣೊಳಡರೆ ಚಪ್ಪರಿಸುತ್ತುಂ (ಕಾವ್ಯಾವ. ೩೦೯) ; ಕರುಣದಲಿ ಚಪ್ಪರಿಸಿದನು ಕಂಧರವ (ಕುವ್ಯಾದ್ರೋ. ೦೦-೩೫); ಅರಿಗಂಡಭೈರವ ಚುಬುಕಿಜಿದು ಚಪ್ಪರಿಸಿದನು ಭುಜವ (ತೊರರಾ. ೪-೦೨-೨೯); ವಿಹಗಾಧೀಶ ತದ್ಭುಜವ ಚಪ್ಪರಿಸಿ . . . ಬೊಬ್ಬಿಜಿದ (ಮೋಹತ. ೩೮-೩೪); ತುರಂಗಂಗಳಂ ಚಪ್ಪರಿಸಲು . . . ಕಾರ ಮಿಂಚಿನ ತೆಱದೊಳುರವಣಿಸಿದುವು (ಜೈಮಿಭಾ. ೨೫-೪೫). ೫. ಗದರಿಸು; ಬೆದರಿಸು : ಇರು ಮುಟ್ಟಮೆಂದು ತಾಂ ಚಪ್ಪರಿಸಿದೊಡಾನಿರೆನೆ ಮುಚ್ಚುಮಱಿಯೇಕೆಯೊ (ಅರ್ಧನೇ. ೫-೯); ಪಾಮರೀಯುವತಿಯರಾರ್ದು ಚಪ್ಪರಿಸೆ ಕೋಗಿಲೆಯಾಂಚರಮೆಂದು ಬೆರ್ಚಿ ಪಾಱಿವು ಗಿಳಿವಿಂಡು (ಅನಂಪು. ೧-೮೨) ; "ಅದನ್ನೆಲ್ಲಾ ಹೇಳಬಾರದು" ರಾಮಿಾ ಚಪ್ಪರಿಸಿದ (ಕತ್ತಲೆ. ೫೦). ೬. ಕಡೆಗಣಿಸು ; ಅಲಕ್ಷಿಸಂ ; ಪ್ರತಿಭಟಿಸು : ಕಪ್ಪಮಿಾಯದೆ ಚಪ್ಪರಿಸುವ ಮಂಡಲಿಕರುಮಂ (ಆದಿಪು. ೪-೮೨ ವ). ೭. ಹೀಯಾಳಿಸಂ ; ಹಂಗಿಸು; ಮೂದಲಿಸು : ನಳಿತೋಳ ಪಿಂಡುಗಂಕಣದ ಸರಂ ಮೊರೆವಳಿಗಳ ಸರಮಂ ಚಪ್ಪರಿಸುವಿಸಂ ಚೆನ್ನೆಪೊನ್ನೆಯರಲಂ ಕೊಯ್ದಾಳ್ (ಆದಿಪು. ೧೧-೦೦೨) ; ಅಪ್ಪಲೆ ನೀಂ ಪರವೆಣ್ಗಳನಪ್ಪುವುದನೆ ಬಯಸುತಿರ್ಪೆಯಪ್ಪೆಂದು ಕರಂ ಚಪ್ಪರಿಸಿ ನಾರಕರ್ ತಂದಪ್ಪಿಸುವರ್ ಕಾಯ್ದ ಲೋಹಮಯ ಪುತ್ರಿಕೆಯಂ (ಸುಕುಮಾ. ೧೧-೪೩) ; ಚಪ್ಪರಿಸುವ ಮೂದಲಿಸುವ ಹೊಂಕರಿಸುವ ಬಗ್ಗಿಸುವ ಕಳಕಳಂ ಬಳೆವಿನೆಗಂ (ವರ್ಧಪು. ೮-೪೭) ; ಕೊರಳ ರಕ್ಷಿಸಿಕೊಳ್ಳೆನುತ ಚಪ್ಪರಿಸಿ ದ್ರುಪದ ವಿರಾಟರೆಚ್ಚರು (ಕುವ್ಯಾದ್ರೋ. ೨-೩೪). ೮. ಆಕ್ರಮಿಸು ; ಆವರಿಸು : ಮದಾಕ್ಕೃತಿಯಂ ಮಾಸಿಸಿ ಮುಪ್ಪು ಚಪ್ಪರಿಸೆಯುಂ (ಆದಿಪು. ೦-೮೦); ಚಪ್ಪರಿಸಿ ಬಂದು ನಿನ್ನಂ ಮುಪ್ಪಡಸಿದುದಣಲೊಳ್ ಅಡಸಲಿರ್ದಂ ಜವಂ (ಅಜಿಪು. ೨-೯೭) ; ಮುಪ್ಪು ಚಪ್ಪರಿಸೆ ಪರಾಧೀನನೆನಿಸುವೆನೆ (ಪಾರ್ಶ್ವಪು. ೦-೦೩೦) ; ಉಪ್ಪರಿಸಿತ್ತು ಸೂರ್ಯನ ರಥಂಬರಮಷ್ಟದಿಶಾವಿಭಾಗವಂ ಚಪ್ಪರಿಸಿತ್ತು . . . ಭೇರಿಯ ಭೂರಿಗಭೀರನಿಸ್ವನಂ(ಸೂಕ್ತಿಸು. ೧೮-೬) ; ಚಪ್ಪರಿಸಲರಿದೀ ನಿಶಾಟನ ನಿಪ್ಪಸರದಿಂ ಪಾಂಡವರಿಗಣಿದಪ್ಪಿತೆಂದರೆ ಸಾಮವೇ ಹಿತವು (ಸಾಳ್ವಭಾ. ೩೦-೨೭). **ಚಪ್ಪಡಿಸು:** ೪. ಅವಳ ದೇಹವು ನನ್ನ ದೇಹಕ್ಕೆ ಜೋಗುಳ ಹಾಡಿ ಚಪ್ಪಡಿಸಿ ಉಯ್ಯಾಲೆಯಾಡಿಸಿ ಮಲಗಿಸಿತು (ಮುಕ್ತಿ. ೩೯). **ಚಪ್ಪಳಿಸು₂ :** ೩. ಲಲನೆಯಂಜಲಿ ಸಲಿಲದಿಂ ಚಪ್ಪಳಿಸುತಂ ಬೆನ್ನೊಳು ಶಿರಸಿನೊಳು ಜಲವನೊತ್ತುವಳಾತ್ಮಜೆಗೆ (ಬಸಪು. ೦೫-೯). **ಛಪ್ಪರಿಸು :** ೫. ಮಹಾಪಾತಕನು ಬಾಗಿಲಿಂಗೆ ಬಾರದಿರೆಂದು ಛಪ್ಪರಿಸಿ ಜಱೆದು ವೃಷಭನಂ ರಥಂಕಿಸುತ್ತೆ ನಿಲಿಸಿ (ಸಿಂಗಿರಾ. ೪-೩೮). **ತಪ್ಪಡಿಸು :** ೪. ತಲೆದಡವಿ ತಪ್ಪಡಿಸಿ ಬಾಲ ಸಿದ್ಧರಾಮ ಕಾಲಭೈರವನು ತೋರುವನು . . . ಬಂಗಾರ ಸಿರಿಗಿರಿಯ (ಸಿದ್ಧಪು. ೬-೭) ; ಅದನ್ನು ತೊಡೆಯ ಮೇಲೆ ಹಾಕಿಕೊಂಡು ತಪ್ಪಡಿಸಿದಳು (ಗ್ರಾಮಾಯ. ೫೭೭).

[ ಚಪ್ಪರಿ (<ಚಪ್ಪಿರಿ) + – ಸು₁./ತೆಲು. ಚಪ್ಪರಿಂಚು, ಚಪ್ಪಳಿಂಚು ]

**ಚಪ್ಪಲರ್**, ಚಪ್ಪಲರು (ಕ್ರಿ). ೧. ಚಪ್ಪಟೆಯಾಗು ; ತಟ್ಟೆಯಾಗು ; ಗುಂಜ್ಜುಗೊಳ್ಳು : ಎಸಟಿಸಟ್ಟಿಪ್ಪದೆ ಮೊಗವಿುಱಿದು ಕಾರ್ದು ಚಪ್ಪಲರ್ವಿನೆಗಂ ಸಿಪ್ಪಿಟ್ಟು ಕರೆದುಕೊಂಡುವು ಸಪ್ಪದಮುಪ್ಪಳದಿನೊಱಿವ ನಱುವಂಡುಗಳಂ (ಲೀಲಾವ. ೯-೮೬) ; ನಸು ಜೋಲ್ದುಡೆ ಕೊಂಕಿದೋಲೆ ಚಪ್ಪಲರ್ದ ಘನಸ್ತನಂ (ಸೂಕ್ತಿಸು. ೯-೬೦) ; ಚಪ್ಪಲರ್ವಿನಂ ಮೊಲೆ ತೆಕ್ಕೆಗೆ ಸಾರ್ದು (ಮನ್ಮವಿ. ೩-೦೩). ೨. ಸಂಪೂರ್ಣವಾಗಿ ಅರಳು : ಚಪ್ಪಲರ್ದ ಕೊಸವುಗಳು ಕರವೊಪ್ಪಿದವು ಮನೋಜರಾಜ ರಾಜ್ಯೋದಯದೊಳ್ (ವರ್ಧಮಾ. ೧೦-೩೮). **ಚಪ್ಪಲರು :** ೧. ಸಡಿಲಿದ ತಕ್ಕೆ ಚಪ್ಪಲರಿದ ಮೊಗನಸುಮಿಡುವಳ್ಳೆ ಬೆಂಡೆದ್ದ ಕಣ್ಣು . . . ಬೆಳ್ಪಡರ್ದ ಬಾಯ್ದೆಱೆ ಚೆಲ್ವು ಬೀಱೆ (ನಾಗಕು. ೬-೬೦). [ <ಚಪ್ಪೆ₁ + ಅಲರ್₁ ]

**ಚಪ್ಪಲರು** 'ಚಪ್ಪಲರ್' ನೋ.

**ಚಪ್ಪಲಿ**, ಚಪ್ಪಲಂ, ಚೆಪ್ಪಲಿ (ನಾ). ಕಾಲಿನಲ್ಲಿ ಹಾಕಿಕೊಳ್ಳುವ ತೆಳ್ಳಗಿರುವ ಚರ್ಮದ ಮೆಟ್ಟು ; ಪಾದರಕ್ಷೆ : ಹೊಸ ಚಪ್ಪಲಿಯನ್ನು ಕೊಂಡವನು ಹಳೆಯದನ್ನೆಸೆದು ಬಿಡುವಂತೆ ಶ್ಯಾಮ್ ನನ್ನನ್ನು ದೂರಕ್ಕೆ ಎಸೆದಿದ್ದ (ಅಲಹೂ. ೦೫೬) ; ಭಾರತೀಯರು ಹಾಕಿಕೊಳ್ಳುವ ಚಪ್ಪಲಿಗಳು (ಅಗಸ್ತ್ಯ. ೪೦) ; ಚಮ್ಮಡ ಸುಲಿದು, ಚಪ್ಪಲಿಗೆ ಉಂಗುರ ಹೊಲಿಸಿಬಿಡು ತ್ರೇಣಿಯೇ (ನಡದಾ. I, ೫೦೬). **ಚಪ್ಪಲು :** ಚಪ್ಪಲು, ನೈಟ್‌ಗೌನು ಈಚೆ ತೆಗೆದು, ಬಾತ್‌ರೂಮನ್ನು ಪ್ರವೇಶಿಸಿದ (ಅಳಿನಿ. ೧೬) ; ನೀಲೀಬಣ್ಣದ ಪ್ಲಾಸ್ಟಿಕ್ ಚಪ್ಪಲು . . . ಎಷ್ಟು ಮಾಟವಾಗಿ ಕಾಣುತ್ತವೆ ಕಂಡೆಯಾ ? (ಜೀವುಟ. ೬೦). **ಚೆಪ್ಪಲಿ:** ಚೆಪ್ಪಲಿ. ಇದು ಕನ್ನಡದಲ್ಲಿ ಕೆರಹು. ತಮಿಳಿನಲ್ಲಿ ಶೆರಪ್ಪು. ತೆಲುಗಿನಲ್ಲಿ ಇದರ ಬಹುವಚನ ಚೆಪ್ಪುಲ್. ಚೆಪ್ಪುಲ್ ಬಹುವಚನ ಎಂದು ಕಾಣದ ಜನ ಇದನ್ನು ಕನ್ನಡಕ್ಕೆ ಚೆಪ್ಪಲಿ ಎಂದು ಮಾಡಿ ತಂದು ಕೊಂಡಿದೇವೆ (ನಮ್ಮನು. ೧೧೫).

[ ←ಹಿಂ. ಚಪ್ಪಲ್ ; ಮರಾ. ಚಪ್ಪಲ್, ಚಪಲ್, ಚಪಳೀ ]

**ಚಪ್ಪಲಿಚೆಂಡು** (ನಾ). ಒಂದು ಬಗೆಯ ಸಸ್ಯ : (ಸ). [ ? ]

**ಚಪ್ಪಲು** 'ಚಪ್ಪಲಿ' ನೋ.

**ಚಪ್ಪಳ್₁** 'ಚಪ್ಪಳೆ' ನೋ.

**ಚಪ್ಪಳ್ಳ₂**, ಚಪಳ್₁ (ನಾ). ತೊಡೆಯ ಹೊರಭಾಗ : ಹೊಡೆದರೆ ನಡುಬೆನ್ನು ಮುಂಡೆ ಚಪ್ಪಳಗಳ ಒಡಗೂಡಿ ಕರುಳ ಗುಂಡಿಗೆಯ ಬಿಡದೆ ಚೆಲ್ಲಿತು ರಕ್ತ(ಹರಿಸಾಂ. ೩-೭೪). **ಚಪಳ್₁ :** ಕುದುರೆ . . . ಕಂದ ಮುಖ ತಲೆಯು ಕೂದಲು ಸತ್ವವಾಗಿ ಚಪಳವೂ ಎದೆಯೂ ಉಬ್ಬಿ ದೊಡ್ಡಿತ್ತಾಗಿ ಇರಲು (ಅಶ್ವವೈ. ೫-೨೨ ಟೀಕೆ). [ <ಚಪ್ಪೆ₁ ]

**ಚಪ್ಪಳಿಕ್ಕು** 'ಚಪ್ಪಳೆಯಿಕ್ಕು' ನೋ.

**ಚಪ್ಪಳಿಗೊಳ್** (ಕ್ರಿ). ಚಪ್ಪಾಳೆ ತಟ್ಟು; ಸಪ್ಪಳವಮಾಡು: ಪುಷ್ಪಕದೊಳಗೆ ಕುಳ್ಳಿರಿಸಿ ಚಪ್ಪಳಿಗೊಳಲೊಯ್ದು ಹಾಕುವುವು ದೊಡ್ಡ ಕಪ್ಪಟವಾದ ಕೊಳದಲಿ (ಬಿಜ್ಜಳರಾ. ೨-೬೩). [ <ಚಪ್ಪಳೆ + ಕೊಳ್₁ ]

**ಚಪ್ಪಳಿಸು₁** (ಕ್ರಿ).=ಚಪ್ಪಳೆಯಿಕ್ಕು : ಆ ಕೂಸು . . . ನಗುಗುಂ ಕೈ ಚಪ್ಪಳಿಸುಗುಂ ಹಲವನುಲಿಗುಂ (ಬಾಲಚಿ. ೧೩೨-೨೦); ಚಪ್ಪಳಿಸಿ ಕೈಗಳಂ ಕುರುನೃಪತಿ ಕಟ್ಟನಕಟ (ತುರಂಗ. ೭೦-೬೬). [ ಚಪ್ಪಳೆ + – ಇಸು₃ ]

**ಚಪ್ಪಳಿಸು₂** 'ಚಪ್ಪರಿಸು' ನೋ.

**ಚಪ್ಪಳೆ**, ಚಪ್ಪಳ₁, ಚಪ್ಪಾಳೆ₁, ಚಿಪ್ಪಾಳೆ, ಛಪ್ಪಳೆ, ತಪಾಳೆ, ತಪ್ಪಣ್ಣೆ, ತಪ್ಪಣೆ, ತಪ್ಪಳೆ, ತಪ್ಪಾಳೆ (ನಾ). ಎರಡೂ ಅಂಗೈಗಳನ್ನು ಒಂದಕ್ಕೊಂದು ತಾಟಿಸಿ ಮಾಡುವ ಶಬ್ದ; ಕೈಪರೆ ; ಕರತಾಡನ : "ತಾಳಃ . . . ಕಾಲದಿಂದ ಗೀತಕ್ಕೆ ಕಟ್ಟಳೆಯ ಮಾಡುವ ಚಪ್ಪಳೆಯ ಪೆಸರು" (ನಾಚಿರಾ. ೯೬). **ಚಪ್ಪಳ₁** : ಕರಗಳೆರಡಂ ಕೂಡಿ ಚಪ್ಪಳಮನಿಕ್ಕುತಂ (ಸಿದ್ಧರಾ. ೬-೨೦). **ಚಪ್ಪಾಳೆ₁**: ಚಪ್ಪಾಳೆಗಳ ರವ ಕೊಂಬು ಕೊಳಲು ಹೊನ್ನ ತಪ್ಪಟೆಗಳ ದನಿಯಿಂದ . . . ತೇರು ಬಂದೊಪ್ಪಿತು (ಕಂಠವಿ. ೨೫-೧೦೦); ಚಪ್ಪಾಳೆಗಳಂ ಹುಯ್ಯುತ (ಸೌಗಂಧಿ. ೨೯೬-೮); ಅವಳ ಮಾತಿಗೆ ಅಲ್ಲಲ್ಲಿ ಚಪ್ಪಾಳೆಗಳು . . . ಕೇಳಿಬರುತ್ತಿದ್ದವು (ಅಪನಾ. ೧೩೪). **ಚಿಪ್ಪಾಳೆ** : ಕಿರುದನಿಯ ನಗು ಚಿಪ್ಪಾಳೆ ಮುತ್ತುಗಳು ಪಿಸುಮಾತು ಹಾಡು (ಮಲೆನಾ. ೧೯೬). **ಛಪ್ಪಳೆ**: 'ಛಪ್ಪಳೆಯಿಡು' ಪರಾ. **ತಪಾಳೆ** : 'ಕೈತಪಾಳೆ' ಪರಾ. **ತಪ್ಪಣ್ಣೆ** : 'ಕೈದಪ್ಪಣೆ' ಪರಾ. **ತಪ್ಪಣೆ** : 'ತಪ್ಪಣೆಗುಟ್ಟು' ಪರಾ. **ತಪ್ಪಳೆ** : ಮೆಲ್ನುಡಿ ಮುದ್ದುಗೆಯ್ತ ವಿಂಪೊದವಿದ ನುಣ್ಣೊದಟ್ನುಡಿ ಮುದಂ ಮಿಗೆ ತಪ್ಪಳೆಗಾಡುವಾಯತಂ (ದಶಕು. ೫-೬೨). 'ತಪ್ಪಳೆಗಂಟ್ಟು' ಪರಾ. **ತಪ್ಪಾಳೆ** : ಪುಟ್ಟಕೈಯಲಿ ತಪ್ಪಾಳೆಯನಿಕ್ಕುವಳು ತಪ್ಪು ದಟ್ಟಡಿಯಿಟ್ಟು ನಡೆವಳು (ಕವಿಜ. II, ೪೮೫ ಪದ್ಮಿನೀಕಲ್ಯಾಣ).

**ಚಪ್ಪಾಳೆ ತಟ್ಟು**=ಕರತಾಡನ ಮಾಡು : ಚಪ್ಪಾಳೆ ತಟ್ಟಿ ನಾ ಪಾಡುವೆ (ಪುರಂದ. ೧-೮೨-೧) ; ಜನ ಯಾವುದಕ್ಕೆ ಚಪ್ಪಾಳೆ ತಟ್ಟುವುದೊ ಅದನ್ನೇ ಪ್ರಯೋಗದಲ್ಲಿ ಸೇರಿಸಿಬಿಡುವುದು (ಭಾರದ. ೫೭೪). **ಚಪ್ಪಾಳೆ ಬಾರಿಸು**= ಚಪ್ಪಾಳೆತಟ್ಟು : ಆತ ಚಪ್ಪಾಳೆ ಬಾರಿಸುತ್ತಾ ಹೇಳಿದ (ಅಶ್ರಮ. ೮೭). **ಚಪ್ಪಾಳೆಹಾಕು**=ಚಪ್ಪಾಳೆ ತಟ್ಟು : ಸುತ್ತಣ ಜನ ಪ್ರಶಂಸಾಪೂರ್ವಕವಾಗಿ ಚಪ್ಪಾಳೆಹಾಕುತ್ತಿರುವಂತೆಯೂ ಕನಸು ಕಟ್ಟಬಹುದು (ಶಿಕ್ಷದ. ೬೫೦).

[ ದೇ.॥ ತಮಿ. ಚಪ್ಪಾಣಿ ; ತುಳು. ಚಪ್ಪಳಿ ; ತೆಲು. ಚಪ್ಪಟ್ಲು ]

**ಚಪ್ಪಳೆಗುಟ್ಟು**, ತಪ್ಪಣೆಗುಟ್ಟು, ತಪ್ಪಳೆಗುಂಟ್ಟು (ಕ್ರಿ).=ಚಪ್ಪಳೆಯಿಕ್ಕು: ತೂಗಿ ತೊನೆದು ಕೈ ಚಪ್ಪಳೆಗುಟ್ಟುತೆ (ಭೃಂಗೀರ. ಷ. ೪೭೩-೧೩) ; ಧಿಟ್ಟ ಚಂಚರು ಬಂದು ಚಪ್ಪಳೆಗುಟ್ಟಿ ಯೇಡಿಸಿ ಕಾಡಿದಲ್ಲದೆ ಬಿಟ್ಟು ಹೋಗರು ನಿನ್ನನೆನ್ನಯ ಪಳ್ಳಿಗೈತಂದು (ಬಸವು. ೧೮-೧೫). **ತಪ್ಪಣೆಗುಟ್ಟು** : ಮದಿರಾರಸದ ಮದವೇಱ . . . ತೊದಟ್ನುಡಿಯಿಂದಂ ಕರದು ಬಯ್ದುವುತ್ತುಮುಟ್ಟುದಂ ಬಿಟ್ಟು ತಪ್ಪಣೆಗುಟ್ಟುತುಂ ಕುಣಿದು (ಬಾಳವು. ೧೦-೧೩೯ ವ). **ತಪ್ಪಳೆಗುಂಟ್ಟು** : ತಪ್ಪಳೆಗುಟ್ಟುತ ತಾರೆಲೆವಾಡುತ ಒಪ್ಪ ಗೋವಳರ ಮಧ್ಯದೊಳು ಒಪ್ಪದಿನಾ ಬಲಕೇಶರೀವರ್ದಿರು ಬರ್ಪ ಪಟ್ಟಣದ ದಾರಿಯೊಳು (ನೇಮಿಸಂ. ೧೭-೧೦೩).

[ ಚಪ್ಪಳೆ + ಕುಟ್ಟು₁ ]

**ಚಪ್ಪಳೆಗೊಳಿಸು** (ಕ್ರಿ). ಕೈಯಿಂದ ತಟ್ಟು; ಚಪ್ಪರಿಸಂ; ಸಡ್ಡು ಹೊಡೆ : ನಿಪ್ಪಸರದೆ ತೋಳ ಮೊದಲ ಚಪ್ಪಳೆಗೊಳಿಸಿ ದಂಡೆಯ ಹೂಡಿ ನಿಂದಿರು ವೊಪ್ಪುವನೇನ ಬಣ್ಣಿಪೆನು (ಮೋಹತ. ೧೨-೮೪).

[ ಚಪ್ಪಳೆ + ಕೊಳ್₁ + – ಇಸು₃ ]

**ಚಪ್ಪಳೆಯಿಕ್ಕು**, ಚಪ್ಪಳಿಕ್ಕು, ಚಪ್ಪಾಳೆಯಿಕ್ಕು, ತಪ್ಪಳಿಕ್ಕು (ಕ್ರಿ). ಚಪ್ಪಾಳೆ ತಟ್ಟು ; ಕೈಪರೆಗುಟ್ಟು; ಕರತಾಡನಮಾಡು: ಚಪ್ಪಳೆಯಿಕ್ಕಿ ನಲಿದು ಕೊಂಡಾಡಿ . . . ಡಾಕಿನಿತಂಡವೆಸೆದುವಾ ರಣದೆ (ಕಂಠವಿ. ೧೫-೬೨); ನೋಡಿ ಚಪ್ಪಳೆಯಿಕ್ಕಿ . . . ಕೇಕೆ ಹಾಕಿದೆ ಮಗುವು (ಹೂಹಾದಿ. ೧೬-೩). **ಚಪ್ಪಳಿಕ್ಕು** : ಓತು ಕುಣಿವರು ಚಪ್ಪಳಿಕ್ಕಿ (ಬಸವು. ೬-೮) ; ನುಡಿವ ನಾಲಿಗೆಯ ಪಿಡಿದು ಬಿಡದೆ ಥಣಥಣರೆಂದು ಬಡಿದು ಚಪ್ಪಳಿಕ್ಕುತ್ತ (ಪುರಂದ. ೧-೫೩-೧) ; ಸರ್ವರು ಮುತ್ತಿ ಕದುಬಿ . . . ಚಪ್ಪಳಿಕ್ಕುತ ನಗುತಿರೆ (ನವಮೋ. ೧೦-೫೨). **ಚಪ್ಪಾಳೆಯಿಕ್ಕು** : ನಿರ್ದಯ ಅವಿವೇಕತನದ ಪತನಕ್ಕೆ ಚಪ್ಪಾಳೆಯಿಕ್ಕುವನು (ಪ್ರಬಂಧ. ೩೦). **ತಪ್ಪಳಿಕ್ಕು** : ಕಾಲನಾಡಿಸೈ ಕುಮಾರ ಎಂದು ಕಾಂತೆಯರ್ ಮುಂದೆ ನಿಂದು ತಪ್ಪಳಿಕ್ಕಿಯಾಡಿಸಲ್ ವಿಲಾಸದಿಂ . . . ಆಡಿದಂ ಕುಮಾರಕಂ (ದಶಕು. ೨-೭೪).

[ ಚಪ್ಪಳೆ + ಇಕ್ಕು ]

**ಚಪ್ಪಟಿ**, ಚಾಪಳಿ (ನಾ). ೧. ಚಪ್ಪಟೆಯಾದುದು : "ಚಪ್ಪ [ಪಾಠಾಂ. ಕ್ಕ] ಟಿಯೆಂದುವೊತ್ತಿ ಚಪ್ಪಟೆಯಾದುದು" (ಶಮದ. ಮ. ೩೩ ವೃತ್ತಿ); "ಚಪ್ಪಟಿ [ಪಾಠಾಂ. ಕಚ್ಚಟಿ]ಯೆನಲ್ಕೆ ಚಪ್ಪಟೆ" (ಸಂಜೀವ. ೫); ಚಪ್ಪಟಿ, ಪುಚ್ಚಟಿ (ಶಬ್ದಾನು. ೧೪೦ ವ್ಯಾಖ್ಯಾ). **ಚಾಪಳಿ**: (ಗು) ೨. (ಕರಾ) ಸಮತಲವಾದ; ಸಪಾಟಾದ; ಹೆಚ್ಚು ಉಬ್ಬಿಲ್ಲದಿರುವ: ಚಾಪಳಿ ಗೊರಟುಳ್ಳ ಮಾವಿನ ಹಣ್ಣು ಹೆಚ್ಚು ಚೆನ್ನಾಗಿರುತ್ತದೆ (ರೂಢಿ).

[ ?. / ತಮಿ. ಚಪ್ಪಳಿ=ಚಪ್ಪಟೆಯಾಗು ]

**ಚಪ್ಪಾಣಿಮುತ್ತು** (ನಾ). ಶ್ರೇಷ್ಠವಾದ ಮುತ್ತು: ಚಪ್ಪಾಣಿಮುತ್ತು ಬಾಯಿ ಬಿಚ್ಚಿಹೋಗುವಾಗ ದುಃಖ ಬೇಡ (ಪುರಂದ. ೩-೬೭-೫).

[ <ಚಪ್ಪು₁ + ಅಣಿಮುತ್ತು ]

**ಚಪ್ಪಾಳೆ** 'ಚಪ್ಪಳೆ' ನೋ.

**ಚಪ್ಪಾಳೆಯಿಕ್ಕು** 'ಚಪ್ಪಳೆಯಿಕ್ಕು' ನೋ.

**ಚಪ್ಪಿರಿ**, ಚಪ್ಪರಿ, ಚೆಪ್ಪರಿ (ಕ್ರಿ). ೧. ಆಸ್ವಾದಿಸು; ನಾಲಗೆ, ತುಟಿಗಳಿಂದ ಸವಿಮಾಡಿಕೊಂಡು ತಿನ್ನು ; ಹೀರು ; ಚಪ್ಪರಿಸು : ಚನ್ನಯ್ಯನುಂಡು ಮಿಕ್ಕುದ ಚಪ್ಪಿರಿದು ಸವಿದ (ಚನ್ನಪ.ಕ. ೩೭೦-೭೭೦); ಕಡುವುಳಿಗಳ್ಳನೊಂದು ತಿಳಿವಟ್ಟಲನಿಟ್ಟಿಱಿಯಲ್ಕೆ . . . ಕುಡಿದು ಚಪ್ಪಿರಿದು (ದಶಕು. ೮-೨೦೪) : ಮೊಗದೊಳು ಮೊಗವಿಟ್ಟು ಚೆಂದುಟಿ ರಸವ ಸವಿದು ಚಪ್ಪಿರಿದ (ಕಂಠವಿ. ೧೦-೪೦). ೨. (ಅಲಂ) ಅನುಭವಿಸಂ : ಸೌಖ್ಯಮಂ ಚಪ್ಪಿರಿದು (ಸ್ವರೂಪಾ. ೩-೨೬). **ಚಪ್ಪರಿ** : ೧. ಕೆಳಗೆ ನಿಂದು ಚಪ್ಪರಿದಡೆ ತೊಟ್ಟು ಬಿಟ್ಟತ್ತೇ ಹಣ್ಣು (ವೋಳಿಮಾ. ೩೦-೧೨೪) ; ಚಪ್ಪರಿದೀಂಟಿ ನೂತ್ನ ಕಣಿಶೋದ್ಭವ ಸಾರವಂ (ಉದ್ಭಟ. ೩-೨೦) ; ಮರುಳುಗಳು ಬಾಯ ಬಿಡುತ ಮುಕ್ಕುಳಿಸಿ ಚಪ್ಪರಿದು ದಣಿವಂದದಿಂ (ವೀಶೈಪು. ೨-೭-೪೬) ; ರಸ ರಸಾಯನವ ಚಪ್ಪರಿದು (ಮೋಹತ. ೩-೫೭). ೩. ಮೆಲುಕು ಹಾಕು: ಅದನ್ನೇ ಮತ್ತೆ ಮತ್ತೆ ಮಾತಾಡಿ ಅದನ್ನು ಚಪ್ಪರಿಯೋ ನಮ್ಮ ನಡತೆ ಸರೀನೆ ? (ನಿಂದನಿ. ೧೩೪). **ಚೆಪ್ಪರಿ**: ೧. ಈಶ್ವರಂ ತೆರೆಯ ಮುಱಿಯೊಳ್ ಮುನ್ನಿನಂದದಿಂ ಚೆಪ್ಪರಿವುತಾರೋಗಿಸದಿರಲು (ಚೆಬವು. ೫೫-೧೨).

[ ಚಪ್ಪು + ಇರಿ₁ ]

**ಚಪ್ಪು**, ಜಬ್ಬು₁ (ಕ್ರಿ). ೧. ಅಗಿದು ತಿನ್ನು ; ಅರೆದು ತಿನ್ನು ; ಮೆಲುಕಾಡಿಸು. 'ಚಪ್ಪಿರಿ' ಪರಾ. **ಜಬ್ಬು₁** : ೨. ಚೀಪು; ಸೀಪು: ಮಗು ದೊಡ್ಡದಾದರೂ ಮೊಲೆ ಜಬ್ಬುತ್ತಲೇ ಇದೆ (ರೂಢಿ).

[ದೇ.॥ ತಮಿ. ಮಲ. ತೆಲು. ಚಪ್ಪು; ಮಲ್ತೊ. ಚೊಪ್ಯೆ ]

**ಚಪ್ಪೆ₁**, ಚೆಪ್ಪೆ, ಛಪ್ಪೆ (ನಾ). ೧. ಚಪ್ಪಟೆಯಾದುದು ; ತಟ್ಟೆಯಾದುದು. 'ಚಪ್ಪಲರ್' ಪರಾ. ೨. ತೊಡೆಯ ಹೊರಭಾಗ: ಆ ಆಕಳಿನ ಮುಂಗಾಲಿನ ಚಪ್ಪೆಗೆ . . . ಮೆಲ್ಲನೆ ತಿವಿಯಿತು (ಮುಂಬಯಿ. ೫-೯೧) : ಚಪ್ಪೆ

ಗಳೆರಡೂ ಬಂಡಿಯ ಗಾಲಿಯಂತಾಗಿದ್ದುವು (ಬೆಳುಮ. ೧೭೭) ; ಅದರ ಚಪ್ಪೆ ಎಲುವಿನ ಮಗ್ಗುಲಲ್ಲಿ . . . ಅದರ ಹೆಸರು ಬರೆದನು (ಬಂಗಾಹ. ೪೩). **ಚೆಪ್ಪೆ:** ೧. 'ಚೆಪ್ಪೆವಡೆ' ಪರಾ. ೨. 'ಚೆಪ್ಪೆಜಾಡ್ಯ' ಪರಾ. **ಛಪ್ಪೆ:** ೨. ಟೊಂಕದ ಎರಡೂ ಮಗ್ಗುಲಿಗೆ ದೊಡ್ಡವೆರಡು ಛಪ್ಪೆಯ ಎಲುವುಗಳಿವೆ (ಮುಂಬಯಿ. ೬-೩೦೨).

[ ದೇ.॥ ತಮಿ. ಚಪ್ಪೈ; ಮಲ. ಚಿಪ್ಪು; ತೆಲು. ಚಿಪ್ಪ ]

**ಚಪ್ಪೆ$_2$** 'ಸಪ್ಪೆ' ನೋ.

**ಚಪ್ಪೆ$_3$** 'ಛಾಪು' ನೋ.

**ಚಪ್ಪೆ$_4$** (ನಾ). ಒಂದು ಬಗೆಯ ಸಸ್ಯ : ಚಪ್ಪೆಸೊಪ್ಪಿನ ರಸವನೂ ಎಣ್ಣೆಯನೂ ಕೂಡಿ ಮಸ್ತಕಕ್ಕೆ ಒತ್ತಿಸಲು ಪಕ್ಷಿಗ್ರಹ ಹರವಹುದು. ಚಪ್ಪೆಯ ಬೀಜವ ತೇದು ಪಾನ ಲೇಪನಗಳ ಮಾಡಿಸಲು ಪಕ್ಷಿಗ್ರಹ ಹರವಹುದು (ವೈದ್ಯಸಾ. II, ೧೪). [ ? ]

**ಚಪ್ಪೆಗಲ್ಲು** (ನಾ). ಚಪ್ಪಟೆಯಾದ ಕಲ್ಲು ; ಚಪ್ಪಡಿಗಲ್ಲು; ಹಾಸುಗಲ್ಲು: ಒಂದಗುಳು ಚಪ್ಪೆಗಲ್ಲಿನಂದ ಒಂದಗುಳು ಅಡ್ಡಗಲ್ಲಿನಂದ ಒಂದಗುಳು ಊರ್ಧ್ವಗಲ್ಲಾಗಿ ನಿಂದಿಹುದಾಗಿ (ಮೋಳಮಾ. ೨೨೩-೭೭೮).

[ ಚಪ್ಪೆ$_1$ + ಕಲ್ಲು (<ಕಲ್$_3$) ]

**ಚಪ್ಪೆಜಾಡ್ಯ, ಚೆಪ್ಪೆಜಾಡ್ಯ** (ನಾ).=ಚಪ್ಪೆರೋಗ : (ಎಸಮ್ಮ. XV, ೩೬). **ಚೆಪ್ಪೆಜಾಡ್ಯ :** ಕೆಲವು ಕಾಲಗಳಲ್ಲಿ ದನಕರುಗಳಿಗೆ ದೊಡ್ಡಜಾಡ್ಯ ಚೆಪ್ಪೆಜಾಡ್ಯ ನರಡಿ . . . ವ್ಯಾಪಿಸಿರುವುದುಂಟು (ಗ್ರಾಮೂಳ. ೧೧೩).

[ ಚಪ್ಪೆ$_1$ + ಜಾಡ್ಯ ]

**ಚಪ್ಪೆರೋಗ** (ನಾ). ದನಗಳಿಗೆ ಭೇದಿ ವಿಪರೀತವಾಗುತ್ತ ಜಂಘಾಬಲ ಉಡುಗಿ ಹೋಗುವ ಒಂದು ಬಗೆಯ ರೋಗ : ಚಪ್ಪೇರೋಗದ ಉಚ್ಚಾಟ ಹೆಚ್ಚಿದಾಗ ಊರು ಮಧ್ಯದಲ್ಲಿರುವ ಗೋಗಲ್ಲು ಪೂಜೆ ಮಾಡುವ ವಾಡಿಕೆ (ಹುಟ್ಟಿಹ. ೭೦) ; ಇದು ಚಪ್ಪೆರೋಗ . . . ಎಂಬ ರೋಗ ವನ್ನುಂಟುಮಾಡುತ್ತದೆ (ಪರಜೀ. ೯೦). [ ಚಪ್ಪೆ$_1$ + ರೋಗ ]

**ಚಪ್ಪೋಡು, ಚಪೋಡು, ಚಪ್ಪಗೋಡು, ಚೆಪ್ಪೋಡಂ** (ನಾ). ೧. ತಾಮ್ರಶಾಸನ; ಲಿಖಿತವಾದ ಅಧಿಕಾರಪತ್ರ: ಸಾತಿಶಯ ಪದ್ಮಂಗಳೇ ವಜ್ರಮಯದ ವಿಖ್ಯಾತವೆಂದೆನಿಪ ಚಪ್ಪೋಡಾಗಿರುತಿರ್ದವು (ವೀಶೈಪು. ೮-೧೭-೪೩) ; ಚಪ್ಪೋಡ ತಿಳಿದಜುಹಿದಾತಗಂ ಸೇನಾಧಿಪಟ್ಟಗಟ್ಟುತ್ತ . . . ನನ್ನರ್ಥಸಿಂಹಾಸನಾರೂಢನಂ ಮಾಳ್ಪೆಂ (ಪ್ರಭುಪು. ೬-೧೭). ೨. ಸೊಮ್ಮು; ಸ್ವತ್ತು; ಆಸ್ತಿ: ವಿಜ್ಞಾನವು ಯಾವೊಂದು ದೇಶದ ಚಪ್ಪೋಡೂ ಅಲ್ಲ (ವಿಕಾಸ. ೩೦). **ಚಪೋಡು :** ೧. ಯಿಾ ಚಪೋಡ ಬರದಾತ ನಾಗೇನಹಳಿ ಚಕ್ರಪ್ಪನ ಪೌತ್ರರಾದ . . . ಹುಚಣ್ಣನ ಕೈಯ ಬರಹ (ಎಕ. XII, ತುಮಕೂ. ೪೩-೯೪ ; 1679). **ಚಪ್ಪಗೋಡು :** ೧. ಮೇಲು ಕೋಟೆ ಚಪ್ಪಗೋಡು ಇಲ್ಲದೆ ಬರಿಯ ಕಾಗದದಲ್ಲಿ ಈಚೆಗೆ ಅನಾಮಧೇಯ ಗುರುಗಳಿಂದ ಅಧಿಕಾರವನ್ನು ಪಡೆದವರು ಬರಿಯ ಬುಡ್ಡ ದಾಸಯ್ಯಗಳು (ಗರುಡಾ. ೧೭೬). **ಚೆಪ್ಪೋಡು:** ೨. ಈ ಭೂಮಿ ಯಾವೂಬ್ಬನ ಚೆಪ್ಪೋಡಲ್ಲ; ಅದು ದೇವರದು (ಪುನರು. ೩೦೩) ; ಬುದ್ಧಿಶಕ್ತಿ ಯಾವೊಂದು ಜನಾಂಗದ . . . ಚೆಪ್ಪೋಡಲ್ಲ, ಸ್ವಂತ ಆಸ್ತಿಯಲ್ಲ (ಶ್ರೀಕೃಪ್ರ. VIII, ಮುನ್ನುಡಿ). P ಇದು 'ತಾಮ್ರಪತ್ರ' ಎಂಬ ಸಂಸ್ಕೃತ ಶಬ್ದದ ಅನುವಾದವಿರಬಹುದಂ. [ ದೇ.॥ ತಮಿ. ಮಲ. ಚೆಪ್ಪೇಟು ]

**ಚಪ್ರಾಸಿ** 'ಚಪರಾಸಿ' ನೋ.

**ಚಬಕ** 'ಚಬುಕು' ನೋ.

**ಚಬಕಾರ** 'ಚಬುಕಾರ' ನೋ.

**ಚಬಿಕು** 'ಚಬುಕು' ನೋ.

**ಚಬುಕ** 'ಚಬುಕು' ನೋ.

**ಚಬುಕಂಗೆಯ್** (ಕ್ರಿ). ಚಾಟಿಯಿಂದ ತಿವಿದು ವೇಗಗೊಳಿಸು,–ಚುರುಕುಗೊಳಿಸು : ಪತ್ತಿರ್ದ ಕುದಿರೆಯುಂ ಚಬುಕಂಗೆಯ್ಯೆ (ಚಂದ್ರಛ್ಯು. ೭-೧೦೯).

[ ಚಬುಕ (<ಚಬುಕು) + ಕೆಯ್$_1$ ]

**ಚಬುಕಾಯಿಸು** (ಕ್ರಿ). = ಚಬುಕಂಗೆಯ್ : ಬಾಲಕಿಯು ತನ್ನ ಕುದುರೆಯನ್ನು ಹಿಮ್ಮಡಿಯಿಂದ ಚಬುಕಾಯಿಸುತ್ತಾ . . . ಮುಂದೆ ಓಡಿಸಿಕೊಂಡು ಹೊರಟುಹೋದಳು (ಲೂಸಾರ್ತ. ೦೩).

[ <ಚಬುಕು + – ಇಸು$_3$ ]

**ಚಬುಕಾರ, ಚಬಕಾರ, ಸಬಕಾರ** (ನಾ). ಸೋಪು ; ಸಾಬೂನು ; ಸಬ್ಬು: "ಚಬಕಾರ, ಚಬುಕಾರ–ಸಬಕಾರ" (ಗಂಗಾಮ. ೦೨೮). **ಚಬಕಾರ:** ಮೇಲಿನ ಪ್ರಯೋಗವನ್ನು ನೋಡಿ. **ಸಬಕಾರ :** ಆ ಕೊಳೆಗೆ ನಾಲ್ಕು ಬಿಲ್ಲೆಯ ಸಬಕಾರ ಸಾಕಾಗಿದ್ದಿತು (ಜಯಂತ ೩೪೩) ; ಸಬಕಾರದ ನೊರೆಯನ್ನು ಮುಖದ ತುಂಬ ಮೆತ್ತುತ್ತಾರೆ (ದೇಶನ್ನ. ೬೯) ; ತಲೆಗೆ ಸಬಕಾರ ಹಚ್ಚುವದರಿಂದ ಕೂದಲುಗಳು ಬಿರುಸಾಗಿ ಬೆಳ್ಳಗಾಗುವವು (ಬ್ರಹ್ಮಜೀ. ೦೨೦). [ದೇ.॥ ತಮಿ. ಚವುಕ್ಕಾರ; ಮಲ. ಚವುಕ್ಕಾಯರ್; ತುಳು. ಚಬಕಾರ, ಚಬುಕಾರ, ಸೌಕಾರ; ತೆಲು. ಚವುಕಾರ, ಚೌಕಾರ ]

**ಚಬುಕು, ಚಬಕ, ಚಬಿಕು, ಚಬುಕ, ಚಾಬೂಕು, ಚುಬುಕ್ಕು$_2$, ಸಬಕ** (ನಾ). ೧. ಚಾವಟಿ; ಚಾಟಿ; ಚಡಿ: ಚಟುಲ ಹಯಗಳ ಚಬುಕನಿಕ್ಕಲು ಪುಟನೆಗೆದು , . . ತುಳಿದುವು ದಿವವನಾಕ್ಷಣಕೆ (ಕೌಶಿರಾ. ೧೯-೧೧); ಬಲೆ ಪಟ ಹನುಮನ ಬಾಲ ಚಬುಕು ಕೊಳ್ಳಿ ತೊಲಗದ ಕಂಭ ಮುಂದುಲಿವ ತಲೆ ಕಳಸದ ಬಿರಿದಿನ ಹರಿಗೆಯ ಮುಂದಿ ಕಲಹಕ್ಕೆ ಪೊಣಿಮಟ್ಟರು (ಕುರಾಸಾಂ. ೧೧-೩೩); ಖಂಡದ ಹಿಡಿಗಲ್ಲು ನರದ ಚಬುಕುಗಳ ಗಂಡುಭೂತಗಳೆದ್ದ ವಾಗ (ಹರಿಸಾಂ. ೩೪-೫೭) ೨. (ಆಲಂ) ಚುರುಕು ; ಚಪಲತೆ : ಸುಬ್ಬಾ ಎಳೆ ನಾಗರಹಾವಿನಂತೆ ಚಬುಕಾಗಿ. . . ತಿರುಗುತ್ತಿದ್ದ (ಭೀಮುಕಾ.೮೨). **ಚಬಕ:** ೧. ಸಾರಥಿಯು ಪುನಃ ಕುದುರೆಗಳನ್ನು ಚಬಕದಿಂದ ಹೊಡೆಯುವನು (ಮುಂಬಯಿ. ೬-೨೯) ; ಒಂದು ದಿನ ಪೋಲೀಸರ ಚಬಕ ಬಿದ್ದು ನನ್ನ ಮೇಲೆ ಬಾಸಾಳವೆದ್ದಿತು(ಗಾಳಿಪ. ೦೨೯); ಕುದುರೆಗೊಂದು ಚಬಕದೇಟನ್ನು ಕೊಟ್ಟು ಹೇಳಿದ (ಶಾಪ. ೮೩). **ಚಬಿಕು:** ೧. ಆ ರಾಯನು . . . ತನ್ನ ಚಬಿಕಿನ ಪೆಟ್ಟಿನಿಂದ ಆತನನ್ನು ಬಹಳವಾಗಿ ನೋಯಿಸಲು (ಕೃವಾಚ. ೩೨೩). **ಚಬುಕ:** ೧. ಚಬುಕ ಚಾಟಿ ಚಮ್ಮಟಿಕೆಯಿಂದಚ್ಚಟಚ್ಚ ಬಡಿದು . . . ಭಂಗ ಬಡಿಸೆಂದು ನಿರವಿಸಿದನು (ಚಬಪು.೫೭-೯೨). **ಚಾಬೂಕು :** ೧. ಕಾಕಾನಿಂದ ಚಾಬೂಕ ಏಟು ತಿಂದ (ದೀಪಹ. II, ೧೯೮); ಬಡ ಟಾಂಗಾದವನ ಟೊಪ್ಪಿಗೆ ಎಲ್ಲಿಗೆ ಹೋಯಿತೋ, ಚಾಬೂಕು ಯಾರ ಕೈ ಸೇರಿತೊ! (ಶ್ರೀಕಾಂತ. III, ೬೪). **ಚುಬುಕ್ಕು:** ೧. ಸೈರಿಸದೆ ಆರ್ಪವರ ಚುಬುಕಿನ ಎಮ್ಮೆಬಾರಿನ ಪರಮಸೇವೆಗೆ ನಿನ್ನನ್ನು . . . ಎಳೆದೊಯ್ಯುತ್ತಿದೆ (ಬಿಟ್ಟಿಅ. ೨೦-೧) . **ಸಬಕ :** ೧. ಚರ್ಮದ ಜೀನೂ ಮತ್ತು ಬಟ್ಟೆಯ ಸಬಕವೂ ಅವೆ (ಹಂಗಾಳ್ಕೆ. ೨೭).

**ಚಬುಕುಮಾಡು, ಚಬಕುಮಾಡು** = (ಕುದುರೆಯನ್ನು) ಚಬುಕಿನಿಂದ ಹೊಡೆದು ಚುರುಕುಗೊಳಿಸು : ಛಾಯಾಗುಪ್ತನು ರಥಾಶ್ವಮಂ ಚಬುಕುಮಾಡಿ (ಸೌಗಂಧಿ. ೨೯೭-೧) ; ರಾಕ್ಷಸನು–ಅಶ್ವಮಂ ಚಬುಕು ಮಾಡುತ್ತಾ ಬರುತ್ತಿದ್ದನು (ಮುದ್ರಾಮಂ. ೧೫೦); ರಥಾಶ್ವಗಳ ಶರೀರಗಳಂ ಸವರಿ ಚಬಕುಮಾಡಿ . . . ರಥವನ್ನು ನಡೆಸು (ಕೃವಾವಿ. ೯೭).

[ ←ಪಾರ. ಹಿಂ. ಚಾಬುಕ್; ಮರಾ. ಚಾಬೂಕ್ ]

**ಚಬ್ಬಣವಾವಿ** (ನಾ). ಒಂದು ಊರಿನ ಹೆಸರು : ತೆಂಕಲು ಚಬ್ಬಣವಾವಿಯ ಸೀಮೆ (ಕಇ. II, ೧೧-೨೩ ; 1092) ; ಚಬ್ಬಣವಾವಿಯ ಮಲ್ಲೇಶ್ವರದೇವರಿಗೆ ಸಿನ್ನಿಹೇಡದಲು ಬಿಟ್ಟ ಭೂಮಿ (ಕಇ. II, ೦೭-೦೩; 1122). [ ? ]

**ಚಬ್ಬಯ್ಯ** (ನಾ). ಒಬ್ಬಾತನ ಹೆಸರು : ಅವರಣ್ಣಂ ಚಬ್ಬಯ್ಯಂ ಕಲ್ಲಂ ನಿಱಿಸಿದಂ (ಎಕ. VIII, ಸೊರಬ. ೩೮೬-೭ ; 1004). [ಚಬ್ಬ$_0$+ಅಯ್ಯ$_1$]

**ಚಬ್ಬಿಜೋಯಿ** (ನಾ). ಒಂದು ಪ್ರದೇಶದ ಹೆಸರು : ರಾಜಾದಿತ್ಯರಸರ್ ಕೋಸವಳಂ ಸವಲಕ್ಷೇಯ ಭಾಗವುಮುಮಂ ಚಬ್ಬಿಜೋಯಿ ಯೆಪ್ಪತ್ತೊಂದು ಸಾಸಿರಮುಮಂ . . . ಪ್ರತಿಪಾಳಿಸುತ್ತುಂ (ಕಇಶಿ. ೨೨-೭-೨೪; 1083). [ ? ]

**ಚಬ್ಬಿಸೆಟ್ಟಿ** (ನಾ). ಒಬ್ಬಾತನ ಹೆಸರು: ಬಸವಸೆಟ್ಟಿಯ ಮಗಂ ಚಬ್ಬಿಸೆಟ್ಟಿ (ಎಕ. IX, ದೊಡ್ಡಬ. ೯-೮ ; 918). [ ಚಬ್ಬಿ$_0$ + ಸೆಟ್ಟಿ ]

**ಚಬ್ಬೆ** 'ಸಬ್ಬೆ' ನೋ.

**ಚಮ** (ನಾ). ಯಜ್ಞದಲ್ಲಿ ಸೋಮರಸವನ್ನು ಕುಡಿಯುವುದಕ್ಕಾಗಿ ಬಳಸುವ ಪಾತ್ರೆ,– ಪಾನಪಾತ್ರೆ : ದಶಚಮದಿ ಹದಿನಾಲ್ಕುಗ್ರಹಗಳು ಮುಸಲ ಶಮ್ಯವುಲೂಖಿಲಂಗಳು . . . ಅಗ್ನೀಧ್ರರಾ ದ್ವಾದಶಕರೊಪ್ಪಿದರು (ಕೌಶಿರಾ. ೧-೫೯). P ಯಾಗದಲ್ಲಿ ೧. ಹೋತೃವಿಗೆ 'ಮಂಡಲ,' ೨. ಬ್ರಹ್ಮನಿಗೆ 'ಚತುರಸ್ರಕ', ೩. ಉದ್ಗಾತೃವಿಗೆ 'ತ್ರ್ಯಸ್ರಿ', ೪. ಯಜಮಾನನಿಗೆ 'ಪೃಥು', ೫. ಪ್ರಶಾಸ್ತೃವಿಗೆ 'ಅವತಷ್ಟ', ೬. ಬ್ರಹ್ಮಶಂಸಿಗೆ 'ಉತ್ತ್ರೋಷ್ಟ', ೭. ಪೋತೃವಿಗೆ 'ವಿಶಾಖಿ', ೮. ನೇಷ್ಟೃವಿಗೆ 'ದ್ವಿಗೃಹೀತಕ', ೯. ಅಚ್ಛಾವಾಕ್ಷನಿಗೆ 'ರಾಸ್ನಾವ', ೧೦. ಅಗ್ನೀಧ್ರನಿಗೆ 'ಮಯೂಖಿಕ' ಎಂಬ ಹತ್ತುಬಗೆಯ ಚಮಗಳು ಬೇರೆ ಬೇರೆ ಋತ್ವಿಜರಿಗೆ ವಿಧಾಯಕವಾಗಿವೆ. [ <ಸಂ. ಚಮಸ ]

**ಚಮಕ$_1$** (ನಾ). ಒಂದು ಅನುಕರಣ ಪದ : ದುಮುದುಮು ತತ್ತೊಂ ತತ್ತೊಂಗೆನುತಂ ಚಮಕಂ ತಕನಕ ತಕ ಎಂದೆನುತಂ (ತುಂಗಭ. ೨).

**ಚಮಕ$_2$** (ನಾ). ಒಂದು ವೇದಸೂಕ್ತದ ಹೆಸರು : ಚಮಕದಿಂದ ಖಿಲಾಧಿಪತ್ಯವ ನಮಕದಿಂದಖಿಲಾತ್ಮಭಾವವಮರಮನುಜಭುಜಂಗ ಮುಖದೊಳ್ಬಿತ್ತರಿಸುತಿರಲು (ವಿವೇಧ. ೧೨-೯೯). [ ಸಂ. ]

**ಚಮಕಾಯಿಸು** (ಕ್ರಿ). ೧. ಕೋರೈಸು; ಕುಕ್ಕು : ಅದನ್ನು ನೋಡಿದಂತೆಲ್ಲ ಕಣ್ಣು ಚಮಕಾಯಿಸಿ ಹೋಯಿತು (ಎಳಕ. ೫೯). ೨. = ಚಮಕಿಸು ೩ : ನನ್ನ ಕುದುರೆಯನ್ನು ಚಮಕಾಯಿಸುವುದರೊಳಗೆ ಭೀಮರಾಜನು ಮಾಯವಾಗಿ ಹೋಗಿದ್ದನು (ಶ್ರೀರಾಯ. ೨೦೬) ; ನಾಯಕನು . . . ಕುದುರೆಯನ್ನು ಚಮಕಾಯಿಸಿದನು (ಮಲ್ಲಿ. ೫೭). ೩. ನಡುಗಿಸು ; ಬೆದರಿಸು ; (*).

[ ಚಮಕಾ$_0$ (← P ಹಿಂ. ಚಮಕಾನಾ) + – ಇಸು$_3$.]

**ಚಮಕಿ** (ನಾ). ೧. ಬೇಗಡೆ; ಗುನ್ನಾಂಪಟ್ಟೆ. ೨. ಹೊಳೆಯುವ ವಸ್ತು,– ಪುಡಿ; ಕಿವಿಗಳೆರಡರಲ್ಲೂ ಮಿರುಗುವ ಚಮಕಿಯ ಕಾಗದದ ಓಲೆ (ಅಲಹೂ. ೯): ನಾವು ಚಮಕಿಯ ಅಂಗಿಯನ್ನು ತೊಟ್ಟು (ಅಲಿಮ. ೨೨): ಚಮಕಿಯ ಕುಂಕುಮದ ಬಾಸಿಂಗ . . . ಮೆರಗು ಕೊಡುತ್ತಿತ್ತು (ಅಲಹೂ. ೮೪). ೩. ಖಡ್ಗಯುದ್ಧದಲ್ಲಿ ಒಂದು ವರಸೆ ; ಮಿಂಚಿನ ವೇಗದ ಹೊಡೆತ: ಯಿಬ್ಬರು ಸಾಧಕರ ಕೈಗಳಲ್ಲಿ ಯಿದ್ದಂಥಾ ಬಂಡಿಕೋಲ್ಗಳ ವಳಗೆ ವಂದು ಬಂಡಿಕೋಲಿನ ಕೂಡಿ ಯಿದಿರಾಗಿ ಯಿದ್ದ ವೈರಿಯ ವಕ್ಷಸ್ಥಳದಲ್ಲಿ ದೃಢವಾಗಿ ಯಿದ್ದಂಥಾ ಏಟು ಯಾವದು ಅದು ಚಮಕಿಯೆಂದು ತಿಳಿಯಲ್ಪಡುವುದು (ಖಡ್ಗಟೀ. ೫-೫೯). [ ←ಹಿಂ. ಮರಾ. ಚಮಕೀ ]

**ಚಮಕಿತ** (ಗು). ೧. ಚಕಿತ; ವಿಸ್ಮಯಗೊಂಡ; ಬೆರಗಾದ. (ನಾ). ೨. ವಿಸ್ಮಿತನಾದವನು: ಒಡನೇ ಅವರು ಮಾಯವಾದದ್ದನ್ನು ಕಂಡ ಬ್ರಾಹ್ಮಣರೆಲ್ಲರೂ ಚಮಕಿತರಾದರು (ಪುರಾವಿ. ೧೦೪) ; ಭೂಪತಿಯು ಚಮಕಿತನಾಗಿ ನಿಂತು ಚಾರುನ ಮುಖದ ಕಡೆಗೆ ನೋಡುತ್ತಾ ನಿಂತುಕೊಂಡನು (ಇಪ್ಪಕ. ೨೯೪); ದರವಾನನು ತೂಕಡಿಸುತ್ತ ತೂಕಡಿಸುತ್ತ ಹಠಾತ್ತಾಗಿ ಒಂದು ಸಲ ಚಮಕಿತನಾಗಿ ಎಚ್ಚರಗೊಂಡರೆ (ನಿಬಂಧ. II, ೩೭೭).

[<ಸಂ. ಚಮತ್ಕೃತ ]

**ಚಮಕಿಬಟ್ಟು** (ನಾ). "ಉಡುಪು, ಮೊ. ಗಳಿಗೆ ಸೇರಿಸಿ ಹೊಲಿಯುವ ನಾಣ್ಯದಾಕಾರದ, ಬೆಳ್ಳಿ, ಮೊ. ಗಳ ಅಲಂಕಾರದ ಬಟ್ಟು" (Sequin. ೩೦೫೨). [ ಚಮಕಿ + ಬಟ್ಟು$_1$ (<ಬಟ್ಟ$_1$) ]

**ಚಮಕಿಸು** (ಕ್ರಿ). ೧. ಲಕಲಕಿಸು; ಥಳಥಳಿಸು: ಕೆಂಪು ಬೆರೆತ ಜರಿಯ ದಡಿ ಹೆಚ್ಚು ಝಗಝಗಿಸಿ ಚಮಕಿಸುತ್ತದೆ (ಚಂದುಟ. ೬೦); ನಗುವಾಗ್ಗೆ ಆಕೆಯ ತುಟಿಗಳೆರಡೂ ತೆರೆದು ಚಮಕಿಸಿದವು (ಚಂದುಟ. ೮೮). ೨. ಜಳಪಿಸು ; ಹೊಳೆಯಿಸು : (*). ೩. ಚಾಟಿಯಿಂದ ಬಡಿದು ಚುರುಕುಗೊಳಿಸು: ಕುದುರೆಗಳನ್ನು ಚಮಕಿಸುತ್ತಿದ್ದಾರೆ (ಆರ್ಯಕ. ೦೨೪).

[ ಚಮಕು + – ಇಸು$_3$ ]

**ಚಮಕು** (ನಾ). ೧. ಥಳಕು ; ಥಳಥಳಿಸುವಿಕೆ : ಚಿತ್ರದ ಎಚ್ಚರವು ಅವರಿಗೆ ಸೊನ್ನೆ ; ಅವರಿಗೆ ಚಮಕು ಬೇಕು (ನಿಬಂಧ. II, ೨೦೮). ೨. ಹೊಳಪು : ಚನ್ನಬಸವಾಂಕನ ಬರವಣಿಗೆಯಲ್ಲಿ ಚದುರಿನ ಚಮಕಿಲ್ಲ (ಕಸಾಚ. ೩೩೦). ೩. ಚುರುಕು ; ಚೊಟಿ : ಹವಾದೊಳಗ ಹಾರಾಡಿದರ ಚಮಕ ಹತ್ತಲಿಕ್ಕೆ ಬೇಕು. ಚಮಕ ಇಲ್ದ ಗಾಳಿ ಎಲ್ಲೈತಿ (ರಕ್ತ್ರ. ೩೨೭).

[←ಹಿಂ. ಮರಾ. ಚಮಕ್ ]

**ಚಮಗಾರ, ಸಮಗಾರ, ಸಮ್ಮಗಾರ, ಸಮ್ಮಗಾಱ** (ನಾ). ಚರ್ಮದ ಕೆಲಸ ಮಾಡುವವನು ; ಮೋಚಿ : ಹಾದಿಯಲ್ಲಿ ಹೋಗುವ ಚಮಗಾರನನ್ನು ಮುಟ್ಟಿ ಹಾಗೇ ಮನೆ ಒಳಕ್ಕೆ ಹೊಕ್ಕು ಈತ ತಾಯಿಯನ್ನು ಮುಟ್ಟುವನು (ಗೌರಾಂಗ. ೧೦) ; ಚೆಂದವಾದ ಚಪ್ಪಲಿಗಳನ್ನು ಮಾಡಿ . . . ಕೊಳ್ಳಲು ಒತ್ತಾಯ ಮಾಡುವ ಚಮಗಾರನನ್ನು ನೀವು ನೋಡಿರಬಹುದು (ಮಾವಾದ. ೦೦೮). **ಸಮಗಾರ** : "ಸಮಗಾರ–ಚರ್ಮಕಾರ" (ಗಂಗಾಮ. ೩೨೦) ; ಚರ್ಮದ ಮೇಲೆ ಆಸಕ್ತನಾಗುವವನು ಸಮಗಾರನೇ ಸರಿ ಎಂದು ಅಷ್ಟಾವಕ್ರ ಮಹರ್ಷಿಗಳೆನ್ನುವರು (ಬ್ರಹ್ಮಜೀ. ೧೯೦); ಹಲವು ಸಮಗಾರರು ಕೂಡಿ ತೊಗಲೆಲ್ಲಾ ಹದ ಕೆಡಿಸಿದರು (ಗಾದೆ). **ಸಮ್ಮಗಾರ**: ಬ್ರಹ್ಮವನರಿದಲ್ಲಿ ಬ್ರಾಹ್ಮಣ ಸರ್ವ ಜೀವ ಹತಕರ್ಮಕ್ಕೊಳಗಾದಲ್ಲಿ ಸಮ್ಮಗಾರ (ಕಣ್ಣುಮು. ೧೦). **ಸಮ್ಮಗಾಱ**: "ಚರ್ಮಕಾರ" (ನಾಚಿರಾ. *); "ಚರ್ಮಕೃತ್ಯಂ ಪಾದುಕಾಕಾರನೆಂದೆನಲು ಸಮ್ಮಗಾಱಂ" (ಮಂಗರಾ. ೦೧೨-೬); ಶ್ರೀಮಹಾಚಾತುರ್ವ್ವಿದ್ಯ ಸಮುದಯಮುಬ್ಬಾರ್ಪಿನ್ವರುಂ ಈ ಊರ ಸಮ್ಮಗಾಱರಾ ಕವಱಿತ್ತಿಯಾನ್ನಿಟ್ಟಾರ್ (ಕಇ. I, ೮-೩; ಸು. ೮ನೆಯ ಶತ); ಚಕಾರಕ್ಕೆ ಸಕಾರಂ-ಕ್ರಕಚ–ಕರಗಸ; ಚರ್ಮಕಾರ–ಸಮ್ಮಗಾಱ (ಶಮದ. ೨೬೩ ಪ್ರಯೋ) ; ಹುಸಿ ಮೊಳೆತುದಂತ್ಮಜೆಯಲಾ ಹುಸಿಯೆಸೆದುದುಂಕುರ ಸಮ್ಮಗಾಱನಲಿ (ಕೌಶಿರಾ. ೧೦-೩೦) ; ದೂಸಿಗರ ಪೂವಡಿಗರ ಸಮ್ಮಗಾಱರ . . . ನಾಡಿಗರೊಂದು ಜಂಗುಳಿ (ರಾಮಾಶ್ವ. ೭೮-೧೪). P. ಸಂಸ್ಕೃತದ 'ಚರ್ಮಕಾರ' ಎಂಬ ಪದದಿಂದ 'ಚಮ್ಮಗಾರ' ಎನ್ನುವುದು ಸ್ವಾಭಾವಿಕವಾದ ತದ್ಭವ. 'ಚಮಗಾರ' ಎನ್ನುವುದು ಅದರ ಮುಂದಿನ ರೂಪ. ಸಕಾರದಿಂದ ಮೊದಲಾಗುವ ಮತ್ತು ಶಕಟರೇಫದಿಂದ ಕೊನೆಗಾಣುವ 'ಸಮ್ಮಗಾಱ'ವು ಕವಿಗಳು ಪ್ರಾಚೀನವೆಂದು ರೂಪಿಸಿಕೊಂಡ ಸ್ವರೂಪಗಳಿರಬಹುದು. [<ಸಂ. ಚರ್ಮಕಾರ ]

**ಚಮಚ, ಚಮಚೆ** (ನಾ). ಚಿಕ್ಕ ಸವುಟಿನಾಕಾರದ ಸಾಧನ : ಖಾರವನ್ನಾದರೂ ತಿನ್ನೋಣವೆಂದರೆ ಅದೂ ಅಷ್ಟೇ. ಉಳಿದಿದೆ–ಒಂದು ಚಮಚ, ಎರಡು ಚಮಚ (ಆಗಸ್ಟ್. ೬) ; ಚಾಕು ಚಮಚಗಳ ಉಪಯೋಗ ಗೊತ್ತೇ ಇಲ್ಲ (ಪ್ರವಾಇ. II, ೧೮೦). **ಚಮಚೆ** : ತಮ್ಮನ ತಟ್ಟೆಗೆ ಒಂದು ಚಮಚೆ ತುಪ್ಪ ಹೆಚ್ಚು ಬಿತ್ತು (ಚಂದುಟ. ೧೧) ; ಚಮಚೆಯಿಂದ ಹಾಲನ್ನು ಕುಡಿಸುತ್ತಿದ್ದೆ (ಜನಜೀ. ೧೦೩) ; ನನಗೆ ನಿನ್ನ ಚುನಾವಣೆ ಗೀತೆಯನ್ನು ಚಮಚಿಯಿಂದ ಕುಡಿಸು (ಹನ್ನೊಂದ. ೩೫).

[←ಪಾರ. ಚಮ್ಚ, ಚುಮ್ಚ ; ಹಿಂ. ಮರಾ. ಚಮಚಾ./ಸಂ. ಚಮಸ ]

**ಚಮಚಿ** 'ಚಮಚ' ನೋ.

**ಚಮಟ$_1$** (ನಾ). ಹೆಚ್ಚು ಬೆವರುವ ಒಂದು ಬಗೆಯ ರೋಗ (?) : ಈ ಗುಳಿಗೆಯಂ ಗರುಗದ ರಸದಲ್ಲಿ ಕೊಡಲು ಚಮಟ ಮಾಣ್ಗುಂ (ವಿವೈವಿ. ೩೩) [←ತೆಲು. ಚೆಮಟ, ಚೆಮ್ಮಟ]

**ಚಮಟ$_2$** 'ಚಮಡ' ನೋ.

**ಚಮಡ**, ಚಮಟ$_2$, ಚಮ್ಮಡ (ನಾ). ತೊಗಲು; ಚರ್ಮ: ಅದರ ಚಮಡ ಸುಲೀದೆ ಬಿಡ್ಬಾರ್ದು (ಕಾನೂರು. ೨೭೭); ಕಂಭಕ್ಕೆ ಕಟ್ಟಿ ಚಮಡ ಸುಲೀತೇನೆ (ಅಗಸ್ತ್ಯ. ೯೨) ; ಅವಳಿಗೆ ಈ ದಿನ ಚಮಡ ಸುಲೀದಿದ್ದರೆ ನನ್ನ ಹೆಸರು ಬೇರೆ ಕರೀಬೇಕು (ಮಗಮಾಂ. ೩೭). **ಚಮಟ$_2$** : ಲೇ, ಸುಳ್ಳ ಹೇಳಿದರ ಒಬ್ಬೊಬ್ಬರ ಚಮಟಾ ಬಿಳಗೇನು (ಗ್ರಾಮಾಯ. ೫೭). **ಚಮ್ಮಡ** : ಚಮ್ಮಡ ಸುಲಿದು, ಚಪ್ಪಲಿಗೆ ಉಂಗುರ ಹೊಲಿಸಿಬಿಡುತ್ತೇನೆಯೋ (ನಡದಾ. I, ೫೦೭). [←ಹಿಂ. ಚಮಡಾ, ಚಮಡೀ; ಮರಾ. ಚಮಡೀ]

**ಚಮತು** (ನಾ). ಚಮತ್ಕಾರ; ಚಾತುರ್ಯ: ಈ ಹೊಸ ಸರ್ವಜ್ಞ . . . ಯಾವ ಸ್ವಂತ (ಚಮತು)ಮಾಡಲಿರುವನೆಂಬುದು ಅವರಿಗೆ ಗೋಚರಿಸಲಿಲ್ಲ (ಕನಕ. ೨೫). [<ಸಂ. ಚಮತ್ ?]

**ಚಮತುಕಾರತ್ವ** (ನಾ). = ಚಮತ್ಕಾರ ೨: ಚಮತುಕಾರತ್ವದಿಂ ಬಾಡಬಂ ನಲಿವಂತೆ ಸುಮತಿ ತತ್ಪರಶುವಂ ಬೀಸಿಡಲ್ ಸಾರಥಿಯ ಕಂಠವಂ ಕಡಿದೊಯ್ದುದು (ಪರಶು. ೩೦-೩೭). [<ಸಂ. ಚಮತ್ಕಾರತ್ವ]

**ಚಮತುಕೃತಿ** (ನಾ). = ಚಮತ್ಕಾರ ೨ : ಅಮರಪುರಪಾಲನದ ಲೀಲಾ ಚಮತುಕೃತಿಗಿನ್ನೇನನೆಂಬೆನು (ನಿಭಾಗ. ೮-೨೦-೦೭). [<ಸಂ. ಚಮತ್ಕೃತಿ]

**ಚಮತ್ಕರಿಸು** (ಕ್ರಿ). ೧. ಸೋಜಿಗವನ್ನು ಉಂಟುಮಾಡು ; ಆಶ್ಚರ್ಯಗೊಳಿಸು : ಸುಖಿಂ ಸುಳಿದಾಡೆ ಲೀಲೆ ಮೋಹರಿಸೆ ಗಳಂ ಚಮತ್ಕರಿಸೆ ಗದ್ಗದಮಾಂತಿರೆ (ಗಿರಿಕ. ೩-೨೮) ; ತಳಹತ್ತಂ ದಣುವಟ್ಟೆ . . . ಬಾಹುತಳಂ ಚಮತ್ಕರಿಸೆ ನಾನಾಕೌಶಲಂದೋರಿದರ್ (ಶಬಶಂ. ೪-೭೫). ೨. ಅತಿಶಯಿಸು : ಚೆಲ್ವಂ ಚಮತ್ಕರಿಸುವಂತೆ ಸಾಹಿತ್ಯಮಂ ಸಯ್ತಿಡುವಂತೆ ಪ್ರಾಣಮಂ ಪರಿರಕ್ಷಿಪಂತೆ . . . ಪಾರ್ವತಿಯಂ ಸಲಹುತ್ತುಮಿರೆಯಿರೆ (ಗಿರಿಕ. ೩-೦೧೯ ವ). [ಚಮತ್ಕರಣ$_0$ + – ಇಸು$_3$]

**ಚಮತ್ಕಾರ** (ನಾ). ೧. ಸೋಜಿಗ; ಆಶ್ಚರ್ಯ; ವಿಸ್ಮಯ. ೨. ಚಾತುರ್ಯ ; ಕೌಶಲ : ನಯಾನೀಕ ಪ್ರಯುಕ್ತ ಮಹಾಮಂತ್ರ ನಿಚಯ ಚಮತ್ಕಾರಮತಿವಿವೇಕ ಬುದ್ಧ್ಯಾಜೀವಿ (ಎಇ. XIII, ೩೩೦-೨೦ ; 929) ; ವರಪ್ರಸಾದಮ್ಮೂಱು[ರಾ]ಯಾಸ್ಥಾನ ಚಮತ್ಕಾರಬಗೆಕಾಱ (ಬೊಂಕಶಾ. ೦೯೩೭, ಸಿಂದಗಿ. ೦೦-೮ ; 973) ; ಬಲಾತ್ಕಾರವಿದ್ದರೂ ಚಮತ್ಕಾರವಿರಬೇಕು (ಗಾದೆ). ೩. ಶೀಘ್ರತೆ ; ತ್ವರಿತತೆ ; ಬೇಗ : (ಶ). ೪. [ಕಾವ್ಯಮಿ] ಆನಂದ : ಆಹ್ಲಾದವಿಶೇಷಕ್ಕೆ "ಚಮತ್ಕಾರ"ವೆಂಬ ಹೆಸರೂ ಉಂಟು (ಭಾರಮಿ. ೧೫೫). [ಸಂ.]

**ಚಮತ್ಕಾರಿ** (ಗು). ೧. ಸೋಜಿಗವನ್ನುಂಟುಮಾಡುವ ; ಆಶ್ಚರ್ಯಕರವಾದ. ೨. ಅಸಾಧಾರಣವಾದ ; ಅಸಾಮಾನ್ಯವಾದ. (ನಾ). ೩. ಚತುರನಾದ ವ್ಯಕ್ತಿ ; ಚಮತ್ಕಾರ ಮಾಡುವವನು : (ಶ). [ಸಂ. ಚಮತ್ಕಾರಿನ್]

**ಚಮತ್ಕಾರಿತ** (ಗು). ಚಕಿತಗೊಳಿಸಿದ ; ವಿಸ್ಮಯವನ್ನುಂಟುಮಾಡಿದ ; ಆಶ್ಚರ್ಯಗೊಳಿಸಿದ : ನಿಖಿಳಜಗದಾಶ್ಚರ್ಯ ಶೌರ್ಯರಸ ಬಹುಲ ಬಾಲಕ್ರೀಡಾ ಚಮತ್ಕಾರಿತ ವೀರಚಕ್ರನುಂ (ಆದಿಪು. ೮-೪೨ ವ). [ಸಂ.]

**ಚಮತ್ಕೃತ** (ಗು). ೧. ಚಕಿತ; ವಿಸ್ಮಿತ. (ನಾ). ೨. ವಿಸ್ಮಿತನಾದವನು; ವಿಸ್ಮಯಂಗೊಂಡವನಂ : ಅವನಂ ಚಮತ್ಕೃತನಾಗಿ ಅಲ್ಲಿಯೇ ನಿಂತನು (ಕಪಾಕುಂ. ೨೩). [ಸಂ.]

**ಚಮತ್ಕೃತಿ** (ನಾ). ೧. ಸೋಜಿಗ ; ಆಶ್ಚರ್ಯ : ಮಿಂಚುವ ವಿಭೂಷಣಕೆ ಮುಸುಕಿಟ್ಟು ಸುಳಿವರ್ಗೆ ಹೊಂಚುವ ಚಮತ್ಕೃತಿಯನಳವಡಿಸಿ (ಜೈಮಿಭಾ. ೨೬-೦೦). ೨. ಕೌಶಲ ; ಚಾತುರ್ಯ : ಸತ್ಕೃತಿ . . . ಚಮತ್ಕೃತಿಯಂ ಪಡೆದು ಸೊಬಗುವಡೆದತ್ತೀಗಳ್ (ಕಾದಂಪೂ. ೫) ; ಈ ಕೃತಿ ಪುಣ್ಯಾಕೃತಿ ತಾಂ ಚಮತ್ಕೃತಿವಿಲಾಸಾವಾಸಂ(ಸುಕುಮಾ. ೧-೪೫); ಶ್ಯಾಮಕಂಧರನೀವನೀ ಕೃತಿಗತಿಚಮತ್ಕೃತಿಯ (ಬಸಪು. ೧-೫). ೩. ಆಹ್ಲಾದ ; ಆನಂದ : ಮತ್ಕೃತಿ ಚಮತ್ಕೃತಿಯಂ ಧರೆಗುಂಟುಮಾಡುಗುಂ (ಜಗವಿ. ೧-೦೩). [ಸಂ.]

**ಚಮನ್**, ಚಮಾನು, ಚಮಾಲು (ನಾ). ಹೂದೋಟ; ಪುಷ್ಪೋದ್ಯಾನ: ಕೈದಿ ಕಛೇರಿ ಮುಂದಿನ ಸಣ್ಣ ಚಮನ್‌ನಲ್ಲಿ ಬಹಳ ದಕ್ಷತೆಯಿಂದ ಹೂಗಿಡಗಳ ಪಾತಿ ಕಟ್ಟಿ . . . ಕೆಲಸ ಮಾಡುತ್ತಿದ್ದ (ಕಲಸಿ. ೪೦೯) ; ಮನೆಯ ಮುಂದೆ ಚಮನ್, ರೋಜಾ, ಡೇರಾ, ನಂದಿಬಟ್ಟಲು ಗಿಡಗಳ ಮಧ್ಯೆ ಪನ್ನೇರಿಳೆ ಹಣ್ಣಿನ ಮರ (ಹೊಸಕ್ಷಿ. ೦೨೩). **ಚಮಾನು** : ದಕ್ಷಿಣಾಮೂರ್ತಿ ದೇವಸ್ಥಾನಕ್ಕೆ ಚಮಾನು ಗುರಿಕಾರ ಕಪನ್ನಯ್ಯ ಹಿತ್ತಾಳಿ ಚೌಕಟ್ಟು ಗುಬ್ಬೀಕದ ಸಹ ಮಾಡಿಸಿ ಒಪ್ಪಿಸಿದ ನಿಲುವಿನ ಸೇವಾರ್ಥ (ಎಕ. XIV, ಚಾಮರಾ. ೨೩೭-೦ ; ?). **ಚಮಾಲು** : ಚಮಾಲನ್ನಂತು ನೋಡುವುದಕ್ಕೇ ಆಗದು, ಚೆನ್ನಾಗಿ ಹುಲ್ಲು ಕೂಡ ಬೆಳೆದಿಲ್ಲ (ಕಿಂಕಥ. ೦೯೪). [←ಪಾರ. ಹಿಂ. ಮರಾ. ಚಮನ್]

**ಚಮರ** (ನಾ). ೧. ಉದ್ದವಾದ ಕೂದಲು ಮತ್ತು ಗೊಂಡೆಬಾಲವುಳ್ಳ ಒಂದು ಬಗೆಯ ಮೃಗ. ೨. ಚಮರಮೃಗದ ಬಾಲದ ಕೂದಲಿಂದ ತಯಾರಿಸಿದ ಕುಂಚ,– ಚಾಮರ : "ಚಾಮರ ಚಮರಮುದಕ್ಕುಂ" (ಕವಿಕಂ.೨೭೭) ; ಇಕ್ಕೆಲದ ಚಮರ ಸೀಗುರಿಯಿಂದೆ ಮೆಱೆವುತಂ (ನಂಚಿರ. ೩-೭೫) ; ಕರಗ ಕಾಳಾಂಜಿ ಬಡಪ ಗಿಂಡಿ ಚಮರವ ಧರಿಸಿದೂಳಿಗದವರು (ಕಂನವಿ. ೦೨-೩೭). [ಸಂ.]

**ಚಮರಗಾರ್ತಿ** (ನಾ). ಚಾಮರ ಬೀಸುವವಳು ; ಚಾಮರ ಬೀಸುವ ಊಳಿಗದವಳು: ಕಸ್ತೂರಿ ಹಿಂಗದ ಚಮರಗಾರ್ತಿಯರು ಹೊಂಗದಳಿಯ ಕೋಮಲಪತ್ರವೀಜನದಂಗನೆ ಮೆಱೆದಳೊತ್ತಿನಲಿ (ಮೋಹತ. ೫-೩೯). [ಚಮರ + – ಕಾಱ + – ತಿ$_1$ (< – ಇತ್ತಿ)]

**ಚಮರಜ** (ನಾ). (ಚಮರೀಮೃಗದ ಕೂದಲಿನಿಂದ ಮಾಡಿದ) ಚಾಮರ: ಒರ್ವರ್ಳ್ ಕೊಡೆವಿಡಿವುದು ಮತ್ತೊರ್ವರ್ಳ್ ಚಮರಜಮ [ಪಾಠಾಂ. ಚಾಮರವ] ನಿಕ್ಕುತಿರ್ಪುದು (ಗದಾಯು. ೯-೩೦) ; ಚಮರಜಮನಿಕ್ಕೆ ಖಚರ ಪ್ರಮದಾಜನಂ (ಪಂರಾಮಾ. ೦೪-೦೨೮). [ಸಂ.]

**ಚಮರಧಾರಿಗ** (ನಾ). ಚಾಮರದ ಆಳು : ಹಡಪ ಬಾಹಿಯ ಚಮರ ಧಾರಿಗರ ದೊರೆಗಳುಳಿದರು ಬೆದಱಿ ರಥದಲಿ (ಕುವ್ಯಾಗ. ೧-೦೪). [ಚಮರಧಾರ$_0$ + – ಇಗ]

**ಚಮರರುಹ** (ನಾ).=ಚಮರಜ : ತಚ್ಚಮರರುಹ ಮಹಾಶೋಭೆ ಕೈಗಣ್ಮೆ (ಪಂಪಭಾ. ೪-೦೪) ; ಚಮರರುಹದ್ವಯಂ ಬೆಳಪ ಬೆಳ್ಗೊಡೆ ಪೂಮಟ ಭಾಪ್ರತಾನಮತ್ತಮುಮಣಿಪೀಠಮಿಂದ್ರಸಭೆಯೆಂಬಿವು ಘಾತಿ ಚತುಷ್ಕ ಘಾತದಿಂ ಸಮನಿಸೆ (ಶಾಂತಿಪು. ೪-೬೩) ; ಚಮರರುಹಾಗ್ರಮಂ ಪಿಡಿದು (ಕಾದಂಬ. ೯೮) ; ಇಕ್ಕುವ ಚಮರರುಹಂ ತನ್ನ ಕಣ್ಗೆ ಮಱೆಯಾದಪುದು (ಅಜಪು. ೫-೩೪) ; ದೇಸೆವೆತ್ತುವು ಕಮಳಭವಂಗಿಕ್ಕುವಮಳ ಚಮರರುಹಂಗಳ್ (ಜಗವಿ. ೧-೩೮). [ಸಂ.]

**ಚಮರಾಲವಟ್ಟ** (ನಾ). ಚಮರಮೃಗದ ಕೂದಲಿನಿಂದ ಮಾಡಿದ ಬೀಸಣಿಗೆ; ಚಾಮರ: ಆಳಿಯರ್ ಬೀಸುವ ಚಮರಾಲವಟ್ಟ ತಣ್ಗಾಳಿಯಿಂದವಳೊಡಲ್ಗಿಚ್ಚು . . . ಧಡಾಳಿಸಿತು (ಮೋಹತ. ೨೭-೬೨). [ಚಮರ + ಆಲವಟ್ಟ]

**ಚಮರಿ** (ನಾ). ೧. ಹೆಣ್ಣು ಚಮರಮೃಗ : "ಆ ರೋಮಿ ಗೋಕರ್ಣಮೆನಲು ಚ[ಪಾಠಾಂ. ಲ್ಬ]ಮರಿಯ ಮೃಗ[ಪಾಠಾಂ. ಚಮರಿಮೃಗ]ಮದು" (ಮಂಗರಾ. ೪೯-೧೧) ; ಮುಸುಂಗಳಿವು ಕಸ್ತೂರಿಯ ಮೃಗವಿವು ಚಮರಿಯಿವು . . . ಗಜಗಮನೆ ನೋಡು (ತೊರರಾ. ೩-೧-೩೦) ; ಉಡುಗುತ್ತಲ್ಲಿರ್ಪುದುದ್ಯಚ್ಚಮರಿ ರಜಮನಾ ತಾಣದೊಳ್ ಹಸ್ತಿ ಕೈನೀರಿಡುತಂ ಸಮ್ಮಾರ್ಜನಂಗೈವುದು (ರಾಜಶೇ. ೧-೦೨೬). ೨. ಚಮರಮೃಗದ ಬಾಲದ ಕೂದಲು: ಆನೆಗಳ ದಂತಂಗಳುಂ ಮುತ್ತುಗಳುಂ ಪುಲಿಯ ತೊವಲ್ಗಳುಮಂ ಚಮರಿಗಳುಮಂ ಕೊಂಡು ಬಂದು (ವಡ್ಡಾ.ರಾ. ೧೬೩-೦೫) ; ಚಮರಿಯನೆಯ್ದೆ ಕರ್ಬುನದ ಮುಟ್ಟುಗಳಂ ಪಿಡಿದಿರ್ದು ಮಾಜು ನೀಂ (ಜಟ್ಟಮ. ೬-೨೨). ೩. ಚೌರಿ; ಚಾಮರ: ಢಾಳಿಸುವ ಹಲವು ಚಮರಿಗಳ ಮಧ್ಯದೊಳೋಲಗಂಗೊಟ್ಟು ಕುಳ್ಳಿರ್ದ (ಹಚಕಾ. ೧೧-೩೭); ನನೆದವು ಬಾಹುರಕೆ ಹಕ್ಕರಿಕೆ ಹಲ್ಲಣ ಜೋಡು ಸೀಸಕ ಛತ್ರ ಚಮರಿಗಳು (ಕುಮ್ಯಾ.ದ್ರೋ. ೩-೪೦). ೪. ಒಂದು ಬಗೆಯ ಮೀನು : "ಚಮರೀ–ಚಮರೀಮೃಗ, ಮೀನಭೇದ" (ಓಷಧಿ. ೫೪). [ಸಂ. ಚಮರೀ]

**ಚಮರಿಕ** (ನಾ). ಒಂದು ಬಗೆಯ ಮರ; ಕೋವಿದಾರವೃಕ್ಷ. [ಸಂ.]

**ಚಮರಿಮೃಗ** (ನಾ).=ಚಮರೀಮೃಗ : "ಆ ರೋಮಿ ಗೋಕರ್ಣಮೆನಲು ಚಮರಿ ಮೃಗ[ಪಾಠಾಂ. ಚಮರಿಯಮೃಗ]ಮದು" (ಮಂಗರಾ. ೪೯-೧೧). [ಚಮರಿ + ಮೃಗ]

**ಚಮರೀಜ** (ನಾ). = ಚಮರಜ : ನಾನಾಚಮರೀಜವಾಯು ಸಭೆಯಂ ತಳ್ಪೊಯ್ಯಲಿರ್ದಾ ಜಗತ್ಪತಿಯೊಡ್ಡೋಲಗದೊಳ್ (ಜಗವಿ. ೧-೨೬). [ಸಂ.]

**ಚಮರೀಜಕಾಂತೆ** (ನಾ).ಚಾಮರ ಬೀಸುವ ದಾಸಿ: ಚಮರೀಜಕಾಂತೆಯರ್ ಸಿತಚಮರದ ವಿಕ್ಷೇಪದಿಂದಮೆಸೆದರ್ (ಕಾದಂಪೂ. ೪೭೩). [ಚಮರೀಜ + ಕಾಂತೆ]

**ಚಮರೀಮೃಗ** (ನಾ). = ಚಮರಿ ೧ : ಚಮರೀಮೃಗಶಿಶು ತಂದು ದುನಮಗಿದು ಸಾಫಲ್ಯಮಾಯ್ತು (ಕುಸುಮಾ. ೭-೮೭) ; ಬಳಿಕಲ್ಲಿ ಕಸ್ತೂರಿಮೃಗ ಚಮರೀಮೃಗ . . . ಪವಿತ್ರಮೃಗ ಜಾತಿಗಳುಂ (ವಿವೇಕ. ೨೦೨) ; ಉರಿಗಣ್ಣ ಚಮರೀಮೃಗಂ ಹೇರಣಲು ಚಿತ್ರಕ (ರುಕ್ಮಾಂಗ. ೧೧-೪). [ಸಂ.]

**ಚಮರೀರುಹ** (ನಾ).=ಚಮರಜ: ಮಿಳಿರ್ವನ್ನಂ ಚಮರೀರುಹಂ ಮಿಱುಗುವನ್ನಂ ಪಾಂಡರಚ್ಛತ್ರಮಂಡಳಂ (ಜಗವಿ. ೪-೯೯) ; ಜಿನಾಂಬಿಕೆಗಿಕ್ಕಿದರಮರಿಯರಮರೆ ಧವಳಚಮರೀರುಹವಮಂ (ಪುಷ್ಪಪು. ೯-೬೪). [ಸಂ.]

**ಚಮಸ** (ನಾ). ೧. ಯಾಗಾದಿಗಳಲ್ಲಿ ಸೋಮರಸವನ್ನು ಕುಡಿಯುವುದಕ್ಕಾಗಿ ಬಳಸುವ ಪಾತ್ರೆ,– ಪಾನಪಾತ್ರೆ: ಚಮಸ ದರ್ವೀ ಆಜ್ಯಸ್ಥಾಲೀ . . . ಪ್ರಮುಖಪಾತ್ರವಿಶೇಷಂಗಳು (ವಿವೇಕ. ೧೮೫) ; ವಿಹರಿಸುವ ದರ್ಭಾಸ್ತರಣದ ಚಮಸಾದಿಗಳ ಬಹುಸಾಧನಂಗಳಿಂ (ಜೈಮಿಭಾ. ೩೩-೩೮) ; ಸೋಮಲತೆಗಳನ್ನು ಕೊಂಡು ತಂದು ಚಮಸಗಳೆಂಬ ಪಾತ್ರೆಗಳಲ್ಲಿ ಸೋಮರಸವನ್ನು ಗ್ರಹಿಸಿ (ಶಿವದ. ೨೦೨-೧೪). 'ಚಮು' ಪರಾ. ೨. ಚಮಚ; ಸಣ್ಣ ಆಕಾರದ ಸವುಟು : ಪಾಯಸದ ಸವಿಯನಱಿಗುಮೆ ಚಮಸಂ (ನೀತಿಮಂ. I, ೩೦೪). ೩. ಅಕ್ಕಿಹಿಟ್ಟು, ಗೋಧಿಹಿಟ್ಟು ಮೊದಲಾದುವುಗಳಿಂದ ಮಾಡುವ ಒಂದು ಬಗೆಯ ಸಿಹಿತಿಂಡಿ,–ಮಿಠಾಯಿ. [ಸಂ.]

**ಚಮುಸಿ** (ನಾ). = ಚಮಸ ೧ : "ಚಮುಸಿ–ಸೋಮಪಾನಪಾತ್ರ" (ಸಿದ್ಧಾಂತಿ. ೩೮೭). [ಸಂ. ಚಮಸೀ]

**ಚಮಾನು** 'ಚಮನ್' ನೋ.

**ಚಮಾಲು** 'ಚಮನ್' ನೋ.

**ಚಮು** (ನಾ). ೧. ಪಡೆ; ಸೈನ್ಯ: "ಪೃತನಾನೀಕ ಧ್ವಜಿನೀ ಪತಾಕಿನೀ ಸೇನೆ ಬಳ ಚಮೂ ಚಕ್ರಾಖ್ಯಂ" (ವಸ್ತುಕೋ. ೮೩-೭); "ಪೃತನಾ, ಸೇನಾ . . . ಚಮೂಃ, ವರೂಥಿನೀ, ಅನೀಕಿನೀ, ಅನೀಕಂ–ಈ ೧೧ ಪಡೆ" (ಹಲಾಯು. ೭೫-೩೦೩). ೨. ೭೨೯ ಆನೆ, ೭೨೯ ರಥ, ೨೧೮೭ ಕುದುರೆ, ೩೬೪೫ ಕಾಲಾಳು–ಇವುಗಳನ್ನುಳ್ಳ ಒಂದು ಸೈನ್ಯದಳ: "ಪೃತನೆಯವು ಮೂಂದೆ ಮೂಱಾಗೆ ಚಮು" (ಮಂಗರಾ. ೮೬-೩೦). [ಸಂ. ಚಮೂ]

**ಚಮೂನಾಥ** (ನಾ). ಪಡೆವಳ; ದಂಡಾಧಿಪತಿ; ಸೇನಾನಿ : ಚಮೂನಾಥಚಕ್ರಾಧಿನಾಥಂಗೆ ಜಯಪ್ರಾರಂಭಗಚ್ಛಸ್ಫಟಿಕಕಳಶಮಂ ತೀವಿ (ಆದಿಪು ೧೨-೮) ; ಗಂಗರಾಜ ಚಮೂನಾಥನ ಜನನಿ (ಎಕ. II, ೧೧೮-೨೩ ; 1120). [ಸಂ. (ಚಮೂ + ನಾಥ)]

**ಚಮೂಪ** (ನಾ). = ಚಮೂನಾಥ : ಅರಮನೆಯೊಳೊಡನೆಯ ಚಮೂಪರೊಡಗೂಡಿ ಮಜ್ಜನ ಭೋಜನಂ ಮಾಡಿ ಪವಡಿಸಲು (ಹಚಕಾ. ೪-೫೩೩). [ಸಂ.]

**ಚಮೂಪತಿ** (ನಾ).=ಚಮೂನಾಥ : "ಚಮೂಪತಿಯನೀಕಸ್ಥನೆನೆ ದಂಡನಾಥನಕ್ಕು" (ಮಂಗರಾ. ೮೧-೮) ; ಸಿಂಧುರಾರಾತಿಯುಂ . . . ಚಮೂಪತಿ ಕಂಡಂ (ಆದಿಪು. ೧೭-೪೫) ; ಜನಪತಿ ಮೆಚ್ಚಿ ತನ್ನಯ ಚಮೂಪತಿ ಮಾಡಿದಂ (ಅಜಿಪು. ೦-೪೩). [ಸಂ. (ಚಮೂ + ಪತಿ)]

**ಚಮೂರ** (ನಾ). ಹುಲಿ ; ವ್ಯಾಘ್ರ : "ವ್ಯಾಘ್ರಂ ತರಕ್ಷು ಮೃಗರಿಪು. ಚಮೂರವೆನೆ ಶಾರ್ದೂಲಂ" (ವಸ್ತುಕೋ. ४೦-೧) ; "ಚಮೂರವೆನೆ ಹುಲಿ" (ಮಂಗರಾ. ೪೭-೭) ; ಹರಿಣ ಚಮೂರಂಗಳ್ ಶಾಂತರೂಪದಿಂದಿರ್ದುವಜಿತನಾಥನ ಕೆಲದೊಳ್ (ಅಜಿಪು. ೭-೬) ; ತೊಟ್ಟನೆ ಬೀೞೆ ಮೇಲೆ ಪುಲಿದೋಲ್ ನಿಜದೀವದ ಪುಲ್ಲೆ ಬೆರ್ಚಿ ಧೀಂಕಿಟ್ಟು ಚಮೂರವೆಂದು ಬಿಱುತೋಡೆ (ಪುಷ್ಪಪು. ೫-೧೧೧). [?]

**ಚಮೂರು** (ನಾ). ಒಂದು ಬಗೆಯ ಜಿಂಕೆ ; "ಶ್ರೇಷ್ಠವಾದ ಚರ್ಮವುಳ್ಳ ಜಿಂಕೆಯ ಭೇದಗಳು" (ಅಮರ. ಟೀಕೆ). [ಸಂ.]

**ಚಮೂವಲ್ಲಭ** (ನಾ).=ಚಮೂನಾಥ: ವಾಜಿಗಳಂ ವಿಳಾಸಿನಿಯರಂ ತನ್ನಂ ಚಮೂವಲ್ಲಭಾಭರಣಂ ಶ್ರೀಪತಿ (ಸೌಇಇ. XX, ೭೪-೯ ; 1112). [ಸಂ. (ಚಮೂ + ವಲ್ಲಭ)]

**ಚಮ್ಮ, ಚೆಮ್ಮ, ಸಮ್ಮ₁, ಸಮ್ಮ₂** (ನಾ). ಚರ್ಮ ; ತೊಗಲು : ತನುವೆಂಬ ಮನೆಗೆ ಅಸ್ಥಿಂಗಳು ಚಮ್ಮ[ಪಾಠಾಂ. ರ್ಮ]ದ ಹಂಜರ ನರದ ಭೀಮಗಟ್ಟು (ಆದವ. ೧೫-೩೩) ; ಮೆಱೆದಿದಿರಾಗಿ ತಾಗಿದ ಗಜಾಸುರನಂ ಪಿಡಿದೆತ್ತಿ ಚಮ್ಮಮಂ ಸಟಸಟಿಸಟನೆ ಸೀಳ್ದು ಬಿದಿರ್ಚಿಯಾಡುತ (ಎಕ. XVI, ಚಿಕ್ಕನಾ. ೭೦-೨೩ ; 1235). **ಚೆಮ್ಮ** : 'ಚೆಮ್ಮಾವುಗೆ' ಪರಾ. **ಸಮ್ಮ₁**: "ಸಮ್ಮ (ಸಮ, ಚಮ್ಮ)–ಚರ್ಮ(ನ್)=ತೊಗಲು" (ತದ್ಭಕೋ. ೪೩). 'ಸಮಗಾರ' ಪರಾ. **ಸಮ್ಮ₂**: "ನೆಱೆ ತೋಲ್ ತೊವಲುಂ ಸಮ್ಮ ಮದಿರದಕ್ಕುಂ ಚರ್ಮ" (ಕವಿಕಂ. ೮೫) ; "ಸಮ್ಮವೆನೆ ಚರ್ಮ" (ಕಶರ. ೧೧೩) ; ನುಣ್ಪುವಟ್ಟು ತೋಱೆ ಬಿಗಿದುಟ್ಟ ಪುಲಿದೊವಲೊಳಂ ತಕ್ಕಿನಿಂ ಮಿಕ್ಕು ಪೋದ್ದಾನೆರಕ್ಕಸನ ಸ[ಪಾಠಾ. ಚ]ಮ್ಮದ ಮೇಲ್ವೊದಿಕೆಯೊಳಂ ಚೆಲ್ವನಾಂತು (ಕಬ್ಬಿಕಾ. ೧೭೭) ; ಕಣ್ಣಪ್ಪನಡಿಗೆರ್ಪು ಭರದಿನೊರಸಲ್ಕಮವೆಡೆದು ಪೋದುದು (ಅರಾಜ. ೩-೨೮); ಮೆಯ್ಯ ಸಮ್ಮಂ ಸುಗಿದು (ಭಾವಚಂ. ೫-೭) ; ನಸುನಗುತ್ತೆರಳೆಯಂ ತಾಳ್ದು ಪುಲಿಯಂ ಸೀಳ್ದು ಪೊಸಸಮ್ಮವುಟ್ಟು ಫಣಿಗಳ ತೊಟ್ಟು ಕೈದುಗಳನೆಸಕದಿಂ ಧರಿಸಿ (ಚಬಪು. ೨೦-೩೦) ; ಶಿರಮಾಲೆಯಾಭರಣ ನಿರ್ಮಲ ದುಕೂಲಂ ಸಮ್ಮದಂಬರಂ ಕುಂಕುಮದ ತಿಲಕ ಪಣೆಗಣ್ ವಿರಾಜಿಸುವರ್ಧನಾರೀಶ ಸಿದ್ಧನಂಜೇಶ ಸಲಹಾ (ಗುರುಚಾ. ೧೧-೧) ; ಪೊಂಬುಲಿ ಸಮ್ಮಮಾನೆದಲೆಮುತ್ತು ಮೊಲಂಗಳ ಬಿಕ್ಕು . . . ಪೀಲಿಯೆಂಬಿವಂ ತುಂಬಿದ ಕಂಬಿಯುಂ ತಳೆದದೇಂ ತಳರ್ದತ್ತೊ ಪುಳಿಂದ ಸಂಕುಳಂ (ರಾಜಶೇ. ೫-೧೧೪); ಮೆತ್ತನೆಯಾದ ಸಮ್ಮದೆ ಮನೋಹರ ಮೆಂಡೆನಿಸಿರ್ದ ತೆಳ್ವಸಿರ್ ಬಿತ್ತರವಾಗಲ್ (ಹಾಲಾಸ್ಯ. ೧-೦೩-೨೬). 'ಸಮ್ಮವಾವುಗೆ' ಪರಾ. [<ಸಂ. ಚರ್ಮನ್]

**ಚಮ್ಮಖಿಳ್ಳ** (ನಾ). ಚರ್ಮದ ಮೇಲಿನ ಕಲೆ,– ಕೆಂಪುಚುಕ್ಕೆ : ತಲೆಗಾತ್ರ ಸ್ಫುರಣಂ ನರವುಲಿ ಕಾರೆಳ್ಳಟ್ಟಿ ಚ(ಂ)ಮ್ಮಖಿಳ್ಳೆಂದಿನಿತುಂ ಬಲದೊಳ್ ಪುರುಷಂಗೆಡದೊಳ್ ಲಲನೆಗೆ ಸಮನಿಸಿದೊಡಿಷ್ಟಫಲಮಂ ಕುಡುಗುಂ (ಲೋಕೋಪ. ೧೧-೬೪). [ಚಮ್ಮ + ಖಿಳ್ಳ$_0$ (←ಪ್ರಾ. ಖಿಲ್ಲ = ಗುಳ್ಳೆ)]

**ಚಮ್ಮಟ** (ನಾ). ಚರ್ಮದ ಹೊದಿಕೆಯುಳ್ಳ ಗುರಾಣಿ,– ಖೇಟಕ : ಬಹುಭಾರಣದ ಚಮ್ಮಟದ ಖಡುಗದ ಪಾರಗದ ಪರಿಣತರು ಹೆಣಗಿದರು (ಕುಮಾದ್ರೋ. ೧೪-೫). [ <ಸಂ. ಚರ್ಮಪಟ ]

**ಚಮ್ಮಟಿಕೆ$_1$, ಚಮ್ಮಟಿಗೆ$_1$, ಚಮ್ಮಟ್ಟಿಗೆ$_1$, ಚಮ್ಮಡಿಕೆ**(ನಾ). ಕಮ್ಮಾರನು ಬಳಸುವ ದೊಡ್ಡ ಸುತ್ತಿಗೆ : ಮಾಯೆಗಲುಗದ ಧೈರ್ಯವೆಂಬಡೆಯ ಮೇಲಿರಿಸಿ ನಿತ್ಯವೆಂದೆಂಬ ಚಮ್ಮಟಿಕೆ[ಪಾಠಾಂ. ಗೆ]ಯಿಂ ಪೊಡೆವುತಂ(ಇಜ್ಞರ. ದೇ. ೧೦೭-೨೧). **ಚಮ್ಮಟಿಗೆ$_1$ :** ಕಾಯ್ದ ಮೊಳೆಯು ಚಮ್ಮಟಿಗೆಗಳಿಂದೆ ಅಡಸಿ ಹೊಯ್ಕೆ (ಸಾನಂಚ. ೬-೧೦ ರಗಳೆ) ; ಅಸ್ತಿಗಳನು ಮುಱಿಯದೆ ಚಮ್ಮಟಿಗೆಯೊಳು ಕೊಱೆಯದೆ ಗರಗಸವಿಡಿದು ಕೈಕಾಲ್ಗಳ ಬಱಿದೇಕೆ ಕೊಂದೆನೊ ರಣದಿ (ವರ್ಧಚ. ೮-೧೨); ಕಲ್ಲುಗಳಿದ್ದರೆ . . . ಚಾನಗಳಿಂದಾಗಲಿ ಚಮ್ಮಟಿಗೆಯಂಥ ದೊಡ್ಡ ಸುತ್ತಿಗೆಯಿಂದಾಗಲಿ ಒಡೆದು ತಂದು ಹೊಲದ ಮೇರೆಗೆ ಹಾಕಬೇಕು (ಕೃಷಿಪ್ರ. ೪೧). **ಚಮ್ಮಟ್ಟಿಗೆ$_1$ :** (೬). **ಚಮ್ಮಡಿಕೆ :** ಚಮ್ಮಡಿಕೆ ಮೊದಲಾದುವಱಿಂ ಬಡಿವ (ಶಾಸ್ತ್ರಟೀ. ೬೧-೨).

[ ದೇ.॥ ತಮಿ. ಚಮ್ಮಟ್ಟಿ; ತುಳು. ಚಮಟಿಗೆ; ತೆಲು. ಸಮ್ಮೆಟ ]

**ಚಮ್ಮಟಿಕೆ$_2$** ‘ಚಮ್ಮವಟ್ಟಿಗೆ’ ನೋ.

**ಚಮ್ಮಟಿಗೆ$_1$** ‘ಚಮ್ಮಟಿಕೆ$_1$’ ನೋ.

**ಚಮ್ಮಟಿಗೆ$_2$** ‘ಚಮ್ಮವಟ್ಟಿಗೆ’ ನೋ.

**ಚಮ್ಮಟ್ಟಿಗೆ$_1$** ‘ಚಮ್ಮಟಿಕೆ$_1$’ ನೋ.

**ಚಮ್ಮಟ್ಟಿಗೆ$_2$** ‘ಚಮ್ಮವಟ್ಟಿಗೆ’ ನೋ.

**ಚಮ್ಮಡ** ‘ಚವಡ’ ನೋ.

**ಚಮ್ಮಡಿಕೆ** ‘ಚಮ್ಮಟಿಕೆ$_1$’ ನೋ.

**ಚಮ್ಮಡೆಗದ್ದೆ** (ನಾ). ಕೆಂಪುಮಣ್ಣಿನ ಗದ್ದೆ (?): ಶೇರಿದ ಚಂಮಡೆಗದ್ದೆ ತೆವರ ಯುಸಗಮೆಳೆ (ಎಕ. III, ತಿರುಮ. ೬೩-೫೦೩ ; 1744).

[ ಚಮ್ಮಡೆ$_0$ + ಗದ್ದೆ (<ಗಱ್ಪೆ) ]

**ಚಮ್ಮಣಿವಟ್ಟು** ‘ಚೆಮ್ಮಣಿವಟ್ಟು’ ನೋ.

**ಚಮ್ಮರ** ‘ಚಮ್ಮಾರ’ ನೋ,

**ಚಮ್ಮರಿಗೆ** (ನಾ). ಚಾಟಿ ; ಬಾರುಕೋಲು ; ಕೋರಡೆ: ಅಱುವತ್ತಾಱು ಮಂಡಳಿಕರ ಬೆಂನ ಚಂಮರಿಗೆ ಹೊಳೆಕಲ್ಲ ಬೆಣೆಯನಾಯ್ಕನ ಮಗ ಕಂಬೆಯ ನಾಯ್ಕ (ಎಕ. XVI, ತಿಪಟೂ. ೧೬೦-೧೧ ; 1277).

[ <ಚಮ್ಮಟಿಗೆ? ]

**ಚಮ್ಮವಟ್ಟಿಗೆ, ಚಮ್ಮಟಿಕೆ$_2$, ಚಮ್ಮಟಿಗೆ$_2$, ಚಮ್ಮಟ್ಟಿಗೆ$_2$, ಸಮಟಿಗೆ, ಸಮ್ಮಟಿಗೆ** (ನಾ). ಬಾರುಕೋಲು ; ಚಾವಟಿ : ತತ್ತುರಂಗವನು ತೆಗೆದಂಗಣಕೆ ಹಲ್ಲಣಿಸಿ ಹತ್ತಿ ಹೊಯ್ದಾ ಚಮ್ಮವಟ್ಟಿಗೆಯ ಹುಯ್ಲಿಗೆ ಕಱುತ್ತು ನಭಕುಪ್ಪರಿಸೆ ಜಗುಳ್ದಧೋಗತಿಗೆ ಬೀಳ್ವಂದದಿಂ ಬಿಳ್ದನವನು (ಸಮ್ಯಕೌ. ೧೧-೬೦). **ಚಮ್ಮಟಿಕೆ$_2$ :** ಬಿರುದರ ಬೆನ್ನ ಚಮ್ಮಟಿಕೆ ಗಂಡರ ದಾವಣಿ ವೀರಘಂಟೆಯುಪ್ಪರಗುಡಿ ಬಿಲ್ಲ ಜೇವಣಿಕೆ ಕಣ್ಣಲೆ ಕಾಸದೆಯಂಬ ಡೊಂಬಿನಾಳ್ ಧುರಧರೆಯೊಳ್ ಸಹಸ್ರಮಿದಿರಾದಡಮಂತಕನೆಮ್ಮವೋರಿ ಯಂತಿರೆ ಕಡೆವೊಯ್ವನಲ್ಲದಡೆ ಮಾಡುವೆನಗ್ನಿಮುಖ ಪ್ರವೇಶಮಂ (ಮಹಾನೇ. ೧೧-೧೩೬) ; ಚಮ್ಮಟಿಕೆಯಂ ಪಿಡಿದು ರಥವನು ತಿರುಗಿಸುತ ಲಂದು (ರಾವದಿ. ೫೯); ಎತ್ತಿ ಚಮ್ಮಟಿಕೆಯನ್ನು ಚಪ್ಪರಿಸುತ್ತ ವಾಜಿಗಳನ್ನು ಗರಗರಸುತ್ತ (ಮುಲ್ಲಾಶಾ. ೫-೩೦). **ಚಮ್ಮಟಿಗೆ$_2$ :** “ ಚರ್ಮದಂಡಃ, ಕಶಾ – ಈ ೨ ಚಮ್ಮಟಿಗೆ ” (ಹಲಾಯು. ೭೩-೨೮೮) : “ ಕಶೆ ಚರ್ಮದಂಡಮೆನೆ ಚಮ್ಮಟಿಗೆಯೆನಿಸಿಕ್ಕು ” (ಮಂಗರಾ. ೮೧-೧೩) ; ಅನ್ನೆಗಂ ನಕುಳನುಮಂಕ ವಣೆಯುಂ ಬಾಳುಂ ಬಾರುಂ ಚಮ್ಮಟಿಗೆಯುಮನೆರ್ವ ಕೀಲಾಳಿಂ ಪಿಡಿಯಿಸಿಕೊಂಡು ಬಂದು (ಪಂಪಭಾ. ೮-೫೪ ವ); ಬಟಲೆಡ್ಡವಲೊಳ್ ಚಮ್ಮಟಿಗೆಗುತ್ತುಗಳುಮಂ . . . ಮೆಯ್ಯೊಳ್ತೊವಲ್ತೊರಜೆಗಳ ಕಟ್ಟಿಂ ಪುಟ್ಟಿದ ಬೇನೆಯುಮನೆಂತು ಸೈರಿಸಿದೆ (ಕಾದಂಬ. ೭೩೦); ಕಟ್ಟಿ ಚಮ್ಮಟಿಗೆ ಮುಟ್ಟಿದವೋಲ್ ನಸುಬೆರ್ಚೆ (ಕಾವ್ಯಾವ. ೮೨೩) ; ವೀರಘಂಟೆಯ ಹೊನ್ನ ಗುಬ್ಬಿಯ ರನ್ನವಟ್ಟಿಯ ಬೆನ್ನ ಚಮ್ಮಟಿಗೆಯ ಬಿಳಿಯ ಚವರದ . . . ತಟ್ಟನೊಟ್ಟಜೆಯ ಕಟ್ಟುಬ್ಬಟೆಯ ಬಿರುದಿನ ಹರಿಗೆಕಾಱರ ಪರಿವೀಥಿಯೊಳಂ (ಗಿರಿಕ. ೬-೫೫ ವ) : ಮಡದತಾಂಕಿ ಚಮ್ಮಟಿಗೆಯಂ ತೆಗೆದೊತ್ತಿದ ಮುನ್ನಮಾ ಹಯಂ ಮಿಡಿದವೊಲಾರ್ಪಿನಿಂ ನೆಗೆದು ಪಶ್ಚಿಮದಿಕ್ಕಿಗೆ ಪಾಯ್ದು (ಪುಣ್ಯಾಸ್ರ. ೦೦-೩೦) ; ತುರಗವನು ಬೋಳಯಿಸಿ ವಾಘೆಯ ತಿರುಹಿ ಚಮ್ಮಟಿಗೆಯಲಿ ತೇಜಿಯ ಬರಿಯ ಬೆದಱಿಸಿ ಕೃಷ್ಣ ಪಾರ್ಥನ ರಥವ ಲುಳಿವಡೆದ (ಕುಮಾಭೀ. ೩-೨); ಎಸೆವ ಮಿಳಿ ಸರ್ಪಮುಪನಿಷದಾಳಿ ಹಯ ರಜ್ಜು ಮಿಸುಪ ಚಮ್ಮಟಿಗೆಯೋಂಕಾರಂ (ಚಬಪು. ೪೮-೪೨) ; ಈ ಚಮ್ಮಟಿಗೆ ಸುಲಿದು, ಬೆನ್ ಪಸುರ್ಗಟ್ಟಿ (ಅಶ್ವಶಾ. ೬-೯೫) ; ತನ್ನ ಕೋಣೆಯಲ್ಲಿ ಕುಳಿತು ತನ್ನ ಕಲ್ಪನಾವಿಲಾಸಕ್ಕೆ ಚಮ್ಮಟಿಗೆಯನ್ನು ಬೀಸಿ ಎತ್ತೆತ್ತೋ ಹರಿಬಿಡುವನು (ಜಯಂತ. ೬೯). **ಚಮ್ಮಟ್ಟಿಗೆ$_2$ :** “ ಚರ್ಮಪಟ್ಟಿಕಾ–ಚಮ್ಮಟ್ಟಿಗೆ, ಸಮಟಿಗೆಯೆನಲುಮಕ್ಕುಂ”(ಶಮದ. ೨೯೪ ಪ್ರಯೋ); “ಚಮ್ಮಟಿಗೆ – ಚಮ್ಮಟ್ಟಿಗೆ ” (ಶಬ್ದಾನು. ೩೭೮ ಪ್ರಯೋ). **ಸಮಟಿಗೆ :** “ಚರ್ಮಪಟ್ಟಿಕಾ–ಚಮ್ಮಟ್ಟಿಗೆ, ಸಮಟಿಗೆಯೆನಲುಮಕ್ಕುಂ” (ಶಮದ. ೨೯೪ ಪ್ರಯೋ) ; “ ಸಮಟಿಗೆ, ಚಮ್ಮಟಿಗೆ–ಚರ್ಮಪಟ್ಟಿಕಾ ” (ತದ್ಭಕೋ. ೪೩). **ಸಮ್ಮಟಿಗೆ :** ರಾಹುವ ಕೇತುವ ಬಲಿದಿಕ್ಕುಳಿನಿಂ ತೆಗೆದಂಥಾಸುರ ನೆರ್ದೆಗಲ್ಲೊಳ್ ವಜ್ರದ ಸಮ್ಮಟಿಗೆಯ ನಿಗುಚಿ ಕುಳಿಕನ ವಿಷದಿಂ ನೀರೂಡಿಸಿ (ವೀರೇಚ. ೨-೯). [ <ಸಂ. ಚರ್ಮಪಟ್ಟಿಕಾ ]

**ಚಮ್ಮವಾವುಗೆ, ಚಮ್ಮಾವುಗೆ, ಚೆಮ್ಮಾವುಗೆ, ಸಮ್ಮವಾವುಗೆ, ಸಮ್ಮಾವುಗೆ** (ನಾ). ಚರ್ಮದ ಪಾದುಕೆ,– ಪಾದರಕ್ಷೆ: ಸೊಸೆವಿರ್ಗೆಲ್ಲಂ ಸಲೆ ಚಮ್ಮ [ಪಾಠಾಂ. ರ್ಮ]ವಾವುಗೆಯನಾ ಲಲನೆ ಮಹೋತ್ಸಾಹದಿಂದೆ ಮಾಡಿಸಿ ಕೊಟ್ಟಳ್ (ಸುಕುಮಾ. ೧೦-೧೨೦). **ಚಮ್ಮಾವುಗೆ :** ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯಾ ಅಯ್ಯಾ ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ ಮಾಡಯ್ಯಾ (ಬಸವ. ೩೭೧) ; ಮೂವತ್ತಿರ್ವರ್ ಸೊಸೆವಿರ್ಗಂ ಚಮ್ಮಾವುಗೆಯಂ ಮಾಡಿಸಿ ಕೊಟ್ಟಳ್ (ಜೀವಸಂ. ೧೦೮-೩೭ವ); ಆತನಾ ಕಂಬಳವಮಂ ಕಂಡು ಕರ್ಕಶಮದನೊಲ್ಲೆನೆಂದು ಮರಳಿ ಕಳಿಪಲಾ ಯಶೋಭದ್ರೆ ಮೂವತ್ತಿರ್ವರ್ ಸೊಸೆಯರ್ಗೆ ಚಂಪಾ [ ಮ್ಮಾ ] ವುಗೆಗಳಂ ಮಾಡಿಸೆ (ಪುಣ್ಯಾಸ್ರ. ೬-೩೨) : ಪಲ್ಲಕ್ಕಿಯಿಂದಿಳಿದು ಚಮ್ಮಾವುಗೆ ಮೆಟ್ಟಿ (ಭರಚ. ೪೭-೧೨) ; ಹರಳಯ್ಯ ಬಸವೇಶಂಗೆ ಪ್ರೀತಿಯಿಂ ನಮಿಸಿ ಚಮ್ಮಾವುಗೆಯ ಮುಂದಿಟ್ಟು ಮೆಟ್ಟೆನ್ನ ಗುರುವೆ ಎನಲು (ಪ್ರಭುಪು. ೯-೧೦೦) ; ಶಿವಕವೀಶ್ವರರ ಪ್ರಸಾದವಂ ಸವಿವೆ ಮೇಣವರ ಚಮ್ಮಾವುಗೆಯ ಮುಡಿದು ಮುಕ್ತ್ಯಂಗನೆಯ ತವಕದಿಂ ನೆರೆವೆನು (ಏಕೋಪು. ೩-೫). **ಚೆಮ್ಮಾವುಗೆ:** ಒಪ್ಪವಸಿಕ್ಕಿದ ಎಪ್ಪತ್ತುಗೊಂಡೆಯ ಸರ್ಪನ ಹೆಡೆಗೈಯುತಲಿ ಚೆಮ್ಮಾವುಗೆಯ ಸುಪ್ಪಾಣಿಯಿಂದ ನಯವಿಟ್ಟ (ಶರಚ. ೨೯೯) ; ಈ ಚೆಮ್ಮಾವುಗೆಗಳನ್ನಾದರೂ ಸ್ವೀಕರಿಸಿ ನನ್ನ ಕುಲಕೋಟಿಯನ್ನೆಲ್ಲ ಉದ್ಧರಿಸುವ ಕೃಪೆಮಾಡಿರಿ! (ಶರಚ. ೩೦೧). **ಸಮ್ಮವಾವುಗೆ:** ಸೊಸೆವಿರ್ಗೆಲ್ಲಂ ಸುಸಮಾನಚಿತ್ತದಿಂದಿಂದು ಸಮ್ಮವಾವುಗೆಯನಲ್ತೆ ಮಾಡಿಸಿಕೊಟ್ಟಳ್ (ಸುಕುಮಾ. ೧೦-೧೨೦) ; ದೇವರ ಸಮ್ಮವಾವುಗೆಗಳಂ ಪಿಡಿದೆಂಬುದ ನಿಂಬುಕೆಯ್ವ ಸದ್ಭಾವಮೆ ಸಾಲ್ಗುಂ (ಪಂಚಾಮಾ. ೭-೬೮) : ಬೀವಮಾರುತ ರುಗ್ಮಿಣನ ಪುರಕೆ ಪೋದ ಕಾವನ ಕೈಸೆಱೆ ತಂದು ಭೂವರ ಕೇಳ್ನಿನ್ನ

ಪದಪದ್ಮಕೆ ಸಮ್ಮವಾವುಗೆಗಳನಿಕ್ಕಿಸುದೆವು (ನೇಮಿಸಂ. ೨೬-೯೧); **ಸಮ್ಮಾವುಗೆ:** ಮೆರೆವ ಸಮ್ಮಾವುಗೆಯ ಮುಖಕದಿಂ ತೆಗೆದುಟ್ಟ ಚಿತ ದುಕೂಲದ ಮುಂಜೆಯಿಂಗಿನಿಂ (ಪದ್ಮರಾ. ೩-೪೨); ಲಳಿತ ದಾಮೋದರಂ ವರಸೋಮಯಾಜಿಗಳ್ಗಳೆಯು ಸಮ್ಮಾವುಗೆಯ ಮಾಧವಂ (ಅರಾಚ. ೭-೧೬); ಜಿನಮುನಿಗಳೊಡನೆ ವಾದಿಸಿಯವರು ಸೋಲಲ್ಕು ಪದವಿನತರಾಗಲ್ಕೆ ಸಮ್ಮಾವುಗೆಯ ಸೇವೆಯಂ ಕೊಟ್ಟವರ ರಕ್ಷಿಸಿದನು (ವೀಶ್ಮಪು. ೪-೯-೧೬); ಚಿನ್ನಗಂಬಿಯ ಪಟ್ಟೆ ಪಚ್ಚಡಂಗಳನೊಲಿದು ಚನ್ನಾಗಿ ವಲ್ಲಿವಾಟವ ಪೊದೆದು ಯಡಕೆರದಿ ಪೊನ್ನೊರೆ ಕಠಾರಿಯುಮನಾಂತು ವರಹಸ್ತದೊಳಕುಚ್ಚಮಂ ಪಿಡಿದು ನಡಿಯೇಯಿನ್ನು ಜರಿಸರಿವಿನದ ಸಮ್ಮಾವುಗೆಯ ಮೆಟ್ಟಿ (ನವಮೋ. ೧೭-೩೭). [ ಚಮ್ಮ + ಪಾವುಗೆ. / ಸಂ. ಚರ್ಮಪಾದುಕಾ ]

**ಚಮ್ಮಳಗೆ** 'ಚಮ್ಮಾಳಿಗೆ' ನೋ.

**ಚಮ್ಮಳಿ** (ನಾ). ನವಗ್ರಹಗಳಲ್ಲಿ ಒಂದು; ಕೇತು : " ಚ[ಪಾಠಾಂ. ಚಿ]ಮ್ಮಳಿಯೆಂದು ಕೇತು " (ಕಶಸಾ. ೩-೩೨); " ಉಚಿ ಚಮ್ಮಳಿ ಕೇತುವ ರಾಹು ಬಾಂಬಾವಕ್ಕುಂ " (ಕವಿಕಂ. ೪೨). 'ಚಾಟಿ' ಪರಾ. [ ? ]

**ಚಮ್ಮಳಿಕೆ** (ನಾ). = ಚಮ್ಮಳಿ ಚಮ್ಮಳಿಕೆಯೆನೆ ಕೇತು " (ಕಶರ. ೩೩).
[ < ಚಮ್ಮಳಿ ]

**ಚಮ್ಮಾರ,** ಚಂಬಾರ್, ಚಂಬಾರ, ಚಮ್ಮರ (ನಾ). ಚರ್ಮದ ಕೆಲಸ ಮಾಡುವವನು ; ಚಮಗಾರ ; ಸಮಗಾರ: " ಚಮ್ಮಾರ – ಚರ್ಮಕಾರ " (ತದ್ಭಕೋ. ೧೨). **ಚಂಬಾರ್:** (ಕೃಸಗ. II, ೩೪೩); (ವ್ಯಗಿಜ. IV, ೬೬೬). **ಚಂಬಾರ:** (ಎಸಮ್ಮ. XVII, ೨). **ಚಮ್ಮರ:** ಚಮ್ಮರನ ಕಣ್ಣು ಮಬ್ಬೇರಿದುದು, ಕಿವಿ ಕೇಳದಾದುದು (ಕಗದ್ಯ. ೭೯).
[ < ಸಂ. ಚರ್ಮಕಾರ ]

**ಚಮ್ಮಾರುಲಿ** (ನಾ) ಚರ್ಮದ ಮೆಟ್ಟು (?) : ಮೆಟ್ಟಿದ ಚಮ್ಮಾರುಲಿಯ ಪೆಟನೊಸಲೊಳಗಿಟ್ಟ ಕಸ್ತುರಿಯತಿಲಕದ ಮುಟ್ಟ ಪಿಡಿದ ಕೈಸಾಣೆಯ ಕೊನಬುಗಳಿಟ್ಟಣಿಸಿಹರು ಬೀದಿಯಲಿ (ಕಂನವಿ. ೬-೧೯೩). [ ? ]

**ಚಮ್ಮಾವುಗೆ** 'ಚಮ್ಮವಾವುಗೆ' ನೋ.

**ಚಮ್ಮಾಳ** (ನಾ). ಒಂದು ಬಗೆಯ ಚರ್ಮವಾದ್ಯ : ಚಮ್ಮಾಳ ಬಾರಿಸುವವರು ಬಂದರು (ರೂ೦). [ ← ಮರಾ. ಸಂಬಳ್ ]

**ಚಮ್ಮಾಳಿಗೆ, ಚಮ್ಮಳಗೆ, ಚಮ್ಮೋಳಗೆ, ಚಿಮ್ಮಣಿಗೆ** (ನಾ). ಚರ್ಮದ ಪಾದುಕೆ: ನಂಬಿಯಣ್ಣಂ ಪರಮಲೀಲೆಯೊಳುದ್ಧ ಚಮ್ಮಾಳಿ[ಪಾಠಾಂ. ವು]ಗೆಗಳಂ ಮೆಟ್ಟಿ (ಬಸಪು. ೨೬-೧೪); ಹಳ್ಳಯನೆಂಬೊ ಮಾದಿಗ ತನ್ನ ಸತಿಗೂಡಿ ಒಳ್ಳೆ ರೌಪಾದ ಚಮ್ಮಾಳಿಗೆಯ (ಬಿಜ್ಜಳರಾ. ೭-೧೦). **ಚಮ್ಮಳಗೆ:** ಚಮ್ಮಳಗಿ[ಗೆ]ಯ, ಮೆಟ್ಟಿ ವಾರೆಭುರುಬಾ ಕಟ್ಟಿ (ವಿಸಾಸು. ೧೩-೩). **ಚಮ್ಮೋಳಗೆ:** ಚಮ್ಮೋಳಗೆಯ ಮೆಟ್ಟಿದವಗುಂಟೇ ಕಂಟಕಗಳ ಭಯ (ಜಗದಾ. ೨೦೪). **ಚಿಮ್ಮಣಿಗೆ:** ಸರ್ವರು ಮೆಟ್ಟುದಕ ಕಾಲೊಳು ಚಿಮ್ಮಣಿಗೆ (ಕನ್ನಜಾ. ೮೧); ಮೆಟ್ಟಿದಾನ ಚಿಮ್ಮಣಿಗೆ ಉಟ್ಟಿದಾನ ಧೋತರ (ಲೋಕಗೀ. ೧೬೭). [ ಚಮ್ಮ + ? ]

**ಚಮ್ಮೋಳಗೆ** 'ಚಮ್ಮಾಳಿಗೆ' ನೋ.

**ಚಯ್$_1$** (ನಾ). ಒಂದು ಅನುಕರಣ ಪದ: ಚಯ್‌ಚಯ್ಯೆಂಬಾಗಳ್ ಮೆಯ್ ಮೆಯ್ ಚಲದಿಂ ಮುಟ್ಟಿ ಪೊಣರ್ದು ತಳ್ತಿಱಿವು[ರ್ಕಿಂ] (ಪಂಪಭಾ. ೧೩-೩೪).

**ಚಯ್$_2$,** ಚಯ್ಯ, **ಚೆಯ್$_1$,** ಚೈ (ನಾ). ಚೆಲ್ಲಾಟ ; ವಿನೋದ . 'ಚಯ್ಯಾಡು' ಪರಾ. **ಚಯ್ಯ :** " ಚಯ್ಯವು[ಪಾಠಾಂ. ಚಯ್ಯಾಟ, ಚೆಯ್ಯಾಟ]ಮೆನಲ್ ಚೆಲ್ಲಾಟಮಕ್ಕುಂ " (ಕಬ್ಬಿಕೈ. ೨೦) ; ಚ[ಪಾಠಾಂ. ಬ]ಯ್ಯವಾಡುಪುದೇಡಿಪುದು (ರಾಮವಿ. ೧೭-೮೬). **ಚೆಯ್$_1$ :** 'ಚೆಯ್ಯಾಟ' ಪರಾ. **ಚೈ :** 'ಚೈಗುಡು' ಪರಾ. [ ? ]

**ಚಯ** (ನಾ). ೧. ಗುಂಪು ; ಮೊತ್ತ ; ರಾಶಿ ; ಸಮೂಹ : ದಿಗಂಬರ ಕೆಟಂಬರಂ ಬಳಸೆ ಕೀರ್ತಿವಲ್ಲೀಚಯಂ (ಆದಿಪು. ೩-೩೭) ; ಸ್ಮರಕಾಂತಾರತ ಘರ್ಮಬಿಂದುಚಯಮೋ (ಕಾದಂಪೂ. ೭೪೧); ಇಂದ್ರಿಯಚಯವ ಗೆಲುವದೆ ತನ್ನ ಗೆದ್ದುದದು (ನೀಗಟ್ಟು. ೧೨೯). ೨. ಮಣ್ಣಿನ ದಿಣ್ಣೆ : ೩. ಕೋಟೆಯ ಸುತ್ತುಗೋಡೆ,–ಪ್ರಾಕಾರ. [ ಸಂ. ]

**ಚಯನ** (ನಾ). ಕೂಡಿಹಾಕುವಿಕೆ; ಒಟ್ಟುಗೂಡಿಸುವಿಕೆ; ಶೇಖರಿಸುವಿಕೆ; ರಾಶಿಮಾಡುವಿಕೆ : ಚಯನಂ ಮುಗಿಯೆ ಬಲವಂದುಮೆಡವಂದುಮಾ ಚಿತೆಯಂ (ಶ್ರೀರಾಮಾ. ೧೨೦-೨೨೯). 'ಸಂಚಯನ' ಪರಾ. [ ಸಂ. ]

**ಚಯಿತ್ರ** (ನಾ). = ಚೈತ್ರ ೨ : ಚಯಿತ್ರ ಸು ೧೦ ಬ್ರಿ ದಂದು (ಎಕ. XI, ಚಿತ್ರದು. ೧೨-೧೪ ; 1286). [ < ಸಂ. ಚೈತ್ರ ]

**ಚಯಿತ್ರಪೈಯಿತ್ರ** (ನಾ). = ಚೈತ್ರಪವಿತ್ರ : ಶ್ರೀಗ್ರಾಮೇಶ್ವರದೇವರಂಗಭೋಗಕ್ಕಂ ನಿತ್ಯನಿವೇದ್ಯಕ್ಕಂ ಖಂಡಸ್ಫುಟಿತ ಜೀರ್ಣೋದ್ಧಾರಕಂ ಚಯಿತ್ರಪೈಯಿತ್ರಕ್ಕಂ . . . ಬಿಟ ಗರ್ದೆ (ಸೌಇಇ. XX, ೭೬-೩೭ ; 1118).
[ < ಚೈತ್ರಪವಿತ್ರ ]

**ಚಯ್ಯ** 'ಚಯ್$_2$' ನೋ.

**ಚಯ್ಯಾಟ,** ಚೆಯ್ಯಾಟ (ನಾ). ಚೆಲ್ಲಾಟ ; ವಿನೋದ ; ಚೇಷ್ಟೆ : " ಚಯ್ಯಾಟ[ಪಾಠಾಂ: ಚೆಯ್ಯವು]ಮೆನಲ್ ಚಲ್ಲಾಟಮಕ್ಕುಂ " (ಕಬ್ಬಿಕೈ. ೨೦). **ಚೆಯ್ಯಾಟ:** ಕುಚೇಷ್ಟಿತದ ಚೆಯ್ಯಾಟದ ಮುಗುಳ್ನಗೆ ಮೆತ್ತು (ಮಂತ್ರಶ. ೮೮-೯). [ ಚಯ್$_2$ + ಆಟ ]

**ಚಯ್ಯಾಡಂಬರ** (ನಾ). ಕಾಂತಿ ; ಶೋಭೆ : ಇಂದ್ರವಜಕ್ಕೆ ಚಯ್ಯಾಡಂಬರ ಮೆಂಬಂತಿರಲೊಪ್ಪಂಬಡೆದಾತನಿರೆ × × ಎಟಿಯಂಗನೃಪಂ (ಮ್ಯಆರಿ. ೧೯೨೮, ೯-೧೧ ; 1133). [ ? ]

**ಚಯ್ಯಾಡು,** ಚೆಯ್ಯಾಡು (ಕ್ರಿ). ಚಲ್ಲಾಟವಾಡು ; ವಿನೋದಮಾಡು: ಕೆಯ್ಯೊಕಲೆತ್ತಿಯೂನೀ ಮೆಯ್ಯಾರ್ವಿನಮುಟ್ಟಿಕೊಂಡು ಪಣೆಯಿಂ ಪಣೆಯಾ ದೊಯ್ಯನಣೆದಣೆದು ತಣಿಯದೆ ಚಯ್ಯಾಡುವ ತನಯನೆನಗದೆಂದಾದಪನೋ (ಧರ್ಮನಾ. ೩-೧೨೦). **ಚೆಯ್ಯಾಡು:** ದೂರದಿಂದೆ ಪರಿತಂದಪ್ಪಪ್ಪೆನುತ್ತಪ್ಪು ವೊಯ್ಯಗೆ ಚೆಯ್ಯಾಡುವ ಪೋಲುದಂ ಮುಸುಕಿಡುತ್ತೋಯೆಂಬ . . . ಕಂದನೊಳ್ ನಲಿವ ಪೆಣ್ಣಿಂ ನೋಂಪಿಯಂ ನೋಂತಳೋ (ಜಗವಿ. ೨-೬೭). 'ಚೈಗುಡು' ಪರಾ. [ ಚಯ್$_2$ + ಆಡು$_1$ ]

**ಚಯ್ಯಾಳಿ** (ನಾ). (ಸಂತೋಷದ ಸಮಯದಲ್ಲಿ) ವಾದ್ಯವನ್ನು ನುಡಿಸುವ ಬಗೆ(?) ಒಂದು ಗತ್ತು (?) : ಹೊಟ್ಟೇಬಸಪ್ಪನು ಉತ್ಸಾಹದಿಂದ 'ಚಯ್ಯಾಳಿ'ಯ ಗತ್ತನ್ನು ಹಿಡಿಯುತೊಡಗಿದನು (ಹಬ್ಬಿಬ. ೩೮). [ ? ]

**ಚರ** (ಗು). ೧. ಚಲಿಸುವ; ಗತಿಯುಳ್ಳ; ನಡೆಯುವ. ೨. ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ : ವಾರಸುದಾರರು ಜಮೀನುಗಳನ್ನು ತೆಗೆದುಕೊಳ್ಳಲು ನಿರಾಕರಿಸಿದಾಗ ಓಡಿಹೋದವನ ಚರ ಆಸ್ತಿ ನಮಗೆ ಸೇರುತ್ತದೆ (ಪ್ರವಾಇ. II, ೪೭೮). (ನಾ). ೩. ಚಲಿಸುವವನು ; ನಡೆಯುವವನು : ಪರನಪರಂ ಭವನಭವಂ ಚರನಚರಂ . . . ಎನಿಪ ಗಣಿತ ವಿರುದ್ಧಗುಣ ನಿನ್ನ ನಿಜವದೇಂ ಕೇವಳಮೋ (ಜಗವಿ. ೩-೯೭). ೪. ಚಲಿಸುವ ವಸ್ತು ; ಪ್ರಾಣಿ : ಪುರಗಗನಜಲವನಚರಂಗಳು ಚರಗಳಿವು (ಅಮೃತ. ೪-೬೪). 'ಚರಾಚರ' 'ಜಲಚರ' ಪರಾ. ೫. ಗೂಢಚಾರ; ಬೇಹುಗಾರ : "ಅಪಸರ್ಪಃ, ಚರಃ, ಚಾರಃ–ಈ ಮೂಱು ಅರಸಾಳು" (ಹಲಾಯು. ೭೦-೨೮೧) : ಅವಧರಿಪುದೆಂದು ಚರನಿಂತೆಂದಂ (ಪಂಚಾಮಾ. ೪-೩೬); ವಿಜಯಲಕ್ಷ್ಮಿಯ ಸೆಱಗ ಹಿಡಿದನು ದ್ರೋಣನೆಂದರು ಚರರು ಭೂಪತಿಗೆ (ಕುವ್ಯಾದ್ರೋ. ೧೮-೮). ೬. [ವೀಶೈ] ಜಂಗಮ : ಜಂಗಮವೆನಿಸಿಕೊಳ್ಳವೆ ಚರಾದಿಗಳು (ಅವಚಂ. ೨೩೮-೧೧೭೩); ನಟವರ ಕಾಯಕವ ಮಾಡಿ ದೊರೆದರ್ಥದಿಂ ಚರಕೆ ಭಕ್ತಿಯಂ ನಡೆಸುತಿರಲು (ಪ್ರಾಥರಾ. ೨-೬) :

ಚರವು ಗೋಕ್ಷೀರವಂ ಬೇಡೆ ಕೊಟ್ಟಗೆಯತ್ತ ಬಱಡುಗವಿಲೆಯ ಕರೆದು ಸಲಿಸಿದಂ (ರಾಘಚ. ೮-೩೪). ೭. [ವಿಜ್ಞಾ] ವಿದ್ಯುದ್ವಾಹಿಯಾದ ಕಣ: ವಿದ್ಯುತ್ತನ್ನು ಹೊತ್ತ ಅಣುಭಾಗಗಳಿಗೆ ಚರಗಳೆಂದು (Ions) ಹೆಸರು (ಭೌತವಿ. ೩೪೬). [ಸಂ. ]

**ಚರಂಡಿ** (ನಾ). ಕೊಳಚೆನೀರು ಹರಿದಂ ಹೋಗಲು ಮಾಡಿದ ಮೋರಿ; ಗಟಾರ : ನಮ್ಮ ನಗರಗಳ ಚರಂಡಿಗಳಲ್ಲೂ ಸಿಗದು ಇಂಥ ದುರ್ಗಂಧ ! (ಮಾನಸ. ೭೮) ; ಅಡುಗೆಮನೆಯ ಕೊಳಚೆನೀರನ್ನು ನಲ್ಲಿಗಳ ಅಥವಾ ಚರಂಡಿಗಳ ಮೂಲಕ ದೂರ ಒಯ್ಯಬೇಕು (ಅಡುಶಾ. ४೦) : ಅವಳು ಆ ಪತ್ರವನ್ನು ಚರಚರನೆ ಹರಿದು ಚರಂಡಿಗೆ ಹಾಕಿ . . . ನಡೆದುಬಿಟ್ಟಳು (ರಂಗರೋ. ೧೭४) ; ಅಲೆಕ್ಸಿ ಗುಂಡಿ ತೋಡಿ, ಚರಂಡಿ ಹೊಡೆದು ತನ್ನ ಕೆಲಸವನ್ನು ಮುಗಿಸಿದನು (ಯೋಧಖ. ೧೭).

[ ?. / ಪಾರ. ಚರಾಂಡಿ = ಗಲ್ಲಿ ]

**ಚರಂಡಿತನ** (ನಾ). ಕೊಳೆಮಾಡುವಿಕೆ; ಹೊಲಸುತನ: ಚಿಂಡಿಕೆಯ ತೆಗೆದ ಚಿಂಡಿನೊಳಿಂದು ಮಾಡಿದ ಚರಂಡಿತನವನು ತೊಳೆವ ಚಂಡಿಕೆಯ ಚಿಂಗಾಲ! (ನವ್ಯಧ್ವ. ೧೨-೨). [ ಚರಂಡಿ + – ತನ ]

**ಚರಂತ** 'ಚರಂತಿ' ನೋ.

**ಚರಂತಿ**, ಚರಂತ (ಗು). ೧. ಚಲಿಸುವ : ತುಟಿಗೆ ತುಟಿಯಿಡುವ ರತಿಕಾಮರ ಜೋಡಿ! ಚರಂತಿ ತ್ರಿಶಂಕು ಸ್ವರ್ಗದ ಹೊಸ ಮೋಡಿ! (ಚಂತಸ. ೬೦-೩). (ನಾ). ೨. [ವೀಶೈ] ಬ್ರಹ್ಮಚರ್ಯವ್ರತವನ್ನು ಕೈಕೊಂಡ ಜಂಗಮ : ಚೆನ್ನರಾಜದೇವರು ಮಠವ ಕಟ್ಟಿಸಿ ಚರಂತಿಗಳ ದಾಸೋಹಕ್ಕೆ ಬಿಟ್ಟ ಗದ್ದೆ (ಪ್ಯಆರಿ. ೦೯೨೮, ೫೫-೫ ; ?) : ಯಿಾ ಮಠದ ಚರಂತಿ ಹಿರೇರು (ಎಕ. VII, ಶಿವಮೊ. ೦೦೬-೫ ; ?). **ಚರಂತ** : ೨. ಚರಂತರ ಮಠದಲ್ಲಿ ಈ ದಿನ ಪುರಾಣ ಪ್ರವಚನವಿದೆ (ರೂಢಿ). [ <ಸಂ. ಚರತ್ ]

**ಚರಕ₁** (ನಾ). ೧. ಅಲೆದಾಡುವವನು. ೨. ಯಾತ್ರಿಕನಾದ ವಿದ್ಯಾರ್ಥಿ. ೩. ಬೇಹುಗಾರ ; ಗೂಢಚಾರ. ४. ಪ್ರಸಿದ್ಧ ವೈದ್ಯಶಾಸ್ತ್ರಜ್ಞನಾದ ಒಬ್ಬ ಋಷಿಯ ಹೆಸರು. ೫. ಚರಕಋಷಿಯಿಂದ ರಚಿತವಾದ ವೈದ್ಯಗ್ರಂಥ ; ಚರಕಸಂಹಿತೆ. [ ಸಂ. ]

**ಚರಕ₂** (ನಾ). ೧. ನೂಲುವ ರಾಟೆ: ಅವಳು ಚರಕ ತೆಗೆದುಕೊಂಡು ದಾರ ತೆಗೆಯುವುದಕ್ಕೆ ಕುಳಿತುಕೊಂಡಳು (ದೇಜಾಂಕ. ೫೬) ; ಕೈಗಳಿಂದ ಅಥವಾ ತಕಲಿ, ಚರಕಗಳಂಥ ಸಣ್ಣ ಉಪಕರಣಗಳಿಂದ ಎಳೆಗಳನ್ನು ತೆಗೆಯುತ್ತಿದ್ದರು (ಗೃಹವಿ. ೭೨). ೨. ಅರೆಯುವ ಯಂತ್ರ ; ಗಾಣ : ಬಂಡವಾಳಗಾರನು . . . ಇಡೀ ರೈತವರ್ಗವನ್ನು ಸರಕಾರೀ ಕರ-ಕಂದಾಯಗಳ ಚರಕದಲ್ಲಿ ಹಾಕಿ ತೆಗೆದು ಸಿಪ್ಪೆಸುಪ್ಪೆಯಾಗಿ ಮಾಡುತ್ತಾನೆ (ಮಾನಾದ. ೦४೭). ೩. ಚಕ್ರ; ಗಾಲಿ : ದರುಮದ ಚರಕಂ ನನ್ನಿಯ ಪೊರ್ಕುಳುಮರಿವು ಸಮಾಧಿ ಧೃತಿಯುಮಿರೆ ನೇಮಿ (ಶಾಸಂದ. ೩-೦೦). [ ←ಮರಾ. ಚರಕ್; ಪಾರ. ಚರ್ಖ್; ಹಿಂ. ಚರ್ಖ್, ಚರ್ಖಾ / ಸಂ. ಚಕ್ರ ]

**ಚರಕಿ**, ಚರಿಕಿ (ನಾ). ೧. ಲೋಹ, ದಂತ ಮೊದಲಾದುವುಗಳನ್ನು ತಕ್ಕ ಆಕಾರದಲ್ಲಿ ಕಡೆಯುವುದಕ್ಕಾಗಿ ಸಿದ್ಧಪಡಿಸಿದ ಯಂತ್ರ ; ಕಡೆತದ ಯಂತ್ರ; ಲೇತ್‌ಯಂತ್ರ: ಚರಕಿಯ ಭಾಗಗಳನ್ನು ತಕ್ಕಂತೆ ಅಳವಡಿಸುವುದಕ್ಕಾಗಿ . . . ಗಾಡಿಯುಳ್ಳ ಚರಕಿ ಯಂತ್ರದ ತಳಚೌಕಟ್ಟು (Lathe-bed. ಇಂಕವಿ). **ಚರಿಕಿ**: ೨. ಕುಂಬಾರನ ತಿಗುರಿ : (ಕ). ೩. ಬೀಸುವ ಕಲ್ಲು : (ಕ). [ ←ಮರಾ. ಚರಕೀ, ಚರಖೀ ; ಪಾರ. ಚರ್ಖಾ ; ಹಿಂ. ಚರ್ಖೀ ]

**ಚರಗ** 'ಚರುಗ' ನೋ.

**ಚರಚಕ್ರವರ್ತಿ** (ನಾ). ಜಂಗಮರಲ್ಲಿ ಶ್ರೇಷ್ಠನಾದವನು: ಮಲೆಯ ವೀರೇಶ ಸಿದ್ಧರಾಮಸ್ವಾಮಿಯಾ ಕರಕಮಲ ಸಂಭೂತ ಚರಚಕ್ರವರ್ತಿ (ವೀಶೈಪು. ೦-೦-೬). [ ಚರ + ಚಕ್ರವರ್ತಿ ]

**ಚರಚರ** (ನಾ). ಒಂದು ಅನುಕರಣ ಶಬ್ದ. 'ಚರಚರನೆ' ಪರಾ.

**ಚರಚರನೆ** (ಅ). ಚರಚರ ಎಂಬ ಶಬ್ದದೊಂದಿಗೆ: ಕಲುಷದೈತ್ಯರನೆಲ್ಲ ಚರಚರನೆ ಸೀಳಿ (ವಾದಿಕೀ. ೨೮-೦) ; ಆ ಪತ್ರವನ್ನು ಚರಚರನೆ ಹರಿದು ಚರಂಡಿಗೆ ಹಾಕಿ . . . ನಡೆದುಬಿಟ್ಟಳು (ರಂಗರೋ. ೦೭४).

[ ಚರಚರ + – ಅನೆ₁ ]

**ಚರಜಿಂದಗಿ, ಚರಜಿಂದಿಗಿ, ಚರಜಿಂದಿಗೆ** (ನಾ). ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ಆಸ್ತಿ ; ಚರಆಸ್ತಿ : ಮನೆಗಳನ್ನು ಜಪ್ತಿಮಾಡಿ ಹಿಂಡುವ ಎಮ್ಮೆಯನ್ನು (ಕರಸಹಿತ) ಇತರ ಚರಜಿಂದಗಿಯನ್ನು ಜಪ್ತಿ ಮಾಡಿದರು (ಕರವೀ. ೯೩). **ಚರಜಿಂದಿಗಿ**: ಚರಜಿಂದಿಗಿ ವಿಷಯವಾದ ಹಕ್ಕು ಅಥವಾ ಅಂಥಾ ಜಿಂದಗಿಯ ಮೌಲ್ಯವನ್ನು ಕುರಿತ ದಾವೆ (ಗ್ರಾಮೂಕ. ೨೦). **ಚರಜಿಂದಿಗೆ** : "ಚರಜಿಂದಿಗೆ, ಜಂಗಮದ್ರವ್ಯ" (Chattel. ಪಾರಿಪಿ. ೦४).

[ ಚರ + ಜಿಂದಗಿ ]

**ಚರಜಿಂದಿಗಿ** 'ಚರಜಿಂದಗಿ' ನೋ.

**ಚರಜಿಂದಿಗೆ** 'ಚರಜಿಂದಗಿ' ನೋ.

**ಚರಟ**, ಚಟ್ಟ₂, ಚಿಟ್ಟ₁ (ನಾ). ೧. ದ್ರವವಸ್ತುಗಳ ತಳದಲ್ಲಿ ನಿಂತ ಗಟ್ಟಿಯಾದ ವಸ್ತು; ಗಮ್ಟು; ಗಸಿ: ಸಬಕಾರದ ಚರಟವನ್ನು ಕೂಡಿಸಿ ಮಾಡಿದ ಕಾಜಿನಿಂದ ಆಗುತ್ತವೆ (ಮುಂಬಯಿ. ४-೨೨೨) ; ಬರೀ ಸಾರಿನ ಚರಟ ಇದೆ (ರೂಢಿ). ೨. ನಿಸ್ಸಾರವಾದ ವಸ್ತು ; ಸಾರ ತೆಗೆದ ವಸ್ತು : ಕಾಫಿಯ ಚರಟವನ್ನು ಪಾತ್ರೆ ತೊಳೆಯುವುದಕ್ಕೆ ಬಳಸಬಹುದು (ರೂಢಿ). ೩. ಶರೀರದ ಹೊರಪದರ; ಚರ್ಮ; ತೊಗಲು. **ಚಟ್ಟ₂**: (ಕ). **ಚಿಟ್ಟ₁**: ೨. 'ಚಿಟ್ಟಬೆಳಗು' ಪರಾ.

**ಚಟ್ಟಾಎತ್ತು** = ಚರ್ಮವನ್ನು ಸುಲಿ ; ಹಿಂಸೆಮಾಡು : ಕೆಟ್ಟಗಿಟ್ಟ ಹಡದೀ ನಿನ್ನ ಚಟ್ಟಾಎತ್ತೀನ (ಕನ್ನಜಾ. ೬೦). **ಚರಟಾನೇ ಬೆಳಗು, ಚಿಟ್ಟಾನೆ ಬೆಳಗು=ಚಟ್ಟಾಎತ್ತು**: ಸುಳ್ಳು ಬದ್ದೀ ಅಂದ್ರ ನಿನ್ನ ಚರಟಾನೇ ಬೆಳಗೇನು (ಶಿಡುಗು. ೭೬) ; ನಿನ್ನ ಚರಟಾನೇ ಬೆಳಗೇನು (ಮಿಂಚುಹು. ೦೦೭) ; ಇಂವನು ಚಿಟ್ಟಾನ ಬೆಳಗತಾನ (ದೀಪಹ. II, ೫೭).

[ ದೇ.॥ ತುಳು. ಚಟ್; ತೆಲು. ಚಟ್ಟ ]

**ಚರಣ** (ನಾ). ೧. ನಡೆ; ಸಂಚಾರ. ೨. ನಡೆವಳಿಕೆ; ಆಚರಣೆ; ವ್ಯವಹಾರ. 'ತಪಶ್ಚರಣ' ಪರಾ. ೩. ಅಡಿ; ಪಾದ: "ಅಂಘ್ರಿಃ, ಚರಣಃ, ಪಾದಃ– ಈ ೩ ಕಾಲ್" (ಹಲಾಯು. ೮४-೩೫೬) ; ಚ[ಪಾಠಾಂ. ಕ]ರಣದ ಚಾರಿಯ ಚಲ್ಲಿಯ ಪರಿಕ್ರಮಕ್ರಮದ ಭಂಗಿಗಳ್ ನೆಗಟ್ಟೆಡೆಯೊಳ್ (ಆದಿಪು. ೯-೩೯) ; ಚರಣದೆ ಕಾಂಚಿಯಂ ಗುರುನಿತಂಬದ ಪರ್ವುಗೆಯಿಂದೆ ಮಧ್ಯಮಂ . . . ವಿರಹವಿಹ್ವಲೆಯಾಗಿ ಲತಾಂಗಿ ತಾಳ್ದಿದವಳ್ (ಕಾದಂಬ. ೩೩೩) ; ಕೂಡಲ ಸಂಗಮದೇವಾ ನಿಮ್ಮ ಚರಣಕಮಲದಲಾನು ತುಂಬಿ (ಬಸವ. ೯೯೨) ; ಎಂತುಮಾರ ಚರಣಂ ಶರಣಂ (ಜಗವಿ. ೦-೩४): ತಿರುನೀಲಕಂಠರ ಚರಣವಂ ಪಿಡಿದು (ತಿರುರ. ದೇ. ೬-೦೬) ; ಹಿಂದೆ ಚರಣದಲೊದೆದನೊಬ್ಬನ (ಕೌಶಿರಾ. ೨೬-೩೦). ४. [ಛಂದ] ಪದ್ಯದ ಪಾದ,–ಪಂಕ್ತಿ: ಕವಿತೆಯಲ್ಲಿ ಎರಡು, ಮೂರು . . . ಭಾಗಗಳನ್ನು ಮಾಡಿ, ಒಂದೊಂದಕ್ಕೆ ಅಡಿ, ಚರಣ, ಪಾದ, ಪದ ಮುಂತಾದ ಹೆಸರುಗಳನ್ನಿಟ್ಟಿದ್ದಾರೆ (ಛಂದಶ್ಯಾ. ೦४). ೫. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : "ಕ್ರಮ ಚರಣಂ ಪದಯುಗಳಂ ಸಮ ಉಭಯಂ ಬಾಹು ಕಿವಿಗಳೆರಡಱ ನಾಮಂ" (ವ್ಯವಹಾ. ೯-೨). ೬. [ಜೈನ] ನಾಲ್ಕು ಅನುಯೋಗಗಳಲ್ಲಿ ಮೂರನೆಯದು ; ಮುನಿಗಳ ಹಾಗು ಶ್ರಾವಕರ ಆಚರಣೆಯನ್ನು ವಿವರಿಸುವ ಶಾಸ್ತ್ರಭಾಗ: ಪ್ರಥಮ, ಕರಣ, ಚರಣ, ದ್ರವ್ಯ ಎಂಬ ನಾಲ್ಕು ಅನುಯೋಗಗಳನ್ನು ಜೈನರ ಚತುರ್ವೇದಗಳೆಂದು ಕರೆಯಬಹುದು (ಭಾರದ. ೦೭४). 'ಚರಣಾನುಯೋಗ' ಪರಾ. [ ಸಂ. ]

**ಚರಣಗ್ರಂಥ** (ನಾ). [ಜೈನ] ಚರಣಾನುಯೋಗವನ್ನು ವಿವರಿಸುವ ಗ್ರಂಥ : ಆಚಾರಪಾರಾಧನೆ ಮೊದಲಾಗೊಡೆಯ ಚರ[ಪಾಠಾಂ. ಶ್ರವ]ಣ ಗ್ರಂಥಂಗಳುಮಂ . . . ಕಲ್ತೊಡಲ್ಲದೆ (ವಡ್ಡಾ.ರಾ. ೬-೭).
[ ಚರಣ + ಗ್ರಂಥ ]

**ಚರಣಚೌಪಟ** (ನಾ). ಶ್ರೇಷ್ಠ ಕಾಲಾಳು ; ಪರಾಕ್ರಮಿಯಾದ ಪದಾತಿ: ನೆರಹಿದನು ಹದಿನಾಱುಸಾವಿರ ಕರಿಘಟೆಯನು . . . ಚರಣಚೌಪಟರ್ಕೈದು ಲಕ್ಷವ (ಕುವ್ಯಾ.ಆ. ೨೨-೩). [ ಚರಣ + ಚೌಪಟ (<ಚೌಪಟ್ಟ) ]

**ಚರಣತಲ**, ಚರಣತಳ (ನಾ). ೧. ಕಾಲಿನ ತಳಭಾಗ ; ಅಂಗಾಲು : "ಚರಣತಲ [ಪಾಠಾಂ. ಳ] ಮೆಂದೊಡಂಗಾಲೆನಿಕುಂ" (ಮಂಗರಾ. ೨೮-೧೮). **ಚರಣತಳ:** ೧. ಚರಣತಳಪ್ರಘಾತದೆ ಪದಾತಿಗಳಂ ನಖರಪ್ರಹಾರದಿಂ ತುರಗದಟಂಗಳಂ . . . ನುರ್ಗುಮಾಡಿ (ಚಂದ್ರಪು. ೧೧-೯೬). ೨. ಕಾಲು; ಪಾದ : ಚರಣತಳಕ್ಕೆ ಬೀೞ್ವ ಮಣಿಕಾಂಚಿಯನೆತ್ತದೆ ಚುರ್ಚುರ್ತಿರ್ಪ ನೂಪುರಮನೆ ಸೈತು ಸಾರ್ಚದೆ . . . ಬಂದು ಸಂಭ್ರಮದಿನೀಕ್ಷಿಸು ತಿರ್ದಳಿಳೇಶಕಂತುವಂ (ಕುಸುಮಾ. ೮-೧೦) ; ನಂಬಿಯಣ್ಣಂ ಪೂರ್ವಮಂ ನೆನೆದು ಪರಿತಂದು ಚರಣತಳದೊಳು ಬೀಳುತುಂ (ನಂಬಿರ. ೭-೧೨೮).
[ ಚರಣ + ತಲ₂ ]

**ಚರಣತಳ** 'ಚರಣತಲ' ನೋ.

**ಚರಣದೊಡರು** (ನಾ). ಕಾಲಿನ ಆಭರಣ ; ಅಂದಿಗೆ : ಚರಿಸುತ್ತು ನಡೆಗಲಿಸೆ ಚರಣದೊಡರುಲಿಯ ಘತ್ಕಾರದಿಂ ನಡೆವುತ್ತ (ನವಮೋ. ೧೫-೫೫).
[ಚರಣ + ತೊಡರು₂(<ತೊಡರ್₃) ]

**ಚರಣನ್ಯಾಸ** (ನಾ).=ಚರಣವಿನ್ಯಾಸ ೧ : ಚರಣನ್ಯಾಸೋಚಿತಮೇದುರ ಕಾಂಚನಕಮಳಸಪ್ತಕಂ ಕರಮೆಸೆಗುಂ (ಚಂದ್ರಪು. ೧೬-೩೬) ; ಚರಣನ್ಯಾಸದೊಳಾಂಪರಂಬುಜಮನೇಟಂ ದೇವದೇವಂಗೆ ದೇವರಿಳಾಮಂಡಳಮಂ ಮಹಾನಿಲಕುಮಾರರ್ . . . ಪರಿಸ್ಫುರಿತಾದರ್ಶಮಿದೆಂಬಿನಂ ಬೆಳಗುವರ್ತಂತಮ್ಮ ಸದ್ಭಕ್ತಿಯಿಂ (ಅನಂಪು. ೦೯-೩೫). [ ಚರಣ + ನ್ಯಾಸ ]

**ಚರಣಪೆಂಡೆಯ** (ನಾ). ಕಾಲಿಗೆ ತೊಡುವ ಒಂದು ಬಗೆಯ ಆಭರಣ: ತಮ್ಮ ನಾಟ್ಯಕ್ಕೆ . . . ನವರತ್ನದ ಬಿರುದಿನ ದಿವ್ಯ ಚರಣಪೆಂಡೆಯವನಿಕ್ಕಿದರು (ಕಂನವಿ. ೨೮-೨೬) ; ಆಗಿನ ಅವರ ಆಭರಣಗಳೆಂದರೆ . . . ಕಿರುಪಿಲ್ಲಿ, ಚರಣಪೆಂಡೆಯ, ಪಾಯವಟ್ಟ (ಕರ್ನಾಟ. ೧೭೨).
[ ಚರಣ + ಪೆಂಡೆಯ(<ಪೆಂಡೆ) ]

**ಚರಣಭಜಕ** (ನಾ). ಪಾದಸೇವಕ ; ಭಕ್ತ : ಚರಣಭಜಕಕಟುಂಬನೆಂಬೀ ಬಿರುದ ಪಾಲಿಸಿ . . . ಕೊಡುವುದೆಮಗೆ ಮಹಾಪ್ರಸಾದವನು (ಕುವ್ಯಾ.ಸ. ೧೦-೩೮). [ ಚರಣ + ಭಜಕ ]

**ಚರಣವಲ್ಮೀಕ** (ನಾ). ಹುತ್ತಗಾಲು ರೋಗ : "ಚರಣವ[ಪಾಠಾಂ. ವಾ] ಲ್ಮೀಕಮೆನೆ ಹುತ್ತುಗಾಲಕ್ಕು" (ಮಂಗರಾ. ೧೦೩-೨). [ಚರಣ+ವಲ್ಮೀಕ]

**ಚರಣವಿಡಿ** (ಕ್ರಿ). ಪಾದಗಳನ್ನು ಹಿಡಿ : ಕರವ ಪಿಡಿಯೆ ಸಾರ್ಸಾರೆಂದು ಜಱೆದೊಡೆ ಚರಣವಿಡಿದು ದುಃಖಿಸುತ (ಕಂನವಿ. ೬-೧೭೭).
[ ಚರಣ + ಪಿಡಿ₁ ]

**ಚರಣವಿನ್ಯಾಸ** (ನಾ). ೧. ಪಾದಗಳನ್ನು ಇಡುವಿಕೆ ; ಹೆಜ್ಜೆಯಿಡುವಿಕೆ. ೨. [ಛಂದ] ಪದ್ಯದ ಪಾದಗಳ ರಚನೆ. ೧. ೨ : ಚರಣವಿನ್ಯಾಸದೊಳ ಪ್ರಗಲ್ಭನು ತಾನು . . . ಕುಕವಿಯು ಬಾಲಕನಿವನು (ಇಂಚಾಕ. ೦೭೩-೫೫).
[ ಚರಣ + ವಿನ್ಯಾಸ ]

**ಚರಣಸಂಘಟ್ಟ** (ನಾ). ಪಾದಗಳ ಹೊಡೆತ,-ತುಳಿತ : ತನ್ನ ನಿಷ್ಠುರ ಚರಣಸಂಘಟ್ಟದೊಳ್ ಪಡಲ್ವಟ್ಟ ವೀರಭಟರ ಮಕುಟಂಗಳೊಳ್ ತಲೆಗರೆದಿರ್ದನೆ ಗೆತ್ತು ಸೋದಿಸಿ ನೋಡಿಯುಂ . . . ಕಾಣದೆ(ಗದಾಯು. ೬-೨೮ ವ).
[ ಚರಣ + ಸಂಘಟ್ಟ ]

**ಚರಣಹತಿ** (ನಾ). ೧.=ಚರಣಸಂಘಟ್ಟ : ಚಾತುರಂಗದ ಚರಣಹತಿನಿರ್ಘಾತ ಧೂಳೀಮಯುವಖಿಳದಿಗುಜಾತವೆನೆ ಘಟ್ಟಣೆಯಲೇಱಿತು ಪಾಂಡುಸುತಸೇನೆ (ಕುವ್ಯಾದ್ರೋ. ೦೮-೨೫). ೨. ಹೆಜ್ಜೆಯ ಗುರುತು : ಇದುವೆ ಮೊಲ ಪೋದ ಪೆಜ್ಜೆಯು ಹರಿಣ ಚರಣಹತಿ . . . ಬಗ್ಗದಡಿ ಹೆಗ್ಗುರುತು (ನವಮೋ. ೦೬-೧೯). [ ಚರಣ + ಹತಿ ]

**ಚರಣಹೇತಿ**(ನಾ). ಕಾಲುಗಳನ್ನೇ ಆಯುಧವನ್ನಾಗಿ ಉಳ್ಳುದಂ; ಹುಂಜ; ಕುಕ್ಕುಟ : "ಕೃಕವಾಕು ತಾಮ್ರಚೂಡಾಭಿಖ್ಯಂ ತಾಂ ಚರಣಹೇತಿ ಕುಕ್ಕುಟಂ" (ವಸ್ತುಕೋ. ೪೩-೧೮). [ ಚರಣ + ಹೇತಿ ]

**ಚರಣಾನುಯೋಗ** (ನಾ). [ಜೈನ] ಸದಾಚಾರವನ್ನು ನಿರೂಪಿಸುವ ಶಾಸ್ತ್ರಭಾಗ : ಚರಣಾನುಯೋಗಮೆಂಬುದು ಕಷಾಯೇಂದ್ರಿಯೋಪಸರ್ಗ ಪರೀಷಹ ವಿಜಯಿಗಳಪ್ಪ ಚಾರಿತ್ರಮಾನಿಗಳ ಸದಾಚಾರ ಪ್ರಕಾಶನಂಗೆಯ್ವುದು (ಚಾವುಂಪು. ೩೯೯-೫); ಪ್ರಥಮ ಕರಣ ಚರಣಾನುಯೋಗಂಗಳಂ ನಿರವಶೇಷಂ ಕಲ್ತೊಡಲ್ಲದೆ ಜೋಯಿಸಮಂ ಕಲಲ್ಬಾರದು (ಸುಕುಮಾ. ೩-೩೫ ವ). [ ಚರಣ + ಅನುಯೋಗ ]

**ಚರಣಾಭರಣ** (ನಾ). ಕಾಲಿಗೆ ತೊಡುವ ಆಭರಣ: ಸಾಲದೇ ನಿಮಗಿನ್ನು ಕೌರವರೋಲಗದ ಫಲವಾಯ್ತಲಾ ವನಮಾಲೆ ಕೊರಳಿಂಗಲ್ಲ ಚರಣಾಭರಣವಾಯಿತೆಲೆ (ಕುವ್ಯಾ.ಸ. ೦೩-೬೦). [ ಚರಣ + ಆಭರಣ ]

**ಚರಣಾಯುಧ** (ನಾ).=ಚರಣಹೇತಿ : "ಕೃಕವಾಕುಃ, ತಾಮ್ರಚೂಡಃ, ಕುಕ್ಕುಟಃ, ಚರಣಾಯುಧಃ—ಈ ೪ ಕೋಟಿ" (ಹಲಾಯು. ೪೧-೯೪) ; ಕರಮೆಸೆಯೆ ಸಮೆದು ಬಂದುದು ಚರಣಾಯುಧಮದಟ ಚಿತ್ರಪರಿಶೋಭೆಗೆ ಬೆಂತರನೊಂದಾಶ್ರೈಸಿರ್ದುದು (ಯಶೋಚ. ೩-೨೪) : ಬಲಿದ ಚರಣಾಯುಧದವೊಲು ಪರರಳವನೀಕ್ಷಿಸಿ ಕಪಿಯವೊಲು ಮೈವಳಿಯ ಹತ್ತಿದರಂದು ಕಡಿತಲೆಗಾಱಿರುಭಯದಲಿ (ಕುವ್ಯಾ.ಭೀ. ೪-೩೫) ; ಪಾರಾವತಂ ಪರಪುಟ್ಟಂ ಚರಣಾಯುಧಂ ಶಕುನಿ . . . ರತ್ನಖಗಮಿರ್ಕುಂ ತದ್ವನಾಗೌಘದೊಳ್ (ರಾಜಶೇ. ೫-೫೯). [ಚರಣ + ಆಯುಧ]

**ಚರಣೆ** (ನಾ). ಕುದುರೆ, ದನ ಮುಂತಾದುವುಗಳಿಗೆ ಮೇವನ್ನು ಹಾಕಲು ಮಾಡಿದ ಮರದ ಚೌಕಟ್ಟು ; ಗೋದಲೆ ; ಚಂಡಿಗೆ : ಕುದುರೆಯ ಮಂದುರತಮಂ ಮೂಱಿ ಪುಗುವಂತೆ ಪೊಕ್ಕು ಚರಣೆಯ ಪುಲ್ಲೊಳ್ ಪೊರಳಲೊಡಂ (ಪಂಚತಂ. ೦೬೯-೧೦); ತುರಗದುರದುದ್ದ ಮಾಟ್ಟುದು ಚರಣೆಯ ನದಱೊಳಗು ಹಸ್ತವಿಸ್ತಾರಂ ಮತ್ತೆರಡುಂ ಕೆಲದೊಳ್ ಮುಂಡಿಗೆ (ಅಶ್ವಶಾ. ೭-೮) ; ಕೊಂದೆಳದು ಹಾಯ್ಕಿದಳ್ಚರಣೆಯೊಳಗೆ (ಪಾಕೋಪು. ೪-೭೩) ; ಮರದ ಪೆಟ್ಟಿಗೆ, ಛತ್ರದ ತೊಂಬೆ, ಹುಲ್ಲಿನ ಚರಣೆ ಒಂದನ್ನೂ ಬಿಡಬೇಡ (ನಿಶಿಅ. ೨೬೮).
[ ತುಳು. ಚರಣೆ = ಹುಲ್ಲುಗಾವಲು, ಗೋಮಾಳ./ಹಿಂ. ಚರನೀ ]

**ಚರಣೋಪಾಂತ** (ನಾ). ಕಾಲಿನ ಬಳಿ,-ಹತ್ತಿರ; ಪಾದದ ಸಮೀಪ: ಅನಂತವೀರ್ಯಕೇವಲಿಗಳ ಚರಣೋಪಾಂತದೊಳ್ ಕೈಕೊಂಡ ಪರಾಂಗನಾವಿರತಿವ್ರತದ ಭಂಗಮಂ ಬಗೆಯದೆ (ಪಂರಾಮಾ. ೯-೧೦೩ ವ).
[ ಚರಣ + ಉಪಾಂತ ]

**ಚರಪಡಿ** (ನಾ). ಒಂದು ಸ್ಥಳದ ಹೆಸರು (?) : ಅನ್ತೆ ಬನ್ದು ಕೊಟ್ಟಲೆ ಪಳ್ಳದ ಅಲಕಿಱುಕಿಯ ಕಗ್ಗಲ್ಲೊಟ್ಟಿಯ ಪುಣುಶೆ ಪಡಿಯ ಘೊರಪಡಿಯ ಬಳಿಪುಣುಶೆಯ ಚರಪಡಿಯ ತುಟ್ದಿಲೊಟ್ಬಿಯ ಇಶನ್ಬದಿಶಿ ಒಳಿಗೆಱಿಯ ಬರಡಗೆಱ್ (ಎಕ. XVI, ತಿಪಟೂ. ೦೪೦-೭೨ ; ಸು. ೯೦೦). [ ? ]

**ಚರಪಾಠ** (ನಾ). "ನಿರ್ದಿಷ್ಟ ಸ್ವರೂಪವಿಲ್ಲದ, ಅಸಂಗತವಾದ, ಅವ್ಯವಸ್ಥಿತವಾದ, ಸ್ಥಿರಸ್ವರೂಪವಿಲ್ಲದ ಪಾಠಕ್ಕೆ ಅನ್ವಯವಾಗುವಂಥದು. ಅಂಥ ಪಾಠವನ್ನು ಚರಪಾಠ(fluid text) ಎಂದೂ ಕರೆಯುತ್ತಾರೆ" (ಭಾರಪ. ೦೦೬). [ ಚರ + ಪಾಠ ]

**ಚರಪು** 'ಸೆರಪು' ನೋ.

**ಚರಬಂಡವಲ** (ನಾ). ೧. ದನಕರಂ ಮೊದಲಾದ ಚರ ಆಸ್ತಿ : (ಶ). ೨. ವ್ಯಾಪಾರದಲ್ಲಿ ತೊಡಗಿಸಿದ ಬಂಡವಾಳ: (ಮುಂಬಯಿ. ೬: ೩-೦೦೦). 'ಚಲಬಂಡವಾಳ' ಪರಾ. [ ಚರ + ಬಂಡವಲ ]

**ಚರಬಿ** 'ಚರ್ಬಿ' ನೋ.

**ಚರಮ** (ಗು). ೧. ಕಡೆಯ ;ಕೊನೆಯ; ಅಂತಿಮವಾದ: ಚರಮಾವಸ್ಥಿತ ವೀತರಾಗಹೃದಯಚ್ಛದ್ಮಸ್ಥ . . . ತವಿಸಿದಂ ಪಂಚಾಂತರಾಯಂಗಳಂ (ಅನಂಪು. ೯-೧೧೯); ಅಂತರಿಕವಾದ ಕವಿಯ ಧ್ಯಾನಾತ್ಮಕ ಅಥವಾ ಭಾವಾತ್ಮಕ ಜೀವನವು ಸ್ವಾಭಿವ್ಯಕ್ತಿಯನ್ನೇ ತನ್ನ ಚರಮ ಗುರಿಯನ್ನಾಗಿ ಮಾಡಿಕೊಂಡು ಅದಕ್ಕಾಗಿ ಮಾತ್ರ ಕಾವ್ಯರೂಪವನ್ನು ತಳೆಯುತ್ತದೆ (ಭಾವಗೀ. ೮). ೨. ತೀರ ಕೆಳವಂಟ್ಟದ; ಅತ್ಯಂತ ಕೀಳಾದ. ೩. ಪಶ್ಚಿಮ ದಿಕ್ಕಿನ; ಪಾಶ್ಚಾತ್ಯವಾದ: ಲೋಕಯಾತ್ರಿಗೈದು ಮನೆಯಿಂ ಪುಗುತರ್ಪಿನಿಯಂಗೆ ಚರಮದಿಕ್ಕಾಂತೆ ರನ್ನವಟ್ಟಲೊಳ್ ಪಿಂಗದೆತ್ತಿದಾರತಿಯ ಕೆಂಬೆಳಗೆನೆ ಸಂಧ್ಯಾರಾಗಮೆತ್ತಂ ಪರಿಯೆ (ಚಾಮಾಶ್. ೨೨-೬). (ನಾ). ೪. ಕೊನೆಯಲ್ಲಿ ರುವುದು ; ಅಂತ್ಯದಲ್ಲಿರುವುದು : ಪರಪದ ಪೂರ್ವಂ ದ್ವಿತ್ವಾಕ್ಷರವಾಗಿರೆ ಪೂರ್ವಪದದ ಚರಮಂ ಹ್ರಸ್ವಾಕ್ಷರಮಾಗೆ ಸಂಧಿದೋಷಂ (ಶಮದ. ೩೯). ೫. ಅಂತ್ಯ ; ಕೊನೆ: ಚರಮದೊಳಯ್ದುಂ ಜ್ಞಾನಾವರಣಮುಮಂ . . . ಪರಿಹರಿಸಿದನಯ್ದುಮಂತರಾಯಗಳುಮಂ (ಮಲ್ಲಿಪು.೦೪-೯೦). ೬. ತರುವಾಯಂ ; ಬಳಿಕ : "ಪಶ್ಚಾತ್, ಚರಮಂ — ಈ ೨ ಬಟಿಕಂ" (ಹಲಾಯು. ೦೦೭-೨೨): "ಚರಮಮೆನೆ ಪಶ್ಚಾದೆನಲು ಬಟಿಕಮಕ್ಕು" (ಮಂಗರಾ. ೦೨೯-೦೨): ಅಘಾತಿಗಳ ಚರಮದೊಳು ವಿಘ್ನಂ ಪರಿಸಲ್ಪಟ್ಟುದು (ಗೊಮ್ಮಸಾ. ೨-೮). [ ಸಂ. ]

**ಚರಮಕಲ್ಯಾಣ** (ನಾ). [ಜೈನ] ಜಿನನ ಪಂಚಕಲ್ಯಾಣಗಳಲ್ಲಿ ಕೊನೆಯ ಕಲ್ಯಾಣ ; ಪರಿನಿರ್ವಾಣಕಲ್ಯಾಣ : ಪರಮನ ಚರಮಕಲ್ಯಾಣಂ ಪರಿಪೂರ್ಣಮಾಗೆ (ಶಾಂತಿಪು. ೦೨-೩೭ ವ). [ ಚರಮ + ಕಲ್ಯಾಣ ]

**ಚರಮಗೀತ** (ನಾ). ಸತ್ತುಹೋದವರಿಗಾಗಿ ದುಃಖಿಸಿ ಅವರ ಗುಣಗಾನ ಮಾಡುವ ಹಾಡು : ತೆಳರಿಗೊಂದು ಚರಮಗೀತ ಹಾಡಲೆಂದು ಬಯಸಿ, ಇಂತು ನುಡಿದೆ ನಾನು (ಮಾಂದಳಿ. ೩೭-೦೩). [ ಚರಮ + ಗೀತ ]

**ಚರಮಗೀತೆ** (ನಾ). = ಚರಮಗೀತ : "ಅಳುಹಾಡು . . . ವಿಲಾಪಗೀತೆ; ಚರಮಗೀತೆ" (Elegy. ಇಂಕಿನಿ). [ ಚರಮ + ಗೀತೆ ]

**ಚರಮತನು** (ನಾ). ೧. ಕೊನೆಯ ದೇಹ; ಕೊನೆಯ ಜನ್ಮ. ೨. [ಜೈನ] ಕೊನೆಯ ಜನ್ಮದವನು; ಮೋಕ್ಷಗಾಮಿ : ಅಮೂರ್ತರ್ ಚರಮತನು ಸಮಾಕಾರರ್ (ಆದಿಪು. ೧-೨); ಪರಮಶ್ರೀವಲ್ಲಭಂಗೀ ಚರಮತನುಗಿದೇ ಬಾಟಿತ್ರಿ (ಪಂಚಾಮಾ. ೬-೦೨೩). [ ಚರಮ + ತನು ]

**ಚರಮದೇಹ** (ನಾ).=ಚರಮತನು ೧ : ಚರಮದೇಹ ಶತಾತ್ಮಜರಿಂದಮಾ ಮಹೋತ್ಪಲಮುಖಿಯಿಂದಮಾ ಸತಿ . . . ಪಡೆದಳ್ . . . ವ್ಯೊಮೆಯುಂ (ಆದಿಪು. ೮-೯೩); ಚರಮದೇಹಮಂ ತಾಳ್ದಿ (ಚಾಪುಂಪು. ೩೨-೦೩).
[ ಚರಮ + ದೇಹ ]

**ಚರಮದೇಹಧರ** (ನಾ). [ಜೈನ] ಕೊನೆಯ ಸಲ ದೇಹವನ್ನು ಧರಿಸಿದವನು ; ಇನ್ನು ಮುಂದೆ ಜನ್ಮವಿಲ್ಲದವನು ; ಮೋಕ್ಷಗಾಮಿ : ನೀಂ ಚರಮದೇಹಧರನೈ (ಅಜಿಪು. ೬-೬೨). [ ಸಂ. ]

**ಚರಮದೇಹಧಾರಿ** (ನಾ).=ಚರಮದೇಹಧರ: ಇವರಿರ್ವರರಸುಗಳಪ್ಪೊಡೆ ಚರಮದೇಹಧಾರಿಗಳ್ (ಆದಿಪು. ೧೮-೦೦೦ ವ). [ಸಂ. ಚರಮದೇಹಧಾರಿನ್]

**ಚರಮದೈಹಿಕ** (ಗು). ೧. ಚರಮದೇಹಕ್ಕೆ ಸಂಬಂಧಪಟ್ಟ. (ನಾ). ೨.= ಚರಮದೇಹಧರ : ನೀ ಚರಮದೈಹಿಕನೆನು ಧರೆಯೊಳೀ ನಿನ್ನಂತೆ ಪುಣ್ಯಾತ್ಮರುಗಳಾರೈ (ಗಗಚಾ. ೦೭-೪೭). [ ಸಂ. ]

**ಚರಮಧ್ಯಾನ** (ನಾ). [ಜೈನ] ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಎಂಬ ನಾಲ್ಕು ಧ್ಯಾನಗಳಲ್ಲಿ ಕೊನೆಯದು ; ಮೋಕ್ಷಸಾಧನವಾದ ಧ್ಯಾನ : ಪರಮಜಿನಪತಿಯ ಚರಮಧ್ಯಾನದಂತೆಯುಂ . . . ಮುನ್ನೀರೆ ಮೇರೆದಪ್ಪಿದಂತಪ್ಪುದುಂ (ಮಲ್ಲಿಪು. ೦೨-೦೩೨). [ ಚರಮ + ಧ್ಯಾನ ]

**ಚರಮವಾಕ್ಯ** (ನಾ). ೧. ಕೊನೆಯ ಮಾತು : ಸಾಯುವಾಗ ಆತನಾಡಿದ ಚರಮವಾಕ್ಯ ಎಲ್ಲರ ಕಣ್ಣಲ್ಲೂ ನೀರು ತರಿಸಿತು (ರೂಢಿ). ೨. ಸತ್ತವರ ಸ್ಮಾರಕವಾಗಿ ಅವರ ಸಮಾಧಿಯ ಮೇಲೆ ಬರೆದ ವಾಕ್ಯ : ಕೆಲವು ಹೊಸ ಗೋರಿಗಳು ಕಂಡುಬಂದವು. ಅವುಗಳ ಮೇಲೆ ಚರಮವಾಕ್ಯ ಗಳಿದ್ದುವು (ನಿಕಲ. ೦೯೨). [ ಚರಮ + ವಾಕ್ಯ ]

**ಚರಮಶರೀರ** (ನಾ). ೧.=ಚರಮತನು ೧ : ಚರಮಶರೀರಮಂ ಪಡುವ ಕೆಯ್ದುಗಳಿಲ್ಲ (ಮಲ್ಲಿಪು. ೦೪-೪೩). ೨.=ಚರಮತನು ೨: ಚರಮಶರೀರಂ ಸಗರಂ ಚರಮಶರೀರರ್ ನಿಜಾಗ್ರಜಾತರ್ ನೀನುಂ ಚರಮಶರೀರಂ (ಅಜಿಪು. ೦೦-೩೩). [ ಚರಮ + ಶರೀರ ]

**ಚರಮಶ್ಲೋಕ** (ನಾ). = ಚರಮಗೀತ : ನಿನ್ನ ಸಾಹಸಕಾರ್ಯಗಳನ್ನು ಪ್ರಶಂಸಿಸುವ ಚರಮಶ್ಲೋಕಗಳಲ್ಲಿ ಪ್ರತಾಪಕುಮಾರಿಯು ಹೆಸರೂ ಸೇರಿಕೊಳ್ಳಲಿ (ಆರ್ಯಕ. ೯೮). [ ಚರಮ + ಶ್ಲೋಕ ]

**ಚರಮಸಮಯ** (ನಾ). ೧. ಆಯುಸ್ಸಿನ ಕಡೆಗಾಲ ; ಅಂತ್ಯಸಮಯ ; ಮರಣಪೂರ್ವಕಾಲ : ಸ್ವಕೀಯ ಚರಮಸಮಯದೊಳ್ . . . ಪದಿ ಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಆದಿಪು. ೦೬-೯೯ ವ): ಚರಮಸಮಯದೊಳೆ ಬೋಧಾವರಣಮನಯ್ದಂತರಾಯಂ . . . ತೂಳ್ದಿ ತಾಳ್ದಿದಂ ಗುಣಗಣಮಂ (ವರ್ಧಪು. ೦೩-೬೮). ೨. ಕೊನೆಯ ಅವಕಾಶ : ಸಿಂಹಾಸನಾರೋಹಣಕ್ಕಿದುವೆ ಚರಮಸಮಯಮೆಂದಱಿವುವಂತೆ (ಪಂಚಾಮಾ. ೦೪-೦೨೩ ವ). [ ಚರಮ + ಸಮಯ ]

**ಚರಮಸ್ವರ** (ನಾ). ಶಬ್ದದ ಕೊನೆಯ ಸ್ವರ : ಚರಮಸ್ವರಕ್ಕೆ ಚರಮಾಕ್ಷರಕಕ್ಕುಂ ಲೋಪಂ (ಶಮದ. ೨೦೯). [ ಚರಮ + ಸ್ವರ ]

**ಚರಮಾಂಗ** (ನಾ). ೧.=ಚರಮತನು ೧ : ಕೊರಗದೆ ಕರಗದೆ ಪರಮನ ಚರಮಾಂಗಂ ದೀಪ್ರದೀಪಮೆನಿತೊದವಿದೊಡಂ (ಪುಷ್ಪಪು. ೦೪-೨೮). ೨.=ಚರಮದೇಹಧರ: ಪುರುಪರಮೇಶ್ವರಪುತ್ರಂ ಚರಮಾಂಗಂ ಚಕ್ರವರ್ತಿಯೆಂದೊಡೆ ಪೇಟಲ್ ದೊರೆ ಪೆಱರಾರ್ ಭರತನೊಳ್ (ಆದಿಪು. ೦೨-೦೦೯) : ಈ ದಶರಥಾಗ್ರತನೂಭವನೇಕವಾಕ್ಯನಾಕಾಕರಿಕರ್ಣಚಾಮರಯಶಂ ಚರಮಾಂಗನನಂತವೀರ್ಯಂ (ಪಂಚಾಮಾ. ೩-೬೨).
[ ಚರಮ + ಅಂಗ ]

**ಚರಮಾಕ್ಷರ**(ನಾ). ಶಬ್ದದ ಕೊನೆಯ ಅಕ್ಷರ; ಅಂತ್ಯಾಕ್ಷರ : ಚರಮಸ್ವರಕ್ಕೆ ಚರಮಾಕ್ಷರಕಕ್ಕುಂ ಲೋಪಂ (ಶಮದ. ೨೦೯). [ ಚರಮ + ಅಕ್ಷರ ]

**ಚರಮಾದರ್ಶ** (ನಾ). ಕೊನೆಯ ಧ್ಯೇಯ ; ಪರಮಾದರ್ಶ : ಅದು ಚರಮಾದರ್ಶವಲ್ಲದಿದ್ದರೂ ನಮ್ಮ ಪೂರ್ವಿಕರ ಆದರ್ಶ (ಕೀಪ್ರಕ್ರಿ. ೦೨೭).
[ ಚರಮ + ಆದರ್ಶ ]

**ಚರಮೂರ್ತಿ** (ನಾ).=ಚರಂತಿ ೨: ಚರಮೂರ್ತಿಯಾನೆ ನಿನ್ನಂ ಕರೆಯುತ್ತಿರೆ ಕೇಳದಂತೆ ತಳರ್ದಪೆ (ವ್ರಷವಿ. ೨೬-೨೩) ; ವಿವಾಹ ಮಾಡಿಕೊಳ್ಳದೆ ಚರಮೂರ್ತಿಯಾಗಿ ಅಲೆಯುತ್ತಿದ್ದ (ಗಿರಿಪ. ೩೩): ಶ್ರೀಶರೀಫರು ಹೆಚ್ಚು ಕಡಿಮೆ ಚರಮೂರ್ತಿಗಳಹಾಗಿದ್ದರು (ಶರೀಫ. ೬೯ ಕವಿಕಾವ್ಯಪರಿಚಯ).
[ ಚರ + ಮೂರ್ತಿ ]

**ಚರಯಿಸು** 'ಚರಿಸು' ನೋ.

**ಚರರೂಪು** (ನಾ). ಜಂಗಮನ ರೂಪು: ಹರನು ಚರರೂಪಿಂದೆ ಹರಿಯೆಂದು ನುಡಿವೇಳೆ ಕರದ ಹುಟ್ಟಿಂದ ತಿವಿದೀಶನೊಲಿಸಿದ ಗುರುವೆ ಸತ್ಕಕ್ಕ ಶರಣಾಗು (ಕರ್ನಾಕ. ೦೬೨). [ ಚರ + ರೂಪು ]

**ಚರಲಿಂಗ** (ನಾ). [ವೀಶೈ] ಜಂಗಮರೂಪವಾದ ಲಿಂಗ; ಜಂಗಮ: ಭಾವುರೇ ಚರಲಿಂಗಜೀವಕಳಾವ ಚರಲಿಂಗೈಕಜೀವನ (ಬಸವು. ೩೬-೩೪): ಸರ್ವಕರಣಂಗಳಂ ಚರಲಿಂಗ ಮುಖವ ಮಾಡಿ ಆತ್ಮವಿದ್ಯಾಲಿಂಗದಲ್ಲಿ ಮನ ಸಂದು (ಶೂನವ. ೨೭); ಶಿವನು ಚರಲಿಂಗವಾಗಿ ಬಂದು, ಚೂತಫಲವಂ ಬೇಡಲು, ಪವಾಡದಿಂದ ಚೂತಫಲವಂ ಮಾಡಿ ಇತ್ತು (ಭೈರಸೂ. ೯). [ಚರ + ಲಿಂಗ]

**ಚರಲೋಕ** (ನಾ). ಸ್ಥಿರವಲ್ಲದ ಲೋಕ; ಮರ್ತ್ಯಲೋಕ: ಚರಲೋಕ ಸ್ಥಿರವೆಂದು ವರರೆಲ್ಲ ನೆರೆನಂಬಿ, ತಿರುತಿರುಗಿ ತಿರೆಯೊಡನೆ ಕೆಡುತಿಹರಲಾ! (ಕಎವು. ೨೬-೩). [ಚರ + ಲೋಕ]

**ಚರವಿಗೆ** 'ಚರಿಗೆ$_1$' ನೋ.

**ಚರಸಹ** (ನಾ). ಒಂದು ಬಗೆಯ ಕುದುರೆ; ಪಳಗಿಸಿದ ಕುದುರೆ (?): ಈ ಐದು ಕ್ರಿಯೆಗಳನು ತಿಳಿದು ತಿದ್ದಿದ ಕುದುರೆ ಚರಸಹನೆನಿಸಿಕೊಂಬುವುದು (ಅಶ್ವಟೀ. ೨೩-೧೦). [?]

**ಚರಸೇವೆ** (ನಾ). ಜಂಗಮಸೇವೆ: ಶ್ರದ್ಧೆ ಸನ್ಮಾರ್ಗ ಭಕ್ತಿ ಇಲ್ಲದಲ್ಲಿ ಗುರು ಭಕ್ತಿ ಶಿವಲಿಂಗಪೂಜೆ ಚರಸೇವೆ ತ್ರಿವಿಧವೂ ಇತ್ತಲೆ ಉಳಿಯಿತ್ತು (ಮದೇವ. ೨೭೪-೦೭); ಕೊಟ್ಟಿಯದಿರಿ ಶಿವಪೂಜೆಯ ಬಿಟ್ಟು ಮಟ್ಟಿಯದಿರಿ ಚರ ಸೇವೆಯ (ಸರ್ವವ ೩೪-೦೬೯). [ಚರ + ಸೇವೆ$_1$]

**ಚರಸೋಪಾನ**(ನಾ). "ಪ್ರಯಾಣಿಕರನ್ನು ಮೇಲಕ್ಕೆ ಹತ್ತಿಸುವುದಕ್ಕಾಗಲಿ ಕೆಳಕ್ಕಿಸುವುದಕ್ಕಾಗಲಿ ಉಪಯೋಗಿಸುವ ಚರಸೋಪಾನ; ತಿರುಗು ಮೆಟ್ಟಿಲು" (Escalator. ಇಂಕನಿ). [ಚರ + ಸೋಪಾನ]

**ಚರಸ್ವತ್ತು** (ನಾ). = ಚರಜಂದಗಿ: ನಮ್ಮ ಸ್ಥಿರ ಹಾಗು ಚರಸ್ವತ್ತುಗಳೆಲ್ಲ ಇವರದೇ ಅಲ್ಲವೆ? (ದಾನಚಿಂ. ೦೦೪). [ಚರ + ಸ್ವತ್ತು]

**ಚರಾಕು** (ನಾ). ಹುಲ್ಲುಗಾವಲು. [← ಹಿಂ. ಚರಾಗಾಹ್]

**ಚರಾಚರ** (ಗು). ೧. ಚಲಿಸುವ ಮತ್ತು ಚಲಿಸಲಾರದ; ಸ್ಥಾವರವಾದ ಹಾಗು ಜಂಗಮವಾದ: ಪರಮಾಗಮಮೂರ್ತಿ ಚರಾಚರ ಲೋಕಾಲೋಕ ಸಂಪ್ರದಾಯಿನಿ . . . ಸರಸ್ವತೀದೇವಿ ವರದೆಯಕ್ಕೆಮಗೆಂದುಂ (ಕಾವ್ಯಾವ. ೨); ಜಗದೊಳುಳ್ಳ ಚರಾಚರ ಪ್ರಾಣಿಗಳವೆಲ್ಲಿರ್ದೆಡೆಯೊಳಸುಗಳ ತಗಹು ಬಿಟ್ಟವು (ಬಸವು. ೨೦-೩೩). (ನಾ). ೨. ಸ್ಥಾವರ ಹಾಗು ಜಂಗಮ ವಸ್ತುಗಳು: ಧರೆ ಗಗನವಡಸಿ ಕಾದುವಡೆಡೆಯಲಿಹ ಚರಾಚರ ವೆಲ್ಲಿ ಹೊಗಲಿ (ಹಕಕಾ. ೨-೨೩). ೩. ಸ್ಥಾವರ ಹಾಗು ಜಂಗಮ ವಸ್ತು ಗಳಿಂದ ಕೂಡಿದ ಜಗತ್ತು: ಈ ಚರಾಚರ ವಿಚಾರ ವ್ಯಾಪ್ತಿ ನಿಮ್ಮಡಿಗ ಗೋಚರವೆ ಶಿವಶಿವಾ (ಕೃಮಿಥಾ. ೨-೩೩); ಅವನೊಳಡಗುವುದಖಿಳ ಚರಾಚರವಾ ವಿಷ್ಣುಗಾನೆಚಿಗುವೆನು (ಹರಿಬ. ೮-೦). [ಚರ + ಅಚರ]

**ಚರಾದಾಯ** (ನಾ). ೧. ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ವಸ್ತು, ಪ್ರಾಣಿ ಮೊದಲಾದುವುಗಳಿಂದ ಬರುವ ಆದಾಯ: ತೋಟ ತುಡಿಕೆ ಕಳಕೋಠಾರ ಸುಂಕ ಚರಾದಾಯ (ಮೈಆರಿ. ೦೯೪೬, ೦೪-೦೯; 1488); ಚರಾದಾಯ ಸ್ಥಿರಾದಾಯ (ಮೈಆರಿ. ೦೯೩೦, ೯೩-೩೦; 1604); ಗ್ರಾಮಾದಾಯ ಚರಾದಾಯ ಹೊರಾದಾಯ ಇವು ಮೊದಲಾದ ಆ ಸಕಲ ಸ್ವಾಮ್ಯವನೂ . . . ಅನುಭವಿಸಿಕೊಂಡು ಬಹರು (ಎಕ. XIV, ಮೈಸೂರು. ೧೦೩-೪೦೪; 1674). 'ಸ್ಥಿರಾದಾಯ' ಪರಾ. ೨. ವಾರಸುದಾರರಿಲ್ಲದ ದನಕರುಗಳ ಮಾರಾಟದಿಂದ ಸರ್ಕಾರಕ್ಕೆ ಬರುವ ಆದಾಯ: ಈ ವೃತ್ತಿಗೆ ಸಲ್ಲುವ . . . ಹುಲ್ಲುಹಣ ಚರಾದಾಯ ಹೊರಾದಾಯ ಶೀಗೇಮಡಿ ಪತಂಗ (ಹುಟ್ಟುಹ. ೩). ೩. ಸಂಬಳವಲ್ಲದೆ ಮೇಲೆ ಬರುವ ಲಂಚ, ರುಸುಮತ್ತು ಮೊದಲಾದ ಆದಾಯ: (ಕ). [ಚರ + ಆದಾಯ]

**ಚರಾಯ** 'ಚರಾಯಿ' ನೋ.

**ಚರಾಯಿ,** ಚರಾಯ (ನಾ). ೧. ಹುಲ್ಲುಗಾವಲು; ಹುಲ್ಲಿನ ಬಯಲು: (ಕ). ೨. ಹುಲ್ಲುಗಾವಲಿನಲ್ಲಿ ದನಕರುಗಳನ್ನು ಮೇಯಿಸುವಿಕೆ: ಲಕ್ಷ್ಮಿ ನಲ್ಲು ಇದ್ದಂಥಾ ಛಾಗರಾದ ಎತ್ತುಗಳನ್ನು ಮಹಾರಾಜರವರು ತಮ್ಮ ವಶಕ್ಕೆ ತೆಗೆದುಕೊಂಡು, ಹುಲ್ಲು ನೀರು ಇದ್ದಲ್ಲಿಗೆ ಚರಾಯಿಗೆ ಕೂಡಿಸಿದರು (ರಾಜೇಂದ್ರ. ೦೧೪೬). **ಚರಾಯು:** ೧. ಚಿತ್ರದುರ್ಗದ ದನಗಳು ಬೂದಿಹಾಳ್ ಚರಾಯುದಲ್ಲಿ ಮೆಯ್ಯುವವು (ಚಿತ್ರಬಾ. ೭೩). [← ಮರಾ. ಚರಾಯಿ; ಹಿಂ. ಚರಾಈ, ಚರಹೀ]

**ಚರಾರ್ಚನೆ** (ನಾ). ಚರಸೇವೆ; ಜಂಗಮಾರ್ಚನೆ: ಗಳಗಳನೆ ಬಳೆದು ಧನವಮಂ ಗಳಿಸಿ ಚರಾರ್ಚನೆಯನೆಸಗಿ ಹರಕೃಪೆವಡೆದು (ರಾಜಶೇ. ೦೩-೦೦೯). [ಚರ + ಅರ್ಚನೆ]

**ಚರಾವು** (ನಾ). ಹುಲ್ಲುಗಾವಲು: ಚರಾವಿನ ನೆಲದ ವಿಸ್ತಾರಕ್ಕೂ, ಉಳುಮೆಗೆ ಬಳಸಿಕೊಳ್ಳುವ ನೆಲದ ವಿಸ್ತಾರಕ್ಕೂ, ಅಜಗಜಾಂತರ ವ್ಯತ್ಯಾಸವಿದೆ (ಐಕಿಸಂ. ೪೬). [← ಹಿಂ. ಚರಾಊ]

**ಚರಾಸ್ತಿ** (ನಾ). = ಚರಜಂದಗಿ: (Personal-estate. ಪಕ್ರಿನಿ. ೩೩). [ಚರ + ಆಸ್ತಿ]

**ಚರಿ$_1$** (ಕ್ರಿ). (?): ಮೊರೆಹೊಕ್ಕರ ಕಾವ ಮಾರಾಂತರ ಕೊಲುವ ಕಸ್ತೂರಿ ಕೋಲಾಹಲ ಚರಿದು ಚಲ್ವರ ಗಂಡ ಹರತಿಯಿಮ್ಮಡಿರಂಗಪ್ಪನಾಯಕ ಅಯ್ಯನವರ (ಎಕ. XII, ತಿಪ. ೮೪-೩; 1612). [?]

**ಚರಿ$_2$** 'ಸಚ್ಚು' ನೋ.

**ಚರಿ$_3$** (ನಾ). ಸಖಿ; ಸೇವಕಿ: ರಾಕ್ಷಸಿ ನಾಸವೀಕ್ಷಿಸುತಾ ಚರಿಯರ ಮೈಮ್ಯಸಳುತಲೇನೆನಲು (ಐರಾಮಾ. ೨೪೮-೦). [ಸಂ. ಚರೀ]

**ಚರಿ$_4$** (ನಾ). ಕೈಯಿಂದ ಹೊಸೆದು ಮಾಡಿದ ನಾರಿನ ಅಥವಾ ಸೆಣಬಿನ ಹುರಿ: ಬೇನೆಯು ಮನುಷ್ಯನು ಮರಣೋನ್ಮುಖನಾದನೆಂದರೆ ಅವನ ಬಾಯಲ್ಲಿ ಸಕ್ಕರೆ ಕೂಡಿಸಿದ ನೀರು ಹಾಕಿ, ಕಾಲುಗಳನ್ನು ಚಾಚಿ ಅಂಗುಷ್ಠಗಳನ್ನು ಚರಿಯಿಂದ ಬಿಗಿಯುವರು (ಕಧಾಗ. ೨೩೯). [← ಮರಾ. ಚರೀ]

**ಚರಿಕೆ** 'ಚರಕಿ' ನೋ.

**ಚರಿಗೆ$_1$,** ಚರವಿಗೆ, ಚರುವಿಗೆ, ಚವರಿಗೆ, ಚೆರಿಗೆ, ಚೌರಿಗೆ$_1$ (ನಾ). ಚೆಂಬು, ತಂಬಿಗೆ, ಬಿಂದಿಗೆ, ತಪ್ಪಲೆ ಮೊದಲಾದ ಲೋಹದ ಪಾತ್ರೆ: ಧರ್ಮಪತ್ನಿ ಚರಿಗೆಯಲ್ಲಿ ನೀರು ತಂದು ಕೊಟ್ಟರು (ನಡಪ. II, ೦೦೩೮); ಒಲೆಯ ಮೇಲೆ ತಕಪಕಿಸುತ್ತಿದ್ದ ಅನ್ನದ ಹಿತ್ತಾಳೆ ಚರಿಗೆಯನ್ನು ಒಲೆಯ ಪಕ್ಕದಲ್ಲಿಟ್ಟದ್ದ ತಾವುದ ಬಾಗುವುರಿಗೆಗೆ ಎತ್ತಿ ಇಳಿಸಿ . . . ಅನ್ನ ಬಸಿಯಲು ಅಣಿಯಾಗುತ್ತಿದ್ದಳು (ಮಲಮ. ೩೦೦); ಪಾಕಶಾಲೆಯ ರೂಪರೇಷೆ ತಕ್ಕಮಟ್ಟಿಗೆ ಪ್ರದರ್ಶಿತವಾಗಿತ್ತು. ಬಾಗುವುರಿಗೆ . . . ಮೊಸರುಗಡಿಗೆ, ಮಜ್ಜಿಗೆ ಚರಿಗೆ . . . ನೋಣಗಳು ಇತ್ಯಾದಿ (ಕಾಸೂರು. ೩೦). **ಚರವಿಗೆ:** ಚರವಿಗೆಯಲ್ಲಿ ನೀರನ್ನು ಯಾವಾಗಲೂ ತುಂಬಿಟ್ಟಿರಬೇಕು (ರೂ೦). **ಚರುವಿಗೆ:** ಮಲ್ಲಿಕಾರ್ಜುನನ ಬಾಣಸಕೊಂದು ಚರುವಿ[ಪಾಠಾಂ. ಚಾರಿ]ಗೆಯೊಸಟ್ಟುಗವೊ (ಸಿದ್ಧರಾ. ೯-೩); ಇವನ್ನೆಲ್ಲಾ ಕೂಡಿ ತಾವುದ ಚರುವಿಗೆಯಲ್ಲಿ . . . ಅಟ್ಟು (ಸೂಶಾಸ್ತ್ರ. ೦೭೯); ಕೊಡಪಾನ ಚರುವಿಗೆ ಗಿಂಡಿ (ಸಿದ್ಧಕಾ. ೦೩-೪೨). **ಚವರಿಗೆ:** ಒಂದು ಚವರಿಗೆ ನೀರು ತರೋ ಅಪ್ಪರಲ್ಲೇ ಸುಸ್ತಾಗಿ ಬುಟ್ಟು (ವಾಲ್ಮೀಮು. ೦೩೦); ಒಂದು ಚವರಿಗೇಲಿ ತಗೊಂಡು ಒಯ್ಯ ಬಾರದೇನವ್ವ? (ಅವಕಂ. ೭೬). **ಚೆರಿಗೆ:** ಚೆರಿಗೆ ಪಾತ್ರೆಗಳು ಬರಿದಾಗುವವು (ನಾಟಕ. ೫೦). **ಚೌರಿಗೆ$_1$:** ಅತ್ತೆಯ ಮನೆ ಬಂದೊ ಮುತ್ತಿನ ಚೌರಿಗೆ ಬಂದೊ ಹಡೆದಮ್ಮ ನೀರ ಹದಮಾಡಿ (ಹಳ್ಳಿಬಾ. ೩೩); ಚೌರಿಗೆ ತೆಗೆದುಕೊಂಡು ತಾನೇ ನೀರಿಗೂ ಹೋಗುತ್ತಿದ್ದಳು(ಸರ್ವಮಂ. ೯): ಅಮ್ಮಯ್ಯನು ಚೌರಿಗೆಯನ್ನು ತೆಗೆದುಕೊಂಡು ಭಾವಿಯ ಹತ್ತಿರಕ್ಕೆ ಹೊರಟರು . . . ಅವನು ಐದಾರು ಚೌರಿಗೆ ಸೇದಿಕೊಟ್ಟ (ಜಂಗಾಳ್ನ. ೦೦).

**ಚರಿಗೆಕಾಯು** = ಹೊಟ್ಟೆ ಹಸಿ : ನೈವೇದ್ಯದ ಅಕ್ಕಿ ಎಸರುನೀರನ್ನು ಸೇರುವ ಮೊದಲೇ, ಐತಾಳರಿಗೆ ಚರಿಗೆಕಾಯುತ್ತದೆ (ಮಂಮ. ೧೦).
**ಚರಿಗೆ ತೆಗೆದುಕೊಂಡು ಹೋಗು**=ಮಲವಿಸರ್ಜನೆಗೆ ಹೋಗು: ಶಿವಪುತ್ರ ಬಾಗಿಲಿಗೆ ಬರುವುದಕ್ಕೂ, ಬಸವ್ವ 'ಚರಿಗೆ ತೆಗೆದುಕೊಂಡು' ಹೋದವಳು ಹಿಂದಿರುಗುವುದಕ್ಕೂ ಸರಿಹೋಯಿತು (ಐರಹಾ. ೯೯).

[ ದೇ. ೩ ತುಳು. ಚರಿಗೆ, ಚೆರಿಗೆ; ತೆಲು. ಚೆರವ. / ಹಿಂ. ಚರವಾ ; ಮರಾ. ಚರವೀ. / ಸಂ. ಸರಕ ]

**ಚರಿಗೆ₂** 'ಚರಿಯೆ' ನೋ.

**ಚರಿಗೆಗುಡು** 'ಚರಿಗೆಗೊಡು' ನೋ.

**ಚರಿಗೆಗೊಡು, ಚರಿಗೆಗುಡು** (ಕ್ರಿ). [ಜೈನ] ಭಿಕ್ಷೆಗೆ ಹೊರಡು; ಚರಿಗೆಗೆ ಬರು : ಮುನಿಪತಿ ಚರಿಗೆಗೊಟ್ಟನರಣ್ಯದಿಂದಾ ರಾಜವೀಧಿಯೊಳು (ಸಾಳ್ವಭಾ. ೩-೩). **ಚರಿಗೆಗುಡು:** ಕಿಸುಕುಳರೂಪಿಂ ಕೃತಕರ್ಷಿಯಾಗಿ . . . ಚರಿಗೆಗುಡುವುದುಂ [ಪಾಠಾಂ. ವರ್ಪುದುಂ] (ಧರ್ಮಾಮೃ. ೪-೭೭) ; ಆ ನಗರಕ್ಕರಣ್ಯದಿಂ ಚರಿಗೆಗೊಟ್ಟನಂಗಜಮಲ್ಲಂ (ಅರ್ಥನೀ. ೦-೯೦); ಅರಮನೆ ವಾಗಿಲೊಳ್ ಚರಿಗೆಗೊಟ್ಟವರಂ ನಿಲಿಸಲ್ಕೆ ಪೋಪ ಭೂವರನೊಡವೋಗಿ (ಪುಷ್ಪಪು. ೩-೯೮). [ ಚರಿಗೆ₂ (<ಚರಿಯೆ) + ಕೊಡು₁ ]

**ಚರಿಗೆದೋಱು** (ಕ್ರಿ). ಭಿಕ್ಷೆಯನ್ನು ಸ್ವೀಕರಿಸು ; ಭೋಜನಮಾಡು : ಕಿತ್ತ್ರಯ್ಯಂಗಳನೆಮ್ಮಲ್ಲಿಗೊಡಗೊಂಡು ಬಂದು ಚರಿಗೆದೋಱೆ ನೀಮುಂ ಬಿಜಯಂಗೆಯ್ಯಿಮೆನೆ (ವಡ್ಡಾರಾ. ೮೦-೦೩).

[ ಚರಿಗೆ₂ (<ಚರಿಯೆ) + ತೋಱು ]

**ಚರಿಗೆನಿಲಿಸು** (ಕ್ರಿ). ಚರಿಗೆಗಾಗಿ ಬಂದ ಮುನಿಗಳನ್ನು ಊಟಕ್ಕಾಗಿ ನಿಲ್ಲಿಸಿಕೊಳ್ಳು : ಅರಸಿ ತಾ ಮಲಧಾರಿದೇವರ ಚರಿಗೆನಿಲಿಸಲೆ ಬಂದಿಸಿರೆ ನಿನ್ನರಸನಾಗಲಿಯುಳ್ಳೊಡಾತ್ಮಜನಾಗಲೆಲೆ ಮಗಳೇ ಚರಿಗೆನಿಲಿಸಲೆ ನಿಲ್ವೆನುತವೆ ವರಸಿ ಬಿಜಯಂಗೈಯೆ (ಸಾಳ್ವಭಾ. ೩-೦೮).

[ ಚರಿಗೆ₂ (<ಚರಿಯೆ) + ನಿಲಿಸು ]

**ಚರಿಗೆವರ್** (ಕ್ರಿ). ಆಹಾರದ ಭಿಕ್ಷೆಗೆ ಬರು; ಪಾರಣೆಗೆ ಬರು: ಇಂದೆಮ್ಮ ಮನೆಗೆ ಚರಿಗೆವರಲ್ವೇಟ್ಟುಮೆಂದು ನುಡಿದೊಡೆ (ವಡ್ಡಾರಾ. ೫೦-೨೬) : ಮುನಿವರರಂತೀ ಗಿರಿಗೆ ಚರಿಗೆವರ್ಪರ್ (ಆದಿಪು. ೫-೭) ; ಕಿಸುಕುಳ ರೂಪಿಂ ಕೃತಕರ್ಷಿಯಾಗಿ . . . ಚರಿಗೆವರ್ಪುದುಂ [ಪಾಠಾಂ. ಗುಡುವುದುಂ] (ಧರ್ಮಾಮೃ. ೪-೭೭). [ ಚರಿಗೆ₂ (<ಚರಿಯೆ) + ಬರ್₁ ]

**ಚರಿಗೆವುಗಿಸು** 'ಚರಿಗೆವೊಗಿಸು' ನೋ.

**ಚರಿಗೆವುಗು** 'ಚರಿಗೆವೊಗು' ನೋ.

**ಚರಿಗೆವೊಗಿಸು, ಚರಿಗೆವುಗಿಸು** (ಕ್ರಿ). ಆಹಾರದ ಭಿಕ್ಷೆಗೆಂದು ಮನೆಮನೆಗೆ ಕಳುಹಿಸು: ಋಷಿಸಮುದಾಯವೆಲ್ಲಮಂ ಚರಿಗೆವೊ[ಪಾಠಾಂ. ವು]ಗಿಸುತ್ತುಂ (ವಡ್ಡಾರಾ. ೮೫-೦೦). **ಚರಿಗೆವುಗಿಸು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚರಿಗೆ₂ (<ಚರಿಯೆ) + ಪೊಗಿಸು ]

**ಚರಿಗೆವೊಗು, ಚರಿಗೆವುಗು** (ಕ್ರಿ). ಆಹಾರದ ಭಿಕ್ಷೆಗಾಗಿ ಮನೆಯೊಳಗೆ ಪ್ರವೇಶಿಸು,– ಬರು : ನಿರ್ಮಳಚರಿತಂ ಚರಿಗೆವೊಕ್ಕನರಸನ ಬೀಡಂ (ಆದಿಪು. ೫-೦೦). 'ಚರಿಗೆವೊಗಿಸು' ಪರಾ. **ಚರಿಗೆವುಗು :** ಕಿಱುಮನೆ ಪೆರ್ಮನೆಯೆನ್ನದುಣಲ್ಪಕ್ಕ ಮನೆಗಳಂ ಚರಿಗೆವುಗುತ್ತುಂ ಬರ್ಪೊರ್ (ವಡ್ಡಾರಾ. ೭೮-೬) ; ಸಾಕೇತನಗರಕ್ಕೆ ಪ್ರೀತಿಂಕರವಘುನಿ ಚರಿಗೆವುಗೆ (ಚಾವುಂಪು. II, ೩೮-೨೯). [ ಚರಿಗೆ₂ (<ಚರಿಯೆ) + ಪೊಗು ]

**ಚರಿಗೆವೋಗು** (ಕ್ರಿ). ಭಿಕ್ಷೆಗಾಗಿ ಹೋಗು : ನೀಮಿಾ ನಗರಕ್ಕಾಗಿ ಚರಿಗೆ ವೋಗುತ್ತುಂ (ಸುಕುಮಾ. ೫-೨) ; ಅತಿಕ್ಷಪಿತಕಾಯರಾಲೋಕನಗರಕ್ಕೆ ಚರಿಗೆವೋ[ಪಾಠಾಂ. ಚರಿಗೆಗೆ ಪೋ, ಚರಿಗೆಗೆ ಪೋ]ದೊಡೆ (ಪಂರಾಮಾ. ೦೫-೯೯ ವ). [ ಚರಿಗೆ₂ (<ಚರಿಯೆ) + ಪೋಗು₁ ]

**ಚರಿಚಲಿ** 'ಚೆಂಚಲಿ' ನೋ.

**ಚರಿಜಲಿ** 'ಚೆಂಚಲಿ' ನೋ.

**ಚರಿತ** (ಗು೦). ೧. ಮಾಡಿದ; ನೆರವೇರಿಸಿದ; ಸಾಧಿಸಿದ. 'ಚರಿತಾರ್ಥ' ಪರಾ. (ನಾ). ೨. ಗಮನ ; ಗತಿ ; ನಡಗೆ. ೩. ನಡೆದುದು ; ಆಗಿ ಹೋದುದು. ೪. ಜೀವನಕಥೆ; ಚರಿತ್ರೆ; ಇತಿಹಾಸ : ತ್ರಿಷಷ್ಟಿಶಲಾಕಾ ಪುರುಷರ್ಕಳ ಚರಿತಂಗಳುಮನಾಚಾರಮಾರಾಧನೆ ಮೊದಲಾಗೊಡೆಯಂ ಕರಣಗ್ರಂಥಂಗಳುಮಂ . . . ಕಲ್ತೊಡಲ್ಲದೆ ಪೇಟಲಾಗದು (ವಡ್ಡಾರಾ. ೬-೬) ; ಕವಿರತ್ನನೆನ್ನಿತಮಾದುದು ಸಗರಚಕ್ರವರ್ತಿಯ ಚರಿತಂ (ಅಜಿಪು. ೦೨-೨೭). ೫. ನಡೆವಳಿಕೆ ; ಆಚಾರ ; ಶೀಲ : "ಚರಿತಂ ರೀತಿ ಚಾರಿತ್ರಮೆನೆ ಶೀಲಮೆನೆ ಚರಿತ್ರಮೆನಲ್ಕೆಯಾಚಾರಕಕ್ಕು ನಾಮಂ" (ಮಂಗರಾ. ೭೯-೩) : ಆ ಯವ್ವನದೊಳವರ ಚರಿತಂ ಕರಂ ಪೊಸತು (ತಿರುರ. ದೇ.೪-೩). ೬. ವಿಧಿ ; ಕ್ರಮ : ಹರುಷದಿಂದಾ ಕೈಯಲಾ ಅವ್ಯಕ್ತಲಿಂಗಮಂ ಚರಿತದಿ ಪ್ರತಿಷ್ಠಿಸಿ ಮಹಾಪೂಜೆಯಂ ಮಾಡಿ (ಸಿದ್ಧರಾ. ೬-೫೭). ೭. ಅದ್ಭುತಕಾರ್ಯ ; ಸಾಹಸಕೃತ್ಯ. ೮. (ಆಲಂ) ಆಡಳಿತ; ಆಳ್ವಿಕೆ: ತಿರಿಕನನು ಕರತಂದು ಧರಣಿಯ ಚರಿತದೊಳಗಿರಿಸಿದರೆ ಮರ್ಕಟ ಶರೆಯ ಸೇವಿಸಿದಂತೆ ಕುಣಿವರೆ ಭಗಿನಿಭಗಭಾಗ್ಯಾಧರವ ತಿಂದಿರ ಲಾರದಲೆ ಇದಗರೆದೆಯಾಕೆಯ ನೋಡಿ ನೃಪನನುಸರಿಸಿ ಇಹನೆಂದಂತರಂಗದಿ ತಿಳಿವುದೆನೆ ಮಂತ್ರಿ (ಬಿಜ್ಜಪು. ೬೨-೫೪). [ ಸಂ. ]

**ಚರಿತಂ** (ಅ). ಬೇಗನೆ ; ತ್ವರಿತವಾಗಿ : ಪತ್ತೆಂಟು ದೇಸೆ ವಿಳಾಸದೊಳ್ ತೊಡರೆ ಚರಿತಂ ಬಂದರ್ ಕಣ್ಗೊಪ್ಪಿರಲ್ ವರಭೋಗಿಯರ್ (ಪಂಪಭಾ. ೯-೧೦೨). [ <ತ್ವರಿತ ? ]

**ಚರಿತಪುರಾಣ** (ನಾ). ಮಹಾಪುರುಷರ ಚರಿತ್ರೆಯನ್ನೊಳಗೊಂಡ ಪುರಾಣ : ಚರಿತಪುರಾಣದೊಳೊಂದಕೆ ಬರೆದರ್ ಬರೆದಿಕ್ಕಿದತ್ರಿಷಷ್ಟಿ ಸಲಾಕಾಪುರುಷಪುರಾಣಮಂ (ಚಾವುಂಪು. ೪-೨೦) : ಚರಿತಪುರಾಣ ಮನಱಿಯದೆ ತುರಿಪದಿನಧ್ಯಾತ್ಮಿಯಾಗಿ ನೆಗೞ್ವನ ತಪಮುಂ . . . ಪಂದೆಯ ಬಿರುದುಂ ಸುಖಮಾಗಲಾಱವೆಂದುಂ ಕಡೆಯೊಳ್ (ಧರ್ಮಾಮೃ. ೬-೯೯). [ಚರಿತ + ಪುರಾಣ ]

**ಚರಿತಾರ್ಥ** (ಗು೦). ೧. ಗುರಿಯನ್ನು ಸಾಧಿಸಿದ ; ಇಷ್ಟಸಿದ್ಧಿಯನ್ನು ಮಾಡಿಕೊಂಡ (ನಾ). ೨. ಕಾರ್ಯಸಿದ್ಧಿ; ಇಷ್ಟಸಿದ್ಧಿ; ಉದ್ದಿಷ್ಟ ಪ್ರಾಪ್ತಿ : ನನ್ನೊಳಗು ಹೊರಗು ನಾ ಗುಡಿಬಳಸಿನೊಳಗಲೆದ ಚರಿತಾರ್ಥ ಪಡೆಗೊಂಡಿತೀ ಕಬ್ಬದೊಳಗೆ (ಮಲದೇ. ೫೦-೪). ೩. ಇಷ್ಟಸಿದ್ಧಿಯನ್ನು ಪಡೆದವನು ; ಕೃತಾರ್ಥ ; ಧನ್ಯ : ಪರವಾಯು ಮೂಱುದಿವಸಂ ಚರಿತಂ ಚರಿತಾರ್ಥನಾ[ಗುನೀ]ನೆಂಬವೊಲ್ (ಸುಕುಮಾ. ೧೦-೮೩) ; ಬಿನ್ನಪಮಂ ಬಗೆಗೊಳ್ಳುದು ಚರಿತಾರ್ಥನಾಗೆ ಮಾಡುವುದೆನ್ನಂ (ಪಂರಾಮಾ. ೯-೦೩೬) ; ಏಂ ಚರಿತಾರ್ಥನೊ ಸಾರ್ವಭೌಮರೊಳ್ ಯಮತನಯಂ (ಜಗವಿ. ೦೭-೫); ನಿಮ್ಮ ಕಾರುಣ್ಯೋದಯವು ಯೆಮಗಾಯ್ತೆಲಾ ಚರಿತಾರ್ಥರಾವೆಂದ (ಕುಮಾವ್ಯಾಆ. ೦೦-೨೮). ೪. ಬದುಕು; ಹೊಟ್ಟೆಪಾಡು: ವಸುಮತಿ ಈ ಹೊಲಗಳಲ್ಲಿ ತನ್ನ ಬೆವರು ಹರಿಸಿ ಚರಿತಾರ್ಥವನ್ನು ಚೊಕ್ಕಟವಾಗಿ ಸಾಗಿಸುತ್ತಿದ್ದಳು (ಮುಚ್ಚುಮು. ೬) ; ಅವಳ ತಂದೆ . . . ಬಂದುದರಲ್ಲಿಯೇ ಚರಿತಾರ್ಥ ಸಾಗಿಸುತ್ತಿದ್ದ (ಅಕ್ರಮು. ೪೭) ; ಅವರಿಗೆ ಬರುತ್ತಿದ್ದ ಸಂಭಾವನೆಯೂ, ಹೊಲಗದ್ದೆಗಳಿಂದ ಬರುವ ಉತ್ಪನ್ನಗಳೂ ಸೇರಿ ಅವರ ಚರಿತಾರ್ಥ ನಡೆಯುತ್ತಿತ್ತು (ರಾಜ್ಯೋದ. ೫).

[ ಚರಿತ + ಅರ್ಥ ]

**ಚರಿತಾರ್ಥತ್ವ** (ನಾ). ಕೃತಕೃತ್ಯತೆ; ಕೃತಾರ್ಥತೆ : ಇದುವೆ ಪರ ತತ್ತ್ವಾನುಭವಸುಖವಿದುವೆ ಚರಿತಾರ್ಥತ್ವಮುಂದಿರವಿದುವೆ ತುದಿಪದವೆಂದು ನಿನ್ನಿಂದವೆ ವಿದಿತವಹುದು (ಬಸಪು. ೨-೩೬). [ ಸಂ. ]

**ಚರಿತೆ** (ನಾ). ೧. ಚಾರಿತ್ರ್ಯ; ಶೀಲ; ಸ್ವಭಾವ: ವಿತರಣ ಧೈರ್ಯ ವಿದ್ಯಾ ಗೌರವಂಗಳಲಿ ಸುರಮಹೀಜನರಾಜ ರುದ್ರರ ಚರಿತೆಗಳಿಗಿಮ್ಮಡಿಯೆನಿಸಿ ಸತ್ಪುರುಷನಿಲ್ಲಿಗೆ ಸಲಹ ಬಂದನು (ಬಸಪು. ೩-೬೪). ೨. ಕಥೆ; ಜೀವನ ಚರಿತ್ರೆ: ಮುನ್ನಿನ ವೃದ್ಧಭಕ್ತರ ಚರಿತೆಗಳನೊರೆದುದ್ಧರಿಸಿ ಜಗದೇವನಂ ಸಲಹಿದನು ಬಸವೇಶ (ಬಸಪು. ೬೦ ಸೂಚನೆ); ವಿಘ್ನೇಶ್ವರನು . . . ಸರಸ್ವತಿಯರೀ ಕೃತಿಗೆ ನೆಟಿ ಬಾರದಿರರದೇಕೆಂದೊಡೆ ಮಹಾಶಿವಶರಣ ಶಂಕರದಾಸಿಮಯ್ಯನ ಚರಿತೆಯಾದುದಱಿಂದೆ (ಶಂಕದಾ. ೧-೧೦). [ಸಂ. ಚರಿತ]

**ಚರಿತ್ರ** (ನಾ). ೧. ನಡೆ; ನಡೆವಳಿ; ಆಚಾರ: "ಚರಿತ್ರಂ, ಚರಿತಂ, ಶೀಲಂ, ಚಾರಿತ್ರಂ—ಈ ೪ ಆಚಾರಂ" (ಹಲಾಯು. ೬೬-೨೪೨); ಹಾಗು ನಿರೋಧದ ಆಗುಹೋಗನಱಿಯದ ಶರಣನ ಚರಿತ್ರವ ನೋಡಿ ನೋಡಿ ಬೆಱಗಾದೆನಯ್ಯಾ (ಬಸವ. ೯೧೨). ೨. ಇತಿಹಾಸ; ಜೀವನ ಕಥೆ; ನಡೆದು ಹೋದ ಸಾಹಸಾದಿಗಳ ನಿರೂಪಣೆ. 'ಚರಿತ್ರಗಾರ' ಪರಾ. ೩. ಆಚರಣೆ; ಅನುಷ್ಠಾನ. ೪. ಕೆಲಸ; ಕರ್ತವ್ಯ. ೫. ಸಾಹಸಕಾರ್ಯ; ಅದ್ಭುತ ಕೃತ್ಯ. ೬. ಸ್ವಭಾವ; ಮನೋಧರ್ಮ. [ಸಂ.]

**ಚರಿತ್ರಕಾರ** (ನಾ). ಇತಿಹಾಸವನ್ನು ಬರೆಯುವವನು; ಇತಿಹಾಸಕಾರ: ಚರಿತ್ರಕಾರರು . . . ಹೇಳಿರುವ ಕೆಲವು ಅಂಶಗಳನ್ನು ನನಗೆ ಸರಿಯೆಂದು ತೋರಿದ ರೀತಿಯಲ್ಲಿ ಹೊಂದಿಸಿಕೊಂಡಿದ್ದೇನೆ (ಸವಶಿ. IV ಪ್ರಸ್ತಾವನೆ). [ಚರಿತ್ರ + –ಕಾರ$_1$ (<–ಕಾಱ)]

**ಚರಿತ್ರವಂತ** (ನಾ). ಶೀಲವನ್ನು ಕಾಯ್ದುಕೊಂಡವನು; ಶೀಲವಂತ; ಚಾರಿತ್ರವುಳ್ಳವನು: ವಿವಾಹಪೂರ್ವದಲ್ಲಿ ಅವರು ಚರಿತ್ರವಂತರಾಗಿ ಉಳಿಯಲಿಕ್ಕೇ ಬೇಕು (ಬ್ರಹ್ಮಚೀ. ೪). [ಚರಿತ್ರ + –ವಂತ]

**ಚರಿತ್ರವತಿ** (ನಾ). ಒಳ್ಳೆಯ ಶೀಲವುಳ್ಳವಳು; ಪತಿವ್ರತೆ: "ಕುಲವಧು ಸಾಧ್ವಿ ಪತಿವ್ರತೆ ಕುಲಪಾಳಿಕೆ ಸತಿ ಚರಿತ್ರವತಿಯಕ್ಕುಂ"(ವಸ್ತುಕೋ. ೩೨-೪): ಆತನ ಪಿರಿಯರಸಿ ಗುಣಾನ್ವಿತೆ ಪತಿವ್ರತೆ ಚರಿತ್ರವತಿ ವಿಶದ ಗುಣಖ್ಯಾತವತಿ . . . ಚಂಡಿಕಬ್ಬೆಯೆನೆ ಪೊಗಳ[ದ]ರಾರ್ (ಸೌಇಇ. XX, ೯೬-೧೭; 1074). [ಸಂ. ಚರಿತ್ರವತೀ]

**ಚರಿತ್ರವಳ್ಳಿ** (ನಾ). ಒಂದು ಊರಿನ ಹೆಸರು: ಶ್ರೀಮತ್ಕನ್ನಯ್ಯ ಚರಿತ್ರವಳ್ಳಿಯುಮಂ ಪೆರ್ಬ್ಬಾಳುಮಂ ಬಿದಿರುವಳ್ಳಿಯು × × × (ಎಕ. XI, ಚಿತ್ರದು. ೪೯-೮೦; 947). [ಚರಿತ್ರ + ಪಳ್ಳಿ$_1$]

**ಚರಿತ್ರೆ** (ನಾ) =ಚರಿತ್ರ ೨: ಇಂದಿನ ಬಾಳು ನಾಳೆಗೆ ಚರಿತ್ರೆ (ಸಾಹಿಚೀ. ೩೩). [ಸಂ. ಚರಿತ್ರ]

**ಚರಿಯ** 'ಚರಿಯೆ' ನೋ.

**ಚರಿಯಿಸು** 'ಚರಿಸು' ನೋ.

**ಚರಿಯೆ, ಚರಿಗೆ, ಚರಿಯ, ಚರುವೆ, ಚರೆಯ** (ನಾ). ೧. ಆಚರಣೆ; ಚರ್ಯೆ: ನಿತ್ಯ ಪುನೀತ ಶೀಲ ಬ್ರತ ಚರಿಯೆಯುಂ [ಪಾಠಾಂ. ಶೀಲವ್ರಾತ ಚರಿಯಂ] ಸಿಕ್ಕಿಗೊಳಿಸಿದೆಯೊ (ಬಸಪು. ೪೬-೨೩). **ಚರಿಗೆ**: ೨. [ಜೈನ] ಮುನಿಗಳು ಆಹಾರಕ್ಕಾಗಿ ಮಾಡುವ ಸಂಚಾರ; ಭಿಕ್ಷಾಟನೆ: ವಿಂದುಂಡೀಗಳೆ ಬಿಜಯಂಗೆಯ್ಯೆಂದಿರೆ ಕುಳಾದ್ರಿಧೈರ್ಯಂಗೆ ಚರಿಗೆ ಮಾಣ್ದತ್ತಿನಿಸುಂ (ಆದಿಪು. ೯-೧೨೪); ಮುನಿಗಳ್ ಚರಿಗೆಗೆ ಬರುತಿರೆ (ಪಂಚತಂ. ೦೯೦-೨೦); ಮುನಿಗಳ ಚರಿಗೆಯ ಕಾಲವನಱಿದರಮನೆಯ ಬಾಗಿಲಿಗೆ ನಡೆದನು (ಭರಚ. ೩-೨). ೩. ಊಟ; ಔತಣ: ತಡೆದನವನೆಲ್ಲರಂ ತನ್ನ ನಿಳಯದ ಚರಿಗೆಗೆ (ಸೋಮಚ. ೨-೯೨). **ಚರಿಯ**: ೧. ಚರಿಸಲಾಗದವರ ಚರಿಯ್ನು ನಿರತೆಗೇಳಲಾಗದವರ ಸರಿಯೊಳಾವ ಭುಕ್ತಿ ಭೋಗಮಾಡಲಾಗದು (ಶಿವಗೀ. ೪೩೮); ಎರಡು ವಿಂಶತಿ ವರುಷಕೆ ಈ ಪರಿಯ ಚರಿಯ ಮಾಡಿದ ಪರಮಹರುಷದಿ (ಜಗದಾ. ೦೩೪). ೪. ನಡೆವಳಿಕೆ: ಜಾರೆಯರು ತಲೆವಾಗಿಲ ನಿಕ್ಕಿ ನೋಡುವ ಚರಿಯಗಳ ಕಂಡು (ವಂಕಾರಾ. ೩-೬-೧). **ಚರುವೆ**: ೩. ಆದಯ್ಯನರಸಿ ಪದ್ಮಾವತಿಯುಮಿರದೆ ಜಂಗಮಕೆಂದು ಮಾಡಿದನ್ನವ ಜಿನರ ಚರುವೆಗೆಂದೊಯ್ಯಲು (ಚಬಪು. ೩೬-೩೬). **ಚರೆಯ**: ೫. ಮೇಯುವುದು: ಮಂದಮತಿಯು ಮುಂದೆ ತಲೆಯ ಚುಂಚಂ ಪಿಡಿದು ಚರೆಯಕ್ಕೆ ಬಿಟ್ಟ ಗೂಂಟನೆಟಿದು ತಪ್ಪಂತೆ ತಂದು (ಅರ್ಥನೀ. ೬-೬೬ ವ).

**ಚರಿಗೆಮಾಡು**=ಊಟಮಾಡು; ಆರೋಗಿಸು: ಅನುಂ ಭಕ್ತಿಯಿಂದಂ ದಿವ್ಯಾಹಾರಮಂ ಮಗುಟಿಮಗುಟಿ ಬಡ್ಡಿಸಿ ಚರಿಗೆಮಾಡಿ [ಪಾಠಾಂ. ಯುಂಡು] (ವಡ್ಡಾರಾ. ೪೯-೨೬). [<ಸಂ. ಚರ್ಯಾ]

**ಚರಿಷ್ಣು** (ಗು). ೧. ತಿರುಗಾಡುವ. ೨. ಅಸ್ಥಿರವಾದ. [ಸಂ.]

**ಚರಿಸು, ಚರಯಿಸು, ಚರಿಯಿಸು** (ಕ್ರಿ). ೧. ನಡೆ; ಚಲಿಸು; ಸಂಚರಿಸು: ಹಂಸನಂತೆ ರಮಣೀಯ ನೂಪುರನಿನಾದಾನಂದಿತ ಮಾನಸಸರೋವರದೊಳ್ ಚರಿಸಿಯುಂ(ಕಾದಂಪೂ. ೩೨೪); ಮಹಾಶರಣರ್ಗೆ ಗುರುವೆನಿಸಿ ಸಕಲ ದೇಶಂಗಳಂ ಚರಿಸಿದಂ (ಚಬಪು. ೧-೧೮); ಆಗಸದೊಳು ಚರಿಸುವ ಸುರಸತಿಯರ ಸೋಗೆಮುಡಿಗೆ ಪೂಜ್ಯವಾಗಿ . . . ಪೂಗವೃಕ್ಷಗಳೊಪ್ಪುತಿಹುವು (ಕಂವಿ. ೨-೪೦). ೨. ಅಲುಗು; ಅಲ್ಲಾಡು: ಬೆದಱಿ ಭೂಕಂಪದಲ್ಲಿ ಕುಲಗಿರಿಯದಿರುವಂತಿರೆ ಚರಿಸಿ . . . ಕಲಿಕರ್ಣ ಮೈಮಱೆಯೆ (ಕುಮಾವ್ಯಾ. ೩-೨೪). ೩. ಆಚರಿಸು; ನಡೆದುಕೊಳ್ಳು; ಅನುಷ್ಠಾನಮಾಡು: ತಂತಮ್ಮಾಪ್ತರ್ ಚರಿಸುವ ಪೋಜೆಯೊಳೇಕೆಯೊ ಚರಿಯಿಸರನ್ನರ್ (ಧರ್ಮಾಮೃ. ೬-೪೨); ಪರಬ್ರಹ್ಮನು ಹರಂ ಚ[ಪಾಠಾಂ. ಧ]ರಿಸುವರು ಬ್ರಹ್ಮಣ್ಯಮಂ(ಬಸಪು. ೩೩-೪೦); ಮುನೀಂದ್ರಂ ಚರಿಪಂ ಸತಿವೆರಸು ತಪವನೀಪರ್ವತದೊಳ್ (ಪಾಳಂತ. ೧೦೦-೧೬೨). ೪. ಇರು; ವ್ಯವಹರಿಸು; ವರ್ತಿಸು: ನಾನಾಭೋಜ್ಯಕ್ಕೆ ಪಕ್ಕಾಗುತೆ ಚರಿಸಿದೆನಿನ್ನಾಱಿನಿನ್ನಾಱಿ ನಯ್ಯೋ (ರಕ್ಷಾಶ. ೪); ಈ ಪ್ರಕಾರದಿ ಚರಿಸುತಿರೆ ಸಾತ್ವಿಕ ಸುಭಕ್ತಿಸ್ಥಿರಮನಸ್ಕನು (ಬಸಪು. ೪೬-೪); ಸಿರಿ ಸರಸ್ವತಿ ಚಂಡಿ ದುರ್ಗಿಯರೆಂಬ ನಾಮದಲಿ ಚರಿಸುತಿಹ ನಿನ್ನೇಕಮೂರ್ತಿಯ ಪರಿಯನಱಿವವರಾರು (ಕುಮಾವ್ಯಾಆ. ೬-೧೦೪). **ಚರಯಿಸು**: ೧. "ಚರಯಿಸು (ಚರಿಯಿಸು) ಭ್ರಮಣೇ" (ಶಮಧಾ); ಚರಿಸಿದಂ, ಚರಯಿಸಿದಂ (ಶಮದ.೭೪ ಪ್ರಯೋ); ಕನಸಿನೊಳ್ ಚರಯಿಪಂತೊಲ್ ಪೋಗುತಿರ್ದನ್ (ಸಂಸಪ. ೩೨-೧೮೮). **ಚರಿಯಿಸು**: ೧. ಚರಿಯಿಪ ವನದೇವತೆಯರ ಚರಣಾಲಕ್ತಕದೆ ಪೊರೆದು ಪೆನಿಪುವು . . . ಚಂದಿರದುರ್ಗಗಳ್(ಕಾದಂಪೂ. ೯೬); ಚರಿಯಿಸಿ ನಿಚ್ಚಪಚ್ಚವನದೊಳ್ (ಜಗವಿ.೦೬-೦೨೮); ಕೇಳು ನೀನೆಲೆ ಪಾರ್ಥ . . . ರವಿರಥ ಕಾಲಚಕ್ರವನ್ನೆದಿ ಗಗನಾಂಗಣದಿ ಚರಿಯಿಪುದು (ಕುಮಾವ್ಯಾಆ. ೬-೩೨). ೨. ಸ್ಥಿರನಾಗಿ ಗುಣದೊಳೆಸಗುವ ನರನುಂ ವೈರಾಗ್ಯಮುಳ್ಳನುಂ . . . ಉರ್ವರೆ ಚರಿಯಿಸುವೊಡಮುಟಿವರಲ್ಲರುತ್ತಮಗುಣಮಂ (ಧರ್ಮಾಮೃ. ೩-೦೩೨). ೩. ಪಿರಿದಪ್ಪಾದರದಿಂದಂ ಪುರಾಣಮಂ ಕೇಳ್ವರಲ್ಲದಾ ತೆಱದಿಂದಂ ಚರಿಯಿಸುವರಲ್ಲರನ್ನರ್ (ಸಮುಪ. ೬-೨೪); ಗುರುವಚನಮನುಲ್ಲಂಘಿಸಿ ಚರಿಯಿಸಲಣಮಾಗದು(ಧರ್ಮಾಮೃ. ೩-೦೩೦). ೪. ಜನನಾಥಂ ಕಾಮಾಸಕ್ತನಾಗಿ ಮದದಂತಿಯಂತೆ ಚರಿಯಿಸಿ (ಪಂಚತಂ. ೦೩-೨೦); ಎರಡನೆಯ ಸುಷಮಕಾಲದ ಪೊರೆಯೊಳ್ ಮೂಱನೆಯ ಸುಷಮದುಷ್ಷಮಕಾಲಂ ಚರಿಯಿಸುಗುಂ (ಪಂಚಾವಪ. ೦-೩೬); ನೆಲೆಗೆ ಪೋಗಿ ಮಕ್ಕಳೊಳಂ ಪೆಂಡಿರೊಳ ಮೊಡಗೂಡಿ ಸುಖದಿಂ ಚರಿಯಿಸುಪೆಂ ಮೆಚ್ಚಿದಂದದಿಂ ಭೋಗಿಸುಪೆಂ (ಧರ್ಮಾಮೃ. ೦-೦೩೦).

**ಚರಿಸಾಡು, ಚರಿಸಿಯಾಡು**=ಅಲೆದಾಡು; ಸುತ್ತಾಡು: ನಡೆದಡೆ ಹಜ್ಜೆಯಿಲ್ಲ ಸುಳಿದಡೆ ನೆಳಲಿಲ್ಲದೆ ಬಯಲ ಬೆಳಗೆ ಸ್ವರೂಪವಾಗಿ ಚರಿಸಾಡುತ್ತ ತನ್ನನರ್ಚಿಸುವ ಭಕ್ತರ ನೋಡುತ್ತ ಬಪ್ಪಲ್ಲಿ (ಪದಗೋ. ೯೬); ನಿರಾಶಾಭರಿತನಾಗಿ ಚರಿಸಾಡುತ್ತಲು (ಶೂನ್ಯಸಂ. ೨೬೩-೧೦). [ಚರಣ + –ಇಸು$_3$]

**ಚರು₁** (ನಾ). (ಕೃಾ) ಒಂದು ಬಗೆಯ ಸಣ್ಣ ಮೀನು
[←ತುಳು. ಚರು]

**ಚರು₂** (ನಾ). ೧. ಹೋಮಕ್ಕಾಗಿ ಸಿದ್ಧಪಡಿಸಿದ ಅನ್ನ; ಹವಿಸ್ಸು: "ಹವ್ಯಂ, ಪಾಕಃ, ಚರುಃ, ಸಾನ್ನಾಯ್ಯಂ, ಹವಿಃ—ಈ ೫ ಚರು" (ಹಲಾಯು. ೬೯-೨೬೨); ಜಲಗಂಧಾಕ್ಷತೆ ಪುಷ್ಪಾವಲಿ ಚರು ದೀಪಪ್ರದೀಪ ಧೂಪ ಫಲಂಗಳ್ . . . ತಳತಳ ತೊಳಗಿದುವು (ಆದಿಪು. ೭-೧೦೩); ಚಾರುಚರುನಿಚಯದಿಂ ಘನಸಾರಾಗರುಂ ಧೂಮಲೇಖೆಯಿಂ . . . ಜಿನೇಂದ್ರನನಾರಾಧಿಸಿದಂ ನರೇಂದ್ರ ಚೂಡಾರತ್ನಂ (ಶಾಂ. ಪು. ೩೩-೩); ಲಡ್ಡುಗೆಯುಂ ಬೆಸಕಂಗೆ ಹೆಂಡಮಂ ಮಾರಿಗೆ ಚೊಮ್ಮಯ್ಯಂಗೆ ಚರುವಂ ಪದೆದೆತ್ತುವೆಂ (ಸ್ಥಾ. ೪-೮೪); ಕೊಟ್ಟನು ಚರುವವಮಾಡಲು ದೈತ್ಯ ಬಂಡೊರಾಗಿ ತಲೆಯೊಡೆದ (ಕೌಶಿ. ೩೮-೨೩). ೨. ಹವಿಸ್ಸಿನ ಪಾತ್ರೆ: "ಉಖಾ, ಸ್ಥಾಲೀ, ಚರುಃ, ಕುಂಭೀ, ಪಿಠರಂ, ಕುಂಡಂ—ಈ ೬ ಮಡಕೆ" (ಹಲಾಯು. ೩೨-೬೫೯); ಕೈಯಲ್ಲಿ ಚರುವನ್ನು ಹಿಡಿದುಕೊಂಡು ಅಗ್ನಿನಾರಾಯಣನು ಪ್ರಕಟನಾದನು (ಕುಳಸಿ. ೫೪). ೩. ಬಲಿ: ಇದೇನು ಭೂತದ ಚರುವನ್ನು ಮಾಡುತ್ತೀರಾ? (ಮದಮ. ೬೯); ಈರಮ್ಮನು ಚರು, ಓಕಳಿ . . . ಮುಂತಾದ ಸಲಕರಣೆಗಳನ್ನು ಸಜ್ಜುಗೊಳಿಸಿ ಭಟ್ಟರ ಅಡುಗೆಗೆ ಬೇಕಾದ ಲವಾಜಮೆಗಳನ್ನು ಸಿದ್ಧಗೊಳಿಸಿದಳು (ಹಂಹಂ. ೯೦). ೪. (ಆಲಂ) ಆಹಾರ; ಊಟ: ಒಂದು ಚರುವನ್ನು ರಾತ್ರಿ ಅವರಲ್ಲಿಯೇ ತೆಗೆಯುವ (ಮುಗಿದು. ೧೦೩). [ಸಂ.]

**ಚರುಕ** (ನಾ). ೧. ಹವಿಸ್ಸು; ನೈವೇದ್ಯ: ಅನೇಕ ಭಕ್ಷ್ಯೋಪದಂಶ ರಸಪ್ರಚುರ ಚಾರುಚರುಕಂ[ಪಾಠಾಂ. ಚರು]ಗಳಿಂದಂ (ಆದಿಪು. ೨-೩೨ ವ); ಲಲಿತೇಷ್ಟಲಿಂಗ ಪ್ರಸಾದವೇ ಚರುಕಮವನೊಲಿದು ತಾನುಪಭೋಗಿಸುವುದು(ರಾಘಶ. ೦೨-೧೬). ೨. ಹವಿಸ್ಸಿನ ಪಾತ್ರೆ. ೩. ಪಾಕಪಾತ್ರೆ: ವರವನಿತ್ತನು ನಿನಗೆ ಹೇಮದ ಚರುಕವಿದೆ ವಿವಿಧಾನ್ನಪಾನೋತ್ಕರದ ತವನಿಧಿ (ಕುವ್ಯಾ. ೧-೯). [ಸಂ.]

**ಚರುಕಲು** (ನಾ). ಅಗಲ ಬಾಯಿಯ ಪಾತ್ರೆ: ಹೆಚ್ಚಾಗಿ ಉಳಿದ ಅನ್ನವನ್ನು ಚರುಕಲಿನಲ್ಲಿ ಹಾಕಿ ಮುಚ್ಚಿಡಬೇಕು (ರೂಢಿ). [<ಸಂ. ಚರುಕ ?]

**ಚರುಗ, ಚರಗ, ಚರಗು, ಚೆರಗ, ಸರುಗ, ಸರುಗು** (ನಾ). ೧. ಹೊಲ, ಗದ್ದೆಗಳಲ್ಲಿ ಪೈರು ಬೆಳೆದಾಗ ರೈತರು ಭೂಮಿತಾಯಿಗೆ ನೈವೇದ್ಯವೆಂದೂ ಕ್ಷೇತ್ರದ ತುಂಬ ಚೆಲ್ಲುವ ಕಡುಬು ಮುಂತಾದ ಭಕ್ಷ್ಯ: "ಚರುಗ = ಹೊಲದೊಳಗೆ ಚೆಲ್ಲುವ ಆಹುತಿಯ ಅನ್ನ" (ಗಂಗಾನು. ೦೫೯). ೨. ದೇವತೆಯ ಪ್ರೀತ್ಯರ್ಥವಾಗಿ ಹೊಲದಲ್ಲಿ ಮತ್ತು ಊರಿನ ಸುತ್ತ ಚೆಲ್ಲುವ ಕೋಣದ ರಕ್ತ ಮತ್ತು ಮಾಂಸದ ಬಲಿ: (ಓ). **ಚರಗ:** ೧. ಊರ ಒಕ್ಕಲಿಗರ ಚರಗದ ಬುಟ್ಟಿಗಳೆಲ್ಲ ಹೊರಬಿದ್ದವು. ತಮ್ಮ ದೇವರಿಗೂ ಚರಗ ಸಲ್ಲಬೇಕೆಂದು ಹೆಂಡತಿ ಸೂಚಿಸಿದಳು (ಗರಜಾ. ೭೩); ಚರಗವನ್ನು ಚೆಲ್ಲಿದಂತೆ ಚೆದರಿ ಹೋಗಿರಬಹುದು (ಕಒಸಾ. ೩೨). **ಚರುಗು:** ೧. ಬಂಡಿ ತೀವಿದ ಚರುಗು [ಪಾಠಾಂ. ಕೂಳು, ಚರುಗಳ್]ವೆರಸು ತನ್ನ ಮಗನಪ್ಪ ಮುಂಡಕೌಶಿಕನಂ ಕುಂಭಂಗಾಹಾರ ನಿಮಿತ್ತಮಟ್ಟಿದೊಡೆ (ಚಾವುಂಪು. II, ೫೯-೩೩); ಜಿನಪದಯುಗಳಕ್ಕಿತ್ತ್ತಿ ನೈವೇದ್ಯಮಂ ಜಾತ್ರೆಗೆ ಬಂದರ್ವಾತ್ರೆ ತೋರ್ಪರ್ ಚ[ಪಾಠಾಂ. ಪ]ರುಗಂ (ಸಮುಕ. ೨-೬೯). **ಚೆರಗ:** ೧. ಹೊಲಕೆ ಒಕ್ಕಲಿಗ ಚೆರಗೊಗೆದು (ಕಥಜ. ೦೭); ಜೋಕುಮಾರನ ಅಳಕ ಅಂಬಲಿಯೇ ಒಕ್ಕಲಿಗನು ತನ್ನ ಬೆಳೆಸಿಗೆ ಒಗೆಯುವ ಮೊದಲನೆಯ ಚೆರಗ (ಜನಗೀ. ೦೭ ಮೊದಲಮಾತು). **ಸರುಗ:** ೧. ಮತ್ತಂ ಶುಚಿರ್ಭೂತರಾಗಿ ಚಕ್ಕುಲಿಯಂತೆ ಪಿಟ್ಟನಿಂ ಬಟ್ಟಿತುಮಾಗಿ ಬಿರಿದುವಾ ಮೇಲೆ ಸರುಗದ ಮುದ್ದೆಗಳನಿಟ್ಟು (ಪಸಾರ. ೯೬೩); ಪಾಪವ್ವ 'ಸರುಗ' ಮಾಡಿಕೊಂಡು ಬಂದು ಎತ್ತುಗಳ ಪ್ರದಕ್ಷಿಣೆಮಾಡಿ 'ಸರುಗ' ಚೆಲ್ಲಿದಳು (ನಡೆಕಿ. ೬೬). **ಸರುಗು:** ೧. ಆದರದಿಂದನರ್ಘ್ಯಮಣಿವಿಷ್ಟರದೊಳ್ ಕುಳ್ಳಿರ್ದು ಸರುಗಮನಿಕೆಂಡು ದಟಿಂ (ಆದಿಪು. ೧೫-೩೯); ಗಂಧ ಮಾಲ್ಯಾದಿಗಳನೆರ್ಚಿಸಿದ್ ಸಿಂಹಾಸನಮನೇಱಿ ನಾಯ್ ಸರುಗನುಣೆ ಕಂಡುದದಱಿಂ (ಚಾವುಂಪು. ೭೫-೨೩); ಗಂಧಧೂಪದೀಪಕ್ಕಂ ಸರುಗಿಗ[ಂ] . . . ಕುಡುವ ಭೂಮಿ (ಎಕ. XVII, ೧೨೨-೭; 1047); ಪರಕೆಯನೀಯದೆ ಮಾಸಲ ಸರುಗಂ ಮುಂದಿಡದೆ ತಡೆಯದೂಡದೆ ಪಲರುಂ ಬೆರಸರ್ಚನೆ ಮಾಡದೆ ಮಾಣ್ಣದೆ ಪೀಡೆಗಳೇಕೆ ಮಾಣ್ಬುವೆಂದು ಜಡಾತ್ಮರ್ (ಪಸಾರ. ೯೬೩).

**ಚರಗಚೆಲ್ಲು, ಸರುಗಚೆಲ್ಲು** = ಭೂಮಿತಾಯಿಗೆ ನೈವೇದ್ಯಕ್ಕೆಂದು ಸಿದ್ಧಪಡಿಸಿದ ಚರುಗವನ್ನು ಚೆಲ್ಲು: ನಾಡಿನ ಒಕ್ಕಲು ಜನ ಶೀಗಿಹುಣ್ಣಿಮೆಯ ದಿನ ಹೊಲದಲ್ಲಿ 'ಚರಗ' ಚೆಲ್ಲಲು ಹೋಗುತ್ತಾರಷ್ಟೆ? (ಶಶೀಕ. ೬೬); ಕಲ್ಲಪ್ಪ ರಾಸಿಪೂಜೆಯನ್ನು ಮಾಡಿದ. ಕಣದ ಸುತ್ತೆಲ್ಲ 'ಸರುಗ' ಚೆಲ್ಲಿದ (ದಿಶಾಬ. ೩). **ಚೆರಗ ತೂರಾಡು** = ಯಥೇಚ್ಛವಾಗಿ ಚೆಲ್ಲು; ಹಾಳುಮಾಡು; ಪೋಲುಮಾಡು: ತನ್ನ ಹರೆಯದ ರೂಪಿನ ಚೆರಗ ತೂರಾಡಬಾರದೆಂದು ಬಸವಂತಿ ಪಣ್ಣಿಸುತ್ತಿದ್ದಳು (ದೀಪಹ. II, ೦೧೦)
[<ಸಂ. ಚರುಕ]

**ಚರುಗು** 'ಚರುಗ' ನೋ.

**ಚರುಪು** 'ಸೆಳಪು' ನೋ.

**ಚರುವಿಗೆ** 'ಚರಿಗೆ₁' ನೋ.

**ಚರುವೆ** 'ಚರಿಯೆ' ನೋ.

**ಚರೆ, ಚೆರೆ** (ನಾ). ಬಂದೂಕಿನಿಂದ ಹಾರಿಸುವ ಚಿಕ್ಕ ಸೀಸದ ಗುಂಡು; ಸಿಡಿಮದ್ದು: ಕೋವಿಯನ್ನು ಕೆಳಗೂ ಮೇಲೂ ಅಲ್ಲಾಡಿಸುತ್ತಿದ್ದಾಗ ಎಲ್ಲಿಯೋ ಚರೆಯೆಲ್ಲ ನೆಲಕ್ಕುರುಳಿ ಹೋಗಿದ್ದುವು (ಕಾನೂರು. ೫೦). **ಚೆರೆ:** ಸಿಡಿಮದ್ದು ಚೆರೆ ಬಿದ್ದು, ಜಗ್ಗದೆಯೆ ನುಗ್ಗಿದರು (ಕಂಗೀತ. ೨೨-೧); ಜೇಬಿನಿಂದ ಚೆರೆಯನ್ನು ತೆಗೆದು ಅಂಗೈಯ ಮೇಲೆ ಅದರ ಪ್ರಮಾಣ ನಿರ್ಣಯ ಮಾಡುತ್ತಿದ್ದಾಗ ಕೋಳಿ . . . ಓಡತೊಡಗಿತು (ಕಾನೂರು. ೯೩)
[←ಹಿಂ. ಮರಾ. ಛರ್‍ರಾ]

**ಚರೆಗುಂಡಿನಗಿಡ** (ನಾ). ಒಂದು ಬಗೆಯ ಸಸ್ಯ: ಕ್ಯಾನ್ನಾಗಿಡ, ಚರೆಗುಂಡಿನ ಗಿಡ, ಸರ್ವಜಯ, ಹೂದಿಂಗಣ (ವೃಕಿಗಿ. ೦೭-೨೯೯).
[? + ಗಿಡ (<ಗಿಡು)]

**ಚರೆಯು** 'ಚರಿಯೆ' ನೋ.

**ಚರ್ಕಣ** (ನಾ). ಹೆಂಡ ಕುಡಿಯುವುದರಿಂದುಂಟಾದ ಮದ (?): ಪಾನಂಗೋಷ್ಠಿಕೆಯದಾಪಾನಂ ಶುಂಡಾಪ್ರಪಾನಂ ಕಳ್ಗುಡಿಹ ಕಡುಸೊರ್ಕು ಚರ್ಕಣಂ ತಾನದು ಪೆಸರೊಳದುಂ (ವಸ್ತುಕೋ. ೯೩-೬). [?]

**ಚರ್ಚನೆ** (ನಾ). ಗಂಧ ಮೊದಲಾದುವುಗಳನ್ನು ಮೈಗೆ ಲೇಪಿಸುವುದು; ಅನುಲೇಪನ. 'ಚರ್ಚನೆಗೈ' ಪರಾ.
[ಸಂ. ಚರ್ಚನ]

**ಚರ್ಚನೆಗೈ** (ಕ್ರಿ). ಬಳಿ; ಲೇಪಿಸು: ಮಿಱುಗುವ ಕುಂಕುಮ ಗಂಧವ ಮುನಿಗಳ ಚರಣಕ್ಕೆ ಚರ್ಚನೆಗೈದು (ಜ್ಞಾನಸಿ. ೨೭-೮೭).
[ಚರ್ಚನೆ + ಗೈ (<ಕೆಯ್₁)]

**ಚರ್ಚರಂ** 'ಚಚ್ಚರಂ' ನೋ.

**ಚರ್ಚರಿ** (ನಾ). ೧. ಉಲ್ಲಾಸದ ಆಟ; ವಿನೋದ; ಚೆಲ್ಲಾಟ. ೨. ಸಂತೋಷದ ಕೂಗು; ಹರ್ಷೋದ್ಗಾರ. ೩. ಒಂದು ಬಗೆಯ ಹಾಡು; ನೃತ್ಯಗೀತ: ಸಂಗೀತದಿಂಚರಮುನನುಸರಿಸಿ ಪೌರಜನಂಗಳ ಚರ್ಚರಿಯ ನಿನದಂ ಪೆರ್ಚುತಿದೆ (ಮಿತ್ರಗೋ. ೭); ಗರಿಯ ಏಕ್ಕರನೊ ಕಿನ್ನರನೊ ಬಗೆವೆದೆಯ ಮಾಧುರಿಯನರುಹೆಮಗೆಂದುಮಾಲಿಸಿಲ್ಲ ಸುರೆಯ ಚರ್ಚರಿದಲಕ್ಕರೆಯ ಸಂಸ್ಕೃತಿ ಏದಿ ಸುರಿದಿಂತು ದಿವ್ಯ ಹರ್ಷಾವೇಶವಂ (ಗಿರಿವಿಂ. ೭-೭೩೬). [ಸಂ. ಚರ್ಚರೀ]

**ಚರ್ಚಾಕೂಟ** (ನಾ). ಚರ್ಚೆ ನಡೆಯುವ ಸಭೆ ; ಆಯ್ದುಕೊಂಡ ಒಂದು ಹೇಳಿಕೆಯಲ್ಲಿ ಪೂರ್ವಪಕ್ಷ ಉತ್ತರಪಕ್ಷಗಳಾಗಿ ಅಥವಾ ಪಕ್ಷ ವಿರುದ್ಧ ಪಕ್ಷಗಳಾಗಿ ವಾದಮಾಡುವ ಸಭೆ: ಉಪಾಧ್ಯಾಯ–ವಿದ್ಯಾರ್ಥಿ ಸಹಕಾರ ಬೋಧನಕ್ರಮ – ಇದು ಚರ್ಚಾಕೂಟದ ಬೋಧನಕ್ರಮದಂತಿದ್ದು . . . ಯೂರೋಪು ಮುಂತಾದೆಡೆ ಪ್ರಚಾರಕ್ಕೆ ಬಂತು (ಶಿಕ್ಷದ. ೨೯೮) ; ಚರ್ಚಾಕೂಟಕ್ಕಾಗಿ . . ಗ್ರಂಥಾಲಯದ ಕಟ್ಟಡದಲ್ಲಿ ಪ್ರತ್ಯೇಕ ಕೋಣೆಗಳಿರಬೇಕು (ಗ್ರಂಥಾಲ. ೬). [ ಸಂ. (ಚರ್ಚಾ + ಕೂಟ) ]

**ಚರ್ಚಾತೀತ** (ಗು). ವಾದಕ್ಕೆ ನಿಲುಕದ,–ಮೀರಿದ ; ವಾದಾತೀತವಾದ : "ಚರ್ಚಾಸ್ಪದವಲ್ಲದ; ಚರ್ಚಾತೀತ" (Beyond dispute. ಪತ್ರಿವಿ. ೩೨). [ ಸಂ. (ಚರ್ಚಾ + ಅತೀತ) ]

**ಚರ್ಚಾಮಂದಿರ** (ನಾ). ಚರ್ಚೆ ನಡೆಸುವ ಮಂದಿರ : ನ್ಯಾಯದರ್ಶಿಗಳು ಗುಂಪುಗುಂಪಾಗಿ ಹೊರಟು ಚರ್ಚಾಮಂದಿರದಲ್ಲಿ ಸೇರಿದರು (ಪುನರು. ೩೬). [ ಸಂ. (ಚರ್ಚಾ + ಮಂದಿರ) ]

**ಚರ್ಚಾಸ್ಪದ** (ಗು). ಚರ್ಚೆಗೆ ಅವಕಾಶವಿರುವ ; ಚರ್ಚೆಮಾಡಬೇಕಾದ ; ವಾದವಿವಾದಗಳಿಗೆ ಈಡಾಗಿರುವ : ಇದೇ ಸಂದರ್ಭದಲ್ಲಿ ಚರ್ಚಾಸ್ಪದವಾದ ೨ನೆಯ ಸೂತ್ರವು ಹೊಸ ಪ್ರತಿಯಲ್ಲಿ ಬಂದಿದೆ (ಶಮಪಾಂ. ೫೧). [ ಸಂ. (ಚರ್ಚಾ + ಆಸ್ಪದ) ]

**ಚರ್ಚೆ** (ನಾ). ೧. ಚರ್ಚೆ ; ವಾಕ್ಕಲಹ : ಜೂಜಾಟಕೆ ಸೂಳೆಬಂಟಿಕೆ ರಣದ ಸಂವಾದ ಪಗಡಿಗಳ ಚರ್ಚೆ ರಾಜವೀಧಿಯೊಳಿಡಾಡುವ ಸಂದಣಿ ಮಾಜದು ನಿತ್ಯಕೃತ್ಯದಲಿ (ಪ್ರೋಹತ. ೨೦-೨೬). ೨. ವಿಚಾರಣೆ ; ಪರಿಶೋಧನೆ. [ ಸಂ. ]

**ಚರ್ಚಿಕೆ** (ನಾ). ಗಂಧಾದಿಗಳನ್ನು ಬಳಿಯುವಿಕೆ ; ಅನುಲೇಪನ : ನವ ಪಿಷ್ಟ ಚರ್ಚಾಕಾಶಸ್ತ್ರಮುಪಾತ್ರ ದರ್ಭರಚನಂ . . . ಪೂರ್ಣ ಕಲಶಂ ತಳೆದತ್ತು ತುಳಂ ವಿಳಾಸಮಂ (ಚಂದ್ರಪು. ೬-೫೩). [ ಸಂ. ಚರ್ಚಿಕಾ ]

**ಚರ್ಚಿತ** (ಗು). ೧. ಬಳಿದ; ಸವರಿದ; ಲೇಪಿಸಿದ: ನಾಕಲೋಕಚರದ ಚರ್ಚಾಚರ್ಚಿತ ಸುರಭಿ ನಮೇರು . . . ಸಮುತ್ತುಂಗ ಮಣಿಪೀಠಪ್ರತಿಮಮಪ್ಪ ಸೌಧರ್ಮೇಂದ್ರನುತ್ಸಂಗದೊಳ್ ತೀರ್ಥಕರಕುಮಾರಕರರ (ಶಾಂತಿಪು. ೧೧-೧೩ ವ); ಘನಸಾರಸುರಭಿ ಮಳಯರುಹ ಚರ್ಚಿತಮುಮಂ . . . ಸ್ವಸ್ತಿಕಪ್ರಶಸ್ತ ಮಣಿದರ್ಪಣ ಸಮರ್ಪಿತಮುಮಪ್ಪ ಕಳಧೌತ ಮಂಗಳ ಕಳಶಮಂ ಬಳಸಿ (ಮಲ್ಲಿಪು. ೯-೧೧೧) ; ಮಂಜುಳ ಹರಿದ್ರ ಕುಂಕುಮಚರ್ಚಿತಾಂಗದಿಂ ಚೆಲ್ವಿಂದೆ ಸಂಗಡಿಸಿದ ಅಂಜಳಿಗಳಿಂ ಮೆರೆವ ದಂಪತಿಗಳಭಿನಮಿಸೆ (ಜೈಮಿಭಾ. ೩೦-೩೨). ೨. ಚರ್ಚಿಸಿದ; ವಿಚಾರಿಸಿದ ; ವಿಮರ್ಶೆಮಾಡಿದ. ೩. ಇಚ್ಛಿಸಿದ ; ಬಯಸಿದ. [ ಸಂ. ]

**ಚರ್ಚಿಸು** (ಕ್ರಿ). ೧. ವಾದ ಮಾಡು ; ವಿವಾದ ಮಾಡು : ದೇವರಕ್ಷಕನಪ್ಪುದಾಗಮಮನೋವದೆ ಮೆಚ್ಚಿ ಚರ್ಚಿಸದಿರ್ಪುದೊಯ್ಯನೆ ಪಾಪದೊಳ್ (ಧರ್ಮಾಮೃ. ೫-೧೧೧). ೨. ಪರಿಶೀಲಿಸು ; ವಿಚಾರಿಸು ; ಯೋಚಿಸು : ಕೇಳಿವಿದಿಂತುಟೆಂದು ಚರ್ಚಿಸಿ ನಾಡಿವಂತು. ಬೇಟಿ ಪೆಚಿತಾವುದು ಕೇಳಿಕೆಯುಂ ವಿಟತ್ವಮುಂ (ಶಾಂತಿಪು. ೮-೯೧); ಸುಮತಿ . . . ಅವರ ಬಗೆಯ ನಟಿದುಪಾಯಮನಾಗಳೆ ಚರ್ಚಿಸಿ (ಸುಕುಮಾ. ೬-೧೫ ವ); ಕವ್ಯೊಳ್ ಚರ್ಚಿಸಿ ಕಳ್ಳೊಳ್ ವಿಷಮಂ ಬೆರೆಯಿಸಿಕೊಂಡು ಬಂದರ್. (ಧರ್ಮಾಮೃ. ೨-೨೧೧); ಸಾಧಕಬಾಧಕಗಳನ್ನು ಮುಂದಿಟ್ಟು ಸ್ಪಷ್ಟವಾಗಿ ಚರ್ಚಿಸಿದರು (ಹಿಂಕರು. ೩೫). [ ಚರ್ಚೆ + – ಇಸು$_3$ ]

**ಚರ್ಚು$_1$, ಚಚ್ಚು$_2$, ಚೆಚ್ಚು$_2$** (ಕ್ರಿ). (ಕಂಕುಳಲ್ಲಿ) ಎತ್ತಿಕೊಳ್ಳು: "ಚರ್ಚು–ಶಿಶುಸಂಧಾರಣೇ "(ಶಮಧಾ. ವ); ಚರ್ಚಲ್ ಶಶಿಶಿಶುವಂ ಕಟಿಗರ್ಚಲ್ ಘನಘಟೆಯನರ್ಚಲಮರದ್ರುಮಮಂ . . . ಒಡರ್ಚಿದುವೆನೆ ನೀಳ್ದುವಿದಱ ಶಿಖರಕರಂಗಳ್ (ಕಾವ್ಯಾವ. ೫೫೬). **ಚಚ್ಚು$_2$**: ಮಗುವನ್ನು ಬಗಲಿಗೆ ಚಚ್ಚಿಕೊಂಡು (ಮರಮ. ೨೬); ಅವನನ್ನು ಬಗಲಲ್ಲಿ ಚಚ್ಚಿಕೊಂಡೇ ಅಚ್ಯುತನ ವಿರಾಮ ಕಳೆಯುತ್ತದೆ (ಮುಗಿಯು. ೩೪೦). **ಚೆಚ್ಚು$_2$**: ತುಂಬಿದ್ದ ಕೊಡವನ್ನು ಹಗ್ಗದ ಕೊಂಡಿಯಿಂದ ಬಿಡಿಸಿ, ಸೊಂಟಕ್ಕೆ ಚೆಚ್ಚಿ ಬಚ್ಚಲ ಮನೆಯತ್ತ ನಡದೇಬಿಟ್ಟಳು (ಮೂರುದಾ. ೧೯೬). [ ? ]

**ಚರ್ಚು$_2$** (ನಾ). ಕ್ರೈಸ್ತರ ಪ್ರಾರ್ಥನಾಮಂದಿರ : ಚರ್ಚಿನ ಗೋಪುರದಿಂದ ಬರುವ ಗಂಟೆಯ ಸದ್ದು (ಮಲನಾ. ೧). [ ←ಇಂ. Church ]

**ಚರ್ಚೆ** (ನಾ). ೧. ಸುಗಂಧದ್ರವ್ಯಗಳ ಅನುಲೇಪನ : "ಸಮಾಲಂಭನಂ, ಚರ್ಚಾ, ಮಾರ್ಷ್ಟಿಃ–ಈ ೩ ಚರ್ಚೆ" (ಹಲಾಯು. ೮೯-೩೮೬); ತರಳೆಕೆ ತಂದ ಚಂದನದ ಚರ್ಚೆಗಳಿಂ . . . ಮೂರ್ಛೆಯಿಂದೆಚ್ಚತ್ತು (ಕಾದಂಪೂ. ೮೮೪) ; ಮೃಗಮದ ಘುಸೃಣ ಚಂದನ ಚರ್ಚೆಯೊಳಂ (ಜಗವಿ. ೪-೮೦ ವ). ೨. ಚಿಂತನೆ ; ಮನಸ್ಸಿನಲ್ಲಿ ಮತ್ತೆ ಮತ್ತೆ ಆಲೋಚಿಸುವುದು ; ಪರ್ಯಾಲೋಚನೆ : "ಚಿಂತೆಯಲ್ಲಿಯುಂ ಚರ್ಚಾ ಎಂಬುದು" (ಹಲಾಯು. ೦೩೨-೮) ; ಕವಿಕಾವ್ಯದ ವಿಷಯವಾಗಿ ಕೆಲವು ಮಾತುಗಳನ್ನು ಚರ್ಚೆಗೆ ಎತ್ತಿಕೊಂಡಿರುವರು (ಸಾಹಿಸ. ೧೧೪). ೩. ದುರ್ಗೆ; ಚಾಮುಂಡಿ; ಭೈರವಿ: "ಚಾಮುಂಡಿ ಕರ್ಣಮೋಟಿ ಮಹಾ ಮಾಯಾಮೂರ್ತಿ ಚರ್ಚೆಯುಂ ಭೈರವಿಯಾ ನಾಮಮಿವಕ್ಕುಂ" (ವಸ್ತುಕೋ. ೪-೦೯) ; "ಚಾಮುಂಡಿ ಚರ್ಚೆ ಭೈರವಿಯೆನಲು ವನದೇವಿ" (ಮಂಗರಾ. ೫-೦೪). ೪. ಕಾರಣ ಸಹಿತವಾಗಿ ವಿಮರ್ಶಿಸುವುದು; ತರ್ಕ. ೫. ವಾಗ್ವಾದ; ವಿವಾದ. ೬. ಉತ್ಸವ ; ಸಂತೋಷ ; ಉಲ್ಲಾಸ : "ಮುದಮವಲು ಚರ್ಚೆ" (ಮಂಗರಾ. ೯೬-೦೬). ೭. ರತಿಕ್ರೀಡೆ; ಮೈಥುನ. ೮. ಮಾತು; ಉಕ್ತಿ. ೯. ವ್ರತ. ೧೦. ಪ್ರತಿಮೆ. ೧೧. ನೀರುಗುಳ್ಳೆ ; ಬುದ್ಬುದ. "ಸ್ನೇಹಂ ಯುಕ್ತಿ ಪ್ರತಿಮೋತ್ಸಾಹಂ ವ್ರತ ಚಿಂತೆ ಚಂಡಿಕಾದೇವಿಯರುಂ ದೇಹಕ್ಕನುಲೇಪನಕಂ ಮೋಹದಿ ಪುಟ್ಟುವದು ನವಮ ಚರ್ಚಾಶಬ್ದಂ" (ನಾನಾಶಿ. ೦೦೩); "ರತಿಯೊಳ್ ಚಿಂತೆಯೊಳ್ . . . ವ್ರತದೊಳ್ ಲೇಪನಬುದ್ಬುದೋತ್ಸವಗಳೊಳ್ ಚರ್ಚಾಭಿಧಾನಂ" (ನಾನಾರ. ೭೪). [ ಸಂ. ಚರ್ಚಾ ]

**ಚರ್ಚೆಗೈ** (ಕ್ರಿ). ೧. ಬಳಿ; ಸವರು. ೨. ನೇವರಿಸು: ಪೊಚ್ಚ ಪೊಸ ಸುರಚಾಪದಂತೆಸೆವ ವಾಲಧಿಯ ಚರ್ಚೆಗೈವುತಮಣೆದು ಕೊರಳ ಕೊಂಕಿಸಿ ಮರುತನಚ್ಚರಿಯ ಕುವರ . . . ಉಲ್ಲಾಸದಿಂದೆಸೆದನು (ಮಂಕಾರಾ. ೫-೧-೦೫). ೩. ಚರ್ಚೆಮಾಡು; ಚರ್ಚಿಸು; ವಾದಿಸು. [ಚರ್ಚೆ+ಗೈ (<ಕೆಯ್$_1$)]

**ಚರ್ದಿ** (ನಾ). ಕಾರಿಕೊಳ್ಳುವಿಕೆ; ಓಕರಿಕೆ; ವಾಂತಿ; ವಮನ. 'ಚರ್ದಿಸು' ಪರಾ. [ <ಸಂ. ಛರ್ದಿ ]

**ಚರ್ದಿಸು** (ಕ್ರಿ). ಓಕರಿಸು ; ಕಾರಿಕೊಳ್ಳು ; ವಾಂತಿಮಾಡು : ಕುಡೆ ವಿಧಿಪೂರ್ವಕಂ ಸುರಸಮಪ್ಪುದನ್ನಮನುಂಡು ತೃಪ್ತಿಯಂ ಪಡೆದು ಬಟಿಕ್ಕೆ ಚರ್ದಿಸಿದೊಡಂತದನಾ ಸತಿ ತನ್ನ ಕೈಗಳಿಂದುಡುಗಿ (ಮಹಾನೇ. ೬-೦೩೪). 'ಛರ್ದಿಸು' ಪರಾ. [ ಚರ್ದಿ + – ಸು$_1$ ]

**ಚರ್ಪಟಿಸು** (ಕ್ರಿ). ೧. ಶಂಕರಾಚಾರ್ಯರ ಚರ್ಪಟಮಂಜರಿ ಸ್ತೋತ್ರವನ್ನು ಹೇಳು. ೨. ಹೀಯಾಳಿಸು; ಬಡಬಡಿಸು. ೧, ೨: ಜೀವದ ಚಿತ್ತು, ಜಗತ್ತಿನ ಸತ್ತು, ತಿಳಿದಾನಂದದ ಸಂವಿತ್ತು. ಚರ್ಪಟಿಸಲಿ ಅದ್ವೈತದ ವಾದ ಜಾಣ ಬೊಮ್ಮ ಮೌನದೊಳಿತ್ತು (ಅರಳು. ೨೫೮-೩). [ ಚರ್ಪಟ$_0$ + – ಇಸು$_3$ ]

**ಚರ್ಬಿ, ಚರಬಿ** (ನಾ). ಕೊಬ್ಬು ; ನೆಣ ; ಮಜ್ಜೆ : ಚರ್ಬಿ ಇಲ್ಲದ ನನ್ನ ಮಗ ಇವನು (ಧೀಮಕಾ. ೨೨೨). **ಚರಬಿ**: ಅಲ್ಲಿ ಸ್ವಲ್ಪ ಚರಬಿ ಇಟ್ಟಿದ್ದೆ. ತಂದುಕೊಡು ಕತ್ತಿಗೆ ಹಚ್ಚಬೇಕು (ಮಲನಾ. ೯೪) ; ಚರಬಿ ಮಿಶ್ರಿತ ಇಂಗ್ರೇಜೀ ಬಿಸ್ಕೀಟುಗಳನ್ನು ತಿಂದು ನಿಮ್ಮ ಸ್ವಾಸ್ಥ್ಯವನ್ನು ಕಳೆದುಕೊಳ್ಳಬೇಡಿರಿ (ಕುರಿಹಿಂ. ೦೩೩) ; [ ←ಪಾರ. ಚರ್ಬೀ; ಹಿಂ. ಮರಾ. ಚರಬೀ ]

**ಚರ್ಮ** (ನಾ). ೧. ತೊಗಲು ; ತ್ವಕ್ಕು ; ಅಜಿನ : "ತೋಲ್ ತೊವಲುಂ ಸಮ್ಮುಮದಿರದಕ್ಕುಂ ಚರ್ಮ" (ಕವಿಕಂ. ೮೩). ೨. ಗುರಾಣಿ ; ಢಾಲು: "ಖೇಟಕಂ, ಫಳಕಂ, ಚರ್ಮ, ಆವರಣಂ–ಈ ೪ ಹರಿಗೆ" (ಹಲಾಯು. ೭೬–೩೦೭). [ ಸಂ. ಚರ್ಮನ್ ]

**ಚರ್ಮಕಶೆ** (ನಾ). ಸೀಗೆಮರ ಮತ್ತು ಅದರ ಕಾಯಿ [ <ಸಂ. ಚರ್ಮಕಷಾ ]

**ಚರ್ಮಕಾರ** (ನಾ). ಮೆಟ್ಟು ಹೊಲಿಯುವವನು; ಚಮ್ಮಾರ; ಸಮಗಾರ: "ಡೋಹಾರಃ– ಚರ್ಮಕಾರಂ" (ಕಾಕಕ್ಕ. ೬೬) ; ಹೊಲೆಯನೊಮ್ಮೆಯು ಪಾಡಲಿಕೆಯರವಿಂದನಾಭನ ನಾಮಮಾತ್ರದಲಿ ರೂಢಿಸಿಯೆನುತ ಚರ್ಮಕಾರರ ಗೂಡಿನಲಿ ಜನಿಸುವನು (ಕುವ್ಯಾಅ. ೦೨೪. ಹರಿ. ೩೪೭). [ ಸಂ. ]

**ಚರ್ಮಕೃತ್ತು** (ನಾ). =ಚರ್ಮಕಾರ : "ಚರ್ಮಕೃತ್, ಪಾದುಕಾಕಾರಃ– ಈ ೨ ಸಮ್ಮಗಾಱಂ" (ಹಲಾಯು. ೯೮–೪೪೨). [ ಸಂ. ಚರ್ಮಕೃತ್ ]

**ಚರ್ಮಗತ** (ಗು). ಚರ್ಮಕ್ಕೆ ಸೇರಿದ; ಚರ್ಮಕ್ಕೆ ಸಂಬಂಧಿಸಿದ: ಅನ್ನಗತ ಪ್ರಾಣ, ಚರ್ಮಗತ ದೃಷ್ಟಿ (ಗಾಡಿ). [ ಚರ್ಮ + ಗತ₁ ]

**ಚರ್ಮಘರ್ಘರ** (ನಾ). ಎಣ್ಣೆ ಮೊದಲಾದುವನ್ನು ಹಾಕಲು ಮಾಡಿದ ಚರ್ಮದ ಬುದ್ದಲಿ,–ಬುಡ್ಡಿ : "ಚರ್ಮಘರ್ಘರ[ಪಾಠಾಂ. ಗರ್ಪಟ, ಗರ್ಪರ]ಮೆನಲು ಬುದ್ದಲಿಗೆ ನಾಮಮಕ್ಕುಂ" (ಮಂಗರಾ. ೩೩–೨೬).
[ ಚರ್ಮ + ಘರ್ಘರ₂ (<ಗರ್ಘರ₁) ]

**ಚರ್ಮಚಕ್ಷು** (ನಾ). ಪ್ರಾಕೃತಿಕವಾದ ಕಣ್ಣು ; ಭೌತಿಕ ದೃಷ್ಟಿ; ಹೊರಗಣ್ಣು : ಈ ಚರ್ಮಚಕ್ಷುಗಳಿಂ ಕಾಣ್ಬ ಪದಾರ್ಥಮಿಲ್ಲೆನುತೆ (ಜಗವಿ. ೦–೬೩) ; ಚರ್ಮಚಕ್ಷುಗಳಂತೆ ಅಂತಃಚಕ್ಷುಗಳೂ ಉಪಯೋಗಕ್ಕೆ ಬಾರದ ಧೃತರಾಷ್ಟ್ರನಂಥ ವರ್ಗವನ್ನು ಅಪವಾದವೆಂದು ಬಿಟ್ಟು ಬಿಟ್ಟರೂ (ಪ್ರಬಂಧ. ೯೭). [ ಚರ್ಮ + ಚಕ್ಷು ]

**ಚರ್ಮಣ** (ನಾ). ವಾಗ್ಮಿ ; ಅವಧಾನಿ ; ಅನೇಕರ ಪ್ರಶ್ನೆಗಳಿಗೆ ಏಕಕಾಲದಲ್ಲಿ ಕೊಡಲೆ ಉತ್ತರ ಹೇಳಬಲ್ಲವನು : "ಮೇಳೈಸಿ ನಾನಾರವಕ್ಕೆ ಪ್ರತಿಗೈವವಂ ಚರ್ಮಣಂ ವಾಗ್ಮಿಯಕ್ಕುಂ" (ಮಂಗರಾ. ೦೦೬–೧೬). [ ? ]

**ಚರ್ಮದಂಡ** (ನಾ). ಚರ್ಮದಿಂದ ಮಾಡಿದ ಚಾಟಿ ; ಕಶಾದಂಡ ; ಬಾರುಕೋಲು; ಚಮ್ಮಟಿಗೆ: "ಚರ್ಮದಂಡಃ, ಕಶಾ–ಈ ಚಮ್ಮಟಿಗೆ" (ಹಲಾಯು. ೭೩–೨೦೮) ; "ಕಸೆ ಚರ್ಮದಂಡಮೆನೆ ಚಮ್ಮಟಿಗೆಯೆನಿಸಿಕ್ಕು" (ಮಂಗರಾ. ೫೦–೦೩). [ ಚರ್ಮ + ದಂಡ ]

**ಚರ್ಮಪಟ್ಟಿಕೆ** (ನಾ). ೧. ಚರ್ಮದ ಬಾರು. ೨. ಪಗಡೆ ಮೊದಲಾದುವನ್ನು ಆಡಲು ಬಳಸುವ ಚರ್ಮದ ಹಾಸು ; ಪಟ್ಟ.
[ ಚರ್ಮ + ಪಟ್ಟಿಕೆ ]

**ಚರ್ಮಪಾದುಕ** (ನಾ). ತೊಗಲಿನ ಹಾವುಗೆ ; ಚರ್ಮದಿಂದ ಮಾಡಿದ ಮೆಟ್ಟು ; ಪಾದರಕ್ಷೆ : "ಚರ್ಮಪಾದುಕಮುಪಾನತಿಯೆನಲ್ ಕೆರವು" (ಮಂಗರಾ. ೬೦–೦೮). [ ಸಂ. ಚರ್ಮಪಾದುಕಾ ]

**ಚರ್ಮಪಾದುಕೆ** (ನಾ). =ಚರ್ಮಪಾದುಕ. [ ಚರ್ಮ + ಪಾದುಕೆ ]

**ಚರ್ಮಪಾಶ** (ನಾ). ಚರ್ಮದಿಂದ ಮಾಡಿದ ಹಗ್ಗ,–ಮಿಣಿ : "ಮಿಣು ಚರ್ಮಪಾಶಂ" (ಮಂಗರಾ. ೩೯–೨೩). [ ಚರ್ಮ + ಪಾಶ ]

**ಚರ್ಮಪ್ರಭೇದಿಕೆ** (ನಾ). ಚಮ್ಮಾರನು ಉಪಯೋಗಿಸುವ ಚೂರಿ,–ಉಳಿ ; "ಚರ್ಮ ಕತ್ತರಿಸುವ ಸಾಧನ" (ಅಮರ. ೮೮೪).
[ ಸಂ. ಚರ್ಮಪ್ರಭೇದಿಕಾ ]

**ಚರ್ಮಪ್ರಸೇವಿಕೆ** (ನಾ). ತಿದಿ : "ಚರ್ಮಪ್ರಸೇವಿಕೆ = ತೊಗಲ ತಿದಿ" (ಗಂಗಾಮು. ೦೨೯). [ ಸಂ. ಚರ್ಮಪ್ರಸೇವಿಕಾ ]

**ಚರ್ಮಯಷ್ಟಿ** (ನಾ). =ಚರ್ಮದಂಡ : "ಕಶಾಹ್ವಯಂ ಚರ್ಮಯಷ್ಟಿ" (ವಸ್ತುಕೋ. ೮೬–೨೩). [ ಚರ್ಮ + ಯಷ್ಟಿ ]

**ಚರ್ಮಯಷ್ಟಿಕೆ** (ನಾ). =ಚರ್ಮದಂಡ. [ ಚರ್ಮ + ಯಷ್ಟಿಕೆ ]

**ಚರ್ಮರತ್ನ** (ನಾ). [ಜೈನ] ಚಕ್ರವರ್ತಿಯಾಗುವವನಿಗೆ ತಾನಾಗಿ ದೊರಕುವ ಏಳು ಅಜೀವರತ್ನಗಳಲ್ಲಿ ಒಂದು ; ☞ ನೀರಿನ ಮೇಲೆ ತೇಲಿ ಹೋಗಲು ಉಪಯೋಗಿಸುವ ಚರ್ಮದ ಸಾಧನ. ಇದರ ಪ್ರಭಾವದಿಂದ ಚಕ್ರವರ್ತಿಯು ಅಗಾಧ ಜಲದುರ್ಗಗಳನ್ನು ಆಕ್ರಮಿಸಬಲ್ಲನು. ಮಳೆ ಬಂದಾಗ ಮೇಲೆ ಛತ್ರರತ್ನವನ್ನು ಹಿಡಿದು, ಚರ್ಮರತ್ನದ ಮೇಲೆ ಅಪಾರ ಸೈನ್ಯದೊಡನೆ ನಿಶ್ಚಿಂತನಾಗಿ ನಿಂತುಕೊ ಳ್ಳ ಬ ಹು ದು : ಅಗಾಧಜಲದುರ್ಗಸಮುತ್ತರಣನಿರತಸಕಲಶಿಬಿರಸಂಧಾರಣಶಕ್ತಿಯುಕ್ತಮಪ್ಪ ವಜ್ರಮಯಮೆಂಬ ಚರ್ಮರತ್ನಮುಂ (ಆದಿಪು. ೧೦–೩ ವ) ; ನೆಲನೆಲ್ಲಮನವರೇಕಾರ್ಣವಂ ಮಾಡಿದೊಡಡಿಯೊಳ್ ಪಾಸಿದ ಚರ್ಮರತ್ನಮುಮಂ ಮೇಲೆ ಪಿಡಿದ ಛತ್ರರತ್ನಮುಮಂ ಕಾಯೆ(ಅಜಿಪು. ೯–೩೮ ವ); ಗಗನತಳದಂತೆ ಪೆರ್ಮೆಯಂ ತಳೆದ ವಜ್ರಮಯಮೆಂಬ ಚರ್ಮರತ್ನಮುಮಂ (ಚಂದ್ರಪು. ೬–೦೦೦ ವ). [ ಚರ್ಮ + ರತ್ನ ]

**ಚರ್ಮವಾದ್ಯ** (ನಾ). ತೊಗಲಿನಿಂದ ಮಾಡಿದ ಹರೆ, ಮೃದಂಗ, ತಬಲ ಮುಂತಾದ ವಾದ್ಯ : ಇಲ್ಲಿ ಚಂಡೆ . . . ಎಂಬ ಒಂದು ಚರ್ಮವಾದ್ಯವನ್ನು ಉಪಯೋಗಿಸುತ್ತಾರೆ (ಯಕ್ಷಗಾ. ೦೭). [ ಚರ್ಮ + ವಾದ್ಯ ]

**ಚರ್ಮವಾವುಗೆ, ಚರ್ಮಾವುಗೆ** (ನಾ). =ಚರ್ಮಪಾದುಕ: ಸೊಸೆವಿರ್ಗೆಲ್ಲಂ ಸಲೆ ಚರ್ಮ [ಪಾಠಾಂ. ಮ್ಮ] ವಾವುಗೆಯನಾ ಲಲನೆ ಮಹೋತ್ಸಾಹದಿಂದೆ ಮಾಡಿಸಿ ಕೊಟ್ಟಳ್ (ಸುಕುಮಾ. ೧೦–೦೨೦). **ಚರ್ಮಾವುಗೆ**: ಜನಪವೋಲಗದ ಚಾವಡಿಗೆಯ್ದು ಕೇಳ್ದನಾ ಚರ್ಮಾವುಗಾರವೆಂದು (ಗುರುಚಾ. ೦೩–೫೫).
[ ಚರ್ಮ + ಪಾವುಗೆ ]

**ಚರ್ಮಶಾಸ್ತ್ರ** (ನಾ). "ಚರ್ಮ ಮತ್ತು ಚರ್ಮರೋಗ ವಿಷಯಕವಾದ ಶಾಸ್ತ್ರ ; ಚರ್ಮಶಾಸ್ತ್ರ" (Dermatology. ಇಂಕನ್ನಿ).
[ ಚರ್ಮ + ಶಾಸ್ತ್ರ ]

**ಚರ್ಮಸೇವನ** (ನಾ). ತಿದಿ : "ಧೃತಿ ಚರ್ಮಸೇಚ[ ವ ]ನಮೆನಲ್ಕೆ ತಿದಿಯಕ್ಕು" (ಮಂಗರಾ. ೦೩೩–೩೦). [ ಸಂ. (ಚರ್ಮ + ಸೇವನ) ]

**ಚರ್ಮಾಂಬರ** (ನಾ). ತೊಗಲಿನ ಬಟ್ಟೆ, – ವಸ್ತ್ರ, – ಉಡುಗೆ : ಹರಿಣಶಾರ್ದೂಲಾದಿ ಚರ್ಮಾಂಬರವೆ ಸಮಕಟ್ಟೆಮಗೆ ರತ್ನಾಭರಣವೇ ರುದ್ರಾಕ್ಷಿಯೆಂದಳು ನಗುತ ತರಳಾಕ್ಷಿ (ಕುವ್ಯಾಅ. ೨೦–೭). [ ಚರ್ಮ + ಅಂಬರ ]

**ಚರ್ಮಾಕ್ಷಿ** (ನಾ). = ಚರ್ಮಚಕ್ಷು : ಹರನನೀ ಚರ್ಮಾಕ್ಷಿಯಲಿ ಗೋಚರಿಸಬೇಡಿದುದಂಬು ಮರ್ತ್ಯದೊಳಿರವು ಮರುಳು ಭಾವನ್ನ ವುಣ್ಯಮೆನುತ್ತ ಬಿಸುಸುಯ್ದು (ಕುವ್ಯಾಅ. ೭–೨). [ ಚರ್ಮ + ಅಕ್ಷಿ ]

**ಚರ್ಮಾಯತನಪಕ್ಷಿ** (ನಾ). ಬಾವಲಿ ; ಕಣ್ಣುಕಪ್ಪಡಿ : ಜತನದಪ್ಪದ ಕೊನೆವಿಡಿದು ನೇಲುವ ಚರ್ಮಾಯತನಪಕ್ಷಿಯ ಕಂಡು ನಗುತೆ (ಪ್ರಭುಚಾ. ೨೯–೬೨). [ ಚರ್ಮ + ಆಯತನ + ಪಕ್ಷಿ₁ ]

**ಚರ್ಮಾವುಗೆ** 'ಚರ್ಮವಾವುಗೆ' ನೋ.

**ಚರ್ಮಿ** (ಗು). ೧. ಗುರಾಣಿಯನ್ನು ಹಿಡಿದುಕೊಂಡ.(ನಾ). ೨. ಹರಿಗೆ; ಗುರಾಣಿ : "ಫಳಕಂ ಖೇಟಕಂ ಚರ್ಮಿ ಹರಿಗೆಯಕ್ಕುಂ" (ಮಂಗರಾ. ೮೬–೩೦). ೩. ಗುರಾಣಿಯನ್ನು ಹಿಡಿದುಕೊಂಡವನು ; ಯೋಧ : "ಚರ್ಮಿ, ಫಲಕಪಾಣಿ–ಕಡಿತಲೆಗಾಱ" (ನಾಚಿರಾ. ೩). ೪. "ಭುಜಪತ್ರೆಗಿಡ" (ಅಮರ. ೬೮೪). [ ಸಂ. ಚರ್ಮಿನ್ ]

**ಚರ್ಮೇಂದ್ರಿಯ** (ನಾ). ೧. ಪಂಚೇಂದ್ರಿಯಗಳಲ್ಲಿ ಒಂದಾದ ಚರ್ಮ ; ಸ್ಪರ್ಶೇಂದ್ರಿಯ. ೨. ಭೌತಿಕಜಗತ್ತಿಗೆ ಸೀಮಿತವಾದ ಇಂದ್ರಿಯ ; ಚರ್ಮೇಂದ್ರಿಯಗಳಿಗೆ ಗೋಚರಿಸುವ ಮಹಾಭೌತಿಕ ಸೃಷ್ಟಿ; ಶಬ್ದಗಳಿಂದ ಸೂಚಿತವಾಗುವ ಸಾಹಿತ್ಯ ಸೃಷ್ಟಿ; ಮನಸ್ಸಿಗೇ ಹೊಳೆಯುವ ಕಲ್ಪನಾಸೃಷ್ಟಿ (ಸಾಹಿವಿ. ೦೪೨). [ ಚರ್ಮ + ಇಂದ್ರಿಯ ]

**ಚರ್ಯೆ** (ನಾ). ೧. ನಡತೆ; ನಡೆವಳಿ: ನಾವು ಅವಳ ವಿಷಯದಲ್ಲಿ ತೋರಿಸಿದ ಚರ್ಯೆವು ಅಷ್ಟು ಶ್ಲಾಘ್ಯತರವಾದ್ದೆಂದು ಕಾಣುವುದಿಲ್ಲ (ಪೀಟಿಶಮಾ. ೩೦). ೨. ಆಚರಣೆ ; ಅನುಷ್ಠಾನ : ಶೈವಾಗಮಗಳೆಲ್ಲವೂ ಜ್ಞಾನ, ಯೋಗ, ಕ್ರಿಯಾ, ಚರ್ಯೆ ಎಂಬ ನಾಲ್ಕು ವಿಷಯಗಳನ್ನು ವಿವರಿಸತಕ್ಕವುಗಳಾಗಿವೆ (ಭಾರದ. ೨೦೦). [ ಸಂ. ಚರ್ಯಾ ]

**ಚರ್ಯಾಧಿಕಾರ** (ನಾ). ೧. ಅನುಷ್ಠಾನದ ಯೋಗ್ಯತೆ. ೨. ಅನುಷ್ಠಾನ ಮಾಡಿ ಸಿದ್ಧಹಸ್ತನಾದವನು : ಆರ್ಯಾಶತಕಮಂ . . . ಚರ್ಯಾಧಿಕಾರನಪ್ಪಾಶ್ಚರ್ಯಾಮರವಾಣಿಯಿಂದಮೆಸಗಿದನೊಲವಿಂ (ಶಾಕುಂತ. ೬-೧೧). [ ಸಂ. (ಚರ್ಯಾ + ಅಧಿಕಾರ) ]

**ಚರ್ಯಾಪಾದ** (ನಾ). [ವೀಶೈ] ಆಚಾರ ಸಂಪ್ರದಾಯ ಹಾಗೂ ವ್ರತಗಳನ್ನು ತಿಳಿಸುವ ಆಗಮಭಾಗ : ಚರ್ಯಾಪಾದವು ಆಚಾರಸಂಪ್ರದಾಯಗಳನ್ನೂ ವ್ರತನಿಯಮಗಳನ್ನೂ ಹೇಳುತ್ತದೆ (ಭಾರದ. ೨೦೦).
[ ಸಂ. (ಚರ್ಯಾ + ಪಾದ) ]

**ಚರ್ಯಾಮಾರ್ಗ** (ನಾ). ೧. [ಶೈವ] ಚರ್ಯಾಮಾರ್ಗ, ಕ್ರಿಯಾಮಾರ್ಗ, ಯೋಗಮಾರ್ಗ ಮತ್ತು ಜ್ಞಾನಮಾರ್ಗ ಎಂಬ ಮೋಕ್ಷ ಸಾಧನೆಯ ನಾಲ್ಕು ಮಾರ್ಗಗಳಲ್ಲಿ ಒಂದು : ಚರ್ಯಾಮಾರ್ಗ ಅಥವಾ ದಾಸ ಮಾರ್ಗದಲ್ಲಿ ಸಾಧಕನು ದೇವಸ್ಥಾನಗಳಲ್ಲಿ ಶಿವಾರ್ಚನೆಗೆ ಸಲಕರಣೆಗಳನ್ನೊದಗಿಸಿ . . . ಶಿವಭಕ್ತರ ಸೇವೆ ಮಾಡಿಕೊಂಡು . . . ಸಾಲೋಕ್ಯ ಪದವಿಯನ್ನು ಹೊಂದುವನು (ಭಾರದ. ೨೦೭). ೨. [ಜೈನ] ಚರಿಗೆಗಾಗಿ ಹೋಗುವ ಉದ್ದೇಶ : ಚಂಪಾನಗರಕ್ಕೆ ಚರ್ಯಾಮಾರ್ಗದಿಂ ಬರುತ್ತಂ (ಸುಕುಮಾ. ೪-೩೩ ವ). [ ಸಂ. (ಚರ್ಯಾ + ಮಾರ್ಗ) ]

**ಚರ್ಯೆ** (ನಾ). ೧. ನಡೆ ; ನಡತೆ ; ವರ್ತನೆ : ಗುರು ಆಕೆಯ ಚರ್ಯೆಗೆ ವಶನಾಗಿ, ಆಕೆಗೆ ಧರ್ಮವನ್ನು ಉಪದೇಶ ಮಾಡಿದನು (ಹತ್ತುಹು. ೧೮) ; ಹೆಂಡತಿಯಾದವಳಿಗೆ ಗಂಡನ ಚರ್ಯೆಯಲ್ಲಿ ಮರುಅಭಿಪ್ರಾಯವನ್ನು ಸೂಚಿಸುವ ಅಧಿಕಾರವಿದೆಯೇ? (ಕಾವೇರಿ. ೧೯೩). ೨. ಅಭಿವ್ಯಕ್ತಿ. 'ಮುಖಚರ್ಯೆ', ಪರಾ. ೩. [ಜೈನ] ಅಹಿಂಸೆಯ ಪ್ರತಿಜ್ಞೆ,-ಆಚರಣೆ: ಚರ್ಯೆಯೆಂಬುದು ದೇವತಾರ್ಥಮುಂ ಮಂತ್ರಸಿಧ್ಯರ್ಥಮುಂ ಮೋಷಧಾರ್ಥಮುಂ ಆಹಾರಾರ್ಥಮುಂ ಭೋಗಾರ್ಥಮುಮಾಗೆ ಜೈನನಪ್ಪಾತಂ ಹಿಂಸೆಗೆಯ್ಯನಲ್ಲಂ (ಚಾವುಂಪು. ೨೪೬). [ ಸಂ. ಚರ್ಯಾ ]

**ಚರ್ವಣ** (ನಾ). ೧. ಅಗಿದು ತಿನ್ನುವುದು ; ನುರಿಸುವುದು : ಸಮ್ಮಾರ್ಜಿತೋಜ್ವಲದಶನನಿಚಯತಾಂಬೂಲಚರ್ವಣಭರಿತಕಪೋಲರುಂ ಗೋನಿಯೋಗ ದಂಡಧರರುಮಾಗಿ(ಜಗವಿ. ೪-೮೦ ವ). ೨. ಮನಸ್ಸಿನಲ್ಲಿ ಮೆಲುಕು ಹಾಕುವಿಕೆ; ಪುನಶ್ಚಿಂತನೆ: ಅನುಭವದ ಚರ್ವಣರೂಪದ ಪುನರನುಭವವೇ ಕಲಾಸೃಷ್ಟಿಗೆ ಕಾರಣವಾದ ಅನುಭವ (ಸೌಂದಸ. ೧೪). [ ಸಂ. ]

**ಚರ್ವಣೆ** (ನಾ). = ಚರ್ವಣ ೨ : ಅವುಗಳ ಚರ್ವಣೆಯಿಂದ ಆಸ್ವಾದ್ಯವಾದುದೇ ಅಲೌಕಿಕ ಕರುಣರಸ (ಧ್ವನ್ಯಾಲೋ. ೧೯ ಅಡಿಟಿ).
[ ಸಂ. ಚರ್ವಣ ]

**ಚರ್ವಿ** (ನಾ). (?) : ಉದಿಪುದು ಮಮಾಹವೆಂಬುರು ಭ್ರಾಂತಿ ದುರ್ಮಾರ್ಗ ಪದವಿಯಂ ಪಿಡಿದ ಚರ್ವಿಯು ಜನಿಸಿ ವೈಕೂನ್ಯ ವಿಧಿಯೆನಿಪ ಕೃಷ್ಣ ಜಿಹ್ವೆಯು ಮನೋಭ್ರಮೆಯಿಂದ ಭಾವಿಸುತಮವಿಸುತಿಹುದು (ಬಂಕಾಠಾ. ೩-೨೦-೬೦). [ ? ]

**ಚರ್ವಿತ** (ಗು). ೧. ಅಗಿದು ನುರಿಸಿದ. ೨. ತಿಂದ ; ಉಂಡ ; ರುಚಿ ನೋಡಿದ. 'ಚರ್ವಿತಚರ್ವಣ' ಪರಾ. [ ಸಂ. ]

**ಚರ್ವಿತಚರ್ವಣ** (ನಾ). . ತಿಂದುದನ್ನೇ ಮತ್ತೆ ತಿನ್ನುವುದು ; ಅಗಿದುದನ್ನೇ ಮರಳಿ ಅಗಿಯುವುದು. ೨. (ಅಲಂ) ಮಾಡಿದುದನ್ನೇ ಮಾಡುವಿಕೆ ; ವ್ಯರ್ಥವಾದ ಪುನರುಕ್ತಿ ; ತೌಡು ಕುಟ್ಟುವುದು : ನಿಚ್ಚ ಮಿಾ ಪಿಷ್ಟಪೇಷಣಮಿಾ ಚರ್ವಿತಚರ್ವಣಂ ಸುಖಮಿದೇಂ ನಿನ್ನಂ ಮರುಳ್ಮಾಡಿತೋ (ಅದಿಪು. ೩-೬೯) ; ಭವಜಲರಾಶಿಯೊಳ್ ಮುಳುಗಲಟ್ಟಿಯ ಚರ್ವಿತಚರ್ವಣಕ್ಕೆ (ಅಜಿಪು. ೧೦-೩). [ಚರ್ವಿತ + ಚರ್ವಣ]

**ಚರ್ವಿಸು** (ಕ್ರಿ). ತಿನ್ನು; ಸೇವಿಸು: ಕೈಬಾಯಿಗಳ ತೊಳೆದು ತಾಂಬೂಲವಂ ಚರ್ವಿಸಿ (ನವಮೋ. ೧೦-೭೨). [ ಚರ್ವಣ + – ಇಸು$_3$ ]

**ಚರ್ವು** 'ಜರ್ವು$_1$' ನೋ.

**ಚಲ್$_1$** 'ಸಲ್$_1$' ನೋ.

**ಚಲ್$_2$** 'ಚೆಲ್ಲು$_1$' ನೋ.

**ಚಲ$_1$, ಚಳ$_1$, ಛಲ$_1$** (ನಾ). ೧. ಪಟ್ಟುಹಿಡಿಯುವುದಂ; ಹಿಡಿದುದನ್ನು ಬಿಡದೆ ನಡೆಸುವ ದೃಢಚಿತ್ತತೆ ; ಸ್ಥಿರಸಂಕಲ್ಪ ; ಮನೋನಿಶ್ಚಯ : ಕಂದರ್ಪಂ ಚಲದೆನ್ನೊಳ್ಪಿಂದಂ (ಕವಿರಾ.೨-೮೨). ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ (ಪಂಪಭಾ. ೧೪-೬೪) : ಕಿಡದ ಜಸಕ್ಕೆ ತಾನೆ ಗುಡಿಯಾದ ಚಲಂ . . . ಅಳ್ದ ಚಲಂ ಚಲದಂಕಕಾಣಿನ(ಎಕ. II, ೦೩೩-೨೦ : 982); ಚಲದಿಂ ಯದುಬಲವಾಂತಿಸೆ ಸಲೆ ಶರತತಿ ಖಚರರಪಘನಂಗಳನಾಗಳ್ ಗೆಲೆ . . . ನಭಶ್ಚರಸೈನ್ಯಂ (ನೇಮಿಪು. ೭-೮೯). ೨. ಮೊಂಡುತನ; ಹಟಮಾರಿತನ: ಚಲದಿಂ ಕೃಷ್ಣೆಯ ಕೇಶಮಂ ಪಿಡಿದ ನಿನ್ನಂದಾದಟಲ್ ನಿನ್ನುರಸ್ಥಲಮಂ ಪೋಟದೆ ಪೋಪುದಲ್ತು (ಪಂಪಭಾ. ೧೨-೧೪೬). ೩. ಹಿಡಿತ ; ಬಿಗಿ : ಶ್ಲೇಷ್ಮದ ಚಲ ಕತ್ತರಿಸಿ ಬೀಳುವುದು (ಸಕವೈ. ೨೨೩). ಚಳ$_1$: ೧. ಪುಗೆ ನೃಪಸಂಕುಳಂ ಮನಸಿಜಗ್ರಹವಾಗ್ರಹದಿಂದೆ ಪತ್ತಲಂ ದೂಗೆಯ ವಿಕಾರಚೇಷ್ಟೆ ಚಳವಂ ನುಡಿದು (ನೇಮಿಪು. ೯-೮೯). ಛಲ$_1$ : ೧. ಛಲ ಬೇಕು ಶರಣಂಗೆ ಪರಧನವನೊಲ್ಲೆನೆಂಬ (ಬಸವ. ೬೭೬) ; ಛಲದಿಂ ಪೋರಿದರೆಲ್ಲರಂ ಗೆಲಿದು ಬಂದಾ ಪೆಣ್ಣ ಕೊಂಡೋಡಿದಂ (ಸೋಮೇಶ. ೪೪): ಎಲವೆಲವೊ ಕಲಿಯಾಗು ಮಾರುತಿ ಗೆಲಿದನೆಂದಿರಬೇಡ . . . ಛಲವದುಳ್ಳಡೆ ಸಾಕು (ಕುಮಾದ್ರೋ. ೦೩-೩೨). 'ಛಲವಿಡಿ' ಪರಾ. ೪. ಹಟಗಾರ; ದೃಢಸಂಕಲ್ಪವುಳ್ಳವನು : ಮೂಜಗದೂಳ್ ಮೆಚ್ಚಿವ ಮಾನವದೇವಂ ಗೆಲಿದಂ ಅಸ(ಶ)ನ ಬೆಸನವ ಛಲರಧಿಕಂ ಹಾಲ ಬಸವಿದೇವಮುನೀಸಂ (ಎಕ. XXI, ೧೩-೩೯ : 1260).

**ಚಲಚಲ** (ದ್ವಿರುಕ್ತಿ) : ಚಲಚಲದಾಂತು ಕಾದುವ ಸುಯೋಧನ ಸಾಧನದೊಡ್ಡುಗಳ್ (ಪಂಪಭಾ. ೧೦-೩೩). **ಚಲಕೆ ನಲ್ಲಾತಂ**=ದೃಢಸಂಕಲ್ಪದಲ್ಲಿ ಆಸಕ್ತಿಯುಳ್ಳವನು ; ಒಂದು ಬಿರುದು : ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ ಚಲಕೆ ನಲ್ಲಾತಂ ಶ್ರೀಮತ್ಕನ್ನರದೇವನ ರಾಜ್ಯಮುತ್ತರೋತ್ತರಾಭಿವೃದ್ಧಿಗೆ ಸಲುತ್ತಮಿರೆ (ಸೌಇಇ. IX-i, ೬೬-೨ : 966) ; ಚಲಕೆ ನಲ್ಲಾತಂ ಶ್ರೀಮತ್ಕನ್ನರದೇವಂ (ಎಇ. IV, ೩೫೨-೨ ; 975). **ಚಲಕೆ ಮೊದಲಿಗಂ**=ದೃಢಸಂಕಲ್ಪವನ್ನು ಪಾಲಿಸುವವರಲ್ಲಿ ಮೊದಲಿಗನಾದವನು ; ಒಂದು ಬಿರುದು : ಅಸತಿವಿದೂರನಾಳ್ದಾನಿ ವೀರಂ ಚಾಳುಕ್ಯಾರ್ಜುನಂ ಚಲಕೆ ಮೊದಲಿಗಮುರಟ್ಟಗಣ್ಡನಕಳಂಕ ಮಹೇಶ್ವರಂ (ಎಕ. XIV, ಮೈಸೂರು. ೦೨೭-೪; ಸು. 900). **ಚಲಕ್ಕೆಬಲ್ಗಂಡಂ**= ದೃಢನಿಶ್ಚಯಕ್ಕೆ ತಕ್ಕ ಪರಾಕ್ರಮ ಉಳ್ಳವನಂ; ಒಂದು ಬಿರುದಂ : ಉದಾರ ಮಹೇಶ್ವರಂ ಚಲಕ್ಕೆ ಬ[ಲ್ಗ]ಣ್ಡಂ ಶೌರ್ಯ್ಯಮಾರ್ತ್ತಣ್ಡಂ (ಸೌಇಇ. XI-i, ೦೦೩-೭ ; 1074). **ಚಲದಂಕ, ಛಲದಂಕ**= ಹಟವುಳ್ಳ ವೀರ ; ದೃಢನಿಶ್ಚಯವುಳ್ಳವನು ; ಒಂದು ಬಿರುದಂ : ಚಲದಂಕ ಕಂಠೀರವ ನರಸೇಂದ್ರ ಭೂತಳವ ಪಾಲಿಸುತಿರರ್ತಿಯಲಿ (ಕಂಠವಿ. ೮-೨) : ಗುಂಟಲಗಾಳಗತ್ತರಿ ಗರಗಸದ ಬಿರುದಾಳಿಗಳ ಛಲದಂಕ ರಾವುತರೊತ್ತಿ ನೂಕಿದರು (ಕುಮ್ಯಾಧೀ. ೪-೩೬) : ಬಲಗೊಂಡೆನಧಿಕ ಪ್ರವೀಣನ ಬಾಣನ ಕಲೆಗಳಸಾರ ಮಯೂರನ ಸುಲಲಿತ ವಾಕ್ಯಭೂಷಣ ಕಾಳಿದಾಸನ ಛಲದಂಕನ ರಾಘವಾಂಕನ (ತ್ರಿಪುತಿ. ೨-೦೬). **ಚಲದಂಕಕಾಱ**=ಚಲದಂಕ:

ಪರಸೈನ್ಯಮಂ ಪೆಱಂಗೆಡೆಗುಡದಟ್ಟಿ ಕೊಲ್ವ ಚಲವನ್ನಾಳ್ದ ಚಲಂ ಚಲದಂಕ ಕಾಱನ (ಎಕ. II, ೦೩೩-೨೫ ; 982). ಚಲದಂಕಮಲ್ಲ, ಛಲದಂಕಮಲ್ಲ= ೧. ದೃಢಚಿತ್ತದಿಂದ ಕಾದಾಡುವ ವೀರ ; ಒಂದು ಬಿರುದಂ : ಚಲ ದಂಕಮಲ್ಲನಾದ ಕಂಠೀರವನರಸರಾಜನು . . . ಪರಾಕ್ರಮದಿಂದ ಕಾದಿ ದನು (ಕವೀರ. ೧೨೯) : ಚಲದಂಕಮಲ್ಲನೂ ಅಭಿಮಾನಧನನೂ ಎನಿಸಿದ ಸುಯೋಧನನು ಚಿಂತಾಕ್ರಾಂತನಾದನು (ಧಾಮಚ. ೪೦). ೨. ಹಟಗಾರ : 'ಛಲದಂಕಮಲ್ಲರೂ, ಮಾನಧನರೂ' ಆಗಿ ವರ್ತಿಸುತ್ತಾರೆ (ಶಿಕ್ಷದ. ೧೦೫); ಚಲದಂಕರಾಮ=ರಾಮನಂತೆ ಸ್ಥಿರಸಂಕಲ್ಪದಿಂದ ಹೋರಾಡುವವನು; ಒಂದು ಬಿರುದಂ : ನರಸಂಕಭೀಮುಂ ಚಲದಂಕರಾಮುಂ ಗಣ್ಡರ ಗಣ್ಡಂ (ಸೌಇಇ. XX, ೧೮-೯ ; 980) ; ಸನಿವಾರಸಿದ್ದಿ ಗಿರಿದುರ್ಗಮಲ್ಲ ಚಲದಂಕ ರಾಮ (ಕಇಇ. ೭೪-೦೨-೦೪ ; 1170) ; ಸೇಡಿಂಬದ ವಿಪ್ರರೊಂದಳವನೇ ವೊಗಳ್ವೆಂ ಚಲದಂಕರಾಮರ (ಕಇಇ. ೯೭-೪-೩೨ ; 1೫ನೆಯ ಶ). ಚಲದ ವಿನಾಯಕ=ನಿರ್ಧಾರಕ್ಕೆ ಬರುವ ಅಡ್ಡಿಗಳನ್ನು ನಾಶಪಡಿಸತಕ್ಕವನು ; ಒಂದು ಬಿರುದು : ಪುರುಷಕಾರದ ತಾಯ್ಗರು ಪಂಪನಾಗರಂ ಚಲದ ವಿನಾಯಕಂ ನೆಗಳ್ದ ಜಕ್ಕಣಂ (ಕಇ. IV, ೦೦-೩೫; 1121). ಚಲದುತ್ತರಂಗ= ಸ್ಥಿರಸಂಕಲ್ಪದಲ್ಲಿ ಮಿಗಿಲಾದವನು ; ಒಂದು ಬಿರುದು : ಐಯೊಗಟ್ಟಿ ನೆವ್ವಱೆಯಂ ಚಲದುತ್ತರಂಗನಂ (ಎಕ. II, ೫೯-೬೭; 974); ನನ್ನಿಗಿರಿನಾಥಂ ಚಲದುತ್ತರಂಗ ಜಗದೇಕವೀರ ನೊಳಂಬಕುಲಾಂತಕದೇವ (ಎಕ. VI, ೨೩೯-೨ ; 975). ಛಲದಾಳು=ಹಟಸ್ವಭಾವದವನು; ಚಲಗಾರ: ಕಲಿಯ ಕಾಲತೊಡರು ಛಲದಾಳಿಗ[ಪಾಠಾಂ. ಕಲಿತನಕ್ಕೆ]ಲ್ಲದೆ ಇಕ್ಕಬಾರದು (ಬಸವ. ೬೭೫).

ಚಲ₂, ಚಳ₂(ಗು). ೧. ಅಲುಗುವ; ನಡುಗುವ; ಚಂಚಲವಾದ; ಅಸ್ಥಿರ ವಾದ. ೨. ಚಲಿಸುವ ; ನಡೆಯುವ : ಸಾಗುವ ಚಲ[ಪಾಠಾಂ. ಳ]ಕಲ ಹಂಸಸಾರಸರಥಾಂಗಮದಾಲಿನಿನಾದಕೈರವೋತ್ಪಲಶತಪತ್ರ . . . ಗಂಧ ಬಂಧುರಂ ಲಲಿತನ್ಯಾಪಾಂಗನಾಲಕಚಯಂಗಳನಾಡಿಪುದಾಯ್ತು (ಆ ದಿ ಪು. ೪-೯೩). ೩. ಕದಡಿದ; ಕ್ಷುಬ್ಧವಾದ; ಉದ್ರಿಕ್ತವಾದ. (ನಾ). ೪. ಚಂಚಲನಾದವನು: ಗಾಳಿಗೊಡ್ಡಿದ ದೀಪಾಂಕುರದಂತೆ ತನ್ನ ನಿಯ್ಯುವಂ ಕಾಮಂ ಚಲಂ ಮಾಡಿದಂ (ಕಾದಂಪೂ. ೭೫೫). ೫. ಕ್ಷೋಭೆ ; ಉದ್ವೇಗ. ೬. ಗಾಳಿ; ವಾಯು. 'ಚಲಗತಿ' ಪರಾ. ೭. ವೇಗಶಾಲಿ. ೬, ೭: ಘನಕು ಘನನ ಚಲಕು ಚಲನ ನೋಡೆನ್ನಿನನ (ಹಂಸದ. ೬೬-೨೨). ಚಳ₂: ೧. ಚಳ ಚಮರರುಹಸಮಾಜಾನಿಳನಿಂದೊಗೆದೆಸೆವ ಚಾರು ಕರ್ಪೂರರಜೋವಳಿಯಿಂ . . . ಗೆಲೆವಂದುದೋಲಗಂ (ಶಾಂತೀಶ್ವ. ೨-೮೪). ೮. ಚಂಚಲವಾದುದಂ: ಚಳವಂಭೋಬಿಂದು ಮುಕ್ತಾಫಲವೆನಿಸುವವೋಲ್ ಶುಕ್ತಿಕಾಸಂಗದಿಂ (ಮಲ್ಲಿಪು. ೩-೦೯).

ಚಳವಾಗು=ತಡವರಿಸು ; ಕ್ರಮತಪ್ಪು : ಅರಗಿಳಿಗಳ್ ನಿರ್ಮಳ(ಲ) ಮುನಿಸೋ(ರೋ)ದುವೋದಂ ಚಳವಾದೆಡೆಯಱಿದು ಪೇದ್ದು(ಳ್ದು) ವಿರುಳುಂ ಪಗಲುಂ (ಎಕ. XVI, ೩-೦೦ ; 980). [ ಸಂ. ]

ಚಲಂಕು, ಚಲಂಗಂ, ಚಲಕು, ಚಲಗಂ, ಚಲುಂಕು, ಚಲುಕು, ಚೆಲಂಕಂ, ಚೆಲಂಗು, ಜಲಕು (ಕ್ರಿ). ೧. ಎರಚು ; ಚಿಮುಕಿಸು ; ಚೆಲ್ಲು: "ಚಲಕು, ಚಲಂಕು—ಕರವಿಮೋಚನೇ (ಕೈಯಿಂದ ಬಿಡಿಸಿಕೊಳ್ಳು)" (ಶಮಧಾ). ಚಲಂಗು: ೧. "ಚ[ಪಾಠಾಂ. ಚೆ]ಲಂಗು—ಕರಮುಕ್ತೌ (ಕೈಯಿಂದ ಬಿಡು)" (ಶಮಧಾ). ಚಲಕು: ೧. 'ಚಲಂಕು' ಉಲ್ಲೇಖಕ್ಕೆ ಕೊಟ್ಟಿರುವ 'ಶಮಧಾ' ಪ್ರಯೋಗವನ್ನು ನೋಡಿ. ೨. ಬಿಸಾಡು; ಒಗೆ; ಬಿಸುಡು: (೩). ೩. ಕಲಕು: ಅಱಿಲ್ಗಳನುಱೆ ತಱಿದೊಲವಿಂ ತಱುಂಬುತೆಳ್ದುಂಬುತ್ತು ಗರದಿನೆಕ್ಕಸರಂಗೆಯ್ದೊಱಲ್ದು ತಳೆವುತ್ತೆ ನೆಱೆ ಬಾಂದೊಱೆಯಂ ಚಲುಕುತ್ತೆ ತಳರ್ದರಭವಗಣಂಗಳ್ (ವೀರಪು. ೦೦-೬೦). ಚಲಗು: ೨. "ಚ[ಪಾಠಾಂ. ಬ]ಲಗೆ [ಪಾಠಾಂ. ಕೆ]ನೆ ಬಿಸುಡೆಂಬರ್ಥಂ" (ರನ್ನಕ. ೪). ಚಲುಂಕು : ೧. "ಚಲುಕು, ಚಲುಂಕು—ಉಲ್ಲೋತ್ಸರ್ಜನೇ (ದ್ರವವನ್ನು ಚೆಲ್ಲು)" (ಶಮಧಾ): ನಿತ್ಯಬಿಂದುಗೆ—ಬೆಡಂಗು . . . ಚಲುಂಕಿದಂ, ಪಲುಂಬಿದಂ (ಶಮದ. ೩೬.ಪ್ರಯೋ) ; ಶೀತಳಾಂಬುವಂ ಮಾನಿನಿ ಪಾಣಿ ಪಲ್ಲವದಿನೆಲ್ಲರ ಮೇಲೆ ಚಲುಂಕಿಯಾಡಿದಳ್ (ವಳಚಂ. ೦೩೩). ಚಲುಕು : ೧. 'ಚಲುಕಾಡು' ಪರಾ. ಚೆಲಂಕು: ೧. "ಚೆ [ಪಾಠಾಂ. ಚ] ಲಂಕೆಂದು ಕರವಿಮೋಚನಂ" (ಶಶಸಾ. ೨೦-೫೯೯) . ೨. "ಚೆ(ಬೆ)ಲಂಕಿದಂ=ಈಡಾಡಿದಂ" (ಶಮದ. ಪರಿ. ೩). ಚೆಲಂಗು : ೧. 'ಚಲಂಗು' ಉಲ್ಲೇಖಕ್ಕೆ ಕೊಟ್ಟಿರುವ 'ಶಮಧಾ' ಪ್ರಯೋಗವನ್ನು ನೋಡಿ. ಜಲಕು: ೧. "ಜಲಕೆಂದು ಕರ ವಿಮೋಚನ" (ಕವಿಕಂ. ೩೬೯). 'ಕಲಂಕಂ', 'ಚಲ್ಲು₁' ಪರಾ. [ ? ]

ಚಲಂಗು 'ಚಲಂಕು' ನೋ.

ಚಲಂಬಿಡಿ, ಚಲವಿಡಿ, ಛಲವಿಡಿ (ಕ್ರಿ) ಹಟಹಿಡಿ ; ದೃಢನಿಶ್ಚಯವನ್ನು ತೊಡು : ಕೆಲರ್ ನೆತ್ತರೊಳ್ ಮಿಂದು ತಮಗೆ ದೋಷಮಿಲ್ಲೆಂದದರ್ಕೆ ದಿವ್ಯಂಬಿಡಿವಂತೆ ನಂಬಿಸಲ್ ಚಲಂಬಿಡಿದು ನಿಂದನಂತರ್ (ಪಾಂಶಪು. ೪-೩೦ ವ); ಸ್ಮೂಸೆಂದುಂ ಬಾಂಬರನ್ ಅಲರ್ದಿರ್ಕೆಂದು ಚಲಂಬಿಡಿದು ತಱಿ ಸಂದರರೆಬರ್ (ಬದ್ಧಪ್ರ. ೦೨-೨೪೬). ಚಲವಿಡಿ : ಚಲವಿಡಿದೀಗಳಿಂತುಟು ನೆಲಂಬಿಡಿದಿರ್ಪುದು (ಚಕವಿ. ೫-೪೩): ಸತ್ಯಕೀರ್ತಿಯು . . . ಚಲವಿಡಿದನು (ಕವಿಕ. ೬). ಛಲವಿಡಿ : ಛಲವಿಡಿದೊಂದನೆಳಸಿ ಚಾರಿವರಿಯದೆ ನೆಲೆವಿಡಿ ದೊಂದಱೊಳಿರದೆ (ಹದಿಬ. ೩-೩೭). [ ಚಲ₁ + ಪಿಡಿ₁ ]

ಚಲಕು 'ಚಲಂಕು' ನೋ.

ಚಲಗತಿ, ಚಳಗತಿ (ನಾ). ವೇಗವಾದ ಗತಿ ; ವಾಯುವೇಗ : ನೂಱಾನೆ ಯಲಿ ನಿನ್ನವನಳವಿಗೊಟ್ಟನು ಭೀಮಸೇನನ ಚಲಗತಿಯ ಚಾತುರ ಚಪೇಟ ಪದಪ್ರಹಾರದಲಿ (ಕುಮಾ.ಗ. ೪-೨೩). ಚಳಗತಿ : ಚಳಗತಿಯ ವಾಜಿಗಳು ಕೊಂಡೊಯ್ದುಳುಹಿದವು ತಮಸೆಯಲಿ (ತೊರರಾ. ೨-೪-೮). [ಚಲ₂+ಗತಿ]

ಚಲಗಾರ, ಛಲಗಾರ (ನಾ). ಹಟಗಾರ; ಚಲವುಳ್ಳವನು (೩). ಛಲಗಾರ. 'ಛಲಗಾರ್ತಿ' ಪರಾ. [ ಚಲ₁ + - ಗಾರ (< - ಕಾಱ) ]

ಚಲಗು 'ಚಲಂಕು' ನೋ.

ಚಲಚಲಿಸು (ಕ್ರಿ) . ಚಂಚಲವಾಗು; ಗಾಬರಿಹೊಂದು: ಅವಳ ಕಣ್ಣುಗಳು ಚಲಚಲಿಸುತ್ತಿದ್ದುವು (ಘೂರಾಚ. ೪೬೫). [ <ಚಲ₂ + - ಇಸು₁ ]

ಚಲಚಿತ್ತ, ಚಳಚಿತ್ತ (ನಾ). ೧. ಚಂಚಲವಾದ ಮನಸ್ಸು. ೨. ಚಂಚಲ ವಾದ ಮನಸ್ಸುಳ್ಳವನು : ಅಸ್ಥಿರಬುದ್ಧಿಯುಳ್ಳವನು : ಮತ್ತನತಿ ಶ್ರಾಂತನು ಪ್ರಮದೋನ್ಮತ್ತನತಿಕುಪಿತಾನನನು ಚಲಚಿತ್ತನತಿಕಾಮುಕನು . . . ಇಂತೀ ಹತ್ತುಜನವಾವಾಗ ಧರ್ಮದ ತತ್ತ್ವವಱಿಗಳನಱಿಯರೈ (ಕುಮಾ.ಉ. ೩-೭೭); ನೆತ್ತಿಮುಸುಕಿನ ಕೈಯ ಗಲ್ಲದ ಕುತ್ತದಲಿ ನೆಟ್ಟಾಲಿಗಳ ಚಲಚಿತ್ತರಿದ್ದುದು ಸಕಲನಾಯಕವಾಡಿ ದುಗುಡದಲಿ (ಕುಮಾ.ದ್ರೋ. ೯-೪). ಚಳಚಿತ್ತ : ೨. ಚಳಚಿತ್ತರ್ಗೆ ಬಿಂಕದ ಕದಂ ಸತ್ಯಹೀನರ್ಗೆ ಸೋಂಕದ ಕದಂ (ನಂದಿರ. ೧೭-೬೫) : ಚಳಚಿತ್ತಂ ಜಾಡ್ಯವೃತ್ತಂ ಚಪಳಮತಿಮದಾಂಧಂ (ಶಬಶಂ. ೫-೦೮). [ ಚಲ₂ + ಚಿತ್ತ ]

ಚಲಚಿತ್ರ (ನಾ). ಚಲನಚಿತ್ರ; ಸಿನೇಮ: ಇಂದಿಗೂ ನಮ್ಮ ಚಲಚಿತ್ರಗಳಲ್ಲಿ ಹತ್ತು ಹದಿನೈದಕ್ಕೆ ಕಡಿಮೆ ಹಾಡುಗಳಿಲ್ಲದಿದ್ದಲ್ಲಿ ಅವು ಯಶಸ್ವಿಯಾಗಲು ಸಾಧ್ಯವೇ ಇಲ್ಲ (ಭಾರದ. ೫೩೫). [ ಚಲ₂ + ಚಿತ್ರ ]

ಚಲತನ (ನಾ). ಚಂಡಿತನ ; ಮೊಂಡುತನ ; ಹಟಮಾರಿತನ : ಎಲೆಗೆ ನಿನ್ನೊಡನೆ ನಾನೇಂ ಹರಿಯ ಹೋರುವೆಂ ಚಲ[ಪಾಠಾಂ. ಛಲಿ]ತನಕಲಸಿದೆ ನಾಂ (ಕ್ಷಮಿಧಾ. ೦೦-೩೦). [ ಚಲ₁ + - ತನ ]

ಚಲತ್ವ (ನಾ). ೧. ಚಂಚಲತೆ ; ಅಸ್ಥಿರತೆ. ೨. ನಡುಗುವಿಕೆ ; ಕಂಪನ. [ ಸಂ. ]

**ಚಲದಲ**, ಚಲದಳ, ಚಳದಳ (ನಾ). ಅಲುಗಾಡುತ್ತಲೆ ಇರುವ ಎಲೆಗಳನ್ನುಳ್ಳುದು ; ಅರಳಿಮರ ; ಅಶ್ವತ್ಥ. **ಚಲದಳ** : "ಚಲದಳ ಮಶ್ವತ್ಥಂ" (ಮಧು.ಶೋ. ೩೩-೪). **ಚಳದಳ** : "ಚಳದಳಂ ಪೆಸ್ಪೆಲು ಬೋಧಿಯಶ್ವತ್ಥಮೆನಲರಳಿಯುಕ್ಕುಂ" (ಮಂಗರಾ. ೩೪-೧೧). [ಚಲ$_2$ + ದಲ]

**ಚಲದಳ** 'ಚಲದಲ' ನೋ.

**ಚಲದಿ** 'ಶಲದಿ$_2$' ನೋ.

**ಚಲನ**, ಚಳನ (ನಾ). ೧. ಸರಿದಾಡುವಿಕೆ ; ಸಂಚಾರ ; ಗಮನ ; ಗತಿ ; ನಡೆ. ೨. ಅಲುಗಾಟ ; ನಡುಕ ; ಕಂಪನ. ೩. ಅಡಿ ; ಚರಣ ; ಪಾದ : ಕೇಳೀವನಸ್ಥಾನದೊಳ್ ಚಲನನ್ಯಾಸವಿಲಾಸಮಂ ಮೆಱೆದು (ಶಂರಾಮೂ. ೪-೯೦). ೪. ಗಾಳಿ ; ವಾಯು. 'ಚಲನಭವ' ಪರಾ. ೫. [ನಾಟ್ಯ] ಕಣ್ಣಿನ ಒಂಬತ್ತು ಭಾವವಿನ್ಯಾಸಗಳಲ್ಲಿ ಒಂದು : ಭ್ರಮಣ . . . ಚಲನ . . . ಪ್ರಾಕೃತ ಈ ಒಂಬತ್ತು [ಸ್ವನಿಷ್ಠ] ಆಲಿಯ ಭೇದಂಗಳ್ (ರಾಸ್ವರಂ. ೩-೩೪ ಪ). **ಚಳನ** : ೩. ಅದನಾಳ್ದನೆವನತಾರಾತಿ ನೃಪವಮಣಿಮಯಕಿರೀಟಪ್ರಭಾಲೀಢಚಳನನಳಿನಯುಗ್ಮಂ (ಸು ಕು ಮಾ. ೧-೭೪ ಪ) ; ಶ್ರುತಕೀರ್ತಿಗಳ ಚಳನಂ ನಮಗೆಚಳಸುಖಮನೀಗನವರತಂ (ಚಂದ್ರಪ್ರ. ೧-೦೩) ; ಚಳನನಿತಂಬಬಿಂಬಕುಚಕರ್ಣಕಪೋಲಲಲಾಟದೇಶದೊಳ್ ತೊಳಗಿ (ಪುಷ್ಪ.ಪು. ೮-೧೦೦). [ಸಂ.]

**ಚಲನಕ** (ನಾ). ಅರ್ಧದವರೆಗೆ ತೊಡೆ ಮುಚ್ಚುವ ಹೆಂಗಸರ ಒಳ ಉಡುಪು ; ಅರ್ಧೋರುಕ ; ಚಂಡಾತಕ. [ಸಂ.]

**ಚಲನಚಿತ್ರ** (ನಾ). = ಚಲಚಿತ್ರ : ಚಲನಚಿತ್ರದ ಪಟವು ಸುರುಳಿ ಬಿಚ್ಚಿದ ಹಾಗೆ (ಇಂಚಾಪ. ೩೦-೪೦). [ಚಲನ + ಚಿತ್ರ]

**ಚಲನಭವ** (ನಾ). ವಾಯುವಿನ ಮಗ ; ಭೀಮಸೇನ : ದುಶ್ಶಾಸ ಚಲನಭವನಂ ಕೆಣಕುತ (ತುರಂಗ. ೭೫-೭). [ಚಲನ + ಭವ]

**ಚಲನವಲನ** (ನಾ). ೧. ಸಂಚಾರ ; ಗತಿ : ಭೂಮಿಯ ಚಲನವಲನಗಳು ನಿಂತುಹೋದುವು (ಶಾಂತಲಾ. ೨೩೮). ೨. ಹೋಗುವಿಕೆ, ಬರುವಿಕೆ, ಮಾತಾಡುವಿಕೆ ಮುಂತಾದ ಕ್ರಿಯೆಗಳು ; ಚಟುವಟಿಕೆ ; ಸುಧಾಕರನು ಗುಪ್ತಚಾರನಾಗಿ ಮಾರುವೇಷದಿಂದ ನಮ್ಮ ಚಲನವಲನಗಳನ್ನು ಪತ್ತೆ ಹಚ್ಚಲು ಈಗಾಗಲೇ ತಿರುಗಾಡುತ್ತಿರುವನು (ದೇಶಭ. ೯೪) ; ಅವರ ಚಲನವಲನಗಳಲ್ಲಿ ವ್ಯತ್ಯಾಸವೇನಾದರೂ ಇತ್ತೇ? (ಜೀವಾತ್ಮ. ೨೫೦). [ಚಲನ + ವಲನ]

**ಚಲನಶಕ್ತಿ** (ನಾ). ೧. ಚಲಿಸುವ ಶಕ್ತಿ ; ಸಂಚರಿಸುವ ಸಾಮರ್ಥ್ಯ : ವಾಯುವಿನಲ್ಲಿ ಚಲನಶಕ್ತಿಯೂ, ಆಕಾಶದಲ್ಲಿ ವ್ಯಾಪನಶಕ್ತಿಯೂ ಸ್ವಾಭಾವಿಕವಾಗಿ ನೆಲಸಿರುವುದನ್ನು . . . ಕಾಣಬಹುದಾಗಿದೆ (ಶಕ್ತಿ.ವಿ. ೩೦). ೨. ಚಲನೆಯಲ್ಲಿರುವ ಶಕ್ತಿ ; ಕಾರ್ಯಮಾಡುತ್ತ ಇರುವ ಶಕ್ತಿ : "ಚಾಲನಶೀಲಶಕ್ತಿ, ಚಲನಶಕ್ತಿ" (Energy, Kinetic. ಪಾರಿಸಿ. ೩೭). ೩. [ವಿಜ್ಞಾ] "ಒಂದು ಕಾಯವನ್ನು ಚಲನಗೊಳಿಸುವ, ಅಳೆಯಲಾಗುವ, ಒಂದು ಪ್ರಭಾವ ; ಬಲ. (ಹಿಂದೆ) ಚಲನಶಕ್ತಿ." (Force. ಇಂಕನಿ). [ಚಲನ + ಶಕ್ತಿ]

**ಚಲನಸಂಭವ** (ನಾ). ೧. ವಾಯುವಿನ ಮಗ ; ಆಂಜನೇಯ ; ಮಾರುತಿ : ಆ ಚಲನಸಂಭವ ನಿದ್ದೆಯಿಂದೆಚ್ಚತ್ತಿಸಿ ಘರ್ಜಿಸಿದ (ಲೌಶಿರಾ. ೨೯-೨೪). ೨. ಭೀಮಸೇನ : ಚಲನಸಂಭವನ್ನೋರ್ವ ತಾನಾಳ ಮೇಲಿದಿರಾದನೆಂಬುದಿದು ಮಿಥ್ಯ (ತುರಂಗ. ೬೪-೦೩). [ಚಲನ + ಸಂಭವ]

**ಚಲನಸಖ** (ನಾ). ವಾಯುವಿನ ಮಿತ್ರ ; ಅಗ್ನಿ : ಚಲನಸಖ ಸಾಕ್ಷಿಕದಲಾ ಕುಂಡಲೆ ಕುಶೇಶಯಲೋಚನೆಯನಿತ್ತಳು ಕುಬೇರಪ್ರಭಗೆ (ನಿ ಭಾ ಗ. ೯-೦೩-೩೮). [ಚಲನ + ಸಖ]

**ಚಲನಸುತ** (ನಾ). = ಚಲನಭವ ೨ : ಕೊಳುಗುಳದ ಜಯಲಕ್ಷ್ಮಿಗಾಯಿತು ಚಲನಸುತನಲಿ ಮದುವೆ (ಕುಮ್ಮಾ.ಕ. ೦೯-೮೭). [ಚಲನ + ಸುತ]

**ಚಲನಾಂಗ** (ನಾ). ಚಲನಕ್ಕೆ ಸಾಧನವಾದ ಅಂಗ, ಅವಯವ : ಹೀಗೆ ಚಲನಾಂಗಗಳೆಲ್ಲ ಎದೆಗೆ ಸೇರಿವೆ (ಕೀಟಜ. ೦೮). [ಚಲನ + ಅಂಗ$_2$]

**ಚಲನಿ** (ನಾ). = ಚಲನಕ. [ಸಂ. ಚಲನೀ]

**ಚಲನೆ** (ನಾ). = ಚಲನ ೨ : ಈ ಪರಿವರ್ತನೆ ಸುಲಭವಾಗಿ ಕಣ್ಣಿಗೆ ಕಾಣಿಸುವುದಿಲ್ಲ. ಗಡಿಯಾರದಲ್ಲಿ ಗಂಟೆಯ ಮುಳ್ಳಿನ ಚಲನೆಯಂತೆ (ದ್ರಾವಿ. ೩೨೪). [ಸಂ. ಚಲನ]

**ಚಲನೈ** (ಕ್ರಿ). ಚಲಿಸುವಂತೆ ಮಾಡು ; ಚಂಚಲಗೊಳಿಸು : ನಿನ್ನ ಪತಿ ತಪೋನೈಷ್ಠ್ಯಯಿಂದಾನಿರಲು ತತ್ತಪೋ [ಪವ] ಚಲನಗೈಯಲು ಕೋಪದಿಂ ನೋಡೆ ದಹನವಾದಾ (ಪವಮೋ. ೭-೪೩). [ಚಲನೆ + ಗೈ (<ಕೆಯ್$_1$)]

**ಚಲಪತ್ರ** (ನಾ). = ಚಲದಲ : ಪಲಸು ನೇಱಿಲು ಚೂತ ಪಿಚುಮಂದ ನ್ಯಗ್ರೋಧ ಚಲಪತ್ರ ಬಿಲ್ವಾಮಲಕ . . . ಸಾಲುಮರಗಳೊಪ್ಪಿದುವು (ಪ್ರೋಹತ. ೨-೩೪). [ಚಲ$_2$ + ಪತ್ರ]

**ಚಲಪದ** (ನಾ). ಹಟದ ಸ್ಥಿತಿ ; ಮೊಂಡುತನದ ರೀತಿ : ನೀತಿಮಾರ್ಗದಿ ತಿಳುಹಿ ಪಾರ್ಥನ ಗಯನ ಕಳುಹೆನೆ ಚಲಪದದಿ ಕೊಡೆನೆನಲು ಮುರಳಿ ಸುಭದ್ರೆ ಗಮಿಸಿದಳು (ಕೋಗಯು. ೦೫ ಸೂಚನೆ). [ಚಲ$_1$ + ಪದ$_2$]

**ಚಲಪಿಲ್ಲಿ** (ನಾ). ಒಂದು ಬಗೆಯ ಪಿಲ್ಲಿ : ಕಾಲ್‌ಪಿಲ್ಲಿ ಚಲಪಿಲ್ಲಿ ಕೈ ಬಳೆಯ ದನಿಯಲ್ಲಿ . . . ಬಾ (ಬಣ್ಣಬಿ. ೦೨ ೦೭). [ಚಲ$_2$ + ಪಿಲ್ಲಿ$_1$]

**ಚಲಪ್ರತಿಮೆ** (ನಾ). ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ಪ್ರತಿಮೆ, ಉತ್ಸವಮೂರ್ತಿ : "ಚಲ" ಪ್ರತಿಮೆಗಳು . . . ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸಬಹುದು (ಭಾರದ. ೫೦೨). [ಚಲ$_2$ + ಪ್ರತಿಮೆ]

**ಚಲಬಂಡವಾಳ** (ನಾ). ಸ್ಥಿರವಾಗಿರದ ಬಂಡವಾಳ ; ಚಲನೆಯಲ್ಲಿರುವ ಬಂಡವಾಳ : 'ಚಲಬಂಡವಾಳ' ಎಂದರೆ ಶ್ರಮಶಕ್ತಿಯು ಮೇಲೆ ಕೂಲಿ-ಸಂಬಳಗಳ ರೂಪದಲ್ಲಿ ವೆಚ್ಚಮಾಡಿದ ಬಂಡವಾಳ (ಮಾವಾದ. ೦೨೨). 'ಚರಬಂಡವಲ' ಪರಾ. [ಚಲ$_2$ + ಬಂಡವಾಳ (<ಬಂಡವಲ)]

**ಚಲಬ್ಬೆ** (ನಾ). ಒಬ್ಬಾಕೆಯ ಹೆಸರು : ಸ್ವಸ್ತಿಶ್ರಿ (ಶ್ರೀ)ಬಿಜ್ಜೇಸ್ವರದ ಸೂಳೆ ಚಲಬ್ಬೆ (ಇಇ. ೫, ೦೭೦-೦; ೯ನೆಯ ಶತ). [? + ಅಬ್ಬೆ$_1$]

**ಚಲಮಲ** (ನಾ). ೧. ಹೊಳಪು ; ಚಕಚಕ ; ಮಿನುಗುಟ್ಟುವಿಕೆ : ಚಕಚಕ ಚಂಚಲ ಮಿಂಚಿನ ಗೊಂಚಲ ಚಕಮಕಿ ಚಲಮಲ (ಗರಿ. ೦೨೩-೦೨). ೨. ಚಂಚಲತೆ ; ಕಂಪನ. 'ಚಲಮಲಿಸು' ಪರಾ. [?]

**ಚಲಮಲಿಸು** (ಕ್ರಿ). ನಡುಂಗು ; ಚಡಪಡಿಸು : ನಾನು ಹೆದರಿದ ಮೊಲ ಚಲಮಲಿಸುವ ಹಾಗೆ ಮಾಡಿ ಉದ್ಗರಿಸಿದೆನು (ಇಪ್ಪತ್ತ. ೦೮೪). [ಚಲಮಲ + – ಇಸು$_3$]

**ಚಲಮಱಿ** (ಕ್ರಿ). ಚಲವನ್ನು ತಿಳಿ ; ದೃಢನಿಶ್ಚಯವನ್ನು ಅರಿತುಕೊಳ್ಳು : ಬಲ್ಲಿದ ಸು(ಶೂ)ದ್ರಕನೆ . . . ಮುತ್ತಿ ಆನೆಯಂ ಕದಿವೊಂಗಂ ಚಲಮಱಿವೊಂಗಂ ಆಟ್ಕೆವೊಂಗಂ ಕುಡಲ್ವೊಲ್ವೊಂಗಂ ಒಬ್ಬನೋ ಅಚಾರ್ಜ್ಯನ್ (ಎಇ. XXIV, ೯೩-೮ ; 896). [ಚಲ$_1$ + ಅಱಿ]

**ಚಲಮೂರ್ತಿ** (ನಾ). = ಚಲಪ್ರತಿಮೆ : ಚಲಮೂರ್ತಿಗಾಗಿ ಅರ್ಧಮಂಡಪವನ್ನು ಸೇರಿಸಲಾಯಿತು (ಹೊಯ್ಸಳವಾ. ೦೮). [ಚಲ$_2$ + ಮೂರ್ತಿ]

**ಚಲಮೆ** 'ಚಲುಮೆ$_1$' ನೋ.

**ಚಲವಾದಿ$_1$**, ಛಲವಾದಿ (ನಾ). ಚಲವನ್ನು ಹಿಡಿದವನು ; ದೃಢಸಂಕಲ್ಪವುಳ್ಳವನು ; ಛಲಿ : ಕಡುಚಾಗಿ, ಚಲವಾದಿ (ಶಮದ. ೦೬೫ ಪ್ರಯೋ) ; ಚಲವಾದಿಯ ಸಂಗಡ ಹಟವಾದಿ ಸೇರಿದ ಹಾಗೆ (ಗಾದೆ). **ಛಲವಾದಿ** : ಛಳಿಗಂಡವೊಲು ಮೂರ್ಛೆಗೈಸಿ ವಧಿಸಿದತಿ ಛಲವಾದಿ ಛಂದವಿಡೆನ್ನ (ಶತಸಾಂ. ೬೯-೪೯). [ಚಲವಾದ$_0$ + – ಇ$_3$]

**ಚಲವಾದಿ₂** (ನಾ). ಮಾದಿಗರಲ್ಲಿ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು; ಕುಳವಾಡಿ: ಸುಂಕ ತಳವಾಟಿ ಆನುವು ಮಗವೆ ಚಲವಾದಿ ಸಂಗೆಡಿ ಪಂತಗಾಜಿರಿಗೂ ಇದೇ ಭಾಷೆ (ಸೌಇಇ.IX-ii, ೩೩೨-೨೦; 1530); ಜೊತೆಗೆ ನಾಲ್ಕು ಜನ ಚಲವಾದಿಗಳು ಒಬ್ಬರಾದ ಮೇಲೆ ಒಬ್ಬರು ತಮ್ಮ ಕೊಂಬುಗಳನ್ನು ಊದಿದರು (ಚಕರಾ. ೩೯೩).

[ದೇ.? ತಮಿ. ಚಲವಾತಿ ; ತೆಲು. ಚಲವಾದಿ ]

**ಚಲವಾದಿಘಂಟೆ** (ನಾ). ಚಲವಾದಿಯು ಹೆಗಲ ಮೇಲೆ ಹೊತ್ತುಕೊಂಡು ಬಾರಿಸುತ್ತಾ ಹೋಗುವ ಗಂಟೆ : ಮಾಯಾಮರತಾವು, ಪಂಚನಿಶಾನಿ, ಡವಣೆ, ಅರಲಿವಸ್ತ್ರ, ಚಲವಾದಿಘಂಟೆ (ಗುರುದ. ೧೧). [ಚಲವಾದಿ₂+ಘಂಟೆ]

**ಚಲವಿಡಿ** 'ಚಲಂಬಿಡಿ' ನೋ.

**ಚಲವಿತ್ತ** (ನಾ). ೧. ಅಸ್ಥಿರವಾದ ಸಂಪತ್ತು. ೨. ಸಂಪತ್ತು ಸ್ಥಿರವಾಗಿಲ್ಲದವನು : ಚಲವಿ[ಪಾಠಾಂ. ಚಿ]ತ್ತಂ ಬಲಹೀನಜಾನು ಚಪಲಂ . . . ಮೇಷಜಂ (ಜಾತಿ. ೧೭-೧). [ಚಲ₂ + ವಿತ್ತ ]

**ಚಲವೀಣೆ** (ನಾ). ಒಂದು ಬಗೆಯ ವೀಣೆ : ಧ್ರುವವೀಣೆ, ಚಲವೀಣೆ . . . ಇವುಗಳನ್ನೆಲ್ಲಾ ವಿವರಿಸಿದ್ದಾನೆ (ಭಾರದ. ೩೩೮). [ಚಲ?+ವೀಣೆ]

**ಚಲವು** 'ಶಲವು' ನೋ.

**ಚಲಾಂಡ** (ನಾ). ಒಂದು ಬಗೆಯ ಪಕ್ಷಿ ; ಟಿಟ್ಟಿಭ : "ಟೀವಂ ಚಲಾಂಡ ಮೆನಿಸಿಕ್ಕು" (ಮಂಗರಾ. ೩೨-೧೧). [ ? ]

**ಚಲಾಕಿ** 'ಚಾಲಾಕಿ' ನೋ.

**ಚಲಾಕು** 'ಚಾಲಾಕು' ನೋ.

**ಚಲಾಯಿಸು, ಚಲಾಯ್ಸು** (ಕ್ರಿ). ೧. ನಡೆಸು; ಬಳಸು; ಉಪಯೋಗಿಸು: ಕಾನೂನು ಮೀರಿಗೆ ತಮಗೆ ಅಧಿಕಾರವಿಲ್ಲದಿದ್ದರೂ ಅಧಿಕಾರವನ್ನು ಚಲಾಯಿಸಿದ್ದಾರೆ (ಗ್ರಾಮೂಕ.೯೩); ಎಂಥ ನಿರಂಕುಶನಾದ ರಾಜನಾದರೂ ಅವನು ತನ್ನ ಗುಣಕ್ಕನುಸಾರವಾಗಿ ತನ್ನ ಸ್ವಾಮಿತ್ವವನ್ನು ಚಲಾಯಿಸುವನು (ರಾಜ್ಯಾಂಗ. ೩೦) : ಯಾವಯಾವದೋ ಸಿನಿಮಾ ಹಾಡುಗಳನ್ನು ಅವರು ಚಲಾಯಿಸುತ್ತಿದ್ದರು (ಮೂರಾಸ. ೦೨೩). ೨. ಚಲಿಸುವಂತೆ ಮಾಡು; ತಿರುಗಿಸು: ಈಗ ಮೊದಲಿಗಿಂತ ಹೆಚ್ಚಿಗೆ ಚರಖಾ ಚಲಾಯಿಸುತ್ತಲೂ ಇದ್ದೇನೆ (ಕಲಕ. ೭೦). **ಚಲಾಯ್ಸು :** ೧. ಪುಡಾನ್ನು ಯಂಬ ಹೆಸರಿನ ವಂಟ ಕುದುರೆ ಚಲಾಯ್ಸಿ ಅವರನ್ನ ಹೊಡೆಯುತ್ತಿದ್ದಲ್ಲಿ (ಹೃದರ. ೩೦). [ಚಲಾಯಿ₀ (P ←ಹಿಂ. ಚಲಾನಾ) + – ಇಸು₃ ]

**ಚಲಾಯ್ಸು** 'ಚಲಾಯಿಸು' ನೋ.

**ಚಲಾವಣೆ** (ನಾ). ೧. ನಡೆಸುವಿಕೆ; ಬಳಕೆ;(ನಾಣ್ಯಗಳಂತೆ)ವಿನಿಮಯದ ವ್ಯವಹಾರದಲ್ಲಿರುವಿಕೆ; ಮಹಿವಾಟು : ಚಲಾವಣೆ, ಟಂಕನ ಮತ್ತು ವಿಧಿಮಾನ್ಯ (ಭಾಥಾಸ. ೨೮೦); ಈಗ ಚಿನ್ನ ಯಾವ ರೀತಿ ನಿರ್ದಿಷ್ಟ ಚಲಾವಣೆ ಮೌಲ್ಯ ಹೊಂದಿದೆಯೋ ಹಾಗೆ ತಂಬಾಕು ನಾಣ್ಯವಾಗಿದ್ದಿತು (ಕಸಬು. ೩೬) ; ಪದಗಳು ಜನಮನದ ಟಂಕಸಾಲೆಯಲ್ಲಿ . . . ಚಲಾವಣೆಗೆ ಬರುವ ನಾಣ್ಯಗಳಿದ್ದಂತೆ (ಸೌಂದಃ. ೯೨). ೨. ಸಾಗಾಟ ; ಸಾಗಾಣಿಕೆ: ಒಂದೆರಡು ಪರ್ಮಿಟು ಮಾಡಿಸಿ ಪ್ಯಾಲು ಚಲಾವಣೆ ಮಾಡದಿದ್ದರೆ ನಮ್ಮ ರಥ ಸಾಗಲಾರದು (ದೀಕಥು. ೬೪). [ ← ಚಲಿಸುವಂತೆ ಮಾಡು, ಹಿಂ. ಚಲಾವನಾ=ಮರಾ. ಚಲನೀ= ಚಲಾವಣೆಯಲ್ಲಿರುವ ]

**ಚಲಿ₁** 'ಚಿಲ್ಲ₁' ನೋ.

**ಚಲಿ₂, ಛಲಿ** (ನಾ). ಛಲವುಳ್ಳವನು; ದೃಢಸಂಕಲ್ಪವುಳ್ಳವನು: ಅಮುಮ ದಂಡಾಧಿಪ ಕಿರೀಟಪದನೊಪ್ಪಿದಂ ಅಮುಮ ಚಲಿ [ಪಾಠಾಂ. ಛಲಿ]ನಾಯಕರ ದೇವನಿಂತೊಪ್ಪಿದಂ (ಬಸರ. ೯-೨೦೦). **ಛಲಿ:** ಭಕ್ತಿಯ ಬಲಿಯು ವಿರಕ್ತಿಯ ಛಲಿಯ ಸನ್ಮುಕ್ತಿಯ ನೆಲೆಯರ್ಥಾರ್ಣವಕೆ ಭೈತ್ರ . . . ಗೌರನ ನವ್ಯ ಕಾವ್ಯ (ಪೋಲಕು ೩-೨). [ಚಲ₁ + – ಇ₃ ]

**ಚಲಿ₃** (ನಾ). ಒಂದು ಬಗೆಯ ಮರ; ಚೆನ್ನಂಗಿ: "ಚೆನ್ನಂಗಿ ಚಲಿಯುಕ್ಕು" (ಮಂಗರಾ. ೩೭-೦೦). [ ? ]

**ಚಲಿಂದಲ** 'ಚಲಿವಿಂದರ' ನೋ.

**ಚಲಿಕಿಸು** (ಕ್ರಿ) .ಕತ್ತರಿಸು; ತುಂಡರಿಸು: ಈಗ ಚಲಿಕಿಸಿ ಶಿರವನು ಕ್ರೂರದಿ ಕೊಂದಾನೆ (ಹಮಚ. ೦೮೦) ; ಸತಿಶಿರಮಂ ಚಲಿಕಿಸು ಖಡ್ಗದಿಂ ತಡೆಯದೆ (ಹಮಚ. ೨೦೦). [ ? + – ಇಸು₃ ]

**ಚಲಿಕ್ಕ** 'ಚಳುಕ್ಕ' ನೋ.

**ಚಲಿತ, ಚಳಿತ₁** (ಗು). ೧.ಹೆಜ್ಜೆಯಿಟ್ಟ ; ಹೊರಟುಹೋದ ; ಮುಂದೆ ಹೋದ. ೨. ಕದಲಿಸಿದ ; ಕದಡಿದ ; ಸಂಚಲಗೊಳಿಸಿದ. ೩. ನಡುಗಂವ ; ಕಂಪಿಸುವ. ೪. ಅಲುಗಾಡುವ ; ಚಲಿಸುವ : ಚಲಿತ ಭ್ರೂಚಾಪದಂಡಂ ನಿಶಿತಕರಜಹೇತಿಕ್ಷತಂ (ಲೀಲಾ ವ. ೦೩-೩೦). (ನಾ). ೫. ಚಂಚಲವಾದುದು ; ಚಪಲವಾದುದು : ಪದ್ಮ ಪತ್ರದ ಜಲಬಿಂದುವಿನಂತೆ ಚಲಿತಮಾದುದು ಚಿತ್ತಂ (ಪಂರಾಮಾ. ೯-೭೬). **ಚಳಿತ₁ :** ೧. ಪ್ರಥಮಚಳಿತದಕ್ಷಿಣಚರಣನಾಗಿ ನಿಜನಿವಾಸದಿಂ ಪೊ ಱ ಮ ಟ್ಟು (ಪಂಪಭಾ. ೯-೦೩ ವ). [ಸಂ. ]

**ಚಲಿಮಿಲಿಸು** (ಕ್ರಿ). ಹಾತೊರೆ ; ಆತುರಪಡು ; ಉತ್ಕಂಠವಾಗು : ಚಲಿಮಿಲಿಸುತಿವೆ ಧಾತು ಪಂಚಭೂತಾಹುತಿಗೆ ಛಲ ಬ್ಯಾಡ ವ್ರತಕೆ (ಜಪಮು. ೯೬-೦೪). 'ಚಲಮಲಿಸು' ಪರಾ. [ ? + – ಇಸು₃ ]

**ಚಲಿಯಿಸು** 'ಚಲಿಸು' ನೋ.

**ಚಲಿವಿಂದರ, ಚಲಿಂದಲ**(ನಾ). ಪ್ರಯಾಣಿಕರ ಉಪಯೋಗಕ್ಕಾಗಿ ರಸ್ತೆಗಳ ಪಕ್ಕಗಳಲ್ಲಿ ನಿರ್ಮಿಸಿದ ನೀರಿನ ಆಶ್ರಯ ; ಅರವಟ್ಟಿಗೆ : (ಶ). **ಚಲಿಂದಲ :** (ಎಸಮ್ಮ. XV, ೯೩).

'[←ತೆಲು. ಚಲಿವಿಂದಲ, ಚಲಿಪಂದಿಲಿ, ಚಲಿವಂದ್ರಿ, ಚಲಿವೆಂದ, ಚಲಿವೇಂದರ, ಚಲಿವೇಂದಲ, ಚಲಿವೇಂದ್ರ ]

**ಚಲಿಸು, ಚಲಿಯಿಸು, ಚಳಯಿಸು, ಚಳಿಯಿಸು, ಚಳಿಸು₂** (ಕ್ರಿ). ೧. ನಡೆ ; ನಡೆದಾಡು ; ಓಡಾಡು : ಮಹಾಪ್ರಧಾನರ ನಡುವೆ ಚಲಿಸುವ ಚಾತುರಂಗದ ಸುಳಿಯ ಸಂದಣಿಯ (ಕುವ್ಯಾಕ. ೮-೨೦) ; ತಂಡತಂಡದೆ ಕೃಷ್ಣನಗರಿಯೊಳ್ ಚಲಿಸುವ ಮಂಡಳಿಕರ ಕಾಲ ಕಡಗ ಪೆಂಡೆಯ ತಾಟಾಡಿ ಸಿಡಿದ ರತ್ನಗಳ ಕೈದಂಡೆಯೊಳ್ ಸಿಕ್ಕಿ ಬಾಚುವರು (ಮೋಹತ. ೩-೬೦): ಅಲ್ಲಿನ ವಿದ್ವಾಂಸರು ಚಲಿಸುವ ಪುಸ್ತಕಭಂಡಾರಗಳು (ಕಂಗಾಳ್ಮ. ೪). ೨. ಅಲುಗಾಡು ; ಹೊಯ್ದಾಡು : ಅತ್ತಿತ್ತ ಚಲಿಸದಚಲಂ ನಡೆದು ಬರುತಿರ್ದ (ಬಸರ. ೩-೩೭); ಉದ್ದಂಡ ಪದಹತಿಗಳ ಚಲಿಸಿ ದಿಗುಮಂಡಲಂ ಕಿವುಡಾಗೆ ಬಹುವಾದ್ಯಧ್ವನಿಗಳಿಂದ (ಬಸವು. ೫-೦೪) ; ಅರೆಮುಗಿದ ಲೋಚನದ ಸಂಪುಟವರಳಿ ಚಲಿಸುವ ಚಂಚುಪುಟದುಪ್ಪರಿಸಿದಂಘ್ರಿಯ . . . ಸುರಿವ ನೆತ್ತರ ಪತಿಯ ಸುತ್ತಲು ತಿರುಗಿ ಚೀಱುವ ವಿಹಗಸತಿಯನು ಕಂಡನಾ ಮುನಿಪ (ಕೊರಾ. ೦-೨-೦೪). ೩. ಕದಡು ; ಕ್ಷೋಭೆಗೊಳ್ಳು; ದೃಢತೆಯಿಲ್ಲವಾಗು ; ಧವಳಚಾಮರಂ ಕಯ್ಯಗಳೊಳ್ ಮನಂ ಚಲಿಸೆ ಮಾಸಿ ಶಾಱಿದ ಕುರುಳ್ಗಳುಂ ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯಂ ವೃಷಭಲಕ್ಷಣಂ ಲಕ್ಷ್ಮಿಯಂ (ಗದಾಯು. ೯-೩). ೪. ಅಪಮಾರ್ಗಕ್ಕೆ ಹೋಗು ; ಹಾದಿತಪ್ಪು : (ಶ). ೫. ಚಲ್ಲಾಟವಾಡು: (ಶ). **ಚಲಿಯಿಸು :** ೨. ಚಲಿಯಿಸಿದವುದಸಿ ತೋತ್ಪಲದಳವೆಲರಲೆಪಂಗಳಿಂದಿದೆಂಬಿನೆಗಂ ಕೆತ್ತ ಲೊ ಡ ರ್ಚಿ ದ ತ್ತು ಬಲಗಣ್ಣಲರ್ (ಕಾದಂಪೂ. ೩೯೦) : ಬಿಡೆನೀಶಾ ನಿಮ್ಮ ಪಾದಾಬ್ಜಮಂ . . . ಬಲ್ಪಿಡಿದೆಂ ಮತ್ತತ್ತಮಿತ್ತಂ ಚಲಿಯಿಸದೆ (ರಕ್ಷಾಶ. ೯೮). ೬. ಕದಲಿಸು ; ಉದ್ರೇಕಿಸು ; ಕ್ಷೋಭೆಗೊಳಿಸು : ಮುನಿಗೆ ಪಲವು ಪ ಸರ್ಗಮಂ ಮಾಡುತ್ತಮೆಂತುಂ ಚಲಿಯಿಸಲಾಱದೆ ನಾಣ್ಚಿ ಮಯ್ಯಗರೆದು

ಪೋದಂ (ಚಾವುಂಪು. ೪೪) ; ಹರನ ಚಿತ್ರಮಂ ಚಲಿಯಿಸಿ ಕಡುತಪಮಂ ಕಿಡಿಸೆಂದು ಪೇಳೆ (ಗಿರಿಕ. ೨ ಕಥಾಗರ್ಭ). **ಚಳಯಿಸು:** ೭. ಸಡಿಲಿಸು; ಅಳ್ಳಕಮಾಡು: ಕಳೆದುದು ಪತ್ರಭಂಗದ ಬೆಡಂಗುಗಳಂ ಕುಟಿಲಾಲಕಂಗಳಂ ಚಳೆಯಿಸಿದತ್ತು ಕಣ್ಗೆಸೆವ ರಾಗಮನೆಯ್ದಿಸಿ ಕೇಶಹಸ್ತಮಂ ಚಳಯಿಸಿದತ್ತು ಮೆಯ್ಗೆ ಪುಳಕೋದಯಮಂ ಪಡೆದತ್ತು ತಲ್ಲತಾಲಳಿತೆಯರ್ಗಿತ್ತುದಿಂತು ಜಲಕೇಳಿ ಮನೋಭವಕೇಳಿ ಲೀಲೆಯಂ (ಆದಿಪು. ೧೧-೦೪೯). **ಚಳಿಯಿಸು:** ೧. ಮಿಳಿ ಪೆಗಲೊಳ್ ಕೈಯೊಳ್ ಸಂಬಳಿಗೋಲ್ . . . ಜರ್ಜರರವದಿಂ ಪೊಟಲ ಜನಂಗಳ ಕಿವಿಯೊಳ್ ಚಳಿಯಿಸುತುಂ ಬಂದು ನೋಟ್ಪ ಬಹಳಾಗ್ರಹಮಂ (ಮಹಾನೇ. ೮-೨೩). ೨. ಅನಿಲಾಹತಿಯಿಂ ಚಳಿಯಿಕುಮನೋಕಹಾನೀಕಮದ್ರಿ ಚಳಿಯಿಕುಮೆ (ಅಜಿಪು. ೧೦-೪೮) ; ಅಳರಲೆಗಳಲುಗೆ ಮಾಂಗಾಯ್ ಚಳಿಯಿಸೆ (ಪುಷ್ಪಪು. ೦೨-೬೬). ೩. ಕಾಮಂ . . . ಸಂಚಳಿಸದ ಶಂಕರನ ಮನಂ ಚಳಿಯಿಪುದಂ ಸಾರ್ದು ಪಾರ್ದು ತೆಗೆನೆಱೆದಿರ್ದಂ (ಗಿರಿಕ. ೮-೪೪). ೪. ಕೆಲಬರ್ಮಾನುಜರ್ ಚಳಿಯಿಸುತ್ತಿರೆ ಮಗುಟ್ದುವರಂ ಧರ್ಮದೊಳೆ ನಿಱಿಪುದುಂ (ಶಾಸ್ತ್ರಟೀ. ೯೪-೧). ೭. ಅಚಳಿತಧೈರ್ಯನ ಮನಮಂ ಚಳಿಯಿಸಲಾಱದಚ್ಚರಸೆಯರಚ್ಚಿಗಂಗೊಂಡಂತಾಗೆಯುಂ (ಪಂಪಭಾ. ೬-೯೪ ವ). ೮. ಸೋಲಿಸು ; ಹಿಮ್ಮೆಟ್ಟಿಸು: ಈತನ ಶೌರ್ಯಮುಮೀ ಮಹೋಗ್ರಸಂಗ್ರಾಮದೊಳೆನ್ನುಮಂ ಚಳಿಯಿಸಲ್ ಬಗೆದವ್ವುದು (ಪಂಪಭಾ. ೦೨-೮೪) ; ಸುಚತುರಕವಿರವಿಗಳಖಿಳಚೇತೋಗಗನಪ್ರಚುರತಮಸ್ತಿಮಿರಮನಳಱಿ ಚಳಿಯಿಸಲ್ ನೆರೆಗುಮುಟಿದವರ್ ನೆರೆದಪರೇ (ವರ್ಧಪು. ೧-೦೪). ೯. ಅಲುಗುಂವಂತೆ ಮಾಡು; ಕಂಪಿಸುವಂತೆ ಮಾಡು; ಚಂಚಲವಾಗುವಂತೆ ಮಾಡು : ಏಱಿಸಿದ ಬಿಲ್ಲಂತೆ ಶರೀರಮಂ ಚಳಿಯಿಸದೆ ಪಾರ್ಶ್ವದೊಳ್ ಪಟ್ಟಿರ್ಪುದುಂ (ಧರ್ಮಾಮೃ. ೦೨-೦೮). **ಚಳಿಸು₂:** ೨. ಚಳಿಸಿದ ರಸದಿಂಬುಣ್ಗಳ ನಿಲಿಸದಿರದು (ಲೋಕೋಪ. ೯-೦೬೯); ಫಳರಸವೆ ಮದಧಾರೆ ಚಳಿಪ ತಳಿರ್ಗೊಂಚಲುಜ್ಜ್ವಳ ಕರ್ಣಂ (ಪದ್ಮರಾ. ೮-೩೦).

**ಚಲಚಲಿಸು** (ದ್ವಿರುಕ್ತಿ) : ಮಹಾವಾದ್ಯರವ ಚಲಚಲಿಸುತಿಹುದೆತ್ತೆತ್ತಲು (ಜಿನಭಾ. ೩೦-೯). **ಚಲಿಸದ ತನ** = ನಿಶ್ಚಲತೆ ; ದೃಢತೆ : ಅನುದಿನವಲಸದೆ ಚಲಿಸದತನದಿಂದ ಜೀವಂಗೆ ಕರಣೀಯ (ಪರಬೋ. ೩-೦೭-೬). [ ಚಲನ + – ಇಸು₃ ]

**ಚಲುಂಕು** 'ಚಲಂಕು' ನೋ.

**ಚಲುಕಾಡು**(ಕ್ರಿ). ಚೆಲ್ಲಾಡು ; ಎರಚಾಡು : ಪಾಡುತದೞೊಳು ಕೃಷ್ಣನನು ಚಲು[ಪಾಠಾಂ. ತುಳು]ಕಾಡುತುದಕವನೊಬ್ಬರೊಬ್ಬರ ನೋಡಿ ನಗುತಬಲೆಯರು ವಿಹರಿಸುತಿರೆ (ನಿಭಾಗ. ೦೧-೦೯-೪೩).

[ ಚಲುಕು (<ಚಲಂಕು) + ಆಡು₁ ]

**ಚಲುಕು** 'ಚಲಂಕು' ನೋ.

**ಚಲುಮೆ** 'ಚೆಲುಂಮೆ₁' ನೋ.

**ಚಲುವ** 'ಚೆಲ್ವ' ನೋ.

**ಚಲುವತನ** 'ಚೆಲ್ವತನ' ನೋ.

**ಚಲುವತಿ** (ನಾ). ೧. ಚೆಲುವೆ; ಸುಂದರಿ: (ಕ). ೨. ರತಿದೇವಿ: (ಚತುನಿ. ೬. I, ೯೦). [ ಚಲುವ (<ಚೆಲ್ವ) + – ತಿ₁ (<– ಇತ್ತಿ) ]

**ಚಲುವನೆ** 'ಚೆಲ್ವನೆ' ನೋ.

**ಚಲುವರಾಯ** 'ಚೆಲ್ವರಾಯ' ನೋ.

**ಚಲುವಳಿ** 'ಚೆಲುಂವಳಿ' ನೋ.

**ಚಲುವಾನ್** 'ಚೆಲುವಾನ್' ನೋ.

**ಚಲುವಿಕೆ** 'ಚೆಲ್ವಿಕೆ' ನೋ.

**ಚಲುವು** 'ಚೆಲ್ವು₁' ನೋ.

**ಚಲುವೆ₁** 'ಚೆಲ್ವೆ' ನೋ.

**ಚಲುವೆ₂** (ನಾ). ಒಂದು ಬಗೆಯ ಹಕ್ಕಿ : ಹರಡೆ ಚಿಲುವಿಲಿಗನು ಚ[ಪಾಠಾಂ. ಚಿ]ಲುವೆ ಗಿಜುಗಿರಳೆ ಕಮ್ಮರನಸಗ ಕೊಟ್ಟುಳಿ ಹೊಱಸು ಹೊಡೆಗಳೆಂಬ ಪಕ್ಕಿಗಳವಱೊಳೊಪ್ಪಿದವು (ಸಾಳ್ವಭಾ. ೫-೨೦). [ ? ]

**ಚಲುವೆ₃, ಚೆಲವೆ, ಚೆಲುವೆ₂** (ನಾ). ಬಟ್ಟೆಗಳನ್ನು ಮಡಿ ಮಾಡುವಿಕೆ,–ತೊಳೆದು ಹಸನುಗೊಳಿಸುವಿಕೆ,–ಶಂಚಿಮಾಡುವಿಕೆ : ಗಡುಸಾದ ನೀರು (Hard water) ಚಲುವೆಗೆ ಯೋಗ್ಯವಲ್ಲ (ಗೃಹವಿ. ೮೬). **ಚೆಲವೆ:** ಚೆಲವೆ (ಮಡಿ) ಮಾಡಿರದ ಮೃದುವಾದ ಒಂದು ಚೀನಾ ರೇಷ್ಮೆ (ಬಟ್ಟೆ) (Pongee. ಇಂಕನಿ). **ಚೆಲುವೆ₂:** ಓದುತ್ತ ಓದುತ್ತ ಅವರ ಮುಖ ಚೆಲುವೆಯ ಅರಿವೆಯಂತಾಯ್ತು (ಮರಳಿ. ೦೬೯); ತೊಟ್ಟುಕೊಂಡ ಮೇಲೆ ಬಹಳ ಬೆಳ್ಳಗೆ ಚೆಲುವೆಮಾಡಿ ಗಂಜಿಹಾಕಿ ಮಾರುತ್ತಾರೆ (ಪ್ರವಾಇ. II, ೨೮೪). [ ದೇ.೩ ತಮಿ. ಚಲವೈ ; ತುಳು. ಚಲುವೆ ]

**ಚಲುವೆಱು** 'ಚೆಲ್ವುವೆಱು' ನೋ.

**ಚಲೆ** (ನಾ). ೧. ನಿಂತಲ್ಲಿ ನಿಲ್ಲದವಳು ; ಚಂಚಲಸ್ವಭಾವದವಳು ; ಅಸ್ಥಿರೆ. ೨. ಹಾದರಗಿತ್ತಿ ; ವ್ಯಭಿಚಾರಿಣಿ : "ಸ್ವೈರಿಣಿ ವಿದರ್ಬಿನಿಯನೀತೆ ಚಲೆ ಕುಲಟೆಯಭಿಸಾರಿ ಪಾಂಸುಲೆ ಬಂಧಕಿಯೆನಲ್ಕೆ ಹಾದರದ ನಾರಿಯೆನಿಸಿಕ್ಕು" (ಮಂಗರಾ. ೯೦-೪). [ ಸಂ. ಚಲಾ ]

**ಚಲ್ಲ₁, ಚಲ್ಲಂ₃, ಚೆಲ್ಲ₃, ಚೆಲ್ಲ₁, ಚೆಲ್ಲಂ₂** (ನಾ). ೧. ಸರಸ ; ವಿನೋದ; ವಿಲಾಸ ; ಒಯ್ಯಾರ : ಫುಲ್ಲಶರನುಮಂ ಚಲ್ಲದೊಳ್ ಪದವಡಿಸಲುಂ (ಶಾಂತಿಪು. ೮-೭೨ ವ) ; ಚಲ್ಲಂ ಚಳೆಯಂಗುಡುತ್ತುಮಿರೆ (ಅರ್ಧನೇ. ೨-೯೫) ; ಪೆಣ್ಣಾನೆಯೊಂದು ಚಲ್ಲದೊಳು ತೆಗೆದೊಡೆರಳ್ವೆಣ್ಣಾನೆ ಬರ್ಪ ತೆಱದೊಳು (ಭರತ. ೪೦-೮೫) ; ಪಲ್ಲಮಱಿಯ ಚಲ್ಲದ ಸೊರ್ಕನಿಟಿಕೆಯ್ದು ಬೀರದ ಜೋದರ ದಟವುಟದಿಂ (ಧಾಮಾಶ್ವ. ೯೪-೦೮). ೨. ನಗು : "ಚಲ್ಲ [ಪಾಠಾಂ. ಲ್ಲೆ] ನಗೆ" (ಶಬ್ದಮಂ. ೬೬). **ಚಲ್ಲು₃:** ೧. 'ಚಲ್ಲಂಬಡಿ' ಪರಾ. (ಗು). ೩. ಗಾಂಭೀರ್ಯವಿಲ್ಲದಿರುವ ; ಹಗುರಸ್ವಭಾವದ ; ಕಂಚೇಷ್ಟೆಯ ಸ್ವಭಾವದ: ಸ್ವಲ್ಪ ಚಲ್ಲುಸ್ವಭಾವದ ಮನುಷ್ಯ (ಚಿತ್ರಕೂ. ೦೦೪). **ಚೆಲ್ಲ₃:** ೧. 'ಚೆಲ್ಲನೋಟ' ಪರಾ. **ಚೆಲ್ಲ₁:** ೧. "ಚೆಲ್ಲವೆನೆ ಸರಸವುಕ್ಕುಂ" (ಚತುನಿ. ೦೯೫); ಚೆಲ್ಲಂ ಬೇಂಟದ ತೋಟಿಯೊಳ್ ತೊಡರೆ (ಕಾವ್ಯಸಾ. ೫೫೦ ಕೊದ್ವಳ) ; ಅಱಿಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ (ಪಂಪಭಾ. ೬-೯೪ ವ); ಅಲ್ಲದ ಚೇಳಿನ ಚೆಲ್ಲಕ್ಕೆ ಹೋಗಿ ಇವರೆಲ್ಲರೂ ನಾಣುಗೆಟ್ಟರಲ್ಲಾ (ಸರ್ವವ. ೯೨-೫೦೬) ; ಅಲರ್ಗಣ್ ಚೆಲ್ಲಮಂ ಸೂಸೆ (ಜಗವಿ. ೦೪-೦೦೪). ೨. "ಹಸನಂ ಚೆಲ್ಲಂ" (ಚತುನಿ. ೬೬). **ಚೆಲ್ಲು₂:** ೧. ಕಂತು ಪಡೆದಗ್ಗದ ಮೋಹನಶಕ್ತಿಸಂಕುಳಂ ಗಡಮೆನೆ ಚೆಲ್ಲಿನೋಟ್ಗೆನಡೆ ನೋಟ್ಪರ ಕಣ್ಗಳನೆಯ್ದೆ ಮುಂಚಲಂಬಿಡಿವ ವಿಳಾಸಿನೀನಿವಹಂ (ಶಾಂತೀಶ್ವ. ೧೧-೬೭). ೩. ಆ ಎದುರು ಮನೆ ಚೆಲ್ಲು ಹುಡಿಗಿ ರಾಜ ಇದಾಳಲ್ಲ (ನಡದಾ. I, ೫೦೬). ೪. ಕಂಚೇಷ್ಟೆಯ ಸ್ವಭಾವದ ವ್ಯಕ್ತಿ: ಮನಸ್ಸಿಗೆ ತೋರಿದುದನ್ನು ಬಾಯ್ದಲ್ಲಿ ಆಡಿ ತೋರಿಸಿ ಎಲ್ಲರಿಂದಲೂ 'ಚೆಲ್ಲು' ಎನಿಸಿಕೊಳ್ಳುತ್ತಾಳೆ (ಕಂಕಣ ೩೪). [ ?./ತೆಲು. ಚೆರಲು, ಚಿರಲು = ಉತ್ಸಾಹಗೊಳ್ಳು./ ಸಂ. ಚಲ್ = ವಿನೋದಮಾಡು. ]

**ಚಲ್ಲ₂** 'ಸೆಳ್ಳ' ನೋ.

**ಚಲ್ಲಂಬೆರಸು, ಚೆಲ್ಲಂಬೆರಸು** (ಅ). ಸರಸದಿಂದ ಕೂಡಿ ; "ಚಲ್ಲಾಟದೊಡನೆ" (ಪಂಪದೀ. ೨೬೬): ಕಡೆಗಣ್ಣ ಚ[ಪಾಠಾಂ. ಚೆ]ಲ್ಲಂಬೆರಸು ಸೂಸುವ ವಾಸವಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳಂ . . . ಸೇಸೆಗೊಳುತ್ತುಂ (ಪಂಪಭಾ. ೮-೨೭ ವ) ; "ಪ್ರಸಾರದಿಂದ ಕೂಡಿ" (ಪಂಪನಿ). **ಚೆಲ್ಲಂಬೆರಸು:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚಲ್ಲ₁ + ಬೆರಸು₃ ]

**ಚಲ್ಲಂಬೇಱು** (ಕ್ರಿ). ವಿಲಾಸವನ್ನು ಹೆಚ್ಚಿಸು: ಚಲ್ಲಂಬೇಱಿದ ನೋಟದೊಳ್ಪು ನಯದಿಂ ನಾಣ್ಣಾಣದೊಪ್ಪಂಗಳಂ ಬಲ್ಲಂದಂದದೆ ತೋಱುವೋಜೆ . . ಒರ್ವರ್ಗಳಂಗಜರಸಂ ಕೈಗಣ್ಮೆ ಬಂದಿರ್ದಳಂ ನೋಡದಂತೆ ನೋಡಿ (ಬಂಹರಿ. ೩-೫೦). [ಚಲ್ಲ$_1$ + ಪೇಱು$_1$]

**ಚಲ್ಲಕಾತಿ** 'ಚಲ್ಲಗಾರ್ತಿ' ನೋ.

**ಚಲ್ಲಕಾರ್ತಿ** 'ಚಲ್ಲಗಾರ್ತಿ' ನೋ.

**ಚಲ್ಲಗಣ್, ಚೆಲ್ಲಗಣ್** (ನಾ). ಸರಸವನ್ನು ಬೀರುವ ಕಣ್ಣು; ಚೆಲುವಾದ ಕಣ್ಣು: ಸೊಗಯಿಪ ಚಲ್ಲಗಣ್ (ಎಕ. VI, ತರೀಕೆ. ೪೫-೩೪: 1196); ಚಲ್ಲಗಣ್ಣಡೆಯ ಕುಡಿವೆಳಗೆಂಬುರುಳ್ಗಣ್ಣಿಯಲ್ಲಿ ಪಥಿಕಮನೋಮೃಗವನೆಯ್ದೆ ಬೀಱಿ ತಂದಿಲ್ಲಿ ತಡೆವರ್ (ಪದ್ಮರಾ. ೮-೯); ಚಲ್ಲ[ಪಾಠಾಂ. ಚೆಲ್ಲ]ಗಂಗಳ ಚದುರೆ (ಸಾಳ್ವಭಾ. ೨೯-೬). **ಚೆಲ್ಲಗಣ್**: ನಗೆಗಣ್ ಮಱುವಲ್ಲೆಯ ಚೆಲ್ಲಗಣ್ಣಳಿಂ ನೂರ್ಮಡಿ ಚೆಲ್ವನಾನೆ (ಅದ್ಭುರಾ. ೩೩೮); ನಗೆಗಣ್ಣ ಮುಗುಳ್ನಗೆ ಚೆಲ್ಲಗಣ್ಣ ಚಾಪಳಂ (ಪುಷ್ಪಪು. ೫-೨೪); ಮಣಿಹಾರಂ ವಿಟವೇತ್ರವಾಗುರಮೆನಲ್ ಸಾರ್ದಿರ್ಪಿನಂ ಚೆಲ್ಲಗಣ್ ಗಣಿಕಾವಲ್ಲಿಕೆ ಸಂಕುಲಕ್ಕೆ ಮಥಿಸಲ್ ಸಾಕೆಂಬಿನಂ (ದಶಕು. ೧೦-೫೮).

[ಚಲ್ಲ$_1$ + ಕಣ್]

**ಚಲ್ಲಗಾಯ್** 'ಚೆಳ್ಳೆಗಾಯ್' ನೋ.

**ಚಲ್ಲಗಾರ್ತಿ, ಚಲ್ಲಕಾತಿ, ಚಲ್ಲಕಾರ್ತಿ, ಚಲ್ಲೆಗಾರ್ತಿ, ಚೆಲ್ಲಕಾತಿ, ಚೆಲ್ಲಗಾತಿ, ಚೆಲ್ಲಗಾರ್ತಿ, ಚೆಲ್ಲೆಗಾತಿ** (ನಾ). ವಿಲಾಸವತಿ; ಸರಸವತಿ; ರಸಿಕಳಾದ ಸ್ತ್ರೀ: "ಸರಸವತಿ ಚಲ್ಲಗಾರ್ತಿ" (ಅಭಿಕಂ. ೧೬೪); ಎಡೆಯಾಡುವ ಚಲ್ಲಗಾರ್ತಿಯರ ಹುಲ್ಲೆಗಣ್ಣಳ ಕಾಂತಿಕೌಮುದಿಗಳಿಂ (ಅನಂಪು. ೦-೧೦೫ ವ); ಒರ್ವಳ್ಚಲ್ಲ [ಪಾಠಾಂ. ಲಲ್ಲೆ]ಗಾರ್ತಿ ದೂದವಿಯೊಡನೆ ನಗೆ ಮಿನುಗೆ ಮೊಗಮಂ ನೋಡಿ (ರಾಜಶೇ. ೧೦-೧೪೮ ವ). **ಚಲ್ಲಕಾತಿ**: ಮುಂಗುರುಳುಗಳ ತಿರ್ದಿತ ಮೆಲ್ಲನಡಿಯಿಟ್ಟಳು ಚಲ್ಲಕಾತಿ (ಜಂಪ್ರಸಾಂ. ೯-೧೫೮). **ಚಲ್ಲಕಾರ್ತಿ**: ಚಲ್ಲಕಾರ್ತಿಯರ್ ಚಲ್ಲದಿಂ ನಿವಾಳಿಸಿ ನಾಣಂ ಬಱಿದೀಡಾಡಿಯುಂ (ಅರ್ಧನೇ. ೫-೨ ವ). **ಚಲ್ಲೆಗಾರ್ತಿ**: "ಚಲ್ಲೆಗಾರ್ತಿಯೆನೆ ಸರಸವತಿ" (ಕಶರ. ೩೫). **ಚೆಲ್ಲಕಾತಿ**: ತನ್ನ ಸೇವೆಯ ಚೆಲ್ಲಕಾತಿಯರ ಮೇಳದೊಳು (ಭರಜ. ೫೫-೬೯). **ಚೆಲ್ಲಗಾತಿ**: ಚದುರೆಯೆ ಚೆಲ್ಲಗಾತಿಯೆ (ಗೀತಗೋ. ೫೫-೦೦). **ಚೆಲ್ಲಗಾರ್ತಿ**: "ಚೆಲ್ಲಗಾರ್ತಿಯೆಂದು ಸರಸವತಿ" (ಕಕಸಾ. ೧೯-೩೭೬). ಕಣ್ಚೆಲ್ಲದೊಳೆ ಗೆಲ್ವಳೆನ್ನಿವಳಲ್ಲದೆ ಜಗದೊಳಗೆ ಚೆಲ್ಲಗಾರ್ತಿಯರೊಳರೇ (ಲೀಲಾವ. ೨-೮೬); ಅವರೊಳೊರ್ವಳ್ ಜಕ್ಕಜವ್ವನದ ಚೆಲ್ಲಗಾರ್ತಿ (ರಾಮಾಶ್ವ. ೫೦-೧೫). **ಚೆಲ್ಲೆಗಾತಿ**: ಮೆಲ್ಲೆದೆಯವರಿಗೆ ಬಾಹುಬಲಿಯ ಕೃತಿ ಚೆಲ್ಲೆಗಾತಿಯ ಲಲ್ಲೆವಾತು (ನಾಗಕು. ೦-೭೬).

[ಚಲ್ಲ$_1$ + -ಕಾಱ + -ತಿ$_1$ (<-ಇತ್ತಿ)]

**ಚಲ್ಲಣ, ಚಣ್ಣ, ಚಲ್ಲಾಣ, ಚೆಲ್ಲಣ, ಚೊಣ್ಣ, ಚೊಲ್ಲಣ** (ನಾ). ೧. ಮೊಣಕಾಲವರೆಗೆ ಬರುವ ಉಡುಪು;-ಚಡ್ಡಿ; ಅರ್ಧೋರುಕ: "ಚಂಡಾತಕಮೆಂಬುದು ಚಲ್ಲಣಂ" (ಹಲಾಯು. ೯೦-೪೯೩); "ಚಣಕಂ—ಚಲ್ಲಣಂ (ಅರ್ಧೋರುಕಂ)" (ಶಮದ. ಪರಿ. ೨); ಅಗಳಂಗರಾಜ . . . ಇಂಬಾಗಿ ಚಲ್ಲಣವಮನುಟ್ಟು (ಪಂಪಭಾ. ೧೨-೧೦೮ ವ); ಉಟ್ಟ ಚಲ್ಲಣ ಕೈಯ ಪಟ್ಟಿಯವಿಡಿದು ಗರುಡಿಯ ಕಟ್ಟ ಶ್ರವವ ಮಾಡುವಂತೆ ತನ್ನ ತಪ್ಪಿಸಿಕೊಂಡರೆ ಶಿವ ಮೆಚ್ಚುವನೆ (ಬಸವ. ೬೭೮); ಮುಂಜೆಱಗುಗಳ ಚಂದ್ರಿಕೆ ಪಟದ ಚಲ್ಲಣದ . . ವನಿತೆಯರು ಬಳಸಿದರು (ತೊರರಾ. ೦-೦೬-೫೨); ಪಟ್ಟಾವಳಿ ಚಲ್ಲಣವ ತೊಟ್ಟು ಪೆರ್ದೊಡಗೆ (ಮೋಹತ. ೧೨-೪೫). ೨. ಷರಾಯಿ; ಇಜಾರ: ಬೆಲೆಬಾಳುವ ಷರಟು ಹಾಕಿ ಉಲನ್ ಚಲ್ಲಣವನ್ನು ಧರಿಸಿದ್ದ (ವಂಶವೃ. ೩೩೬). **ಚಣ್ಣ**: ೨. ಅವರ ಅಂಗಿ . . . ಬಣ್ಣಬಣ್ಣದ ಚಣ್ಣ ನೋಡಿದರೇ ಹೇಳಿಬಿಡಬಹುದು (ತುಂಗಭ. ೩); ಖಾಕಿ ಚಣ್ಣ ಹಾಕಿಕೊಂಡು ಕಚೇರಿಗೆ ಹಾಜರಾಗಿ ಸಿಪಾಯಿಯರಿಂದ ನಗಿಸಿಕೊಳ್ಳುವದು ತಪ್ಪುತ್ತಿತ್ತಲ್ಲ (ಗಂಪವಾಯ. ೭೨೦); ಚಣ್ಣ ಪೈರಣ ಹಾಕಿದ್ದರೆ ಬರುತ್ತಿತ್ತು (ಕುರಿಹಿಂ. ೦೨೪); ಪಿಸಿಸ್ತೂಲು ತೆಗೆದುಕೊಂಡು ಚಣ್ಣದ ಕಿಸೆಯಲ್ಲಿಟ್ಟಿ (ಮೇದಿಮ. ೬೯). **ಚಲ್ಲಾಣ**: ೧. ಉಲಿವ ಪೊಕ್ಕುಳ ಘಂಟೆ ಚಲ್ಲಾಣದುರೆ ಗೆಜ್ಜೆ (ನವಮೋ. ೧೨-೬೮). **ಚೆಲ್ಲಣ**: ೧. ಸಲ್ಲಲಿತವಾದ ಚೆಲ್ಲಣದ ಚಿತ್ರಿಸಿದ ಪತಾಕಾಂಚಲದಂತೆ ಪಲ್ಲವದ ಶೋಭೆಯಂ ಪಳಚ್ಚನೆ ಮೆಱೆವ ಬಾಲ ಗಜ್ಜೆಯ (ಶಾಂತೀಶ್ವ. ೭-೯೩ ವ); ಉಲಿವ ಗೆಜ್ಜೆಯ ಚೆಲ್ಲಣದ ಹೊಂಬೆಳೆದ ಹರಿಗೆಯು ಹೊಳೆವ ಕಡಿತಲೆಗಳ ವಿಲಾಸದೊಳೆಂದು ಹೊಕ್ಕುದು ತುಳುವ ಪಡೆ (ಕುವ್ಯಾಭೀ. ೯-೩೩); ಚೆಲ್ಲಣ ಕಾಸೆ ಕುಪ್ಪಸ ಪೊಲೆಕಟ್ಟುಗಳ್ (ಮೋಹತ. ೨೪-೪). **ಚೊಣ್ಣ**: ೨. ನನ್ನ ಬಿಳಿಚೊಣ್ಣದ ಸಂಗಡಿಗರೊಡನೆ ಆಡುತ್ತಿದ್ದೆ (ಗೀಪ. ೨); ಚೊಣ್ಣದ ಕಿಸೆಯಲ್ಲಿ ಹುರಿಗಡಲೆ ಇದ್ದುವು (ಜಯಂತ. ೨೦). **ಚೊಲ್ಲಣ**: (೧).

[ದೇ.೫ ತಮಿ. ಮಲ. ಚಲ್ಲಡ; ತುಳು. ಚಲ್ಲಣೆ; ತೆಲು. ಚಲ್ಲಡ, ಚಲ್ಲಾಡ. / ಸಂ. ಚಲನಕ, ಚಂಡಾತಕ]

**ಚಲ್ಲಣಂದೆಗೆ** (ಕ್ರಿ). ೧. ಚಡ್ಡಿಯನ್ನು ಕಳಚಿಸು. ೨. (ಅಲಂ) ಅವಮಾನ ಮಾಡು; ಭಂಗಿಸು: ನಿಚ್ಚಟದ ರಾವುತರಂ ಚಲ್ಲಣಂದೆಗೆದುಂ ಮುಂಗುಡಿಯ ರಾವುತರಂ ಭಂಗಿಸಿ ತಿವಿದು (ಮೇಕರಹ. ೨೨೭-೧೫). [ಚಲ್ಲಣ + ತೆಗೆ$_1$]

**ಚಲ್ಲಣಗಟ್ಟು** (ಕ್ರಿ). ಚಡ್ಡಿಯನ್ನು ಧರಿಸು; ಚಣ್ಣವನ್ನು ತೊಟ್ಟುಕೊಳ್ಳು: ಸಾಸಿರದಂಟನೆಯ ದಳದಲ್ಲಿ ಖೇಚರಿ ಚಲ್ಲಣಗಟ್ಟಿ ವಾಸುಗಿಯ ಫಣಾಮಣಿಯು ಪ್ರಜ್ವಲಿಸುವುದ ಕಂಡೆ (ಅವಹಂ. ೬೦-೨೬೦). [ಚಲ್ಲಣ + ಕಟ್ಟು$_1$]

**ಚಲ್ಲಧ್ವಜ** (ನಾ). ಯಾವಾಗಲೂ ಸೋಲದ ವ್ಯಕ್ತಿ; ಒಂದು ಬಿರುದು (?): ಮಾಸಾಮಾನ್ಯ ಚಲ್ಲಧ್ವಜ ರಣದುತ್ತರಂಗನೆನ್ನುವೊಳ್ಪಿದಂ (ಎಕ. VIII, ಸೊರಬ. ೮೮-೨: 912). [Pಇದು "ಚಲಧ್ವಜ"-ಎಂಬುದರ ಅಪಲಿಖಿತವಿರಬಹುದು]

**ಚಲ್ಲಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚಲ್ಲವಂತ** 'ಚಲ್ಲವತ್ತ' ನೋ.

**ಚಲ್ಲವತ್ತ, ಚಲ್ಲವಂತ, ಚಲ್ಲವರ್ತ, ಚಲ್ಲವೊತ್ತ, ಚೆಲ್ಲವತ್ತ, ಚೆಲ್ಲವೊತ್ತ** (ನಾ). ಸವಿಮಾತುಗಳಿಂದ ಮರುಳುಮಾಡಿ ದ್ರೋಹ ಬಗೆಯುವವನು; ಠಕ್ಕ; ವಂಚಕ: "ನಂಬಿಸಿ ತಿಂಬುವನಂ ಬುಧರೆಂಬರ್ ಬೊಂದುಕನು ಚಲ್ಲವತ್ತನುಮೆಂದುಂ" (ಅಭಿಕಂ. ೦೫೫); ಕೆಮ್ಮಗೆ ನಾಡ ಚಲ್ಲವ[ಪಾಠಾಂ. ವು]ತ್ತರ ನುಡಿಗೊಳ್ಳದಿರ್ (ಪಂಪಭಾ. ೯-೪೨); ನಂಬುಗೆ ಚಲ್ಲವತ್ತರೊಳ್ . . . ಉಂಟುಮಾಡವೆ ಕೇಡಂ (ನೀತಿಮುಂ. I, ೦೦೫). **ಚಲ್ಲವಂತ**: "ಚಲ್ಲವಂತ[ಪಾಠಾಂ. ವತ್ತ]ನುಮೆನೆಲ್ ನಂಬಿಸಿಯೆ ತಿಂಬಾತನಕ್ಕು" (ಶಬ್ದಮಂ. ೪೭). **ಚಲ್ಲವರ್ತ**: "ಬೊಂದುಕಂ ಚಲ್ಲವರ್ತ[ಪಾಠಾಂ. ವತ್ತ, ವೊತ್ತ]ನೆನೆ ನಂಬಿಸಿಯೆ ತಿಂಬವನ ಪೆಸರಕ್ಕು" (ಅಭಿಕ್ಷ. ೩೫). **ಚಲ್ಲವೊತ್ತ**: "ಚಲ್ಲವೊತ್ತರ್ = ನಂಬಿಸಿ ತಿಂಬವರ್" (ಶಮದ. ಪರಿ. ೨); ಎಲ್ಲಿಯಾನುಂ ಬಂದ ಚಲ್ಲವೊತ್ತನ ಬೆಲ್ಲವಾತುಗಳಂ ಕೈಕೊಂಡು ರಾಜ್ಯಹಿತಂ ಕಿಡಿಸಲ್ಬಗೆದೆಯಪ್ಪೊಡದನುಪೇಕ್ಷಿಸಲ್ಬಾರದು (ಪಂಚತಂ. ೦೨೫-೧). **ಚೆಲ್ಲವತ್ತ**: "ಬೊಂದುಕನೆಂದುಂ, ಚೆಲ್ಲವತ್ತನೆಂದುಂ ನಂಬಿಸಿ ತಿಂಬಿಪನ" (ಕಶಸಾ. ೦೭-೩೩೮); ಬೇಳ್ವೆ ತಿರಿಕುಳಿಯಲ್ಲದರ ಚೆಲ್ಲವತ್ತನೆಂ (ಸಂಸಪ. ೨೪-೦೦). **ಚೆಲ್ಲವೊತ್ತ**: ಮೇಲಿನ 'ಕಬ್ಬಿಕ್ಕೆ' ಪ್ರಯೋಗದ ಪಾಠಾಂತರವನ್ನು ನೋಡಿ. [?]

**ಚಲ್ಲವರ್ತ** 'ಚಲ್ಲವತ್ತ' ನೋ.

**ಚಲ್ಲವಾಡು, ಚಲ್ಲಾಡು$_2$, ಚೆಲ್ಲವಾಡು, ಚೆಲ್ಲಾಡು$_2$** (ಕ್ರಿ). ವಿನೋದ ಮಾಡು; ಸರಸವಾಡು: ಚಲ್ಲವಾಡಿ ಪೂವೆತ್ತುವ ಮಾಲೆಗಾರ್ತಿಯರ ನಂದರಿಕೇಸರಿ ನಿಂದು ನೋಡಿದಂ (ಪಂಪಭಾ. ೪-೮೦); ಬೆಣ್ಣೆಯ ಚೆನಕಂಗೆ

ಕೆಂಡದುಂಡಲಿಗೆಯು ಮಾಡಿ ಚಲ್ಲವಾಡಿದರೆ ಹಲ್ಲು ಹೋಹುದು (ಬಸವ. ೬೬೧ ಅ); ಹೋಹ ಮಾರಿಯ ಚಲ್ಲವಾಡುವರು (ಎಕ. VIII, ಸೊರಬ. ೨೬೮-೬೩ : ಸು. 1245). **ಚಲ್ಲಾಡು₂ :** ನಲ್ಲನೆರ್ದೆಯಂ ಸಾರ್ದಲ್ಲಿ ಚಲ್ಲಾಡಿ (ಚಿಕವಿ. ೧-೫). **ಚಲ್ಲವಾಡು :** ನೇವುರದ ನುಣ್ದುರಕ್ಕೆ ಮರಳ್ವ ಮರಾಳಬಾಳಕಂಗಳ ಮೊಗದೊಳ್ ಮುಗುಳ್ನಗೆವಾಲಂ ಚಲ್ಲಿ ಚಲ್ಲವಾಡುತ್ತುಂ (ಅರ್ಧನೇ. ೦-೯೨ ವ); ಬುಲ್ಲವಿಸಿದನು ಕೋಪಶಿಖಿಯಲಿ ಚಲ್ಲವಾಡುತ ಕೊರಳು ಕೈಗಳ ಬಿಗಿದ ಬಾಲದಲಿ (ಶಾಶಿರಾ. ೨೧-೪೮); ಒಲ್ಲದವಳೊಡನಾಡಿ ಚಲ್ಲವಾಡುವನೆಗ್ಗ (ಸರ್ವಜ್ಞ. ೧೬೦೭). **ಚಲ್ಲಾಡು₂ :** ಮಳೆ ಸುಗ್ಗಿಗಳ ತಡೆದು ಮೆಲ್ಲಗಿಲ್ಲ ಕುಳಿರ ತೆರೆ ಚಲ್ಲಾಡುತಿರಲು (ಶಾಲಿಹ. ೬೦-೧೨೮). [ಚಲ್ಲ₁ + ಆಡು₁]

**ಚಲ್ಲವೊತ್ತ** 'ಚಲ್ಲವತ್ತ' ನೋ.

**ಚಲ್ಲಾಟ₁, ಚೆಲ್ಲಾಟ₁** (ನಾ). ಚಲ್ಲಾಪಿಲ್ಲಿಯಾಗಿ ಚಲ್ಲುವುದು,-ಎಸೆಯುವುದು ; ತೂರಾಡುವುದು : (ಕ). **ಚೆಲ್ಲಾಟ₁ :** (ಕ).

[ಚಲ್ಲು₁ + ಆಟ]

**ಚಲ್ಲಾಟ₂, ಚೆಲ್ಲಾಟ₂**(ನಾ). ೧. ವಿನೋದ ; ಸರಸ ; ಲೀಲೆ ; ವಿಲಾಸ : ಭಾವದಲ್ಲಿ ನನ್ನ ಕೂಡಣ ಚಲ್ಲಾಟದಿಂದ ಸಂಚರಿಸುತ್ತ ತಾನೇ ಜಂಗಮನಾದನಯ್ಯಾ (ವಚನ. II, ೦೫೨); ಅತಿವಿಳಾಸಮನೆಸಗುತ್ತ ಸೆದಿರ್ವೆಳವೆಣ್ಗಳ ಚಲ್ಲಾಟಮಂ ನೋಡುತ್ತ (ಉದ್ಭಟ. ೩-೩೨ ವ). ೨. ಗಾಂಭೀರ್ಯವಿಲ್ಲದಿರುವಿಕೆ : ಅವಳ ಚಲ್ಲಾಟದ ನಡವಳಿಕೆ ಗೌರವಕ್ಕೆ ಧಕ್ಕೆ ತರುತ್ತದೆ (ಕ). **ಚೆಲ್ಲಾಟ₂ :** ೧. ಚೆಲ್ಲಾಟಂ ಕಲಹಂ ರತಿ ಸಲ್ಲೀಲೆ (ಮನ್ಮವಿ. ೫-೩೫); ಅಳಿಗಳವ್ವುಗೆ ಸಿಂಗವಣಿಗಳ ಚೆಲ್ಲಾಟ (ಕಂಸವಿ. ೧೦-೪೪); ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ (ಗಾದೆ). ೨. ನಲ್ಲ ಕಂಡರೆ ಚೆಲ್ಲಾಟವಾಡುವ ಚೆಲುವೆಯು ಗತಿಯೇನು? (ಪೋಲೀಮಾ. ೦೫೦ ಪ್ರಸ್ತಾವನೆ).

[ಚಲ್ಲ₁ + ಆಟ. / ತೆಲು. ಚೆಲ್ಲಾಟ]

**ಚಲ್ಲಾಟಂಬೆಱು** (ಕ್ರಿ). ಸರಸವಾಡು; ಸಂತೋಷಿಸು; ವಿನೋದವಡು: ಚಲ್ಲಾಟಂಬೆತ್ತು ಕಾಂತಾಮಣಿಯುಗುರಿಸಿದಳ್ ತೈಲಮಂ ಬಾಲೆಗಾಗಳ್ (ಉದ್ಭಟ. ೮-೦೫). [ಚಲ್ಲಾಟ₂ + ಪೆಱು₁]

**ಚಲ್ಲಾಡು₁, ಚೆಲ್ಲಾಡು₁** (ಕ್ರಿ). ೧. ತೂರಾಡು ; ಈಡಾಡು ; ಒಗೆದಾಡು : ಫುಲ್ಲನಾಭನ ಪ್ರಾಣವಲ್ಲಭೆಯ ನೆಱೆ ಸಿರಿಯು ಚ[ಪಾಠಾಂ. ಚೆ]ಲ್ಲಾಡುತುಱೆ ಮೆಱೆದ ಕಲ್ಯಾಣಪುರದ ಸುತ್ತೆಲ್ಲ (ಗುಭಕ. ೦-೨೦). **ಚೆಲ್ಲಾಡು₁:** ೧. ಬಿರಿದಚ್ಚಲರ ಧೂಳಿಗಳ ಚೆಲ್ಲಾಡಿ (ಜೈಮಿಭಾ. ೩-೨೪); ಹಿಗ್ಗಿರ್ದ ಕಂಗಳಿಗೆ ಚೆಲ್ವಿಕೆಯ ಚೆಲ್ಲಾಡಿ (ಶಾಲಿಹ. ೦೦೮-೨೪೭). ೨. ಅತಿಶಯವಾಗಿ ಬಿದ್ದಿರು ; ಯಥೇಷ್ಟವಾಗಿ ಇರು ; ಇಟ್ಟಾಡು : ಹೊರಗಡೆ ತ್ರಯೋದಶಿ ಚಂದ್ರನ ಬೆಳಕು ಚೆಲ್ಲಾಡುತ್ತಿತ್ತು (ಚಂಗಾಳ್. ೫೦೫) : ಎರಡಾಣೆ ನಾಕಾಣೆಗೆ ಸೇರಕ್ಕಿ ಬಿದ್ದು ಚೆಲ್ಲಾಡೋದು (ನನ್ನೂರು. ೩೦೭). [ಚಲ್ಲು₁ + ಆಡು₁]

**ಚಲ್ಲಾಡು₂** 'ಚಲ್ಲವಾಡು' ನೋ.

**ಚಲ್ಲಾಣ** 'ಚಲ್ಲಣ' ನೋ.

**ಚಲ್ಲಾನೆ** (ನಾ). ಒಂದು ಬಗೆಯ ಮರ: ವಲೀವರ, ಚಲ್ಲಾನೆ . . . ಗೂಗ (ಮೃಜಿಗಿ. ೩೦-೬೦೭). [ ? ]

**ಚಲ್ಲಾಪಿಲ್ಲಿ, ಚಲ್ಲಪಿಲ್ಲಿ, ಚಲ್ಲಿಪಿಲ್ಲಿ, ಚೆಲ್ಲಪಿಲ್ಲಿ, ಚೆಲ್ಲಾಪಿಲ್ಲಿ, ಚೆಲ್ಲಿಪಿಲ್ಲಿ**(ನಾ). ಅಸ್ತವ್ಯಸ್ತ ಚೆದರಿದ ಸ್ಥಿತಿ; ಅವ್ಯವಸ್ಥೆಯ ರೀತಿ; ಅಸ್ತವ್ಯಸ್ತತೆ : ಅವರ ಫೌಜಿಗೆ ಬಹಳ ಪೆಟ್ಟಾಗಿ . . . ಕಡೆಗೆ ಇದಿರಿಗೆ ನಿಲ್ಲಲಾರದೆ ಚಲ್ಲಾಪಿಲ್ಲಿ ಆದ್ದರಿಂದ (ರಾಜೇಂದ್ರ. ೯೩); ಉದ್ದಿನ ಮೂಟೆಯು ಉರಳಿ ಹೋದರೆ ಅದರೊಳಗಿರುವ ಕಾಳುಗಳು ಚಲ್ಲಿ ಚಲ್ಲಾಪಿಲ್ಲಿಯಾಗಿ ಹೋಗುವಂತೆ (ಹುಟ್ಟಿಹ. ೧೨೮); ಮನಸು ಚದರಿ ಚಲ್ಲಾಪಿಲ್ಲಿಯಾಯಿತು (ಹೊಬಿಸಿ. ೧೨). **ಚಲ್ಲಪಿಲ್ಲಿ :** ಗಲ್ಲೆಯೊಡೆಯ ತಿವಿದನು ಗಡೆಯುವರನು ಚಲ್ಲಪಿಲ್ಲಿಯ ಮಾಡಿದನು (ಕುರಾಸಾಂ. ೦೩-೨೦). **ಚಲ್ಲಿಪಿಲ್ಲಿ:** ಬಲದಲ್ಲಿ ಕೆಲಫೌಜು ನಿತ್ರಾಣಿಸಲಾಱದೆ ಚ[ಪಾಠಾಂ. ಚೆ]ಲ್ಲಿಪಿಲ್ಲಿಯಾದುದು (ಸಮ್ಮುಕಾ. ೮-೫೦). **ಚೆಲ್ಲಪಿಲ್ಲಿ:** ಠಾಣ್ಯವನೆಲ್ಲವ ಹೊಕ್ಕುಱುದಿಱುದು ಚೆಲ್ಲ[ಪಾಠಾಂ. ಚಲ್ಲಿ]ಪಿಲ್ಲಿಯ ಮಾಡಿ (ಕುರಾಸಾಂ. ೫-೪೫). **ಚೆಲ್ಲಾಪಿಲ್ಲಿ :** ಸಾಮಾನುಗಳೆಲ್ಲ ಅತ್ತಿತ್ತ ಚೆಲ್ಲಾಪಿಲ್ಲಿಯಾಗಿದ್ದವು (ಕೊತಕಾ. ೬೦); ಪಾಂಡ್ಯ ಸೈನ್ಯಗಳು ಚೆಲ್ಲಾಪಿಲ್ಲಿಯಾಗಿ ಓಡುತ್ತಿದ್ದವು (ಶ್ರೀಣಾಯ. ೩೦೯); ಕೈಯಲ್ಲಿದ್ದ ಬಟ್ಟಲು ಕೆಳ ಉರುಳಿ ಇದ್ದ ದೋಸೆ ಎಲ್ಲಾ ಚೆಲ್ಲಾಪಿಲ್ಲಿಯಾಗಿ ಕೆಳಬಿತ್ತು (ಪರ್ವಸ. ೫೫). **ಚೆಲ್ಲಿಪಿಲ್ಲಿ :** ದೇವತೆಗಳು . . . ಕಲ್ಲುತಾಗಿದ ನೆಲ್ಲಿಯಂತೆ ಚೆಲ್ಲಿಪಿಲ್ಲಿಯಾಗುವಂ ತೋಡಿದುವಲ್ಲಿ ನಿಲ್ಲದೆ (ನೇಮಿಸಂ. ೨೫-೫೫).

[<ಚಲ್ಲು₁. / ತುಳು. ಚಲ್ಲಾಪಿಲ್ಲಿ]

**ಚಲ್ಲಿ₁, ಜಲ್ಲಿ₁** (ನಾ). ೧. ಚೂರು ; ತುಣುಕು ; ತುಂಡು ; ಹೋಳು : ಒಗುಮಿಗೆ ಬೇಳೆಗೆಯ್ಯ ಮೆಟಸಂ ತಳೆದಲ್ಲದ ಚಲ್ಲಿಯಂ ಪವಣ್ಪುಗೆ ಕಲಸಿರ್ದ ತಣ್ಣಲಸುಗೂಟನಿಳಾಪತಿಗಿತ್ತನಟ್ಟಿಯಿಂ (ಲೀಲಾವ. ೫-೬೦); ಚೆಳಿಯುದಂಗೋಪಾಂಗವಮಂ ಚಲ್ಲಿ ಮಾಡಿದೊಡಂ ತಳ್ತೊಳಗಿರ್ದೊಡಂ ಕಡೆಗದೆಂದುಂ . . . ದೇಹದಿನಾತ್ಮಂ ಪೆಱನೆಂಬ ಬುದ್ಧಿ ನಿನಗೀಗಳ್ ಸಾರ್ದುದು (ಧರ್ಮನಾ. ೫-೦೦೯); ಕಾಡೆ ಕವಟೆಕಾಯು ತಂದು ಚಲ್ಲಿಯ ಮಾಡಿ ಕೂಡೆ ವರಲೊಳಗಿಡುವುದು (ಸಾಳ್ವಸಾಂ.೯). **ಜಲ್ಲಿ₁:** ೨. ರಸ್ತೆಯನ್ನು ಭದ್ರಪಡಿಸಲು ಹಾಗು ಸಿಮೆಂಟ್ ಕಾಂಕ್ರೀಟ್ ತಯಾರಿಸಲು ಹಾಕುವ ಕಲ್ಲಿನ ಚೂರು,-ತುಂಡು: ಬದುಕಿನ ನಡುಕಟ್ಟನಲ್ಲಿ ಕಟ್ಟೆ ಮೈಯ ಕಲ್ಲ ಜಲ್ಲಿ(ಗರಿ. ೯೪-೫); ರಸ್ತೆಗೆ ಜಲ್ಲಿ ಎಂದರೆ ಏನೆಂಬುದು ತಿಳಿದೇ ಇರಲಿಲ್ಲ (ರಂಗಕ. ೨೩). ೩. (ಆಲಂ) ಸುಳ್ಳು ; ಸತ್ವವಿಲ್ಲದ ವಿಚಾರ : ದುರಗಿ ಆಡಿದ ನುಡಿಯು ಬೇಡೆನ್ನರಲ್ಲಿ; ಕಾಳಿ ಹೇಳುವ ಮಾತಿನಲಿ ಇಲ್ಲ ಜಲ್ಲಿ (ನವರಾ. IV, ೨೭-೧೨).

[ದೇ.॥ ತಮಿ. ಮಲ. ಚಲ್ಲಿ ; ತುಳು. ಚಲ್ಲಿ, ಜಲ್ಲಿ ; ತೆಲು. ಜಲ್ಲಿ]

**ಚಲ್ಲಿ₂, ಛಲ್ಲಿ₁** (ನಾ). ೧. [ನಾಟ್ಯ] ನೃತ್ಯದ ಒಂದು ಗತಿ,– ಪಾದವಿನ್ಯಾಸ : ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಆದಿಪು. ೯-೨೫); ಚರಣದ ಚಾರಿಯ ಚಲ್ಲಿಯ ಪರಿಕ್ರಮ ಕ್ರಮದ ಭಂಗಿಗಳ್ ನೆಗಟ್ಟಿಡೆಯೊಳ್ (ಆದಿಪು. ೯-೩೯). **ಛಲ್ಲಿ₁:** ೨. [ಸಂಗೀತ] ಮೃದಂಗ ಬಾರಿಸುವ ಒಂದು ಮಟ್ಟು,-ಗತ್ತು : ವಾದ್ಯವಿದ್ಯಾಧರನಪ್ಪ ವಿದ್ಯಾಧರವರ್ಮಾರ್ದಂಗಿಕಂ ಮೃದಂಗಸಂಗತೋತ್ಸಂಗವಾಗಿ . . . ಬೊಲ್ಡಾವಣೆ ಬೊಲ್ಡಾವಣೆ ಛಲ್ಲಿ ಪಾಡು ಪದಂ . . . ಜೋಕೆಯೆಂಬ ದೇಸೆಯು ಶಬ್ದಂಗಳೆಸೆಯೆ ಬಾಜಿಸುತ್ತಿರೆಯುಂ (ಕಾಂಜೀಕ್ಷ. ೧೩-೬೭ ವ).

**ಛಲ್ಲಿಮಾಡು**=ನರ್ತನಮಾಡು ; ನಾಟ್ಯವಾಡು : ವರ್ಗ ದ್ವಿತೀಯಾಕ್ಷರಂಗಳ್ಗೆ-ವಖ್ಯಾಣಂ . . . ಛಲ್ಲಿಮಾಡಿದಂ (ಛಲ್ಲಂ ಮಾಡಿದಂ) (ಶಮದ. ೦೫ ಪ್ರಯೋ). [<ಪ್ರಾ. ಚಲ್ಲಿ=ನೃತ್ಯದಲ್ಲಿಯ ಗೀತೆ. / ತಮಿ. ಚಲ್ಲಿ= ಒಂದು ಬಗೆಯ ವಾದ್ಯ]

**ಚಲ್ಲಿ₃, ಚೆಲ್ಲಿ₂, ಚೆಲ್ಲಿ** (ನಾ). ಕನ್ನಡಿ : ದರ್ಪಣ : "ಕನ್ನಡಿಗೆ ಕೈಪಿಡಿ ಚಲ್ಲಿ[ಪಾಠಾಂ. ಲ್ಲೆ]ಯೆಂದು" (ಶಬ್ದಮಂ. ೬೫); ಬಲ್ಲವನಲ್ಲರಿಗೆ ಲಲ್ಲೆಯ ನುಡಿವನೆ ಬಲ್ಲವನಿರವು ಚಲ್ಲಿಯ ರೂಹಿನಂತೆ ಯಿದ ಬಲ್ಲವರಾರೊ(ಪದಗೋ. ೪೮-೦೦೫). **ಚಲ್ಲೆ₂:** "ಚಲ್ಲೆಯೆನೆ ದರ್ಪಣಂ ನೇರಾದುದು" (ಕಕರ. ೩೪). **ಚೆಲ್ಲಿ:** ಒಲವಿಂದೀವೊಡೆ ಗೋವಂಗಲಗೆ ಕೊಟಲ್ ಕೋಡ ಕಾಳೆ ಕೋಲುಡೆ ದೋಲ್ ಕಂಬಲ ಕಲ್ಲಿ ಚೆಲ್ಲಿ ಪೀಲಿಯ ತಲೆಸುತ್ತಲ್ಲದೆ ಮಹಾಗ್ರಪೂಜೆ ವಿರುದ್ಧಂ (ಆಗವಿ. ೧೭-೨೨). [ ? ]

**ಚಲ್ಲಿಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚಲ್ಲಿಸು$_1$, ಚೆಲ್ಲಿಸು$_1$** (ಕ್ರಿ). ೧. ಎರಚುವಂತೆ ಮಾಡು ; ಚೆಲ್ಲುವಂತೆ ಮಾಡು : ಪಾವುಗಳಿಂ ಕರ್ಚಿಸುತ್ತುಂ ಪಲ್ಲಿಯಿಂದಂ ಬೆದಱಿಸುತ್ತುಂ ಕಿಚ್ಚಂ ಚಲ್ಲಿಸುತಂ (ಧರ್ಮಪ. ೦-೭೬ ವ) ; ಅಲ್ಲಿ ಉಳಿದಿದ್ದ ಒಂದು ಕೆಂಡವನ್ನು ತರಿಸಿ ಅದಕ್ಕೆ ಅಮೃತದ ನೀರನ್ನು ಚಲ್ಲಿಸಿದನು (ಪಂಜಾಮ್ಮ. ೪೦). ೨. ಸುರಿಯುವಂತೆ ಮಾಡು ; ಸುರಿಸು : (+). **ಚೆಲ್ಲಿಸು$_1$** : ೧. ಮಲ್ಲಿಗೆ ಯರಳಂತೆ ಬೆಳ್ಗಾಳು ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು . . . ಚೆಲ್ಲಿಸಿದಳು ದೆಸೆದೆಸೆಗೆ (ಮೋಹತ. ೩೦-೩೭) ; ಒಂದು ಖಂಡಿಗ ರಾಗಿಯನ್ನು ಚೆಲ್ಲಿಸಿದೆ (ಹಂಗಾಳ. ೪೨೦). ೨. ಆಲಿನೀರ್ಗಳಂ ಚೆಲ್ಲಿಸಿಕೊಳುತ್ತೆ (ನಂಬಿರ. ೧೨-೦೦೭). [ಚಲ್ಲು$_1$ + – ಇಸು$_3$]

**ಚಲ್ಲಿಸು$_2$, ಚಳ್ಳಿಸು, ಚೆಲ್ಲಿಸು$_2$** (ಕ್ರಿ). ಚೂರುಮಾಡು ; ತುಂಡುಮಾಡು ; ಕತ್ತರಿಸು : ತಾಳಿಸಿದ ಬದನೆಯ ಕಾಯ ಚ[ಪಾಠಾಂ. ಚೆ]ಲ್ಲಿಸಿದ ನೀರುಳ್ಳಿ ಶುಂಠಿ ಸಹಿತಿಕ್ಕುವುದು (ಸೂಪಶಾ. ೪-೨೯). **ಚಳ್ಳಿಸು:** ನೀರುಳ್ಳಿಯ ಗಡ್ಡೆಯಂ . . . ಚಳ್ಳಿಸಿ ಜಾಜಿಯಂ ಕಲಸಿ ಮೆಲ್ಲದ ಮಾನವನೇನ ಬಲ್ಲನೋ (ನೀತಿಸಾ. ೭೪೭). **ಚೆಲ್ಲಿಸು$_2$ :** ಚೆಲ್ಲಿಸಿದ ನೀರುಳ್ಳಿ ನಿಂಬೆಹುಳಿ ಮೆಣಸು ಹಸಿಯಲ್ಲ ಸಕ್ಕರೆ ಹುಳಿಯ ಬೆರೆಸಿ ಪಾಕಂ ಮಾಡಿ (ಸೂಪಶಾ. ೬-೧೭).

[ ಚಲ್ಲಿ$_1$ + – ಇಸು$_3$ ]

**ಚಲ್ಲು$_1$, ಚಲ್$_2$, ಚೆಲ್ಲು$_1$** (ಕ್ರಿ). ೧. ಹರಡು; ಪಸರಿಸು : ಕ್ರೂರಾಕಾರ ಮನೆಯ್ದೆ ತಾಳ್ದಿ ತಮಮಂ ಚ[ಪಾಠಾಂ. ಚೆ]ಲ್ಲುತ್ತುಮಿರ್ದಲ್ಲಿಯುಂ . . . ರಾಹು ಬಂದು (ಬಾಧಪು. ೫-೦೩) ; ಬೆಳುದಿಂಗಳು ಹಾಲು ಚಲ್ಲಿದ ಹಾಗಿದೆ (ರೂಢಿ). ೨. ಚದರಿಹೋಗು; ದಿಕ್ಕಾಪಾಲಾಗು: ಸಮಸ್ತಜನಮನಕ್ಕನು ರಾಗವಪ್ಪಾಗಲಲ್ಲಿಗೆ ಚಲ್ಲಿದೆಲ್ಲಾ ಬ್ರಾಹ್ಮಣೋತ್ತಮರು ಬಂದು ಕೂಡಲ್ (ಉದ್ಭಟ. ೪-೦೦೨ ವ) ; ಮುಂದೆ ಹೆಣದಿನಿಹಿಗಳೆ ಖಗಮೃಗ ವೃಂದ ಚ[ಪಾಠಾಂ. ಚೆ]ಲ್ಲಿತು ಭೂತಪ್ರೇತನಿವೃಂದ ಕೆದಱಿತು (ಕುವ್ಯಾಗ. ೦೨-೪); ಚ[ಪಾಠಾಂ. ಚೆ]ಲ್ಲಿತಾಕ್ಷಣ ನೆರೆದ ಸೇನಾವಲ್ಲಭರು (ತೊರರಾ. ೪-೪-೩೦). ೩. ಸಿಂಪಿಸು ; ಚಿಮುಕಿಸು ; ತಳಿ : ಬದ್ಧಜಲಮಂ ಚಲ್ಲಿ ಚಲ್ಲಿ ತದುದ್ಧರಾಗ್ನಿಯನಂತು ಕೆಡಿಸಿ (ಬಸಪು. ೩-೫) . ೪. ಬಿಸುಡು ; ಎಸೆ : ಒಡೆದ ಹುಳಿಮಜ್ಜಿಗೆಯ ತಿಳಿಯುಮಂ ಚ[ಪಾಠಾಂ. ಚೆ]ಲ್ಲಿ ಪಾವಡೆ ಯಲ್ಲಿ ಹಿಂಡಿ (ಸೂಪಶಾ. ೨-೦೬) ;ಆ ವಿಳಾಸದ ಕಾರ್ಡನ್ನು ಅಲ್ಲಿಯೇ ಚಲ್ಲಿ . . . ಓಡಹತ್ತಿದನು(ಜೀವಪ್ರ. ೨೩). ೫. ಧಾರಾಳವಾಗಿ ಖರ್ಚುಮಾಡು, –ವ್ಯಯಮಾಡು : ಗಳಿಸಿ ತಂದೆ ಮಗರ್ಥವೀವುದನುಳಿದು ಭಂಡಾರವನೆ ಮಿಂಡಗರ್ಗಳಿಸಿ ಚ [ಪಾಠಾಂ. ಚೆ] ಲ್ಲುವುದುಚಿತವೇ ಯೆಂದಾಗ್ರಹಿಸಿ ನುಡಿದು (ಬಸಪು. ೦೦-೬). ೬. ಕೆಡಹು ; ಬೀಳಿಸು : ಆರು ಕೊಂಡರು ಹೇಳು ನಡೆವುತ ದಾರಿಯಲಿ ಕೆಡಹಿದೆಯೊ ಮೈಮಱೆದಲ್ಲಿ ಚ[ಪಾಠಾಂ. ಚೆ]ಲ್ಲಿದೆಯೊ (ಬಸಪು. ೧೪-೨೭) ; ಭಾವನಂಟ ಬಂದಾಗ್ಯೂ ಹಾಲು ಚಲ್ಲೋದು ಬಿಡಲಿಲ್ಲ (ಗಾದೆ). ೭. ಇಡು ; ಹಾಕು ; ಇರಿಸು : ಕುಡಿಯುವ ನೀರೊಳಗೆ ಮೊದಲೇ ಒಂದು ಶೀತೋಷ್ಣಮಾಪಕ ಯಂತ್ರವನ್ನು ಚಲ್ಲಿಟ್ಟಿರಬೇಕು (ಮುಂಬಯಿ. ೫-೧೨೨). ೮. ಎರಚು ; ತೂರು : ಕಾಲಮೃತ್ಯುವಿನ ಎರಡು ಕಣ್ಣಲಿ ಚಲ್ಲಿ ಮಣ್ಣಂ (ಬಸಪು. ೪೭-೧); ಗದ್ದೆಗಳಿಗೆ ಬೀಜವನ್ನು ಚಲ್ಲಿದ ಮೇಲೆ ಮರುದಿವಸದವರೆಗೂ ನೀರನ್ನು ಬಂದು ಮಾಡಬೇಕು (ಕೃಷಿಪ್ರ. ೫೭). **ಚಲ್$_2$** : ೬. ನೀರ್ಗುಡಿವ ಸೌಹೃದಯರ್ಕಳಕ್ಷಿಗುರೆ ಕೋಮಲೆಯರಕ್ಷಿಗಳ್ ಚದುರಿನಿಂದಂಜುಳಿ ಗಳಲ್ಲೆಸೆಯೆ ಚಲ್ದಪರ್ಮಿನ್ಗಳೆಂದುಚ್ಚರಿಸುತೆ (ಪರಶು. ೪-೨೦). **ಚೆಲ್ಲು$_1$** : ೧. ಚೆಲ್ಲುತುಮಾಸ್ಯದಿಂ ಮಿಗೆ ಮುಗುಳ್ನಗೆಯಂ (ಕುಸುಮಾ. ೫-೦೩೮) ; ಕಾಂತೆಯರ್ ಬರೆ ಕಟಾಕ್ಷಮಂ ಚೆಲ್ಲುತುಂ (ನಂಬಿರ. ೧೦-೪); ಬಿಲ್ಲನೊದಱಿಸಿ ವೈರಿಭಟರಿಗೆ ಚೆಲ್ಲಿದನು ಭೀತಿಯನು (ಕುವ್ಯಾದ್ರೋ. ೦೮-೩) ; ಮಲ್ಲಿಗೆ ಯರಳ್ಗೂಡಿ ಪಾಲ್ದಳಿದಂದದಿ ಚೆಲ್ಲಿತು ಬೆಳುದಿಂಗಳಿಳೆಗೆ (ಮೋಹತ. ೦೮-೦೦೨) ; ಆ ದಿನ ಮಳೆಯಿಲ್ಲದ ಸ್ವಚ್ಛ ಬಿಸಿಲು ಚೆಲ್ಲಿದ ದಿನ (ಗಿರಿಜಾ. ೦). ೨. ಘುಳುಘುಳಿಸಿ ಬರ್ಪ ಮತ್ತಗಜಮಂ ಭೋಂಕನೆ ಕಂಡು . . . ಮಕ್ಕಳೆಲ್ಲಂ ಚೆ[ಪಾಠಾಂ. ಚ]ಲ್ಲಿ ಪೋಗೆ (ನಂಬಿರ. ೨-೨೭) ; ಅಂಬರದ ಸುರರ ವಿಮಾನತತಿ ಚೆಲ್ಲಿದವು ದೆಸೆದೆಸೆಗೆ (ತೊರರಾ. ೪-೪-೦೭) ; ವಿಸ್ಮಯಂಬಡೆದು ಚೆಲ್ಲಿದ ಕರಣಂಗಳಂ ಮೆಲ್ಲನೆ ಸಂಕ್ಷೈಸಿಕೊಂಡು (ರಾಜಶೇ. ೭-೭೧ ವ). ೩. ಮರಾಳಬಾಳಕಂಗಳ ಮೊಗದೊಳ್ ಮುಗುಳ್ನಗೆವಾಲಂ ಚೆಲ್ಲಿ ಚೆಲ್ಲ ವಾಡುತ್ತುಂ (ಅರ್ಧನೇ. ೧-೯೨ ವ) ; ಮರುಗದ ಮಡಿಯೊಳ್ ಕತ್ತುರಿಯಂ ಚೆಲ್ಲು (ನಂಬಿರ. ೧೪-೩೮). ೪. ನಿನ್ನ ಕೈಯೊಳಗಿನ ಕೋಲು ಇತ್ತ ಕಡೆಗೆ ಚೆಲ್ಲು (ಮುಂಬಯಿ. ೩-೦೧೯). ೫. ಸಕಲಭಂಡಾರವನು ಭೂಸುರನಿಕರದಲಿ ಚೆಲ್ಲಿದನು (ಕುವ್ಯಾಆ. ೪-೨೨). ೬. ತೆಗೆದೀಂಟೆ ಜಲಮಂ ಬಿಡೆ ತಪ್ಪಿ . . . ೯ಳ್ ತೀವಿಕೊಂಡು ಚೆಲ್ಲುವ ಪದದೊಳ್ (ಗಿರಿಕ. ೦-೧೨೦) ; ಮಸಗೆ ಮೊಗೆದನು ಹೊಗುವ ಸೇನಾಪ್ರಸರವನು ಕುಡಿತೆಯಲಿ ಚೆಲ್ಲಿದನಸಮಬಲನಡಹಾಯ್ದು ಕೊಂಡನು ನೆಲನನಳವಿಯಲಿ (ಕುವ್ಯಾಕ. ೧೨-೨೩). ೮. ಚೆಲ್ಲಿದರು ಒಬ್ಬ ರೊಬ್ಬರಿಗೆ ಜೀರಿಗೆವೆರಸು ಚೆಲ್ಲವಂ (ಸಿದ್ಧರಾ. ೮-೮೮) ; ಮಲ್ಲಿಗೆ ದಾಸಣ ಹೂವ ಸಂಪಗೆಯಂತೆ ಚೆಲ್ಲಿತು ಬಣ್ಣಗೂಳುಗಳ (ಮೋಹತ. ೦೫-೩೭) ; ಮಂಕುಬೂದಿಯನ್ನು ಚೆಲ್ಲಿದಳು (ಹಾಡುತ್ತ. ೯೫). ೯. ವರ್ಷಿಸು ; ಸುರಿ ಕುಳ್ಳಿದರ್ರ ಮುಖದೊಳಂ ಕಣ್ಗಳೊಳಂ ಮಯ್ಯೊಳಂ ತುಷ್ಟಂ ಚೆಲ್ಲೆ (ನಂಬಿರ. ೬-೪೨) ; ಚೆಲ್ಲಿದವು ಸಹದೇವ ಶಿರದಲಿ ಮಲ್ಲಿಗೆಯ ಮೊಗ್ಗೆಗಳ ಮಳೆ (ಕುವ್ಯಾಸ. ೯-೬೫). ೧೦. (ಬಾಣ ಮೊದಲಾದುವನ್ನು) ಪ್ರಯೋಗಿಸು,– ಬಿಡು : ಚೆಲ್ಲಿದರು ಕೂರಂಬುಗಳನೆಡದಲ್ಲಿ ಬಲದಲಿ ಹಿಂದೆ ಮುಂದೆಸೆ ರ್ಝಲ್ಲರಿಯ ಶರಜಾಳ ರ್ಝೊಂಪಿಸಿತಬುಜಸಖಸುತನ (ಕುವ್ಯಾಕ. ೦೦-೩೫). ೧೧. ಬೀಸು; ಆಡಿಸು : ಚಾಮರ ಛತ್ರ ಕುಂಚ ಸಿತ ಚೌರಿಯ ಚಮತ್ಕಾರದಿಂ ಚೆಲ್ಲುವಾ ಮಡದಿಯರು ಯಿಕ್ಕೆಲದಿ ನಿಂದು (ನವಮೋ. ೦೦-೦೭). ೧೨. ಚಾಚು ; ನೀಡು : ಅವಯವಂಗಳನಲ್ಲಿ ಚೆಲ್ಲಿದಳು ಛಲದಿಂದೆ (ಕಾರಿರ. ಹ. ೫೭-೩೦) ; ಆಕಾಶದ ಸುತ್ತೆಲ್ಲ ನೋಡಿ ಕೈಮುಗಿದು, ಚೆಲ್ಲಿದ ಗೋಣಿನಿಂದ ದಿಕ್ಕುಗಳನ್ನೆಲ್ಲ ಕೇಳುವಂತೆ ಮಾಡಿದನು (ಪಾವಕ. ೩) ; ಬೆಂಚಿನ ಕೆಳಗೆ ಕೈಕಾಲು ಚೆಲ್ಲಿದ (ಕುರಿಹಿಂ. ೦೨೨). ೧೩. ಕಳೆ ; ನೀಗು : ಕಲ್ಲೆಗೆಡೆದವು ಕರಿಗಳಸುಗಳ ಚೆಲ್ಲಿದವು ತೇಜಿಗಳು (ಕುವ್ಯಾಭೀ. ೭-೨).

**ಚಲ್ಲಬಡಿ, ಚಲ್ಲವಡಿ, ಚೆಲ್ಲಬಡಿ** = ಚದರಿಹೋಗುವಂತೆ ಹೊಡೆ ; ಚಲ್ಲಾಪಿಲ್ಲಿಯಾಗುವಂತೆ ಬಡಿ : ಅಲ್ಲಿ ಬಂದ ಮೃಗವಂ ಚ[ಪಾಠಾಂ. ಚೆ]ಲ್ಲಬಡಿವುತುಂ (ಕಣ್ವರ. ಹ. ೩೫-೨೦) ; ಅಲ್ಲಿ ನೆರೆದಾ ಕ್ಷತ್ರವರ್ಗವ ಚಲ್ಲಬಡಿದು (ಕುವ್ಯಾಆ. ೨-೩೩) ; ಚಲ್ಲಬಡಿವೆ ತನ್ನ ಸೇನೆಯ ಕರೆಯೊ ನಮ್ಮೆಲ್ಲ ವ್ಯಂತರಿಗರನು (ಭರತೇ. ೨೪-೪೬) ; ಕಾಪಿನವರನು ಚಲ್ಲಬಡಿದು (ರಾಮಾಸಂ. ೬-೬-೪೦) ; ಮಾವು ಬನದೊಳಗೆ ಮೃಗರೆದಪಾ ತುಂಬಿಗಳು ಚಲ್ಲವಡಿದಂತೆ ದೆಸೆದೆಸೆಗೆ ಪಾಱಿ . . . ಬರುತಿರ್ದಳಂತಾ ಭವಾನಿ (ವೀಶೈಪು. ೨-೪-೨೦) : ಸುರಬಲಂಗಳಂ ಚಲ್ಲವಡಿದಣ್ಣನಂ ತೋಱಿತೋಱಿನುತ್ತೆ (ಚಬಪು. ೩೦-೪೭) ; ಸುಶರ್ಮನವದಿರ ಚೆಲ್ಲಬಡಿದನು ದಳದ ನಾಯಕರೆಲ್ಲರಿಗೆ ಸವಿದೋಱಿದನು ಬಲುಗದೆಯ ಹೊಯ್ಲುಗಳ (ಕುವ್ಯಾಕ. ೦೫-೩೪) ; ಮುಱಿಮೂಳೆಯುವನೆಲುಗಳ ಚೆ[ಪಾಠಾಂ. ಚ]ಲ್ಲಬಡಿ ಮೋದೆನುತ ಕಂಗಳು ದಳ್ಳುರಿಯನುಗುಳಲ್ಕೆ (ನಿಭಾಗ. ೫-೧೦-೭) ; ಉಱುಬುವ ರಥಾರೂಢರಂ ದೆಸೆದೆಸೆಗೆ ಚೆಲ್ಲಬಡಿದು . . . ಮತ್ತವನ ಚಾಪವಂ ಕೋಪದಿಂ ಖಂಡಿಸಿದನು (ಚಬಪು. ೩೯-೨೦) ; ವೈರಿಗಳನು ಚೆಲ್ಲಬಡಿದು ದೆಸೆಗಟ್ಟಿ ನಿಲ್ಲದೈತಂದು ಸತ್ಯಾಗಾಲದ ಪಾಳ್ಯವೆಲ್ಲವ ಸೂಱೆಯಾಡಿದನು (ಕಂನವಿ. ೩-೫೬). **ಚಲ್ಲವರಿ, ಚಲ್ಲುವರಿ, ಚಲ್ಲೆವರಿ, ಚೆಲ್ಲವರಿ, ಚೆಲ್ಲುವರಿ** = ಹರಡು ; ಚದರು ; ವಿಸ್ತಾರ ವಾಗಿ ವ್ಯಾಪಿಸು ; ಚಲ್ಲಾಪಿಲ್ಲಿಯಾಗು : ನೆಲ್ಲಿಯಕಾಯ್ಗಳ ಹೆಗ್ಗುದಿಗೆ

ಯೊಳಿಡೆ ಚೆಲ್ಲವರಿದು ಬೀಳುವಂತೆ ಬಲ್ಲಿದ ಖಾನರು ಚಿಗಿದು ಬಿಟ್ಟಾಕ್ಷಣ ಹಲ್ಲ ಕಿರಿದರಗಳೊಳಗೆ (ಕಂಸವಿ. ೦೪-೭೯) : ನೆಗೆವ ಮೃಗೇಂದ್ರಗಳಿಂ ಚೆಲ್ಲವರಿದ ಪುಲ್ಲೆಗಳಿಂ ಸಮ್ಮರ್ದಂಬಡೆವ ಪೊಮ್ಮಟೆಗಳಿಂ (ರಾಜಶೇ. ೧-೧೩೩ ವ); ಪುಲಿ ಬರವ ಕಾಣುತೆ ಹರಿಣಚಯ ಚೆಲ್ಲವರಿದಂತೆ ತರುಣಿಯರು ಬಿರದೆ ಮುರಿದೋಡುತ್ತೆ . . . ಇರಲು (ನವಮೋ. ೦೦-೬೩) ; ನಾಡೆಲ್ಲ ಹಸಿರು ಬೆಳೆಗಳಿಂದ ತುಂಬಿ ಎಲ್ಲೆಲ್ಲಿಯೂ ಚೆಲುವು ಚೆಲ್ಲವರಿದಿತ್ತು (ಜೀವರಂ. ೩೦) ; ಚೆಲ್ಲುವರಿದ ಹೆಳಲಿನ ತುದಿ ಎಷ್ಟು ಮನೋಹರ (ಚೆಂದುಟಿ. ೬೦) ; ಅಲ್ಲಿ ಸಿಡಿಲುಗಳೆಱಗಿದಂದದಿ ಬಲ್ಲಿದರ ಹರಿಗೆಗಳು ಮೊಳಗಲು ಚೆ[ಪಾಠಾಂ. ಚೆ]ಲ್ಲೆವರಿದಿಱಿದಾಡಿದುದು ಯಾದವರ ಪರಿವಾರ (ಸಾಳ್ವಭಾ. ೧೯-೧೩) ; ತೆಲ್ಲಿಗರ್ ಬಿಲ್ಲಂ ಕಂಡ ಕಾಗೆಯಂತೆ ಚೆಲ್ಲವರಿಯೆ (ಧರ್ಮಾಮೃ. ೨-೬೯) ; ಪುಲ್ಲಶರನ ಮಾರ್ಬಲ ಬನದೊಳು ಪೊಕ್ಕು ಚೆಲ್ಲವರಿದು ಪೀಡಿಸಲು ಪಲ್ಲವಿಸಲು ಸದನದೊಳಿರ್ದ ರಿಸಿಗಳು ಗಲ್ಲಕೆ ಕರವ ಸಾರ್ಚಿದರು (ಮೋಹತ. ೭-೦೦) ; ದಿಕ್ಕುದಿಕ್ಕಿಗೆ ಚೆಲ್ಲವರಿದುದು ಪಾಯ್ದಳ (ನಾಗಕು. ೧೪-೬೬) ; ನೆಱೆ ಚೆಲ್ಲುವರಿದು ಸೂಸುವ ಕಣ್ಮವಕೆಯೆನಿಸಿ ಮೆಱೆದರಲ್ಲಿಯ ವಾರನಾರಿಯರು (ಭಿಕ್ಷಾಟ. ೨-೮) ; ಕೈಗೆ ಸಿಕ್ಕಿದ ಗ್ರಂಥಗಳನ್ನು ತೆಗೆದುಕೊಂಡು ದಿಕ್ಕುದಿಕ್ಕಿಗೆ ಮತಾನುಯಾಯಿಗಳು ಚೆಲ್ಲುವರಿದಾಗ ಎಷ್ಟೋ ನಾಶವಾದುವು (ಕೂಸ್ಮಳು. ೧೭, ಹಿನ್ನೆಲೆ). **ಚೆಲ್ಲೆಪೊಯ್** = ಚದರುವಂತೆ ಹೊಡೆ: ಪೊದಱುಗಟ್ಟುವ ಕದಲೆಗದಿರನುರದಿನುರವಣಿಸಿ ನೆತ್ತಿಯಿಂ ಪೊತ್ತು ನೆಗೆದು ಚಂಚುವಿಂ ಚೆಲ್ಲೆಪೊಯ್ದು ನಖದಿಂ ನಲಿಗೆದಱೆ (ಅನಂಪು. ೭-೮೦ ವ). **ಚೆಲ್ಲಿಕೊಡು** = ಬಿಟ್ಟುಬಿಡಂ ; ಬಿಸುಡಂ : ಮನವೇಲ ಹುಡುಗಿಯನ್ನು ತನ್ನ ಅಪ್ಪುಗೆಯಿಂದ ಚೆಲ್ಲಿಕೊಟ್ಟು . . . ಅಲ್ಲಿಂದ ಪಾರಿಕೊಂಡ (ಆಚೋಲೀ. ೦೪) ; ಆವೇಶ ಬಂದವಳಂತೆ ಹೊದಿಕೆಯನ್ನು ಚೆಲ್ಲಿಕೊಟ್ಟು ಹಾಸಿಗೆಯಲ್ಲಿ ಎದ್ದು ಕುಳಿತಳು (ಮೂರುದಾ. ೨೭೭). **ಚೆಲ್ಲಿಕೊಳ್** = ಎರಚಿಕೊಳ್ಳು ; ಸಂರಿದುಕೊಳ್ಳು : ತುಱುಗಿದ ಕಾಯಿಪಣ್ಗಳ ಸಾಲವೃಕ್ಷವ ಮುಱಿದು ದೂಳಿಯ ಚೆಲ್ಲಿಕೊಳುತ . . . ಬಂದುದು ಬಿಱುಗಾಳಿ ಮದಗಜದಂತೆ (ಮೋಹತ. ೪-೬೭) ; ಕೇತಕಿಯರಳ ಧೂಳ್ಗಳ ಚೆಲ್ಲಿಕೊಳುತಳಿವ್ರಾತಕಲರ ಮಧುಮದವ ಪ್ರೀತಿಯಿಂದೀಯುತನಿಲದಂತೆ ವನದೊಳಗಾತುರದಲಿ ಚರಿಸಿದುದು (ಕಂಸವಿ. ೯-೯).

[ ದೇ.೩ ತಮಿ. ತುಳು. ಚೆಲ್ಲು ; ಕೊಡ. ಚೆಲ್ಲ್ ; ತೆಲು. ಚಲ್ಲು ]

**ಚೆಲ್ಲು₂** 'ಸೆಳ್ಳು₁' ನೋ.

**ಚೆಲ್ಲು₃** 'ಚೆಲ್ಲ₁' ನೋ.

**ಚೆಲ್ಲುಚಾಲು** (ನಾ). ಗಾಂಭೀರ್ಯವಿಲ್ಲದ ನಡವಳಿಕೆ ; ಕೆಟ್ಟಚಾಳಿ ; ಹೀನವಾದ ನಡತೆ : ಸತ್ತ ಹೆಣದ ಹೆಬ್ಬೆಟ್ಟಿನ ಗುರ್ತನ್ನು ಹಾಕಿ ಮಗನಿಗೆ ಆಸ್ತಿಯನ್ನು ತಪ್ಪಿಸಿ ಚೆಲ್ಲುಚಾಲಿನ ಬಜಾರಿಗೆ ಸ್ವತ್ತು ಸೇರುವಂತೆ ಮಾಡಬಾರದು (ಹುಟ್ಟುಹ. ೧೩೬).

[ ಚೆಲ್ಲು₃ (<ಚೆಲ್ಲ₁) + ಚಾಲು ]

**ಚೆಲ್ಲುತನ, ಚೆಲ್ಲಂತನ** (ನಾ). ಗಾಂಭೀರ್ಯವಿಲ್ಲದಿರುವಿಕೆ ; ಲಲ್ಲೆಗಾರಿಕೆ ; ಲಘುಮನೋಭಾವ: (ಶ). **ಚೆಲ್ಲುತನ:** ಇವೆಲ್ಲಾ ದೇವಸ್ಥಾನದ ಆವರಣದಲ್ಲಿವೆ ಅಂತ ಮೊದಲೇ ಒಂದು ಪೂಜ್ಯಭಾವನೆಯ ಪಕ್ಷಪಾತ ಮನಸ್ಸಿನಲ್ಲಿ ಚೆನ್ನಾಗಿ ಬೇರೂರಿರುವದರಿಂದ, ನೋಡುವ ಕಣ್ಣಿಗೆ ಅದರಲ್ಲೇನೂ ಚೆಲ್ಲುತನ ಕಂಡುಬರುವುದಿಲ್ಲ (ಕಲ್ಲಕಾ. ೬): ಹಿಂದಿನ ಚೆಲ್ಲುತನವೆಲ್ಲ ಈಗ ಅಡಗಿದೆ (ಹುಲಿಹಾ. ೨೬೭).

[ ಚೆಲ್ಲು₃ (<ಚೆಲ್ಲ₁) + -ತನ ]

**ಚೆಲ್ಲುಬಡಿ** (ಕ್ರಿ). ಲಲ್ಲೆಯಾಡಂ; ವಿಲಾಸಮಾಡಂ: ಆ ಉಡುಗಿ ಕಂಡಕಂಡ ಗಂಡಸರ ತಾವ ಚೆಲ್ಲುಬಡೀತೈತೆ. ಇದೇನು ಚೆಂದವಾ ? (ಕಂಕಣ. ೬೦).

[ ಚೆಲ್ಲು₃ (<ಚೆಲ್ಲ₁) + ಬಡಿ₁ ]

**ಚೆಲ್ಲುವಡು** (ಕ್ರಿ). ವ್ಯಾಪಿಸು ; ಆಕ್ರಮಿಸು: ಎಲ್ಲ ನಾಡುಗಳ . . . ಚೆಲ್ಲುವಡುತ ಗಡಿಸೆಱಗಿಗೆ ಪರಿದು (ಚಿಕಸ. ೧೯). [ <ಚೆಲ್ಲು₁ ? ]

**ಚೆಲ್ಲೆ₁** 'ಚೆಲ್ಲೆ' ನೋ.

**ಚೆಲ್ಲೆ₂** 'ಚೆಲ್ಲಿ₃' ನೋ.

**ಚೆಲ್ಲೆ₃** 'ಚೆಲ್ಲ₁' ನೋ.

**ಚೆಲ್ಲೆಗಣ್** 'ಚೆಲ್ಲೆಗಣ್' ನೋ.

**ಚೆಲ್ಲೆಗಾರ್ತಿ** 'ಚೆಲ್ಲಗಾರ್ತಿ' ನೋ.

**ಚೆಲ್ಲೆನೋಟ, ಚೆಲ್ಲೆನೋಟ** (ನಾ). ಸರಸವಾದ ನೋಟ ; ಸೊಬಗಿನ ನೋಟ ; ವಿಲಾಸದ ದೃಷ್ಟಿ : ಚೆಲ್ಲೆನೋಟದಿ ರಂಗಕೇಳಿಯನೆಸಗೆಂಬ ವಲ್ಲಭೆಯೆಂದು ವಂದಪಳೊ (ಕಶಸಾಂ. ೨೩-೧೨). **ಚೆಲ್ಲೆನೋಟ:** ಮೆಲ್ಲಾಪ್ತುದೋಱುತೊಯ್ಯನೆ ಚೆಲ್ವಿನೊಳಂ ಚೆಲ್ಲೆನೋಟಮಂ ಚೆಲ್ಲುವೆನೋ (ಚಿಕವಿ. ೬-೨೦೩). [ ಚೆಲ್ಲೆ₃ (<ಚೆಲ್ಲ₁) + ನೋಟ ]

**ಚೆಲ್ಲೆಹ** 'ಸಲ್ಲೆಹ' ನೋ.

**ಚೆಲ್ವ** 'ಚೆಲ್ವ' ನೋ.

**ಚೆಲ್ವಿಕೆ** 'ಚೆಲ್ವಿಕೆ' ನೋ.

**ಚೆಲ್ವು** 'ಚೆಲ್ವು₁' ನೋ.

**ಚೆಲ್ವೆ** 'ಚೆಲ್ವೆ' ನೋ.

**ಚವ₁** 'ಚೆವು' ನೋ.

**ಚವ₂, ಚವ್ವ₃, ಚೌ₂** (ನಾ). (ಉಕ) ೧. ರುಚಿ ; ಸೊಗಸು : ನಾಲಗೆಗೆ ಚವ ಇಲ್ಲ, ಏನೂ ಬೇಡ (ರೂಢಿ). **ಚವ್ವ₃:** 'ಚವ್ವಗೆಡು' ಪರಾ. **ಚೌ₂:** ೨. ಚೆನ್ನಾಗಿರುವುದಂ; ಉತ್ತಮಸ್ಥಿತಿ; ಸುಖ; ಚೈನಿ (ಉಕ): ಎಲ್ಲರಿಗಿಂತ ಚೌ ಇರೋದು ನಂದು. ಆಳಿದ್ದಾವ ರಾಜಾ ಆಗೇನಿ (ಶ್ರೀಮೂಕ್ಯ. ೨೬೬). ೩. (ಆಲಂ) ಮಾತಿನಲ್ಲಿ ಗೌರವ,-ಘನತೆ (?):- ಏ ಚೌ ಅದ ಏನ ಬಾಯಾಗ ? ಒಳಗ ಹೊರಗ ಯಾರ್ಯಾರ ಕೇಳ್ಯಾರಂಬೂ ಅಂಜಿಕೀ ಅಳಕಾ ಏನೂ ಇಲ್ಲೇನು ನಿನಗೆ? (ದೀಪನಿ. ೩೦).

[ ←ಮರಾ. ಚವ್ ]

**ಚವಂಗ** (ನಾ). ಒಂದು ಬಗೆಯ ಆಟ ; ಚೌಕಾಬಾರದ ಆಟ; ಚಕ್ಕದ ಆಟ (ಉಕ): ಹಗಲೆಲ್ಲ ಬೀದಿಯ ಮುದುಕಿಯರೊಡನೆ ಚವಂಗ, ಗೊಟಗುಣಿ ಆಡುವುದೇ ಅಜ್ಜಿಯ ಕೆಲಸ (ನದೀಪ. ೭೯). [ ? ]

**ಚವಕ** 'ಚೌಕ₂' ನೋ.

**ಚವಕಿ** 'ಚೌಕಿ' ನೋ.

**ಚವಚವನೆ** (ಅ). ಮೆಲ್ಲಮೆಲ್ಲನೆ (?) : ಶಿವಸಿದ್ಧಿಯನು ನೀವು ನಿಮ್ಮೊಳಿ ಕಂಡನುಭವಿಸಿದೊಡಹುದೆ ದೇವಿಯರೆ ನವಗಿಷ್ಟು ಬುದ್ಧಿಗಲಿಸಿಯೆಂದು ಗಲ್ಲವ ಚವಚವನಲುಗಿ ಕೇಳುವನು (ಭರತ. ೪೩-೩೯).

[ ಚವಚವ₀ + -ಅನೆ₁ ]

**ಚವಟ** 'ಚೌಟ' ನೋ.

**ಚವಡಿ** 'ಚಾವುಂಡಿ' ನೋ.

**ಚವಡಿಕೆ** (ನಾ). ಒಂದು ಕ್ಷುದ್ರದೇವತೆಯ ಹೆಸರು: ಎಲ್ಲಾಯಿ ಯಕನಾತಿ ಬನದ ಶಂಕರಿ . . . ಕಲ್ಲದ ಚವಡಿಕ ಮಾರಿಮಸಣೆ (ವಿಶಾಸು. ೩೮-೨). [ <ಸಂ. ಚಾಮುಂಡಿಕಾ ]

**ಚವಡಿಕೆ, ಚೌಟಗಿ, ಚೌಡಕಿ, ಚೌಡಿಕೆ** (ನಾ). ಒಂದು ಬಗೆಯ ಚರ್ಮವಾದ್ಯ ; ಒಂದು ಕಡೆಗೆ ಚರ್ಮದ ಆವರಣವಿದ್ದು, ಉದ್ದವಾದ ಹಿಡಿಕೆಯೂ, ಚರ್ಮದ ನಡುವಿನಿಂದ ಒಂದು ತೆಳ್ಳಗಿನ ಹುರಿಯೂ ಜೋಡಿಸಲ್ಪಟ್ಟಿರುವ ವಾದ್ಯ : (ಶ). **ಚೌಟಗಿ:** ಗೊಂದಲದವರು ಬಂದು ಚೌಟಗಿ ಬಾರಿಸಿಕೊಂಡು 'ಜೇಜೇ' ಅಂತ ಹೇಳ್ತಾರಲ್ಲ, ಕೇಳಿದೀಯೇನು ? (ಬೆಳಂಮು. ೮೩). **ಚೌಡಕಿ:** ಗೊಂದಲಿಗರು . . . ಇಬ್ಬರು

ಮೂವರು ಕೂಡಿ, ಸಂಬಾಳ, ಚೌಡಿಕೆಗಳನ್ನು ಬಾರಿಸುತ್ತಾ, ಭವಾನಿಯ ಹಾಡುಗಳನ್ನು ಹಾಡುತ್ತಾ ಭಿಕ್ಷೆ ಬೇಡುವರು (ಕಭಾಗೆ. ೨೦೦) ; ಚೌಡಿಕೆಯ ನಾದ, ಸುತಿಯ ಸೂರು, ತಾಳ ಹೆಜ್ಜೆಗಳ ಗತ್ತಿನ ಕಡಿತ (ಪೆಟ್ಟು) . . . ಇಂಪಾಗಿ ಇನ್ನಷ್ಟು ಕೇಳಬೇಕೆಂದೆನಿಸುವುದು (ಕನ್ನಜಾ. ೧೩). **ಚೌಡಿಕೆ:** "ಚವಡಿಕೆ (ಚೌಡಿಕೆ)—ಸುತಿ" (ಜಾನಕೋ. ೩೩).

[ ←ಮರಾ. ಚವಂಡಕೇ, ಚೌಂಡಕೇ, ಚೌಂಡಕೇ ]

**ಚವತಿ** 'ಚೌತಿ' ನೋ.

**ಚವತಿಚಂದ್ರ** 'ಚೌತಿಚಂದ್ರ' ನೋ.

**ಚವರ,** ಚಉರ, ಚವಲ$_1$, ಚವುರ$_1$, ಚವುಲ, ಚೌರ$_1$ (ನಾ). ೧. ಚಮರ; ಚಾಮರ: "ಚವರಂ ಚಾಮರಮಂತದು" (ಚತುನಿ. ೯೬) ; ಮಂಗಳಾರತಿ ಯಿತ್ತು ಚವರ ಸೀಗುರಿಯಿಕ್ಕಿ (ಬಸರ. ೩-೮೦) ; ನೆರೆದಲರ ಚವರಮಂ ಬಿತ್ತರದಿಂ ಬೀಸುತ್ತುಮಿರ್ದರ್ (ಕಬ್ಬಿಗಾ. ೦೩೮) ; ಪಿಡಿದೆರಳ್ ಸತ್ತಿಗೆ ಗಳಿರಡೆರಳ್ ಚವರಗಳ (ಚಬಪು. ೪೭-೩೭) ; ಚವರದ ಕುಂಚದಾರತಿಯ . . . ಬೋನವಮಂ ಸವಿವಡಿಯುಡುವಾಳಿಯರುಮಂ ಪದೆದಿತ್ತಳವಳ್ ವಿಳಾಸದಿಂ (ರಾಜಶೇ. ೯-೩೯). **ಚಉರ:** ೧. ಧಾರೆಯಬಿದು ಕೊಟ ಹಳಿ ಚಂನ ಮಾಡಲಾಗಿ ಚಉರ ಮರಿಯಾದಿಯಲು (ಎಕ. X(೩), ಕೋಲಾರ. ೦೧೮-೧೭ ; 1532). **ಚವಲ$_1$:** ೧. ಜನಿತ ವಿದ್ಯಾದೇವತೆಯರಾ ವನಿತೆಗಾಳಿಯರಾಗಿ ಬೆಳ್ಳಲೆಯನು ಗಳಿಸಿ ಕೊಡೆವಿಡಿದು ಢಾಳಿಸಿದರು ಚವಲಗಳನು (ಸಾಳ್ಯಭಾ. ೩೦-೨೭) ; ಕರಿಯಪ್ಪಾಗೆ ಧೊರೆಗಾಳು ಬೀಸ್ಯಾಳೂ ಚವಲಾವ (ಹುಟ್ಟಿಹ. ೪೩). ೨. ಚಾಮರ ಬೀಸುವ ಊಳಿಗ: ಅಕ್ಕಸಾಲೆಯ ಕಾಳಯ್ಯ ಕಾಲಾಳು ಚವಲದ ಚಿಕ್ಕ (ನಾಗಳು. ೦೬-೨೬). **ಚವುರ$_1$:** ೧. ನನ ತಮ್ಮ ಎತ್ತರಿಸಿ ಬೀಸೋ ಚವುರವ (ಗರತಿ. ೪೦). **ಚವುಲ:** ೧. ಹಾಸವ್ಹೊಜ್ಜುರದ ಹಲಗೆಯ ತುಳಸಮ್ಮ ಬೀಸವ್ಯ ಬೆಳ್ಳಿ ಚವುಲವ (ಸಾಪದ. ೦೪). **ಚೌರ$_1$:** ೧. "ಚೌರಮೆನೆ ತಾಂ ಬಕ್ರ್ಯ ಚಾಮರಕೆ" (ಕಶರ. ೩೭) ; ಚೌರ ಬೀಸುತ್ತಿದ್ದವು ಚೌರ (ಅಮನಿ. ೫).

**ಚವರ ಬೀಸು**=೧. ಚಾಮರದಿಂದ ಗಾಳಿ ಹಾಕಂ. ೨. (ಆಲಂ) **ಪೊರಕೆಯಿಂದ ಹೊಡೆ:** ಇನ್ನೂ ನಿಮಗೆಷ್ಟು ಚವರಾ ಬೀಸಲೀ ಎಂದು ಕಸ ಉಡುಗುತ್ತ ಕಸಬರಿಗೆ ಸುಮ್ಮನೆ ಮೇಲೆ ಮಾಡಿದೆ (ಹುಡ್ಕಾಟ. ೫).

[ <ಸಂ. ಚಾಮರ ]

**ಚವರಂಗ** 'ಚೌರಂಗ' ನೋ.

**ಚವರಬೊಂಬಾಳ,** ಚವಲಬೊಂಬಾಳ, ಚೌರಬೊಂಬಾಳ (ನಾ). ರಾಜ ಯೋಗ್ಯವಾದ ಚಾಮರದ ಅಲಂಕಾರವುಳ್ಳ ಒಂದು ವಿಶೇಷ ರೀತಿಯ ಅಂದಣ,—ಪಾಲಕಿ: ಚವರಬೊಂಬಾಳ ಪಟ್ಟದ ರಾಜಗಲ್ಲದೆ ಯುವರಾಜ ಗುಂಟ ಲೋಕದೊಳು (ಭರತ. ೮೦-೨೬). **ಚವಲಬೊಂಬಾಳ:** ಭವರೋಗಹರ . . . ಲಲಿತ ಚವಲಬೊಂಬಾಳವನೇಱ ಮೆಲ್ಲಡಿಯಿಟ್ಟ ವಿವರವನೇನ ಬಣ್ಣಿಪೆನು (ಮೋಹತ. ೪೨-೨೨) ; ಚವಲಬೊಂಬಾಳವನಿಳಿದ ಮಾಧವನು (ಮೋಹತ. ೪೨-೩೭). **ಚೌರಬೊಂಬಾಳ:** ಒಪ್ಪುವ ಚೌರಬೊಂಬಾಳವಡರ್ದು ದಿಗ್ವಿಜಯಕ್ಕೆ ಪೊಱಮಟ್ಟ (ರಾಘಚ. ೦೯-೫೭).

[ ಚವರ + ಬೊಂಬಾಳ ]

**ಚವರಿ,** ಚವಲಿ$_1$, ಚವುರಿ, ಚವುಲಿ, ಚೌರಿ$_1$, ಚೌಲಿ$_1$ (ನಾ). ೧. ಚಮರೀಮೃಗದ ಕೂದಲು: ತನ್ನ ಬೆನ್ನೊಳ್ ಪರೆದೊಪ್ಪಲ್ ಕೇಶ ಪಾಶಂ ಕಱಿಯ ಚವರಿಯಂ ಕಟ್ಟಿದಂತೆ (ಜಗವಿ. ೦೭-೦೩೩) ; ಬಾಲದ ಮೇಲಿನ ಕೂದಲು ಚವರಿಯಂತೆ ಒಪ್ಪುವವು (ಮುಂಬಯಿ. ೩-೫೫). ೨.= ಚವರ ೧: ಬಿರುದಿನ ಬಳಿಯ ಚವರಿಯ ಬೀಸಿ ಮಲೆತರ ತಲೆಯ ಶೂಲದೊಳೊತ್ತಿ (ಕುವ್ಯಾವಿ. ೦೨೪. ೬-೩೦) ; ಚವರಿ ಸೀಗುರಿ ಮುಂದೆ ಯುವತಿಯರ್ ಕುವರರು (ಭೈರವೇ. ೨-೬೦) ; ಮಹಾರಾಜರವರು ತಮ್ಮ ಭುಜಬಲದಿಂದ ಸಂಪಾದಿಸಿದ . . . ಸೂರೇಪಾನ, ಚವರಿ, ವಟಪಾವಡೆ ಮುಂತಾದ ಬಿರುದುಗಳನ್ನು ಹಿಡಿದಿದ್ದರು (ಡಾಮವಂ. ೩೬); ತಂಗಾಳಿಯಾ ಕೈಯೊಳಗಿರಿಸೀ ಎಸಳೀನಾ ಚವರಿ (ಗರಿ. ೨-೪). ೩. ಹೆಂಗಸರು ಕೇಶ ಶೃಂಗಾರಕ್ಕೆಂದು ಜೋಡಿಸಿಕೊಳ್ಳುವ ಕೂದಲ ಕಂಚ್ಚು ; ಗಂಗಾವನ (ಉಕ) ಅವಳ ಜಡೆ ಚಿಕ್ಕದಾದುದರಿಂದ ಚವರಿ ಸೇರಿಸಿಕೊಂಡು ಜಡೆ ಹೆಣೆದುಕೊಳ್ಳುತ್ತಾಳೆ (ರೂಢಿ). **ಚವಲಿ$_1$:** ೨. ಕಂದಾಟರದ ಕಾಗಕೆ ಕಳಿಹಿದಲಿ ಪರಬಳಸಿಂಗದ ಮೇಲೆ ಬಿಳಿಯ ಚವಲಿಯ ಕಟ್ಟಿ (ಎಕ. VIII, ಸಾಗರ. ೦೦೯-೬ ; 1329 ?). ೩. ವನಿತಾ ಚೊಲ್ಲಿಹಕಂ ಚವಲಿಯಹುದೆ ಚೂಡಾರತ್ನಾ (ನೀತಿಸಾ. ೪೮೯). ೪. ತಲೆಯಲ್ಲಿ ಧರಿಸುವ ಒಂದು ಆಭರಣ: ಅಲರು ಚವಲಿ ಬೈತಲೆವಣಿ ಮುತ್ತಿನ ಬಲೆಯಿಲ್ಲ ಬಂದರೂಪ್ಪ ದೊಳು (ಭರತ. ೦೭-೨೫) ; ಬೆನಕ ನಿಮ್ಮವ್ವಾಗೆ ಬೆಳ್ಳೀಯ ಶಿವದಾರ ಕುಣಿಕಾಲು ಚವಲೀ ಕೊನೆ ಮುಡಿಯೋ (ಹುಟ್ಟಿಹ. ೩೦); ಹಬ್ಬಿಗೆಲ್ಲಿ ಮರೆತೆ ಹವಳಾವ ಜಾಣಾನ ಮಗ್ಗುಲಲ್ಲಿ ಮರೆತೆ ಚವಲಿಯ (ಜೈಸರ್ವ. ೦೩೧). **ಚವುರಿ:** ೧. ಸುಮನಃ-ಹುವ್ವು, ವಾಲ-ಚವುರಿಯ (ಬಾಪಟೀ. ೨-೬-೩೫ ವ). ೨. ಕೋಳುಗಳ ನೀಡಿ ಚವುರಿಗಳ ಬೀಸುವ ಹೆಣ್ಣುಗಳ ನಡುವೆ (ವಡಕಾ. ೫೦) ; ಸತ್ತಿಗೆ ಸೀಗುರಿ ಸೂರೆಪಾನ ಕುಂಚ ಚವುರಿ ಬೀಸಣಿಗೆ . . . ಕಣ್ಣೀರವಾದಿ ಬಿರುದುಗಳು ಮುಂತಾದುವನ್ನು ಹಿಡಿದು ಊಳಿಗಗುಡುತ್ತ (ಬಟ್ಟಅ. ೩೦-೮). ೩. ಎಡಗಯ್ಯೊಳ್ ಕೊಟ್ಟರ್ಥದಂತೆ ತಳಿಗೆಯ ಕೂಟ ನಂತೆ ಮುಡಿದ ಚವುರಿಯಂತೆ ನೆಲಹಿನ ಮೊಸರಂತೆ (ಧರ್ಮಾಮೃ. ೮-೦೪೨ ಅಬಿ). ೫. ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ ಬಳಕೆಯಲ್ಲಿದ್ದ ಒಂದು ನಾಣ್ಯ: ದುರ್ಗವು ಕೈವಶವಾದ ಮೇಲೆ . . . ಸಿಕ್ಕಿದ ನಾಣ್ಯಗಳ ವಿವರ: ೬,೪೦೦,೦೦೦ —ಬೆಳ್ಳೀನಾಣ್ಯ . . . ೧,೦೦೦,೦೦೦ — ಚವುರಿ (ಚಿತ್ರಪಾ. ೦೦೩). **ಚವುಲಿ:** ೪. ಆಕೆ ಚವುಲಿ, ಬೈತಲೆಮಣಿ ಮುಂತಾದ ಆಭರಣಗಳನ್ನು ಧರಿಸಿದ್ದಾಳೆ (ರೂಢಿ). **ಚೌರಿ$_1$:** ೨. ಅಳವಡಿಸಿಕ್ಕಿದಾ ಬಿಳಿಯ ಚೌರಿಗಳುಜ್ವಲಕಾಂತಿ ನೀಳ್ದುಗೊಂದಳಿಸಿರೆ (ಕುಸುಮಾ. ೮-೬೫) ; ನೆಗಹಿ ಬೀಸುವ ಚೌರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕೆ ಕೋಱದರು (ಕುವ್ಯಾದ್ರೋ. ೯-೦೭). ೩. ಬಾಲೆ ಮಾಣಿಕವನುಡು ಸಾದ ಕಿವಿಯಲಿ ಕೂಡು ಕಾಲ ಪೆಂಡೆಯವ ಮುಡಿ ಚೌರಿಯಂ ಕಾಲ್ಗಟ್ಟು (ಹಡಕಾ. ೪-೪೯) ; ಅಂಗನೆ ಚೌರಿ ಕಾಲಿಗೆ ಕಟ್ಟಿ ಮುಂಗೈಗೆ ತಾಳಿಯ ಬಿಗಿದು . . . ರಂಗನ ಸ್ಮರಿಸುತ ಹೊಱಗೆ ಹೊಱಟಳು (ಪುರಂದ. ೦-೦೦೦-೫). ೪. ಹೆರಳಿಂಗೆ ರನ್ನ ಕೆತ್ತಿಸಿದ ರಾಗಟೆ ಚೌರಿ ಗೊಂಡೆ ಮುತ್ತಿನ ಕುಚ್ಚುಗಳು (ಶ್ರೀಕೃಪಾ. ೦೦). ೬. (ಮಂಟಪ ಮುಂತಾದುವು ಗಳ) ಅಲಂಕಾರಕ್ಕಾಗಿ ಕಟ್ಟುವ ಕುಚ್ಚು: ಕಟ್ಟಿದ ಚೌರಿಗಳ್ ಗಗನಮಂ ಮಿಗೆ ಚುಂಬಿಪ ಕೂವಕಂಭಂ (ದಶಕು. ೦೨-೫೪) ; ಆಯಿದನು . . . ಕುಣಿವ ಗಂಟೆಯ ಹೊಳೆವ ಹೊಂಗಱಿಯ ಬಾಯಿಧಾರೆಯ ತೈಲಲೇಪನದಾಯತದ ಚೌರಿಗಳ ರಿಪುಭಟನಾಯುಚದ ಕಡೆವಗಲಭುಕ್ತಿಯ ಶಕ್ತಿಯನು ನೃಪತಿ (ಕುವ್ಯಾಶ. ೩-೬೫) ; ಬಿಳಿಯ ಚೌರಿಯ ಮೇಲುಗಟ್ಟಿನ ಹೊಳಹು ಮಿಗೆ ರಚಿಸಿದರು ಸತಿಯ ವಿವಾಹಮಂಟಪವ (ನಳಚ. ೩-೬). **ಚೌಲಿ$_1$:** ೩. ಚೌಲಿ, ಟೇಪು, ಪಿನ್ನು ಮೊದಲಾದುವು ಹೆಂಗಸರ ಕೇಶಾಲಂಕಾರ ಸಾಮಗ್ರಿ ಗಳು (ರೂಢಿ). [ <ಸಂ. ಚಮರೀ ]

**ಚವರಿಕೊಟ್ಟು,** ಚೌರಿಕೊಟ್ಟು (ನಾ). ಒಂದು ಬಗೆಯ ಚವರಿ ಸೇರಿರುವ ತಲೆಯ ಆಭರಣ; ಚಿನ್ನದ ಕೊಪ್ಪಿನಲ್ಲಿ ಸೇರಿಸಿ ಕಟ್ಟಿರುವ ಚಮರೀಮೃಗದ ಕೂದಲಿಂದ ಮಾಡಿದ ಗೊಂಡೆ ; ಚವಲಿತುಂಬು : (ಕ). **ಚೌರಿಕೊಟ್ಟು:** ರೇಗಟ, ಕೇದಿಗೆ, ಚೌರಿಕೊಟ್ಟು, ಜಡೆಬಂಗಾರ, ಗೊಂಡ್ಯ . . . ಡಾಬು ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲಿಮಂ. ೩೮). [ ಚವರಿ + ಕೊಟ್ಟು$_2$ ]

**ಚವರಿಕೊಪ್ಪು** (ನಾ). =ಚವರಿಕೊಟ್ಟು : (*). [ ಚವರಿ + ಕೊಪ್ಪು$_8$ ]

**ಚವರಿಗೆ** 'ಚರಿಗೆ$_1$' ನೋ.

**ಚವರಿಬಿಜ್ಜಣ** (ನಾ). ಚವರಿಯಿಂದ ಮಾಡಿದ ಬೀಸಣಿಗೆ : ಚವರಿ ಬಿಜ್ಜಣವಿಡಿದು ಬಾಗಿರ್ದ ಮಯಕುವರಿ, ಹೆದರುತಂಜುತೆ ಮೆಲ್ಲನೆಯ ಮಾತು ತೆಗೆದಳು (ಶ್ರೀರಾಮಾ. ೬೫೦-೨೫೩). [ ಚವರಿ + ಬಿಜ್ಜಣ ]

**ಚವರಿಮಿಗ** (ನಾ).=ಚಮರೀಮೃಗ: ಮಜಿಯಾನೆಗಳ್ ಕಲಂಕಿದ ದಡೆಯಂ ತುದಿವಾಲದಿಂ ಬಟಿಪ ಚವರಿಮಿಗಂಗಳಿಂ (ರಾಮಾಶ್ವ. ೪೩-೨೫).

[ ಚವರಿ + ಮಿಗ ]

**ಚವರೀಮೃಗ** (ನಾ).=ಚಮರೀಮೃಗ : "ಸೃಮರಃ-ದೊಡ್ಡ ಚವ[ಪಾಠಾಂ. ಮ]ರೀಮೃಗ" (ಸಿದ್ಧಾಂತಿ. ೧೩೬). [ <ಸಂ. ಚಮರೀಮೃಗ ]

**ಚವರೆ** (ನಾ). (?) : ದೇವಿಯರ ಚವರೆಯಲು × × × ಕಲುಕುಳ (ಶಾಶಾಎ. ೧೯೩೨. ಉಡುಪಿ. ೩೯೨-೩೦ ; ?). [ ? ]

**ಚವರ್ಗ** (ನಾ).[ವ್ಯಾಕ] ಚ, ಛ, ಜ, ಝ, ಞ ಎಂಬ ಐದು ಅಕ್ಷರಗಳ ಗುಂಪು : ಚಟವರ್ಗಂ=ಚವರ್ಗ ಟವರ್ಗಂಗಳ್ (ಶಮದ. ೬೫ ಟೀಕೆ) ; ವರ್ಗಗಳಿಗೆ ಕ್ರಮವಾಗಿ ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ ಎಂದು ಆಯಾ ವರ್ಗದ ಮೊದಲನೆಯ ವ್ಯಂಜನದ ಹೆಸರನ್ನು ಇಟ್ಟಿದ್ದಾರೆ (ಮಧ್ಯಮ. ೧೩). [ ಚ + ವರ್ಗ ]

**ಚವಲ$_1$** 'ಚವರ' ನೋ.

**ಚವಲ$_2$** (ನಾ). ಹುಟ್ಟುಕೂದಲನ್ನು ತೆಗೆಸುವುದು ; ಮುಡಿ ತೆಗೆಸುವುದು; ಚೌಲಕರ್ಮ; ಜಾವಳ ಇಳಿಸುವಿಕೆ (ಉಕ): ಹುಟ್ಟಿದಾಗ ಹಾಡುವ ಹಾಡುಗಳಿವೆ; ಚವಲದ ಹಾಡುಗಳಿವೆ (ಜಾನಗೀ. ೦೭); ಮದುವೆ, ಮುಂಜಿ, ಚವಲ . . . ಮತೀಯ ಪ್ರೇರಣೆಗಳನ್ನು ಬಿಂಬಿಸುವ ಸಾವಿರಾರು ಹಾಡುಗಳಿವೆ (ಸುವರ್ಣ. ೦೨೫). [ <ಸಂ. ಚೌಲ ]

**ಚವಲ$_3$, ಚವಲಿ$_2$, ಚೌಲ$_2$, ಚೌಲಿ$_2$** (ನಾ). ಎರಡಾಣೆ ಬೆಲೆಯ ಬೆಳ್ಳಿಯ ಒಂದು ಚಿಕ್ಕ ನಾಣ್ಯ : ಒಂದು ಚವಲ ದಕ್ಷಿಣೆ ಕೊಡಬೇಕು (ಕಠುಳ. ೪೭) ; ಅವರದು-ಚವಲದಲ್ಲಿಯ ಡೌಲು ! (ಸುತ್ತುಮು. ೧೫) ; ಒಂದು ಚವಲ 'ಇನಾಂ' ಎಂದು ತಮ್ಮ ಒಕ್ಕಲುಗಳಿಗೆ ಕೊಡುತ್ತಿದ್ದರು (ಪರಾವ. ೧೬೦). **ಚವಲಿ$_2$**: ಗೌಡ ಬೇಡಬೇಡವೆಂದರೂ ಎರಡಾಣೆಯ ಚವಲಿ ಯೊಂದನ್ನು ಅವನ ಕೈಯಲ್ಲಿ ತುರುಕಿದರು (ಮುತುರುದಾ. ೪) : 'ಚವಲಿ ಯಲ್ಲಿಯ ಡವಲು' ಎಂಬಂತೆ ವಿಶೇಷ ಆಭರಣಗಳಿಲ್ಲದಿದ್ದರೂ (ಮುಂಗಾರು. ೨೯). **ಚೌಲ$_2$**: ನೀರು ತುಂಬಿದ ಪಂಚಪಾತ್ರೆಯೊಳಗೆ ಒಂದು ಚೌಲವನ್ನು ಚಲ್ಲಿ . . . ವಕ್ರರೇಷೆಯಿಂದ ನೋಡಿರಿ ; ಅದು ಪಾವಲಿಯಷ್ಟು ದೊಡ್ಡ ದಾಗಿ ಕಾಣಿಸುತ್ತದೆ (ಮುಂಬಯಿ. ೬-೯೩). **ಚೌಲಿ$_2$**: ಗಡಿಯಾಳಗಳು ತೀರ ಸಣ್ಣವೆಂದರೆ ಚೌಲಿಯಷ್ಟು ಇರುತ್ತವೆ (ಮುಂಬಯಿ. ೩-೮೬).

[ ←ಮರಾ. ಚವಲ್, ಚವಲೀ. / ತಮಿ. ಚವಲ ; ತುಳು. ಚವಲೊ ; ತೆಲು. ಚವಲ ]

**ಚವಲಂಬ** (ನಾ). ಕಣ್ಣಿವೆ ; ರೆಪ್ಪೆ: "ಚವಲಂಬಮೆಂದು ಕಣ್ಣವೆ" (ಕವಿಕಂ. ೧೮೫); ಪೊಂಗಟಿಯ ಕವಲಂಬಂ ಚವಲಂಬಮಾಡದ ಮುನ್ನಮೋಡುವಿನಂ ಪೋಗೆಚ್ಚಂ (ರಾಮಾಶ್ವ. ೧೪೫-೨) ; ಚವಲಂಬವನವಲಂಬಿಸಿ ನಗೆಯುಂ ಕಣ್ಣಾಗೊನೆಗಿದೆ (ಅರಳು. ೪೯೫-೧). [ ? ]

**ಚವಲಬೊಂಬಾಳ** 'ಚವರಬೊಂಬಾಳ' ನೋ.

**ಚವಲಿ$_1$** 'ಚವರಿ' ನೋ.

**ಚವಲಿ$_2$** ಚವಲ$_3$' ನೋ.

**ಚವಲಿತುಂಬು** (ನಾ). ತಲೆಯಲ್ಲಿ ಧರಿಸುವ ಒಂದು ಆಭರಣ : ಆಕೆ ಚವಲಿತುಂಬು ಹಾಕಿಕೊಂಡಿದ್ದಾಳೆ (ರೂಢಿ).

[ ಚವಲಿ$_1$(<ಚವರಿ) + ತುಂಬು$_2$ ]

**ಚವಳಿ, ಚವಳೆ, ಜವಳಿ$_4$** (ನಾ). ಒಂದು ಬಗೆಯ ತರಕಾರಿ ; ಗೋರಿ ಕಾಯಿ: ಹೀರೆ ಸೌತೆ ಕೂಷ್ಮಾಂಡೆಳೆಗೂಗುರಿ ಕಾರಸೆಗದಳಿ ಚವಳಿ ಬಿಂಬಂ ಬಿಜುಸೇಬದ ಮಡಿವಾಗಲ ಹಾಗಲ . . . ಶಾಖಾಳಿಗಳಂ ಸಲೆ ಸಂಭಾರಂ ಬೊರೆದುಪ್ಪಿನಕಾಯಿಗಳನೆಡೆವಮಾಡಿದಳೆಡೆವಿಡದೆ (ಮದೇಪು. ೨೭-೭); ಚವಳಿ, ಬದನೆ, ಅವರೆ, ಸವತಿ, ಕೋತಂಬರಿ, ಸಾಸಿವೆ, ಮುಂತಾದ ತೋಟಗಳಲ್ಲಿ ಬೆಳೆಯುವ ಪಲ್ಲೆಕಾಯಿಗಳು (ಕಭಾಗ. ೪೫೭) ; ಗೋವಿನ ಜೋಳದೊಡನೆ ಚವಳಿಯನ್ನು ತುಸು ಕೂಡಿಸಿದರೆ, ಬಾಳಕ ಬಹಳ ಒಳ್ಳೆಯದಾಗುವದು (ಗೋಗ್ರಾ.ಸ. ೭೦). **ಚವಳೆ** : ಚವಳೆ ಹೀರಿ ಹಾಗಲು . . . ಎಂಬ ಕಾಯಿ ಎಲೆ ಪಲ್ಲೆಗಳು (ಮುಂಬಯಿ. ೩-೧೯೫). **ಜವಳಿ$_4$**. 'ಜವಳಿಕಾಯಿ' ಪರಾ.

[ ← ಮರಾ. ಚವಳೀ, ಚಂವಳೀ ]

**ಚವಳಿಕಾಯಿ, ಜವಳಿಕಾಯಿ** (ನಾ). ಗೋರಿಕಾಯಿ: ಅವ್ವ ಝುರಡಿಯೊಳಗೆ ಹಾಕಿಟ್ಟ ಚವಳಿಕಾಯಿ ಆರಿಸುತ್ತ . . . ಕೂತಿದ್ದಳು (ಪ್ರನಿ. ೨೭೦). **ಜವಳಿಕಾಯಿ** : ಕಡೂರಿನಿಂದ ಉತ್ತರಕ್ಕೆ ಗೋರಿಕಾಯಿಯನ್ನು 'ಜವಳೀ ಕಾಯಿ' ಎನ್ನುತ್ತಾರೆ (ಸುವರ್ಣ. ೨೬೦).

[ ಚವಳಿ + ಕಾಯಿ$_4$(<ಕಾಯ್$_4$) ]

**ಚವಳೆ** 'ಚವಳಿ' ನೋ.

**ಚವಿ** (ನಾ). ಹೊಳಪು ; ಕಾಂತಿ : "ಕಳೆಗದಿರು ಮಿನುಗು . . . ಬೆಳಗುಂ ಚವಿಯುಂ ತಿಳಿವೆಸರ್ ಕಾಂತಿಗೆ" (ಅಭಿ.ಮಂ. ೦೩) ; ನುಡಿಯೆ ಪಲ್ಗಳ ಚ[ಪಾಠಾಂ. ಛ]ವಿಯುಂ ತುಟದಳರ ಕೆಂಪುಮೇಂ ಕಿದಜುದುದೋ (ಅರ್ಧನೇ. ೦-೯೩) ; ಮಿಸುನಿ ರತುನದ ಚವಿ[ಪಾಠಾಂ. ರತ್ನಪ್ರಭೆ]ಗಳಲ್ಲಿ ರಂಜಿಸುವ ಮಂಟಪದೊಳಗೆ . . . ಅವನೀಶನಿದ್ದನು ಸಿಂಹಪೀಠದಲಿ (ನಳಚ. ೪-೨೫).

[ <ಸಂ. ಛವಿ ]

**ಚವಿಕೆ** (ನಾ). ಮೆಣಸಿನ ಜಾತಿಗೆ ಸೇರಿದ ಒಂದು ಔಷಧಿ ಸಸ್ಯ : (*).

[ ←ಮರಾ. ಚವಕ್ ]

**ಚವಿಸು** (ಕ್ರಿ). ತಳತಳಿಸು; ಮಿರುಗು; ಪ್ರಕಾಶಿಸು; ಹೊಳೆ,

**ಚವಿಚವಿಸು, ಚವಚವಿಸು** (ದ್ವಿರುಕ್ತಿ) : ಹರಳೋಲೆ ಮಕರಿಕಾಪತ್ರ ಮೂಕುತಿ ಸಣ್ಣಗೆಟಿಯ ತಿಲಕ ಚವಿಚವಿಸೆ (ಭರಚ. ೪೦-೫೩) ; ನೀನೀಗ ಧವಳಪಟ್ಟೆಯ ನೂಂಕಿ ಮೊಗದೋಟಿ ಮೋಹನ ಚವಚವಿಸಿದು ದೆಂದರವರು (ಭರಚ. ೦೯-೦೩೬). [ ಚವಿ + -ಇಸು$_3$ ]

**ಚವು$_1$** 'ಚೌ$_1$' ನೋ.

**ಚವು$_2$** 'ಚೆವು' ನೋ.

**ಚವುಂಡನಾಯಕ** (ನಾ). ಒಬ್ಬಾತನ ಹೆಸರು : ಲೋಕವಿದ್ಯಾಧರನ ವಾಳಿಯಬಿಪ್ಪ ಚವುಣ್ಡನಾಯಕ ಅವಂಗೆ ಕೊಟ್ಟ ಮಣ್ಣು ಬಸದಿಗೆ (ಎಕ. VI, ಕಡೂರು. ೮-೦೦ ; ಸು. ೯೯೦). [ <ಚಾವುಂಡ + ನಾಯಕ ]

**ಚವುಕ** 'ಚೌಕ$_2$' ನೋ.

**ಚವುಕಛತ್ರಿ** (ನಾ). ಚಚ್ಚೌಕವಾದ ಕೊಡೆ,-ಛತ್ರಿ: ಮುತ್ತಿನ ಚವುಕಛತ್ರಿ ವಲ್ಲವದ ಜಲ್ಲರಿಗಳೆತ್ತಿದವು (ಸಿಂಗಿರಾ. ೭-೪೩). 'ಚವುಕಸತ್ತಿಗೆ' ಪರಾ.

[ ಚವುಕ (<ಚೌಕ$_2$) + ಛತ್ರಿ$_2$ ]

**ಚವುಕವಳಿ** (ನಾ). ಒಂದು ಬಗೆಯ ಸೀರೆ : ಭುವನಕೋಶದ ಸೀರೆ ಶುಭ್ರ ಪಟ್ಟಾವಳಿ ನವರಂಗವು ಕರ್ಣವಡ ಚವುಕವಳಿಯು ಸಿಂಹಳಾಂತಕ ಕಂಠಿಯು ಅವುಗಿದೇವನ ಮನೆಯೊಳಗೆ (ಅಮುಸಾಂ. ೪-೨೩).

[ ಚವುಕ (<ಚೌಕ$_2$) + ವಳಿ$_5$ (<ಪಟಿ$_7$) ]

**ಚವುಕಸತ್ತಿಗೆ** 'ಚೌಕಸತ್ತಿಗೆ' ನೋ.

**ಚವುಕಳಿ** 'ಚೌಕಳಿ' ನೋ.

**ಚವುಕಿ** 'ಚೌಕಿ' ನೋ.

**ಚವುಕಿಗೆ** 'ಚೌಕಿಗೆ' ನೋ.

**ಚವುಕು** 'ಚೌಕ$_2$' ನೋ.

**ಚವುಕುಳಿ** 'ಚೌಕಳಿ' ನೋ.

**ಚವುಗಾವೆ** 'ಚೌಗಾವೆ' ನೋ.

**ಚವುಟು** (ನಾ). (?) : ಪಟ್ಟನೇಗಾಣ (ವಾಣಿ) × × × ಮಾನಿ ಚವುಟುಂ ಪ್ರತಿಗೃಹೇ ಮಾಲಾಕಾರಿಷು ಪುಷ್ಪಸೂತ್ರತ್ರಯಂ ಚ ದತ್ತವಾನ್ (ಕಇಆ. ೬೦-೪೩-೩೩ ; 1104). [ ? ]

**ಚವುಡಂಗಿ, ಚೌಡಂಗಿ,** ತವುಡಂಗಿ, ತೌಡಂಗಿ (ನಾ). ಒಂದು ಬಗೆಯ ಸಸ್ಯ : ಮೂತ್ರರಕ್ತಕ್ಕೆ:–ಚತುರ್ಭಾಗ ಚವುಡಂಗಿರಸ ಆವಿನ ನೊರೆಪಾಲು ಕುಡಿಸುವುದು (ವಿವೈವಿ. ೧೨೪). **ಚೌಡಂಗಿ :** ಚೌಡಂಗಿ ಸೊಪ್ಪಿನ ರಸ, ನೆಲ ಗುಳ್ಳದ ರಸ ಹೆಗ್ಗುಳ್ಳದ ರಸ (ಸಕವೈ. ಪ. ೪೪೪). **ತವುಡಂಗಿ:** "ತವು [ಪಾಠಾಂ. ತೌ]ಡಂಗಿ ಅಜಗಂಧಿಯಕ್ಕು" (ಮಂಗರಾ. ೪೦-೩೨). **ತೌಡಂಗಿ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚವುಡಿ** 'ಚಾವುಂಡಿ' ನೋ.

**ಚವುತಿ** 'ಚೌತಿ' ನೋ.

**ಚವುಥಾಯ** 'ಚೌಥಾಯಿ' ನೋ.

**ಚವುದಂತ** 'ಚೌದಂತ' ನೋ.

**ಚವುದರಿ** 'ಚೌಧುರಿ' ನೋ.

**ಚವುದಳ** 'ಚೌದಳ' ನೋ.

**ಚವುಹಟಮಲ್ಲ** 'ಚೌವಟಮಲ್ಲ' ನೋ.

**ಚವುಪದಿ** 'ಚೌಪದಿ' ನೋ.

**ಚವುಪರ್ಣ** (ನಾ). ಗರುಡ : [ಸಿ]ರೆಯೊಳು ಕಾಳ್ಗನಂ ಜಲದೊಳಂಬುಜ ದಾಶರಥಂಗೆ ರಾಘವಂ ಕಲಿ ಚವುಪರ್ಣನಾ ವಿನತೆಗಂತನುರಾಗದೆ ಪುಟ್ಟ ಕೀರ್ತಿಯಂ ನಿಲಿಸುವ ಪಾಂಗಿನಿಂ (ಕಇ. IV, ೨೨-೧೬ : 1024). [ <ಸಂ. ಸುಪರ್ಣ ]

**ಚವುಬಾರ** 'ಚೌಬಾರ' ನೋ.

**ಚವುರ$_1$** 'ಚವರ' ನೋ.

**ಚವುರ$_2$** 'ಚೌರ$_1$' ನೋ.

**ಚವುರಸ** 'ಚೌರಸ' ನೋ.

**ಚವುರಾಶಿ** 'ಚೌರಾಸಿ' ನೋ.

**ಚವುರಿ** 'ಚವರಿ' ನೋ.

**ಚವುರಿಸು** (ಕ್ರಿ). ಚಾಮರ ಬೀಸು; ಚಾಮರಸೇವೆ ಮಾಡು: ಎಸಳಸಳಿನ ಸಿರಸಲ ಚವುರಿಸುವದು ಮೈಯನ್ನೆ ಬೀಸಲು ಮೈನವಿರೇರಿದ ನೇರಿಳೆ ನವಕನ್ನೆ (ಮುಳ್ಳಕಂ. ೪೪-೭). [ ಚವುರ (<ಚವರ) + –ಇಸು$_3$ ]

**ಚವುರಿಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೃಔನಿ. ೦೪-೨೬೪). [ ಚವುರಿ$_2$ + ಹುಲ್ಲು (<ಪುಲ್) ]

**ಚವುಲ** 'ಚವರ' ನೋ.

**ಚವುಲಿ** 'ಚವರಿ' ನೋ.

**ಚವುವಟ್ಟೆ, ಚವ್ವಟ್ಟೆ** (ನಾ). ೧. ನಾಲ್ಕು ಹಾದಿಗಳ . ೨. ನಾಲ್ಕು ಹಾದಿ ಕೂಡುವ ಸ್ಥಳ ; ಚೌವಟ ; ಚೌಕ : ಜೂದಿನ ಕಟ್ಟೆ ಮೈಲಿಗೆ ಸಂತೆಯಂಗಡಿ ಬೀದಿ ಚವುವಟ್ಟೆ [ಪಾಠಾಂ. ಚವ್ವಟ್ಟೆ, ಚಾವ್ವಟ್ಟ]ಗಳೊಳಗೆ ಬಾದುರನವರ ಕಾಣದೆ (ಕುರಾಸಾಂ. ೦೮-೦೨೮). **ಚವ್ವಟ್ಟೆ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚವು$_1$ (<ಚೌ$_1$) + ಬಟ್ಟೆ$_3$ ]

**ಚವುಷಷ್ಟಿ** ' ಚೌಷಷ್ಟಿ ' ನೋ.

**ಚವುಸರ** ' ಚೌಸರ ' ನೋ.

**ಚವುಳಪ್ರಪ್ತ** (ನಾ). ಸವುಳಂಭೂಮಿ ; ಚೌಳುನೆಲ (?) ಗೋವಣ್ಣ ದೇವಣ್ಣಂಗಳ ಕಯುಲು ಕೊಂಡ ಚವುಳಪ್ರಪ್ತದ ಕಂಬ ೩ ಕಂ ಸಿಧಾಯ ಬೆ ೩ (ಎಕ. XI, ಹೊಳಲ್ಕೆ. ೦೩೬-೬೩ ; 1307). [ ಚವುಳು (<ಸವುಳು$_1$) + ಪ್ರಪ್ತ ? ]

**ಚವುಳಿ** 'ಚೌಳಿ$_1$' ನೋ.

**ಚವುಳು** ' ಸವುಳು$_1$ ' ನೋ.

**ಚವುಳುಪ್ಪು** ' ಸವುಳುಂಪ್ಪು ' ನೋ.

**ಚವುಳುಭೂಮಿ** ' ಸವುಳುಂಭೂಮಿ ' ನೋ.

**ಚವುಳುಮಣ್ಣು** ' ಸವುಳುಮಣ್ಣು ' ನೋ.

**ಚವೆ** ' ಚವ್ವೆ ' ನೋ.

**ಚವ್ಯ** (ನಾ). = ಚವ್ವೆ : "ಕೃಕವಾಕು ಮಸ್ತಕಂ ನೇತ್ರಿಯೆನೆ ಚವ್ಯವಕ್ಕು [ಪಾಠಾಂ. ಚವ್ವಮಕ್ಕು, ಚವ್ವೆಯಕ್ಕು] " (ಮಂಗರಾ. ೪೨-೩೮) ; " ಚಿಕ್ರಿಕಾ – ಚವ್ಯ " (ಒಷಧಿ. ೩೩) ; ತ್ರಿಕಟುಕಮುಂ . . . ಜೀರಕ ಚವ್ಯ ಲವಣ ಸಂವರ್ಚಕಮುಮ್ಮತಂ ಶ್ಲೇಷ್ಮವಾತಶೂಲಾಪಹರಂ (ಅಶ್ವಶಾ. ೦೦-೦೦). [ ಸಂ. ]

**ಚವ್ವ$_1$** ' ಚವ್ವೆ ' ನೋ.

**ಚವ್ವ$_2$** ' ಚೌ$_1$ ' ನೋ.

**ಚವ್ವ$_3$** ' ಚವ್ಯ ' ನೋ.

**ಚವ್ವಂಗುಲ** ' ಚೌವಂಗುಲ ' ನೋ.

**ಚವ್ವಗೆಡು** (ಕ್ರಿ). ಹದಗೆಡು ; ರೀತಿಗೆಡು : ಕಾಲು ಬಿದ್ದರು ಇವಗ ಕರುಣ ಹುಟ್ಟುವದಿಲ್ಲ ನೀತಿ ನಡಾವಳಿಯಿಂದ ಚವ್ವಗೆಟ್ಟಿನೆ, ಮತಿಗೆಟ್ಟಿನೆ (ಮಡ್ಡುಹ. ೮೩). [ ಚವ್ವ$_3$ ( <ಚವ್ವ$_2$ ) + ಕೆಡು$_1$ ]

**ಚವ್ವಟ** ' ಚೌವಟ್ಟ ' ನೋ.

**ಚವ್ವಟ್ಟೆ** ' ಚವುವಟ್ಟೆ ' ನೋ.

**ಚವ್ವಲಿಸು** ' ಜವ್ವರಿಸು ' ನೋ.

**ಚವ್ವಾಳಿ** (ನಾ). (ಉಕ) ಉದ್ದವಾದ ನಾಲ್ಕು ಸೀಳುಗಳನ್ನು ಜೋಡಿಸಿ ಹೊಲಿದ ಚೌಕಾಕಾರದ ಬಟ್ಟೆ ; ಹಾಸುವ ಜಮಖಾನದಂತಹ ಬಟ್ಟೆ : ಆ ಹೊರಸಿನ ಮೇಲೆ ಏನೋ ಒಂದು ಚವ್ವಾಳಿಯ ಹಾಗೆ ಒಗೆದದ್ದು (ಕನ್ನಡಿ. ೦೦೨) ; ಒಬ್ಬಳು ಚವ್ವಾಳಿಯ ಒಂದು ಚುಂಗು ಕೈಯಲ್ಲಿ ಹಿಡಿದುಕೊಂಡು . . . ಧೂಳಿಬ್ಬಿಸಿದ್ದರೆ (ಸ್ಮೃತಿಚಿ. ೨೩೪). [ ← ಮರಾ. ಚವಾಳ, ಚವಾಳೇ ]

**ಚವ್ವಿ** (ನಾ). ಒಂದು ಅನುಕರಣ ಶಬ್ದ ; ಮಕ್ಕಳನ್ನು ಮಲಗಿಸುವಾಗ ಮೆಲ್ಲಗೆ ತಟ್ಟುವುದಕ್ಕೆ ಹೇಳುವ ಮಾತು : ಆ ಚಳಿಗಾಳಿಗೆ ಶಿವು . . . ಕುಸಗುಡಹತ್ತಿದ. ಪಾರ್ವತಿ ಅವನ ಮಗ್ಗುಲಲ್ಲಿಯೇ ಮಲಗಿ ಚವ್ವಿಬಡಿಯ ಹತ್ತಿದಳು (ನಡುಗೋ. ೩೮).

**ಚವ್ವೀಶ** ' ಚೌವೀಸ ' ನೋ.

**ಚವ್ವೆ, ಚವೆ, ಚವ್ವ$_1$** (ನಾ). ಒಂದು ಬಗೆಯ ಸಸ್ಯ : "ಕೃಕವಾಕು ಮಸ್ತಕಂ ನೇತ್ರಿಯೆನೆ ಚವ್ವೆಯಕ್ಕು [ಪಾಠಾಂ. ಚವ್ಯವಕ್ಕು, ಚವ್ವಮಕ್ಕು]" (ಮಂಗರಾ. ೪೨-೩೮). **ಚವೆ :** ತಾಳೀಸಪತ್ರ ದು ೧½ ೩ ತೂಕ, ಮೆಣಸು ದುಡ್ಡು ೩ ತೂಕ, ಚವೆ ದು ೩ ತೂಕ . . . ಇಷ್ಟನ್ನೂ ಇಡಿದು ಚೂರ್ಣವಂ ಮಾಡಿ (ವಿವೈವಿ. ೩೨). **ಚವ್ವ$_1$ :** ಮೇಲಿನ ' ಮಂಗರಾ ' ಪ್ರಯೋಗದ ಪಾಠಾಂತರವನ್ನು ನೋಡಿ. [ <ಸಂ. ಚವ್ಯಾ ]

**ಚಷಕ** (ನಾ). ಮದ್ಯವನ್ನು ಕಂಡಿಯುವ ಬಟ್ಟಲು ; ಪಾನಪಾತ್ರೆ : "ಮಧುಪಾತ್ರಂ ಚಷಕಂ" (ವಸ್ತುಕೋ. ೪೯-೨೬) ; " ಗರ್ಹಕಃ, ಅನುತರ್ಷಃ, ಚಷಕಃ, ಸರಕಃ–ಈ ೪ ತಿಳಿವಟ್ಟಲ್ " (ಹಲಾಯು. ೩೪-೦೬೨) ; ಇರೆ ನವ ಪದ್ಮರಾಗ ಚಷಕಂ ನಿಜಹಸ್ತತಳಾಗ್ರದೊಳ್ (ಜಗವಿ. ೦೬-೦೦೩). [ ಸಂ. ]

**ಚಷಕಭಾಂಡ** (ನಾ). ಮದ್ಯದ ಪಾತ್ರೆ : ಕಡುಮುಳಿದವರ್ನೂಂಕೆ ಚಷಕ ಭಾಂಡದ ಮೇಲೆ ಪೊಡೆಗೆಡೆಯುತೆ (ಅರಾಕ. ೬-೦೩). [ ಚಷಕ + ಭಾಂಡ ]

**ಚಷಾಲ** (ನಾ). ಯಜ್ಞಶಾಲೆಯಲ್ಲಿ ಯೂಪಸ್ತಂಭದ ತುದಿಗೆ ಸೇರಿಸಿದ ಮರದ ಬಳೆ: ಯೂಪವಮಂತೇಕವಿಂಶತಿಗಳುತ್ಕೃಷ್ಟತ್ರಿವೃತ್ಸೂತ್ರಭೂಷಿತ ಚಷಾಲದಿಂ ಮೆಱೆದುವಾ ಮಂಟಪದೊಳು (ಜೈಮಿಭಾ. ೩೩-೬೭). [ ಸಂ. ]

**ಚಷ್ಕ**(ನಾ). ಅಪಹರಿಸುವುದು ; ಲಪಟಾಯಿಸುವುದಂ : ಹೊರಡುವವರು . . . ಹೆಣ್ಣಿನವರಲ್ಲಿ ಯಥೇಷ್ಟವಾಗಿ ಪಾತ್ರೆ-ಪಳಗಗಳನ್ನು ' ಚಷ್ಕ ' ಹೊಡೆದಿದ್ದರು (ಮನೆಬೆ. ೨೫): ಹಗಲು ಹೂ ಮೊಡುವುದು, ರಾತ್ರಿ ಹೂವಿನ ಕಾಲು ತಲೆ ಕಡಿದು 'ಚಷ್ಕ' ಮಾಡುವುದು (ದೀಪಹ. I, ೭): ಅಪ್ಪನ ಪಾಕೀಟನೊಳಗಿಂದ ಐದುರೂಪಾಯಿಯ ನೋಟನ್ನು ಚಷ್ಕಮಾಡಿ . . . ಒಂದು ಮಟ್ಟವನ್ನು ಮುಟ್ಟಿದ್ದನು (ಗಂಪಡಾಯಿ. ೫೪). [ ←ಹಿಂ. ಚಸನಾ ; ಮರಾ. ಚಸಣೇ=ಮೋಸ ]

**ಚಷ್ಮ** (ನಾ). ಕನ್ನಡಕ ; ಉಪನೇತ್ರ ; ಚಾಳೀಸು (ಉಕ) : ದಶದಿಶೆ ನಿಶೆಯು, ಜಗವೆಲ್ಲಾ ನಿಶೆಯು ನಿಶನಿರಂತರ ಚಷ್ಮ (ಚಂತನ. ೭೫-೯). [ ←ಪಾರ. ಚಷ್ಮಾ; ಹಿಂ. ಚಶ್ಮಾ; ಮರಾ. ಚಷ್ಮಾ, ಚಶ್ಮಾ, ಚಸ್ಮಾ ]

**ಚಸಕ** (ನಾ).=ಚಷಕ: " ಚಸಕ-ಶಾಕಗಳ ಪಾತ್ರೆ " (ಅಕಾನಿ. ೧೦-೧೭). [ <ಸಂ. ಚಷಕ ]

**ಚಹ**, ಚಹಾ, ಚ್ಯಾ₂ (ನಾ). ಟೀಸೊಪ್ಪು ಮತ್ತು ಅದರಿಂದ ಮಾಡಿದ ಪಾನೀಯಂ : ಚಹದ ಗಿಡದ ಮೂಲಸ್ಥಾನವು ಚೀನ (ಸಸ್ಯಶಾ. ೦೩೪) ; ಚಹಕ್ಕೆ ರೊಕ್ಕ ನೀನು ಕೊಟ್ಟುಬಿಡು (ಚಂದುಟ. ೫೭) ; ಎರಡು ಕಪ್ಪು ಚಹ ಮಾಡಲಿಕ್ಕೆ ಹೇಳು (ಆಟೋಟೀ. ೦೪೪). **ಚಹಾ:** ಚಹಾತೊಪ್ಪಲದ ಬೀಜವು ಸಣ್ಣದಾಗಿ ಕಸಕಸಿಯಂತೆ ಇರುತ್ತದೆ (ಕೃಷಿಪ್ರ. ೨೦೦) ; ಚಹಾ ಆಗಲಿ, ಬಿಸಿ ಇರುವಾಗಲೆ . . . ತೆಗೆದುಕೊಳ್ಳಿ (ಒಂಟದ. ೧೭೦); ಗೋಪಾಲ ಎರಡು ಚಹಾ ತಗೊಂಡು ಬಾ (ಬಿನ್ನಿಹಿಂ. ೧೦). **ಚ್ಯಾ₂:** ಒಂದೊಂದು ಕಪ್ಪು ' ಚಾ 'ನಾದರೂ ಕುಡಿಯೋಣ (ಚಂದುಟ. ೫೭) ; ಇಬ್ಬರು ಚಾ ಕುಡೀಲಿಕ್ಕೆ ಹೋಗಿದ್ದರು (ರಕ್ತಧ್ವ. ೨೦). [ ←ಚೀನಿ. ಚಾ. / ಪೋರ್ಚು.ಚಾ. / ಹಿಂ. ಚಾ, ಚಾಯ್ ; ಮರಾ. ಚಹಾ ]

**ಚಹಡ**, ಚಹಡಿ, ಚಹಡೆ, ಚಾಡ₁, ಚಾಡಿ, ಚಾಹಡ, ಛಾಡ, ಛಾಡಿ (ನಾ). ೧. ಇನ್ನೊಬ್ಬರನ್ನು ಕುರಿತು ದೋಷಾರೋಪಣೆ ಮಾಡಿ ಹೇಳುವುದು ; ಕೊಂಡೆಯ ; ಪಿಸುಣು : ಪೈಶೂನ್ಯವೆಂಬುದು ಪರರ ಕೆಡಿಪೆನೆಂಬಾಸುರ ಚಹಡ ಕೊಂಡೆಯವು (ದ್ವಾದಶಾ. ೨೯-೬೬೦). **೨.** ಚಾಡಿ ಹೇಳುವವನು ; ಚಾಡಿಕೋರ; ಪಿಸುಣ: "ದುಸ್ಥಿತಿಪ್ರೇರಕಂ ಚಹಡಂ" (ಮಂಗರಾ. ೭೨-೨೩); ವೀರೇಶ ನೀಂ ಸೌಂದರ್ಯದೊಪಾಟಮಂ ತೆಳೆದು ಪೊದಿಸು ನಾರದ ಸ್ನೇಹ ಚಹಡನಾಗು (ಪ್ರಭುಪು. ೬-೬೦). 'ಚಹಡತನ' ಪರಾ. **ಚಹಡಿ:** ೧. ನಾರದನು ಚಹಡಿಯ ಹೇಳಿ ಹಲವಂಗದಲಿ ಬಳಿಕಾ ಫಾಳಿಯನು ಕಳುಹಿದನು ಕೋಪಾಗ್ನಿಯನು ಹೊತ್ತಿಕ್ಕಿ (ತಿಮ್ಮಣಾಂ. ೫-೦೦೭) ; ಖೂಳ ನಾರದ ಬಂದು ಬಾಣನೊಳ್ ಚಹಡಿಯ ಹೇಳಲುಜ್ಜುಗ ವೆತ್ತನಂತೆ (ಮೋಹತ. ೩೩-೯೦) ; ಮಂಚಣ್ಣ ಚಹಡಿಯಂ ವಿಸ್ತಾರದಿಂ ಪೇಳೆ (ಚಬಪು. ೭ ಸೂಚನೆ). **ಚಹಡೆ:** ೧. ದುರ್ಜನರ ಚಹಡೆಯ ಮಾತುಗಳ ಕೇಳ್ದು (ಚಬಪು. ೮-೯). **ಚಾಡ₁ :** ೧. ನಾರದಂ . . . ಚಾಡವ ಪೇಳೆ (ಗುರುಚಾ. ೮-೭೨) ; ಆಡದಿರು ಪುಸಿ ನಿಂದ್ಯ ನಿಷ್ಠುರ ಚಾಡವಂ (ಶಂಕೆದಾ. ೦೬-೪೮). **ಚಾಡಿ :** ೧. "ಪಿಸುಣ. ಕೊಂಡೆಯ ಚಾಡಿಯೆನೆ ಕುತ್ಸಿತಕ್ಕೆ ಪೆಸರೆಸಗು " (ಶಬ್ದಮಂ. ೬೬) ; ಚಾಡಿಗಳ್ ಹೇಳುವುದಿಲ್ಲಿ ನುಡಿದಾಡುವ ನಾಲಿಗೆ ಕೀಳುವರಲ್ಲಿ (ಪುರಂದ. ೨-೩೯-೩) ; ಅಠಮಠ್ರೆಮಾಡಿ ಚಾಡಿಯ ಹೇಳಿದರು (ಎಕ. XI, ಮೊಳಕಾ. ೯-೬. 1551) ; ಅವರು ಪ್ರೀತಿಯಿಂದ, ಬಿಡದೆ ಹೋದರೆ ದೋಷವನ್ನು ಕಲ್ಪಿಸಿ, ಚಾಡಿಯನ್ನು ಹೇಳಬೇಕು (ಕೃಷಾಳ.೩೬೦). ೩. ಸೂಚನೆ.'ಚಾಡಿಯೋಲೆ 'ಪರಾ. **ಚಾಹಡ:** ೧. ಮಹ ರಸಿಕತನದೊಳು ಚಾಹಡವ ಪೇಳಿ ದೇವದಾನವರು ಕನಲ್ದುರುಳುತಿಹರು (ಪ್ರಭುಪು.೬-೩೭). **ಛಾಡ:** ೧. ಛಾಡವ ಪೇಳಿ ಉತ್ತಮರನ್ನ ಬಳಲಿಸಿ ನಾಡೊಳು ಸ್ವಾಮಿದ್ರೈವ ದ್ರೋಹತನದಲ್ಲಿ ಆಡಬಾರದ ಮಾತುಗಳೆಲ್ಲ ಸರ್ವದಾ ಜೋಡಿಸಿನುಡಿವುತ್ತ (ವಿಸಾಸು. ೬೪-೬). **ಛಾಡಿ:** ೧. ಛಾ[ಪಾಠಾಂ. ಚಾ]ಡಿ ಹೇಳಲುಬೇಡ ನಾಲಿಗೆ ನಿನ್ನ ಬೇಡಿಕೊಂಬುವೆನು ನಾಲಿಗೆ (ಪುರಂದ. ೧-೦೮೩-೨) ; ಬೇಡಿರಿ ಬೇಡಿರಿ ಹೀಗೆ ಛಾಡಿ ಹೇಳುವುದನ್ನು ಯಾರು ಕಲಿಸಿದರು (ಜನಸಾ.೦೦೫). [ ?. / ತಮಿ. ತುಳು. ತೆಲು. ಚಾಡಿ./ಮರಾ. ಚಹಾಡ್, ಚಹಾಡೀ, ಚಾಡೀ ]

**ಚಹಡತನ**, ಚಾಡತನ(ನಾ). ಚಾಡಿಹೇಳುವ ಸ್ವಭಾವ; ಚಾಡಿಕೋರತನ: ಚಹಡತನಗಳನಱಿಯೆ ಏಗುವೆ ನೀನು ಹಸುಳೆಯಲಾ (ಶಾಶಿರಾ. ೧೮ ೩೮). **ಚಾಡತನ:** (೩). [ ಚಹಡ + – ತನ ]

**ಚಹಡಿ** 'ಚಹಡ' ನೋ.

**ಚಹಡೆ** 'ಚಹಡ' ನೋ.

**ಚಹರೆ**, ಚೇರೆ, ಚೇಹರಾ (ನಾ). ಕೃತಿ ; ಆಮುಂದ್ರೆ ; ಲಕ್ಷಣ : ಅವನಿಗೆ ಸಾಮಾನ್ಯ ನಡವಳಿಕೆಯಲ್ಲೂ ನಾಟಕದ ಚಹರೆ ರೀತಿ ಬಂದುಬಿಟ್ಟಿತ್ತು (ಅಲಹೂ. ೧೭) ; ಈ ಬಂದೂಕಿನ ಚಹರೆಯೂ . . . ನಿನ್ನ ಬಂದೂಕಿನ ಚಹರೆಯೂ ಒಂದೇ ಆಗಿದೆ (ಪಂಜಪಂ. ೨೨೦). 'ಮುಂಖಚಹರೆ' ಪರಾ. **ಚೇರೆ :** ಆರು ತಿಂಗಳ ಕೂಸು, ಚೇರೆ ಬದಲಾಯಿಸಿತು (ಕನ್ನಜಾ. ೦೮೯). **ಚೇಹರಾ :** ನಮಗೆ ಮೊದಲು ಚೇಹರಾ ಮಾತ್ರ ತೋರಿಸಬೇಕು (ರಕ್ತಧ್ವ. ೩೦೮). [ ←ಪಾರ. ಚಿಹ್ರಾ; ಹಿಂ. ಚೆಹರಾ; ಮರಾ. ಚಹರಾ, ಚೇಹರಾ, ಚೇಹೇರಾ ]

**ಚಹರೆಪಟ್ಟಿ** (ನಾ). ಆಕಾರ, ಲಕ್ಷಣ, ಮುಖಮುದ್ರೆ ಮೊದಲಾದುವುಗಳ ವಿವರ,-ತಪಶೀಲು : ಸಾಹಿತಿಯ ಚಹರೆಪಟ್ಟಿಯನ್ನು ಬರೆಯ ಹೊರಟವನು ಅವನ ಬಡತನವನ್ನು ಮೊದಲು ಕಾಣಿಸದೆ ವಿಧಿಯಿಲ್ಲ (ಅಲಮ. ೧೧೪). [ ಚಹರೆ + ಪಟ್ಟಿ₂ ]

**ಚಹಾ** 'ಚಹ' ನೋ.

**ಚಹಾಪಾಣಿ** (ನಾ). ಚಹ, ತಿಂಡಿ, ನೀರು ಮೊದಲಾದುವುಗಳನ್ನು ತೆಗೆದುಕೊಳ್ಳುವುದಂ ; ಚಹ ಹಾಗೂ ಫಲಾಹಾರ : ಅವನು ಕಾಟಿದ ಬಿಲ್ಲಿನಲ್ಲಿ ಈ ಚಹಾಪಾಣಿಯ ವೆಚ್ಚವೂ ಸೇರಿತ್ತು (ದೇಶನ್ನ. ೧೧೪). [ ←ಮರಾ. ಚಹಾಪಾಣೀ ]

**ಚಹಾಪಾನ** (ನಾ). ಚಹವನ್ನು ಕುಡಿಯುವುದಂ : ಚಹಾಪಾನ ನಮ್ಮ ನೀರಡಿಕೆಯನ್ನು ಹಿಂಗಿಸಿದುದಲ್ಲದೆ ನಮ್ಮ ಮನಸ್ಸುಗಳಿಗೂ ನವಚೇತನ ನೀಡಿತು (ಕಾಲಯಾ. ೧). [ ಚಹಾ (<ಚಹ) + ಪಾನ ]

**ಚಳ₁** 'ಚಲ₁' ನೋ.

**ಚಳ₂** 'ಚಲ₂' ನೋ.

**ಚಳ₃** (ನಾ). ಬೆಲ್ಲ: ಮಲಯರುಹಂ ನುಗ್ಗಿಯ ಬೇರ್ ಜಲಮುಂಬುದಮೆಣಲೆ ಮಾಂಸಿ ಚಳಮೇಲೆಯಿವಂ ತಳಿವುದು (ಲೋಕೋಪ. ೭-೪೩). [ ? ]

**ಚಳಂಕಿ** (ನಾ). ಒಂದು ಔಷಧಿ ದ್ರವ್ಯ : ಹಲಸಂದೆ ಔಡಲ ಚಳಂಕಿ ಇವು ಕ್ರಿಮಿದೋಷಹರ (ಅಶ್ವಟೀ. ೯೦-೨). [ ? ]

**ಚಳಕ₁** 'ಚಡಿಕೆ' ನೋ.

**ಚಳಕ₂** (ನಾ). ೧. ವೇಗ; ಚಪಲತೆ ; **ಶೀಘ್ರತೆ:** " ಚಳಕಮೆನಲ್ ವಹಿಲಮೆಂದು ತಿಳಿಗೆ ವಿದಗ್ಧರ್" (ಛಾರನಿ. ೦೧): ಕಲಕಿದನು ಬಲಜಲಧಿಯನು ಬಲು ಚಳಕದಲಿ ತೆಗೆದೆಸುತ (ಸಂಭಪ. ೦೯-೭): ಊರ್ವಿಳಾಪತಿ

ಚಳಕ[ಪಾಠಾಂ. ದಳಯ, ನಿಳಯ]ದಿಂದೈತಂದು ಕಂಡನು ಕಪಟರಕ್ಕಸಿಯ (ತೊರರಾ. ೩-೪-೨೬) ; ಚಳಕದೆ ಕಳಸದ ಘಟ್ಟವನಿಳಿದು (ಕೆಲನ್ನ. ೧೧-೫೪). ೨. ಜಾಣ್ಮೆ; ಚಾತುರ್ಯ; ಕೌಶಲ; ಚಮತ್ಕಾರ: ಆ ಬಿಲ್ಲನಾ ರಥವ ತಳುವದೆ ಕಡಿದು ಭಂಗಿಸಿದನವನ ಕೈಯ ಚಳಕವನೇನ ಬಣ್ಣಿಪೆನು (ನೇಮಿಸಂ. ೦೨-೬೯) ; ಈ ಲುಳಿಯಿಂ ಬಿನ್ನಣಮಿಾಯೊಡಲ್ಮಣಿತ ವಿಾಯಿಂದಾಳಮಿಾ ಬೀರಮಿಾ ಚಳಕಂ ಶ್ರೀಚಕದೇವನೊಳ್ ಮೆಱೆಗುಂ (ಚಳವಿ. ೪-೧೪೮) ; ಬಿರಿಮುಗುಳ ಬಿಡಿಸುತ್ತಲಿರ್ದನು ಕರದ ಚಳಕದಲಿ (ಅಂಬಿಕಾ. ೪-೨೬); ಕೆಲವರು ರಂಗೋಲಿಯ ಕೆಳಗೆ ತೂರುವ ಚಳಕವನ್ನು ತೋರಿಸಿದರು (ನಂಟರು. ೩೦). 'ಚಾಲಾಕು' ಪರಾ. [ ? ]

**ಚಳಕಿ₁** 'ಚಡಿಕೆ' ನೋ.

**ಚಳಕಿ₂** (ನಾ). (?) : ಲಕ್ಷ್ಮೀನರಸಿಂಹದೇವರ ಅಮ್ರಿತಪಡಿಗೆ ಕೊಟ್ಟ ಗ ೫ ಚಳಕಿಯ ವ್ರಿತ್ತಿಯನು (ಎಕ. VI, ಕಡೂರು, ೮೮-೪೬ ; 1223 ?). [ ? ]

**ಚಳಕಿಗೆ, ಚಳಿಕಿಗೆ** (ನಾ). ತೋಳಿಗೆ ಧರಿಸುವ ಒಂದು ಆಭರಣ ; ತೋಳ್ಬಳೆ ; ಬಂದಿ: ದ್ವಿಗುಣಿಸೆ ಚಮರಜಮಂ ಪೊಳೆವುಗುರ್ಗಳ್ ಚಳಕಿಗೆಯು ಪೊಚ್ಚ ಪೊಸಮುತ್ತಿನ ತಟಸ್ರಗೆವಂಶುಮಾಳೆ ಮೋಗಣ್ಗೊಗೆಯೆ ಕುಚಾಭೋಗಮಿಕ್ಕಿದರ್ ಚಮರಜಮಂ (ಮಲ್ಲಿಪು. ೮-೧೦೨); ದ್ಯುತಿವೀಱುವ ಮುತ್ತಿನ ಚಳಕಿಗೆಯಂ ಯುವತಿಯ ನಳಿತೋಳ್ಗೆ ಕಟ್ಟಿದಳ್ ಮತ್ತೊರ್ವಳ್ (ಜಗವಿ. ೧೧-೧೧೬); ಕಂಕೆಲ್ಲಿಯ ಕಂಕಣಮುಮಂ ವಿಚಕಿಳದ ಚಳಕಿಗೆಯುಮಂ . . . ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು (ಚಂದ್ರಪು. ೬-೧೧೪ ವ) ; ಕಿಱುಗೆಜ್ಜೆ ಚಳಕಿಗೆ ಜೂಳಿಯವೆಸೆದವಾನಿಱಿಗುರುಳಬಲಾಮಣಿಗೆ (ರಾಮವಿ. ೬-೭೪); ಹಸ್ತಕಡಗ ಚಳಕಿಗೆ ರನ್ನದ ಬಳೆ ಹರಳುಂಗುರಗಳನವರಿಯರಿಟ್ಟರವಳ್ಗೆ (ಚಂಪ್ರಸಾಂ. ೨೫-೧೩೬). **ಚಳಿಕಿಗೆ** : ಜೂಳಿಯ ಚಿನ್ನಪೂ ಕಮಲಪೂ ಚಳಿಕಿಗೆ ತಾಳಿಹೂ ಬೆಂಬಚ್ಚೆದಂಡೆ ತೋಳೊಂಕೆ . . . ಬಾಲೆಗಾಭರಣವೊಪ್ಪಿದುವು (ಭರಜ. ೪೦-೬೫) ; ಗೊಜ್ಜುಗೆಯ ಸಜ್ಜುಕದ ಚಳಿಕಿಗೆಯನಜ್ಜಗೆಯ ಪಜ್ಜಳಿಪ ಬಜ್ಜರದ ಬಾವುರಿಯ (ರಾಜಶೇ. ೧೧-೫೭ ರಗಳೆ). 'ಚಳಕೆ' ಪರಾ.

[ ? ]

**ಚಳಕು₁, ಚಳಂಕು₁, ಛಳಕು, ಛಳುಕು** (ನಾ). ಒಮ್ಮಿಂದೊಮ್ಮೆಲೆ ನರ ಮಿಡಿದು ಉಂಟಾಗುವ ನೋವು ; "ನರವಾಯು" (ಜಾನಕೋ. ೫೫). **ಚಳುಕು₁** : ಕೆಲರುರದ ಚಳುಕಿಂ ವಾತಪಿತ್ತಜ್ವರದಿ ಕೆಲಬರು ಮಡಿಯುತಿರ್ದರ್ (ಅರ್ಜಾವಿ. ೮-೨೧) ; ಅಯ್ಯೋ . . . ಮಯ್ಯೆಲ್ಲೆಲ್ಲ ಚಳಕು(ತುಂಗಭ. ೨೨). **ಛಳಕು**: ಆಗಾಗ್ಗೆ ಸೊಂಟದ ಛಳಕು, ಕೈಕಾಲುಗಳ ಹಿಡಿತದಿಂದ ಸಂಕಟಪಡುತ್ತಿದ್ದ ಮುದುಕಿ, ಹಬ್ಬವಾದುದರಿಂದ . . . ಕೆಲಸಮಾಡುತ್ತಿದ್ದುದನ್ನು ಕಂಡು ರತ್ನಮ್ಮನಿಗೆ ಕೊಂಚ ಕನಿಕರವೂ ಆಯಿತು (ಕೀಲುಗೊಂ. ೦) ; ತೊಡೆ ಛಳಕು ಒಂದೂ ಇಲ್ಲವೆಂದೂ ಚಿಕ್ಕಪುಟ್ಟಮ್ಮ ಹೇಳಿದ್ದಳು (ಮನೋನಂ. ೦೫೦). **ಛಳುಕು** : ಮುಂದೆ ಕಂಕುಳು ಸಂದಿಯಲ್ಲಿ ಬಾತುಕೊಂಡಿತು. ತುಂಬಾ ಛಳುಕು ಕಾಣಿಸಿಕೊಂಡಿತು (ಊರುಳ. ೩೨) ; ಅವನಿಗೆ ಛಳುಕು ಹೊಡೆದಂತಾಯಿತು (ರಂಗನಾ. ೧೭೫).

**ಚಳಕುಹಿಡಿ** = ನರಗಳು ಮಿಡಿ ; ಸ್ನಾಯು ಅಲುಗಾಡದಂತಾಗಿ ನೋವಾಗು : ಅವನಿಗೆ ಚಳಕುಹಿಡಿದಂತೆ ಆಗಿತ್ತು (ಕನಕ. ೮೯) ; ನನ್ನ ಸೊಂಟ ಚಳಕುಹಿಡಿದದ್ದು, ಕೈಕಾಲು ತತ್ತರಿಸಿದ್ದ ಅವಲಕ್ಷಣವೇ (ಸ್ವ. ತಿಜ. ४೫೦). [ ದೇ.॥ ತಮಿ. ಮಲ. ಚುಳುಕ್ಕು ]

**ಚಳಕು₂** (ನಾ). (ಹಾಡುವ ಪದ್ಯಗಳ) ಸಮುದಾಯ : ದುಂದುಮಿಯಲ್ಲಿ . . . ಚೌಪದಿಗಳಿರದೆ, ತ್ರಿಪದಿ ಅರ್ಧಚೌಪದಿ ಮೊದಲಾದವುಗಳ ಕೂಡುವಿಕೆಯ ' ಚಳಕು ' ಗಳಿರುವುವು (ಕನ್ನಜಾ. ೯೫).

[ ←ಮರಾ. ಚಳಕ್ ]

**ಚಳಕೆ, ಚಳಿಕೆ₁** (ನಾ). ೧. = ಚಳಕಿಗೆ : ವೈಡೂರ್ಯದ ಹೀರಗಡಗ ಚಳಕೆಗಳ (ಜನರಾ. ೯-೧೪೦). **ಚಳಿಕೆ₁** : ೧ ಪಾಣಿ ಕಂಕಣ ಚಳಿಕೆ ಹಿಂಬಳೆಯು (ಜನಮು. ೦೨-೩೯); ಕರದ ಕಂಕಣ ಚಳಿಕೆ ಹಿಂಬಳೆ ಕೊರಳ ಸರ (ಜಿರಾಮಾ. ೨೫-೪೦). ೨. (ಕರಾ) ಕೈಬಳೆಗಳ ನಡುವಿನ ಹಸ್ತಾಭರಣ.

[ ದೇ. ॥ ತುಳು. ಚಳಕಿ ]

**ಚಳಗತಿ** 'ಚಲಗತಿ' ನೋ.

**ಚಳಚಮತ್ಕೃತಿ** (ನಾ). ವೇಗದ ಚಾತುರ್ಯ; ಅದ್ಭುತವಾದ ಚಟುವಟಿಕೆ: ಬಳಿಯ ರಕ್ಕಸರಥಿಕರಸುಗೆಯ ಚಳಚಮತ್ಕೃತಿಯಿಂದ ದೂಷಣ ಹಳಚಿದನು (ತೊರರಾ. ೩-೬-೦೪). [ ಚಳ್₂ (=ಚಲ್₂) + ಚಮತ್ಕೃತಿ ]

**ಚಳಚಳ** (ನಾ). ಒಂದು ಅನುಕರಣ ಶಬ್ದ : ಅಪ್ಪುವಿಂಗೆ ಇಳಿಜಾರಿನಲ್ಲಿ ಚರಿಸುವಾಗ ಹುಟ್ಟುವ ಬುಳುಬುಳು ಚಳಚಳ ಭೋರ್ಭೋರೆಂಬ ಶಬ್ದ ಉಂಟು (ವಚಶಾ. II, ೩೨).

**ಚಳಚಳನೆ** (ಅ). ೧. ಥಳಥಳನೆ: ಚಳಚಳನೆ ಮಿಂಚಿತ್ತು ಸಿಡಿಲ ಕೈದೀವಿಗೆವೊಲ್(ಕಮಠ. ೦೯೩ ಪ್ರಯೋ);ಬಳಬಳನುದುರುತಿರ್ದುದು ಕರ್ಪು ಚಿತ್ರಭಿ ಚಳಚಳನೊಳಗೇಱುತಿಹುದು (ಭರಜ. ೭೭-೩೪). ೨. ಬೇಗನೆ; ಲಗುಬಗೆಯಿಂದ ಕೂಡಿ : ಭೋಜನಕೆ ಸಲುವುಪಕರಣವನಲ್ಲಲ್ಲಿಗೆಲ್ಲಕೆ ಚಳಚಳನನು ಗೊಳಿಸಿದರು (ಭರಜ. ೪-೫೮) ; ಚಳಚಳನೆಯ್ದಿದರಂಗ ಶೃಂಗಾರಾಂಶು ತಳತಳನತ್ತಿತ್ತ ಕೆದಱಿ (ಭರಜ. ೩೮-೩). [ <ಚಲ್₂ + – ಅನೆ₁ ]

**ಚಳಚಳಿಸು** (ಕ್ರಿ). ಲಕಲಕಿಸು ; ತಳತಳಿಸು ; ಉಜ್ವಲವಾಗು : ಸಿರಿ ಸೋರ್ವ ಮುಖಪದ್ಮಂ-ಚಳಚಳಿಸೆ (ರಾಮಾಶ್ವ. ೬೯-೨೪).

[ <ಚಲ್₂ + – ಇಸು₃ ]

**ಚಳಚಿತ್ತ** 'ಚಲಚಿತ್ತ' ನೋ.

**ಚಳಣ, ಛಲ್ಲಣೆ** (ನಾ). ೧. ಅಡಿ ; ಪಾದ ; ಚರಣ : ನರೇಂದ್ರಂ . . . ಭೀಷ್ಮರ ಚಳಣಯುಗಕ್ಕೆಱಗೆ (ಪಂಪಭಾ. ೧೧-೬೦); ಜಳದೇವತೆ ಕೋಡುವ ತಿಳಿಗೊಳದೊಳಗಿರ್ಪಂತೆ ಶೀಲವತಿ ಸೀತೆ ವಿನಿಶ್ಚಳಮಿರೆ ಮನದೊಳ್ ಜನಪತಿ ಚಳಣಂ ದಳ್ಳುರಿಯ ನಡುವೆ ಕೋಡುತ್ತಿರ್ದಳ್ (ಪಂಪರಾಮಾ. ೧೬-೨೮). **ಛಲ್ಲಣೆ** : ೨. ಚಲನೆ ; ಹರಿದಾಟ : ಉದುಕದ ಛಲ್ಲಣೆಯಿಂದ ಚಂದ್ರ ಕಂಪನೆ ಅನುಭವಿಸುವಂತೆ (ತತ್ತ್ವಚಿಂ. ೩-೦೩). [ <ಸಂ. ಚಲನ ]

**ಚಳತುಂಬಿ** (ನಾ). ಸುಳಿದಾಡುವ ದುಂಬಿ ; ಚಂಚಲವಾದ ಭ್ರಮರ : ಗೊಂಚಲನಾಗೋತ್ತರ ಚಳತುಂಬಿಗೆ ಗುಣಗುಟ್ಟುವುದೆ ಮಾಯಾ (ಚಿದಾವ. ೩೬-೦). [ ಚಳ್₂ ( = ಚಲ್₂) + ತುಂಬಿ₁ ]

**ಚಳತುಂಬು, ಚಳತೊಂಬು** (ನಾ). ಓಲೆಗೆ ಸೇರಿಸುವ ಜುಮುಕಿಯಂತಹ ಅಲ್ಲಾಡುವ ಒಂದು ಆಭರಣ : ಪುಲ್ಲಲೋಚನೆ ಚಳತುಂಬು ಮಿಾನ ಬಾವುಲಿಯ . . . ಕರ್ಣದಲಿಟ್ಟು (ಶ್ರೀಕೃಪಾ. ೧೦) ; ನೀಲದ ಬಾವುಲಿ ಚವುಕಳಿ ಚಳತುಂಬು ತೂಬು ತಕ್ಕಡಿ ಇಟ್ಟರು (ಕರ್ನಾಕ. ೩೦೮) ; ಮುಗಿಲಲ್ಲಾಡುವ ಬಾವಿಲಿ ಮಲ್ಲಿಗೆ ಕಿವಿಗೊಪ್ಪು ಓಲೆಕೊಪ್ಪು ಚಳತುಂಬ (ಗಿರಿ. ೦೦೬-೯) ; ವಾಲೇಗೆ ಚಳತುಂಬ ಮರತೇ ಬಂದ್ಯ (ನಾಪದ. ೦೦೮). **ಚಳತೊಂಬು** : ಎಸೆವ ಕಪೋಲ ಹೊಸ ಕುಂಡಲ ಚಳತೊಂಬುಳ್ಳ ಶ್ರವಣ (ಪುರಂದ. ೦-೦೯೦-೪).

[ ಚಳ್₂ ( = ಚಲ್₂) + ತುಂಬು₄./ತುಳು. ಚಳತುಂ, ಚಳ್ತುಂಬು ]

**ಚಳತೆ** (ನಾ). ೧.ಚಂಚಲತೆ ; ಚಪಲತೆ: ತಿಳಿವು ತಿರುಗಿತು ಲಾಸ್ಯಲೀಲೆಯ ಚಳತೆ ಚಂಡಿಸಿ ಹಿಂಗಿಹೋಯಿತು (ಪ್ರಭುಲೀ. ೭-೩೪). ೨. ಲಗುಬಗೆ ; ತ್ವರೆ : ಹಿಡಿಗುದುರೆಯ ಸಾವಿರವ ಬಿಡದೆ ಚ[ಪಾಠಾಂ. ದಚ್ಚ]ಳತೆ ಮಾಡಿ ತಂದೊಪ್ಪಿಸಿದನಂದು ಕಡುಗಲಿ ರಾಮನಾಥನಿಗೆ (ಕುರಾಸಾಂ. ४೨-೮೦).

[ ಸಂ. ಚಲತಾ ]

**ಚಳತೊಂಬು** 'ಚಳತುಂಬು' ನೋ.

**ಚಳದಳ** 'ಚಲದಲ' ನೋ.

**ಚಳನ** 'ಚಲನ' ನೋ.

**ಚಳನತಳ** (ನಾ). ಪಾದತಲ ; ಕಾಲಡಿ : ಚಳನತಳಂಗಳಂ ತೊಳೆದು ಮುಂಬಟ್ಟಿಯ ತೀರ್ಥವಾರಿಯಿಂ . . . ಫಳಕುಳದಿಂ ಧರಾಧಿಪತಿ ಪೂಜಿಸಿದಂ (ಚಂದ್ರಪು. ೧೭-೯) ; ಚಳನತಳದ್ಯುತಿಚ್ಛಲದೆ ಕೆಂಬಿಸಿಲಂ ಕಿಡೆ ಮೆಟ್ಟಿ . . . ಪೊಜಿಮಟ್ಟಲೊರ್ವಳಭಿಸಾರಿಕೆ ಭೂಚರ ಚಂದ್ರಮೂರ್ತಿಯೋಲ್ (ವರ್ಧಪು. ೬-೪೮). [ ಚಳನ (=ಚಲನ) + ತಳ$_2$ (=ತಲ) ]

**ಚಳಪಳ** (ನಾ). ಒಂದು ಅನುಕರಣ ಶಬ್ದ : ನೀರು ಸುರಿಯುವಾಗ ಚಳಪಳ ಸದ್ದು ಕೇಳಿಸುತ್ತಿತ್ತು (ರೂಢಿ).

**ಚಳಪಳನೆ** (ಅ). ಚಳಪಳ ಎಂಬ ಸದ್ದಿನೊಡನೆ : ಚಳಪಳನೆಳ್ದು ಚಿಮ್ಮಿ ಗರಿಗಳ್ ಪೊಳೆಯಲ್ ನೆಗೆದೆಳ್ದು ಮತ್ತ್ಯಯುಂ ತಳತಳಿಸುತ್ತೆ . . . ತೋರ್ದುದಾ ವಿಳಸಿತರತ್ನಕೋಶಮೆನಿಸುತ್ತೆ ಧರಾತಳದೊಳ್ ನಿರಂತರಂ (ಹಾಲಾಸ್ಯ. ೪-೯-೨೦). [ ಚಳಪಳ + – ಅನೆ$_1$ ]

**ಚಳಬಳಿಕೆ** (ನಾ). ೧. ಲಗುಬಗೆ; ಚಪಲತೆ; ಚಳಕ; ವೇಗ: ಚಳಬಳಿಕೆಗಳ ಚಾರುತುರಗಕುಲವನುವಾಗಿ ನಿಂದವು (ಸೋಮಪತ. ೬-೨೮); ಭಾವಿಸುವೊಡಾ ಚಳಬಳಿಕೆಯನು ತಾವೆ ಬಲ್ಲರು ದೇವಭಕ್ತರು (ಪ್ರಭುಲೀ. ೨೩-೨೮); ಕುಣಿದ ವಸುರನ ರಥದ ಹಯ ದಿನಮಣಿಯ ದಿವ್ಯವರೂಥವಾಜಿಯ ಹಣೆಗೆ ಹೊಂಚುವ ಖುರದ ಚಳಬಳಿಕೆಯ[ಪಾಠಾಂ. ಪುಟದ ಚಲಗತಿಯ]ಧಡಾಳದಲಿ (ತೊರರಾ. ೬-೨೦-೫೧) ; ಮಂಡಲಭೇದ ಚಳಬಳಿಕೆ ಚದುರೋಜೆವೆರಸಿ ರಣರಂಗದೊಳ್ . . . ಉರವಣಿಸಿದುವು (ಜೈಮಿಭಾ.೨೫-೪೫). ೨. ಅಬ್ಬರ: ಪರಮವಿದ್ಯೆಯ ನೆರವಿ ನಿಲುಕುವ ಚಳಬಳಿಕೆ ಮೊಳಗುವ ಜಯಾಂತದ ವಾದ್ಯ ರಭಸದಲಿ (ತೊರರಾ. ೬-೧೮-೮) ; ಕೊರಲೊಂದು ಚಳಬಳಿಕೆ [ಪಾಠಾಂ. ಳಕಿ]ಯನುಳ್ಳ ಪಲಬಣ್ಣದಿರವಾಂತ ಜೋಡ ಮೈಗಿಟ್ಟು (ವರ್ಧಚ. ೧೧-೦೨೬). ೩. ಗಾನದ ಇಂಪು: ಕೊರಳ ಚಳಬಳಿಕೆಯುಲಿಯೊಳ್ [ಪಾಠಾಂ. ಳಕಿಯೊಳುಲಿಯ]ವುರುಷನ್ನೆದೆ . . . ಬಸಕೆ ತಪ್ಪುದಂಗನೆ (ಜನವ. ೮-೨೦) ; ಭಙ್ಗಯಿಲ್ಲದೆ ತನ್ನ ಗಂಧರ್ವಗಾಯಕಮನಡ್ಡ ಮಾಡುವತಲಖಿಳ ಚಳಬಳಿಕೆಯಿಂ ಕೊನರಿ (ಲಿಂಗಪು. ೨೬-೪೬). ೪. ಸೊಗಸು; ಚಾತುರ್ಯ; ಬಿನ್ನಾಣ (?) : ಚಳಬಳಿಕೆಯೊಳು ಚಂದದೊಳು ಬಂಧದೊಳು ನಿರ್ಮಳ ಮೋಹಿಗಳು ನೆರೆವಾಗ (ಭರತ. ೩೦-೧೩೦) ; ಹಾವಭಾವದ ಚಳಬಳಿಕೆ ರಂಜಿಸೆ ತನ್ನ ಹಾವಂತೆ ಬಂದೊರ್ವಳೊಲೆದು (ಭರತ. ೪೭-೩೮). ೫. [ನಾಟ್ಯ] ಒಂದು ನೃತ್ಯಭಂಗಿ : ಢಾಳ ಡಿಳ್ಳಾಯಿ ಚಂಡಣ ಚಳಬಳಿಕೆ ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೦೬-೬೭ ಪ).
[ ಚಳಬಳ$_0$ + – ಇಕೆ ]

**ಚಳಬಳಿಸು** 'ಚಳವಳಿಸು' ನೋ.

**ಚಳಮತಿ** (ನಾ). ಚಂಚಲಬುದ್ಧಿಯುಳ್ಳ ವ್ಯಕ್ತಿ : ಚಳಮತಿಯಾದ ನೀಂ ಜಡಧಿಸಂಭವೆಯಪ್ಪುದಜುಂ (ಗದಾಯು. ೯-೫) ; ಚಳಮತಿ ಬೆಸನಿ ಸುಖಪ್ರಿಯಂ (ಸೂಕ್ತಿಸು. ೦೬-೫೨). [ ಚಳ$_2$ (= ಚಲ$_2$) + ಮತಿ ]

**ಚಳಮಾಲೆ** (ನಾ). ಪೊದರಾಗಿ, ನೇರವಾಗಿ ಬೆಳೆಯುವ ಒಂದು ಬಗೆಯ ಮುಳ್ಳಿನ ಗಿಡ,–ಕಂಟಿ : (ಕ). [ ? ]

**ಚಳಮಿಳನೆ** (ಅ). ಚಕಚಕನೆ ; ಮಿರಮಿರನೆ: 'ತಾನೆ ಹೂ, ಹಕ್ಕಿ,'ಹೆಣ್ಣು ಕಣ್ಣೆಂದಾಗಿ ನೀಡಿ ಬಾನ್‌ಮಿನಂಗಳಲ್ಲು ಚಳಮಿಳನಾಗಿ ಅಗ ಬಗೆಯ ಮಿಂಚಿತ್ತು ಒಂದೇ ಬಿಂಬ (ಮುಕ್ತಕಂ. ೩೨-೭). [ಚಳಮಿಳ$_0$ + – ಅನೆ$_1$]

**ಚಳಯ$_1$** 'ಚಳೆಯ$_1$' ನೋ.

**ಚಳಯ$_2$**, ಚಳೆಯ$_2$, ಚಾಳೆಯಂ, ಛಳೆಯ$_2$ (ನಾ). ೧. ಲಗುಬಗೆ ; ವೇಗ ; ಶೀಘ್ರತೆ : ಕಟ್ಟಾಯತನಾಗಿ ಚಳಯದಿಂ ಪೊಜಮಟ್ಟಂ (ಅನಂಪು. ೧೦-೫೬) ; ಚಳಯದಲಿ ತರಿಸಿದನು ಸಂಭಾರವನು ತವಕದಲಿ (ಶಾಶಿರಾ. ೦-೫೮). ೨. ಚಲನ ; ಗತಿ : ಸುಳುಹಿನ ಸೂಕ್ಷ್ಮದ ತಿಳುಹಿನ ಚಳಯವ ತಾಳ್ದಿಡೆಯ ಬಲ್ಲರೆ ಬಲ್ಲರೆಂಬೆ (ಮೋಳಿಮಾ. ೦೦೩-೪೦೨).

**ಚಳೆಯ$_1$:** ೧. ಪಟನೀರಿಂದಂ ಮರ್ದಿಸಿ ಚಳೆಯ[ಪಾಠಾಂ. ವಳಯ]ದೊಳಂ ಪೂಸೆ (ಖಮದ. ೧೧-೬೮) ; ಚಳೆಯದಿಂ ಸೂತನವನಿವನ ತರಲಾಲಯಕೆ (ನೀಲಂಠ. ೪೦). **ಚಾಳೆಯ:** ೩. ಕುಪ್ಪಳಿಸುತ್ತ ಸಾಗುವ ಒಂದು ರೀತಿಯ ಚಲನ ಕ್ರಮ: "ಚಾ [ಪಾಠಾಂ. ಜಾ] ಳೆಯಂ ಗ[ಪಾಠಾಂ. ದ]ತಿ ಲಂಘನಂ" (ಮಂಗರಾ. ೨೫-೯). ೪. ಕುಸ್ತಿಯಲ್ಲಿ ಅಥವಾ ಕಾಳಗದಲ್ಲಿ ಶತ್ರುವನ್ನು ಹಿಡಿಯಲು ಹೊಂಚು ಹಾಕುತ್ತಾ ವೇಗವಾಗಿ ಸಂಚರಿಸುವ ಕ್ರಮ : ಕಳಾಸ ಚಾಳೆಯ ಮಂಡಿಸೀರಣಂ ಹಜ್ಜೆಯಕ್ಕಂ (ಮಂಗರಾ. ೮೮-೩೮) ; ಶಕ್ತಿ ಮೊದಲಾದ ಕೈದುಗಳೊಳು ಕೇಣಮಿಲ್ಲದೆ ಚಾರಿ ಚಳಕ ಚಾಳೆಯ ಚದುರ್ಪಾಣಿ ಲಾಘವ ಪಂಥ ಪಾಡುಗಳನರಿದು ಬಿನ್ನಾಣದಿಂ ಗಾಯಗಾಣಿಸಿದರತಿಬಲರು (ಜೈಮಿಭಾ. ೨೨-೬). ೫. [ಸಂಗೀತ] ಸ್ವರ ವಿನ್ಯಾಸ ಕ್ರಮ : ಗತಿ ಗಮಕ ಗಹಗಹಿಕೆ ತಿರುಪು ಚಾಳೆಯ ಕೊಂಕು ಜತಿ ಜೋಕೆ ಮಾರ್ಗವಣೆ . . . ನುತ ಶುದ್ಧ ಸಾಳಂಗ ಸಂಕೀರ್ಣಮಂ ಯಥೋಚಿತ ತಾರ ಮಧುರಮಂದ್ರಂಗಳಿಂ ಹಾಡಿ ಭೂಪತಿಯ ದುಗುಡವನು ತೊಳೆದರು (ಹದಕಾ. ೭-೬) ; ಗಹಗಹಿಕೆವಡೆದ ವಹಣಿಯ . . . ಮಹ ಚಾಳೆಯದಲ್ಲಿ ಮೂರ್ತಿವಡೆದುದು ರಾಗಂ (ಯಶೋಚ. ೨-೨೯). ೬. [ನಾಟ್ಯ] ನೃತ್ಯದಲ್ಲಿ ಹೆಜ್ಜೆಯಿಡುವ ಕ್ರಮ: ಪಯ ಪಾಡು ನಿಚ್ಚವಣೆ ಚಾಳೆಯಮುಲ್ಲಾಸಂ ತಿರುಂಪು ತಡವಿತ್ರಡಮುನ್ನಯನವಿಶೇಷಂ ಡಿಳ್ಳಾಯಿಯ ಉಳಿಪುದಿದುಸುರಮೆಸೆವಿನಂ ನರ್ತಿಸಿದರ್ (ಧರ್ಮಚ. ೨-೨೬); ತೋಳ ನೀಡಿದಳು ಮನ್ಮಥನೊಚ್ಚಿಯಿಂದುರ್ಚಿ ಬಾಳ ನೀಡಿದನೊಯೆಂಬಂತೆ ಚಾಳೆಯದೊಳು ಹೊಳೆದಳು ರಾಜಸುತರೆದೆ ಹೋಳಾಗುವಂತೆ ಹೊಮ್ಮಿಚಿದು (ಭರತ. ೦೨-೬೬); ಅತಿ ಸೂಳಿಯಲಿ ಚಾಳೆಯವಾಗಿ ತಿರುಹಿದಳು(ಉತ್ತರಾ. ೨೭-೦೮). **ಛಳೆಯ:** ೧.ಛಳೆಯದಲಿ ಬರಹೇಳು ನಿನ್ನೀ ತಲೆಯೊಡೆಯನಹ ವಿಷ್ಣುವನು (ನಿಥಾಗ. ೭-೭-೦೦). [ <ಪ್ರಾ. ಚಲಿಅ. / ಸಂ. ಚಲಿತ ]

**ಚಳಯಂಗುಡು** 'ಚಳೆಯಂಗೊಡು' ನೋ.

**ಚಳಯಂಗೊಡು** 'ಚಳೆಯಂಗೊಡು' ನೋ.

**ಚಳಯಂಬೆಜು** (ಕ್ರಿ). ಜಲಸೇಚನವನ್ನು ಪಡೆ ; ಸಿಂಪಣೆಯನ್ನು ಪಡೆ : ಕ್ಷಿತಿತಳಂ ಸದ್ಭಾಗದಿಂದೆಂಬಿನಂ ಘನಕಾಶ್ಮೀರದ ನೀರಿನಿಂದೆ ಚಳಯಂ ಬೆತ್ತತ್ತಲುಂ . . . ಮಾಡಿತ್ತು ಸಂತೋಷಮಂ (ವರ್ಧಪು. ೦೩-೭೫).
[ ಚಳಯ$_1$ (<ಚಳೆಯ$_1$) + ಪೆಜು$_1$ ]

**ಚಳಯಗೊಡು** 'ಚಳೆಯಂಗೊಡು' ನೋ.

**ಚಳಯಿಸು** 'ಚಲಿಸು' ನೋ.

**ಚಳವಳ, ಚಳವಳಿ, ಚಳಂವಳಿ** (ನಾ). ೧. ಚಲನೆ ; ಅಲ್ಲಾಡುವಿಕೆ ; ಜರಗುವಿಕೆ. 'ಚಳವಳಿಸು' ಪರಾ.೨. ಚಟುವಟಿಕೆಯಿಂದ ನಡೆಸುವ ಸಾಮಾಜಿಕ ವಿಡಾಯ; ಸಾಮೂಹಿಕ ಕ್ಷೋಭೆ ; ಯಾವುದಾದರೂ ಒಂದು ಪದ್ಧತಿ, ಕ್ರಮ ಅಥವಾ ಕಾನೂನಿನ ವಿಷಯವಾಗಿ ನಡೆಸುವ ಸಾಮೂಹಿಕ ಆಂದೋಲನ: ನನ್ನ ಮಿತ್ರರ ಪ್ರೀತಿಯ ಚಳವಳಕ್ಕಾದರೋ ಇದೇ ಒಂದು ನೆವವಾಯಿತು (ಜೀವನಾ. ೯) ; ರಾಷ್ಟ್ರೀಯ ಚಳವಳದಲ್ಲಿ ಸೇರಿಕೊಂಡು ತ್ಯಾಗಬುದ್ಧಿಯಿಂದ ದೇಶಸೇವೆ ಮಾಡಿದ ವೀರವ್ಯಕ್ತಿ ಅವರು (ರಾಜಪ. ೨೭) ; ಬ್ರಿಟಿಷರ ಕಾಲದಲ್ಲಿ ನಾಟ್ಯಕಲೆಯನ್ನೆ ಬಹಿಷ್ಕರಿಸಬೇಕೆಂದು ಚಳವಳವೆದ್ದಿತ್ತು (ಭಾರದ. ೫೫೦). **ಚಳವಳಿ :** ೨. ಸ್ವದೇಶಿ ಚಳವಳಿಯ ಸಮಯದಲ್ಲಿ . . . ತಂದೆಯವರು ತಮ್ಮ ನೌಕರಿಯನ್ನೂ ಬಿಡುವ ಪ್ರಸಂಗ ಬಂದಿದ್ದು (ಭಾರತಿ. ೨) ; ಕರನಿರಾಕರಣೆಯ ಚಳವಳಿಯ ಸಮಯದಲ್ಲಿ . . . ಅಲ್ಲಿ ಇದ್ದೆ (ಬದುಕು. ೧೦). **ಚಳುವಳಿ :** ೨. ಇವರು ಹೂಡಿದ ಚಳುವಳಿ ಯುರೋಪಿನ ಬೌದ್ಧಿಕವಿಕಾಸವನ್ನು ತ್ವರೆಗೊಳಿಸಿತು

(ಕನ್ನಸಂ. ೨೨); ಸ್ವಾತಂತ್ರ್ಯದ ಚಳುವಳಿ ತೀವ್ರವಾಯಿತು (ಭಾರದ. ೪೨೮); ಕ್ಷಾಮನಿವಾರಣೆಗೆ . . . ತಿಲಕರು ಚಳುವಳಿಯನ್ನ ಹೂಡಿದರು (ಸ್ವಾವೀರ. ೩೯); ಚಳುವಳಿ ನಿಂತಿತ್ತು, ಕಾಲೇಜು ತೆರದಿತ್ತು (ಇಂಜಾಪ. ೩೯-೮೨).
[ ←ಮರಾ. ಚಳವಳ ]

**ಚಳವಳಿ** 'ಚಳವಳ' ನೋ.

**ಚಳವಳಿಖೋರ** (ನಾ). ಚಳವಳಿ ಮಾಡುವವನು ; ಚಳವಳಿ ಮಾಡುವ ಸ್ವಭಾವದವನು: ಈ ಚಳವಳಿಖೋರ ಮಂದೀ ಮನಸೂ ಬಲೇ ಚಂಚಲ (ತಿಡುಗು. ೧೨). [ ಚಳವಳಿ + – ಖೋರ(<–ಕೋರ್)$_3$ ]

**ಚಳವಳಿಸು**, ಚಳಬಳಿಸು (ಕ್ರಿ). ೧. ಅಲುಗಾಡು ; ಅಲ್ಲಾಡು ; ಚಲಿಸು : ಅಳವಳಿಸಂ ಬೆಬ್ಬಳಿಸಂ ಕಳವಳಿಸಂ ಕನಲನೊನಲನಳ್ಕಂ ಬಳ್ಕಂ ಚಳವಳಿಸಂ ಚಪ್ಪರಿಸಂ ತಳವಳಿಸಂ ಬೇಸಟಿಯ್ದಿ ಬೆಳ್ಮೊಗದಿನಿರಂ (ಅಜಿಪು. ೩-೯೦); ಕೌತುಕವಿದೇನೆಂದು ಚಳವಳಿಸುತಿರಲೆಲ್ಲರು(ಜಿಸಮು. ೩೦-೩೯). **ಚಳಬಳಿಸು** : ೨. [ನಾಟ್ಯ] ನೃತ್ಯಭಂಗಿಯಂನ್ನು ತೋರು: ತಾಳದಲಿ ತರಹರಿಸಿ ಮೆಲ್ಲನೆ ಮೇಳದಲಿ ಮ್ಯನಿಗುರಿ ಕರ ಸಂಚಾಳಿಯಲಿ ಚಳಬಳಿಸಿ ತಿರುಪಿನ ಮಡುಪಿನಲಿ ಮಣಿದು . . . ವಿನುತ ಮರಾಳಗತಿಯಲಿ ಗಮಕಿಸುತವೊಪ್ಪಿರ್ದಳಾ ಮಾಯಿ (ಪ್ರಭುಲೀ. ४-३೭). [ ಚಳವಳ + – ಇಸು$_3$ ]

**ಚಳಾಯ** (ನಾ). ಸಾಗಾಣಿಕೆಯ ಸುಂಕ ; ಸ್ಥಳದಿಂದ ಸ್ಥಳಕ್ಕೆ ಸಾಗಿಸುವ ವಸ್ತುಗಳ ಮೇಲೆ ಸಾಗಣೆಗಾಗಿ ಹೇರುವ ಸುಂಕ : ಉಳಿದ ಶೇಷವುಂ ಚಳಾಯವುಂ ಬಿಟ್ಟು (ಎಕ. VI, ತರೀಕ. ೨೦-೨೭ ; 1185); ಆರು ವರ್ಷಗಳ ಹಿಂದೆ ದಾಯದರೆ ಎಲ್ಲದರ ಜತೆಗೆ ಚಳಾಯವನ್ನೂ ಘಟಿಕಾಸ್ಥಾನಕ್ಕೆ ಮಾಯಿಕೊಡಲಾಯಿತು (ಸವತಿ. ೨೦). [ ಚಳಿ$_2$(=ಚಲ್$_2$) + ಆಯ$_7$ ]

**ಚಳಿ**$_1$, ಸಳಿ$_1$ (ಕ್ರಿ). ಚಳಿತು, ಸಳಿತು (ಭೂತನ್ಯೂ) . ೧. ಪ್ರಭಾವ ಕಡಮೆಯಾಗು ; ಸೆಡೆ ; ಹಿಂದೆಗೆ ; ಕುಗ್ಗು ; "ಚಳಿ-ವಿಗತಪ್ರಭಾವೇ (ಶಕ್ತಿಗುಂದು), ಶೀತೇ ಚ " (ಶಮಧಾ) ; ಕಳ್ದ ಕಸವರವಂನೆಲ್ಲಮನೇಗೆಯ್ದು ಯೆಂದು ಬೆಸಗೊಂಡೊಡನಿತುಮಿರ್ದುವಯ್ನಾಸಿರಮುಜುಸಾಸಿರ ದೀನಾರಮನ್ನ ಸೂಳೆಗೆ ಬಿಯಮಾದುದುಳಿದುವೆಲ್ಲ[ಂ] ವಣ್ಣ[ಂ] ಚಳಿಯದಿರ್ದುದೆಂದೊಡೆ (ವಡ್ಡಾರಾ. ೧೨೩-೨೩) ; ತುಂಗಕುಚದ್ವಯ ಶೈಲದುರ್ಗಮಂ ಚಳಿತ[ಪಾಠಾಂ. ತಳೆದ]ರ್ದೇಳಿದಂಗಜನುಂ (ಗದಾಯು. ೮-೩೯) ; ಸುನಂದೆಯ ನುಡಿಗೆ ಚಂಡಶಾಸನನೇವೈಸಿ ಮುಳಿಯದೆ ಲಜ್ಜೆಯಿಂ ಚಳಿಯದೆ ಮತ್ತುಮಿಂತೆಂದಂ (ಅನಂಪು. ೧೦-೯೦ಪ); ಚಳಿಯ ದಾಹಪಕಾಂಕ್ಷೆ ಯಕ್ಷರಿಗೆಲೆಲೆ ನೋಡಾ (ಉತ್ತರಾ. ೭-೫೦) ; ಬವರಿವರಿವ ಚಮ್ಮಟಗೆಗೆ ಚಳಿಯದ ಕಡಿಯಾಣಮಂ ಕೈಗೊಳದ ಬಗೆಯುರ್ಕಿ ಬಗೆದಂತೆ ಕಂಡು (ರಾಜಶೇ. ೭-೧೧ ವ) ; ನಿಮ್ಮಾ ಬಲ್ಮೆಯ ಜಂಕಣೆಗಂ ಕಣೆಗಂ ಚಳಿತರ್ (ರಾಮಾಶ್ವ. ೧೨೦-೨೭). ೨. ಬಳಲು ; **ಸೋಲು** ; **ಸೋತುಹೋಗು** : ಕೆಯ್ ಬೆಚ್ಚರಿಕೆಯ ಚಲದಿಂ ಕೆಯ್ ಚಳಿವಿನಮಿಱಿದರೆರಡು ಬಲದೊಳ ಮದಟರ್ (ಪಂಪಭಾ. ೦೩-೩೧) ; ಖಿಳಿಲ್ ಖಿಳಿಲ್ ತೊಪ್ಪು ತೊಪ್ಪು ಛಳಿಲ್ ಛಳಿಲೆಂದು ಕೊಳ್ವ ಬಡಿಗಂ ಚಳಿತು (ಧರ್ಮಾಮೃ. ೬-೮೮) ; ಬಳಸಿ ತೊಟಲ್ದೆನ್ನಡಿಗಳ್ ಚಳಿತುವು ಕಣ್ ನಂದಿ ಬಂದವುದು (ಲೀಲಾವ. ೧೪-೭೨) ; ಆವ ಪರಿಯೊಳಾದೊಡೆಯುಂ ಚಳಿಯದೆ ಮತ್ತೆ ಶ್ರೀವರನೊಳು ತೊಳಲಿದರೆ ದೇವದೇವನ ಕಾಣಲಹುದು (ಕೃಷ್ಣಗೋ. ೨-೯೯). **ಸಳಿ**$_1$ : ೨. ತಲೆ ಸಳಿತು ಕೈಮುಟಿದರಂತೆ ಯೆಸುವಾಳುಗಳ್ ನಿಲೆ ಕಂಡು (ಸಮ್ಯಕ್ತಾ. ೮-೩೮). [ ದೇ.॥ ತಮಿ. ತುಳು. ಚಲಿ ]

**ಚಳಿ**$_2$, ಛಳಿ, ಸಳಿ$_2$ (ನಾ). ೧. ಶೀತ ; ಶೈತ್ಯ ; ಥಂಡಿ : "ಚಳಿ–ವಿಗತಪ್ರಭಾವೇ(ಶಕ್ತಿಗುಂದು), ಶೀತೇ ಚ " (ಶಮಧಾ); ಚಳಿ ಬಿಸುಪು ಬಿಸುಪು ಚಳಿಯನೆ ಬಳೆದುದು ಹಿಮರಾಜತೇಜಮಿಾ ಜಗದೆಡೆಯೊಳ್(ಗಿರಿಕ. ೯-೭೪); ಗಿರಿಯ ಶೃಂಗಾಗ್ರದೆ ಚಳಿ ಮಳೆ ಬಿಸಿಲೆನ್ನದುರುತರ ಯೋಗಮಾರ್ಗದಲ್ಲಿ . . . ಯೋಗೀಶ್ವರರಿರುತಿಹರು (ಕಂಸವಿ. ೨-೩೦) ; ಅಲ್ಲಿ ಕೊರಗೆಂಬುದಿಲ್ಲಮ್ಮ, ಅಲ್ಲಿ ಚಳಿ ಭಿದ್ರವಿಲ್ಲಮ್ಮ (ಇಂಗೀತ. ೮೯-೭). ೨. **ಹಿಮ** ; **ಮಂಜು**. 'ಚಳಿವೆಟ್ಟು' ಪರಾ. ೩. ಚಳಿಜ್ವರದಲ್ಲಿ ಬರುವ ಮೈನಡುಕ : ಅವನಿಗೆ ಚಳಿ ಬಂದಿತ್ತು (ರೂಢಿ). **ಛಳಿ** : ೧. 'ಛಳಿಗಾಲ' ಪರಾ. ೩. 'ಛಳಿಜ್ವರ' ಪರಾ. **ಸಳಿ**$_2$ : ೧. ಬೆಂಕಿಗೆ ಸಳಿ ಬಂದು ಉದಕವ ಕಾಯಲಾಗಿ ಹಿಮ ಹಿಂಗಿ ಜ್ವರ ಬಂದಿತ್ತು (ಸಗಬೊ. ೬೭) ; ಏನು ಕಾರಣವಾಗಿ ನೀನಿಂತು ಮೌನದಲ್ಲಿ ಮಂಡಿಸಿರ್ಪೆ . . . ಸಳಿ ಮಳೆ ಘಾಳಿ ಬಿಸಿಲ ಬೇನೆ ಬಾಯಾಱಿಕೆ ಪಸಿವು ಮುಂತಾದ ವೇದನೆಗಳೊಂದುಂ ಗಣನೆಗೆ ತಾರದೆ (ಭಾರಶಾಂ.೧೪-೭೦); ಹರಿಯುಮಿಾ ಹಿಮುಕಂಜಿ ಕಲಶಾಬ್ಧಿಯಂ ಬಿಟ್ಟು . . . ಉರುವ ಸಳಿ ತೊಲಗದಿರಲೋಡಿಬಂದಾಗಸದ ತರಣಿಮಂಡಲ ಮಧ್ಯದೊಳ್ಳನೆಯ ಮಾಡಿಕೊಂಡಿರುವನೀ ಹೈಮಂತ ಶಕ್ತಿಯಂ ಬಣ್ಣಿಸಲ್ಕಾರಳವೊ ಮೂಜಗದೊಳು (ಅರ್ಜಾವಿ. ೧^-೨೯).
[ ದೇ.॥ ತಮಿ. ಮಲ. ಚಳಿ ; ತುಳು. ಚಳಿ, ಚಲಿ, ಸಲಿ ; ತೆಲು. ಚಲಿ ]

**ಚಳಿ**$_3$ ' ತಳಿ$_4$ ' ನೋ.

**ಚಳಿಕ** (ನಾ). ಲವಲವಿಕೆ : "ತವಕ, ಲವಲವಿಕೆ, ಚಪಲ, ಅಸವಸ, ಚಳಿಕ" (ಕಂನುಹು. ೮೪). [ ? ]

**ಚಳಿಕಿಗೆ** ' ಚಳಕಿಗೆ ' ನೋ.

**ಚಳಿಕೆ**$_1$ 'ಚಳಕೆ' ನೋ.

**ಚಳಿಕೆ**$_2$ (ನಾ). ಇಬ್ಬನಿ ; ಹಿಮ : ಪರೆದುದು ಚಳಿಕೆ ರವಿಯ ಕರಂಗಳು ಪರಕರಸಿದವೆಣ್ದೆಸೆಯ ಹರುಷವಾದುದು ಕೋಕಮಿಥುನ ಕೋಕನದ ಕೊರಗೆ ಚಕೋರ ಕೈರವವು (ಶರ್ಕಕಾ. ४-೭೨). [ ? ]

**ಚಳಿಕೊಡು** 'ಚಳಿಗೊಡು' ನೋ.

**ಚಳಿಕ್ಕ** ' ಚಳಂಕ ' ನೋ.

**ಚಳಿಗದಿರ್** (ನಾ). ತಂಪಾದ ಕಿರಣ; ಹಿಮಕಿರಣ: ಶಶಿಯ ಚಳಿಗದಿರ್ಗಳ ಕುಳಿರ್‌ಕಾಂತಿ (ಶ್ರೀರಾಮಾ. ४೨೦-೭).
[ ಚಳಿ$_2$ + ಕದಿರ್$_2$ ]

**ಚಳಿಗದಿರ**, ಸಳಿಗದಿರ (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : "ಸವಿಗಡಲಣುಗಂ . . . ನೈದಿಲ್ಗೆಳೆಯ ಚಂದ ಚಳಿಗದಿರ ಕತ್ತಲೆವಣೆಯ ಶಶಿಯ ನಾಮಂ" (ಕಬ್ಬಿಕ್ಕೆ. ४೩); "ಚಳಿಗದಿರಂ ಕಟ್ಟಲೆವಣಿ ಕುಳಿರ್ವೆಳಗನು . . . ತಣ್ಗದಿರ ಮಂಜುಗೈಯಂ ಚಂದಂ" (ಕವಿಕಂ. ४೩). **ಸಳಿಗದಿರ** : ಸಳಿಗದಿರನ ಕಳಂಕನುದ್ದುವವೊಲು ತಿಲಕವ ತೊಡೆದು (ಜ್ಞಾನಸ. ४೩-೮೦).
[ ಚಳಿಗದಿರ್ + – ಅ$_7$ ]

**ಚಳಿಗದಿರ್ಗಲ್ಲು** (ನಾ). ಚಂದ್ರಕಾಂತಶಿಲೆ : ಎಕ್ಕಲಂ ಚಳಿಗದಿರ್ಗಲ್ಲಿನೊಳು ದಾಡೆಯಂ ಮಸೆದು ಪದಗೋಳಿಸುವನಿತಕ್ಕೆ (ರಾಘಚ. ೧೭-೭೨).
[ ಚಳಿಗದಿರ್ + ಕಲ್ಲು(<ಕಲ್$_3$) ]

**ಚಳಿಗಾಲ**, ಛಳಿಗಾಲ (ನಾ). ಚಳಿ ಹೆಚ್ಚಾಗಿರುವ ಕಾಲ ; ಮಾಗಿ ; ಹೇಮಂತ ಶಿಶಿರಋತುಗಳ ಸಮಯ : ಹರಿವ ತೊಱೆಗಳ ನಡುವೆ ಧೃತಿಯೊಸರಿಸದುಱಿ ಚಳಿಗಾಲವೆಲ್ಲಂ ನಿರುತದಿಂ ಕೊರಳುದ್ದ ನೀರೊಳು ನಿಂದು (ಬಸಪು. ೨-೧೨) ; ಬಿಸಿಲು ಮಳೆ ಚಳಿಗಾಲವಿವು ಸಂಧಿಸಿದವೇ ರಘುಪತಿಯನೀಯಾಯಸವ ನೋಡಲಿಕಿದ್ದೆವೇ ಶಿವಶಿವ ಮಹಾದೇವ (ತೊರರಾ. ೬-೨-೭). **ಛಳಿಗಾಲ** : ಛಳಿಗಾಲದಲ್ಲಿ ಅವು ಒಂದೂವರೆ ಅಡಿ ಆಳದವರೆಗೂ ಹೋಗುತ್ತವೆ (ಕೀಟಬ. ೩).
[ ಚಳಿ$_2$ + ಕಾಲ ]

**ಚಳಿಗಿರಿ** (ನಾ). ಹಿಮಾಲಯ ಪರ್ವತ; ಹಿಮಾಚಲ: ಒಂದು ದಿನ ಚಳಿಗಿರಿಯ [ಪಾಠಾಂ. ವೆಟ್ಟ] ದೆಸೆಗೆ ಚೆಲ್ಲಲು ನಿತ್ಯದಂತಲ್ಲದತ್ತ ನೀ ಬಿಸುಟ ಪರಿಯ ತಿಳುಹೆನಲ್ಕೆ (ಪ್ರಾಥರಾ. ४-೧४). [ ಚಳಿ$_2$ + ಗಿರಿ$_1$ ]

**ಚಳಿಗೊಳ್** (ಕ್ರಿ). ತಣ್ಣಗಾಗು ; ಕಂಗಾಗು ; ತಗ್ಗು : ಕೇಡಿನಲ್ಲಿ ಕಂಗೆಡದೆ ಒಲವು, ಮುಪ್ಪಿನಲ್ಲಿ ಚಳಿಗೊಳದೆ ಗೆಲವು (ಇಂಗೀತ. ೮೩-೧೮).
[ಚಳಿ$_1$ + ಕೊಳ್$_1$]

**ಚಳಿಜ್ವರ, ಛಳಿಜ್ವರ** (ನಾ). ಚಳಿಯೊಡನೆ ಬರುವ ಜ್ವರ ; ಮೈನಡುಕದೊಂದಿಗೆ ಏರುವ ಜ್ವರ ; ಮಲೇರಿಯಂ : ಇವು ಚಳಿಜ್ವರ ಅಥವಾ ಮಲೇರಿಯಾಜ್ವರವನ್ನುಂಟುಮಾಡುತ್ತವೆ (ಪರಜೀ. ೨೭). **ಛಳಿಜ್ವರ :** ಮಂದಾಗ್ನಿಯಲ್ಲಿ, ಛಳಿಜ್ವರದಲ್ಲಿ [ಪಾಠಾಂ. ಛಳಿಯಲ್ಲಿ] . . . ಪವನಕ್ರಿಯೆಯ ಮಾಡಿಸುವುದು (ವೃದ್ಧಸಾ. I, ೩೦) ; ಗರುಗದ ಸೊಪ್ಪಿನಲ್ಲಿ ಒಂದು ಪಾವು ರಸವಂ ಹಿಂಡಿ ಛಳಿಬರುವ ಸಮಯದಲ್ಲಿ ಕೊಡಲು ಛಳಿಜ್ವರಂ ಮಾಣ್ಗುಂ (ಸಕವೈ. ೬೩). [ಚಳಿ$_2$ + ಜ್ವರ]

**ಚಳಿತ$_1$** (ನಾ). ಚಳಿ ; ಶೀತ ; "ಕುಳಿರ್ದುದು" (ಚತುನಿ. ಸ. I, ೩೭).
[ಚಳಿ$_2$ + -ತ$_2$]

**ಚಳಿತ$_2$** 'ಚಲಿತ' ನೋ.

**ಚಳಿನಾಡು** (ನಾ). ಚಳಿ ಹೆಚ್ಚಾಗಿರುವ ನಾಡು ; ಶೀತವಲಯದಲ್ಲಿ ಇರುವ ನಾಡು : (ಸ). [ಚಳಿ$_2$ + ನಾಡು]

**ಚಳಿಯ** 'ಚಳೆಯಂ$_1$' ನೋ.

**ಚಳಿಯಿಸು** 'ಚಲಿಸು' ನೋ.

**ಚಳಿಲ್** (ನಾ). ಒಂದು ಅನುಕರಣ ಶಬ್ದ : ಪೊಸ ಪೂವಿನೊಳ್ ಪೊರೆದು ಪೊಣ್ಮಿದ [ಕ]ಂಪು ಮೊಗಂಗಳಂ ಚಳಿಲ್ಲೆನೆ ಕೊಳೆ ಪೊಯ್ಯೆ ತೀಡಿದುದು ತೆಂಕಣಗಾಳಿ ವಸಂತಮಾಸದೊಳ್ (ಪಂಪಭಾ. ೫-೩೪) ; ಉರ್ಕಂಬುಗಳೆಱಗಿ ರೋಮರೋಮಕ್ಕೆ ನೆಳಲ್ ನೆಕ್ಕು ಚಳಿಲ್ ಚಕ್ಕು ದೊಗಲ್ ದೊಕ್ಕೆನೆ ನಾಂಟಿದುವರಾತಿಭಟರವಯವಮಂ (ಜಗವಿ. ೭-೮೦).

**ಚಳಿಲನೆ** (ಅ). ಒಮ್ಮೆಲೆ ; ಕೂಡಲೆ : ಚಳಿಲನೆ, ಕಿಳಿಲನೆ, ಗಳಗಳನೆ, ಕಿಳಕಿಳನೆ (ಶಬ್ದಾನು. ೧೪೦ ವ್ಯಾಖ್ಯಾ). [ಚಳಿಲ್ + -ಅನೆ$_1$]

**ಚಳಿವೆಟ್ಟ** 'ಛಳಿವೆಟ್ಟು' ನೋ.

**ಚಳಿವೆಟ್ಟಣುಗಿ** (ನಾ). ಹಿಮವಂತನ ಮಗಳು ; ಪಾರ್ವತಿ : ಚಳಿವೆಟ್ಟಣುಗಿಯಾಣ್ಮನ ಭಕ್ತ ಸಂಗನಾದಳವ ನೋಡಲ್ಕೆ . . . ಸೂರ್ಯನುದಯಂಗೈದನಾ ಸಮಯದಿ (ಪ್ರಾಭುಲಿ. ೧೩-೨೯).
[ಚಳಿವೆಟ್ಟು + ಅಣುಗಿ (< ಅಣುಂಗಿ)]

**ಚಳಿವೆಟ್ಟಳಿಯ** (ನಾ). ಹಿಮವಂತನ ಅಳಿಯ ; ಶಿವ : "ಎಲರುಣಿವೆದೆಯಂ ಚಳಿವೆಟ್ಟಳಿಯಂ ಸಸಿದಲೆಯ . . . ಪೇಟ್ವುರ್ ಸ್ಮರಹರಂಗೆ ನಾಮವಿದೆನುತುಂ" (ಕವಿಕಂ. ೦೫). [ಚಳಿವೆಟ್ಟು + ಅಳಿಯ]

**ಚಳಿವೆಟ್ಟಾಣ್ಮ** (ನಾ). ಹಿಮಗಿರಿಯ ಒಡೆಯ ; ಹಿಮವಂತ ; ಚಳಿವೆಟ್ಟಾಣ್ಮನ ಪುತ್ರಿ ಸುರ್ಕೆ ಚಳಿಯಿಂ (ರಾಜಶೇ. ೯-೧೭).
[ಚಳಿವೆಟ್ಟು + ಆಣ್ಮ (< ಆಳ್ಮ)]

**ಚಳಿವೆಟ್ಟು, ಚಳಿವೆಟ್ಟ, ಛಳಿವೆಟ್ಟು** (ನಾ). ಹಿಮಗಿರಿ ; ಹಿಮಾಚಲ : "ಕುಳಿರ್ವೆಟ್ಟೈಕಿಲ್ವೆಟ್ಟುಂ ಚಳಿವೆಟ್ಟು ಹಿಮಾದ್ರಿ" (ಚತುನಿ. ೧೦) ; ಮನ್ಮಥನು ತಳಿರ್‌ರಥವನೇಱಿ ಮುಂದೆ ಪೋಗಲ್ಕಾ ಚಳಿವೆಟ್ಟು ಕಣ್ಗೆ ರಂಜಿಸಿತು (ಮೋಹತ. ೬-೪೫). **ಚಳಿವೆಟ್ಟ :** ಚಳಿವೆಟ್ಟದಳಿಯ ಕೇಳುಳಿದ ಮಾತೇನೀಗ (ಮಲ್ಲಾರಿ. ೬-೪). **ಛಳಿವೆಟ್ಟು :** ಛಳಿವೆಟ್ಟನಿಂದಬ್ಧಿಪರಿಯಂತದವನಿಯು ತದಾಕಾರದಂತೆಸೆವುದು (ನವಮೋ. ೨-೧೮).

**ಚಳಿವೆಟ್ಟುಮಗಳ್** = ಚಳಿವೆಟ್ಟಣುಗಿ : ಚಳಿವೆಟ್ಟುಮಗಳ ನಲ್ಲಂ ಪೇಳ್ದ ಶಾಸ್ತ್ರಂಗಳ್ (ಏಕೋತ್ತ. ೬-೭೮). [ಚಳಿ$_2$ + ಬೆಟ್ಟು$_2$]

**ಚಳಿವೆಱು** (ಕ್ರಿ). ಚಳಿಯನ್ನು ಹೊಂದು ; ಶೀತದಿಂದ ಬಾಧೆಪಡು : ಭೀತಿಯಲಿ ಚಳಿವೆತ್ತು ನಡುಗುವಂದದಿ ಪೇಳ್ದ ರಣದುಮ್ಮಳಿಕೆಯ ಬಹಳ ನಿಷ್ಠುರವ (ಮೋಹತ. ೩೪-೪೫). [ಚಳಿ$_2$ + ಪೆಱು$_1$]

**ಚಳಿಸು$_1$** 'ತಳಿಸಂ$_1$' ನೋ.

**ಚಳಿಸು$_2$** 'ಚಲಿಸಂ' ನೋ.

**ಚಳುಕಿ$_1$** 'ಚಳುಕ್ಯ' ನೋ.

**ಚಳುಕಿ$_2$** (ನಾ). ಒಂದು ಬಗೆಯ ವಿಮಾನಂ : "ಚಳುಕಿಯೆನೆ ಶಿಂಶುಮಾರಂ" (ವಸ್ತುಕೋ. ೨೩-೬). [ ? ]

**ಚಳುಕಿಡು** (ಕ್ರಿ). ನರಗಳ ಮಿಡಿತದಿಂದ ಬೇನೆಯುಂಟಾಗು ; ನರಗಳಲ್ಲಿ ಚುಚ್ಚಿದಂತೆ ನೋವುಂಟಾಗು : ನವಮಾಸ ಪೂರೈಸಲಾ ಸತಿಗೆ ಬಿಡದೊಡನೆ ದಿವದಲ್ಲಿ ಕಾಂಚಿ ಕಟಿ ಮಿಡಿಮಿಡಿದು ಚಳುಕಿಡಲ್ (ಪರಶು. ೩-೪೯). [ಚಳುಕು$_1$ (< ಚಳಕು$_1$) + ಇಡು$_1$]

**ಚಳುಕು$_1$** 'ಚಳಕಂ$_1$' ನೋ.

**ಚಳುಕು$_2$** (ನಾ). (?) : ಅಳರಶರಕೇಳಿಪಂಪಿಂದಲಾಸ್ಯಶ್ರೀಯು ಚಳುಕಿನಿಂ ನೋಳ್ಪರಂತಃಕರಣತುಷ್ಟಿಯಂ ಸುಸೋಪನೇವರ್ಣಿಸುವೆನು (ಜಿನಮು. ೨-೧೨). [ ? ]

**ಚಳುಕ್ಯ, ಚಲಿಕ್ಯ, ಚಳಿಕ್ಯ, ಚಳುಕಿ$_1$, ಚಟಿಕ್ಯ, ಚಾಳೋಕ್ಯ, ಸಳುಕಿ** (ನಾ). = ಚಾಲುಕ್ಯ : ಸತ್ಯಾಶ್ರಯವೆಸರೆಸೆದುದಾ ಚಳುಕ್ಯಾನ್ವಯದೊಳ್ (ಕಇಅ. ೨-೨-೨೦ ; 1058). **ಚಲಿಕ್ಯ :** ಚಲಿಕ್ಯೋ ವ ಲ್ಲ ಭೇ ಶ್ವ ರಃ (ಎಇ. XXVII, ೮-೩ ; 543). **ಚಳಿಕ್ಯ :** ಸಮಜನಿ ನವಮಸ್ತಸ್ಯ ರಾಜ್ಞಶ್ಚಳಿಕ್ಯ ಕ್ಷ್ಮಾಪ (ಎಕ. VII, ಶಿವಮೊ. ೮೩-೧೪ ; 1587). **ಚಳುಕಿ$_1$ :** ಚಳುಕಿ ವಂ ಶೋ ತ್ತ ಮ ರಂ (ಎಇ. XVI, ೩೮-೫ ; 1107). △ **ಚಟಿಕ್ಯ :** ಚಟಿಕ್ಯರನ್ವಯಂ ನೆಗಳೆ ನಗಳ್ತೆಯಂ ತಳೆದು ತಂನಯ ತೇಜದೊಳಾಣೆಯೋಲೆಯುಂಡಿಗೆ ಸಲೆ ಸಾಧ್ಯವಾದ ನೆಲನಂ ತಳೆದಂ ನೃಪಮೇರುತ್ತೈಲಪಂ (ಕಇಅ. ೯೫-೪-೯ ; 12ನೆಯ ಶತ). **ಚಾಳೋಕ್ಯ :** ನನ್ನಿಯಂ ಪೇಳುವೆನರಸ ಕೇಳಿನ್ನು ಚಾಳೋಕ್ಯಾನ್ವಯದವರು ಮುನ್ನ ನಿಕ್ಷೇಪಿಸಿದುದೆಂಬತ್ತೆಂಟು ಕೋಟಿ ಧನ ವಿನ್ನ ಸಿಂಹಾಸನದ ಕೆಳಗಿದೆ (ಬಸವು. ೫-೫೭). **ಸಳುಕಿ :** ವಿದಿತ ಶ್ರೀ ಸಳುಕಿ ರಾಜ್ಯ[ದೊ]ಳ್ (ಸೌಇಇ. XI-1, ೧೪-೧೫ ; 872).
[< ಸಂ. ಚಾಲುಕ್ಯ]

**ಚಳುಪು** (ನಾ). = ಚಳಕು$_1$ : (ಸ). [ ? ]

**ಚಳುಮ** (ನಾ). = ಚಳಕಂ$_1$ : ಯೋನಿಯೋನಿಯಲ್ಲಿ ಭೇದ ಚಳುಮ ರುಜಾ ಇತರ ತೋರದ ನೋವು (ಬಾಹಟೀ. ೨-೦-೭೭ ವ). [ ? ]

**ಚಳುವಳಿ** 'ಚಳವಳ' ನೋ.

**ಚಳೆ$_1$** 'ತಳೆ$_4$' ನೋ.

**ಚಳೆ$_2$** 'ಚೆಲ್ಲ$_1$' ನೋ.

**ಚಳೆ$_3$** 'ಸೆಳೆ$_4$' ನೋ.

**ಚಳೆ$_4$** 'ತಟಿ' ನೋ.

**ಚಳೆ$_5$** (ನಾ). ೧. ಒಂದು ಬಗೆಯ ಬಟ್ಟೆ : ದೇವಾಂಗದ ಚಳೆಯ ಪಟಿಯ ಪಟ್ಟಾವಳಿಯೆಕ್ಕಾರೋಹಣದ ಕಕ್ಕರವಟಿಯಗೆಯ ದುಗುಳದ ಪಾಗುಡಂಗಳಂ . . . ತೊಟ್ಟು (ಮಹಾನೇ. ೯-೪ ವ). ೨. ಚಿಕ್ಕಮಕ್ಕಳನ್ನಾಗಲಿ, ಅಶಕ್ತರನ್ನಾಗಲಿ ಎತ್ತಿಕೊಂಡು ಹೋಗುವುದಕ್ಕಾಗಿ ಬಳಸುವ ಬಟ್ಟೆ ; ಜೋಳಿಗೆ : (ಸ).

**ಚಳೆಕೊಡು** 'ಚಳೆಗೊಡು' ನೋ.

**ಚಳೆಗೊಡು, ಚಳೆಕೊಡಂ, ಚಳಿಕೊಡಂ** (ಕ್ರಿ). ಸಿಂಪಡಿಸು ; ಚಿಮುಕಿಸು ; ತಳಿಸು : ಕೇಸರಿಪೀಠವ ಪಾಸಿ ಕಸ್ತೂರಿನೀರ ಪೋಸರಿಸದೆ ಚಳೆಗೊಡುವ (ಅನಂಚ. ೫-೫೩) ; ಕಸ್ತೂರಿಯಾ ಜಲದಿಂದೆ ಚಳೆಗೊಟ್ಟು (ನವಮೋ. ೦೦-೭೮) ; ಸಾರಣೆಯನೇ ಹಾಕಿ ಚಳೆಗೊಟ್ಟು ರಂಗವಲ್ಲಿಯನಿಟ್ಟು (ಮಲ್ಲಚ. ೨-೦೫). **ಚಳೆಕೊಡು :** ಅಂಗಳ ಸಾರಿಸಿ ಗಂಧದ ಚಳೆಕೊಟ್ಟು (ಲೋಕಗೀ. ೨೦೫). **ಚಳೆಕೊಡು :** (ಸ). [ಚಳೆ$_1$ (< ತಳೆ$_4$) + ಕೊಡು$_1$]

**ಚಳೆಯು$_1$**, ಚಳಯು$_1$, ಚಳಿಯು, ಛಳಯು, ಛಳೆಯು$_1$ (ನಾ). (ನೆಲವನ್ನು ಗುಡಿಸಿದ ಬಳಿಕ)ನೀರು ಈಯುವುದು,-ಸಿಂಪಿಸುವುದು,-ಚಿಮುಕಿಸುವುದು : "ಚಳೆಯ ಮನೆ ನೀರ ತಳಿದುದು" (ಛಾರನಿ. ೧೦); "ಚಳೆಯುಮುಮನೆ ಸಿಂಪಿಸುವುದಕಕ್ಕುಂ" (ಕವಿಕಾಂ. ೨೪೬); ಎಳೆದಳಿರ ಹಸೆ ಪನ್ನೀರ ಚಳೆಯ ಮೆಟಿದವಾ ಶೈತ್ಯಶಾಲೆಯೊಳಗೆ (ಹ ಚ ಕಾ. ೩-೪೫); ಕತ್ತುರಿನೀರ ಚಳೆಯದೊಳಂ (ಪುಷ್ಪಪು. ೮-೫೦ ವ); ಚಂದ್ರಕಾಂತದ ಜಲದ ಚಳೆಯುಮಂ ಕೊಟ್ಟು (ಸೌಂದಪು. ೮-೨೦); ಚಳೆಯದಿಂ ಚೆಲ್ಲಿದ ಚಂದನರಸದಿಂದ ಪೊಳಲು ಕಣ್ಗೆಸೆದುದು (ಕುಮಾರಾ. ೪೦-೬೬); ಮೇಗಣಂದುದಿರ್ವ ಕಮ್ಮಲರ್ಸರಿಯ ಪನ್ನೀರ್ಚಳೆಯದ . . . ಅಗಜೆಯಿರ್ಪೆಡೆ ಮೆಟಿದುದು (ನಂದಿಮೂ. ೭-೩). **ಚಳೆಯು$_1$** : "ಜಲಸೇಚನಂ ಚಳಯಮೆನಿಕುಂ" (ಶಶರ. ೦೨೩): ಪುಷ್ಪರಸದ ಚಳಯಂಗಳೆನೆ ಮ್ಯಸಿರಿಯನಾಂತ ತದ್ವನದೇವಿ (ಸೌಂದಪು. ೧೮-೩೨); ಪನಿನೀರೊಳೊದವಿದ ಚಳಯವೊಪ್ಪಿದುದು (ವರ್ಧಚ. ೫-೪೩). **ಚಳಿಯು**: ಬೀದಿಬೀದಿಯೊಳ್ ಬಡದಿತ್ತ ಪನ್ನೀರ ಚಳಿಯ ವಾಡುವ ಪಾತ್ರದ (ಜಬಪು. ೩೬-೦೭). **ಛಳಯು** : ಅರಳಿದ ಹೂವುಗಳಲ್ಲಿ ಸುರಿವ ಮಕರಂದದಿಂದ ವನಪ್ರದೇಶವೆನುವ ಬೀದಿಯೊಳ್ ಛಳಯಮಂ ಕೊಟ್ಟು (ಸೌಗಂಧಿ. ೪೭೨-೦). **ಛಳೆಯು$_1$**: ಬಾವನ್ನಮಂ ಕದಡಿ ಸಿಂಪಿಸುವ ಛಳೆಯದಿಂ (ನಳಚಂ. ೧೯೫); ಹರುಷದಿಂ ಗುಡಿಗಟ್ಟಿ ವೀಥಿವೀಥಿಯಲಿ ಛಳೆಯದಿ ರಂಗವಲಿಗಳಿಂದ ವಿರಚಿಸಲು (ಲಶಿಚಂ. ೩೬-೫೦); ಪನ್ನೀರ ಬಾವನ್ನದೆಸೆವ ಛಳೆಯಂ ಮೃಗಮದೋನ್ನತದ ಸಾರಣೆಯು (ರಾಶಶ. ೪-೫). [ ಚಳಿ$_1$ (<ತಳಿ$_4$) + - ಅ$_6$ ]

**ಚಳೆಯು$_2$** 'ಚಳಯು$_2$' ನೋ.

**ಚಳೆಯು$_3$** 'ತಟ' ನೋ.

**ಚಳೆಯುಂಗುಡು** 'ಚಳೆಯುಂಗೊಡು' ನೋ.

**ಚಳೆಯುಂಗೆಯ್** (ಕ್ರಿ).=ಚಳೆಗೊಡು: ತಂಗೆ ತಲೆವೀದಿಯಂ ತೊಡೆಯದಿರು ಕೂಡೆ ಚಳೆಯಂಗೆಯ್ದಲಂಕರಿಸು (ಹಚಕಾ. ೪-೨೪). [ಚಳೆಯು$_1$ + ಕೆಯ್$_1$]

**ಚಳೆಯುಂಗೊಡು**, ಚಳಯುಂಗುಡು, ಚಳಯುಂಗೊಡು, ಚಳಯುಗೊಡು, ಛಳೆಯುಂಗುಡು, ಛಳೆಯುಂಗೊಡು(ಕ್ರಿ). = ಚಳೆಗೊಡು : ಚಳೆಯಂಗೊಡುವವೋಲೆಸೆದುದಾ ಚಟುಕುವನಿ ಸಿದ್ಧಪತಿ ನಲಿಯಲು (ಸಿದ್ಧರಾ. ೩-೩೨); ಕೇರಿಕೇರಿಯೊಳು ಪನ್ನೀರಿನಿಂದರರೆ ಚಳಿ [ಪಾಠಾಂ. ಳೆ] ಯಂಗೊಟ್ಟು (ಸಿದ್ಧೇಪು. ೧೯-೧೮). **ಚಳಯುಂಗುಡು** : ಚಲ್ಲಂ ಚಳ [ಪಾಠಾಂ. ಳೆ]ಯುಂಗುಡುತ್ತುಮಿರೆ ರಾಗರಸಾಮೃತದಿಂ (ಅರ್ಧನೇ. ೨-೯೫); ಘುಸೃಣರಸಂಗಳಿಂ . . . ಚಳಯುಂಗುಡುತಿರ್ಪ ಮೌಕ್ತಿಕಪ್ರಸರದೆ ಕೂಡೆ ರಂಗವಲಿಯಂ ನಲಿದಿಕ್ಕುತುಂ (ವರ್ಧಪು. ೦೩-೭೪). **ಚಳಯುಂಗೊಡು** : ಅನಿಮಿಷವಧು ಕತ್ತುರಿಗದಡಿನ ಚಳಯಂಗೊಟ್ಟಳ್ (ಅನಂಪು. ೬-೪೩). **ಚಳಯುಗೊಡು**: ಚಳಯಗೊಟ್ಟುದು ಲೇಸು ಕುಸುಮಾಜಿ ಹೊಸರಂಗವಲಿ ಲೇಸು ಕುಸುಮಾಂಗಿ (ಛರಚ. ೧೦-೯). **ಛಳೆಯುಂಗುಡು** : ಜೋಳಿಸುವ ಲಾಲಾಜಲಂ ಖುರಹತಿಯಿಂ ನೆಗೆವ ದೂಳ್ಗೆ ಛಳೆಯುಂಗುಡೆ (ಗಿರಿಶ. ೭-೫೫ ವ); ಘುಸೃಣರಸಂಗಳಿಂದೆ ಛಳೆಯುಂಗುಡುವಂತೆ (ಅನಂಪು. ೧೦-೩೫). **ಛಳೆಯುಂಗೊಡು** : ಪುನುಗು ಜವಾದಿ ಜಲದೀಯಲ್ಲ ಪೊರವಳೆಯಂಗಣದಿ ಛಳೆಯಂಗೊಟ್ಟು (ನವಮೋ. ೨೧-೧೮). [ ಚಳೆಯು$_1$ + ಕೊಡು$_1$ ]

**ಚಳೆಹಾಕು** (ಕ್ರಿ). = ಚಳೆಗೊಡು : ಅಂಗಳಕ್ಕೆಲ್ಲ ಚಳೆಹಾಕಿ ರಂಗವಲ್ಲಿ ಇಟ್ಟಿದ್ದಾರೆ (ರೂಢಿ). [ ಚಳಿ$_1$ (<ತಳಿ$_4$) + ಹಾಕು (<ಪಾಯ್ಕು$_1$) ]

**ಚಳೆಹೊಡೆ** (ಕ್ರಿ).=ಚಳೆಗೊಡು: ಮತ್ತೆ ಕೆಲವರು ಬೀದಿಗಳಿಗೆ ಪನ್ನೀರಿನ ಚಳೆ ಹೊಡೆಯುತ್ತಲಿದ್ದರು (ದೇಯೂನಿ. ೦೫೦).
[ ಚಳಿ$_1$ (<ತಳಿ$_4$) + ಹೊಡೆ$_1$ (<ಪೊಡೆ$_1$) ]

**ಚಳ್ಳ** 'ಸೆಳ್ಳ' ನೋ.

**ಚಳ್ಳಪಿಳ್ಳಿ**, ಚಳ್ಳೆಪಿಳ್ಳೆ (ನಾ). ಒಂದು ಬಗೆಯ ಮಕ್ಕಳಾಟ : ಬೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು ಚಳ್ಳಪಿಳ್ಳಿ [ಪಾಠಾಂ. ಅಳ್ಳಂಚೀರ, ಅಳ್ಳಾಚಾರಿ]ಗೊಂಬೆಯಂತೆ ಆಡಿಹೋಯಿತು (ಕನಕ. ೧೧೭-೩). **ಚಳ್ಳೆಪಿಳ್ಳೆ** : "ಮಕ್ಕಳ ಆಟ" (ಜಾನಕೋ. ೫೫). 'ಚಿಳ್ಳೆಪಿಳ್ಳೆ' ಪರಾ. [ ? ]

**ಚಳ್ಳವರೆ** (ನಾ). (ಉಕ) ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ; ಹಿತ್ತಲವರೆ ; ಚಪ್ಪರದವರೆ : ಔಡಲಗಿಡಗಳ ಬೊಡ್ಡೆಯಲ್ಲಿ ಚಳ್ಳವರೆಯ ಬೀಜವನ್ನು ಹಾಕಿ ಆ ಬಳ್ಳಿಯನ್ನು ಔಡಲಗಿಡಗಳಿಗೆ ಹಬ್ಬಿಸಬೇಕು (ಕೃಷಿಪ್ರ. ೦೫೫); ನಾನೇನು ನಿಮ್ಮ ತೋಟದಲ್ಲಿ ಬೆಳೆದ ಬದನೆ ಕಾಯಿಯೇ ಚಳ್ಳವರೆಯೇ (ಇಪ್ಪಕ. ೨೦೫). [ಚಳ್ಳು (<ಸೆಳ್ಳು) + ಅವರೆ$_1$]

**ಚಳ್ಳಿಸು** 'ಚಲ್ಲಿಸು$_2$' ನೋ.

**ಚಳ್ಳು** 'ಸೆಳ್ಳು' ನೋ.

**ಚಳ್ಳುಗುರ್** 'ಸೆಳ್ಳುಗುರ್' ನೋ.

**ಚಳ್ಳುಗುರು** 'ಸೆಳ್ಳುಗುರ್' ನೋ.

**ಚಳ್ಳೆ** 'ಸೆಳ್ಳ' ನೋ.

**ಚಳ್ಳೆಕೆಂದಾಳ** (ನಾ). ಒಂದು ಬಗೆಯ ಮರ : ಚಳ್ಳೆಕೆಂದಾಳ, ಕೆಂಪುಚಳ್ಳೆ (ಮೈಶಿಗಿ. ೨೪-೪೫೫). [ ? ]

**ಚಳ್ಳೆಪಿಳ್ಳೆ** 'ಚಳ್ಳಪಿಳ್ಳಿ' ನೋ.

**ಚಟಪು** 'ಸೆಟಪು' ನೋ.

**ಚಟಿಂಗಯ್ಯ** (ನಾ). ಒಬ್ಬಾತನ ಹೆಸರು : ಮಲ್ಲಿಸೇನಭಟಾರರ ಗುಡ್ಡಂ ಚಟಿಙ್ಗಯ್ಯಂ ತೀರ್ತ್ಥಮಂ ಬನ್ದಿಸಿದಂ (ಎಕ. II, ೪-೦ ; ಸು. ೨೦೦). [ ? ]

**ಚಟಿತ್ತಿ** (ನಾ). ಒಬ್ಬಾಕೆಯ ಹೆಸರು : ಮಾರವರ್ಮ್ಮಸ್ವಾಮಿಗೆ ಸುನ್ದರಿ ಚಟಿತ್ತಿಯರಾ ದೇಗುಲಂ ಮೂದೆಯ್ದುದಾ ವೃತ್ತಿಯುಂ ಸರ್ವ್ವಪರಿಹಾರಂ ವಿಟ್ಟಾರ್ (ಎಕ. VI, ಚಿಕ್ಕಮ. ೯೨-೪ ; ಸು. 750 ?). [ ? ]

△**ಚಟುಕ್ಕ** 'ಚಳುಕ್ಕ' ನೋ.

**ಚಟುವಟ್** (ನಾ). ಪ್ರತಿಜ್ಞೆ (?) : ಸಾಸಿಗ × × × ಪಟಿಯರೊಡೆಯ × ಬಿವೆಡೆಯಮ್ಮಂ ಹರಿತ್ರನ ಕುಮಾರಂ ಚಟುವಟ್ ಪೊಡದು ನುಡಿದು ಮತ್ತನ್ನದಾತನ್ ನುಡಿವಕ್ಕು (ಸೌಇಇ. IX-i, ೨೨-೦೦ ; 923). [ ? ]

**ಚಾ$_1$** (ನಾ). ೧. ಒಂದು ಅನುಕರಣ ಧ್ವನಿ : ಇದ್ದರೆಲ್ಲರ ಕೂಡಿಕೊಂಡು ಎದ್ದನು ಯುವರಾಜನೆಡೆಗೆ ಚಾ[ಪಾಠಾಂ. ಬಾ] ಹೋಯೆನೆ ಗೆದ್ದನು ಜಗದ ಜಾಣರನು (ಭರಚ. ೫೬-೮೫). ೨. ದನಕರುಗಳನ್ನು ಅಥವಾ ಮೇಕೆಗಳನ್ನು ಮುಂದಕ್ಕೆ ಹೋಗುವಂತೆ ಅಟ್ಟುವಾಗ ಬಳಸುವ ಧ್ವನಿ : ಹುಡುಗನು ಚಾ ಎಂದು ಎತ್ತುಗಳನ್ನು ಹೊಡೆದುಕೊಂಡು ಹೋಗುತ್ತಾನೆ (ರೂಢಿ).

**ಚಾ$_2$** 'ಚಹ' ನೋ.

**ಚಾಂಕಿಮಯ್ಯ** (ನಾ). ಒಬ್ಬಾತನ ಹೆಸರು : ಚಾಂಕಿಮಯ್ಯನ ಮಾಡಿಸಿದ ಶ್ರೀಶಾಂತಿನಾಥದೇವರ ತ್ರಿಭುವನತಿಳಕ ಚೈತ್ಯಾಲಯದಲಿರ್ಪ್ಪ ರಿಶಿ(ಷಿ)ಯರ್ (ಇಆ. XIX, ೨೭೩-೩೫ ; 1064). [ ಚಾಂಕಿಮ$_1$+ಅಯ್ಯ$_1$ ]

**ಚಾಂಗಾಳ್ವ** 'ಚಂಗಾಳ್ವ' ನೋ.

**ಚಾಂಗು**, ಚಾಗು, ಜಾಂಗು, ಜಾಗು$_2$ (ಅ). ಭಲೆ, ಭೇಷ್, ಭಾಪು ಎಂಬರ್ಥದ ಹೊಗಳಿಕೆಯ ಮಾತು,-ಕೊಂಡಾಟದ ನುಡಿ: ಇಂದೆನ್ನ ಮನೆಗೆ ಪ್ರಮಥರು ಬಂದಹರೆಂದು ಗುಡಿತೋರಣವ ಕಟ್ಟಿ . . . ರಂಗವಾಲಿಯನಿಕ್ಕಿ ಉಘೆ ಚಾಂಗು ಭಲಾ ಎಂಬೆ (ಬಸವ. ೩೭೬); ಉಗೆ ಚಾಂಗು ಬಲಯೆಂಬ ನೆಗೆವ ರಭಸಂಗಳೊಳು(ದೀಕ್ಷಾಬೋ. ೧೧೭-೭); **ಚಾಂಗು** ಬಲಾಯೆನಲು ನಂದಿಧ್ವಜವ್ರಜವು (ಬಸಪು. ೫-೩೯); ಜಯ ಜಯ **ಚಾಂಗು** ಬೊಲ್ಲೆಂಬ ರಭಸದಿಂ ಕೀರ್ತಿಸುತ್ತ (ವೀಕ್ಕಿಪು. ೪-೧೨-೪೫); ಪಾದವೆಚ್ಚಟಿಕೆ

ಪರಾಕು ಚಾಂಗೆಂದು ಮುಂದೋದೆ ಕೈಸನ್ನೆಯೊಳ್ನಿಲಿಸಿ . . . ಪಾಡುವ ನಾದವ ನಿಲಿಸಿಯಿದ್ದನು (ಭರಚ. ೪೯-೯). **ಚಾಗು:** "ಅರರೆ ಧಣಾ . . . ಚಾಗು ಸಲೆ ಸುಂವುರೆಯನೆ ಕೊಂಡಾಟದ ನುಡಿ" (ಭಾರನಿ. ೪೬) ; ಮರ್ಝು **ಪೂತು** ಪಾಯಕು ಗಂಡುಗಲಿಯಹೆ ಚಾಗು ತೊಟ್ಟೆಸು (ಕುಬ್ರಾ, ಭೀ. ೧೦-೦); ಎಲ್ಲರುಂ **ಪೂತುರೇ** ಸುಭಟ ಚಾಗೆಂದುಲಿಯೆ ಕೋಪದಿಂ ಗುಹನಾರ್ದು ತೆಗೆದೆಚ್ಚನು (ಜಬಪು. ೪೩-೧೭); ಚಾಗು ದಣುದಣು ಭಾಪು ಭಳಿರೆ ಬಲ ಬಲರೆ ಕೇಳೀಗ ನಿನ್ನಂ ಪೋಲ್ವರಂ ಕಾಣೆನು (ರುಕ್ಮಾಂಗ. ೧೩-೭೩). **ಜಾಂಗು:** ಸಭೆಯೊಳುಣ್ಮೆ ಪೊಣ್ಮೆತ್ತು ಜಾಂಗು ಬೊಲ್ಲ ಶುಭ ಬೊಲ್ಲ ಮಾಂಗಳಿಕ ಬೊಲ್ಲಮೆಂಬೀ ರವಂ (ಜಗವಿ. ೧೦-೭೨) ; ಕರಿಗಮನೆಯರು ತಂದರು ರತ್ನ ಮಯ ಹೊನ್ನ ಹರಿವಾಣ ದುಂಬಿದಾರತಿಯ ತಿರುಹಿ ನಿವಾಳಿಸಿ ಜಾಂಗು ಬೊಲ್ಲೆಂದೆಂದು ಸಿರಿವೆತ್ತು ನಿಂದರಿಕ್ಕೆಲದಲಿ (ಮೋಹತ. ೨೨-೧೩). **ಜಾಗು₂:** "ಅರರೇ ಭಾಪುರೆ . . . ಜಾಗುಮಾ ಧಣಾ ಧಿರುರೇ ಪುರೆಯೆನೆ ಕೊಂಡಾಟಂ" (ಚತುನಿ. ೫೫); ಜಾಗು ಧಣಾ ಧಣಾ ಪೂತು ಕಾರ್ಮುಖ ಯೋಗಸಿದ್ಧನೆ (ಕುವ್ಯಾಅ. ೧೫-೨೯): ಸೊಲ್ಲಿಸಿದರು ಜಾಗು ಬೊಲ್ಲು ತುಬ್ಬುವ ಕೆಂಬಲ್ಲ ತಳಿಗೆ ಗಾರ್ತಿಯರು (ಮೋಹತ. ೧೫-೩೬).

**ಚಾಗುಚಾಗು, ಜಾಗುಜಾಗು** (ದ್ವಿರುಕ್ತಿ): ತಾನೊಹಿಸಿಕೊಳೆ ಸದರ ಗಂಡನೆ ಚಾಗುಚಾ[ಪಾಠಂ. ಜಾಗುಜಾ]ಗೆನುತೆ (ಮದೇಪು. ೩-೫೫); ಸುಭಟ ರಹುದೋ ಜಾಗುಜಾಗೆನುತೊಲೆದನಾ ದ್ರೋಣ (ಕುವ್ಯಾದ್ರೋ. ೨-೮೧): ಜಾಗುಜಾಗೆಂದಸುರ ಖಾತಿಯೊಳುಬ್ಬಿ ಘರ್ಜಿಸಿದ (ಅಂಬಿಕಾ. ೦೫-೨)·

[ ←ತೆಲು. ಚಾಂಗು. / ಮರಾ. ಚಾಂಗ ]

**ಚಾಂಗೇರಿ** (ನಾ). ಒಂದು ಬಗೆಯ ಸೊಪ್ಪು; ಹುಲ್ಲುಹುಳಿಗನ ಸೊಪ್ಪು; ಪುಲ್ಲಂಪುರುಚಿ : (ಶ). [ ಸಂ. ಚಾಂಗೇರೀ ]

**ಚಾಂಚಲ್ಯ** (ನಾ). ಚಂಚಲತೆ ; ಅಸ್ಥಿರತೆ : ಕುದುರೆಗಳೆರಡೂ ಚಾಂಚಲ್ಯ ತೋರಿದವು (ಇಪ್ಪಕ. ೩೨೦). 'ಚಿತ್ತಚಾಂಚಲ್ಯ' ಪರಾ. [ ಸಂ. ]

**ಚಾಂಡಾಲ, ಚಾಂಡ್ಡಾಳ** (ನಾ). ಚಂಡಾಲ ; ಹೀನ : ಕರ್ಮಾಧಿಗತ ಚಾಂಡಾಲರಿವದಿರ ಮಾತುಗಳನೆಲೆ ನಂಬದಿರು ಭೂಪ (ಬಸಪು. ೫೬-೫೦) : ಏಕಗೋತ್ರದ ಪುರುಷಸತಿಯರಜ್ಞಾನದಿಂದಾ ನೆರೆದಲ್ಲಿ ಪುಟ್ಟಿದಂ ಚಾಂಡಾಲನೈ (ವೀಕ್ಷೈಪು. ೭-೨-೨೦). **ಚಾಂಡಾಳ :** ಇದನಳಿದಾತಂಗಕ್ಷಯ ನರಕಂ ನಿಜವಂಶಕ್ಷಯವಾತಂ ಧರಿತ್ರಿಯೊಳು ಚಾಣ್ಡಾಳ (ಸಾಇಇ. XX,೦೦೭-೫೦; 1188). [ಸಂ.]

**ಚಾಂಡಾಲಗಿತ್ತಿ** (ನಾ). ಹೊಲತಿ ; ಪಂಚಮಸ್ತ್ರೀ : ಕೀಳು ವರ್ಗದ ಹೆಂಗಸು : ಕಂಡಕಂಡವರ ಹಿಂದೆ ಹರಿವ ಚಾಂಡಾಲಗಿತ್ತಿಯಂತೆ (ಗಣಭಾ. ೨೮೯-೧). [ ಚಾಂಡಾಲ + – ಗಿತ್ತಿ ]

**ಚಾಂಡಾಲತ್ವ** (ನಾ). ಹೊಲೆತನ; ಪಂಚಮ ವರ್ಗಕ್ಕೆ ಸೇರಿರುವಿಕೆ : ಉತ್ತಮದ ರವಿಕುಲದೊಳುದಿಸಿ ಚಾಂಡಾಲತ್ವವೆತ್ತ ಸತಿಯರ್ಗೆಳಸಿ ಘೋರ ನರಕಾಳಿಗನಿಮಿತ್ತ ಹೋಹವನಲ್ಲ (ಹಚಕಾ. ೮-೨೫). [ ಸಂ. ]

**ಚಾಂಡಾಲಪತಿ**(ನಾ). ಹೊಲೆಯರ ಪ್ರಮುಖ ; ಪಂಚಮರ ಮುಖ್ಯಸ್ಥ : ಚಾಂಡಾಲಪತಿಯ ಮನಮೆರ್ದೆಗೊಂಡು ಮನಃಪದ್ಮ ಮುಕುಳವಾಂ ಸವಿವಳಿಯಿಂ ಕಂಡೊಡೆ ಮುನಿವಾ ನರರುಂ ಪೆಂಡಿರುದಾರತೆಗದೇಕೆ ಮುನಿವರೋ ದೇವಿ (ಶಾಂತಿಪು. ೯-೦೯೪). [ ಚಾಂಡಾಲ + ಪತಿ₂ ]

**ಚಾಂಡಾಲಿಕೆ** (ನಾ). ಕೀಳುದರ್ಜೆಯ ಒಂದು ಬಗೆಯ ವಾದ್ಯ.

[ ಸಂ. ಚಾಂಡಾಲಿಕಾ ]

**ಚಾಂಡಾಳ** 'ಚಾಂಡಾಲ' ನೋ.

**ಚಾಂಡಾಳಿಸು** (ಕ್ರಿ). ಚಂಡಾಲನಂತೆ ವರ್ತಿಸು : ಮದ್ಯಪಾಂ ಕುಡಿಕುಡಿದು ಮರುತಹತಿಯಿಂದ ಚಾಂಡಾಳಿಸುವ ಚಿತ್ತೈಯರನರಸ ನೋಡುತ ಬಂದನು (ಹಚಕಾ. ಪರಿ. ೪-೫೫). [ ಚಾಂಡಾಳ ( = ಚಾಂಡಾಲ) + – ಇಸು₃ ]

**ಚಾಂತ** (ನಾ). ಚಕಾರವನ್ನು ಕೊನೆಯಲ್ಲಿ ಉಳ್ಳ ಶಬ್ದ : (ಶ).

[ ಚ + ಅಂತ₂ ]

**ಚಾಂತಿ** 'ಸಾಂತಿ' ನೋ.

**ಚಾಂದಣಿ, ಚಾಂದನಿ** (ನಾ). ಮೇಲ್ಕಟ್ಟು ; ವಿತಾನ ; ಛತ್ತು : ವಿಧವಿಧದಿ ಪಾಸಿ ಚಾಂದಣಿಗಳಂ ಕಟ್ಟಿ (ಕೃಷ್ಣವಿ. ೨-೯೦): ಹಡಗಿನ ಮೇಲ್ಗಡೆ ಚಾಂದಣಿಯನ್ನು ಕಟ್ಟಿದ್ದಿತಾದ ಕಾರಣ ಹಡಗಿನೊಳಗಿದ್ದ ಪ್ರಯಾಣಿಕರಿಗೆ ಯಾವುದೂ ಗೊತ್ತಾಗುತ್ತಿರಲಿಲ್ಲ (ಕಪಾಕುಂ. ೩). **ಚಾಂದನಿ :** (ಶ).

[ ←ಮರಾ. ಚಾಂದಣೀ ; ಹಿಂ. ಚಾಂದನೀ ]

**ಚಾಂದನಿ** 'ಚಾಂದಣಿ' ನೋ.

**ಚಾಂದಸ, ಚಾನಸ, ಛಾನಸ** (ಗು). ೧. ಸಂಪ್ರದಾಯನಿಷ್ಠ. (ನಾ). ೨. ವೇದಾಧ್ಯಯನ ಮಾಡಿದವನು; ವೈದಿಕ: ಛ ಕಾರಕ್ಕೆ ಚಕಾರಂ–ಛವಿ–ಚವಿ . . . ಛಾಂದಸ – ಚಾಂದಸ (ಶಮದ. ೨೫೫ ಪ್ರಯೋ). ೩. ಮಂದಮತಿ ; ದಡ್ಡ : ವರರತ್ನಘೋಷನ ಪರಿಯಲ್ಲ ವಿದ್ಯಾಸಾಗರನಾದ ವ್ಯಾಳಿಯಂತಲ್ಲಾ ಪರಮಚಾಂದಸನಾದಕು (ಭೃರಸೂ. ೩೨೭). **ಚಾನಸ:** ೪. ಎಚ್ಚರವಿಲ್ಲದಿರುವಿಕೆ; ಅಜಾಗರೂಕತೆ: ಹುಲಿಯು ದುಷ್ಟಮೃಗವೆಂದು ತಿಳಿದಿದ್ದರೂ . . . ಚಾನಸದಿಂದ ಹುಲಿಯ ಬೋನಿಗೆ ಬಿದ್ದಿರುವ ಬಾಗಿಲ ಹಲಗೆಯನ್ನು . . . ಎತ್ತಿದನು (ಕಥಾಮಂ. IV, ೮೪). **ಛಾನಸ :** ೧. ಸ್ವಲ್ಪ ಛಾನಸ ಸ್ವಭಾವದ ಪದ್ದಕ್ಕನಿಗೆ ದೇವರು ದಿಂಡರ ಕೆಲಸಗಳನ್ನು ಎರಡನೆಯವರು ಮಾಡಿದರೆ ಎಷ್ಟೂ ಒಗ್ಗುತ್ತಿರಲಿಲ್ಲ (ಸಾವಿಊ. ೬೬). ೩. ಉರಿದುವೀ ನಿಮ್ಮಯ ತಪೋಜಪ ಧ್ಯಾನಂಗಳಿರವದೇಂ ಛಾನಸಮದೊರ್ವ ಮಾಯಾವಿ ನಿಮ್ಮ ರಿಸಿಯರನೊಲಿಸಿಕೊಂಡೊಯ್ದಪಂ ಬಿಡಿಸಿಕೊಳ ಮೇಳೆಂದೊಜಿಲ್ದರಂದು (ಜಬಪು. ೨೦-೨೩). 'ಛಾನಸತನ' ಪರಾ.

[ <ಸಂ. ಛಾಂದಸ ]

**ಚಾಂದಸಿಕೆ** (ನಾ). ತಡಮಾಡುವಿಕೆ; ಆಲಸ್ಯ; ಜಡತೆ: ಚಾಟುಕಾತಿಯರು ಚಾಂದಸಿಕೆಯ ನೂಂಕಿ ಸಫಾಟಿಕೆಯಿಂದ ಪಾಡಿದರು (ಭರಚ. ೫-೫೮). 'ಛಾಂದಸಿಕ್ಕೆ' ಪರಾ.

[ ಚಾಂದಸ + – ಇಕೆ ]

**ಚಾಂದ್ರ** (ಗು). ೧. ಚಂದ್ರನಿಗೆ ಸಂಬಂಧಿಸಿದ. (ನಾ). ೨. ಮೃಗಶಿರಾ ನಕ್ಷತ್ರ. [ ಸಂ. ]

**ಚಾಂದ್ರಜ್ಞಾನಿ** (ನಾ). ಚಂದ್ರಮಂಡಲವನ್ನು ಕುರಿತು ವಿಶೇಷ ಜ್ಞಾನವುಳ್ಳವನು : ಚಂದ್ರಮಂಡಲದ ವಿಷಯದಲ್ಲಿ ವಿಶೇಷಜ್ಞಾನವುಳ್ಳ ಜ್ಯೋತಿರ್ವಿಜ್ಞಾನಿ ಅಥವಾ ನಾವಿಕ : ಚಾಂದ್ರಜ್ಞಾನಿ (Lunarian. ಇಂಕನಿ).

[ ಸಂ. ಚಾಂದ್ರಜ್ಞಾನಿನ್ ]

**ಚಾಂದ್ರಪ್ರಭ** (ಗು). [ಜೈನ]ಚಂದ್ರಪ್ರಭನೆಂಬ ತೀರ್ಥಂಕರನಿಗೆ ಸಂಬಂಧಿಸಿದ : ಕಣ್ಗಿಂಬಾದ ಚಾಂದ್ರಪ್ರಭಂ ರೂಪಂ . . . ಎಮ್ಮೊಳ್ ಮಾಟ್ಕೆ ನೈರ್ಮಲ್ಯಮಂ (ಚಂದ್ರಪು. ೦-೧). [ ಸಂ. ]

**ಚಾಂದ್ರಮಸ** (ಗು) . = ಚಾಂದ್ರ. [ ಸಂ. ]

**ಚಾಂದ್ರಮಸಾಯನ** (ನಾ). ಚಂದ್ರನ ಮಗ; ಬುಧ: "ರೌಹಿಣೇಯಃ, ಬುಧಃ, ಸೌಮ್ಯಃ, ಚಾಂದ್ರಮಸಾಯನಃ – ಈ ೪ ಬುಧನ ಪೆಸರ್" (ಹಲಾಯು. ೯-೪೬). [ ಸಂ. ]

**ಚಾಂದ್ರಮಾನ** (ನಾ). ಚಂದ್ರನ ಗತಿಯನ್ನು ಅನುಸರಿಸಿ ಕಾಲವನ್ನು ಗಣಿಸುವ ಕ್ರಮ : ಚಂದ್ರನ ಗತಿಯ ಸಂಬಂಧದಿಂದ ಎಣಿಸಲ್ಪಡುವ ಪಕ್ಷ, ಮಾಸ, ವರ್ಷಗಳ ಮಾನವು ಚಾಂದ್ರಮಾನವೆಂದೆನಿಸಿಕೊಳ್ಳುತ್ತದೆ (ಮುಂಬಯಿ. ೬-೭೮); ಚಾಂದ್ರಮಾನದ ಮಧ್ಯಾಹ್ನದಲ್ಲಿ, ಚಂದ್ರನ ಭಾಗ ಸೂರ್ಯಾಭಿಮುಖವಾಗಿರುವುದರಿಂದ ಅದು ಕುದಿಯುವ ನೀರಿನಷ್ಟು ಕಾವುಳ್ಳದ್ದಾಗಿರುತ್ತದೆ (ಅಕಾಶ. ೩೯). [ ಸಂ. ]

**ಚಾಂದ್ರಮಾಸ** (ನಾ). ಚಾಂದ್ರಮಾನ ಕ್ರಮದಲ್ಲಿರುವ ಚೈತ್ರ, ವೈಶಾಖ ಮೊದಲಾದ ತಿಂಗಳು : ಈ ರೀತಿಯಾದ ಪರಿಕ್ರಮಣವೇ . . . ಆತನ ಕಲೆಗಳಿಗೆ ಕಾರಣವಾಗಿ, ಅವುಗಳಿಂದ ಚಾಂದ್ರಮಾಸವು ನಿರ್ಧಾರಿತವಾಗಿರುವುದು (ಜ್ಯೋತಿರ್ವಿ. ೨೦೨). [ ಚಾಂದ್ರ + ಮಾಸ$_2$ ]

**ಚಾಂದ್ರಾಯಣ** (ನಾ). ೧. ಚಂದ್ರನ ಗತಿ,-ಚಲನೆ ; ಚಂದ್ರನು ಕ್ಷಯಿಸುವುದು ಮತ್ತು ವೃದ್ಧಿಯಾಗುವುದು. ೨. ಚಂದ್ರನ ವೃದ್ಧಿ ಕ್ಷಯಗಳಿಗನುಸಾರವಾಗಿ ತಮ್ಮ ಆಹಾರವನ್ನು ಒಂದು ತುತ್ತಿನಿಂದ ಆರಂಭಿಸಿ, ದಿನಕ್ಕೆ ಒಂದೊಂದೇ ತುತ್ತು ಹೆಚ್ಚಿಸುತ್ತ ಆಮೇಲೆ ಕ್ರಮೇಣ ಒಂದೊಂದೇ ತುತ್ತು ಕಡಮೆ ಮಾಡುತ್ತಾ ಬರುವ ಒಂದು ವ್ರತ : ಪ್ರಿಯಕಾರಿಣಿಯುಂ . . . ಚಾಂದ್ರಾಯಣಮಂ ನೋಂತು (ಶಾಂತಿಪು. ೯-೧೪೮) ; ಅನುದಿನಂ ಭುಂಜಿಸಿದ ಶವದ ಶಿರದಕ್ಕಿಯಲ್ಲನಪೇಯ ಚಾಂದ್ರಾಯಣಂ (ಹಜಕಾ. ೧೪-೭); ಅತಿಕೃಚ್ಛ್ರ ಚಾಂದ್ರಾಯಣ ಸಾಂತಪನಾದಿ ವ್ರತನಿಯಮದ ಪವಣಲ್ಲ (ಹದಿಬ. ೨-೧೩). ೧, ೨: ನೆಲೆಮಾಡದೊಳೆಡೆಯಾಡುವ ಕಲಹಂಸಾಲಸ ವಿಳಾಸವತಿಯರ ಮುಖಮಂಡಲಕೆ ಸರಿಯಾಗಲಾಱದೆ ಸಲೆ ಮಾಟ್ಟಿಂ ಚಂದ್ರನಿಂತು ಚಾಂದ್ರಾಯಣಮಂ (ಯಶೋಚ. ೧-೩೦). [ ಸಂ. ]

**ಚಾಂದ್ರಿ** (ನಾ). ಬುಧಗ್ರಹ: ಚಾಂದ್ರಿ ನೋಡೆ ಯಮಳ ಸ್ತ್ರೀಜನ್ಮಂ (ಜಾತತಿ. ೩-೧೩). [ ಸಂ. ]

**ಚಾಂಪೇಯ** (ನಾ). ೧. ಸಂಪಿಗೆ ; ಚಂಪಕ : ಧರೆಗೆಲ್ಲಂ ಸೊಗಸಂ ಬಳಿಕ್ಕೊದವಿ ಚಾಂಪೇಯಮೋರಂತೆ ಷಟ್ಚರಣಂಗಳ್ಗೆಯಪಥ್ಯಮಾದ ತೆಱದಿಂ (ಶ್ರೀಸೋಚ. ೭೫) ; ವಿಲಸಿತ ಚಾಂಪೇಯದ ಮೊಗ್ಗೆ ತುದಿಯೊಳು ನೆಲಸಿದ ತುಹಿನಾಂಬುವೆನಲು (ಜ್ಞಾನಜ. ೩-೭೦). ೨. ನಾಗಸಂಪಿಗೆ ; ನಾಗಕೇಸರ. ೩. ಚಿನ್ನ ; ಬಂಗಾರ. ೪. ಚಂಪಾದೇಶದ ರಾಜಪುತ್ರ ; ಕರ್ಣ : ಬಾಳ್ವ ವಸ್ತುಗಳೆಲ್ಲ ದಾನಕೆ ಸರಿಯು ಸರಿಮಾಡಿ ಕೇಳ್ವರಿಗೆ ಕೊಟ್ಟಮಲಕೀರ್ತಿಯೊಳಾಳ್ದ ಧರ್ಮೋದ್ಯೋಗದಲಿ ಕೃತ ಬಾಳ್ವನೀ ಚಾಂಪೇಯಗೆಣೆಯಾರೆಂದಳಿಂದುಮುಖಿ (ಜಿನಭಾ. ೧೯-೫೧). [ ಸಂ. ]

**ಚಾಂವ** 'ಚಾಮು' ನೋ.

**ಚಾಂವಯ್ಯ** (ನಾ). ಒಬ್ಬಾತನ ಹೆಸರು: ಜಟಾಸಿಂ[ಗ]ನಂದಿ ಆಚಾರ್ಯ್ಯರ ಪದವ ಚಾ[ಂ]ವಯ್ಯಂ ಮಾಡಿಸಿದೋಂ(ಕಇಅ. ೭೨-೭-೨; ಸು. 10ನೆಯ ಶತ).

[ ಚಾಂವ (<ಚಾಮು) + ಅಯ್ಯ1 ]

**ಚಾಕ** (ಗು). ೧. ಅಚ್ಚುಕಟ್ಟಾದ; ಚೊಕ್ಕಟ ; ಚೊಕ್ಕ: (ಕ). (ನಾ). ೨. ಚೊಕ್ಕತನವುಳ್ಳವನು : ಈ ಕಾಯಕ್ಕೆ ಬಂದವರ ಸಾಕುವೆನೆಂಬೊ ಮಹ ವ್ಯಾಕುಲದಲ್ಲಿ ತಿರುಗಿ ಚಾಕಾನಾಗದೆ ಪೋದೆ (ಪೋಕ್ಷದೀ. ೫೪-೧).

[ ←ಮರಾ. ಚಾಕ್ ]

**ಚಾಕಗೌಡ** (ನಾ). ಒಬ್ಬಾತನ ಹೆಸರು: ಚಾಕಗೌಡ ಮಾಳಗವು[ಡ] ನಿಲಿಸಿದ (ಎಕ. VIII, ಸೊರಬ. ೭೨-೭: 1034 ?). [ಚಾಕ$_0$+ಗೌಡ (<ಗಾವುಂಡ)]

**ಚಾಕಚಕ್ಯ** (ನಾ). ೧. ಲಗುಬಗೆ ; ವೇಗ; ತ್ವರೆ : ಹೆಣ್ಣು . . . ಅತಿ ಮುಂದಾಗಿ ಚಾಕಚಕ್ಯದಿಂದ ನುಗ್ಗಬಾರದು (ಹಳ್ಳಿಬಾ. ೬೫); ಈ ಕೆಲಸವನ್ನು ಚಾಕಚಕ್ಯದಿಂದ ನೆರವೇರಿಸಿದ ಹೆಂಡತಿಯ ಬಗ್ಗೆಯೂ ಅವರಲ್ಲಿ ಅಸಮಾಧಾನ ಮೂಡಿತು (ಬಿಪರಿ. ೫೭). ೨. ಜಾಣ್ಮೆ; ಚಾತುರ್ಯ ; ಕೌಶಲ: ಲೋಕನಾಯಕ ಶಿಕ್ಷೆ ರಕ್ಷೆಯ ಚಾಕಚಕ್ಯದೊಳಾರು ನೀನುಳಿದೇಕೆ ಸೆರೆವಿಡಿದಿರ್ಪೆ (ರಾಮಾಸಂ. ೧-೩-೧೮) ; ಅವಳು . . . ಅತ್ಯದ್ಭುತವಾದ ಚಾಕಚಕ್ಯದೊಡನೆ ಅಭಿನಯಿಸಲಾಗಿ, ಸಭೆಯಲ್ಲೆಲ್ಲೆಲ್ಲಿಯೂ ಭೇಷ್ ಭೇಷ್ ಎಂಬ ಜಯಜಯಕಾರವು ಹುಟ್ಟಲು (ಮೊಗ್ಗು. ೫೦); ಎದುರಾಳಿಗಳನ್ನು . . . ದುಡುಮ್ಮನೆ ಪರಾಜಯಗೊಳಿಸುವ ಒಂದು ನೂತನ ಚಾಕಚಕ್ಯವಿದೆ ಅವರಲ್ಲಿ (ರಾಜಪ. ೮೧). [ ಸಂ. ]

**ಚಾಕಚಕ್ಯತೆ** (ನಾ). ಚಾತುರ್ಯ ; ಚಾಲಾಕು : ಸಹೋದರರನ್ನು ಚಾಕ/ಚಕ್ಯತೆಯಿಂದ ಮೂಲೆಗೊತ್ತಿಸಿ . . . ಔರಂಗಜೇಬ್ ಅಟ್ಟಹಾಸ ಮಾಡುತ್ತಿರುವ ಪರ್ವಕಾಲ (ದುರಂನಾ. ೩) ; ಉಡುಪಿನೊಳಗೆ ಬಹಳ ಚಾಕಚಕ್ಯತೆಯಿಂದ ಸೇರಿಸಿದ್ದ ವಜ್ರ, ನೀಲ . . . ನವರತ್ನಗಳು ಹೊರಬಿದ್ದುವು (ಪ್ರಪಾಇ. II,೧೦); ನಾಲ್ಕುಜನರಿಗೆ ಹೊಂದಿಕೊಂಡು ಸರಿಯಾಗಿ ನಡೆಯುವ ಚಾಕಚಕ್ಯತೆಯೂ ಇತ್ತು (ಕುರುಕಾ. ೮೪).

[ ಚಾಕಚಕ್ಯ + – ತೆ$_3$ ]

**ಚಾಕಣ** 'ಚಕ್ಕಣ' ನೋ.

**ಚಾಕರ** (ನಾ). ಆಳು; ಸೇವಕ; ನೌಕರ: ಅವಗೆ ಚಾಕರರಾಗಿ ನಾವಿರ್ದಿವನು ಭಾವಿಸಬಾರದು (ಜಿನಭಾ. ೪೭-೪೦) ; ಒಡೆಯನಂತೆ ಚಾಕರ (ಮುಂಬಯಿ. ೪-೩೩) ; ಇವನಂತಿರುವ ಚಾಕರನು ದೇವರ ದಯದಿಂದಲೇ ನಮಗೆ ದೊರಕಿದನು (ವಾಗ್ವಿ. ೨). [ ← ಪಾರ. ಹಿಂ. ಮರಾ. ಚಾಕರ್ ]

**ಚಾಕರವಾನ** 'ಚಾಕರಿವಾನ' ನೋ.

**ಚಾಕರಿ** (ನಾ). ಊಳಿಗ ; ಸೇವೆ ; ನೌಕರಿ : ಚಾಕರಿಯ ಮಾಡಿದರೆ ಆಚೀಚೆಲಾಡುವರು (ಪುರಂದ. ೧-೦೪೮-೫) ; ತುರಗದ ಚಾಕರಿಯಾಳಿರುವವನಿಗೆ ತರುಣಿಯ ಭೋಗವು ಬೇಕೆ (ವಾದಿಕೀ. ೭೭-೧೦) ; ತಂತಮ್ಮ ಚಾಕರಿಯನ್ನು ಮಾಡಿದ ನೃಪಗೆ ತಾವು ಚಾಕರಿಯ ಮಾಡಿದರು (ಯನಳ. ೯); ಕೆಲವರು ಚಾಕರಿ ಇಲ್ಲವೆ ದಿನಗೂಲಿ ಮಾಡಿ ಹೊಟ್ಟೆ ತುಂಬಿಕೊಳ್ಳುವರು (ಮುಂಬಯಿ. ೪-೦೩೮); ಸರ್ಕಾರದ ಚಾಕರಿಯನ್ನು ಸಂಪಾದಿಸಿಕೊಳ್ಳುವುದಕ್ಕೆ . . . ಹೋದರು (ದೇವೀಚಾ. ೩೩) ; ನೃತ್ಯದ ಚಾಕರಿಯನ್ನು ಅವಳು ಈಗ ಬಿಟ್ಟುಬಿಟ್ಟಿರುವುದಾಗಿಯೂ . . . ಸರಕಾರಕ್ಕೆ ಅರ್ಜಿ ಕೊಡಲು ಸೂಚಿಸಿದರು (ಗಂಗಾಸಾ. ೧೭). [ ←ಪಾರ. ಹಿಂ. ಮರಾ. ಚಾಕರೀ ]

**ಚಾಕರಿದಾರ** (ನಾ).=ಚಾಕರ : ನಾನಂತೂ ಚಾಕರಿದಾರ ; ಕೇಳಲೇಬೇಕು (ನಮ್ಮಳ್ಳಿ. ೩೦). [ ಚಾಕರಿ + – ದಾರ$_4$ ]

**ಚಾಕರಿವಾನ**, ಚಾಕರವಾನ (ನಾ).=ಚಾಕರ : ಚಕ್ರವರ್ತಿಯಿಂದ ಚಾಕರಿವಾನನವರೆಗೆ ಎಲ್ಲರ ಮನೆಯ ವೃತ್ತಾಂತಗಳೂ . . . ಪ್ರತ್ಯಕ್ಷವಾಗಿಬಿಡುತ್ತವೆ (ಶ್ರೀಕಥ. ೭೭). **ಚಾಕರವಾನ** : ಖಾವಂದರಾದವರು ತಾವೆ ಯಿದಕ್ಕೆ ಸಾಹಸ ಮಾಡಿದರೆ ಚನ್ನವಲ್ಲದೆ ನಮ್ಮಂಥಾ ಚಾಕರವಾನರು ಮಾಡುವ ಕೆಲಸವಲ್ಲಾ (ಹೈದರ. ೭೫). [ <ಚಾಕರಿ ]

**ಚಾಕಲೆಟ್** 'ಚಾಕಲೇಟು' ನೋ.

**ಚಾಕಲೇಟು, ಚಾಕಲೆಟ್, ಚಾಕ್ಲೇಟ್** (ನಾ). ಕೋಕೋ ಬೀಜದ ಹಿಟ್ಟನ್ನು ಕಲಸಿ ಮಾಡುವ ಒಂದು ಬಗೆಯ ಸಿಹಿಯಾದ ತಿಂಡಿಯ ಬಿಲ್ಲೆ : ಚಾಕಲೇಟು ಬಹಳ ತಿನ್ನಲಿಕ್ಕೆ ಕೊಡಬೇಡಿರಿ (ಕುರಿಹಿಂ. ೦೩೨). **ಚಾಕಲೆಟ್** : ಇಂಗ್ಲೀಷ್ ಕೇಕ್, ಚಾಕಲೆಟ್ ಮುಂತಾದ ಅನೇಕ ಬಗೆಯ ತಿಂಡಿಗಳೂ . . . ಇಡಲ್ಪಟ್ಟವೆ (ಪ್ರಕಾಶಿ. ೧). **ಚಾಕ್ಲೇಟ್** : ಅವರಿಗೆಲ್ಲ ರಾಯರು ಈವರೆಗೆ ಅದೆಷ್ಟು ಚಾಕ್ಲೇಟ್, ಪೆಪ್ಪರಮೆಂಟ್ . . . ಕೊಟ್ಟಿದ್ದಾರೋ (ಕಂಬಳು. ೦೨೧). [ ←ಇಂ. Chocolate ]

**ಚಾಕಿ** (ನಾ). ಮೊಟ್ಟೆಯೊಡೆದು ಆಗ ತಾನೆ ಹೊರಬಂದ ರೇಷ್ಮೆ ಹುಳುವಿನ ಮರಿ.

**ಚಾಕಿಕಟ್ಟು** = ಮೊಟ್ಟೆಯಿಂದ ಆಗತಾನೆ ಬಂದ ರೇಷ್ಮೆ ಹುಳುವಿನ ಮರಿಗೆ (ಆಹಾರದ) ಸೊಪ್ಪು ಹಾಕು: ಚಾಕಿಕಟ್ಟುವುದಕ್ಕೆ ಹಿಪ್ಪೆನೇರಳೆ ಸೊಪ್ಪನ್ನು ಸಣ್ಣಗೆ ಕತ್ತರಿಸಿಟ್ಟುಕೊಳ್ಳಬೇಕು (ರೂಢಿ). [ ? ]

**ಚಾಕು** (ನಾ). ಕೊಯ್ಯುವ ಸಾಧನ ; ಚಿಕ್ಕ ಚೂರಿ : ಒಂದು ಹರಿತವಾದ ಚಾಕುವಿನಿಂದ ಕೀವನ್ನು ಹೊರಗೆ ತೆಗೆದು ಹಾಕಬೇಕು (ಗ್ರಾಮಾಕ. ೦೪೯) ; ಊಹಾಪೋಹಗಳು ತಮ್ಮ ಸರ್ಜರಿ ಚಾಕುಗಳಿಂದ ನನ್ನನ್ನು . . . ಕತ್ತರಿಸಿದುವು (ಎಮುಳ. ೬೫). [ ←ಪಾರ. ಹಿಂ. ಮರಾ. ಚಾಕೂ ]

**ಚಾಕುಸು** (ನಾ). ಒಂದು ಬಗೆಯ ಸಸ್ಯ ; ಆವರಕ . ತೆಂಗಡಿ ; "ಆಹುಲೀ" (ಪಂಡಿತ). [ ? ]

**ಚಾಕ್ರಿಕ** (ನಾ). ೧. ಮೇಳದವರೊಂದಿಗೆ ಗಾಯನ ಮಾಡಿ ರಾಜನನ್ನು ಹೊಗಳುವವನು. ೨. "ಕಾಲವನ್ನು ತಿಳಿಸುವವರು" (ಅಮರ. ೮೮೩). [ ಸಂ. ]

**ಚಾಕ್ಲೇಟ್** 'ಚಾಕಲೇಟು' ನೋ.

**ಚಾಕ್ಷುಷ** (ಗು). ೧. ಕಣ್ಣಿಗೆ ಸಂಬಂಧಪಟ್ಟ. (ನಾ). ೨. ಕಣ್ಣಿಗೆ ಕಾಣುವಂತಹುದು : ಅಕ್ಕರಂ . . . ವಿವಿಧಾಕಾರಂ ಲಿಪಿಭೇದವೃತ್ತಿಯಿಂ ಚಾಕ್ಷುಷಂ ಪುರಾತನ ಮತದಿಂ (ಶಮದ. ೩) ; ಕೆಲವು ಚಾಕ್ಷುಷಂಗಳ್ ಕೆಲವು ಅಚಾಕ್ಷುಷಂಗಳಪ್ಪುವು (ಶಬ್ದ್ಮಸ್ಮೃ. ೨೪೬). ೩. ಹದಿನಾಲ್ಕು ಮನುಗಳಲ್ಲಿ ಒಬ್ಬ. [ ಸಂ. ]

**ಚಾಕ್ಷುಷಪ್ರತ್ಯಕ್ಷ** (ನಾ). ಸ್ವತಃ ಕಣ್ಣಿಂದ ನೋಡಿ ತಿಳಿಯತಕ್ಕುದು : ಈ ವಸ್ತು ಕರಿದಿದು ಬಿಳಿದು ಎಂಬಿವು ಮೊದಲಾಗಿ ಪುಟ್ಟುವ ತಿಳಿವು ಚಾಕ್ಷುಷ ಪ್ರತ್ಯಕ್ಷಮೆನಿಪುದು (ಚಳಬಿ. ೩). [ ಚಾಕ್ಷುಷ + ಪ್ರತ್ಯಕ್ಷ ]

**ಚಾಕ್ಷುಷಿ** (ನಾ). [ವೀಶೈ] ಸಾಧಾರ ದೀಕ್ಷೆಯ ಐದು ಪ್ರಕಾರಗಳಲ್ಲಿ ಒಂದು ; ನೋಟದ ಮೂಲಕ ಕೊಡುವ ದೀಕ್ಷೆ: ಗುರು ತನ್ನ ನಯನವಂ ಮುಚ್ಚಿ ಶಿಷ್ಯನ ನೋಡಿಯುಱುದುಮಾಹ್ವಾನಮಂ ಮಾಡಿ ಮೋಕ್ಷವನೀವುದರರೆ ಚಾಕ್ಷುಷಿ (ವೀಶೈಪು.೬-೬-೬೫); ವರದೇಶಿಕೇಂದ್ರನುರು ವಾಸುಭಕ್ತನಂ . . . ಕರ ಚೆಲ್ವ ದಿಟ್ಟಿ ಪೊರೆಯೇರೆ ನೋಡಲಾ ದುರಿತಾರಿ ದೀಕ್ಷೆಯಿರದಾಯ್ತು ಚಾಕ್ಷುಷೀ (ಜಾಲಾಸ್ಕ. ೪-೧೦-೪೩). [ಸಂ. ಚಾಕ್ಷುಷೀ]

**ಚಾಗ$_1$**, **ಜಾಗ$_1$** (ನಾ). ೧. ಹಸಿರು ಬಣ್ಣ ; ಮರಕತ ವರ್ಣ : ಚಾ[ಪಾಠಾಂ. ಜಾ]ಗದ ಬಲ್ಪಲಾದ ಪೊನಲಿಂ ಬಳೆದೊಪ್ಪುವ ನಾಳಿಕೇರದಿಂ (ಮಲ್ಲಿಪು.೨-೪೫). **ಜಾಗ$_1$:** ೧. "ಜಾಗಮೆಂದುಂ, ಪಸುರ್ಪೆಂದುಂ ಮರಕತ ವರ್ಣಂ" (ಕಶಸಾ. ೧೧-೨೦೯) ; ಜಾಗದ ನೆರೆವಡಲಗೆಗಳ ಜಾಗಂಗಳ ಪಸುರ್ಗಳಸೆಯೆ (ಆದಿಪು. ೪-೩೧); ಜಾಗದ ಪೊನಲ್ ಕೃತಕಾಚಳ ನಿರ್ಜರಾಂಬುವೆಂಬಿನಿತಱನಾದೆ ಕೊಟ್ಟಿಸಱಂ (ಪುಷ್ಪಪು. ೨-೪೦). ೨. ಪಚ್ಚೆ ಮಣಿ ; ಮರಕತ : ಜಾಗಂಗಳೆಸೆವ ಪಸುರ್ಪೆಳಗುಂ ಪ್ರಜ್ವಳಿಪ ಮಣಿ ಸ್ತಂಭದ ಕೆಂಬೆಳಗುಂ ಪಸರಿಪುವು ಸುರಶರಾಸನಶತಮಂ (ಚಂದ್ರಪು. ೬-೫೦).

**ಚಾಗ$_2$** (ನಾ). ತ್ಯಾಗ; ದಾನ: "ಚಾಗಂ ತ್ಯಾಗದೊಳಂ" (ಕರ್ಣಾನಿ. ೪೯) ; ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರ್ (ಪಂಪಭಾ. ೪-೨೯); ರವಿನಂದನ ನನ್ನಿ ಚಾಗ[ಪಾಠಾಂ. ಸತ್ಯ]ಮಣ್ಮೆಂಬಿನಿತರ್ಕಂ ನೀನೆ ಪೊತ್ತ ಮೊದಲಿಗನಾದೈ (ಗದಾಯು.೫-೧೬); ಚಾಗದ ಪೆಂಪಿಂದಮೆ ಗಜ್ಜರಾಜನೆಸೆದಂ (ಎಕ. II, ೩೮೪-೦೯ ; ಕು. 1135).

**ಚಾಗಜಗಝಂಪ** = ತ್ಯಾಗ ಗುಣದಲ್ಲಿ ಲೋಕಪ್ರಸಿದ್ಧನಾದವನು ; ಒಂದು ಬಿರುದು : ಚಟ್ಟಭೂಪಂಗೆ ನೆಟ್ಟನೆ ಕೊಟ್ಟಂ ಧರೆ ಮೆಚ್ಚೆ ಚಾಗ ಜಗಝಂಪಂ ರಘುಪವಳಾಚಾರ್ಯಂ (ಎಕ. XIII, ೩೦೨-೧೮ ; 1126).

**ಚಾಗವೆಡಂಗಿ** = ತ್ಯಾಗಗುಣದ ವೈಭವವುಳ್ಳವಳು ; ಒಂದು ಬಿರುದು : ನೆಗೞ್ದಳ್ ಜಗಕ್ಕೆ ವಿನಯಗುಣೈಕಾಸ್ಪದೆ ಸುಗ್ಗಿಯಬ್ಬೆ ತನಗೊಂದಿದ ಚಾಗವೆಡಂಗಿಯೆಂಬ ಪೆಸರೆಸೆವಿನೆಗಂ (ಶಾಪ್ಮಾವ. ೦೬೦). [<ಸಂ. ತ್ಯಾಗ]

**ಚಾಗಂಗೆಯ್** (ಕ್ರಿ). ದಾನಮಾಡು : ಅಂತು ಚಾಗಂಗೆಯ್ದು ಜಗನ್ಮಂಗಳ ಗಂಗಾವಾರಿಯೊಳ್ . . . ಮಿಂದು (ಪಂಪಭಾ. ೯-೭೨ಪ); ಲೇಸಪ್ಪ ವಸ್ತು ನಿಕರಮನೋಸರಿಸದೆ ಸೂಱೆಗೊಂಡು ಚಾಗಂಗೆಯ್ವಂ(ಧರ್ಮಾಮೃ. ೨-೩೩). [ ಚಾಗ$_2$ + ಕೆಯ್$_1$ ]

**ಚಾಗಗುಣ** (ನಾ). ದಾನಮಾಡುವ ಗುಣ; ದಾನಶೀಲತೆ: ಸುರಭೂರುಹ ಮುಮನಗ್ಗದ ಸುರಭಿಯುಮಂ ಚಾಗಗುಣದೊಳೆಮ್ಮರಸಂ ತ್ರಸ್ತರಿಯಾಡುಂವಂ (ಧರ್ಮಾಮೃ. ೪-೨೦೬). [ ಚಾಗ$_2$ + ಗುಣ ]

**ಚಾಗಟೆ** (ನಾ) ಒಂದು ಬಗೆಯ ಬಳ್ಳಿ : ಕುದುರೆಯ ರಿಕಾಪು ಚಾಗಟೆಯ ಬಳ್ಳಿಯೊಂದಕ್ಕೆ ತೊಡಕಿಕೊಂಡಿತು (ಹುಂಹಾ. ೬). [ ? ]

**ಚಾಗವಟ್ಟೆ** (ನಾ). ಒಂದು ಬಗೆಯ ಕೇದಗೆ ; ಹುಚ್ಚು ಕೇದಗೆ : ಹುಚ್ಚು ಕೇದಗೆ ಎಂದರೂ ಚಾಗವಟ್ಟೆ ಎಂದರೂ ಗಾಯದರಿ ಎಂದರೂ ಒಂದೇ ಪರ್ಯಾಯವು (ಕೃಷಿಪ್ರ. ೧೩೨). [ ? ]

**ಚಾಗವಿಕ್ಕು** (ಕ್ರಿ). ೧. ದಾನಮಾಡು ; ತ್ಯಾಗಮಾಡು. ೨. ಹೊರಚೆಲ್ಲು : ಮನದೊಳ್ಳೆವಿರ್ದ ಮೋಹಾಮೃತರಸಮನೆ ಸರ್ವಾಂಗವುಮಂ ಚಾಗವಿಕ್ಕೆ ತ್ರೆನಿಸಲ್ ಘರ್ಮಾಂಬು ತಳ್ತೊಪ್ಪಲು (ಕಾದಂಬ. ೫೨೩). [ಚಾಗ$_2$+ಇಕ್ಕು]

**ಚಾಗಿ** (ನಾ). ತ್ಯಾಗಗುಣವುಳ್ಳವನು ; ದಾನಿ ; ದಾನಶೀಲ ; ಕೊಡುಗೈಯಾತ : "ಚಾಗಿಯೆ ತಾಂ ತ್ಯಾಗಿ" (ಚತುನಿ. ೪೩) ; ನೋಟವಪ್ಪದೊಡ್ಡರು ವಿಪ್ಪಾಡಿ ಚಾಗಿಗಳ್ ಮಹಾದೇವರ ದೇಗುಲವಂ ಮಾಡಿಸಿ (ಸೌಇಇ. IX-1, ೧೭-೧೬ ; ೧೧ನೆಯ ಶತ) ; ಭಯಮಱಿಯದ ಕಲಿಯುಂ ಚಾಗಿಯು ಮೆನಿಸದೆ . . . ಪಂದೆಯುಮಾಗಿ (ಪಂಪಭಾ. ೬-೭೩) ; ದೇವೋತ್ತಮ ನೀನೆ ಚಾಗಿವೆಸರಂ ಪಡೆದೈ (ಪಂಚಾಮಾ. ೫-೩) ; ಚಾಗಿಗಳ ನಡುವೆ ಕಡುಚಾಗಿ ಸಂಗನ ಬಸವ (ಬಸರ. ೯-೮೩) ; ಚೋಳಕುಲಕಮಲಬಾಲಾರ್ಕನೆನಿಪ ಚಾಗಿ ಕುವರನನಿತ್ತು, ರಕ್ಷಿಸನೆ (ಭಾವಚಿಂ. ೩-೩೨). [ < ಸಂ. ತ್ಯಾಗಿನ್ ]

**ಚಾಗಿಗುಣ** (ನಾ). ತ್ಯಾಗಮಾಡುವವನ ಗುಣ ; ದಾನಶೀಲತೆ : ಚಾಗಿ ಗುಣಂ ಧಾರಿಣಿಪತಿಗೋಗಡಿಸದೆ ವೈಶ್ಯಜಂಗೆ ಲುಬ್ಧಗುಣಂ . . . ಸಹಜ ಮಕ್ಕುಂ ಜಗದೊಳ್ (ಧರ್ಮಾಮೃ. ೦೩-೩೮). [ ಚಾಗಿ + ಗುಣ ]

**ಚಾಗಿಯಬ್ಬೆ** (ನಾ). ಒಬ್ಬಾಕೆಯ ಹೆಸರು : ಚಾಗಿಯಬ್ಬರಸಿಯು ಬೂತುಗನು ಬಿತ್ತುವಟ್ಟವ ಕೊಟ್ಟ (ಎಕ. XV, ಅರಸೀ. ೨೩೭-೦೭ : 971). [ ಚಾಗಿ$_0$ + ಅಬ್ಬೆ$_{11}$ ]

**ಚಾಗು** 'ಚಾಂಗು' ನೋ.

**ಚಾಗುರೆ**, **ಜಾಗುರೆ** (ನಾ). = ಚಾಂಗು : ಪೂತುರೇ ಹನುಮಂತ ಚಾಗುರೇ ಪೂತು ಮರುತಜ (ಕೌಶಿರಾ. ೨೭-೩೯); ಕಾದಿ ಮಿಗಿಲಪ್ಪ ವರವಂ ಚಾಗುರೇ ಪಡೆದೆ (ವೀಶೈಪು. ೩-೧೮-೪೦); ಭಳಿರೆ ಚಾಗುರೆ ಚಾಗು ಸಹಸಿಗಳ್ಳ ಕೈವಾಳಗಳನು ತೋರಲ್ಬಂದಿರೇ (ಕುರಂಗ. ೫೮-೦೩) . **ಜಾಗುರೆ :** ಜಾಗುರೆ ಜಾಗು ಭಲರೆ ನುತ್ತಿರ್ಪವರ್ಕಲಬರು (ಅರಾಚ. ೮-೩೦). ಜಾಗುಜಾಗುರೆ (ದ್ವಿರುಕ್ತಿ) : ಜಾಗುಜಾಗುರೆ ಕರ್ಣ (ಕುಪ್ಪಾದ್ರೋ. ೦-೩೬). [ ? ]

**ಚಾಗೆ** 'ಚೇಗೆ' ನೋ.

**ಚಾಚಪುಟ** (ನಾ). [ಸಂಗೀತ] ತಾಳ ಕ್ರಮದಲ್ಲಿ ಒಂದು: ಸಮುರಪ್ರಚಂಡ ಗೀತನ್ರಿ[ ನೃ ]ತ್ಯರತ ವಿತತಘನಶುಷಿರವಾದ್ಯಲಯ ಚಚ್ಚಪುಟ ಚಾಚಪುಟ ಪರಮೇಶ್ವರಮುಖಕಮಳ . . . ಬ್ರಹ್ಮವೀಣಾದಿ ಗೇಯ ಗಾಂಧರ್ಬ[ ರ್ವ ] (ಕೂಲ್ಗಾಶಾ. ೨೨-೦೪ : 1257) ; ಎಸೆವೆರಡು ತಾಳಂಗೊಂಡು ಚಚ್ಚಪುಟವೆಂಬಿನಿಂ ಚಾಚು[ಚ]ಪುಟ . . . ಪ್ಲುತದಶಪ್ರಾಣವಱದೊತ್ತ (ಚೀರಮ. ೦೦-೩೩) ; ಚಚ್ಚಪುಟದ ಚಾಚು[ಚ]ಪುಟದ ಸಾಂಬ್ರಾಣಿಯ ಕಿಚ್ಚು ಕೀಲಣೆಗಳನಱದು . . . ಪಾಡಿದರು (ಭರಚ. ೦೨-೮೩). 'ಚಚ್ಚಪುಟ' ಪರಾ. [ ಸಂ. ]

**ಚಾಚತ್ಪುಟ** (ನಾ). = ಚಾಚಪುಟ : ಬಳಿಕ ಧ್ರುವ . . . ಏಕವೆಂಬ ಸಪ್ತತಾಳ ಭೇದಂಗಳಂ ಅವುಗಳೊಳು ಚಂಚತ್ಪುಟ ಚಾಚತ್ಪುಟ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮). [ ಸಂ. ]

**ಚಾಚರೆ** (ನಾ). ಮುಂದಕ್ಕೆ ಚಾಚಿಕೊಂಡಿರುವ ಬಂಡೆ,–ಕಲ್ಲು : ಬಾನ್ ಬಟ್ಟೆಯಲೆವ ಬರ್ದಿಲರಾ ಚಾಚರೆಯೊಳೇಗಳುಂ ಕುಳಿತಿರ್ದ ಶಿಖರಗಾತ್ರದ ಪರ್ದುಮುದಿಯನಂ ಕಂಡು (ಶ್ರೀರಾಮಾ. ೩೩೩-೩೯). [ ಚಾಚು$_1$ + ಅರೆ$_2$ (<ಅಱೆ$_4$) ]

**ಚಾಚಾ** (ನಾ). ಚಿಕ್ಕಪ್ಪ ; ತಂದೆಯ ಸೋದರ : ನಿಮ್ಮಾಯಿ ಚಾಚಾನ ಡೈರಿಯಲ್ಲಿ ಇದೇ ವ್ಯಕ್ತಿಯ ಹೆಸರು ಬರೆದಿದೆ (ಭಾರತಿ. ೩೨).
[ ←ಹಿಂ. ಚಚಾ, ಚಾಚಾ ]

**ಚಾಚಿ, ತಾಚಿ** (ನಾ). ಮಕ್ಕಳ ಭಾಷೆಯಲ್ಲಿ ತಾಯಿಯ ಮೊಲೆ : (+). **ತಾಚಿ:** ತಾಚಿ ಹಾಲಿಗೆ ಒಗ್ಗಿದ ಮಗು ಮೇಲುಹಾಲನ್ನು ಕುಡಿಯುವುದಿಲ್ಲ (ರೂಢಿ). [ ದೇ.॥ ತಮಿ. ತೆಲು. ಚಾಚಿ. / ಹಿಂ. ಮರಾ. ಛಾತೀ ]

**ಚಾಚು₁** (ಕ್ರಿ). ೧. ಮುಂದೆ ನಡೆ,–ಸಾಗು,–ಸರಿ : ಪನ್ನಗಾಭರಣ ಶ್ರೀ ಮಲ್ಲಿಕಾರ್ಜುನ ಬಲ್ಲನೆನಲು ದಂಡಿಗೆ ಚಾಚಿತು (ಸಿದ್ಧರಾ. ೯-೮). ೨. ಮುಂದೆ ಒಡ್ಡು,–ಹಿಡಿ: ತಾಯಿಗಳು ಮೊಲೆಗಳನೊಡನೊಡನೆ ಕಟುಗಳಿಗೆ ಮಿಗೆ ಮೆಯ್ಯಡವಿ ಚಾಚಿಕೊಳುತ್ತಿರಲು (ಬಸವು. ೩೦-೩೬) : ಕರಪಲ್ಲವವ ಚಾಚಿದಳು ಕಂಕಣ ಘಲ್ಲುಘಲಿರೆನೆ (ನಳಚ. ೨-೩೩ ವ) : ನೃಪವರನಡಿಗೆ ನಿರ್ಮಲ ಕಿರೀಟಮಂ ಚಾಚುತಿರೆ (ಜೈಮಿಭಾ. ೭-೧೮). ೩. ಮುಂದೆ ತಳ್ಳು,–ನೂಕು : ಓಹಿಲದೇವನಂ ಪೊಱಮಡಿಸಿ ಕದವಂ ಚಾಚಲಾಗದು (ಓಹಿರ. ಹ. ೨೦೭-೮); ನಕುಲನುದಾರಕರ್ಣನ ಮುಟ್ಟಿ ಬಂದನು ಚಾಚಿದನು ರಥವ (ಕುಮ್ಮಾ.ಳ. ೪-೦೦) ; ಮೃತ್ಯುವಿನ ಗೋಸಾಳಿಯಲಿ ಚಾಚಿದನು ಚಾಪಳ ಚಂದ್ರಹಾಸಕವ (ತೊರವೆ. ೦-೮-೩೩). ೪. ನೀಡಂ; ವಿಸ್ತರಿಸು: ಭೃತ್ಯನ ಕಾವುದೆಂದರ್ಜುನನು ಹಣೆ ಚಾಚಿದನು ಹರಿಪದಕೆ (ಕುಮ್ಮಾ.ಉ. ೨-೪೪);ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು (ಗಾದೆ). ೫. ಪಾರುಮಾಡು; ರಕ್ಷಿಸು : ಹಿಡಿದುದ ಬಿಡದಿದ್ದಡೆ ಕಡೆಗೆ ಚಾಚುವ ಅಲ್ಲದಿದ್ದಡೆ ನಡು ನೀರಲ್ಲದ್ದುವ (ಬಸವ. ೩೩೦). ೬. ಹೆಚ್ಚಾಗಿ ಒದಗಿಸು; ಧಾರಾಳವಾಗಿ ಹಾಕು: ಆ ಸಂತರ್ಪಣೆಯಲ್ಲಿ ಕೇಳಿ ಕೇಳಿದಷ್ಟು ಹೋಳಿಗೆ ಚಾಚುತ್ತ ಇದ್ದರು (ರೂಢಿ). [ ದೇ.॥ ತಮಿ. ಚಾಟು ; ತುಳು. ತೆಲು. ಚಾಚು ]

**ಚಾಚು₂** (ನಾ). ವಿಸ್ತಾರ ; ವ್ಯಾಪ್ತಿ ; ಹರವು : ಅವರ ಶಾರೀರಕ್ಕೆ ಬಹಳ ದೊಡ್ಡ ಚಾಚಿತ್ತು (ಸಂಗೀತ. ೨೬) ; ಭೂಮಿಯ ಉಬ್ಬು ಸೂರ್ಯನಿಗೂ ಆ ಚಾಚಿಗೂ ನಡುವೆ ಎದ್ದು . . . ನೆಲದ ಮೇಲೆ ನೆರಳನಾಟವಿರಲಿಲ್ಲ (ಖಳಜೀ. ೯೩). [ <ಚಾಚು₁ ]

**ಚಾಚುಬಂಕ** (ನಾ). ಮನೆಯ ಮುಂದೆ ಅಥವಾ ದೋಣಿ ಹಡಗು ಇತ್ಯಾದಿಗಳಲ್ಲಿ ವಿಸ್ತರಿಸಿದ ಸೂರುಳ್ಳ ಜಾಗ : ಒಂದು ನಿರ್ದಿಷ್ಟವಾದ ರೀತಿಯಲ್ಲಿ ಹಗ್ಗ ಮತ್ತು ಕೂವೆಮರಗಳು ಅಳವಟ್ಟಿರುವ ಹಡಗು ; ದೋಣಿಯಲ್ಲಿ ಹುಟ್ಟು ಆನಿಕೆಯನ್ನು ಹೊತ್ತಿರುವ ಕಬ್ಬಿಣದ ಚಾಚುಬಂಕ: ಇಂಥ ಬಂಕವಿರುವ ದೋಣಿ (Rigger. ಇಂಕನಿ). [ ಚಾಚು₁ + ಬಂಕ₁ ]

**ಚಾಚೂ** 'ಚಚು' ನೋ.

**ಚಾಜು** (ನಾ). ೧. ಸಂಪ್ರದಾಯವಾಗಿ ಬಂದುದು ; ಪರಂಪರೆಯಿಂದ ಬಂದುದು: ಜನಾಂಗದ ಪೀಳಿಗೆಗೆ ಚಾಜಾಗಿ ಉಳಿಯಲೆಂದು . . . ಹುರಿ ದುಂಬಿಸಿ ನಗುವಳು (ಕನ್ನಡಾ. ೩೨). ೨. ಬಳುವಳಿ: ಕುಂಬಾರ ಮನಿಯಾಗ ಹುಟ್ಟಿದಿ ಸೀಗಿ ಚರಗ ಬುಟ್ಟಿ ಚಾಜ ತಂದೆ (ಲೋಕಗೀ. ೦೩೯).
[ ? ]

**ಚಾಟ** (ನಾ). ಮೋಸಗಾರ ; ವಂಚಕ. 'ಚಾಟವಿದ್ಯೆ' ಪರಾ. [ ಸಂ. ]

**ಚಾಟಕ** (ನಾ). ೧. ಗಾರುಡಿವಿದ್ಯೆ ; ಅಭಿಚಾರ ; ಕಣ್ಣುಕಟ್ಟುವಿದ್ಯೆ : ನೋಟ ಲಕ್ಷಣ ಹೇಳ್ವೆ ಕೇಳ್ವೆ ಚಾಟಕದ ಯೋಗಲ್ಲ ರಾಜಾಯೋಗ ತಾನು (ಜ್ಞಾನಸಿಂ. ೦೮-೬೨) ; ಮಣಿಮಂತ್ರೌಷಧಂಗಳಂ ಬಲ್ಲಸಲ್ಲ ಚಾಟಕದ ವಿದ್ಯೆಯಂ ತೋರುವವನಲ್ಲ (ಮಲ್ಲಿಚ. ೩-೦೦). ೨. ಮಂತ್ರಗಾರ; ಯಕ್ಷಿಣಿ ಗಾರ : ಪಡಿಯ ಚಾಟಕನಲ್ಲ ಒಡನೆ ಬೂಟಕನಲ್ಲ ನಡುವೆ ಚಾಟಕನಲ್ಲ ಶೈವನಂತೆ (ಪ್ರಭುಲಿ. ೦೩೦-೩). 'ಚಾಟಕತನ' ಪರಾ. [ ಸಂ. ]

**ಚಾಟಕತನ** (ನಾ). ೧. ಮೋಸಗಾರಿಕೆ. ೨. ಮಾಯಾಜಾಲ : ಪಾಟಲಿಪೂಗಳ ಮಿಟಿಸಿ ಶಿಖಿಯೊಳು ಚಾಟಕತನದಲಿ ಕಾಟಕರತಿಭರದಿ . . . ನೋಡುತ (ಹಮಜ. ೦೮) ; ಊಟಕೆ ಬಂದವರಲ್ಲಾ ಬೀಗರು ಚಾಟಕತನದಲಿ ರಾಜಕುಮಾರಿಯ ಬ್ಯಾಟಕೆ ಮೆಚ್ಚಿ ಆತನ ಮದುವೆಯ ನೋಟಕೆ ಬಂದವರೇ (ಕರ್ನಾಕ. ೩೨೯). [ ಚಾಟಕ + – ತನ ]

**ಚಾಟಕ್ಕೈರ** (ನಾ). ಗಂಡುಗುಬ್ಬಿಮರಿ : "ಚಾಟಕ್ಕೈರವೆಂದರೆ ಗಂಡು ಗುಬ್ಬಚ್ಚೀ ಪಿಳ್ಳೆ" (ಸಿದ್ಧಾಂತಿ. ೦೩೯). [ ಸಂ. ]

**ಚಾಟಣಕ** (ನಾ). ಒಂದು ಬಗೆಯ ಪಕ್ಷಿ : ಚಟಕ ಚಾಟಣಕ ಚಕ್ರವಾಕ ಕರಟಿ ಬಳಾಹಕ ಗೃಧ್ರ ಪಿಕ ಮಾರಕುಟಿಕ (ಮದೇಪು. ೫-೯). [ ? ]

**ಚಾಟವಿದ್ಯೆ** (ನಾ). ಮೋಸಮಾಡುವ ವಿದ್ಯೆ ; ಗಾರುಡೀ ವಿದ್ಯೆ ; ಕಣ್ಣುಕಟ್ಟು ವಿದ್ಯೆ : ತಾಂತ್ರಿಕರ ಚಾಟವಿದ್ಯೆಗಳಿಂದಲೂ, ವಿಷಪ್ರಯೋಗ ಗಳಿಂದಲೂ ನೀವು ಯಾವಾಗಲೂ ಜಾಗರೂಕರಾಗಿರಬೇಕು (ಕಥವಿ. I,೬೨೩).
[ ಚಾಟ + ವಿದ್ಯೆ ]

**ಚಾಟಿ₁, ಚಾವಟಿ, ಛಾಟಿ, ಛಾವಟಿ** (ನಾ). ೧. ಹುರಿಯನ್ನು ಅಥವಾ ಬಾರನ್ನು ಕಟ್ಟಿ ಮಾಡಿದ ಹೊಡೆಯುವ ಸಾಧನ ; ಬಾರುಕೋಲು ; ಕೊರಡೆ: ಮುಂದಣಂ ತೆಗೆದು ಕಟ್ಟಿದ ಬಲ್ಮಱುಗಳ್ಗೆ ಚಾಟಿಯಂ ಪಿಡಿವ . . . ಸಂಭ್ರಮಕ್ಕೆ ನೆಲೆಯಾದನಪೂರ್ವದ ಬಾಹುಕಂ (ನಳಚಂ. ೬೫೦) : ಚಾಟಿಯೊಳ್ ಬಡಿವುತುಂ ಸರಳ್ಗಳಂ ಪೊಸೆವುತುಂ . . . ಬಳಲಿಸುವರು (ಜಬಪು. ೫೬-೨೬) : ಕರವಜ್ರಮುಷ್ಟಿಯನ್ನೊಲೆದು ಪ್ರತತಿಯ ಕೊನರ ಚಾಟಿಯಂ ಕಳೆದು ಪೊಯ್ದು . . . ಸುಳಿಘಾಳಿ ಸುಳಿವುದಾ ನಂದನದೊಳು (ಜನಮು. ೪೮-೩೪). ೨. ಬುಗುರಿಯನ್ನು ಆಡುವುದಕ್ಕಾಗಿ ಉಪಯೋಗಿಸುವ ಹುರಿ,–ದಾರ : ಬುಗುರಿಯಾಡಿಸಲು ಚಾಟಿ ಅಗತ್ಯ (ರೂಢಿ). **ಚಾವಟಿ :** ೧. ಚಾವಟಿ ಹಿಡಿದು ಪಾರ್ಥನ ಸಾರಥಿಯಾಗಿದ್ದನು (ವಾರಾಕ್ಕ. ೭೬) ; ಚಾವಟಿಯ ಏಟನಂತೆ ಕೇಳಿಸಿತು ಆ ಮಾತು ನನಗೆ ! (ಶಾಲಮು. ೯೦) ; ಕೈಯಲ್ಲಿ ಚಾವಟಿಯನ್ನು ಹಿಡಿದು ತನ್ನ ಚಿಕ್ಕಪ್ಪನ ಕುರಿಯ ಮಂದೆಯನ್ನು ಕಾಯಬೇಕಾಗಿದ್ದಿತು(ಪ್ರಗಂಬ. ೭). **ಛಾಟಿ:** ೧. ಒಂದೇಟು ಕೊಡುವುದಕ್ಕಾಗಿ ಕುದುರೆಯ ಛಾಟಿಯನ್ನು ಮೇಲಕ್ಕೆತ್ತಿದೆ (ಪ್ರತಾಪ. ೫೪) ; ಛಾಟಿ ಹೊಡೆತದ ಸದ್ದು ಛಾಟಿ ಹೊಡೆದ ನಂತರ . . . ಗಾಡಿ ಎಳೆಯುವ ಸದ್ದು (ಕೂನಥೀ. ೨೦). **ಛಾವಟಿ :** ೧. ಕಸ್ತೂರಿ ನಿರೀಕ್ಷಿಸಿದ್ದಕ್ಕಿಂತ ಹೆಚ್ಚಿನ ಛಾವಟಿ ಏಟು ಬಿತ್ತು (ಬೆಂದಜೀ. ೭೮).

**ಚಾಟಿಯಿಲ್ಲದೆ ಬುಗುರಿ ಆಡಿಸು** = (ಆಲಂ) ಸಾಹಸಮಾಡು : ಅವನು ಚಾಟಿಯಿಲ್ಲದೆ ಬುಗುರಿ ಆಡಿಸುತ್ತಾನೆ (ರೂಢಿ).

[ದೇ.॥ ತಮಿ. ಚಾಟ್ಟಿ, ಚಾಟ್ಟೈ ; ಮಲ. ಚಾಟ್ಟ; ತೆಲು. ಜಾಟಿ ; ಕೊಲಾ. ಸಾಟ್ ]

**ಚಾಟಿ₂** 'ಸಾಟಿ₁' ನೋ.

**ಚಾಟಿಕ್ಕೋಲು** 'ಚಾಟಿಗೋಲು' ನೋ.

**ಚಾಟಿಗುಂಡು** (ನಾ). ತುದಿಯಲ್ಲಿ ಗುಂಡನ್ನು ಉಳ್ಳ ಒಂದು ಬಗೆಯ ಚಾವಟಿ : ಚಾಟಿಗುಂಡು ಬಂಧನಕ್ಕಲ್ಲದೆ (ಬಲೇಶ್ವ.೨): ಕುಟ್ಟಿಕೊಳ್ಳದಿರಿ ಚಾಟಿ[ಚಾಟಿ]ಗುಂಡಿನಲಿ ಶಸ್ತ್ರವನು ಚಿಟ್ಟಿಕೊಳ್ಳದಿರಿ ಬೆನ್ನಿನಲಿ ಸಿಡಿಯನು ಕಟ್ಟಿ ತೂಗಿಸಿಕೊಳ್ಳದಿರಿ (ಕನಕ. ೦೩೨-೩). [ ಚಾಟಿ₁ + ಗುಂಡು ]

**ಚಾಟಿಗೋಲು, ಚಾಟಿಕೋಲು** (ನಾ). ಚಾವಟಿಯ ಕೋಲು ; ಬಾರು ಕೋಲು : ತನ್ನ ಉದ್ದನೆಯ ಚಾಟಿಗೋಲಿನ ಮೇಲೆ . . . ಕೈಯಾಡಿಸುತ್ತ (ಪುನರು. ೨೬೩). **ಚಾಟಿಕೋಲು :** ಮತ್ತಕೋಕಿಲನೆಂಬ ಚಾಟಿಕೋಲವಗೆ ಕಣ್ಣೊತ್ತಿ ಹೊಯ್ ಹೊಯ್ಯೆಂದನೊಡನೆ (ಭರತ. ೪೮-೭೬).
[ ಚಾಟಿ₁ + ಕೋಲು₁ (< ಕೋಲ್₁) ]

**ಚಾಟಿಸು₁** (ಕ್ರಿ). ಚಾವಟಿಯಿಂದ ಹೊಡೆ,–ಮರ್ದಿಸು,–ಪ್ರಹಾರ ಮಾಡು: ಕರಿಘಟೆ ತುರಂಗಮಂ . . . ಕೂಡಿಕೊಂಡು ಕೌರವಬಲವ ಚಾಟಿ ಸೇಲೆಂದು ನುಡಿದಂ (ತುರಂಗ. ೩೬-೨೬). [ ಚಾಟಿ₁ + – ಇಸು₃ ]

**ಚಾಟಿಸು₂** (ಕ್ರಿ). ಸಾರು ; ಪ್ರಕಟಿಸು : ಕೂಲಿ ಕೆಲಸ ಕೂಡ ದೊರೆಯ ದಿರಲು ತನ್ನ ಹೆಂಡತಿಯನ್ನು ವಿಕ್ರಯಿಸುವೆನೆಂದು ಚಾಟಿಸಿದರು (ಪುರಾವಿ. ೨೧೭). [ ←ತೆಲು. ಚಾಟಿಂಚು, ಸಾಟಿಂಚು ]

**ಚಾಟು₁** (ನಾ). ಒಂದು ಅನುಕರಣ ಶಬ್ದ.

**ಚಾಟುಚಾಟು** (ದ್ವಿರುಕ್ತಿ): ಸತಿಯಂ ಚಮ್ಮಟಗೆಯುಲಿ ಚಾಟು ಚಾಟನೆ ಪತಿ ಹೊಡೆವುತಿರಲು (ಬಸಪು. ೫೨-೮).

**ಚಾಟು₂** (ನಾ). ೧. ಆಶ್ರಯ; ಶರಣು: (+). ೨. ಆಸರೆ; ರಕ್ಷಣೆ; ಮಳೆ, ಗಾಳಿ, ಬಿಸಿಲು ಮೊದಲಾದುವುಗಳಿಂದ ರಕ್ಷಿಸಿಕೊಳ್ಳಲು ಮಾಡಿಕೊಂಡ ರಕ್ಷಣಾ ಸ್ಥಾನ, – ಮರೆ, ತಡಿಕೆ ಮೊದಲಾದದ್ದು : ಆನೆ ಕುದುರೆ – ಒಂಟೆಗಳ ಸಲುವಾಗಿಯೂ ಚಾಟು ಮಾಡಲ್ಪಟ್ಟಿತ್ತು (ತಿರೋಮು. ೭೭).

**ಚಾಟಾಗು**=ಆಶ್ರಯವಾಗು; ರಕ್ಷಣೆ ನೀಡು ; ಮರೆಯನ್ನುಂಟು ಮಾಡು : ಸಡೇದ ಗಿಡಗಳನ್ನು ಹಾಕಿದರೆ ಸುತ್ತಲೂ ಚಾಟಾಗಿ ಗಾಳಿಯ ಭಾರವನ್ನು ಹಿಡಿಯುತ್ತವೆ (ಕೃಷಿಪ್ರ. ೧೫೦). [ ದೇ. ॥ ತೆಲು. ಚಾಟು ]

**ಚಾಟು₃** 'ಸಾಟಿ₁' ನೋ.

**ಚಾಟು₄** (ಗು). ೧. ಸಂತೋಷಕರವಾದ; ಪ್ರಿಯವಾದ. 'ಚಾಟೂಕ್ತಿ' ಪರಾ. ೨. ಚಮತ್ಕಾರವಾದ; ಚಾತುರ್ಯದ: ಮೈ ಮೈಯೊಳಡಗು ವಂದದೊಳಪ್ಪಿ . . . ರಮಿಸಿದರ್ಕೆ ಮರ್ಝು ಚಾಟುವೋಹಿಗಳು (ಭರತ. ೭೮-೧೪೭). (ನಾ). ೩. ಸಂತೋಷಕರವಾದ ಮಾತು ; ಪ್ರಿಯವಚನ : ಅತಿ ಕೃಪಣಂಗಳುಮಪ್ಪ ಚಾಟು ಸಹಸ್ರಂಗಳೊದವೆ (ಕಾದಂಪೂ. ೯೨೭). ೪. ಚಮತ್ಕಾರ; ಚಾತುರ್ಯ: ನಾಟಕಸತಿಯರಲ್ಲವೆ ನೀನು ತಾನೆಂದು ಚಾಟಾಗಿ ನುಡಿದರೆ ನೃಪಗೆ ತೀಟವೇಳುತಿದೆ . . . ಎಂದೆಣಿಸಿದರು (ಭರತ. ೧೪-೯೦). ೫. ಚಮತ್ಕಾರದ ಮಾತುಗಳನಾಡುವವನು : ಬಂದಿಕಾಱನು ಚಾಟು ಚಪಳಿಗನೆಂದು ನಾ ಮುಂದಱಿಯೆನೆಂದಳು ಮಾಯೆ (ಪ್ರಭುಲೀ. ೭-೫೩). [ ಸಂ. ]

**ಚಾಟುಕ** (ನಾ). ಸಂತೋಷಕರವಾದ ಮಾತು ; ಸಂತೋಷಗೊಳಿಸುವ ಮಾತು. ೨. ಹೊಗಳುವವನು ; ಸ್ತುತಿಗಾರ: "ಮುಖಸ್ತುತಿ ಮಾಡುವವ" (ಚಾನಕೋ. ೫೫). [ ಸಂ. ]

**ಚಾಟುಕಾತಿ** (ನಾ). ಹಿತವಾದ ಮಾತುಗಳನ್ನಾಡುವವಳು ; ಪ್ರಿಯ ಭಾಷಿಣಿ : ಚಾಟುಕಾತಿಯರು ಚಾಂದಸಿಕೆಯು ನೂಕಿ ಸಘಾಟಿಕೆಯಿಂದ ಪಾಡಿದರು (ಭರತ. ೫-೫೮). [ ಚಾಟು₄ + – ಕಾತಿ₅ ]

**ಚಾಟುಕಾರ** (ನಾ). ೧. ಹಿತವಾಗಿ ನುಡಿಯುವ ಮಾತು ; ಸಂತೋಷ ಗೊಳಿಸುವ ಮಾತು ; ಪ್ರಿಯವಚನ ; ಮುಖಸ್ತುತಿ: ಪುಸಿಗೂರ್ಮೆ ಯಿಂದನೇಕ ಚಾಟುಕಾರದಿಂ ನಂಬಿಸಿ ಮೆಲ್ಲನೆ ಬೆಸಗೊಳ್ವುದುಂ (ಧರ್ಮಾಮೃ. ೨-೧೦೭) ; ಆ ವನಂ . . . ಚಾಟುಕಾರಪಟು ಶಠವಿಟನಂತೆ ಕುಶಲಪಥ ಸನಾಥಮುಂ (ಪಾಧಪು. ೦೦-೮೦ವ). ೨. ಪ್ರೀತಿ ; ವಿಶ್ವಾಸ. 'ಚಾಟು ಕಾರಂಗೆಯ್' ಪರಾ. [ ಸಂ. ]

**ಚಾಟುಕಾರಂಗೆಯ್** (ಕ್ರಿ). ಸಂತೋಷಗೊಳಿಸು ; ಪ್ರೀತಿಯನ್ನು ತೋರಿಸು: ಕಾಲ ಮೇಲೆ ಪೊರಳ್ದು ಚಾಟುಕಾರಂಗೆಯ್ವುದುಂ (ಪಂಚತಂ. ೦೮೯-೮). { ಚಾಟುಕಾರ + – ಕೆಯ್₁ ]

**ಚಾಟುಕಾರಿಸು** (ಕ್ರಿ). ಕೀರ್ತಿಸು; ಹೊಗಳು ; ಸ್ತುತಿಸು: ಗುಣಪಾಲಸೆಟ್ಟಿ ಬೆಱಗಾಗಿ ಪೆರ್ಗಡೆಗಳಂ ಚಾಟುಕಾರಿಸಲೆಂದು ಕೃತಕವಚನಂಗಳಿಂ ನಂಬೆ ನುಡಿದು (ಧರ್ಮಾಮೃ. ೦೦-೪೨). [ ಚಾಟುಕಾರ + – ಇಸು₃ ]

**ಚಾಟುಕಾಱ** (ನಾ). ೧. ಪ್ರಿಯವಾದ ಮಾತುಗಳನ್ನಾಡುವವನು : ವಂಗನೊಳ್ ಬಗೆಯಿಲ್ಲದಂಗನೊಳ್ ಮನವೊಲ್ಲದತಿ ಚಾಟುಕಾಱನಂ ರತರಷ್ಟಚೋರನಂ ಭೂಪಿನುತ ರೂಪನಂ ಭಾವಿಸುತ್ತೋಪನಂ ಬಂದು (ಜಗವಿ. ೦೭-೧೦೯ ರಗಳೆ). ೨. ಮುಖಸ್ತುತಿ ಮಾಡುವವನು; ಹೊಗಳು ಭಟ್ಟ : ಋಷಿಯರ ಮಾರ್ಗಮಂ ಕಲಿಯಲೆಂದು ಕೃತಕ ವೈರಾಗ್ಯದಿಂ ಸಂಸಾರಕ್ಕೆ ವೇಸುವರಂತೆಲ್ಲಾ ಋಷಿಯರ್ಗಂ ಚಾಟುಕಾಱರ{ರ} ವಿನಯದಿಂ ಪೊಡೆಮಡುವುದುಂ (ಧರ್ಮಾಮೃ. ೬-೨೮).

[ ಚಾಟು₄ + – ಕಾಱ ]

**ಚಾಟುಗಾಲು** (ನಾ). ಒಂಟಿಕಾಲಿನಲ್ಲಿ ನಿಂತು ಭೂಮಿಯನ್ನು ಗಟ್ಟಿಸುವುದು : ಸಮವಾದ ಪಾದಗಳಿಂದ ನಿಂತು ವಂದು ಕಾಲಿಂದ ಭೂಮಿಯ ತಾಟಿಸುವುದುಂಟು ಅದು ಚಾಟುಗಾಲುಯೆಂಬುದು (ಐದ್ಮಟೀ. ೪-೪೭).

[ ಚಾಟು₀ + ಕಾಲು1 (<ಕಾಲ್₁) ]

**ಚಾಟುಗೋಷ್ಠಿ** (ನಾ). ಪ್ರಿಯವಾದ ಸಂಭಾಷಣೆ ; ಸರಸಸಲ್ಲಾಪ : ಅವರು ಕುಲಾಂಗನೆಯರ ನೆಳಲಿಗೆ ಕೂಡ ಹೆದರುವವರಾಗಿದ್ದರೂ . . . ಮಠಗಳಲ್ಲಿ ಊಟ ನೀಡುವ ನಗೆಮೊಗದ ವಿಗಡೆಯರನ್ನಾಗಲೀ, ಕಂಡು ಚಂದ್ರಶೇಖರರಾಯರು ಆವರೊಡನೆ ಯಥೇಷ್ಟವಾಗಿ ಚಾಟುಗೋಷ್ಠಿಗಳನ್ನಾಡುವರಂತೆ ! (ಪವಶೀ. ೮). [ಚಾಟು₄+ಗೋಷ್ಠಿ (<ಗೊಟ್ಟಿ₁)]

**ಚಾಟುತನ** (ನಾ). ೧. ಇಷ್ಟವಾಗಿರುವಿಕೆ ; ಪ್ರಿಯವಾಗಿರುವಿಕೆ : (+). ೨. ಮಾತಿನ ಚತುರತೆ; ಪ್ರಿಯೋಕ್ತಿಗಳನ್ನು ನುಡಿಯುವಿಕೆ : ಕೂಟದ ರಸುಗಳ ಮಧ್ಯದೊಳಿರ್ದ ನೃಪಗವಳ್ಚಾಟುತನದಿಂ ಮಾಡಿದಟಮಟವನು ಸುರೆ(ಸಮ್ಯಕ್ತ್ವ. ೯-೩೮) ; ಚಲ್ಲಂ ಚದುರೋಜೆ ಚಾಟುತನಮಂದಂ ಬಂಧ ಮೊಳ್ಪೇಟಮಿಚ್ಚೆಗೆ ಸಂದೊಂದುವ ಕೂಟಮಲ್ಲಮುವರ್ಗೇಂ ಮೈಸಂದು ಮುಚ್ಚಿದ್ರ್ದುದೋ (ರಾಜಶೇ. ೧೧-೮೩). ೩. ಹೊಗಳಿಕೆ ; ಮುಖಸ್ತುತಿ : "ಚಾಟು, ಚಟು, ಶ್ಲಾಘೇ=ಚಾಟುತನದ ನುಡಿ" (ನಾಚಿರಾ. ೬): ನೀನೀ ಚಾಟುತನದಲಿ ಸುಲಭನಹೆ ನಿಜವಿದ್ಯವಲಾ ಕಳನೊಳಾಂತರನಿಱಿದಡೊಪ್ಪುವುದದುವೆ ಶೂರತನ (ಕೌಶಿರಾ. ೧೯-೨೭).

[ ಚಾಟು₄ + – ತನ ]

**ಚಾಟುಪದ್ಯ** (ನಾ). ಮನೋಹರವಾದ ಅರ್ಥವುಳ್ಳ ಚಿಕ್ಕ ಪದ್ಯ ; ಚುಟಕ ; ಸುಭಾಷಿತ : ಒಂದು ಶತಕ ಹಾಗು ಕೆಲವು ಚಾಟುಪದ್ಯ ಮುಕ್ತಕಗಳನ್ನು ಬಿಟ್ಟರೆ 'ಕಾವ್ಯಸಾರ'ದಲ್ಲಿ ಉದ್ಧೃತವಾದ ಪದ್ಯಗಳೆಲ್ಲ ಚಂಪೂ ಪ್ರಬಂಧಗಳಿಂದ ಆಯ್ದುಕೊಂಡವುಗಳಾಗಿವೆ (ತವನಿ. ೩೭).

[ ಚಾಟು₄ + ಪದ್ಯ ]

**ಚಾಟುಪೊಂಗ** (ನಾ). ಪ್ರಿಯವಾಗಿ ಮಾತನಾಡುವವನು (?): ನಗುತ್ತೆ ಜನನಿಯಂತದಕ್ಕೆನುತ್ತೆ ಚಾಟುಪೊಂಗನುಸುರೆ ಬಂದೆ (ಹಾಲಾಸ್ಯ. ೪-೦೩-೧ ರಗಳೆ). [ ಚಾಟು₄ + ಪೊಂಗ ]

**ಚಾಟುಭಣಿತಿ** (ನಾ). ಚಮತ್ಕಾರದ ಹೇಳಿಕೆ ; ಚತುರತೆಯ ಮಾತು ; ಚತುರೋಕ್ತಿ: ಗಣಿಕೆಯ ಚಾಟುಭಣಿತಿ[ಪಾಠಾಂ. ಭಣಿತೆ]ಯಂ ಕೇಳ್ದರಸನೊಳ್ ಪೀಠಮರ್ದಕನಿಂತೆಂದಂ (ರಾಜಶೇ. ೧೦-೦೨೨ವ).

[ ಚಾಟು₄ + ಭಣಿತಿ ]

**ಚಾಟುಮಾತು** (ನಾ). ಸಂತೋಷಗೊಳಿಸುವ ಮಾತು ; ಚತುರೋಕ್ತಿ: ನೀಟುದೋಱುತ ಮಿಠಾರಿಯರೊಲಿಸುತಾ ಚಾಟುಮಾತುಗಳಾಡಿ ನಗುತಾ ಮೀಟಿ ಮಿಸುಕುವ ಚುನ್ನಾಟದಿ ನರ್ತನದಾಟ ನೋಡಿದರು ಕೋವಿದರು (ಸೌಂದಕಾ. ೩-೧೦೧). [ ಚಾಟು₄ + ಮಾತು₁ ]

**ಚಾಟುಲ** (ಗು). ಚಂಚಲವಾದ ; ಚಪಲವಾದ. 'ಚಾಟುಲತನ' ಪರಾ.

[ ಸಂ. ]

**ಚಾಟುಲತನ** (ನಾ). ಚಂಚಲ ಸ್ವಭಾವ ; ಅಸ್ಥಿರತೆ ; ಚಪಲತನ : ಸದ್ಭಕ್ತ ದೈವವೆಂದು ಅರ್ಚಿಸುವ ಠಾವಿನಲ್ಲಿ ಮತ್ತತ್ವ ದುಶ್ಚಾರಿತ್ರ ಪಗಡೆ ಪರಿಹಾಸಕತನ ಚಾಟುಲತನ ಗೆಲ್ಲ ಸೋಲತನ ಇವೆಲ್ಲವ ಬಿಡಬೇಕು (ಮೋಹಮಾ. ೫೫-೨೨೫). [ ಚಾಟುಲ + – ತನ ]

**ಚಾಟುವಚನ** (ನಾ).=ಚಾಟಂವಮಾತು : ಕುಸಂ ವಸುದೇವ ದೇವಕಿಯರ ಸೆಱೆಯಂ ಬಿಟ್ಟು . . . ಕೆವ್ಮನೆ ನಿವ್ಮನಚ್ಚಿಗಂಬಡಿಸಿದೆನೆಂದು ಚಾಟು ವಚನಂಗಳಂ ಮೆಱೆದು (ಜಗವಿ. ೩-೨೨ ವ); ಅರಸಂ ಯಥಾರ್ಥ ಪ್ರೇಮ ಚಾರುಚಾಟುವಚನಾಮೃತವರ್ಷದಿಂದರಸಿಯು ಗಾ ತ್ರ ಕ್ಷೇ ತ್ರ ದೊ ಳ್ ರೋಮಹರ್ಷಸಸ್ಯಸಮೃದ್ಧಿಯಂ ಮಾಡಿ (ಪುಷ್ಪಪು. ೩-೧೧೭ವ); "ಇಷ್ಟು ದೊಡ್ಡ ಭೂತಾಕಾರದ ಶರೀರಕ್ಕೆ ಅನ್ನವಿಲ್ಲದಿದ್ದರೆ ಶಿವನು ಮೆಚ್ಚಿಯಾನೇ?" ಎಂದು ಚಾಟುವಚನಗಳನ್ನು ಆಡಿದನು (ಶ್ರೀರಾಯ. ೧೯).

[ ಚಾಟು$_4$ + ವಚನ ]

**ಚಾಟುವೆಣ್** (ನಾ). ಸಂತೋಷಗೊಳಿಸುವ ಮಾತುಗಳನ್ನಾಡುವವಳು; ಪ್ರಿ ಯ ಭಾ ಷಿ ಣಿ : ಬೇಟವ ಮಾಡಿದಳ್ಳಹುಕಾಲವಿಂದಾತ ಕೂಟಕೆ ಸಾರ್ತಂದನೆನಲು ಚಾಟುವೆಣ್ಣೊಬ್ಬಳೆ ನಗುತಿದಿರ್ಗೊಂಡ ಸಘಾಟವನೇನ ಬಣ್ಣಿಪೆನು (ಭರಜ. ೭೮-೧೧೪); ಎದೆಗೋಂಟೆಯ ತಳಪಟ ಮಾಳ್ಪ ಚಾಟು ವೆಣ್ಗಳ ತಿಂಥಿಣಿಯಿಂದ ವೇಶ್ಯಾವಾಟ ರಾರಾಜಿಸುತಿಹುದು(ನಾಗಳು. ೨-೫೪).

[ ಚಾಟು$_4$ + ಪೆಣ್ ]

**ಚಾಟೂಕ್ತಿ** (ನಾ). ೧. ಸಂತೋಷಗೊಳಿಸುವ ಮಾತು; ಪ್ರಿಯವಚನ. ೨. ಚಮತ್ಕಾರೋಕ್ತಿ : 'ಶ್ಲೋಕ' ರೂಪದಲ್ಲಿರುವ ಸಂಸ್ಕೃತದ ಸುಭಾಷಿತಗಳನ್ನೂ ಅನ್ಯೋಕ್ತಿಗಳನ್ನೂ ಚಾಟೂಕ್ತಿಗಳನ್ನೂ ಕನ್ನಡಿಸುವುದಕ್ಕೆ ಸಾಂಗತ್ಯವು ಅತ್ಯಂತ ಸಮರ್ಥವಾದ ಛಂದಸ್ಸು (ಇಂಚಾಪ. IV, ೮೦೯).

[ ಚಾಟು$_4$ + ಉಕ್ತಿ ]

**ಚಾಟೆ** (ನಾ). (ಕರಾ) ಒಂದು ಬಗೆಯ ಉದ್ದವಾದ ಮೀನು. [ ? ]

**ಚಾಟ್ಯೂರ್** (ನಾ). ಒಂದು ಊರಿನ ಹೆಸರು : ಚಾಟ್ಯೂರುಂ ಪೆರ್ಮ್ಮಾಣೂರುಂ ಸಮೀಪವಾಗ್ (ಮ್ಯಆರಿ. ೧೯೪೧, ೧-೩೫ : 788). [ ? + ಊರ್ ]

**ಚಾಡ$_1$** 'ಚಹಡ' ನೋ.

**ಚಾಡ$_2$** (ನಾ). ಮರ ; ವೃಕ್ಷ : ಒಂದು ಗಿಡುವಿನಲ್ಲಿ ಹುಟ್ಟಿದ ಮುಳ್ಳ ಒಂದೊಂದ ಮುಱಿದು ಸುಡಲೇತಕ್ಕೆ ಚಾಡವ ಕಡಿದು ಒಡಗೂಡಿ ಸುಡಲಿಕ್ಕೆ ವಿಶ್ವಮಯ ಮೊನೆ ನಷ್ಟ (ಆವರೀ. ೬೦). [ <ಪ್ರಾ. ಝಾಡ ]

**ಚಾಡಗಾರ** 'ಚಾಡಿಕಾಱ' ನೋ.

**ಚಾಡತನ** 'ಚಹಡತನ' ನೋ.

**ಚಾಡಿ** 'ಚಹಡ' ನೋ.

**ಚಾಡಿಕಾಱ, ಚಾಡಗಾರ, ಚಾಡಿಕಾರ, ಚಾಡಿಗಾರ** (ನಾ). ಚಾಡಿ ಹೇಳುವವನು; ಇಲ್ಲದ ಅಪವಾದವನ್ನು ಸೃಷ್ಟಿಸುವವನು; ಪಿಸುಣ; ನಿಂದಿಸುವವನು : ನಾಱುತಿರ್ಪ ಮೂಗುಳ್ಳಾತನೆತ್ತಲುಂ ಚಾಡಿಕಾಱಂ ವದನದುರ್ಗಂಧಿಯಾ ಕೊಂಡೆಯದ ಸೂಚಕಂ (ವೀಕೈಪು. ೪-೨೨-೩೩); ಮೃಡನ ನಿಜವೇಳ್ವಲ್ಲಿ ಪಾರಂಗತದ ಚಾಡಿಕಾಱನಾಗುತ ಚರಿಪುದು (ಷಶಿಲ. ೧೩-೮). **ಚಾಡಗಾರ :** (೩). **ಚಾಡಿಕಾರ :** "ಪಿಶುನಃ—ಚಾಡಿಕಾರಂ" (ಕಾಶಕ್ಕ. ೨೦೪); "ದ್ವಿಜಿಹ್ವಃ – ಹಾವು, ಸುಳ್ಳು, ಚಾ[ಪಾಠಾಂ. ಭಾ] ಡಿಕಾರ" (ಸಿದ್ಧಾಂತಿ. ೩೪೯); ಚಾಡಿಕಾರನಿಗೆ ಊರೆಲ್ಲಾ ನಂಟರು (ಹುಟ್ಟಿಹ. ೧೧೨). **ಚಾಡಿಗಾರ :** (೩). [ ಚಾಡಿ (<ಚಹಡ) +– ಕಾಱ ]

**ಚಾಡಿಕೋರ, ಚಾಡಿಖೋರ** (ನಾ). ಚಾಡಿ ಹೇಳುವ ಸ್ವಭಾವ ವುಳ್ಳವನು ; ಪಿಸುಣ : ಆದರೆ ಎಲ್ಲರೂ ನನ್ನನ್ನು ಚಾಡಿಕೋರ ಎಂದು ಬಿಟ್ಟರೆ! ಎಂದು ನನಗೆ ಹಾಗೆ ಮಾಡಲು ಹೆದರಿಕೆಯಾಗಿತ್ತು (ಶಾಲಿಮ. ೦೫೦); ಆ ಜಗಳಗಂಟ ಚಾಡಿಕೋರನ ವಿಚಾರ ಬಹಳವಾಗಿ ಯೋಚಿಸಬೇಕಾಗಿದೆ (ಕೈಲಾಳ. ೭೫). **ಚಾಡಿಖೋರ:** (೩). [ಚಾಡಿ (<ಚಹಡ) +–ಕೋರ$_3$]

**ಚಾಡಿಕೋರಿ** (ನಾ). ಚಾಡಿ ಹೇಳುವ ಸ್ವಭಾವದವಳು : ನಾನೇನು ಚಾಡಿಕೋರಿಯಲ್ಲ (ಶಾಲಿಮ. ೧೫೦). [ ಚಾಡಿಕೋರ + – ಇ$_2$ ]

**ಚಾಡಿಖೋರ** 'ಚಾಡಿಕೋರ' ನೋ.

**ಚಾಡಿಗಾರ** 'ಚಾಡಿಕಾಱ' ನೋ.

**ಚಾಡಿಗಾರ್ತಿ** (ನಾ). ಚಾಡಿ ಹೇಳುವವಳು: (೩).

[ ಚಾಡಿಗಾಱ + – ತಿ$_1$ (< – ಇತ್ತಿ) ]

**ಚಾಡಿಬಾಕ** (ನಾ). = ಚಾಡಿಕೋರ : ತನ್ನ ಅಂತರಂಗವನ್ನು ಗೆಳೆಯರ ಮುಂದಾಗಲಿ ಚಾಡಿಬಾಕರ ಮುಂದಾಗಲಿ ಇರಿಸಿ ಉಪಯೋಗವೂ ಇಲ್ಲ (ಸರಸ. ೦೦೬). [ಚಾಡಿ (<ಚಹಡ) + ಬಾಕ (<ಬಕ್ಕ) ]

**ಚಾಡಿಬುರಕ** (ನಾ).=ಚಾಡಿಕೋರ : ಲೋಭಿಯಾಗುವುದರಿಂದ ನಿಷ್ಕರುಣಿಯಾಗುವುದರಿಂದ ಚಾಡಿಬುರುಕನಾಗು [illegible]ರಿಂದ ಮನವು ಅಶುದ್ಧವಾಗುವುದು (ವಿಜಾಮಂ. ೫೦).

[ ಚಾಡಿ (<ಚಹಡ) + ಬುರಕ (<ಪುರುಕ) ]

**ಚಾಡಿಮಾತು** 'ಚಾಡಿವಾತು' ನೋ.

**ಚಾಡಿಯೋಲೆ** (ನಾ). ಗ್ರಂಥಗಳಲ್ಲಿ ಸೇರಿಸುವ ಅಕಾರಾದಿ ಮುಂತಾದ ಸೂಚಿ ;ಅನುಬಂಧ: ಈ ಸಲದ ಮುದ್ರಣದಲ್ಲಿಯೂ ನಾಲ್ಕು ಚಾಡಿಯೋಲೆಗಳನ್ನು (Indices) ಸೇರಿಸಿದೆ (ಕವಿಚ. II, ಮುನ್ನುಡಿ XI).

[ ಚಾಡಿ (<ಚಹಡ) + ಓಲೆ ]

**ಚಾಡಿವಾತು, ಚಾಡಿಮಾತು** (ನಾ). ಚಾಡಿಯ ಮಾತು; ಇಲ್ಲದ ದೂಷಣೆಯನ್ನು ಆರೋಪಿಸುವ ಮಾತು : ಮುಂ ಗೋಕುಲದೊಳು ಬಲಭದ್ರನ ಚಾಡಿವಾತಂ ಕೇಳ್ದು (ಚಕದ. ೧೮). **ಚಾಡಿಮಾತು :** ಹೊಗಳಿಕೆಗಾಗಲಿ ಚಾಡಿಮಾತುಗಳಿಗಾಗಲಿ ಕಿವಿಗೊಟ್ಟು ಆತ ಇತರರನ್ನು ತೆಗಳಬಾರದು (ತತ್ವಪ್ರಾ. ೫೬೦). [ ಚಾಡಿ (<ಚಹಡ) + ಮಾತು$_1$ ]

**ಚಾಡಿಸು**(ಕ್ರಿ). ಚಾಡಿಹೇಳು; ದೂರನ್ನು ಆರೋಪಿಸು: ರೂಢೀಶನೊಡನೆ ಯಂಬಲಿಯನುಂಡುದು ಯಿಶ ಚಾಡಿಸಿದನದರಿಂದ ಹೊಲಗೇರಿಯೊಳು ನಮ್ಮ ನೋಡಲಿಚ್ಛೈಸಿ ನೃಪ ಬಂದಪನು (ಚೋರಬ. ೮-೫೨).

[ ಚಾಡಿ (<ಚಹಡ) +– ಸು$_1$ ]

**ಚಾಣ** 'ಚೇಣ' ನೋ.

**ಚಾಣಂಗಿ** 'ಚಣಗೆ' ನೋ.

**ಚಾಣಕಿ** 'ಚಾಳಾಂಕಿ' ನೋ.

**ಚಾಣಕ್ಕಿ** 'ಚಾಳಾಂಕಿ' ನೋ.

**ಚಾಣಕ್ಯ** (ನಾ). ೧. ಮೌರ್ಯ ರಾಜ್ಯಸಂಸ್ಥಾಪನೆಗೆ ಕಾರಣನಾದ ವ್ಯಕ್ತಿ; ಮೌರ್ಯ ಚಂದ್ರಗುಪ್ತ ಮಹಾರಾಜನ ಮಂತ್ರಿ ; ಅರ್ಥಶಾಸ್ತ್ರದ ಕರ್ತೃ : ಮನೆಯೊಳು ಚಾಣಕ್ಯನಿನ್ದಂ ಮಿ ಗಿ ಲೆ ನಿ ಪ ಮಹಾಮಂತ್ರಿ ನಾನಾ ನಯಜ್ಞಂ (ಎಕ. VI. ಚಿಕ್ಕಮ. ೦೬೦-೫೦: 1108 ?). ೨. (ಆಲಂ) ಬುದ್ಧಿವಂತ; ವ್ಯವಹಾರಕುಶಲ; ತಂತ್ರಗಾರ: ರಾಜಕೀಯದಲ್ಲಿ ಇವನು ಚಾಣಕ್ಯ (ರೂಢಿ). [ ಸಂ. ]

**ಚಾಣಕ್ಯಚೌಕ** (ನಾ). ಒಂದು ದುರ್ಗದ ಹೆಸರು: ವಂದನವುಂ ಕಿಳಿಗಿಳವುಂ ಚಂದನ ಚಾಣಕ್ಯಚೌಕ ಪನ್ನವಳಗಯೆ ಸನ್ದಣಿಗಡಗನಿಕರಮನೊನ್ದರ ನಿ ಮಿ ಷ ದೆ ಕೊಣ್ಡಾ ವೀರಪಾಣ್ಡ್ಯ (ಕೆಇಇ. IX–1, ೧೧೮-೬೩ : 1107).

[ ? ]

**ಚಾಣಕ್ಯತನ** (ನಾ). ವ್ಯವಹಾರಕೌಶಲ್ಯ ; ಕುಟಿಲನೀತಿ ; ಕುಶಲತೆ : ವಿಷ್ಣುವರ್ಧನನ ಚಾಣಕ್ಯತನ ಇಲ್ಲಿ ಚೆನ್ನಾಗಿ ಫಲಿಸಿತು (ಶಾಂತಲಾ. ೨೨೮).

[ ಚಾಣಕ್ಯ + – ತನ ]

**ಚಾಣಕ್ಯನೀತಿ** (ನಾ). ಕುಟಿಲ ನೀತಿ ; ಕುಟಿಲೋಪಾಯ : ಎಲ್ಲರನ್ನೂ ಶಿಬಿರಗಳಿಗೆ ಕಳಿಸಿಕೊಟ್ಟು ತಾವೂ ಬೊಪ್ಪಣನೂ ಚಾಣಕ್ಯನೀತಿಯೊಂದನ್ನು ಹೊಸೆಯುತ್ತ ಕುಳಿತರು (ಶಾಂತಲಾ. ೨೨೩). [ ಚಾಣಕ್ಯ + ನೀತಿ ]

**ಚಾಣಕ್ಯಮೂಲ** (ನಾ). ಒಂದು ಬಗೆಯ ಔಷಧಿ ಗೆಡ್ಡೆ : "ಮಹಾಕಂದಂ–ಚಾಣಕ್ಯಮೂಲಂ" (ಓಷಧಿ. ೦೦೭). [ ಚಾಣಕ್ಯ$_0$ + ಮೂಲ ]

**ಚಾಣಾಂಕಿ** 'ಚಾಳಾಂಕಿ' ನೋ.

**ಚಾಣಾಕ್ಷ** (ನಾ). ಹರಿತವಾದ ಬುದ್ಧಿಯುಳ್ಳವನು; ಸೂಕ್ಷ್ಮ ದೃಷ್ಟಿಯುಳ್ಳವನು; ಕುಶಲಮತಿ; ವ್ಯವಹಾರ ಚತುರ : ಕೊಡುವ ಬಾಣವ ಕಾಣಬಾರದು ಹಿಡಿದ ಧನು ಚಾಣಾಕ್ಷರಿಬ್ಬರ ಕಡುಹ ಬಣ್ಣಿಸಲರಿದು (ಕಾಶಿರಾ. ೩೬-೫೦): ಅಲ್ಲದೆ ಚಾಣಾಕ್ಷರಾದ ಅವರು ಈ ಪ್ರಸಂಗದಲ್ಲಿ ಆಚಾರ್ಯರ ಕಾರಸ್ಥಾನವನ್ನು ಕಂಡು ಹಿಡಿದಿದ್ದರು (ಸಮಜೀ. ೪೧): ಆದರೆ ಚಾಣಾಕ್ಷರಾದ ಫಿಡಲ್ ವೆಂಕೋಬರಾಯರು . . . ನಾರಾಯಣಗೌಳ ರಾಗವನ್ನು ಹಾಡುವಂತೆ ಸನ್ನೆ ಮಾಡಿದರು (ಸಂಗೀತ. ೦೩).

[ < ಚಾಣಕ್ಯ / ಮರಾ. ಚಾಣಖ್ಯ, ಚಾಣಕ್ಷ, ಚಾಣಾಕ್ಷ ]

**ಚಾಣಾಕ್ಷತನ** (ನಾ). ಸೂಕ್ಷ್ಮದೃಷ್ಟಿ; ಚಾತುರ್ಯ; ವ್ಯವಹಾರ ಕುಶಲತೆ: ಮೈದುನನ ಜಾಣತನಕ್ಕೂ ಚಾಣಾಕ್ಷತನಕ್ಕೂ ಅಕ್ಕ ಅಟ್ಟಹಾಸದಿಂದ ನಕ್ಕಳು (ವೃನಿ. ೪೩); ನನ್ನ ಚಾಣಾಕ್ಷತನದ ಅರಿವು ಆ ವೃದ್ಧನಿಗೆ ಚೆನ್ನಾಗಿ ಗೊತ್ತಿದೆ (ಬಂಗಾಹೆ. ೬೯): ಸಾಧಾರಣವಾಗಿ ಉಚ್ಚ ತರಗತಿಯ ಮೇಧಾಶಕ್ತಿಯೂ, ಯಶಸ್ವೀ ಆಡಳಿತದ ಚಾಣಾಕ್ಷತನವೂ, ಒಬ್ಬ ವ್ಯಕ್ತಿಯಲ್ಲಿ ಕೂಡಿ ಹೋಗುವುದಿಲ್ಲ (ಸಸ್ಮಳ. ೮೧). [ ಚಾಣಾಕ್ಷ + – ತನ ]

**ಚಾಣಾಕ್ಷತೆ** (ನಾ). = ಚಾಣಾಕ್ಷತನ : ಪೂಸ್ತರು ತಮ್ಮ ಚಾಣಾಕ್ಷತೆಯನ್ನು ಉಪಯೋಗಿಸಿದರು (ಕಾವೇರಿ. ೦೮೨). [ ಚಾಣಾಕ್ಷ + – ತೆ₃ ]

**ಚಾಣೆ** (ನಾ). (ಉಕ). ಅಂಗೈಯ ಮೇಲೆ ಬೆತ್ತದಿಂದ ಕೊಡುವ ಏಟು. [ ? ]

**ಚಾತ** (ನಾ). ೧. ಭೂತ ; ಪಿಶಾಚಿ. 'ಕುಟ್ಟಿಚಾತ' ಪರಾ. ೨. "ಒಬ್ಬ ರಾಕ್ಷಸ" (ಕಸೂ ಕೋ. ೩೬೩). [ ದೇ. ||ತಮಿ. ಮಲ. ಚಾತ್ತ ]

**ಚಾತಕ** (ನಾ). ಮಳೆಯ ನೀರಿನ ಆಧಾರದಿಂದಲೇ ಬದುಕುವುದೆಂದು ನಂಬಲಾದ ಪಕ್ಷಿ ; ಮಳೆಯ ಹನಿಗಳನ್ನು ಬಾಯೊಡ್ಡಿ ಕುಡಿದು ಬಾಯಾರಿಕೆಯನ್ನು ತೀರಿಸಿಕೊಳ್ಳುವ ಒಂದು ಬಗೆಯ ಪಕ್ಷಿ; ಚಾದಗೆ: ಚಾತಕಮಲ್ಲದೆ ವೃಷ್ಟನಿಪಾತಮನಲ್ಲಿಯ ಜನಂಗಳೆಳಸರ್ (ಶಾಂತೀಶ್ವ. ೦-೮೬) : ಮಾರುತ್ತರದ ಪನಿಮಳೆಗೆ ಜನಮನ ನಿರೀಕ್ಷಣಾಚಾತಕಂ . . . ಕೊರಳೆತ್ತಿ ನಿಂತಿರೆ (ಶ್ರೀರಾಮಾ. ೧೬೯-೪೬೯). [ ಸಂ. ]

**ಚಾತಕಿ** (ನಾ). ಹೆಣ್ಣು ಚಾತಕ ಪಕ್ಷಿ : ವಲಿಯು ಭಾರದ್ವಾಜ ಪಿಕ ಪಿಂಗಲಿ ನಿಶಾಟ ಧ್ವಾಂಕ್ಷ ಚಾ[ಪಾಠಾಂ. ಜಾ] ತಕಿ ಚಲಿಮಿಲಿಗ (ತೊರರಾ. ೩-೦-೩೩). [ ಸಂ. ಚಾತಕೀ ]

**ಚಾತಗುದ್ದಿ** (ನಾ). ಒಬ್ಬಾತನ ಹೆಸರು : ಮೂಡೆಕಲ್ಲಾ ಕಾಳೆಗದುಳ್ ಗಾರ ವರಾಳ್ ಅವಧೀರರಾ ಮಗನ್ ಚಾತಗುದ್ದಿಯಾರುವಟ್ ಪುಲಿಕುಬುಕಿಯರಾ ದುಗ್ಗಮಾರನ್ . . . ಅನ್ನಿಱಿದು ಸತ್ತರ್ (ಎಕ. X, ಶ್ರೀನಿವಾ. ೪೦-೩ ; ಸು. ೯೦೦). [ ? ]

**ಚಾತಬೊಕ್ಕಣಂಗಟ್ಟು** (ಕ್ರಿ). (?) : ನಖದೊಳ್ ಸೂಜಿಯಂ ಪೆಟ್ಟಿಯುಂ ಚಾತಬೊಕ್ಕಣಂಗಟ್ಟಿಯುಂ ಕರ್ಜಱಿಯನೂಱಿಯುಂ . . . ಪಲ್ಲಂ ಕಟಲೆ ಗುಟ್ಟಿಯುಂ ನೀರೊಳಿಕ್ಕಿ ಮೆಟ್ಟಿಯುಂ (ಅಜಿಪು. ೧೧-೧೦೨).

[ ಚಾತಬೊಕ್ಕಣ ? + ಕಟ್ಟು₁ ]

**ಚಾತಮ್ಮ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ನಟುಳ್ಳನ್ನ ಚಾತಮ್ಮನ್ ತೊಱುಗೊಳೆ ಇರ್ವ್ವ ವೇಡರಾ ಕೊನ್ದು ತೊಱುವಿಕ್ಕಿಸಿ ಸುರಲೋಕಂ ಪೊಕ್ಕ (ಎಕ. X, ಚಿಂತಾಮ. ೧೨೨-೧: ಸು. 1000). [ ? ]

**ಚಾತರಾಸಿ** 'ಚೇತರಾಶಿ' ನೋ.

**ಚಾತಾಣಿ** 'ಸಾತಾನಿ' ನೋ.

**ಚಾತಾಲ** 'ಸಾತಾನಿ' ನೋ.

**ಚಾತಾಳ** 'ಸಾತಾನಿ' ನೋ.

**ಚಾತಾಳಿ** 'ಸಾತಾನಿ' ನೋ.

**ಚಾತುಃಶ್ರುತಿ** (ನಾ). ನಾಲ್ಕು ವೇದಗಳು : ನಿರುತ ಚಾತುಃಶ್ರುತಿಗಳೊಳು ವಿಸ್ತರಣದಿಂದೊಂದು ಶಾವಂ ಕರಮೆಸೆಯುಲಱಿದೆತ್ತಿ ಶುನಕವನುಷ್ಟ್ರ ಸುತ್ತಿರಲು (ಬಸಪು. ೫೫-೫೧). [ < ಸಂ. ಚತುಃಶ್ರುತಿ ]

**ಚಾತುಃಸ್ವರ** (ನಾ). ಉದಾತ್ತ, ಅನುದಾತ್ತ, ಸ್ವರಿತ ಮತ್ತು ಪ್ರಚಯಂಗಳೆಂಬ ನಾಲ್ಕು ವೇದೋಚ್ಚಾರಣದ ಕ್ರಮ ಸ್ವರಗಳು: "ತ್ರಿದಿವಂ, ಷಡಾದಿ ಸಪ್ತಸ್ವರಮುಮ್ಯತಮುದಾತ್ತಾದಿ ಚಾತುಃಸ್ವರಂ ಸಂಪದೆ ಘೋಷಂ ವರ್ಣಜಾಲಂ ಸ್ವರಮೆನಿಕುಂ " (ನಾನಾರ. ೮೫). [ ಸಂ. ]

**ಚಾತುರ** (ಗು). ೧. ಜಾಣ್ಮೆಯ ; ಕೌಶಲದ ; ಚಾತುರ್ಯದ : ಬಳಿಕ ನೂಱಾನೆಯಲಿ ನಿನ್ನವನಳವಿಗೊಟ್ಟನು ಭೀಮಸೇನನ ಚಲಗತಿಯ ಚಾತುರ ಚಪೇಟ ಪದ[ಪಾಠಾಂ. ಚಾಪಳ ಚಪೇಟ ಪದ, ಚಾತುರ್ಯ ಪೀಠಪದ]ಪ್ರಹಾರದಲಿ (ಕುಮ್ಯಾಗ. ೪-೨೩). ೨. ಸುಂದರವಾದ; ಮನೋಹರವಾದ : " ಬಸವನೆನೆ ಗೊಂದೆಯೆನೆ ಚಾತುರ[ಪಾಠಾಂ. ಚಾರುತರ] ವೃಷಭನೊಳ್ಪೆಸರಕ್ಕು " (ಶಬ್ದಮಂ. ೬). (ನಾ). ೩. ಜಾಣತನ ; ಚಾತುರ್ಯ. ೪. ಪ್ರಿಯವಾದ ಮಾತನ್ನಾಡುವಿಕೆ ; ಹೊಗಳುವಿಕೆ ; ಸ್ತುತಿಸುವಿಕೆ. [ ಸಂ ]

**ಚಾತುರಂಗ** (ನಾ). ನಾಲ್ಕು ಅಂಗಗಳನ್ನುಳ್ಳದು; ಆನೆ, ಕುದುರೆ, ರಥ, ಕಾಲಾಳು ಎಂಬ ನಾಲ್ಕು ಅಂಗಗಳಿಂದ ಕೂಡಿದ ಸೈನ್ಯ ; ಚತುರಂಗ ಬಲ : ಅಲ್ಲಿ ತುಂಬುರನನೀಕ್ಷಿಸಿ ಪೇಳುತ ಚಾತುರಂಗಮಂ ಜಾನಿಸಿ ನೋಡಿ ನೋಡಿ ಹೊಗೆ ಹತ್ತಿದ ಪುತ್ತಳಿಯಂತೆ ಬಂದು (ನಂಬಿರ. ೭-೨) ; ನೆರಪಲ್ ಪೇಟ್ಟು . . . ಚಾತುರಂಗಮಂ ನಿಜಬಳಾಧಿಪತಿಗೆ ಕುಮಾರಂ (ಪುಷ್ಪಪು. ೫-೬) ; ಕದಳಿಯೊಳು ಮದದಾನೆ ಹೊಕ್ಕಂದದಲಿ ಹೆಚ್ಚಿದ ಚಾತುರಂಗದ ಮೆದೆಯನೊಟ್ಟಿದು ಹೂಣೆ ಹೊಕ್ಕನು ಥಟ್ಟನೊಡೆತುಳಿದು (ಕುಮ್ಯಾದ್ರೋ. ೫-೪). [ ಸಂ. ]

**ಚಾತುರಂಗಬಲ** (ನಾ). ಚತುರಂಗ ಸೈನ್ಯ : ಉನ್ನತಮಹಿಮಂ ತನ್ನ ಮುಂದಿರ್ದ ಚಾ[ಪಾಠಾಂ. ಚ]ತುರಂಗಬಲವಮಂ ನಡೆ ನೋಡಿ (ನಂಬಿರ. ೮-೭).

[ ಚಾತುರಂಗ + ಬಲ ]

**ಚಾತುರತನ** (ನಾ). ಚತುರತೆ ; ಕುಶಲತೆ; ಜಾಣತನ : " ಚಾಟು, ಚಟು, ಶ್ಲಾಘೇ = ಚಾತುರತನದ ನುಡಿ "(ನಾಟಿರಾ. ೩). [ ಚಾತುರ + – ತನ ]

**ಚಾತುರಿ** (ನಾ). ಚಾತುರ್ಯ ; ಜಾಣತನ ; ಕೌಶಲ : ನರನ ದೋರ್ಬಲ ನಿಶಿತ ಚಾತುರಿಯಶೇಷವ ನೋಡಲೋಸುಗ ಬಂದನೈಸೆಂದ (ಕೋಗಪು. ೧೬-೨೭); ಐರೋಪ್ಯರು . . . ಈ ಘಟನೆಗಳು ಬ್ರಾಹ್ಮಣರೆಂದು ಹೆಸರಾದ ಒಂದು ವ್ಯವಸಾಯಿಗಳ ಚಾತುರಿ ಎಂದು ಅರ್ಥ ಮಾಡಿದ್ದಾರೆ (ನಿಬಂಧ. I, ೦೦೯) : ಪಂಪನು ಚಾಣಕ್ಯನೀತಿಯ ಚಾತುರಿಯನ್ನು ಹೊರಗೆಡುವುವಂತೆ ಬಣ್ಣಿಸಿದ್ದಾನೆ (ಕವನಿ. ೩೫). [ ಸಂ. ಚಾತುರೀ ]

**ಚಾತುರಿಯ₁** (ನಾ). ಚಾತುರ್ಯ ; ಕೌಶಲ ; ಜಾಣತನ : ನೆತ್ತದೊಳ್ ಬಿತ್ತರಂಬಡೆದು ಚದುರಂಗದೊಳ್ ಚಾತುರಿಯಮನಿತ್ತು [ಪಾಠಾಂ. ಚಾತುರ್ಯಂಗೊಟ್ಟು] (ಗಿರಿಕ. ೨-೦೦೫ ವ) ; ನಿಜಪ್ಪ ಪ್ರವೆಸರಿನ ಯೋಗ ದಂಡವನು ಚಾತುರಿಯದಿಂ ಪಿಡಿವುತೆ (ಗಗಪಾ. ೦೬-೨೦) ; ಈ ಚಾತುರಿಯ ಮಧುರವಾಣಿಗಾಲಯಮಾದುದು (ವಂಕಾರಾ.೦-೩-೪೪).

[ < ಸಂ. ಚಾತುರ್ಯ ]

**ಚಾತುರಿಯ₂** (ನಾ) ಜಾಣ ; ಬುದ್ಧಿವಂತನಾದವನು ; ಚತುರ : ಉರುತರದ ಮಚ್ಚವ ಕಟ್ಟುವತಿ ಚಾತುರಿಯರಿಪ್ಪರು ಚಿನ್ನವರದರು ತಪ್ಪು ರಾಂತದಲಿ (ಜೀವಂಚ. ೨-೨೮). [ ಚಾತುರಿ + – ಅ₇ ]

**ಚಾತುರಿಸು** (ಕ್ರಿ). ಜಾಣ್ಮೆತೋರು (?) : ಅಪ್ಪಿದರು ಹಿಮಜಳವ ತವಮಗೊಪ್ಪದಲಿ ಚಾತ[ತು]ರಿಸಿ ಸಖಿಯರು ಚಪ್ಪರಿಸಿ ಚಲ್ಲಿದರು ಕುಚಯುಗನಾಭಿ ಜಘನದಲಿ (ಅಂಬಿಕಾ. ೮-೨೪). [ ಚಾತುರಿ + – ಇಸು₃ ]

**ಚಾತುರ್ಗತಿಕ** (ನಾ). [ಜೈನ] ದೇವ, ಮಾನವ, ತಿರ್ಯಕ್ ಮತ್ತು ನಾರಕವೆಂಬ ಚತುರ್ಗತಿಗಳನ್ನು ಹೊಂದುವವನು : ಚಾತುರ್ಗತಿಕನುಂ ಮಿಥ್ಯಾದೃಷ್ಟಿಯುಂ ಸಂಜ್ಞಿಯುಂ ಪರ್ಯಾಪ್ತಕನುಂ ಗರ್ಭಜನುಂ . . . ಉಪಲಬ್ಧಿಕನುಮಪ್ಪ ಭವ್ಯಂಗೆ ತತ್ಪ್ರಥಮೋಪಶಮ ಸಮ್ಯಕ್ತ್ವಮಕ್ಕುಂ (ತತ್ತ್ವಾಪ್ರ. ೮೧). [ ಸಂ. ]

**ಚಾತುರ್ಜಾತಕ** (ನಾ). ೧. ದಾಲ್ಚಿನ್ನಿ, ಲವಂಗಪತ್ರೆ, ಏಲಕ್ಕಿ ಮತ್ತು ನಾಗಕೇಸರಗಳೆಂಬ ನಾಲ್ಕು ಬಗೆಯ ಔಷಧದ್ರವ್ಯಗಳು : ಶತಾವರಿ ಘೃತ . . . ಚಂಗಲ್ವಕೋಷ್ಠ, ಚಾತುರ್ಜಾತಕಗಳು (ದಾಲ್ಚಿನ್ನಿ, ಲವಂಗ ಪತ್ರೆ, ಏಲಕ್ಕಿ ಮತ್ತು ನಾಗಕೇಸರಿ) . . . ಕಲ್ಕಮಾಡಿ ಪಾಕದಲ್ಲಿ ಕಲಸಿ ಹದದಲ್ಲಿಳಿಸಿ ಘೃತವನ್ನು ಶೋಧಿಸಬೇಕು (ಸಕವೈ. ೪೧೩ ಪಂ). ೨. ತಪಸ್ವಿಗಳಲ್ಲಿ ಒಂದು ಬಗೆ : ಕಾರ್ತಿಕದ ಪುಣ್ಣಮಿ ನೋಂಪುವಾರದನ್ನು ಚಾತು[ರ್ಜಾ]ತಕ ತಪೋಧನರ ಪಂಚರಾಶಿ ಪಾದಮೂಲ ಪರಿವಾರ (ಕಇಇ. ೧೧೩-೧೨-೧೯ : 1051). [ ಸಂ. ]

**ಚಾತುರ್ಜಾವ** (ನಾ). ೧. ನಾಲ್ಕು ಜಾವಗಳು. ೨. ನಾಲ್ಕು ಜಾವಗಳುಳ್ಳದು ; ರಾತ್ರಿ: ಚಾತುರ್ಜಾವದ ಹೊತ್ತು ಜಾಗರಗಳ ಮಾಡಿ (ಪುರಂದ. ೩-೧೨೫-೧). [ <ಸಂ. ಚಾತುರ್ಯಾಮ ]

**ಚಾತುರ್ಥ** (ಗು). ೧. ನಾಲ್ಕನೆಯ: ಆ ಜ್ಞಾನದಾಚೆ ವಿಜ್ಞಾನ ಉದಯವಿದೆ ಗಂಟೆ ಬಾರಿಸಿತ್ತು ಚಾತುರ್ಥ ಸರ್ಗ ನೈಸರ್ಗ ಮಾರ್ಗ ಡಂಗುರವ ಸಾರಿಸಿತ್ತು (ಹ್ರದಸ. ೧೦-೬). ೨. ನಾಲ್ಕನೆಯದಕ್ಕೆ ಸಂಬಂಧಿಸಿದ. [ ಸಂ. ]

**ಚಾತುರ್ಥಿಕ** (ಗು). ೧. ನಾಲ್ಕನೆಯದಕ್ಕೆ ಸಂಬಂಧಿಸಿದ ; ನಾಲ್ಕನೆಯ ದಿನ ಮಾಡತಕ್ಕ. 'ಚಾತುರ್ಥಿಕಸ್ನಾನ' ಪರಾ. (ನಾ). ೨. ನಾಲ್ಕು ದಿನಕ್ಕೊಮ್ಮೆ ಬರುವ ಜ್ವರ : ಚಾತುರ್ಥಿಕವೆಂಬ ಜ್ವರವು . . . ನಾಲ್ಕು ದಿನಕ್ಕೊಮ್ಮೆ ತಪ್ಪದೆ ಬರುವುದು (ಸಕವೈ. ೯೮). [ ಸಂ. ]

**ಚಾತುರ್ಥಿಕಸ್ನಾನ** (ನಾ). (ಮುಟ್ಟಾದವಳು) ನಾಲ್ಕನೆಯ ದಿನ ಮಾಡುವ ಶುದ್ಧಸ್ನಾನ : ಚಾತುರ್ಥಿಕಸ್ನಾನಮಂ ಸಂತಸದಿ ಮಾಡಿ ದೇವಾಂಗಮಂ ತೆಗೆದುಟ್ಟು (ಕಾಮಾಪು. ೭-೩೯). [ ಚಾತುರ್ಥಿಕ+ಸ್ನಾನ ]

**ಚಾತುರ್ದಂತ** (ನಾ). ೧. ನಾಲ್ಕು ದಂತಗಳುಳ್ಳದು; ಐರಾವತ. ೨. ಆನೆ: ಅಂತು ಚಾತುರ್ದಂತಪೊಂದೊಂದರ್ಗೆ ಓರೋರಂತೆ ನಡುವಗಲ್ವರಂ ಕಾದುವುದುಂ (ಪಂಪಭಾ. ೧೧-೩೬ ವ) ; ಚಾತುರ್ದಂತಮನಪರಾಜಿತ ನೇಟಿದಂ ತನ್ನ ಮನಃಪ್ರಸ್ಫಾರಿ ಪೌರುಷಮತಿಯಿಂ (ಶಾಂತಿಪು. ೪-೭).
[ ಸಂ. ]

**ಚಾತುರ್ದಂತಬಲ** (ನಾ). ಗಜಸೈನ್ಯ : ಅಂತು ನೆರೆದ ಚಾತುರ್ದಂತಬಲ ಜಲಧರ ಲಘಸಂ ಪ್ರಭಿನ್ನ ಬ್ರಹ್ಮಾಂಡಾಖಂಡ ಶಂಕೆಯಂ ಪುಟ್ಟಿಸೆ (ಶಾಂತಿಪು ೩-೧೦೧ ವ). [ ಚಾತುರ್ದಂತ + ಬಲ ]

**ಚಾತುರ್ಬಲ, ಚಾತುರ್ಬಳ** (ನಾ). ಚತುರಂಗ ಸೈನ್ಯ : ಚಾತುರ್ಬಲವಿಲ್ಲದರಸನಂತೆ ಕಣ್ಗೆಳದನಾಗಿ (ಶಾಂತಿಪು. ೪-೩೦ ವ). ಚಾತುರ್ಬಳ : ನಿಜೈಕಂ ದೋರ್ಬಳಂ ಶತ್ರುದುರ್ದಮ ಚಾತುರ್ಬಳನಾಶಮಂ ಪಡೆಯ (ಚಂದ್ರಪು. ೨-೯). [ ಸಂ. ]

**ಚಾತುರ್ಬಳ** 'ಚಾತುರ್ಬಲ' ನೋ.

**ಚಾತುರ್ಭಾಗ** (ನಾ). ನಾಲ್ಕನೆಯ ಒಂದು ಭಾಗ ; ಕಾಲುಭಾಗ. 'ಚಾತುರ್ಭಾಗಾರ್ಧ' ಪರಾ. [ ಸಂ. ]

**ಚಾತುರ್ಭಾಗಾರ್ಧ** (ನಾ). ನಾಲ್ಕನೆಯ ಒಂದು ಭಾಗದ ಅರ್ಧ ; ಎಂಟನೆಯ ಒಂದು ಅಂಶ : ಹಿಪ್ಪಲಿ ಮೂಲ, ತಾವರೆಬೇರು . . . ಈ ಚೂರ್ಣದ ವರಾಹ ತೂಕಮಂ ಚಾತುರ್ಭಾಗಾರ್ಧ ಕಷಾಯಂ ಕಾಚಿ ಪಾನವ ಮಾಡಲು ಸಂಧಿಗಸನ್ನಿ ಹರ (ಸಕವೈ. ೦೩೩).
[ ಚಾತುರ್ಭಾಗ + ಅರ್ಧ ]

**ಚಾತುರ್ಮಾಸ** (ನಾ). ೧. ನಾಲ್ಕು ತಿಂಗಳು. ೨. ನಾಲ್ಕು ತಿಂಗಳು ನಡೆಸುವ ವ್ರತ,-ನಿಯಮ ; ನಾಲ್ಕುಮಾಸಗಳಲ್ಲಿ ಮಂಗಿಯುವ ವ್ರತ: ಚಾತುರ್ಮಾಸದ ಪಾರಣೆಯೆಂದು . . . ಪೊಱಮಟ್ಟು (ವಡ್ಡಾರಾ. ೯೮-೮). ೩. ಚಾತುರ್ಮಾಸ್ಯ ವ್ರತದ ಕಾಲ,-ಅವಧಿ : ಚಾತುರ್ಮಾಸ ಹಿದು ಸನ್ನಿಹಿತವಾಯ್ತುದ ನೂಕಿ ಬಿಜಯಂಗೈವುದಿಚ್ಛೆಯಲಿ (ಕುಮ್ಮಾಅ. ೧೯-೩೧). [ ಸಂ. ]

**ಚಾತುರ್ಮಾಸ್ಯ** (ಗು). ೧. ನಾಲ್ಕು ತಿಂಗಳುಗಳಲ್ಲಿ ನಡೆಯಬೇಕಾದ. (ನಾ). ೨.ಮಳೆಗಾಲದ ನಾಲ್ಕು ತಿಂಗಳು, ಆಷಾಢ ಶುಕ್ಲ ಪೌರ್ಣಿಮೆಯಿಂದ ಹಿಡಿದು ಕಾರ್ತಿಕ ಶುದ್ಧ ಪೌರ್ಣಮಿಯವರೆಗೆ ವ್ರತ ಹಿಡಿದು ಮುನಿಗಳು ಒಂದೆಡೆ ವಾಸಿಸುವುದು ; ಒಂದು ವ್ರತ : ಸಂಸ್ಕಾರ; ವೈಶ್ವದೇವ, ಚಾತುರ್ಮಾಸ್ಯ, ಶುದ್ಧಿ . . . ಬಗ್ಗೆ . . . ಅಪರಾರ್ಕನು ಉದಾಹರಿಸಿದ್ದಾನೆ (ಭಾರದ. ೬೩) ; ಮಳೆಗಾಲದಲ್ಲಿ ನಾಲ್ಕು ತಿಂಗಳು ಮಾತ್ರ ಒಂದು ಕಡೆ ಮುನಿಗಳು ವಾಸಿಸಬೇಕು. ಇದಕ್ಕೆ 'ಚಾತುರ್ಮಾಸ್ಯ' ವೆನ್ನುತ್ತಾರೆ (ಕಶಾಅ. ೮೩). [ ಸಂ ]

**ಚಾತುರ್ಮುಕ್ತಿ** (ನಾ). ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯವೆಂಬ ನಾಲ್ಕು ವಿಧವಾದ ಮುಕ್ತಿ : ಯುಕ್ತಿಯುಂ ಗುರುಭಕ್ತಿ ತನಗಾ ಭಕ್ತಿಯುಂ ಗುರುಭಕ್ತಿ ಚಾತುರ್ಮುಕ್ತಿಯುಂ ಗುರುಭಕ್ತಿಯೇ ವ್ರತಯೋಗುರುಸ್ಸ ಶಿವಃಪ್ರೋಕ್ತವೆನುತಂ (ಬಸಪು. ೩೯-೩).
[ <ಸಂ. ಚತುರ್ಮುಕ್ತಿ ]

**ಚಾತುರ್ಯ** (ನಾ). ೧. ಜಾಣತನ ; ಕೌಶಲ ; ಬಂಧ್ವಿವಂತಿಕೆ : ಮಕರಾಂಕಧ್ವಜಮಾಲಿಕಾಪ್ರಕಟಿತ . . . ರತವ್ಯಾಪಾರ ಚಾತುರ್ಯಂ . . . ಅದೇಂ ಬೆಡಂಗಮುರ್ದುದೋ (ಚಂದ್ರಪು. ೧-೦೩೪); ಪಾಣೇಪತಿಗೆ ಚಾತುರ್ಯಮಂ . . . ಸ್ವಾಹಾಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ ಪಂಪಾಪತಿ ವಿರೂಪಾಕ್ಷನೆಮಗಿಷ್ಟಸಿದ್ಧಿಯಂ ಮಾಳ್ಕೆ (ಹಕಳಾ. ೦-೧). ೨. ಮನೋಹರವಾದುದು; ಆಹ್ಲಾದಕರವಾದುದು : ನಮಿಸಿ ಚಾತುರ್ಯರಸ ಸಂಸ್ತುತಿಗಳಂ ಮಾಡಿ (ಬಸಪು. ೫೮-೫೮). [ ಸಂ. ]

**ಚಾತುರ್ಯವಚನ** (ನಾ). ಜಾಣ್ನುಡಿ; ಚಮತ್ಕಾರದ ಮಾತು:ಜಗನ್ನುತ ಚಾತುರ್ಯವಚನರಚನೆಗಳಿಂದಂ ಭಟ್ಟಾರಕರ್ಬೆಸಸುವುದುಂ (ಸುಕುಮಾ. ೫-೫). [ ಚಾತುರ್ಯ + ವಚನ ]

**ಚಾತುರ್ಯವಡೆ** (ಕ್ರಿ). ಚತುರತನವನ್ನು ಹೊಂದು ; ಕೌಶಲತೆಯನ್ನು ಪಡೆ: ಜನರಿವಳನು ಪೋಲ್ವ ಜಾಣೆ ಜಗದೊಳಿಲ್ಲನೆ ಚಾತುರ್ಯವಡೆವಳು (ಹರಿಬಿ. ೦-೫೪). [ ಚಾತುರ್ಯ + ಪಡೆ$_1$ ]

**ಚಾತುರ್ಯಾಮ** (ನಾ). ೧. ನಾಲ್ಕುಜಾವ : ಆಗಳುಭಯಬಲಂಗಳೊಳಂ ಚಾತುರ್ಯಾಮಾವಸಾನ ಘಟಿತ ಘ[o]ಟಿಕಾಧ್ವನಿಗಳುಂ . . . ನೆಗಟ್ಟುವು (ಪಂಪಭಾ. ೧೦-೩೩ವ). ೨. [ಜೈನ] ಪಾರ್ಶ್ವನಾಥನಿಂದ ಪ್ರತಿಷ್ಠಿತವಾದ ಅಹಿಂಸಾ, ಸತ್ಯ, ಅಸ್ತೇಯ, ಅಪರಿಗ್ರಹ ಎಂಬ ನಾಲ್ಕು ಮಹಾ ವ್ರತಗಳು: ಬೌದ್ಧ ಪಿಟಕಗಳಲ್ಲಿ ಜ್ಞಾತಪುತ್ರ ಮಹಾವೀರನು ಚಾತುರ್ಯಾಮಯುಕ್ತನೆಂದು ವರ್ಣಿಸಲಾಗಿದೆ (ಜೈನಪ. ೫೩೩). [ ಸಂ. ]

**ಚಾತುರ್ವರ್ಗ** (ಗು). ೧. ನಾಲ್ಕು ಪುರುಷಾರ್ಥಗಳಿಗೆ ಸಂಬಂಧಿಸಿದ. (ನಾ). ೨. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳು : ಲಿಂಗ ಜಂಗಮ ಪೂಜನಂಗಳೆ ತುಂಗ ಚಾತುರ್ವರ್ಗ ಸೌಖ್ಯಫಲಂಗಳೆರೆ ಮಿಗಿಲೆಂದು ಧರಣಿಯೊಳಿದ್ದಳಾ ನಿಂಬಿ (ಬಸಪು. ೨೩-೮೯).
[ ಸಂ. ]

**ಚಾತುರ್ವರ್ಣ** (ನಾ). ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳು : ಸಮಯಿಗಳುಂ ಚಾತುರ್ವರ್ಣಮುಮುಚಿತ ಚರಿತ್ರಮಂ ಬಿಸುಟ್ಟಾದಂ ಪೊಲ್ಲಮೆಯೊಳ್ ಸಲೆ ನಡೆವರ್(ಆದಿಪು.೧೫-೩೩);

ಚಾತುರ್ವರ್ಣಂಗಳೊಳಂ . . . ಮಹಾಗುಣ ವಾತ್ಸಲ್ಯಂ(ಶಸಾರ. ೪೮೩); ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಹೀಗೆ ಚಾತುರ್ವರ್ಣ ಜಾತಿ ಪಂಗಡಗಳ ಕವಲು ಕವಲಾದ ಬಳ್ಳಿಗಳನ್ನು . . . ಹಬ್ಬಿಸಿರುತ್ತಾರೆ (ಹೊಸೂಹ. ೧೭). [ ಸಂ. ]

**ಚಾತುರ್ವರ್ಣ್ಯ** (ನಾ). =ಚಾತುರ್ವರ್ಣ: ಮಧ್ಯಾಹ್ನದಾಗಳ್ ಚರಿಗೆವೊಕ್ಕು ಚಾತುರ್ವರ್ಣ್ಯದ ಮನೆಗಳುಮಂ ತೊಳಲುತ್ತಂ (ವಡ್ಡಾರಾ. ೧೧೭-೮); ಚಾತುರ್ವರ್ಣ್ಯದೊಳಂ ದ್ವಿಜಜಾತಿಗೆ ದರ್ಭಾಧಿಕಾರಮಲ್ಲದೆ . . . ಶಸ್ತ್ರಾಸ್ತ್ರ ಮವರ್ಗೆ ಜಾತಿವಿರುದ್ಧಂ (ಗದಾಯು. ೨-೧೭); ಪರಮಾತ್ಮಂ ಪರಮಾಗಮಂ ಪರಮ ಚಾತುರ್ವರ್ಣ್ಯಮಾರ್ಹಂತ್ಯ ಮುದ್ದುರ ಸದ್ಧರ್ಮಮಿವಂ ತಿರಸ್ಕರಿಸೆ ಸಾರ್ಗಂ ದೃಷ್ಟಿಮೋಹಾಸ್ರವಂ (ಸುಕುಮಾ. ೮-೧೯); ಸ್ವಧರ್ಮದಿಂ ನಿರ್ವಿಘ್ನಮಾಗಿ ಸಕಲಪ್ರಕೃತಿಜಾತಿ ಚಾತುರ್ವರ್ಣ್ಯಮಂ ಬಿಡದೆ ಪೊರೆವಲ್ಲಿ ನೀತಿಶಾಸ್ತ್ರಂಗಳ್ಗೆ ಪಳಿಪೊರಿಸದೆ (ಜ್ಞಮಿಥಾ. ೧೮-೧೫); ಆ ಪಾಠಶಾಲೆಗಳಲ್ಲಿ ಚಾತುರ್ವರ್ಣ್ಯದ ಬಾಲಕರಿಗೂ ಮತ್ತು ಅವರೊಡನೆ ಸೇರತಕ್ಕ ಇತರ ಮತದವರಿಗೂ ಓದು . . . ಕಲಿಸುತ್ತಿದ್ದರು (ಮಹಾವಂ. II, ೫೨). [ ಸಂ. ]

**ಚಾತ್ರ** (ನಾ). ಶಿಷ್ಯ ; ವಿದ್ಯಾರ್ಥಿ: ಗೊಮ್ಮಲಯ್ಯನ ಭಾವಂ ಸಿಲ್ಲಪಯ್ಯಂ ತಪೋಧನರ್ಗಂ ಚಾತ್ರರ್ಗಂ ವಿದ್ಯಾರ್ತ್ಥಿಮಾಣಿಯರ್ಗಂ . . . ನಾಲ್ಕು ಮಾವಿನ ಮರನ ಬಿಟ್ಟಂ (ಕಇಇ. ೯೨-೧-೫೭: 1082). [ <ಸಂ. ಛಾತ್ರ ]

**ಚಾದಗೆ,** ಜಾದಗೆ (ನಾ). =ಚಾತಕ : "ಚಾದಗೆ ಚಾತಕಂ" (ವಸ್ತುಕೋ. ೪೨-೧೭); ಕಾರ್ಗಾಲದ ಬರವಂ ಚಾದಗೆ ಪಾರ್ಷಂತೆ ತನ್ನ ಬರವನೆ ಪಾರುತಿರ್ದ ಧರ್ಮಪುತ್ರನ ಮರುತ್ಸುತನ ಪಾದಕಮಲಂಗಳಂ . . . ಅರ್ಚಿಸಿ (ಪಂಪಭಾ. ೮-೩೭ ವ); . . . ಚಾದಗೆಯಂತಾಕಾಸವನಿಗೆ ಬಾಯಂ ಬಿಡುತ್ತುಂ (ಧರ್ಮಾಮೃ. ೦-೦೩೦); ನಿಜಾಭಿಮಾನಮಂ ಧರಿಯಿಸುವಲ್ಲಿ ಚಾದಗೆವೊಲಪ್ಪುದು (ಕಾವ್ಯಸಾ. ೪೨೨). **ಜಾದಗೆ:** ಜಾ[ಪಾಠಾಂ. ಚಾ]ದಗೆ ನವೋದಬಿಂದುವನಾದರಿಪವೊಲುಟಿದ ಕೆಟಿಯ ತೊಟಿಯುದಕಮನೇ ನಾದರಿಕುಮೆ (ಆದಿಪು. ೯-೧೦೯); ಮುಂಗಾರ ಪನಿಯಂ ಸೇವಿಸುವ ಜಾದಗೆಯಂತೆ (ಅದ್ಭುಟ. ೫-೬೮ ವ). [ <ಸಂ. ಚಾತಕ ]

**ಚಾದಗೆವಕ್ಕಿ,** ಜಾದಗೆವಕ್ಕಿ (ನಾ). ಚಾತಕಪಕ್ಷಿ: ನಲಿದುದು ಸೋಗೆ ನುಣ್ಪ ನೆಡೆಗೊಂಡುದು ಚಾದಗೆವಕ್ಕಿ (ಗಿರಿಕ. ೯-೩೩). **ಜಾದಗೆವಕ್ಕಿ:** ಕಾರ್ಗಾಲಮಂ ಸೋಗೆ ಮುಂಬನಿಯಂ ಜಾದಗೆವಕ್ಕಿ . . . ನೆನೆವಂತಾಂ ನೆನೆವೆಂ ಸರೋಜಮುಖಿಯಂ (ಆದಿಪು. ೧೨-೩೦). [ ಚಾದಗೆ + ಪಕ್ಕಿ$_1$ ]

**ಚಾದಗೆವಱಿ** (ನಾ). ಚಾತಕ ಪಕ್ಷಿಯ ಮರಿ : ಕಾರದಿನಂ ಕೈಮಿಾಱಿದ ಬಳಿಕವೆ ನೀರನುಣದ ಚಾದಗೆವಱಿಯುಂತಾಹಾರಂಗೊಳ್ಳದನುಳಿದಳ್ (ಜಯನೃಪ. ೪-೩೩). [ ಚಾದಗೆ + ಮಱಿ ]

**ಚಾದರ,** ಚದ್ದರು, ಚಾದರಿ, ಚಾದರು, ಛಾದರು (ನಾ). ೧. ಹತ್ತಿಯ ಅಥವಾ ರೇಷ್ಮೆಯ ದಪ್ಪ ಹೊದಿಕೆ,–ದುಪ್ಪಟಿ. ೨. ರೇಷ್ಮೆಯ ಜರ ತಾರಿಯಿಂದ ಅಲಂಕೃತವಾದ ವಸ್ತ್ರ ; ಶಾಲು : ರನ್ನದೊಟ್ಟಿಲೊಳಿಟ್ಟು ಚಾದರವ ಮರೆ ಮಾಡಿ ಜೋಗುಳವ ಪಾಡುತಾ ದಂಪತಿಗಳಿರುತ್ತಿದ್ದರು (ಶರಕು. ೩-೫೩); ಹಸರು ಜರತಾರ ಚಾದರ ಜಾಣೆ ಮುಸುಕಿಟ್ಟು (ಶ್ರೀಕೃಪಾ. ೧೨); ಪಲ್ಲಂಗವು ಸುಂದರವಾದ ಬಹು ಬೆಲೆಯುಳ್ಳ ಚಾದರದಿಂದಲೂ . . . ಅಲಂಕೃತವಾಗಿತ್ತೆಂದು ಹೇಳಲವಶ್ಯಕವಿಲ್ಲ (ರಾಜಾರಾ. ೦೯). **ಚದ್ದರು:** ೧. ಚದ್ದರು ಹಾಸಿ . . . ಶ್ರೀಮತಿಯನ್ನು ಮಲಗಿಸಿದ್ದರು (ಚಗುಳ. ೨೮೯). **ಚಾದರಿ:** ೨. ಹಣೆದೆದ್ದು ನಮಿಸಿ ಖಂಡೆಯವಿಡಿದು ಚಾದರಿಯ ಮಣಿದುಡುಗೆ ಸುತ್ತಿ (ಚಿನಮು. ೫-೨೦). **ಚಾದರು:** ೧. ನಿರ್ಮಲೆಗೆ ಬಾಯೆಲ್ಲ ಕಹಿಯಾದಂತಾಗಿ ಚಾದರಿನ ಕೊನೆಯನ್ನು ಬಾಯೊಳಗಿಂದ ಹೊರತೆಗೆದಳು (ಮೂರುದಾ. ೨೨೦); ಅದೇ ವಿಚಾರದಲ್ಲಿ ಚೆನ್ನೂ ಹಾಸಿಗೆಯಲ್ಲಿ ಉರುಳಿ ಚಾದರು ಹೊದ್ದುಕೊಂಡ (ಕ್ಷಿತಿಜ. ೫೨). ೨. ಮುರಿಯುತ ಚಕ್ರವ ಹರಿವುತ ಚಾದರ ಭರದಿ ನಿಮ್ಮಪ್ಪಗೆ ವರೆ ಹೋಗೆಂದರು (ಚಂದ್ರಾವ. ೦೨). **ಛಾದರು:** ೧. ಅವನು ಹೇಳಿದಂತೆ ಒಂದೆರಡು ಸಲ ಕೆಳಗಿಳಿದು ಬಂದು ಅವನ ಛಾದರು ಮೊದಲಾದುವುಗಳನ್ನು ತಂದುಕೊಟ್ಟೆ (ಚಂದುಟ. ೦೩). [ ←ಪಾರ. ಚಾದರ್; ಹಿಂ. ಮರಾ. ಚದ್ದರ್, ಚಾದರ್ ]

**ಚಾದರಿ** 'ಚಾದರ' ನೋ.

**ಚಾದರು** 'ಚಾದರ' ನೋ.

**ಚಾದಾನಿ** (ನಾ). ಚಹದ ಪಾತ್ರೆ; ಟೀ ಕಾಯಿಸುವ ಪಾತ್ರೆ : "ವರ್ಕ, ಚಾದಾನಿಯನ್ನು ಒಲೆಯ ಮೇಲಿರಿಸು"–ಎಂದು ಯಜಮಾನಿಯು ಕೂಗುವಳು (ದಾಂಪ್ರ. I, ೩೯೩); ಒಂದು ಚಾದಾನಿಯಲ್ಲಿ ಬಿಸಿ ಚಾ, ಸಮಿಾಪದಲ್ಲಿ ಸಕ್ಕರೆಯ ಪಾತ್ರೆ (ನಿಷ್ಕಾಮ. ೦೦). [ ಚಾ$_2$ (< ಚಹ) + ದಾನಿ$_2$ ]

**ಚಾದುಪೊಲ** (ನಾ). ಒಂದು ಬಗೆಯ ಭೂಮಿ; ಕೆಂಪು ಭೂಮಿ (?) : ಆಗ್ನೇಯದ ಎಲಂಚಿ ಕೊಣ್ಣೆಯಿನ್ದೆ ಪೂಲಿ ಕುಣ್ಣೆಯಿನ್ದೆ ಪೆರ್ಬಾಳದೊಳಗಣ ಚಾದುಪೊಲದಿನ್ದೆ ಪರಿಯೊಟ್ಟೆಯ ಕೈವರದೊಳ್ ಒನ್ದು ಮಾನ್ನಂ ಮಣಮುಂ ಮೂಗಣ್ಣುಗಂಮ್ಮಾಣ್ನು (ಎಕ. X (೪), ಚಿಕ್ಕಬ. ೧೦೭-೭೭ : 850). [ <ಚಾದು$_1$ + ಪೊಲ ]

**ಚಾದ್ಯ** (ನಾ). ಗುಣಾಕಾರ ಮಾಡುವ ಅಂಕ ; ಗುಣಕ : (೬). [ ? ]

**ಚಾನ** 'ಚೇಣ' ನೋ.

**ಚಾನಸ** 'ಚಾಂದಸ' ನೋ.

**ಚಾಪ** (ನಾ). ೧. ಬಿಲ್ಲಂ ; ಧನುಸ್ಸು : "ಚಾಪಮೆನಲು ಬಿಲ್ಲಿಂಗೆ ನಾಮಂ" (ಮಂಗರಾ. ೮೭-೩೨); ದಿಟ್ಟರಹರಿ ನೀವೆನುತಲವರ ಬೆನ್ನಟ್ಟಿ ಬಡಿದು ಚಾಪಗಳ ಕುಟ್ಟಿ ಮುಱಿದು (ಕೃಪುಸಾಂ. ೨೦-೨೨೦); ಕಣ್ಬೇನೆಯ ಕರಡಿಯಂತೆಯೂ ಚಲದಿರೆಲೆ ಕೂಟ ಚಾಪಂ ಪೋದೊಡೇನಕ್ಕುಂ (ರಾಮಾಶ್ವ. ೦೯೫-೨೭). ೨. ವೃತ್ತ ಪರಿಧಿಯ ಒಂದು ಭಾಗ. ೩. ಕಾಮನಬಿಲ್ಲು. ೪. [ಜ್ಯೋತಿ] ಮೇಷಾದಿ ರಾಶಿಗಳಲ್ಲಿ ಒಂದು; ಧನೂರಾಶಿ: ಚಾಪಾ[ದಿ]ತ್ರಿಕಗೇಹದೊಳ್ ದಿನಪನಂ ಸೌಮ್ಯಗ್ರಹಂ ನೋಡೆಯುಂ (ಅಟ್ಟಮ. ೮-೧೯). ೫.= ಚಾಪಯೋಗ : ಉದ್ಯೋಗಗೇಹದಿನಾ ತುರ್ಯಗ್ರಹಂಬರಂ ನೆಲಸೆ ಚಾಪಂ ಯೋಗಮಕ್ಕುಂ ಗ್ರಹಂ (ಜಾತತಿ. ೦೩-೮). ೬. [ಕಾವ್ಯಮಿಾ] ಚಿತ್ರಕಾವ್ಯದ ಬಂಧಗಳಲ್ಲೊಂದು ; ಬಿಲ್ಲಿನ ಆಕಾರದಲ್ಲಿ ಶ್ಲೋಕವನ್ನು ರಚಿಸುವುದು : ಶರ ಶೂಲ ಚಾಪ ಚಕ್ರಾಸಿ ರೂಪಮಿಭರಥತುರಂಗ ಪದಗತಪಾಠಂ ಮುರಜಂ . . . ಸರ್ವತೋಭದ್ರಂಗಳ್ (ಕಾವ್ಯಾವ. ೫೬೯). [ ಸಂ. ]

**ಚಾಪಕ** (ನಾ). ಚಪ್ಪಟೆಯಾಗಿರುವ ರತ್ನ : ಪೇಳುವೆ ತ್ರಿವೃತ್ತವೆಂಬುದು ಮೂರು ಕೂಡಿಹುದು ಕೇಳು ಚಾಪಕಮೆಂದು ಚಪ್ಪಟೆಯನ್ನೈದಿಹುದು ತಾಳಿರುವ ತ್ರಿಷ್ಟಮೆಂಬುದು ಮೂರು ಮೂಲೆಯದು (ರತ್ನಶಾ. ೨೦-೦೪). [ ? ]

**ಚಾಪಕ್ಷೇತ್ರ** (ನಾ). [ಜ್ಯೋತಿ] ಧನೂರಾಶಿ : ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ ಸತ್ಯಾಜಿತಂ . . . ಮಕರದೊಳಿರೆ ಮೂರ್ಖಂ (ಜಾತತಿ. ೦೭-೦೭). [ ಚಾಪ + ಕ್ಷೇತ್ರ ]

**ಚಾಪಗತಿ** (ನಾ). [ನಾಟ್ಯ] ನೃತ್ಯದಲ್ಲಿ ಒಂದು ಗತಿ,–ಗಮನ ; ಅರ್ಧ ವೃತ್ತಾಕಾರದ ಚಲನೆ; ಬಿಲ್ಲಿನ ಹಾಗೆ ನಿಲ್ಲುವ ಭಂಗಿ (?): ಶೃಂಗಾರ ಸಾರ ರಸಮನಪಾಂಗ ದ್ಯುತಿ ಬೀಱೆ ಮಿಱೆ ಲಾವಣ್ಯರಸಂ ತುಂಗ ಕುಚೆ ಚಾಪಗತಿಯಂ ಸಂಗುಳಿಸುತನಂಗಚಾಪಲತೆಯೆನೆ ಮೆಟೆದಳ್ (ರಾಜಶೇ. ೦೨-೯೪). [ ಚಾಪ + ಗತಿ ]

**ಚಾಪಚಾಪಳ** (ನಾ). ವೇಗವಾಗಿ ಬಾಣ ಬಿಡುವವನು ; ಧನುರ್ವಿದ್ಯಾಕುಶಲ : ಉಗ್ರಭಟಪಟಳಮನಾರ್ದುರುಳಿಚ್ಚುಂ ಪೊರಳಿಚ್ಚುಂ ಮರಳಿಚ್ಚುಂ ಚಾಪಚಾಪಳಂ ಯುವರಾಜಂ (ಚಂದ್ರಪು. ೫-೧೦೦).
[ ಚಾಪ + ಚಾಪಳ (= ಚಾಪಲ) ]

**ಚಾಪಚ್ಯುತ** (ನಾ). ಬಿಲ್ಲು ಕೈಯಿಂದ ಜಾರಿದವನು ; ಬಿಲ್ಲನ್ನು ಕಳೆದುಕೊಂಡವನು; ಧನಸ್ಸು ಇಲ್ಲದವನು : ಕ್ಷಿತಿಯೊಳೀ ಕ್ಷತ್ರಿಯರ ಧರ್ಮಸ್ಥಿತಿಯನರಿಯಾ ಕೃಷ್ಣ ಚಾಪಚ್ಯುತರನಪಗತವಾಹನರ ಪರಿಮುಕ್ತಕೇಶಿಗಳ . . . ಇರಿವುದು ಧರ್ಮವೇ ನಾವರಿಯೆವಿದನು(ಕುಮಾ.ಕ. ೨೬-೩೨).
[ ಚಾಪ + ಚ್ಯುತ ]

**ಚಾಪಟಂಕೃತಿ** (ನಾ). ಬಿಲ್ಲಿನ ಟೇಂಕಾರ; ಧನಸ್ಸಿನ ಟಂಕಾರ ; ಒದವಿದ ಚಾಪಟಂಕೃತಿ ಭಯಂಕರವಾಗೆ ವರೂಥಭಾರದಿಂದದಿರೆ ನೆಲಂ (ಶಂರಾಮಾ. ೪-೬೩). [ ಚಾಪ + ಟಂಕೃತಿ ]

**ಚಾಪಟೆಯು, ಚಾಪಟೆಯಂ, ಚಾವಟೆಯಂ** (ನಾ). ೧. ಜಾರ : "ಚಾಪ [ಪಾಠಾಂ. ವ] ಟೆಯರೆನಲ್ ಜಾರರೆಂದು ತಿಳಿಗೆ ವಿದಗ್ಧರ್" (ಭಾರತಿ. ೪೪).
**ಚಾಪಟೆಯು : ೨.** ಧೃಷ್ಟ ; ಧೂರ್ತ. 'ಚಾಪಟೆಯಂತನ' ಪರಾ.
**ಚಾವಟೆಯು :೨.** ನಟರಲಾ ನೀವ್ ಸುರಪುರ ಚಾವಟೆಯರ್ರೈ ಚತುರೋಕ್ತಿಗಳಲವುಟಿಸಿದರೆ ನಾ ಮರಳುವೆನೆ (ಕುಮಾ.ಆ. ೨೦-೩೪) ; ಚಾವಟೆಯರನು ಚಿಮ್ಮುರಿಯ ಬಿಗಿಸುವೆನಮರಿಪುರ ಕಡೆಗಣ್ಣ ಕಣ್ಣಿಯಲಿ(ಕುಮಾ.ಸ. ೨-೩೮).
[ ← ಮರಾ. ಚಾವಟ ]

**ಚಾಪಟೆಯು** 'ಚಾಪಟೆಯು' ನೋ.

**ಚಾಪಟೆಯುತನ** (ನಾ). ಧೂರ್ತತನ; ಚಾಪಲ್ಯ : ಮಾಣೆಯಲಾ ಹರಾದ್ಯರ ಬಗೆಗೊಳದ ನವಿಮ್ಮಾ ಹರೀಶ್ವರನೊಡನೆ ಹಳಚುವ ಚಾಪ [ಪಾಠಾಂ. ವ] ಟೆಯುತನವ (ತೊರರಾ. ೬-೪೭-೧). [ ಚಾಪಟೆಯು + -ತನ ]

**ಚಾಪಣೆ** (ನಾ). ಪ್ರಭಾವ ; ವರ್ಚಸ್ಸು (?) : ಯೋಗಿಗಳ ತಪದಿಂದ ಕೆಲಸಾರ್ಚಿ ವೈಸಿಕ ವಿರಾಗಿಗಳ ಧ್ಯಾನದಿಂ ಪಡೆದೆಗೆದು ಬಿಸುಟಾಗಲಾಗವಿಾಕರ ಕ್ರಿಯಾಭ್ರಂಶಮೆನಿಸುತ ತತ್ತ್ವವಿದರ ಚಾಪಣೆಯು ಕಳೆದು ಬೀಗಿಸಿ ಸಮಾಧಿಯಂ ಮೌನಿಗಳ ಕುನಿಯಂತೆ ಕೂಗಿಪುದು (ವೆಂಕಾರಾ. ೨-೩೫-೨೬).
[ ←ಹಿಂ. ಮರಾ. ಛಾಪ್ ]

**ಚಾಪತಂತ್ರ** (ನಾ). ಬಿಲ್ವಿದ್ಯೆ; ಧನುರ್ವಿದ್ಯೆ ; ಚಾಪಾಗಮ : ಮಝುರೇ ಚಾ ಪ ತಂ ತ್ರ ವಿ ಶಾ ರ ದಾ ಎನುತೊಬ್ಬರೊಬ್ಬರ ಬಿರುದ ಮೂದಲಿಸಿ (ಕುಮಾ.ಭೀ. ೪-೧೮). [ ಚಾಪ + ತಂತ್ರ ]

**ಚಾಪಧರ** (ನಾ). ಬಿಲ್ಲನ್ನು ಧರಿಸಿದವನು ; ಬಿಲ್ಲುಗಾರ ; ಧನುರ್ಧಾರಿ : ಅಂತಿಸುವ ಚಾಪಧರ ನೀರದನಿಕರದ ಶರಾಸಾರಮಂ ಮಂಜಿನ ಮುಟಿಯನ ಹಿಮಕಿರಣನಾತ್ಮಕಿರಣಂಗಳಿಂ ಕಿಡಿಸುವಂತೆ ತನ್ನಂಬುಗಳಿಂ ಕಡಿಕಡಿದು ಕಿಡಿಸಿ (ಶಾಂತಿಪು. ೪-೧೦ ವ). [ ಸಂ. ]

**ಚಾಪಪ್ರಮುಕ್ತ** (ಗು). ಬಿಲ್ಲಿನಿಂದ ಬಿಡಲ್ಪಟ್ಟ : ಹೂಂಕೃತಿ ಬಿಲ್ಗಾರರ ಗುಣತಂಕೃತಿ ಚಾಪಪ್ರಮುಕ್ತ ಶರನಿಕರ ಮಹಾಭೀಂಕೃತಿ ನೋಳ್ಪಮರರ್ಗೆ ಭಯಂಕೃತಿಗೆಯ್ದುದು (ರಾಜಶೇ. ೬-೪೬). [ ಚಾಪ + ಪ್ರಮುಕ್ತ ]

**ಚಾಪಯೋಗ** (ನಾ). [ಜ್ಯೋತಿ] ಒಂದು ಯೋಗ : ಹತ್ತನೆಯ ರಾಶಿಯಿಂದ ನಾಲ್ಕನೆಯ ರಾಶಿಯವರೆಗಿರುವ ಏಳು ರಾಶಿಗಳಲ್ಲೂ ಗ್ರಹವಿದ್ದರೆ ಚಾಪಯೋಗ(ಜಾತಕ. ೦೩-೮ ಅಡಿಟ). ಈಚಾಪಯೋಗದಲ್ಲಿ ಹುಟ್ಟಿದವನು ಪರಾಕ್ರಮಿಯಾಗುತ್ತಾನೆ ಎಂದು ಜ್ಯೋತಿಶಾಸ್ತ್ರದಲ್ಲಿ ಹೇಳಿದೆ.
[ ಚಾಪ + ಯೋಗ ]

**ಚಾಪರಿಕೆ** (ನಾ). ೧. (ಕರಾ). ತೆಂಗಿನ ಮರಕ್ಕೂ ಮತ್ತು ಹೆಡೆಗೂ ನಡುವೆ ಅಂಟಿರುವ ಬಲೆಯಂತಹ ನಾರಿನ ಪದರು ; ಸೀಬಿ. ೨. ತೆಳ್ಳಗಿರುವ ಹೆಂಗಸು. [ ? ]

**ಚಾಪಲ, ಚಾಪಳ** (ಗು). ೧. ಚಪಲವಾದ ; ಚಂಚಲವಾದ : ಚಾಪಬಾಣಂಗಳಿರ್ದಪುವೆಮ್ಮೊಳೆಂಬೊಲಿಹ ಚಾಪಲ ಭ್ರೂಲತೆಯ ಚಂಚಲಾಪಾಂಗದ ಪುಳಿಂದಿಯರ್ತಮ್ಮ ತಮ್ಮ ಓಪರಂ ಬಳಿವಿಡಿದು ಬರುತಿರ್ದರು (ಜೈಮಿಭಾ. ೨೮-೪೨). (ನಾ). ೨. ಅಸ್ಥಿರತೆ ; ಚಂಚಲತೆ : ಬನ್ನಪಂಗೆಯ್ವುದೆ ಧಾರ್ಷ್ಟ್ಯಂ ಸೇವೆಯುಂ ಚಾಪಲಮುಪಕರಣಂ (ಕಾದಂಬ. ೧೦೨). ೩. ಆತುರ ; ತೀವ್ರಗತಿ. **ಚಾಪಳ : ೨.** ದೂರಾಭೀಕ್ಷಣ . . . ಉರುತರ ಚಾಪಳಾದಿಗೆ ಸಾರಂ ಬುಧರಿಂ ಪದಕ್ಕೆ ಯುಗಳೋಚ್ಚರಣಂ (ಶಮದ. ೦೯೫). ೩. ಕೆದರಿಕೊಂಡರು ಭಟರು . . . ಮದದ ವೀರಾವೇಶ ರೋಷೋತ್ಕರಿತ ಚಾಪಳವ (ತೊರರಾ. ೪-೧೨-೬). ೪. ಉತ್ತೇಜನ : ಕನರ್ಗೊನರಿಂ ಬಾಳಚೂತದ್ರುಮಂ ಚಾಪಳಮಂ ಪುಂಸ್ಕೋಕಿಲಕ್ಕೋಲಗಿಸೆ (ಮಲ್ಲಿಪು. ೨-೩೪). [ ಸಂ. ]

**ಚಾಪಲತಾಯೋಗ** (ನಾ). ೧. ಬಿಲ್ಲಿನ ಸಂಬಂಧ. ೨. ಅಸ್ಥಿರವಾಗಿರುವಿಕೆ; ಚಂಚಲತೆ. ೧, ೨ : ಮುಖರತೆ ಪುರಳಿಯೊಳ್ ಚಾಪಲತಾಯೋಗಂ ಜೀವೆಯೊಳ್ ಪ್ರ ತಾ ರ ಣ ಂ ನಾವೆಯೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಚಂದ್ರಪು. ೩-೯ ವ).
[ ಸಂ. (ಚಾಪಲತಾ + ಯೋಗ ; ಚಾಪ + ಲತಾ + ಯೋಗ) ]

**ಚಾಪಲತಾರೋಹಣ** (ನಾ). ೧. ಚಾಪಲ್ಯವುಂಟಾಗುವಿಕೆ. ೨. ಧನಸ್ಸಿನ ಹೆದೆಯೇರಿಸುವಿಕೆ. ೧, ೨ : ಕಲಕಂಠಕ್ಕತನುಗೆ ಚಾಪಲತಾರೋಹಣ ವಿಕಾರಂ . . . ಮಾನವಕುಲಕ್ಕೆ ಕನಸಿನೊಳಮಿಂತಿವಿಲ್ಲಾ ನಾ ಡೊ ಳ್ (ಶಂರಾಮಾ. ೦-೧೦೫). [ ಸಂ. (ಚಾಪಲತಾ + ಆರೋಹಣ) ]

**ಚಾಪಲತೆ** (ನಾ). ೧. (ಬಳ್ಳಿಯಂತಿರುವ) ಬಿಲ್ಲು ; ಧನುರ್ಲತೆ ಮದನ ಚಾಪಲತೆಯಂತೆ ಮುಷ್ಟಿಗ್ರಾಹ್ಯಮಧ್ಯೆಯುಂ . . . ಎನಿಸಿ (ಕಾದಂಪೂ. ೪೯) ; ಅಳಿವೆದೆಯಂ ಸಡಿಲ್ಚಿ ನಿಲಿಸಿದ ತನುಚಾಪಲತೆಯಂತೆ ತನುಲತೆ ನಿಡುಜೆಡೆಯಿಂ ಕಡು ಬೆಡಂಗುವಡೆಯೆ (ರಾಜಶೇ. ೫-೦೯ ವ). ೨. ಚಪಲತೆ ; ಚಾಂಚಲ್ಯ. ೧, ೨ : ಆ ಚಾಪಲತೆ ಕೂರ್ಪ ಕೋಪಮುಳಿಯ ಚಾಪಲತೆಯಂತೆಯುಂ . . . ಇರ್ಪನ್ನೆಗಂ (ಪುಷ್ಪಪು. ೬-೩೪ ವ). [ಸಂ. ಚಾಪಲತಾ]

**ಚಾಪಲಾಘವ** (ನಾ). ಬಿಲ್ಲನ್ನು ಬಳಸುವಲ್ಲಿನ ಕೈಚಳಕ, ಹಸ್ತಕೌಶಲ, - ಜಾಣ್ಮೆ : ಇಂತಹ ಅಪೂರ್ವ ಚಾಪಲಾಘವವನ್ನು ನೋಡಿ ಸಂತೋಷಪಡಲು ನಾವೆಲ್ಲರೂ ಕುತೂಹಲಿಗಳಾಗಿರುವೆವು (ಶಾಂತಲಾ. ೨೨೫).
[ ಚಾಪ + ಲಾಘವ ]

**ಚಾಪಲ್ಯ** (ನಾ). ೧. ಚಪಲತೆ ; ಚಾಂಚಲ್ಯ ; ಚಂಚಲಸ್ವಭಾವ : ಚಾಪಲ್ಯವನ್ನು ಮಾ ಡ ಬೇ ಡ (ಶಾಕುಂತ. ೦೦೩). ೨. ಚಟುವಟಿಕೆ ; ಉತ್ಸಾಹ: ಇದರಿಂದ ದೇಹಕ್ಕೆ ಚಾಪಲ್ಯ ಹುಟ್ಟಿ, ಮಿಂಚು ಹೆಚ್ಚಾಗುತ್ತದೆ (ಮುಂಬಯಿ. ೫-೦೭೨). ೩. ಬಯಕೆ ; ಲವಲವಿಕೆ. 'ವಾಕ್ಚಾಪಲ್ಯ' ಪರಾ. [ ಸಂ. ]

**ಚಾಪವಲ್ಲರಿ** (ನಾ). = ಚಾಪಲತೆ ೧: ನಿಬದ್ಧನಿಷಂಗಚಾಪವಲ್ಲರಿ ಮಿಸುಪಂಗಮೆತ್ತ ಘನಶಾಂತಿ ಸಮುನ್ನತಿಯೆತ್ತ (ಶಬಶಂ. ೨-೮೨).
[ ಚಾಪ + ವಲ್ಲರಿ ]

**ಚಾಪವಿದ್ದೆ** (ನಾ). ಧನುರ್ವಿದ್ಯೆ ; ಬಿಲ್ವಿದ್ಯೆ : ಮುತ್ತುಮಲ್ಲಿ ಬಡಿವುದುಂ ಬಿಡುವುದುಂ ಚಾಪವಿದ್ದೆಯೊಳ್ (ಎಪಿ. XIII, ೩೩೨-೪ ; ೯೭೭).
[ ಚಾಪ + ವಿದ್ದೆ (<ವಿದ್ಯೆ) ]

**ಚಾಪವಿದ್ಯಾಧರ** (ನಾ). ಧನುರ್ವಿದ್ಯೆಯನ್ನು ಬಲ್ಲವನು ; ಬಿಲ್ಗಾರ : ಧರಧುರವ ಮಾಡಿದರೇಕೆ ಕರೆಕರೆ ಬಿರುದ ಬೆಸಗೊಂಬ ಗುರುತನಯನೋ ಚಾಪವಿದ್ಯಾಧರನೊ (ಕುಮಾ.ಭೀ. ೮-೬೫). [ ಸಂ. ]

**ಚಾಪವೇದ** (ನಾ). ಧನುರ್ವೇದ ; ಬಿಲ್ವಿದ್ಯೆ : ತಂದೆಯ್ಕದನೆ ಚಾಪವೇದ ಮುಂಕುಂದನೈದನೆ (ಕುಮಾ.ದ್ರೋ. ೦೯-೭). [ ಚಾಪ + ವೇದ ]

**ಚಾಪಳ** 'ಚಾಪಲ' ನೋ.

**ಚಾಪಳಮತಿ** (ನಾ). ಚಪಲ ಸ್ವಭಾವದವನು ; ಚಂಚಲಚಿತ್ತ : ರೂಪಕದೊಳಂ ವಿಶೇಷಾಳಾಪೋದ್ದೇಶದೊಳಮಲ್ಲದುಟಿದೆಡೆಗಳೊಳಂ ಚಾಪಳಮತಿಗಳ್ ವಿರಸ ಸಮಾಪವನಿಡದಿರ್ಕೆ ಬಹಂ ವಿಶೇಷಣಗಣಮಂ (ಕವಿರಾ. ೨-೨೮). [ ಚಾಪಳ (= ಚಾಪಲ) + ಮತಿ ]

**ಚಾಪಳವೃತ್ತಿ** (ನಾ). ಚಂಚಲತೆ ; ಚಪಲಸ್ವಭಾವ : ಚಾಪಳವೃತ್ತಿಯಂ ಮೆಱೆವ ತಾಣವಿದಲ್ತೆಮಗೆಂದು ಮಾನ್ಯ ಧಾತ್ರೀಪತಿಗಳ್ ಕೆಲರ್ ನೆಲನನಪ್ಪುವವೊಲ್ ತಲೆವಾಗಿದರ್ (ನಳಚಂ. ೪೫೨).

[ ಚಾಪಳ ( = ಚಾಪಲ) + ವೃತ್ತಿ ]

**ಚಾಪಳೆ** 'ಚಪ್ಪಟೆ' ನೋ.

**ಚಾಪಳೆ** (ನಾ). ಚಪಲಚಿತ್ತದವಳು ; ಚಂಚಲ ಸ್ವಭಾವದ ಹೆಂಗಸು : ಚಾಪಳೆಯರಾಲೋಚಿಸುತ ಕಡುಪಾಪಿಯಂಗಜನೆಂದು ಬೈಯುತ ತೋಪಿ ನೆಡೆಗಿಡದೈದೆ ತಂದರು ಸತಿಯ ಸಂತೈಸಿ (ನಳಚ. ೧-೪೦).

[ ಚಾಪಳ (=ಚಾಪಲ) + – ಎ₂ ]

**ಚಾಪಾಗಮ** (ನಾ). ಧನುರ್ವಿದ್ಯೆ; ಬಿಲ್ವಿದ್ಯೆ ; ಧನುರ್ವೇದ : ನಿಮ್ಮ ನದಿರ್ಪುವಲ್ಲಿ ಚಾಪಾಗಮಮೇವುದಂತೆನಗೆ ಬಿಲ್ವರಮಾಜಿಯೊಳಾಂಪ ಗಂಡರಾರ್ (ಪಂಪಭಾ. ೧೧-೧೨೨) ; ರಾಘವಂಗೆ ಚಾಪಾಗಮದೊಳ್ ಲವಂ ಶತಸಹಸ್ರಗುಣಂ ಮಿಗಿಲಾದಂ (ಪಂರಾಮಾ. ೧೬-೧೨). [ ಚಾಪ+ಆಗಮ ]

**ಚಾಪಾಗಮಜ್ಞ** (ನಾ). ಬಿಲ್ವಿದ್ಯೆಯಲ್ಲಿ ನೈಪುಣ್ಯ ಪಡೆದವನು : ಕಾಪಾಲಕರತಳ ಸದಾಪಾವನಾಂಗ ನಿವ್ರ್ಯಾಪಾರ ಘನವೇರು ಚಾಪಾಗ ಮಜ್ಞ ನಿರ್ಲೇಪಾತ್ಮ . . . ಪಾಲಿಸೈ (ವೀಶೈಪು. ೭-೧-೧). [ ಸಂ. ]

**ಚಾಪಾಗಮಾಚಾರ್ಯ** (ನಾ). ೧. ಧನುರ್ವಿದ್ಯಾಗುರು. ೨. ದ್ರೋಣ: ಚಾಪಾಗಮಾಚಾರ್ಯನ ಘಡಾವಣೆ ಘಲ್ಲಿಸಿತು ಜಗವ (ಕುವ್ಯಾಆ. ೭-೨೦).

[ ಚಾಪಾಗಮ + ಆಚಾರ್ಯ ]

**ಚಾಪಾಚಾರ್ಯ** (ನಾ). = ಚಾಪಾಗಮಾಚಾರ್ಯ ೧ : ನಿಯಮಿಸುವರ್ . . . ನಿಜಶಿಕ್ಷೆಯಿನನುಪಮಮಾಗೆ ಚತುರ ಚಾಪಾಚಾರ್ಯರ್ (ಪುಪ್ಪಪು. ೨-೫೯). [ ಚಾಪ + ಆಚಾರ್ಯ ]

**ಚಾಪಾಭ್ಯಾಸ** (ನಾ). ಧನುರ್ವಿದ್ಯೆಯ ಅಭ್ಯಾಸ : ಚಾಪಾಭ್ಯಾಸವನ್ನು . . . ಮಾಡುವುದರಿಂದ . . . ಶಕ್ತಿಯನ್ನು ಉಂಟುಮಾಡಿ, ಮುಪ್ಪನ್ನೂ ಕೆಡಿಸುವುದು (ಸಕವ್ಯ. ೫೬). [ ಚಾಪ + ಅಭ್ಯಾಸ ]

**ಚಾಪಿಸು** 'ಛಾಪಿಸು' ನೋ.

**ಚಾಪು₁, ಜಾಪು, ಜೇಪು₁, ಝಾಪು, ದಾಪು₁** (ನಾ). ೧. ಹರವು; ವಿಸ್ತಾರ; ಚಾಚು; ಉದ್ದ. 'ಚಾಪುಗಲ್ಲು', 'ಚಾಪುಗಾಲು' ಪರಾ. ೨. ಆಟದಲ್ಲಿ ಉಪಯೋಗಿಸುವ ಸಣ್ಣ ಚಪ್ಪಟೆಯ ಕಲ್ಲು ; ಬಚ್ಚ. **ಜಾಪು: ೩.** ದೂಥದೂರಕ್ಕೆ ಇಡುವ ಹೆಜ್ಜೆ ; ದೊಡ್ಡಹೆಜ್ಜೆ. 'ಜಾಪುಗಾಲು' ಪರಾ. **ಜೇಪು₁:** ೧. 'ಜೇಪುಗಾಲು' ಪರಾ. ೪. ನೆಗೆತ; ಹಾರುವಿಕೆ. 'ಜೇಪುಕೊಡು' ಪರಾ. **ಝಾಪು: ೩.** 'ಝಾಪುಗಾಲು' ಪರಾ. **ದಾಪು₁: ೩.** ಒಂದು ಗಾವುದ ದಾರಿ ಎರಡೇ ದಾಪ ಮಾಡಿ . . . ಬಂದಳೆ ತಾಯವ್ವ (ನಾಪದ. ೧೬೭) ; ಒಳಕೊಠಡಿಗೆ ನಾಲ್ಕೇ ದಾಪಿನಲ್ಲಿ ಚಿಮ್ಮಿ ಹೋಗಿ . . . ಮಗುವನ್ನು ಎತ್ತಿಕೊಂಡನು (ನಂಟರು. ೫೯). **೫.** ದೂರ ದೂರಕ್ಕೆ ಇಡುವ ಹೆಜ್ಜೆಯ ಅಂತರದ ಒಂದು ಪ್ರಮಾಣ ; ಮಾರು ಗಾಲಿನ ಅಳತೆ : ಈ ರಾಜ್ಯದಲ್ಲಿ ನಾಯಿಯ ಬಾಲದಂತೆ ಒಂದು ದಾಪು ಉದ್ದಬಾಲವುಳ್ಳ ಮನುಷ್ಯರಿದ್ದಾರೆ (ಪ್ರವಾಇ. II, ೨೦). **೬.** ಗೋಲಿ ಆಡಿ ಸೋತಾಗ ಕೈ ಗೆಣ್ಣುಗಳಿಂದ ಭೂಮಿಯ ಮೇಲೆ ಗೋಲಿ ಯನ್ನು ನೂಕುವುದು (?) ; "ತೇಕು ; ಜೇಪು" (ಜಾನಕೋ. ೪).

[ ದೇ.೫ ಮಲ. ಚಾಮ್ಪು ]

**ಚಾಪು₂** (ನಾ). ಬಂದೂಕಿನ ಕುದುರೆ : ಕೋವಿ ಚಾಪು ರಿಪೇರಿ ಮಾಡಾಕೆ ಅಂತ . . . ಆಚಾರಿಗೆ ಕೊಟ್ಟಿಂದಾನೆ (ಪಂಜಸಂ. ೨೧೭).

[ ತಮಿ. ಚಾಪ್ಪು, ಚಾಪ್ ; ಮಲ. ತುಳು. ಚಾಪು./ಮರಾ. ಚಾಪ್./ ಪೋರ್ಚ್. ಥಾಪ=ಬಂದೂಕಿಗೆ ಹಾಕುವ ಲೋಹದ ತೆಳ್ಳನೆಯ ಪಟ್ಟಿ ]

**ಚಾಪು₃** (ನಾ). ೧. [ಸಂಗೀತ] ಮೃದಂಗಾದಿಗಳನ್ನು ಬಾರಿಸುವುದರಲ್ಲಿ ಒಂದು ಗತ್ತು : ಮೃದು ಮೃದಂಗದ ಚದುರ ಚಾಪು ಕೇಳುತಿದೆ (ದ್ರಾಕ್ಷದಾ. ೬೮-೩); ಹೊಸದಾಗಿ ಮೃದಂಗವನ್ನೊಂದನ್ನು ಮಾಡಿ ತಂದಾಗ . . . ಅದರ ಮಿಟ್ಟು, ಚಾಪು ಮತ್ತು ಟೊಪ್ಪಿ ನಾದಗಳನ್ನು . . . ಪರೀಕ್ಷಿಸು ತ್ತಿದ್ದರು (ಸಂಗೀತ. ೧೦೦). ೨. ಒಂದು ಬಗೆಯ ತಾಳ: ಆದಿ, ದೇಶಾದಿ, ರೂಪಕ, ಚಾಪು ಮತ್ತು ಝಂಪೆತಾಳಗಳಲ್ಲಿ ಬಹಳ ಹಾಡುಗಳನ್ನು ರಚಿಸಿದ್ದಾರೆ (ಸಂಗೀತ. ೨೯).

**ಚಾಪುಹಾಕು** = ತಬಲದ ಮೇಲೆ ವಿಶಿಷ್ಟವಾದ ತಾಳದ ಹೊಡೆತ ಹಾಕು : ಮಾದಣ್ಣ ಮಾತುಗಳಿಗೆ ಮುಗಿತಾಯದ 'ಚಾಪು' ಹಾಕಿದನು (ಬೆಳುಮ. ೨೫೮). [ ← ಮರಾ. ಚಾಪ್ ]

**ಚಾಪು₄** (ನಾ). ತೆನೆಯಾದ ದಂಟಿನ ಸೂಡು; "ತೆನಿದಂಟು ಒಟ್ಟಿದ್ದು": (ಜಾನಕೋ. ೫೫). [ ←ಮರಾ. ಚಾಪ್ = ರಾಶಿ ; ಸಮುದಾಯ ]

**ಚಾಪುಗಲ್ಲು** (ನಾ). ಅಗಲವಾಗಿ ಮಟ್ಟವಾಗಿರುವ ಕಲ್ಲು ; ಚಪ್ಪಟೆ ಯಾದ ಕಲ್ಲು : (+). [ ಚಾಪು₁ + ಕಲ್ಲು (<ಕಲ್₃) ]

**ಚಾಪುಗಾಲು, ಜಾಪುಗಾಲು, ಜೇಪುಗಾಲು, ಝಾಪುಗಾಲು, ದಾಪುಗಾಲು** (ನಾ). ದೂರದೂರಕ್ಕೆ ಇಡುವ ಹೆಜ್ಜೆ ; ದಾಟುಗಾಲು : (+). **ಜಾಪುಗಾಲು** : ಗೋಣು ಹಾಕುತ್ತಾ ಜಾಪುಗಾಲನ್ನು ಎತ್ತಿಡುತ್ತ . . . ತಿರುಗಿದನು (ಅನ್ನ. ೩೩೭). **ಜೇಪುಗಾಲು :** ಒಬ್ಬ ಮನುಷ್ಯ ಬೇಲಿಯ ಆಚೆಗೆ ಜೇಪುಗಾಲು ಹಾಕುತ್ತ ಹೋದುದನ್ನು ಕಂಡೆ (ಸ್ಮೃತಿಚಿ. ೩೦೯) ; ಜೇಪುಗಾಲಿನಿಂದ ಯುದ್ಧವೀರನ ಭಂಗಿಯಲ್ಲಿ ನಿಲ್ಲುವನು (ಹುಚ್ಚಾಟ. ೪೮); **ಝಾಪುಗಾಲು :** ತಂಗಿಯು ಝಾಪುಗಾಲಿಟ್ಟು ಓಡುವವರಂತೆ ನಡೆಯುತ್ತಿದ್ದಾಳೆ (ಹೊಸಕ್ಷ. ೧೯೩). **ದಾಪುಗಾಲು :** ಶೀನಪ್ಪ ದಾಪುಗಾಲಿ ನಿಂದ ಪಡಸಾಲೆಯ ಬಾಗಿಲ ತನಕ ಹೋಗಿ ಒಳಗೆ ಇಣಿಕಿ ನೋಡಿದ (ಅನಾಥ. ೨೪).

**ದಾಪುಗಾಲು ಹಾಕು** = ದೂರದೂರಕ್ಕೆ ಹೆಜ್ಜೆಯಿಡು : ಬಾದಾಮಿ ಮರದಿಂದ ಮನೆಯ ಕಾರ್ನಿಸ್‌ವರೆಗೆ ದಾಪುಗಾಲು ಹಾಕಿ ನಿಲ್ಲುತ್ತಿದ್ದ ಪಿಶಾಚಿ (ನಿಬಂಧ. II, ಮುನ್ನುಡಿ X) ; ದಾಪುಗಾಲು ಹಾಕಿ ಮಂಟಪವನ್ನು ಸಮಾಪಿಸಿದ (ಹೇಮಕೂ. ೨೪). [ ಚಾಪು₁ + ಕಾಲು₁(< ಕಾಲ್₁) ]

**ಚಾಪೆ, ಚೇಪೆ₁** (ನಾ). ನೆಲದ ಮೇಲೆ ಹಾಕುವ ಗರಿ, ನೊದೆಹುಲ್ಲು, ಜೊಂಡು, ಬಿದಿರು ಮೊದಲಾದುವುಗಳಿಂದ ಹೆಣೆದ ಹಾಸು ; ಮಂದಲಿಗೆ: "ವಂಶಾಸನಂ ಚಾಪೆ" (ಮಂಗರಾ. ೬೨-೨೦); ಉರ್ವೀತಳಮಂ ತಾಂ ಚಾಪೆವೊಲ್ ಸುತ್ತಿದಂ (ಸೋಮೇಶ. ೪೪); ವರ್ಷವಂದಕ್ಕೆ ಬ್ರಾಹ್ಮಣರಿಗೆ ಹಾಸುವ ಬಿದಿರ ಚಾಪೆ ಕುಳಿರುವ ಚಕ್ಕಳಕ್ಕೆ ವೊಂದು ಹಣ (ಎಕ. VIII, ತೀರ್ಥಹ.೩೩-೫೮; ಸು. 1430); ಒಬ್ಬ ಚಾಪೇ ಕೆಳಗೆ ತೂರಿದರೆ ಇನ್ನೊಬ್ಬ ರಂಗೋಲಿ ಕೆಳಗೆ ತೂರಿದ (ಗಾದೆ). **ಚೇಪೆ₁:** ಒಬ್ಬ ಗೊಲ್ಲ ರಾಕೆಯು . . . ಕೈಯಲ್ಲಿ ಚೇಪೆ ಹಣೆಯುತ್ತ (ತಿರುಗು. ೧೪).

[ ದೇ.೫ ತಮಿ. ಚಾಪ್ಪೈ ; ಮಲ. ಚಾಪ್ಪ = ಗುಡಿಸಲು; ತುಳು. ಚಾಪೆ ; ಕೊಡ. ಸೋಪಿ; ತೆಲು. ಚಾಪ ; ಪರ್ಜಿ. ಚಾಪ್./ ಸಂ. ಕ್ಷಿಪ = ಬಿದಿರು ]

**ಚಾಪೆಗೂಳು** (ನಾ). ಚಾಪೆಯ ಮೇಲೆ ಹರಡಿದ ಅನ್ನ ; (ಭೂರಿ ಸಂ ತರ್ಪಣೆಗೆ ತಯಾರಿಸಿದ) ಅಧಿಕವಾದ ಕೂಳು: ಸೀಗಲ್ಲದ ಚಾಪೆಗೂಳಿನ ಭಟರಂತೆ ಓಗರ ಮೇಲೋಗರದಾಸೆಗೆ ಲೇಸಿನ ದ್ರವ್ಯಕ್ಕೆ ಆಸೆ ಮಾಡಲಿಲ್ಲ (ಬಲೀಶ್ವ. ೦೪೪). [ ಚಾಪೆ + ಕೂಳು (< ಕೂಟ್₁) ]

**ಚಾಪೆಹಿಡಿ** (ಕ್ರಿ). ಚಾಪೆ ಹಿಡಿದು ಮಲಗು ; ಹಾಸಿಗೆ ಹಿಡಿ ; ರೋಗಗ್ರಸ್ತವಾಗು ; "ನೆಲಹಿಡಿ; ಬೇನೆಯಿಂದ ಬಳಲು" (ಜಾನಕೋ. ೩೬) : ನಿನ್ನನ್ನು ಕಾಣದೆ ಪ್ರಮೀಲೆ ಸಾಯೋದಕ್ಕೆ ಸಿದ್ಧವಾಗಿದ್ದಾಳೆ. ಚಾಪೆ ಹಿಡಿದಿದ್ದಾಳೆ (ಮರೀ. ೧೪೦). [ ಚಾಪೆ + ಹಿಡಿ$_1$ (<ಪಿಡಿ$_1$) ]

**ಚಾಬಕ್‍ಸವಾರಿ** (ನಾ). ಕುದುರೆಯಂ ನಡಗೆಗಳಲ್ಲಿ ಒಂದು ಬಗೆ: "ಹಾರುತ್ತಾ ಸುತ್ತು ತಿರುಗುವ ಚಾಬಕ್‍ಸವಾರಿ ಸುಳಿನಡಿಗೆ ಹಾಯ್ದು ಪೋಡುವಿಕೆ . . . ಈ ನಡಿಗೆಗಳೈದೂ ಅಶ್ವಧಾರೆಗಳು" (ಸಿದ್ಧಾಂತಿ. ೨೦೩). [ ← ಪಾರ. ಚಾಬುಕ್‍ಸುವಾರೀ ; ಹಿಂ. ಚಾಬುಕ್‍ಸವಾರೀ ; ಮರಾ. ಚಾಬೂಕ್‍ಸ್ವಾರೀ = ಕುದುರೆಯನ್ನು ತಿದ್ದುವಿಕೆ,–ಪಳಗಿಸುವಿಕೆ ]

**ಚಾಬೂಕಸ್ವಾರ** (ನಾ). ಕುದುರೆಯನ್ನು ಪಳಗಿಸುವವನು : ವಿಕ್ರಮ ರಾಜನು ಚಾಬೂಕಸ್ವಾರನನ್ನು ಸಾರಂಗಬಣ್ಣದ ಕುದುರೆ ಮೇಲೆ ಸ್ವಾರಿಯಂ ಮಾಡಿಸಲು (ಶನಿಮಾ. ೮).
[ ← ಪಾರ. ಚಾಬುಕ್‍ಸುವಾರ್ ; ಹಿಂ. ಚಾಬುಕ್‍ಸವಾರ್ ; ಮರಾ. ಚಾಬೂಕ್‍ಸ್ವಾರ್ ]

**ಚಾಬೂಕು** 'ಚಬುಕು' ನೋ.

**ಚಾಮ, ಚಾಂವ** (ನಾ). ಶ್ಯಾಮ ; ಕೃಷ್ಣ : "ಚಾಮ–ಶ್ಯಾಮ = ನೀಲ" (ತದ್ಭಕೋ. ೧೨). **ಚಾಂವ**: 'ಚಾಂವಯ್ಯ' ಪರಾ. [<ಸಂ. ಶ್ಯಾಮ]

**ಚಾಮಕಬ್ಬೆ** (ನಾ). ಒಬ್ಬಾಕೆಯ ಹೆಸರು : ಚಾತುರ್ವ್ವರ್ಣ್ಣ ಶ್ರವಣಸಂಘಕಾಧಾರರಪ್ಪ ಚಾಮಕಬ್ಬೆಗಳ ನಿಸಿಧಿಗೆ (ಎಕ. XV, ಹೊಳೆನ. ೬೭-೮ ; ಸು. 950). [ ಚಾಮ + ಅಕ$_1$ (<ಅಕ್ಕ$_1$) + ಅಬ್ಬೆ$_1$ ]

**ಚಾಮಯ್ಯ** (ನಾ). ಒಬ್ಬಾತನ ಹೆಸರು: ಬೆಣ್ಣೆಯೂರ ದೇವಗಣನುಂ ಮಳ್ಳವೂರದ ಪೆರ್ಮ್ಮಾಡಿಗಾಮುಣ್ಡನುಂ ಉರ್ಪ್ಪವಳ್ಳಿಯ ಚಾಮಯ್ಯನುಂ ಇನ್ದವೂರದ ವಿಟಿಯ್ಯನುಂ ಮಜ್ಜಳಂ (ಎಕ. VI, ಚಿಕ್ಕಮ. ೩-೦೬ ; 899 ?) ; ನೆಲ್ಕಲ್ಲಿಯೂರ ಚಾಮಯ್ಯಂ ಪತಿಹಿತನ್ ಪಣ್ಣೆ ಪೆಣ್ಡಿರನುಡೆಯುಟ್ಟಲುಂ ಎಟ್ಟಿನ ತುಱುಗೊಳಲುಂ ಅಟ್ಟಿ ಸತ್ತನ್ (ಎಕ. X, ಮುಳಬಾ. ೦೬೩-೨ ; ಸು. 950). [ ಚಾಮ + ಅಯ್ಯ$_1$ ]

**ಚಾಮರ** (ನಾ). ಚವರ ; ಚವಂರ : "ಚಾಮರ ಚಮರಮದಕ್ಕು" (ಕವಿಕಂ. ೨೬೭): ಕರೆಗಳ್ ಮಿಳ್ಳಿಸೆ ಚಾಮರಂಗಳೆಲರಿಂದಂ . . . ಬೆಳ್ದಿಂಗಳಂತಿರೆ ತೋಱುತ್ತೆ ಸೆವುತ್ತರೀಯ ವಸನಂ (ಕಾದಂಪೂ. ೨೮) ; ಇಕ್ಕುವ ಸೀಗುರಿಯ ಬೀಸುವ ಚಾಮರದ ವಿಲಾಸಿನಿಯ . . . ಸವಿದನಿಗಳ್ಗೆ ಕಿವಿಗೊಡುತ್ತೆ (ಬಸರ. ೬-೧೬) ; ಎತ್ತಿದ ಸತ್ತಿಗೆ ಬಿರುದಿನ ಡಾಳಿನ ಮೊತ್ತ ಡಾಳಿಪ ಚಾಮರದ ಬಿತ್ತರದಿನಮಂಡಲವ ಮುಸುಕೆ ನೆಱೆ ಕತ್ತಲೆಯಾಯಿತು ಧರೆಗೆ (ಕಂಸವಿ. ೦೦-೨೬) ; ತೆಂಗುಗರಿಯ ಚಾಮರವು, ಸುತ್ತು ಸಂಪಿಗೆಯ ತಂಪು ಗಾಳಿ (ನೆಲಮು. ೩೩-೧೩).

**ಚಾಮರವನಿಡು** = ಚಾಮರದಿಂದ ಗಾಳಿ ಹಾಕು : ತರಣಿಶಶಿಗಳು ಚಾಮರವನಿಡುತಿರೆ (ಬಸವು. ೦-೦೬). **ಚಾಮರಸೇವೆ** = ೧. ದೇವರಿಗೆ ಚಾಮರ ಬೀಸುವ ಸೇವೆ ; ಷೋಡಶೋಪಚಾರಗಳಲ್ಲಿ ಒಂದು. ೨. (ಆಲಂ). ಕಸಪೊರಕೆಯಿಂದ ಹೊಡೆಯುವುದು : ಅವರಿಗೆ ಚಾಮರ ಸೇವೆಯಾಗದ ಹೊರತು ಬುದ್ಧಿ ಬರುವುದಿಲ್ಲ (ರೂಢಿ). **ಚಾಮರಹಾಕು** = ಚಾಮರಬೀಸು; ಗಾಳಿಬೀಸು: ಭೀಮನು ಕೃಷ್ಣನಿಗೆ ಸತ್ತಿಗೆ ಹಿಡಿದನು; ಅರ್ಜುನನು ಚಾಮರ ಹಾಕಿದನು (ರಾಜಸೂ. ೨). [ ಸಂ. ]

**ಚಾಮರಗ್ರಾಹಿಣಿ** (ನಾ). ಚಾಮರ ಬೀಸುವವಳು: ಆಗಳುಭಯಪಾರ್ಶ್ವದೊಳಂ ಚಾಮರಗ್ರಾಹಿಣಿಯರ್ಕಳ್ ಕಾಶಕಣಿಶಂಗಳಿಂ ದೆಸೆವ ಶರಲ್ಲಕ್ಷ್ಮಿಯಂ ನೆನೆಯಿಸೆ (ಪಂಪಾಮಾ. ೩-೪೩ ವ); ಸೊಳಱಿದು ತೋಳಂ ನೆಗಪಿ ಚಾಮರಮಂ ಬೀಸುವ ಚಾಮರಗ್ರಾಹಿಣಿಯರಿಂ (ರಾಜಶೇ. ೫-೧೯ವ).
[ ಸಂ. ಚಾಮರಗ್ರಾಹಿಣೀ ]

**ಚಾಮರಧಾರಿಣಿ** (ನಾ). = ಚಾಮರಗ್ರಾಹಿಣಿ : ಉತ್ತರಗರ್ಭಗುಡಿಯ ಪಶ್ಚಿಮದಲ್ಲಿ ಚಾಮರಧಾರಿಣಿ (ಹೊಯ್ಸಳವಾ. ೦೫೩).
[ ಸಂ. ಚಾಮರಧಾರಿಣೀ ]

**ಚಾಮರವಿಕ್ಕು, ಚಾಮರವಿಕ್ಕು** (ಕ್ರಿ). ಚಾಮರ ಹಾಕು : ನೆರೆದಂತಃಪುರಕಾಂತೆಯರ್ ಪಲಬರುಂ ಸೇಸಿಕ್ಕೆಯುಂ ವಾರಸೌಂದರಿಯರ್ ಚಾಮರವಿಕ್ಕೆಯುಂ (ಆದಿಪು. ೦೨-೦೩೦). **ಚಾಮರವಿಕ್ಕು**: ಗಾಳಿಯಲಿ ತಲೆದೂಗುತಿಹ ಹುಲ್ಲು ಹಸ್ಸೆಂಬ ಮೃದುನಾದದಿಂದ ಚಾಮರವಿಕ್ಕುವಂದದಲಿ (ಕೋಗಿಲೆ. ೦೦-೧೨). [ ಚಾಮರ + ಇಕ್ಕು ]

**ಚಾಮರರೇಖೆ** (ನಾ). [ ಸಾಮುದ್ರಿ ] ಹಸ್ತರೇಖೆಗಳಲ್ಲಿ ಒಂದು ; ಐಶ್ವರ್ಯವನ್ನು ಸೂಚಿಸುವ ರೇಖೆ: ಹಲರೇಖೆಯು ಚಾಮರರೇಖೆಯು ಯಿರಲು ರಾಜ್ಯಾಧಿಪತಿಯಾಗಿ ನಿತ್ಯದಲ್ಲಿಯೂ ಸಂಪತ್ತು ಅಭಿವೃದ್ಧಿಯಾಗುವುದು (ಸಾಮುಲ. ೦೦೩-೫). [ ಚಾಮರ + ರೇಖೆ ]

**ಚಾಮರವಿಕ್ಕು** 'ಚಾಮರವಿಕ್ಕು' ನೋ.

**ಚಾಮರಿಗ** (ನಾ). ಚಾಮರವನ್ನು ಹಿಡಿಯುವವನು : ಚಾಮರ ಬೀಸುವ ಉದ್ಯೋಗದವನು : ಅಡಪಿಗಂ, ಚಾಮರಿಗಂ, ಕರಹಟಿಗಂ (ಶಮದ. ೦೯೭ ಪ್ರಯೋ). [ ಚಾಮರ + – ಇಗ ]

**ಚಾಮರಿಗಿತಿ** (ನಾ). ಚಾಮರ ಹಾಕುವ ಉದ್ಯೋಗದವಳು: ಚಾಮರಿಗಿತಿ, ಮದ್ದಳಿಗಿತಿ (ಶಮದ. ೨೦೮ ಪ್ರಯೋ).
[ ಚಾಮರಿಗ + – ಇತಿ (< – ಇತ್ತಿ) ]

**ಚಾಮರಿಯ** (ನಾ). = ಚಾಮರಿಗ : ಹೊರೆಯ ಹಡಪಿಗ ಚಾಹಿಯರ ಚಾಮರಿಯರಸು ನೋಯಿಸಿದ ಗೆಲವಿನ ಗರುವತನವನು ಬಡ್ಡಿ ಸಹಿತು ಗುಳಿಚಿದನು ಪಾರ್ಥ (ಕುವ್ಯಾಕ. ೨೮-೩೩). [ <ಸಂ. ಚಾಮರಿಕ ]

**ಚಾಮರಿಸು** (ಕ್ರಿ). ಹೊಂದಿಸು; ಅಳವಡಿಸು: ಬಣ್ಣದ ವಸ್ತ್ರವ ಕೆನ್ನೆಗೆ ಚಾಮರಿಸಿ ಸಣ್ಣ ರುದ್ರಾಕ್ಷಿ ಸಕಲಾತಿ . . . ಅಳವಟ್ಟು ಅಪ್ಪಮರ್ತ್ಯಕ್ಕೆ ಇಳಿದಾರು (ಜಗೀತ. ೯೩). [ < ಸಾವರಿಸು ? ]

**ಚಾಮಿಕರ** (ನಾ). = ಚಾಮೀಕರ : ಚಾಮಿಕರಾಂಚಿತ ಚಾಮರ ತಳಿತಭಿರಾಮ ಧವಳಾತಪತ್ರಗಳು (ಭೈರವೇ. ೨-೦೦) ; ಅರಮನೆಯ ಚೋರರುಂ ಪೊಕ್ಕು ಚಾಮಿಕರ ನವರತ್ನ ಭೂಷಣವ ಕದ್ದು (ಪ್ರಭುಪು. ೯-೦೯). ☞ ಇದು ಛಂದಸ್ಸಿಗಾಗಿ ಅಳವಡಿಸಿಕೊಂಡಿರುವ ರೂಪ.
[ < ಸಂ. ಚಾಮೀಕರ ]

**ಚಾಮೀಕರ** (ನಾ). ಚಿನ್ನ ; ಹೊನ್ನು ; ಬಂಗಾರ : ಚಾರು ಚಾಮೀಕರಯಂತ್ರವ್ರಾತದಿಂ ಕುಂಕುಮ ಘನರಸಮಂ ಸಿಂಪಿಸುತ್ತಿರ್ದನೆಂಬಂತಿರಲೆತ್ತಂ ನೀಳ್ದು ಪೊಣ್ಮೆತ್ತು . . . ಶೋಣ ಸೂರ್ಯಾಂಶುಜಾಲಂ (ಕಾದಂಪೂ. ೦೪೦) ; ಚಾಮೀಕರದ ಗದ್ದುಗೆಯಖಿಳ ಸಾಮಂತರನು ಪೃಥ್ವೀಪಾಲರನು ನೆರಹಿದನು (ಕುವ್ಯಾಉ. ೮-೨೯) ; ಗೋಪುರದ ಚಾಮೀಕರದ ದೀಪ್ತಿ (ಶ್ರೀರಾಮಾ. ೩೩೩-೩೪). [ ಸಂ. ]

**ಚಾಮೀಕರಪರಿಷ್ಕೃತ** (ಗು). ಚಿನ್ನದಿಂದ ಲೇಪನ ಮಾಡಲ್ಪಟ್ಟ : ಬಂಗಾರದ ಒಪ್ಪವಿಕ್ಕಿದ : ಅರಸ ತೊಡು ಕವಚವನು ಚಾಮೀಕರ ಪರಿಷ್ಕೃತ ವಜ್ರಮಯ ಬಂಧುರದ ಸೀಸಕವಿದೆ . . . ಪತಿಕರಿಸು (ಕುವ್ಯಾಗ. ೫-೩೯). [ ಚಾಮೀಕರ + ಪರಿಷ್ಕೃತ ]

**ಚಾಮೀಕರಪೀಠ** (ನಾ). ಚಿನ್ನದ ಪೀಠ ; ಬಂಗಾರದ ಆಸನ : ಆಸ್ಥಾನಮಂಡಪೋಪಗತ ಚಾಮೀಕರಪೀಠಾಧ್ಯಾಸಿತನಂ ತ್ರಿವಿಷ್ಟಪಗುರುವಂ ಕಂಡು (ಶಾಂತಿಪು. ೮-೬೬ ವ). [ ಚಾಮೀಕರ + ಪೀಠ ]

**ಚಾಮುಂಡ** (ನಾ). ಒಬ್ಬಾತನ ಹೆಸರು : ಜಿನಗೃಹವಂ ಬೆಳ್ಗೊಳದೊಳ್ಚಮೆಲ್ಲಂ ಪೊಗಳೆ ಮನ್ತ್ರಿ ಚಾಮುಣ್ಡನ ನನ್ದನನೊಲವಿಂ ಮಾಡಿಸಿದಂ (ಎಕ. II, ೦೨೦-೨ ; ಸು. 995) ; [ ? ]

**ಚಾಮುಂಡಯ್ಯ** (ನಾ). = ಚಾವುಂಡ : ಚಾ ಮು ಣ್ಡ ಯ್ಯ (ಎಕ. II, ೯೦೩-೧ : ಸು. 1000) ; ಶ್ರೀಯೂರ ಚಾವುಣ್ಡಯ್ಯನ ಭೂಮಿಯಲು ಪತ್ತುಕೊಳಗ ಬೆದೆಗದ್ದೆಯುಂ (ಮೈಆರಿ. ೧೯೪೬, ೨೮-೧೨ : 1032).
[ ಚಾಮುಂಡ + ಅಯ್ಯ₁ ]

**ಚಾಮುಂಡರಾಜ** (ನಾ). = ಚಾವುಂಡ : ಶ್ರೀ ಚಾ ಮು ಣ್ಡ ರಾ ಜ ಂ ಮಾಡಿಸಿದಂ (ಎಕ. II, ೧೭೩೯೦ ; ಸು. 983). [ಚಾಮುಂಡ + ರಾಜ ]

**ಚಾಮುಂಡಿ** (ನಾ). ೧. ಸಪ್ತಮಾತೃಕೆಯರಲ್ಲಿ ಒಬ್ಬಳ್ ; ಶಕ್ತಿದೇವತೆ. ೨. ದುರ್ಗೆ ; ಪಾರ್ವತಿ : ಬ್ರಾಹ್ಮಿ ಮಾಹೇಶ್ವರಿ . . . ಚಾಮುಂಡಿ ಯೆಂಬವರೇ ಕ್ರಮದಿಂದಾ ಷಡ್ಜಾದಿ ಸ್ವರಾಧಿದೇವತೆಗಳು (ವಿವೇಕ. ೨೩೦); ಲೋಕಮಾತೆ . . . ಚಾಮುಂಡಿಯೆಂಬವಳು ಜನಪನ ಕುಲದೇವತೆ (ಕಂನವಿ. ೧೦-೭೩) ; ಚಂಡಿ ಚಾಮುಂಡಿ ಪೇಳ್ ಬೇಕಾದುದೇನು (ಗಿರಿ. ೩೬-೯).

**ಚಾಮುಂಡಿಯ ಬೆಟ್ಟ, ಚಾಮುಂಡಿಬೆಟ್ಟ** = ಮೈಸೂರ ಬಳಿಯಿರುವ ಒಂದು ಬೆಟ್ಟ ; ಚಾಮುಂಡಿ ದೇವತೆ ನೆಲಸಿರುವ ಬೆಟ್ಟ : ಚಾಮುಂಡಿಯ ಬೆಟ್ಟಕೈದಿದ ತುರುಗಳ ಸ್ತೋಮದ ಮೇಲೆ ಬಿದ್ದಿಱಿದು (ಕಂನವಿ. ೦೩-೬೨) ; ಯಾತ್ರಿಕರು ಬೆಳಗ್ಗೆ ಚಾಮುಂಡಿಬೆಟ್ಟಕ್ಕೆ ಹೊರಟರು (ರೂಢಿ).
[ < ಸಂ. ಚಾಮುಂಡಾ ]

**ಚಾಮೂರ** (ಗು). ಜಿಂಕೆಗೆ ಸಂಬಂಧಿಸಿದ : ಹರಿ ಹರಿಣನಾಗೆ ಸಲೆ ಕೊಂದು ಸೀಳ್ದ ಚಾಮೂರವಾಲೆಯುಮೆನ್ನಗಳ ಕರಕಟಗಳೊಳಿವೆ ನೋಡ (ಪದ್ಮರಾ. ೧೦-೨೬). 'ಚಮೂರು' ಪರಾ. [ < ಸಂ. ಚಾಮೂರವ ]

**ಚಾಮೊಂತ** (ನಾ). ಸಾಮಂತ ; ಮಾಂಡಲಿಕ.

**ಚಾಮೊಂತಚೂಡಾಮಣಿ** = ಸಾಮಂತ ಶ್ರೇಷ್ಠ ; ಮಾಂಡಲಿಕ ಶ್ರೇಷ್ಠ ; ಒಂದು ಬಿರುದು : ಕಲ್ಲಗಾವುಣ್ಡ ಚಾಮೊನ್ತಚೂಡಾಮಣಿ (ಮೈಆರಿ. ೧೯೩೨, ೩೭-೭ : ಸು. 950). [ < ಸಂ. ಸಾಮಂತ ]

**ಚಾಯ, ಚಾಯೆ** (ನಾ). ೧. ಬಣ್ಣ ; ವರ್ಣ : ಪದ್ಮರಾಗವದು ತಾನೆ ಜಾತರಂಗಂ ಕುರುವಿಂದಂ ಸೌಗಂಧಿಕಂ ಗದಾಂಗ ನೀಲಯುಗ್ಮನಾಮ ಕವೆಂಬೀ ನಾಲ್ದೆಱನಾಗಿರ್ಕುಮಾ ಚತುರ್ವಿಧಕ್ಕೆ ಬೇಱೆ ಬೇಱೆ ಚಾಯಂಗಳಂ ಪೇಳ್ದಪೆಂ ಕೇಳಿಂ (ಹಾಲಾಸ್ಯ. ೨-೧-೭೦ ವ) ; ಬಿಳಿ ಚಾಯದ ಉಡುಪು ನೊಡನೆ ಜರದ ರುಮಾಲನ್ನು ಸುತ್ತದ ಬೆಳುವಲದ ಕೆಂಚ (ಚೆಲುವ) ನಿಲ್ಲವೆಂದರೆ ಅತಿಶಯೋಕ್ತಿಯಾಗದು (ಕನ್ನಡಾ. ೦೭೮). ೨. ಹೊಳಪು ; ಕಾಂತಿ : ಆರು ಕಲ್ಲೊಳ್ಳ ಏರಿತಂದನ ಭೀಮ ದಾರಿ ಕಂಕಣದ ಕರವೀರ ಈ ಮನಿಗೆ ಚಾಯವಾದಾವೆಂದು ನಸುನಕ್ಕ (ಲೋಕಗೀ. ೨೦) : ಆಯವಾದವು ಬಂಡಿ ಚಾಯವಾದವು ಕುರುಜು ರಂಗಯ್ನ ತೇರು ಹೊಸತೇರು ಗೊಂಬೆತೇರು ರಾಣಿರಂಗಡಿಗೆ ಹರಿದಾವೊ (ಹಳ್ಳಿಯ. ೨೮) ; ಆಯುಳ್ಳ ಅತಿಗಲ್ಲ ಚಾಯುಳ್ಳ ಮತಿಗಲ್ಲ ಸೂರಿದ ಮತಿಯೆಂಬು ಕೆರಸಿಯ ಗೋರಿ ಕಲ್ಲಿಗೆ ನಾರೇರೈವರು ನೆರೆದಾರ (ಲೋಕಗೀ. ೧೮). **ಚಾಯೆ:** ೧. ಈ ನಾಡ ಅರಿಸಿಣ ಚಾಯೆ ಇಲ್ಲವೆಂದು ಗೋವೆ ಮಲೆನಾಡ ಅರಸಿಣ ಅವರಪ್ಪ ಆನೆಯ ಕೊಟ್ಟು ತರಿಸ್ಯಾರಾ (ಲೋಕಗೀ. ೩೦). ೩. ರೀತಿ ; ಮಾರ್ಗ ; ಕ್ರಮಂ : ರಾಯರ ಮೆಚ್ಚಿದು ನಿಮಗೀ ಚಾಯೆಯ ಪೊಲನಲ್ತು ಕಲ್ತು ವಿಲ್ಲಿದನದಱಿಂ ದಾಯಂಗಿಡದೀಯೆಡೆಯೊಳ್ ತಾಯಂ ಸವಿಗಾರ್ತಿಯೊಡನೆ ತರ್ಪುದೆ ದಾಯಂ (ಜಿಳವಿ. ೩-೦೭೭). ೪. ನೆರಳು. [ < ಸಂ. ಛಾಯಾ ]

**ಚಾಯಬೇರು, ಚಾಯಿಬೇರು, ಛಾಯಾವೇರು** (ನಾ). ಕೆಂಪು ಬಣ್ಣ ಹಾಕಲು ಉಪಯುಕ್ತವಾದ ಒಂದು ಬಗೆಯ ಕೆಂಪು ಬಣ್ಣದ ಬೇರು : ಮಜ್ಜಿಗೆ ಹುಲ್ಲಿನ ಬೇರು (ಚಾಯಬೇರು) ಹಿಟ್ಟುಳಕನ ಬೇರು . . . ಮತ್ತು ಸಕ್ಕರೆ ಇಷ್ಟನ್ನು ಅರೆದು ಕಲಸಿಕೊಡಲು ಆ ತಕ್ಷಣವೇ ಮೂತ್ರ ಬಿಡುವುದು (ಸಕಪ್ಮ. ೯೯೪ ಪರಿ). **ಚಾಯಿಬೇರು:** ರಸಾಂಜನ, ಚಾಯಿ ಬೇರು ಇವನ್ನರೆದು ಅಕ್ಕಿ ತೊಳೆದ ನೀರಿನೊಡನೆ ಕೊಟ್ಟರೂ ರಕ್ತವಾಂತಿ, ಅಜೀರ್ಣದಿಂದಾದ ಉಬ್ಬಸ ಇವು ಹೋಗುವುವು (ಸಕಪ್ಮ. ೪೨೩). **ಛಾಯಾವೇರು :** ಚಿರಿವೇರು, ಛಾಯಾವೇರು (ಮೈಜಿಗಿ. ೫೭-೦೦೫೫).
[ ದೇ. ತಮಿ. ಮಲ. ಚಾಯವೇರ್ ]

**ಚಾಯಮಿಾನು** (ನಾ). ಬಣ್ಣದ ಮೀನು ; ರಂಗುರಂಗಿನ ಮೀನು : ಮಾಣಿಕ ಮಯ್ವಣ್ಣದ ಚಾಯಮೀನ ಕಂಡಾಣೆಕಾರಿಕೆ ಜಲಗಾ ಱ ಕ್ಷೋಣೀಶ್ವರನಾಸ್ಥಾನಕೆ ತಂದು ಕೈಗಾಣಿಕೆ ಕೊಟ್ಟ ರಕ್ಕಸಗೆ (ವೀರಹತ. ೦೦-೩೯). [ ಚಾಯ + ಮೀನು (< ಮೀನ್₂) ]

**ಚಾಯಿಬೇರು** 'ಚಾಯಬೇರು' ನೋ.

**ಚಾಯೆ** 'ಚಾಯ' ನೋ.

**ಚಾರ** (ನಾ). ೧. ಚಲಿಸುವಿಕೆ ; ನಡಗೆ ; ಸಂಚಾರ ; ಸೂರ್ಯಚಾರವಂ ನೋಡಲ್ ಐದು ಗಗನ ಖಂಡಂಗಳಂ ಅಗ್ಗಳಂ ಸಲ್ಗುಂ (ತತ್ತ್ವಪ್ರ. ೨೦೪); ಚಾರ ತಪ್ಪಿತೆ ಗ್ರಹಕೆ ವ್ಯಾಧಿ ವ್ಯಾತವಾಯಿತೇ ? (ಕಎಖು. ೫೦-೩). ೨. ಗೂಢಚಾರ ; ಬೇಹುಗಾರ. ೩. ದೂತ ; ಸೇವಕ : ಮಕುಟವರ್ಧನರಂ ಕಾಣಿಸುತಂ ಬಂದ ಚಾರರಂ ಬೀಳ್ಕೊಡಿಸುತಂ ಸುಖದೊಳಿಪ್ಪಲ್ಲಿ (ಬಸರ. ೬-೩೫) ; ಚಾರರಿಗೆ ಸಿರವ ಕತ್ತರಿಸಿ ಚೆಲ್ಲೆಂದು (ಕನ್ನಜಾ. ೨೪೭). ೪. ನಿರ್ವಹಣೆ ; ಆಚರಣೆ ; ಅಭ್ಯಾಸ ; ಸಾಧನೆ : ದೂತೆ ಕೇಳ್ನಮ್ಮವರು ಶೋಭನ ರೀತಿ–ಚಾರವನೆಲ್ಲ ತೀರಿಸಿ ಆತನೊಳು ಮೈಹೊಂದಿಕೆಯ ಮಾಡಿ ಮಮತೆಯಲ್ಲಿ ಕೂಡಿ (ಶರೀಷ. ೯೯-೨). ೫. ಬೇಡಿ ; ಸಂಕೋಲೆ. ೬. ಸೆರೆ ; ಬಂಧನ. ೭. ಪ್ರಿಯಾಲವೃಕ್ಷ. ೮. ಕುಹಕಚೇಷ್ಟೆ ; ವಂಚಕಚೇಷ್ಟೆ ; (ಕ). ೯. ದನಗಳಿಗೆ ಆಹಾರವಾಗುವ ಹಸಿರು ಹುಲ್ಲು, ಸೊಪ್ಪು ಮೊದಲಾದುವು ; ಮೇವು : (ಕ). [ಸಂ.]

**ಚಾರಕ** (ನಾ). ೧. ಗತಿ ; ಗಮನ ; ಸಂಚಾರ. ೨. ದೂತ ; ಪರಿಚಾರಕ : ಕರಸಿ ಚಾರಕರ್ಗೆ ಕೆಲಸಂಗೊಟ್ಟು ಊರೂರ್ಗೆ ಬೇಱೆಬೇಱೊಳಿದ್ದಾ ರಾಯಸವಿತ್ತು (ವಂಬಿರ. ೫-೪) ; ಅಗ ಚಾರಕ, ದೂತ, ಹಾಸ್ಯಗಾರ, ಹನುಮನಾಯಕನೆಂಬ ಬಹುಕಾರ್ಯದ ಏಕಮುಖಿಯಾದ ಅಧಿಕ ಪ್ರಸಂಗಿಯು ಬಂದು ಮಾತಿಗೆ ತೊಡಗುತ್ತಾನೆ (ಯಕ್ಷಬ. ೪೪) ; ಮಾರುದಿನ ಬೆಳಗಾಗುತ್ತಿದ್ದ ಹಾಗೆ ಅರಮನೆಯ ಚಾರಕನು ಒಂದು ನೂರು ಥೊಲ್ಲಗಳನ್ನು ತಂದನು (ದೇಶಾಂಕ. ೭೩). [ ಸಂ. ]

**ಚಾರಕ್ಷೇತ್ರ** (ನಾ). ಸಂಚಾರ ಮಾಡತಕ್ಕ ಸ್ಥಳ : ಇದರಂತೆಯೇ ಚಂದ್ರನ ಚಾರಕ್ಷೇತ್ರ (ತತ್ತ್ವಪ್ರ. ೨೦೦). [ ಚಾರ + ಕ್ಷೇತ್ರ ]

**ಚಾರಚಕ್ಷು** (ನಾ). ಚಾರರನ್ನು ಕಣ್ಣಾಗಿ ಉಪಯೋಗಿಸಿಕೊಳ್ಳುವವನು ; ಚಾರರ ಮೂಲಕ ತಿಳಿದುಕೊಳ್ಳುವವನು : ಯಾಚಕಯಾಚಿತಾರ್ಥ ಸುಸಮರ್ಥನಗೋಚರ ಚಿತ್ತನರ್ಥಶಾಸ್ತ್ರೋಚಿತ ಚಾರಚಕ್ಷು ವಿಮಳಾಚರಣಂ ಸಚರಾಚರಸ್ತುತಂ (ಚಂದ್ರಪು. ೬-೦೯); ಸದಾ ಚಾರಚಕ್ಷುರಭಿವ್ಯಕ್ತ ಪರಕ್ಷಿತೀಶಗೃಹ ವೃತ್ತಂ . . . ನಂದನಂ ಪುಟ್ಟಿದಂ (ಪುಷ್ಪಪು. ೦೩-೦೦).
[ ಸಂ. ಚಾರಚಕ್ಷುಸ್ (ಚಾರ + ಚಕ್ಷುಸ್) ]

**ಚಾರಚಿಪ್ಪಿ, ಚಾರಚಿಬ್ಬಿ** (ನಾ). ಕಕ್ಕಸಂ ; ಪಾಯಖಾನೆ ; ಶೌಚಕೂಪ : (ಕ). **ಚಾರಚಿಬ್ಬಿ :** (ಕ). [ ? ]

**ಚಾರಚಿಬ್ಬಿ** 'ಚಾರಚಿಪ್ಪಿ' ನೋ.

**ಚಾರಟಿ** (ನಾ). (ಕಾಶ್ಮೀರದಲ್ಲಿರುವ) ಒಂದು ಬಗೆಯ ಬೆಟ್ಟದಾವರೆ ; ಸ್ಥಳಪದ್ಮಿನಿ : "ಅವ್ಯಥಾ, ಅತಿಚರಾ, ಪದ್ಮಾ, ಚಾರಟೀ, ಪದ್ಮಚಾರಿಣೀ–ಇ–ಕಾಶ್ಮೀರ ದೇಶದಲ್ಲಿರುವ ಬೆಟ್ಟದಾವರೇ ಹೆಸರು" (ಸಿದ್ಧಾಂತಿ. ೦೨೮).
[ ಸಂ. ಚಾರಟೀ ]

**ಚಾರಟ್ಟಿ** (ನಾ). = ಚಾರಟಿ : "ಚಾರಟ್ಟಿ–ಸ್ಥಲಪದ್ಮಿನಿ" (ಅಕಾನಿ. ೦೦–೨೫).
[ < ಸಂ. ಚಾರಟೀ ]

**ಚಾರಣ** (ನಾ). ೧. ತಿರುಗಾಡುವಿಕೆ ; ಸುತ್ತಾಡುವಿಕೆ ; ಸಂಚಾರ. ೨. ದ್ವಂದ್ವಯುದ್ಧದಲ್ಲಿ ಒಂದು ವರಸೆ : ಚಂಡಶಾಸನಂ ಚಾರಣದಾಸೆಯಿಂ ನುಸುಳ್ದು (ಅಸಂಪು. ೧೧-೬೦). ೩. ನಟ್ಟವಿಗ ; ಸಂಚಾರೀ ನಟ : "ಶೈಲಾಲೀ, ಶೈಲೂಷಃ, ಕುಶೀಲವಃ, ಚಾರಣಃ . . . ಈರ ನಟ್ಟವಿಗಂ" (ಹಲಾಯು. ೯೭-೯೩೮). ೪. ಕತೆಯನ್ನು ಕವಿತೆ ಮಾಡಿ ಹಾಡುವವನು; ಕಥಾಗೀತೆಯನ್ನು ಹಾಡುವವನು: ಹಲವಾರು ಅಜ್ಜ ಅಜ್ಜಿಯರು ಮತ್ತು ಚಾರಣರು ತಮ್ಮ ಕಲ್ಪನೆಗೆ ಬಂದಂತೆ ಕತೆ ಕಟ್ಟಿ ... ಹಾಡಿರಬೇಕು (ನಂಜುಂಡ. ೩೨). ೫. ಹೊಗಳು ಭಟ್ಟ; ಸ್ತುತಿಪಾಠಕ: ಚಾರಣಗಣಂಗಳೋದುವ ಕಂದ ವೃತ್ತದಿಂ (ಅಜಪು. ೪-೭). ೬. ದೇವಗಾಯಕ; ಗಂಧರ್ವ : ಈತನನಂತ ರಿಕ್ಷದೊಳ್ ಕರಗಳನೆತ್ತಿ ರಾಯರಿಸಿಯೆಂದುರೆ ಕೀರ್ತಿವರಲ್ತೆ ಚಾರಣರ್ (ಶಾಕುಂತ. ೨೭-೯೧). ೭. ಚಲಿಸುವಂತೆ ಮಾಡುವ ಸಾಧನ : "ಅಂಕುಶ (ವಾ) ಚಾರಣಮಂ ಯಾತಮೆಂಬುದು" (ಹಲಾಯು. ೩೭-೬೯). ೮. [ಜೈನ] ಯಾವಾಗಲೂ ಸಂಚಾರಶೀಲನಾಗಿ ಅಲ್ಲಲ್ಲಿ ಜಿನಧರ್ಮೋಪದೇಶ ಮಾಡುವ ಅವಧಿಜ್ಞಾನವುಳ್ಳ, ಗಗನಗಾಮಿಯಾದ ಮುನಿ : ಒಂದು ದಿವಸಂ ಮಣಿಮಾಳಿ ರತಿಚಾರಣರೆಂಬ ಚಾರಣರನವಧಿಜ್ಞಾನಿಗಳಂ ಕಂಡು (ಆದಿಪು. ೨-೧೩ ವ) ; ಮತ್ತಮೊಳಗಣ ನಾಲ್ಕುಂ ದೆಸೆಯೊಳ್ ಚಾರಣಾಚ್ಯುತೇಂದ್ರಪ್ರಮುಖರಪ್ಪ ಕಲ್ಪಾಮರರುಮಂ (ಚಂದ್ರಪು. ೧೨-೧೦೩ ವ). [ಸಂ.]

**ಚಾರಣಋದ್ಧಿ** (ನಾ). [ಜೈನ] ಚಾರಣ ಮುನಿಗಳು ತಪೋಬಲದಿಂದ ಸಾಧಿಸಿಕೊಳ್ಳುವ ಗಗನಸಂಚಾರಶಕ್ತಿ : ಅಂದಿನಭವದೇವನ ತಂದೆ ಯೆನಾಂ ರತಿವರ್ಮನೆನಿಲ್ಲಿ ಶ್ರೀವರ್ಮನೆನಾಗಿ ಸಂಯಮಮುಮಂ ಕೈಕೊಂಡು ಚಾರಣಋದ್ಧಿಯುಮಂ ಪರಮಾವಧಿಯುಮಂ ಪಡೆದೆಂ (ಜಾವುಪು. ೩೯-೭). [ಚಾರಣ + ಋದ್ಧಿ]

**ಚಾರಣಋದ್ಧಿವಡೆ** (ಕ್ರಿ). ಗಗನಸಂಚಾರಶಕ್ತಿಯನ್ನು ಪಡೆ,- ಹೊಂದು : ಅದುವೆ ನಿರ್ವೇಗನಿಮಿತ್ತಮಾಗೆ ತೊಱೆದು ತಪಂಬಟ್ಟು ಚಾರಣಋದ್ಧಿವಡೆದು ಪೋಗಲೊಡಂ (ಪಂಚಾಮೊ. ೮-೩೭ ವ). [ಚಾರಣಋದ್ಧಿ + ವಡೆ₁]

**ಚಾರಣಋಷಿ** (ನಾ). [ಜೈನ] ಚಾರಣಋದ್ಧಿಯನ್ನು ಪಡೆದ ಯೋಗಿ : ಧರ್ಮಾಭರಣರೆಂಬ ಚಾರಣಋಷಿಯರ ಸಮಕ್ಷಮದೊಳ್ ದೀಕ್ಷೆಯಂ ಕೊಂಡಂ (ಪಂಚಾಮೊ. ೧೭-೯೨ ವ); ಚಾರಣಋಷಿಯರ ರೂಪಂ ಚಾರುಗುಣಂ ನೋಡಿ . . . ಹಸ್ತಾಂಭೋರುಹಮಂ ಮುಗಿದು (ಧರ್ಮಾಮೃ. ೧೧-೩೭). [ಚಾರಣ + ಋಷಿ]

**ಚಾರಣಕವಿ** (ನಾ). ಆಶ್ರಯದಾತನನ್ನು ಕೀರ್ತಿಸಿ, ಹೊಗಳಿ ಕಾವ್ಯ ರಚಿಸುವವನು : ಚಾರಣಕಾವ್ಯ . . . ಅವುಗಳನ್ನು ರಚಿಸುವ ಕವಿಗಳೆ ಚಾರಣಕವಿಗಳು (ಕರ್ನಾಜ. ೧೧೮). [ಚಾರಣ + ಕವಿ₁]

**ಚಾರಣಕ್ರಮ** (ನಾ). (ಅಂಕುಶದಿಂದ ತಿವಿದು ಆನೆ) ಮುಂದಕ್ಕೆ ಚಲಿಸುವಂತೆ ಮಾಡುವ ರೀತಿ; ಚೋದನೆ ಮಾಡುವ ಬಗೆ: ಅಮರಾನೀಕದ ಸುತ್ತು ಪೋಲೆ ದಿನನಾಥಾಮಂದ್ಯ ಸಂಧ್ಯಾಭ್ರವಿಭ್ರಮಮಂ ವಾಹನ ದೇವದಂತಿಶಿರದೊಳ್ ಕೂರಂಕುಸಂ ಚಾರಣಕ್ರಮದಿಂದಾದಱುವತ್ತು ನಾಲ್ಕು ಪೊಳೆಪಿಂ ಕಣ್ಗೊಪ್ಪೆ (ಶಾಂತಿಪು. ೯-೧೦೭). [ಚಾರಣ + ಕ್ರಮ]

**ಚಾರಣಗೀತ** (ನಾ). ಚಾರಣರು ಹಾಡುವ ಹಾಡು: ವೀರರಸಪ್ರಧಾನವಾದ ಚಾರಣಗೀತಗಳನ್ನು . . . ಎಷ್ಟೋ ಜನ ಚಾರಣರು ತಾವೇ ರಚಿಸಿಕೊಳ್ಳುತ್ತಿರಬಹುದು (ಕರ್ನಾಜ. ೧೧೮). [ಚಾರಣ + ಗೀತ]

**ಚಾರಣಗುಣ** (ನಾ). = ಚಾರಣಋದ್ಧಿ : ಚಾರಣಗುಣದಿಂದಂ ಸಂಸಾರಾರ್ಣಮಪಾರ ಚೈತ್ಯವಂದನೆಗೆಂದುದೋರಂತೆ ಪೋಗಿ ಗಗನವಿಹಾರದಿನುರ್ವೀ ವಿಹಾರಮಂ ಮುನಿ ಬಿಸುಟಂ (ಶಾಂತಿಪು. ೯-೧೦೩). [ಚಾರಣ + ಗುಣ]

**ಚಾರಣಯೋಗಿ** (ನಾ). = ಚಾರಣಋಷಿ : ಅನಂತಸಂಜ್ಞನಂ ಚಾರಣ ಯೋಗಿಯಂ ನೃಪತಿ ಕಂಡಂ (ಚಂದ್ರಪು. ೩-೬೯). [ಚಾರಣ + ಯೋಗಿ]

**ಚಾರಣೆ** (ನಾ). ೧. ಚೆಂಡಿನ ಆಟದಲ್ಲಿ ಒಂದು ವರಸೆ : ಚಾರಿಸೆ ನಾಲ್ಕು ಪ್ರಕರಣ ಚಾರಣೆ ಮೂನೂಱ ಮೂವತೆಣ್ಟೆನಿಸಿದವಾ ಚಾರಣೆಗಳನ ಶ್ರಮದಿಂ ಚಾರಿಸುಗುಂ ಕೋಟಿ ತೆಱದಿನೆಱೆವ ಬೆಡಂಗಂ (ಎಕ. II, ೦೩೩-೮೩; ೨೩೩). ೨. ಶತ್ರುವಿನ ಸಂಚನ್ನು ನೋಡಿ ಹೊಡೆಯುವುದಕ್ಕಾಗಿ ಯುದ್ಧದಲ್ಲಿ ವಿಚಿತ್ರಗತಿಯಿಂದ ನಡೆವ ಕ್ರಮ : ಚಿತ್ರದ ಚಳಗತಿಯ ಚೌಪಟದ ಚಾರಣೆ[ಪಾಠಾಂ. ಚದ್ದಣೆ]ಗಳ ಥಡಾಳದಲಿ ಹೊಳೆದ ರಾವರ್ತದಲಿ . . . ಭೀಮಕೌರವರು (ಕುಮಾ.ಗ. ೬-೨೨). ೩. ಆನೆ, ಕುದುರೆ, ಮುಂತಾದ ವಾಹನಗಳನ್ನು ನಡೆಸುವುದು ; ಚೋದನೆ.

**ಚಾರಣೆವೆಡಂಗ** = ಆನೆ, ಕುದುರೆಗಳೇ ಮುಂತಾದ ವಾಹನಗಳನ್ನು ನಡೆಸುವುದರಲ್ಲಿ ಚಾತುರ್ಯವುಳ್ಳವನು; ಒಂದು ಬಿರುದು: ಶೌರ್ಯದೀಪ ಸೊಗಸುಗದಾಣ್ಮಂ ಚಾರಣೆವೆಡಂಗಂ ವಿಶಿಷ್ಟಜನಮಿತ್ರಂ (ಎಕ. VIII, ಸೊರಬ. ೪೭೪-೧೧ ; ೨೮೪). [ಸಂ. ಚಾರಣ]

**ಚಾರಪಪ್ಪು** (ನಾ). = ಚಾರಬೀಜ : ಚಾರಪಪ್ಪು = ನುರುಕಲು ಬೀಜ ಮಧುರ (ಅಷ್ಟಾಂಗ. ೧೯೩-೧೨೨); ಚಾರು [ರ] ಪಪ್ಪು ಅಕಲಕರೆ . . . ಚೂರ್ಣವ ಮಾಡಿ (ಸಕವೈ. ೩೯೨). [ಚಾರ + ಪಪ್ಪು./ತೆಲು. ಚಾಱಪಪ್ಪು]

**ಚಾರಪಾಯಿ, ಚಾರಪಾಯಿ** (ನಾ). (ಉಕ) ನೂಲು ಅಥವಾ ಹುರಿಯ ಹೆಣೆಗೆಯಿಂದಾದ ಮಂಚ; ಹೊರಸು : ಕೆಲವು ಚಿಂದಿಗಳು ತೂಗ ಬಿದ್ದಿವೆ. ಚಾರಪಾಯ ಒಂದು ತಿರುವಿ ಬಿದ್ದಿದೆ (ಅನ್ನ. ೩೩೪). **ಚಾರಪಾಯಿ:** ನಾಗರಾಜ . . . ತನ್ನ ತಂಬುವಿಗೆ ತೆರಳಿ ಚಾರಪಾಯಿ(ಹೊರಸು) ಯ ಮೇಲೆ ಬಿದ್ದನು (ಕನಸಿ. ೨೪).

[← ಪಾರ. ಮರಾ. ಚಾರ್‌ಪಾಯೀ ; ಹಿಂ. ಚಾರ್‌ಪಾಈ]

**ಚಾರಪಾಯಿ** 'ಚಾರಪಾಯಿ' ನೋ.

**ಚಾರಬೀಜ** (ನಾ). ಪ್ರಿಯಾಳದ ಬೀಜ : "ಪ್ರಿಯಾಳಂ-ಚಾರಬೀಜ" (ಒಷಧಿ. ೯೮) ; ಕಡೆಯಿಲ್ಲದ ಕದಳಿಯ ಫಲ ಚಾರಬೀಜ ಎಂಭತ್ತು ಖಂಡುಗ (ಬಸಹ. ೯೧-೨೭೩). [ಚಾರ + ಬೀಜ]

**ಚಾರರಾಸಿಪಪ್ಪು** (ನಾ). ಒಂದು ಬಗೆಯ ಬೀಜ (?) : ಬಹುಮೂತ್ರಕ್ಕೆ ಕಾರೆಸೊಪ್ಪು, ಚಾರರಾಸಿಪಪ್ಪು, ಚಕ್ಕವತ್ತದ ಸೊಪ್ಪು . . . ಇವೆಲ್ಲಂ ಪಥ್ಯಂಗಳು (ಸಕವೈ. ೪೦೦). 'ಚಾರಪಪ್ಪು' ಪರಾ. [?]

**ಚಾರಾಖರ್ಚು** (ನಾ). ದನಗಳ ಮೇವಿನ ವೆಚ್ಚ : ಜುಮಾನೆ ದರದ ಪಟ್ಟಿಯನ್ನು ದನಗಳ ಚಾರಾಖರ್ಚಿನ ಪಟ್ಟಿಯನ್ನು ಚಿಕಟಾಯಿಸಿರತಕ್ಕದ್ದು (ಗ್ರಾಮಾಕ. ೧೧೭). [←ಹಿಂ. ಮರಾ. ಚಾರಾಖರ್ಚ್]

**ಚಾರಿ₁** (ನಾ). ೧. ಪಗಡೆಕಾಯಿ ; ಲೆತ್ತದ ಕಾಯಿ ; ನೆತ್ತದ ಕಾಯಿ : ಒರ್ವಳ್ ನೆತ್ತದ ಚಾರಿಯಂ ಕೊಂಡು ಬಂದು . . . ಆಡಿಮೆಂದೊಡನೆ (ಬಂಹರಿ. ೩-೬೦ ವ); ಒಡ್ಡಡಸಿದ ಚಾರಿಯನೆ ಪೊಯ್ದು (ಅದ್ಭುಟ. ೧೧-೧೩) ; ಕೆಲರುಚಿತದ ಕಥೆವೇಳ್ವ ಕೆಲರು ನೆತ್ತದ ಚಾರಿಯಿಡುವ ಕೆಲರಾಲಿವಟ್ಟಲ ಬೀಸುವ ಕಾಲೊತ್ತಿ ಕೆಲಕೆಲರೆಸಗಿದರವಳ್ಗೆ (ವರ್ಧಜ. ೧೧-೩೩); ಅಕ್ಷ ಹೃದಯವೆಂಬ ಹೆದೆಯನ್ನೂ ಚಾರಿಯೆಂಬ ರಥವನ್ನೂ ಸಂಪಾದಿಸಿಕೊಂಡು ಜೂಜೆಂಬ ಯುದ್ಧದಲ್ಲಿ (ಕ್ಷವಾಸ. ೧೨೪). ೨. ಒಂದು ಬಗೆಯ ಬಣ್ಣ,- ರಂಗು : (+). [< ಸಂ. ಶಾರಿ, ಶಾರೀ, ಸಾರಿ, ಸಾರೀ]

**ಚಾರಿ₂** (ನಾ). ೧. ಗತಿ ; ಗಮನ ; ಚಲನೆ : ಧಾರೆಗಳ ದಳ್ಳುರಿಯ ಖಡಿಗಳ ಭಾರಣೆಯ ಬಲು ಝಳದಲಂಪಿನ ಚಾರಿಗಳು ಹೊಱಸೂಸಲು (ನಿಭಾಗ. ೯-೧೪-೪೭) ; ನೆಲವ ಮುದ್ದಿಡುವ ಚಾರಿಯಲ್ಲಿ ಪದಚಾರಿಯಾಗಿ ಹೊರಟ (ಸೂರ್ಯಪಾ. ೧೩-೯). ೨. ನಡವಳಿಕೆ ; ವ್ಯವಹಾರ : ಬೇರೆ ಮತವೆಮಗೇನು ಬೊಪ್ಪನ ಚಾರಿ ನಿಮ್ಮದು (ಕುಮಾ.ಅ. ೮-೭೩). ೩. ಬೇಡಿ;

ಸಂಕೋಲೆ: ವಿಟಜನಕ್ಕೆ ತೊಡರ್ವ ಚಾರಿಯೆನಿಪ ಸೂಳೆಗೇರಿಯಿಂ ವಿದಗ್ಧ ಹೃದಯಹಾರಿಯಿಂ (ಪಂಪಭಾ. ೧-೫೮ ರಗಳೆ). ೪. ಅಗ್ಗದ ಬೆಲೆ; ಸಂಲಭ ಬೆಲೆ : (*). ೫. ಕಾಳಗದ ಒಂದು ವರಸೆ; ಯುದ್ಧದ ಒಂದು ಬಗೆಯ ತಂತ್ರ ; ಉಪಾಯ : ಸುಳಿದರೆಡಬಲ ಚಾರಿಯಲಿ ಚಾಪಳದ ಪಯ ಪಾಡಿನಲಿ (ಕುವ್ಯಾಗ. ೬-೨೨) ; ಕೇಣವಿಲ್ಲದೆ ಚಾರಿ ಚಳಕ ಚಾಳಿಯ ಚದುರ್ಪಾಣಿ ಲಾಘವ ಪಂಥ ಪಾಡುಗಳನರಿದು (ಜೈಮಿಭಾ. ೨೨-೬). ೬. [ಸಂಗೀತ] ವಾದ್ಯವನ್ನು ನುಡಿಸುವ ಒಂದು ಕ್ರಮ,-ಬಗೆ : ಬಹು ಲಯಭೇದದೋಜೆ ಗತಿಭೇದದೊಡಂ ಚಾರಿಭೇದ ದುರ್ವಹಿತೆ ತಗುಳ್ದ ಳಂಕರಣಭೇದದಮರ್ಕೆ ನಿಮಿರ್ಕೆಯಿಂ . . . ಹೃದ್ಯವಾದ್ಯಮಂ ಬಹಳಿಕೆ ವೆತ್ತು ಬಿತ್ತರಿಸಿ ಬಾಜಿಸಿದರ್ (ಪುಷ್ಪಪು. ೧೨-೨೬). ೭. [ನಾಟ್ಯ] ನರ್ತನದಲ್ಲಿ ಒಂದು ರೀತಿ; ನೃತ್ಯದಲ್ಲಿ ಹೆಜ್ಜೆ ಹಾಕುತ್ತಾ ಮುಂದೆ ಸಾಗುವಿಕೆ: "ಸುತ್ತುವಳಯಂ ತಿರುಪು ಚಾರಿ ಬೈಸಿಕೆ ಪುಟವದೊತ್ತಿ ತೋಱುವ ಹಜ್ಜೆ ಯೆನಿಕ್ಕು" (ಮಂಗರಾ. ೨೫-೯) ; ಚರಣದ ಚಾರಿಯ ಚಲ್ಲಿಯ ಪರಿಕ್ರಮ ಕ್ರಮದ ಭಂಗಿಗಳ್ ನೆಗಟ್ದೆಡೆಯೊಳ್ ಸುರವಂದಿಗಳಿಂ ಹೋಹೋಯೆನಿಸಿ ದುದಾಟಮಿಂತು ನೀಲಾಂಜನೆಯ (ಆದಿಪು. ೯-೩೯); ಚಾರಿಮೆಟ್ಟುವ ಭಂಗಿ ದೋರ್ವಲನಂ ಮನಂಗೊಳೆ . . . ಮುರಾರಿ ಕೈಪಱಿಗಾಡಿದಂ (ಜಗವಿ. ೩-೫೨) ; ನಿಲವಿವು ಗತಿಗಳಿವಾಸನಕುಲಮಿವು, ಚಾರಿಗಳಿವೆಂದು ತಾನಭಿನಯಿಸುತ್ತ (ಕುಸುಮಾ. ೭-೬೨). [ ಸಂ. ಚಾರೀ ]

**ಚಾರಿಗತಿ** (ನಾ). [ನಾಟ್ಯ] ನರ್ತನದಲ್ಲಿ ಒಂದು ಗತಿ : ಚಾರಿಗತಿಯಲಿ ನಡೆವನೊಡನೊಡನೆ ಹೊಡೆಯುವನು (ಭಾಸನಾ. ೧೦೬).

[ ಚಾರ್ $_{೩}$ + ಗತಿ ]

**ಚಾರಿಟ** (ನಾ). ಒಂದು ಅನುಕರಣ ಶಬ್ದ ; ಪಾರಿವಾಳದ ಕೂಗು : ಪಾರಿವಾಳದ ಪಕ್ಕಿ ಮದನಕ್ಕೆಯೊಳು ತನ್ನ ನಾರಿಗಿದಿರು ನಡೆದಾಡಿ ಗೂರುಳು ಗುಕುಗುಕು ಗುಟುಗುಟು ಗುಱುಗುಱು ಚಾರಿಟಿಯೆಂದುವಲ್ಲಲ್ಲಿ (ಭರಜ. ೦೫-೩೨).

**ಚಾರಿತ್ರ** (ನಾ). ಶೀಲ; ನಡತೆ ; ಆಚಾರ : "ಚರಿತಂ ರೀತಿ ಚಾರಿತ್ರಮೆನೆ . . . ಆಚಾರಕಕ್ಕು ನಾಮಂ" (ಮಂಗರಾ. ೭೪-೩); ತತ್ತ್ವಭೇದನೆ ಚಾರುತರ ಸುಜ್ಞಾನವದರಾಚರಣೆ ಚಾರಿತ್ರ (ಪಕುಭಾ. ೫-೨೦). [ ಸಂ. ]

**ಚಾರಿತ್ರಂಗೆಡು** (ಕ್ರಿ). ನಡತೆಗೆಡು ; ಶೀಲವನ್ನು ಬಿಡು : ಚಾರಿತ್ರಂಗೆಟ್ಟರನಾಟ್ಕಡಿಗಳೆವಂತೆ ಚಾರಿತ್ರಮುಳ್ಳರನೇಕಾಟ್ಕಡಿಗಳೆಯರ್ (ಧರ್ಮಾಮೃ. ೭-೪೩). [ ಚಾರಿತ್ರ + ಕೆಡು $_{1}$ ]

**ಚಾರಿತ್ರಕ** (ನಾ). ಶೀಲ ; ಗುಣ : ಹೃದಯಕ್ಲೇಶವನು ಬಿಡು ತೊಡಸು ಚಾರಿತ್ರಕದ ಭೂಷಣವ (ತಿಮ್ಮಸ್ತ್ರೀ. ೨-೬೭). [ ಸಂ. ]

**ಚಾರಿತ್ರಮೋಹ** (ನಾ). = ಚಾರಿತ್ರಮೋಹನೀಯ : ಇರ್ತಱನಪ್ಪ ವೇದನೀಯಮುಮಂ ದರ್ಶನಮೋಹದೊಳಂ ಚಾರತ್ರಮೋಹದೊಳಂ ಯಥಾಕ್ರಮದಿಂ . . . ಸ್ತ್ರೀಪುನ್ನಪುಂಸವೇದಮೆನಿಸಿಯುಂ (ಸು ಕು ಮಾ. ೩-೩೯ ವ). [ ಚಾರಿತ್ರ + ಮೋಹ ]

**ಚಾರಿತ್ರಮೋಹನೀಯ** (ನಾ). [ಜೈನ] ಮೋಹನೀಯ ಕರ್ಮಗಳಲ್ಲಿ ಒಂದು ; ಆಚಾರವನ್ನು ದೂಷಿಸುವ ಒಂದು ಕರ್ಮವಿಧ : ದರ್ಶನ ಮೋಹನೀಯಂ ಚಾರಿತ್ರಮೋಹನೀಯಮೆಂದಿರ್ತೆಱನಕ್ಕುಂ (ಶಾಂತಿಪು. ೧೨-೧೧ ವ). [ ಚಾರಿತ್ರ + ಮೋಹನೀಯ ]

**ಚಾರಿತ್ರವಂತ** (ನಾ). ಸದಾಚಾರಶೀಲ. 'ಚಾರಿತ್ರವಂತಿಕೆ' ಪರಾ.

[ ಚಾರಿತ್ರ + – ವಂತ ]

**ಚಾರಿತ್ರವಂತಿಕೆ** (ನಾ). ಒಳ್ಳೆಯ ಶೀಲವನ್ನು ಪಡೆದಿರುವಿಕೆ; ಸದಾಚಾರ ಶೀಲತೆ : ಇದ್ದ ಬಿದ್ದವರಲ್ಲಿ ಚಾರಿತ್ರವಂತಿಕೆಯಿಲ್ಲ (ಸಹುಜೀ. ೩೩).

[ ಚಾರಿತ್ರವಂತ + – ಇಕೆ ]

**ಚಾರಿತ್ರಾರಾಧನೆ** (ನಾ). [ಜೈನ] ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರ ಎಂಬ ರತ್ನತ್ರಯಂದಲ್ಲಿ ಮೂರನೆಯದು ; ಒಳ್ಳೆಯ ಚಾರಿತ್ರವನ್ನು ಅನುಸರಿಸುವಿಕೆ : ಪಾಪಕ್ರಿಯೆಯಂ ನಿವೃತ್ತಿಮಾಡಿ ಶುಭ ಪರಿಣಾಮಮಂ ತನ್ನೊಳ್ ನಿಱಿಸುವುದು ಚಾರಿತ್ರಾರಾಧನೆ (ಜೀವಸಂ. ೩-೮ ವ). [ ಚಾರಿತ್ರ + ಆರಾಧನೆ ]

**ಚಾರಿತ್ರಿಕ** (ಗು). ಚರಿತ್ರೆಗೆ ಸಂಬಂಧಿಸಿದ; ಐತಿಹಾಸಿಕವಾದ: ಚಾರಿತ್ರಿಕಾಧಾರಗಳೇನೂ ಇಲ್ಲವಾದರೂ ಹಾಗೆ ಇದ್ದಿತ್ತು ಎಂಬುದನ್ನು ಊಹಿಸುವುದು ಕಷ್ಟವೇನೂ ಅಲ್ಲ (ಸಪತಿ. v. ಪ್ರಸ್ತಾವನೆ). [ ಸಂ. ]

**ಚಾರಿತ್ರ್ಯ** (ನಾ). = ಚಾರಿತ್ರ : ಚಾರಿತ್ರ್ಯವಿಲ್ಲದ ಚಾರುತ್ವವೇತಕೆ ಬರಿಯ ಚತುರುತ್ವವೆ ಸಾಕೆ (ಇಂಜಾಪ. ೧೭೮-೭೯). [ ಸಂ. ]

**ಚಾರಿವರಿ** $_{1}$ (ಕ್ರಿ). ೧. ಸಂಚನ್ನು ನೋಡಿ ನುಗ್ಗು ; ಯುಕ್ತಿಯಿಂದ ಮುಂದೆ ಸರಿ; ಯುಕ್ತಿಯಿಂದ ಮುಂದೆ ಸಾಗು: ನೃಪನೊಡಹುಟ್ಟಿದನ ಹೊಯ್ದರುಣಜಲದಲಿ ಚಟ್ಟಱಿದು ರಿಪು ಚಾರಿವರಿದನು ಕಳನ ಚೌಕದಲಿ (ಕುವ್ಯಾಕ. ೨೦-೨) : ಹಱಿದು ತೇಜಿಯ ಥಟ್ಟನುಬರಕುಱುಬಿ ರಕ್ಕಸ ಭಟರ ಬೀದಿಯ ತೆಱಹ ತಪ್ಪಿಸಿ ಚಾರಿವರಿದೊಡಹೊಕ್ಕರಗಲದಲಿ (ತೊರರಾ. ೬-೧೦-೦೫) ; ಅರಿಯರೆನಿಪ ರಾಯರ ಪೌಜಿನೊಳು ಚಾರಿವರಿದಾಡಿದನಾ ಸುಭಟ (ನೇಮಿಸಂ. ೧೨-೮೦) ; ರಸಿಕಜನದಕ್ಷಿಗಳಂ ಚಾರಿವರಿದಾಡಿಸಿದಳೆ ಚ್ಚಾರಿ ತದಂಗಮುನನಂಗನಿರೆ ಪಿಂಗಡೆಯೊಳ್ (ರಾಜಶೇ. ೧೨-೮೯). ೨. ಸುತ್ತುವರಿ ; ಆವರಿಸು; ಆಕ್ರಮಿಸು: ದನುಜನಾಯಕರಾಳಿಗೊಂಡರು ಚಾರಿವರಿದರು ಸಿಂಗಣೇಕರನು (ಕಾಶಿರಾ. ೧೭-೪೫); ಅಕ್ಕತುಳ ವೀರರ್ಕಳಂ ಚಾರಿವರಿದೆಂಟುದಿಕ್ಕಿನೊಳ್ (ರುಕ್ಮಾಂಗ. ೦೩-೫೪) : ಘೋರತರ ದಂಡಮಂ ಒಡಿದಿರ್ದು ಕರ್ಬುರ ಶರೀರದಿಂ ಭೀಕರಾಕ್ಷಿಗಳಿಂದಳಂತಕಂ ಚಾರಿವರಿವನು ಜನರಂ (ತುರಂಗ. ೮೬-೪). [ ಚಾರ್ $_{೩}$ + ವರಿ $_{೨}$ ]

**ಚಾರಿವರಿ** $_{2}$ 'ಚಾಲುವರಿ' ನೋ.

**ಚಾರಿವರಿ** $_{3}$ (ನಾ). ಸಂಚನ್ನು ನೋಡಿ ನುಗ್ಗುವಿಕೆ. 'ಚಾರಿವರಿವರಿ' ಪರಾ. [ < ಚಾರಿವರಿ $_{1}$ ]

**ಚಾರಿವರಿಯಿಸು, ಚಾರಿವರಿಸು** (ಕ್ರಿ). ಯುಕ್ತಿಯಿಂದ ನಡೆಸು : ತಾರಕನ ಸುತರುಳಿದ ಧೊರೆಗಳೊಳು ತೇರ್ಗಳಂ ಚಾರಿವರಿಯಿಸಿ ಕಾದುತಿರೆ (ವೀಕ್ಕಪು. ೨-೧೧-೧೮). **ಚಾರಿವರಿಸು :** ಒಬ್ಬೊಬ್ಬರೆಯ್ತಂದು ಸಸಿನೆ ಸರಳಿನ ಮಳೆಯ ಕರೆಯಲು ನಸುನಗುತ ಕಡಿದೆಲ್ಲವನು ಮಗುಳೆಸೆದು ರಣದಲಿ ಚಾರಿವರಿಸಿದನಮಿತ ಸಾಹಸದಿ (ಕೋಗಯು. ೨೫-೨೬).

[ ಚಾರಿವರಿ $_{1}$ + – ಇಸು $_{3}$ ]

**ಚಾರಿವರಿವರಿ** (ಕ್ರಿ). = ಚಾರಿವರಿ $_{1}$ : ಅನಿತು ಚಾತುರ್ಬಲವನಾಗಳೊರ್ವನೆ ಚಾರಿವರಿವರಿದು . . . ಕೊಲ್ವುದಂ ಕಂಡು (ಜೈಮಿಭಾ. ೮-೨೯).

[ ಚಾರಿವರಿ $_{3}$ + ವರಿ $_{2}$ ]

**ಚಾರಿವರಿಸು** 'ಚಾರಿವರಿಯಿಂಸು' ನೋ.

**ಚಾರಿಸು** (ಕ್ರಿ). ೧. ಅರೆ ; ರುಬ್ಬು ; ಮರ್ದಿಸು : ಅಸುವೆಯ ಕಲ್ಗಳಂ ತೊಳೆದು ಚಂದನಮಂ ಪನಿನೀರ್ಗಳಿಂದೆ ಚಾ [ಪಾಠಾಂ. ಸಾ]ರಿಸಿ (ಗಿರಿಕ. ೨-೮೯). ೨. ಉಜ್ಜು ಅಥವಾ ಅರೆದು ಮಿಶ್ರಮಾಡು ; ಕೂಡಿಸು : ಏರಂಡತೈಲದೊಳ್ ಸುರವಾರುಣಿಯಂ ಕಲಸಿ ತಾಮ್ರಪಾತ್ರೆಯೊಳಧಿಕಂ ಚಾ[ಪಾಠಾಂ. ಬಾ]ರಿಸಿ ಪೂಸುತಿರೆ (ಲೋಕೋಪ. ೯-೧೪೦); ನೀರೊಳಗರೆವುದು ಸೌತೆಯ ಬೇರಂ ಬೀಜಮುಮನಲ್ಲಿ ಬೆಲ್ಲಮನಿನಿತಂ ಚಾರಿಸಿ ಕುಡುವುದಂ (ಅಶ್ವಶಾ. ೧೧-೨೬) : ಹೆತ್ತ ತುಪ್ಪವ ತೆಗೆದು ಚಾರಿಸಿದ ನಿಂಬೆಹುಳಿಯೆಣ್ಣೆ ಸುಣ್ಣವ ಕದಡಿ (ಸೂಪಶಾ. ೨-೧೯). ೩. ಚಾತುರ್ಯದಿಂದ ನಡೆಸು ; ಜಾಣತನದಿಂದ ನೆರವೇರಿಸು : ಚಾ[ಪಾಠಾಂ. ಬಾ] ರಿಸಿ ಬಾಳಾಗಮುಮುವ ತಾರಂಗೆಯ್ದಂತೆ ಕಾಲದಂತಕನನೆ ಪೋಲ್ತು . . . ಪೊಯ್ದು ಕೊಂದರ್

ವಲರಂ (ಪಂಪಭಾ. ೧೦-೮೩) ; "ಕತ್ತಿಗಳನ್ನು ಝುಳಪಿಸಿ" (ಪಂಚದೀ. ೩೩೮): ಇನ್ನದಟ ಪೊಜಗಗ್ಗಳಿಕೆಯೆನಿಪತಿವಿಷಮ ಮನದಜತಿವಿಷಮದುಷ್ಕರಮೆಂಬ ದುಷ್ಕರವಂ ಎಳೆಯೊಳೊರ್ವನೆ ಚಾರಿಸಲ್ ಬಲ್ಲಂ (ಎಕ. II, ೧೩೩-೮೩ ; ೫೫೨). [ಚಾರಣ + – ಇಸು೩ ]

**ಚಾರು** (ಗುಂ). ೧. ಚೆಲುವಾದ ; ಸುಂದರವಾದ ; ಆಹ್ಲಾದಕರವಾದ : ಚಾರು ರೂಪವಭಾಸಕ ಸತಿಯೇ (ಧಂದೋಣಬು. ೬. ೦-೨೬) ; ಸುಳಿವುದಲ್ಲಿ ಚಾರು ಸಮೀರಂ (ಜಗವಿ. ೨-೨೩) ; ಚಾರು ಕಂಗಳ ಮುಚ್ಚಿ ಮೆಚಿದಿವೆ ನಾರಿಕೇಳಗಳು (ಜೀವಂಧ. ೧೬-೧೧). ೨. ಉತ್ತಮವಾದ ; ಶ್ರೇಷ್ಠವಾದ: 'ಚಾರುಚರಿತ್ರ' ಪರಾ. [ಸಂ. ]

**ಚಾರುಕಲ್ಯಾಣ** (ನಾ). [ಸಂಗೀತ] ತಾಳ ಪ್ರಭೇದಗಳಲ್ಲಿ ಒಂದು ; ಬಳಿಕ ಧ್ರುವ . . . ಏಕವೆಂಬ ಸಪ್ತತಾಳ ಭೇದಂಗಳಂ ಅವುಗಳೊಳು ಚಂಚತ್ಪುಟ . . . ಚಾರುಕಲ್ಯಾಣ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ- (ವಿವೇಕ. ೨೩೮). [ಚಾರು + ಕಲ್ಯಾಣ ]

**ಚಾರುಕೇಶಿ** (ನಾ). [ಸಂಗೀತ] ಒಂದು ರಾಗದ ಹೆಸರು : ಚಾರುಕೇಶಿ– ಜನಕರಾಗ ಶಿಸೇ ಬಾಣಚಕ್ರದ ಎರಡನೇ ರಾಗ ಮೇಳಸಂಖ್ಯೆ ೨೬ . . . ಈ ರಾಗದ ಪೂರ್ವಾಂಗ ಶಂಕರಾಭರಣ, ಉತ್ತರಾಂಗ ತೋಡಿ (ಸಂಗೀಅಂ. ೦೩೪). [ಸಂ. ಚಾರುಕೇಶೀ ]

**ಚಾರುಗಣ್ಣು** (ನಾ). ಹಿತಕರವಾದ ದೃಷ್ಟಿ: ಚಾರುಗಣ್ಣಿನಿಂದ ಮಾಳೂನನ್ನು ನೋಡಿ, ಮುಂಗೈ ತಗುಲಿಸಿ ಕೆಳದನಿಯಲ್ಲಿ ಕೇಳಿದನು (ಪವನ. ೦೩). [ಚಾರು + ಕಣ್ಣು (<ಕಣ್) ]

**ಚಾರುಗಾತ್ರ** (ನಾ). ೧. ಚೆಲುವಾದ ದೇಹ : ಚಾರುಗಾತ್ರದ ಸುಪ್ರಸನ್ನ ಮುಖಾರವಿಂದದ . . . ಸಾರ ಸೌಭಾಗ್ಯದಲಿ ಬಲದೈತ್ಯಾರಿಗಳು ರಂಜಿಸಿದರಾ ಜನನಿವಹಮಧ್ಯದಲಿ (ನಿಭಾಗ. ೧೦-೧೬-೩೦). ೨. ಚೆಲುವಾದ ದೇಹವುಳ್ಳವನು : ಘನವಿರಾಟ್ಚಾರುಗಾತ್ರ ಕೃತವಿಷ್ಣು ಕಮಳಜ ತುರಾಷಾಟ್ಟಕಿತ ಚಂಚಲಿತ ತಾಂಡವಾಡಂಬರ ದಿಗಂಬರಾಂಬರ ಕುಂತಲ (ಉದ್ಭದೇ. ೬-೩೨). [ಚಾರು + ಗಾತ್ರ ]

**ಚಾರುಚರಿತ್ರ** (ನಾ). ೧. ಒಳ್ಳೆಯ ನಡತೆ ; ಸದಾಚಾರ : ಒಡಲಂ ಚಾರುಚರಿತ್ರದೊಳ್ ಧನವಸ್ಸಿಗಿಷ್ಟಾಪೂರ್ತದೊಳ್ ಸತ್ಯಮಂ ನುಡಿಯೊಳ್ . . . ತಾಳ್ದಿದಂ (ಲೋಕೋಪ. ೧-೦೮ ಪೀಠಿಕೆ) ; ಚಾರುಚರಿತ್ರ ತೀರ್ಥ ಜಲದಿಂದಘಕರ್ದಮಮಂ ಕಟಲ್ಚಿ (ಶಂಕಾಮಾ. ೦-೧೪) . ೨. ಒಳ್ಳೆಯ ನಡತೆಯುಳ್ಳವನು ; ಸದಾಚಾರಿ : ಚಾರುಚರಿತ್ರನಪ್ಪುದು ಗುಣಾನ್ವಿತ ನಪು ದು (ಧರ್ಮಾಮೃ. ೫-೯೦). [ಚಾರು + ಚರಿತ್ರ ]

**ಚಾರುಚೋಪಿ** (ನಾ). ಚೂರು ಚೂರು (?): ಸ್ವರ್ಗ ನಿರ್ಗವೆಂಬಘಾನು ಚಾರುಚೋಪಿ ಮಾಡಿದ್ದೇನು ಅಗ್ಗ ಮಾಡಿದೇನು ನಾಲ್ಕು ಪದಗಳೆಂಬವಾ ನುಗ್ಗು ಮಾಡಿ ಕಳೆದೆ ನಾನು ದಶಾವಾಯುವೆಂಬರಾ (ಜಿದಾವ. ೧೪೪-೦೩). [ ? ]

**ಚಾರುತರ** (ಗು). ೧. ಹೆಚ್ಚು ಚೆಲುವಾದ ; ಹೆಚ್ಚು ಸುಂದರವಾದ : ಚಾರುತರಾಪ್ಸರಾಸ್ತ್ರೀವಂದ್ಯೆಯಹ ರಂಭೆ (ಬಸಪು. ೯೦-೩) ; ಪೊಗಳೆ ಕೆಸರ್ಮಲ್ಲಿಗೆಯೆನಲ್ವಾವರೆಗೆ ಚಾರುತರಮಪ್ಪ ನಾಮಮುಮಕ್ಕುಂ (ಕಬ್ಬಿಗ. ೧೨) ; ಜನರೆಲ್ಲ ಚಾರುತರ ಬೋಧೆಯ ನೀಡುವರು (ಸಿದ್ಧಪು. ೯೦-೮). ೨. ಉತ್ತಮವಾದ ; ಶ್ರೇಷ್ಠವಾದ : ಚಾರುತರ ಯಜ್ಞವಿದ್ಯಾ ಪಾರಗರ ರವಂಗಳಿಂ . . . ನೆಗಟ್ಟುದಾಹುತಿಧೂಮಂ (ಪಂಪಭಾ. ೬-೩೪). (ನಾ). ೩. ಉತ್ತಮವಾದ ರೀತಿ : ಚಾರುತರದಲಿಕ್ಕೇರಿಯವರ ಬಲ ವಾರಿಧಿ ಮುತ್ತಿ ಮೂದಲಿಸಿ (ಕಂನವಿ. ೦೪-೯೦). [ಸಂ. ]

**ಚಾರುತ್ವ** (ನಾ). ಮನೋಹರತೆ ; ಸುಂದರತೆ: ನಿಶಾಂತಸ್ಫಾರ ಚಾರುತ್ವ ಮಾಗಿಯುಂ ಅನಿಶಾಂತ ಸ್ಫಾರ ಚಾರುತ್ವಮುಂ . . . ಎನಿಸಿ (ಚಂದ್ರಪ. ೧೦-೦೬ ವ) ; ತತ್ಪಂಕಜಾಕರ ಚಾರುತ್ವಕೆ ಮೆಚ್ಚಿ ತೂಗೆ ಶಿರವಂ (ರಾಜಶೇ. ೨-೬೩) ; ಚಾರಿತ್ರ್ಯವಿಲ್ಲದ ಚಾರಂತ್ವವೇತಕೆ ಬರಿಯ ಚತುರತ್ವವೆ ಸಾಕೆ (ಇಂಚಾಪ. ೦೬೮-೬೯) ; ರಚನೆಯಿಂದಲೂ ಪ್ರಸಾದದಿಂದಲೂ ಚಾರುತ್ವ ದಿಂದಲೂ ತುಂಬಿಕೊಂಡಿರುವ ಶಬ್ದಗಳನ್ನೇ ಕಾವ್ಯದಲ್ಲಿ ಸೇರಿಸಬೇಕು (ಭಾರಮಿ. ೬೬). [ಸಂ. ]

**ಚಾರುರೂಪ** (ನಾ). ಮನೋಹರವಾದ ರೂಪು ; ರಮಣೀಯವಾದ ಆಕೃತಿ : ಈ ಚಾರುರೂಪ ಲಲಿತ ವನೇಚರಿಯರನೀ ಕಂರೂಪರೊಳ್ ಕೂಡಿ (ಪುಷ್ಪಪು. ೫-೯೦). [ಚಾರು + ರೂಪ ]

**ಚಾರುರೂಪಿಣಿ** (ನಾ). ಸುಂದರವಾದ ರೂಪವುಳ್ಳವಳು ; ಸುಂದರಿ : ಇಂದೆನಿತು ಚಾರುರೂಪಿಣಿಯಾಗಿ ತೋರುತಿಹೆ ನೀನೆನಗೆ (ಶ್ರೀರಾಮಾ. ೬೪-೨೮೭). [ಸಂ. ಚಾರುರೂಪಿಣೀ ]

**ಚಾರುವೃತ್ತ** (ನಾ). ೧. ಮನೋಹರವಾದ ವರ್ತುಲಾಕಾರವುಳ್ಳದು. ೨. ಮನೋಹರವಾದ ನಡತೆಯುಳ್ಳವನು. ೧, ೨ : ಮಂಜು ಮಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ . . . ರಾಜನೆನ್ನವೊಲಾದೊಡಂ (ಕ್ಷಮಿಭಾ. ೨೮-೬೨). [ಚಾರು + ವೃತ್ತ ]

**ಚಾರುಹಾಸ** (ನಾ). ಮೋಹಕವಾದ ನಗು ; ಮನೋಹರವಾದ ನಗುಂ : ಚಾರುಹಾಸನಿವಾಸನಾಡಿದನಾಡಿದಂ ಸುಭಗಂ (ಜಗವಿ. ೩-೫೩). [ಚಾರು + ಹಾಸ್ಯ ]

**ಚಾರುಹಾಸಿನಿ** (ನಾ). ಮೋಹಕವಾದ ನಗೆಯುಳ್ಳವಳು : ಒಡಂಬಟ್ಟು ಚಾರುಹಾಸಿನಿ ನಿಜನಿವಾಸಕ್ಕೆ ಪೋದಳ್. (ಗದಾಯು. ೨-೧೦ ವ). [ಸಂ. ಚಾರುಹಾಸಿನೀ ]

**ಚಾಱೆ** (ನಾ). (ಕಠಾ) ಹಲಸಿನ ತೊಳೆ ತೆಗೆದು ಉಳಿದ ಭಾಗ; ಸೋಲೆ; ಸೆಡೆ. [ ? ]

**ಚಾರ್ಕಲ** (ನಾ). ನಕ್ಷತ್ರ ; ಚುಕ್ಕಿ ; ತಾರೆ : ತಂಗೀಯು ಕರೆಯೆಂದ್ರು ಸಂಜೆಯಾಯಿತೆಂದ ಬಂಗಾರದ ಕೊರಳ ಮಡದೀಯು ಕರೆಯೆಂದ್ರು ಚಾರ್ಕಲದ ಬೆಳಕು ಹಗಲೆಂದ (ಹಳ್ಳಿಯು. ೦೬೩): ಚಾರ್ಕಲಕ್ಕೆ ಎಂದಾದರೂ ಚಂದ್ರಮನ ಸೊಬಗು ಬಂದೀತೆ ? (ಜಾಪ). [ ? ]

**ಚಾರ್ಖಾನೆ** (ನಾ). ಚಚ್ಚೌಕವಾದ ಮನೆ ; ಚಚ್ಚೌಕ ; ಪೊಪ್ಪಳಿ: (೬). **ಚಾರ್ಖಾನೆಸೀರೆ** = ಚಚ್ಚೌಕವಾದ ಮನೆಗಳಿಂದ ಕೂಡಿದ ಸೀರೆ ; ಚೌಕಡಿಸೀರೆ: (೬). [←ಪಾರ. ಹಿಂ. ಚಾರ್‌ಖಾನಾ; ಮರಾ. ಚಾರಖಣೀ]

**ಚಾರ್ಚಿಕ್ಯ** (ನಾ). ೧. ಗಂಧ ಮೊದಲಾದ ಸುಗಂಧದ್ರವ್ಯಗಳನ್ನು ಶರೀರಕ್ಕೆ ಲೇಪಿಸುವುದು ; ಸುಗಂಧದ್ರವ್ಯಗಳನ್ನು ಮೈಗೆ ಲೇಪಿಸಿ ಕೊಳ್ಳುವಿಕೆ. ೨. ಅಂಗರಾಗದ ಹಿಟ್ಟು,-ಹುಡಿ ; ಬುಕ್ಕೀಹಿಟ್ಟು : "ಚರ್ಚಾ, ಚಾರ್ಚಿಕ್ಯಂ, ಸ್ಥಾಸಕಃ – ೩ ಕುಂಕುಮ ಮುಂತಾದ ಅಂಗರಾಗದ ಹಿಟ್ಟಿಗೆ ಹೆಸರು, ಮೈಮಿಂಚುವುಡಿ, ಮೈಗುಜ್ಜುವ ಗಂಧವುಡಿ, ಉದ್ವರ್ತನಚೂರ್ಣ, ಬುಕ್ಕೀಹಿಟ್ಟು" (ಸಿದ್ಧಾಂತಿ. ೦೬೮). [ಸಂ. ]

**ಚಾರ್ಜು, ಛಾರ್ಜು** (ನಾ). ೧. ಪ್ರಯಾಣದ ವೆಚ್ಚ, – ಖರ್ಚು ; ಪ್ರವಾಸದ ಟಿಕೆಟ್ಟು ಮೊದಲಾದುವುಗಳ ಬೆಲೆ : ಹೋಗಿ ಬರುವ ಚಾರ್ಜು ಕೊಟ್ಟೇ ಕಳುಹಿದ್ದೆ (ಹುಕ್ಕುಹು. ೫೫). ೨. ಹೊಣೆ ; ಅಧಿಕಾರ; ವಶ : ಯಾವುದಾದರೂ ಒಂದು ಕೋರ್ಟಿನ ಚಾರ್ಜಿಗೆ ನೇಮಿಸತಕ್ಕದ್ದು (ಗ್ರಾಮಾಕ. ೦೦) ; ಕಿಟ್ಟಿ ಹೊಸ ದಪ್ತರಿನ ಛಾರ್ಜು ತೆಗೆದುಕೊಂಡಿರಲಿಲ್ಲ (ಗಂಮಾಯಿ. ೨೨) ; ಚಾವಡಿಯ "ಛಾರ್ಜು" ಓಲೆಕಾರನ ಕಡೆಗೆ ಇರುವುದು (ಗಾಳಿಗು. ೩). **ಛಾರ್ಜು** : ೧. ಮೈಸೂರಿಗೆ ಹನ್ನೆರಡಾಣೆ ಛಾರ್ಜು (ಪನ್ನಪ. ೨೬). [←ಇಂ. Charge ]

**ಚಾರ್ಮಣ** (ಗು). ೧. ಚರ್ಮದ ಆವರಣವುಳ್ಳ. (ನಾ). ೨. ಚರ್ಮಗಳ ರಾಶಿ ; ತೊಗಲಿನ ಸಮೂಹ, ೩. ಗುರಾಣಿಗಳ ಸಮೂಹ. [ಸಂ.]

**ಚಾರ್ವಕ** (ನಾ). = ಚಾರ್ವಾಕ ೧ : ವಾಗ್ಬಲದ ಪೊಡಪ್ಪು ವೇಡ ಗಡ ಚಾರ್ವ್ವಕ ಚಾರ್ವ್ವಕ ನಿಮ್ಮ ದರ್ಪ್ಪವಮಂ ಸಲಿಪನೆ ಗೋಷನನ್ನಿ ಮುನಿಪುಂಗವನೆಂಬ ಮದಾನ್ಧ ಸಿನ್ಧುರಂ (ಎಳ. II, ೬೯-೪೦ ; ಸು. 1100). [ <ಸಂ. ಚಾರ್ವಾಕ ]

**ಚಾರ್ವರಿ** 'ಚಾಲುಂವರಿ' ನೋ.

**ಚಾರ್ವಾಕ** (ನಾ). ೧. ನಿರೀಶ್ವರವಾದಿ ; ದೇವರ ಅಸ್ತಿತ್ವದಲ್ಲಿ ನಂಬಿಕೆಯಿಲ್ಲದವನು ; ನಾಸ್ತಿಕ : "ಲೋಕಾಯತಿಕಃ, ಚಾರ್ವಾಕಃ – ಈ ೨ ಚಾರ್ವಾಕನು" (ನಾಚಿರಾ. ೦೨೬); ಎಲೆ ಚಾರ್ವಾಕ ನಿನಗಿದು ಕೇಳುವೊಡೆ ಪವಣಲ್ಲ (ಬಸವು. ೪೯-೨೫); ಸಂಪನ್ನ ತನುವೇ ಆತ್ಮನೆಂಬರು ಕೆಲರು ವಾದಿಗಳು ಕೆಲಕೆಲರು ಚಾರ್ವಾಕರು (ಅಮೃತ. ೩-೫೭). ೨. ಆರು ನಾಸ್ತಿಕ ದರ್ಶನಗಳಲ್ಲಿ ಒಂದು : ಈ ಮೂಲ ತತ್ವಾನ್ವೇಷಣ ರೂಪದಲ್ಲಿ ಚಾರ್ವಾಕ, ವೈಭಾಷಿಕ . . . ಆರು ನಾಸ್ತಿಕದರ್ಶನಗಳೂ . . . ಆವಿರ್ಭವಿಸಿರುತ್ತವೆ (ಭಾರದ. ೨೨೯). [ ಸಂ. ]

**ಚಾರ್ವಾಕತೆ** (ನಾ). ನಾಸ್ತಿಕತೆ ; ನಿರೀಶ್ವರವಾದ : ಈ ಚಾರ್ವಾಕತೆಯೆ ಒಂದು ಕ್ಷಣ ಅವನಿಗೆ ಮೋಜಾಗಿ ಕಂಡಿತ್ತು (ಸಮಜೀ. ೬೬೩). [ ಸಂ. ಚಾರ್ವಾಕತಾ ]

**ಚಾರ್ವಾಕದರ್ಶನ** (ನಾ). ನಿರೀಶ್ವರವಾದವನ್ನು ಪ್ರತಿಪಾದಿಸುವ ದರ್ಶನ; ನಾಸ್ತಿಕತ್ವವನ್ನು ತಿಳಿಸುವ ಶಾಸ್ತ್ರ : ದರ್ಶನಗಳಿಗೆಲ್ಲ ಮೊದಲನೆಯದಾಗಿಯೂ, ಸರ್ವದರ್ಶನ ಪ್ರತಿಕಕ್ಷಿಯಾಗಿಯೂ ಇರುವ ದರ್ಶನವು ಚಾರ್ವಾಕದರ್ಶನವು (ಹಿಂದಸಾ. ೮೦). [ ಚಾರ್ವಾಕ + ದರ್ಶನ ]

**ಚಾರ್ವಾಕಮತ** (ನಾ). = ಚಾರ್ವಾಕದರ್ಶನ : ಕೃತಕದ್ವಿಜಂ ಚಾರ್ವಾಕ ಮತಾವಲಂಬಿಯಾಗಿ . . . ಮಹೀಪಾಲನೊಳ್ ಸಹಸ್ರಜಿಹ್ವನಪ್ಪ ನಾಗ ರಾಜನನೆ ಪೋಲ್ವುದು ನುಡಿಯೆ (ಶಾಂತಿಪು. ೮-೧೨೬ ವ). [ ಚಾರ್ವಾಕ + ಮತ ]

**ಚಾರ್ವಾಕವಾದ** (ನಾ). ನಿರೀಶ್ವರವಾದ; ನಾಸ್ತಿಕವಾದ: ಅವನ ವಿಚಾರ ವಾದವೆಲ್ಲ ವಾದಸರಣಿಯೆಲ್ಲ ಚಾರ್ವಾಕವಾದ, ಚಾರ್ವಾಕವಾದಸರಣಿ (ಭಾರದ. ೦೦೨). [ ಚಾರ್ವಾಕ + ವಾದ ]

**ಚಾಲ್** 'ಚಾಲು' ನೋ.

**ಚಾಲ** (ನಾ). ಒಂದು ಬಗೆಯ ಮರ : ಕಗ್ಗಲಿ ಚಾಲ ಮೂಲ ಕವಳಂ (ಯಾದವ. ೪-೫೨). [ ? ]

**ಚಾಲಕ, ಚಾಳಕ₁** (ನಾ). ೧. ನಡೆಯಿಸುವವನು; ನಿರ್ವಾಹಕ; ವ್ಯವಸ್ಥಾಪಕ : ಬ್ಯಾಂಕು ಸ್ಥಾಪನೆಯಾಗುವಾಗ . . . ಚಾಲಕರು ಬ್ಯಾಂಕ್ ರಿಜಿಷ್ಟರ್ ಮಾಡಿದ ಬಗ್ಗೆ ಪತ್ರಿಕೆಯನ್ನು ಹೊರಡಿಸುವರು (ಬ್ಯಾಂಕಕ್ಕೆ. ೧೦) ; ಈ ಉದ್ಯಮದ ಚಾಲಕರೆಂದರೆ ಸ್ವಯಂ ಶ್ಯಾಮಲಾಲರು (ಕಾರಿಹಿಂ. ೧೪೮). ೨. ಸಾರಥಿ ; ಬಂಡಿ ಹೊಡೆಯುವವನು : ಜ್ಞಾನಾಂಬೆಯನ್ನು ಬಂಡಿಯಲ್ಲಿ ಕೂರಿಸಿ ಚಾಲಕನನ್ನು ಪನ್ನಂಪಳ್ಳಿಯ ಕಡೆ ಬಿಡಲು ಹೇಳಿದೆ (ಪ್ರತಾಪ. ೩೦). ೩. ಮದಿಸಿದ ಆನೆ. ೪. ಚಲನಶಕ್ತಿಯನ್ನು ನೀಡುವ ಯಂತ್ರ : ಈ ವಿಧಿಯನ್ನನುಸರಿಸಿ ವಿದ್ಯುತ್ಪ್ರವಾಹದಿಂದ ತಿರುಗುವ ಚಾಲಕಗಳನ್ನು (Motors) ಕಟ್ಟಿರುತ್ತಾರೆ (ಭಾತವಿ. ೩೩೬). **ಚಾಳಕ₁** : ೧. ಚಾಳಕನಿಲ್ಲದೂರು . . . ಸೊಬಗಿಲ್ಲದ ನಾರಿಯರೊಪ್ಪಲಾರ್ವರೇ (ನೀತಿಸಾ. ೦೫೬). [ ಸಂ. ]

**ಚಾಲತಿ, ಚಾಲ್ತಿ** (ಗು). ೧. ವ್ಯವಹಾರದಲ್ಲಿರುವ ; ಚಲಾವಣೆಯಲ್ಲಿರುವ ; ಬಳಕೆಯಲ್ಲಿರುವ : ಅಲ್ಲಿಯ ಪ್ರಮುಖ ವ್ಯಾಪಾರಿಯು ಆ ಯಾವತ್ತು ಕಾಳನ್ನು . . . ಚಾಲತಿ ಬೆಲೆಗೆ ಸಾಟಿ ಮಾಡುತ್ತಾನೆ (ಚಾಲಪ್ರ. II, ೮೯೩) ; ಅದು ಸಾಧಾರಣ ಚಾಲತಿ ಶ್ರೇಣಿಯ ಆದರ್ಶ (ನಿಬಂಧ. II, ೦೪). (ನಾ). ೨. ಜನಬಳಕೆ; ವ್ಯವಹಾರ: ಬೆಂಕಿಕಡ್ಡಿ ಬಂದ ಮೇಲೆ ಚಕಮಕಿ ಬೆಂಕಿ ಚಾಲತಿಯಲ್ಲಿಲ್ಲ (ಕೂಥಿ). ೩. ವಾದ್ಯಗಳ ವಾದನದ ರೀತಿಗಳಲ್ಲಿ ಒಂದು : ಮೇಳದವರು ಅದಕ್ಕೆ ಮೊಟ್ಟಮೊದಲು 'ಮುಕ್ತಾಯ' ಕೊಟ್ಟು ಚಾಲತಿಯನ್ನು ಬಾರಿಸಿ ಮುಗಿಸುವರು (ಚಟ್ನಹೊ. ೧೩). **ಚಾಲ್ತಿ** : ೨. ಕೆಂಪು ಔಷಧಿ ಸವರಿದ ಕಡ್ಡಿಗಳೇ ಆಗ ಚಾಲ್ತಿ (ಕೆಂಗೂಲಿ. ೦೦೨) ; ಕತ್ತಿ ಏರುವ, ಕೊಂಡ ಹಾಯುವ . . . ಸಂಪ್ರದಾಯ ಈ ಶತಮಾನದಲ್ಲಿಯೂ ಎಲ್ಲ ಕಡೆಯೂ ಚಾಲ್ತಿಯಲ್ಲಿದೆ (ಸಾಜಂಡ. ೧೩೪) : ರಂಜಣದಲ್ಲಿಯ . . . ನಾಣ್ಯ ಚಾಲ್ತಿಯಿಲ್ಲದೆ ಹಸರುಗಟ್ಟಿದ್ದವಂತೆ (ಗೀಜುಗಿ. ೩). [ ←ಮರಾ. ಚಾಲತೀ ]

**ಚಾಲತಿಠೇವಣಿ** (ನಾ). = ಚಾಲತಿಠೇವು : ಅವನು ಸಿರಿವಂತನಾದ್ದರಿಂದ ಚಾಲತಿಠೇವಣಿಯಲ್ಲಿಯೇ ಬಹಳ ಹಣ ಇಟ್ಟಿದ್ದಾನೆ (ಕೂಥಿ). [ ಚಾಲತಿ + ಠೇವಣಿ ]

**ಚಾಲತಿಠೇವು** (ನಾ). (ದಿನನಿತ್ಯದ ವ್ಯವಹಾರಕ್ಕೆ ಬಳಸುವುದಕ್ಕಾಗಿ) ಬ್ಯಾಂಕು ಮೊದಲಾದುವುಗಳಲ್ಲಿ ಇಟ್ಟ ಹಣ; ಕರೆಂಟ್ ಡಿಪಾಸಿಟ್ಟು : ಬಳಕೆಯ ಇಡುಗಂಟು(ಚಾಲತಿಠೇವಿ)ನಲ್ಲಿಟ್ಟರೆ . . . ಈ ಖಾತೆಯ ಉಪಯೋಗವನ್ನು ಹೆಚ್ಚಾಗಿ ಮಾಡಿಕೊಳ್ಳುವರು (ಬ್ಯಾಂಕಕ್ಕೆ. ೦೭). [ ಚಾಲತಿ + ಠೇವು ]

**ಚಾಲತಿದಪ್ತರ** (ನಾ). ದಿನನಿತ್ಯದ ವ್ಯವಹಾರಕ್ಕೆ ಸಂಬಂಧಪಟ್ಟ ಲೆಕ್ಕಪತ್ರ,–ದಾಖಲೆ : (ಕ). [ ಚಾಲತಿ + ದಪ್ತರ ]

**ಚಾಲತಿಭಂಡವಲ** (ನಾ). ವ್ಯವಹಾರದಲ್ಲಿ ತೊಡಗಿಸುವ ಬಂಡವಾಳ; ಚಲಾವಣೆಯಲ್ಲಿರುವ ಹಣ : ಇದಕ್ಕೆಲ್ಲ ಬೇಕಾಗುವ ಚಾಲತಿಭಂಡವಲ (Working Capital)ವೂ ಬಹಳವಾಗಿದೆ (ಚಾಲಪ್ರ. I, ೪೭೪). [ ಚಾಲತಿ + ಭಂಡವಲ (<ಬಂಡವಲ) ]

**ಚಾಲತಿಮಾಲು** (ನಾ). ಸದ್ಯ ಬಳಕೆಯಲ್ಲಿರುವ ಸರಕು : ಅವನಿರುವ ಅಂಗಡಿಯಲ್ಲಿ ಚಾಲತಿಮಾಲಿನ ದಾಸ್ತಾನೇ ಹತ್ತು ಲಕ್ಷ ರೂಪಾಯಿಗಳಷ್ಟಿರ ಬಹುದಂತೆ (ಜಾರುದಾ. ೬೬). [ ಚಾಲತಿ + ಮಾಲು₄ ]

**ಚಾಲತಿಸಾಲು, ಚಾಲ್ತಿಸಾಲು** (ನಾ). ನಡೆಯುತ್ತಿರುವ ವರ್ಷ : ಕಂದಾಯದ ಬಾಕಿಗೋಸ್ಕರ ರೈತರು ಪಾವತಿ ಮಾಡುವ ಹಣವನ್ನು ಮತ್ತು ಚಾಲತಿಸಾಲಿಗೆ ಕೊಟ್ಟ ಹಣವನ್ನು ಲೆಕ್ಕದಲ್ಲಿ ದಾಖಲ್ಮಾಡಿ . . . ದುರಸ್ತು ಮಾಡಬೇಕು (ಗ್ರಾಮೂಕ. ೬೦). **ಚಾಲ್ತಿಸಾಲು** : 'ಚಾಲ್ತಿಸಾಲಿ'ನ ಬಾಕಿಯನ್ನು ಗುದಸ್ತಬಾಕಿಯನ್ನೂ ಬೇರೆ ಬೇರೆ ಹಾಕಿ . . . ತಲೆ ಕೆಡಿಸುತ್ತಿದ್ದರು (ನನ್ನೂರು. ೦೫೩). [ ಚಾಲತಿ + ಸಾಲು₃ (<ಸಾಲ್₃) ]

**ಚಾಲನ** (ನಾ). ೧. ನಡೆಸುವಿಕೆ ; ಚಲಿಸುವಂತೆ ಮಾಡುವಿಕೆ : "ಚಾಲನ, ಪ್ರೇರಣ" (Actuation. ಇಂಕಲಿ). ೨. ಜರಡಿ ಮೂಲಕ ಸೋಸುವಿಕೆ. ೩. ಅಲ್ಲಾಡಿಸುವಿಕೆ, 'ಲಾಂಗೂಲಚಾಲನ' ಪರಾ. ೪. ಸಡಿಲಗೊಳಿಸುವಿಕೆ. [ ಸಂ. ]

**ಚಾಲನಿ, ಚಾಳನಿ** (ನಾ). ಸಾರಣಿಗೆ ; ಒಂದರಿ ; ಜರಡಿ : "ಚಾಲ[ಪಾಠಾಂ. ಳ]ನಿ ರಂಧ್ರಿ ಸಾರಣಿಗೆ" (ಮಂಗರಾ. ೬೨-೨೦). **ಚಾಳನಿ** : "ಚಾಳನಿಯೆನೆ ಶಾರಣಿಕಂ" (ವಸ್ತುಕೋ. ೪೯-೨೭). [ ಸಂ. ಚಾಲನೀ ]

**ಚಾಲನೆ** (ನಾ). ಚಲನಶಕ್ತಿ ; ಪ್ರೇರಣೆ : ಅವರಿಗೆ ನಾವು ಚಾಲನೆ ಕೊಟ್ಟರೆ ಅವರಿಗೆ ಸರಿಯಾದ ದಾರಿ ಸಿಗಬಹುದು (ಅಪನಾ. ೧೭೫) ; ಒಂದು ದೃಷ್ಟಿಯಿಂದ ಈ ಎಲ್ಲ ಚಾಲನೆ ಶೇಖರಿಸುವುದು ನರಹರಿ ಕುಸುಮಾರ ಪರಿಸರದಲ್ಲಿ (ಸಮಜೀ. ೧೭, ಟಿಪ್ಪಣಿ) ; ಇದಕ್ಕೆ ಹೆಚ್ಚಿನ ಚಾಲನೆಯನ್ನು ಕೊಡಬೇಕೆಂದು ಅವಳು ಅವನ ಹರಟೆಯ ಕೊನೆಗೆ ಹೇಳುತ್ತಿದ್ದಳು (ರಂಗರೋ. ೩೪). [ ಸಂ. ಚಾಲನ ]

**ಚಾಲವರಿ** 'ಚಾಲುವರಿ' ನೋ.

**ಚಾಲಾಕಿ**, ಚಲಾಕಿ (ನಾ). ಚುರುಕುತನ; ಬುದ್ಧಿವಂತಿಕೆ: ಆಹಹಹಾ ನಿನ್ನ ಚಾಲಾಕೀನೇ (ರಂಗವ. ೨೨೨). **ಚಲಾಕಿ:** ಅಂಗಡಿಗಳ ವೈವಿಧ್ಯ, ವ್ಯಾಪಾರದ ಚಲಾಕಿ, ಜನರ ಮಾತುಕತೆ ಅವನ ಪ್ರಬಂಧದಲ್ಲಿ ಮರುಧ್ವನಿಸುತ್ತವೆ (ಸ್ವಪ್ನಹೊ. ೦೦೦); ತಮ್ಮ ಮಾತಿನ ಚಲಾಕಿ ತೋರಿಸಿ, ತನಗೂ ವೇದಾಂತ ಸಾಕಷ್ಟು ತಿಳಿದಿದೆ ಅನ್ನುವುದೇನು ? (ಅಳಿಸಿ. ೮೨).

[ ←ಫಾರ. ಚಾಲಾಕೀ; ಮರಾ. ಚಲಾಕೀ, ಚಲಾಖೀ ]

**ಚಾಲಾಕು**, ಚಲಾಕು, ಚಾಲೂಕು, ಚಾಲೋಕು (ನಾ). ೧. ಚುರುಕು; ಚಾತುರ್ಯ; ಜಾಣತನ; ಚಾಕಚಕ್ಯತೆ: ವ್ಯಾಪಾರ ಮಾಡಲು ತುಂಬ ಚಾಲಾಕು ಬೇಕು (ರೂಢಿ). ೨. ಚತುರನಾದ ವ್ಯಕ್ತಿ; ಬುದ್ಧಿವಂತಿಕೆಯುಳ್ಳ ವ್ಯಕ್ತಿ: ನೀವು ಮಾತಿನಲ್ಲಿ ತುಂಬಾ ಚಾಲಾಕಿದ್ದೀರಿ (ಬದುಕು. ೦೨೩); ಅವನ್ನ ಹಿಡೀಬೇಕಾದರೆ ನಿಮಗಿಂತ ಚಾಲಾಕಾದವರು ಬರಬೇಕು (ಕಣಾಆ. ೩೩); ಹುಡುಗಿ ಒಳ್ಳೇ ಚಾಲಾಕಾಗಿ ಭಾಗೀರಥಿಗೆ ಕಂಡಳು (ಭಾರಥಿ. ೦೩). **ಚಲಾಕು:** ೨. ಪಾರಜದಂತೆ ಚಲಾಕಾದ ಸಾಹೇಬರೂ ಕೂಡ, ಆಕಾಲ ಜಡತ್ವವನ್ನು ಪಡೆದಂತಾಗಿತ್ತು (ದೀಪಹ. II, ೩೭೪). **ಚಾಲೂಕು:** ೧. ಸ್ವರಸೃಷ್ಟಿಯಲ್ಲಿ ಅವರಿಗೆ ಅಪಾರವಾದ ಚಾಲೂಕಿತ್ತು (ಸಂಗೀತ. ೨೭). **ಚಾಲೋಕು:** ೨. ಈಗಿನ ಕಾಲದ ಹುಡುಗಿಯರಂತೆ ಆಗಿನ ಕಾಲದವರು ಚಾಲೋಕೂ ಅಲ್ಲ (ಅನಾಮಿ. ೬೦).

[ ←ಫಾರ. ಚಾಲಾಕ್; ಮರಾ. ಚಲಾಕ್, ಚಲಾಖ್ ]

**ಚಾಲಿ**$_1$ (ನಾ). [ನಾಟ್ಯ] ನೃತ್ಯದಲ್ಲಿ ಒಂದು ಭಂಗಿ: ಅನುಪಿನಿಂ ಚೌಷಷ್ಟಿ ಹಸ್ತ ಮುವ್ವತ್ತೆರಡು ಮಿಸುಪ ದೃಷ್ಟಿಗಳು ನಾಲ್ವತ್ತು ಮಂಡಲ ವಿನೂತನದ ಪನ್ನೆರಡು ವೈಪಾಡು ಪಿರಿದೆನಿಸುವೈವತ್ತೊಂದು ಚಾಲಿಯಿಂದೆ . . . ನರ್ತನಂಗೆಯ್ವುತಿರೆ (ಪಾಸೋಪು. ೦-೪೮). [ <ಸಂ. ಚಾರೀ ]

**ಚಾಲಿ**$_2$ (ನಾ). (?) : ಬನದಾಗ ಬಿತ್ತೂದು ಬನದಾಗ ಬೆಳೆಯೂದು . . . ಬನದಾಗ ಚಾಲೀ ಎರಗೂವ ಬಿದುರೀನ ಬುಟ್ಟಿ ಭೂಮಾಕ ಬರಬೇಕ (ಮಲ್ಲಿಗೆ. ೬೦). [ ? ]

**ಚಾಲಿತ** (ಗು). ೧. ಚಲಿಸುವಂತೆ ಮಾಡಿದ; ನಡೆಸಿದ. ೨. ಅಲುಗಿಸಿದ; ಬೀಸಿದ: ವಿಭವರಮೆಯ ಕಟಾಕ್ಷವೆಂಬಂತೆ ಭಾಮಿನೀಚಾಲಿತ ಚಾರು ಚಾಮರಂ ಮುಂಬಿನೊಳಿಂಬುವಡೆಯೆ ಬಳಜಳಧಿಯೊಳ್ನೆಗೆದ ತರಂಗದಂತೆ ಸೂಸುವ ಸೀಗುರಿ ದೇಸಿವಡೆಯೆ (ರಾಜಶೇ. ೦೩-೭೦ ವ). [ ಸಂ. ]

**ಚಾಲಿಸು**, ಚಾಳವಿಸು, ಚಾಳಿಸು$_2$, ಚಾಳೈಸು$_1$ (ಕ್ರಿ). ೧. ಚಲಿಸುವಂತೆ ಮಾಡು; ನಡೆಯಿಸು: ಮೂಲೆ ಮೂಲೆಯಲಿ ವಿದ್ಯುಲ್ಲಹರಿಯೊಂದು ಧೂಲಿಕಣ ಭೂಗೋಳ ರವಿಚಂದ್ರತಾರೆಗಳ ಚಾಲಿಪುದು ಬಿಡು ಕೊಡದೆ (ಮಂಕುತಿ. ೪೩). ೨. ಅಲ್ಲಾಡಿಸು; ಅಲುಗಿಸು: ಚಾಲಿಪ ಬಾಲಮಗುರ್ವಿ ಪಾನನಂ . . . ಅರಲ್ದ ಮೊಗೆಸೆಯೆ ತರಕ್ಷುದಂಸಕಕಸಂವೃತವಿರ್ದುದು (ರಾಜಶೇ. ೩-೮೨). ೩. ಪಸರಿಸು; ವಿಸ್ತರಿಸು; ಹಬ್ಬು: ಏಳು ಪಾತಾಳ ಅಪ್ಪುಟಗಲಕೆ ಚಾಲಿಸಿಹುದೆಂಬತ್ತುಯೆರಡೇ ಕೋಟಿ ಪರಿಯಂತ ಕೇಳು ತಾ ಭೂವಳಯ . . . ಚಾಲಿಸಿಹುದವಕರಸಯೆರಡೇ ಲಕ್ಷ ಲವಣಾಂಬು (ಸಂಭಪ. ೧೧-೭). **ಚಾಳವಿಸು:** ೪. ಹೆಚ್ಚುವಂತೆ ಮಾಡು; ಅಧಿಕಗೊಳಿಸು: ಮೇಲೆ ಮೇಲಭಿಲಾಷೆ ಧೈರ್ಯವ ಚಾಳವಿಸೆ ಪರಿತೋಷ ಪೂರಣದೇಳುಮುಳುಗಾಯ್ತುತ್ತರಕೆ ನಸು ಬಾಗಿದಳು ಶಿರವ (ಕುವ್ಯಾಅ. ೭-೦೦೨). ೫. ಚಲಿಸು; ನಡೆ; ಮುಂನುಗ್ಗು: ಚಾಳವಿಸಿದುದು ವಿಷಯ ಸೌಖ್ಯದ ಮೇಲೆ ಮನ (ನಿಭಾಗ. ೩-೩-೩). **ಚಾಳಿಸು**$_2$ : ೧. "ಚಾಳಿಸು—ಚಾಪಲ್ಯೇ" (ಶಮುಧಾ). ೨. ಶೈಲ ಸುಂಕುಳಮಂ ಚಾಳಿಪ ಮಲ್ಲ ಜಟ್ಟಿಗಳಂ (ಕುಸುಮಾ. ೩-೮೭). ೫. ಚಾಳಿಸಬೇಡ ವಿಗ್ರಹಕೆ ವಿಕಳ ಬಲನಿವನು (ಕುವ್ಯಾಳ. ೧೨-೩). ೬. ನಿವಾರಿಸು; ಹೋಗಲಾಡಿಸು: ಪಾಲುಂ ನೇಟೆಲ ಪಣ್ಣಳನಾಲೋಚಿಸದಧಿಕವಾಗಿ ಕೊಂಡತಿವಿಷಮಂ ಚಾಳಿ[ಪಾಠಾಂ. ಲಿ]ಸುಗುಂ ನೆಲ್ಲಿಯಕಾಯ್ (ಖಮದ. ೨-೮೦). ೭. ಹಾಳುಮಾಡು; ಕಳೆ: ಬರಿದೆ ರತಿಗೊಡದೆ ಈ ಪೊತ್ತು ಚಾಳಿಸಿದೆ (ಪ್ರಾಥರಾ. ೯-೩೦). ೮. ಸುಳ್ಳು ಹೇಳಿ ನಂಬಿಸು; ಠಕ್ಕಿಸು: ಅದಕಲ್ಲ ನೋಡೊಂದು ನೋಂಪಿಯೆಂದೆಮ್ಮನೊಪ್ಪದಿ ಚಾಳಿಸುವುದೊಂದು ಬಗೆಯ (ಭರತ. ೬-೨೦). ೯. ಬಿಡು; ತ್ಯಜಿಸು; ದೂರಮಾಡು (?): ಬೀಡ ಚಾಳಿಸುವನಾನಾಡ ಚಾಳಿಸುವನ ಕೂಡೆ ಜಾಣ್ಮೆಯು ತೋಟುವಂತೆ ನೋಡಣ್ಣ ನಿನ್ನ ತಮ್ಮಂದಿರಾಟವನೆಂದ (ಭರತ. ೪೩-೯೮); ಮೇಲಾದೊಡವೆಯ ಸೆಳೆ ಕೊಂಡಾತನ ಚಾಳಿಸಿ ಬಿಡು ನೀ ಮಗಳೆ (ಕಂಪವಿ. ೬-೦೫೬); ಬಾಲಕಂ ತೊದಲಿಸುತೆ ನುಡಿದರಾಮೋದಮಂ ತಾಳದುರೆ ತವುತವಗೆ ತಾತಮಾತೆಯರದಂ ಚಾಳಿಸುತೆ ಜರೆದಪರೆ (ಪರಕು. ೦-೨೦). **ಚಾಳೈಸು**$_1$ **:** ೫. ತರುಗಳೊಳಡಗುತ್ತ ಕಡೆಗಣ್ಣಿನಲಿ ನೋಡುತ್ತ ತರಳೆ ಚಾಳೈಸಿದಳು (ನಿಭಾಗ. ೮-೦೦-೦೯). ೮. ಬಲ್ಲೆವೈ ನೀನಿಪ್ಪ ಜಾಣನೆಂಬುದ ಮಾತಿನಲ್ಲಿ ನಮ್ಮನು ಚಾಳೈಸದಿರು (ಭರತ. ೪೮-೨೨). [ ಚಾಲನ + – ಇಸು$_2$ ]

**ಚಾಲು**, ಚಾಲ್, ಚಾಲೂ, ಚಾಳಿ$_2$, ಚಾಳು$_2$ (ನಾ). ೧. ಚಲಿಸುವಿಕೆ; ಚಲನೆ: (+). ೨. ಆರಂಭ; ತೊಡಗುವಿಕೆ: ಈ ಬಲವು ಕಾರನ್ನು ಹೊಸದಾಗಿ 'ಚಾಲು' ಮಾಡುವಾಗಲೋ (starting) ಗುಡ್ಡದ ರಸ್ತೆಯಲ್ಲಿ ಹತ್ತುವಾಗ ಕಾರು ಕಡಿಮೆಯ ವೇಗದಲ್ಲಿ ಹೋಗುವಾಗಲೋ ಬೇಕಾಗುತ್ತದೆ (ಶಿಲ್ಪನಾ. ೨೦೪). ೩. ನಡೆವಳಿಕೆ; ವರ್ತನೆ; ಸ್ವಭಾವ: ಈಗಲಾದರೂ ತಮ್ಮ ಚಾಲು ಬಿಡದೆ, ಮತ್ತೂ ಈ ಮೇಲೆ ಸರಕಾರದ ನಿಶಾನಿ ತಂದು, ನಮ್ಮ ಜನದ ಮೇಲೆ ಚಿಕ್ಕಪುಟ್ಟ ಮಾತನಾಡಿದರು (ರಾಜೇಂದ್ರ. ೦೦೩). ೪. ಸಂಪ್ರದಾಯ; ಪದ್ಧತಿ: ಗೌಡರು ಅಳಿಯತನಕ್ಕೆ ಅತ್ತೆ ಮನೆಗೆ ಹೋಗುತ್ತಿದ್ದಾಗಲೂ ಎರಡು ಮೂರು ದಿನಗಳು ಇದ್ದು ಬರುವುದೇ 'ಚಾಲಾ' ಗಿತ್ತು (ನಮ್ಮೂರು. ೦೨೭). ೫. ಚಲಾವಣೆ; ಬಳಕೆ; ಚಾಲ್ತಿ: ಕಟುವಿಲ್ಲದ ಎಮ್ಮೆಗೆ ಕೊಟ್ಟರು ಮೊಹುಹೊನ್ನುಗಳ ಎರಡು ಸವಕಲು ಒಂದು ಚಾಲ[ಪಾಠಾಂ. ಸಲ್ಲಲೆ]ಇಲ್ಲ (ಪುರಂದ. ೩-೨೭-೪). ೬. ಕಂದುರೆಯ ಹೆಜ್ಜೆ,–ನಡೆ: (+). ೭. [ಸಂಗೀತ] ಹಾಡಿನ ಧಾಟಿ: ಇಂಗ್ಲಿಷ್ ಪದ್ಯಗಳನ್ನು ಹಿಂದುಸ್ತಾನಿ ಚಾಲುಗಳಲ್ಲಿಯೂ ಆಲಾಪ ಮಾಡಿ ಆ ನಂತರ ಭಾರತೀಯ ಗೀತೆಗಳನ್ನು . . . ರಾಗ ಎಳೆಯುವನು (ಗಾಳಿಪ. ೪೪); ಆಮೇಲೆ ಶಂಕರಾಭರಣ ರಾಗ ಏಕತಾಳದ 'ಚಾಲು' ಕುಣಿತವನ್ನೂ ಕುಣಿದ (ನಮ್ಮೂರು. ೩೦೮). **ಚಾಲ್:** ೩. ಹಾಗೆ ಬಂದಂತಾವರ ಚಾಲ್ ಚಲನ್ ವಗೈರೆ ನಡತೆಗಳನ್ನು ಇನ್ನೂ ಅವರ ಸಮ್ಮಂಧವಾಗಿ ತಿಳಿಯತಕ್ಕ ಸಂಗತಿಗಳನ್ನೆಲ್ಲಾ ವಿಚಾರಿಸಿ ತಿಳಿದುಕೊಂಡು . . . ರಿಪೋರ್ಟ್ ಮಾಡತಕ್ಕದ್ದು (ಗ್ರಾಮಾಕ. ೪೭). **ಚಾಲೂ:** ೫. ಆಹಾರಧಾನ್ಯಗಳ ರೇಶನ್ನು ಚಾಲೂ ಆಗಿ . . . ಸಾಗಿಸಲ್ಪಡುತ್ತಿತ್ತು (ಪಾನಕ. ೬೦). **ಚಾಳಿ**$_2$ **:** ೩. ಕೀಲುಜಾತಿಯ ಮನೆಯಲುಂಬುದು ಮೇಲೆ ತಂದೆಯ ತಲೆಯನರಿವುದು ಚಾಳಿಯೇ ಭಕ್ತರಿಗೆ ಭಕ್ತರ ಭಕ್ತಿ ಏತಬದು (ಬಸಪು. ೨೮-೩೨); ಭಾವಶುದ್ಧಿಯಲ್ಲೈವರನು ಸಂಭಾವಿಸುವೆನವರವರ ಚಿತ್ತದ ಭಾವವಟುದುಪಚರಿಸುವೆನು ಚತುರತೆಯ ಚಾಳಿಯಲಿ (ಕುವ್ಯಾಆ. ೦೫-೨೩); ಹೊತ್ತ ಚೋಹಕೆ ಚಾಳಿ[ಪಾಠಾಂ. ಜೋಹದಜಾಳಿ]ಲೇಸಾಯಿತ್ತು (ತೊರರಾ ೪-೪-೪೦). ೮. ಚಟ; ಅಭ್ಯಾಸ; ಗೀಳು: ಅಳುತೇಳುತ ಬೆರಳು ಚಾಳಿ ಮಿಡುಕುವ ಬಾಯಿ ಮೇಳದೊಳು ತೊಡಕ ಬಿಡದವನ ಜಪವದುವೆ ಹಾಳುಮನೆಯಂತೆ (ಸರ್ವಜ್ಞ. ೦೭೩); ದೇವಲೋಕದವರಿಗೂ ಅಂಥ ಚಾಳಿ ತಪ್ಪಿದ್ದಲ್ಲ (ಕಲ್ಲಿಕಾ. ೦೮೭); ಯಾವ ಮನೆಹಾಳು ನನಮಗ ಕಲಿಸಿದನೋ ಈ ಚಾಳೀನ (ಬಂಗಬ. ೬); ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ (ಗಾದೆ). ೯. ಬಗೆ; ರೀತಿ: ತಾಳಮೇಳದ ಗತಿಯ ಗಮಕದ ಕೀಲಕಣೆಯ ಕಾಲಾಟ ವಿಘಟಿಸಿ ಚಾಳಿಯಲಿ ತಬ್ಬಿಬ್ಬುವೋಗುತ

ಲಿರ್ದಳಾ ಮಾಯೆ (ಪ್ರಭುಲಿ. ೬-೨೬); ವನರುಹಾಕ್ಷನ ಧ್ಯಾನದಲಿ ಕೇಳಿನಕುಲೇಶ್ವರ ಸತಿಯರೀತನನನುವಟೆಸಿತು ಹೊದ್ದಿದರು ಹರಿಮೋಖ ಲೆಯ ಚಾ[ಪಾಠಾಂ. ಧಾ]ಳಿಯಲಿ (ತೊರಠಾ. ೧-೩-೪೭). ೧೧. ಮಲ್ಲ ಯಂದ್ಧದ ಒಂದು ವರಸೆ: ಭಾಳನೇತ್ರನ ವರದ ಗರುಡಿಯ ಚಾ[ಪಾಠಾಂ. ಜಾ]ಳಿಯೆನಿತುಂಟನಿತನಿವರಲಿ ಮೇಳವಿಸಿದನು (ತೊರಠಾ. ೧-೦೩-೧); ಸೂಳುದೆಗದದ್ರಿಯಲಿ ತರುಶಾಖಾಳಿಯಲಿ ಮುಷ್ಟಿಯಲಿ ಲಾಗಿನ ಚಾಳಿ ಯಲಿ ಮಂಡಿಯಲಿ ಕಾದಿದರು (ಅನಂಠಾ. ೪-೧-೪೩). ಚಾಳ್ಯು$_2$: ೮. ತಾಳದ ಶ್ಯಾಪದ ಲೋಲಭಕ್ತರಿಗೀವ ಚಾಳಿಹುದೇತಗೆ ಪಾಲಿಸಲೆಂತು (ಅಂಬಿಹ. ೧-೧೧೦).

**ಚಾಳಿ ಬಿಡು**=ಸ್ನೇಹ ಬಿಡು; ಸಂಗ ಬಿಡು: ಇಷ್ಟು ಸಣ್ಣ ಮಾತಿಗಾಗಿ ಅಣ್ಣ ತಂಗಿಯರಲ್ಲಿ ವೈಮನಸ್ಸು ಹುಟ್ಟಿತು; ಮೊದ ಮೊದಲು ಹುಡುಗ ರಂತೆ ಚಾಳಿ ಬಿಟ್ಟರು (ಭೂವಿಹಾ. ೪೧). [ ←ಹಿಂ. ಮರಾ. ಚಾಲೂ ]

**ಚಾಲುಕ್ಯ**, ಚಾಳುಕ್ಯ (ನಾ). ಕರ್ನಾಟಕದ ಒಂದು ಪ್ರಾಚೀನ ರಾಜ ವಂಶದ ಹೆಸರು: ಚಾಲುಕ್ಯರ ಶಿಲ್ಪದಲ್ಲಿ ನಾಗರ ಮತ್ತು ದ್ರಾವಿಡ ರೀತಿಗಳ ಮಿಳಿತವಿರುವುದರಿಂದ ಅದನ್ನೇ ವೇಸರವೆಂದು ಹೇಳಬಹುದು (ಭಾರಶಿ. ೪೯೨). **ಚಾಳುಕ್ಯ**: ಕಾದಿಯೋಡಿದೊಡೆಟ್ಟಟ್ಟಿದನಟ್ಟಿ ಮುಟ್ಟಿ ಪಿಡಿದಂ ಚಾಳುಕ್ಯ ಚಕ್ರೇಶ್ವರಂ (ಕಾವ್ಯಾವ. ೭೭); ಕದಂಬರು . . . ಚಾಳುಕ್ಯರು, ಹೊಯ್ಸಳರು— ಇವರ ಪ್ರೋತ್ಸಾಹದಿಂದ ಜೈನಧರ್ಮ ಹನ್ನೆರಡನೇ ಶತಮಾನದವರೆಗೆ ಬೆಳೆದು ಬೆಳಗಿತು (ಕಜಾಅ. ೭೯); ಚಾಳುಕ್ಯರ ಶಿಲ್ಪವನ್ನನುಸರಿಸಿಯೇ ಪಲ್ಲವರು ದೇವಾಲಯಗಳನ್ನು ನಿರ್ಮಿಸಿದರು (ಹೊಯ್ಸವಾ. ೩).

**ಚಾಳುಕ್ಯಕಂಠೀರವ** = ಚಾಳುಕ್ಯ ಪಂಚಾನನ; ಕಾಂತೆಯ ಮುಂದೆ ಪೂಣ್ದು ನುಡಿದಂ ಚಾಳುಕ್ಯ ಕಂಠೀರವಂ (ಗದಾಯು. ೮-೭೪). **ಚಾಳುಕ್ಯ ಚಕ್ರವರ್ತಿ** = ಒಂದು ಬಿರುದು: ಚಾಳುಕ್ಯ ಚಕ್ರವರ್ತಿ ಶ್ರೀಸಾಹಸ ಭೀಮವಿಜಯದೊಳ್ ಭೀಮಸೇನಪ್ರತಿಜ್ಞಾ ವರ್ಣನಂ (ಗದಾಯು. ೧-೭೪ ವ). **ಚಾಳುಕ್ಯ ನಾರಾಯಣ** = ಚಾಳುಕ್ಯರಲ್ಲಿ ನಾರಾಯಣ ನಂತಿರುವವನು; ಒಂದು ಬಿರುದು: ಶಂಕರ ಕಲ್ಪದ್ರುಮನೀಗಭೀಷ್ಟ ಫಲಮಂ ಚಾಳುಕ್ಯ ನಾರಾಯಣಂ (ಗದಾಯು. ೧-೨). **ಚಾಳುಕ್ಯಪಂಚಾನನ** = ಚಾಳುಕ್ಯರಲ್ಲಿ ಸಿಂಹದಂತಿರುವವನು; ಒಂದು ಬಿರುದು: ಚಾಳುಕ್ಯ ಪಞ್ಚಾನನಂ ಶ್ರೀಮತ್ ಪಞ್ಚಲದೇವರ್ (ಎಇ. VI, ೨೩೯-೪; 975). **ಚಾಳುಕ್ಯ ಮಾರ್ತಂಡ** = ಚಾಳುಕ್ಯರಲ್ಲಿ ಸೂರ್ಯನಂತಿರುವವನು; ಒಂದು ಬಿರುದು: ಮಾಟಕ್ಕೆ ಮಂಗಲಮುಚ್ಚಂಡಕರಂ ಮಹೀವಲಯದೊಳ್ ಚಾಳುಕ್ಯಮಾರ್ತಂಡನಾ (ಗದಾಯು. ೧-೪). **ಚಾಳುಕ್ಯಾಭರಣ** = ಚಾಳುಕ್ಯ ರಿಗೆ ಆಭರಣದಂತಿರುವವನು; ಒಂದು ಬಿರುದು: ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ (ಸೌಇಇ. XX, ೪೭-೪; 1072).

[ ಸಂ. ]

**ಚಾಲುಗೇಣಿ** (ನಾ). ವರ್ಷಕೊಮ್ಮೆ ಕೊಡುವ ಗೇಣಿ,-ಗಂತ್ತಿಗೆ: ಮಳೆ ಬಿದ್ದೊಡನೆ ಅವರು ಕೆಲಸಕ್ಕೆ ಬರುವುದನ್ನು ನಿಲ್ಲಿಸಿದರು, ಅವರದೂ ತಪ್ಪಲ್ಲ ಏಕೆಂದರೆ ಅವರೂ ಹಂಗಿನ ಚಾಲುಗೇಣಿ ಒಕ್ಕಲುಗಳೇ (ಚಾಳಿಗಿ. ೩೬).

[ ಚಾಲು + ಗೇಣಿ (<ಕೇಣ್ಮೆ) ]

**ಚಾಲುವರಿ**, ಚಾರಿವರ್ಿ$_2$, ಚಾರ್ವರಿ, ಚಾಲವರಿ, ಚಾಲುವರೆ, ಚಾಲ್ವರಿ (ಕ್ರಿ). ಬೇಡು; ಅಂಗಲಾಚು; ಬಹಳವಾಗಿ ಬೇಡಿಕೊಳ್ಳು; ಗೋಗರೆ: ಚಾಲುವರಿದು ನಾನು ಅವರನ್ನು ಇಲ್ಲಿಗೆ ಕರೆಸಿಕೊಂಡಿದ್ದೇನೆ (ಹುಚ್ಚಾಟ. ೧೧); ಕಾಕಾ ಊಟ ಮಾಡಿಕೊಂಡು ಹೋಗಿರೆಂದು ಚಾಲುವರಿದ (ವ್ಯನಿ. ೨೬೯). **ಚಾರಿವರ್ಿ$_2$**: ಛಲವಿಡಿದೊಂದನೆಳಸಿ ಚಾರಿವರಿಯದೆ ನೆಲೆವಿಡಿದೊಂದಟಿಸೋಳಿರದೆ ನೆಟಿಸ್‌ನಿಂದ ನೀರ ತೆಪ್ಪದವೋಲು (ಹದಿಬ. ೩-೩೭). **ಚಾರ್ವರಿ**: ಚಂದಿರನ ಕಾಣುತಲೆ ಚಾರ್ವರಿಯ ಚಿತ್ತಾ (ಚಾವದ. ೪೧).

**ಚಾಲವರಿ**: ಕಾಲನು ಪೂರಳಿಗೆ ಬೀಳು ಕಟ್ಟಿಸಿಕೊಂಡೆ ಚಾಲವರಿದೆ ಗೊಲ್ಲ ಬಾಲೆಯರೆಲ್ಲರಿಗೆ (ವಿದಾಳ್ಯ. ೧೩೩-೨); ಆವ ಕಾವ ಗೋವ ಚಾಲವರಿದು ಕೂಗಿ ಶುದ್ಧ ಲಾವಕರಟ್ಟುಳಿ ಬಿಡಿಸು (ವೋಲ್ಹದೀ. ೩೮-೫). **ಚಾಲುವರೆ**: ಬೇಕಾದಷ್ಟು ಚಾಲುವರೆದು ಹೇಳತಿದ್ದೆ (ನಮ್ಮಬ. ೦೨); ವೇಲೂರ ಮುತ್ತಿಗೆ ಯನ್ನೆಬ್ಬಿಸಬೇಕೆಂತಲೂ ಚಾಲುವರೆದುದರಿಂದ ಕೊಟ್ನು ಆ ಮಾತಿಗೆ ಒಡಂಬಟ್ಟು (ಚರಿಸಂ. ೧೩೪). **ಚಾಲ್ವರಿ**: ಹಲವು ದೈವರಿಗೆ ಕೇವಲ ಚಾಲ್ವ ರಿದರೆ ಹಲಬುವುದಲ್ಲದೆ ಬಳಲಿಕೆ ಪೋಗೋದೇನಯ್ಯ (ವೋಲ್ಹದೀ. ೩೨-೨); ಕೈಲಿ ಬೆಣ್ಣೆಯಿದ್ದವನು ತುಪ್ಪಕೆ ಚಾಲ್ವರಿವುದುಂಟೆ (ಕುಚೇಲೋ. ೧೮). 'ಅಲ್ವರಿ' ಪರಾ. [ ? ]

**ಚಾಲುವರೆ** 'ಚಾಲುವರಿ' ನೋ.

**ಚಾಲೂ** 'ಚಾಲು' ನೋ.

**ಚಾಲೂಕು** 'ಚಾಲಾಕು' ನೋ.

**ಚಾಲೋಕು** 'ಚಾಲಾಕು' ನೋ.

**ಚಾಲ್ತಿ** 'ಚಾಲತಿ' ನೋ.

**ಚಾಲ್ತಿಸಾಲು** 'ಚಾಲತಿಸಾಲು' ನೋ.

**ಚಾಲ್ವರಿ** 'ಚಾಲುವರಿ' ನೋ.

**ಚಾವಂಡಯ್ಯ** (ನಾ). ಒಬ್ಬಾತನ ಹೆಸರು: ಚಾವಣ್ಡಯ್ಯಂಗೆ ಇವರ್ಪೇಟ್ ನಾಡುಸಾಸನಂಗೊಟ್ಟ (ಎಕ. IX, ಹೊಸಕೋ. ೧೧೧-೭; 997).

[ <ಚಾವುಂಡ + ಅಯ್ಯ$_1$ ]

**ಚಾವಕ** (ನಾ). [ಗಣಿತ] ಒಂಭತ್ತು ಎಂಬ ಸಂಖ್ಯೆಯ ಸಂಕೇತ: ನವ . . . ಚಾವಕ, ಕೌಶವ ? . . . ನಾಟ್ಯಾಂಗ, ಇಂತಿನಿತುಂ ೯ಕ್ಕೆ ಪೆಸರು (ವ್ಯವಹಾ. ೧೧). P 'ನವಕ' ಇರಬಹುದೆ ?

**ಚಾವಗಾವುಂಡ** (ನಾ). ಒಬ್ಬ ವ್ಯಕ್ತಿಯ ಹೆಸರು: ಲಕಗಾವುಣ್ಡಂ ಭವ ಗಾವುಣ್ಡ ಚಾವಗಾವುಣ್ಡ ಭಸಗಾವುಣ್ಡ (ಎಕ. IV, ಹೆಗ್ಗಡ. ೦೦೪-೯; 1087).

[ <ಚಾವ + ಗಾವುಂಡ (<ಗಾಮುಂಡ) ]

**ಚಾವಟಿ** 'ಚಾಟಿ$_1$' ನೋ.

**ಚಾವಟೆಯ** 'ಚಾಪಟೆಯ' ನೋ.

**ಚಾವಡಿ**, ಚಾವಡೆ, ಚಾವುಡಿ, ಛಾವಡಿ (ನಾ). ೧. ಆಸ್ಥಾನ; ಸಭಾ ಮಂದಿರ; ಓಲಗಶಾಲೆ: ಮುತ್ತಿನೊಳೆಸೆವ ಚಾವಡಿಯೊಳು ಕುಳ್ಳಿರ್ದು . . . ನುಡಿದನು (ಅಂಜಜ. ೭-೧೩೬); ಮರುಳು ತಂಡಗಳಾಪ್ಪಸೈನ್ಯವು ನಿರುತ ಚಾವಡಿ ರುದ್ರಭೂಮಿಯು (ಕೌಶಿಠಾ. ೩-೨೨); ಭಿತ್ತಿಯೊಳ್ ಪೊಱಮಟ್ಟು ಚಾವಡಿ ಮದನಕೈಯೆತ್ತಿದ ಪದೆವುದಂಡೆಗಳು . . . ರಂಜಿಸಿತು (ಮೋಹಕ. ೨೨-೭). ೨. ಹಳ್ಳಿಯಲ್ಲಿಯ ಪಂಚಾಯಿತಿ ಸಭೆ ಸೇರುವ ಸ್ಥಳ; ಹಳ್ಳಿಯ ಕಚೇರಿ; ಗ್ರಾಮಕಚೇರಿ: ಈತನು ಗ್ರಾಮದ ಚಾವಡಿಯಲ್ಲಿ ಬಂದ ವ್ಯವಹಾರಗಳನ್ನು ಇತ್ಯರ್ಥ ಪಡಿಸುತ್ತಿರು ವಾಗ . . . ಸೈನ್ಯಸಮೇತನಾಗಿ ಬಂದು (ಸಂಸಕ. ೦೦೭); ಊರು ಎನಿಸಿ ಕೊಳ್ಳುವುದಕ್ಕೆ ಒಂದು 'ಚಾವಡಿ' ಇರಬೇಡವೆ ? (ಗ್ರಾಳಗು. ೧); ಚಾವಡಿ ಯಲ್ಲಿ ಕುಳಿತು ನಡೆಸುವ ತಾಳಮದ್ದಳೆಯ ಸಂಪ್ರದಾಯ (ಯಕ್ಷಬ. ೧೬). ೩. ಮನೆಯ ಮುಂದಿನ ಜಗುಲಿ,-ಕಟ್ಟೆ. ೪. ಆಶ್ರಯಸ್ಥಾನ: "ಹಕ್ಕಿಗವಿ . . . ಚಾವಡಿ ಪೊಟಲ್ ಬೀಡುವಾಗರವೆಂದೊಡಾಶ್ರಯಕೆ ನಾಮಮಕ್ಕುಂ" (ಕಬ್ಬಿಕ್ಕ. ೬೩); "ಚಾವಡಿಯು ಮೇರೆಯಾಗರ ವಸದಂ" (ಕವಿಕಂ. ೦೬೫). ೫. ಕೊತವಾಲನ ಕಚೇರಿ; ಪೋಲೀಸ ಚೌಕಿ: ಚೆಂನ್ನ ಪಟ್ಟಣದ ಚಾವಡಿಗೆ ಸಲುವ ಕಿಟುಗವರ ಸ್ಥಳದ ಸುಳ್ಳಿರಿಯ ಕಾಲುವಳಿ ಹಿರಿಯಕ ಮನೆಯ ಮಣಪ್ರಮಾಣಿನಲ್ಲಿ ಕುಳಬಳಿ ಸಾಂಮ್ಯ ಸಹ (ಎಕ. IX (8), ಚನ್ನಪ. ೨೯೯-೮; 1387); ಕಳ್ಳನನ್ನು ಹಿಡಿದು . . . ಕಟ್ಟಿ ಚಾವಡಿಗೆ ತೆಕ್ಕೊಂಡು ಹೋಗಿ ಲಾಲಕಂಭಕ್ಕೆ ಬಿಗಿದರು (ಕಥಾಮಂ. IV, ೨೭).

**ಚಾವಡೆ:** ೨. ಮುಳುವಾಯ ಜಾವಡೆಯ ಮಂನೆಯ ಶ್ರೀಮನ್ಮಹಾನಾಯಚಾರ್ಯ್ಯರ . . . ಮಕ್ಕಳು (ಎಕ. X, ಚಿಂತಾಮ. ೩೯-೩ ; 1407?). **ಚಾವುಡಿ:** ೫. ಮೇಷಲಗ್ನ ಉದಯದಲಿ ಥಳಿಗೆ ಓಯಲೂ ಬೇಲೂರು ಚಾವುಡಿಗೆ ಸಲುವ ಎಲಹಕ್ಕ ನಾಡ ಸಿವನಸಮುದ್ರ ಸೀಮೆ ವೊಳಗಣ . . . ಸರ್ವ್ವಮಾನ್ಯದ ಅಗ್ರಹಾರದಲೂ (ಎಕ. IX, ನೆಂಮಂ. ೩೦-೩ ; 1563). **ಭಾವಡಿ:** ೩. ಮಾತನಾಡುತ್ತ ನಮ್ಮ ಭಾವಡಿಯವರೆಗೂ ಅವನನ್ನ ಕರೆದುಕೊಂಡು ಹೋದೆ (ಹುಚಿಮಿ. ೪೪).

[ ←ಹಿಂ. ಮರಾ. ಚಾವಡೀ ]

**ಚಾವಡಿಕಾರ** (ನಾ). ಪಂಚಾಯತಿಯ ಸದಸ್ಯ ; ಪಂಚ (ಉಕ) : ಶಿವಾಚಾರದ ನಂಜಪ್ಪಯೆಂಬ ಚಾವಡಿಕಾರ ಬಂದು (ರಾಜೇಂದ್ರ. ೧೪೧).

[ ಚಾವಡಿ + – ಕಾರ$_1$ (< – ಕಾಱ) ]

**ಚಾವಡಿವನೆ** (ನಾ). ಚಾವಡಿಯ ಮನೆ; ಸಭಾಮಂದಿರ; ಓಲಗಶಾಲೆ: ದಿಸಪನುದಯಾಚಲದ ಚಾವಡಿವನೆಗೆ ಬರೆ ಬಲವೆರಸು ಗಳಗರ್ಜನದಿ ಬಂದೊಡ್ಡಿದವು ಕಳನೊಳು ಖತಿಯ ಪಡಪಿನಲಿ (ಕುವ್ಯಾ.ಛೀ. ೬-೮)

[ ಚಾವಡಿ + ವನೆ ]

**ಚಾವಡಿವಳಿತ** (ನಾ). ಆಸ್ಥಾನದ ಅಧಿಕಾರ ; ಸೀಮೆಯ ಆಡಳಿತ : ಈ ನಮ್ಮ ಅವಸ್ಥೆಯ ಗುಟ್ಟನ್ನು ಭೇದಿಸಿಕೊಳ್ಳಬಲ್ಲ ಗೂಢಚಾರ ಪ್ರಣಿಧಿಗಳು ಮೈಸೂರ ಮಹಾಸ್ವಾಮಿಯವರ "ಚಾವಡಿವಳಿತದಲ್ಲಲ್ಲದಿಲ್ಲವೆಂಬ ನಿಶ್ಚಯವೂ ನಮ್ಮನ್ನು ಕದಡಿರಲಿಲ್ಲ (ಚಿಟ್ಟಅ. ೬೫-೧೯).

[ ಚಾವಡಿ + ವಳಿತ (=ವಲಿತ) ]

**ಚಾವಡೆ** 'ಚಾವಡಿ' ನೋ.

**ಚಾವಣಿ** 'ಛಾವಣಿ' ನೋ.

**ಚಾವಣಿಗೆಗೊಳು** (ಕ್ರಿ). ಆಶ್ರಯಕೊಡು (?) : ತಲೆಗಾಯಿದುತ್ತ ಮರನೂ ಚಾವಣಿಗೆಗೊಳುತಲ್ಲಿಗಲ್ಲಿಗುರೆ ಕನಕಮಣಿ ಕೇವಲುತ್ಕ್ಯೃಷ್ಟದಿಂ (ಪರಚು. ೧೦.೦೫). [ ಚಾವಣಿಗೆ ? + ಕೊಳು (<ಕೊಳ್$_1$) ]

**ಚಾವಬ್ಬೆ** (ನಾ). ಒಬ್ಬಾಕೆಯ ಹೆಸರು: ಚಾವಬ್ಬೆಯ ಮಗಂ ಪೋಚನಕಲ್ಲ (ಮೈಆರಿ. ೧೯೪೨, ೨-೭ ; 973 ?) [ <ಚಾವು + ಅಬ್ಬೆ$_1$ ]

**ಚಾವಯ್ಯ** (ನಾ). ಒಬ್ಬಾತನ ಹೆಸರು : ಕನ್ನಬ್ಬರಸಿಯ ತಮ್ಮ ಛಾವಯ್ಯನುಂ ದವ್ಯಡಯ್ಯನುಂ ನಾಗವರ್ಮನುಂ ಬಂದಿಲ್ಲಿ ದೇವರಂ ಬಂದಿಸಿದರ್ (ಎಕ. II, ೪೬೬-೧ ; ಸು. 1000).

[ <ಚಾವು + ಅಯ್ಯ$_1$ ]

**ಚಾವಲ, ಚಾವಳ, ಜಾವಳ$_1$** (ನಾ). ಚಾಪಲ್ಯ; ಚಪಲತನ; ದುಡುಕುವ ಸ್ವಭಾವ 'ಚಾವಲಿಸು' ಪರಾ. **ಚಾವಳ:** ಪತ್ವಕ್ಕೆ ಪತ್ವಂ – ಕಪಿಲಾ – ಕವಿಲೆ . . . ಚಾಪಳ – ಚಾವಳ (ಶಮದ. ೨೫೮ ಪ್ರಯೋ). **ಜಾವಳ$_1$:** "ಜಾವಳಮೆನಲ್ಕೆ ಚಾಪಲಮದು ತಾಂ" (ಕವಿಕಂ. ೨೦೦).

[ <ಸಂ. ಚಾಪಲ ]

**ಚಾವಲಿಸು, ಚಾವಳಿಸು, ಜಾವಳಿಸು** (ಕ್ರಿ). ೧. ಚಪಲತೆಯನ್ನುಂಟುಮಾಡು; ದುಡುಕುವಂತೆ ಮಾಡು : ಕುಲಮದವೊಂದು . . . ರಾಜ್ಯಮದವೊಂದಿನಿತುಂ ಮದಮೆಯ್ದೆ ಕೂಡೆ ಚಾ[ಪಾಠಾಂ. ಜಾ]ವಲಿಸೆ ಮದೋದ್ಧತರ್ಕಳಿರಲಾರದೆ ಪೇಟ್ ಬೆಸನಾವುದೊಂದು . . . ಕದರ್ಥಿಸಿದರ್ ಸಹಸ್ರನಂದನರ್ (ಅಜಿಪು. ೧೦-೧೦). **ಚಾವಳಿಸು:** ೨. ಅಲ್ಲಗಳೆ; ಜರೆದು ಮಾತನಾಡು ; ಹೀಯಾಳಿಸು : ಇಳೆಯಂ ತಾಳ್ದಿದ . . . ಧೂಮಧ್ವಜಂ ರಥಿಕಮಂ ಮೇಲೆ ಕಡಂಗಿ ಪೊಯ್ದು ವಿಳಿಕೆಯ್ದೀನಾನುಮಂ ಕೀಟ್ ಚಾ[ಪಾಠಾಂ. ಜಾ]ವಳಿಪಂತಾದುದು ಜೀರ್ಣವರ್ಣಪರುಷ ಪ್ರಧ್ವಾನದಿಂ ಮಾರುತಂ (ಶಂರಾಮಾ. ೭-೧೦೨). ೩. ಧ್ವನಿಮಾಡು ; ತೊಂಡುಗೆಡೆ : ಕಾಮುನ ಡಾಮರದಮಲ್ಲಿ ಕೋಕಿಲೋತ್ಕರರವಮಲ್ಲಿ ಚಾವಳಿಪ ರಾಜಶುಕಪ್ರಜಮಲ್ಲಿ . . . ಸಾರದಿರಾ ಮರನಂ ವಸಂತದೊಳ್ (ಕಾವ್ಯಾವ. ೩೬೭) ; ಅರಗಿಳಿವಿಂಡು ಬಂಡಳಿಪ ಸಾರಿಕೆ ಚಾವಳಿಪುನ್ನದಾಳಿ ಗಾವರಿಸುವ ಸೋಗೆ (ಪುಷ್ಪವು. ೧೪-೨೩). **ಜಾವಳಿಸು:** ೨. ಉದ್ವೃತ್ತಮರ ಮುದ್ವೃತ್ತಮರಂಗಳ ಗಾವರಕ್ಕೆ ಜಾ[ಪಾಠಾಂ. ಚಾ. ಬಾ]ವಳಿಸಿ ಚಡಾಳದೊಳ್ಮೊರೆವುವು (ಅನಂಪು. ೧-೬೭). [ ಚಾವಲ + – ಇಸು$_3$ ]

**ಚಾವಳ** 'ಚಾವಲ' ನೋ.

**ಚಾವಳಿಸು** 'ಚಾವಲಿಸು' ನೋ.

**ಚಾವಿ** (ನಾ). ಬೀಗದ ಕೈ; ಕೀಲಿ ಕೈ: ಒಳಗಣ ಹೊರಗಣ ಬಿಯ್ಯಗಳಿಗೆ ಎಷ್ಟೆ ಚಾವಿ – ಬೀಗದ ಕಯ್ಗಳು ? (ಮಂತ್ರಶ. ೩೩-೨೩) ; ಚಾವೀನ ತಗೊಂಬಾಂತ ಹೇಳಿದ್ರು (ದೇಶಭು. ೯೩).

[ ←ಹಿಂ. ಚಾಬೀ ; ಮರಾ. ಚಾವೀ ]

**ಚಾವುಂಡ** (ನಾ). ಒಬ್ಬಾತನ ಹೆಸರು : ನೆಗಟ್ಟ ಮಾಬಳಯ್ಯಂಗನೇಕ ಗುಣರತ್ನರಾಶಿ ಮನುಮುನಿಚರಿತಂ ವಿನಯವಿಭೂಷಣನೊಳ್ಪಿಂಗಿನೆಯಂ ಮೊದಲೆನಿಸಿ ಪುಟ್ಟಿದೊಂ ಚಾವುಣ್ಡಂ (ಎಕ. III, ತಿರುಮ. ೬೯-೦೫ ; ಸು. 980). [ <ಚಾಮುಂಡ ]

**ಚಾವುಂಡಿ, ಚವಡಿ, ಚವುಡಿ, ಚೌಡಿ** (ನಾ). = ಚಾಮುಂಡಿ : ಮಕಾರಕ್ಕೆ ವಕಾರಂ – ಅಮರೀ – ಅವರಿ . . . ಚಾಮುಂಡೀ – ಚಾವುಂಡಿ (ಶಮದ. ೨೬೩ ಪ್ರಯೋ). **ಚವಡಿ:** ಬಲಪ್ಪದಂನಾಯಕರ ಪ್ರಧಾನ ಕಳವತಿಹ ಚವಡಿಯಕ್ಕನವರು (ಎಕ. X, ಕೋಲಾರ. ೩೨-೯ ; 1346). **ಚವುಡಿ:** ಅವನು ಚವುಡಿಯನ್ನು ಪೂಜಿಸುತ್ತಿದ್ದಾನೆ (ರೂಢಿ). **ಚೌಡಿ:** ಬೆಟ್ಟದ ಚೌಡಿಗೆ ಗಡಿಯ ಭೈರವನಿಗೆ ಕೊಟ್ಟೆವು ನರಬಲಿಯನುತ (ಕಂನವಿ. ೩-೭೦).

[ <ಚಾಮುಂಡಿ ]

**ಚಾವುಡಿ** 'ಚಾವಡಿ' ನೋ.

**ಚಾಷ** (ನಾ). ಒಂದು ಬಗೆಯ ನೀಲಿಬಣ್ಣದ ಪಕ್ಷಿ ; ಶಕುನದ ಪಕ್ಷಿ ; "ಚಾಷಃ, ಕಿಕೀದಿವಿಃ – ೨ ಹಂಗನಹಕ್ಕೀ ಹೆಸರು. ಶಕುನದ ಹಕ್ಕಿ, ಆಂಧ್ರದಲ್ಲಿ ಪಾಲಪಕ್ಷಿ" (ಸಿದ್ಧಾಂತಿ. ೧೩೮) ; ತರದಿಂ ಚಾಷ[ಪಾಠಾಂ. ಪ] ಮಯೂರ ತಾರ ತಿಳಿಗೋಕ್ಷೀರಾಬ್ಜ ನೀರೋಪಮಂ ದೊರೆಕೊಳ್ಗುಂ ಶಶಿ ಭಾನುಗಳ್ಗೆ (ಲೋಕೋಪ. ೪-೨೯) ; ಚಾಷ ಭಾಸ ಹಂಸ ಬಕ . . . ಸುಪರ್ಣಾದಿ ಪಕ್ಷಿ ಸಮೂಹಗಳಂ (ಭಾರಶಾಂ. ೩೬-೨೬೪). [ ಸಂ. ]

**ಚಾಷಗತಿ** (ನಾ). [ನಾಟ್ಯ] ನರ್ತನದಲ್ಲಿ ಒಂದು ಬಗೆಯ ಪಾದಚಲನೆ ; "ಬಲಗಾಲನ್ನು ಒಂದು ಗೇಣು ಮುಂದಿರಿಸಿ ಪುನಃ ಅದೇ ಕಾಲನ್ನು ಜಾಗ್ರತೆ ಎಡತು ಗೇಣು ಹಿಂದಕ್ಕಿರಿಸಿ ನೆಗೆದು ಸ್ವಭಾವವಾಗಿ ನಿಂತುಕೊಂಡು ಹೆದರಿಕೆಯಿಂದ ಕೂಡಿರುವಂತೆ ಹಿಂದಕ್ಕೂ ಮುಂದಕ್ಕೂ ಅನೇಕಾವರ್ತಿ ಚಲಿಸುವುದು" (ಲಾಸ್ಯರಂ. ೩೦೬ ಗದ್ಯಾನುವಾದ) : ಮಿಸುಗುವ ಸಮಪಾದಂ ರಂಜಿಸುತ್ತಿರ್ಪ ಸ್ಥಿತಾವರ್ತ ಶಕಟಾಸ್ಯಂಗಳ್ ಪಸರಿಪ ವಿಚ್ಯವೆಯರ್ಧ್ಯರ್ಥಿ ಸಮಂತಾ ಚಾಷಗತಿಯುಮಂಬುಜಗಂಧೀ (ಲಾಸ್ಯರಂ. ೬-೨). [ ಚಾಷ + ಗತಿ ]

**ಚಾಸರಾಳ್** (ನಾ). ಒಂದು ಊರಿನ ಹೆಸರು (?) : ಶ್ರೀ ಚಾಸರಾಳ್ ಪೊನ್ನಾಕವಳಿಗೆ ಕಾಳಮ್ಮನ್ ಮಾನ್ದಳಿ ಬೀರಿಯದುಳ್ಳೆ ಬಲವೆಮ್ಮರಸರ ಕಾಳೆಗದುಳ್ಳೆ ಎಱಿದು ಸತ್ತನ್ (ಎಕ. XVI, ತುಮಕೂ. ೦೦೦-೦ ; 786).

[ ? ]

**ಚಾಹಡ** 'ಚಹಡ' ನೋ.

**ಚಾಹಿಯ** (ನಾ). ಛತ್ರಿ ಹಿಡಿಯುವವನು (?) : ಸಿಡಿದು ಕರ್ಣನ ತಲೆ ಧರಿತ್ರಿಗೆ ಕೆಡೆಯೆ . . . ಹಡಪಿಗರು ಚಾಮರದ ಚಾಹಿಯರೊಡನೆ ನೆಲ ಕುರುಳಿದರು (ಕುವ್ಯಾಕ. ೦-೮). [ <ಪ್ರಾ. ಛಾಹಿ, ಛಾಹಿಯಾ = ನೆರಳು ]

**ಚಾಹುಲ್ಲು** (ನಾ). ಶುಂಠೀಹುಲ್ಲು; "ಭೂತೃಣಾ" (ಶಂಡಿಕ.) [ ? ]

**ಚಾಳ**, ಚಾಳು₁ (ನಾ).(ಉಕ) ಒಂದೇ ಬಗೆಯ ಮನೆಗಳ ಸಾಲು; ಹಲವು ಮನೆಗಳನ್ನೊಳಗೊಂಡ ವಠಾರ: ಗಿರಣಿಯ ಕೂಲಿಕಾರರು ವಾಸಿಸುವ 'ಚಾಳ'ದಂಥ ಓಣಿ (ಮೋಹಬ. ೪೫೯); ದೊಡ್ಡ ದೊಡ್ಡ ಚಾಳಗಳನ್ನು ಕಟ್ಟಿಸುವವರು . . . ಗಿರಣಿಯ ಮಾಲಕರು ನಿಮ್ಮ ಕಣ್ಣ ಕಕ್ಷೆಯಲ್ಲಿ ಬರದಿರುವದು ವಿಚಿತ್ರವಾಗಿದೆ (ಮುಕ್ತಮ. ೨೨೦). **ಚಾಳು₁ :** ಆ ಚಾಳುಗಳನ್ನು ನೋಡಿ ಪಾರಿವಾಳಗಳನ್ನಿಡುವುದಕ್ಕೆ ಮಾಡಿದ ಪೆಟ್ಟಿಗೆಯು ನೆನಪಾಯಿತು ಶಾಮಣ್ಣನಿಗೆ (ಮೂರಾಬ. ೯೬); ನಮ್ಮ ಚಾಳಿನ ಬಾಡಿಗೆ ಎಷ್ಟು ವಸೂಲಾಯಿತು (ಪರಿಲ. ೮); ಮಳೆಗಾಲದಲ್ಲಿ ಚಾಳಿನಲ್ಲಿರುವವರ ಬವಣೆ ಹೇಳತೀರದು (ಸಾವಿಉ. ೧). [←ಮರಾ. ಚಾಳ್./ಸಂ. ಶಾಲಾ]

**ಚಾಳಂಕಿ** 'ಚಾಳಾಂಕಿ' ನೋ.

**ಚಾಳಕ₁** 'ಚಾಲಕ' ನೋ.

**ಚಾಳಕ₂**, ಚಾಳ್ಕ (ಗು). ೧. ತುಂಟತನದ; ಧೂರ್ತತೆಯುಳ್ಳ; ಕುಟಿಲವಾದ :(ಕ).(ನಾ). ೨. ತಂತ್ರಿ; ಉಪಾಯಗಾರ; ಧೂರ್ತ; "ಹಂಚಿಕೆಯುಳ್ಳವ, ಕಿಡಿಗೇಡಿ" (ಜಾನಕೋ. ೫೬): ಸರಡುಪತ್ರದ ಲಾಳು ಗೊಂಬಗಡ ನಮ್ಮನೀ ನರೆದಲೆಯಚಾಳಕನೆನುತ ಕೋಪಿಸಿದ ಸೌಂದರಕುವರನಾ ವಿಪ್ರನ (ಸೌಂದಪು. ೫-೯); ಚಾಳಕನ ನಗೆನುಡಿಯು ಮಾಳಿಗೆಯು ಮುಱಿದಂತೆ ಬಾಳು ಉಳ್ಳವರ ಬಿಱು ನುಡಿಯು ಬೀಳ್ವನೆಯು ಏಳಿಗಾದಂತೆ (ಸರ್ವಜ್ಞ. ೧೩೪೯). **ಚಾಳ್ಕ:** 'ಚಾಳ್ಕತನ' ಪರಾ. [←ಹಿಂ. ಚಾಲಕ್]

**ಚಾಳಣಿ** (ನಾ). = ಚಾಲನಿ: ಆ ಡಬ್ಬಿ ತಳದ ತಗಡಿನೊಳಗ ಎಷ್ಟು ಚಾಳಣಿ ಆಗಬಹುದಂತ ಅನ್ನಿಸತದ ನಿನಗ? (ಪ್ರಪಾಠ. ೪೨). [<ಸಂ. ಚಾಲನೀ]

**ಚಾಳನಿ** 'ಚಾಲನಿ' ನೋ.

**ಚಾಳಯಿಸು** 'ಚಾಳಿಸು₁' ನೋ.

**ಚಾಳವಿಸು** 'ಚಾಲಿಸು' ನೋ.

**ಚಾಳಾಂಕಿ**, ಚಾಣಕಿ, ಚಾಣಕ್ಕಿ, ಚಾಣಾಂಕಿ, ಚಾಳಂಕಿ, ಜಾಣಾಂಕಿ (ನಾ). ಒಂದು ಬಗೆಯ ಪಕ್ಷಿ; ಮೈನಾಹಕ್ಕಿ; ಸಾರಿಕೆ: ಜಯವಿಲ್ಲನ ಮುಂದೆ ಪೂಸರನನು ಪೊಗಳ್ವರು ಖೂಳರೆಂದು ಸಂತೋಷದಿ ಚಾಳಾಂಕಿ [ಪಾಠಾಂ. ಚಾಣಾಂಕಿ, ಜಾಣಾಂಕಿ, ಜಾಣ್ಯಕ್ಕಿ]ಯುಲಿದವು (ಸೊಬಸೋ. ೩-೦೭); ಹಂಸೆಗಳಿಗಲಸಗಮನಂಗಳಂ ತೋಱುತಂ ಚಾಳಾಂಕಿಗಳಿಗೆ ನೀತಿಯನು ಸಿರುತೆ . . . ಬೆಲೆವೆಣ್ಗಳೆಸೆದಿರ್ದರು (ಚಬಪು. ೧೦-೪೦). **ಚಾಣಕಿ :** ಕಳಹಂಸೆ ನಲಿಯಲೊಪ್ಪದೆ ಸೋಗೆ ಕುಣಿಯೆ . . . ಗಿಳಿವಿಂಡುಗಳ ಮಾತು ಸೊಗಸೆ ಚಾಣಕಿಯೋದೆ (ಲಶಿಜಂ. ೦೪-೩೩). **ಚಾಣಕ್ಕಿ :** ಶುಕಸಾರಿಕಾಭ್ಯಾಂ = ಗಿಳಿಯುಂ, ಚಾಣಕ್ಕಿಯುಮೆಂಬಿವಱಿಂ (ನೀತಿವಾ. ೯-೩೩); ಝಿಂಬಿಯ ಬನದೊಳು ಹೊಂಬುಳ್ಳ ಚಾಣಕ್ಕಿಗಳಿರಾ ರಂಬಿ ಗಿರಿಜಮ್ಮನರಸಗ ಸೋ ಇಂದು ಧರಗ ತುಂಬಿದಾರೂತಿ ಬೆಳಗಿರೆ (ಲೋಕಗೀ. ೦೪). **ಚಾಣಾಂಕಿ :** ಮಿಾನ್ನುಲಿಗ ಮರಕುಟಕ ಚಾಣಾಂಕಿ (ರುಕ್ಮಾಂಗ. ೦೦-೫). **ಚಾಳಂಕಿ :** ಕೋಕಿಳಂಗಳ ರವದ ಕಹಳೆ ಚಾಳಂಕಿ ಪಾಠಕರ ಕಳಕಳದಿಂದೆ ಪೊಱಮಟ್ಟನು (ಚಬಪು. ೩೫-೭); ಪಾರಿವಾಳದ ಪಕ್ಷಿ ಮಱಿಹುಲ್ಲೆ ಚಾಳಂಕಿಗಳಾ ಸರಸಗೋಷ್ಠಿಗೆ ಸಲೆ ಹೇಮಪಂಜರದೊಳಿರಿಸಿ (ಜಿನರಾ. ೭-೫೮). **ಜಾಣಾಂಕಿ :** ಅರಗಿಳಿ ಪರಿಸಲರ್ಥೈಸುವ ಜಾಣಾಂಕಿ . . . ನರ್ತಿಪ ನವಿಲು (ಶ್ರೀಪಾಲ. ೧-೨೪). [?]

**ಚಾಳಿ₁** 'ಚಾಟಿ' ನೋ.

**ಚಾಳಿ₂** 'ಚಾಲು' ನೋ.

**ಚಾಳಿತನ** (ನಾ). ದುರಭ್ಯಾಸ; ಕೆಟ್ಟನಡತೆ: ಕಡಿಮೆ ಹೆಂಡಿರು, ಹದಿನಾರು ಸಾವಿರ ಮಂದಿ ಬಿಡು ನಿನ್ನ ಚಾಳಿತನವೆಂದ (ಕರ್ನಾಕ. ೨೮೭). [ಚಾಳಿ₂ (<ಚಾಲು) + -ತನ]

**ಚಾಳಿಸು₁**, ಚಾಳಯಿಸು, ಚಾಳ್ಯಿಸು₂ (ಕ್ರಿ). ೧. ಜರಡಿ ಹಿಡಿ; ಶೋಧಿಸು: ಹಳೆಯ ಗಂಟು ಗದಡಿಗಳನ್ನೆಲ್ಲಾ ಚಾಳಿಸಿ ಅದನ್ನು ಹುಡುಕಾಡಿಕೊಂಡನು (ಬೆಳಗು. ೨೫); ಡಬ್ಬಿಯೊಳಗಿನ ಹಿಟ್ಟನ್ನು ಪರಾತಕ್ಕೆ ಚಾಳಿಸಿದನು (ರಕ್ತರಾತ್ರಿ. ೨೨೦). ೨. ಸೋಲಿಸು; ಹಿಮ್ಮೆಟ್ಟಿಸು; ಓಡಿಸು: "ಚಾ [ಪಾಠಾಂ. ಜಾ] ಳಿಸಿತೆಂದು ಸೋಲಿಪುದು" (ಶಬ್ದಮ. ೭೨); ವಿಜಯದ ಗುಡಿವಿಡಿಸಿ ಅರಿನೃಪರಂ ಭೇದಿಸಿ ಪಾಂಚಾಳರಂ ಚಾಳಿ[ಪಾಠಾಂ. ಚಾರಿ, ಬಾಡಿ]ಸಿ ಗಾಂಧರ್ವರಂ ವಿರಥರ್ ಮಾಡಿ (ಪಂಪಭಾ. ೬-೨೯ ವ); ಮಲ್ಲಶ್ರುಮದೆ ಪೊಣರ್ದು ಗೋಪಾಲರಂ ಚಾ [ಪಾಠಾಂ. ಜಾ]ಳಿಸುತ್ತುಂ (ಜಗವಿ. ೪-೩೮). ೩. ಹೀಯಾಳಿಸು; ತಿರಸ್ಕರಿಸು: ಓರೊರ್ವರಂ ಡೊಕ್ಕರಿಸುತ್ತೋರೊರ್ವರಂ ಚಾಳಿಸುವ ಪದದೊಳ್(ಜಗವಿ. ೬-೬೪); ಚೊಕ್ಕೆಯದಾಸೆಗೆ ಪೊಕ್ಕ ಮಲ್ಲನನಿಕ್ಕಿ ಮೆಟ್ಟಿ ವಜ್ರದ ಬಳ್ಳಿಯಂತೆ ಥಡಿಕೆಯೊಳ್ ಬಿಗಿದು ಚಾಳಿಸಿ ನೂಂಕುವ (ಗಿರಿಕ. ೨-೧೦೫ವ). ೪. ಪೀಡಿಸು; ಕಾಡು: ಎಂದು ತನ್ನಟಿಪನಡರೆ ಚಾಳಿಸಿ ನುಡಿದು ಪೋಗುತ್ತುಂ (ಅನಂಪು. ೧೦-೯೫ ವ); ತೆಗೆದೆತ್ತೆ ಬಾರದಿರೆ ಸಿದ್ಧನಂ ಚಾಳಿಸಲ್ಪೆಗೆದು (ಪಾರ್ಶೀಪು. ೧೦-೬೪); ಅಱುವುಗೇಡಿಂ ನಾಡೆ ನಿಮ್ಮವರಂ ಚಾಳಿಸಿದೆವು (ರಾಮಾಶ್ವ. ೧೨೨-೪). ೫. [ಸಂಗೀತ] ರಾಗಾಲಾಪನೆಮಾಡು,-ಹಾಡು: ಸುಖಸುಧಾಪಾನದೊಳ್ ಪರಿಷಜ್ಜನಂಗಳಂ ಮುಳುಗಿಸಿದತ್ತು ಚಾಳಿಸಿದ ರಾಗಮೆ ನಚ್ಚಿನ ಮಂಜುಘೋಷೆಯಾ (ಅನಂಪು.೪-೮೮). **ಚಾಳಯಿಸು :** ೨. ಚಾಳಯಿಸಿ ಕೊಂಡುಳಿದೆವಿನ್ನು ಬಾಳಿ ಸಾಕೆಮಗೆಂದು ಭೂಪರು ಚಾಳಿಸಿದೊಡಬಲೆಯರು ನಗುತಿರೆ ನಾಚಿ ತವಕದಲಿ (ಜೀವಂಚ. ೦೫-೨೬). **ಚಾಳ್ಯಿಸು₂:** ೬. ತಾತ್ಸಾರಮಾಡು; ಬೇಸರಪಡು: ಪೇಳಲ್ದಾರ ಜಿಹ್ವೆಗಸಾಧ್ಯ ರತ್ನದ ಮೇಳವಿದಲ್ಲಿ ಸಿದ್ಧಿಸಿತೋ ಚಾಳ್ಯಿಸದೆ ಕೆತ್ತಿದನಾರೋ ಕೆಲಸಿಯೆಂದಾಲೋಚಿಸಿದಳು (ಮೋಹತ. ೨೭-೨೯). [<ಚಾಲಿಸು]

**ಚಾಳಿಸು₂** 'ಚಾಲಿಸು' ನೋ.

**ಚಾಳಿಸು₃** 'ಚಾಳೀಸು' ನೋ.

**ಚಾಳೀಸ** 'ಚಾಳೀಸು' ನೋ.

**ಚಾಳೀಸಪತ್ರೆ** 'ತಾಳೀಸಪತ್ರೆ' ನೋ.

**ಚಾಳೀಸು**, ಚಾಳಿಸು₃, ಚಾಳೀಸ, ಚಾಳೇಸ (ನಾ). ೧. ನಲವತ್ತು. ೨. ಸುಮಾರು ನಲವತ್ತರ ವಯಸ್ಸಿಗೆ ಉಂಟಾಗುವ ದೃಷ್ಟಿಮಾಂದ್ಯ; ದೂರದ ವಸ್ತುಗಳು ಮಾತ್ರ ಕಣ್ಣಿಗೆ ಸ್ಫುಟವಾಗಿ ಕಾಣುವ ಕಣ್ಣಿನ ಕುಂದು: ವಯೋನುಗುಣವಾಗಿ ಮನುಷ್ಯನಿಗೆ ಚಾಳೀಸು (Long Sight) ಬಂದಮೇಲೆ . . . ಓದುವುದನ್ನು ಕಡ್ಡಾಯವಾಗಿ ನಿಲ್ಲಿಸಬೇಕಾಗಿತ್ತು (ಶಿಲ್ಪನಾ. ೦೫೨). ೩. ಕನ್ನಡಕ; ಉಪನೇತ್ರ; ಸುಲೋಚನ: ಚಾಳೀಸು ಹಾಕಿ ಚಿರೂಟು ಸೇದುವ ಅಕಬರಬಾದಶಹನೂ . . . ಔರಂಗಜೇಬನೂ ಇತಿಹಾಸಕ್ಕೊಂದು ಹೊಸ ಮುಖವನ್ನು ತಂದು ಕೊಟ್ಟರು (ಗಾಳಿಪ. ೭೦); ಸರಿಯಾಗಿ ಕಾಣೋದಿಲ್ಲಾ ಅಂತಾನೆ 'ಚಾಳೀಸು' ಹಾಕೇನಿ (ಚಂದುಬ. ೩೨); ಜೋಶಿಯವರು ಪುನಃ ಚಾಳೀಸನ್ನು ಮೂಗಿಗೇರಿಸಿದರು (ಜೀವನ. ೫೪). **ಚಾಳಿಸು₃:** (ಕ). **ಚಾಳೀಸ :** ೨. ನಿನ್ನ ಕಣ್ಣಿಗೆ ಚಾಳೀಸ ಹುಟ್ಟಿ (ಜಿನರಾ. ೪-೨೭); ಏನೋ ಸಹಜವಾಗಿ ವಯೋಧರ್ಮದಿಂದುಟಾಗಿರುವ ದೃಷ್ಟಿಮಾಂದ್ಯವೆಂದೋ ಇಲ್ಲವೇ ಚಾಳೀಸವೆಂದೋ ಕಡೆಗಣಿಸುವುದುಂಟು (ನಿಮ್ಮದೃ. ೮೩). ೩. ಚಾಳೀಸ-ತಂತಿಯು ಬದಲು ತಂತುವನ್ನು ಕಟ್ಟಿಕೊಂಡಿದ್ದ ಚಾಳೀಸವನ್ನು ಮೂಗಿನ ಮೇಲಿಟ್ಟುಕೊಂಡು ದಾರವನ್ನು ಕಿವಿಗೆ ಸುತ್ತಿದ್ದಾರೆ (ಸುವಸಂ. ೭೮). **ಚಾಳೇಸ :** ೨. ಕಣ್ಣುಗಳಲ್ಲಿ ನೀರು ಸುರಿಯಲು ಕಣ್ಣು ಚಾಳೇಸವಾಗಿ ವಿಕಾರವಾಗಿರಲು (ಅಶ್ವಟೀ.೩೪-೧೦). [←ಮರಾ. ಚಾಳೀಸ, ಚಾಳಿಸೀ; ಹಿಂ. ಚಾಲೀಸ್ /ಪ್ರಾ. ಚತ್ತಾಲೀಸ್./ಸಂ. ಚತ್ವಾರಿಂಶತ್]

**ಚಾಳು₁** 'ಚಾಳ' ನೋ.
**ಚಾಳು₂** 'ಚಾಲು' ನೋ.
**ಚಾಳುಕ್ಯ** 'ಚಾಲುಕ್ಯ' ನೋ.
**ಚಾಳುವ** 'ಸಾಳುವ' ನೋ.
**ಚಾಳೆಯ** 'ಚಳಯ್ಯ₂' ನೋ.
**ಚಾಳೀಸ** 'ಚಾಳೀಸು' ನೋ.
**ಚಾಳೈಸು₁** 'ಚಾಲಿಸು' ನೋ.
**ಚಾಳೈಸು₂** 'ಚಾಳಿಸು₁' ನೋ.
**ಚಾಳೋಕ್ಯ** 'ಚಳುಕ್ಯ' ನೋ.
**ಚಾಳ್ಕ** 'ಚಾಳಕ₂' ನೋ.
**ಚಾಳ್ಕತನ** (ನಾ). ಧೂರ್ತತನ ; ಉಪಾಯಗಾರಿಕೆ : ಆರನೆಯ ಸೂಳಿನೊಳ್ ಚಾಳ್ಕತನದಿಂ ಕಳಿಂಗನಂ ಚೀನಹಮ್ಮೀರರಂ ಕೊಂದು (ಪರಕು. ೩೭-೧೮) ; ಬೀಳ್ಕೊಟ್ಟರಾವು ಪೋಪೆವೆಂದಖಿಳ ಬಾಡಬರ್ ಚಾಳ್ಕತನ ದೀನತೆಯೊಳಭಿನಮಿಸಲ್ (ಪರಕು. ೪೧-೨೦).
[ ಚಾಳ್ಕ (<ಚಾಳಕ₁) + –ತನ ]
**ಚಾಟ್, ಚಾಳಿ₁** (ನಾ). ನವಗ್ರಹಗಳಲ್ಲಿ ಒಂದು ; ರಾಹು : "ಚಾಟ್= ರಾಹು" (ಶಮದ. ಪರಿ. ೧) ; "ಚಾಟ[ಪಾಠಾಂ. ಜಾಳ]ಲರ್ವಟ್ಟೆವಾವೆನೆ ರಾಹು" (ಶಬ್ದಮಂ. ೧೮); "ಚಾಟಿನಲ್ ಚಾವೆ[ಪಾಠಾಂ. ಚೂಪ]ನಿಪ್ಪುದು" (ಸಂಜೀವ. ೫). **ಚಾಳಿ₁** : ಅಕಟವನ ನೊಸಲಲ್ಲಿ ತಿಂಗಳಂ ಬರೆವೋಗಿ ಚಾಳಿಯಂ ಗೀಚಿದೆಯೊ (ಹೆಬ್ಬರ. ೩೩-೧೪೨).
[ ದೇ.॥ ಮಲ. ಚಾಟ್=ಕೆಟ್ಟಗಳಿಗೆ ; ಕೆಟ್ಟಶಕುನ ]
**–ಚಿ** (ಪ್ರ). ಒಂದು ತದ್ಧಿತ ಪ್ರತ್ಯಯ. 'ಕುಡಿಚಿ' ಪರಾ.
**ಚಿಂಕಿಲು** (ನಾ). ಸಣ್ಣಕೀಲು (?) : ವಜ್ರದ ಘಾಲಿಗೆ ವಜ್ರದ ಚಿಂಕಿಲು ವಜ್ರದ ನೊಗ ಹೊಮ್ಮಿಗಳು ವಜ್ರದಾಯುಧನ ವಾಹನದಂತೆ ವಾಜಿಯು ಪ್ರಜ್ವಲ ಸಾಲದಿದುರದ (ದೇವಾಂಕು. ೩-೧೭೯). [ ? ]
**ಚಿಂಕು** (ನಾ). ಒಂದು ಬಗೆಯ ಆಭರಣ : ವೀರಮುದ್ರಿಕೆ ಪಂಚಸರ ಗೌಳಸರ ಮುಕ್ತಾಹಾರ ಹೊಂಬಂದಿ ಚಿಂತಾಕು ತೋರವಮೂಗುತಿ ಹೊನ್ನ ಕುಸುಮ ಚಿಂಕು ಕರ್ಣಪೂರ ಕೊರಲ ಕಂಠಿಕೆಗಳ (ಶಾಂತೀಶ. ೩-೭೦).
[ ? ]
**ಚಿಂಗಯ್ಯ** (ನಾ). ಒಬ್ಬಾತನ ಹೆಸರು : ಚಿಂಗಯ್ಯನ ಚಾಮಬ್ಬೆಯ ಮಗಂ ಪೋಚಣನಕಲ್ಲ (ಮೈಆರಿ. ೧೯೪೨, ೨-೭ ; 973 ?). [ ಚಿಂಗ₀ + ಅಯ್ಯ₁ ]
**ಚಿಂಚ₁** (ನಾ). ಮೈಮೇಲೆ ಚುಕ್ಕೆಗಳಿರುವ ಎತ್ತು : ಕೆಲವ ಕೇಸಿಗ ನಿಟಿಲ ಹಂಡ ಹಾರುವ ಚಿಂಚ ಮಲೆವ ಪುಲ್ಲೋರಿ . . . ಕಬ್ಬಸಿಗಳೊಳಗಾದ ಪಲವು ಪರಿಯೆತ್ತು ತೊಂಬತ್ತಾರು ಲಕ್ಷ ಮೇಳೈಸಿ ಪಿಡಿದುವು ಗೆಲ್ಲಕೆ (ಸಿಂಗಿರಾ. ೩೫-೭); ಚಿಂಚವೆರಡೆತ್ತಾಗಿ ಸಂಚಿನ ಸೊಸೆಯಾಗಿ ಮಿಂಚಾಗಿ ಬರುವ ಮಗನಾದರಾ ಮನೆಗೆ ಲಂಚ ತಪ್ಪುವುದೆ (ಸರ್ವಜ್ಞ. ೦೭೫೪).
**ಚಿಂಚ₂** (ನಾ). ಹುಣಿಸೆಮರ : ಬದರಿಯ ಫಲವಂ ಮೇಣ್ ಚಿಂಚದ ಚಿಗುರಿಂ ಕೂಡಿ ಪುದಿದ ಸಜ್ಜಿಗೆಯಿಂ ಮಾಡಿದ ಸೇವಗೆಯಂ (ಲೋಕೋಪ. ೮-೧೩); ಕನಕಮಂಡುಕ ಮತ್ಸ್ಯ ಕಮಠ ಕಲ್ಲೆಂದು ಚಂದನ ಚಿಂಚ ಮಧು ಶೃಂಗ ಕಡವ ಪೂರುಷ ಶೇಷವೃಕ್ಷಂಗಳು (ಮದೇಶು. ೩೦-೧೫).
[ ದೇ.॥ ತಮಿ. ಚಿನ್ನ ; ತೆಲು. ಚಿಂತ ; ಕೊಲಾ. ಸಿಂತಾ ; ನಾಯ್ಕಿ. ಶಿತ್ತ ; ಗೊಂಡಿ. ಸಿತ್ತಾ./ಸಂ. ಚಿಂಚಾ ]
**ಚಿಂಚಕ** (ನಾ). ಒಂದು ಬಗೆಯ ಮರ : "ಲವಣಕಿಂಶುಕಃ–ಕಂಗುಂಗೆ, ಚಿಂಚಕ" (ಓಷಧಿ. ೦೪೨). [ ? ]
**ಚಿಂಚಗ** (ನಾ). ಒಂದು ಬಗೆಯ ಗಿಡ ; ಕೆಂಪು ಗೋರಂಟೆ : "ಕಿಂಕಿರಾತಃ –ಹೊಂಗೋರಟೆ, ಚಿಂಚಗ" (ಓಷಧಿ. ೩೩). [ ? ]
**ಚಿಂಚಪಟ್ಟಿ** (ನಾ). ಒಂದು ಬಗೆಯ ಕೊರಳಿನ ಆಭರಣ ; ಹುಣಿಸೆ ಎಲೆ ಆಕಾರದ ಪದಕಗಳುಳ್ಳ ಸರ : ನೇತ್ರಾವಳಿಯ ಸೀರಿ ಮಿತ್ರಿ ಗಂಗವ್ವ ಉಟ್ಟು ನಕ್ಷತ್ರಮಾಲೆ ಚಿಂಚಪಟ್ಟಿ ಮೂಗಬೊಟ್ಟು ಕರ್ತುವಿನ ಕಾರ್ಯಕ್ಕೆ ತೊಡಗಿದಳು (ಸಿದ್ಧಪು. ೦೯-೯೮). [←ಮರಾ. ಚಿಂಚಪಟೀ, ಚಿಂಚಪೇಟೀ]
**ಚಿಂಚಿಲ** (ನಾ). ಒಂದು ಊರಿನ ಹೆಸರು; P ಈಗಿನ ಗದಗ ತಾಲೂಕಿನ ಚಿಂಚಲಿ : ಚಿಞ್ಚಿಲದಯ್ವತ್ತುಬುವರುಂ ಮಹಾಜನದ ಕಾಲಂ ಕಟ್ಟಿ ಕೊಟ್ಟು (ಸೌಇಇ. XI-I, ೦೫-೨ ; 871) ; ಚಿಂಚಿಲಗ್ರಾಮಸ್ಯ (ಎಇ. IV, ೨೦೭-೨೪ ; 982) ; ಅದಱಿಂ ಮೂಡಣ ಚಿಂಚಿಲ ಅಕ್ಕಸಾಲೆಯ ಕೆಯಿಂ ಮೂಡಲು ಮತ್ತರು ೧ (ಸೌಇಇ. XX, ೨೨೦-೩೯ ; 1283). [ ? ].
**ಚಿಂಚು** (ನಾ). ಒಂದು ಬಗೆಯ ಸಸ್ಯ (?) : "ಚಿರುಂಡಿ ಚಿಂಚು" (ಅಕಾನಿ. ೦೦-೨೭). [ ? ]
**ಚಿಂಚಿ** (ನಾ). ಮೈಮೇಲೆ ಚುಕ್ಕೆಯನ್ನು ಉಳ್ಳ ಹಸು : ಭೃಂಗೆ ಚಿಂಚಿ ಪಿಂಗೆ ಹಂಡೆ ಶೃಂಗಿ ಕೃಷ್ಣೆ ರಂಗು ಮುತ್ತು ಪಿಂಗಳೆ ಹೇಮಾಂಗಿಯೆಂದು ರಂಗ ಕರೆದನು (ಪ್ರಸಭಾ. ೩೧-೭). [ಚಿಂಚ₁ + –ಇ₂]
**ಚಿಂಚಿಗ** (ನಾ). ಒಂದು ಬಗೆಯ ಗಿಡ : ಚಿಂಚಿಗದ ಸೊಪ್ಪನು ಎಳ್ಳೆಣ್ಣೆಯಲ್ಲಿ ಎಳವದನಾಗಿ ಹುರಿದು ವಣಗಿಸಿ ಪುಡಿಮಾಡಿ (ಸಳವ್ಯ. ೦೯೪).
[ ? ]
**ಚಿಂಡೆ** (ನಾ). ಒಂದು ಬಗೆಯ ಸಸ್ಯ : ಚಿಂಡೇ, ಹೊಂಡೇಮರ (ಮ್ಯಾಜಿ. ೨೦-೩೫೮). [ ? ]
**ಚಿಂತಕ** (ನಾ). ಯೋಚಿಸುವವನು ; ಯಾವುದಾದರೂ ವಿಷಯವನ್ನು ಚಿಂತಿಸುವವನು : "ಧ್ಯಾತಾ, ಧ್ಯಾಃ, ಧ್ಯಾಯಕಃ–ಈ ೩ ಚಿಂತಕಂ" (ಅಭಿಕ್ಯ. ೭೩). 'ಹಿತಚಿಂತಕ' ಪರಾ. [ ಸಂ. ]
**ಚಿಂತಕುಂಟೆ** (ನಾ). ಒಂದು ಊರಿನ ಹೆಸರು: ಚಿರುಪಿಯು ಚಿನ್ನಕುಂಟೆಯು ಚಿಟಾಯುವೊಟಲು ಪುಳುವಟ್ಟು ನಾಲ್ಕೂರುಮಿಟ್ಟು ನಡೆದ ಕಲ್ಲಿಗೊಡಂಗೆ ಯೊಡ್ಡಿನ ಕೆಟಗೆ (ಸೌಇಇ. IX-I, ೨೭-೦೦; 950).
[ ಚಿಂತ₀ + ಕುಂಟೆ₃ ]
**ಚಿಂತನ** (ನಾ). ೧. ಯೋಚನೆ ; ಆಲೋಚನೆ : ಗುರುತತ್ವಚಿಂತನವದು ಗುರುಧ್ಯಾನ (ಬಸಪು. ೩೯-೨೯) ; ವಿಷಯಗಳ ಚಿಂತನದಿಂದ ಮನುಷ್ಯನಿಗೆ ಅವುಗಳಲ್ಲಿ ಆಸಕ್ತಿ ಹುಟ್ಟುತ್ತದೆ (ಧರ್ಮಸಾ. ೦೩೨). ೨. ಧ್ಯಾನ : ಭವದಂಘ್ರಿ ಚಿಂತನಮೆ ಕೇಳ್ ಕೈವಲ್ಯಲಕ್ಷ್ಮೀಸುಖೋತ್ಸವಮಂ ಸಾರ್ಚುವ ದೂತಿ (ಶಬಶಂ. ೫-೩೨). [ ಸಂ. ]
**ಚಿಂತನಪರ** (ಗು). ಚಿಂತನದಲ್ಲಿ ಆಸಕ್ತವಾದ ; ಯೋಚನೆಯನ್ನು ಅವಲಂಬಿಸಿದ : ಒಂದೊಂದು ಶಬ್ದವೂ ಸ್ಫೂರ್ತಿಯ ಒಂದೊಂದು ಕುಡಿಯಾಗುತ್ತದೆ . . . ವಿಚಾರಿತ ರಮಣೀಯ ಇಲ್ಲವೆ ಚಿಂತನಪರ ಶೈಲಿಯಾಗುತ್ತದೆ (ನವ್ಯಶಾ. ೩೫). [ ಸಂ. ]
**ಚಿಂತನಶೀಲ** (ಗು). = ಚಿಂತನಪರ: ಅವರು ತುಂಬ ಚಿಂತನಶೀಲ ಕವಿಗಳು (ರೂಢಿ). [ ಸಂ. ]
**ಚಿಂತನಾಂಶ** (ನಾ). ೧. ಯೋಚಿಸಲು ಯೋಗ್ಯವಾದ ಭಾಗ. ೨. ಯೋಚನೆಯ ಅಂಶ ; ಯೋಚನಾಭಾಗ : ನನ್ನ ಈಗಿನ 'ದರ್ಶನ'ಕ್ಕೆ ಒಪ್ಪುವ ಭಾವಾಂಶ ಚಿಂತನಾಂಶ ಕಲ್ಪನಾಂಶ ರೂಪಾಂಶಂಗಳಲ್ಲಿ ಎರಕ ಹೊಯ್ದು ಅದನ್ನೊಂದು ಹೊಸಕೃತಿಯಾಗಿಯೆ ಮಾಡಿದ್ದೇನೆ (ಚಂದ್ರಸ. IV, ಮುನ್ನುಡಿ). [ ಚಿಂತನ + ಅಂಶ ]
**ಚಿಂತನೀಯ** (ಗು). ೧. ಆಲೋಚಿಸತಕ್ಕ; ಯೋಚಿಸಬೇಕಾದ ; ಯೋಚನೆಗೆ ಯೋಗ್ಯವಾದ. (ನಾ). ೨. ಯೋಚಿಸತಕ್ಕುದು ; ಯೋಚನೆಗೆ ಯೋಗ್ಯವಾದುದು : ಈ ವಿವರಣೆ ಚಿಂತನೀಯವಾಗಿದೆ (ದ್ರಾವಿವಿ. ೧೨೬). [ ಸಂ. ]

**ಚಿಂತನೆ** (ನಾ). ೧. = ಚಿಂತನ ೧ : ಅಕ್ಷರ . . . ಚಿಂತನೆ . . . ಇವೆಲ್ಲವ ಕಲಿತಡೇನೋ ಚೌಷಷ್ಟಿ ವಿದ್ಯಾಕಳಾವಿದನೆನಿಸಿಕೊಂಬನಲ್ಲದೆ ಲಿಂಗವಂತನೆನಿಸಿಕೊಂಬುದಿಲ್ಲ (ಮಡಿಮಾ. ೪೩-೬೦); ಈ ಎರಡು ಅನುಭವಗಳ ತಾರತಮ್ಯದ ಚಿಂತನೆಯನ್ನು ಪದ್ಯರೂಪದಲ್ಲಿರಿಸಿದ್ದಾರೆ (ಸೌಂದಸ. ೩೨೫); ತಾವು ಹೇಳಿದ ಸಂಗತಿಯನ್ನೆಲ್ಲ ಇನ್ನೊಮ್ಮೆ ಚಿಂತನೆ ಮಾಡುತ್ತೇವೆ (ಮುಂಬಯಿ. ೪-೯೩). ೨. ಧ್ಯಾನಿಸುವುದು : ಎಟಗಿ ನೋಡುವುದೊಂದಟಲಿ ಎರಡಟಲಿ ಚಿಂತನೆ . . . ಮೋಣ್ ಹತ್ತಟಲಿ ಮರಣ ಇವು ದಶಾವಸ್ಥೆಗಳೆನಲು (ಬಸಪು. ೩೫-೩೨); ಮನೆಯಲ್ಲಿ ಕೂತುಕೊಂಡು ಇದೇ ರೋಗದ ಚಿಂತನೆ ಮಾಡಿದರೆ ಒಳ್ಳೆಯದಲ್ಲ ಎಂದು ಕೆಲಸಕ್ಕೂ ಕಳುಹಿಸುತ್ತಿದ್ದೆ (ಮನೋನಂ. ೮೨). [ಸಂ. ಚಿಂತನಾ ]

**ಚಿಂತನೆಗೊಳು** (ಕ್ರಿ). ಆಲೋಚನೆಗೆ ಒಳಗಾಗು ; ಯೋಚನಾಪರನಾಗು ; ಚಿಂತೆಮಾಡು : ಜಿನದೀಕ್ಷೆಗೆಳಸಿ ತಂದೆಗೆ ಪೇಳಲಂಜಿ ಚಿಂತನೆಗೊಳುತೆಯ್ತಂದರಾಗ (ಭರಡ. ೪೫-೩೯). [ಚಿಂತನೆ+ಕೊಳು(<ಕೊಳ್$_1$)]

**ಚಿಂತಾಕ** 'ಚಿಂತಾಕು' ನೋ.

**ಚಿಂತಾಕು,** ಚಿಂತಾಕ (ನಾ). ೧. ಕೊರಳಲ್ಲಿ ಧರಿಸುವ ಒಂದು ಬಗೆಯ ಆಭರಣ ; ಅಡ್ಡಿಕೆ ; ಹುಣಿಸೆಯ ಎಲೆಯ ಆಕಾರದ ರತ್ನಗಳನ್ನು ಕೆತ್ತಿರುವ ಆಭರಣ : ಕಾಂತನ ಮುಖಕೆ ಕಾಂತಿಯನೀವುದೊಂದು ಸುಕಾಂತ ಚಿಂತಾಕನಂಗನೆಗೆ ಕಾಂತೆಯರೊಲಿದು ಕಟ್ಟಲು (ಅಂಜಚ. ೮-೫೯); ಮೂಕುತಿ ಮುತ್ತಿನ ಸರ ಕರ್ಣಪತ್ರ ಚಿಂತಾಕು ನೇವಳ ಉಳಿ ಪದಕ (ಭರಚ. ೩೧-೪೩); ವಜ್ರದ ಚಿನ್ನದ ಚಿಂತಾಕು (ಸಿದ್ಧಪು. ೧೯-೭೨): ಚಿಂತಾಕು ಇಟಗೊಂಡು ಚಿಪ್ಪಾಡಿ ಬಳಿವಾಕಿ ಚಿಂತಿಲ್ಲ ಏನ ನಿನಗಷ್ಟು ನಿಮರಾಯ ಅಲ್ಲೊಬ್ಬ ಕೂಡ ನಗುತಿದ್ದ (ಕನ್ನಜಾ. ೫೮). ೨. ಒಡ್ಯಾಣ; ನಡುಪಟ್ಟಿ ; ಡಾಬು : ತೂಕದ ಮೊಲೆಗಳ ಬಡನಡು ತಾಳದೆಂದಾ ಕಾಂತೆ ಚಿನ್ನದ ಕಟ್ಟಾ ಜೋಕೆಗೈದಳೊಯೆನೆ ನವರತ್ನಮಯದ ಚಿಂತಾಕು ತೋಱಿತು ನಡುವಿನೊಳು (ಭರಚ. ೪೦-೫೭); ಪದಕ ಕೊರಲ ಪಂಚಸರ ನಾನಾರತ್ನ ಪುದಿದ ನಡುವಿನ ಚಿಂತಾಕು . . . ಸುದತಿಯೊಳೊಂದಿ ಮೆಱೆದುವು (ರಾಮವಿ. ೭-೭೨). **ಚಿಂತಾಕ :** ೧. ಕಾಂತಾಕಚಭಾರದಿಂದೆ ನುಣ್ಗೊರಲು ಮುಂದೆಂತಹುದೆಂದು ಸಂದೆಗದೆ ಸಂತತ ಬಣ್ಣಗಲ್ಲುಗಳ ಕೀವಣಿಸಿರ್ದ ಚಿಂತಾಕ ಬಲುಹನಿಕ್ಕಿದರು (ವೋಹತ. ೨೩-೩೮); ಪರದೈವ ಹರಿಯೆಂಬೊ ಮುತ್ತಿನ ಮೂಗುತಿಯು ತರಣಿ ಭಾಸನೆಂಬೊ ಮುತ್ತಿನ ಚಿಂತಾಕ (ವಿಸಾಸು. ೫೪-೫); ಸರ ಮುತ್ತು ಚಿಂತಾಕ ಸರಿಗೆ ತಾಯಿತ ಮುತ್ತು ಮೆರೆವ ಯೇಕಾವಳಿಯು (ಶ್ರೀಕೃಪಾ. ೦೨); ನನಗೊಂದು ಚಿಂತಾಕವು ಬೇಕಾಗಿರುವುದರಿಂದ ನಮ್ಮ ತಂದೆಯು . . . ಪೇಟೆಗೆ ಹೋಗಿದ್ದಾನೆ (ತೊಳಮು. ೭೯).

[ ದೇ. ಹೆ ತಮಿ. ಚಿನ್ತಾಕ್ಕು ; ತೆಲು. ಚಿಂತಾಕು./ಮರಾ. ಚಿತಾಂಕ್, ಚಿತಾಕ್ ]

**ಚಿಂತಾಕುಲ,** ಚಿಂತಾಕುಳ (ಗು). ೧. ಯೋಚನೆಯಿಂದ ಕಲಕಿದ; ವ್ಯಸನದಿಂದ ಕೂಡಿದ ; ಚಿಂತೆಯಿಂದ ವ್ಯಗ್ರವಾದ. **ಚಿಂತಾಕುಳ :** (ನಾ). ೨. ಚಿಂತೆಗೆ ಒಳಗಾದವನು ; ಚಿಂತಾಕ್ರಾಂತ : ಫಲುಗುಣನ ಪರಮವಿವೇಕವನು ಪತಿಕರಿಸಿ ನೆಱೆ ಚಿಂತಾಕುಳನ ಮಾಡಿದನು ಕೌರವರಾಯನನು ಭೀಷ್ಮ (ಕುವ್ಯಾಭೀ. ೧೧-೨೮).

[ ಸಂ. (ಚಿಂತಾ + ಆಕುಲ) ]

**ಚಿಂತಾಕುಲತೆ,** ಚಿಂತಾಕುಳತೆ (ನಾ). ಚಿಂತೆಯಿಂದ ವ್ಯಗ್ರವಾಗಿರುವಿಕೆ,– ಪೀಡಿಸಲ್ಪಟ್ಟಿರುವಿಕೆ. **ಚಿಂತಾಕುಳತೆ :** ಒಳಗೊಳಗಲ್ಲು ಚಿಂತಾಕುಳತೆಯನೊಳಕೊಂಡು ಬೇಡನಿವನೆನ್ನಿಂದಗ್ಗಳಿಸಿದನೆ (ಶಬಶಂ. ೪-೯೨).

[ ಸಂ. ಚಿಂತಾಕುಲತಾ (ಚಿಂತಾ + ಆಕುಲತಾ) ]

**ಚಿಂತಾಕುಲಿತ** (ನಾ). ಚಿಂತೆಯಿಂದ ವ್ಯಗ್ರನಾದವನು ; ಚಿಂತಾಕ್ರಾಂತನಾದವನು : ಚಿಂತಾಕುಲಿತನನಾಱೆಸುವಂತಿರೆ . . . ಪರ್ಣಕುಟೀರಾತಂರಮಂ ಪೊಕ್ಕು (ಕಾದಂಉ. ೭೦೦). [ ಸಂ. (ಚಿಂತಾ + ಆಕುಲಿತ) ]

**ಚಿಂತಾಕುಳ** ' ಚಿಂತಾಕುಲ ' ನೋ.

**ಚಿಂತಾಕುಳತೆ** ' ಚಿಂತಾಕುಲತೆ ' ನೋ.

**ಚಿಂತಾಕ್ರಾಂತ** (ಗು). ೧. ಚಿಂತೆಗೊಳಗಾದ ; ಚಿಂತೆಯಿಂದ ತುಂಬಿದ. (ನಾ). ೨. ಚಿಂತೆಯಿಂದ ಕೂಡಿದವನು ; ವ್ಯಥೆಗೆ ಒಳಗಾದವನು : ಆ ಪಾರ್ವಂಗೆ ಮಕ್ಕಳಿಲ್ಲದಿರೆ ಪೆಂಡತಿಯುಂ ತಾನುಂ ನಿಚ್ಚನಿಚ್ಚಲುಂ ಚಿಂತಾಕ್ರಾಂತರಾಗಿರ್ಪರ್ (ಜೀವಸಂ. ೩೭-೨೨ ವ) ; ಲಕ್ಷ್ಮಣ . . . ಮೂರ್ಖರಿಗೊಡೆಯ ನೀನೆನುತೊಟಲಿ ಪೊಡವಿಗೆ ಕೆಡೆದು ಹೊರಳಲು ರಾಮ ಚಿಂತಾಕ್ರಾಂತನಾಗಿರ್ದ (ಕೌಶಿರಾ. ೪೩-೩೬). [ಸಂ. (ಚಿಂತಾ + ಆಕ್ರಾಂತ)]

**ಚಿಂತಾಕ್ರಾಂತೆ** (ನಾ). ಚಿಂತೆಯಿಂದ ಕೂಡಿದವಳು : ತನಗೆರಡಿಲ್ಲದೋಪನ ವಿಯೋಗದೊಳ್ ಚಿಂತಾಕ್ರಾಂತೆಯಾಗಿರ್ದ ಕೆಳದಿಗಿಂತೆಂದಳ್ (ಶಾಂತಿಪು.-೮-೧೦೬) ; ಕಾಂತೆ ತಾಂ ಸುತರಿಲ್ಲದಿರ್ದಡನಂತ ಚಿಂತಾಕ್ರಾಂತೆಯಾಗುತೆ ತೂಂತು ನೋಂಪಿಗಳಂ ಪಲವನುಱೆ ನೋಂತು ಬೇಸತ್ತು (ಬಸಪು. ೨-೪೮).

[ ಸಂ. ಚಿಂತಾಕ್ರಾಂತಾ (ಚಿಂತಾ + ಆಕ್ರಾಂತಾ) ]

**ಚಿಂತಾಪರ** (ಗು). ೧. ಯೋಚನೆಯಲ್ಲಿ ಆಸಕ್ತವಾದ ; ಚಿಂತನೆಯಲ್ಲಿ ಮುಳುಗಿದ. ೨. ಧ್ಯಾನದಲ್ಲಿ ತೊಡಗಿರುವ ; ಧ್ಯಾನಮಗ್ನವಾದ. (ನಾ). ೩. ಚಿಂತನೆಯಲ್ಲಿ ಮುಳುಗಿದ ವ್ಯಕ್ತಿ ; ಆಲೋಚನಾಶೀಲ : ವಿಜ್ಞಾನಿಗಳು ಸಾಮಾನ್ಯವಾಗಿ ಚಿಂತಾಪರರಾಗಿಯೇ ಇರುತ್ತಾರೆ (ರೂಢಿ).

[ ಸಂ. (ಚಿಂತಾ + ಪರ) ]

**ಚಿಂತಾಪರವಶತೆ** (ನಾ). ಚಿಂತೆಯಿಂದ ಮೈಮರೆಯುವಿಕೆ : ಚಿಂತಾಪರವಶತೆಯಿನಿನಿಸಂ ತಡೆದಿದಿರೇಟದಾತ್ಮಪರ್ಯಂಕದೊಳಾ ಕಾಂತಂ ಕುಳ್ಳಿರೆ (ಪುಷ್ಪಪು. ೩-೬೬). [ ಸಂ. ಚಿಂತಾಪರವಶತಾ(ಚಿಂತಾ + ಪರವಶತಾ) ]

**ಚಿಂತಾಭರ** (ನಾ). ಯೋಚನೆಯ ಹೊರೆ ; ಚಿಂತೆಯ ಆಧಿಕ್ಯ : ಆಕ್ರಾಂತಚಿಂತಾಭರಸ್ತಿಮಿತ ಗಾತ್ರೆಯುಂ . . . ಆಗಿರ್ಪನೆಗಂ (ಚಂದ್ರಪು. ೩-೫೦ ವ). [ ಸಂ. (ಚಿಂತಾ + ಭರ) ]

**ಚಿಂತಾಮಗ್ನ** (ಗು). ೧. ಚಿಂತೆಯಲ್ಲಿ ಮುಳುಗಿದ. (ನಾ). ೨. ಚಿಂತೆಯಲ್ಲಿಯೇ ಮುಳುಗಿರುವವನು: ಮುಕುಂದರಾಯರು . . . ಹುಬ್ಬು ಗಂಟಿಕ್ಕಿ ಚಿಂತಾಮಗ್ನರಾಗಿದ್ದಾರೆ (ವೀರಯೋ. ೨). [ಸಂ. (ಚಿಂತಾ + ಮಗ್ನ)]

**ಚಿಂತಾಮಣಿ** (ನಾ). ೧. ಸ್ವರ್ಗಲೋಕದ ಒಂದು ದಿವ್ಯರತ್ನ ; ಬೇಡಿದುದನ್ನು ಕೊಡಬಲ್ಲುದೆಂದು ನಂಬಲಾದ ದೇವಲೋಕದ ರತ್ನ : ಅದರ್ಕೆ ಮುನ್ನ ಚಿಂತಾಮಣಿ ಕಾಮಧೇನು ಸುರಭೂರುಹಮೆಂಬಿವನೇಕೆ ಮಾಡಿದಂ ತಾಮರಸೋದ್ಭವಂ (ಅಜಿಪು. ೧-೭೨); ಚಿಂತಾಮಣಿ ಬಂದಂತಿರೆ . . . ಒಸಗೆಯಾಯ್ತು ರಮನೆಯೊಳ್ (ಪುಷ್ಪಪು. ೦೩-೦೨೨) ; ತರುಗಳೊಳು ಕಲ್ಪಾವನೀಜಂ . . . ರತ್ನನಿಕರದೊಳಗೆ ಚಿಂತಾಮಣಿಯು (ಬಸಪು. ೫-೭೯) ; ಚಿಂತಾಮಣಿಗೆ ಕೈದುಡುಕಿ ಹರಳುತೆಕ್ಕೆಯಿದೆಂಬ ಪಾಟಿಗೆ ಪರಮಗುರು ನಾನಾದೆನೈ (ಕುವ್ಯಾಭೀ. ೩-೭೯) ; ರಸದ ಬಾವಿಯು ಮನೆ ಮನೆಗಳಲಿ ಮಿಸುಪ ಚಿಂತಾಮಣಿಗಳಿರುತಿರೆ ಎಸೆವ ಪರುಷದ ಕಣಿಗಳಗ್ಗದ ವೀಥಿವೀಥಿಯಲಿ (ಕೌಶಿರಾ. ೩೯-೭). ೨. (ಆಲಂ) ತುಂಬ ಬೆಲೆಯುಳ್ಳ ವ್ಯಕ್ತಿ ; ಶ್ರೇಷ್ಠವ್ಯಕ್ತಿ : ಸೋಬಾನಕ ನೀ ನಡಿಯ ಸೊಬಗಿನ ಚಿಂತಾಮಣಿಯೆ (ಲೋಕಗೀ. ೧೧). ' ದಾನಚಿಂತಾಮಣಿ ' ಪರಾ. ೩. [ಸಂಗೀತ] ಒಂದು ರಾಗದ ಹೆಸರು : ಚಿಂತಾಮಣಿ, ಕಲ್ಗಡ . . . ಮುಂತಾದ ಕಷ್ಟ ರಾಗಗಳಲ್ಲಿ ಕೃತಿರಚನೆ ಮಾಡಿ ಶಾಸ್ತ್ರಿಗಳು ಆ ರಾಗಗಳ ಸ್ಪಷ್ಟ ಪರಿಚಯ ಮಾಡಿ ಮಾರ್ಗದರ್ಶಕರಾಗಿದ್ದಾರೆ (ಸಂಗೀಚಂ. ೨೯೪).

[ ಸಂ. ]

**ಚಿಂತಾಯಕ** (ನಾ). ಭಕ್ತರ ಕ್ಷೇಮವನ್ನು ಕುರಿತು ಯಾವಾಗಲೂ ಚಿಂತಿಸುತ್ತಿರುವವನು; ವಿಪತ್ತನ್ನು ನಿವಾರಣೆ ಮಾಡತಕ್ಕವನು: ಸಂತಸದಿ ಗುರುವಿನಡಿಗಂತಾಗ ಮೈಯಿಕ್ಕಿ ಚಿಂತಾಯಕನೆ ಮತ್ತದೆಂತೆಂದೆನೆ (ಮನೋವಿ. ೨-೪೦); ತಾಯನಗಲಿದ ಶಿಶು ವಿನಂದದಿ ಬಾಯಬಿಡು ವಂತಾಯ್ತಲೇ ಚಿಂತಾಯಕನೆ ಬಿಡಬೇಡ ರಕ್ಷಿಸು(ಹರಿಸಾ. ೯೪); ಇಂತಿವಷ್ಟಾ ದಶದೋಷಾ ಚಿಂತಾಯಕಗಿಲ್ಲವದರಿಂದ ಸುಖವೆ ನಿರಂತರ ನಿಜದೊ ಳೊಪ್ಪಿಹುದು (ಭರಿಜ. ೬೬-೧೧೬); ಮುಂದದಿ ಚಿಂತಾಯಕಂ 'ಅವರ ಚಿತ್ತ ಶುದ್ಧಿಯ ನೋಳ್ಪೆನೆಂದು ನಟಿಸಿದ ಸತ್ವನೌ (ಪ್ರಭುಪು. ೫-೧೫೭); ಚಿಂತೆ ಯನುಳಿದಾತನವನು ಚಿಂತಾರತ್ನ ಚಿಂತಾಯಕ ರಂಗಧಾಮ (ಶತಸಾಂ. ೫೮-೯೭). [ಸಂ.]

**ಚಿಂತಾರತ** (ನಾ). ಮನಸ್ಸಿನಲ್ಲಿಯೇ ಒಡಗೂಡುವಿಕೆ; "ಸಂಕಲ್ಪ ಸಮಾಗಮ" (ಕಾದಂಟು. ಅಡಿಟಿ): ಕರ್ಣಪೂರೋತ್ಪಲದಿಂ ಚಿಂತಾರತ ಕ್ಕಾಟಿಸಿ ಮಣಿಮಯದೀಪಂಗಳಂ ನಂದೆ ಪೊಯ್ವಳ್ (ಕಾದಂಬು. ೩೩೯). [ಸಂ. (ಚಿಂತಾ + ರತ)]

**ಚಿಂತಾರತಿ** (ನಾ). ಯೋಚನೆಯಲ್ಲಿ ಆಸಕ್ತಿ: ಇವರಿರವಿನ ಚಿಂತಾರತಿ ನಿವಗೇಕೀ ಕ್ಷುಧೆಯನೀ ಪಥಶ್ರಮವುಮಂ ತೀರ್ಚುವ ಬಗೆಯಂ ಬೇಗಂ ಮಾಡುವುದು (ಗಿರಿಕ. ೯-೯೩). [ಸಂ. (ಚಿಂತಾ + ರತಿ)]

**ಚಿಂತಾರತ್ನ** (ನಾ).=ಚಿಂತಾಮಣಿ ೧: ರತ್ನಂಗಳ ನಡುವಣ ಚಿಂತಾರತ್ನ ದಂತೆ . . . ಗಿರಿರಾಜತನೂಜೆ ವಿರಾಜಿಸುತಿರ್ದು (ಗಿರಿಕ. ೪-೪೩ ವ); ಬಸವನೆಂಬ ವಿನೂತ್ನ ಚಿಂತಾರತ್ನವಿರುತಿರಲು (ಬಸಪು. ೬೦-೮೪). [ಸಂ. (ಚಿಂತಾ + ರತ್ನ)]

**ಚಿಂತಾಲು** (ನಾ). ಒಂದು ಬಗೆಯ ಭಾರಮಾಪಕ; ತೂಕದ ಪರಡಿ ಗಳಿಲ್ಲದ, ಬರಿ ಕೊಂಡಿಗಳಿಗೆ ಭಾರವನ್ನು ಅಳವಡಿಸಿ ತೂಕ ಮಾಡುವ ಒಂದು ಸಾಧನ. ೨. ದೊಡ್ಡ ತಕ್ಕಡಿ: ಗೋಣಿಯ ಚೀಲದಂತೆ ಚಿಂತಾ ಲಿನಲ್ಲಿಟ್ಟು ತೂಗುವುದಕ್ಕಾಗುವುದಿಲ್ಲ (ನಿಬಂಧ. II, ३೦೫); ಅದಕ್ಕೆ ಶಿಬಿಯು ಒಪ್ಪಿ ಚಿಂತಾಲನ್ನು ತರಿಸಿ (ವಡಭಾ. ೦೪೯). ೩. "ಬಂಗಾರ-ಬೆಳ್ಳಿಗಳನ್ನು ತೂಗುವ ಸಣ್ಣ ತಕ್ಕಡಿ, ತರಾಜು" (ಕಸೂ.ಕೋ. ೩೪೩); ತುಲಾ- ತ್ರಾಸು, ಚಿಂತಾಲು, ತಕ್ಕಡಿ, ತೂಗುಕೋಲು (ಸಿದ್ಧಾಂತಿ. ३೫೭). [?]

**ಚಿಂತಾಲೋಲ** (ಗು). ೧. ಯೋಚನೆಯಿಂದ ಕೂಡಿದ ಮನಸ್ಸುಳ್ಳ; ಆಲೋಚನಾ ಪರವಾದ. (ನಾ). ೨. ಚಿಂತೆಯಲ್ಲಿ ಮುಳುಗಿದವನು: ಸೈಂಧವನು ಚಿಂತಾಲೋಲನಿರ್ದನು ಮರಣಜೀವನಜಾತಸಂಶಯನು (ಕುಮಾರವ್ಯಾ.ದ್ರೋ. ೮-೬೮). [ಸಂ. (ಚಿಂತಾ + ಲೋಲ)]

**ಚಿಂತಿ** (ನಾ). ಒಂದು ಬಗೆಯ ಆಭರಣ; ಚಿಂತಾಕು: ಎಡೆನರೆ ಬವರಿ ಮುತ್ತಿನ ಚಿಂತಿ ಕುಲ್ಲಾವಿ ಬೆಡಗುಗಾಣಿಸುತಿರಲೆಯ್ದಿ (ನಾಗಕು. ३೯-೫). [<ಚಿಂತಾಕು./ತಮಿ. ಚಿನ್ತಿ]

**ಚಿಂತಿತ**(ಗು). ೧. ಯೋಚಿಸಿದ; ಆಲೋಚಿಸಿದ. ೨. ಸ್ಮರಿಸಿದ; ಎಣಿಸಿದ; ನೆನೆದ. (ನಾ). ೩. ಯೋಚನೆ. ೪. ಬಯಕೆ; ಇಷ್ಟಾರ್ಥ: ಇಂತೆಂದು ನುತಿಸಲಿಂದ್ರಂ ಸಂತಸದಿಂ ಶಂಭುವೆಂದನೆಲೆ ಸುರನಾಥನೆ ಚಿಂತಿತಮನೀ ವೆನೀಗಳೆ ನೀಂ ತಳ್ವದೆ ಬೇಡೆನಲ್ಕೆ ಕೈಮುಗಿದೆಂದಂ (ಹಾಲಾಸ್ಯ. ೦-३-೯೭). ೫. [ಸಂಗೀತ]ಸ್ವರದೋಷಗಳಲ್ಲಿ ಒಂದು: ಕಂಪಿತ ಚಿಂತಿತ . . . ಕಾಲಹೀನವೆಂಬ ಹದಿನೈದು ಸ್ವರದೂಷಣಂಗಳಂ ತೊಱೆದು (ವಿವೇಕ. ३೩೬). [ಸಂ.]

**ಚಿಂತಿಸು** (ಕ್ರಿ). ೧. ಯೋಚಿಸು; ಆಲೋಚಿಸು; ಭಾವಿಸು: ಮಾರ್ಗಗದಿತ ದೋಷಂಗಳುಮಂ ಚಿಂತಿಸಿ (ಕವಿರಾ. ೦-೪೭); ಧುರದೊಳ್ ಮೂಱುಂ ಲೋಕಂ ನೆರೆದಿರೆಯುಂ ಕುಡುವ ಪೊ[ಟ್ಟ]ಱೊಳ್ ಮೇರುವೆ ಮುಂದಿರೆಯುಂ ಬೇರದ ಬಿಯದಂತರಕ್ಕೆ ಕಿಱಿದೆಂದು ಚಿಂತಿಪಂ ಪ್ರಿಯಗಗಳ್ಗಂ (ಪಂಪಭಾ. ೧-೪೮); ಮತಿಯಂ ಬಿಪ್ಪಂಡಿಪಳ್ ಲಕ್ಷಣಮನೆಣಿ ಸಳೌದಾರ್ಯಮಂ ಚಿಂತಿಸಳ್ (ಕಾದಂಪೂ. ೫೪೮); ಚಿಂತಿಸಿದೊಡಲ್ಲದೀಯದು ಚಿಂತಾಮಣಿ (ಸಮಪ. ೩೯೪-೮ ಅನುಬಂಧ. I); ಅಳಿಯನಳಿವನು ಹೇಳ ಬಾರದು ತಿಳಿಯಲಿದನಿನ್ನೆನುತ ಚಿಂತಿಸಿ ನಳಿನಲೋಚನ ಬರುತ ಕಂಡನು (ಕುಮಾರವ್ಯಾ.ದ್ರೋ. ೮-३); ಮುಂದೊರ್ವ ಖಳನುಯ್ವನೆಂದು ಚಿಂತಿಸಿ ಭಾನು ಸಂದನು ಪಡುಗಡಲೊಳಗೆ (ಮೋಹತ. ४-೬३). ೨. ಆತಂಕಪಡು; ಕಳವಳಿಸು; ವ್ಯಥೆಗೊಳ್ಳು: ಮಾವಂ ಚರಿತಾರ್ಥಂ ನೀನಣಂ ಚಿಂತಿಸದಿರು ನಮಗಿನ್ನುಂಟೆ ಶೋಕಾವಕಾಶಂ (ಆದಿಪು. ४-೮೯); ಅಂತವನಿಪನಿಕರಂ ಕೈಯಾಂತವನಿಪನಿಕರವೊಂದುಕೋಟಿಗೆ ಮಿಗಿಲೆಂಬಂತಾದೊಡಮೊಳ ಸೋಱದೆ ಚಿಂತಿಸದಾಂತಿಱುಗುಮಿಾಗುಮಿಱಿವಬೆಡಂಗಂ (ಗದಾಯು.೦-೦೫); ತಾ ಮುನ್ನ ಕರ್ಣನ ಶರಹತಿಯಲೇಕಳಿದುದಿಲ್ಲಾ ಎನುತ ಚಿಂತಿಸಿದ (ಕುಮಾರವ್ಯಾ.ಕ. ೦३-೮). ೩. ಮನನಮಾಡು; ಅರಯ್ಯು; ಬಗೆದು ನೋಡು: ಮಾಣದೆ ಚಿಂತಿಸದೋದುಂ ಪಲವಂ ಭಾವಿಸುತಿರ್ಪನ ತಪಮುಮೊಪ್ಪಲಾರ್ಕುಮೆ ಕಡೆಯೊಳ್ (ಧರ್ಮಾಮೃ. ೨-೮३). ೪. ಧ್ಯಾನಮಾಡು: ಚಿಂತಿಪುದು ಜಿನೇಶ್ವರನಂ ಸಂತತಮುತ್ಸವದೆ (ಸಮಪ. ೦-೦೦೦). [ಚಿಂತನ + – ಇಸು$_{3}$]

**ಚಿಂತೂರ್** (ನಾ). ಒಂದು ಊರಿನ ಹೆಸರು. 'ಚಿಂತೂರ್‌ಬೋಯ' ಪರಾ. [? + ಊರ್]

**ಚಿಂತೂರ್‌ಬೋಯ** (ನಾ). ಒಬ್ಬಾತನ ಹೆಸರು: ಚಿಂತೂರ್ ಬೋಯಸ್ಯ ಭಾರದ್ವಾಜಸಗೋತ್ರ (ಇಅ. VII, ೧೮೭-೨४; 668). [ಚಿಂತೂರ್ + ಬೋಯ]

**ಚಿಂತೆ** (ನಾ). ೧. ದುಃಖದಿಂದ ಕೂಡಿದ ಯೋಚನೆ; ದುಮ್ಮಾನ: "ಬೇವಸಮೆ ಚಿಂತೆ" (ಚತುನಿ. ३೦); "ಚಿಂತೆ ತಾನೆಯುಬ್ಬೆಗಮಕ್ಕುಂ" (ಕಬ್ಬಿಗ. ೭೧); ಚಿಂತೆಯಿದೇನೋ ಸಂತತಿಗೆ (ಪಂಪಭಾ. ೧-೧೧೮); ಪೇಟ್ ನಿನಗಿನಿತೊಂದು ಚಿತ್ತದ ನಿಮಿತ್ತದ ಚಿಂತೆ (ಪುಷ್ಪಪು. ೩-೬೦); ಚಿಂತೆ ಏತಕೋ ಬಯಲ ಭ್ರಾಂತಿ ಏತಕೋ (ಪುರಂದ. ೧-೬೮-೧); ಆ ಚಿಂತೆಯೇ ವ್ಯಾಧಿ (ರಕ್ಷಾಕ. ೬४). ೨. ಯೋಚನೆ; ಆಲೋಚನೆ: ಪರರ ಚಿಂತೆ ನಮಗೇಕಯ್ಯ ನಮ್ಮ ಚಿಂತೆ ನಮಗೆ ಸಾಲದೆ (ಬಸವ. ೫೧೮); ಮಚ್ಚಿತದೊಳುಣ್ಮಿ ಪೊಣ್ಮುವ ತನೂಭವ ಲಾಭದ ಚಿಂತೆ ಪೋ ಸುನಿರ್ಣೀತಮಿಂದೆಂದದೇಂ ನುಡಿದನೋ ಬಗೆಯಂ ನವಭಾವಕೋವಿದಂ (ಪುಷ್ಪಪು. ೩-೬३). ೩. ಧ್ಯಾನ: ಅವರು ಯಾವಾಗಲೂ ದೇವರ ಚಿಂತೆ ಯಲ್ಲಿಯೇ ಕಾಲಕಳೆಯುತ್ತಾರೆ (ರೂಢಿ). ೪. ಅಡ್ಡಿ; ಆಂತಕ: ಎಷ್ಟು ಕಠಿಣವಾದರೂ ಚಿಂತೆಯಿಲ್ಲ (ದ್ರಾವಿವಿ. ೬೩). ೫. [ಕಾವ್ಯಮಿ]ಸಂಚಾರೀ ಭಾವಗಳಲ್ಲಿ ಒಂದು; ಅನುಭೂತವಸ್ತುವನ್ನು ಎಡೆಬಿಡದೆ ಧ್ಯಾನಿ ಸುವುದು: ಮತಿ ನಿರ್ವೇದ . . . ಚಿಂತೋಗ್ರತೇರ್ಷ್ಯಾಧೃತಿ . . . ಇವಿಂತೆಯ್ದಿ ಸಂಚಾರಿಭಾವಂ (ಕಾವ್ಯಾವ. ೭೯೫); ಮತಿ ಲಜ್ಜೆ . . . ಚಿಂತೆ . . . ಅಪಸ್ಮಾರಗಳೆಂಬ ಮೂವತ್ತು ಮೂಱು ಸಂಚಾರೀಭಾವಂ ಗಳಿಂ ಪರಿವರ್ಧಿಸಿ (ವಿವೇಕ. ३३೭).೬. ಹತ್ತು ಕಾಮಾವಸ್ಥೆಗಳಲ್ಲಿ ಒಂದು: ಅಭಿಲಾಷೆ ಚಿಂತೆ . . . ಮರಣವೆಂಬ ದಶಾವಸ್ಥಾವಿಚಾರಪರರಿಂದು ಪಾಶ್ರಿತರಾಗಿ (ವಿವೇಕ. ३೩೦). [ಸಂ. ಚಿಂತಾ]

**ಚಿಂತೆಗೆಯ್** (ಕ್ರಿ). ೧. ತಲ್ಲಣಿಸು; ಉಮ್ಮಳಿಸು; ಕಳವಳಿಸು: ಇನ್ನಿದಕೆ ಚಿಂತೆಗೆಯ್ವೊಡೆ ಪನ್ನತಿಕೆಗೆ ಬನ್ನವಲ್ತೆ (ರಾಜಶೇ. ೦೩-೯೭). ೨. ಯೋಚನೆ ಮಾಡು: ಆಲೋಚಿಸು: ಒಂದು ದಿವಸಂ ಸುಕವಿಯಂತಪೂರ್ವಾರ್ಥ ಲಬ್ಧಿಗೆ ಚಿಂತೆಗೆಯ್ದು ತನ್ನೊಳಿಂತೆಂದು ಬಗೆದಂ (ಪಂಚತಂ. ३३-೧೦). [ಚಿಂತೆ + ಕೆಯ್$_{1}$]

**ಚಿಂತೆಗೊಳ್ಳು** (ಕ್ರಿ). ವ್ಯಥೆಪಡು ; ಕಳವಳಪಡು ; ಉಮ್ಮಳಿಸು : (ಓ).
[ ಚಿಂತೆ + ಕೊಳ್ಳು$_1$ (<ಕೊಳ್$_1$) ]

**ಚಿಂತೆದಾಳ್** (ಕ್ರಿ).=ಚಿಂತೆಗೊಳ್ಳು : ಪೇಳು ವೈಶಂಪಾಯ ಮುನಿರಾಯ ಧರ್ಮಸುತನಾಳೋಚನೆಯನೇಕೆ ಮಾಳ್ಪ ರೋಮಶನಂದು ಪೇಳಿದ ರಹಸ್ಯ ಮನ್ನಾರೊಡನೆಯುಸುರನರ್ಜುನ ಬಂದಮೇಲೆ ಚಿಂತೆದಾಳಬೇಡೆಂದು (ಲಕ್ಷ್ಮ.ಭಾ. ೩-೩೨-೩). [ ಚಿಂತೆ + ತಾಳ್$_1$ ]

**ಚಿಂತೆವಡು** (ಕ್ರಿ).=ಚಿಂತೆಗೊಳ್ಳು: ಇಂತು ಹನ್ನೆರಡು ಸಾವಿರ ಮೂಕೊಟಿ ಯರು ಮುಂತಾಗ ವಿಜಯಾಪುರಕೆ ಚಿಂತೆವಡುತಲ್ಯೆದಿ (ಕಂಸವಿ. ೧೩-೬೩).
[ ಚಿಂತೆ + ಪಡು$_1$ ]

**ಚಿಂತೆವಿಡಿ** (ಕ್ರಿ).=ಚಿಂತೆಗೊಳ್ಳು : ಮಕ್ಕಳ ಹರುಷಗಾಣದೆ ಚಿಂತೆವಿಡಿದರೆ ಹಲವು ವರ್ಷಗಳು (ಕುವ್ಯಾ.ಆ. ೭೮೪. ಪರಿ. ೩೧೨). [ ಚಿಂತೆ + ಪಿಡಿ$_1$ ]

**ಚಿಂತೆವೆಱು** (ಕ್ರಿ).=ಚಿಂತೆಗೊಳ್ಳು : ಇಂತಿರುತಿರಲ್ಕೆ ಕೌಂಡಿನ್ಯನೆಂಬೊರ್ವ ಮುನಿಪಂ ತನ್ನ ಮನೆಗೆ ಬರಲಾತನಂ ಸತ್ಕರಿಸಿ ಚಿಂತೆವೆತ್ತಿರಲವನಿದೇನೆಂದು ಬೆಸಗೊಂಡೊಡೆ (ಜ್ಞಮಿಭಾ. ೧೦-೨೫). [ ಚಿಂತೆ + ಪೆಱು$_1$ ]

**ಚಿಂತ್ಯ** (ಗು). ೧. ಯೋಚಿಸತಕ್ಕ ; ಪರಿಶೀಲಿಸಲು ಯೋಗ್ಯವಾದ ; ಆಲೋಚಿಸತಕ್ಕ : "ಚಿಂತ್ಯ(ತರ್ಕ್ಯ)" (Conceivable. ಪಾರಿಸಿ. ೧೯) ೨. ಯೋಚಿಸಲು ಸಾಧ್ಯವಾದ. 'ಅಚಿಂತ್ಯ' ಪರಾ. [ಸಂ.]

**ಚಿಂತ್ಯಾಗಮ** (ನಾ). ಆಗಮಗಳಲ್ಲಿ ಒಂದು ಬಗೆ : ಮತ್ತಮಾ ಸಿದ್ಧಾಂತ ಭೇದಂಗಳಾವಾವವೆಂದೊಡೆ ಕಾಮಿಕಾಗಮ ಯೋಗಜಾಗಮ ಚಿಂತ್ಯಾಗಮ . . . ಇಪ್ಪತ್ತೆಂಟು ದಿವ್ಯಾಗಮಗಳಕ್ಕುಂ (ವಿವೇಕ. ೬೮). [ಸಂ.]

**ಚಿಂದ** (ನಾ). ನಪುಂಸಕ ; ಖೊಜ್ಜ : ಅದಱೊಳ್ ಪುಟ್ಟಿದ ಗಂಡರೆಲ್ಲ ಮತಿವೀರರ್ ಪೆಂಡಿರೆಲ್ಲಂ ವಿಲಾಸದ ಸೌಭಾಗ್ಯದ ಸೀಮೆಗಳ್ . . . ಮೂಕರುಂ ಚದುರರ್ ಚಿಂದೆ[ಪಾಠಾಂ. ಲೆಂಕ]ರುಮಾಯಕಾಱರಥಮ ವ್ಯಾಪಾರಿಗಳ್ ಧಾರ್ಮಿಕರ್ (ಕಾವ್ಯಸಾ. ೧೯೮) ; (ಅನಂಪು. ೧೧ ೧೨ ನೋ).
[ <ಪ್ರಾ. ಚಿಂಧ ]

**ಚಿಂದಗಾವುಂಡ** (ನಾ). ಒಬ್ಬಾತನ ಹೆಸರು : ಚಿನ್ದಗಾವುಣ್ಡರ ಮಗ ನಾಡ ಗಾವುಣ್ಡ ಗಾವುಣ್ಡಗೆಯ್ವನ್ದು (ಎಕ. X, ಮಾಲೂರು. ೯೪-೮ : ಸು. 950).
[ ಚಿಂದ$_0$ + ಗಾವುಂಡ(<ಗಾಮುಂಡ) ]

**ಚಿಂದರಿ** (ನಾ).=ಚಿಂದಿ ೨ : ಉಟ್ಟ ಮಲ್ಲಗಂಟಿನ ತೊಡರ್ಚಿದುಡೆಗಂಟೆಯ ಕಿರ್ಗಟ್ಟಿನ ಸುರಗಿಯ ಕಟ್ಟಿದ ಚಿಂದರಿಯ [ಪಾಠಾಂ. ಚಿಂದಿಯ] ತೊಟ್ಟ ಕಂಚುಳಿಕೆಯ ಹಿಡಿದ ಬಿಲ್ಲ ಬಲಗೈಯ ಸರಳ ಬೆನ್ನ ಬತ್ತಳಿಕೆಯ . . . ಸಿಂಗರಂಬೆರಸಿ (ಗಿರಿಕ. ೬-೫೫ ವ).
[ ?. / ತೆಲು. ಚಿಂದರ, ಚಿಂದಱ. / ಮರಾ. ಚಿಂದರ್, ಚಿಂದರೀ ]

**ಚಿಂದರುಬಾವಲಿ** (ನಾ). ಒಂದು ಬಗೆಯ ಕರ್ಣಾಭರಣ : ಕೆಂದೆತ್ತು ಕೈಯಾಗ ಕೆಂಪಂಗಿ ಮೈಯಾಗ ಚಿಂದರುಬಾವಲಿ ಕಿವಿಯಾಗ ಇಟ್ಕೊಂಡು ತಂಗಿಯರ ಕರೆಯ ಬರುತಿದ್ದ (ಹಳ್ಳಿಬಾ. ೬೨) ; ಚಿಂದರುಬಾವಲಿ ಕಿವಿಯಲ್ಲಿ ಇಕ್ಕೊಂಡು ಅಣ್ಣಾ ಬಂದಾ ತಂಗೀ ಕರೆಯೋಕೆ (ಜಗೀತ. ೨೯).
[ <ಚಂದ್ರಬಾವುಲಿ ]

**ಚಿಂದಾಟಿ** (ನಾ). ಚಿಂದಿಚಿಂದಿಯಾದುದು ; ಹರಕಲು ಬಟ್ಟೆ : ಎರಡನೆಯ ಖಲೀಫನಾದ ಉಮರನು ಭರತಖಂಡದ ನೂಲಿನ ಬಟ್ಟೆಯ ನಿಲುವಂಗಿ ಯನ್ನು ತೊಟ್ಟಿದ್ದನೆಂತಲೂ ಅದಕ್ಕೆ ೧೨ ತೂತುಗಳು ಬಿದ್ದು ಅದು ಹರಿದು ಚಿಂದಾಟಿಯಾಗಿದ್ದಿತೆಂತಲೂ ಉಲ್ಲೇಖವಿದೆ (ಖಾದಿಶಾ. ೨೦).
[ ←ಮರಾ ಚಿಂಧೋಟೀ ]

**ಚಿಂದಿ** (ನಾ). ೧. ಹರಕು ಬಟ್ಟೆ ; ತುಂಡು ಬಟ್ಟೆ : ಒಂದು ಪಟ್ಟಾವಳಿಯ ಚಿಂದಿಯೊಳೊಂದೆಸೆಯೊಳೀಶ್ವರನೊಡನೆ ಬಲುಹೊಂದಿ ಸಂಧಿಸಿ (ಬಸವು. ೨೭-೧೩) ; ಪೀತಾಂಬರಗಳ ಹೊದೆಯುವರಲ್ಲಿ, ಕೌಪೀನಕೆ ಚಿಂದಿಯು ಸಿಗದಿಲ್ಲಿ (ಪಾಂಚಜ. ೬೭-೩೦). ೨. ತಲೆಗೆ ಕಟ್ಟಿಕೊಳ್ಳುವ ಚಿಕ್ಕ ವಸ್ತ್ರ: ತೋರದ ದೇಹ ಕುಂಡಲವೆದೆ ನರೆಗಡ್ಡ ಸೇರಿದ ಚಿಂದಿ ಕುಲ್ಲಾಯಿ (ಭರಜ. ೦೩-೯) ; ವೈಯಾರದ ಬಿರುದಿನ ಚಿಂದಿಗಳ ಚೆಲ್ವರಾಯ ರಾವುತರ್ಕೈದಿದರು (ಕಂಸವಿ. ೨೩-೮೫) ; ವಾರೆದುರುಬಿನ ಚಿಂದಿ ವಾರಣದ ಶಿಖಿಯಲ್ಲಿ (ಕೊಟ್ಟೂಬ. ೧೫-೫೦) ; ಇಟ್ಟ ಮುತ್ತಿನ ಚೌಕಳಿ ಚಿಂದಿ ಹರೆನಾವು ತೊಟ್ಟ ಭೂಷಣ ರತ್ನಾಭರಣ (ಸೌಂದಕಾ. ೯-೬೫) ; ಚಿಂದಿಯೊಳಪೊಕ್ಕು ಬ್ರಹ್ಮಸ್ಥಾನ ಗೊರೆದು(ಜನಮು. ೨೭-೧೧). ೩. ಸೊಂಟಪಟ್ಟಿ ; ನಡುಕಟ್ಟು : ಕಟ್ಟಿದ ಚಿಂದಿಯುಂ ಸುರಿಗೆಯುಂ ಪೆಗಲೇಱಿದ ಮಕ್ಕಳುಂ (ಸೂಕ್ತಿಸು. ೧೮-೩೩).
**ಚಿಂದಿಉಡಾಯಿಸು** = ಸ್ವಲ್ಪವೂ ಉಳಿಯದಂತೆ ಕೊಳ್ಳೆಹೊಡೆ, ಲಪಟಾಯಿಸು : ಅಂತೂ ಇಂಥ ಅತಿರಥ ಮಹಾರಥರ ಸಂಘಟನೆಯಲ್ಲಿ ಕಳವು ಮಾಲು ಚಿಂದಿ ಉಡಾಯಿಸಿ ಹೋಗುವುದರಲ್ಲಿ ಸಂದೇಹವಿಲ್ಲ (ಕಲಸಿ. ೧೦೮). **ಚಿಂದಿಯಾಗು** = ಚೂರು ಚೂರಾಗು : ಉಟ್ಟಿದ್ದ ಧೋತ್ರ, ತೊಟ್ಟಿದ್ದ ವಸ್ತ್ರಗಳು ಮುಳ್ಳುಪೊದೆಗಳಿಗೆ ಸಿಕ್ಕಿ ಹರಿದು ಚಿಂದಿಯಾಗಿವೆ (ಶಾಂತಲಾ. ೩೩೭). [ ?. / ಹಿಂ. ಚಿಂದೀ ; ಮರಾ. ಚಿಂಧೀ. / ಪ್ರಾ. ಛಿಂದಾವಿಯ=ಹರಿದ ; ಕತ್ತರಿಸಿದ ]

**ಚಿಂದಿಬಟ್ಟೆ** (ನಾ). ತುಂಡುಬಟ್ಟೆ : ಮೊದಲಿದ್ದ ಚಿಂದಿಬಟ್ಟೆಯೂ ಈಗ ಮಾಯವಾಗಿದ್ದಿತು (ಬಾಡಆ. ೦೧೯). [ ಚಿಂದಿ$_1$ + ಬಟ್ಟೆ$_2$ ]

**ಚಿಂದು** (ನಾ). ೧. [ನಾಟ್ಯ] ನೃತ್ಯದಲ್ಲಿ ಒಂದು ಬಗೆ ; ಅಭಿನಯದಲ್ಲಿ ಒಂದು ರೀತಿ : ಮಾತಂಗಿ ಶಬರಿ ಯೋಗಿಣಿ ಮುಂತಾದ ಆಟಮನಾಡಿ ನಾನಾದೇಶ ವೇಷ ಭಾಷೆಗಳನಳವಡಿಸಿ ಚಿಂದು ಜಕ್ಕಡಿ . . . ಮೊದಲಾದ ಆಟಗಳಿಂ (ವಿರೂಪಾ. ೯೦) ; ಕೋಲಚಾರಿಯ ಕೊಳ ವನ ಚಿಂದು ಮೊದಲಾದ ಲೀಲೆಯನೆಲ್ಲವ ತೋಱಿ (ಭರಜ. ೧೨-೯೩) ; ಚಿಂದು ಚಕ್ಕಡಿ ಕೋಲಚಾರಿಗಳ್ (ಚಿಬಸು. ೨-೨೯). ೨. [ಸಂಗೀತ] ಸಂಗೀತದ ಸ್ಥಾಯಿ ಗಳಲ್ಲಿ ಒಂದು ಬಗೆ : ಜಕ್ಕಡಿ ಚಿಂದು ಮೊದಲಾದ ಠಾಯವು . . . ಮೆಱೆಯೆ (ರೇವಣ. ೩೦-೩೮) ; ಗೀತಕ್ರಮದಿ ಸಂಕೀರ್ಣವೆತ್ತು ರತಿ ಜೊಡಣೆಗೆ ಚಿಂದು ಜಕ್ಕಡಿ ಗೀತ ಕಂಪನವ ಸೂಡೆ ಸರಸಾಲಾಪದಿ (ಲಿಂಗಪು. ೨೭-೦೭). [ ದೇ.॥ ತಮಿ. ಚಿನ್ದು ; ತೆಲು. ಚಿಂದು ]

**ಚಿಂಪಯ್ಯ** (ನಾ). ಒಬ್ಬಾತನ ಹೆಸರು . ಕೊವರಪೆಯ ಚಿಂಪಯ್ಯನುಂ ಲೋಕಯ್ಯನುಂ ಕೊಟ್ಟಾರದ ಮಾರ ಪುಲಿಯುಂ (ಎಕ. XII, ಶಿರಾ. ೨೮-೫೦ ; 943). [ ? + ಅಯ್ಯ$_1$ ]

**ಚಿಂಪಾಂಜಿ** (ನಾ). (ಮನುಷ್ಯನನ್ನು ಹೋಲುವ) ಒಂದು ವಾನರ ಜಾತಿ : ಮಂಗನ ಮರಿಗೆ ಇನ್ನೂ ಹೆಚ್ಚು ಕಾಲ ಶಿಕ್ಷಣ ಅಗತ್ಯ. ಚಿಂಪಾಂಜಿ ಎಂಬ ಮಾನವ ಮಂಗದ ಮರಿಗಳು ಇನ್ನೂ ಹೆಚ್ಚುಕಾಲ ತೆಗೆದುಕೊಳ್ಳುತ್ತವೆ (ಶಿಕ್ಷದ. ೮೬). [ ←ಇಂ. Chimpanzee ]

**ಚಿಂಪಿ** 'ಸಿಪ್ಪು' ನೋ.

**ಚಿಂಪಿಗ** 'ಸಿಪ್ಪಿಗ' ನೋ.

**ಚಿಂಪೆ** 'ಸಿಪ್ಪು' ನೋ.

**ಚೀಃ** (ನಾ). ಜುಗುಪ್ಸೆ, ತಿರಸ್ಕಾರ ಮುಂತಾದುವುಗಳನ್ನು ಸೂಚಿಸುವ ಒಂದು ಅನುಕರಣ ಶಬ್ದ ; ಧಿಕ್ಕರಿಸುವ ಶಬ್ದ : ಆ ಸುದತಿಯ ರೂಪಿನಿಂ ಪೆಱತನೆಂದೊಡೆ ಚೀಃ ಕರಮೊಗ್ಗನಾಗೆನೇ (ಆದಿಪು. ೨-೭೪) ; ಚೀಃ ಜಪವೆಣಿಸುವ ನೆವದಿಂದಂ ನೃಪ ತದ್ಗುಣಗಣಮನೀಗಳೆಣಿಸುತ್ತಿರ್ಪಂ (ಕಾದಂಪೂ. ೯೫೬) : ಸಾರಮಸಾರಮಿದೆಂದು ವಿಚಾರಿಸಿ ಕೈಕೊಂಡು ಕಿಡಿಸ ಲಾರ್ಪುದೆ ಚೀಃ ನಿಷ್ಕಾರಣಂ (ಧರ್ಮಾಮೃ. ೩-೨೭೦).

**ಚೀಃಗೈ** (ಕ್ರಿ). ತಿರಸ್ಕರಿಸು; ಧಿಕ್ಕರಿಸು: ಮನಮೇಕೊ ಕಳವಳಂಗೊಳುತಿರ್ಪ ದಾಶೆಯಂ ಚೀಗೈದು (ಶ್ರೀರಾಮಾ. ೮೨೨-೨೯೩).
[ ಚೀಃ + ಗೈ (<ಕೆಯ್$_1$) ]

**ಚಿಕಟಾಯಿಸು**, ಚಿಗಟಾಯಿಸು (ಕ್ರಿ). ಅಂಟಿಸು; ಲಗತ್ತಿಸು: ನೋಟೀಸಿನ ನಕಲಿನ ಮೇಲೆ ಷರಾ ಬರೆದು ಬಾಕಿದಾರನು ವಾಸಮಾಡುವ ವಾಸಸ್ಥಾನದಲ್ಲಿಯಾಗಲಿ ಜಪ್ತಿ ಸೊತ್ತುಗಳನ್ನು ಇಟ್ಟಿರುವ ಸ್ಥಳದಲ್ಲಿಯಾಗಲಿ ಚಿಕಟಾಯಿಸತಕ್ಕದ್ದು (ಗ್ರಾಮಾಕ. ೭೩). **ಚಿಗಟಾಯಿಸು :** ನಕಲನ್ನು ಆತನ ವಾಸದ ಮನೆಗೆ ಚಿಗಟಾಯಿಸಿ ಅಸಲಿಗೆ ಹಾಜರಿದ್ದವರ ರುಜು ಪಡೆಯಲಾಯಿತು (ಪಂಜಪಂ. ೪೭).
[ ಚಿಕಟ್$_0$ (ಠ ←ಮರಾ. ಚಿಕಟಣೇ) + – ಇಸು$_3$. ]

**ಚಿಕಣ** (ನಾ). (ಕರಾ). ಒಂದು ಬಗೆಯ ವಿಮಾನು. [ ? ]

**ಚಿಕಣಿ** (ಗು). ೧. ಗಟ್ಟಿಯಾದ: (ಕ). ೨. ಸಾರವತ್ತಾದ: (ಕ). ೩. ದಪ್ಪನಾದ : (ಕ). ೪. ಜಿಡ್ಡಿನ : (ಕ). [ ?./ಸಂ. ಚಿಕ್ಕಣ./ಹಿಂ. ಚಿಕನಾ ]

**ಚಿಕಣ್ಣ** (ನಾ). ಒಬ್ಬಾತನ ಹೆಸರು : ಮೂವತ್ತಊವರುವುವರಸುಂ ಚಿಕ(೦)ಣ್ಣಜಿಗ್ಗಿ ಪದಿ × × × ಗೊಟ್ಟರ್ (ಸೌಇಇ. XI-i, ೧೦–೩೦ : 864).
[ < ಚಿಕ್ಕ$_1$ + ಅಣ್ಣ$_1$ ]

**ಚಿಕಪ** 'ಚಿಕ್ಕಪ್ಪ' ನೋ.

**ಚಿಕರ** 'ಸಿಕರ' ನೋ.

**ಚಿಕರಿ** (ನಾ). ಬೆಟ್ಟ : ಶತ್ವಕ್ಕೆ ಚತ್ವಂ—ನಿಶ್ಚಲ—ನಿಚ್ಚಲ . . . ಶಿಖರಿ—ಚಿಕರಿ (ಶಮದ. ೨೬೩ ಪ್ರಯೋ). [ < ಸಂ. ಶಿಖರಿನ್ ]

**ಚಿಕಸಂಭು** (ನಾ). ಒಬ್ಬಾತನ ಹೆಸರು : ಕುರುವರನ ಮಗ ಚಿಕಸಂಭುವ ನಯ್ದ ನೀಱ ಎಡೆನಾ(ಣ್ಡ)ಟ್ಟತ್ತು ಆಳುತ್ತಿರೆ (ಎಕ. VIII, ಸೊರಬ. ೫೭೦–೬ : 951). [ <ಚಿಕ್ಕ$_1$ + ಸಂಭು$_0$(<ಸಂಬು) ]

**ಚಿಕಿಚ್ಚೆ** (ನಾ).=ಚಿಕಿತ್ಸೆ : ದ್ವಿತ್ವದ ಥತ್ವಕ್ಕೆ ದಡ್ಡಕ್ಕರದ ಚಕಾರಂ—ಇಚ್ಛೆ—ಇಚ್ಚೆ ; ಮಚ್ಛರ – ಮಚ್ಚರ ; ಚಿಕಿಚ್ಛೆ – ಚಿಕಿಚ್ಚೆ (ಶಮದ. ೬. ೨೫೭ ಪ್ರಯೋ). [<ಸಂ. ಚಿಕಿತ್ಸಾ ]

**ಚಿಕಿತ್ಸಕ** (ನಾ). ೧. ಚಿಕಿತ್ಸೆ ಮಾಡುವವನು; ವೈದ್ಯ: "ಆಯುರ್ವೇದೀ, ಭಿಷಕ್, ವೈದ್ಯಃ, ದೋಷಜ್ಞಃ, ಚಿಕಿತ್ಸಕಃ – ಈ ೫ ವೈದ್ಯಂ" (ಹಲಾಯು. ೧೦೦–೪೫೮) : ಮನಶ್ಶಾಸ್ತ್ರವೇತ್ತರೂ, ಚಿಕಿತ್ಸಕರೂ ಆದ ಅವರ ಕಣ್ಣುಗಳಲ್ಲಿ ನೀರು ಕಟ್ಟಿತ್ತು (ಹೊಸಕ್ಷಿ. ೧). ೨. (ಅಲಂ) ಆಳವಾಗಿ ಪರಿಶೀಲಿಸುವವನು,–ವಿಮರ್ಶಿಸುವವನು : ಚಿಕಿತ್ಸಕ ಓದುಗರು ಸಂಶಯ ತಳೆದಾರೆಂದೆನಿಸುವುದು (ಸುತ್ತುಮು. ೧). [ ಸಂ. ]

**ಚಿಕಿತ್ಸಕಬುದ್ಧಿ** (ನಾ). ವಿಮರ್ಶಕ ಬುದ್ಧಿ; ಪರೀಕ್ಷಕ ಬುದ್ಧಿ : ರಂಗನಲ್ಲಿ ಸಾಕಷ್ಟು ಚಿಕಿತ್ಸಕ ಬುದ್ಧಿಯೂ ಇತ್ತು (ರಂಗರೋ. ೩೪). [ಚಿಕಿತ್ಸಕ+ಬುದ್ಧಿ]

**ಚಿಕಿತ್ಸಾಂಗ** (ನಾ). ಚಿಕಿತ್ಸೆಗೆ ಸಂಬಂಧಪಟ್ಟುದು : ವೈದ್ಯ, ಔಷಧ, ರೋಗಸ್ಥ, ಪರಿಚಾರಕ ಈ ನಾಲ್ಕೂ ಚಿಕಿತ್ಸಾಂಗವೆನಿಸಿಕೊಂಬುವುವು (ಸಕವ್ಯ. ೨೩). [ಸಂ. (ಚಿಕಿತ್ಸಾ + ಅಂಗ) ]

**ಚಿಕಿತ್ಸಾಕ್ರಮ** (ನಾ). ವೈದ್ಯೋಪಚಾರದಲ್ಲಿ ಅನುಸರಿಸುವ ರೀತಿ : ರೋಗವಿಧಾನದಲ್ಲಿಯಾಗಲಿ ಚಿಕಿತ್ಸಾಕ್ರಮದಲ್ಲಿಯಾಗಲಿ ಇರುವ ಭಿನ್ನಾಭಿಪ್ರಾಯಗಳನ್ನು . . . ಬರೆದು ಸೂಚಿಸಿದ್ದಾನೆ (ಸಕವ್ಯ. IX, ಪ್ರಸ್ತಾವನೆ).
[ಸಂ. (ಚಿಕಿತ್ಸಾ + ಕ್ರಮ) ]

**ಚಿಕಿತ್ಸಾಲಯ** (ನಾ). ರೋಗಿಗೆ ಪರೀಕ್ಷೆ ಮತ್ತು ಉಪಚಾರ ಮಾಡುವ ಸ್ಥಳ; ಆಸ್ಪತ್ರೆ: ಚಿಕಿತ್ಸಾಲಯದಲ್ಲಿ ಮೇರಿ ಗುಟ್ಟಾಗಿ ಡಾಕ್ಟರರಿಂದ ದೇಹಪರೀಕ್ಷೆ ಮಾಡಿಸಿದಳು (ಕಾವೇರಿ. ೧೭೫): ರಾತ್ರಿಯಾಗಿ ಚಿಕಿತ್ಸಾಲಯದ ಪಟಾಂಗಣದಲ್ಲಿ ಎರಡು ಗಂಟೆ ಬಾರಿಸಿತು (ಹೇಮಂತ. ೫೦೫).
[ ಸಂ. (ಚಿಕಿತ್ಸಾ + ಆಲಯ) ]

**ಚಿಕಿತ್ಸಿತ** (ಗು). ರೋಗದ ಪರೀಕ್ಷೆ ಮತ್ತು ಔಷಧೋಪಚಾರಗಳಿಂದ ಕೂಡಿದ : ಚಿಕಿತ್ಸಿತಾಗೂಢಪ್ರೌಢಮಪ್ಪ ಗದಾಂಗಮುಮಂ . . . ತ್ರಿದಶವರ್ಗಕ್ಕುಪದೇಶಂಗೆಯ್ಯುತ್ತಿಪ್ಪಂ (ಶಾಂತಿಪು. ೧೦–೯೦ ವ). [ ಸಂ. ]

**ಚಿಕಿತ್ಸೆ** (ನಾ). ರೋಗವನ್ನು ಗುಣಪಡಿಸುವ ಕಾರ್ಯ; ರೋಗ ನಿವಾರಣೋಪಾಯ; ವೈದ್ಯೋಪಚಾರ: "ಉಪಚರ್ಯಾ, ಚಿಕಿತ್ಸಾ – ಈ ೨ ವೈದ್ಯಂ ಮಾಡುಹ" (ಹಲಾಯು. ೧೦೦–೪೫೪) : ಉದಾರವಹ್ನಿಯ ವಿವಿಧ ಪೀಡಾಕಾರಕುಂಟೆ ಚಿಕಿತ್ಸೆಯೆಂದನು ಮುನಿ ನೃಪಾಲಂಗೆ (ಕುವ್ಯಾಅ. ೧೬–೧೩) : ಚಿಕಿತ್ಸೆಯ ಮಾಡುವ ವೈದ್ಯನಿಗೆ . . . ಚಿಕಿತ್ಸಾವಿಷಯವು ನಿಷ್ಫಲವಲ್ಲವೆಂದು ಪೂರ್ವಾಚಾರ್ಯರು ಹೇಳುವರು (ಸಕವ್ಯ. ೧೩) : ಆಂಗ್ಲೇಯ ವೈದ್ಯರು ಕೂಡ ಚಿಕಿತ್ಸೆ ನಡೆಸಿದರು (ಪ್ರತಾಪ. ೧೭).
[ ಸಂ. ಚಿಕಿತ್ಸಾ ]

**ಚಿಕೀರ್ಷೆ** (ನಾ). ೧. ಕೆಲಸ ಮಾಡುವ ಬಯಕೆ : ನಿಯಮದಿಂ ಶುಭರೂಪವಿಗುರ್ವಣೇಚ್ಛೆಯಿಂ ಅಶುಭಾಕಾರಂಗಳಂ ದುಃಖಪ್ರತೀಕಾರ ಚಿಕೀರ್ಷೆಯಿಂ ಅತಿದುಸ್ಸಹ ದುಃಖ ಹೇತುಗಳನೆ ವಿಗುರ್ವಿಸುವರ್ (ತತ್ತ್ವಪ್ರ. ೧೨೨) : ನೆಟ್ಟನಾ ಜ್ಞಾನವಸ್ತುವಿನೊಳು ಚಿಕೀರ್ಷೆ ನೆಱೆಹುಟ್ಟದಾಗಿಯು (ವೀಶ್ಮಪು. ೫–೧೨–೨೭) : ಚಿಕೀರ್ಷೆಯಾವೇಗದ ವಹ್ನಿಫಣಿ ಲೇಲಿಹ್ಯಮಾನ ಜಹ್ವೆಗಳಂತೆ (ಶ್ರೀರಾಮಾ. ೧೩–೩೩೦). ೨. ಉದ್ದೇಶ ; ಮನೋರಥ : ಅನಂತನು ಪದುಮನಾಭಪ್ರಿಯ ಚಿಕೀರ್ಷೆಯಲುದಿಸಿದಪನು (ನಿಘಾಗ. ೧೦–೧–೩೫). [ ಸಂ. ಚಿಕೀರ್ಷಾ ]

**ಚಿಕುರ** (ಗು). ೧. ಯಾವುದಕ್ಕೂ ಹಿಂದೆಗೆಯದೆ ಇನ್ನೊಬ್ಬರಿಗೆ ತೊಂದರೆಯನ್ನುಂಟುಮಾಡುವ. ೨. ಹಿಂದೆ ಮುಂದೆ ಆಲೋಚಿಸದೆ ಕೆಲಸ ಮಾಡುವ ; ದುಡುಕಿನ ಸ್ವಭಾವದ. ೩. ಚಂಚಲವಾದ; ಅಸ್ಥಿರವಾದ. (ನಾ). ೪. ತಲೆಯ ಕೂದಲು : "ಕೇಶಃ, ಶಿರಸಿಜಃ . . . ಚಿಕುರಃ, ಶಿರೋರುಹಃ, ವಾಳಃ – ಈ ೭ ತಲೆಯ ನವಿರ್" (ಹಲಾಯು. ೮೭–೩೭೬) ; ಚಿಕುರ ಚಾರು ಮೃದುಕುಂತಳ ಕಳಾಪಮಳಿಕೇಶಂ (ಗದಾಯು. ೮–೫೭) ; ಮಧುಪವ್ಯೂಹನಿಭಕುಟಿಳಚಿಕುರಮನೋಹರೆ ಮನಸಿಜನ ಕಣೆಗೆ ದೊಣೆಯೆನೆ ನೆಗಟ್ದಳ್ (ಸುಕುಮಾ. ೧–೭೯) : ಕಮಲವನದೊಳೆಱಗಿದ ಪರಮೆದುಱುಗಳೆಂಬಂತಲ್ಲಿ ಚಿಕುರನಿಕರಮೆಸೆಯೆ (ರಾಜಶೇ. ೧–೧೩೫ ವ) : ಚೆಲ್ಲಿದಾ ಚಿಕುರರಾಶಿಯೆ ಕತ್ತಲೆಯ ಮೊತ್ತಮೆಂಬಂತೆವೋಲ್ (ಶ್ರೀರಾಮಾ. ೬೭–೩೭೦). [ ಸಂ. ]

**ಚಿಕೆಯ** (ನಾ). ಒಬ್ಬಾತನ ಹೆಸರು : ಶ್ರೀ ಕನ್ನರದೇವಂ ಪೃಥಿವೀ ರಾಜ್ಯಂಗೆಯೆ ಚಿಕೆಯನ್ನಾಡನಾಳೆ (ಎಕ. VIII, ಸೊರಬ. ೭೦–೨ : 938).
[ <ಚಿಕ್ಕಯ್ಯ ]

**ಚಿಕೋರಿ** (ನಾ). ಒಂದುಬಗೆಯ ಗಿಡ; ಠ ಇದರ ಬೇರಿನ ಪುಡಿಯನ್ನು ಕಾಫಿಪುಡಿಗೆ ಬೆರೆಸುತ್ತಾರೆ : (ಬೇರಿಗಾಗಿ ಬೆಳಸುವ, ನೀಲಿಹೂವು ಬಿಡುವ) ಒಂದು ಜಾತಿಯ ಗಿಡ; ಇದರ ಬೇರಿನ ಪುಡಿ : 'ಚಿಕೋರಿ' (Chicory. ಇಂಕನಿ) ; ತನ್ನ ಮುಂದಿದ್ದ ವ್ಯವಹಾರದ ಬಗ್ಗೆ ಚಿಂತಿಸುತ್ತ . . . ಚಿಕೋರಿ ದಟ್ಟವಾಗಿ ಬೆಳೆದಿದ್ದ ಟೆನಿಸ್‌ಮೈದಾನದಲ್ಲಿ . . . ಅಡ್ಡಾಡಿದನು (ಪುನರು. ೨೭೫). [ ← ಇಂ. Chicory ]

**ಚಿಕ್ಕ$_1$** (ನಾ). ೧. ಎಳೆಯತನ; ಎಳೆಯ ವಯಸ್ಸು : ಮಕ್ಕಳ ಮದುವೆಯ ಚಿಕ್ಕಲ್ಲಿ ಮಾಡಿದಡೆ . . . ಇಷ್ಟವ ಮಱೆಯಬೇಕು (ಪ್ರೋಲಿಮಾ. ೮೦–೩೦೯). ೨. ಒಬ್ಬಾತನ ಹೆಸರು : ಆತನ ಮಗ ಚಿಕ್ಕಕಲ್ಲ ನಿಱಿಸಿದೊ (ಎಕ. VIII, ಸೊರಬ. ೨೦೨–೬; 955). (ಗು). ೩. ಸಣ್ಣ ; ಕಿರಿಯ : ಮದದಾನೆಯುಮಂ ಮಾಣಿಕಮುಮನೊತ್ತೆವಿಡಿಸಲಟ್ಟುವ ಚಿಕ್ಕ ಪೋರ್ಕುಳಿ ಬೋಜಂಗರುಮಂ . . . ಮೆಱೆದು (ಪಂಪಭಾ. ೪–೮೭ ವ); ದೇವಾ ನೀನೆನಗೆ ಚಿಕ್ಕ ತಮ್ಮ (ಬಸವ. ೯೦೪) : ಕೈಯಲ್ಲಿ ಚಿಕ್ಕ ಕೊಡಲಿ (ಆರ್ಯಕ. ೧೧). ೪. ಕೀಳಾದ ; ಕ್ಷುಲ್ಲಕವಾದ. 'ಚಿಕ್ಕನುಡಿ' ಪರಾ.
**ಚಿಕ್ಕಚಿಕ್ಕ** (ದ್ವಿರುಕ್ತಿ): ಪಾದಾಃ, ಪ್ರತ್ಯಂತ ಪರ್ವತಾಃ– ೨ ದೊಡ್ಡ ಬೆಟ್ಟಗಳ ಬಳಿಯಲ್ಲಿ ಸುತ್ತುಮುತ್ತಲೂ ಸಮೀಪವಾಗಿರುವ ಚಿಕ್ಕಚಿಕ್ಕ

ಕಲ್ಲು ಗುಡ್ಡೆಗಳು (ಸಿದ್ಧಾಂತಿ. ೯೩). **ಚಿಕ್ಕದು** = ಸಣ್ಣದಂ : ಚೇಳ್ ಚಿಕ್ಕದೆಂದಳ್ಕಟಿಂ ತೆಗೆಯಲ್ ಕಚ್ಚದೆ (ಸೋಮೇಶ. ೪೦) ; ಅಕ್ಕ ನಿನ್ನ ಮಾತ ಕೇಳಿ ಚಿಕ್ಕದೊಂದು ಗಿಳಿಯ ಸಾಕಿದೆ (ಪುರಂದ. ೧-೦೦೨-೧). **ಚಿಕ್ಕವ, ಚಿಕ್ಕವನು** = ಸಣ್ಣ ವಯಸ್ಸಿನವನು ; ಸಣ್ಣವನು : ಚಿಕ್ಕವನಂ ಬೇಂಟೆಗೆ ಬಲಿಯಿಕ್ಕುವನೋ (ದಶಕು. ૩-೧೩೮) ; ಧುರವ ಹೊಗತಕ್ಕವನೆ ಚಿಕ್ಕವ ನಿಟಿಯಲಾಪನೆ (ಕುಮಾರವ್ಯಾ. ૩-೧೭) ; ಚಿಕ್ಕವನೇ ಇವನು ನಮ್ಮ ಕೈಗೆ ಸಿಕ್ಕದೆ ಓಡುವನು (ಪುರಂದ. ೧-೬೦ ಪಲ್ಲವಿ). **ಚಿಕ್ಕವಳು, ಚಿಕ್ಕಳು** = ಸಣ್ಣ ವಯಸ್ಸಿನವಳು ; ಸಣ್ಣವಳು : ಚಿಕ್ಕವಳಿದ್ದಾಗಲೇ ಆಕೆ ಅನಾಥಳಾದಳು (ರೂಢಿ); ಚಿಕ್ಕಳ ನುಡಿಗೇಳು ಮತ್ತುಂಬವೆಂದಳು ತಕ್ಕಳೊರ್ವಳಿಗೊರ್ವಳಲ್ಲಿ (ಭರತ. ೪-೩೦); **ಚಿಕ್ಕವು** (ಬಹುವ): ಮಕ್ಕಳು ತುಂಬಾ ಚಿಕ್ಕವು (ರೂಢಿ). **ಚಿಕ್ಕಾತ** = ಚಿಕ್ಕವ: ಚಿಕ್ಕಾತನಾದೊಡಂ ಬುದ್ಧಿವಂತನಲ್ಲಿ ಕಾರ್ಯಮಂ ಕೇಳ್ವುದು (ಪಂಚತಂ. ೧೦೦-೪). [ ದೇ.॥ ತಮಿ. ತುಳು. ಚಿಕ್ಕ; ತೆಲು. ಚಿಕಿ./ ಪ್ರಾ. ಚಿಕ್ಕ = ಅಲ್ಪವಾದ, ಸ್ವಲ್ಪ ]

**ಚಿಕ್ಕ₂** 'ಸಿಕ್ಕ₁' ನೋ.

**ಚಿಕ್ಕ₃** (ಗು). ಚಪ್ಪಟೆಯಾದ ಮೂಗುಳ್ಳ. [ ಸಂ. ]

**ಚಿಕ್ಕಎಲಚಿ** (ನಾ). ಎಲಚಿಯಲ್ಲಿ ಒಂದು ಬಗೆ ; ಸಣ್ಣ ಎಲಚಿ ಗಿಡ : "ನಿಷ್ಕುಟೀ-ಚಿಕ್ಕಎಲಚಿ" (ಓಷಧಿ. ೮೭). [ ಚಿಕ್ಕ₁ + ಎಲಚಿ ]

**ಚಿಕ್ಕಂದು₁** (ನಾ). ಎಳೆಯ ವಯಸ್ಸು; ಎಳವೆ; ಬಾಲ್ಯ: ಮೆಚ್ಚಿಸಲೆಂದು ಮೆಯ್ದೆ ಜಗಮಂ ಚಿಕ್ಕಂದು ತೊಟ್ಟಾಂ ಪರೀಕ್ಷಿಸಿ (ಕಾದಂಬ. ೫೦೮) ; ಚಿಕ್ಕಂದಿನ ಬಾಳುವೆ ನಿಮ್ಮ ಆಣೆಯಯ್ಯ (ಬಸವ. ೫೦೪) ; ಚಿಕ್ಕಂದಿನಲ್ಲಿ ಹುಡುಗರ ಬುದ್ಧಿ ಬಹಳ ಕೋಮಲವಾಗಿರುವುದು (ಮುಂಬಯಿ. ೪-೩೪). [ ಚಿಕ್ಕ₁ + ಅಂದು₂ ]

**ಚಿಕ್ಕಂದು₂**(ಅ). ಬಾಲ್ಯಕಾಲದಲ್ಲಿ ; ಎಳವೆಯಲ್ಲಿ: ಇವನು ತಮ್ಮಯ್ಯನನು ನೆಟಿ ಪರಿಭವಿಸನೇ ಚಿಕ್ಕಂದು (ಕುಮಾರವ್ಯಾ. ೧೯-೨೩). [ ಚಿಕ್ಕ₁ + ಅಂದು₃ ]

**ಚಿಕ್ಕಕಲ್ಲುರಿ** (ನಾ). ಒಂದು ಬಗೆಯ ಮೂಲಿಕೆ : "ಬ್ರಹ್ಮಸೋಮಾ-ಚಿಕ್ಕಕಲ್ಲುರಿ; ನೀರಗಿಚ್ಚು" (ಓಷಧಿ. ೮೧). [ ಚಿಕ್ಕ₁ + ಕಲ್ಲುರಿ₀ ]

**ಚಿಕ್ಕಕಾಗೆದೊಂಡೆ** (ನಾ). ಒಂದು ಬಗೆಯ ಮೂಲಿಕೆ : "ಧ್ವಾಕ್ಷಾಂಗೀ-ಚಿಕ್ಕಕಾಗೆದೊಂಡೆ" (ಓಷಧಿ. ೮೧). [ ಚಿಕ್ಕ₁ + ಕಾಗೆದೊಂಡೆ ]

**ಚಿಕ್ಕಕಾಡತ್ತಿ** (ನಾ). ಒಂದು ಬಗೆಯ ಹತ್ತಿಗಿಡ : ಚಿಕ್ಕಕಾಡತ್ತಿ, ಬೆಟ್ಟರಳಿ (ಮೈಸೂರಿ. ૩೭-೭૩೫). [ ಚಿಕ್ಕ₁ + ಕಾಡತ್ತಿ ]

**ಚಿಕ್ಕಕ್ಕ** (ನಾ). ಕಿರಿಯ ಅಕ್ಕ : ನಮ್ಮ ಚಿಕ್ಕಕ್ಕನನ್ನು ಕಂಡರೆ ಎಲ್ಲರಿಗೂ ಪ್ರೀತಿ (ರೂಢಿ). [ ಚಿಕ್ಕ₁ + ಅಕ್ಕ₁ ]

**ಚಿಕ್ಕಗುಂಜಿ** (ನಾ). ಸಣ್ಣ ಗುಲಗಂಜಿ : "ಕಾಕನುಂದಿಕಾ – ಚಿಕ್ಕಗುಂಜಿ" (ಓಷಧಿ. ૩೨). [ ಚಿಕ್ಕ₁ + ಗುಂಜಿ ]

**ಚಿಕ್ಕಚಿರಾಯತ** (ನಾ). ಒಂದು ಬಗೆಯ ಮೂಲಿಕೆ : (ಮೈಸೂರಿ. ૩೪-೭೫೦). [ ಚಿಕ್ಕ₁ + ಚಿರಾಯತ (<ಕಿರಿಯಾತು) ]

**ಚಿಕ್ಕಟ₁** 'ಚಿಕ್ಕುಟ' ನೋ.

**ಚಿಕ್ಕಟ₂** (ನಾ). (?) : ಮುಕ್ಕುಳಿಸಿ ಪುಕ್ಕುಳಿಸೆ ಕಕ್ಕಸದಿ ಚಿಕ್ಕಟದಿ ದಿಕ್ಕನ ಮರಿಕ್ಕಿ (ಜಿನಮು. ૩೯-೭) ; ಸಿಕ್ಕಿಸಂತರದಲ್ಲಿ ಶಾರ್ವರಿ ಚಿಕ್ಕಟದಿ ಮುಸುಕಿಕ್ಕಿ ದಹಿತರ ಸೊಕ್ಕ ಹಾರಿಸುತಿರುವ ರಘುಜರ ಮೌಳಿ ರವಿಯಾಗೇ (ಜಿರಾಮಾ. ૩೭೭-૩೭). [ ? ]

**ಚಿಕ್ಕಟು** 'ಚಿಕ್ಕುಟ' ನೋ.

**ಚಿಕ್ಕಟ್ಟು** (ನಾ). ಒಂದು ಬಗೆಯ ಔಷಧಿ ಸಸ್ಯ : "ಧೂರ್ತಃ – ಉಮ್ಮತ್ತ, ಖಚೋರ, ಚಿಕ್ಕಟ್ಟು" (ಓಷಧಿ. ೮૩). [ ? ]

**ಚಿಕ್ಕಡು** 'ಚಿಕ್ಕುಟ' ನೋ.

**ಚಿಕ್ಕಣ** (ಗು). ೧. ಮೃದುವಾದ ; ನಯವಾದ. (ನಾ). ೨. ಮೃದುಗೊಳಿಸುವಿಕೆ : "ಮಾರ್ದವಕರಣ, ಚಿಕ್ಕಣ" (Demulcent. ಪಾರಿಭಾ. ૩೪). ૩. ಮೃದುಗೊಂಡುದು ; ಮೆತ್ತಗಾಗಿರುವುದು : ಕಿಮುಟ್ಟಿದನೆಂದು ಚಿಕ್ಕಣವಾಗಿ ಮಾಡಿದಂ (ಶಮದ. ಸ. ૩૩ ವೃತ್ತಿ). ೪. ಸ್ನಿಗ್ಧವಾಗಿರುವಂತೆ ಬೇಯಿಸಿದ ಅಡಿಗೆ : "ಚಿಕ್ಕಣಂ, ಮಸೃಣಂ, ಸ್ನಿಗ್ಧಂ – ೩ ಹೆಚ್ಚಿದಂಥಾದ್ದಕ್ಕೂ ನಯವಾದದ್ದಕ್ಕೂ ಮೆತ್ತಗಿರುವ ಹಾಗೆ ಅಟ್ಟಲ್ಪಟ ಅಡಿಗೆಗೂ . . . ಪೆಸರುಗಳು" (ಸಿದ್ಧಾಂತಿ. ૩೪೭). ೫. ಅಡಕೆ : ಇನಿನುಡಿ ನುಡಿಯುವಾ ಇಂಬಾದ ಕಣ್ಣುಗಳುಳ್ಳ ಚಿಕ್ಕಣದ ಬಣ್ಣದ ಒಕ್ಕಲಿಗರ ಚಿಕ್ಕಹುಡುಗ (ಕೋಹಿನೂ. ೫೪). ೬. ಅಡಕೆಯ ಮರ. [ ಸಂ. ]

**ಚಿಕ್ಕಣಗೆಸಟ್** (ನಾ). ಅಡಕೆಯಿಂದ ತಯಾರಿಸಿದ ಕಲ್ಕ : ಕಾಸದ ಚಿಕ್ಕಣ [ಪಾಠಾಂ. ಣಿ]ಗೆಸಟಿೊಳ್ ಸಾಸಿವೆ(ಸವಿ) ಕಲ್ಲು ಪ್ಪುಕಣಿಕಮುರ್ದಿನ ಪುಡಿಯುಂ ಬೇಸಟದೆ ಕೂಡಿ ಕುದಿರೆಗೆ ಪೂಸುಂಗೆ (ಅಶ್ವಶಾ. ೦೪-೩೦). 'ಚಿಕ್ಕಣಿಗೆಸಟ್' ಪಠಾ. [ ಚಿಕ್ಕಣ + ಕೆಸಟ್ ]

**ಚಿಕ್ಕಣಪಾಕ** (ನಾ). ಸ್ನಿಗ್ಧವಾದ ಪಾಕ : ಮಂಜಿಷ್ಠೆ, ನೀಲಾಂಜನ ತಾವರೆಗೆಣಸು ಇವಿಷ್ಟನು ಪ್ರತ್ಯೇಕ ಎರಡು ವರಹ ತೂಕಗಳನು ಸೂಕ್ಷ್ಮವಾಗಿ ಚೂರ್ಣಿಸಿ ಹಾಕಿ ಕಾಸಿ ಚಿಕ್ಕಣಪಾಕದಲ್ಲಿ ಇಳುಹಿ (ವೃದ್ಧಸಾ. II, ೦೩೫) ; ವಾಸಾಘೃತ – ಆಡುಸೋಗೆ, ಅಮರದವಳ್ಳಿ. . . ಶುಂಠಿ ಇವುಗಳನ್ನು ಅರೆದು ಅರ್ಧ ಪಾವು ತುಪ್ಪ ಸೇರಿಸಿ ಚಿಕ್ಕಣಪಾಕದಲ್ಲಿ ತೆಗೆದು ಶೋಧಿಸಿಕೊಂಡು (ಸಕವೈ. ೦೦೫). [ ಚಿಕ್ಕಣ + ಪಾಕ ]

**ಚಿಕ್ಕಣಿ₁** (ನಾ). ಒಂದು ಬಗೆಯ ಅಡಕೆ : ಕರ್ಪುರಭರಿತ ಚಿಕ್ಕಣಿ ನಾಗವಳ್ಳಿಯ ಭರದ ಹೊಂಬಟ್ಟಲಲಿ ಹೊಯ್ಸಣದವರು ಕೊಡುತಿರಲು (ಭೌಶಿರಾ. ૩-೬೯).

**ಚಿಕ್ಕಣಿಅಡಿಕೆ** ಚಿಕ್ಕಣಿಜಾತಿಯ ಅಡಕೆ : ಚಿಕ್ಕಣಿ ಅಡಿಕೆ ಕೇದಿಗೆ ಕಾಚ್ ಕೂಡಿದ ಎಲಕ್ಕಿ (ಪುರಂದ. ૩-೮೪-૩). **ಚಿಕ್ಕಣಿಕ್ರಮುಕ** = ಚಿಕ್ಕಣಿ ಅಡಿಕೆ : ಶ್ವೇತವರ್ಣ ಮನಾ ಚಿಕ್ಕಣಿಕ್ರಮುಕ ಕರ್ಪುರದಾ ತಿಳಿ ಸುಚೂರ್ಣಮಂ ತಂದೀಯಲವನು ಚರ್ವಣಗೈದು (ನವಮೋ. ೦೭-೮). [ <ಸಂ. ಚಿಕ್ಕಣ ]

**ಚಿಕ್ಕಣಿ₂** (ನಾ). ಒಂದು ಬಗೆಯ ಹುಲ್ಲು : . ಚಿಕ್ಕಣಿ, ಸಿಂಪಿಗನ ಹುಲ್ಲು . . . ಏನೇನೋ ಜಾತಿಯ ಎಲ್ಲವೂ ಮಣ್ಣಿನ ರಚನೆಯಲ್ಲಿಯೆ ಇದ್ದಹಾಗೆ ತೋರುತ್ತದೆ (ಗಾಳಿಪ. ೦೦೪). [ <ಚಿಕ್ಕಣಿಕೆ ]

**ಚಿಕ್ಕಣಿಕೆ** (ನಾ). ಒಂದು ಬಗೆಯ ಹುಲ್ಲು : "ಚಿಕ್ಕಣಿಕೆ [ಪಾಠಾಂ. ಬಂಡಿ] ಬಂದಿಯತ್ತು" (ಮಂಗರಾ. ૩૩-೮) ; ಪೊಸ ಚಿಕ್ಕಣಿಕೆಯ ಪುಲ್ಲಂ ಪೊಸ ಬೆಳ್ಳುಳ್ಳಿಯ ರಸಂಗಳಂ ತಳದಿಂದಂ ಪೊಸದು (ಕಲ್ಯಾಕಾ. ૩-೪೭) ; ಕಿಱುಮಾಲೆ ನೂಲೆ ಕಿಸುಕುಱಿ ನೆಱೆದೀ ಚಿಕ್ಕಣಿಕೆ ವ್ಮಾನಿನಿ ಕಸಕೆ ಕಲ್ಬುರ್ (ಸೂಕ್ತಿಸು. ૩-૩೯) ; ಚಿಕ್ಕಣಿಕೆಯ ರಸಮಂ ಮೂತ್ರಕ್ಕಂ ಸರಿಯಾಗಿ ಬೆರಸಿ ನಸ್ಯಂಗೆಯ್ಯಲ್ (ಖಮದ. ೧೦-೭೫). [ ? ]

**ಚಿಕ್ಕಣಿಕೆಸಟ್** 'ಚಿಕ್ಕಣಿಗೆಸಟ್' ನೋ.

**ಚಿಕ್ಕಣಿಕ್ಕೆ** (ನಾ). ಕ್ಷುಲ್ಲಕ ವ್ಯಕ್ತಿ ; ನೀಚ ವ್ಯಕ್ತಿ (?) : ತೆರಳ್ದ ಮೊಗಂ ನರಮತ್ತೆ ಮಾಣಿಳೀ ಬಟ್ಟೆಯ ಚಿಕ್ಕಣಿಕ್ಕೆ ಪೊಸ ಬರ್ಬರ ಸೂಳೆಯರಾಳಿಗೊಂಬುದಂ (ಸೂಕ್ತಿಸು. ೮-૩೪). [ ? ]

**ಚಿಕ್ಕಣಿಗೆಸಟ್, ಚಿಕ್ಕಣಿಕೆಸಟ್** (ನಾ).=ಚಿಕ್ಕಣಗೆಸಟ್ : ಇರ[ಭ]ದೊಟ್ಟೆಯ ತುರಗದ ಗಾರ್ಧಪದ ಪುರೀಷಂಗಳೊಡನೆ ಚಿಕ್ಕಣಿಗೆರಸಂ [ಸಟಂ] ಕ್ಷುಭಿಯಿಸಿ ಮೈಪದಮುನಱದಱದುಂ ಲಿಪ್ತಗೈದು (ಅಶ್ವವೈ. ೧೦-೦೧); "ಸಣ್ಣ ಕೆಸರು" (ಅಶ್ವವೈ. ಟೀಕು). **ಚಿಕ್ಕಣಿಕೆಸಟ್** : ಕಾಸಿದ ಚಿಕ್ಕಣಿಕೆಸಟಿೊಳ್ ಸಾಸಿವೆ ಕಲ್ಲುಪ್ಪು ಕಣಿಕಮುರ್ದಿನ ಪುಡಿಯುಂ ಬೇಸಱದೆ ಬಾಹಿನೆಡೆಯೊಳ್ ಪೂಸುವುದು (ಅಶ್ವಶಾ. ೦೦-೭೦). 'ಚಿಕ್ಕಣಗೆಸಟ್' ಪಠಾ. [ ಚಿಕ್ಕಣಿ₁ + ಕೆಸಟ್ ]

**ಚಿಕ್ಕಣ್ಣ** (ನಾ). ಕಿರಿಯ ಅಣ್ಣ : ನಮ್ಮ ದೊಡ್ಡಣ್ಣನಿಗಿಂತಲೂ ಚಿಕ್ಕಣ್ಣ ಹೆಚ್ಚು ಬುದ್ಧಿವಂತನಾದ್ದರಿಂದ ನಮ್ಮ ತಾಯಿಗೆ ಅವನ ಮೇಲೆ ಬಹಳ ಪ್ರೀತಿ (ರೂಢಿ). [ ಚಿಕ್ಕ$_1$ + ಅಣ್ಣ$_1$ ]

**ಚಿಕ್ಕತಂದೆ** (ನಾ).=ಚಿಕ್ಕಪ್ಪ : (ಶ). [ ಚಿಕ್ಕ$_1$ + ತಂದೆ ]

**ಚಿಕ್ಕತನ** (ನಾ). ೧. ಬಾಲ್ಯ ; ಎಳೆಯ ವಯಸ್ಸು : ಚಿಕ್ಕತನ ತಮಗಿದನು ಕಾಣಲು ಮಕ್ಕಳಿಗೆ ತಾನೇಕೆ (ಕುಮಾ.ಆ. ೭೮೩. ೩೭-೭೦). ೨. ಸಣ್ಣತನ ; ಕ್ಷುಲ್ಲಕತನ : ತಮ್ಮ ಚಿಕ್ಕತನಕ್ಕಾಗಿ ತಾವೇ ನಾಚಿಕೊಳ್ಳುವಂತಾಗುತ್ತದೆ (ರೂಢಿ). [ ಚಿಕ್ಕ$_1$ + – ತನ ]

**ಚಿಕ್ಕತಮ್ಮ** (ನಾ). ಕೊನೆಯ ತಮ್ಮ : ಕೂಡಲ ಸಂಗಮದೇವಾ ನೀನೆನಗೆ ಚಿಕ್ಕತಮ್ಮ (ಬಸವ. ೯೦೪); ನನ್ನ ತಮ್ಮಂದಿರೆಲ್ಲಾ ಊರಿನಲ್ಲಿ ನಮ್ಮ ತಂದೆ ತಾಯಿಯ ಬಳಿ ಇದ್ದಾರೆ, ಚಿಕ್ಕತಮ್ಮನೊಬ್ಬ ಮಾತ್ರ ನನ್ನ ಬಳಿ ಇದ್ದಾನೆ (ರೂಢಿ). [ ಚಿಕ್ಕ$_1$ + ತಮ್ಮ ]

**ಚಿಕ್ಕತಾಯಿ** (ನಾ). ೧.=ಚಿಕ್ಕಮ್ಮ: (ಶ).
[ ಚಿಕ್ಕ$_1$ + ತಾಯಿ (<ತಾಯ್) ]

**ಚಿಕ್ಕತಾರ** (ನಾ). ಒಂದು ಬಗೆಯ ನಾಣ್ಯ (?) : ತೆಲ್ಲಿಗರು ಎಳ್ಳ ಮಾಱಿ ಕೊಂಡವಗು ಹೊಂಗೆ ಕಟ್ಟಿದಲಗಿನ ಚಿಕ್ಕತಾರವ ತೆಱುವರು ಬೆಳಿಯ ತಾರದರ್ದ್ದದ ಎಣ್ಣೆಯನು ಗಾಣಕ್ಕೆ ನಿಚ್ಚಲು ಅರ್ದ್ಧಸೊಲ್ಲಿಗೆಯನು ಆಡಿತಕ್ಕೆ ಎಱೆವರು (ಸೌಇಇ. IX-1, ೩೩೭-೨೭ ; 1219).
[ ಚಿಕ್ಕ$_1$ + ತಾರ$_1$ ]

**ಚಿಕ್ಕತೂಬರ** (ನಾ). ಒಂದು ಬಗೆಯ ಮರ: "ಕಾಕಾಂಡಃ–ಚಿಕ್ಕತೂಬರ, ಹೆಬ್ಬೇವು, ಹೆಮ್ಮರ" (ಓಷಧಿ. ೩೯).
[ ಚಿಕ್ಕ$_1$ + ತೂಬರ$_1$ (<ತುಂಬುರು$_1$) ]

**ಚಿಕ್ಕತೊಗರಿ** (ನಾ). ಒಂದು ಬಗೆಯ ತೊಗರಿ: ಚಿಕ್ಕತೊಗರಿ, ವಿಷತೊಗರಿ, ಕೇಸರಿಬೇಳೆ (ಮೈಜಿಗಿ. ೪೯–೯೫೦). [ ಚಿಕ್ಕ$_1$ + ತೊಗರಿ$_1$ (<ತೊವರಿ) ]

**ಚಿಕ್ಕನರುವಲು** (ನಾ). ಒಂದು ಬಗೆಯ ಔಷಧಿ ಗಿಡ ; ಅಗ್ನಿಮಂಥ : "ತೇಜೋವೃಕ್ಷಃ–ಚಿಕ್ಕನರುವಲು" (ಓಷಧಿ. ೭೨).
[ ಚಿಕ್ಕ$_1$ + ನರುವಲು (<ನಱುವಲ್) ]

**ಚಿಕ್ಕನುಗಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೈಜಿಗಿ. ೭–೧೦೧).
[ ಚಿಕ್ಕ$_1$ + ನುಗ ? + ಹುಲ್ಲು(<ಪುಲ್) ]

**ಚಿಕ್ಕನುಡಿ** (ನಾ). ಕೀಳುಮಾತು ; ಸಣ್ಣಮಾತು ; ಕ್ಷುದ್ರವಾದ ನುಡಿ : ಅಕ್ಕ ಕೇಳೌ ಚಿಕ್ಕನುಡಿಗಳು ತಕ್ಕುವೇ ಹಿರಿಯರ್ಗೆ (ಸಂಭವ. ೨೦–೧೧೧).
[ ಚಿಕ್ಕ$_1$ + ನುಡಿ$_2$ ]

**ಚಿಕ್ಕನೆಕ್ಕಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : ಚಿಕ್ಕನೆಕ್ಕಿ ಸೊಪ್ಪು, ಲಕ್ಕಿ (ಮೈಜಿಗಿ. ೪೮–೯೫೭). [ ಚಿಕ್ಕ$_1$ + ನೆಕ್ಕಿ + ಸೊಪ್ಪು$_3$ ]

**ಚಿಕ್ಕನೆಲದಾಳು** (ನಾ). ಒಂದು ಬಗೆಯ ಔಷಧಿ ಗಿಡ : "ಪುತ್ರಜನನೀ – ಚಿಕ್ಕನೆಲದಾಳು ; ತಾಳಿಯಸೊಪ್ಪು" (ಓಷಧಿ. ೧೦೦).
[ ಚಿಕ್ಕ$_1$ + ನೆಲದಾಳು (<ನೆಲದಾೞ್) ]

**ಚಿಕ್ಕನೇರಳೆ** 'ಚಿಕ್ಕನೇಱಲ್' ನೋ.

**ಚಿಕ್ಕನೇರಿಲು** 'ಚಿಕ್ಕನೇಱಲ್' ನೋ.

**ಚಿಕ್ಕನೇಱಲ್, ಚಿಕ್ಕನೇರಳೆ, ಚಿಕ್ಕನೇರಿಲು** (ನಾ). ಒಂದು ಬಗೆಯ ನೇರಿಳೆ : "ವೈರಸೀ – ಚಿಕ್ಕನೇಱಲ್" (ಓಷಧಿ. ೧೫೭). **ಚಿಕ್ಕನೇರಳೆ :** (ಮೈಜಿಗಿ. ೭೩–೦೪೯೫). **ಚಿಕ್ಕನೇರಿಲು :** ಚಿಕ್ಕನೇರಿಲು ಜಂಬುನೇರಿಲು ಗಳರುಟಾಳ (ರುಕ್ಮಾಂಗ. ೧೦–೩). [ ಚಿಕ್ಕ$_1$ + ನೇಱಲ್ ]

**ಚಿಕ್ಕಪ್ಪ, ಚಿಕಪ, ಚಿಗಪ್ಪ** (ನಾ). ೧. ತಂದೆಯ ತಮ್ಮ ; ಕಕ್ಕ : ಅಪ್ಪನ ಅವ್ವ ಅನ್ನದವ ಚಿಕ್ಕಪ್ಪನ ಅಪ್ಪಾ ಅಂದಾನೇ (ಗಾದೆ). ೨. ಚಿಕ್ಕಮ್ಮನ ಗಂಡ; ತಾಯಿಯ ತಂಗಿಯ ಗಂಡ: ತಂದೆಯ ತಮ್ಮನಷ್ಟೇ ಚಿಕ್ಕಪ್ಪನಲ್ಲ, ಚಿಕ್ಕಮ್ಮನ ಗಂಡನೂ ಚಿಕ್ಕಪ್ಪನೇ (ರೂಢಿ). **ಚಿಕಪ:** ೧. ಯಿವಂದಿರ ಚಿಕಪ ಉಡಖಾನ ಮಗ ಅಬೂಖಾನನು (ಎಕ. VII, ಶಿವಮೊ. ೨೯–೦೯; 1712) ;
**ಚಿಗಪ್ಪ :** ೧. ಚಿಗಪ್ಪ ಚಿಗವ್ವ ಅವಾರಲ್ಲಾ (ಮಣ್ಣುಹೆ. ೧೬೧); ಉಂಡುಟ್ಟು ಸುಖದಿಂದಿದ್ದು ವಕೀಲಿ ಮಾಡುತ್ತ ಕಾಲ ಕಳೆಯಬೇಕೆಂದು ಆತನ ಚಿಗಪ್ಪನ ಇಚ್ಛೆ (ಜ್ಯೋತಿಶ್ಯಾ. ೧೬). [ ಚಿಕ್ಕ$_1$ + ಅಪ್ಪ$_1$ ]

**ಚಿಕ್ಕಪ್ರಾಯ** (ನಾ). ಎಳೆಯ ವಯಸ್ಸು ; ಚಿಕ್ಕವಯಸ್ಸು : "ಕನಿಷ್ಠಃ, ಅತಿಯುವಾ – ಬಹಳ ಚಿಕ್ಕಪ್ರಾಯದ ಹುಡುಗ, ಅಲ್ಪಃ – ಚಿಕ್ಕವನು ೨ ಕ್ಕೂ ಹೆಸರು" (ಸಿದ್ಧಾಂತಿ. ೩೩೦). [ ಚಿಕ್ಕ$_1$ + ಪ್ರಾಯ ]

**ಚಿಕ್ಕಬಳ್ಳಿ** (ನಾ). ಒಂದು ಬಗೆಯ ಔಷಧಿ ಗಿಡ : "ಲಘುಪೂರ್ವಕಃ – ಚಿಕ್ಕಬಳ್ಳಿ" (ಓಷಧಿ. ೧೯೨). [ ಚಿಕ್ಕ$_1$ + ಬಳ್ಳಿ ]

**ಚಿಕ್ಕಬಿಟ್ಟುವ** (ನಾ). (?) : ಮೂಡಣ ಹೆಗ್ಗದ್ದೆ ಅದಱ ಮೇಗಣ ಕೊಡಂಗೆ ಎರಡಱಲ್ಲಿಯೂ ಮೂಡೆ ೨ ಬಂಣಟೆಮೂಡೆ ೨ ಮುಂಡಿನ ಮಾಡುವ ಬಳುಮೂಡೆ ೧ ಚಿಕ್ಕ ಬಿಟ್ಟುವ ಕೊಡಂಗೆ ಮೂಡೆ ೧ (ಎಇ. XXVII, ೨೮–೩೦ ; 1256). [ ? ]

**ಚಿಕ್ಕಬ್ಬೆ** (ನಾ). ೧.=ಚಿಕ್ಕಮ್ಮ : ನನ್ನ ಚಿಕ್ಕಬ್ಬೆಗೆ ನನ್ನನ್ನು ಕಂಡರೆ ಬಹಳ ಪ್ರೀತಿ (ರೂಢಿ). ೨. ಒಬ್ಬಾಕೆಯ ಹೆಸರು: ತನ್ನರಸಿ ಚಿಕ್ಕಬ್ಬೆಗೆ ಬಡಗನ್ನಿ ಕೆಱೆಯ ಬಡಗಣ ಬದರಿಯ ಪಿನ್ನಣ ಕೆಱೆಯುಮ್ಮಿಬ್ಬಿಟ್ಟ ದೇವರ್ಗೆ (ಎಕ. VII, ಶಿವಮೊ. ೯೭–೦೯ ; ಸು. 915). [ ಚಿಕ್ಕ$_1$ + ಅಬ್ಬೆ$_1$ ]

**ಚಿಕ್ಕಬ್ರಹ್ಮಿ** (ನಾ). ಒಂದು ಬಗೆಯ ಔಷಧಿ ಗಿಡ : "ಲಘುಬ್ರಹ್ಮಿ–ಚಿಕ್ಕ ಬ್ರಹ್ಮಿ" (ಓಷಧಿ. ೧೯೨). [ ಚಿಕ್ಕ$_1$ + ಬ್ರಹ್ಮಿ ]

**ಚಿಕ್ಕಮರುಳು** (ನಾ). ಒಂದು ಬಗೆಯ ಔಷಧಿ ಗಿಡ : ಚಿಕ್ಕಮರುಳು, ಮೈಕೆಬೇರು ಗಂಡರಿಸಿನದಲ್ಲಿ ನಿಂಬೆಕಾಯಷ್ಟು ಕುಡಿಯೆ ಬಾಣಂತಿ ರೋಗ ಬಸುರಿಳಿವದು ಮಾಣ್ಗುಂ (ವಿಷ್ಣುವಿ. ೮೦). [ ? ]

**ಚಿಕ್ಕಮಾತು** (ನಾ).=ಚಿಕ್ಕನುಡಿ : ಚಿಕ್ಕಮಾತುಗಳನ್ನಾಡಿ ನೋಯಿಸುವುದೇ ಅವರ ಸ್ವಭಾವ (ರೂಢಿ). [ ಚಿಕ್ಕ$_1$ + ಮಾತು$_1$ ]

**ಚಿಕ್ಕಮಾರಯ್ಯ** (ನಾ). ಒಬ್ಬಾತನ ಹೆಸರು : ಕಿಟ್ಟಪಳ್ಳಿ . . . ತುಱು ಗೊಳೊಳ ಚಿ[ಕ್ಕ]ಮಾರಯ್ಯ ಸತ್ತ (ಎಕ. IX ಕಾನಕಾ. ೮೮–೫ ; ಸು. 870).
[ ಚಿಕ್ಕ$_1$ + ಮಾರಯ್ಯ ]

**ಚಿಕ್ಕಮ್ಮ** (ನಾ). ೧. ತಾಯಿಯ ತಂಗಿ : ಹರುಷವಿಂಗಿಲಾ ಚೈದ್ಯಪುರ ದಲಿ ವರಜನನಿ ಚಿಕ್ಕಮ್ಮನಲ್ಲಿಹಳೆಂದನು (ನಳಚ. ೬–೩೫). ೨. ಚಿಕ್ಕಪ್ಪನ ಹೆಂಡತಿ ; ಕಕ್ಕಿ : ಆ ನೃಪನ ಚಿಕ್ಕಮ್ಮ ಪಡೆದಳು (ಸಾಳ್ವಭಾ. ೦–೨೭); ಇವರೂ ಸಹ ನಮ್ಮ ಚಿಕ್ಕಮ್ಮನೇ, ಅಂದರೆ ತಾಯಿಯ ತಂಗಿಯಲ್ಲ, ನಮ್ಮ ಚಿಕ್ಕಪ್ಪನ ಹೆಂಡತಿ (ರೂಢಿ). ೩. ಮಲತಾಯಿ : ಚಿಕ್ಕಮ್ಮ ಕೇಳು ಹಿಂದಣ ಜನ್ಮದೊಳು ನಾನು ಮಕ್ಕಳಂ ಬಯಸಿ ದೈವದಮುಂದೆ ನೋಂಪಿಯಂ ಚೊಕ್ಕಟದಿ ಮಾಡಿತಿಲ್ಲದೞುಂದವಿಾ ನನ್ನ ಬಸಿಱು ಪಾಳ್ಪಸಿರಾದುದು (ಸಮ್ಯಕ್ತಾ. ೫–೧೫). [ ಚಿಕ್ಕ$_1$ + ಅಮ್ಮ$_2$ ]

**ಚಿಕ್ಕಯ್ಯ** (ನಾ).=ಚಿಕ್ಕಪ್ಪ ೧ : ಅಯ್ಯನಯ್ಯನು ಚೆನ್ನಯಂ ಚಿಕ್ಕಯ್ಯ ಕಕ್ಕಯ್ಯನು ತೆಲುಗು ಬೊಮ್ಮಯ್ಯನಯ್ಯನು ನಿಂಬಿ ತಾಯ್ ಚೇರಮನ ಮಗ ನಾನು (ಬಸವು. ೩–೮೨) ; ಯಾರ ಬಲದಿಂದ ಬಂದುದೀ ಮಹಾಕಪಿ ಸಂತೆ ಮುಳಿದುಚಿಕ್ಕಯ್ಯನೈದಿ ಸೇರಿದಂ ಮಾನುಷರ (ವೆಂಕಾರಾ. ೬–೦೮–೨೪).
[ ಚಿಕ್ಕ$_1$ + ಅಯ್ಯ$_1$ ]

**ಚಿಕ್ಕವಯಸ್ಸು** (ನಾ).=ಚಿಕ್ಕಪ್ರಾಯ: ಚಿಕ್ಕವಯಸ್ಸಿಗೇ ನಾನು ನನ್ನ ತಾಯಿ ಯನ್ನು ಕಳೆದುಕೊಂಡಿದ್ದೆ (ರೂಢಿ). [ ಚಿಕ್ಕ$_1$ + ವಯಸ್ಸು ]

**ಚಿಕ್ಕವೂಸಿ** (ನಾ). ಪುನರ್ವಸು ಮಳೆ : (ಎಸಮ್ಮ. XV, ೩೦).
[ ಚಿಕ್ಕ$_1$ + ಪೂಸಿ$_0$ ( < ಪುಸ್ಯ) ]

**ಚಿಕ್ಕವ್ವ** 'ಚಿಕ್ಕವ್ವೆ' ನೋ.

**ಚಿಕ್ಕವ್ವೆ, ಚಿಕ್ಕವ್ವ, ಚಿಗವ್ವ** (ನಾ).=ಚಿಕ್ಕಮ್ಮ: ಚಿಕ್ಕವ್ವೆಯ ಮೇಲೆ ಸಿಟ್ಟು ಹುಟ್ಟಿತು (ಮುನಿಮಾ. ೩). **ಚಿಕ್ಕವ್ವ :** ಮಕ್ಕಳು ಚಿಕ್ಕವ್ವ ಎನ್ನುತ್ತಾ (ಮುನಿಮಾ. ೯೪). **ಚಿಗವ್ವ:** ನಿನಗ್ಯಾಕ ಅದರ ಚಿಂತಿ ಚಿಗವ್ವಾ? (ಗ್ರಾಮಾಯ. ೨೮); ನಾನು ನಾಳೆ ಮುಂಜಾನೇ ನಮ್ಮ ಚಿಗವ್ವನ ಮನೆಗೆ ಹೊರಟೆನು (ಮುಂಬಯಿ. ೧-೩೮). [ ಚಿಕ್ಕ$_1$ + ಅವ್ವೆ ]

**ಚಿಕ್ಕಸ** (ನಾ). ಜವೆಗೋಧಿಯ ಹಿಟ್ಟು; ಯವ ಚೂರ್ಣ. [ ಸಂ. ]

**ಚಿಕ್ಕಸಾಡಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಚಿಕ್ಕಸಾಡಿಹುಲ್ಲು, ಕರಿಕೊಡೆಹುಲ್ಲು, ನಾಲೆಹುಲ್ಲು (ವ್ಯಜಿಗಿ. ೬೯-೧೪೦೨).

[ ಚಿಕ್ಕ$_1$ + ಸಾಡಿ$_0$ + ಹುಲ್ಲು (<ಪುಲ್) ]

**ಚಿಕ್ಕಸಿವನ್ನಿ** (ನಾ). ಒಂದು ಬಗೆಯ ಔಷಧಿ ಗಿಡ : "ಲಘುಕಾಶ್ಮರ್ಯ – ಚಿಕ್ಕಸಿವನ್ನಿ" (ಒಷಧಿ. ೧೪೨). [ ಚಿಕ್ಕ$_1$ + ಸಿವನ್ನಿ ]

**ಚಿಕ್ಕಸುರಟಿಗಿಡ**(ನಾ). ಒಂದು ಬಗೆಯ ಗಿಡ: ಚಿಕ್ಕಸುರಟಿಗಿಡ, ಗರುಡಫಲ (ವ್ಯಜಿಗಿ. ೪೫-೮೮೧). [ ಚಿಕ್ಕ$_1$ + ಸುರಟಿ$_0$ + ಗಿಡ (<ಗಿಡು) ]

**ಚಿಕ್ಕಹಣ** (ನಾ). ಎರಡು ಆಣೆಗಳ ಬೆಲೆಯ ಒಂದು ಬೆಳ್ಳಿ ನಾಣ್ಯ: (ಕಿ).

[ ಚಿಕ್ಕ$_1$ + ಹಣ ]

**ಚಿಕ್ಕಹೀರೆ** (ನಾ). ಒಂದು ಬಗೆಯ ಹೀರೆ : "ಮಾರಣೀ – ಚಿಕ್ಕಹೀರೆ" (ಒಷಧಿ. ೧೨೪). [ ಚಿಕ್ಕ$_1$ + ಹೀರೆ$_1$ (<ಪೀರೆ) ]

**ಚಿಕ್ಕಹೊಂಬಳಿ** (ನಾ). ಒಂದು ಬಗೆಯ ತೆರಿಗೆ : ಶಾನುಭೋಗರ ವರ್ತನೆಯಿಂದ ಗ ೨ ಆಂಗ್ರುವಂಕ್ಕೆ ನಾಡೋಪಾದಿಯಲ್ಲಿ ಬಾಹ ಉಂಬಳಿಯ ಚಿಕ್ಕಹೊಂಬಳಿ ಹೊಮಾರು ಕ್ರಯ ಕಡಾಯ ಭಿಟ್ಟೆ ಕೊಟ್ಟೆ (ವ್ಯಆರಿ. ೧೯೩೪, ೨೭-೨೦ ; 1430). [ ? ]

**ಚಿಕ್ಕಹೊರಲಿಗ** (ನಾ). ಒಂದು ಬಗೆಯ ಮೂಲಿಕೆ (?) : ಹೊರಲಿಗ, ಚಿಕ್ಕಹೊರಲಿಗನಸಮೂಲ ಭಂಗಿಯ ಪುಡಿ . . . ಇಷ್ಟನ್ನೂ ಕೂಡಿ ಅರೆದು (ವಿವ್ಯವಿ. ೨೧೫). [ ಚಿಕ್ಕ$_1$ + ಹೊರಲಿಗ ? ]

**ಚಿಕ್ಕಾಟ** 'ಚಿಕ್ಕುಟ' ನೋ.

**ಚಿಕ್ಕಾಡಿ** 'ಚಿಕ್ಕುಟ' ನೋ.

**ಚಿಕ್ಕಾಡು** 'ಚಿಕ್ಕುಟ' ನೋ.

**ಚಿಕ್ಕಾಣೆ** (ನಾ). (ಆಕಾರದಲ್ಲಿ ಚಿಕ್ಕದಾದ) ಒಂದು ಬೆಳ್ಳಿಯ ನಾಣ್ಯ : (ಕಿ). [ ಚಿಕ್ಕ$_1$ + ಆಣೆ$_5$ ]

**ಚಿಕ್ಕಾಸು** (ನಾ). ಸಣ್ಣಕಾಸು; ತೀರ ಚಿಕ್ಕನಾಣ್ಯ: ಒಂದುಚಿಕ್ಕಾಸು ಕೂಡ ಬಡ್ಡಿ ಸಹ ಕೊಟ್ಟಿಲ್ಲ (ಕುರುಕಾ. ೪೩); ಮಾಸ್ತರು ಎಂದರೆ ಚಿಕ್ಕಾಸು ಸಾಲ ಕೊಡುವರಿಲ್ಲ (ಕಾವೇರಿ. ೧೦೧) ; ದುಂದುವೆಚ್ಚ ಮಾಡಿ, ಒಂದು ಚಿಕ್ಕಾಸೂ ಅವನ ಬಳಿ ಉಳಿದಿಲ್ಲ (ರೂಢಿ). [ ಚಿಕ್ಕ$_1$ + ಕಾಸು$_2$ ]

**ಚಿಕ್ಕಿ** 'ಚುಕ್ಕೆ$_1$' ನೋ.

**ಚಿಕ್ಕಿಹಾವು** (ನಾ). ಮೈಮೇಲೆ ಬಣ್ಣದ ಬೊಟ್ಟುಗಳಿರುವ ಹಾವು ; ಸುಂಟಿಗನೆಂಬ ಒಂದು ಬಗೆಯ ವಿಷಸರ್ಪ : (ಕಿ).

[ ಚಿಕ್ಕಿ (<ಚುಕ್ಕೆ$_1$) + ಹಾವು (<ಪಾವು$_1$) ]

**ಚಿಕ್ಕೀಚಲು** (ನಾ). ಒಂದು ಬಗೆಯ ಈಚಲು ಮರ ; ಕಿರೀಚಲು : "ಪರುಃ – ಗಿಣ್ಣು, ಚಿಕ್ಕೀಚಲು" (ಒಷಧಿ. ೯೦).

[ ಚಿಕ್ಕ$_1$ + ಈಚಲು$_1$ (<ಈಂಚಿಲ್) ]

**ಚಿಕ್ಕೀರೆ** (ನಾ). ಒಂದು ಬಗೆಯ ಕೀರೆಸೊಪ್ಪು : (ವ್ಯಜಿಗಿ. ೬-೯೪).

[ ಚಿಕ್ಕ$_1$ + ಕೀರೆ ]

**ಚಿಕ್ಕು$_1$** 'ಸಿಕ್ಕು$_1$' ನೋ.

**ಚಿಕ್ಕು$_2$** (ನಾ). (ಉಕ) ಒಂದು ಬಗೆಯ ಗಿಡ ಮತ್ತು ಅದರ ಹಣ್ಣು; ಸಪೋಟಾ : ಚಿಕ್ಕುಹಣ್ಣು ತಿನ್ನಲು ಬಲುರುಚಿ (ರೂಢಿ).

[ ←ಮರಾ. ಚಿಕೂ, ಚಿಕ್ಕೂ ]

**ಚಿಕ್ಕು$_3$** (ನಾ). ಒಂದು ಕ್ಷುದ್ರದೇವತೆಯ ಹೆಸರು : ಗಾಡಿಗ ಡಿಂಬು ಗಂಗೆ ಚಿಕ್ಕು ಮುಟ್ಟಿಗೆ ಹುರಿಬುತ್ತಿಯ ಬೇಡಿ ಈಡಾಡಿದ ಕೂಳಂಬಲಿಯ ನಾಯ್ದು ಕುಱುಕುವ ಹೇಸಿ ದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ (ಬಸವ. ೫೫೭). [ ? ]

**ಚಿಕ್ಕುಟ, ಚಿಕ್ಕಟ$_1$, ಚಿಕ್ಕಟಂ, ಚಿಕ್ಕಡು, ಚಿಕ್ಕಾಟ, ಚಿಕ್ಕಾಡಿ, ಚಿಕ್ಕಾಡು, ಚಿಕ್ಕುಟು, ಚಿಕ್ಕುಡು, ಚಿಗಟ, ಚಿಗಟೆ** (ನಾ). ಸೊಳ್ಳೆಯಂತಹ ಸಣ್ಣ ರೆಕ್ಕೆ ಹುಳು : ದಂಸೇಹಿಯ = ಚಿಕ್ಕುಟಗಳಿಂದಂ (ವರ್ಧಮಾರಾ. ೧೨೨-೪) ; ಯುಗಜುಗವ ಬಲ್ಲೆನೆಂಬವರು ನಿಚ್ಚಕ್ಕೆ ನಿಚ್ಚ ಬಪ್ಪ ಚಿಕ್ಕುಟ [ಪಾಠಾಂ. ಚಿಕ್ಕಟ, ಚಿಕ್ಕುಟ] ಸಾವನಱಿಯರು (ಅವಚಂ. ೧೧೩-೫೧೧); ಪೆರ್ವಾಗಿಲಂ ತಾಗೆ ಒಂದು ಬೀಯಗವಿಕ್ಕಿ ಚಿಕ್ಕುಟಂ [ಪಾಠಾಂ. ಚಿಕ್ಕಟುಂ, ಚಿಕ್ಕಡುಂ] ನುಸುಟಲ್ಬಾರದಂತಾಗಿ ಬಿಗಿಯೆ (ಅರ್ಧನೇ. ೭-೪೪ ವ); ಹೇನು ಕೂರೆ ಚಿಕ್ಕುಟ ತಗುಣೆಗಳಿವು ಹೀರುವರೆಣಿಪವು ರಕ್ತವ (ಭಕ್ತಸ. II, ೦೨-೧). **ಚಿಕ್ಕಟ$_1$ :** "ಯೂಕಾ ಮಕ್ಷಿಕಾದಯಃ = ಕೂರೆ, ತಗುಣೆ, ಚಿಕ್ಕಟ ಮೊದಲಾದವು" (ಬಾಹಟೀ. ೨-೫-೨೭ ವ) ; ಚಿಕ್ಕಟವು ಮೈಯ ಕಡಿವಂತೆ (ಸರ್ವಜ್ಞ. ೧೪೧೭); ಚಿಕ್ಕಟದ ಕಾಲುಗಳು ೦.೦೫ ಅಂಗುಲ ಉದ್ದ–ಅಡ್ಡಲಾಗಿ ೧೩ ಅಂಗುಲ, ಎತ್ತರ ೭.೭೫ ಅಂಗು ಲಹಾರಬಲ್ಲವು (ಕೀಟಬಿ. ೩). **ಚಿಕ್ಕಟು:** ಎಕ್ಕತೂಳದ ಭಟತತಿಯ ಚಿಕ್ಕಟು ತಿಗುಣೆಯ ತಿಕ್ಕುವಂದದಿ ನೆಲಕಿಕ್ಕಿದನರೆಗಳಿಗೆಯೊಳು (ನೇಮಿಸಂ. ೨೯-೩೧). **ಚಿಕ್ಕಡು :** ಗುಡಮಾಕ್ಷಿಕ ಮಳಯಜ . . . ಎಂಬಿವ ನಿಂಬಾಗೊಡಗೂಡಿ ಧೂಪಿಸುಗೆ ಚಿಕ್ಕಡು ನೊರಜುಂ ತಗುಣೆ ಬಾವಲೆಂಬಿವು ಕಿಡುಗುಂ (ಲೋಕೋಪ. ೭-೩೯); ದಂಶಮಶಕ–ಚಿಕ್ಕಡು ನೊರಜು (ತಸೂವ್ಯ. ೨೯೭) ; ಕೊಂಡೆಯನಂತೆ ಪತ್ತುವ ಚಿಕ್ಕಡಿನಿಂ ಕಡುಘಾತಕನಂತೆ ನೋಯಿಸುವ ಪೆನೊರ್ಣಗಳಿಂ . . . ಬಿಂಬಿಮ್ಮೆಂಬ ಪೇರವಿಯಂ ನೋಡಿ(ಧರ್ಮಾಮೃ. ೩-೫೩) ; ದಂಶಮಶಕ–ಚಿಕ್ಕಡು ಗುಂಗುಱುಂ (ತತ್ತ್ವಪ್ರ. ೩೩೩). **ಚಿಕ್ಕಾಟ:** ಇಲ್ಲಿಗೆ ಬಂದರೆ ಅವರನ್ನು ತಗುಣೆ ಚಿಕ್ಕಾಟಗಳಂತೆ ಕಾಲಿನಿಂದ ತುಳಿದು ನಾಶಮಾಡುತ್ತೇನೆ (ಮಂದಾಕಿ. ೧೫೪). **ಚಿಕ್ಕಾಡಿ :** ಚಿಕ್ಕಾಡಿ ತಗುಣೆಯೂ ರಕ್ಕಸರು ಜಾರೆಯರು ಒಕ್ಕಲಿಕ್ಕುವರು ಇರುಳೆಲ್ಲ ಬೆಳಗಾಗಿ ಸುಕ್ಕಿದಂತಿಹರು (ಸರ್ವಜ್ಞ. ೧೮೫೫). **ಚಿಕ್ಕಾಡು:** ಆನೆ ನೀರೊಡಗೂಡಿ ತಾನಾಡುತಿರಲೊಂದು ಮೌನದ ಚಿಕ್ಕಾಡು ನುಂಗೆ ಕಂಡು ಮಾನಿನಿ ನಲಿದಾಡುತ (ಮಿಶ್ರಸ್ತೋ. ೬೮) ; ಆನೆಯನೆತ್ತುವಂಗಾಡು ಚಿಕ್ಕಾಡೆಂಬಂತೆ ಗೋವರ್ಧನಾಚಲಮನೆತ್ತಿ (ಅರ್ಧನೇ. ೭-೮೨ ವ) ; ಬೆಕ್ಕಿಲಿಯೂ ಗೂಬೆಯೂ ಚಿಕ್ಕಾಡು ತಗುಣೆಯೂ ರಕ್ಕಸ ಕಳ್ಳಜಾರರುಱಿ ಕತ್ತಲೆಯ ಮಕ್ಕಳು (ಸರ್ವಜ್ಞ. ೧೧೯೧); ಇಲಿ ಮತ್ತು ಚಿಕ್ಕಾಡುಗಳ ಮೂಲಕ ಪ್ಲೇಗು ಬರುತ್ತದೆ (ಆಡುಸಾ. ೪೮). **ಚಿಕ್ಕುಟು :** ಮುನ್ನಿನ ಭವದೊಳ್ ಪರಿಪಡೆ ಚಿಕ್ಕುಟುಮಂ ಗುಂಗುಱುಮಂ ನೆಱೆ ಸೋವುತಿರ್ದ ಭಕ್ತಿಯ ಭರದಿಂ (ಬಂಹರಿ. ೭-೭೫). **ಚಿಕ್ಕುಡು :** ತುಂಬಿ ಪತಂಗ ನೊಣ ಜೇನನೊಣ ಚಿಕ್ಕುಡು . . . ಮೊದಲಾದುವಕ್ಕೆ ಸ್ಪರ್ಶನ ರಸನ ಘ್ರಾಣಮುಮಕ್ಕು (ಶಾಸ್ತ್ರಟೀ. ೧೧೭-೬). **ಚಿಗಟ :** ಇವುಗಳಲ್ಲಿ ಇಲಿಗಳ ಮೇಲೆ ಜೀವಿಸುವ ಚಿಗಟಗಳು ಪ್ಲೇಗ್ ರೋಗವನ್ನು ತರುವುವು (ಗೃಹವಿ. ೧೮೭); ಕಣಜದ ಶೈತ್ಯದಿಂದ ಚಿಗಟಗಳು ಮೇಲಕ್ಕೆ ಹಾರಿ ಬಂದು ಆಳಿನ ಮೊಗಕ್ಕೆ ಮುತ್ತಿದವು (ಬಿಸ್ತ್ರಕ. ೧೦೮) ; ಚಿಗಟನ ಕಣ್ಣೊಳಗೆ, ಆನೆಪೋಗಿ ಕುಂತರೂ ನಾವು ಆಶ್ಚರ್ಯಪಡಬೇಕಾಗಿಲ್ಲ (ಕರಿಕಂ. ೭) ; ಅಡವಿಗೆ ಹೋದರೂ ಚಿಗಟದ ಕಾಟ ತಪ್ಪದು (ಗಾದೆ). **ಚಿಗಟೆ :** ತತ್ತತ್ಪ್ರಕೃತಿ ವಿಶೇಷಂಗಳಿಂ . . . ಮ್ಯತ್ಸಃ – ಚಿಗಟೆಯಾಗಿ (ಬಾಹಟೀ. ೧೧-೧೩ ವ).

**ಚಿಕ್ಕುಟು** 'ಚಿಕ್ಕುಟ' ನೋ.

**ಚಿಕ್ಕುಡಿಪ್ಪೆ** (ನಾ). ಒಂದು ಬಗೆಯ ಗಿಡ: (ವ್ಯಜಿಗಿ. ೪೧-೮೦೨). [ ? ]

**ಚಿಕ್ಕುಡು** 'ಚಿಕ್ಕುಟ' ನೋ.

**ಚಿಕ್ಕುಳ** (ನಾ). ಸಣ್ಣವ್ಯಕ್ತಿ ; ಕೀಳು ದರ್ಜೆಯವನು : ವೇದವ ಕಲಿತು ಶಾಸ್ತ್ರವನೋದಿ . . . ಪರತತ್ತ್ವವ ನೋಡಿ ಕಂಡಿಹೆವೆಂದು ಹೇಳುತಿಪ್ಪ ಹಿರಿಯರೆಲ್ಲರು ಇಕ್ಕುವ ದಾತಾರನ ಬಾಗಿಲವ ಕಾಯ್ದು ಚಿಕ್ಕುಳರಾದರು [ಪಾಠಾಂ. ಚಿಕ್ಕಮಕ್ಕಳಾದರು] (ವೋಳಿವಮ. ೫೩-೨೧೮).

[ ಚಿಕ್ಕ$_1$ + ಕುಳ್$_5$ (= ಕುಲ) ]

**ಚಿಕ್ಕೊಳಿ** (ನಾ). (?) : ಹುತ್ತದ ಮೇಗಣ ಕಾಗೆ ನೆತ್ತಾ ಕಾರೋದ ಕಂಡೆ ಕಿತ್ತೂಳಿ ಕಂಡೇ ಗುರುತೀಗೆ ಅತ್ಕಮ್ಮ ಚಿಕ್ಕೂಳಿರಾಗೀಲಿ ಇರ್ವೇಳುತ್ತಿದ್ದೋ (ಹುಟ್ಟಿಹ. ೭೨). [ ? ]

**ಚಿಕ್ಕೊಳಿಗ** (ನಾ). ಸಣ್ಣಪುಟ್ಟ ಕೆಲಸ ; ಕಿರುಕುಳ ಸೇವೆ : ಓಲಗ ದಬಲೆಯುರನು ಬೀಳ್ಕೊಟ್ಟು ಚಿಕ್ಕೊಳಿಗದವರೊಡಗೂಡಿ ಲೀಲೆಯಿಂ ನರಸಿಂಹನಂತ್ಯೆದಿದ (ಕಂನವಿ. ೧೧-೧೨೫); ತೂಗದಿರಿಯೆಂದು ಚಿಕ್ಕೊಳಿಗ ದವರ ಸಂಜ್ಞೆಯಾಗಿ ನಿಂದಿರಿಸಿ ಅಪ್ಪಣೆವಿಡಿದು (ಕೃಷ್ಣವಿ. ೩-೮೬).

[ ಚಿಕ್ಕ$_1$ + ಊಳಿಗ (< ಊಟಿಗ) ]

**ಚಿಕ್ಕೆ**$_1$ 'ಚುಕ್ಕೆ$_1$' ನೋ.

**ಚಿಕ್ಕೆ**$_2$ (ನಾ). ೧. ಚಪ್ಪಟೆಯಾದ ಮೂಗುಳ್ಳ ಹೆಂಗಸು. ೨. ಇಲಿ. ೩. ಅಡಕೆ : (ಕಿ). [ ಸಂ. ಚಿಕ್ಕಾ ]

**ಚಿಕ್ಕೆಬೊಟ್ಟು** (ನಾ). ಚುಕ್ಕೆಯ ಆಕಾರದಲ್ಲಿರುವ ಬೊಟ್ಟು; ಹಣೆಗೆ ಇಡುವ ದುಂಡನೆಯ ಸಾದಿನ ಗುರುತು : (ಕಿ).

[ ಚಿಕ್ಕೆ$_1$ (< ಚುಕ್ಕೆ$_1$) + ಬೊಟ್ಟು$_2$ (< ಬಟ್ಟು$_1$) ]

**ಚಿಕ್ಕೆರಲೆ** (ನಾ). ಮರಿಹುಲ್ಲೆ ; ಜಿಂಕೆಯ ಮರಿ : ಕಿಱುದಳಿರಂ ಗೆಲ್ವಧರದ ಚಿಕ್ಕೆರಲೆಯ ಸೋಲಿಪ ನಗೆಗಣ್ಣ (ಜಯಶಾ. ೩-೨೨).

[ ಚಿಕ್ಕ$_1$ + ಎರಲೆ ]

**ಚಿಕ್ಕೇಲ** (ನಾ). ಒಂದು ಬಗೆಯ ಔಷಧಿ ಗಿಡ : "ಅರೇಣು, ಚಿಕ್ಕೇಲ, ಕಡಲೆ" (ಒಷಧಿ. ೩). [ ? ]

**ಚಿಕ್ಕೇಲಕ್ಕಿ** (ನಾ). ಸಣ್ಣ ಏಲಕ್ಕಿ : "ರಾಷ್ಟ್ರವೃದ್ಧಿಕರೀ–ಚಿಕ್ಕೇಲಕ್ಕಿ" (ಒಷಧಿ. ೧೩೯). [ ಚಿಕ್ಕ$_1$ + ಏಲಕ್ಕಿ ]

**ಚಿಕ್ಕೊತ್ತೆ** (ನಾ). ಸ್ವಲ್ಪಹೊತ್ತಿನ ಸಹವಾಸಕ್ಕಾಗಿ ಮಾತ್ರ ಸೂಳೆಯರಿಗೆ ಕೊಡುವ ಒತ್ತೆಯ ಹಣ; ಹಗಲು ಹೊತ್ತಿನಲ್ಲಿ ಕೊಡುವ ಒತ್ತೆಹಣ; ಹಗಲೊತ್ತೆ : ಮತ್ತೆ ಬೊಜಂಗರಿಲ್ಲ ಪೊಱಗೊಚ್ಚತವೇಂ ನಿನಗುಂಟು ತೋಳ ಚಿಕ್ಕೊತ್ತೆಗೆ ಪೊಕ್ಕೆಯಿಂತು ಶುನಿಯಂತಿರೆ ನಿಲ್ವರೆ ಸೂಳೆಕೇರಿಯೇ ಒತ್ತೆಗೆ ನಾಣ್ಚೆಯುಂ ಪೊಱಮಡಾಂ ಮೊಱೆಯಿಟ್ಟಪೆನೆಂದು ಸುತ್ತಿದಳ್ ಮುತ್ತಿದಳಚ್ಚೆ ಚೌಕಿಗೆಯನೊರ್ಬಳೆ ಮಾರಿಯ ಮೂರಿಯಂದದಿಂ (ಲೀಲಾವ. ೨-೧೨೨) ; ಬಾಗಿಲೊಳ್ಬೊಜಗರೀಗಳ್ಬಂದು ನಿಂದಿರ್ದಪರ್ ಕರೆ ನಿಮ್ಮಕ್ಕನನಕ್ಕುವಕ್ಕು ಹೊಸತೀ ಚಿಕ್ಕೊ[ಪಾಠಾಂ. ತ್ಕೊ]ತ್ತೆಯಂ ಕೊಟ್ಟು ನೋಡಿರೆ (ಶಾಂತೀಶ್ವ. ೧೦-೭೮) ; ಹರಿಸದಿನಿತ್ತ ಹಗಲ ಚಿಕ್ಕೊತ್ತೆಯ ನಿರುಳೊತ್ತೆಯ ಹಣಮೆನುತವೆ ಬಗೆದು (ಜಯಶಾ. ೧೪-೫೨).

[ ಚಿಕ್ಕ$_1$ + ಒತ್ತೆ$_1$ ]

**ಚಿಕ್ಲೀತಾಸೊಪ್ಪು** (ನಾ). ಒಂದು ಬಗೆಯ ಸೊಪ್ಪು: ಚಿಕ್ಲೀತಾಸೊಪ್ಪು, ನೀರುಪುಳ್ಳಂಪುರಚಿಎಲೆ ಗಿಡ (ಮೈಜಿಗಿ. ೨೫-೧೧೫೨). [ ?+ ಸೊಪ್ಪು$_3$ ]

**ಚಿಗಟ** 'ಚಿಕ್ಕುಟ' ನೋ.

**ಚಿಗಟಾಯಿಸು** 'ಚಿಕಟಾಯಿಸು' ನೋ.

**ಚಿಗಟೆ** 'ಚಿಕ್ಕುಟ' ನೋ.

**ಚಿಗಣೆ** 'ಚಿಗುಳಿ' ನೋ.

**ಚಿಗಪ್ಪ** 'ಚಿಕ್ಕಪ್ಪ' ನೋ.

**ಚಿಗರಿ**$_1$ 'ಚಿಗರೆ$_1$' ನೋ.

**ಚಿಗರಿ**$_2$ 'ಚಿಗರೆ$_2$' ನೋ.

**ಚಿಗರಿಗಣ್**, ಚಿಗರಿಗಣ್ಣು (ನಾ). ಜಿಂಕೆಯ ಕಣ್ಣುಗಳಂತಿರುವ ಕಣ್ಣು. ಚಿಗರಿಗಂಗಳ ಚೆಲುವಿ ಚೆದರಿ ನಿಂತಾಳ (ಸಹೀಗೀ. ೧೧೦-೧). **ಚಿಗರಿಗಣ್ಣು** : ನೆಕ್ಲಿದೋವ್ ಒಳಗೆ ಪ್ರವೇಶಿಸಿದಾಗ ಆ ಚಿಗರಿಗಣ್ಣುಗಳು ಕ್ಷಣಕಾಲ ಮಾತ್ರ ತಾಯಿಯಿಂದ ಸರಿದು ಅವನ ಕಣ್ಣುಗಳನ್ನು ಸಂಧಿಸಿದುವು (ಪುನರು. ೨೩೮). [ ಚಿಗರಿ$_1$ (< ಚಿಗರೆ$_1$) + ಕಣ್ ]

**ಚಿಗರಿಗಣ್ಣು** 'ಚಿಗರಿಗಣ್' ನೋ.

**ಚಿಗರೆ**$_1$, ಚಿಗರಿ$_1$ (ನಾ). ಜಿಂಕೆ ; ಹುಲ್ಲೆ : ಹಕ್ಕಿ ಗಾನ ಮಾಡುತಿವೆ ಭೃಂಗ ದಿಕ್ಕಿಗೋಡುತಿವೆ ಇದನು ನಿಂತು ನೋಡುತಿವೆ ಚಿಗರೆ ಸಾಲ್ಗಳು (ಪಯಣ. ೫೧-೮) ; ಅವಳೊಂದು ಹೆಣ್ಣು ಚಿಗರೆ ಯಾರ ಕೈಗೆ ಬಿದ್ದಿತೋ (ಹೊಸಬಿ. ೯೮); 'ದೀರ್ಘಾಪಾಂಗ' ವೆಂಬ ಚಿಗರೆ ಆಕೆಯ ಮುದ್ದುಕಂದ (ಧರ್ಮಸಾ. ೬೮). ತಾರಾಪದನು ಚಿಗರೆಯ ಮರಿಯ ಹಾಗೆ ಬಂಧನಭೀರು (ಇಪ್ಪಕ. ೧೬೦). **ಚಿಗರಿ**$_1$ **:** ಚಿಗರಿ ಮೊಲ ಜೇನ್ನುಣಿಸೆವಣ್ಣಿಂ (ಮಹಾವಿ. ೭-೩೨) ; ಚಿಗರಿಯಂತೆ ಜಿಗಿದು ಒಳಗೆ ಓಡಿಹೋದ (ಪ್ರೇಮತ. ೯೬) ; ಚಂದಪ್ಪ ಮೂಡ್ಯಾನ ಚಿಗರೀಯನೇರ್ಯಾನೋ(ಗಾಳಿಗು. ೧೬) ; ನಮ್ಮ ಚಿಗರಿಯನ್ನು ಬಿಟ್ಟು ಅದನ್ನು ಹಿಡಿಯಲಿಕ್ಕೆ ಓಡೋಣ (ಮುಂಬಯಿ. ೧-೨೭).

**ಚಿಗರೆ**$_2$, ಚಿಗರಿ$_2$ (ನಾ). ಒಂದು ಬಗೆಯ ಗಿಡ ; ಸುಜ್ಜಲು ; P ಇದರ ಸೊಪ್ಪನ್ನು ಒಣಗಿಸಿ ಪುಡಿಮಾಡಿ ಸೀಗೆಪುಡಿಯೊಂದಿಗೆ ಉಪಯೋಗಿ ಸುತ್ತಾರೆ : ಚಿಗರೆಯ ಪುಡಿಗೂ ಈಗ ಬೆಲೆ ಹೆಚ್ಚಾಗಿದೆ (ರೂಢಿ). **ಚಿಗರಿ**$_2$ **:** ಸುಜ್ಜಲು, ಚುಚ್ಚಲು, ಚಿಗರಿ, ಬೀಳ್ಕಂಬಿ, ತುಗಿ (ಮೈಜಿಗಿ. ೪-೬೨).

**ಚಿಗವ್ವ** 'ಚಿಕ್ಕವ್ವ' ನೋ.

**ಚಿಗಳಿ** 'ಚಿಗುಳಿ' ನೋ.

**ಚಿಗಿ**$_1$, **ಜಿಗಿ**$_1$ (ಕ್ರಿ). ೧. (ಬೆರಳುಗಳಿಂದ) ಚಿಮ್ಮಿಸು ; ಮಿಡಿ : "ಚಿಗಿ– ಅಂಗುಲಿ ವಿಸರ್ಜನೇ(ಬೆರಳಿನಿಂದ ಚಿಮ್ಮು)"(ಶಮಧಾ);ಚಿಗಿದಂಬು ಕಡಿದುದು ಕರ್ಣನಂದನನ (ಕುವ್ಯಾಕ. ೨೦-೩೫) ; ಅಂಡೆಯ ನೆಗಹಿ ಕುಂಕುಮರಸ ದುಂಬಿ ಕೈಯಂಡೆಯ ಕೊಳವೆಯ ಚಿಗಿದು ಮಂಡೆಯ ನಿಡುಜಡೆವಿಡಿದು ಹೊಯ್ದಾಡಿದರು (ವೋಹಶ. ೧೪-೬೫). ೨. ನೆಗೆ ; ಕುಪ್ಪಳಿಸು ; ಹಾರು ; ಚಿಮ್ಮು : ಗಗನಕೆ ಚಿಗಿದು ಮಾರುತಿಯಗ್ನಿಬಾಣವ ತೆಗೆದೆಸಲಸುರಾಧಿಪನು (ಅಂಜಚ. ೧೪-೨೦೪) ; ಸೆಳೆದು ಹಿರಿಯುಬ್ಬಣವನವನಿಪ ಕೆಲಕೆ ಚಿಗಿದನು (ಕುವ್ಯಾಕ. ೪-೩೬) ; ತುರಗದ ಮೊಗಂ ಮೊಗರಂಬುಮಾಗ ಗಗನಕೆ ಚಿಗಿಯೆ (ಚಿಬಪು. ೩೨-೭) ; ನೇಜೆಯುದಿಱಿತಕೆ ಚಿಗಿದು ಕುದುರೆಯಿಂದ ಮಾಜದೆ ಬೀಳ್ವ ರಾವುತರ . . . ಯಮರಾಜನಾಲಯಕಟ್ಟಿದರು (ಕಂನವಿ. ೩-೬೯) ; ತೆಗೆದಾ ಜಟಾಯುವಿನ ಪ್ರಾಣಗಳನಾಕ್ಷಣದಿ ಚಿ[ಪಾಠಾಂ. ಜಿ]ಗಿಯೆ ಸದನಕೆ (ವಂಕಾರಾ. ೧-೩-೨೦). **ಜಿಗಿ**$_1$ **:** ೨. ಅತ್ತಳ್ ಬಸಿಱಿಂ ಪೊಸೆದಳ್ ಜಿಗಿದಳ್ (ಅರ್ಧನೇ. ೭-೩೫) ; ಜಿಗಿವ ರಕುತದ ಗದೆಯ ಬಿಱುವೊಯ್ಲುಗಳೊಳಗೆ ಕಿಡಿ ಮಸಗಿ (ಕುವ್ಯಾದ್ರೋ. ೩-೩೫) ; ಧರಣಿ ಜಿಗಿದುದು ಗಜಂಗಳ್ ಕುಗ್ಗಿದುವು (ಚಿಬಪು. ೨೬-೧೧) ; ತಿಂಮ ಸಿದಿಗೆಯಿಂದ ಜಿಗಿದು ಹಾರಿ ಮನೆಗೇ ಓಡಿದ (ತಿಂಮತ. ೧೯).

**ಚಿಗಿದಾಡು** = ಕುಣಿದಾಡು; ನಲಿದಾಡಂ: ಕಂಜನಾಭನ ಕಂಡು ಪರವಶ ದಲಿ ಹಾಹಾ ರಂಜಿಸುತಲಿ ಎರಗಿ ಚಿಗಿದಾಡಿದ ಚರಣ(ವಿದಾಕ್ಯ. ೨೭-೨); ದಿಕ್ಕು ಗಳ ಮರೆದು ಧಿಗಿಧಿಗಿಯೆಂದು ಚಿಗಿದಾಡೆ (ವಿದಾಕ್ಯ. ೧೨೭-೪). **ಚಿಗಿದೇಳು**= ಚಿಮ್ಮಿ ಮೇಲಕ್ಕೆ ಬರು : ಅದ್ದ ರಥ ಹರಿಯುರವಣೆಗೆ ಚಿಗಿದೆದ್ದು ಸವು ಪಾಯ್ದುಭಯ ಘಟ (ಕುವ್ಯಾಕ. ೭-೨೨).

**ಚಿಗಿ**$_2$ (ಕ್ರಿ). ಚಿಗಿತು (ಭೂತನ್ಯೂ). ೧. ಚಿಗುರು ; ಮೊಳಕೆಯೂಗು ; ಮೊಳೆದೋರು ; ಪಲ್ಲವಿಸು : ಏತದ ಗಣೆ ಚಿಗಿತು ಕಾತು ಫಲ ವಾದಂದು(ಸರ್ವಜ್ಞ. ೦೭-೭೦); ಈ ಕುಡಿಯು ಚಿಗಿಯುವುದಿನ್ನು ಕರುಣಾಳು, ನನ್ನೊಡೆಯ (ಪಿಪಾಸಿ. ೪೦-೭) ; ಒಂಬೊಂದು ದೇಶ ಮೋಹಪಾಶವನ್ನು

ಬಿಗಿಯಿತು ಅದಕು ಹೃದಯ ಚಿಗಿಯಿತು (ಪಯುಣ. ೫-೮); ಕಲ್ಪವೃಕ್ಷದ ಅಗಿಯೇ, ಚಿಗಿಯೇ (ಗರಿ. ೪೮-೪). ೨. (ಆಲಂ) ಚೈತನ್ಯಹೊಂದು; ಚೇತರಿಸಿಕೊಳ್ಳು: ಶ್ರೀಕಂಠಶಾಸ್ತ್ರಿಗಳು ಮತ್ತೆ ಚಿಗಿತರು(ಗಂಗಾಸಾ. ೧೧೧).
[ <ಚಿಗುರ್₁. / ಕುರುಖ್. ಚಿಗಾ, ಚಿಗೀ ]

**ಚಿಗಿಲ್** 'ಜಗಿಲ್₁' ನೋ.

**ಚಿಗಿಹಲ್ಲೆ** (ನಾ). (?): ಸುರಪನಿಡುವ ಚಿಗಿಹಲ್ಲೆಯ ಮೋಹನ ಶರಮಂ ಬೆಳಗುವ ಸಿಕಿನಿವಳಿಯ ರತಿ ವರನಾ ಮೋಹನವಂಚಕ ವಿತತಿಯನಟಿಸಿ ಹಿಡಿದು ತರಲು (ಜಯಕಾ. ೧೪-೧೧). [ ? ]

**ಚಿಗುಟು** 'ಚಿವುಂಟು' ನೋ.

**ಚಿಗುರ್₁** ಚಿಗುರು₁ (ಕ್ರಿ). ಚಿಗುತು, ಚಿಗುರ್ತು (ಭೂತನ್ಯೂ). ೧. ಅಂಕುರಿಸು; ಪಲ್ಲವಿಸು; ಮೊಳಕೆಯಾಗು: "ಚಿಗುರ್-ಪಲ್ಲವೋತ್ಪತ್ತೌ" (ಶಮಧಾ); "ಚಿಗುರಾದುದಕೆ ಚಿಗುರ್ತುದಕ್ಕುಂ" (ಶಶರ. ೩೬); "ಪರ್ಣತೀತಿ ಚಿಗುರ್ದಪುದೆಂಬುದು" (ಕಾಶಶ್ಮ. ೩೬): ನೀರಸ ತರು ಚಿಗುರ್ವ ವು (ತೊರರಾ. ೧-೫-೬೦). **ಚಿಗುರು₁**: ೧. ಮಾಗಿಯೊಳ್ಬೇಸಗೆಯೊಳುಂ ಚಿಗುರಿದೆಳವುಲ್ ಮೃಗಂಗಳ್ಗೆ ಬೀಯದು (ಜ್ಞಮಿಭಾ. ೧೫-೧೮); ಗಿಡ ಹಬ್ಬುವುದು; ಚಿಗುರುವುದು (ಸಾಹಿಜೀ. ೮೧). ೨. ಉಂಟಾಗು; ತಲೆದೋರು: ಹಗೆತನವು ನಿನಗೇನು ಕಾರಣ ಚಿಗುರಿದುದು (ತೊರರಾ. ೪-೨-೨೩). ೩. ಉತ್ಸಾಹಗೊಳ್ಳು: ರಸಂದೆಗೆವ ದನಿ ನಿಮಿರೆ ನಾಲ್ಕು ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ (ಗಿರಿಕ. ೨-೩೯). ೪. ಚೈತನ್ಯ ಹೊಂದು; ಪ್ರವರ್ಧಮಾನಕ್ಕೆ ಬರು: ಹಿಂದೆ ವ್ಯಾಪಾರದಲ್ಲಿ ನಷ್ಟ ಹೊಂದಿ ಕುಗ್ಗಿದ್ದರೂ ಈತ ಈಚೆಗೆ ಚಿಗುರಿಕೊಂಡಿದ್ದಾನೆ (ರೂಢಿ).

**ಚಿಚ್ಚಿಗುರು** (ದ್ವಿರುಕ್ತಿ): ದೇವನ ಕರುಣೆಯ ಕರುಳಿನ ತಿರುಳೊಂದು ಚಿಚ್ಚಿಗುರುತಿರುವಂತೆ ಪ್ರತಿದಿನವು (ಸಖೀಗೀ. ೩೩-೬೪೨).

[ ದೇ.೫ ತಮಿ. ಇವಿಟ್; ತುಳು. ಇಗುರು, ಚಿಗುರು, ತಿಗುರು, ಸಿಗುರು; ತೆಲು. ಇಗುರು, ಚಿಗುರು, ಚಿವುರು = ತಳಿರು, ಕುಡಿ ]

**ಚಿಗುರ್₂**, ಚಿಗುರು₂ (ನಾ). ತಳಿರು; ಕುಡಿ; ಪಲ್ಲವ: ಮರಂಗಳ ಚಿಗುರ್ಗಳಿಂದೊಗೆದೆಲರಿಂ (ಕಾದಂಪೂ. ೧೧೬); ಚಿಗುರಿಂ ಪೂವಿಂ ಕಾಯಿಂ ಸೊಗಯಿಪ ಮಾವಿಂಗೆ ಪುಣಸೆಗೆಟಗಲ್ವೇಡಾ (ಸಮಪ. ೯-೫೬); ಚಿಗುರೆಂದುಂ ಮೆಲೆ ಬೇವು ಸ್ವಾದುವಹದೇ (ಸೋಮೇಶ. ೪೧). **ಚಿಗುರು₂**: ಚಿಗು [ಪಾಠಾಂ. ಗ] ರು ತಳಿರು ಪತ್ರೆ ಮೊದಲಾದವಟಿಲ್ಲಿಯ ಗಂಧವನಟುವುದು ಆಚಾರಲಿಂಗದಲ್ಲಿಯ ಶಿವಲಿಂಗ (ಆದವ. ೫-೧೨); ಚಿಗುರನಿರದೊದವಿಸುತ . . . ಬಂದೆಸೆದುದು ನವಚೈತ್ರಂ (ಜಯಕಾ. ೧೧-೧); ಕೆಲರು ಚಿಗುರಿನ ತೊಡವ ಧರಿಸಿದರು (ನಳಚ. ೧-೪೦); ಸವಿಯ ಬಾ . . . ಸೀ ಹುಳಿಯ ಚಿಗುರನ್ನು (ನವ್ಯಧ. ೨-೯).

**ಚಿಚ್ಚಿಗುರು** (ದ್ವಿರುಕ್ತಿ): ಮೊಳಕೆಯಲಿ ತುಂಬಿ ಚಿಚ್ಚಿಗುರಿನಲ್ಲಿ ತುಂಬಿ (ಗಂಗಾತ. ೧೧೮-೧೧). **ಚಿಗುರಾಗು** = ಚಿಗುರು; ಮೊಳಕೆದೋರು: "ಚಿಗುರಾದುದೆಲೆ ಚಿಗುರ್ತುದಕಕ್ಕು ಪೆಸರು" (ಶಬ್ದಸ್ಮ. ೨೨); "ಚಿಗುರ್ತುದೆನೆ ಚಿಗುರಾದುದು (ಶಬ್ದಮಂ. ೨೨). [ < ಚಿಗುರ್₁ ]

**ಚಿಗುರಾಸೆ** (ನಾ). ಮುಂದೆ ಕಾರ್ಯರೂಪಕ್ಕೆ ಬರುತ್ತದೆಂಬ ಆಸೆ; ಆಶಾಂಕುರ: ತುಕ್ರನ ಹೆಂಡತಿ ಸಂಕ್ರಿ ಇವರಾದರೂ ಜೊತೆಯಾದಾರು ಎನ್ನುವ ಚಿಗುರಾಸೆಯಿಂದ 'ಓಯ್' ಎಂದು ಕೂ ಹಾಕಿದ್ದಕ್ಕೆ (ಹೊಸಕ್ಷ. ೪೯). [ ಚಿಗುರ್₂ + ಆಸೆ₁ ]

**ಚಿಗುರಿಕ್ಕು** (ಕ್ರಿ). ಚಿಗುರಂಗಳಿಂದ (ಮನೆಯನ್ನು) ಅಲಂಕರಿಸು; ಹಸಿರು ತೋರಣವನ್ನು ಕಟ್ಟು: ಪೊಸತಿಲ ಮೇಲನೊಕ್ಕಿಟದು ಮಾಸಲ ತುಯ್ಯಲನಟ್ಟು ಬಾಗಿಲರ್ಚಿಸಿ ಚಿಗುರಿಕ್ಕಿ ಚಟ್ಟಿಟಿದು (ಪಸಾರ. ೪೬೫).
[ ಚಿಗುರ್₂ + ಇಕ್ಕು ]

**ಚಿಗುರಿಡು** (ಕ್ರಿ). ೧. = ಚಿಗುರಿಕ್ಕು. ೨. ಕಾಂತಿಯನ್ನು ಹೊಂದು.- ಪಡೆ: ಚಿಗುರಿಡೆ ದೇಗುಲಂಗಳಗರಂ ಪೊಗರೇಟಿ (ಚಕವಿ. ೨-೬೦).
[ ಚಿಗುರ್₂ + ಇಡು₁ ]

**ಚಿಗುರಿಸು** (ಕ್ರಿ). ೧. ಮೊಳೆಯುವಂತೆ ಮಾಡು; ಚಿಗುರುವಂತೆಮಾಡು: ಮಿಂಡೆದ್ದ ಹಣ್ಣಾಳುವವನಕೆ ನಡೆತಂದು . . . ಕಂಡ ಕಂಡವನಿಜಾತಂಗಳಂ ಚಿಗುರಿಸಿದರು (ಜ್ಞಮಿಭಾ. ೩೦-೫); ಸುಗಿವ ಮಳೆ ಹಳೆಯುಗೆಯೊಳಡಗಿರ್ಪ ಬೇರ್ಗಳಿಂ ಚಿಗುರಿಸಿತು ತಾಯ್ನೆಲದ ಹಸುರುಡುಗೆಯೊಡಲಂ (ಕಾಲೂರ. ೪೫-೬೩). ೨. (ಆಲಂ) ಸಂತೋಷಪಡಿಸು; ಉತ್ಸಾಹಗೊಳಿಸು; ನಲಿಯಿಸು: ಈ ಗಿರಿಜೆಯ ನಿಜರಾಗಂ ಶಂಕರನ ಚಿತ್ತಮಂ ಚಿಗುರಿಸದೇ (ಗಿರಿಕ. ೪-೫೬); ಚಿತ್ರಮೋಹಿನಿ ಕೂಡೆ ಬಂದು ನಿಂದಳು ಮರುಳು ಚಿತ್ತವೆಲ್ಲವ ಚಿಗುರಿಸುತ (ಭರಚ. ೧೨-೬೨); ಕೇಳ್ದರ ಚಿತ್ತಮಂ ಚಿಗುರಿಕುಂ ಚಿಕದೇವನ ಜಾಣದೆಂತುಟೋ (ಚಕವಿ. ೪-೧೧೫). [ ಚಿಗುರ್₂ + - ಇಸು₃ ]

**ಚಿಗುರು₁** 'ಚಿಗುರ್₁' ನೋ.

**ಚಿಗುರು₂** 'ಚಿಗುರ್₂' ನೋ.

**ಚಿಗುರುದೋಟು** (ಕ್ರಿ). ಎಳೆಯ ಮೊಳಕೆ ಕಾಣಿಸಿಕೊಳ್ಳು; ಮೊಳಕೆಯೊಡೆ: ತೆಗೆದು ದಾರಿಗೆ ಹೆಜ್ಜೆಹೆಜ್ಜೆಗೆ ಚಿಗುರುದೋಟಿದ ತಳಿರ ಪಟಪಟಿದು (ತೊರರಾ. ೨-೪-೧೯).
[ ಚಿಗುರು₂ (<ಚಿಗುರ್₂) + ತೋಟು ]

**ಚಿಗುರುಪ್ರಾಯ** (ನಾ). ಎಳೆಯ ವಯಸ್ಸು: ಮಲ್ಲಿಗೆಯಂದದಿ ಚಿಗುರು-ಪ್ರಾಯದ ಮನವಮಲರುತಿದೆ (ಸಖೀಗೀ. ೨೦-೩೨೮).
[ ಚಿಗುರು₂ (<ಚಿಗುರ್₂) + ಪ್ರಾಯ ]

**ಚಿಗುರುಬೋಣೆ** (ನಾ). ಕೋಮಲೆ; ಎಳೆಯ ಪ್ರಾಯದ ಹುಡುಗಿ: ಚಿಗುರುಯಲೆಗಳ ತಂದು ಹಾಸಿಗೆಯನ್ನು ಮಾಡಿ ಚಿಗುರುಬೋಣೆಯು ಮಲಗೆ ಚಿಗುರುಪೊಗೆಯಾಯ್ತು (ಯನಳ. ೩೫); ಪಲ್ಲವಪಾಣಿಯು ಚೆಲ್ವ ಚಿಗುರುಬೋಣೆಯು ಮಲ್ಲಿಗೆ ಹೂವಿನ ಚೆಂಡ ಗಂಧದುಡಿಯೊಳದ್ದಿ ಬಸವಗಿಟ್ಟು (ಶರಲೀ. ೧೩೯-೩).
[ ಚಿಗುರು₂ (<ಚಿಗುರ್₂) + ಬೋಣ್₂. / ತೆಲು. ಇಗುರುಬೋಡಿ, ಇಗುರುಬೋಣೆ, ಚಿಗುರುಬೋಡಿ, ಚಿಗುರುಬೋಣಿ ]

**ಚಿಗುರುಮಿಸೆ** (ನಾ). ಹೊಸಹರಯದ ಗುರುತಾಗಿ ಆದೇ ತಾನೆ ಮೂಡುತ್ತಿರುವ ಮೀಸೆ: ಅಯ್ಯೋ ಚಿಗುರುಮೀಸೆ ಸರ್ದಾರ ಕೈಕಾಲು ಸೋಲ್ತಾವೊ (ದಿನಾರಿ. ೧). 'ತುಪ್ಪುಳುಮೀಸೆ' ಪರ್ಯಾ.
[ ಚಿಗುರು₂ (<ಚಿಗುರ್₂) + ಮೀಸೆ ]

**ಚಿಗುರೆತ್ತು** (ಕ್ರಿ). ಮೊಳಕೆದೋರು: ಆಲದ ಎಲೆ ಸೀಳಿ ಅರಳೆಲೆ ಚಿಗುರೆತ್ತಿ ಬಂದಂತೆ (ವಿಜಾಮಂ. ೬೩೦). [ ಚಿಗುರು₂ (<ಚಿಗುರ್₂) + ಎತ್ತು₁ ]

**ಚಿಗುರೆಲೆ** (ನಾ). ೧. ಚಿಗುರಾಗಿರುವ ಎಲೆ; ಎಳೆಯ ಎಲೆ; ಎಳತಾದ ಎಲೆ: ಚಿಗುರೆಲೆಗಳಿಂ ಕೂಡಿರುವ ಕುಡಿಲು, ಮರದ ಸುಳಿ (ಸಿದ್ಧಾಂತಿ. ೧೦೦); ಹಣ್ಣೆಲೆ ಉದುರುವಾಗ ಚಿಗುರೆಲೆ ನಗುವುದು (ಗಾದೆ). ೨. ತಾಂಬೂಲಕ್ಕೆ ಉಪಯೋಗಿಸುವ ಎಳೆಯ ವೀಳೆಯದೆಲೆ: ಹಣ್ಣುಕಾಯಿ ಎರಡೂವೆ ಮೊದಲಾಗಾಬೇಕು ಕಳಿಅಡಿಕೆ ಚಿಗುರೇಲೆ ಮೊದಲಾಗಾಬೇಕು (ಹುಟ್ಟುಹ. ೪೬).
[ ಚಿಗುರು₂ (<ಚಿಗುರ್₂) + ಎಲೆ₁ ]

**ಚಿಗುರೊಡೆ** (ಕ್ರಿ). ೧. ಚಿಗುರಂ ಮೂಡು: ಬಳ್ಳಿ ಚಿಗುರೊಡೆದಿದೆ (ರೂಢಿ). ೨. ಕಾಣಿಸಿಕೊಳ್ಳು; ತಲೆದೋರಂ; ಆವಿರ್ಭವಿಸು: ತನ್ನ ಕಾಲ ಮೇಲೆ ತಾನೇ ನಿಲ್ಲಬೇಕಾಯಿತು. ಈ ವಿಚಾರ ಚಿಗುರೊಡೆದು ಕಾರ್ಯೋನ್ಮುಖವಾಗಹತ್ತಿತು (ಜಯಂತ. ೩೪೩).
[ಚಿಗುರು₂ (<ಚಿಗುರ್₂) + ಒಡೆ₁ ]

**ಚಿಗುಳಿ, ಚಿಗಣಿ, ಚಿಗಳಿ, ಜಿವುಳಿ** (ನಾ). ಎಳ್ಳು, ಬೆಲ್ಲಹಾಕಿ ಕುಟ್ಟಿ ಮಾಡಿದ ಉಂಡೆ : ಪೂಜಿಸಿ ಎಣ್ಣೆಯಲ್ಲಿ ಅಭಿಷೇಕಮಂ ಮಾಡುವುದು ಚಿಗುಳಿ ತಂಬಿಟ್ಟನಲ್ಲಿ ಪೂಜಿಸುವುದು (ಬಾಲಚಿ. ೧೩೩-೭) ; ಚಿಗುಳಿ ಚಕ್ಕುಲಿ ಹಾಲವುಗೆ ಮಂಡಗೆ . . . ತಂದುಕೊಡುವರು (ಬಸಪು. ೧೮-೧೫) ; ಚಿಗುಳಿ ಲಡ್ಡುಗೆ ಸಕ್ಕರೆವೇಣಿಯೊಳವು ಮನ್ಮಂದಿರದೊಳ್ನೀಂ ಬಯಸಿ ಪೋಗಿ ತಂದಪೆನೀಗಳ್ (ವೃಷವಿ. ೯-೭೮). **ಚಿಗಣಿ :** ಚಿಗಣಿಯು ನೆನೆಅಕ್ಕಿ ನೆನೆಗಡಲೆ ಎಲ್ಲವನು ತಕ್ಕೊಂಡು (ನಾಪದ. ೧೭೫). **ಚಿಗಳಿ :** ಚಿಗಳಿ ತಂಬಿಟ್ಟುಗಳನ್ನೂ, ಕಡಬುಗಳನ್ನೂ . . . ತಂದುಕೊಡಲು (ಕೃವಾಆ. ೩೦೪) : ಇನ್ನು ಮೇಲೆ ನಿಮ್ಮನ್ನ ಮರೆತರೂ ಚಿಗಳೀನ ಮರೆಯೊಲ್ಲ ! (ನಮ್ಮೆ. ೧೨) ; ಚಿಗಳಿ, ತಂಬಿಟ್ಟು, ಹೆಸರುಂಡಿ, ಚಕ್ಕುಲಿ ತಯಾರಿಸಿದರು (ಕಿಪವು. ೩-೮೭). **ಜಿವುಳಿ :** 'ಜಿವುಳಿದುಟು' ಪರಾ.

**ಚಿಗಳಿಬೊಂಬೆ** = ೧. ಚಿಗುಳಿಯಂತೆ ಕಪ್ಪಾಗಿರುವ ಬೊಂಬೆ. ೨. (ಅಲಂ) ಕಪ್ಪುಬಣ್ಣದ ವ್ಯಕ್ತಿ : ಎಲ್ಲಿ ಬೇಕಾದರೂ ನೋಡಿ " ಚಿಗಳಿ " ಬೊಂಬೆಗಳು (ಬಿಸ್ಕತ್. ೫).

[ ದೇ.॥ ತೆಲು. ಚಿವ್ಮಿರಿ, ಚಿವ್ಮಿಲಿ ]

**ಚಿಗುಳಿದುಳಿ** 'ಚಿಗುಳಿದುಟು' ನೋ.

**ಚಿಗುಳಿದುಟು, ಚಿಗುಳಿದುಳಿ, ಜಿವುಳಿದುಟು** (ಕ್ರಿ). ಚಿಗಳಿಯಾಗುವಂತೆ ತುಳಿ ; ಗಿಜಿಗಿಜಿಯಾಗುವಂತೆ ತುಳಿ ; ಜಜ್ಜಿಹೋಗುವಂತೆ ತುಳಿ : ರಾಸಭಂ ಬಂದುಮಾ ವಾಸವಸ್ಯನ್ಯಮಂ ಕರ್ಚಿಯುಮೊದೆದು ಚಿಗುಳಿ ದುಟುದುಂ ಪಡಲ್ವಡಿಸುತ್ತುಮಿರೆ (ಜಗವಿ. ೮-೩೯ ವ). **ಚಿಗುಳಿದುಳಿ :** ಅಟ್ಟ ಕಪಿಗಳ ಚಿಗುಳಿದುಳಿದನು ಸೇನೆ ಮೆದೆಗೆಡಲು (ತಾಕಿರಾ. ೨೫-೨೦) ; ಹಗೆಯ ಬಲದಲಿ ಹರಿದು ಸುಭಟರ ಚಿಗುಳಿದುಳಿದುದು ತಲೆಗಳನು ಮುಗಿಲಗಲದಲಿ ಹರಹಿದುದು ದಿಕ್ಕರಿ (ಕುವ್ಯಾದ್ರೋ. ೩-೧೩) ; ನಿಮಿಷಮಾತ್ರದೊಳ್ ಮುತ್ತಿದ ಭಟರ್ಗಳಂ ಮುರಿದು ಶತಪತ್ರಗಳಂ ಚಿಗುಳಿದು[ಪಾಠಾಂ. ಳಿಂಬಂತೆ ತು]ಳಿದು (ಚಬಪು. ೨೮-೨೪) ; ಅಸಂಖ್ಯಾತ ವಾಜಿ ಕರಿಘಟೆ ಪಾಯ್ದಳವನ್ನು ಚಿಗುಳಿದುಳಿಯುತ್ತಾನೆ (ನಂಜುಂಡ. ೭೮). **ಜಿವುಳಿದುಟು :** ಸುಪ್ರತೀಕ[ಂ] ಕೆಯ್ಯ ಕಾಲ ಕೋಡೇಟಿನೊಳ್ ಬಲಮನೆಲ್ಲಂ ಜವನೆ ಜಿವುಳಿದುಟುವಂತೆ ತೊಟ್ಟುಟಿದುಟಿದು (ಪಂಪಭಾ. ೧೧-೭೨ ವ). [ ಚಿಗುಳಿ + ತುಟು$_1$ ]

**ಚಿಗುಳಿದುಟಿಸು** (ಕ್ರಿ). ಜಜ್ಜಿಹೋಗುವಂತೆ ತುಳಿಸು : ತುರಗಖುರಪುಟ ದೊಳರಿಗಳ ಶಿರಂಗಳಂ ಚಿಗುಳಿದುಟಿಸಿ (ದಶಕು. ೭-೫೨).

[ ಚಿಗುಳಿದುಟು + – ಇಸು$_3$ ]

**ಚಿಗ್ಲೂಣ** (ನಾ). ಸಡಿಲವಾಗುವುದು; ಅಳ್ಳಕವಾಗುವುದು : " ಶ್ಲಥತಾ = ಚಿಗ್ಲೂಣವು " (ಬಾಹಟೀ. ೨-೨-೭೭ ವ). [ ? ]

**ಚಿಚ್ಚಕ್ಷು** (ನಾ). ಮನಸ್ಸಿನ ಕಣ್ಣು; ಅಂತರ್ದೃಷ್ಟಿ ; ಜ್ಞಾನದೃಷ್ಟಿ: ಅಖಂಡಜ್ಯೋತಿಯಂ ಶುದ್ಧಭಾಸುರ ಚಿಚ್ಚಕ್ಷುವೊಳೀಕ್ಷಿಸುತ್ತೆ ಯುಮಿವ್ವಂದಂ ತಾಳ್ದುಮಾನಂದಮಂ (ಶಬಶಂ. ೨-೭೦).

[ ಸಂ. ಚಿಚ್ಚಕ್ಷುಸ್ (ಚಿತ್ + ಚಕ್ಷುಸ್) ]

**ಚಿಚ್ಛಕುದಿಬೋಯ** (ನಾ). ಒಬ್ಬಾತನ ಹೆಸರು: ಚಿಚ್ಛಕುದಿಬೋಯಸ್ಯ . . . ಶಮ್ಮಣ (ಇಆ. VII, ೧೮೮-೫೭: 668). [ <ಚಿಚ್ಛಕ್ತಿ + ಬೋಯ ]

**ಚಿಚ್ಛಕ್ತಿ** (ನಾ). ಚೈತನ್ಯ; ಆತ್ಮಶಕ್ತಿ: ಶಾಂತ್ಯತೀತೋತ್ತರಕಲೆಯೆಂಬ ಹೆಸರಿನ ಚಿಚ್ಛಕ್ತಿಯೂ . . . ಕ್ರಿಯಾಶಕ್ತಿಯೂ ಎಂದು ಆರು ವಿಧವಾದ ಶಕ್ತಿಗಳಿರುವುವು (ಶಿವಾಸೂ. ೪೦-೨೬ ಟೀಕೆ); ಘನತಮಸ್ಸತ್ತ್ವಪ್ರಧಾನಗಳೆನಿಸಿ ಧೂಮಜ್ವಾಲೆಗಳವೊಲ್ ಜನಿಸಿ ಮಾಯಾಶಕ್ತಿ ಚಿಚ್ಛಕ್ತಿಗಳೆನಿಸಿಹವು (ಅಮೃತ. ೫-೪೦); ದಿವ್ಯಚಿಚ್ಛಕ್ತಿಯಿಂ ತಿರುಗುತಿಹ ಸೃಷ್ಟಿಚಕ್ರಂಗಳ್ ಕಣಾ (ಶ್ರೀರಾಮಾ. ೮೭೦-೮೦) ; ಇದರ ಬಹಿಷ್ಕರಣಕ್ಕೆ ಒದಗಿ ಬರುವ ಚಿಚ್ಛಕ್ತಿ ಪ್ರತಿಭೆ (ಕಾವ್ಯಕು. ೧೪). [ ಸಂ. (ಚಿತ್ + ಶಕ್ತಿ) ]

**ಚಿಚ್ಛಾಸಕ** (ನಾ). ಜ್ಞಾನವನ್ನು ನಿಯಂತ್ರಿಸುವವನು : ನಾನೆಂಬ ಮೂಱು ಸುಶ್ಲೋಕಾರ್ಥದಂದವೆಂತೆನಲಾಗಿ 'ಬಿತ್ತರಿಪೆನೆಂದನಾ ದೇಶಿಕಂ ಚಿಚ್ಛಾಸಕಂ (ವೀಶೈಪು. ೫-೮-೨೪). [ ಸಂ. (ಚಿತ್ + ಶಾಸಕ) ]

**ಚಿಟ್** (ನಾ). ಒಂದು ಅನುಕರಣ ಶಬ್ದ. 'ಚಿಟ್ಟನೆ', 'ಚಿಟ್ಟಿಕ್ಕು$_1$' ಪರಾ.

**ಚಿಟ$_1$** (ನಾ). ಒಂದು ಅನುಕರಣ ಶಬ್ದ. 'ಚಿಟಗುಟ್ಟು' ಪರಾ.

**ಚಿಟಚಿಟ** (ದ್ವಿರುಕ್ತಿ) : ಸಾಸಿವೆ ಚಿಟಚಿಟ ಎಂದು ಸಿಡಿಯಿತು (ರೂಢಿ).

**ಚಿಟ$_2$** 'ಚಿಟ್ಟು$_1$' ನೋ.

**ಚಿಟಕಿ$_1$** 'ಚಿಟುಂಕು' ನೋ.

**ಚಿಟಕಿ$_2$** 'ಚಿಟಿಕೆ' ನೋ.

**ಚಿಟಕಿಸು** (ಕ್ರಿ). ಸನ್ನೆಗೋಲಿನಿಂದ ಯಾವುದಾದರೊಂದು ವಸ್ತುವನ್ನು ಮುಂದಕ್ಕೆ ನೂಕಂ : (ಕ). [ ? + – ಇಸು$_3$ ]

**ಚಿಟಕಿಹೊಡೆ** 'ಚಿಟಿಕೆಹೊಡೆ' ನೋ.

**ಚಿಟಕು** 'ಚಿಟುಂಕು' ನೋ.

**ಚಿಟಕುದೆಗೆ**(ಕ್ರಿ). =ಚಿಟುಕುಗಳೆ: ಕರವನೊತ್ತುತ ಬೆರಳ್ಗಳ ಚಿಟಕುದೆಗೆವುತಂ ಉಸಿರ್ದಳತಿಕುಶಲದಿಂದಂ (ಪ್ರಭುಪು. ೫-೭೦).

[ ಚಿಟಕು (<ಚಿಟುಂಕು) + ತೆಗೆ$_1$ ]

**ಚಿಟಕುಮುಳ್ಳು** 'ಚಿಟುಕುಮುಳ್ಳು' ನೋ.

**ಚಿಟಕೊಳಗು, ಚಿಟಿಕೊಳಗು, ಚಿಟಿಗೊಳಗು** (ನಾ). ದನಕರುಗಳ ಕಾಲು ಗೊರಸುಗಳ ಹರಡಿನಲ್ಲಿ ಅಂಟಿಕೊಂಡು ಸಣ್ಣಗೆ ತೋರಿಬರುವ ಪುಟ್ಟ ಬೆರಳಿನಾಕಾರದ ಗೊರಸು : (ಕ). **ಚಿಟಿಕೊಳಗು :** (ಕ). **ಚಿಟಿಗೊಳಗು :** ಇವುಗಳ ಹಿಂದೆ ಬೆಟ್ಟಡಿಕೆಯ ಹಾಗೆ ಇವೇನು ? ಇವು ಚಿಟಿಗೊಳಗು (ಮುಂಬಯಿ. ೧-೩೩). 'ಕಿಱುಗೊಳಗು' ಪರಾ.

[ ಚಿಟ$_2$(<ಚಿಟ್ಟು$_1$) + ಕೊಳಗು ]

**ಚಿಟಗ** (ನಾ). ಗುಬ್ಬಿಯ ಜಾತಿಗೆ ಸೇರಿದ ಕೆಂಪುಬಣ್ಣದ ಹಕ್ಕಿ : (ಕ). [ ? ]

**ಚಿಟಗಾಣಿ, ಚಿಟಗಾಳಿ** (ನಾ). ಚಿಕ್ಕವಳು ಯುವತಿ: ಈ ಚಿಟಗಾಣಿ ನಮ್ಮ ಸೊಸಿ ಕಾಣಸ್ತಾಳ ! (ಬಾಂಡಾಯ. ೧೪). **ಚಿಟಗಾಳಿ:** ಆಡಲಾರಿನೇ ಗೌರಿ, ಪಾಡಲಾರಿನೇ ಗೌರಿ, ಚಿನ್ನದ ಚಿಟಗಾಳೀ ಗೌರಿ (ಕನ್ನಜಾ. ೧೬೮).

[ <ಚಿಟುಂಕು ]

**ಚಿಟಗಾಳಿ** 'ಚಿಟಗಾಣಿ' ನೋ.

**ಚಿಟಗುಟ್ಟು** (ಕ್ರಿ). ೧. ಚಿಟಚಿಟ ಎಂದು ಶಬ್ದಮಾಡು : ಕಿಡಿಗಳು ಚಿಟಗುಟ್ಟುತ್ತಾ ಹಾರುತ್ತಿವೆ (ರೂಢಿ). ೨. (ಮನಸ್ಸಿನ ವೇದನೆಯಿಂದ ನರ ಮೊದಲಾದುವು) ಮಿಡಿ ; ತುಡಿ : ವಿಜಯನ ಮೈ ಚಿಟಗುಟ್ಟಿ ಹೋಯಿತು (ಕಲಾಜೋ. ೭೮). [ ಚಿಟ$_1$ + ಕುಟ್ಟು$_1$ ]

**ಚಿಟಗುಬ್ಬಿ** 'ಚಿಟ್ಟಗುಬ್ಬಿ' ನೋ.

**ಚಿಟಣವೀಸ, ಚಿಟಣೀಸ, ಚಿಟನೀಸ, ಚಿಟ್ನೀಸ** (ನಾ). (ಅರಸನ) ಪತ್ರಗಳನ್ನೂ ಪತ್ರಗಳಿಗೆ ಉತ್ತರಗಳನ್ನೂ ಬರೆಯುವ ಅಧಿಕಾರಿ ; ಕಾರ್ಯದರ್ಶಿ ; ಕಾರಭಾರಿ : ಗೋವಳಕೊಂಡದ ಸುಲ್ತಾನನ ಚಿಟಣವೀಸನಾದ ರಾಮಚಂದ್ರಪಂಡಿತನು ಬರೆದಿರುವ ಪತ್ರವನ್ನು ನೀನು ಓದಿದಿಯೇನು ? (ಜಿರಂಗ. ೧೨೪). **ಚಿಟಣೀಸ:** ಮಹಾತ್ಮಾಜಿಯವರ ಏಕನಿಷ್ಠ ಚಿಟಣೀಸ ಶ್ರೀಮಹಾದೇವಭಾಯಿ ದೇಸಾಯಿ (ಕಾಂಗ್ರೆಸ. ೪೪). **ಚಿಟನೀಸ:** ಚಿಟನೀಸ ಗಿರಿಯಪ್ಪನಂ ಕಳುಹಲ್ (ಕೆಳನೃ. ೮-೪೩) ; ನಾನು ಚಿಟನೀಸರಿಗೆ ಹೇಳಿದೆನು (ಹೇಮಂತ. ೨೭೭). **ಚಿಟ್ನೀಸ :** ಬಾಳಾಸಾಹೇಬನು ಚಿಟ್ನೀಸನ ಕೈ ಬೆಚ್ಚಗೆ ಮಾಡುವುದೇ ತಡ . . . ಅಪ್ಪಣೆ ಕೊಟ್ಟುಬಿಟ್ಟ (ಪ್ರಣಸ. ೩೬). [ ←ಹಿಂ. ಚಿಟನವೀಸ್ ; ಮರಾ. ಚಿಟಣೀಸ್, ಚಿಟನವೀಸ್, ಚಿಟನೀಸ್ ]

**ಚಿಟಣೇಸ** 'ಚಿಟಣವೀಸ' ನೋ.

**ಚಿಟನೀಸ** 'ಚಿಟಣವೀಸ' ನೋ.

**ಚಿಟಪಾಗು** (ನಾ). ಪುಟ್ಟರುಮಾಲು ; ಸಣ್ಣಪೇಟ : ವಡ್ಡರ ಯಾರನ ಬೋಯಿಗೆ ಕಡಗ ಸ ೧ ಸರಪಣಿ ಸ ೧ ಚಿಟಪಾಗು ೧ ಪಪುಳ್ಳಿ ಅಚ್ಚಡ ೧ ಸಹ ಯಿನಾಮು ಕೊಟ್ಟು (ಎಕ. XI, ಹಿರಿಯೂ. ೩೬-೧೪ ; 1533 ?).
[ ಚಿಟ್$_2$ (<ಚಿಟ್ಟು$_1$) + ಪಾಗು$_2$ ]

**ಚಿಟಬರಿಸು** (ಕ್ರಿ). ಹಿಡಿಸಲಾರದೆ ಒದ್ದಾಡು ; ಕಕ್ಕಸಬಡು : ನಾನು ತುರುಕಿದ ಅರ್ಥವನ್ನು ತಾಳಲಾರದೆ ಕೊನೆಯ ಸಾಲು ಚಿಟಬರಿಸುತ್ತಲಿದೆ (ದೇಕನ್ನ. ೧೦೦). [ ? ]

**ಚಿಟಯ್ಯ** (ನಾ). ಒಬ್ಬಾತನ ಹೆಸರು ಅವರ ಪುತ್ರರಣ್ಣಯ್ಯನುಂ ಚಿಟಯ್ಯನುಂ (ಎಕ. VII, ಶಿಕಾರಿ. ೨೮೬-೧೦ ; ಸು. 900 ?).
[ ಚಿಟ್$_2$ (<ಚಿಟ್ಟು$_1$) + ಅಯ್ಯ$_1$ ]

**ಚಿಟಿಕಿ** 'ಚಿಟುಂಕು' ನೋ.

**ಚಿಟಿಕಿಡು** 'ಚಿಟುಂಕಿಡು' ನೋ.

**ಚಿಟಿಕಿವಾಲೆ** (ನಾ). ಒಂದು ಬಗೆಯ ಔಷಧಿಗಿಡ : "ಪಯಸ್ಯಃ – ಚಿಟಿಕಿ ವಾಲೆ" (ಒಷಧಿ. ೯೧). [ ? ]

**ಚಿಟಿಕಿಸು** 'ಚಿಟುಂಕಿಸು' ನೋ.

**ಚಿಟಿಕಿಹಾಕು** 'ಚಿಟಿಕೆಹಾಕು' ನೋ.

**ಚಿಟಿಕಿಱು** (ಕ್ರಿ). ಚಿಟಿಕೆಯನ್ನು ಹಾಕು: ಅನ್ನವನೆ ತೋಱಿ ಚಿ[illegible]ಯು ಬಾಲವ ಬೀಸಿ ಕುನ್ನಿ ಸುಳಿದಾಡಿ ಕಾಲ್ಗೆಱಗುವ ತೆಱದಿ (ಪುರಂದ. [illegible]-೬೪-೪).
[ ಚಿಟಿಕು (<ಚಿಟುಂಕು) + ಇಱು$_1$ ]

**ಚಿಟಿಕು** 'ಚಿಟುಂಕು' ನೋ.

**ಚಿಟಿಕೆ$_1$** 'ಚಿಟುಂಕು' ನೋ.

**ಚಿಟಿಕೆ$_2$ ಚಿಟಿಕ್ಕಿ, ಚಿಟುಕೆ** (ನಾ). ಒಂದು ಬಗೆಯ ಸಣ್ಣ ಮೂಲಿಕೆ : "ಅಮೃತಶಿಖಾ-ಚಿಟಿಕೆ ; ಹಾಲೆ" (ಒಷಧಿ. ೮); ಗ್ರಹಣೀ ಗಜಕೇಸರಿ ಲೇಹ್ಯ . . . ಕಳ್ಳಂಗಡಲೆಬೇರಿನ ತೊಕ್ಕು, ಚಿಟಿಕೆಬೇರು, ತುರುಚನಬೇರು . . . ಇವನೆಲ್ಲ ಖಂಡುಗ ನೀರಿನಲ್ಲಿ ಹಾಕಿ ಕಷಾಯವ ಕಾಸಿ (ಸಕವೈ. ೩೩೯). **ಚಿಟಿಕ್ಕಿ:** "ಶೋಫ – ಚಿಟಿಕಿ, ಹಾಲೆ" (ಒಷಧಿ. ೧೭೨) ; ಬೆಕ್ಕಿನಬುಡ್ಡೆಗಿಡ . . . ಚಿಟಿಕಿಹಂಬು, ಮಿಂಚುಬಳ್ಳಿ, ಕನಕಾಯ (ವೈಜಿಗಿ. ೧೭-೩೦೮). **ಚಿಟುಕೆ:** "ಅರ್ಕಪುಷ್ಪಿ – ಚಿಟುಕೆ ; ಹಾಲೆ ; ಹಿಟ್ಟುಳಿಕೆ" (ಒಷಧಿ. ೬).
[ ? ]

**ಚಿಟಿಕೆ$_3$** (ನಾ). ಊತ ; ಬಾವು. 'ಗಂಟಲುಚಿಟಿಕೆ' ಪರಾ. [ ? ]

**ಚಿಟಿಕೆಗುಂಡಿ** (ನಾ). =ಚಿಟಿಕೆಗುಬ್ಬಿ: ಅಂಗಿಗೆ ಚಿಟಿಕೆಗುಂಡಿ ಹಾಕಿಸಿದೆ (ರೂಢಿ).
[ ಚಿಟಿಕೆ$_1$ (<ಚಿಟುಂಕು) + ಗುಂಡಿ$_2$ ]

**ಚಿಟಿಕೆಗುಬ್ಬಿ** (ನಾ). (ಕುಪ್ಪಸ, ಅಂಗಿ ಮೊದಲಾದುವುಗಳಲ್ಲಿ) ಒತ್ತಿ ಹಾಕಿಕೊಳ್ಳುವ ಸಣ್ಣ ಆಕಾರದ ಗುಂಡಿ: ಸೆರಗನ್ನು ಕೈಯ ಮೇಲೆ ಹಾಕಿಕೊಂಡು ಕುಪ್ಪಸದ 'ಚಿಟಿಕೆ – ಗುಬ್ಬಿ 'ಯನ್ನು ಒತ್ತಿ ಹಾಕಿಕೊಂಡಳು (ಹೊಸಕ್ಕ. ೪೭). [ ಚಿಟಿಕೆ$_1$ (<ಚಿಟುಂಕು) + ಗುಬ್ಬಿ$_1$ ]

**ಚಿಟಿಕೆತಾಳ** (ನಾ). ಕೀರ್ತನಕಾರರು ಬಳಸುವ ಮರದ ಅಥವಾ ದಂತದ ತಾಳ : (ಕ). [ ಚಿಟಿಕೆ$_1$ (<ಚಿಟುಂಕು) + ತಾಳ$_1$ (=ತಾಲ) ]

**ಚಿಟಿಕೆಹಾಕು, ಚಿಟಿಕಿಹಾಕು, ಚುಟಿಕೆಹಾಕು** (ಕ್ರಿ). ೧. = ಚಿಟಿಕೆಹೊಡೆ: ಅನೇಕ ಬಾರಿ ಚಿಟಿಕೆಹಾಕಿ ಏನು ಅನುಷ್ಠಾನಮಾಡಿದಳೋ ! (ಬಾಣಿ. ೧೧೦) ; ಭಾಗೀರಥಮ್ಮ ಮಗುವಿನ ಮುಂದೆ ನಿಂತು ಚಿಟಿಕೆಹಾಕುವಳು (ವಂಶವೃ. ೪೭). ೨. (ಶೀತ, ವಾತ ಮುಂತಾದುವನ್ನು ಗುಣಪಡಿಸಲು) ಬಳೆಯ ಚೂರನ್ನು ಕಾಯಿಸಿ ಬರೆಹಾಕು: ಮಗುವಿಗೆ ಸೆಳವು ಬಂದಿದೆ, ಚಿಟಿಕೆ ಹಾಕು (ರೂಢಿ). **ಚಿಟಿಕಿಹಾಕು :** ೧. ಮೊದಲುಮೊದಲು ನಾನು ಜೋರಾಗಿ ಚಿಟಿಕಿಹಾಕಬೇಕಾಗುತ್ತಿತ್ತು (ಶಾಲಮ. ೧೯೪). **ಚುಟಿಕೆಹಾಕು:** ೨. ಲೋಹದಿಂದ ಸುಡುವುದು ಅಥವಾ ಚುಟಿಕೆಹಾಕುವುದು ಅವರ ಮುಖ್ಯ ಚಿಕಿತ್ಸಾವಿಧಾನ (ಪ್ರವಾಇ. I, ೩೦೮).
[ ಚಿಟಿಕೆ$_1$ (<ಚಿಟುಂಕು) + ಹಾಕು (<ಪಾಯ್ಕು$_1$) ]

**ಚಿಟಿಕೆಹೊಡೆ, ಚಿಟಿಕಿಹೊಡೆ** (ಕ್ರಿ). ಕೈಯ ಹೆಬ್ಬೆರಳು ಮತ್ತು ಮಧ್ಯದ ಬೆರಳನ್ನು ಸೇರಿಸಿ ಸದ್ದುಮಾಡು,–ಶಬ್ದಮಾಡು : ಬೆರಳಿಂದ ಚಿಟಿಕೆ ಹೊಡೆದು, ಸ್ವಾಮಿಜಿಗೆ ಸಂಜ್ಞೆಮಾಡುತ್ತಾರೆ (ವೀರಯೋ. ೧೧೨). **ಚಿಟಿಕಿಹೊಡೆ:** ಆತ ಚಿಟಿಕಿಹೊಡೆಯುತ್ತ ಸಂತೋಷದಿಂದ ಮನೆಯ ಕಡೆ ಹೊರಟ (ರೂಢಿ). [ ಚಿಟಿಕೆ$_1$ (<ಚಿಟುಂಕು) + ಹೊಡೆ$_1$ (<ಪೊಡೆ$_1$) ]

**ಚಿಟಿಕೊಳಗು** 'ಚಿಟಿಕೊಳಗು' ನೋ.

**ಚಿಟಿಗೊಳಗು** 'ಚಿಟಿಕೊಳಗು' ನೋ.

**ಚಿಟಿಚಿಟಿ** (ನಾ). ಒಂದು ಅನುಕರಣ ಶಬ್ದ : ಉಸಿರ್ಹಾಕಿ ಕಣ್ಣು ಮುಚ್ಚಿಲ್ಲ ಯೋಗಿಯು ಕೂಸಾಗಿ ಚಿಟಿಚಿಟಿ ಚೀರಿಲ್ಲ (ಸಿದ್ಧಪು. ೩-೨೦). ೨. ಮನಸ್ಸಿಗೆ ಆಗುವ ಕಿರಿಕಿರಿ: ನಾನು ಸುಮ್ಮನೆ ಮುಪ್ಪಾಗುತ್ತಾ ಇದೀನಿ. ಆಗ ಈಗ ಮನಸ್ಸಿನ ಚಿಟಿಚಿಟಿಗೂ ಇದೇ ಕಾರಣ ಇರಬೇಕು (ರಂಗನಾ. ೯೯).
**ಚಿಟಿಚಿಟಿಯಾಗು** = ಒಡೆದುಹೋಗು : ಕಿರುಗತ್ತಿಯನ್ನು ಬೆನ್ನ ಮೇಲಿನ 'ಬೆವರುಸಲೆ 'ಯ ಮೇಲೆ ಯಥೇಚ್ಛ ಆಡಿಸಿ ಅದು ಚಿಟಿಚಿಟಿ ಯಾದಾಗ "ಅಯ್ಯಬ್ಬ" ಎಂದು ತೃಪ್ತಿಯ ನಿಟ್ಟುಸಿರು ಬಿಟ್ಟಳು (ಹೊಸಕ್ಕ. ೪೮). **ಚಿಟಿಚಿಟಿಯೆನ್ನು** = ಕಿರಿಕಿರಿಯಾಗು: ತಲೆ ಚಿಟಿಚಿಟಿ ಯೆನ್ನುತ್ತಿದೆ (ರೂಢಿ).

**ಚಿಟಿಚಿಟಿಸು** (ಕ್ರಿ). ಚಿಟಿಚಿಟಿ ಎಂದು ಶಬ್ದಮಾಡು : ಸುಡುಗಿಚ್ಚು ಚಿಟಿಚಿಟಿಸುತ (ಕಾಲೂರ. ೧೮೪-೪೧೭). [ ಚಿಟಿಚಿಟಿ + – ಇಸು$_3$ ]

**ಚಿಟಿಚಿಣಿರ್** (ನಾ). ಒಂದು ಅನುಕರಣ ಶಬ್ದ: ಏನೆಂಬೆನಾ ಹೋಮವ ಬೇಳುವೆಡೆಯೊಳು ಸಾನುರಾಗದೆ ಲಾಜೆಯನು ಭೂನುತೆವೆನೆ ಬೇಳುತಿರೆ ಚಿಟಿಚಿಣಿರೆಂಬ ಧ್ವಾನವೆಸೆದುದು (ಅಂಜಚ. ೫-೨೩೭).

**ಚಿಟಿಲ್** (ನಾ). ಒಂದು ಅನುಕರಣ ಶಬ್ದ.
**ಚಿಟಿಲ್ಚಿಟಿಲ್** (ದ್ವಿರುಕ್ತಿ) : ಸೋಗೆಯ ಹಂಸೆಯಾನೆ ವೃಷದಂದದ ಸಿಂಗದ ಪಾಂಗಿನಿಂ ಬೆಡಂಗಾಗಿ ಚಿಟಿಲ್ಚಿಟಿಲ್ಗರೆಯಲೊಂದದ ಮಂದಗತಿ ಕ್ರಮಂ ಮಹಾಭೋಗಿ[ಯೆನಿಪ್ಪ]ಂ (ಲೋಕೋಪ. ೧೧-೩೮) ; ಪೆರ್ಗಲ್ಲಿಂದ ದಪ್ಪುತ್ತುಂ ಕರ್ಗಲ್ಲಂ ನೆರಪಿ ತಂದು ಬರಿಯೆಲ್ವೆಲ್ಲಂ ನುರ್ಗಾಗಿ ಚಿಟಿಲ್ಚಿಟಿಲೆನೆ ಕುರ್ಗುತ್ತುಂ (ಧರ್ಮಾಮೃ. ೬-೧೯೧).

**ಚಿಟು$_1$** (ನಾ). ಒಂದು ಅನುಕರಣ ಶಬ್ದ. 'ಚಿಟುಗುಟ್ಟು' ಪರಾ.

**ಚಿಟು$_2$** 'ಚಿಟ್ಟು$_1$' ನೋ.

**ಚಿಟುಂಕಿಸು, ಚಿಟಿಕಿಸು, ಚಿಟುಕಿಸು** (ಕ್ರಿ). ೧. ಹೆಬ್ಬೆರಳು ಮತ್ತು ಮಧ್ಯದ ಬೆರಳಂಗಳನ್ನು ಸೇರಿಸಿ ಶಬ್ದಮಾಡು ; ಚಿಟಿಕೆಹಾಕು: (ಕ). ೨. ಬೆರಳುಗಳನ್ನು ಮೆತ್ತಗೆ ಅದುಮಿ ಗಿಣ್ಣುಗಳ ಬಳಿ ಸದ್ದಾಗುವಂತೆ ಮುರಿ ; ನೆಟಿಗೆ ತೆಗೆ : ಕರಾಂಗುಲಿಯಂ ಚಿಟುಂ[ಪಾಠಾಂ. ಟಂ]ಕಿಸಿ . . . ಗಲ್ಲಮಂ ಪಿಡಿದಲುಂಗಿ (ರಾಜಶೇ. ೮-೮೨ ವ); ಕರಪಲ್ಲವಮನೊತ್ತುತ್ತೆ ಬೆರಲಂ ಚಿಟುಂಕಿಸುತೆ (ಕುಮಾಪು. ೫-೫೯೭). **ಚಿಟಿಕಿಸು :** ೧. ಯಾದವರ ಬಡಕಜುವೆ ಬಾ ಬಾ ಎಂದು ಚಿಟಿಕಿಸಿ ಕರೆದು ಗುರುಸುತ ಸಾತ್ಯಕಿಯ ತಾಗಿದನು (ಕುವ್ಯಾಕ. ೩-೧೭). **ಚಿಟುಕಿಸು :** ೧. ಜಾಲಿಕಂ ನೋಡಿ . . . ಮದವಣಿಗಂ ಬಂದೀ ಜನದ ಬಗೆಗೆ ಬೆಱಗಂ ಸೋಜಿಗಮನೆ ಮಾಟ್ಟುದೆಂದು ಚಿಟುಕಿಸಲಾಗಳ್ (ದಶಕು. ೬-೧೪೭) ; ಕರೆಯಲಂಗೈತಳಕೆ ಬಹನೇ ತರಣಿ ವನಕೇಸರಿಯು ಚಿಟುಕಿಸಿ ಕರೆಯೆ ಹೊಱಿಯನು ಹೊದ್ದುವುದೆ (ಕೌಶಿರಾ. ೧-೪೧) ; ಬೆರಳು ಚಿಟುಕಿಸಿ ಕರೆವ ಕೃಷ್ಣನ ನಿರುಪಮಾಕ್ಷೇಪವನು ಕೇಳುತ (ನಿಭಾಗ. ೧೦-೬೮-೩೦). [ ಚಿಟುಂಕು + – ಇಸು$_3$ ]

**ಚಿಟುಂಕು,** ಚಿಟಕ್ಕಿ$_1$, ಚಿಟಕು, ಚಿಟಿಕಿ, ಚಿಟಿಕು, ಚಿಟಿಕೆ$_1$, ಚಿಟುಂಕೆ. ಚಿಟುಕು$_1$, ಚುಟಕಿ, ಚುಟಕಂ, ಚುಟಕೆ, ಚುಟಿಕೆ, ಚುಟಿಗೆ, ಚುಟುಕ$_1$, ಚುಟುಕಿ, ಚುಟುಕು (ನಾ). ೧. ಕೈಯ ಹೆಬ್ಬೆರಳು ಮತ್ತು ಮಧ್ಯದ ಬೆರಳುಗಳನ್ನು ಸೇರಿಸಿ ಮಾಡುವ ಶಬ್ದ : ವೇದಪಿತಾ ಮಹನೆಂಬ ಪೆಸರಿನಂಗುಲಿಯ ಚಿಟುಂಕನಿಟ್ಟು ಕರೆದು (ವೃಷವಿ. ೩೮-೫೦ ವ). **ಚಿಟಕ್ಕಿ$_1$:** ೧. 'ಚಿಟಕಿಹೊಡೆ' ಪರಾ. **೨.** ಹೆಬ್ಬೆರಳು ಮತ್ತು ತೋರು ಬೆರಳುಗಳನ್ನು ಸೇರಿಸಿ ಹಿಡಿಯಬಹುದಾದಷ್ಟು; ಸ್ವಲ್ಪಮಾತ್ರ: ಅಲ್ಲಿ ಕುಳಿತವರು ಒಂದು ಚಿಟಕಿ ನಶ್ಯ ಹಾಕಿಕೊಳ್ಳಬೇಕಾದರೂ ಹೊರಗೆ ಎದ್ದು ಹೋಗುತ್ತಿದ್ದರು (ಹುಟ್ಟಿಹ. ೧೪). **ಚಿಟಕು :** ೩. ನಲವತ್ತು ಸುತ್ತು ನೂಲಿನ ಕುಚ್ಚು : (ಶ). ೪. ಒಂದು ಬಗೆಯ ಚಿಕ್ಕ ಹೊಲಿಗೆ : "ಚಿಟಕು—ಹೊಲಿಗೆ" (ಜಾನಕೋ. ೫೬). **ಚಿಟಿಕಿ :** ೧. 'ಚಿಟಿಕಿಹಾಕು' ಪರಾ. ೨. ಒಂದು ಕಪ್ಪು ಬೇಯಿಸಿದ ತರಕಾರಿಗಳು ; ೧ ಚಿಟಿಕಿ ಅರಸಿನ (ಅಡುಸಾ. ೧೦೬). **ಚಿಟಿಕು :** ೧. 'ಚಿಟಿಕಿಱು' ಪರಾ. **ಚಿಟಿಕೆ$_1$ :** ೧. 'ಚಿಟಿಕೆಹಾಕು', 'ಚಿಟಿಕೆಹೊಡೆ' ಪರಾ. ೨. ರಾಯರು ಒಂದು ಚಿಟಿಕೆ ನಶ್ಯವನ್ನು ಜ್ಞಾನವಶಕ್ಕಾಗಿ ಮಂತ್ರಿಸಿ ಮೂಗಿಗೆ ಹಾಕಿಕೊಂಡು (ರಾಯುಕ. ೩೦) ; ನವಸಾರ ಪುಡಿಯನ್ನೂ ಸುಣ್ಣದ ಭರಣಿಯೊಂದನ್ನೂ ತೆಗೆದು ಕೊಂಡು, ಎರಡನ್ನೂ ಎರಡೆರಡು ಚಿಟಿಕೆ ಅಂಗೈಯಲ್ಲಿ ಹಾಕಿಕೊಂಡು (ಶಾಂತಲಾ. ೭೪). ೩. ಚಿಕ್ಕದು ; ಸಣ್ಣದು : "ಚಿಟಿಕೆ" ಯಲ್ಲಿ ಮಾಡಿಬಿಡು (ನಮ್ಮನು. ೯೪). 'ಚಿಟಿಕೆಗುಬ್ಬಿ' ಪರಾ. ೬. (ಶೀತ, ವಾತ ಮುಂತಾದವು ಗಳನ್ನು ಗುಣಪಡಿಸಲು) ಬಳೆಯ ಚೂರು, ಚರ್ಮದ ತುಣುಕು ಮುಂತಾದುವನ್ನು ಕಾಯಿಸಿ ನೆತ್ತಿ, ಹಣೆ ಮುಂತಾದ ಕಡೆ ಬರೆ ಯೆಳೆಯುವಿಕೆ : ಮಗುವಿಕೆ ಸಂದಾಗಿದೆ, ಚಿಟಿಕೆ ಹಾಕಿಸಬೇಕು (ರೂಢಿ). ೭. ಮರ ಅಥವಾ ದಂತದಿಂದ ಮಾಡಿದ ತಾಳಹಾಕುವ ಒಂದು ಸಾಧನ : ದಾಸರು ಚಿಟಿಕೆಗಳಲ್ಲಿ ತಾಳಹಾಕುತ್ತಾ ಹಾಡುತ್ತಿದ್ದರು (ರೂಢಿ). **ಚಿಟುಂಕೆ :** ೧. 'ಕೈಚಿಟುಂಕೆ' ಪರಾ. **ಚಿಟುಕು$_1$ :** ೧. ಗುರುವಿ ನೊಳಗಪಹಾಸ್ಯ ಪ್ರತ್ಯುತ್ತರಂಗಳಂ ಬೆರಳಂ ಚಿಟುಕಂ . . . ಮಾಡ ಲಾಗದು (ದೀಕ್ಷಾಬೋ. ೩೦-೨೦). ೩. ಕಾಲವಶವೀ ಜಗದ್ವ್ಯವ ಹಾರವೆಲ್ಲವುನ್ಮಿಷ ನಿಮಿಷವ್ಯದೆ ಚಿಟುಕು (ವೀಶೈಪು. ೪-೫-೪೭). 'ಚಿಟುಕುವನಿ' ಪರಾ. ೮. ಬೆರಳುಗಳನ್ನು ಮೆಂತ್ಯಗೆ ಅದುಮಿ ಗಿಣ್ಣು ಗಳ ಬಳಿ ಸದ್ದಾಗುವಂತೆ ಮುರಿಯುವುದು ; **ನೆಟಿಕೆ :** ಮೆಲ್ಲನೆ ಬೆರಳ್ಗಳ ಚಿಟುಕನೊತ್ತುತವೆ . . . ಸಂತೈಸಿದನು (ಅಂಜಜ. ೮-೯೬). ಬೆರಳ ಚಿಟುಕ ತೆಗೆವನು (ಭರಜ. ೩೦-೧೦೯). 'ಚಿಟುಕಂಮುರಿ' ಪರಾ. **ಚುಟಕಿ :** ೭. ನಾಮದೇವ . . . ಚುಟಕಿಯಿಂದ ತಾಳಹಾಕುತ್ತ ಕುಣಿಯುತ್ತ ಇದ್ದುಬಿಡುತ್ತಿದ್ದನು (ಭಾರದ. ೨೯೨). **ಚುಟಕು : ೩.** "ಸ್ವಲ್ಪ,ಸಣ್ಣ" (ಜಾನಕೋ. ೫೬). **ಚುಟಕೆ : ೬.** ಇನ್ನೂ ಅವರಿಗೆ ಚುಟಕಿ ಬಿದ್ದಿಲ್ಲ. ಬಿದ್ದ ಮೇಲೆ ಇಂಥ ಉಸಾಬರಿ ಬಿಡೋದು (ಊರುಕ. ೯೫). **ಚುಟಿಕೆ : ೬.** 'ಚುಟಿಕೆಹಾಕು' ಪರಾ. **ಚುಟಿಗೆ : ೩.** ಎಲ್ಲ ಕೆಲಸವೂ ಚುಟಿಗೆಯಲ್ಲಿ ಮುಗಿಯಿತು (ರೂಢಿ). **ಚುಟುಕ$_1$ : ೩.** ವೈಶ್ವಾನರನ ಆವರ್ತನನೃತ್ಯರಂಗದಲ್ಲಿ ಸಣ್ಣ ಚುಟುಕ (ಅರಳು. ೧೯೫ ೨) ; ಅವನಿಗೆ ಒಂದೆರಡು ಚುಟುಕ ವೈದ್ಯಗಳನ್ನು ಹೇಳಿಕೊಡುತ್ತ . . . ಪಂಡಿತನನ್ನಾಗಿ ಮಾಡಬೇಕೆಂದಿದ್ದರು (ಶಾಂತಲಾ. ೨೪೩). **ಚುಟುಕಿ : ೩.** ಸೂಜಿಕಾಯಕದ ಕುಶಲಕರ್ಮವು ಚುಚ್ಚುಮದ್ದಿನಂತೆ ಚುಟುಕಿಯ ಕೆಲಸವಲ್ಲ (ನಲಮು. VII ನಾಲ್ಕುಮಾತು). **ಚುಟುಕು : ೩.** ಚುಟುಕಾಗಿಯೇ ಉತ್ತರ ಹೇಳಿ ಹೊರಟುಹೋದ ರಾಮಕೃಷ್ಣ (ತ್ಯಾಗಮು. ೪೬) ; ಈ ಆಟಗಳು ಚುಟುಕು ಪಲ್ಲವಿಗಳ ತಾನದೊಂದಿಗೆ ಇರುವ ಮೂಲಕ ಆಡುವ ಮಕ್ಕಳಿಗೆ ದಣಿವೇ ಅನಿಸದು (ಕನ್ನಜಾ. ೪೦).

**ಚಿಟಕಿಚಪ್ಪರ** = (ಅಲಂ) ಕಡವೆಂಪೆಚ್ಚ : ಚಿಟಕಿ ಚಪ್ಪರ ಆರು ಕಾಲ ಬೇಟೆ (ಗಾದೆ) ; ಅವನು ಮಗಳ ಮದುವೆಯನ್ನು ಚಿಟಕಿಚಪ್ಪರದಲ್ಲಿ ಮುಗಿಸಿದ (ರೂಢಿ).

**[ ದೇ.॥ ತಮಿ. ಚಿಟಿಕ್ಕೈ, ಚಿಟ್ಟಿಕ್ಕೈ, ಚುಟುಕ್ಕು ; ತುಳು. ಚಿಟಿಕ ; ಚಿಟ್ಕ್ ; ತೆಲು. ಚಿಟಿಕ, ಚಿಟುಕು./ಮರಾ. ಚುಟಕೀ./ಸಂ. ಛೀಟಿಕಾ ]**

**ಚಿಟುಂಕೆ** 'ಚಿಟುಂಕು' ನೋ.

**ಚಿಟುಕಿಕ್ಕು** (ಕ್ರಿ). ಬೆರಳುಗಳಿಂದ ಶಬ್ದಮಾಡು ; ಚಿಟಿಕೆಹಾಕು : ಇಂತುಚ್ಚುಚ್ಚಿರೇಯೆಂದೆನುತ ಚಿಟುಕಿಕ್ಕುತವೆ ತ್ರನ್ನರಮನೆಯ ಹಿತ್ತಿಲ ಬಾಗಿಲಲಿ ಲಿಂಗಪ್ರಸಾದವನು ಜನನಿ ತಂದವನಿಯಲಿ ಸುರಿಯಲು (ಬಸವು. ೩೦-೨೦). [ ಚಿಟುಕು$_1$(<ಚಿಟುಂಕು) + ಇಕ್ಕು ]

**ಚಿಟುಕಿಡು, ಚಿಟಿಕಿಡು** (ಕ್ರಿ). = ಚಿಟಿಕೆಹಾಕು ೧ : ತೊದಳ್ನುಡಿ ನುಡಿದಂ ತರ್ಳರ್ನಡೆಗಳಂ ನಡೆದಂ ಚಿಟುಕಿಟ್ಟೊಡಾಡಿದಂ (ಅನಂಪು. ೬-೬) ; ಅದುಭುತ ಸ್ವಾಂತನ್ನಿಗುಱಿ ಚಿಟುಕಿಡುತ ಬೆರಳಂ ನಾಸಿಕದೊಳಿಟ್ಟು (ಬಸವು. ೩೦-೧೬). **ಚಿಟಿಕಿಡು :** ಚಿಟಿಕಿಟ್ಟು ಮೈದಡಹಿ ಹಾಸಗಳ ಕಳಚುತ್ತೆ (ವೆಂಕಾರಾ. ೩-೬-೪೦). [ ಚಿಟುಕು$_1$ (<ಚಿಟುಂಕು) + ಇಡು$_1$ ]

**ಚಿಟುಕಿಸು** 'ಚಿಟುಂಕಿಸು' ನೋ.

**ಚಿಟುಕೀ** (ಕ್ರಿ). ಬೆರಳುಗಳನ್ನು ಮೆತ್ತಗೆ ಅದುಮಿ ಗಿಣ್ಣುಗಳ ಬಳಿ ಸದ್ದಾಗುವಂತೆ ಮಡಿಸಂ ; ನೆಟಿಗೆ ತೆಗೆ : ನುಣ್ಪೊಡೆಗಳಂ ಪಿಡಿದೌಂಕಿ ಬೆರಲ್ಗಳಂ ಕ್ರಮಕ್ರಮದೊಳೆ ಕೋದು ತಳ್ತು ಚಿಟುಕಿತ್ತು . . . ರಸದಂ ಬುಲಮಂ ಸವಿಮಾಡಿ ನೀಡಿ ಮೆಲ್ಪುಮರಿ ಬಟಲ್ದತನ್ನಿನಿಯಳಂ ನೃಪ ನಾಱಿಸಿದಂ ರತಾಂತದೊಳ್ (ಸೂಕ್ತಿಸು. ೧೪-೬೫).

[ ಚಿಟುಕು$_1$(<ಚಿಟುಂಕು) + ಈ$_2$ ]

**ಚಿಟುಕು$_1$** 'ಚಿಟುಂಕು' ನೋ.

**ಚಿಟುಕು$_2$** (ನಾ). ಪ್ರಣಯಕೋಪ; ಶೃಂಗಾರಚೇಷ್ಟೆ: "ಚಿಟುಕು ಬಿಂಬ ಮುಕ್ಕುಂ" (ಮಂಗರಾ. ೯೬-೧೬). P 'ಬಿಂಬ' ಎಂಬುದು 'ಬಿಬ್ಬೋಕ' ಎಂಬುದರ ಸವಕಳಿರೂಪವಿರಬಹುದು. **[ ದೇ.॥ ತೆಲು. ಚಿಟ್ಟಕ ]**

**ಚಿಟುಕು$_3$** (ನಾ). (ಕಂದುರೆಯ) ಕಿವಿಗಳ ಹೊರಭಾಗ : "ಕಿವಿಗಳ ಹೊಱಗನು ಚಿಟುಕೆಂಬುದು" (ಅಶ್ವವೈ. ೮-೨೪ ಟೀಕೆ). [ ? ]

**ಚಿಟುಕುಗಳೆ** (ಕ್ರಿ). ಬೆರಳುಗಳನ್ನು ಸದ್ದಾಗುವಂತೆ ಮಡಿಸಂ ; ನೆಟಿಗೆ ತೆಗೆ : ಚೆನ್ನ ನಸು ಮುರಿಯುತ್ತೆ ಕರತಲಾಂಗುಳಿಗಳಂ ಚನ್ನಮರ್ದು ಚಿಟುಕುಗಳೆಯುತ್ತೆ (ಅರಾಜ. ೧೧-೮೦) ; ಮುಂಗುರುಳನೆ ತಿದ್ದಿ ಮುದ್ದಿಸಿ ಬಯಲನಾಲಂಗಿಸಿಯವಳಂಗುಳಿಗಳ ಹಾಂಗೆ ಮೃಣಾಳವ ಚಿಟುಕುಗಳೆವ ಕರಣಂಗಳಿಗುಜ್ಜುಗಿಸುವನು (ಮದೇಪು. ೨೦-೩೪).

[ ಚಿಟುಕು$_1$(<ಚಿಟುಂಕು) + ಕಳೆ$_1$ ]

**ಚಿಟುಕುಮುರಿ** (ಕ್ರಿ). ೧. ನೆಟಿಗೆ ಮುರಿ. ೨. (ಅಲಂ) ಕೆಟ್ಟದ್ದನ್ನು ಬಯಸು : ಅಮಲನ ಹೆಸರಿನಲ್ಲಿ ಚಿಟುಕುಮುರಿಯಲು ಚುಚ್ಚುಮಾತಾ ಡಲು ಬಿಡುತ್ತಿರಲಿಲ್ಲ (ಇಪ್ಪಳ. ೨೪೩) ; ಹೊಟ್ಟೆಕಿಚ್ಚಿನ ಹೆಂಗಸರು ಚಿಟುಕು ಮುರಿದರು (ವಾಗ್ವೈವಿ. ೧೦೮). [ ಚಿಟುಕು$_1$(<ಚಿಟುಂಕು) + ಮುರಿ$_1$ ]

**ಚಿಟುಕುಮುಳ್ಳು, ಚಿಟಕುಮುಳ್ಳು, ಚಿಟುಗುಮುಳ್ಳು** (ನಾ). ಕಾಲಿನಲ್ಲಿ ಚುಚ್ಚಿಕೊಂಡು ಹೊರತೆಗೆಯಲು ಕಷ್ಟವಾಗುತ್ತಿರುವ ಮುಳ್ಳು,– ಹೊರಬರದೆ ನೋವುಂಟುಮಾಡುತ್ತಿರುವ ಮುಳ್ಳು : ನನ್ನ ನಿಮ್ಮ ಮನದಲ್ಲಿ ಅಥವಾ ಯಾವ ಮನದಲ್ಲಿಯೇ ಆಗಲಿ ಚಿಟುಕುಮುಳ್ಳು ಆಡಿಸುತ್ತ ಬಂದಿದೆ (ವಚಸಂ. LXXII, ಟೀಕೆ). **ಚಿಟಕುಮುಳ್ಳು :** ಚಿಟಕು ಮುಳ್ಳಿನಂತೆ ಅವನು ಮನಸ್ಸಿಗೆ ನೋವುಂಟುಮಾಡುತ್ತಲೇ ಇದ್ದ (ರೂಢಿ). **ಚಿಟುಗುಮುಳ್ಳು :** ಕಾಲಿನಲ್ಲಿರುವ ಚಿಟುಗುಮುಳ್ಳು ಬಹಳ ಯಾತನೆ ಯನ್ನುಂಟು ಮಾಡುತ್ತಿದೆ (ರೂಢಿ).

**ಚಿಟುಕುಮುಳ್ಳಾಗು** = ನೋವುಂಟುಮಾಡು ; ವ್ಯಥೆಪಡಿಸು : ಅದರ ಕಿರುಕುಳ ಬಹಳ ಜನಕ್ಕೆ ಚಿಟುಕುಮುಳ್ಳಾಗಿ . . . ಇರುತ್ತದೆ (ದೀಪಹ. II, ೩೬೪). **ಚಿಟುಕುಮುಳ್ಳಾಟ**=ಒಳಗೊಳಗೇ ಉಂಟಾಗುವ ನೋವು,– ಯಾತನೆ : ಸೂಟಿಯನ್ನು ಮುಗಿಸಿ ಊರನ್ನು ಬಿಡುವ ತನಕವೂ ಚಿಟುಕುಮುಳ್ಳಾಟವಾಗಿತ್ತು (ದೀಪಹ. II, ೧೬೭) ; ನೀಲಕಂಠನ ಸಂಗಡ ವನಮಾಲಿಲಾಲನ ಚಿಟುಕುಮುಳ್ಳಾಟ, ಛಲನೆ ಬಹಳ ದಿನಗಳಿಂದಲೂ ನಡದೇ ಇತ್ತು (ಇಪ್ಪಕ. ೪೦೧). **ಚಿಟುಕುಮುಳ್ಳಾಡಿಸು, ಚಿಟಕುಮುಳ್ಳಾಡಿಸು, ಚಿಟುಗುಮುಳ್ಳಾಡಿಸು** = ಒಳಗೊಳಗೇ ಚುಚ್ಚಿ ವ್ಯಥೆಪಡಿಸು : ಕಾವೇರಿ ಮದುವೆ ಆಗದೆ ಇದ್ದಾಗ ಶೇಷಣ್ಣ ಆಕೆಯನ್ನು ಚಿಟುಕುಮುಳ್ಳಾಡಿಸುತ್ತಿದ್ದ ನಂತೆ (ವ್ಯನಿ. ೧೬೬) ; ಸರ್ವರ ಕಣ್ಣಿಗೂ ಬೀಳುವಂತೆ ನಾವು ಪ್ರದರ್ಶಿಸು ತ್ತಿದ್ದೇವಲ್ಲ ಎಂಬ ಆತ್ಮಪ್ರಜ್ಞೆ ನಮ್ಮ ಒಳಗೆ ಚಿಟಕುಮುಳ್ಳಾಡಿಸುತ್ತದೆ (ಗಾಳಿಪ. ೭೮); ಇದು ಅವಳ ಮನಸ್ಸಿನಲ್ಲಿ ಚಿಟುಗುಮುಳ್ಳಾಡಿಸಿದಂತೆ ಮಾಡುತ್ತಿತ್ತು (ಇಪ್ಪಕ. ೭೪).

[ ಚಿಟುಕು$_1$ (<ಚಿಟುಂಕು) + ಮುಳ್ಳು(<ಮುಳ್$_2$) ]

**ಚಿಟುಕುವನಿ** (ನಾ). ತೊಟ್ಟಿಕ್ಕುವ ಹನಿ ; ತುಂತುರುಹನಿ ;, ಸೋನೆ: ಮದನಮದಮರ್ದನನ ಬರವಿಂಗೆ . . . ಚಳಿಯುಂಗೊಡುವವೋಲೆಸೆದುದಾ ಚಿಟುಕುವನಿ ಸಿದ್ಧಪತಿ ನಲಿಯಲು (ಸಿದ್ಧರಾ. ೩-೩೨).

[ ಚಿಟುಕು$_1$(<ಚಿಟುಂಕು) + ಪನಿ$_2$ ]

**ಚಿಟುಕುವಾರೆ**(ನಾ) . ಒಂದು ಬಗೆಯ ಔಷಧಿ ಗಿಡ: "ಜಲರಾಮಃ–ಚಿಟುಕು ವಾರೆ" (ಒಷಧಿ. ೬೦). [ ? ]

**ಚಿಟುಕೆ** 'ಚಿಟಿಕೆ$_2$' ನೋ.

**ಚಿಟುಕೆನ್** (ಕ್ರಿ). ನೆಟಿಗೆ ಬರು : ಸೌಷ್ಠವದಿಂದಂ ಚಿಟುಕೆನ್ನದಿರ್ಪ ಮೊಟ ಕೆಯ್ ವೃತ್ತತ್ವದಿಂದೊಂದಿ ತೋಱುವ ಮುಂಗೆಯ್ ಕಡುದೊಡ್ಡಿತಪ್ಪ ತಳವೊಳ್ಪಿಂದೊಂದಿ ನೇರ್ಪಟ್ಟು ತೋಱುವ ದೀರ್ಘಾಂಗುಲಿ ಕೆಂಪುವೆತ್ತೆಸೆ ವುಗುರ್ ಮಾಟ್ಕುಂ ಮಹೈಶ್ವರ್ಯಮಂ (ಲೋಕೋಪ. ೧೧-೧೧).

[ ಚಿಟುಕು$_1$ (<ಚಿಟುಂಕು) + ಎನ್$_1$ ]

**ಚಿಟುಕೊತ್ತು** (ಕ್ರಿ) . = ಚಿಟುಕಂಗಳೆ : ಎಳವೆರಲ್ಗಳ ಚಿಟುಕೊತ್ತಿ ಕೈ ದೊಡಿಸುವ ಬಳೆಗಾಱರಿರ್ದರಿಕ್ಕೆಲದಿ (ಮೋಹತ. ೩-೨೩).

[ ಚಿಟುಕು$_1$ (<ಚಿಟುಂಕು) + ಒತ್ತು$_1$ ]

**ಚಿಟುಗುಟ್ಟು** (ಕ್ರಿ) . ೧. ಚಿಟ್‌ಚಿಟ್ ಎಂದು ಶಬ್ದಮಾಡು : ಕೆಂಡದ ಮೇಲೆ ಉಪ್ಪು ಬಿದ್ದು ಚಿಟುಗುಟ್ಟುತ್ತಾ ಇದೆ (ರೂಢಿ). ೨. (ಆಲಂ) ಸಿಡಿಮಿಡಿಗೊಳ್ಳು : ಕಂಗೆಟ್ಟವುಡ ಕಚ್ಚಿ ತೂಬರದ ಕೊಳ್ಳಿಯೊಲು ಚಿಟು ಗುಟ್ಟುತಂ (ಷಶಿಲ. ೧೩-೨೩). [ ಚಿಟು$_1$ + ಕುಟ್ಟು$_1$ ]

**ಚಿಟುಗುಮುಳ್ಳು** 'ಚಿಟುಕುಮುಳ್ಳು' ನೋ.

**ಚಿಟುಚಟಕ** (ನಾ). ಸಣ್ಣಗುಬ್ಬಚ್ಚಿ ; ಚಿಟಗುಬ್ಬಿ : ಹಸುಬಂ ಚಿಟುಚಟಕ ಕಬ್ಬಕ್ಕಿ ಹೆಬ್ಬಕ್ಕಿಗಳ ನೋಡಿದವು (ಮದೇಪು. ೫-೯).

[ ಚಿಟು$_2$ (<ಚಿಟ್ಟು$_1$) + ಚಟಕ$_1$ ]

**ಚಿಟುಬಾಳೆ** 'ಚಿಟ್ಟುಬಾಳೆ' ನೋ.

**ಚಿಟುಮಿಟಿ** (ನಾ). ಅಸಂಬದ್ಧವಾದುದು : ಲಂಡ ಕೇಳ್ನಿನ್ನ ಚಿಟುಮಿಟಿ ಬಿನುಗುವಾದವು . . . ಅತರ್ಕ್ಯನನೆಯ್ದಲಾರ್ಪುದೇ (ವೀಶ್ಮಪು. ೪-೬-೨೩).

[ ? ]

**ಚಿಟ್ಟ$_1$** 'ಚಿಟ್ಟು$_1$' ನೋ.

**ಚಿಟ್ಟ$_2$** 'ಚಿಟ್ಟ' ನೋ.

**ಚಿಟ್ಟಗುಬ್ಬಿ, ಚಿಟಗುಬ್ಬಿ**(ನಾ). ಒಂದು ಬಗೆಯ ಸಣ್ಣಗುಬ್ಬಿ: ಚಿಟ್ಟಗುಬ್ಬಿ ಚಿಂವು ಚಿಂವು (ಅರಳು. ೨೬೭-೧). **ಚಿಟಗುಬ್ಬಿ** : "ವರ್ತಿಕೆ – ಚಿಟಗುಬ್ಬಿ" (ಗಂಗಾಮ. ೨೮೩). [ ಚಿಟ್ಟ$_1$ (<ಚಿಟ್ಟು$_1$) + ಗುಬ್ಬಿ$_2$ ]

**ಚಿಟ್ಟಚ್ಚು** (ನಾ). ೧. ಅಚ್ಚನ್ನು ತಯಾರಿಸುವ ಚಿಕ್ಕಸಾಧನ: ಸಕ್ಕರೆಅಚ್ಚು ಗಳನ್ನು ತಯಾರಿಸಲು ಚಿಟ್ಟಚ್ಚನ್ನು ಉಪಯೋಗಿಸುತ್ತಾರೆ(ರೂಢಿ). ೨. ಸಣ್ಣ ಅಚ್ಚು ; ಬೆಲ್ಲ,ಸಕ್ಕರೆ ಮುಂತಾದುವುಗಳ ಎರಕ ಹೊಯ್ದ ಚಿಕ್ಕ ಆಕೃತಿ : ನಾಲ್ಕು ಚಿಟ್ಟಚ್ಚು ಬೆಲ್ಲ ಬೇಕಾಗಿದೆ (ರೂಢಿ).

[ ಚಿಟ್ಟು$_1$ + ಅಚ್ಚು$_3$ ]

**ಚಿಟ್ಟಜೇನು, ಚಿಟ್ಟಿಜೇನು** (ನಾ).ಒಂದು ಬಗೆಯ ಜೇನು ; ಕಿರಂಜೇನು: ಹೂಗೆಲಸಿ ಚಿಟ್ಟಜೇನಿಳಿಸಿದೀ ಚೆಂಜೇನು (ಪಾರಸಿ. ೨೩-೫೨೦). **ಚಿಟ್ಟಿಜೇನು** : 'ಚಿಟ್ಟಿಜೇನುತಂಪ್ಪ' ಪರಾ.

[ ಚಿಟ್ಟ$_1$ (<ಚಿಟ್ಟು$_1$) + ಜೇನು$_1$ (<ಜೇನ್) ]

**ಚಿಟ್ಟನಬೇರು** (ನಾ). ಒಂದು ಬಗೆಯ ಔಷಧಿ ಗಿಡ: ಅಡಕೆ, ಚಿಟ್ಟನಬೇರು, ಸೊಗದೆಬೇರು . . . ಮೆಣಸು ಇವು ಸಮತೂಕ ಕಷಾಯವಿಟ್ಟು ತೆಗೆದು ಕೊಳ್ಳಲು ರಾತ್ರಿಜ್ವರಂ ನಾಶಮಕ್ಕುಂ (ಸಕವ್ಯ. ೧೦೮).

[ ? + ಬೇರು (<ಬೇರ್) ]

**ಚಿಟ್ಟನೆ** (ಅ). ಗಟ್ಟಿಯಾಗಿ ; ಜೋರಾಗಿ : ಅವಳು ಚಿಟ್ಟನೆ ಚೀರಿದಳು (ಭಾರತಿ, ೨೧). [ ಚಿಟ್ +– ಅನೆ$_1$ ]

**ಚಿಟ್ಟಬಳ** (ನಾ). ಸಣ್ಣಬಳ್ಳ : ಚಿಟ್ಟಬಳಗಳಿಗೆ ಕಟ್ಟುಗಳಲ್ಲದೆ ಬೆಟ್ಟಕ್ಕೆ ಕಟ್ಟ ನಿಕ್ಕುವರೆ (ಶಾಂತೀಶ. ೬-೫೨). [ಚಿಟ್ಟ$_1$ (<ಚಿಟ್ಟು$_1$) + ಬಳ$_1$ (<ಬಳ್ಳ)]

**ಚಿಟ್ಟಬಾಸುರ** (ನಾ). ಸಣ್ಣಜಾತಿಯ ಕಬ್ಬು (?) : ಕರಿಯ ಕಬ್ಬು ರಸ ದಾಳಿಯ ಬಿಳಿಗಬ್ಬು ಮೆಱೆವ ಚಿಟ್ಟಬಾಸುರದ ಹೊಱೆಹೊಱೆಗಟ್ಟಿ ನಿಲ್ಲಿಸಿ ಮಾಱುವುದನಾ ದೊರೆಮಗ ಕಂಡನು (ಜ್ಞಾನಜ. ೩೮-೧೨೪).

[ ಚಿಟ್ಟ$_1$ (<ಚಿಟ್ಟು$_1$) + ? ]

**ಚಿಟ್ಟಬಿಲ್ಲು** (ನಾ).ಸಣ್ಣಬಿಲ್ಲು : ಕಡೆಗೊಂದು ಹಕ್ಕಿ ಹೊಡೆಯುವ ಚಿಟ್ಟ ಬಿಲ್ಲಾದರೂ ಇತ್ತೇ ? (ಮಲೆಮ. ೬೬).

[ ಚಿಟ್ಟ$_1$ (<ಚಿಟ್ಟು$_1$) + ಬಿಲ್ಲು$_1$ (<ಬಿಲ್$_2$) ]

**ಚಿಟ್ಟಮುಟ್ಟಿ, ಚಿಟ್ಟಾಮುಟ್ಟಿ, ಚಿಟ್ಟೆಮುಟ್ಟಿ** (ನಾ). ಒಂದು ಬಗೆಯ ಮೂಲಿಕೆ : ಚಿಟ್ಟಮುಟ್ಟಿಬೇರು, ಪಿರಾಮುಟ್ಟಿವೇರು (ಸಕವ್ಯ. ೧೦೭). **ಚಿಟ್ಟಾಮುಟ್ಟಿ** : ದಶಮೂಲ . . . ಕಿಱುಕಳ್ಳಂಗಡಲೆ, ಚಿಟ್ಟಾಮುಟ್ಟಿ, ಇಷ್ಟನೂ ಪ್ರತ್ಯೇಕ ಹತ್ತು ಹಲಗಳ ಚೆನ್ನಾಗಿ ಒಣಗಿಸಿ, ಜಜ್ಜುಗುಟ್ಟಿ (ವೈದ್ಯಸಾ. I, ೪೦೫). **ಚಿಟ್ಟೆಮುಟ್ಟಿ** : ಧಾತಕಿಕುಸುಮ, ಎಳಚಿಚಕ್ಕೆ, ನೆಲಗುಳ್ಳ, ಚಿಟ್ಟೆಮುಟ್ಟಿ, ಶುಂಠಿ, ಅರಿಸಿನ ಇವು ಕಷಾಯವಿಕ್ಕಿ ಕೊಡಲು ವಾತಜ್ವರಂ ಮಾಣ್ಗುಂ (ಸಕವ್ಯ. ೬೯). [ ← ತೆಲು. ಚಿಟಿಮುಟಿ ]

**ಚಿಟ್ಟಲು** (ನಾ). ಒಂದು ಬಗೆಯ ಮರ: (ಎಸಮ್ಮ. XVII, ೩೩). [ ? ]

**ಚಿಟ್ಟವುಡಲ, ಚಿಟ್ಟೌಡಲ** (ನಾ). = ಚಿಟ್ಟುಹರಳು : ಕರಿಯ ಬೆಕ್ಕಿನ ತಲೆಯೊಳಗೆ ಚಿಟ್ಟವುಡಲವ ಬಿತ್ತಿ ಬೆಳೆದು ಆ ಬೀಜವನ್ನು ಬಾಯೊಳಗೆ ಹಾಕಿಕೊಳ್ಳೆ ಆ ಬೆಕ್ಕಿನಂತಕ್ಕು (ವಿವ್ಯವಿ. ೨೦೯). **ಚಿಟ್ಟೌಡಲ**: ವರ ಚಿಟ್ಟೌಡಲ ದೆಣ್ಣೆಯಲಾಗಲಿ ಮೇಣಿರುವ ತ್ರಿಫಲೆ ಕಷಾಯದಲಿ (ಸಾಳ್ವಸಾಂ. ೨೦) : ಚಿಟ್ಟೌಡಲದ ಹರಳು ಒಂದು ಹಿಡಿಯನ್ನು ಮೇಲಣ ತೊಟ್ಟ ತೆಗೆದು ಆ ತಿರುಳ ಹುಳಿಮಜ್ಜಿಗೆಯಲ್ಲಿ ಅರೆದು ಕುಡಿಯೆ ಶ್ವಾಸಖಾಸಗಳು ಹುಟ್ಟು ಗೆಡುವುವು (ಸಕವ್ಯ. ೨೦೬); ಚಿಟ್ಟೌಡಲ: — ಈ ಎಣ್ಣೆಯಂ ಹಾಲಲ್ಲಿ ತೆಗೆದು ಕೊಳ್ಳೆ ವಾತೋದರ ಮಾಣ್ಗುಂ (ವಿವ್ಯವಿ. ೪). [ಚಿಟ್ಟು$_1$+ಅವುಡಲ]

**ಚಿಟ್ಟಹಲಗೆ** (ನಾ). ಚಿಕ್ಕತಮ್ಮಟೆ : ಕರಡಿಯ ಮಜಲು ಊಡಕ – ಚಿಟ್ಟ ಹಲಗೆಯ ಮಜಲಿನವರು (ಸುಪರ್ಣ. ೪೦).

[ ಚಿಟ್ಟ$_1$ (<ಚಿಟ್ಟು$_1$) + ಹಲಗೆ (<ಪಲಗೆ) ]

**ಚಿಟ್ಟಹುಲ್ಲು** (ನಾ). ಸಣ್ಣಜಾತಿಯ ಹುಲ್ಲು : ಚಿಟ್ಟಹುಲ್ಲು – ಇದರಿಂದ ಬಹಳ ಚಾಪೆಗಳನ್ನು ಮಾಡುತ್ತಾರೆ (ಸಿದ್ಧಾಂತಿ. ೦೩೩).

[ ಚಿಟ್ಟ$_1$ (<ಚಿಟ್ಟು$_1$) + ಹುಲ್ಲು (<ಪುಲ್) ]

**ಚಿಟ್ಟಳಿಲ್** (ನಾ). ಸಣ್ಣ ಅಳಿಲು : ಚೀರಿದುದು ಚಿಳಿಚಿಳಿಚಿಳಿಲ್ಲೆಂದು . . . ಚಿಟ್ಟಳಿಲ್ (ಶ್ರೀರಾಮಾ. ೪೯೩-೦೯೯).
[ ಚಿಟ್ಟ$_1$ (< ಚಿಟ್ಟು$_1$) + ಅಳಿಲ್$_0$ (< ಅಣಿಲ್) ]

**ಚಿಟ್ಟಾಡು** (ಕ್ರಿ). ಸ್ವಲ್ಪವಾದರೂ ಅಲ್ಲಾಡು ; ಮಿಸುಕಾಡು : ದ್ರೋಣಾಚಾರ್ಯರ ಭಟ್ಟರೆಲ್ಲಂ ಚಿಟ್ಟದಂತೆ ಚಿಟ್ಟಾಡದಂಜಿ ನಿಲೆ (ಧರ್ಮಾಮೃ. ೧೩-೫೫ ಅಡಿಟಿ). [ ಚಿಟ್ಟು$_1$ + ಆಡು$_1$ ]

**ಚಿಟ್ಟಾನೆ** (ನಾ). ಸಣ್ಣಆನೆ; ಆನೆಮರಿ: ಹಳ್ಳಿಗೆ ಬರುವ ಸರ್ಕಸ್ ಎಂಥದಿರಬೇಕು . . . ಮಂಗ್ಯಾ, ನಾಯಿ, ಚಿಟ್ಟಾನೆ, ತಟ್ಟೂ ಕೆಲವು ಇದ್ದವು (ನಿರಾಭ. ೬೪). [ ಚಿಟ್ಟು$_1$ + ಆನೆ$_1$ ]

**ಚಿಟ್ಟಾಮುಟ್ಟಿ** 'ಚಿಟ್ಟಮುಟ್ಟಿ' ನೋ.

**ಚಿಟ್ಟಿ$_1$** 'ಚಿಟ್ಟು$_1$' ನೋ.

**ಚಿಟ್ಟಿ$_2$, ಚಿಟ್ಟೆ$_1$**(ನಾ). ೧. ಧಾನ್ಯದ ಒಂದು ಅಳತೆ; ನಾಲ್ಕು ಸೊಲಗೆಯ ಅಳತೆ : (೬). **ಚಿಟ್ಟೆ$_1$** : ೧. ಮಾಣಿನ್ನು ಚಿಟ್ಟೆ ಪಡಿಗೆ ಸಗಣಿಯ ತುಂಬಿ (ಅಮುಸಾಂ. ೩-೧೨೬). ೨. ಸೇರಿನ ಹತ್ತನೆಯ ಒಂದು ಭಾಗ.
[ ದೇ. ॥ ತಮಿ. ತೆಲು. ಚಿಟ್ಟಿ ]

**ಚಿಟ್ಟಿ$_3$** 'ಚಿಟ್ಟೆ$_3$' ನೋ.

**ಚಿಟ್ಟಿಕ್ಕು$_1$** (ಕ್ರಿ). ಚಿಟ್ಟೆಂದು ಚೀರಂ : ಬಲುವಹಿತದಲ್ಲಿ ಅಟ್ಟಹಾಸದಲಿ ಚೀರಿ ಚಿಟ್ಟಿಕ್ಕಿ ಕೂಗಿ (ವಿಶಾಸು. ೭೦-೫). [ ಚಿಟ್ + ಇಕ್ಕು ]

**ಚಿಟ್ಟಿಕ್ಕು$_2$** (ಕ್ರಿ). = ಚಿಟ್ಟುಹಿಡಿ ೧ : ವಾಸುದೇವನ ಪೂಜೆಯೊಮ್ಮೆ ಮಾಡೆಂದರೆ ಬೇಸತ್ತು ತಲೆಯ ಚಿಟ್ಟಿಕ್ಕಿ ಕುಳಿತೆ (ವಿದಾಕೃ. ೫೦-೫).
[ ಚಿಟ್ಟು$_2$ + ಇಕ್ಕು ]

**ಚಿಟ್ಟಿಗ** (ನಾ). ಶಿಷ್ಯ; ಛಾತ್ರ: "ಶಿಷ್ಯಕಃ, ಶಿಷ್ಯಃ, ಈ ೨ ಚಿಟ್ಟಿಗಂ" (ಕಾಶಕೃ. ೨೯೫) : ಹಿಡಿದ ಕರಡಿಗೆ ಪುಷ್ಪವನಾಗುಮಾಡುವ ಜಡೆಯ ಚಿಟ್ಟಿಗರಿರೆ (ಹರಿಸಾಂ. ೧-೮೧) ; ಮುದುಕ ಜಂಗಮರು ಚಿಟ್ಟಿಗರೊಡಿದರು ಮುಂದೆ (ಸಿದ್ಧೇಪು. ೧೭-೧೪) ; ಓರಂತೆ ಸಂಚರಿಸುತಿರ್ಪ ಚಿಟ್ಟಿಗನಿತ್ತ ಬಾರನೆಂದಾ ಬಿಲದ್ವಾರದತ್ತಂ ನೋಡುತಿರೆ (ಕೊಟ್ಟೂಬ. ೮-೩೬). [ < ಸಂ. ಶಿಷ್ಯಕ ]

**ಚಿಟ್ಟಿಜೇನು** 'ಚಿಟ್ಟೆಜೇನು' ನೋ.

**ಚಿಟ್ಟಿಜೇನುತುಪ್ಪ** (ನಾ). ಸಣ್ಣಜೇನಿನ ಗೂಡಿನಲ್ಲಿ ಸಿಗುವ ಜೇನುತುಪ್ಪ: ತವಕ್ಷೀರ ೪ ಪಲ ಸೇರಿಸಿ ಪಾಕದಲ್ಲಿ ಬೆರಸಿ ಚಿಟ್ಟಿಜೇನುತುಪ್ಪ ಸೇ ೨ ಹಾಕಿ ಕಲಸಿ (ಸಕವೈ. ೪೧೨ ಪರಿ.). [ ಚಿಟ್ಟಿಜೇನು (< ಚಿಟ್ಟಜೇನು) + ತುಪ್ಪ ]

**ಚಿಟ್ಟಿರಿ** 'ಚಿಟ್ಟಿಱು' ನೋ.

**ಚಿಟ್ಟಿಲಿ** (ನಾ). ಸಣ್ಣಇಲಿ ; ಚಿಕ್ಕಇಲಿ : "ಗಿರಿಕಾ, ಬಾಲಮೂಷಿಕಾ ಈ ೨ ಚಿಟ್ಟಿಲಿಗಳ ಹೆಸರು" (ಸಿದ್ಧಾಂತಿ. ೧೩೬) ; ಮನೆಯಲ್ಲಿ ಚಿಟ್ಟಿಲಿಗಳ ಉಪದ್ರವವು ಬಹಳವಾಗಿದೆ (ಕುರಿಹಿಂ. ೧೭). [ ಚಿಟ್ಟು$_1$ + ಇಲಿ$_1$ ]

**ಚಿಟ್ಟಿಱು** 'ಚಿಟ್ಟೆಱು' ನೋ.

**ಚಿಟ್ಟು$_1$, ಚಿಟ್ಟ$_2$, ಚಿಟ್ಟು$_2$, ಚಿಟ್ಟ$_1$, ಚಿಟ್ಟಿ$_1$, ಚಿಟ್ಟೆ$_2$, ಚೀಟು$_3$** (ಗು). ೧. ಸಣ್ಣದಾದ ; ಚಿಕ್ಕದಾದ. 'ಚಿಟ್ಟಿಲಿ' ಪರಾ. **ಚಿಟ$_2$** : ೧. 'ಚಿಟಕೊಳಗು' ಪರಾ. **ಚಿಟು$_2$** : ೧. 'ಚಿಟುಬಾಳೆ' ಪರಾ. **ಚಿಟ್ಟ$_1$** : ೧. 'ಚಿಟ್ಟಗುಬ್ಬಿ' ಪರಾ. **ಚಿಟ್ಟೆ$_1$** : ೧. 'ಚಿಟ್ಟೆಜೇನು' ಪರಾ. (ನಾ). ೨. ಸಣ್ಣಹಕ್ಕಿ : ಚಿಟ್ಟೆ ಜೂಗ ಹದ್ದೆಂಬಿವಂ (ಹಡಕಾ. ೫-೪೩). **ಚಿಟ್ಟೆ$_2$**: ೧. 'ಚಿಟ್ಟೆಕಥೆ', 'ಚಿಟ್ಟೆಬೆಲ್ಲ' ಪರಾ. ೩. ಪಗಡೆಯ ಸಣ್ಣಕಾಯಿ : ಲೆತ್ತವಲಗೆಯ ಹಾಸಿ ಚಿಟ್ಟೆಯನಿತ್ತೆರದಿ ಸಾಲ್ಗೊಳಿಸಿ (ಜಿನಭಾ. ೩೬-೪೫). ೪. ಪಗಡೆಯ ಸಣ್ಣದಾಳ: ವಿರಾಟ ಧರ್ಮಭೂಪಾಲನಾ ಶಿರಮಂ ಚಿಟ್ಟೆಯೊಳಿಟ್ಟಂ (ಸೋಮೇಶ. ೭೪). **ಚೀಟು$_3$**: ೫. ಚೂರು; ತುಂಡು; ರಾಯ ನೀನಾರಬುತ್ತಿಗೆ ಚೀಟು ರೊಟ್ಟಿಯ ಕಾಯ ಕೊಯ್ದಾಪೆ ಕೇಳು (ಮೋಹತ. ೧೦-೩೬). [ ದೇ. ॥ ತಮಿ. ಚಿಟ್ಟು; ತುಳು. ಚಿಟ್ಟೆ; ತೆಲು. ಚಿಟ್ಟಿ, ಚಿಟ ]

**ಚಿಟ್ಟು$_2$** (ನಾ). ಜುಗುಪ್ಸೆ ; ಬೇಸರ. 'ಚಿಟ್ಟಿಕ್ಕು$_2$', 'ಚಿಟ್ಟುಹಿಡಿ' ಪರಾ. [ < ಚಿಟ್ ]

**ಚಿಟ್ಟುಂಬೆ** (ನಾ). ಒಂದು ಬಗೆಯ ಗಿಡ : ಸಾಂಬ್ರಾಣಿಮರ, ಚಿಟ್ಟುಂಬೆ (ವೃಜಿಗಿ. ೧೩-೨೩೬). [ ? ]

**ಚಿಟ್ಟುಕೋಳಿ** (ನಾ). ಸಣ್ಣ ಆಕಾರದ ಒಂದು ಬಗೆಯ ಕಾಡುಕೋಳಿ : ಸೆಬೆ ಒಡ್ಡಿ ಕಾಡುಕೋಳಿ, ಚಿಟ್ಟುಕೋಳಿ ಹಿಡಿಯುವುದು (ಮಲಮ. ೯೩).
[ ಚಿಟ್ಟು$_1$ + ಕೋಳಿ$_1$ (< ಕೋೞಿ$_1$) ]

**ಚಿಟ್ಟುತಂದ್ರಿ, ಚಿಟ್ಟುತಾಂಡ್ರಿ** (ನಾ). ಒಂದು ಬಗೆಯ ಮರ: ಮರಗಳು : ಹೆಸವ . . . ಚಿಟ್ಟುತಂದ್ರಿ, ಬೇವು (ನಮ್ಮನು. ೨೩೬). **ಚಿಟ್ಟುತಾಂಡ್ರಿ** : ಚಿಟ್ಟುತಾಂಡ್ರಿಮರ, ಕಾಡುಲವಂಗ, ಕ್ರೂರಮಾವು (ವೃಜಿಗಿ. ೫೨-೧೦೩೪).
[ ? ]

**ಚಿಟ್ಟುತಾಂಡ್ರಿ** 'ಚಿಟ್ಟುತಂದ್ರಿ' ನೋ.

**ಚಿಟ್ಟುದ್ದು** (ನಾ). ಸಣ್ಣಉದ್ದು ; ಉದ್ದಿನ ಕಾಳಿನಲ್ಲಿ ಸಣ್ಣ ಜಾತಿ: (೬).
[ ಚಿಟ್ಟು$_1$ + ಉದ್ದು$_2$ (< ಉೞ್ದು) ]

**ಚಿಟ್ಟುಬಾಳೆ, ಚಿಟುಂಬಾಳೆ** (ನಾ). ಒಂದು ಬಗೆಯ ಬಾಳೆಗಿಡ ಮತ್ತು ಅದರ ಹಣ್ಣು ; ಪುಟ್ಟಬಾಳೆ : ಚಿಟ್ಟುಬಾಳೆಯ ಹಣ್ಣು ಬಹಳ ರುಚಿ (ರೂಢಿ). **ಚಿಟುಂಬಾಳೆ**: ಚಿಗುಳಿ ಚಿನ್ನಾಲ್ ಬಚ್ಚೇವ ಚಿಟುಂಬಾಳೆ ಆಗಲೋಳು ಗರಿ ಕಾಣಿಸೆನೆ (ಮಲ್ಲಿಗೆ. ೨). [ ಚಿಟ್ಟು$_1$ + ಬಾಳೆ$_1$ (< ಬಾೞೆ) ]

**ಚಿಟ್ಟುಮುರಿ** (ನಾ). ಒಂದು ಬಗೆಯ ಆಟ ; ಮುಂಟ್ಟಾಟ ; ಜೂಟಾಟ (?) : "ಚಿಟ್ಟುಮುರಿ ಪುಮ್ಮೆಯೊಳಕ್ಕುಂ" (ಕವಿಕಂ. ೨೨೬) : ಹಂಸೆ ಹಂಸೆಗಟ್ಟುಂಬರಿವಪೊಲು ಪದಪದಂ ಮೆಱೆಯೆ ಚಿಟ್ಟುಮುರಿ[ಪಾಠಾಂ. ಸೆಟ್ಟುಮುರಿ]ಯಾಡುತಿರ್ದರು ಸತಿಯರು (ಹಡಕಾ. ೪-೧೦) ; ಜಗಜಟ್ಟಿ ಹಾಯಿಕಿಕೊಂಡು ನುಣ್ಣನೆ ಚಿಟ್ಟುಮುರಿಯಾಟದಲಿ ಸದೆದನು ಮತ್ತೆ ಕೌರವರ (ಕುವ್ಯಾಅ. ೬-೧೪) ; ಬೆಟ್ಟವನು ಕೊಡೆವಿಡಿದು ಮರದಿಂದಿಟ್ಟು ಪುಟನೆಗೆದಂಬರದೊಳುಱೆ ಚಿಟ್ಟುಮುರಿ[ಪಾಠಾಂ. ಟ್ಟಮೆರೆ]ಯಾಡುವ ನಳಾದಿ ಪ್ರಮುಖ ಪಟುಭಟರ (ತೊರರಾ. ೬-೩೫-೪೪). [ ? ]

**ಚಿಟ್ಟುಹರಳು** (ನಾ). ಚಿಕ್ಕಜಾತಿಯ ಹರಳು: ಚಿಟ್ಟುಹರಳಿನ ಎಣ್ಣೆ ತುಂಬ ತಂಪು (ರೂಢಿ). 'ಚಿಟ್ಟವುಡಲ' ಪರಾ. [ ಚಿಟ್ಟು$_1$ + ಹರಳು$_2$ ]

**ಚಿಟ್ಟುಹಿಡಿ** (ಕ್ರಿ). ಮನಸ್ಸಿಗೆ ಹಿಂಸೆಯಾಗು; ಬೇಸರವಾಗು ; ಜುಗುಪ್ಸೆಯುಂಟಾಗು : ನನಗೂ ತಲೆ ಚಿಟ್ಟುಹಿಡಿದುಹೋಗಿದೆ (ಮರಳಿ. ೩೫) : ನಮ್ಮ ಸಂಸ್ಕೃತಕಾವ್ಯಗಳಲ್ಲಿ . . . ತಲೆ ಚಿಟ್ಟುಹಿಡಿಯುವಷ್ಟು ವರ್ಣನೆಗಳೂ ಕಂಡುಬರುತ್ತವೆ (ಭಾರದ. ೪೪೫); ಅವನ ತಲೆ ಚಿಟ್ಟುಹಿಡಿದುಹೋಗಿತ್ತು (ಕತ್ತಬಿ. ೪೫); ಆ ಮಾತೆಲ್ಲಾ ಕೇಳಿಕೇಳಿ ಕಿವಿ ಚಿಟ್ಟುಹಿಡಿದುಹೋಗಿದೆ (ಜಂಡಕೋ. ೧೪). [ ಚಿಟ್ಟು$_2$ + ಹಿಡಿ$_1$ (< ಪಿಡಿ$_1$) ]

**ಚಿಟ್ಟುಹಿಡಿಸು** (ಕ್ರಿ). ಬೇಸರವಾಗುವಂತೆ ಮಾಡು: ಜೀರುಂಡೆಗಳ ಕೂಗು ಕಿವಿಗೆ ಚಿಟ್ಟುಹಿಡಿಸುತ್ತಿತ್ತು (ಮಲಮ. ೩) : ಹಾಳುಕೆಲಸ ತಲೆ ಚಿಟ್ಟು ಹಿಡಿಸುತ್ತಿದೆ (ರೂಪಸ. ೧೩೧) ; ತುಂಬಾ ಚಿಟ್ಟುಹಿಡಿಸಿದರೆ . . . ಪುಟ್ಟ ಏಟನ್ನು ಕೊಟ್ಟು ಬರುತ್ತಿದ್ದಳು (ನಾಲ್ಮ. ೧೧೬). [ಚಿಟ್ಟುಹಿಡಿ+ –ಇಸು$_3$]

**ಚಿಟ್ಟುಳುಕ** (ನಾ). ಒಂದು ಬಗೆಯ ಸಸ್ಯ : ನೆಗ್ಗಿಲು, ಸೂರ್ಯಭಕ್ತ, ಹೊನ್ನಗನ್ನೆ, ಚಿಟ್ಟುಳುಕ ಇದರ ಸೊಪ್ಪುಗಳಲ್ಲಿ ರಸವ ತೆಗೆದು ಜೇನುತುಪ್ಪದಲ್ಲಿ ಕೊಡಲು . . . ಮೂತ್ರಕೃಚ್ಛ್ರರೋಗ ಸಹ ಪರಿಹಾರವಕ್ಕು (ಸಕವೈ. ೩೬೬). [ ? ]

**ಚಿಟ್ಟೂಳಿಗ** (ನಾ). ಚಿಕ್ಕಕೆಲಸ ; ಸಣ್ಣಪುಟ್ಟಕೆಲಸ : ಇವರುಗಳು ದೊರೆತನ ಮಾಡುವ ಯೋಗ್ಯತೆಯನ್ನು ಪಡೆದವರಾಗಿ ಕಾಣಲ್ಪಡುತ್ತಾರೆ ; ಚಿಟ್ಟೂಳಿಗ ಮಾಡುವುದಕ್ಕೆ ತಕ್ಕವರಲ್ಲ (ವ್ಯಾಸಜಿ. ೨೨೨).
[ ಚಿಟ್ಟು$_1$ + ಊಳಿಗ (< ಊೞಿಗ) ]

**ಚಿಟ್ಟಿ$_1$** 'ಚಿಟ್ಟಿ$_2$' ನೋ.
**ಚಿಟ್ಟಿ$_2$** 'ಚಿಟ್ಟು$_1$' ನೋ.
**ಚಿಟ್ಟಿ$_3$** 'ತಿಟ್ಟು$_3$' ನೋ.
**ಚಿಟ್ಟಿ$_4$** (ನಾ). [ಸಂಗೀತ] ಹಾಡಿನಲ್ಲಿ ಒಂದು ಶಾಸ್ತ್ರಬದ್ಧವಾದ ಕ್ರಮ. 'ಚಿಟ್ಟೆತಾನ', 'ಚಿಟ್ಟೆಸ್ವರ' ಪರಾ. [ದೇ.೫ ತಮಿ. ಚಿಟ್ಟೈ]
**ಚಿಟ್ಟಿ$_5$** 'ಚಿಟ್ಟ' ನೋ.
**ಚಿಟ್ಟಿ$_6$, ಜಿಟ್ಟಿ$_1$, ಜಿಟ್ಟೆ** (ನಾ). ೧. (ಹೂವಿನಿಂದ ಹೂವಿಗೆ ಹಾರಾಡುವ) ಒಂದು ಬಗೆಯ ರೆಕ್ಕೆಹುಳು ; ಪಾತರಗಿತ್ತಿ : ಮಿಂಚುವ ಚುಕ್ಕಿಯ ರೆಕ್ಕೆಯ ಚಿಟ್ಟೆಯೊ (ಅನಿಕೇ. ೩೦-೬) ; ಇನ್ನು ಪಾರದಿರೆನ್ನ ಬಳಿಯೆ ಸೊಗ ಗೂಡು; ಚಿಟ್ಟೆ ನೀ ನೆನವೊಳೆನ್ನೊಳವೆಯನಳುಂಬಂ (ಗೀವಿಂ. ೧-೬) : ರೇಷ್ಮೆ ಹುಳುವು . . . ೩ ವಾರ ನಿದ್ರೆಮಾಡಿ ಅದು ಎಚ್ಚತ್ತಾಗ ಚಿಟ್ಟೆಯಾಗಿ ರೂಪಾಂತರ ಹೊಂದುತ್ತದೆ (ಗೃಹವಿ. ೬೬). ೨. ಮಿಡತೆ: ದಿವ್ಯಾಸ್ತ್ರ ಚಯಂಗಳ್ಕೊಳೆ ಗಾಂಧರ್ವಬಲಂಗಳ್ಕೆಡೆದುವು ಮಿಟ್ಟೆಗೊಂಡ ಚಿ[ಪಾಠಾಂ. ಬ, ಬೆ]ಟ್ಟೆಯ ತೆಱದಿಂ (ಪಂಪಭಾ. ೬-೩೮). **ಜಿಟ್ಟಿ$_1$**: ೨. ಪ್ರತಿವರ್ಷ ತಪ್ಪದೆ ಸಣ್ಣ ಪ್ರಮಾಣದಲ್ಲಿ ಜಿಟ್ಟೆಗಳು ಕಂಡುಬರುತ್ತವೆ (ಕೀಟಬಿ. ೮೪) : ಜಿಟ್ಟೆ ಹುಳಗಳಝೇಂಕಾರ ಮೈಯನ್ನು ಜುಮ್ಮೆನ್ನಿಸುತ್ತದೆ (ಕೃಹಿಕಾ. ೯). **ಜಿಟ್ಟೆ**: ೧. ಒಂದು ಜಿಟ್ಟೆಯನ್ನು ಹಿಡಿದು ಒಂದು ಕಡ್ಡಿಯ ಮೇಲೆ ಸಿಕ್ಕ ಹಾಕಿದ (ಕೃವಾಆ. ೧೦೩). ೨. "ಮಿಡಿತೆ, ಮಿಡಿಚೆ—ಜಿಟ್ಟೆ" (ಗಂಗಾಮು. ೨೫೬).
[ ? ]
**ಚಿಟ್ಟೆಕಥೆ** (ನಾ). ಚಿಕ್ಕಕಥೆ : ಉಪಮೆ, ರೂಪಕ, ಚಿಟ್ಟೆಕಥೆ, ತಿಳಿಹಾಸ್ಯ ಅಥವಾ ಪ್ರತಿಮೆ, ಅನ್ಯೋಕ್ತಿ ಒದಗಿ ಬಂದು ಯುಕ್ತಿವಾದಗಳಿಂದ ಗಳಿಸ ಬೇಕಾದ ಸಿದ್ಧಿಯನ್ನು ಸಾಧಿಸುತ್ತದೆ (ನಿಬಂಧ. I, ಮುನ್ನುಡಿ X).
[ ಚಿಟ್ಟೆ$_2$(<ಚಿಟ್ಟು$_1$) + ಕಥೆ ]
**ಚಿಟ್ಟೆತಾನ** (ನಾ). [ಸಂಗೀತ] "ಮಿಾಟುಗಳ ಅಭ್ಯಾಸಕ್ಕಾಗಿಯೇ ರಚಿತ ವಾದ ತಾನಗಳಿಗೆ ಚಿಟ್ಟೆತಾನಗಳೆಂದು ಹೆಸರು" (ಸಂಗೀಚಂ. ೮೯).
[ ಚಿಟ್ಟಿ$_4$ + ತಾನ$_2$ ]
**ಚಿಟ್ಟೆತಾಳ** (ನಾ). = ಚಿಟಿಕೆತಾಳ : ಯುವತಿಯು ಎಡಗೈಯಲ್ಲಿ ಡಮರುಗ ವನ್ನೂ ಬಲಗೈಯಲ್ಲಿ ಚಿಟ್ಟೆತಾಳವನ್ನೂ ಹಿಡಿದು ನರ್ತಿಸುತ್ತಿರುವಳು (ಹೊಯ್ಸವಾ. ೩೩). [ ಚಿಟ್ಟೆ$_2$(<ಚಿಟ್ಟು$_1$) + ತಾಳ$_1$(=ತಾಲ) ]
**ಚಿಟ್ಟೆಬೆಲ್ಲ** (ನಾ). ಸಣ್ಣ ಅಚ್ಚುಬೆಲ್ಲ : ಕರೆದು ಕೈಯಲ್ಲಿ ಚಿಟ್ಟೆಬೆಲ್ಲ ಕೊಟ್ಟು ಚಿಕ್ಕ ಹರಳುಕಲ್ಲುಗಳನ್ನೆ ಆರಿಸಿ ಕೊಟ್ಟು (ಪುರಂದ. ೪-೬೭-೨).
[ ಚಿಟ್ಟೆ$_2$ (<ಚಿಟ್ಟು$_1$) + ಬೆಲ್ಲ ]
**ಚಿಟ್ಟೆಮುಟ್ಟೆ** 'ಚಿಟ್ಟಮುಟ್ಟೆ' ನೋ.
**ಚಿಟ್ಟೆಸ್ವರ** (ನಾ). [ಸಂಗೀತ] ಅಲಂಕಾರಕ್ಕಾಗಿ ಕೃತಿಗೆ ಸೇರಿಸುವ ಸ್ವರಗಳ ಗುಂಪು ; ಕೃತಿಯನ್ನು ಹಾಡುವಾಗ ಅನುಪಲ್ಲವಿ ಮತ್ತು ಚರಣದ ಕೊನೆಯಲ್ಲಿ ಹಾಡುವ ಸ್ವರಗಳ ಸಮೂಹ: ಪಲ್ಲವಿ, ಅನುಪಲ್ಲವಿ ಚಿಟ್ಟೆಸ್ವರಗಳ ನಂತರ ಪಲ್ಲವಿಗೆ ಸೇರುವುದು ಸಂಪ್ರದಾಯ (ಸಂಗೀಚಂ. ೬೨).
[ ಚಿಟ್ಟಿ$_4$ + ಸ್ವರ ]
**ಚಿಟ್ಟೆಹುಲಿ** (ನಾ). ಸಣ್ಣಜಾತಿಯ ಹುಲಿ: ಚಿಟ್ಟೆಹುಲಿಯಂತೆ ಅದರ ಮೈಮೇಲೆ ಪಟ್ಟೆಮುದ್ರೆ (ಬಾಳಿಗಿ. ೯೫).
[ ಚಿಟ್ಟೆ$_2$ (<ಚಿಟ್ಟು$_1$) + ಹುಲಿ$_1$ (<ಪುಲಿ$_1$) ]
**ಚಿಟ್ಟೇಱು** (ಕ್ರಿ). ಮನಸ್ಸಿಗೆ ಹಿಂಸೆಯಾಗು ; ಬೇಸರವಾಗು; ಜುಗುಪ್ಸೆ ಯುಂಟಾಗು : ಚಿಟ್ಟೇಱ್ ಮೃತ್ಯುಗಱ್ವಂತೊಟ್ಟಜೆಯಿಂ ಬಂದು ಹರನ ಸುತನೊಳ್ ಪಳಚಲ್ ತೊಟ್ಟನೆ ಚಕ್ರದಿ ತಲೆ ಪಱಿದಟ್ಟೆಗಳುರ್ವರೆಗೆ ಕೆಡೆದು ಮಡಿದರ್ ಸವಣರ್ (ಶ್ರೀಪುವಿ. ೩೨-೬೫).
[ ಚಿಟ್ಟು$_2$ + ಏಱು$_1$ (<ಏಱ್$_1$) ]

**ಚಿಟ್ಪುಡಲ** 'ಚಿಟ್ಟವುಡಲ' ನೋ.
**ಚಿಟ್ಟ, ಚಿಟ್ಟ$_2$, ಚಿಟ್ಟಿ$_3$, ಚಿಟ್ಟಿ$_5$** (ನಾ). ದಿನಚರಿಯನ್ನು ಬರೆದಿಡುವ ಚಿಕ್ಕದಾದ ಕರಡುಪುಸ್ತಕ. 'ಕುಳವಾರ್ಚಿಟ್ಟ' ಪರಾ. **ಚಿಟ್ಟ$_2$**: (ಕೈಸ್‌ಗ. II, ೫೪೬). **ಚಿಟ್ಟಿ$_3$**: (ಕ). **ಚಿಟ್ಟಿ$_5$**: ಹಣವಸೂಲಿ ತಪಶೀಲ್ ಲೆಖ್ಖವನ್ನು ದಾಖಲ್ಮಾಡಿರುವ ಚಿಟ್ಟೆಯು ಅಧಿಪತಿ ಭದ್ರವಾಗಿಟ್ಟಿರಬೇಕು (ಗ್ರಾಮಾಳ. ೬೮) : ಹಳೆ ದುಮ್ಮಾಲೆ ಚಿಟ್ಟೆಯನ್ನು ನೋಡಿದರೆ ಈ ವಿಷಯ ತಿಳಿದು ಬರುತ್ತದೆ (ತುಳುನಾ. ೧೧೬). [ ←ಹಿಂ. ಚಿಟ್ಠಾ ]
**ಚಿಟ್ನೀಸ** 'ಚಿಟಣವೀಸ' ನೋ.
**ಚಿಟ್ರೆಹಕ್ಕಿ** (ನಾ). ಒಂದು ಬಗೆಯ ಹಕ್ಕಿ : ಚಿಟ್ರೆಹಕ್ಕಿಯು ಚಿರತೆ . . . ಪರಿವ ಗೀಜಗ ಮೆರೆದವು (ಗೋಹಾಡು. ಪುಟ ೨೪).
[ ಚಿಟ್ರೆ$_0$ + ಹಕ್ಕಿ$_1$ (<ಪಕ್ಕಿ$_1$). / ತುಳು. ಚಿಟ್ಟೆಪಕ್ಕಿ ]
**ಚಿಟ್ಲೆ, ಚಿಟ್ಲು** (ನಾ). ಒಂದು ಬಗೆಯ ಕಾಡುಮರ : (ಕ). **ಚಿಟ್ಲು** : (ಎಸಮ್ಮ. I, ೨೯). [ ←ತಮಿ. ಚಿಟ್ಟಲಿಂಗಿ ]
**ಚಿಟ್ಲು** 'ಚಿಟ್ಲೆ' ನೋ.
**ಚಿಡಾಯಿಸು, ಚುಡಾಯಿಸು** (ಕ್ರಿ). ಕೀಟಲೆ ಮಾಡಿ ರೇಗಿಸು: ಕೆರಳಿಸು : (ಕ). **ಚುಡಾಯಿಸು** : ಸುಮಿತ್ರೆಗೆ ಗೆಳತಿಯರು ಚುಡಾಯಿಸುವುದು ಕಿವಿಗೆ ಬೀಳಲೇ ಇಲ್ಲ (ವಿದ್ಯಾರಿ. ೧೮೫) : ಸ್ವಾಮಿಯನ್ನು ಇನ್ನೊಂದಷ್ಟು ಚುಡಾಯಿಸೋಣ (ಸ್ವಾಮಿಸ್ನೇ. ೦೩೭).
[ ಚಿಡಾಯಿ$_0$ (P ←ಮರಾ. ಚಿಡವಿಣೇ) + – ಇಸು$_3$]
**ಚಿಣಗಿ$_1$** (ನಾ). ಒಂದು ಬಗೆಯ ಹೂವು: ಅಣ್ಣಿಗೇರಿ ಅಮೃತಲಿಂಗ ಗೊಯ್ದನಾ ಚಿಣಗಿ ಬಿಳೀ ಕಣಗಿಲೆಹೂವ (ಕಜಾಗೀ. ೪೦) : ಚಿಟ್ಟ ಚಿಣಗೀ ಹೂವ ದುಂಡಮಲ್ಲಿಗಿಹೂವ (ಮಲ್ಲಿಗೆ. ೬). [ ? ]
**ಚಿಣಗಿ$_2$** 'ಚಿಣೆಗಿ' ನೋ.
**ಚಿಣಿ** 'ಚಿನ್ನಿ$_1$' ನೋ.
**ಚಿಣಿಕೋಲ್** 'ಚಿಣ್ಣಿಕೋಲು' ನೋ.
**ಚಿಣಿಕೋಲು** 'ಚಿಣ್ಣಿಕೋಲು' ನೋ.
**ಚಿಣೆಗಿ, ಚಿಣಗಿ$_2$** (ನಾ). ಒಂದು ಬಗೆಯ ವಿಷಸರ್ಪ : ಚಿಣೆಗೀಹಾವು ಬಳೆಬಡಕಹಾವು ಹೆಬ್ಬಾವು ಎಂದು ಹಲವು ತರದ ಹಾವುಗಳು ಉಂಟು (ಮುಂಬಯಿ. ೨-೩೩). **ಚಿಣಗಿ$_2$**: ಬೇರೆ ವಿಷಯುಕ್ತಸರ್ಪಗಳು ಚಿಣಗೀಹಾವು (ಘುಸರ್ಾ), ಮಂಡೋಳ (ಘೋಣಸ)(ಕಭಾಗಿ. ೬೭). [ ? ]
**ಚಿಣಿದಾಂಡು** 'ಚಿನ್ನಿದಾಂಡು' ನೋ.
**ಚಿಣಿಪಣಿ** 'ಚಿಣಿಫಣಿ' ನೋ.
**ಚಿಣಿಫಣಿ, ಚಿಣಿಪಣಿ** (ನಾ). ೧. ಚಿಣ್ಣಿ ಮತ್ತು ದಾಂಡು : ಹುಡುಗರು . . . ತಮ್ಮ ಕೊಂಬು, ಕೊಳಲು, ಚಿಣಿಫಣಿ, ಗೋಲುಗಜ್ಜುಗಗಳನ್ನು ತಕ್ಕೊಂಡು . . . ಹಿಂಬಾಲಿಸಿದರು (ಭಾಮ್ಮತ. ೩೧೩). ೨. ಚಿಣ್ಣಿ ಮತ್ತು ದಾಂಡುಗಳಿಂದ ಆಡುವ ಆಟ: ಸುಮ್ಮನ ಚಿಣಿಫಣಿ ಆಡೋಣು (ಅಮನಿ. ೨೬) : ಅಪ್ಪಾ, ಕೃಷ್ಣನ ಕೂಡ ನಾನು ಚಿಣಿಫಣೀ ಆಡುತ್ತಿದ್ದೆ (ಮುಂಬಯಿ. ೫-೨೬೮). **ಚಿಣಿಪಣಿ** : (ಕ). [ ಚಿಣಿ(<ಚಿನ್ನಿ$_1$) + ಫಣಿ$_2$ ]
**ಚಿಣಿಮಿಂಡಿ** (ನಾ). ಒಂದು ಬಗೆಯ ತಿನಿಸು (?) : ಮಡಿಲೊಳಗೆ ಚಿಣಿಮಿಂಡಿ ಬಟ್ಟಲೊಳಡಸಿ ಚಿಲಿಪಾಲ್ಗಿಂಡಿನೀರನು ಪಿಡಿದು ಬಂದಿ ನ್ನೋರ್ವ ಸತಿ ಸುತನ್ನುಸ್ತಸಂಜ್ಞೆಯಲಿ ಯಡೆಗೆ ಕರೆದು (ಜರಾಮಾ. ೪-೨೬).
[ ? ]
**ಚಿಣ್ಣ** 'ಚಿನ್ನ$_2$' ನೋ.
**ಚಿಣ್ಣಂಚಿ** (ನಾ). ಚಿಕ್ಕಹಂಸ ; ಹಂಸದ ಮರಿ : ಚಿಣ್ಣಂಚಿ ನಡೆ ಚಿಕ್ಕಹೆಱ ವಣಿ ಮಱಿಯುಲ್ಲಿಗಣ್ (ಶ್ರೀಪಾಲ. ೩-೩೮).
[ ಚಿಣ್ಣ (<ಚಿನ್ನ$_2$) + ಅಂಚೆ$_3$ ]

**ಚಿಣ್ಣತನ** (ನಾ). ಎಳೆತನ ; ಚಿಕ್ಕಂದು ; ಬಾಲ್ಯ: ಹೆಣ್ಣಿನಂಗವ ನೋಡಿರೆ ಪುರಾತನರ್ಬಳಿಕ ಚಿಣ್ಣತನದನುವ ನೋಡಿರೆ (ಮದೇಶ. ೩೦-೧೭) : ಕಣ್ಣ ಮುಂದುದಿಸಿಯನ್ನೋದಕಂಗಳ ಗ್ರಹಿಸಿ ಚಿಣ್ಣತನದಿಂ ಮೆರೆದು ಯವ್ವನತ್ವಂ ದಳೆದು (ಭಕ್ತಿ.ಸ. IV, ೩-೧). [ ಚಿಣ್ಣ (< ಚಿನ್ನ$_2$) + – ತನ ]

**ಚಿಣ್ಣನೆ** (ಅ). ಬೇಗನೆ; ಕೂಡಲೆ : ಆ ವೇಗಕ್ಕೆ ಬಲೆಯನ್ನು ಎತ್ತಿಹಿಡಿದಿದ್ದ ಎಣೆಯು ಚಿಣ್ಣನೆ ಹಾರಿ ಸಮಗ್ರ ಬಲೆಯು ಹಂದಿಯ ಮೇಲೆ ಬಿತ್ತು (ಹುಟ್ಟಿಹ. ೨೦) [ ? + – ಅನೆ$_1$ ]

**ಚಿಣ್ಣವೆಱೆ** (ನಾ). ಎಳೆಯಂ ಚಂದ್ರ; ಬಾಲಚಂದ್ರ: ಅಣ್ಣವಾಲು ಪಾಯಸ ಅಮೃತಾನ್ನವನು . . . ಚಿಣ್ಣವೆಱೆಯ ಸೂಡಿದಭವನ ಶರಣರಿಗುಣ್ಣಲಿಕ್ಕುವ ಬಸವೇಶ (ಬಸಪು. ೧-೧೭೦). [ ಚಿಣ್ಣ (< ಚಿನ್ನ$_2$) + ವೆಱೆ ]

**ಚಿಣ್ಣಾಟ** 'ಚಿನ್ನಾಟ' ನೋ.

**ಚಿಣ್ಣಿ** 'ಚಿನ್ನಿ$_1$' ನೋ.

**ಚಿಣ್ಣಿಕೋಲು, ಚಿಣಿಕೋಲ್, ಚಿಣಿಕೋಲು** (ನಾ). ೧. ವಂಕ್ಕಳು ಆಟಕ್ಕೆ ಬಳಸುವ ಮರದ ಸಣ್ಣತುಂಡು ; ಚಿಣ್ಣಿ : ಬಿಜ್ಜಳನ ಬಲವ ಕಂಡು ಚಿಣ್ಣಿಕೋಲಂತೆ ಚಿಗಿದನು (ಬಿಜ್ಜರಾ. ೩-೩೬). ೨. ಚಿಣ್ಣಿ ಮತ್ತು ದಾಂಡಂಗಳಿಂದ ಆಡುವ ಆಟ: ಚೆಂಡು ಬುಗುರಿ ಚಿಣ್ಣಿಕೋಲು ಗಜ್ಜುಗವಾಡುತ (ಪುರಂದ. ೨-೫೨-೧). **ಚಿಣಿಕೋಲ್ :** ೨. ಬಾಲಕರು ನೂಱಾಱು ಮೆಱೆದರು . . . ಚಂಡಿನ ಹೊಣಕೆ ಚಿಣಿಕೋಲಾಳುಗೊತ್ತಿನ ದಂಡೆಯನೆ ನಾನಾವಿನೋದದಲಿ (ಕುಮ್ಮಾ.ಅ. ೬-೧): ಚಿಣಿಕೋಲ್ ಚೆಂಡು ಬುಗುರಿಯನಾಡುತ (ಪುರಂದ. ೧-೧೩-೨). **ಚಿಣಿಕೋಲು:** ೨. ಚಿಣಿಕೋಲಿನಂಥ ಆಟಗಳನ್ನು . . . ಆಡುವಲ್ಲಿ, ಗೆಲುವಿನ ಗುರುತನ್ನು ನೆನೆದು ಹಿಗ್ಗಬಲ್ಲ (ಸ್ವಪ್ನಹೊ. ೩೮).
[ ಚಿಣ್ಣಿ (<ಚಿನ್ನಿ$_1$) + ಕೋಲು$_1$ (<ಕೋಲ್$_1$) ]

**ಚಿಣ್ಣಿಗ** (ನಾ). ಬಾಲಕ; ಹುಡುಗ: ಹೆಣ್ಣು ಪ್ರಾಣಕ್ಕೆ ಮುನಿದರೇ ಚಿಣ್ಣಿಗ ಹಾದರಿಗನಾಗಿ ಕಳವಂ ಕಲಿತರೇ ಹೆಣ್ಣು ಧರೆ ಭೂಮಿಯಾ × × × ಹೆಣ್ಣಂ ಬಿಡು ಚಿಣ್ಣ ಬೇಡಾ ಆ ಮೊಣ್ಣುಳದಿರಾ (ಗುಭಜ. ೬-೩೬).
[ ಚಿಣ್ಣ (<ಚಿನ್ನ$_2$) + – ಇಗ ]

**ಚಿಣ್ಣಿದಾಂಡು** 'ಚಿನ್ನಿದಾಂಡು' ನೋ.

**ಚಿಣ್ಕೊಸ** (ನಾ). (?): ಕಣ್ಣಾ ಬಿಟ್ಟರೆ ಬಿಡೆನೊ ಜಲವನ್ನು ಪೊಕ್ಕರೆ ಬಿಡೆನೊ ಮಣ್ಣು ತೂರಿ ಕಿಡಿಯಾದರೆ ಬಿಡೆನೊ ಸಣ್ಣನಾಗಿ ಹೆಣ್ಣು ತೋರಿದರೆ ಬಿಡೆನೊ ಉಣ್ಣಾದ ಚಿಣ್ಕೊಸ ತೋರಿದರೆ ಬಿಡೆನೊ (ವಿಠ್ಠಲದೀ. ೩೬-೧). [ ? ]

**ಚಿತ** (ಗು). ೧. ರಾಶಿಮಾಡಿದ ; ಕೂಡಿಹಾಕಿದ ; ಸಂಗ್ರಹಿಸಿದ. ೨. ಮುಚ್ಚಿದ ; ಆವರಿಸಿದ ; ತುಂಬಿದ. [ ಸಂ. ]

**ಚಿತಕ** (ನಾ). ಶವವನ್ನು ಸುಡಲು ಒಟ್ಟಿದ ಕಟ್ಟಿಗೆಯ ರಾಶಿ ; ಚಿತೆ : ಪ್ರಭಾವತಿ ಕಂತಿಕೆಯನೆತ್ತಿಕೊಂಡುಯ್ದು ಪರೇತವನದೊಳ್ ಯೋಗಸ್ಥರಾಗಿರ್ದ ಹಿರಣ್ಯವರ್ಮಮುನಿವರರ್ಸರ್ವರುಮನೊಂದೆ ಚಿತಕದ ಮೇಗಿಟ್ಟು ಸುಡುವಾಗಳ್ (ಜಾವುಂಪು. ೬೦). [ <ಸಂ. ಚಿತಿಕಾ ]

**ಚಿತಗು** 'ಚಿದಕಂ$_1$' ನೋ.

**ಚಿತಾನಳ** (ನಾ). ಹೆಣವನ್ನು ಸುಡುವ ಬೆಂಕಿ : ಆ ಜಯದ್ರಥನ ಚಿತಾನಳನಿಂದಮೊಗೆದ ಪೊಗೆಗಳ್ ಕೊಳೆ ಸುರಿವೊಡೆ ಸುರಿವುವೆನ್ನ ನಯನ ಜಲಂಗಳ್ (ಪಂಪಭಾ. ೧೧-೧೧೯). [ ಸಂ. ಚಿತಾನಲ (ಚಿತಾ + ಅನಲ) ]

**ಚಿತಾಭಸ್ಮ** (ನಾ). ಚಿತೆಯ ಬೂದಿ : ನೆಹರೂ ಅವರ ಚಿತಾಭಸ್ಮವನ್ನು ಅವರ ಅಪೇಕ್ಷೆಯಂತೆ ಭಾರತದಾದ್ಯಂತ ಸಿಂಪಡಿಸಲಾಯಿತು (ರೂಢಿ).
[ ಸಂ. (ಚಿತಾ + ಭಸ್ಮ) ]

**ಚಿತಾಯಿಸು** (ಕ್ರಿ). ಹುರಿದುಂಬಿಸು ; ಉತ್ತೇಜಿಸು : ರೇಗಿಸು ; ಚಿತಾಯಿಸು; ಎತ್ತಿಕಟ್ಟು (Incite. ಇಂಕನಿ). [ ಚಿತಾವಣೆ + –ಇಸು$_3$ ]

**ಚಿತಾರ** (ನಾ). ಬಣ್ಣದ ಸಾಮಾನುಗಳನ್ನು ಮಾಡುವವನು; ಗುಡಿಗಾರ: ಗುಡಿಗಾರರಿಗೆ ಚಿತಾರರೆಂತಲೂ ಅನ್ನುವರು. ಗಾಡದ ಮೇಲೆ ಕಟ್ಟಿಗೆಯ ಸಾಮಾನುಗಳನ್ನು ಮಾಡುವದೇ ಇವರ ಮುಖ್ಯ ಹೊರೆಯು (ಕಭಾಗ. ೧೫೬). [ ←ಮರಾ. ಚಿತಾರ. / ಸಂ. ಚಿತ್ರಕಾರ ]

**ಚಿತಾರಿ** (ಗು). ನಾಜೂಕಾಗಿರುವ: ಹಾಡಿಕೆಯಲ್ಲಿ ಚಿಲ್ಲರೆ ಚಿತಾರಿ ಕೆಲಸಗಳು ಇರಲಿಲ್ಲ, ಕಚ್ಚುಗುಳಿಯಿಡುವ ಅಗ್ಗದ ಸಾಮಾನು ಇರಲಿಲ್ಲ (ಗಾನಕ. ೪೪).
[ < ಚಿತಾರ ? ]

**ಚಿತಾವಣೆ** (ನಾ). ಇತರರನ್ನು ಪ್ರೇರಿಸುವಿಕೆ; ಎತ್ತಿಕಟ್ಟುವಿಕೆ; ಪ್ರಚೋದನೆ : ನರಸಮ್ಮನ 'ಚಿತಾವಣೆ' ಯಿಂದ ವಿಷಕಂಠಯ್ಯ, ಪಾರ್ವತಮ್ಮ ಮದುವೆಯ ಸುದ್ದಿ ಎತ್ತಿದಳು ಎಂದರೆ . . . ಕೋಣೆಯಿಂದ ಮೆಲ್ಲನೆ ಜಾರಿಬಿಡುತ್ತಿದ್ದನು (ಸರ್ವಮಂ. ೧೭೭) ; ಆ ಸಿಂಬಾವಿಹಗ್ಗಡೆಯ ಚಿತಾವಣೆ ಬೇರೆ ಇದೆ ಅವನಿಗೆ (ಮಲಮ. ೫೯೭) ; ನಿನ್ನ ತಂದೆಯನ್ನು ತೀರಿಸಿಬಿಡು ಎಂದು ಚಿತಾವಣೆಮಾಡಿದನು (ಹತ್ತುಕು. ೬೭).
[ ←ಹಿಂ. ಚಿತಾವನೀ ]

**ಚಿತಾವಣೆಗಾತಿ** (ನಾ). ಪ್ರೇರೇಪಿಸುವವಳು ; ಹುರಿದುಂಬಿಸುವವಳು : ವರ್ತಕ ಮಾಸ್ತೋವಳನ್ನು ಬಿಡುಗಡೆ ಮಾಡಿಸುವ ಕಾತರತೆಯಿಂದ ಬಾಪ್ಪೋವಳೆ ಮುಖ್ಯ ಚಿತಾವಣೆಗಾತಿಯೆಂದು ಒತ್ತಿ ಒತ್ತಿ ಹೇಳಿದನು (ಪುನರು. ೧೦೩). [ ಚಿತಾವಣೆ + – ಗಾತಿ$_5$ ]

**ಚಿತಿ** (ನಾ). ೧. ರಾಶಿ ; ಸಮೂಹ. ೨. ಶೇಖರಿಸುವುದು ; ಸಂಗ್ರಹಿಸುವುದು. ೩. ಬೆಂಕಿಯ ಕುಂಡ : ತುಪ್ಪವನಿಕ್ಕಿದ ಚಿತಿಯಂತೆ ಸ್ಫಟಿಕವ ಸಾರಿದ ಒಱೆತೆಯಂತೆ (ವೀರಶೈಮೃ. ೧೬೦-೫೯೯) : 'ಚಿತಿ' ಎಂದರೆ ಯಜ್ಞವೇದಿಕೆ, ಕುಂಡ (ಸೌಂದಕ. ೦೨೦). ೪. ಶವವನ್ನು ಸುಡಲು ಒಟ್ಟಿದ ಕಟ್ಟಿಗೆಯ ರಾಶಿ; ಚಿತೆ: ಮತವು ತನಗಿನ್ನರಸನೊಡನಾ ಚಿತಿಯ ಪುಗುವುದು (ರಾಮಾಸಂ. ೬-೩-೨೦) ; ಮದವಳಿಗೆ ಲಗ್ನವೇದಿಕೆಯಂತೆ, ಚಿತಿಯು ಪೊಗುತ (ಗೀವಿಂ. ೫೭-೦೭). ೫. ಜ್ಞಾನಸ್ವರೂಪ ; ಆತ್ಮಧರ್ಮವಾದ ಜ್ಞಾನ : ಆ ಚೈತನ್ಯವು ಚಿತಿ ಮಾತ್ರ (ಭಾತತ್ತ್ವ. ೩೪೧). ೬. [ಗಣಿತ] ಸಾಲಾಗಿರುವ ವಸ್ತುಗಳ ಕ್ರಮವನ್ನು ವ್ಯತ್ಯಾಸಪಡಿಸುವುದು, ಹಾಗೆ ವ್ಯತ್ಯಾಸ ಪಡಿಸಿದ ವಸ್ತುಗಳು ಮತ್ತು ಅವುಗಳಿಗೆ ಸಂಬಂಧಿಸಿದ ಲೆಕ್ಕ : ಲೀಲಾವತಿಯನ್ನು ೧೩ ಅಧ್ಯಾಯಗಳನ್ನಾಗಿ ವಿಭಾಗಿಸಿದ್ದಾರೆ . . . ಚಿತಿ (Stacks), ಕ್ರಕಚ (Saw) . . . ಮುಂತಾದ ವಿಷಯಗಳು ಅಡಕವಾಗಿವೆ (ಗಣಚ. ೨೭೪). [ ಸಂ. ]

**ಚಿತಿಶಕ್ತಿ** (ನಾ). [ತತ್ತ್ವಶಾ] ಜೀವಾತ್ಮ: ಇಂತಹ ಚಿತಿಶಕ್ತಿಗಳೆಂಬ ಜೀವಾತ್ಮರು ಅಸಂಖ್ಯಾತಗಳಾಗಿರುವರು (ಹಿಂದಸಾ. ೫೮). Pಸಾಂಖ್ಯಮತದಂತೆ ಚಿಚ್ಛಕ್ತಿಯೇ ಜೀವಾತ್ಮ. [ ಚಿತಿ + ಶಕ್ತಿ ]

**ಚಿತೆ** (ನಾ). = ಚಿತಿ ೪ : "ಚಿತ್ರೆ ಚಿತೆಯೆನಲು ಸಿದ್ಧಿಗೆಯದೆನಿಕ್ಕಂ" (ಮಂಗರಾ. ೧೧೮-೭):ಆ ಗಂಧದ ಕೊರಡನ್ನು ತಂದು ಚಿತೆಯ ಮೇಲಿರಿಸಿದರು (ಹಬ್ಬಿಬ. ೪) ; ಕ್ಷಿಪ್ರದಲ್ಲಿ ಚಂದನಕಾಷ್ಠದ ಚಿತೆ ರಾಜಪಿತೃಭೂಮಿಯಲ್ಲಿ ಸಿದ್ಧವಾಯಿತು (ಶಾಂತಲಾ. ೧೮೦). [ ಸಂ. ಚಿತಾ ]

**ಚಿತೆವೆಂಕಿ** (ನಾ). ಚಿತೆಯ ಬೆಂಕಿ : ಬೇರೊಂದು ಚಿತೆವೆಂಕಿಯನ್ನು ಹಾದು ಬಂದಿರುವ . . . ಹೆಣ್ಣಿನ ಮೋಹ ಬೇಡ (ಅನುಕ. ೪೩).
[ ಚಿತೆ + ಬೆಂಕಿ (<ಬೆಂಕೆ) ]

**ಚಿತ್ಕಲೆ, ಚಿತ್ಕಳೆ** (ನಾ). ಪರಮಾತ್ಮನ ಚೈತನ್ಯಾಂಶ: ಇದು ಚತುರ್ವೇದಾಗಮಪ್ರಚಯಪೌರಾಣದುದಧಿಯೊಳ್ ಜನಿಸಿದಾ ಚಿತ್ಕಲಾನಿಧಿಯೆನಿಸಿ (ಏಕೋಶಪು. ೦-೬೭). **ಚಿತ್ಕಳೆ:** ಆ ನೆನಹು ನಿರ್ಧರಿಸಿ ಚಿತ್ತನಿಸಿತ್ತು, ಆ ಚಿತ್ತಿನಿಂದೆ ಚಿತ್‌ನಾದ ಚಿತ್‌ಬಿಂದು ಚಿತ್‌ಕಳೆಗಳೊಗೆದುವು (ಅಖಂಡೇ. ೩-೧).
[ ಸಂ. ಚಿತ್ಕಲಾ (ಚಿತ್ + ಕಲಾ) ]

**ಚಿತ್ಕಳೆ** ‘ಚಿತ್ಕಲೆ’ ನೋ.

**ಚಿತ್ಕಾಂತ** (ನಾ). ಮನಸ್ಸಿಗೆ ಪ್ರಿಯವಾದವನು ; ಪ್ರಾಣಪ್ರಿಯ ; ಪ್ರಾಣಕಾಂತ: ಚಿತ್ಕಾಂತ ನಿನ್ನ ಯುನಿವಚನಾಮೃತವು ಸುರಸ ಮತ್ಕರ್ಣದೊಳು ಪೊಕ್ಕು (ನವಮೋ. ೩-೩). [ ಸಂ. (ಚಿತ್ + ಕಾಂತ) ]

**ಚಿತ್ಕ್ರಿಯೆ** (ನಾ). ಮನಸ್ಸಿನ ಆಲೋಚನೆ,– ಕ್ರಿಯೆ: ಕಲಾವಿದನ ಕ್ರಿಯೆ ಚಿತ್ಕ್ರಿಯೆಯಾದುದರಿಂದ ಭೌತಮಾಧ್ಯಮ ಯಾವ ರೀತಿಯಲ್ಲೂ ಅವನ ಅಭಿವ್ಯಕ್ತಿಗೆ ಅಡ್ಡಿಯಾಗುವುದಿಲ್ಲ . . . ಆದರೆ ಕಲ್ಲು, ಭಾಷೆ, ಬಣ್ಣ ಇತ್ಯಾದಿಗಳು ಕಲಾಮಾಧ್ಯಮವಾಗುವುದು ಕಲಾವಿದನ ಪ್ರತಿಭೆಗೆ ಅಥವಾ ಚಿತ್ಕ್ರಿಯೆಗೆ ಒಳಗಾದಾಗ (ಸೌಂದಸ. ೭೨).
[ ಸಂ. ಚಿತ್ಕ್ರಿಯಾ (ಚಿತ್ + ಕ್ರಿಯಾ) ]

**ಚಿತ್ತ** (ಗು). ೧. ತಿಳಿದ; ಗ್ರಹಿಸಿದ. (ನಾ). ೨. ಮನಸ್ಸು: ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ (ಬಸವ. ೨೯) ; ಶಿವನಿಷ್ಠೆ ಚಿತ್ತದೊಳು ಬೇರ್ವರಿದವರ್ಕೆಲರು (ತಿರುರ. ದೀ. ೧೪-೧೭) ; ಸೂಚಿಸ್ಪೋಯಿತು ಚಿತ್ತ . . . ಮಿಳಿಚಿ ಪೊಗುವಂಗಜನ ಶರದಲಿ (ಕುಮಾವ್ಯಾ. ೨-೦೦). ೩. ಅಪೇಕ್ಷೆ; ಆಶಯ : ಧರ್ಮವನು ಮಾಡಬೇಕೆಂಬ ಚಿತ್ತದಿಂದ ತಿರುಮಲರಸರು (ಎಕ. XX, ೮-೩೩ ; 1556) ; ಚಿತ್ತವಱಿತು ಸೇವೆಯೆಸಗುವ ಸತಿಯರ ವೃತ್ತವ ಬಿತ್ತರಿಸುವೆನು (ಹದಿಬ. ೪-೩). ೪. ಗುರಿ ; ಉದ್ದೇಶ : ಪರಿಕಿಸುವ ನಾಡಿ ನಡುವಿರೆ ಪರೀಕ್ಷೆಯೊಳು ತಿಳಿದ ರಾಸಿಯಿಂತಿದು ಮೊದಲೊಳು ಚಿತ್ತದಿಚ್ಛೆಯೊಳಂತ್ಯದೊಳಿರೆ ತಪ್ಪದು ಫಣಮದು ಚಿತ್ತವಿಳಾಸಂ (ಭಾಸ್ಕರ. ೩೦-೮). [ ಸಂ. ]

**ಚಿತ್ತಂಗುಡು, ಚಿತ್ತಗೊಡು** (ಕ್ರಿ). ಮನಸ್ಸಿಡು ; ಗಮನಿಸು : ಸರ್ವಸ್ವಮುಂ ನಿಮ್ಮಡಿಗಳೊಡವೆ ಆಂ ಕಾಪಿನಾಳೆಂದು ಚಿತ್ತಂಗುಡುತಿರ್ಪಂತೆ (ರಕ್ಷಾಶ. ೩೯). **ಚಿತ್ತಗೊಡು:** ವಿದಿತ ವೈದಿಕ ಲೌಕಿಕಕೆ ಜಗವದುಹದಂತಿರೆ ಚಿತ್ತಗೊಡಬೇಕೆಂದು ಕೈಮುಗಿದ (ತೊರರಾ. ೬-೩೩-೨೭) ; ಮನೋರಮೆ ವಿನಾಯಕನ ಮಾತುಗಳನ್ನೆಲ್ಲ ಚಿತ್ತಗೊಟ್ಟು ಕೇಳುತ್ತಿದ್ದಳು (ಅಂಬಿಕ. ೧೭).
[ ಚಿತ್ತ + ಕುಡು$_1$ (<ಕೊಡು$_1$) ]

**ಚಿತ್ತಂಗೊಳ್** (ಕ್ರಿ). ಮನಸ್ಸಿಡು ; ಮನಸ್ಸಿಗೆ ತೆಗೆದುಕೊಳ್ಳು : ಕೇಳೀವನ ಪಾದಪಂಗಳಿರ ಚಿತ್ತಂಗೊಂಡು ಬೀಟ್ಕೊಂಡು ರಾಗದೆ ನಿಮ್ಮಂ ಬಲಗೊಂಡು ಪೋಪ ಗುಣಮಂ ಕೊಳ್ಳಿಂ (ಆದಿಪು. ೦೦-೧೩೪).
[ ಚಿತ್ತ + ಕೊಳ್$_1$ ]

**ಚಿತ್ತಂಗೊಳಿಸು** (ಕ್ರಿ). ಮನಸ್ಸನ್ನು ಒಲಿಸು ; ಮೋಹಗೊಳಿಸು ; ಆಕರ್ಷಿಸು : ಬಳೆದೊಡಿಸಲೆಂದು ಸುದತಿಯ ಕೆಳೆಯನದೊರ್ವಂ ಕರಕ್ಕೆ ಕೆಯ್ನೀಡೆ ಸುಖೋಜ್ವಳೆಯ ಶಶಿಮುಖಿಯ ಚಿತ್ತಂಗೊಳಿಸುವ ಸಖಿ ಬೇಡಬೇಡವೆನುತುಂ ನುಡಿದಳ್ (ಗಿರಿಶ. ೪-೦೩೮) ; ಕಡುಚದುರರ ಚಿತ್ತಂಗೊಳಿಸಿದುದಾ ಬನದೊಳು ಸುಳಿವೆಳಗಾಳಿ (ಜಯುಕಾ. ೦-೩೦).
[ ಚಿತ್ತಂಗೊಳ್ + – ಇಸು$_3$ ]

**ಚಿತ್ತಂಬಡೆ** (ಕ್ರಿ). ೧. ಮನಸ್ಸನ್ನು ಹೊಂದು ; ಗಮನವಿಡು : ಭುವನಾಗ್ರದ ಸುಖಸಂಪದಕಿಚ್ಛೈಸುವ ಚಿತ್ತಂಬಡೆದು ವಿರಾಜಿಪ ಮುನಿನಿವಹದ ಪದಪಂಕಜಕೆಱಗುವೆ ನಾಂ (ಜಯುಕಾ. ೦-೦೦). ೨. ಮನಸ್ಸನ್ನು ವಶಪಡಿಸಿಕೊಳ್ಳು: ಪುರುಷನ ಚಿತ್ತಂಬಡೆ[ಪಾಠಾಂ. ಬಡಿ]ಯಲ್ ಪರಮಶ್ರಾವಕಿಯರಪ್ಪರಿತ್ತಲ್ಲಳೆಯಂ . . . ಪೆಂಡಿರಿಗೀವರ್ ಗೌರಿಗೆಂದು ಸಲೆ ತಾಟಕಿಯರ್ (ಸಮಪ. ೩-೧೦೦). [ ಚಿತ್ತ + ಪಡೆ$_1$ ]

**ಚಿತ್ತಂಬುಗು** (ಕ್ರಿ). ಮನಸ್ಸನ್ನು ಪ್ರವೇಶಿಸು, – ಒಳಹೊಗು ; ಮನಸ್ಸನ್ನು ಆಕರ್ಷಿಸು : ಚಿತ್ತಂಬೊಕ್ಕಿರ್ದಯಿಂತೈ ಹರಿ ಕುಳಿರ್ವ ಕರಸ್ಪರ್ಶದಿಂದಿಂದು ತಾಪಂಬೆತ್ತಂ ಮೈಸೋಂಕಿ ಮಂದಾನಿಳನುರಿದಂ (ಜಗವಿ. ೦೦-೪೦). [ ಚಿತ್ತ + ಪುಗು (<ಪೊಗು) ]

**ಚಿತ್ತಂಬೆಱು** (ಕ್ರಿ). ಮನಸ್ಸನ್ನು ಆಕರ್ಷಿಸು: ಬಸನಂ ಕೈಗಣ್ಮೆ ತಮ್ಮೊಲ್ದರನೆ ಪಿಡಿದು ಬಲ್ಲಂದದಿಂ ನಲ್ಮೆಯಂ ಪತ್ತಿಸಿ ಚಿತ್ತಂಬೆತ್ತು ಮೆಚ್ಚಂ ಸಲಿಸಿ (ಸಮಪ. ೩-೩೦). [ ಚಿತ್ತ + ಪೆಱು$_1$ ]

**ಚಿತ್ತಕ್ಲೇಶ** (ನಾ). ಮನಸ್ಸಿನ ಆತಂಕ ; ಮನೋವೇದನೆ : ಲೇಸು ಮಾಡಿದಿರೆನ್ನ ಚಿತ್ತಕ್ಲೇಶ ಬೀತುದು ನಾನು ಬದುಕಿದೆ (ಕೌಶಿರಾ. ೪೩-೨೯).
[ ಚಿತ್ತ + ಕ್ಲೇಶ ]

**ಚಿತ್ತಕ್ಷೋಭ** (ನಾ). ಮನಸ್ಸಿನ ಗೊಂದಲ ; ಮನಸ್ಸು ಕಲಕಿ ಹೋಗುವಿಕೆ ; ಅಶಾಂತಿ : ಮುನಿಮಂ ಮೂದಲಿಸಿಯುಮಿನ್ನೆನಿತುಂ ಪೊಕ್ಕಿರ್ಪೆನೆಂದು ಚಿತ್ತಕ್ಷೋಭಂ ತನಗಾಗೆ (ಗದಾಯು. ೭-೨೭). [ ಚಿತ್ತ+ಕ್ಷೋಭ ]

**ಚಿತ್ತಕ್ಷೋಭೆ** (ನಾ). = ಚಿತ್ತಕ್ಷೋಭ : ನಾನಾವಿಧವಾದ ಚಿತ್ತಕ್ಷೋಭೆಗೆ ಮೂಲವಾದ ರಾಜಕೀಯಕ್ಷೇತ್ರದಲ್ಲೂ ಇದೇ ಪ್ರಶಾಂತಿಯನ್ನು ಪ್ರಕಾಶಪಡಿಸಿದ ರಾಮ, ಧರ್ಮರಾಜ . . . ಕಾರಣಪುರುಷರು (ಜುಕ್ಯಾರ. ೦೨೪ ಟೀಠಿಕೆ). [ ಚಿತ್ತ + ಕ್ಷೋಭೆ ]

**ಚಿತ್ತಗ** (ನಾ). ಚಿರತೆ : ಇದೆ ಬಗ್ಗನನಿಕ್ಕು ! ಮೇಣದೆ ಚಿತ್ತಗನಂ ತುಡು! (ರಾಮಾಶ್ವ. ೮೪-೧೩). [ <ಸಂ. ಚಿತ್ರಕ ]

**ಚಿತ್ತಗೊಡು** ‘ಚಿತ್ತಂಗುಡು’ ನೋ.

**ಚಿತ್ತಗ್ಲಾನಿ** (ನಾ). ಮನಸ್ಸಿನ ನೋವು ; ಅಸಂತೋಷ; ಖಿನ್ನತೆ : ನದೀಸುತನೇನನೆಂದನು ತನ್ನ ಚಿತ್ತಗ್ಲಾನಿಯನು ಬಿಸುಟೇನ ನುಡಿದನು (ಕುಮಾವ್ಯಾದ್ರೋ. ೦-೩೩) ; ಅವರಿಗೆ ತಮ್ಮ ಕುಟಿಲತೆಯ ನೆನಪಾಗಿ ಚಿತ್ತಗ್ಲಾನಿ ಉಂಟಾಗುತ್ತಿತ್ತು (ಪ್ರೇಮಾಶ್ರ. ೪೯). [ ಚಿತ್ತ + ಗ್ಲಾನಿ ]

**ಚಿತ್ತಚಾಂಚಲ್ಯ** (ನಾ). ಮನಸ್ಸಿನ ಅಸ್ಥಿರತೆ : ಪುಂಸವನಸೀಮಂತಮಂ ತಾಂ ಚಾರುಲೋಚನಗೆ ವಿಸ್ತರಿಸಿದಂ ಚಿತ್ತಚಾಂಚಲ್ಯವಿಲ್ಲದೆ (ಜೈಮಿಭಾ. ೦೮-೩೭) ; ಈ ಬಗೆಯ ಸಂತೋಷವೂ ಲಜ್ಜೆಯೂ ಆತನಿಗೆ ಇದುವರೆಗಿದ್ದ ಚಿತ್ತಚಾಂಚಲ್ಯವನ್ನು ಹೆಚ್ಚಿಸಿದುದು (ಕವಿಕ. ೪೦). [ ಚಿತ್ತ + ಚಾಂಚಲ್ಯ ]

**ಚಿತ್ತಜ** (ನಾ). ೧. ಮನಸ್ಸಿನಲ್ಲಿ ಹುಟ್ಟಿದವನು ; ಮನ್ಮಥ ; ಕಾಮ. ಚಿತ್ತಜಸನ್ನಿಭಂ ದ್ವಿಜವರಂ (ದಶಕು. ೦೦-೦೦೪). ೨. [ಜೈನ] ಬಾಹುಬಲಿಯ ಹೆಸರುಗಳಲ್ಲಿ ಒಂದು : ಚಿತ್ತಜಂ ಚಿತ್ತಭವಂ . . . ಎನೆ ನೆಗಟ್ದುವು ಬಾಹುಬಲಿಗೆ ಪಲವುಂ ಪೆಸರ್ಗಳ್ (ಆದಿಪು. ೮-೩೩) ; [ ಸಂ. ]

**ಚಿತ್ತಜಕೇಳಿ** (ನಾ). ಕಾಮಕೇಳಿ; ಸಂಭೋಗ: ನೆನೆಯದೆ ಪೋದುವಂತವರ್ಗೆ ಚಿತ್ತಜಕೇಳಿಗಳಿಂದೆ ಪೊಟ್ತುಗಳ್ (ಚಂದ್ರಪು. ೬-೮೩).
[ ಚಿತ್ತಜ + ಕೇಳಿ$_2$ (= ಕೇಲಿ) ]

**ಚಿತ್ತಜನ್ಮ** (ನಾ). = ಚಿತ್ತಜ ೧ : ಕೋಡಿಡೆ ವಾಸುಪೂಜ್ಯಮುನಿಯೊಳ್ ಮರುಳಾದಪೆ ಚಿತ್ತಜನ್ಮ ನೀಂ ನೋಡ ನಿಜಾಪ್ತವರ್ಗದಳವಂ (ಪಂಚಾಮಾ. ೦-೨೩). [ ಚಿತ್ತ + ಜನ್ಮ ]

**ಚಿತ್ತಜಾಂತಕ** (ನಾ). ಮನ್ಮಥನನ್ನು ಸಂಹರಿಸಿದವನು ; ಶಿವ ; ಈಶ್ವರ : ನಿತ್ಯನಹ ಚಿತ್ತಜಾಂತಕರೂಪ ಚರಲಿಂಗ ಹಸ್ತದೊಳು ನಿರವಯಲ ನಿಜಸಮಾಧಿ (ಪ್ರಾಥರಾ. ೨-೨೧). [ ಚಿತ್ತಜ + ಅಂತಕ ]

**ಚಿತ್ತಜಾತ** (ನಾ). = ಚಿತ್ತಜ ೧ : ಚಿತ್ತಜಾತನ ತಾತ ಕಾತರವಿಲ್ಲದೈತಂದ (ಕೌಶಿರಾ. ೨-೪೪). [ ಚಿತ್ತ + ಜಾತ ]

**ಚಿತ್ತಜಾರಿ** (ನಾ). ಮನ್ಮಥನ ಶತ್ರು; ಶಿವ; ಈಶ್ವರ : ಚಿತ್ತಜಾರಿಯಖಂಡದೀಪವನೆತ್ತುವಂ (ಬಸಪು. ೯-೩೬) ; ಚಿತ್ತಜಾರಿಯ ಗಿರಿಯ ಬಲುಹಿಂ ಕಿತ್ತು ಗರ್ವವನಿಲ್ಲಿ ಮಾಡದೆ ಇತ್ತು ಕಾಂಬುದು ಲೇಸು ಸೀತೆಯನು (ಕೌಶಿರಾ. ೩೮-೦೭). [ ಚಿತ್ತಜ + ಅರಿ$_6$ ]

**ಚಿತ್ತಜ್ಞಾನ** (ನಾ). ಮನಸ್ಸಿನಲ್ಲಿರುವ ನಿಜದ ಅರಿವು ; ಆತ್ಮಜ್ಞಾನ : ಅನುಭಾವ ಭಕ್ತಿಸಂಬಂಧವಾಗಿಹುದು ಪ್ರಾಣಲಿಂಗಸ್ಥಲವೆಂಬುದೀಗ ಚಿತ್ತಜ್ಞಾನವೆಂಬ ಶಬ್ದಕ್ಕರ್ಥ (ಅಪ್ರಾಮಾ. ೭೪-೩೦ ಟೀಕು). [ಚಿತ್ತ+ಜ್ಞಾನ]

**ಚಿತ್ತಣಿಸು** 'ಚಿತ್ತಳಿಸು' ನೋ.

**ಚಿತ್ತನಾಥ** (ನಾ). ಮನಸ್ಸಿನ ಒಡೆಯಂ ; ನಲ್ಲ : ಚಿತ್ತನಾಥನೊಳ್ ಬೆರಸುವೆನೆನ್ನದಾಂ ಬೆರಪೆನೆಂಬುದಿದಾಗದು (ಕವಿರಾ. ೨-೦೦೫).
[ ಚಿತ್ತ + ನಾಥ ]

**ಚಿತ್ತನಿರೋಧ** (ನಾ). ಮನಸ್ಸಿನ ಹತೋಟಿ,-ನಿಗ್ರಹ : ಮನಮೊಸೆದೆರಡಿಲ್ಲದೆ ಚಿತ್ತನಿರೋಧಂಗೆಯ್ದು (ಜಿನಾಕ್ಷಿ. ೩೬-೨೬) ; ಚಿತ್ತನಿರೋಧಂ ತಪಂ (ಸಮಪ. ೬-೧೮). [ ಚಿತ್ತ + ನಿರೋಧ ]

**ಚಿತ್ತಪಲ್ಲಟ** (ನಾ). ಮನಸ್ಸು ಬದಲಾಗುವಿಕೆ : ಅದಂ ಬಿಟ್ಟಕಣ್ಣಂ ಸಾವಧಾನವಾಗಿ ಕೇಳ್ವುದರ್ಕೆ ಚಿತ್ತಪಲ್ಲಟವಾಗಿ (ಪಂಚತಂ. ೩೦೩-೭).
[ ಚಿತ್ತ + ಪಲ್ಲಟ ]

**ಚಿತ್ತಪ್ಪಕೆಱೆ** (ನಾ). ಒಂದು ಕೆರೆಯ ಹೆಸರು : ಮಂಜುಗಟಿಯರ್ ಚಿತ್ತಪ್ಪಕೆಱೆಯಂ ಕಟ್ಟಿಸಿ ನಾಲ್ಕಳೆವೆಯ ಭಾಗಂ ಬಿತ್ತುವಾಟಂ ಕೆಱೆಗೆ ಕುಡುವುದು (ಎಕ. XI, ಹಿರಿಯೂ. ೩೩-೩ ; ಸು. 890).
[ ಚಿತ್ತಪ್ಪ₀ + ಕೆಱೆ ]

**ಚಿತ್ತಪ್ರಿಯ** (ನಾ). ಮನಸ್ಸಿಗೆ ಪ್ರಿಯನಾದವನು ; ಮನೋವಲ್ಲಭ : ಚಿತಪ್ರಸನೆ ತಚ್ಚಿತ್ತಪ್ರಿಯಂಗೇಂ ಮೆಱೆದಳೊ ಸುರತಕ್ರೀಡೆಯಂ ಪ್ರೌಢಿಯಿಂದಂ (ಕಾವ್ಯಸಾ. ೬೩೪). [ ಚಿತ್ತ + ಪ್ರಿಯ ]

**ಚಿತ್ತಭವ** (ನಾ). ೧. = ಚಿತ್ತಜ ೧ : ಕಾಮಿನೀಜನಕೇಳೀವಿಭವಕ್ಕೆ ಚಿತ್ತಭವ ನಿರ್ಪ್ಪನ್ನಿಬ್ಬರ್ಪ್ಪಂ (ಸೌಇಇ. XX, ೭೪-೨೬ ; 1112). ೨. = ಚಿತ್ತಜ ೨ : ಚಿತ್ತಭವಂ . . . ಅಂಗಜನೆನೆ ನೆಗಟ್ದುವು ಬಾಹುಬಲಿಗೆ ಪಲವುಂ ಪೆಸರ್ಗಳ್ (ಆದಿಪು. ೮-೫೩). [ ಚಿತ್ತ + ಭವ ]

**ಚಿತ್ತಭ್ರಮಣೆ** (ನಾ). = ಚಿತ್ತಭ್ರಮೆ : ಇದೇನು ಚಿತ್ತಭ್ರಮಣೆಯೋ ಯಿಲ್ಲವೆ ನನಗೆ ಸ್ವಪ್ನಾವಸ್ಥೆಯೋ (ಅರ್ಕಮಾ. ೦೩೯) ; ಶಾಂತಲಾದೇವಿಯ ಕಳೇಬರವನ್ನು ತೆಗೆದುಕೊಂಡು ಹೋಗಿರುವ ಪ್ರಭುಗಳಿಗೆ ಚಿತ್ತಭ್ರಮಣೆಯಾಗಿರಬಹುದು (ಶಾಂತಲಾ. ೩೪೮). [ ಚಿತ್ತ + ಭ್ರಮಣೆ ]

**ಚಿತ್ತಭ್ರಮೆ** (ನಾ). ಮನಸ್ಸಿನ ಭ್ರಾಂತಿ ; ತಲೆಕೆಡುವುದು ; ಹುಚ್ಚು : ಪಿತ್ತೋದ್ರೇಕಂ ಪುಗುಟುಂ ಚಿತ್ತಭ್ರಮೆಯೆಂಬಿವಕ್ಕುಮಂಗಮ[ದುಂ] ತಾನೆತ್ತಂ ಹಳದಿಯ ವರ್ಣಂಚಿತ್ರಿರ್ಪುದು ವೈತ್ತಮೆನಿಪ ಬಾಷ್ಪದ ಭೇದಂ (ಖಮದ. ೦೫-೫); ಪಿತ್ತಭ್ರಮೆಯಿದ್ದವಗೆ ಚಿತ್ತಭ್ರಮೆಯಾಗದೇ ? (ಗಾದೆ).
[ ಚಿತ್ತ + ಭ್ರಮೆ ]

**ಚಿತ್ತಭ್ರಾಂತಿ** (ನಾ). = ಚಿತ್ತಭ್ರಮೆ : ಚಿತ್ತಭ್ರಾಂತಿಶ್ರಾಂತಂ ಪೊತ್ತುದುಮಂ ತಡವಿ ನೋಡುತುಂ (ಪಂಚತಂ. ೧೮೭-೦೩). [ ಚಿತ್ತ + ಭ್ರಾಂತಿ ]

**ಚಿತ್ತಮುರಕ** (ನಾ). ಒಂದು ಬಗೆಯ ಬಳ್ಳಿ (?) : ಚಿತ್ತಮುರಕನ ಬಳ್ಳಿ ಎತ್ತ ಹಬ್ಬಿದರೇನ ಚಿತ್ತ ಬ್ಯಾರವಳ ಬಗೆ ಬ್ಯಾರೆ (ಗರತಿ. ೦೩೨). [ ? ]

**ಚಿತ್ತಮೋಹನ** (ನಾ). ಮನಸ್ಸಿಗೆ ಉಂಟಾಗುವ ಭ್ರಾಂತಿ, - ಭ್ರಮೆ : ಚಿತ್ತಮೋಹನಂ ಭ್ರಮಮಕ್ಕುಂ (ಕಾವ್ಯಾವ. ೭೦೮).
[ ಚಿತ್ತ + ಮೋಹನ ]

**ಚಿತ್ತಯಿಸು, ಚಿತ್ತಯ್ಸು, ಚಿತ್ತವಿಸು, ಚಿತ್ತೈಸು** (ಕ್ರಿ). ೧. ಮನಸ್ಸಿಗೆ ತಂದುಕೊಳ್ಳು ; ಲಕ್ಷಿಸು ; ಗಮನಿಸು : ಪಟ್ಟಬದ್ಧನೆ ಚಿತ್ತಯಿಸು (ಬಸಪು. ೫೫-೩) ; ದೇವರು ಚಿತ್ತಯಿಸುವುದು ಹೊತ್ತುಗಳೆಯದೆ ಎನ್ನ ಕಳುಹಿ (ಕುಮಾದ್ರೂ. ೪-೮೫) ; ಉತ್ತರೋತ್ತರ ಜೀಯ ಶಕುನ ಮುಂತಾದುವ ಚಿತ್ತಯಿಸುವುದು (ಮೋಹತ. ೬-೧೨). ೨. ಮನಸ್ಸನ್ನು ಸೆಳೆ ; ಆಕರ್ಷಿಸು : ಇತ್ತಬದೊಳು ನಿಂದಿಹ ಜೀವರನ್ನದ ಪುತ್ತಳಿಗಳು ಸೊಡರ್ವಿಡಿದು ಮುತ್ತಡಿ[ಡ]ಸಿದ ಮಹದುಪಕರಣಗಳಿಂದೆ ಚಿತ್ತಯಿಸಿದುವಲ್ಲಲ್ಲಿ (ಮೋಹತ. ೨೨-೯). ೩. (ಅಲಂ) ದಯಮಾಡು ; ಆಗಮಿಸು ಅಥವಾ ಹೋಗು : ಆದರೂ ನನ್ನ ಪ್ರಾರ್ಥನೆಯನ್ನು ಮನ್ನಿಸಿ ಅವರು ಇಲ್ಲಿವರೆಗೆ ಚಿತ್ತಯಿಸಿದರು (ವೀರಬಂ. ೯೩) ; ಕಾರ್ಯಕ್ರಮಕ್ಕೆ ಸ್ವಾಮಿಗಳು ಚಿತ್ತಯಿಸಿದರು (ರೂಢಿ). **ಚಿತ್ತಯ್ಸು** : ೧. ತೃತೀಯಜನ್ಮದ ವೃತ್ತಕ ಮೊಂದುಂಟು ನಿನಗದಂ ಪೇಟ್ದಪೆನಾಂ ಚಿತ್ತಯ್ಸಿ [ಪಾಠಾಂ. ಚಿತ್ತೈಸಿ] ಕೇಳ್ (ಚಂದ್ರಪ್ರ. ೫-೮೭) ; ಪುಟ್ಟುವೊಂದುಜ್ಜುಗದೊಳೆ ಮ ರ ಣಾ ವ ಸ್ಥೆ ಯ ಂ ತಾಳ್ದಿ ಬಂದಾಯಸಮಂ ಚಿತ್ತಯ್ಸಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೩) ; ಜೀಯ ಚಿತ್ತಯ್ಸಾ [ಪಾಠಾಂ. ಚಿತ್ತೈಸಾ]ದೊಡಿನ್ನಖಿಳ ಸಾ ಮ್ರಾ ಜ್ಯ ಮಾ ಯಿ ತೆ ಂ ಬು ತ್ಸ ವ ಂ ತನಗಿಲ್ಲ (ಜೈಮಿಭಾ. ೨-೨೦) **ಚಿತ್ತವಿಸು** : ೧. ಇದೆ ಚತುರಂಗಬಲಂ ಬಂದುದು ಮನ್ಮಥಭೂಪ ನೋಡು ಚಿತ್ತವಿಸು (ಗಿರಿಕ. ೭-೪೩) ; ಭೂತಳಾಧಿಪ ಚಿತ್ತವಿಸು ಖಳ ಕೌತುಕದ ಕಾಳಗದಿ ಗೆಲುವನು (ಕೌಶಿರಾ. ೩೬-೨೦) ; ಉಸುರಲಮ್ಮೆನು ಜೀಯ ಸುರರಾಯಸವ ಚಿತ್ತವಿಸು [ಪಾಠಾ. ಚಿತ್ತೈಸು] (ತೊರರಾ. ೧-೮-೫೯) ; ಚಿತ್ತವಿಸಿ ಮುನಿನಾಥಯೆನಗದ ಬಿತ್ತರಿಸಿ ಪೇಳು (ನಳಚ. ೩-೦೦) ; ಸಂಕಲ್ಪವಿದೆಂದು ಸೂಚಿಸಿದರೆ ಸ್ತ್ರೀಸ್ವಭಾವ ಚಾಪಲ್ಯವೆಂದು ಚಿತ್ತವಿಸನೊ(ಸೌಗಂಧಿ. ೨೫೯-೦೯). **ಚಿತ್ತೈಸು** : ೧. ನಿಮ್ಮಡಿ ಚಿತ್ತೈಸಿ ಕೇಳಿವಿನಾತಂ ಸಂಸಾರ [ಭೀರುವಾಗಿ ಜಿನದೀಕ್ಷೆಯಂ ಬಯಸಿ]ಬಂದಂ (ಧರ್ಮಾಮೃ. ೭-೦೩೭) : ತಂದೆ ಚಿತ್ತೈಸುವುದು ಕಿಂಕರನ ಬಿನ್ನಪಂ (ನಂಬಿರ. ೧-೭೬) ; ಧುರದ ವೃತ್ತಾಂತವನು ಚಿತ್ತೈಸರಸ ತಿಳುಹುವೆನು (ಕುಮಾಭೀ. ೦-೫೬) ; ವಾರನಾರಿಯರ ಚಿತ್ತೈಸು ಸತ್ಕುಮರಕಂಠೀರವರುಗಳ ಚಿತ್ತವಿಸು (ಮೋಹತ. ೨೦-೫೫) ; ಭೂಭೃನ್ನಾಥ ಚಿತ್ತೈಸೊಳಗೀಕ್ಷಿಸೆ ಶ್ರೀಭೃತನಾತ್ಮ ತೋಱುವನು (ಭರತ. ೨-೭೩) ; ಚಿತ್ತೈಸು ಮದನಮೋಹಿನಿ . . . ಈ ಪಟ್ಟಣದೊಳ ಗೊರ್ವನುತ್ತಮನಾಯಕನಿಹನು (ಕಂಸವಿ. ೯-೪೫). ೩. ನಿನ್ನ ಬರವನು ನೆನೆದೆನ್ನನು ನಿನ್ನ ಬಳಿಗೆ ಕಳುಹಿದಳು ಜನಪ ಚಿತ್ತೈಸುಪವನಕೆ (ಜೀವಂಸಾಂ. ೦೮-೦೦) : ಜ ನ ನಾ ಥ ನೋಡ ಚಿತ್ತೈಸಬೇಕೆಂದು ತ ದ್ವ ನ ಪಾ ಲ ಬಿನ್ನಯಿಸಿದನು (ಮೋಹತ. ೪-೫೦) ; ಸಭಾಮಂಟಪಕ್ಕೆ ಚಿತ್ತೈಸಬೇಕು (ಸೌಗಂಧಿ.೦೯೬-೩); ನೀವು ಇಲ್ಲಿಂದ ಚಿತ್ತೈಸಿದ ಬಳಿಕ ಇಲ್ಲಿ ನಡೆದ ಅನರ್ಥವಂ ಹೇಳುವದಕ್ಕೆ ಶಕ್ಯವಲ್ಲ (ಮುದ್ರಾಮಂ. ೦೫). ೪. ಅನುಗ್ರಹಿಸು ; ದಯಪಾಲಿಸು ; ಕೊಡು : ಆದಡೆಲೆ ರಾಜೇಂದ್ರ ನಿಮ್ಮಯ ಪಾದುಕೆಯ ಚಿತ್ತೈಸಿ ದೇವರ ಪಾದವೆಂದೇ ಕಂಡು ಸೇವೆಯ ಮಾಡಿಕೊಂಡಿಹೆನು (ತೊರರಾ. ೨-೭-೩೩). ೫. ಕೇಳಿಕೊಳ್ಳು ; ಬೇಡಿಕೊಳ್ಳು ; ಗಮನಕ್ಕೆ ತರು : ಕಾಪಿನ ಹಲರ ಸಹಾಯದಿಂದ ಧರ್ಮಕ್ಕೆ ವೊಂದು ಕ್ಷೇತ್ರವನು ಕೊಡಬೇಕು ಯೆಂದು ಚಿತ್ತೈಸಲಾಗಿ (ಎಇ. XX, ೮-೩೫ ; 1556).
[ ಚಿತ್ತ + - ಇಸು₃ ]

**ಚಿತ್ತಯ್ಸು** 'ಚಿತ್ತಯಿಸು' ನೋ.

**ಚಿತ್ತರ, ಚಿತ್ತಾರ₁** (ನಾ). ೧. ವಸ್ತ್ರ, ಗೋಡೆ, ಕಾಗದ ಮುಂತಾದುವುಗಳ ಮೇಲೆ ಬರೆದ ಪ್ರತಿಕೃತಿ,-ಆಕೃತಿ ; ಚಿತ್ರ : ಕಡುಚೆಲುವಿನ ಚಿತ್ತರ ಸಲೆ ಸುಭಗತೆಯ ಪುತ್ಥಳಿ (ಶ್ರೀಪಾಲ. ೨-೭); ಪಗಲೊಳೆಸೆವ ಸುದೀಪ ಕಾಂತಿಯೊ ಹೊಗೆ ಬಡಿದ ಚಿತ್ತರದ ಬೊಂಬೆಯೊ [ಪಾಠಾಂ. ಹೊಗೆಯೊಳೆಸಗಿದ ಚಿತ್ರಪ್ರತಿಮೆಯೊ] ಹೇಳಲೇನವಳ (ನಳಚ. ೭-೨೪); ಚಿತ್ತರದ ಬೊಂಬೆಗಳಂತೆ ನಿಂತಿರುವ ರಾಕ್ಷಸರ ಗುಂಪು (ಸೌಗಂಧಿ.೩೩೮-೦೯); ಅನುಜರಿಂ ಕೂಡಿ ತಂದೆ ಚಿತ್ತರವೊಂದೆ ಕಾಣುವ ಮಂದಿರಕ್ಕೈತಂದು (ರಘುವಂ. ೦೫೩-೦೫) ; ನಕ್ಷತ್ರಾರತಿಯಂದದಿ ಹೂಗಳ ಗೊಂಚಲನೆತ್ತಿರುವ ಮಾವಿನ ಮರವಿದು ಮರವೋ, ನಭದಲಿ ಬರೆದರೊ ಚಿತ್ತರವ? (ರಾಮುನ. ೦೪-೨೦); ನಿತ್ಯದಲಿ ಕೇತಯ್ಯ . . . ಚಿತ್ತರದ ಬುಟ್ಟಿ ಮೊರ ಹೆಣೆದು ಮಾರುವನು (ಕನ್ನಜಾ. ೨೬೩). ೨. ಸುಂದರವಾದುದು ; ಸೊಗಸಾದುದು : ಹೆತ್ತಾಯಿ ನಿನ ಕರುಳ, ಮತ್ತೆಲ್ಲಿ ದೊರೆತಾವ ಚಿತ್ತರ ಬಗೆಯ ಮಕ್ಕಳಿಗೆ (ಕನ್ನಜಾ. ೦೦೫); ಏನು ಎತ್ತರ ಏನು ಬಿತ್ತರ ಏನು ಚಿತ್ತರವೀ ಪುರ

(ಕರುಣಾ. ೨೬-೧) ೩. ಆಶ್ಚರ್ಯ : ಬಾಹುಬಲಿಪಂಡಿತದೇವರ ವಚನ ವಿಳಾಸಂ ಚಿತ್ತ[ಪಾಠಾಂ. ತ್ರಿ]ರಮಂ ಸುರಸಾರ್ಥಲೀಲೆಯಂ ಪೆರ್ಚಿಸುಗುಂ (ಬಾಧಪು. ೧-೫೧) ; ಬಿತ್ತುವರ್ ಕವಿಯಲ್ಲಿ ಬೆಳಸುವರೆದೆಯೊಳು ಚಿ[ಪಾಠಾಂ. ಬಿ]ತ್ತರವೇನೊ ಪಿಸುಣವಿದ್ಯ (ಕವಿಜ. II, ೪೫ ; ಸೂಬಸೂ. ೦೩-೨೪ ನೋ).

**ಚಿತ್ತಾರ**$_1$ : ೧. ಭಿತ್ತಿ ಇಲ್ಲದೆ ಬರೆಯಬಹುದೆ ಚಿತ್ತಾರವ (ಬಸವ. ೩೯೮) ; ಚಿತ್ತಾರದೋಳ್ಬರದ ಪ್ರತಿಮೆಯಂತಿಹುದ ನೋಡು (ತುರಂಗ. ೭೮-೦೦) ; ಬಾನ್ಪಟದಿ ಮುಸಿಯ ಚಿತ್ತಾರಮಂ ಕಂಡರಿಸಿದರ್(ಶ್ರೀರಾಮಾ. ೨೮೯-೦೦೪). [ <ಸಂ. ಚಿತ್ರ ]

**ಚಿತ್ತರಗಂಬ** (ನಾ). ಚಿತ್ರಗಳನ್ನುಳ್ಳ ಕಂಬ ; ಕಂಡರಣೆಯ ಕಂಬ : ಪೊನ್ನ ಪುತ್ತಳಿಯಂತೆ ಚಿತ್ತರಗಂಬಮಂ ನೆವ್ವಿ (ಚಿಕವಿ. ೪-೪೦). [ ಚಿತ್ತರ + ಕಂಬ$_1$ (<ಕಂಭ) ]

**ಚಿತ್ತರಗೈ** (ಕ್ರಿ). ಚಿತ್ರವನ್ನು ಬರೆ ; ಚಿತ್ರಿಸು : ನರ್ತನ ಕೋಲಾಟ ಹೊನ್ನಂಡೆಗಳನಾಂತು ಪುತ್ತಳಿ ಮದನಕೈಯೆಡೆಯು ಚಿತ್ತರಗೈದಿರ್ದ ಬಿನ್ನಾಣಗಳ ನೋಡಿ ಚಿತ್ತೈಸಿದನು ಕೃಷ್ಣ (ಮೋಹತ. ೦೪-೩೦). [ ಚಿತ್ತರ + ಗೈ (<ಕೆಯ್$_1$) ]

**ಚಿತ್ತರಟಿ, ಚಿತ್ತರಟ್ಟೆ** (ನಾ). ಒಂದು ಬಗೆಯ ಗಿಡ : “ ರುಚಿ ಚಿತ್ತರಟಿ [ಪಾಠಾಂ. ತೆ] ಸಿಂಹಿಕಾಖ್ಯಂ ” (ಮಂಗರಾ. ೩೯-೨೮). **ಚಿತ್ತರಟ್ಟೆ**: ಬೆದಕದಿರು ಬೆದಕದಿರು ಬೆದಕಿದಡೆ ಹುರುಳಿಲ್ಲ ಚಿತ್ತರಟ್ಟೆಯಂ ಕಾಯಲ್ಲಿ ಮತ್ತೇನ ನಱಸಂವಿರಯ್ಯಾ (ಬಸವ. ೨೮). [ ? ]

**ಚಿತ್ತರಟಿಹಳ್ಳಿ** (ನಾ). ಒಂದು ಸ್ಥಳದ ಹೆಸರು : ಪೆರ್ಗಡೆ ನಾಕಿಯ ಚಟ್ಟಯ್ಯಂ ಚಿತ್ತರಟಿಹಳ್ಳಿ ಓಟೂರ್ಗ್ಗೆ ಮೂಲಿಗನ್ (ಎಕ. VIII, ಸೊರಬ. ೭೦-೦೦ ; 938). [ ಚಿತ್ತರಟಿ$_0$ + ಹಳ್ಳಿ (<ಪಳ್ಳಿ$_1$) ]

**ಚಿತ್ತರಟ್ಟೆ** ‘ಚಿತ್ತರಟಿ’ ನೋ.

**ಚಿತ್ತರಿಗ** (ನಾ). ಚಿತ್ರವನ್ನು ಬರೆಯುವವನು ; ಚಿತ್ರಗಾರ : ತತ್ಕರ್ತೃ ಸಂಬಂಧದೊಳ್ ಚಿತ್ರಿಗನಲ್ಲದನಂ ಚಿತ್ರಮಂ ಬರೆವುದಱಿಂ ಚಿತ್ತರಿಗನೆಂಬುದು(ರಸರ. ೦೦೩ ಪರಿ.). [ ಚಿತ್ತರ + –ಇಗ ]

**ಚಿತ್ತವಂತ** (ನಾ). ಗಮನವಿಟ್ಟು ನೋಡುವವನಂ ; ಲಕ್ಷಿಸುವವನು ; ಗೂಢಚಾರ : “ ಚಿತ್ತವಂತಂ ಪ್ರಣಿಧಿಯಕ್ಕು ” (ಮಂಗರಾ. ೭೯-೭). [ ಚಿತ್ತ + –ವಂತ ]

**ಚಿತ್ತವಿಕೃತಿ** (ನಾ). ಮನೋವಿಕಾರ ; ಭ್ರಮೆ ; ಹುಚ್ಚು : ಚಿತ್ತವಿಕೃತಿ ಅಪರಾಧ ಅಥವಾ ದುರ್ವರ್ತನೆ (ಭಾಧಾನ. ೦೯೨). [ ಚಿತ್ತ + ವಿಕೃತಿ ]

**ಚಿತ್ತವಿಕ್ಷೇಪ** (ನಾ). ಮನಸ್ಸನ್ನು ಚೆದರಿಸುವಿಕೆ ; ಗಲಿಬಿಲಿ : ದೃಷ್ಟಿ ಎಂಬುದು ನಮ್ಮ ಕೆಲಸಕ್ಕೆ ಸಹಾಯಮಾಡುವದಕ್ಕಿಂತ ಹೆಚ್ಚಾಗಿ ಅದು ಎಷ್ಟೋ ಪಟ್ಟು ಚಿತ್ತವಿಕ್ಷೇಪವನ್ನೇ ಉಂಟುಮಾಡುತ್ತದೆ (ಇಸ್ಕ್ಕ. ೨೦೬). [ ಚಿತ್ತ + ವಿಕ್ಷೇಪ ]

**ಚಿತ್ತವಿಡು** (ಕ್ರಿ). ೧. ಮನಸ್ಸಿಡಂ ; ಗಮನವಿಡು: ಗುರುಗಳ ಮಾತನ್ನು ಚಿತ್ತವಿಟ್ಟು ಕೇಳು (ರೂಢಿ). ೨. ಪ್ರೀತಿಸಂ : ಅತ್ತಲಾ ದಮಯಂತಿ ನಳನಲಿ ಚಿತ್ತವಿಟ್ಟಳು (ನಳಚ. ೨-೪೯). [ ಚಿತ್ತ + ಇಡು$_1$ ]

**ಚಿತ್ತವಿಭ್ರಮ** (ನಾ). ೧. = ಚಿತ್ತಭ್ರಮೆ : ನನ್ನ ಚಿತ್ತವಿಭ್ರಮ ಭಾವೋದ್ರೇಕಕ್ಕೆ ಏರಿತು (ಶಾಂತಲಾ. ೩, ೬೦೪). ೨. ಒಂದು ಬಗೆಯ ಸನ್ನಿಪಾತ ರೋಗ : ಮತ್ತಮಾ ತ್ರಯೋದಶ ಸನ್ನಿಪಾತಮಾವುದೆಂದೊಡೆ :–ಸಂಧಿಗ . . . ಚಿತ್ತವಿಭ್ರಮ (ಸಕವ್ವ. ೦೫೧). [ ಚಿತ್ತ + ವಿಭ್ರಮ ]

**ಚಿತ್ತವಿಮೋಹನ** (ನಾ). ಮನಸ್ಸನ್ನು ಮರುಳುಗೊಳಿಸುವಿಕೆ : ಸಮುಲ್ಲಸಜ್ಜಷಪತಾಕೆಯೆನಿಪ್ಪವೊಲಾಂತಳಾಕೆಯಾ ಪಸದನದೊಳ್ ಜಗತ್ತ್ರಿತ್ರಯ ಚಿತ್ತವಿಮೋಹನ ಶಕ್ತಿಯೇಟ್ಸಿಯಂ (ಚಂದ್ರಪು. ೩-೭೬). [ ಚಿತ್ತ + ವಿಮೋಹನ ]

**ಚಿತ್ತವಿಶುದ್ಧಿ** (ನಾ). ಮನಸ್ಸಿನ ಪರಿಶುದ್ಧತೆ : ಮೋಕ್ಷಲಕ್ಷ್ಮಿಯಂ ಸಾಧಿಸಲಟ್ಟಿಯುಂ ಬಗೆಯುಮುಳ್ಳೊಡೆ ಚಿತ್ತವಿಶುದ್ಧಿಯಿಂದಮಾರಾಧಿಸು ಭವ್ಯ (ಚಾವುಂಪು. ೩-೧೯). [ ಚಿತ್ತ + ವಿಶುದ್ಧಿ ]

**ಚಿತ್ತವಿಸು** ‘ಚಿತ್ತಯಿಸು’ ನೋ.

**ಚಿತ್ತವಿಹ್ವಲ** (ನಾ). ಮನಸ್ಸಿನಲ್ಲಿ ಭ್ರಮೆಯನ್ನು ಹೊಂದಿದವನಂ ; ಕಳವಳಗೊಂಡವನು : ಕಂಗಳಿನ ಮಿಂಚಿನ ಹೊಳಕಿನೆಡೆ ನಡೆಗೆಟ್ಟು ನಿಂದರು ಚಿತ್ತವಿಹ್ವಲರು (ಕುವ್ಯಾವಿ. ೧-೨೫). [ ಚಿತ್ತ + ವಿಹ್ವಲ ]

**ಚಿತ್ತವೃತ್ತಿ** (ನಾ). ೧. ಮನಸ್ಸಿನ ವ್ಯಾಪಾರ ; ಯೋಚನೆ ; ಭಾವನೆ ; ಮನೋಧರ್ಮ : ಭಟ್ಟಾರಕನ ಚಿತ್ತವೃತ್ತಿಯನಾ ಮಹಾತ್ಮನಾವ ಮಾಟ್ಕಿಯೊಳಱಿದಂ (ಆದಿಪು. ೦೦-೭ ವ) ; ಮೆಲ್ಲಗೆ ಮಱಿದೊಂದಿದಂತು ಸಿರದಾಗಿರೆ ಕೂಟದ ಚಿತ್ತವೃತ್ತಿಯಂ ಬಗೆಯಂ (ಶಾಂತಿಪು. ೮-೯೨) ; ಪೋಗಲಿರ್ಪತ್ರಿಜನಂದು ಕನ್ನಡಿಸಿದಂ ಸುವಿಧೀಶನ ಚಿತ್ತವೃತ್ತಿಯಂ (ಪುಷ್ಪಪು. ೦೩-೩೯) ; ಚಿತ್ತವೃತ್ತಿಯುನಱಿದು ಹತ್ತೆವಿಡಿದೋಲಯಿಸು (ಸರ್ವಜ್ಞ. ೭೩೦). ೨. ಏಕಾಗ್ರತೆ ; ಮನಸ್ಸನ್ನು ಕೇಂದ್ರೀಕರಿಸುವುದು : ನೃತ್ಯಗೀತಂಗಳಿಂದತಿಶೋಭನವಾಗೆ ಚಿತ್ತವೃತ್ತಿಯಿಂ ಶಿವನಂ ಭಜಿಸಿ (ಹಮ್ಮಿರ. ೨-೫೫ವ). [ ಚಿತ್ತ + ವೃತ್ತಿ$_2$ ]

**ಚಿತ್ತವೇದ್ಯ** (ನಾ). ಮನಸ್ಸಿಗೆ ತಿಳಿಯುವುದು ; ಮನಸ್ಸಿಗೆ ಗೊತ್ತಾಗುವುದು : ಚಿತ್ತವೇದ್ಯವಾಗದು ಸದ್ಗುರುವಿನ ಕರಣಕ್ಕಲ್ಲದೆ (ಬಸವ. ೮೦೬). [ ಚಿತ್ತ + ವೇದ್ಯ ]

**ಚಿತ್ತವೈಕಲ್ಯ** (ನಾ). ಮನಸ್ಸಿನ ಹದ ಕೆಡುವುದು ; ಬುದ್ಧಿವಿಕಲತೆ ; ಹುಚ್ಚು : ಕೋಪಮೆಂಬುದೆ ಸಕಲಸನ್ಮಾರ್ಗದಾರಣಂ ಚಿತ್ತವೈಕಲ್ಯಕರಣಂ (ಮಂಕಾರಾ. ೨-೯-೦೬). [ ಚಿತ್ತ + ವೈಕಲ್ಯ ]

**ಚಿತ್ತಶಯ** (ನಾ). ಮನಸ್ಸಿನಲ್ಲಿರುವವನು ; ಮನ್ಮಥ : ಚಿತ್ತಶಯನೆ ನಾಮಮಂ ಪುರುಷೋತ್ತಮಸುತನಾಳ್ದಂ (ಪುಷ್ಪಪು. ೬-೫೧). [ ಸಂ. ]

**ಚಿತ್ತಶುದ್ಧ** (ನಾ).=ಚಿತ್ತಶುದ್ಧಿ: ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದರತ್ತ ಲಕ್ಷ್ಮಿ ತಾನಾಗಿಪ್ಪಳು (ವಚಸಂ. ೨೪೭-೦೪). [ ಚಿತ್ತ + ಶುದ್ಧ ]

**ಚಿತ್ತಶುದ್ಧಿ** (ನಾ). ಮನಸ್ಸಿನ ನಿರ್ಮಲತೆ : ಚಿತ್ತಶುದ್ಧಿಯನೈದಿದವರೆತ್ತಲಿರೆ ಭಯವಿಲ್ಲ (ಗಗತಾ. ೦೪-೪೨) ; ಈ ವೇದಾಂತದ ಆಚರಣೆಗೆ ಚಿತ್ತಶುದ್ಧಿ, ಪ್ರಾಮಾಣಿಕತೆ, ಆತ್ಮವಿಶ್ವಾಸ ಇವು ಅವಶ್ಯಕವಾದ ಗುಣಗಳು (ಶಕ್ತಿವಿ. ೧೦೨). [ ಚಿತ್ತ + ಶುದ್ಧಿ ]

**ಚಿತ್ತಸಂಭವ** (ನಾ).=ಚಿತ್ತಜ ೧. : ಆಗಲುಂ ಸೊಗಯಿಸುಂ ಶೋಭಾವಹಂ ಚಿತ್ತಸಂಭವಲಕ್ಷ್ಮೀನಿಳಯಂ ಸಮಸ್ತಜನಚೇತೋಹಾರಿ ಶಯ್ಯಾಗೃಹಂ (ಪಂಚತಂ. ೦೨೩-೭). [ ಚಿತ್ತ + ಸಂಭವ ]

**ಚಿತ್ತಸಮುನ್ನತಿ** (ನಾ). ೧. ಆತ್ಮಗೌರವ ; ಅಭಿಮಾನ. ೨. ಗರ್ವ; ಅಹಂಕಾರ. [ ಚಿತ್ತ + ಸಮುನ್ನತಿ ]

**ಚಿತ್ತಸ್ಖಲನೆ** (ನಾ).=ಚಿತ್ತಚಾಂಚಲ್ಯ: ತ್ರೈಪುರವನೊಳಪೊಕ್ಕು ವಿಷ್ಣು ದುರ್ಬೋಧಕಂ ಆ ಪತಿವ್ರತೆಯರಂ ಕೋಟಿಕಾಮರ ಗೆಲ್ವ ರೂಪಿನಿಂದೇ ಕಾಂತದಲ್ಲಿ ಚಿತ್ತಸ್ಖಲನೆಗಳ ಮಾಡಿದಂ (ವೀಶೈಪು. ೨-೦೦-೨೯). [ ಚಿತ್ತ + ಸ್ಖಲನೆ ]

**ಚಿತ್ತಸ್ಥೈರ್ಯ** (ನಾ). ಮನಸ್ಸಿನ ಧೈರ್ಯ,–ಬಲ : ಮಕ್ಕಳ ಮುಂದಿನ ಜೀವನದಲ್ಲಿ ಚಿತ್ತಸ್ಥೈರ್ಯ ಇರುವುದಿಲ್ಲ (ಶಿಕ್ಷದ. ೭೪). [ಚಿತ್ತ+ಸ್ಥೈರ್ಯ]

**ಚಿತ್ತಸ್ವಾಸ್ಥ್ಯ** (ನಾ). ಮನಸ್ಸಿನ ಶಾಂತಿ : ನೆಮ್ಮದಿ : ಆ ಪ್ರದೇಶ ಒಡೆಯನಿಗೆ ಚಿತ್ತಸ್ವಾಸ್ಥ್ಯ ತಪ್ಪಿತ್ತು (ಒಡಕ. ೧) ; ಕಾವ್ಯನಿರ್ಮಾಣಕ್ಕೆ ಕಾರಣಗಳನ್ನು ಹೇಳುವಾಗ ನಮ್ಮ ಆಲಂಕಾರಿಕರು ‘ಚಿತ್ತಸ್ವಾಸ್ಥ್ಯ’ ವನ್ನು ಹೇಳುತ್ತಾರೆ (ವಿಮರ್ಶ. ೦೬). [ ಚಿತ್ತ + ಸ್ವಾಸ್ಥ್ಯ ]

**ಚಿತ್ರಹತ್ಯ** (ನಾ). ತನ್ನ ಮನಸ್ಸಿಗೆ ತಾನೇ ವಂಚನೆ ಮಾಡಿಕೊಳ್ಳುವುದು; ಆತ್ಮವಂಚನೆ: ಹತ್ತುಸಾವಿರ ಜನರು ಸುತ್ತಲಿದ್ದೊಡಮೇನು ಚಿತ್ರಹತ್ಯಕೆ ಯಾರು ತಡೆಯ ಕಟ್ಟುವರಯ್ಯ ? (ಶಾಂಬಜ. ೯೧-೪). [ ಚಿತ್ತ + ಹತ್ಯ ]

**ಚಿತ್ರಳಿ** (ನಾ). ಸಣ್ಣಚೂರು ; ಚಿಕ್ಕಚೂರು : ಮತ್ತವೊಂದಕ್ಕೆ ವಜ್ಜಿಗೆ ಯೆಱೆದು ಕಂಬೇವು ಕೊತ್ತುಂಬರಿಯಕ್ಕಿ ನೀರುಳ್ಳಿ ಶುಂಠಿಗಳ ಚಿತ್ರಳಿಯ [ಪಾಠಾಂ.ಸಿ]ಹಾಕಿಯಂತದ ವಗ್ಗರಣೆ ಮಾಡಿ(ಸೂಪಶಾ. ೩-೩೮). 'ಚಿತ್ರಳಿಸು' ಪರಾ. [ ? ]

**ಚಿತ್ರಳಿಸು, ಚಿತ್ರಣಿಸು** (ಕ್ರಿ). ಸಣ್ಣಸಣ್ಣ ಚೂರಾಗಿ ಮಾಡು: ಚಿಕ್ಕದಾಗಿ ಕತ್ತರಿಸು : ಎಳನೀರೊಳಿನಿಸು ಸಕ್ಕರೆಯಿಕ್ಕಿ ನೇಱಿಲೆಳದಳಿರುಮಂ ಕುಡಿಯುಮಂ ಚಿತ್ರಳಿ[ಪಾಠಾಂ. ೧]ಸಿ ಹಾಕಿ (ಸೂಪಶಾ. ೨-೩೮). **ಚಿತ್ರಣಿಸು:** ಕಿಱುಸೊಜ್ಜಿಗೆಯನು ಬರಬರನಟ್ಟು ಚಿತ್ರಣಿಸಿ ಕತ್ತರಿಸಿದಲ್ಲ ನೀರುಳ್ಳಿ ಸಹಿತಂ ಕಲಸಿ (ಸೂಪಶಾ. ೦-೨೩) [ ಚಿತ್ರಳಿ + - ಇಸು ]

**ಚಿತ್ತಾಕರ್ಷಕ** (ನಾ). ಮನೋಹರವಾದುದು ; ಮನಸ್ಸನ್ನು ಸೆಳೆಯು ವಂಥದು : ತಾನೂ ಪ್ರೀತಿಸಿ, ತನ್ನನ್ನೂ ಪ್ರೀತಿಸಿದ ಚಿತ್ತಾಕರ್ಷಕನಾದ ತರುಣವ್ಯಕ್ತಿ (ಪುನರು. ೦೯೩). [ ಚಿತ್ತ + ಆಕರ್ಷಕ ]

**ಚಿತ್ತಾಗಾರ, ಚಿತ್ತಾರ$_2$** (ನಾ). ಚಿತ್ರಿಸಿದ ಆಕಾರ, – ಸ್ವರೂಪ : "ಚಿತ್ರಾಕಾರ–ಚಿತ್ತಾಗಾರ" (ಶಮದ. ೨೬೧ ಪ್ರಯೋ). **ಚಿತ್ತಾರ$_2$:** "ಚಿತ್ರಾಕಾರ–ಚಿತ್ತಾರ" (ಶಮದ. ೨೯೩ ಪ್ರಯೋ). [ <ಸಂ. ಚಿತ್ರಾಕಾರ ]

**ಚಿತ್ತಾಭೋಗ** (ನಾ). ಸುಖಾದಿ ಇಚ್ಛೆಯಲ್ಲಿ ತತ್ಪರವಾದ ಮನಸ್ಸು : "ಮನಸ್ಕಾರಃ, ಚಿತ್ತಾಭೋಗಃ – ಮನಸ್ಸಿನ ವಿಶಾಲತೆ ಅಂದರೆ ಇಚ್ಛೆಯ ಹೆಸರು" (ಸಿದ್ಧಾಂತಿ. ೪೨). [ ಚಿತ್ತ + ಆಭೋಗ ]

**ಚಿತ್ತಾರ$_1$** 'ಚಿತ್ತರ' ನೋ.

**ಚಿತ್ತಾರ$_2$** 'ಚಿತ್ತಾಗಾರ' ನೋ.

**ಚಿತ್ತಾರಿ** (ನಾ). ಚಿತ್ರಗಳನ್ನು ಬರೆಯುವವನು; ಚಿತ್ರಕಾರ ; ಚಿತ್ರಶಿಲ್ಪಿ: ಸಾಮಂತಚೂಡಾಮಣಿಯ ಮೆಯ್ಯ ಬಣ್ಣಂ ವಿಧಾತ್ರನೆಂಬ ಚಿತ್ತಾರಿಯ ವರ್ಣಕ್ರಮಂಗೆಯ್ದು ಕದಳೀಗರ್ಭಶ್ಯಾಮಮೆಂಬ ಬಣ್ಣದಂತಾದುದು (ಪಂಪಭಾ. ೨-೫೯ ವ) ; ಚಿತ್ತಾರಿ ಪಲ್ಲೋಜಂಗೆ ಮತ್ತರು[೧೨] (ಸೌಇಇ. VIII, ೩೭೭-೨೩ ; ?). [ ಚಿತ್ತಾರ$_1$ (<ಚಿತ್ತರ) + – ಇ$_3$ ]

**ಚಿತ್ತಾರಿಗ** (ನಾ).=ಚಿತ್ತಾರಿ : ಸುಕೇಶಿನಿಯ ಮಾಡದ ಕೇರ್ಗಳೆಲ್ಲಾ ಯೆಡೆಗಳೊಳಂ ವ್ಯಾಳಂಗಳಪ್ಪಾನೆಗಳಂ ತನ್ನ ಚಿತ್ತಾರಿಗರಿಂದಂ ಬರೆಯಿಸಿದು (ವಡ್ಡಾರಾ. ೩೪-೧೨) ; ನಾನಾರೂಪಮಂ ಬರೆವ ಚಿತ್ತಾರಿಗನಂತೆ ನಾನಾ ಭೇದಮಪ್ಪ ನಾಮಕರ್ಮ (ಪಸಾರ. ೯೪-೦೭).
[ ಚಿತ್ತಾರ$_1$ (<ಚಿತ್ತರ) + – ಇಗ ]

**ಚಿತ್ತಾರಿವಿದ್ಯೆ** (ನಾ). ಚಿತ್ರಗಳನ್ನು ಬರೆಯುವವನ ವಿದ್ಯೆ: ಚರಕವಿದ್ಯೆ, ಸಾಮುದ್ರಿಕೆಯ ಲಕ್ಷಣ, ಚಿತ್ತಾರಿವಿದ್ಯೆ . . . ಮೊದಲಾದ ನಾನಾವಿದ್ಯೆಗಳನು . . . ಅರಿತು (ವಚಶಾ. ೮). [ ಚಿತ್ತಾರಿ + ವಿದ್ಯೆ ]

**ಚಿತ್ತಾವಧಾನ** (ನಾ). ಏಕಚಿತ್ತತೆ ; ದೃಢಗಮನ : ಕೇಳಿರ್ಯ ನೆರೆದಖಿಳಜನ ಚಿತ್ತಾವಧಾನದಲಿ (ಕುಮಾವ್ಯಾಸ. ೮-೩೪). [ ಚಿತ್ತ + ಅವಧಾನ ]

**ಚಿತ್ತಿ** (ನಾ). ಬುದ್ಧಿ ; ಪ್ರಜ್ಞೆ. [ ಸಂ. ]

**ಚಿತ್ತಿನಿ** (ನಾ). [ಕಾಮಶಾ] ಪದ್ಮಿನಿ, ಚಿತ್ತಿನಿ, ಹಸ್ತಿನಿ, ಶಂಖಿನಿ ಎಂಬ ನಾಲ್ಕು ಬಗೆಯ ಸ್ತ್ರೀಜಾತಿಗಳಲ್ಲಿ ಒಂದು ಮತ್ತು ಆ ಜಾತಿಗೆ ಸೇರಿದ ಹೆಣ್ಣು : ನಿತಂಬಂ ಮನಂಗೊಳಿಕುಂ ಬೆಟ್ಟಿತುವಾಗೆ ಚಿತ್ತಿನಿಗೆ ನಿಂಬಾ ಮೋದಮಕ್ಕುಂ (ಮದತಿ. ೨-೪) ; ನೆರೆದುನಿಂದ ಕೀರಾಳಿಗೆ ಕಾಮಾದ್ವೈತ ಶಾಸ್ತ್ರಸೂತ್ರಮಂ ಪಾಠಮೋದಿವ ಪರಿಜ್ಞಾನದಿಂ ಮೆಱೆವ ಚಿತ್ತಿನಿಯರಿಂ (ಗಿರಿಕ. ೭-೧೧ ವ); ಮೂಡಲದು ಹಸ್ತಿನಿಗೆ ಬಡಗಲದು ಚಿತ್ತಿನಿಗೆ (ಸರ್ವಜ್ಞ. ೧೬೩೦). [ <ಸಂ. ಚಿತ್ರಿಣೀ ]

**ಚಿತ್ತು$_1$** (ನಾ). ೧. ಜ್ಞಾನಸ್ವರೂಪವಾದುದು; ಆತ್ಮ; ಚೈತನ್ಯಸ್ವರೂಪ: ಮುಕ್ತಿಯ ಮುಗುಳಂತೆ ಚಿತ್ತಿನ ಬಿತ್ತಿನಂತೆ ಸತ್ಯದ ಸಾರದಂತೆ . . . ಅದ್ವಿತೀಯನೊಪ್ಪುತಿರ್ದಂ (ಕಬಕಂ. ೧-೮೦ ವ); ಜೀವದ ಚಿತ್ತು ಜಗತ್ತಿನ ಸತ್ತು ತಿಳಿದಾನಂದದ ಸಂವಿತ್ತು (ಅರಳು. ೨೩೮-೦). ೨. ಬುದ್ಧಿಶಕ್ತಿ; ಮೇಧಾಶಕ್ತಿ. ೩. ಬುದ್ಧಿಶಕ್ತಿಯುಳ್ಳ ಜೀವ: ಚಿತ್ತುಗಳಲ್ಲದ ಗೋವಿತ್ತ ಪಾಲ್ಕುತ್ತು ಕತ್ತುರಿಗಳು ಪವಿತ್ರ ಗಡಾ ಚಿತ್ತು ಮೆಯ್ಯಾದಾತ್ಮವಸ್ತು ಮೈಯೊಳಗಿದ್ದರುತ್ತಮನೆಂದರೇಕೆಣಿಕೆ (ಭರತ. ೭೯-೯೬). [<ಸಂ. ಚಿತ್]

**ಚಿತ್ತು$_2$** (ನಾ). ೧. ಬರೆಯುವಾಗ ಮಸಿಯಿಂದ ಆಗುವ ಕಲೆ : ಗಗನಕೆದುರು ನಿಂತಿದೆ ತರು ಮಸಿಯ ಚಿತ್ತಿನಂದದಿ (ಅನಿಕೇ. ೦೪-೪). ೨. ಬರೆದುದರಲ್ಲಿ ಸರಿಯಿಲ್ಲವೆಂದು ಹೊಡೆದು ಹಾಕಿದ ಭಾಗ,-ಹೊಡೆದು ಹಾಕುವುದಕ್ಕಾಗಿ ಮಾಡಿದ ರೇಖೆ ಮೊದಲಾದುವುಗಳ ಚಿಹ್ನೆ: ಸರಿಯಾಗಿ ಬಂದದ್ದು ಚಿತ್ರ. ಅಲ್ಲದ್ದು ಚಿತ್ತು.: ಬರವಣಿಗೆಯಲ್ಲಿ ಹೊಡೆದು ತಿದ್ದಿಯೋ ಮಸಿ ಬಿದ್ದು ಕೆಟ್ಟೋ ಆಗಿರುವ ಭಾಗ (ನಮ್ಮನು. ೦೦೨). ೩. ಕರಡುಪ್ರತಿ : (೬).

**ಚಿತ್ತುಮಾಡು$_1$**=ಕಲೆಯಾಗುವಂತೆ ಬರೆ; ಗೀಚು: ನಾಗೇಂದ್ರ ತಾನು ಬರೆದಿದ್ದನ್ನು ಚೆನ್ನಾಗಿ ಹೊಡೆದುಹಾಕಿ ಚಿತ್ತುಮಾಡಿದ (ಕಂಕಣ. ೧೭೪) : ಗುರುತಿಸಬೇಕಾದ ಅಂಶಗಳನ್ನು ಸಕಾಲದಲ್ಲಿ, ನಿಖರವಾಗಿ ಚಿತ್ತುಮಾಡದೆ ಗುರುತಿಸಬೇಕು (ಶಿಕ್ಷದ. ೩೭೬). [ ←ಹಿಂ. ಚಿತ್ರೀ ; ಮರಾ. ಚಿತಡ ]

**ಚಿತ್ತು$_3$** (ನಾ). ೧. ಬೆನ್ನು ಕೆಳಗಾಗಿ ಬೀಳುವಿಕೆ ; ಅಂಗತ್ತನಾಗಿ ಬೀಳುವಿಕೆ ; (ಕುಸ್ತಿಯಲ್ಲಿ) ಸೋಲು : ಮಲ್ಲಾರಿ ಚಿತ್ತಾದ – ಸೋತ. (ಭೀಮಕಾ. ೩). ೨. (ಗಂಜೀಫು, ಇಸ್ಪೀಟು ಮುಂತಾದ ಆಟಗಳಲ್ಲಿ) ಮಂಗುಚಿದ ತನ್ನ ಆಟದ ಎಲೆಗಳನ್ನು ಬೆನ್ನು ಕೆಳಗಾಗಿ ಹಾಕಿ ತೋರಿಸುವುದು : ನೆತ್ತ ಚದುರಂಗ ಪಗಡೆಯು ಚಿತ್ತಾಯುಬಯ್ದು ದಾಯ ಬಿಡಿಬಿಲ್ ಸೊಗುಳೀಯುತ್ತಮರಾಡರು ಆಡಲ್ಪೆತ್ತಲೆಯುಹ ಭಂಗ ಬಪ್ಪನೆಂಬುದು ಪುಸಿಯೆ (ನೀತಿಸಾ. ೮೦೦).

**ಚಿತ್ತುಮಾಡು$_2$**=೧.ಅಂಗತ್ತನಾಗಿ ಬೀಳಿಸು; ಕುಸ್ತಿಯಲ್ಲಿ ಸೋಲಿಸು: ಭೈರವನು . . . ಸುಲೇಮಾನನನ್ನು 'ಚಿತ್ತು' ಮಾಡಿಬಿಟ್ಟನು (ಪಾಳೆಹೊ. ೦೦೩). ೨. (ಇಸ್ಪೀಟಾಟದಲ್ಲಿ) ಮಂಗುಚಿದ ತನ್ನ ಆಟದ ಎಲೆಗಳನ್ನು ಬೆನ್ನು ಕೆಳಗಾಗಿ ಹಾಕಿ ತೋರಿಸು : ಆಟವು ಪೂರೈಸಿದ ನಂತರ ಮಡಿಚಿದ ಪಟ್ಟುಗಳನ್ನೆಲ್ಲ ಅವನು ಚಿತ್ತು ಮಾಡಿ ತೋರಿಸಿದನು (ರೂಢಿ).
[ ←ಹಿಂ. ಚಿತ್ ; ಮರಾ. ಚಿತ್, ಚೀತ್ ]

**ಚಿತ್ತು$_4$** (ನಾ). ಚಿಲ್ಲದ ಮರ ಮತ್ತು ಅದರ ಬೀಜ : ಚಿಲ್ಲದ ಬೀಜ, ಚಿತ್ತು, ಚಲಿಬೀಜ (ಮೃಚಿಗಿ. ೭೩-೦೪೮೪). [ ? ]

**ಚಿತ್ತೂರ್** (ನಾ). ಒಂದು ಊರಿನ ಹೆಸರು : ಅದೆಯಱಿನಾತ ಚಿತ್ತೂರ ಮೋನಿಗುರವಡಿಗಳ ಶಿಷಿತ್ತಿಯರ್ ನಾಗಮತಿಗನ್ನಿಯರ್ ಮೂಱು ತಿಙ್ಗಳ್ ನೋನ್ತು ಮುಡಿಪ್ಪಿದರ್ (ಎಕ. II, ೨೦-೧ : ಹು. 700).
[ ? + ಊರ್ ]

**ಚಿತ್ತೆ** (ನಾ). ೧. ಒಂದು ನಕ್ಷತ್ರದ ಹೆಸರು; ಚಿತ್ರಾನಕ್ಷತ್ರ: ಜಯನಿನದಂ ಸುರದುಂದುಭಿಚಯನಿನದಂ ಪುಷ್ಪವರ್ಷಮೊರ್ಮೆಯೆ ಸಕಲೋರ್ವಿಯ ನೆಯ್ದೆ ಪರ್ವುತಿರೆ ಚಿತ್ತೆಯ ಸರಿಯೆಂತೆಱಗಿ ಪೋದುದಮರಸಮಾಜಂ(ಆದಿಪು. ೦೪-೦೪೭); ಚಿತ್ತೆಯ ಮಳೆ ಹೊಯಿದು ಮುತ್ತಾಗಬಲ್ಲುದೇ (ಸರ್ವಜ್ಞ. ೩೭೮) ; ಕುರುಡುಪ್ರೀತಿಯ ಹಾಂಗ ಕುರುಡು ಚಿತ್ತೆಯ ಮಳೆಯೆ (ಸಖೀಗೀ. ೮೩-೨). ೨. ಸೂರ್ಯನು ಚಿತ್ತಾನಕ್ಷತ್ರದಲ್ಲಿ ಸಂಚರಿಸುವಾಗ ಬರುವ ಮಳೆ ; ಸಾಮಾನ್ಯವಾಗಿ ಆಶ್ವಯುಜ ತಿಂಗಳಲ್ಲಿ ಬರುವ ಮಳೆ : ಚಿತ್ತೆ ಮುತ್ತಿನೋಪಾದಿಯಲಿ (ಭಾಸ್ಕರ. ೬೦-೪). 'ಕಂರುಂಡುಚಿತ್ತೆ' ಪರಾ.
[ <ಸಂ. ಚಿತ್ರಾ ]

**ಚಿತ್ತೈಕಾಗ್ರತೆ** (ನಾ). ಮನಸ್ಸಿನ ಏಕಾಗ್ರತೆ : ಮಗಳ **ಚಿತ್ತೈಕಾಗ್ರತೆಗೆ** ಸಂತೋಷಪಡುತ್ತ ಸತಿಪತಿಯರು . . . ಕುಳಿತರು (ಶಾಂತಲಾ. ೧೪) : ಚಿತ್ತೈಕಾಗ್ರತೆಯನ್ನು ಭಂಗಗೊಳಿಸುವಂಥ ಪ್ರಲೋಭನೆಗಳಾವುವೂ ಅಲ್ಲಿಲ್ಲದುದರಿಂದ, ಅವನು ಆ ಜಾಗವನ್ನಾರಿಸಿಕೊಂಡಿದ್ದನು (ಪುನರು. ೩೪). [ ಚಿತ್ತ + ಏಕಾಗ್ರತೆ ]

**ಚಿತ್ತೈಸು** 'ಚಿತ್ತಯಿಸು' ನೋ.

**ಚಿತ್ತೋಡಿ** (ನಾ). ಒಂದು ಬಗೆಯ ಗಿಡ: ಉಡ್ಡಿ, ವುಡಿಗ, ಗೂಡುಮುರ್ಕಿ, ಚಿತ್ತೋಡಿ, ಉದುರೆ (ವೃಜಿಗಿ. ೩೨-೭೦೧). [ ? ]

**ಚಿತ್ತೋದ್ಭವ** (ನಾ).=ಚಿತ್ತಜ ೧ : ಚಿತ್ತೋದ್ಭವನನೆಸೆಯೆ ತೂರ್ಯತ್ರಿಕಂ ಹಾಸಪುಷ್ಪಾಂಜಳಿಯಿಂ ತತ್ಕಾಂತೆ ದೇಹದ್ಯುತಿ ಜವನಿಕೆಯಿಂ ನಾಟ್ಯರಂಗಂ ಬೊಲಿರ್ಪಳ್ (ಅಜಪು. ೨-೪೧) ; ಚಿತ್ತೋದ್ಭವನರಮನೆ ನೃಪಸುತರಿಂ ಕವರ್ತೆವೋದಂತೆ ಬಿನ್ನನಾಯ್ತುದ್ಯಾನಂ (ಶಾಂತಿಪು. ೮-೩೮). [ ಚಿತ್ತ + ಉದ್ಭವ ]

**ಚಿತ್ತೋದ್ವೇಗಕರ** (ಗು). ಮನಸ್ಸಿಗೆ ಕಳವಳವನ್ನುಂಟುಮಾಡುವ : ಆತನಿಗೆ ಚಿತ್ತೋದ್ವೇಗಕರವಾದ ಆವ ಪ್ರಶ್ನೆಯನ್ನೂ ನಾನು ಹಾಕುವುದಿಲ್ಲ (ಬಿನ್ನಬೇ. ೯೭). [ ಸಂ. ]

**ಚಿತ್ಪಿಂಡ** (ನಾ). ಜ್ಞಾನಸ್ವರೂಪಿ ; ಶಿವ : ಜಲಂಧರವಧಾಕಥನವೆನುತ ಚಿತ್ಪಿಂಡಂಗೆ ಹತ್ತನೆಯ ಲೀಲೆಯಿದು ಮುಗಿಯಿತ್ತು (ವೀಶೈಪು. ೨-೧೩-೪೩); ವಿಮಳ ವಿಳಸಿತಧವಳಾತುಳಾಖಂಡ ಚಿತ್ಪಿಂಡ ವೃಷಭೇಶ್ವರನಂ ಕಂಡು (ಹಮ್ಮಿರ. ೩-೪ ಪ). [ ಸಂ. (ಚಿತ್ + ಪಿಂಡ) ]

**ಚಿತ್ಪುರುಷ** (ನಾ). ಜ್ಞಾನಸ್ವರೂಪ ; ಪರಮಾತ್ಮ : ಸುರತರು ಸುರಭಿ ಚಿಂತಾಮಣಿ ನೀನೆಂದು ವಿರಚಿಸಲೆಲ್ಲರ ಮೆಚ್ಚು ತರು ಪಶು ಪಾಷಾಣ ಸಾಟಿಯಿಲ್ಲಾತ್ಮ ಚಿತ್ಪುರುಷನೆಂದರೆ ನಿನ್ನ ಮೆಚ್ಚು (ಭರತ. ೨-೩೮). [ ಸಂ. (ಚಿತ್ + ಪುರುಷ) ]

**ಚಿತ್ಯ** (ನಾ). ೧. ರಾಶಿ ಹಾಕುವುದು. ೨. ಹೆಣವನ್ನು ಸುಡಲು ಏರ್ಪಡಿಸಿರುವ ಸೌದೆಯ ಒಟ್ಟಿಲು; ಚಿತೆ: "ಚಿತ್ರ ಚಿತ್ಯ [ಪಾಠಾಂ. ಚಿತೆ, ಜಿತ್ಯ] ಯೆನಲು ಸಿದ್ಧಿಗೆಯದೆನಿಕ್ಕುಂ" (ಮಂಗರಾ. ೧೦೮-೭). [ ಸಂ. ಚಿತ್ಯ ]

**ಚಿತ್ರ** (ಗು). ೧. ಎದ್ದು ಕಾಣುವ; ಸ್ಪಷ್ಟ; ಸುವ್ಯಕ್ತ. ೨. ಪ್ರಕಾಶಮಾನವಾದ ; ಕಣ್ಣನ್ನು ಕೋರೈಸುವ ; ಮನೋಹರವಾದ. ೩. ವಿವಿಧ ವರ್ಣಗಳನ್ನುಳ್ಳ; ಶಬಲವಾದ ; ಚುಕ್ಕೆಗಳಿಂದ ಕೂಡಿದ. 'ಚಿತ್ರ ಕಂಬಲ' ಪರಾ. ೪. ಆಶ್ಚರ್ಯಕರವಾದ. 'ಚಿತ್ರಪ್ರಪಂಚ', 'ಚಿತ್ರ ಸಂಪುಟ' ಪರಾ. (ನಾ). ೫. ಚಿತ್ರಲೇಖನದ ಮೂರು ಬಗೆಗಳಲ್ಲಿ ಒಂದು : ಚಿತ್ರ ಚಿತ್ರಾರ್ಧ ಚಿತ್ರಾಭಾಸಮೆಂಬ ಮೂಱುಂ ಪ್ರಕಾರಮುಮಂ . . . ಪರಿಭಾವಿಸಿ ನೋಡಿ (ಮಲ್ಲಿಪು. ೩-೪೨). ೬. ಬರೆದ ಆಕೃತಿ ; ತಸವೀರು ; ಚಿತ್ತಾರ': ಕೇರಿಲ್ಲದೆ ಚಿತ್ರಮಂ ಬರೆವೆನೆಂಬ . . . ಪಚ್ಚಪಸಿಯೆಗ್ಗನಂ ಪೋಲ್ಕುಂ (ಧರ್ಮಾಮೃ. ೧-೬೭) : ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣಾ (ಬಸವ ೧೨೬) : ಭಿತ್ತಿಯ ಚಿತ್ರದಲಿ ತತ್ತ್ವ ತಾ ನೆರೆದಿಹುದೆ ಚಿತ್ರತ್ತ್ವ ತನ್ನ ನಿಜದೊಳಗೆ ತ್ರೈಜಗದ ತತ್ತ್ವ ತಾನೆಂದ (ಸರ್ವಜ್ಞ. ೩೨೬) : ಒಂದೆರಡು ಚಿತ್ರಗಳನ್ನೂ ಪುಸ್ತಕದಲ್ಲಿ ಸೇರಿಸಬೇಕು (ಬಾಣಆ.೬, ಕಥಾಮುಖ); ಸೆಮಿಟಿಕ್ ವರ್ಣಮಾಲೆಯ ಎಲ್ಲ ಲಿಪಿಗಳೂ ಮೊದಲಿಗೆ ಚಿತ್ರದ ಸಂಕೇತವನ್ನೇ ಹೊಂದಿದ್ದವು (ದ್ರಾವಿವಿ. ೩೦). ೭. ಆಶ್ಚರ್ಯ ; ಸೋಜಿಗ ; ಅದ್ಭುತ: ನಿನ್ನ ಚರಿತ್ರಂ ಚಿತ್ರಮೆಂದು ಪೊಗಟ್ದಪುದು ಜಗಂ (ಜನಾಲಿ. ೩-೩) ; ಪುತ್ರಮುಖಾಬ್ಜಾಲೋಕನ ಮಾತ್ರದೊಳಂ ಪಿತೃ ತಪಕ್ಕೆ ಪೋಕುಂ ಚಿತ್ರಂ (ಸುಕುಮಾ. ೯-೧೦೧); ತಾನು ಅದಟರಕ್ಕಸನ ಮೇಲಿರದೆ ಸಂಗ್ರಾಮವನೊದವಿಸಿದುದು ಚಿತ್ರವಲ್ತೆ (ತ್ರಿಪುಸಾಂ. ೩-೩೪) : ಇಂದು ದುಶ್ಶಾಸನನ ಶೋಣಿತದೊಂದು ಕುಡಿತೆಯಲಾ ಮಹಾಶಿಖಿ ನಂದಿತೇನಿದು ಚಿತ್ರವಲ್ಲಾ ಸೂತ (ಕುಮಾವ್ಯ. ೧೯-೯೦). ೮. ಭದ್ರ; ಶುಭ. ೯. ಲೋಹ. ೧೦. ಬೊಟ್ಟು : "ತಿಲಕದೊಳು ಚಿತ್ರದೊಳು ಪುಂಡ್ರಮಕ್ಕು" (ಮಂಗರಾ. ೧೩೨-೩೭). ೧೧. ಒಂದು ಬಗೆಯ ಮೂಲಿಕೆ. ೧೨. ವಾಯು ; ಮಾರುತ. ೧೩. ಚಲನಚಿತ್ರ; ಸಿನಿಮಾ: ಕನ್ನಡದಲ್ಲಿ ಈಚೀಚೆಗೆ ಬಹಳ ಚಿತ್ರಗಳು ತಯಾರಾಗುತ್ತಿವೆ (ರೂಢಿ). ೧೪. = ಚಿತ್ರಕವಿತ್ವ: ವ್ಯಂಗ್ಯಾರ್ಥವೇ ಇಲ್ಲದೆ ಇದ್ದರೆ 'ಚಿತ್ರ' ಅಥವಾ 'ಅಧಮಕಾವ್ಯ'ವಾಗುವುದು (ಕೃಬಿಡಿ. ೧೮೨) ; ಮಿಕ್ಕುದೆಲ್ಲವೂ 'ಚಿತ್ರ'ವೆಂದೇ ಮುಂದೆ ಪ್ರತಿಪಾದಿಸಲಾಗುತ್ತದೆ (ಧ್ವನ್ಯಾಲೋ. ೨೭). ೧೫. [ಕಾವ್ಯಮೀ] ಒಂದು ಅರ್ಥಾಲಂಕಾರ ; ಚಿತ್ರಾಲಂಕಾರ : ಏನಾನುಮನೊಂದಂ ಸಂಸ್ಥಾನದಿನನುಕರಿಸುವಂತು ಭಂಗ್ಯಂತರದಿಂ ಪೀನವೊಡಂಬಡೆ ವಿರಚಿಸೆ ನಾನಾ ವಿಚ್ಛಿತ್ತಿ ಚಿತ್ರಮೆನಿಕುಂ ಪೆಸರಿಂ (ಕಾವ್ಯಾವ. ೩೬೮); ಭಾವಿಸಿ ನೋಡೆ ಪ್ರಶ್ನೋತ್ತರ ಪದಂಗಳ್ಗೊಂದೇ ಶೀವಿದುತ್ತರವುಸುರೆ ಚಿತ್ರ (ಕುವಲ. ೧೩೦-೧). ೧೬. [ಛಂದ] ತ್ರಿಪದಿಯಲ್ಲಿ ಒಂದು ಬಗೆ : ಭುಜಗಪಕ್ಷಗತಿ ಶಿಖಿವ್ರಜಪದಗಣದೊಳಗಜರಸದ ಶದೊಳ್ಪೆಱವೆಡೆಯೊಳಗಧೋಕ್ಷಜಗಣಮಾದೊಡದು ಚಿತ್ರಂ (ಛಂದೋಂಬು. ೩-೨೪೯) ; "ಮಾರುತ ಶುಭ ಲೋಹಾದ್ಭುತ ತಾರಕಿ ಮೂಲಿಕೆಯ ಭೇದ ಸಾಧನ ತಿಲಕಂ ಸಾರದೆ ಬಱಿಕೀಯೆಂಟುಂ ಧಾರುಣಿಯೊಳು ಚಿತ್ರಶಬ್ದಮೆನಿಕುಂ ನಿಜದಿಂ" (ನಾನಾಶಂ.೩೭).

**ಚಿತ್ರವೆಡಂಗ** = ಒಂದು ಬಿರುದು. ರಾಷ್ಟ್ರಕೂಟ ಖೊಟ್ಟಿಗದೇವನ ಬಿರುದು : ರಟ್ಟಕನ್ದರ್ಪ್ಪಂ ಚಿತ್ರವೆಡೆ(ಡ)ಂಗ[ಂ] ಶ್ರೀಮತ್ ಕೊಟ್ಟಿಗ ದೇವ[ಂ] (ಇಆ. XII, ೨೩೬-೩ : 971). [ ಸಂ. ]

**ಚಿತ್ರಂಬರೆ** (ಕ್ರಿ). ಚಿತ್ರವನ್ನು ಬರೆ ; ಚಿತ್ರಿಸು : ದಿನೇಶ್ವರಸುತನ ರೂಪು ಚಿತ್ರಂಬರೆದಂತಿರ್ದಪುದು ಚಿತ್ರಭಿತ್ತಿಯೊಳೆನ್ನಾ (ಗದಾಯು. ೩-೩೪). [ ಚಿತ್ರ + ಬರೆ₁ ]

**ಚಿತ್ರಕ** (ನಾ). ೧. ಚಿತ್ರವನ್ನು ಬರೆಯುವವನು : "(ರಂ)ಗಾಜೀವ ಚಿತ್ರಿಯೆನೆ ಚಿತ್ರಕಂ" (ಮಂಗರಾ. ೧೧೧-೨) ; ಚಿತ್ರಕನುಂ ತಾನುಮಲ್ಲದೆ ಪೆಱರಱಿಯದಂತು ಕರುವಿಡಿಸಿ (ಪಂರಾಮಾ. ೩-೨೩ ವ) ; ಪ್ರಕಟಿಸಿದತ್ತು ಪದ್ಮಜನ ಪಕ್ಕದೊಳಿಟ್ಟಿರದಾತ್ಮಲೀಲೆಯಿಂ ಸುಕವಿಕದಂಬಕಂ . . . ಚಿತ್ರಕವ್ರಜಂ (ಪುಷ್ಪಪು. ೩-೨೦). ೨. ಚಿರತೆ. ೩. ಹುಲಿ. ೪. ಹಣೆಗೆ ಇಡುವ ತಿಲಕ,–ಬೊಟ್ಟು: "ಚಿತ್ರಕಂ ಪುಂಡ್ರಂ ಲಲಾಟಿಯೆನಲು ತಮಾಲಪತ್ರಮೆನೆ ತಿಲಕಮದು" (ಮಂಗರಾ. ೯೯-೨೦). ೫. ಚಿತ್ರಮೂಲ ಎಂಬ ಗಿಡ ಮತ್ತು ಅದರ ಬೇರು: "ಚಿತ್ರಮೂಲಂ ವ್ಯಾಳವಗ್ನಿ ಚಿತ್ರಕವಕ್ಕು" (ಮಂಗರಾ. ೩೯-೨೬) : ಚಿತ್ರಕಮುಂ ತನಿವಾಲಿನಲ್ಲಿ ಪೊಯ್ದೊಡೆ ಪೆಱತೇನೊ ಸಂಪಗೆಯ ಗಂಧಮನೀಟ್ಕುಳಿಕೊಳ್ಗುಮಾ ಪೊಸರ್ (ಲೋಕೋಪ. ೮-೯೮). ೬. ಹರಳಿನ ಗಿಡ. ೭. [ಕಾಮಶಾ]ಮಂದನ, ಚಿತ್ರಕ, ದಮನ ಮತ್ತು ಮಾಳವ ಎಂಬ ಪುರುಷರ ನಾಲ್ಕು ಬಗೆಗಳಲ್ಲಿ ಒಂದು : ಘನಕೃಶ ಸೂಕ್ಷ್ಮದೀರ್ಘ ವಿಕೃತಿತ್ವಮನೆಯ್ದಿದ ಹೇಮಪುತ್ರಿಕಾ ತನು ವಿವಿಧಾಂಬರಾಭರಣ ಭೂಷಣಮಾಱಿದ ಕತ್ತುರಿಗಂಪು ದಿವ್ಯಭೋಜನರುಚಿ ರೋಮಸಂಜನಿತ ಜಂಘೆಯನಂಗಮತೋಕ್ತ ಚಿತ್ತಿನೀಸ್ತನಪರಿರಂಭಮುಖ್ಯ ಬಹುಭೋಗದೆ ಚಿತ್ರಕನಾಮಮೊಪ್ಪುಗುಂ (ಮನ್ಮವಿ. ೨-೧೩). [ ಸಂ. ]

**ಚಿತ್ರಕಂಠ** (ನಾ). ೧. ಪಾರಿವಾಳ. ೨. ಚಾಲುಕ್ಯರ ಒಂದನೆಯ ವಿಕ್ರಮಾರ್ಜುನನ ಒಂದು ಕುದುರೆಯ ಹೆಸರು : ಸತ್ಯಾಶ್ರಯ ಶ್ರೀ ಪೃಥಿವೀವಲ್ಲಭ ಮಹಾರಾ[ಜಾ]ಧಿರಾಜ ಪರಮೇಶ್ವರಸ್ಯ ಪ್ರಿಯತನಯಃ ಚಿತ್ರಕಣ್ಠಸ್ಯ ಪ್ರವರತುರಙ್ಗಮೇಣೈಕೇನೈವ ಪ್ರತಿತಾನೇಕ ಸಮರಮುಖೇ . . . ನಿಜಭುಜವಿಜಿತವಿಜಿಗೀಷುಃ (ಪ್ರಾಆರಿ. ೦೯೩೪, ೩೦-೧೧ ; 670) ; (ಸೌಇಇ. XX, ೬-೭ ; 780 ನೋ). [ ಚಿತ್ರ + ಕಂಠ₁ ]

**ಚಿತ್ರಕಂಬಲ** (ನಾ). ಪಟ್ಟೆಪಟ್ಟೆಯಾದ ಕಂಬಳಿ ; ನಾನಾವಿಧವಾದ ಬಣ್ಣಗಳಿಂದ ಕೂಡಿದ ಕಂಬಳಿ ; ರತ್ನಗಂಬಳಿ : ಆಸ್ತರಣ=ಆನೆಯ ಮೇಲೆ ಹಾಸುವ ಚಿತ್ರಕಂಬಲ (ನಾಚಿರಾ. ೬). [ ಚಿತ್ರ + ಕಂಬಲ ]

**ಚಿತ್ರಕಂಬಳಿ** (ನಾ). = ಚಿತ್ರಕಂಬಲ : ಪ್ರವೇಣೀ . . . ಕುಥಃ—ಈ ಆನೆಯ ಬೆನ್ನು ಮೇಲೆ ಹಾಸುವ ಆನೆಗೆ ಹೊದಿಸುವ ಚಿತ್ರಕಂಬಳಿಗೂ ಚೀಣಾಂಬರಕ್ಕೂ ಹೆಸರುಗಳು (ಸಿದ್ಧಾಂತಿ. ३೧೪). [ ಚಿತ್ರ + ಕಂಬಳಿ ]

**ಚಿತ್ರಕಥೆ** (ನಾ). ೧. ಆಶ್ಚರ್ಯಕರವಾದ ಕಥೆ ; ವಿಚಿತ್ರವಾದ ಕಥೆ : ಸುಮತಿ ಚಿತ್ರಕಥೆಯನಿಂತೆಂದು ಪೇಟಲ್ಬಗುಲ್ದಳ್ (ಸುಕುಮಾ. ೭-೧೬ ವ). ೨. ಚಿತ್ರಗಳ ಸಹಾಯದಿಂದ ನಿರೂಪಿಸಿರುವ ಕಥೆ : ಪತ್ರಿಕೆಗಳಲ್ಲಿ ಮಕ್ಕಳಿಗಾಗಿ ಚಿತ್ರಕಥೆಗಳನ್ನು ಪ್ರಕಟಿಸುತ್ತಾರೆ (ರೂಢಿ). ೩. ಚಲನಚಿತ್ರಕ್ಕೆ ಅಳವಡಿಸಿದ ಕಥೆ : ಈ ಚಿತ್ರದ ದಿಗ್ದರ್ಶಕರೇ ಚಿತ್ರಕಥೆಯನ್ನೂ ಬರೆದಿದ್ದಾರೆ (ರೂಢಿ). [ ಚಿತ್ರ + ಕಥೆ ]

**ಚಿತ್ರಕರ** (ನಾ). ಚಿತ್ರ ಬರೆಯುವವನು ; ಚಿತ್ರಕಾರ : ಸಕಳಾಳಾಪಕಳಾ ಕಳಾಪಕಥಿತ ವ್ಯಾವೃತ್ತಿಯೊಳ್ಕೂಡಿ ಚಿತ್ರಕರಂಬೊಲ್ಪರಭಾಗಭಾವವಿಲಸದ್ವರ್ಣಕ್ರಮಾವೃತ್ತಿಯುಂ ಪ್ರಕಟಂ ಮಾಡಿರೆ ಪೇಟ್ದ ಚಿತ್ರಕೃತಿಯಂ ವ್ಯಾವರ್ಣಿಸುತ್ತುಂ (ಕವಿರಾ. ೧-೧೪೯). [ ಸಂ. ]

**ಚಿತ್ರಕರ್ಮ** (ನಾ). ೧. ಚಿತ್ರವನ್ನು ಬರೆಯುವುದು ; ಚಿತ್ರರಚನೆ : ರಸಭಾವಕಂಚುಕಿತ ಚಿತ್ರಕರ್ಮಂಗಳಿಂದದೊರ್ಮೆ . . . ಕಳೆವನಿಂತು ಪೊಟ್ತುಂ ನೃಪಂ (ಕಾದಂಪೂ. ३೦). ೨. ಬರೆದ ಆಕೃತಿ ; ಚಿತ್ರ : ದುರ್ವಹಮಹಮಿಂದ್ರರೇಂ ಸುಖದ ಲೆಪ್ಪವೊ ಪುಣ್ಯದ ಚಿತ್ರಕರ್ಮವೋ (ಶಾಂತಿಪು. ೯-೩೪). ೩. ಕೆತ್ತನೆಯ ಕೆಲಸ; ಕುಸುರಿಗೆಲಸ : ವಚಿಸಿದುವೊ ಚಿತ್ರಕರ್ಮಂಬೆತ್ತ ದೈತ್ಯಕುಲ ದೇವತಾಮೂರ್ತಿಗಳ್ ? (ಶ್ರೀರಾಮಾ. ೪೭೨-೭३३); ಸ್ವರ್ಣಕಾರನೆ ಬಲ್ಲನುಳಿದವರರಿಯರು ಚಿನ್ನದ ಚಿತ್ರಕರ್ಮವನು (ಇಂಜಾಪ. ೬೭-३೫). [ ಸಂ. ಚಿತ್ರಕರ್ಮನ್ ]

**ಚಿತ್ರಕಲೆ** (ನಾ). ಚಿತ್ರವನ್ನು ಬರೆಯುವ ವಿದ್ಯೆ : ಕೆಲವು ಕಡೆಗಳಲ್ಲಂತೂ ಚಿತ್ರಕಲೆಯನ್ನು ಸರ್ವಕಲೆಗಳಿಗೂ ಆಧಾರಭೂತವಾದುದೆಂದು ಹೊಗಳಲಾಗಿದೆ (ಕಶಾಲ. ೪೫೯). [ ಚಿತ್ರ + ಕಲೆ$_3$ ]

**ಚಿತ್ರಕವಿತ್ವ** (ನಾ). [ಕಾವ್ಯಮಿ] ಚಮತ್ಕಾರಪೂರ್ಣವಾದ ಶಬ್ದವೈಚಿತ್ರ್ಯವುಳ್ಳ ಕಾವ್ಯ : ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟುಮಾಡುವ ಇತರ ಶಬ್ದವೈಚಿತ್ರ್ಯಕ್ಕೆ ಚಿತ್ರಕವಿತ್ವವೆಂದೂ 'ಬಂಧ' ವೆಂದೂ ಹೆಸರು (ಕೈಪಿಡಿ. ३೫೪). [ ಚಿತ್ರ + ಕವಿತ್ವ ]

**ಚಿತ್ರಕಶಕ್ತಿ** (ನಾ). ಚಿತ್ರವನ್ನು ಕಲ್ಪನೆ ಮಾಡಿಕೊಳ್ಳುವ ಶಕ್ತಿ ; ಕಲ್ಪನಾಶಕ್ತಿ : ನನ್ನ ಚಿತ್ರಕಶಕ್ತಿ ಉತ್ಪ್ರೇಕ್ಷೆಯನೇರಿ ಬಣ್ಣಬಣ್ಣದ ಬಣ್ಣನೆಗೆ ಒಲೆದಿತು (ಸಪೀಗೀ. ३೫-೪೪೩); ಇಲ್ಲಿನ ವಿಶೇಷತೆ, ಚಿತ್ರಕಶಕ್ತಿ (Fancy) ಯಿಂದ ಪ್ರತಿಮಾನಿರ್ಮಾಣದವರೆಗೆ ಈ ಕಲ್ಪನಾಸೌಂದರ್ಯದಲ್ಲಿ ಮಜಲುಗಳಿವೆ (ಸೌಂದಸ. ३೯). [ ಚಿತ್ರಕ + ಶಕ್ತಿ ]

**ಚಿತ್ರಕಾಯ** (ನಾ). ೧. ಸುಂದರವಾದ ದೇಹ. ೨. ಹುಲಿ : "ವ್ಯಾಘ್ರಃ . . . ಚಿತ್ರಕಾಯಃ, ಮೃಗಾರಿಃ—ಈ ೭ ಹುಲಿ" (ಹಲಾಯು. ४೮-೭४); ಚಿತ್ರಕಾಯನಂ ತಪ್ಪಿಸಿ ತಂದು ತೋಱಿ ಬಿಡು ಪೋಪ ಮೃಗಾಳಿಗೆ (ಉದ್ಭಟ. ३-೫೦). ೧, ೨ : ಮತ್ತಮಾ ಮಹಾವನಂ ಯೌವನದಂತೆ ಮದನೋತ್ಕಳಿಕಾಕಮನೀಯಮುಂ ಚಿತ್ರಕಾಯಶೋಭಾಪ್ರಾಯಮುಂ (ಚಂದ್ರಪು. ೫-೫३ ವ) ; ಮತ್ತಮಾ ಮಂಟಪಂ . . . ಚಿತ್ರಕಾಯಾಶ್ರಿತಮಾಗಿಯುಂ ಮೃಗಮದಸಮೃದ್ಧಿಭಾಜನಮುಂ (ರಾಜಶೇ. ೮-೮ ವ). ३. ಚಿರತೆ. [ ಚಿತ್ರ + ಕಾಯ ]

**ಚಿತ್ರಕಾಯಾಜಿನ** (ನಾ). ಹುಲಿಯ ಚರ್ಮ,-ತೊಗಲು: ಮುಂದೆ ಚಿತ್ರಕಾಯಾಜಿನದ ಸುಲಿಪಲ್ಲ ಭಸಿತದ ಜಟಾಭರದ ಮುನಿನಾಥನು . . . ಪರಿಕರಂಗಳಂ ಸವಕಟ್ಟುತಿರಲು ಭೂಪತಿ ಕಂಡನು (ಹಕಶಾ. ೫-೩೪). [ ಚಿತ್ರಕಾಯ + ಅಜಿನ ]

**ಚಿತ್ರಕಾರ** (ನಾ). ಚಿತ್ರವನ್ನು ಬರೆಯುವವನು. [ ಸಂ. ]

**ಚಿತ್ರಕಾವ್ಯ** (ನಾ). [ಕಾವ್ಯಮಿ] ವ್ಯಂಗ್ಯಾರ್ಥರಹಿತವಾದ ಕಾವ್ಯರಚನೆ: ರೀತಿಗುಣಾಲಂಕಾರಗಳಿಂದ ಮಾತ್ರ ಕೂಡಿದ ಶಬ್ದಾರ್ಥಗಳು ಒಂದು ಪಕ್ಷ ಕಾವ್ಯವಾದರೂ 'ಚಿತ್ರಕಾವ್ಯ' ವಾಗಬಹುದೇ ಹೊರತು ಉತ್ತಮಕಾವ್ಯವಾಗಲಾರವು (ಕೈಪಿಡಿ. ೦೭೩) ; ವ್ಯಂಗ್ಯಾರ್ಥಶೂನ್ಯವಾದ 'ಚಿತ್ರಕಾವ್ಯ' ವೆಂಬ ಜಾತಿಯನ್ನು ಕುರಿತು ಮಾತಾಡುತ್ತಾ . . . ಎನ್ನುತ್ತಾನೆ (ಭಾರಮಿಾ. ೬೬). [ ಚಿತ್ರ + ಕಾವ್ಯ ]

**ಚಿತ್ರಕುಟಿ** (ನಾ). ಡೇರೆ; ಗುಡಾರ: "ಚಿತ್ರಕುಟಿ ಗುಣಲಯನಿ ದೂಷ್ಯಮೆನೆ ಗುಡಿಯಕ್ಕು" (ಮಂಗರಾ. ೮೫-३೭). [ ಚಿತ್ರ + ಕುಟ್ಟಿ$_2$ ]

**ಚಿತ್ರಕೃತಿ** (ನಾ). ೧. ಚಿತ್ರರಚನೆ ; ಚಿತ್ರ. ೨. ವೈವಿಧ್ಯಪೂರ್ಣವಾದ ಕೃತಿ. ೧,೨: ಚಿತ್ರಕರಂಬೊಲ್ಪರಭಾಗಭಾವವಿಲಸದ್ವರ್ಣಕ್ರಮಾವೃತ್ತಿಯುಂ ಪ್ರಕಟಂಮಾಡಿರೆ ಪೇಟ್ದ ಚಿತ್ರಕೃತಿಯಂ ವ್ಯಾವರ್ಣಿಸುತ್ತುಂ (ಕವಿರಾ. ೧-೧೪೯). [ ಚಿತ್ರ + ಕೃತಿ$_1$ ]

**ಚಿತ್ರಗತಿ** (ನಾ). ಆಶ್ಚರ್ಯಕರವಾದ ಚಲನೆ,-ಗಮನ : ಬರಿಕೈಯ ಲೌಡಿಯ ವಜ್ರಮುಷ್ಟಿಗಳ ನಾಳಿವಿಲುಗಳ ರಾಯಜೋಧರ ಮೇಳವಣೆಗಳ ಚಿತ್ರಗತಿ ಶುಂಡಾಲವನು ನೋಡಿದರು ಗಜಸೇನಾಸಮುದ್ರದಲಿ(ಕುಮಾ. ಉ. ೧೧-೧೯); ಉರುತೆಬಿದ ಮೂದೆಬಿದ ಕೈದುಕಾಱರು ಸಿಂಗವಱಿಗಳೆನೆ ಕಡುಕೆಯಿಂದು ಹೊಣಿಸಿ ಪಚಾರಿಸುತೆ ಮಾಗತಿ(ನಿ) ಚಿತ್ರಗತಿಯಿಂ (ಸಾಳ್ವಭಾ. ३೫-೦೪) ; ಪದ್ಯಕಾವ್ಯದ ಶಬ್ದಯೋಜನೆಯಲ್ಲಿ ಧ್ವನಿಯ ಮಾತೊಂದು ಹುದುಗಿ ಬರುವದು, ಚಿತ್ರಗತಿಯ ಮಾತೊಂದು ಸಮರಸವಾಗಿ ಸೇರಿ ಬರುವದು (ಸಾಹಿವಿ. ೮३). [ ಚಿತ್ರ + ಗತಿ ]

**ಚಿತ್ರಗಾರ** (ನಾ).=ಚಿತ್ರಕಾರ : ನನ್ನ ಚಿತ್ರದೊಳಿರುವ ಚಿತ್ರಗಾರನು ಬರೆದ ಚಿತ್ರಕೆ ಬಹದೆಂದೊ ಜೀವಕಳೆ? (ಸಪೀಗೀ. ३೮-೫३೦) ; ಅವನು ನಮ್ಮ ಪತ್ರಿಕೆಯ ಚಿತ್ರಗಾರನಾಗಬಹುದು (ಶಾಲಿಮ. ೪೫) ; ಕತ್ತೆ ಚಿತ್ರಗಾರನ ಮಿಂಡ (ಗಾದೆ). [ <ಸಂ. ಚಿತ್ರಕಾರ ]

**ಚಿತ್ರಗೀತೆ** (ನಾ). ಚಲನಚಿತ್ರದ ಗೀತೆ ; ಸಿನಿಮಾಹಾಡು : ಆ ಚಿತ್ರಗೀತೆಯ ಬಿಟ್ಟಾವುದಿದ್ದರು ಶ್ರವಣಾರ್ಹವಲ್ಲವೆನ್ನುವರು (ಚಂದ್ರವೀ.೨-೪೬). [ ಚಿತ್ರ + ಗೀತೆ ]

**ಚಿತ್ರಗುಪ್ತ** (ನಾ). ೧. ಮನುಷ್ಯರು ಮಾಡುವ ಪಾಪಪುಣ್ಯದ ಕರ್ಮಗಳನ್ನು ಬರೆದಿಡುವನೆಂದು ನಂಬಲಾದ ಯಮಲೋಕದ ಗುಮಾಸ್ತ: ಯಮನ ಭಟರು ಕರುಣಾರಸಮಯರೆ ಮಱವೆಯೆ ಚಿತ್ರಗುಪ್ತರಿಗೆ (ಕೈವಲ್ಯ. ೩೯-೨) ; ನಿನ್ನ ಕೃಪೆ ಎಂದಾಗ'ಬ್ರಿಟಿಷ್'ಪ್ರಭುತ್ವ ಎಂದೇ ಇತ್ತು ಎಂದು ಚಿತ್ರಗುಪ್ತನು ಬರೆದುಕೊಂಡನಂತೆ (ಮಲ್ಲಿ. ೫೦). ೨. (ಆಲಂ) ಚಾಡಿಕೋರ ; ಪಿಸುಣ : ಅಧಿಕಾರವಲಯಗಳಲ್ಲಿ ನಡೆಯುವ ಘಟನೆಗಳನ್ನು ಈ ಚಿತ್ರಗುಪ್ತನು ಮೇಲಧಿಕಾರಿಗಳಿಗೆ ವರದಿ ಮಾಡುತ್ತಾನೆ (ರೂಢಿ). [ ಸಂ. ]

**ಚಿತ್ರಗೃಹ** (ನಾ). ಚಿತ್ರಗಳನ್ನು ಬರೆದಿಡುವ ಸ್ಥಳ ; ಚಿತ್ರಶಾಲೆ : ಅದೇ ಮನೆಯ ಚಿತ್ರಗೃಹದಲ್ಲಿ ಅವನನ್ನು ಬಂದಿಯಾಗಿ ಮಾಡಿದ್ದನು (ಬಂಕಿಮ. ೦೮೦). [ ಚಿತ್ರ + ಗೃಹ ]

**ಚಿತ್ರಗೆಲಸ** (ನಾ). ಚಿತ್ರಗಳನ್ನು ಬರೆಯುವ ಕೆಲಸ ; ಕುಸುರಿಗೆಲಸ: ಬರಿಸು ನಾನಾದೇಶದ ಚಿತ್ರಗೆಲಸದವರ ವಿಶ್ವಕರ್ಮ ಸಂತತಿಯ (ಕಂನವಿ. ३೦-೮). [ ಚಿತ್ರ + ಕೆಲಸ ]

**ಚಿತ್ರಗೆಲಸಿ** (ನಾ). ಚಿತ್ರದ ಕೆಲಸ ಮಾಡುವವನು ; ಕುಸುರಿಗೆಲಸ ಮಾಡುವವನು : ಮುಂಗಡೆಯೊಳು ಚಿತ್ರಗೆಲಸಿ ಚಿಪ್ಪಿಗರಾಯುಧಂಗಳ ಕೇರಿಯೊಪ್ಪಿದುವು (ಮೋಹತ. ೩-೨೦). [ ಚಿತ್ರಗೆಲಸ + – ಇ₃ ]

**ಚಿತ್ರಘೋಷಾವಳಿ** (ನಾ). ತಂತ್ರೀವಾದ್ಯಗಳಲ್ಲಿ ಒಂದು ಬಗೆ : ಬಳಿಕ ವಿಪಂಚಿಕೆ ಚಿತ್ರಿಕೆ ಚಿತ್ರಘೋಷಾವಳಿ . . . ಕಾಲಕೇಯೆಂಬ ಮೂವತ್ತು ಮೂಱು ತಂತ್ರೀವಾದ್ಯಂಗಳಲ್ಲಿ (ವಿವೇಕ. ೨೩೬). [ ಸಂ. ]

**ಚಿತ್ರಚಮತ್ಕಾರ** (ನಾ). ಖಡ್ಗ ಯುದ್ಧದಲ್ಲಿ ವಿಚಿತ್ರವಾದ ಒಂದು ವರಸೆ: ಬಂಡಿಕೋಲಿನ ತುದಿಯಿಂದ ಭೂಮಿಯನ್ನು ಮುಟ್ಟಿಸಿ ಆಮೇಲೆ ವಳಗೆ ಭ್ರಮಣ ಮುಂತಾಗಿ ಯಿದಿರಾಗಿ ಯಿದ್ದವನ ಕೊರಳಲ್ಲಿ ಏಟು ಆವುದು ಅದು ಚಿತ್ರಚಮತ್ಕಾರವೆಂದು ತಿಳಿವದು (ಖಡ್ಗಬೀ. ೫-೬೫). [ ಚಿತ್ರ + ಚಮತ್ಕಾರ ]

**ಚಿತ್ರಚರಿತ** (ನಾ). ಆಶ್ಚರ್ಯಕರವಾದ ಚರಿತ್ರೆಯುಳ್ಳವನು; ಬಾಳಿನಲ್ಲಿ ಸೋಜಿಗದ ಕಾರ್ಯಗಳನ್ನು ಮಾಡಿದವನು: ಚಿತ್ರಚರಿತರು ಬಂದರಲ್ಲಿಗೆ ಮಿತ್ರಭಾವದಲವರನಭಿವಂದಿಸಿದನಾಚಾರ್ಯ (ಕು ವ್ಯಾ ದ್ರೌ ೯. ೦೬-೫೩). [ ಚಿತ್ರ + ಚರಿತ ]

**ಚಿತ್ರಚರಿತ್ರ** (ನಾ). = ಚಿತ್ರಚರಿತ : ಚಿತ್ರಚರಿತ್ರ ಕೇಳ್ (ಉದ್ಭಟ. ೬-೩೮) : ಚಿತ್ರಚರಿತ್ರನೆ ಸದ್ಗುಣಪುತ್ರನನತಿಕರುಣದಿಂದೆ ಪಾಲಿಪುದೀಗಳ್ (ಹಾಲಾಸ್ಯ. ೨-೫-೩೨). [ ಚಿತ್ರ + ಚರಿತ್ರ ]

**ಚಿತ್ರಜ್ಞ** (ನಾ). ಚಿತ್ರಕಲೆಯನ್ನು ಬಲ್ಲವನು ; ಚಿತ್ರಕಲಾವಿದ : ಚಿತ್ರಜ್ಞ ಜಾತಿವರ್ಗವನಱಿದು ಪೃಥ್ವಿಪಟಂಗಳಲ್ಲಿ ದೃಷ್ಟವ ತೋಱ ಬರುವಂತೆ (ಮೋಳಿಮಾ. ೦೯೮-೭೪೦). [ ಸಂ. ]

**ಚಿತ್ರತಂಡುಲೆ** (ನಾ). ಕ್ರಿಮಿನಾಶಕವಾದ ಒಂದು ಬಗೆಯ ಸಸ್ಯ ; ವಾಯುವಿಳಂಗ. [ ಸಂ. ಚಿತ್ರತಂಡುಲಾ ]

**ಚಿತ್ರನ್ಯಸ್ತ** (ಗು). ಚಿತ್ರದಲ್ಲಿ ಬರೆದ ; ಚಿತ್ರಗತವಾದ : ಬಿಲ್ಲುಂಬೆಱಗು ಮಾಗಿ ಚಿತ್ರನ್ಯಸ್ತರೂಪುಗಳಂತೆ ನಿಶ್ಚಳೀಭೂತರುಮಪಕ್ಷ್ಮಪಾತರುಮಾಗಿ ನೀಡುಂ ನೋಡಿ (ಶಾಂತಿಪು. ೪-೧೧ ವ). [ ಸಂ. (ಚಿತ್ರ + ನ್ಯಸ್ತ) ]

**ಚಿತ್ರಪಟ** (ನಾ). ೧. ಚಿತ್ರವನ್ನು ಬರೆದಿರುವ ಬಟ್ಟೆ. ೨. ಬಟ್ಟೆ ಮೊದಲಾದುವುಗಳಲ್ಲಿ ಬರೆದಿಟ್ಟ ಚಿತ್ರ: ಎನ್ನ ಪಸರಿಸಿದ ಚಿತ್ರಪಟಮೆಂಬ ದೀಹಕ್ಕೆ ಖೇಚರ ಭೂಚರಯುವಮೃಗಂಗಳೆಳಸಿ ಬಂದು (ಆದಿಪು. ೩-೮೬ ವ); ವಿಶ್ವಕರ್ಮಂ ಬರೆದಂ ಚಿತ್ರಪಟಮಂ ದಲೆನೆ ಭುವನತ್ರಿತಯಂ ಕಾಣಲಾದು ದಭವನ ಸಭೆಯೊಳ್ (ಶಾಂತಿಪು. ೯-೬೯); ಅವನು ಚಿತ್ರಪಟವನ್ನು ಥೊಪ್ಪನೆ ಕೆಡವಿದನು (ಮಧ್ವಮ. ೭). ೩. ಬಣ್ಣಬಣ್ಣದ ಬಟ್ಟೆ ; ಮಿಶ್ರವರ್ಣಗಳ ವಸ್ತ್ರ: ಪಾಸಿದ ದಳಿಂಬಮುಗುರ್ಗಳ ಕೇಸಡಿಗಳ ಚರಣಭೂಷಣಂಗಳ ರುಚಿಯಿಂ ಬಾಸಣಿಸಿ ಚಿತ್ರಪಟಮಂ ಪಾಸಿದವೊಲಿರೆ ವಧೂವರರ್ ನಡೆತಂದರ್ (ಅನಂತಪು. ೬-೫೪) ; ಕಟ್ಟೆಱಕದ ಚಿತ್ರಪಟಗಳಿಂ ರಾಯನ ಪಟ್ಟದಾನೆಗಳ್ಸೆದಿದುವು (ಕಂಎವಿ. ೩-೪೩). ೪. ಚಲನಚಿತ್ರ; ಸಿನಿಮಾ : ಆ ಚಿತ್ರಪಟವನ್ನು ನೋಡಲು ಜನರ ನೂಕುನುಗ್ಗಲು ಹೇಳತೀರದು(ರೂಢಿ). [ ಚಿತ್ರ + ಪಟ₃ ]

**ಚಿತ್ರಪಟ್ಟಿಕೆ** (ನಾ). ಚಿತ್ರಗಳ ಸಾಲು,-ಪಟ್ಟಿ: ಗೋಡೆಯ ಕೆಳಭಾಗದಲ್ಲಿ ಆರು ಚಿತ್ರಪಟ್ಟಿಕೆಗಳಿವೆ (ಹೊಯ್ಸಳವಾ. ೭೭) ; ಚಿತ್ರಪಟ್ಟಿಕೆಯ ನಾಲ್ಕನೆಯ ಸಾಲಿನಲ್ಲಿ ಪುರಾಣೇತಿಹಾಸಗಳ ಕಥೆಯು ಇದೆ (ಮೈವಾಸ್ತು. ೧೦೨). [ ಚಿತ್ರ+ ಪಟ್ಟಿಕೆ ]

**ಚಿತ್ರಪಟ್ಟು** (ನಾ). ಚಿತ್ರಗಳನ್ನುಳ್ಳ ಹಿಡಿ,-ಹಿಡಿಕೆ : ಚಿತ್ರಪಟ್ಟಿನ ಚಾಮರಂಗಳು ಯೆತ್ತ ನೋಡಿದರತ್ತ ದೊರೆಗಳು ಮತ್ತ ಬಣಜಿಗ ಸೀಲವಂತರ ಮನೆಯ ನೋಡುತಲಿ (ರೇವಣಾ. ೨-೮). [ ಚಿತ್ರ + ಪಟ್ಟು₁ ]

**ಚಿತ್ರಪತ್ರ** (ನಾ). ೧. ಬಣ್ಣಬಣ್ಣದ ಎಲೆ: (ಕ). ೨. ವಿಚಿತ್ರವಾದ ಆಕಾರ ಗಳುಳ್ಳ ಎಲೆಗಳ ಸಮೂಹ : ಅಂದಂಬೆತ್ತ ಬಂದುಗೆಯೆಸಟಿಂ ಕತ್ತರಿಸಿ ಪತ್ತಿಸಿದ ಚಿತ್ರಪತ್ರಂಗಳಳುಂಬಮಾದ ಪೊಂಬಾಟೆಯ ಕಂಬಂಗಳೊಳಂ (ಚಂದ್ರಪ್ರಪು. ೭-೯೫ ವ) ; ಹೊಳೆವ ಭಿತ್ತಿಯ ಸಾಲಭಂಜಿಕೆಗಳಲಿ . . . ರಚನೆಯ ಚಿತ್ರಪತ್ರದಲಿ (ಕುವ್ಯಾಆ. ೧೨-೦೪). ೩. = ಚಿತ್ರಪಟ ೨ : ವಿರಿಂಚಿಸೃಷ್ಟಿಯೊಳುಳ್ಳ ಮೂಱುಜಗದ ನಾನಾಪ್ರಪಂಚುಗಳ ಚಿತ್ರಪತ್ರಂಗಳೆಸೆ ದಿರ್ದುವಾ ಸಭೆಯೊಳ್ ಮನೋಹರಮೆನೆ (ಜೈಮಿಭಾ. ೦೭-೨೫) : ಸರಸಿಜನಾಭನ ಭವನಮು ಪಿರಿದುಂ ಲೇಸಾಗಿ ಚಿತ್ರಪತ್ರಸಮೇತಂ ಪರಮಾನಂದದೆ ಮಾಡಿಸಿ (ಮೈಆರಿ. ೧೯೩೦, ೮೯-೧೨ : ೭) [ ಚಿತ್ರ+ಪತ್ರ ]

**ಚಿತ್ರಪದ** (ನಾ). ೧. [ಛಂದ] ಪ್ರತಿಯೊಂದು ಚರಣದಲ್ಲಿ ಹತ್ತು ಅಕ್ಷರಗಳಿರುವ ಒಂದು ಸಮವಾದವೃತ್ತ: ಚಂದ್ರಗಣಂಗಳೆ ಮೂಱೆಡೆ ಯೊಳ್ ಚಂದ್ರಧರಂ ಬರೆಯಾ ಕಡೆಯೊಳ್ ಸಾಂದ್ರಯತಿಸ್ಥಿತಿ ಪಂಚಮ ದೊಳ್ ಚಂದ್ರಮುಖೀ ನಿಲೆ ಚಿತ್ರಪದಂ (ಛಂದೋಂಬು. ೨-೧೦೦) : ೨. ಪ್ರತಿಯೊಂದು ಚರಣದಲ್ಲಿ ಎಂಟು ಅಕ್ಷರಗಳುಳ್ಳ ಒಂದು ಸಮವಾದವೃತ್ತ: ಇಂದುಯುಗಂಗಳ ಮುಂದಂ ಬಂದು ಹರದ್ವಿತಯಂ ಗಳ್ ನಿಂದೊಡೆ ಚಿತ್ರಪದಂ (ಛಂದೋಂಬು. ೨-೯೪). [ ಸಂ. ]

**ಚಿತ್ರಪರ್ಣಿ** (ನಾ). ಒಂದು ಬಗೆಯ ಗಿಡ ; ನರಿಹೊನ್ನೆಗಿಡ : "ವೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ . . . ೪ ಕೋಲವನ್ನ ಎಂಬುವದು, ನರಿಹೊನ್ನೇಗಿಡ" (ಸಿದ್ಧಾಂತಿ. ೧೦೭). [ ಸಂ. ಚಿತ್ರಪರ್ಣೀ ]

**ಚಿತ್ರಪುಂಖ** (ನಾ). ಬಾಣ: "ಚಿತ್ರಪುಂಖಂ ಮಾರ್ಗಣಂ . . . ಅಂಬೆನಿಕ್ಕುಂ" (ಮುಂಗರಾ. ೮೭-೩೪). [ ಚಿತ್ರ + ಪುಂಖ ]

**ಚಿತ್ರಪುತ್ತಳಿ** (ನಾ). ಮನೋಹರವಾದ ಮೂರ್ತಿ ; ಚೆಲುವಾದ ಬೊಂಬೆ : ಜೀವಂಗೊಂಡ ಚಿತ್ರಪುತ್ತಳಿಯಂತೆ ರಂಜಿಪೀ ಬಾಲೆಯಂ ಕಂಡು (ಅದ್ಭುತ. ೩೦-೨೨). [ ಚಿತ್ರ + ಪುತ್ತಳಿ ]

**ಚಿತ್ರಪುತ್ರಿಕೆ** (ನಾ). = ಚಿತ್ರಪುತ್ತಳಿ : ಸೂತ್ರಿಸಿದ ಚಿತ್ರಪುತ್ರಿಕೆಯ ಲಾವಣ್ಯರಸವೊಸರ್ವಂತೆ (ಮಲ್ಲಿಪು. ೨-೭೪); ಲೋಕಾಲೋಕನ ಚಿತ್ರಪುತ್ರಿಕೆ ಲಸಲ್ಲಾವಣ್ಯಲಕ್ಷ್ಮೀಮುಖಶ್ರೀಕಲ್ಯಾಣಯಶೋನಿಧಾನೆ (ರಾಜಶೇ. ೩-೧೩). [ ಚಿತ್ರ + ಪುತ್ರಿಕೆ ]

**ಚಿತ್ರಪೂರ್ವರಂಗ** (ನಾ). ನಾಟಕವನ್ನು ಸ್ಥಾಪಿಸುವ ಕ್ರಮದ ಒಂದು ಬಗೆ : ಹಿಂದೆ ಎರಡು ಪದ್ಧತಿಗಳೂ ಇದ್ದುವೆಂದೂ, ಇವುಗಳಿಗೆ ಕ್ರಮವಾಗಿ 'ಶುದ್ಧಪೂರ್ವರಂಗ' 'ಚಿತ್ರಪೂರ್ವರಂಗ' ಎಂಬ ಹೆಸರುಗಳಿದ್ದಂತೆಯೂ ತೋರುತ್ತದೆ (ಕೈಪಿಡಿ. ೨೦೩). P ನಾಟಕವು ಪ್ರಾರಂಭವಾಗುವುದಕ್ಕೆ ಮೊದಲು ಪೀಠಿಕಾರೂಪವಾಗಿ ರಂಗದಲ್ಲಿ ನಡೆಯುವ ಕೆಲವು ಸಂಗತಿಗಳಿಗೆ ಪೂರ್ವರಂಗವೆಂದು ಹೆಸರು. [ ಚಿತ್ರ+ಪೂರ್ವರಂಗ ]

**ಚಿತ್ರಪ್ರಪಂಚ** (ನಾ). ೧. ಆಶ್ಚರ್ಯಕರವಾದ ವಿಷಯಗಳ ಸಮೂಹ: ರಸಂಬೆತ್ತೊಳ್ಪದೇನೆಂಬಮಿತಗುಣಮದೇನೆಂಬ ಚಿತ್ರಪ್ರಪಂಚಂ (ಶಾಂತಿಪು. ೯-೦೪೮). ೨. ಚಲನಚಿತ್ರಗಳ ಜಗತ್ತು ; ಸಿನಿಮಾಪ್ರಪಂಚ : ವಿದ್ಯಾರ್ಥಿಗಳಲ್ಲಿ ಚಿತ್ರಪ್ರಪಂಚದ ಬಗೆಗೆ ಆಸಕ್ತಿ ಈಗೀಗ ಅತಿಯಾಗಿ ಹೆಚ್ಚಾಗುತ್ತಿದೆ (ರೂಢಿ). [ ಚಿತ್ರ +ಪ್ರಪಂಚ ]

**ಚಿತ್ರಪ್ರಬಂಧ** (ನಾ). ಚಿತ್ರರಚನೆ ; ಚಿತ್ರಕೃತಿ: ಇವು ಆದಿಮಾನವನ ಅಪ್ರಬುದ್ಧ ಚಿತ್ರಪ್ರಬಂಧಗಳಾಗಿವೆ (ಭಾರದ. ೫೨೨). [ಚಿತ್ರ + ಪ್ರಬಂಧ]

**ಚಿತ್ರಪ್ರವರ್ತನ** (ನಾ). ಚಿತ್ರದಲ್ಲಿ ವರ್ಣಲೇಪನದ ಆರು ಪ್ರಕಾರಗಳಲ್ಲಿ ಒಂದು : ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಕಮುದ್ವರ್ತನಂ ಚಿತ್ರಪ್ರವರ್ತನವೆಂಬಾಱುಂ ತೆಱದಣ್ಕೆಯುಮಂ (ಮಲ್ಲಿಪು. ೫-೪೨). [ ಚಿತ್ರ+ ಪ್ರವರ್ತನ ]

**ಚಿತ್ರಫಲಕ**(ನಾ). ೧. ಚಿತ್ರಗಾರನು ಚಿತ್ರ ಬರೆಯಲು ಉಪಯೋಗಿಸುವ ಚೌಕಟ್ಟು: ಚಿತ್ರಫಲಕದ ಪಾಶ್ಚಾತ್ಯ ನಾಮ ಪಿಕ್ಚರ್. ಪಿಕ್ಚರ್ ಎಂಬುದು ವರ್ಣಚಿತ್ರವನ್ನು ತಿದ್ದುವುದಕ್ಕೆ ಚಿತ್ರಗಾರನು ಉಪಯೋಗಿಸುವ ಚೌಕಟ್ಟು ಎಂಬ ಅರ್ಥವಿರುವ ಗ್ರೀಕ್ ಪದಸಮುಚ್ಚಯದ ಸಂಕ್ಷಿಪ್ತಭಾಗ (ನಕ್ಷತ್ರ. ೨೦). ೨. ಚಿತ್ರದಿಂದ ಕೂಡಿರುವ ಹಲಗೆ: ಏರ್ದಿಷ್ಟವಾಗಿ ಪಾಠ ಬೋಧನೆಗಾಗಿಯೇ ವಿಶಿಷ್ಟ ಚಿತ್ರಫಲಕಗಳೂ, ಚಲನಚಿತ್ರಗಳೂ ತಯಾರಾಗಿವೆ (ಶಿಕ್ಷದ. ೨೯೦) ; ಚಿತ್ರಫಲಕದ ಮುಂದೆಯೂ, ಗೋಡೆಯ ಮೇಲೆ ನೇತು ಹಾಕಿದ್ದ ಅರೆಮುಗಿದ ಚಿತ್ರಗಳ ಮುಂದೆಯೂ ನಿಂತಾಗ (ಪುನರು.೨೦). [ ಚಿತ್ರ + ಫಲಕ ]

**ಚಿತ್ರಬಂಧ** (ನಾ). [ಕಾವ್ಯವಿ೩ಾ] ಚಿತ್ರಕಾವ್ಯದಲ್ಲಿ ಒಂದು ಬಗೆ ; ಚಿತ್ರ ರೂಪವಾದ (ಖಡ್ಗಬಂಧ, ಚಕ್ರಬಂಧ ಮೊದಲಾದ) ಪದ್ಯರಚನೆ : ಅರ್ಥಗರ್ಭಿತವಾಗಿ, ಯಮಕ, ಚಿತ್ರಬಂಧಗಳಿಂದ ಕೂಡಿ, ಸ್ವಲ್ಪಮಟ್ಟಿಗೆ ಪ್ರೌಢವಾಗಿದೆ (ಭಾರದ. ೪೩೨). [ ಚಿತ್ರ + ಬಂಧ ]

**ಚಿತ್ರಬಲ್ಲಾರೆ** (ನಾ). ಒಂದು ಬಗೆಯ ಗಿಡ: ಬಿಳೀಚಿತ್ರಫಾಲ, ಚಿತ್ರಬಲ್ಲಾರೆ (ವ್ಯಜಿಗಿ. ೩೬–೬೯೮). [ ? ]

**ಚಿತ್ರಭಾನು** (ನಾ). ೧. ನಾನಾಬಣ್ಣದ ಕಿರಣಗಳುಳ್ಳವನು; ಸೂರ್ಯ: ಭೂನುತ ಶಿವಾರ್ಚಕರಿಗಾನಂದಕರ ಚಿತ್ರಭಾನು ಶಶಿಶಿಖಿನೇತ್ರ ಕೀನಾಶ ಮದನಾಶ ನೀನೆ ಗತಿ (ಗುರುಜಾ. ೧೦–೨೩). ೨. ಅಗ್ನಿ: ಚಿತ್ರಭಾನು ಪ್ರವೇಶಂಗೈದಳೆಂದು ಶತಪತ್ರಲೋಚನೆ (ಜೈವಿಭಾ. ೨೮–೧೩); ತಾಯಿಯಂ ತಳ್ಳದಿರೊ ಚಿಂತಾನರಕಚಿತೆಯ ಪುತ್ರವಿರಹದ ಚಿತ್ರಭಾನುವಿಗೆ! (ಶ್ರೀರಾಮಾ. ೮೦–೩೪). ೩. ಅರುವತ್ತು ಸಂವತ್ಸರಗಳಲ್ಲಿ ಹದಿನಾರನೆಯದು : ಮತ್ತಮಾ ವರುಷವೇ ಪ್ರಭವ . . . ಚಿತ್ರಭಾನಂ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೦).

[ ಚಿತ್ರ + ಭಾನು ]

**ಚಿತ್ರಭಿತ್ತಿ** (ನಾ). ಚಿತ್ರಗಳಿಂದ ಕೂಡಿದ ಗೋಡೆ : ವೇದಿಕಾವಳಯಂ ಪೂವಲಿ ಮತ್ತವಾರಣಮುದಂಚತ್ತೋರಣಂ ಚಿತ್ರಭಿತ್ತಿ ಲತಾಮಂಟಪ ವೆಂಬಿವಿಲ್ಲದ ಜಿನಾವಾಸಂಗಳಿಲ್ಲೆಲ್ಲಿಯುಂ (ಪುಷ್ಪ ಪು. ೨–೭೩) : ಬೆಟ್ಟದಡವಿಯ ತಡಿಯ ಚಿತ್ರಭಿತ್ತಿಯಿನುಣ್ಮಿ ಹಾರುತೊಯ್ಯನೆ ತೇಲಿ ಬಂದತ್ತು . . . ಬೆಳ್ವಕ್ಕಿಪಂತಿ (ಶ್ರೀರಾಮಾ. ೦೩೦–೨೪೦). [ ಚಿತ್ರ + ಭಿತ್ತಿ ]

**ಚಿತ್ರಮಂದಿರ** (ನಾ). ಚಲನಚಿತ್ರವನ್ನು ಪ್ರದರ್ಶಿಸುವ ಮಂದಿರ ; ಸಿನಿಮಾಗೃಹ: ಚಿತ್ರಮಂದಿರ ಭರ್ತಿಯಾಗಿದೆ (ರೂಢಿ).

[ ಚಿತ್ರ + ಮಂದಿರ ]

**ಚಿತ್ರಮಾಲೆ** (ನಾ). ಚಿತ್ರಗಳ ಸಾಲು ; ಪಟಗಳ ಪಂಕ್ತಿ: (+).

[ ಚಿತ್ರ + ಮಾಲೆ ]

**ಚಿತ್ರಮೂಲ** (ನಾ). ಒಂದು ಬಗೆಯ ಔಷಧಿ ಗಿಡ : "ಚಿತ್ರಮೂಲಂ ವ್ಯಾಳವಗ್ನಿ ಚಿತ್ರಕವಕ್ಕು" (ಮಂಗರಾ ೩೯–೨೬) ; ಚಿತ್ರಮೂಲದ ಬೇರು ಸೊಪ್ಪು ಸಹ ಅರೆದು ಪಳದ್ಯ ಕಾಸಿ ಉಣ್ಣಲು ದೀಪನಮಕ್ಕುಂ (ವಿವೈವಿ. ೪) ; ಹುರುಗಿಲು, ಚಿತ್ರಮೂಲ, ಮಂಜಿಷ್ಠೆ . . . ಮೆಣಸು ಇವುಗಳನ್ನು ಕಷಾಯ ಕಾಯಿಸಿ ಸೇವಿಸೆ ಶ್ಲೇಷ್ಮಜ್ವರ ನಾಶವಾಗುವುದು (ಸಕವೈ. ೯೦).

[ < ಸಂ. ಚಿತ್ರ. / ತುಳು. ತೆಲು. ಚಿತ್ರಮೂಲ ]

**ಚಿತ್ರಮೂಲಿಕೆ** (ನಾ). = ಚಿತ್ರಮೂಲ : (+). [ ಸಂ. ಚಿತ್ರಮೂಲಿಕಾ ]

**ಚಿತ್ರಮೃಗ** (ನಾ). ಮೈಮೇಲೆ ಬಿಳಿಚುಕ್ಕಿಗಳಿರುವ ಜಿಂಕೆ; ಸಾರಂಗ : ಬಳಿಕಲ್ಲಿ ಕಸ್ತೂರಿಮೃಗ . . . ಚಿತ್ರಮೃಗ . . . ಪವಿತ್ರ ಮೃಗಜಾತಿಗಳುಂ (ವಿವೇಕ. ೨೦೨). [ ಚಿತ್ರ + ಮೃಗ ]

**ಚಿತ್ರರಥ** (ನಾ). ೧. ಪ್ರಕಾಶಮಾನವಾದ ರಥವುಳ್ಳವನು ; ಸೂರ್ಯ. ೨. ಅಗ್ನಿ : (+). [ ಸಂ. (ಚಿತ್ರ + ರಥ) ]

**ಚಿತ್ರರೂಪಿ** (ನಾ). ವಿವಿಧ ರೂಪಗಳನ್ನು ಹೊಂದುವವನು : ಚಿತ್ರರೂಪಿಗಳಾದ ರಾಕ್ಷಸರಂತೆ, ದಿನಕ್ಕೊಂದು ಬಗೆಯ ರೂಪ ತಳೆದು (ಬಿಶಂಬಾ. ೧೩). 'ಕಾಮರೂಪಿ' ಪರಾ. [ ಸಂ. ಚಿತ್ರರೂಪಿನ್ ]

**ಚಿತ್ರರೂಪು** (ನಾ). ವಿಚಿತ್ರವಾದ ಆಕೃತಿ ; ಚಿತ್ರದಂಥ ಆಕೃತಿ : ಹಗಲ ನಿರುಳಂ ಮಾಡಲಿರುಳಂ ಹಗಲು ಮಾಡಲು ಚಿತ್ರರೂಪಂ ಗಗನದಲಿ ಬರೆಯಲು ಬಯಲನಾಕಾರವಂ ಮಾಡಿ (ಬಸಪು. ೪೨–೩).

[ ಚಿತ್ರ + ರೂಪು ]

**ಚಿತ್ರಲಕ್ಷಣ** (ನಾ). ೧. ಚಿತ್ರದ ಸ್ವರೂಪ. ೨. ಚಿತ್ರದ ಲಕ್ಷಣಗಳನ್ನು ತಿಳಿಸುವ ಒಂದು ಗ್ರಂಥ : ಚಿತ್ರಗಳು ಹೇಗಿರಬೇಕೆಂಬ ವಿಷಯವಾಗಿ 'ಚಿತ್ರಲಕ್ಷಣ' ಎಂಬ ಪ್ರಾಚೀನಗ್ರಂಥವಿದೆ (ಭಾಚಿತ್ರ. ೨೦).

[ ಚಿತ್ರ + ಲಕ್ಷಣ ]

**ಚಿತ್ರಲತಿಕೆ** (ನಾ). [ಛಂದ] ಪ್ರತಿಪಾದದಲ್ಲೂ ಇಪ್ಪತ್ತೈದು ಅಕ್ಷರಗಳಿರುವ ಒಂದು ಅಕ್ಷರವೃತ್ತ : ಕ್ರೌಂಚಪದಂ . . . ಇದಕ್ಕೆ ಚಿತ್ರಲತಿಕೆಯೆಂದು ಬೇರೊಂದು ಹೆಸರು (ಕೈಪಿಡಿ. ೮೮). 'ಕ್ರೌಂಚಪದ' ಪರಾ.

[ ಸಂ. ಚಿತ್ರಲತಿಕಾ ]

**ಚಿತ್ರಲತೆ** (ನಾ). [ಛಂದ] ತ್ರಿಪದಿಯಲ್ಲಿ ಒಂದು ಪ್ರಭೇದ : ತುದಿಯೊಳಗೀಶ್ವರ ಗಣಮೊದವಿರೆ ಪದಮೆಲ್ಲಂ . . . ಪೆಱಗಣ ಚಿತ್ರದಂದದೊಳಿರ್ದೊಡದೆ ಚಿತ್ರಲತೆಯಕ್ಕುಂ (ಛಂದೋಂಬು. ೩–೨೩೦) ; ಜಯಕೀರ್ತಿ ಲಕ್ಷಣಿಸಿದ ವಿಚಿತ್ರಾತ್ರಿಪದಿಯೂ ನಾಗವರ್ಮನು ಲಕ್ಷಣಿಸಿದ ಚಿತ್ರಲತೆಯೂ ಸಾಮಾನ್ಯವಾಗಿ ಒಂದೇ (ಛಂದೋವಿ. ೮೩). [ ಸಂ. ಚಿತ್ರಲತಾ ]

**ಚಿತ್ರಲಿಪಿ** (ನಾ). ಚಿತ್ರಗಳೇ ಅಕ್ಷರಗಳಾಗಿರುವ ಬರವಣಿಗೆ : ಆ ಗೆರೆಗಳು ಪ್ರಾಚೀನ ಇಜಿಪ್ತದ ಚಿತ್ರಲಿಪಿಗಳ ಹಾಗೆ ಇರುತ್ತಿದ್ದವು (ಇಪ್ಪಕ.೩೦೯); ಮುದ್ರಿಕೆಗಳ ಮೇಲಿನ ಲಿಪಿಯನ್ನು ಚಿತ್ರಲಿಪಿ(Pictography) ಎಂದು ಕರೆದಿದ್ದಾರೆ (ದ್ರಾವಿವಿ. ೨೩). [ ಚಿತ್ರ + ಲಿಪಿ ]

**ಚಿತ್ರಲೀನಬಳ್ಳಿ** (ನಾ). ಒಂದು ಬಗೆಯ ಔಷಧಿ ಬಳ್ಳಿ : (ವ್ಯಜಿಗಿ. ೩–೩೩).

[ ಚಿತ್ರಲೀನ$_0$ + ಬಳ್ಳಿ ]

**ಚಿತ್ರಲೇಖೆ** (ನಾ). ೧. ಚಿತ್ರಾಕಾರವನ್ನು ಸೂಚಿಸುವ ರೇಖೆ. ೨. ಬಾಣಾಸುರನ ಮಂತ್ರಿಯಾದ ಕುಂಭಾಂಡನ ಮಗಳು : ಏಕೆನ್ನ ಪಿರಿದು ಕೀರ್ತಿಯ ಮಾಡುವೆ ಚಿತ್ರಲೇಖೆ (ಮೋಹತ. ೨೯–೦೯). ೩. ಒಬ್ಬ ಅಪ್ಸರಸ್ತ್ರೀ : ರಂಭೆ . . . ಚಿತ್ರಲೇಖೆ . . , ಘೃತಾಚಿ ಮೊದಲಾದ ದೇವಗಣಿಕೆಯರುಂ (ವಿವೇಕ. ೨೧೩). [ ಸಂ. ಚಿತ್ರಲೇಖಾ ]

**ಚಿತ್ರವಧೆ** (ನಾ). ಚಿತ್ರಹಿಂಸೆಯಿಂದ ಕೊಲ್ಲುವಿಕೆ ; ದೇಹವನ್ನು ತುಂಡು ತುಂಡಾಗಿ ಕತ್ತರಿಸಿ ಕೊಲ್ಲುವಿಕೆ : (+). [ ಚಿತ್ರ + ವಧೆ ]

**ಚಿತ್ರವರ್ತ** (ನಾ). = ಚಿತ್ರಪ್ರವರ್ತನ : ಪುಲಕಂ ಪತ್ರಕಂ . . . ಚಿತ್ರವರ್ತಮೆಂಬಾಱುಮಣ್ಕೆಗಳೊಳಂ (ಚಂದ್ರಪು. ೦೩–೭೦). [ ಸಂ. ]

**ಚಿತ್ರವಸ್ತ್ರ** (ನಾ). ಚಿತ್ರವನ್ನು ಬರೆದಿರುವ ಬಟ್ಟೆ ; ಚಿತ್ರಪಟ : ಇದೆ ಕೊಳ್ ರಣಕ್ಷೇತ್ರವಿನ್ಯಾಸಮಂ ತೋರ್ಪ ಚಿತ್ರವಸ್ತ್ರಂ (ಶ್ರೀರಾಮಾ. ೬೨೧–೧೧೧). [ ಚಿತ್ರ + ವಸ್ತ್ರ ]

**ಚಿತ್ರವಾಹನ** (ನಾ). ೧. ಒಬ್ಬಾತನ ಹೆಸರು : ಚಿತ್ರವಾಹನ ಪೊನ್ನುಬ್ಬಾಳೆ (ಎಕ. VI, ಕೊಪ್ಪ. ೩೭–೧ ; ಸು. 675 ?) ; ಚಿತ್ರವಾಹನಗ್ಗಾಗಿ ಕಲಿಕಾನ್ತಿ ಎಱಿದು ಸ್ವರ್ಗಕೇಱಿದೊಂ (ಎಇ. IX, ೧೮–೧೩ ; ಸು. 800). ೨. ಚಿತ್ರಾಂಗದೆಯ ತಂದೆ : ಚಿತ್ರವಾಹನನಳಿಯ ಚಿತ್ರಾಂಗದೆಯ ರಾಜ್ಯಸೂತ್ರಮಂ ಪಿಡಿದು (ಚಿತ್ರಾಂಗ. ೭೮–೧೮೭೭). [ ಸಂ. ]

**ಚಿತ್ರವಿಚಿತ್ರ** (ಗು). ೧. ಹಲವು ಬಗೆಯ ಬಣ್ಣಗಳಿಂದ ಕೂಡಿದ : (+). ೨. ಬಹಳ ವಿಲಕ್ಷಣವಾದ : ಅವನು ಚಿತ್ರವಿಚಿತ್ರ ಬಟ್ಟೆಯನ್ನು ತೊಟ್ಟಿದ್ದಾನೆ (ರೂಢಿ). [ ಚಿತ್ರ + ವಿಚಿತ್ರ ]

**ಚಿತ್ರವಿಧ** (ನಾ). ಆಶ್ಚರ್ಯಕರವಾದ ರೀತಿ : ಧಾತ್ರೀಶನ ಸಾಂದ್ರಮನಸ್ಸೂತ್ರದೊಳಾ ಸತಿಯ ಗುಣಗಣೋದ್ಗಮತತಿಯಂ ಚಿತ್ರವಿಧದಿಂ ತೊಡರ್ಚಿದ ಧಾತ್ರಂ ಮುಂ ಮಾಲೆಗಾರರೊಡನಾಡಿದನೋ (ಚಂದ್ರಪು. ೩-೨೮). [ ಚಿತ್ರ + ವಿಧ ]

**ಚಿತ್ರವಿವಕ್ಷೆ** (ನಾ). ೧. ಚಿತ್ರ ಬರೆಯಬೇಕೆಂಬ ಆಸೆ. ೨. ಚಿತ್ರಲೇಖನ ; ಚಿತ್ರರಚನೆ (?) : ಉತ್ಕರಣಂ ಚಿತ್ರವಿವಕ್ಷೆ ವಾಸ್ತು . . . ಎಂಬಿನಿತ ಱೂಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪಪು. ೪-೫೯). [ ಚಿತ್ರ + ವಿವಕ್ಷೆ ]

**ಚಿತ್ರವಿಹಂಗ** (ನಾ). ದುಂಬಿ ; ಭ್ರಮರ. [ ಚಿತ್ರ + ವಿಹಂಗ ]

**ಚಿತ್ರವಿಹಗ** (ನಾ).=ಚಿತ್ರವಿಹಂಗ : "ಅಲರ್ವಕ್ಕಿ ಮಲ್ಲಳಿ ಪಱಿಮೆ . . . ಬಂಡುಣಿಯ ಚಿತ್ರವಿಹಗಮಕ್ಕುಂ" (ಕಬ್ಬಿಗ. ೦೩); ಹೈಮಾಗಾತ್ಮಜಾಲಪನರಾಗಾಬ್ಜ ನವಪರಾಗ ಭೋಗಾರ್ತಚಿತ್ರವಿಹಗಾ ಗಾರುಡಧ್ವಜನತಾ ಗಾಳಿವಟ್ಟದಲೆಯಾ (ಉದ್ಭಟ. ೬-೨೭). [ ಚಿತ್ರ + ವಿಹಗ ]

**ಚಿತ್ರವೀಣೆ** (ನಾ). ಒಂದು ಬಗೆಯ ವೀಣೆ : ಚಿತ್ರವೀಣೆಯು ಪಾಶ್ಚಾತ್ಯ ದೇಶಗಳ Zither ವಾದ್ಯದ ಮೇಲೆ ವಿಶೇಷಪ್ರಭಾವವನ್ನು ಬೀರಿದೆ(ಭಾರದ. ೫೪೫). [ ಚಿತ್ರ + ವೀಣೆ ]

**ಚಿತ್ರವೃತ್ತಿ** (ನಾ). ಆಶ್ಚರ್ಯಕರವಾದ ರೀತಿ ; ಅಚ್ಚರಿಯನ್ನುಂಟುಮಾಡುವ ರಚನೆ,-ಕ್ರಮ : ಕಡೆಪದ ಕಾಂತಿ ಕಂಡರಣೆಯುನ್ನತಿ ಚಿತ್ರದ ಚಿತ್ರವೃತ್ತಿ ಬೇಗಡೆವೆಸದೇಟ್ಗೆಯಲ್ಲಿ ಪೊಸತಾದುದು (ಚಂದ್ರಪು. ೦-೦೪೪). [ ಚಿತ್ರ + ವೃತ್ತಿ₂ ]

**ಚಿತ್ರವೇಂಟೆ** (ನಾ). ಒಂದು ಬಗೆಯ ಬೇಟೆ: ವಿದ್ಯಾಧರರ ಬೇಂಟೆ ಚಿತ್ರವೇಂಟೆ . . . ಉಚಿತವೇಂಟೆಯನಾಡಿದಂ ಹರಿಶ್ಚಂದ್ರವಸುಧಾಧೀಶನು (ಹಡಿಕಾ. ೩-೪೯). [ ಚಿತ್ರ + ಬೇಂಟೆ ]

**ಚಿತ್ರಶಕ್ತಿ** (ನಾ). = ಚಿತ್ರಕಶಕ್ತಿ : ಕಲ್ಪನಾಶಕ್ತಿ, ಚಿತ್ರಶಕ್ತಿ . . . ಇವೇ ಮೊದಲಾದ ಪ್ರಶ್ನೆಗಳನ್ನು ಐತಿಹಾಸಿಕವಾಗಿ ವಿಮರ್ಶಿಸಿ (ನವ್ಯಕಾ. ೮). [ ಚಿತ್ರ + ಶಕ್ತಿ ]

**ಚಿತ್ರಶಾಲೆ₁** (ನಾ). ಬಣ್ಣದ ಸೀರೆ : ಪುತ್ತಳಿಬಣ್ಣದ ಚಿತ್ರಶಾಲೆಯನುಟ್ಟು ಹಸ್ತಕಂಕಣ ನಲಿವುತ (ಲೋಕಗೀ. ೦೩). [ ಚಿತ್ರ + ಶಾಲೆ₁ (<ಸೇಲೆ) ]

**ಚಿತ್ರಶಾಲೆ₂**(ನಾ).೧. ಚಿತ್ರಗಳು ಇರುವ ಸ್ಥಳ; ಚಿತ್ರಗಳನ್ನು ಒಳಗೊಂಡ ಸ್ಥಳ: ಏಂ ಚಿತ್ರ ಜ ಚಿತ್ರಶಾಲೆಯೆನೆ ಜಂಬೂದ್ವೀಪಮಿಂಬಾದುದೋ (ಮಲ್ಲಿಪು. ೦-೬೬); ಮಣಿಮಯದ ಬಹುವಿಸ್ತಾರ ಭದ್ರೋಪರಿಯ ಭವನದ ಚಿತ್ರಶಾಲೆಯಲಿ . . . ಮಲಗುವ ಮಹೀಪತಿ ನೀರೊಳೊಱಗುವನು (ಕುವ್ಯಾಗ. ೩-೪೦). ೨. ಚಿತ್ರಪ್ರದರ್ಶನ ಸ್ಥಳ: ಸಂಸ್ಕೃತ ಮತ್ತು ಪಾಳಿ ಸಾಹಿತ್ಯಗಳಲ್ಲಿ . . . ಚಿತ್ರಶಾಲೆಗಳ ನಿರೂಪಣೆ ಕಂಡು ಬರುತ್ತದೆ (ಭಾರದ. ೫೨೩). [ ಚಿತ್ರ + ಶಾಲೆ₃ ]

**ಚಿತ್ರಶಿಖಂಡಿ** (ಗು). ೧. ಮನೋಹರವಾದ ಶಿಖೆಯುಳ್ಳ. (ನಾ). ೨. ಸಪ್ತರ್ಷಿಗಳು : "ಚಿತ್ರಶಿಖಂಡಿಯೆನೆ ಋಷಿಯರಕ್ಕು" (ಮಂಗರಾ. ೦೨-೭). ೩. ಸಪ್ತರ್ಷಿಗಳಲ್ಲಿ ಒಬ್ಬ; ಅಂಗೀರಸ. 'ಚಿತ್ರಶಿಖಂಡಿಜ' ಪರಾ. ೪. ಸಪ್ತರ್ಷಿಮಂಡಲವೆಂಬ ನಕ್ಷತ್ರಪುಂಜ. [ ಸಂ. ಚಿತ್ರಶಿಖಂಡಿನ್ ]

**ಚಿತ್ರಶಿಖಂಡಿಜ** (ನಾ). ಅಂಗೀರಸನ ಮಗನಾದ ಬೃಹಸ್ಪತಿ : ಸಲೆ ನಿರ್ಜರಾಧೀಶಪ್ಪವೃದ್ಧಶ್ರವಂಗೆಯೊಪ್ಪಲು ಜೀವನಾಗಿ ಚಿತ್ರಶಿಖಂಡಿಜಂ ಮಂತ್ರಿತಿಲಕಂ ಗಡಾ (ಭಾವಚಿಂ. ೨-೦೯). [ ಸಂ. ]

**ಚಿತ್ರಶಿಲ್ಪಿ** (ನಾ). ಚಿತ್ರವನ್ನು ಬರೆಯುವವನು : ಚಿತ್ರಶಿಲ್ಪಿಯ ಮನೆಗೆ ಹೋಗಿದ್ದ ಮಿತ್ರನೊಬ್ಬನು ಸಂಜೆಯ ಚಿತ್ರವೊಂದನ್ನು ನೋಡಿ (ನವ್ಯಕಾ. ೬೫). [ ಚಿತ್ರ + ಶಿಲ್ಪಿ ]

**ಚಿತ್ರಸಂಪುಟ** (ನಾ). ಮನೋಹರವಾದ ಪೆಟ್ಟಿಗೆ : ತರಿಸಿದನು ಮಡಿವರ್ಗದಮಲಾಂಬರವನಂಬುಜಮುಖಿಗೆ ರತ್ನಾಭರಣವನು ವಿವಿಧಾನುಲೇಪನ ಚಿತ್ರಸಂಪುಟವ (ಕುವ್ಯಾಸ. ೦೫-೬೩). [ ಚಿತ್ರ + ಸಂಪುಟ ]

**ಚಿತ್ರಸೂತ್ರ** (ನಾ). ಒಂದು ಬಗೆಯ ಬಣ್ಣದ ವಸ್ತ್ರ : ಚೀನದ ಮಹಾಚೀನದ ಪಟ್ಟೆಯ ಚಿತ್ರಾವಟ್ಟೆಯ ಪಟ್ಟಾವಳಿಯ ಪಟ್ಟಸೂತ್ರದ ಚಿತ್ರಸೂತ್ರದ ನೇತ್ರವಟ್ಟಣಿಗೆಯ ಪುಟ್ಟಿಗೆಗಳನೊಟ್ಟಿ (ಸುಕುಮಾ. ೦೦-೪೦ ವ). [ ಚಿತ್ರ + ಸೂತ್ರ ]

**ಚಿತ್ರಸೃಷ್ಟಿ** (ನಾ). ವೈವಿಧ್ಯದಿಂದ ಕೂಡಿದ ರಚನೆ; ಬಗೆಬಗೆಯ ರಚನೆ: ಅವನ ಬೆಸಗಿನ ತ್ರಿಪದಿಗಳ ಚಿತ್ರಸೃಷ್ಟಿಯಲ್ಲಿ ಸಹ ಇದನ್ನು ನಾವು ಕಾಣಬಹುದು (ನವ್ಯಕಾ. VI, ಮುನ್ನುಡಿ). [ ಚಿತ್ರ + ಸೃಷ್ಟಿ ]

**ಚಿತ್ರಸೇಡು** (ನಾ). ಒಂದು ಗ್ರಾಮದ ಹೆಸರು ; ಈಗಿನ ಅನಂತಪುರ ಜಿಲ್ಲೆಯ ಗೂಟಿ ತಾಲ್ಲೂಕಿನ ಚಿತ್ರಚೇಡು: ತೊರಮರ ವಿಷಯೇ ಚಿತ್ರಸೇಡು ಗ್ರಾಮಮಧಿವಸತಿ (ಇಇ. XIX, ೦೫೦-೦೯ ; ೬೨). [ ? ]

**ಚಿತ್ರಹಾರ** (ನಾ). ಬಣ್ಣಬಣ್ಣದ ಹಾರ : ಶಾರದ್ಯಕವನ್ಯಕುಸುಮದ ಚಿತ್ರಹಾರ [ಪಾಠಾಂ. ಪೂರ] ಕೇಯೂರ ಕರ್ಣಪೂರದ ಭೂಷಣಂಗಳೊಳಂ . . . ಪಸದನಂಗೆಯ್ದು (ಜಗವಿ. ೪-೮೦ ವ). [ ಚಿತ್ರ + ಹಾರ₃ ]

**ಚಿತ್ರಹಿಂಸೆ** (ನಾ). ೧. ಬಗೆಬಗೆಯಾದ ಹಿಂಸೆ ; ಅನೇಕರೀತಿಯಿಂದ ಉಂಟುಮಾಡುವ ಕಿರುಕುಳ,-ತೊಂದರೆ : ಮಧುರನು ತನಗೆ ಆಗಲೇ ಇಬ್ಬರು ಹೆಂಡಿರಿದ್ದರೂ ಮಾತಂಗಿನಿಯನ್ನು ಸೆರೆಹಾಕಿ ಚಿತ್ರಹಿಂಸೆಪಡಿಸುತ್ತಾನೆ (ಬಂಕಿಮು. ೪೩) ; ಜನರನ್ನು ಸೆರೆಮನೆಗೆ ತಳ್ಳಿ, ಚಿತ್ರಹಿಂಸೆ ಕೊಟ್ಟು (ಪುಸಕು. ೦೭೯). ೨. ಒಂದು ನರಕದ ಹೆಸರು: ಪರ್ವತಯುಗಳಘಟ್ಟನ . . . ಚಿತ್ರಹಿಂಸೆಯೆಂಬ್ಬೆದು ಮಂತ್ರಿನರಕಂಗಳ ಸಾಹಚರ್ಯದಿಂ (ವಿವೇಕ. ೦೮೦). [ ಚಿತ್ರ + ಹಿಂಸೆ ]

**ಚಿತ್ರಾಂಗ** (ಗು). ೧. ಮೈಮೇಲೆ ಪಟ್ಟೆಗಳನ್ನು ಅಥವಾ ಚುಕ್ಕೆಗಳನ್ನು ಹೊಂದಿದ : ಚಿತ್ರಾಂಗ ಜಿಂಕೆಯೂ, ಕೃಷ್ಣಮೃಗವೂ ಸಾಕಲು ಯೋಗ್ಯವಾದುವು (ಜಾಲಪ್ರ. III, ೦೪೪೦). (ನಾ). ೨. ಹುಲಿ: ಮುಂದೆ ಚಿತ್ರಾಂಗ ನೊಳು ಪೆಣಗುತಿರೆ ಕಾಡ್ಕೋಣ ಪಿಂದಟ್ಟಿಬರೆ (ಪ್ರಾಭರಾ. ೮-೨೩). ೩. ಬಣ್ಣಬಣ್ಣದಿಂದ ಕೂಡಿದ ಬಟ್ಟೆ : ನವರತ್ನದಂದುಗೆ ಕರ್ಣಪತ್ರ ಚಿತ್ರಾಂಗದಿಂದ . . . ಉತ್ಸವದ ಕಳೆಗೂಡಿ ಕಲ್ಯಾಣಮೋಕ್ಷಶ್ರೀಯ ಸೊಬಗ ನೆಱೆ ಸೂಱೆಗೊಂಬಂತಿರ್ದಾವು (ಸಿಂಗಿರಾ. ೩೫-೬). [ ಚಿತ್ರ + ಅಂಗ₂ ]

**ಚಿತ್ರಾಂಗದೆ** (ನಾ). ೧. ಚೆಲುವಾದ ತೋಳ್ಬಳೆಗಳನ್ನು ಧರಿಸಿದವಳು : (+). ೨. ಅರ್ಜುನನ ಹೆಂಡತಿ ; ಬಭ್ರುವಾಹನನ ತಾಯಿ : ಬಭ್ರುವಾಹನನ ನಿಜಮಾತೆ ಚಿತ್ರಾಂಗದೆ ಸಂತೋಷಮಂ ತಾಳ್ದು (ಜೈಮಿಭಾ. ೦೭-೩೦). [ ಸಂ. ಚಿತ್ರಾಂಗದಾ (ಚಿತ್ರ + ಅಂಗದ + –) ]

**ಚಿತ್ರಾಂಗಿ₁** (ನಾ). ನಾನಾಬಣ್ಣಗಳಿಂದ ಮತ್ತು ಚುಕ್ಕೆಗಳಿಂದ ಕೂಡಿದ ಅಂಗಿ,-ಕವಚ : ಪೊದೆದ ದುಕೂಲ ಚಿತ್ರಾಂಗಿ ಚಿಮ್ಮುರಿ ತೊಡವದಿರ್ಪ ಚಾಮರ ಛತ್ರವೆಸೆಯೆ ಮದುವೆಗೆ ಪೋಪಂತೆ ಪೋಗುತಿರ್ದನು ನೋಡುಕದನಕೆ ಭರತಚಕ್ರೇಶ (ಭರಚ. ೩೦-೪೫). [ ಚಿತ್ರ + ಅಂಗಿ₂ ]

**ಚಿತ್ರಾಂಗಿ₂** (ನಾ). ಸುಂದರವಾದ ಶರೀರವುಳ್ಳವಳು; ಚೆಲುವೆ; ಸುಂದರಿ: ಭೂಷಣದ ಘನರವದ ಚಿತ್ರಾಂಗಿಯ ತರ್ವವೆ ಹಸ್ತದೊಳ್ತೋಯದ ಮಳೆಗಱೆವುದಚ್ಚರಿಯೆ (ಜೈಮಿಭಾ. ೩೦-೮). [ ಸಂ. ಚಿತ್ರಾಂಗೀ (ಚಿತ್ರ + ಅಂಗ + –) ]

**ಚಿತ್ರಾಂತ** (ನಾ). [ಸಂಗೀತ] ಒಂದು ಬಗೆಯ ಸ್ವರದೋಷ : ರಂಗು . . . ಚಿತ್ರಾಂತ ಪರುಷ ಶ್ರುತಿಹೀನ ಪ್ರಯಾಣ ಅಸಮಾನ ಕಾಲಹೀನವೆಂಬ ಹದಿನೈದು ಸ್ವರದೂಷಣಂಗಳಂ ತೊಱೆದು (ವಿವೇಕ. ೨೩೬). [ ? ]

**ಚಿತ್ರಾಂಬರ** (ನಾ). ೧. ಅನೇಕವರ್ಣಗಳಿಂದ ಕೂಡಿದ ಬಟ್ಟೆ: ಪರಿವಿರಚಿತ ಚಿತ್ರಾಂಬರವಿತಾನಚ್ಛಾಯಾಚ್ಛುರಿತ ರಂಗಭೂಮಿಯೊಳ್ (ಆದಿಪು. ೮-೬೭ವ); ನಾನಾವಿಧವರ್ಣದಿಂದೆಸೆವ ನೀರ್ಪೂವೆಯ್ದೆ ಚೆಂಬೂವಿನಂತಿರೆ ಚಿತ್ರಾಂಬರವಾದುದಾ ನದಿ (ಚಂದ್ರಪು. ೧೦-೪೮); ಬೂದಿಯೆ ಚಂದನ ಯಜ್ಞಸೂತ್ರವೆ ಹಾರ . . . ರುದ್ರಾಕ್ಷಿ ಕೈಬಳೆ ವಲ್ಕ ಚಿತ್ರಾಂಬರ ಸಂನ್ಯಾಸಿ ಕಾಮಿಗೆ ಮಿಗಿಲು (ಇಂಚಾಷ. ೧೧೨-೯೮). ೨. (ನಕ್ಷತ್ರಗಳಿಂದ ಕೂಡಿ) ಮನೋಹರವಾದ ಆಕಾಶ. ೧, ೨: ಅತ್ರಿಯ ಪುತ್ರಂ ರಾಜಂ ಚಿತ್ರಾಂಬರಯುಕ್ತನಾಗಿ ಬಂದಂ ಭರದಿಂ (ಹಮ್ಮಿ.ರ. ೩-೧೭). [ಚಿತ್ರ + ಅಂಬರ]

**ಚಿತ್ರಾನ್ನ** (ನಾ). ೧. ಉಪ್ಪು, ಕಾರ, ಹುಳಿ ಸೇರಿಸಿ ಒಗ್ಗರಣೆ ಹಾಕಿ ಕಲಸಿದ ಅನ್ನ; ಕಲಸನ್ನ: ಮಿಱುಪ ಚಿತ್ರಾನ್ನ ನಾನಾಬಗೆ ಭಕ್ಷ್ಯಗಳ . . . ಸಿರಿಧರನಾರೋಗಿಸಿದನು (ಕಂನವಿ. ೬-೦೦೩); ಪರಿಕಲಿತ ಚಿತ್ರಾನ್ನರಾಶಿಯ ಶೋಣಿತಾಜ್ಯಗಳ . . . ಭೋಜನಗೈದು (ಅನಂರಾ. ೬-೨೨-೦೪); ಹುರುಳಿಕಾಯಿಯ ಪಲ್ಯ, ಚಿತ್ರಾನ್ನ, ಬೋಂಡ ಮತ್ತು ಪಾಯಸ–ಆ ದಿನದ ಅಡಿಗೆ (ರಂಗಶ. ೮೪); ಉಪ್ಪೇರಿ, ವಾಂಗೀಭಾತು, ಚಿತ್ರಾನ್ನ . . . ಪಟ್ಟೆ ಉದ್ದಕ್ಕೂ ಸಾಗಿತು (ರೂಪಸಂ. ೦೭). ೨. =ಚಿತ್ರಾಹುತಿ: ಊಟ ಮಾಡುವುದಕ್ಕೆ ಮುಂಚೆ ಬ್ರಾಹ್ಮಣರು ಚಿತ್ರಾನ್ನವಿಟ್ಟು ಆಪೋಶನ ತೆಗೆದುಕೊಳ್ಳುತ್ತಾರೆ (ರೂಢಿ). [ಚಿತ್ರ + ಅನ್ನ೩]

**ಚಿತ್ರಾಭಾಸ** (ನಾ). ಚಿತ್ರದ ಮೂರು ಪ್ರಕಾರಗಳಲ್ಲಿ ಒಂದು; ಸತ್ಯವೆನ್ನುವಂತೆ ಭ್ರಮೆಯನ್ನುಂಟುಮಾಡುವ ಪ್ರತಿಬಿಂಬ (?): ಚಿತ್ರ ಚಿತ್ರಾರ್ಧ ಚಿತ್ರಾಭಾಸಮೆಂಬ ಮೂಱುಂ ಪ್ರಕಾರಮುಮಂ (ಮಲ್ಲಿಪು. ೫-೪೨); ಕ್ರಿಯಾಗುಣದ್ರವ್ಯಂಗಳಿಂ ಜಾತಿಯಾಗೆ ಬರೆದ ಚಿತ್ರಂ ಚಿತ್ರಾರ್ಧಂ ಚಿತ್ರಾಭಾಸಮೆಂಬ ಮೂಱುಂ ಚಿತ್ರದೊಳಂ (ಚಂದ್ರಪು. ೦೫-೭೦ ವ). [ಸಂ.]

**ಚಿತ್ರಾಯತನ** (ನಾ). [ಕಾವ್ಯಮೀ] ಕಾವ್ಯರಚನೆಯಲ್ಲಿ ಒಂದಂ ಬಗೆ; ಚಿತ್ತಾಣ: ಮುಕ್ತಕಂ ಕುಲಕಂ ಕೋಶಂ ಸಂಘಾತಮೆಂಬ ರಚನಾವೈಚಿತ್ರ್ಯ ಚಿತ್ರಾಯತನ ವೈದಂಡಿಕ ಪ್ರಬಂಧ ಬಂಧುರ ಪದ್ಯಬಂಧದೊಳಂ (ಅನಂಪು. ೦೦-೨೮ ವ). [P ಇದು 'ಚಿತ್ತಾಣ' ಎಂಬುದರ ಸಂಸ್ಕೃತೀಕರಣ.]

**ಚಿತ್ರಾರ್ಧ** (ನಾ). ಚಿತ್ರದ ಮೂರು ಪ್ರಕಾರಗಳಲ್ಲಿ ಒಂದು; ಪೂರ್ಣಾಕಾರವಲ್ಲದ ಪ್ರತಿಬಿಂಬ (?): ಚಿತ್ರ ಚಿತ್ರಾರ್ಧ ಚಿತ್ರಾಭಾಸಮೆಂಬ ಮೂಱುಂ ಪ್ರಕಾರಮುಮಂ (ಮಲ್ಲಿಪು. ೫-೪೨); ಕ್ರಿಯಾಗುಣದ್ರವ್ಯಂಗಳಿಂ ಜಾತಿಯಾಗೆ ಬರೆದ ಚಿತ್ರಂ ಚಿತ್ರಾರ್ಧಂ ಚಿತ್ರಾಭಾಸಮೆಂಬ ಮೂಱುಂ ಚಿತ್ರದೊಳಂ (ಚಂದ್ರಪು. ೦೫-೭೦ ವ). [ಚಿತ್ರ + ಅರ್ಧ]

**ಚಿತ್ರಾರ್ಪಿತ** (ಗು). ೧. ಚಿತ್ರದಲ್ಲಿ ಬರೆದ; ಚಿತ್ರೀಕರಿಸಿದ. ೨. ನಿಶ್ಚಲವಾದ: ಕಪೋಲನ್ಯಸ್ತಹಸ್ತ ಪ್ರವರ್ತನೆ ಚಿತ್ರಾರ್ಪಿತಕಾಂತೆಯಂತೆ ತಳೆದಳ್ . . . ನಿಷ್ಪಂದಕಾರಿತ್ವಮಂ (ಚಂದ್ರಪು. ೮-೮೫). [ಚಿತ್ರ + ಅರ್ಪಿತ]

**ಚಿತ್ರಾಲಂಕಾರ** (ನಾ). [ಕಾವ್ಯಮೀ] ಒಂದು ಬಗೆಯ ಅಲಂಕಾರ; ಪ್ರಶ್ನೆಯ ಶಬ್ದಗಳಲ್ಲಿಯೇ ಉತ್ತರ ಅಡಗಿರುವುದು: ಪ್ರಶ್ನೆಮಾಡಿದಕ್ಕ ಭಿನ್ನವಾದುತ್ತರವೊಂದೇ ಪೇಳಲ್ಕೆ ಚಿತ್ರಾಲಂಕಾರವೆನಿಪುದು. "ದಾವಾಗ್ನಿ" ಯೆಂಬುದುದಾಹರಣ (ಕುವಲ. ೧೫೧-೦ ಟಿಪ್ಪಣಿ). 'ಚಿತ್ರೋತ್ತರ' ಪರಾ. [ಚಿತ್ರ + ಅಲಂಕಾರ]

**ಚಿತ್ರಾವತಿ** (ನಾ). = ಚಿತ್ರಾಹುತಿ: ಚಿತ್ರಾವತಿಯನ್ನು ಇಡುವ ಮೊದಲು ಈ ಪ್ರಾರ್ಥನೆಯಾಗಬೇಕು (ರಂಗರೋ. ೧೭); ರಾಯರು 'ಪರಿಷಂಚಾಮಿ' ಮಾಡಿ ಚಿತ್ರಾವತಿಯಿಟ್ಟು, 'ಅಮೃತೋಪಿ'ಯನ್ನು ತೆಗೆದುಕೊಂಡರು (ಧರ್ಮಸಿ. ೮೨): 'ಇಲ್ಲೇ ಚಿತ್ರಾವತಿ ಆಗಲಿ' ಎಂದರು ಗೋಪಾಳರಾಯರು (ವೃನಿ. ೩೨೮). [<ಸಂ. ಚಿತ್ರಾಹುತಿ]

**ಚಿತ್ರಾವಲಂಬನ** (ನಾ). ಚಿತ್ರಗಳಿಂದ ಕೂಡಿದುದಂ: ಏಣಾಕ್ಷಿಯರ್ನನೆದ ಮೈಯೊಳಿಹ ವಸನಂಗಳಂ ಸಡಿಲ್ಚಿ ರಮಣೀಯ ಚಿತ್ರಾವಲಂಬನದ ಶೋಭೆಗಳ ಸಮನಿಸಿದ . . . ಪಲವು ಬಣ್ಣಂಗಳಂ ತೆಗೆದುಟ್ಟು ರಂಜಿಸಿದರು (ಜೈಮಿಭಾ ೩೦-೧೭). [ಚಿತ್ರ + ಅವಲಂಬನ]

**ಚಿತ್ರಾವಹ** (ನಾ). ಅಚ್ಚರಿಯನ್ನುಂಟುಮಾಡುವುದು; ಆಶ್ಚರ್ಯಕರವಾದುದು: ರಾಜಧಾನಿ ಪಿರಿದುಂ ಚಿತ್ರಾವಹಂ ಬಂದು ನೋಟ್ಟುದು (ಕಾದಂಪೂ. ೯೯೦); ಮತ್ತೀ ವಿವಾಹಾನಂದಂ ದೊರೆಕೊಂಡುದಾರಿನಿದು ಮಚ್ಚಿತ್ತಕ್ಕೆ ಚಿತ್ರಾವಹಂ (ಚಂದ್ರಪು. ೬-೯೮). [ಸಂ.]

**ಚಿತ್ರಾವಳಿ** 'ಚಿತ್ರಾವಟಿ' ನೋ.

**ಚಿತ್ರಾವಟಿ, ಚಿತ್ರಾವಳಿ** (ನಾ). ಒಂದು ಬಗೆಯ ವಸ್ತ್ರ; ನಾನಾವಿಧವಾದ ವರ್ಣಗಳಿಂದ ಕೂಡಿದ ವಸ್ತ್ರ: ಪಟಿ ಚಿತ್ರಾವಟಿ ಜೋಗಂ ಪಟಿಯುಂ ದೇವಾಂಗಮೆಂಬ ವಸನಂಗಳನೇಂ ಘಟಿಯಿಸುವವೊ . . . ವಿಶದ ವಸನಾಂಗಕುಜಂ (ಆದಿಪು. ೫-೩೪); ಚಿತ್ರಾವಟಿ ಪಟ್ಟಾವಟಿಯ ಪಟ್ಟಸೂತ್ರದ ಚಿತ್ರಸೂತ್ರದ ನೇತ್ರವಟ್ಟಣಿಗೆಯ ಪುಟ್ಟಿಗೆಗಳನೊಟ್ಟಿ (ಸುಕುಮಾ. ೧೦-೯೧ ವ). **ಚಿತ್ರಾವಳಿ**: ಕವಿದ ಚಿತ್ರಾವಳಿಯ ದಡ್ಡಿಯ ವಿವಿಧ ಭಟರುಗ್ಗಡಣೆಯಲಿ ವರಯುವತಿ ಬಂದಳು . . . ನೃಪಸಭೆಗೆ (ಕುವ್ಯಾಉ. ೬-೧೮); ಚೀನಾಂಬರ ಚಿತ್ರಾವಳಿಗಳು ಬಂದವೇನೆಂಬೆ ಕಪ್ಪಕಸುರನ (ಕುರಾಸಾಂ. ೧೮-೮). [<ಚಿತ್ರ + ಪಟಿ೭]

**ಚಿತ್ರಾಸನ** (ನಾ). ವರ್ಣರಂಜಿತವಾದ ಕಂಬಳಿ; ರತ್ನಗಂಬಳಿ. [ಚಿತ್ರ + ಆಸನ]

**ಚಿತ್ರಾಹುತಿ** (ನಾ). ಊಟಕ್ಕೆ ಮೊದಲು ಚಿತ್ರಗುಪ್ತನೇ ಮೊದಲಾದ ದೇವತೆಗಳಿಗೆ ಊಟದೆಲೆಯ ಬಲಪಕ್ಕದಲ್ಲಿ ಇಡುವ ಅನ್ನದ ಬಲಿ: ರಾಜಾನಿಗೆ ತುತ್ತುಮಾಡಿ ತಿನಿಸಿದ ನಂತರವೇ ಒಳಗೆ ಬಂದು ಚಿತ್ರಾಹುತಿ ಇಡುತ್ತಿದ್ದರು (ದೀಪಹ. I, ೦೪); ಒಂದು ದೊಡ್ಡ ಇಲಿ ಬಂದು ದತ್ತೂನ ತಾಟಿನ ಬದಿಯ ಚಿತ್ರಾಹುತಿ ತಿನ್ನತೊಡಗಿತು (ಸ್ವಶಿಚ. ೨೬೦). [ಸಂ. (ಚಿತ್ರ + ಆಹುತಿ)]

**ಚಿತ್ರಾಳ** (ನಾ). ಒಂದು ಬಗೆಯ ಗಿಡ: "ಚಿವಾಖ್ಯಾ–ಬಿಳಿಯ ಗಱುಕೆ, ಚಿತ್ರಾಳ, ಗೋರಕ್ಷಿ" (ಒಷಧಿ. ೫೬). [?]

**ಚಿತ್ರಿ** (ನಾ). =ಚಿತ್ರಕಾರ: "(ರಂ)ಗಾಜೀವ ಚಿತ್ರಿಯೆನೆ ಚಿತ್ರಕಂ" (ಮಂಗರಾ. ೦೦೦-೨). [ಸಂ. ಚಿತ್ರಿನ್]

**ಚಿತ್ರಿಕ** (ನಾ). =ಚಿತ್ರಕಾರ: ಮನದೊಳ್ಭಾವಿಸುತುಂ ಬರೆದನಿತ್ತಱಿಂ ಚಿತ್ರಿಕಂಗಮುತ್ತಮಸೌಖ್ಯಂ ಜನಿಯಿಕುಂ (ಸಮಪ. ೦-೦೦೭); ಪಟದೊಳ್ ದಿಟವಾಗಿ ಚಿತ್ರಿಕಂ ಬರೆದನೆ ಗೆತ್ತು (ಚಂದ್ರಪು. ೨-೫೭); ಪಡಿಯಱನಱ ಪದಿನತ್ತಂತಚತುರ ಚಿತ್ರಿಕನೊರ್ವಂ ಬಿಂಕಂಬಡೆದೈತಂದು (ಜಯುಕಾ. ೩-೪); ಚಿತ್ರವು ಚಿತ್ರಿಕನನ್ನೇ ನುಂಗಿದಂತಿತ್ತು (ನಿರಾಭ. ೩೦). [ಸಂ.]

**ಚಿತ್ರಿಕೆ** (ನಾ). ೧. ಚಿತ್ರಗಳನ್ನು ಬರೆಯುವವಳು,–ರಚಿಸುವವಳು: ಈ ನವ ಚಿತ್ರಂ ಬರೆದೆಯ್ದಿದನೆನೆ ಭೂನಾಥಂ ಕೇಳ್ದು ಚಿತ್ರಿಕೆಗೆಯನೂನ ಸಕಲಮಣಿಖಚಿತವಿಭೂಷಣಮಂ ಮನವೊಸೆದಿತ್ತಂ (ಜಯುಕಾ. ೩-೭೭). ೨. ಒಂದು ಬಗೆಯ ತಂತಿವಾದ್ಯ: ಬಳಿಕ ವಿಪಂಚಿಕೆ ಚಿತ್ರಿಕೆ . . . ಕಾಲಕೀಯೆಂಬ ಮೂವತ್ತುಮೂಱು ತಂತ್ರೀವಾದ್ಯಂಗಳಲ್ಲಿ (ವಿವೇಕ. ೨೩೭). [ಸಂ. ಚಿತ್ರಿಕಾ]

**ಚಿತ್ರಿಗ** (ನಾ). = ಚಿತ್ರಕಾರ: ಮೆಱೆವ ಚಿತ್ರಿಗ ನಾನಾಬಗೆ ದುಗುಲವ ವಿರಚಿಸುತಿಹ ಸೇಲಿಗರ ಸಿರತಾಳಿ ಜೋಡು ಪೈಠಣಿಗಳ ಹೊಲಿಗೆಯ ಗರುವ ಚಿಪ್ಪಿಗಗೇರಿಯಿಹುವು (ಕಂನವಿ. ೬-೫೫); ಅಪೂರ್ವ ಚಿತ್ರಿಗನೊಬ್ಬನು ಚಿತ್ರವನ್ನು ತಂದು ಅವನ ಅಡಿಯೆಡೆಗಿಟ್ಟಿದ್ದಾನೆ (ಸಾಹಿಸಂ. ೨೪). [ಚಿತ್ರ + –ಇಗ./ಸಂ. ಚಿತ್ರಿಕ]

**ಚಿತ್ರಿಣಿ** (ನಾ). = ಚಿತ್ತಿನಿ: ಎಸಳುಗಂಗಳ ಚಿತ್ರವಸನಭೂಷಣಮುಸಿತಕುಸು ಮಂಗಳೆಱಕದವಳೇ ಚಿತ್ರಿಣಿ[ಪಾಠಾಂ. ತ್ತಿನಿ] (ಜನವ. ೨-೧೩).
[ ಸಂ. ಚಿತ್ರಿಣೀ ]

**ಚಿತ್ರಿತ** (ಗು). ೧. ಚಿತ್ರಿಸಿದ. ೨. ವಿವಿಧ ಬಣ್ಣಗಳಿಂದ ಕೂಡಿದ.
[ ಸಂ. ]

**ಚಿತ್ರಿಸು** (ಕ್ರಿ). ೧. ಚಿತ್ರವನ್ನು ಬರೆ,-ರೂಪಿಸು : "ಚಿತ್ರಿಸು-ರೂಪಾದಿ ಲೇಖನೇ" (ಶಮಧಾ) ; ಚಿತ್ರಿಸಿ ಚಿತ್ರಕ್ಕಾಯುಪೊಯ್ದಂ ಮದನನೆನೆ ಮಹಾದೇವಿ ಕಣ್ಗೊಪ್ಪಿ ತೋರ್ಪಳ್ (ಅಜಿಪು. ೨-೪೫) ; ಮದನಮಂಗಳ ಭೃಂಗಾರಂಗಳಂ ಬರ್ಚಿಸುವಂತೆ ಮೊಲೆಗೆಲದೊಳ್ ಕಸ್ತೂರಿಕಾಪತ್ರ ಭಂಗಮಂ ಚಿತ್ರಿಸಿಯುಂ (ಚಂದ್ರಪು.೬-೬೩ ವ); ಚಿತ್ರಸಬಾರದವನ ರೂಪು ಕರುವಿಟ್ಟು ಸೂತ್ರಿಸಿ ಯೆಱಿಯಲಶಕ್ಯ (ಭರಚ. ೧-೪೯) ೨. ಚಿತ್ರಗತ ವಾಗು ; ಚಿತ್ರಿಸಲ್ಪಡು: ಅತ್ಯಾಸಕ್ತಿಯಿಂ ಮಱವಟ್ಟರಂತೆಯು ಚಿತ್ರಿಸಿದ ರಂತೆಯುಂ . . . ಮಿಡುಕದೆ ನೋಡುತಿರ್ದಂ (ಕಾದಂಪೂ. ೭೪೭). ೩. ವರ್ಣಿಸು ; ಕಣ್ಣಿಗೆ ಕಟ್ಟುವಂತೆ ವಿವರಿಸು: ರಾಮನ ನಡತೆಯನ್ನು ಮುಂದ್ದಣನು ಚಿತ್ರಿಸಿರುವ ಬಗೆಯನ್ನು ನೋಡಿದರೆ ಅವನನ್ನು ಕುರಿತೇ ಮೇಲಿನ ಅನ್ಯೋಕ್ತಿಯಿರಬೇಕು (ತವನಿ. ೧೮೯). [ ಚಿತ್ರ + - ಇಸು₂ ]

**ಚಿತ್ರೆ** (ನಾ). ೧. ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿನಾಲ್ಕನೆಯದು ; ಚಿತ್ತಾ ನಕ್ಷತ್ರ: ಮತ್ತಮಾ ಖಗೋಳದಲ್ಲಿ . . . ಚಿತ್ರೆ . . . ರೇವತಿಗಳೆಂಬಿಪ್ಪ ತ್ತೇಳು ತಾರೆಗಳಾದ ನಾಲ್ಕು ನಾಲ್ಕು ಪಾದಗಳಿಂದ ನೂಱಿಂಟಾಗಿ (ವಿವೇಕ. ೨೫೮).೨.ಒಂದು ಬಗೆಯ ಗಿಡ; ಇಲಿಕಿವಿ ಗಿಡ; ಮೂರೆಲೆ ಹೊನ್ನೆಗಿಡ. ೩. [ಜೈನ] ಒಬ್ಬ ದೇವತಾ ಸ್ತ್ರೀ : ಸುಪ್ರತಿಷ್ಠಿತೆ ಸುಪ್ರಣಿಧಿ . . ಚಿತ್ರೆ ಯೆಂಬೆಣ್ಬರುಂ ದಿಗಂಗನೆಯರಂ ನಾಭಿರಾಜಾಂಗನೆಗೆ ಮಣಿದರ್ಪಣಮಂ ಪಿಡಿಯಲುಂ . . . ಬೆಸಸುವುದುಂ (ಆದಿಪು. ೬-೩ ವ). [ ಸಂ. ಚಿತ್ರಾ ]

**ಚಿತ್ರೋಕ್ತಿ** (ನಾ). ಚಮತ್ಕಾರವನ್ನುಂಟುಮಾಡುವ ಮಾತು : ಸವಿ ದೋರುವ ಚಿತ್ರೋಕ್ತಿಗಳನ್ನಾಡುವುದು ಒಂದು ಕುಸುರು ಮಾತ್ರ (ಸಾಹಿವಿ. ೬). [ ಚಿತ್ರ + ಉಕ್ತಿ ]

**ಚಿತ್ರೋತ್ತರ** (ನಾ). ೧. = ಚಿತ್ರಾಲಂಕಾರ ೧ : ಪ್ರಶ್ನಮುಮುತ್ತರಮು ಮೊಂದೆ ತೆಱನಾಗಿರ್ಪುದಱಿಂದಿದು ಚಿತ್ರೋತ್ತರಂ (ಅಪ್ರತಿ. ೦೨೫-೧). ೨. [ಕಾವ್ಯವಿ॥] ಒಂದು ಬಗೆಯ ಅಲಂಕಾರ; ಎರಡು ಅಥವಾ ಅನೇಕ ಪ್ರಶ್ನೆಗಳಿಗೆ ಒಂದೇ ಉತ್ತರವನ್ನುಳ್ಳದು.
[ ಚಿತ್ರ + ಉತ್ತರ ]

**ಚಿತ್ಸುಖ** (ನಾ). ಆತ್ಮಸುಖ : ವೃಷಪದನಮ್ರುಚಿರಚಿತ್ಸುಖದ ನವ್ಯಭಾಗ್ಯ ಸುಪ್ರದ ಜಯತು (ವೀಶ್ವಪು. ೮-೧-೧). [ ಸಂ. (ಚಿತ್ + ಸುಖ) ]

**ಚಿದಂಬರ** (ನಾ). ೧. ಶುದ್ಧ ಬ್ರಹ್ಮ; ಪರಮಾತ್ಮ: ತನುಜ ಕೇಳಾ ಶೂನ್ಯದಿಂ ಚಿದಂಬರವಾದುದೆನಿಸಿತು (ವೀಶ್ವಪು. ೧-೬-೫) ; ಹೃದಯದೊಳಗಲ್ಲಿರುವದು ಚಿದಂಬರವು (ಗಗತಾ. ೯-೩೨). ೨. ಯೋಗಿಗಳು ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಅಂತರಂಗ; ಹೃದಯಾಕಾಶ: ವಾಲ್ಮೀಕಿ ತಾಂ ಕಿಱುನಗೆವೀಱಿ ಕರತಲಾಮಲಕದಂತೆಲ್ಲಂ ಬಗೆಗೊಡರಲ್ ಶ್ರೀರಾಮ ಚಂದ್ರಮಂ ಚಿದಂಬರದೊಳೊಪ್ಪಿರಲ್ (ಅದ್ಭುತ. ೨-೮). ೩. ದಕ್ಷಿಣ ಭಾರತದ ಒಂದು ಪ್ರಸಿದ್ಧಕ್ಷೇತ್ರ: ಚಿದಂಬರ ಒಂದು ಪ್ರಸಿದ್ಧ ಶಿವಕ್ಷೇತ್ರ (ರೂಢಿ).

**ಚಿದಂಬರ ರಹಸ್ಯ** = ಬಿಡಿಸಲಾಗದ ಗುಟ್ಟು ; ಯಾರಿಗೂ ಗೊತ್ತಾಗದಂತಿರುವ ರಹಸ್ಯ: ವೇದವಲ್ಲಿಯ ಲಗ್ನದ ವಿಷಯ ಹೊರಗಿ ನವರಿಗೆಲ್ಲ ಚಿದಂಬರರಹಸ್ಯವೇ (ನಿಂದನಿ. ೧೬೪) ; ತಮ್ಮ ಶಾರದೆ ಹೀಗೆ ಕ್ರಾಂತಿಕನ್ಯೆಯಾಗಿ ಮಾರ್ಪಟ್ಟುದು ಹೇಗೆಂಬುದು ಅವರ ಪಾಲಿಗೆ ಚಿದಂಬರ ರಹಸ್ಯವಾಗಿತ್ತು (ಊರುಕ. ೬೭). [ ಸಂ. (ಚಿತ್ + ಅಂಬರ) ]

**ಚಿದಂಶ** (ನಾ). ಚೈತನ್ಯದ ಅಂಶ : ಅವನು . . . ಜೀವರಲ್ಲಿ ಚಿದಂಶ ದಿಂದಲೂ ನೆಲಸಿದ್ದರೂ, ಅವನ ಸಚ್ಚಿದಾನಂದಸ್ವರೂಪದಲ್ಲಿ ಯಾವ ನ್ಯೂನತೆಯೂ ಅಂಟಲಾರದು (ಶಕಿವಿ. ೫೩). [ ಸಂ. (ಚಿತ್ + ಅಂಶ) ]

**ಚಿದಕವರೆ** (ನಾ). ೧. ನೀರಿನಲ್ಲಿ ನೆನಸಿ ಸಿಪ್ಪೆ ತೆಗೆದ ಅವರೆಕಾಳು : (ಕ). 'ಚಿಲುಕವರೆ', 'ಹಿದುಕವರೆ' ಪರಾ. ೨. ನೆನಸಿದ ಅವರೆಕಾಳಿನಿಂದ ಮಾಡುವ ಒಂದು ಬಗೆಯ ಮೇಲೋಗರ: ನಮ್ಮ ಮನೆಯಲ್ಲಿ ಇವತ್ತು ದೋಸೆ, ಚಿದಕವರೆ ಮಾಡಿದ್ದಾರೆ (ರೂಢಿ).
[ ಚಿದಕು₂ + ಅವರೆ₁ ]

**ಚಿದಕು₁**, ಚಿತಗು, ಚಿದುಕು₁ (ಕ್ರಿ). ಹಸಿಯ ಕಾಳನ್ನು ನೀರಲ್ಲಿ ನೆನೆಹಾಕಿ, ಹಿಸುಕಿ, ಸಿಪ್ಪೆಯಿಂದ ಕಾಳನ್ನು ಬೇರ್ಪಡಿಸು : (ಕ). **ಚಿತಗು :** ಚಿತಗಿದ ಅವರೇಕಾಳಿನಲ್ಲಿ ಮೇಲೋಗರ ಮಾಡಿ . . . ಬಡಿಸುತ್ತಿದ್ದಳು (ಇತಿನೋ. ೧೩). **ಚಿದುಕು₁ :** (ಕ).
[ ದೇ.॥ ತಮಿ. ಚಿತಕು ; ತೆಲು. ಚಿದುಕು, ಚಿತುಕು; ಮಲ್ಯಾ. ಚಿತ್ನ ]

**ಚಿದಕು₂**, ಚಿದುಕು₂ (ನಾ). ೧. ಕಾಳನ್ನು ಹಿಸುಕಿ ಸಿಪ್ಪೆ ತೆಗೆದುದು. 'ಚಿದಕವರೆ' ಪರಾ. ೨. "ನೆನೆಗಟ್ಟಿದ ನೀರಂ ; ನೆನೆಗಚ್ಚು" (ಜಾನಕೋ. ೫೭). **ಚಿದುಕು₂ :** (ಕ). [ <ಚಿದಕು₁ ]

**ಚಿದಗು** (ನಾ). ವಂಚನೆ; ಮೋಸ(?): ಇರುಳು ಹಗಲು ಚಿದಗು ವ್ಯಾಪಾರ ದಲ್ಲಿ ಸರಿ ಇಲ್ಲವೋ ನಿನಗೆ ಪೇಳಿದರೇನಹದು (ವಿಶ್ವೋಸು. ೧೮-೨). [?]

**ಚಿದರ** 'ಚಿದ್ರ' ನೋ.

**ಚಿದಾತ್ಮ** (ನಾ). ಚೈತನ್ಯಸ್ವರೂಪವಾದ ಆತ್ಮ ; ಪರಮಾತ್ಮ : ರಾಜ್ಯ ಲಕ್ಷ್ಮಿಯೊಳನಾದರಮಾಯ್ತು ಮನಂ ಚಿದಾತ್ಮನಾ (ಆದಿಪು. ೮-೬).
[ ಸಂ. (ಚಿತ್ + ಆತ್ಮ) ]

**ಚಿದಾನಂದರೂಪ** (ನಾ). ಚೈತನ್ಯ ಮತ್ತು ಆನಂದಗಳ ರೂಪವಾಗಿರು ವವನು; ಪರಮಾತ್ಮ: ಧ್ಯಾನಾದಿಮೂರ್ತಿಗಳನೊಳಕೊಂಡು ತೋಱುವ ಚಿದಾನಂದರೂಪನತ್ಯಧಿಕನಿಶ್ಚಿಂತಂ (ಹಜಿಕಾ. ೫-೬೮) ; ಪರಂಜ್ಯೋತಿ ಸ್ವರೂಪನಂ ಪ್ರಖ್ಯಾತಚಿದಾನಂದರೂಪನಂ ಚಿಂತಿಸಿದಂ (ಶಬಶಂ. ೨-೯೭).
[ ಸಂ. (ಚಿತ್ + ಆನಂದ + ರೂಪ) ]

**ಚಿದಾಭಾಸ** (ನಾ). [ತತ್ತ್ವಶಾ]ಚಿದ್ವಸ್ತುವಿನ ಪ್ರತಿಬಿಂಬ; ಪರಬ್ರಹ್ಮನ ಪ್ರತಿಬಿಂಬ ; ಜೀವ ; ಸ್ವರ್ಗಾದಿಭೋಗಮಂ ಸಾಧಿಸುವ ಜೀವನೆ ಚಿದಾ ಭಾಸನೆನಿಸುಗುಂ ಚಿದಾಭಾಸನೆಂದೊಡೆ ತೈಜಸನೆಂಬುದರ್ಥಂ (ಮನೋವಿ. ೬-೧೬ ಟೀಕು) ; ಜಾಗ್ರದಾವಸ್ಥೆಯಲ್ಲಿಯೂ ವ್ಯಷ್ಟಿಸ್ಥೂಲಶರೀರದಲ್ಲಿಯೂ ಅಭಿಮಾನವ ಮಾಡಿದಂಥ ಜೀವನಿಗೆ ವಿಶ್ವನೆನುತಲೂ, ವ್ಯಾವಹಾರಿಕ ನೆನುತಲೂ ಚಿದಾಭಾಸನೆನುತಲೂ ಮೂರು ಹೆಸರು (ವೇಸಾರ. ೭).
[ ಸಂ. (ಚಿತ್ + ಆಭಾಸ) ]

**ಚಿದುಕು₁** 'ಚಿದಕು₁' ನೋ.

**ಚಿದುಕು₂** 'ಚಿದಕು₂' ನೋ.

**ಚಿದುಕುಚೆಱುವು** (ನಾ). ಒಂದು ಕೆರೆಯ ಹೆಸರು : ಗ್ರಾಮಸ್ಯಾಘಾಟಾಃ ಪೂರ್ವತಃ ಚಿದುಕುಚೆಱುವು [ಉತ್ತರತಃ] × × × ವ್ರಯ್ಯ [ದೊನ] ಪಶ್ಚಿಮತಃ ದುತ್ತೆಚೆಱುವು (ಕಇಇ. ೬೦-೪೫-೩೦ ; 1104). [ ? ]

**ಚಿದ್ಘನ** (ನಾ). ಜ್ಞಾನದಿಂದ ಪರಿಪೂರ್ಣವಾದುದು ; ಪರಬ್ರಹ್ಮ : ಚಿದ್ಘನದೊಳಗೆ ಅವಿರಳೈಕ್ಯವಾದ ಎನ್ನ ಅಜಗಣ್ಣತಂದೆಯನಱಿದು ಶರಣೆಂಬುವಾತ ನೀನಾರು ಹೇಳಯ್ಯ (ಶೂನ್ಯಸಂ. ೨೪).
[ ಸಂ. (ಚಿತ್ + ಘನ) ]

**ಚಿದ್ದರೂಪ** (ನಾ). ಜ್ಞಾನಮಯಸ್ವರೂಪ ; ಚಿನ್ಮಯರೂಪ : ಶುದ್ಧ ಮೂರುತಿ ನಮ್ಮ ವಿಜಯವಿಠ್ಠಲರೇಯ ಪೊಳದು ಉದ್ಧರಿಸುವ ತನ್ನ ಚಿದ್ದರೂಪವ ತೋರಿಕೊಳುತ (ವಿಸಾಸು. ೨-೫). [ <ಚಿದ್ರೂಪ ]

**ಚಿದ್ರ, ಚಿದರ** (ನಾ). ೧. ತೂತು ; ರಂಧ್ರ. ೨. ಭೇದೋಪಾಯ ; ಒಡಕು : ವಿಭೀಷಣಂ ಚಿದ್ರದಿಂ ತಾನೆ ಕೊಂದನಲ್ಲದೆ . . . ತನ್ನ ನೊಸಲಕ್ಕರದೋದೆ ರಾವಣನಂ ಕೊಂದುದಲ್ಲದೆ, ಪೋ ರಾಮಂ ಕೊಂದನೆ (ರಾಮಾಶ್ವ. ೧೧೨-೨೯). **ಚಿದರ :** ೩. ತುಂಡು; ಚೂರು : ಕದಳಿಯ ಬನದೊಳು ಹೋದರೆ ಸಹಜದಿ ಚಿದರ ಮಾಡಿ ಯಮನೆಡೆಗೆ ಕಳುಹುವದು (ಸಿದ್ಧವು. ೬-೩೦). [ <ಛಿದ್ರ ]

**ಚಿದ್ರೂಪ** (ನಾ). ೧. ಸಹೃದಯ ; ಒಳ್ಳೆಯ ಮನಸ್ಸಿನವನು : "ಚಿದ್ರೂಪಃ, ಸಹೃದಯಃ—ಈ ಎರಡು ಲೇಸಪ್ಪ ಮನದವಂ" (ಹಲಾಯು. ೬೧-೨೧೮) ; ೨. ಚೈತನ್ಯಸ್ವರೂಪ ; ಜೀವ : ನಿದ್ರೆಯೊಳಗಿರ್ದನಾ ಬಸವನನುರಾಗದಿಂ ಚಿದ್ರೂಪದಿಂ ಶಿವನನರ್ಚಿಪುದ್ಯೋಗದಿಂ ಇರೆ (ಬಸರ. ೯-೦೩೬). ೩. ಪರಮಾತ್ಮ : ಈ ಗೂಢ ಚಿದ್ರೂಪನನು ಲಕ್ಷಿಸುವಂದವೆಂತೆಂದ (ನಿಭಾಗ. ೧೧-೬-೩೬) ; ಆತ್ಮನು ಸದ್ರೂಪನು. ಜೀವನು ಚಿದ್ರೂಪನು (ಭಾರದ. ೨೩೬). [ ಸಂ. (ಚಿತ್ + ರೂಪ) ]

**ಚಿನ** 'ಚಿನ್ನ₂' ನೋ.

**ಚಿನಕಡಿ₁** 'ಚಿನಗಡಿ' ನೋ.

**ಚಿನಕಡಿ₂** (ನಾ). ಚಿಕ್ಕಚೂರು,–ತುಣುಕು : ಕಡಿದ ಖಡೆಯದ ಕುಸುರಿಗಳ ಚಿನಕಡಿಯ ಹೀರಾವಳಿಯ ಮುಕುಟದ ಸಡಿಲಿದನುಪಮರತುನರಾಜಿಯ ಮುಱಿದ ಕಂಕಣದಸ್ತಿಕಡಿಕು ಪಸರಿಸ (ಕುಮಾರವ್ಯಾ. ೦೩-೩) : ತಾರಕನ ದೇಹಮಂ ಚಿನಕಡಿಯನಿರದೆ ಮಾಡಿತು ಶಾಂಭವಾಸ್ತ್ರಂ (ಚಬಪು. ೪೦-೩೦).

**ಚಿನಕಡಿಯಾಗು** = ಸಣ್ಣಚೂರಾಗು ; ತುಂಡುತುಂಡಾಗು : ಘನ ಪಾಲುಪರೆಯರಸಿನ ಬಲು ಸುಭಟರು ಚಿನಕಡಿಯಾದರಾ ರಣದ (ಕಂಸವಿ. ೦೩-೮೩). [ <ಚಿನಗಡಿ ]

**ಚಿನಕಡಿಗಳೆ** (ಕ್ರಿ). ಚಿಕ್ಕಚಿಕ್ಕ ಚೂರುಮಾಡು : ಕಡಿದನೊಂದೇ ಸರಳಿನಲಿ ಚಿನಕಡಿಗಳೆದು ರುಧಿರಾಂಬುರಾಶಿಯೊಳಡಗಿಸಿದ ಚತುರಂಗಬಲವನದೊಂದು ನಿಮಿಷದಲಿ (ಕುಮಾರವ್ಯಾ.ಗ. ೦-೧೦). [ ಚಿನಕಡಿ₂ + ಕಳೆ₁ ]

**ಚಿನಕಡಿಗೈ** (ಕ್ರಿ). ಚೂರುಮಾಡು ; ತುಂಡರಿಸು : ರಿಪುಬಲವ ಚಿನಕಡಿಗೈದೆಬ್ಬಿಸುವೆನೆಂದು ನುಡಿದನು ಚಿನಪಟ್ಟಣದ ಮನ್ನೆಯನು (ಕಂಸವಿ. ೦೨-೬೮). [ ಚಿನಕಡಿ₂ + ಗೈ (<ಕೆಯ್₁) ]

**ಚಿನಕಡಿವಡೆ** (ಕ್ರಿ). ತುಂಡುತುಂಡಾಗು ; ಚೂರುಚೂರಾಗು : ಹತ್ತಿಗೆ ಹರಿದ ಗಾಲಿಯ ರಥವ ಚಿನಕಡಿವಡೆದ ಕಾಲಾಳ (ಕುಮಾರವ್ಯಾ.ಶ.೨-೬).

[ ಚಿನಕಡಿ₂ + ಪಡೆ₁ ]

**ಚಿನಕಾಳೆ** 'ಚಿನ್ನಂಗಾಳೆ' ನೋ.

**ಚಿನಕುರಳಿ** 'ಚಿಲಕುರುಳಿ' ನೋ.

**ಚಿನಗಡಿ, ಚಿನಕಡಿ₁, ಚಿನಿಗಡಿ** (ಕ್ರಿ). ಸಣ್ಣಸಣ್ಣ ಚೂರು ಮಾಡು ; ತುಂಡರಿಸು : ದನುಜರನು ಬರಹೇಳು ಕರೆಕರೆ ಚಿನಗಡಿಯಬೇಕಿವನನು (ಪ್ರಹ್ಲಾಚ. ೬-೬೧). **ಚಿನಕಡಿ₁ :** ಅವರಿರ್ವರೆಡೆಯೊಳಡ್ಡಾಂತು ನಿಂದುದು ಬೆಳೆದು ಚಿನಕಡಿದ ಶರಗಿರಿಯದೇನೆಂಬೆನದ್ಭುತವನು (ಜೈಮಿಭಾ. ೪-೩೮) ; **ಚಿನಿಗಡಿ :** ಜನುಮಜನುಮದಲಿಂದ ಮಾಡಿದ ಘನದುರಿತವರ್ವತಗಳು ಚಿನಿಗಡಿದು ಸಾಧನವೆಲ್ಲ ವೇಗ ತನಗೆ ತಾ ಮಾಡಿಸುವನು (ತೀರ್ಥಮ. ೬೦).

[ ಚಿನ (<ಚಿನ್ನ₂) + ಕಡಿ₂ ]

**ಚಿನಗಾಳೆ** 'ಚಿನ್ನಂಗಾಳೆ' ನೋ.

**ಚಿನಡಿ** 'ಚುಂಗಡಿ₂' ನೋ.

**ಚಿನಡಿಸೀರೆ** (ನಾ). ಒಂದು ಬಗೆಯ ಸೀರೆ ; ಚುಕ್ಕೆಗಳಿರುವ ಸೀರೆ : ಎರಡು ಚಿನಡಿಸೀರೆ ಕೊಂಡು (ಕಾಮಿಕಾಂ. ೦೦೨) ; ನೀನು ಇನ್ನು ಮೇಲೆ ಚಿನಡಿಸೀರೆಗಳನ್ನುಡಬೇಡ (ಗೃಹಲ. ೨೬೦).

[ ಚಿನಡಿ (<ಚುಂಗಡಿ₂) + ಸೀರೆ₂ ]

**ಚಿನಪುಳಿ** (ನಾ). (ಕರಾ) ತೆಂಗಿನಕಾಯಿಯ ಎಳೆಯ ಮೊಗರು,–ಸಣ್ಣ ಹೀಚು ; ಕುರುಬು : ಚಿನಪುಳಿ ಉದುರುವುದನ್ನು ನೋಡಿದರೆ ಈ ವರ್ಷ ತೆಂಗಿನಕಾಯಿ ತುಂಬ ತುಟ್ಟಿಯಾಗುವ ಹಾಗೆ ಕಾಣುತ್ತದೆ (ರೂಢಿ).

[ ಚಿನ (<ಚಿನ್ನ₂) + ? ]

**ಚಿನಯಿ** 'ಚಿನಾಯಿ' ನೋ.

**ಚಿನವರದ** 'ಚಿನ್ನವರದ' ನೋ.

**ಚಿನವಾರ** 'ಚಿನಿವಾರ' ನೋ.

**ಚಿನಾಯಿ, ಚಿನಯಿ, ಚಿನಿ₂** (ನಾ). ೧. ಚೀನಾದೇಶಕ್ಕೆ ಸಂಬಂಧಿಸಿದುದು; ಚೀನಾದೇಶದಿಂದ ಬಂದುದು : (+). **ಚಿನಯಿ :** ೧. ಮುಂಬಯಿ ಮಣದ ಮೇಲೆ ಧಾರಣೆ ಇರತಕ್ಕ ಜೀನಸಗಳು . . . ೨೨. ಮೇಣ, ಚಿನಯಿ (ಮುಂಬವ್ಯಾ. ೧೧೮). **ಚಿನಿ₂ :** ೨. ಒಂದು ಬಗೆಯ ರೇಷ್ಮೆವಸ್ತ್ರ: ಬಿಜ್ಜಳನ ಭಂಡಾರದ ಚಿನಿ ಮಹಾಚಿನಿ ದೇವಾಂಗ ಲತಾವಳಿ ಹಂಸಾವಳಿ ಗಜಾವಳಿ ಮೊದಲಾದ ಪಟ್ಟಾವಳಿಯ ದಿಂಡುಗಳಂ ತರಿಸಿ (ಬಸರ. ೮-೦೦).

[ <ಚೀನ₁ . / ಮರಾ. ಚಿನಾಈ, ಚಿನಈ ]

**ಚಿನಾಲಿ** 'ಛಿನಾಲಿ' ನೋ.

**ಚಿನಿ₁** 'ಚಿನ್ನ₂' ನೋ.

**ಚಿನಿ₂** 'ಚಿನಾಯಿ' ನೋ.

**ಚಿನಿಕಂಡ** (ನಾ). = ಚಿನಿಖಂಡ : ನನ್ನಂ ಕೊಂದು ಜಾರರೊಳು ಬಿನದಿಪ್ಪೆನೆನುತಿರ್ದಳೆಂದು ಚಿನಿಕಂಡವಾಯಿಸಿ ಬಿಟ್ಟ ಬಳಿಕ (ಪ್ರಭುಪು. ೬-೦೭೬) ; ಸ್ತ್ರೀಯರೆದೆಗಳಂ ಬಗಿಬಗಿದು ಸದರಮಂ ಕೊಡದೆ ಚಿನಿಕಂ[ಪಾಠಾಂ. ಖಂ]ಡಗಳ ಕೊಯ್ದುರದಕೆ ದೋಷಂಗಳೆನಿತಿಲ್ಲ (ಗುರುಬೋ. ೦೯-೦೩೬).

[ ಚಿನಿ₁ (<ಚಿನ್ನ₂) + ಕಂಡ₁ ]

**ಚಿನಿಕಹಳೆ** 'ಚಿನ್ನಂಗಾಳೆ' ನೋ.

**ಚಿನಿಖಂಡ** (ನಾ). ಸಣ್ಣದಾಗಿ ಕತ್ತರಿಸಿದ (ಮಾಂಸದ) ಚೂರು : ಆತನ ಹಿಡಿದು ಎನ್ನ ಮುಂದೆ ಹೆಡಗುಡಿಯ ಕಟ್ಟಿ ಚಿನಿಖಂಡವ ಮಾಡಿ ಬಾಣಸವ ಮಾಡುವಾಗಲು (ಬಸಹ. ೩೩-೯೧) ; ಕಟಕಟನೆ ಕಾದಿ ಛಿದ್ರಿಸಿ ಚಿನಿಖಂಡವ ಮಾಡಿ ಆಯಿದು ತಿನ್ನುತಿಹ ಕ್ರೂರಕರ್ಮಿಯನಿಱಿದಿಱಿದು (ಚನ್ನಪ.೩೬-೬); ಗಂಡನ ಪಿಡಿದು ನುಂಗಿದ ಮೀನ ತಾ ಚಿನಿಖಂಡವ ಕೊಯ್ವಂತೆ ಕೊಯ್ದು (ಮೋಹತ. ೦೦-೪೬). [ ಚಿನಿ₁ (<ಚಿನ್ನ₂) + ಖಂಡ ]

**ಚಿನಿಖಂಡಗೈ** (ಕ್ರಿ). (ಮಾಂಸವನ್ನು) ಚೂರುಚೂರು ಮಾಡು,–ತುಂಡುತುಂಡಾಗಿ ಕತ್ತರಿಸು : ಒರೆದ ಮಾತನುಕರಿಸು ನೀನನುಸರಿಸದಿರೆ ಚಿ[ಪಾಠಾಂ. ಛಿ]ನಿಖಂಡಗೈವೆನು (ಜನಭಾ. ೩೦-೪೬) ; ಬಿತ್ತರನೇ ನಭ ಧರೆಗೆ ಚಿನಿಖಂಡಗೈದುವಮಾ ಶೂರ ಸೋದರಭಾವನ ಕತ್ತಿಗೆದುರಾರು (ಜಿನಮು. ೩೩-೬). [ ಚಿನಿಖಂಡ + ಗೈ (<ಕೆಯ್₁) ]

**ಚಿನಿಗಡಿ** 'ಚಿನಗಡಿ' ನೋ.

**ಚಿನಿಚಿದ್ರ** (ನಾ). ಸಣ್ಣಸಣ್ಣ ಚೂರು : ಚಿನಿಚಿದ್ರವನು ಮಾಡಿ ತಿನುತಿರ್ದಳಾಗ (ಕಂಕ. ೯-೦೦೯). [ ಚಿನಿ₁ (<ಚಿನ್ನ₂) + ಚಿದ್ರ ]

**ಚಿನಿಪಾಲು** 'ಚಿಲುಪಾಲ್' ನೋ.

**ಚಿನಿವರ** 'ಚಿನಿವಾರ' ನೋ.

**ಚಿನಿವರದ** 'ಚಿನ್ನವರದ' ನೋ.

**ಚಿನಿವಲ** 'ಚಿನಿವಾರ' ನೋ.

**ಚಿನಿವಾನ** (ನಾ). ಸಣ್ಣಪುಟ್ಟ ತೆರಿಗೆ : ಬಿರಾಡದ ರೊಕ್ಕ ದಂಡಿನ ಕಾಣಿಕೆ ರೊಕ ಜಾನಸಾಲೆ ಅಉಡಲದ ಹರಳ ಬಿಟಿಯಉ ಮೊದಲಾದ ಯೇನುಂಟಾದ ಚಿನಿವಾನ ಬಿಟಗಳು ಕಾಣಿಕೆ ಕಪ್ಪಗಳು ಸಹವಾಗಿ (ಸೌಇಇ. IX-ii, ೬೩೩-೨೦ ; 1556) ; ಬೇಡಿಕೆಯೆಂದು ಚಿನಿವಾನವ ಕೊಟ್ಟು ಬರುತ್ತಿದ್ದರು (ಎಕ. XI, ಹೊಳಲ್ಕೆ. ೬೩-೧೧ ; 1716). [ ? ]

**ಚನಿವಾರ,** ಚಿನವಾರ, ಚನಿವರ, ಚನಿವಲ, ಚನಿವಾಲ, ಚಿನ್ನವಾರ, ಚಿನ್ನವಾಲ, ಚಿನ್ನಿವಾರ (ನಾ). ೧. ಅಕ್ಕಸಾಲಿಗ : ಮಲ್ಲಿಯು ಚನಿವಾರರ ಅಂಗಡಿಯ ಬೊಂಬೆಯಾಗಿದ್ದಾಳೆ (ಮಲ್ಲಿ. ೪೦) ; ಬೆಳ್ಳಿಬಂಗಾರ ಮಾಡುವ ಚನಿವಾರರ . . . ಅಂಗಡಿಗಳು ಅಂದವಾಗಿ ಕಾಣುತ್ತವೆ (ಮಂಜುಳ. ೮). **೨.** ಚಿನ್ನದ ವ್ಯಾಪಾರಿ ; ನಾಣ್ಯಗಳ ವಿನಿಮಯ ಮಾಡಿಕೊಡುವವನು ; ಸರಾಫ ; ರತ್ನವ್ಯಾಪಾರಿ : ಧನದನೆನ್ನೊಳು ಸರಿಯಲ್ಲೆಂಬ ಧನಿಕರು ಚನಿವಾರ ಗಂಧವಣಿಜರು (ಕಾಂತೀಶ. ೬-೨೨) ; ಮಿನುಗಿಸುತೆ ಪೆಡೆವಣಿಗಳೊಲಪಿನಿಂ ಭೋಗಿಗಳು ದಣಿದು ಮಿಗೆ ಬೇರೆ ಬೇರಿಳುಹಿಕೊಂಡಿಪ್ಪವೆನೆ ಚನಿವಾರರೋಳಿಯಿಂದುರೆ ಶೋಭಿಸಿದರು (ಪರಶು. ೪-೨೯). **ಚಿನವಾರ : ೨.** ಈ ಚಿನವಾರನ ಪ್ರಾಬಲ್ಯವೇನು ? (ಕಥವಿ. I, ೨೬೩) ; ಔಚಿತ್ಯದ ನಿಕಷಕ್ಕೆ ಒರೆದಾಡುವ ಚಿನವಾರರು ಸಾಹಿತ್ಯದ ಕಳ್ಳಸಂತೆಯಲ್ಲಿಯೂ ಕಡಮೆ ಇಲ್ಲ (ಗಾಳಿಪ. VIII, ಮುನ್ನುಡಿ). **ಚನಿವರ : ೨.** ಪೆತ್ತರು ಬಿಸುಟ ಶಿಶುವ ರಕ್ಷಿಸಿಕೊಂಬರಾರು ಚನಿವರನೊಪ್ಪದಿದ್ದ ಹೊನ್ನ ಕಟ್ಟುವರಾರು (ತಿರುಶ. ೯-೩೦). **ಚನಿವಲ : ೨.** ಲಾಕುಳರ ಚನಿವಲರ ಚಿನ್ನದತಿಶ್ರೇಣಿಗರ (ಸಿದ್ಧಕಾ. ೦೩-೩೬). **ಚನಿವಾಲ : ೨.** ಚನಿವಾಲ ಮನೆತನಗಳ ರೀತಿಯೆ ಇದು(ಪೂಜಾಫ. ೩೭): ನಮ್ಮ ನಮ್ಮ ಹೊಟ್ಟೆ ತುಂಬಿಕೊಳ್ಳಲಿಕ್ಕೆ ಹೆಂಡರ ಮೈಮೇಲಿನ ಸಣ್ಣ ಸಣ್ಣ ದಾಗಿನೆಗಳನ್ನು ಚನಿವಾಲರ ಕಡೆಗೆ ಒತ್ತೆ ಇಡಬೇಕಾಗುತ್ತದೆ (ಮೋಹಿನೀ. ೩೩). **ಚಿನ್ನವಾರ : ೩.** ಚಿನ್ನದ ವ್ಯಾಪಾರ : ಅಗಸಾಲೆ ಒಬ್ಬನಿಗೆ . . . ಬೊಕ್ಕಸದಿಂದ ನಾಣ್ಯಗಳನ್ನು ತಂದುಕೊಟ್ಟು ಚಿನ್ನವಾರದ ಕಟ್ಟಲೇ ಪ್ರಕಾರ ಚಿನ್ನ ಬೆಳ್ಳಿ ಸಹಾ ತೆಗೆದುಕೊಂಡು ಬೇಕಾದ ವಸ್ತುಗಳನ್ನು ಮಾಡಿಸಿದರು (ಚಿತ್ರಪಾ. ೪೯). **ಚಿನ್ನವಾಲ : ೨.** "ಸೊನ್ನವರದ–ಚಿನ್ನವಾಲ" (ಗಂಗಾಮು. ೩೩೬). **ಚಿನ್ನಿವಾರ : ೨.** ಚಿನ್ನಿವಾರನ ಮನೇ ನಾಯಿಯಾದರೆ ನಾಣ್ಯದ ನೋಟಾ ಬಲ್ಲುದೇ ? (ಗಾದೆ).

[ ದೇ.॥ ತುಳು. ಚನಿವಾರೆ, ಚನಿವಾರ್ದೆ ]

**ಚನಿವಾರಪೇಟೆ** (ನಾ). ಚಿನ್ನದ ವ್ಯಾಪಾರಿಗಳ ಬೀದಿ, –ಮಾರುಕಟ್ಟೆ: ಚನಿವಾರಪೇಟೆಯಂತೂ ಅಂದು ತುಂಬಾ ಸಿಂಗರಿಸಿಕೊಂಡಿತ್ತು (ಹೇಮಕೂ. ೭). [ ಚನಿವಾರ + ಪೇಟೆ₂ ]

**ಚನಿವಾರ್ದಿಕೆ** (ನಾ). ಚನಿವಾರನ ಕೆಲಸ,–ಉದ್ಯೋಗ: ಬಾಯಿ ಹೋಗಿ ಬಹುಮಾತೇ, ಕಣ್ಣು ಹೋಗಿ ಚನಿವಾರ್ದಿಕೆಯೇ, ಕೈ ಹೋಗಿ ಕಡದಾಟವೇ (ಹಾಸ್ಯಮ. ೩). [ <ಚಿನ್ನವರದ + – ಇಕೆ./ತುಳು. ಚನಿವಾರ್ದಿಗೆ ]

**ಚನಿವಾಲ್** 'ಚಿಲುಪಾಲ್' ನೋ.

**ಚನಿವಾಲ** 'ಚನಿವಾರ' ನೋ.

**ಚನಿವಾಲು** 'ಚಿಲುಪಾಲ್' ನೋ.

**ಚನಿವಾಲಕಟ್ಟೆ** 'ಚನಿವಾಲಗಟ್ಟೆ' ನೋ.

**ಚನಿವಾಲಗಟ್ಟೆ,** ಚನಿವಾಲಕಟ್ಟೆ (ನಾ). ಚಿನ್ನದ ವ್ಯಾಪಾರಿಗಳ ಬೀದಿ ; ಸರಾಫ್‌ಕಟ್ಟೆ : ಗಾಡಿಯನ್ನಿಳಿದು ಮೊದಲು ಚನಿವಾಲಗಟ್ಟೆಗೆ ಹೋದರು (ಹೂಬಿಸಿ. ೭೯). **ಚನಿವಾಲಕಟ್ಟೆ:** ಚಿಕ್ಕಪುಟ್ಟ ಆಭರಣಗಳನ್ನು ಒತ್ತೆಇಡಲು ಮತ್ತೆ ಚನಿವಾಲಕಟ್ಟೆಗೆ ಕಳ್ಳನಂತೆ . . . ಓಡಬೇಕಾಗುತ್ತದೆ (ಮಾವಾದ. ೦೩) ; ಮೂರು ತೊಲೆಯ ಏಕಾವಳೀಸರವು ಈಗಾಗಲೆ ಚನಿವಾಲಕಟ್ಟೆಯನ್ನು ಸೇರಿತ್ತು (ಜಿವರಿ. ೦೯೦). [ ಚನಿವಾಲ (<ಚನಿವಾರ) + ಕಟ್ಟೆ₁ ]

**ಚನಿವೆಂಡು** (ನಾ). ಒಂದು ಬಗೆಯ ಆಟ (?): ಬಾಲಕರು ನೂಜಾಟು ಮೆಟಿದರು . . . ಚೆಂಡಿನ ಹೊಣಕೆ ಚಣಿಕೋಲಾಳು ಚನಿವೆಂಡಿನಲಿ ದಂಡೆಯು ಹಾಟುಗುಪ್ಪೆಗಳ [ಪಾಠಾಂ. ಗೊತ್ತಿನ ದಂಡೆಯೆನೆ ನಾನಾ ವಿನೋದದಲಿ] (ಕುವ್ಯಾಅ. ೬-೧). [ ? ]

**ಚನುಕುರುಳಿ** 'ಚಿಲಕುರುಳಿ' ನೋ.

**ಚನುಕುಲಿ,** ಚವುಕುಲಿ (ನಾ). ಒಂದು ಬಗೆಯ ಹಕ್ಕಿ : ಮಿಗೆ ಲಾವುಗೆಯು ಚನುಕುಲಿ[ಪಾಠಾಂ. ರಿ]ಯು ಜಗಜಟ್ಟಿಮಲ್ಲ ಮಾಸಾಳ ಕಾಳಗವಲ್ಲಿ (ಅಮುಸಾಂ. ೧-೮೦). **ಚವುಕುಲಿ :** ತಗರ ಕಾಳಗ ಕುಕ್ಕುಟನ ಕಾಳಗವಲ್ಲಿ ಮಿಗಿಲ ಲಾವುಗೆ ಚವುಕುಲಿ ಬಗೆಬಗೆ ಜಟ್ಟಿಮಲ್ಲರ ಕಾಳಗವಲ್ಲಿ (ಬಸಪ. ೧-೩೦). [ ? ]

**ಚನುಚಂಪೆ** (ನಾ). ಒಂದು ಬಗೆಯ ವಾದ್ಯ : ಜುಂಜೆಯು ಚನುಚಂಪೆ ಕುಕ್ಕುರು ತುಡುಮು ಪಾವುಂಚೆ ಕಿಂಕಿಣಿಗಳನು . . . ಕೇಳಿಸಿದರು (ಭರತೇ. ೦೩-೦೬). [ ? ]

**ಚನುಮಯ**(ನಾ).=ಚಿನ್ಮಯ ೩: ಚನುಮಯನ ಕಾಣಿಸುವೆಬಾಯೆಂದೆನಂತ ಕರೆತಂದವನ ಹರಿಪದವನಜದಲ್ಲಿ ಕೆಡಹಿದನು (ಕೌಶಿರಾ. ೧೪-೩೮) ; ಬಳಿಕಲಖಂಡ ಚನುಮ[ಪಾಠಾಂ. ನ್ಮ]ಯನಾದಿಲಕ್ಷ್ಮಿಯ ಗಂಡನೆಸೆದನು (ತೊರರಾ. ೧-೮-೧) ; ಚನುಮಯನಿಪ್ಪ ನಿಜದೊಳಗೆ ತ್ರೈಜಗದ ಜನನ ತಾನೆಂದ (ಸರ್ವಜ್ಞ. ೩೨೪). [ <ಚಿನ್ಮಯ ]

**ಚಿನ್ನಾಳೆ** 'ಚಿನ್ನಂಗಾಳೆ' ನೋ.

**ಚಿನ್ನ₁** (ನಾ). ೧. ಹೊನ್ನು ; ಬಂಗಾರ ; ಸುವರ್ಣ: ಚಿನ್ನದ ಸವಂಗ ಮಪೂರ್ವದ ಮೊಚ್ಚೆಯಂ . . . ಒಪ್ಪೆ(ಹಂಪಭಾ. ೯-೦೦೩); ಚಿನ್ನವನೊರೆಯ ಬಹುದಲ್ಲದೆ ಬಣ್ಣವನೊರೆಯಬಹುದೆ (ಅವಹಂ. ೨೬೬-೦೨೦೩); ತೋಱದನು ತಾ ಬಳಿಕವಗೆ ಹದಿನಾಱುಬಣ್ಣದ ಪುಟದ ಚಿನ್ನಕೆ ನೂಱುಮಡಿಯನೆ ಹೊಳೆಹೊಳೆವ ಹೊಮ್ಮಱಿಯ ರೂಪಕವ (ತೊರರಾ. ೩-೮-೦೪) ; ಹುತವಹನೆಡೆಯೊಳು ಹುದುಗಿರ್ದ ಚಿನ್ನಕ್ಕೆ ಹಿತವಾಗಿ ಬಣ್ಣ ಬಂದಂತೆ ಚಿತಭಸ್ಮಲಿಪ್ತ ದೇಹವಿರ್ದುದು (ಮೋಹತ. ೮-೨೦); ಚಿನ್ನದ ಹರಡೆಯಿಟ್ಟಗಳೋಗದವರು . . . ಬೆನ್ನಟ್ಟಿ ಬೀಳಲಿಱಿದರು (ಕಂಐವಿ. ೦೩-೩೮) : ಗಿಡಗನನ್ನು ಪಂಜರದಲ್ಲಿ ಕೂಡಿದರೆ ಸಲಾಕಿ ಚಿನ್ನವಾದರೇನು ? ಕಬ್ಬಿಣವಾದರೇನು ? (ಆರ್ಯಕ. ೪೦). **೨.** ಚಿನ್ನದ ನಾಣ್ಯ : ನಿನ್ನ ಮೊಲೆಗೆಲದೊಳ್ ಚಿನ್ನದಗಲದ ಪೊನ್ನ ಬಣ್ಣದ ಮತ್ತಿ ಮತ್ತೆನಿಸದೆ ಮಾಡಿದುದು (ಅರ್ಧನೇ. ೨-೩ ಪ). ೩. ಪ್ರೀತಿಪಾತ್ರರನ್ನು ಮುದ್ದಿನಿಂದ ಕರೆಯುವ ಮಾತು : ನೀನೂ ನನ್ನ ಜೊತೆ ಬಂದ್ಬಿಡು ಚಿನ್ನಾ (ದೂಬೆಟ್ಟ. ೩೮).

ಚಿನ್ನಚಿಗುರು=ಒಡವೆವಸ್ತ್ರ: ಅನಿವಾರ್ಯಸಂಗತಿಯಲ್ಲಿ ವಾಗ್ದೇವಿಯು ಚಿನ್ನಚಿಗುರು ಈಡು ಇಟ್ಟು . . . ಅನುಪತ್ಯ ಸುಧಾರಿಸಿಕೊಳ್ಳುತ್ತಿದ್ದಳು (ವಾಗ್ದೇವಿ. ೨೯೦). ಚಿನ್ನದ ಕಣ್ಣ = ಹಿರಣ್ಯಾಕ್ಷನೆಂಬ ರಾಕ್ಷಸ : ಚಿನ್ನದ ಕಣ್ಣನ ಕೊಂದು ಭೂಮಿಯ ವನಜಸಂಭವಗಿತ್ತನ್ಯಾ (ಕನಕ. ೦೨೦-೩). ಚಿನ್ನದ ಹಬ್ಬ = ಐವತ್ತನೆಯ ವಾರ್ಷಿಕೋತ್ಸವ ಸಮಾರಂಭ; ಸುವರ್ಣಮಹೋತ್ಸವ : ಪರಿಷತ್ತಿನ ಚಿನ್ನದ ಹಬ್ಬವು ವೈಭವದಿಂದ ಜರುಗಿತು (ರೂಢಿ). ಚಿನ್ನದೆಳೆ=ಚಿನ್ನದ ಸರಿಗೆ: ಚಿನ್ನದೆಳೆ ಮುಂಡಾಸನವು ಸಿರದಿಯಾಂತು . . . ಮಣಿಕಟಕಗಳನು ಧರಿಸಿ (ನವಮೋ. ೨-೪೪).

[ ದೇ.॥ ತಮಿ. ತೆಲು. ಚಿನ್ನ ]

**ಚಿನ್ನ₂,** ಚಿಣ್ಣ, ಚಿನ, ಚಿನಿ₁, ಜಿನ₁ (ನಾ). ೧. ಚಿಕ್ಕದು ; ಸಣ್ಣದು : (ಕ). **೨.** ಎಳೆಯವನು ; ಚಿಕ್ಕವಯಸ್ಸಿನವನು : ತನ್ನ ಮಗಳೆಂದೊಡೇಂ ಕಾಲ್ಪಿಡಿದು ಕೊಂಡೊಯ್ದು ಚಿನ್ನರಿಹರೆಂಬೆಣಿಕೆ ಮುರಿಯೆ ಬಿಸುಸುಯ್ವಂ (ಕಾಲಾರ. ೩೬-೩೭). (ಗು). ೩.ಚಿಕ್ಕದಾದ; ಸಣ್ಣದಾದ. 'ಚಿನ್ನಂಗಾಳೆ' ಪರಾ. **ಚಿಣ್ಣ : ೨.** ಕಾನನಕೆ ಹೋಗೇಳೆಲವೊ ಚಿಣ್ಣ (ಹಚಕಾ. ೦೦-೦೦) ; ಚಿಣ್ಣನಂ ಕೈದುಡುಕಲೀವನೆ ಫಣಿಯ ಹುತ್ತದೊಳು (ಬಸಪು. ೦೮-೯೦) : ೩. 'ಚಿಣ್ಣಂಚೆ' ಪರಾ. **ಚಿನ :** ೩. 'ಚಿನಗಡಿ' ಪರಾ. **ಚಿನಿ₁ :** ೩. 'ಚಿನಿಖಂಡ' ಪರಾ. **ಜಿನ₁ :** ೩. 'ಜಿನಗಾಳೆ' ಪರಾ.

[ ದೇ.॥ ತಮಿ. ಮಲ. ಚಿನ್ನ; ಕೊಡ. ಚಿನ್ನಿ; ತೆಲು. ಚಿನ್ನ; ಕೊಲಾ. ಚಿನ್ನಿ, ಸಿನ್ನ; ನಾಯ್ಕಿ. ಸಿನ್ನ; ಪರ್ಜಿ. ಚಿನ್ ]

**ಚಿನ್ನ$_3$** (ನಾ). ಕತ್ತರಿಸಿದುದು ; ತುಂಡಾದುದು : "ಛಿನ್ನ-ಚಿನ್ನ" (ಶಮದ. ೨೫೫ ಪ್ರಯೋ). [ < ಸಂ. ಛಿನ್ನ ]

**ಚಿನ್ನ$_4$, ಚಿನ್ನೆ** (ನಾ). ಚಿಹ್ನೆ ; ಗುರುತು: " ಚಿಹ್ನ – ಚಿನ್ನ " (ಶಮದ. ೨೬೪ ಪ್ರಯೋ). **ಚಿನ್ನೆ :** 'ಚಿನ್ನೆದೋಱು' ಪರಾ. [ < ಸಂ. ಚಿಹ್ನ ]

**ಚಿನ್ನಅಗಿಲು** (ನಾ). ಚಿಕ್ಕ ಜಾತಿಯ ಅಗಿಲಂ ಮರ : "ವಲ್ಲೀ–ಮೆಣಸು . . . ಚಿನ್ನಅಗಿಲು, ಕರಿಯ ಹತ್ತಿ " (ಒಷಧಿ. ೧೪೫).

[ ಚಿನ್ನ$_2$ + ಅಗಿಲು (< ಅಗಿಲ್) ]

**ಚಿನ್ನಂಗಾಳೆ, ಚಿನಕಾಳೆ, ಚಿನಗಾಳೆ, ಚಿನಿಕಹಳೆ, ಚಿನ್ನಾಗ್ಳೆ, ಚಿನ್ನಗಾಳೆ, ಜಿನಗಹಳೆ, ಜಿನಗಾಳೆ** (ನಾ). ಒಬ್ಬನೇ ಊದುವ ಸಣ್ಣ ಜೋಡು ಕಹಳೆ : (೬). **ಚಿನಕಾಳೆ :** ಈ ದೇವರ ವಾಲಗವು ನಡೆಯಬೇಕಾದರೆ, ಹೆಗ್ಗಾಳೆ, ಚಿನಕಾಳೆ, ರಂಗಿನ ಕಾಳೆ ಮೊದಲಾದವುಗಳು ಮೊಳಗ ಬೇಕು (ಕನ್ನಜಾ. ೯) ; **ಚಿನಗಾಳೆ :** ನುಡಿವ ವೀರಣ ಗೌರುಗಾಳೆ ಚಿನಗಾಳೆ ಗಳ ಶಂಖಾನಿನಾದಂಗಳಿಂ (ಷಶಿಲ. ೭-೮). **ಚಿನಿಕಹಳೆ :** ಕೂಗಿಡುವ ಕಹಳೆ ಹೆಗ್ಗಹಳೆ ಚಿನಿಕಹಳೆ ಕರಣೆಯ ನಾದ (ಅಖಂಡೇ. ೨೦೬-೪೬). **ಚಿನ್ನಾಗ್ಳೆ:** ಕರಡಿ ಕಂಸಾಳೆ ಹೆಗ್ಗಾಳೆ ಚಿನ್ನಾಗ್ಳೆ (ಸಿದ್ಧಕಾ. ೮-೬). **ಚಿನ್ನಗಾಳೆ:** ಕೊಳಲು ತಪ್ಪಟೆ ಟುಂಜೆ ಚಿನ್ನಗಾಳೆಯು ಭೇರಿ (ಜ್ಞಾನಜ. ೪-೪೮). **ಜಿನಗಹಳೆ :** ಗಗ್ಗರವಱ ಗಿಡಿಬಿಡಿ ತೂಳುವಱ ಚಿನ್ನ ಬೊಗ್ಗಿನ ಹಱ ಜಿನಗಹಳೆ (ಕುರಾಸಾಂ. ೪೦-೬೮). **ಜಿನಗಾಳೆ:** ಒತ್ತಿ ಊದುವ ಜಿ[ಪಾಠಾಂ. ಚಿ] ನಗಾಳೆ . . . ಕೇಳ್ವರ ಕಿವಿವಾಗಿಲ ಕೆತ್ತುವದು (ಕುರಾಸಾಂ. ೩೮-೯೩).

[ ಚಿನ್ನ$_2$ + ಕಾಳೆ (<ಕಹಳೆ) ]

**ಚಿನ್ನಕಾರ** (ನಾ). ಜಿಂಕೆ ಜಾತಿಯ ಒಂದು ಬಗೆಯ ಪ್ರಾಣಿ : ಚಿಗರೆಗಳು . . . ಚಿನ್ನಕಾರವೆಂಬ ಜಾತಿಯು ಕಾನಡಾಜಿಲ್ಲೆಯಲ್ಲಿ ಇಲ್ಲ, ಉಳಿದ ಮೂರು ಜಿಲ್ಲೆಗಳಲ್ಲಿ ಅಪರೂಪವಾಗಿ ದೊರೆಯುವದು (ಕಭಾಗ. ೬೫).

[ ? ]

**ಚಿನ್ನಗಣಿಕ** (ನಾ). = ಚಿನ್ನಗೆಯ್ಕ (?) : ಚಿನ್ನಗಣಿಕದ ಚವುಡಿಸೆಟ್ಟಿ ಬಾಚವೆಸೆಟ್ಟಿ (ಎಕ. XI, ಚಿತ್ರದು. ೬-೨೩ ; 1338).

[ P ಇದು 'ಚಿನ್ನಗೆಯ್ಕ' ಎಂಬುದರ ಅಪಲಿಖಿತವಿರಬಹುದು ]

**ಚಿನ್ನಗಾಳೆ** 'ಚಿನ್ನಂಗಾಳೆ' ನೋ.

**ಚಿನ್ನಗಿರಿ** (ನಾ), ಚಿನ್ನದ ಬೆಟ್ಟ ; ಮೇರುಪರ್ವತ. 'ಚಿನ್ನಗಿರಿಚಾಪ' ಪರಾ. [ ಚಿನ್ನ$_1$ + ಗಿರಿ$_1$ ]

**ಚಿನ್ನಗಿರಿಚಾಪ** (ನಾ). ಮೇರುಗಿರಿಯನ್ನೇ ಬಿಲ್ಲಾಗಿ ಮಾಡಿಕೊಂಡವನಂ; ಶಿವ : ಚಿನ್ನಗಿರಿಚಾಪ . . . ಅಪ್ಪಣೆಯನೀಯೆ (ಪ್ರಾಭರಾ. ೨೦-೨೪).

[ ಚಿನ್ನಗಿರಿ + ಚಾಪ ]

**ಚಿನ್ನಗೆಯಿಕ** 'ಚಿನ್ನಗೆಯ್ಕ' ನೋ.

**ಚಿನ್ನಗೆಯ್ಕ, ಚಿನ್ನಗೆಯಿಕ** (ನಾ). ೧. ಚಿನ್ನದ ಕೆಲಸ ; ಅಕ್ಕಸಾಲಿಗನ ವೃತ್ತಿ : ಚಿನ್ನಗೆಯ್ಕದ ನಖರಂಗಳುಂ (ಎಇ. XIV, ೨೬೩-೫೦ ; 1173). ೨. ಅಕ್ಕಸಾಲಿಗ: ಬಣ್ಣವಿಟ್ಟು ನುಡಿದಲ್ಲಿ ಫಲವೇನು ಚಿನ್ನಗೆಯ್ಕನಾಡುವ ನಂತೆ (ಬಸವ. ೨೦೫). **ಚಿನ್ನಗೆಯಿಕ :** ೧. ಬ್ರಾಹ್ಮಣರಭಿಗಾರಕ್ಕೆ ಚಿನ್ನ ಗೆಯಿಕದ ಹರದರಲಿ ತಿಂಗಳಿಂಗೆ ಪ್ರತ್ಯೇಕ ಹಾಗ ವೊಂದು (ಕಇ. II, ೨೦-೨೬; 1147) ; ವೇಣುಗ್ರಾಮದ ಸ್ಥಳದ ಚಿನ್ನಗೆಯಿಕದವರುಂ (ಎಇ. XIII, ೨೦-೫೦; 1204) ; ಆ ನಗರದ ಅಂಗಡಿಯವರು, ಚಿನ್ನಗೆಯಿಕದ ವ್ಯವಹಾರಿ ಗಳು . . . ತಮ್ಮ ತಮ್ಮ ಆದಾಯಗಳಲ್ಲಿ ಒಂದು ಭಾಗವನ್ನು ಬಿಟ್ಟು ಕೊಡುತ್ತಾರೆ (ಕಶಾಅ. ೧೬೮).

**ಚಿನ್ನಗೆಯಿಕದ ಚೀರ=ಜರತಾರಿಸೀರೆ:** ಚಿನ್ನಗೆಯಿಕದ ಚೀರಕ್ಕೆ ದೂಸಿಗ ವಸರಕ್ಕೆ ಹತ್ತಿವಸರಕ್ಕೆ ಮಣಿಗಾಱವಸರಕ್ಕೆ (ಎಇ. XIII, ೨೦-೫೨; 1204).

[ ಚಿನ್ನ$_1$ + ಗೆಯ್ಕ ]

**ಚಿನ್ನಗೆಲಸ** (ನಾ).=ಚಿನ್ನಗೆಯ್ಕ ೧ : ಆತ ಚಿನ್ನಗೆಲಸದಲ್ಲಿ ಬಹಳ ಪರಿಣತ ನಾಗಿದ್ದಾನೆ (ರೂಢಿ). [ ಚಿನ್ನ$_1$ + ಕೆಲಸ ]

**ಚಿನ್ನಗೇದಗೆ** (ನಾ). ಬಂಗಾರದಿಂದ ಮಾಡಿದ ಕೇದಗೆ; ಮಂಡಿಯಲ್ಲಿ ಧರಿಸುವ ಕೇದಗೆಯಾಕಾರದ ಚಿನ್ನದ ಆಭರಣ: ವಜ್ರದೋಲೆ ತುಱುಬಿನ ಮುತ್ತಿನ ಬಲೆ ಚಿನ್ನ[ಪಾಠಾಂ. ಚೀನ, ಚಿನ್ನ]ಗೇದಗೆ ಗಱಗಳಿಂ ಸಿಂಗರಿಸಿದಳು (ಕುರಾಸಾಂ. ೨೯-೯೭). [ ಚಿನ್ನ$_1$ + ಕೇದಗೆ ]

**ಚಿನ್ನಗೇವಿಕ** (ನಾ). = ಚಿನ್ನಗೆಯ್ಕ ೧ : ಚಿನ್ನಗೇವಿಕದ ಮಹದೇವಂ ಬಲ್ಲಿ ಮಯ್ಯನ ಶತದ ಕಿಸುಕಾಡು ಮತ್ತ ೨ (ಕಇ.II, ೯-೨೩ ; 1075).

[ P ಇದು ' ಚಿನ್ನಗೆಯ್ಕ ' ಎಂಬುದರ ಅಪಲಿಖಿತ ]

**ಚಿನ್ನತಿಕೋಲು** 'ಚಿನ್ನತಿಗೋಲಂ' ನೋ.

**ಚಿನ್ನತಿಗೋಲು, ಚಿನ್ನತಿಕೋಲು** (ನಾ). ಒಂದು ಬಗೆಯ ಕೋಲು ; ಕೈಗೋಲು (?) : ಒಟ್ಟಿದಳಿಗೆಯ ಚಿನ್ನತಿಗೋಲ ತುದಿಯಿಂದ ಕುಟ್ಟುವ ನಂತೆ ಮಾನ್ಯದೊಳು (ಭರಜ. ೨೯-೭೨). **ಚಿನ್ನತಿಕೋಲು :** ಮುತಿವಿಕಳನೀ ಪರದಗಿದುವೇ ವಿತತಿ ಚಿನ್ನತಿಕೋಲು ತನಗೆಂದತಿಶಯದಿ ನಗುತಿರ್ದುದಾ ಜನವು (ಜೀವಂಚ. ೯-೯). [ ಚಿನ್ನತಿ ? + ಕೋಲು$_1$ (<ಕೋಲ್$_1$) ]

**ಚಿನ್ನತಿತ್ತಿರಿ** (ನಾ). ಚಿಕ್ಕ ತಂತ್ರೂರಿ ; ಸಣ್ಣ ತಂತ್ರೂರಿ : ಚಿನ್ನತಿತ್ತಿರಿ ಶಂಖವಾಸಗಳ ಮೊತ್ತದ ನಾದ ಕೇಳ್ವರ ಕಿವಿವಾಗಿಲ ಕೆತ್ತುವದು(ಕುರಾಸಾಂ. ೩೮-೯೩) ; ಚಿನ್ನತಿತ್ತಿರಿ ಟುಂಚಿ ಮುರು ತಾಪು ಹೆಗ್ಗಾಳೆ . . . ಸನ್ನಾಹ ಭೇರಿ ಮೊಳಗಲು (ರಾಮವಿ. ೮-೭೧). [ ಚಿನ್ನ$_2$ + ತಿತ್ತಿರಿ$_2$ ]

**ಚಿನ್ನದಾರೆ, ಚಿನ್ನಧಾರೆ** (ನಾ). ಒಂದು ಬಗೆಯ ಸಸ್ಯ : "ಲೋಮಂಥಿನೀ– ಚಿನ್ನದಾರೆ " (ಒಷಧಿ. ೦೪೪) ; ಹೆಗ್ಗುರುಟಿಗೆ ಹುಣಿಸೆಯ ತಿಗುಡೆಗ್ಗಿಲ್ಲದ ಚಿನ್ನದಾರೆಯಲಿಕ್ಕಿದ ಸಂದಗ್ಗಳದ ಹಿಕ್ಕೆ . . . ಅಖಿಳ ವಿಷಮನಂತಾಱ ಸುಗುಂ (ಖಮದ. ೦೬-೦೦೨). **ಚಿನ್ನಧಾರೆ:** "ವಸು ಚಿನ್ನಧಾರೆ" (ಮಂಗರಾ. ೪೦-೩೨) ; " ತ್ರಿಪಾದೀ – ಚಿನ್ನಧಾರೆ " (ಒಷಧಿ. ೬೯). [ ? ]

**ಚಿನ್ನದಾವರೆ** (ನಾ). ಹೊಂಬಣ್ಣದ ತಾವರೆ ; ಹೊಂದಾವರೆ : ಚಿನ್ನ ದಾವರೆಯ ಕಾಣ್ಕೆಯನಿಕ್ಕಿ ಮಧುವಾಣಿ ತನ್ನ ಕೈಮುಗಿದಳರ್ತಿಯೊಳು (ಭರಜ. ೩೭-೬೯). [ ಚಿನ್ನ$_1$ + ತಾವರೆ (<ತಾಮರೆ) ]

**ಚಿನ್ನದಾವರೆಗಿಡ** (ನಾ). ಒಂದು ಬಗೆಯ ಗಿಡ : (ವೃಕಿಗಿ. ೪೫-೮೮೮).

[ ಚಿನ್ನದಾವರೆ ? + ಗಿಡ (<ಗಿಡು) ]

**ಚಿನ್ನಧಾರೆ** 'ಚಿನ್ನದಾರೆ' ನೋ.

**ಚಿನ್ನನೇಱಲ್** (ನಾ). ಚಿಕ್ಕನೇರಳೆ; ನಾಯಿನೇರಳೆ: " ಜಂಬುಜಾಂಬವಂ– ಚಿನ್ನನೇಱಲಹಣ್ಣು " (ಒಷಧಿ. ೬೨). [ ಚಿನ್ನ$_2$ + ನೇಱಲ್ ]

**ಚಿನ್ನಪೂ** (ನಾ). ತಲೆಯಲ್ಲಿ ಧರಿಸುವ ಹೂವಿನಾಕಾರದ ಒಂದು ಬಗೆಯ ಬಂಗಾರದ ಒಡವೆ : ಚಿ[ಪಾಠಾಂ. ಚೆ]ನ್ನಪೂವನೋಸರಿಸುವ ಹಾರಮಂ ಪಿಡಿದು ನೋಡುವ ಕಟ್ಟಿದ ನೂಲ ತೊಂಗಲಂ ತಿರಿಪುವ ಕೆಯ್ತ ದೊಂದಂ ನೆವದಿಂ ಲಲಿತಾಂಗಿಯ ಶಂಕೆಯಂ ಭಯಂ ಬೆರಸಿದ ನಾಣುಮಂ ಕ್ರಮದೆ ಪಿಂಗಿಸು (ಪಂಪಭಾ. ೩-೭೭) ; ಕುನ್ತಳದೇಸಕ್ಕಳವಟ್ಟ ಚಿನ್ನಪೂವೆನೆ ಬೆಳಗಿದುದೊಳ್ವೊಲವೆನಿಪ್ಪ ಬೆಳ್ವಲದೇಶಂ (ಕಇ. I, ೨೪-೮ ; 1148) : ಒಪ್ಪವಂ ತಳೆದ ಕುನ್ತಳದೇಶಕೆ ಚೆಂನಪೂವೆ ತಳ್ತಿತ್ತವಳಂಕೆಗೊಣ್ಡದೆ ವಿರಾಜಿಸುತಿರ್ಪ್ಪುದು ಬೆಱ್ವೊಲಂ (ಶಾಸಪ. ೬೫) ; ಜೂಳೆಯ ಚಿನ್ನಪೂ ಕಮಲಪೂ . . . ಮೊದಲಾಗಿ ಬಾಲೆಗಾಭರಣವೊಪ್ಪಿದುವು (ಭರಜ. ೪೦-೬೫).

[ ಚಿನ್ನ$_1$ + ಪೂ$_2$ ]

**ಚಿನ್ನಭಂಡಾರ** (ನಾ). ಚಿನ್ನ ಮೊದಲಾದುವನ್ನು ಇಟ್ಟಿರುವ ಕೋಶ,– ಖಜಾನೆ: ಚೆಂನಭಂಡಾರದ ತಿಂಮರಸರ ಮಕ್ಕಳು ನಾರಾಯಣದೇವಗಳು (ಇಆ. IV, ೩೨೮-೮ ; 1530) ; ಚೆಂನಭಂಡಾರದ ಪುರುಷೋತ್ತಮ್ಮಯನ ಮಗ (ಎಕ. VII, ಶಿವಮೊ. ೨-೭೬ ; 1641). [ ಚಿನ್ನ$_1$ + ಭಂಡಾರ ]

**ಚಿನ್ನರೂಪ** (ನಾ). ಚಿಕ್ಕವನು ; ಎಳೆಯವನು : ಚಿನ್ನಪ್ರಸನ್ನ ರನ್ನ ಸಿರಿ ಸಂಪನ್ನ ಚಿನ್ನಾಂಬರ ಚಿನ್ನರೂಪ ಚಿನ್ಮಯಕಾಯ (ತೀರ್ಥಸು. ೧೬೩).
[ ಚಿನ್ನ$_2$ + ರೂಪ ]

**ಚಿನ್ನಲಾಮಜ್ಜ** (ನಾ). ಕಿರಿಯಬಾಳದ ಬೇರು ; ಚಿಕ್ಕಲಾಮಂಚ : "ಕಾಂಚನಂ – ನಾಗಕೇಸರ, ಚಿನ್ನಲಾಮಜ್ಜ, ಉಮ್ಮತ್ತ" (ಒಷಧಿ. ೨೪).
[ ಚಿನ್ನ$_2$ + ಲಾಮಜ್ಜ ]

**ಚಿನ್ನವರದೆ, ಚಿನವರದ, ಚಿನಿವರದ್** (ನಾ). ಚಿನ್ನದ ವ್ಯಾಪಾರಿ ; ಚಿನಿವಾರ: "ವಿತ್ತವಣಿಜಂ ಚಿನ್ನವರದಂ" (ಮಂಗರಾ. ೧೦೩-೧೪) ; ಕುಬೇರನ ನಿಳಿಕೆಯ್ವರ್ ನಿಜಮುಪ್ಪನುಪಮಧನದಿಂದ ಚಿನ್ನವರಧರ್ ಪುರದೊಳ್ (ಕುಸುಮಾ. ೨-೧೦೩) ; ಪೊಸರನ್ನಗಟ್ಟಿಗಳಿಂದಲೆಸೆವ ಚಿನ್ನವರದರಂಗಡಿಗಳೆತ್ತರದೊಳು (ಅಂಜಚ. ೩-೬೯) ; ಪುಟ್ಟಮನೆ ಲೀಲಾವಾತ್ರದಿಂ ಕಟ್ಟು ವಚ್ಚರಿಯಿಂದಾ ಪುರದಲ್ಲಿ ಚಿನ್ನವರದರ್ ತಾವಿಂತು ವಿಭ್ರಾಜಿಪರ್ (ಶಾಂತೀಶ. ೧-೦೨೧) ; ಜಟ್ಟಿಗ ಗೀತಪಾಠಕರು ಸೆಟ್ಟಿಗ ಬಲು ಚಿನ್ನವರದರು ಘಟ್ಟಿಪ ಕಟ್ಟಿಗೆಕಾಱರೇಱಿದರು (ಮೋಹತ. ೩೬-೪೩) ; ಹರಸಖನ ಪುರದ ಧನವಿಾ ಪುರದ ಚಿನ್ನವರದರೊಳೊರ್ವನೊರೆವ ಚಿನ್ನಕ್ಕೆ ಸರಿಬಾರದು (ಚಿಬಪು. ೧೧-೪೬). **ಚಿನವರದ:** ಸ್ತ್ರೀಪುರುಷರಿಡುವಂಗಭೂಷಣದಾಪಯಿತ ಹಣ ಹೊನ್ನರಾಸಿಯರೀ ಪರಿಯು ಚಿನವರದರೆಡೆಯೊಳಗಂಬರತಲಮ್ಬರೂ ಸದ್ವ್ಯಾಪಿಸಿಹೆರಂಗಡಿಯೊಳು (ಜರಾಮಾ. ೨೩-೪೧). **ಚಿನಿವರದ:** ಪೊನ್ನ ಕುಪ್ಪೆಗಳಿಂದ ಚಿನಿವರದರಂಗಡಿ ವಿರಾಜಿಸಿದುವು (ಗುಹೆಜಾ. ೧-೩೦).
[ ಚಿನ್ನ$_1$ + ವರದ ]

**ಚಿನ್ನವಲಗೆ** (ನಾ). ಚಿನ್ನದ ಗಟ್ಟಿ: ಕ್ರಾಸುಗಟ್ಟಲೆ ಪೊರೆಗಲ್ಲು ಮಚ್ಚರಗಡ್ಡಿ ಭಾಸುರವಹ ಚಿನ್ನವಲಗೆ ಲೇಸಾಗಿ ಮಯಣದಿಂದೆತ್ತೆಗೆಯುನೆತ್ತುವ ಬಹು ಕೌಸಲವಿದರಿರುತಿಹರು (ಅಂಜಚ. ೩-೮೧). [ ಚಿನ್ನ$_1$ + ಹಲಗೆ ]

**ಚಿನ್ನವಾರ** 'ಚಿನಿವಾರ' ನೋ.

**ಚಿನ್ನವಾಲ** 'ಚಿನಿವಾರ' ನೋ.

**ಚಿನ್ನಾಟ, ಚಿಣ್ಣಾಟ** (ನಾ). ಹುಡಂಗಾಟ ; ಚೆಲ್ಲಾಟ : ನಲ್ಲನ ಮುರಿದ್ದು ಬಲು ಚೆಲುವೆಯೆಂದು ಬೀದಿಯ ಜನರೊಡನೆ ಚಿನ್ನಾಟವೇ ? (ಪೂರ್ಣಸೂ. ೦೩೦ ಪ್ರಸ್ತಾವನೆ) ; ಮಧುಚುಂಬನವು ತುಪ್ಪಿ ಚಿನ್ನಾಟ (ಉಯ್ಯಾಲೆ. ೨೪-೪); ಬೆಕ್ಕಿಗೆ ಚಿನ್ನಾಟ ಇಲಿಗೆ ಪ್ರಾಣಸಂಕಟ (ಗಾದೆ). **ಚಿಣ್ಣಾಟ:** ರಾಜಕೀಯದಲ್ಲಿ ಚಿಣ್ಣಾಟವಾಡುತ್ತಿರುವ ಮಾನವನ ಮನಸ್ಸು (ಪ್ರಬಂಧ. I, ಲೇಖನಗಳ ತಿರುಳು). [ ಚಿನ್ನ$_2$ + ಆಟ ]

**ಚಿನ್ನಾಟಿಕೆ** (ನಾ). ಮಕ್ಕಳಾಟಿಕೆ ; ಹುಡುಗಾಟಿಕೆ; ಚೇಷ್ಟೆ : ಮಗಳಿಗೆ ಎಷ್ಟು ಜನ ಮಕ್ಕಳೆಂಬುವದು ತಿಳಿದ ಮೇಲೆ ಎಲ್ಲಾ ಮಕ್ಕಳ ಚಿನ್ನಾಟಿಕೆಯಾಗಲಿ (ಮುಂಗಾರು. ೦೧೩). [ ಚಿನ್ನಾಟ + – ಇಕೆ ]

**ಚಿನ್ನಾಣೆ** (ನಾ). ಒಂದು ಬಗೆಯ ಆಟ: ನಲಿದಾಡುತಿರ್ದರು ವಿನೋದದಿಂ ಚಂಡಾಟ ಚಿನ್ನಾಣೆಯಂ (ಕುರಂಗ. ೦೦-೦). [ ? ]

**ಚಿನ್ನಾರಿ** (ನಾ). ೧. ಬಂಗಾರದ ಬಣ್ಣದ ಜರಿಯುಳ್ಳದು : ಹ್ಯಾಗೆ ಕೊಟ್ಟುಬಿಟ್ಟನೇ ಅಮ್ಮ ಆ ರಿಬ್ಬನ್ನಿನವನು ಈ ನಿನ್ನ ಚಿನ್ನಾರಿ ಟೋಪನು ? (ನಡದಾ. I, ೩೧೬). ೨. ಮಕ್ಕಳನ್ನು ಪ್ರೀತಿಯಿಂದ ಕರೆಯುವಾಗ ಬಳಸುವ ಮಾತು : ಚಿನ್ನಾರಿ, ಬಾಮ್ಮ ಇಲ್ಲಿ (ರೂಢಿ).
[ ದೇ.೩ ತೆಲು. ಚಿನ್ನಾರಿ ]

**ಚಿನ್ನಾಲಿ** 'ಛಿನಾಲಿ' ನೋ.

**ಚಿನ್ನಿ$_1$, ಚಿಣಿ, ಚಿಣ್ಣ, ಚಿಳ್ಳೆ$_1$** (ನಾ). ೧. ಮಕ್ಕಳು ಚಿಣ್ಣಿಕೋಲಾಟಕ್ಕೆ ಬಳಸುವ ಮರದ ಸಣ್ಣ ತುಂಡು: ಹಿಂಡುಗೆಳೆಯರು ಕೂಡಿಕೊಂಡಾಡುವಲಗ್ಗೆ ಚೆಂಡು ಬುಗುರಿ ಚಿನ್ನಿಗಳನು (ಚಂದ್ರಹಾ. ೦-೩೩) [illegible] ೧. 'ಚಿಣಿಕೋಲು', 'ಚಿಣಿದಾಂಡು' ಪರಾ. **ಚಿಣ್ಣ:** ೧ [illegible] ಯೊಲೆರಡು ಕೊಡೆಗಡಿದು (ಚಿನಮು. ೩೩-೬೨) ; ಅಗೋ ವಿದುರ . . . ಈಗ ಜಟಧಾರಿಯಾಗಿದ್ದಾನೆ ; ದೇಹ ತುಂಬ ಕೃಶವಾಗಿದೆ; ಬಾಯಲ್ಲಿ ಚಿಣ್ಣಿಯನ್ನು ಇಟ್ಟುಕೊಂಡಿದ್ದಾನೆ (ವದಭಾ. ೩೬೪). ೨. ಮೊಳಕಾಲಿನ ಚಿಪ್ಪು: ಅಂಗಜನ್ಯಪನಣ್ಣೆವಾಲುಂಬ ಕುಂದಣದ ಗಿಣ್ಣಿಲ ಮಗುಚಿ ದಂತೆಸೆದವು ಮೊಣಕಾಲ ಚಿಣ್ಣಗಳಾ ಕೋಮಲೆಗೆ (ರಾಮವಿ. ೧೨-೩೨). ೩. ಚಿಕ್ಕದು; ಸಣ್ಣದು: (ಕ). **ಚಿಳ್ಳೆ$_1$:** ೧. ನಿನ್ನ ಗೋಲಿಯು ಚೆಂಡು ಬುಗುರಿ ಚಿಳ್ಳೆಗಳ ಯಿನ್ನು ಬಾಲಕರೆಲ್ಲ ಕೊಂಡು ಪೋಗುವರು (ಹಮಚ. ೦೬೯). [ < ಚಿನ್ನ$_2$ ]

**ಚಿನ್ನಿ$_2$** (ನಾ). ಒಂದು ಬಗೆಯ ಗಿಡ : (ಕ). 'ಕಂಕೋಳಚಿನ್ನಿ' ಪರಾ.
[ ದೇ.೩ ತಮಿ. ಚಿನ್ನಿ ]

**ಚಿನ್ನಿ$_3$** (ನಾ). (ದನಕರುಗಳಿಗೆ ನೆನಸಿ ಕೊಡುವ) ತೊಗರಿಯ ನುಚ್ಚು ಮತ್ತು ಕಡಲೆಯ ನುಚ್ಚುಗಳ ಮಿಶ್ರಣ : ತೊಗರಿಯ ನುಚ್ಚು, ಕಡಲೆಯ ನುಚ್ಚು ಕೂಡಿದ್ದಕ್ಕೆ "ಚಿನ್ನಿ" ಎಂದು ಹೇಳುತ್ತಾರೆ (ಗೋಗ್ರಾಸ. ೩೧). [←ಮರಾ. ಚುಣೀ,ಚೂಣ. / ಪ್ರಾ. ಚುಣ್ಣ./ಸಂ. ಚೂರ್ಣ ]

**ಚಿನ್ನಿಗ** (ನಾ). ಚಿನ್ನದ ವ್ಯಾಪಾರ ಮಾಡುವವನು ; ಚಿನಿವಾರ : ಬೆಲೆಯ ಚಿನ್ನಿಗ ಬಲ್ಲ ನೆಲೆಯನಂಬಿಗ ಬಲ್ಲ (ಸರ್ವಜ್ಞ. ೧೯೧೩).
[ ಚಿನ್ನ$_1$ + – ಇಗ ]

**ಚಿನ್ನಿದಾಂಡು, ಚಿಣಿದಾಂಡು, ಚಿಣ್ಣದಾಂಡು** (ನಾ) =ಚಿಣ್ಣಿಕೋಲು ೨: ಹುಡುಗರು ಚಿನ್ನಿದಾಂಡು ಆಡುತ್ತಿದ್ದಾರೆ (ರೂಢಿ). **ಚಿಣಿದಾಂಡು:** ಚಿಕ್ಕ ನನ್ನ ಕಂದಯ್ಯ ಚಿಣಿದಾಂಡು ಆಡ್ಯಾನು (ಹಳ್ಳಿಯ ೬೯). **ಚಿಣ್ಣದಾಂಡು:** ಚಿಣ್ಣೀದಾಂಡು, ಪಟ, ಗೋಲಿ, ಮರಕೋತಿ – ಒಂದು ಒಂದೂ ಇಲ್ಲ (ನಡದಾ. I, ೩೬೬). [ ಚಿನ್ನಿ$_1$ + ದಾಂಡು ]

**ಚಿನ್ನಿಧಿ** (ನಾ). ಜ್ಞಾನದ ಆಶ್ರಯ; ಪರಮಾತ್ಮ: ಚಿನ್ನಿಧಿಯನಸ್ಮಾಯಕಾಜಿರ ಚಿನ್ನ ಚಿಮ್ಮಿಟಗೆಯೂನತುಳಿತಾಭಿನ್ನ ಬಲಯುತನಂ . . . ತನ್ನಿ (ಬಸಪು. ೩೯-೩೭) ; ಸಾಕ್ಷಾತ ಚಿನ್ನಿಧಿ ಮಹೇಶ್ವರನೆ ನಿನಗೆ ವಂದಿಸುವೆ (ವೀಶ್ವಪು. ೨-೮-೨೮). [ ಸಂ. (ಚಿತ್ + ನಿಧಿ) ]

**ಚಿನ್ನಿಮರ** (ನಾ). ಒಂದು ಬಗೆಯ ಮರ : (ಮೈಶಿಗ. ೨-೨೦).
[ ಚಿನ್ನಿ$_2$ + ಮರ$_1$ ]

**ಚಿನ್ನಿವಾರ** 'ಚಿನಿವಾರ' ನೋ.

**ಚಿನ್ನಿಸಕ್ಕರೆ** (ನಾ). ಹಿಟ್ಟಿನಂತಿರುವ ಒಂದು ಬಗೆಯ ಸಕ್ಕರೆ; ರಾಯಪುಡಿ ಸಕ್ಕರೆ : ಚಿನ್ನಿಸಕ್ಕರೆಯು ಬೆರೆಯೆ ಭರತಿ ಉಕ್ಕುವದು ಕ್ಷೀರಸಿಂಧು (ಸೂರ್ಯಪಾ. ೩೪-೦೦) ; ಸಣ್ಣ ಶಾವಿಗೆ ಒಲ್ಲ ಚಿನ್ನಿಸಕ್ಕರೆ ಒಲ್ಲ (ಹಳ್ಳಿಹಾ. ೩೨). [ <ಚೀನಿ + ಸಕ್ಕರೆ ]

**ಚಿನ್ನೆ** 'ಚಿನ್ನ$_4$' ನೋ.

**ಚಿನ್ನೆದೋಱು** (ಕ್ರಿ). ಗುರುತು ತೋರು ; ಚಿಹ್ನೆ ಕಾಣಿಸಿಕೊಳ್ಳು: ಸೊನ್ನಗೇದಗೆಯ ಪೂವೊಡೆಯಂತೆ ಬಸಿಱನ ಚಿನ್ನೆದೋಱಿದುದು ಮೆಯ್ಯೊಳಗೆ (ಮೋಚತ. ೦೬-೨). [ ಚಿನ್ನೆ (< ಚಿನ್ನ$_4$) + ತೋಱು ]

**ಚಿನ್ಮಯ** (ಗು). ೧. ಜ್ಞಾನಸ್ವರೂಪವಾದ ; ಶುದ್ಧ ಜ್ಞಾನಮಯವಾದ : ಚಿನ್ಮಯಜ್ಯೋತಿಪ್ರಭಾರೂಪಭಾವನಾತೀತಪ್ರಭುವೆ (ಬಸಪು. ೮-೩೩). (ನಾ). ೨. ಶುದ್ಧಜ್ಞಾನದಿಂದ ಕೂಡಿದುದು ; ಚಿದ್ರೂಪವಾದುದು : ಶಾಬರರೂಪರಚನೆಯ ತೆರೆಯ ಮಱೆಯಲಿ ಮೆಱೆವ ಚಿನ್ಮಯದ ರೂಪನು (ಕುಮಾ.ಅ. ೬-೩೭); ಚಿನ್ಮಯದ ಬೋಧೆಯಂ ಪೇಳ್ದು ರಕ್ಷಿಸಿದ ದೇಶಿಕನಿಗಗ್ಗಳವೆನಿಸುವ (ವೀಶ್ವಪು. ೧-೧-೩೩) ; ಜಡವೆ ಚಿನ್ಮಯವಾಗಿ ಚಿಮ್ಮಿದವುದಯ್ (ಶ್ರೀರಾಮಾ. ೩-೦೨೯). ೩. ಪರಮಾತ್ಮ ; ಪರಬ್ರಹ್ಮ ; ಪರವಸ್ತು: ಹದಿನಾಲ್ಕುಲೋಕವು ತಾನೆಯಾದ ಚಿನ್ಮಯನ ಹೇಳಿಹೆನೆಂದರೆ ಎನ್ನಳವಲ್ಲ (ವಚಸಂ. ೩೯೪-೦೨). [ ಸಂ. ]

**ಚಿನ್ಮಾತ್ರಗೋಚರ** (ಗು). ಬುದ್ಧಿಗೆ ಮಾತ್ರ ಗೋಚರವಾಗುವ; ಅಮೂರ್ತವಾದ: ವಿದ್ಯಾವಂತರು ಚಿನ್ಮಾತ್ರಗೋಚರವಾದ ಭಾವನೆಗಳನ್ನು ಅಳವಡಿಸಿಕೊಂಡು ಮೂಲತತ್ವಗಳನ್ನು ಪ್ರತಿಪಾದಿಸುವುದಕ್ಕೆ ಪ್ರಯತ್ನಪಡುತ್ತಾರೆ (ಪ್ರಬಾಇ. I, ೩೩೮). [ಸಂ.]

**ಚಿಪಟ** (ಗು). ೧. ಚಪ್ಪಟೆಯಾದ. ೨. ಚಪ್ಪಟೆಯಾದ ಮೂಗುಳ್ಳ. (ನಾ). ೩. ಅವಲಕ್ಕಿ. [ಸಂ.]

**ಚಿಪಲಿ** 'ಚಿಪಳಿ' ನೋ.

**ಚಿಪಳಿ, ಚಿಪಲಿ** (ನಾ). ಮರದಿಂದ ಮಾಡಿದ ತಾಳ; ಚಿಟಿಕೆ: ವಾಸುದೇವರು . . . ಇವರ ಭಿಕ್ಷೆಯ ಪೋಷಾಗು ಹ್ಯಾಗಂದರೆ – ತಲೆಗೆ ನವಿಲಗರಿಯ ಟೊಪ್ಪಿಗೆ, ಯೆಡಗೈಯಲ್ಲಿ ಚಿಪಳಿ, ಬಲಗೈಯಲ್ಲಿ ತಾಳ (ಕಥಾಗ. ೨೧೪). **ಚಿಪಲಿ:** ಕಾಲ ಸರಪಳಿ ಮಿನುಕು ಕನ್ನಡಿಯು . . . ಗಿಣಿ ಚಿಪಲಿಗಳು (ಗುರುಚಾ. ೩-೫೦). [← ಮರಾ. ಚಿಪಳೀ]

**ಚಿಪಿಟ** (ನಾ). ೧. ಅವಲಕ್ಕಿ: "ಪೃಥುಕಃ, ಚಿಪಿಟಃ–ಈ ೨ ಅವಲಕ್ಕಿ" (ಹಲಾಯು. ೯೪-೪೩೦). ೨. ಚಪ್ಪಟೆಯಾದ ಮೂಗು. 'ಚಿಪಿಟಾಸ್ಯ' ಪರಾ. [ಸಂ.]

**ಚಿಪಿಟಕ** (ನಾ). = ಚಿಪಿಟ ೧: "ಅವಲ್ – ಮುಸಲ ಕ್ರಿಯಾಯಾಂ, ಚಿಪಿಟಕೇ ಚ" (ಶಮಧಾ) [ಸಂ.]

**ಚಿಪಿಟಾಸ್ಯ** (ನಾ). ಚಪ್ಪಟೆಮೂಗಿರುವ ಮುಖವುಳ್ಳವನು: ಉರಗಾವೃತಂ ಸುವರ್ಣಾಭರಣಂ ಜಲಯಾನವಾಸಿತಂ ಚಿಪಿಟಾಸ್ಯಂ (ಜಾತತಿ. ೧೯-೧೨). [ಚಿಪಿಟ + ಆಸ್ಯ]

**ಚಿಪಿಲೆ** 'ಸಿಪಿಲೆ' ನೋ.

**ಚಿಪ್ಪ** (ನಾ). ೧. ಶಿಲ್ಪವಿದ್ಯೆ. ೨. ಹೊಲಿಗೆ. 'ಚಿಪ್ಪಿಗ' ಪರಾ. [< ಸಂ. ಶಿಲ್ಪ]

**ಚಿಪ್ಪಡ, ಚಿಪ್ಪಡೆ** (ನಾ). ಕಲ್ಲಿನ ಬಿರುಕು,–ಸಂದು: ಎತ್ತ ನೋಡಿದತ್ತ ಚಿಪ್ಪಡ. ಅದರಲ್ಲಿಯೇ ಒಂದು ಕಿಂಡಿಯನ್ನು ಹುಡುಕಿ ವನಶ್ರೀಭಾಂಡಾರದಿಂದ ಹವಳ ಮುತ್ತುಗಳನ್ನು ಕದ್ದುತರಲು ಒಬ್ಬರ ಹಿಂದೊಬ್ಬರು ಪಾರಾದರು (ದಾಸಹು. ೨೪). **ಚಿಪ್ಪಡೆ:** ದೂರಿನ ಚಿಪ್ಪಡೆಯಲ್ಲಿ ಹಾವುಗಾರರು ಹಾವುಗಳನ್ನೋ ಏಡಿಗಳನ್ನೋ ಹಿಡಿಯುತ್ತಿರುವಂತೆ ಕಂಡಿತು (ಹೇಮಂತ. ೧೪೮). [?]

**ಚಿಪ್ಪಡು** (ನಾ). ೧. (ಕರಾ) ಸ್ತ್ರೀಯರ ಕಿವಿಯ ಬಳಿಯ ಕೂದಲು. ೨. ಪಕ್ಷಿಗಳ ತುಪ್ಪುಳು. [?]

**ಚಿಪ್ಪಡೆ** 'ಚಿಪ್ಪಡ' ನೋ.

**ಚಿಪ್ಪಣಿ** (ನಾ). ಚಿಮುಕಿಸುವ ಸಾಧನ (?): ಉಪ್ಪರಿಗೆ ಹೊಂಗಳಸ ಮಂಟಪ ಚಪ್ಪರಕೆ ಪನ್ನೀರ ಚಿಪ್ಪಣಿ (ರೇವಣಾ. ೨-೭). [< ಸಿಂಪಣಿ?]

**ಚಿಪ್ಪಲಿಗ** (ನಾ). ಬಟ್ಟೆ ಹೊಲಿಯುವವನು; ದರ್ಜಿ; ಸಿಂಪಿಗ (?): ವಿನಯದಿಂ ಚಿಪ್ಪಲಿಗನೊಬ್ಬನು ದನುಜಸೂದನಗೆಱಗಿ ಕವಚವ ಮನವೊಲಿದು ಕೊಡಲು (ಕೃಕಣಾ. ೫-೪೮). [< ಚಿಪ್ಪಿಗ?]

**ಚಿಪ್ಪಲು$_1$** (ನಾ). ಒಂದು ಬಗೆಯ ವಿಮಾನು: ಬೆಳಚ ಚಿಪ್ಪಲು ಮಲಗು ಹೆಮ್ಮಲಗು . . . ಗಱುಲುಗಳೆಂಬ ಹೊಳೆವಳಿಯ ವಿಮಾನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಚಕಾ. ೫-೪೬). [?]

**ಚಿಪ್ಪಲು$_2$** (ನಾ). ಒಂದು ಬಗೆಯ ಮರ: ಚಿಪ್ಪಲ ತೊಪ್ಪಲ ನಿರಸಲ ತೊಪ್ಪಲ . . . ಮುಂತಾದ ಬಯಲುವನದಲ್ಲಿದ್ದ ಕಾಡ ತೊಪ್ಪಲುಗಳನ್ನು ತಗ್ಗಿಗೆ ಹಾಕಿ (ಕೃಷಿಪ್ರ. ೪೮). [?]

**ಚಿಪ್ಪಳ** (ನಾ). (ಕರಾ) ಬೇಲಿಯ ಎರಡು ಕಡೆಗಳಲ್ಲಿ ಜೋಡಿಸಿ ಬಿಗಿಯುವ ಬಿದಿರು; ಬೇಲಿಯ ಅಡ್ಡಗಟ್ಟು: ಈ ಬೇಲಿಗೆ ಎರಡಾದರೂ ಚಿಪ್ಪಳ ಬೇಕು (ರೂಢಿ). [?]

**ಚಿಪ್ಪಳಿ** (ನಾ). ಒಂದು ಪ್ರದೇಶದ ಹೆಸರು (?): ಗೇಣಿ ನಾಗಂಡುಗದಲು ಭತ್ತ ಮೂಡೆ ಓಶಿ ಚಿಪ್ಪಳಿಯ ಒಳಗೆ ಮೂಡಲು ಜಲ್ಲೆಯ ಅಣ್ಣಸೆಟಿಯ ಹಿರಿಯ ಗದ್ದೆಯಿಂದಂ ಪಡುವಲು (ಸೌಇಇ. IX-II, ೪೨೪-೨೫; 1401). [?]

**ಚಿಪ್ಪಳು** (ನಾ). ಇಕ್ಕಟ್ಟಿಗೆ ಸಿಕ್ಕಿಸುವುದು; ಪೀಡಿಸುವುದು. 'ಚಿಪ್ಪಳೇಱಿಸು' ಪರಾ.

ಚಿಪ್ಪಳು ಹಾಕು = ತೊಂದರೆಕೊಡು; ಕಾಡು; ಪೀಡಿಸು: (ಕಿ).

[← ತುಳು. ಚಿಪ್ಪಲೆ]

**ಚಿಪ್ಪಳೇಱಿಸು** (ಕ್ರಿ). ತೊಂದರೆಕೊಡು; ಕಾಡು; ಪೀಡಿಸು: (ದಾಸಪಕಿ. ೧೪೫-೨). [ಚಿಪ್ಪಳು + ಏಱಿಸು]

**ಚಿಪ್ಪಾಟಿ, ಚಿಪ್ಪಾಡಿ, ಚಿಪ್ಪಾಡೆ** (ನಾ). ೧. ರಸವನ್ನು ಹಿಂಡಿದ ಕಬ್ಬು, ದನಗಳು ತಿಂದುಳಿಸಿದ ಮೇವು ಮುಂತಾದುವು: **ಚಿಪ್ಪಾಟ** ="ದನ ತಿಂದುಳಿದ ದಂಟು; ಸೊಪ್ಪು" (ಜಾನಕೋ. ೫೬). **ಚಿಪ್ಪಾಡಿ:** ೧. ದನಗಳ ಮುಂದಿನ ಚಿಪ್ಪಾಡಿ ತಿಂದ ಬೀಳತದ (ಅಕೋಳ. ೧೬೬): ಚಿಂತಾಕು ಇಟಗೊಂಡು, ಚಿಪ್ಪಾಡಿ ಬಳಿವಾಕಿ (ಕನ್ನಜಾ. ೫೮); ಗಬ್ಬಿದ್ದ ದನಕ್ಕೆ . . . ಇದ್ದ ಬಿದ್ದ ಚಿಪ್ಪಾಡಿಯನ್ನು ತಿನ್ನಲು ಚೆಲ್ಲುತ್ತಾರೆ (ಗೋಗ್ರಾಸ. ೨೬). ೨. ಚೂರು; ತುಂಡು; ತುಣುಕು: ಒಂದು ಹೆಜ್ಜೆ ಮುಂದಿಟ್ಟರೆ ನಿಮ್ಮನ್ನು ಚಿಪ್ಪಾಡಿ ಮಾಡಿ ಗಾಳಿಗೆ ತೂರೇನು (ವಿಜಸಾ. ೦೦). **ಚಿಪ್ಪಾಡೆ:** ೨. ಆ ಪೋಲೀಸನು ತನ್ನೆ ಹಗಲುಗನಸಿನಲ್ಲಿಯ ಕಾರಿನ ಕೂಡ ನೆಲಕ್ಕೆ ಬಿದ್ದು ಚಿಪ್ಪಾಡೆಯಾಗುತ್ತಿದ್ದನು (ಕನಳಿ. ೦೦೯); ದೊಣ್ಣೆಯಿಂದ ಕಂಡವರನ್ನು ಚಿಪ್ಪಾಡೆ ಮಾಡುತ್ತ ಬರುತ್ತಿರಲು (ಯುದುರಾ. ೩).

[← ಹಿಂ. ಚಿಪ್ಪಡ; ಮರಾ. ಚಿಪಟೀ, ಚಿಪಾಟ, ಚಿಪಾಡ]

**ಚಿಪ್ಪಾಡಿ** 'ಚಿಪ್ಪಾಟಿ' ನೋ.

**ಚಿಪ್ಪಾಡೆ** 'ಚಿಪ್ಪಾಟಿ' ನೋ.

**ಚಿಪ್ಪಿ** 'ಸಿಂಪಿ$_2$' ನೋ.

**ಚಿಪ್ಪಿಗ** 'ಸಿಪ್ಪಿಗ' ನೋ.

**ಚಿಪ್ಪಿಗಿತಿ** (ನಾ). ದರ್ಜಿಕೆಲಸದವಳು; ಸಿಂಪಿಗರವಳು: ತೆಲ್ಲಿಗಿತಿ, ಚಿಪ್ಪಿಗಿತಿ, ಒಕ್ಕಲಿಗಿತಿ (ಶಮದ. ೨೦೮ ಪ್ರಯೋ); ಆ ಹೆಂಗಸರಲ್ಲಿ ಒಬ್ಬಳು ಚಿಪ್ಪಿಗಿತಿ. ಒಬ್ಬಳು ಅಡಿಗೆಯವಳು (ಪುನರು. ೯೨).

[ಚಿಪ್ಪಿಗ (< ಸಿಪ್ಪಿಗ) + – ಇತಿ$_1$ (< – ಇತ್ತಿ)]

**ಚಿಪ್ಪು$_1$** 'ಸಿಂಪು$_1$' ನೋ.

**ಚಿಪ್ಪು$_2$** 'ಚೀಪು$_2$' ನೋ.

**ಚಿಪ್ಪುಕುಂಟೆ** (ನಾ). ವ್ಯವಸಾಯದ ಒಂದು ಬಗೆಯ ಸಾಧನ: ಈ ಕೆಲಸವನ್ನು . . . ಎತ್ತುಗಳ ಸಹಾಯದಿಂದ ಮಾಡುವುದಕ್ಕೆ ಚಿಪ್ಪುಕುಂಟೆಗಳೆಂಬ ಮುಟ್ಟುಗಳಿವೆ. ಒಂದು ಮರದ ತುಂಡಿಗೆ ನಾಲ್ಕು ಹಲ್ಲುಗಳು ಅಥವಾ ಚಿಪ್ಪುಗಳು ಸಿಕ್ಕಿಸಿರುತ್ತವೆ (ವ್ಯವಮ. ೨೨).

[ಚಿಪ್ಪು$_2$ (< ಚೀಪು$_2$) + ಕುಂಟೆ$_1$]

**ಚಿಪ್ಪುಗಟ್ಟು** (ಕ್ರಿ). ಕರಟವು ಬಲಿತುಕೊಳ್ಳು; ಕರಟದ ರೂಪುಗೊಳ್ಳು: ಅವು ಚಿಪ್ಪುಗಟ್ಟಿದ ಬಳಿಕ ಒಳಗೆ ಕೊಬ್ಬರಿಯಾಗುತ್ತದೆ (ಮುಂಬಯಿ. ೨-೫೦).

[ಚಿಪ್ಪು$_1$ (< ಸಿಂಪು$_1$) + ಕಟ್ಟು$_1$]

**ಚಿಪ್ಪುಹಂದಿ** (ನಾ). ಒಂದು ಬಗೆಯ ಹಂದಿ: ಕಾಡುಕುರಿ, ಕಾಡುಹಂದಿ, ಮುಳ್ಳುಹಂದಿ, ಚಿಪ್ಪುಹಂದಿ . . . ಮುಂತಾದ ಇತರ ಪ್ರಾಣಿವರ್ಗಕ್ಕೆ ಕಾಡಿನಲ್ಲಿ ಮಿತಿಯೇ ಇರಲಿಲ್ಲ (ಪಂಜಪಂ. ೨).

[ಚಿಪ್ಪು$_1$ (< ಸಿಂಪು$_1$) + ಹಂದಿ (< ಪಂದಿ)]

**ಚಿಬಕಳಿ** (ನಾ). ತೇವವಾದ ಮರಳುಪ್ರದೇಶದಲ್ಲಿ ವಾಸಿಸುವ, ಬಿಳಿಯ ಪುಕ್ಕಗಳಿಂದ ಕೂಡಿದ ಒಂದು ಬಗೆಯ ಹಕ್ಕಿ: (ಕಿ). [?]

**ಚಬಟಗ, ಜಬಟಗ** (ನಾ). ಒಂದು ಬಗೆಯ ಹುಲ್ಲು : (ಕ). **ಜಬಟಗ :** (ಕ). [ ? ]

**ಚಬಲಂಗಡಿ** (ನಾ). ಚಬ್ಬಲುಗಳನ್ನು ಮಾಡುವ ಮೇದರ ಅಂಗಡಿ (?): ಚಬಲಂಗಡಿಯವರು ಕೊಡುವ ಧೂಪದ ಕಾಣಿಕೆ (ಸೌಇಇ. IV, ೨೫೫-೨೫ ; ೧೫೧೩). [<ಚಬ್ಬಲ್ + ಅಂಗಡಿ (<ಅಂಗಾಡಿ) ]

**ಚಬುಕ** (ನಾ). ಗದ್ದ ; ಗಲ್ಲ : "ತುಟಿಯ ಕೆಳಗು ಚಬುಕಮೆಂಬುದು" (ಹಲಾಯು. ೮೭-೩೭೦) ; ತಾಯುಂ ತಂದೆಯುಂ ಮಗಳ ಚಬುಕಮಂ ಪಿಡಿದು ಬುದ್ಧಿವೇಳ್ದು (ಚಾಧಪು. ೧೨-೧೧ ವ); ಲಲಿತಚಬುಕದ ಚಾರು ಕರ್ಣದ (ಜ್ಞಾನಚಂ. ೩-೫). [ ಸಂ. ]

**ಚಬುಕು, ಚುಬುಕು₁** (ಕ್ರಿ). ೧. ಚಪ್ಪರಿಸು : ಒಂದು ದಿನಕ್ಕೆ ಒಂದು ಹುಣಿಸೆಬೀಜದ ಸಿಪ್ಪೆಯನ್ನು ಪುಡಿಮಾಡಿ ಒಂದು ನಿಂಬೆಹೋಳಿನ ಮೇಲೆ ತುಂಬಿ . . . ಆ ಹೋಳನ್ನು ಚಬುಕಿ ಸಿಪ್ಪೆಯನ್ನು ಉಗಿದು ಹಾಕಬೇಕು (ಸಕವೈ. ಪರಿ. ೪೮೩). ೨. ಲೊಚಗುಟ್ಟು. 'ಚಬುಕುಗುಟ್ಟು' ಪರಾ. **ಚುಬುಕು₁ :** ೧. ಖೂಳನೀತನು ಮುದದಿ ಪರಸತಿಯರನ್ನಂದು ಲಾಲಸೆಯಿಂ ತಾನು ತುಟಿಯ ಚುಬುಕಿದನು (ಸಾನಂಗ. ೪೧) ; ಮಗು ಎದೆಹಾಲು ಚುಬುಕುತ್ತಿದೆ (ರೂಢಿ). [<ತೆಲು. ಚಬುಕು ]

**ಚಬುಕುಗುಟ್ಟು** (ಕ್ರಿ). (ಆಲಂ) ಅಸಮಾಧಾನವನ್ನು ಸೂಚಿಸು ; ಆಕ್ಷೇಪಿಸು ; ಗೊಣಗುಟ್ಟು : ಚಂದಮಿದೆಂತುಟೆಂದಡುರಿದೆಟ್ಟಪರಿಂತಿದ ಶುದ್ಧಶಬ್ದಮಾಯ್ತೆಂದೊಡೆ ದುಃಖದಿಂ ಚಬುಕುಗುಟ್ಟಿದಪರ್ (ಸೂಕ್ತಿಸು. ೧-೫೬). [ ಚಬುಕು + ಕುಟ್ಟು₁ ]

**ಚಬುಕೆ** (ನಾ). (ಕುದುರೆಯ) ಕೆಳತುಟಿ : "ಅಧರೋಷ್ಠಕ್ಕೆ ಚಬುಕೆಯೆಂಬ ಪೆಸರಕ್ಕುಂ" (ಅಶ್ವಶಾ. ೮೭-೧೪). [<ಸಂ. ಚಬುಕ ]

**ಚಬ್ಬ** 'ಚಬ್ಬು' ನೋ.

**ಚಬ್ಬಂಬೊಯ್, ಚಬ್ಬುವೊಯ್, ಸಿಬ್ಬಂಬೊಯ್** (ಕ್ರಿ). ೧. ಚರ್ಮದ ಮೇಲೆ ಚುಕ್ಕೆಗಳುಂಟಾಗು : ಟೊಬ್ಬಿನ ಸೊಡರಿಂ ಚರುವಿಂ ಚಬ್ಬಂಬೊಯ್ದಲೆ[ಪಾಠಾಂ.ಚಬ್ಬುಂಬೊಯಿದೆಲೆ]ಯಿನಲರಿನಕ್ಷತೆಯಿಂ . . .ಜಿನರನರ್ಚಿಸೆ ನಿಬ್ಬರಮಾಗಿರ್ದ ನರಕಗತಿಯೊಳ್ ಬೀಟಂ (ಜಿನಾಲಿ. ೩೭) ; ದೆಸೆಯಾನೆಗಳಾನನದೊಳ್ ಪಸರಿಸಿ ದುಗ್ಧೋದಬಿಂದು ಚಬ್ಬಂಬೊಯ್ದಂತೆಸೆದಿರ್ದುವು (ಅಜಿಪು. ೪-೫೯) ; ಅಂಬಿಜೆವಿಡಿವ ತಮೋದಾನಾಂಬುವಿನೊಳ್ ಮುಳುಗಿನಿಂದ ನಭಮೆಂಬ ಮದಸ್ತಂಬೇರಮಮಾಗಳ್ ಚ[ಪಾಠಾಂ. ಸಿ]ಬ್ಬಂಬೊಯ್ದಪೊಲಡರೆ ತುಱುಗಿದುವು ತಾರಗೆಗಳ್ (ಪಂರಾಮಾ. ೧೧-೧೮೩). **ಚಬ್ಬುವೊಯ್ :** ೨. ಚರ್ಮದ ಮೇಲೆ ಸೌಂದರ್ಯವನ್ನು ಅಧಿಕಗೊಳಿಸುವ ಗುರುತುಗಳನ್ನು ಪಡೆ: ಮುಖಂ ಲಾವಣ್ಯದ ಚಬ್ಬುವೊಯ್ಯೆ ನುಡಿಗಳು ದಟ್ಟಡಿಯಿಡೆ ಅಲರ್ಗಣ್ಣು ನಯವೇಱೆ (ಬಸರ. ೧೦-೧೧೦). **ಸಿಬ್ಬಂಬೊಯ್ :** ೧. ಮೇಲಿನ 'ಪಂರಾಮಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ಚಬ್ಬು + ಪೊಯ್₁ ]

**ಚಬ್ಬಲ್, ಚಬ್ಬಲು, ಚಬ್ಬಿಲ್, ಚಬ್ಬಿಲು, ಸಿಬ್ಬಲು** (ನಾ). ೧. (ಬಿದಿರಿನಿಂದ ಮಾಡಿದ, ಗಂಜಿ ಮುಂತಾದುವನ್ನು ಬಸಿಯುವುದಕ್ಕೆ ಉಪಯೋಗಿಸುವ) ಮಂಚ್ಚಳ, –ತಟ್ಟೆ : "ಪಡಳಿಕೆಯನಲ್ ಚಬ್ಬಲದು" (ಮಂಗರಾ. ೬೧-೨೦). **ಚಬ್ಬಲು :** ೧. ಉನ್ನತದೂಳಿಗದವರು ಹೊನ್ನ ಚಬ್ಬಲಲಿ ನೀಡಿದ ಪರಿಕರದಿಂದ ಮನ್ನಣೆವಡೆದರಾ ಕ್ಷಣದೆ (ಕಂಸವಿ. ೨೬-೨೬) ; ಮುತ್ತಿನ ಚಬ್ಬಲು ತೆಗೆದುಕೊಳ್ಳಿ (ಹಳ್ಳಬಾ. ೭). ೨. ಜರಡಿ; ಸಾರಣಿಗೆ ; ಒಂದರಿ : ಜರಡಿಪಾತ್ರೆ ಅಥವಾ ಚಬ್ಬಲು : ದಕ್ಷಿಣ ಹಿಂದುಸ್ಥಾನದಲ್ಲಿ ಹೆಚ್ಚಾಗಿ ಹತ್ತಿರ ಹೆಣೆದ ಕುಕ್ಕೆಯನ್ನು ಉಪಯೋಗಿಸುತ್ತಾರೆ(ಅದುಸಾ. ೩೪). **ಚಬ್ಬಿಲ್:** ೧. ಅರಮನೆಗಾಗಿ ನಡೆದು ಬಂದು ರಂಜಿಪ ಬೆರಕೆವರಲ ಚಬ್ಬಿಲೊಳಗೆ ಹೊಸ ಹೊನ್ನಸರಿಗೆಯ ಬೀವುಗಳನು ತುಂಬಿ (ನೇಮಿಸಂ. ೨೧-೨೬). **ಚಬ್ಬಿಲು :** ೧. ಹದನಾಗಿ ಬೇಯಲಿಕ್ಕುಳದಲ್ಲಿಯುದ ತೆಗೆವುತದಱಗಲದೊಂದು ಚಬ್ಬಿಲಿನಲ್ಲಿ ತೆಗೆದಿರಿಸಿ (ಸೂಪಶಾ. ೧-೫೨) ; ವೈಶ್ಯವನಿತೆ ತಲೆವೀದಿಗೆ ಭರದಿಂ ಬಂದು ಪಲವು ತೆಱದರ್ಚನೆಯಂ ಚಬ್ಬಿಲೊಳಿಟ್ಟು (ಜಯಕಾ. ೧೨-೪೫). **ಸಿಬ್ಬಲು :** ೧. ದೇವತಾ ಪ್ರಸಾದವನ್ನು ಸಿಬ್ಬಲಿನಲ್ಲಿಟ್ಟು ಕೊಡಿ (ರೂಢಿ).

[ ದೇ.॥ ತಮಿ. ಚಿಪ್ಪಲ್ ; ತೆಲು. ಸಿಬ್ಬಿ ]

**ಚಬ್ಬಲು** 'ಚಬ್ಬಲ್' ನೋ.

**ಚಬ್ಬಸಲೆ** (ನಾ). ಚಿಕ್ಕ ಹುಲ್ಲುಗಾವಲು (?) : ಪದ್ಮೋತ್ಕರಕ್ಕಂಬೆಗಳ್ ತಳರುತ್ತಿರ್ದಪುವೊಪ್ಪೆ ಚಬ್ಬ [ಪಾಠಾಂ. ಪೆರ್ಬ] ಸಲೆಯಿಂ ನೀದಾರ್ಣವಂ ಸಾರ್ದು ಗೋಕುಳಮಾ ಪೋದುದು ಕಾಯ್ದಪಂ ತಪನನುತ್ತೀವ್ರಂ (ಲೀಲಾವ. ೫-೭೪). [ <ಚಱು + ಪಸಲೆ ? ]

**ಚಬ್ಬಿಲ್** 'ಚಬ್ಬಲ್' ನೋ.

**ಚಬ್ಬಿಲು** 'ಚಬ್ಬಲ್' ನೋ.

**ಚಬ್ಬು, ಚಬ್ಬ, ಸಿಬ್ಬ, ಸಿಬ್ಬು, ಸಿಬ್ಬೆ** (ನಾ). ೧. ಕೆಂಪು, ಕಪ್ಪು ಅಥವಾ ಬಿಳಿಯ ಚುಕ್ಕೆಗಳನ್ನುಂಟುಮಾಡುವ ಒಂದು ಬಗೆಯ ಚರ್ಮರೋಗ : "ಕಿಲಾಸಂ, ಸಿಧ್ಮಂ ಈ ೨ ಚಬ್ಬು" (ನಾಚಿರಾ. ೧೦೯) ; ಸಿದ್ಧಾಧಿಕಾಶ್ರಯಾ ಚಬ್ಬು ಮೊದಲಾದ ದೋಷಂಗಳಿಗಾಶ್ರಯಮಾಗಿರುವದು (ಬಾಹಟೀ. ೨-೩-೮ ವ). ೨. ಸಣ್ಣಸಣ್ಣ ಬಿಳಿಯ ಚುಕ್ಕೆ: ಅಮರಶ್ರೇಣಿಗೆ ಮುತ್ತಿನಾಭರಣಮಂ ದಿಗ್ದಂತಿಯೂಥಕ್ಕೆ ಚಬ್ಬುಮಂ . . . ಮೆಯ್ವೆರ್ಚಿಸಲ್ ಸಾಲ್ದು ತಳ್ತಮದೊರ್ಪ್ಪಿರ್ದುದುದೀರ್ಣಕೀರ್ಣ ಪವನಾಂಭಃಶೀಕರಂ ಶ್ರೀಕರಂ(ಪುಷ್ಪಪು. ೧೦-೩೩). 'ಕಡುಚಬ್ಬು' ಪರಾ. **ಚಬ್ಬ :** ೧. ಚಬ್ಬ ಉಳ್ಳವನಂ ಸಿಧ್ಮಳನೆಂಬುದು (ಹಲಾಯು. ೯೯-೪೫೨). **ಸಿಬ್ಬ :** ೧. "ಕಿಲಾಸಂ, ಸಿಧ್ಮಂ ೨ ಸಿಬ್ಬದ ಹೆಸರುಗಳು" (ಸಿದ್ಧಾಂತಿ. ೧೫೯); "ಸಿಬ್ಬ (ಬ್ಬೆ, ಸಿಬ್ಬು, ಚಬ್ಬು)—ಸಿಧ್ಮ" (ತದ್ಭಕೋ. ೪೫). **ಸಿಬ್ಬು :** ೧. ಚರ್ಮದ ಮೇಲ್ಮೇಲಿನ ಸೋಂಕಿಗೆ ಕಾರಣವಾದ ಒಂದು ಬಗೆಯ ಸಿಬ್ಬು . . . ಮೈಚರ್ಮದ ಬಣ್ಣ ಕೆಡಿಸುತ್ತದೆ (ಕವಿಕೋ. I, ೨೨೭) ; ಸಿಬ್ಬು ಇದ್ದವ ತುರಿಸಿಕೊಂಡರೆ ಅದು ಒಂದು ಹಬ್ಬವೇ? (ಗಾದ). ೩. "(ಕೆಳಗಡೆ ಹೊಸಚರ್ಮ ಹುಟ್ಟಿದ ಹಾಗೆಲ್ಲ ಮೇಲುಗಡೆ ಉದುರುತ್ತ ಹೋಗುವ ಸತ್ತ ಚರ್ಮದ) ಹುರುಪು; ಹಗರು ; (ಮು.) ತಲೆಯ—ಹೊಟ್ಟು, ಸಿಬ್ಬು, ಸಿಂಡು" (Scurf. ಇಂಕನಿ). **ಸಿಬ್ಬೆ :** ೧. "ಸಿಬ್ಬ (ಬ್ಬೆ, ಸಿಬ್ಬು, ಚಬ್ಬು)—ಸಿಧ್ಮ" (ತದ್ಭಕೋ. ೪೫).

[ ದೇ.॥ ತುಳು. ಚಬ್ಬು, ಚಬ್ಬೊ, ಶಿಬ್ಬ, ಶಿಬ್ಬು, ಸಿಬ್ಬು, ಸಿಬ್ಬೊ ; ತೆಲು. ಸಿಬ್ಬಿಯ, ಸಿಬ್ಬೆ ]

**ಚಬ್ಬುದೋಱು** (ಕ್ರಿ). ಮೈಮೇಲೆ ಬಿಳಿ ಅಥವಾ ಕರಿಯ ಮಚ್ಚೆಗಳಂ ಕಾಣಿಸಿಕೊಳ್ಳು: ಕಿಱುವಿಳುಪುದೋಱೆ ನೀಲಂ ತುಂಬಿ ಚಬ್ಬುದೋಱಿರಲು ಜಂಬಮೆಡನಾಗೆ ಜಾಡಂ (ಮಂಗರಾ. ೮೧-೧೪).

[ ಚಬ್ಬು + ತೋಱು ]

**ಚಬ್ಬುವೊಯ್** 'ಚಬ್ಬಂಬೊಯ್' ನೋ.

**ಚಮಕಲು** (ನಾ). ಸಿಂಪಡಿಸುವಿಕೆ. 'ಚಮಕಲುಮಚ್ಚೆ' ಪರಾ.

[ ಚಮಕು(<ಚಿಮುಕು) + – ಅಲು(< – ಅಲ್₂) ]

**ಚಮಕಲುಮಚ್ಚೆ** (ನಾ). ಅಲ್ಲಲ್ಲಿ ಚಿಮುಕಿಸಿದಂತೆ ಇರುವ ಚಿಕ್ಕಚಿಕ್ಕ ಮಚ್ಚೆ : ನಿಮಗೆ ಎಲ್ಲೆಲ್ಲಿ ಚಮಕಲುಮಚ್ಚೆ ಇದೆ (ಮಲಿಮ. ೭೫೯).

[ ಚಮಕಲು + ಮಚ್ಚೆ₁ ]

**ಚಮಕು** 'ಚಿಮುಕು' ನೋ.

**ಚಮಟ** 'ಚಿಮ್ಮಟ' ನೋ.

**ಚಮಟಿ** 'ಚಿಮ್ಮಟ' ನೋ.

**ಚಮಟಗೆ** 'ಚಿಮ್ಮಟಗೆ' ನೋ.

**ಚಮಟು** 'ಚಿವುಂಟು' ನೋ.

**ಚಮಟಿ** 'ಚಿಮ್ಮುಟ' ನೋ.

**ಚಮಣಿ** (ನಾ). ೧. ಹೊಗೆ ಹೋಗುವ ನಳಿಕೆ ; ಹೊಗೆಗೂಡು : ಅದುವೆ ಫ್ಯಾಕ್ಟರಿ ಚಿಮಣಿಗಳೆರಡು ಹೊಗೆಯನ್ನು ಉಗುಳುವ ಕೊಳವೆಯ ಜೋಡು (ಕಪಶು. ೮-೧೧೪); ಕಾರ್ಖಾನೆಯ ಚಿಮಣಿಗಳಂತೆ ಕಂಡಿರಬೇಕು (ಕುಡಕ. ೩) ; ಸುಟ್ಟು ಕಪ್ಪಾಗಿ ಕಾಣುವ ಚಿಮಣಿಗಳು (ಯೋಧಪು. ೧). ೨. ದೀಪದ ಬುರುಡೆ ; ದೀಪಕ್ಕೆ ಹಾಕುವ ಗಾಜಿನ ಬುರುಡೆ ; ದೀಪದ ಪಾವು (ಉಕ) : ದೀಪಕದ (Burner) ಮೇಲೆ ಚಿಮಣಿಯನ್ನು ಹಾಕುವುದೂ ಇದೇ ಉದ್ದೇಶದಿಂದ (ಭೌಕವಿ. ೨೯೪). ೩. ಸೀಮೆಎಣ್ಣೆಯ ಬುಡ್ಡಿ : ಗೋಡೆಯೊಂದಕ್ಕೆ ನೇತಾಡುತ್ತಿದ್ದ ಚಿಮಣಿಯ ದೀಪದ ಮಂದಪ್ರಕಾಶದಲ್ಲಿ ಅಲ್ಲಿನ ದೃಶ್ಯ ನಿಧಾನವಾಗಿ ಆತನ ಕಣ್ಣುಗಳೆದುರಿಗೆ ಮೂಡಿತು(ಜ್ಞಾರಾಮಿ. ೧೬೪); ಸೀಮೆಎಣ್ಣೆಯ ಚಿಮಣಿಯ ಬುಡ್ಡಿ ಉರಿಯುತ್ತಿತ್ತು (ರಂಗರೋ. ೧೦೪); ಉರಿಯುವ ಚಿಮಣಿಯನ್ನು ಆರಿಸಲು ಅವಳಿಗೆ ನೆನಪಾಗಿರಲಿಲ್ಲ (ಚಂದ್ರಕಾ. ೧). [ ←ಇಂ. Chimney ]

**ಚಮಣಿಎಣ್ಣೆ** (ನಾ). ಕಲ್ಲೆಣ್ಣೆ ; ಸೀಮೆಎಣ್ಣೆ : ಏಕೆ ಮನೆಯಲ್ಲಿ ಚಿಮಣಿ ಎಣ್ಣೆ ಇದ್ದಿಲ್ಲವೇನು ? (ಕುಂಹಿಂ. ೭೩) ; ಚಿಮಣಿಎಣ್ಣೆಯ ದೀಪಗಳು ಕಾಣಿಸಿಕೊಂಡುವು (ಮೂರುದಾ. ೧೧೨). P ಈ ಶಬ್ದ ಸೀಮೆಎಣ್ಣೆ ಎಂಬುದರಿಂದಲೂ ಬಂದಿರಬಹುದು. [ ಚಮಣಿ + ಎಣ್ಣೆ ]

**ಚಮರು** (ನಾ). ಕುಣಿಕೆ; ಜೀರುಗುಣಿಕೆ: ಒಂದು ಹಗ್ಗವನ್ನು ದೋಣಿಯ ಮುಂದಿನ ಶಿಖರಕ್ಕೆ ಚಿಮರುಹಾಕಿ ಕಟ್ಟಿ (ಕಂಗ್ಲಾಳ್ಕ. ೫೦೨). [ ? ]

**ಚಮಿಚಮಿ** (ನಾ). ಒಂದು ಅನುಕರಣ ಶಬ್ದ ; ಹಸಿಪದಾರ್ಥಗಳು ಸುಡುವಾಗ ಉಂಟಾಗುವ ಶಬ್ದ : ವ್ಯಾಘಶಿಶುಗಳ್ ಕರಿಮುರಿ ಕಣ್ಲೊಗೆದ ಮರಂ ಘುಘುರಿಲ್ ಗಜಂ ಚಿಮಿಚಿಮಿಯೆಂದು . . . ಸೀದುವು (ಗಿರಿಕ. ೯-೨೨) ; ಆ ದೆಸೆ ಚಿಮಿಚಿಮಿಯೆನುತುರಿದುದು ಗಗನ ಜಾಜಿದುದು (ವರ್ಧಕ. ೭-೨೫). 'ಸಿಮಿಸಿಮಿ' ಪರಾ.

**ಚಮಿಚಮಿಸು**(ಕ್ರಿ). ಚಿಮಿಚಿಮಿ ಎಂದು ಶಬ್ದಮಾಡು: "ಚಿಮಿಚಿಮಿಸು-ಶಬ್ದೇ, ಲುಠನೇ ಚ (ಹೊರಳಾಡು)" (ಕಮುಧಾ) ; ಚಿಮಿಚಿಮಿಸೆ ತಾಳಿಸುವುದುಂ ಇಕ್ಷುಯಂತ್ರಂಗಳಿಂ ಪಿಟ್ಟುವುದುಂ ಬ್ರಸಿದ ದಸಿಯೊಳ್ ತೆಗೆವುದುಂ . . . ಮೊದಲಾದ ಪಲವುಂ ತೆಱದ ದಾರುಣೋದಗ್ರನಿಗ್ರಹ ವಿಗ್ರಹಕ್ಕೆ ತಮ್ಮ ವಿಗ್ರಹಂಗಳನೊಡ್ಡಿ (ಶುಕುಮಾ. ೧೧-೯೭ ವ) ; ಚಿಮಿಚಿಮಿಸಿ ಕಾಯ್ದು ಧೂಪಂ ಸವಿಯ ಹೊಗೆಯನುಗುಳೆ (ಟಿಹಿರ. ಹ. ೨೦೯-೫) ; ದಿಗ್ದಾವಾನಲಂ ಪರ್ವಿ ಚಿಮಿಚಿಮಿಸಿ ಸುಡುತಿರ್ದುದಖಿಳ ಜೀವಾದಿಗಳನು (ವೀಕ್ರಪು. ೩-೧೯-೧೧) ; ಪರಿವರುಣಜಲದಿನಾಱುವ ಕರುಳಿಂ ಚಿಮಿಚಿಮಿಸುತಿರ್ಪ ಕೋಟ್ಸೈದುಟಿಂ ಸಂಗರರಂಗಮಾವಗಂ ಕೊಕ್ಕರತೆಯನೊಡರಿಸದದಾರ ಕಣ್ಗಂ ಮನಕಂ (ರಶರ. ೭-೧೦೭). 'ಸಿಮಿಸಿಮಿಸು' ಪರಾ. [ ಚಿಮಿಚಿಮಿ + - ಇಸು$_3$ ]

**ಚಮುಕಿಸು, ಚುಮುಕಿಸು** (ಕ್ರಿ). (ದ್ರವವನ್ನು) ಎರಚು ; ಸಿಂಪಡಿಸು ; ತಳಿ ; ಸಿಂಪಿಸು : ಸಿಮೆಂಟ್, ಸುಣ್ಣದ ತಿಳಿ . . . ಇವನ್ನು ಅದುಮಿದ ಗಾಳಿಯಿಂದ ತುಂತುರು ತುಂತುರಾಗಿ ಚಿಮುಕಿಸುತ್ತಾರೆ (ಶಿಲ್ಪನಾ. ೨೦೦); ಅದರಲ್ಲಿದ್ದ ರಸವನ್ನು ರೋಗಿಯ ತಲೆಯ ಮೇಲೆ ಚಿಮುಕಿಸಿದನು (ಮಣಿಸ. ೧೭) ; ಅವರೆಲ್ಲರೂ ಬಾಳೆಎಲೆಗಳನ್ನು ನೀರು ಚಿಮುಕಿಸಿ ತೊಳೆದುಕೊಂಡರು (ಕಂಗಾಳ್ಕ. ೨೦) ; ನಾವು ಕುಳಿತಲ್ಲಿಂದ ಚಂದ್ರನ ಬೆಳ್ಳಿಎಲೆಗಳ ಮೇಲೆ ರೇಕುಗಳನ್ನು ಚಿಮುಕಿಸಿದಂತೆ ಕಾಣುತ್ತಿತ್ತು (ಅಲಹೂ. ೧೦೨). **ಚುಮುಕಿಸು :** ಹಣೆಯ ಮೇಲೆ ಚುಮುಕಿಸಿದಳು (ದಾಂಡ್. ೯೫).

[ ಚಿಮುಕು + - ಇಸು$_3$ ]

**ಚಮುಕು, ಚಿಮಂಕು** (ಕ್ರಿ). ಸಿಂಪಡಿಸು ; ತಳಿ. 'ಚಿಮುಕಿಸು' ಪರಾ. **ಚಿಮಕು :** 'ಚಿಮಂಕಲು' ಪರಾ. [ <ಚಿಮ್ಮು$_1$ ]

**ಚಮುಟ** 'ಚಿಮ್ಮುಟ' ನೋ.

**ಚಮುಟಾಂಗ** (ನಾ). ಇಕ್ಕುಳದ ಆಕಾರವುಳ್ಳ ಸಾಧನ ; ಪಟಕಾರ : ಶಸ್ತ್ರಚಿಕಿತ್ಸೆಯ ಚಿಮುಟ . . . ಚಿಮುಟದಂಥ ಅಂಗ: ಚಿಮುಟಾಂಗ (Forceps. ಇಂಕನಿ) ; ಮೊಂಡನೆ ಅಥವಾ ಕೊನೆ ತುಂಡು, ಎರಡನೆ ತುರುಚಿನ ಕೊನೆಯಲ್ಲಿ ಕೀಲುಗೊಂಡು ಒಂದು ಜೊತೆ ಸೂಕ್ಷ್ಮವಾದ ಚಿಮುಟಾಂಗಗಳಾಗಿವೆ (ಕೀಟಬ. ೮೭).

[ ಚಿಮುಟ (<ಚಿಮ್ಮುಟ) + ಅಂಗ$_3$ ]

**ಚಮುಟಗೆ** 'ಚಿಮ್ಮಟಗೆ' ನೋ.

**ಚಮುಟು, ಚಿವುಟು$_1$** (ಕ್ರಿ). (ಕಣ್ಣನ್ನು) ಮಿಟುಕಿಸು. – ಮಿಡಿ : (ಕ). **ಚಿವುಟು$_1$ :** 'ಕಣ್ಚಿವುಟು' ಪರಾ.

[ ದೇ.॥ ತಮಿ. ಚಿಮಿಟ್ಟು, ಚಿಮಿಟ್ ; ಮಲ. ಚಿಮಿಟ್ಟು ]

**ಚಮೂಕ** (ನಾ). ಒಂದು ಬಗೆಯ ಪಕ್ಷಿ : ಚಿಮೂಕ ದೊಡ್ಡ ಮರವಕ್ಕಿ (ಅಆನಿ. ೧೧-೩೫). [ ? ]

**ಚಮ್ಮಂಡೆ, ಚಿಮ್ಮಂಡೆ** (ನಾ). ಜೀರುಂಡೆಹುಳು; ಜೀರುದುಂಬಿ : ವನದ ಚಿಮ್ಮಂಡೆಗಳ ಘೋರಧ್ವನಿಗಳಲಿ ಕಿವಿ ವ್ಯಾಗಕುಲದ ಸೊಗಡಿನಲಿ ನಾಸಿಕ (ಕುವ್ಯಾಅ. ೧೩-೫೦). **ಚಿಮ್ಮಂಡೆ :** "ಝಿಲ್ಲಿಕೆಯೆನಲ್ ಜಿಮ್ಮಂಡೆಗಕ್ಕು ನಾಮಂ" (ಸೂಚಿರಾ. ೫೨-೧೧).

[ ದೇ.॥ ತಮಿ. ಮಲ. ಚಿಮಿಲಿ ; ತೆಲು. ಚಿಮಟ, ಚಿಮ್ಮಟ, ಚಿಮ್ಮಟ, ಚಿಮ್ಮೆಟ ]

**ಚಮ್ಮಚನೂರ್** (ನಾ). ಒಂದು ಊರಿನ ಹೆಸರು : ಕಿಚಿಯುಂಡಯ್ಯನ ದೇವನುಂ ಚಿಮ್ಮಚನೂರ ವಂಹಾರಾಜಯ್ಯನುಂ (ಎಕ. XI; ಚಿತ್ರದು. ೭೩-ಶಿಂ. 987). [ ? + ಊರ್ ]

**ಚಮ್ಮಟ** 'ಚಿಮ್ಮುಟ' ನೋ.

**ಚಮ್ಮಟಿ** 'ಚಿಮ್ಮುಟ' ನೋ.

**ಚಮ್ಮಟಗೆ, ಚಿಮಂಟಗೆ, ಚಿಮಂಟಿಗೆ** (ನಾ). ೧.=ಚಿಮ್ಮುಟ ೧: ಚಿಮ್ಮಟಗೆಯಲಿ ಮುಳ್ಳನು ಪೊತ್ತಿ ಅಮರಿಸಿದಂತೆ (ಜ್ಞಾನಸಿಂ. ೦೮-೬೩). **ಚಿಮಟಗೆ:** ೧. ಕರಗಿದ ಬೆಳ್ಳಿಯನ್ನು ಪೊಚ್ಚ ಗಟ್ಟಿಗನಾದ ಮನುಷ್ಯನು ಎರಡು ಚಿಮಟಗೆಗಳಿಂದ ಹಿಡಿದು ಯೆತ್ತಿ, ಮುನ್ನಿನ ಹಲಿಗೆಗಳಲ್ಲಿ ಮಾಡಿದ ಕಾವಲಿಗಳಲ್ಲಿ ಸುರುವುವನು (ಕಥಾಗಿ. ೫೮೨) ; ಹಡಪಿಗನು ಕನ್ನಲ್ಲಿರುವ ಚಿಮಟಗೆಯಿಂದ . . . ಆ ಕಾಳನ್ನು ತೆಗೆದು (ಸುವರ್ಣ. ೩೮). ೨. ಹೆಬ್ಬೆರಳು ಮತ್ತು ತೋರಬೆರಳಿನಲ್ಲಿ ಹಿಡಿಯುವಷ್ಟು ಪ್ರಮಾಣ ; ಒಂದು ಚಿಟಿಕೆ : ಚೊಂಕದಲ್ಲಿಟ್ಟ ನಶುವಿನ ಡಬ್ಬಿಯನ್ನು ತೆಗೆದು ಒಂದು ಚಿಮಟಗೆ ನಸ್ಯವನ್ನೇರಿಸುತ್ತ (ಪಮಹಾ. ೨೭೩); ಒಂದು ಚಿಮಟಗೆ ಮಣ್ಣನ್ನು ತೆಗೆದುಕೊಂಡು ಬಾಯಲ್ಲಿ ಹಾಕಿಕೊಂಡಳು (ಮತ್ತಮು. ೧೨೫). **ಚಿಮಟಗೆ :** ೨. ಚಿಮಟಗೆಯಷ್ಟು ಇದ್ದಲಿಯ ಪುಡಿಯನ್ನು ಗೇಣುದ್ದ ಹಾಳೆಯ ಚೂರಿನ ಮೇಲೆ ಗೆಳೆದು (ಮಾಪಾದ. ೦೦೦).

[ ಚಿಮ್ಮಟ (<ಚಿಮ್ಮುಟ) + - ಇಗೆ$_1$ ]

**ಚಮ್ಮಲು** (ನಾ). ಚಿಮ್ಮುವ ಸಾಧನ ; ಪಿಚಕಾರಿ : ಓಕುಳಿಯ ಮಾರೆತ್ತಿ ಚಿಮ್ಮಲ್ಗೊಳಟ್ಟು ಜಗಿದು ಕೊಳದೊಳು (ಚಿನಮಂ. ೯೮-೪೭). 'ಚಿಮ್ಮುಗೋವಿ' ಪರಾ. [ ಚಿಮ್ಮು$_1$ + - ಅಲು (< - ಅಲ್$_2$) ]

**ಚಮ್ಮಿ$_1$** (ನಾ). ಒಂದು ಬಗೆಯ ಪಳಿದ್ಯ : ಸಕಲ ಸಂಭಾರಂಗಳ ಅಮ್ಮಿಕಲ್ಲೊಳಗರೆದು ನುಣುಗುವಂದದಿ ಕಾಸಿ ಕಮ್ಮನೆಯ ತುಪ್ಪದೊಳು ಪೊಡ್ಡಣಿಗೆಯಂ ಕೊಟ್ಟು ಚಿಮ್ಮಿಯೆಂದೆಂಬ ಹೆಸರಂ ಕೊಟ್ಟು ನವ ಪರಿಮಳವನು ಭಾವನೆಗೊಡುವುದು (ಸೂಪಶಾ. ೨-೪೮). [ ? ]

**ಚಿಮ್ಮು₃** (ನಾ). ಚವರ್ಗ (?): ಚರಣದೊಳೆಸೆವ ಚಿಮ್ಮುಯ ಕೆಂಪು ಬಿಗಿದುಟ್ಟ ಮರಕತವಟ್ಟೆ ಮಾಂದಳಿರು ಸಿರದಲಿ ಮೆಱೆಯೆ (ಪ್ರೋಹತ. ೧೯-೩೨).

[ ? ]

**ಚಿಮ್ಮಿಸು** (ಕ್ರಿ). ೧. ಬೆರಳಿನಿಂದ ಮಿಡಿ,–ಮಿಡಿಸು. ೨. ಹಾರಿಸು; ನೆಗೆಯಿಸು: ವಾನರರಿಗೋಸುಗ ಗಿರಿಯನೆತ್ತಿ ಚಿಮ್ಮಿಸಿ ನೆಲಕೆ ನಿಲಿಸಿದೆ ನೀ ಅಸಮ ಹನುಮಂತ (ಹರಿಕಂದ. ೨-೬೫-೩). ೩. ಹೊರ ಹೊಮ್ಮಿಸು; ಪ್ರವಿಸು: ಪಸಿದಟುಕಿರ್ವ ಬಾಲಕನ ಪಾದಮನಾಲಿಸಿ ಗೇಹಕೃತ್ಯಮಂ ಬಿಸುಟತಿವೇಗದಿಂ ಪರಿದು ಸೋಗಿಲೊಳಡ್ಡಮಿಟ್ಟು ಚಿಮ್ಮಿಸಿ ಮೊಲೆವಾಲ್ಗಳಂ . . . ಸಾರ್ಚಿ ಮೊಲೆಯೂಡುವ ಸೈಪೆಸಗೆಂದು ಸಾರ್ವುದೊ (ಸೂಕ್ತಿಸು. ೬-೩). ೪. ಚಿಮುಕಿಸು; ಸಿಂಪಡಿಸು: ಪನ್ನೀರ ಮೈಗೆ ಚಿಮ್ಮಿಸಿಯಾಲವಟ್ಟಮಿಕ್ಕುವಳು (ಭರತ. ೧೦-೯೩). ೫. ಝಳಪಿಸು: ಸುರಗಿಕಾಱಂ ಸುರಗಿಯಂ ಚಿಮ್ಮುವಂತೆ ನಾಲಗೆಯಂ ಚಿಮ್ಮಿಸುತ್ತಂ (ಪುಷ್ಪದಂ. ೯-೨೫ ವ); ಜಯಘೋಷದಿಂ ರಾಜತೇಜಿಯನಡರಿ ಖಂಡೆಯವ ಚಿಮ್ಮಿಸುತ ಕಡುತವಕದಲಿ ಕಂಠೀರವರಾಜೇಂದ್ರ ನಡೆದನು (ಕಂನವಿ. ೧೫-೦೫). ೬. ಬೀಸು: ಇಕ್ಕೆಲದ ಕೋಕನದವೇತ್ರಿಯರ್ಚಿಮ್ಮಿಸುವ ಚಾರುಚಂಚಲಚಾಮರಂಗಳಿಂದೆ (ಕ್ರಮಿಥಾ. ೩೦-೯೪).

[ ಚಿಮ್ಮು₁ + – ಇಸು₂ ]

**ಚಿಮ್ಮು₁** (ಕ್ರಿ). ೧. ಬೆರಳಿನಿಂದ ಮಿಡಿ,–ಮಿಡಿಸು: "ಚಿಮ್ಮು–ಅಂಗುಲಿ ವಿಮೋಚನೇ ಶಸ್ತ್ರಕ್ರಿಯಾಯಾಂ ಚ (ಜಳಪಿಸು)" (ಶಮದಾ). ೨. ನೂಕು; ತಳ್ಳು: ರಣದೊಳ್ ಶಕ್ರನ ತೇರನೇಱಿದ ಮಹಾಶೈಲಾಳಿ ಬೆಂಬತ್ತಿ ಮಾರ್ಗಣದಿಂ ಚಿಮ್ಮಿದ (ಶಬ್ದಮಣಿ. ೮೧); ತೋಳುಗಳ ಹಿಡಿದೆಳೆದು ಖಳ ಕರವಾಳದಲಿ ಚಿಮ್ಮಿದನು (ಕುಮರರಾ. ೬-೧೦೦-೫೮). ೩. ಎಸೆ; ಚೆಲ್ಲು; ತೂರು: ಕಡಿದು ಚಿಮ್ಮಿದ ಬೆರಳುಗಳ . . . ಹೊಡೆಮುರಳಿದಾಲಿಗಳ ತೋಳಿನ ಕಡಿಕುಗಳ ರಣಮಹಿ ಭಯಾನಕರಸಕೆ ಗುರಿಯಾಯ್ತು (ಕುಮಾರ. ೪-೦೮); ಕಂಡನಾ ಗಜದ ಮಸ್ತಕ ಸಹ ಕೆಡೆದಿರ್ದ ಮುಂಡದ ತಲೆ ಗಗನದಲಿ ಚಂಡಪ್ರತಾಪಿಯ ಜಯವಧು ತಿಱಿಕಲ್ಲ ಕೊಂಡಾಡುವಂತೆ ಚಿಮ್ಮಿದನು (ಪ್ರೋಹತ. ೩೪-೯). ೪. ನೆಗೆ; ಹಾರು; ಪುಟಿ: ತರವೋಯ್ಯನಿಂ ಚಿಮ್ಮುಮಂಬುಕಣಜಾಲದಿಂ (ಅದ್ಭುಟ. ೩-೮೩); ಶಾತ್ಮಕಿ ನಕುಲರೆಡವಂಕದಲಿ ಚೂಣಿಗೆ ಚಿಮ್ಮಿದರು (ಕುವ್ಯಾಶ. ೩-೨); ಹಯವಡಿಗಡಿಗೆ ಚಿಮ್ಮಿತು ವಾಯುವೇಗದೊಳು (ಸೌಜ. ೬-೫); ನೇತ್ರರಾಗಸಕೆ ಚಿಮ್ಮಿತ್ತು ರಣದೊಳೋಕುಳಿಯ ಮಿತ್ತುವಿನ ಜೀಕೊರ್ಳವಿಯುಗುಳ್ದ ಕೆನ್ನೀರೆಂಬೊಲು (ಕ್ರಮಿಥಾ. ೨೫-೦೫). ೫. ಹೊರಹೊಮ್ಮು; ಹೊರಸೂಸು: ಅವನ ಕಣ್ಣುಗಳಲ್ಲಿ ನೀರು ಚಿಮ್ಮಲಾರಂಭಿಸಿತು (ಮಹಾಗ. ೦೯೯). ೬. ಎರಚು; ಚಿಮುಕಿಸು; ತಳಿ: ನರಪತಿ ಕೊಂಡು ಜೀಕರ್ಣಟವೆಯಂ ದಿದಿದೊಯ್ಯನೆ ಕರ್ಪೂರ್ದಿಯಿಂ ಮನೋಹರಿಯರ ಮೇಲೆ ಚಿಮ್ಮೆ (ಧರ್ಮಾಮೃ. ೭೪-೦೫); ಪಡಿಮುಳದೊಡೆವುತ ಪನ್ನೀರ ಚಿಮ್ಮುತ . . . . ಸೌಂದರಿಯರಿದ್ದರು ಬಳಸಿನೊಳು (ಭರತ. ೪-೦೦೮). ೭. ರಭಸವಾಗಿ ತೂಗು; ಝಳಪಿಸು: "ಚಿಮ್ಮು-ಅಂಗುಲಿ ವಿಮೋಚನೇ, ಶಸ್ತ್ರಕ್ರಿಯಾಯಾಂ ಚ (ಜಳಪಿಸು)" (ಶಮದಾ): ಕಠಾರಿಗಳನುದ್ದಕ್ಕೆ ಚಿಮ್ಮುತ್ತೊಡವೆ ತಿರುಹುತ್ತ (ಪುಟ್ಟ. ೩೦-೩೨); ಝಡಿದು ಚಿಮ್ಮುವ ಖಂಡೆಯವ ಕೈದುಡುಕಿ (ಕುಮರರಾ. ೫-೩-೩೦); ಕಡಿದು ಮುಂಗೈಯ ಕೋಪಾಟೋಪದಲಿ ಖಳ ಜಡಿದು ಖಂಡೆಯವ ಚಿಮ್ಮಿದನು (ಕಂನವಿ. ೦೩-೬೫). ೮. ಬೀಸು: ಚಿಮ್ಮುವ ಚಾಮರದ ಸೂಸುವ ಸೀಗುರಿಯ (ಗಿರಿಕ. ೩-೫೫ ವ); ಚಿಮ್ಮುವ ಚಾಮರಂಗಳನೆಡೆವಿಡದೆ ಪಸರಿಸಿದ ಸೀಗುರಿಗಳೆಡೆಯೊಳ್ (ಅದ್ಭುಟ. ೮-೫೨ ವ); ಶಶಿಮುಖಿಯರೆಡಬಲದಿ ಕೈವಾರಿಸುತ ಸಿತಚಾಮರವ ಚಿಮ್ಮಲು (ನಳಚ. ೪-೨೫).

[ ದೇ.? ತೆಲು. ಚಿಮ್ಮು ]

**ಚಿಮ್ಮು₂** (ನಾ). ನೆಗೆತ: ಚಿಮ್ಮುಗಳ ಕಾಣಿಸುವುದು ಸ್ಫುರಿತವೆನಿಸಿಕೊಂಬುದು ಹಾವು ನಡೆದಂತೆ ಡೊಂಕುಡೊಂಕಾಗಿ ಓಡಿಸುವುದು ನಾಗೋಷ್ಪವೆನಿಸಿಕೊಂಬುದು (ಅಶ್ವಶಾ. ೨೫-೬). [ <ಚಿಮ್ಮು₁ ]

**ಚಿಮ್ಮುಗಾಲ** (ನಾ). (ಆಲಂ) ಉತ್ಸಾಹದ ಕಾಲ: ಏಳು, ಎಚ್ಚರವಾಗು, ಉಸಿರು ತುಂಬು–ಈ ಚಿಮ್ಮುಗಾಲದಲ್ಲಿಯೂ ನೀನೇಳದೇ ಹೋದರೆ ಎಂದೆಂದಿಗೂ ಬೀಳು, ಬಿದ್ದಿರು, ಓ ಕನ್ನಡ ಮಗುವೇ! (ಕನ್ನನು. I, ೩೬).

[ ಚಿಮ್ಮು₂ + ಕಾಲ ]

**ಚಿಮ್ಮುಗೆ** (ನಾ). ೧. ಚಿಮ್ಮುವಿಕೆ; ಬುಗ್ಗೆ: ಮುಂದಕ್ಕೆ ಅಥವಾ ಮೇಲಕ್ಕೆ ಚಿಮ್ಮಿ ಸೂಸುವ ನೀರು, ಆವಿ, ಅನಿಲ, ಮೊಗಳ ಧಾರೆ: ಬುಗ್ಗೆ; ಚಿಮ್ಮುಗೆ(ಸಂ. ಇಂಕನಿ). ೨. ಸ್ಫುರಣ: ಮನವ ದೇಹವನಲೆವ ಚಿಮ್ಮುಗೆಗಳೊಂದಾಗಿ ಘನಸಹಜದುಂಗನೆಯ ಕೆರಳಿಸಿದುವು (ಇಂಗೀಶ. ೪೬-೨೦).

[ ಚಿಮ್ಮು₁ + – ಗೆ ]

**ಚಿಮ್ಮುಗೊಳ್ಳು** (ಕ್ರಿ). ನೆಗೆ; ಹಾರು: ದಿಮ್ಮಿಡುವ ಘಣಘಣಾಯೆಂಬ ಘಂಟೆಯ ರವಕೆ ಚಿ[ಪಾಠಾಂ. ಚಿ]ಮ್ಮುಗೊಳ್ಳುತ್ತಿರುವ ಆ ಹರಿಣದಂತೆ (ಕಶಳ. ೮೪-೪). [ ಚಿಮ್ಮು₂ + ಕೊಳು₁ (<ಕೊಳ್₁) ]

**ಚಿಮ್ಮುಗೋವಿ** (ನಾ). ಪಿಚಕಾರಿ; ಜೀಕೊರ್ಳವೆ: ಬಗೆಬಗೆಯ ಚಿತ್ರದ ಚಿಮ್ಮುಗೋವಿಯ ತುಂಬಿದೋಕುಳಿಯ (ಅನಂರಾ. ೬-೧-೫೬).

[ ಚಿಮ್ಮು₁ + ಕೋವಿ₁ ]

**ಚಿಮ್ಮುಟ, ಚಿಮುಟ, ಚಿಮುಟಿ, ಚಿಮಟೆ, ಚಿಮುಂಟ, ಚಿಮ್ಮಟ, ಚಿಮ್ಮಟಿ** (ನಾ). ೧. ಚಿವುಟಿ ಹಿಡಿಯುವ ಇಕ್ಕುಳದಂತಹ ಸಣ್ಣ ಸಾಧನ; ಪಟಕಾರ: ಹಿಡಿಯಿಲ್ಲದ ಶಸ್ತ್ರ ಕೀಲಿಲ್ಲದ ಕತ್ತರಿ ಉಭಯವನೊಡಗೂಡದ ಚಿಮ್ಮುಟ (ಸವಚ. ೧೨೫-೬೯೦); ಕತ್ತಿಯ ಬಸವಣ್ಣ ಕೊಟ್ಟ ಕತ್ತರಿಯ ಚೆನ್ನಬಸವಣ್ಣ ಕೊಟ್ಟ ಕಿತ್ತುಹಾಕುವ ಚಿಮ್ಮುಟವ ಪ್ರಭುರಾಯ ಕೊಟ್ಟ (ಪದಗೋ. ೧೩೬-೬೨); ದಾನವಿಲ್ಲದರ ಕಡಿದಿಟ್ಟು ಚಿಮ್ಮುಟ ಮೊನೆಯೊಳವರ ಖಂಡವನುಗಿದು (ವೀಕ್ಷಪು. ೪-೧೯-೪೬). **ಚಿಮಟ:** ೧. ನಿನ್ನೆ ದಿನ ಕಾದ ಚಿಮಟಗಳಿಂದ ಅವನ ಹಲ್ಲುಗಳನ್ನೆಲ್ಲ ಕೀಳುವುದರಲ್ಲೇ ಇಡೀ ದಿನವೆಲ್ಲಾ ಕಳೆದೆ (ನಗಹೊ. ೨೨೬). ೨. ಹೆಬ್ಬೆರಳಂ ಮತ್ತು ತೋರಬೆರಳಿನಲ್ಲಿ ಹಿಡಿಯುವಷ್ಟು ಪ್ರಮಾಣ; ಒಂದಂ ಚಿಟಿಕೆ: ಅವನನ್ನು ಅಲ್ಲಿಂದ ಎತ್ತಿ ಹೊರಗೆ ತರೋದು ಅಂದ್ರೆ ಅವರಪ್ಪ ಶಾಮಣ್ಣನವರಿಂದ ಒಂದು ಚಿಮಟ ನಸ್ಯ ತರುವಷ್ಟು ಕಷ್ಟವಾಯಿತು. (ತುಂಬಿಹೊ. ೮೩). **ಚಿಮಟಿ:** ೧. ಇಕ್ಕುಳ ಇಲ್ಲವೆ ಚಿಮಟ (Pincers)ಗಳು ಇಂಥ ಸನ್ನೆಕೋಲುಗಳು (ದಾಂಶ್ರ. I, ೩೩೮). **ಚಿಮಟೆ:** ೨. ನಿಂಗಿಯು . . . ಜರದಾ ತಂಬಾಕಿನ ಚಿಮಟೆಯನ್ನು ಬಾಯಲ್ಲಿಟ್ಟುಕೊಂಡಳು (ರಕ್ತಧ್ವ. ೨೨೫). **ಚಿಮುಟ:** ೧. ಒಂದು ದಬ್ಬಳ, ಒಂದು ಚಿಮುಟ . . . ಇತ್ಯಾದಿ ಸಲಕರಣೆಗಳು ಬೇಕು (ಮುದ್ರಕ. ೨೦); ಕತ್ತರಿ, ಚಿಮುಂಟ – ಇವು ಸನ್ನೆಗಳು (ಶಿಶ್ವಿನಾ. ೦೯೫). **ಚಿಮ್ಮಟ:** ೧. ಅಮ್ಮಮ್ಮ ಕ್ರೂರದಿ ಕೊಯ್ದು ಬಿಸುಡುತ್ತಲ್ಲಿ ಚಿಮ್ಮಟಗಳಿಂ ತಿಱಿದು ತಿಱಿದು ಚಿಮ್ಮುತ್ತಲ್ಲಿ (ಹೊಮ್ಮರ. ೧೬೬-೧೮). **ಚಿಮ್ಮಟೆ:** ೧. ನೆಱೆ ಕಾದ ಚಿಮ್ಮಟಗಳಲಿ ಖಂಡವ ತೆಗೆವರು (ನಿಘಾಗ. ೫-೧೧-೨೬).

[ ←ಹಿಂ. ಚಿಮಟಾ, ಚಿಮಟೀ; ಮರಾ. ಚಿಮಟ್, ಚಿಮಟಾ, ಚಿಮೂಟ್. / ತಮಿ. ಚಿಮಿಟ್ಟಾ; ತುಳು. ಚಿಮಟಿ. ಚಿಮಿಂಟ, ಚಿಮ್ಮಿ; ತೆಲು. ಚಿಮಟ, ಚಿಮ್ಮಟ ]

**ಚಿಮ್ಮುರಿ** (ನಾ). ೧. ತಲೆಯುಡಿಗೆ; ರುಮಾಲು: ದೊಡ್ಡಮುದ್ರೆಯ ಕಳ್ಳರು ತುಱುಬು ಚಿಮ್ಮುರಿಗಳ ಕಟ್ಟಿ ಹಗರಣದ ನಿಱುಗುರುಳ ಬಾಲೆಯರ ಮುಂದೆ . . . ಬೀಗಿ ಬೆಱೆಯುತ್ತಿಪ್ಪರು (ವಾಣೀಮಾ. ೧೮೮-೭೦೯); ತುಱುಬು ಚಿಮ್ಮುರಿ ಚಿಂದಿ ಕಾಸೆಯ ಸೆಱಗು (ಪ್ರಭುಲೀ. ೫-೭); ಕತ್ತರಿಸಿದ ಪನ್ನೆಯೊತ್ತಿದ ಕೊನೆಮಿಸೆ ಸುತ್ತಿದ ಚಿಮ್ಮುರಿ (ಕುರಾಸಾಂ. ೪೦-೯೨);

ನೀಳಕುಂತಳದ ವಿಡಾಯ ಚಿಮ್ಮುರಿಯ ಚೆಲ್ವ ತುಱುಂಬಿನ . . . ಏಟ ಸಾರ್ವಭೌಮ (ಹಮ್ಮೀರ. ೬-೨೦). ೨. ಬಿಗಿದ ದಟ್ಟಿ; ವೀರಗಚ್ಚೆ: ಸುತ್ತಿದ ಚಿಮ್ಮುರಿ ತೊಟ್ಟಿದ್ದ ಚಿಮ್ಮುರಿ ಮತ್ತು ಹಿಡಿದ ಕೈಯಲುಗು ಮುತ್ತಿನ ಸಂಜೋಗದ ಕುಡುರೆಯನೇಱಿಯುತ್ತಮರಾಘವರೆಯ್ದು (ಚೀಜಂಸಾಂ. ೩-೩೮): ಮುರಿದುಟ್ಟ ಕಾಸೆ ಚಿಮ್ಮುರಿ ಬಿಟ್ಟ ಜಡೆ (ಭರತ. ೬೩-೦೪). ೩. ಕೈಗಳನ್ನು ಬೆನ್ನ ಹಿಂದೆ ಸೇರಿಸಿ ಬಿಗಿದು ಕಟ್ಟುವುದು; ಹೆಡಮುರಿಗೆ; ಹಿಂಗಟ್ಟು: ಸಾಧುಗಳನಾದರಿಸುವೆನು ಮಾಱಾಂತರನು ಚಿಮ್ಮುರಿಯ ಬಿಗಿಸುವೆನವರಿಯರ ಕಡೆಗಣ್ಣ ಕಣ್ಣ ಯಲಿ (ಕುಮಾ.ಸ.೨-೩೦). [ ? + ಮುರಿ$_3$ ]

**ಚಿರ** (ಗು). ೧. ದೀರ್ಘಕಾಲ ಬಾಳುವ; ಬಹುಕಾಲದ. 'ಚಿರಕಾಲ' ಪರಾ. (ನಾ). ೨. ಬಹುಕಾಲವಿರತಕ್ಕುದು; ಶಾಶ್ವತಮಾದುದು: ಚಿರಮಲ್ಲೆನ್ನಯ ತೇಜಮುಂ(ಅಜಿಂಪು. ೬-೬೯); ಅರಸೊತ್ತಿಗೆಯ ನಂಬಿ ಬರುಸು ಮಾತುಗಳೇಕೆ ಚಿರವೆ ಹೊಡಿಸಿಲು ತಿಳಿಯರಸ ಪರಿಕಿಸಲು (ಅಕ್ಷ. ೨೪೩). [ ಸಂ. ]

**ಚಿರಋಣಿ** (ನಾ). ಉಪಕಾರವನ್ನು ಸದಾ ಸ್ಮರಿಸಿಕೊಳ್ಳುತ್ತಿರುವವನು; ಕೃತಜ್ಞ: ನಾನು ಅವರಿಗೆ ಚಿರಋಣಿ (ಜೀವಾತ್ಮ. XI. ಸಂಕೆಲ್ಪ); ನಾನು ತಮ್ಮ ಉಪಕಾರಕ್ಕೆ ಚಿರಋಣಿಯಾಗಿರುತ್ತೇನೆ (ರಾಯಳ. ೩೫); ಅವುಗಳ ಅಪಾರವಾದ ಮಹತ್ವವನ್ನು ತೋರಿಸಿಕೊಟ್ಟಿದ್ದಕ್ಕೆ ಭಾರತೀಯರು ಚಿರಋಣಿ (ಕಶ್ಮ. ೩೬). [ ಸಂ. ಚಿರಋಣಿನ್ ]

**ಚಿರಂ** (ಅ). ಶಾಶ್ವತವಾಗಿ; ಯಾವಾಗಲೂ: ಕೆಸಱಿಕ್ಕುಗೆ ಭೃಗುಸುತನುದಯಮಾಗೆ ನಿಲ್ಕುಂ ಚಿರಮುಂ (ಶೋಕೋಪ. ೩-೨೬). [<ಚಿರ]

**ಚಿರಂಜೀವ** (ನಾ). ೧. ಬಹುಕಾಲ ಬಾಳುವವನು, ಬದುಕುವವನು. ೨. ಹಿರಿಯರು ಚಿಕ್ಕವರನ್ನು ಕರೆಯುವಾಗ ಬಳಸುವ ಶಬ್ದ: ಚಿರಂಜೀವ, ರಾಜಶ್ರೀ . . . ಮೊದಲಾದ ಶಬ್ದಗಳನ್ನೂ . . . ಪತ್ರ ಸ್ವೀಕರಿಸತಕ್ಕವರ ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯವುಂಟು (ಮುಂಬಯಿ. ೯-೮೪). ೩. ಮಗ; ಪುತ್ರ: ಇಂವ ನಿನ್ನ ಚಿರಂಜೀವ ಏನು? (ಅಪಪಾ. ೦೦). [ ಸಂ. ]

**ಚಿರಂಜೀವಿ** (ನಾ). ೧. ಬಹಳ ಕಾಲ ಬದುಕಿರುವವನು. ೨.= ಚಿರಂಜೀವ ೩: ತಮ್ಮ ಚಿರಂಜೀವಿ ಎಂತಹ ಸುಸಂಸ್ಕೃತ ಯುವಕ(ಮಹಾಗ. ೦೮೩). ೩. ಬಹಳ ಕಾಲ ಬದುಕಿರುವವರೆಂದು ಪುರಾಣಪ್ರಸಿದ್ಧರಾದ ಏಳು ಜನರು; ಅಶ್ವತ್ಥಾಮ, ಬಲಿ, ವ್ಯಾಸ, ಪರಶುರಾಮ, ವಿಭೀಷಣ, ಕೃಪಾಚಾರ್ಯ ಮತ್ತು ಆಂಜನೇಯ. P ಕೆಲವರು 'ಮಾರ್ಕಂಡೇಯ' ನನ್ನೂ ಇವರ ಜೊತೆ ಸೇರಿಸುತ್ತಾರೆ. ೪. ಕಾಗೆ: ದೊರೆಯೇ ಮಲ್ಲಿಗೆಗೆಕ್ಕೆ ಹಂಸೆಗೆ ಬಕಂ . . . ಬಕನಿಶಾಯ[ಕ್ಕೆ] ಚಿರಂಜೀವಿಗಳ್ (ಕಾ. IV, ೦-೮೯; 1284). [ ಸಂ. ಚಿರಂಜೀವಿನ್ ]

**ಚಿರಂಟಿ**(ನಾ). ೧. ತಂದೆಯ ಮನೆಯಲ್ಲಿಯೇ ಇರುವ ಪ್ರಾಪ್ತವಯಸ್ಕಳಾದ ಹೆಂಗಸು. ೨. ಯುವತಿ: ಪಾಡೆ ಚಿರಂಟಿಯರ್ (ಜಾದ್ಯಟಿ. ೬-೭೦). [ ಸಂ. ಚಿರಂಟೀ ]

**ಚಿರಂಟಿಕೆ** (ನಾ). = ಚಿರಂಟಿ ೧: "ಚಿರಂಟಿಕೆ ಸುವಾಸಿನಿಯಪ್ಪವಳುಂ ವಯಸ್ಥೆಯುಂ" (ವಸ್ತುಕೋ. ೦೨೬-೬೩). [ ಸಂ. ಚಿರಂಟಿಕಾ ]

**ಚಿರಂತನ** (ಗು). ೧. ಪೂರ್ವದ; ಹಿಂದಿನ ಕಾಲದ; ಪ್ರಾಚೀನವಾದ: ಚಿರಂತನಭವದ ಕಿಲ್ಬಿಷ ಕರ್ಮಪಾಕವ್ರವರ ದುರಿಯೋಧನನ ಸದ್ಮದೊಳು ಮಾತ್ರದಲಿ ಎವಗೆ ರಚಿಸಿತು ರಾಜ್ಯವಿಭ್ರಂಶವನು (ಕುಮಾಗ. ೦೦-೪೪). ೨. ಸ್ಥಿರವಾದ; ಶಾಶ್ವತವಾದ: ಆತ್ಮಜ್ಞಾನ, ಜಗದ ಅನುಭವ, ಅನುಭಾವಗಳೇ ಅಕ್ಕನ ಸಾಹಿತ್ಯಕ್ಕೆ ಚಿರಂತನ ವಸ್ತು! (ಕನ್ನಾಳ. ೭೬). (ನಾ). ೩. ನಿರಂತರ; ಸತತ: ಚಿರಂತನವೂ ಮೊತನವೇರುತ್ತಿರುವ ಜೀವನದ ಸ್ವರೂಪ ಎಂಥದು? (ಶಿಕ್ಷಪ. ೦). ೪. ವಯಸ್ಸಾದವನು; ಹಿರಿಯ: ಅವಱೊಳಗೆ ಚಿರಂತನನುಂ ಬುದ್ಧಿವಂತನುಮಪ್ಪುದೊಂದು ಕಪೋತಂ ಪಕ್ಷಿಗಣಕ್ಕಿಂತೆಂದುದು (ಪಂಚತಂ. ೨೮೮-೦೯). [ ಸಂ. ]

**ಚಿರಂತಹಿಂಸೆ** (ನಾ). ಒಂದು ಬಗೆಯ ನರಕ: ಯಮಮಾನುಗನಿಯುವ . . . ಚಿರಂತಹಿಂಸೆಗಳೆಂಬ್ಬೆದು ಮಂತ್ರಿನರಕಂಗಳಂ ಭಯಂಕರಮಾಗಿ ಯಮಪಾಯಿಯೆಯುಂಬರಸುವರಕವಿಹುದು (ವಿವೇಕ. ೦೫೦). [ ? + ಹಿಂಸೆ ]

**ಚಿರಂತನಾಚಾರ್ಯ** (ನಾ). ಹಿಂದಿನ ಕಾಲದ ಆಚಾರ್ಯ, ವಿದ್ವಾಂಸ: ಮಿಗೆ ಕನ್ನಡಗಬ್ಬಂಗಳೊಳಗುಣತಗುಣಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸುವರ್ಗದ್ಯಕಥಾಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್ (ಕವಿರಾ. ೦-೨೬). [ ಚಿರಂತನ + ಆಚಾರ್ಯ ]

**ಚಿರಕಾಲ** (ನಾ). ಬಹಳ ಕಾಲ; ದೀರ್ಘಕಾಲ: ಚಿರಕಾಲಂ ಬಂಧವದೊಳ್ ಮುರುಳಾಗಿರ್ದನ ಮರುಳ್ತನಂ ತಿಳಿವವೊಲೋಸರಿಸಿರೆ ಮಿಥ್ಯಾತ್ವಂ (ಜಗನ್ನಾ. ೦೫-೩); ಅಂತು ದೀಕ್ಷೆಯಂ ಕೆಯ್ಕೊಂಡು . . . ಚಿರಕಾಲಮಿರ್ದು (ಪುಷ್ಪ. ೯-೫ ವ). [ ಚಿರ + ಕಾಲ ]

**ಚಿರಕಾಲಿಕ** (ನಾ). ಬಹಳ ಕಾಲ ಇರುವುದು: ಜನಸಮುದಾಯವು ಒಂದು ರಾಜಕೀಯೋದ್ದೇಶದಿಂದ ಚಿರಕಾಲಿಕವಾಗಿ ಸ್ಥಾಪಿಸಲ್ಪಟ್ಟಿರಬೇಕು (ರಾಜ್ಯಾಂಗ. ೨೭); ಆ ಸತ್ಯ ಚಿರಕಾಲಿಕವಾಗಲಿ ಎಂದು ಶ್ರುಪಿಸುವ ಮಾತು ಬೇರೆ (ಕಾತ್ಯಾ. ೨೭೯). [ ಸಂ. ]

**ಚಿರಚ** 'ಚಿರತೆ$_1$' ನೋ.

**ಚಿರಚು** 'ಚಿರತೆ$_1$' ನೋ.

**ಚಿರಜೀವಿ**(ನಾ). ೧. ಬಹಳ ಕಾಲ ಬದುಕುವವನು; ದೀರ್ಘಾಯುಷ್ಯುಳ್ಳವನು: ಪುತ್ರಾನ್ವಿತಂ ಲಂಬಮುಷ್ಕನವಂ (ಶಾಂ) ಚಿರಜೀವಿ ತತ್ಸಮತೆಯಿಂದಂ ಧೈರ್ಯಮಂ ತಾಳ್ದುಗುಂ (ಶೋಕೋಪ. ೦೦-೫); ಕಡಲ ಕಡೆ. ಸುಧೆಯ ಕುಡಿ, ಹರಿಹರರ ಮೀರಿ ಚಿರಜೀವಿಯಾಗು! (ಜಾಂಪ. ೪೪-೩). ೨. ಕಾಗೆ: "ಅರಿಷ್ಟ: . . . ಚಿರಜೀವೀ, ವಾಯಸ:- ೧೦ ಕಾಗೆ" (ಜಲಾಯು. ೪೦-೯೨). [ ಸಂ. ಚಿರಜೀವಿನ್ ]

**ಚಿರಜೀವಿತೆ** (ನಾ). ಬಹಳಕಾಲ ಬದುಕುವಿಕೆ; ಶಾಶ್ವತವಾಗಿರುವಿಕೆ: ಇನ್ನೇವೆಸಗೊಂಡಪುದಣ್ಣ ನರರ ಚಿರಜೀವಿತೆಯಂ (ಜಂದ್ರಪು. ೩-೩೨). [ಸಂ. ಚಿರಜೀವಿತಾ ]

**ಚಿರಡಿ$_1$** (ನಾ). ಕಿರಿಗೆ; ಚಿಕ್ಕಸೀರೆ: ಚಿರಡಿ ಚಂದಿ ಕದ್ದನಂತೆ (ಕಪಡಾ. II, ೬೫೩). [ ←ಮರಾ. ಚಿರಡೀ ]

**ಚಿರಡಿ$_2$** (ನಾ). ಕೋಪ; ಸಿಟ್ಟು: ಅವನ ಚಿರಡಿಗೆ ಕರಸ್ಥಾನ (ದಾಜಕ. II, ೨೦೭).

**ಚಿರಡಿಗೇಳು**=ಸಿಟ್ಟಿಗೇಳು; ರೇಗು: ಚಿರಡಿಗೆದ್ದು ರಾಗಿನ್ನ ಒಂದೇಟು ಹೊಡೆದ (ತ್ರಿಪಿ. ೩೫೩); ಅವರಿಗೆ ಉಂಟಾದ ಕುಂಠಿತತನವನ್ನು ಕಂಡು ಅವರು ಬಹಳ ಚಿರಡಿಗೇಳುವರು (ಸ್ವತಿಪ. ೪೨೯). [ ←ಮರಾ. ಚಿರಡೀ ]

**ಚಿರಣ** 'ಚೀರಣ' ನೋ.

**ಚಿರಣಗೆಲಸ** 'ಚೀರಣಗೆಲಸ' ನೋ.

**ಚಿರತೆ$_1$**, ಚಿರಚ, ಚಿರಚು, ಚಿರ್ಚ, ಚಿರ್ಚು (ನಾ). ಮೈಮೇಲೆ ಚುಕ್ಕೆಗಳಿರುವ ಹುಲಿಜಾತಿಗೆ ಸೇರಿದ ಒಂದು ಬಗೆಯ ಕ್ರೂರಪ್ರಾಣಿ; ಚಿಟ್ಟೆಹುಲಿ: ಹುಲಿಜಾತಿ: ಹುಲಿ, ಹೆಬ್ಬುಲಿ . . . ಚಿರತೆ (ನಮ್ಮನು. ೨೩೯). ಚಿರಚ: ಹುಲಿ ಜಾತಿ: ಹುಲಿ, ಹೆಬ್ಬುಲಿ . . . ಚಿರತೆ, ಶಿವಂಗಿ, ಚಿರಚ (ನಮ್ಮನು. ೨೩೯). ಚಿರಚು: ಚಿರಚು ಕಾಮುಕಪ್ರಾಣಿಯೆಂದೂ . . . ಹೇಳಿರುವನು (ಪಶುಪ. ೨೯). ಚಿರ್ಚ: (೩). ಚಿರ್ಚು: ಅಡವಿಗಳಲ್ಲಿ ಚಿರ್ಚು . . . ಅಡವಿಯ ಬೆಕ್ಕು ಮುಂತಾದವುಗಳಿರುತ್ತವೆ (ಜಿಪಪ. ೩೪) [ ದೇ.೩ ತಮಿ. ಚಿಱುತ್ತೈ; ಕೊಡ. ಚಿರತೆ; ತೆಲು. ಚಿಱುತ ]

**ಚಿರತೆ೨** (ನಾ). ಶಾಶ್ವತ ಪದವಿ ; ಮೋಕ್ಷ : ನಲವಿಂದ ಚಿರತೆಯು ಬಯಸಿ ಜಿನೇಂದ್ರನ ಚರಣಸೇವೆಯನಂ ಮಾಳ್ಪೆನೆಂದು (ಚಂಪ್ರಚ. ೩೯-೦೨೬). [ ಸಂ. ಚಿರತಾ ]

**ಚಿರನವತೆ** (ನಾ). ಸದಾ ಹೊಸದಾಗಿರುವಿಕೆ: ಒಂದು ಕೊಂಬೆಯು ಬಾಡಲಿನ್ನೊಂದು ಚಿಗುರುವುದು ಸಂದಿಹುದು ಚಿರನವತೆಯುತ್ಸತ್ತ್ವ ಮಾದೆ (ಮುಕುಳ. ೨೩೨). [ ಚಿರ + ನವತೆ ]

**ಚಿರನಿದ್ರೆ** (ನಾ). (ಅಲಂ) ಸಾವು: ಆ ರೋಗಿಯನ್ನು ಚಿರನಿದ್ರೆ ಆವರಿಸಿತು (ರೂಢಿ). [ ಚಿರ + ನಿದ್ರೆ ]

**ಚಿರನಿಧಿ** (ನಾ). ಶಾಶ್ವತವಾದ ಆಶ್ರಯ ; ಶಾಶ್ವತವಾದ ನೆಲೆ: ವಿವಿಧ ಪಯೋಜದಿ ವ್ಯರ್ಥಾಯಾಸದಿ ತೊಳಲಿದೆ ತೃಪ್ತಿಯ ಚಿರನಿಧಿಗೆ (ಅಗ್ನಿಹಂ. ೦೦-೬). [ ಚಿರ + ನಿಧಿ ]

**ಚಿರನಿಮಿಷ** (ನಾ). ಬಹಳ ಹೊತ್ತು ಕಣ್ಣು ಮುಚ್ಚಿಕೊಂಡಿರುವುದು : ಇರ್ದುದನಿಮಿಷಜಾತಂ ಚಿರನಿಮಿಷವಪಾಗೆ ಕಣ್ಣಾಳ್ಮನಂ (ಅಜಿ. ೦-೪೭). [ ಚಿರ + ನಿಮಿಷ ]

**ಚಿರನೂತನ** (ನಾ). ಸದಾಕಾಲ ಹೊಸದಾಗಿರುವುದು : ಆವನ ಕಾವ್ಯ ಕನ್ನಡಕ್ಕೆ ಚಿರನೂತನ ಚಿರಂತನ (ಸಾಹಿಸ. ೦೦೯). [ ಚಿರ + ನೂತನ ]

**ಚಿರಪರಿಚಿತ** (ನಾ). ಬಹುಕಾಲದಿಂದಲೂ ತಿಳಿದಿರುವುದು : ಇದು ದಿನದಂಥ, ಚಿರಪರಿಚಿತವಾದ ಹಗಲಲ್ಲ (ಬೆಕಂಬಾ. ೦) ; ಮತ್ಸ್ಯ, ಕೂರ್ಮ . . . ಕಲ್ಕಿ ಎಂಬ ದಶಾವತಾರಗಳು ಚಿರಪರಿಚಿತವಾಗಿವೆ(ಭಾರಲ. ೧೯೨). [ ಚಿರ + ಪರಿಚಿತ ]

**ಚಿರಪು** 'ಸೆಜಿಪು' ನೋ.

**ಚಿರಪ್ರಣಯ** (ನಾ). ಬಹುಕಾಲದ ಪ್ರೀತಿ : ಕಡೆಯಲ್ಲಿ ಒಂದು ಬಾರಿ ಮುದ್ದಿಸಿ ಚಿರಪ್ರಣಯವಿದ್ದುದರಿಂದ ಮತ್ತೆ ಮರುಗಿದವನಾಗಿ . . . ಅಳತೊಡಗಿದನು (ಕವಿಕ. ೩೨). [ ಚಿರ + ಪ್ರಣಯ ]

**ಚಿರಬಿಲ್ವ** (ನಾ). ಹುಲಿಗಿಲ ಮರ ; ಹೊಂಗೆಮರ ; ಕರಂಜವೃಕ್ಷ : ಅರನೇಜಿಲ್ ತಾಜಿ . . . ದಿಂಡಂ ಚಿರಬಿ[ಪಾಠಾಂ. ಚಿ]ಲ್ವಂ ಬೃಹ್ಮವೃಕ್ಷಂ ಕಜಿಕೆ ತಜಿಯದಿಂದೊಪ್ಪುಶಿರ್ದತ್ರರಣ್ಯಂ (೧೧೪. ೦-೭೨). [ ಸಂ. ]

**ಚಿರಮಂಗಲವತಿ** (ನಾ). ಯಾವಾಗಲೂ ಮುತ್ತೈದೆತನವನ್ನುಳ್ಳವಳು : ಚೆನ್ನಮಲ್ಲಿಕಾರ್ಜುನನನ್ನು ಅಮರಪತಿಯನ್ನಾಗಿ ವರಿಸಿದಳು ; ಚಿರಮಂಗಲವತಿಯಾದಳು (ಕಾಳಬ. ೬೦). [ ಸಂ. ಚಿರಮಂಗಲವತೀ ]

**ಚಿರಮುತ್ತೈದೆ** (ನಾ). = ಚಿರಮಂಗಲವತಿ : ಆಯುಷ್ಮವಂತೆಯಾಗಿ ಐಶ್ವರ್ಯವಂತೆಯಾಗಿ ಚಿರಮುತ್ತೈದೆಯಾಗಿರು (ಶಂಗಾಳ್. ೦೨). [ ಚಿರ + ಮುತ್ತೈದೆ (<ಮುತ್ತ್ರೈದು) ]

**ಚಿರರಾತ್ರ** (ನಾ). ಅಸಂಖ್ಯಾತ ರಾತ್ರಿಗಳು ; ಬಹಳ ಕಾಲ ; ದೀರ್ಘಕಾಲ : "ಹಲವಿರುಳಾದೆಡೆ ಗಣರಾತ್ರವೆಂಬುದು ಅಲ್ಲಿಂದಂ ಮೇಲೆ ಚಿರರಾತ್ರವೆಂಬುದು" (ಶಬ್ದಾನು. ೦೮-೦೦೮). [ಸಂ.(ಚಿರ + ರಾತ್ರಿ + – )]

**ಚಿರರಾತ್ರೆ** (ನಾ). = ಚಿರರಾತ್ರ : "ಚಿರರಾತ್ರೆಯೆಂಬುದುವಸಂಖ್ಯಾತ ದಿರುಳು" (ಮಂಗರಾ. ೩೦-೭). [ ಸಂ. ಚಿರರಾತ್ರ ]

**ಚಿರವಿಚ್ಛೇದ** (ನಾ). ಶಾಶ್ವತವಾದ ಬೇರ್ಪಡೆ,–ಅಗಲಿಕೆ : ಕಪಾಲ ಕುಂಡಲೆಗೂ ಅವಳ ಸ್ವಾಮಿಗೂ ಚಿರವಿಚ್ಛೇದ ಉಂಟುಮಾಡುವುದೊಂದೇ ಉದ್ದೇಶ (ಕಪಾಕುಂ. ೯೨). [ ಚಿರ + ವಿಚ್ಛೇದ ]

**ಚಿರವಿಲ್ವ** (ನಾ). ಚಿರಬಿಲ್ವ: "ಕರಂಜಕಾ" (ಪಂಡಿತ). [ ಸಂ. ]

**ಚಿರಶಾಂತಿ** (ನಾ). ಶಾಶ್ವತವಾದ ನೆಮ್ಮದಿ : ವಿಶ್ವವು ಜೀನರಿಗಮೃತವು ಅಮೃತವು ಚಿರಶಾಂತಿ ಸಂನ್ಯಾಸಿಗಳಿಗೆ (ಅಂಜಾಪ. ೭೩-೩೩); ಮತ್ತೆ ಹಿಂದಿರುಗಲಾರದ ಆ ದೇವದೇವನ ರಾಜ್ಯದಲ್ಲಿ ಚಿರಶಾಂತಿಯನ್ನರಸುತ್ತಾ ತೆರಳಿದ್ದರು (ಕುಟುಸಂ. ೬೦೨). [ ಚಿರ + ಶಾಂತಿ ]

**ಚಿರಸೂತೆ** (ನಾ). ಬಹುಕಾಲವಾದ ಮೇಲೆ ಕರು ಹಾಕಿದ ಹಸು; "ಚಿರಸೂತಾ, ಬಷ್ಕಯಣೀ – ೨ – ಬಹುಕಾಲಕ್ಕೆ ಈಯಲಾದ ಆಕಳಿಗೂ ಈಯದಲಾದರೂ ಬಹುಕಾಲ ಹೆರಿಗೆಯಿಲ್ಲದೇ ನಿಂತ ಆಕಳಿಗೂ, ಬಹುಕಾಲಕ್ಕೆ ೧ ಸಾರಿ ಈಯುವ ಆಕಳಿಗೂ, ಹೆಸರುಗಳು, ಕಡೆಗಂದಿನ ಆಕಳು" (ಸಿದ್ಧಾಂತಿ. ೨೩೩). [ ಸಂ. ಚಿರಸೂತಾ ]

**ಚಿರಸ್ಥಾಯಿ** (ನಾ). ಬಹಳ ಕಾಲ ತಾಳುವ ಸ್ವಭಾವವುಳ್ಳದು ; ದೀರ್ಘಕಾಲ ಉಳಿಯುವಂತಹುದು ; ದಾಳಿ, ಶುಂಠಿ ಮುಂತಾದ ಸಸ್ಯಗಳು ಬಹುಕಾಲ ಬದುಕುವವು, ಇವುಗಳು ಚಿರಸ್ಥಾಯಿ (Perennials) ಪೈರುಗಳು (ಸಸ್ಯಶಾ. ೨೪); ದೇಶಚರಿತ್ರೆಯಲ್ಲಿ ಮಾತೆಯ ಸ್ವಾತಂತ್ರ್ಯಕ್ಕಾಗಿ ಹೋರಾಡಿದನೆಂದು ನಿನ್ನ ಹೆಸರು ಚಿರಸ್ಥಾಯಿಯಾಗಿ ನಿಲ್ಲಲಿ(ಹಿಂಕಿರು. ೨೪). [ ಸಂ. ಚಿರಸ್ಥಾಯಿನ್ ]

**ಚಿರಸ್ಥಾಯಿಸು** (ಕ್ರಿ). ಸದಾಕಾಲದಲ್ಲೂ ನೆಲಸುವಂತೆ ಮಾಡು : ನನ್ನ ಹೆಸರಂ ಜಗದಿ ನಿನ್ನಿಂ ಚಿರಸ್ಥಾಯಿಸುವೆವೆಂಬ ಪಂಥಕೇಂ ಮಣ್ಣೂಡಿಸಲೆ? (ಹರಿಶ್ಚರ. ೨೬-೩೪). [ ಚಿರಸ್ಥಾಯಿ + – ಇಸು೨ ]

**ಚಿರಸ್ಮರಣೀಯ** (ನಾ). ಸದಾಕಾಲ ನೆನಸಿಕೊಳ್ಳುವಂತಹುದು : ಗುಪ್ತರ ಸೇವೆ ಚಿರಸ್ಮರಣೀಯ (ಪುಣ್ಯಾರ. ೦೦೭ ಬೀ೬೪). [ ಚಿರ + ಸ್ಮರಣೀಯ ]

**ಚಿರಾತೀತ** (ಗು). ಬಹಳ ಹಿಂದೆ ಕಳೆದುಹೋದ. [ ಚಿರ + ಅತೀತ ]

**ಚಿರಾಯತ** 'ಕಿರಿಯಾತು' ನೋ.

**ಚಿರಾಯಿ** (ನಾ). ಹೊದಿಸುವ ಬಟ್ಟೆ (?) : ಚಂದ್ರನೋಪಾದಿಯಲ್ಲಿ ಬಿಳುಪಾಗಿ ಮನೋವೇಗವುಳ್ಳ ಮಹಾವೃಷಭಗಳಂ ಕಟ್ಟಿ ಚೆನ್ನದ ಚಿರಾಯಿಗಳಿಂದ ಮುಚ್ಚಲ್ಪಟ್ಟಂಥಾದ್ದಾಗಿ (ಶಿವದ. ೩೮-೪). [ <ಚೀರ೨ ]

**ಚಿರಾಯಿತ** 'ಕಿರಿಯಾತು' ನೋ.

**ಚಿರಾಯು** (ನಾ). ೧. ದೀರ್ಘಾಯುಸ್ಸು: ನಿರ್ಮಳತೆ ಚಿರಾಯು ವೈರಿಪುರ ತೂನ್ನತೆ . . . ವಿಮುಕ್ತಿಯೆಂಬಿವಂ ಪಡೆವಂ (ರಾಜಶೇ. ೩-೧೦೦). ೨. ದೀರ್ಘಾಯುಸ್ಸುಳ್ಳವನು : ಸೂಸದೆ ಸೈತುಮೆಯ್ದೆ ಪಕ್ಷವುಮವರ ಪ್ರದೇಶಮುಮಗಲ್ದಿರೆ ವಾಜಿ ಚಿರಾಯು ನಿಶ್ಚಯಂ(ಲೋಕೋಪ. ೦೦-೬೩). ೩. ಕಾಗೆ: "ಕಾಕಂ ಚಿರಕಯು . . . ಕರಟವೆನೆ ಕಾಗೆ" (ಮಂಗರಾ. ೩೦-೩). [ ಸಂ. ಚಿರಾಯುಸ್ ]

**ಚಿರಾಯುಷ್ಮತಿ** (ನಾ). ಬಹುಕಾಲ ಬದುಕುವ ಹೆಂಗಸು : ನೀನು ಚಿರಾಯುಷ್ಮತಿಯಾಗಿರು, ನನಗೆ ಪ್ರಾಣದಾನವನ್ನು ಮಾಡಿದೆ (ಕಪಾಕುಂ. ೦೨೦). [ಸಂ. ಚಿರಾಯುಷ್ಮತೀ ]

**ಚಿರಾಯುಷ್ಯ** (ನಾ). ಬಹಳಕಾಲ ಬದುಕುವಿಕೆ ; ದೀರ್ಘಾಯುಷ್ಯ : ಶುಭಮಸ್ತು ಶೋಭನಮಸ್ತು . . . ಚಿರಾಯುಷ್ಯಮಸ್ತು(ಮುದತಿ. ೬-೨ ಅಡಿಟಿ). [ ಚಿರ + ಆಯುಷ್ಯ ]

**ಚಿರಾಸಾಣಿ** (ನಾ). ಒಂದು ಬಗೆಯ ಓಮ ; ಖುರಾಸಾನಿ: ಲವಂಗ, ಚಿರಾಸಾಣಿ, ಓಮ, ವಾದಕ್ಕಿ, ಚವ್ಯ, ಚಿತ್ರಮೂಲ . . . ಚೂರ್ಣವ ಮಾಡಿ ತೆಗೆದುಕೊಳ್ಳುವುದು (ವಿಶ್ವವಿ. ೫೯). [ <ಖುರಾಸಾನಿ ]

**ಚಿರಿ** (ನಾ). ಒಂದು ಅನುಕರಣ ಶಬ್ದ. 'ಚಿರಿಗುಟ್ಟು'. ಮರಾ.

**ಚಿರಿಗಾವುಂಡ** (ನಾ). ಒಬ್ಬಾತನ ಹೆಸರು : ಬಂನವತ್ತಕಯ ಪ [ದ್ಮ] [ರ] ಸನುಂ ಅಲ್ಲಿಯ ಹಿರಿಯಕೇರಿಯ ಚಿರಿಗಾವುಂಡನುಂ ತಂಬರಸಾಂಯು ಗಾವುಂಡನುಂ (ಸೌಇಇ. XI-4, ೩೦-೩೩ ; 1005). [ ಚಿರಿ೧ + ಗಾವುಂಡ (<ಗಾವುಂಡ) ]

**ಚಿರಿಗುಟ್ಟು** (ಕ್ರಿ). ಚಿರ್ರೆಂದು ಶಬ್ದಮಾಡು : ಕರುಳುಗಳನು ಹಿಂಡಿಂದು ಅಸ್ಥಿಗಳನು ಭರದಿ ಬಿಸುಟು ರಕ್ತವನು ಚಿರಿಗುಟ್ಟಿ ಹೀರುವ ಪುಂಡರೀಕನ ಕಂಡು (ಜ್ಞಾನಸಿ. ೨೬-೯).

ಚಿರಿಚಿರಿಗುಟ್ಟಿಸು=ಚಿರಿಚಿರಿ ಎಂದು ಕಿರುಚುವ ಹಾಗೆ ಮಾಡು,- ಕೂಗಿ ಕೊಳ್ಳುವಂತೆ ಮಾಡು : ಮರದ ಮಾಂಗಾಯ್ಮಂಗನನು ಬಲು ಚಿರಿಚಿರಿಗುಟ್ಟಿಸದಿರೆ ನಾನು (ಪಲಾಂಡು. ೬). [ ಚಿರಿ + ಕುಟ್ಟು$_1$ ]

**ಚಿರಿಚು** (ಕ್ರಿ). ನಗು : ಉಕ್ಕಿಬರುವ ನಗುವನ್ನು ಅದುಮಿ ನಗು ; ಚಿರಿಚು (Titter. ಇಂಕನಿ). [ ದೇ.$_1$ ತಮಿ. ಮುಲ. ಚಿರಿ ]

**ಚಿರಿಟು** 'ಸುರುಂಟು' ನೋ.

**ಚಿರಿವೇರು** 'ಚಿಱುವೇರು' ನೋ.

**ಚಿರು** 'ಚಿಱು' ನೋ.

**ಚಿರುಕುಟ** (ನಾ). ಚಿಂದಿ ; ಹರುಕು ಬಟ್ಟೆ : ಚಿರುಕುಟ [ಪಾಠಾಂ. ಚಿರಕುಟ] ಮನುಟ್ಟು ಕಯ್ಯೊಳ್ ಕಿರಿದುಣುತಂ ದೆಸೆಗೆ ನಗುತುವಮಾಡುತ್ತಿಪ್ಪಾ ಮರುಳ್ (ಸಮಯ. ೧೨-೩೩).

[ ? ./ಮರಾ. ಚಿರಕುಟ, ಚಿರಕೂಟ, ಚಿರಗುಟ, ಚಿರಗೂಟ, ಚೀರಕುಟ ]

**ಚಿರುಗುಳ್ಳ** 'ಚಿಱುಗುಳ್ಳ' ನೋ.

**ಚಿರುಟು** 'ಸುರುಂಟು' ನೋ.

**ಚಿರುಪಿ** (ನಾ). ಒಂದು ಊರಿನ ಹೆಸರು : ಚಿರುಪಿಯು ಚಿನ್ನಕುಕ್ಕೆಯು ಚಿಱಿಯಮೊಬಲು ಪುಳುವಟ್ಟು ನಾಲ್ಕೂರುಮಿಟ್ಟು ನಡೆದ ಕಲ್ಲಿಗೊಡಂಗೆ ಯೊಡ್ಡಿನ ಕೆಬಗೆ (ಸೌಇಇ. IX-i, ೨೬-೧೦ ; 960). [ ? ]

**ಚಿರೂಟು** 'ಚುರುಟು' ನೋ.

**ಚಿರೋಟ** (ನಾ). ಮೈದಾಹಿಟ್ಟು, ತುಪ್ಪ, ಸಕ್ಕರೆಗಳನ್ನು ಕೂಡಿಸಿ ಕರಿದು ಮಾಡುವ ಒಂದು ಬಗೆಯ ಸಿಹಿ ಭಕ್ಷ್ಯ : ಮೈಸೂರಿನಿಂದಲೇ ತಯಾರು ಮಾಡಿ ತಂದಿದ್ದ ಚಿರೋಟಗಳನ್ನೂ ಹುರಿಗಾಳನ್ನೂ ಶಾರದಮ್ಮನವರು ಎಲ್ಲರಿಗೂ ಹಂಚಿದರು (ಮೂಲಾನ. ೧೨೩).

[ ←ಮರಾ. ಚಿರೋಟೀ, ಚಿರೋಟಾ ]

**ಚಿರ್ಚ** 'ಚಿರತೆ$_1$' ನೋ.

**ಚಿರ್ಚಿರಿಲ್** (ನಾ). ಒಂದು ಅನುಕರಣ ಶಬ್ದ : ಇಳಾಮಂಡಲಂ ಚಿಚ್ಚಿರಿಲ್ಲೆಂದೊಡೆಗುಂ (ಸೌಇಇ. XI-ii, ೧೨೬-೦೪ ; 1090).

**ಚಿರ್ಚು** 'ಚಿರತೆ$_1$' ನೋ.

**ಚಿರ್ಪುಳಿ** (ನಾ). ಒಂದು ಊರಿನ ಹೆಸರು ; ಪ ವಂದನವಲ್ಲಿ ತಾಲ್ಲೂಕಿಗೆ ಸೇರಿರುವ ಈಗಿನ ಚಿಪ್ಪಿಲಿ ಎಂಬ ಊರು : ಬಾಣರರ್ಸ ಇತ್ತ ಕೆಯು ಕೆಱೆಯು ನಾಲ್ವತ್ತು ಪುಣಸೆ ಇದಕ್ಕೆ ಉತ್ತರ ಸಾಕ್ಷಿ ಕಣ್ಣಾಗ. x x ಕ ಯಿರು ಚಿರ್ಪುಳಿ x x x ಸಾಕ್ಷಿ ಪಡೆದೊರ್ (ಸೌಇಇ. IX-i, ೦-೫ ; ?).

[ ? ]

**ಚಿರ್ಭಟ** (ನಾ). ಒಂದು ಬಗೆಯ ಸೌತೆ ; ಮೆಕ್ಕೆಗಿಡ ಮತ್ತು ಅದರ ಕಾಯಿ : "ಉರ್ವಾರುಃ, ಚಿರ್ಭಟಃ-ಈ ೨ ಮೆಕ್ಕೆ" (ಹಲಾಯು ೩೫-೫೬).

[ ಸಂ. ]

**ಚಿರ್ಯಾತ** 'ಕಿರಿಯಾತು' ನೋ.

**ಚಿಲಕ** 'ಚಿಲುಕ' ನೋ.

**ಚಿಲಕಡಿ** (ನಾ). ಒಂದು ಬಗೆಯ ಮರ : ಚಿಲಕಧೂಪ, ಚಿಲಕಡಿ, . . . ಧೂಪ (ವೃಕಿಗಿ. ೧೪-೨೩೬). [ ? ]

**ಚಿಲಕತ್ತು** 'ಚಿಲಖತ್ತು' ನೋ.

**ಚಿಲಕಧೂಪ** (ನಾ).=ಚಿಲಕಡಿ : ಚಿಲಕಧೂಪ, ಚಿಲಕಡಿ, ಗುಗ್ಗುಳಧೂಪ, ಮಡ್ಡಿಮರ, ಮಾದಿ, ಚಿತ್ರ, ಧೂಪ (ವೃಕಿಗಿ. ೧೪-೨೩೬). [ ? ]

**ಚಿಲಕಿ$_1$** 'ಚಿಲಿಕೆ$_1$' ನೋ.

**ಚಿಲಕಿ$_2$** 'ಚಿಲಿಕೆ$_2$' ನೋ.

**ಚಿಲಕು** (ನಾ). (ಉಕ) ಗಂಡಸರಿಗೆ ಉಂಟಾಗುವ ಒಂದು ಬಗೆಯ ಮೂತ್ರರೋಗ : (ಕ). [ ? ]

**ಚಿಲಕುರುಳಿ**, ಚಿನಕುರುಳಿ, ಚಿನುಕುರುಳಿ (ನಾ). ೧. ಹುರುಳಿ, ಕಡಲೆ ಮುಂತಾದ ಧಾನ್ಯಗಳನ್ನು ಹುರಿದು ಖಾರ ಹಾಕಿ ಮಾಡಿದ ಒಂದು ಖಾದ್ಯ ವಿಶೇಷ; ಹುರಿಗಾಳು: ಚಿಲಕುರುಳಿ ಮಾರೋಳೆ ತಿಲಕಬೊಟ್ಟಿನ ಕರಿಚಲುವೆ (ಹಳ್ಳಿಯ. ೪೫). **ಚಿನಕುರುಳಿ :** ೧. ನನ್ನ ಸ್ನೇಹಿತ ಊರಿಂದ ತಂದಿದ್ದ ಚಿನಕುರುಳಿ ಬಹಳ ಸೊಗಸಾಗಿತ್ತು (ರೂಢಿ). ೨. ಒಂದು ಬಗೆಯ ಪಟಾಕಿ; ಮದ್ದಿನ ಚಟಾಕಿ: ಪಟಾಕಿ, ಚಿನಕುರುಳಿ, ಹೂಬಾಣ, ಹೂವಿನ ಕುಂಡ (ಚಂಡಮ. ೬೨-೦). ೩. (ಅಲಂ) ಹಾಸ್ಯ; ಜೋಕು: ಈ ವರ್ಷದ ದೀಪಾವಳಿ ಸಂಚಿಕೆಯಲ್ಲಿ ಚಿನಕುರುಳಿ ಸೊಗಸಾಗಿತ್ತು (ರೂಢಿ). **ಚಿನುಕುರುಳಿ :** ೧. ಚಿನುಕುರುಳಿ ಬಹಳ ಚೆನ್ನಾಗಿದೆ (ರೂಢಿ).

[ ಚಿಲಕು ? + ಹುರುಳಿ ]

**ಚಿಲಕೂಲಿ** 'ಚಿಲುಕೂಲಿ' ನೋ.

**ಚಿಲಕೆ** 'ಚಿಲಿಕೆ$_1$' ನೋ.

**ಚಿಲಖತ್ತು**, ಚಿಲಕತ್ತು (ನಾ). ಯುದ್ಧದಲ್ಲಿ ಶರೀರ ರಕ್ಷಣೆಗಾಗಿ ಹಾಕಿಕೊಳ್ಳುವ ಕವಚ ; ಉಕ್ಕಿನ ಕವಚ ; ತನುತ್ರಾಣ ; ಸಮಂಗ : ಅವನು ಪೋಷಾಕಿನಲ್ಲಿ ಯಾವಾಗಲೂ ಚಿಲಖತ್ತನ್ನು ಪಯೋಗಿಸುತ್ತಿದ್ದನು (ಇಂಗ್ಲಿಇ. ೦೦೦); ಬೇರೆ ಬೇರೆ ಬಗೆಯ ಹಳೆಯ ಆಯುಧಗಳನ್ನೂ ಚಿಲಖತ್ತುಗಳನ್ನೂ ಸಂಗ್ರಹಿಸಿ ಅಲ್ಲಿಡಲಾಗಿದ್ದಿತು (ರತ್ನಗೋ. ೩). **ಚಿಲಕತ್ತು :** ಚಿಲಕತ್ತು ಒರೆಗತ್ತಿ ಎತ್ತಿ ದಂಡಿನ ಮಂದಿ (ಲೋಕಗೀ. ೨೦೨); ಉನ್ನೀಸಳು ಗಂಡನ ಚಿಲಕತ್ತು ಕಳೆದು ಉಪಚರಿಸುವಳು (ಸೂರಜ. ೧೭).

[ ←ಮರಾ. ಚಿಲಖತ್, ಚಿಲಕತ್; ಪಾರ. ಚಿಹಿಲ್ಕದ್ ]

**ಚಿಲಣ** 'ಚೀರಣ' ನೋ.

**ಚಿಲಣಗೆಲಸ** 'ಚೀರಣಗೆಲಸ' ನೋ.

**ಚಿಲವಾನ್** 'ಚಿಲುವಾನ' ನೋ.

**ಚಿಲಿ** (ಕ್ರಿ). ಹಲ್ಲುಬಿಡು ; ಕಿಸಿ : ಕರ್ವೊಗದೆಡೆಯ ಪಲ್ಗಳಂ ಬೆಳ್ಪನೆಯೆ ಚಿಲಿವ ಘೋರಕೆ ದೆದರಿ (ಶ್ರೀರಾಮಾ. ೧೦೭-೧೨೬). 'ಕಿರಿ$_2$' ಪರಾ. [?]

**ಚಿಲಿಕಿ** 'ಚಿಲಿಕೆ$_2$' ನೋ.

**ಚಿಲಿಕೀರೆ** 'ಚಿಲುಕೀರೆ' ನೋ.

**ಚಿಲಿಕೆ$_1$**, ಚಿಲಕಿ$_1$, ಚಿಲಕೆ, ಚಿಲುಕೆ, ಚೀಲಿಕೆ (ನಾ). ಒಂದು ಬಗೆಯ ಸೊಪ್ಪು : "ಚಿಲಿಕೆ ಸ್ವಸ್ತಿಕೆಯಕ್ಕು" (ಮಂಗರಾ. ೪೪-೪೬) ; ನುಗ್ಗೆಯ ಕಾಯ ತೊಂಡೆಯ ಕಾಯ ಚಿಲಿಕೆಯ . . . ಮೇಲೋಗರವುಣ್ಬೆಯಗ್ಗದಾರೋಗ್ಯವು ಪಥ್ಯ (ಸಾಳ್ವಸಾಂ. ೬). **ಚಿಲಕಿ$_1$ :** ಸೊಪ್ಪುಗಳು : ಅಗಸೆ, ಬಳಸೂಲಿ . . . ದಂಟು, ಹರಿವೆ, ಚಿಲಕಿ, ದಗ್ಗಳಿ, ಕೆಸವೆ (ನಮ್ಮನು. ೨೩೬). **ಚಿಲಕೆ :** "ವೃದುಪತ್ರೀ—ಚಕ್ರವರ್ತಿ, ಚಿಲಕೆ" (ಓಷಧಿ. ೧೨೮). **ಚಿಲುಕೆ :** ಮತ್ತೆ ಕೆಲವಕ್ಕೆ ಬದನೆಯ ಬಜ್ಜಿ ಕೆಲವಕ್ಕೆ ಕತ್ತರಿಸಿದೆಳೆಕೀರೆ ಚಿಲುಕೆ [ಪಾಠಾಂ. ಚಗತೆ]ನರುವಲು ಚಕ್ರವರ್ತಿ ಮೊದಲಾದ ಸೊಪ್ಪಂ ತುಪ್ಪದೊಳಗೆ ಚೆನ್ನಾಗಿ ತಾಳಿಸಿ (ಸೂಪಶಾ. ೪-೨೦). **ಚೀಲಿಕೆ :** "ಚಿಲ್ಲೀಕಾ—ಚೀಲಿಕೆ" (ಓಷಧಿ. ೫೬). [ ದೇ.$_1$ ತೆಲು. ಚಿಲುಕ, ಚಿಲ್ಕ./ಸಂ. ಚಿಲ್ಲಿಕಾ ]

**ಚಿಲಿಕೆ$_2$**, ಚಿಲಕಿ$_2$, ಚಿಲಿಕಿ (ನಾ). ೧. (ಉಕ) ಚಾವಣಿಯನ್ನು ಹಾಕುವಾಗ ಬಿದಿರಿಗೆ ಬದಲಾಗಿ ಹಾಕುವ ಸಣ್ಣ ಗಳು ; ಸಣ್ಣ ಮರದ ಪಟ್ಟಿ ; ರಿಪೀಸು : ಬಡವರಿದ್ದವರು ಜಂತೆಗಳ ಮೇಲೆ ಚಿಲಿಕೆಗಳನ್ನು ಹಾಕಿ ಅವುಗಳ ಮೇಲೆ ಯಾವುದಾದರೂ ಒಂದು ಗಿಡದ ಎಲೆಗಳನ್ನು ಹರವಿ ಮೇಲುಮುದ್ದಿಯ ಹಾಕುವರು (ಮುಂಬಯಿ. ೪-೦೧೭). ೨. ಚಿಟ್ಟೆ ; "ಸಿದಿಗೆ" (ಜಾನಪೋ. ೫೬). **ಚಿಲಕಿ$_2$ :** ೧. ಗಂಡಸಮಗ ಗುಜಭೀಮ ಹುಟ್ಟಿದರ ಚಿಲಕಿ ಚಿತ್ತರ ನಗತಾವ (ಗರತಿ. ೮೯). **ಚಿಲಿಕಿ :** ೧. ಬರಿಕಿ ಎಲುಗಳು ಜಂತಿಗಳು ಚಿರಳೆಲುಗಳೇ ಚಿಲಿಕಿ ಇಂತೀ ಗೃಹಕ್ಕೆ ಮಾಂಸದ ಮೇಲುಮುದ್ದೆಗಳು ರಕ್ತದ ಸಾರಣೆಗಳ (ವಚಶಾ. I, ೨೫೦-೨೪). [ ? ]

**ಚಿಲಿಕೆನೆವಾಲು** (ನಾ). ಚೆನ್ನಾಗಿ ಕಾಯಿಸಿ ಕೆನೆಗೂಡಿದ ಹಾಲು : ಇನಿದೊಸರ್ವ ತನಿಪಾವಿನೊಳ್ವಣ್ಣ ರಸದಿ ಚಿಲಿಕೆನೆವಾಲನೆಟಿದು ಸಿರದಚ್ಚ ವುಡಿಯನ್ನುದುರಿಸಿ(ಕವಿಜ. III, ೨೦೦ ಪ್ರಭಾವತೀ ಪರಿಣಯ). 'ಚಿಲುಪಾಲು' ಪರಾ. [ <ಚಿಲು₁ + ಕೆನೆವಾಲು(<ಕೆನೆವಾಲ್) ]

**ಚಿಲಿಚಿಮ, ಚಿಳಿಚಿಮ** (ನಾ). ಒಂದು ಬಗೆಯ ಸಣ್ಣ ಮೀನು ; ಜಂಬು ಮೀನಂ : "ನಲಮೀನ ಚಿಲ್[ಲಿ]ಚಿಮ ಎಂದೊಡೆ ಸಿಸಿಲು, ಚಿಳಿಯ ಮೀನೆಂದು ಎಂಬರು" (ನಾಚಿರಾ.೬). **ಚಿಳಿಚಿಮ:** "ನಳಮೀನಃ, ಚಿಳಿಚಿಮಃ– ಈ ೨ ಕಿಱುಮೀನ್". (ಹಲಾಯು. ೧೦೮-೩೭); "ಚಿಳಿಚಿಮವೆನಲು ನಳಮೀನ ವೆನೆ ಕಿಱುಮೀನ ಪೆಸರನಿಕ್ಕು " (ಮಂಗರಾ. ೧೨೦-೬); ವಿಸ್ಫುರತ್ಫೇನದೊಳಂ ಚಳಚ್ಚಿಳಿಚಿಮದೊಳಂ . . . ಅತಿಮನೋಹರಮಾದ ಯಮುನಾಹ್ರದ ಪರಿಸರಪ್ರದೇಶದೊಳಕ್ರೂರಂ ನಿಜಮರೂಥಮಂ ನಿಲಿಸಿ (ಜಗವಿ. ೫-೧೦ ೩೮); ಪುಟನೆಗೆದು ಮಗುಟುಟುವ ಚಿಳಿಚಿಮಾನೀಕದಿಂ (ಉದ್ಭಟ. ೩-೮೪). [ ಸಂ. ]

**ಚಿಲಿಪಾಲು** 'ಚಿಲುಪಾಲ್' ನೋ.

**ಚಿಲಿಪಿಲಿ** (ನಾ). ಹಕ್ಕಿಗಳು ಗುಂಪಾಗಿ ಮಾಡುವ ಧ್ವನಿಯ ಅನುಕರಣ: "ಪಕ್ಕಿಗಳುಲಿಗಕ್ಕು ನಾಮ ಚಿಲಿಪಿಲಿಯೆನುತುಂ" (ಕವಿಕಂ. ೬೩); ಚಿಲಿಪಿಲಿ ಹಾಡಿಗೆ ಗುಬ್ಬಿಯ ಥಕ ಥೋಂ ಧಿಕ್ಕಿಟ್ಟ (ಮಾಂಡಳಿ. ೪೩-೧); ಅಲ್ಲೊಂದು ಇಲ್ಲೊಂದು ಹಕ್ಕಿಗಳ ಚಿಲಿಪಿಲಿ ಕೂಗು ಅವನ ಕಿವಿಗೆ ಕಚಕುಳಿಯಾಡಿಸಿ ದಂತಾಯಿತು (ಶೀವೋಠ. ೧೧).

**ಚಿಲಿಪಿಲಿಗುಟ್ಟು** (ಕ್ರಿ). ಚಿಲಿಪಿಲಿ ಎಂದು ಧ್ವನಿಮಾಡು : ಚಿಲಿಪಿಲಿಗುಟ್ಟ ನುಣ್ದೊಂದಳ್ಗಳಿಂ ಕಿವಿಗಿಂಪನೊಡರ್ಚಿ (ದಶಕು. ೧-೫೭) ; ಹಕ್ಕಿಗಳೆಲ್ಲಾ ಸಂತೋಷದಿಂದ ಚಿಲಿಪಿಲಿಗುಟ್ಟ ಕೂಗುತ್ತಾ ಹಾರಾಡುತ್ತಿದ್ದವು (ಕಳಹು.೨); ಇತರ ಹಂಸಪಕ್ಷಿಗಳು . . . ಚಿಲಿಪಿಲಿಗುಟ್ಟುತ್ತಾ ಹಾರಿಹೋದವು (ಹಿಂಕಿರು. ೩೭). [ ಚಿಲಿಪಿಲಿ + ಕುಟ್ಟು₁ ]

**ಚಿಲಿಪಿಲಿಗುಡು**(ಕ್ರಿ).(ಅಲಂ) ಹಕ್ಕಿಯು ಚಿಲಿಪಿಲಿಗುಟ್ಟುವಂತೆ ಸಂತೋಷ ದಿಂದ ಕೂಡಿರು,–ಆನಂದದಿಂದಿರು : ಮನಸ್ಸು ಸಂತೋಷದಿಂದ ಚಿಲಿಪಿಲಿಗುಡುತ್ತಿದ್ದ ದಿನ (ರಂಗಹ. ೧೨೪). [ ಚಿಲಿಪಿಲಿ + ಕುಡು₁(<ಕೊಡು₁) ]

**ಚಿಲಿಪಿಲಿಹಕ್ಕಿ** (ನಾ). ಒಂದು ಬಗೆಯ ಹಕ್ಕಿ ; ಕೊಟ್ಟು : " ಚಾಷಃ = ಚಿಲಿಪಿಲಿಹಕ್ಕಿ " (ಕಾಕಶ್. ೧೫೭). 'ಚಿಲಿಮಿಂಲಿಗ'ಪರಾ. [ ಚಿಲಿಪಿಲಿ + ಹಕ್ಕಿ₁(<ಪಕ್ಕಿ₁) ]

**ಚಿಲಿಮಿಲಿ** (ನಾ). ಹಕ್ಕಿಗಳು ಗುಂಪಾಗಿ ಮಾಡುವ ಧ್ವನಿಯ ಅನುಕರಣ: " ಚಿಲಿಮಿಲಿಯೆಂದು ಪಕ್ಕಿಗಳುಲುಹು " (ಕಶಸಾ. ೩-೧೫ ) ; ಸಮಸ್ತಧಾತ್ರಿ ಯುಮನಾಳಿಪವೆಂದುಲಿವಂತೆ ಪಕ್ಕಿಗಳ್ ಚಿಲಿಮಿಲಿಯೆಂಬ ಪೊಟ್ರಣಿಯೊಳಿ ಬಂದುಬಿದೊಡ್ಡಿದನಂತಕಾತ್ಮಜಂ (ಷಂಪಭಾ. ೦೦-೩೩) ; ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೇ ನೀವು ಕಾಣಿರೇ (ಮಹಾದೇ. ಬ. ೩೩-೭೩).

**ಚಿಲಿಮಿಲಿಗ, ಚಿಲುಮಿಂಲಿಗ** (ನಾ). ಚಿಲಿಮಿಂಲಿ ಎಂದು ಶಬ್ದಮಾಡುವ ಒಂದು ಬಗೆಯ ಹಕ್ಕಿ ; ಕೊಟ್ಟು ; ಚಾಷ : ಗೌಜು ಪಾರಿವ ನಿರಿಲೆ ಸಾಳುವ ಚಿಲಿಮಿಲಿಗ ಚಂಬೋತ . . . ಗರಿಗ ಮೊದಲಾದಖಿಳ ಖಗಕುಲ ಬಿದ್ದುದುರಿಯೊಳಗೆ (ಕುವ್ಯಾ.ಆ. ೨೦-೩೩) ; ವಲಿಯ ಭಾರದ್ವಾಜ ಪಿಕ ಪಿಂಗಲಿ ನಿಶಾಟಧ್ವಾಂಕ್ಷ ಚಾತಕಿ ಚಿಲಿಮಿಲಿಗ ಜಾಣ್ವಕ್ಕಿ . . . ಮಡಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡೆಂದ (ತೊರರಾ. ೩-೧-೩೩). **ಚಿಲುಮಿಲಿಗ :** ಹರಡೆ ಚಿಲುಮಿಲಿಗನು ಚಿಲುವೆ ಗಿಜುಗಿರಳೆ ಕಮ್ಮರನಸಗ . . . ಪಕ್ಕಿಗಳವಟ್ಟೊಳೊಪ್ಪಿದವು (ಸಾಳ್ವಭಾ. ೫-೨೦). [ ಚಿಲಿಮಿಲಿ + – ಗ₂ ]

**ಚಿಲಿಮಿಲಿಸು** (ಕ್ರಿ). ಚಿಲಿಮಿಲಿ ಎಂದು ಧ್ವನಿಮಾಡು: ಬಳಸಿ ಚಿಲಿಮಿಲಿಪ ವಿಹಗಂಗಳ ಕಳಕಳದೊಡನೆ ತೊಡರ್ದು . . . ತೀಡಿತ್ತು ಸುಪ್ರಭಾತ ಸಮೀರಂ (ಕುಸುಮಾ. ೪-೭೦) ; ಬಳಸಿ ಚಿಲಿಮಿಲಿಪ ವಿಹಗಂಗಳ ಕಳಕಳ ದೊಡನೆ ತೊರ್ದು ಸರಸೀಜಳಮಂ ವಳಿಗೊಳಿಸಿ ಕುಮುದ ಮುಖಮಂ ಪೆಳಱಿಸಿ ತೀಡಿತ್ತು ಸುಪ್ರಭಾತ ಸಮೀರಂ (ಶಾಂತೀಶ್ವ. ೧೧-೯೫). [ ಚಿಲಿಮಿಲಿ + – ಇಸು₃ ]

**ಚಿಲಿಮೆ₁** 'ಚಿಲುಮೆ₁' ನೋ.

**ಚಿಲಿಮೆ₂** 'ಚಿಲುಮೆ₂' ನೋ.

**ಚಿಲಿವಾಲು** 'ಚಿಲುಪಾಲ್' ನೋ.

**ಚಿಲು₁** (ಕ್ರಿ). ೧. ಅನ್ನದಂತೆ ಚೆನ್ನಾಗಿ ಬೇಯು. ೨. ಚೆನ್ನಾಗಿ ಕುದಿ,– ಕಾಯು. 'ಚಿಲುಪಾಲ್' ಪರಾ. [ ದೇ.॥ ತಮಿ. ಚಿಲು ]

**ಚಿಲು₂** (ನಾ). (?) : "ಗೋಧಾಸ್ಯಸ್ಯಃ–ಚಿಲು " (ಒಷಧಿ. ೫೦). [ ? ]

**ಚಿಲುಕ, ಚಿಲಕ, ಚಿಲುಕು₁** (ನಾ). ೧. ಕದವನ್ನು ಭದ್ರಪಡಿಸುವುದಕ್ಕಾಗಿ ಉಪಯೋಗಿಸುವ ಕೊಂಡಿ,–ಸರಪಣಿ : ಕದವ ಮುಚ್ಚಿದಳಿದಕೋ ಚಿಲುಕ ಅಲ್ಲಾಡುತಿದೆ (ಪುರಂದ. ೨-೯೭ ಅನುಪಲ್ಲವಿ). ೨. ಬೇಟೆಯಲ್ಲಿ ಉಪಯೋಗಿಸುವ, ತುದಿಯಲ್ಲಿ ಮುಳ್ಳಿನಂತೆ ಮೊನೆಯಿರುವ ಒಂದು ಉಪಕರಣ; ಈಟಿ; ಬರ್ಜಿ (?) : ತಡಿಕೆ ತಳಿಯು ಅಂಟಿನ ಕಣಿ ಚಾಳುವ ಹಿಡಿದ ದೀಹವು ಪಾಚಿ ಸಿಡಿಯು ಹೊಡೆದೆತ್ತುವ ಮೊಲ ಎಸೆವ ಚಿಲುಕಗಳು ಬಿಡುಗಣ್ಣ ಬೇಡರೊದಗಿತು (ಹರಿಶಾಂ. ೨-೨). **ಚಿಲಕ:** ೧. ಅತ್ತೇಮನೇಲಿ ಹೇಗಿರುವೆ ಮಗಳೇ ಅಂದ್ರೆ ಚಿಲಕಕ್ಕೆ ಮೊಳಕ್ಕೆ ತಗುಲಿದ ಹಾಗೆ ಅಂದ್ಲು (ಹುಟ್ಟುಹ. ೧೦೩). **ಚಿಲುಕು₁:** ೨. ಮದನನ ನನೆಯಂಬು ಮುನಿಹೃದಯಮಂ ನಡಪನುತ್ತೆ ಚಿಲುಕಿನ ದೊಡ್ಡ ಮೊನೆಯಂಬ ನಾಗಿಸಿದನೋ ಯೆನಲ್ . . . ಹೊಂಗೇದಗೆಗಳೊಪ್ಪಿದುವು ತರತರಮೊಳ್ಳ (ಚಿಬಶು. ೪೫-೧೮). [ ದೇ.॥ ತಮಿ. ಮಲ. ಚಿಲುಕ್ಕು ; ತುಳು. ಚಿಲ್ಕ್; ತೆಲು. ಚಿಲಕ, ಚಿಲುಕು, ಚಿಲುಕೆ ]

**ಚಿಲುಕವರೆ** (ನಾ). ನೀರಿನಲ್ಲಿ ನೆನಸಿ ಸಿಪ್ಪೆ ತೆಗೆದ ಅವರೆಕಾಳು ಮತ್ತು ಅದರಿಂದ ಮಾಡಿದ ಒಂದು ಬಗೆಯ ಮೇಲೋಗರ : ಇಂದು ನಮ್ಮ ಮನೆಯಲ್ಲಿ ಚಿಲುಕವರೆ ಮಾಡಿದ್ದರು (ರೂಢಿ). 'ಚಿದಕವರೆ' ಪರಾ. [ ಚಿಲುಕು₂ + ಅವರೆ₁ ]

**ಚಿಲುಕಾಯಿ** (ನಾ). ಗಿಳಿ (?) : ಯಾಕತ್ತೆ ನನ್ನ ಗೋಪೀದೇವಿ ಕಂದಯ್ಯ ಗೋಪುರದಲ್ಲಾಡೊ ಚಿಲುಕಾಯಿ ಚಿಂತಾಮಣಿ ಹಸುಳೆ ಬಂದಾಡೊ ತೊಡೆ ಮೇಲೆ (ಹಳ್ಳಿಯ. ೮೯). [ ?./ತೆಲು. ಚಿಲುಕ, ಚಿಲ್ಕ ]

**ಚಿಲುಕಿಸು** (ಕ್ರಿ). ಕಾಳಿನ ಮೇಲಿರುವ ಸಿಪ್ಪೆ ತೆಗೆ, – ಸಿಪ್ಪೆ ಬಿಡಿಸು : ಚಿಲುಕಿಸಿದ ಅವರೆಕಾಳು ಬಹುರುಚಿ (ರೂಢಿ). [ ಚಿಲುಕು₂ + – ಇಸು₃ ]

**ಚಿಲುಕೀರೆ, ಚಿಲಿಕೀರೆ** (ನಾ). ಒಂದು ಬಗೆಯ ಸೊಪ್ಪು ; "ಶೋಧಿನೀ– ಚಿಲುಕೀರೆ " (ಒಷಧಿ. ೧೭೨) ; ಚಿಲುಕೀರೆ ಸೊಪ್ಪು ಸಿಹಿಪಾಲೆ ಸೊಪ್ಪು ಚಕ್ರವರ್ತಿ ಪುಳಂಪುರುಚಿ ಜಾಂಗಲಮಾಂಸ . . . ಯಿಷ್ಟು ಪಥ್ಯ ಕರವಹುದು (ವಿಷಚಿ. ೦೩-೩). **ಚಿಲಿಕೀರೆ :** ಚಿಲಿಕೀರೆಯ ಸೊಪ್ಪಿನ ರಸದಲ್ಲಿ ಒಂದು ಜಾವ ಮರ್ದಿಸಿ ಸಾಸಿವೆ ಪ್ರಮಾಣ ಗುಳಿಗೆಯಂ ಮಾಡಿ ಸಮಜ್ವರಕ್ಕೆ ಜೀರಿಗೆ ಸಕ್ಕರೆಯಲ್ಲಿ ಕೊಡುವುದು (ವೈವಿ. ೩೭); ಚಕ್ರವರ್ತದ ಸೊಪ್ಪು, ಚಿಲಿಕೀರೆ ಸೊಪ್ಪು ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕಚಿ. ೦೦೨). [ ←ತೆಲು. ಚಿಲುಕಕೂರ ]

**ಚಿಲುಕು₁** 'ಚಿಲುಕ' ನೋ.

**ಚಿಲುಕು₂** (ನಾ). ಸಿಪ್ಪೆ ; ಪೊರೆ. 'ಚಿಲುಕಿಸು', 'ಚಿದಕು₂' ಪರಾ. [ ? ]

**ಚಲುಕೂಲಿ, ಚಲಕೂಲಿ** (ನಾ). ಒಂದು ಬಗೆಯ ಹಕ್ಕಿ : ಪರ್ಬಕ್ಕಿ ಹೆಂಗುರು ಕಾಕಂ ಚಲುಕೂಲಿ ರತ್ನಖಗಮಿರ್ಕುಂ ತದ್ವನಾಗೌಘದೊಳ್ (ರಾಜಶೇ. ೩-೩೯) ; ಪಾರಾವತಂ ಪರಪುಟ್ಟಂ ಚಲುಕೂಲಿ ಚಾತಕಮ ವಿರ್ಕುಂ (ಯಾದವ. ೪-೩೩) ; ಗರುಡಂ ಶರಾರಿ ಚಲುಕೂಲಿ ಪಿಕಳಂ ಬಕಂ (ಕುಮಾಪು. ೪-೦೧೮). **ಚಲಕೂಲಿ :** ಅಂಚೆಯ ಚಿಂಬೋತನ ಚಲಕೂಲಿಯ ಕೊಂಚೆಯ ಗಿಳಿ ಕೊಳರ್ವಕ್ಕಿಯ ಪುರುಳಿಯ (ಹಮ್ಮಿ.ರ. ೪-೦೨ ರಗಳೆ). [?]

**ಚಲುಕೆ** 'ಚಿಲಿಕೆ$_1$' ನೋ.

**ಚಲುತಲಿ** (ನಾ). ಒಂದು ಬಗೆಯ ಆಯುಧ : ಸಂಣ ಚಂದ್ರಾಯುಧಾ ಚಲುತಲಿ ಮೊದಲಾದಾ ಬತ್ತೀಶಾಯುಧಾ (ಎಕ. XVI, ಗುಬ್ಬಿ. ೭೪-೨೩; ಸು. 1776). [ ? ]

**ಚಲುಪಾಲ್, ಚಿನಿಪಾಲು, ಚಿನಿವಾಲ್, ಚಿನಿವಾಲು, ಚಿಲಿಪಾಲು, ಚಿಲಿವಾಲು, ಚಿಲುಪಾಲು, ಚಲುಹಾಲು** (ನಾ). ನೀರು ಇಂಗುವಂತೆ ಚೆನ್ನಾಗಿ ಕಾಯಿಸಿದ ಹಾಲು ; ಕೆನೆಹಾಲು : "ಕಾಯೆ ಬತ್ತಿದ ಹಾಲು ಚಲು[ಪಾಠಾಂ. ಚಿರ]ಪಾಲೆನಿಕ್ಕು" (ಮಂಗರಾ. ೬೪-೨) ; ಸಗ್ಗದಮರ್ದಿನ ಕೊಳಂ ಮೇಲ್ವಾಯ್ದು ಮಿಸುಪ ಚಲುಪಾಲ್ಗೆ ನೆಗಳಂ ನೆಯಿದಾರೆಯಟ್ಟಿಪೋ (ವೀಕ್ಕಪು. ೩-೯-೩೪). **ಚಿನಿಪಾಲು :** ಇನಿದಾದ ಚಿನಿಪಾಲು ಪೀರ್ವರಸಂಚಿ ಹುಳಿಗಂಗೆಯ ಕುಡಿವುದೇ (ಸರ್ವಶ. ೧೯೩-೯೦೦) ; ಕಾಸಿ ಚಿನಿಪಾಲಂ ಕೊಡುವವಳು ನಿಮಗೆ ಕೊಡಗೂಸು (ಬಸಪು. ೯-೩೮) ; ಸಕ್ಕರೆಯ ಜೇನ ಸವಿಗಿಮ್ಮಿಗಿಲು ಕೆನೆಗಟ್ಟಿ ವುಕ್ಕುಕ್ಕಿ ಕಾಯೆ ಚಿನಿಪಾಲ ರುಚಿಗಿಂದಧಿಕ (ಶಿವಪೋ. ೦-೨) ; ಸಕ್ಕರೆ ಚಿನಿಪಾಲು ತುಪ್ಪವ ಯಿಕ್ಕೊಡನೀರ್ವರು ಸವಿದು (ಕರಿಕ. ೬೭-೩). **ಚಿನಿವಾಲ್ :** ಚಿನಿವಾಲ್ಗೆ ನೆಗೆ ಸದ್ಯ್ರತಂಗಲಸಿ ದುಂದದೊಳೆನ್ನ ಕೃತಿರಸಂ ನಾಡೆ ಸವಿಗೊಳಿಸುವುದು (ಪಂದಿಮಾ. ೦-೩೦). **ಚಿನಿವಾಲು :** "ಲಿಂಗಮೂರ್ತಿ ಇನ್ನೊಬ್ಬರಿಗೆ ಶಿವ ಕಾರುಣ್ಯ" ಎಂಬ ಆ ಚಿನಿವಾಲನ್ನು ಕೊಡಲು ಯತ್ನಿಸುವವನೇ ಹೊರತು ಹುಳಿಯನ್ನು ಕೊಡನು (ಕರ್ನಾಕ. ೦೨೦). **ಚಿಲಿಪಾಲು :** ಶಿವಮೃಡನಾಮ ಶಿವಜ್ಞಾನ ವೆಂಬ ಚಿಲಿಪಾಲನಾರೋಗಿಸುವ ಪರಹಿತದಿಂದ (ರು ದ್ರ ಛಾ . ೯೨) ; ಚಿಲಿಪಾಲು ಸಕ್ಕರೆಯಂ ಸುಲಿದ ಬಾಳೆಯ ಹಣ್ಣ ಕಲಸಿ (ಗುರುಬೋ. ೮೦); ಚಿಲಿಪಾಲಿನೊಳಗೆ ಶರ್ಕರೆವೆರದು ಪರಿಮಳಂ ಕಲಿತಮೆಂದೆನಿಸುತಿರಲೀಂಟ ನಾಲಗೆದಣಿದು ಸುಲಭದಿಂ ನೆನೆದಪುದೆ ದೇವ (ಪಂಕಾರಾ. ೩-೦-೨) ; ಶರ್ಕರೆವೆರಸಿ ಚಿಲಿಪಾಲೀವ ಸಿರಿಯೆನಗಹುದೆಯೆಂದು (ಚಿಸಭಾ. ೩೦-೯). **ಚಿಲಿವಾಲು :** ತುಪ್ಪ ಸಕ್ಕರೆ ಚಿಲಿವಾಲ ಸವಿವೊಲಂ ಪೊಪ್ಪುಕಥೆಯ ಪೇಳುವೆನು (ರಾಜುವಿ. ಅನುಬಂಧ ೩.೨೦-೬). **ಚಿಲುಪಾಲು :** ರಸಮೊಸರ್ವ ಮುಪ್ಪಳಮಂ ಚಿಲುಪಾಲ ತಿರುಳ ಕರಣೆಗಳುಮಂ . . . ಒಂದುಗೂಡಿ (ಸಂಬಿರ. ೦೦-೩೩) ; ಚಿಲುಪಾಲಿನೊಳು ವಿಷಂ ತವರಾಜನೊಳು ಕೃಪೆ (ಭಾವಚಿಂ. ೯-೩); ಗುಟ್ಟಿಡರದೆ ಕಾದ ಚಿಲುಪಾಲು ಮಕ್ಷಿಕೋಚ್ಛಿಷ್ಟವಿಲ್ಲದ ಜೇನುತುಪ್ಪ (ಶೋಡಶ. ೨೩-೦) ; ಚಿಲುಪಾಲು ತಂಬಾಲು ಕೆನೆವೆರಸಿದ ಪಾಲಂ (ಕಂಪವಿ. ೮-೯೦). **ಚಲುಹಾಲು :** ಬಟ್ಟಹಾಲು, ಚಲುಹಾಲು, ಕೆನೆಹಾಲು, ಎಟ್ಟೆಹಾಲು, ತನಿಹಾಲು ಮುಂತಾದ ತರತರದ ಹಾಲು ಗಳನ್ನು ಬಟ್ಟಲು ಬಟ್ಟಲು ತುಂಬಿ ತಂದು ಎಡೆ ಮಾಡಿದಳು(ಮೂಮಲ್ಲಿ. ೩೪).

[ ಚಲು$_1$ + ಪಾಲ್$_1$ ]

**ಚಲುಹಾಲು** 'ಚಲುಪಾಲ್' ನೋ.

**ಚಲುಮಿಲಿಗ** 'ಚಿಲಿಮಿಲಿಗ' ನೋ.

**ಚಲುಮುರಿ** (ನಾ). ಗೋಧಿಯ ಹಿಟ್ಟಿನಿಂದ ಮಾಡಿ, ತುಪ್ಪದಲ್ಲಿ ಕರಿದ ಒಂದು ಬಗೆಯ ಭಕ್ಷ್ಯ : ನೆಟಿ ಸಣ್ಣ ಗೋದುವೆಯ ಹಿಟ್ಟ ಸಿಹಿವಾಲೊಳಗೆ ನುಱುಗುವಂದದಿ ಕಲಸಿ . . . ತುಪ್ಪದೊಳಗಡಲು ಚಲುಮುರಿಯಾದುದು (ಸೂಪಶಾ. ೦-೩೩). [ ? ]

**ಚಲುಮೆ$_1$, ಚಲಮೆ, ಚಿಲುಮೆ, ಚಿಲಿಮೆ$_1$** (ನಾ). ೧. ನೀರು ಉಕ್ಕುವ ಸ್ಥಳ ; ಬುಗ್ಗೆ ; ತಲಪರಿಗೆ ; ಒರತೆ ; ಊಟೆ : ಕಲ್ಲ ಮೊರಡಿಯೊಳಗೆ ಚಿಲುಮೆಯಗ್ಗವಣಿಯುಂಟೆ ಅಯ್ಯಾ (ಅಡಚ. ೦೩-೨೦) ; ನಿತ್ಯ ಚಿಲುಮೆಯ ತೋಡುವಾತಂಗೆ ಉಚ್ಚೆಯ ಬಚ್ಚಲ ತೋಡಲಾಗದು (ಶಿವಮಂ. ೩೯) ; ಬಱತಿರ್ದ ಚಿಲುಮೆಯ ನೀರನಿತ್ತು ಜಂಗಮಕೆ (ಪಬಪು. ೩೭-೭). ೨. ಕಾರಂಜಿ : ಅದರ ಮುಂಭಾಗದಲ್ಲಿ ನೀರಿನ ಚಿಲುಮೆ (Fountain) ಯೊಂದನ್ನು ಇಟ್ಟಿದ್ದರು (ಕಲಾಸಾ. ೩೭). **ಚಲಮೆ :** ೧.ಮಳಲಿನ ಮಱಿಯ ನೀರ ಬಳಸದೆಸಲೆ ವೃದ್ಧಿಯಲ್ಲಿ ನೆಲ ಚಲಮೆಯಂ ಕಂಡು (ಐರೀಕ್ಕ. ೦೯); ಕಲ್ಲ ಹಳ್ಳದೊಳಂಟೆ ಚಲಮೆ ಕಾಣ್ಬುದೆ ಗೂಗೆ ರವಿಯು (ವೀಕ್ಕಪು.೪-೩-೫೨); ಹರಿಸದಿಂದಾ ಮಳಲ ಬಗಿದು ಚಲಮೆಯ ತೆಗೆವರೆಬರು(ಸಿದ್ಧೇಪು. ೦೯-೮). **ಚಿಲುಮೆ :** ೧. ಬಹು ಜಲಮಂ ಬಿಟ್ಟು ಚ[ಪಾಠಾಂ. ಚಿ]ಲುಮೆಯಂ ತೆಗೆದರೆ ಅದು ನೆಲಶುದ್ಧ ಸೌಕರ್ಯವಲ್ಲದೆ ಅವು ಶೀಲವಲ್ಲ (ಪುಡಿಮಾ. ೦೮-೨೩); ಕೂಪಕರಾಃ, ವಿದಾರಕರಾಃ – ೨ ಚಿಲುಮೆಗಳಾಗಿ ತೋಡಲ್ಪಟ್ಟ ಮರಳು ಹಳ್ಳ ಮುಂತಾದುವುಗಳು ನೀರೂರಿ ಬರುವ ಹಳ್ಳಗಳು (ಸಿದ್ಧಾಂತಿ. ೭೦). **ಚಿಲಿಮೆ$_1$ :** ೨. ನಗರದ ಕೇಂದ್ರ ಸ್ಥಳಗಳಲ್ಲಿ ನೀರಿನ ಚಿಲಿಮೆಗಳನ್ನು ನಿರ್ಮಿಸಿದ್ದಾರೆ (ರೂಢಿ).

[ ದೇ.ಶ ತೆಲು. ಚೆಲಮ ; ಕುವಿ. ಸಲ್ಮ ]

**ಚಲುಮೆ$_2$, ಚಿಲಿಮೆ$_2$** (ನಾ). ತಂಬಾಕು ಸೇದಲು ಉಪಯೋಗಿಸುವ ಮಣ್ಣಿನ ಕೊಳವಿ,-ನಳಿಕೆ : ಚಿಲುಮೆ ದೊರೆಯುವುದು, ಎಷ್ಟು ಹುಡುಕಿದರೂ ಕಡ್ಡಿಪೆಟ್ಟಿಗೆ ದೊರೆಯಲೊಲ್ಲದು (ಕಮ್ಮಟ. ೪) ; ಕೈಯಲ್ಲಿ ಚಿಲುಮೆ ಯನ್ನು ಹಿಡಿದುಕೊಂಡು ಲಗುಬಗೆಯಿಂದ ಅವಳ ಬೆನ್ನು ಹತ್ತಿ ಹೋಗುತ್ತ ಅಂದ (ಅಶೋಕ. ೦೦). **ಚಿಲಿಮೆ$_2$ :** ತಂಬಾಕವೇ ಇಲ್ಲ, ಚಿಲಿಮೆಯಲ್ಲಿಂದ ಬರಬೇಕಂ (ಕುರಿಹಿಂ. ೭೦).

[ ←ಪಾರ. ಹಿಂ. ಚಿಲಮ್ ; ಮರಾ. ಚಿಲಮ್, ಚಿಲಿಮಿ, ಚಿಲೀಮ್ ]

**ಚಲುವಾನ, ಚಲವಾನ್, ಚಲುವಾನು** (ನಾ). ೧. ಪೂರ್ಣವಾದ ಹಣದ ಭಾಗ ; ಚಿಲ್ಲರೆ ಹಣ : ಚಲುವಾನಂ ಬಿನುಗುಗಳಿಗೆ ನಾನಾ ಜಾತಿಯ ವೊಕ್ಕಲುಗಳಿಗೆ ವರುಷ ೧ ಕೆ (ಸೌಇಶಾ. IX-ii, ೩೦೬-೩; 1525). ೨. ಚಿಲ್ಲರೆ ; ಸಣ್ಣ ; ಅಲ್ಪ : ಅರೆವೊದಲಹ ಚಲುವಾನಂ ಬರೆ ಲೆಕ್ಕದ ಕಡೆಯೊಳಗಲ ನೀಳನ ಸಂಖ್ಯಕ್ಕಿರದೆ ಪರಸ್ಪರದಿಂದಾ (ವ್ಯವಹಾ. ೮ ಕ್ಷೇತ್ರಗಣಿತ) ; ಯಿವರೆಲ್ಲರಿಗೆ ಸಲುವ ಚಲುವಾನ ಕೊಡಗಿಗಳು (ಎಕ. IX, ನೆಲಮಂ. ೮೦-೦೩ ; 1545) ; ಚಿಕ್ಕಿಗನಂ ಪಿಡಿದಾರ್ಜಿಸಿದರ್ಥದ ಚಲುವಾನ ದೊಳಿನ್ನೇನಹುದು (ಧಕಿ.ಸ. IV, ೦೨). **ಚಲವಾನ್ :** (೪). **ಚಲುವಾನು :** ೨. ತಮ್ಮ ರಾಜ್ಯದಲ್ಲಿ ನಿಡುಂಬರೆ ಕಟ್ಟುವ ಕೆಲಸದಲ್ಲಿ ಮುನ್ನೂರು ಚಲುವಾನು ಆಳು ಉಂಟಷ್ಟೆ(ರಾಜೇಂದ್ರ. ೭೩).

[ ?./ತಮಿ. ಚಿಲುವಾಣ, ಚಿಲ್ವಾಣ, ಚಿಲ್ವಾಣ ; ಮಲ. ಚಿಲ್ವಾನ; ತುಳು. ಚಲುವಾನ, ಚಿಲ್ವಾನ ; ತೆಲು. ಚಲುವಾನ, ಚಲುವಾಯನ. /ಮರಾ. ಚಿಲವಣಾ, ಚಿಲ್ಲವಣಾ, ಚಿಲವಾನ್, ಚಲವಾಣ್ ]

**ಚಲುವಾನಪೈರು** (ನಾ). ಅವರೆ, ಹುರುಳಿ, ಕಡಲೆ, ಕೊತ್ತುಂಬರಿ ಮುಂತಾದ ಚಿಲ್ಲರೆ ಧಾನ್ಯದ ಬೆಳೆ ; ಚಿಲ್ಲರೆ ಪೈರು (?) : ಸೊಪ್ಪಿನ ತೋಟ ಚಲುವಾನಪೈರು ಉಪಗ್ರಾಮಗಳ ಹೆಚ್ಚು ಹುಟ್ಟುವಳಿ ಕೆರೆಗಳ ಹೆಚ್ಚು ಹುಟ್ಟುವಳಿ ಮುಂತಾದ ಸಕಲ ಸ್ವಾಮ್ಯಉ (ಎಕ. III, ತಿರುಮ, ೩೩-೦೩೭೦ ; 1748). [ ಚಲುವಾನ + ಪೈರು (<ಪಯಿರ್) ]

**ಚಲುವಾನಸುಂಕ** (ನಾ). ಚಿಲ್ಲರೆ ಸುಂಕ ; ಸಣ್ಣ ಪುಟ್ಟ ಬಾಬಿನ ತೆರಿಗೆ : ತಳವಾಱಿಕೆ ಅಳವಾಱನ್ಯಾಯಸಭೆಯ ಸಂಜೆಯ ಚಲುವಾನಸುಂಕ ಸೋಡಿಗೆ ಇವು ಮೊದಲು (ಎಕ. V, ಹಾಸನ. ೨-೦೮ ; 1563).

[ ಚಲುವಾನ + ಸುಂಕ ]

**ಚಿಲುವಾಸು** 'ಚಿಲುವಾನ' ನೋ.
**ಚಿಲುಹಾಲು** 'ಚಿಲುಪಾಲ್' ನೋ.
**ಚಿಲ್ಯೆತ** 'ಚೀಲ್ಯೆತ' ನೋ.
**ಚಿಲ್ಕರಿವೆ** 'ಚಿಲ್ಕುಹರಿವೆ' ನೋ.
**ಚಿಲ್ಕುಹರಿವೆ, ಚಿಲ್ಕರಿವೆ** (ನಾ). ಒಂದು ಬಗೆಯ ಸೊಪ್ಪು; ಕಿರುಕು ಸಾಲೆ: ಹರಿವೆಸೊಪ್ಪು, ಚಿಲ್ಕುಹರಿವೆಸೊಪ್ಪುಗಳಲ್ಲಿ ಎರಡು ವಿಧಗಳಿವೆ (ಕಕಕ. ೧೭). **ಚಿಲ್ಕರಿವೆ:** ಹರಿವೇ ಸೊಪ್ಪು, ದಂಟು ಸೊಪ್ಪು, ಚಿಲ್ಕರಿವೇ ಸೊಪ್ಪು (ಕ್ಷುಕಿಗಿ. ೬-೯೨). [ಚಿಲ್ಕು ? + ಹರಿವೆ]
**ಚಿಲ್ಪ** (ನಾ). ೧. ಸಣ್ಣವನು; ಚಿಕ್ಕವನು: ಈ ಚಿಲ್ಪ ಈಸಲ ಮೊದಲ ಬಹುಮಾನ ಪಡೆದಿದ್ದಾನೆ (ರೂಢಿ). ೨. ಕುಳ್ಳಾದ ಎತ್ತು; ಗಿಡ್ಡ ಎತ್ತು: ನೇಗಿಲಿಗೆ ಹೂಡಿರುವ ಚಿಲ್ಪಗಳು ಒಳ್ಳೆ ಬಲಿಷ್ಠವಾಗಿವೆ (ರೂಢಿ). (ಗು). ೩. ಸಣ್ಣದಾದ; ಚಿಕ್ಕದಾದ: ಈ ಚಿಲ್ಪಹುಡುಗ ಬಹಳ ಬುದ್ಧಿವಂತ (ರೂಢಿ). [?]
**ಚಿಲ್ಪಾರಿ** 'ಚಿಲ್ಪೇರಿ' ನೋ.
**ಚಿಲ್ಪೇರಿ, ಚಿಲ್ಪಾರಿ, ಚುಲ್ಪಾರಿ** (ನಾ). ಸಣ್ಣವನು; ಚಿಕ್ಕವನು: ನಿಮ್ಮಂಥ ಚಿಲ್ಪೇರಿಗಳೆಲ್ಲ ರಾಜಕೀಯಕ್ಕೆ ತಲೆಹಾಕದೆ ನಿಮ್ಮಷ್ಟಕ್ಕೆ ನೀವಿರಬಾರದೇನೋ (ಸ್ವಾಮಿಸ್ಮೃ. ೧೨೪). **ಚಿಲ್ಪಾರಿ:** ಆ ಚಿಲ್ಪಾರಿ ಬಹಳ ಚೇಷ್ಟೆ ಮಾಡುತ್ತಾನೆ (ರೂಢಿ). **ಚುಲ್ಪಾರಿ:** ಒಬ್ಬ ಚುಲ್ಪಾರಿಯನ್ನು ಎತ್ತಿ ಒಳಕ್ಕೆ ಬಿಡುತ್ತಿದ್ದವು (ಪರೀಕ್ಷೆ. ೩೨). [<ಚಿಲ್ಪ]
**ಚಿಲ್ಮಿಷ** (ನಾ). ಮೋಸ; ವಂಚನೆ: ಅವನೇನೋ ಒಳ್ಳೆಯವನೇ, ಅವನ ಹೆಂಡತಿ ಬಲು ಚಿಲ್ಮಿಷದವಳು (ಅದೂಟಿ. ೧೧೨).
[←ತೆಲು. ಚಿಲಿವಿಸ./ಸಂ. ಕಿಲ್ಬಿಷ]
**ಚಿಲ್ಲ$_1$, ಚಿಲಿ$_1$, ಚಿಳ್ಳ$_2$, ಚಿಲ್ಲು$_1$** (ನಾ). ಒಂದು ಬಗೆಯ ಗಿಡ ಮತ್ತು ಅದರ ಬೀಜ; ಕತಕ. ಕದಡಿದ ನೀರನ್ನು ಶುದ್ಧ ಮಾಡಲು ಉಪಯೋಗಿಸುವ ಬೀಜ: ತದಕಿನ ತಾಳ ತೆಂಗಿನ ತಳಂಕಿನ ತುಂಬುರ ಚಿಲ್ಲ ಬೆಲ್ಲವತ್ತದ ಬಿಳಿಯತ್ತಿಯಿಪ್ಪೆಯ ಮರಂಗಳ (ಲೀಲಾವ. ೬-೨೭); ಚಿಲ್ಲ ಚೆನ್ನೆಗೆ ತೇಗು ತುಂಬುರವರಗಳಿಂ ನಿಲ್ಲದೆ ಮೆಱೆದುದಾ ವಿಪಿನ (ಕುಮಾಸಂ. ೨೭-೩೩); ಚಿಲ್ಲ ನೆಲ್ಲಿಯು ಹೊಂಗೆ ನೇಱಲು . . . ಸೂರ ಮಾರ್ಗವ ತಡೆದಿಹುವು (ಕಂಸವಿ. ೦೮-೩೭). **ಚಿಲಿ$_1$:** (ಶ). **ಚಿಳ್ಳ$_2$:** ಚಳಿ ಚುಜ್ಜುಲು . . . ಮೊದಲಾದ ಗಗನಮಂ ತುಡುಕುವ ವೃಕ್ಷಂಗಳ್ (ಸೌಗಂಧಿ. ೩೪-೭). **ಚಿಲ್ಲು$_1$:** "ಕತಕಂ ಚಿಲ್ಲು" (ಮುಂಗರಾ. ೪೨-೩೯); ಬೆಲ್ಲವತ್ತ ವರವಾದಲ ವಂಬಟೆ ಚಿಲ್ಲು ಚಿಳ್ಳೆಗಾಯ್ [ಪಾಠಾಂ. ಚಿಳ್ಳ ಚಿಲ್ಲಕಾಯ್] (ಸೂಕ್ತಿಸು. ೧೦-೮೭); (ನಳಹಿಂ. ೪೬೨ ನೋ); ಮರಗಳು; ಹೆಸವ . . . ಚಿಲ್ಲು, ಹೂವರುಸಿ, ಬೆಪ್ಪಾಲೆ, ಹಾಲೆ (ಸಮ್ಮುಸು. ೨೩೭).
[ದ್ರಾ.೩ ತಮಿ. ತೆಲು. ಚಿಲ್ಲ]
**ಚಿಲ್ಲ$_2$, ಚಿಲ್ಲು$_2$** (ನಾ). ರಾಟೆಯಲ್ಲಿ ಕದಿರನ್ನು ಜೋಡಿಸಲು ಇರುವ ಕಿವಿಯಂತಹ ಭಾಗ; ಕದಿರನ್ನು ಜೋಡಿಸುವ ಮರದ ಅಥವಾ ಚರ್ಮದ ಕಿವಿ: ಚಿಲ್ಲ ಹಮ್ಮಿಗಿ, ಕಟ್ಟು, ಇವೆಲ್ಲವನ್ನು ಮಾಡಿಸಿಕೊಡುತ್ತಾನೆ (ಕಕ್ಕಸು. I, ೩೭೭). **ಚಿಲ್ಲು$_2$:** ಮನಿಯಾನ ಕೋಣವ ಕಡಿಸಿ ಚಿಲ್ಲು ಮಾಡಿಸಿ ಕೊಟ್ಟಾ (ಹುಲ್ಲಗ. ೯೭).
**ಚಿಲ್ಲ$_3$** 'ಚುಲ್ಲ$_1$' ನೋ.
**ಚಿಲ್ಲ$_4$** (ನಾ). ೧. ರೋಗದಿಂದ ನೀರು ಸುರಿಯುತ್ತಿರುವ ಕಣ್ಣುಳ್ಳವನು; ಸೋರುಗಣ್ಣ. ೨. ಗುಂಡುಮುಳುಕನ ಹಕ್ಕಿ; ಮುಂಡುಮುಳುಕನ ಹಕ್ಕಿ: "ಆಶಾಪೀ, ಶಕುನೀ, ಚಿಲ್ಲಃ – ಈ ೩ ಗುಂಡುಮುಳುಕ (ನಹಕ್ಕಿ)" (ಹಲಾಯು. ೪೨-೯೭); "ಚಿಲ್ಲಮಾತಪಪಕ್ಷಿಯೆನೆ ಮುಂಡುಮುಳುಕನಕ್ಕುಂ" (ಮುಂಗರಾ ೩೦-೩). [ಸಂ.]

**ಚಿಲ್ಲಗೊಟ್ಟೆ** (ನಾ). =ಚಿಲ್ಲಬಿತ್ತು: ನೆಲ್ಲಿಯ ಸೆಟ್ಟು ಬಾಳಮಸಿತಾಂಜನವೊಲ್ಪಿಹ ವಂಸ್ತ್ರಯಿಪ್ಪೆ ಕೇಡಿಲ್ಲದ ಚಿಲ್ಲಗೊಟ್ಟೆ ಪೊಸಪೀರೆಯ ಬಿತ್ತಿನೊಳಾದ ಬೂದಿಯುಂ ನಿಲ್ಲದೆ ಬಾವಿಯೊಳ್ ಕಲಸಲ್ . . . ಬಾವಿಗಳ ನೀರಮ್ಮು ತೋಪಮಮಂ (ಅಟ್ಟಸು. ೦೦-೬೩). [ಚಿಲ್ಲ$_1$+ಗೊಟ್ಟೆ$_1$ (<ಕೊಟ್ಟೆ$_1$)]
**ಚಿಲ್ಲತನ** (ನಾ). ಕ್ಷುಲ್ಲಕತನ; ನೀಚತನ: ಚಿಲ್ಲವೇ ಹೇಳಕಟಯನ್ನೀ ಚಿಲ್ಲತನವೆಂದಿಂಗೆ ಮಾಣ್ಬುದು (ಬಸಪು. ೪೩-೪೦).
[ಚಿಲ್ಲ$_2$ (<ಚುಲ್ಲ$_1$) + -ತನ]
**ಚಿಲ್ಲಫಲ** (ನಾ). =ಚಿಲ್ಲಬಿತ್ತು: ಚ(ಚಿ)[ಪಾಠಾಂ. ಛಿ]ಲ್ಲಫಲದಿಂದೆ ನೀರ್ಕದಡೆಲ್ಲಂ ತಿಳಿ (ಕಿಡು) ವಂತೆ ತಿಳಿಗುಮುದಱಿಂ ಧರೆಯೊಳ್ (ಜಸುದ. ೦೨-೪೬).
[ಚಿಲ್ಲ$_1$ + ಫಲ]
**ಚಿಲ್ಲಬಿತ್ತು** (ನಾ). ಚಿಲ್ಲದ ಬೀಜ: "ವಾರಿಪ್ರಸಾದನಃ–ಚಿಲ್ಲಬಿತ್ತು" (ಓಷಧಿ. ೦೩೨). [ಚಿಲ್ಲ$_1$ + ಬಿತ್ತು$_2$ (<ಬಿಟ್ಟು)]
**ಚಿಲ್ಲಬೀಜ** (ನಾ). =ಚಿಲ್ಲಬಿತ್ತು: "ಕಾಂಸ್ಯಂ-ಕಂಚು, ಚಿಲ್ಲಬೀಜ" (ಓಷಧಿ. ೩೪).
[ಚಿಲ್ಲ$_1$ + ಬೀಜ]
**ಚಿಲ್ಲರೆ** (ಗು). ೧. ಸಣ್ಣ; ಕ್ಷುದ್ರವಾದ; ಅಲ್ಪವಾದ; ಸಾಮಾನ್ಯವಾದ: ಎಲ್ಲಾ ದೇವರ ಗಂಡ ಅವ ಚಿಲ್ಲರೆ ದೈವದ ಮಿಂಡ (ಪುರಂದ. ೦-೩೭-೮); ಇತರೆ ಚಿಲ್ಲರೆ ಬಾಬುಗಳನ್ನೆಲ್ಲಾ ನಿರ್ವಹಿಸಬೇಕು (ಗ್ರಾಮಾಳ. ೨); "ಚಿಲ್ಲರೆ ಮಂದಿ" ಎಂದಳು ಇನ್ನೊಬ್ಬಳು (ವಾಪೋಲೀ. ೩೪೬). (ನಾ). ೨. ಒಂದು ಪೂರ್ಣ ನಾಣ್ಯದ ಅಂಶ,–ಭಾಗ; ಸಣ್ಣ ಪುಟ್ಟ ನಾಣ್ಯ: ಸಮಯಕೆ ದೊರೆಯುವ ರೂಪಾಯಿ ಚಿಲ್ಲರೆ ಸೂರರ ಚೆಕ್ಕಿಗೆ ಮಿಗಿಲು (ಚಂದ್ರವೀ. ೦೪೯-೯೩); ಎಂಟಾಣೆಯ ಪಾವಲಿಯೊಂದನ್ನಿತ್ತ ಅವನ ಕೈಗೆ, 'ಚಿಲ್ಲರೆ ಇಲ್ಲವಲ್ಲೋ' ಎಂದು (ರೂಪಸಂ. ೮).
**ಚಿಲ್ಲರೆಯಂಗಡಿ**=ನಿತ್ಯೋಪಯೋಗದ ವಸ್ತುಗಳನ್ನು ಸಣ್ಣ ಪ್ರಮಾಣದಲ್ಲಿ ಮಾರುವ ಅಂಗಡಿ; ಸಣ್ಣ ಅಂಗಡಿ; ಕಿರಂಕುಳ ಅಂಗಡಿ(ಉಕ): ನನ್ನ ತಮ್ಮ ಚಿಲ್ಲರೆಯಂಗಡಿ ಇಟ್ಟಿದ್ದಾನೆ (ರೂಢಿ). **ಚಿಲ್ಲರೆವ್ಯಾಪಾರಿ**=ನಿತ್ಯೋಪಯೋಗಿ ವಸ್ತುಗಳನ್ನು ಸಣ್ಣಪ್ರಮಾಣದಲ್ಲಿ ವ್ಯಾಪಾರ ಮಾಡುವವನು: ನಾನೊಬ್ಬ ಚಿಲ್ಲರೆ ವ್ಯಾಪಾರಿ (ಪುಟ್ಟುರುದಾ. ೧೩೪).
[?./ತಮಿ. ಚಿಲ್ಲಱೈ; ಮಲ. ಚಿಲ್ಲಱ; ತುಳು. ಚಿಲ್ಲರೆ; ತೆಲು. ಚಿಲ್ಲರ./ಹಿಂ. ಚಿಲ್ಲರ್; ಮರಾ. ಚಿಲ್ಲರ್, ಚಿಲ್ಲಾರ್, ಚಿಲ್ಲೇರ್. / ಪ್ರಾ. ಛಿಲ್ಲರ]
**ಚಿಲ್ಲರೆಖರ್ಚು** (ನಾ). (ಲೆಕ್ಕಕ್ಕೆ ಸಿಕ್ಕದ) ಸಣ್ಣಪುಟ್ಟ ವೆಚ್ಚ: ಚಿಲ್ಲರೆ ಖರ್ಚಿಗಾಗಿ . . . ರೂಪಾಯಿಗಳನ್ನು ಕೊಡಲು ಕಾರ್ಯಕಾರಿಸಮಿತಿಯು ನಿರ್ಧರಿಸಿದೆ (ಹುಕ್ಕುಸು. ೯೭). [ಚಿಲ್ಲರೆ + ಖರ್ಚು$_4$]
**ಚಿಲ್ಲರೆಕೆಲಸ** (ನಾ). ಮುಖ್ಯವಲ್ಲದ ಕೆಲಸ; ಸಣ್ಣಪುಟ್ಟ ಕೆಲಸ: ಚಿಲ್ಲರೆ ಕೆಲಸಕ್ಕೆ ಆಳು ಇಟ್ಟುಕೊಳ್ಳಲಾಗಿದೆ (ರೂಢಿ). [ಚಿಲ್ಲರೆ + ಕೆಲಸ]
**ಚಿಲ್ಲರೆಜನ** (ನಾ). ಸಣ್ಣಪುಟ್ಟ ಜನ; ಸಾಮಾನ್ಯ ಜನ: ಮಣ್ಣಿನ ಬಟ್ಟಲುಗಳಲ್ಲಿ ಮಿಠಾಯಿ ಕೊಡುತ್ತಾರೆ ಚಿಲ್ಲರೆಜನಕ್ಕೆ (ಸಾಹಿತ್. ೩೮೦ ಅನು). [ಚಿಲ್ಲರೆ + ಜನ]
**ಚಿಲ್ಲರೆಧಾನ್ಯ** (ನಾ). ಮುಖ್ಯವಲ್ಲದ ಕಾಳು ಕಡ್ಡಿ; ಹುರುಳಿ, ಅವರೆ ಮೊದಲಾದ ಧಾನ್ಯಗಳು; ಅಕ್ಕಡಿಕಾಳು: ವರ್ಷಕ್ಕೆ ಒಂದೆರಡು ಪಲ್ಲ ಚಿಲ್ಲರೆಧಾನ್ಯವೂ ಬರುವುದುಂಟು (ರೂಢಿ). [ಚಿಲ್ಲರೆ + ಧಾನ್ಯ]
**ಚಿಲ್ಲರೆಮಾತು** (ನಾ). ಅಪ್ರಧಾನವಾದ ಮಾತು; ಸಣ್ಣಪುಟ್ಟ ಮಾತು: ಸುಮ್ಮನೆ ಯಾಕಯ್ಯಾ ಈ ಚಿಲ್ಲರೆಮಾತನ್ನೆಲ್ಲಾ ಕಟ್ಟಿಕೊಂಡು ಕುಣಿಯುವುದು (ರೂಢಿ). [ಚಿಲ್ಲರೆ + ಮಾತು$_1$]
**ಚಿಲ್ಲರೆವೆಚ್ಚ** (ನಾ). =ಚಿಲ್ಲರೆಖರ್ಚು: "ಚಿಲ್ಲರೆ ವೆಚ್ಚ; ಸಾದಿಲ್ವಾರು" (Contingency. ಪತ್ರಿವಿ. ೩೪). [ಚಿಲ್ಲರೆ + ವೆಚ್ಚ]

**ಚಿಲ್ಲರೆಸಾಮಾನು**(ನಾ). ಸಣ್ಣಪುಟ್ಟ ಸಾಮಾನು: ಈ ಚಿಲ್ಲರೆ ಸಾಮಾನುಗಳಿಗೆ ಸಂಬಳದಲ್ಲಿ ಅರ್ಧ ಖರ್ಚಾಗುತ್ತದೆ (ಉಪ). [ಚಿಲ್ಲರೆ + ಸಾಮಾನು]

**ಚಿಲ್ಲಹರಿ** (ನಾ). ಜ್ಞಾನಪ್ರವಾಹ,–ಪರಂಪರೆ; ಚಿದ್ಭಾವತರಂಗ: ಪರವಶೀಭಾವದಿಂದರವಿರಿದ ಕಣ್ಣಳಿಂ ಪರಮ ಚಿಲ್ಲಹರಿ ತಲೆಗೇರಿದುನ್ಮತ್ತದಿಂ ಯೋಗೀಂದ್ರರುಲೆ ಮೆರೆದರು (ಬಕೋಪು. ೪–೩೫).

[ಸಂ. (ಚಿತ್ + ಲಹರಿ)]

**ಚಿಲ್ಲಳಿ** 'ಚಿಲ್ಲೆಳಿ' ನೋ.

**ಚಿಲ್ಲಾಣ** (ನಾ). ೧. ಸಣ್ಣಕತ್ತಿ; ಕಠಾರಿ. ೨. ಬಳುಕುವ ಕತ್ತಿ: (ಈ) 'ಚೀಲಣ' ಪರಾ. [←ತೆಲು. ಚಿಲ್ಲಾಣ, ಚಿಲ್ಲಾಡ]

**ಚಿಲ್ಲಿಕ** (ನಾ). ಒಂದು ಬಗೆಯ ಸಸ್ಯ: "ಶ್ವಾಸನಃ – ಚಿಲ್ಲಿಕ, ನಾಯಚಿಲಕೆ" (ಒಷಧಿ. ೧೬೪). [< ಚಿಲಿಕೆ$_1$ ?]

**ಚಿಲ್ಲು**$_1$ 'ಚಿಲ್ಲ$_1$' ನೋ.

**ಚಿಲ್ಲು**$_2$ 'ಚಿಲ್ಲ$_2$' ನೋ.

**ಚಿಲ್ಲು**$_3$ (ನಾ). ಬಂದೂಕಿನಿಂದ ಹೊಡೆದಾಗ ಹಾರುವ ಗುಂಡು; ಚರೆ: ಕಾಲಿಗೆ ಗುಂಡು ತಾಗಿ ಇಬ್ಬರು ಉರುಳಿದರು. ಒಂದು ಚಿಲ್ಲು ಬಂದು ನನ್ನ ತೊಡೆಯನ್ನು ಕೊರೆಯಿತು (ಧೂಮಮ. ೯೦). [?]

**ಚಿಲ್ಲುಕಭಟಾರ** (ನಾ). ಒಬ್ಬಾತನ ಹೆಸರು: ಉತ್ತರಾಯಣ ಸಂಕ್ರಾನ್ತಿಯೊಳ್ವೆಕ್ಕಾಣಭಟಾರರ ಶಿಷ್ಯರ್ ಚಿಲ್ಲುಕಭಟಾರರ ಕಾಲಂ ಕರ್ಚಿ ಕೊಟ್ಟ ಮರ್ಯಾದೆಯೊಳಗೆ (ಎಕ. XII, ಶಿರಾ. ೨೮–೪೦; 943).

[ಚಿಲ್ಲುಕ$_0$ + ಭಟಾರ]

**ಚಿಲ್ಲುಗುಂಡು**(ನಾ). ಬಂದೂಕಿನಿಂದ ಸಿಡಿಯುವ ಗುಂಡು; ಸಿಡಿಗುಂಡು: ಎರಡೆರಡು ಚಿಲ್ಲುಗುಂಡು ಗುರಿ ಇಡಿಸಿದಲ್ಲಿ ಚನ್ನವೀರ, ಅಕ್ಕಸಾಲೆ ನರಜು, ಇವರಿಬ್ಬರೂ ಗುರಿಗೆ ಇಟ್ಟದ್ದು ತಗಲಿತು (ರಾಜೇಂದ್ರ. ೧೪೬).

[ಚಿಲ್ಲು$_3$ + ಗುಂಡು]

**ಚಿಲ್ಲೆ, ಚಿಲ್ಲೆ**$_2$ (ನಾ). ನೀಚಳಾದ ಹೆಂಗಸು; ಕೆಟ್ಟ ನಡತೆಯುಳ್ಳವಳು: ಕುಟಿತಮತಿಗಳು ಖುಲ್ಲೆಯರು ಕಳ್ಳೆಯರು ಚಿಲ್ಲೆ[ಪಾಠಾಂ. ಳ್ಳೆ]ಯರು (ಬಸಪು. ೪೩–೩೪). **ಚಿಳ್ಳೆ**: ಕಳ್ಳೆಯರ್ ಚಿಳ್ಳೆಯರ್ ಶಾಂತರಂ ಯೆಣಿಸದಪರಾಧೆಯರ್ (ಚತಿಲ. ೨–೫೮). [ಚಿಲ್ಲ$_3$ (< ಚುಲ್ಲ$_1$) + – ಎ$_2$]

**ಚಿಲ್ಲೆಳಿ, ಚಿಲ್ಲಳಿ** (ನಾ). ಒಂದು ಬಗೆಯ ಮರ: ಒಕ್ಕಳಮಪ್ಪ ಚಿಲ್ಲೆಳಿಯ [ಪಾಠಾಂ. ಚಿಲ್ಲಳಿಯ, ಚಿಲ್ಲೆಳಿಯ, ಚಿಳ್ಳಿಲೆಯ]ಕಾಯ್ಗಳೊಳಿಕ್ಕಿ ಸುರೇಂದ್ರಶಾಖೆಯಂ ಚಕ್ಕನೆ ಕೂಡಿರಲ್ (ಜಮದ. ೬–೫೬). **ಚಿಲ್ಲಳಿ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [?]

**ಚಿವ** 'ಸಿವ' ನೋ.

**ಚಿವಟು** 'ಚಿವುಂಟು' ನೋ.

**ಚಿವಡಾ, ಚಿವುಡಾ, ಚುಡುವ, ಚೂಡಾ** (ನಾ). ಹುರಿದು, ಒಗ್ಗರಣೆ ಹಾಕಿದ ಅವಲಕ್ಕಿ; ಖಾರದ ಅವಲಕ್ಕಿ: ಹೊರಗೆ ಒಬ್ಬ 'ಮಹಾರಾಜರು' ಚಹಾದ ತಪ್ಪೇಲಿಯನ್ನೂ, ಚಿವಡಾದ ರಾಶಿಯನ್ನೂ ಇಟ್ಟುಕೊಂಡು ಕುಳಿತು, ಶಿಷ್ಯರಾಗಬಂದ ಉಮೇದುವಾರರಿಗೆ ಅನುಗ್ರಹಿಸುತ್ತಿದ್ದರು (ಪೂರ್ವರಂ. ೩). **ಚಿವುಡಾ**: (ಚಿವುಡಾ) ಖಾರದ ಅವಲಕ್ಕಿ ಇವೆಲ್ಲ ರಾಜಸ ಆಹಾರದಲ್ಲಿ ಬರುವವು (ಬ್ರಹ್ಮಚೇ. ೧೩೩). **ಚುಡುವ**: ಚಹ ಚುಡುವ ಭಕ್ಷಣವು ಗೃಹಸ್ಥನ ಲಕ್ಷಣವು (ಶಿಥ್ರಮು. ೩೦). **ಚೂಡಾ**: ಚಾಹಾದ ಜೋಡಿ ಚೂಡಾಧಾಂಗ ನೀ ನನಗಂದಾಂವಾ (ಸಖೀಗೀ. ೯೨–೦೫); ಅಲ್ಲಿಯ ಕೆಲಸಗಾರರು ಉಪ್ಪಿಟ್ಟು, ದೋಸೆ, ಸಿರಾ, ಇಡ್ಲಿ, ಚೂಡಾ ಮುಖ್ಯವಾಗಿ ತಮ್ಮ ನಿತ್ಯದ ನಾಮಾವಳಿಯ ಪಠಣಕ್ಕಾರಂಭಿಸಿರುವರು (ತುಳ್ಳುಣ್ಣ. ೮). [←ಮರಾ. ಚಿವಡಾ./ಪ್ರಾ. ಚಿಮಿಟ್ಟ, ಚಿಮಿಢ,ಚಿವಿಟ್ಟ, ಚಿವಿಡ./ಸಂ. ಚಿಪಿಟ, ಚಿಪುಟ]

**ಚಿವರು**$_1$ 'ಸಿವುಬು$_1$' ನೋ.

**ಚಿವರು**$_2$ 'ಸಿವುಬು$_2$' ನೋ.

**ಚಿವರುಗಾಯ** 'ಚಿವುರುಗಾಯ' ನೋ.

**ಚಿವಲ್ಲಿಕೆ** (ನಾ). ಒಂದು ಬಗೆಯ ವನಸ್ಪತಿ: "ಉಚ್ಚಲ್ಲಿಕಾ–ಚಿವಲ್ಲಿಕೆ ?" (ಓಷಧಿ. ೧೬). [?]

**ಚಿವಾನಿಕಳನಿ** 'ಚಿವಾನಿಕಟನಿ' ನೋ.

**ಚಿವಾನಿಕಟನಿ, ಚಿವಾನಿಕಳನಿ**(ನಾ). ಒಂದು ಗದ್ದೆಯ ಹೆಸರು: ವಾಳ್ಗಟ್ಟು ಚಿವಾನಿಕಟನಿ (ಎಕ. XVI, ತುಮಕೂ. ೯೯–೬; ?). **ಚಿವಾನಿಕಳನಿ**: ಇದರ್ಕೆ ಚಿವಾನಿಕಳನಿ ವಾಳ್ಗಟ್ಟುಕೊಟ್ಟೊದು (ಎಕ. XVI, ತುಮಕೂ. ೮೬–೫; ?).

[ಚಿವಾನಿ$_0$ + ಕಟನಿ]

**ಚಿವಿ** (ಕ್ರಿ). ಕೆರೆದುಕೊಳ್ಳು; ತುರಿಸು: "ಕೆರೆ, ತುರಿಸು, ತಿಕ್ಕು, ಚಿವಿ, ಚಿವುಟು, ಚಿವುರು, ಚಿಗಟು" (ಕಂನುಹು. ೮೩). [?]

**ಚಿವಿಕೆ** (ನಾ). ಒಂದು ಬಗೆಯ ಗಿಡ; "ಗ್ರಂಥಿಲಾ ವಮಾರಿಪ" (ಪಂಡಿತ).

[?]

**ಚಿವು** (ನಾ). ಒಂದು ಅನುಕರಣ ಧ್ವನಿ; ಹಕ್ಕಿಗಳ ಚಿಲಿಪಿಲಿ: 'ಚಿವುಗುಂಡು' ಪರಾ.

**ಚಿವುಚಿವು** (ದ್ವಿರುಕ್ತಿ): ಹೂವಿನ ಗಿಡದ ಸಾಲೊಳಗೆ ಚಿವುಚಿವು ಅನ್ನುತ್ತ . . . ಹಾರಾಡುವ ಹಕ್ಕಿ ನೋಡು (ಮುಂಬಯಿ. ೨–೧೧).

**ಚಿವುಂಟು, ಚಿಗುಂಟು, ಚಿಮುಟು, ಚಿವಟು, ಚಿವುಟು**$_2$**, ಚಿವುಡು, ಚೂಟು**$_1$**, ಜಿಗಟು**$_1$**, ಜಿಗುಟು**$_1$ (ಕ್ರಿ). ೧. ಉಗುರುಗಳಿಂದ ಚರ್ಮವನ್ನು ಹಿಂಡು,–ಅದುಮು,–ಒತ್ತು: ಕೂಸಂ ಚಿವುಂಟುವೈ ತೊಟ್ಟಿಲಂ ತೂಗುವೈ (ನಂಬಿರ. ೧೫–೧೪೧). ೨. ಉಗುರಿನಿಂದ ಕತ್ತರಿಸು,–ಕೀಳು: ಕಾಲಕಂಧರ ಬೊಮ್ಮನೇಕಶಿರಸ್ಸನಾ ನಖರಾಗ್ರದಿಂ ಸಾಲೊಳೊಂದನದಂ ಚಿವುಂಟಲಜಂ ತದಾಮೃತನಾದನೇ (ಹಾಲಾಸ್ಯ. ೨–೧೬–೫). **ಚಿಗುಂಟು**: ಚಿಗುಟುವುದು, ಕಾರಣವಿಲ್ಲದೆ ಕೆಣಕಿ ಜಗಳಕ್ಕೆ ಕರೆಯುವುದು (ಕಳಹು.೧೦). **ಚಿಮುಟು**: ೧. ಅವನ ತೋಳನ್ನು ಗಟ್ಟಿಯಾಗಿ ಚಿಮುಟ . . . ಎಂದ (ದೀವಹಂ. ೧೪೩). **ಚಿವಟು**: ೧. ಚಿವಟುವುದೂ, ಚಿವರುವುದೂ ನಡೆಯಿತು (ಕುರಿಹಿಂ. ೬೭). **ಚಿವುಟು**$_2$: ೧. ಸವರಣಂ ತಲೆಗಳಸರಿದು ವೈಷ್ಣವರ ಘೋರಾಗ್ರಂಗಳಂ ಮಿಗೆ ಚಿವುಟ ಬೌದ್ಧರುಗಳ ಮದೋದ್ಧತಿಯೆಂಬ ಕಾನನನೆ ಸವಟ್ (ಬಸಪು. ೫೨–೦೦); ಶೈಲೆ . . . ಮಮತೆಯಿಂದ ಕೆನ್ನೆಗೆ ಮೆಲ್ಲನೆ ಚಿವುಟಿ, ಅಲ್ಲಿಂದ ಪಾರಾಗಿ ಸ್ನಾನಕ್ಕಾಗಿ ಹೊರಟು ಹೋದಳು (ಕೀಚಕೋಕ. ೫೯); ಅವನ ಹೃದಯದಲ್ಲಿ ಚಿಂತೆಯು ಚಿವುಟಿದಂತಾಗುತ್ತಿದ್ದಿತು (ಪ್ರಣಸ. ೭೦). ೨. ರಾಕ್ಷಸರ ಹುಡುಗರು . . . ಚಿಗುರುಗಳಂ ಚಿವುಟಿ (ಸೌಗಂಧಿ. ೪೦೯–೯); ಕರುಳುವಳ್ಳಿಯ ಕುಡಿಯ ಚಿವುಟಿ ಸೊನೆಗರಸುತಿಹೆ ಇಂಥ ಹಾಲುಳ್ಳ ಹಾಡು (ಅರಳು. ೩೫೯–೦೧). **ಚಿವುಡು**: ೨. "ಚಿವುಡು–ನಖಚ್ಛೇದೇ" (ಶಮಧಾ). **ಚೂಟು**$_1$: ೧. "ನಮ್ಮನ್ನು ಚೂಟಿದರೆ ನಮಗೆ ನೋವಾಗುತ್ತದೆ; ಅದರಂತೆ ಪರರಿಗೆ" ಎಂಬ ಮಾತನ್ನು ನಾವು ಮನಸ್ಸಿನಲ್ಲಿಡಬೇಕು (ಧಾರಸಂ. ೨). **ಜಿಗಟು**$_1$: ೧. ಅಮ್ಮ, ನೋಡಮ್ಮ ಇವಳನ್ನ! ಜಿಗಟತಾಳೆ (ಬಳಜೀ. ೦೬೯). **ಜಿಗುಟು**$_1$: ೧. ಅವನ ತೋಳಿನ ಚರ್ಮ ಎದ್ದು ಬರುವಂತೆ ಜಿಗುಟುತ್ತಿದ್ದರು (ಮುಸಕೂ. ೧೩). ೨. ಶೂಲಿ ತಾ ಮಗನ ತಲೆ ಜಿಗುಟಿ ಹರಿಯೇಕೆ ಪಾಲಿಸದೆ ಹೋದ (ಸರ್ವಜ್ಞ. ೨೦೫). [ದೇ.॥ ತಮಿ. ಚಿಮಿಣ್ಣು; ಮಲ. ಚೀಣ್ಣು]

**ಚಿವುಕಳಿ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ: ಭ್ರಮಣದಲ್ಲಿ ಹಿಮ್ಮಡಿಗಳಿಂದ ಒಂದು ಬಾರಿ ಯರಡು ಪಥಳವ ತಾಡಿಸುವುದು. ಅವುದು ಉಂಟು ಅದು ಬಲ್ಲವರಿಂದ ಚಿವುಕಳಿ ಎಂದು ನುಡಿಯಲ್ಪಡುವುದು (ಖಡ್ಗಚಿ. ೪೭೩೦).

[?]

**ಚವುಕುಲಿ** 'ಚಿನುಕುಲಿ' ನೋ.

**ಚವುಗಣ್ಣು** (ನಾ). ೧. ಅರೆಗಣ್ಣು ; ಕಿರುಗಣ್ಣು : ಆವನ ಆ ಚವುಗಣ್ಣುಗಳು ಅಗಲವಾದುವು (ಚೀನಬಾ. ೨೩೨). ೨. ಸಣ್ಣದಾಗಿಸಿದ ಕಣ್ಣು : ದೂರದಲ್ಲಿ ಬರುತ್ತಿದ್ದ ಬಸ್ಸನ್ನು ಚವುಗಣ್ಣಿನಿಂದ ನೋಡಿದಳು (ರೂಢಿ). [ ಚವು$_0$ + ಕಣ್ಣು$_2$ (<ಕಣ್) ]

**ಚವುಗುಡು** (ಕ್ರಿ). ಚವುಚವು ಎಂದು ಧ್ವನಿಮಾಡು ; ಚಿಲಿಪಿಲಿಗುಂಟ್ಟು : ಕಣ್ಣು ಮುಚ್ಚಿಕೊಳ್ಳುತಾವು ಚಿಕ್ಕ ಚವುಗುಡುತಾವ ಹಕ್ಕಿ (ಹಾಡುಪಾ. ೪೧-೩). [ ಚವು + ಕುಡು$_1$ (<ಕೊಡು$_1$) ]

**ಚವುಟು$_1$** 'ಚವಂಟು' ನೋ.

**ಚವುಟು$_2$** 'ಚವುಂಟು' ನೋ.

**ಚವುಡಾ** 'ಚವಡಾ' ನೋ.

**ಚವುಡಿಕೆ** (ನಾ). ಜಿಗುಟಿ ಹಾಕುವಿಕೆ ; ಉಗುರಿನಿಂದ ಕತ್ತರಿಸುವಿಕೆ : ಪೊಡಮಡಿಕೆ, ತಲೆವಡಿಚವುಕೆ, ಡಿಕೆ (ಶಬ್ದಾನು. ೫೭೦ ಪ್ರಯೋ). [ ಚವುಡು (<ಚವುಂಟು) + - ಇಕೆ ]

**ಚವುಡು** 'ಚವುಂಟು' ನೋ.

**ಚವುರು$_1$** 'ಸಿವುಱು$_1$' ನೋ.

**ಚವುರು$_2$** 'ಸಿವುಱು$_2$' ನೋ.

**ಚವುರುಗಾಯ, ಚವರುಗಾಯ** (ನಾ). ಉಗುರು ಮುಳ್ಳು ಮೊದಲಾದುವುಗಳಿಂದಾದ ಗಾಯ ; ಪರಚುವುದರಿಂದಾದ ಗಾಯ : ಗಲ್ಲದ ಮೇಲೆ ಚವುರುಗಾಯದ ಕಲೆಗಳಿದ್ದವು (ನಿರಾಳ. ೭೦). **ಚವರುಗಾಯ:** ನನಗೆ ಚವರುಗಾಯಗಳಾಗಿದ್ದವು (ಮೋದಿಮ. ೨೦೪) [ ಚವುರು$_1$ (<ಸಿವುಱು$_1$) + ಗಾಯ ]

**ಚವ್ವು** 'ಚೀವು' ನೋ.

**ಚಹಣ, ಚೇಹಣೆ** (ನಾ). ಮೇಳಗಾತಿ (?): ಗಿಳಿಗಳೋದುಗ್ಗಡಣೆ ಕೋಕಿಲರವಂ ಕಹಳೆ ಫಳವಿಡಿದ ಪಲಸು ಮದ್ದಳೆ[ಯು] ಮೊರೆವಳಿಕುಲಂ ಬಳಸಿ ತಾರೈಪ ಚಹಣಿ[ಪಾಠಾಂ. ಚಹಣೆ, ಚಿಂಹಣತೆ, ಶಿಹಣಿ]ಯರು . . . ನವಿಲು ನರ್ತನಂಗೈವವಂತಾ ವನದೊಳು (ಸೋಮಚ. ೨-೮೦); (ಹರಿಚಾ. ೩-೩೬ ಸೋ); "ಹಿಮ್ಮೇಳ" (ಸೋಮಚ. ಕೋಶ). **ಚೇಹಣೆ:** ಲಲ್ಲೆಗೂಡುವ ಚೇಹಣಿಯ [ಪಾಠಾಂ. ಚೇವಣಿಗೆಯರ] ಸಂಗೀತದ ಸಂದಣಿಯೊಳ್ ಪುಷ್ಪಾಂಜಲಿಯ ಸಮಯದೊಳ್ (ಮಲುಹ. ಹ. ೦೬೯-೦೦). [ ? ]

**ಚಿಹ್ನ** (ನಾ). ಗುರುತು ; ಲಕ್ಷಣ ; ಲಾಂಛನ : ಎಸೆದೊಪ್ಪಿರ್ದ ವಿಮಾನವಮಾಲೆ ಖಚರಾನೀಕಕ್ಕೆ ಚಿಹ್ನಂಗಳ್ (ಶಾಂತಿಪು. ೫-೩೪); ಗುರುಶಿಷ್ಯ ಸಂಬಂಧವಾದುದಕ್ಕೆ ಇದು ಚಿಹ್ನ (ಬಸವ. ೯೩೮); ಮಹೋತ್ಸವಳೋತ್ಸಳನಿಮೇಷೋನ್ಮೇಷ ಚಿಹ್ನಂಗಳಿಂ ಗಡ ಬೆಳ್ದಿಂಗಳೆಂಬುದೇ ಪೊಗಟ್ವಿನೂರ್ಜಶ್ರೀಯು ಬೆಳ್ದಿಂಗಳಂ (ಜಗವಿ. ೪-೭೪). [ ಸಂ. ]

**ಚಿಹ್ನೆ** (ನಾ). = ಚಿಹ್ನ : ಇತರರಿಂದ ಅವನನ್ನು ಪ್ರತ್ಯೇಕಿಸುವ ಚಿಹ್ನೆಗಳೂ ಹೌದು (ಪತಿನ್ನಕು. ೬೨೫). [ ಸಂ. ಚಿಹ್ನ ]

**ಚಿಳಕ** (ನಾ). ಸಮೂಹ ; ಮಂಡಲ (?) : ಇಳೆಯಿಂತೀರೇಳು ಲೋಕಂಗಳೊಳವತಿಶಯಂ ಚೆಲ್ವಿನಿಂ . . . ಕುಳಾದ್ರೀಂದ್ರದಿಂದಂ ಬಳಸಿರ್ದ ಮೇರುವೇಳುಂ ಗ್ರಹದ ಚಿಳಕವೇಳುಂ ಯತಿಖ್ಯಾತಿಯೇಳುಂ . . . ತಂನೊಳೊಪ್ಪಲು (ಕಶಿ. IV, ೦-೮ ; 1204). [ ? ]

**ಚಿಳಿಚಿಟಿಲ್** (ನಾ). ಒಂದು ಅನುಕರಣ ಶಬ್ದ : ಅಗಶಿಖರಂ ಚಿಳಿಚಿಟಿಲನೆ [ಪಾಠಾಂ. ಛಿಳಿಛಿಟಿಲೆನೆ]ಮಿಗೆ ಸಿಡಿದುದು (ರಾಜಶೇ. ೫-೩೬).

**ಚಿಳಿಚಿಮ** 'ಚಿಲಿಚಿಮ' ನೋ.

**ಚಿಳಿಚಿಳಿ** (ನಾ). ಒಂದು ಅನುಕರಣ ಶಬ್ದ : ಚಿಳಿಚಿಳಿ [ಪಾಠಾಂ. ಛಿಳಿಛಿಳಿ] ಧ್ವನಿ ಛಟಛಟತ್ಕೃತಿ ಘುಳುಘುಳುಸ್ವನ (ತೊರರಾ. ೫-೮-೬೨)

**ಚಿಳಿಲ್** (ನಾ). ಒಂದು ಅನುಕರಣ ಶಬ್ದ : ಬೀಸೂವ ಬಿಱುಗಾಳಿ ಕೊಳ್ಳಮಟೆ ಪೊಯ್ವ ಸಿಡಿಲ್ ಚಿಳಿಲೆಂಬ ಮಿಂಚು (ಪಮುದ. ೧೮೩ ಪ್ರಯೋ).

**ಚಿಳಿಬರಸು** (ನಾ). ಒಬ್ಬಾತನ ಹೆಸರು(?): ಸಿವನದ ರಾಚನ ಮಗನಣುಗನ್ ಚಿಳಿಬರಸು ಮಾಡಿಸಿದೊನ್ (ಸೌಇಇ. IX-1, ೨೨-೦೪ ; 923). [ ? + ಅರಸು$_2$ (<ಅರಸ$_1$) ]

**ಚಿಳ್ಕೀಳ್** (ನಾ). ಒಂದು ಅನುಕರಣ ಶಬ್ದ : ಪಂದಲೆಗಳನೆರ್ದೆಯಂ ಮೆಟ್ಟಿ ಚಿಳ್ಕೀಳೆನಲ್ ಬೆಟ್ಟುಱುವನ್ನಂ ಕಿಟ್ಟು ಕಿಟ್ಟಿಪ್ಪಳಿಸಿ (ಶೃಂಗಾರ. ೧-೬೧).

**ಚಿಳ್ಳ** 'ಚುಲ್ಲ$_1$' ನೋ.

**ಚಿಳ್ಳನೆ**(ಅ). ತಟ್ಟನೆ; ಕೂಡಲೆ: ಉಗುರೊತ್ತಲು ನೀರಿನ ಸೆಲೆ ಚಿಳ್ಳನೆ ಪ್ಪೇಲ್ಪ್ ಚಿಮ್ಮುವ ಸಿರಿನೆಲವೆ (ಜೂಹಾದಿ. ೫೧-೧೧). [ ಚಿಳ್ಳ$_0$ + - ಅನೆ$_1$ ]

**ಚಿಳ್ಳು** (ನಾ). ಒಂದು ಬಗೆಯ ಮರ : "ಕೋವಿದಾರಃ – ಕಂಚಿವಾಳ, ಚಿಳ್ಳು, ಹೇರಾಚ ?" (ಓಷಧಿ. ४೧). [ ? ]

**ಚಿಳ್ಳೆ$_1$** 'ಚಿನ್ನಿ$_1$' ನೋ.

**ಚಿಳ್ಳೆ$_2$** 'ಚಿಲ್ಲೆ' ನೋ.

**ಚಿಳ್ಳೆ$_3$** (ನಾ). ಸಣ್ಣದು; ಪುಟ್ಟದು; ಮರಿ : "ಕರು, ಕುನ್ನಿ, ಪೂರಿ, ಚಿಳ್ಳೆ, ಚ್ಯೂ, ಪಿಳ್ಳೆ, ಕಂದ . . . ಹುಡುಗ" (ಕಂನುಹು. ೮೧). **ಚಿಳ್ಳೆಪಿಳ್ಳೆ = ಚಿಳ್ಳೆ$_3$** : ಎಲ್ಲರ ಮನೇಲೂ ಚಿಳ್ಳೆಪಿಳ್ಳೆಗಳೇ ಇರೋದು (ಪಾರೇ. ४೮). [ ? ]

**ಚಿಳ್ಳೆಕೇತ** (ನಾ). ಕೀಟಲೆಮಾಡುವ ಒಂದು ಬಗೆಯ ಬೇತಾಳ,–ಅತಿಮಾನುಷವ್ಯಕ್ತಿ : Robin good fellow ಎಂಬ ಪಿಳ್ಳೆಯಕ್ಷ, ಚಿಳ್ಳೆಕೇತ (Puck. ೫೦೫೩). 'ಕಿಳ್ಳೆಕೇತ' ಪರಾ. [ ಚಿಳ್ಳೆ$_3$ + ಕೇತ$_2$ ]

**ಚಿಳ್ಳೆಪಿಳ್ಳೆರಾಯ** 'ಚಿಲ್ಲಪಿಳ್ಳೆರಾಯ' ನೋ.

**ಚಿಱಿಯಪೊಟಲು** (ನಾ). ಒಂದು ಊರಿನ ಹೆಸರು : ಚಿರುಪಿಯು ಚಿನ್ನ ಕುಣ್ಚೆಯು ಚಿಱಿಯಪೊಟಲು ವುಳುವಟ್ಟು ನಾಲ್ಕೂರುಮಿಟ್ಟು ನಡೆದ ಕಲ್ಲಿಗೊಡಂಗೆಯೊಡ್ಡಿನ ಕೆಟಗೆ (ಸೌಇಇ. IX-1, ೨೬-೦೦ ; 950). [ ಚಿಱಿ$_0$ + ಪೊಟಲು (<ಪೊಟಲ್) ]

**ಚಿಱು, ಚಿರು** (ನಾ). ಕಿಱಿದು ಎಂಬುದಕ್ಕೆ ಸಮಾಸದಲ್ಲಿ ಬರುವ ಸಂಕ್ಷಿಪ್ತರೂಪ: ಚಿಱುನನೆ ಚಿಲ್ಲರಲ್ದ ಕಳಿವೂಪಳೆವೂ . . . ಕೀಡೆ ಕರ್ದುಂಕಿದವೂ(ತ್ರಿಪುವಿ. ४೨-೬). 'ಚಿಱುಗುಳ್ಳ' ಪರಾ. **ಚಿರು:** 'ಚಿರಂಗುಳ್ಳ' ಪರಾ. [ <ಕಿಱು$_2$ ]

**ಚಿಱುಗುಳ್ಳ, ಚಿರುಗುಳ್ಳ** (ನಾ). ಒಂದು ಬಗೆಯ ಮರ : ಇಪ್ಪೆವಕುಳಂ ಕರಿಯವೀಳೆ ಚಿಱುಗುಳ್ಳಂ . . . ಮೊದಲಾದುತ್ಕೃಲ್ಲ ತರುಸಂತತಿಗಳಿಂದೆಸೆವುದುಚ್ಚಳಿತ ನಿರ್ಝರ ವಿಪುಂಜತತಿ ರಂಜಿಸುವ ಬಿಂಜಂ (ಉದ್ಭಟ. ೩-४೩). **ಚಿರುಗುಳ್ಳ :** "ನಿದಿಗ್ಧಿಕಾ, ಸ್ಪೃಶ್ರೀ . . . ರಾಷ್ಟ್ರಿಕಾ–೧೦ ಹೆಗ್ಗುಳ್ಳದ ಹೆಸರುಗಳು ಮುಳ್ಳುಳ್ಳ ಚಿರುಗುಳ್ಳ " (ಸಿದ್ಧಾಂತಿ. ೦೧೬). [ ಚಿಱು + ಗುಳ್ಳ ? ]

**ಚಿಱುಬಾಳೆ** (ನಾ). ಒಂದು ಬಗೆಯ ಬಾಳೆ: ನಂದನಾದ್ಯಾರಾಮಂಗಳೊಳು . . . ಚಿಱುಬಾಳೆ . . . ಸಾರ್ವರ್ತುಕವಾದ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೦೦). [ ಚಿಱು + ಬಾಳೆ$_1$(<ಬಾಟ$^2$) ]

**ಚಿಱುವೇರು, ಚಿರಿವೇರು** (ನಾ). ಕೆಂಪುಬಣ್ಣವನ್ನು ಒದಗಿಸಿಕೊಡುವ ಒಂದು ಬಗೆಯ ಬೇರು,–ಮೂಲಿಕೆ : ಚಿಱುವೇರಿನ ಬಣ್ಣಂ ಮಿಗೆ ಪಱಿಯಲ್ಕಂಬರವ ಬಿಡದುಮಾ ತೆಱದಿಂದ ಶಾಂ ಕುಱುಗಿರ್ಕು ನೇಹವಾತನು ಮಱುವನ್ನಂ ಬಿಡದು ಮೈದೊಱದುಮಾಯಾಸಂ (ಕವಿಜ. ४-೨४). **ಚಿರಿವೇಱು :** ಚಿರಿವೇರು, ಛಾಯಾವೇರು (ಮೃಶಿಗ. ೫೬-೦೦೫೫). 'ಚಾಯಬೇರು' ಪರಾ. [ ←ತೆಲು. ಚಿಱುವೇರು, ಚಿರುವೇರು ]

**ಚಟಿಯು** (ನಾ). ಒಬ್ಬಾತನ ಹೆಸರು : ಮಾರಾನ್ತ ರಿಪುಬಲದೊಳ್ಗಾಗಿ × × × ಱಿದು ಸಗ್ಗಗಸ್ತನಾದಂ ಚಟಿಯಂ (ಎಳ. X, ಮುಳಬಾ. ೮೩-೩; ಸು. 767 ?). [ ? ]

**ಚೀಕಟಿಕೆ** (ನಾ). ಒಂದು ಬಗೆಯ ಗಿಡ : ವಿರೇಕಕ್ಕೆ:-ನುಗ್ಗೆಯ ಸೊಪ್ಪು, ಹರುವೆ ಸೊಪ್ಪು . . . ಚೀಕಟಿಕೆ, ತ್ರಿಫಲೆ ಇವು ಪ್ರತ್ಯೇಕವು ಒಂದೊಂದು ತೊಲೆ (ವಿಷ್ಣುವಿ. ೧೯೩). [ ? ]

**ಚೀಕರಿ** 'ಸೀಕರಿ' ನೋ.

**ಚೀಕರಿವೋಗು** 'ಸೀಕರಿವೋಗು' ನೋ.

**ಚೀಕಲು** 'ಸೀಕಲು' ನೋ.

**ಚೀಕಾತು** (ನಾ). ಅಜಿಗಿಜಿಯಾದಂದಂ; ಮುದ್ದೆ: ತುಳಿದರು ಕೇರಿದರು ಕೆಡಹಿದರು ಸತ್ವದಿ ಚೀರಿದರು ಚೀಕಾತು ಮಾಡಿದರರ್ಧನಿಮಿಷದಲಿ (ಕೋಗಯು. ೨೩-೪೮). [ ←ಹಿಂ. ಮರಾ. ಚಿಕಾಟ್ ]

**ಚೀಕು$_1$** 'ಸೀಕು$_1$' ನೋ.

**ಚೀಕು$_2$** 'ಸೀಕು$_2$' ನೋ.

**ಚೀಕೊಳವೆ** 'ಚೀರ್ಕೊಟವಿ' ನೋ.

**ಚೀಜು, ಚೀಸ್, ಚೀಸು** (ನಾ). [ಸಂಗೀತ] ಹಾಡು ; ಸಂಗೀತಕೃತಿ : ನಿನ್ನಿನ ಚೀಜು ರುಚಿ ಹತ್ತಲಿಲ್ಲೋ ಭರಮಾ (ರಳ್ಳಧ್ಯ. ೩೦೪). **ಚೀಸ್** : ರೋಷನ್ . . . ಹಿತವಾಗಿ ಒಂದು ಚೀಸ್ ಹಾಡಿದಳು (ರೂಜಸ. ೪೯). **ಚೀಸು** : ಮಾರವದಲ್ಲಿ ಒಂದು ಚೀಸು, ಬೇಹಾಗ್, ಶಹನಗಳಲ್ಲಿ ಎರಡು ದೇವರ ನಾಮಗಳನ್ನು ಹಾಡಿದಳು (ರೂಜಸ. ೨೨೩).

[ ←ಪಾರ. ಹಿಂ. ಮರಾ. ಚೀಜ್ ]

**ಚೀಟಾಡು** (ಕ್ರಿ). ಇಸ್ಪೀಟು ಆಟವನ್ನು ಆಡು ; ಗಂಜೀಫ಼ು ಆಡು : ದೇಸರದಿ ಕುಳಿತಿರಲು, ರಾಯರೆ, ಏಕೆ, ತುಸ ಹೊತ್ತು ಚೀಟಾಡಬಾರದೇ ಎನ್ನುವರು (ನವರಾ. IV, ೨೦-೦೦). [ ಚೀಟು$_2$ + ಆಡು$_1$ ]

**ಚೀಟಾಳು** (ನಾ). ಸಣ್ಣ ಆಳು, - ಸೇವಕ : ಆಟಾಳಿಗೊಂದು ಚೀಟಾಳು (ಗಾದೆ). [ ಚೀಟು$_3$(<ಚಿಟ್ಟು$_1$) + ಆಳು$_3$(<ಆಳ್$_3$) ]

**ಚೀಟಿ$_1$, ಚೀಟು$_1$** (ನಾ). ನಾನಾ ಬಣ್ಣಗಳ ಚಿತ್ರದ ನಮೂನೆಯನ್ನೊಳಗೊಂಡ ಹತ್ತಿಯ ಬಟ್ಟೆ ; ಬಣ್ಣದ ಚಿತ್ರಗಳ ಬಟ್ಟೆ: ಜಂಗಮ ದೇವರ ಜಂಗಿನ ಪಠವು ಲಿಂಗ ಧರಿಸೋ ಕಾವೀ ವಲ್ಲಿ ಜೋಗಿಗಳ್ ಹೊದೆಯೋ ಚೀಟೀದಟ್ಟಿ (ನಾಹದ. ೦೪೨) ; ಲಾಂಗ್‌ಕ್ಲಾತ್, ಚೀಟಿ, ವಾಯಿಲ್, ಮಸ್ಲಿನ್, ಮಲ್ ಇವನ್ನು ಸಾದಾ ನೇಯ್ಗೆ ಉಪಯೋಗಿಸಿ ನೇಯುವರು (ಗೃಹವಿ. ೭೩). **ಚೀಟು$_1$** : (ಮುಂಬಯು. ೬. ೩-೨೯೭).

[ ?. / ತಮಿ. ಮಲ. ಚೀಟ್ಟ; ತೆಲು. ಚೀಟಿ./ಹಿಂ. ಛೀಂಟ್, ಛೀಟ್ ; ಮರಾ. ಚೀಟ್, ಛೀಟ್./ಇಂ. Chints ]

**ಚೀಟಿ$_2$** 'ಚೀಟು$_2$' ನೋ.

**ಚೀಟಿಬಟ್ಟೆ** (ನಾ). = ಚೀಟಿ$_1$ : ಬಣ್ಣ ಬಣ್ಣಗಳ ಚಿತ್ರದ ನಮೂನೆಗಳಿಂದ ಬಣ್ಣ ಕಚ್ಚುವಂತೆ ಧಾಟಿ ಸಾ., ಗಾಜುಮೆರಗು ಕೊಟ್ಟು ತಯಾರಿಸಿದ ಹತ್ತಿಯ ದಾರದ ಬಟ್ಟೆ(ಯ) ಚೀಟಿಬಟ್ಟೆ(ಯ) (Chints. ಇಂಕೋ).

[ ಚೀಟಿ$_1$ + ಬಟ್ಟೆ$_2$ ]

**ಚೀಟು$_1$** 'ಚೀಟಿ$_1$' ನೋ.

**ಚೀಟು$_2$, ಚೀಟಿ$_2$** (ನಾ). ೧. (ಬರೆಹವಿರುವ) ಸಣ್ಣ ಕಾಗದ ; ಪತ್ರ: ಪಂಚಾಕ್ಷರಿಯ ಮಂತ್ರವೇ ಮಹಾಘನವೆಂದು ಸಂಚಿಕೆಯ ಚೀಟಿನಿಂ ಬರೆದದಂ ತೂಗಿ ಮೆಚ್ಚಿವಂ (ಶಬಶು. ೩೨-೬೭); ಕಂದಾಯದ ಚೀಟು ಬರೆಸಿ . . . ಹರಹರ ರೈತರಿಗೂ ಚೀಟಿಗಳು ಕೊಡುವರು (ಮಹಾಪಂ. II, ೩೦). ೨. ಆಜ್ಞಾಪತ್ರ ; ಅಪ್ಪಣೆ ಚೀಟಿ : ಕೈಯೊಳಗಣ ಹೊಚ್ಚಿಯ ಬಿಟ್ಟು ತೋಱು ಕೆಡದಿಹರೆ ಜಗದೊಡೆಯನ ಚೀಟಿ ಕೊಳ್ಳಿ, ಬಂಕೇಶ್ವರಲಿಂಗದಾ (ಸುಂಳಬಂ.೨) ; ಕಾಲನ ಚೀಟುಗಳು ಕವಿವಂತೆ ಕವಿದವು ಹರಿ ಶರವ್ರಾತ (ನಿಥಾಗ. ೦೦-೩೩-೨೭) ; ಗುರಂಸುತಂ ಯಮನವರ ಚೀಟುಗಳ್ ಕವಿವಂತೆ ಕವಿಸಿದಂ ಕರ್ಣನ ವೈರಿಗಳ ನಾಯಕರಿಗೆ (ಕುರಂಗ. ೩೪-೩). ೩. ಭೀತಿ, ರೋಗ ಮೊದಲಾದ ಉಪದ್ರವಗಳ ಪರಿಹಾರಕ್ಕಾಗಿ ಉಪಯೋಗಿಸುವ ಯಂತ್ರಗಳನ್ನು ಬರೆಯುವ ತಾಳೆಗರಿ, ತಗಡು ಮೊದಲಾದಂವು: ಯಾ ಮಂತ್ರವಂ ನೂರೆಂಟು ಬಾರಿ ವಿಧಿಯಿಂದ ಜಪವಂ ಮಾಡಿ ಚೀಟಿನಲ್ಲಿ ಬರದು ಉದ್ಯಾನ ಮಧ್ಯದಲ್ಲಿ ಹೂಳಲು ಸಮಸ್ತವಾದ ದುಷ್ಟ ಜಂತುಗಳು ನಾಶವನ್ನೈದುವವು (ಸೌಗಂಧಿ. ೪೨೮-೦೭) ; ಭಟ್ಟರು . . . ಮೂರು ಮಕ್ಕಳಿಗೂ ಚೀಟುಗಳನ್ನು ಕಟ್ಟಿ, ಮಂತ್ರೋದಕವನ್ನು ಪ್ರೋಕ್ಷಣೆ ಮಾಡಿದರು (ಪಂಜಪಂ. ೪೦) ; ಆಚಾರ್ರು . . . ಚೀಟು ಕಟ್ಟುವ, ದಾಟು ತೆಗೆಯುವ ಅಥವಾ ಅನ್ನ ತೆಗೆದುಹಾಕುವ ನೆವದಲ್ಲಿ ಬುಂಡೇದಾಸನ ಪಡಸಾನೆ ಕಡೆಗೆ ಹೋಗಿ ಬರುತ್ತಿದ್ದರು (ನನ್ನೂರು. ೦೮೯). ೪. ಅಂಚೆಯ ಚೀಟಿ ; ಸ್ಟಾಂಪು : ಈ ದುಷ್ಟನು . . . ತನ್ನ ಮನೆಯೊಳಗಿನ ವೀರಾಗ್ರಣಿಗಳನ್ನೂ . . . ಅಜ್ಜಿಗಳನ್ನೂ ವಿಲಾಯತಿ ಚೀಟುಗಳಂತೆ ಅಗ್ಗವಾಗಿ ಮಾರಿಬಿಟ್ಟನು (ಮೋಹಿನೀ. ೦೩೨). ೫. ದಾಖಲೆಪತ್ರ ; ರಿಕಾರ್ಡ್ : ಶ್ರೀನರಸಿಂಹ ಭಾರತೀವೊಡೆಯರ ದಿವ್ಯನಾಮದಲ್ಲಿ ಮುದ್ರೆ ಚೀಟು ತಾಂಭ್ರ ಶಾಸನ (ಎಳ. VIII, ತೀರ್ಥಹ. ೦೫೩-೦೦ ; ಸು. 1480) ; ಧರಣಿಪತಿಗಳು ತೆರುವ ಕಪ್ಪಕಾಣಿಕೆಯ ಮುಡುವು ಬೊಕ್ಕಸ ಚೀಟು . . . ಛಪದೆ ಕೇಳಿದನು (ಶರಲೀ. ೦೬೨-೭). ೬. ಇಸ್ಪೀಟು ; ಗಂಜೀಫ಼ು : ಸಂತೆಗೆ ಚೀಟು, ಮುಂಗೈಗೆ ಬಳೆ (ಗಾದೆ). 'ಚೀಟಾಡಂ' ಪರಾ. **ಚೀಟಿ$_2$** : ೧. ಕಡೆಯ ಸಂಬಳಕೆಲ್ಲ ಮುಕುತಿಸಾಧನವನ್ನು ಕೊಡುವಂತೆ ತಿರುಗದ ಚೀಟಿ ಬರಿಸಿಕೊಟ್ಟ (ಪುರಂದ. ೨-೦೫-೪) ; ಪೆಸರ ಬರೆದೊಂದು ಚೀಟಿಯೊಳಿರಿಸಿ (ಕೊಟ್ಟೂರುಬ. ೯-೫೯) : ಸಾಯುವಾಗ ಒಂದು ಚೀಟಿ ಬರೆದು ಕೊಟ್ಟಿದಕ್ಕಾಗಿ ಎಂದು ಆ ಚೀಟಿಯನ್ನು ಕೊಟ್ಟನು (ಬತ್ತೀಸು. ೨೪) ; ರಾಯರ ಚೀಟಿಯು ಬಂದಿತ್ತು (ರಾಯುಳ. ೩೭). ೭. ಔಷಧಿಸೀಸೆ ಮೊದಲಾದುವುಗಳ ಮೇಲೆ ಗುರುತಿಸಲು ಅಂಟಿಸುವ ಸಣ್ಣ ಕಾಗದ ; ಗುರುತಿನ ಚೀಟಿ : ಪ್ರತಿಯೊಂದು ಪಾತ್ರೆಯ ಮೇಲೂ ಆ ಪಾತ್ರೆಯಲ್ಲಿರುವ ಸಾಮಾನಿನ ಚೀಟಿ ಅಂಟಿಸಿದರೆ . . . ತೆಗೆದುಕೊಳ್ಳಲು ಸುಲಭವಾಗುವುದು (ಅಡುಸಾ. ೫೨). ೮. ಹಣದ ಕಂತಿನ ರೂಪದಲ್ಲಿ ನಡೆಸುವ ವ್ಯವಹಾರ: ನಮ್ಮ ಕಚೇರಿಯಲ್ಲಿ ಒಂದು ಚೀಟಿ ಆರಂಭಿಸಿದ್ದೇವೆ (ರೂಢಿ). ೯. ಪ್ರಯಾಣದಲ್ಲಿ ಕೊಂಡುಕೊಳ್ಳುವ ಟಿಕೇಟು : ಬಸ್ಸಿನಲ್ಲಿ ಚೀಟಿ ತೆಗೆದುಕೊಳ್ಳದೆ ಪ್ರಯಾಣ ಮಾಡಬಾರದು(ರೂಢಿ). ೧೦. (ಉಕ) ಔಷಧಿಯ ಪುಡಿ, ಮಾತ್ರೆ ಮೊದಲಾದುವನ್ನು ಕಟ್ಟಿದ ಕಾಗದದ ಚಿಕ್ಕ ಪುಡಿಕೆ.

**ಚೀಟಿಬರು**= ೧. ಚೀಟಿಯ ಹಣ ಕೈಸೇರು: ಈ ತಿಂಗಳು ನನಗೆ ಚೀಟಿ ಬಂತು (ರೂಢಿ). ೨. (ಆಲಂ) ಸಾವು ಬರು : ಇನ್ನೇನು ಹುಷಾರಾದರು ಎಂದುಕೊಳ್ಳುವಷ್ಟರಲ್ಲಿಯೇ ಚೀಟಿ ಬಂದು ಬಿಟ್ಟಿತು (ರೂಢಿ).

[ ?./ತಮಿ. ಮಲ. ಚೀಟ್ಟು ; ತುಳು. ಚೀಟ್, ಚೀಟಿ ; ತೆಲು. ಚೀಟಿ./ಇಂ. Chit]

**ಚೀಟು$_3$** 'ಚಿಟ್ಟು$_1$' ನೋ.

**ಚೀಡೆ** (ನಾ). ಎಣ್ಣೆ ಅಥವಾ ತುಪ್ಪದಲ್ಲಿ ಕರಿದ ಗೋಲಿಯಾಕಾರದ ಸಿಹಿತಿಂಡಿ : (+).

[ ದೇ.೫ ತಮಿ. ಚೀಟ್ಟೆ ; ಮಲ. ಚೀಡ ; ತೆಲು. ಚೀಡೆ ]

**ಚೀಡೆಹುಳು** (ನಾ). ಸಣ್ಣಹುಳು ; ಕ್ರಿಮಿ : ನಿಜವಾಗಿ ನಮ್ಮ ದೇಹಾತ್ಮಗಳನ್ನು ತಿಂದುಹಾಕಿದ, ತಿನ್ನುತ್ತಿರುವ ಚೀಡೆಹುಳು ಉಪೇಕ್ಷೆ(ಸಾಹಿಶೇ. ೮೫). 'ಕೀಡೆ' ಪರಾ. [ ಚೀಡೆ$_0$ (<ಕೀಡೆ) + ಹುಳು$_2$ (<ಪುಟು$_1$) ]

**ಚೀಣ** (ನಾ). = ಚೀನ$_1$. [ <ಸಂ. ಚೀನ ]

**ಚೀಣಾಂಬರ** (ನಾ). = ಚೀನಾಂಬರ : ಪಟುಪಟಾವಳಿ ಚೀಣಿ ಚೀಣಾಂಬರ ನ್ಯಾಯ ವ್ಯವಹಾರ ಭರವರಾಗಿಯುಂ (ಎಕ. XVI, ಗುಬ್ಬಿ. ೭೪-೯೬ : ?).
[ <ಸಂ. ಚೀನಾಂಬರ ]

**ಚೀಣಾಕಾಗದ** (ನಾ). (ಹಿಂದೆ) ಚೀನಾದೇಶದಿಂದ ಬರುತ್ತಿದ್ದ ಕಾಗದ ; ಬಿಳಿಕಾಗದ: ಬಿಳಿಯ ಕಾಗದಕ್ಕೆ ಚೀಣಾಕಾಗದವೆಂದು ಹೆಸರು(ಗುಣಸಾ. ೪).
[ <ಚೀಣ + ಕಾಗದ ]

**ಚೀಣಿಕಾಯಿ** 'ಚೀನಿಕಾಯಿ' ನೋ.

**ಚೀತ್ಕರಣ** (ನಾ). = ಚೀತ್ಕಾರ ೧. 'ಚೀತ್ಕರಿಸು$_1$' ಪರಾ. [ ಸಂ. ]

**ಚೀತ್ಕರಣೆ** (ನಾ) =ಚೀತ್ಕಾರ ೨ : ಉರುರಭಸವಳ್ಳಿಱಿಯೆ ರಥ ಚೀತ್ಕರಣೆ ರಥಹಯಹೇಷಿತದ ನಿಷ್ಠುರನಿನಾದದಲೌಕಿ ಹೊಕ್ಕನು ಶಲ್ಯನಾಹವವ (ಕುವ್ಯಾಕ. ೩-೨೫). [ ಸಂ. ಚೀತ್ಕರಣ ]

**ಚೀತ್ಕರಿಸು$_1$** (ಕ್ರಿ). (ಭಯಂ, ದುಃಖ ಮೊದಲಾದುವುಗಳಿಂದ) ಗಟ್ಟಿಯಾಗಿ ಅರಚು ; ಆರ್ತನಾದ ಮಾಡು ; ಕೂಗು : "ಅಯ್ಯೋ" ಎಂದು ಚೀತ್ಕರಿಸಿದಳು (ಕಾವೇರಿ. ೨೦೫). [ ಚೀತ್ಕರಣ + - ಇಸು$_3$ ]

**ಚೀತ್ಕರಿಸು$_2$** 'ಸೀತ್ಕರಿಸು' ನೋ.

**ಚೀತ್ಕಾರ** (ನಾ). ೧. ಗಟ್ಟಿಯಾಗಿ ಅರಚುವ ಶಬ್ದ ; ಆರ್ತನಾದ : ಈ ಚೀತ್ಕಾರಗಳಿಂದ ಆ ಮಹಾಧೀರನ ಎದೆಯೂ ಜರ್ಜರಿಸಿತು(ಶಾಂತಲಾ. ೭೩); ಚೀತ್ಕಾರ ಕೇಳಿದಾಗ ಮನೆಯ ಪರಿಸ್ಥಿತಿಯೇ ಬದಲಾಗಿ ಹೋಯ್ತು (ಪದ್ಮಸ. ೧೯೩). ೨. ರಥವು ಚಲಿಸುವಾಗ ಉಂಟಾಗುವ ಧ್ವನಿ : ರಥಾಂಗ ರಥಚೀತ್ಕಾರಂ ಶಿಳೀಮುಖ ಝೇಂಕಾರಂ . . . ಬಳೆದಾಗಸಮಂ ಮುಸುಂಕೆ (ಗಿರಿಕ. ೮-೮ ವ) ; ಘುಳುಘುಳಿಪ ಚೀತ್ಕಾರ ಕೋಲಾಹಳದ ಸೂತನ ರೇಖೆಯಲಿ ಭಟಕುಲಲಲಾಮನ ತೇರು ಬಂದುದು (ಕುವ್ಯಾದ್ರೋ. ೪-೫೦).
[ ಸಂ. ]

**ಚೀತ್ಕೃತಿ** (ನಾ). = ಚೀತ್ಕಾರ ೧ : ವಿಹಗ ಸಮುತ್ಕರಚೀತ್ಕೃತಿ ತೀವಿ ವಿಪಿನದೊಳ್ಪಡಮೆಗುಂ (ರಾಜಶೇ. ೫-೬೨). ೨. = ಚೀತ್ಕಾರ ೨ : ತುರಗ ಗರ್ಜನೆ ರಥದ ಚೀತ್ಕೃತಿ ವರಧನುಷ್ಟಂಕಾರ (ಕುವ್ಯಾವಿ. ೬-೬೩) ; ಧೂಳಿಯಂ ಮೇಣ್ ಚಕ್ರಚೀತ್ಕೃತಿಯುಮಂ ತವಿಸಿ, ಪಿಂದೋಡಿದರ್ (ಶ್ರೀರಾಮಾ. ೯೩-೪೨೭). [ ಸಂ. ]

**ಚೀನ$_1$**(ನಾ). ೧. ಒಂದು ದೇಶದ ಹೆಸರು : ನೀರರುಹವದನೆ ಸುಕುಮಾರಿ ಮಧುರಪ್ರಿಯೆ ವಿಚಾರವಿದೆಯುವಳಿ ಚೀನದ ಮಾನಿನಿ (ಜನವ. ೬-೩೮) : ಇಂಥ ಸುದ್ದಿಯನ್ನು ಚೀನದಲ್ಲಿ ದೊರಕಿಸುವುದು ಕಠಿನವಾದ್ದರಿಂದ ಈ ವರದಿ ಬಹಳ ವಿರಳವಾಗಿದೆ (ಚೀನಬಾ. ೩೯೫) : ಚೀನಾಕ್ಕೆ ಪಶ್ಚಿಮದಲ್ಲಿ ಮಧ್ಯ ಏಷ್ಯದ ಎತ್ತರವಾದ ಪ್ರಸ್ಥಭೂಮಿಗಳಿವೆ (ಭೂವಿಜ. ೪೦೮). ೨. ಚೀನಾ ದೇಶದಲ್ಲಿ ತಯಾರಾದ ರೇಷ್ಮೆ,-ರೇಷ್ಮೆಯ ಬಟ್ಟೆ : ಸೌಧಾಳಿಯೊಳ್ಗುಡಿಯಾಯ್ತು ಚೀನದ ಸುಯ್ಯಕಾಣದ ಪಟ್ಟೆ (ಪಂಪಭಾ. ೧೪-೧೫) ; ನಾಳೆ ವಿನೋದದಿಂದೊಡನಿರ್ವರುಂ ಮುತ್ತಿನಾಭರಣಂಗಳಂ ನೆಱೆ ತೊಟ್ಟು ಚೀನಮನುಟ್ಟು (ಧರ್ಮಾಮೃ. ೩-೩೬) : ಪಸುರ್ವಡಿಯ ಬೆಳ್ವಟ್ಟೆಯ ಚಿನ್ನದಾರ ಹೊಂಬಿಸಿಲ [ ಚೀ ] ನಂ [ ಪಾಠಾಂ. ಲಂಜಿನಂ, ಲಚಿಷ್ಣಂ ಲಜೀಪಂ.] (ಸಿದ್ಧರಾ. ೮-೫೬). ೩. ಒಂದು ಬಗೆಯ ಜಿಂಕೆ : "ಚೀನಃ-ಹಕ್ಕೀಬಣ್ಣವಾಗಿ ೩೦ ಅಂಗುಲದುದ್ದವಿರುವ ದುಪ್ಪೀ ಹೆಸರು" (ಸಿದ್ಧಾಂತಿ. ೧೩೬). [ ಸಂ. ]

**ಚೀನ$_2$** (ನಾ). ಒಂದು ಬಗೆಯ ವಾದ್ಯ : ಯುದ್ಧಸಮಯದಲ್ಲಿ ಬಳಸುತ್ತಿದ್ದ ವಾದ್ಯಗಳೂ ಹಲವಾರು : ಭೇರಿ, ಕೊಂಬು, ಚೀನ, ಢಕ್ಕೆ . . . ಶಂಖವಾಸ, ಇತ್ಯಾದಿ (ನಂಜುಂಡ. ೧೩೦). [ ? ]

**ಚೀನಕ** (ನಾ). = ಚೀನಿಕರ್ಪೂರ : "ಚೀನಕಃ- ಚೀನಿಕರ್ಪೂರ"(ಓಷಧಿ. ೫೬).
[ ಸಂ. ]

**ಚೀನಗರ್ಪೂರ** (ನಾ). ಚೀನಾ ದೇಶದಿಂದ ಬರುವ ಕರ್ಪೂರ ; ಪಚ್ಚಕರ್ಪೂರ (?) : "ಕ್ರು(ಕೃ) ?ತ್ರಿಮಃ - ಅಟ್ಟುಪ್ಪು, ಚೀನಗರ್ಪೂರ, ಕರ್ಕಸ್ಸೆಲ" (ಓಷಧಿ. ೩೮). 'ಚೀನಿಕರ್ಪೂರ' ಪರಾ.
[ ಚೀನ$_1$ + ಕರ್ಪೂರ (<ಕಪ್ಪುರ) ]

**ಚೀನಚೇಳ** (ನಾ).=ಚೀನಾಂಬರ: ಪೂತಲವಕ್ಕೆ ಪೌರವನಭೂರುಹಮೊಪ್ಪುವ ಮುಳ್ಳಿಗುಚ್ಚಳಕ್ಕೇತನ ಚೀನಚೇಳವರುಣೋಪಲಭಿತ್ತಿಗೆ . . . ದೊರೆಯಾಗಿ ತೋಱಿದತ್ತು . . . ರಕ್ತಸೇಕದಿಂ (ಚಂದ್ರಪ್ರ. ೬-೩೭).
[ ಚೀನ$_1$ + ಚೇಳ ( = ಚೇಲ$_1$) ]

**ಚೀನವಸನ** (ನಾ). = ಚೀನಾಂಬರ : ಬರೆ ತೆಗೆದಪ್ಪಿ ಚೀನವಸನಾಂಚಲಮಂ ನಸು ನೂಂಕಿ (ರಾಜಶೇ. ೪-೬೬) ; ಪಿಂದೆಸೆಗೋಡುವುದು ಬಳಕೆಗೈದದ ಮನವೇನೆಂದಪೆನೊ ಪವನನಿದಿರೊಳ್ ತಂದ ಪತಾಕಿಕೆಯ ಚೀನವಸನವಿದೆಂಬೊಲ್ (ಶಾಕುಂತ. ೧೮-೩೪). [ ಚೀನ$_1$ + ವಸನ ]

**ಚೀನಾಂಬರ** (ನಾ). ಚೀನಾದೇಶದಲ್ಲಿ ತಯಾರು ಮಾಡಿದ ಬಟ್ಟೆ,-ವಸ್ತ್ರ,-ರೇಷ್ಮೆವಸ್ತ್ರ : ರುದ್ರಾಕ್ಷಿಯ ಧರಿಸಿ ಮಿಸುವ ಚೀನಾಂಬರದುಡಿಗೆಯನೆಲ್ಲ ತ್ಯಜಿಸುತೆಳಗಾವಿಯನುಟ್ಟು (ಪೋಳಿಪು. ೫-೫) : ಕಳೆದು ತಣ್ಣಸ ವಸ್ತ್ರಗಳ ಚೀನಾಂಬರಗಳನುಟ್ಟು ಸತಿಯರೊಪ್ಪಿದರು (ಕಂಸವಿ. ೨೫-೧೩೪) : ಹಾಲ್ನೊರೆಯಂತೆ ಶುಭ್ರವಾದ ಚೀನಾಂಬರಗಳನ್ನುಡಿಸಿ, ಅಷ್ಟೇ ಶುಭ್ರವಾದ ವಕ್ಷವಸ್ತ್ರವನ್ನು ಲಘುವಾಗಿ ಬಿಗಿದರು (ಶಾಂತಲಾ. ೧೦೪).
[ ಚೀನ$_1$ + ಅಂಬರ ]

**ಚೀನಾಂಶುಕ** (ನಾ). = ಚೀನಾಂಬರ : ವಿಚಿತ್ರ ಚೀನಾಂಶುಕರುಚಿರಂಗಳುಂ . . . ಉತ್ಪಳಪೇಟಮಂ ಪುಗುವಾಗಳ್ (ಆದಿಪು. ೪-೫೮ ವ) ; ಚಾರು ಚೀನಾಂಶುಕ ವಿತಾನ ಶೋಭಾ ಸನಾಥದೊಳ್ . . . ಸುಖಸುಪ್ತನಾಗಿ (ಪಧರ್ಮಾ.೫-೨ವ); ರೇಷ್ಮೆಯನ್ನು ಭಾರತದಲ್ಲಿ 'ಚೀನಾಂಶುಕ' ಎನ್ನುತ್ತಿದ್ದರು (ಶಿಲ್ಪಸಾ. ೫೭). [ ಚೀನ$_1$ + ಅಂಶುಕ ]

**ಚೀನಾಕ** (ನಾ). ತರಕಾರಿಯಾಗಿ ಉಪಯೋಗಿಸುವ ಒಂದು ಬಗೆಯ ಸೊಪ್ಪು : ಚೀನಾಕ (ಸವತೀ ಜಾತಿ) ಚಿರ್ಭಟ ಇವು ಕಫವಾತಕರ (ಅಷ್ಟಾಂಗ. ೧೩೭-೮೦). [ ಸಂ. ]

**ಚೀನಾಬಿಳೀಮರ** (ನಾ). ಒಂದು ಬಗೆಯ ಮರ : ಚೀನಾಬಿಳೀಮರ, ಪುನಾಲಿ, ಹಂದಿಬಳ್ಳಿ (ಮ್ಯಾಜಿಗಿ. ೨೯-೫೬೪). [ ಚೀನಾ$_0$ + ಬಿಳಿ + ಮರ$_1$ ]

**ಚೀನಾರು** (ನಾ). ಒಂದು ಬಗೆಯ ಮರ : ಭವ್ಯ ಚೀನಾರುಗಳು ಚಾಚಿವೆ ತೋಳು, ಹಾಕುತ ರಿಂಗಣ (ಚಿಂತನ. ೪೮-೧೫).
[ ←ಪಾರ. ಚೀನಾರ್ ; ಹಿಂ. ಚಿನಾರ್ ]

**ಚೀನಾಲಿ** 'ಛಿನಾಲಿ' ನೋ.

**ಚೀನಾಸೋಂಪು** (ನಾ). ಒಂದು ಬಗೆಯ ವನಸ್ಪತಿ : ಮರಾಟಿಮೊಗ್ಗು, ಚೀನಾಸೋಂಪು (ಮ್ಯಾಜಿಗಿ. ೯೫-೮೯೦). [ ಚೀನಾ$_0$ + ಸೋಂಪು ]

**ಚೀನಿ** (ನಾ). ೧. ಚೀನಾದೇಶದಿಂದ ಬಂದುದು ; ಚೀನಾದೇಶದಲ್ಲಿ ಉತ್ಪನ್ನವಾದುದು. ೨. ಪಚ್ಚಕರ್ಪೂರ ; ಹಿಮವಾಲುಕ : "ಪ್ರಾಲೇಯಮೆನಲು ಘನಸಾರಮೆನೆ ಪಚ್ಚೆ ಹಿಮವಾಳುಕಂ ಚೀನಿ" (ಮಂಗರಾ. ೯೯-೨೨). ೩. ರೇಷ್ಮೆಬಟ್ಟೆ : ಮಗಮಗಿಪರಲ ಮುಡಿದು ಚಂದನಂಬೊರೆದು ಚೀನಿಗಳ ಪೊದೆದು (ಪದ್ಮರಾ. ೮-೨೭) ; ಎಳದಳಿರ ಪೊದಕೆಯಿಂ ಚೀನಿ ಚೀನಾಂಬರಂಗಳ ಮೇಲುಕಟ್ಟನಿಂ . . . ರಾಜಗೃಹದೊಳೊಪ್ಪಿದುದು ಚಪ್ಪರವತುಳ ವಿಸ್ತರದಲಿ (ಸೌಂದಪು. ೪-೨೦) ; ಚೀನಿ ದುಕೂಲ ಜಲ್ಲಿ ಕರ್ನೆ ವಿಕರ್ನೆಗಳ್ಬಾನು ಮಂಡಲದಂತೆಸೆಯಲು (ಶಾಂತೀಶ. ೦-೪೪) ೪. ಒಂದು ಬಗೆಯ ಸಕ್ಕರೆ ; ಬೂರಾಸಕ್ಕರೆ. ೫. ಒಂದು ಬಗೆಯ ಕಬ್ಬು : ಚೀನಿಯ ಕಬ್ಬು ಸಾಮಾನ್ಯವಾಗಿ ತೆಳ್ಳಗಿರುತ್ತದೆ (ರೂಢಿ). [ <ಸಂ. ಚೀನೀಯ ]

**ಚೀನಿಕರ್ಪೂರ** (ನಾ). ಪಚ್ಚಕರ್ಪೂರ; ಹಿಮವಾಲುಕ : ಕರಶಿಗೆ ತಗಚೆಯ ಬೀಜ ಬಾವಂಚಿಯ ಬೀಜ . . . ಚೀನಿಕರ್ಪೂರ ಇವೆಲ್ಲವಂ ತವೊಳು ಸರಿಯಾಗಿ ಕೊಂಡು (ವಿವೈವಿ. ೯೩). [ ಚೀನಿ + ಕರ್ಪೂರ ]

**ಚೀನಿಕಾಯಿ, ಚೀಣಿಕಾಯಿ** (ನಾ). ಸಕ್ಕರೆಗುಂಬಳಕಾಯಿ ; ಸಿಹಿ ಕುಂಬಳಕಾಯಿ: ಚಾವಡಿಯ ಮಾಡಿಗೆ ತಾಗಿರುವ ಅಡ್ಡಕೋಲಿನಲ್ಲಿ ಸೌತೆ, ಕುಂಬಳ, ಚೀನಿಕಾಯಿ ಮೊದಲಾದುವುಗಳು ತೂಗುತ್ತಿದ್ದುವು (ಚಿಗುಬ. ೩೪). **ಚೀಣಿಕಾಯಿ:** ಚೀಣಿಕಾಯಟ್ಟವಳ್ಕಾರವ್ಮ ಚೀಣೀಕಟ್ಟೇ ಪುಟ್ಟವೆಂಕವ್ಮ (ನಾಪದ. ೨೦೩). [ ಚೀನಿ + ಕಾಯಿ$_4$ (<ಕಾಯ್$_4$) ]

**ಚೀನಿಕೊಳವೆ** (ನಾ). ದುರ್ಬೀನು; ದೂರದರ್ಶಕಯಂತ್ರ; ಸಿದ್ಧೇಶ್ವರನ ಗದ್ದಿಗೆ ಮೇಲೆ ಹೋಗಿ, ಚೀನಿಕೊಳವೆ ಹಾಕಿ ನೋಡಿದಲ್ಲಿ, ಒಂದು ತಂಬಾದರೂ ಕಾಣುವುದಿಲ್ಲಾ (ರಾಜೇಂದ್ರ. ೯೩).
[ ಚೀನಿ ? + ಕೊಳವೆ (<ಕೊಟವಿ) ]

**ಚೀನೀಯ** (ನಾ). ಚೀನಾದೇಶದಲ್ಲಿ ಹುಟ್ಟಿದವನು ; ಚೀನಾದೇಶದ ಪ್ರಜೆ : ಹಿಂದೂದೇಶದವರಲ್ಲದ ಆಸ್ಯಾಖಂಡದ ವಂಶೀಯರು . . . ಆರಬರು, ಬೆಲುಚಿಯರು, ಚೀನೀಯರು, ಮೊಗಲರು (ತುಳುನಾ. ೧೭೪).
[ ಸಂ. ]

**ಚೀನೋತ್ತರೀಯ** (ನಾ). ಹೊದೆಯುವ ರೇಷ್ಮೆಯ ವಸ್ತ್ರ,–ಮುಗುಟ : ಮತ್ತಮತಿಸಂಭ್ರಮಸ್ಖಲಿತ ಚಿತ್ರಚೀನೋತ್ತರೀಯಮಂ ಮಾಱಿದು (ಮಲ್ಲಿಪು. ೯–೨೦). [ಚೀನ$_1$ + ಉತ್ತರೀಯ ]

**ಚೀಪು$_1$** 'ಸೀಪು$_1$' ನೋ.

**ಚೀಪು$_2$, ಚಿಪ್ಪು$_2$, ಚೂಪು$_2$** (ನಾ). ೧. ಬೆಣೆಯಾಗಿ ಉಪಯೋಗಿಸುವ ಕಲ್ಲಿನ ಅಥವಾ ಮರದ ಚೂರು,–ತುಂಡು: (ಕ). (ಗಂ). ೨. ಮೊನಚಾದ ; ಚೂಪಾದ ; ಹರಿತವಾದ. 'ಚೀಪುಗಲ್ಲು' ಪರಾ. **ಚಿಪ್ಪು$_2$ :** ೧. 'ಚಿಪ್ಪುಕುಂಟೆ' ಪರಾ. **ಚೂಪು$_2$ :** ೨. ಕೋಡು . . . ಚೂಪಾದ ತುದಿಯುಳ್ಳದ್ದು ಇರುತ್ತದೆ (ಮುಂಬಯಿ. ೪–೪೭). ಹರಿಯ ಕಿರೀಟದ ಚೂಪು ಕುಡಿ ಎಡವೀಯೆ (ಮುಕ್ತಕಂ. ೨೦–೭).
[ ದೇ.॥ ತಮಿ. ಮಲ. ಚಿಮ್ಪು ; ತುಳು. ಚೀಪು ; ತೆಲು. ಚಿಂಪಿ ].

**ಚೀಪು$_3$** 'ಸೀಪಿ' ನೋ.

**ಚೀಪುಗಲ್ಲು** (ನಾ). ಮೊನಚಾದ ತೆಳ್ಳನೆಯ ಕಲ್ಲು; ಚೂಪುಗಲ್ಲು: ಇವುಗಳ ಅವಶೇಷಗಳೂ ಅವರು ಬಳಸುತ್ತಿದ್ದ ಚೀಪುಗಲ್ಲುಗಳ ಆಯುಧಗಳೂ ಹಿಂದೂಸ್ಥಾನದ ದಕ್ಷಿಣ ಭಾಗದಲ್ಲಿ ಹೇರಳವಾಗಿ ದೊರೆತಿವೆ (ಹಿಂದೂಇ. ೪).
[ ಚೀಪು$_2$ + ಕಲ್ಲು (<ಕಲ್$_3$) ]

**ಚೀಪುತೊಟ್ಟು** (ನಾ). ಸಣ್ಣಮಕ್ಕಳಿಗೆ ಚೀಪುವುದಕ್ಕಾಗಿ ಕೊಡುವ ಮೊಲೆಯ ತೊಟ್ಟಿನಾಕಾರದ ಸಾಧನ : ಕೂಸಿಗೆ ಚೀಪುವುದಕ್ಕಾಗಿ ಕೊಡುವ ಕೃತಕ ಮೊಲೆತೊಟ್ಟು ; ಚೀಪುತೊಟ್ಟು (Comforter. ಇಂಕನಿ).
[ಚೀಪು$_1$ (<ಸೀಪು$_1$) + ತೊಟ್ಟು$_4$ ]

**ಚೀಪೆಟ್ಟು** (ನಾ). =ಚೀಮಾರಿ: ಯಾವುದೋ ಒಂದು ನೆಪ ಸಿಕ್ಕಿದರೆ ಸಾಕು; ಕೆಲಸವನ್ನು ಬಿಟ್ಟುಬಿಡುವೆ ಎಂದು ಚೀಪೆಟ್ಟು ಹಾಕಿದೆ (ಲಕ್ಷ್ಮೀಪ್ರ. ೪೪).
[ <ಚೀ + ಪೆಟ್ಟು$_2$ ]

**ಚೀಮಾರಿ** (ನಾ). ಎದುರಿಗೆ ಮಾಡುವ ಅವಮಾನ,–ತೆಗಳಿಕೆ; ತಿರಸ್ಕಾರ: ಅಪ್ಪನ ಹತ್ತಿರ ಹೋಗು, ಚೀಮಾರಿ ಆಗುವುದು (ರೂಢಿ). 'ಛೀಮಾರಿ' ಪರಾ.

**ಚೀಮಾರಿಮಾಡು**=ಅವಮಾನಿಸು; ಛೀ ಎನ್ನು; ಧಿಕ್ಕರಿಸು : ಅವಳು ಆ ಕ್ಲಬ್ಬಿನ ಶಾಂತ ವಾತಾವರಣದ ಮೇಲೂ ಧಾಳಿಯಿಟ್ಟು ಅಲ್ಲಿದ್ದವರೆಲ್ಲರನ್ನೂ ಚೀಮಾರಿ ಮಾಡಿದಳು (ಯೋಧಪು. ೭೮).
[ <ಚೀ + ಮಾರಿ ? ]

**ಚೀಮು** (ನಾ). ಇರುವೆ : ಹಗಲಗತ್ತಲೆಯಂತೆ ಯಿಹ ಕಾಪಿಗರು ಮೇಲಡ್ಡಿ ಚೀಮು ಕೂರದ ಬಗೆಯ ಪುಟ್ಟದ್ದೇರ್ದಲ್ಲಿ ಬಂತೀ ಕೋಡಗೆಂದೆಲ್ಲಾ (ಜಿರಾಮಾ. ೨೦೭–೬೩). [ ←ತೆಲು. ಚೀಮು ]

**ಚೀರ$_1$** 'ಚೀಲ' ನೋ.

**ಚೀರ$_2$**(ನಾ). ೧. ಮರದ ತೊಗಟೆ. ೨. ನಾರುಬಟ್ಟೆ; ವಲ್ಕಲ: ಭಾರ್ಯಾನುಜನಃ ಸಹಿತಡವಿಗೆ ನಡೆದನಾ ರಾಮು ಚೀರಾದಿಗಳ ಧರಿಸಿ (ಅರಾಮಾ. ೭–೫೦). ೩. ಹರುಕುಬಟ್ಟೆ ; ಚಿಂದಿ. ೪. ಗೆರೆ ; ರೇಖೆ. ೫. ಬಟ್ಟೆ; ವಸ್ತ್ರ: ಚಿನ್ನಗೆಯಿಕದ ಚೀರಕ್ಕೆ ದೂಸಿಗವಸರಕ್ಕೆ ಹತ್ತಿವಸರಕ್ಕೆ ಪ್ರಣಿಗಾಱವಸರಕ್ಕೆ ಗಂಧವಣವಸರಕ್ಕೆ ಗಂಧವಣಿಗರಂಗಡಿಗೆ . . . ಬೇಱೆವೇಱೆ ಸುಂಕಸ್ಥಲೆ ಹಿರಿಯರಾಗವೊಂದು (ಎಇ. XIII, ೨೧–೫೩; 1204); ಕೃಷ್ಣನ ಚೀರದಂತ್ಯವ ಪಿಡಿದು ಸದನಕೆ ಕರೆದು ಪದಕೆಱಗೆ (ಅಕ್ರೂಚ. ೬–೫೫). ೬. ಒಂದು ಬಗೆಯ ಹಾರ ; ನಾಲ್ಕು ಎಳೆಗಳ ಮುತ್ತಿನ ಹಾರ ; ಗ್ರೋಸ್ತನ : ಕರವೆಸೆವ ಚಿನ್ನಗುಳ್ಳೆಯ ಚೀರದಿಂದೊಪ್ಪೆ (ಬಸರ. ೯–೧೦೦). ೭. [ಬೌದ್ಧ] ಸಂನ್ಯಾಸಿಯ ವಸ್ತ್ರ ; ಕಾವಿಯ ಬಟ್ಟೆ : (ಕ). [ ಸಂ. ]

**ಚೀರಗಟ್ಟು** (ಕ್ರಿ). ಬಟ್ಟೆಯಿಂದ ಬಿಗಿದು ಕಟ್ಟು : ಚೀರಗಟ್ಟಿದ ಹಡಪ ಹಲ್ಲಣ ಹಿಂದೆ ಹಾರಮುಪ್ಪಂದದಿ ಹಾಕಿ ಭೋರನೆ ಬರುತಿರ್ದರಾ ಕ್ಷಿಂಟೆ ರಾವುತರು (ಶ್ರೀಪಾಲ. ೧೩–೯೩). [ ಚೀರ$_2$ + ಕಟ್ಟು$_1$ ]

**ಚೀರಟೆ** (ನಾ). ಒಂದು ಬಗೆಯ ಹಕ್ಕಿ : ಚೀರಟೆ ಹಕ್ಕಿಗಳ ಚೀರುದನಿಯ ಲಾಲಿ (ಅನಾಥ. ೫). [ ? ]

**ಚೀರಣ, ಚಿರಣೆ, ಚಿಲಣ, ಚೀರಣೆ, ಚೀರ್ಣ, ಚೀಲಣ, ಚೀಲಣೆ** (ನಾ). ೧. ಲೋಹವನ್ನು ಕತ್ತರಿಸಲು ಬಳಸುವ ಚಿಕ್ಕ ಉಳಿ; ಅಪ್ಪು; ಚಾಣ: ಹೊನ್ನು ಹೆಣ್ಣು ಮಣ್ಣೆಂಬ ಮೂಱು ಸಂಕಲೆಯ ಕೀಲ ಜ್ಞಾನಚೀರಣದಿಂದ ತಡೆಗಡಿದು (ಘನವ. ೭೩). ೨. ಉಳಿಯಿಂದ ಮಾಡಿರುವ ಕೆತ್ತನೆಯ ಕೆಲಸ: ಚೀರಣದುಡಿದಾರ ಮೇಖಲೆ ಮಂಜೀರ ಹಾರಗಳನ್ನು ಕೊಟ್ಟು ನೊಲಿದು (ಕುರಾಸಾಂ. ೪೮–೩೭) ; ಭೂರಿವೆಳಗಿನ ವಜ್ರಪಂಕ್ತಿಯ ಚೀರಣದ ಥೊಲೆಗಳ ರಭಸದಿ ತೋಱುವತಿಸಿಂಗರದ ಚಾಮಿಕರದ ಕಲಶಗಳ (ಅಂಬಿಕಾ. ೬–೫೭). **ಚಿರಣೆ:** ೧. 'ಚಿರಣೆಗೆಲಸ' ಪರಾ. **ಚಿಲಣ:** ೧. 'ಚಿಲಣಗೆಲಸ' ಪರಾ. **ಚೀರಣೆ:** ೧. 'ಚೀರಣೆಗೆಲಸ' ಪರಾ. **ಚೀರ್ಣ:** ೧. "ವೃಶ್ಚನಃ, ಪತ್ರಪರಶುಃ–ಚೀರ್ಣದ ಪೆಸರು ಅಗಸಾಲಿಗನ ಕೊರಮುಟ್ಟು" (ಸಿದ್ಧಾಂತಿ. ೩೭೦). **ಚೀಲಣ :** ೧. ಅಲಿಕಲುಂಗಳ ಕಡಿವಡುಕ್ಕಿನ ಚೀಲಣದ ಹಂಗೇಕೆ (ಕುಮ್ಮಟದ್ರೌ. ೧೧–೩೦). 'ಚೀಲಣಿಸು' ಪರಾ. **ಚೀಲಣೆ:** ೨. 'ಚೀಲಣೆಗೆಯ್' ಪರಾ. [ ದೇ.॥ ತೆಲು. ಚೀರಣ, ಚೀರ್ಣ ]

**ಚೀರಣಗೆಲಸ, ಚಿರಣೆಗೆಲಸ, ಚಿಲಣಗೆಲಸ, ಚೀರಣೆಗೆಲಸ** (ನಾ). ಉಳಿಯಿಂದ ಮಾಡಿದ ಕೆತ್ತನೆಯ ಕೆಲಸ : ತಾರೇಶನಂ ನಗುವ ಲೋವೆ ಚೀರಣಗೆಲಸ ಚಾರುವೇದಿಕೆಗಳಿಂದ (ಮರುಚ. ೬–೩). **ಚಿರಣೆಗೆಲಸ:** ಸಣ್ಣ ಚಿರಣೆಗೆಲಸಗಳಿಂದ ಸೊಭಗಾಂತ ಬಣ್ಣದ ಚಾವಡಿಯಹುದು (ಗೋಮಟೇ. ೧–೦೩೭). **ಚಿಲಣಗೆಲಸ :** ಚಿತ್ರದ ಶಾಲೆ ಚಿಲಣಗೆಲಸದ ಪೊಸ ಮುತ್ತಿನ ಚಾವಡಿವಿಡಿದು ನಿತ್ಯದಾನವನೀವ ಮಂಡಪವದಱೊಳು ಚಿತ್ರರದಿಂದೊಪ್ಪುತಿಹುದು (ಅಂಜಿಚ. ೩–೩೪). **ಚೀರಣೆಗೆಲಸ :** ರನ್ನದ ಚೀರಣೆಗೆಲಸದಿಂ ಸೊಬಗಾಂತ ಚಿನ್ನದ ಕಳಸಂದಿಂದೆಸೆವ (ಗೋಮಟೇ. ೫–೩೭).
[ ಚೀರಣ + ಕೆಲಸ ]

**ಚೀರಣೆ** 'ಚೀರಣ' ನೋ.

**ಚೀರಣೆಗೆಲಸ** 'ಚೀರಣಗೆಲಸ' ನೋ.

**ಚೀರಲ** (ನಾ). (ಉಕ) ಬಿರುಕು : ಹೊಲವು ತಗ್ಗು ತೆವರಾಗಿ ಹಳ್ಳನಾಲಿ ಕೊರಿ ಚೀರಲಗಳು ಇದ್ದರೆ ಅಂಥ ಹೊಲಗಳ ಬೆಳೆಯು ಹೊಲದಲ್ಲೆಲ್ಲ ಒಂದೇ ಸಮನಾಗಿ ಬೆಳೆಯುವದಿಲ್ಲ (ಕೃಷಿಪ್ರ. ೩೭). [ ←ಮರಾ. ಚೀರ್ ]

**ಚೀರಳಚಿಂತೆ** (ನಾ). ಒಂದು ಊರಿನ ಹೆಸರಂ : ಮುಡಣದೆಸೆ ಪೆಣ್ಣಲ್ಚಿನ್ತೆ ಪುಲ್ಪೇಡು ಉದಿಚೇಡು ಚೀರಳಚಿನ್ತೆ (ಎಕ. XII, ಶಿರಾ. ೩೮-೩೯ : 378). [ ? ]

**ಚೀರಾಟ** 'ಚೀಱಾಟ' ನೋ.

**ಚೀರಿ** (ನಾ). ಜೀರುಂಡೆಹಂಳು; ಚಿಮ್ಮುಂಡೆ : "ಝಿಲ್ಲೀಕಾ, ಚೀರೀ-ಈ ೨ ಜಿಮ್ಮುಂಡೆ" (ಹಲಾಯು. ೯೩-೧೧೨) : "ಭೃಂಗಾರೀ, ಚೀರಿಕಾ, ಚೀರೀ, ಝಿಲ್ಲಿಕಾ ಈ ೪ ಜೀಱುಂಡೆ" (ನಾಚಿರಾ. ೧೧೫). [ ಸಂ. ಚೀರೀ ]

**ಚೀರಿಕಾರುತ** (ನಾ). ಜೀರುಂಡೆಗಳ ಧ್ವನಿ,-ಶಬ್ದ : ಬಂದುದು ಬೇಸಗೆ ಗಾಲಮುಸ್ತಕಾಸಾರಕಸಾರಮುಸ್ತಮಿತಮಾರುತನುದ್ಗತ ಚೀರಿಕಾರುತಂ (ಪಂರಾಮಾ. ೭-೮೫). [ ಸಂ. (ಚೀರಿಕಾ + ರುತ) ]

**ಚೀರಿಕೆ** (ನಾ). = ಚೀರಿ : "ಭೃಂಗಾರಿ, ಚೀರಿಕಾ . . . ರೆಕ್ಕೆಗಳುಳ್ಳ ಇರುವೆಗಳ ಹೆಸರುಗಳು, ಚಿಮ್ಮುಂಡೇಹುಳವೆನ್ನುವರು" (ಸಿದ್ಧಾಂತಿ. ೦೪೧). [ ಸಂ. ಚೀರಿಕಾ ]

**ಚೀರಿಡು** (ಕ್ರಿ). ಅರಚು ; ಕಿರಿಚು : ನಿನ್ನ ಸಂಕಲ್ಪಗಳ ಲೆಕ್ಕಿಸದೆ ಚೀರಿಡೆ (ವಿಸೀಗೀ. ೧೦-೭). 'ಕೀಱಿಡು$_1$' ಪರಾ. [ ಚೀರು$_3$ (<ಕೀಱು$_1$) + ಇಡು$_1$ ]

**ಚೀರಿಲ್ಲಿ** (ನಾ). ಒಂದಂ ಬಗೆಯ ದೊಡ್ಡ ಮೀನಂ : ಏನು ಬಾಯ್ಬಡಿಕ ಹೆಣ್ಣೆ ನೀನು, ಚೀರಿಲ್ಲಿ ಚೀಲಿ (ಮಂತ್ರಶ. ೫೬-೭). [ <ಸಂ. ಚೀರಲ್ಲಿ ]

**ಚೀರೀರವ** (ನಾ).=ಚೀರಿಕಾರುತ : ನಿಷ್ಠುರ ಚೀರೀರವ ಮುಖರಪರುಷ ಕಾನನಪವಮಾನನ ಸೋಂಕನಾಸೆಗೆಯ್ಕುಲ್ ಬಗೆದ್ಯೆ (ಪಂರಾಮಾ. ೭-೧೦). [ ಸಂ. (ಚೀರೀ + ರವ) ]

**ಚೀರು$_1$** 'ಸಿವುಱು$_1$' ನೋ.

**ಚೀರು$_2$** 'ಸಿವುಱು$_2$' ನೋ.

**ಚೀರು$_3$** 'ಕೀಱು$_1$' ನೋ.

**ಚೀರು$_4$** 'ಚೀಱು$_3$' ನೋ.

**ಚೀರುಮಣ್ಣು** (ನಾ). ಪಾತ್ರೆ ಮೊದಲಾದುವುಗಳ ಬಾಯಂನ್ನು ಗಾಳಿ ಹೋಗದಂತೆ ಭದ್ರಪಡಿಸುವ ಜಿಗುಟಾದ ಜೇಡಿಮಣ್ಣು : ಶ್ವೇತಾಭ್ರಕವನ್ನು ಕುಟ್ಟಿ ವಸ್ತ್ರಗಾಳಿತ ಚೂರ್ಣಮಾಡಿ . . . ಸೂರಣಗೆಡ್ಡೆ ಮಧ್ಯದಲ್ಲಿಟ್ಟು ಚೀರುಮಣ್ಣು ಹಚ್ಚಿ ಪುಟ ಹಾಕಬೇಕು (ಸಳವ್ಯ. ಪರಿ. ೫೦೦). [ ಚೀರು$_4$ (<ಚೀಱು$_3$) + ಮಣ್ಣು (<ಮಣ್) ]

**ಚೀರುಲಿ** (ನಾ). ಚೀರುವ ಧ್ವನಿ ; ಕಿರಿಚುವ ಧ್ವನಿ : ಮಸಣದ ದೆವ್ವದ ಚೀರುಲಿ ನಾನು ಸಿಡಿಮದ್ದಿನ ಪೇರುಂಡೆಯು ನಾನು (ಪಾಂಚಜ. ೧೬-೫). [ ಚೀರು$_3$(<ಕೀಱು$_1$) + ಉಲಿ$_2$ ]

**ಚೀರ್ಕೊಳವಿ** 'ಜೀರ್ಕೊಟವಿ' ನೋ.

**ಚೀರ್ಕೊಳವೆ** 'ಜೀರ್ಕೊಟವಿ' ನೋ.

**ಚೀರ್ಕೊಟವೆ** 'ಜೀರ್ಕೊಟವಿ' ನೋ.

**ಚೀರ್ಗರೆ** (ಕ್ರಿ). ಚೀರೆಂದು ಧ್ವನಿಮಾಡು,-ಶಬ್ದಮಾಡು: ಚೀರ್ಗರೆವಿಕ್ಷುಯಂತ್ರ ನಿಕರಂ ಪುಂಡ್ರೇಕ್ಷುಷಂಡಂಗಳೊಳ್ (ಅನಂಪು. ೦-೭೯). 'ಜೀರ್ಗರೆ' ಪರಾ. [ ಚೀಱು$_1$ (<ಕೀಱು$_1$) + ಕರೆ$_1$ ]

**ಚೀರ್ಗಾಳೆ** (ನಾ). ಚೀರೆಂದು ಧ್ವನಿಮಾಡುವ ಒಂದು ಬಗೆಯಂ ಕಹಳೆ : ಮುರಜ ಡಕ್ಕೆಯು ಮುರುಡೀ ರಭಸಾಗಳಿಂದ ಕರಣೆ ಚೀರ್ಗಾಳೆ ಭೂರ್ಗ ಶಬ್ದಾಗಳಿಂದ (ಹಮುಚ. ೨೩೯). [ ಚೀರು$_3$ (<ಕೀಱು$_1$) + ಕಾಳೆ (<ಕಹಳೆ) ]

**ಚೀರ್ಗೊಳವೆ** 'ಜೀರ್ಕೊಟವಿ' ನೋ.

**ಚೀರ್ಚಿಟಲ್** (ನಾ). ಒಂದು ಅನುಕರಣ ಶಬ್ದ : ಚೀರ್ಚಿಟಲೆಂಬ ತಱಗೆಂಡಗಳ ಹೋಮಕುಂಡ (ಭರಪ. ೨೦-೧೨೯).

**ಚೀರ್ಣ** 'ಚೀರಣ' ನೋ.

**ಚೀಲ, ಚೀರ$_1$** (ನಾ). ಪದಾರ್ಥಗಳನ್ನು ತುಂಬಲು ಬಟ್ಟೆ, ಗೋಣಿ ಮೊದಲಾದುವುಗಳಿಂದ ಮಾಡಿರುವ ಸಾಧನ; ಕೋಶ: "ಅರ್ತಿಯನೆ ಚೀಲಮದು" (ಮಂಗರಾ. ೧೦೫-೧೪) ; ಪರದನ ಚೀಲಮನೊಳಗಿರ್ದು ಮೆಲ್ಲ ನೀಕ್ಷಿಸಿ ಚೋರಂ (ಧರ್ಮಾಮೃ. ೧೨-೭೬) ; ಕೂರ್ತು ಕೂಸಿರ್ಪ ಚೀಲಂ ಜರಾಯುವೆನಿಕ್ಕುಂ (ಮಂಗರಾ. ೯೧-೮) ; ನಿರ್ಮದನು ಮತ್ಸ್ಯನ ಪುರಿಗೆ ಯತಿವೇಷದಲಿ ಬಂದನು ಹೊನ್ನಸಾರಿಯ ಚೀಲ ಕಕ್ಷದಲಿ (ಕುವ್ಯಾವಿ. ೧-೧೭) ; ರಕ್ತ ಕೀವು ತಾಕಿ ಮಾಂಸ ಚೀಲದೊಳಗೆ ಬೆಳೆದೆ ನಾ (ಪುರಂದ. ೧-೧೭೬-೧); ಮಿಱುಪ ಕಕ್ಷದ ಪಟ್ಟೆಯ ಚೀಲ ನೊಸಲೊಳು ಪರಿಮಳ ಗಂಧಾಕ್ಷತೆಯ ಸಿರಿವಂತರಿವರಾರೆ (ಕಂಸವಿ. ೨೫-೧೦೨) ; ಪುಸ್ತಕಗಳನ್ನು ಚೀಲಕ್ಕೆ ಹಾಕಿಕೊಂಡು ಸ್ಕೂಲಿಗೆ ಹೊರಟೆ (ಬಾಲಮು. ೨) . **ಚೀರ$_1$** : "ಸ್ಯೂತಃ, ಪ್ರಸೇವಹಃ – ಚೀರ" (ನಾಚಿರಾ. ೬) ; ಚೀರದಲಿ ನೆಱೆ ತುಂಬಿ ದಂತಿರೆ ಪೂರವಿಸಿ ಭುಗಿಲೆನಿಸಿ ಭಸಿತದ ಧಾರೆ ಪೊಱಮಡೆ(ಬಸಪು. ೪೪-೧೫); ಜನನಿಯುದರದ ಮಾಂಸಚೀರದಿಂ ಬದ್ಧನಾಗನುಕರಿಪ ಗರ್ಭಜಲದಿಂ ಮುಳುಗಿ (ಲಶಿಚಂ. ೩೯-೩೯); ಮಿಳಿಪೊಱೆಯ ತೊಗಲ ಚೀರಮಂ ತೆಗೆದು ಕಡೆಗಿರಿಸಿ ಸಂಬಳಿಗೋಲ ಸೂರೊಳ್ಳಮಂತಿಟ್ಟು ಪದತಳಂದೊಳೆದು ನಿಳಯಕ್ಕೆ ಕರೆದೊಯ್ದು (ಪಾಸೋಪು. ೭-೨೧). [ ದೇ.೫ ಮಲ. ಚೀಲ, ಶೀಲ ; ಕೊಡ. ಚೀಲೆ ; ತುಳು. ಚೀರವು ]

**ಚೀಲಕೀಲಿ** (ನಾ). ಒಂದು ಬಗೆಯಂ ಗಿಡ: ಚೀಲಕೀಲಿಯ ಬೇರು ತಿಗುಡೆಯು ಸಮಾಂಶವಾಗಿ ಚೂರ್ಣಿಸಿ ಹಸುವಿನ ತುಪ್ಪದಿಂದಾ ಘಾಯಕ್ಕೆ ತೊಡೆಯಲು ಸರ್ಪವಿಷ ಹರ (ವಿಷಚಿ. ೦೩-೨). [ ? ]

**ಚೀಲಣ** 'ಚೀರಣ' ನೋ.

**ಚೀಲಣಿಸು** (ಕ್ರಿ). ಕೆತ್ತನೆ ಕೆಲಸವನ್ನು ಮಾಡು; ಕಂಡರಿಸು: ಕಾಲಭೈರವನೊಂದುಗ್ರಾಕಾರವ ಸೋಲಿಸಿ ಬಿದಿಯುಕ್ಕಿನಿಂದ ಚೀಲಣಿಸಿದ ಚಿತ್ರವೆಂಬಂತೆ ಭಿಲ್ಲನಾಭೀಳಾಕಾರವೊಪ್ಪಿದುದು (ನೇಮಿಸಂ. ೨-೩೪) ; ಪಜ್ಜಳಿಸುವ ತಿಳುವಳಿಕಿನ ಪರಲಿಂ ಚೀಲಣಿಸಿದ ಚಿತ್ರಮುಮೆನೆ ಕರಮೆಸೆದಂ ಭೂಪತಿ ಪುರಸತಿಯರ ಕಣ್ಗಳ ಕದಿರಿಂದ (ಜಯುಕಾ. ೧೦-೫೬) . [ ಚೀಲಣ (<ಚೀರಣ) + – ಇಸು$_3$ ]

**ಚೀಲಣೆ** 'ಚೀರಣ' ನೋ.

**ಚೀಲಣೆಗೆಯ್** (ಕ್ರಿ).=ಚೀಲಣಿಸು: ಕಡುಗಾಡಿಯಿಂ ಕಡೆದ ನೀಲದ ನೀಱೆ ಕಾರ್ಮುಗಿಲ ನೋಡಿ ಚೀಲಣೆಗೆಯ್ದ ಪುತ್ಥಳಿಯ ತೆಱದಿಂ ಪುಳಿಂದಿಯರ್ ಸೊಗಯಿಸಿದರು (ಸಮ್ಯಕೌ. ೧೦-೩೦). [ ಚೀಲಣೆ (< ಚೀರಣ) + ಕೆಯ್$_1$ ]

**ಚೀಲಯ** 'ಚೀಲಾಯ' ನೋ.

**ಚೀಲಾಯ, ಚೀಲಯಂ** (ನಾ). ಸಣ್ಣ ಕತ್ತಿ; ಸುರಿಗೆ; ಕಠಾರಿ : "ಚೀಲಾಯ ಮೆನಲ್ ಕಿತ್ತಲಗು" (ಭಾರನಿ. ೬) ; ವಿಷವ ತೆಗೆದಳು ದ್ರುಪದಸುತೆ ಕೈಮುಸುಕಿನಲಿ ಚೀಲಾಯವುಗಿದನು ವಸುಮತೀಶ್ವರನು (ಕುವ್ಯಾ. ೪. ೨೫-೩೦) : ರಕ್ಕಸರಾಯ ಚೀಲಾಯದಲಿ ಶಿಖಿಸುತನ ಹೊಟ್ಟೆಯನು ತಿವಿದಿಳೆ ಬಿರಿಯೆ ಬೊಬ್ಬಿಟ್ಟನು (ತೊರರಾ. ೬-೨೨-೧೬). **ಚೀಲಯ** : ಆತನೀತನ ನಿಲುಕಿ ಹೊಯ್ದನು ದಂಡೆಯಿಂದದ ಕಳಚಿ ಮಾರುತಿ ಹೊಕ್ಕಡವ ಚಿಮ್ಮಿದನು ಚೀಲಯವ (ಕುವ್ಯಾಆ. ೨೨-೩೩). 'ಚಿಲ್ಲಾಣ' ಪರಾ. [ ? ]

**ಚೀಲಾಯುಧ** (ನಾ). ಚೀಲಾಯ ; ಸಣ್ಣಕತ್ತಿ : ಕುಕ್ಕುಟಗಳ ಕಾಲ್ಗೆ ಚೀಲಾಯುಧವಿಕ್ಕಿ ಸೊಕ್ಕುಮದ್ದಿನ ಗುಟುಕಿತ್ತು ಉಕ್ಕಂದದೆ ಕಾದಿಪರಸುಮಕ್ಕಳ ಮೊತ್ತ ಕಿಕ್ಕಿಱಿದೆಸೆದುದರ್ತಿಯೊಳು (ಕಂಸವಿ. ೭-೧೨). [ <ಚೀಲಾಯ + ಆಯುಧ ]

**ಚೀಲಿ** (ನಾ). ಬೆಕ್ಕು ; ಮಾರ್ಜಾಲ : "ಚೀಲಿಯೆನಲು ಬೆಕ್ಕು" (ಚತುನಿ. ೦೫೦) ; ತನಿವಣ್ಣನಿತ್ತು ಭಯವೀವ ರಿಪುವೆಂಬ ಚೀಲಿಯನೆಬ್ಬಟ್ಟಿ (ಕೃವಲ್ಲ. ೯-೮-೨) ; ಚೀಲಿಗೆ ಚಲ್ಲಾಟ ಇಲಿಗೆ ಪ್ರಾಣಸಂಕಟ (ಗಾದೆ). [←ತೆಲು. ಚೀಲಿ]

**ಚೀಲಿಕೆ** 'ಚಿಲಿಕೆ$_1$' ನೋ.

**ಚೀಲಿತ** (ನಾ). ಮುಚ್ಚುವಿಕೆ ; ಮರೆ: ಸಾಲುವಿಡಿದು ಪುದಿದಿಹ ದೋಷಂಗಳ ಚೀಲಿತವನು ಮಾಡಿ ಗುಣವ ಪಾಲಿಸಿ ಕೃತಿಯ ಕೊಂಡಾಡುವ ಸುಜನರ ಜಾಲವ ನಾ ಸ್ತುತಿಸುವೆನು (ರಾಮವಿ. ೧-೫೮). [ ? ]

**ಚೀಲಿಸು** (ಕ್ರಿ). ೧. ಕತ್ತರಿಸು ; ಕೊನೆಗೊಳಿಸು : ಚೀಲಿಪಂ ಸಾರ್ಚಿದ ವೈರಿವೀರರ ಚಿರಾಯುವನಾಜಿಯೊಳೀಂ ಪ್ರವೀಣನೋ (ಸೌಇಇ. XX, ೭೬-೩೭ : 1118). ೨. ತಿರಸ್ಕರಿಸು; ತ್ಯಜಿಸು: ಚಿಂತಾಮಣಿಯಂ ಚೀಲಿಸಿ ಠಕ್ಕೆಯನಾಂತೊಲ್ಲ್ಬಾತಕ್ಕೋತೊಪ್ಪುವ ನವಸಂತಾನವ ಸವಜಿದೊಲು (ಮದೇಪು. ೨೭-೩೦). [ <ಚೀಲಣಿಸು ]

**ಚೀಲೈತ, ಚಿಲೈತ, ಜೀಲೈತ** (ನಾ). ಒಂದು ಬಗೆಯ ಗಿಡ; ಕಾಗಿತೊಂಡೆ ಗಿಡ : ಹುಚ್ಚುತೊಂಡೆ ಗಿಡ : "ಚೀ[ಪಾಠಾ. ಜೀ]ಲೈತಮನೆ ಕಾಕಜಂಘೆಯಕ್ಕು" (ಮಂಗರಾ. ೪೦-೩೦): ಚೀಲೈತನ ಬೇರನೊಂದೆ ಕಟಿಯಿಂದೀಂಟಲ್ (ಖಮದ. ೧೧-೩೦). **ಚಿಲೈತ:** "ಪಾರಾವತಪದೀ–ಚಿಲೈತ, ಕಂಗುಂಗ" (ಒಷಧಿ. ೯೬). **ಜೀಲೈತ:** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚೀವರ** (ನಾ). ಸಂನ್ಯಾಸಿಗಳ ಬಟ್ಟೆ : ಯಾರ ಪತ್ರ ಚೀವರವೆತ್ತಿ ಹಿಡಿವ (ವೈಶಾಖಿ. ೭೭-೩೯೬) : ಆಗ ಭಗವಂತನು ಉಡುಪು ಹಾಕಿಕೊಂಡು ಪಾತ್ರ ಚೀವರಗಳನ್ನು ಕೊಂಡು . . . ಪೂರ್ವದ ಕಡೆ ಮುಖಮಾಡಿ ಕುಳಿತನು (ತೀರ್ಥಕ. ೪೦). [ ಸಂ. ]

**ಚೀವು, ಚಿವ್ವು, ಜೀವು** (ಕ್ರಿ). ೧. ಸೀಸದ ಕಡ್ಡಿ ಮೊದಲಾದುವುಗಳನ್ನು ತೆಳುವುಮಾಡು,– ಹೆರೆ : (ಕ). ೨. ರಸವನ್ನು ಹೀರು; ಸೀಪು : ಹಕ್ಕಿ ಬಳಗ ಕೊಕ್ಕನಿಕ್ಕಿ ಚೀವುತಿರಲು ಕವಣೆ ಬೀಸಿ (ಬಣ್ಣಿಪಿ. ೬೨-೧೫). **ಚಿವ್ವು:** (ಕ). **ಜೀವು:** ೧. ಚೀವು ಜೀವು (ಸೀಸದ ಕಡ್ಡಿ ಜೀವಿಕೊಡು) (ನಮ್ಮನು. ೯೦) ; ಸೀಸದ ಕಡ್ಡಿಯನ್ನು ಜೀವುವವನು ಚಾಕೆಂದು ಹೇಳಬಹುದೋ ? (ಜೀವಾತ್ಮ. ೬೦).

[ ದೇ. ॥ ತಮಿ. ಮಲ. ಚೀವು; ತೆಲು. ಚಿವ್ವು ]

**ಚೀಸ್** 'ಚೀಜು' ನೋ.

**ಚೀಸು** 'ಚೀಜು' ನೋ.

**ಚೀಹಾಕು** (ಕ್ರಿ). ಚೀಮಾರಿ ಮಾಡು ; ಧಿಕ್ಕರಿಸು; ಅವಮಾನಗೊಳಿಸು: (ಕ). [ <ಚೀ + ಹಾಕು (<ಪಾಯ್ಸು$_1$) ]

**ಚೀಳ್** (ನಾ). ಕಿರಿಚುವಿಕೆ ; ಅರಚುವಿಕೆ. 'ಚೀಳಿಡು' ಪರಾ. [ ? ]

**ಚೀಳಿಡು**(ಕ್ರಿ). ಅರಚು; ಕೂಗು; ಘೀಳಿಡು: "ಚೀಳಿಡುವುದೆನೆ ಘೀಟಿಡುವುದಕ್ಕುಮರ್ದನಾಮಂ" (ಶಬ್ದಮಣಿ. ೫೫) ; "ಚೀಳಿಡೆನೆ ಘೀಟಿಡುವುದಕ್ಕು" (ಶಬ್ದಮಂ. ೫೦). [ ಚೀಳ್ + ಇಡು$_1$ ]

**ಚೀಟ್** 'ಕೀಟು$_1$' ನೋ.

**ಚೀಟಾಟ, ಚೀರಾಟ**(ನಾ). ಕಿರಿಚಾಟ; ಕೂಗಾಟ : ಆಹ, ಏನ್ ಚೀಟಾಟಂ ಏನ್ ಕೊಲ್ವ ಗರ್ವಂ (ಅಕ್ಕಕ್ಕಾ. ೩-೪೪). **ಚೀರಾಟ:** ಗಂಡಸರ ಕೊಟಡಿಯಲ್ಲಿದ್ದಂತೆಯೆ ಚೀರಾಟ ಕೂಗಾಟಗಳು ಕಿವಿ ಬಿರಿಯುವಂತಿದ್ದುವು (ಪುನರು. ೧೮೮). [ ಚೀಟು$_1$ (<ಕೀಟು$_1$) + ಆಟ ]

**ಚೀಟಿಕೆ** (ನಾ). = ಚೀಟಾಟ : ತೋಟಿತಾ ವನಮಧ್ಯದಲಿ ಮುಗಿಲೇಟಿಕೆಯ ಮುಂಗುಡಿಯ ಸಿಡಿಲಿನ ಚೀಟಿಕೆಯ ಚಡ್ಡಣದ ರವ ರಾಘವನ ಕಿವಿಗಳಿಗೆ (ತೊರರಾ. ೩-೧೨-೧೪). [ ಚೀಟು$_1$ (<ಕೀಟು$_1$) + – ಇಕೆ ]

**ಚೀಟು$_1$** 'ಕೀಟು$_1$' ನೋ.

**ಚೀಟು$_2$** 'ಸೀಟು$_3$' ನೋ.

**ಚೀಟು$_3$, ಚೀರು$_4$** (ನಾ). ಮಣ್ಣಿನ ಲೇಪ : ಪಳುಗಿದ ಮಡಕೆಯೊಳ್ ಸುರಿದು ಬಾಯಿಗೆ ಮುಚ್ಚಳ ಮುಚ್ಚಿ ಚೀಟನು ಮಾಡಿ ಒಲೆಯ ಮೇಲಿಟ್ಟು (ಸಾಳ್ವಸಾಂ. ೧೮). **ಚೀರು$_4$ :** 'ಚೀರುಮಣ್ಣು' ಪರಾ.

**ಚೀರುಮಾಡು** = ಕೆಸರು ಮಣ್ಣನ್ನು ಬಳಿದು ಸ್ವಲ್ಪವೂ ತೂತು ಇಲ್ಲದಂತೆ ಮಾಡು,–ಭದ್ರಪಡಿಸು : ಕಪ್ಪೆಚಿಪ್ಪನ್ನು ಹಾಲುಕೊರಟಿಗೆ ರಸದಲ್ಲಿ ಭಾವನೆ ಮಾಡಿ ಶರಾವ ಸಂಪುಟಗಳಲ್ಲಿಟ್ಟು ಚೀರುಮಾಡಿ . . . ಅರೆದು (ಸಕವ್ಯ. ಪರಿ. ೪೯೯). [ ದೇ.॥ ತಮಿ. ಮಲ. ಚೀಟು ]

**ಚೀಟು$_4$** 'ಸಿವುಟು$_2$' ನೋ.

**ಚೀಟೀಟ್** 'ಸಿವುಟೀಟ್' ನೋ.

**–ಚು$_1$** (ಪ್ರ). ಪ್ರೇರಣಾರ್ಥದಲ್ಲಿ ಧಾತುಗಳ ಮೇಲೆ ಹತ್ತುವ ಒಂದು ಪ್ರತ್ಯಯ. 'ಒಡರ್ಚು', 'ತಗುಳ್ಚು', 'ಸಡಿಲ್ಚು' ಪರಾ.

**–ಚು$_2$** (ಪ್ರ). ಒಂದು ಭಾವವಾಚಕ ತದ್ಧಿತಪ್ರತ್ಯಯ. 'ಕೆಂಚು' ಪರಾ.

**ಚುಂಗಚ್ಚೆ** (ನಾ). ಚುಂಗು ಬಿಟ್ಟ ಕಚ್ಚೆ : ಚುಂಗಚ್ಚೆ ಹಾಕಿ ದೋತರ ಉಟ್ಟಿದ್ದಾರೆ (ತಿಡುಗು. ೩೦). [ ಚುಂಗು$_1$ + ಕಚ್ಚೆ ]

**ಚುಂಗಡಿ$_1$** (ನಾ). ೧. ಚಿಲ್ಲರೆ : ಅಂಗಡಿಯಲ್ಲಿ ಚುಂಗಡಿ ಸಿಕ್ಕದೇ ? (ಗಾದೆ). ೨. ಸಾಲದ ಹಣಕ್ಕೆ ಕೊಡುವ ಹೆಚ್ಚಿನ ಹಣ ; ಬಡ್ಡಿ : ನನ್ನ ಅಸಲ ಚುಂಗಡಿ ಸಹವಾಗಿ ಹಣ ಕೊಡು (ಬತ್ತೀಸ. ೪೫); ನೀವು ಚುಂಗಡಿಗೆ ಚುಂಗಡಿಯನ್ನು ಕಟ್ಟಿ, ಎಲ್ಲರ ಮನೆಯನ್ನು ಹಾಳುಮಾಡಿ . . . ತಿರುಗುತ್ತಿದ್ದೀರಿ (ಮುದ್ರಾಮಂ. ೧೧೭). [ ದೇ.॥ ತಮಿ. ಚುಙ್ಕಮ್ ; ತುಳು. ಚುಂಗುಡಿ ; ತೆಲು. ಚುಂಗುಡು. / ಮರಾ. ಚುಂಗಡೀ ]

**ಚುಂಗಡಿ$_2$, ಚಿನಡಿ, ಚುಂಗುಡಿ** (ನಾ). (ಹೊಳೆಯುವ) ಚುಕ್ಕೆಗಳಿಂದ ಕೂಡಿದ ಬಟ್ಟೆ : ಅಂಗಡಿ ಭಾರಿ ಆದ್ದರಿಂದ ಗುಳೋಪು, ಗುಂಡಾರು, ಕನಡಿ, ಕಾಂಗಡಿ, ಚುಂಗಡಿ, ಸಿಂಗಡಿಗಳ ಸಿಂಗಾರವೇನು ಕೇಳಬೇಕೆ! (ದಿನಾರಿ. ೮೯). **ಚಿನಡಿ :** 'ಚಿನಡಿಸೀರೆ' ಪರಾ. **ಚುಂಗುಡಿ :** ಮುಂದಲೆ ಚುಂಗುಡಿ ಸುತ್ತಿದ ಹಚ್ಚಡ ಹೊಂದೊಡವಾಂತ ಕೈ ಸೆಳವೆ (ಭರತೇ. ೧೨-೫೦).

[ ←ಮರಾ. ಚುನಡೀ ; ಹಿಂ. ಚುನರೀ ]

**ಚುಂಗಡಿಲಾಭ** (ನಾ). (ಅಸಲಿನ ಮೇಲೆ) ಬಡ್ಡಿ ಹಾಕುದವುರಿಂದ ಪಡೆಯುವ ಲಾಭ : "ಕುಸೀದಿಕಃ, ವಾರ್ಧುಷಿಕಃ, ವೃದ್ಧ್ಯಾಜೀವಃ, ವಾರ್ಧುಷೀ–ಳ ಬಡ್ಡಿ ತೆಲವಾಸಿ ಮುಂತಾದ ಚುಂಗಡಿಲಾಭದಿಂದ ಬದುಕುವವನ ಹೆಸರು" (ಸಿದ್ಧಾಂತಿ. ೨೩೬). [ ಚುಂಗಡಿ$_1$ + ಲಾಭ ]

**ಚುಂಗಡಿಹಣ** (ನಾ). ೧. ಸಾಲದ ಹಣಕ್ಕೆ ಕೊಡುವ ಬಡ್ಡಿ : (ಕ). ೨. ಚಿಲ್ಲರೆ ಹಣ : (ಕ). [ ಚುಂಗಡಿ$_1$ + ಹಣ ]

**ಚುಂಗಲ** (ನಾ). ಒಂದು ಬಗೆಯ ಆಯುಧ : ಪರಸ ತೋಮರ ಶಕ್ತಿ ಚುಂಗಲ ಪರಿಘ (ಮುಂಬರಾ. IX, ೮೯–? ; ?). [ ? ]

**ಚುಂಗಾಣಿ** (ನಾ). ಜೇಡಿಮಣ್ಣಿನಿಂದ ಮಾಡಿದ, ಚಿಕ್ಕದಾದ ಹೊಗೆಬತ್ತಿಯ ಕೊಳವೆ : (ಉ.ಅಮೆರಿಕದ ಇಂಡಿಯನರು ಶಾಂತಿಸೂಚನೆಯಾಗಿ ಸೇದುವ) ಶಾಂತಿ ಚುಂಗಾಣಿ (Peace pipe. ಇಂಕನಿ).

[ ← ಹಿಂ. ಚೋಂಗಾ./ತಮಿ. ಚುಙ್ಕಾನ್ ; ಮಲ. ಚುಙ್ಙ ; ತುಳು. ಚುಂಗಾಣಿ, ಸುಂಕಾಣಿ ]

**ಚುಂಗು$_1$, ಚೆಂಗು$_3$** (ನಾ). ತುದಿ ; ಕೊನೆ ; ಅಂಚು ; ಸೆರಗು : ಪಟ್ಟೆ ವಾಳಿಯನುಟ್ಟು ಬನ್ನಿ ಥಟ್ಟೆ ಚುಂಗ ಬಿಟ್ಟು ಬನ್ನಿ (ಪುರಂದ. ೧-೧೧೭-೭); ಚಲ್ಲಣಗೊಟ್ಟು ಕಾಸಿಯನುಟ್ಟು ಸೆಟಗುಂಗಳಿಲ್ಲವ ಚುಂಗ ಹಾಕಿದನು (ಅಮುಸಾಂ. ೫-೨೦); **ಚೆಂಗು$_3$ :** ಕೊರಚಿಯ ಚೆಂಗುಬಿಟ್ಟ ಸೆರಗನ್ನು ಹಿಡಿದೆಳೆದು . . . ಘರ್ಜಿಸಿದನು (ಬಾಗಿಸ. ೧೭).

[ ದೇ.॥ ತಮಿ. ಚುಙ್ಕು ; ತೆಲು. ಚುಂಗು ]

**ಚುಂಗು$_2$** 'ಸುಂಕು$_3$' ನೋ.

**ಚುಂಗು$_3$** (ನಾ). ೧. ಕೊಳೆತ ಗಂಜಲ ಮೊದಲಾದುವುಗಳಿಂದ ಹುಟ್ಟುವ ದುರ್ವಾಸನೆ: 'ಚುಂಗು'ಯಿದ್ದಲ್ಲಿ ಮುಂಗು (ಹೇಮಂತ. ೧೮೧). 'ಚುಂಗುನಾತ' ಪರಾ. ೨. ಒಂದು ಬಗೆಯ ವಾಸನೆ : ಅವನ ಮೈಯಿಂದ ಏನೋ ಒಂದು ವಿಧವಾದ, ಆದರೆ ಹಿತವಾದ ಚುಂಗು ಹೊರ ಹೊಮ್ಮುತ್ತಿತ್ತು (ಪುನರು. ೭೧). [ ? ]

**ಚುಂಗುಡಿ** 'ಚುಂಗಡ್ಡಿ$_2$' ನೋ.

**ಚುಂಗುನಾತ** (ನಾ). ಗಂಜಲದ ವಾಸನೆ ; ಹೊಲಸು ವಾಸನೆ ; "ದನದ ಗೋತದ ನಾತ; ಉಚ್ಚೆನಾತ" (ಜಾನಕೋ. ೩೭).
[ ಚುಂಗು$_3$ + ನಾತ ]

**ಚುಂಗುರಿಸು** (ಕ್ರಿ). ರೋಮಾಂಚನಗೊಳ್ಳು ; ನವಿರೇಳು : ನಾನೆಂದ ಮಾತಿಗೆ ನಿನಗೆ ಮೈ ಚುಂಗುರಿಸಿತೆಂತು ಕೈ ಕಂಪಿಸಿಹುದೆಂತು (ಚಂದ್ರವೀ. ೧೬೮-೭೦). [ ? + – ಇಸು$_3$ ]

**ಚುಂಗುವಾಸನೆ** (ನಾ). = ಚುಂಗುನಾತ : ಬೆವರಿನ ಚುಂಗುವಾಸನೆಯಿಂದ ಖೈದಿಗಳು ಆ ಮುಂಗೋಣೆಯನ್ನು ಹೊಲಸು ಮಾಡಿದರು (ಪುನರು. ೧೩೪).
[ ಚುಂಗು$_3$ + ವಾಸನೆ ]

**ಚುಂಗುಳ** (ನಾ). ಒಂದು ಬಗೆಯ ಹುಳು: ಚುಂಗುಳಂ ತಿನೆ ಮೊಗಂಗಟ್ಟು ಸಂಮ್ಲಾನವಾದ ಮಲರಂತಿರ್ದಾಕೆಯಂ ಕಾಣುತೆರ್ದೆಯುರಿದುದಣ್ಣಂಗೆ (ಶ್ರೀರಾಮಾ. ೩೦೪-೧೦೦). [ ? ]

**ಚುಂಚ** 'ಚುಂಚು$_2$' ನೋ.

**ಚುಂಚಲ**, ಚುಂಚಲಿ, ಚುಚಲ, ಚುಚಲಿ (ನಾ). ಒಂದು ಬಗೆಯ ಔಷಧಿ ಸಸ್ಯ : (ಕ). **ಚುಂಚಲಿ :** ಚುಂಚಲಿಗಿಡ, ಕಾಡುಸೆಣಬು (ಮೃಜಿ. ೨೪-೪೪೯). **ಚುಚಲ :** ಚುಚಲ–ಈ ಬೇರಂ ಹಾಲಲ್ಲರೆದು ತೆಗೆದುಕೊಳ್ಳೆ ವಾಂತಿ ಆಗಿ ಪೈತ್ಯ ಹರ (ವಿವೈವಿ. ४). **ಚುಚಲಿ:** ಚುಚಲಿಸೊಪ್ಪಂ ತಂದು ನೀರಲ್ಲಿ ತುಳಿದು ಸೊಲ್ಲಗೆ ರಸವಂ ಸೂತಕವಾದಾಗ ಮೂರು ಸೂತಕದಲ್ಲಿ ಕೊಡಲು ಗುಣ (ವಿವೈವಿ. ೧೦೬). [ ? ]

**ಚುಂಚಲಿ** 'ಚುಂಚಲ' ನೋ.

**ಚುಂಚಿ$_1$** 'ಚುಂಚು$_2$' ನೋ.

**ಚುಂಚಿ$_2$** (ನಾ). ಒಂದು ಬಗೆಯ ತಾಮ್ರದ ಆಭರಣ (?) : ಕಾಲ ಪಳಂಚಿನುಂಗುರದ ಮುತ್ತಿನ ಹಾರದ . . . ಬಾಲೆಯರೇವರೋಲ್ದೊಲಿಸಿ ಪತ್ತಿಸಿ ಚಿತ್ರಮನಿಂಬುಗೆಯ್ವ ಕೀಸೋಲೆಯ ಕಾಚಿನುಂಗುರದ ಚುಂಚಿಯ ಬಂದಿಯರೆಮ್ಮ ನಲ್ಲೆಯರ್ (ಸೂಕ್ತಿಸು. ೮-೪೦೦). [ ? ]

**ಚುಂಚಿಗೆಯಿ** (ನಾ). ಒಂದು ಬಗೆಯ ಭೂಮಿ : ಕಂಡಿಕೆ ಎರಡು ಸ್ಥಳದ ಕೆಯಿ ಮತ್ತರೆಂಟು ಚುಂಚಿಗೆಯಿ ಮತ್ತರು ನಾಲ್ಕು (ಸೌಇಇ. XI-II, ೧೬೯-೩೫ ; 1119). [ ಚುಂಚಿ ? + ಕೆಯಿ (<ಕೆಯ್$_4$) ]

**ಚುಂಚಿಲಿ** (ನಾ). ಮೂತಿ ಉದ್ದವಾಗಿದ್ದು, ಆಕಾರದಲ್ಲಿ ಚಿಕ್ಕದಾಗಿರುವ ಇಲಿ : ಸುಂಡಿಲಿ : ಸೊಂಡಿಲಿ ; ಮೂಗಿಲಿ : (ಕ).
[ ಚುಂಚು$_2$ + ಇಲಿ$_1$ ]

**ಚುಂಚು$_1$**, ಜುಂಜು$_1$ (ನಾ). ೧. ಜುಟ್ಟು ; ಕೂದಲು : ಮಂದಮತಿಯು ಮುಂದೆ ತಲೆಯ ಚುಂಚಂ ಪಿಡಿದು ಚರೆಯಕ್ಕೆ ಬಿಟ್ಟು ಗೂಂಟನೆಟಿದು ತಪ್ಪಂತೆ (ಅರ್ಥನೀ. ೬-೬೬ವ). ೨. ಮುಂಗುರುಳು ; ಗುಂಗುರು ; ಸುರುಳಿಗೂದಲು : ಪೊದಟ್ಟಧರಪೊತ್ತದೆಯುಂ ನಿಱಿಗೊಂಡ ಚುಂಚು ಸೋರ್ಮುಡಿ ಕಡುನುಣ್ಪುವೆತ್ತ ತೊಡೆ . . . ಕರಮೆ ರಂಜಿಸೆ ಬಂದರಿಳೇಶ ಕಾಂತೆಯರ್ (ಕಾವ್ಯಾವ. ೯೩೪); ಚುಂಚು ಚಂಚಲವಾಗಿ ಚುಮ್ಮುಚುಮ್ಮನೆ ತಾಗಿ ಹಿಂಚುಮುಂಚಿನ ಸವಿ ತೂಗಿ ಕಂಚುಮಿಂಚಾಗಿ ರಾಗಿಸಿದರು (ಭರತ. ೧೩-೩೧). **ಜುಂಜು$_1$:** ೧. ಕೆಂಜೆಡೆಗಳಿಂದಳವಟ್ಟಿಹ ಕಿರೀಟವಾ ಜುಂಜು ನಡು ನೆತ್ತಿಯೊಳು (ವೀಶೈಪು. ೩-೩-೨೦); ಎತ್ತಿಕೊಂಡಾ ಕೂಸು ತಲೆಯಲಿ ಪೊತ್ತ ಗೂಡೆಯ ಮಲಿನ ವಸನದ ಸುತ್ತುಡಿಗೆ ತಲೆ ಜುಂಜು ಸೊಗಯಿಸೆ ಕೊರವಿಯಾಂ ಬಂದೇ (ಸಾಳ್ವಭಾ. ೩೧-೨೧); ನೆತ್ತಿಯು ಜುಂಜು ಮೇಗಣಳಿಮಾಲೆ ಕರಾಸಿಯೆ ನೀಳ್ದ ಕೊಂಬು . . . ಗೆಲೆವಂದುದು ಬೀರನನಂದು ಮಾಮರಂ (ವೃಷವಿ. ೪-೩೭). ೩. ಗುಂಜುಗುಂಜಾದ ಕೂದಲು; ಒರಟುಕೂದಲು; ಕೆದರಿದ ಕೂದಲು. 'ಜುಂಜುಗೇಶ', 'ಜುಂಜುದಲೆ' ಪರಾ. ೪. ನವಿಲು,ಕೋಳಿ ಮುಂತಾದುವುಗಳ ತಲೆಯ ಮೇಲಿನ ಶಿಖೆ;ಕೊಟ್ಟು: ಜುಂಜೆಟ್ಟಿ ನವಿಲ್ಗಳ್ ಮಿಗೆ ಮಂಜುಳತನುವಿನೊಳಡಂಗಿಸಿದ ತುಂಡದಿನಾ ರಂಜಿಸಿದುವು (ಉದ್ಭಟ. ४-೩४) ; ಕೊರ್ಪಿನ ಡೊಂಕಣೆಯಲ್ಲಿ ಜುಂಜಿನಂತಿರೆ ಮಿಳಿರ್ದಾಡುತಿರ್ಪ ಪೊಸಚೌರಿಯ ದಿಟ್ಟಿಗಳುಳ್ಳ (ಕಬ್ಬಿಗಾ. ೨೬೩).
[< ಪ್ರಾ. ಚುಂಚುಅ=ತಲೆಗೆ ಧರಿಸುವ ಒಂದು ಬಗೆಯ ಆಭರಣ ; ಶಿರೋಭೂಷಣ./ತೆಲು. ಚುಂಚು ]

**ಚುಂಚು$_2$**, ಚುಂಚ, ಚುಂಚಿ$_1$, ಚೂಚು$_1$ (ನಾ). ೧. ಪಕ್ಷಿಯ ಕೊಕ್ಕು : ನಾನು ನಿಮ್ಮನ್ನು ಒಂದೊಂದಾಗಿ ನನ್ನ ಚುಂಚಿನಲ್ಲಿ ಹಿಡಿದುಕೊಂಡು ಹೋಗಿ . . . ಸರೋವರದಲ್ಲಿ ಬಿಡುವೆನು (ಬುದ್ಧಜಾ. ೩೭); ಗಿಳಿ ಸಿಟ್ಟಿಗೆದ್ದಿತು. ನೀರಜಾಳ ಕೈಗೆ ಚುಂಚಿನಿಂದ ಕುಟುಕಿತು (ದಲಿಕು. ೭४). ೨. ಸೊಂಡೆ ; ಮೂತಿ. 'ಚುಂಚಿಲಿ' ಪರಾ. ೩. ಗೋಡೆಯಿಂದ ಮುಂಚಾಚಿಕೊಂಡಿರುವ ಭಾಗ ; ಸೂರು ; ಒಪ್ಪಾರಿನ ತುದಿ : "ವಲೀಕಂ, ನೀವ್ರಂ, ಪಟಲಪ್ರಾಂತಂ – ಇ ಒಪ್ಪಾರದ ಚೂರು, ಲೋವೆ ಚೂರು,ಮನೆಯ ಚುಂಚು" (ಸಿದ್ಧಾಂತಿ. ೯೦); ಒಳಅಂಗಳದಲ್ಲಿ ಚುಂಚಿನ ಕೆಳಗೆ ವೇದಿಕೆಯ ಮೇಲೆ ಎರಡು ವೇತ್ರಾಸನಗಳು (ರಾಕ್ಷಮು. ೯). 'ಚುಂಚು ಲೋವೆ' ಪರಾ. **ಚುಂಚ :** (ಕ). **ಚುಂಚಿ$_1$ :** ೧. ನೆರೆ ಚುಂಚಿಯೊಳ್ ಕಚ್ಚಿ ಮುನಿಗಳ್ಗಪಾಯಮಂ ಬರದಂತೆ (ಲಕ್ಷ್ಮಭಾ. ೧-೬-೩೫). **ಚೂಚು$_1$ :** ೧. ಪಕ್ಷಿ ಪುಚ್ಛ ಮೈ ಚೂಚು ಚಾಚಿದರು ಬೇರೆ ಪ್ರಾಣಪಕ್ಷಿ (ಹೃದಸ. ೬೬-೩) ; ಚೂಚು ಚಾಚಿ ಚಾದಗೆಯು, ಎಡಕೆ ಕೂಗುವುದು ಚೆಂದವಾಗಿ (ಮಾಳಘದೂ. ೩-೯). [ <ಸಂ. ಚಂಚು ]

**ಚುಂಚು$_3$** (ಗು). ೧. ಹೆಸರುವಾಸಿಯಾದ ; ಪ್ರಖ್ಯಾತವಾದ. 'ಅಕ್ಷರ ಚುಂಚು' ಪರಾ. ☞ ಇದು ಸಂಸ್ಕೃತದ ಒಂದು ಪ್ರತ್ಯಯ. ಪೂರ್ವ ಪದದೊಡನೆ ಸೇರಿದಾಗ ಮಾತ್ರ ಬರುತ್ತದೆ. (ನಾ). ೨.=ಚುಂಚಿಲಿ.
[ ಸಂ. ]

**ಚುಂಚು$_4$** (ನಾ). ಒಂದು ಬಗೆಯ ವನಸ್ಪತಿ: "ವೀರ್ಯವತಿ ಚುಂಚಿನಿಕ್ಕುಂ" (ಮಂಗರಾ. ४४-४೭) ; ಚುಂಚಿನೊಳೊದವಿದ ಬೀಜಮುಮನರೆದು ಕುಡುವುದು ಬೇಗಂ (ಖಮುದ. ೨-೦४). [ ? ]

**ಚುಂಚು$_5$** (ನಾ). ಕಂದು ಅಥವಾ ಕೆಂಪುಬಣ್ಣ : (ಕ). [ ? ]

**ಚುಂಚುಕಾಲು** (ನಾ). "ಕುದುರೆಯ ಗೊರಸಿನ ಮೇಲ್ಗಡೆಯ ಕೀಲಿನ ಮೇಲ್ಭಾಗದಲ್ಲಿ ಕೂದಲು ಕುಚ್ಚುಕುಚ್ಚಾಗಿ ಬೆಳೆಯುವ ಸ್ಥಳ; ಕುದುರೆಯ ಚುಂಚುಕಾಲು" (Fetlock. ಇಂಕನಿ).
[ ಚುಂಚು$_1$ + ಕಾಲು$_1$ (<ಕಾಲ್$_1$) ]

**ಚುಂಚುದಲೆ**, ಜುಂಜುದಲೆ (ನಾ). ೧. ಕೆದರಿದ ಕೂದಲಿನ ತಲೆ : ಚುಂಚುದಲೆಯ ಲಕ್ಕ . . . ಮುಕುತಿಯ ಗಂಗಣ್ಣ (ಕುರಾಸಾಂ. ೧೯-೯೫). **ಜುಂಜುದಲೆ :** ೧. ಜುಂಜುದಲೆ ಕೆಂಗಣ್ಣ ಗುಂಜಾಭರಣವೆಸೆಯೆ (ಕಣ್ವರ. ದೀ. ೧೨೭-೯) ; ಜುಂಜುದಲೆಗಳ ಪೇರುರದ ಕೆಂಜುರಿಯ ಪುಂಜವ ಮಿಸುಕುತಿಹ ಕೆಂಗಣ್ಣುಗಳ . . . ಧೀರ ಜವದಟ್ಟಾರ್ಜವದಿ ನೆರೆದು (ಮದೀಪು. ೩-४೮); ಜುಂಜುದಲೆ ಕೆಮ್ಮೀಸೆ ಕೆಂಗಣ್ಗಳಿಂದಂ . . . ನಡೆತಂದು (ಜೆಬಪು. ೩೦-೯). ೨. ಗುಂಗುರು ಕೂದಲಿನ ತಲೆ ; ಸುರುಳಿಗೂದಲಿನ ತಲೆ : (ಕ). [ ಚುಂಚು$_1$ + ತಲೆ$_1$ ]

**ಚುಂಚುಪತ್ರ** (ನಾ). ಒಂದಂ ಬಗೆಯ ಸಸ್ಯ: "ಚುಂಚುರಃ, ಚುಂಚುಪತ್ರ ಈ ಯೆರಡುಂ ಚಂಚಸೊಪ್ಪು" (ಒಷಧಿ. ೫೭). [ ಚುಂಚು$_4$ + ಪತ್ರ ]

**ಚುಂಚುಮಿಸೆ,** ಜುಂಜುಮಿಸೆ (ನಾ). ೧. ಸುರುಳಿಯಾಗಿ ತಿರುವಿದ ಮೀಸೆ: ಮುರಿದಣ್ಚೆಕ್ಕಿದ ಗಡ್ಡ ಮೀಸೆ ಮೂಡಿ ಕಟ್ಟಿಂ ತಳ್ತ ಕೆಂಬಟ್ಟೆ ಕತ್ತುರಿಯಿಂ ತೂಱುವ ಚುಂಚುಮಿಸೆ (ಅನಂಪು. ೧೧-೭೫); ಈ ಚುಂಚು ಮೀಸೆಯೂ ಪಟ್ಟೋಕ್ಷೇಪದಡಿಯ ನೊಸಲ ವೇಲೆಯಲ್ಲಿ ತೆರೆಗಳಂತೆ ಸೂಸುವೆತ್ತಿರುವ ಅಲಕಗಳೂ (ಮಂತ್ರಶ. ೯೨-೧೨). **ಜುಂಜುಮಿಸೆ:** ೨. ಕೆದರಿದ ಮೀಸೆ; ಗುಂಜುಗುಂಜಾಗಿರುವ ಮೀಸೆ: ಭಯಂಕರ ವದನದಿಂದೆ ಕೆಂಡದಂತಿರೆ ತೋರ್ಪ ಕಣ್ಗಳಿಂ ಜುಂಜುಮಿಸೆಗಳಿಂದೆ ನಿರುತದಿಂ ಫಲಕ ಖಡ್ಗಗಳಾಂತ ಕರಯುಗಳದಿಂ (ಪಾಸೋಪು. ೩-೬೭). [ ಚುಂಚು$_1$ + ಮೀಸೆ ]

**ಚುಂಚುರ** (ನಾ). ಒಂದು ಬಗೆಯ ಸಸ್ಯ: "ಚುಂಚುರಃ, ಚುಂಚುಪತ್ರ ಈ ಯೆರಡುಂ ಚಂಚಸೊಪ್ಪು" (ಒಷಧಿ. ೫೭). [ ? ]

**ಚುಂಚುರುಚು** (ನಾ). ಒಂದು ಬಗೆಯ ಸಸ್ಯ (?): ಮರಗಜುಕೆಯ ಬಳ್ಳಿಯ ಪೆರ್ಗುರುಟಿಗೆಯಿಂ ಬ್ರಹ್ಮದಂಡೆಯಿಂ ಕಳವಲ್ ಚುಂಚುರುಚುಂ ಗಿಣಮೂಗಿಯ ಜಂಗರ ಹಿತಕರಮೆನಿಪ ಬಂಜೆ ಮಡುಪಾಗಲುಮಂ (ಖಮದ. ೧೬-೫೮). [ ? ]

**ಚುಂಚುಲೆ** (ನಾ). ಒಂದು ಬಗೆಯ ಆಯುಧ: ಸುರಗಿ ಕಠಾರಿ ಕಡಿತಲೆ . . . ಸಿರಿಮುರಿ ಕಕ್ಕಡೆ ಚುಂಚುಲೆ ರವಿಹಾಸ ಉರಿಯನುಗುಳು ತಿರ್ದುವಲ್ಲಿ (ಭರಡ. ೨೦-೧೩೩). [ ? ]

**ಚುಂಚುಲೋವೆ** (ನಾ). ಗೋಡೆ ಮೊದಲಾದುವುಗಳಿಂದ ಮುಂಚಾಚಿ ಕೊಂಡಿರುವ ಭಾಗ: ಪೊಂಬಿಸದುಪ್ಪರಿಗೆಯ ಬಿಸವಂದವಾದ ಚುಂಚು ಲೋವೆಗಳೊಳಗೆ ಬಳಸಿ ನಲಿದುಲಿವ ಪಾರಿವಂಗಳ ಕೊರಲುಲಿಯೊಳಂ (ಕಬ್ಬಿಕಾ. ೪೪); ಪಳುಕಿನ ಚುಂಚುಲೋವೆಯೊಳವಲಂಬಿಪ ತೊಳಪ ಮುತ್ತಿನ ಲಂಬಣವನು. (ಶ್ರೀಪಾಲ. ೩-೫೨); ಹೊನ್ನ ರನ್ನದ ಚುಂಚು ಲೋವೆಗಳಿಂ ನೆರೆದ ಕೆಂಬೆಳಗನಿಂಬಿಡುವುನ್ನತದ ಮಾಣಿಕದ ಕಳಸಾಳಿ ವಳಿಗಳಿಂ (ಸಾಳ್ವಭಾ. ೪-೪೦). [ ಚುಂಚು$_2$ + ಲೋವೆ ]

**ಚುಂಚುಬು** 'ಜುಂಜುಬು' ನೋ.

**ಚುಂಚುಬುದಲೆ** 'ಜುಂಜುಬುದಲೆ' ನೋ.

**ಚುಂಟಿ** (ನಾ). = ಚುಂಡಿ. [ <ಸಂ. ಚುಂಡೀ ]

**ಚುಂಡ** (ನಾ). (ಕರಾ) ಸಣ್ಣ ಜುಟ್ಟುಳ್ಳವನು. [ ? ]

**ಚುಂಡಿ** (ನಾ). ಒಂದು ಬಗೆಯ ಸಣ್ಣ ಬಾವಿ: "ಚುರೀ, ಚುಂಡೀ, ಚೂಚುಕಃ– ಈ ೩ ಬಗರಗೆ" (ಹಲಾಯು. ೧೧೩-೬೨); "ಚುರಿ ಚುಂಡಿ ಮಾನಂಗಿ" (ಮಂಗರಾ. ೧೨೫-೧೯). [ ಸಂ. ಚುಂಡೀ ]

**ಚುಂಡಿಲಿ** 'ಸುಂಡಿಲಿ' ನೋ.

**ಚುಂದಿ** (ನಾ). ಕುಂಟಣಿ; ತಲೆಹಿಡುಕಿ. [ ಸಂ. ಚುಂದೀ ]

**ಚುಂದು** 'ಸುಂದು$_1$' ನೋ.

**ಚುಂಬಕ** (ನಾ). ೧. ಮುತ್ತಿಡುವವನು; ಚುಂಬಿಸುವವನು: "ನಿಕ್ಷಃ- ಚುಂಬಕಂ" (ಶಾಶಕ್ತ. ೫೫). ೨. ವ್ಯಭಿಚಾರಿ; ಕಾಮುಕ. ೩. ಮೋಸಗಾರ; ವಂಚಕ. ೪. ಅಯಸ್ಕಾಂತ: "ಚುಂಬಕಮಯಸ್ಕಾಂತಮಕ್ಕುಂ" (ಮಂಗರಾ. ೩೦-೫): ಆ ಸಮಯದಲಿ ಬಂದನಗ್ಗದ ಭೂಸುರ ಶ್ರೀಕಂಠನೋ ಪದ್ಮಾಸನನ ಪಲ್ಲಟವೊ ಕಮಲಾಂಬಕನ ಚುಂಬಕವೊ (ಕುವ್ಯಾಅ. ೪-೭); ಚುಂಬಕವನು ಸೂಜಿಗಳೆಯ್ತಿಂದವಲಂಬಿಸುವಂತೆ ಕಲಿಗಳು . . . ರಾಮನನಾಡಂಬರದಿಂದ ಪೊರ್ದಿದರು (ಕುರಾಸಾಂ. ೯-೧೭); ಪ್ರೀತಿಯೆಂಬ ಚುಂಬಕಾ ಕೂಡಿಸಿತ್ತು ಆಡಿಸಿತ್ತು(ಸಖೀಗೀ. ೯೬-೪). 'ಚುಂಬಕಗಾಳಿ' ಪರಾ. [ ಸಂ. ]

**ಚುಂಬಕಗಾಳಿ** (ನಾ). ಆಕರ್ಷಿಸುವ ಶಕ್ತಿಯಿಂದ ಕೂಡಿದ ಗಾಳಿ: ಉತ್ತರಧ್ರುವದಿಂ ದಕ್ಷಿಣಧ್ರುವಕೂ ಚುಂಬಕಗಾಳಿಯು ಬೀಸುತಿದೆ (ನಾದಲೀ. ೫೦-೨); ಅದರ ಚುಂಬಕಗಾಳಿಯು ಅವನ ಸುತ್ತಲೂ ಬೀಸುತ್ತಿತ್ತು (ಸಮಜೀ. ೮೯೪). [ ಚುಂಬಕ + ಗಾಳಿ$_1$ ]

**ಚುಂಬಕತ್ವ** (ನಾ). ಆಕರ್ಷಿಸುವ ಶಕ್ತಿ; ಕಾಂತಶಕ್ತಿ: ರಾಸನು . . . ದಕ್ಷಿಣಧ್ರುವದ ಬಳಿ ಭೂಮಿಯ ಮೇಲಿನ ಚುಂಬಕತ್ವದ ಬಗ್ಗೆ ಪರಿಶೋಧಿಸುವ ಸಲುವಾಗಿ ಹೊರಟಿದ್ದನು (ಸಸ್ಯಕ. ೮); ಅಯಸ್ಕಾಂತದ ನೆರೆಯಲ್ಲಿ ನಿಂತ ಕಬ್ಬಿಣದ ತುಂಡೂ ಚುಂಬಕತ್ವವನ್ನು ಪಡೆಯುವಂತೆ (ಛಾಂಉಪ. VI, ಮುನ್ನುಡಿ). [ ಸಂ. ]

**ಚುಂಬನ** (ನಾ). ೧. ಪ್ರೀತಿಗಾಗಿ (ಸಾಮಾನ್ಯವಾಗಿ) ಒಂತೊಬ್ಬರ ಕೆನ್ನೆ ಮೊದಲಾದ ಅಂಗಗಳ ಮೇಲೆ ತುಟಿಗಳನ್ನು ಇರಿದಂ ಬಳಿಕ ಮುಂಚಿ ಒತ್ತುವುದು; ಅಧರವನ್ನು ಸವಿಯುವುದು; ಬಾಯ್ಗೊಟ; ಮುತ್ತು; ಮುದ್ದು: "ವದನಕೂಟಂ ಮುತ್ತು ಚುಂಬನಮದೋಷ್ಠಪಾನಂ" (ಮಂಗರಾ. ೯೭-೧೬); "ಮೌಕ್ತಿಕದೊಳು ಚುಂಬನದೊಳುಂ ಮುತ್ತೆನಿಕ್ಕುಂ" (ಶಬ್ದಮಂ. ೯೮); ಕಳಾನಿಲಯಂ ಮಾಡಿದನೊಲ್ದು ಚುಂಬನಪರಿಷ್ವಂಗ ಪ್ರಪಂಚಂಗಳಂ (ಜಗವಿ. ೧೧-೧೪೧); ಮೊದಲ ಚುಂಬನದೊಳು ಹಲು ಬಿದ್ದಂತೆ (ಕುವ್ಯಾವಿ. ೬-೮). ೨. ಸ್ಪರ್ಶ: ಚರಣಚುಂಬನಕೆ ಕಲ್ಲೆ ತಾಂ ಬೆಣ್ಣೆಯಾಯ್ತೆನೆ ಕಂಪಿಸಿತು ಬಂಡೆ (ಶ್ರೀರಾಮಾ. ೩೪-೨೭೯). [ ಸಂ. ]

**ಚುಂಬನಗೊಡು** (ಕ್ರಿ). ಮುತ್ತನ್ನು ಕೊಡಂ; ಮುದ್ದಿಕೊಡು: ಚುಂಬನಗೊಟ್ಟು ಚುಂಬಿಸಿ ರಂಗುವಮಾಣಿಕದಂಬುಲವಿತ್ತು ಮುದ್ದಿಸಿದ . . . ಮಾನಿನಿಯ (ಮೋಹತ. ೩೩-೪೯). [ ಚುಂಬನ + ಕೊಡು$_1$ ]

**ಚುಂಬಿ** (ಗು). ಮುಟ್ಟುವ; ತಾಗುವ. 'ಗಗನಚುಂಬಿ' ಪರಾ. [ ಸಂ. ಚುಂಬಿನ್ ]

**ಚುಂಬಿತ** (ಗು). ೧. ಮುತ್ತಿಟ್ಟ; ಚುಂಬಿಸಿದ. ೨. ತಾಗಿದ; ಮುಟ್ಟಿದ: ಏರಿದನು ಸೌಮಿತ್ರಿ . . . ವಿರಳಪರ್ಣದ್ರುಮದ ಪುಷ್ಪಿತಶರೀರದಾ ಸ್ವರ್ಗಚುಂಬಿತ ಸಾಲದುನ್ನತಶಿರದ ಕರದ ಗೋಪುರಕೆ (ಶ್ರೀರಾಮಾ. ೧೫೭-೧೧೭). (ನಾ). ೩. ಮುತ್ತಿಟ್ಟುದು; ಚುಂಬಿಸಿದುದು: ಒಂದು ಶೂನ್ಯ ಅಧರವಾಗೆ ಒಂದು ಶೂನ್ಯ ಓಷ್ಠವಾಗೆ ಪೂರ್ಣವೊಂದೆ ಚುಂಬಿತ (ಅನಿಕೇ. ೦೯-೮). [ ಸಂ. ]

**ಚುಂಬಿಸು** (ಕ್ರಿ). ೧. = ಚುಂಬನಗೊಡು: ಪೊಸತಲರ್ದೊರ್ಗಂದು ತಾವರೆಯ ಗೆತ್ತು ಮುಖಾಬ್ಜಮನೊಂದು ತುಂಬಿ ಚುಂಬಿಸೆ ಸತಿ ಬೆರ್ಚಿ ಪೆಳ್ಚಳಿಸಿ (ಪಂಪಭಾ. ೫-೩೩); ಪ್ರತಿಬಿಂಬವ್ಯಾಜದಿಂ ನಿನ್ನಯ ಕದಪುಗಳಂ ಚುಂಬಿಸುತ್ತುಂ (ಕಾದಂಪೂ. ೮೯೭); ನೊಸಲೆಡೆಯನು ಚುಂಬಿಸಿ ತಕ್ಕೈಸುತ ಪರವಶೆಯಾದಳು (ಕಂನವಿ. ೯-೧೭೭). ೨. ಮುಟ್ಟು; ಸ್ಪರ್ಶಿಸು; ತಾಗು: ಅಂಬರಮಂ ಚುಂಬಿಸಿ[ಪಾಠಾಂ. ಅಂಬರ ಚುಂಬಿತಮಾಗಿ] ನಳನಳಿಸಿ ಕೊರ್ಬಿ ಬೆಳೆದ ಪೆರ್ಬಿದಿರ ತುದಿ (ಗಿರಿಕ. ೦-೦೨೮ ವ); ಅವನ ದೇಹದ ಛಾಯವೆನ್ನಯ ಛಾಯ ಚುಂಬಿಸುತ (ಕುವ್ಯಾಕ. ೮-೪೦); ಮಹಾಬಲಾಚಲವೊಪ್ಪುತಿಹುದು ವ್ಯೋಮಮಂಡಲವ ಚುಂಬಿಸುತ (ಕಂನವಿ. ೨-೨೭). [ ಚುಂಬನ + – ಇಸು$_3$ ]

**ಚುಕತಾ** 'ಚುಕ್ತಾ' ನೋ.

**ಚುಕಾಣಿ** 'ಚುಕ್ಕಾಣಿ' ನೋ.

**ಚುಕಾಯಿಸು** (ಕ್ರಿ). ೧. ಮೇರೆ ಮೀರು; ಮುಂದುವರಿ: ಚುಕಾಯಿಸಿ ಅವಳನ್ನು ಹಿಡಿದುಕೊಂಡು(ದಾಲಕ್. ೧೧೭). ೨. ಮುಗಿಸು; ಪೂರೈಸು. ೩. ಸರಿಹೊಂದಿಸು; ಕ್ರಮಂಪಡಿಸು. ೪. ಬೆಲೆಯನ್ನು ನಿಗದಿಗೊಳಿಸು,– ಗೊತ್ತುಪಡಿಸು. ೫. ಸಾಲ ಮುಂತಾದುವನ್ನು ತೀರಿಸು,–ಸಂದಾಯ ಮಾಡು: (ಠ). [ ಚುಕಾ$_0$ (P ಹಿಂ. ಚುಕಾನಾ) + – ಇಸು$_3$ ]

**ಚುಕಿ** 'ಚೂಕು' ನೋ.

**ಚುಕುಳ** (ನಾ). ಒಂದು ಬಗೆಯ ಗಿಡ; ಹಾಲುತೊಟ್ಟಿನ ಗಿಡ: "ಅಕ್ಕಿಹೆಡೆ ಹೇಮದುಗ್ಧಂ ಚುಕುಳ[ಪಾಠಾಂ. ಕಿಲ]ಮೆಂದೆನಿಕ್ಕುಂ" (ಮಂಗರಾ. ೬೯-೨೭). [ ? ]

**ಚುಕ್ಕಣ** 'ಚುಕ್ಕಾಣಿ' ನೋ.

**ಚುಕ್ಕಮನ** (ನಾ). ಹೀನವಾದ ಮನಸ್ಸು; ಕ್ಷುದ್ರಮನಸ್ಸು: ರೊಕ್ಕದೊಳಗೆ ಲೆಕ್ಕ ಮುಕ್ಕಾಣಿ ಹೋದರೆ ಕಕ್ಕುಲತೆಯ ಬಿಡು ಚುಕ್ಕಮನವೆ (ಪ್ರಾಲಾರ. ೧೯೮-೭). [ <ಚುಕ್ಕಿ$_1$ + ಮನ$_1$ ]

**ಚುಕ್ಕಾಣಿ, ಚುಕಾಣಿ, ಚುಂಕ್ಕಣ, ಸುಕಾಣ, ಸುಕಾಣು**(ನಾ). ೧. (ಹಡಗು, ವಿಮಾನ ಮುಂತಾದುವುಗಳ) ದಿಕ್ಕನ್ನು ಬದಲಿಸಲು ಸಹಾಯ ಮಾಡುವ, ಮರ ಅಥವಾ ಲೋಹದಿಂದ ಮಾಡಿದ ಒಂದು ಬಗೆಯ ಸಾಧನ: ಅಂಬಿಗರು ಚುಕ್ಕಾಣಿಗಳನ್ನು ತಿರುಗಿಸತೊಡಗಿದರು (ಹಾಹುತ. ೨೫); ವಿಮಾನಗಳನ್ನು ಎಡ-ಬಲಗಳಿಗೆ ತಿರುಗಿಸಲು ಸಹಾಯಕವಾದ ಈ ಫಲಕಕ್ಕೆ ಚುಕ್ಕಾಣಿಯೆನ್ನುತ್ತಾರೆ (ವಿಜ್ಞಾವಿ. ೭೮); ದಿಕ್ಕಿಲ್ಲದಂತೆ ಹರಿದಾಡುವವಗೆ ಚುಕ್ಕಾಣಿ ಬೇಡ (ಸೂರ್ಯಪಾ. ೩೩-೪). ೨. ಮಾರ್ಗದರ್ಶಿಯ ಸ್ಥಾನ,-ಪದವಿ: ಪುರುಷನ ಜೀವನದ ಚುಕ್ಕಾಣಿಯೇ ಸ್ತ್ರೀಗೆ ಯೋಗ್ಯಸ್ಥಳ (ಅಪನಾ. ೫೧). **ಚುಕಾಣಿ:** (+). **ಚುಕ್ಕಣ:** ೧. "ಹಡಗಿನ ಮುಖಂ ಕೋಟಿಪತ್ರಂ . . . ಅದಱ ಹಿಂದು ಚುಕ್ಕಣಮೆನಿಕ್ಕುಂ" (ಮಂಗರಾ. ೧೨೧-೫); ಆ ಹಡಗದ ಚುಕ್ಕಣಕ್ಕೆ-ಹಿಂಬದಿಗೆ ನಿಂತು ಈ ದೃಶ್ಯವನ್ನು ನೋಡುತ್ತಿರುವಂತೆ ವಿಷ್ಣುನಿಗೆನಿಸಿತು (ಸಮುಜೀ. ೯೮೭). **ಸುಕಾಣ:** (+) **ಸುಕಾಣು:** ೧. ಕುದುರೆಗಳನ್ನು ನಡಿಸುವದಕ್ಕೆ ಕಡಿವಾಣವಿದ್ದಂತೆ ಹಡಗುಗಳನ್ನು ನಡಿಸುವದಕ್ಕೆ ಸುಕಾಣು ಇರುತ್ತದೆ (ಮುಂಬಯಿ. ೩-೧೧೩). [<ಪ್ರಾ. ಸುಕ್ಕಾಣಯ./ಅರ. ಹಿಂ. ಸುಕ್ಕಾನ್; ಮರಾ. ಸುಕಾಣ್ ]

**ಚುಕ್ಕಾಣಿಗ** (ನಾ). ಚುಕ್ಕಾಣಿಯನ್ನು ಹಿಡಿದಿರುವವನು: "(ಚುಕ್ಕಾಣಿ) ನಡಸುವವನು; ಚುಕ್ಕಾಣಿಗ; ಕರ್ಣಧಾರ" (Helmsman. ಇಂಕನ್ನ).

[ ಚುಕ್ಕಾಣಿ + -ಗ$_2$ ]

**ಚುಕ್ಕಾಣಿಚಕ್ರ** (ನಾ). "ಹಡಗಿನ ಕರ್ಣವನ್ನು ತಕ್ಕಂತೆ ತಿರುಗಿಸಲಾಗುವ ಚಕ್ರ; ಚುಕ್ಕಾಣಿಚಕ್ರ" (Helm. ಇಂಕನ್ನ). [ ಚುಕ್ಕಾಣಿ + ಚಕ್ರ$_1$ ]

**ಚುಕ್ಕಿ$_1$** 'ಚುಕ್ಕೆ$_1$' ನೋ.

**ಚುಕ್ಕಿ$_2$** 'ಚುಕ್ಕೆ$_2$' ನೋ.

**ಚುಕ್ಕಿ$_3$, ಚುಕ್ಕೆ$_3$** (ನಾ). ೧. ಒಂದು ಗ್ರಹದ ಹೆಸರು; ಶುಕ್ರಗ್ರಹ: "ಚುಕ್ಕಿಯೆನೆ ಶುಕ್ರಂ" (ಕಕರ. ೩೭). ೨. ರಾಕ್ಷಸರ ಗುರು; ಶುಕ್ರಾಚಾರ್ಯ: ಬೋಟಿಯರೋಜನ ಜಾಣ್ಮೆ, ಚುಕ್ಕಿಯಜಾವು, ಜವನ ಜರ್ವು, ಜಕ್ಕರರಸನೈಸಿರಿ ತನ್ನೊಳೊದವೆ ಮನುವಿನ ಮಾರ್ಗದೆ ನಡೆಯುತೆ . . . ಮೆಱೆದಂ(ರಾಮಾಶ್ವ. ೧೧೪-೧೧). 'ಚುಕ್ಕಿಗುವರ' ಪರಾ. **ಚುಕ್ಕೆ$_3$:** ೧. ಮೂಡ ಚುಕ್ಕೆಯು ಮೂಡೆ ಗಾಡದಿಂ ಕುಕ್ಕುಟವು ಜೋಡು ಕೂಡಿಯೆ ತಾವು ಕೂಗುತಿರಲು (ಯನಳ. ೩೪). [ <ಸಂ. ಶುಕ್ರ ]

**ಚುಕ್ಕಿಗುವರ** (ನಾ). ಶುಕ್ರಾಚಾರ್ಯನ ಶಿಷ್ಯ; ರಾಕ್ಷಸ; ಅಸುರ: "ರಕ್ಕಸರ್, ಮರ್ಬಿಗರ್, ಚುಕ್ಕಿಗುವರರ್, ಮೊದಲ ಸಗ್ಗಿಗರ್-ಈ ೪ ರಕ್ಕಸರ ಪೆಸರ್" (ಕಕಸಾ. ೨-೨೨); "ಚುಕ್ಕಿಗುವರರ್ಮಬ್ಬಿಗರ್ . . . ರಕ್ಕಸರಕ್ಕು" (ಕಬ್ಬಿಕ್ಕೆ. ೧೦); "ಚುಕ್ಕಿಗುವರರು ರಕ್ಕಸರು ಮಬ್ಬಿಗರು ಯೆನಲ್ಕೆ ಅಸುರಾಭಿಧಾನದೊಳ್ ಸಲೆ ತೋರ್ಪುದು" (ಕಬ್ಬಮು. ೧೦).

[ ಚುಕ್ಕಿ$_3$ + ಕುವರ$_2$ ]

**ಚುಕ್ಕಿತ** (ನಾ). [ನಾಟ್ಯ] ನೃತ್ಯದಲ್ಲಿ ಚೆನ್ನಾಗಿ ಕಾಣುವಂತೆ ಹಲ್ಲನ್ನು ಪ್ರದರ್ಶಿಸುವುದು: ಮಿಗೆ ಕರ್ಚಿದೊಡೆ ಭಿನ್ನಂ ಮಗುಳ್ದುಂ ಚೆನ್ನಾಗಿ ತೆಱೆಯೆ ಚುಕ್ಕಿತಮಕ್ಕುಂ (ಶಾಸ್ವರಂ. ೩-೯೦). [ ? ]

**ಚುಕ್ಕಿವಟ್ಟೆ** (ನಾ). ನಕ್ಷತ್ರಗಳು ಸಂಚರಿಸುವ ಮಾರ್ಗ; ಆಕಾಶ: ಮುಗಿಲವೇಷವನಾಂತು ನಿಂದುದಲ್ಲಲ್ಲಿ ಬೃಂದಾರಕರ ವೃಂದವಾ, ಚಾರಣರ ಚರಣಚಿಹ್ನೆಯಂ ಚುಕ್ಕಿವಟ್ಟೆಯಿಂ (ಶ್ರೀರಾಮಾ. ೪೦೫-೭೧). 'ಆಱುಲ್ವಟ್ಟೆ' ಪರಾ. [ ಚುಕ್ಕಿ$_1$(<ಚುಕ್ಕೆ$_1$) + ಬಟ್ಟೆ$_1$ ]

**ಚುಕ್ಕಿಸು** (ಕ್ರಿ). ಸಂಕೋಚಗೊಳ್ಳು (?): ಅಕ್ಕಟ ತನ್ನ ಮನಕೆ ತಂಗಿ ತಾ ಮಱೆಯಿಕ್ಕುವುದೊಂದು ಮಂತಣವುಂಟೆ ಚುಕ್ಕಿಸದಿರು ಸೂಚಿ ಕವಲಾದಂತೆ ನಿನ್ನ ಮನಕ್ಕಾವು ಪೊಱಗೆ ಪೇಳೆಂದಳು (ಸೊಬಸೋ. ೨೫-೫).

[ <ಸುಕ್ಕಿಸು ? ]

**ಚುಕ್ಕಿಸೊಪ್ಪು** 'ಚುಂಕ್ಕಿಸೊಪ್ಪು' ನೋ.

**ಚುಕ್ಕುತಟ್ಟು** (ಕ್ರಿ). (ಮಕ್ಕಳನ್ನು ಮಲಗಿಸಲು) ಬೆನ್ನಿನ ಮೇಲೆ ಮೃದುವಾಗಿ ಕೈಯಿಂದ ತಟ್ಟು: ತಾಯಿ ಮಗುವನ್ನು ಚುಕ್ಕುತಟ್ಟುತ್ತ ಮಲಗಿಸುವಂತೆ ತಮ್ಮನ ತಲೆಯ ಮೇಲೆ ಕೈಯಿಟ್ಟು ಅಡ್ಡಾದರು (ಪ್ರನಿ. ೩೪೭); ಗೋದಾವರಿ . . . ಕೇಶವನಿಗೆ ಚುಕ್ಕುತಟ್ಟುತ್ತಿದ್ದಳು (ಭಾರಥಿ. ೨೪).

[ ಚುಕ್ಕು$_0$ + ತಟ್ಟು$_1$ ]

**ಚುಕ್ಕುಬಡಿ** (ಕ್ರಿ). = ಚುಕ್ಕುತಟ್ಟು: ಎಷ್ಟು ಚುಕ್ಕುಬಡಿದರೂ, ಚಪ್ಪರಿಸಿದರೂ ನಿಮಾಯಿಗೆ ನಿದ್ದೆಯೇ ಬರಲಿಲ್ಲ (ಗೌರಾಂಗ. ೧೦); ಈ ಕುಮಾರ ಕಂಠೀರವನನ್ನು ಮೆಚ್ಚಿ, ಚುಕ್ಕುಬಡಿದು ಅವನನ್ನು ಮಲಗಿಸಲು ಪ್ರಯತ್ನ ಮಾಡಿದೆ (ಗಾಳಿಪ. ೧೭೧). [ ಚುಕ್ಕು$_0$ + ಬಡಿ$_1$ ]

**ಚುಕ್ಕೆ$_1$, ಚಿಕ್ಕಿ$_1$, ಚಿಕ್ಕೆ$_1$, ಚುಕ್ಕಿ$_1$** (ನಾ). ೧. ನಕ್ಷತ್ರ; ತಾರೆ: ಈ ಚಟಗಳ ಪರಂಪರೆ ಹೇಳುತ್ತ ಹೋಗುವುದೆಂದರೆ ಮುಗಿಲ ಚುಕ್ಕೆಗಳನ್ನು ಎಣಿಸಿದಂತೆಯೇ ಸರಿ (ಗಾಳಿಗು. ೩೦). ೨. ವರ್ತುಲಾಕಾರದ ಸಣ್ಣ ಗುರುತು, -ಚಿಹ್ನೆ; ಬಿಂದು. 'ಚುಂಕ್ಕಿದುಂಬಿ' ಪರಾ. ೩. (ಆಲಂ) ಕೆಲಸಕ್ಕೆ ಬಾರದವನು; ಅಲ್ಪ; ಹೀನ: ಹೊಕ್ಕರಾಹವದೊಳಗೆ . . . ಚುಕ್ಕೆ[ಪಾಠಾಂ. ಕ್ಕಿ]ಗಳಿರಾ ಎನುತ ಹೊಯ್ದರು (ನಳಚ. ೯-೨೪). **ಚಿಕ್ಕಿ$_1$:** ೧. ಭೂಮಧ್ಯರೇಖೆಯಿಂದ ಬಡಗಕ್ಕೂ ತೆಂಕಣಕ್ಕೂ ಹೋದಹೋದ ಹಾಗೆ ಗುರುತಿನ ಚಿಕ್ಕಿಗಳು ಕಾಣದ ಹಾಗಾಗಿ ಹೊಸಹೊಸ ಚಿಕ್ಕಿಗಳು ದೃಷ್ಟಿಗೆ ಬೀಳಹತ್ತುತ್ತವೆ (ಮುಂಬಯಿ. ೪-೩೮); ಮುಗಿಲ ಮ್ಯಾಗಿನ ಚಿಕ್ಕಿ, ಹಗಲ ಮೂಡಿದರೇನ (ಕನ್ನಜಾ. ೧೨೮). ೨. ಹುಲಿಯ ಮೋರೆಯ ಮೇಲೆಯೂ ಕುತ್ತಿಗೆಯ ಮೇಲೆಯೂ ಚಿಕ್ಕಿಗಳು ಇರುತ್ತವೆ (ಮುಂಬಯಿ. ೪-೩೭). **ಚಿಕ್ಕೆ$_1$:** ೧. ನೇಸರಿನ ಮುಂದೆ ಚಿಕ್ಕೆಗಳು ಒಪ್ಪುವವೆ ? (ಬಿದುರಿ. ೧೫೧); ಸೂರ್ಯ, ಚಂದ್ರ, ಚಿಕ್ಕೆ ಕೋಟಿ ಕಣ್ಣರಳಿಸಿ ನೋಡಿವೆ (ನೆಲಮು. ೨೪-೧೧). **ಚುಕ್ಕಿ$_1$:** ೧. ಚುಕ್ಕಿಗಳುದುರಲಡಿಗಡಿಗೆ ವನಚರರ್ ಬೆದರೆ (ವೆಂಕಾರಾ. ೬-೩೮-೩೧); ಚುಕ್ಕಿಗಳಿನಡಸಿರ್ದ ನಭವನು (ರಾಮಾಸಂ.೬-೮-೨೧); ಗಾಜಿನಾಚೆ ದಿಗಂತದಲ್ಲಿ ಚುಕ್ಕಿಗಳು ಮಿನುಗುತ್ತಿದ್ದವು (ಮಾರ್ಗದ. ೮೪). ೨. ಬಿಳಿ ಚಾಯೆಯ ನೀಲದುಕೂಲದಲ್ಲಿ ನೆಯ್ದಿರುವ ಜರತಾರಿಯ ಚುಕ್ಕಿಗಳಂತೆ ಅಲ್ಲಿ ಇಲ್ಲಿ ಮ್ಲಾನ ನಕ್ಷತ್ರಗಳು ಮಿನುಗುತ್ತಿದ್ದುವು (ರಾಮಾನ. ೮೦). ೩. ಚುಕ್ಕಿಗಳಲಾ ನಿನ್ನವರು ಕೈಯಿಕ್ಕ ಹೇಳಾ (ಕುವ್ಯಾಕ. ೧೯-೫೦): ಜಲಜಭವಭವಲೋಕಪಾಲಾವಳಿಗಳೀಕ್ಷಣ ತೊಲಗಿ ಬದುಕುವುದುಳಿದ ಚುಕ್ಕಿಗಳೇನು ಗಣನೆಂದೊದರಿದವು ಕಹಳೆ (ಅಂಬಿಕಾ. ೩೦-೭).

**ಚುಕ್ಕಿಯ ಮಾತು** = (ಆಲಂ) ಕೆಲಸಕ್ಕೆ ಬಾರದ ಮಾತು; ಪೊಳ್ಳು ನುಡಿ: ಮಿಕ್ಕಾ ವಿಷವೈದ್ಯದೊಳಂ ಚುಕ್ಕಿಯ ಮಾತೇವುದಣ್ಣ (ಖಮುದ. ೭-೭೫). **ಚುಕ್ಕೆಯಾಗು** = ಗುರಿಯಾಗು: ಅಕ್ಕಜದ ಮುಖವಿದಱ ಚೂಣಿಗೆ ಚುಕ್ಕೆ[ಪಾಠಾಂ.ಕ್ಕಿ]ಯಾಯಿತು ಮನ ಮಹೀಶನ ಮುಕ್ಕಳಾಟಕೆಯಾಯ್ತೆನುತ ತೂಗಿದನು ಸಿರಿಮುಡಿಯ (ಕುವ್ಯಾಸ. ೨-೧೪).

[ ದೇ. ೫ ತಮಿ. ಚುಕ್ಕೈ; ತೆಲು. ಚುಕ್ಕ; ಕೊಲಾ. ಸುಕ್ಕ; ನಾಯ್ಕಿ. ಪರ್ಜಿ. ಚುಕ್ಕ; ಗೊಂಡಿ. ಸುಕ್ಕುಮ್; ಕುಇ. ಸುಕ ]

**ಚುಕ್ಕೆ**₂, ಚುಕ್ಕಿ₂, ಸುಕ್ಕೆ (ನಾ). ಒಂದು ಬಗೆಯ ಸಸ್ಯ ; ಹುಳಿಯಾದ ಎಲೆಗಳುಳ್ಳ ಸಸ್ಯ ; ''ಕಾಡಹುಳಿ ಚಿಕ್ಕೇಸೊಪ್ಪು'' (ಪ್ರ ಭಣ್ಣ). **ಚುಕ್ಕಿ**₂ **:** ಮಳೆಗಾಲದಲ್ಲಿ ಚುಕ್ಕಿ ಪಲ್ಯ ಹೆಚ್ಚಾಗಿ ಬೆಳೆಯುತ್ತದೆ (ರೂಢಿ). **ಸುಕ್ಕೆ:** ಬಸಲೆ, ಬಾಯಿಬಸಲೆ, ಸುಕ್ಕೆ (ನಮ್ಮನು. ೨೩೮). [<ಸಂ. ಚುಕ್ರ]

**ಚುಕ್ಕೆ**₃ 'ಚುಕ್ಕಿ₃' ನೋ.

**ಚುಕ್ಕೆಗಳೆ** (ಕ್ರಿ). (ಆಲಂ) ಅಲ್ಪನೆಂದು ಹೀಯಾಳಿಸು,-ಹೀಗಳೆ : ಯಾಕೆ ಭಯ ನಿಮಗಿನ್ನು . . . ನೀ ಚುಕ್ಕೆಗಳೆಯದಿರು ಸಾಹಸವ ನೋಡೆಮ್ಮ ಪಗೆಯಿದಿರೊಳು (ತುರಂಗ. ೬೪-೨೫). [ಚುಕ್ಕೆ₁ + ಕಳೆ₁]

**ಚುಕ್ಕೆದುಪ್ಪಿ** (ನಾ). ಒಂದು ಬಗೆಯ ಜಿಂಕೆ ; ಕವಲು ಕವಲಾಗಿರುವ ಕೊಂಬುಗಳೂ ಮೈಮೇಲೆ ಸಣ್ಣಸಣ್ಣ ಚುಕ್ಕೆಗಳೂ ಇರುವ ಜಿಂಕೆ; ಕೃಷ್ಣಸಾರ; ಸಾರಂಗ : "ಪೃಷತಃ – ಚುಕ್ಕೆದುಪ್ಪಿ" (ಸಿದ್ಧಾಂತಿ. ೧೩೭). [ಚುಕ್ಕೆ₁ + ದುಪ್ಪಿ]

**ಚುಕ್ಕೆಸೊಪ್ಪು**, ಚುಕ್ಕಿಸೊಪ್ಪು, ಸುಕ್ಕೆಸೊಪ್ಪು (ನಾ). = ಚುಕ್ಕೆ₂ : ಚುಕ್ಕೇಸೊಪ್ಪು ಹುಳಿಹುಳಿಯಾಗಿರುವುದು (ತರಚಿ. ೧೭). **ಚುಕ್ಕಿಸೊಪ್ಪು :** ಸುಕ್ಕೆಸೊಪ್ಪು, ಚುಕ್ಕಿಸೊಪ್ಪು (ಮೈಜಿಗಿ. ೬೭-೧೩೬೪). **ಸುಕ್ಕೆಸೊಪ್ಪು :** ಮೇಲಿನ 'ಮೈಜಿಗಿ' ಪ್ರಯೋಗವನ್ನು ನೋಡಿ. [ಚುಕ್ಕೆ₂ + ಸೊಪ್ಪು₃]

**ಚುಕ್ತ** 'ಚುಕ್ತಾ' ನೋ.

**ಚುಕ್ತಾ**, ಚುಕತಾ, ಚುಕ್ತ, ಚುಕ್ತಿ (ನಾ). (ಹಣವನ್ನು) ಬಾಕಿಯಿಲ್ಲದಂತೆ ತೀರಿಸುವಿಕೆ,-ಮುಗಿಸುವಿಕೆ; ಬೇಬಾಕಿ : ಎಂಕಪ್ಪನೂ ಅಸಲೂ ಬಡ್ಡೀ ಮುಟ್ಟಿಸಿ ಲೆಕ್ಕಾ ಚುಕ್ತಾ ಮಾಡಿಕೊಂಡ (ತಿರುಗು. ೬೮); ಪೈಗೆ ಪೈ ಕಂದಾಯ ಚುಕ್ತಾ ಮಾಡುತ್ತೇವೆ (ಪ್ರೇಮಾಶ್ರ. ೫). **ಚುಕತಾ:** ಖಾತೇದಾರ ಆಸಾಮಿಯು ಕೂಲಿಯ ಫಾಯದೆಯ ಇಚ್ಛೆಯಿಂದ ಮೊದಲನೇ ಬಾಕಿಯನ್ನು ಚುಕತಾ ಕಳುಹಿಸಿ (ಮುಂಬವ್ಯಾ. ೨೪೭). **ಚುಕ್ತ:** ಇನ್ನು ಎರಡು ದಿನಗಳಲ್ಲಿ ಗೇಣಿ ಚುಕ್ತ ಮಾಡಿ (ಮುಗಿಯ. ೨೪೦); ವ್ಯಾಸ ಬಿಲ್ ಚುಕ್ತ ಮಾಡಿ (ನಿರ್ದೋಷಿ. ೩). **ಚುಕ್ತಿ :** ಅದರ ಚುಕ್ತಿಗೆ ಮಾದಯ್ಯ ಅವನ ಯಾಲಕ್ಕಿಮಲೆಯಲ್ಲಿ ಎರಡು ವರ್ಷ ಆಳುಗಳ ಮೇಲ್ವಿಚಾರಕನಾಗಿ ಬಿಡಾರ ಹೂಡಬೇಕು (ಮಾಸಕೂ. ೧೧). [←ಹಿಂ. ಮರಾ. ಚುಕತಾ]

**ಚುಕ್ತಿ** 'ಚುಕ್ತಾ' ನೋ.

**ಚುಕ್ತಿಪಟ್ಟಿ** (ನಾ). ಸಾಲದ ವಿವರಣೆಯನ್ನು ತೋರಿಸಿ, ಉಳಿದ ಬಾಕಿದಾರರ ಹೆಸರುಗಳನ್ನು ತಿಳಿಸುವ ಪಟ್ಟಿ: ಸೊಸೈಟಿಯ ಈ ಸಲದ ಚುಕ್ತಿಪಟ್ಟಿಯಲ್ಲಿ ಅವನ ಹೆಸರಿರಲಿಲ್ಲ (ರೂಢಿ). [ಚುಕ್ತಿ (<ಚುಕ್ತಾ) + ಪಟ್ಟಿ₂]

**ಚುಕ್ರ** (ನಾ). ೧. ಹುಳಿಯಾದ ಮದ್ಯ. ೨. ಹುಣಿಸೆ. ೩.=ಚುಕ್ಕೆ₂. [ಸಂ.]

**ಚುಕ್ರಿಕೆ** (ನಾ). ಒಂದು ಬಗೆಯ ಸಸ್ಯ; ಪುಲ್ಲಂಪುರಿಚೆ ; ಹುಳಿಚಿಕ್ಕ : "ಜಾಂಗೇರಿ ಚುಕ್ರಿಕಾಹ್ವಂ" (ವಸ್ತುಕೋ. ೩೭-೨೭). [ಸಂ. ಚುಕ್ರಿಕಾ]

**ಚುಚಲ** 'ಚುಂಚಲ' ನೋ.

**ಚುಚಲಿ** 'ಚುಂಚಲ' ನೋ.

**ಚುಚುಂದರ** (ನಾ). ದೇಹ ಚಿಕ್ಕದೂ ಉದ್ದವಾದ ಮೂತಿಯುಂ ಇರುವ ಒಂದು ಬಗೆಯ ಇಲಿ; ಸುಂಡಿಲಿ; ಮೂಗಿಲಿ: "ಸುಂಡಿಲಿ ಚುಚುಂದರಂ [ಪಾಠಾಂ. ಕುದ್ರುಂದರಂ, ಚುಚ್ಚುಂದರಂ, ಬುಂಚುಂಧರಂ]" (ಮಂಗರಾ. ೪೯-೧೨). [<ಸಂ. ಛುಚ್ಚುಂದರ]

**ಚುಚುಂದರಿ** (ನಾ). = ಚುಚುಂದರ : ಚುಚುಂದರಿಯಂ ಪಿಡಿದು ಮದ ಗಜೇಂದ್ರಕ್ಕಿದಿರಂ ಬಂದು ನಿಲೆ ತೊಲಗಿ ಪೋಕುಂ (ಲೋಕೋಪ. ೦೦-೫೦). [ಸಂ. ಚುಚುಂದರೀ]

**ಚುಚುಂದ್ರಿ**, ಚುಚೇಂದ್ರಿ (ನಾ). ೧.=ಚುಚುಂದರ : ಹಾವು ಚುಚುಂದ್ರಿಯನ್ನು ನುಂಗಿದಂತೆ ಆಕೆಯ ಸ್ಥಿತಿಯಾಯಿತು (ತುಳಸಿ. ೧೨೫). **ಚುಚೇಂದ್ರಿ:** ೨. ಒಂದು ಬಗೆಯ ಮದ್ದಿನ ಬಾಣ. ೩. (ಆಲಂ) ತೊಂದರೆ ಕೊಡುವ ಮಾತು : ಪೀಡಿಸಬೇಕೆಂದು ಇನ್ನೊಂದು ಚುಚೇಂದ್ರಿ ಬಿಟ್ಟೆ (ಸುತ್ತುಮು. ೯೩). [<ಸಂ. ಚುಚುಂದರೀ]

**ಚುಚುಲು** 'ಸುಜ್ಜಲು' ನೋ.

**ಚುಚೇಂದ್ರಿ** 'ಚುಚುಂದ್ರಿ' ನೋ.

**ಚುಚ್ಚಳ**(ಗು).ವ್ಯರ್ಥವಾದ; ತುಚ್ಛ:ಆ ಕಮಲದ ನೆಲೆಯ ಕಾಣಲರಿಯದೆ ತೊಳಲಿ ಬಳಲಿ ಜಗದೊಳಗೆ ನಚ್ಚುಮಚ್ಚಿಗೊಳಗಾಗಿ ಚುಚ್ಚಳ ಪೂಜೆಗೆ ಸಿಲ್ಕಿ . . . ಭವಕೆ ಗುರಿಯಾಗುವ ಮನುಜರ ಕಂಡು ನಾಚಿತ್ತೆನ್ನ ಮನವು (ಲಿಂಗವ. ೪೩-೬). 'ಚುಚ್ಚು₄' ಪರಾ. [?]

**ಚುಚ್ಚಿಸು** (ಕ್ರಿ) . ತಿವಿಯುವಂತೆ ಮಾಡು; ಇರಿಯಿಸು; ನಾಟಿಸು : ಕೆಚ್ಚನೆ ಕಾಯ್ದು ಕನಲ್ದು ಕೊಳ್ಳಿಯೊಳ್ ಸೋಲೆ ತಗುಳ್ದು ಚುಚ್ಚಿಸು (ಧರ್ಮಾಮೃ. ೯-೧೮೦) ; ಸಸನೆ ಇರಲಾರದ ಬಡ್ಡಿ ಗೇರು ಚುಚ್ಚಿಸಿಕೊಂಡಳು (ಗಾದೆ). [ಚುಚ್ಚು₁ (<ಚುರ್ಚು₁) + – ಇಸು₃]

**ಚುಚ್ಚು**₁ 'ಚುರ್ಚು₁' ನೋ.

**ಚುಚ್ಚು**₂. 'ಚುರ್ಚು₂' ನೋ.

**ಚುಚ್ಚು**₃ (ನಾ). ೧. ಇರಿತ; ತಿವಿತ. 'ಒಳಚುಚ್ಚು' ಪರಾ. ೨. ಬಾಣ (?): ಅಮರ್ಕೆವೆತ್ತ ಪುಲಿದೋಲ ಪಟ್ಟಿಗೆಯುಮೊಟ್ಟದ ಚುಚ್ಚುಂ ಕಟ್ಟದ ತೊಂಗಲುಂ ಬೆರಸು . . . ಇದಿರ್ಚಿ ನಿಂದ ಬಿಲ್ಲಡೆಯ ಪಡಿಗೆ ಪಡೆನಾಯಕನಾಗಿ (ವರ್ಧಮಾ. ೪-೪೨ ವ). [<ಚುರ್ಚು₁]

**ಚುಚ್ಚು**₄ (ನಾ). ಚಿಕ್ಕದು ; ಸಣ್ಣದು : "ಚುಚ್ಚೆಂದು ಗುಜ್ಜೆಂದು ಕಿಱಿದು" (ಶಬ್ದಮಂ. ೭೩). [<ಪ್ರಾ. ಚುಚ್ಛ./ ಸಂ. ತುಚ್ಛ]

**ಚುಚ್ಚುಕ** (ನಾ). ಚುಚ್ಚಿಕೊಡುವವನು ; ಕಲಹಕ್ಕೆ ಪ್ರೇರಿಸುವವನು ; ಚಾಡಿಕೋರ : ನುಚ್ಚುಗೂಳುಣ ಹೊಲ್ಲ ಚುಚ್ಚುಕರ ನೆರೆ ಹೊಲ್ಲ ಮುಚ್ಚರದಿ ನಡೆವ ಮಗ ಹೊಲ್ಲ (ಸರ್ವಜ್ಞ. ೧೯೦೨). [ಚುಚ್ಚು₁ (<ಚುರ್ಚು₁) + – ಕ₃]

**ಚುಚ್ಚುಕಳಿಲೆ** (ನಾ). ಎಳೆಯ ಬಿದಿರ ಕಳಿಲೆಯಲ್ಲಿ ರಂಧ್ರ ಮಾಡಿ ಮಸಾಲೆ ಮೆಂತ್ಯ ಒಗ್ಗರಣೆಯನ್ನು ತುಂಬಿ ಮಾಡುವ ಒಂದು ಬಗೆಯ ತಿಂಡಿ: ಕಳಿಲೆಯ ಕುಡಿಯನೊತ್ತಿ ಶತಛಿದ್ರವಾಗುವ ತೆಱದಿ ಕದುಕಿಱಿದು . . . ಪೊದ್ದಣಗೆಯಿತ್ತು ನರೆಯಂ ಕೊಟ್ಟು ಪರಿಮಳವ ನಿಕ್ಕಲದು ಚುಚ್ಚುಕ [ಪಾಠಾಂ. ಗ]ಳಿಲೆ (ಸೂಪಶಾ. ೬-೨). [ಚುಚ್ಚು₁ (<ಚುರ್ಚು₁) + ಕಳಿಲೆ (<ಕಱಿಲೆ)]

**ಚುಚ್ಚುಕೂದಲು** (ನಾ). ಚುಚ್ಚುವ ಕೂದಲು ; ಒರಟಾದ ಕೂದಲು: ಪತಂಗ ಚಿಟ್ಟೆಗಳ ಮರಿಗಳ ಮೇಲೆ ಚುಚ್ಚುಕೂದಲುಗಳೂ ಇರುತ್ತವೆ (ಕೀಟಜಿ. ೧೨೬). [ಚುಚ್ಚು₁ (<ಚುರ್ಚು₁) + ಕೂದಲು (<ಕೂಂದಲ್)]

**ಚುಚ್ಚುಗ** (ನಾ). ಮಗುಚುವ ಕೈ ; ಕುರುಪೆ : ರತ್ನ ಕಿತ್ತಲಿ ತೆಗೆದು ಚುಚ್ಚುಗದಿಂದ ಅಲ್ಲಾಡಿಸಿದಳು (ಬೆಂದಜೀ. ೧೨೩) . [ಚುಚ್ಚು₁ (<ಚುರ್ಚು₁) + – ಗ₂]

**ಚುಚ್ಚುಗಲೆ** (ನಾ) . ಇರಿತದ ಗಾಯದಿಂದುಂಟಾದ ಕಲೆ: ಕುತ್ತದೊಳಾದ ಚುಚ್ಚುಗಲೆಯೋ ಎದೆಗಗ್ಗಳ ಕಪ್ಪು ಕಾಡಿ ಮೇಣ್ ಕುತ್ತಿಸಿಕೊಂಡುವೇ (ಸೂಕ್ತಿಸು. ೮-೪೧೯). [ಚುಚ್ಚು₁ (<ಚುರ್ಚು₁) + ಕಲೆ₂]

**ಚುಚ್ಚುಗೊಂಡೆಯ** (ನಾ). ಚುಚ್ಚಿಕೊಡುವ ಚಾಡಿ ; ಮನಸ್ಸಿಗೆ ನೋವುಂಟುಮಾಡುವಂಥ ನಿಂದೆ : ಚುಚ್ಚುಗೊಂಡೆಯದದಟಮುನಿ ಜಡೆವಿಚ್ಚಿ ನರ್ತಿಸೆ ರಾಮ ಕುಬುಬಿಱಿದೆಚ್ಚು ಕಡಿದನು ಶಿರವ ಸರಳಿನಲಾ ಖರಾಸುರನ (ತೊರಾ. ೩-೬-೫೫). [ಚುಚ್ಚು₁ (<ಚುರ್ಚು₁)+ಕೊಂಡೆಯ]

**ಚುಚ್ಚುನುಡಿ** (ನಾ). ಕೇಳುವವರಿಗೆ ನೋವನ್ನುಂಟುಮಾಡುವಂಥ ಮಾತು ; ಕಟಕಿ : ಕೊಟ್ಟ ಹಣವನ್ನು ದಕ್ಕಿಸಿಬಿಡಬೇಡಿರಿ ಎಂದು ಮೊದಲಾದ ಚುಚ್ಚುನುಡಿಗಳನ್ನು . . . ಹೇಳಿದ (ಕುರುಕಾ. ೧೩೪).
[ ಚುಚ್ಚು$_1$ (<ಚುರ್ಚು$_1$) + ನುಡಿ$_2$ ]

**ಚುಚ್ಚುನೋಟ** (ನಾ). ಇರಿಯುವಂತಹ ನೋಟ; ತೀಕ್ಷ್ಣದೃಷ್ಟಿ : ಆನಂದನ ಚುಚ್ಚುನೋಟ ಅವಳ ಹೃದಯದಲ್ಲಿ ಕೋಲಾಹಲವೆಬ್ಬಿಸಿತ್ತು (ಮರಳಿ. ೧೯೬); ಅಡಿಗೆಮನೆಯಲ್ಲೂ ನಾನಾನ ಚುಚ್ಚುನೋಟವಿದ್ದದ್ದೇ (ಸ್ಮೃತಿಚಿ. ೧೭). [ ಚುಚ್ಚು$_1$ (<ಚುರ್ಚು$_1$) + ನೋಟ ]

**ಚುಚ್ಚುಮದ್ದು** (ನಾ). ಶರೀರಕ್ಕೆ ಸೂಜಿಯಿಂದ ಚುಚ್ಚಿ ಪಿಚಕಾರಿಯ ಮೂಲಕ ಕೊಡುವ ಔಷಧ; ಸೂಜಿಮದ್ದು; ಇಂಜೆಕ್ಷನ್: ಈಗ ಎಲ್ಲೆಲ್ಲೂ ಚುಚ್ಚುಮದ್ದಿಗೇ ಪ್ರಾಶಸ್ತ್ಯ (ನವನೀ. ೩೪); ಟಾಮಿಗೆ ಒಂದು ಚುಚ್ಚುಮದ್ದು ಕೊಟ್ಟರು (ಕಪವು. ೩-೩೭).
[ ಚುಚ್ಚು$_1$ (<ಚುರ್ಚು$_1$) + ಮದ್ದು$_1$ (<ಮರ್ದು) ]

**ಚುಚ್ಚುಮಾತು** (ನಾ). = ಚುಚ್ಚುನುಡಿ : ದ್ರೋಣನು ದುರ್ಯೋಧನನ ಚುಚ್ಚುಮಾತಿನಿಂದ ನೊಂದು ಕೆಚ್ಚಿನಿಂದ ಕಾದುತ್ತಿದ್ದನು (ವಚಭಾ. ೨೮೯); ಅವರ ಚುಚ್ಚುಮಾತುಗಳು ಶೂಲದಂತೆ ಇರಿಯುತ್ತಿದ್ದವು (ಕುಂಕುಮ. ೭೬).
[ ಚುಚ್ಚು$_1$(<ಚುರ್ಚು$_1$) + ಮಾತು$_1$ ]

**ಚುಚ್ಚುರೊಟ್ಟಿ** (ನಾ). ಚುಚ್ಚಿ ರಂಧ್ರ ಮಾಡಿ ಬೇಯಿಸಿದ ಒಂದು ಬಗೆಯ ರೊಟ್ಟಿ : ಕುಟ್ಟ ಕಣಿಕದೊಳು ಸರಿಬೆಣ್ಣೆಯಾಜಟಿೊಳೊಂದು ಬಟ್ಟವಾಲನೆಯಿಕ್ಕಿ ಮಿದಿದು ಬಟ್ಟಂ ಮಾಡಿ . . . ಸಲಗೆಯಿಂ ಚುಚ್ಚಿ ತಿಳಿದುಪ್ಪಮಂ ಬಿಟ್ಟು ಸಕ್ಕರೆಯುಮಂ ತಳಿದು ತೆಗೆದೊಡೆ ಚುಚ್ಚು[ಪಾಠಾಂ. ಕರ್ಕು, ಕುಕ್ಕು]ರೊಟ್ಟಿಯೆಂಬೊಳ್ಪೆಸರವಡೆದು (ಸೂಪಶಾ. ೧-೧೦).
[ ಚುಚ್ಚು$_1$ (<ಚುರ್ಚು$_1$) + ರೊಟ್ಟಿ ]

**ಚುಚ್ಚುಳ** (ನಾ). ೧.=ಚುಚ್ಚುನುಡಿ: ಮದನಕೇಳಿಗೆ ನಮ್ಮ ಗುಟುಮಾಡಿ ನಿಶ್ಚೈಸಿ ಸತಿಯರೆಂದಾಳಿ ಚುಚ್ಚುಳ ನುಡಿದು ಎಮ್ಮನು ಒಲ್ಲದಿಹನು (ಹರಿಸಾಂ. ೩೦-೪೯). ೨. ಚುಚ್ಚುಮಾತನಾಡುವವನು : ಚೆಚ್ಚರಿಗಂ ಪರಿವಾರಯಂ ಚುಚ್ಚುಳ [ಪಾಠಾಂ. ತುಚ್ಚುಳ]ನತ್ಯುಗ್ರಕೋಪಿ ಮೂರ್ಖಂ ಕೆಸಟಿೊಳ್ ಕಿಚ್ಚಿಡುವನೆನಿಪ ಖಳನುಂ (ಸಮುಪ. ೬-೧೦೬). [ ? ]

**ಚುಜ್ಜಲು** 'ಸಂಜ್ಜಲು' ನೋ.

**ಚುಜ್ಜಲುಮರ** (ನಾ). ಒಂದು ಬಗೆಯ ಮರ ; ಸಂಜ್ಜಲು : ಚುಜ್ಜಲು ಮರದ ಕೆಳಗೆ ವಾಯುವ್ಯ ಮುಖನೆ ಕ ೧ (ಎಕ. III, ತಿರುಮ. ೬೩-೧೦೩೪; 1748). [ ಚುಜ್ಜಲು (<ಸುಜ್ಜಲು) + ಮರ$_1$ ]

**ಚುಜ್ಜುಲು** 'ಸುಜ್ಜಲು' ನೋ.

**ಚುಟಕ, ಚುಟುಕ$_2$** (ನಾ). ಒಂದು ಬಗೆಯ ಪದ್ಯ ; ಅಣಕದಿಂದ ಕೂಡಿದ (ಸಾಮಾನ್ಯವಾಗಿ ನಾಲ್ಕುಸಾಲುಗಳಿರುವ) ಸಣ್ಣ ಪದ್ಯ : ಪ್ರಾಸಬದ್ಧವಾದ ಚುಟಕಗಳನ್ನು ಬರೆಯುವಷ್ಟು ಶಕ್ತಿ ಅವನಿಗೆ ಜನ್ಮದತ್ತ ವಾಗಿದ್ದು (ಒಳಜೀ. ೩೦); ಅದರ ಕೆಳಗೆ ನಾಲ್ಕುಸಾಲಿನ ಒಂದು ದರಿದ್ರ ಚುಟಕ ಬೇರೆ ಬರೆದಿತ್ತು ! (ಶಾಲಿಮ. ೪೭). **ಚುಟುಕ$_2$ :** ಚಕಮಕಿಗಳು ಚುಟುಕಗಳು ಇವುಗಳ ಕರ್ತೃಗಳೆಮಗಭಿವಂದ್ಯರು (ಇಂಡಾಪ. ೪-೯).
[ ←ಮರಾ. ಚುಟಕಾ ]

**ಚುಟಕಿ** 'ಚಿಟುಂಕು' ನೋ.

**ಚುಟಕು** 'ಚಿಟುಂಕು' ನೋ.

**ಚುಟಕೆ** 'ಚಿಟುಂಕು' ನೋ.

**ಚುಟಿ** 'ಸೂಟಿ$_1$' ನೋ.

**ಚುಟಿಕೆ** 'ಚಿಟುಂಕು' ನೋ.

**ಚುಟಿಕೆಹಾಕು** 'ಚಿಟಿಕೆಹಾಕು' ನೋ.

**ಚುಟಿಗೆ** 'ಚಿಟುಂಕು' ನೋ.

**ಚುಟು** (ನಾ). ಒಂದು ರಾಜವಂಶದ ಹೆಸರು: 'ಹಾರಿತೀಪುತ್ರ ವಿಷ್ಣುಸ್ಕಂದ ಚುಟುಕುಲಾನಂದ ಶಾತಕರ್ಣಿ' ಎಂಬ ಅರಸನು ವೈಜಯಂತಿ(ಬನವಾಸಿ)ಯ ಅರಸನಾಗಿದ್ದು (ಕುಲುನಾ. ೨೪); ಬನವಾಸಿಪ್ರಾಂತದಲ್ಲಿ ಶಾತವಾಹನರ ಶಾಖೆಯೇ ಆದ ಚುಟುಕುಲದವರು . . . ಕ್ರಮೇಣ ಸ್ವತಂತ್ರರಾದರು (ಭಾಇಪ್ರ. ೩೦೪). ಶ್ರೀ ಗೋವಿಂದಪೈಗಳು ಚುಟು ಮತ್ತು ತುಳು ವಿಗೆ ಸಂಬಂಧವಿರಬಹುದೆಂದು ಅನುಮಾನಿಸಿದ್ದಾರೆ. [ ? ]

**ಚುಟುಕ$_1$** 'ಚಿಟುಂಕು' ನೋ.

**ಚುಟುಕ$_2$** 'ಚುಟಕ' ನೋ.

**ಚುಟುಕಿ** 'ಚಿಟುಂಕು' ನೋ.

**ಚುಟುಕು** 'ಚಿಟುಂಕು' ನೋ.

**ಚುಟ್ಟ$_1$** 'ಚುರುಟು' ನೋ.

**ಚುಟ್ಟ$_2$** (ನಾ). ೧. ಚಿಕ್ಕದು; ಸಣ್ಣದು: "ಪುಟ್ಟ, ಚುಟ್ಟ – ಅಲ್ಪೀಭಾವೇ. ಕಿರಿದರೊಳ್" (ಶಾಶಕ್ಕ. ೨೫೭). ೨. ಸಣ್ಣ ಉಂಡೆ,–ಗುಳಿಗೆ: ಅವರು ಸುಣ್ಣ, ಬೆಣ್ಣೆ ಎಲ್ಲಾ ಹಾಕಿ ,ತಿಕ್ಕಿ, ನಶ್ಯದ 'ಚುಟ್ಟ' (ಚುಟಿಗೆ)ಗಳನ್ನು ಸಿದ್ಧಪಡಿಸಿ . . . ಹೋಗುತ್ತಿದ್ದರು (ಮಲಚಿ. ೬೦). [ <ಪ್ರಾ. ಛುಟ್ಟ ]

**ಚುಟ್ಟಾ** 'ಚುರುಟು' ನೋ.

**ಚುಟ್ಟಿ** (ನಾ). ಒಂದು ಬಗೆಯ ಹಣೆಯ ಆಭರಣ ,–ಮುಂದಲೆಯ ಆಭರಣ : (+). [ ದೇ.; ತಮಿ. ಮಲ. ಚುಟ್ಟ ]

**ಚುಡಾಯಿಸು** 'ಚಿಡಾಯಿಸು' ನೋ.

**ಚುಡಿತ$_1$** (ನಾ). ನಿಂದೆಯ ಮಾತು ; ದೂಷಣೆ (?) : ಚಾಡಿ ಚುಡಿತ ಗಳಾಡಿ ಸಲೆ ಪಂಥಗಳನಾಡಿ ಕೆಡುಕ ನೀನಾಗಬೇಡ (ಪುರಂದ. ೫-೨೨-೪).
[ ? ]

**ಚುಡಿತ$_2$** (ಗು). ಹರಿತವಾದ (?) : ಹಿಡಿದು ತರ್ಕಿಸಿಕೊಂಡು ಮುಡುಹಿಲಿ ಚುಡಿತ ನಖರೇಖೆಗಳ ಬರದು ಕಡುಘನದಿ ಕ್ರೀಡಿಪುದು ಬಿಂದುವ ವಜ್ರವನು ಮಾಡಿ (ಕಕ್ಕೋಕ. ೬-೨೦). [ ? ]

**ಚುಡುವ** 'ಚಿವಡಾ' ನೋ.

**ಚುಣಚುಣಿ** 'ಚುನಿಚುನಿ' ನೋ.

**ಚುಣಿ** 'ಚೂಳಿ$_1$' ನೋ.

**ಚುಣುಕು$_1$** 'ಜುಣುಂಗು' ನೋ.

**ಚುಣುಕು$_2$** 'ಚುಳುಕು' ನೋ.

**ಚುಣುಗು** 'ಜುಣುಂಗು' ನೋ.

**ಚುಣ್ಣ** (ನಾ). (ಕರಾ) ಗೆಣಸಿಗೆ ಹುಳು ಬೀಳುವ ಒಂದು ಬಗೆಯ ರೋಗ: ಈ ಬಾರಿ ಗೆಣಸಿನ ಬೆಳೆಗೆ ಚುಣ್ಣ ಹಿಡಿದು ಹಾಳಾಯಿತು (ರೂಢಿ).
[ ? ]

**ಚುತಿ** (ನಾ). ಚ್ಯುತಿ; ನಾಶ. 'ಚುತಿಸು' ಪರಾ. [ <ಸಂ. ಚ್ಯುತಿ ]

**ಚುತಿಸು**(ಕ್ರಿ). ಇಲ್ಲವಾಗು; ನಾಶಹೊಂದು: ವೈರಿಸಿದಳಗ್ರಮಹಿಷಿಯೊಳೀಗ ಚುತಿಸಿತಾ ಸಲ್ಲಾಪ (ಜನಮು. ೬-೨೭). [ ಚುತಿ + – ಇಸು$_2$ ]

**ಚುತ್ತು** (ಕ್ರಿ). ಬಳಲು ; ಆಯಾಸಪಡು (?) : ಹತ್ತಲಾರೆನು ನಾನು ಯತ್ತರದ ಯಾ ಮರವ ತತ್ತರವು ಪುಟ್ಟುವದು ಚುತ್ತಿ ಕೈಕಾಲು (ಹಮಾಚ. ೧೯೨). [ ? ]

**ಚುದ್ರತನ** (ನಾ). ಚಾಡಿ ಹೇಳುವ ಬುದ್ಧಿ ; ದೂರುವ ಗುಣ : ಚು[ಪಾಠಾಂ. ಕ್ಷು]ದ್ರತನ ಕಳವು ಪರದ್ರೋಹದಿಂದ ಬುದ್ಧಿಯಿಂದಲೆ ಗಳಿಸಿ ಸಿಕ್ಕಿದಂಥರ್ಥವನು ಸದ್ಯದಲ್ಲಾರು ಉಂಬುವರ್ (ಪುರಂದ. ೧-೧೫೨-೩).
[ <ಕ್ಷುದ್ರತನ ]

**ಚುನಮುರಿ** 'ಚುರುಮುರಿ' ನೋ.

**ಚುನಮುರಿಉಂಡೆ** (ನಾ). ಪುರಿ ಮತ್ತು ಬೆಲ್ಲದ ಪಾಕದಿಂದ ಮಾಡಿದ ಉಂಡೆ ; ಪುರಿಯುಂಡೆ : ಚುನಮುರಿಉಂಡೆಗಳನ್ನು ಮಾರುವ, ಹೆಂಗಸು ಅವಳು (ಮಂಕ್ಕ.ಮು. ೧೫೧). [ ಚುನಮುರಿ (<ಚುರುಮುರಿ) + ಉಂಡೆ ]

**ಚುನಾಯಿ** (ನಾ). ಆಯ್ಕೆ ; ಆರಿಸುವಿಕೆ. 'ಚುನಾಯಿತಾಣ' ಪರಾ. [ ←ಹಿಂ. ಚುನಾಈ ]

**ಚುನಾಯಿಕೆ** (ನಾ). = ಚುನಾಯಿ : (+). [ ಚುನಾಯಿ + – ಕೆ ]

**ಚುನಾಯಿತ** (ಗು). ಆರಿಸಿದ ; ಆಯ್ಕೆಯಾದ : ನಾಲ್ಕುಬಾರಿ ಕೂಡ ಪ್ರಜಾಪ್ರತಿನಿಧಿಸಭೆಗೆ ಚುನಾಯಿತರಾದವರು (ಆಲಹೂ. ೬೫). [ <ಚುನಾಯಿಸು ]

**ಚುನಾಯಿತಾಣ** (ನಾ). ಚುನಾವಣೆ ನಡೆಯುವ ಸ್ಥಳ; ಚುನಾವಣೆಯ ಕಟ್ಟೆ : ಪುಂಡರೀಕನು ಒಂದು ಚುನಾಯಿತಾಣದಲ್ಲಿ ಅಧಿಕಾರಿಯಾಗಿದ್ದನು (ಕೋದಂಡ. ೫೫). [ ಚುನಾಯಿ + ತಾಣ ]

**ಚುನಾಯಿಸು** (ಕ್ರಿ). ಆಯು; ಆರಿಸು: ಕಾರ್ಯಕಾರಿಮಂಡಲಿಗೆ ನಿನ್ನನ್ನೂ ಒಬ್ಬ ಸದಸ್ಯನನ್ನಾಗಿ ಚುನಾಯಿಸಿರುವರೆಂದು ತಿಳಿಯಿತು (ರಾಯುಕ. ೪೮) : ನೀವು ಬಟ್ಟೆ ಚುನಾಯಿಸುವುದರಲ್ಲೂ ಜಾಣ್ಮೆ ತೋರಿಸ್ತೀರಲ್ಲ (ಬದುಜ. ೧೨೫). [ ಚುನಾಯಿ + – ಇಸು$_3$ ]

**ಚುನಾವಣೆ** (ನಾ). ಜನರ ಅಭಿಮತಗಳ ಮೂಲಕಒಬ್ಬನನ್ನು ತಮ್ಮ ಪ್ರತಿನಿಧಿಯನ್ನಾಗಿ ಆರಿಸುವುದು: ಚುನಾವಣೆಯ ರಂಗು ಮಾಯವಾದ ಕೂಡಲೆ ಪಕ್ಷಗಳ ಸೊಲ್ಲೂ ಕೂಡ ಕೇಳಿಬರುವುದಿಲ್ಲ (ರಾಜಪ. ೧೧); ಚುನಾವಣೆಯ ತಾರೀಖು ಇನ್ನೂ ಒಂದು ವಾರ (ರಾಯುಕ. ೯೦). [ ಚುನಾಯಿಸು + – ಅಣೆ$_4$ ]

**ಚುನಾವಣೆಗೊಳ್ಳು**(ಕ್ರಿ).ಜನರ ಅಭಿಮತಗಳ ಮೂಲಕ ಆಯ್ಕೆಯಾಗು: ತಾನು ನಾಯಕಸ್ಥಾನಕ್ಕೆ ಚುನಾವಣೆಗೊಂಡ ವಿಷಯವನ್ನು . . . ತಿಳಿಸಿದನು (ಪುನರು. ೪೬). [ ಚುನಾವಣೆ + ಕೊಳ್ಳು$_1$ (< ಕೊಳ್$_1$) ]

**ಚುನಿಚುನಿ, ಚುಣಚುಣಿ** (ನಾ). ಜ್ಯೋತಿಷ್ಮತಿಬಳ್ಳಿ ; ಅಗ್ನಿಬಳ್ಳಿ : ಜೀನಸಿನ ಹೆಸರು . . . ಚುನಿಚುನಿಬೀಜ ಚುಮುಚುಮಿ ಕಲಸಕ್ಕರಿ (ಮುಂಬವ್ಯಾ. ೧೫೭). **ಚುಣಚುಣಿ** : ಸೂರ್ತಿ ಚವಾಳಾ ಮಣದ ಮೇಲೆ ಕಿಮ್ಮತ್ತು ಇರತಕ್ಕ ಜೀನಸಗಳು. ೧, ಅಕ್ಕಲ ಖಾರ . . . ೯೦, ಚುಣಚುಣಿ ಬೀಜ ; ೯೧, ಚೋಬಚಿನ್ನಿ (ಮುಂಬವ್ಯಾ. ೧೨೫). [ ←ಹಿಂ. ಚುನ್‌ಚುನೀ ]

**ಚುನ್ನ** (ಗು). ೧. ಹೀನವಾದ; ಅಲ್ಪವಾದ; ಕ್ಷುದ್ರವಾದ: ಮಾರುತಿ ಮುನ್ನ ಶರಧಿಯ ದಾಂಟಿ ಬನವನು ಮುರಿದು ತವಸುತರ ಚುನ್ನವಾಳದ ಲೊರಸಿ ಲಂಕೆಯ ಬನ್ನಬಡಿಸುತಲುರುಹಿ ರಕ್ಕಸಕುನ್ನಿಗಳ ಕೊಲುವಂದು (ಅನಂರಾ. ೬-೭-೬೮). 'ಚುನ್ನಕಥೆ' ಪರಾ. (ನಾ). ೨. ನಿಂದೆ; ತೆಗಳಿಕೆ; ಬಯ್ಗುಳು: "ನಿಂದೆ ಚುನ್ನಂ" (ಚಕುನಿ. ೬೭); ನಿನ್ನ ಬೋಧದೆಸಕಂ ಚುನ್ನಕ್ಕೆ ಪಕ್ಕಾಗದೇ (ಪುಷ್ಪಪು. ೧೪-೬೬); ಚುನ್ನವಾದೊಡಂ, ಜುಗುಪ್ಸೆ ಯಾದೊಡಂ ಇರ್ದುದನಿರ್ದಂತರಸಂಗೆ ಒಳಓಲಗದೊಳಱಿವುವುದೆ ದೂತರ್ಗೆ ನೀತಿ (ಚಿಕವಂ. ೫-೫); ಚುನ್ನದಿಂ ಕೀರ್ತಿಸಲು ರಯ್ಯಮೆ ಹೇಳು (ಲಿಂಗಪು. ೧೭-೨೪) ೩. ಅಣಕ ; ಕೊಂಕುನುಡಿ ; ವ್ಯಂಗ್ಯ ; ಉಪಹಾಸ : "ಸೋಲ್ಲುಂಠಃ, ಸೋತ್ಪ್ರಾಸಃ, ಸೋಪಹಾಸಃ-ಈ ಮೂಱು ಚುನ್ನಂ" (ಹಲಾಯು.೨೪-೦೪೮); ನುಡಿದೊಡೆ ಚುನ್ನಮಂ ನುಡಿದಳೆಂದಪೆ(ರಸರ.೪-೧೭೨). ೪. ತಪ್ಪು ; ದೋಷ : ಸುಮ್ಮನಿರ್ದರೆ ಜ್ಞಾನಕ್ಕೆ ಭಂಗ ಉಭಯವನು ಪ್ರತಿಪಾದಿಸದಿರ್ದರೆ ತನ್ನಯ ಭಕ್ತಿಗೆ ಇದಿರೆಡೆಗೆಡುವುದು ಇದು ಚುನ್ನವಲ್ಲ (ಸರ್ವವ. ೧೨೪-೬೩೭) : ಲಾವಣ್ಯವಿರಲೇನು ಚುನ್ನ ಮಯಣನ ಗುಣಂ ನನಗಿಲ್ಲ ನಿನಗಿಲ್ಲ ಪೋಗು (ಪ್ರಭುಪು. ೮-೯೪). ೫. ಅಲ್ಪವಾದುದು; ಕ್ಷುದ್ರ ವಾದುದು : ನಿನ್ನ ಹಸುಬೆಯು ನೂರು ಛಿನ್ನಭಿನ್ನದ ದ್ವಾರ ನಿನ್ನಂಗಿ ಪಾಗುಗಳು ಚುನ್ನ ಚಿಂದಿಗಳು (ಶರಲೀ. ೧೯೪-೮). ೬. ಆಸೆ ; ಅಪೇಕ್ಷೆ : ಷಡುರುಚಿಯಾನಱಿವನ್ನಕ್ಕ ಬೇಟದ ಚುನ್ನ ಬಿಡದು (ಮದೇವ. ೨೮೭-೬೮); ಎನ್ನಯ ಸುತ್ತಿದ ಮಾಯೆ ನಿನಗೆ ಅನ್ಯವೆ ಅದು ನಿನ್ನಯ ಚುನ್ನ (ಸುಂಕಬಂ. ೫೪) ; ಚುನ್ನದಿ ಕಯ್ಯಲಿ ಘಳಿಗೆಯ ಸೆಳೆದೀಯೆ ತನ್ನಯೆ[ಪಾಠಾಂ. ಯ್ಯ] ಸವಿದುದರ್ಧವನು ಇನ್ನು ಕೊಳ್ಳಬ್ಬಬ್ಬ ನೀನೆಂಬ ಬಾಲನನೆನ್ನ ತೋಳೆಂದು ತಕ್ಕಿಪವೊ (ವರ್ಧಜ. ೩-೨೯). ೭. ಅಲ್ಪನಾದವನು ; ಸಣ್ಣವ್ಯಕ್ತಿ : ಇನ್ನಂ ವಿಷಮುಸಮುಸ್ಯೆಯನೆನ್ನೊಳ್ ಕುಡಲುಚಿತಮಕ್ಕುಮೋ ಎಂದವನಂ ಚುನ್ನ ಮನಾಗಿಸಿ (ದಿವ್ಯಚ. ೯-೫೩).

**ಚುನ್ನಮಾಡು, ಚುನ್ನವಾಡು** = ೧. ಅಪಹಾಸ್ಯಮಾಡು ; ಹೀಯಾಳಿಸು ; ಅಣಕವಾಡು : ನಿನ್ನೊಕ್ಕಲ್ತನಮೇನೆನುತುಂ ಚುನ್ನ ಮಾಡಲ್ಕೆ ಮುನಿದವಂ ಕೈವೊಯ್ದಂ (ಮಹಾನೇ. ೧೦-೯೨); ಗಿರಿಸುತೆ ಚುನ್ನ ವಾಡಿ ನಗುತಿರ್ದಪಳೀಶನ ಮುಗ್ಧವೃತ್ತಿಗೆ (ಜಗವಿ. ೧೭-೯೮) ; ತನ್ನ ತಾ ಕೊಂಡಾಡುತನ್ಯರ ಚುನ್ನವಾಡುವ (ಅಮ್ಮಕ. ೨-೫೫) ; ನನ್ನನ್ನು ಹಂಗಿಸಿ ಬಯ್ದು ಚುನ್ನವಾಡಿ ಜರೆದು ಕೊರಚಾಡಿ . . . ಕೆರಳಿಸುತ್ತಿದ್ದರೆ (ಮುಂತ್ರಶ. ೨೭-೧೪). ೨. ನಿಂದಿಸು ; ಬಯ್ಯು : ಆತನಸಗನೆ ಭಾಳನೇತ್ರನ ತನು ಕಣಾ ನೀ ಚುನ್ನವಾಡದಿರು (ಬಸಪು. ೨೦-೨೩) ; ತನ್ನೊಳಿದ್ದವಗುಣವ ನೋಡದೆ ಚುನ್ನವಾಡುವನು (ಕುವ್ಯಾದ್ರೋ. ೧೯-೨೮); ಮಡಿವಳನೊರ್ವನ ಭದ್ರಮಾಗೆ ದೇವಿಯರೊಳ್ ಕುಂದಿಟ್ಟು ದೇವರಂ ಚುನ್ನವಾಡಿದಂ (ರಾಮಾಶ್ವ. ೩೪-೨೨). ೩. ಚುಚ್ಚುಮಾತನಾಡು ; ಕೊಂಕುನುಡಿ : "ಪರ್ಯನುಯೋಗಃ, ಉಪಾಲಂಭಃ – ಈ ೨ ಚುನ್ನವಾಡಿ ಬೆಸಗೊಳುಹ" (ಹರಾಯು. ೨೫-೧೫೩); "ಉಪಾಲಂಭವೆನೆ ಚುನ್ನವಾಡಿ ಬೆಸಗೊಂಬುದಕೆ ಪೆಸರ್" (ಮಂಗರಾ. ೨೭-೭) ; ಮುನ್ನೆ ತಂಗಿಯಂ ಚುನ್ನವಾಡಿದಕ್ಕನ ವಕ್ರಮೆಗೆ ಬಟಿಕೆ ಮಗಳಂ ನುಡಿದ ಕುಂಟಣಿಯ ಕೊಂಕು ಸಂಗತಿ ವಡೆದುದು (ಅನಂಪು. ೮-೧೫ ವ). **ಚುನ್ನವಾಡಿಸು** = ಹೀಯಾಳಿಸುವಂತೆ ಮಾಡು ; ಹೀಯಾಳಿಕೆಯಂ ಮಾತುಗಳನ್ನು ಆಡಿಸಂ : ತನ್ನೊಳಿಗದ ತೊತ್ತಿರ ಕೈಯಲೆನ್ನನು ಚುನ್ನವಾಡಿಸಿದ ಕನ್ನೆಯನು ಎನ್ನ ತೊತ್ತಿರ ತೊತ್ತ ಮಾಡದೆ ಬಿಡೆಂ (ಅಂಜಚ. ೫-೧೬೩). [<ಸಂ. ಕ್ಷುಣ್ಣ ? ]

**ಚುನ್ನಂಗೆಯ್, ಚುನ್ನಗೈ** (ಕ್ರಿ). ಹೀಯಾಳಿಸು; ಅವಹೇಳನ ಮಾಡು : ಬಱುಜಱುಚಿನ ಸೊಲ್ಲಂ ಸೊಲ್ವುದು ನಿನಗೇಂ ಮೊಗ್ಗೆಯೆನಲು ಚುನ್ನಂ ಗೆಯ್ವುದನುಳಿದು ಹೂಣಿಸಿ (ಉದ್ಭದೇ. ೩-೭೧). **ಚುನ್ನಗೈ:** ಮಿಂಚಿಡೆಯಲ್ಲಿ ಮಿನುಗೆ ಬರ್ಪ ಕಾಮುರ್ಗಿಲಂ ಚುನ್ನಗೈವ [ಪಾಠಾಂ. ಚುನ್ನಗೆಯ್ವೊಲ್] ಪೊಂಬಳ್ಳಿಯ ಸಂಚವ ನಗುವ ಪೆಂಡಿರುಗೂಡಿ (ಸೂಬಸೂ. ೧೦-೨೯). [ ಚುನ್ನ + ಕೆಯ್$_1$ ]

**ಚುನ್ನಕ** (ನಾ). ನಿಂದಿಸುವವನು; ತೆಗಳುವವನು: ನಿನ್ನ ಸಂಪದ ನೋಡ ಲಾಱದೆ ಚಿನ್ನಭಿನ್ನವ ಮಾಡಿ ಕೆಡಿಸುವ ಚುನ್ನಕರ ನುಡಿವಿಡಿಯದಿರ ಪ್ರಸನ್ನ ನಿಧಿಯೆ (ಆದಿಪು. ೧೦-೫). [ ಚುನ್ನ + – ಕ$_3$ ]

**ಚುನ್ನಕಥೆ** (ನಾ). ಹೀನವಾದ ಕತೆ ; ಕ್ಷುದ್ರವಾದ ಕಥೆ : ಕನ್ನೆಯರ ಕೀರ್ತಿಸಿದ ಚುನ್ನಕಥೆವೇಳೆ ಸತ್ಫಲವುಪ್ಪುದೇ (ಪ್ರಭುಪು. ೨-೭). [ ಚುನ್ನ + ಕಥೆ ]

**ಚುನ್ನಗಾರ್ತಿ** (ನಾ). ನಿಂದಿಸುವವಳು ; ತೆಗಳುವವಳು : ಈ ಚುನ್ನ ಗಾರ್ತಿಯಂ ಬನ್ನಂಬಡಿಸುವೆನೆಂದೆಣಿಸಿ ಕೆಂಕರಿಸುತ್ತ (ಚಿಕವಿ. ೬-೨೭೫ ವ). [ ಚುನ್ನ + – ಕಾಱ + – ತಿ$_1$ (< – ಇತ್ತಿ) ]

**ಚುನ್ನಗೈ** 'ಚುನ್ನಂಗೆಯ್' ನೋ.

**ಚುನ್ನನುಡಿ** (ನಾ).ಅಣಕ; ಚುಚ್ಚುಮಾತು; ಉಪಹಾಸ: "ಸೋಲ್ಲುಂಠಮಾ ಸೋಪಹಾಸಂ ಚುನ್ನನುಡಿಯಕ್ಕು" (ಮಂಗರಾ. ೨೬-೫). [ ಚುನ್ನ + ನುಡಿ$_2$ ]

**ಚುನ್ನಾಟ** (ನಾ). ಅಣಕ ; ಅಪಹಾಸ್ಯ: ಕೃಷ್ಣ ನಿನಗೆ ಚುನ್ನಾಟ ಬೇಡೆಂದ ನಾರದನು (ವೋಹತ. ೧೩-೬೦) ; ಚುನ್ನಾಟವಾಡಿ ಪುಣ್ಯಪಾಪವ ಹಿಂದು ಮಾಡಿ (ವ್ಯಲಾರ. ೧೯೬-೭). [ ಚುನ್ನ + ಆಟ ]

**ಚುಬುಕ್** (ನಾ). ಒಂದು ಅನುಕರಣ ಶಬ್ದ : ಆ ವ್ಯಾಖ್ಯಾನವಮನಂತಾ ನವ್ಯಂ ಚುಬುಕೆಂದವಜ್ಞೆಯಿಂ ದಕ್ಷಿಣಹಸ್ತ ವ್ಯಾಪಾರದೆ ತೋಱಿದಂ . . . ವಟುಕಂ (ವರ್ಧಪು. ೧೬-೯).

**ಚುಬುಕ** (ನಾ). ಬಾಯಿಯ ಕೆಳಗಿರುವ ಮುಖಭಾಗ ; ಗದ್ದ ; ಗಲ್ಲ : ಚುಬುಕಂ ಹೃದಯಂ . . . ಪುರ್ಬುಗಳೆಂಬೆಡೆಯಂ ಮಹಾಹಿ ಕೊಂಡೊಡೆ ಗರುಡಂಗಮೆತ್ತಲರಿದು (ಲೋಕೋಪ. ೦೦-೪) ; ಒಬ್ಬಳು ಮೂಗನ್ನು, ಒಬ್ಬಳು ಚುಬುಕವನ್ನು ವರ್ಣಿಸಿದಳು (ಚಿಕರಾ. ೩೨೯). 'ಚಿಬುಕ' ಪರಾ. [ ಸಂ. ]

**ಚುಬುಕಾಗ್ರ** (ನಾ). ಗದ್ದದ ತುದಿ: ಆ ನೃಪಂ ಕರಸರೋರುಹದಿಂ ಚುಬುಕಾಗ್ರ ಭಾಗಮಂ ಪಿಡಿದು (ಕಾದಂಪೂ. ೪೯೪) ; ಚುಬುಕಾಗ್ರಮಂ ನಲವೊಡರಿಸೆ ಮುದ್ದಾಡಿಸುತ್ತುಮಿರ್ದರ್ ಸುತನಂ (ಚಂದ್ರಪು. ೬-೯೭) ; ಕೋಮಲಿತ ಚುಬುಕಾಗ್ರ ಲಲಿತಾರುಣಾಧರದ . . . ಸಿರಿಮೊಗವನೆಂತು ನೋಡದೆ ಮಾಣ್ಬೆನು (ಜೈಮಿಭಾ. ೧೯-೨೦). [ ಚುಬುಕ + ಅಗ್ರ$_1$ ]

**ಚುಬುಕಿರಿ** 'ಚುಬುಕಿಱು' ನೋ.

**ಚುಬುಕಿಱು**, ಚುಬುಕಿರಿ (ಕ್ರಿ). ೧. ಗಲ್ಲವನ್ನು ಸವರಿಕೊಳ್ಳು. ೨. (ಆಲಂ) ಅಲಕ್ಷ್ಯವಾಗಿ ಕಾಣು ; ಉದಾಸೀನತೆಯನ್ನು ತೋರು : ಆವ್ ಕೈಕೊಂಡ ಗಮನಕಿದಲ್ಪವೆನುತರಿಗಂಡಭೈರವ ಚುಬುಕಿಱಿದು ಚಪ್ಪರಿಸಿದನು ಭುಜವ (ತೊರರಾ. ೪-೧೨-೫೯) ; ಒತ್ತಿ ಹೊಳಕುವ ಹಾಸ್ಯಗರ್ವದ ಹೆತ್ತುಗೆಯ ಹವಣಿಸದ ಹಮ್ಮಿನ ಚಿತ್ತದಿನಸುತ ಚುಬುಕಿಱಿವುತಂಗೈಸಿದನು ರಣಕೆ (ತೊರರಾ. ೬-೧೯-೨೪); ಕೇಳಿ ಚುಬುಕಿಱಿದಾಗಳಿಂದ್ರನು ಬೀಳುಗೆಡಹುವೆನಸುರನೆನುತ ಕಟ್ಟಾಳುತನವನು ತೋಱುವನು(ಉತ್ತರಾ. ೩೮-೪೫). **ಚುಬುಕಿರಿ: ೨.** ರಾಕ್ಷಸಮಂಡಲೇಂದ್ರನ ಪುರವ ದಿಟ್ಟಿಸಿ ನಗುತ ಚುಬುಕಿರಿದ (ಅನಂರಾ. ೪-೩-೨೪).

[ ಚುಬುಕ + ಇಱು$_1$ ]

**ಚುಬುಕು$_1$** 'ಚಿಬುಕು' ನೋ.

**ಚುಬುಕು$_2$** 'ಚಬುಕು' ನೋ.

**ಚುಮ್** (ನಾ). ಒಂದು ಅನುಕರಣ ಶಬ್ದ. 'ಚುಮ್ಮನೆ', 'ಚುಮ್ಮೆನ್' ಪರಾ.

**ಚುಮಚುಮ** (ನಾ). ಗಾಯ ಅಥವಾ ಹುಣ್ಣಿನಿಂದ ಉಂಟಾಗುವ ಉರಿ: ಕಾಲಿಗೆ ಮುಳ್ಳು ಚುಚ್ಚಿದ್ದರಿಂದ ಇನ್ನೂ ಚುಮಚುಮ ಅನ್ನುತ್ತಿದೆ (ರೂಢಿ). [ ? ]

**ಚುಮುಕಿಸು** 'ಚಿಮುಕಿಸು' ನೋ.

**ಚುಮುಚುಮು** (ನಾ). (ನಸುಬೆಳಕನ್ನು ಸೂಚಿಸುವ)ಒಂದು ಅನುಕರಣ ಶಬ್ದ: ಕುಲುಕುಲು ನಗುವ ಚುಮುಚುಮು ನಸುಕಿನೊಲು ನಗೆಮುಗುಳ ನರಳಿಸಿದಳಾ ಧನ್ಯೆ (ಜೀವಲ. ೯-೩) ; ಚುಮುಚುಮು ನಸುಕಿನಿಂದ ಒಂದು ಪ್ರಹರ ಕಳೆಯುವವರೆಗೆ ಏನಾದರೊಂದು ಮನೆಯ ಹೊರಗಿನ ಕಾರ್ಯಕ್ರಮವನ್ನು ಏರ್ಪಡಿಸುವುದು ಅಗತ್ಯ (ಗಾಳಿಪ. ೧೭೦) ; ಚುಮುಚುಮು ನಸುಕಿನಲ್ಲೆದ್ದು ಪಸೂನಿಯಲ್ಲಿ ಸ್ನಾನವಾಡಿ ಸ್ವಾಮಿದರ್ಶನಕ್ಕೆ ಹೊರಟಳು (ಪ್ರೇಮಾಶ್ರ. ೨೩೦).

**ಚುಮುಚುಮುಗುಟ್ಟು** (ಕ್ರಿ). = ಚುರುಗುಟ್ಟು ೧ : ಕಾಲಿನಲ್ಲಿ ಮುರಿದ ಮುಳ್ಳು ಚುಮುಚುಮುಗುಟ್ಟುತ್ತಿದೆ (ರೂಢಿ).

[ ಚುಮುಚುಮು + ಕುಟ್ಟು$_1$ ]

**ಚುಮ್ಮು** (ಗು). ದುಃಖಿತ. 'ಚುಮ್ಮಿಸು' ಪರಾ. [ <ಸಂ. ಚುಮ್ರ ]

**ಚುಮ್ಮನೆ** (ಅ). ಚುಂ ಎಂಬ ಸದ್ದಿನೊಂದಿಗೆ : ಒಡೆವ ಸಮಯದೊಳು ಹಾಲೊಳಗೆ ಸುಣ್ಣದ ತಿಳಿಯ ಬಿಡಲು ಚು[ಪಾಠಾಂ. ಜು]ಮ್ಮನೆ ತಿಳಿವುದದು (ಸೂಪಶಾ. ೨-೫). [ ಚುಮ್ + – ಅನೆ$_1$ ]

**ಚುಮ್ಮಿಸು** (ಕ್ರಿ). ನೋಯಿಸು; ಪೀಡಿಸು: ಅಮ್ಮ ಕೇಳಿ ವಿಪ್ರ ದುಮ್ಮಾನದೊಳಗೆನ್ನ ಚುಮ್ಮಿಸಿದ ವೇತ್ರದೊಳು (ಹಮಚ. ೧೩೫).

[ ಚುಮ್ಮ + – ಇಸು$_3$ ]

**ಚುಮ್ಮುಚುಮ್ಮು** (ನಾ). ಒಂದು ಅನುಕರಣ ಶಬ್ದ : ತರಣಿ ಕಿರಣ ಚುಮ್ಮುಚುಮ್ಮನೆ ಬಿಸುಪನು ಧರಿಸಿತಿರುಳ ಕುಮುದಿನಿಯು (ಚಂಪ್ರಸಾಂ. ೦೫-೧೨) ; ಹೊಸ ಹೊನ್ನ ಮಳೆ ಚುಮ್ಮುಚುಮ್ಮನೆ [ಪಾಠಾಂ. ಜುಮ್ಮು ಜುಮ್ಮನೆ] ಕಱಿದು ರಂಜಿಸುತದೆ ರಾಶಿರಾಶಿಯೊಳು (ಭರಚ. ೩-೦೦೯).

**ಚುಮ್ಮುಟು** (ನಾ). ಅಲಕ್ಷ್ಯ ; ತಿರಸ್ಕಾರ : " ಅನಾದರೇ – ಚುಮ್ಮುಟಿನೊಳ್" (ಶಾಶಕ್ಕ. ೩೮). [ ? ]

**ಚುಮ್ಮೆನ್** (ಕ್ರಿ). (ರಭಸದಿಂದ) ಶಬ್ದಮಾಡು ; ಸುಯ್ ಎನ್ನು : ಚಂಚನ್ಮೌರ್ವಿ ಚುಮ್ಮೆಂದುಗುೞ್ದಪುವೊ ಶರಶ್ರೇಣಿಯಂ ಮಾಣದೆಂಬಂತೆ (ಅರ್ಧನೇ. ೬-೪೧). [ ಚುಮ್ + ಎನ್$_1$ ]

**ಚುಯ್**(ನಾ). ಒಂದು ಅನುಕರಣ ಶಬ್ದ ; ಕಾದ ಪಾತ್ರೆ ಮೊದಲಾದುವುಗಳ ಮೇಲೆ ನೀರನ್ನು ಚಿಮುಕಿಸಿದಾಗ ಉಂಟಾಗುವ ಸದ್ದು : ಕೊಳನಂ ಪುಗಿಸೆ ಮೆಯ್ಯ ಬೆಂಕಿಯಿಂ ಚುಯ್ಯೆಂದು ನೊರೆಗಟ್ಟಿ ಬಿಸಿಯ ತೆರೆ ತಾಮುರ್ಬಟ್ಟಿ (ಗಿರಿಕ. ೪-೦೦೯ ವ) ; ಪೂ ತಳಿರ್ ಬಾಡಿ ಕರಂಗಿ ಚುಯ್ಯೆನುತುಮಿರ್ದುವು (ಕಬ್ಬಿಗಕಾ. ೩೦೪) ; ಪೊಡಕರಿಸಿದುಗ್ರಶರದುರಿಯ ಬಂಬಲ್ಗಳಿಂ ಕಡಲೇಳಱುದಕ ಚುಯ್ಯೆಂದಿಂಗುತಂ ಕೂಡೆ ಹುಡಿಯಾದವು(ಮೀಶೈಪು. ೩-೧೨-೧೨); ಕೊಳದಂಬು ಬತ್ತೆ ಚು[ಪಾಠಾಂ. ಸೀ]ಯ್ಯೆಂದೊಳಗಣ ನಳಿನಾಳಿ ಕರಿಕುವರಿಗುಂ (ರಾಜಶೇ. ೫-೩೮).

**ಚುಯಿಚ್ಚುಯಿ** ( ದ್ವಿರುಕ್ತಿ ) : ವೀಜನದೆಲರಿಂದ ಪನಿನೀರ್ಗಳಿಂದೆ ಚುಯಿಚ್ಚು[ಪಾಠಾಂ. ಚ್ಚು ಇಚ್ಚು]ಯೆಂದಿಂಗಿಂವವೂ (ಧೈರವೇ. ೨-೦೧೪).

**ಚುಯ್ಯನೆ** (ಅ). ಚುಯ್ಯೆಂಬ ಸದ್ದಿನಿಂದ ಕೂಡಿ: ಜನಿತ ನಿದಾಘದುಗ್ರತರ ತಾಪದಳುರ್ಕೆಯೊಳೆಯ್ದೆ ಕಾಯ್ದು ಚುಯ್ಯನೆ ಕುದಿಗೊಂಡ ನೀರ ಬಿಸುಪಿಂಗೆನಸುಂ ಮಱುಗುತ್ತೆ (ಶಾಂತೀಶ್ವ. ೧೨-೨೮).

[ ಚುಯ್ + – ಅನೆ$_1$ ]

**ಚುರುಕ್** (ನಾ). ಬಿಸಿ, ನೋವು ಮುಂತಾದುವುಗಳಿಂದ ಉಂಟಾಗುವ ಚುರುಕನ್ನು ಸೂಚಿಸುವ ಅನುಕರಣ ಶಬ್ದ : ನನ್ನ ಮನಸ್ಸು ಒಳಗೊಳಗೇ ಚುರುಕ್ ಎಂದಿತು (ಬರಬಾ. ೧೪೮) ; ಅವನ ಮನಸ್ಸಿಗೆ ಕಿರಿಕಿರಿಯಾದದ್ದು ನೋಡಿ ಸುಬ್ಬಕೃಷ್ಣನಿಗೆ ಚುರುಕ್ ಎಂದಿತು (ರಾಗಿಚಿ. ೧೧೩).

**ಚುರುಚುರನೆ** (ಅ). ಸಶಬ್ದವಾಗಿ: ಚುರುಚುರನುರಿವ ಹೆಜ್ಜೊಡರು ಚೀರ್ಚಟಲೆಂಬ ತಱಿಗೆಂಡಗಳ ಹೋಮಕುಂಡ (ಭರಚ. ೨೦-೦೨೯).

[ <ಚುರುಚುರು + – ಅನೆ$_1$ ]

**ಚುರುಮುರಿ** 'ಚುರುಮುರಿ' ನೋ.

**ಚುರುಮುರಿ** 'ಚುರುಮುರಿ' ನೋ.

**ಚುರಿ$_1$** 'ಚೂರಿ' ನೋ.

**ಚುರಿ$_2$** (ನಾ). ಸಣ್ಣ ಬಾವಿ ; ಬಗರಗೆ : "ಚುರೀ, ಚುಂಡೀ, ಚೂಚುಕಃ– ಈ ೩ ಬಗರಗೆ" (ಹಲಾಯು. ೦೦೩-೬೨) : "ಚುರಿ ಚುಂಡಿ ಮಾನಂಗಿ" (ಮಂಗರಾ. ೦೨೫-೦೯). [ ಸಂ. ಚುರಿ, ಚುರೀ ]

**ಚುರಿತಕ** (ನಾ). ಮೊನಚಾದ ಉಗುರಿನಿಂದಾದ ಗಾಯ ; ನಖಕ್ಷತ : ನಖಕ್ಷತದ ಠಾವುಗಳ ಪೇಳುವೆ ಸುಕುಮಾರ ಕೇಳು ಮೈಯಲಿ ನಖವ ಮೆಲ್ಲನೆ ಪೊತ್ತೆ ಚುರಿತಕನೆಂಬರದನೆಲ್ಲಾ (ಶಕ್ಕೋಕ. ೦೦-೦೯).

[ <ಸಂ. ಆಚ್ಛುರಿತಕ ]

**ಚುರಿಮುರಿ** 'ಚುರುಮುರಿ' ನೋ.

**ಚುರುಕ** (ನಾ). ಚುರುಕುಳ್ಳವನು; ಜಾಣ; ಕುಶಾಗ್ರಮತಿ: ಶಾನಭಾಗರು ಆಟದಲ್ಲಿ ತುಂಬ ಚುರುಕರು (ಮೂರುದಾ. ೮); ತಮ್ಮ ಕೆಲಸದಲ್ಲಿ ಇವರು ಇಷ್ಟು ಚುರುಕರಿರಬಹುದು ಎಂದು ಅನಿಸಿರಲೇ ಇಲ್ಲ (ಅಬೋಲೀ. ೧೦೩). [ ಚುರುಕು (<ಚುಱುಕು) + – ಅ$_7$ ]

**ಚುರುಕು** 'ಚುಱುಕು' ನೋ.

**ಚುರುಕುಗೊಳಿಸು** (ಕ್ರಿ). ತೀಕ್ಷ್ಣಗೊಳಿಸು; ಜಾಗ್ರತಗೊಳಿಸು; ತೀವ್ರಗೊಳಿಸು: ಬರಲಿರುವ ಅನುಭವವನ್ನು ಸಮಗ್ರವಾಗಿ ಸ್ವೀಕರಿಸಲು ಇಂದ್ರಿಯಗಳನ್ನೆಲ್ಲಾ ಚುರುಕುಗೊಳಿಸಿ ಕುಳಿತಿದ್ದರು (ಬಿತಂಬಾ. ೨); ನಡೆಯನ್ನು ಮತ್ತಷ್ಟು ಚುರುಕುಗೊಳಿಸಿ, ಆ ಬಾಲಕನನ್ನು ಸಮೀಪಿಸಿ (ಬಿತಂಬಾ. ೨೬). [ ಚುರುಕು (<ಚುಱುಕು) + ಕೊಳ್$_1$ + – ಇಸು$_3$ ]

**ಚುರುಕುತನ** (ನಾ). ಚಾಣಾಕ್ಷತೆ; ಬುದ್ಧಿವಂತಿಕೆ; ಚಾಲಾಕಂ: ಅವಳಿಗೆ ಬಹಳ ಚುರುಕುತನವಿದೆ (ರೂಢಿ). [ ಚುರುಕು (<ಚುಱುಕು) + – ತನ ]

**ಚುರುಕುದೃಷ್ಟಿ** (ನಾ). ತೀಕ್ಷ್ಣವಾದ ನೋಟ; ಸೂಕ್ಷ್ಮವಾದ ದೃಷ್ಟಿ: ಇತರ ಪ್ರಾಣಿಗಳು ನಮಗಿಂತ ಚುರುಕುದೃಷ್ಟಿಯನ್ನು ಹೊಂದಿವೆ (ಮನೋನಂ. ೦೮೩). [ ಚುರುಕು (<ಚುಱುಕು) + ದೃಷ್ಟಿ ]

**ಚುರುಕುಬುದ್ಧಿ** (ನಾ). ಕುಶಾಗ್ರಬುದ್ಧಿ; ಸೂಕ್ಷ್ಮಬುದ್ಧಿ: ಅವನು ಚುರುಕುಬುದ್ಧಿಯವನು (ರೂಢಿ). [ ಚುರುಕು(<ಚುಱುಕು) + ಬುದ್ಧಿ ]

**ಚುರುಕಿ** (ನಾ). ಒಂದು ಬಗೆಯ ಔಷಧಿ ಸಸ್ಯ: ಬೆಳ್ಳುಳ್ಳಿ ಚುರುಕಿಯ ಸೊಪ್ಪು ಇವಂ ಸಮಭಾಗ ಮಾಡಿ ಅರೆದು (ಅಶ್ವಟೀ. ೮೧-೧೧). [ ? ]

**ಚುರುಕೆನ್** (ಕ್ರಿ). ೧. ಬಿಸಿಯಾಗು; ಕಾವೇರು. ೨. ಸಂಕಟವಾಗು: ತಳಮಳವಾಗು: ಈ ವಿಧದ ಕಷ್ಟಮಂ ಏಕೆ ನೀ ಕೊಟ್ಟೆ ನೋಡುವರೆ ಮನವೆಂತು ನಿಮಗೆ ಚುರುಕೆನದೆ (ಶರಲೀ. ೦೭೦-೦೩); ತನ್ನಯ ಮಡಲು ಚುರುಕೆನದೆ (ಶರಿಕ. ೯೬-೯). [ ಚುರುಕು (<ಚುಱುಕು) + ಎನ್$_1$ ]

**ಚುರುಗುಟ್ಟು** (ಕ್ರಿ). ೧. ನೋಯು; ಸಂಕಟವಾಗು: ಒಂದೊಂದು ಸಂಗತಿಯನ್ನೂ ಕೇಳುತ್ತ ಹೋದಂತೆ, ನನ್ನ ಹೃದಯವು ಚುರುಗುಟ್ಟುತ್ತ ನಡೆಯಿತು (ಜನಜೀ. ೩೩); ಆ ಮಾತಿಗೆ ಶೆಟ್ಟರ ಹೃದಯ ಒಮ್ಮೆ ಚುರುಗುಟ್ಟಿದಂತಾಗಿತ್ತು (ಹೊಸಕ್ಕ. ೩೪). ೨. ಹಸಿವೆಯಾಗು: ಬಸ್ಸಿನ ಪ್ರಯಾಣದಿಂದ ಅರ್ಧ ಹೊಟ್ಟೆ ಚುರುಗುಟ್ಟುತ್ತಿತ್ತು (ಬದುಬೈ. ೨೦); ಹೊಟ್ಟೆ ಚುರುಗುಟ್ಟಿದಾಗಲೊಮ್ಮೆ ಆ ಸಮಸ್ಯೆ . . . ಹೆಡೆಯಾಡುತ್ತಿತ್ತು (ಹಾಡುಹು. ೨೨). [ <ಚುಱುಕು + ಕುಟ್ಟು$_1$ ]

**ಚುರುಗುಡು** (ಕ್ರಿ). ಬಿಸಿ ತಾಗು; ಸುಡು: ಭಾದ್ರಪದ ಮಾಸ. ಮೈ ಚುರುಗುಡುವಂತಹ ಬಿಸಿಲು (ಜಮೀನ್ದಾ. ೧). [ <ಚುಱುಕು + ಕುಡು$_1$(<ಕೊಡು$_1$) ]

**ಚುರುಚುರಕೆಗಿಡ** (ನಾ). ಒಂದು ಬಗೆಯ ಔಷಧಿ ಸಸ್ಯ: (ವೃಜಿ. ೭೬-೧೫೬೪). [ ಚುರುಚುರಕೆ$_0$ + ಗಿಡ(<ಗಿಡು) ]

**ಚುರುಚುರು** (ನಾ). ೧. ಕುದಿಯುವ ಇಲ್ಲವೆ ಉರಿಯುವ ಸದ್ದು. ೨. ಸುಡುವ ವಸ್ತುವನ್ನು ಮುಟ್ಟಿದಾಗ ಉಂಟಾಗುವ ನೋವನ್ನು ಸೂಚಿಸುವ ಅನುಕರಣ ಶಬ್ದ: ಬೆಳಗಿನ ಎಂಟುಗಂಟೆ ಬಿಸಿಲು ಇನ್ನೂ ಚುರುಚುರು ಅನ್ನುವುದಿಲ್ಲವಲ್ಲಾ ಎಂದು ವಟಗುಟ್ಟುತ್ತಿದ್ದರು (ಹುಟ್ಟುಹ. ೧೬೬); ಬೆಂಕಿ ತಗುಲಿ ಕೈ ಇನ್ನೂ ಚುರುಚುರು ಎನ್ನುತ್ತಿದೆ (ರೂಢಿ).

**ಚುರುಚುರುಗುಟ್ಟು** (ಕ್ರಿ). ೧. ಬಿಸಿ ಮುಟ್ಟಿ ಬಾಧೆಯಾಗು; ಉರಿ ತಾಗಿ ನೋವಾಗು: ಬೆಂಕಿಗೆ ಕೈ ತಗುಲಿ ಚುರುಚುರುಗುಟ್ಟುತ್ತಿದೆ (ರೂಢಿ). ೨. ತೀವ್ರವಾದ ವೇದನೆಗೊಳಗಾಗು: (+). [ ಚುರುಚುರು+ಕುಟ್ಟು$_1$ ]

**ಚುರುಚುರೆನ್ನು** (ಕ್ರಿ). = ಚುರುಚುರುಗುಟ್ಟು ೨: (+). [ ಚುರುಚುರು + ಎನ್ನು(<ಎನ್$_1$) ]

**ಚುರುಟು**, ಚಿರೂಟು, ಚುಟ್ಟ$_1$, ಚುಟ್ಟಾ, ಚುರೂಟು (ನಾ). ಒಂದು ಬಗೆಯ ಹೊಗೆಬತ್ತಿ; ಹೊಗೆಸೊಪ್ಪನ್ನು ಎಲೆಯಲ್ಲಿ ಸುತ್ತಿ ಮಾಡಿದ ಬೀಡಿ: ಚುರುಟು ಬಾಯಿಗಿಟ್ಟು ಬೆಂಕಿಪೆಟ್ಟಿಗೆ ಹುಡುಕುವನು . . . ಕಡ್ಡಿ ಹಚ್ಚಿ ಚುರುಟು ಹೊತ್ತಿಸುವನು (ಜೀವಮು. ೯೩). **ಚಿರೂಟು:** ಚಾಳೀಸು ಹಾಕಿ ಚಿರೂಟು ಸೇದುವ ಅಕಬರಬಾದಶಹನೂ, ತ್ರಿಪುಂಡ್ರಕಧಾರಿಯಾದ ಔರಂಗಜೇಬನೂ ಇತಿಹಾಸಕ್ಕೊಂದು ಹೊಸಮುಖವನ್ನು ತಂದುಕೊಟ್ಟರು (ಗಾಳಿಪ. ೭೦); ಎಡ ಬದಿಯಿಂದ ಚಿರೂಟಿನ ವಾಸನೆಯ ಜೊತೆಗೆ ಒಂದು ಗಂಡಸು-ಧ್ವನಿ ಅವಳನ್ನು ಇಂಗ್ಲಿಷಿನಲ್ಲಿ ಕೇಳಿತು (ಕ್ಷಿತಿಜ. ೪). **ಚುಟ್ಟ$_1$:** ಅವನು ಚುಟ್ಟ ಸೇದುತ್ತಿದ್ದಾನೆ (ರೂಢಿ). **ಚುಟ್ಟಾ:** ಕೆಲವರು . . . ಚುಟ್ಟಾ ಸಿಗರೇಟುಗಳನ್ನು ಸೇದುತ್ತಾ ಊರಿನ ಸಮಾಚಾರಗಳನ್ನು ಚರ್ಚಿಸುತ್ತಲಿದ್ದರು (ನಿಷ್ಕಾಮ. ೧೧); 'ಚುಟ್ಟಾ' ಸೇದುವುದನ್ನು ಒಮ್ಮೆ ನಿಶ್ಚಯಿಸಿ ಬಿಟ್ಟಿದ್ದಾನೆ (ಚಂದುಟ. ೫೪). **ಚುರೂಟು:** ಬಹಳ ಆದರದಿಂದ ಸರ್ವೋತ್ಕೃಷ್ಟವಾದ ಚುರೂಟುಗಳನ್ನು ಮುಂದಿಟ್ಟನು (ಕಳ್ಳಕಾ. ೫೪). 'ಸುರುಂಟು' ಪರಾ.

[ <ಸುರುಂಟು./ತಮಿ. ಮಲ. ಚುರುಟ್ಟು./ಇಂ. Cheroot ]

**ಚುರುಮರಿ** 'ಚುರುಮುರಿ' ನೋ.

**ಚುರುಮುರಿ**, ಚುನಮರಿ, ಚುರಮರಿ, ಚುರಮುರಿ, ಚುರಿಮುರಿ, ಚುರುಮರಿ (ನಾ). (ಉಕ) ನೆನಸಿದ ಬತ್ತವನ್ನು ಹುರಿದು ಮಾಡುವ ಅರಳು; ಮಂಡಕ್ಕಿ; ಪುರಿ: ವೇಣು ಅಲ್ಲಿ ಹೊತ್ತು ಮಾರುತ್ತಿದ್ದವನಿಂದ 'ಅಲ್ಲೀಪಾಕ-ಚುರುಮುರಿ' ಕೊಂಡುಕೊಂಡಿದ್ದಳು (ನಿರೀಕ್ಷೆ. ೯೬); ಅವರ ಮೇಲೆ ಚುರುಮುರಿ ಬತ್ತಾಸು ತೂರಿದರು (ಕಪವು. ೬-೧೯). **ಚುನಮರಿ:** ಫಳಿ ಮೇಲೆ ಡಬ್ಬಿಯೊಳಗೆ ಉಂಡಿ, ಚುನಮರಿ . . . ಅದಾವ ತಂದು ಕೊಡು (ಅಕೋಳ. ೪೦). **ಚುರಮರಿ:** ಮಿಠಾಯಿಗಾರನಲ್ಲಿ ಚುರಮರಿಯನ್ನು ಕೊಂಡರು (ಹೂಬಿಸಿ. ೩); ಹೌದಿನೊಳಗೆ ಮಿಠಾಯಿಗಳಿದ್ದವು. ಅವಕ್ಕೆ ಚುರಮರಿ ತಿನ್ನಿಸುವುದು ಇವರ ಒಂದು ಕೆಲಸವಾಗಿತ್ತು (ಇಪ್ಪತ್ತ. ೩೦೬). **ಚುರಮುರಿ:** ಅವಲಕ್ಕೀ ಕುಟ್ಟುವದು, ಚುರಮುರೀ ಹುರಿಯುವದು, ಇವೇ ಇವರ ಕುಲದ ಹೋರೆಗಳು (ಕಭಾಗೆ. ೦೦೫); ಗುರಪ್ಪನ ಅಂಗಡಿಗೆ ಹೋಗಿ ಒಂದು ಪಾವು ಚುರಮುರಿ ತಕ್ಕೊಂಡು ಬಾ (ತಿಡುಗು. ೪೬). **ಚುರಿಮುರಿ:** ಚುರಿಮುರಿಯೆಂದು ಅವಲಕ್ಕಿಯನ್ನು ಶರ್ಕರೆ ಸಹಿತ ದೇವರಿಗನ್ನು ಮಾಡಿರಿ (ಕವಿಜ. III, ೧೬೯ ಮುಲ್ಲಾಶಾಸ್ತ್ರ). **ಚುರುಮರಿ:** ಅವನು ಚುರುಮರಿ ದಾಣಿಗಳನ್ನು ಸಂಗ್ರಹಿಸಿ ತನ್ನ ಹತ್ತಿರ ಇಟ್ಟುಕೊಳುತ್ತಿದ್ದ (ಫಲಸಂ. ೦೮); ಬಿಸೇ ಚುರುಮರಿ ಕಡಲೆ ಮಾರುವ ಮುದುಕಿ ಬಂದರೆ ಕರೆಯಿರಿ (ನೆಲಮು. ೦೩-೫).

[ ←ಮರಾ. ಚುರ್‌ಮುರಾ, ಕುರ್‌ಮುರಾ ]

**ಚುರುಳೊಮುದು** (ನಾ). ವೀಳೆಯದೆಲೆ ಮತ್ತು ಅಡಕೆ; ತಾಂಬೂಲ: ಆ ಕೈಂಕರ್ಯಗಳ ದಾನಗಟ್ಟಳೆಯ ವಿವರ ಪ್ರತಿದಿನ ೧ಕ್ಕೆ . . . ಅರ್ಧ ಪರಪಮುದು ಕಟಿಯಮುದು ನೈಯಮುದು ಚುರುಳೊಮುದು ಸಹ ವರ್ಷ ೧ಕ್ಕೆ ಸಲುವುದು (ಎಕ. XIV, ಶ್ರೀರಂಗ. ೯೫-೨; 1535).

[ ←ತಮಿ. ಚುರುಳಮುದು ]

**ಚುರೂಟು** 'ಚುರುಟು' ನೋ.

**ಚುರ್ಕಿ** 'ಸುರ್ಕಿ' ನೋ.

**ಚುರ್ಕಿಗಾರೆ** 'ಸುರ್ಕಿಗಾರೆ' ನೋ.

**ಚುರ್ಚಿ** (ನಾ). ಕಣ್ಣು ಉರಿಯುವ ಒಂದು ಬಗೆಯ ರೋಗ; ಉರಿಗಣ್ಣು: ವ್ಯಾಲಿಗೆಗಣ್ಣೊ ವಾತದಿಂ ಬಲಿದ ಕಣ್ಣೊ ಕುಟಿಯಗಣ್ಣೊ ಚುರ್ಚಿಯಗಣ್ಣೊ . . . ಇದಕ್ಕೆ ತಿಳಿಯೆನೇನಂ ಮರ್ದಂ (ಮಹಾವಿ. ೭-೫೦).

[ <ಚುರ್ಚು$_2$ ]

**ಚುರ್ಚು₁**, ಚುಚ್ಚು₁ (ಕ್ರಿ). ೧. ಆಯುಂಧ, ಮುಳ್ಳು, ಕೊಕ್ಕು ಮುಂತಾದುವುಗಳಿಂದ ತಿವಿ,—ಇರಿ : "ಸುಡುವಲ್ಲಿ ತಿವಿವಲ್ಲಿ ಚುರ್ಚು" (ಶಬ್ದಮಂ. ೮೭); ಸೇನೆಯುಂ ಮುತ್ತಿದುವು ಕುತ್ತಿದುವು ರವಿರಥತುರಂಗಮಂ ಚುರ್ಚಿದುವು . . . ಬಾಣಂಗಳು (ಜಬಪು. ೨೫-೧೮) ; ಚುರ್ಚೆ ಮಹಿಶೂರ ಬಾಣಮಿದಿರ್ಚದೆ ಕೆಟದಿಯುವರೆಣಗಿ ನರಪತಿಗೆ ಕರ್ಚಿದರಡಿಯುಂಗುಟವುಂ (ಅಪ್ರತಿ. ೫೮-೫೩) ; ಚುಚ್ಚುಗವನ್ನು ಚುರ್ಚಿ ತೆಗೆದಳು. ಅದರ ಜೊತೆಗೆ ಮಿಡಿನಾಗರ ಹಾವು ಬಂದಿತು! (ಜಿಂದಜೀ. ೧೨೩). **ಚುಚ್ಚು₁ :** ೧. ನಿಡಿಯ ನಾಲಗೆಯುಂ ಪಿಡಿದು ಪೆಡತಲೆಯುಂ ತೆಗೆದೆರಡು ಕೆಯ್ಯೊಳ್ ಮುಚ್ಚಿ ಚು[ಪಾಠಾಂ. ಮು]ಚ್ಚುತ್ತಿರ್ಪಂ (ಅಜಿಪು. ೧೧-೧೦ ವ) ; ಮೆಲ್ಲಮೆಲ್ಲನೆ ಸೀಳಿ ರೆಮ್ಮಯ್ಯ ದಮ್ಮಯ್ಯ ಮೆಲ್ಲಮೆಲ್ಲನೆ ಚುಚ್ಚಿರೆಮ್ಮಯ್ಯ ದಮ್ಮಯ್ಯ (ಸಾನಂದ. ೪-೨೦೦) ; ಶರದಲಿ ಚುಚ್ಚಿದನು ಜೇಕುಳಿಯ ಬಿಟ್ಟನು ನೆತ್ತರನು ನೆಲಕೆ (ಕುವ್ಯಾಕ. ೩-೩೧) ; ಮೊನೆನೋಟದಿಂ ಚುಚ್ಚಿ ಬೆಳ್ಳಿ ನೋಡುವಳು (ಕಾಲೂರ. ೪೨-೫೪) ; ಪ್ರಾಣಿಗಳ ಚರ್ಮದೊಳಕ್ಕೆ ಚುಚ್ಚಿ . . . ರಕ್ತ ವನ್ನು ಹೀರುತ್ತವೆ (ಕೀಟಬಿ. ೭೪). ೨. ತೂತುಮಾಡು ; ರಂಧ್ರಮಾಡು: ಒತ್ತಿ ಮೂಗಂ ಚುಚ್ಚಿ ನಸ್ತಿತಂ (ಮಂಗರಾ. ೫೩-೨) ; ಇವೊತ್ತು ಮಗುವಿಗೆ ಕಿವಿ ಚುಚ್ಚಲಾಯಿತು (ರೂಢಿ). ೩. ಕಟಕಿಯ ಮಾತನಾಡು : ಬಸವಂತಿ ಕೂತು ಮೆಯ್ಯಲಿಕೆ ಬಂದವಳೆಂದು ಚುಚ್ಚುತ್ತಿದ್ದಳು (ದೀಪಹ. II, ೧೪೧).

**ಚುಚ್ಚಿಕೊಡು** = ೧. ಚಾಡಿಹೇಳು ; ಎತ್ತಿಕಟ್ಟು ; ಪ್ರಚೋದಿಸು : ಒಚ್ಚತಯಿಲ್ಲನಲಾಗುವುದು ಕಾಲವೊಂದಚ್ಚಿ ಕರ್ಮಗಳತ್ತ ತಹುದು ಚುಚ್ಚಿ ಕೊಡುವರಂತೆ ಪುದ್ಗಲಪರಿಣತಿಗಚ್ಚಾದ ಕಾರಣದಿಂದ (ಭರಹ. ೬೮-೪೨) ; ನೆರೆಹೊರೆಯ ಹೆಂಗಸರು ನಾಗಮ್ಮನಿಗೆ ಚುಚ್ಚಿಕೊಡುತ್ತಿದ್ದುದಲ್ಲದೆ ಆ ಗುಂಡಪ್ಪನ ನಾಚಿಕೆ ಇಲ್ಲದೆ ವರ್ತನೆಗೆ ಹೇಸುತ್ತಿದ್ದರು (ಜಾಗಿನ. ೩೨). ೨. ಹೇಳಿಕೊಡಂ ; ಗುಟ್ಟಾಗಿ ತಿಳಿಸು : ತರಗತಿಯಲ್ಲಿ ಉತ್ತರ ಚುಚ್ಚಿ ಕೊಡುವ ವಿಷಯವಾಗಿ ದೊಡ್ಡ ದೊಂದು ಚರ್ಚೆಯೇ ನಡೆಯಿತು (ಹಾಲಿಮ. ೨೦). **ಚುರ್ಚಿನುಡಿ, ಚುಚ್ಚುನುಡಿ** = ಮನಸ್ಸಿಗೆ ನಾಟುವಂತೆ ಮಾತನಾಡಂ : "ಚುರ್ಚಿನುಡಿ–ಮರ್ಮೋದ್ಘಾಟನೆಯ ಮಾತುಗಳ ನ್ನಾಡು, ಒತ್ತಿಹೇಳು" (ಪ್ರಭಣ) ; ನೃಪನ ಮರ್ಮವ ಚುಚ್ಚಿನುಡಿದನು ಘಾಸಿ ಮಾಡಿದನಾ ನೃಪಾಲಕನ (ಕುವ್ಯಾಕ. ೧೩-೨೯) ; ಹುಚ್ಚನೆಂದರು, ಲುಚ್ಚನೆಂದರು . . . ಚುಚ್ಚಿ ನುಡಿದರು (ಕಎಪು. ೨೦-೨).

[ ದೇ.॥ ತುಳು. ಚುಚ್ಚು ; ತೆಲು. ಚೊರ್ಚು, ಚೊಚ್ಚು ; ಕೊಲಾ. ಚೊಚ್ಚಿಲ್ಲು, ಚೊಟ್ಟಂಚು, ಚೊನ್ನು ]

**ಚುರ್ಚು₂**, ಚುಚ್ಚು₂, ಚುಟ್ಟು (ಕ್ರಿ). ಸುಡು ; ದಹಿಸು : "ಚುರ್ಚು ದಾಹೇ (ಉರಿ)" (ಶಮಧಾ) ; "ಸುಡುವುದುಂ ಚುರ್ಚಿನಲ್ಕುಪ್ಪುದು" (ಕಬ್ಬಿಕ್ಕೆ. ೧೪) ; "ಚುರ್ಚೆಂಬುದು ತಾನೊಗೆಗುಂ ದಹಿಪರ್ಥದಲ್ಲಿಯುತಿಭರ ದಿಂದಂ" (ಕವಿಕಂ. ೩೫) ; ಉರಿವ ಕೈದೀವಿಗೆಗಳೊಳ್ ಮೊಗಮಂ ಚುರ್ಚು ವರುಂ (ಆದಿಪು. ೫-೮೫ ವ) ; ಚುರ್ಚಿದವೊಲ್ ಬಿಸಿಲಳುರೆ ಕಿಮುಟ್ಟಿದ ತಳಿರಂತೆ ನೊಂದು (ಶಮದ. ೨೪ ಪ್ರಯೋ); ನರಿ ನಾಯ್ ಮೊದಲಾದುವಡಸಿ ಪಿಡಿದೆಡೆಯೊಳ್ ನೆತ್ತರನೊತ್ತಿ ಕಳೆದು ಬಟಿಯುಂ ಭರದಿಂ ಚುರ್ಚುವುದು ಕಾಯ್ದು ಕರ್ಬುನದಿಂದಂ(ಖಮದ. ೧೩-೪); ವಿರಹಶಿಖಿ ದವಶಿಖಿ ಚುರ್ಚುಗುಂ (ರಾಜಶೇ. ೭-೮೩) ; ನೀರೊಳ್ ಕಿರ್ಚು ಚುರ್ಚುಗುಮೇ ? (ರಾಮಾಶ್ವ.೩-೧). **ಚುಚ್ಚು₂ :** "ಚುಚ್ಚಿನಲು ಸುಡುವುದುಂ" (ಕಶರ. ೩೭) ; ಕೊಳ್ಳಿಯೊಳ್ ಪಿರಿದುಂ ಚುಚ್ಚುವುದುಂ (ಸುಕುಮಾ. ೧೧-೪೭ ವ) ; ಬಾಗಿಲಿಕ್ಕಿದು ಹೊಣಗೆ ಮುದ್ರಿಸಿ ಕಿಚ್ಚ ಚುಚ್ಚುವ ಪರುಠವಣೆಯಲಿ ಖಳ ಪುರೋಚನ ನಂದು ನಿರ್ಮಿಸಿದ (ಕುವ್ಯಾಆ. ೮-೭೦). △ **ಚುಟ್ಟು :** ಚುಟ್ಟಿದ ತೆಟದಿಂ ಪುಸಿಗಳನುಟ್ಟುವನಿವನೆಂದು ಕಾಯ್ದು ಕರ್ಬುನದಿಂದಂ ಚುಟ್ಟಿ (ಸುಕುಮಾ. ೧೧-೪೪). [ ? ]

**ಚುರ್ಚುಂಗೊಳ್ಳಿ**, ಚುಂರ್ಚುಗೊಳ್ಳಿ (ನಾ). ಉರಿಯುಂವ ಕೊಳ್ಳಿ ; ಸೂಟಿ ಚುರ್ಚುಂಗೊಳ್ಳಿ, ಇರ್ಕುಂಗೊಟ್ (ಶಮದ. ೧೭೦ ಪ್ರಯೋ) ; ಚುರ್ಚುವ ಕೊಳ್ಳಿ, ಚುರ್ಚುಂಗೊಳ್ಳಿ (ಶಬ್ದಾನು. ೩೪೫ ಪ್ರಯೋ). **ಚುರ್ಚುಗೊಳ್ಳಿ :** ಎಂತು ಪಿಡಿದ ಚುರ್ಚುಗೊಳ್ಳಿ ಗಾಳಿ ಸೋಕೆ ಸುಡುವುದೋ . . . ಅಂತು ಪೆಣ್ಣ ಸೇರ್ಕೆ ಕೇಡಿಗಕ್ಕುಮಲ್ತೆ (ಸಾನಂದ. ೮-೭೦). [ಚುರ್ಚು₂ + ಕೊಳ್ಳಿ₁]

**ಚುರ್ಚುಗೊಳ್ಳಿ** 'ಚುರ್ಚುಂಗೊಳ್ಳಿ' ನೋ.

**ಚುರ್ಚುವಾಯ್** (ಕ್ರಿ). ತಿವಿಯಲೆಂದು ಮೇಲೆ ಬೀಳಂ,– ಎದುರಿಗೆ ಬರು : ಶತಜೀವಿ ಎಂಬಾದೇಶವುಂ ಕೇಳ್ದು ಭರದಿಂದಂ ಚುರ್ಚು ವಾಯ್ದುಂ ಪೊಗಳೆ ಬುಧಜನಂ ಬಂದ ಕಾವೇರಿಯೊಳ್ . . . ಅನ್ನು ಚುರ್ಚುವಾಯ್ದು ಬದ್ದುರ್ಜ್ಹಿಕಿದನ್ (ಎಕ. VII, ಶಿವಮೊ. ೪-೪೦; 1122).

[ ಚುರ್ಚು₁ + ಪಾಯ್₁ ]

**ಚುರ್ಚೆ** (ನಾ). ಒಂದು ಬಗೆಯ ಮರ : ಕೆಲವು ಕಡೆಗಳಲ್ಲಿ ತೇಗ, ನಂದಿ . . . ಚುರ್ಚೆ, ಬೆಳ್ಮಾಲೆ . . . ಮುಂತಾದ ಗಗನಚುಂಬಿತ ವೃಕ್ಷಗಳು (ಪಂಜಪಂ. ೨). [ ? ]

**ಚುಲ್** 'ಸೂಲ್' ನೋ.

**ಚುಲಕ**, ಚುಳಕ₂ (ನಾ). ಅಂಗೈ ; ಕುಡಿತೆ: ಕಯ್ಯುಬ್ಬ, ಚುಲಕದ ಮುದ್ರಿಕೆ ಯನ್ನಾತನಿಗೆ ನೀಡುವನು (ಮಂತ್ರಶ. ೧೩೦-೧೧). **ಚುಳಕ₂ :** ಚುಳಕ ಪ್ರಮಾಣಮಾದೊಡಮುಳಿಯದವೋಲ್ ದುಗ್ಧವಾರ್ದಿಜಳಮಂ ಮೊಗೆ ದರ್ . . . ದಿವಿಜರ್ (ಜಾಧಪು. ೮-೯೭). 'ಚುಳಕಪಾನ' ಪರಾ. [ಸಂ.]

**ಚುಲಕತನ** 'ಚುಲುಂಕುತನ' ನೋ.

**ಚುಲಕಬುದ್ಧಿ** 'ಚುಲುಕುಂಬುದ್ಧಿ' ನೋ.

**ಚುಲುಕ**, ಚುಳುಕ (ನಾ). ೧. = ಚುಲಕ : ಬಿಸಿಲ ನಡಗೆಯಲಿ ಜನಿತ ವಿಸ್ಮೃತಿಯ್ಯೆದೆ ಮಸ್ತಕವನು ಚುಲುಕಸಲಿಲದೊಳಗೊತ್ತಲು (ವಿವೇಘ. ೮-೫). **ಚುಳುಕ :** ೧. ದಿಗ್ಗಜಮಂ ಪಡೆ ಪಾಯ್ದು ವಾರ್ಧಿಯುಂ ಚುಳುಕ ದೊಳಾಂಪ . . . ಅಳವಂ ಸಮಂತು ತಳೆದಂ (ಚಂದ್ರಪು. ೬-೨೮) ; ಆಗಸ್ತ್ಯಂಗೆ ಚುಳುಕಮಾತ್ರಂ ಭವಸಾಗರಶತಂ (ಅನಂಪು. ೧೦-೪೪). ೨. ಕಾಡಿಗೆ, ಮುಲಾಮು ಮುಂತಾದುವುಗಳನ್ನು ಹಾಕಿಡಂವ ಸಣ್ಣ ಪಾತ್ರೆ ; ಭರಣಿ. [ ಸಂ. ]

**ಚುಲುಕು** 'ಚುಳುಕು' ನೋ.

**ಚುಲುಕುಗಾಣು** (ಕ್ರಿ). ಹಗುರವಾಗಿ ಕಾಣು ; ಕಡೆಗಣಿಸು ; ಅಲಕ್ಷ್ಯ ಮಾಡು : ಬೆಳೆವಾಗ ಗೆಲವು ವಿಡಾಯಗಳವಗೊಡವೆಳೆದು ಬಂದುವು ಸಾಜವಾಗಿ ಬೆಳೆದ ಮೇಲೀ ಸಿರಿ ಬಂದ ಮೇಲವನಾರ ಚುಲು[ಪಾಠಾಂ.ಳು]ಕು ಗಾಣನೆ (ಭರಹ. ೩೦-೨೪).

[ ಚುಲುಕು (<ಚುಳುಕು) + ಕಾಣು (<ಕಾಣ್) ]

**ಚುಲುಕುತನ**, ಚುಲಕತನ (ನಾ). ಗಂಭೀರವಲ್ಲದ ನಡತೆ; ಹಗುರವಾದ ನಡತೆ ; ಲಾಘವ : (+). **ಚುಲಕತನ :** (+).

[ ಚುಲುಕು(<ಚುಳುಕು) + – ತನ ]

**ಚುಲುಕುಬುದ್ಧಿ**, ಚುಲಕಬುದ್ಧಿ (ನಾ). = ಚುಲುಕುತನ : (+). **ಚುಲಕಬುದ್ಧಿ :** (+). [ ಚುಲುಕು (<ಚುಳುಕು) + ಬುದ್ಧಿ ]

**ಚುಲುಕೋದಕ**, ಚುಳುಕೋದಕ (ನಾ). ಅಂಗೈಯಲ್ಲಿ ಹಿಡಿಯುವಷ್ಟು ನೀರು ; ಮುಕ್ಕುನೀರು : ಮಹಾತ್ಮ ಜಹ್ನು ತಾಂ ಮೊಗೆಯೆ ಸುಹಸ್ತ ದಲ್ಲಿ ಚುಲುಕೋದಕವಾದಳದೊಮ್ಮೆ ಗಂಗೆ (ಪಂಚಶ. ೮೨-೧೦೩). **ಚುಳುಕೋದಕ :** ಚುಳುಕೋದಕಂಗಳಿಂ ಕಿಂಚಿದ್ ದಳಂಗಳಿಂ ನಲಿದು ಗಂಗಾಂಬು ಶೇಖರನ ಪೂಜಿಸಿದಂಗೆಯೊಲಿದಿಂದ್ರನರಮನೆಯ ಸಿರಿ ಬಂದು ತೊತ್ತಾಗಿ ಯಿರ್ಪಳೆಂಬುದೆ ನಿಶ್ಚಯಂ (ಗುರುಜಾ. ೫-೫೭). [ ಚುಲುಕ + ಉದಕ₂ ]

**ಚುಲ್ಲಾರಿ** 'ಚಿಲ್ಲೇರಿ' ನೋ.

**ಚುಲ್ಲ$_1$**, ಚಿಲ್ಲ$_3$, ಚಿಳ್ಳ (ಗುಂ). ೧. ಕೀಳಾದ; ಕ್ಷುದ್ರವಾದ. 'ಚುಲ್ಲಮಾತು' ಪರಾ. (ನಾ). ೨. ಅಲ್ಪತನ; ಕ್ಷುದ್ರತೆ: ಈ ಪಳ್ಳಿ ಪಟ್ಟಣದ ಜನರೆಲ್ಲ ಚುಲ್ಲಮುಳಿದು ಕಳೆಗೊಳ್ಳುವರು (ಬಾಲಭಾ. ೩-೮೦). **ಚಿಲ್ಲ$_3$**: ೩. ಕೀಳಾದ ಆಳು ; ಹೀನ : ವಾತಾತ್ಮಂ ಚಿಲ್ಲನೂನಂ ಪಿಸುಣಿಗನಳಿಪಂ (ಮದಪ. ೩-೦೪); ಮಲ್ಲವರ್ಮಾಸಾಳುಗಳೆಕ್ಕಟಿಗರ್ಚಿ[ಪಾಠಾಂ. ಬಿ]ಲ್ಲಗೋಳಾಯಿಲ ಪೇಟಕರ್ . . . ಎಸೆದರ್ (ಮದನಪು. ೧೯-೬). **ಚಿಳ್ಳ**: ೩. ಗೆಲ್ಲ ಸೋಲ ಬಲ್ಲವರಿಗೇಕೆ ಅದು ಚಿಳ್ಳರ ಗುಣ (ಸಗಬೊ. ೪೫); ಎಳ್ಳನಿತು ಈ ಭೂಪತೀಶನು ಸುಳ್ಳ ಪೇಳುವನಲ್ಲ ಮನುಜರ ಕಳ್ಳ ಚಿಳ್ಳನು ಅಲ್ಲ (ಹಮಚ. ೧೧೪). [ <ಪ್ರಾ. ಚುಲ್ಲ. / ಸಂ. ಕ್ಷುಲ್ಲ ]

**ಚುಲ್ಲ$_2$** (ನಾ). ೧. ನೀರು ಸುರಿಯುವ ಕಣ್ಣು ; ಸೋರುಗಣ್ಣು ; ಮಂಜುಗಣ್ಣು: ನಾನಾ ಕಂಟಕದೋಷಂ ಚುಲ್ಲ ಚಿಲ್ಲಂ ಪಿಟಕಪಿಲ್ಲಾದಿಗಳು ತೊಂಬತ್ತಾರೆನಿಸುತಿಹುವು (ವಿವೇಕ. ೩-೪೫). ೨. ಮಂಜುಗಣ್ಣಿನವನು; ಸೋರುಗಣ್ಣಿನವನು : "ಪಿಲ್ಲಃ, ಚಿಲ್ಲಃ, ಚುಲ್ಲಃ-ಈ ೩ ಅಟೀಗಣ್ಣವಂ" (ಹಲಾಯು. ೪೯-೪೫೩). [ಸಂ. ]

**ಚುಲ್ಲಕ**, ಚಂಲ್ಲಿಕ, ಚಂಲ್ಲುಕ (ಗು). ೧. ಕೀಳಾದ ; ಕ್ಷುಲ್ಲಕವಾದ : "ಚುಲ್ಲಕ-ಕೆಟ್ಟ, ಕ್ಷುದ್ರ" (ಪ್ರಭಚ). **ಚುಲ್ಲಿಕ**: ೧. ಶ್ರೀವಿಜಯವಿಠಲನ ಕರುಣದಿಂದ ಚುಲ್ಲಿಕ ನಡತೆ ಪೋಗಿ ಒಳ್ಳೆ ಫಲ ದೊರಕುವದೂ (ತೀರ್ಥಮ. ೨೦೦). **ಚುಲ್ಲುಕ**: (ನಾ). ೨. ಕೀಳಂಮನುಷ್ಯ ; ಅಲ್ಪ : ಅವರ ಕಾರ್ಯಮೆ ಲೇಸುಂ ಎಂದುಸಿರೆ ಚು[ಪಾಠಾಂ. ಚೆ]ಲ್ಲುಕರ್ (ಹಾರಾಸ್ಕ. ೪-೦೫-೬೦). [ <ಸಂ. ಕ್ಷುಲ್ಲಕ ]

**ಚುಲ್ಲಮಾತು** (ನಾ). ಅಲ್ಪವಾದ ಮಾತು; ಕ್ಷುದ್ರವಾದ ಮಾತು : ನಿಲ್ಲಿಸಲು ಧರಣಿಪನ ಮಾರ್ಗದಿ ಚುಲ್ಲಮಾತುಗಳಾಡಿ ಕೌಶಿಕ (ಹಮಚ. ೦೬೪). [ಚುಲ್ಲ$_1$ + ಮಾತು$_1$ ]

**ಚುಲ್ಲಿ** (ನಾ). ಬೆಂಕಿ ಉರಿಸುವ ಸಲಕರಣೆ; ಒಲೆ: "ಚುಲ್ಲೀ, ಅಶ್ಮಂತಕಂ, ಉತ್ತಾನಂ, ಅಧಿಶ್ರಯಣೀ - ಈ ೪ ಒಲೆ" (ಹಲಾಯು. ೫೨-೦೫೮); ಅಡಿಗಡಿಗೆ ಚುಲ್ಲಿಯೊಳಿಡುವ ಸೌದೆ ಸಿಡಿವುತ್ತ ಕಿಡಿಗಳ ಕೆದರುತಿರ್ಪವಂ ಬಿಟ್ಟು (ವೀಶ್ಮಪು. ೭-೧೦-೩೭); ಚುಲ್ಲಿ ಪೇಷಣ ಕಂಡನಿ ಉಪಸ್ಕರ ಉದಕುಂಭ ಎಂಬೈದು ಗೃಹೋಪಕರಣಗಳೂ ಹತ್ಯಾಕಾರಕಗಳು (ಅರ್ಥ. ೧೮೭). [ಸಂ. ]

**ಚುಲ್ಲಿಕ** 'ಚುಲ್ಲಕ' ನೋ.

**ಚುಲ್ಲುಕ** 'ಚುಲ್ಲಕ' ನೋ.

**ಚುಲ್ಲುವಾಸ್ತ್ರ** (ನಾ). (?) : ಸ್ತ್ರೀಯರಲ್ಲದಡೆ ಕಡೆಸಾರು ಹೆಂಗಳಡಿದನ ಮೇಲೆ ಚುಲ್ಲುವಾಸ್ತ್ರಗಳಿಂದ ದಾನವನೆ ಕೊಳಚುದಕದಲ್ಲಿ ತೇಲ್ಮುಳುಗು ತಬ್ಬಿಯ ಪಾಯ್ವೆನೆಂಬ ಮರುಳೇನೆನ್ನೊಳುಳಿಯೆಂದನು (ಜನಮು. ೩೩-೨೨). [ ? + ಅಸ್ತ್ರ ]

**ಚುಸ್ತ** (ನಾ). ೧. ಸುಟ್ಟ ಅಥವಾ ಕರಿದ ಮಾಂಸ. ೨. ಮಾಂಸವನ್ನು ಸುಟ್ಟಾಗ ಅಥವಾ ಕರಿದಾಗ ಅದಕ್ಕೆ ಉಂಟಾಗುವ ಕರಿಕಾದ ಹೊರಪದರ : (೩). [ಸಂ. ]

**ಚುಳಕ$_1$** (ಗು). ಸೂಕ್ಷ್ಮವಾದ: ಸಕಲ ನಿಷ್ಕಲ ಉಭಯಾಕಾರವ ಅಖಿಲಾಂಡ ಗಳನೊಳಕೊಂಡೊಪ್ಪುವ ಚುಳಕ ಚಿದಾನಂದವವನು (ಮೈಲಾರ. ೦೩೯-೨). [ <ಚುಳುಕು ]

**ಚುಳಕ$_2$** 'ಚುಲಕ' ನೋ.

**ಚುಳಕಪಾನ** (ನಾ). ಅಂಗೈಯಲ್ಲಿ ತುಂಬುವಷ್ಟು ನೀರು ; ಬೊಗಸೆ ಯಷ್ಟು ನೀರು : ಅಂತಸ್ಸ್ಫುರದತಿಸ್ಫಾರಸಮರೋಷ್ಮಸಂತಪ್ತಜಲ ಪ್ರತ್ಯೇಕಚುಳಕಪಾನಮಾತ್ರಜಾನುದಘ್ನಜಲದುರ್ಗನುಮಾಗಿ ನಡೆದು (ಆದಿಪು. ೦೪-೫೨ ವ). [ ಚುಳಕ$_2$ (<ಚುಲಕ) + ಪಾನ ]

**ಚುಳಕಿತ** (ನಾ). ಅತಿಸೂಕ್ಷ್ಮವಾದಂದಂ (?) : ಅಳಿಕನೇತ್ರಾಶ್ರಮಕೆ ನಮಿಸುತ ಗಣಂ ಕೂಡೆ ಪುಳಕಿಸುತ ಬರಲು ಶಶಿರವಿಕೋಟಿಕಿರಣದಿಂ ಚುಳಕಿತವನತಿಗಳದ ಕೈವಲ್ಯಮಂ ಕಂಡ ಕುಳಕಪ್ರಸಾದಿ ವೃಷಭಾ (ಲಿಂಗಪು. ೬-೩೫). [ಸಂ. ಚುಲಕಿತ ]

**ಚುಳಕು** (ನಾ). ತೀಕ್ಷ್ಣತೆ (?) : ಚರಲಿಂಗಂ ಚಾತುರ್ಭುಜ ವಂದಿತ ಚಿರ ಕಾಯಾ ಚೀಲಾಳ ಸುರಕ್ಷಕ ಗರಳಾಂಕಾ ಚುಳಕಿಲ್ಲದ ಶಾರ್ವರಿವರ ಚೂಡಾ ಮಕುಟ (ಪ್ರಭುಪು. ೩-೪). [ ? ]

**ಚುಳಕೆ** 'ಚುಳಿಕೆ' ನೋ.

**ಚುಳಿ** 'ಚೂಳಿ$_1$' ನೋ.

**ಚುಳಿಕೆ**, ಚುಳಕೆ (ನಾ). ೧. ಉಕ್ಕಿನ ಅಥವಾ ಕಬ್ಬಿಣದ ತುದಿಯುಳ್ಳ ಬೆತ್ತ,-ಕೋಲು : ಕವಣೆಕಲ್ಬಿರಿಗಲ್ಲು ವನಿಕೆಯು ವಿವರಿಸಲ್ಪಡಿಗೆಗಳು ಚುಳಿಕೆಯು (ಜ್ಞಾನಸಿಂ. ೨-೬೫). **ಚುಳಕೆ**: ೨. "ಹತ್ತಿ ಬಡಿಯುವ ಬೆತ್ತ" (ಜಾನಪಕೋ. ೫೭). [ ←ತಮಿ. ಚುಳಿಕ್ಕು ]

**ಚುಳುಂಕ** 'ಚುಲುಂಕ' ನೋ.

**ಚುಳುಂಕಾಡು** 'ಚುಳ್ಕಾಡು' ನೋ.

**ಚುಳುಕಿ** (ನಾ). ಕಿರುತೊಳೆ; ಸೋಲೆ: ಹಣ್ಣು ಹಿಸಿದು ಇಬ್ಬಾಗವಾಗಿ ತನ್ನ ಹೊಟ್ಟೆಯ ತೊಳೆ ಚುಳುಕಿಗಳನೆಲ್ಲ ಬಯಲಿಗೆ ಹಾಕಿತು (ಮಲಮ. ೪೩೦). [ ←ಮಲ. ಚೂಳ ]

**ಚುಳುಕು**, ಚುಣುಕು$_2$, ಚಂಲುಕು, ಚುಳ್ಕು (ನಾ). ೧. ಅತಿ ಸೂಕ್ಷ್ಮವಾದುದಂ ; ತೀರ ಸಣ್ಣದಾಗಿರುವುದು : ಅಗೋಚರ ಅಪ್ರತಿಮ ಲಿಂಗವೆ . . . ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ (ಬಸವ. ೭೪೩); ಘನಮಹಿಮಲಿಂಗವೆ ಅನುಪ್ರಾಣಿ ಎನ್ನ ಕರವನಜಕ್ಕೆ ಬಂದು ಚುಳು ಕಾದಿರಲ್ಲ (ಸುಸಾರ. ೦೦ ಪಲ್ಲವಿ); ತಮ್ಮ ಬುದ್ಧಿಯ ಅಂಗೈಯಲ್ಲಿ ಲಿಂಗದಂತೆ 'ಚುಳುಕಾ'ಗಿ ಬರುವದೆ ನನ್ನ ಹಾದಿ (ಮಸಾಹಿ. ೩). **ಚುಣುಕು**: ೧. ನಿಮ್ಮ ಹೊಟ್ಟೇ ಕರುಳಿನಾ ತುಣುಕು ಅಂತನ ಚುಣುಕು ತೋರಿಸಿದಿರಿ ಮಿಣುಕು (ಹಾಡುಪಾ. ೪೩-೫). **ಚುಲುಕು**: ೨. ಲಾಘವ ; ಹಗುರವಾದ ನಡತೆ. 'ಚಂಲುಕುತನ' ಪರಾ. **ಚುಳ್ಕು**: ೩. ಕುಳ್ಳು ; ಗಿಡ್ಡು : ಮೈಯಲ್ಲಿ ನೀನು ಸ್ವಲ್ಪ ಚುಳ್ಕು. ಆದ್ದರಿಂದ ನಿನ್ನ ವಯಸ್ಸು ಥಟ್ಟನೆ ತಿಳಿಯುವದಿಲ್ಲ (ಮಾರುದಾ. ೪೬).
[ದೇ.॥ ತಮಿ. ಚುಳುವು; ಮಲ. ಚುಲುಂಗ; ತೆಲು. ಚುಲುಕ, ಚುಲ್ಕ ]

**ಚುಳುಕೋದಕ** 'ಚುಲುಕೋದಕ' ನೋ.

**ಚುಳ್ಕಾಡು**, ಚುಳುಂಕಾಡು (ಕ್ರಿ). ನೀರಿನಲ್ಲಿ ತುಳುಕಾಡು,-ತೇಲಾಡು : ಕೌಂಗಿನ ಪೊಂಬಾಟೆಯು ನಟ್ಟಗಂಪುಗಡಲೊಳ್ ಚುಳ್ಕಾಡಿ ಚುಳ್ಕಾಡಿ . . . ಪದ್ಮಿನಿಯೊಳ್ ತುಂಬಿ ಮಲಂಗಿ ಸೇದೆಗಟೆಗುಂ ಕಾಸಾರತೀರಂಗಳೊಳ್ (ಅನಂಪು. ೩-೦೦); ತೊಳಗುವ ತಿಳಿನೀರ್ಗೊಳದೊಳು ಚುಳ್ಕಾಡಿ ಬಳಿಕ ಮುಳುಗಿ ಮೇಲಕೇಳಲಾ ಲಲನೆಯ ಮುಖಮೊಪ್ಪಿತು ಪಾಲ್ಗಡಲೊಳು ಪೊಳೆದುದುದಯಿಪ ಚಂದ್ರನಂತೆ (ಶ್ರೀಪಾಲ. ೫-೫೪). **ಚುಳುಂಕಾಡು**: ಮುನ್ನೆ ಕಣ್ಬೇಟದವಳ್ ತುಳುಕಿದೆಡೆಗೆಯ್ದಿ ಚುಂಬಿಸಿ ಚುಳುಕಾಡೆ ಮರಳ್ಚಿ ಮೂಡಿದಂ ಸ್ಮರನೊರ್ವಂ (ಅನಂಪು. ೭-೩೮). [ < ತುಳ್ಕಾಡು ]

**ಚುಳ್ಕು** 'ಚುಳುಕು' ನೋ.

**ಚುಳ್ಕೋದಕ** (ನಾ).=ಚುಲುಂಕೋದಕ : ಪ್ರಕಟಂ ಹಾರೀತಿಮಂತ್ರಾತ್ಮಕ ನನುಪಮಿತಂ ಕೊಟ್ಟ ಸನ್ನಾರ್ಘ್ಯ ಚುಳ್ಕೋದಕದಿಂದಂ ಪುಟ್ಟಿ ಚಾಳುಕ್ಯ ಕುಳರೆನಿಸಿ (ನಾಂದೇಡ್. ೨೩-೪ ; 1122). [ < ಚುಲುಂಕೋದಕ ]

**ಚುಳ್ಳನೆ** (ಅ). ನೋವಾಗುವಂತೆ : ಇಚುಂಪೆ ಊಜಿಲು . . . ಗಂದೆ ನೆಸೆದುದೊ ನೊಂದು ಚುಳ್ಳನುರಿದುದೊ ತಂದೆ (ರುದ್ರರ. ದೇ. ೨೦೪-೩). [ ಚುಳ್$_0$ + - ಅನೆ$_1$ ]

**ಚುಳ್ಳಿ**$_1$ (ನಾ). ೧. ಒಂದು ಬಗೆಯ ಸಾಗವಾನಿ ಮರ: (ಕ). ೨. ಒಂದು ಬಗೆಯ ಮುಳ್ಳುಪೊದೆ. 'ಕರಿಚುಳ್ಳಿ' ಪರಾ.

[ ದೇ.II ತಮಿ. ಮಲ. ತುಳು. ಚುಳ್ಳಿ ]

**ಚುಳ್ಳಿ**$_2$ (ನಾ). ವಿಕಾರ; "ತಂಟೆಗಳನ್ನು ಚುಂಚಿನಂತೆ ನೀಡುವುದು" (ಸಿರಿಕೋ. ೧೮೮): ಅಚ್ಯುತ ಅಳುಕಳುಕಿ, ನಾಚಿ, ನಾಚಿ ತನ್ನ ಮುಖವನ್ನು ಚುಳ್ಳಿ ಮಾಡಿಕೊಂಡು . . . ಕಾರ್ಯೋದ್ದೇಶವನ್ನು ವಿವರಿಸಿದ (ಮುಗಿಯು. ೧೮೩). 'ಚುಳ್ಳಿಸು' ಪರಾ. [ ? ]

**ಚುಳ್ಳಿಮುಳ್ಳಿಗಿಡ** (ನಾ). ಒಂದು ಬಗೆಯ ಔಷಧಿಸಸ್ಯ: ಗುಬ್ಬಚ್ಚಿಗಿಡ, ಚುಳ್ಳಿಮುಳ್ಳಿಗಿಡ (ವ್ಯಾಜಿ. ೧೧-೧೮೮). [ಚುಳ್ಳಿಮುಳ್ಳಿ$_0$+ಗಿಡ (<ಗಿಡು)]

**ಚುಳ್ಳಿಸು** (ಕ್ರಿ). ಕಿವುಚು; ವಿಕಾರಮಾಡು: ಆಕೆ ಕೊಂಚವೂ ಮುಖ ಚುಳ್ಳಿಸದೆ ನಗುನಗುತ್ತ ತನ್ನ ಕಠಾರಿಯನ್ನು ಬೀಸುತ್ತಿರುತ್ತಾಳೆ (ಪ್ರವಾಇ. II, ೨೯೯). [ ಚುಳ್ಳಿ$_2$ + – ಇಸು$_3$ ]

**ಚುಱ್** (ನಾ). ಒಂದು ಅನುಕರಣ ಶಬ್ದ. 'ಚುಱ್ಱನ್' ಪರಾ.

**ಚುಱಚಿ** 'ತುಱುಚಿ' ನೋ.

**ಚುಱುಕು,** ಚುರುಕು (ನಾ). ೧. (ಚಾಕು ಮುಂತಾದುವುಗಳಂತೆ) ತೀಕ್ಷ್ಣವಾಗಿರುವಿಕೆ; ಮೊನಚಾಗಿರುವಿಕೆ; ಹರಿತವಾಗಿರುವಿಕೆ: ಒಳಗೊಳಗೆ ನಲ್ಲನ ಪಲ್ಲುಗುರ್ಗಳ ಚುಱುಕುಗಳನಱಿದು ಬೈವುತಂ ಬರುತಿರ್ದರಾತ್ಮ ಮಂದಿರಕಂದು ಬಂಧಕಿಯರು (ಜಬಪು. ೯-೧೬). **ಚುರುಕು:** ೨. ತೀಕ್ಷ್ಣವಾದುದು; ಹರಿತವಾದುದು: ಹೆಂಗಸರಿಗೆ ಈ ವಿಷಯದಲ್ಲಿ ಬುದ್ಧಿ ಬಹಳ ಚುರುಕು (ಅಲಹೂ. ೪೦); ರೋಜಕಿಯ ಕಿವಿ ತುಂಬ ಚುರುಕು (ಮಹಾತ್ಮಾ. ೨೨); ಜನಗಳ ಬುದ್ಧಿಯ ಚುರುಕಿನ ಮೇಲೆ, ಪ್ರಾಮಾಣಿಕತೆಯ ಮೇಲೆ ಅದರ ದೊಡ್ಡಸ್ತಿಕೆ ಹೊಂದಿಕೊಂಡಿದೆ (ಆಳನಿ. ೧೩೬). ೩. ಸೂಕ್ಷ್ಮವಾದುದು; ಚಾಲಾಕಾದುದು: ಪೇಟೆಯ ಮಕ್ಕಳು ಬಹಳ ಚುರುಕು (ತ್ಯಾಗಮ. ೧೮೦). ೪. ಕಾವು; ಬಿಸುಪು: ಪ್ರಶಾಂತ ಮತ್ತು ತಂಪಾದ ಕೋಣೆ ಹೊರಗಿನ ಬಿಸಿಲಿನ ಚುರುಕನ್ನು ಮರೆಯಿಸಿ, ಕೆಲಸಕ್ಕೆ ಪ್ರೋತ್ಸಾಹಿಸುತ್ತಿದ್ದವು (ಅಪನಾ. ೨೦). ೫. ವೇಗ; ಲಗುಬಗೆ: ಚುರುಕಿನ ಕಡಲೆಡೆ ಗಾಳಿಗಳೆಮ್ಮನ್ ಕರೆತಂದಿರ್ದಪುವೆಂತೋ ಎಮ್ಮನ್ (ಬದ್ಧಪ್ರ. ೯-೧೬೯); ಹುಕ್ಕರಾಯನು . . . ಯುದ್ಧಸಿದ್ಧತೆಗಳನ್ನು ಚುರುಕಿನಿಂದ ನಡೆಯಿಸುತ್ತಿದ್ದನು (ಶ್ರೀವಿದ್ಯಾ. ೮೬); ಚುರುಕಾಗಿ ಹೋದರೆ ಹೊತ್ತು ಮುಳುಗುವುದರಲ್ಲಿ ಹೋಗಿಬಿಡಬಹುದು (ಚಂಗಾಳ್ವ ೩೩). ೬. ಪದಾರ್ಥಗಳ ಬೆಲೆಯಲ್ಲಿ ಏರಿಕೆ; ವಸ್ತುಗಳು ತುಟ್ಟಿಯಾಗುವಿಕೆ: (ಕ). (ಗು). ೭. (ಕತ್ತಿಯಂತೆ) ಹರಿತವಾದ; ಹದನಾದ; ತೀಕ್ಷ್ಣವಾದ: ಚುರುಕು ಶಬ್ದಪ್ರಯೋಗದಲ್ಲಿಯೂ, ಅದಕ್ಕಿಂತ ಚುರುಕಾದ ತಿನಿಸುಗಳಲ್ಲಿಯೂ ಆಕೆ ತುಂಬ ಆಸಕ್ತಳು (ಸಾಸಮಾ. ೮೪). ೮. ಚತುರ; ಚಾಲಾಕಾದ: ಎಂತಹ ಚುರುಕು ಹುಡುಗಿ (ಮಹಾತ್ಮಾ. ೯೨).

**ಚುರುಕಿನವ**=ಬುದ್ಧಿವಂತ; ಚಾಲಾಕು ವ್ಯಕ್ತಿ: ಹುಡುಗ ಒಳ್ಳೇ ಚುರುಕಿನವನಾಗಿದ್ದ (ಕಾವೇರಿ. ೧೯೦). **ಚುರುಕುಮಾಡು**=ವೇಗಗೊಳಿಸು; ಶೀಘ್ರಗೊಳಿಸು: ಕುದುರೆಯನ್ನು ಚುರುಕುಮಾಡಿದರು (ಕಳಹು. ೩). **ಚುರುಕುಮುಟ್ಟಿಸು**=(ಆಲಂ) ಹಿಂಸೆಮಾಡು; ನೋಯಿಸು: ಪೋಲೀಸರು ಅವನಿಗೆ ಚನ್ನಾಗಿ ಚುರುಕುಮುಟ್ಟಿಸಿದರು (ರೂಢಿ). **ಚುರುಕುಮೆಣಸಿನಕಾಯಿ**=೧. ಒಂದು ಬಗೆಯ ಮೆಣಸಿನಕಾಯಿ; ಲವಂಗ ಮೆಣಸಿನಕಾಯಿ: ಒಂದಷ್ಟು ಚುರುಕುಮೆಣಸಿನಕಾಯಿ ಕೊಂಡುಕೊಂಡು ಬಾ (ರೂಢಿ). ೨. (ಆಲಂ) ಚಟುವಟಿಕೆಯಿಂದ ಕೂಡಿರುವವನು: ಆ ಹುಡುಗ ಚುರುಕುಮೆಣಸಿನಕಾಯಿ (ರೂಢಿ).

[ ದೇ.II ತಮಿ. ಚುರುಚುರುಪ್ಪು; ಮಲ.ಚುರುಕ್ಕು; ತುಳು. ಚುರುಕು; ಕೊಡ. ಚುರೀಕೀ; ತೆಲು. ಚುಱುಕು ]

**ಚುಱುಚುಱಿಗ** (ನಾ). ಚುರುಕಾದ ನಡಗೆಯುಳ್ಳವನು; ವೇಗಶಾಲಿ: "ಉತ್ತಾಳಃ, ತ್ವರಿತಃ—ಈ ೨ ಚುಱುಚುಱಿಗಂ" (ಹಲಾಯು. ೬೦-೨೦೩).

[ ಚುಱುಚುಱು$_0$ + – ಇಗ ]

**ಚುಱ್ಱನೆ** (ಅ). ವೇಗವಾಗಿ; ರಭಸದೊಡನೆ: ಅಚ್ಚುಳಕೋಲಿಂ ತಿಱ್ಱನೆ ತಿರಿಪಿ ದುರಾತ್ಮರ್ ಚುಱ್ಱನೆ ಕನ್ನೆತ್ತರೊಗೆಯೆ ತೊಲಗದೆ ಬಡಿದರ್ (ಧರ್ಮಾಮೃ. ೬-೧೯೧); ಚುಱ್ಱನೆ ಕೊಂದಿಕ್ಕಿದವು (ಜಂಪ್ರಸಾಂ. ೮-೩೨).

**ಚುಱ್ಱಚುಱ್ಱನೆ** (ದ್ವಿರುಕ್ತಿ): ಕಡುಗಾಯ್ದ ತೀವ್ರಖರಕರಪ್ರಕರಮಂ ಚುಱ್ಱಚುಱ್ಱನೆ [ಪಾಠಾಂ. ಚುಟಚುಟನೆ] ಸುಡೆ (ಗಿರಿಕ. ೯-೨೬ ವ).

[ ಚುಱ್ + – ಅನೆ$_1$ ]

**ಚುಱ್ಱನ್** (ಕ್ರಿ). ಚುರುಗುಡು; ಸುಡು: ಮಹಾಕ್ಷುಧಾಗ್ನಿಯೇೞ್ಗೆಗೆ ಬಿಸಿಲಟ್ಟಿ ಪೆರ್ಚುವ ಪಿಪಾಸೆಗೆ ಚುಱ್ಱನುತಿರ್ಪ ಕಲ್ಲ ಬೆಂಕೆಗೆ ಬಿಡದೊಂದು ಮಗ್ಗುಲಿರವಿರಂಗಿನಿತಟ್ಟದೆ . . . ಹೃದಯಂ ಕುಳಿರ್ಕೊಳುತುಮಿರ್ದುದು (ವರ್ಧಪು. ೧೨-೩೩). [ ಚುಱ್ + ಎನ್$_1$ ]

△ **ಚುಟ್ಟು**$_3$ 'ಚುರ್ಚು$_2$' ನೋ.

**ಚೂ** (ನಾ). ನಾಯಿಯನ್ನು ಇತರರ ಮೇಲೆ ನುಗ್ಗುವಂತೆ ಹೇಳುವ ಮಾತು. 'ಚೂಬಿಡು' ಪರಾ.

**ಚೂಕ** (ನಾ). ತುಚ್ಛನಾದವನು; ಅಲ್ಪ; ನೀಚ: ಸೇರದಿವರ ಸಂಗ . . . ಲೋಕಾಪವಾದವ ಸೈರಿಸುವ ಚೂಕ ಗಳಿಗೆನುತಸುರಾರಿ ನಗುತಿರ್ದ (ಅಕ್ರೂಚ. ೬-೭೭). [ <ಸಂ. ಶೂಕ./ತಮಿ. ಚೂಕ್ಕ ]

**ಚೂಕಿ** 'ಚೂಕು' ನೋ.

**ಚೂಕು,** ಚುಕಿ, ಚೂಕಿ (ನಾ). ತಪ್ಪು; ನ್ಯೂನತೆ; ಲೋಪ: "ಚೂಕು = ತಪ್ಪು; ಅಪರಾಧ" (ಜಾನಕೋ. ೫೭). **ಚುಕಿ:** (ಕ್ರಿಸ್‌ಗೆ. II, ೫೪೭). **ಚೂಕಿ:** (ವ್ಯಗೆಜೆ. IV, ೭೭೭); ಚೂಕಿಯಲ್ಲಿ ಯಾರ ಲುಕಸಾನಿ ಇದ್ದಾಗ್ಯೂ ತತ್ಕಾಲವೇ ಬರಿದು ತಿಳಿಸಬೇಕು (ಮುಂಬವ್ಯಾ. ೯೩).

[ ←ಹಿಂ. ಮರಾ. ಚೂಕ್./ಪ್ರಾ. ಚುಕ್ಕ ]

**ಚೂಕುನ್ನ** (ನಾ). ೧. ಚೂ ಎಂದು ಅಟ್ಟುವ ನಾಯಿ. ೨. (ಆಲಂ) ಹೇಳಿದಂತೆ ಕೇಳುವವನು: ಧರ್ಮಜಗೆ ಪಟ್ಟಮಾದರೆ ರಾಜ್ಯದ ಕನ್ನೆಗರಸಹರವರ ಪಾರಂಪರೆಯು ಪುತ್ರರಿನ್ನು ಸಂದೇಹಮೇತಕೆಯಿಕ್ಕು ಪಡೆಯ ಚೂಕುನ್ನರಾದೆವೆ ಮಹಾದೇವ (ಲಕ್ಷ್ಮಭಾ. ೩೨-೮).

[ ಚೂ + <ಕುನ್ನಿ$_1$ ]

**ಚೂಚಕ**$_1$ 'ಸೂಸಕ' ನೋ.

**ಚೂಚಕ**$_2$ (ನಾ). = ಚೂಚುಕ: ಇಂಬೊಪ್ಪುವ ಕುಕ್ಷಿ ಚೆಲ್ವನೊಳಕೊಂಡಾ ಚೂಚಕಂ (ಲೋಕೋಪ. ೧೧-೭೦); ಬೆಳೆದು ಕೊಬ್ಬಿದ ನಡುವನು ಕಂಡು ಮೊಗಗಂದಿದೊಲು ಚೂಚಕಗಳೊಪ್ಪಿದವು (ಜಂಪ್ರಸಾಂ. ೪-೪೩).

[ <ಸಂ. ಚೂಚುಕ ]

**ಚೂಚಿಸು** (ಕ್ರಿ). ನೋಡು; ತಿಳಿ; ಪರೀಕ್ಷಿಸು (?): ದಶಮುಖ ನೊರ್ಮೆಯೆ ಚೂಚಿಸಲಾಟಿಸಿ ದಶಮುಖನಳಿಪಿಂ ನೋಡುತ್ತಿರ್ದಂ (ಕುಮುರಾ. ೯-೮). [ ಚೂಚು ? + –ಇಸು$_3$./ತೆಲು. ಚೂಚು ]

**ಚೂಚು**$_1$ 'ಚುಂಚು$_2$' ನೋ.

**ಚೂಚು**$_2$ (ಗು). ಚೂಪಾದ; ಮೊನಚಾದ. 'ಚೂಚುಗದ್ದ' ಪರಾ.

[ ? ]

**ಚೂಚುಕ** (ನಾ). ಮೊಲೆಯ ತೊಟ್ಟು: ಪೊಂಗೊಡನಂ ತಮಾಳಪಲ್ಲವದೊಳ್ ಮುಚ್ಚಿದಂದದೊಳೆ ಚೂಚುಕಮಾಂತುದು ಕರ್ಪಂ (ಪಂಪಭಾ. ೧-೧೨೩); ಹೃದಯದ ಕಾಳಿಕೆಯೆನೆ ಸೊಗಯಿಸಿದತ್ತು ಮೇಚಕತೆ ಚೂಚುಕದೊಳ್ (ಚಂದ್ರಪು. ೩-೮೭); ಚೂಚುಕಂ ಕರ್ಪಂ ತಳೆಯೆ (ರಾಮಾಶ್ವ. ೨೦-೭).

[ ಸಂ. ]

**ಚೂಚುಗದ್ದ** (ನಾ). ಚೂಪಾಗಿರುವ ಗದ್ದ ; ಮೊನಚಾದ ಗದ್ದ : ಒಂದೆರಡು ಕೆಂಪುಹನಿಗಳು ಅವರ ಚೂಚುಗದ್ದದ ಮೇಲೆ ಕುಳಿತಿದ್ದವು (ರಂಗರೋ. ೭೭). [ ಚೂಚು₂ + ಗದ್ದ (<ಗಡ್ಡ₁) ]

**ಚೂಟ್** (ನಾ). ಬಿಟ್ಟುಬಿಡುವುದು; ಬಿಟ್ಟು ಹೊರಡಲು ಸೂಚನೆ. 'ಚೂಟಾಟ' ಪರಾ. [ ←ಹಿಂ. ಛೂಟ್ ]

**ಚೂಟಾಟ,** ಚೂಡಾಟ, ಜೂಟಾಟ (ನಾ). ಒಂದು ಬಗೆಯ ಆಟ ; ಚೂಟ್ ಎಂದು ಹೇಳಿದ ಕೂಡಲೆ ಒಬ್ಬರು ಉಳಿದವರನ್ನು ಅಟ್ಟಿಸಿಕೊಂಡು ಹೋಗಿ ಮುಟ್ಟುವ ಆಟ; ಮುಟ್ಟಾಟ : ಚಂದ್ರ ಮೋಡಗಳೊಡನೆ ಚೂಟಾಟವಾಡುತ್ತಾ ದಿಗಂತದ ಕಡೆಗೆ ಓಡುತ್ತಿದ್ದ (ಮುರುಕು. ೬೨); ಒಂದರ ಹಿಂದೆ ಒಂದು ಮುಚ್ಚಿಟ್ಟುಕೊಳ್ಳುತ್ತಾ ಅವು ಚೂಟಾಟವಾಡುತ್ತಿರುವಂತೆ ಕಾಣುತ್ತಿದ್ದವು (ಹ್ಯಾಲಿಮ. ೨೭). **ಚೂಡಾಟ :** ಎಳೆಗಾಳಿಗೆ ಚೂಡಾಟವಾಡುತ್ತಿದ್ದ ನೀಳಕೇಶ ಹಾರಿ ನಾಗೇಂದ್ರನ ಮೊಗಕ್ಕೆ ಕಚಕುಳಿಯಿಟ್ಟವು (ಸಿಡಿಲು. ೩೭). **ಜೂಟಾಟ:** ಒಂದು ಸಂಜೆ ಹುಡುಗಿಯರೆಲ್ಲರೂ ಜೂಟಾಟವಾಡುತ್ತಿರುವಾಗ ಮಾಧವಿಯು . . . ಬಿದ್ದುಬಿಟ್ಟಳು (ಮೊಗ್ಗು. ೪೭) ; ಮಕ್ಕಳೆಲ್ಲರೂ ಜೂಟಾಟ ಆಡುತ್ತಿದ್ದರು (ರೂಢಿ).
[ ಚೂಟ್ + ಆಟ ]

**ಚೂಟಿ₁** 'ಸೂಟಿ₁' ನೋ.

**ಚೂಟಿ₂** (ನಾ). ಗುರಿ ; ಲಕ್ಷ್ಯ : (ಕ).
[ ದೇ.॥ ತುಳು. ಚೂಟ ; ತೆಲು. ಸೂಟಿ ]

**ಚೂಟಿ₃** 'ಸೂಟಿ₂' ನೋ.

**ಚೂಟಿಕಾತಿ** (ನಾ). ಚುರುಕಾಗಿರುವವಳು; ಚತುರೆ: ಬೇಟದ ಪದನೇನು ಕೂಟದ ಕುಜುಹೇನು . . . ರಂಗಾಯೆಂಬ ಚೂಟಿಕಾತಿಯನೆಂದೀಕ್ಷಿಪೆನೊ (ಶತಸಾಂ. ೨೯-೫೩). [ ಚೂಟಿ₁ (<ಸೂಟಿ₁) + – ಕಾತಿ₅ ]

**ಚೂಟು₁** 'ಚಿವುಟು' ನೋ.

**ಚೂಟು₂** 'ಸೂಟಿ₁' ನೋ.

**ಚೂಟುಗಾರ** (ನಾ). ಚದುರ ; ಉಪಾಯಗಾರ : (ಕ).
[ ಚೂಟು₂(<ಸೂಟಿ₁) + – ಗಾರ (<–ಕಾಱ) ]

**ಚೂಡ₁** (ನಾ). ೧. ಶಿಖೆ ; ಜುಟ್ಟು. ೨. (ನವಿಲು, ಹುಂಜ ಮುಂತಾದುವುಗಳ) ತಲೆಯ ಮೇಲಿನ ತುರಾಯಿ,–ಕೊಟ್ಟು: "ಶಿಖಾ ಚೂಡಮೆನಲಾ ಕೊಟ್ಟು " (ಮಂಗರಾ. ೫೦-೩). ೩. ಶಿಖರ ; ತುದಿ. 'ಚೂಡಾಗ್ರ' ಪರಾ. [ <ಪ್ರಾ. ಚೂಡಾ. / ಸಂ. ಚೂಡಾ ]

**ಚೂಡ₂** (ನಾ). ಗಂಟುಗಂಟಾಗಿರುವ ಕೂದಲು ; ಜಡೆಗಟ್ಟಿರುವ ಕೂದಲು : "ಚೂಡ ಜೂಟ" (ಚತುನಿ. ೯೩) ; ಹರನ ಚೂಡದಲ್ಲಿ ಹಾರುತ್ತಿದ್ದ ಆ ಸುಧಾಂಶುಲೇಖೆಯು ಜಗತ್ತಿನಲ್ಲಿ ಎಲ್ಲೆಲ್ಲಿಯೂ ಕಾಣಿಸಲಿಲ್ಲ (ಕೋಹಿನೂ. ೭). [ <ಸಂ. ಜೂಟ ]

**ಚೂಡಕ** (ನಾ). ಜಡೆಯಲ್ಲಿ ಧರಿಸುವ ಒಂದು ಬಗೆಯ ಚಿನ್ನದ ಆಭರಣ; ಜಡೆಬಿಲ್ಲೆ : (ಕ). [ ಸಂ. ]

**ಚೂಡಾ** 'ಚಿವಡಾ' ನೋ.

**ಚೂಡಾಂತ** (ನಾ). ಅತ್ಯಂತ ಕೊನೆಯದು; ತುತ್ತತುದಿ: ಜಗತ್ತಿನಲ್ಲೇನು ನನ್ನ ಪ್ರಾರ್ಥನೆ ಒಂದೇ ಚೂಡಾಂತವೆ ? (ಇಪ್ಪಕ. ೨೨೩).
[ ಸಂ. (ಚೂಡಾ + ಅಂತ) ]

**ಚೂಡಾಕರಣ** (ನಾ).(ಮೊದಲನೆಯ ಬಾರಿಗೆ) ಗಂಡುಮಕ್ಕಳಿಗೆ ತಲೆಯ ಕೂದಲನ್ನು ತೆಗೆಸುವ ವಿಧಿ ; ಚೌಲ. ☞ ಷೋಡಶಸಂಸ್ಕಾರಗಳಲ್ಲಿ ಒಂದು: ಚಂದ್ರಾಪೀಡಂ ಪ್ರತಿದಿನಂ ಪ್ರವೃದ್ಧಮಾನನಾಗೆ ಚೂಡಾಕರಣಾದಿ ಕ್ರಿಯಾಕಲಾಪಮುಮಂ ಮಾಡುತ್ತುಂ (ಕಾದಂಪೂ. ೪೩೩).
[ ಸಂ. (ಚೂಡಾ + ಕರಣ) ]

**ಚೂಡಾಕರ್ಮ** (ನಾ).=ಚೂಡಾಕರಣ : ಆ ಅರಸುಮಕ್ಕಳಿಗೆ ಐದು ವರ್ಷ ತುಂಬುತ್ತಲೆ . . . ಚೂಡಾಕರ್ಮವನ್ನು ಮಾಡಿಸಿ (ಭೀಷ್ಮಜ.೫೦); ಅವರವರ ಕುಲಾಚಾರದ ಪ್ರಕಾರ ಆಯಾಕಾಲದಲ್ಲಿ ಚೂಡಾಕರ್ಮವನ್ನು ಮಾಡುವುದು (ಆರ್ಯಧ. ೧೨೩). [ ಸಂ. (ಚೂಡಾ + ಕರ್ಮ) ]

**ಚೂಡಾಗ್ರ** (ನಾ). ಶಿಖರದ ತುದಿ,–ಕೊನೆ : ಆಮ್ರಕುಂಜದ ಮೇಲ್ಭಾಗದಲ್ಲಿ ಬೆಳ್ದಿಂಗಳದ ಗುಣ್ಣೆಗೆ ನುಣ್ಣಾಗಿ ಕಂಗೊಳಿಸುವ ನಮ್ಮ ಕಿಲ್ಲೆಯ ಚೂಡಾಗ್ರ ಭಾಗ (ಇಪ್ಪಕ. ೧೯೨). [ ಸಂ. (ಚೂಡಾ + ಅಗ್ರ) ]

**ಚೂಡಾಟ** 'ಚೂಟಾಟ' ನೋ.

**ಚೂಡಾಮಣಿ** (ನಾ). ೧. ತಲೆಯಲ್ಲಿ ಧರಿಸುವ ರತ್ನ,–ರತ್ನದ ಆಭರಣ; ಬೈತಲೆಬಟ್ಟು : "ಶಿರದ ರತ್ನ ಚೂಡಾಮಣಿಯೆನಿಕ್ಕುಂ" (ಮಂಗರಾ. ೯೮-೧೯); ಪ್ರಣತ ರಿಪುನೃಪತಿಚೂಡಾಮಣಿರಂಜಿತಪಾದಂ (ಕಾದಂಪೂ.೦೯); ಹನುಮಂತನು ಒಪ್ಪಿ ಸೀತೆ ಗುರುತಿಗೋಸ್ಕರ ಕೊಟ್ಟ ಚೂಡಾಮಣಿಯನ್ನು ತೆಗೆದುಕೊಂಡು ರಾಮನ ಬಳಿಗೆ ಹೋದನು (ನೀತಿಚಿಂ. VII, ೨೦). ೨. (ಅಲಂ) ಶ್ರೇಷ್ಠವಾದ ವ್ಯಕ್ತಿ ಅಥವಾ ವಸ್ತು: ವಿಶದಾತ್ಮೀಯ ವಂಶಕ್ಕೆ ಚೂಡಾಮಣಿಯುಂ . . . ಬಂದು ಕಂಡು (ಪಂಪಭಾ. ೭-೯೫) ; ಉಪಮಾತೀತಂ ಕೃತಿ ಶಾಂತಿಪುರಾಣಂ ಸಲೆ ಪುರಾಣಚೂಡಾಮಣಿಯೆಂದು ಪಶಮದಿಂ ಬರೆಯಿಸಿ (ಶಾಂತಿಪು ೦-೩೮) ; ಸಕಳದಿಗನ್ತರಪ್ರವರ್ತ್ತಿತಕೀರ್ತ್ತಿಯನ್ನೞ್ಬರ ಚೂಡಾಮಣಿ (ಶಾಇಇ. XX, ೪೭-೦೪ ; 1072) ; ನೀನು ಶೀಲಸಂಪನ್ನೆಯಾಗಿ ಕನ್ನಡಕನ್ನೆಯರ ಚೂಡಾಮಣಿಯಾಗಿರುವೆ (ದಾನಚಿಂ.೦೭೭).
[ ಸಂ. (ಚೂಡಾ + ಮಣಿ) ]

**ಚೂಡಾಯುತ** 'ಚೂಡಾಯ್ತ' ನೋ.

**ಚೂಡಾಯ್ತ,** ಚೂಡಾಯುತ (ನಾ). ಒಂದು ಬಗೆಯ ಆಯುಧ (?) : 'ಜೋಡು ಸೀಸಕವಾಂತ ಸಬಳಿಗರೊತ್ತಂಡ ಚೂಡಾಯ್ತ ಹರಿಗೆ ಬಿಲ್ಲವರ ಖೇಡೆಯವಡೆದ ರಾವುತ ಜೋದ ರಥಿಕರ ನೋಡ (ಮೋಹತ. ೨೦-೫೪). **ಚೂಡಾಯುತ:** ಕಡಿತಲೆ ಚೂಡಾಯುತ ಕಾಗಿನ ಕಾಸೆ ಉಡಿಗೆ ಬದ್ದುಗೆಯ ಕಠಾರ ಹಿಡಿದ ಹರಿಗೆ (ಶ್ರೀಪಾಲ. ೦೩-೭೩) ; ರನ್ನದ ಬಾಹು ಕಯ್ಯಂಬು ಹೊನ್ನ ಚೂಡಾಯುತ ಮೆಟಿಯೆ (ಕುರಾಸಾಂ. ೦೦-೨೦). [ ? ]

**ಚೂಡಾರತ್ನ** (ನಾ). ೧.=ಚೂಡಾಮಣಿ ೧: ವರತನುವಿನ ಕೈಯೊಳಭೇದ್ಯ ಕವಚಮುಮಂ ಚೂಡಾರತ್ನ[ಪಾಠಾಂ. ಚೂಡಾಮಣಿರತ್ನ]ಮುಮಂ ರತ್ನ ಕಟಕಂಬೆರಸು ಪಲವುಂ ಪರಾರ್ಧ್ಯ ರತ್ನಂಗಳಂ ಕೊಂಡು (ಆದಿಪು. ೦೩-೩ ವ); ಹೆಂಗಸರು ತೊಟ್ಟುಕೊಳ್ಳುತ್ತಿದ್ದ ಒಡವೆಗಳ ವೈವಿಧ್ಯ ದಂಗುಬಡಿಸುವಂಥದ್ದಾಗಿದೆ . . . ಚೂಡಾರತ್ನ, ನೂಪುರ, ನೇವುರ (ನಂಜುಂಡ. ೦೨೭). ೨.=ಚೂಡಾಮಣಿ ೨: ಕವಿಜನ ಚೂಡಾರತ್ನಂ ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ (ಅಜಿಪು. ೦-೮೦) ; ಯಾಕಮಬ್ಬೆಗಂ ಜನಿಯಿಸಿದಂ ಖ್ಯಾತಂ ಧರೆಯೊಳು ಪೆರ್ಗ್ಗಡೆ ಬೇತಂ ಮಂತ್ರಿಜನಮುಕುಟ ಚೂಡಾರತ್ನಂ (ಕಇಇ. ೮೧-೦೫-೪೦ ; 1117). [ ಸಂ. (ಚೂಡಾ + ರತ್ನ) ]

**ಚೂಡಾಲ** (ನಾ). ಒಂದು ಬಗೆಯ ಸುವಾಸನೆಯ ಹುಲ್ಲು ; ಕೊಡನಾರಿ ಹುಲ್ಲು ; ಭದ್ರಮುಸ್ತೆ: "ಚೂಡಾಲ–ನಾಗರಮುಸ್ತೆ, ಉಚ್ಚಟಿಗೆ" (ಒಷದಿ. ೫೮). [ ಸಂ. ಚೂಡಾಲಾ ]

**ಚೂಡಾಲು** 'ಚೌಡಾಲು' ನೋ.

**ಚೂಡಿ₁** 'ಸೂಟಿ₁' ನೋ.

**ಚೂಡಿ₂** 'ಸೂಟಿ₁' ನೋ.

**ಚೂಡಿಕೆ** (ನಾ). ತುದಿ ; ಶಿಖರ ; ಅಗ್ರಭಾಗ: ಷೋಡಶಪ್ರತಿಯ ಕರಣಿಕರೊಳಗ್ರಣಿಯೆನಿಪ ಗಾಡಿಕಾಱಂ ವಿರೂಪಾಕ್ಷನಿರವಂ ಮನಶ್ಚೂಡಿಕಾಪಟದೊಳಂಕಿಸಿ ಬಳಿಕುಳಿದ ಬಾಹ್ಯವೃತ್ತಿಯಂ ಬಳಸುವಚಲಂ (ಪದ್ಮರಾ.೫-೭).
[ ಸಂ. ಚೂಡಿಕಾ ]

**ಚೂಡೆ** (ನಾ). ೧. ಶಿಖೆ ; ಜುಟ್ಟು. ೨. (ನವಿಲು, ಹುಂಜ ಮುಂತಾದುವುಗಳ) ತಲೆಯ ಮೇಲಿನ ತುರಾಯಿ,-ಗೊಂಡೆ : "ಶಿಖಾ, ಚೂಡಾ–ಈ ೨ ನವಿಲ ಕೊಟ್ಟು" (ಹಲಾಯು. ೪೧-೮೯). ೩. ಸಿರಪೇಶು; ಕಿರೀಟದ ತುದಿಯ ಗುಚ್ಛ,-ಕುಚ್ಚು. ೪. ತಲೆ; ಶಿರಸ್ಸು: "ಚೂಡಾ, ಶಿಖಾ – ಈ ಎರಡಱಲ್ಲಿಯುಂ ಶಿರಸ್ಸೆಂಬುದು " (ಹಲಾಯು. ೧೩೩ ೧೩). ೫. ಶಿಖರ ; ತುದಿ. ೬. ಒಂದು ಬಗೆಯ ತೋಳುಬಳೆ ; ವಂಕಿ : ಅಳವಡಿಸಿ ತೋಳ ಬಾಪುರಿ ಬಂದಿ ಭುಜಕೀರ್ತಿಗಳನು ಪೊಂಬಳೆದೋರೆ ಕಂಕಣಂ ಚೂಡೆಯು (ನವಮೋ. ೧೧-೨೫) : ಕಂಕಣ ಚೂಡೆವ ವಂಕಿ ಬಾಜುಬಂದ ಬಂಗಾರ ಬಳಿಯು ತಗಿರೆಂದ (ಲೋಕಗೀ. ೩೧೩).

[ ಸಂ. ಚೂಡಾ ]

**ಚೂಡೋದಯ** (ನಾ).=ಚೂಡಾಕರಣ : ಪಿಕಮೌನವ್ರತದುಂದುಭಿಧ್ವನಿ ಬಲಾಕಾದೃಶ್ಯ ಚೂಡೋದಯಾನಕರಾವಂ . . . ಚಾತಕೋದಕಕೇಳೀಕೃತ ತೂರ್ಯನಾದಮೆಸೆದತ್ತಂಭೋದನಿರ್ಘೋಷಣಂ (ಚಂದ್ರಪು. ೪-೩೫).

[ ಸಂ. (ಚೂಡಾ + ಉದಯ) ]

**ಚೂಣಿ** 'ಚೂಳಿ$_1$' ನೋ.

**ಚೂಣಿಗ** (ನಾ). ಸೈನ್ಯದ ಮುಂಭಾಗದಲ್ಲಿ ನಿಂತು ಕಾದುವವನು ; ಮುಂದಳದ ಯೋಧ : ಭಲರೆ ಭಲರತಿಬಲರೆ ಹಿಂಚದಿರಿನ್ನು ಹೊಯ್ ಹೊಯ್ ಚೂಣಿ[ಪಾಠಾಂ. ಣೆ]ಗರನು (ಕುವ್ಯಾಭೀ. ೪-೩) ; ರಕ್ತಪ್ರವಾಹ ಮಾದುದು ರಣಂ ಸಾಹಸವಿರಕ್ತರಾದರ್ ಖಳನ ಚೂಣಿಗರ್ (ಜಬಪು. ೨೪-೧೩) ; ಚೂಣಿಗರ ಚೌಕಳಿಸಿ ಕೆಡಹುತಂ (ನಂದಿಮಾ. ೧೩-೫೦).

[ ಚೂಣಿ(<ಚೂಳಿ$_1$) + – ಗ$_2$ ]

**ಚೂಣಿಗಾಳಗ** 'ಚೂಣಿಗಾಳೆಗ' ನೋ.

**ಚೂಣಿಗಾಳೆಗ,** ಚೂಣಿಗಾಳಗ (ನಾ). ಸೈನ್ಯದ ಮುಂಭಾಗದಲ್ಲಿ ನಡೆಯುವ ಯುದ್ಧ ; ಮುಂಚೂಣಿಯುದ್ಧ: ತೊಡಗಿತ್ತು ಚೂಣಿಗಾಳೆಗ [ಪಾಠಾಂ. ಕಾಳಗ]ದಲ್ಲಿ ತನತನಗೆ (ವೀರರ. ಹ. ೪೯೩-೨೩) ; ಚೂಣಿಗಾಳೆಗದ ಭಟರ್ ಎತ್ತಿದರೆ ಪಂಥ ಪಾಡುಗಳನು (ಜೈಮಿಭಾ. ೯-೧೫). **ಚೂಣಿಗಾಳಗ:** ಆಸುರದ ಭಟರವುಕಿ ಹಿಡಿದರು ಚೂಣಿಗಾಳಗವ (ಕೌಶಿರಾ. ೩೩-೧೩).

[ ಚೂಣಿ(<ಚೂಳಿ$_1$) + ಕಾಳೆಗ ]

**ಚೂಣಿನೋಟ** (ನಾ). ಕುಡಿನೋಟ ; ಕಟಾಕ್ಷ : ರಾಣಿಯರೋಲಗ ಹರೆದುದು ಪೆಣ್ಮಂಡೆಮಾಣಿಕವಹ ಪಟ್ಟದರಸಿ ಚೂಣಿನೋಟದ ಸೊಬಗಿಂದೆ ಪೂಗೋಲನ ಕಾಣಿಸಿದಳು ಕಾಂತನೆದೆಗೆ (ಮೋಹತ. ೨೨-೧೬).

[ ಚೂಣಿ (<ಚೂಳಿ$_1$) + ನೋಟ ]

**ಚೂಣಿಯಾಳ್** (ನಾ).=ಚೂಣಿಗ: ಕಾದವ ಪಾಣ್ಡ್ಯಾದಿಗಳು ಕಾದಿ ಗೆಲ್ದಂ ನರಸಿಂಹ್ವಂ ಚೂಣಿಯಾಳೊಳಾ ತಿಮಿಳವಡೆ ಪಡಲ್ವತ್ತಡಳ್ವಾಡೆ ಪಾಣ್ಡ್ಯಂ ಸರಿದಂ (ಎಕ. XVI, ಚಿಕ್ನಾ. ೭೦-೬ ; 1285).

[ ಚೂಣಿ (<ಚೂಳಿ$_1$) + ಆಳ್$_3$ ]

**ಚೂತ** (ನಾ). ಮಾವಿನ ಮರ ; ಸಹಕಾರ : ನವಚೂತಂ ತಳಿರ್ವಂದದಿಂ ತಳಿರ್ಗುಮೇ ಸ್ಥಾಣೂತ್ಕರಂ ಚೈತ್ರದೊಳ್ (ಜಗವಿ. ೧-೧೩) ; ಪಾಡುವೆಳ ಕೋಗಿಲೆಗಳಲಿ ರಂಜಿಸುವುದಿದು ಚೂತ (ನಿಭಾಗ. ೧೧-೨೫-೨೩). [ ಸಂ. ]

**ಚೂತಕ** (ನಾ). ಸಣ್ಣ ಜಲಾಶಯ ; ಬಗರಗೆ ; ಹೊಂಡ : "ಚುರೀ, ಚುಂಡೀ, ಚೂತಕಃ – ಈ ೩ ಬಗರಗೆ " (ಹಲಾಯು. ೧೧೩-೬೨). [ ಸಂ. ]

**ಚೂತಕುಜ** (ನಾ). ೧. ಮಾವಿನ ಮರ. ೨. [ಛಂದ] ಪ್ರತಿಯೊಂದು ಚರಣದಲ್ಲಿ ಇಪ್ಪತ್ತೆರಡು ಅಕ್ಷರಗಳಿರುವ ಒಂದು ಸಮವೃತ್ತದ ಹೆಸರು: ಅನಿಲಂ ಭೂಚಕ್ರವಾಕಂ ಶ್ವಸನ ಶೀತಕರಾಗ್ನಿಯುಗ್ಮಂಗಳಿಂ ಮುಂದೆ ನೆಗಟ್ದಾ ಭೂತೇಶಂ ನಿಲಲ್ . . . ಚೂತಕುಜಾಹ್ವಯಂ ನಾಮ ವೃತ್ತಮಕ್ಕುಂ (ಛಂದೋಂಬು. ೨-೧೮೬). [ ಚೂತ + ಕುಜ ]

**ಚೂತಡಿಂಭ** (ನಾ). ಮಾವಿನ ಕುಡಿ,-ಚಿಗುರು ; ಮಾಂದಳಿರು : ಜೋಕೆ, ಜೋಕೆ, ಚೂತಡಿಂಭ, ನಿನ್ನ ಕಂಡರಯ್ಯೊ ಎಂಬ ಒಬ್ಬ ಕೂಡ ಇಲ್ಲದಿಂದು ನೀನು ನನ್ನಿ ಬೆಳಕ ತಂದು ತಮವ ಕೆಣಕೆ ಮುಳಿವುದೇನೊ ? (ಮಾಂದಳಿ. ೩೬-೪). [ ಚೂತ + ಡಿಂಭ ]

**ಚೂತತತಿ** (ನಾ). ಮಾವಿನ ಮರಗಳ ಗುಂಪು ; ಮಾವಿನ ತೋಪು : ತೊಳಪೆಳವೆಱೆಯುಂ ಮೊರೆವಳಿಕುಳಂಗಳುಂ . . . ಮುಳಿಸಂ ಕಟಲ್ಚಿ ಕಳೆದುವು ಕಳಿಕಾಂಕುರ ಚೂತತತಿಗಳುಂ ಕಾಮಿಗಳಾ (ಕವಿರಾ. ೨-೬೯).

[ ಚೂತ + ತತಿ$_2$ ]

**ಚೂತದ್ರುಮ** (ನಾ). = ಚೂತಕುಜ ೧ : ರಕ್ತಾಶೋಕ ಚೂತದ್ರುಮ ಸಮುದಿತ ಬಾಲಪ್ರವಾಳ ಧ್ವಜಂ ಬಂದುದು ಚಂಚಚ್ಚಂಚರೀಕ ಪ್ರಕರಶುಕ ಕುಲಾಲಾಪ ಕಾಂತಂ ವಸಂತಂ (ಕಾದಂಉ. ೭೭೮). [ ಚೂತ + ದ್ರುಮ ]

**ಚೂತನಂದನ** (ನಾ). ಮಾವಿನ ತೋಟ,-ವನ : ಚಂಪಕಗಂಧಿ ಮಂದವನದೊಳ್ ಕಟಿಪಲ್ ಬರೆ ಮಾಣ್ದು ಮಾರುತೋತ್ಕಂಪಿತ ಚೂತನಂದನದೊಳಿನ್ನಿರು ನೀನೆನೆ ಮಾವಿನಳ್ಳಿಗೊಂಬಂ ಪಿಡಿದೊಂದು ಕೆಯ್ವರಸು ಮೆಯ್ಗರೆದಳ್ (ಶಾಂತಿಪು. ೮-೯೩). [ ಚೂತ + ನಂದನ ]

**ಚೂತಲತೆ** (ನಾ). ಮಾವಿನ ಮರ : ನಂದನದೊಳಾಂ ನೀರ್ವೊಯ್ದು ಬೆಳೆಯಿಸಿದ ಚೂತಲತೆ ಪೂತುದು (ಜೈಮಿಭಾ. ೨೯-೩೦). [ಚೂತ + ಲತೆ]

**ಚೂತವನ** (ನಾ). = ಚೂತನಂದನ : ಕಿಕ್ಕಿಱಿಗಿಱಿದು ಬೆಳೆದಡರೆ ಕೊಳೆ ಪೂತ ಚೂತವನಮೆ ಬಾಟಿವೇಲಿಯಾಗೆ ಪೊದರ್ತಗುಟ್ದು ಕವಲ್ತೆಳದಳಿಸುವ ಲಸದಶೋಕೋದ್ಯಾನ ಮಧ್ಯದೊಳ್ (ಶಾಂತಿಪು. ೪-೯೫ ವ) : ವಿರಚಿಸಿದಂ . . . ಸದ್ವಿನುತ ಕರ್ಣಾಟಕವಿಚೂತವನಚೈತ್ರ ಲಕ್ಷ್ಮೀಶನೆಂಬೊರ್ವನು . . . ವಿಮಲಜೈಮಿನಿಭಾರತದ ಕಥೆಯನು (ಜೈಮಿಭಾ. ೧-೧೧). [ ಚೂತ + ವನ ]

**ಚೂತಾಂಕುರ** (ನಾ). ಮಾವಿನ ಚಿಗುರು : ಪಂಜರದ ಗಂಡುಕೋಗಿಲೆಗಳ್ಗೆ ಚೂತಾಂಕುರದ ಕುಟುಕನಿಕ್ಕಲುಂ (ಕಾದಂಪೂ. ೧೧೦೬) ; ನೀಂ ಬರಂ ಬವರಂ ಬರ್ಕುಮೆ ಸೋಲಿಸಲ್ಕನಿಪನಂ ಚೂತಾಂಕುರಂ ಸಾಲದೇ (ಮಲ್ಲಿಪು. ೧೪-೩೬) : ಎಲೆ ಚೂತಾಂಕುರ ನಿನ್ನಂ ಮಲರ್ವಿಲ್ಲಂ ತಳೆದ ಕಾಮದೇವಂಗಿತ್ತಂ . . . (ಎಂದು ಮಾವಿನ ಮೊಗ್ಗನ್ನು ಎಸೆಯುವಳು) (ಶಾಕುಂತ. ೮೧-೧೩೪).

[ ಚೂತ + ಅಂಕುರ ]

**ಚೂತೋತ್ಕರ** (ನಾ). = ಚೂತತತಿ : ಸಕಳೋದ್ಯಾನಂಗಳೊಳ್ ಸಂತತ ಸರಸಫಳವ್ರಾತದಿಂ ಸೇವ್ಯಮಲ್ಲಲ್ಲಿ ಕರಂ ಖರ್ಜೂರವೃಂದಂ . . . ಚೂತೋತ್ಕರಂ ದಾಡಿಮತತಿ (ಪುಷ್ಪಪು. ೯-೧೫). [ ಚೂತ + ಉತ್ಕರ ]

**ಚೂಪು$_1$** (ನಾ). ೧. ನೋಟ ; ಕಾಣ್ಕೆ ; ದೃಶ್ಯ : (+). ೨. ಕಣ್ಣು ; ನೇತ್ರ : (+). [ ←ತೆಲು. ಚೂಪು ]

**ಚೂಪು$_2$** 'ಚೀಪು$_2$' ನೋ.

**ಚೂಪುಗಲ್ಲು** (ನಾ). ಚೂಪಾದ ಕಲ್ಲು ; ಮೊನಚಾದ ಕಲ್ಲು : ಅವನು ಕೈಯಲ್ಲಿ ಒಂದು ಚೂಪುಗಲ್ಲು ತೆಗೆದುಕೊಂಡು ಬೇವಿನ ತೊಗಟೆ ಕೆತ್ತಹತ್ತಿದನು (ಬಾಬಲ. ೨೬). [ ಚೂಪು$_2$ (<ಚೀಪು$_2$)+ಕಲ್ಲು (<ಕಲ್$_3$) ]

**ಚೂಪುಗಾರಿಕೆ$_1$** (ನಾ). ತೋರಿಕೆ ; ಆಡಂಬರ ; ಬೂಟಾಟಿಕೆ : "ನೀನು ಚೂಪುಗಾರಿಕೆಯ ಕೆಲಸ ಇದು ಎಂದು ತಿಳಿದಿದ್ದೆಯೋ ? " ಎಂದು ಹೀಯ್ಯಾಳಿಕೆ ಮಾಡಿದ (ಕೂನಭೀ. ೨೧೬).

[ ಚೂಪು$_1$ + – ಕಾರ$_1$ (< – ಕಾಱ) + – ಇಕೆ ]

**ಚೂಪುಗಾರಿಕೆ$_2$** (ನಾ). ಕುಶಲತೆ; ಚಾಲಾಕುತನ : ಆ ಪೊಡವಿಪಾಲಕನ ಸಂಭವಂ ಗಡ ತಾಯೆ ಚೂಪುಗಾರಿಕೆಯೊಳಂ ವಿದುರ್ತ್ತಮಾಶ್ವಮಂ (ಪರಶು. ೩೮-೪೭).

[ ಚೂಪು$_2$ (<ಚೀಪು$_2$) + – ಕಾರ$_1$ (< – ಕಾಱ) + – ಇಕೆ ]

**ಚೂಪುಗೊಳಿಸು** (ಕ್ರಿ). ಹರಿತಗೊಳಿಸು; ಹದನುಗೊಳಿಸು : ಕತ್ತಿ ಕತ್ತರಿಯನು ಸಾಣೆಯ ಹಿಡಿವರು ಸೂಜಿಯ ಚೂಪುಗೊಳಿಸುವರು (ಇಂಚಾಪ. ೭೦-೪೨). [ ಚೂಪು$_2$ (<ಚೇಪು$_2$) + ಕೊಳ್$_1$ + – ಇಸು$_3$ ]

**ಚೂಪುಗೋಲು** (ನಾ). "(ಬೇಲಿ, ಮೊ.ಗಳಿಗೆ ಉಪಯೋಗಿಸುವ) ಮರದ ಚೂಪುಗೋಲು ; ದಸಿ" (Pale. ಇಂಕನಿ).
[ ಚೂಪು$_2$ (<ಚೇಪು$_2$) + ಕೋಲು$_1$ (<ಕೋಲ್$_1$) ]

**ಚೂಪೇಣು**(ನಾ). ಹರಿತವಾದ ಮೊನೆ ; ಮೊನಚಾದ ತುದಿ : "ಬೆಣೆಯಾಕಾರದ ಹಲಗೆಯ ಚೂಪೇಣು" (Feather-edge. ಇಂಕನಿ).
[ ಚೂಪು$_2$ (<ಚೇಪು$_2$) + ಏಣು (<ಏಣ್) ]

**ಚೂಬಿಡು** (ಕ್ರಿ). ೧. ನಾಯಿಯನ್ನು ಮತ್ತೊಬ್ಬರ ಮೇಲೆ ನುಗ್ಗುವಂತೆ ಮಾಡು : ಅವನ ಮೇಲೆ ನಾಯಿಯನ್ನು ಚೂಬಿಟ್ಟನು (ರೂಢಿ). ೨. (ಆಲಂ) ವಿರುದ್ಧವಾಗಿ ನಿಲ್ಲಿಸು ; ಎತ್ತಿಕಟ್ಟು ; ಪ್ರೇರಿಸು : ಪಕ್ಕದ ಮನೆಯವರ ಮೇಲೆ ಇವರನ್ನು ಚೂಬಿಟ್ಟನು (ರೂಢಿ). [ ಚೂ+ಬಿಡು$_1$ ]

**ಚೂರ್** (ಕ್ರಿ). ಹರಿತವಾಗು ; ತೀಕ್ಷ್ಣವಾಗು. 'ಚೂರ್ಮೊನೆ' ಪರಾ.
[ <ಕೂರ್$_2$ ]

**ಚೂರಡಿಕೆ** (ನಾ). ಹೋಳು ಅಡಕೆ ; ಚೂರು ಮಾಡಿದ ಅಡಕೆ : ಎಲೆಗೆ ಸುಣ್ಣ ಹಚ್ಚಿ ಚೂರಡಿಕೆಯೊಂದನ್ನು ಬಾಯಿಗೆ ಹಾಕಿಕೊಂಡಳು (ರೂಢಿ).
[ ಚೂರು$_3$ + ಅಡಿಕೆ (<ಅಡಕೆ$_1$) ]

**ಚೂರಣ** (ನಾ). ಪುಡಿ ; ಹುಡಿ : "ಚೂರಣ — ಚೂರ್ಣ = ಹುಡಿ" (ಶಬ್ದಕೋ. ೧೩). 'ಚೂರಣಿಸು' ಪರಾ. [ <ಸಂ. ಚೂರ್ಣ ]

**ಚೂರಣಿಸು** (ಕ್ರಿ). ಪುಡಿಯಾಗುವಂತೆ ಮಾಡು : ತೇರು ಬ್ಯಾರೆನದಂತೆ ಸರ್ವವ ಚೂರಣಿಸಿ ಚಯನಿಚಯ ನೋಡೊಳತೂರುವನಿಗಂಡುಳಿದ ದನುಜರು ಪಾರಲಾಗಸಕೆ (ಜಿರಾಮಾ. ೭೮-೩೨). [ ಚೂರಣ + – ಇಸು$_3$ ]

**ಚೂರಿ, ಚುರಿ$_1$** (ನಾ). ಸಣ್ಣ ಕತ್ತಿ ; ಸುರಿಗೆ : ರಮಣನಿಲ್ಲದ ನಾರಿ . . . ಹಡೆದವಳ ಎದೆ ಕೊರಳ ಕೊಯ್ವಂಥ ಚೂರಿ (ಪುರಂದ. ೧-೧೪೮ ಅನುಪಲ್ಲವಿ); ಇಱಿವ ಬಲ್ಲೆಹದಿಂದ ತಱಿವ ಖಂಡೆಯ ಮೂಗ ಕೊಱೆವ ಕರದ ಚೂರಿಯಿಂದ . . . ಬಲ ನೊಂದು (ಕಂನವಿ. ೩-೭೭); ಚೂರಿಯನು ಬಾಳನ್ನು ಶೂರತ್ವದಿಂ ಪಿಡಿದು ಸಾರಿ ರಣದೊಳಗೆ ಸಾಗಲಾ ಚೂರಿಯ ಸೂಱೆ ನೋಡೆಂದ (ಸರ್ವಜ್ಞ. ೭೦೭) ; ಚೂರಿ ಹದ ಆದರೂ ಗಿಡ ಕಡಿಯಲಾರದು (ಗಾದೆ). **ಚುರಿ$_1$** : ಪರಶು ತೋಮರ ಕೊಂತ . . . ಪಿಂಡಿವಾಳಿಟ್ಟಿ ಚುರಿ ಭಾಕು (ಜಿನಮು. ೩೮-೧೨).

**ಚೂರಿಯಿಡು** = ಚೂರಿಹಾಕು : ಕಂಡ ದೃಶ್ಯ ಅವರ ಎದೆಗೇ ಚೂರಿಯಿಟ್ಟಂತಿತ್ತು (ಹೊಸಕ್ಷ. ೨೨). **ಚೂರಿಹಾಕು** = ಚೂರಿಯಿಂದ ಇರಿ : ಯಾವನೊಬ್ಬ ಚೂರಿಹಾಕಿ ಅಂತೆ ಮಸಣದಲ್ಲಿ ನೂಕಿ (ಪಯಣ. ೬೦-೧೨) ; ನೀನು ಚೀರಿಕೊಂಡೆಯಾದರೆ ಚೂರಿ ಹಾಕುತ್ತೇನೆ. ಇದು ನೋಡು (ಹೇಮಂತ. ೦೪೫). [ <ಸಂ. ಛೂರೀ ]

**ಚೂರಿಕೆ** (ನಾ). ತೀಕ್ಷ್ಣತೆ ; ಉಗ್ರತೆ (?) : ಭರದಿ ಸುತ್ತುತ ಬಿಗಿದು ಕಚ್ಚುತ ತೆರೆದು ಫಣಗಳ ಕಣಾಗಳಿಂದಲೆ ಸುರಿವ ಕಿಡಿಗಳ ಚೂರಿಕೆಯೊಳೊಪ್ಪಿರಲು ಕಾಳಿಯನು ನೆರೆದ ಗೋಪೀಜನವು ಕಾಣುತ ತರಳಗೀ ವಿಧಿಯಾಗಲೆವ್ವಾ ಹರಣವೇಕೆಂದೆನುತ ಮಡುವೊಗಲೆದ್ದರವರಂದು (ಕೃಕರ್ಣಾ. ೨-೪೦).
[ ಚೂರ್ + – ಇಕೆ ]

**ಚೂರಿತ** (ನಾ). = ಚುರಿತಕ (?) : ಕೊರಳು ಕಂಗಳೊಳಿರಲು ನಖದಲಿ ಬೆರಟು ಎರಡಕೆಯಿಯಿದು ಬಂದಡೆ ಹಿರಿದು ಮರ್ದಿಸೆ ಕರುಣೆ ಸುಖಿಪಳು ಬಹಳವೆಯಿದವಳು ಮೆರೆವ ಮೆಲ್ಲೆದೆಗೆಯಿ ತ್ರಾಡಣ ವರ ಸುನಾಭಿಗೆ ಬರಲು ಚೂರಿತ ಸ್ಮರನ ಮಂದಿರ ಜಘನಕೆಯಿತರೆ ಬೆರಳ ನಖಗಳನು (ಕಕ್ಕೋಳ. ೧೦-೫೯). [ ? ]

**ಚೂರಿಪಾನ** 'ಸೂರಿಪಾನ' ನೋ.

**ಚೂರಿಸು$_1$** (ಕ್ರಿ). ೧. ಚೂರುಚೂರುಮಾಡು ; ಪುಡಿಮಾಡು ; ನಾಶಗೊಳಿಸು : ಎಡಬಲಕೆ ತೂಳುವ ಮದೇಭವ ಕಡಿದು ಹರಹಿದನೌಕಿ ಚೂ[ಪಾಠಾಂ. ಘೂ]ರಿಸಿ ಗಡಣಿಸುವ ಭೂಪರಿಗೆ ಮಾಡಿದನಮರಪದವಿಯನು (ಕುಮ್ವಾದ್ರೋ. ೧೧-೧೩) : ಅಶ್ವವನ್ನೆದೆ ಮೀಂಟೆ ಕೂರಸಿಯಿಂ ಚೂರಿಸು ತೊಳಪೊಕ್ಕುರುಬುವ ಯವನ ಸಮೂಹಾಧೀಶನುರುಬೆಗಂದಿದಿರಾಂತಂ (ಕಳನ. ೨-೩೭). ೨. ಕಾಡು ; ಪೀಡಿಸು : ಚಾರಿಪರಿದು ಚಿಂತಿಸಿ ಚೇಱುತಱುಚುತ ಚೂರಿಸದಿಚ್ಚೆ ಚೈತನ್ಯ ಚೋರತ್ವವೆತ್ತಿದೆಯೆನೆ(ಶತಸಾಂ.೭೫-೮೩).
[ ಚೂರು$_3$ + – ಇಸು$_3$ ]

**ಚೂರಿಸು$_2$** (ಕ್ರಿ). ೧. ಇರಿ ; ತಿವಿ : ಪಾರ್ಥನ ಕಟ್ಟಳವಿಯಲಿ ಚೂರಿಸಿದ ರುಬ್ಬಣದ ಮೊನೆಗಳಲಿ (ಕುಮ್ವಾ.ಆ. ೨೦-೨೪) : ದುಶ್ಶಾಸನನ ಮಗನಿದಿರಾಗಿ ಖಡುಗದ ಮೊನೆಯ ಚೂರಿಸಿ (ಕುಮ್ವಾದ್ರೋ. ೬-೫೭) ; ಚತುರಂಗದ ಚಡಾಳತೆಯಿಂದ ಚೂರಿಸುವಸ್ತ್ರಶಸ್ತ್ರದಲಿ (ತೊರರಾ. ೬-೧೭-೨೯) ; ಚೂರಿಸುವ ಖಂಡೆಯದ ಕರದ ಬಹು ರೌದ್ರರಸಧಾರಣಾನನದ ಕಣ್ಗಳ ಕಿಡಿಯ (ಜಬಪು. ೪೨-೪೫). ೨. ಹರಡು ; ಚಾಚು ; ನೀಡು : ಕಾನಿಡುವ ಕಬ್ಬೊಗೆಯ ಚೂರಿಸುವಾನನದ . . . ಬಸಿವ ವಿಷದಲಿ ಬಂದುದುರಗಾಸ್ತ್ರ (ಕುಮ್ವಾ.ಕ. ೨೫-೧೮) ; ಚೂರಿಸುವ ನಿಡುನಾಲಗೆಯ ಪೂತ್ಕಾರರವದಕ್ಷಿಗಳಲುಬ್ಬುವ ತೋರಗಿಡಿಗಳ ದಾಡೆಗಳ (ತೊರರಾ. ೬-೧೫-೩೩) ; ಜಿಹ್ವೆಯಿಂ ಚೂರಿಸುತಲುರಿ ಮಸಗಿ ಕಡಲಂತೆ ಗರಳಮಂ ಕಾರಿ (ತುರಂಗ. ೬೯-೪೦).
[ ಚೂರಿ + – ಇಸು$_3$ ]

**ಚೂರು$_1$** 'ಸಿವುಱು$_1$' ನೋ.

**ಚೂರು$_2$** 'ಸೂರ್' ನೋ.

**ಚೂರು$_3$** (ನಾ). ೧. ತುಂಡು ; ಭಾಗ ; ಹೋಳು : "ಭಿತ್ತಂ, ಶಕಲಂ, ಖಂಡಂ, ಅರ್ಧಃ—ಳ ಮುರುಕು ಚೂರುಗಳ ಹೆಸರು" (ಸಿದ್ಧಾಂತಿ. ೨೯) ; ಆ ರೊಟ್ಟಿಯನ್ನು ಮುರಿದು ಏಳು ಚೂರು ಮಾಡಿ, ತೀರ ಸಣ್ಣ ಚೂರು ತನಗೆ ಇಟ್ಟುಕೊಂಡು, ಉಳಿದ ಆರು ಚೂರುಗಳನ್ನು ಆರು ಮಂದಿ ಮಕ್ಕಳಿಗೆ ಕೊಟ್ಟನು (ಮುಂಬಯಿ. ೪-೭೫) ; ಕಲ್ಲಿನ ಚೂರು ಮೊಳಕೆಯನ್ನು ಉತ್ಪತ್ತಿ ಮಾಡಲಾರದು (ಶಕ್ಯಪ್ರಾ. ೧೯೭). ೨. ತುಸು ; ಸ್ವಲ್ಪ ; ಕೊಂಚ : ಅವಳಿಗೆ ಒಂದು ಚೂರು ನಾಚಿಕೆಯಿಲ್ಲ (ರೂಢಿ); ಒಂದು ಚೂರು ಇಲ್ಲಿಗೆ ಬಂದುಹೋಗು (ರೂಢಿ).

**ಚೂರುಚೂರು**(ದ್ವಿರುಕ್ತಿ) : ಮಡಕೆ ಕೆಳಗೆ ಬಿದ್ದು ಚೂರುಚೂರಾಯಿತು (ರೂಢಿ). **ಚೂರುಚಾರು, ಚಾರುಚೂರು** = ಅಲ್ಪಸ್ವಲ್ಪ ; ಚಿಕ್ಕಪುಟ್ಟ : ತನ್ನ ಮೈಮೇಲಿನ ಚೂರುಚಾರು ವಸ್ತುಗಳನ್ನು ಮುರಿಸಿ . . . ಅವನಿಗೆ ವಿದ್ಯಾಭ್ಯಾಸ ಮಾಡಿಸಿದಳು (ಮುಂಬಯಿ. ೪-೫೦); ಮೈಮೇಲಿದ್ದ ನಾಲ್ಕಾರು ಚೂರುಚಾರು ಒಡವೆಗಳು . . . ಹೋಗಿಬಿಟ್ಟವು (ಸಂಚಿತ್ರ. ೩೦) ; ಸ್ವಪ್ನವಾರ್ತೆಯನ್ನು ಚೂರುಚಾರು ಬಿಡದಂತೆ ನಿವೇದನ ಮಾಡಿದರು (ಕಥವಿ. II, ೦೭೪); ಉಪಾಧ್ಯಾಯರಿಗೆ ಕಾಯಿಪಲ್ಯ, ಕಾಳುಕಡ್ಡಿ ತಂದು ಕೊಡುವವರಿಗೆ, ಅವರ ಮನೆಯ ಚಾರುಚೂರು ಕೆಲಸ ಮಾಡಿ ಕೊಡುವವರಿಗೆ . . . ಶಿಕ್ಷಕರ ಬೆತ್ತವು . . . ನಿಂತು ಬಿಡುತ್ತಿತ್ತು (ನಾಡಿಗೇ. ೧೦೫).
[ <ಪ್ರಾ. ಚೂರ ]

**ಚೂರ್ಣಗೊಳಿಸು** (ಕ್ರಿ). ಏಕಾಗ್ರವಾಗಿಸು ; ಒಮ್ಮುಖವಾಗಿಸು ; ಚೂಪುಮಾಡು (?) : ಉರೆ ಶ್ರದ್ಧೆಯಿಂ ಕನಕವಿಷ್ಟರದಲಿ ಮಂಡಿಸಿರೆ ಮಾರ್ತಾಂಡಂಗೆ ನೀರ್ಚಲ್ಲಿ ವಿದ್ಯುಕ್ತದಿಂ ನಮಿಸಿ ಕರಣಮಂ ಚೂರ್ಣಗೊಳಿಸುನ್ಮೀಲನೇತ್ರವಾಗಿ . . . ಮೈದೋರ್ದನು' (ಪರಶು. ೨೯-೬).
[ ಚೂರ್ಣ$_0$ + ಕೊಳ್$_1$ + – ಇಸು$_3$ ]

**ಚೂರ್ಣ$_1$** (ನಾ). ಒಂದು ಬಗೆಯ ಗೆಡ್ಡೆ ; ಸುವರ್ಣಗೆಡ್ಡೆ : "ಅರ್ಶೋಘ್ನಃ, ಸೂರಣಃ, ಕಂದಃ–೩ ಚೂರ್ಣದ ಗಡ್ಡೆ " (ಸಿದ್ಧಾಂತಿ. ೧೩೦) : ಗಡ್ಡೆಗಳು : ಚೂರ್ಣ, ಕೆಸವೆ, ಗೆಣಸು (ನಮ್ಮನು. ೨೩೭). [ <ಸಂ. ಸೂರಣ ]

**ಚೂರ್ಣ$_2$** (ನಾ). ೧. ಸುಣ್ಣ : ಸ್ಥೂಲವಡಿಕೆಯಾದಂತೆ ಸೂಕ್ಷ್ಮ ವರ್ಣವಾದಂತೆ ಕಾರಣ ಚೂರ್ಣವಾದಂತೆ ಮೂಱು ಕೂಡಿದ ಮತ್ತೆ ಬಣ್ಣವಾಯಿತ್ತು ರಜ (ಮೋಳಮಾ. ೧೦೮-೪೩೦) ; ಪೊಂಬರಿಯಣದಿ ಪೋಳ್ಮಣಿ ಮಯವಡೆದಿರ್ದ ಸಂಬಳಿಗೆಯ ಪರ್ಣ ಚೂರ್ಣ ಕೊಂಬ ಕರ್ಪೂರಕರಂಡವಸ್ಮರನ ತಲೆಗಿಂಬಿನೊಳ್ ತಂದಿರಿಸಿದರು (ಮೋಹತ. ೧೬-೨೭). ೨. ಪುಡಿ ; ಹುಡಿ : ಸೂಸುವ ನವ ಪಟವಾಸದ ಚೂರ್ಣಂ ಮಾಸರಮಾದುದು ದಿಕ್ಪರಿಪೂರ್ಣಂ (ಚಂದ್ರಪು. ೪-೬೩ ರಗಳೆ) ; ವ್ಯೆಯೊಡ್ಡುವಡೆ ಪಂಚಾಗ್ನಿಯುಂಟು ತಲೆಯಡಿಯಾಗಿ ನಿಲುವಡುಕ್ಕಿನ ಸೂಜಿಯುಂಟು ಮೆಲುವೊಡೆ ಲೋಹಚೂರ್ಣವುಂಟು (ಹಚಕಾ. ೮-೬೨) ; ಚೂರ್ಣ, ಘೃತ, ತೈಲ . . . ತಯಾರಿಸುವಾಗ ಕೆಂಪು ಚಂದನವನ್ನೂ ಉಪಯೋಗಿಸಬೇಕು (ಸಕವ್ಯ. XII, ಪ್ರಸ್ತಾವನೆ). ೩. ಸುವಾಸನೆಯ ಪುಡಿ; ಪರಿಮಳದ ಹಂಡಿ : ಕಣ್ಣಿಗೆ ಅಂಜನ, ತುಟಿಗೆ ಕೆಂಪು, ಮುಖಕ್ಕೆ ಚೂರ್ಣಗಳನ್ನು ಆಧುನಿಕ ರೀತಿಯಲ್ಲಿ ಅಲಂಕಾರಕ್ಕಾಗಿ ನಿಯೋಜಿಸುತ್ತಿದ್ದರು (ಭಾರದ. ೦೩). ೪. ತಂಡು; ಚೂರು : ತಮ್ಮ ಪತ್ರದ ಚೂರ್ಣಮೆಲ್ಲಮುಮನುಡುಗುತುಂ (ನಂಬಿರ. ೭-೯೦). ೫. ಚೋರವಿದ್ಯೆಗಳಲ್ಲಿ ಒಂದು ; ಪುಡಿ ಎರಚಿ ಮಂತ್ರ ಹಾಕುವುದು. 'ಚೂರ್ಣಯೋಗ' ಪರಾ. ೬. [ಕಾವ್ಯವಿ಼] ಗದ್ಯದ ಒಂದು ಭೇದ : "ಸುಲಭವಾದ ಗದ್ಯ ಶೈಲಿಗೆ 'ಚೂರ್ಣ'ವೆಂದು ಹೆಸರು. ಇದರಲ್ಲಿ ಪದಗಳು ಸಮಾಸವಾಗದೇ (ಅಥವಾ ದೊಡ್ಡ ಸಮಾಸಗಳಿರದೆ) ಬಿಡಿಬಿಡಿಯಾಗಿ ಇರುತ್ತವೆ" (ಕ್ಕಬಿಡಿ. ೧೭೮). [ ಸಂ. ]

**ಚೂರ್ಣಂಗೆಯ್** (ಕ್ರಿ). ಪುಡಿಮಾಡು; ಅರೆ: ಇವನೆಲ್ಲ ಚೂರ್ಣಂಗೆಯ್ದು ಸೇವಿಸೆ (ಸಕವ್ಯ. ೨೩೮). [ ಚೂರ್ಣ$_2$ + ಕೆಯ್$_1$ ]

**ಚೂರ್ಣಕ**(ನಾ). ೧. ಅರೆಯುವುದು; ಪುಡಿಮಾಡುವುದು. ೨."ಪದಾರ್ಥಗಳನ್ನು ಪುಡಿಮಾಡುವ ಯಂತ್ರ ; ಚೂರ್ಣಕ " (Disintegrator. ಇಂಕನಿ). ೩.=ಚೂರ್ಣ$_2$ ೬. : ಕೆಲವರು ಮುಕ್ತಕ, ವೃತ್ತಗಂಧಿ ಉತ್ಕಲಿಕಾಪ್ರಾಯ, ಚೂರ್ಣಕ ಎಂದು ನಾಲ್ಕು ಭಾಗ ಮಾಡಿ . . . ಚೂರ್ಣಕವು ಅಲ್ಪಸಮಾಸಕವೆಂದೂ ಹೇಳುತ್ತಾರೆ (ಕ್ಕಬಿಡಿ. ೧೭೯ ಅಡಿಟಿ). [ ಸಂ. ]

**ಚೂರ್ಣಕುಂತಲ, ಚೂರ್ಣಕುಂತಳ** (ನಾ). ಮುಂಗುರುಳು ; ಸುಳಿಗೂದಲು : ಹದವಡೆದ ಬೀರವಿೂಸೆಗೂ, ನಿರಿನಿರಿಗೊಳಿಸಿರುವ ಚೂರ್ಣಕುಂತಲಕ್ಕು-ಪರಮ ನಾಪಿತವ್ರತ ! (ಮಂತ್ರಕ ೯೩-೨೪). **ಚೂರ್ಣಕುಂತಳ**: ಝೇಂಕೃತಿಯಿಲ್ಲದಳಿವಿಂಡುಗಳೋಯೆನಲಾ ನೀಱಯಾ ಶೋಳಪ ಮುಡಿ ಚೂರ್ಣಕುಂತಳಮೆಸೆದವೆಯ್ದೆ ಕಂಗಳಿಗೆ (ಗುಭಕ. ೨೩-೮). [ ಸಂ. ]

**ಚೂರ್ಣಕುಂತಳ** 'ಚೂರ್ಣಕುಂತಲ' ನೋ.

**ಚೂರ್ಣಗಡ್ಡೆ,** ಚೂರ್ಣಗೆಡ್ಡೆ (ನಾ). ಸೂರಣಗಡ್ಡೆ ; ಸುವರ್ಣಗೆಡ್ಡೆ : " ಅರ್ಶೋಘ್ನಃ, ಸೂರಣಃ, ಕಂದಃ–೩ ಚೂರ್ಣಗಡ್ಡೆ, ಸೂರಣದ ಗಡ್ಡೆ " (ಸಿದ್ಧಾಂತಿ. ೧೩೦). **ಚೂರ್ಣಗೆಡ್ಡೆ** : ಸುವರ್ಣಗೆಡ್ಡೆ, ಚೂರ್ಣಗೆಡ್ಡೆ, ಸೂರ್ಯನ ದಂಟು (ಮೃಕಿಗಿ. ೬-೧೦೦). [ ಚೂರ್ಣ$_1$ + ಗಡ್ಡೆ ]

**ಚೂರ್ಣಗೆಡ್ಡೆ** 'ಚೂರ್ಣಗಡ್ಡೆ' ನೋ.

**ಚೂರ್ಣನ** (ನಾ). ಅರೆಯುವುದು ; ಪುಡಿಮಾಡುವುದು : ಚೂರ್ಣನ ವಿಮುಖೀಕರಣ ದುರ್ಭೋಗ್ಯ ನಾನಾ ವಿಧಾಸಂಖ್ಯಾತ ತೀವ್ರ ವೇದನಾರೂಪಂಗಳಾಗಿ (ವಿವೇಕ. ೧೮೦). [ ಸಂ. ]

**ಚೂರ್ಣನೀಯ** (ಗು). ಪುಡಿಮಾಡಲು ಬರುವ ; ಪುಡಿಗೊಳಿಸುವುದಕ್ಕೆ ಸಾಧ್ಯವಾದ : ಅನಿಷ್ಟುರೋಷ್ಮಪುಟಮಧ್ಯಸಂಧಾರಣಮಾತ್ರ ಚೂರ್ಣನೀಯ ಶಾಕವರ್ತಿಕಮುಂ (ಆದಿಪು. ೧೧-೨೬ ವ). [ ಸಂ. ]

**ಚೂರ್ಣಮಾಡು**(ಕ್ರಿ).=ಚೂರ್ಣಂಗೆಯ್: ಸೈಂಧವಲವಣ, ಕೊನ್ನಾರಿಗೆಡ್ಡೆ . . . ಇವಂ ಚೂರ್ಣಮಾಡಿ ನಸ್ಯವಂ ಮಾಡೆ ಶೀತಜ್ವರಂ ಮಾಣ್ಗುಂ (ಸಕವ್ಯ. ೭೯). [ ಚೂರ್ಣ$_2$ + ಮಾಡು$_1$ ]

**ಚೂರ್ಣಯೋಗ** (ನಾ). (ಮಂತ್ರಿಸಿದ) ಹುಡಿಯನ್ನು ಚೆಲ್ಲಿ ಮರುಳುಗೊಳಿಸುವುದು : ಚೂರ್ಣಯೋಗ ಘುಟಿಕಾಂಜನಮೆಂದಿವು ಮಾಡಲಾಗೊಡೆಯ ತಸ್ಕರ ಶಾಸ್ತ್ರಂಗಳೊಳ್ (ವಡ್ಡಾರಾ. ೧೨೨-೦೭).

[ ಚೂರ್ಣ$_2$ + ಯೋಗ ]

**ಚೂರ್ಣವಾಸ** (ನಾ). ವಾಸನೆ ಕಟ್ಟಿದ ಪುಡಿ ; ಸುವಾಸನೆಯ ಪುಡಿ : ಮಗನ ಮಯ್ಯಂ ಚೂರ್ಣವಾಸದಿನುದ್ವರ್ತಿಸಿ ಮಂದರಾಭಿಷೇಕಾರ್ಹನಾಗೆಂದು ಪರಸಿ (ಚಾವುಂಪು. ೨೩೩). [ಚೂರ್ಣ$_2$ + ವಾಸ$_3$ ]

**ಚೂರ್ಣಾಳಕ** (ನಾ). = ಚೂರ್ಣಕುಂತಲ : ಸೆಣಸಲೆಳಸಿ ನೆಗೆವಂತೆ ಚೂರ್ಣಾಳಕಂ ಪಣೆವಿಡಿದು ಕುಣಿವುತ್ತಿರೆಯುಂ (ರಾಜಶೇ. ೭-೧೭ ವ).

[ ಚೂರ್ಣ$_2$ + ಅಳಕ$_3$ ( = ಅಲಕ) ]

**ಚೂರ್ಣಿ** (ನಾ). ೧. ನೂರು ಕವಡೆಗಳ ಮೊತ್ತ. ೨. ಉತ್ತರವನ್ನು ಕೊಡಲು ಸಾಧ್ಯವಾಗದಿರುವಂಥ ತರ್ಕವನ್ನು ಅರಿಸುವಿಕೆ. [ಸಂ. ]

**ಚೂರ್ಣಿಕೆ** (ನಾ). ೧. ಸುಲಭ ಶೈಲಿಯ ಒಂದು ಗದ್ಯ ಪ್ರಕಾರ : ಚೂರ್ಣಿಕೆ ಲತಿಕೆ . . . ಚಿತ್ರಮೆಂಬ ಗದ್ಯಬಂಧದೊಳಂ (ಅಸಂಪು. ೧೦-೨೮ ವ) ; ಗಣೇಶ ಪ್ರಾರ್ಥನೆಯಾದ ತರುವಾಯ ಸಭಾಪೂಜೆ ನಡೆಯುತ್ತದೆ. ತರುವಾಯ ಚೂರ್ಣಿಕೆ(ಭಾರದ.೩೩೬) ; ಈಗಲೂ ಚೂರ್ಣಿಕೆ ಮತ್ತು ಶ್ಲೋಕ ವೃತ್ತಗಳ ರಾಗ ರಾಗದ ಹಾಡಿಕೆ ದೇವಪೂಜಾಸಮಯದಲ್ಲಿ ರೂಢಿಯಲ್ಲಿದೆ (ಸಂಗೀಚಂ. ೭೭). ೨. ಮದುವೆಯ ಸಂದರ್ಭದಲ್ಲಿ ಹಾಡುವ ಒಂದು ಶೋಭನ ಗೀತ (?) : ಲೋಭವ ತೊಱೆದು ದಿಬ್ಬಣಿಗರ ಹೇಮ ವಸ್ತ್ರಾಭರಣದೊಳೊಲ್ದು ತಣಿಪಿ ಶೋಭನ ಮಾಡದೆ ಚೂರ್ಣಿಕೆ ಮಾಳ್ಪಾಗ ಲಾಭದ ಪರದರುತ್ಸವವೆ (ಭರತ. ೩೮-೧೨೮).

[ ಸಂ. ಚೂರ್ಣಿಕಾ ]

**ಚೂರ್ಣಿಗ** (ನಾ). ಪುಡಿ ಮಾಡುವವನು ; ನಾಶಮಾಡುವವನು : ಅಡಸಿ ವೈರವ ಭಾವ ಪರಿಯೊಳು ಕೆಡುಕ ಹಡೆವರು ನೂರುಮಂದಿಯ ನಿಡಿವನಾ ಚೂರ್ಣಿಗನ ತೆರದೊಳಗೆ (ಜನಭಾ. ೭-೦೩).

[ ಚೂರ್ಣ$_2$ + – ಇಗ ]

**ಚೂರ್ಣಿಸು** (ಕ್ರಿ). ಪುಡಿಮಾಡು : ಕಲ್ಲುಕಂಬವ ಚೂರ್ಣಿಸಿದ ಪರಾಕ್ರಮವೀಗಳೆಲ್ಲಿ ಪೋದುದು (ಶಾಂತೀಶ. ೨-೧೧೬) ; ಅಂಜನಗಿರಿಯಂ ಚೂರ್ಣಿಸಿ ಹಿಂಡಳಮಷ್ಟಂತೆಯದಂ . . . ಕರಂಡದೊಳಂಜನಮಂ ತುಂಬಿ ಬೊಮ್ಮನಿರಿಸಿದನೋ (ಹಮ್ಮೀರ. ೩-೦೨). [ ಚೂರ್ಣನ + – ಇಸು$_3$ ]

**ಚೂರ್ಣೀಕರಿಸು** (ಕ್ರಿ). = ಚೂರ್ಣಿಸು : ವನದೊಳಗಿದ್ದ ಗೋಮಯಮಂ ಚೂರ್ಣೀಕರಿಸಿ ದಹಿಸಿ ಮಾಡಿಕೊಂಬುದೇ ಅನುಕಲ್ಪವೆನಿಸುವದು (ವಿವೇಕ. ೬೨). [ ಚೂರ್ಣೀಕರಣ$_0$ + – ಇಸು$_3$ ]

**ಚೂರ್ವೊನೆ** (ನಾ.) ಹರಿತವಾದ ತುದಿ ; ತೀಕ್ಷ್ಣವಾದ ಧಾರೆ : ನೀಗಾರ್ದ್ರತೆ ಮುಳ್ಗೆ ಚೂರ್ವೊನೆ ಭವಚ್ಚಿತ್ತಕ್ಕೆ ತತ್ತ್ವಜ್ಞತಾವಿಭವಂ ಸಾಜಂ (ಶಾಂತಿಪು. ೧೧-೯೪). 'ಕೂರ್ವೊನೆ' ಪರಾ. [ಚೂರ್+ಮೊನೆ$_1$]

**ಚೂರ್ವೊನೆಗೊಳ್** (ಕ್ರಿ). ಹರಿತವಾದ ತುದಿಯನ್ನು ಹೊಂದು,–ಪಡೆ : ವನಿತಾಪಾದಪಯೋಜಸಂಗಸುಖದಿಂದಂಗಕ್ಕೆ ರೋಮಾಂಚಮಾಯ್ತೆನೆ ನಟ್ಟಂತಿರೆ ಸೂಸೆ ಸೂಜಿಗಳನಾ ಪೊಂಜಾಜಿಯೊಂದೊಂದು ಚೂರ್ವೊನೆಗೊಂಡೊಂದಲರಾಯ್ದು ಕೋದ ತೆಱದಿಂದಿರ್ಪಂತು ಪುಲ್ಲಾಂಬುಜಾನನೆ ಪುಷ್ಪಾಂಜಲಿಗೊಟ್ಟಳ್ (ಅರ್ಧನೇ. ೩-೯೯).

[ ಚೂರ್ವೊನೆ + ಕೊಳ್$_1$ ]

**ಚೂಲ್** 'ಸೂಲ್' ನೋ.

**ಚೂಲ**, ಚೂಳ್₂ (ನಾ). ೧. ಜುಟ್ಟು ; ಶಿಖೆ. ೨. ತುದಿ ; ಶಿಖರ. ಇಲ್ಲಿ ಕವಿಕರ್ಮ ಸಾರ್ಥಕತೆಯ ಚೂಲವನ್ನು ಮುಟ್ಟಿದೆ (ಭಾವಗೀ. ೧೩೭) ; ಆನಂದವೇ ಸಮಸ್ತ ವ್ಯಾಪಾರಗಳ ಮೂಲ ಮತ್ತು ಚೂಲ (ಸೌಂದಸ. ೧೦೦). **ಚೂಳ್₂ :** ೨. ಖೇಚರ ಚಕ್ರವರ್ತಿ ಧರಣೀಂದ್ರಜನಸ್ಮದಧೀಶನು ಧೃತಾರಾಚಳಚೂಳಶೇಖರಂ (ಚಂದ್ರಪು. ೬-೧೯) ; ನಿಮಿರ್ದುದೀ ಕಾಂಚನ ಶೈಳಂ ಖತುವಿಮಾನ ಚುಂಬಿತಚೂಳಂ (ಪುಷ್ಪಪು. ೧೦-೫೭). [ ಸಂ. ]

**ಚೂಲಿಕೆ**, ಚೂಳಿಕೆ (ನಾ). ೧. (ಆನೆಯ) ಕಿವಿಯ ಬುಡ,– ತಳಭಾಗ : ಮೃದುಸುವೃತ್ತ ಬಹಲಪುಲಂಬ ಶಿವಾತರ ಮಹಾಸ್ರೋತೋಪರಿಭಿನ್ನಾಂ ತನುತ್ಕೃಷ್ಟಾವಿಪುಲ ಚೂಲಿಕಾದುಂದುಭಿನಿರ್ಘೋಷಕರ್ಣನುಂ (ಆದಿಪು. ೧೨-೫೬ ವ). ೨. ಹುಂಜದ ತಲೆಯಲ್ಲಿರುವ ಕೊಟ್ಟು ; ತುರಾಯಿ. ೩. ಬೆಟ್ಟ, ಮರ ಮುಂತಾದುವುಗಳ ತುದಿ,-ಶಿಖರ. ೪. ಮುಂಭಾಗ ; ಮುಂಬದಿ. ೫. [ಕಾವ್ಯಮೀ] ನಾಟಕದಲ್ಲಿ ಬರುವ ವಿಷಯಗಳನ್ನು ತೆರೆಯ ಹಿಂದಿನಿಂದ ಸೂಚಿಸುವುದು : ಚೂಲಿಕಾ–ಪಾತ್ರಗಳು ರಂಗಕ್ಕೆ ಬರದೆ ತೆರೆಯ ಹಿಂದೆಯೇ ಇದ್ದು ಮಾತನಾಡಿ ಯಾವುದಾದರೂ ಒಂದು ಸಂಗತಿಯನ್ನು ಸೂಚಿಸುವುದು (ಕ್ರ ಪ ಡ. ೨೦೬). ೬. [ಜೈನ] ದೃಷ್ಟಿವಾದದ ಐದು ಪ್ರಕಾರಗಳಾದ ಪರಿಕರ್ಮ, ಸೂತ್ರ, ಪ್ರಥಮಾನುಯೋಗ, ಪೂರ್ವಗತ ಮತ್ತು ಚೂಲಿಕೆ ಎಂಬುವುಗಳಲ್ಲಿ ಕೊನೆಯದು: ಆ ದೃಷ್ಟಿವಾದು ಪರಿಕರ್ಮಮುಂ ಸೂತ್ರಮುಂ ಪ್ರಥಮಾನುಯೋಗಮುಂ ಪೂರ್ವಗತಮುಂ ಚೂಲಿಕೆಯುಂ ಎಂದು ಪಂಚಪ್ರಕಾರಮಕ್ಕುಂ (ತತ್ತ್ವಾಪ್ರ. ೬೦). **ಚೂಳಿಕೆ :** ೧. "ಕರ್ಣಮೂಲಂ, (ತು) ಚೂಳಿಕಾ–ಈ ೨ ಕಿವಿಯ ಮೊದಲ್" (ಹಲಾಯು. ೩೭-೩೪). ೩. ಆ ಚೂಳಿಕಾಭಾಗದಾದಲೆಯೊಳ್ ನಿಂದವುದೂರ್ಧ್ವಲೋಕಮೆನೆ . . . ಶ್ರೀಸುಂದರಂ ಮಂದರಂ (ಆದಿಪು. ೧-೫೦) ; ಕನಕಾಚಲ ಚೂಳಿಕೆಯಿಂ ಕನಲ್ದು ಗರ್ಜಿಸುತುಮೆಟ್ಟಿ ಸಿಂಗದ ವೋಲ್ . . . ಉತ್ತಂಸ ಕಿರಣ ಕೇಸರನೆಟ್ಟಂ (ಪಂಪರಾಮಾ. ೯-೫೨) ; ಚೂಳಿಕೆಯಗ್ರಭಾಗದಿಂ ಸ್ವರ್ನಿಳಯಂಬರಂ ನಿಮಿರ್ದು . . . ಮೇರುಗಿರಿ ಪುಟ್ಟಿಸುತ್ತಿರ್ದುದಗುರ್ವ ನಾವಗಂ (ಶಾ ಧ ಪು. ೧-೩೬). ಹೆಮವತುಳುವತಿರಥರಾಜಿಗಳ ಗಿರಿಚೂಳಿಕೆಯಲೇ ಚೆಲ್ಲಬಡಿದಮರಾಳಿಹೊಗಳಲು ಕಾದಿದರು ನೀಲಾಂಗದಾದಿಗಳು (ತೊರರಾ. ೬-೩೪-೫೦). ೪. ಧಾಳಿಯಿಟ್ಟುದು ರಾಯದಳ ಪಾಂಚಾಲದೇಶಕೆ ಮುಂದೆ ಹೊಕ್ಕುದು ಚೂಳಿಕೆಯಲಿ ಸುಯೋಧನಾದಿಗಳೂರನುರವಣಿಸಿ (ಕು ಭಾ, ಆ. ೬-೩೪). ೬. ಆಯ್ದು ಚೂಳಿಕೆಯಂಮನಾಖವಧಿಯುಮಂ. . . ಪೆಸರ್ಗೊಂಡು (ಆದಿಪು. ೩-೪೦ ವ). ೭. ಕೂದಲು; ಕೇಶ. 'ಚೂಳಿಕಾವರ್ಧನ' ಪರಾ. [ ಸಂ. ಚೂಲಿಕಾ ]

**ಚೂಲು** 'ಸೂಲ್' ನೋ.

**ಚೂಷೆ** (ನಾ). ತೊಗಲಿನಿಂದ ತಯಾರಿಸಿದ ಆನೆಯ ನಡುಕಟ್ಟು. [ ಸಂ. ಚೂಷಾ ]

**ಚೂಳ್₁**, ಚೂಟಿ (ನಾ). ಜುಟ್ಟು ; ಶಿಖೆ : " ಚೂಳ (ಚಂಡಿಕೆ) –ಚೂಡಾ= ಶಿಖೆ " (ಶಬ್ದಕೋ. ೦೩). △ **ಚೂಟಿ :** ಈಡಿತಂ, ಈಟಿತಂ ; ಚೂಡಾ, ಚೂಟಿಂ (ಶಬ್ದಾನು. ೦೪೦ ಪ್ರಾಪ್ರಾ). [ <ಸಂ. ಚೂಡಾ ]

**ಚೂಳ್₂** 'ಚೂಲ' ನೋ.

**ಚೂಳಯ** 'ಚೂಳಿಯ' ನೋ.

**ಚೂಳಾಕರಣ** (ನಾ).=ಚೂಡಾಕರಣ: ಚೂಳಾಕರಣದಿನಶ್ಮಲೆ ಭಾಳಚ್ಛಾಯೆಯೊಳೆ ಭಂಗಮುಂ ಪಡೆದರಿಭೂಪಾಳರ್ಗೆ ದೀನವೃತ್ತಿಯ ಚೂಳಾಕರ್ಮಮನೊಡರ್ಚಿದಂ ನೃಪತನಯಂ (ಮಲ್ಲಿಪು. ೪-೧೩೬). [<ಸಂ. ಚೂಡಾಕರಣ]

**ಚೂಳಾಕರ್ಮ** (ನಾ).=ಚೂಡಾಕರ್ಮ: ಅರಿಭೂಪಾಳರ್ಗೆ ದೀನ ವೃತ್ತಿಯ ಚೂಳಾಕರ್ಮಮನೊಡರ್ಚಿದಂ ನೃಪತನಯಂ (ಮಲ್ಲಿಪು. ೪-೧೩೬). [ <ಪ್ರಾ. ಚೂಲಾಕಮ್ಮ./ಸಂ. ಚೂಡಾಕರ್ಮ ]

**ಚೂಳಾಮಣಿ** (ನಾ). = ಚೂಡಾಮಣಿ : ಶ್ರೀಜಿನಮಾರ್ಗ್ಗನ್ನೀತಿಸಪ್ಪನ್ನಸ್ಸರ್ವ ಚೂಳಾಮಣಿ (ಎಕ. II, ೪೪೫ ; ಕು. 700). [ <ಪ್ರಾ. ಚೂಲಾಮಣಿ./ಸಂ. ಚೂಡಾಮಣಿ ]

**ಚೂಳಾಯ್ತು** 'ಸೂಳಾಯ್ತು' ನೋ.

**ಚೂಳಿ₁**, ಚೂಣಿ, ಚುಳಿ, ಚೂಣೆ(ನಾ). ೧. ಮುಂಭಾಗ; ಮುಂದಿನ ಸಾಲು: ಚೂಳಿಯೊಳ್ ಮೈದೋಟಿದಂ ಮಂದಮಾರುತಂ ಪಾಳಿಯಿಂ ನಡೆಸಿದಂ ಸೇನೆಯಂ ಸೇನಾನಿ (ಜಬಪು. ೩೫-೧೨). ೨. ಆರಂಭ ; ಮೊಟ್ಟಮೊದಲು : ಬಾಳ್ವ ಮಾತಿನ್ನೇಕೆ ಚೂಳಿಲಿ ಬಂದ ಸ್ತ್ರೀಯಳಿಯೆ (ಶಪೋಶ. ೧೭-೩೪). ೩. (ಯುದ್ಧದಲ್ಲಿ) ಎಲ್ಲಕ್ಕೂ ಮುಂದೆ ಇರುವ ಸೈನ್ಯ ; ಮುಂದಳ; ಅಗ್ರಗಾಮಿ ದಳ: ಒದವಿದರಾ ಚೂಳಿಯ ಬಲುಗಾಜರು (ಪರ್ಧಶ. ೬-೮೫); ಚೂಳಿಯ ಭಟರ ಕೈಯಿಂದ ಭೋರ್ಗರೆದ್ಹದಿ ಮೇಲಕ್ಕೈದುವ ಬಾಣಗಳ ದಾಳಿಯೊಪ್ಪಿದುದು (ಕಂಸವಿ. ೧೨-೨೦) ; ಎಸೆದುದು ಸಂಜೆಗೆಂಪೆನಿಪ ಕಾವನ ಚೂಳಿಯ ದೂಳ ದಾಟಿಗಂ . . . ಪೊಣ್ಮುವ ಪಿರಂಗಿಯ ಗುಂಡೆನೆ ಚಂದ್ರಮಂಡಲಂ (ಚಕವಿ. ೬-೦೭); ಸಮುದ್ರದ ತಟದಿ ನಿಂದು ಚೂಳಿಯ ಕಳುಪಲೋಪಧಿಪ್ರಸ್ಥ ಪುರಕೆ (ಲಿಂಗಪು.೧೦-೪೬). **ಚುಣಿ:** ೨.ಚುಣಿಗೆ ಮೂರ್ತಿಸ್ಥಾಪನಾ ಮಾಡಿದವರು ನಮ್ಮ ಜನರು (ಹೊಸಂಸಾ. ೨೯) ; ಚುಣೀಗೆ ಈ ಊರಿಗೆ ಗಂಟಿನ ಬ್ಯಾನಿ ಬಂತು (ಅಮನಿ. ೪). **ಚುಳಿ :** ೪. ಕೊಕ್ಕು ; " ಚುಂಚು " (ಜಾನಕೋ. ೫೭). **ಚೂಣಿ :** ೧. ಪಂಚಪರುಷವನುಳ್ಳ ಬಸವನು ಸಂಚಿಸಿದ ಸಾಧನಸಮಗ್ರತೆ ಮುಂಚೆ ಜೀರ್ಣಿಸಿ ಹೋದುದೂಟದ ಮೊದಲ ಚೂಣಿಯಲಿ (ಪ್ರಭುಲೀ. ೨೩-೪೩); ಸುಮನಸರೊಬ್ಬುಳಿಯ ಚೂಣಿಯಲಿ ಮುನಿಗಳು ಬೆಬ್ಬಳಿಸಿದರು (ತೊರರಾ. ೧-೧೦-೯); ರಂಗದಿಂದ ಚೂಣಿಗೆ ಬರುವಾಗ ಆರತಿಯಾಗುವಾಗ ಬೇರೆ ಬೇರೆ ಪದಗಳನ್ನು ಹೇಳುವರು (ಯಕ್ಷಗಾ. ೩೪). 'ಚೂಣಿಗಾಳಿಗೆ' ಪರಾ. ೩. ರಾಯನ ಚೂಣಿ ಹೋದಹುದೀಸು ಸಂದಣಿ ಕಾಣೆವು (ಬಸಪು. ೫-೩೪) ; ಚೂಣಿ ಹಳಚಿತ್ತುಭಯದಳದಲಿ ರೇಣು ಮುಸುಕಿತು ದಿಕ್ಕುದೆಸೆಗಳ (ಕಾ ಶಿ ರಾ. ೨೦-೧೪) ; ಚೂಣಿ ಬಿದ್ದುದು ಜವನ ದೂತಶ್ರೇಣಿಯೆದ್ದುದು (ತೊರರಾ. ೬-೩೮-೪). ಇತ್ತಲ್ ದಮನಂ . . . ತನ್ನ ಮೆಯ್ಗಾವಲ ಕಿಱುವಡೆಗೆ ಕೈವೀಸಿ ಚೂಣಿಯೊಳೆ ನಿಂದು ತಾಗಿದಂ (ರಾಮಾಶ್ವ. ೯೦-೧೯). ೪. ತುದಿ ; ಅಗ್ರ ; ಕೊನೆ. 'ಚೂಣಿನೋಟ' ಪರಾ.

**ಚೂಣಿಯ ಬಲಿ** = ಯುದ್ಧರಂಗಕ್ಕೆ ಕೊಡುವ ಬಲಿ,–ಆಹುತಿ : ದುರುಳ ದಾನವ ನಿಮ್ಮ ನನ್ನ ಖಡ್ಗಾಹುತಿಗೆಯರದೆ ಚೂಣಿಯ ಬಲಿಯ ಕಳುಹಿದನೆ (ಹರಿಮೋ. ೦೨-೪೦).

**ಚೂಳಿ₂** (ನಾ). ೧. ಚವರಿ ; ಹೆರಳು : ಒಡಲಿಚಂ ತನ್ನ ಬೆದೆಗಾರ್ತಿಯ ಚೂಳಿಯ ಸಿಂಗರಕ್ಕೆಂದು ಸಮೆದು ಬೈತಿಟ್ಟ ಕುಂದಣದ ಗೊಂಡೆಯೆನೆ . . . ಎಸೆವ ಜೋಳದ ಪಾಟಿಯುಂ (ರಾಮಾಶ್ವ. ೧೦೦-೨೭). ೨. ರಾಜಚಿಹ್ನೆಗಳಲ್ಲಿ ಒಂದು : ಕಾಳೆ ಡಮಾಮಿ ಟಕ್ಕೆಯ ಸಾಲಸತ್ತಿಗೆ ಚೂಳಿ [ಪಾಠಾಂ. ಚೌರಿ]ಸೂರೇಪಾನ್ನಳಿಂದ ಮೇಲಾದ ಸಾವಿರ ಕುದುರೆಯು ಸಹ ಬಂದ ಗಾಳಿಯನೇನ ಬಣ್ಣಿಪೆನು (ಕಂಸವಿ. ೧೮-೮೨). [ <ಸಂ. ಚೂಲ, ಚೂಲಾ ]

**ಚೂಳಿಕಾವರ್ಧನ** (ನಾ). ಗರ್ಭಿಣಿಯರಿಗೆ ಮಾಡುವ ಮಂಗಳಶಾಸ್ತ್ರ ; ಸೀಮಂತೋನ್ನಯನ; ಸೀಮಂತೋತ್ಸವ: ಘನಗರ್ಭಾಶಾವಧೂಪುಂಸವನದೆಸೆವ ತೂರ್ಯಸ್ವನಂ ಚೂಳಿಕಾವರ್ಧನವಮಾಂಗಲ್ಯಂ ಬಳಾಕಕ್ಕೆಸೆಯೆ ಪಸರಿಪಾತೋದ್ಯಘೋಷಂ . . . ಘೂರ್ಣಿಸಿದುದಭಿನವಾಂಭೋದ ಗಂಭೀರನಾದಂ (ಪಂಪರಾಮಾ. ೭-೦೫೦). [ ಸಂ. ಚೂಲಿಕಾವರ್ಧನ (ಚೂಲಿಕಾ + ವರ್ಧನ) ]

**ಚೂಳಿಕೆ** 'ಚೂಲಿಕೆ' ನೋ.

**ಚೂಳಿಗಲಹ** (ನಾ). ಸೈನ್ಯದ ಮುಂಭಾಗದಲ್ಲಿ ನಡೆವ ಯುದ್ಧ; ಮುಂಚೂಣಿಯುದ್ಧ: ಸೂಳು ಮತ್ಸರ ಬಿರುದು ಪಾಡಿನ ಚೂಳಿಗಲಹದ ಕದಡು ಜೂಜಿನ ತೋಳುವಲರೊಳತೋಟಿ ಮಸಗಿತು ದಿವಸ ದಿವಸದಲಿ (ಕುವ್ಯಾಆ. ೮-೧). [ ಚೂಳಿ$_1$ + ಕಲಹ ]

**ಚೂಳಿಗಾಳಿ** (ನಾ). ಮುಂಭಾಗದಿಂದ ಬೀಸುವ ಗಾಳಿ: ಚೂಳಿಗಾಳಿಯ ದನಿಯನಾಲಿಸುತೆ ನೆಲದೊಳಗೆ ಪೊಳ್ದು ತನುಗಳಂ ಕೀಳಲಾಱದೆ . . . ಮಮ್ಮಲಂ ಮಱುಗಿದರ್ ತತ್‌ಕ್ಷಣದೊಳು (ಜಬಪು. ೩೫-೧೪).

[ ಚೂಳಿ$_1$ + ಗಾಳಿ$_1$ ]

**ಚೂಳೆಯ, ಚೂಳಯ, ಜೂಳಯ, ಜೂಳೆಯಂ, ಜೋಳಯ, ಜೋಳೆಯ** (ನಾ). ೧. ಬೈತಲೆಗೆ ಇಡುವ ಮುತ್ತಿನ ಆಭರಣ; ಬೈತಲೆಮುತ್ತು; ಹಣೆಬೊಟ್ಟು: ಕಂಕಣ ಚೂಳೆಯ ತೊಳಪ ಕಾಲುಂಗುರದೆ . . . ಬರುತಿರ್ದರು (ಕುಮುರಾ. ೦೩-೬೫): ಮುತ್ತಿನ ಮುಡಿಕಟ್ಟು ಚೂಳೆಯ ಭುಜಕೀರ್ತಿ . . . ದೇಸೆವೆತ್ತಿರೆ ಮೆಱೆದಳಾ ನೀಱೆ (ಕುರಾಸಾಂ. ೨೯-೯೫). **ಚೂಳಯ:** ೨. ಹಣೆಗೆ ಇಡುವ ಕುಂಕುಮಂದ ತಿಲಕ; ನೇರವಾದ ಬೊಟ್ಟು: ಲಲಾಮುಕವನ್ನೋಸರಿಸಿ ಸೆಂದುರದ ಚೂಳಯುವನ್ನು ತಿದ್ದಿ ಉಗುರಿಸಿ ಸೇವರಿಸಿಕೊಳ್ಳುತ್ತ (ಮುಂತ್ರಶ. ೧೪೨-೨). **ಜೂಳಯ:** ೨. ಜೂಳಯ ತಿಂಗಳಿಗೆಯನಲ್ ನೇರಬೊಟ್ಟಿಗೆ ಪೆಸರ್ (ಕಬ್ಬಿಕೈ. ೨೬); "ಜೂಳಯುವೆನಲುಂ ಮೆಱೆವ ಬೊಟ್ಟು" (ಶಬ್ದಮಂ. ೬೩): "ಜೂಳಯಂ ತಿಲಕಮಕ್ಕುಂ" (ಕಶರ. ೪೦). **ಜೂಳೆಯ:** ೧. "ಮುತ್ತಿನ ಬೈತಲೆಯಕ್ಕು ಜೂಳೆಯಂ" (ಕವಿಕಂ. ೧೬೨); ನೂಪುರಂ ಮೇಖಲೆ ಪೊಸಕಡಗಂ ಜೂಳೆಯಂ (ದಕಕು. ೬-೮೦); ತೆತ್ತಿಸಿದ ನವರತುನದಿಂದಲಿ ಮುತ್ತಿನುಂಡೆಯ ಜೂಳೆಯಂಗಳ ಪತ್ತಿ ಪಚ್ಚೆಯ ಹಲಗೆ ಪವಳದ ಕಡೆದ ಬೋದಿಗೆಯ (ಕುವ್ಯಾದ್ರೋ. ೭೦೩. ಪರಿ. ೨೭೮); ಜೂಳೆಯ ಚಿನ್ನ ಪೂ ಕಮಲ ಪೂ ಚಳಿಕಿಗೆ ತಾಳಿಹೂ . . . ಆಭರಣವೊಪ್ಪಿದುವು (ಭರತ. ೪೦-೬೫). ೨. ನೊಸಲ ಚಿಲ್ವಿಕೆಗೊಂದು ಕಡೆಯ ಜೂಳೆಯವಿಟ್ಟು ಹಸಿ ಬಾಳೆಯಲೆಯ ಹಸೆಯಲಿ ಮಲಗಿಸಿದರು (ಕಾಲೂದ. ೦೮೩-೪೦೫). ೩. ಕೊರಳ ಸರ,-ಪಟ್ಟಿ: ಬಿರುದಿನ ಪೊಂಬಾವಡೆ ಸೆಡಕಿನ ವಲ್ಲಿ ಕೊರಳ ಮುತ್ತಿನ ಜೂಳೆಯದ . . . ಭೂಷಣಗಳಾಂತಿಹ ಹಯ ಖುರವೆತ್ತಿ ಕುಣಿಯುತ್ತೈದಿದುವು (ಕಂನವಿ. ೧೫-೧೪). ೪. ಕೈಗೆ ತೊಡುವ ಮುತ್ತಿನ ಆಭರಣ: ಪೊಳೆವ ಕಂಕಣವಲೆಯ ಮುದ್ರಿಕೆಯ ಬೆರಳ ಜೂಳೆಯ ಕಡಗಗಳ್ ಮೆರೆಯೆ (ಕುರಂಗ. ೪-೨೯). **ಜೋಳಯ:** ೧. ಮುತ್ತಿನ ಬೊಟ್ಟು, ಮುತ್ತಿನ ಮೂಕುತಿ . . . ಜೋಳಯ, ಭುಜಕೀರ್ತಿ (ಕುಮೂಸಾಂ. ೩೬೦). **ಜೋಳೆಯ:** ೧. ಮುಡಿಗೆ ಜೋಳೆಯ ತೆಲ್ಲಟಿಯೆಂಬ ನಾಟ್ಕುಡಿಯಂತೆ ಪಾಪಮನೆ ಪೆರ್ಚಿಸಿ (ಧರ್ಮಾಮೃ. ೬-೧೬೫ ವ). ೪. ತೋಳಬಂದಿಯ ಮಣಿಖಚಿತ ಕೇಯೂರದ ಪುಷ್ಯರಾಗ ಜೋಳೆಯದ (ಧರ್ಮಪ. ೨-೨೩ ವ); ಕೀಲಕಡಗದ ವಜ್ರಲಹರಿಯ ಜೋಳೆ [ಪಾಠಾಂ. ಲೆ]ಯದ ಕಂಕಣದ ರವೆಯದ ತೋಳಬಂದಿಯ ಕೊರಳ ತ್ರಿಸರದ ಬೆರಳ ಮುದ್ರಿಕೆಯ . . . ಮೇಲು ಶೃಂಗಾರದ ಸಖೀಜನ ಸಂದಣಿಸಿತು (ಕುವ್ಯಾಆ. ೧೩-೩೨). [ <ಪ್ರಾ. ಚೂಲಿಯಾ, ಚೂಲಾ ]

**ಚೂಱಿಕಾಱ** 'ಸೂಱೆಗಾಱ' ನೋ.

△ **ಚೂಟ** 'ಚೂಳ$_1$' ನೋ.

**ಚೆಂ$_1$, ಚಂ** (ಗು). ಕೆಂಪು ಎಂಬುದಕ್ಕೆ ಸಮಾಸದಲ್ಲಿ ಆದೇಶವಾಗಿ ಬರುವ ಸಂಕ್ಷಿಪ್ತರೂಪ. 'ಚೆಂಗಣಗಿಲೆ', ಪರಾ. **ಚಂ:** 'ಚಂಗಾವಿ' ಪರಾ.

[ ದೇ.೫ ತಮಿ. ಮಲ. ಚೆಮ್ ; ತುಳು. ಚನ್ನ ; ತೆಲು. ಚೆಂ ]

**ಚೆಂ$_2$** (ಗು). 'ಚೆನ್ನು' ಎನ್ನುವ ಪದಕ್ಕೆ ಸಮಾಸದಲ್ಲಿ ಆದೇಶವಾಗಿ ಬರುವ ಸಂಕ್ಷಿಪ್ತರೂಪ. 'ಚೆಂಕೊನ್ನಿಗ', 'ಚೆಂಗಾಲ' ಪರಾ.

[ <ಚೆನ್ನು ]

**ಚೆಂಕೊನ್ನಿಗ** (ನಾ). ಸುಂದರನಾದ ಪರಾಕ್ರಮಿ (?): ವನತರುಗಳ ಪಣ್ಣೆಲೆಗಳ್ ಕಟಿಲೆ ಕಳಿಂಕೆಗಳ್ ತಾರಕೆಗಳಂತೊಗೆಯೆ ಕೊನೆಗಳ್ ಚೆಂಕೊನ್ನಿಗ [ಪಾಠಾಂ. ಚೆಂಕೊಂಗ]ರಬ್ಬೆಯಂತೆ ನಿಮಿರೆ ತಳಿರನಂಗನ ಬಾಳಂತೆ ಪೊಳೆಯೆ (ಬಂಹರಿ. ೫-೫ ವ). [ ಚೆಂ$_2$ + ಕೊನ್ನಿಗ ]

**ಚೆಂಗಟ್ಟು** (ನಾ). ಸುಂದರವಾದ ಚೌಕಟ್ಟು,-ಆವರಣ: ಚೆಂಗಟ್ಟಿಂ ಧನುವಂತೆ ಕೊಂಕಿಯೆಸೆಗುಂ ಮೇಗೆಟ್ಟಿ ಮುಮ್ಮಾಡಮುಂ (ವ್ಯಸೂಮ. ೫-೧೭).

[ ಚೆಂ$_2$ + ಕಟ್ಟು$_2$ ]

**ಚೆಂಗಣಗಿಲೆ,** ಚಂಗಣಗಿಲೆ, ಚೆಂಗಣೆಗಿಲ್, ಚಂಗಣೆಗಿಲು, ಚೆಂಗಣೆಗಲು, ಚೆಂಗಣೆಗಿಲ್, ಚೆಂಗಣೆಗಿಲು, ಚೆಂಗಣೆಗಿಲೆ (ನಾ). ೧. ಕೆಂಪು ಕಣಗಿಲೆ. ೨. ತಾವರೆ; ಕಮಲ: "ಚಂಗಣಗಿಲೆ, ಸೌಗಂಧಿಕ, ಕಲ್ಹಾರ, ಹಲ್ಲಕ, ರಕ್ತಸ್ಕಂಧಕ" (ನಾಚಿರಾ. ೬). **ಚಂಗಣಗಿಲೆ:** ೨. ಸುಕರ್ಪೂರಂ ತಮಾಲದಳ ಚಂಗಣಗಿಲೆಯು ಕೋಷ್ಠಸಾರ ಕಸ್ತೂರಿ ಲಾಮಂಚಸಂಯುಕ್ತ ಶಿವಗಂಧಾಷ್ಟಕಂ ಲೇಸು (ಗುರುಚಾ. ೬-೫). **ಚಂಗಣೆಗಿಲ್:** ೨. "ಕಲ್ಹಾರಂ ಸುಗಂಧಿಕಂ ಚಂಗಣೆಗಿಲೆ[ಪಾಠಾಂ. ಕನ್ನೈದಿಲೆ, ಕನ್ನೈದಿಲೆ]ನಿಸಿಕ್ಕು" (ಮಂಗರಾ. ೧೨೪-೧೭). **ಚಂಗಣೆಗಿಲು:** ೨. ಪನ್ನೀರಿಂದ ತೇದ ಚಂಗಣಗಿಲಾದಿಯಾದ ಪರಿಮಳಪುಷ್ಪಗಳಿಂದ ವಾಸಿತವಾದ ಶ್ರೀಗಂಧವನ್ನು ಧರಿಸಿದಲ್ಲಿ ಜನರುಗಳ ತಾಪವನ್ನು ಪರಿಹರಿಸಿ . . . ಮನ್ಮಥನ ನಿದಾನಸ್ಥಾನವಾಗಿರುವುದು (ಸಕವ್ವ. ೪೦). **ಚೆಂಗಣೆಗಲು:** ೨. "ಸೌಗಂಧಿಕಂ, ಕಲ್ಹಾರಂ, ಹಲ್ಲಕಂ, ರಕ್ತಸ್ಕಂಧಕಂ – ಈ ೪ ಚೆಂಗಣೆಗಲ ಹೂವ್ವಿನ ಹೆಸರು" (ನಾಚಿರಾ. ೧೦೧); "ಕಲ್ಹಾರಂ – ಚೆಂಗಣೆಗಲು ಬಿಳಿಯ ನೈದಿಲು, ಈಚಲು ತುರುಕುಡಿ ?" (ಒಷಧ. ೨೨). **ಚೆಂಗಣೆಗಿಲ್:** ೧. ಆದಿಶೈವಂ ದೇವದೇವೇಶ್ವರನ ಪೂಜೆಯನು ಮಾಡಲೊಂದು ಚೆಂಗಣೆಗಿಲಿಂಡೆಯ ಕೊಂಡು ಹೋಗುತಿರಲು (ಸೌಂದಪು. ೩-೧೯). ೨. ಸಿಂಗಾರದ ವನಸಿರಿಗೆ ನೆಲೆಯನೀವ ತುಂಗಭದ್ರೈಕಶಾಲನವು ಚೆಂಗಣೆಗಿಲ ಮಡು ಕಮಲಾಕರಗಳು ಕಂಗೆ ಮಂಗಳವಾಗಿಹವು (ಅಂಜಚ. ೩-೩೭); ಚೆಂಗಣೆಗಿಲ ದಿವ್ಯಪರಿಮಳಕೆಱಗುವ ಭೃಂಗವಿಂಡುಗಳ ಝೇಂಕಾರ (ಕಂನವಿ. ೫-೧೦೨). **ಚೆಂಗಣೆಗಿಲು:** ೨. "ಪದ್ಮಕಂ–ಪದ್ಮಕ, ತಾವರೆ, ಶ್ರೀಗಂಧ, ಚೆಂಗಣೆಗಿಲು, ಕೋಷ್ಠ" (ಒಷಧ. ೯೦); ಚೆಂಗಣೆಗಿಲು ನೈದಿಲು ಹೊಂದಾವರೆ ಪೊಂಗಿದ ಸರಸಿಗಳಿಂದ . . . ರಾಜಿಸುತಿಹುದು (ಕಂನವಿ. ೨-೪೯). **ಚೆಂಗಣೆಗಿಲೆ:** ೨. ಚೆಂಗಣೆಗಿಲೇ ಬಾರ ಲಿಂಗದೊಲವೇ ಎನುತ . . . ಕೊಳಂಗಳ ಜಳಂಗಳೊಳು ಪೋಗಿರ್ದು ಮಂಗಳವೆನಿಪ್ಪ ಹೂವಂ ಕೊಂಡು (ಪುಷ್ಪರ. ಹ. ೫೨೫-೧೭); ಚೆಂಗಣೆಗಿಲೆಯೆಳೆಯಲರ್ವಾಸಿಗಕೆ ಮನಂಗೊಳಿಸುವ ಮೃಗಮದದಣ್ಪಂ ಲಲಿತಾಂಗಿಯದೊರ್ವಳ್ ತೊಡೆದು (ಜಯಕಾ. ೧೪-೨೨). [ ಚೆಂ$_1$ + ಕಣಗಿಲೆ$_1$ ]

**ಚೆಂಗಣೆಗಲು** 'ಚೆಂಗಣಗಿಲೆ' ನೋ.

**ಚೆಂಗಣೆಗಿಲ್** 'ಚೆಂಗಣಗಿಲೆ' ನೋ.

**ಚೆಂಗಣೆಗಿಲು** 'ಚೆಂಗಣಗಿಲೆ' ನೋ.

**ಚೆಂಗಣೆಗಿಲೆ** 'ಚೆಂಗಣಗಿಲೆ' ನೋ.

**ಚೆಂಗದಿರ್,** ಚಂಗದಿರ್ (ನಾ). ಕೆಂಪಾದ ಕಿರಣ; ಕೆಂಬೆಳಕು: ಅಳಿಯೆ ತಮಮಿಂದು ಚೆಂಗದಿರ್ಗಳನುಳಿದಮಳಾಂಶುಗಱೆವವೋಲ್ ರಿಪುಗರ್ವಂ ಕಳಿಯೆ (ರಾಜಶೇ. ೬-೧೩೩). 'ಚೆಂಗದಿರ' ಪರಾ. **ಚಂಗದಿರ್:** 'ಚಂಗದಿರ' ಪರಾ. [ಚೆಂ$_1$ + ಕದಿರ್$_2$ ]

**ಚೆಂಗದಿರ,** ಚಂಗದಿರ (ನಾ). ಕೆಂಪಾದ ಕಿರಣಗಳಿಂದ ಕೂಡಿದವನು; ಸೂರ್ಯ: "ಚೆಂ[ಪಾಠಾಂ. ಬೆಂ]ಗದಿರನುಂ ನೇಸಱು ಪೊಟ್ಟುಮನೆ ಸೂರ್ಯನುಂ" (ಕಬ್ಬಿಕೈ. ೧೧); ಚೆಂಗದಿರನು ಚೆಂಬಿಸಿಲ ಚೆಂದುಡಿಗೆಯನ್ನು ವಿಂಧ್ಯೆಯ ಗಿರಿಶಿಖರಗಳಿಗೆ ತೊಡಿಸುತ್ತಿದ್ದಾನೆ (ಮುಚಸ. ೧). **ಚಂಗದಿರ:** "ಚಂಗದಿರನೆನಲಕ್ಕು ದಿನಪಂ" (ಕಶರ ೩೫). [ ಚೆಂಗದಿರ್ + – ಅ$_7$ ]

**ಚೆಂಗನೆ,** ಚಂಗನೆ (ಅ). ಚಕ್ಕನೆ : ಕೂಡಲೆ ; ತಟ್ಟನೆ: ಮರದಿಂದ ಕೆಳಕ್ಕೆ ಚೆಂಗನೆ ಹಾರಿದನು (ರೂಢಿ). **ಚಂಗನೆ:** ಸೇವಕನು ಚಂಗನೆ ಹಾರಿ ಅಧಿಕಾರಿಯನ್ನು . . . ತನ್ನ ಕಠಾರಿಯಿಂದ ಇರಿದನು (ಒಡಕೆ. ೨೪).

**ಚೆಂಗಚೆಂಗನೆ, ಚಂಗುಚಂಗನೆ** (ದ್ವಿರುಕ್ತಿ): ಚೆಂಗಚೆಂಗನೆ ತೇಜಿ ತೆಗೆಯೆ ದ್ವಾದಶಯೋಜನಾಂಗಣಪರ್ಯಂತ ಹರಿದು . . . ನಿಂದುದು ತೊಟ್ಟನಲ್ಲಿ (ಭರತ. ೨೪-೩೦) ; ಚಂಗುಚಂಗನೆ ಓಡುತ್ತಾ ಬಂದಳು (ರೂಢಿ).

[ ಚೆಂಗು₂ + – ಅನೆ₁ ]

**ಚೆಂಗಯ್** (ನಾ). ಕೆಂಪಾಗಿರುವ ಕೈ; ಅಂಗೈ: ಕೆಂಬಾಯ್ಗೆ ಚೆಂಗಯ್ಗೆ ಬಡಮೆಯ್ಗೊಲ್ದು ಬಾಯ್ಗಿಂತು ಬಂತಂತೆ ಬಣ್ಣಿಸುತೆ ಚದುರರೆಯ್ದೆ ವೆಂಡಿರೆಳ್ಳಂದರು (ಉದ್ಭದೇ. ೫-೨೩). [ ಚೆಂ₁ + ಕಯ್₂ (<ಕೆಯ್₂) ]

**ಚೆಂಗಲವೆ,** ಚಂಗಲವೆ, ಚಂಗಳವೆ (ನಾ). ಕೆಂಪು ತಾವರೆ, ಕೆಂದಾವರೆ : "ಚೆನ್ನೈದಿಲೆಯುಂ ಚೆಂಗಲವೆಯುಮದೆನ್ನಲ್ ಸಲೆ ರಕ್ತೋತ್ಪಳಮಕ್ಕುಂ" (ಕವಿಕಂ. ೯೫). **ಚಂಗಲವೆ:** "ಅವರೆಂದುಂ, ಚಂಗಲವೆಯೆಂದುಂ, ಚೆನ್ನೆಯ್ದಿಲ್" (ಕಕಸಾ. ೯-೧೮೭) ; "ಚಂಗಲವೆಯಾವಲೆಂದು ಚೆನ್ನೈದಿಲ್ಗೆ . . . ಪೆಸರಪ್ಪುದು" (ಕಲ್ಪಮಂ. ೨೭). **ಚಂಗಳವೆ :** "ಮಿಗೆ ಚಂಗಳವೆಯಾವಲೆಂದೆನಲ್ ಚೆನ್ನೈದಿಲಿಗೆ ಪೆಸರ್" (ಕಬ್ಬಿಗ. ೨೦). [ ಚೆಂ₁ + ಕಲವೆ ]

**ಚೆಂಗಲ್ಲು** (ನಾ). ಕೆಂಪುಬಣ್ಣದ ಕಲ್ಲು ; ಕೆಂಗಲ್ಲು : ಉಳಿಮುಟ್ಟದ ಶಿಲೆಯಲ್ಲವು ಕಲೆಯಾಯಿತು ಇಲ್ಲಿ . . . ಚೆಂಗಲ್ಲೇ ಮಾಂಗಲ್ಯಕೆ ಸೆಲೆಯಾಯಿತು ಇಲ್ಲಿ (ಕರುಣಾ. ೭೧-೧೧). [ ಚೆಂ₁ + ಕಲ್ಲು (<ಕಲ್₃) ]

**ಚೆಂಗಳ್ಳು** (ನಾ). ಕೆಂಪು ಬಣ್ಣದ ಮದ್ಯ,–ಹೆಂಡ: ವೇಣುವೀಣೆಗಳಿಂವುದನಿ ಕರ್ಣಕಮೃತಮಂ ಸೂಸುತಿರೆ, ಚೆಲ್ವು ಚೆಂಗಳ್ಳಾಯ್ತು ನರಪತಿಯ ಮತಿಗೆ (ಶ್ರೀರಾಮಾ. ೭೭-೩೫೦). [ ಚೆಂ₁ + ಕಳ್ಳು (<ಕಳ್₃) ]

**ಚೆಂಗಾಟ,** ಚಂಗಾಟ (ನಾ). ಚೆಲ್ಲಾಟ ; "ನೆಗೆದಾಟ ; ಜಗಿದಾಟ" (ಜಾನಪದಕೋ. ೫೩). **ಚಂಗಾಟ :** ಬೆಕ್ಕಿಗೆ ಚಂಗಾಟ, ಇಲಿಗೆ ಪ್ರಾಣಸಂಕಟ (ಗಾದೆ). [ ಚೆಂಗು₂ + ಆಟ ]

**ಚೆಂಗಾಯ್** (ನಾ). ಕೆಂಪುಬಣ್ಣದ ಕಾಯಿ : ಚೆಂದಳಿರ್, ಕೆಂದಳಿರ್; ಚೆಂಗಾಯ್, ಕೆಂಗಾಯ್ (ಶಬ್ದಾನು. ೩೪೨ ಪ್ರಯೋ).

[ ಚೆಂ₁ + ಕಾಯ್₄ ]

**ಚೆಂಗಾರೆ** (ನಾ). ಕೆಂಪು ಕಾರೆಯಂ ಹಣ್ಣು : ಜಲವುಟ್ಟೆಳನಾವಗಂ ಜೆದಕಿತಿಂದಾ ಬಟ್ಟೆಯೊಳ್ ಬಟ್ಟನೇಱಲ ಚೆಂಗಾರೆಯ ಮೆಲ್ದುಗುಟ್ಟ ಸಹಕಾರೋಚ್ಛಿಷ್ಟ ಪಕ್ಷಂಗಳಂ (ಸುಕುಮಾ. ೪-೫೭). [ ಚೆಂ₁ + ಕಾರೆ₁ ]

**ಚೆಂಗಾಲ** (ನಾ). ಒಳ್ಳೆಯ ಕಾಲ ; ಚೆನ್ನಾದ ಕಾಲ : ಚಂಡಿ ಚಾಮುಂಡಿಯರ್ ನರಶಿರಗಳೊಂದರ್ಬುದವ ಹರಡಿ ಧ್ರುವದಿಂದ ಧ್ರುವಬರಂ ಬೀಸುಗಾಲಿಂದೊದೆದು ಕ್ರೀಡಿಸುವ ಕೆಂಗಾಲ ಚಂಡಿಕೆಯು ತೆಗೆದ ಚೆಂಡಿನೊಳಿಂದು ಮಾಡಿದ ಚರಂಡಿತನವನು ತೊಳೆವ ಚಂಡಿಕೆಯ ಚೆಂಗಾಲ ! (ನವ್ಯಧ್ವ.೧೨-೩).

[ ಚೆಂ₂ + ಕಾಲ ]

**ಚೆಂಗಾವಿ,** ಚಂಗಾವಿ (ನಾ). ೧. ಕೆಂಪು ಬಣ್ಣ ; ಕಾವಿ ಬಣ್ಣ : ಚೆಂಗಾವಿಯಂಶುಕದಿನುಜ್ವಳವಾಗಿ . . . ಸಾರಂಗಾಕ್ಷಿಯಂಗಜನರ್ಚನೆಗೆಯ್ಗುಂ (ಮಿತ್ರಗೋ. ೧೫-೨೯); ಆ ಜೋಗವಟ್ಟಿಗೆಯುಮಾ ಬೆಳ್ಪಡೆಯುಮಾ ಬೆಂಬೂದಿಯ ಪೂಸುಮಾ ಚೆಂಗಾವಿಗಪ್ಪಡದುಡೆಯುಂ (ರಾಮಾಶ್ವ. ೫೬-೧೩) ; ಚೆಂಗಾವಿಯ ನಿಲುವಂಗಿಯನ್ನು ಧರಿಸಿದ್ದಾನೆ (ಕುಂಗಭ. ೨). ೨. ಕೆಂಪು ಬಣ್ಣದ ಸೀರೆ : ಚೆಂಗಾವಿಯನ್ನುಟ್ಟು ಬಾಗಿನಗಳನಾಂತು ನಿನ್ನನೆ ನೋಳ್ಪೆನೆಂದು (ಗಾಥಾಸ. ೮೨-೨೪). **ಚಂಗಾವಿ :** ೧. ಖಳಗೆ ಬೆಂಬಲವಾಗಿ ಸಂಧ್ಯಾ ಸುರಕ್ಕಸಿಯು ಚಲುವ ಚಂಗಾವಿ ಸೀರೆಯನುಟ್ಟು ಬಪ್ಪಂತೆ . . . ಸಂಜೆಗೆಂಪಡರ್ದುದು (ನವಮೋ. ೧೧-೨೩). [ ಚೆಂ₁ + ಕಾವಿ ]

**ಚೆಂಗಾಳ್ವ** 'ಚಂಗಾಳ್ವ' ನೋ.

**ಚೆಂಗಿಸು,** ಚಂಗಿಸು. ಜಂಗಿಸು (ಕ್ರಿ). ೧. ಉಕ್ಕಿಬರು ; ಹೆಚ್ಚಾಗು : ಹೆಂಗಸಿನ ಕೈಯಿಂದಲಿ ಸಮರಾಂಗಣದಿ ಬಳಿಕೆಂದು ಊರ್ವಶಿ ಚೆಂಗಿಸಿದ ಕೋಪದಲಿ ಶಾಪವ ಕೊಡಲು (ಅಂಬಿಕಾ. ೮-೩೩). **ಚೆಂಗಿಸು:** ೨. ಹಾರು; ಕುಪ್ಪಳಿಸು ; ನೆಗೆ : ಬಂದಿತು ಬಂದಿತು ಬಂದಿತು ಹೊಮ್ಮೃಗ . . . ಕೊಂಗಿಸಿ ಕುಣಿಯುತ ಚಂಗಿಸಿ ಪಾರಿ (ಹಮಚ. ೨೨). **ಜಂಗಿಸು :** ೨. ಸಿಂಗಂ ಪೆಱುತಿರಲಾ ಶಿಶುವಂ ತಾಯುಂಗದಿ ತಲೆ ಹೊರಟುದಯಿಪ ಸಮಯಕೆ ಮುಂಗಡೆಯೊಂದು ಮತಂಗದ ಮಱಿಯಿರೆ ಕಾಣುತ ಕಡು ಮುಳಿದು ಜಂಗಿಸಿಯಾವೊಡಲಿಂದದನವಱಿತು (ಜಯಶ್ರೀ. ೧೫-೩೨).

[ ಚೆಂಗು₂ + – ಇಸು₃ ]

**ಚೆಂಗು₁,** ಚಂಗು₁ (ಕ್ರಿ). ಹಾರು ; ನೆಗೆ ; ಕುಪ್ಪಳಿಸು : ಏರೊಡೆದು ಚೆಂಗಿದಂ ತಲೆಗೆದರ್ದು ಶಾಕಿನಿಗೆ ಕೈಸಿಲ್ಕದೆ (ಪರಶು. ೩೦-೪೨) ; ಕಂಗಳಿಗೆ ಕಾಣದಲೆ ಚೆಂಗು ನೀ ಮಾಯದಲಿ (ಹಮಚ. ೧೬೫): ಮರುತ್ವನಯನತ್ತಣ್ಗೆ ಚೆಂಗಿದನಭ್ರ ಮಾರ್ಗದೊಳು (ಸಂರಾಜಂ. ೧೧೯). **ಚೆಂಗು₁ :** (ಸ).

[ ದೇ.೫ ತಮಿ. ಚಿಮ್ಮು. ]

**ಚೆಂಗು₂,** ಚಂಗಂ₂ (ನಾ). ಹಾರುವಿಕೆ ; ನೆಗೆತ ; ಜಗಿತ: (ಸ). **ಚಂಗು₂ :** ಚಂಗು ಹೊಡೆದು ನುಣುಚಿಕೊಳ್ಳುತ್ತಿದ್ದ (ಏರಿಗೇ. ೫೮). [ <ಚೆಂಗು₁ ]

**ಚೆಂಗು₃** 'ಚುಂಗು₁' ನೋ.

**ಚೆಂಗು₄,** ಚಂಗು₃, ಜಂಗಂ₃ (ನಾ). ಒಂದು ಬಗೆಯ ತಂತಿವಾದ್ಯ : ಚೆಂಗು ದಂಡಿಗೆ ತಿತ್ತಿ ಮುಖವೀಣೆ ಜಂತ್ರವುಪಾಂಗ ಮುಂತಾದುವನಾಂತು (ಭರತ. ೪೭-೪೭): ಜೇಗಟೆ ಘಂಟೆ ವರತಂತಿ ಚೆಂಗು ಮೊದಲಾದವಗ್ನಿಯ ವಂಶ (ಗುರುಚಾ. ೭-೩೬) ; ಕೂಗುತಿಹವು ಸರ್ವಕಾಲದಿ ಜಾಗಟೆ ಕೊಳಲು ದಪ್ಪಟೆ ಚೆಂಗು ಕೊಂಬು ತಾಳ ರವಗಳಿಂದ (ಚದಾವ. ೫೧-೨). **ಚಂಗು₃ :** ಆವಜ ಚಂಗು ಶ್ರೀಮುಖವೀಣೆಗಾಱರು ತಾವಾಗ ತಂತಮ್ಮ ಕಲೆಯ ಭಾವ ಭಿನ್ನಣದೋಱ ಕೇಳಿಸಿದರು (ನಾಗಕು. ೨೨-೭೦) ; ಉತ್ತಮ ಸುತಾಳ ವೀಣಾಮೃದಂಗಂ ಚಂಗು ತಿತ್ತಿಯುಮುಪಾಂಗದಾ ಮೇಳಗಳ (ಪ್ರಭುಪು. ೪-೩೭) ; ಚಂಗ ಬಾಜಿಸುವ ಫಣಿವೇಣಿಯರ ತತಿ (ರಾಘಚ. ೭-೮೩). **ಜಂಗು₃ :** ಜಂಗು ಗೆಜ್ಜೆ ಮೃದಂಗ . . . ವೀಣೆಗಳ ನುಡಿನುಡಿಸುವಾ (ಪರಶು. ೧೧-೨೮). [ ←ಪಾರ. ಚಂಗ್. / ತೆಲು. ಚೆಂಗು ]

**ಚೆಂಗುಡಿ,** ಚಂಗುಡಿ (ನಾ). ೧. ಕೆಂಪಾದ ಚಿಗುರು–ಕುಡಿ: ಬೆಳ್ದಿಂಗಳುಚಿ ಬಾಸಣಿಸಿದಂತೆವೊಲ್ತೆಂದಳಿರ್ ಚೆಂಗುಡಿಯುನಾ ಸುಬಿಂಬಂ ಪ್ರಕಾಶಮನಿಳಿಪ ರಂಗದಾ ರೋಪಾತಿಶಯ ಕಾಂತಿಯಾ (ಸಂದಿಮಾ. ೧೭-೩೪) : ಸಂತಸದ ಕೂಟಗಳು ಕಂಗೊಳಿಪ ನೋಟಗಳು ಚೆಂಗುಡಿಗಳುಯ್ಯಾಲೆಗಳೆಲ್ಲ ಹೋಗಿಹವು (ವಿಜೀಗೀ. ೩೨-೨೦). ೨. ಹವಳ ; ಪ್ರವಾಳ : "ಚೆಂಗುಡಿಯೆಂದು ಪ್ರವಾಳಂ" (ಕಕಸಾ. ೮-೧೪೮) ; ಸಿಂಗರಂಬಡೆದ ಮೊಗ ಚೆಂಗುಡಿಯ ಕುಡಿಯೊಲೆಸೆವಧರ (ಸಂದಿಮಾ. ೨೩-೩೭) : ಚೆಂಗುಡಿಯ ಕುಡಿಗಳೆಂಬಿನೆ ಗಮಣಂ ಮಿನುಮಿನನೆ ಮಿನುಗುತಿರ್ದುವು ನನೆದೀವಿದ ಪಾಟಲೀದ್ರು ಮಂಗಳ ಕೊನೆಗಳ್ (ದಮಯ್ತ. ೧-೮೫). **ಚಂಗುಡಿ:** ೨. "ಚಂಗುಡಿಯೆನಲ್ ವಿದ್ರುಮಂ" (ಕಬ್ಬಿಗ. ೪೭); "ಚಂಗುಡಿಯೆ ಹವಳಮಕ್ಕುಂ" (ಕಕರ. ೩೫).

[ ಚೆಂ₁ + ಕುಡಿ₃ ]

**ಚೆಂಗುಲಾಬಿ,** ಚಂಗುಲಾಬಿ (ನಾ). ಕೆಂಪು ಗುಲಾಬಿ : ಚೆಂಗುಲಾಬಿ, ಮಲ್ಲಿಗೆಯು, ಬಕುಳ ಸೇವಂತಿ ರಂಗು ತಾಳಿ (ನಲಮು. ೩೫-೦೪). **ಚಂಗುಲಾಬಿ :** ಚಂಗುಲಾಬಿಯು ಅರೆ ಅರಳಿದ ಪುಷ್ಪಗಳನ್ನು ಎತ್ತಿಕೊಂಡು (ಚಂದುಟು. ೧೭). [ ಚೆಂ₁ + ಗುಲಾಬಿ ]

**ಚೆಂಗೂದಲು** (ನಾ). ಕೆಂಪಗಿರುವ ಕೂದಲು : ಅವಳ ದುಂಡುಮುಖದ ಮೇಲೆ ಚೆಂಗೂದಲು ಗುಂಗುರುಗುಂಗುರಾಗಿ ಕುಣಿಯುತ್ತಿತ್ತು (ಪುನರು. ೩೮೫). [ ಚೆಂ₁ + ಕೂದಲು (<ಕೂಂದಲ್) ]

**ಚೆಂಗೂಲಿ,** ಚಂಗೂಲಿ (ನಾ). ೧. ಕೈಗೂಲಿಮಾಡುವವನು; ದಿನಗೂಲಿಯವನು ; ಆಯಾ ದಿನದ ಕೂಲಿಯನ್ನು ಅಂದೇ ಪಡೆದು ಕೆಲಸ ಮಾಡುವವನು: ಕಾಮಾಟಿ ಚೆಂಗೂಲಿಗಳು ಸಹಾ ಅವರವರ ಸದ್ದಿವಾಲರ ಸಮೇತ ಸಮಯ ಬಿದ್ದ ಹಾಗೆ ಕೆಲಸ ಮಾಡಲು ಬರುತ್ತಿರಲಿ (ಪಾಟಮಾ. ೩). ೨. ಸೂಳೆ ; ವೇಶ್ಯೆ: ಯಾಕೆ ಚೆಂಗೂಲಿ ಆಡಿದ ಹಾಗೆ ಆಡುತ್ತಿರುವೆ ? (ರೂಢಿ). **ಚಂಗೂಲಿ:** ೧. ಗುಮಾಸ್ತೆಯರು . . . ಚಂಗೂಲಿ ಪಹರೆಯವರು ಮುಂತಾದ ಜನಗಳನ್ನೂ . . . ನೇಮಕ ಮಾಡಿಸಿ (ಮಹಾಪಂ. I, ೧೩೭) ; ಆಂಗ್ಲೇಯರು ಭಾರತೀಯರನ್ನು ಚಂಗೂಲಿಗಳನ್ನಾಗಿಸಿ . . . ಶ್ರೀಮಂತ ರಾಗಲಾರಂಭಿಸಿದರು (ಹೊಸಹು. ೬೮).

[ ದೇ.॥ ತಮಿ. ಚೆಯ್‌ಕೂಲಿ; ತೆಲು. ಚೇಕೂಲಿ ]

**ಚೆಂಗೆಂಡ** (ನಾ). ಕೆಂಪಗಿರುವ ಕೆಂಡ ; ನಿಗಿನಿಗಿಯಾದ ಕೆಂಡ : ವಿಷಯ ವಿಂದ್ರಿಯದೊಡನೆ ತಾಗೆ ಚೆಂಗೆಂಡವನು ಕೆದರಿ ಚೇತವ ಸುಡುತ ಇರವನರುಹುವುದು (ಮಿಲದೇ. ೨೩-೭). [ ಚೆಂ$_1$ + ಕೆಂಡ ]

**ಚೆಂಗೊಕ್ಕು** (ನಾ). ಕೆಂಪಗಿರುವ ಕೊಕ್ಕು, – ಮೂತಿ: ಕಳವೆಯ ಪೊಂದೆನೆಯಿಂ ಸಂಗಳಿಸಿರೆ ಚೆಂಗೊಕ್ಕು ಪಚ್ಚೆಯಂತೆವೊಲಿರೆ ಮಯ್ಯಿಗಳಿಗಳ ಸಾಲ್ಬಭದೊಳ್ಕಣ್ಗೊಳಿಸಿತ್ತಾಗಳ್ಸುರೇಂದ್ರಚಾಪದ ತೆರದಿಂ(ವುರಾಚ. ೫-೭೦).

[ ಚೆಂ$_1$ + ಕೊಕ್ಕು$_2$ ]

**ಚೆಂಗೊಡೆ** (ನಾ). (?) : ಇಡಿದುದ್ದಂ ಬೆಳೆದೇಟ್ಗೆವೆಟ್ಟದ ಬದಿರ್ಗಾಡೆಲ್ಲಮಂ ಬೇಗೆ ನಿಚ್ಚಡರ್ದವರ್ಂತಿರ್ದುದು ಸಂಜೆಗೆಂಪದಱ ಬಿತ್ತೂಂದೊಂದರಲ್ ತೋರ್ಪಿನಂ ಪಿಡಿದಂತಿರ್ದುವು ನಟ್ಟ ಬಾಂದೊಱೆಯ ಮಿಾನೆಲ್ಲಂ ಕಟಲ್ ತಂದ ಚೆಂಗೊ [ಪಾಠಾಂ. ಜೇನೊ]ಡೆಯಂತಿರ್ದುವು ಪಕ್ಕೆವೆಟ್ಟದೆಡೆಯೊಳ್ ನೀಹಾರರುಚ್ಯುಂಡಲಂ (ಸೂಕ್ತಿಸು. ೯-೧೨).

[ P ಇದು 'ಜೇಂಗೊಡ'ಎಂಬುದರ ಅಪಲಿಖಿತವಿರಬಹುದು ]

**ಚೆಂಗೊರಲ್** (ನಾ). ಕೆಂಪಾದ ಕೊರಳು, – ಕಂತ್ರಿಗೆ : ಚಕಾರಕ್ಕೆ – ಚೆಂಗಣಗಿಲೆ . . . ಚೆಂಗೊರಲ್, ಚೆಂದುಟಿ (ಶಮದ. ೧೮೨ ಪ್ರಯೋ).

[ ಚೆಂ$_1$ + ಕೊರಲ್ ]

**ಚೆಂಗೋಟು** (ನಾ). ಅಂಕಂಡೊಂಕಾಗಿರುವುದು ; ವಿಶೇಷವಾಗಿ ಪಕ್ರವಾಗಿರುವುದು (?) : ಮೊಳಕಾಲಿಕ್ಕುತ್ತೆಱಗುತೆ ನಿಲುತಂ ಕಾಲುಂ ಕೆಯ್ಯುಂ ಚೆಂಗೋಟಾ [ಪಾಠಾಂ. ಚೆಂಗೊಂಡಾ]ಗಿರೆ ಮೇಲುಂ ತಳವುಂ ಕೆಲವುಂ ಡೊಂಕಿರೆ ಕುಳ್ಳಿರ್ದೇಳುತ್ತುಂ ಬೀಳುತ್ತುಂ (ಧ್ಯಗೀಲ. ಪ. ೪೭೩-೨).

[ ? ]

**ಚೆಂಗೋಲ್** (ನಾ). ಕೆಂಪಾದ ಕೋಲು : ಚಕಾರಕ್ಕೆ – ಚೆಂಗಣಗಿಲೆ . . . ಚೆಂಬೊನ್, ಚೆಂಗೋಲ್ (ಶಮದ. ೧೮೨ ಪ್ರಯೋ). [ ಚೆಂ$_1$ + ಕೋಲ್$_1$ ]

**ಚೆಂಚ$_1$,** ಚಂಚ, ಚಂಚು$_1$ (ನಾ). ಬೇಡ ; ಬೇಟೆಗಾರ ; ಶಬರ : ಧಿಟ್ಟ ಚೆಂ[ಪಾಠಾಂ. ಚಂ] ಚರು ಬಂದು ಚಪ್ಪಳೆಗುಟ್ಟಯೇಡಿಸಿ ಕಾಡಿದಲ್ಲದೆ ಬಿಟ್ಟು ಹೋಗರು ನಿನ್ನನು(ಬಸವು. ೧೮-೧೫); ಬಿಲ್ಲುಗಳಿಗೆ ತಿರುವಿಡುವ ಚೆಂಚರ್ಕಳಿಹ ಗೂಳಿಯಂ (ರೇವಣ. ೩೭-೧೧); ನರೆತೆರೆಯುರೆತ ಚೆಂಚರಿಂ ಚೆಂಚಿತಿಯರಿಂ (ರೇವಣ. ೦೧೯-೨೦). **ಚಂಚ :** ಹೀನಮಾನವರನೀ ಬೇಡರಂ ಚಂಚರಂ . . . ಏನೆಂದು ಅಯ್ಯಯ್ಯಯೆಂದು ಬಾಯ್ಬಿಟ್ಟೆಂದಡೇನಪ್ಪುದು (ಸಿದ್ಧರಾ.೨-೬೩).
**ಚಂಚು$_1$ :** 'ಚಂಚುದೊಡ್ಡಿ' ಪರಾ. [ ದೇ.॥ ತೆಲು. ಚೆಂಚು ]

**ಚೆಂಚ$_2$** (ನಾ). ಒಂದು ಬಗೆಯ ಸಸ್ಯ : "ಅಸಿಸಿಂಬಿ–ಚೆಂಚ" (ಓಷಧಿ. ೫).

[ ? ]

**ಚೆಂಚಲಿ,** ಚಂಚಲಿ, ಚರಿಚಲಿ, ಚರಿಜಲಿ (ನಾ). ಒಂದು ಬಗೆಯ ಸಸ್ಯ: ಚೆಂಚಲಿಸೊಪ್ಪು (ಮೈಜಿಗಿ. ೩೦-೫೮೩). **ಚಂಚಲಿ :** ಗೊರಜಿ, ಚಂಚಲಿ, ಚರಿಜಲಿ, ತಾಳಿಸಪತ್ರ (ಮೈಜಿಗಿ. ೩೭-೭೩೩). **ಚರಿಚಲಿ :** (೬). **ಚರಿಜಲಿ :** ಮೇಲಿನ 'ಮೈಜಿಗಿ' ಪ್ರಯೋಗವನ್ನು ನೋಡಿ. [ದೇ.॥ ತೆಲು.ಚಂಚಲಿ]

**ಚೆಂಚಿತಿ,** ಚಂಚಿತಿ (ನಾ). ಬೇಡರ ಹೆಂಗಸು ; ಬೇಡಿತಿ ; ಶಬರಿ : ಮಱುವೊಲ್ಲೆಯ ಕಣ್ಮಂಚಂ ಕೆದಱುವ ನೋಟದ ಚೆಂ[ಪಾಠಾಂ. ಚಂ]ಚಿತಿಯಂ ವಿಪ್ರರಾಜವಧು ಕಂಡು (ಪುಣ್ಯಾಸ್ರ. ೧೨-೩೨) ; ನರೆತೆರೆಯುರೆತ ಚೆಂಚರಿಂ ಚೆಂಚಿತಿಯರಿಂ (ರೇವಣ. ೦೧೯-೨೦). **ಚಂಚಿತಿ :** ಹಗಲುವಿರುಳುಂ ಚಂ[ಪಾಠಾಂ. ಚೆಂ]ಚಿತಿಯರೊಡನೆಗಲದೆಡೆಯಾಡುತ್ತ ಬಂದು(ಬಸವು. ೪೪-೭).

[ ಚೆಂಚ$_1$ + –ಇತಿ$_1$ (< – ಇತ್ತಿ) ]

**ಚೆಂಚು** 'ಸಂಚು' ನೋ.

**ಚೆಂಜಂಜೆ** (ನಾ). ಕೆಂಬಣ್ಣದ ಸಂಜೆ : ಕೆಂಜಂಜೆ, ಚೆಂಜಂಜೆ ; ಕೆಂದಳಿರ್, ಚೆಂದಳಿರ್ (ಶಬ್ದಾನು. ೩೪೩ ಪ್ರಯೋ). [ ಚೆಂ$_1$ + ಸಂಜೆ ]

**ಚೆಂಜೇನು** (ನಾ). ಕೆಂಪು ಬಣ್ಣದ ಜೇನುತುಪ್ಪ : ಅಚ್ಚಹಸು ಕರೆದ ಈ ಇನಿದಾದ ಬೆಳ್‌ಪಾಲು, ಹೂಗೆಲಸಿ ಚಿಟ್ಟಜೇನಿಳಿಸಿದೀ ಚೆಂಜೇನು (ಪಾರಸಿ. ೨೩-೫೨೦); ಬೆಳಕು ಮರಳಿತು, ಹೊವು ಅರಳಿತು, ಚೆಂಜೇನಾಯಿತು ಬಿಳಿ ಹಾಡು (ಶಿಲಾಲ. ೬೦-೩). [ ಚೆಂ$_1$ + ಜೇನು(<ಜೇನ್) ]

**ಚೆಂಟಕಣ್ಣಿ** (ನಾ). ಒಂದು ಬಗೆಯ ಮರ: ಮರಗಳು; ಹೆಸವ, ಹೆಬ್ಬಲಸು . . . ಚೆಂಟಕಣ್ಣಿ, ಚಿಟ್ಟುತಂದ್ರಿ, ಬೇವು, ಹುಚ್ಚಬೇವು (ನಮ್ಮನು. ೨೩೭).

[ ? ]

**ಚೆಂಡಕನರಿ,** ಚಂಡಕನರಿ (ನಾ). ಒಂದು ಬಗೆಯ ನರಿ ; ಗುಳ್ಳೆನರಿ : (೬). **ಚಂಡಕನರಿ :** ಒರ್ವ ರಾಯಭಾರಿಯೊಲಿನ್ನೊರ್ವ ಚಂಡಕನರಿ ಸಾಲು (ಚಂಶನ. ೬೨-೧೯). [ ಚೆಂಡಕ ? + ನರಿ$_1$ ]

**ಚೆಂಡಲರು** (ನಾ). ಒಂದು ಬಗೆಯ ಹೂವು ; **ಚೆಂಡುಹೂವು :** ಸತಿಯರ್ಗೆ . . . ಚೆಂಡಲರಿನ ಪೊಟ್ಟಣ ದಿವ್ಯಚಂದನದುಂಡೆಗಳನು ಕೊಟ್ಟು ನಗುತ(ಮೋಹತ. ೦೪-೩೯). [ಚೆಂಡು(<ಸೆಂಡು)+ಅಲರು$_2$(<ಅಲರ್$_2$)]

**ಚೆಂಡಾಟ** 'ಸೆಂಡಾಟ' ನೋ.

**ಚೆಂಡಾಟಗಾರ** (ನಾ). ಚೆಂಡಿನಿಂದ ಆಟವಾಡುವವನು : ಚೆಂಡಾಟಗಾರರಲ್ಲಾಗಲೀ ಅಥವಾ ಒಂದು ಜೇನುನೊಣದ ಶರೀರದಲ್ಲಾಗಲೀ–ಜಯ ಮತ್ತು ಪ್ರಗತಿ ಸಾಧ್ಯ (ಕೀಟಬಿ. ೧೦).

[ ಚೆಂಡಾಟ(<ಸೆಂಡಾಟ) + – ಗಾರ(<– ಕಾಱ) ]

**ಚೆಂಡಾಡು** 'ಸೆಂಡಾಡು' ನೋ.

**ಚೆಂಡಾಲ** (ನಾ). ಒಂದು ಬಗೆಯ ಮರ : ಕೆಂದಾಳೆ, ಸಗಡೆಕೆಂದಾಳ, ಚೆಂಡಾಲ (ಮೈಜಿಗಿ. ೬೮-೧೩೯೫). [ ? ]

**ಚೆಂಡಿ$_1$** 'ಚೆಂಡೆ$_2$' ನೋ.

**ಚೆಂಡಿ$_2$** 'ಚಂಡಿ$_1$' ನೋ.

**ಚೆಂಡಿಕಸ** (ನಾ). ಬತ್ತದ ಗದ್ದೆಯಲ್ಲಿ, ಪೈರಿನ ನಡುವೆ ಬೆಳೆಯುವ ಒಂದು ಬಗೆಯ ಕಳೆ,–ಹುಲ್ಲು: (೬). [ ಚೆಂಡಿ$_1$(<ಚೆಂಡೆ$_2$) + ಕಸ ]

**ಚೆಂಡಿಕೆ,** ಚಂಡಿಕೆ$_1$(ನಾ). ಜುಟ್ಟು; ಶಿಖೆ: "ಶಿಖಾ, ಕಾಕಪಕ್ಷಃ, ಶಿಖಂಡಿಕಾ– ಈ ೩ ಚೆಂಡಿಕೆ" (ಹಲಾಯು. ೮೮-೩೭೮) ; ಪೊನ್ನ ಪಂಜರವಂ ಪೊತ್ತಿರದೆ ಟ್ಟುಂದಂ ಚೆಂ[ಪಾಠಾಂ. ಚಂ] ಡಿಕೆವೆರಸಿದ ಚಂಡಾಲ ಬಾಲಕಂ(ಕಾದಂಪೂ. ೩೭) ; ನಂದಿನಿಯ ಪಾಲಿದೆ ನೀಂ ಕುಡಿಯಲ್ಕೆ ನಿನ್ನ ಚೆಂಡಿಕೆ ಬಳೆದಪ್ಪುದು (ಜಗನ್. ೩-೫೧); ಚೆಂದದಿಂ ಚೆಂ[ಪಾಠಾಂ. ಚಂ]ಡಿಕೆವಿಡಿದು ಮಗಳನುತ್ತರಿಸು ವಂದದಿಂ (ಮಾನಸ. ಪ. ೬೯-೧೮) ; ಚೆಂ[ಪಾಠಾಂ. ಚಂ]ಡಿಕೆಗಳ ಬಾಲಕರ ಮಂಡಳಿಯನು . . . ಕಂಡಳಾ ಕಮಲದಳಾಕ್ಷಿ (ಕುರಾಸಾಂ. ೭-೫೪). **ಚಂಡಿಕೆ$_1$:** ಕಪ್ಪಿಗೆ [ಸಲೆ] ಚೆಲ್ವಾಗಿಯೆ ಚಂಡಿಕೆ ನೆಗೆದೊಡಮಾಗವು ಮಟ$^3$ (ಅಟ್ಟಮ. ೫-೨) ; ಕೆಂಡದಂಥವಯೆನ್ನ ಗಂಡ ಕಂಡರೆ ಹಿಡಿದುಕೊಂಡು ಚಂಡಿಕೆಯ ದಂಡಿಸದೆ ಬಿಡ (ಪುರಂದ. ೧-೭೫-೫) ; ಅಂದವಾಗಿ ಚಂಡಿಕೆ ಕಟ್ಟಿ ಹಣೆಗೆ ತಿಲಕವನ್ನು ಇಟ್ಟುಕೊಂಡು ದೇವರಿಗೆ ವಂದಿಸುವವನು(ಶಪವು. ೫-೩೩).

[ <ಸಂ. ಶಿಖಂಡಿಕಾ ]

**ಚೆಂಡಿಕೆವುಣುಸೆ** (ನಾ). ಒಂದು ಬಗೆಯ ಹುಣಿಸೆ (?) : ಚಾವಗಾವುಣ್ಡನ ಸೋಭನಗಾವುಣ್ಡನ ಪೊಲದೊಳ್ [ಚೆ] ಣ್ಡಿಕೆ [ವು] ಣುಸೆಯಿಂ ಮೂಡಂ ಮು[ಟ್ಟ]ಯಂಗೇರಿ ಸೀಮೆಯಿಂ ಬಡಗಣ ದೆಸೆಯೊಳ್ (ಸೌಇಇ. XX, ೩೮-೩೦ : 1068). [ ಚೆಂಡಿಕೆ$_0$ + ವುಣುಸೆ(<ವುಣಸೆ) ]

**ಚೆಂಡಿಗೊಳ್ಳು** 'ಚಂಡಿಗೊಳ್' ನೋ.

**ಚೆಂಡಿಸು**, ಚಂಡಿಸಂ$_1$ (ಕ್ರಿ). ೧. ತಲೆ ಕತ್ತರಿಸಂ : ಈ ಕ್ಷಿತಿಮಂಡಲದೊಳು ಉದ್ದಂಡ ದೈತ್ಯರ ಚೆಂಡಿಪ ನರಹರಿಯೆ (ಪುರಂದ. ೦-೧೬೬-೨). **ಚೆಂಡಿಸು$_1$ :** ೨. ಉತ್ಸಾಹಿಸ ; ಪುಟನೆಗೆ : ಕಂಡು ಕನಸಿನೊಳು ರೂಪ ಜಯಂತನ ಪುಂಡರೀಕಾಕ್ಷಿ ಪುಳಕದೆ ಚೆಂಡಿಸಿ ಮೇಲ್ವಾಯ್ದವನೆಂದೇ ತಬ್ಬಿಕೊಂಡಳು ಬಯಲನೇನೆಂಬೆ (ಕಂವವಿ. ೯-೧೬೬). [ ಚೆಂಡು (<ಸೆಂಡು) + – ಇಸು$_3$ ]

**ಚೆಂಡು** 'ಸೆಂಡು' ನೋ.

**ಚೆಂಡುಕಾರೆ** (ನಾ). ಕಾರೆಗಿಡದಲ್ಲಿ ಒಂದು ಬಗೆ : ಬೆಟ್ಟದ ಕಮ್ಮಗಗ್ಗರೆ ಚೆಂಡುಕಾರೆ (ವೃಜಿಗಿ. ೮೮-೦೩೦೯). [ ಚೆಂಡು (< ಸೆಂಡು) + ಕಾರೆ$_1$ ]

**ಚೆಂಡುಗ** (ನಾ). ಒಂದು ಬಗೆಯ ಮರ : " ಅಕ್ಷ–ತಾಡಿಕವಡೆ, ಚೆಂಡುಗ, ದೇವಸಾಸಿವೆ " (ಒಷಧಿ. ೧). [ ? ]

**ಚೆಂಡುಚೇಣಿಹುಲ್ಲು** (ನಾ). ಒಂದು ಬಗೆಯ ಹುಲ್ಲು : (ವೃಜಿಗಿ ೨೬-೩೨೬).
[ ಚೆಂಡು$_0$ + ಚೇಣಿ$_1$ + ಹುಲ್ಲು(<ಪುಲ್) ]

**ಚೆಂಡುಮಲ್ಲಿಗೆ**, ಚಂಡುಮಲ್ಲಿಗೆ (ನಾ). ಒಂದು ಬಗೆಯ ಗುಂಡಾದ ಹೂ : ಸೀವೆ ಶಾವಂತಿಗೆ, ಚೆಂಡುಮಲ್ಲಿಗೆ (ವೃಜಿಗಿ. ೬೩-೦೩೦೧). **ಚಂಡುಮಲ್ಲಿಗೆ :** (೬). [ ಚೆಂಡು(<ಸೆಂಡು) + ಮಲ್ಲಿಗೆ ]

**ಚೆಂಡುವೂ**, ಚೆಂಡುಹೂವು, ಚೆಂಡುಹೂ (ನಾ). ಒಂದು ಬಗೆಯ ಹಳದಿ ಹೂ : ' ನೀನೊಂದು ಪೂವಿನ ಚೆಂಡು ' ಎನುತೆನ್ನ ಮುದ್ದಾಡು ತಿರ್ದನ್ ' ಚೆಂಡುವೂ !ಚೆಂಡುವೂ ! ' ಎಂದಟ್ಟಹಾಸಂ ವೊಳಗಲದ್ಭುತಂ ನಗುತೆ (ಶ್ರೀರಾಮಾ. ೬೦೯-೧೪೬). **ಚೆಂಡುಹೂವು :** ಚಂಡು ಹೂವಿನಲ್ಲಿ . . . ಬಹಳ ಪ್ರಕಾರ ಕುಲಗಳುಂಟು (ಕೃಷಿಪ್ರ. ೨೦೦). **ಚೆಂಡುಹೂ :** ಗೌರೀಮುಡಿ, ಚೆಂಡುಹೂಗಳಂಥ ಬಣ್ಣಬಣ್ಣದ ಹೂಗಳಿಗೆ ಬಡತನವೇ ಆ ಎರೆಯಲ್ಲಿ ? (ಬೆಳುಮ. ೦೩). [ ಚೆಂಡು(<ಸೆಂಡು) + ಹೂ$_2$(<ಪೂ$_2$) ]

**ಚೆಂಡುಹೂ** 'ಚೆಂಡುವೂ' ನೋ.

**ಚೆಂಡೆ$_1$**, ಚಂಡೆ$_1$ (ನಾ). ಒಂದು ಬಗೆಯ ಚರ್ಮವಾದ್ಯ : ಚೆಂಡೆಯ ತಾಳಕ್ಕನುಗುಣವಾಗಿ . . . ಕುಣಿವುದನ್ನು ನೋಡುತ್ತಿದ್ದರೆ, ನೋಡು ತ್ತಿದ್ದವರಿಗೆ ಆಡುತ್ತಿರುವ ಕಥೆಯೇ ಮರೆತುಹೋಗುತ್ತಿತ್ತು (ವಿಸರು. ೦೯). **ಚಂಡೆ$_1$ :** ಮೇಳದವರ ಚಂಡೆಯ ಧ್ವನಿ ಉಕ್ಕೇರಿ ಹರಡುತ್ತದೆ (ಸಂಸ್ಕಾರ. ೦೪೨). [ದೇ.॥ ತಮಿ. ಚೆಣ್ಬೈ ; ಮಲ. ಚೆಣ್ಡ ; ತುಳು. ಚೆಂಡೆ]

**ಚೆಂಡೆ$_2$**, **ಚೆಂಡಿ$_1$** (ನಾ). ೧. ಒಂದು ಬಗೆಯ ಗಂಧದ್ರವ್ಯ; ಕರಿಕಚೋರ : " ಗಣಹಾಸಕ–ಚೆಂಡೆಯೆಂಬ ಗಂಧದ್ರವ್ಯ " (ಒಷಧಿ. ೪೬). **ಚೆಂಡಿ$_1$ :** ೨. ಒಂದು ಬಗೆಯ ಸಸ್ಯ : (೬). [ <ಸಂ. ಚಂಡಾ ]

**ಚೆಂತಲಪಲ್ಲಿ** (ನಾ). ಒಂದು ಊರಿನ ಹೆಸರು ; P ಈಗಿನ ಬಾಗೇಪಲ್ಲಿ ತಾಲ್ಲೂಕಿನ ಚೆಂತನಪಲ್ಲಿ : ಪಲ್ಲವಮಾರಾಜ ಪ್ರಿಥಿವೀರಾಜ್ಯಂಗೆಯೆ ಚೆನ್ತಲಪಲ್ಲಿನ ಊರೆಕಿ ದೇವಿನವ್ಮ . . . . ಚೆನ್ತ ಕ ಪು ಲ್ಲ ನಾ ಚೆ ಕಾ ರ (ಎಕ. X, ಬಾಗೆಪ. ೬೬-೪ ; ಸು.900). [ ಚೆಂತಲ ? + ಪಲ್ಲಿ$_2$(<ಪಳ್ಳಿ$_1$) ]

**ಚೆಂದ$_1$** 'ಚಂದ$_1$' ನೋ.

**ಚೆಂದ$_2$** 'ಚಂದ$_2$' ನೋ.

**ಚೆಂದಂಗೆಡು** 'ಚಂದಗೆಡು' ನೋ.

**ಚೆಂದಂಬಡೆ** (ಕ್ರಿ). ಅಂದವನ್ನು ಪಡೆ ; ಸೊಗಸನ್ನು ಹೊಂದು : ಪಾರ್ವರ ಕೇರಿಯಂತೆ ಚೆಂದಂಬಡೆದ ಮಡದಿನೆಸೆದುಂ ತೇರೆನಿಸಂ (ಕಬ್ಬಿಕಾ. ೩೦).
[ ಚೆಂದ$_1$(<ಚಂದ$_1$) + ಪಡೆ$_1$ ]

**ಚೆಂದಕಾಣಿಸು** 'ಚಂದಕಾಣಿಸು' ನೋ.

**ಚೆಂದಕಾಣು** 'ಚಂದಕಾಣು' ನೋ.

**ಚೆಂದಗಲೆ** (ನಾ). ಚಂದ್ರನ ಕಳೆ ; ಚಂದ್ರಬಿಂಬ : ದೇವರಾದಿತ್ಯನಂ ಪೊಸ ಚೆಂದಗಲೆಯು ಹುಟ್ಟಂಗೆಯ್ವನಂ (ಉದ್ಭದೇ. ೩-೩೦).
[ ಚೆಂದ$_2$(<ಚಂದ$_2$) + ಕಲೆ$_3$ ]

**ಚೆಂದಗೇಡಿ** 'ಚಂದಗೇಡಿ' ನೋ.

**ಚೆಂದಗೇಡಿತನ** 'ಚಂದಗೇಡಿತನ' ನೋ.

**ಚೆಂದಬಾಳು** (ನಾ). ಸೊಗಸಾದ ಬದುಕು,–ಜೀವನ : ಒಂದಿರಿತಕಿರಿದೆ ನೀನೆಲ್ಲರೆದೆಯನ್ . . . ಚೆಂ ದ ಬಾ ಳ ನ್ ಮೆಚ್ಚುವೆಲ್ಲರೆದೆಯನ್ ! (ಹೂಂಗಳು. ೨೬-೨೦). [ ಚೆಂದ$_1$(<ಚಂದ$_1$) + ಬಾಳು$_2$(<ಬಾಳ್$_2$) ]

**ಚೆಂದಮಿಳ್** (ನಾ). ಶುದ್ಧವಾದ ತಮಿಳುಭಾಷೆ : (೬).
[ ಚೆಂ$_2$ + ತಮಿಳ್./ತಮಿ. ಚೆನ್ತಮಿಳ್ ]

**ಚೆಂದಲ್** (ನಾ). ಒಂದು ಬಗೆಯ ಭತ್ತ,–ನೆಲ್ಲು : ನವಗಂಧೋದ್ಗಮ ಗಂಧಶಾಳಿ ಶುಕಲೀಲಾಶಾಲಿಪದಿಂದಾದವೊಪ್ಪುವ ಚೆಂದಲ್ ಸಹಕಾರಪಕ್ವರಸ ಸಾರಾಸಾರ ಪಾನೀಯದಿಂ ಸವಿಶೇಷಂ ಬೆಳೆದೊಪ್ಪಿ ತೋರ್ಪ ಕಳಮಂ (ಸುಕುಮಾ. ೦-೭೪). 'ಕೆಂದಳಗ' ಪರಾ. [ ? ]

**ಚೆಂದಲ** (ನಾ). ಒಂದು ಬಗೆಯ ಮರ: ಮರಗಳು : ಹೆಸವ, ಹೆಬ್ಬಲಸು . . . ಸಾಗಡೆ, ಚೆಂದಲ (ನಮ್ಮಸು. ೨೩೬). [ ? ]

**ಚೆಂದವ** 'ಚಂದವು' ನೋ.

**ಚೆಂದವಗಲ್** (ನಾ). ಚಂದ್ರಕಾಂತಶಿಲೆ: ಕಿಸುವೊನ್ನ ಪಂಜರಿಯ ಚೆಂದವಗಲ್ಲ ಕೋಂಟೆಯ ಮೂವಳಸಿನಗಟ್ಟಿಂದೊಳಗೆ ಕರ್ಪೂಣಿಯ ನೆಲೆಗಟ್ಟಿಂ ಪಳಿಕಿನಚಿಯ ಭಿತ್ತಿಯಿಂ (ರಾಮಾಶ್ವ. ೩೪-೦೯). 'ಚಂದಗಲ್' ಪರಾ.
[ ಚೆಂದವ (<ಚಂದವು) + ಕಲ್$_3$ ]

**ಚೆಂದವೇರು** (ಕ್ರಿ). ಸೊಗಸು ಹೆಚ್ಚಾಗು ; ಅಂದವೇರು : ಸಾರಣೆ ಕಾರಣೆ ಸುಣ್ಣಬಣ್ಣಗಳಿಂದೆ ಗುಡಿಸಲು ಚೆಂದವೇರುವೊಲು (ಇಂಚಾಪ. ೨೩೩-೩೩). [ ಚೆಂದ$_1$ (<ಚಂದ$_1$) + ಏರು$_1$ (<ಏಱ್) ]

**ಚೆಂದಳ**,ಚೆಂದಳ (ನಾ).ಕೆಂಪಾಗಿರುವ ಅಂಗೈ: ನುಣ್ಗೊಡನಂ ಮುಗುದೆಯ ರೆರಡುಂ ಚೆಂದಳದಿಂದವೆ ನೆಗಪಿ ಮನೋರಾಗದಿ ರಂಜಿಪ ಸಿರಿದಲೆ ಯೊಳಗೇಚಿಸಲು (ಜಯುಕಾ. ೯-೦೩) ; ಚೆಂದಳವ ನೊಸಲೆಡೆಗೆ ತಂದೊಲ ವಿಂದ ನೆಗೆದಪ್ಪಿದಳು ಪರಸುತ ಕಂದದನು ಮೂಜಗದ ಸಿರಿ ಕೈಸಾರ್ದ ತೆಅವಾಗೀ (ಸಾಳ್ಭಾ. ೩೦-೪೪). **ಚೆಂದಳ :** ಚೈತ್ರಮಿತ್ರನ ಪಟಯಿಗೆಯ ತಳಿರ್ಕಳಿಂ ಪಟಿವ ಚಂದಳದಿಂದಶೋಕೆಯ ಕೊನೆದಳಿರನುಣಿಸಿತ್ತು ಪಸುಳೆಗೋಗಿಲೆಗಳಂ ಪೊರೆವ ವೀಣಾನಿನಾದೆಯರಿಂ (ಉದ್ಭಟ. ೦-೭೮ ವ).
[ ಚೆಂ$_1$ + ತಳ$_3$ ( = ತಲ$_2$) ]

**ಚೆಂದಳಿರ್**, ಚುಂದಳಿರ್, ಚೆಂದಳಿರು (ನಾ). ಕೆಂಪು ಚಿಗುರು ; ಎಳೆಯ ಚಿಗುರು : ಮಧುವಿಂ[ದುಱಿ] ಸೊಕ್ಕನಾಳ್ದ ಕೀರಳಿಯರ ಕದಪಿನ ಬಣ್ಣಮಪ್ಪ ಚೆಂದಳಿರ್ದುಱುಗಲ್ (ಶಾ ದಂ ಪೂ . ೯೬): ಚೆಂದಳಿರ್ ಪೊಸನನೆಗಳುಳ್ಳೆರಲ್ ಕಸುಗಾಯ್ ಕರಂದೋಱಿ (ಪದ್ಮರಾ. ೮-೪) : ಎಳವೆಯನುಳಿಯದ ಚೆಂದಳಿರೆನೆಯಿನಿದುಟ ಸೊಗಯಿಸಿತು (ಜಯುಕಾ. ೩-೪೧) ; ಗಿಡುಗಳೆಲ್ಲಂ ತಳಿರ್ಚೆಂದಳಿರೆಳದಳಿರೆ ಬೆಳ್ಳಿರೆ ಪಸುರೆಲೆ ಪಣ್ಣೆಲೆ ಗಳಿಂ ರಂಜಿಸೆಯುಂ (ರಾಮಾಶ್ವ. ೦೬-೨೩). **ಚೆಂದಳಿರ್ :** ಸೋಮರ್ಪಾಡಿ ಚಂ[ಪಾಕಾಂ ಚೆಂ]ದಳಿರೆಳಲತೆ (ಚತುನಿ. ೦೨೨) **ಚೆಂದಳಿರು :** ಚೆಂದಳಿರು ದಿನದಿನವುಮೊಗೆಯೆ ನೀರೆರೆದು (ಮಂಕುಳ. ೨೩೩) : ವೃಕ್ಷಲತೆಗಳೆಲ್ಲ ಹೊಸ ಚೆಂದಳಿರ ಉಡಿಗೆಯಿಂದೊಪ್ಪಿವೆ (ಶಾಂತಲಾ. ೪೦).
[ ಚೆಂ$_1$ + ತಳಿರ್$_2$ ]

**ಚೆಂದಳಿರು** 'ಚೆಂದಳಿರ್' ನೋ.

**ಚೆಂದಳಿರ್ಗೈ** (ನಾ). ಕೆಂಪು ಚಿಗುರಿನಂತಿರುವ ಕೈ; ಅಂಗೈ: ಚೆಂದಳಿರ್ಗೈಯ ಕುಮಾರಿಯ ರೂಪನದೇನಂ ಬಣ್ಣಿಪೆನು (ಜಯನೃ. ೩-೬೨); ಸುದತಿಯರಧಿ ನಾಯಕಿಯ ನುಣ್ದೋಳ್ಗಳಗ್ರದೊಳು ಚೆಂದಳಿರ್ಗೈಯ್ಗಳೆಸೆದವು (ತ್ರಿಭುತಿ. ೭೧-೫೩). [ ಚೆಂದಳಿರ್ + ಕೈ$_2$ (<ಕೆಯ್$_2$) ]

**ಚೆಂದಳಿರ್ದೊಂಗಲ್** (ನಾ). ಕೆಂಪಾದ ಚಿಗುರುಗಳ ಗೊಂಚಲು,- ಗುಂಪು: ಚೆಂದಳಿರ್ದೊಂಗಲಿಂ ಮಿಸುಪಶೋಕೆ ಫಲಾವಳಿ ತೀವಿ ತೋರ್ಪ ಮಾಕಂದಂ . . . ಒಪ್ಪಿರೆ ನಂದನಮಲ್ಲಿ ರಂಜಿಕುಂ (ಶಬಶಂ. ೨-೪೧). [ ಚೆಂದಳಿರ್ + ತೊಂಗಲ್ ]

**ಚೆಂದಳಿರ್ವಾಸು** (ನಾ). ಕೆಂಪು ಚಿಗುರಿನಿಂದ ಮಾಡಿದ ಹಾಸಿಗೆ: ಚೆಂದಳಿರ್ವಾಸಿನೊಳತ್ತಮಿತ್ತ ಚಿಲ್ವಿಂಗೆಡೆಯಾಗಿ ಸೂಸಿದರಲುಂ ನಱುದಂಬುಲಮುಂ . . . ದೇವದಂಪತಿಯ ಕೂಟಮನೇಂ ಪಿಸುಣಾಡ ಲಾರ್ತುವೋ (ಶಬಶಂ. ೧-೫೦). [ ಚೆಂದಳಿರ್ + ಪಾಸು$_2$ ]

**ಚೆಂದಾವರೆ** (ನಾ). ಕೆಂಪಾದ ತಾವರೆ; ಕೆಂದಾವರೆ "ರಕ್ತೋತ್ಪಲಂ- ಚೆಂದಾವರೆ" (ಒಷಧಿ. ೧೩೫) [ ಚೆಂ$_1$ + ತಾವರೆ (<ತಾಮರೆ) ]

**ಚೆಂದಿರ** (ನಾ). ಚಂದ್ರ: ಚೆಂದಿರಗೆಜಗಿ ದೇವಾಂಗದೆಳೆದೆಗೆದು ಮಧುವ ನೊಲವಿಂದೆ ಮನ್ನಿಸಿ (ಪದ್ಮರಾ. ೮-೯೩); ಇಂದ್ರಿಯದ ಆಶೆಗಳ ಬಂಧಿಸದೆ ಕೊಂದವನು ಸುಂದರನು ಅಕ್ಕ ಸುಖಿಯಕ್ಕು ಲೋಕಕ್ಕೆ ಚೆಂದಿರನು ಅಕ್ಕು (ಸರ್ವಜ್ಞ. ೫೪೩). [ <ಸಂ. ಚಂದಿರ ]

**ಚೆಂದಿರುಳು** (ನಾ). ಉತ್ತಮವಾದ ತಿರುಳು; ಚೆನ್ನಾದ ಸಾರ: ಪೆರುಮಾಳನ ಕೆಂದಾವರೆ ಬೆಳಕಿನ ಚೆಂದಿರುಳೇ ಬಾಳಿನ ತಿರುಕೋಡೊಳಗಿನ ಬಲು ಅರಿವಿನ ಅರುಳೇ (ಅರಳು. ೨೨೫-೯). [ ಚೆಂ$_2$ + ತಿರುಳು (<ತಿರುಳ್) ]

**ಚೆಂದುಗೋಳಿ** (ನಾ). ಒಂದು ಸ್ಥಳದ ಹೆಸರು (?): ವಿಕ್ರಮಾದಿತ್ಯ ಭಟರಕ × × × ಚೆನ್ದುಗೋಳಿ ವಳಿಯುರಾದಿಲಿ × × ಳಗಳ್ಗೆ ಕೊಟ್ಟ ಭೂಮಿ ವಿವರ (ಎಕ. VIII, ಸಾಗರ. ೯೩-೩; ಸು. 680 ?). [ ? ]

**ಚೆಂದುಟಿ, ಚಂದುಟಿ** (ನಾ). ಕೆಂಪಗಿರುವ ತುಟಿ; ಕೆಂದುಟಿ: ಅವಳ ಚೆಂದುಟಿಯುಂ ಪೊಸ ತೊಂಡೆವಣ್ಣದೊಂದಚ್ಚರಿಯಲ್ಲಿ ಪುಟ್ಟಿತೆನುತ (ಉದ್ಭಟ. ೬-೭೪); ಅವಳು ಚೆಂದುಟಿಗಳಲ್ಲಿ ಬೆಳ್ನಗೆಯನ್ನು ಅರಳಿಸಿ ಆನಂದದ ನಿರ್ಝರಿಯನ್ನು ಹರಿಸಿದಳು (ಎರಸಿ. ೧೭). **ಚೆಂದುಟಿ:** ತಳಿರ್ಗೊಯ್ವ ಎಳೆಯಳ ಚ[ಪಾಠಾಂ ಚೆ]ಂದುಟಿದಳಿರಂ ತಳಿರ್ಗೆತ್ತು ಕರ್ದುಂಕಿದುದು ಶುಕಂ (ರಾಜಶೇ. ೧೧-೫೪). [ ಚೆಂ$_1$ + ತುಟಿ$_2$ ]

**ಚೆಂದುಡಿಗೆ** (ನಾ). ಕೆಂಪುಬಣ್ಣದ ಬಟ್ಟೆ,-ಉಡಿಗೆ: ಚೆಂಗದಿರನು ಚೆಂಬಿಸಿಲ ಚೆಂದುಡಿಗೆಯನ್ನು ವಿಂಧ್ಯೆಯ ಗಿರಿಶಿಖರಗಳಿಗೆ ತೊಡಿಸುತ್ತಿದ್ದಾನೆ (ಮುಚಿತ. ೧). [ ಚೆಂ$_1$ + ತುಡಿಗೆ (<ತೊಡುಗೆ) ]

**ಚೆಂದುಳ್ಳಿ** 'ಚಂದೊಳ್ಳಿ' ನೋ.

**ಚೆಂದುಳ್ಳೆ** 'ಚಂದೊಳ್ಳೆ' ನೋ.

**ಚೆಂದೆಂಗಾಯ್** (ನಾ). = ಚೆಂದೆಂಗು: ಎಸೆವ ಚೆಂದೆಂಗಾಯ್ಗಳೊಂದೊಂದ ನೊಡೆಯೊತ್ತಲೊಸರಿ ಸೋರ್ವೆಳನೀರ್ಗಳರ್ಘ್ಯಂಗಳಾಗೆ ರಂಜಿಸುವ ಬನ ದೇವಿ (ಜೈಮಿಭಾ. ೩-೨೭). [ ಚೆಂ$_1$ + ತೆಂಗಾಯ್ ]

**ಚೆಂದೆಂಗು, ಚಂದೆಂಗು** (ನಾ). ಕೆಂಪು ಬಣ್ಣದ ತೆಂಗು ಮತ್ತು ಅದರ ಕಾಯಿ: ಕಾಯ್ದುಱುಗಲಂ ಪೆಱರ್ದ ಚೆಂದೆಂಗು ಕಟ್ಟಲಿಸುತ್ತಿರ್ಪಲೆವಳ್ಳಿ . . . ಎಸೆಗುಂ (ಆದಿಪು. ೧-೬೭); ಭೂಲತಾಂಗಿ ತೆಗೆದೆತ್ತಿಟ್ಟ ರಸರತ್ನವೋ ಎನಿಸಿ ಫಲಿತ ಚೆಂದೆಂಗೆಸೆದುವು (ಹದಶಾ. ೩-೨೮); ಒಪ್ಪುವ ಚೆಂದೆಂಗಲ್ಲದೆ ಮಾವಲ್ಲದೆ ಕೌಂಗಲ್ಲದೆ ಗಿಡುಮರಗಳೆಂಬುವಿಲ್ಲಾ ನಾಡೊಳ್ (ಕಬ್ಬಿಕಾ. ೨೦); ಮೇಘರಾಜನ ಬರವನೆ ಪಾರ್ವ ಚೆಂದೆಂಗುಗಳ ಪಂತಿಗಳ್ (ರಾಮಾಶ್ವ. ೮-೨೨). **ಚೆಂದೆಂಗು:** (೬). [ ಚೆಂ$_1$ + ತೆಂಗು$_3$ ]

**ಚೆಂದೊಂಗಲ್** (ನಾ). ಕೆಂಪಾದ ಗೊಂಚಲು; ಚಿಗುರಿನ ಗೊಂಚಲು: ಅಗ್ನಿ ನೀಡಿದನಲ್ತೆ ತನ್ನಂಗಳದ ಮರದ ಮಾಂದಳಿರ ಚೆಂದೊಂಗಲಂ? (ಶ್ರೀರಾಮಾ. ೪೮-೫೫೦). [ ಚೆಂ$_1$ + ತೊಂಗಲ್ ]

**ಚೆಂದೊರಳೆ** (ನಾ). ಕೆಂಪಾದ ಗುಲ್ಮ,-ಪ್ಲೀಹ: ಕರುಳ ಪೂಗೊಂಚಲು ಖಂಡದ ಕಳಿಕೆ ಬಂಧುರದಲು ಶಾಖೆಗಳಾಗೆ ಪಿರಿದು ಚೆಂದೊರಳೆದಳಿರ ಕಬಂಧದ್ರುಮ ಮೆಱೆದುವು ಖಡ್ಗಚೈತ್ರದಲಿ (ಕಂಸವಿ. ೦೫-೫೦). [ ಚೆಂ$_1$ + ತೊರಳೆ$_1$ ]

**ಚೆಂದೊಳ್ಳೆ** 'ಚಂದೊಳ್ಳೆ' ನೋ.

**ಚೆಂದ್ರಕಾಳಿ** 'ಚಂದ್ರಕಾಳಿ' ನೋ.

**ಚೆಂಬಕ** 'ಚಂಬಕ' ನೋ.

**ಚೆಂಬಕವೞಿ** 'ಚಂಬಕವೞಿ' ನೋ.

**ಚೆಂಬಟ್ಟೆ** (ನಾ). ಕೆಂಪು ಬಟ್ಟೆ,-ವಸ್ತ್ರ: ಬಾಲೆಯುರದೊಳೊಂದಿದ ಪೊಸ ಬೆಮರ್ಮುತ್ತು ಬೀಳಲುಳಿದ ಚೆಂಬಟ್ಟೆಯ ನೂಲಂತೆ ಕಂಗೆಸೆದುದು ತೋರಮೊಲೆಗಳ ಮೇಲೆ ರಂಜಿಪ ನೀಲ ನಖರೇಖೆ (ತ್ರಿಭುತಿ. ೦೩-೩೯). [ ಚೆಂ$_1$ + ಬಟ್ಟೆ$_2$ ]

**ಚೆಂಬಡಿ** (ನಾ). ಒಂದು ಪ್ರದೇಶದ ಹೆಸರು (?): ಅನ್ತೆ ತೆ[ಂ]ಕ ಅತ್ತಿಯೋಡು ಪಳ್ಳಂ[ಬೆ]× ಗಾಲು ಚೆಮ್ಬಡಿ (ಎಇ. X, ೬೭-೯೪; ೧ನೆಯ ೫೩). [ ? ]

**ಚೆಂಬಣ್ಣ** (ನಾ). ೧. ಕೆಂಪುಬಣ್ಣ: ಚೆಂಬಣ್ಣ ಮಾಂದಳಿರಸುಗೆ ಪುನ್ನಾಗ ದಾಳಿಂಬ ತ್ರಿಪರ್ಣ ಪುಷ್ಪಗಳು . . . ಬನದಿ ರಂಜಿಸಿತು (ಪ್ರೋಹಚ. ೪-೪೯); ಬಾಯ್ದೆಱೆಬವಳದ ಚೆಂಬಣ್ಣಮಿಂತು ಬನ್ನಂಬಡಿಕುಂ (ಚಕವಿ. ೬-೬೩). ೨. ಕೆಂಪುಬಣ್ಣದ ವಸ್ತ್ರ,-ಬಟ್ಟೆ: ಕುಂಭಾಂಡ ಮಂತ್ರಿಶೇಖರ ಮುಖ್ಯ ದೈತ್ಯರ್ಗೆ ಚೆಂಬಣ್ಣವನುಡಿಸಿದನು (ಪ್ರೋಹಚ. ೩೫-೪). [ ಚೆಂ$_1$+ಬಣ್ಣ ]

**ಚೆಂಬಣ್ಣು** (ನಾ). ಕೆಂಪಾದ ಹಣ್ಣು; ಪಕ್ವವಾದ ಹಣ್ಣು: ಚೆಂಬಣ್ಣು ಗಾಯ್ಗಳಂ ತೊಡವಿಟ್ಟು ಹೂವಿಟ್ಟು ಕುಣಿಯುವಳ್ (ಕಾಲೂರ. ೧೨೦-೨೫೦). [ ಚೆಂ$_1$ + ಪಣ್ಣು$_3$ (<ಪಣ್$_3$) ]

**ಚೆಂಬದುವ** (ನಾ). ಕೆಂಪು ಕಮಲ: ಅದಱ ಮೊದಲ್ ಸುವರ್ಣಘಟಿತಂ . . . ಚೆಂಬದು(?)ವದ ಘಂಟಿಕಾಪಟಕಮಂ ತಳೆದಿಂತೊಗೆದಿರ್ಪುದು (ಶಾಂತೀಶ್ವ. ೧೩-೩೨). [ ಚೆಂ$_1$ + ಪದುವ (<ಪದುಮ) ]

**ಚೆಂಬರಣೆ** (ನಾ). ಕೆಂಪು ಭರಣೆ: ಏಂ ಬಱಿದೆ ಪರಪುವ್ವೆ ಪಲವುಂ ಬರಣೆಯನಿರಿಸು ಕೆಲಕೆ ನೆಲೆವೆಲೆವೇಱಾ ಪೊಂಬರಣೆಗಳೆರಡರ್ಕಂ ಚೆಂಬರಣೆಗಮಿನಿತಱಿಂದೆ ಕಣೆದಪವೀಗಳ್ (ಚಕವಿ. ೬-೫೦). [ ಚೆಂ$_1$ + ಬರಣೆ ]

**ಚೆಂಬರಿಗೆ** (ನಾ). ಚೆನ್ನಾದ ಗುರಾಣಿ: ಕಚಂ ಸಾರಮೆನಿಪ್ಪ ಚೆಂಬರಿಗೆಯಂ ನಳಿತೋಳೆಸಿಯುಂ ಸಮಂತು ಪೋಲ್ವಾ ರಮಣೀನಿಕಾಯದಿನನಂಗನ ನಟ್ಟನ ದಿವ್ಯಶಸ್ತ್ರ ಭಂಡಾರದ ಗೇಹಮಂ ನೆಱೆಯೆ ಪೋಲ್ತುದು ಭೂವನಿ ತೇಶನೋಲಗಂ (ಧರ್ಮಾಮೃ. ೪-೧೪೧). [ಚೆಂ$_2$ + ಪರಿಗೆ$_3$ ]

**ಚೆಂಬವಳ** (ನಾ). ಕೆಂಪು ಹವಳ: ಕರ್ಮಣಿಸರದೊಳ್ ಚೆಂಬವಳಮಂ ಕೋದಂತಿರೆ . . . ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ (ರಾಮಾಶ್ವ. ೬-೦೫); ನಡುವಿನಿಂದ ಜಗ್ಗುತ್ತಿದ್ದ ಚೆಂಬವಳದ ಒಂದೆಯನ್ನು ನಡುಪಟ್ಟಿಯು ಸಮೇತ ಕಳಚಿ (ಸವತಿ. ೪೮). [ ಚೆಂ$_1$ + ಪವಳ ]

**ಚೆಂಬಳದಿ** (ನಾ). ಕೆಂಪು ಮಿಶ್ರಿತವಾದ ಹಳದಿಯ ಬಣ್ಣ: ಬಿರುಕು ದೋರ್ದೊಳ್ಕಿದುದು ಪೊನಲ್ ಚೆಂಬಳದಿಯಾ ಮತಂಗನ ಪೆಸರ ಮಡುವಿ ನೊಳ್ ನೀರು ಓಕುಳಿಯಾಯ್ತು (ಶ್ರೀರಾಮಾ. ೨೮೫-೬). [ ಚೆಂ$_1$+ಪಳದಿ ]

**ಚೆಂಬಾನ್** (ನಾ). ಕೆಂಪಾದ ಆಕಾಶ: ಚೆಂಬಾನ ಕುಂಬಿಡುವ ಬೆಟ್ಟಗಳ ಸಾಲು (ಕಾಲೂರ. ೨೫-೦೨). [ ಚೆಂ$_1$ + ಬಾನ್$_3$ ]

**ಚೆಂಬಾಯ್** (ನಾ). ಕೆಂಪಾಗಿರುವ ಬಾಯಿ: ಆ ಸತಿಗೆಡ್ಡಂಬಡೆದವು ನಗೆ ಮೊಗವಾಸುರವಡಗಿದ ಚೆಂಬಾಯ್ ನಟುಸುಯ್ ಸೂಸುವ ನಾಸಿಕ (ಉದ್ಭಟ. ೨-೫೬); ಚೆಂಬಾಯ್ಪೇನನೀಂಟುತ್ತುಂ (ಚಿಕವಿ. ೬-೨೫೩). [ ಚೆಂ$_1$ + ಬಾಯ್ ]

**ಚೆಂಬಾಯ್ದೆಱೆ**(ನಾ). ೧. ಕೆಂಪನೆಯ ತುಟಿ. ೨. ಕೆಂಬಣ್ಣ ಬಳಿದ ಬಾಗಿಲು. ೧, ೨: ಕಾಣದೆ ಚೆಂಬಾಯ್ದೆಱೆಯಂ ಮಾಣನ್ನೀ ಪರಿಯ ಮನದ ಬಱುಸಂದೆಯಮಂ (ಚಿಕವಿ. ೬-೬೨). [ ಚೆಂ$_1$ + ಬಾಯ್ದೆಱೆ ]

**ಚೆಂಬಾವುಗೆ** (ನಾ). ಕೆಂಪಾದ ಪಾದುಕೆ,-ಹಾವುಗೆ: ಲಾಲಿತ ಚೆಂಬಾವುಗೆ ಮೆಟ್ಟಿ . . . ಸಲೀಲೆಯಿಂದೆದ್ದಳಾ ಕುವರಿ (ಮೋಹತ. ೨೮-೬). [ ಚೆಂ$_1$ + ಪಾವುಗೆ ]

**ಚೆಂಬಾವುಡೆ** (ನಾ). ಕೆಂಪು ಬಣ್ಣದ ವಸ್ತ್ರ: ಚೆಂಬಾವುಡೆಯುಡಿವಸನವು ತೋಯ್ದು . . . ಮೆಱೆಯೆ ಪೀತಾಂಬರ ನೋಡಿ ಹಿಗ್ಗಿದನು (ಮೋಹತ. ೧೪-೫೮). [ ಚೆಂ$_1$ + ಪಾವುಡೆ (<ಪಾವುಡ) ]

**ಚೆಂಬಾೞೆ** (ನಾ). ಬಾಳೆಯಲ್ಲಿ ಒಂದು ಬಗೆ; ಕೆಂಪುಬಾಳೆ; ಚಂದ್ರಬಾಳೆ: ಪಣ್ತ ಪೊಂಬಾೞೆಯ ಚೆಂಬಾೞೆಯ ರಂಗುಬಾೞೆಯ ತೋಂಟದಿನೊಳಗೊಳಗೆ ಬಾಂಬಟ್ಟೆಗರ್ಕ್ಕೆ ಪೊಟಲ ಸೊಬಗಂ ನಿರುಕಿಸಲ್ಕೆಂದು (ರಾಮಾಶ್ವ. ೦೦೧-೨೯). [ಚೆಂ$_1$ + ಬಾೞೆ ]

**ಚೆಂಬಿಸಿಲ್, ಚೆಂಬಿಸಿಲು** (ನಾ). ಕೆಂಪು ಬಣ್ಣದ ಬಿಸಿಲು: ಕೆಂದಾವರೆ ಚೆಂಬಿಸಿಲಿಂದೊಂದುವ ತೆಱದಿಂದೆ ನಿನ್ನ ಮೃದುಪದಯುಗಮೆಂದಂದಿನ ಪೊಲಲಕ್ತಕ ರಸದಿಂದಂ ಪೇೞೊಂದಿತಿಲ್ಲಿದೇನಿಂದುಮುಖೀ (ಶಾ ದಂ ಪೂ. ೩೩೨); ಪೊಸರನ್ನದ ಲೋಲಾಂಶು ಪುರಗೋಪುರಗಳ ಮೇಲೆ ಚೆಂಬಿಸಿಲಂತೆ ಚಂದ್ರಿಕೆಯಂತೆ ತಮಾಲದಂತೆಸೆದವು (ತ್ರಿಭುತಿ. ೨-೨೫); ಇನಬಿಂಬ ಕಂದಿ ಚೆಂಬಿಸಿಲಿಷ್ಟು ಮಾಸೆ ಮಾರ್ದನಿಗೊಟ್ಟುವೆಂಟುದಿಕ್ಕುಗಳು (ಭರಜ. ೫೦-೦೧೬). **ಚೆಂಬಿಸಿಲು:** ಹೂಬಿಸಿಲು ಹೊಂಬಿಸಿಲು ಚೆಂಬಿಸಿಲು ಚುಂಬಿಸಲು ಎದೆಯನ್ನೆ ತುಂಬಿಸಲು ಬಿಂಬಿಸುತಿರೆ (ಭಾವಜೀ. ೨೦-೪೦೫). 'ಕೆಂಬಿಸಿಲ್' ಪರಾ. [ ಚೆಂ$_1$ + ಬಿಸಿಲ್ ]

**ಚೆಂಬಿಸಿಲ** (ನಾ). ಕೆಂಪಾದ ಬೆಳಕಿನಿಂದ ಕೂಡಿದವನು; ಸೂರ್ಯ: ಚೆಂಬಿಸಿಲನಂ ಪಾಲ್ಗಡಲನುರುಮದಗಜವಂ . . . ಕನಸಿನೊಳು ನಿಟ್ಟಿಸಿದಳಾ ಬೆಳಗಪ್ಪ ಜಾವದೊಳ್ (ಸಾಳ್ವಭಾ. ೩-೩೮). [ ಚೆಂಬಿಸಿಲ್$_1$ + – ಅ$_7$ ]

**ಚೆಂಬಿಸಿಲು** 'ಚೆಂಬಿಸಿಲ್' ನೋ.

**ಚೆಂಬು$_1$, ಚಂಬು, ಚೊಂಬು** (ನಾ). ೧. ತಾಮ್ರ ಮೊದಲಾದ ಲೋಹಗಳಿಂದ ಮಾಡಿದ ಬಾಯಿ ಕಿರಿದಾಗಿರುವ ಗುಂಡನೆಯ ಪಾತ್ರೆ; ತಂಬಿಗೆ: ಸಾದಿನ ಭರಣ ಪನ್ನೀರ ಚೆಂಬುಗಳು . . . ತೈಲದ ಕುಪ್ಪಿಗೆಗಳಾ ಗೃಹದೊಳು ಬಿಡಿಬಿಡಿಯಾಗಿಹವು (ಅಂಜಚ. ೩-೦೦೬); ಪನ್ನೀರ ಚೆಂಬು ಗಂಧೋದಕ ಹೂಜೆ . . . ತಲೆಗಿಂಬಿನೊಳ್ ತಂದಿರಿಸಿದರು (ಮೋಹತ. ೨೭-೩೫). ೨. ಗೋಪುರದ ಕಲಶ: ಯಿೂ ಹೊನು ಮಹಾದೇವರ ಚೆಂಬಿನ ಒಡಿಲು ಹೊನ್ನಕಳಶಕೆ ಮಾಡಿದ ಧರ್ಮ (ಸೌಇಇ. IX-ii, ೪೫೦-೨೨; 1444); ಬೆಂಮಣ ಭಂಡಾರಿಯ ಮೊಂಮಗಳ ಮಗಳು ಸಂಕಂಮವೊದಲಿತಿ ಮಹಾದೇವರ ಚೆಂಬಿನ ಕೆಲಸಕ್ಕೆ ಕೊಟ್ಟ ದೊಡವರಹ (ಸೌಇಇ. IX-ii, ೪೭೯-೦೯; 1510). ೩. ತಾಮ್ರ: 'ಚೆಂಬು' ಅಂದರೆ ತಾಮ್ರ ಮತ್ತು ತಾಮ್ರದ ಪಾತ್ರೆ (ಸಂಕೋಧ. ೮೮). 'ಚೆಂಬುಕಂಟಿಗ' ಪರಾ. **ಚಂಬು:** ೧. ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣ ಜಲವ ಕೊಂಡು (ಕಂನವಿ. ೫-೫೫); ಹಸಿರು ಪೇಯದಿಂದ ತುಂಬಿದ ಕಟ್ಟಿಗೆಯ ಚೆಂಬನ್ನು ನಮಗೆ ಕೊಟ್ಟು ಕುಡಿಯ ಹೇಳಿದರು (ಮೇದಿಮ. ೦೦೨); ಅಂಬು ಬಿಡಲಿಕ್ಕೆ ತಿಳಿಯದೇ ಇದ್ದರೆ ಚಂಬು ಮುಣುಗಿಸ ತಿಳಿಯದೇ (ಗಾದೆ). **ಚೊಂಬು:** ೧. ಚಂದ್ರಕಾಂತಶಿಲೆಯ ಚೊಂಬುಗಳ ಬಾಯಿ ಕಟ್ಟಿ (ಸೌಗಂಧಿ. ೨೦೫-೦೦). ಚಂಬಿನವೂಳಿಗ=ನೀರನ್ನು ತಂದು ಕೊಡುವ ಊಳಿಗ: ದೇವರಾಜ ಒಡೆಯರೈಯ್ಯನವರ ಚಿಮ್ಬಿನ ವೂಳಿಗದ ಚಲುವವ್ವೆಯವರ ಕುಮಾರರಾದ ದೊಡ್ಡದೇವೈಯ್ಯನವರು (ಎಕ. III ಶ್ರೀರಂಗ. ೦೪-೯೬ ; 1686).
[ ದೇ.॥ ತಮಿ. ಚೆಮ್ಬು; ಮಲ. ತುಳು. ಚೆಂಬು; ಕೊಡ. ಚೆಂಬೀ; ತೆಲು. ಚೆಂಬು ]

**ಚೆಂಬು$_2$** (ನಾ). ಸೋರೆಯ ಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ: "ತುಂಬಃ–ಚೆಂಬು, ಸೋರೆ, ತುಂಬೆ" (ಒಷಧಿ. ೭೧). [ <ಸಂ. ತುಂಬ ]

**ಚೆಂಬುಕ** 'ಚಂಬಕ' ನೋ.

**ಚೆಂಬುಕುಟಿಗ, ಚಂಬುಕುಟ್ಟಗ, ಚಂಬುಕುಟ್ಟಿಗ** (ನಾ). ತಾಮ್ರದ ಕೆಲಸ ಮಾಡುವವನು; ತಾಮ್ರಕಾರ: "ತಾಮ್ರಕುಟ್ಟಕ" (ನಾಚಿರಾ. ೯). **ಚಂಬುಕುಟ್ಟಗ:** "ಶೌಲ್ಬಿಕಃ, ತಾಮ್ರಕುಟ್ಟಕಃ–೨ ಚಂಬುಕುಟ್ಟಗನ ಪೆಸರುಗಳು" (ಸಿದ್ಧಾಂತಿ. ೨೬೭). **ಚಂಬುಕುಟ್ಟಿಗ:** ಚಂಬುಕುಟ್ಟಿಗನೊಬ್ಬನ ಲಯಬದ್ಧವಾದ ಸುತ್ತಿಗೆಯ ಏಟಿನಂತೆ ಕೇಳಿಸುತ್ತದೆ (ಜೋಮದು. ೨). [ ಚೆಂಬು$_1$ + – ಕುಟಿಗ$_1$ ]

**ಚೆಂಬುಗೆಂಪು** (ನಾ). ತಾಮ್ರದ ಬಣ್ಣ; ಕೆಂಬಣ್ಣ: ನಿಜಬಿಂಬಂ ಚೆಂಬುಗೆಂಪೇಱೆ . . . ಸಾರ್ದಂ ದಿನನಾಥನಸ್ತಗಿರಿಮಸ್ತಪ್ರಸ್ತರ ಪ್ರಾಂತಮಂ (ಅನಂಪು. ೩-೬೬). [ ಚೆಂಬು$_1$ + ಕೆಂಪು$_1$ ]

**ಚೆಂಬುಡಿ** (ನಾ). ಕೆಂಪುಹುಡಿ,-ದೂಳು: ಭೂರಮೆಯ ಸಸಿಂಧೂರ ಸೀಮಂತ ರೇಖೆಯಂತೆ ಚೆಂಬುಡಿ ತಳ್ತು ಕಂಗೊಳಿಪ ಘಂಟಾಪಥದ ಪರಿಸರದಲ್ಲಿ (ರಾಜಶೇ. ೩-೨೦ ವ). [ ಚೆಂ$_1$ + ಪುಡಿ ]

**ಚೆಂಬುರುಳ್** (ನಾ). ಸೊಗಸಾದ ಅರ್ಥ; ಪರಮಸತ್ವ: ಹುಟ್ಟೆಂಬ ಹೆಡ್ಡತನ ಹರಿಯೆ ಹಿರಿದೆಂಬ ಚೆಂಬುರುಳ ಕಾಣುವುದೆ ಅಱಿವು (ಕುಱಳ್. ೧-೩೭-೮). [ ಚೆಂ$_2$ + ಪುರುಳ್ ]

**ಚೆಂಬುಳುಕಾಯಿ** (ನಾ). ಒಂದು ಬಗೆಯ ಮರ: ದೇವದಾರಿ, ಗಂಧಗಿರಿ, ಗ್ಯಾದಾರಿ, ಚೆಂಬುಳುಕಾಯಿ (ಮೃಜಿಗಿ. ೩೫-೬೮೩). [ ? ]

**ಚೆಂಬೂ** (ನಾ). ಕೆಂಪು ಬಣ್ಣದ ಹೂ: ಇಳಾತಳದ ತಾರಗೆಯಂತುಪಹಾರಮಾದ ಚೆಂಬೂಗಳಳುಂಬಮಾಗೆ ನಯನೋತ್ಸವಮಾದುದು ತತ್ಪುರೋತ್ಸವಂ (ಚಂದ್ರಪು. ೩-೯೬). [ ಚೆಂ$_1$ + ಪೂ$_2$ ]

**ಚೆಂಬೂತ** 'ಚೆಂಬೋತ' ನೋ.

**ಚೆಂಬೆಣ್ಣೆಗರುಗ** (ನಾ). ಗರುಗದಲ್ಲಿ ಒಂದು ಬಗೆ: "ಬಲಾ, ವಾಟ್ಯಾಲಕಃ ಈ ೨ ಚೆಂಬೆಣ್ಣೆಗರುಗ" (ನಾಚಿರಾ. ೧೦೦). [ ಚೆಂ$_1$ + ಬೆಣ್ಣೆಗರುಗ ]

**ಚೆಂಬೆರಲ್** (ನಾ). ಕೆಂಪನೆಯ ಬೆರಳು: ಸರ್ವಪುರುಷಾರ್ಥಕ್ಕಂ ವಿಧಿಸ್ಥಾನಮಿಾ ಪದಮೆಂಬಂತಿರೆ ಚೆಂಬೆರಲ್ಗುಡಿಗಳಂ ಕೀಲ್ಮಾಡಿ ಸಸ್ನೇಹಹಸ್ತದೆ ಶೇಷಾದ್ರಿಯೆ ಮುನ್ನಮಪ್ಪೆಡೆಗಳೊಳ್ ಪಾದಾಬ್ಜಮಂ ಶೋಱುವೈ (ವಸ್ತುವಂ. ೦೨-೮೮). 'ಕೆಂಬೆರಲ್' ಪರಾ. [ ಚೆಂ$_1$ + ಬೆರಲ್ ]

**ಚೆಂಬೆಲರ್** (ನಾ). ದಕ್ಷಿಣದ ಗಾಳಿ; ತೆಂಗಾಳಿ: ವನಲಕ್ಷ್ಮಿಯ ನರ್ತಕಿಯಂತೆ ಚೆಲ್ವನಾಳ್ದುದು ಫಲಭಾರಕುಂಬುಲತೆ ಚೆಂಬೆಲರ್ಪೊಯ್ಲಿನ ಲೋಲವೃತ್ತಿಯಿಂ (ಶಾಂತೀಶ್ವ. ೦೦-೮೯). [ ℙ ಇದು 'ತೆಂಬೆಲರ್' ಎಂಬುದರ ಅಪಲಿಖಿತವಿರಬಹುದು. ]

**ಚೆಂಬೆಳಕು** 'ಚೆಂಬೆಳಗು' ನೋ.

**ಚೆಂಬೆಳಗು, ಚೆಂಬೆಳಕು** (ನಾ). ಕೆಂಪುಬಣ್ಣದ ಕಾಂತಿ,-ಪ್ರಭೆ,-ಪ್ರಕಾಶ: ಪಡುಗಡಲ ತಡಿಯ ಯೆಡೆಯೊಳಿಡಿದ ವಿದ್ರುಮಲತೆಯ ಕುಡಿಯ ನಿಡುಚೆಂಬೆಳಗೊ (ವಂದಿಮಾ. ೧೮-೧೮). **ಚೆಂಬೆಳಕು:** ಅಂಬುಜಸಖಂ ಬಂದನಂ ಬರದಲಿ ತುಂಬಿದ್ದ ಬಲು ಕತ್ತಲೆಂಬ ಕಂಬಳಿ ಕಳಚಿ, ಚೆಂಬೆಳಕು ಹಾಸಿ ನಿಂದುಪ್ಪವಡಿಸಿ (ಕಎಪು. ೨೬-೪). 'ಕೆಂಬೆಳಗು' ಪರಾ. [ ಚೆಂ$_1$ + ಬೆಳಗು$_2$ ]

**ಚಂಬೊಂಗಟ್ಟು** (ನಾ). ಚಿನ್ನದಿಂದ ಮಾಡಿದ ಕಟ್ಟು,–ಚೌಕಟ್ಟು : ಭಟಶ್ರೇಣಿಯ ಚಂಬೊಂಗಟ್ಟು ತಳ್ಳಡ್ಡಣದ ಪೊಳೆವು ಕೆಂದೂಳಿಯಿಂದೊಂದಿ ಕೆಂಬಟ್ಟೆಯ ಮೇಲ್ಗಟ್ಟಾದುದು (ಅನಂಪು. ೧೩-೭೪).
[ ಚಂಬೊನ್ + ಕಟ್ಟು$_2$ ]

**ಚಂಬೊಂಗಳಸ** (ನಾ). ಚಿನ್ನದ ಕಲಶ : ಒಪ್ಪಂಬೆತ್ತ ಚಂಬೊಂಗಳಸ ದೆಳವಿಸಿಲ್ ಸಂತತಂ ವ್ಯೋಮಗಂಗಾಬ್ಜದ ಪೆರ್ಚಂ ಮಾಡೆ (ಜಗವಿ. ೯-೯೫); ಚಂಬೊಂಗಳ ಸಜ್ಜಳಂ ಪರಿಹರ ಶ್ರೀಗೇಹಮಂ ಕೂಡೆ ಮಾಡಿಸಿದಂ (ಎಕ. XI, ದಾವಣ. ೨೫-೭೨ ; 1224). [ ಚಂಬೊನ್ + ಕಳಸ$_1$(=ಕಲಸ) ]

**ಚಂಬೊಗರ್** (ನಾ). ಕೆಂಪು ಬಣ್ಣದ ಕಾಂತಿ : ಬಂದುಗೆಪೂವಿನ ಪರಾಗಮಂ ಕಳಚಿ ಪೊರಳ್ದು ಚಂಬೊಗರನಾಂತು . . . ಚರಿಸುವಂ ಮೆಲ್ಲ ಮೆಲ್ಲನೆ ಮಂದಮಾರುತಂ (ನಂದಿಮಾ. ೩-೨೬) ; ಚಂಬೊಗರಿಂ ರಂಗೇರಿಹ ಜಲದಾಬ್ಜಮುಖಿ ತುಸ ತುಟಿತೆರೆದು ಶಿಶುಚಂದ್ರನ ನಗೆ ನಗುವಳು(ಗಹೀಶ. ೩೧-೨). 'ಕೆಂಬೊಗರ್' ಪರಾ. [ ಚಂ$_1$ + ಪೊಗರ್ ]

**ಚಂಬೊನ್**, ಚಂಬೊನ್, ಚಂಬೊನ್ನು (ನಾ). ೧. ಚಿನ್ನ ; ಬಂಗಾರ ; ಅಪರಂಜಿ : "ಸೊನ್ನೆ, ಕಸವರಂ, ಚಂಬೊನ್, ಮಿಸುನಿ–ಈ ೪ ಸುವರ್ಣಂ" (ಕಶಸಾ. ೫-೬೧) ; ಚಂಬೊನ್ನ ತಳಿಗೆಗಳೊಳ್ ತೆಕ್ಕನೆ ತೀವಿದ ಬಿಡು ಮುತ್ತಿನ ಸೇಸೆಗಳುಂ ಬೆರಸು ಮಹತ್ತರ ದೇವಿಯರ್ ಬಂದು ಪೊಡೆ ಮಟ್ಟು (ಆದಿಪು. ೨-೬೭ ವ) ; ಚಂಬೊನ್ನ ದೋಣಿಗಳೊಳಮಲಂಕರಿಸಿದ ಪಳುಕಿನ ಪಟ್ಟವಣಿಗೆಗಳೊಳಂ (ಕಾದಂಪೂ. ೭೧) ; ಚಂಬೊನ್ನ ಘಟಂಗಳಿನ ಮೃತಾಂಬುಧಿಯುಂಬುಗಳನಾಂತು (ಪಾರ್ಶ್ವಪು. ೧೪-೮೪). ೨. ತಾಮ್ರ : ನಲ್ ಸಮೆದ ಚಂಬೊನ್ನ ಕೊಡಮೆತ್ತಿ ಮೂಜು ತಣಿಯೆಚಿದು ಮುಡಿಗೆಯ್ದಳಾ ಪೆಣಕೆ (ಅಂತಿಗೂ. ೨೦-೪೧೬). ೩. ಚಿನ್ನದ ನಾಣ್ಯ : ಚಂಬೊಂಗಳನೋರಂತಿರೆ ಬೇಡಿಕೊಳ್ವೆನೆನ್ನಾರ್ಪನಿತಂ (ಧರ್ಮಾಮೃ. ೧-೧೩೭) ; ತುಂಬುರನ ಕಯ್ಯಿಂದ ಹತ್ತೆಂಟು ಸಾವಿರದ ಚಂಬೊನ್ನ ಜಾಳಿಗೆಯ ಕುಡಲೆಂದು ತರಿಸೆ (ಸಾಂದಪು. ೧೫-೯೬). **ಚಂಬೊನ್ :** ೨. ಚಂಬೊನ್ನ ತಾಳ ಕಿನ್ನರಿಗಳನಾಂತು ನಿತಂಬಿನಿಯರುಗಳಿಯ್ದಿದರು (ಜೀವಂಸಾಂ. ೧೧-೩೯). **ಚಂಬೊನ್ನು :** ೧. "ಚಂಬೊನ್ನೆನಲು ಸುವರ್ಣಂ" (ಕಶರ. ೩೬) ; ನಿನ್ನ ಕೃಪಾರಸದಿಂದ್ಯೆಸೆಯಾನು ಕಬ್ಬೊನ್ನು ಚಂಬೊನ್ನಾದಂತೆ . . . ಭಾಗ್ಯೋನ್ನತಿಯೊಡಗೂಡಿಹೆನು (ಹದಿಬ. ೧-೩೫).
[ ಚಂ$_1$ + ಪೊನ್./ತಮಿ. ಚೆಮ್ಪೊನ್ ]

**ಚಂಬೊನ್ನು** 'ಚಂಬೊನ್' ನೋ.

**ಚಂಬೊಳಪು** (ನಾ).=ಚಂಬೊಗರ್ : ಪೊಳೆವ ಪಳಿಕಿನ ಜಪಸರಂ ಕುಸುಮಮಾಗೆ ಚಂಬೊಳಪಾಂತ ಜಡೆಗಳೆಳದಳಿರ್ದೊಂಗಲಾಗೆ . . . ಮುನಿಕುಲ ಮೊಪ್ಪಿತಾ ಮಹಾಕಾನನದೊಳು(ನಂದಿಮಾ. ೨-೨೪). [ ಚಂ$_1$ + ಪೊಳೆಪು ]

**ಚಂಬೋತ**, ಚಂಬೋತ, ಚಂಬೂತ (ನಾ). ಒಂದು ಬಗೆಯ ಕೆಂಪು ಬಣ್ಣದ ಪಕ್ಷಿ ; ಕೆಂಪು ಕಾಗೆ ; ಸಂಬಾರಗಾಗೆ : "ಧೂಮ್ರಾಚ್ಛದಂ ಚಂಬೋತ[ಪಾಠಾಂ. ಕೆಂಬೋತ] ಮೆಂದೆನಿಕ್ಕುಂ" (ಮುಂಗರಾ. ೫೨-೦೦) ; ಅಂಚೆಯ ಚಂಬೋತನ ಚಿಲಕೂಲಿಯ ಕೊಂಚೆಯ(ಹಮ್ಮೀರ. ೪-೦೨ ರಗಳೆ) ; **ಚಂಬೋತ:** ಸಾಳುವ ಚಿಲಿಮಿಲಿಗ ಚಂ[ಪಾಠಾಂ. ಚಂ]ಬೋತ ಮಿಾನ್ಚುಲಿಗ . . . ಮೊದಲಾದಖಿಳ ಖಗಕುಲ ಬಿದ್ದುದುರಿಯೊಳಗೆ (ಕುವ್ಯಾಅ. ೨೦-೩೩); ಮರಕುಟಿಗ ಚಂಬೋತ ಶುಕ . . . ಸರಟ ಸಾರ ಸಮೂಹ ಮೇಳ ಗಳಿತ್ತಲಿವೆ (ತೊರರಾ. ೩-೧-೩೨). **ಚಂಬೂತ :** ಪಿಕ್ಕುಳಿಕ ಚಂಬೂ[ಪಾಠಾಂ. ಬೋ]ತ ಗೀಜಗ . . . ಕೆಂಡವಕ್ಕಿಗಳವಟಿಳೊಳೊಪ್ಪಿದುದು (ಸಾಳ್ವಭಾ. ೫-೨೨) ; ಕಾಗೆ ಪಿಕನಂ ಚಂಬೂತ ಮಯೂರನಂ . . . ಮೆಚ್ಚದೊಡದೇಂ ಭಂಗಗಳೇ ಧಾತ್ರಿಯೊಳ್ (ನೀಶಿಸಾ. ೭೧೨). 'ಕೆಂಬೋತ' ಪರಾ.
[ ದೇ.II ತಮಿ. ಮಲ. ಚೆಮ್ಪೋತ್ತು ]

**ಚಿಕ್** 'ಚೆಕ್ಕು$_2$' ನೋ.

**ಚಿಕ್ಕಂದ** 'ಚಕ್ಕಂದ' ನೋ.

**ಚಿಕ್ಕನೆ** (ಅ). ಥಟ್ಟನೆ ; ಬೇಗನೆ ; ಕೂಡಲೆ : "ಭೋಂಕನೆ ಚಿಕ್ಕನೆ . . . ಚೆಚ್ಚರ ಬೆಚ್ಚರಮುಮಂ ಕೂಡಿರೆ ತವ್ಮೊಳೊದವುಗುಂ ಶೀಘ್ರಾರ್ಥಂ "(ಶಮದ. ೩೦೫); ಉರೋಭಾಗಮಂ ಪಾದದಿಂ ಪೋಗೊದೆಯುತ್ತುಂ ಕೋಟ್ಕಳಂ ಚಿಕ್ಕನೆ ಕಿಟಿ$^3$ (ಜಗವಿ. ೬-೫೫) ; ಕೊಳದೊಳು ಕಾಲಂ ತೊಳೆಯಲ್ಪುಗೆಯಲ್ಲಿರ್ದ ನಕ್ರಂ ಚಿಕ್ಕನೆ ಚರಣಮಂ ಪಿಡಿಯೆ (ಪುಣ್ಯಾಸ್ರ. ೬-೧೪ ವ) ; ಕಣ್ಣಿಟ್ಟು, ಚಿಕ್ಕನೆದ್ದು ಹೊರಟು ಹೋಗುವವನು (ಬಟ್ಟಅ. ೨೨-೧೧). **ಚಿಕ್ಕಚಿಕ್ಕನೆ** (ದ್ವಿರುಕ್ತಿ) : ಪಟ್ಟವನು ಚಿಕ್ಕಚಿಕ್ಕನೆ[ಪಾಠಾಂ. ಚಕ್ಕಚಕ್ಕನೆ] ಕಟ್ಟಿಯಮರವರಕ್ಕಜಿನ ಖಾಂಡಕ್ಕವರ ಪೆಸರಿಕ್ಕೆ (ಮದೇಪು. ೫-೬೬).
[ ದೇ.II ತಮಿ.ಚಿಕ್ಕೆನ್ ; ಮಲ. ಚಿಕ್ಕೆನ್ನು, ಚಿಕ್ಕನೇ ; ತುಳು. ಚಕ್ಕ ]

**ಚಿಕ್ಕವತ್ತ** 'ಚಕ್ಕವತ್ತಿ' ನೋ.

**ಚಿಕ್ಕಿತ** (ನಾ). ಸ್ಪಷ್ಟ, ನಿರ್ದಿಷ್ಟ : ಚಿಕ್ಕಿತಹ ಮಾರ್ಗದೊಳು ಬಹು ಜನ್ಮಕ್ಕೆ ಸಾಧನವಹ ಭವಂಗಳನೊಕ್ಕಲಿಕ್ಕುವ ಭೇದವನು ಕೃಪೆಯಿಂದ ಲೆನ್ನೊಳಗೆ ಮಿಕ್ಕು ಬೆರಸಲ್ವೇಕೆನುತ ವ್ಯೆಯಿಕ್ಕಿ ಬಿನ್ನೈಸಿದರೆ ಶಿಷ್ಯಂಗಕ್ಕಜಿಂ ಬೆಸಸಿದನು ಸದ್ಗುರುನಾಥನುಚಿತದಲಿ (ಸದ್ಗುರು. ೧-೧೩); ಮಾತಿನಲ್ಲಿ ಮತ್ತು ನಡವಳಿಕೆಯಲ್ಲಿ ಚಿಕ್ಕಿತವಾಗಿದ್ದರೆ ಜೀವನದಲ್ಲಿ ಕಷ್ಟಗಳು ಬರುವುದಿಲ್ಲ (ರೂಢಿ). [ <ಖಚಿತ ? ]

**ಚಿಕ್ಕಿಸು** (ಕ್ರಿ). ಹಿಂದಕ್ಕೆ ಅಟ್ಟು ; ಹಿಮ್ಮೆಟ್ಟಿಸು : ಅದರಿಂದೆ ಕೈಗಾಯ್ದು ನಲ್ಲದೊಡೆ ನಿಲಿಸಿ ಬಾಜಿಯಲಿ ಚಿಕ್ಕಿಸದೆ ಬಿಡೆ (ವಂಕಾರಾ. ೬-೧೧-೪೨).
[ ಚಿಕ್ಕು$_0$ + – ಇಸು$_3$ ]

**ಚಿಕ್ಕು$_1$** 'ಸೆಕ್ಕಿ$_1$' ನೋ.

**ಚೆಕ್ಕು$_2$**, ಚೆಕ್$_2$, ಚಕ್ಕು$_3$, ಚಿಕ್ (ನಾ). ೧. ಚೌಕುಳಿ ಬಟ್ಟೆ ; ಚೌಕುಳಿ ಆಕೃತಿಯಾಗಿ ನೆಯ್ದ ಅಥವಾ ಅಚ್ಚೊತ್ತಿದ ಬಟ್ಟೆ : ಚೌಕುಳಿಬಟ್ಟೆ, ಪಪ್ಪಳಿಬಟ್ಟೆ ; ಚೆಕ್ಕು ಬಟ್ಟೆ (Check. ಇಂಕನಿ). **ಚೆಕ್$_2$ :** ೨. ತಾಳೆ ನೋಡುವುದು ; ಸರಿ ನೋಡುವುದು : ಲೆಕ್ಕ ಚೆಕ್‌ಮಾಡಿ ಆಮೇಲೆ ಹಣ ಕೊಡು (ರೂಢಿ). **ಚಕ್ಕು$_3$ :** ೧. ಚಕ್ಕು ಸೀರೆ ಈಗಿನ ಹೊಸ ಫ್ಯಾಶನ್ನು (ರೂಢಿ). **ಚಿಕ್ :** ೨. ಅವರು 'ಚಿಕ್' ಮಾಡಿದ ಬಳಿಕ . . . ರಾತ್ರಿ ಎಂಟರ ವರೆಗೆ ಕೆಲಸ (ನಾಪೂಲೀ. ೮೬). [ ←ಇಂ. Check ]

**ಚೆಕ್ಕು$_3$**, ಚಕ್ಕು$_4$ (ನಾ). ಬ್ಯಾಂಕುಗಳಿಂದ ಹಣ ಪಡೆಯಲು ಕೊಡುವ ಆದೇಶಪತ್ರ ; ದರ್ಶನಿ ಹುಂಡಿ ; ಧನಾದೇಶ : ಆರು ಸಾವಿರದ ಇನ್ನೂರೈವತ್ತು ರೂಪಾಯಿಗಳಿಗೆ ರಂಗಾಚಾರಿಯ ರುಜು ಇದ್ದ ಒಂದು ಚೆಕ್ಕು ಇತ್ತು (ಇಬದು. ೧೩೭) ; ಸಮಯಕ್ಕೆ ದೊರೆಯುವ ರೂಪಾಯಿ ಚಿಲ್ಲರೆ ನೂರರ ಚೆಕ್ಕಿಗೆ ಮಿಗಿಲು (ಚಂದ್ರವೀ. ೧೪೯-೯೩). **ಚಕ್ಕು$_4$ :** ಈಗ ತಾನೇ ನನಗೆ ಒಂದು ಸಾವಿರ ರೂಪಾಯಿಗೆ ಚಕ್ಕು ಬಂದಿದೆ (ರೂಢಿ). 'ಚಕ್ಕು ಹುಂಡಿ' ಪರಾ. [ ←ಇಂ. Cheque ]

**ಚಿಕ್ಕುದಟು**, ಚಿಕ್ಕುದಟು (ಕ್ರಿ). ಚೂರಾಗುವಂತೆ ಕಡಿ ; ಚಿಕ್ಕೆಯಾಗುವಂತೆ ಕತ್ತರಿಸು : ವೀರರಂ ತಡೆಗಡಿದ ನೆತ್ತರ ಕಡಲ್ಕಟ್ಟಿ ಚಿಕ್ಕುದಟು ದಂತಾಗೆ ತಳ್ತ ಕೂರಾಳ್ಗಳಂ . . . ಬಗಿದು (ಇಹರ. ದೇ. ೪೨-೫). **ಚಿಕ್ಕುದಟಿ$^3$ :** ಕೂರಸಿಯೆಸಕಕ್ಕೆ ಚಿಕ್ಕುದಟಿಯಲುಟಿ$^3$ ಯಾವವನೆಂದೆನುತ್ತೆ ಗರ್ಜಿಸಿ ಜಡಿದೆಟ್ಟಿನಾ ಯಮಸೂನು ಕರಾಗ್ರದ ಖಡ್ಗಧೇನುಮಂ (ಮಹಾನೇ. ೭-೦೫). [ ಚಿಕ್ಕು$_1$(<ಸೆಕ್ಕಿ$_1$) + ತಟಿ$_1$ ]

**ಚಿಕ್ಕುಲಗುಲಿ** 'ಚಕ್ಕಲಗುಲಿ' ನೋ.

**ಚಿಕ್ಕುಲಿ** 'ಚಕ್ಕುಲಿ' ನೋ.

**ಚಿಕ್ಕೆ** 'ಸೆಕ್ಕಿ$_1$' ನೋ.

**ಚಿಕ್ಕೆವತ್ತ** 'ಚಕ್ಕವತ್ತಿ' ನೋ.

**ಚಿಗಳ್,** ಚಗಳು (ನಾ). ಉತ್ಪನ್ನ ; ಫಸಲು (?) : ಪಗಲಾದಿತ್ಯಂ ಮಕರಂಬುಗುವೊಡೆ ಕರವೊಳ್ಳಿತಾಗಿ ಜೋಳಂ ಬೆಳೆಗುಂ ನೆಗಟ್ಟಂದಿರುಳುಂ ಪೊಕ್ಕೊಡೆ ಚಿಗಳಗಣಿತವಲ್ಲಿ ಜೋಳನಾಡೆಯೆಂದುಂ ಅಟ್ಟಂ (ಜಟ್ಟಮ. ೮-೨೦೪). **ಚಗಳು :** ಆ ಯೆರಡುತೋಟದ ಒಳಗುಳ ಹಲಸು ಮಣಸು ಮಾವು ಚೆಳುವೊಟೆಯ ಮೊದಲಾಗಿ ಯೇನು ಉಳಂಥಾ ಬೆಳೆಯ ಚಗಳ ನೆಲ್ಲವನು ಅಗು ಮಾಡಿಕೊಂಡು (ಎಕ. VIII, ತೀರ್ಥಹ. ೩೨-೪೬ ; 1418 ?). [ ? ]

**ಚಿಗಿಚಿ** (ನಾ). ನುಗ್ಗೆಮರ ; "ಶೋಭಾಂಜನ" (ಶಂಡಿತ). [ ?./ಮರಾ. ಶೇಗಟ, ಶೇಗವಾ ]

**ಚಿಗತಳಿ** 'ಚಗತಿಳಿ' ನೋ.

**ಚಿಚ್ಚರ** 'ಚಚ್ಚರ' ನೋ.

**ಚಿಚ್ಚರಂ** 'ಚಚ್ಚರಂ' ನೋ.

**ಚಿಚ್ಚರಿಕೆ** (ನಾ). ಚಳಕ; ನೈಪುಣ್ಯ ; ಕೌಶಲ ; ವೇಗ : ಮೆಯ್ಯ್ ಮೆಯ್ಯ್ ಚಲದಿಂ ಮುಟ್ಟೆ ಪೊಣರ್ದು ತಳ್ತಿಱುವು[ರ್ಕಿಂ] ಕೆಯ್ಯ್ ಚಿಚ್ಚರಿಕೆಯ ಚಲದಿಂ ಕೆಯ್ಯ್ ಚಳಿವಿನಮಿಱಿದರೆರಡು ಬಲದೊಳಮದಟರ್ (ಶಂಪಥಾ. ೧೩-೩೪). [ ಚಿಚ್ಚರ(<ಚಚ್ಚರ) + – ಇಕೆ ]

**ಚಿಚ್ಚರಿಗ** 'ಚಚ್ಚರಿಗ' ನೋ.

**ಚಿಚ್ಚರಿತ** (ನಾ). ಜಾಗರೂಕನಾದವನು ; ಜಾಗೃತನಾದವನು : ಪೊಚ್ಚಪೊಸಗಂಪನೀಯುತುಮಚ್ಚಿಗೊಳಿಪ್ಪ ಮಲಧೂಪಮಂ ಶಾಂತಂಗಂ ಚಿಚ್ಚರಿತನರ್ಪಿಸುತ್ತುಂ ಸಚ್ಚಿನ್ಮಯದವಾಂತು ರಂಜಿಸಿದಂ (ಉದ್ಭಟ. ೧೦-೩೮). [ <ಚಿಚ್ಚರ ]

**ಚಿಚ್ಚರಿಸು** (ಕ್ರಿ). ಎಚ್ಚರಿಕೆಯಿಂದಿರು ; ಜಾಗ್ರುತೆಗೊಳ್ಳು : ಪನ್ನಗರಾಜನ ನೊತ್ತಿ ಕಟ್ಟೆ ಚಿಚ್ಚರಿಸಿ ಕರಾಗ್ರದೊಳ್ ನಿಱಿಪೆನೋ ಪಿಡಿದೇಱುವೆನೋ ಸುರೇಭಮಂ (ಧರ್ಮಾಮೃ. ೯-೧೮೨). [ಚಿಚ್ಚರ (<ಚಚ್ಚರ) + – ಇಸು$_3$]

**ಚಿಚ್ಚರು** 'ಚಚ್ಚರ' ನೋ.

**ಚಿಚ್ಚು$_1$** 'ಚಚ್ಚು$_1$' ನೋ.

**ಚಿಚ್ಚು$_2$** 'ಚರ್ಚು$_1$' ನೋ.

**ಚಿಜಕರ** (ನಾ). ಒಂದು ಬಗೆಯ ಜೋಳ : ಈ ಜಿಲ್ಲೆಯಲ್ಲಿ ಪೊಟ್ಟಿಗೆ ೧೮ ಪ್ರಕಾರದ ಜೋಳ ಬೆಳೆಯುವದು . . . ಅವುಗಳ ಹೆಸರುಗಳು – ಮೂರ ತಿಂಗಳ ಜೋಳ . . . ಚಿಜಕರ, ಕಾಗಿಜೋಳ (ಕಭಾಗ. ೨೭೦). [ ? ]

**ಚಿಜ್ಜ** 'ಛಜ್ಜ' ನೋ.

**ಚಿಜ್ಜೆ$_1$** 'ಸೆಜ್ಜೆ$_1$' ನೋ.

**ಚಿಜ್ಜೆ$_2$** 'ಸೆಜ್ಜೆ$_2$' ನೋ.

**ಚಿಜ್ಜೆ$_3$** (ನಾ). ಒಂದು ಬಗೆಯ ವಾದ್ಯ (?) : ಚಿಜ್ಜೆದನಿ ಕೇಳಿ ಎದ್ದು ಮಜ್ಜಣ ಮಾಡು ರುದ್ರಾಕ್ಷಿ ತೊಟ್ಟು ಮಡಿಯುಟ್ಟು ಸಿದ್ಧರ ಊರಿಗದ ಶಿವಗುಡಿಗೆ ನೀನು ಹೋಗವ್ವ (ಶರಜ. ೨೦). [ ? ]

**ಚಿಟಿಗೆ** (ನಾ). ಒಂದು ಬಗೆಯ ಆದಾಯ (?) : ಅರಮನೆಗೆ ತೆಱುವ ಸಂಬಳ ಪರತಿ ಕುಡಿಕೆ ಚಿಟಿಗೆ ಅಧಿಕಾರಿ ಸೇನಬೋವರ ಸಂಬಳ ಎಲ್ಲವನು ಬಿಟ್ಟೆವೂ (ಎಕ. III, ಮಳವ. ೬೭-೫ ; 1550 ?). [ <ಚಟ್ಟಿಗೆ ? ]

**ಚಿಟ್ಟ$_1$** 'ಚರಟ' ನೋ.

**ಚಿಟ್ಟ$_2$** 'ಚಟ್ಟ$_3$' ನೋ.

**ಚಿಟ್ಟಬೆಳಗು** (ಕ್ರಿ). ಚರ್ಮವನ್ನು ಸುಲಿ; ಹಿಂಸೆಮಾಡು : ಅವರು ಚಿಟ್ಟ ಬೆಳಗದಿದ್ದರೂ ಅವರು ಬಿಡುವ ಎಚ್ಚರಿಕೆಯ ಹುಸಿಗುಂಡಿಗೇ ತಮ್ಮಾಜಿ ಗತಪ್ರಾಣನಾಗುತ್ತಿದ್ದ (ದೀಪಹ. I, ೩೮). [ ಚಿಟ್ಟ$_1$ (<ಚರಟ) + ಬೆಳಗು$_1$ ]

**ಚಿಟ್ಟಿ$_1$** 'ಚಟ್ಟಿ$_1$' ನೋ.

**ಚಿಟ್ಟಿ$_2$** 'ಛಟ್ಟಿ' ನೋ.

**ಚಿಟ್ಟಿ$_3$** (ನಾ) ಒಂದಂ ಬಗೆಯ ಪಕ್ಷಿ : "ಟಿಟ್ಟಿಭಾಃ, ಕ್ಷುದ್ರ ಪಕ್ಷಿಕಾಃ – ಈ ೨ ಚಿಟ್ಟಿ [ಪ್ರಾಕಾ. ಚಿಟ್ಟಿ]" (ಹಯಾಯು. ೪೨-೯೯). [ ? ]

**ಚಿಟ್ಟಿಗೆ** (ನಾ). ತೊತ್ತು ; ದಾಸಿ : ಚಿಟ್ಟಿಗೆಯ ಮಗ ಮಲ್ಲನಂ ಕರೆದು ನೊಸಲಲ್ಲಿ ಕಟ್ಟುಗ್ರುವಾಗಿ ರಾಜಿವ ಅಗ್ನಿನೇತ್ರವನು . . . ತೋಱಿಸಲ್ಕೆ (ಪ್ರಾರ್ಥರಾ. ೦೪-೩೮). [ <ಸಂ. ಚೇಟಿಕಾ ]

**ಚಿಟ್ಟಿಸು** (ಕ್ರಿ). ಚೇಷ್ಟಿಸು ; ಕೆಲಸ ಮಾಡು: ತ್ರಿಜಗವನೆತ್ತುವ ವೀರ್ಯಂ ನಿಜವಾಗಿಹುದವರ್ಗೆ ಚಿಟ್ಟಿಸದೆ ತೆಪ್ಪನಿಹಂ ತ್ರಿಜಗದ ಸುಖಕಧಿಕ ಸುಖಂ ನಿಜವಾಗಿಹುದೆಂತುಟೆಂತು ನುಡಿಯಲಸಕ್ಕಂ (ತ್ರಿಲೋಕ. ೧೦೬). [ <ಚೇಷ್ಟಿಸು ]

**ಚಿಟ್ಟಿಱ್** 'ಚಟ್ಟಿಱ್' ನೋ.

**ಚಿಟ್ಟು$_1$** 'ಚಟ್ಟು$_1$' ನೋ.

**ಚಿಟ್ಟು$_2$** 'ಚಟ್ಟು$_2$' ನೋ.

**ಚಿಟ್ಟು$_3$** 'ಚಟ್ಟು$_3$' ನೋ.

**ಚಿಡಿಯಕ್ಕ** (ನಾ). ಒಬ್ಬಾಕೆಯ ಹೆಸರು : ಗೋವಿನ್ದ ಮಾಧವರಸರ್ ಕೂಡಲೂರಾ ಮೂವತ್ತುಮಾಳ ಚಿಡಿಯಕ್ಕಂ ಪೊಯ್ದು ಮಣ್ಣು ಇರ್ಕ್ಕಣ್ಣಾಗಂ (ಎಕ. XII, ಮದ್ದಗಿ. ೫೦-೫ ; ಸು. 950 ?). [ ಚಿಡಿ$_0$ + ಅಕ್ಕ$_1$ ]

**ಚಿಡ್ಡಿ** 'ಚಡ್ಡಿ$_1$' ನೋ.

**ಚಿಣಿತಿ** (ನಾ). ಹಿಮ್ಮೇಳದ ವ್ಯಕ್ತಿ (?) : ಇನ್ನಾಡುವೆ ಜಂಗಮ ಬಹುರೂಪ . . . ಇಲ್ಲೆನ್ನೋ ಮದ್ದಳಿಗ ಒಲ್ಲೆ ಎನ್ನೋ ಕಹಳೆಕಾಱ ಬಿಂದವ ಹರಿದು ನಿಂದು ಹಾಡಿರೋ ಚಿಣಿತಿಯರಿರಾ (ಸರ್ವವ. ೪೮-೨೫೫) 'ಚಿಹಣಿ' ಪರಾ. [ ? ]

**ಚಿಣ್ಣವೂರ್** (ನಾ). ಒಂದು ಊರಿನ ಹೆಸರು : ಅವರಾಳ್ವಿಣ್ಣವೂರೊಳ ಎಱಮ್ಮನಾಸನ್ದಿ ಅಳಿ (ಎಕ. VI, ಕಡೂರು. ೧೪೫-೪ ; ಸು. 750). [ ಚಿಣ್ಣ ? + ಊರ್ ]

**ಚಿದರಿಸು** 'ಕೆದಱಿಸು' ನೋ.

**ಚಿದಱು** 'ಕೆದಱ್$_1$' ನೋ.

**ಚಿದುಕ** (ನಾ). ಒಂದು ಬಗೆಯ ಮರ (?) : ಬೆಟ್ಟ ಕಿಬ್ಬಿಯಲ್ಲಿ ಚಿದುಕದ ತಾಳಲ್ಲಿ ಈಶಾನ್ಯ ಮುಖವಾಗಿ ನಟ್ಟ ಕಲ್ಲು ೧ (ಎಕ. XIV, ನಂಜನ. ೨೯೫ ಪುಟ. ೦೫೦-೩೩ ; 1716). [ ? ]

**ಚಿದುರು$_1$** 'ಕೆದಱ್'$_1$ ನೋ.

**ಚಿದುರು$_2$** 'ಚದುರ್' ನೋ.

**ಚಿದುಱಿಸು** 'ಕೆದಱಿಸು' ನೋ.

**ಚಿದುಱು** 'ಕೆದಱ್$_1$' ನೋ.

**ಚಿನ್ನ,** ಚನ್ನ$_1$ (ನಾ). ೧. ಸುಂದರನಾದವನಂ ; ಚೆಲುವನಾದವನು : ಪೊನ್ನುಳ್ಳವನೆ ಕುಲೀನಂ ಚಿನ್ನಂ ಕಲಿ ಸತ್ಯವಾದಿಯೆನಿಸುಗುಂ (ಕಾವ್ಯಾವ. ೬೦); ಚಲದಭಿರಾಮುನನ್ನನ ತವಮ್ಮನೆ ಚಿನ್ನರ ಚಕ್ರವರ್ತ್ತಿ (ಎಕ. VIII, ಸೊರಬ. ೨೬೭-೪೨ ; ಸು. 1165) ; ಎನ್ನಾನಂದಸುಧಾಬ್ಧಿವರ್ಧನ ಕಳಾಸಂಪನ್ನನಂ ಚಿನ್ನನಂ . . . ಕಂಡೆಂ (ಶಂಪಾಶ. ೩೫) ; ಚೆಲುವರ ಚೆಲ್ವ ಚಿನ್ನಿಗರ ಚಿನ್ನ ಸುವೀರರ ವೀರ (ಅಪಶ. ೧೨೨). ೨. ಶೂರ; ಪರಾಕ್ರಮಿ: ಚಿನ್ನರನಡಿಗೊತ್ತಿ ಮಂಡಳಿಕರಂ ಬೆಸಕೆಯ್ಸಿ (ಶಂಪಥಾ. ೬-೦೮). 'ಚಿನ್ನ ಪೊಂಗ' ಪರಾ. ೩. ಒಳ್ಳೆಯದು : ತಾನು ಒಬ್ಬ ತಳವಾರನಾಗಿದ್ದರೆ ಎಷ್ಟು ಚಿನ್ನ (ಧರ್ಮಸಾ. ೬೩). ೪. ಚೆಲುವು; ಸೌಂದರ್ಯ; ಸೊಗಸು: ಬಿಸುಗದಿರಳಿದಹಿಮಕಿರಣನಂತೆ ನೋಳ್ಪರ ಕಣ್ಗೆ ಚಿನ್ನಬಸವಂ ಚಿನ್ನಮಂ ತಳೆದನು (ಬಬಪು. ೫-೪೨). ೫. ಅಂದವಾದಂದು ; ಮನೋಹರ

ಪಾದಂದು : ಭೃಂಗಕೋಕಿಳ ಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ (ಆದಿಪು. ೧೧-೯೮). (ಗು). ೬. ಅಂದವಾದ ; ಚೆಲುವಾದ : ಧರಣೀನಾಥನ ಚೆನ್ನ ಹೊನ್ನ ಕರುಮಾಡಂ ಮಾಳ್ಪುದಾಶ್ಚರ್ಯಮಂ (ಬಾಧಪು. ೪-೩೨). 'ಚೆನ್ನಪೂ' ಪರಾ. ಚನ್ನ$_1$: (ಕ). [ ಚೆನ್ನು + - ಅ$_7$ ]

**ಚೆನ್ನಂಗಿ,** ಚನ್ನಂಗ, ಚನ್ನಂಗಿ$_1$, ಚೆನ್ನಗೆ$_1$, ಚೌನಂಗಿ (ನಾ). ಒಂದು ಬಗೆಯ ಮರ : "ಚೆನ್ನಂಗಿ ಚಲಿಯಕ್ಕುಂ" (ಮಂಗರಾ. ೩೭-೧೯) ; ಹಲಸಾಲಂ ತಡಸಾಸು . . . ಚೆನ್ನಂಗಿ ಬೊಬ್ಬುಲಿ (ಪಾರ್ಶ್ವಪು. ೧೨-೩೮) ; ಕರುವಿಡಿದಿರ್ಪಾ ಚೆನ್ನಂಗಿಯ ತರು ಡಾಣೆಗೆ (ಶಮದ. ೬೨ ಪ್ರಯೋ) ; ಚೆನ್ನಂಗಿ ಬನ್ನಿ ಹೊನ್ನೆಯ ತರುಗಳ್ (ಹಮ್ಮೀರ. ೪-೬೯) ; ತೇಗ ಚೆನ್ನಂಗಿ ಬನ್ನಿ ಪಾದ್ರಿಯು . . . ಮೆರೆದವರಣ್ಯದಿ (ಗೋಹಾಡು. ೪). **ಚೆನ್ನಂಗ :** (ಕ). **ಚನ್ನಂಗಿ$_1$ :** ಹೂಲಿ ಮಾಲಿನಿ ಬನ್ನಿ ಹೊನ್ನೆ ಚನ್ನಂಗಿ [ಪಾಠಾಂ. ಸೊಗಡಗಿಲು] (ಸೋಮಚ. ೩-೨) ; ಹೊನ್ನೆ ಹೊನ್ನಯ್ಯಗಳ ಮಗನಂ ಮನ್ನಿಸಾ ಚ[ಪಾಠಾಂ. ಚೆ]ನ್ನಂಗಿಯೇ ಆ ಚೆನ್ನಯ್ಯಂಗೊಲಿದಭವನೆಂದಿಗೆ ಚೆನ್ನಮಾಡುವನು (ಬಸಪು. ೪೫-೩೭) ; ಚನ್ನಂಗಿ (ಚೊಂದಾರ) . . . ಇಮಾರತಿಗೆ ಮೇಲಾದದ್ದು (ಕಥಾಗಿ. ೩೯). **ಚೆನ್ನಗೆ$_1$ :** ಎಲವದ ಬೇಲ ಚೆನ್ನಗೆಯ ಪೊನ್ನೆಯ ಕಮ್ಮರದ (ಲೀಲಾವ. ೬-೨೭). **ಚೌನಂಗಿ:** ಮರಗಳು: ಹೆಸವ, ಹೆಬ್ಬಲಸು . . . ಗೊರವಿ, ಹೆಣ್ಣುಗೊರವಿ, ಚೌನಂಗಿ, ಮಡ್ಡಿ (ನಮ್ಮನು. ೨೩೭). [ ದೇ.॥ ತೆಲು. ಚೆನ್ನಂಗಿ, ಚೆನಂಗಿ ]

**ಚೆನ್ನಂಗಿಬಿದಿರು, ಚನ್ನಂಗಿಬಿದಿರು** (ನಾ). ಒಂದು ಬಗೆಯ ಬಿದಿರು : ಅಣ್ಣ ತಮ್ಮರು ಕೂಡಿ ನಿನ್ನೆ ಗುಡ್ಡವನೇರಿ ಚೆನ್ನಂಗಿಬಿದಿರ ಕಡಿದಾರ (ಕನ್ನಜಾ. ೧೮). **ಚನ್ನಂಗಿಬಿದಿರು :** ಅಣ್ಣ ತಮ್ಮ ಕೂಡಿ ನಿನ್ನೆ ಗುಡ್ಡಾ ಏರಿ ಚನ್ನಂಗಿಬಿದಿರ ಕಡಿದಾರೊ (ಹಳ್ಳಿಯ. ೩೧).
[ ಚೆನ್ನಂಗಿ$_0$ + ಬಿದಿರು$_2$ (<ಬಿದಿರ್$_2$) ]

**ಚೆನ್ನಕ್ಷಿ** (ನಾ). ಒಳ್ಳೆಯ ಕಣ್ಣು ; ದೋಷರಹಿತವಾದ ಕಣ್ಣು : ನಿನ್ನ ನಯನದೊಳೆನ್ನ ಚೆನ್ನಕ್ಷಿಯನವರ್ಚುವೆನು (ಬಸಪು. ೧೮-೭೦).
[ ಚೆನ್ನ + ಅಕ್ಷಿ ]

**ಚೆನ್ನಗಂಡ** (ನಾ). ಸುಂದರನಾದ ವೀರ ; ಚೆಲುವನಾದ ಸಾಹಸಿ : ಮಿಡುಬುಣ್ಮೆ ಪುಷ್ಪಕೃತ ಶೇಖರದಂತಿರೆ ಕೊಂಡು ಪೋದರಚ್ಚರಸಿಯರಣ್ಮೆ ಸತ್ತ ಭಟರಂ ಕೊನೆವಿಸಾಸೆಯ ಚೆನ್ನಗಂಡರಂ (ಗದಾಯು. ೪-೨೨).
[ ಚೆನ್ನ + ಗಂಡ$_1$ ]

**ಚೆನ್ನಗೆ$_1$** 'ಚೆನ್ನಂಗಿ' ನೋ.

**ಚೆನ್ನಗೆ$_2$** (ನಾ). (ಕರಾ) ಬಾಯಿಂಕಟ್ಟಿರುವ ಚೀಲದಲ್ಲಿರುವ ಧಾನ್ಯವನ್ನು ಪರೀಕ್ಷಿಸುವುದಕ್ಕಾಗಿ ಸ್ವಲ್ಪ ಹೊರಗೆ ತೆಗೆದುಕೊಳ್ಳಲು ತುದಿಯಲ್ಲಿ ಚೂಪಾಗಿದ್ದು ಕೊಳವೆಯಂತಿರುವ ಕಬ್ಬಿಣದ ಸಾಧನ ; ಸಕ್ಕರೆ ಗುತ್ತಿ : ಅಕ್ಕಿ ಪರೀಕ್ಷಿಸಲು ಚೆನ್ನಗೆ ಸಾಲದೆ (ರೂಢಿ). [ ? ]

**ಚೆನ್ನಡಿ,** ಚನ್ನಡಿ (ನಾ). ೧. ಚೆಲುವಾದ ಪಾದ ; ಮನೋಹರವಾದ ಪಾದ : ತಾವರೆಗಳಡಿಯ ಥಳಥಳಿಪ ಚೆನ್ನಡಿಗಳಸಿಯಡಿಯ ಲಲಿತಾಂಗಿಯರ್ (ಚಬಪು. ೩೭-೪೦) ; ಎನ್ನ ಜನ್ಮಕ್ಕೆ ಸಾಫಲ್ಯಮಾದುದು ನಿನ್ನ ಚೆನ್ನಡಿಯೂಳಿಗದಿಂದ (ಹದಿಬ. ೧-೩೯) ; ಚೆನ್ನಡಿ ಬಿಣ್ದೊಡೆ ಬಡನಡು (ಚಳವಿ. ೩-೯೦). ೨. ಮೇಲಾದ ಪಾದ ; ಶ್ರೇಷ್ಠವಾದ ಪಾದ : ಸನ್ನುತ ಕವಿ ಪಂಪರಾಜನು ಮೊದಲರ ಚೆನ್ನಡಿಗಳಿಗೆಱಗುವೆನು (ಅಂಜಚ. ೧-೬೯). ೩. ಚೆನ್ನಾದ ಅಡಿಭಾಗ,- ತಳಭಾಗ : ಗೂಳಿಯ ಪಂದಿಯ ಪೊನ್ನ ಬೀರಸಂಕಲೆಯ ತೊಳಪ್ಪ ಕನ್ನಡಿಯ ಚೆನ್ನಡಿಯಡ್ಡಣ ವೆಡ್ಡಮಾಗೆ ಮೂದಲಿಸಿ ಪೊಡರ್ಪು ಮೆರ್ಚೆ ಕಿಲರುರ್ಕುಡಿಗಳ್ ತಱಸಂದು ಕಾದಿದರ್ (ಕಬ್ಬಿಗಕಾ. ೨೭೨). **ಚನ್ನಡಿ: ೨.** ಸನ್ನುತ ಚತುರ್ವಿಂಶತಿ ಜಿನರಾಜರ ಚನ್ನಡಿಗಳಿಗೆಱಗುವೆನು (ತ್ರಿಪುಸಾಂ. ೧-೬). [ ಚೆನ್ನ + ಅಡಿ$_1$ ]

**ಚೆನ್ನನಾಯಿ** (ನಾ). (ಕರಾ) ಒಂದು ಬಗೆಯ - ಕಾಡುನಾಯಿ ; ಹುಲಿಯನ್ನು ಹೆದರಿಸುವ ಒಂದು ಬಗೆಯ ನಾಯಿ.
[ ←ತುಳು. ಚೆನ್ನನಾಯಿ=ತೋಳ ]

**ಚೆನ್ನನೆ** (ಅ). ಅಂದವಾಗಿ ; ಮನೋಹರವಾಗಿ : ಸುರಹೊನ್ನೆಯ ಚೆನ್ನನಪ್ಪರಲನೊತ್ತರದೆ ಸುತ್ತಿ ತೆತ್ತಿಸಿದ ಕೈರವದ ಕರ್ಣಪೂರಂಗಳುಮಂ (ಜಗವಿ. ೬-೦೬ ವ).
**ಚೆನ್ನಚೆನ್ನನೆ** (ದ್ವಿರುಕ್ತಿ) : ಸನ್ನಿ ತೆಱಪುಗೊಡಿ ಸಾಗಿ ಮಲ್ಲಗೆಯೆಂದು ಚೆನ್ನಚೆನ್ನನೆ ಸೊಲ್ಲಿಸಿದರು (ಭರಜ. ೮-೯೫). [ ಚೆನ್ನ + - ಅನೆ$_1$ ]

**ಚೆನ್ನಪೂ** (ನಾ). ಅಂದವಾದ ಹೂವು : ಮಿಳಿರ್ವ ಕುರುಳ್ಗಳೊಳ್ ತೊಡರ್ದು ದೇಸಿಯನಾವಗಮಿಸಾವ ಚೆನ್ನಪೂಗಳನವನೊಯ್ಯನೋಸರಿಸುತುಂ (ಪಂಪಭಾ. ೨-೦೭) ; ತೊಳಗುವ ಚೆನ್ನಪೂಗಳಲಕಾವಳಿಯೊಳ್ಪಱುಗಲ್ (ಕಾದಂಪೂ. ೭೩೪). [ ಚೆನ್ನ + ಪೂ$_2$ ]

**ಚೆನ್ನಪೊಂಗ** (ನಾ). ೧. ಸುಂದರನಾದ ವೀರ; ಚೆಲುವನಾದ ಪರಾಕ್ರಮಿ: ಕೊಂಡು ಪೋದರಚ್ಚರಸೆಯರಣ್ಮೆ ಬಿಟ್ಟ ಭಟರಂ ಕೊನೆವಿಸಾಸೆಯ ಚೆನ್ನಪೊಂಗರಂ (ಕಾವ್ಯಾವ. ೮೩೪); ಕವಿ ಪಂಡಿತರೋದುವ ಕೊಂಕು ಚೆನ್ನಪೊಂಗರ ಕುಡಿಮುಂಜೆಱಂಗು ನಿಡುಬಯ್ಲಲೆ ಬಾರ್ತೆಯ (ಅನಂಪು. ೮-೪೯) ; ಮಾಧವಂ . . . ಗಾಡಿಯಿಂ ಬರ್ಪ ಚೆನ್ನಪೊಂಗನಂ ಕೈಗೊಟ್ಟು ಕೂಡಿವಂದೋಲಗದ ಸಾಲೆಯಂ ಪುಗಿಸಿ (ರಾಮಾಶ್ವ. ೫೭-೧೫). ೨. ಉತ್ತಮನಾದ ವೀರ ; ಶ್ರೇಷ್ಠನಾದ ಕಲಿ : "ಚೆನ್ನಪೊಂಗಂ-ವೀರಂ" (ಶಮದ. ಪರಿ. ೨) ; ಕುರುಬಲದೊಳ್ ಕರಂ ನೆಗಟ್ದ ಬೀರರ ಚೆನ್ನರ ಸಂದ ಚೆನ್ನಪೊಂಗರ ತಲೆ ತಾಟ ಪಣ್ ಕೆದಱದಂತೆ ನಿರಂತರಮಾಜಿರಂಗದೊಳ್ ಪರೆದಿರೆ (ಪಂಪಭಾ. ೮-೧೦೬) . [ ಚೆನ್ನ + ಪೊಂಗ ]

**ಚೆನ್ನಭಕ್ತಿ,** ಚನ್ನಭಕ್ತಿ (ನಾ). ಉತ್ತಮವಾದ ಭಕ್ತಿ : ಆಭವಂ ನಗುತತ್ತಾ ನಿಂಬಿಯಕ್ಕನ ಚೆ[ಪಾಠಾಂ. ಚ]ನ್ನಭಕ್ತಿಗೆ ಮೆಚ್ಚಿಯಾರೋಗಿಸಿ ಮುದಂಬೆತ್ತು (ಬಸಪು. ೩೪-೭೫). **ಚನ್ನಭಕ್ತಿ :** ಮೇಲಿನ ಪ್ರಯೋಗದ ಪಾಠಾಂತರ ವನ್ನು ನೋಡಿ. [ ಚೆನ್ನ + ಭಕ್ತಿ ]

**ಚೆನ್ನಭಾಷಿತ** (ನಾ). ಸೊಗಸಾದ ಮಾತು ; ಉತ್ತಮವಾದ ಮಾತು ; ಸುಭಾಷಿತ : ವಂಶಾವಳಿಯುಮಂ ನಿಜಾವಳಿಯುಮನೊಳ್ಳಿತ್ತಾಗಿ ಪೇಟ್ದೀ ನಿನ್ನ ಚೆನ್ನಭಾಷಿತಮದೊಳ್ಳಿತ್ತಾದುದು (ಗದಾಯು. ೨-೮ ವ).
[ ಚೆನ್ನ + ಭಾಷಿತ ]

**ಚೆನ್ನಲರ್** (ನಾ). ಅಂದವಾದ ಹೂವು : ಅಮರರು ಚೆನ್ನಲರ್ಮಳೆಯ ಕಱೆದರು (ಭರಜ. ೪೭-೧೧೯). [ ಚೆನ್ನ + ಅಲರ್$_2$ ]

**ಚೆನ್ನಸರ** (ನಾ). ಚೆನ್ನಾಗಿರುವ ಕಂಠಹಾರ ; ಸುಂದರವಾದ ಹಾರ : ಉಳಿದಾರ ಕಂಠಿ ಖಡೆಯ ಪೊಂಗಲು ಹೊನ್ನ ಬಳೆಯುತ್ತರಿಗೆ ಚೆನ್ನಸರವಾ ಕಳಿಪು (ಕುರಾಸಾಂ. ೪೨-೨೩) ; ಹರಳೋಲೆ ಕಟ್ಟಾಣಿಮುತ್ತಿನ ಮೆಂಟಿಯ ಮಿಱುಗುವ ಚೆನ್ನಸರಗಳು (ಕಂಸವಿ. ೯-೭೫). [ ಚೆನ್ನ + ಸರ$_6$ ]

**ಚೆನ್ನಸುಗೆ** (ನಾ). ಸುಂದರವಾದ ಅಶೋಕವೃಕ್ಷ : ಚೆನ್ನಸುಗೆಯ ನೆಱಲಡಿಯ ನುಣ್ಪಟಲೊಟ್ಟಲೊಳ್ ಕಿಂದಳಿರಿಂ ನಲ್ವಾಸುಗೆಯ್ದು (ರಾಮಾಶ್ವ. ೩೦-೨೫). [ ಚೆನ್ನ + ಅಸುಗೆ ]

**ಚೆನ್ನಳಗ** (ನಾ). ಚೆಲುವಾದ ಹವಳದ ಬಣ್ಣದ ಕುದುರೆ : ಜನ್ನ ಜನ್ನಾರ ಚೆನ್ನಳಗ ಚೆಲುವ ಚೀರ ತನ್ನೀಲ ಭೈರ ಕಂಕರಿಗಂ ಸನ್ನುತ ಸಾಂಬ್ರಾಣಿಯನೇಱ ನೃಪಕುಲರನ್ನರಿಗಂದು ತೋಱದರು (ಅಂಜಚ. ೬-೮೩).
[ ಚೆನ್ನ + ಅಳಗ$_1$ ]

**ಚೆನ್ನಾಕಳ್** (ನಾ). ಉತ್ತಮವಾದ ಹಸು; ಒಳ್ಳೆಯ ಜಾತಿಯ ಗೋವು: ಋತ್ವಿಜರೆಲ್ಲರ್ . . . ರನ್ನಮಂ ಪೊನ್ನ ಹೇಱಂ ಚೆನ್ನಾಕಳಂ ಪ್ರತಿಗ್ರಹಿಸಿ ತಮಮನಂ ಪರಸಿ ಬೀಟ್ಕೊಂಡರ್ (ರಾಮಾಶ್ವ. ೧೬೬-೦೩). [ಚೆನ್ನ+ಆಕಳ್]

**ಚೆನ್ನಾಟ** (ನಾ). ಲೀಲೆ ; ವಿಲಾಸ ; ವಿನೋದ : ಊಟವ ಮಾಡಿದು ವಧುಬಂಧುಗಳು ಚೆನ್ನಾಟದಿ ಕೃಷ್ಣ ಕೈದೊಳೆದು . . . ಕರ್ಪೂರಕೂಟ ವೀಳೆಕೆಯನು ಸವಿದು (ಮೋಹಹ. ೧೪-೦೬). [ ಚೆನ್ನ + ಆಟ ]

**ಚೆನ್ನಿ**, ಚನ್ನಿ (ನಾ). ಚೆಲುವೆ ; ಸುಂದರಿ : ನಕ್ಕೊಮ್ಮೆ ಹೇಳ ಚೆನ್ನಿ ಆ ನಗಿ ಇತ್ತಿತ್ತ ಹೋಗೇತಿ ಎತ್ತೆತ್ತ (ಗರಿ. ೧೦೦-೩). **ಚನ್ನಿ** : "ಚನ್ನಿ=ಚೆಲ್ವೆ" (ಕಾಶಕ್ಕ. ೩೯) ; ಚನ್ನಿಗೆ ನಾರಿಕುಲರನ್ನಿಗೆ ಭಾಗ್ಯಸಂಪನ್ನಿಗೆ ಸಗರಕುಲ ಪಾವನೆಗೆ (ತೀರ್ಥಮ. ೧೮). [ ಚೆನ್ನ + – ಇ₂ ]

**ಚೆನ್ನಿಕೆ** (ನಾ). ಚೆಲುವು ; ಸೌಂದರ್ಯ : ಕಲಿ[ತ]ನದುರ್ಕ್ಕಿ ಜೌವನದ ಚೆನ್ನಿಕೆ ರೂಪಿನೊಳೊಲ್ಪೆ × ಳ್ದು ಮಾರ್ವ್ವಲಿದದಟರ್ದ್ದ ವೀರ್ಯ್ಯ ವಿರದಾಯದೊಱನ್ದು ಮನಕ್ಕೆ ಸಂಕೆಯನ್ನೊಲಗಿಸಿದಂ (ಸೌಇಇ. XI-i, ೪೧-೩೩; 969). [ ಚೆನ್ನು + – ಇಕೆ ]

**ಚೆನ್ನಿಗ**, ಚನ್ನಿಗ (ನಾ). ೧. ಚೆಲುವನಾದವನು; ಸುಂದರ; ಸ್ಫುರದ್ರೂಪಿ: ತಮ್ಮ ವಿಭೂತಿಯ ತಮ್ಮ ತಮ್ಮ ಚೆಲ್ವುಗಳ ವಿಲಾಸದುರ್ಮೆಗಳೊಳಾವೆವ ಗಾಗಿವೆವೆಂದು ಬಂದ ಚೆನ್ನಿಗರು ಮನಾಸೆಕಾಱರು ಮನೊಲ್ಲದೆ (ಪಂಪಭಾ. ೧-೦೦೬); ಕಡುಗೂರ್ಪ ಮಡದಿಯ ಮತ್ತೊಬ್ಬ ಚೆನ್ನಿಗ ಕೊಂಬ (ಬಸವ. ೪೦) ; ಧರೆಗೆ ಕಾಮನೆ ಚೆಲ್ವ ಕಾಮನಿಂದಾ ಚಕ್ರಧರನೆ ಚೆನ್ನಿಗ ನೆನಲೆಸೆದಾ (ಭರತ. ೫೦-೬೪). ೨. = ಚೆನ್ನಿಗರಾಯಂ : ನೆಱ ನಂಬಿದೆನು ಬೇಲೂರ ಚೆನ್ನಿಗನ (ಪುರಂದ.೧-೯೦-೩). **ಚನ್ನಿಗ**: ೧. ಚ[ಪಾಠಾಂ. ಚೆ]ನ್ನಿಗನು ಮಡಿದನು ಶಿವಶಿವಾ ಎನ್ನದೆ (ಬಸಪು. ೪೮-೧೦) ; ಬನ್ನಿರೈ ನೀವ್ ಘಟ್ಟ ಬೆಟ್ಟದ ಚನ್ನಿಗರು (ಕೊರಠಾ. ೬-೦೪-೨೯). [ ಚೆನ್ನು + – ಇಗ ]

**ಚೆನ್ನಿಗತನ**, ಚನ್ನಿಗತನ (ನಾ). ಚೆಲುವು; ಸೌಂದರ್ಯ: ಗಱ ಕಿಟ್ಟಿ ಕೀತ ಬಾವಲ ತೆಱದಿಂ ಬೀಭತ್ಸಮಪ್ಪೊಡಲ್ಗೆ ಕೆಲರ್ ಬೇಸಱುತುಂ ನೆನೆವರ್ ಮುನ್ನಿನ ಪೆಱರಂಗನೆಯರ್ಗೆ ಮೆಱೆವ ಚೆನ್ನಿಗತನಮಂ (ವರ್ಧಪು.೦೦-೩೯). **ಚನ್ನಿಗತನ**: ಮನಂ ಪೆಱರಂಗನೆಯರ್ಗೆ ಮೆಱೆವ ಚನ್ನಿಗತನಮಂ (ಶ್ರಾವಕಾ. ೨೦-೮). [ ಚೆನ್ನಿಗ + – ತನ ]

**ಚೆನ್ನಿಗರಾಯ**, ಚನ್ನಿಗರಾಯ (ನಾ). ವಿಷ್ಣುವಿನ ಒಂದು ಮೂರ್ತಿ ; (ಬೇಲೂರಿನ) ಚನ್ನಕೇಶವ : ಕಂತುಪಿತನು ವೇಲಾಪುರದ ಚೆನ್ನಿಗರಾಯ ಎಂಥಾ ಗಾಡಿಗಾಱನೆ (ಪುರಂದ. ೧-೦೭೦ ಪಲ್ಲವಿ) ; ಮದನನ ಹೆತ್ತವನು ವರಪುರದರಸ ಚೆನ್ನಿಗರಾಯ (ನರಹ. ೨-೪೯) ; ಮಂಗಳಂ ಬೇಲೂರು ಚೆ[ಪಾಠಾಂ. ಚ]ನ್ನಿಗರಾಯ ಕೇಶವಗೆ (ಹರಿಸಾ. ೧೧೦). **ಚನ್ನಿಗರಾಯ** : ಮೇಲಿನ 'ಹರಿಸಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ ಚೆನ್ನಿಗ + ರಾಯ ]

**ಚೆನ್ನಿತು** 'ಚೆನ್ನಿತ್ತು' ನೋ.

**ಚೆನ್ನಿತ್ತು**, ಚನ್ನಿತು, ಚೆನ್ನಿತು (ಗು). ೧. ಸುಂದರವಾದ ; ರಮಣೀಯ ವಾದ : "ರಯುಃ, ರಯಣಂ, ರಯ್ಯಂ, ರಯಣೀಯಂ, ಈ ೪ ಚೆನ್ನಿತ್ತು" (ಕಾಶಕ್ಕ. ೧೧೦). **ಚನ್ನತು**: ೨. ಒಳ್ಳೆಯ ; ಚೆನ್ನಾದ : ಈ ಸುದಿನ ಚನ್ನತಾಹವವೀರರೆಂಬುದನ್ನರಿಯೆನಾ (ತುರಂಗ. ೬೩-೧೧). **ಚೆನ್ನಿತು** : ೩. ದಪ್ಪವಾದ ; ಪುಷ್ಟವಾದ : " ಮೇದಸ್–ನೆಣಂ; ಮೇದುರಂ-ಚೆನ್ನಿತು " (ಕಾಶಕ್ಕ. ೦೩೦). [ < ಚೆನ್ನು ]

**ಚೆನ್ನೀರ್** (ನಾ). ನೆತ್ತರು ; ಕೆನ್ನೀರಂ ; ರಕ್ತ : ಕರುಳುಗಳೊಕ್ಕು ಕಾಳಿಜ ಹಾಯ್ದು ನಿಡುನರ ಹಱಿದು ಚೆನ್ನೀರ್ಗಳು ಹರಿದು (ಕಂನವಿ. ೦೪-೮೭). 'ಕೆನ್ನೀರ್₁' ಪರಾ. [ ಚೆಂ₁ + ನೀರ್₁ ]

**ಚೆನ್ನು**, ಚನ್ನು (ನಾ). ೧. ಅಂದ ; ಸೊಗಸು ; ಚೆಲುವು : ಸೂಳೆಯಂತೆ ಚೆನ್ನ ಮೆಱೆಯದೆ (ಧರ್ಮಾಮೃ. ೫-೯೯) ; ಬಣ್ಣ ರೂಪವಹ ಚೆನ್ನುವ ಹರಿದಲ್ಲಿ ಅದನಲ್ಲಿಯೇ ಮಾಡಬಹುದು (ಮೋಳಮಾ. ೯೫-೩೭೬) ; ಎನಗೆ ಹೊನ್ನುಂ ನೀನೆ ಎನಗೆ ಚೆನ್ನುಂ ನೀನೆ (ಅರಿರ. ಹ. ೧೨೩-೦೪); ಉಚ್ಚಾರಣೆಗೆ ಚೆನ್ನಲ್ಲವೆಂಬುದನ್ನು ಲಕ್ಷಿಸಿಯೇ . . . ಕನ್ನಡಕ್ಕೆ ಸಹಜವೆನಿಸುವಂತೆ ಅನುಸ್ವಾರವನ್ನಾಗಿ ಇಟ್ಟುಕೊಂಡರು (ಸಂಶೋಧ. ೫೦). ೨. ಸರಿಯಾಗಿರುವಿಕೆ; ನೇರ್ಪು; ಖಂಜುತೆ : ಚೆನ್ನೇವುದೋ ಸಚ್ಚರಿತಂ ಚೆನ್ನಲ್ಲದೆ ದೇಹಿಗೆ (ಸಮಪ. ೬-೪೪) ; ಚೆನ್ನಿಂ ನಮಸ್ಕರಿಸಿ (ಪದ್ಮರಾ. ೭-೨೨). **ಚನ್ನು**: ೧. "ಚೆಲುವಿಕೆ" (ಜಾನಕೋ. ೫೫). ೩. ನೆಟ್ಟಗಿರಂವುದಂ: ನೇರವಾಗಿರುವುದು : ನಾಯ ಬಾಲ ಸೆಡೆಯಂ ಕಟ್ಟಲ್ಕೆ ಚ[ಪಾಠಾಂ. ಚೆ]ನ್ನಪ್ಪುದೆ (ಸೋಮೇಶ. ೪೭).

**ಚನ್ನಹ** = ಅಂದವಾದ ; ಚೆಲುವಾದ : ಚನ್ನಹ ಮಾಡಮಂ ಬಿನ್ನಣದಿಂದಡರ್ದು (ಹಾಲಾಸ್ಯ. ೧-೦೬-೪೭). **ಚೆನ್ನಾಗಿ, ಚನ್ನಾಗಿ** = ಸೊಗಸಾಗಿ ; ಸಂಪೂರ್ಣವಾಗಿ ; ಹದವಾಗಿ : ಚೆನ್ನಾಗಿ ತಿಳಿದು ಪಾಪಾನುರಾಗಮಂ ಪತ್ತುವಿಟ್ಟು (ಧರ್ಮಾಮೃ. ೨-೯೦) ; ಮುನ್ನ ಬೆಸಸಿದ ಸದಾಚಾರಗಳುಂ ಚೆನ್ನಾಗಳವಟ್ಟವು (ದೀಕ್ಷಾಬೋ. ೦೨೬-೮) ; ನಿನ್ನೊಡವುಟ್ಟಿದರಾದಿಯಾದವರೆಲ್ಲ ಚೆನ್ನಾಗಿರ್ದಪರೀಗ (ಅಂಜನ. ೦೦-೦೫೫) ; ನಿಮ್ಮ ಊರು ಚೆನ್ನಾಗಿದೆ (ರಾಯುಕ. ೮೦); ಜನ್ನಿಗೆಯ ಪಾಲಂ ತೆಗೆದು ಚ[ಪಾಠಾಂ. ಚೆ]ನ್ನಾಗಿ ಕಾಸಿದ ನಂತರದೊಳು (ಬಸಪು. ೦೪-೫) ; ಚ[ಪಾಠಾಂ. ಚೆ]ನ್ನಾಗಿ ನೀವನು ನಯದಿ ನೋಡಲು ರೋಗಿಯಾದವನುಂ ನಿರೋಗಿಯೆನಲ್ಕೆ ಬಾಳ್ವನಲಾ (ಬಸಪು. ೪೭-೬೫) **ಚೆನ್ನಾಗು**=ಅಂದವಾಗು; ಸೊಗಸಾಗು : ಅಯ್ಯಯ್ಯಾ ಚೆನ್ನಾದುದೆನೆ ಕನ್ನಡಿಗರು ರಯ್ಯಾ ಮಂಚಿದಿಯೆನೆ ತೆಲುಗ (ಭರತ. ೦-೭) ; ಚೆನ್ನಾದ ಕುಂಕುಮಗಾರಣೆಯಿಂದ ಸಂಪನ್ನತೆವಿಡಿದುದಾಸ್ಥಾನ (ಕಂನವಿ. ೮-೧೧). [ ದೇ.೩ ತೆಲು. ಚೆನ್ನು ]

**ಚೆನ್ನುಗೆಡು** (ಕ್ರಿ). ಅಂದಗೆಡು ; ಹಾಳಾಗು: ಕಣ್ಣಾವಗಾಲದ ಹೊಳೆಯಲ್ಲಿ ಮುಳುಗಿ ಚೆನ್ನುಗೆಟ್ಟರಯ್ಯಾ (ಮೋಳಿಮಾ. ೨೪೪-೭೯೫).

[ ಚೆನ್ನು + ಕೆಡು₁ ]

**ಚೆನ್ನುಡಿ** (ನಾ). ಒಳ್ಳೆಯ ಮಾತು ; ಸೂಕ್ತಿ : ನಿರಹಂಕಾರಕ್ಕೆ ಭಕ್ತಿಯೇ ಶೃಂಗಾರವೆಂಬ ತನ್ನ ಚೆನ್ನುಡಿಯಂತೆ ನಿರಹಂಕಾರದ ಮೂರ್ತಿಯಾಗಿ (ಶರಣ. ೪೧೮). [ ಚೆನ್ನ + ನುಡಿ₂ ]

**ಚೆನ್ನುಡೆ** (ನಾ). ಸೊಗಸಾದ ಉಡುಗೆ : ಚೆನ್ನುಡೆಯ ಹೊಂಬಣ್ಣದ ಬಿಚ್ಚುಗೂದಲ . . . ಹೆಣ್ಣಾಮಗು (ಪುನರು. ೪೪೦). [ ಚೆನ್ನ + ಉಡೆ₂ ]

**ಚೆನ್ನೆ₁**, ಚನ್ನೆ (ನಾ). ಚೆಲುವೆ ; ಸುಂದರಿ : ಚೆನ್ನೆ ಪೊನ್ನೆಯುರಲಂ ಕೊಯ್ದಳ್ (ಆದಿಪು. ೧೧-೧೦೨) ; ಪೆಱರಂ ತನ್ನಂತು ಬಗೆದು ಲೋಗರ ಚೆನ್ನೆಯರಂ ಬಯಸಲಾಗದೞವುಳ್ಳ ನರಂ (ಸಮಪ. ೫-೬೨) ; ಕಜ್ಜಳದ ಕನ್ನಡಿಯ ಚೆನ್ನೆಯರ್ವೆರಸು ಇಚ್ಚೆಗಾರ್ತಿ ನಡೆವಾಗಳ್ (ಕಬ್ಬಿಗಕಾ. ೩೨೪). **ಚನ್ನೆ** : ಚ[ಪಾಠಾಂ. ಚೆ]ನ್ನೆಯ ಕಣ್ಮಲರೊಳ್ ಕಾಡಿಗೆಯ ನೆಟ್ಟಿದಳ್ ಮತ್ತೊರ್ವಳ್ (ಪಂರಾಮಾ. ೩-೮೫) ; ಪೊಗಳ್ಗುಂ ಭೂಮಂಡಳಂ ಸಂತತಂ ಪಿರಿದುಂ ಮಾಳಲದೇವಿಯುಂ ಬಹುಕಳಾಸಂಪನ್ನೆಯುಂ ಚನ್ನೆಯುನ್ (ಕಇ. IV, ೦-೩೮; 1204); ವರಪತಿವ್ರತೆ ಚನ್ನೆಯರ ಗರುವೆನಿಸಿ ನಡೆದಳು (ಕುವ್ಯಾಳ. ಓರಿಇ. ೩೩-೨೦). [ ಚೆನ್ನ + – ಎ₂ ]

**ಚೆನ್ನೆ₂** (ನಾ).=ಚೆನ್ನಂಗಿ : ಅರಳೆಯಿಂದೆಕ್ಕೆಯಿಂ ಕಕ್ಕೆಯಿಂ . . . ಬನ್ನಿಯಿಂ ಚೆನ್ನೆಯಿಂ (ನಂದಿಮಾ. ೦೩-೦೨) ; ಎಲವಂ ಸಂಪಗೆ ಹೊನ್ನೆ ಚೆನ್ನೆ ಕವಳಂ ಕಾರಾಚಮಾಚಂ ಪುಲಿಂಗಿಲ್ (ರಾಜಶೇ. ೫-೩೬). [ < ಚೆನ್ನಂಗಿ ]

**ಚೆನ್ನೆ₃** (ನಾ). (ಕರಾ) ಎರಡು ಸಾಲುಗಳಲ್ಲಿ ಏಳೇಳು ಗುಣಿಗಳನ್ನುಳ್ಳ ಮಣೆಯ ಮೇಲೆ ಕವಡೆ ಅಥವಾ ಹುಣಸೆಬೀಜಗಳಿಂದ ಆಡುವ ಒಂದು ಬಗೆಯ ಆಟ ; ಅಟ್ಟುಗುಳಿಮಣೆ ಆಟ : ಚೆನ್ನೆಯಾಡದೆ ಶತಮಾನವೇ ಕಳೆದುಹೋದಂತಿತ್ತು ನನಗೆ (ಪಳಮು. ೧೨); ಗೊಂಬೆಮದುವೆಯನ್ನೊಮ್ಮೆ ಮಾಡಿ, ಚೆನ್ನೆಯಕ್ಕಡಿಯೊಮ್ಮೆ ಹೂಡಿ (ಗಿಳಿವಿಂ. ೬೧-೧೪).

[ ←ತುಳು. ಚೆನ್ನೆ ]

**ಚೆನ್ನೆಕಾಯಿ** (ನಾ). ಚೆನ್ನೆ ಆಟದಲ್ಲಿ ಬಳಸುವ ಬೀಜ,-ಕಾಯಿ : ಚೆನ್ನೆ ಕಾಯಿಗಳು ನನ್ನ ಕೈಯಿಂದ ಮೆಲ್ಲಮೆಲ್ಲನೆ ನಡುಗಿ ನಡುಗಿ ಚೆನೆಗುಳಿಗೆ ಬೀಳುತ್ತಿದ್ದುವು (ಶಳಮು. ೧೨). [ ಚೆನ್ನೆ$_3$ + ಕಾಯಿ$_4$ (<ಕಾಯ್$_4$) ]

**ಚೆನ್ನೆಗ್ಗಿಲು,** ಚನ್ನೆಗ್ಗಿಲು (ನಾ). ಕೆಂಪು ನೆಗ್ಗಿಲುಗಿಡ ; ಕೆನ್ನೆಗ್ಗಿಲು : "ಕಪಿಪಿಪ್ಪಲಿ-ಚೆನ್ನೆಗ್ಗಿಲು, ಗಜಗಿಪ್ಪಲಿ" (ಓಷಧಿ. ೨೭) ; ಬಿಳಿಕೊಮ್ಮೆ ಬೇರನೂ ಚೆನ್ನೆಗ್ಗಿಲ ಬೇರನೂ ನೀರಲ್ಲಿ ಅರೆದು ಮುಖಕ್ಕೆ ಲೇಪಿಸಲು ಸ್ತ್ರೀಯರುಗಳ ಮುಖದ ಕರಿಬಂಗು ಶಮನವಹುದು (ವೈದ್ಯಸಾ. II, ೧೯೭). **ಚೆನ್ನೆಗ್ಗಿಲು :** ಕಡವದ ಬೇರು, ಚನ್ನೆಗ್ಗಿಲು, ಹಿಟ್ಟುಳುಕನ ಬೇರು ಇವಂ ಹಸುವಿನ ಹಾಲೊಳರೆದು . . . ಕೊಳ್ಳಲು ಕಲ್ಲುಕಟ್ಟು ಮೂತ್ರಕೃಚ್ಛ್ರ ಸಹ ಮಾಣ್ಗುಂ (ಸಕವ್ಯ. ೩೭೯). [ ಚೆಂ$_1$ + ನೆಗ್ಗಿಲು (<ನೆಗ್ಗಿಲ್) ]

**ಚೆನ್ನೆನಪು** (ನಾ). ಸರಿಯಾದ ನೆನಪು : (+). [ ಚೆನ್ನ + ನೆನಪು ]

**ಚೆನ್ನೆಮಣೆ,** ಚನ್ನೆಮಣೆ (ನಾ). (ಕರಾ) ಚೆನ್ನೆ ಆಟವಾಡುವ ಮಣೆ ; ಅಟ್ಟುಗುಳಿಮಣೆ : ಆ ಚೆನ್ನೆಮಣೆ ಇಲ್ಲಿ ತಾ (ಶಳಮು. ೧೨). **ಚೆನ್ನೆಮಣೆ:** ಚನ್ನೆಮಣೆಗೆ ಹಾಲುವಾಣದ ಕಾಳು, ಪೆಟ್ಟಿಗೆ ಗಜ ಒದಗಿಸುತ್ತಿದ್ದವರು ರಾಗಜ್ಜ (ಪ್ರಕೃ. ೮೭). [ ಚೆನ್ನೆ$_3$ + ಮಣೆ ]

**ಚೆನ್ನೆಯ್ದಿಲ್, ಚನ್ನೆಯ್ದಿಲ್, ಚನ್ನೈದಿಲು, ಚೆನ್ನೈದಿಲ್, ಚೆನ್ನೈದಿಲೆ** (ನಾ). ಕೆಂಪು ನೈದಿಲೆ ; ರಕ್ತೋತ್ಪಲ : "ಸೌಗಂಧಿಕಂ, ಕಲ್ಹಾರಂ-ಈ ೨ ಚೆನ್ನೆಯ್ದಿಲ್"(ಹಲಾಯು.೧೧೨-೫೯); ಅಲರ್ದ ಚೆನ್ನೆಯ್ದಿಲ್ಗಳೊಳ್ಗಂಪಿನಿಂಪನಲಂಪಿಂ ತೆಗೆದೊಟ್ಟಿಕೊಂಡು . . . ತೀಡಿತ್ತೊಂದು ಮಂದಾನಿಲಂ (ಕಾದಂಬ. ೬೨೮). **ಚೆನ್ನೆಯ್ದಿಲ್ :** "ಆವಲೆಂದುಂ ಚಂಗಲವೆಯೆಂದುಂ ಚ[ಪಾಠಾಂ. ಚೆ]ನ್ನೆಯ್ದಿಲ್" (ಶಶಸಾ. ೯-೧೬೭). **ಚನ್ನೈದಿಲು :** ಒಂದು ಹೂ ಮಂದಾರವುತ್ಪಲ ಒಂದು ಚನ್ನೈದಿಲು [ಪಾಠಾಂ. ಚೆನ್ನೆಯ್ದಿಲು] ಬಕುಳ ವೊಂದೊಂದು ಅರವಿಂದ (ಬಸಪು. ೧೯-೬೫).**ಚೆನ್ನೈದಿಲ್ :** ಚೆನ್ನೈದಿಲ ಕಂಪ ನೆಯ್ದಿಲಾರ್ವುವೆ ಪೂಗಳ್ (ಅದಿಪು. ೧೧-೦೨೩); ಕೆಲರಂಭೋರುಹದಿಂ ಕೆಲರ್ ಸುರಗಿಯಿಂ ಚೆನ್ನೈದಿಲಿಂದಂ ಕೆಲರ್ . . . ಪೂಜಿಸಿ(ಧರ್ಮಾಮೃ. ೫-೨೩೨) ; ಚೆನ್ನೈದಿಲಲರ ಮಾಲೆ (ಲೀವಡ. ೯೮-೪೩). **ಚೆನ್ನೈದಿಲೆ :** "ಚೆನ್ನೈದಿಲೆಯು ಚೆಂಗಲವೆಯುಮದೆನ್ನಲ್ ಸಲೆ ರಕ್ತೋತ್ಪಲಮಕ್ಕುಂ" (ಕವಿಕಂ. ೯೫). 'ಕೆನ್ನೆಯ್ದಿಲ್' ಪರಾ. [ ಚೆಂ$_1$ + ನೆಯ್ದಿಲ್ ]

**ಚೆನ್ನೆಯ್ದಿಲ್ಗೊಳ,** ಚೆನ್ನೈದಿಲ್ಗೊಳ (ನಾ). ಕೆಂಪುನೈದಿಲೆಗಳನ್ನುಳ್ಳ ಕೊಳ : ಅಲರ್ದಂಭೋರುಹಷಂಡಮುಳ್ಳಲರ್ದ ಚೆನ್ನೆಯ್ದಿಲ್ಗೊಳಂ(ಆದಿಪು. ೦-೬೭). **ಚೆನ್ನೈದಿಲ್ಗೊಳ :** ಚೆನ್ನೈದಿಲ್ಗೊಳದವೊಲಾಯ್ತು ಸಂಜೆಗೆಂಪಿನಿಂ ಗಗನತಳರ (ಕಾದಂಪೂ. ೫೦೦). [ ಚೆನ್ನೆಯ್ದಿಲ್ + ಕೊಳ$_2$ ]

**ಚೆನ್ನೇಸಱ್, ಚೆನ್ನೇಸಱು** (ನಾ). ಕೆಂಪು ಬಣ್ಣದ ಸೂರ್ಯ : ಚೆನ್ನೇಸಱ ಬಿಂಬಂ ಬಿಸುಪನುಳಿದು ಭೂವಿಮಾತಳಕಂಬರದಿಂದಿಳಿತರ್ಪಂದದಿಂ (ಜಯುಕಾ. ೩-೬೭). **ಚೆನ್ನೇಸಱು :** ಚೆನ್ನೇಸಱು ಮೂಡಗಡೆ ಬೆಳೆವಂದದಿ ಸನ್ನುತ [ತಿ]ವೆತ್ತು ಬೆಳೆದನು (ನೇಮಿಸಂ. ೫-೧೧೨). [ ಚೆಂ$_1$ + ನೇಸಱ್ ]

**ಚೆನ್ನೇಸಱು** 'ಚೆನ್ನೇಸಱ್' ನೋ.

**ಚೆನ್ನೈದಿಲ್** 'ಚೆನ್ನೆಯ್ದಿಲ್' ನೋ.

**ಚೆನ್ನೈದಿಲೆ** 'ಚೆನ್ನೆಯ್ದಿಲ್' ನೋ.

**ಚೆನ್ನೈದಿಲ್ಗೊಳ** 'ಚೆನ್ನೆಯ್ದಿಲ್ಗೊಳ' ನೋ.

**ಚೆನ್ನೊಪ್ಪು** (ಕ್ರಿ). ಚೆನ್ನಾಗಿ ಶೋಭಿಸು : ತಿರೆಯುಂ ಮುಟಿಬೆಳೆಗಳಿಂ ಚೆನ್ನೊಪ್ಪಿ ಬಜಗಾಲವಂ ಕಾಣದಾಯ್ತು (ಅದ್ಭುತ. ೭-೨೧).
[ ಚೆನ್ನ + ಒಪ್ಪು$_1$ ]

**ಚೆನ್ನೌಡಲ** (ನಾ). ಒಂದುಂ ಬಗೆಯ ಔಡಲ; ಕೆಂಪು ಹರಳಿನ ಗಿಡ : "ಉತ್ತಾನ(ಪತ)ಪತ್ರ — ಹೇರೌಡಲ, ಚೆನ್ನೌಡಲ" (ಓಷಧಿ. ೧೭).
ಚೆಂ$_1$ + ಔಡಲ (<ಅವುಡಲ) ]

**ಚೆಪ್ಪಗೊಡಲಿ** 'ಚಪ್ಪಗೊಡಲಿ' ನೋ.

**ಚೆಪ್ಪರಿ** 'ಚಪ್ಪರಿ' ನೋ.

**ಚೆಪ್ಪಲಿ** 'ಚಪ್ಪಲಿ' ನೋ.

**ಚೆಪ್ಪಾಳೆ** 'ಚಪ್ಪಳೆ' ನೋ.

**ಚೆಪ್ಪು** 'ಚೇಪು$_3$' ನೋ.

**ಚೆಪ್ಪೆ** 'ಚಪ್ಪೆ$_1$' ನೋ.

**ಚೆಪ್ಪೆಜಾಡ್ಯ** 'ಚಪ್ಪೆಜಾಡ್ಯ' ನೋ.

**ಚೆಪ್ಪೆವಡೆ** (ಕ್ರಿ). ಚಪ್ಪಟೆಯಾಗು : ಪೊಡವಿಯು ಪೊತ್ತ ಫಣೀಂದ್ರನ ತಲೆ ಚೆಪ್ಪೆವಡೆದುದು (ನೇಮಿಸಂ. ೨೭-೧೦೫). [ ಚೆಪ್ಪೆ (<ಚಪ್ಪೆ$_1$) + ಪಡೆ$_1$ ]

**ಚೆಪ್ಪೋಡು** 'ಚಪ್ಪೋಡು' ನೋ.

**ಚೆಬ್ಬೆ** 'ಸಬ್ಬೆ' ನೋ.

**ಚೆಮ್ಮ** 'ಚಮ್ಮ' ನೋ.

**ಚೆಮ್ಮಣಿ** (ನಾ). ಕೆಂಪು ರತ್ನ ; ಮಾಣಿಕ್ಯ ; ಪದ್ಮರಾಗ : ಕಡಲೊಡೆಯನು ನಿಟ್ಟಿಪ ಚೆಮ್ಮಣಿಗಯ್ಯ ಪಿ[ಪಾಠಾಂ. ಚೆನ್ನಮಣಿಗನ್ನ, ಚನ್ನಮಣಿಗ್ಗೆಪಿ]ಡಿಯೆನೆ . . . ಪಗಲಾಣ್ಮನೆಸದನು (ಸೊಬಗಿನ. ೯-೭).
[ ಚೆಂ$_1$ + ಮಣಿ$_3$ ]

**ಚೆಮ್ಮಣಿಗೆ** 'ಚವಮ್ಮಾಳಿಗೆ' ನೋ.

**ಚೆಮ್ಮಣಿವಟ್ಟು,** ಚಮ್ಮಣಿವಟ್ಟು (ನಾ). ೧. ಬೈತಲೆಯ ಮಣಿ (?) : ಭಳಿರೆ ಜಡ ಜಾರಜಂಗುಳಿಯ ನಟ್ಟ ನಡುವಲೆಗಿಟ್ಟ ಚೆಮ್ಮಣಿವಟ್ಟೆ ಮುಟ್ಟದಿರೆನಲು ಬೆಜ್ಜರವಟ್ಟು ನಿಟ್ಟಿಸುತ್ತಿರಲು ತದ್ವಿಹಗಾಂಗನೆಯು ಮುಗುಳೆ (ಮದೀಪು. ೬-೦೫). **ಚಮ್ಮಣಿವಟ್ಟು :** ೨. ಕುಂಕುಮದ ಬಟ್ಟು; ಕೆಂಪು ತಿಲಕ: ಕಮಳದಳನೇತ್ರೆ ಕಲಧೌತಗಾತ್ರೆ ರಮಣಿಯರ ನುಣ್ಗೊಸಲ್ಗ ಮರ್ದ ಚಮ್ಮಣಿವಟ್ಟೆ ಕುಮತಿಯೆಂದಿಟ್ಟಸದಿರೆನ್ನನೆಂದ (ಮದೀಪು. ೮-೦೩).
[ ಚೆಮ್ಮಣಿ + ಬಟ್ಟು$_1$ (<ಬಟ್ಟ$_1$) ]

**ಚೆಮ್ಮಾವುಗೆ** 'ಚವಮ್ಮಾವುಗೆ' ನೋ.

**ಚೆಮ್ಮಾಳಿಗೆ** (ನಾ). ಚಂದವಾದ ಮಾಳಿಗೆ: ಹಣ್ಣಡಿಕ್ಕಾಸುಮುಂಚ ಕುಶಲದ ತಲೆಗಿಂಬು ಚೆಮ್ಮಾಳಿಗೆಗೊಳಗೆ ತೆನೆಯಾದ ರಾಜನವ ನಿಮ್ಮ ರಾಯರು ಬಿತ್ತಿ ಬೆಳೆದರು (ನಾಪದ. ೭೫). [ ಚೆಂ$_2$ + ಮಾಳಿಗೆ ]

**ಚೆಮ್ಮುಗು** (ನಾ). (ಗಿಳಿಯ) ಕೆಂಪಾದ ಮೂಗು,-ಕೊಕ್ಕು : ದಾಳಿಂಬದೊಳ್ವಣ್ಣನೊಡೆದು ಚೆಮ್ಮೂಗಿಟ್ಟು ಹೇಟುಲಳವಡದ ಸಲ್ಲೀಲೆಯೊಳಗಳ ವಟ್ಟು (ಉದ್ಭಟ. ೩-೯೫). [ ಚೆಂ$_1$ + ಮೂಗು$_1$ ]

**ಚೆಮ್ಮೊಗ** (ನಾ). ಕೆಂಪಾದ ಮುಖ : ಏದುತ್ತೇದುತ್ತ ಸೇದೆನೀರಲ್ಲಿ ಮಿಂದ ಚೆಮ್ಮೊಗವನ್ನು ಚೇಲಾಂಚಲದಿಂದ ತೊಡೆದುಕೊಂಡು (ಮಂತ್ರಶ. ೬೯-೦೫).
[ ಚೆಂ$_1$ + ಮೊಗ ]

**ಚೆಯ್$_1$** 'ಚಯ್$_2$' ನೋ.

**ಚೆಯ್$_2$** 'ಸಯ್$_2$' ನೋ.

**ಚೆಯಿಪಲ್ಲ** (ನಾ). ಒಂದುಂ ಮನೆತನದ ಹೆಸರುಂ (?) : ಸುಸೌಖ್ಯಸಂಗಮಂ ಕೋಮಳಗಾತ್ರ ತಮ್ಮ ಮಲ್ಲಿರಾಯನು ಸ್ವರ್ಗಮನೆಯ್ದೆ ಚೆಯಿಪಲ್ಲದಾಮದೀಪಂ ಮದಶೋವಿಭ[ತಮ್ಮಂ]ಮನೆ ಸಂಪರಿಸಿದು(ಕಇ. I, ೩೮-೯; 1408).
[ ? ]

**ಚೆಯ್ಗುಡು,** ಚೈಗುಡು (ಕ್ರಿ). ಲಲ್ಲೆಯಾಡು ; ಮುದ್ದಾಡು ; ಪಡೆಯದ ಬಕರ್ಮಮೋ ಸುತನ ವಕ್ತ್ರಮನೀಕ್ಷಿಪ ಲಲ್ಲೆಗೆಯ್ದು ನಣ್ಪಿಡಿದನುರಾಗದಿಂ ನಗಿಸುವಳ್ಕಟಿಗೊಳೊಪ್ಪುವ ನೆತ್ತಿಯೊಡ್ಡಿ ಚೆಯ್ಗು[ಪಾಠಾಂ. ಚೈಗು]ಡುವ . . . ಸೈವು ಸರೋರುಹೇಕ್ಷಣೆ (ವೃಷಪಿ. ೨-೩೩). **ಚೈಗುಡು :** ಚೈಗುಡುವ ಪೆಣ್ಮಣಿಯ ಸೈಪಿಂಗೆ ತಿಳಿವಡೆಕೆಯುಂಟೆ (ಕಿರೀಟೆ. ೨-೨೮).
[ ಚೆಯ್$_1$ (<ಚಯ್$_2$) + ಕುಡು$_1$ (<ಕೊಡು$_1$) ]

**ಚೆಯ್ಮುಂಡಾಡು**, ಚೈಮುಂಡಾಡು (ಕ್ರಿ). ಮುದ್ದಾಡು ; ಲಲ್ಲೆಯಾಡು: (ಕ). **ಚೈಮುಂಡಾಡು**: ತೆಗೆದು ತಕ್ಕೈಸಿ ಬೋಳೈಸಿ ಚೈಮುಂಡಾಡಿ ಒಗುಮಿಗೆಯ ಸುಖಸುಧಾನಂದದೊಳಗೋಲಾಡಿ (ದೀಕ್ಷಾಬೋ. ೧೪೪-೬) ; ದಾ ಎನುತ ಚೈಮುಂಡಾಡಿ [ಪಾಠಾಂ. ಕೈಮುದ್ದಾಡಿ] ಮುಂದಲೆ ವಿಡಿದು ಕುಣಿಕುಣಿದಾಡಿ ಸೌಖ್ಯವನೀಯುತಿರ್ದಳು ಮಾಯೆ ಮೋಹಿನಿಗೆ (ಪ್ರಭುಲೀ. ೩-೨೯) ; ಒಸೆದು ಚೈಮುಂಡಾಡುತಾಲಿಂಗಿಸಿದಳನುರಾಗ ಪ್ರಪಂಚದ ಕೊಸಬೆಕೆಯ ಕಳವಳದ ಮ್ಮೈಮುಟಿವೆಯಲಿ ಮಸ್ತಕವ (ತೊರರಾ. ೬-೧೨-೩೦). [ ಚೆಯ್$_1$ (<ಚಯ್$_2$) + ಮುಂಡಾಡು ]

**ಚೆಯ್ಯಾಕ** (ನಾ). ಒಂದು ಬಗೆಯ ತಾಳವಾದ್ಯ : ಚೆಯ್ಯಾಕಗಳು ಚೆಳ್, ಚೆಯ್ ಎಂದು ಕುಟ್ಟುತ್ತಿರುವುವು (ಕನ್ನಜಾ. ೧೪). [ ? ]

**ಚೆಯ್ಯಾಟ** 'ಚಯ್ಯಾಟ' ನೋ.

**ಚೆಯ್ಯಾಡು** 'ಚಯ್ಯಾಡು' ನೋ.

**ಚೆರಗ** 'ಚರುಗ' ನೋ.

**ಚೆರವು** 'ಸೆಱವು' ನೋ.

**ಚೆರಿಗೆ** 'ಚರಿಗೆ$_1$' ನೋ.

**ಚೆರೆ** 'ಚರೆ' ನೋ.

**ಚೆರೆಮದ್ದು** (ನಾ). ಸಿಡಿಮದ್ದು ; ಚರೆ : ಅದರಲ್ಲಿ ತುಂಬಿಸುವುದು ಮಾತ್ರ ಚೆರೆಮದ್ದು (ಬಟ್ಟಜೀ. ೩೮). [ ಚೆರೆ (<ಚರೆ) + ಮದ್ದು$_1$ (<ಮರ್ದು) ]

**ಚೆಲ್**, ಚೆಲು (ಗು). ಚೆಲುವಾದ ; ಸುಂದರವಾದ. 'ಚೆಲ್ಗದಿರ್', 'ಚೆಲ್ವಡೆ' ಪರಾ. **ಚೆಲು**: ಹುಣ್ಣಿಮೆಯ ಶಶಿಯಂತೆ ಚೆಲು ಚೆಲುವೆಣ್ಣುಗಳು ಸಹ ಬಂದನೆಂದೀಕ್ಷಿಸಿತು ಪುರಜನವು (ಸಾಳ್ವಭಾ. ೧೮-೯೬). 'ಚೆಲುಕಾಂತಿ' ಪರಾ. [ <ಚೆಲ್ವು$_1$ ]

**ಚೆಲಂಕು** 'ಚಲಂಕು' ನೋ.

**ಚೆಲಂಗು** 'ಚಲಂಕು' ನೋ.

**ಚೆಲದಿ** 'ಸೆಲಂದಿ' ನೋ.

**ಚೆಲಪಿಳೆರಾಯ** 'ಚೆಲ್ವಪಿಳ್ಳೆರಾಯ' ನೋ.

**ಚೆಲಬಾಗೆ** (ನಾ). ಒಂದು ಬಗೆಯ ಗಿಡ: ಚೆಲಬಾಗೆ, ಚೇಲ, ಎಲೆಸುಜ್ಜಲ ಬಾಗೆ (ಮೃಶಿಗಿ. ೪-೬೩). [ ? ]

**ಚೆಲವೆ** 'ಚಲುವೆ$_2$' ನೋ.

**ಚೆಲು** 'ಚೆಲ್' ನೋ.

**ಚೆಲುಕಾಂತಿ** (ನಾ). ಅಂದವಾದ ಕಾಂತಿ,–ಶೋಭೆ : ಕಣ್ಣದಿರಿನ ಚೆಲು ಕಾಂತಿ ಚೆಲ್ಲುವ ಸೆರೆಗಣ್ಣು (ನಿಮ್ಮಧ್ಯ. ೩). [ ಚೆಲು(<ಚೆಲ್) + ಕಾಂತಿ ]

**ಚೆಲುಗಬ್ಬ** (ನಾ). ಸುಂದರವಾದ ಕಾವ್ಯ : 'ಕಾಲೂರ ಚೆಲುವೆ' ಒಂದು ಚೆಲುಗಬ್ಬ (ಕಾಲೂರ. ೧೧ ಹರಳ). [ ಚೆಲು (<ಚೆಲ್) + ಕಬ್ಬ$_1$ ]

**ಚೆಲುಬಿಸಿಲು** (ನಾ). ಅಂದವಾದ ಬಿಸಿಲು : ಬಂಗಾರದ ಚೆಲುಬಿಸಿಲ ಕಿರೀಟದ ಶೃಂಗಾರದ ತಲೆ ಎತ್ತುವನು (ಕಎಪು. ೫-೩).

[ ಚೆಲು (<ಚೆಲ್) + ಬಿಸಿಲು (<ಬಿಸಿಲ್) ]

**ಚೆಲುವ$_1$** 'ಚೆಲ್ವ' ನೋ.

**ಚೆಲುವ$_2$** (ನಾ). ಒಂದು ಬಗೆಯ ಪಕ್ಷಿ: ಹಲುಬುವ ಗೌಜು ಕರ್ಕಟ ಕಪ್ಪುರಸೆಟ್ಟಿ ಚೆಲುವ ಬೆಳವ ಕುಕ್ಕುಟಿಗ (ಮೋಹತ. ೬-೧೬). 'ಸಾಳುವ' ಪರಾ. [ ? ]

**ಚೆಲುವಳಿ**, ಚಲುವಳಿ (ಕ್ರಿ). ಅಂದಗೆಡು ; ವಿಕಾರವಾಗು : ಹೊರಟು ಪಾಂಡ್ಯನ ಚೆ [ಪಾಠಾಂ. ಚ]ಲುವಳಿದು ನೆಟ ಹೊರಟು ನೆಲೆಗೊಂಡಿದ್ದ ಬೆನ್ನಿನ ಹೊರಟು ಹೋಗಲು ಮಿಥ್ಯೆಯಾಯಿತು (ಬಸಪು. ೫೦-೩೦). **ಚಲುವಳಿ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ ಚೆಲುವು (<ಚೆಲ್ವು$_1$) + ಅಳಿ$_1$ (<ಅೞಿ$_1$) ]

**ಚೆಲುವಾನ್**, ಚಲುವಾನ್ (ಕ್ರಿ). ಚೆಲುವನ್ನು ಹೊಂದು ; ಅಂದವನ್ನು ಪಡೆ: ಚೆಲುವಾಂತ ರಾಜಮಂದಿರಗಳೆಸೆದಿಹ ಕೇರಿಯಲಿ ಮೆಲ್ಲನೈತಂದು (ವಂಕಾರಾ. ೩-೩-೩೩). **ಚಲುವಾನ್**: ಮೋಹನದೆ ಇರ್ಪುದು ಕರ್ನಾಟಕ ರಾಜ್ಯ ಚಲುವಾಂತುಪೊಪ್ಪುವ ಸಕಲ ಸಂಭ್ರಮದೆ (ಕಂನವಿ. ೨-೧೦).

[ ಚೆಲುವು (<ಚೆಲ್ವು$_1$) + ಆನ್$_1$ ]

**ಚೆಲುವಿಕೆ** 'ಚೆಲ್ವಿಕೆ' ನೋ.

**ಚೆಲುವು** 'ಚೆಲ್ವು$_1$' ನೋ.

**ಚೆಲುವುತನ** (ನಾ). ಅಂದಗಾರಿಕೆ ; ಸೊಗಸುತನ ; ಚೆಲ್ವಿಕೆ : ಚೆಲುವುತನವಿರ್ದೊಡೇನು ಬೆಲೆವೆಣ್ಗೆ (ರೇವಣ. ೬೬-೨೩). 'ಚೆಲ್ವತನ' ಪರಾ. [ ಚೆಲುವು (<ಚೆಲ್ವು$_1$) + –ತನ ]

**ಚೆಲುವೆ$_1$** 'ಚೆಲ್ವೆ' ನೋ.

**ಚೆಲುವೆ$_2$** 'ಚಲುವೆ$_2$' ನೋ.

**ಚೆಲುವೆಣ್ಣು** (ನಾ). ಸುಂದರಿ ; ಚೆಲುವೆ : ಅಣ್ಣಾವಳಿಯುದೆ ಬಣ್ಣಗುಂದದೆ ಹುಣ್ಣಿಮೆಯ ಶಶಿಯಂತೆ ಚೆಲು ಚೆಲುವೆಣ್ಣುಗಳು ಸಹ ಬಂದನೆಂದೀಕ್ಷಿಸಿತು ಪುರಜನವು (ಸಾಳ್ವಭಾ. ೧೮-೯೬).

[ ಚೆಲು (<ಚೆಲ್) + ಪೆಣ್ಣು (<ಪೆಣ್) ]

**ಚೆಲ್ಗದಿರ್** (ನಾ). ಸುಂದರವಾದ ತೆನೆ : ಉಬ್ಬಿದೊಡಲೇಂ ಪೊಲಂ ಚೆಲ್ಗದಿರ್ ಪಾಲ್ ಪಡೆದು ತುಂಬಿ ಬೆಳೆದಿದೆ (ಕಾಲೂರ. ೪೧-೫೦).

[ ಚೆಲ್ + ಕದಿರ್$_1$ ]

**ಚೆಲ್ನಡೆ** (ನಾ). (?): ಸೋರ್ಮುಡಿ ಪದಿರ್ಮುಡಿ ಸೋಗೆಗೆ ಪುರ್ವು ಕೊರ್ವು ಚೆಲ್ನಡೆಗೆ ನಖಂ ಮುಖಂ ಪಕಿಗೆ ತೋಳ್ ಕರವಾಳ್ ಮದನಂಗೆ ಕಾಂತೆಯಾ (ಪುಷ್ಪಪು. ೯-೪೩). [P ಇದು 'ಬಿಲ್ಲೆಡೆ' ಎಂಬುದರ ಅಪ ಲಿಖಿತವಿರಬಹುದು.] [ ಚೆಲ್ + ನಡೆ$_2$ ]

**ಚೆಲ್ಲ$_1$** 'ಚಲ್ಲ$_1$' ನೋ.

**ಚೆಲ್ಲ$_2$** 'ಸೆಳ್ಳ' ನೋ.

**ಚೆಲ್ಲಂಗೆಯ್** (ಕ್ರಿ). ಸರಸವಾಡು ; ವಿನೋದವಮಾಡು : ಕಳಮಾಳಿ ಯೆಸೆದುವಲ್ಲಲ್ಲಿ ಚೆಲ್ಲಂಗೆಯ್ವುತುಂ ಕಾಯ್ದು ವಲ್ಲವಿಯರಿಂ (ಪದ್ಮರಾ. ೮-೧೪). [ ಚೆಲ್ಲ$_1$ (<ಚಲ್ಲ$_1$) + ಕೆಯ್$_1$ ]

**ಚೆಲ್ಲಂದೋಱು** (ಕ್ರಿ). ವಿನೋದವನ್ನು ತೋರು ; ಸರಸವಾಡು : ಇಲ್ಲಿ ಪಲವುಂ ಚೆಲ್ಲಂದೋಱುವೆಂ ನಿಲ್ಲಿಂ (ಚಕವಿ. ೬-೦೩೩ ವ).

[ ಚೆಲ್ಲ$_1$ (<ಚಲ್ಲ$_1$) + ತೋಱು ]

**ಚೆಲ್ಲಂಬೇಡು** (ಕ್ರಿ). ವಿಲಾಸವನ್ನು ಬೇರು ; ಒಯ್ಯಾರ ಮಾಡು : ಚೆಲ್ಲಂಬೇಡುವಪೊಲಿರ್ದುವವಯವವನಿತುಂ (ಧರ್ಮಾಮೃ. ೧೩-೦೦೨).

[ ಚೆಲ್ಲ$_1$ (<ಚಲ್ಲ$_1$) + ಬೇಡು ]

**ಚೆಲ್ಲಂಬೆರಸು** 'ಚಲ್ಲಂಬೆರಸು' ನೋ.

**ಚೆಲ್ಲಕಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲಕೇತನ** (ನಾ). ಒಂದು ಬಿರುದು: ವಿಜಯಲಕ್ಷ್ಮೀನಿವಾಸಿತ ಚೆಲ್ಲಕೇತನ ಶ್ರೀಮತ್ ಬಂಕೆಯರಸ (ಕಇ. I, ೦೫-೫ ; ?). 'ಚಲ್ಲಧ್ವಜ' ಪರಾ.

[ ಚೆಲ್ಲ$_0$ + ಕೇತನ ]

**ಚೆಲ್ಲಗಣ್** 'ಚಲ್ಲಗಣ್' ನೋ.

**ಚೆಲ್ಲಗಣ್ಪೊಣರ್** (ನಾ). ವಿಲಾಸವನ್ನು ಬೀರುವ ಕಣ್ಣುಗಳ ಜೊತೆ : ತನ್ನಯ ಚೆಲ್ಲಗಣ್ಪೊಣರ ಲೀಲೆಯನೇೞ್ಪ ಬಾಳೆಮೀನ್ಗಳಂ (ಪುಷ್ಪಪು. ೯-೯೯). [ ಚೆಲ್ಲಗಣ್ (<ಚಲ್ಲಗಣ್) + ಪೊಣರ್$_2$ ]

**ಚೆಲ್ಲಗಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲಗಾರ್ತಿ** 'ಚಲ್ಲಗಾರ್ತಿ' ನೋ.

**ಚೆಲ್ಲಣ** 'ಚಲ್ಲಣ' ನೋ.

**ಚೆಲ್ಲನೆ** (ಅ). ಶೀಘ್ರವಾಗಿ ; ಕೂಡಲೆ: ನೆಲ್ಲಿ ಬೆಳುಹೂಲಿಗಳ ಬೇರಿಲ್ಲಣ ಮುಳುಗೊಗ್ಗಿಯೆಂಬಿನಿತ್ತಱ ಪುಡಿಯಂ ಚೆಲ್ಲನೆ ಮೂಗಿನೊಳೂಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ(ಖಮದ. ೭-೫೩). [ಚೆಲ್$_0$ + – ಅನೆ$_1$]

**ಚೆಲ್ಲಪಯ್ಯ** (ನಾ). ಒಬ್ಬಾತನ ಹೆಸರು : ಇವರುಭಯ ಸನ್ಮಥದೊಳ್ ಬರದೊಂ ಚೆಲ್ಲಪಯ್ಯಂ (ಎಕ. XI, ಹೊಳಲ್ಕೆ. ೩೦-೦೫ ; 964).

[ ಚೆಲ್ಲಪ$_0$ + ಅಯ್ಯ$_1$ ]

**ಚೆಲ್ಲಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚೆಲ್ಲವತ್ತ** 'ಚಲ್ಲವತ್ತ' ನೋ.

**ಚೆಲ್ಲವಾಡು** 'ಚಲ್ಲವಾಡು' ನೋ.

**ಚೆಲ್ಲವೆರು** (ಕ್ರಿ). ವಿಲಾಸವನ್ನು ಪಡೆ ; ಸರಸದಿಂದ ಕೂಡಿರು : ಚೆಲ್ಲವೆತ್ತೊರೆ ರೆನೋಟಕ್ಕೆಡೆಯಾಗೇಕಾಂತಮಂ ಪೇಳ್ವವೊಲಿ ಜಿನುಗುತಿರ್ದಪ್ಪೆ ಕರ್ಣಾಂತರದೊಳ್ (ಶಾಕುಂತ. ೧೧-೨೪).

[ ಚೆಲ್ಲ$_1$ (<ಚಲ್ಲ$_1$) + ಪೆರು (<ಪೆಱು$_1$) ]

**ಚೆಲ್ಲವೊತ್ತ** 'ಚಲ್ಲವತ್ತ' ನೋ.

**ಚೆಲ್ಲಾಟ$_1$** 'ಚಲ್ಲಾಟ$_1$' ನೋ.

**ಚೆಲ್ಲಾಟ$_2$** 'ಚಲ್ಲಾಟ$_2$' ನೋ.

**ಚೆಲ್ಲಾಡಿಸು** (ಕ್ರಿ). ಚದರಿಸು : ಇರಲಿ ನೋಡುವೆ, ಚೆಂಗಾಳ್ವರನ್ನು ಚೆಲ್ಲಾಡಿಸುತ್ತೇನೆ ಎಂದರು (ಚೆಂಗಾಳ್ವ. ೨೫).

[ ಚೆಲ್ಲಾಡು$_1$ (<ಚಲ್ಲಾಡು$_1$) + – ಇಸು$_3$ ]

**ಚೆಲ್ಲಾಡು$_1$** 'ಚಲ್ಲಾಡು$_1$' ನೋ.

**ಚೆಲ್ಲಾಡು$_2$** 'ಚಲ್ಲವಾಡು' ನೋ.

**ಚೆಲ್ಲಾಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚೆಲ್ಲಿ** 'ಚೆಲ್ಲಿ$_3$' ನೋ.

**ಚೆಲ್ಲಿಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚೆಲ್ಲಿಸು$_1$** 'ಚಲ್ಲಿಸು$_1$' ನೋ.

**ಚೆಲ್ಲಿಸು$_2$** 'ಚಲ್ಲಿಸು$_2$' ನೋ.

**ಚೆಲ್ಲು$_1$** 'ಚಲ್ಲು$_1$' ನೋ.

**ಚೆಲ್ಲು$_2$** 'ಚಲ್ಲ$_1$' ನೋ.

**ಚೆಲ್ಲುತನ** 'ಚಲ್ಲುತನ' ನೋ.

**ಚೆಲ್ಲುಮಲ್ಲಿ**(ನಾ). ಗಾಂಭೀರ್ಯವಿಲ್ಲದವಳು ; ಚೆಲ್ಲಗಾತಿ : ಈ ಹುಡುಗಿ ಶುದ್ಧ ಚೆಲ್ಲುಮಲ್ಲಿ (ನಂದನ. ೭೦). [ ಚೆಲ್ಲು$_2$ (<ಚಲ್ಲ$_1$) + ಮಲ್ಲಿ ]

**ಚೆಲ್ಲೆ, ಚಲ್ಲೆ$_1$** (ನಾ). ೧. ಉದ್ದ ; ನೀಳ; ದೀರ್ಘತೆ: "ಚೆ[ಪಾಠಾಂ. ಚ]ಲ್ಲೆ ಯನೆ ನಿಡಿದು" (ಶಬ್ದಮಂ. ೫೦). (ಗು). ೨. ಉದ್ದವಾದ ; ದೀರ್ಘವಾದ. 'ಚೆಲ್ಲೆಗಣ್' ಪರಾ. ಚಲ್ಲೆ$_1$: ೧. "ಚಲ್ಲೆಯನೆ ನಿಡಿದು" (ಕಬ್ಬಿಗ. ೫೦). 'ಚಲ್ಲೆಗಣ್' ಪರಾ.

**ಚೆಲ್ಲೆಗಣ್, ಚಲ್ಲೆಗಣ್** (ನಾ). ನೀಳವಾದ ಕಣ್ಣು ; ಅಗಲವಾದ ಕಣ್ಣು : ಬಂದರ್ ನಗೆಗಣ್ಗಳ ಚೆಲ್ಲೆಗಣ್ಗಳಲರ್ಗಣ್ಗಳ ವಿಡುಗಣ್ಗಳ ಬೆಡಂಗಿಯರ್ (ಜಗವಿ. ೪-೦೨೪) ; ಮಡದಿಯರ ಚೆಲ್ಲೆಗಣ್ಣೆಳವಿಂಚಿನಂತಿರಲು (ನಂದಿರ. ೦೫-೭೭); ನಲ್ಲರೂಪಿಲ್ಲೆಂದಡೀಕ್ಷಿಸು ಚೆಲ್ಲೆಗಂಗಳಿಂ (ಬಸವು. ೪೦-೧೪). **ಚಲ್ಲೆಗಣ್** : ಚಲ್ಲೆಗಣ್ಣ ತುಱುಗೆವೆಯ ವಿಶಾಲಗಂಡಸ್ಥಳದ . . . ವಾರನಾರೀಕದಂಬಂ (ಧರ್ಮಾಮೃ. ೮-೧೯೭) ; ಆತನ ಚಲ್ಲೆಗಣ್ಗಳಾತನ ಬಗೆಗೊಳ್ವ ಪೆರ್ದೊಡೆಗಳ್ (ಜಗವಿ. ೧೧-೦೫) ; ಶ್ರುತಿಯುವತಿ ಸೂಸುವ ಚಲ್ಲೆಗಂಗಳ ಮೊನೆಗೆ ಮಿಸಲುಗುಡದ ಪ್ಯೆಸಿರಿಯ (ಶುಮ್ಮಾಳ. ೪-೪೦).

[ ಚೆಲ್ಲೆ + ಕಣ್ ]

**ಚೆಲ್ಲೆಗಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲೆನೋಟ** 'ಚಲ್ಲೆನೋಟ' ನೋ

**ಚೆಲ್ಲೆಯ** 'ಸೆಲ್ಲೆಹ' ನೋ.

**ಚೆಲ್ಲೆಹ** 'ಸೆಲ್ಲೆಹ' ನೋ.

**ಚೆಲ್ಲೆಹೋಗು** (ಕ್ರಿ.) ಚೆಲ್ಲಾಟಕ್ಕೆ ಹೋಗು (?) : ಚನ್ದ್ರವನದಲ್ಲಿ ಕೋಣಪ್ಪಜಟ್ಟಿಯೊಡನೆ ಚೆಲ್ಲೆಹೋಗಿಯಿದ್ದು ರಾತ್ರಿ ಕಾವಲಿದ್ದದ್ದಕ್ಕೆ (ಬಟ್ಟಅ. ೫೭-೦). [ <ಚೆಲ್ಲ$_1$ + ಹೋಗು$_1$ (<ಪೋಗು$_1$) ]

**ಚೆಲ್ವ**, ಚಲುವ, ಚಲ್ವ, ಚೆಲುವ$_1$ (ನಾ). ೧. ಅಂದವಾದಂದು ; ಸುಂದರವಾದಂದು; ಚೆನ್ನಾದುದು ; ಉತ್ತಮವಾದುದು : ಮತ್ತಾ ಪುರಂ ಚೆಲ್ವನಾಪುರಮಿಂಬಾಪುರಮೊಳ್ಳಿತಾಪುರಂ (ಅನಂಪು. ೧-೦೨೦). ೨. ಅಂದ; ಚೆಲುವು; ಸೌಂದರ್ಯ: ಮೊದಲ ಪದಂ ನ್ಯೂನಾಕ್ಷರಂ . . . ಇದಱಿಂ ಛಂದೋಭಂಗಂ ಪದನಱಿದದನಿಂತು ಸಮಱೆ ಪೇೞ್ದೊಡೆ ಚೆಲ್ವಂ (ಕವಿರಾ. ೦-೯೨). ೩. ಸುಂದರನಾದವನು ; ಸ್ಫುರದ್ರೂಪಿ : ಚೆಲ್ವರ್ಕಳಭಿಜನರ್ಕಳ್ಗನಿಗಳ್ (ಕವಿರಾ. ೨-೨೭) ; ಪುಷ್ಪಸಂಕುಳದೊಳ್ ನೀನೇ ವಿಳಾಸಿಯ್ಯೆ ಮಿಡಿಗಳೊಳ್ ನೀಂ ಚೆಲ್ವನೈ (ಆದಿಪು. ೧೧-೯೮) ; ಕರ ಚೆಲ್ವ[ಪಾಠಾಂ. ಚೆಲುವ] ಶ್ರೀಶೈಲಚನ್ನಮಲ್ಲಿಕಾರ್ಜುನನ ಸಜ್ಜನ ಗಂಡನ ಮಾಡಿಕೊಂಬೆ (ಮಹಾದೇ. ಬ. ೧೪೪-೩೨೮). ೪. ಒಬ್ಬಾತನ ಹೆಸರು : ಇಷ್ಟಬ್ರಿತ್ಯನಪ್ಪ ಪೊಲೊಕ್ಕುಪ್ರಿಯು ಚೆಲ್ವ . . . ಚೆಲ್ವ ಸಂಪನ್ನ (ಎಇ. IX, ೨೦-೪ ; ). 800 **ಚಲುವ**: ೧. ನಿಮ್ಮ ಕರುಣವೇ ಕರ ಚಲುವ ಸಕಳೇಶ್ವರಯ್ಯ (ಸಮಾವ. ೫-೧೮) ; ಚ[ಪಾಠಾಂ. ಚೆ]ಲುವವಹ ಮೃದುತರ ವೆನಿಪ ಪರಿಮಳಿಪ ಪೊಸಖಂಡಂಗಳಂ ಸವಿಗೊಳುತ (ಬಸವು. ೧೮-೨೯). ೩. ಚಲುವ [ಪಾಠಾಂ. ಸುಜನ]ರುಟಿಗೆ ರೂಪಿನ ಮದವಮಂ (ಸಮಶ. ೪-೦೦೮) ; ಸಾವಿಲ್ಲದ ಕೇಡಿಲ್ಲದ ಚ[ಪಾಠಾಂ. ಚೆ]ಲುವಂಗಾನೊಲಿದೆನವ್ವಾ (ಮಹಾದೇ. ಬ. ೧೨೨-೨೮೩). (ಗು). ೫. ಅಂದವಾದ ; ಸೊಗಸಾದ ; ಉತ್ತಮವಾದ : ಬೇಱೊಂದು ನಾತೊಡೆ ಚಲುವ ಚಂದನದ ಪಡಿ ಯೆನಿಸದಡೆ (ಬಸವು. ೨೭-೪) ; ಚಲುವ ವಧು ಕೇಳೆಲೆ ದುರಾತ್ಮಕರಳಿವರೇ ಯೆನ್ನನು (ಕುಮ್ಮಾವಿ. ಒಂಇ. ೨-೩೦). **ಚಲ್ವ** : ೧. ಚ[ಪಾಠಾಂ. ಚೆ]ಲ್ವವಹ ಮೃದುವಪ್ಪ ಗಂಧಂ ನಿಲ್ವ . . . ಬಿಲ್ವಪತ್ರೆಯನೆಯ್ದೆ ಕೊಯ್ದು (ಬಸವು. ೪೩-೨೭). ೩. ಚಲ್ವನೇ ಹರನಂ ಮೋಹಿಸಲಾಪ್ಪರ್ನೆಂತುವಧಿಕಂ ಶ್ರೀವಿಷ್ಣು ಭೂಪಾಳಕಂ (ಎಕ. V, ಬೇಲೂರು. ೫೮-೩೯; 1117). **ಚೆಲುವ$_1$**: ೧. ಪರಿಣಾಮದೊಳಗೆ ಮನದ ಪರಿಣಾಮವೆ ಚೆಲುವ ಸಂಗದೊಳಗೆ ಶರಣರ ಸಂಗವೆ ಚೆಲುವ (ಅವಚಂ. ೦೧೯-೫೩೮). ೩. ನೀಲೋತ್ಪಲನಿಭಾಂಗದ ಮುದ್ದುವದನದ ಚೆ[ಪಾಠಾಂ. ಚ]ಲುವ ದೇವರ ದೇವನೆಸೆದನು ಬಾಲ ಕೇಳಿಯಲಿ (ತೊರರಾ. ೦-೮-೮೦) ; ಚೆಲುವರರಸನರ್ಚನಾದ್ರವ್ಯವೆರಸಿ ನಿರ್ಮಾಲಯೋಗಿಪಥಕ್ಕೆದಿದನು (ಭರತ. ೩-೭). ೫. ಪೂಸಿದ ವಿಭೂತಿ ಕಯ್ಯೊಳು ಪಾತ್ರೆಯೇಕ ಜೆಡೆ ಭಾಸುರದ ಪುಲಿದೊವಲು ಲಾಕುಳಂ ಚೆಲುವ ನಡೆ (ತಿರುರ. ದೇ. ೦೦-೦೦).

**ಚೆಲುವಾನೆಗಳ್**=ಒಳ್ಳೆಯ ಆನೆಗಳನ್ನು ಹಿಡಿಯುವವನು; ಒಂದು ಬಿರುದು : ಕೋಟಶೂರ್ಪ್ಪರವರೇಶ್ವರಂ ಚೆಲುವಾನೆಗಳ್ಳಂ ವೈರಿ [ಹೃತ್ಶೆಲ್ಲಂ] (ಕಇಕ. ೦೨೩-೩೭-೯ ; 1107).

[ ದೇ.॥ ತಮಿ. ಚೆಲ್ವ ; ತೆಲು. ಚೆಲುವ, ಚೆಲ್ವ ]

**ಚೆಲ್ವಕಾಱ** (ನಾ). ಅಂದಗಾರ ; ಚೆಲುವ ; ಸುಂದರ : ಚೆಲ್ವಕಂಗಳ ಚೆಲ್ವ ಕಾಱ ನೋಡ ಬಂದೆ ನಿನ್ನ ಬಳಿಸಾರ ಬಂದೆ (ಕನಕ. ೦೨೫ ಪಲ್ಲವಿ).

[ ಚೆಲ್ವ + – ಕಾಱ ]

**ಚೆಲ್ವಡೆ** (ಕ್ರಿ). ೧. = ಚೆಲ್ವುವಡೆ : ತೆಳ್ವೊಡೆ ಕಡು ಚೆಲ್ವಡೆದುದು (ಅನಂಪು. ೬-೫). ೨. ಅಂದವನ್ನುಂಟುಮಾಡು : ಕರಮೆ ಚೆಲ್ವಡೆದು ಸಿಂಗರಮಾಡಿ ವಾಮೇತರಹಸ್ತದೊಳು ಖಡ್ಗಮಿತ್ತ (ಶ್ರೀಪಾಲ. ೮-೩೮).

[ ಚೆಲ್ + ಪಡೆ$_1$ ]

**ಚೆಲ್ವತನ,** ಚಲುವತನ (ನಾ). ಅಂದಗಾರಿಕೆ ; ಸೊಗಸುಗಾರಿಕೆ ; ಚೆಲುವಿಕೆ : ಪುರುಷನ ಭಾವಂ, ಪುರುಷತನಂ, ಏವಂ ವೀರತನಂ, ಶೂರ ತನಂ, ಬಲ್ಲತನಂ, ಚೆಲ್ವತನಂ (ಶಬ್ದಾನು. ೪೩೦ ಪ್ರಯೋ). **ಚಲುವತನ :** ಚಲುವತನವನು ತೋಱಿ ರಾಮನನೊಲಿಸಲ್ಕೆದಿದ ಶೂರ್ಪಣಖಿಯನು ಕಲಿ ಸುಮಿತ್ರಾಸೂನು ಹಿಡಿದಿಳುಹಿದನು ನಾಸಿಕವ (ತೊರರಾ. ೩-೪ ಸೂಚನೆ). [ ಚೆಲ್ವ + – ತನ ]

**ಚೆಲ್ವನೆ,** ಚಲುವನೆ (ಗು). ಸುಂದರವಾದ; ಸೊಗಸಾದ: ಪೊನ್ನೋಲೆಯಂ ತೊಡಿಸಿ ಚೆಲ್ವನಪ್ಪ ಪೂಮಾಲೆಯಂ ಮುಡಿಯಿಸುತ್ತುಂ (ಧರ್ಮಾಮೃ. ೩-೯); ಚೆಲ್ವನಪ್ಪ ನವಹಾಟಕನಿರ್ಮಿತಮಪ್ಪ ಕೋಂಟೆ ಮುಟ್ಟರೆ ಮುಗಿಲಂ (ಚಂದ್ರಪು. ೧-೧೧೪). **ಚಲುವನೆ:** ಹಲವನಱಿಂತೊರೆದುದಕೆ ಕರ ಚೆ[ಪಾಠಾಂ. ಚೆ]ಲುವನಾಯಿತ್ತು (ಬಸವು. ೫೧-೪೦). [ ಚೆಲ್ವು₁ + – ಅನ್ನೆ₂(<–ಅನೆಯ್ದು₂) ]

**ಚೆಲ್ವಪಿಳ್ಳೆ** (ನಾ). ಮುದ್ದಾದ ಮಗಂ ; ಸುಂದರನಾದ ಬಾಲಕ ; ಬಾಲ ಕೃಷ್ಣ : ಡಿಳ್ಳಿಯೊಳೊಂದುಗೂಡಿರೆ ದೇವರು ಚೆಲ್ವಪಿಳ್ಳೆ ಬಾರೆನೆ ನಿನ್ನ ಬೆಂಬಱಿಯ ಬರಲು (ಗೀತಗೋ. ೪೭). P ತಮಿಳಿನಲ್ಲಿ ಈ ಪದವನ್ನು ವಿಶೇಷವಾಗಿ ಸ್ಕಂದನಿಗೆ ಅನ್ವಯಿಸುತ್ತಾರೆ. [ ←ತಮಿ. ಚೆಲ್ವಪ್ಪಿಳ್ಳೈ ]

**ಚೆಲ್ವಪಿಳ್ಳೆರಾಯ,** ಚೆಳ್ಳೆಪಿಳ್ಳೆರಾಯಂ, ಚೆಲಪಿಳೆರಾಯಂ (ನಾ). (ಮೇಲುಕೋಟೆಯ) ಚೆಲುವರಾಯಸ್ವಾಮಿ : ಉಲ್ಲಾಸದಿಂ ಯಾದವಾದ್ರಿಗೈದಿಸಿ ಚೆಲ್ವಪಿಳ್ಳೆರಾಯಗೆ ನೀ ಪಿತನೆಂದೆನಿಸಿದೆ(ಗೀತಗೋ. ೪೭). **ಚೆಳ್ಳೆಪಿಳ್ಳೆರಾಯ:** ಮೇಲ್‌ಕೋಟೆಯಲ್ಲಿ ಕೃಷ್ಣನ (ಚೆಳ್ಳೆಪಿಳ್ಳೆರಾಯನ) ಗುಡಿಯನ್ನು ಕಟ್ಟಿಸಿ (ಮುಂಬಯಿ. ೬-೧೧೬). **ಚೆಲಪಿಳೆರಾಯ :** ಶ್ರೀ ಚೆಲಪಿಳೆರಾಯರಿಗೆ ನಿತ್ಯ ಸಂದಿ ತಪ್ಪ ತಿರುನಾಳು ಬೆಱವು (ಎಕ. XIV, ಶ್ರೀರಂಗ. ೯೫-೨ ; 1585). [ ಚೆಲ್ವಪಿಳ್ಳೆ + ರಾಯ ]

**ಚೆಲ್ವರಾಯ,** ಚಲುವರಾಯಂ (ನಾ). ೧. = ಚೆಲ್ವಪಿಳ್ಳೆರಾಯಂ : ಈ ಪರಿಯಲಿ ಮೇಲುಕೋಟೆ ಇಂದಿರೆವರ . . . ತಾಪತ್ರಯಗಳ ಬಿಡಿಸಿ ಚೆಲ್ವ ರಾಯ ಗೋಪಾಲ ಮೂರುತಿ ಪುರಂದರವಿಠಲ (ಪುರಂದ. ೨-೯-೩). **ಚಲುವರಾಯ :** ೧. ಮೇಲುಕೋಟೆಯ ಚಲುವರಾಯಸ್ವಾಮಿಯ ಗುಡಿ ಸೊಗಸಾಗಿದೆ (ರೂಢಿ). ೨. ಚೆಲುವರಲ್ಲಿ ಮಿಗಿಲಾದವನಂ ; "ಕುಮಾರ ರಾಮ" (ಜಾನಕೋ. ೫೫). [ ಚೆಲ್ವ + ರಾಯ ]

**ಚೆಲ್ವಿಕೆ,** ಚಲುವಿಕೆ, ಚಲ್ವಿಕೆ, ಚೆಲುವಿಕೆ (ನಾ). ಅಂದ; ಚೆಲುವು ; ಸೊಗಸು ; ಸೌಂದರ್ಯ : ಎಱದೀವುದುಮಜನೀಕೆಯ ನಳಿತೋಳಿಂ ಗೊಲ್ದು ತಮ್ಮ ಚೆಲ್ವಿಕೆಯಂ ಕಂಡೆಲಲತೆಗಳ್ಪೂವುಗಳಂ ತಳೆದಿರ್ದುಂ ತಳೆಯ ದಿರ್ಪುವಾ ಫಲಿನತೆಯಂ (ಧರ್ಮಾಮೃ. ೩-೦೫೩) ; ನೋಡು ಮೈಥಿಲಿ ವಿಶ್ವ ಕರ್ಮನು ಮಾಡಿಹುದ ಲಂಕಾತ್ರಿಕೂಟದ ಕೋಡುಗಲ್ಲಿನ ನಡುವೆ ಚೆಲ್ವಿಕೆ ಯಿಂದ ಮೆಱೆಯುವುದ (ಕಾಶಿರಾ. ೪೪-೦೩); ಅವನ ಚೆಲ್ವಿಕೆ ಗಂಡು ಪೆಣ್ಗಳ ಕಂಗಳ ಸೆಱೆವಿಡಿದಿಹುದು (ಭರತ. ೧-೫೦). **ಚಲುವಿಕೆ :** ಆವಳವ ಳೂರ್ವಶಿಯೊ ರಂಭೆಯೊ ದೇವವಧುಗಳ ಸುಳಿವೊ ತಾನೆನಲಾವ ಚ [ಪಾಠಾಂ. ಚೆ]ಲುವಿಕೆ ಶಿವಶಿವಾಯೆಂದರಸ ಬೆಱಗಾದ (ಕುಮಾ.ಅ. ೫-೧೧) ; ಚಲುವಿಕೆಗೆ ಹಿಮವಂತಸುತೆಗಗ್ಗಳೆ . . . ಏನಗ್ಗಳೆಯೊ ಶಿವಶಿವ ಸೀತೆ ರೂಪಿನೊಳು (ತೊರರಾ. ೩-೭-೧೮) ; ಚಕ್ರೇಶ ಚಲುವಿಕೆಯಾಗಿ ಪೂಜೆಯ ಮಾಳ್ಪೆನೆಂದು ತನ್ನೊಳಗಿಂತು ನೆನೆದನು (ಭರತ. ೭೩-೨೪). **ಚಲ್ವಿಕೆ :** "ಚಲ್ವಿಕೆಯೆನಲ್ ಸೌಂದರ್ಯದೊಳು" (ಕಕರ. ೧೨೩). **ಚೆಲುವಿಕೆ :** ಮಿಸುನಿಗಳ ಗಂಟೆಯಿಂದೆಸೆವ ಚೆಲುವಿಕೆಯುನವನೀಶ ನೋಡುತ ಬಂದನು ಹಚಕಾ. ೪-೪೦) ; ಮಡದಿಯೊರ್ವಳು ಬಾಗಿಲಲಿ . . . ಕಡು ಚೆಲುವಿಕೆಯ ಬೀಱಿದಳು (ಕಂನವಿ. ೬-೦೦೦). [ ಚೆಲ್ವು₁ + – ಇಕೆ ]

**ಚೆಲ್ವಿಕೆದಾಳು** (ಕ್ರಿ). ಸೌಂದರ್ಯವನ್ನು ಪಡೆ ; ಚೆಲುವಾಗು : ಸುಲೋಚನೆಯುಂ ಲಕ್ಷ್ಮೀಮತಿಯುಂ ಸಂಜನಿಯಿಸಿ ಪಿರಿದುಂ ಚೆಲ್ವಿಕೆ ದಾಳಿದರು (ಜಯುಕಾ. ೩-೧೯). [ ಚೆಲ್ವಿಕೆ + ತಾಳು₁(<ತಾಳ್₁) ]

**ಚೆಲ್ವಿಡಿ** (ಕ್ರಿ). ಚೆಲುವಿನಿಂದ ಕೂಡಿರು; ಸೌಂದರ್ಯದಿಂದ ತುಂಬಿರು : ಪಳಂಚಲೆವ ಪಂಚಜಡೆ ನೊಸಲೊಳೊಡಂಬಡುವರಲೆಲೆಯಿವಱಿಂ ಚೆಲ್ವಿಡಿ ದಿರ್ದುದು ಬಾಳಕೇಳಿ ಧರ್ಮಾತ್ಮಜನಾ (ಪಂಪಭಾ. ೨-೪) ; ಚೆಲ್ವಿಡಿದ ಸರೋರುಹಾಂತರಕೆ ಮಾನಿತ ಮಾನಸರಾಜಹಂಸಿಯಂ ನಡೆಯಿಸುವಂತೆ (ಶಾಂತಿಪು. ೫-೧೧೩) ; ಮೃಡನಾಗಳ್ ಗಿರಿಜೆಯ ಚೆಲ್ವಿಡಿದ ಮೊಗಂಗಂಡು (ಗಿರಿಕ. ೧೦-೯೨). [ ಚೆಲ್ವು₁ + ಇಡಿ₂ ]

**ಚೆಲ್ವು₁,** ಚಲುವು, ಚಲ್ವು, ಚೆಲುವು (ನಾ). ೧. ಅಂದ ; ಚಂದ ; ಸೊಗಸು ; ಸೌಂದರ್ಯ : "ಚೆ[ಪಾಠಾಂ. ಚ]ಲ್ವೆಂಬುದಂದವೆನಿಕ್ಕು" (ಕಬ್ಬಿಗೈ. ೩೦) ; ಚೆ[ಪಾಠಾಂ. ಚ]ಲ್ವ ಪಾಂಗಱಿಯ[ದ]ಂತಿದನಿಂತಿರೆ ಪೇೞ್ಗೆ ವಿಕಲ್ಪಮಂ (ಕವಿರಾ. ೧-೧೩೫) ; ಚೆಲ್ವಿನಿಂ ದೇವಾಸುರರ್ಕಳಂ ಗೆಲ್ವ ರೂಪನೊಡೆಯಂ (ವರ್ಧಮಾ.ರಾ. ೫೩-೧೪) ; ಕೊಂಕಿದ ಕೊಂಕು ತದ್ವಿಷಯ ಕಾಂತೆಯ ಪುರ್ವಿನ ಕೊಂಕಿನಂತೆ ಚೆಲ್ವಂ ಕುಡೆ (ಆದಿಪು. ೧-೬೧) ; ಇದಾರ ಪುಣ್ಯದ ಪುಂಜವಿದಾರ ಚೆಲ್ವಿನಂಕುರಂ(ನಂಬಿರ. ೨-೫೦). ೨. ಸುಂದರ ವಾದುದು ; ಮನೋಹರವಾದುದು : ಆಳಿ ಬಿರಿದಿರ್ದ ಜಾದಿಯೊಳೆ ಪಲ್ಮೊರೆಯುತ್ತಿರೆ . . . ಸಾರೆ ಚಕೋರವಿಂದುಮಂಡಲಗಳಿತಾಮೃತಾಸವ ಮನುಂಡುಸಿರುತ್ತಿರೆ ಚಲ್ವು ಶಾರದಂ (ಪಂಪಭಾ. ೭-೭೦). **ಚಲುವು :** ೧. ಚ[ಪಾಠಾಂ. ಚೆ]ಲುವು ಮಿಗೆ ಪೂಜಾಪ್ರಬಂಧಗಳನಭಿನಯಿಸುವಂ (ಬಸವು. ೪೧-೨೨) ; ರಾಯನ ಚಲುವನೀಕ್ಷಿಸಿ ನಲಿದು ಕೊಂಡಾಡಿದರು ಮನ ವೊಲಿದು (ನಳಚ. ೩-೦೩). **ಚಲ್ವು :** ೧. ಕಂಪಿನ ಕಾರಾಗಾರವಮುಂ ಚ[ಪಾಠಾಂ. ಚೆ]ಲ್ವಿನ ಕುಲಗೃಹಮುಮಿರ್ಪಂತಿರ್ದ ವಸಂತಗೃಹಮಂ ಪೊಕ್ಕು (ಚಂದ್ರಪು. ೭-೯೫ ವ) ; ೨. ಮನ್ನೆಪೇಟದಿ ತೆಂಕ ನಿನ್ನ ದೇಗುಲ ಚಲ್ವು (ಎಕ. VIII, ನಗರ.೬೨-೪ ; ಸು. 800). **ಚೆಲುವು :** ೧. ಗಾನದೊಳು ವಿದ್ಯೆ ದೊಳು ಪ್ರಾಯದೊಳು ಚೆಲುವಿನೊಳು . . . ಪ್ರತಿಯಿಲ್ಲ(ಸಿದ್ಧರಾ. ೦-೩೪); ಲಲನೆಯೊಳು . . . ಚೆಲುವಿನೊಳು ದಶರಥಾತ್ಮಜನೊಳತಿ ಕಬ್ಬಿನೊಳು ಬಿಳುದಿನೊಳು ರಾಮುವೆನಿಸಿಕ್ಕು(ಮಂಗರಾ. ೧೪೭-೪೦) ; ಉಸುರಿಲ್ಲದೊಡಲಿನ ಚೆಲುವಿನಂತಿರೆ ನಮ್ಮ ಬಲ (ಕುಮಾ.ದ್ರೋ. ೯-೫೨). ೨. ಚೆಲುವೆನಿಸಿರ್ದೀ ಕುಸುಮಾವಳಿಯಂ ಕೊಯ್ದು ವನಿಸುತೆಯ ಕರತಳರಾಗಂ ಬಳಸಿದುದೆಂಬಿನ ಮೆಸೆದುವು . . . ಪಲ್ಲವ ಪ್ರಕರಂಗಳ್ (ಕಾದಂಪೂ.೦೦೮).

**ಚೆಲ್ವಾಗು,** **ಚಲುವಾಗು** = ಸುಂದರವಾಗು; ಮನೋಹರವಾಗು : ತಂತಮ್ಮ ಠಾಣಾಂತರಂಗಳೊಳಿರ್ದಂಗಜತಂತ್ರದಂತೆಸೆವಿನಂ ಚೆಲ್ವಾದು ವಿಮ್ಮಾವುಗಳ್ (ಆದಿಪು. ೧೧-೪೭) : ಸಾಸನಮನ್ನಿದೆ ಚೆಲ್ವಾಗೆ ಸಾಮಿ ಯಣ್ಣಂ ಬರೆದೋಂ (ಸೌಇಇ. XI-i, ೪೧-೫೭ ; 969) ; ಪೃಥುಳೋನ್ನತ ಕರಾಂಬುಜಯುಗಂ ಚ[ಪಾಠಾಂ. ಚೆ]ಲುವಾಯಿತಯ್ಯಂಗೆ(ಬಸವು. ೩೮-೪೦). [ ದೇ.॥ ತಮಿ. ಚೆಲ್ವು ; ತೆಲು. ಚೆಲುವು, ಚೆಲ್ವು ]

**ಚೆಲ್ವು₂** (ನಾ). ಒಂದು ಬಗೆಯ ಮರ : ಪಾವಕನ ಶರೀರದಂತಿರುಡಿ ಸುಂಕಿಗನಂತಿರೆ ಚೆಲ್ವು ಸಂದ ಲಾವಕನ ನಿಯೋಗದಂತೊಗೆದ ಬೊಬ್ಬುಲಿ ಪರ್ವಿದಟವ್ಯಮುದ್ಭುತಂ (ಪುಷ್ಪಾಸ್ವ. ೮-೯೪). [ ? ]

**ಚೆಲ್ವುದೋಱು**(ಕ್ರಿ). ಅಂದವನ್ನು ಕಾಣಿಸು; ಸೊಗಸನ್ನುಂಟುಮಾಡು: ಆಮ್ರಭೂಷಿತಕಮನಾಮ್ರಪಕ್ವಫಳದೊಳ್ ಶುಕಕಾಮಿನಿ ಚೆಲ್ವುದೋಱಿ ದಳ್ (ಆದಿಪು. ೧೦-೯೯). [ ಚೆಲ್ವು₁ + ತೋಱು ]

**ಚೆಲ್ವುವಡೆ** (ಕ್ರಿ). ಅಂದವನ್ನು ಪಡೆ ; ಸುಂದರವಾಗು : ರಂಗ ನಿನ್ನಯ ಚೆಲ್ವುವಡೆದೊಳುದೊಡೆಯ ಬೆಡಂಗಿಯ ಬಗೆಯ ಬಣ್ಣಿಪೊಡೆ ಕಂಗಳಿಂ ಕೇಳ್ವಂಗರಿದು ಗಡ (ಶತಸಾಂ. ೧-೪). [ ಚೆಲ್ವು₁ + ಪಡೆ₁ ]

**ಚೆಲ್ವುವರಿ** (ಕ್ರಿ). ೧. ಅಂದವಾಗಿ ಓಡು,-ಮುಂದುವರಿ : ಇನ್ನಪ್ಪ ಚಕ್ರವರ್ತಿಗಳಿನ್ನೀ ಮಾರ್ಗದೊಳೆ ನಡೆಯಿಮೆಂದೞಿವುವವೋಲ್ ತನ್ನ ರಥಾಂಗಾಹತಿಯಿಂ ಮುನ್ನಮೆ ನೀರ್ ತಳರೆ ಚೆಲ್ವುವರಿದತ್ತು ರಥಂ (ಆದಿಪು.೧೨-೬೪). ೨. ಚೆಲುವನ್ನು ಹರಡಂ,-ಸೂಸು : ಗುರುವಿಕೆಯನಾಂತ ಸಾಂತಂಗಂ ಚೆಲ್ವುವರಿವ [ಪಾಠಾಂ. ಚೆಲ್ವರಿವಪ್ಪ] ಬಲ್ಲವ್ವೆಗವೊಪ್ಪುವ ಲೆಕ್ಕಿಗರರಸನೊಗೆದನೆಸೆವಾಂಡಯ್ಯಂ (ಕಬ್ಬಿಕಾ. ೧೧). [ ಚೆಲ್ವು$_1$ + ಪರಿ$_2$ ]

**ಚೆಲ್ವುವೀಱು** (ಕ್ರಿ). ಅಂದವನ್ನು ಸೂಸಂ; ಸೊಗಸನ್ನು ಬೀರು: ನಿರವಧಿಸೌಷ್ಠವದಿಂ ತನ್ನಿರವಧಿಕಂ ಚೆಲ್ವುವೀಱೆ (ಜಗವಿ. ೧೧-೪೭)

[ ಚೆಲ್ವು$_1$ + ಬೀಱು ]

**ಚೆಲ್ವುವೆಱು**, ಚಲುವೆಱು (ಕ್ರಿ). ಅಂದವನ್ನು ಪಡೆ ; ಸುಂದರವಾಗು : ವಿನಯಮಾವೆಡೆಗಾವುದು ಚೆಲ್ವುವೆತ್ತು ರಂಜಿಸುಗುಮುದರ್ಕದಂ ಸಮುೞಿ ನಿಚ್ಚಲುಮಾ ಬಿಯಮಾ ವಿನೋದಮಾ ಪಸದನಮಾ ವಿಳಾಸದೊಳೊಡಂಬಡೆ ಭೋಗಿಸಿದಂ ಗುಣಾರ್ಣವಂ (ಪಂಪಭಾ. ೧೪-೩೮) : ಮೊಗಮಿಸೆ ಬಾರದಿರ್ದುಂ ಸೊಗಯಿಪ ತನ್ಮುನಿಕುಮಾರವದನಾಬ್ಜಂ ದಿಟ್ಟಿಗೆ ಚೆಲ್ವುವೆತ್ತು ಮುೞಿದುಂಬಿಗಳಿಜಿಗದ ಕನಕಕಮಲಮಂ ನೆನೆಯಿಸುಗುಂ (ಕಾದಂಪೂ. ೭೩೪). **ಚಲುವೆಱು** : ನೋಟಂ ನೋಟದೊಳು ಸಲೆ ಹೊಕ್ಕುಯಿಬ್ಬರ ಕಂಗಳೆರಡೆರಡಕ್ಕಜಂ ಮಿಗೆ ಏಕವಾಗಿಂತೆಯ್ದೆ ಚ[ಪಾಠಾಂ. ಚೆ]ಲುವೆತ್ತು (ಬಸವು. ೧೮-೮೩). [ ಚೆಲ್ವು$_1$ + ಪೆಱು$_1$ ]

**ಚೆಲ್ವೆ**, ಚಲುವೆ$_1$, ಚಲ್ವೆ, ಚೆಲುವೆ$_1$ (ನಾ). ಸುಂದರಿ; ರೂಪವತಿ: ಅವರ್ಿರ್ವರ್ಗಂ ಪ್ರಿಯನಂದನೆ ಗುಣಗಣಾಭರಣೆಯನಂತಮತಿಯೆಂಬಳ್ ಅತಿಚೆಲ್ವೆ (ಧರ್ಮಾಮೃ. ೩-೭) ; ಚೆಂದುಟಿಯ ಚೆಲ್ವೆ (ಉದ್ಭಟ. ೫-೫೩) ; ಮಂಡಾಲದೊಳು ಚೆಲ್ವೆ ಕೊರವಂಜೀ ನಿನ್ನ ಗಂಡನಿನ್ನೆಂತೋನೆ (ಕೃಷಿಡಿ. ೧೫೩). **ಚಲುವೆ$_1$**: ತಾನೇ ಚಲುವೆಯೆಂದು ಅವಳು ತಿಳಿದಿದ್ದಾಳೆ (ರಂಗಕೋ. ೧೭೩). **ಚಲ್ವೆ**: ಇವನ ವಧು ಚಲ್ವೆ ರೂಪಿನೊಳ್ (ಸಮುಪ. ೫-೨೮). **ಚೆಲುವೆ$_1$**: ಚಾರುಚರಣದಿಂದ ಚೆಲುವೆ ಗಂಗೆಯ ಪಡೆದ (ಪುರಂದ. ೧-೨೩೩-೨) ; ಚೆಲುವೆಗೆ ತಕ್ಕ ಸಿಂಗರವ ನಿರ್ಮಿಸಿ (ಮೋಹತ. ೨೩-೫೩) ; ಚೆಗರಿಗಂಗಳ ಚೆಲುವೆ ಚೆದರಿ ನಿಂತಾಳ (ಸಜೀಗೀ. ೧೦೦-೧). [ ಚೆಲ್ವು$_1$ + -ಎ$_8$ ]

**ಚೆಲ್ವೆಸೆ** (ಕ್ರಿ). ಚೆನ್ನಾಗಿ ಶೋಭಿಸು : ಕತ್ತುರಿಯ . . . ಸೊವಡೊಳ್ ಕಡುಸೊರ್ಕೆ ಸೊರ್ಕಿಗಾವರಿಸುವ ತುಂಬಿ ಚೆಲ್ವೆಸೆಯೆ ಕಣ್ಗೆಸೆದತ್ತು ಖಗೇಂದ್ರನೋಲಗಂ (ಆದಿಪು. ೨-೫) ; ತೊಳಪ್ಪ ಕನ್ನವುರಂ ಚೆಲ್ವೆಸೆದಿರೆ (ಕಾವ್ಯಾವ. ೪೪೦); (ಶಮದ. ೭೨ ಪ್ರಯೋ. ನೋ). [ ಚೆಲ್ವು$_1$ + ಎಸೆ$_2$ ]

**ಚೆಲ್ವೆಳವೆ** (ನಾ). ಅಂದಮಾದ ಹೊಸಪ್ರಾಯಂ: ಚೆಲ್ವೆಳವೆ ಬಾವನ್ನದಿಂದೆದೆ ತುಂಬುತಿಹುದು (ಕಾಲೂರ. ೧೪೮-೩೨೪).

[ ಚೆಲ್ವು$_1$ + ಎಳವೆ (<ಎಳಮೆ$_1$) ]

**ಚೆಲ್ವೆಳಸು** (ನಾ). ಸೊಂಪಾಗಿ ಬೆಳೆದ ಬೆಳೆ : "ಪಿರಿದಾಗಿ ಬೆಳೆದ ಬೆಳೆಯೆಂದುಱೆ ಚೆಲ್ವೆಳಸೆನ್ನಲಕ್ಕು" (ಕವಿಕಂ. ೨೩೭). [ ಚೆಲ್ + ಬೆಳಸು$_2$ ]

**ಚೆಲ್ವೆಱು** (ಕ್ರಿ). = ಚೆಲ್ವುವೆಱು : ಮುತ್ತಿನಕ್ಷತೆಯಿಟ್ಟು ದೇವಿ ನೃಪನ ಚೆಲ್ವೆತ್ತು ನೋಡಲು ಕಣ್ಣುಕಾಂತಿ ಬಿತ್ತರಿಸಿದುದು (ಶ್ರೀಪಾಲ. ೧೧-೧೦೦).

[ ಚೆಲ್ + ಪೆಱು$_1$ ]

**ಚೆಲ್ವೊಂದು** (ಕ್ರಿ). ಸೌಂದರ್ಯವು ಒಟ್ಟುಗೂಡು,-ಸೇರು : ಸುಡುಮೈಯ ಚೆಲ್ವೊಂದಿ ಬಿಡದಿರ್ದೊಡಂ ಬಾಡಿ (ಕಾಲೂರ. ೧೭೭-೩೭೦).

[ಚೆಲ್ವು$_1$ + ಒಂದು$_1$ ]

**ಚೆಲ್ವೊಗೆ** (ಕ್ರಿ). ಚೆಲುವಾಗು; ಶೋಭಿಸಂ: ಚೆಲ್ವೊಗೆದ ಮಲ್ಲಳಿಗಾರ್ತಿಯೆನೆ ಸುತ್ತಿ ಬರ್ಪಾಕೆ (ಕಬ್ಬಿಕ್ಕ. ೩೭). [ ಚೆಲ್ವು$_1$ + ಒಗೆ$_1$ ]

**ಚೆಲ್ವೊಡರಿಸು** (ಕ್ರಿ). ಚೆಲುವನ್ನುಂಟುಮಾಡು ; ಅಂದಗೊಳಿಸು : ಕಡುಗಾಡಿ ನಾಡೆಯುಂ ಕಣ್ಗೆಡಱೆ ಮನಂ ಬೆರ್ಚೆ ಸುತನ ಬರ್ಪಂದುಂ ಚೆಲ್ವೊಡರಿಸಿ ಬಲ್ವಿಡಿವಿಡಿದುದು ತೊಡರ್ದಳಿಪಿಂ ನೋಟ್ಕು ನೋಟಕರ್ಕಳ ಮನಮಂ (ಕಾವ್ಯಾವ. ೨೦೦) ; ಸಮಂತೊಡನೆ ಮಹೇಶನಂ ಪ್ರಿಯದೊಳಪ್ಪಿದಳ್ ಗಿರಿಜಾತೆಯಾಹ ಚೆಲ್ವೊಡರಿಸಿತಾ ಹ ದಂಪತಿಗಳಾಹ ಜಗತ್ಪ್ರಭುಗಳ್ ಸುಭಾಗ್ಯರೆನ್ನೊಡೆಯರೆನುತ್ತೆ ಕೆಯ್ಮುಗಿದು ಬಣ್ಣಿಸುತಿರ್ದಳತಿ ಪ್ರಮೋದದಿಂ (ಗಿರಿಕ. ೧೦-೧೦೩).

[ ಚೆಲ್ವು$_1$ + ಒಡರಿಸು ]

**ಚೆಲ್ವೊರೆ** (ಕ್ರಿ). ಸೊಗಸಿನಿಂದ ತುಂಬು ; ಸುಂದರವಾಗಿರು : ನೀಱಸ ಚೆಲ್ವೊರೆದ ಸವಿದುಟಿಯನೊಲವಿಂ ಬರೆ ಪೀರ್ದುವು ನೋಡುವಿಚ್ಚೆಗಾರ್ತಿಯ ಕಣ್ಗಳ್ (ಕಬ್ಬಿಕಾ. ೩೯೪). [ ಚೆಲ್ + ಪೊರೆ$_2$ ]

**ಚೆಲ್ವೋಡು** (ಕ್ರಿ). ಸೌಂದರ್ಯ ಹೋಗು ; ಅಂದಗೆಡು : ಬಾಡದ ಬಾಸಿಗಮುಡೆ ಚೆಲ್ವೋಡದ ದಿವ್ಯಾಂಬರಂ ಮನಂಗೊಳೆ (ಆದಿಪು. ೩-೪೦).

[ ಚೆಲ್ವು$_1$ + ಓಡು$_1$ ]

**ಚೆವಕೊಳ್ಗಂಡ** (ನಾ). ಒಂದು ಬಿರುದು : ಮಹಾರಾಜನೊಳ್ಕಾದಿ ಸತ್ತ ಕೆಲ್ಲಗಾವುಣ್ಡ ಚಾಮೊನ್ತಚೂಡಮಣಿ ಚೆವಕೊಳ್ಗಣ್ಡ ಸಮರೈಕಪಾತ್ರ (ಮ್ಯಆರಿ. ೧೯೩೩, ೩೭-೮ ; ಸು. 950). [ ? ]

**ಚೆವು**, ಚವ$_1$, ಚವ್ವು$_2$, ಚೆವ್ವು, ಚೌವು (ನಾ). ಮುತ್ತುರತ್ನಗಳನ್ನು ತೂಗುವ ಒಂದು ಬಗೆಯ ತೂಕದ ಪ್ರಮಾಣ,-ತೂಕಕಟ್ಟಳೆ : ಹವಳಕ್ಕೆ ಕಣಜುಗಟ್ಟಳೆ ಭುವನದೊಳಂ ಚೆವು ಅಡಹು ಮುತ್ತಿನ ಮಣಿಗಂ (ವ್ಯವಹಾ. ಅನು. ೧, ೩-೧೫). **ಚವ$_1$** : ಚವದ ಮೇಲೆ ಕಿಮ್ಮತ್ತು ಆಗತಕ್ಕ ಜೀನಸಗಳು . . . ೧೦೦ ದೋಕಡೆ . . . ೧ ಚವ ಮತ್ತು ಟಕ್ಕಾ (ಮುಂಬವ್ಯಾ. ೧೩೭). **ಚವ್ವು$_2$** : ಮುತ್ತಿನ ಚವು ಕತ್ತಿಗೆ ತಿಳಿದೀತೇ (ಗಾದೆ). **ಚೆವ್ವು** : ಮುತ್ತಿನ ಮಣಿಗಳಿಗೆ ತೂಕಕಟ್ಟಳೆ ಚೆವ್ವುಗಳೆಂದುಂಟು (ವ್ಯವಹಾ. ಅನುಬಂಧ. ೧, ೦-೪ ಟೀಕು). **ಚೌವು** : ಚೌವ ಗುಣಿಸುವ ವಿವರಾ : ಮಣಿಯೇಸು ತೂಕವಿದೆಯೆಂಬದ ನೋಡಿಕೊಂಡು ಆ ತೂಕವನು ೪ ಪಾಲು ಮಾಡಿ . . . ಅದರಲಿ ಮಣಿ ಎಷ್ಟುಂಟು ಅಷ್ಟರಿಂ ಭಾಗಿಸಲು ಬಂದದ್ದು ಚೌವು (ಭಾಸ್ಕರ. ೭೮-೨).

[ ದೇ.॥ ತಮಿ. ಚೆವ್ವು; ತೆಲು. ಚವಿ. / ಮರಾ. ಚವ್ ]

**ಚೆವ್ವು** 'ಚೆವು' ನೋ.

**ಚೆವ್ವೆಣ್ಣೆ** (ನಾ). ಮಗು ಹುಟ್ಟಿದೊಡನೆ, ಜೇನುತುಪ್ಪದೊಂದಿಗೆ ಬೆರಸಿ ಚೀಪಿಸುವ ಹರಳೆಣ್ಣೆ,-ಕೈಯೆಣ್ಣೆ,-ಔಡಲೆಣ್ಣೆ : ಚೆವ್ವೆಣ್ಣೆ : ಚೆವ್ವು ತಮಿಳಿನಲ್ಲಿ ಕೆಂಪು ; ಮಗು ಹುಟ್ಟಿದೊಡನೆ ಕುಡಿಸುವ ಕೈಯೆಣ್ಣೆ (ನಮ್ಮನು. ೧೦೭). [ ←ತಮಿ. ಚೆವ್ವೆಣ್ಣೈ ]

**ಚೆಳೆ** (ನಾ). ಒಂದು ಕ್ಷುದ್ರದೇವತೆಯ ಹೆಸರಂ : ಮಾರಿ, ಮಸಣಿ, ಬಳಹರಿ, ಚೌಡಿ, ಚೆಳೆ ಇತ್ಯಾದಯೋಪಿ ಶಬ್ದಾಃ ಉಪಸಂಗ್ರಾಹ್ಯಾಃ (ಶಬ್ದಾನು. ೧೦೫ ವ್ಯಾಖ್ಯಾ). [ ? ]

**ಚೆಳ್ಳ** 'ಸೆಳ್ಳ' ನೋ.

**ಚೆಳ್ಳಕಾಯಿ** 'ಚೆಳ್ಳೆಗಾಯ್' ನೋ.

**ಚೆಳ್ಳಮರ** (ನಾ). ಒಂದು ಬಗೆಯ ಮರ; ಚಳ್ಳೆಮರ ; ಶ್ಲೇಷ್ಮಾತಕ : ತೆಂಕಣ (ಲು) ಪುತ್ತು ಚಿಳ್ಳ (ಚೀಳ) ಮರದಿಂ ಬಡಗಲ್ ವ (ಪ್ಪಗಳಾ) ದವಾಱು ಕೆಯ್ಯನಾದಂ ಕುಟಿಮಾಟ್ಟುದು (ಅಟ್ಟಮ. ೧೧-೨೩).

[ ಚೆಳ್ಳ (<ಸೆಳ್ಳ) + ಮರ$_1$ ]

**ಚೆಳ್ಳು$_1$** 'ಸೆಳ್ಳ' ನೋ.

**ಚೆಳ್ಳು$_2$** 'ಸೆಳ್ಳು$_1$' ನೋ.

**ಚೆಳ್ಳುಗುರ್** 'ಸೆಳ್ಳುಗುರ್ ನೋ.

**ಚೆಳ್ಳುಗುರು** 'ಸೆಳ್ಳುಗುರ್' ನೋ.

**ಚೆಳ್ಳೆ** 'ಸೆಳ್ಳ' ನೋ.

**ಚೆಳ್ಳಿಗಾಯ್,** ಚಲ್ಲಗಾಯ್, ಚೆಳ್ಳಕಾಯಿ (ನಾ). ಉಪ್ಪಿನಕಾಯಿಗೆ ಉಪಯೋಗಿಸುವ ಚಳ್ಳೆಮರದ ಕಾಯಿ : ಗಾವಟೆ ಬೆಲ್ಲವತ್ತ ವರ ಮಾದಲವಂಬಟೆ ಚಿಲ್ಲು ಚೆಳ್ಳಿಗಾಯ್ [ಪಾಠಾಂ. ಚೆಳ್ಳ ಚಿಲ್ಲಕಾಯ್] ಮಾವಿನ ಕಾಯ್ಗಳೊಪ್ಪುವರಗಪ್ಪುರ ಮಾಗುಳಿಗಳ್ (ಸೂಕ್ತಿಸು. ೧೧-೮೭) ; (ನಳಚಂ. ೪೬೨ ನೋ). **ಚಲ್ಲಗಾಯ್ :** ಪಿಪ್ಪಲಿ ಚ[ಪಾಠಾಂ. ಚೆ]ಲ್ಲಗಾಯ್ ಮೆಣಸು ಮಾಗುಳಿವೇರ್ವೊಳೆಯಲ್ಲವೇಲೆ . . . ಆದಿಯಾದುಪ್ಪಿನಕಾಯ್ಗಳಂ ಮಗಮಗಿಪ್ಪುವನಿಕ್ಕಿದನಬ್ಜಪತ್ರದೊಳ್ (ಲೀಲಾವ. ೫-೭೦). **ಚೆಳ್ಳಕಾಯಿ :** "ದ್ವಿಕುತ್ಸಿತಃ–ಚೆಳ್ಳಕಾಯಿ" (ಒಷಧಿ. ೭೬). [ಚೆಳ್ಳ (<ಸೆಳ್ಳ)+ಕಾಯ್₄]

**ಚೆಱಪು** 'ಸೆಱಪು' ನೋ.

**ಚೇಗಿ** 'ಚೇಗೆ' ನೋ.

**ಚೇಗು₁** 'ತೇಗು₄' ನೋ.

**ಚೇಗು₂** (ನಾ). ೧. ಗಿಡ ಮರಗಳ ಮಧ್ಯದ ತಿರುಳು ; ಕೆಚ್ಚು : "ಕೆಚ್ಚು ತಂತುವಾಯಕ್ರಿಯಾಯಾಂ (ನೇಯ್ಗೆಯ ಕೆಲಸ) ತರುಸಾರೇ ಚ (ಚೇಗು)" (ಶಮಧಾ) ; "ಸಾರಃ ಮಜ್ಜಾ – ೨ ಗಿಡದಲ್ಲಿರುವ ಚೇಗಿನ ಹೆಸರು ; ಚೇಗು ಅಂದರೆ ಬಲಿತಿರುವಿಕೆ" (ಸಿದ್ಧಾಂತಿ. ೯೯). ೨. ಸಾರ ; ಸತ್ತ್ವ ; ಗಟ್ಟಿಯಾದುದು ; ಸತ್ತ್ವಯುತವಾದುದು: ಕೂತದ್ದು ಕುಟ್ಟಿ, ಗೇದದ್ದು ಚೇಗು (ಗಾದೆ). 'ಚೇಗೇರು' ಪರಾ. ೩. ಪಾತ್ರೆಯ ತಳಕ್ಕೆ ಅಂಟಿಕೊಂಡಿರುವ ಕಪ್ಪುವಸ್ತು : ಈ ಬಾಣಲೆಯ ತಳಕ್ಕೆ ಚೇಗು ಏರಿಬಿಟ್ಟಿದೆ. ಉಜ್ಜಲಿಕ್ಕೆ ಆಗುವುದಿಲ್ಲ (ರೂಢಿ). ೪. ಒಂದು ಬಗೆಯ ಹುಲ್ಲು (?) : ಆ ವಿಶಾಲವಾದ ಹಣೆಯಂಚಿನ ಹುಬ್ಬುಗಳು ಚೇಗಿನಂತೆ ಬೆಳೆದು ಪುಷ್ಟವಾಗಿ ಇಳಿದುಬಿದ್ದು ಕಣ್ಣಿಗಡ್ಡವಾಗುತ್ತಿದ್ದ ಕಾರಣ . . . ಎತ್ತಿ ಕಟ್ಟಿರುತ್ತಿದ್ದನು (ನವತಿ. ೫೨). 'ಚೇಗಂಗಡ್ಡೆ' ಪರಾ.

[ದೇ.೫ ತಮಿ. ಚೇಗು, ಚೇಗ; ತೆಲು. ಚೇಗ, ಚೇವ]

**ಚೇಗು₃** 'ಚೇಗೆ' ನೋ.

**ಚೇಗುಗಡ್ಡೆ** (ನಾ). ಒಂದು ಬಗೆಯ ಮೂಲಿಕೆ : ಚೇಗುಗಡ್ಡೆ, ಅಚೂರ ಮುಳ್ಳು (ಮೃಜಿಗಿ. ೭೭-೦೫೭೪). [ಚೇಗು₂ + ಗಡ್ಡೆ]

**ಚೇಗೆ,** ಚಾಗೆ, ಚೇಗಿ, ಚೇಗು₃, ಛೇಗಿ, ಛೇಗೆ (ನಾ). ಕೇಡು ; ಭಂಗ ; ನಷ್ಟ ; ನಾಶ : ಆಗಿಗೆ ಮನಗೊಡದೆ ಚೇಗೆಗೆ ದುಃಖಿತನಾಗದೆ ಕಂಡ ಕಂಡವರಲ್ಲಿ ಬಂದುಗೆಲಿಯದೆ (ಬೋಳಮಾ. ೧೧೯-೪೭೭) ; ಆಗುಮಾಡಿದ ಸುಕೃತವಂ ನೆಱೆ ಚೇಗೆಯಾಗಲು ಬಗೆದೆ ಶಿವಶಿವ (ಬಸಪು. ೨೪-೨೫) ; ಆಗು ಹೋಗು ಚೇಗೆಗಳೆಂಬ ಕುಳಿ ತೆವರು ನೋಡಾ (ಸಿದ್ಧೇವ. ೧೮೦-೫೪೮) ; ಮಹೇಶ್ವರನ ತಿರುಪಿನೊಳುರು ಭುಜೋದ್ಭೂತ ವಾಯುವಿಂದೆ ಚೇಗೆಯಾದುವು [ಪಾಠಾಂ. ಜೋಗಿಯಾದಂ] ಚರಾಚರವು (ಚಬಪು. ೦೨-೨೦). 'ಆಗುಚೇಗೆ' ಪರಾ. **ಚಾಗೆ:** ಭಕ್ತಂಗೆ ಆಗೂ ಇಲ್ಲ ಚಾಗೆ[ಪಾಠಾಂ. ಚೇಗೆ]ಯೂ ಇಲ್ಲ (ಚನ್ನವ.ಶ. ೬೩೩-೧೪೦೮). **ಚೇಗಿ:** 'ಆಗುಂಚೇಗಿ' ಪರಾ. **ಚೇಗು₃:** ತನಗೆ ಮುನಿವವರಿಗೆ ತಾ ಮುನಿಯಲೇಕಯ್ಯಾ ತನಗಾದ ಆಗೇನು ಅವರಿಗಾದ ಚೇಗೇನು (ಬಸವ. ೨೪೮). **ಛೇಗಿ:** ಈಗ ಬಹುವಿಧ ದುರ್ನಿಮಿತ್ತಗಳಾಗುತಿದೆ ನಿಜಪತಿಯನಿಂದೇಕಗಲಿದೆನೊ ತಾನು ಛೇಗಿಯಾಗದೆ ಬಿಡದು ಬಱೆದೇ ಹೋಗದೆನ್ನಯ ಬಯಕೆ (ಉತ್ತರಾ. ೨೯-೩೩). **ಛೇಗೆ :** ಆಗಿಗೆ ಮುಯ್ಯಾಂತು ಛೇಗೆಗೆ ಹಲುಬುತ್ತ ಸುಖದುಃಖವೆಂಬ ಉಭಯವ ಸಂಗಿಸಾಣದೆ (ಬಲೀಶ್ವ. ೪೭) ; ಆಗಾವುದು ಬಿಡದಿದ್ದಡೆ ಛೇಗೆಯಾವುದು (ಕಲ್ಯಾಣಾಂ. ೪೯); ಆಗಿಗೆ ಮುಯ್ಯಾಂತು ಛೇ[ಪಾಠಾಂ. ಚೇ]ಗೆಗೆ ಮನಗುಂದುವವನಲ್ಲ (ಅಂಬಿವ. ೩೮೭-೧೪೫೩). 'ಆಗುಛೇಗೆ' ಪರಾ.

**ಚೇಗೆಮಾಡು = ಕೆಡಿಸು ;** ಬಿಟ್ಟುಬಿಡು : ಸುವ್ರತವನು ಚೇಗೆಮಾಡದೆ ಪಲಕಾಲ ತಪಸುಗೆಯ್ದು ನೀಗಿದನಾ ಮುನಿ ತನುವ (ನೇಮಿಸಂ. ೭-೭೮).

[<ಪ್ರಾ. ಛೇಅ./ಸಂ. ಛೇದ]

**ಚೇಗೇರು** (ಕ್ರಿ). ಸತ್ತ್ವ ಹೆಚ್ಚಾಗು; ಹುರಿಗೊಳ್ಳು: ಕಷ್ಟಗಳು ಹೆಚ್ಚಿದಷ್ಟೂ ಅವನ ಕೆಚ್ಚೆದೆಯು ಚೇಗೇರಿತು (ಕೃಮುಹ. ೪೦).

[ಚೇಗು₂ + ಏರು₁ (<ಏಱ್₁)]

**ಚೇಗೊಡತಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : ಆಡುಸೋಗೆ ಸೊಪ್ಪಿನ ರಸ, ಬಳ್ಳಿಸೊಂಡೆ ಕಷಾಯ . . . ಚೇಗೊಡತಿಸೊಪ್ಪಿನ ರಸ (ಸಕವೈ. ೨೨೭). [ಚೇಗೊಡತಿ₀ + ಸೊಪ್ಪು₃]

**ಚೇಟ** (ನಾ). ಸೇವಕ ; ಆಳು ; ದಾಸ : "ಚೇಟಃ, ಭುಜಿಷ್ಯಃ, ಕಿಂಕರಃ– ಈ ೩ ಭಂಟು" (ಹಲಾಯು. ೬೦-೨೦೦) ; ನಿಮ್ಮ ಚೇಟರು ಇಬ್ಬರೊಳಗೆ ಕಲಹ ಇದೆ (ದೇವಮ. ೧೧೧). [ಸಂ.]

**ಚೇಟಕ** (ನಾ). = ಚೇಟ. [ಸಂ.]

**ಚೇಟಿ** (ನಾ). ಹೆಣ್ಣಾಳು ; ದಾಸಿ ; ಸೇವಕಿ : "ಚೇಟೀ ಸಮಾಖ್ಯೆ ದಾಸಿದಲಕ್ಕುಂ" (ವಸ್ತುಕೋ. ೫೪-೦೨) ; ದ್ರೌಪದಿಯ ಕೆಲದೊಳಿರ್ದ ಸುಂದರ ಮಾಲೆಯೆಂಬ ಚೇಟಿ (ಪಂಪಭಾ. ೩-೫೩ ವ); ದಾಸೋಹವನಲರ್ಚುವ ಚೇಟಿ (ಬಸಪು. ೬-೦೦) ; ಪಾಡಿನೊಳ್ಪಂ ಕೇಳ್ದು ಅಗಣಿತ ಚೇಟಿಯರ್ ನೆರೆದರ್ (ಅದ್ಭುತ. ೦೯-೦೫). [ಸಂ. ಚೇಟೀ]

**ಚೇಟಿಕೆ** (ನಾ). = ಚೇಟಿ : ಮುಂದೆ ಬಂದೇಱಿದ ಚೆನಗನ ಡಿಯ ಚೇಟಿಕೆ (ಪಂಪಭಾ. ೯-೦೦೦). [ಸಂ. ಚೇಟಿಕಾ]

**ಚೇಡಿ** 'ಚೇಡೆ' ನೋ.

**ಚೇಡಿಸು** 'ಛೇಡಿಸು' ನೋ.

**ಚೇಡುಬೀರ** (ನಾ). ಒಂದು ಬಗೆಯ ಗಿಡ: ಸಿತ್ತುಂಡೆ ಗಿಡ, ಸಿಡಿಗೋಲಿ, ಹನುಮಂತ ತೊಪ್ಪಲು, ಚೇಡುಬೀರ (ಮೃಜಿಗಿ. ೨೦-೩೯೩). [?]

**ಚೇಡೆ, ಚೇಡಿ** (ನಾ). ೧. ಮಾಟ, ಮದ್ದು ಮುಂತಾದ ಕ್ಷುದ್ರಕರ್ಮಗಳ ಅಧಿದೇವತೆ ; ಬೇತಾಳ : (೩). **ಚೇಡಿ : ೨.** ಮಾಟ ; ಮಂತ್ರ ; ಯಕ್ಷಿಣೀವಿದ್ಯೆ : ಸುಡುಗಾಡ ಸಿದ್ಧನ ನಾಡಾವದು ಗೊತ್ತಿಲ್ಲ ಓಡಿಸಿ ಒಯ್ದಾನ ಹಸಗೂಸು ಅವನೆಂಥ ಚೇಡಿ ಬಲ್ಲವನಿರಬೇಕು (ಸಿದ್ಧಪು. ೪-೫೮). [←ಮರಾ. ಚೇಡಾ]

**ಚೇಣ, ಚಾಣ, ಚಾನ** (ನಾ). ಕಲ್ಲು ಮೊದಲಾದುವನ್ನು ಒಡೆಯುವ ಉಳಿ ; ಟಂಕ: ಜನರ ನೆರವಿಯೆಂಬ ಚೇಣದಿಂ ದೇವಗತಿಯೆಂಬ ನಿಗಳಮಂ ಛೇದಿಸದೆ (ಧರ್ಮಾಮೃ. ೭-೯೭) ; ಉಕ್ಕಿನ ಘಟ್ಟಿಯ ಮೃತ್ತಿಕೆಯು ಚೇಣ ಕಡಿಯಿತ್ತು (ಬಿಬ್ಬಬಾ. ೬೦-೨೨೫) ; ಉಕ್ಕಿನ ಬಲು ಚೇಣವೂ ಸಿಡಿದ ಕುಡುಹುಗಳೊ (ಸೂಬಸೂಲೀ. ೭-೪೩). **ಚಾಣ :** ಅಱೆಯಂ ಸೀಳುವೊಡಾನೆ ಮೆಟ್ಟಲಹುದೇ ಚಾಣಂಗಳಿಂದಲ್ಲವೇ (ಸೋಮೇಶ. ೭೬); ಕೇವಲ ಕಲ್ಲಾಗಿದ್ದ ಅದನ್ನು ಯಾವ ಚಾಣವು ಕಲೆಯ ನೆಲೆವನೆ ಮಾಡಲಿತ್ತೋ (ಶಾಬಲ. ೯೯). **ಚಾನ :** ದಾನವೆಂದರೆ ತಲೆಯ ಚಾನದಲಿ ಕಡಿದಂತೆ (ಸರ್ವಜ್ಞ. ೩೬೨) ; ಆ ಕಲ್ಲುಗಳನ್ನು ದೊಡ್ಡ ಸುತ್ತಿಗೆಯಿಂದ ಚಾನಗಳಿಂದ . . . ಒಡೆದು (ಕೃಷಿಪ್ರ. ೪೦). [ದೇ.೫ ತುಳು. ಚೇಣು, ಚೇನು ; ತೆಲು. ಸೇನ]

**ಚೇಣಪಟ್ಟಿಸು** (ನಾ). ಜಟ್ಟಿಕಾಳಗದಲ್ಲಿ ಒಂದು ವರಸೆ : ಸಂದ ಕೊಕ್ಕಸ ಗುಂಡು ಗೋಣಿಯು ಮಿಂದೆಪಟ್ಟಿಸು ಚೇಣಪಟ್ಟಿಸುವೆಂದೆನಿಪ ಮಿಂದಾಣದಲಿ ಕಾದಿದರು ಜಟ್ಟಿಗಳೂ (ಸಾಳ್ವಭಾ. ೨೨-೭೨). [?]

**ಚೇಣಿ₁** (ನಾ). ೧. ನೀರಿನಲ್ಲಿ ಬೆಳೆಯುವ ಒಂದು ಬಗೆಯ ಗಟ್ಟಿಯಾದ ಹುಲ್ಲು : ಚೇಣೀಯು ಹುಲ್ಲು ತುಳಕೊಂಡು ಮಾದೇವ ಈದ್ದುಳಿಯ ಬೇಟೆ ಹೊರಟಾನೊ (ಹಳ್ಳಿಯ. ೩೦); ನದಿಯ ದಡದಲ್ಲಿದ್ದ ಚೇಣಿಯಲ್ಲಿ ಹಕ್ಕಿಗಳು ಕುಳಿತಿದ್ದವು (ಮಹಸ. ೫೦); ಚೇಣಿಯ ಚಾಪೆಗಳು ಸಾಲದುದರಿಂದ ಹಜಾರದ ಒಂದು ಕಡೆಗೆ . . . ಈಚಲು ಚಾಪೆಗಳನ್ನು ಹಾಸಿದ್ದರು (ಗರುಡಾ. ೬೨). ೨. ಒಂದು ಬಗೆಯ ಕಬ್ಬು. 'ಚೇಣಿಕಬ್ಬು' ಪರಾ. [?]

**ಚೇಣಿ₂** 'ಕೇಣಿ₃' ನೋ.

**ಚೇಣಿ₃** (ನಾ). (?) : ಹತ್ತೂಕಾಲೇಣಿ ಮುತ್ತಿನ ಚೇಣಿ ಮತ್ತಾರಿಗೆ ಹೂವ ಕುಯ್ಯಾಯೊ ನೀನು (ಹಳ್ಳಿಪಾ. ೩೦). [?]

**ಚೇಣಿಕಬ್ಬು** (ನಾ). ಒಂದುಂ ಬಗೆಯ ಕಬ್ಬು : ರಸದಾಳಿ ಮತ್ತು ಪಟ್ಟಾಪಟ್ಟಿ ಮತ್ತು ಚೇಣಿಕಬ್ಬಲ್ಲದೆ ಈಚಿಗೆ ಅನೇಕ ತಳಿ ಕಬ್ಬುಗಳನ್ನು ಪ್ರಚಾರಕ್ಕೆ ತಂದಿರುತ್ತಾರೆ (ವ್ಯವಮು. ೩೦). [ಚೇಣಿ$_1$ + ಕಬ್ಬು$_2$ (<ಕರ್ಬು$_1$)]

**ಚೇಣಿಮಂದಲಿಗೆ** (ನಾ). ಚೇಣಿಹುಲ್ಲಿನಿಂದ ಮಾಡಿದ ಚಾಪೆ: ಒಳಗಿನಿಂದ ಒಂದು ಚೇಣಿಮಂದಲಿಗೆಯನ್ನು ತಂದು ಜಗುಲಿಯ ಮೇಲೆ ಹಾಕಿದಳು (ಹಂಗಾಳ್ಕ. ೪೯). [ಚೇಣಿ$_1$ + ಮಂದಲಿಗೆ]

**ಚೇತ** (ನಾ). ಮನಸ್ಸು ; ಚೇತಸ್ಸು : "ಮನಮಾಶಯಮಂತಃಕರಣ ನಾಮವುದೆ ಚಿತ್ತಮಂತೆ ಚೇತಂ ಸ್ವಾಂತಂ ಮನದಿಡುವಟಿಯೊಳ್ ವರ್ತಿಕುಂ" (ವಸ್ತುಕೋ. ೭೦-೨೩) ; ಸುಚರಿತ್ರತೆಯಿಂ ಸಮಸಂದ ಸೌಷ್ಠವಂ ಚೇತದೊಳುಣ್ಮೆ ಕನ್ನೆ ತಳೆದಳ್ ಕಿಲಿಕಿಂಚಿತಭಾವಚೇಷ್ಟೆಯಂ (ಚಂದ್ರಪು. ೩-೧೨೨) ; ಪ್ರಭುದೇವದೇವನನಿಶಂ ರಾಜಿರ್ಕೆ ಮಚ್ಚೇತದೊಳ್ (ಹಮ್ಮೀರ. ೧-೧೧). [<ಸಂ. ಚೇತಸ್]

**ಚೇತಕಿ** (ನಾ). ಅಳಲೆಕಾಯಿ ; ಹರೀತಕಿ : "ಚೇತಕಿ ಶಿವೆ ಹೈಮವತಿ ಹರೀತಕಿ" (ವಸ್ತುಕೋ. ೩೩-೧೨). [ಸಂ. ಚೇತಕೀ]

**ಚೇತನ** (ಗು). ೧. ಇಂದ್ರಿಯಗ್ರಹಣಶಕ್ತಿಯುಳ್ಳ ; ಪ್ರಜ್ಞೆಯುಳ್ಳ. ೨. ಜೀವಂತವಾದ ; ಸಜೀವವಾದ. 'ಚೇತನ ಪ್ರತಿಮೆ' ಪರಾ. ೩. ಸ್ಪಷ್ಟವಾದ ; ಪ್ರಮುಖವಾದ ; ಉತ್ತಮವಾದ. (ನಾ). ೪. ಮನಸ್ಸು; ಬುದ್ಧಿ ; ಪ್ರಜ್ಞೆ : ಅವನಾಡುವ ಮಾತುಗಳನ್ನು ಆ ನಿರ್ಮಲ ಚೇತನದಿಂದ ಹೊರಬರುವ ಅನುಭವಪೂರಿತ . . . ಮಾತುಗಳನ್ನು ಸುಮ್ಮನೆ ಆಲಿಸಬೇಕು (ಕುಹುಸಂ. ೧೧೧). ೫. ಆತ್ಮ ; ಜೀವ : "ಕ್ಷೇತ್ರಜ್ಞಂ ಚೇತನನಾತ್ಮಂ" (ವಸ್ತುಕೋ. ೧೮-೩) ; ಓ ನನ್ನ ಚೇತನ ಆಗು ನೀ ಅನಿಕೇತನ (ಅನಿಕೇ. ೬೦-೧). ೬. ಪರಮಾತ್ಮ : ವಿಶ್ವಮಂ ಸರ್ವತ್ರ ತುಂಬಿ ದಂತರ್ಯಾಮಿ ಚೇತನಂ ತಾ ಪ್ರೇಮಾತ್ಮವಾಗಿರ್ಪುದು (ಶ್ರೀರಾಮಾ. ೧೧-೨೪೯). ೭. ಚೈತನ್ಯವುಳ್ಳುದು; ಜೀವಿ; ಪ್ರಾಣಿ. ೮. ಚಟುವಟಿಕೆ; ಚೈತನ್ಯ. ೯. ಶಕ್ತಿ; ಸಾಮರ್ಥ್ಯ: ನಷ್ಟಹೊಂದಿದ ಮಿದುಳಿನ ಭಾಗದಿಂದ ಚೇತನವನ್ನು ಪಡೆಯುವ ದೇಹದ ಅಂಗಗಳು ನಿಸ್ತೇಜವಾಗಿ ನಿರುಪಯೋಗವಾಗಬಹುದು (ಮನೋಲಂ. ೧೦೦); ನಿಮ್ಮನ್ನು ಮಾತ್ರವಲ್ಲ ನಿಮ್ಮ ಹೆಂಡತಿ ಮಕ್ಕಳನ್ನು ಕೂಡಾ ಸಾಕುವಷ್ಟು ಚೇತನ ನನಗಿದೆ (ಭ್ರಮಣ.೧೯೭). [ಸಂ.]

**ಚೇತನಂಗುಂದು, ಚೇತನಗುಂದು** (ಕ್ರಿ). ಶಕ್ತಿಗುಂದು ; ಚೈತನ್ಯ ಉಡುಗು : ಅರುಮರುಹಿನಿಂ ಚೇತನಂಗುಂದಿ ಭ್ರಮಣೆಯೊಳೊಂದಿ ಮಲಗುತ್ತೆ (ನವಮೋ. ೧೩-೬). **ಚೇತನಗುಂದು:** ಅಹಿನಾಥ ಮೂರ್ಛೆಯ ನಾಂತ ತಳಕೆ ಚೇತನಗುಂದಿ ದಿಗ್ದಂತಿ ಮಂಡಿಸಲಾಗ ಭೂತಲವೆಲ್ಲ ಕಂಪಿಸಿತು (ಮೋಹತ. ೩೮-೬೨). [ಚೇತನ + ಕುಂದು$_1$]

**ಚೇತನಂಗೆಡು, ಚೇತನಗಿಡು** (ಕ್ರಿ). ಚೈತನ್ಯವಿಲ್ಲದಂತಾಗು; ಜಡವಾಗು; ಪ್ರಜ್ಞೆತಪ್ಪು ; ಶಕ್ತಿಗುಂದು : ನಿಂದಳಯ್ ಪ್ರಕೃತಿ ತಾಂ ಜನಕಜಾ ಹೃತ್ಕೃತಿಯೆನಲ್ ಪ್ರತಿಯೆನಲ್ ಚೇತನಂಗೆಟ್ಟು ! (ಶ್ರೀರಾಮಾ. ೨೪೪-೪೩೯). **ಚೇತನಗಿಡು :** ಚೇತನಗಿಡದೆ ಮುಪ್ಪಿಕನಾಗಿ ನಿಲ್ಲೆಂದಾತನ ಕರೆದು ಬೊಬ್ಬಿಱಿದ (ಮೋಹತ. ೧೨-೮೩). [ಚೇತನ + ಕೆಡು$_1$]

**ಚೇತನಂಬಡೆ, ಚೇತನವಡೆ** (ಕ್ರಿ). ಚೇತರಿಸಿಕೊಳ್ಳು ; ಚೈತನ್ಯವನ್ನು ಪಡೆ : ಆತನರಮನೆಪೊಗಲ್ ಬಸವನುಸಿರಾಡಿದುದು . . . ಸಮಿಪಕೆ ಬರಲ್ ತನು ಚೇತನಂಬಡೆದುದು (ಹಬಪು. ೬-೨೭). **ಚೇತನವಡೆ:** ದನುಜನ ಮಾಯೆಯೊಂದಿನಿಸು ಬೇಗದಿನೊರ್ಮೆಯೆ ಮಾಯಮಾಗೆ ಚೇತನ [ಪಾಠಾಂ. ನೆ]ವಡೆದು (ಚಂದ್ರಪು. ೩-೬). [ಚೇತನ + ಪಡೆ$_1$]

**ಚೇತನಗಿಡಿಸು** (ಕ್ರಿ). ಚೈತನ್ಯಗುಂದಿಸು ; ಶಕ್ತಿಗುಂದಿಸು : ಚೇತನಗಿಡಿಸಿ ಕೊಲ್ಲುತೆ ಕೊಂಡು ಪೋಪೆವುದೂತರ ನೋಡುತೆಯ್ದುದಲ್ (ಮೋಹತ. ೨೯-೧೪). [ಚೇತನ + ಕಿಡಿಸು (<ಕೆಡಿಸು)]

**ಚೇತನಗಿಡು** 'ಚೇತನಂಗೆಡು' ನೋ.

**ಚೇತನಗುಂದು** 'ಚೇತನಂಗುಂದು' ನೋ.

**ಚೇತನತ್ವ** (ನಾ). ಚೈತನ್ಯ : ಆತ್ಮವಸ್ತುಗಳಿಗೆ ಚೇತನತ್ವ, ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವ ಮೊದಲಾದ ವ್ಯವಹಾರಗಳಿರುವುವು (ಹಿಂದಸಾ. ೨೩೪). [ಸಂ.]

**ಚೇತನದಪ್ಪು** (ಕ್ರಿ). ಚೈತನ್ಯ ಉಡುಗು ; ಮೈಮರೆ ; ಜಡವಾಗು : ಅಸಹಾಯರಾಗಿದ್ದ ಗಂಡಂದಿರನ್ನು ದ್ರೌಪದಿಯು ನೋಡುತ್ತ ಚೇತನದಪ್ಪಿ ದಂತಿರಲು (ವಚಭಾ. ೯೮). [ಚೇತನ + ತಪ್ಪು$_1$]

**ಚೇತನದಾಯಕ** (ಗು). ೧. ಚೈತನ್ಯವನ್ನು ಕೊಡುವ ; ಉತ್ಸಾಹಕರವಾದ. (ನಾ). ೨. ಚೈತನ್ಯವನ್ನು ಕೊಡುವಂತಹುದು: ಇವು ಆಹಾರ ವಸ್ತುಗಳಲ್ಲ ; ಚೇತನದಾಯಕಗಳು (ಆರುಶಾ. ೮೦). [ಸಂ.]

**ಚೇತನಧರ್ಮ** (ನಾ). ಚೈತನ್ಯವುಳ್ಳ ಅಥವಾ ಸಜೀವವಾದ ವಸ್ತುಗಳ ಗುಣ : ಅನುಗತಮಪ್ಪಂತಿರೆ ಚೇತನಧರ್ಮಂಗಳನಚೇತನಾರ್ಥಂಗಳೊಳಂ . . . ವಿವರ್ಣಿಪರರೆಬರ್ (ಕಾವ್ಯಾವ. ೯೩೨). [ಚೇತನ + ಧರ್ಮ]

**ಚೇತನಪ್ರತಿಮೆ** (ನಾ). ಸಜೀವವಾದ ಬೊಂಬೆ,–ಪ್ರತಿಮೆ : ಶ್ರೀತರುಣ ವಲ್ಲಭಗೆ ಜೀವರು ಚೇತನಪ್ರತಿಮೆಗಳು (ಹಸಾರ. ೨೪-೧೭). [ಚೇತನ + ಪ್ರತಿಮೆ]

**ಚೇತನಭಾವ** (ನಾ). ಚೈತನ್ಯವಿರುವಿಕೆ : ತನಮಿಕೆಯುಮೆಂಬಿವುಂ ಚೇತನ ಭಾವದೊಳಕ್ಕುಂ (ಕಾವ್ಯಾವ. ೩೪೩) ; ಪ್ರಕಟಂ ಚೇತನಭಾವದೊಳಿಕೆ ತನಮುಮುಮೆಯಕ್ಕುಂ (ಶಮುದ. ೨೦೦). [ಚೇತನ + ಭಾವ$_2$]

**ಚೇತನವಡೆ** 'ಚೇತನಂಬಡೆ' ನೋ.

**ಚೇತನಾಚೇತನ** (ಗು). ಸಜೀವವಾದ ಮತ್ತು ನಿರ್ಜೀವವಾದ : ಮರ, ಗಿಡು, ಬಳ್ಳಿ . . . ಕನ್ನಡಿ, ಕಳಸ ಇಂತಪ್ಪ ಚೇತನಾಚೇತನವಸ್ತುಗಳೆಲ್ಲಂ ನಪುಂಸಕಮೆ (ಶಮುದ. ೯೦ ಪ್ರಯೋ); ಚೇತನಾಚೇತನಾತ್ಮಕವಾದ ಪ್ರಪಂಚದಲ್ಲಿ ಇಪ್ಪತ್ತೈದು ತತ್ವಗಳಿವೆ (ಭಾರದ. ೧೨೩). [ಚೇತನ + ಅಚೇತನ]

**ಚೇತನಿಸು** (ಕ್ರಿ). ಚೈತನ್ಯವನ್ನು ಪಡೆ ; ಜೀವತುಂಬಿಕೊಳ್ಳು : ಚಿತ್ರದ ಬೊಂಬೆಯು ಹಾಗೆ ಎಲ್ಲಕ್ಕೆ ಆತ್ಮನಿಂದ ಚೇತನಿಸಿ ನಡೆವುತ್ತಿವೆ (ಮುದೇವ. ೨೭೭-೩೦). [ಚೇತನ + – ಇಸು$_3$]

**ಚೇತನೆ** (ನಾ). ೧. ಪ್ರಜ್ಞೆ ; ಎಚ್ಚರ : ಎಷ್ಟೋ ಹೊತ್ತಿನವರೆಗೆ ಪ್ರಯತ್ನಿಸಿದ ಬಳಿಕ ಫಾಕ್ಸನಿಗೆ ತುಸು ಚೇತನೆಯುಂಟಾಯಿತು (ಅಂಬಿಳ. ೧೬೦). 'ಚೇತನೆಗೊಳ್', 'ಚೇತನೆವಡೆ' ಪರಾ. ೨. ಗ್ರಹಣಶಕ್ತಿ ; ಬುದ್ಧಿ ;ಆಲೋಚನಾ ಸಾಮರ್ಥ್ಯ. ೩. ಚೈತನ್ಯ ; ಶಕ್ತಿ : "ಚೇತನೆ ಚೈತನ್ಯಂ" (ವಸ್ತುಕೋ. ೧೧೩-೨೭) ; ಔಷಧಕ್ಕಿಂತಲೂ ಅವಳ ಹಸನ್ಮುಖದ ಅಂತಃಕರಣದ ನೋಟವೇ ಅವರಲ್ಲಿ ಚೇತನೆಯನ್ನು ತುಂಬುತ್ತಿತ್ತು (ಕುಂಕುಮು. ೮೪). [ಸಂ. ಚೇತನಾ]

**ಚೇತನೆಗೊಳ್** (ಕ್ರಿ). ಚೈತನ್ಯವನ್ನು ಪಡೆ ; ಜಾಗ್ರತವಾಗು : ಯಾವನನು ಕಂಡೊಡನೆ ಜೀವ ಚೇತನೆಗೊಂಡು ಭಾವಭಕ್ತಿಯ ಪುಷ್ಪವಾಯಿತಾತ್ಮಾ ಸನದಿ (ಕೃಷ್ಣಾಕು. ೯-೦). [ಚೇತನೆ + ಕೊಳ್$_1$]

**ಚೇತನೆವಡೆ** (ಕ್ರಿ). = ಚೇತನಂಬಡೆ: ದನುಜನ ಮಾಯೆಯೊಂದಿನಿಸು ಬೇಗದಿ ನೊರ್ಮೆಯೆ ಮಾಯಮಾಗೆ ಚೇತನೆ[ಪಾಠಾಂ. ನ]ವಡೆದು (ಚಂದ್ರಪು. ೩-೬). [ಚೇತನೆ + ಪಡೆ$_1$]

**ಚೇತರಣೆ** (ನಾ). ಚೈತನ್ಯ ; ಪ್ರಜ್ಞೆ ; ಎಚ್ಚರ : ಬಟಲ್ದ ಮೆಯ್ಗೆ ಚೇತರಣೆಯಲರ್ಚೆ (ಚಂದ್ರಪು. ೮-೬೦). [<ಸಂ. ಚೇತಸ್]

**ಚೇತರಾಶಿ,** ಚಾತರಾಸಿ, ಜಾತರಾಸಿ (ನಾ). ಒಂದು ಬಗೆಯ ಮೂಲಿಕೆ : ಚೇತರಾಶಿ, ನೈದಿಲಗೆಡ್ಡೆ, ತುರುಚನ ಬೇರು, ಕೊತ್ತಂಬರಿ ಬೀಜ . . . ಹಿಪ್ಪಲಿ ಇಷ್ಟನ್ನು ಕಷಾಯವ ಕಾಸಿ ಕೊಡಿಸಲು ವಾತ, ಪಿತ್ತ, ಶ್ಲೇಷ್ಮಂ ಗಳಿಂದುಂಟಾದ ವಿಸರ್ಪ ಶಮನವಹುದು(ವೈದ್ಯಸಾ. I, ೩೩೪). **ಚಾತರಾಸಿ:** ಹಾವುಮೆಕ್ಕೆ ಬೇರು, ಚಾತರಾಸಿ, ಗೊರಟೆ, ನೆಲಗುಳ್ಳ ಈ ಬಗೆಗಳ ರಸವ . . . ಪಾಕಿ (ಸಕವೈ. ೧೫೩). **ಜಾತರಾಸಿ:** ಜಾತರಾಸಿ, ಸಹದೇವೀ . . . ಕಷಾಯವನಿಕ್ಕಿ ತೆಗೆದುಕೊಳ್ಳಲು ಶೀತಜ್ವರ ಪರಿಹಾರವಾಗುವುದು (ಸಕವೈ. ೬೫). [ ←ತೆಲು. ಚೇತರಾಸಿ, ಚೇದರಾಶಿ ]

**ಚೇತರಿಸು** (ಕ್ರಿ). ೧. ಚೈತನ್ಯವನ್ನು ಪಡೆ ; ಎಚ್ಚೆತ್ತುಕೊಳ್ಳು ; ಜಾಗ್ರತನಾಗು : ಕಿಱಿದು ಬೇಗಮನಿರ್ದು ತನ್ನಿಂ ತಾನೆ ಚೇತರಿಸಿ (ಪಂಪಭಾ. ೫-೧೫ವ); ಸೀತಾದೇವಿ ಕೇಳ್ದು ಮೂರ್ಛೆವೋಗಿ ಕಿಱಿದುಂ ಬೇಗದಿಂ ಚೇತರಿಸಿ (ಪಂರಾಮಾ. ೧೫-೭೫ ವ) ; ವಾತಜನ ಮೂಲಿಕೆಗೆ ಕಟಿಬಲ ಚೇತರಿಸಿದುದು (ಶಾಕಿರಾ. ೩೬-೨೦). ೨. ಎಚ್ಚರಿಸು ; ಜಾಗ್ರತೆಗೊಳಿಸು ; ಚೈತನ್ಯವನ್ನು ತುಂಬು: ಸಂಸಾರಾಸಾರತೆಯನಱಿದನುಂ ಮಹಾಸತ್ತ್ವನುಮಪ್ಪುದಱಿಂ ತನ್ನಂ ತಾನೆ ಸಂತೈಸಿಯುಂ ಚೇತರಿಸಿಯುಂ (ಪಂಪಭಾ. ೧೩-೩೦ ವ); ಪ್ರಪಂಚವನ್ನು ನಿನ್ನ ಹೃದಯದೊಲುಮೆಯಿಂದ ಚೇತರಿಸಿ ಬದುಕಿಸಿ ಬೆಳೆಯಿಸಬಲ್ಲ ಸೃಷ್ಟಿಯ ಮಾಯೆ ನೀನು ! (ಕಮನಿ. ೨೦೩).

**ಚೇತರಿಸಿಕೊಳ್ಳು** = ಎಚ್ಚೆತ್ತುಕೊಳ್ಳು ; ಪುನಃ ಚೈತನ್ಯವನ್ನು ಪಡೆ; ಮತ್ತೆ ಶಕ್ತಿಯನ್ನು ಪಡೆ : ಆ ತಳೋದರಿ ಬಳಿಕ ಮೆಲ್ಲನೆ ಚೇತರಿಸಿ ಕೊಂಡೆದ್ದು (ಕೊರರಾ. ೫-೩-೩೪) . [ ಚೇತರಣೆ + – ಇಸು$_3$ ]

**ಚೇತಸ್ಸು** (ನಾ). ೧. ಪ್ರಜ್ಞೆ ; ಬುದ್ಧಿಶಕ್ತಿ. ೨. ಮನಸ್ಸು ; ಚಿತ್ತ. ೩. ಜೀವ ; ಆತ್ಮ. [ ಸಂ. ಚೇತಸ್ ]

**ಚೇತೋಜಾತ** (ನಾ). ಮನಸ್ಸಿನಲ್ಲಿ ಹುಟ್ಟಿದವನು ; ಮನ್ಮಥ : ಚೇತೋಜಾತನ ಮೂರ್ತಿಗಾತನೆ ಮಿಗಿಲ್ (ಶಾಂತೀಶ್ವ. ೨-೩೪). 'ಚೇತೋಜಾತವೈರಿ', 'ಚೇತೋಜಾತಹರ' ಪರಾ. [ ಸಂ. (ಚೇತಸ್ + ಜಾತ) ]

**ಚೇತೋಜಾತವೈರಿ** (ನಾ). ಮನ್ಮಥನ ವೈರಿ ; ಶಿವ : ಅಂತಾತಗಂ ಬದುಕುಂಟೆ ಚೇತೋಜಾತವೈರಿಯ ಬಾರಿಯುಳಿ (ಬಸಪು. ೫೪-೪೬).
[ ಚೇತೋಜಾತ + ವೈರಿ ]

**ಚೇತೋಜಾತಹರ** (ನಾ). ೧. ಮನ್ಮಥನನ್ನು ಸಂಹರಿಸಿದವನು ; ಶಿವ. ೨. [ಛಂದ] ಗುರು ಅಕ್ಷರದ ಸಂಜ್ಞೆ : ಶೀತಕರಾಗ್ನಿ ಚೇತೋಜಾತಹರರ್ಕಳೆರ್ದಂದು . . . ಎನಿಪ್ಪಂ (ಛಂದೋಂಬು. ೨-೮೪). [ ಸಂ. ]

**ಚೇತೋನಂದನ** (ನಾ). ಮನಸ್ಸಿಗೆ ಆನಂದದಾಯಕವಾದುದು : ಜನ ಚೇತೋನಂದನಂ ನಂದನಂ ಲಳಿತ ಶ್ರೀಪರಿರಂಜನಂ ಜನಮೆನಲ್ ಚೆಲ್ವಾದು ದುರ್ವೀತಳಂ (ಜಗವಿ. ೨-೨). [ ಸಂ. (ಚೇತಸ್ + ನಂದನ) ]

**ಚೇತೋರಥ** (ನಾ). ಮನೋರಥ ; ಬಯಕೆ ; ಅಭೀಷ್ಟ : ಲೋಕಮಂ ರಕ್ಷಿಸುತಿರ್ಕ್ಕಾಪೂರ್ಣ್ಣಂ ಚೇತೋರಥಯುತಂ ಕಮಳಾಕಲ್ಪವಲ್ಲೀವಿಳಾಸಾವಸಥಂ ಶ್ರೀವಿಷ್ಣುದಂಡಾಧಿಪ ದಿವಿಜಕುಜಾತಂ (ಎಕ. V, ಬೇಲೂರು. ೧೬-೨೩ ; 1136). [ ಸಂ. (ಚೇತಸ್ + ರಥ) ]

**ಚೇತೋವೃತ್ತಿ** (ನಾ). ಮನಸ್ಸಿನ ವ್ಯಾಪಾರ ; ಚಿತ್ತವೃತ್ತಿ : ಶೋಱಿದ ಚೇತೋವೃತ್ತಿಯುಂ ಕೊರಗುವೆ (ಪುಷ್ಪಪು. ೩-೧೦೦).
[ ಸಂ. ( ಚೇತಸ್ + ವೃತ್ತಿ) ]

**ಚೇತೋಹಾರಿ** (ಗು). ಮನಸ್ಸನ್ನು ಸೂರೆಗೊಳ್ಳುವ ; ಮನೋಹರವಾದ ; ಸುಂದರವಾದ : ಸೊಗಯಿಕುಂ ಶೋಭಾವಹಂ . . . ಸಮಸ್ತ ಜನಚೇತೋಹಾರಿ ಶಯ್ಯಾಗೃಹಂ (ಪಂಚತಂ. ೧೨೩-೭) ; ತನ್ನೆದುರಾಗಿ ಕೆಳಗೆ ಪರ್ವಿರ್ದ ಚೇತೋಹಾರಿ ದೃಶ್ಯಮಂ ದರ್ಶಿಸುತ್ತಿರೆ(ಶ್ರೀರಾಮಾ. ೨೮೪-೧೭೫).
[ ಸಂ. ಚೇತೋಹಾರಿನ್ ]

**ಚೇತ್ರ** (ನಾ). ಪುಣ್ಯಸ್ಥಳ ; ಕ್ಷೇತ್ರ : ಪುಣ್ಯಗ್ರಹಂಗಳ ನಡುವಣ ಪವಿತ್ರ ಮಂಡಲದಂತೆ ಸುಕ್ಷೇತ್ರದೊಳ್ಕಾಶಿಚೇತ್ರದಂತೆ (ಚಬಪು. ೨೯-೮).
[ <ಸಂ. ಕ್ಷೇತ್ರ ]

**ಚೇದಿ** (ನಾ). ಒಂದು ದೇಶದ ಹೆಸರು : ಮರುವಂಗಾಂಗ ಕಳಿಂಗ . . . ಲಾಟ ಕರಹಾಟಚೇದಿ ಕಾಶ್ಮೀರ ಗುರ್ಜ್ಜರ . . . ಪ್ರಸಿದ್ಧಾವನೀಶ್ವರರಂ ಸಾಧಿಸಿ (ಎಕ. XI, ದಾವಣ. ೩-೧೦ ; 1121) ; ಸರ್ವವಿತ್ತವನದಕಿತನಿಲ ಜನಾಳು ಮುಂದಣ ಚೇದಿ ದೇಶದಲಿ (ಕುವ್ಯಾಸ. ೪-೨). [ ಸಂ. ]

**ಚೇದಿಯ** (ನಾ). ಬಸದಿ ; ಚೈತ್ಯ : ಪರಲೂರಾ ಚೇದಿಯದ ಬಱಿ ಪ್ರಭಾಚನ್ದ್ರ ಗುರಾವರ್ ಪಡೆದಾ[ರ್] (ಇಆ. XI, ೬೦-೨೦; ಸು. 6ನೆಯ ಶಕ) ; ಜೇಬುಳಗೇರಿಗೆ ಕಲಿಯಮ್ಮಗಾಮುಣ್ಡಗೆಯ್ದಾ ಚೇದಿಯಮಾನ್ಮಾಡಿಸಿದಾನ್ (ಸೌಇಇ. XI-I, ೫-೯; ?).
[ <ಪ್ರಾ. ಚೇಇಅ./ ಪಾಲಿ. ಚೇತಿಯ./ಸಂ. ಚೈತ್ಯ ]

**ಚೇಪರಿಸಿನ** (ನಾ). ಒಂದು ಬಗೆಯ ಅರಿಸಿನ ; ಕೆಂಪು ಅರಿಸಿನ : ಕಡೆದ ಚೇಪರಿಸಿನ ಕಸ್ತೂರಿ ಕುಂಕುಮವು (ಜಗೀತ. ೭೨). [ ಚೇಪು$_3$ + ಅರಿಸಿನ ]

**ಚೇಪರ್ದ** (ನಾ). ಒಂದು ಬಗೆಯ ಹದ್ದು ; ಕೆಂಪು ಹದ್ದು : ಕರಿಯ ಪರ್ದುಱಿಪರ್ದ ಚೇಪರ್ದ[ಪಾಠಾಂ. ಚೆಂಬರ್ದು]ರುತರದ ಹಡೆಹರ್ದು ಪೆರ್ವರ್ದವೞಿಯೊಳೊಪ್ಪಿದವೂ (ಸಾಳ್ವಭಾ. ೫-೨೩). [ ಚೇಪು$_3$ + ಪರ್ದು ]

**ಚೇಪಿಡು** (ಕ್ರಿ). ಅರಿಸಿನವನ್ನು ಇಡು : ಆ ಪಾಪಿಯಾ ಪರುಷಾಕ್ಷರಮಾಲಾಲಾಪಕ್ಕೆ ಕಿನಿಸ್ವನಗೇಳ್ದು ಚೇಪಿ[ಪಾಠಾಂ. ಜೇಪೆ, ಜೀವ, ಜೇ]ಡೆಯುದುಗು ಉರಗನಂತೆ ನಡುಗುತ ನಾ ಪಕ್ಕದೊಳು ತಲೆಯುಡುಗಿದೆ(ಕೊಬಸೋ. ೧೯-೪೫) ; ಚಂಪಕದ ಮೈಯವರ್ ಚೇಪಿಟ್ಟ ಚಿತ್ರಿನಿಯರೂ(ಪರಶು. ೮-೬).
[ ಚೇಪು$_3$ + ಇಡು$_1$ ]

**ಚೇಪು$_1$** 'ತೇಪು' ನೋ.

**ಚೇಪು$_2$,** ಸೇಪು (ನಾ). ಕೆಚ್ಚಲಿನ ಹಾಲು ತೊರೆಯುವುದು,–ಹೊರಚಿಮ್ಮುವುದು. 'ಚೇಪುಬಿಡು' ಪರಾ. **ಸೇಪು:** 'ಸೇಪುಬಿಡು' ಪರಾ.
[ ದೇ.ಶ ಕೊಡ. ತೆಲು. ಚೇಪು ]

**ಚೇಪು$_3$,** ಚೆಪ್ಪು (ನಾ). ೧. ಒಂದು ಬಗೆಯ ಅರಿಸಿನ; ಕೆಂಪು ಅರಿಸಿನ: ಚಿನ್ನದ ಒಲೆಗಳ ಕಾಂತಿಗಳಿಂದ ಹೊಳೆಯುತಲಿರುವ ಕೆನ್ನೆಗಳಲ್ಲಿ ಚೇಪನ್ನು ತೊಡಕೊಂಡು (ಶಿವದ. ೩೦-೮) ; ತಿಗಳರುಡುಗೆಯುಟ್ಟು ಸೊಗಸು ಚೇಪುಗಳಟ್ಟು ಅಗಿಲು ಚಂದನ ಗಂಧ ಧರಿಸಿ (ಸೌಂದರ್ಯ. ೩-೨೫). ೨. ಕೆಂಪು. 'ಚೇಪರ್ದ' ಪರಾ. **ಚೆಪ್ಪು:** ೨. ಕೆಂಪು ಚೆಪ್ಪು ಅರಿಸಿನ ಗಂಧ ಇಂಪಾದ ಹರಿನಾಮದ ಬಟ್ಟು (ನಾಪದ. ೩೦೪). [ ←ತಮಿ. ಚೇಪ್ಪು ]

**ಚೇಪುಬಿಡು,** ಸೇಪುಬಿಡು (ಕ್ರಿ). (ಎಮ್ಮೆ, ಹಸು ಮೊದಲಾದುವು) ಹಾಲಿನ ಧಾರೆಯನ್ನು ಬಿಡು ; ಸೊರುಬಿಡು : (ಶ). **ಸೇಪುಬಿಡು :** ಈವತ್ತು ಎಮ್ಮೆ ಯಾಕೋ ಸೇಪುಬಿಡಲೇ ಇಲ್ಲ (ರೂಢಿ).
[ ಚೇಪು$_2$ + ಬಿಡು$_1$ ]

**ಚೇಪೆ$_1$** 'ಚಾಪೆ' ನೋ.

**ಚೇಪೆ$_2$** 'ಸೀಬೆ' ನೋ.

**ಚೇಪೆಕಾಯಿ** 'ಸೀಬೆಕಾಯಿ' ನೋ

**ಚೇರ** (ನಾ). ೧. ಒಂದು ದೇಶದ ಹೆಸರು; ಪ್ರಾಚೀನ ಪಾಂಡ್ಯ, ಚೋಳ ಮತ್ತು ಚೇರ ಎಂಬ ಮೂರು ತಮಿಳು ರಾಜ್ಯಗಳಲ್ಲಿ ಒಂದು; ಈಗಿನ ಕೇರಳ : ಗೌಳ ಲಾಟ ಚೋಟ ಚೇರ ಪಾಂಡ್ಯ ಕಳಿಂಗಾದಿವಿಷಯಂಗಳಂ ಸಾಧಿಸಿ (ಧರ್ಮಾಮೃ. ೧೧-೭೦). ೨. ಚೇರದೇಶದ ರಾಜ : ಚೋಳನ ಜೂಬು ಘಾಳವನ ಗೋಣ್ಮುರಿ ಚೇರನನಟ್ಟಿ ತಿಂಬ ಮಾಕಾಳಿ (ಎಕ. VII, ಶಿವಮೊ. ೫-೭: 1218); ಚೇರಂ ವಾರುವಕೋಟಿಯಂ . . . ಕಳಿಪಿದಂ (ದಶಕು. ೮-೩೦). ೩. ಚೇರದೇಶದ ಜನ. ೧, ೩: ವೈವಾಹಗೇಹದ

ಸಿರಿಯುವೊಲು ಮಂಗಳಮಯುವು ಮಲೆಯಾಳ ಜನಪದದ ಅರಸಿನಂತಿರೆ ಚೇರಮಯವೆನಲುರವಣಿಸಿ ನೂಕಿದರು ನಿಡುವಕ್ಕರಿಕೆಗಳ ಗರುವಾಯಿಗಳ ಘನಮದದ ತೇಜಿಗಳ (ಕುವ್ಯಾಭೀ. ೬-೩೦). 'ಕೇರಲ' ಪರಾ. ೪. ಚೇರ ದೇಶದ ಕುದುರೆ ; ಮಾಸಲುಗೆಂಪು ಬಣ್ಣದ ಒಂದು ಬಗೆಯ ಕುದುರೆ: "ಅರುಣಂ ಮಾಸೆ ಚೀರನಕ್ಕುಂ" (ಮಂಗರಾ. ೮೧-೧೪); ಜನ್ನನಂ ನೀಲನನಳಗನಂ ತನ್ನಿ . . . ಚೀ[ಪಾಠಾಂ. ಚೇ]ರನನು ತನ್ನಿ (ಬ ಸ ಪು. ೫೯-೪೦) ; ಬಿಳಿಯುವು ಬಾಲದ ಮೊಳೆಗಳ್ ಬೆಳರ್ಗವಿಲುಂ ಮೆಯ್ಯು ಬಣ್ಣ ಮಾಡೊಡೆ ಚೀರಂ (ಅಶ್ವಶಾ. ೨-೧೧). [ಸಂ.]

**ಚೀರಟೆ** 'ತೇರಂಟೆ' ನೋ.

**ಚೀರಡಿ** (ನಾ). ಕಟ್ಟಡದಲ್ಲಿ ಕಂಬಗಳ ಮೇಲಿನ ಭಾಗ; ಲೋವೆ (?) : ಇಂಗೆಲ್ಗಳ ಸೊಗಯಿಪ್ಪ ತೊಲೆಗಳಿಂ ತೆಂಗಿನ ಸುಟಿಯಲೆಯಚ್ಚ ನೆಲೆಗಳಿಂ ಮಂಜು ಶಿರೀಷದ ಚೀರಡಿಯಿಂದಂ ಚೆಂಜಾಜಿಯ ಗೊಂಚಲ ಗುಡಿಯಿಂದಂ (ಉದ್ಭಟ. ೫-೨೦) : ಕೀರಣಿಗೆಲಸದ ಹದಿನಾಱು ಕಂಭ ಗಳ್ಚೀರಡಿ ಮದನಕೈಯಿಂದ ಸೇರಿದ ಮುತ್ತಿನ ಗದಗೆ ಬೋದಿಗೆಯಿಂದ ಸಾರಸಿಂಗರದೊಳೊಪ್ಪಿದುವು (ನಾಗಕು. ೨೭-೧೬). [?]

**ಚೀರಣಿಗ** (ನಾ). ಕೇರಳದೇಶದವನು : "ಕೇರಳನೆನಲ್ ಚೀರಣಿಗ [ಪಾಠಾಂ. ಚೇರಡಿಗ]ನಕ್ಕು" (ಶಾ ಗರಾ. ೧೧೨-೭).

[ಚೀರಣ$_0$ (<ಕೇರಳ) + – ಇಗ]

**ಚೀರಮಾನಿ** (ನಾ). ಒಂದು ಬಗೆಯ ಕುದುರೆ; ಚೀರದೇಶದ ಕುದುರೆ : "ಸಾಂಬ್ರಾಣಿ ಕಲಹತಿ ಚೀರಮಾನಿಯೆಂಬೀಸಱೊಳು ಪುಟ್ಟಲಾ ದೇಶ ವೆಸರಿಂದಲಾ ಕುದುರೆಗಭಿಧಾನಮಕ್ಕುಂ" (ಮಂಗರಾ. ೮೩-೨೦). [<ಚೀರ]

**ಚೀರಿ** 'ಕೇರಿ' ನೋ.

**ಚೀರಿಸು** 'ಸೇರಿಸು' ನೋ.

**ಚೀರು** (ನಾ). ಗುಹ್ಯರೋಗದಿಂದ ಉಂಟಾದ ತರುಡಿನ ಬಾವು,-ಊತ: "ಚೀರುಃ = ತರುಡು ಊದುವುದು" (ಕಾಶಕೌ. ೨೦೦).

ಚೀರುಇಳಿ = ಗುಹ್ಯರೋಗದಿಂದ ತರುಡು ಊದಿಕೊಂಡು ಜೋಲುಂ : (+). [←ತೆಲು. ಚೀರು, ಚೀಱು]

**ಚೀರುಕುಟಿ** (ನಾ). ಚೀರು ರೋಗದಿಂದ ಬರುವ ಬೊಕ್ಕೆ: ಚೀರುಕುಟಿಗೆ:– ಗಜ್ಜುಗದ ತಿರುಳು ನಾಲ್ಕು ತೂಕ . . . ಹಾಲಲ್ಲಿ ತೇದು ಉದಯದಲ್ಲಿ ದಿನಂಪ್ರತಿಯೂ ತೆಗೆದುಕೊಳ್ಳುವುದು ಚೀರುಕುಟಿ ಮಾಣ್ಗುಂ (ವಿವೈವಿ. ೧೨೩). [ಚೀರು + ಕುಟಿ$_1$./ತೆಲು. ಚೀಱುಕುಟ್ಟು]

**ಚೀರೆ** 'ಚಹರೆ' ನೋ.

**ಚೇಲ$_1$**, **ಚೇಳ** (ನಾ). ೧. ಬಟ್ಟೆ; ವಸ್ತ್ರ: "ಚೇಲಂ, ಚೀರಂ, ವಾಸಃ, ಕರ್ಪಟಂ . . . ವಸ್ತ್ರಂ, ಸಿಚಯಃ, ಪಟಃ–ಈ ೧೦ ಸೀರೆ" (ಹಲಾಯು. ೯೦-೩೯೪). ನೀಲಚೇಲದುಡೆಯುಂ ಮೇಲ್ಗೊಂಡ ಪೊಂಬಟ್ಟೆಯುಂ . . . ಚೆಲ್ವಾಗೆ (ಜಗವಿ. ೩-೧೬); ನೀಲಾಭರಣಭೂಷಿತನಾಗಿ ಕಾಗಿನ ಚೇಲವ ಹೊದ್ದು (ಮೋಹತ. ೧೮-೨೦). 'ಚೇಲಾಂಚಲ' ಪರಾ. **ಚೇಳ:** ೧. "ಚೀರಂ ಚೇಳಂ ಕರ್ಪಟಂ" (ವಸ್ತುಕೋ. ೭೮-೨೦). ೨. ಕೆಟ್ಟದು ; ಕೀಳಾದುದು : "ಅರ್ವಾಣಂ, ಅಣಕಂ . . . ಅಧಮಂ, ಚೇಳಂ, ಕಪ್ಪಂಡಂ . . . ಈ ೧೩ ಹೊಲ್ಲಹ ವಸ್ತು" (ಹಲಾಯು. ೫೩-೦೮೩); "ಅವಮಂ . . . ಚೇಳವವದ್ಯಂ ಕುತ್ಸಿತಂ ಕುಪೂಯಂ ಯಾಪ್ಯಂ" (ವಸ್ತುಕೋ. ೦೦೮-೫೯). [ಸಂ.]

**ಚೇಲ$_2$**, **ಚೇಲಾ**, **ಚೇಲಿ$_2$**, **ಚೇಲೆ** (ನಾ). ೧. ಶಿಷ್ಯ ; ವಿದ್ಯಾರ್ಥಿ : ಗವಯಿಗಳ ಹಿಂದೆ ಚೇಲ ಇರುವಂತೆ (ಯಕ್ಷಲ. ೯೩). 'ಚೇಲವಾಡಿ' ಪರಾ. ೨. ಅನುಯಾಯಿ ; ಸೇವಕ ; ಸೈನಾತಿ : ನಡುವೆ ನಡುವೆ ಚೇಲರು ಹತ್ತಿಸಿಕೊಟ್ಟ ಭಂಗಿ ಚಿಲುಮೆಯನ್ನು . . . ಸೇದಿ (ದೆಯ್ಯಮು. ೧೧) ; ಕಣವೆಯ ಕೆಳಗಿನವರ ಚೇಲನಾಗಿ ಕುಣಿಯುತ್ತ ಉಂಡಮನೆಗೆರಡು ಬಗೆಯುವ ಅವನ ದ್ರೋಹವರ್ತನೆ (ರಾಗಿತ. ೧೨೩). ೩. ಬಲಾತ್ಕಾರ ದಿಂದ ಎಳೆವಯಸ್ಸಿನಲ್ಲಿಯೆ ಮುಸಲ್ಮಾನನಾಗಿ ಮಾಡಲ್ಪಟ್ಟವನು; [P] ಇಂತಹ ಬಾಲಕರನ್ನು ದೊಡ್ಡವರಾದ ಮೇಲೆ ಚೇಲ ಎಂಬ ಹೆಸರಿನೊಂದಿಗೆ ಸೈನ್ಯಕ್ಕೆ ಸೇರಿಸಿಕೊಳ್ಳಲಾಗುತ್ತಿತ್ತು (ಕೈ.ಸ್ ಗ. II, ೩೪೬). **ಚೇಲಾ:** ೨. ಉಳಿದವರೆಲ್ಲ ಅವರ ಚೇಲಾ ಆಗಿಯೇ ಇರಬೇಕೆಂಬುದು ಅವನ ಸಿದ್ಧಾಂತವಾಗಿತ್ತು (ಗ್ರಾಮಾಯ. ೪೫) ; ಅದರಲ್ಲಿರುವವರು ಆಡಳಿತಗಾರರ ಚೇಲಾಗಳು (ಕಾಮಿಕಾಂ. ೭೫). **ಚೇಲಿ$_2$:** ೩. ಉತ್ತಮವಾದ ಎಲ್ಲಾ ಜಾತೀ ಜನಗಳನ್ನು ತನ್ನ ಜಾತಿಗೆ ಸೇರಿಸಿಕೊಳ್ಳ ಬೇಕೆಂದು ಕೆಲವು ಜನರನ್ನು ಚೇಲಿಗಳನ್ನಾಗಿ ಮಾಡಿಕೊಂಡನು (ಹಾಮವಂ. ೨೩೪). **ಚೇಲೆ:** ೩. ಕೊಡಗು ಜನರನ್ನೆಲ್ಲಾ ಮುಂಜಿ ಮಾಡಿ ಕುಲಗೆಡಿಸಿ ಚೇಲೆಯರ ಮಾಡಿ ಇಟ್ಟುಕೊಂಡು (ರಾಜೇಂದ್ರ. ೧೭).

[←ಹಿಂ. ಮರಾ. ಚೇಲಾ. / ಪ್ರಾ. ಚೆಲ್ಲ]

**ಚೇಲ$_3$** (ನಾ). ಒಂದು ಬಗೆಯ ಗಿಡ : ಚಿಲಬಾಗೆ, ಚೇಲ, ಎಲೆಪುಜ್ಜಲ ಬಾಗೆ (ವೃಜಿಗಿ. ೬-೬೩). [?]

**ಚೇಲವಾಡಿ**(ನಾ). ವಿದ್ಯಾರ್ಥಿನಿಲಯ: ವಿದ್ಯಾನಿಕೇತನದ ಚೇಲವಾಡಿಯನ್ನು ವಿಸ್ತಾರಗೊಳಿಸುವುದಕ್ಕೆ ನೂರು ಹೊನ್ನು . . . ಕಳುಹಿಸಿದ್ದೇನೆ (ಸಹ್ಯಾಕ. VIII, ೨೦). [ಚೇಲ$_2$ + ವಾಡಿ$_1$ (<ಪಾಡಿ$_1$)]

**ಚೇಲಾ** 'ಚೇಲ$_2$' ನೋ.

**ಚೇಲಾಂಚಲ** (ನಾ). ವಸ್ತ್ರದ ತುದಿ; ಸೆರಗು: "ಸೆಱಂಗೆಂದು ಚೇಲಾಂಚಲಂ" (ಕಶಸಾ. ೨೦-೩೯೭) ; ದೇವ ನಿಮ್ಮ ದಯೆಗೆಯ್ದ ಫಳಂ ಕೇವಲ ಶುಭ ಸೂಚಕಮೆಂದಾ ವಧು ಗುಡಿಗಟ್ಟಿ ಚೀನಚೇಲಾಂಚಲಮಂ (ಮಲ್ಲಿಪು. ೬-೩೫).

[ಚೇಲ$_1$ + ಅಂಚಲ]

**ಚೇಲಾಚಾರ** (ನಾ). ಹೀನ ನಡವಳಿಕೆ : ಎಲ್ಲಾ ಒಂದಾದರೆ ಶಾಲ್ಯನ್ನ ಉಂಬುವರು ಹುಲ್ಲನೇತಕೆ ಮೆದ್ದು ಬದುಕರು ಸುವ್ವಿ ಹುಲ್ಲನೇತಕೆ ಮೆದ್ದು ಬದುಕರು ಚೇಲಾಚಾ[-ಚಾ]ರಾ ಜಲದೊಳಾಚರಿಸಿ ಅಳುವುದೇಕೆ ಸುವ್ವಿ (ವಾದಿಕೀ. ೧೫೩-೧೭). [ಚೇಲ$_1$ + ಆಚಾರ]

**ಚೇಲಿ$_1$** (ನಾ). ಕೆಟ್ಟ ಹೆಂಗಸು ; ದುಷ್ಟೆ. [ಸಂ. ಚೇಲೀ]

**ಚೇಲಿ$_2$** 'ಚೇಲ$_2$' ನೋ.

**ಚೇಲಿಕ, ಚೇಳಿಕ** (ನಾ). ಬಟ್ಟೆ ಹೊಲೆಯುವವನು ; ಚಿಪ್ಪಿಗ ; ಸಿಂಪಿಗ ; ದರ್ಜಿ: "ಚಿಪ್ಪಿಗನು ಚೇಲಿ[ಪಾಠಾಂ. ೪]ಕಂ ಸೂಚಿಕಂ ತುನ್ನವಾಯನೆನಿಕ್ಕು" (ಮಂಗರಾ. ೧೧೧-೨). **ಚೇಳಿಕ:** ಮೇಲಿನ ಪ್ರಯೋಗದ ಪಾಠಾಂತರ ವನ್ನು ನೋಡಿ. [ಚೇಲ$_1$ + – ಇಕ]

**ಚೇಲಿಕೆ, ಚೇಳಿಕೆ** (ನಾ). ಪುನುಗು: "ಚೇಲಿ[ಪಾಠಾಂ. ೪]ಕೆಯೆನಲ್ ಪುಣುಗು" (ಮಂಗರಾ. ೯೯-೨೨). **ಚೇಲಿಕೆ:** ಕುಸುಮ ಮೃಗಮದ ಗಂಧ ಚೇಳಿಕೆಯು (ಮದೇಪು. ೨-೪೪). [?]

**ಚೇಲೆ** 'ಚೇಲ$_2$' ನೋ.

**ಚೇಷ್ಟಾಕೃತ** (ನಾ). [ನಾಟ್ಯ] ಮೂರು ಬಗೆಯ ಆಂಗಿಕಾಭಿನಯಗಳಲ್ಲಿ ಒಂದು : "ಆಂಗಿಕಾಭಿನಯುವು ಶಾರೀರ, ಮುಖಜ, ಚೇಷ್ಟಾಕೃತ ಎಂದು ಮೂರು ವಿಧ ; ಕೈ ಕಣ್ಣು ಮುಂತಾದ ಅಂಗೋಪಾಂಗಗಳ ಚಲನೆಗಳು ಶಾರೀರ ಮತ್ತು ಮುಖಜ; ನೃತ್ತ ವಿಶೇಷಗಳು ಚೇಷ್ಟಾಕೃತ" (ಸಂನಾಟ. ೧೧). [ಸಂ. (ಚೇಷ್ಟಾ + ಕೃತ)]

**ಚೇಷ್ಟಾಲು** (ನಾ). ಕೀಟಲೆ ಅಥವಾ ಕುಚೇಷ್ಟೆ ಮಾಡುವ ಸ್ವಭಾವ ದವನು ; ವಿನೋದಪ್ರಿಯ : "ನಿನಗೆ ಮನೆಯ ಹಂಬಲಿದ್ದರೆ, ನೀನು ಹೋಗು" ಎಂದು ಚೇಷ್ಟಾಲುವೊಬ್ಬನು ಉತ್ತರಕೊಟ್ಟನು (ಯದುರಾ. ೭೧).

[P ಇದು 'ಕೃಪಾಲು' ಎಂಬ ಪದದ ಅನುಕರಣೆಯಿಂದಾದುದು]

**ಚೇಷ್ಟಿತ** (ಗುಂ). ೧. ಕೆಲಸ ಮಾಡಿದ,-ಮಾಡಲ್ಪಟ್ಟ. ೨. ಕದಲಿಸಿದ ; ಚಲಿಸುವಂತೆ ಮಾಡಿದ. ೩. ಯಂತ್ರಿಸಿದ ; ಯಂತ್ರಿಸಲ್ಪಟ್ಟ. (ನಾ). ೪. ಕಾರ್ಯ ; ಕೆಲಸ ; ನಡೆವಳಿಕೆ : ಸೃಷ್ಟಿಸಮಯದೊಳಿದರ್ಕಿದು ಚೇಷ್ಟಿತಮೆಂದಖಿಳ ಜಾತಿಯೊಳ್ ಕಲ್ಪಿಸೆ ನೀಂ ದುಷ್ಟತೆ ನಿಸರ್ಗಮಾಯ್ತು (ಜಗವಿ. ೩-೧೧೨) ; ತೊಱೆವುದು . . . ನಿರ್ಹೇತುಕಮಪ್ಪ ಖೇದಮನಿದಲ್ತು ಕೃಪಾವತಿಯರ್ಗೆ ಚೇಷ್ಟಿತಂ (ಚಂದ್ರಪ್ರ. ೩-೬೫) ; ಚಿಃ ಕಷ್ಟಮಿಾ ಚೇಷ್ಟಿತಂ (ಪುಷ್ಪಪು. ೧೩-೩೧). ೫. ಗತಿ ; ಸಂಚಾರ. [ ಸಂ. ]

**ಚೇಷ್ಟಿಸು** (ಕ್ರಿ). ೧. ಚಲಿಸು ; ಅಲುಗಾಡು. ೨. ಉದ್ಯೋಗಿಸು ; ಆಚರಿಸು ; ಕೆಲಸಮಾಡು : ಇಲ್ಲಿಗೆ ತಕ್ಕುದೇನುಮಂ ಚೇಷ್ಟಿಪಂ (ಚಂದ್ರಪ್ರ. ೩-೬೮) : ಮಿಕ್ಕಿನ ಸರ್ವಾಂಗಂಗಳುಂ ನಿಮ್ಮಯ ದೆಸೆಗೆ ಕರಂ ಚೇಷ್ಟಿಸುತ್ತೊರ್ಮೆಯುಂ ನಿಲ್ವಿನಂ (ರಕ್ಷಾಶ. ೬೬) ; ಧರ್ಮದೊಳ್ ಚೇಷ್ಟಿಸಿ ಶಾಸ್ತ್ರದೊಳ್ ತಿಳಿದು (ದಶಕು. ೧೪-೨೪). ೩. ಚಲನೆಯುಂಟುಮಾಡು ; ಚೈತನ್ಯವನ್ನು ತುಂಬು : ಆ ಸಂಸಾರ ಪ್ರಪಂಚಕವನೆಲ್ಲವಂ ಚೇಷ್ಟಿಸಿ ಜಗತ್ತ್ರಯವನೊಕ್ಕಲಿಕ್ಕಿ ಕೊಲ್ಲುತ್ತಿಪ್ಪುದೆಲ್ಲವು ಮಾಯೆ (ಗಣಭಾ. ೪೪) : ನೀನು ಚೇಷ್ಟಿಸದಿರಲ್ ಕಾಲ್ನಡೆಯಬಲ್ಲವೆ (ಏಕೋತ್ತ. ೧೪-೯೮). ೪. ಚೇತರಿಸಿಕೊಳ್ಳು ; ಜಾಗ್ರತವಾಗು: ವನಮೃಗರಾಜಿಗಳ್ ತೃಷೆಯ ಕೋಟಲೆಯಿಂ ವನವೆಲ್ಲಮಂ ತೊಟಲ್ದಿನಕಿರಣಂಗಳಿಂ ಕೆಡೆದು ಚೇಷ್ಟಿಸಿ ಕಂಡು ಮರೀಚಿಕಾಜಲಕ್ಕನುನಯದಿಂ ಕರಂ ಪರಿದು ಲಂಘಿಸಿ (ದಶಕು. ೪-೨೩) ; ಷೋಡಶ ಘಟಿಕೆ ಸಂದುದು . . . ಶಿವಾರ್ಚನೆಯ ಮಾಡಬೇಕೆಂದು ಕಟ್ಟಿಗೆಕಾಱರು ಕೊಂಡಾಡಲ್ಕೆ ಕ್ಷಣದೆ ಚೇಷ್ಟಿಸಿದ (ಮೋಹತ. ೨೦-೫೦). ೫. ಕೆಣಕು; ಚಲ್ಲಾಟವಾಡು: ಚೇಷ್ಟಿಪ ವೇಶ್ಯಾಭುಜಂಗರ ಮಧುಪಾನ ಗೋಷ್ಠಿಯ ಸೊಬಗನೀಕ್ಷಿಸಿದ (ಮೋಹತ. ೧೮-೯೬). [ಚೇಷ್ಟೆ+ – ಇಸು$_3$]

**ಚೇಷ್ಟೆ** (ನಾ). ೧. ಅಂಗಾಂಗಗಳ ಚಲನೆ ; ಸಂಜ್ಞೆ ; ಚಲನವಲನ: ದರ್ಪಣದ ಪ್ರತಿಬಿಂಬಕ್ಕೊಂದು ಚೇಷ್ಟೆಯುಂಟೆ (ಆದಪ. ೨೮-೮೦) ; ಆಯತನೇತ್ರೆಯಿಾಕ್ಷಿಸಿದ ರೀತಿ ತದಾಸ್ಯದ ಚೇಷ್ಟೆಯಿಂ . . . ಅಱಿಯಲಾಯ್ತನಗಂದಿದಿರಲ್ಲಿ ನಿಶ್ಚಯಂ (ದಶಕು. ೧೩-೫೮). ೨. ಉದ್ಯೋಗ ; ಕ್ರಿಯೆ; ಕಾರ್ಯ: ಧೈರ್ಯಂಗೆಟ್ಟು ಮೇಲ್ವಾಯ್ದ ಚೇಷ್ಟೆಗೆ ಪೌಲಸ್ತ್ಯನು ಮೊತ್ತಗೊಟ್ಟನೆನಲಾಱಂ ದರ್ಪಕಂ ದಂಡಿಸಂ (ಶಂಕಾಮಾ. ೯-೧೪೮) : ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೆ ಬೀಜ (ಮಹಾದೇ. ಬ. ೨೪-೪೬). ೩. ವರ್ತನೆ ; ನಡವಳಿಕೆ : ಪರವೆಯರ ವಾರ್ತೆಯುಂ ಕೊಂಡು ಚೆಚ್ಚರದಿಂದೆ ಬರಲವನ ಚೇಷ್ಟೆಯಂ ಕಾಣುತೆರ್ದೆ ಹಡಿದೆಱೆದು (ನಂಬಿರ. ೧೬-೧೦೯). ೪. ಚಾಲನೆ; ಪ್ರೇರಣೆ; ಸಂಚಲನೆ: ತತ್ಕಳಿಂಗಕನ್ನಿಕೆಯ ಗರಂ ನೆಲೆಯಲ್ತದಲ್ಲದಿರ್ದೊಡೆ ನೆಲೆಯಾಕೆಗೆ ಕಡೆಗೆ ಗರದ ಚೇಷ್ಟೆ ನಿತಾಂತಂ (ದಶಕು. ೧೩-೬೦); ಬಲುಭೂತ ಸೋಂಕಿತೋ ಗ್ರಹದ ಚೇಷ್ಟೆಯೋ ಪೈತ್ಯ ತಲೆಗಡರ್ದುದೊ (ನವಮೋ. ೨೫-೪೯). ೫. ಹಂಡುಗಾಟ; ತಮಾಷೆ : ಅವನ ಮಿತ್ರರನೇಕರು ಚೇಷ್ಟೆ ಮಾಡಿದಾಗಲೆಲ್ಲ ಅವನು ನಕ್ಕು ಅದನ್ನು ತೇಲಿಸಿಬಿಡುತ್ತಿದ್ದ (ಭಾರತಿ. ೧): ಕುಂಟನಿಗೆ ಎಂಟು ಚೇಷ್ಟೆ ಕುರುಡನಿಗೆ ನಾನಾ ಚೇಷ್ಟೆ (ಗಾದೆ). ೬. ಸರಸ ; ಚೆಲ್ಲಾಟ. 'ಚೇಷ್ಟಿಸು' ಪರಾ. ೭. ತುಂಟತನ ; ತುಂಟಾಟ ; ಕೀಟಲೆ : ಆ ಹುಡುಗನದು ಬಹಳ ಚೇಷ್ಟೆ (ರೂಢಿ). [ ಸಂ. ಚೇಷ್ಟಾ ]

**ಚೇಷ್ಟೆಕೋರ, ಚೇಷ್ಟೆಖೋರ** (ನಾ). ಹಂಡುಗಾಟದ ಸ್ವಭಾವದವನು ; ತಮಾಷೆಗಾರ : ಇತ್ತೀಚೆಗೆ ಈ ಮುದುಕರ ಗದ್ದಲ ಒಂದಿನಿತು ಕಡಿಮೆಯಾಗಿದೆ; ನಾನು ಚೇಷ್ಟೆಕೋರನಾದ್ದರಿಂದ ಹಾಗಾಗಿರಬೇಕು (ಚಂದುಟ. ೯೨). **ಚೇಷ್ಟೆಖೋರ** : ಸೃಷ್ಟಿಯೊಳಗೆ ಇಂಥ ಚೇಷ್ಟೆಖೋರನ ಕಾಣೆ (ಪುರಂದ. ೧-೬೫ ಅನುಪಲ್ಲವಿ) : ಇದೆಲ್ಲ ಚೇಷ್ಟೆಖೋರರ ಹಾರಿಕೆಯ ಸುದ್ದಿ (ಗಂಗಾಸಾ. ೧೦೯). [ ಚೇಷ್ಟೆ + – ಕೋರ$_3$ ]

**ಚೇಷ್ಟೆಖೋರ** 'ಚೇಷ್ಟೆಕೋರ' ನೋ.

**ಚೇಷ್ಟೆಗಾರ** (ನಾ). = ಚೇಷ್ಟೆಕೋರ : (+).

[ ಚೇಷ್ಟೆ + – ಗಾರ(<–ಕಾಱ) ]

**ಚೇಷ್ಟೆಗೆಡು** (ಕ್ರಿ). ಚಲನೆ ನಿಂತುಹೋಗು ; ಚೈತನ್ಯ ಉಡುಗು : ಈ ದೇಹದೊಳಿಂದೀ ಪ್ರಾಣಮುಳ್ಳನ್ನೆಗಮೆ ತಡೆಯುದಾತ್ಮೇಶನಂ ಕಾಣ್ಬೆನೋ ಪುಣ್ಯದಿನೆಂದಾಂ ಚೇಷ್ಟೆಗೆಟ್ಟಂದವಳನೆ ಪಿಡಿದಲ್ಲಿಂದಮೆಂತಾನುಮೆಟ್ದಿಂ (ಕಾದಂಪೂ. ೮೮೬) ; ಕರಣ ಬಲ ಪ್ರಾಣದ ಚೇಷ್ಟೆಗೆಟ್ಟು ಭರತಂ ಪದಾನತಂ ವಿಕಲನಾಗಿ ಮೂರ್ಛೆಗೆ ಸಂದಂ (ಶಂಕಾಮಾ. ೬-೧೫). [ಚೇಷ್ಟೆ + ಕೆಡು$_1$]

**ಚೇಹರಾ** 'ಚಹರೆ' ನೋ.

**ಚೇಳ್** (ನಾ). ಒಂದು ಬಗೆಯ ವಿಮಾನ: ಚೇಳ್ಪಸಿಗಂ ಸಸಿಲ್ಗೊದಳೆ ವಿಮಾನ್ . . . ಬಣ್ಣಮಾನೆನಿಪವೆಲ್ಲಂ ಬಿಳ್ದುವಾ ತಾಣದೊಳ್ (ರಾಜಶೇ. ೫-೧೦೫).

[ ←ತಮಿ. ಚೀಲ್ ]

**ಚೇಳ** 'ಚೇಲ$_1$' ನೋ.

**ಚೇಳಿಕ** 'ಚೇಲಿಕ' ನೋ.

**ಚೇಳಿಕೆ** 'ಚೇಲಿಕೆ' ನೋ.

**ಚೇಳು$_1$** 'ತೇಱ್$_2$' ನೋ.

**ಚೇಳು$_2$** (ನಾ). ಒಂದು ಬಗೆಯ ಗಿಡ : "ಗಂಧವೃಕ್ಷ – ಚೇಳು" (ಒಷಧಿ. ೪೬). [ ? ]

**ಚೇಳುಕೊಂಡಿ** (ನಾ). ಚೇಳಿನ ಬಾಲದ ತುದಿಯಲ್ಲಿರುವ ಮುಳ್ಳು. 'ಚೇಳುಕೊಂಡಿಗಿಡ' ಪರಾ. [ ಚೇಳು$_1$(<ತೇಱ್$_2$) + ಕೊಂಡಿ$_1$ ]

**ಚೇಳುಕೊಂಡಿಗಿಡ** (ನಾ). ೧. ಚೇಳು ಕೊಂಡಿಯಂತಹ ಕೊಂಡಿಯಿರುವ ಬಣ್ಣಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಸಣ್ಣ ಗಿಡ ; ಕರ್ಣಕುಂಡಲ: ಚೇಳುಮಣಿಗಿಡ, ಚೇಳುಕೊಂಡಿಗಿಡ (ಮೃಜಗಿ. ೪೨-೮೩೩). ೨. "ನಾಗದಂತಿ" (ಶಂಡಿಶ). ೩. ಒಂದು ಬಗೆಯ ಮುಳ್ಳುಪೊದೆ: "ವೃಶ್ಚಿಕಃ–ಮುಳ್ಳುಹುಳ, ಚೇಳು, ಚಕಾರದಿಂದ . . . ಚೇಳುಕೊಂಡೀಗಿಡ" (ಸಿದ್ಧಾಂತಿ. ೩೨೦). [ ಚೇಳುಕೊಂಡಿ + ಗಿಡ (<ಗಿಡು) ]

**ಚೇಳುಬಾಣ** (ನಾ). ಒಂದು ಬಗೆಯ ಮದ್ದಿನ ಬಾಣ : ಉರಿಬಾಣ ಚೇಳುಬಾಣಗಳ ಬಿಡುತ ಪರಿಪರಿಯಲ್ಲಿ ಪುಷ್ಪಬಾಣಗಳಾ ಸುರಿವುತ ಬರುತಿರ್ದರರ್ತಿಕಾಱರು (ಭರತ. ೨೦-೬೨) ; ಚೇಳುಬಾಣಗಳ ಊಟಳವುರಿ ಪೊಟ್ಟಣವೇಳುವ ಜಂತ್ರದ ದಗಳು . . . ಪಟ್ಟಣದಾಳುವೇರಿಯ ತುಂಬಿಹುವು (ಕಂಸವಿ. ೬-೨೦). [ ಚೇಳು$_1$(<ತೇಱ್$_2$) + ಬಾಣ ]

**ಚೇಳುಬಾಲ** 'ಚೇಳುವಾಲ' ನೋ.

**ಚೇಳುಮಣಿ** (ನಾ). ಚೇಳಿನ ವಿಷವನ್ನು ಇಳಿಸತಕ್ಕ ಒಂದು ಬಗೆಯ ಮಣಿ : (+). [ ಚೇಳು$_1$(<ತೇಱ್$_2$) + ಮಣಿ$_3$ ]

**ಚೇಳುಮಣಿಗಿಡ** (ನಾ). = ಚೇಳುಕೊಂಡಿ ಗಿಡ ೧ : ಚೇಳುಮಣಿಗಿಡ, ಚೇಳುಕೊಂಡಿಗಿಡ (ಮೃಜಗಿ. ೪೨-೮೩೩). [ಚೇಳುಮಣಿ + ಗಿಡ(<ಗಿಡು)]

**ಚೇಳುರಿಗಿಡ** (ನಾ). ಒಂದು ಬಗೆಯ ಗಿಡ ; ತುರುಚೆ : ಅಂಟು ಸುರುಸುರಿಗೆ ಬಳ್ಳಿ, ತುರಚಿಬಳ್ಳಿ, ಚೇಳುರಿಗಿಡ (ಮೃಜಗಿ. ೬೫-೦೫೩೨). [ ಚೇಳು$_1$ (<ತೇಱ್$_2$) + ಉರಿ$_2$ + ಗಿಡ (<ಗಿಡು) ]

**ಚೇಳುವಾಲ, ಚೇಳುಬಾಲ** (ನಾ). ೧. ಚೇಳಿನ ಬಾಲ. ೨. = ಚೇಳುಕೊಂಡಿಗಿಡ ೨ : "ಯುಗಫಲ–ಕೊಡಸಿಗೆ, ಚೇಳುವಾಲ" (ಒಷಧಿ. ೦೩೨); ಚೇಳುವಾಲದ ಗಿಡುವಿನ ಬೇರು, ಗಂಟುಭಾರಂಗಿ ಇಷ್ಟನು ಸಮಾಂಶವಾಗಿ ತೆಗೆದುಕೊಂಡು (ವೈದ್ಯಸಾ. I, ೦೫೦). **ಚೇಳುಬಾಲ** : ೨. "ಅಹಿದಂಷ್ಟ್ರಾ–ಚೇಳುಬಾಲ" (ಅಕಾನಿ. ೨-೧೧) ; ತಗಚೆಸೊಪ್ಪಿನ ರಸ, ಚೇಳುಬಾಲದ ಸೊಪ್ಪಿನ ರಸ . . . ಪ್ರಾತಃಕಾಲದಲ್ಲಿ ಗಳಿತೂಕವಂ ಸೇವಿಸುವುದು (ಕಳವೈ. ೨೦೬). [ ಚೇಳು$_1$(<ತೇಱ್$_2$) + ಬಾಲ$_1$ ]

**ಚೇಳುವಾಳಿ, ಚೇಳಂವಾಳಿ** (ನಾ). = ಚೇಳುವಾಲ ೨: "ಉಷ್ಣಧೂಮ– ಚೇಳುವಾಲಿ" (ಒಷಧಿ. ೧೭): "ವೃಶ್ಚಿಕಾಪ್ಪಾ–ಚೇಳುವಾಲಿ" (ಒಷಧಿ. ೧೫೭). ಚೇಳುವಾಳಿ: "ಭೂವೃಶ್ಚಿಕಾಳಿ – ಚೇಳುವಾಳಿ" (ಒಷಧಿ. ೧೧೩). [ <ಚೇಳುವಾಲ ]

**ಚೇಳುವಾಳಿ** 'ಚೇಳಂವಾಲಿ' ನೋ.

**ಚೇಟ್** 'ತೇಟ್$_2$' ನೋ.

**ಚೈ** 'ಚಯ್$_2$' ನೋ.

**ಚೈಕೋಲ್** (ನಾ). ಒಂದು ಪ್ರದೇಶದ ಹೆಸರು (?) : ಅದಱ ತದನನ್ತರ ಚೈಕೋಲ ತಾಟಮರ ಅದಱ ತದನಾನ್ತರ ಮಟ್ಟಱಿಯ ಕುರಚಿಗೊಣ್ಡು (ಸೌಇಇ. IX-I, ೯೧-೨೫ ; ?). [ ? ]

**ಚೈಗುಡು** 'ಚೆಯ್ಗುಡು' ನೋ.

**ಚೈತ** (ಗು). ಚಿತೆಗೆ ಸಂಬಂಧಿಸಿದ. 'ಚೈತಾಗ್ನಿ' ಪರಾ. [ ಸಂ. ]

**ಚೈತನ್ಯ** (ನಾ). ೧. ಜೀವದ ಲಕ್ಷಣ ; ಜೀವಂತಿಕೆ. ೨. ಗ್ರಹಣಶಕ್ತಿ ; ಬುದ್ಧಿಶಕ್ತಿ; ಅರಿವು ; ಪ್ರಜ್ಞೆ : "ಚೇತನೆ ಚೈತನ್ಯಂ" (ವಸ್ತುಕೋ. ೧೧೫-೨೭): ಮುನಿಯ ಮಾತಿನ ಬಲೆಗೆ ಸಿಲುಕಿತು ಜನಪತಿಯ ಚೈತನ್ಯಮೃಗ (ಕುವ್ಯಾಸ. ೦-೯೩). ೩. ಜೀವ ; ಆತ್ಮ ; ಚಿತ್‌ಶಕ್ತಿ : ಭೂತಚತುಷ್ಟಯ ಸಂಭೂತಚೈತನ್ಯಂ ಪಿಷ್ಟೋದಕಗುಡಧಾತಕ್ಯಾದಿಯತ್ತಣಿಂ ಮದಶಕ್ತಿ ಪುಟ್ಟುವಂತೆ ಪುಟ್ಟುಗುಂ (ಶಾಂತಿಪು. ೮-೧೨೮ ವ) ; ಜಡವಸ್ತುಗಳಲ್ಲಿ ಚೈತನ್ಯವು ಪೂರ್ಣವಾಗಿ ತಿರೋಹಿತವಾಗಿರುವುದು (ಶಕ್ತಿವಿ. ೯) ; ಎಲ್ಲಾ ಪ್ರಾಣಿಗಳಲ್ಲಿಯೂ ದೇವರ ಚೈತನ್ಯ ಇದೆ ಎಂದು ತಿಳಿಯಬೇಕು (ನೀತಿಚಂ. I, ೧೨). ೪. ಚಟುವಟಿಕೆ ; ಚಲನ ; ಎಚ್ಚರ : "ಮಿಡುಕು, ಮಿಡುಂಕು– ಚೈತನ್ಯೇ (ಚೇತರಿಸು)" (ಶಮದಾ) ; ಕತ್ತಲೆಗೆ ಕಾರುಣ್ಯವನು ಚೈತನ್ಯವನು ಗಿರಿಗಳಿಗೆ . . . ಕೊಟ್ಟರೆ ಲೇಸು ಬಳಿಕೇನು (ಕುವ್ಯಾಅ. ೩-೭) : ಇಂಥ ಸಣ್ಣಪುಟ್ಟ ಇಂಧನವನ್ನೇ ಸಾಧನವನ್ನಾಗಿಸಿಕೊಂಡು ಮಹಾಚೈತನ್ಯಾಗ್ನಿಯೊಂದು ದೇಶದಲ್ಲೆಲ್ಲ ಏಳುವದಿತ್ತು (ಸಮಜೀ. ೭೦೯). ೫. ಶಕ್ತಿ ; ಸಾಮರ್ಥ್ಯ : ಒಬ್ಬ ಹಣಗಾರನು ಸಾವಿರಾರು ವರಹಗಳ ಚೈತನ್ಯವುಂಟಾದವನಾಗಿದ್ದು (ಕಥಾಮಂ. IV, ೧೩). 'ಚೈತನ್ಯಗೆಡಂ', 'ಚೈತನ್ಯದಾಯಕ' ಪರಾ. ೬. ಬಂಗಾಳದಲ್ಲಿ ಭಕ್ತಿಪಂಥವನ್ನು ಪ್ರಚಾರಪಡಿಸಿದ ಒಬ್ಬ ಸಂತ; ಗೌರಾಂಗಪ್ರಭು: ತನ್ನ ಭಕ್ತಿಭಾವನೆಯಿಂದ ಉತ್ತರಭಾರತವನ್ನು ಚೇತನಗೊಳಿಸಿದವನು ಚೈತನ್ಯದೇವ (ಭಾರದ. ೨೦೯). [ ಸಂ. ]

**ಚೈತನ್ಯಂಬಡೆ, ಚೈತನ್ಯವಡೆ** (ಕ್ರಿ). ೧. ಜೀವಂತವಾಗು ; ಜೀವದುಂಬಿಕೊಳ್ಳು : ಮೊದಲ್ನೋಡಿದ ಚಿತ್ರವೆ ಚೈತನ್ಯಂಬಡೆದಂತೆ ಮನುಜೇಶ್ವರ ನೊರ್ವಂ ಮನೆಯಂ ಪೊಕ್ಕು (ಜಯುಕಾ. ೯-೨೫). ಚೈತನ್ಯವಡೆ: ೧. ಹೇಮಗಂಭಂಗಳ್ ಚೈತನ್ಯವಡೆದು ಮುಂಬರಿದೆಡೆಯಾಡುವಂತೆ ತತ್ಕುವರಿಯು ಹೊಂಬಾಳೆದೊಡೆಗಳೊಪ್ಪಿದುವು (ಮೋಹತ. ೨೩-೦೬). ೨. ಚೇತರಿಸು ; ಎಚ್ಚರು : ಅನ್ನೆವರ ಹನುಮಂತ ನಸು ಚೈತನ್ಯವಡೆದನು (ಕೌಶಿರಾ. ೨೫-೨೭). [ ಚೈತನ್ಯ + ಪಡೆ$_1$ ]

**ಚೈತನ್ಯಗೆಡು** (ಕ್ರಿ). ಸಾಮರ್ಥ್ಯಗುಂದು ; ಉತ್ಸಾಹವಿಲ್ಲದಂತಾಗು : ತೂಕಡಿಕೆಯುಂಟಾಗಿ ಮೈಕಾಂತಿಗುಂದಿ ಚೈತನ್ಯಗೆಟ್ಟು ನುಡಿಯಿಲ್ಲದೆ . . . ಕಷ್ಟವುಂಟಾಗಿರ್ಪುದೆ ಅಭ್ಯಾಸ ಸನ್ನಿಪಾತಲಕ್ಷಣವೆಂದು ಅರಿದುಕೊಳ್ಳುವುದು (ಸಕವೈ. ೧೬೭). [ ಚೈತನ್ಯ + ಕೆಡು$_1$ ]

**ಚೈತನ್ಯದಾಯಕ** (ಗು). ಸಾಮರ್ಥ್ಯವನ್ನು ಕೊಡುವ; ಉತ್ಸಾಹವನ್ನು ನೀಡುವ: ವನ್ಯಮೃಷನ ಧ್ವನಿಯೂ ಗಾಡಿಯ ಧ್ವನಿಯೂ ಮಾತ್ರ ಆಗಾಗ್ಗೆ ಅವನ ಚೈತನ್ಯದಾಯಕವಾದ ಯವ್ವನದ ನಿದ್ರೆಯನ್ನು ಕೆಡಿಸುತ್ತವೆ (ಮಲಿನಾ. ೧೫). [ ಸಂ. ]

**ಚೈತನ್ಯದಾಯಿ** (ಗು). = ಚೈತನ್ಯದಾಯಕ: ಚೈತನ್ಯದಾಯಿಯಾದ ಹೊಸ ಗಾಳಿಯನ್ನು ಸೇವಿಸಿದನು (ಪುನರು. ೧೩೫). [ ಸಂ. ಚೈತನ್ಯದಾಯಿನ್ ]

**ಚೈತನ್ಯಭಾವಿ** (ನಾ). ೧. ಆತ್ಮಸ್ವರೂಪಿ ; ಚಿತ್‌ಸ್ವರೂಪನಾದವನು : ಅಪರಿಮಿತ ಸೂಕ್ಷ್ಮದೊಳಖಿಳಮಂ ಕಪಟನಾಟಕಸೂತ್ರವಿಧ್ಯಾನಿಪುಣದಿಂ ಪ್ರಕಟಿಸುವ ತತ್ ಚೈತನ್ಯಭಾವಿ ಶಿವಂ (ಬಸವು. ೫೦-೩೧). ೨. ಬುದ್ಧಿವಂತನಾದವನು ; ಪ್ರಜ್ಞಾವಂತ. [ ಸಂ. ಚೈತನ್ಯಭಾವಿನ್ ]

**ಚೈತನ್ಯವಡೆ** 'ಚೈತನ್ಯಂಬಡೆ' ನೋ.

**ಚೈತನ್ಯವಡೆಸು** (ಕ್ರಿ). ಉತ್ಸಾಹವನ್ನು ತುಂಬು ; ಪ್ರೋತ್ಸಾಹಿಸು : ತೋರದಾಸೆಯನಿಕ್ಕಿ ಚೈತನ್ಯವಡೆಸಿದಳಾ ರಾಜಮುಖಿ ತನ್ನ ಸಖಿಯ (ಮೋಹತ. ೨೮-೩). [ ಚೈತನ್ಯವಡೆ (<ಚೈತನ್ಯಂಬಡೆ) + – ಸು$_1$ ]

**ಚೈತನ್ಯವಾದ** (ನಾ). "ಇಂದ್ರಿಯ ಗೋಚರವಾಗುವ ಬಾಹ್ಯವಸ್ತುಗಳು ವಾಸ್ತವವಾಗಿ ಭಾವನಾಮಯವಾದವು ಎಂಬ ವಾದ" (Idealism. ಇಂಕನಿ) : ಚೈತನ್ಯವಾದಕ್ಕೆ ಪುಷ್ಟಿಕೊಡುವ ೨೦ನೇ ಶತಮಾನದ ಜೀವ ಶಾಸ್ತ್ರಜ್ಞರ ಕಾಣಿಕೆ . . . ಸಾಹಾಯ್ಯಕವಾಗಿದೆ (ಕುಕ್ಕಾರ. ೩೮ ಟೀಕೆ). [ ಚೈತನ್ಯ + ವಾದ$_3$ ]

**ಚೈತನ್ಯಸ್ಥ** (ನಾ). ೧. ಪ್ರಜ್ಞಾಶೀಲ ; ಬುದ್ಧಿವಂತ : ಅತುಳಿತಾನಂದಿತ ಪರವಶೀಯುತ ಮಹಿಮ ತತ್ತ್ವಸ್ಫುರಣಗತಿಮತಿ ಸಕಾಯ ಸಕರ್ಮ ಚೈತನ್ಯಸ್ಥ ರತಿವಿತತಿ ಸತತಮುಂ ನಿಮ್ಮಲ್ಲಿರಲು ಸಮ್ಮತಿಸಿ ಕರುಣಿಸು (ಬಸವು. ೬೦-೫೯). ೨. ಹಣವಂತ ; ಶ್ರೀಮಂತ. [ ಸಂ. ]

**ಚೈತನ್ಯಾತುಮ** (ನಾ). ಚೈತನ್ಯಸ್ವರೂಪವಾದ ಆತ್ಮ ; ಪರಮಾತ್ಮ : ಪ್ರೀತಿ ಮಿಗಲಾ ಹರಿಯೆ ಚೈತನ್ಯಾತುಮನು ತಾನೆಂಬ ನಿಜಧ್ಯಾನಾತಿಶಯಮಾಳವಡಲು ವ್ಯಷ್ಟಿಸಮಾಧಿಯೆನಿಸುವದು (ಗಗಿತಾ. ೧೩-೩೭). [ <ಚೈತನ್ಯಾತ್ಮ ]

**ಚೈತನ್ಯಾತ್ಮ** (ನಾ). = ಚೈತನ್ಯಾತುಮ: ಹರಿಯುಂತಿರಲಿ ಚೈತನ್ಯಾತ್ಮನಾತನ ಮಾತದೇಕೆಂದ (ಕುವ್ಯಾದ್ರೋ. ೦೫-೫೪). [ ಚೈತನ್ಯ + ಆತ್ಮ ]

**ಚೈತಾಗ್ನಿ** (ನಾ). ಚಿತೆಯ ಬೆಂಕಿ : ಸೂರ್ಯತನಯಂ ತೇಜೋಗ್ನಿಯಿಂದಂ ದ್ವಿಷದ್ಬಲಮಂ ಸುಟ್ಟನುದಾತ್ತಪುಣ್ಯನವನಂ ಚೈತಾಗ್ನಿಯಿಂ ಸುಟ್ಟನಿಲ್ಲ (ಪಂಪಭಾ. ೧೩-೬೦). [ ಚೈತ + ಅಗ್ನಿ ]

**ಚೈತ್ತ** (ಗು). ಚಿತ್ತಕ್ಕೆ ಸಂಬಂಧಿಸಿದ ; ಲೋಕದಲ್ಲಿ ಜ್ಞಾನ ಸುಖ ದುಃಖ . . . ಮೊದಲಾದ ಭಾವಗಳು ಸರ್ವಜನ ಪ್ರಸಿದ್ಧಗಳಾಗಿರುತ್ತವೆ. ಇವುಗಳಿಗೆ ಮೂಲವಾಗಿರುವುದನ್ನು ಚಿತ್ತವೆಂದೂ, ಇವುಗಳನ್ನು ಚೈತ್ತವೆಂದೂ ಸಾಮಾನ್ಯವಾಗಿ ವ್ಯವಹರಿಸುವರು (ಹಿಂದನಾ. ೦೦೯). [ಸಂ. ]

**ಚೈತ್ಯ** (ಗು). ೧. ಚಿತೆಗೆ ಸಂಬಂಧಿಸಿದ. (ನಾ). ೨. ಚಿತಾಭಸ್ಮವನ್ನು ಹೂಳಿದ ಜಾಗದಲ್ಲಿ ಕಟ್ಟಿದ ಸ್ಮಾರಕ : ಚೈತ್ಯ ಎಂದರೆ ಶವದಹನಾನಂತರ ಭಸ್ಮವನ್ನು ಇಡುವ ಸ್ಥಳ (ಸೌಂದಸ. ೦೨೦). ೩. ಯಜ್ಞಶಾಲೆ. ೪. (ಬೌದ್ಧ ಅಥವಾ ಜೈನ) ದೇವಾಲಯ : ಒಪ್ಪಂಬೆತ್ತುವಂ ಮಾಡಿಸಿ ದರತುಲ ಚೈತ್ಯಂಗಳಂ ಭಕ್ತಿಯಿಂದಂ (ಚಂದ್ರಪು. ೩-೮೦); ಏನೊಪ್ಪಿರ್ಪುವೊ ಪೋಲ್ತು ದಿವ್ಯ ಜಿನಚೈತ್ಯಂಗಳ್ ಬಹಿತ್ರಂಗಳಂ (ಪುಷ್ಪಪು. ೨-೬೪); ಬುದ್ಧನು ಚರ್ಚೆ ನಡೆಸಿದ ಸ್ಥಳದಲ್ಲಿ ಅರವತ್ತು ಮೊಳ ಎತ್ತರದ ಚೈತ್ಯವನೆತ್ತಿ (ಪ್ರವಾಇ. I, ೧೬೯). ೫. ಜೀವಾತ್ಮ. ೬. ಅರಳಿಮರ. 'ಚೈತ್ಯಕ್ಷಿತಿಜಾತ' ಪರಾ. [ ಸಂ. ]

**ಚೈತ್ಯಕ** (ನಾ). ಸ್ಮಾರಕ ಶಿಲೆ ; ಸ್ಮಾರಕ : ಪ್ರೀತ್ಯಾಶೈಲಮಿದಂ ಸ್ವಯಂ ನೃಪತಿನಾ ಸಂಸ್ಥಾಪಿತಂ ಚೈತ್ಯಕಂ (ಎಇ. XXVII, ೧೬೨-೨ ; ೯ನೆಯ ಶತ) ; ಅವಳ ಮರಣದ ಸ್ಮಾರಕವಾಗಿ ಮತ್ತು ತನ್ನ ಪ್ರೀತಿಯ ಸ್ಮಾರಕವಾಗಿ ಅವಳ ಗಂಡನು ಶಿಲೆಯ ಚೈತ್ಯಕವನ್ನು ನಿಲ್ಲಿಸುತ್ತಾನೆ (ಕಶಾಅ. ೪೨೦). [ ಸಂ. ]

**ಚೈತ್ಯಕ್ಷಿತಿಜಾತ** (ನಾ). ಅರಳಿಮರ; ಅಶ್ವತ್ಥವೃಕ್ಷ: ತುಂಗಶಾಖಾಚ್ಛದಚ್ಛನ್ನ ತರುಚ್ಛಾಯಾವನೀಭಾಗದೊಳಳವಡೆ ಕೈಯಿಕ್ಕಿ ಕೊಂಡಿರ್ದು ಚೈತ್ಯಕ್ಷಿತಿಜಾತ ಪ್ರಾಂತದೇಶಸ್ಥಿತ ಕನಕಮಯ ಪ್ರಾತಿಹಾರ್ಯಾಷ್ಟಕಾರ್ಹತ್ಪ್ರತಿಬಿಂಬಭ್ರಾಂತಿಯಂ ಮಾಡಿದಂ (ಚಂದ್ರಪು. ೨-೮೨). 'ಚೈತ್ಯವೃಕ್ಷ' ಪರ್ಯಾ. [ ಚೈತ್ಯ + ಕ್ಷಿತಿಜಾತ ]

**ಚೈತ್ಯಗೃಹ** (ನಾ). ಜಿನಾಲಯ; ಬಸದಿ: ಭಕ್ತಿಭರಾವನತನಪವರ್ಗಲಕ್ಷ್ಮಿಯ ಮನಮಂ ಪುಗುವಂತೆ ಚೈತ್ಯಗೃಹಮಂ ಪೊಕ್ಕಂ (ಮಲ್ಲಿಪು. ೧೦-೧೧೮). [ ಚೈತ್ಯ + ಗೃಹ ]

**ಚೈತ್ಯಗೇಹ** (ನಾ). = ಚೈತ್ಯಗೃಹ : ಅನಿಶಂ ಪೊಂಪುಟಿವೋಪುದಾ ಪುರದ ಚಂಚಚ್ಚೈತ್ಯಗೇಹೋತ್ಕರಂ (ಚಂದ್ರಪು. ೧೧-೬೩). [ ಚೈತ್ಯ + ಗೇಹ ]

**ಚೈತ್ಯಪುರುಷ** (ನಾ). ಜೀವಾತ್ಮ : ಚೇತನವೂ ಮನವೂ ನಮ್ಮಲ್ಲಿ ಹಣಿಕೆ ಹಾಕುತ್ತ ಪ್ರತಿವ್ಯಕ್ತಿಯೊಳಗಿನ ಚೈತ್ಯಪುರುಷನು (Psyche) ಈ ಪೃಥ್ವಿಯಲ್ಲಿ ಹೇಗೆ ಮುಂದುವರಿಯುತ್ತಿದ್ದಾನೆಂಬುದರ ಒಳನೋಟವನ್ನು ನಮಗೆ ತೋರಿಸಿಕೊಡುವವು (ಮಹಾಯೋ. ೧). [ ಚೈತ್ಯ + ಪುರುಷ ]

**ಚೈತ್ಯಭವ** (ಗು). ಚೈತ್ಯಗೃಹದಲ್ಲಿ ಉದ್ಭವಿಸಿದ,-ಉಂಟಾದ : ಗಗನದ ತೆಱಪಂ ತೀವಿತ್ತು ಚೈತ್ಯಭವ ಶಂಖರವಂ (ಚಂದ್ರಪು. ೮-೯೯). [ ಚೈತ್ಯ + ಭವ ]

**ಚೈತ್ಯರಾಜಿ** (ನಾ). ಬಸದಿಗಳ ಸಾಲು : ನೀಮೆರಡುವರೆ ದ್ವೀಪದ ಚೈತ್ಯರಾಜಿಗೊಯ್ಯುದೆ ಬೆಸಂ ಬೆಸಂ ಪೆಱತುಂಟೇ (ಶಾಂತಿಪು. ೯-೬೨). [ ಚೈತ್ಯ + ರಾಜಿ$_1$ ]

**ಚೈತ್ಯವೃಕ್ಷ**(ನಾ). = ಚೈತ್ಯಕ್ಷಿತಿಜಾತ: "ಚೈತ್ಯದ್ರುಮ – ಚೈತ್ಯವೃಕ್ಷು ಇದ. ಅರಳಿಯ ಮರಕ್ಕಂ (ಅಪ್ಪುದು)?" (ಓಷಧಿ.೫೮); ಶ್ರೀಮದಶೋಕ ಪ್ರಾಸಾದಾಮರತರು ಚೈತ್ಯವೃಕ್ಷ ಸಿದ್ಧಾರ್ಥ ಮಹಾಸಾಮಜ ರಿಪುವಿಷ್ಟರ ಲಕ್ಷ್ಮೀಮಂಟಪ ಗಂಧಕುಟಿಯದೇನೊಪ್ಪಿದುದೋ (ಅಜಿಪು. ೬-೨೦); ದೇವಾಲಯವು ಪವಿತ್ರವಾದ ತೀರ್ಥವಾದುದರಿಂದ ಸ್ನಾನಕ್ಕಾಗಿ ಕೊಳ (ಕಲ್ಯಾಣಿ); ಚೈತ್ಯವೃಕ್ಷ . . . ಮುಂತಾದುವನ್ನು ನಿರ್ಮಿಸಬೇಕು (ಹೊಯ್ಸವಾ. ೧೨). [ ಚೈತ್ಯ + ವೃಕ್ಷ ]

**ಚೈತ್ಯಸಂಪ್ರಜ್ಞೆ** (ನಾ). ಚೈತ್ಯದ ಅರಿವು : ತನ್ನ ಭೀಪ್ಸಾದೂತನಂ ಮೃಣ್ಮಯದ ಜಡಕೆ ಸಂವಾದಿಯಾಗಿರ್ಪ ಸುಪ್ತಚಿತ್ತದ ಗುಪ್ತತಿಮಿರದ ಸೆರೆಯ ಚೈತ್ಯಸಂಪ್ರಜ್ಞೆಯಂ ಪುಡುಕಿ ಕಂಡೈತರಲ್ ಕಳುಹುವಧ್ಯಾತ್ಮದೋಲ್ ಶ್ರೀರಾಮನಟ್ಟಿದಾ ಸುಗ್ರೀವದೂತೋತ್ತಮಂ ಪೊಕ್ಕನೈಸಲೆ ಲಂಕೆಯಂ (ಶ್ರೀರಾಮಾ. ೪೩೫-೬). [ ಚೈತ್ಯ + ಸಂಪ್ರಜ್ಞೆ ]

**ಚೈತ್ಯಾಲಯ, ಚೈತ್ಯಾಳಯ** (ನಾ). ಜೈನ ಅಥವಾ ಬೌದ್ಧ ದೇವಾಲಯ: ಚೈತ್ಯಾಲಯ ನಿರ್ಮಾಣ ನಿರ್ಮಾಪಣ ಶಾಸನಾರೋಪಿತ ಗ್ರಾಮಕ್ಷೇತ್ರ ವಿತರಣಮುಂ (ಆದಿಪು. ೧೫-೧೩ ವ); ಮಂದರಾಚಲದ ಕೃತ್ರಿಮ ಚೈತ್ಯಾಲಯಂಗಳೆಲ್ಲಂ ಸೌಧಾಲಯಂಗಳೆನಿಸೆಯುಂ (ಅಜಿಪು. ೪-೬೭ ವ); ಚೈತ್ಯಾಲಯಗಳು ಬುದ್ಧನನ್ನು ಪೂಜಿಸುವ ಸ್ಥಳಗಳು (ಮ್ಯಾಪಾಸು. ೨೪). ಚೈತ್ಯಾಳಯ: ಸಿಂಹಣನ್ದ್ಯಾಚಾರ್ಯರ್ ಮುಡಿಪೆದೆಡೆ[ಯೊಳ್] ಬೆಡಂಗಂ ಪಡೆದಿರೆ ಮಾಡಿಸಿ ಜನೇನ್ದ್ರಚೈತ್ಯಾಳಯಮಂ (ಕಇಅ. ೬೨-೮-೧೦ ; 1008). [ ಚೈತ್ಯ + ಆಲಯ ]

**ಚೈತ್ಯಾವಸಥ** (ನಾ). = ಚೈತ್ಯಗೃಹ : ರಸವತ್ಸಂಗೀತ ನಾನಾ ಪಟುಪಟಹ ನಿನಾದಂಗಳಿಂ ತೀವೆ ಚೈತ್ಯಾವಸಥಂಗಳ್ (ಸುಕುಮಾ. ೧೧-೫೩). [ ಚೈತ್ಯ + ಅವಸಥ ]

**ಚೈತ್ಯಾವಾಸ** (ನಾ). = ಚೈತ್ಯಗೃಹ : ಅಮರನಿಕಾಯಾನ್ವಿತಂ ವಿಶ್ರುತಾಕೃತ್ರಿಮ ಚೈತ್ಯಾವಾಸಪೂಜೋತ್ಸವದಿನಗಲನಲ್ಲಿಂದಮೆಂದುಂ ಸುರೇಂದ್ರಂ (ಸುಕುಮಾ. ೯-೪೧). [ ಚೈತ್ಯ + ಆವಾಸ ]

**ಚೈತ್ಯಾಳಯ** 'ಚೈತ್ಯಾಲಯ' ನೋ.

**ಚೈತ್ಯಾಳಿ** (ನಾ). ಜಿನಗೃಹಗಳ ಸಾಲು : ಎರಡುಂ ವಿದ್ಯಾಧರಶ್ರೇಣಿಯೊಳೆಡೆಯಡೆಯೊಳ್ ಜೈನಚೈತ್ಯಾಳಿ ತಳ್ತಂಬರಮಂ ತಟ್ಟೈಸಿ (ಶಾಂತಿಪು. ೨-೧೧೭). [ ಚೈತ್ಯ + ಆಳಿ$_4$ (=ಆಲಿ$_4$) ]

**ಚೈತ್ಯೇಶ** (ನಾ). = ಚೈತ್ಯಪುರುಷ : ಅಂತರ್ಯದೊಂದು ಚೈತನ್ಯ ನಿನ್ನ ಕೈಂಕರ್ಯ ಕರ್ತೃವಾಗಿ ಕ್ಷೇತ್ರಜ್ಞ ಬರಲಿ ಚೈತ್ಯೇಶನಾಗಿ ಮಧುಬೋಧವೋದವಾಗಿ (ಅರಳು. ೩-೧೦). [ ಚೈತ್ಯ + ಈಶ ]

**ಚೈತ್ರ** (ನಾ). ಚಿತ್ರಾನಕ್ಷತ್ರದಲ್ಲಿ ಪೂರ್ಣಚಂದ್ರನಿರುವ ತಿಂಗಳು; ಚಾಂದ್ರಮಾನ ಸಂವತ್ಸರದ ಮೊದಲನೆಯ ತಿಂಗಳು; ವಸಂತ ಋತುವಿನ ಮೊದಲ ತಿಂಗಳು; ಮಧುಮಾಸ: ಮಂದಾನಿಲಂ ತೆಂಕಣಿಂ ಬರೆ ಚೈತ್ರಂ ಕುಡುಪರ್ಣ್ಯಲಾಜತತಿಯೋ (ಕಾದಂಪೂ. ೬೪೧); ನವಚೂತಂ ತಳಿರ್ವಂದದಿಂ ತಳಿರ್ಗುಮೇ ಸ್ಥಾಣೂತ್ಕರಂ ಚೈತ್ರದೊಳ್ (ಜಗವಿ. ೧-೧೩); ಚೈತ್ರನಾಗಮವಾಯ್ತು ಮಂಥರೆಯ ಶಿಶಿರಕ್ಕೆ (ಶ್ರೀರಾಮಾ. ೨೩-೬೦೮). [ ಸಂ. ]

**ಚೈತ್ರದೂತ** (ನಾ). ವಸಂತಾಗಮನವನ್ನು ತಿಳಿಸುವ ಹಕ್ಕಿ; ಕೋಗಿಲೆ : ನಳನಳಿಪ ಮಾಮರದ ಕೆಂದಳಿರನುಂಡು ಕುಕಿಲುವಾ ಚೈತ್ರದೂತನ ದುಃಸ್ಥಿತಿಯ ಕಂಡು (ಕೋಗಿಲೆ. ೩-೬೩). [ ಚೈತ್ರ + ದೂತ ]

**ಚೈತ್ರದೂತಿ** (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು; ಆದಿರ್ಗಂತಿ; ಅದಿಮುರ್ತ್ತೆ; ವಸಂತದೂತಿಕೆ: ವನಪಾಲಂ ಕಾಣ್ಕೆಗೈದಂ ವಿಚಕಿಲವರಲಂ ಪಚ್ಚೆಯಂ . . . ಚೈತ್ರದೂತೀಘನಗುಚ್ಛವ್ರಾತಮಂ (ರಾಜಶೇ. ೧೦-೨). [ ಚೈತ್ರ + ದೂತಿ ]

**ಚೈತ್ರಪವಿತ್ರ** (ನಾ). ಚೈತ್ರಮಾಸದಲ್ಲಿ ಆಚರಿಸುವ ಒಂದು ಉತ್ಸವ : ಶ್ರೀಕಣ್ಠೇಶ್ವರದೇವರ ಅಂಗಭೋಗಕ ರಂಗಭೋಗಕ ಚೈತ್ರಪವಿತ್ರಕ್ಕ ತಪೋಧನರಾಹಾರದಾನಕ್ಕ (ಎಕ. VIII, ಸೊರಬ. ४೭೬-೧೮ : 939) : ಶ್ರೀಮಾಳೇಸ್ವರದೇವರ ಗ(೦)ನ್ಧಪೂಟ್ಪಧೂಪದೀಪನಿವೇದ್ಯಕ್ಕಂ ಚೈತ್ರಪವಿತ್ರಕ್ಕಂ ಖಣ್ಡಸ್ಫುಟಿತ ಜೀರ್ಣೋದ್ಧಾರಕ್ಕಂ (ಸಾಇಇ. XI-II, ೧೬೨-೨೭; 1112); ಚೈತ್ರಪವಿತ್ರಂಗಳೊಳು ಗಾಣದಲ್ಲಿ ವೀಸವ್ವೈದು (ಎಇ. XX, ೧೨-೧೧೭ ; 1167). [ ಸಂ. ]

**ಚೈತ್ರಮಾಸ** (ನಾ). = ಚೈತ್ರ : ಚೈತ್ರಮಾಸಂ ಪೋದುದು (ಜೈಮಿಭಾ. ೫-೧೮). [ ಚೈತ್ರ + ಮಾಸ$_2$ ]

**ಚೈತ್ರಮಿತ್ರ** (ನಾ). ವಸಂತ ಋತುವಿನ ಗೆಳೆಯ; ಮನ್ಮಥ: ತುಂಬಿಯಿಂದಂ ಗಿಳಿಯಿಂದಂ ಬೀರಮಂ ಪಾಡಿಸಿ ಪೊಗಟಿಸುವಂ ಚೈತ್ರದೊಳ್ ಚೈತ್ರಮಿತ್ರಂ (ಜಗವಿ. ೧೪-೪೧). [ ಚೈತ್ರ + ಮಿತ್ರ ]

**ಚೈತ್ರರಥ** (ನಾ). ಅಲಕಾನಗರದ ವನ; ಕುಬೇರನ ಉದ್ಯಾನವನ: ಅಂತಾ ಚಿತ್ರರಥನಿಂ ಚೈತ್ರರಥಮೆಂಬ ಬನಮು ಮಚ್ಛೋದಮೆಂಬ ಸರೋವರಮುಮಾದುದಲ್ಲದೆಯುಂ (ಕಾದಂಪೂ.೭೧೦); ಅದು ಮೆಚ್ಚದು ಚೈತ್ರರಥದ ಚಿತ್ರಾಸ್ಪದಮನೆನಲ್ವೀತಶೋಕ ಪುರವರಮೆಸೆಗುಂ (ಮಲ್ಲಿಪು. ೨-೩೨). [ ಸಂ. ]

**ಚೈತ್ರಾಗಮ** (ನಾ). ವಸಂತಋತುವಿನ ಪ್ರಾರಂಭ : ಈ ಕೋಮಳಿ ಕಾಮಕ್ಲಿಷ್ಟೆ ಚಿತ್ತಕ್ಕಳಲನೊಲವುಮಂ ಪುಟ್ಟಿಪಳ್ ನೋಡೆ ಪತ್ರಾವಳಿ ಶೋಭಂಬೆತ್ತ ಚೈತ್ರಾಗಮಪವನಪರಿಸ್ಪೃಷ್ಟ ವಾಸಂತಿಯಾಪೋಲ್ (ಶಾಕುಂತ. ೩೫-೬೧). [ ಚೈತ್ರ + ಆಗಮ ]

**ಚೈತ್ರಾದೀಪ** (ನಾ). (?) : ಶ್ರೀಪೌಲೋವಿನಾಶ ಭೂಭೃತ್ಸಮುದಯುವಿನುತಂಗಳ್ ತಮಸ್ತೋಮ ಚೈತ್ರಾದೀಪಂಗಳ್ . . . ಪುಷ್ಪದಂತ ಶ್ರೀಪಾದಂಗಳ್ ಸಮುತ್ಪಾದಿಸುಗೆಮಗೆ ಹೃದಿಂದೀವರಾನಂದದೊಳ್ಪಂ (ಪುಷ್ಪಪು. ೧-೧). [ P ಇದು 'ಚೈತ್ರಾದೀಪ' ಎಂದಿರಬಹುದೆ ? ]

**ಚೈತ್ರಾನಿಲ, ಚೈತ್ರಾನಿಳ** (ನಾ). ಚೈತ್ರಮಾಸದ ಗಾಳಿ; ವಸಂತ ಋತುವಿನ ಗಾಳಿ : ಮಳಯಾವನೀಧರಚರಂ ತಾಂ ಬಂದುದಾ ದಾನ ಬಂಧುರ ಗಂಧಾಕುಳ ಭೃಂಗಮಂಗಜಗಜಂ ಬರ್ಪಂತೆ ಚೈತ್ರಾನಿಲಂ [ಪಾಠಾಂ. ಳಂ] (ಚಂದ್ರಪು. ೭-೩೮). **ಚೈತ್ರಾನಿಳ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚೈತ್ರ + ಅನಿಲ ]

**ಚೈತ್ರಾನಿಳ** 'ಚೈತ್ರಾನಿಲ' ನೋ.

**ಚೈತ್ರಿ** (ನಾ).=ಚೈತ್ರ. [ ಸಂ. ಚೈತ್ರೀ ]

**ಚೈತ್ರಿಕ** (ನಾ).=ಚೈತ್ರ. [ ಸಂ. ]

**ಚೈದ್ಯ** (ಗು). ೧. ಚೇದಿದೇಶಕ್ಕೆ ಸಂಬಂಧಿಸಿದ. (ನಾ). ೨. ಚೇದಿದೇಶದ ರಾಜ ; ಶಿಶುಪಾಲ : ಸೋತನೈ ಹರಿಯೆಂದು ಚೈದ್ಯನ ಬೂತುಗಳು ಬಣ್ಣಿಸಿದರು (ಕುವ್ಯಾಸ. ೧೦-೭೯): ಶಿವಶಿವಯೆನುತ ಚೈದ್ಯನನು ಬೈವುತ ನೆರೆದ ಸುರ ಮುನಿಜನವಿರಲು (ನಿಭಾಗ. ೧೦-೮೦-೧೧). [ ಸಂ. ]

**ಚೈನಿ, ಚೈನಂ$_1$** (ನಾ). (ಉಕ) ವಿಲಾಸ; ಸುಖಭೋಗ; ಮಜ; ಷೋಕಿ: ಕಾಲೇಜಿಗೆ ಹೋಗಿ ಚೈನಿ ಮಾಡುವ ಸಂಧಿ ದೊರೆಯುವದೆಂದು ಮೊದಲಿನಿಂದ ಅಭ್ಯಾಸದಲ್ಲಿ ತೊಡಗಿದ್ದೆ (ಅನ್ನ. ೧೯೦) ; ರೈತಾಪಿ ಕಸುಬು ಬಿಟ್ಟು, ಚೈನಿ ಮಾಡಿಕೊಂಡು ತಿರುಗಿದವರು ಯಾರು ಉದ್ಧಾರವಾದರು ಹೇಳಿ (ಬೆಳುಮ. ೨೦೧). **ಚೈನು$_1$** : ಇಡೀ ದಿನವೂ ಅವಳ ಮನಸ್ಸಿಗೆ ಚೈನೆಂಬುದು ಇರಲಿಲ್ಲ(ಕಾಗೆಕ. ೬೯).

**ಚೈನಿಹೊಡೆ**=ಷೋಕಿಮಾಡು ; ಮಂಜಾಮಾಡು : ಕಾಲೇಜು ಅಂದರೆ ಚೈನಿ ಹೊಡೆಯುವದೆಂದು ಬಂದಿರಬೇಕು (ಭೂಮಿತಾ. ೫೩).

[ ←ಹಿಂ. ಮರಾ. ಚೈನ್ ]

**ಚೈನು$_1$** 'ಚೈನಿ' ನೋ.

**ಚೈನು$_2$** (ನಾ). ೧. ಸರಪಣಿ. ೨. ಕೊರಳಿನಲ್ಲಿ ಅಥವಾ ಕಾಲಿನಲ್ಲಿ ಧರಿಸುವ ಆಭರಣ : ಕಾಲಿಗೆ ಬೆಳ್ಳಿಯ ಚೈನು (ವಡದಾ. I, ೫೫೮) ; ಕುತ್ತಿಗೆ ಚೈನಿಗೆ ಯಾರೋ ಕೈಹಾಕಿದಂತೆ ಭಾಸವಾಯಿತು (ಸಾವಿಸ. ೧೦). [←ಇಂ. Chain]

**ಚೈಮುಂಡಾಡು** 'ಚೆಯ್ಮುಂಡಾಡು' ನೋ.

**ಚೈರಂತನ** (ಗು). ಪುರಾತನವಾದ ; ಪ್ರಾಚೀನವಾದ : ಇಂತು ಕವೀಂದ್ರ ಸಮಯಮಂ ಚೈರಂತನಮಾರ್ಗದೊಳೊಂದೆ ತಿಳಿಯೆ ಪೇೞ್ದಂ . . . ನಾಕಿಗಂ (ಕಾವ್ಯಾವ. ೯೫೯) : ಚೈರಂತನ ಯೋಗಿನಾಯಕಯಶಸ್ಸಮಕೀರ್ತಿ . . . ಮಾಘಣಂದಿ ಸೈದ್ಧಾಂತಿಕಚಕ್ರವರ್ತಿ (ಚಂದ್ರಪು. ೧-೨೨). [ ಸಂ. ]

**ಚೈರಂತನಕ್ರಮ** (ನಾ). ಪ್ರಾಚೀನ ಸಂಪ್ರದಾಯ : ಮಳಲೊಂದನಲ್ಲಿ ಕುಱಿಪಂ ಮಾಡಿಟ್ಟು ಚೈರಂತನಕ್ರಮದಿಂದಾ ಮಣಲೆಲ್ಲಮಂ ಮಗುೞ್ಚಿ ಪಾರಾವಾರದೊಳ್ ಪೊಯ್ದು ಮತ್ತಮದಂ ಸೋದಿಸಿ ಕಾಣ್ಬವೊಲ್ (ಸುಕುಮಾ. ೫-೩೩). [ ಚೈರಂತನ + ಕ್ರಮ ]

**ಚೊಂಕು** (ನಾ). (?) : ಅಲ್ಲಿ ಜಡೆಮುಡಿ ಚೊಂಕು ಮಂಡೆಯಲಿ ರುದ್ರಾಕ್ಷಿಯಲ್ಲಿ ರಚಿಸಿದ ಟೋಪಿ (ಚೋರಬ. ೪-೧೬). [ ? ]

**ಚೊಂಗೆ** (ನಾ).ರೊಟ್ಟಿಯಂತಹ ಒಂದು ಬಗೆಯ ಸಿಹಿ ಖಾದ್ಯ; "ಒಂದು ಸೀ ತಿನಿಸು" (ಜಾನಕೋ. ೫೮). [ ←ಮರಾ. ಚೋಂಗಾ ]

**ಚೊಂಚ** (ನಾ). ಸೊಟ್ಟಗೈಯವನು; ಚೊತ್ತ : ಚೀಲ ಚೀಲ ಬೋನವ ಬಸಿದು ಚೊಂಚರಿಗೆ ನೀಲವ್ವ ಉಣಿಸಿ ಬರುವಳು (ಸಿದ್ಧಪು. ೫-೨೩) ; ಗುಳ್ಳಗಣ್ಣ, ಗುಜ್ಜ, ಚೊಂಚ ಎಂದು ನಿಂದಿಸುವುದು ಅನ್ಯಾಯ (ದಾಬುತ್ತಿ. ೩೦). [ ಚೊಂಚು + - ಅ$_7$ ]

**ಚೊಂಚು** (ನಾ). ಡೊಂಕುತನ ; ವಕ್ರತೆ. 'ಚೊಂಚುಗೈ' ಪರಾ. [?]

**ಚೊಂಚುಗೈ** (ನಾ). ಡೊಂಕಾದ ಕೈ ; ಸೊಟ್ಟಗೈ : ಆ ಚೊಂಚುಗೈ ಹೆಣ್ಣುಮಗಳಿಗೆ ಜೀವನದಲ್ಲಿ ಇಷ್ಟಾದರೂ ಸಮಾಧಾನ ಬೇಡವೆ (ಸಮಜೀ. ೯೭೭).

[ ಚೊಂಚು + ಕೈ$_2$ (< ಕೆಯ್$_2$) ]

**ಚೊಂಟ** 'ಸೊಟ್ಟ' ನೋ.

**ಚೊಂತತಟಾಕ** (ನಾ). ಒಂದು ಕೊಳದ ಹೆಸರು: ಚೊನ್ತ ತಟ(ಟಾ)ಕಮೆ ವಟವೃಕ್ಷಮೆ (ಇಆ. VIII, ೨೦೪-೩೭ ; ಸು. 10ನೆಯ ಶತ).

[ ಚೊಂತ$_0$ + ತಟಾಕ ]

**ಚೊಂದಕಪ್ಪೆ** (ನಾ). ಬಾಲದ ಕಪ್ಪೆ ; ಗೊದಮಟ್ಟೆ: ಚೊಂದಕಪ್ಪೆ ಇಲ್ಲವೆ ಬಾಲಕಪ್ಪೆಗಳು ತಮ್ಮ ತಮ್ಮ ಅಂಗಿಯನ್ನು ಕಳಚಿ ಕಪ್ಪೆಯಾಗುವುವು (ಬಾಲಪ್ರ. III, ೧೩೨೦). [ ←ತುಳು. ತೊಂದಪ್ಪೆ ]

**ಚೊಂಬು** ‚ಚೆಂಬು$_1$' ನೋ.

**ಚೊಂಯ್** (ನಾ). ಒಂದು ಅನುಕರಣ ಪದ : ಚೊಂಯ್ ಚೊಂಯ್ ಅನ್ನೋ ಸದ್ದು ಎಣಿಸುತ್ತ . . . ಕೂತಿರುತ್ತಾರೆ ಆರೇಳು ಮಂದಿ (ಹಂಗೂಲಿ. ೧೩೭).

**ಚೊಕ್**(ನಾ).ಒಂದು ಅನುಕರಣ ಶಬ್ದ : ಝೊಱ್ಱೆಂಬ ಝುಮ್ಮೆಂಬ ಚಕ್ಕೆಂಬ ಚೊ[ಪಾಠಾಂ. ಭೊ]ಕ್ಕೆಂಬ . . . ಕುರುಸಿಗಳುರವಣೆಯ ದನಿಯಡಸುತಂ ಪುಟ್ಟೆ (ಇಹರ. ಹ. ೧೩೯-೭).

**ಚೊಕ್ಕ, ಚೊಕ್ಕು$_2$, ಚೋಖು** (ಗು). ೧. ಶುದ್ಧವಾದ ; ಸ್ವಚ್ಛವಾದ: ಸಕ್ಕರೆ ಬೆರಸಿದ ಚೊಕ್ಕ ಪಾನಕಕಿನ್ನು ಮಿಕ್ಕಿ ಮೆರೆಯುತಲಿದೆ ರಕ್ಕಸಾರಿಯ ಧ್ಯಾನ (ಜಗದಾ. ೧೦೧). 'ಚೊಕ್ಕಚಿನ್ನ' ಪರಾ. (ನಾ). ೨. ಸುಂದರವಾದುದು ; ಮನೋಹರವಾದುದು: "ನಿಗರ, ನೆಟ್ಟೆ, ಕಿನೆ, ಚೊಕ್ಕಳಿಕೆ, ಚೊಕ್ಕ . . . ಕಣ್ಗೆವಂದುದು, ಪರಿವಡೆದುದು – ಈ ೧೪ ಮನೋಹರಂ" (ಕಶಸಾ. ೧೧-೨೦೧) ; "ಚೊಕ್ಕವೆನಲ್ಕೊಳ್ಳಿತ್ತು" (ಕರ್ಣಾನಿ. ೧೫) ; ಒಕ್ಕಲಿಗಂ ಚೊಕ್ಕೆಲೆಗಳಂ ತಂದು ಪೂಟ್ದಿರ್ದ ಕರಗದ ನೀರಂ ಕಟ್ಟಿ ದೋಗರದ ಮೊಟ್ಟೆಯಂ ತೆಗದು (ಪುಣ್ಯಾಸ್ರ. ೧೨-೧೬ ವ) : ಸುಗಂಧದ ಪುಷ್ಪಸಮೂಹದ ಮಾಲೆಯಿಂ ಚೊಕ್ಕಮಾದ ಮೇಲ್ಕಟ್ಟೆಸೆವುತಿರಲಾಗಿ (ಮನೋವಿ. ೧-೨೬ ಟೀಕು). ೩. ಸ್ವಚ್ಛವಾದುದಂ ; ಶುದ್ಧವಾದುದು ; ಕಲಂಕವಿಲ್ಲದುದು ; ದೋಷರಹಿತವಾದುದು : ಈ ಪಂಥದವರು ಚೊಕ್ಕಾದ ಮರಾಠಿಯಲ್ಲಿ ವಿಪುಲಸಾಹಿತ್ಯವನ್ನು . . . ನಿರ್ಮಿಸುತ್ತಾ ಬಂದಿದ್ದಾರೆ (ಮಸಾಹಿ. ೧೦). ೪. ಉತ್ತಮನಾದವನು ; ಶ್ರೇಷ್ಠನಾದವನಂ; ದೋಷರಹಿತನಾದವನು: ಯಜನ ಯಾಜನಮಧ್ಯಯನಾಧ್ಯಾಪನ . . . ಮಾಡುವ ಚೊಕ್ಕ ದ್ವಿಜಮಹಾರಾಜರೊಪ್ಪಿದರು (ಮೋಹತ. ೩-೩೮); ಚೋದ್ಯಪುರುಷನೆ ಚೊಕ್ಕನೆ ಜಯ ಭವರೋಗವೈದ್ಯ ಚಿದಂಬರಪುರುಷ (ಭರಚ. ೬೪-೧೦೮) : ಅಕ್ಕನ ರೂಪಿಗೆ ತಕ್ಕ ಚೆನ್ನಿಗನಿವ ಚೊಕ್ಕನಾದೊಡೆ ವೀಣೆಯಲಿ ಸಕ್ಕರೆ ಪಾಲೊಳು ಬೆರೆದಂದವೆಂದು (ನಾಗಕು. ೧೨-೮೫). ೫. ಪರಿಶುದ್ಧತೆ; ಸ್ವಚ್ಛತೆ. **ಚೊಕ್ಕು$_2$**: ೩. ಕಳವು ಆಗ್ಯಾವೇನೋ ಅಂತ ಲೆಖ್ಖಪತ್ರದ ಕಾಗದಾ ತಗದು ನೋಡತೇನಿ, ಲೆಖ್ಖ ಎಲ್ಲಾ ಚೊಕ್ಕು (ಗಂಮಾಯಿ. ೧೩೮). 'ಚೊಕ್ಕುತನ' ಪರಾ. ೬. ಸೌಂದರ್ಯ; ಚೆಲುವು: ಅಕ್ಕನಾ ಗಾಂಧಾರಿ ವಿಪಹಕೆ ತೆಕ್ಕೆಯೊಳಗೈದಿರ್ದ ಭಾವನ ಚೊಕ್ಕ ನೋಡೀತನಿಗೆ ಬೇಡಿದರಮ್ಮ ನಿನ್ನುವನು (ಜಿನಭಾ. ೪-೧೮). **ಚೋಖು**: ೩. ಆಚಾರ್ಯರು . . . ಎಷ್ಟು ಚೋಖಾಗಿ ಪಾಲು ಮಾಡಿಟ್ಟರು. ಇದಕ್ಕನಬೇಕು ನ್ಯಾಯ ಪಕ್ಷಪಾತಿ ಅಂತ! (ಸಮಜೀ. ೧೮೦).

**ಚೊಕ್ಕಮಾಡು**=ಶುದ್ಧಮಾಡು; ಸ್ವಚ್ಛಮಾಡು: ನಾವೇ ಬೇಗ ತೆಗೆದು ಒಳಗೆಲ್ಲ ಗುಡಿಸಿ ಚೊಕ್ಕಮಾಡ್ತೇವೆ (ರಂಗಕ. ೩೦).

[ ದೇ.॥ ತಮಿ. ಚೊಕ್ಕ, ಚೊಕ್ಕು ; ಮಲ. ಚೊಕ್ಕ, ಚೊಜ್ಞು ; ತುಳು.ತೆಲು. ಚೊಕ್ಕ. / ಪ್ರಾ. ಚೋಕ್ಖ. / ಸಂ. ಚೋಕ್ಷ ]

**ಚೊಕ್ಕಕಾಲ** (ನಾ). ಉತ್ತಮವಾದ ಕಾಲ ; ಸುಖದ ಕಾಲ: ಸೊಕ್ಕೇಱು ತಿದ್ದುದು ಸುಖತೃಪ್ತಿ ತೋಱುವ ಚೊಕ್ಕಕಾಲವನೇನನೆಂಬೆ(ಭರಚ. ೪೧-೮೭).

[ ಚೊಕ್ಕ + ಕಾಲ ]

**ಚೊಕ್ಕಚಿನ್ನ** (ನಾ). ಶುದ್ಧವಾದ ಚಿನ್ನ; ಅಪ್ಪಟ ಬಂಗಾರ; ಅಪರಂಜಿ: ಚೆನ್ನಾಗಿ ಪುಳಿದೊಡೆದೊಪ್ಪವಿಕ್ಕಿದ ಚೊಕ್ಕಚಿನ್ನದ ಪತುಮೆಗಳಂತೆ (ಮೋಹತ. ೧೮-೩೬). [ ಚೊಕ್ಕ + ಚಿನ್ನ$_1$ ]

**ಚೊಕ್ಕಟ, ಚೊಕ್ಕಟ್ಟ, ಚೊಕ್ಕಣ, ಚೊಕ್ಕಳ** (ನಾ). ೧. ಅಂದ; ಸೊಬಗು; ಸೌಂದರ್ಯ: "ಗರಗರಿಕೆ ಚೊಕ್ಕಟಂ" (ಚತುಸಿ.೯೦); "ಸುಭಗತೆಗೆ ಚೊಕ್ಕಟಂ ಬುದಕ್ಕುಂ" (ಕಶರ. ೩೭). ೨. ಸ್ವಚ್ಛವಾದುದಂ ; ಪರಿಶುದ್ಧವಾದಂದಂ : ಚೊಕ್ಕಟಹ ಸುರಧೇನುವಿಂಗೆಣೆಯೆ ಪಾರಿಜಾತಕ್ಕೆಣೆಯೆ (ಹತಿಲ. ೩-೫). ೩. ಕುಂದಿಲ್ಲದಿರುವಿಕೆ ; ಅಚ್ಚುಕಟ್ಟು ; ಓರಣ : ಮಕ್ಕಳನು ಬಯಸಿ ದೈವದ ಮುಂದೆ ನೋಂಪಿಯು ಚೊಕ್ಕಟದಿ ಮಾಡಿತಿಲ್ಲ (ಸಮ್ಯಕ್ತ್ವಾ. ೫-೧೫); ಚೊಕ್ಕಟವಾಗಿ ರಾಜ್ಯವನಾಳು ದ್ವಾರಕಿ ಹೊಕ್ಕು ಬರುವೆನು ಬೇಗದಲಿ (ಮೋಹತ.೧೩-೮); ಚರಲಿಂಗಕೊಲವಿನಿಂ ಚೊಕ್ಕಟದೆ ಮಾಡಿಸಿದ ಪರಿಪರಿಯ ಪರಿಕರಂಗಳನಿರದೆ ತರಿಸಿ (ಚಬಪು. ೬೨-೧೧) : ಅಕ್ಕಟಿಕೊಳಗೆ ಬಹು ಬಗೆಯ ಧಾನ್ಯಗಳನು ಚೊಕ್ಕಟವಾಗಿಯೆ ಬೆಳೆದು (ಕಂಸವಿ. ೬-೫೨). **ಚೊಕ್ಕಟ್ಟ:** ೨. ಕಿಟ್ಟಗಟ್ಟಿದ ಕಬ್ಬಿಣಕ್ಕೆ ಪುಟವ ಹಾಕಿಸೊ ಚೊಕ್ಕಟ್ಟ[ಪಾಠಾಂ.ಉತ್ಕೃಷ್ಟ] ಬಂಗಾರದೊಳು ಎನ್ನ ಸೇರಿಸೊ (ಪುರಂದ. ೨-೨೩-೩). **ಚೊಕ್ಕಣ : ೧.** ತನುವಿಂ ನರುವಂ ದೆಸೆಗಳ್ಗೆ ಕೊಟ್ಟು ಸಂಪನ್ನತೆವೆತ್ತು ನೆಟ್ಟಗೊಳೆ ಚೊಕ್ಕಣ ಮಾದೆಣೆಗಂಟು ಕಟ್ಟು (ಕಮಮಾ. ೧೫-೩೯). **ಚೊಕ್ಕಳ: ೧.** ತೊಳಪ್ಪ ಬೆರಲುಂಗುರಮಿಂಚರವಿಾವ ನೇವುರಂ ಚೊಕ್ಕಳವಪ್ಪ ಚೆಲ್ವನೊಳಕೊಂಡಿರೆ (ಕಬ್ಬಿಕಾ. ೩೦೪); ಚೊಕ್ಕಳಮಪ್ಪಳ ರೂಪಿಂ ರತಿಯಂ ಮಿಕ್ಕಳಂ (ಉದ್ಭದೇ. ೨-೪೮) ; ಇಕ್ಕೆಲದರಸುಗಳೋಳಿ ಸಭಾಲಕ್ಷ್ಮಿಯಿಕ್ಕಿದ ಕಂಠಿಕೆಯೆನಲು ಚೊಕ್ಕಳವಾಗೆ (ನಾಗಕು. ೩೨-೧೦೮). ೨. ಚೊಕ್ಕಳವಮಣಿಯೋಲೆವೆಳಗು ಸೊಗಸಿದುದವಳಾ (ಉದ್ಭಟ. ೫-೪೫) : ಚೊಕ್ಕಳದ ನೀರ್ದಾಣವಮಂ ಬನಮಂ ದೇಗುಲಮಂ ಕಂಡು (ರಾಮಾಶ್ವ. ೫೪-೨೭); ಮುಕ್ಕಣ್ಣನಡಿ ಗೊಪ್ಪಿಸುತ್ತ ತದ್ದೇಹಮಂ ಚೊಕ್ಕಳವ ಮಾಡಿದಂ (ಲಿಂಗಪು. ೩-೩೦). ೪. (ಅರಿವಿನಿಂದ)ಪರಿಶುದ್ಧನಾದವನಂ; ತಿಳಿವು ಪಡೆದವನಂ: ಚೊಕ್ಕಳ ನೆನಿಪಂ ನಿಜವಧು ಮಕ್ಕಳ್ವಡೆದಂದು ಭೋಗಿಸಲ್ ಪೇಸಿಯೆ ಪಿಂತಿಕ್ಕುವ ತೆಱದಿಂದಂ ಪಿಂತಿಕ್ಕಿದನಾ ರಾಜ್ಯವನಿತೆಯಂ ತತ್ತ್ವವಿದಂ(ಪಾರ್ಶ್ವಪು. ೪-೯೦). [ <ಚೊಕ್ಕ./ತುಳು. ತೆಲು. ಚೊಕ್ಕಟ./ಮರಾ. ಚೋಖಟ, ಚೋಖಟಾ ]

**ಚೊಕ್ಕಟಂಬಡೆ** (ಕ್ರಿ). ಸೊಗಸಾಗು; ಅಚ್ಚುಕಟ್ಟಾಗು: ಚೊಕ್ಕಟಂಬಡದೆ ಸಂಭಾರವಮಂ ಬಗೆಯನಱಿದೊಡವೆರಸಿ ಕಲಸಿ (ಸೂಪಶಾ. ೪-೩).

[ ಚೊಕ್ಕಟ + ಪಡೆ$_1$ ]

**ಚೊಕ್ಕಟಗೊಳಿಸು** (ಕ್ರಿ). ಸ್ವಚ್ಛಮಾಡು: ಮಿಕ್ಕ ಮಾಂಸವ ಬಲು ಕೈಗೆಲಸ ಗಳಿಂದೆ ಚೊಕ್ಕಟಗೊಳಿಸಿ . . . ರಕ್ಕಸರಾಯಗಾತಿಥ್ಯವ ಗೆಯ್ದಳು (ಮೋಹತ. ೧೧-೪೮). [ ಚೊಕ್ಕಟ + ಕೊಳ್$_1$ + - ಇಸು$_3$ ]

**ಚೊಕ್ಕಟ್ಟ** 'ಚೊಕ್ಕಟ' ನೋ.

**ಚೊಕ್ಕಣ** 'ಚೊಕ್ಕಟ' ನೋ.

**ಚೊಕ್ಕಣಿಕೆ**(ನಾ). ಒಂದು ಬಗೆಯ ಮೂಲಿಕೆ: "ತುಲಪೋಟಃ–ಚೊಕ್ಕಣಿಕೆ, ಅವರೆ, ಬಲುಗುಣಿಕೆ, ಎಲಚಿ, ನೆಲದಾಳು" (ಓಷಧಿ. ೬೫); ಸಣಬಿನ ವಿಷಕ್ಕೆ ಕುಡು ಚೊಕ್ಕಣಿಕೆಯ ಕೂಡಮೃತಲತೆಯಂ (ಖಮುದ. ೨-೪೯). [ ? ]

**ಚೊಕ್ಕತನ, ಚೊಕ್ಕುತನ** (ನಾ). ಅಚ್ಚುಕಟ್ಟುತನ ; ಒಪ್ಪ ; ಓರಣ : ಆಕೆ ಚೊಕ್ಕತನದಿಂದ ಸಂಸಾರ ಮಾಡಿಕೊಂಡು ಇದ್ದಾಳೆ (ರೂಢಿ). **ಚೊಕ್ಕುತನ:** ಮಾದ್ರಿಯ ಒರಲಿಕೆ 'ಕಟ್ಟಿಂ' ಎಂಬುದರಿಂದ ಮೊದ ಲಾದುದೂ ಮುಂದೆ ಬರುವ ಓಕಾರದ ಅಂತ್ಯಪ್ರಯೋಗವೂ ಪಂಪನ ದೇಸಿಯ ಚೊಕ್ಕುತನವನ್ನು ಒಕ್ಕಣಿಸುತ್ತವೆ (ಕವನಿ. ೬೪); ಕೆಲಸದ ಚೊಕ್ಕು ತನದಿಂದ ಆಗದಿದ್ದರೆ ಇನ್ನಾವುದಾದರೂ ರೀತಿಯಿಂದ ಆದರೂ ಈ ಬೈಗಳು ತಪ್ಪಿಸಿಕೊಳ್ಳಬೇಕು (ಗಂಮಾಯಿ. ೨೭). [ ಚೊಕ್ಕ + - ತನ ]

**ಚೊಕ್ಕದಂಬುಲ** (ನಾ). ಉತ್ತಮವಾದ ತಾಂಬೂಲ ; ರುಚಿಕರವಾದ ವೀಳೆಯ: ಎತ್ತಿ ಪೊನ್ನ ಬಟ್ಟಲೊಳಿಱಿದೀವ ಕುಂಕುಮರಸಂ ಹಿಡಿಹಾರದಿ ನೀವ ಚೊಕ್ಕದಂಬುಲಮೆ ಸೆವನ್ನೆಗಂ ಮೆಱೆದಳಂದು ವಿಲಾಸಿನಿ ತದ್ವಿಲಾಸವಮಂ (ಚಂದ್ರಪು. ೮-೪೬). [ ಚೊಕ್ಕ + ತಂಬುಲ ]

**ಚೊಕ್ಕನೆ** (ಅ). ಚೆನ್ನಾಗಿ ; ಅಂದವಾಗಿ : ಚೊಕ್ಕನೆಸೆವ ಜವ್ವನಾಯುಷ್ಯ ಭೋಗಗಳಕ್ಕ ವ್ಯರ್ಥಗಳೆಂದಳವಳು (ಚಂಪ್ರಸಾಂ. ೩-೧೦೪); ಸೊಕ್ಕುಜವ್ವನೆ ಯರ ಮೊತ್ತದೊಳು . . . ನೃಪತಿ ಚೊಕ್ಕನಾನಂದಿಸುತಿರ್ದನು ಮದಗಜ ಪೊಕ್ಕು ನೀರಾಟವಾಡುವೊಲು (ಭರಜ. ೬೫-೭೭).

**ಚೊಕ್ಕಚೊಕ್ಕನೆ** (ದ್ವಿರುಕ್ತಿ) : ಚೊಕ್ಕಚೊಕ್ಕನೆ ತಾನಗಳ ತಂದು ಕೊರಳಲ್ಲಿ ಜಕ್ಕುಲಿಸಿದರು ಜಾಣೆಯರು (ಭರಜ. ೫-೬೨).

[ ಚೊಕ್ಕ + - ಅನೆ$_1$ ]

**ಚೊಕ್ಕಬಂಗಾರ, ಚೊಕ್ಕುಬಂಗಾರ** (ನಾ). = ಚೊಕ್ಕಚಿನ್ನ : ಚೊಕ್ಕ ಬಂಗಾರವೇ ಬೇಕೆಂಬ ಹಟವೇಕೆ ನಿನಗೆ (ನಲಮು. ೨೭-೫). **ಚೊಕ್ಕು ಬಂಗಾರ :** ಇಲ್ಲಿ ಬಂದ ಹರಟೆಗಳಲ್ಲಿ ಎಲ್ಲವೂ ಹರಟೆಯ ಹದಿನಾರಾಣೆ ಚೊಕ್ಕುಬಂಗಾರವೇ ಆಗಿರಲಿಕ್ಕಿಲ್ಲ (ಮುಂಗಾಪು. ೭). [ಚೊಕ್ಕ + ಬಂಗಾರ]

**ಚೊಕ್ಕಬೆಳ್ಳಿ** 'ಚೊಕ್ಕವೆಳ್ಳಿ' ನೋ.

**ಚೊಕ್ಕಭೋಜನ** (ನಾ). ೧. ಸೊಗಸಾದ ಊಟ. ೨. ಮಾಂಸವಿಲ್ಲದ ಆಹಾರ ; ಸಸ್ಯಾಹಾರ (ಎಸಮ್ಮ. II, ೧೭). [ ಚೊಕ್ಕ + ಭೋಜನ ]

**ಚೊಕ್ಕಮಾತು** 'ಚೊಕ್ಕವಾತು' ನೋ.

**ಚೊಕ್ಕಮುತ್ತು** (ನಾ). ಶ್ರೇಷ್ಠವಾದ ಮುತ್ತು ; ಕುಂದಿಲ್ಲದ ಮುತ್ತು : ಅರಳ ಕುಲಕಂ ಬೈತಲೆಯ ಚೊಕ್ಕಮುತ್ತೆನಿಪ ಮಲ್ಲಿಗೆಗಳೇಂ ಬಿರಿದುವೋ (ಚಬಪು. ೪೫-೧೬). [ ಚೊಕ್ಕ + ಮುತ್ತು$_6$ ]

**ಚೊಕ್ಕಯ್ಯ** (ನಾ). ಒಬ್ಬಾತನ ಹೆಸರು : ಚೊಕ್ಕಯ್ಯಙ್ಗಂ ಆಚಬ್ಬೆಗಂ ಪುಟ್ಟಿದಂ ಬಿಕ್ಕಿಯಣಂ (ಎಕ. XII, ಶಿರಾ. ೩೫-೫ : 948).

[ ಚೊಕ್ಕ$_0$ + ಅಯ್ಯ$_1$ ]

**ಚೊಕ್ಕರೆಯ** (ನಾ). ೧. ಚೊಕ್ಕ ಹರೆಯಂ ; ಒಳ್ಳೆಯ ಪ್ರಾಯಂ. ೨. ಚೊಕ್ಕಹರೆಯಂವುಳ್ಳವನಂ ; ಏರುಜವ್ವನಿಗ : ವರ ವರೂಥದಿ ಸ್ಥಾಣು ಗಿರಿಜೆಯರಿರವಿನೊಳಗೊಪ್ಪಿರ್ದನವ ಚೊಕ್ಕರೆಯನೀ ಬ್ರಾಹ್ಮಣಗೆ ಮುನ್ನಾ ಚರಣೆ ಫಲ ವದಗೀ ದೊರೆದಳಾಹಾ ಜಾತಿವಾಜಿಯು ಕುರುಡನಿಗೆ ಸಫಲಾದ ಪೋಲ್ (ಜನಭಾ. ೨೦-೨೨). [ ಚೊಕ್ಕ + ಹರೆಯ (<ಪರಯ) ]

**ಚೊಕ್ಕವಾತು, ಚೊಕ್ಕಮಾತು** (ನಾ). ಅಚ್ಚುಕಟ್ಟಾದ ಮಾತು ; ಜಾಣ್ಮೆಯಂ ನುಡಿ : ಬಿಡುಮುತ್ತಿಗೆಣೆಯಹ ಚೊಕ್ಕವಾತುಗಳನು ನುಡಿವು ತಿರ್ದುದು ತಾನೀಗ ಕಡುಚಿಂತೆವಡೆದಂದವೇನು (ನಾಗಕು. ೩-೧೦೫). **ಚೊಕ್ಕಮಾತು :** ಅಕ್ಕ ನಿನ್ನೀ ನುಡಿ ನನ್ನ ಚಿತ್ತಕೆ ಬಾರದಕ್ಕಟ ಬಂದರು ಸುರೆನೆ ಪಕ್ಕಿಗೇತಕೆ ಬಹುದೀ ಜಾಣ್ಮೆಯೆಂದುದು ಚೊಕ್ಕಮಾತಿನ ರಾಜಕೀರ (ಭರಜ. ೬-೯೯). [ ಚೊಕ್ಕ + ಮಾತು$_1$ ]

**ಚೊಕ್ಕವೆಳ್ಳಿ, ಚೊಕ್ಕಬೆಳ್ಳಿ** (ನಾ). ಶುದ್ಧವಾದ ಬೆಳ್ಳಿ : ದಿವಿಜವರನೀಶ ನೊರ್ವನೇ ಪತಿಯೆಂದು ಮೇದಿನಿಗಱಿಪೆ ಚೊಕ್ಕವೆಳ್ಳಿಯೊಳ್ ಸಮೆದು ನಭದಲ್ಲಿಯೊಂದಱ ಲೆಕ್ಕಮಂ ಸಾದರದಿನಮರೆ ಪತ್ತಿಸಿದನೋ . . . ಎನಲ್ಕಾಗಳರೆವೆಱಿಯೊಗೆದುದು (ಪದ್ಮರಾ. ೮-೭೩) ; ಚಾರುಮುದ್ರಾಪುರದ ಚೊಕ್ಕವೆಳ್ಳಿಯ ಕೋಂಟೆ (ಏಕೋಪು. ೪-೩). **ಚೊಕ್ಕಬೆಳ್ಳಿ :** ಅದು ಕಂದು ಬೆಳ್ಳಿಯದಲ್ಲ ; ಚೊಕ್ಕ ಬೆಳ್ಳಿಯದು (ರೂಢಿ). [ ಚೊಕ್ಕ + ಬೆಳ್ಳಿ ]

**ಚೊಕ್ಕಳ** 'ಚೊಕ್ಕಟ' ನೋ.

**ಚೊಕ್ಕಳಕಾತಿ** (ನಾ). ಅಣೆಗಾತಿ ; ಓರಣಗಾತಿ : ತಕ್ಕೈಸಿ ಬಾಯ್ಗೆ ತಂಬುಲವಾ ಇಕ್ಕಿದನೊಡನೆ ಥೂಥೂಯೆನುತುಗುಳ್ವುದು ಚೊಕ್ಕಳಕಾತಿ ಭಾಪೆಂದ (ಭರಜ. ೪೩-೬೩). [ ಚೊಕ್ಕಳ (<ಚೊಕ್ಕಟ) + - ಕಾತಿ$_6$ ]

**ಚೊಕ್ಕಳತನ** (ನಾ). =ಚೊಕ್ಕತನ : ಚೊಕ್ಕಳತನದಿಂ ಮಿಕ್ಕಲರ್ಗೆ ಮೊಗಸದಿರುಳುಣ್ಣದೊಡಲ ಪಸಿವಿಂಗೆ ಪಾಯ್ದು . . . ಬೀಸರವಾಗದೊಸಗೆ ಗಂಪನುಣ್ಬ ಬಾಕುಳಿದುಂಬಿಗಳ(ಲೀಲಾವ.೩-೨೦೪): ಚೊಕ್ಕಳತನದಿಂ ಸವಿದಂ ಮೊಕ್ಕಳಂ (ವೃಷವಿ. ೪೦-೭೫). [ ಚೊಕ್ಕಳ(<ಚೊಕ್ಕಟ) + – ತನ ]

**ಚೊಕ್ಕಳವೆಳಗು** (ನಾ). ಶುಭ್ರವಾದ ಬೆಳಕು ; ಬೆಳುದಿಂಗಳು : ಚೊಕ್ಕಳವೆಳಗಾವರಿಸುವವನಿತಳವಕ್ಕಱುಗೊಂಬ ವಿರಹಿಗಳ್ ನೆಯ್ದಿಲ ತಕ್ಕನುದಯಗಿರಿಶಿಖರಮನೇಱಲ್ ಪಿರಿದುಂ ಸೊಗಸಿದುದು (ಜಯಣಾ. ೧೦-೫೫).
[ ಚೊಕ್ಕಳ (<ಚೊಕ್ಕಟ) + ಬೆಳಗು₂ ]

**ಚೊಕ್ಕಳಿಕೆ, ಚೊಕ್ಕಳಿಕ್ಕೆ** (ನಾ). ೧. ಸೊಗಸು ; ಚೆಂದ ; ಅಚ್ಚುಕಟ್ಟು ; ಮನೋಹರತೆ : "ನಿಗರ, ನೆಟ್ಟಿ, ಕೆನೆ, ಚೊಕ್ಕಳಿಕೆ, ಚೊಕ್ಕ . . . ಕಣ್ಗೆ ವಂದುದು, ಪರಿವಡೆದುದು ಈ ೧೪ ಮನೋಹರಂ" (ಶಶಸಾ. ೧೦-೨೦೦): ಸಕ್ಕದಮಂ ಮಱೆಗೊಳ್ಳದೆ ಚೊಕ್ಕಳಿಕೆಯನಚ್ಚಗನ್ನಡಂ ಬೇಟ್ಪರ ಕಯ್ವೊಕ್ಕ ನಿಧಿಯೆನಿಪಪಭ್ರಂಶಕ್ಕಂ ದೇಶೀಯ ಪದಕಮುಂಟು ಸಮಾಸಂ (ಶಮದ. ೨೯೯) ; ಚೊಕ್ಕಳಿಕೆಯ ನವಚಂದ್ರಿಕೆಯೆನೆ ಹೃದಯಕ್ಕೆ ವಿಲಾಸಮನೀವುದು ಸತ್ಪ್ರಭುರಾಜನ ಸವಿಮಾತು (ಜಯಣಾ. ೧-೨೪): ಉಳುಗಂ ಬಿತ್ತುತ್ತೆ ನಾಡೆ ಚೊಕ್ಕಳಿಕೆಯಿಂ ಪ್ರಕ್ಷುಂದನಾಮೋದಮಂ ತಳೆದೋರಂತೆಸೆದಿರ್ಪ ಸೂಳೆಯರ ಮೆರ್ಮೆಗೀಳಂಗಳಿಂದಂ (ವೀರವಿ. ೬-೯೪) ; ರಕ್ಕಸವಾಣಂತಿಯರು ತಲೆಬುರುಡೆಯೊಳಕ್ಕಱು ಮಿಗೆ ಮೊಗೆಮೊಗೆದು ಲೆಕ್ಕವಿಲ್ಲದೆ ಬಿಸಿನೆತ್ತರ ಮಿಂದೊಂದು ಚೊಕ್ಕಳಿಕೆಯನೇನೆಂಬೆ (ನಾಗಕು. ೧೦-೧೨೫) ; ಉನ್ನತಕುಶಲನಲ್ಲವೆಂಬೊಡಂ ನೀನೀಗಳೆನ್ನ ಸವಿನುಡಿಯ ಚೊಕ್ಕಳಿಕೆಯಿಂ ತಿಳಿಯಿದಲ್ಲೆನ್ನ ಸತ್ಪ್ರೌಢಿಗೇಳು (ಪಾಸೋಪು. ೭-೪೬) ; ಸಲ್ಲದ ನಿನ್ನಂಕದ ಬಿಂಕದ ಮೈಸಾಸದ ಸಡಗರದ ಬಿಡುನುಡಿಯ ಚೊಕ್ಕಳಿಕೆಯಿಂ ಒಲ್ಲದೆ ನಿಲ್ಲದೆ ಮರಲ್ವುದೆಂದಂ (ರಾಮಾಶ್ವ. ೯೦-೧೧). ೨. ಪ್ರಸಿದ್ಧಿ : "ಚೊಕ್ಕಳಿಕೆ ಪ್ರಸಿದ್ಧದೊಳೆ" (ಕರ್ಣಾನಿ. ೯೦). **ಚೊಕ್ಕಳಿಕ್ಕೆ** : ೨.ಅಂಗುಸರಾಯನ ಗಂಡುಬೀರಮಂ ಕಂಡಿಸಿ ಚೊಕ್ಕಳಿಕ್ಕೆಯೊಡನೊಂದಿದ ಪಟ್ಟದ ಭೋಜರಾಜನಂ ಕೊಂಡನೆನಲ್ಕೆ ಚಂಡಿಸುವ ಗಂಡರದಾರ್ಗಳ ಚಾಮರಾಜನೊಳ್ (ಚಕವಿ. ೨-೭೫).
[ ಚೊಕ್ಕಳ (<ಚೊಕ್ಕಟ) + – ಇಕೆ ]

**ಚೊಕ್ಕಳಿಕೆವಡೆ** (ಕ್ರಿ). ಅಂದವನ್ನು ಹೊಂದು ; ಮನೋಹರವಾಗು : ಚಿಕ್ಕಹರೆಯದೊಳು ಚಿನ್ನದ ಬೊಂಬೆಯಂತೆ ಕಡು ಚೊಕ್ಕಳಿಕೆವಡೆದ ಚೆಲ್ವು (ಸಮ್ಯಕ್ತ್ವ. ೦೨-೨೭). [ ಚೊಕ್ಕಳಿಕೆ + ಪಡೆ₁ ]

**ಚೊಕ್ಕಳಿಕ್ಕೆ** 'ಚೊಕ್ಕಳಿಕೆ' ನೋ.

**ಚೊಕ್ಕಳೆ** (ನಾ). ಸೊಗಸುಗಾತಿ ; ಚೆಲುವೆ : ಹಸನಹ ರೂಪು ತಕ್ಕ ಹರೆಯಂ ಕಡು ಚೊಕ್ಕಳೆ ಜಾಣೆ ಹಕ್ಕಿವೂಲ್ ಕೊಸರುವ ಲಾಗು ಕೂಡಿ ತಣಿವಿಲ್ಲದ ಬಾಕುಳಿ . . . ಬಸನದ ಬಿತ್ತೆನಿಪ್ಪಳೊಡಗೂಡಿದೊಡಲ್ಲದಲಂಪು ಪೋಪುದೇ (ಸೂಕ್ತಿಸು. ೮-೪೦೦). [ ಚೊಕ್ಕಳ + – ಎ₂ ]

**ಚೊಕ್ಕು₁** (ಕ್ರಿ). ಕುಗ್ಗು ; ಪರಿತಪಿಸು : ನೀನೆ ಬೇಡೆನಲ್ಸುರವಂದ್ಯ ನಕ್ಕು ವಾಹನನಾಗ್ಗು ತನಗೆನಲ್ಕೇಳಿ ತಲೆಗುಕ್ಕಿದಂ ಹೋ ಹೋ ಕೋಲ್ಪಡಿದ ತನ್ನನುಮಹಂಕಾರದಿಂ ಕೆಟ್ಟೆನೆಂದು ಚೊಕ್ಕಿದಂ ಬಳಿಕ ಹರುಷವ ತಾಳ್ದು ಮನದೊಳಗೆಯುಕ್ಕಿದಂ ಹರಿಪದಕೆ ತನುವನೀಡಾಡಿ ಜನ್ಮಕ್ಕೆ ಸಫಲವಿದಾಯ್ತು ನಿನ್ನ ಪೊತ್ತುದರಿಂದ ಸುಖಿಯಾದೆ ನಾನೆಂದನು(ತುರಂಗ.೪-೩೪).
[ <ಸುರ್ಕು₁ ? ]

**ಚೊಕ್ಕು₂** 'ಚೊಕ್ಕ' ನೋ.

**ಚೊಕ್ಕುತನ** 'ಚೊಕ್ಕತನ' ನೋ.

**ಚೊಕ್ಕುಬಂಗಾರ** 'ಚೊಕ್ಕಬಂಗಾರ' ನೋ.

**ಚೊಕ್ಕೆಯ, ಚೊಕ್ಕೆಹ, ಜೊಕ್ಕೆಯ** (ನಾ). ೧. ಬಿನ್ನಾಣ; ಚಾತುರ್ಯ : ಪ್ರಥಮಾಲಿಂಗನದೊಳೆ ಸಫಲಮಾಗೆ ಮತ್ತೆ ಮತ್ತುಜ್ವಲಿಸುವ ಚೊಕ್ಕೆ[ಪಾಠಾಂ. ಬೊಬ್ಬೆ]ಯದನುಭವಕ್ಕೆ ಸಿರಿಮಂಚಂ ಸುಖದುಕ್ಕಡವಾಗೆ (ನಂಬಿರ. ೧೦-೯೮). ೨. ಮಲ್ಲಯುದ್ಧದಲ್ಲಿ ಒಂದು ಪಟ್ಟು : ಕಡಂಗುವ ಮಲ್ಲನನಡಸಿ ತಿವಿದು ಕಡುಪಿಂ ಕೆಡಪಿ ಕೊಪ್ಪರದೊಳ್ ಕುಮ್ಮಿ ಮಂಡಿಯೊಳ್ ಮಿದಿದು ಕುದಿದು ಸದೆದು ಸಣ್ಣಿಸುವ ಚೊಕ್ಕೆಯದಾಸೆಗೆ ಪೊಕ್ಕ ಮಲ್ಲನನಿಕ್ಕಿ ಮೆಟ್ಟಿ (೧೧೪೫. ೨-೦೦೫ ವ): ಇಕ್ಕಿದರು ಗಳಹತ್ತದಲಿ ಸಲೆ ಮಿಕ್ಕು ಸತ್ರಾಣದಲಿ ಮಿಗೆ ಸರಿವೊಕ್ಕು ಹಿಡಿದರು ಬಿನ್ನಣದ ಚೊ[ಪಾಠಾಂ. ಜೊ]ಕ್ಕೆಯದ ಜೋಡಿಯಲಿ (ಕುಮ್ಮಾಸ. ೨-೯೬). ೩. ಸಂದೇಹ ; ಅನುಮಾನ (?) : ಅವರವರೆಂದಂತೆ ಎನ್ನದೆ ತನ್ನಿರವ ಭಿನ್ನವ ಮಾಡದೆ ಮೂಢಸಾಧನೆಯವನೊಡನೆ ಕಾಡುವ ತೆಱದಂತೆ ಅವನಿಗೆ ಚೊಕ್ಕೆಯ [ಪಾಠಾಂ.ಹ] ಇವನಿಗೆ ನಿಶ್ಚಯ ಉಭಯವ ನೀವೇ ಬಲ್ಲಿರಿ (ಪೋಳಿಮಾ. ೦೪೯-೫೭೪). **ಚೊಕ್ಕೆಹ:** ೧. ಸೊಕ್ಕುಗಲೆಗಳ ಸೋಲಕ್ಕೆ ಮೈಗೊಟ್ಟು ಮೇಲಿಕ್ಕಿ ಲಲ್ಲೈಪ ಭಾವಕಿಯಾ ಚೊಕ್ಕೆಹದನುಭಾವದಕ್ಕರಗಳಿಗೆ ಸಂಯುಕ್ತ್ಯಾಗಿ ತೋರ್ಪುದೀ ಕಾವ್ಯ(ಭ್ಯರವೇ. ೧-೦೯). ೩. ಮೇಲಿನ 'ಮೋಳಿಮಾ' ಪ್ರಯೋಗದ ಪಾಠಾಂತರವನ್ನು ನೋಡಿ. ೪. ಯುಕ್ತಿ : ಭಕ್ತನಾಗಿದ್ದಲ್ಲಿ ಉಭಯದ ಮಾರ್ಗವ ಗುರುವಿನ ಚೊಕ್ಕೆಹವ [ಪಾಠಾಂ. ಚೊಕ್ಕವಹ] ಆ ಜಂಗಮದ ಅಪೇಕ್ಷೆಯ ಇದಿರಿಟ್ಟು (ಅಱಮಾ. ೦೨೯-೯೨): ವಾದಿಯ ಚೊಕ್ಕೆಯ ವಾಗ್ಮಿಯ ಚೇತನ (ಪದೊಮ್ಮ. ೨೩೯-೪೯). **ಜೊಕ್ಕೆಯ:** ೨. ಗಾಯವುಂಟೇ ತೋಱು ನಿನಗಡುಪಾಯೊ ಬಿಡು ಜೊಕ್ಕೆಯವನೆನುತಲಿ (ಕುಮಾ. ಅ. ೬-೩೧) ; ಜೊಕ್ಕೆಯದೊಳಗೆ ಮುಂದಲೆವಿಡಿದು (ಮೃರಾಶಾ. ೪-೭೬).

**ಚೊಕ್ಕೆಯತನ** (ನಾ). ಚಾತುರ್ಯ ; ಜಾಣ್ಮೆ : "ಚೊಕ್ಕೆಯತನಮೆ ನಾಡೆ ಬಿನ್ನಾಣಮೆಂಬರ್" (ಭಾರನಿ. ೬೪). [ ಚೊಕ್ಕೆಯ + – ತನ ]

**ಚೊಕ್ಕೆಹ** 'ಚೊಕ್ಕೆಯಂ' ನೋ.

**ಚೊಗಚೆ** 'ಚಗಚೆ' ನೋ.

**ಚೊಗರು₁** 'ತೊವಱು' ನೋ.

**ಚೊಗರು₂** 'ತೊಗರು₁' ನೋ.

**ಚೊಗೆ, ಚೋಗೆ** (ನಾ). ಪಾದದವರೆಗೆ ಇರುವ ಉದ್ದವಾದ ಅಂಗಿ ; ನಿಲುವಂಗಿ : ಕಾಗಿನ ಚೊಗೆಯಾಂತು ಬಲರಾಮದೇವನಂತಾಗಿರ್ಪ ಜನರ ಕಣ್ಮನಕೆ (ಮೋಹತ. ೦೭-೭೬) ; ಮೃಗಶತ್ರುಚ್ಛರ್ಮದಿಂ ಮಾಡಿದ ಚೊಗೆ ಮೆರೆಯಲ್ (ಹಾಲಾಸ್ಯ. ೪-೨-೩೨) ; ಸೊಗಸಿಂದ ನಿದ್ರೆಗೈದಿಂದುಹಾಸನು ತೊಟ್ಟ ಚೊಗೆಯ ಕುಪ್ಪಸದ ಕೊನೆಯಲ್ಲಿ ಬಿಗಿದು ಕಟ್ಟಿರ್ದ ಪತ್ರಿಕೆಯನ್ನು ಮೆಲ್ಲನೆ ತೆಗೆದುಕೊಂಡಳು ಮಂತ್ರಿತನುಜೆ (ಚಂದ್ರಹಾ. ೩-೨೮): ಬಾಲ ಬಂಗಾರು ಚಲ್ ಪಟ್ಟೆದುಕೂಲ ಚೊಗೆಯಿಂ (ಶಬುಧಾ. ೦೯-೩). **ಚೋಗೆ:** ಉಟ್ಟ ಚಲ್ಲಣ ಜಟ್ಟಿಚೋಗೆ ಕುಲ್ಲಾಯಿಗಳಿಟ್ಟ ಕಸ್ತುರಿಬೊಟ್ಟು ಮೆಱೆವ ಕಟ್ಟಾಳುಗಳಂತೆ . . . ಇಟ್ಟಾಡಿದರು ತುಂಬಿ ಜಲವ (ಗೋಮಟೇ. ೦೭-೦೪೯). [ ←ಹಿಂ. ಮರಾ. ತುರ್ಕಿ. ಚೋಗಾ ]

**ಚೊಚ್ಚ** (ಗು). ಸ್ವಚ್ಛ ; ನಿರ್ಮಲ ; ಶುದ್ಧ : ಸುಧರ್ಮರೆಂಬ ದಿಗಂಬರರ ಪೊರ್ದಿ ಚೊಚ್ಚ ಧರ್ಮವ ಕೇಳ್ದು (ಸಾಳ್ವಭಾ. ೨೦-೭೬).
[ <ಸಂ. ಸ್ವಚ್ಛ ]

**ಚೊಚ್ಚನೆ** (ಗು). ಶುಭ್ರವರ್ಣದ ; ಸ್ವಚ್ಛವಾದ ; ಬಿಳುಪಾದ : ಮೃದುವಾಕ್ಯನಸ್ಸಕ್ಸಾರಂ ಸುದೃಷ್ಟಿ ಮೇಧಾವಿ ನಿಡಿಯನಸಿಲಕಫಾತ್ಮಂ ಸದಯಂ ಚೊ [ಪಾಠಾಂ. ಕೆ]ಚ್ಚನೆ ಮೈ ಬಟ್ಟದನತಿಚಪಳಂ ಸಖಿಪ್ರಿಯಂ ಸಸಿಯೆನಿಕುಂ (ಜಾತತಿ. ೨-೨೦). [ ಚೊಚ್ಚ + – ಅನೆ₂ (<–ಅನೆಯ₂) ]

**ಚೊಚ್ಚಲ್** 'ಚೊಚ್ಚುಲ್' ನೋ.

**ಚೊಚ್ಚಲು** 'ಚೊಚ್ಚುಲ್' ನೋ.

**ಚೊಚ್ಚಿಲ್** 'ಚೊಚ್ಚುಲ್' ನೋ.

**ಚೊಚ್ಚಿಲು** 'ಚೊಚ್ಚುಲ್' ನೋ.

**ಚೊಚ್ಚುಲ್, ಚೊಚ್ಚಲ್, ಚೊಚ್ಚಲು, ಚೊಚ್ಚಿಲ್, ಚೊಚ್ಚಿಲು** (ನಾ). ೧. ಮೊದಲನೆಯ ಬಸಿರು; ಮೊದಲ ಸೂಲು: ಗೃಷ್ಟಿ:, ಸಕೃತ್ಪ್ರಸೂತಾ-ಈ ೨ ಚೊಚ್ಚು[ಪಾಠಾಂ. ಚ್ಚ]ಲ ಮಣಿಕಂ (ಹಲಾಯು. ೯೬-೧೦೮). **ಚೊಚ್ಚಲ್:** ೧. ಚೊಚ್ಚಲ್ ಪೆಱುವಳಂತೆ ತೊಟಲುತ್ತುಂ (ಧರ್ಮಾಮೃ. ೧-೧೬೦). (ಗು). ೨. ಮೊತ್ತಮೊದಲನೆಯ; ಪ್ರಪ್ರಥಮ: ಪಟಯಿಸಿದ ಳ್ಕ್ಯೊಂತಿ ತನ್ನ ಚೊಚ್ಚ[ಪಾಠಾಂ. ಚ್ಚಿ]ಲ ಮಗನಂ (ಗದಾಯು. ೧೦-೧೮); ಶಾರಿಕೆಯ ಚೊಚ್ಚಲ ಶಾಬಕವೋದಿದವ್ಪುಮ (ಅರ್ಧನೇ. ೧-೯೪); ಸುಭುಜನುಂ ತನ್ನ ಚೊಚ್ಚಲ ಮಗಂಗೆ ಪಟ್ಟಮಂ ಕಟ್ಟಿ (ರಾಮಾಶ್ವ. ೯೯-೪). **ಚೊಚ್ಚಲು:** ೧. ಕರುವು ಚೊಚ್ಚಲು: ತೊರೆದ ಕೆಚ್ಚಲು (ಕಎವು. ೩೦-೯); ಚೊಚ್ಚಲು ಬಸುರಿ ಉಡಿ ತುಂಬಿಸಿ ಕಳುಹಿಸಬೇಕು (ರೂಪಸಂ. ೧೬); ಗೌರಿ ಚೊಚ್ಚಲು ಬಾಣಂತಿ (ಮುಂಗಾಪು. ೩೩). ೨. ಹೊಚ್ಚ ಹೊಸ ಚೊಚ್ಚಲನು ಭವಕೆ ಕಾಯುತಿದ್ದೇನೆ (ಕೋಗಿಲೆ. ೪-೯೩); ರಾಘವಾಂಕನು ಗುರುವಿನ ಪಾದಕ್ಕೆ ಶರಣು ಮಾಡಿ ತನ್ನ ಅಚ್ಚುಮೆಚ್ಚಿನ ಚೊಚ್ಚಲು ಕೃತಿಯನ್ನು ಬೊಗಸೆಯಲ್ಲಿ ಹಿಡಿದು (ತುಂಗಭ. ೪೫). **ಚೊಚ್ಚಿಲ್:** ೧. ಹಲವು ಸೂಲಾಕಳು ವರೇಷ್ಕಿಕೆಯೆನಿಕ್ಕು ಚೊಚ್ಚಿಲದು ಗೃಷ್ಟಿಯೆನಿಕ್ಕು (ಮಂಗರಾ. ೫೪-೪). ೨. ನೀಮುಂ ನಿಮ್ಮ ಚೊಚ್ಚಿಲ ಮಗನಪ್ಪ ಸೂರ್ಯಸೂನುವಂ ಸೂರ್ಯದಿನದಂದು ಕಂಡು (ಪಂಪಭಾ. ೯-೬೩ ವ); ಚೊಚ್ಚಿಲ ಕೂಸು ಮೊಲೆಯ ತೊಟ್ಟು ನುಂಗಿತ್ತು (ಕಲ್ಯಾಣಾಂ. ೧೦೩-೮). **ಚೊಚ್ಚಿಲು:** ೧. ಮುಚ್ಚು ಮಱೆಯೇಕಿನ್ನು ಸುತರಲಿ ಚೊಚ್ಚಿಲವ ನೀನೆಂದು ಮೈದಡವಿದನು ಶಶಿಮೌಳಿ (ಕುಮಾರ್ಯಾ.ಗ. ೯-೨೩). ೨. ನೀಲವ್ವನನ್ನು ಚೊಚ್ಚಿಲ ಹೆರಿಗೆಗೆ ತನ್ನ ಹಳ್ಳಿಗೆ ಕರೆದುಕೊಂಡು ಹೋಗಲು (ಬರಹಾ. ೧೮).

**ಚೊಚ್ಚಲುಸಂಭ್ರಮ** = ಪ್ರಥಮ ಪ್ರಯತ್ನಗಳಲ್ಲಿ ಮಾಡುವ ಉತ್ಸಾಹದ ಕಾರ್ಯ. [ ಚೊಚ್ ? + ಚುಲ್(<ಸೂಲ್). / **ತೆಲು.** ಚೊಚ್ಚಿಲು, ಚೊಚ್ಚಿಲ್ಲು = ಪ್ರಾರಂಭಿಸು; ಮೊದಲುಮಾಡು ]

**ಚೊಟ್ಟ** 'ಸೊಟ್ಟ' ನೋ.

**ಚೊಟ್ಟಗಾಲು** 'ಸೊಟ್ಟಗಾಲು' ನೋ.

**ಚೊಟ್ಟಗೆಯ್** 'ಸೊಟ್ಟಗೆಯ್' ನೋ.

**ಚೊಟ್ಟೆ₁** 'ಸೊಟ್ಟ' ನೋ.

**ಚೊಟ್ಟೆ₂** (ನಾ). ಅಂಗಹೀನೆ ; ಹೆಳವಿ : (ಕ).

[ ಚೊಟ್ಟ(<ಸೊಟ್ಟ) + -ಇ₂ ]

**ಚೊಟ್ಟೆ₃**(ನಾ). ಹುಂಜದ ತಲೆಯ ಮೇಲಿರುವ ಕೆಂಪು ಬಣ್ಣದ ಕೊಟ್ಟು,-ಜುಟ್ಟು: ಹುಂಜಗಳ . . . ಕೆಂಗೆಂಪು ಚೊಟ್ಟೆಗಳು ಸೇರೆಗಾರರ ತಲೆ ವಸ್ತ್ರಕ್ಕಿಂತಲೂ ಕೆಂಪಾಗಿ ರಂಜಿಸಿದುವು (ಕಾನೂರು. ೫೦೫). 'ಕೊಟ್ಟು₁', 'ಜುಟ್ಟಿ' ಪರಾ. [ ದೇ.॥ ತಮಿ. ಮಲ. ಚುಟ್ಟಿ. / ಪ್ರಾ. ಚೋಟ್ಟೀ ]

**ಚೊಟ್ಟೆಗೆಯ್ಕ** 'ಸೊಟ್ಟಗೆಯ್ಕ' ನೋ.

**ಚೊಟ್ಟು** 'ಸೊಟ್ಟು₂' ನೋ.

**ಚೊಟ್ಟೆ₁** 'ಚಟ್ಟೆ₁' ನೋ.

**ಚೊಟ್ಟೆ₂** (ನಾ). ಹೀನಸ್ವಭಾವದ ಮನುಷ್ಯ ; ಅಲ್ಪ : (ಕ).

[ ←ಹಿಂ. ಛೋಟಾ ]

**ಚೊಟ್ಟೆ₃, ಸೊಟ್ಟೆ₂** (ನಾ). ೧. ರಸ ತೆಗೆದ ಮೇಲೆ ಉಳಿದ ಭಾಗ; ಸಿಪ್ಪೆ. 'ನಿಂಬೆಚೊಟ್ಟೆ' ಪರಾ. **ಸೊಟ್ಟೆ:** ೧. (ಎತ್ತುಗಳ) ಮೈಯನ್ನು ದಿನದಿನದ ಸಾಯಂಕಾಲದಲ್ಲಿ ಹೀರೇಕಾಯಿ ಸೊಟ್ಟೆಯಿಂದ ಚೆನ್ನಾಗಿ ತಿಕ್ಕಿ ಒರಿಸಿ (ಕೃಷಿಪ್ರ. ೧೯). ೨. ತೆಂಗು ಮೊದಲಾದುವುಗಳ ಮೇಲ್ಪದರ; ಮೊಟ್ಟೆ: ತೆಂಗಿನ ಸೊಟ್ಟೆಯನ್ನು ಮೊದಲು ಒಂದು ವರ್ಷ ಕೆಸರೊಳಗೆ ಹುಗಿದಿಟ್ಟು (ಕಥಾಗ. ೧೮೪). ೩. ಬುರುಡೆ: ತಂತಿ ಝಣಗುಡದ ಪೊಳ್ಳು ಸೊಟ್ಟೆ ಎನಿಸೀತು ಹೇಗೆ ವೀಣೆ ? (ಅರಳು. ೬೬-೧೧).

**ಚೊಟ್ಟೆಹಾಕು**=ವ್ಯರ್ಥವಾಗಿ ಕಾಲಕಳೆ : ರಾಮಸ್ವಾಮಿ ಅಯ್ಯಂಗಾರಿ ನಾಲ್ಕುದಿವಸ ಮೈಸೂರಿಗೆ ಹೋಗಿ ಸಂಗೀತ ಕಲಿಯುತ್ತೇನೆಂದು 'ಚೊಟ್ಟೆ' ಹಾಕಿ ಬಂದಿದ್ದ (ಸಂಧ್ಯಾರಾ. ೫೬). 'ಚರಟ' ಪರಾ. [ ? ]

**ಚೊಟ್ಟೆ₄** (ನಾ). ಒಂದು ಬಗೆಯ ಮರ: ಚಳ್ಳೆಹಣ್ಣುಮರ, ಸೊಳ್ಳೆ, ಚೊಟ್ಟೆ, ಕೆಂದಲ್, ಮಣ್ಣಡಿಕೆ, ಚೆಡ್ಲು (ಮೈಜಿಗಿ. ೨೪-೪೫೩). [ ? ]

**ಚೊಟ್ಯಾಲುಗುಬ್ಬಿ** (ನಾ). ಕುದುರೆಗೆ ಕತ್ತಿನ ಮೇಲೆ ಹಾಕುವ ಒಂದು ಬಗೆಯ ಒಡವೆ: ಸುವರ್ಣರಜತಮ ನಿರ್ಮಿಸಿದ ಉಚ್ಚೈಶ್ರವಸ್ಸಿಂಬ ಅಶ್ವ ರತ್ನದ ಆಭರಣದ ಲೆಕ್ಕ ... ೧ತುರಾಯಿ ಪೀಠ ಸಹ ೧೮ ಚೊಟ್ಯಾಲುಗುಬ್ಬಿ (ಎಕ. XIV, ನಂಜನ. ೨೯೩; 1547). [ ಚೊಟ್ಟೆ₃+<ಅಯಾಲು+ಗುಬ್ಬಿ₂ ]

**ಚೊಣ್ಣ** 'ಚಲ್ಲಣ' ನೋ.

**ಚೊತ್ತ** 'ಸೊತ್ತ₁' ನೋ.

**ಚೊತ್ತಮ್ಮ** (ನಾ). ಒಬ್ಬಾತನ ಹೆಸರು: ಅರಟ್ಟಗಳರಸರ್ ಚೊತ್ತಮ್ಮನ್ ಎಡೆತೊಱೆ ನಾಡು ಸಾಸಿರವುಂ ಆಳುತ್ತಿರ್ದು (ಎಕ. III, ಮೈಸೂರು. ೫೫-೫; 740). [ ಚೊತ್ತ₀ + ಅಮ್ಮ₁ ]

**ಚೊತ್ತಿ** 'ಸೊತ್ತಿ' ನೋ.

**ಚೊತ್ತಿಗೆ** 'ಜೊತ್ತಗೆ' ನೋ.

**ಚೊತ್ತು** 'ಸೊತ್ತು₁' ನೋ.

**ಚೊಪ್ಪಟೆ** (ನಾ). ದೇವದಾರು ವೃಕ್ಷ : "ಚೊ[ಪಾಠಾಂ. ಬೊ]ಪ್ಪಟೆಯೆನಲ್ ದೇವದಾರುವಕ್ಕುಂ" (ಮಂಗರಾ. ೩೬-೦೬). [ ? ]

**ಚೊಬ್ಬೆ** (ನಾ). ಪುಟ್ಟಿ; ಬುಟ್ಟಿ: ಬೆತ್ತದ ಚೊಬ್ಬೆಯಲ್ಲಿ ಹಿಡಿದುಕೊಂಡಿದ್ದ ಮಾವಿನ ಹಣ್ಣುಗಳಲ್ಲಿ (ಅಜೋಲೀ. ೭೨). 'ಚಬ್ಬಲ್' ಪರಾ. [ ? ]

**ಚೊಮ್ಮನೆ** 'ಜೊಮ್ಮನೆ' ನೋ.

**ಚೊರ್** (ನಾ). ಒಂದು ಅನುಕರಣ ಶಬ್ದ : ಕಾದ ಹಂಚಿನ ಮೇಲೆ ನೀರು ಸಿಡಿದಾಗ ಚೊರ್ರೆಂದಿತು (ರೂಢಿ).

**ಚೊಲ್ಲ** (ನಾ). ಹರಡಿರುವುದು ; ವ್ಯಾಪಕವಾಗಿರುವುದು (?) : ಎಲ್ಲಿ ನೋಡಲು ಮಡಿದ ವೀರರ ವಲ್ಲಭೆಯರಾರ್ತಧ್ವನಿಯು ನೆಱೆ ಚೊಲ್ಲವಾಗಿರೆ ಕಂಡು ಬೆದಱುತ ಬಂದನಾ ವಿದುರ (ತಿಮ್ಮಸ್ತ್ರೀ. ೧-೧೮). [ <ಚಲ್ಲು₁ ]

**ಚೊಲ್ಲಣ** 'ಚಲ್ಲಣ' ನೋ.

**ಚೊಲ್ಲಣಿಗೆ** (ನಾ). ಚೆಲುವು; ಸೊಗಸು; ಹೊಳಪು (?): ಅಲ್ಲಿ ಸಾವಿರದ ನಾನೂರು ಯೋಜನದೆಡೆಯ ಪಲ್ಲವಿತಮಾದ ಶಿವಗಣಗಳಾಗಾರದಿಂ ಚೊಲ್ಲಣಿಗೆವಡೆದ ನವರಂಗ ಮಣಿಮಯಗೇಹ ಸಲ್ಲಲಿತ ಹರ್ಮ್ಯಕುಳದ (ಲಿಂಗಪು. ೩-೧೪); ಕೋಟಿ ಹರ್ಮ್ಯಗಳ ಮಲ್ಲಿಕಾಗ್ರದಿ ರಾಜಿಪ ಚೊಲ್ಲಣಿಗೆ ಪಡೆದ ಚಿಂತಾರತ್ನ ಕಳಶದಿಂ ತೆಲ್ಲವಣ್ಣದ ಬಾಗಿಲಿಂ ಕನಕವಲಗೆಯಿಂ . . . ಸಲ್ಲಲಿತಮಾಗೆಸೆದುದು (ಲಿಂಗಪು. ೩-೨೧). [ ? ]

**ಚೊಲ್ಲಣಿಸು** (ಕ್ರಿ). ಶೋಭಿಸು ; ಹೊಳೆ (?) : ಮಾದೇವ ಸಲ್ಲಲಿತ ನಂದಿಗೊಲಿದು ಮೆಲ್ಲಡಿಗಳಿಂ ತೋರ್ಪ ದೃಷ್ಟಿಯಿಂ ಕಟಕದಿಂ ಪಲ್ಲವದ ಸಂಗ್ರಹಣ ವಶೌಲದಿಂ ಸೊಬಗಿಡಿವುತಲ್ಲಿ ಕುಂಡಲಮನಲುಗುತ ಮುಂದೆ ಶೋಭಿಸಿದ ಚೊಲ್ಲಣಿಸಿ ವೃಷಭ ಪೆಚ್ಚಿ (ಲಿಂಗಪು. ೧೪-೪೩). [ ? ]

**ಚೊಲ್ಲೆಯ₁, ಚೊಲ್ಲೆಹ, ಜೊಲ್ಲಯ, ಜೊಲ್ಲೆ, ಜೊಲ್ಲೆಯ₁, ಜೊಲ್ಲೆಹ** (ನಾ). ೧. ತುರುಬಿನ ಕೊನೆ: "ಚೊಲ್ಲೆಯ[ಪಾಠಾಂ. ಹ]ಮೆಂದು ತುಱುಬಿನ ಕೊನೆ" (ಕಕಸಾ. ೨೦-೪೦೫); ಕತ್ತುರಿಯದ್ದಬೊಟ್ಟೆಸೆಯೆ ಮುತ್ತಿನ ಮೂಗುತಿಯೊಪ್ಪೆ . . . ಜೋಲ್ದಿರೆ ಚೊಲ್ಲೆಯಂ (ಲೀಲಾವ. ೨-೩೯); ಕತ್ತರಿಪೀಲಿಯನಾಂತ ಚೊಲ್ಲೆಯಂ (ಚಂದ್ರಪು. ೮-೫೦); ಚಲ್ಲಣವನಳವಡಿಸಿ ಜಾಱಿದ ಚೊಲ್ಲೆಯವ ಮಿಗೆ ಸಂವರಿಸಿಕೊಂಡು (ಜೀವಂಧ. ೧೬-೬೦); ಚೊಲ್ಲೆಯದ ಬಳಲುಮುಡಿಯ ತೊಳಪ ಕೆಂಬಲ್ಲ ಕಂಬುಗ್ರೀವದ (ಕೃಷ್ಣಲ. ೨-೧೨-೩); ಕೆದಱೆ ಕುರುಳೊದರೆ ಚೊಲ್ಲೆಯಂ (ಚಳವಿ. ೬-೪೮). ೨.

ತುರುಬಿನಲ್ಲಿ ಮುಡಿಯುಂವ ಹೂವಿನ ದಂಡೆ,–ಮಾಲೆ : ಸುರಯಿಯ ಚೊಲ್ಲೆಯಮುಂ ಪೊಸಸುರಹೊನ್ನೆಯ ಮೊಗ್ಗೆಯೆಕ್ಕಸರಮುಂ (ಕಬ್ಬಿಗಾ. ೩೨೫); ಮಲ್ಲಿಗೆಚೊಲ್ಲೆಯಂ (ಶಬಶಂ. ೩-೧೧); ಗೆಲ್ಲವೆಣ್ಗೆ ಜಸದ ಪೊಸ ಚೊಲ್ಲೆಯಮಂ ಸೂಡಿ ಕೂಡಿವರ್ಪ ಬಲ್ಲಾಳ್ತನದ ಗಂಡುಗಲಿಗಳಿರಾ (ರಾಮಾಶ್ವ. ೪೭-೪). **ಚೊಲ್ಲೆಹ :** ೧. "ಚೊಲ್ಲೆಹವೆಂದು ತುಱುಬಿನ ಕೊನೆಯಕ್ಕುಂ" (ಕವಿಕಂ. ೦೯೦); ಇವರ ಚೊಲ್ಲೆಹವತನು ಪಿಡಿವ ಸಲ್ಲೆಹ (ಸೌಂದಪು. ೭-೫೫); ಕವಿವ ಕುರುಳ ಕಟ್ಟು ಸಡಿಲಿದ ಚೊಲ್ಲೆಹದೆವೆಯಿಕ್ಕ ದೆಸಳುಕಣ್ಣುಗಳ (ಹದಿಬ. ೭-೧೪). ೨. ಪರಿಮಳವಿಡಿದ ಚೊಲ್ಲೆಹಕ್ಕಳಿ ಗಳೆಱಗುತಿರೆ (ಇಹರ. ದೇ.೩೨-೭); ಇಟ್ಟ ಜೆಡೆ ಚೊಲ್ಲೆಹವಮರ್ದಿರೆ ತೊಟ್ಟ ಕಂಚುಕವಮಂ (ಬಸವು. ೧೨-೯೩). ೩. ಹೂವಿನ ಗೊಂಚಲು,–ಗುಚ್ಛ : ಓಡ ಕುದುರೆಯ ಮೇಲೆ ಮಸಿಯು ಹಲ್ಲಣವ ಹಾಕಿ ಬಸಲೆಯ ಹುಬ ಬಾಯಿಗೆ ಕಟ್ಟಿ ದೆಸೆವರಿವ ಅಸುರಾವುತ ಚೊಲ್ಲೆಹದ ಬಲ್ಲೆಹವ ಹಿಡಿದು ಮುಗುಳು ನಗೆಯವಳಲ್ಲಿ ಏಱಿ ತಿವಿಯೆ ಚೊಲ್ಲೆಹದ ಬಲ್ಲೆಹ ಮುಱಿದು ಓಡಿನ ಕುದುರೆ ಒಡೆದು ಮಸಿಯು ಹಲ್ಲಣ ನುಗ್ಗುನುಸಿಯಾಗಿ ಬಸಲೆಯ ಬಾಯಿಕಟ್ಟು ಹಱಿದು ಅಸುರಾವುತ ಅವಳ ಕಿಸಲಯರಸಕ್ಕೊಳಗಾದ (ಕೋಲಶಾಂ. ೨೪-೧೧); ಉರಿಯ ಸಿರಿಯ ನಡುವೆ ಒಂದು ಸರೋವರದಲ್ಲಿ ನರಿ ತಿರುಗಾಡುತ್ತದೆ ಬಾಲ ಉಡುವಿನಂದ ನಡು ಬಳ್ಳುವಿನ ಚೊಲ್ಲೆಹ ದಂದ ತಲೆ ಕೋಡಗದಂತೆ ರೂಪು ನರಿಯಾಗಿ ಆತ್ಮ ಕುಕ್ಕುರನಾಗಿ ಏತಕ್ಕೂ ಸಿಕ್ಕದೆ ಸರೋವರದಲ್ಲಿ ಹರಿದಾಡುತ್ತದೆ (ಅಱಿಮಾ. ೧೩೫-೧೧೩). **ಜೊಲ್ಲಯ :** (ಚ). **ಜೊಲ್ಲೆ :** ೨. ಮಲ್ಲಿಗೆಯ ಜೊಲ್ಲೆಯಂ ಮೊಲ್ಲೆಯ ಮುಗುಳ್ಗಳಂ . . . ಭೂವಲ್ಲಭನ ವಲ್ಲಭೆಗಲಂಕರಿಸಿ (ವಂಕಾರಾ. ೦-೮-೮). ೩. ಒಂದೆರಡು ಜೊಲ್ಲೆ ಸಾಲದೇ ? ಮರಕ್ಕೆ ಮರವೇ ಕೆಳಗೆ ಬರಬೇಕೇನು (ಮುಗಿಯು. ೧೭). **ಜೊಲ್ಲೆಯ :** ೧. ಏತಕೀ ಬಳೆಗೈಗೆ ಬಿಲು ಹಿಣಿಲೇತಕೀ ಜೊಲ್ಲೆಯ[ಪಾಠಾಂ. ಚೊಲ್ಲೆಹ]ಕೆ ಚಲ್ಲಣವೇತಕೀ ಹೆಣ್ಣುಡಿಗೆಗೆ (ಕುವ್ಯಾಕ. ೨೨-೨೩). **ಜೊಲ್ಲೆಹ :** ೧. "ಕಬರಿಯಗ್ರ" (ಚತುನಿ. ಚ. I. ೩೦).

[ ದೇ.॥ ತೆಲು.ಚೊಲ್ಲ, ಚೊಲ್ಲಿಯ, ಜೊಲ್ಲೆ, ಜೊಲ್ಲಿ ]

**ಚೊಲ್ಲೆಯ್ಯ₂ (ನಾ).** ಕಂಚುಕಿ : ತಂಬುಲಿಗರ್ ನಂಬುಗೆಗೆಟ್ಟವರಂತೆ ಪೆಱ ಸಾರೆ ಚೊಲ್ಲೆಯರ್ ಗಲ್ಲೆಯಂಬಲಿಯಂತೆ ನೆಲನಂ ಪತ್ತೆ (ಧರ್ಮಾಮ್ಮ. ೨-೩೯). [ <ಪ್ರಾ. ಚೋಲಅ. / ಸಂ. ಚೋಲ = ಕುಪ್ಪಸ ; ಕಂಚುಕ ]

**ಚೊಲ್ಲೆಯಂಗೆಯ್ (ಕ್ರಿ).** ತುರುಬನ್ನು ಕಟ್ಟು ; ತುರುಬಿನ ಕೊನೆಯನ್ನು ಎಳೆದು ಬಿಗಿಗೊಳಿಸು : ಸ್ತನವಮಂ ಮೇಲ್ವೆಱಗಿಂದವರ್ಚಿ ನಿಱಿಯಂ ತತ್ಕಾಂಚಿಯೊಳ್ ಸೇರ್ಚಿ ಪೂವಿನ ಭಾರಕ್ಕಿಱಿವಾ ಬಱಲ್ಮುಡಿಯನೆಲ್ಲಂ ಚೊಲ್ಲೆಯಂಗೆಯ್ದು (ಶಾಂತೀಶ್ವ. ೪-೨೨೦). [ ಚೊಲ್ಲೆಯ₁ + ಕೆಯ್₁ ]

**ಚೊಲ್ಲೆಹ** 'ಚೊಲ್ಲೆಯ್ಯ₁' ನೋ.

**ಚೊಲ್ಲೆಹಗಾಱ (ನಾ).** ಕಂಚ್ಚಿನ ಅಲಂಕಾರವನ್ನು ಉಳ್ಳವನು : ಬಲ್ಲಿನ ನಾರಿಯು ಇಲಿ ಬಂದು ಕಡಿಯಲಾಗಿ ನಾರಿ ಜಾಱಿತ್ತು ಬಿಲ್ಲು ಮುಱಿಯಿತ್ತು ಬಿಲ್ಲಿನೊಳಗಾಡುವ ಚೊಲ್ಲೆಹಗಾಱರೆಲ್ಲಿಯೂ ಇಲ್ಲ(ಮೋಳಿಮಾ. ೧೯೧ ೭೧೭).

[ ಚೊಲ್ಲೆಹ ( <ಚೊಲ್ಲೆಯ್ಯ₁) + – ಕಾಱ ]

**ಚೊಲ್ಲೆಹದುಱುಬು (ನಾ).** ಒಂದು ಬಗೆಯ ತುರುಬು : ವಾರಿದುಱುಬಿನ ವರಿವತುಱುಬು ಚೊಲ್ಲೆಹದುಱುಬು ಬಾರದುಱುಬಿನ ಬಟ್ಟದುಱುಬು ಪಿಣಿಲಾಂತ ಘನ ಕೋರ ಜೆಡೆ (ಪ್ರಭುಪು. ೪-೭೯).

[ ಚೊಲ್ಲೆಹ ( <ಚೊಲ್ಲೆಯ್ಯ₁) + ತುಱುಬು₂ ( <ತುಱುಂಬು₂) ]

**ಚೊಳ್ಳೆ** 'ಸೆಳ್ಳೆ' ನೋ.

**ಚೊಱ (ನಾ).** ಒಂದು ಬಗೆಯ ಮೀನು : (ಚ).

[ ದೇ.॥ ತಮಿ. ಚುಱ, ಚುಱವ, ಚುಱವು, ಚುಱಾ; ಮಲ. ಚುಱಾ, ತುಱಾವು, ಶ್ರಾವು; ತೆಲು. ಚೊಱ, ಚೋಱ, ಸೊಱ ]

**ಚೋಕು, ಚೌಕ್ಕು (ಗು).** ೧. (ಕರಾ) ಚಪ್ಪಟೆಯಾದ : ಒಲೆಯ ಬಳಿಯಲ್ಲೇ ಒಳಕ್ಕೆ ಕಟ್ಟಿದ ಕೆಲವು ಚೋಕು ಮೈಸೂರು ಕದಳಿ, ಬೂದಿಬಾಳೆಗೊನೆಗಳೂ ಅವರ ದೃಷ್ಟಿಗೆ ಬಿದ್ದವು (ಬಾಳಗಿ. ೧೫೦). ೨. ಕ್ಷೀಣವಾದ ; ಬಡಕಲಾದ ; ಜೀರ್ಣವಾದ ; ಹಳೆಯ. 'ಚೋಕುಮರ' ಪರಾ. **ಚೌಕ್ಕು:** ೨. ತೋಟ ದಿಂದ ಅಡಕೆಯ ಮರ ೮೭೭೮ ಕೆ ಸಸಿ ೮೨೧ ಚೌಕು ೨೦೦೦ ಉಭಯಂ ಮರ ೨೮೨೨೯ (ಎಕ. VIII, ತೀರ್ಥಹ. ೮೮-೦೯; 1641) ; ಗದೆ ಅಂಚಿನ ೯೩ಕೆ ಸಸಿ ೧೯ ಚೌಕು ೧೧ ಉಭಯಂ ಮರ ೩೭೯ . . . ತೋಟದಿಂದ ಮರ ೧೭೬೩ಕೆ ಸಸಿ ೧೭೩ ಚೌಕು ಮ ೩೨೬ ಉಭಯಂ ಮರ ೪೯೯ (ಎಕ. VIII, ತೀರ್ಥಹ. ೮೮-೨೩; 1641).

**ಚೋಕಾಗು**=ಕ್ಷೀಣವಾಗು ; ಹಳತಾಗು : ಕೆರೆಯ ಏರಿ ಎಲ್ಲೂ ಒಂದು ಕಡೆ ಚೋಕಾಗಿದೆ (ರೂಢಿ). [ ←ತುಳು. ಚೋಕ್ ]

**ಚೋಕುಮರ (ನಾ).** ಹಳೆಯ ಮರ ; ಹಣ್ಣು ಬಿಡುವುದು ನಿಂತುಹೋದ ಮರ : ತೆಂಗಿನ ಮರನಿಂದ ಕ್ರಿಯ ಸಂವತ್ಸರದಲುಯೇಣಾಕೆ ಫಲಮರ ೫೦೩ ಸರ್ವಜಿತ್ತು ಸಂವತ್ಸರದಲ್ಲುಯೆಡಸಸಿ ೨೭೬ ಖರ ಸಂವತ್ಸರದಲು ಕೂಡಿದು ಚೋಕುಮರ ೩೦೬ಕೆ ಪಾಲು ೧ಕೆ ಮರ ೭೬ (ಎಕ. VIII, ತೀರ್ಥಹ. ೯೫-೭೭ ; 1709). [ ಚೋಕು + ಮರ₁ ]

**ಚೋಕ್ಷ (ಗು).** ೧. ಸ್ವಚ್ಛವಾದ ; ಶುದ್ಧವಾದ ; ಚೊಕ್ಕ. ೨. ಮನೋಹರವಾದ ; ಸುಂದರವಾದ. ೩. ಪ್ರಾಮಾಣಿಕವಾದ. ೪. ಜಾಣ್ಮೆಯುಳ್ಳ. ೫. ಚುರುಕಾದ ; ತೀಕ್ಷ್ಣವಾದ ; ಉಗ್ರವಾದ. [ ಸಂ. ]

**ಚೋಖ** 'ಚೊಕ್ಕ₂' ನೋ.

**ಚೋಗೆ** 'ಚೊಗೆ' ನೋ.

**ಚೋಚ (ನಾ).** ೧. ತೊಗಟೆ ; ಸಿಪ್ಪೆ. ೨. ದಾಲ್ಚಿನ್ನಿ ಚಕ್ಕೆ ; ಲವಂಗ ಪಟ್ಟೆ. ೩. ತೆಂಗು : "ತೆಂಗಿನ ಫಲಂ ಚೋಚಯೆನಿಸುವುದು" (ನಾಚಿರಾ. ೧೦೩); ಬೆಳೆದೆಱಗಿರ್ದ ಕೆಯ್ವೊಲದಿನುಂನತ ಚಂಪಕ ಚೋಚಮೋಚ ಪಾಟಳ ಪನಸಾಂಬ್ರ ಪೂಗವನ ನಾಗಲತಾಳಿಯಿಂ (ಸೌಇಇ. IX-i, ೧೦೮-೨೩ ; 1057); ದಾಡಿಮ ದ್ರಾಕ್ಷಾ ಚೋಚ ಮೋಚಾದಿ ಫಳಕುಳಂಗಳುಂ ಸೊಗಯಿಪುವು (ಚಂದ್ರಪು. ೬-೩೪ ವ). ೪. ಬಾಳೆ ; ಕದಳಿ : ವಿಧುಮಣಿ ಕಲಶಂ ದ್ರಾಕ್ಷೆ ಚೋಚಂ ವರಾಟಂ (ಚಂದ್ರಛ್ಯು. ೧೫-೭೮). [ ಸಂ. ]

**ಚೋಜಿಗ, ಚೋದಿಗ, ಸೋಜಿಗ (ನಾ).** ೧. ಆಶ್ಚರ್ಯಕರವಾದುದು ; ಚೋದ್ಯ ; ವಿಚಿತ್ರವಾದುದು : ಅಂಗನೆಯೊಳ್ ಕಳ್ದಿರ್ಪುದನಂಗಾಹಿಯ ನಱಿದು ಪೇಟ್ದು ಪೊಡೆಯಂ ಕಡುಪಿನ್ನಂಗಂ ದೊರೆಕೊಂಡಿರೆ ಕೊಂಡಂ ಗಡಮೆಲೆತ್ತೆಗ ಹುಯಿಲದೇಂ ಚೋಜಿಗವೋ(ಕಾವ್ಯಾವ. ೪೪೫); ಕಡುಚಾಗಿ ; ಕಣ್ಬುಲ್ಲಂ ; ಚಿಕ್ಕಚೋಜಿಗಂ (ಶಮದ. ೬೫ ಪ್ರಯೋ); ಇವಳನ್ನು ಆರಿಯೆಯಾ? ಏನೋ ಚೋಜಿಗವಾಗಿದೆ. ನಿಮ್ಮ ಬೀದಿಯಲ್ಲಿಯೇ ಕೆಳಭಾಗ . . . ಆ ಚೌಕದ ಬಳಿ (ಮುಸುಗ. ೨). **ಚೋದಿಗ:** ಚೋದಿಗಂ ಜಗದೊಳೀ ಸೌಂದರ್ಯ ಸದ್ಭೂಷಣಂ (ಚಂದ್ರಛ್ಯು. ೦೫-೯೭). **ಸೋಜಿಗ:** ೨. ಆಶ್ಚರ್ಯ : ಜಲವ ತಪ್ಪಿದ ಮತ್ಸ್ಯ ಬದುಕುವುದೇ ಸೋಜಿಗ (ಬಸವ. ೩೭೭); ತರದಿಂ ರೋಗಂ ವಿಷಂ . . . ದುರ್ಜನಂ ದುರ್ಮದಂ ತಸ್ಕರ ರೆಂಬೀ ಕಂಟಕಸನ್ಮೋಮದ ನಡುವೊಡಲಿರ್ಪಂದಮೇಂ ಸೋಜಿಗಂ (ರಕ್ಷಾಶ. ೨೯); ಜಗದ ಜೀವರ ಯಂತ್ರಮಯ ಹಾಹೆಗಳನಾಡಿಸಿ ತೋರ್ಪ ನಾಟಕಿ ಮಗುವುತನದಲಿ ಬಾಲಕರ ಕೇಳೀಕಲಾಪದಲಿ ಸೊಗಸುವುದು ಸೋಜಿಗವಲಾ (ಕೊರರಾ. ೧-೮-೭೭). ೩. ಆಶ್ಚರ್ಯಕರವಾದ ವಿಷಯ : ಈ ಋಷಿಗಳು . . . ನಿಸರ್ಗಪ್ರೀತಿ ಎಂದರೇನೆಂಬುದನ್ನು ಅವರು ಬಲ್ಲವರು ಅದರ ಸೋಜಿಗ ಗಳಲ್ಲಿ ಕರಗಿ ತಮ್ಮ ಮತ್ತು ನಿಸರ್ಗದ ಸಾಮರಸ್ಯವನ್ನು ಕಂಡವರು (ಸೌಂದಸ. ೧೦೩); ಮರೆತು ಜಗ ಮಲಗಿರಲು, ಅರಿಯಲಾ ಸೋಜಿಗವ (ಕನ್ನಜಾ. ೩೦೩). [ <ಸಂ. ಚೋದ್ಯಕ ]

**ಚೋಜಿಗಂಬಡು, ಚೋದಿಗಂಬಡು, ಚೋದಿಗವಡು, ಸೋಜಿಗಂಬಡು, ಸೋಜಿಗಪಡು, ಸೋಜಿಗವಡು** (ಕ್ರಿ). ಆಶ್ಚರ್ಯಪಡು: ಅದಂ ಕಂಡು ಕಡು ಚೋಜಿಗಂಬಟ್ಟು (ಬಾಧಪು. ೪-೬೩ ವ). **ಚೋದಿಗಂಬಡು:** ಸಮ್ಯಕ್ತ್ವದ ಮಹಾತ್ಮೆಯಂ . . . ಚೋದಿಗಂಬಟ್ಟು ಕೇಳ್ದಂ (ಸಮ್ಯಕೌ. ೧೨-೧). **ಚೋದಿಗವಡು :** ಆ ದೇಶಾಧಿಪ ಚಿಂತಿಸಿ ಚೋದಿಗವಡುತಿರ್ದ ನಾಗ (ಶ್ರೀಪಾಂ. ೮-೨). **ಸೋಜಿಗಂಬಡು :** ಓಹಿಲಯ್ಯನಂ ಶ್ರೀಹಸ್ತದಿಂ ಸೋಮನಾಥಂ ಬರತೆಗೆದು ಮುಂದಿರಿಸಿಕೊಂಡು ಸವಿನುಡಿಗಳಿಂ ಸಂತವಿಡುತ್ತಮಿರೆ ಪೂಜಾರಿಗಳ್ಕಂಡು ಸೋಜಿಗಂಬಡುತ್ತುಂ ಬೆಱಗಾಗಿ (ಓಹಿರ. ಹ. ೨೦೭-೨೪) ; ನೋಟಕರ್ ಮೂಗಿಂಗೆ ಬೆರಳಿಟ್ಟು ಸೋಜಿಗಂಬಡುತಿರೆ ಸಮಸ್ತ ಬಲಮಂ ನೆರಪಿ ಮನದ ಗೆಲವಿಂ (ಪದ್ಮರಾ. ೩-೪೦). **ಸೋಜಿಗಪಡು :** ಈ ಜಗದಲ್ಲಿಯಿದಕೆ ಸಮನಿಲ್ಲೆಂದು ಸೋಜಿಗಪಡುತಿರ್ಪರವರು (ಕಂನವಿ. ೭-೦೪). **ಸೋಜಿಗವಡು:** ಬಿಟ್ಟ ಸೂಱೆಯೊಳು ವಿಮಾನವೆಂದಾಗಸವಟ್ಟೆಯೊಳಗೆ ಬರುತಿರ್ದ ತೊಟ್ಟನೆ ನಿಂದೊಡಿದೇನೆಂದು ಸೋಜಿಗವಟ್ಟು ದಖಿಲ ಜನವೆಲ್ಲ (ಅಂಜಚ. ೧೪-೮೦). [ ಚೋಜಿಗ + ಪಡು$_1$ ]

**ಚೋಟನ** (ನಾ). ಚಿಟಿಕೆ: ಮಾಡಿತು ಜನನ ಮಸ್ತಕಕಂದೊಲವನು ಕೂಡಿತಂಗುಲಿಗೆ ಚೋಟನವ (ಅನಂಚ. ೦೨-೫೩). [ <ಸಂ. ಛೋಟನ ]

**ಚೋಟು** (ನಾ). ೧. ಚಾಚಿದ (ಕೈಯ) ಹೆಬ್ಬೆರಳ ತಂದಿ ಹಾಗು ತೋರು ಬೆರಳ ತಂದಿ ಇವುಗಳ ನಡುವಿನ ಅಳತೆ: “ಪ್ರಾದೇಶವೆಂದೆನೆ ಚೋಟು” (ಮಂಗರಾ. ೯೬-೦೦); ಕುಂಬಳದ ಕಾಯ ನಾಲ್ವೆರಳಗಲ ಚೋಟುದ್ದವೆಂಬಂತೆ ಸಂಬಳಿಸಿ (ಸೂಪಶಾ. ೫-೧೮) ; ಮೂಱು ಚೋಟೆಂದಾಱು ಖಂಡವ ಕಂಡು ಬಲಾಱಿಕೆಯೊಳು ಬಹವೇಳು (ಭರಚ. ೨೦-೧೩) : ಚೋಟು ಕೊಂಬಿನದಕ್ಕೆ ೩೦ ವರಹಗಳನ್ನೂ . . . ಕೊಡುತ್ತೇವೆ (ಚಾಮುಪಂ. II, ೫೮). (ಗು). ೨. ಚಿಕ್ಕ ; ಸಣ್ಣ.

**ಚೋಟಗಲ**=ಒಂದು ಚೋಟಿನಷ್ಟು ಅಗಲ : “ ಪ್ರಾದೇಶಃ, ತಾಲಃ, ಗೋಕರ್ಣಃ . . . ಚೋಟುದ್ದ, ಚೋಟಗಲ, ಚೋಟೆತ್ತರ ” (ಸಿದ್ಧಾಂತಿ. ೦೬೮). **ಚೋಟುದ್ದ**=೧.ಒಂದು ಚೋಟಿನಷ್ಟು ಉದ್ದ:ನೋಡಿದೊಡೆಂಟು ಗೇಣೊಡಲ ಚೋಟುದ್ದವ ಮಾಡಿ (ಮೋಹತ. ೪೦-೨೩) : ಚೋಟುದ್ದದವನು ‘ಬಾಳಿನ ಹಂಬಲ’ ಮೇಲೆ ಏನು ಬರೆದಿದಾನೋ ನೋಡೋಣ (ರಾಮಾನ. ೮೭) : ಚೋಟುದ್ದ ಮಗುವಿಗೆ ಗೇಣುದ್ದ ಕುಲಾವಿ (ಗಾದೆ). ೨. (ಆಲಂ) ತೀರ ಚಿಕ್ಕ ವಯಸ್ಸಿನ ವ್ಯಕ್ತಿ ; ಕಿರಿಯಂ : ಚೋಟುದ್ದ ಇದ್ದಾಳೆ ನನಗೇ ಬುದ್ಧಿ ಹೇಳುತ್ತಾಳೆ ನೋಡಿ (ಹೂಹಣ್ಣು. ೪೨). **ಚೋಟೆತ್ತರ** = ಚೋಟುದ್ದ : “ಪ್ರಾದೇಶಃ, ತಾಲಃ, ಗೋಕರ್ಣಃ . . . ಚೋಟುದ್ದ, ಚೋಟಗಲ, ಚೋಟೆತ್ತರ” (ಸಿದ್ಧಾಂತಿ. ೦೬೮).

[ ದೇ.॥ ಮಲ. ಚೋಟ್ಟಚ್ಚಾನ; ತುಳು. ಚೋಟು, ಚೋಟ್ಟು; ಚುಟ್ಟಿ: ಕೊಡ. ಚುಟಿ;]

**ಚೋಡ** (ನಾ). ಒಬ್ಬಾತನ ಹೆಸರು : ಸಂಕರಸ ಚೋಡಮಹಾರಾಜಗೆ ಪದ್ಮಲದೇವಿಗಂ ಹುಟ್ಟಿದಳ್ (ಕಲಂಶಾ. ೮-೨೫ : 1060).

**ಚೋಡಿ** (ನಾ). ೧. ಕೋಪ; ಮುನಿಸು. ೨. ಈರ್ಷ್ಯೆ; ಮತ್ಸರ; ಸ್ಪರ್ಧೆ: ಅರಿಯದ ಮಗುವಿನ ಮೇಲೆಯೇ ನಿನ್ನ ಚೋಡಿ? (ಮಾಮರಾ. ೯೦); ವಿಶ್ವಾಮಿತ್ರನು ಚೋಡಿಯಿಂದ ಈ ಯಜ್ಞವನ್ನು ನಡೆಸುತ್ತಾ, ದೇವತೆಗಳಿಗೆ ಆಹುತಿಯನ್ನು ಕೊಡಿಸಿದನು (ನೀತಿಚಿಂ. VII, ೨೯). [←ಕೊಡ. ಚೋಡಿ]

**ಚೋದಕ** (ಗು). ನಡಸುವ; ಪ್ರೇರಿಸುವ; ಪ್ರೇರಕವಾದ: ಒಳಸ್ರವಿಸುವ ನಿರ್ನಾಳಗ್ರಂಥಿಗಳು . . . ಇವುಗಳ ಚೋದಕ ಸ್ರವಣಗಳು– “ ಹಾರ್ಮೋನ್ಸ್ ” ರಕ್ತದ ಹರಿವಿಗೆ ಪ್ರಸರಿಸುತ್ತವೆ (ಕೀಟಜಿ. ೪೦) ; ಇದು ಸಸ್ಯಗಳಲ್ಲಿ ಸಿಕ್ಕುವ ಒಂದು ಚೋದಕಸ್ರಾವ (Plant hormone) (ನಿರಶಾ. ೦೩). [ ಸಂ. ]

**ಚೋದನ** (ನಾ). ೧. ಅಟ್ಟುವುದು; ದೂಡುವುದು. ೨. ಪ್ರೇರಿಸುವುದು; ಆದೇಶ ನೀಡುವುದು. [ ಸಂ. ]

**ಚೋದನಾತ್ಮಕ** (ನಾ). ಪ್ರೇರಕವಾದುದು; ಪ್ರಚೋದಿಸುವಂತಹುದು: ಈ ಧರ್ಮವು ಚೋದನಾತ್ಮಕವಾದುದು ಎಂದರೆಇದೇ ಎಲ್ಲರನ್ನೂ ಕಾರ್ಯಪರರನ್ನಾಗಿ ಮಾಡುವುದು (ನಡದಾ. II, ೦೪೫೫). [ ಸಂ. ]

**ಚೋದನೆ** (ನಾ). ೧.=ಚೋದನ. ೨. [ತತ್ತ್ವಶಾ] “ಚೋದನಾ ಎಂದರೆ ಪ್ರವರ್ತಕ ಅಥವಾ ನಿವರ್ತಕವಾದ ವಾಕ್ಯ ” (ಭಾತತ್ತ್ವ. ೩೮೩): ಧರ್ಮ ಎಂದರೆ ಚೋದನಾಗಮ್ಯವಾದುದು (ಭಾತತ್ತ್ವ. ೩೮೩). [ಸಂ. ಚೋದನಾ]

**ಚೋದಹಲಸು** (ನಾ). ಒಂದು ಬಗೆಯ ಹಲಸು : ಚೋರ–ಉಪ್ಪು ಮಣ್ಣು, ಖಚೋರ, ಚೋದಹಲಸು, ಲವಂಗ, ತೇಗ (ಓಷಧಿ. ೫೮).

[ ಚೋದ್ಯ$_0$ + ಹಲಸು (<ಪಲಸು) ]

**ಚೋದಿಗ** ‘ಚೋಜಿಗ’ ನೋ.

**ಚೋದಿಗಂಬಡು** ‘ಚೋಜಿಗಂಬಡು’ ನೋ.

**ಚೋದಿಗಗೊಳ್** (ಕ್ರಿ).=ಚೋಜಿಗಂಬಡು : ವಾರುವಗಳ ಕಂಡು ಭೂರಿ ಚೋದಿಗಗೊಂಡು (ಯಾದವಾ. ೦೮). [ಚೋದಿಗ (<ಚೋಜಿಗ)+ಕೊಳ್$_1$]

**ಚೋದಿಗವಡು** ‘ಚೋಜಿಗಂಬಡು’ ನೋ.

**ಚೋದಿಸು** (ಕ್ರಿ). ೧. ಗಾಡಿ, ರಥ ಮೊದಲಾದುವನ್ನು ನಡೆಯಿಸು : ಸಾರಥಿ ರಥಮಂ ಲೀಲೆಯೆ ಚೋದಿಸೆ ತೆರೆಗಳ ಮಾಲೆಯನವಯವದೆ ದಾಂಟಿ ಪರಿದುವು ಹರಿಗಳ್ (ಆದಿಪು. ೧೨-೮೧) ; ಬರವೇಟ್ಟಂ ನರನುದ್ಧಮಪ್ಪ ರಥಮಂ ಚೋದಿಪ್ಪ ಕೃಷ್ಣಾಖ್ಯನಂ (ನೇಮಿಪು. ೧೨-೯೮); ವಾರಣಾರೋಹಕರೆಲ್ಲಂ . . . ಆನೆಗಳಂ ಚೋದಿಸುವುದುಂ (ಬಾಧಪು. ೧೩-೮೯ ವ). ೨. ಪ್ರಚೋದಿಸು ; ಪ್ರೇರೇಪಿಸು : ಪ್ರಾರ್ಥನಾತೀವ್ರತೆಯ ಸಾತ್ವಿಕ ತಪಶ್ಶಕ್ತಿ, ಪೇಳ್, ತಾಂ ಸ್ವಯಂಕ್ರಿಯೆಯಾಗಿ ಚೋದಿಸದೆ ಸೃಷ್ಟಿಯಂ (ಶ್ರೀರಾಮಾ. ೩೨೬-೧೯೨). [ ಚೋದನ + – ಇಸು$_3$ ]

**ಚೋದ್ಯ** (ಗು). ೧. ಅಟ್ಟಬೇಕಾದ ; ಓಡಿಸಬೇಕಾದ. ೨. ಪ್ರೇರಿಸಲ್ಪಡುವ ; ಬಲಾತ್ಕರಿಸಲ್ಪಡುವ ; ನಿರ್ಬಂಧಿಸಲ್ಪಡುವ. (ನಾ). ೩. ಪ್ರಶ್ನೆಯನ್ನು ಎತ್ತುವುದು; ಆಕ್ಷೇಪಿಸುವುದು. ೪. ಆಶ್ಚರ್ಯ ; ಸೋಜಿಗ; ವಿಸ್ಮಯ: ಬೆರಳನೆಣಿಸಿ ಪರಮಾರ್ಥವ ಹಡೆದೊಡೆ ಚೋದ್ಯವಲ್ಲವೆ ಹೇಳಾ (ಬಸವ. ೫೮೦) : ಮನಕ್ಕಾದ ಚೋದ್ಯಮಂ (ಕುಸುಮಾ. ೦೩-೪). ೫. ಆಶ್ಚರ್ಯಕರವಾದ ವಿಷಯಂ ; ಸೋಜಿಗದ ವಿಷಯ : ಕಮಳದೊಳನಿಮಿಷಯುಗಮೊಪ್ಪಿ ತೋರ್ಪುದಿಂತಿದು ಚೋದ್ಯಂ (ಕವಿರಾ. ೩-೨೦೮) ; ಒಂದು ಚೋದ್ಯಮಂ ಕಂಡೆಂ (ಶಾಂತಿಪು. ೨-೨೧ ವ) ; ಈತನ ಮಾತು ಅಶ್ರುತಪೂರ್ವಮೀ ಚೋದ್ಯಮಂ ನೋಡುವಂ(ಶಂಕರಂ.೦೭೦-೦೫). ೬. ಒಂದು ಬಗೆಯ ವಿಷಚಿಕಿತ್ಸಾಕ್ರಮಂ : ಪತ್ರಾಚ್ಛಾದನದಿಂದಂ ಚಿತ್ರತೆಯಂ ಮಾಟ್ಟುದದುವೆ ಚೋದ್ಯಮೆನಿಕ್ಕುಂ (ಖಮದ. ೩-೮). [ಸಂ.]

**ಚೋದ್ಯಂದಳೆ** (ಕ್ರಿ). ಆಶ್ಚರ್ಯಪಡು: ಅದಕೆ ಚೋದ್ಯಂದಳೆದು ಕುವರಂಗೆ ಹರಣವೆಂತೊದಗಿತ್ತು ಪೇಳೆಂದು . . . ಪದಪಿನಿಂ ಕೇಳಲು (ಕೊಟ್ಟೂಬ. ೧೨-೧೩). [ ಚೋದ್ಯ + ತಳೆ$_1$ ]

**ಚೋದ್ಯಂಬಡು, ಚೋದ್ಯಪಡು, ಚೋದ್ಯವಡು** (ಕ್ರಿ). = ಚೋದ್ಯಂದಳೆ : ಅರಸಂ ಮೊದಲಾಗಿ ಪೊಟಲ ಜನವೆಲ್ಲಂ ಚೋದ್ಯಂಬಟ್ಟು ಬೆಱಗಾಗಿ ನೋಡುತ್ತಿರ್ದ (ಪದ್ಮರಾ. ೮೪-೧೫); ತಪೋವನದ ತಪೋಧನರ ತಪಃಪ್ರಭಾವಕ್ಕೆ ಚೋದ್ಯಂಬಟ್ಟು (ಪಂಪಭಾ. ೧-೧೧೫ ವ).**ಚೋದ್ಯಪಡು:** ಒಬ್ಬರಿಗೊಬ್ಬರು ಆಡಿಕೊಳ್ಳುತ್ತಿದ್ದ ಮಾತುಗಳನ್ನು . . . ಕೇಳಿ ಚೋದ್ಯಪಟ್ಟು ಬೆರಗಾಗಿದ್ದರು(ಕಸಾಚಿ. ೫). **ಚೋದ್ಯವಡು:** ಅರಮಗನೆಂದವೋಲ್ ನೆಗಳ್ದ ಕಜ್ಜಮನೀಕ್ಷಿಸಿ ಚೋದ್ಯವಟ್ಟು (ರಾಜಶೇ. ೦೪-೫೯).

[ ಚೋದ್ಯ + ಪಡು$_1$ ]

**ಚೋದ್ಯಕರ** (ನಾ). ಸೋಜಿಗವನ್ನುಂಟುಮಾಡತಕ್ಕುದು ; ಆಶ್ಚರ್ಯ ಕರವಾದುದು : ಚಕ್ರಗಳು ಭೂತಳಕೊರಗಿ ಭೀತಿಯಿಂ ಪುಲ್ಲ ಕಚ್ಚಿದುವೊ ಯೆನೆ ಪಲ್ಲೊಳಂಟಿಹ ಪಾಸೆಯೇಂ ಚೋದ್ಯಕರಮೆನಿಪುದೊ (ಪಂಪಾರಾ. ೫-೨-೨೯). [ ಸಂ. ]

**ಚೋದ್ಯಪಡು** 'ಚೋದ್ಯಂಬಡು' ನೋ.

**ಚೋದ್ಯಮಯ** (ಗು). ಆಶ್ಚರ್ಯಕರವಾದ; ಅದ್ಭುತವಾದ : ಆದಿಯ ವರೆಲ್ಲರು ಹೋದರು ಹೊಲಬುಗೆಟ್ಟು ಎನಗಿನ್ನಾದವರಾರೋ ಭೇದಕ್ಕತೀತ ಚೋದ್ಯಮಯ ನಿಃಕಳಂಕಮಲ್ಲಿಕಾರ್ಜುನಾ (ಮಹಾಮಾ. ೦೦೧-೪೦೪). [ ಸಂ. ]

**ಚೋದ್ಯವಡು** 'ಚೋದ್ಯಂಬಡು' ನೋ.

**ಚೋದ್ಯವಡೆ** (ಕ್ರಿ). ಆಶ್ಚರ್ಯಕರವಾಗಿರಂ: ಭೂವಲಯಕ ಚೋದ್ಯವಡೆದ ದುರ್ಗವ ಕೊಳ್ವ ಭಾವವ ಚಿತ್ತೈಸೆಂದ(ಕಂಸವಿ. ೧೬-೭೬). [ಚೋದ್ಯ+ಪಡೆ$_1$]

**ಚೋದ್ಯಾವಹ**(ನಾ).ಆಶ್ಚರ್ಯಕರವಾದುದು; ವಿಸ್ಮಯಂಕರವಾದುದು: ಜಗಕ್ಕತಿಚೋದ್ಯಾವಹಮಾಗೆ ಪೆಂಪುವಡೆದತ್ತಂತಾತ್ಮಜನ್ಮೋತ್ಸವಂ(ಆದಿಪು. ೭-೩೭). [ ಸಂ. (ಚೋದ್ಯ + ಆವಹ) ]

**ಚೋಪದಾರ, ಚೋಪುದಾರ** (ನಾ). ಹಿರಿಯ ಅಧಿಕಾರಿಯ ಮುಂದೆ ಕೋಲು ಹಿಡಿದುಕೊಂಡು ಹೋಗುವ ಸಿಪಾಯಿ ; ಕಟ್ಟಿಗೆಕಾರ ; ವೇತ್ರಧಾರಿ : ಚೋಪದಾರ ಮಹಲದಾರ ನಕೀಬ . . . ಇವರೇ ಮೊದಲಾದವರು ಅಲಾಹಿದ ಪಾಗಿರ್ದ ಪೇಷಾಕಚೇರಿಗೆ ಸೇರಿದವರು (ಜಾಮವಂ. ೨೨೬) ; ರತ್ನದ ಕೆಲಸಾ ಮಾಡಿದಂಥ ಚೋಪದಾರರ ಮುರುಕು ಆಸಾಗಳು ಸೋಟಾಗಳು ಇವುಗಳ ದೊಡ್ಡ ರಾಸಿ . . . ಬಿದ್ದಿತ್ತು (ಮುಸುಗ. ೨೮) ; ಮೇಣೆಗಳೊಳಗೂ ಕೂತು ಭಾಲದಾರ ಚೋಪದಾರ ಮೊದಲಾದ ಪರಿವಾರದೊಂದಿಗೆ ಬರುತ್ತಿದ್ದರು (ಮಂಜುಳ. ೦೮೯). **ಚೋಪುದಾರ** : ಬರಿಸೊಂದು ಮಾರ್ಗದೊಳುಯಿರಿಸುತ್ತ ಚೋಪುದಾರರ ನಲ್ಲಿಗಲ್ಲಿ ಬಿಡದೆ ತರಿಸು (ಕೃಷ್ಣವಿ. ೩-೨೦) ; ಸಾರೋಟು ಚೋಪುದಾರ ನೊಡನೆ ಕಳುಹಿಸಿ . . . ಅವರನ್ನು ಕರೆಯಿಸಿ (ಮಹಾಪಂ. II, ೦೨೦) ; ದೊರೆಗಳು ಅದನ್ನು ಪರಿಶೀಲಿಸಿ ಕಟ್ಟಿಗೆಯವರು ಚೋಪುದಾರರುಗಳಿಂದ ವರಾಕು ಹೊಗಳಿಸಿಕೊಳ್ಳುತ್ತಾ (ಕೃಷ್ಣಭೂ. ೦೪೮). [ ←ಮರಾ. ಚೋಪದಾರ್ ; ಫಾರ. ಹಿಂ. ಚೋಬ್‌ಗಾರ್ ]

**ಚೋಪದಿತುಪ್ಪ** (ನಾ). ಒಂದು ಬಗೆಯ ಸಸ್ಯ (?) : "ಚೋರ– ಉಪ್ಪುಮಣ್ಣು, ಖಚೋರ, ಚೋದಹಲಸು . . . ಚೋಪದಿತುಪ್ಪ" (ಓಷಧಿ. ೫೮). [ ? ]

**ಚೋಪಾರ$_1$** (ನಾ). (ಕರಾ) ಕಷ್ಟದ ಪರಿಸ್ಥಿತಿ ; ದಾರಿದ್ರ್ಯ. [ ←ತುಳು. ಚೋಪಾರೊ ]

**ಚೋಪಾರ$_2$** 'ಜಾಪರ' ನೋ.

**ಚೋಪುದಾರ** 'ಚೋಪದಾರ' ನೋ.

**ಚೋಮ** (ನಾ). ಒಬ್ಬಾತನ ಹೆಸರು : ಚೋಮತ್ತಟ್ಟಾರ ನಾಮಧೇಯೇನ ಲಿಖಿತಂ ತಾಮ್ರಸಾಧನಮ್ (ಮೈಆರಿ. ೦೯೪೨ , ೩೦-೫೫ ; ಸು. 610). [ <ಸಂ. ಸೋಮ ]

**ಚೋರ್‌ಇನಾಂ** (ನಾ). ಕಂದಾಯ ಕೊಡದೆ ಕಳ್ಳತನದಿಂದ ಅಥವಾ ಅನಧಿಕೃತವಾಗಿ ಅನುಭವಿಸುವ ಜಮೀನು (ಮೈಗೆಜೆ. IV, ೭೬೬). [ <ಚೋರ + ಇನಾಂ ]

**ಚೋರ** (ನಾ). ಕಳವು ಮಾಡುವವನು ; ಕಳ್ಳ : ಜಾರ ಚೋರ ವೀರರ ಕಥೆಯಂತೆ ಬಾಯ್ಸವಿಯ ಮಾತುಗಳಂ ಬಚಿಕೆಯ್ಯ ಚರ್ಚೆಯಲ್ಲ (ಅನಂಪು. ೦-೩೬) ; ಚೋರರು ಇವರನ್ನು ಸಮೀಪಿಸದೆ ಇರುವಂತಾಗಲಿ (ಶುಕ್ಲಾರ. ೨೯೮). [ ಸಂ. ]

**ಚೋರಕ** (ನಾ). = ಚೋರ : ಕೃಪಣೆಯರು ಚೋರಕರ ತಾಯ್ಗಳು ಕುಟಿತ ಮತಿಗಳು ಖೂಳೆಯರು (ಬಸಪು. ೪೦-೫೪) ; ನೆರೆ ಹೊಲ್ಲ ದುರಾಚಾರಿಗಳ ನೆರೆ ಹೊಲ್ಲ ಜಾರ ಚೋರಕರ (ಅಖಂಡೇ. ೧೨೮-೯೨). [ ಸಂ. ]

**ಚೋರಕಂಡಿ** 'ಚೋರಗಂಡಿ' ನೋ.

**ಚೋರಕಂಡಿಕ** 'ಚೋರಖಂಡಿಕ' ನೋ.

**ಚೋರಕವೃತ್ತಿ** (ನಾ). ಕಳ್ಳತನ; ಚೌರ್ಯ : ಒತ್ತರಿಸಿ ನಡುವಿರುಳು ಚೋರಕವೃತ್ತಿಯಲಿ ಬಂದಾವ ಪರಿಯಲಿ ಚಿತ್ತಜಾರಿಯ ನಿಳಯದಲಿ ಪೊಕ್ಕು (ಬಸಪು. ೪೩-೫೦). [ ಚೋರಕ + ವೃತ್ತಿ$_2$ ]

**ಚೋರಖಂಡಿಕ, ಚೋರಕಂಡಿಕ** (ನಾ). ಒಂದು ಬಗೆಯ ಸಸ್ಯ : "ಚೋರಖಂ[ಪಾಠಾಂ. ಕಂ]ಡಿಕಮೆನಲು ಹುಲ್ಲುಸರಡೆನಿಸಿಕ್ಕು" (ಮಂಗರಾ. ೪೩-೯೦). **ಚೋರಕಂಡಿಕ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚೋರಗಂಡಿ, ಚೋರಕಂಡಿ, ಚೋರ್ಗಂಡಿ** (ನಾ). ೧. (ಕೋಟೆ ಮೊದ ಲಾದುವುಗಳಲ್ಲಿ) ಗುಪ್ತವಾಗಿ ನುಸುಳಿ ಹೋಗಲು ಮಾಡಿರುವ ಕಂಡಿ; ಕಳ್ಳದಾರಿ: ಅಲ್ಲಿ ನೂಱ ಹದಿನೈದು ಚೋರಗಂಡಿ ಅವಕ್ಕೆ ನೂಱ ಹದಿನೈದು ಮೊಳೆಯ ಕದಂಗಳು (ಜನ್ನವ. ಕ. ೦೫೬-೩೫೭) ; ಒಯ್ಯನೆ ಚೋರಗಂಡಿ ಯಲಿಳಿದು ಹೊಕ್ಕನು ಭೂರಿವೇಳಗಿನ ಮೊದಲ ವಳಯದ ಕೋಟೆಯನು ಬಳಿಕ (ಕೂರರಾ. ೫-೨-೬) . ೨. (ಅಲಂ) ಕಳ್ಳ : ಈಗ ಓಡುವುದೀ ಚೋರಗಂಡಿಯೆಂದಣಕವನಾಡರೆ ನಾಡವರೆಲ್ಲ (ನೇಮಿಸಂ. ೩೦-೮೨). **ಚೋರಕಂಡಿ** : ೧. ಚೋರಕಂಡಿಗಳಂಬುಕಂಡಿಗಳೊಳು ಗುಬಿಯೇಟಿಸಿ ಮೆಟಿವ ಕೈಗೋವಿ (ಕಂಸವಿ. ೦೦-೦೩೭). **ಚೋರ್ಗಂಡಿ** : ೧. ಆ ಪೊಳಲ ಚೋರ್ಗಂಡಿಯರಿಶವಂಗಳ ಭಂಡಿ (ಏಕೋಪು. ೪-೦೦). [ಚೋರ+ಕಂಡಿ$_1$]

**ಚೋರತನ** (ನಾ). ಕಳ್ಳತನ : ಉರುಪತಿವ್ರತೆಯ ಚೋರತನದಲಿ ಕೊಂಡು ಹೋಹವನಾರು (ಕೂರರಾ. ೩-೦೦-೦೦). [ ಚೋರ + – ತನ ]

**ಚೋರತೆ** (ನಾ). (?) : ಸ್ಥಾಣುವೊಳಹುದು ಚೋರತೆ ಚೋರತೆಗೆ ಕೈ ಗಾಣಿಕೆ ಕೊಟ್ಟೀ ಕಂಗಳಿಗೇ ಕೇಣಿಗೊಂಡನ್ನವನದ ತನ್ನ ಮಾಡಿ ಕೊಂಡೂಣೆಯದಿಂದೆ ಸುಖೇಚ್ಛೆ (ಅರಸಾ. ೫-೨೨೫). [ ? ]

**ಚೋರದಿಡ್ಡಿ** (ನಾ). = ಚೋರಗಂಡಿ : ಬಲುಭಟರು ಹೊತ್ತಿಳಿದು ಹೊಱಡುವ ಚೋರದಿಡ್ಡಿಗಳ (ಮೈರಾಕಾ. ೨-೦೮). [ ಚೋರ + ದಿಡ್ಡಿ ]

**ಚೋರಪಹರೆ, ಚೋರುಪಹರೆ** (ನಾ). ಗುಪ್ತಕಾವಲು ; ರಹಸ್ಯವಾಗಿ ಮಾಡುವ ಪಹರೆ : ಆಣೆ ಭಾಷೆಗಳಿಂದ ಬರೆದ ಸುಳ್ಳು ಕಾಗದಗಳು ಚೋರ ಪಹರೆಯಲ್ಲಿ ಶಿಕ್ಕಿದನ್ನು ಖಂಡೆರಾಯ ನೋಡಿಕೊಂಡು (ಹೈದರ. ೦೦೬). **ಚೋರುಪಹರೆ** : ಗರಡಿಮನೆ ಹತ್ತರ ಶಬ್ದ ಕೇಳಿದರಿಂದಾ, ಯರಡು ಜನ ಪಹರೆದವರ ಚೋರುಪಹರೆ ಇಟ್ಟಲ್ಲಿ (ರಾಜೇಂದ್ರ. ೦೪೦). [ ಚೋರ + ಪಹರೆ ]

**ಚೋರಪುಷ್ಪಿ** (ನಾ). ಒಂದು ಬಗೆಯ ಸಸ್ಯ ; "ಕಡಿಯಾಲದ ಗಿಡ, ಹಕ್ಕರಕೆ ಸೊಪ್ಪು" (ಅಮರ. ೬೬೪) : "ಶಂಖಿನೀ, ಚೋರಪುಷ್ಪೀ ಈ ೨ ಚೋರಪುಷ್ಪಿ" (ನಾಚಿರಾ. ೦೦೦). [ ಸಂ. ಚೋರಪುಷ್ಪೀ ]

**ಚೋರಮಾಳಿಗೆ** (ನಾ). ರಹಸ್ಯವಾದ ಮಾಳಿಗೆ ; ನೆಲಮಾಳಿಗೆ : ಬಳಸಿದಗಳುಗಳಲ್ಲಿ ಶರಧಿಯ ಹೊಳೆಯ ಕೂರ್ಮನ ಕಂಡಿಹವು ಮೇಣ್ ನೆಲ ದೊಳೆಸೆಯುವ ಚೋರಮಾಳಿಗೆ ಕಾಲುಕಣ್ಣಿಗಳ (ಮೈರಾಕಾ. ೨-೦೭). [ ಚೋರ + ಮಾಳಿಗೆ ]

**ಚೋರಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ಪೃಥವೀವಲ್ಲಭಂ ಪಲ್ಲವ ಕುಲತಿಲಕಂ ಪಲ್ಲವಾದಿತ್ಯಂ ಶ್ರೀಮನ್ನೊಱಂಬಾಧಿರಾಜಂ ಚೋರಯ್ಯ ನೊಱಂಬತ್ತರ್ಗಂದೆ ಮೂವರುಂ (ಎಕ. X, ಮುಳಬಾ. ೮೪-೭ ; 974). [ ಚೋರ ? + ಅಯ್ಯ$_1$ ]

**ಚೋರವಿದ್ಯೆ** (ನಾ). ಕಳ್ಳತನದ ವಿದ್ಯೆ ; ತಸ್ಕರಶಾಸ್ತ್ರ : ಅವರ ಚೇತನವನು ನೀನು ಹಗಲೊಳೆ ಕದಿಯುವ ನೀನೆಲ್ಲಿ ಕಲಿತೆಯೆ ಇಂತಹ ಚೋರ ವಿದ್ಯೆಯನು (ಇಂಚಾಪ. ೧೦೩-೫೩). [ ಚೋರ + ವಿದ್ಯೆ ]

**ಚೋರವೆ** (ನಾ). ಒಬ್ಬಾಕೆಯ ಹೆಸರು : ಆತನ ಮದವಳಿಗೆ ಚೋರವೆ (ವ್ಯಆರಿ. ೧೯೩೫, ೫೦-೯ ; ?). [ ಚೋರ? + ಅವ್ವೆ (<ಅವ್ವೆ) ]

**ಚೋರವ್ರಜ** (ನಾ). ಕಳ್ಳರ ಗುಂಪು : ಚೋರವ್ರಜದಿಂದಮರ್ಥಪತಿಯಕ್ಕುಮವಂ (ಜಾತಕ. ೧೩-೩೦). [ ಚೋರ + ವ್ರಜ ]

**ಚೋರಿ** (ನಾ). ಕಳವು ; ಅಪಹರಣ : ಕಳವು, ಚೋರಿ, ದರೋಡೆ, ಖೂನಿ, ಆತ್ಮಹತ್ಯೆ ಮುಂತಾದುವು . . . ನಡೆದ ಸಮಯದಲ್ಲಿ (ಗ್ರಾಮಾಳ. ೪). [ ←ಹಿಂ. ಚೋರೀ ]

**ಚೋರಿಸು** (ಕ್ರಿ). ಕಳವು ಮಾಡು : ಗಂಧಮಂ ಕುಸುಮಮಂ ಧಾನ್ಯಮಂ . . . ಪಾದರಕ್ಷೆಗಳವು ಮರಂಗಳನಿತ್ಯೆಸೆಂದು ಚೋರಿಸಿದವಂ (ವೀಶೈಪು. ೪-೦೭-೪೧). [ ಚೋರ + - ಇಸು$_3$ ]

**ಚೋರುಪಹರೆ** 'ಚೋರಪಹರೆ' ನೋ.

**ಚೋರೆ$_1$** 'ಸೋರೆ$_2$' ನೋ.

**ಚೋರೆ$_2$** (ನಾ). ರಕ್ತ ; ನೆತ್ತರು : ನಾವು ಗಡಿಮದ್ದು ಹಾಕಿ ಕಟ್ಟಿ ಚೋರೆ ಸೋರುವುದು ನಿಲ್ಲಿಸಿದೆವು (ಹುಲಿಹಾ. ೩೨೭). [ ದೇ.॥ ತಮಿ. ಚೋರಿ, ಶೋರ್ರೈ ; ಮಲ. ಚೋರ, ಚೋರಿ ; ಕೊಡ. ಚೋರೆ ]

**ಚೋರೆಕುರಿ** (ನಾ). ರಕ್ತದ ಗುರುತು ; "ರಕ್ತತಿಲಕ" (ಹುಲಿಹಾ. ಕೋಶ): ತಂಗ, ಇದೇಕೆ ನನ್ನ ಹಣೆಗೆ ಚೋರೆಕುರಿ ಇಟ್ಟೆ ? (ಹುಲಿಹಾ. ೨೭೮). [ ←ಕೊಡ. ಚೋರೆಕುರಿ ]

**ಚೋರ್ಗಂಡಿ** 'ಚೋರಗಂಡಿ' ನೋ.

**ಚೋಲ$_1$** (ನಾ). ದೆವ್ವ ; ಬೇತಾಳ : ತನುಲಕ್ಷ ಚತುರಸೀತಿಯ ಸೂಕ್ಷ್ಮಶರೀರವದು ಮನೆಮನೆಯ ಹೊಕ್ಕು ಬರ್ಪನ ಚೋಲದಂತೆ ಬೆಂಬಿಡದಿರಲು (ಕೈಕವ. ೩-೪-೫). [ ←ತಮಿ. ಚೋಟ ]

**ಚೋಲ$_2$, ಚೋಳ$_2$** (ನಾ). ೧. ಅಂಗಿ ; ಕವಚ. ೨. ಕುಪ್ಪಸ ; ರವಿಕೆ. **ಚೋಳ$_2$ :** ೧. ಉಚ್ಚೈಃ ಕರಧೃತ ವಿಲಸತ್ಪಲ್ಲವಂ ಪಲ್ಲವಂ ಚೂರ್ಣಿತ ಚೋಳಂ ಚೋಳನಾದಂ ಕದನವದನದೊಳು ಭೇರಿಯಂ ಪೊಯ್ಯೆ . . . ಅತುಳಬಳಂ ವೀರಬಲ್ಲಾಳದೇವಂ (ಎಕ. IV, ನಾಗಮಂ. ೦೫-೩೬ ; 1179). ೨. ಸೀರೆಯಂ ತತ್ತರುಣಿಗುಡಿಸಿ ಬಳಿಕಸಿತ ಚೋಳಮಂ ತೊಡಿಸಿ (ಸಿದ್ಧಕಾ. ೧೧-೧೪). 'ಕಟ್ಟುಂಚೋಳ' ಪರಾ. [ ಸಂ. ]

**ಚೋಲಕ, ಚೋಳಕ** (ನಾ). ೧. = **ಚೋಲಿ :** "ವಾರವಾಣಕಂ ಕಂಚುಕಂ ಚೋಲ[ಪಾಠಾಂ. ಳ]ಕಂ ಕುಪ್ಪಸಂ ಬಾಚಿಯಕ್ಕುಂ"(ಮಂಗರಾ. ೧೦೦-೨೯). ೨. ಯೋಧರು ಧರಿಸುವ ಎದೆಕವಚ. **ಚೋಳಕ :** ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ೨. "ಚೋಳಕಮುಮಂಗಿಗೆ ಕಂಚುಕಮುಕ್ಕುಂ" (ವಸ್ತುಕೋ. ೦೩೦-೭೪). ೩. (ಬೆಂಕಿಯನ್ನು ಹುಟ್ಟಿಸುವ) ಮರದ ಚಕ್ಕೆ ; ಅರಣಿ : ಚೋಳಕವಿಲ್ಲದಿದ್ದರೆ, ಪುರುಷನ ಸಾಮರ್ಥ್ಯ ಪ್ರಯತ್ನಗಳಿಲ್ಲದಿದ್ದರೆ, ಅಗ್ನಿ ಹುಟ್ಟುವುದೆ ? (ಬುದ್ಧಕ. ೭೪, ಮಿಲಿಂದ). [ ಸಂ. ]

**ಚೋಲಿ, ಚೋಳಿ** (ನಾ). ರವಿಕೆ ; ಕುಪ್ಪಸ : ಜರಿಯ ಸೀರೆಯುಟ್ಟು ಅದೇ ಬಣ್ಣದ ಚೋಲಿ ಹಾಕಿಕೊಂಡಳು (ದೂಬಟ್ಟ. ೦೪). **ಚೋಳಿ :** ಚೋಳಿಗಳನ್ನು ಕೊಂಡು (ಕಾಮಿಕಾಂ. ೨೨೨). [ ಸಂ. ಚೋಲೀ ]

**ಚೋಷಣ** (ನಾ). ಹೀರಿಕೊಳ್ಳುವುದು ; ಚೀಪುವುದು. [ ಸಂ. ]

**ಚೋಷ್ಯ** (ನಾ). ಹೀರಿಕೊಂಡು ಸವಿಯಬಹುದಾದುದು : ಚತುರವಿಧ = ಖಾದ್ಯ, ಪೇಯ, ಚೋಷ್ಯ, ಲೇಹ್ಯವೆಂಬ ೪ ವಿಧಗಳು (ಹಸಾರ. ೪-೧ ಟೀಕು). [ ಸಂ. ]

**ಚೋಹ** 'ಜೋಹ' ನೋ.

**ಚೋಳ$_1$** 'ಚೋಟ' ನೋ.

**ಚೋಳ$_2$** 'ಚೋಲ$_2$' ನೋ.

**ಚೋಳಂಗಿ** (ನಾ). ಗರ್ಭಿಣಿಗೆ ಮಾಡುವ ಒಂದು ಸಂಸ್ಕಾರ ; ಕುಪ್ಪಸ ತೊಡಿಸುವ ಒಸಗೆ ; ರವಿಕೆಶಾಸ್ತ್ರ (?) : ಒಂದು ದಿವಸಂ ತನ್ನ ಮಗ[ಳಾ] ಚೋಳಂಗಿ[ಪಾಠಾಂ. ಚೋಳಗೆ, ಚೋಗಳ]ಯೊಳ್ ಸ್ವಜನ ಬಾಂಧವ ಜನ ಪರಿಜನರ್ಕಳೆಲ್ಲರುಮಂ ಬರಿಸಿ ದಿವ್ಯಾಹಾರಂಗಳನೂಡಿ (ವಡ್ಡಾರಾ. ೧೮೪-೧೮). [ <ಚೋಲ$_2$ ? ]

**ಚೋಳಕ** 'ಚೋಲಕ' ನೋ.

**ಚೋಳಿ** 'ಚೋಲಿ' ನೋ.

**ಚೋಳಿಕ** (ನಾ). ಚೋಳದೇಶದ ಅರಸ ; ಚೋಳರಾಜ : ಕ್ಷಣದಿಂ ಮಾಳವಮೇಳುಮೆಯ್ದೆ ವಿಳಯಕ್ಕೆಯ್ದಿತ್ತು . . . ಆಹವಾಂಗಣದೊಳು ಚೋಳಿಕನಮ್ಮಿ ಸತ್ತಂ (ಎಕ. VII, ಶಿಕಾರಿ. ೧೧೮-೧೩ ; 1054) ; ಮಾಳವಂ ವಿಂಧ್ಯ ನಿಕುಂಜಪ್ರಾಪ್ತನಾದಂ ಜಲಧಿನಿಕಟಮಂ ಚೋಳಿಕಂ ಪೇಳಿಗೊಂಡಂ (ಎಕ. XII, ತಿಪಟೂ. ೧೨೮--೨೭ ; 1202). 'ಚೌಳಿಕ' ಪರಾ. [<ಚೋಟ$_1$]

**ಚೋಳಿಗ** (ನಾ). (?) : ವಸ್ತುಕಾರ ಕ್ಷೇತ್ರಾತ್ ಪಶ್ಚಿಮೇನ ಮಹಾಪಥಾದುತ್ತರೇಣ ಚೋಳಿಗವಣಿಜಕ್ಷೇತ್ರಾದ್ದಕ್ಷಿಣೇನ ದ್ವಾದಶ ಖಣ್ಡುಕಂ ಶ್ಯಾಮಾಕ್ಷೇತ್ರ ದತ್ತಂ (ಎಕ. XVI, ತುಮುಕೂ. ೭೮-೦೪ ; ಸು. 400 ?). [ ? ]

**ಚೋಳಿತಿ** (ನಾ). ಚೋಳದೇಶದವಳು : ಮದನಕಲಹಾಸಕ್ತೆ ವುದುವೆನಿಪ ನೀಲಕೇಶದ ಸಿತಗೆಯುವಳಿ ಚೋಳಿತಿ ನಲ್ಲಳೆ (ಜನವ. ೬-೨೯). [ ಚೋಳ$_1$ (<ಚೋಟ) + - ಇತಿ (< - ಇತ್ತಿ) ]

**ಚೋಳು** 'ತೇಟ್$_2$' ನೋ.

**ಚೋಳ್ನೆಲ** (ನಾ). ಚೋಳದೇಶ ; ಚೋಳನಾಡು : ಅಳವಿಗಳುಂಬವಪ್ಪ ಭುಜಗರ್ವ್ವದಚೋಳನನ್ನಿ ಪಾಳನಂಜಿ ತಲ್ಲಳಿಸೆ ತಗುಳ್ದು ಚೋಳ್ನೆಲನನಾಳ್ನೆಲ ನಾಗಿರೆ ಮಾಡಿಕೊಂಡ ಹೊಯ್ಸಳನದಟ್ಟಿ ೯ (ಎಕ. XI, ದಾವಣ. ೦೫-೦೩ ; 1143). [ <ಚೋಟ + ನೆಲ]

**ಚೋಱ** (ನಾ). ಒಂದು ವಂಶದ ಹೆಸರು (?) : ಅವರ ಮಗನ್ತೊನ್ನ ಮಾರನ್ ಚೋಱದ ನಚ್ಚಯನೊಳ್ವೊಟ್ಟು (ಎಕ. X, ಗೌರಿಬಿ ೭೭-೩ ; 750). [ ? ]

**ಚೋಟ, ಚೋಳ$_1$** (ನಾ). ೧. ಒಂದು ದೇಶದ ಹೆಸರು ; ಪ್ರಾಚೀನ ತಮಿಳುರಾಜ್ಯಗಳಲ್ಲಿ ಒಂದು : ಗೌಳ ಲಾಟ ಚೋಟ ಚೇರ ಪಾಂಡ್ಯ ಕಳಿಂಗಾದಿ ವಿಷಯಂಗಳಂ ಸಾಧಿಸಿ ಕಪ್ಪಂಗೊಂಡು (ಧರ್ಮಾಮೃ. ೧೦-೭೦). ೨. ಚೋಳದೇಶದ ರಾಜ : ಚೋಟನ ಮೇಲೆಟ್ಟಿಯ್ದ್ಯನ ಮಕ್ಕಳ್ (ಎಕ. IX, ಹೊಸಕೋ. ೮೫-೧ ; ಸು. 750) ; ಪ್ರತಾಪಾವನತ ಚೇರ ಚೋಟ ಪಾಂಡ್ಯ ಪಲ್ಲವಸ್ಯ ಪ್ರತಿಪಾಳಿತ ಜಿನಶಾಸನಸ್ಯ (ಎಕ. II, ೫೯-೩೨ ; 974) ; ಚೋಟನ ಪಂದಲೆಯೊಂದೆ ಕೈಗೆವಂದುದೆ ಕರಿಕೋಟ ಬಂದುದು . . . ಬಗೆದಂತೆ ಚೇರಮನ ಚೋಟನ ಪಾಂಡ್ಯನ ನಾಡೆ ಕೈಗೆ ವಂದುದು (ಸೂಕ್ತಿಸು. ೫-೭). **ಚೋಳ$_1$ :** ೧. ಎಲೆ ಚೋಳ ಕ್ಷಿತಿಪಾಳಸನ್ನವೆಟ್ಟಿಯಂ ನೀಂ ನಿವಿಕೋಲ್ (ಎಕ. II, ೫೯-೧೦೦ ; 974). ೨. ಚೋಳ ತೆಲುಂಗ ಭೂಭುಜರವನೆಸುಗೆಯ ತಾಳಲಾಱದೆ ತೊಲಗಿದರು (ಪ್ರಭುಮಿಸಂ. ೦೨-೮೩). ೩. ಚೋಳದೇಶದ ಕುದುರೆ ; ಧಾರಿಣಿಯೊಳು ನಿಂದು ನಿಲ್ಲದೆ ಕುಣಿದೇಳ್ವ ಕಾರುರಗನು ಕಣೆವಟ್ಟಾ ಚೇರ ಚೋಳನು ಕೈರ ತೇಜಿಗಳೊಡಗೂಡಿ ಚೇರದೇಶದ ರಾಯರ ಕಂಡಾ (ಭರತ. ೨೨-೨೩). ೪. ಚೋಳದೇಶದ ಜನ : ಇವನು ಚೋಳರು, ಪಾಂಡ್ಯರು ಮತ್ತು ಲಾಟರು ಇವರುಗಳ ಮೇಲೆ ದಂಡೆತ್ತಿ ಹೋಗಿ ಜಯಗಳಿಸಿದನು (ವ್ಯಾಸು. ೮).

**ಚೋಟನ ಸಿಂಗಂ ಕೊಳಗ** = ಒಂದು ಅಳತೆ ; ಚೋಳನಸಿಂಗನ ಹೆಸರಿನಲ್ಲಿರುವ ಒಂದು ಕೊಳಗ : ಪಲ್ಲವಗಟ್ಟನ ತೂಬಿನ ಮೊದಲಲ್ ಚೋಟನಸಿಂಗಂ ಕೊ[ಳ]ಗದಲ್ ಕಣ್ಣುಗವ್ ಗಟ್ಟಿಯುವ್ (ಎಇ. V, ೨೦೭-೧೩ ; 1047). **ಚೋಟನ ಸಿಂಘ** = ಚೋಳರಲ್ಲಿ ಸಿಂಹಪ್ರಾಯ ನಾದವನು ; ಒಂದು ಬಿರುದು : ಶ್ರೀಮತ್ ದಣ್ಣನಾಯಕವ್ ಅಪ್ಪಿಮಯ್ಯನಪ್ಪ ಒರ್ಕೆತ್ತುಗಣ್ಡವ್ ಗಣ್ಡನಾರಾಯಣ ಚೋಟನ ಸಿಂಘವ್ ರಾಜೇನ್ದ್ರ ಚೋಟಬ್ರಹ್ಮಮಾರಾಯರ್ (ಎಇ. V, ೨೦೭-೩ ; 1047).

[ ದೇ.॥ ತಮಿ. ಮಲ. ಚೋಟ ; ತುಳು. ಚೋಳ ; ತೆಲು. ಚೋಲ, ಚೋಡ ]

**ಚೋಟಿಗಾಮುಂಡ** (ನಾ). ಒಬ್ಬಾತನ ಹೆಸರು : ಸಾಕ್ಷಿ ಸಂಗಮದ ಪೆಮ್ಮಾನಡಿ ಗಾಮುಣ್ಡರುಂ ರಣವಿಕ್ರಮಗಾಮುಣ್ಡರುಂ ಚೋಟಿಗಾ ಮುಣ್ಡರುಂ (ಎಕ. IV, ಎಡತೊ. ೬೦-೬೯ ; ಸು. 890).

[ ಚೋಟಿ + ಗಾಮುಂಡ ]

**ಚೋಟಪೆರ್ಮಡಿ** (ನಾ). ಒಬ್ಬಾತನ ಹೆಸರು : ಪುನಕಾಲರ ಮಗಂ ಜೂನಿಕವನ ತಮ್ಮಂ ಚೋಟಪೆರ್ಮ್ಮಡಿ (ಎಕ. II, ೩೭೮-೪ ; ಸು. 1015).

[ ಚೋಟ + ಪೆರ್ಮಡಿ (<ಪೆರ್ಮಾನಡಿ) ]

**ಚೌ₁**, ಚವು₁, ಚವ್ವ₂ (ನಾ). ೧. ನಾಲ್ಕು : " ಚೌ ಚತು . . . ಜಳರಾಶಿ ಎಂದು ನಾಲ್ಕರ ನಾಮಂ " (ವ್ಯವಹಾ. ೯-೪) ; ಏಕ ದ್ವಿ ತ್ರಿ ಚತುಃ ಶಬ್ದಾಕೃತಿಗೆಕ್ಕ ದು ತಿ ಚೌಗಳಾದೇಶಂಗಳ್ (ಶಮದ. ೨೯೦). 'ಚೌಪದಿ', 'ಚೌಮೊಗ' ಪರಾ. **ಚವು₁** : ಅಹಿತನ ಹೊಟ್ಟೆಯನು ಚವು ಕಡಿಯ ಮಾಡಿಯೆ ಕಟ್ಟಿ ಕೊಂಡಾಡಿದನು ಕೌಶಲಮಲ್ಲ ನಿಮಿಷದಲಿ (ಕುವ್ಯಾ.ಅ. ಓರಿಇ. ೨೬-೩೩). 'ಚವುದಂತ', 'ಚವುವಟ್ಟೆ' ಪರಾ. **ಚವ್ವ₂** : ೨. ನಾಲ್ಕುನಾಲ್ಕರ ಲೆಕ್ಕ : ತಾಳ ಚವ್ವ ಚಕ್ಕ ಕುಣಿತ ತಕ್ಕ ತಕ್ಕ (ಗರಿ. ೯೯-೩). ೩. ಒಂದು ಬಗೆಯ ಆಟ ; ನಾಲ್ಕು ಕಾಯಿಗಳನ್ನು ಇಟ್ಟುಕೊಂಡು ನಾಲ್ಕು ಕವಡೆಗಳಿಂದ ಆಡುವ ಆಟ; ಚೌಕಾಬಾರದ ಆಟ: ಚಕ್ಕಂದ, ಚವ್ವ, ಚದುರಂಗ, ಇಸಪೇಟುಗಳನ್ನು ಆಡುತ್ತಿದ್ದರೆ ? (ಗಾಳಿಪ. ೩೭). ೪. ಚೌಕಾಬಾರದ ಆಟದಲ್ಲಿ ಬೀಳುವ ನಾಲ್ಕರ ಗರ : ಈಗ ಚವ್ವ ಬಿದ್ದರೆ, ನನ್ನ ಕಾಯಿ ಹಣ್ಣು (ರೂಢಿ).

[ <ಪ್ರಾ. ಚಉ./ಸಂ. ಚತುರ್ ]

**ಚೌ₂** 'ಚವ್ವ₂' ನೋ.

**ಚೌಕ₁** (ನಾ). ಕಡಿಮೆ ಬೆಲೆಯುಳ್ಳುದು ; ಅಗ್ಗವಾದುದು : ಹಣ್ಣು ಚೌಕವಾಗಿ ಸಿಕ್ಕಿದ್ದರಿಂದ ಹೆಚ್ಚು ಕೊಂಡು ತಂದೆ (ರೂಢಿ).

[ ದೇ.॥ ತಮಿ. ಚವುಕ್ಕೈ ; ತೆಲು. ಚವುಕ, ಚೌಕ ]

**ಚೌಕ₂**, ಚಉಕ, ಚವಕ, ಚವುಕ, ಚವುಕು, ಚೌಕಂ₁ (ನಾ). ೧. ನಾಲ್ಕು ಮೂಲೆಗಳುಳ್ಳುದು ; ಚತುಷ್ಕಾಕಾರವಾದುದು : ಚೌಕಮಂ ಕೀಲಿಸುತುಂ ತೆಗೆದಾಚ್ಛಾದಿಸೆ ಕೇಳ ನೀಳಪಟಮಕ್ಕುಂ . . . ದಟ್ಟೈಸಿತ್ತನಿತ್ತುಂ ತಮಂ (ಗಿರಿಳ. ೪-೭೬) ; ಕಳನೊಳುದಕದ ಸೈವಲಿಯ ಸೆಲೆಯಿರಿದು ಚೌಕಕೆ ಸೀಳಿದನು ನೆಲನ (ಕುವ್ಯಾ.ದ್ರೋ. ೧೦-೨೮) ; ಹಲ್ಲೆಯ ಚೌಕದೊಳು ಕೊಯಿದು ಮೊದಲ ರಸದೊಳು ಇಳಿಯಬಿಡಲಮೃತಪಾನವೆಸರಂ ಧರಿಸಿ ಸವಿವಡೆದುದು (ಸೂಪಶಾ. ೧-೪೩) ; ಮೂಡಣಾಶ್ರಯದಲ್ಲಿ ವರ್ತುಳಂ ಚೌಕಮಂ ವರ್ತಿಸುತ (ವೀಶೈಪು. ೩-೩-೭) ; ಮಿಸುನಿಗಂಬಗಳ ಮೇಲೆಸೆದಿಹ ಚೌಕದ ಪೊಸ ನವರತ್ನ ಬೋದಿಗೆಯ(ಕಂಸವಿ. ೭-೭೩). ೨. ಚತುಷ್ಕೋಣಾ ಕೃತಿಯಾದ ಅಂಗಳ : ಆರ್ದ್ರಮೃತ್ತಿಕಾ ವಿರಚಿತಮಪ್ಪ ಚತುರಾಂತರ ದೊಳ್ ಮುತ್ತಿನ ಚೌಕದ ನಡುವಣ ಚೆಂಬೊನ್ನ ಪಟ್ಟವಣೆಯ ಮೇಗಣ ದುಗುಲದ ಪಸೆಯೊಳ್ . . . ಕುಳ್ಳಿರಿಸಿ (ಪಂಪಭಾ. ೩-೭೪ ವ) ; ಕಂದನಂ ತಂದು ಚೌಕದೊಳಿರಿಸಿದಂ (ದೀಕ್ಷಾಬೋ. ೧೦೭-೯) ; ಶಿವನೆಯಿತಂದು ಚೌಕದೊಳಿರಿಸಿ . . . ಅಭಯಕರವ ಶಿರದೊಳಿಟ್ಟು (ಬಸಪು. ೦೮-೩). ೩. (ಮದುವೆ ಮೊದಲಾದ ಸಂದರ್ಭಗಳಲ್ಲಿ) ಇಡುವ ಚತುಷ್ಕಾಕಾರ ವಾಗಿ ಮಾಡಿದ ಆಸನ ; ಹಸೆ : ಸೊಗಯಿಪ ಚೌಕದ ಬಿಡುಮುತ್ತು ಗಳೊಳ್ ಪೂವಲಿಯ ಮಲ್ಲಿಕಾಮುಕುಳಶ್ರೇಣಿಗಳಂ (ಜಗವಿ. ೯-೧೩೦). ೪. ನಾಲ್ಕು ಬೀದಿಗಳು ಕೂಡುವ ಸ್ಥಳ ; ಚೌವಟ್ಟ ; ಚತುಷ್ಪಥ : ಸುರೇಂದ್ರನ ಭವನದಲಿ ಗುಡಿ ನೆಗಹಿತಮರಾವತಿಯ ಚೌಕದಲಿ ತವತವಗೆ ತನಿವರಿವ ಜನದುತ್ಸವವನದನೇನೆಂಬೆ (ಕುವ್ಯಾ.ಆ. ೧೨-೩೮) ; ಜನರು ಚೌಕಗಳಲ್ಲಿಯೂ ಸಭೆಗಳಲ್ಲಿಯೂ ಸೇರಿ . . . ಮಾತನಾಡಿಕೊಳ್ಳುತ್ತಿದ್ದರು (ವಚಥಾ. ೨೭) ; ದೊಡ್ಡ ಪೇಟೆಯ ಚೌಕ ಬಂದಿತು (ರಂಗಕ. ೨). ೫. (ಪಗಡೆ, ಲೆತ್ತ ಮೊದಲಾದ ಆಟಗಳಲ್ಲಿ) ನಾಲ್ಕರ ಗರ,–ದಾಯ. 'ಚೌಕದಾಯ', 'ಚೌಕದುಗ' ಪರಾ. ೬. ಇಷ್ಟಲಿಂಗವನ್ನಿಡುವ ಭರಣಿ,–ಕರಡಿಗೆ; ಲಿಂಗದಕಾಯಿ; ಗುಂಡಗಳಿಗೆ (ಉಕ): ಚಲುವಾದ ಚಂದ್ರಹಾರಂ ಚೌಕ ಶಿವಧಾರ (ಸಿದ್ಧಕಾ. ೧೧-೧೨) ; ಶಂಬುಲಿಂಗಯ್ಯ ಇಂಬಾದ ಚೌಕವು ತುಂಬಿಡಿ ದುಡ್ಡು ದಮಡೆಗಳನು (ಲೋಕಗೀ. ೬೮). ೭. ಚೌಕಾಕಾರವಾಗಿರುವ ವಸ್ತ್ರ ; ಕರವಸ್ತ್ರ : ಕೈಯನ್ನು ಚೌಕದಿಂದ ಒರೆಸಿಕೊಳ್ಳುತ್ತ ಬಂದರು (ಕಲಾಸಾ. ೭) ; ಚೌಕದಲ್ಲಿ ಕಣ್ಣೊರೆಸಿಕೊಂಡು (ಅವತಂ. ೧೬೦). ೮. ಬಯಲು ; ಕಣ ; ರಂಗ : ಅರುಣಜಲದಲಿ ಚಟ್ಟಿಸಿದು ರಿಪು ಚಾರಿವರಿದನು ಕಳನ ಚೌಕದಲಿ (ಕುವ್ಯಾಕ. ೨೦-೨) ; ಗೂಳಿಕಾಳಗಗಳ ಧೂಳಿಯ ನೆಲದೊಳು ಕೇಳಿಯ ಚೌಕವ ಮಾಡಿ (ಕಂಸವಿ. ೭-೧೭). ೯. ಸಂಗೀತದಲ್ಲಿ ಮಧ್ಯಲಯ : " ತತ್ವಂ, ಓಘಃ, ಘನಂ ಈ ಮೂರು ಶಬ್ದಗಳನ್ನೂ . . . ಕ್ರಮದಿಂದ ವಿಲಂಬಿತಂ– ಸಾವಕಾಶಗತಿಯಾದ ವಿಲಂಬಮಾನಕ್ಕೂ, ದ್ರುತಂ-ತ್ವರೆಯಾದ ಗತಿಯುಳ್ಳ ದ್ರುತಮಾನಕ್ಕೂ ಮಧ್ಯಂ–ಸ್ಥಾಯಿಯ ನಡಿಕಟ್ಟಾದ ಮಧ್ಯಮಾನಕ್ಕೂ ಹೆಸರುಗಳು ಅಂದರೆ ಪುರು, ಚೌಕ, ಮುಕ್ತಾಯಗಳು" (ಸಿದ್ಧಾಂತಿ. ೩೩) ; ಅಂಕುರಸ್ಥಾಯಿ, ಶ್ರುತಿಸ್ಥಾಯಿ, ಮೂರ್ಧಸ್ಥಾಯಿ, ಚೌಕ ಖೇಚರೀ ಸ್ಥಾಯಿ ರವಸಂಗತಿ, ಮುಕ್ತಾಯಗಳೆಂಬ ಸಪ್ತಾವಸ್ಥೆಗಳಲ್ಲಿಯುಂ (ವಿವೇಕ. ೨೩೩). ೧೦. ಚಮತ್ಕಾರ ; ಚದುರು : ಬೇಡ ಚೌ[ಪಾಠಾಂ. ಚೌ]ಕದ ಮಾತು ನಿನಗೆಂದಾಡುವಂದಾ ಚೌಕದಾಯವನಾಡುವವನು ಪಂಚೇಂದ್ರಿಯಕೆ ಲಿಂಗಪ್ರಸಾದವನು ಕೂಡಿ (ಬಸಪು. ೪೩-೭) ; ಮಾತು ಚೌಕನಾಯಿತು ತಕ್ಕರೆ, ಮನ ತಣಿಯಲಿಲ್ಲ (ಚಿಕರಾ. ೫೦೦). ೧೧. ತುದಿ ; ಅಗ್ರ : ಬಗೆ ನೊಸಲಲ್ಲಿ ಕೂಡೆ ನಿಲೆ ತಪ್ಪದೆ ಮೂಗಿನ ಚೌಕ[ಪಾಠಾಂ. ಕೌತ]ದಲ್ಲಿ ದಿಟ್ಟಿಗಳಿರೆ . . . ಜಾನಿಸುತ್ತಗಲದೆ ನಿಂದನೊರ್ವ ಸವಣಂ (ಕಬ್ಬಿಕಾ. ೨೨೭). ೧೨. ನಾಲ್ಕು ರೂಪಾಯಿ: (ಕ). ೧೩. ನಾಲ್ಕರ ಗುಂಪು ; ಒಡ್ಡು. ೧೪. ಕುದುರೆಯ ನಾಗಾಲೋಟ; ಪ್ಲುತ: "ಪ್ಲುತ–ಕುದುರೆಯ ಚೌಕ ನಡಿಗೆ" (ಗಂಗಾಮ. ೨೨೫). **ಚಉಕ** : ೧೫. ನೂರಂ ಎಲೆಗಳ ಕಟ್ಟು : ಯಡದೊರ್‍ರೆ ಕೋಟೆ ಮಾರ್ಗದಲ್ಲಿ ಮೂಲೆ ಹೇರ್‍ರಿಗೆ ಕಾಸು ೧ ಜವಳಿ ನಡೆಗೆ ಕಾಸು ೨ ಹೊಗೆಸೊಪಿನ ನಡೆಗೆ ಕಾಸು ೨ ಯಲೆ ನಡೆಗೆ ಯಲೆಕಂತು ೧ ತಲೆಹೊರೆಗೆ ಚಉಕ ೧ (ಪ್ರಮಆರಿ. ೧೯೩೦, ೪೫-೧೩ ; 1771). **ಚವಕ** : ೧೬. ಚೌಕಟ್ಟು (?) : ಆ ಮುದ್ದೆಯ ದಂಣಾಯಕರು ಮಾಡ್ಸಿ ಕೊಟ್ಟ ಕನಕದಂಡದ ಚವಕ ಸದಕ ಹಳತಾದಡೆ ಹೊಸತ ಮಾಡಿಸುವನು (ಸೌಇಇ. IX-II, ೪೦೭-೪೩ ; 1377). **ಚವುಕ** : ೧. ವಜ್ರದ ಸರಳ ಕಿವಿವರೆಗುಗಿದು ಚವುಕಕೆ ಧರಣಿಯನು ಸೀಳಿದನು ನಿಮಿಷಾರ್ಧದಲಿ ಕಲಿಪಾರ್ಥ (ಕುವ್ಯಾ.ದ್ರೋ. ಓರಿಇ. ಪರಿ. ೨೯೭); ಬಾಲೆಯ ನೊಸಲೊಳು ಬಗೆ ಯಿಟ್ಟಾ ಬಲ್ಲಹನೊಲವಿಂ ಚವುಕದ ಬೊಟ್ಟಂ ಕುಂಕುಮದಿಂದಿಡೆಯಂಗಜ ಚಕ್ರೇಶಂ . . . ಉರುಮಹಿಷೀಪದಮಂ ಕೊಟ್ಟು (ಜಯಕಾ. ೧೪-೭೪).

೩. ದೊನ್ನೆಗಳ ಹರಹಿ ಬಾಳೆಲೆ ಹಾಳೆಯಂ ಹಾಕಿ ಬಿನ್ನಣದಿಂ ಮಾಡಿದಾ ಚವುಕ [ಪಾಠಾಂ.ಚೌಕ]ದೆಡೆಗಳ ಮುಂದೆ . . . ಚೆನ್ನಾಗಿಯಾಪೋಷಣಮನೆತ್ತಿ ಕುಳ್ಳಿರ್ದು (ಸಮ್ಯಕ್ಶಾ. ೭-೨೩). **ಚವುಕು :** ೧. ಇಮಾರತಿ ಕಟ್ಟಿಗೆ, ಚವುಕು ಮತ್ತು ಗೋಲು (ಮುಂಬವ್ಯಾ. ೧೪೫). **ಚೌಕು:** ೨. "ಚತುಶ್ಶಾಲ, ಸಂಜವನ" (ನಾಚಿರಾ. ೬). ೬. ಅವರ ಕೊರಳಲ್ಲಿ ಚಿನ್ನದ ಚೌಕು (ಬಿಟ್ಟಹೊ. ೨).

**ಚಚ್ಚೌಕ ; ಚಕ್ಕಚೌಕ** = ನಾಲ್ಕೂ ಕಡೆಗೆ ಚೌಕವಾಗಿರುವುದು ; ಸಮಚತುರಸ್ರ ; ಚದರ : " ಚಚ್ಚೌಕ–ಚಕ್ಕಚೌಕ " (ಗಂಗಾಮ. ೧೨೭) ; ಚಚ್ಚೌಕವಾಗಿ ಘನಕುಂಡಮಂ ತೆಗೆದು (ಜಿಬವು. ೨೦–೦೨) : ರಾಜನು ಈ ಸ್ಥಳದಲ್ಲಿ . . . ಚಚ್ಚೌಕವಾದ ಒಂದು ಆವರಣವನ್ನು ನಿರ್ಮಾಣ ಮಾಡುವಂತೆ ಆಜ್ಞೆಮಾಡಿದ (ಪ್ರವಾಇ. I, ೨೬೩) ; ನಾಲ್ಕು ಕೋನಗಳು ಸಮವಾಗಿಯೂ, ನಾಲ್ಕು ಬಾಹುಗಳು ಸಮವಾಗಿಯೂ ಉಳ್ಳದ್ದು ವರ್ಗಕ್ಷೇತ್ರ ಅಥವಾ ಚಚ್ಚೌಕವೆಂದು ಹೇಳಲ್ಪಡುವುದು (ಭೂಮಿಅ. ೧೦). **ಚೌಕವನೆಣಿಸು** = ನಾಲ್ಕು ನಾಲ್ಕಾಗಿ ಎಣಿಸು : ಅವರಿಗೆ ಸಾವಿರ ಹೊಂಗಳಂ ಚೌಕವನೆಣಿಸಿ ಕೊಟ್ಟನ್ನಳುಪಿ ಬಂದವಘಡಿಸಿದೊಡೆ ಬಿಡೆನೆನುತ (ಬಸವು. ೨೮–೪೦). **ಚೌಕಾಗಿಕೂಡು** = ಚಚ್ಚೌಕವಾಗಿ ಕುಳಿತು ಕೊಳ್ಳು; ಪದ್ಮಾಸನ ಹಾಕಿಕೊಂಡು ಅಚ್ಚುಕಟ್ಟಾಗಿ ಕುಳಿತುಕೊಳ್ಳು: ಎರಡನೇ ಪಂತಿಯಲ್ಲಿ ಚೌಕಾಗಿ ಕೂತು ಬೇಕಾದಷ್ಟು ಕೆಚ್ಚುವಿಯಂತೆ (ಪವಶೀ. ೩೨). [ <ಪ್ರಾ. ಚಉಕ್ಕ./ಸಂ. ಚತುಷ್ಕ ]

**ಚೌಕಂಗೊಳ್ಳು** (ಕ್ರಿ). ನಾಲ್ಕು ಸಾಲುಗಳನ್ನು ಹೊಂದು : ಸಾಂಗತ್ಯ ವಾದರೂ ಈ ಮುಕ್ಕಾಲ್ವಾಡುಗಳು (ತ್ರಿಪದಿ) ಚೌಕಂಗೊಂಡಾದು ವೆಂಬುದನ್ನೂ ಅವನು ಸೂಚಿಸದೆ ಇಲ್ಲ (ಸಾಹಿವಿ. ೦೦೫) ; ತ್ರಿಪದಿ ಚೌಕಂಗೊಂಡು ಸಾಂಗತ್ಯವೆನಿಸುವುದು (ಸಂಶೋಧ. ೦೪೨).
[ ಚೌಕ$_2$ + ಕೊಳ್$_1$ ]

**ಚೌಕಂಡ, ಚೌಖಂಡ** (ನಾ). ಚಚ್ಚೌಕವಾದ ಮಂಟಪ : ಚತುಃಖಂಡ –ಚೌಕಂಡ (ಶಮದ. ೨೯೦ ಪ್ರಯೋ). **ಚೌಖಂಡ:** ಪಳುಕಿನ ಚೌಖಂಡಂಗಳ ಕೆಳಗಣ ಚೆಂಬೊನ್ನ ಮತ್ತವಾರಣದೊಳ್ (ಪಂರಾಮಾ. ೩-೩೭); ''ಮನೆಯ ತೋಟ'' (ಪಂರಾಮಾ. ಕೋಶ). [ <ಸಂ. ಚತುಷ್ಖಂಡ ]

**ಚೌಕಟ್ಟು** (ನಾ). ೧. ನಾಲ್ಕು ಮೂಲೆಯಾಗಿರುವ ಮರದ ಅಥವಾ ಲೋಹದ ಕಟ್ಟು : ಚಾಮಪ್ಪಾಜೀಯವರಿಂದ ಹಿತ್ತಾಳೆ ಚೌಕಟ್ಟು ಗುಬ್ಬೀಕದ ಸಹಿತವಾಗಿ ಮಾಡಿಶಿ ವಪ್ಪಿಶಿದ ನಿಲುವಿನ ಸೇವಾರ್ಥ (ಎಕ. XIV, ಚಾಮರಾ. ೨೦೭-೩: ಸು. 1868 ?); ಕಿಟಕಿಗಳಿಗೆಲ್ಲಾ ಕಂಚಿನ ಚೌಕಟ್ಟು ಹಾಕಬೇಕೆಂದಿದ್ದವನು ಈಗ ಉಕ್ಕಾದರೂ ಸಾಕು ಎಂದುಕೊಂಡ (ಯೋಧವು. ೩೪). ೨. ಸ್ಥೂಲವಾದ ರೂಪರೇಖೆ: ಬೋಧನ ಕಾರ್ಯಕ್ಕೆ ಪಠ್ಯಪುಸ್ತಕ ಒಂದು ಚೌಕಟ್ಟು ಮಾತ್ರ (ಶಿಕ್ಷದ. ೨೭೪). ೩. ಮಿಂತಿ; ಕಟ್ಟು: ಸಂಸರು, ಚರಿತ್ರೆಯ ಇತರ ಅಂಶಗಳನ್ನು ಅದಕ್ಕೆ ಚೌಕಟ್ಟುಮಾಡಿ . . . ಈ " ವಿಜಯ ನಾರಸಿಂಹ " ನಾಟಕವನ್ನು ಬರೆದಿದ್ದಾರೆ (ಸಂಸಕ. ೧೧೫) ; ವಿಷಾದದ ಚೌಕಟ್ಟಿನಲ್ಲಿ ಅರಳಿದ ಅರೆನಗೆ (ವಾತ್ಸಲ್ಯ. ೨೯೦). ೪. ಬಂಧ ; ರಚನೆ : ದ್ರಾವಿಡ ಭಾಷೆಗಳ ಪ್ರಮುಖ ಕಾವ್ಯಗಳೆಲ್ಲ ಸಂಸ್ಕೃತ ಮಹಾ ಕಾವ್ಯಗಳ ಅನುವಾದಗಳು, ಇಲ್ಲವೆ ಅವುಗಳ ಮಾದರಿಯ ಚೌಕಟ್ಟಿನಲ್ಲಿ ರಚಿತವಾದವು (ದ್ರಾವಿವಿ. ೨೨೪). ೫. ವರ್ಗ ; ಪಂಗಡ : ಒಡನೆ (ತೆ)– ತೋಡ–ತೋ ಎಂಬ ಪ್ರತ್ಯಯಗಳು ತೃತೀಯೆಯ ಚೌಕಟ್ಟಿನಲ್ಲಿ ಸೇರುತ್ತ ವೆಂದು ತೋರುತ್ತದೆ (ದ್ರಾವಿವಿ. ೨೨೪).
[ <ಪ್ರಾ. ಚಉಕಟ್ಟೀ./ಹಿಂ. ಚೌಖಟ್ ; ಮರಾ. ಚೌಕಟ್ ]

**ಚೌಕಡಿ** (ನಾ). ೧. ನಾಲ್ಕರ ಗುಂಪು ; ಚತುಷ್ಕ : ಒಂದು ಚೌಕಡಿ ತಿರುಗೆ ಧರಣಿಯನಂದು ಸೋಕುವುದುದಕ ಚೌಕಡಿ ಕುಂದದೆಪ್ಪತ್ತೆರಡು ತಿರುಗಲು ಧ್ರುವನ ಮಂಡಲವ ಬಂದು ಸೋಕುವುದು (ಸಂಭಪ. ೪–೧೩) ; ವಿನುತಕೃತಯುಗ ಮೊದಲ ಮನುವಿನ ನಾಲ್ಕು ಚೌಕಡಿಯ(ಕುಮ್ಯಾಅ. ೭೦೩. ೨೫–೨೯). ೨. ನಾಲ್ಕು ವಸ್ತುಗಳ ಅಥವಾ ವ್ಯಕ್ತಿಗಳ ಮೇಳ,–ಗುಂಪು: ಅರಾಣೆಯ ಬಾಕಿನ ಮೇಲೆ, ಈ ಚೌಕಡೀ ವಿರಾಜಮಾನವಾಗಿತ್ತು (ದೀಪಹ. II, ೩೩೮). ೩. ಸೀರೆ ಮೊದಲಾದುವುಗಳ ಮೇಲೆ ಇರುವ ಚಚ್ಚೌಕಮನೆಗಳು : ಚೌಕಡಿ ಸೀರೆ ಕೆಲವರಿಗೆ ಬಹಳ ಇಷ್ಟ (ರೂಢಿ). 'ಚೌಕಳಿ' ಪರಾ. [ ←ಮರಾ. ಚೌಕಡೀ ]

**ಚೌಕಡೆ** (ನಾ). ನಾಲ್ಕು ಕಡೆ : ಗ್ವಾಡಿಗಳಲಿ ನೋಳ್ಪರ ಚಿತ್ತಭ್ರಾಮಕ ಚೌಕಡೆಯಲಿ ನಿಲುಗನಡಿ (ಕಭವಿ. ೪೦೩). [ ಚೌ$_1$ + ಕಡೆ$_3$ ]

**ಚೌಕದಾಯ** (ನಾ). ಪಗಡೆಯಾಟದಲ್ಲಿ ದಾಳಗಳನ್ನು ಎಸೆದಾಗ ನಾಲ್ಕು ನಾಲ್ಕಾಗಿ ಹೆಚ್ಚುತ್ತ ಹೋಗುವ ಗರಗಳು ; ನಾಲ್ಕು, ಎಂಟು, ಹನ್ನೆರಡು ಈ ಗರಗಳು : ಬೇಡ ಚೌಕದ ಮಾತು ನಿನಗೆಂದಾಡುವಂದಾ ಚೌಕದಾಯವನಾಡುವನು (ಬಸವು. ೪೩-೬). [ ಚೌಕ$_2$ + ದಾಯ$_2$ ]

**ಚೌಕದುಗ** (ನಾ). (ಪಗಡೆಯಾಟದಲ್ಲಿ) ಒಂದಾದ ಮೇಲೆ ಒಂದರಂತೆ ನಾಲ್ಕು ಸಲ ಬೀಳುವ ಎರಡರ ಗರ : ಚೌಕದುಗಮಂ ಚೌಪಂಚಿ ಬಾಯೆಂದು (ಉದ್ಭಟ. ೧೧–೧೪) ; ಸಾರಿಗಳಂ ಪರಾಕರಿಸಿ ಸುಂಕಿಗ ನಂತಿರೆ ಹೂಡಿ ರೇಖೆಯಂ . . . ಚೌಕದುಗನಿದುಗನಿದ್ದುಗನಿತ್ತಿಗನೆಂಬ ದಾಯಮಂ ಪೋರಿಸಿ ಬೇಡಿದ ದಾಳಮಳವಟ್ಟಿರೆ (ಪುಣ್ಯಸ್ರ. ೪–೧೮) ; ಆಡುವನು ತಾಂ ಚೌಕದುಗವಂ ಚೌಕದುಗಕ್ಕಿಕ್ಕಿ (ಬಸವು. ೪೩-೬).
[ ಚೌಕ$_2$ + ದುಗ ]

**ಚೌಕಬಂಧ** (ನಾ). " ಅಡ್ಡನಾಗಿ ಓದಿದರೂ, ಮೇಲಿಂದ ಕೆಳಕ್ಕೆ ಓದಿ ದರೂ ಒಂದೇ ರೀತಿ ಇರುವಂತೆ ಅಳವಡಿಸಿದ ಶಬ್ದಗಳ ಚೌಕ ; ಚೌಕಬಂಧ" (Word-Square. ಇಂಕನಿ). [ ಚೌಕ$_2$ + ಬಂಧ ]

**ಚೌಕಲಾಣಿ** (ನಾ). (ಉಕ) ಚೊಚ್ಚಲ ಮಗನ ಮದುವೆಯಲ್ಲಿ ಮದುಮಗನ ತಾಯಿಗೆ ಮಾಡುವ ವಿಶೇಷವಾದ ಅಭ್ಯಂಗಸ್ನಾನ ಮತ್ತು ಊಟ–ಉಪಚಾರ;ಕುಡಿಬಾಳೆಯೆಲೆಯಲ್ಲಿ ಊಟ ಮಾಡ ದಿರುವುದು, ಹಸಿರು ಸೀರೆಯನ್ನು ಉಡದಿರುವುದು, ಹಾಗಲ ಹಂದರದಲ್ಲಿ ಹಾಯದಿರುವುದು–ಇವು ಚೊಚ್ಚಲ ಮಗನ ತಾಯಿ ಅನುಸರಿಸುವ ನಿಯಮಗಳು. ಚೊಚ್ಚಲ ಮಗನ ಮದುವೆಯಲ್ಲಿ ಚೌಕಲಾಣಿಯ ಮೂಲಕ ಈ ನಿಯಮಗಳನ್ನು ಮುಕ್ತಾಯಗೊಳಿಸ ಲಾಗುವುದು ; ಇದಕ್ಕೆ "ನಿಯಮ ಬಿಡಿಸುವುದು" ಎಂದು ಹೆಸರು: ಚೊಚ್ಚಲ ಮಗನ ತಾಯೀ ನೇಮ ಬಿಡಿಸಬೇಕು, ಚೌಕಲಾಣಿ ಹಾಕಬೇಕು ಹಾಗಲ ಹಂದ್ರ ಹಾಕಬೇಕು (ಅಮನಿ. ೫೪).
[ ←ಮರಾ. ಚೌಕನಹಾಣ್ ]

**ಚೌಕವರ್ಣ** (ನಾ). [ಸಂಗೀತ] (ಶೃಂಗಾರರಸಪ್ರಧಾನವಾದ, ನಾಟ್ಯಕ್ಕೆ ಮೀಸಲಾದ) ಹಾಡಿನ ಒಂದು ರಚನೆ,–ಬಂಧ (?) : ಪದವರ್ಣವನ್ನು ಚೌಕವರ್ಣವೆಂದೂ ಕರೆಯುವ ರೂಢಿಯುಂಟು (ಸಂಗೀಜಿಂ. ೭೨) ; ಭಾಸ್ಕರ ಸೇತುಪತಿಯವರನ್ನು ಹೊಗಳಿ ಎಷ್ಟೋ ಚೌಕವರ್ಣಗಳನ್ನು ಇವರು ರಚಿಸಿದರು (ಸಂಗೀತ. ೩೭). 'ಪದವರ್ಣ' ಪರಾ. [ಚೌಕ$_0$ + ವರ್ಣ]

**ಚೌಕವಿಲಾಸ, ಚೌಕವಿಳಾಸ**(ನಾ).ಒಂದು ಬಗೆಯ ವಸ್ತ್ರ(?): ವಿಶಾಲವಾದ ಸ್ತಂಭಗಳ ನಡುವೆ ಮೇಘವರ್ಣಿಗೆಯ ಮೇಲುಕಟ್ಟು, ಚೌಕವಿಲಾಸದ ಕಡೆಗಟ್ಟು ಸುಯ್ಯಾಣದ ತೆರೆ, ಪಂಚರಂಗದ ಚೂಣಿಕೆ . . . ನೇತ್ರಾವಳಿ, ರತ್ನಾವಳಿಗಳಿಂದ ಮಂಟಪ ಸುಂದರವಾಗಿ ರಾರಾಜಿಸುತ್ತಿತ್ತು (೧೦ನ. ೧೨೩). **ಚೌಕವಿಳಾಸ :** ಪುರದಗಲಕ್ಕೆ ವಿಸ್ತರಿಸಿದ ವಿವಾಹಮಂಟಪ ವಿಶಾಲಸ್ತಂಭ ಕೋಟಿಗಳ ನಡುವೆ ಕಟ್ಟಿರ್ದ ಮೇಘವರ್ಣಿಗೆಯ ಮೇಲುಕಟ್ಟಿನ ಪಲ್ಲಿಯ ಚೌಕವಿಳಾಸದ ಕೇಥಾಯಿಯ[ಪಾಠಾಂ. ಚೌಕತದ ಕದಾಯಿಯ]ಕಡೆಗಟ್ಟಿನ ಸುಯ್ಯಾಣದ ಥೆರೆಯ (ಮದೀರ. ೬–೧೧). [ ಚೌಕ$_2$ + ವಿಲಾಸ ]

**ಚೌಕವಿಳಾಸ** 'ಚೌಕವಿಲಾಸ' ನೋ.

**ಚೌಕಶಿ, ಚೌಕಸಿ, ಚೌಕಾಶಿ, ಚೌಕಾಸಿ** (ನಾ). ೧. (ನ್ಯಾಯನಿರ್ಣಯ ಮುಂತಾದ ಸಂದರ್ಭಗಳಲ್ಲಿ) ಕೂಲಂಕಷವಾದ ವಿಚಾರಣೆ; ತಪಾಸಣೆ; ನಾಲ್ಕು ಜನ ಕೂಡಿ ಮಾಡುವ ಪರಾಮರ್ಶೆ: ಸ್ತ್ರೀಯರನ್ನು ಹೊಡೆದ ಬಗ್ಗೆ ಚೌಕಶಿ ಮಾಡಬೇಕು (ಕರವೀ. ೧೮೦); ನಮ್ಮ ತುಳಸಿಯ ಲಗ್ನದ್ದೂ ಚೌಕಶಿಯಾಗಬೇಕಲ್ಲ (ಮೂರುದಾ. ೨೩೩). ೨. ವ್ಯಾಪಾರ ಮೊದಲಾದುವುಗಳಲ್ಲಿ ಬೆಲೆ ಕಡಿಮೆ ಕೇಳುವುದು; ಬೆಲೆ ಕಡಿಮೆ, ಸರಕು ಜಾಸ್ತಿ ಎಂದು ಎಳೆದಾಡುವುದು: ಕೊಳ್ಳುವ ಪ್ರತಿಯೊಂದು ಮಾಲನ್ನು ಪೂರ ಚೌಕಶಿ ಮಾಡಿಯೇ ಕೊಳ್ಳಬೇಕು (ಮೂರುದಾ. ೧೩೪). **ಚೌಕಸಿ:** ೧. ಅವಳು . . . ನಿನ್ನ ಬಗ್ಗೆ ಎಲ್ಲ ತರದ ಚೌಕಸಿ ಮಾಡಿದಳು (ಮುಕ್ತ. ೧೫೩). ೨. "ಚೌಕಸಿ" ಮಾಡಿ ವ್ಯಾಪಾರ ಮುರಿದು ಕೊಂಡು ಎಲ್ಲವ್ವನೂ ಹೊರಟಳು (ಬನಸಿ. ೯೨). **ಚೌಕಾಶಿ:** ೨. ನಿನ್ನ ಹಾಗೆ ವ್ಯಾಪಾರದಲ್ಲಿ ಚೌಕಾಶಿಯನ್ನು ಮಾಡುವರೇ ಇಲ್ಲ (ಸೋಕ್ರಮು. ೫೯). **ಚೌಕಾಸಿ:** ೨. ಅವನೊಡನೆ ಚೌಕಾಸಿ ಮಾಡಿ ಹನ್ನೊಂದಾಣೆಗೆ ಒಂದರಂತೆ ಕೊಳ್ಳುತ್ತೇವೆ (ನಾಡಿಗೇ. ೩೨). ೩. (ಆಲಂ) ದಾಕ್ಷಿಣ್ಯ; ಸಂಕೋಚ: ಊಟ ಉಪಚಾರಗಳಲ್ಲಿ ಚೌಕಾಸಿಯೇನೂ ಇಲ್ಲ (ದುಂಬಿಹ. ೫೭).

[ ←ಮರಾ. ಚೌಕಶೀ, ಚೌಕಸೀ; ಹಿಂ. ಚೌಕಸೀ ]

**ಚೌಕಸ** (ನಾ). ಜಾಣತನ; ಚಾತುರ್ಯ: ನಿಮ್ಮಿಬ್ಬರಿಗೂ ಕುಸ್ತಿ ಬೇಡಕಟ ನಿಮ್ಮೊಳಗೆ ನೀವು ಚೌಕಸವಾಗಿ ರಾಜ್ಯಮಂ ಹಂಚಿಕೊಂಡು ರೂಢಿಯಂ ಪಾಲಿಸಲು ನಿಮ್ಮೊಳಗೆ ನೀವು ಮನಗೂಡಿ ಬದುಕುವದೊಳ್ಳಿತು (ಕುರಂಗ. ೩೯-೧೩). [ ←ಹಿಂ. ಮರಾ. ಚೌಕಸ = ಜಾಣಾಕ್ಷ, ದಕ್ಷ ]

**ಚೌಕಸತ್ತಿಗೆ, ಚವುಕಸತ್ತಿಗೆ** (ನಾ). ಚಚ್ಚೌಕವಾದ ಕೊಡೆ, -ಛತ್ರಿ: ಕೊಡೆಯ ತಟ್ಟೆಯ ಸೀಗುರಿಯ ಚೌಕಸತ್ತಿಗೆಯ ಮುತ್ತಿನ ಝಲ್ಲರಿಯ ಮೊತ್ತಮಂ ತುಱುಗಲಾಗಿ ಪಿಡಿಯಿಸಿಯುಂ (ಚಂದ್ರಪು. ೧೨-೮೩ ವ). **ಚವುಕಸತ್ತಿಗೆ:** ಕೆತ್ತಿಸಿದ ಕನಕದ ಚವು[ಪಾಠಾಂ.ಚೌ]ಕ ಸತ್ತಿಗೆಯ . . . ಭಟಕುಲಲಲಾಮನ ತೇರು ಬಂದುದು ತೀವಿದಸ್ತ್ರದಲಿ (ಕುಮಾ್ದ್ರೋ. ೪-೫೦).

[ ಚೌಕ$_2$ + ಸತ್ತಿಗೆ ]

**ಚೌಕಸಿ** 'ಚೌಕಶಿ' ನೋ.

**ಚೌಕಸುದ್ದ** (ನಾ). ಶುದ್ಧವಾದ ಚತುರಶ್ರ; ಓರೆಕೋರೆಗಳಿಲ್ಲದ ಚಚ್ಚೌಕ: (ಪ್ರ). [ ಚೌಕ$_2$ + ಸುದ್ದ ]

**ಚೌಕಳಿ, ಚವುಕಳಿ, ಚವುಕುಳಿ, ಚೌಕುಳಿ** (ನಾ). ೧. ನಾಲ್ಕುಮುತ್ತುಗಳುಳ್ಳ ಕಿವಿಯ ಆಭರಣ: ಪೊಳೆವ ಪೂವಿನ ಚೌಕಳಿಯಂ ವಧೂಜನಂ . . . ಆಂತುದರ್ಥಿಯಿಂ (ಬಾಥಪು. ೧೪-೧೧೨); ಮಕರಕುಂಡಲ ನೀಲ ಮುತ್ತಿನ ಚೌಕಳಿ [ಪಾಠಾಂ. ಬಾವುಲಿ] ಇಡುತಲಿ (ಪುರಂದ. ೨-೮೨-೨). **ಚವುಕಳಿ:** ೧. ಮುತ್ತಿನ ಚವುಕಳಿ ಮೋಹನವಸ್ತ್ರ ಚೆಲ್ವೆತ್ತ ಮುದ್ರಿಕೆಗಳ ನಾಂತು (ಜೀವಂಸಾಂ. ೫-೫೨). **ಚವುಕುಳಿ:** ೧. ಚೆಲುವ ರನ್ನದ ಬೆಳಗುಗಳ ಚವುಕುಳಿಯ ಮುತ್ತಿನ ಸಣ್ಣ ಕಡುಕಿನ ಹೊಳೆವ ಮುತ್ತಿನ ಕೊಪ್ಪುಗಳ ಕರ್ಣಾಭರಣವೆಸೆಯೆ (ಬಸಪು. ೪-೩೯); ಕಂಠಸರವು ಘನ ಒಂಟಿ ಚವುಕುಳಿಯು (ಶರಲೀ. ೧೧೨-೨). **ಚೌಕುಳಿ:** ೧. ಮುತ್ತಿನೇಕಾವಳಿ ತ್ರಿಸರ ಪಂಚಸರ × × × ಚೌಕುಳಿಯ ತೊಳಪಂ (ಕುಮುರಾ. ೨-೩೯); ತೂಗುವ ಕಿರೀಟಮಲುಗುವ ಚೌಕುಳಿಗಳ (ಜಬಪು. ೭-೨೪); ಹಾರ ಕಡಗ ಕಂಠಮಾಲೆ ಕರ್ಣದೊಳಿಹ ತೋರಮುತ್ತಿನ ಚೌಕುಳಿಯ (ಕಂನವಿ. ೯-೯೮). ೨. ಸೀರೆ ಮೊದಲಾದುವುಗಳ ಮೇಲೆ ಇರುವ ಚಚ್ಚೌಕದ ಮನೆ: ಕೈಮಗ್ಗದ ಚೌಕುಳಿ ಪಂಚೆಯನ್ನು ಸುತ್ತಿಕೊಂಡಿರುವವನು (ನಡದಾ. I, ೫೫೮); ಚೌಕುಳಿ ನಮೂನೆಯಾಗಿ ನೆಯ್ದ ಅಥವಾ ಅಚ್ಚೊತ್ತಿದ ಬಟ್ಟೆ (Check. ಇಂಕನಿ).

[ ತಮಿ. ಚವುಕ್ಕಳಿ; ಮಲ. ಚವುಕ್ಕಿಳಿ; ತೆಲು. ಚೌಕಳಿ ]

**ಚೌಕಳಿಸು** (ಕ್ರಿ). ನಾಲ್ಕು ಕಡೆಯಿಂದ ಮುತ್ತು (?): ಚೂಣಿಗರ ಚೌಕಳಿಸಿ ಕೆಡಹುತಂ ಕೊಡವುತಂ ಬಾಣಂಗಳಂಗವಿವರಂ ಸೀಳ್ದು ಮಿಗೆ ತಾಳ್ದು ಖಾತಿಯಿಂ ಭೀತಿಗೊಳದೆ (ನಂದಿಮಾ. ೧೩-೫೦). [ ←ತೆಲು. ಚೌಕಳಿಂಚು ]

**ಚೌಕಾಬಾರ, ಚೌಕಾಬಾರಾ** (ನಾ). ಒಂದು ಬಗೆಯ ಆಟ; ಚಕ್ಕದ ಆಟ: ಚೌಕಾಬಾರವಾಡುವಾಗ ಮೊದಲನೇ ಆಟದ ಫಲವನ್ನು ಅದು ಚೌಕವಾಗಲಿ ಕಡೆಗೆ ಬಾರವಾಗಲಿ ದೇವರಿಗೆ ಸಮರ್ಪಣೆ ಮಾಡದ ಹುಡುಗರು ನಮ್ಮೂರಲ್ಲೇ ಇರಲಿಲ್ಲ (ಹುಟ್ಟಿಹ. ೧೨೭). **ಚೌಕಾಬಾರಾ:** ನನ್ನ ಜತೆ ಚೌಕಾಬಾರಾ, ಅಡುಗುಣಿಮನೆ, ಆನೆಕಟ್ಟುವುದು ಮೊದಲಾದ ಆಟಗಳನ್ನೂ ಆಡುತ್ತಿದ್ದರು (ದೂರಸ. ೨೭೪); ಹೆಂಗಸರು, ಗಂಡಸರು 'ಚೌಕಾಬಾರಾ' ಆಡುತ್ತಾ ನಗುತ್ತಿದ್ದರು (ನಮ್ಮೂರ. ೧೪೩). P ಮೊದಲಿಗೆ ಈ ಆಟದಲ್ಲಿ ಆರು ಮತ್ತು ಹನ್ನೆರಡರ ಗರಗಳ ಲೆಕ್ಕದಿಂದ ಕಾಯಿಗಳನ್ನು ನಡೆಸುತ್ತಿದ್ದರು. ಅದರಿಂದಲೇ ಈ ಹೆಸರು ಬಂದಿರಬೇಕು. ಈಗ ನಾಲ್ಕು ಮತ್ತು ಎಂಟರ ಗರಗಳ ಆಟಕ್ಕೂ ಈ ಹೆಸರಿದೆ.

[ <ಚಕ್ಕ$_2$ + ಬಾರ$_3$ ]

**ಚೌಕಾಬಾರಾ** 'ಚೌಕಾಬಾರ' ನೋ.

**ಚೌಕಾಶಿ** 'ಚೌಕಶಿ' ನೋ.

**ಚೌಕಾಸಿ** 'ಚೌಕಶಿ' ನೋ.

**ಚೌಕಿ, ಚವಕಿ, ಚವುಕಿ** (ನಾ). ೧. ನಾಲ್ಕು ಕಾಲಂಗಳುಳ್ಳ ಆಸನ; ಪೀಠ; ಮಣೆ: ಬಲ್ಲಹಿಗೆಲ್ಲವಣ್ಗೆ ಸಮದಿತ್ತಂ ಚೌಕಿಯಂ ಜೋಕೆಯಿಂ (ಚಕವಿ. ೨-೭೦); ಒಂದು ಚೌಕಿಯನ್ನೆಳೆದುಕೊಂಡು ಕುಳಿತಳು (ಅರಗಿ. ೧೫೮). ೨. ಮಾಳಿಗೆ: ರಾಯನೀ ಪರಿ ಬೇನೆಯ ನೆವಂಗೊಂಡು ಪೂಗೋಲನಟ್ಟುಳಿಯಂ ಮಱಸಿಕೊಂಡು ಜಂತದ ಚೌಕಿಯೊಳಿರ್ದಪಂ (ಮಿತ್ರಗೋ. ೩೮). ೩. ನಾಲ್ಕು ಮನೆಗಳ ವಠಾರ: (ಪ್ರ). ೪. ಮನೆಯ ಒಳಅಂಗಳ; ತೊಟ್ಟಿ: ಗೆಲ್ಲದ ಗರುಡಿಯುಂ ಚದುರ ಚೌಕಿಯುಂ ಐಸಿರಿಯರಮನೆಯುಂ (ಚಿಕವಂ. ೧೧೪-೧೧); ಆ ಮಹಾದ್ವಾರಗಳನ್ನು ಪ್ರವೇಶ ಮಾಡಿದರೆ ವಿಶಾಲವಾದ ಚೌಕಿ (ಶ್ರೀರಾಯು. ೪೫). ೫. (ಯಕ್ಷಗಾನದ) ಪಾತ್ರಧಾರಿಗಳು ವೇಷ ಹಾಕುವ ಮನೆ; ನೇಪಥ್ಯ: ಚೌಕಿ:— ಇದು ವೇಷವನ್ನು ಹಾಕುವ ಮನೆ; ಗೂಡಾರ ಇದನ್ನೇ ಸಂಸ್ಕೃತನಾಟಕಗಳಲ್ಲಿ 'ನೇಪಥ್ಯ' ಎನ್ನುವುದು (ಪಾರ್ತಿಸು. ೪೯); ಬಣ್ಣ ಹಾಕುವ ಚೌಕಿಯಲ್ಲಿಯೇ ರಂಗಪೂಜೆ (ಯಕ್ಷಬ. ೩೭). ೬. ಕಾವಲಂಗಾರರ ಚಾವಡಿ; ಪೋಲೀಸ್ ಠಾಣೆ: ನನ್ನನ್ನು ಕರೆದುಕೊಂಡು ಚೌಕಿಗೆ ಹೋಗಿ, ಅಲ್ಲಿ ನಾನು ಅರಸುಮಗನ ಕೊಲೆ ಮಾಡಿರುತ್ತೇನೆಂತಲೂ . . . ಹೇಳಿದನು (ಬೀರಬ. ೯೩); ನನ್ನನ್ನು ಇವರು ಹಿಡಿದು ಚೌಕಿಗೆ ಒಯ್ದು ಕೂಡಿಸಿದರೆ . . . ಜನ ಗುಲ್ಲೆಬ್ಬಿಸುವರು (ಸ್ವಾತಿ. ೧೯೦); ಊರೊಳಗೆ ಪೋಲಿಸ ಚೌಕಿ ಇದ್ದಿತು (ಜಮೀನ್ದಾ. ೪). ೭. ಕಾವಲು; ಪಹರೆ: ಕಿರೀಟ ರಾಮರಾಯನು . . . ಮೂರು ದಿವಸ ವಿಜಾಪುರದ ಸುತ್ತ ಚೌಕಿಯ ಮಾಡ್ಯಾನು (ಕಾಲಸಂ. ೧೧೪-೬). ೮. ಚಚ್ಚೌಕವಾದ ಮಂಟಪ; ಚಪ್ಪರ: ನೀಲದ ನೆಲಗಟ್ಟುಗಳ ಮೇಲೆ ಚೌಕಿಗಳನ್ನು ರಚಿಸಲಾಗಿತ್ತು (ರಾ ಜ.ಸೂ. ೪೪). **ಚವಕಿ:** ೧. ಎಂದಿಲ್ಲದಣ್ಣಯ್ಯ ಇಂದ್ಯಾಕ ಬಂದಾನ ಕುಂಡರ ಕೊಡಲೆ ಮಣಿ ಚವಕಿ (ಮಲ್ಲಿಗೆ. ೯೨). **ಚವುಕಿ:** ೬. ಪಟ್ಟದ ಕೋಟೆ ಬಾಗಿಲುಗಳ ಚವುಕೀಪಹರೇಕ್ಕೆ ತಮ್ಮ ಕಡೆ ಬಾರಿನ ಜವಾನರನ ಯಿಟ್ಟು ಬಂದೋಬಸ್ತು ಮಾಡಿ (ಹೈದರ. ೭೭).

**ಚೌಕಿಊಟ** = ಮಠದಲ್ಲಿ ಸ್ವಾಮಿಗಳ ಸಮಕ್ಷಮದಲ್ಲಿ ವಿಶೇಷ ಆಮಂತ್ರಿತರಿಗೆ ನೀಡುವ ಭೋಜನ; ಮಠದಲ್ಲಿಯ ಗೌರವ ಭೋಜನ; ಅಲಂಕಾರಪಂಕ್ತಿ.

[ ←ಮರಾ. ಹಿಂ. ಚೌಕೀ. / ಸಂ. ಚತುಷ್ಕ ]

**ಚೌಕಿಂಗೆ** 'ಚೌಕಿಗೆ' ನೋ.

**ಚೌಕಿಗೆ,** ಚವುಕಿಗೆ, ಚೌಕಿಂಗೆ (ನಾ). ೧. ಮನೆಯ ಒಳಅಂಗಳ,–ಹಜಾರ. ತೊಟ್ಟಿ : "ಸಂಜವನಂ, ಚತುಶ್ಶಾಲಂ–ಈ ೨ ಚೌಕಿ[ಪಾಠಾಂ. ರ]ಗೆ" (ಹಲಾಯು. ೪೯–೧೩೭); "ಸಂಜವನವಾ ವಿಭವ ಚೌಕಿಗೆಯೆನಿಕ್ಕು" (ಮಂಗರಾ. ೫೮–೮); ಚಂದನದ ಚೌಕಿಗೆಯ ಮುಂದೆ ಮರಕತದೊರಲೊಳ್ ಮುತ್ತಿನಕ್ಕಿಯಂ ಪೊಯ್ದು ಕನಕದೊನಕೆಯಂ ನಳಿತೋಳ್ಗಳಿಂ ನೆಗಪಿ (ಲೀಲಾವ. ೨–೩೪); ಒಳಗಂ ಪೊಕ್ಕು ಮಾಡದ ಮುಂದಣ ಚೌಕಿಗೆಯ ರಂಗದೊಳ್ ವಿಸ್ತರಿಗೆಗಳನೇಱಲಿಕ್ಕಿ ಕುಳ್ಳಿರ್ದರ್ (ಬಂಧರಿ. ೩–೬೯ ವ); ಪಟಪಟನೆ ಬೆಳೆದ ಬಾಟೆಯ ತಿವುರಿಯೊಳಂ ಸೊಂಪಾದ ಪಾದರಿಯ ಚೌಕಿಗೆಗಳೊಳಂ ಬಿಟ್ಟ ಬೀಡು ಬರೆದಂತೆ ಕಂಡರಿಸಿದಂತೆ ಕಣ್ಗೆಸೆದಿರ್ದುದು (ಕಬ್ಬಿಗಕಾ. ೨೩೮); ಹೊಗರ ನೀಲದ ಸರಿಯ ನೆಲಗಟ್ಟುಗಳ ಚಪ್ಪರದೆಡೆಯೆಡೆಯ ಚೌಕಿಗೆಯ ಚತುರಂಗದ ವಿಚಿತ್ರದ ರಚನೆ ಚೆಲುವಾಯ್ತು (ಕುವ್ಯಾಸ. ೬–೨೫). ೨. ಮಂಚ: ಚೌಕಿಗೆಗೆ ಬಪ್ಪುದುಮಾಗುಳಿ ಮುನ್ನ ಬಪ್ಪುದುದ್ದಸದೆ ಬೊಜಂಗನೊಳ್ ನುಡಿಯುತುಂ ಕೊರೆವಳ್ ಕಡುನಿದ್ರೆಗಣ್ಣೊಯೇ ಕಿಸುಕುಳಿ ಕುಂಭಕರ್ಣನೊಡವುಟ್ಟಿದಳೋ ಹಡೆದುಂಬ ಸೂಳೆಯೋ (ಸೂಕ್ತಿಸು. ೮–೪೫೦). **ಚವುಕಿಗೆ:** ೧. ಕನ್ಯಾಮಾಡದೆರಡನೆಯ ನೆಲೆಯ ಮುಂದಣ ಚವುಕಿ[ಪಾಠಾಂ. ಚವುಪಳಿ, ಚೌರಿ]ಗೆಯ ಮೇಲೆ . . . ನಡಪಾಡುತ್ತಿರ್ದಳ ಮುಂದೆ (ವಡ್ಡಾರಾ. ೧೪೮–೧೨); ರಾಯನರಮನೆ ಮಂಡವಿಗೆ ಗುಡಿ ಲಾಯ ಚವುಕಿಗೆ ನಿಖಿಳಭವನನಿಕಾಯವನು ತೆಗೆದೊಟ್ಟಿದರು ಬಂಡಿಗಳ ಹಂತಿಯಲಿ (ಕುವ್ಯಾಗ. ೪–೧೭); ನಾಮತೀರ್ಥದ ಚವುಕಿಗೆಯ ಮುಂದಣ ಮೊಗಸಾಲೆಯೊಳ್ (ಚಕವಂ. ೭೪–೧೭). **ಚೌಕಿಂಗೆ:** ೧. ಪಾಳೆಯವ ಬಿಡುವ ಠಾವಿನೊಳು ಗುಡಿ ಚೌಕಿಂಗೆ ಶಾಲೆ ಗಡ ಕರಿತುರಗ ಲಾಯಗಳ ಸೇನೆಗಂ ಕೂಳು ಖಜ್ಜಾಯಗಳ ಮಾಡಿಸಿದ (ತುರಂಗ. ೩೯–೨೪).

[ <ಪ್ರಾ. ಚವುಕ್ಕಿಆ. / ಸಂ. ಚತುಷ್ಕಿಕಾ ]

**ಚೌಕಿದಾರ** 'ಚೌಕೀದಾರ' ನೋ.

**ಚೌಕಿಸು** (ಕ್ರಿ). ಚೌಕಾಕಾರವಾಗಿ ಲಟ್ಟಿಸು (?): ತಂಡುಲವ ತಿಲವನುದ್ದಂ ಗೋದಿಯಂ ಜವದಿ ಚಂಡನಂಗೈವುತಂ . . . ಸಣ್ಣಿಸುತ ನಾದಿ ಗುಡದುಂಡೆಯಿಂ ಘಟ್ಟಿಸುತ ಬೆಣ್ಣೆಯಂ ಕೈಗಲಸಿ ದಂಡಿಗಲ್ಲಿಂ ಚೌಕಿಸಿ ತೊಂಡೆವಸುರಂ ಘೃತವ ತೊಡೆದ ಭಾಜನದೆಡೆಯ ಕೆಂಡವಿಸಿಯಿಂ ಪಚನಿಸಲು ಚೆಲ್ವಿನೊಳು ರಸಂಗಂಡ ಕೋಮಲದ ಸೌಖ್ಯದ ಸವಿಯ ಸಕ್ಕಜದ ಮಂಡಗೆ ಶಿವಾರ್ಪಣ ಸುಖ (ಲಿಂಗಪು. ೮–೧೧). [ ಚೌಕ$_2$ ? + – ಇಸು$_3$ ]

**ಚೌಕೀದಾರ,** ಚೌಕಿದಾರ (ನಾ). ಕಾವಲುಗಾರ; ಪಹರೆಯವನು : ಗಾಡಿಗಳು ಚೌಕೀದಾರನ ಕಣ್ಣು ತಪ್ಪಿಸಿಯೇ ಹೋಗಬೇಕಾಗುತ್ತಿದ್ದವು (ಪ್ರಡಸ. ೪೫); ಅಷ್ಟು ಹೊತ್ತಿಗೆ ಊರ ಚೌಕೀದಾರನು ಚೌಕಿಯ ಬಾಗಿಲಿಗೆ ಬಂದು ನಿಂತಿದ್ದ (ಜಮೀನ್ದಾ. ೪). **ಚೌಕಿದಾರ:** "(ರಾತ್ರಿ) ಕಾವಲುಗಾರ; ಚೌಕಿದಾರ" (Chaukidar. ಇಂಕನಿ).

[ ಚೌಕಿ + – ದಾರ$_4$. / ಹಿಂ. ಮರಾ. ಚೌಕೀದಾರ್ ]

**ಚೌಕೀದಾರಿ** (ನಾ). ಪಹರೆ; ಕಾವಲು : ಬಿಹಾರ ಬಂಗಾಲ ಒಡಿಸಾಗಳಲ್ಲಿ ಚೌಕೀದಾರಿ ತೆರಿಗೆಯನ್ನು ನಿಲ್ಲಿಸಬೇಕು(ಕರವೀ. ೩೦).

[ ←ಹಿಂ. ಮರಾ. ಚೌಕೀದಾರೀ ]

**ಚೌಕು$_1$** 'ಚೌಕ$_2$' ನೋ.

**ಚೌಕು$_2$** 'ಚೋಕು' ನೋ.

**ಚೌಕುಳ** (ನಾ). ೧. ನಾಲ್ಕು ಜಾತಿ : (೬). ೨. [ಸಂಗೀತ] ಶಾರೀರದ ಗತಿಯಲ್ಲಿ ಒಂದು ಬಗೆ (?) : ನಿಗುರ್ವ ಚೌಕುಳವೆಂಬ ಶಾರೀರ ಸುಗತಿಯಿಂದನುಬದ್ಧಗೂಡಿ ಪ್ರಗಣಿತಾಳತಿಯೆಸೆಯೆ ಸಂಧಿಸೆ ಗಮಕ ಸಪ್ತಕವು (ಬಸವು. ೧೯–೧೦). [ ಚೌ$_1$ + ಕುಳ$_5$ (=ಕುಲ) ]

**ಚೌಕುಳಿ** 'ಚೌಕಳಿ' ನೋ.

**ಚೌಕೋಣ** (ನಾ). ನಾಲ್ಕು ಕೋನಗಳನ್ನುಳ್ಳದು; ಚತುಷ್ಕೋಣಾಕೃತಿ: ಚೌಕೋಣದ ಕ್ಷೇತ್ರಫಲ (ಭೂಮಿಅ. ೪೩) : ತ್ರಿಕೋಣ, ಚೌಕೋಣ, ಅಷ್ಟಕೋಣದ ಸುತ್ತುವರ್ತುಳ (ನೆಲಮು. ೫೮–೧೩).

[ ಚೌ$_1$ + ಕೋಣ$_2$. / ಪ್ರಾ. ಚಉಕ್ಕೋಣ ]

**ಚೌಖಂಡ** 'ಚೌಕಂಡ' ನೋ.

**ಚೌಗಡ** 'ಚೌಘಡೆ' ನೋ.

**ಚೌಗಳಿಗೆ** (ನಾ). ನಾಲ್ಕು ಮಡಿಕೆ; ನಾಲ್ಕು ಪದರ : ನಡಸಿದನು ಹರಿಗೋಲನಂಬಿಗ ಒಡೆಯ ಸಿದ್ದನು ತನ್ನ ಕಂಥಿಯ ಚೌಗಳಿಗೆಯನು ಮಾಡಿ ಹಿಡಿದ ಲಾಕುಳ ಹುಟ್ಟುಮಾಡಿದ (ರೇವಕಾ. ೬–೪). [ ಚೌ$_1$ + ಗಳಿಗೆ$_3$ ]

**ಚೌಗಾಂವೆ** 'ಚೌಗಾವೆ' ನೋ.

**ಚೌಗಾವೆ,** ಚವುಗಾವೆ, ಚೌಗಾಂವೆ (ನಾ). ನಾಲ್ಕು ಗ್ರಾಮಗಳ ಕೂಟ,–ಸಮುದಾಯ : ಚತುರ್ಗ್ರಾಮ–ಚೌಗಾವೆ (ಶಮದ. ೨೯೦ ಪ್ರಯೋ); ಶ್ರೀಸೋಮನಾಥ ದೇವರಿಗೆ ಮಹಾಜನಂಗಳುಂ, ಆಸನ್ನ ಚೌಗಾವೆ ಸಮಕ್ಷದಲು ಸ್ತೋತ್ರವನು ಬಿಟ್ಟರು (ಎಕ. XI, ದಾವಣ. ೧೬೨–೧೭; 1265). **ಚವುಗಾವೆ:** ರಾಜವೂರ ಕೊಳವಿಯ ಕಲ್ಲಗವುಡ ದೇವಸಾಣಿಯ ಜಕ್ಕಗೌಡನ ಮಗ ಸೋಮಗೌಡ ಯಿಂತೀ ಚವುಗಾವೆಯ ಮುಂದೆ ಧಾರಾಪೂರ್ವ್ವಕಂ ಮಾಡಿಕೊಟ್ಟರು (ಎಕ. V, ಅರಸೀ. ೧೦೮–೬೮; 1255). **ಚೌಗಾಂವೆ:** ಊರೊಡೆಯ ಪ್ರಮುಖ ಮಹಾಜನಂಗಳಿನ್ನೂರ್ವ್ವರುಂ ಸವಿಠಾಣಮಹಾಸಭೆಯಾಗಿದ್ದು ಚೌಗಾಂವೆಯ ನವಿಲೂರ ಕುರುಂಬಸೇಣಿಗರು . . . ಕೊಟ್ಟ ಕ್ರಮಂ (ಕಕುಲ. ೨೩–೩೯; ?).

[ ಚೌ$_1$ + ಗಾವೆ (<ಗಾಮ) / ಸಂ. ಚತುರ್ಗ್ರಾಮ ]

**ಚೌಘಡೆ,** ಚೌಗಡ (ನಾ). ದೇವಾಲಯಂ, ಅರಮನೆ ಮೊದಲಾದ ಕಡೆಗಳಲ್ಲಿ ನಾಲ್ಕುಗಳಿಗೆಗೊಮ್ಮೆ ಬಾರಿಸುವ ಕಹಳೆ, ನಗಾರಿ,ನಾಗಸ್ವರ ಮೊದಲಾದ ವಾದ್ಯಗಳ ಮೇಳ : ದೇವಾಲಯಗಳಲ್ಲಿಯೂ, ದೊಡ್ಡ ದೊಡ್ಡ ಸರದಾರರ ಮನೆಗಳ ಮುಂದೆಯೂ 'ಚೌಘಡೆ'ಗಳ ಸಮ್ಮೇಲನದ ಮಧುರವಾದ ಧ್ವನಿಗಳಾಗುತ್ತಿದ್ದುವು (ಯದುರಾ. ೧೬೦). **ಚೌಗಡ:** ಗುಡಿಯಲ್ಲಿಯ ಓಲಗದವರು 'ಚೌಗಡ' ಬಾರಿಸುತ್ತಿದ್ದರು (ಬನಸಿ. ೨೨೩): ಹೊರಆಗಸಿ ನೌಬತ್ತು ಅರಮನೆಯ ಚೌಗಡವು(ಕನ್ನಜಾ. ೩೦೮); ಅರಮನೆಯ ಮುಂದಿರುವ ನೌಬತ್ತು ನಗಾರಿ . . . ದಿವ್ಯ ಚೌಗಡ ಕಣಕಣಿಸಿ (ಲೋಕಗೀ. ೨೦೦). [← ಮರಾ. ಚೌಘಡಾ ]

**ಚೌಚೌ$_1$** (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ; ಸೀಮೆಬದನೆ : ಚೌಚೌ, ಸೀಮೆಬದನೆಕಾಯಿ (ವ್ಯಾಜಿಗಿ. ೩೯–೧೪೦೭); ಸರಿಯಾಗಿ ಕಾಪಾಡಿದರೆ ವಿಶೇಷವಾಗಿ ಕಾಯಿಬಿಡುವುದರಿಂದ ಚೌಚೌವನ್ನು ಹೆಚ್ಚಾಗಿ ಬೆಳೆಯುತ್ತಾರೆ (ತರಬಿ. ೨೧). [←ತಮಿ. ಚೌಚೌ ]

**ಚೌಚೌ$_2$** (ನಾ). ೧. ಹಲವು ಬಗೆಯ ಪದಾರ್ಥ, ವಿಷಯ ಮೊದಲಾದವುಗಳ ಮಿಶ್ರಣ: ಆ ಪ್ರದರ್ಶನ ಒಂದುಬಗೆಯ 'ಚೌಚೌ' ಪ್ರದರ್ಶನವಾಗಿ ಬಿಡುತ್ತದೆ (ರಾಮುರಾ. ೮೨). ೨. ಹಲವು ಬಗೆಯ ಖಾದ್ಯಗಳನ್ನು ಮಿಶ್ರಮಾಡಿದ ಒಂದು ಬಗೆಯ ಖಾರದ ತಿನಿಸು : 'ಸಂಗೀತ' ಇಲ್ಲವೆ 'ಮಿಸಳ' ಎನ್ನುವ ಅರ್ಥದಲ್ಲಿ ನಾವು ಚಹದ ಅಂಗಡಿಗಳಲ್ಲಿ ಕೇಳುವ 'ಚೌ–ಚೌ' ಶಬ್ದವು ಚೀನಿ ಭಾಷೆಯದು (ಭಾಷಾಶಾ. ೧೭೮); ಒಂದು ಚೌಚೌ ತೆಗೆದುಕೊಂಡು ಬಾ (ಕಾಮಿಕಾಂ. ೪೮).

[←ಇಂ. Chow Chow ]

**ಚೌಜಂತ**(ನಾ). ನಾಲ್ಕುಕೋರೆಗಳನ್ನುಳ್ಳದು; ಐರಾವತ: ಚತುರ್ದಂತ–ಚೌಜಂತ (ಶಮದ. ೨೯೦ ಪ್ರಯೋ); ನೆಗಟ್ಟ . . . ಚೌಜಂ[ಪಾಠಾಂ. ದಂ]ತ ಮಿಗೆ ಸುರಕರಿಗೆ (ಶಬ್ದಮಂ. ೧೧). [ ಚೌ$_1$ + ಜಂತ ]

**ಚೌಟ,** ಚಉಟ, ಚಉಟ್ಟ, ಚವಟ (ನಾ). ಒಂದು ರಾಜವಂಶದ ವಂಶಸ್ಥನ ವಂತ್ತು ಆ ವಂಶಸ್ಥನಕ್ಕೆ ಸೇರಿದವನು : ಚೌಟ, ಅಳ್ವ, ಪಕ್ಕಳ, ಅಜಿರಿ, ಬಂಗ . . . ಎಂಬ ಹೆಸರುಗಳು ಹೊರತಾಗಿ ಉಳಿದು ಬಂಟರಿಂದ ಬಂದವುಗಳು (ತುಳುನಾ. ೧೮೯) ; ಸ್ಥಾನಸ್ಥಾನದಿ ನಮಗೆ ಮದಿಪು ಮೌನ ಕೊಟ್ಟರು ಚೌಟರು (ಕಎಪು. ೧೮-೧೩) ; ಒಡೆಯ ! ಕಾರ್ಕಳದೊಡೆಯ ! ಚೌಟರ! ನುಡಿದ ತಪ್ಪನು ಕಾವುದು (ಕಎಪು. ೨೦-೩೯). **ಚಉಟ :** ಅಲ್ಲಪ್ಪ ಸೇಖರರಾದ ಚಉ[ಟ]ರು ಅವರ ತಂಮ ದೇವರು ಶೇಖರು ಬೀಮಣ ಶೇಖರು . . . ಬರಸಿಕೊಟ್ಟ ಶಿಲಾಶಾಸನದ ಕ್ರಮವೆಂತೆಂದರೆ (ಸೌಇಇ. IX-II, ೪೬೦-೮ ; 1465). **ಚಉಟ್ಟ :** ಕುಂದಹೆಗ್ಗಡೆ ಹೊಂನ ಬಡ್ಡಿಯಿಂದ ಗ ೩೦ ಬೆಳುಮಂಣುಯಿಂದ ಚಉಟ್ಟರ ಕಾಹೆನ ಅಕಿ ಗ ೭ (ಎಕ. VIII, ತೀರ್ಥಹ. ೯೩-೭೨ ; 1709). **ಚವಟ :** ಮಹಾಪ್ರಧಾನಿ ಮಂಗಪ ದಣಾಯಕರು ತುಬುರಾಜ್ಯದ ಮೇಲೆ ದಂಡೆತ್ತಿಬಂದು ಬಿ(ೕ)ದಿ(ೕ) ರೆಯಲು ಪಾಳೆಯ ಬಿಟ್ಟು ಚವಟರ ಕೆಡಹಿ(ಕಇ. I, ೩೩-೪ ; 1398?).

[ ←ತುಳು. ಚೌಟ ]

**ಚೌಟಗಿ** 'ಚವಡಿಕೆ' ನೋ.

**ಚೌಡ$_1$** (ಗು). ೧. ಚೂಡಕ್ಕೆ ಸಂಬಂಧಿಸಿದ ; ಜುಟ್ಟಿಗೆ ಸಂಬಂಧಪಟ್ಟ ; ಚೌಲಕ್ಕೆ ಸಂಬಂಧಿಸಿದ. (ನಾ). ೨. ಜುಟ್ಟುಬಿಡಿಸುವುದು ; ಚೌಲ ಕರ್ಮ ; ಚೂಡಾಕರ್ಮ. [ ಸಂ. ]

**ಚೌಡ$_2$** (ನಾ). ಒಂದು ಬಗೆಯ ಕುದುರೆ: ಚೌಡನನೇಱಿ ಪಾಯ್ವಲ್ಲಳಗೂಡಿ ಗಗನಕೆ ಲೌಡಿಯನಿಡುತಾನುತ್ಮೆದಿ (ಭರಜ. ೨೨-೩೨). ೨. ಒಂದು ಜಾತಿಯ ಹೆಸರು : ಬ್ರಾಹ್ಮಣನು ಕ್ಷತ್ರಿಯನು . . . ಪಾಂಚಾಳನು ಕುಂಬಾರನು ಚಿತ್ರಬರೆವವನು ಚೌಡನು ನಾವಿಂದನು ಅಗಸನು ಮುಚ್ಚಿಗನು ಹೊಲೆಯನು ಮಾದಿಗನು . . . ಜಾತಿಗಳು ಹದಿನೆಂಟು ಉಂಟು (ಖಜ ಟೀ. ೩-೨೭). [ ? ]

**ಚೌಡಂಗಿ** 'ಚವುಡಂಗಿ' ನೋ.

**ಚೌಡಕಿ** 'ಚವಡಿಕೆ' ನೋ.

**ಚೌಡಾಲು,** ಚೂಡಾಲು (ಗು). ೧. ನಾಲ್ಕು ಕಡೆಗಳಲೂ ತೆರೆದಿರುವ : ಹವುದೆ ಚೌಡಾಲ ಕಂಬಂಗಳೂ ರವಿಬಿಂಬವೆಸೆದಂತೆ ತಳುಕುಲೋವೆಗಳಿಂದ ಹವುದೆ ಒಪ್ಪಿತು ರತ್ನಕಲಶ (ಸಾಂದಕಾ. ೩-೩೬). (ನಾ). ೨. ನಾಲ್ಕು ಕಡೆಗಳಲ್ಲಿಯೂ ತೆರಪಾಗಿರುವ ಅಂಬಾರಿ : ಆನೆಗೆ ಚೌಡಾಲ ಬಗಿರಂದ (ರೋಕಗೀ. ೧೭೬). **ಚೂಡಾಲು:** ೧. ಎಸೆದೊಪ್ಪವೆತ್ತ ಸಿಂಹನ ಮಿಸುನಿಯ ಚೂಡಾಲ ಹೌದೆಯಂ ಪಾ[ವುಡ]ಮಂ . . . ಇತ್ತರ್ (ಬೀಕಪಂ. ೧-೧೦೦).

[ ←ಮರಾ. ಚೌಢಾಳ್ ]

**ಚೌಡಾಳಿಸು** 'ಚಡಾಳಿಸು' ನೋ

**ಚೌಡಿ** 'ಚಾವುಂಡಿ' ನೋ.

**ಚೌಡಿಕೆ** 'ಚವಡಿಕೆ' ನೋ.

**ಚೌತ** (ನಾ). ಆಧಿಕ್ಯ ; ಹೆಚ್ಚಳ (?): ಗಟ್ಟಿನ ಕೊಳಿ ಕಡುಗಂಪಿನೊಳಟ್ಟಮೆ ಗೊಳಗಪ್ಪವೆಂದು ಮಧುಪಂಗಳ್ ತಮ್ಮಟ್ಟಮೆಯೆ ಚೌತವಾಗಿರೆ ನಿಟ್ಟರಿಸಿದುವಂತೆ ಚಂಪಕಕ್ಕೆಱಗದುವೇ (ಆದಿಪು. ೧೦-೧೧೩) ; "ಅಮಾನ್ಯ" (ಆದಿಪು. ಕೋಶ). [ ? ]

**ಚೌತನ** (ನಾ). ಆಧಿಕ್ಯ ; ಹೆಚ್ಚಳ (?) : ಅನುವನೀವ ಚೌತನವನನ್ನಮ ಗುರ್ಬ್ಬಿನ ಬಲ್ಪನನ್ನದಾಸ್ಥಾನದೊಳಾದಯಂ ಮಿಗುವ ತೇಜವನನ್ನವಧೀಶನೆಂದುದಂ ತಾನೆ ತಗುಳ್ದು ಮಾರ್ಪ್ಪದಟಂ . . . ವಿನೋದವನನ್ನವನನ್ನ ಪಾಳನ (ಸೌಇಇ. IX-I, ೨೦೩-೪೯ ; 1126) ; ಕಟ್ಟಾಯದ ಕಣೆ ಪೆಂಪಿನ ಕಟ್ಟಳೆ ಚೌತನ[ಪಾಠಾಂ. ವಟ]ದ ಮೇರು ನನ್ನಿಯ ತವರೂರ್ (ಶಾವ್ಯಾ.ವ. ೨೨೯). [ ? ]

**ಚೌತರಘು,** ಚೌದರ್ಪು (ನಾ). ನಾಲ್ಕು ದಿಕ್ಕು ; ನಾಲ್ಕು ಕಡೆ : ಈ ಅಗ್ರಹಾರದ ಚೌತರಘುಗಳಿಗೂ . . . ಶಿಲಾಪ್ರತಿಷ್ಠೆಗಳನ್ನು ಮಾಡಿಸಿಕೊಡುವಂತೆಯೂ (ಮಹಾಪ. II, ೧೫೩). **ಚೌದರ್ಪು :** ಆ ಹಜಾರವೂ ನಾವು ಕುಳಿತಿದ್ದ ಹಜಾರದಷ್ಟೇ ಹೆಚ್ಚು ಕಡಿಮೆ ಚೌದರ್ಪಿನದಾಗಿತ್ತು (ಹಂಗಾಳ್ಕ. ೩೭೮). [ ←ಹಿಂ. ಮರಾ. ಚೌತರಫ್ ]

**ಚೌತಾಯ** 'ಚೌಥಾಯಿ' ನೋ.

**ಚೌತಾಯಿ** 'ಚೌಥಾಯಿ' ನೋ.

**ಚೌತಾಳ** (ನಾ). [ಸಂಗೀತ] ಒಂದು ತಾಳದ ಹೆಸರು: ಚೌತಾಳದ ಮಾತ್ರಾ ಸಂಖ್ಯೆ ಆದಿತಾಳದಂತೆಯೇ ಇರುತ್ತದೆ (ಸಂಶೋಧ. ೧೬೨).

[ ಚೌ$_1$ + ತಾಳ$_1$ (=ತಾಲ) ]

**ಚೌತಿ,** ಚವತಿ: ಚವುತಿ (ನಾ). ಪಕ್ಷದ ನಾಲ್ಕನೆಯ ತಿಥಿ ; ಚತುರ್ಥಿ : ಜ್ಯೇಷ್ಠ ಶುದ್ಧ ಚೌತಿಯ ಬೆಳಗಪ್ಪ ಜಾವದೊಳ್ . . . ಮೋಕ್ಷಕ್ಕೆ ಸಂದರ್ (ಜಾ ಪು ಂ ಪು. ೪೩-೧೧) ; ಚತುರ್ಥೀ, ಚೌತಿ (ಶಬ್ದಾನು. ೧೬೦ ಪ್ರಯೋ). **ಚವತಿ :** ಚವತೀ ಹಬ್ಬದ ದಿನಗಳಲ್ಲಿ . . . ಗಣಪಗಳನ್ನು ಮಾಡುವವರು ನಮ್ಮ ಊರಿನಲ್ಲಿ ಮೂರೇ ಜನರು (ಅಬೋಲೀ. ೩೭). 'ಚವತಿಚಂದ್ರ' ಪರಾ. **ಚವುತಿ :** ವಿನಾಯಕನಧಿದೇವತೆಯಾಗುಳ್ಳ ಚವುತಿ (ವಿವೇಕ. ೩೨೦).

[<ಪ್ರಾ. ಚಉತ್ಥೀ. / ಸಂ. ಚತುರ್ಥೀ ]

**ಚೌತಿಚಂದ್ರ,** ಚವತಿಚಂದ್ರ (ನಾ). ಗಣೇಶಚತುರ್ಥಿಯ ದಿನದ ಚಂದ್ರ : ಚೌತಿಚಂದ್ರನನ್ನು ನೋಡಿ ಇಲ್ಲದ ಅಪವಾದ ಕೇಳಬೇಕಾಯಿತು (ರೂಢಿ). **ಚವತಿಚಂದ್ರ :** ಅಗೋ ಚವತಿಚಂದ್ರ ನೋಡು ಮೂಡಿದಂತೆ ಎರಡು ಕೋಡು (ಅರಳು. ೨೭೯-೭). [ ಚೌತಿ + ಚಂದ್ರ$_2$ ]

**ಚೌತಿವೆಱ** (ನಾ). = ಚೌತಿಚಂದ್ರ : ವರಚೌತಿವೆಱಗಂಡು ನೆರೆದವಳಿಗೀ ರತ್ನವರಶ್ಯಮಂತಕವ ನಾಂ ತಂದೆ (ಸಾನಂಚ. ೨-೧೦೨). [ಚೌತಿ + ಪೆಱ]

**ಚೌತೀಸ** (ನಾ). ಮೂವತ್ತುನಾಲ್ಕು: ಕೃತಯುಗ ಚೌತೀಸಲಕ್ಷ ಐವತ್ತಾಱು ಸಾವಿರ ವರುಷದಲ್ಲಿ ಕೇತಾರೇಶ್ವರ ದೇವರು ಪೃಥ್ವಿಗೆ ಮೂಲಸ್ಥಾನ (ಚನ್ನವ. ೩೦-೧). [ <ಪ್ರಾ. ಚಉತೀಸ್. / ಸಂ. ಚತುಸ್ತ್ರಿಂಶತ್ ]

**ಚೌತೆಱ** (ನಾ). ನಾಲ್ಕು ಬಗೆ: ಭಾವದೊಳ್ ಪದುಳವಾಗಿರೆ ಚೌತೆಱನರ್ಥ ವೃತ್ತಿಯೊಳ್ದನಿ ಪೊಸದೇಸಿ ಮಾತಿನೊಳುದಾರತೆವೆತ್ತಿರೆ ಸಯ್ಪು ಪೇಟ್ಟು ದಿಂಪೆನಿಸೆ ಕವೀಶ್ವರಂ ಕೃತಿಯಂ (ಪುಷ್ಪಪು. ೧-೩೯). [ ಚೌ$_1$ + ತೆಱ$_1$ ]

**ಚೌತ್ಥಾಯಿ** 'ಚೌಥಾಯಿ' ನೋ.

**ಚೌಥಾಯಿ,** ಚವುಥಾಯ, ಚೌತಾಯ, ಚೌತಾಯಿ, ಚೌತ್ಥಾಯಿ, ಚೌದಾಯಿ (ನಾ). ಮಾಂಡಳಿಕರ ಆದಾಯದಲ್ಲಿ ರಾಜನಿಗೆ ಸಲ್ಲಿಸಬೇಕಾದ ನಾಲ್ಕನೆಯ ಒಂದು ಭಾಗ: ಮೊಗಲರ ರಾಜ್ಯದೊಳಗೆ ಚೌಥಾಯ (ವಸೂಲಿನ ನಾಲ್ಕನೇ ಪಾಲು) ಸರದೇಶಮುಖಿ (ವಸೂಲಿನ ಹತ್ತನೇ ಪಾಲು) ಎಂಬ ಬಾಬುಗಳನ್ನು ಇವನು ಶಾ ಹೂ ರಾ ಜ ನಿ ಗೆ ಸಂಪಾದಿಸಿ ಕೊಟ್ಟನು (ಕರ್ನಾಇ. ೭೭). **ಚವುಥಾಯ :** ಅರ್ಕಾಟಸೀಮೆ ಚವುಥಾಯಹಣದ ನಿಮಿತ್ಯಾ ಯಾ ಪ್ರಾಂತ್ಯದಲ್ಲಿ ಸಂಚರಿಸುತ್ತಾ ಯಿದ್ದವರಿಗೆ (ಹೈದರ. ೭೭). **ಚೌತಾಯ :** ಪಾದುಶಾಹನಿಹ ದೇಶದೊಳ್ಳೊದಲಾಗಿ ಚೌತಾಯಮಂ ಕೊಂಡು ಪ್ರಸಿದ್ಧಿವೆತ್ತಿರ್ಪಂ (ಸಕಪ್ರ. ೨, ಪ್ರಸ್ತಾವನೆ). **ಚೌತಾಯಿ :** ಮಹೀಶೂರ ರಾಜ್ಯದ ದವಲತ್ತಿಗೂ . . . ಚೌತಾಯಿಗೂ ಕುಂಪಣಿಯವರು ಯಾವ ಹಕ್ಕನ್ನೂ ಮಾಡಕೂಡದು (ಚಾಮುಪಂ. ೨೦೩). **ಚೌತ್ಥಾಯಿ :** ನೇತಾಜಿ ಪಾಲ್ಕರನು . . . ಚೌತ್ಥಾಯಿಯನ್ನು ಸಂಗ್ರಹಿಸಿ ಅವರಂಗಾಬಾದಿನವರೆಗೆ ದೇಶವೆಲ್ಲವನ್ನೂ ಬಾಯ್ಬಿಡಿಸಿದನು (ಛತ್ರಶಿ. ೬೯). **ಚೌದಾಯಿ:** ತಾನಾಳ್ವ ದೇಶಕೋಶಂಗಳೊಳ್ ತನಗೆ ಬರ್ಪರ್ಥದೊಳ್ ಚತುರಂಶದೊಳೊಂದು ಭಾಗ ಧನಮಂ ಕೊಂಬುದೆಂದು ಚೌದಾಯಿಯ ಪರವಾನಂ ಬರೆಸಿ (ಕಳನ್ನ. ೯-೮೯). [ ←ಹಿಂ. ಮರಾ. ಚೌಥಾಈ ]

**ಚೌದಂತ,** ಚವುದಂತ (ನಾ). ೧.=ಚೌಜಂತ : " ಕುಂಭಿನಿಯೊಳೈರಾವತಕ್ಕೆ ಚೌದಂತವೆಂದೆಂಬ ನುಡಿ" (ಕಶರ. ೩೭) ; ಚೌದಂತ ಮದಕರಿಯೊಳಡಗಿತ್ತು (ಅವಚಂ. ೨೪೦-೧೯೯) : ಚ ತು ರ್ದ ೦ ತ – ಚೌ ದ ೦ ತ (ಶಮುದ. ೨೪೯ ಪ್ರಯೋ) : ದೇವೇಂದ್ರನಾ ವ ಜ್ರಾ ಯು ಧ ವ ಜಡಿದು ನೂಂಕಿದಂ ಚೌದಂತನಾ (ವೀಶೈಪು. ೩-೨೧-೨೦); ಇಂದ್ರಂಗೆ ದೂಱಲ್ಕವನತಿಭರದಿಂದೆಯ್ದಿ ಚೌದಂತಮಂ . . . ಏರ್ದು (ಹಾಲಾಸ್ಯ. ೧-೨-೩೦). **೨.** ಆನೆ : ಜಯ ವೆಲ್ಲಿಯದು ನಮಗಿನ್ನು ಸಾಕಿನ್ನೆಲ್ಲವೇತಕೆ ಚಿತ್ತವಿಸು ಚೌದಂತನಾಹವವ (ಕುವ್ಯಾದ್ರೋ. ೩-೨೩) ; ಚೌದಂತನ ಕಾದುದಾರಚಂಡಚಕ್ರಧರ ಜಯತು (ಶತಸಾಂ. ೭೫-೮೩). **ಚವುದಂತ: ೩.** ನಾಲ್ಕು ದಂತಗಳು : ಆದಿರುದ್ರನ ಪಾದದ ನಿಡುಬೆರಳಲ್ಲಿ ಹುಟ್ಟಿದ ಯಮಂಗೆ ಐದು ಪಾದ ಚವುದಂತ ಚುಂಚುಬುದಲೆ (ರುದ್ರಭಾ. ೮೯).

**ಚೌದಂತಕವಿ** = ರಾಘವಾಂಕ ಕವಿಯ ಒಂದು ಬಿರುದು : ಹರ ನೊಲ್ಮೆಯಂ ಪಡೆದು ಶಿವಶರಣರಂ ನುತಿಸಿ ಚೌದಂತಕವಿಯೆನಿಸುವ . . . ರಾಘವನ ಕಥೆಗೇಳ್ವುದು (ರಾಘಚ. ೧-೨೫).

[ ಚೌ$_1$ + ದಂತ./ಪ್ರಾ. ಚಉದಂತ / ಸಂ. ಚತುರ್ದಂತ ]

**ಚೌದಂತಿ** (ನಾ). ನಾಲ್ಕುದಂತಗಳುಳ್ಳದು; ಐರಾವತ: ದೊರೆ ಕೇಳ್ಯಾವಕ ಪುಣ್ಯಕೀರ್ತಿಯುವತಿ ಪ್ರಸ್ಥಾನಮಂಗೆಯ್ದು ನಿರ್ಜರಗಂಗಾತಟದಲ್ಲಿ ವಿಶ್ರ ಮಿಸಿಕೊಂಡಲ್ಲಿಂದೆ ಚೌದಂತಿಯಾಗರದೊಳ್ ಸತ್ಕೃತಿಗೊಂಡು . . . ಗೆಯ್ವಳ್ವಿನೋದಂಗಳಂ (ನರಚ. ೭೯-೨೦೫). [ <ಸಂ. ಚತುರ್ದಂತಿನ್ ]

**ಚೌದರಿ** 'ಚೌಧುರಿ' ನೋ.

**ಚೌದರ್ವು** 'ಚೌತರಪು' ನೋ.

**ಚೌದಲೆಯ** (ನಾ). ನಾಲ್ಕು ತಲೆಗಳನ್ನುಳ್ಳವನು; ಬ್ರಹ್ಮ: " ಚೌದಲೆಯಂ ಪಂಕಜಸಂಭವಾಹ್ವಯನೊಳ್ " (ಕರ್ಣಾನಿ. ೯೬).

[ ಚೌ$_1$ + ತಲೆ$_1$ + – ಅ$_7$ ]

**ಚೌದಶ** (ನಾ). ಹದಿನಾಲ್ಕು: ತರಳ ತಿಳಿ ನಾಡಿಗಳ ಚೌದಶಗಳಿಗೆ ನಾಮಗಳ (ಗಗಶಾ. ೯-೧೧). [ <ಪ್ರಾ. ಚೌದಸ./ಸಂ. ಚತುರ್ದಶ. ]

**ಚೌದಸೆ** (ನಾ). ಚತುರ್ದಶಿ: ಚತುರ್ದಶಿ–ಚೌದಸೆ (ಶಬ್ದಾನು. ೧೬೦ಪ್ರಯೋ).

[ <ಪ್ರಾ. ಚಉದಸೀ, ಚಾವುದ್ದಸೀ./ಸಂ. ಚತುರ್ದಶೀ ]

**ಚೌದಳ,** ಚವುದಳ (ನಾ). ೧. ನಾಲ್ಕು ದಳಗಳು,–ಎಸಳುಗಳು. **೨.** ನಾಲ್ಕು ಎಸಳುಗಳುಳ್ಳದು : ಚತುಃಕೋಣೆ ಚೌ[ಪಾಠಾಂ. ಚವು]ದಳ ಪದ್ಮ ಅಲ್ಲಿಹ ಅಕ್ಷರ ನಾಲ್ಕು (ಅವಚಂ. ೪೪-೧೮೮) ; ನಲಿದ ಚೌದಳ ಪಂಕರು ಹಮಂ ಕಳೆದು (ಬಸವು. ೩-೮); ಬಳಿಕಂತಷ್ಟದಳಂಗಳ ಮುಂದೇ ನಳನಳಿಸುವ ಚೌದಳಂ (ಹಾಲಾಸ್ಯ. ೧-೧-೨೦ ರಗಳೆ). **ಚವುದಳ: ೨.** ಮೇಲಿನ 'ಅವಚಂ' ಪ್ರಯೋಗದ ಪಾಠಾಂತರವನ್ನು ನೋಡಿ.

[ ಚೌ$_1$ + ದಳ$_2$ ( = ದಲ) ]

**ಚೌದಾಯಿ** 'ಚೌಥಾಯಿ' ನೋ.

**ಚೌದಾರೆ**(ನಾ). ಒಂದು ಬಗೆಯ ಬಾಣ; ನಾಲ್ಕು ಅಲಗುಗಳುಳ್ಳ ಬಾಣ: ನಾರಾಚ ಕಣೆಗಿಲೆಲೆ ಸಿಲುಕುಬಳೆ ತಳುಕ ಚೌದಾರೆ ದಸಿ ಬಿಸುಗದಿರು ಸವಿ ವಾಯನೆಂಬ ನಾನಾ ಸರಳನು (ಸೋಮುಚ. ೬-೨೬). [ ಚೌ$_1$ + ದಾರೆ$_1$ ]

**ಚೌದಿಕ್ಕು** (ನಾ). ನಾಲ್ಕು ದಿಕ್ಕು : ಚೌದಿಕ್ಕಿನೊಳಗೆಸೆವಾ ಹೊಳೆವ ರತ್ನದ ಗೋಪುರಗಳಿಂ . . . ನಿಳಯ ಶ್ರೀಸತಿಯಿಂದಲೆಸೆದುದು ತುತ್ತರಾಧಿಪನ (ಸನತ್ಕು. ೨-೩೨). [ ಚೌ$_1$ + ದಿಕ್ಕು ]

**ಚೌದಿನ** (ನಾ). ೧. ನಾಲ್ಕು ದಿನ. **೨.** ನಾಲ್ಕನೆಯ ದಿನ: ದೀವಳಿಗೆಯ ಚೌದಿನದೊಳ್[ಪಾಠಾಂ. ಬಾವುದಿನಂ]ಭಾವಿಸಿ ಶುದ್ಧಾತ್ಮನಾಗಿ ವೃಕ್ಷಾದಿಯ ಪತ್ರಾವಳಿಯಂ . . . ಮೆಲುಗೆ ನಿರ್ವಿಷಂ ವರ್ಷಾಂತಂ (ಖಮುದ.೧೭-೧೬೮).

[ ಚೌ$_1$ + ದಿನ ]

**ಚೌದೆಸೆ** (ನಾ). = ಚೌದಿಕ್ಕು : ಇಂತಪ್ಪ ಪುರದ ಚೌದೆಸೆಯ ಬಾಗಿಲುಗಳ ಮುಂತಿಹ ಚಾವಡಿಗಳಲಿ (ಕಂಸವಿ. ೬-೨೪) ; ಪುರಲಕ್ಷ್ಮಿ ಮೈಮರೆದು ಕಣ್ಮುಚ್ಚಿಕೊಂಡಳೆನೆ ಮುಚ್ಚಿದವು ಗೋಪುರಂ ಚೌದೆಸೆಗಳಾ (ಪರಶು. ೩೮-೬).

[ ಚೌ$_1$ + ದೆಸೆ$_2$ ]

**ಚೌಧುರಿ,** ಚವುದರಿ, ಚೌದರಿ, ಚೌಧೊರೆ (ನಾ). ೧. ಹಳ್ಳಿಯ ಒಬ್ಬ ಸರ್ಕಾರೀ ಅಧಿಕಾರಿ ; ಪಟೇಲ : ತಮ್ಮಣ್ಣಯ್ಯ ಚೌಧುರಿ (ಮ್ಯಾಎರಿ. ೧೯೩೪, ೧೩೯ ; 1500). **ಚವುದರಿ :** (೩). **ಚೌದರಿ : ೨.** ಹೆಂಡ ಇಳಿಸು ವವರಲ್ಲಿ ಒಂದು ಜಾತಿ: ಚೌದರಿಗಳು.-ಇವರು ಕಾನಡಾಜಿಲ್ಲೆಯ ಘಟ್ಟದ ಮೇಲಿನ ಭಾಗದಲ್ಲಿ ಮಾತ್ರ ಇರುತ್ತಾರೆ (ಕಥಾಗಿ. ೧೮೦). **ಚೌಧೊರೆ: ೧.** ನಾ ಡ ಮ ನ್ನೆ ಯ ರು ೦ ಚೌಧೊರೆಗಳುಂ ಪ್ರಭುಗಾವುಣ್ದಗಳುಮಿಬ್ಬು ಕೊಟ್ಟರ್ (ಸೌಇಇ. IX-1, ೧೭೨-೩೫ ; 1106).

[ ←ಹಿಂ. ಮರಾ. ಚೌಧರೀ ]

**ಚೌಧೊರೆ** 'ಚೌಧುರಿ' ನೋ.

**ಚೌನಂಗಿ** 'ಚೆನ್ನಂಗಿ' ನೋ.

**ಚೌಪಂಚಿ,** ಚೌಹಂಚಿ (ನಾ). ಪಗಡೆಯಾಟದಲ್ಲಿ ಒಂದಾದ ಮೇಲೆ ಒಂದ ರಂತೆ ನಾಲ್ಕು ಸಲ ಬೀಳುವ ಐದರ ಗರ: ಇರ್ದುಗಮುಮಂ ಚೌಪಂಚಿ ಯಿರ್ಪಂಚಿಯಿತ್ತಿಗೆದೊಳದ್ರಿಕೆ ಕಚ್ಚೆ ಚೌಕದುಗಮಂ ಚೌಪಂಚಿ ಬಾಯೆಂದು . . . ಕರೆಯುತ್ತೆ ಲೆತ್ತಮನಲಂಪಂಬೆತ್ತು ತಾವಾಡಿದರ್ (ಉದ್ಭಟ. ೧೧-೧೪) ; ವನಿತೆ ಮೆಚ್ಚುಗು ಪಂಚಿ ಹಾಯ್ಕುದೊಡೆನುತ ಚೌಪಂಚಿಯ ನೊಸೆದು ತಾನನಘನಾಡುವನು (ಬಸವು. ೪೩-೮). **ಚೌಹಂಚಿ :** ತಡೆಯದೆ ಪಂಚಿಟ್ಟಾಡುವ . . . ನಾಲ್ಕುಂ ಕರಣದ ಜೀವದ ಕಡೆಯೊಳ್ ಶಂಕರನಂ ನಿಲಿಸುತ್ತಾಡುವ ಚೌಹಂಚಿಯನು (ಉದ್ಭದೇ. ೩-೦೨). [ಚೌ$_1$ + ಪಂಚಿ$_1$ ]

**ಚೌಪಟ** 'ಚೌವಟ್ಟ' ನೋ.

**ಚೌಪಟಂಬರಿ** 'ಚೌವಟಂಬರಿ' ನೋ.

**ಚೌಪಟಮಲ್ಲ** 'ಚೌವಟವಂಲ್ಲ' ನೋ.

**ಚೌಪಟಮಲ್ಲತನ** (ನಾ). ಅತಿಶಯವಾದ ಪರಾಕ್ರಮ,–ಶೌರ್ಯ : ಬಿಲ್ಲ ಬಲುಮೆಯದೆನ್ನ ಗಂಡನೊಳಲ್ಲದಾರಿಗೆ ಹೇಳು ಚೌಪಟಮಲ್ಲತನ ಮರ್ಕಟ ರೊಳಲ್ಲದೆ ಮೆಱೆಯದೇ ನಿನಗೆ (ತೊರರಾ. ೪-೫-೧೯).

[ ಚೌಪಟಮಲ್ಲ (<ಚೌವಟಮಲ್ಲ) + – ತನ ]

**ಚೌಪಥ** (ನಾ). ನಾಲ್ಕು ದಾರಿಗಳು ಕೂಡುವ ಜಾಗ ; ಚೌಕ : ಗ್ರಾಮ ಮಧ್ಯಗಳಲ್ಲಿ ಚೌಪಥ ಪಟ್ಟಣಪ್ರದೇಶದಲ್ಲಿ ಹಿರಿಯಾಲದ ಮರದಲ್ಲಿ ಮನೆಯ ಮಾಡಿ (ಬಸವ. ೫೫೭). [ ಚೌ$_1$ + ಪಥ./ಸಂ. ಚತುಷ್ಪಥ ]

**ಚೌಪದ** (ನಾ). ೧. ನಾಲ್ಕು ಪಾದಗಳುಳ್ಳ ಒಂದು ಪದ್ಯಜಾತಿ; ಚೌಪದಿ: ಚತುಃಪದ – ಚೌಪದ (ಶಮುದ. ೨೪೦ ಪ್ರಯೋ) ; ಕೈಯಲ್ಲಿ ಬಿಲ್ಲು ಬಾಣ ಅಥವಾ ಚೌಪದದ ಕೋಲು ಹಿಡಿದು ಹೊರಟ ಈ ಹುಡುಗರ ತಂಡವನ್ನು ನೋಡಲು ಬಹಳ ಚಂದ (ನನ್ನೂರು. ೧೧೫). **೨.** ಮುಕ್ತಿಯ ನಾಲ್ಕು ಪದವಿಗಳು. 'ಚೌಪದಸ್ಥ' ಪರಾ. [ ಚೌ$_1$ + ಪದ$_3$./ಸಂ. ಚತುಷ್ಪದ ]

**ಚೌಪದನ** (ನಾ). = ಚೌಪದ ೧ : ಅಂದು ನಿನ್ನೊಡನಿದ್ದು, ಕಂಡು ಕಣ್ಣಾರೆ . . . ಇಂದಾದೆ ಹಾಡಿ ಬಾಳ್ಕದ ಚೌಪದನವಾ (ಕಎಪು. ೨೫-೭).

[ <ಚೌಪದ ]

**ಚೌಪದಸ್ಥ** (ನಾ). ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯ ಎಂಬ ಮುಕ್ತಿಯ ನಾಲ್ಕು ಪದವಿಗಳಲ್ಲಿ ಒಂದಕ್ಕೆ ಅರ್ಹನಾದವನು: ರುದ್ರಪ್ರಮಥ ತಿಂಥಿಣಿಗೆ ನಮಿಸಿ ಶಿವನ ಕಾಂತೆಗೆ ನಮಸ್ಕರಿಸಿ ಚೌಪದಸ್ಥರ್ಗೆಱಗಿಯಂತರಿಕ್ಷತ್ರಯಾತೀತ ಗುರುಚರಣದೊಳ್ ಸ್ವಾಂತಮಂ ಬೈಚಿಟ್ಟು ಗುರುವಿಂದ ಬೀಳ್ಕೊಂಡು (ಐಕೋಪು. ೮-೭೨).

[ <ಸಂ. ಚತುಷ್ಪದಸ್ಥ ]

**ಚೌಪದಿ,** ಚವುಪದಿ (ನಾ). ೧. ನಾಲ್ಕು ಕಾಲುಂಗಳುಳ್ಳ ಪೀಠ : ಹಿಂದಕ್ಕೆ ಬಿದ್ದು ಬೆನ್ನು ಆನಿಸಿ ಕಟ್ಟಿಗೆಯ ಆ ಚೌಪದಿಯಲ್ಲಿ ಕುಳಿತುಬಿಟ್ಟಳು (ಸಿವಥಾ. ೨೮) ; ಅಲ್ಲಿ ಒಂದು ಚೌಪದಿಯ ಮೇಲೆ ಇಂದುವದನೆಯು ಕುಳಿತಿದ್ದಳು (ಬಿಶಾಪ. ೭೩). **೨.** [ಛಂದ] ನಾಲ್ಕು ಪಾದಗಳುಳ್ಳ ಒಂದು ಪದ್ಯಜಾತಿ: ಮದನನ ತಂದೆಯು ಮುಂದುದಯಿಸೆ ಶಂಕರನೋಳ್ಪೊದವಿರೆ ಸಂದುದು ನೋಡಿದೆ ಸತಿ ಚೌಪದಿಗೇ (ಛಂದೋಂಬು. ೫-೨೫೨) : ನಾಗವರ್ಮನು ಹೇಳಿರುವ ಅಕ್ಕರಿಕೆ, ಮದನವತಿ, ಛಂದೋವತಂಸ, ಚೌಪದಿ, ಗೀತಿಕೆ, ಸಾಂಗತ್ಯ, ಏಳೆ–ಇವು ಏಳೂ ಅಕ್ಕರದ ಪ್ರಸ್ತಾರದೊಳಗೇ ಸೇರುತ್ತವೆ (ಕೃಷಿಡಿ. ೦೩೦). **ಚವುಪದಿ : ೨.** ಕಂದಂಗಳ್ಪಲವಾಗಿರೆ ಸುಂದರವೃತ್ತಂಗಳಕ್ಕರಂ ಚವುಪದಿ [ಪಾಠಾಂ. ಚೌಪದಿ] ಮತ್ತಂದಲ್ಲಿಗೀತಿಕೆ ತಿವದಿಗಳಂದಂ ಬೆತ್ತೆಸೆಯೆ ಪೇಟ್ದೊಡದು ಚತ್ತಾಣಂ (ಕವಿರಾ. ೧-೩೩).
[ <ಸಂ. ಚತುಷ್ಪದೀ ]

**ಚೌಪದಿಗ** (ನಾ). ಚೌಪದಿಗಳನ್ನು ರಚಿಸುವವನು : ಚೌಪದುಳಿಗಂ, ಚೌಪದಿಗಂ (ಶಬ್ದಾನು. ೪೧೦ ವ್ಯಾಖ್ಯಾ). [ ಚೌಪದ + – ಇಗ ]

**ಚೌಪದಿಗವಿತೆ** (ನಾ). ಚೌಪದಿಯ ರೂಪದಲ್ಲಿ ಬರೆದಿರುವ ಕವಿತೆ: ಸಣ್ಣವರುಗಳನೋದಿಸುತಿರ್ಪ ಕಸೆಯ ಕೋಲಣ್ಣಗಳ್ ಚೌಪದಿಗವಿತೆ ಬಣ್ಣಗಂಬಿಯ ಪುಸ್ತಕಲಿಖಿತಜ್ಞರು ಕನ್ನಡಕವ ತಾಳ್ದಿಹರು (ಮೋಹತ. ೩-೪೦).
[ ಚೌಪದಿ + ಕವಿತೆ ]

**ಚೌಪದುಳಿಗ** (ನಾ). = ಚೌಪದಿಗ : ಚೌಪದುಳಿಗಂ, ಚೌಪದಿಗಂ (ಶಬ್ದಾನು. ೪೧೦ ವ್ಯಾಖ್ಯಾ). [ ಚೌಪದ + – ಉಳಿಗ$_3$ ]

**ಚೌಪನ್ನ** (ನಾ). ಐವತ್ತುನಾಲ್ಕು : ಪಟುಭಟಪರಾಕ್ರಮಾನ್ವಿತ ವೀರರುಗಳು ಸಂಘಟಿಸಿ ಚೌಪನ್ನ ಕೋಟೆಯು . . . ಕಟಕಪತಿ ದಳವಡೆಯರಂ ಕೂಡಿ (ನವವೋ. ೨೯-೩೪). [ <ಪ್ರಾ. ಚಉಪನ್ನ./ಮರಾ. ಚೌಪನ್ ]

**ಚೌಪಳಿ** (ನಾ). = ಚೌಪಳಿಗೆ ೩ : ಕುಳಿಶಾವಳಿಗಳನವಮರ್ದಿಂ ತೋಳೆದಡಿಗಲ್ಲಿಕ್ಕಿ ಬೆಳ್ಳಿಯಿಟ್ಟಗೆಯಿಂ ಚೌಪಳಿಯಿಕ್ಕಿದಂತೆ ತೊಳತೊಳತೊಳಗಿ ಬೆಡಂಗಿಡಿದ ಪಾಂಡುಕಾಹ್ವಯ ಶಿಲೆಯೊಳ್ (ಶಾಂತಿಪು. ೧೦-೨೯). [ <ಚೌಪಳಿಗೆ ]

**ಚೌಪಳಿಕೆ** 'ಚೌಪಳಿಗೆ' ನೋ.

**ಚೌಪಳಿಗೆ,** ಚೌಪಳಿಕೆ, ಚೌಪಾಳಿಗೆ, ಚೌವಳಿಗೆ (ನಾ). ೧. ಚಚ್ಚೌಕವಾದ ಹಜಾರ,–ಮೊಗಸಾಲೆ : ಸುಭದ್ರೆಯೆಂಬ ಕನ್ನೆ ಕೆಮ್ಮುಗಿಲ ತೆರೆಯ ಪೊರೆಯೊಳ್ ನೆಗೆದು ಪೊಬಮಡುವ ವಿದ್ಯಾಧರಿಯಂತೆ ತನ್ನ ಚೆಂಬೊನ್ನ ಕನ್ನೆ ಮಾಡದ ಮೇಗಣ ನೆಲೆಯ ಚೌಪಳಿಗೆಯ ಬಾಗಿಲೊಳ್ ನಿಂದು (ಪಂಪಭಾ. ೪-೩೯ ವ). **೨.** ಚಚ್ಚೌಕವಾದ ಮಂಟಪ: ಮಾ [ಡ]ದ ನೆಲೆಯ ಚೌವಳಿಗೆ [ಪಾಠಾಂ. ಚಾವಡಿ]ಗಳುಮನವಟಿ ಮೇಲಿರ್ದೆಲೆಯಡಕೆಯುಮಂ ತೆಂಗಿನೆಳನೀರುಮಂ ಕೊಳಲಿಂಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ತೆಂಗಿನ ಮರಂಗಳುಮಂ (ಪಂಪಭಾ. ೫-೪೭ ವ) ; ಮನಂಗೊಳಿಸುವ ಪಳಿಕಿನ ಚೌಪಳಿಗೆಯ ನೀಲ ಶಿಲಾಸ್ತಂಭಮಂ ಮಲಂಗಿ (ಪಂರಾಮಾ. ೫-೫೭ ವ) ; ಬಂದ ನೆರವಿಯೆಲ್ಲಮಂ ಚೌವಳಿಗೆಯೊಳಂ ಬಯಲ್ಗಳೊಳ[ಮ]ವರ್ಗೆ ತಕ್ಕಂತಿರಿಸಿ (ಬಂಹರಿ. ೬-೪೭ವ); ಐವತ್ತಾಱು ದೇಶದ ಭೂಲಲನೇಶರಿಗೆ ಮಾಡಿಸಿದ ವಿಲಸಿತವಪ್ಪ ಚೌಪಳಿಗೆಗಳಂದು ಹೊಂಗಲಶದೊಳಗೆ ರಾಜಿಸಿದವು(ರಾಮವಿ. ೭-೩೦). **ಚೌಪಳಿಕೆ : ೩.** ಪೀಠ; ಆಸನ : ಗೋಸನೆವಿಡಿ[ಯಲಾ]ಗಳ್ ಪೊಟಲೆಲ್ಲಾ ಕೈಗೆಯ್ದು ಮಹಾವಿಭೂತಿಗಳಿಂ ಬಂದು ತಂತಮ್ಮ ಚೌಪಳಿಕೆಗಳ ಮೇಲೆ ಲೀಲೆಯಿಂದಿರ್ದರ್ (ಬಂಹರಿ. ೨-೩೦ ವ). **ಚೌಪಾಳಿಗೆ :** ೧. ಹರುಷದಿಂದಲಿ ಕನ್ನೆಮಾಡದ ಪಿರಿಯ ಚೌಪಾ[ಪಾಠಾಂ. ಮಾ]ಳಿಗೆಯಲತಿ ವಿಸ್ತರದಲೋಲಗ ಗೊಟ್ಟು ಕುಳ್ಳಿತು ಸಕಲವಿಭವದಲಿ (ಪ್ರಭುಲೀ. ೫-೧೮). **ಚೌವಳಿಗೆ : ೨.** ಕಡೆಯ ಚೌವಳಿಗೆಯೊಳಿರ್ದ ರಾಜಂ . . . ಪಟಹಮಂ [ಕೊಂ]ಡು ಬಾಜಿಸುತಿರ್ದಂ (ಬಂಹರಿ. ೫-೧೨ ವ). [ <ಸಂ. ಚತುಷ್ಪಲಕ? ]

**ಚೌಪಾರ** (ನಾ). ಒಂದು ಬಗೆಯ ಔಷಧಿ ಸಸ್ಯ : "ರೋಮಕರ್ಕಶಿಕಾ–ಚೌಪಾರ, ಅಜಮೋದ" (ಒಷಧಿ. ೧೪೧). [ ? ]

**ಚೌಪಾಳಿಗೆ** 'ಚೌಪಳಿಗೆ' ನೋ.

**ಚೌಪೀಠ** (ನಾ). ನಾಲ್ಕು ಕಾಲುಂಗಳುಳ್ಳ ಪೀಠ,–ಆಸನ : ರತಿ ಮಣಿಖಚಿತ ಚೌಪೀಠದೊಳು ಮಂಡಿಸಿ (ನವವೋ. ೧೪-೧೮). [ ಚೌ$_1$+ಪೀಠ ]

**ಚೌಪುಲ್ಲಿ** (ನಾ). ಒಂದು ಬಗೆಯ ಸೀರೆ: ಚಂದ್ರಗಾವಿಯ ಗುಳ್ಳಗಾವಿಯ ಬರಹದ ಮಾಂದಳಿಯ ಉದಯರಾಗಗಳ ಇಂದ್ರಾಣಿಯ ಚೌಪುಲ್ಲಿ ಸೀರೆಯನುಟ್ಟು ಚಂದದಿಂ ನಡೆದರಾಳಿಯರು (ಜ್ಞಾನಚಂ. ೧೮-೩೮). 'ಪುಲ್ಲಿ' ಪರಾ. [ ಚೌ$_1$ + ಪುಲ್ಲಿ ]

**ಚೌಬಲ** (ನಾ). ಚತುರ್ಬಲ ; ಚತುರಂಗ ಬಲ : ಚೌಬಲಂ ಬೀದಿಬೀದಿಗಳೊಳಂ ಬೆಂಬಿಡದೆ ನಡೆಗೊಂಡುದುರ್ವರೆಯು ತಲ್ಲಣಿಪೊಲು (ಪರಶು. ೨೦-೧೭). [ ಚೌ$_1$ + ಬಲ ]

**ಚೌಬಾಗಿಲು** (ನಾ). ನಾಲ್ಕು ಕಡೆಯೂ ಬಾಗಿಲುಗಳುಳ್ಳದು : ಮೊಗಸಾಲೆ ಚೌಬಾಗಿಲುಪ್ಪರಿಗೆಯು ದಾಂಟ ಪೊಗಲು ರಾಮನು ಮುದದಿಂದ (ಅಬ್ಬಲೂ. ೩-೮೮). [ ಚೌ$_1$ + ಬಾಗಿಲು (<ಬಾಗಿಲ್) ]

**ಚೌಬಾಜಾರ** (ನಾ). ಚೌಕದ ನಾಲ್ಕುಕಡೆಗಳಲ್ಲಿಯೂ ಇರುವ ಅಂಗಡಿಗಳ ಸಾಲು: ಇಂತಪ್ಪ ಪುರವರದಿ ನವಮಣಿಕನಕದಿಂದೆ ನಿರ್ಮಿಸಿದ ಚೌಬಾಜಾರದಿಂದೆಣಿಕೆಯಿಲ್ಲದ ಸಾಲುವುಪ್ಪರಿಗೆ ಸೌಧ ಧವಳಾರ ಸಾರಣೆ ಕಾರಣೆ (ನವವೋ. ೨-೩೪). [ ಚೌ + ಬಾಜಾರ (<ಬಾಜಾರು) ]

**ಚೌಬಾರ,** ಚವುಬಾರ, ಚೌಬಾರಿ, ಚೌಭಾರ, ಚೌಭಾರಿ(ನಾ). ೧. ನಾಲ್ಕು ಕಡೆಯೂ ಬಾಗಿಲುಗಳುಳ್ಳದು ; ಉಪ್ಪರಿಗೆಯ ಮೊಗಸಾಲೆ : ಗೊಂದಣಿಸಿದ ಗೋಪುರಂಗಳಿಂ ಚಂದವಾದ ಚೌಬಾರಂಗಳಿಂದತಿರಮಣೀಯವಾಗಿ (ವಿರೂಪಾ. ೪೩ ವ) ; ಎಡಬಲದ ಚೌಬಾರದುಪ್ಪರಿಗೆ ಗೋಪುರಗಳಿಡಿಕಿರಿದ ಸೌಧಗಳ ಧವಳಸಂಕಾಶದಿಂ (ನವವೋ. ೨-೩೦). **ಚವುಬಾರ :** ೧. ಪುರವಮಂ ಪೊಕ್ಕಂಗಡಿವೀಧಿಯೊಳಗಣಿಂ ಬಂದು ಚವುಬಾರದ ಮಂಡೆಯದೊಳು ಕುಳ್ಳಿರ್ಪುದುಂ (ಪುಣ್ಯಾಸ್ರ. ೭-೭೬ ವ). **ಚೌಬಾರಿ :** ೧. ತೋರಿಯ ನಿಖಿಳ ಪೊಂಗಳಸದಿ ಮೆಱೆವ ಚೌಬಾರಿಯ ಹರ್ಮ್ಯದ ಮುಂದೆ ವಾರಿಜದಳಲೋಚನೆಯರೊಪ್ಪುವ ಸೂಳೆಗೇರಿಯ ಸೊಬಗ ನಿಟ್ಟಿಸಿದ (ಮೋಹತ. ೧೮-೩೪). **೨.** ನಾಲ್ಕು ರಸ್ತೆಗಳು ಕೂಡುವ ಸ್ಥಳ ; ಚೌಕ : ಬಳ್ಳೊಡಿ ಗಾಮಕ ಬಂದಾಳ ಚೆನ್ನಮ್ಮ ಚೌಬಾರಿಗೆ ಡೇರಿ ಹೊಡಿಸ್ಯಾಳ . . . ಹತ್ತನೂರ್ಹೆಳಬರು ಹಿಂಬಾಲ (ಲೋಕಗೀ. ೨೨೫). **ಚೌಭಾರ :** ೧. ಕರುವಾಡ ಕಳಸದುಪ್ಪರಗುಡಿ ಭಿತ್ತಿಯು ಹಿರಿಯುಪ್ಪರಿಗೆಯು ಚೌಭಾರ (ಅಮುಸಾಂ. ೪-೭೩) ; ಎಡಬಲದ ಚೌಭಾರದುಪ್ಪರಿಗೆಗಳ ಮೇಲೆ ಕಡುಚಲುವ ಗಣಿಕೆಯರು ನಿಂದಿರಲು (ಗುಭಜ. ೦-೭೮). **ಚೌಭಾರಿ :** ೧. ಕುಂದಣ ನವರತ್ನ ಖಚಿತ ಚೌಭಾರಿಯ ಮುಂದಣ ನಾಲ್ದೆಸೆಗಳಲಿ ಸಂದಣಿಸಿದರು (ಮೋಹತ. ೨೦-೨೦). [ <ಪ್ರಾ. ಚಉವಾರ./ಸಂ. ಚತುರ್ದ್ವಾರ ]

**ಚೌಬಾರಿ** 'ಚೌಬಾರ' ನೋ.

**ಚೌಬೀದಿ** 'ಚೌವೀದಿ' ನೋ.

**ಚೌಬೀನಿ** 'ಚೌಬೀನೆ' ನೋ.

**ಚೌಬೀನೆ,** ಚೌಬೀನಿ (ನಾ). ೧. ಬಡಗಿಯ ಕೆಲಸಕ್ಕೆ ಬರುವ ಮರ,–ಕಟ್ಟಿಗೆ. **೨.** ಮರದಿಂದ ಮಾಡಿದ ಸಾಮಾನು : ಚೌಬೀನೆ ವ್ಯಾಪಾರ–ಬೇರೆ (ಚಿತ್ರಕೂ. ೪೦) ; ಚೌಬೀನೆಗಾಗಿ ಮರಗಳನ್ನು ಬೆಳೆಸುವ ಉದ್ಯೋಗವುಳ್ಳ ಅಧಿಕಾರಿ (Forester. ಇಂಕನಿ). **೩. ತೊಲೆ :** (ಕೈಸಗ. II, ೫೪೫). **ಚೌಬೀನಿ:** ೧.ಆ ಪ್ರವಾಹದಲ್ಲಿ . . . ಚೌಬೀನಿ ಮರಗಳು ಬಿಡಿಬಿಡಿಯಾಗಿ, ಗುಂಪುಗುಂಪಾಗಿ ಹೊಡೆದು ಕೊಂಡು ಬರುತ್ತಿದ್ದವು (ಮಹಾಗ. ೨೧೭).
[ ←ಪಾರ. ಚೋಬೀನ್; ಮರಾ. ಚೋಬೀನಾ ]

**ಚೌಭಾಗಿ** (ನಾ). ನಾಲ್ಕು ಭಾಗಗಳುಳ್ಳುದಂ : ಚೌಭಾಗಿ, ಚತುರ್ಭಾಗಿ (ಶಬ್ದಾನು. ೩೭೭ ಪ್ರಯೋ). [ <ಸಂ. ಚತುರ್ಭಾಗಿನ್ ]

**ಚೌಭಾರ** 'ಚೌಬಾರ' ನೋ.

**ಚೌಭಾರಿ** 'ಚೌಬಾರ' ನೋ.

**ಚೌಮೂಲೆ** (ನಾ). ನಾಲ್ಕು ಮೂಲೆಗಳು : ಹೇಳಲೇನದ ಮಂಟಪದ ಚೌಮೂಲೆಯಗಲದ . . . ಬಹಳ ರತ್ನವಿತಾನದುಬ್ಬರದ (ಕೊರರಾ. ೦-೧೩-೭) ; ಕುಂದನರೆಯಿಂ ಮೂಡಲು ಚೌಮೂಲೆ ಬಳಿಯ ನೆಟ್ಟ ಕಲು (ಎಕ. XIV, ಗುಂಡ್ಲುಪೇ. ೧೨೭ ೧೦ : ?). [ ಚೌ$_1$ + ಮೂಲೆ ]

**ಚೌಮೊಗ** (ನಾ). ೧. ನಾಲ್ಕು ಮುಖಗಳು. ೨. ನಾಲ್ಕು ಮುಖಗಳುಳ್ಳವನು ; ಬ್ರಹ್ಮ : "ಬೊಮ್ಮ ಚೌಮೊಗಂ" (ಕರ್ಣಾನಿ. ೬೧). [ ಚೌ$_1$ + ಮೊಗ ]

**ಚೌರ$_1$, ಚವುರ$_2$** (ನಾ). ೧. ಕ್ಷೌರ ; ಹಜಾಮತಿ : "ಚೌರ–ಕ್ಷೌರ" (ತದ್ಭಕೋ. ೧೩); ಭಕ್ತಿಯಲಿ ಮಜ್ಜನವ ಚೌರವ ಮಾಡಿಕೊಂಡು (ಅರ್ಜಾವಿ. ೧೩-೫೭). ೨. (ಆಲಂ) ನಷ್ಟ ; ಪೋಲು : ಸ್ನೇಹಿತರಿಗೆ ಕಾಫಿ, ತಿಂಡಿಯೆಂದು ನಾಲ್ಕು ರೂಪಾಯಿ ಚೌರವಾಯಿತು (ರೂಢಿ). **ಚವುರ$_2$ :** ೧. ಈತ ಚವುರದ ನಾಚಿತಂದೆ ಕೇಳೀತನೇ ಕಾಳಾಂಜಿಯಪ್ಪಣ್ಣನು (ಚಬಪು. ೫೭-೫೪). [ <ಸಂ. ಕ್ಷೌರ ]

**ಚೌರ$_2$** 'ಚವರ' ನೋ.

**ಚೌರಂಗ, ಚವರಂಗ** (ನಾ). ೧. ಸೈನ್ಯದ ನಾಲ್ಕು ಅಂಗಗಳು; ಚತುರಂಗ. 'ಚೌರಂಗದಳ' ಪರಾ. ೨. ನಾಲ್ಕು ಕಾಲುಗಳನ್ನುಳ್ಳ ಪೀಠ; ಮಂಚಿಕೆ; ಚೌಕಿ : ತನಗೆ ಕುಳಿತುಕೊಳ್ಳಲಿಕ್ಕೆ ಸಿದ್ಧಪಡಿಸಿದ್ದ ಚೌರಂಗದ ಮೇಲೆ ಹೋಗಿ ಕುಳಿತುಕೊಂಡಳು (ಧತ್ರ.ಪ. ೪೩); **ಚವರಂಗ: ೨.** ಕೂಡುವುದಕ್ಕೆ ಚಂದನದ ಅಷ್ಟಕೋನಾಕೃತಿಯಾದ ಚವರಂಗವನ್ನು ಇಟ್ಟು (ಮಂಜುಳ. ೬೩). [ <ಪ್ರಾ. ಚಉರಂಗ./ಸಂ. ಚತುರಂಗ ]

**ಚೌರಂಗದಳ** (ನಾ). ಚತುರಂಗ ಸೈನ್ಯ : ತನ್ನ ಚೌರಂಗದಳಮನಿತುಮಂ ಸಜ್ಜುಗೊಳಿಸಿದಂ (ಮಿತ್ರಗೋ. ೫೫). [ ಚೌರಂಗ + ದಳ$_2$ (=ದಲ) ]

**ಚೌರಗೆ** 'ಚೌರಿಗೆ$_2$' ನೋ.

**ಚೌರಬೊಂಬಾಳ** 'ಚವರಬೊಂಬಾಳ' ನೋ.

**ಚೌರಶೀತಿ, ಚೌರಾಶೀತಿ, ಚೌರಾಸೀತಿ, ಚೌಶೀತಿ** (ನಾ). = ಚೌರಾಸಿ ೧ : ಚೌರಶೀತಿಯ ಬಂಧವ ನೆಗಳ್ದನರ್ಥಿಯಲಿ(ಮೋಹತ. ೩೨-೧೭). **ಚೌರಾಶೀತಿ:** ಈತ ಕಾಣಿರೆ ಹಿಂದೆ ಚೌರಾಶೀತಿ ದುರ್ಗದೊಳೋಡಿ ಬದುಕಿದನು(ಕುವ್ಯಾಸ. ೨-೭೭). **ಚೌರಾಸೀತಿ :** ಹದಿನೆಂಟುಸಾವಿರ ಶೀಲ ಚೌರಾಸೀತಿ ಪದವೆತ್ತ ಲಕ್ಷಸದ್ಗುಣವ (ವರ್ಧಚ. ೧೨-೪೨) ; ಮುದವಡೆದೆಸೆವ ಚೌರಾಸೀತಿ ಬಂಧದ ವಿಧದ ರತಿಯ ತೋಱು ಮೆಱೆವ ಪುದುಗಿದ ನವರತ್ನದ ಪ್ರತಿಮೆಗಳಿಂದ (ಕಂನವಿ. ೭-೩೯). **ಚೌಶೀತಿ :** ದಿಕ್ಕರಿಗೆಣೆ ಮಿಗಿಲೆನಿಸುವ ಚೌಶೀತಿ ಲಕ್ಕ ಹಸ್ತಿಗಳ್ (ಶ್ರೀಪಾಲ. ೧೩-೧೭೯) ; ಲೇಸಿನ ವಿಟರವಯವದಲಿ ಮೋದದೆ ಚೌಶೀತಿ ಬಂಧದೆ ಕೂಡಿ (ಮೋಹತ. ೧೮-೪೦). [ <ಸಂ. ಚತುರಶೀತಿ ]

**ಚೌರಸ, ಚವುರಸ** (ನಾ). ೧. ನಾಲ್ಕು ಮೂಲೆಗಳುಳ್ಳುದಂ ; ಚಚ್ಚೌಕ ; ಚತುರಸ್ರ : "ಚೌರಸ–ಚತುರಸ್ರ(ಶ್ರ) = ಚಚ್ಚೌಕ" (ತದ್ಭಕೋ. ೦೩) ; ಮಿಸುವ ಪವಳದ ಪುತ್ತಳಿ ಪೊನ್ನ ಪೊದಕೆ ರಂಜಿಸಿತು ಚಾವಡಿಯ ಚೌರಸದೆಡೆಯೊಳು(ಜೈಮಿಭಾ. ೧೭-೨೩). ೨. ಚದರ; ಚೌಕ: ಐದುಜನರುಳ್ಳ ಒಂದು ಮನೆತನಕ್ಕೆ ವರ್ಷಕ್ಕೆ ೮೦ ಚೌರಸ ಯಾರ್ಡು ಬಟ್ಟೆ (ಖಾದಿಶಾ. ೯೯); ಈ ಜಿಲ್ಹೆಯ ಜನಸಂಖ್ಯೆಯು ಚೌರಸ ಮೈಲಿಗೆ ೧೧೯ ರಂತೆ ಬೀಳುವದು (ಕಾರವ. ೪೦). **ಚವುರಸ :** ೧. ಕೊಪ್ಪೇಶ್ವರದೇವರ ಬಡಗದೆಸೆಯಲು ಮಾಣಿಕೇಸರದ ಚವುರಸ ೫೦ ಕಯಿ ನಿವೇಸಣ (ಸೌಇಇ. XX, ೧೮೪-೩೨ ; 1199). [ <ಪ್ರಾ. ಚಉರಂಸ ; ಚಉರಸ್ಸ. / ಸಂ. ಚತುರಸ್ರ ]

**ಚೌರಾಯಿಸಿ** 'ಚೌರಾಸಿ' ನೋ.

**ಚೌರಾಶಿ** 'ಚೌರಾಸಿ' ನೋ.

**ಚೌರಾಶೀತಿ** 'ಚೌರಶೀತಿ' ನೋ.

**ಚೌರಾಸಿ, ಚವುರಾಶಿ, ಚೌರಾಯಿಸಿ, ಚೌರಾಶಿ** (ನಾ). ೧. ಎಂಬತ್ತು ನಾಲ್ಕು : ಚೌರಾಸಿ [ಪಾಠಾಂ. ಚತುರಾಶೀತಿ, ಚವುರಾಶಿ, ಚೌರಾಶಿ] ಲಕ್ಷ ಜೀವರಾಶಿಗಳಿಗೆ ರಾಶಿವಾಳ ತಾನಾಗಿ (ಅವಚಂ. ೩-೮) ; ಅಂಡಜ ಸ್ವೇದಜ ಜರಾಯುಜ ಉದ್ಭಿಜವೆಂಬ ಚೌರಾಸಿ ಲಕ್ಷ ಜೀವಂಗಳೇಕಾದವು (ವಚಸಂ. ೫೪೧-೨೪) ; ಪಯೋಜನಾಭನು ನಿರ್ಮಿಸನೆ ಚೌರಾಸಿದುರ್ಗಗಳ (ಬಸಪು. ೫೨-೩೭). **ಚವುರಾಶಿ :** ೧. ಮೇಲಿನ 'ಅವಚಂ' ಪ್ರಯೋಗದ ಪಾಠಾಂತರವನ್ನು ನೋಡಿ. **ಚೌರಾಯಿಸಿ :** ೧. ಮಿಗೆ ಚೌರಾಯಿಸಿ ಲಕ್ಷಯೋನಿಮುಖಸಂಜಾತ ಪ್ರಯಾಸಂಗಳು (ಉದ್ಭಟ. ೧೦-೫೩). **ಚೌರಾಶಿ:** ೧. ಧರಣಿಯಲಿ ಚೌರಾಶಿ ಲಕ್ಕದ ಕರಣಜೀವರ ಹರಣಕಾಗಳು ವರಮಹಾ ಕೃಪೆಯುಳ್ಳನು (ಸಂಭಪ. ೪-೨). ೨. ಎಂಬತ್ತುನಾಲ್ಕು ಲಕ್ಷ ಜೀವರಾಶಿ : ನರಸುರ ಚೌರಾಶಿಗಳಿಗೆಲ್ಲ ನೀನಿತ್ತಲ್ಲದಿಲ್ಲ ನೋಡಯ್ಯಾ (ಮೋಳಿಮಾ. ೩೪-೧೪೪). [ <ಪ್ರಾ. ಚಉರಾಸೀ. / ಸಂ. ಚತುರಶೀತಿ ]

**ಚೌರಾಸೀತಿ** 'ಚೌರಶೀತಿ' ನೋ.

**ಚೌರಾಸೀಶ** (ನಾ). ಎಂಬತ್ತುನಾಲ್ಕು ಗ್ರಾಮಂಗಳ ಒಡೆಯ (?) : ಕಡುಪಿಂದಂ ಧರಣೀಶ್ವರಂ ಬೆಸಸೆ ಚೌರಾಸೀಶನಂ ಬಂದಿಯಂ ಪಿಡಿದು (ಎಇ. XVI, ೬೨-೪೦ : 1081). [ ಚೌರಾಸಿ + ಈಶ ]

**ಚೌರಿ$_1$** 'ಚವರಿ' ನೋ.

**ಚೌರಿ$_2$** (ನಾ). [ಜೈನ]ಮುನಿಗಳಿಗೆ ನೀಡುವ ಭಿಕ್ಷೆ ; ಚರಿಗೆ (?) : ಹರಶರಣರುಗಳಿಗಾದಯ್ಯ ಪರ್ವ ಮಾಡಿ ನಿರುತದಿಂದಾ ದಿವಸ ಪಾರೀಶನಂ[ನುಂ] ತನ್ನ ಗುರುಗಳಿಗೆ ಚೌರಿಯನುವೆಸಗಿ ಭೋಜನವ ಮಾಡಿಸುತಿರಲು (ಪ್ರಭುಪು. ೮-೩೭). [ <ಸಂ. ಚರ್ಯಾ ? ]

**ಚೌರಿಂದ್ರಿಯ** (ನಾ). ಚರ್ಮ, ನಾಲಗೆ, ಮೂಗು, ಕಣ್ಣು ಎಂಬ ನಾಲ್ಕು ಇಂದ್ರಿಯಂಗಳನ್ನುಳ್ಳುದಂ : ತ್ರಿಯಿಂದ್ರಿಯಕೆಂಟುಲಕ್ಷ ಚೌರಿಂದ್ರಿಯದಲ್ಲಿ ಪೊಂಭತ್ತುಲಕ್ಷ (ದ್ವಾದಶಾ. ೧೦-೨೦೩). [ <ಪ್ರಾ. ಚಉರಿಂದಿಯ. / ಸಂ. ಚತುರಿಂದ್ರಿಯ ]

**ಚೌರಿಕುಪ್ಪಿಗೆ** (ನಾ). ಚವಲಿತುಂಬು : ಕೆಂದಾವರೆಯ ಮೊಗ್ಗೆಯಂ ಚೌರಿಕುಪ್ಪಿಗೆಯಂತೆ ಯಿರಿಸಿ (ಸೌಗಂಧಿ. ೧೭೦-೯). [ ಚೌರಿ$_1$ (<ಚವರಿ) + ಕುಪ್ಪಿಗೆ ]

**ಚೌರಿಕೊಟ್ಟು** 'ಚವರಿಕೊಟ್ಟು' ನೋ.

**ಚೌರಿಗೆ$_1$** 'ಚರಿಗೆ$_1$' ನೋ.

**ಚೌರಿಗೆ$_2$, ಚೌರಗೆ** (ನಾ). ಮನೆ : "ಚೌರಿಗೆಯೆಂದು ಮನೆ" (ಕಕಸಾ. ೧೭-೩೦೭) ; ಗುಡಿಗೂಡಾರಂ ಚೆಲ್ವಂಗಡಿ ಚೌರಿಗೆ ಚಂಪೆ ತಿವುರಿ ದುಮ್ಮುಳ ಮಿಮಱುಂದದಡಸಿದ ಪಸುರಿಂ ಕಪ್ಪಿಂ ಕಡುಗೆಂಪಿಂ ಮೆಱೆದುದವನ ಪೊಱ ವೀಡು ಕರಂ (ಬಾಹಪು. ೧೦-೧೯) ; ಬೆಂದುದು ದೇವ ಮಾಧವನ ಪೆರ್ಮನೆ . . . ಆದಿವಿಠಲನ ಚೌರಿಗೆ ಕೂಚಿಯ ಸನ್ನಿಕೇತನಂ (ವೃಷವಿ. ೩೮-೧೦೦). **ಚೌರಗೆ :** "ಸಂಜವನಂ, ಚತುಶ್ಶಾಲಂ–ಈ ೨ ಚೌರ[ಪಾಠಾಂ. ಕಿ]ಗೆ" (ಹಲಾಯು. ೪೯-೧೫೭). [ <ಪ್ರಾ. ಚಉರಿಯಾ = ಲಗ್ನಮಂಟಪ ]

**ಚೌರಿಮಿಸೆ** (ನಾ). ಚೌರಿಯಂತೆ ಹುಲುಸಾಗಿ ಬೆಳೆದ ಮೀಸೆ: ತೊಯ್ದಿದ್ದ ಚೌರಿಮಿಸೆಗಳನ್ನು ನೀವಿಕೊಳ್ಳುತ್ತಾ (ಮಲಮ. ೧೪). [ ಚೌರಿ$_1$ (<ಚವರಿ) + ಮಿಸೆ ]

**ಚೌರಿಯ** (ನಾ). ಕಳ್ಳತನ ; ಕಳವು : ಸಪ್ತವ್ಯಸನಂಗಳವಾವುವೆಂದಡೆ ದ್ಯೂತಮುಂ ಮಾಂಸಮುಂ . . . ಚೌರಿಯಮುಂ (ಪಸಾರ. ೫೯೩-೭). [ <ಸಂ. ಚೌರ್ಯ ]

**ಚೌರ್ಯ** (ನಾ) =ಚೌರಿಯ : ತಾರತಮ್ಯ ವಿವೇಕವರಿಯದಾ ಸಂಸ್ಕಾರ ಪ್ರೇರಕವೋ ಚೌರ್ಯಕ್ಕೆ (ಮಂಕುಕ. ೮೭೦) : ನಾರೀಹೃದಯಚೌರ್ಯ ನಿಪುಣಂಗೆಯ್ದ ಮಾಟಮೆ ದಿಟಂ (ಶ್ರೀರಾಮಾ. ೧೮೨-೨೨೦). [ಸಂ.]

**ಚೌರ್ಯವ್ಯಸನಿ** (ನಾ). ಕಳ್ಳತನದ ಗೀಳು ಉಳ್ಳವನು : ಎಸದಿರೆಸದಿರು ಗೋಪ ಚೌರ್ಯವ್ಯಸನಿಯನು (ನಿಭಾಗ. ೪-೦೩-೧೪).
[ಸಂ. ಚೌರ್ಯವ್ಯಸನಿನ್]

**ಚೌಲ$_1$, ಚೌಳ**(ನಾ). ಷೋಡಶ ಸಂಸ್ಕಾರಗಳಲ್ಲಿ ಒಂದು; ಚೂಡಾಕರ್ಮ; ಜುಟ್ಟು ಬಿಡಿಸುವುದು; ಜಾವಳ : ಜಾತಕರ್ಮನಾಮಕರಣಾನ್ನಪ್ರಾಶನ ಚೌಲೋಪನಯನಾದಿ ಸಮುಚಿತಕ್ರಿಯೆಗಳಿಂ (ಸುಕುಮಾ. ೫-೫೦ ವ) : ಗರ್ಭಾಧಾನ . . . ಜಾತಕರ್ಮ ನಾಮಕರಣ ಅನ್ನಪ್ರಾಶನ ಚೌಲ . . . ಎಂಬ ಷೋಡಶಕರ್ಮಗಳೊಡನೆಯು (ವಿವೇಕ. ೫) ; ಚೌಲವಾದಾಗಲೇ . . . ಬ್ರಾಹ್ಮಣರೊಬ್ಬರು ಅಕ್ಷರಾಭ್ಯಾಸ ಮಾಡಿಸಿದರು (ಜಂಗಾಳ್ಕ. ೨). **ಚೌಳ :** ಮಂತ್ರತಂತ್ರಗಳಿಂದ ಚೌಳಮುಹೂರ್ತಮಂ ಬೆಳೆಯಿಸಿ (ಸೌಗಂಧಿ. ೧೫-೫). [ಸಂ.]

**ಚೌಲ$_2$** 'ಚವಲ$_3$' ನೋ.

**ಚೌಲ$_3$, ಚೌವಲ** (ನಾ). ಒಂದು ನಾಣ್ಯ; ಹಾಗ: ಪ್ರತಾಪಕೆ ಚೌಲ ನಾಲ್ಕುಂ ಸತತಂ ಚೌಲಕ್ಕೆ ನಾಲ್ಕು ಪಾಯಿಗಳಕ್ಕುಂ (ವ್ಯವಹಾ. ೫-೨೭ ಅನು. I) ; ಬೇಳೆ ಖಂಡಗದ ಹದಿನೈದು ಕೊಳಗವೊಬ್ಬಳಕ್ಕಂ ಗದ್ಯಾಣ ಏಳು ಚೌಲದುವಲ ಬೆಲ್ಲ ಸಾವಿರದೆಂಬತ್ತಕ್ಕಂ ಗದ್ಯಾಣ ಹತ್ತು (ಎಕ. XI. ಮೊಳಕಾ. ೩೦-೦೨ : 1336). **ಚೌವಲ:** ಆ ಮೂ[ವ]ತ್ತ ಟಿಗೊಳಗೆ ಇಪ್ಪತ್ತ ನಾಲ್ಕಕಂ ಅರುವಣ ಮತರಿಗೆ ಚೌವಲ ಶ್ರೀ ಮೂಲಸ್ತಾನದೇವರ್ಗ್ಗೆ [ಅನಿಗರದ] ಮತರು [೬] (ಸೌಇಇ. XI-1, ೬೮-೦೩ : 1033). [?]

**ಚೌಲಕರ್ಮ** (ನಾ).=ಚೌಲ$_1$. [ಚೌಲ$_1$ + ಕರ್ಮ]

**ಚೌಲಿ$_1$** 'ಚವರಿ' ನೋ.

**ಚೌಲಿ$_2$** 'ಚವಲ$_3$' ನೋ.

**ಚೌವಂಗುಲ, ಚವ್ವಂಗುಲ** (ನಾ). ನಾಲ್ಕು ಅಂಗುಲ; ನಾಲ್ಕು ಬೆರಳುಗಳ ಅಳತೆ : ಗಳಹತ್ತ ಡೊಕ್ಕರವ ತಡೆವ ಚೌವಂ [ಪಾಠಾಂ. ಚವ್ವಂ]ಗುಲ ದುವಂಗುಲಕೊಡೆಮುರಿವ ಪಟ್ಟಸಕೆ ಚಾಚುವ ಝಡಿತೆಗೊದಗುವ ಭಟರು ಹಣಗಿದರು (ಕುವ್ಯಾಸ. ೨-೯೭). **ಚವ್ವಂಗುಲ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಚೌ$_1$ + ಅಂಗುಲ]

**ಚೌವಂದ** (ನಾ). ನಾಲ್ಕು ಬಗೆ,-ತೆರ: ಸುಗ್ಗಿಯುಮಾ ತೆಂಗಾಳಿಯು ಮಿರ್ವರುಂ ಸಜ್ಜುವಂ ಪಡೆದು ಚೌವಂದದ ದಟಕಂ ಸೆಲವಿತ್ತೊಡ ಗೊಂಡು ಬರೆ (ಕಬ್ಬಿಗಕಾ. ೦೯೬). [ಚೌ$_1$ + ಅಂದ]

**ಚೌವಟ** 'ಚೌವಟ್ಟ' ನೋ.

**ಚೌವಟಂಬರಿ, ಚೌಪಟಂಬರಿ** (ಕ್ರಿ). ನಾಲ್ಕುದಿಕ್ಕುಗಳಲ್ಲಿಯೂ ಹರಡಿ: ಚಕೋರಿಗಳ ನಿರ್ಮಳ ಹರುಷ ಬೆಳೆಯಿತೋಯೆಂದೆಂಬ ಸಂದೇಹ ಕೊಳಗಾಗಿ ಚೌವ[ಪಾಠಾಂ. ಪ]ಟಂಬರಿದು ಪಸರಿಸಿತು ಬೆಳುದಿಂಗಳೆಲ್ಲಾ ದೆಸೆಯೊಳು (ಹಡಕಾ. ೩-೮೪). **ಚೌಪಟಂಬರಿ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಚೌವಟ (<ಚೌವಟ್ಟ) + ಪರಿ$_2$]

**ಚೌವಟಮಲ್ಲ, ಚವುಪಟಮಲ್ಲ, ಚೌಪಟಮಲ್ಲ** (ನಾ). ಮಹಾ ಪರಾಕ್ರಮಿ ; ಶ್ರೇಷ್ಠ ಭಟ ; ಅತಿಶಯದ ಯೋಧ : ತೋರಹತ್ತನೆಂಬ ಚೌವಟಮಲ್ಲನೆಂಬ ಮುಱಿವ ರಕ್ಕಸನೆಂಬ . . . ತನ್ನೊಡ್ಡಿನ ಪೇರಾನೆಗಳಂ ಕಂಡು ಕಡುಮುಳಿದು (ಕಬ್ಬಿಗಕಾ. ೨೮೬) ; ಕೆಲಬಲದ ಭಟರೆಲ್ಲರಿಗೆ ಕೈವೀಸಿ ಚೌವ [ಪಾಠಾಂ. ಪ] ಟಮಲ್ಲ ನುಡಿದನು (ಕುವ್ಯಾದ್ರೋ. ೨-೩೦). **ಚವುಪಟಮಲ್ಲ:** ನಿಲ್ಲುನಿಲ್ಲೆಂದೆನಲು ಚವು[ಪಾಠಾಂ. ಚೌ]ಪಟಮಲ್ಲನದ ಲೆಕ್ಕಿಸದೆ ಮುಂದಕ್ಕೆ ನಿಲ್ಲದಡಿಯಿಡೆ (ತೊರವೆ. ೫-೨-೯). **ಚೌಪಟಮಲ್ಲ :** ರಾಯ ಚೌಪಟಮಲ್ಲ ಮಲೆವರಿರಾಯಧೂಳಿಪಟ್ಟ . . . ಭೀಕರ ಭೀಮ ಕೊಂದನು ಕೌರವಾನುಜನ (ಕುವ್ಯಾಕ. ೧೯ ಸೂಚನೆ); ಸಮರ ಚೌಪಟಮಲ್ಲನಾಗಿ ನಿಲು ತಾಳೀಕಿಸುವ ಹರಿಯ ರೌದ್ರಮಂ ಕಾಣುತ (ಲಕಿಜಂ. ೪-೦೩).
[ಚೌವಟ (<ಚೌವಟ್ಟ) + ಮಲ್ಲ]

**ಚೌವಟ್ಟ$_1$, ಚವ್ವಟ, ಚೌಪಟ, ಚೌವಟ** (ನಾ). ನಾಲ್ಕು ರಸ್ತೆಗಳು ಕೂಡುವ ಜಾಗ; ಬೀದಿಯ ಚೌಕ: ನಗರಾಭ್ಯಂತರ ದೇವತಾಭವನದೊಳ್ ಚೌವಟ್ಟದೊಳ್ ಬೀದಿವೀದಿಗಳೊಳ್ . . . ನೀತಿಗೆಟ್ಟಾಡುವರ್ (ಸುಕುಮಾ. ೨-೭) : ಹರ್ಮ್ಯತಳಕ್ಕೆ ಪಾಯ್ದು ಚೌವಟ್ಟಮನೆಯ್ದಿ . . . ದಿಂಕಿಟ್ಟುದು ದುಂದುಭಿಸ್ವನಮನೇಳಿಸಿ ಭೋಂಕನೆ ಶಂಖನಿಸ್ವನಂ (ಶಂರಾಮಾ. ೫-೦೦೭) ; ಜನಮೆಲ್ಲಂ ನೋಡೆ ಚೌವಟ್ಟದ ಬಿಸುವುಡಿಯೊಳ್ ಬೀಟ್ಟು ಸಾವಂತುಟಾಯ್ತೇ(ಕಾವ್ಯಾವ. ೩೭೪); ಚತುಃಪಟ್ಟ – ಚೌವಟ್ಟ (ಶಮದ. ೨೯೦ ಪ್ರಯೋ). **ಚವ್ವಟ:** ಆ ಸಂಯಮಿ ಪೊಟಲೊಳ್ ಕೂಡೆ ತೊಟಲುತ್ತುಂ ಬಂದು ಬಟಲೊಂದು ಚವ್ವಟದ ಪುಣ್ಯಗೃಹದ ಭಿತ್ತಿಯೊತ್ತಂ ಸಾರ್ದು ಕಂಠಗತಪ್ರಾಣನಾಗಿರೆ (ಮಹಾನೀ. ೫-೦೨೦). **ಚೌಪಟ:** ಪಟುಗತಿಯ ಗರುವಾಯಿಯಲಿ ಸಂಘಟಿಸಿ ಹಯವನು ಸುಳಿಸಿದನು ಚೌಪಟದೊಳೊಯ್ಯಾರಿಸುತ ಬೋಳಯಿಸಿದನು ಕಂಧರವ (ಕುವ್ಯಾಭೀ. ೩-೩); ಭೂವಲ್ಲಭಂ ಮೆಲ್ಲೆಲ್ಲನೆ ಸಲ್ಲೀಲೆಯಿಂ ಮುಂಬರಿಯುತ್ತಿರೆ ಚೌಪಟ ಚೌಪಟದೊಳುಂ (ಮರಾಜ. ೫-೯೩). 'ಚರಣಚೌಪಟ' ಪರಾ. **ಚೌವಟ:** "ಚತುಷ್ಪಥದೊಳಂ ಸಲೆ ಚೌವಟಮೆಂದು ಭಾವಿಕುಂ" (ಕರ್ಣಾನಿ. ೧೨); "ಸಭೆ ದೇವಾಗಾರಂ ಚೌವಟ ಮೆಸೆದಿರ್ಪಾರವೆಯೆಂಬೆಡೆಗಳುಚಿತವೋ ಸಟಿಗೆ ಟಿಲ್ (ಲೋಕೋಪ. ೦೨-೫೩) ; ಪಲವುಂ ಮಂಟಪದಿಂ ದೇಗುಲದಿಂದಾ ಪಣ್ಯವೀಥಿಯಿಂ ಚೌವಟದಿಂ . . . ಕುಕ್ಕನೂರು ಚೆಲ್ವಂ ತಳೆಗುಂ (ಶಾಸಪ. ೮೨) ; ಪತಿಯ ಪರೋಕ್ಷದೊಳೊಪ್ಪುವ ಸತಿ ತಾಂ ಚೌವಟದ ಪಣ್ಣ ಮರದಂತಿರ್ಕುಂ (ಬಂಹರಿ. ೦೦-೨೯). [<ಸಂ. ಚತುಃಪಟ್ಟ]

**ಚೌವಟ್ಟ$_2$** (ನಾ). ಮಲ್ಲಯುದ್ಧದ ಒಂದು ಪರಸೆ: ಕತ್ತರಂ ಕರವಡಂ . . . ಮುಹಡಂ ಚೌವಟ್ಟ ಪಿಟ್ಟಾಳಸಂ ಎಂದು ಮಲ್ಲವಾತುಮಂ ನುಡಿದು (ಬಾಧಪು. ೦೭-೦೯). [?]

**ಚೌವಲ** 'ಚೌಲ$_3$' ನೋ.

**ಚೌವಳಿಗೆ** 'ಚೌಪಳಿಗೆ' ನೋ.

**ಚೌವಾಣ** (ನಾ). ಒಂದು ವಂಶದ ಹೆಸರು.

**ಚೌವಾಣ ಸಹಸ್ರಬಾಹು**=ಚೌವಾಣ ವಂಶಕ್ಕೆ ಕಾರ್ತವೀರ್ಯಾರ್ಜುನನಂತಿರುವವನು ; ಒಂದು ಬಿರುದು : ಶೌರ್ಯ್ಯನಾರಾಯಣಂ ರಾಯಮುಂನೀರ ಬಡವಾನಳಂ ಚೌವಾಣಸಹಸ್ರಬಾಹು ರಾಯಜಗಝಂಪಿ ಕೀರ್ತಿವಿದ್ಯಾಧರಂ . . . ಶ್ರೀಮತ್ಯೆ(ತ್ರೈ)ಲಪದೇವರ ವಿಜಯರಾಜ್ಯಂ (ಎಕ. VII, ಶಿಕಾರಿ. ೦೨೫-೭ ; 1019) ; (ಇಕ. V. ೦೫-೬ : 1019 ನೋ.).
[←ಹಿಂ. ಚೌಹಾನ ; ಮರಾ. ಚವ್ಹಾಣ]

**ಚೌವಿಧ** (ನಾ). ನಾಲ್ಕುವಿಧ,-ಬಗೆ: ಚೌವಿಧಂ, ಚತುರ್ವಿಧಂ (ಶಬ್ದಾನು. ೩೭೬ ಪ್ರಯೋ). [ಚೌ$_1$ + ವಿಧ]

**ಚೌವೀದಿ, ಚೌಬೀದಿ** (ನಾ). ೧. ನಾಲ್ಕು ಬೀದಿಗಳು ಕೂಡುವ ಎಡೆ ; ಚೌಕ : ಪೊನ್ನ ಕಲ್ಲ ನೆಲೆಯಲ್ಲಿಟ್ಟಲ್ಲಿ ಚೌವೀದಿಯೋಳ್ ತುಂಬುಂ ಚೆಲ್ವಿನ ವಿಗ್ರಹಂ ಮನವನೇನಿಟ್ಟಿಂತು ಸೋಲಿಕ್ಕುವೋ (ಮ್ಯಸೂಮು. ೪-೫). **ಚೌಬೀದಿ : ೨.** ನಾಲ್ಕು ರಸ್ತೆಗಳು ; ಚತುಷ್ಪಥ : ಉಸುರಲಳವೇ ಚೌಬೀದಿಯ ಶೃಂಗಾರದೆಸಕವನೇನೆಂಬೆನದನು (ಅನಂಜ. ೦೯-೪೮); ಪಡುವಣ ತೆಂಕಣ ಮೂಡಣ ಬಡಗಣ ಚೌಬೀದಿಗಳ್ವಿರಾಜಿಸಿ ತೋರ್ಕುಂ (ಹಾಲಾಸ್ಯ. ೦-೪-೭೩) ; ಆ ನೃಪಾಲಕರ ಗುಡಿವ್ರಜಮೆಲ್ಲ . . . ರಾಜಿಸುತಿರ್ದುದತಿ ವಿಚಿತ್ರತವೆತ್ತು ಚೌಬೀದಿಯೊಳ್ (ನವಮೋ. ೨೯-೩೭). [ಚೌ$_1$ + ಬೀದಿ]

**ಚೌವೀಶ** 'ಚೌವೀಸ' ನೋ.

**ಚೌವೀಸ, ಚವ್ವೀಶ, ಚೌವೀಶ** (ನಾ). ಇಪ್ಪತ್ತುನಾಲ್ಕು: ಚೌವೀಸ ತೀರ್ತ್ಥಕರ ಮಾಡಿಸಿ ಕೊಟರು (ಕೊಪ್ಪಶಾ. ೯; ಸು. 1500); ಮತ್ತೆ ಚೌವೀಸ ತೀರ್ಥಕರೆನುತಿ್ಹರು (ವೀಶ್ಚಪು. ೪-೭-೩೩); ವಿದಿತ ಚೌವೀಸಾಖ್ಯ ಗುರುಗಳು ಮೊದಲಿಗರು (ನಿಭಾಗ. ೧೧-೦೬-೩೭). **ಚವ್ವೀಶ:** ಚವ್ವೀಶ ತೀರ್ಥಕರ ನಾಮಪೂರ್ವಕಂ ಪ್ರದಕ್ಷಿಣಂಗೊಂಡು (ಪುಣ್ಯಾಸ್ರ. ೦-೯೮ ವ); ಚವ್ವೀಶ ಜಿನರೇಶ ಶರಣೆಮಗೆ (ಜಂಪ್ರಸಾಂ. ೨೮-೦೩೪). **ಚೌವೀಶ:** ಚೌವೀಶ ತೀರ್ತ್ಥಕರ ಮಾಡಿಸಿ ಕೊಟರು (ಕಇಅ. ೭೩-೧೦-೪ ; ಸು.12ನೆಯ ಶ).
[ <ಪ್ರಾ. ಚಉವೀಸ. / ಸಂ. ಚತುರ್ವಿಂಶತಿ ]

**ಚೌವು** 'ಚೆವು' ನೋ.

**ಚೌವೇದಿ** (ನಾ). ನಾಲ್ಕುವೇದಗಳನ್ನು ಅಭ್ಯಾಸಮಾಡಿದವನು ; ಚತುರ್ವೇದಿ: ಚತುರ್ವೇದಿ – ಚೌವೇದಿ (ಶಮದ. ೨೯೦ ಪ್ರಯೋ).
[ <ಸಂ. ಚತುರ್ವೇದಿನ್ ]

**ಚೌವೇದಿಭಟ್ಟ** (ನಾ). ಒಬ್ಬಾತನ ಹೆಸರು: ಧರೆ ನಕ್ಷತ್ರಮಾ ಮೇರು ನಿಲ್ವನ್ನೆಗ ನೋಡಾರಂಭಬ್ರಿಂದಂ ಒಸೆದು ತಣಿಯಲುಂ ತನ್ನ ಚೌವೇದಿಭಟ್ಟ (ಕಇಅ. ೭೮-೦೩-೦೩ ; 1088). [ ಚೌವೇದಿ + ಭಟ್ಟ ]

**ಚೌವೇರ** (ನಾ). ೧. ಚತುರ್ವೇದಗಳನ್ನು ಅಭ್ಯಾಸಮಾಡಿದವನು ; ಚತುರ್ವೇದಿ: ಪನ್ನಿಬ್ಬರ್ಗ್ ಚೌ[ವೇ]ರರುಮಂ ಪೆ[ಣ್ಣ][ರಂ]ಕವಿಲೆಯ ಮನಬಿದ ಮಹಾಪಾತಕಮಾದ[ನ್ರೈ] (ಸೌಇಇ. XI-I, ೪೦-೦೬ ; 965). ೨. ಒಂದು ವಂಶದ ಹೆಸರು: ಶ್ರೀಧರ ಚೌವೇರ ಪುತ್ರಸ್ಯ ಬಿಣವ್ಮದ್ವೇದಿ . . . ವತ್ಸಗೋತ್ರಃ ಮಾದ(ಧ)ವ ಚೌವೇರಗ್ರ್ಗಂ (ಇಆ. XVIII, ೩೬೭-೦೭; 8ನೆಯ ಶ); ಅವರೊಳ್ ಪೋತೆಯ ಚೌವೇರವೆಸರೊಳೆಸೆದಿಪ್ಪ್ಪ ಯಜ್ಞದೀಕ್ಷಿತರೆಸೆದರ್ (ಎಇ. XIII, ೪೩-೪೦ ; 1112).
[ <ಸಂ. ಚತುರ್ವೇದ ]

**ಚೌಶತ** (ನಾ). ನಾಲ್ಕು ನೂರು. [ ಚೌ$_1$ + ಶತ ]

**ಚೌಶೀತಿ** 'ಚೌರಶೀತಿ' ನೋ.

**ಚೌಷಷ್ಟಿ, ಚವುಷಷ್ಟಿ** (ನಾ). ಅರುವತ್ತುನಾಲ್ಕು: ಚತ್ತೀಸ ದೃಷ್ಟಿ ಚೌಷಷ್ಟಿ ಹಸ್ತಂಗಳಂ ಬಿತ್ತರಿಸುವುದು ಕೋಪೆನಿಕ್ಕು (ಮಂಗರಾ. ೨೩-೯); ಚೌಷಷ್ಟಿ ಯೋಗಿನಿಯರ್ಗೆ ಬಲಿಗೊಟ್ಟು (ಕೃಮಿಭಾ. ೩-೭೨). **ಚವುಷಷ್ಟಿ:** ಇಪ್ಪತ್ತೈದು ಗ್ರಾಮಂಗಳು ಚವುಷಷ್ಟಿ[ಪಾಠಾಂ. ಚೌಷಷ್ಟಿ] ಪಟ್ಟಣ ಚಪ್ಪನ್ನ ವೀಥಿಗಳ ದಾಂಟಿ (ಅವಜಂ. ೬೧-೨೬೭).
[<ಪ್ರಾ. ಚಉಸಟ್ಠಿ. / ಸಂ. ಚತುಷ್ಷಷ್ಟಿ ]

**ಚೌಷಷ್ಟಿಕಲೆ, ಚೌಷಷ್ಟಿಕಳೆ** (ನಾ). ಅರುವತ್ತುನಾಲ್ಕು ಕುಶಲವಿದ್ಯೆಗಳು,-ಕಲೆಗಳು ; **P** " (ಅ) ವಾತ್ಸ್ಯಾಯನ ಕಾಮಸೂತ್ರದಲ್ಲಿ: ಗೀತ (ಹಾಡುಗಾರಿಕೆ), ವಾದ್ಯ (ವಾದ್ಯಗಳನ್ನು ನುಡಿಸುವುದು), ನೃತ್ಯ (ನರ್ತಿಸುವುದು), ಆಲೇಖ್ಯ (ಚಿತ್ರಗಳನ್ನು ರಚಿಸುವುದು), ವಿಶೇಷಕಚ್ಛೇದ್ಯ (ಹಣೆಯ ಮೇಲೆ ತೊಡಲು ಆಗುವಂತೆ ವಿಧವಿಧಾಕೃತಿಗಳಲ್ಲಿ ಎಲೆಬಿಡಿಸುವುದು), ತಂಡುಲ ಕುಸುಮ ಬಲಿವಿಕಾರ (ಪೂಜೆಗಾಗಿ ಅಕ್ಕಿ ಮತ್ತು ಹೂಗಳನ್ನು ಬಗೆಬಗೆಯಾಗಿ ಜೋಡಿಸುವುದು), ಪುಷ್ಪಾಸ್ತರಣ (ಮನೆಯನ್ನೋ ಕೊಠಡಿಯನ್ನೋ ಹೂಗಳಿಂದ ಮುಚ್ಚುವುದು ಅಥವಾ ಅಲಂಕರಿಸುವುದು), ದಶನ ವಸನಾಂಗರಾಗ (ಹಲ್ಲುಗಳಿಗೂ, ಬಟ್ಟೆಗಳಿಗೂ ಮತ್ತು ಶರೀರಕ್ಕೂ ಬಣ್ಣಗಳನ್ನು ಹಚ್ಚುವುದು), ಮಣಿಭೂಮಿಕಾಕರ್ಮ (ರತ್ನ ಜಡಿತವಾದ ನೆಲೆಗಟ್ಟು ಮಾಡುವುದು ; ಮೊಸಾಯಿಕ್ ಕೆಲಸ. 'ಗೊಂಬೆಗಳನ್ನು ಮಾಡಂವುದು' ಎಂದೂ ಅರ್ಥೈಸಿದ್ದಾರೆ.), ಶಯನರಚನ (ಹಾಸಿಗೆಗಳನ್ನು ಮಾಡುವುದು), ಉದಕವಾದ್ಯ (ಮುರಜ ಮೊದಲಾದುದರ ದನಿಯಾಗುವಂತೆ ನೀರಿನ ಮೇಲೆ ಬಾಜಿಸುವುದು), ಉದಕಾಘಾತ (ಜಲಕ್ರೀಡೆಯಲ್ಲಿ-ನೀರನ್ನು ಬೊಗಸೆಗಳಲ್ಲಿ ತುಂಬಿ ಇತರರ ಮೇಲೆ ಬಲವಾಗಿ ಸೂಸುವುದು), ಚಿತ್ರಾಯೋಗ (ಮದ್ದು ಮಂಲಿಗೆಗಳಿಂದ, ಔಷಧಿಗಳಿಂದ, ಮಂತ್ರಗಳಿಂದ ಬೇರೆಯವರು ಕೃಶಕಾಯರೂ, ಅಕಾಲಿಕವಾಗಿ ತಲೆ ನರೆತವರೂ, ಹುಚ್ಚರೂ ಮುಂತಾಗಿ ಆಗುವಂತೆ ಮಾಡುವುದು.), ಮಾಲ್ಯಗ್ರಥನ ವಿಕಲ್ಪ (ಹಲವು ರೀತಿಗಳಲ್ಲಿ ಪುಷ್ಪಹಾರಗಳನ್ನು ಕಟ್ಟುವುದು), ಶೇಖರಕಾಪೀಡಯೋಜನ (ಶೇಖರಕಗಳನ್ನೂ ಆಪೀಡಕಗಳನ್ನೂ ಧರಿಸುವುದು-ಉಚಿತವಾದ ಸ್ಥಳಗಳಲ್ಲಿ ಶಿರೋಭೂಷಣವಾಗಿ ತೊಡುವ ಎರಡು ಆಭರಣಗಳು), ನೇಪಥ್ಯ ಪ್ರಯೋಗ (ತಾನು ವಸ್ತ್ರಾಲಂಕಾರ ಮಾಡಿಕೊಳ್ಳುವುದು ಅಥವಾ ಇತರರಿಗೆ ಮಾಡುವುದು), ಕರ್ಣಪತ್ರಭಂಗ (ದಂತ ಮೊದಲಾದುವುಗಳಿಂದ – ಕರ್ಣಾಭರಣಗಳನ್ನು ಮಾಡುವುದು), ಗಂಧಯುಕ್ತಿ (ಪರಿಮಳ ದ್ರವ್ಯಗಳ ತಯಾರಿಕೆ), ಭೂಷಣಯೋಜನ (ಆಭರಣಗಳನ್ನು ಮಾಡುವುದು), ಐಂದ್ರಜಾಲಾಯೋಗ (ಇಂದ್ರಜಾಲದ ವಿಧಾನಗಳು ಎಂದರೆ ಭ್ರಮಾಸೃಷ್ಟಿಯನ್ನು ನಿರ್ಮಿಸುವುದು-ದೇವತೆಗಳು, ಸರ್ಪಗಳು, ಸೈನ್ಯಗಳು ಇತ್ಯಾದಿ.), ಕೌಚುಮಾರಯೋಗ (ಕುಚುಮಾರನ ಚಿಕಿತ್ಸಾನಿರ್ದೇಶನ -ದೃಢದೇಹಿಯೂ, ವೀರ್ಯವಂತನೂ ಆಗಲು ಸಾಧ್ಯವಾಗುವಂತೆ), ಹಸ್ತಲಾಘವ (ಎಲ್ಲ ಕೆಲಸಗಳಲ್ಲಿಯೂ ಕೈಗಳ ಎಂದರೆ ಹಸ್ತದ ಚುರುಕು ; 'ವ್ಯಕ್ತಿಗಳೆದುರಿನಲ್ಲಿಯೇ ಪದಾರ್ಥಗಳನ್ನು ಕದಿಯುವುದು' ಎಂದೂ ಅರ್ಥೈಸಿದ್ದಾರೆ.), ವಿಚಿತ್ರಶಾಕಯೂಷ-ಭಕ್ಷ್ಯ ವಿಕಾರಕ್ರಿಯಾ (ಬಗೆಬಗೆಯ ಕಾಯಿಪಲ್ಯದ ತಯಾರಿಕೆಯನ್ನೂ, ಸಾರು, ಹುಳಿ ಇತ್ಯಾದಿಗಳನ್ನೂ, ಭಕ್ಷ್ಯಗಳನ್ನೂ ತಯಾರಿಸುವುದು.), ಪಾನಕರಸರಾಗಾಸವಯೋಜನ (ಪಾನಕ, ರಸ ಮೊದಲಾದ ಬಗೆಬಗೆಯ ಪೇಯಗಳನ್ನು ಸಿದ್ಧಮಾಡುವುದು), ಸೂಚೀವಾನ ಕರ್ಮಗಳು (ಹೊಲಿಯುವುದು, ನೇಯುವುದು, ಕಸೂತಿ ಹಾಕುವುದು, ಮಂಡಿಕೆ ಮಾಡುವುದು.), ಸೂತ್ರಕ್ರೀಡಾ (ದಾರಗಳಿಂದ ಆಡುವುದು ಎಂದರೆ ಬೆರಳುಗಳಲ್ಲಿ ದಾರವೊಂದನ್ನು ಹಿಡಿಯುವುದು ಮತ್ತು ಅದು ಮನೆ ದೇವಾಲಯ ಇತ್ಯಾದಿಗಳ ಸ್ಥೂಲರೇಖೆಯನ್ನು ತಳೆಯುವಂತೆ ಮಾಡುವುದು ; 'ದಾರಗಳನ್ನೆಳೆಯುವುದರಿಂದ ಆಕೃತಿಗಳು ಚಲಿಸುವಂತೆ ಮಾಡುವುದು' ಎಂದೂ ಅರ್ಥೈಸಿದ್ದಾರೆ.), ವೀಣಾಡಮರುಕ ವಾದ್ಯಗಳು (ವೀಣೆ, ಡಮರುಕ, ಮತ್ತಿತರ ವಾದ್ಯಗಳನ್ನು ನುಡಿಸುವುದು), ಪ್ರಹೇಲಿಕಾ (ಒಗಟುಗಳು), ಪ್ರತಿಮಾಲಾ (ಒಂದು ಆಟ ; ಒಬ್ಬನು ಒಂದು ಶ್ಲೋಕವನ್ನು ಹೇಳುತ್ತಾನೆ. ಇನ್ನೊಬ್ಬನು ಅದರ ಅಂತ್ಯಾಕ್ಷರದಿಂದ ಮೊದಲುಮಾಡಿ ಇನ್ನೊಂದು ಶ್ಲೋಕವನ್ನು ಹೇಳುತ್ತಾನೆ. ಹೀಗೆಯೇ ಮುಂದುವರಿಯುತ್ತದೆ. ಇದನ್ನು 'ಅಂತ್ಯಾಕ್ಷರಿ' ಎನ್ನುತ್ತಾರೆ.), ದುರ್ವಾಚಕ ಯೋಗ (ಇನ್ನೊಂದು ಆಟ; ಪ್ರತಿಯೊಬ್ಬ ಸ್ಪರ್ಧಿಯೂ ಪರುಷಾಕ್ಷರ ಘಟಿತವಾದ ಶ್ಲೋಕಗಳನ್ನು ಹೇಳುವುದು.), ಪುಸ್ತಕವಾಚನ (ಪುಸ್ತಕಗಳನ್ನು ಓದುವುದು), ನಾಟಕಾಖ್ಯಾಯಿಕಾದರ್ಶನ (ನಾಟಕಗಳು ಮತ್ತು ಆಖ್ಯಾಯಿಕೆಗಳ ಜ್ಞಾನ), ಕಾವ್ಯಸಮಸ್ಯಾಪೂರಣ (ಕವಿತೆಯ ರಚನೆ ; ಶ್ಲೋಕದ ಕೊನೆಯ ಪಾದವು ಮೊದಲೇ ಕೊಡಲಾಗಿದ್ದು ಅದರ ಮೊದಲ ಮೂರು ಪಾದಗಳನ್ನು-ನಾಲ್ಕು ಪಾದಗಳೂ ಕೂಡಿ ಸಮಂಜಸ ಅರ್ಥ ಬರುವಂತೆ-ಆಮೇಲೆ ಸೇರಿಸುವುದು.), ಪಟ್ಟಿಕಾ ವೇತ್ರವಾನವಿಕಲ್ಪ (ಬೆತ್ತ ಮತ್ತು ಬಿದಿರುಗಳಿಂದ-ಮಂಚಗಳು ಆಸನಗಳು ಮೊದಲಾದ-ಬೇರೆ ಬೇರೆ ವಸ್ತುಗಳನ್ನು ಮಾಡು

ವುದು.), ತಕ್ಷಕರ್ಮಗಳು (ಕೆತ್ತನೆಕೆಲಸ. ಎಂದರೆ ಚಿನ್ನ, ಉಕ್ಕು, ಮರ ಮೊದಲಾದುವುಗಳಲ್ಲಿ ಕೆಲಸಮಾಡುವುದು.),ತಕ್ಷಣ(ಬಡಗಿಯ ಕೆಲಸ ಅಥವಾ ಮರಗೆಲಸ), ವಾಸ್ತುವಿದ್ಯಾ (ಗೃಹನಿರ್ಮಾಣ ವಿಜ್ಞಾನ ; ಮನೆಗಳನ್ನು ಹೇಗೆ ಕಟ್ಟಬೇಕು, ಎಂಥ ಭೂಮಿಯ ಮೇಲೆ ಕಟ್ಟಬೇಕು, ಎಂಥ ಪದಾರ್ಥಗಳನ್ನು ಬಳಸಬೇಕು ಇತ್ಯಾದಿ), ರೂಪ್ಯರತ್ನಪರೀಕ್ಷಾ (ನಾಣ್ಯಗಳು ಮತ್ತು ರತ್ನಗಳ ಪರೀಕ್ಷೆ), ಧಾತುವಾದ (ಧಾತುಗಳ ಎಂದರೆ ಖನಿಜಗಳ ಮಿಶ್ರಣ, ಶುದ್ಧೀಕರಣ, ಇತ್ಯಾದಿ), ಮಣಿರಾಗಾಕರಜ್ಞಾನ (ಹರಳುಗಳು ಮತ್ತು ರತ್ನಗಳಿಗೆ ಬಣ್ಣಹಾಕುವ ವಿಧಾನಗಳ ತಿಳಿವಳಿಕೆ ಮತ್ತು ಗಣಿಗಳ ಸ್ಥಲಪರಿಜ್ಞಾನ ಮತ್ತು ಕಾರ್ಯಪರಿಜ್ಞಾನ.), ವೃಕ್ಷಾಯುರ್ವೇದಯೋಗ(ಸಸ್ಯಗಳಿಗೆ ಔಷಧಿಗಳು ಎಂದರೆ ಮರಗಳು ಮತ್ತು ಇತರ ಗಿಡಗಳು ರೋಗ ರುಜಿನವಿಲ್ಲದೆ ಸೊಂಪಾಗಿರುವಂತೆಯೂ, ವಿಶೇಷ ಚಿಕ್ಕದಾಗಿ ಅಥವಾ ಎತ್ತರವಾಗಿ ಮಾಡಲು ಸಾಧ್ಯವಾಗುವಂತೆಯೂ, ಉಪಯುಕ್ತವಾಗುವ ವಿಧಾನಗಳ ತಿಳಿವಳಿಕೆ.), ಮೇಷಕುಕ್ಕುಟಲಾವಕ ಯುದ್ಧ ವಿಧಿ (ಟಗರು, ಹುಂಜ ಮತ್ತು ಲಾವಗೆಗಳು ಯುದ್ಧ ಮಾಡುವಂತೆ ಮಾಡುವುದು), ಶುಕ ಸಾರಿಕಾ ಪ್ರಲಾಪನ (ಗಂಡು ಮತ್ತು ಹೆಣ್ಣು ಗಿಳಿಗಳು ಮಾತುಗಳನ್ನು ಆಡುವಂತೆ ಕಲಿಸುವುದು), ಉತ್ಸಾದನ–ಸಂವಾಹನ–ಕೇಶಮರ್ದನದಲ್ಲಿ ಕೌಶಲ (ಹಸ್ತಪಾದಗಳಿಂದ ತಲೆ ಮತ್ತು ಶರೀರವನ್ನು ತಿಕ್ಕುವ ಎಂದರೆ ಮರ್ದಿಸುವ ಕೌಶಲ), ಅಕ್ಷರ ಮುಷ್ಟಿಕಾಕಥನ (ಅಕ್ಷರ ಶ್ರೇಣಿಗಳಿಂದ ಅರ್ಥವನ್ನರಿಯುವುದು. ಉದಾ : ‘ ಮೇವೃಮಿಕಸಿಂಕತುವೃಧಮಕುಂಮೀ ’ –ಎಂಬ ಅಕ್ಷರಶ್ರೇಣಿ ಮೇಷ ವೃಷಭಾದಿ ದ್ವಾದಶ ಮಾಸಗಳನ್ನು ಸೂಚಿಸುತ್ತವೆ.), ಮ್ಲೇಚ್ಛಿತವಿಕಲ್ಪ (ಗೂಢಲಿಪಿ ಭಾಷಾಭೇದಗಳು ಎಂದರೆ ಉದ್ದಿಷ್ಟ ವ್ಯಕ್ತಿಗಲ್ಲದೆ ಅನ್ಯರಾರಿಗೂ ತಿಳಿಯಲಾಗದ ಭಾಷೆಗಳು.), ದೇಶಭಾಷಾವಿಜ್ಞಾನ (ನಿಖಿಲ ದೇಶೀಯ ಭಾಷಾ ಪಾಂಡಿತ್ಯ), ಪುಷ್ಪಶಕಟಿಕಾ (ಪುಷ್ಪಗಳ ಗಾಡಿ ಎಂದರೆ ಪ್ರೇಮ ಪತ್ರಗಳನ್ನು ಇಟ್ಟು ಕಳುಹಿಸಲು– ಪುಷ್ಪಗಳಿಂದ ಗಾಡಿಗಳು, ಕುದುರೆಗಳು, ಆನೆಗಳು, ಪಲ್ಲಕ್ಕಿಗಳು ಇತ್ಯಾದಿಗಳನ್ನು ಮಾಡುವುದು.), ನಿಮಿತ್ತಜ್ಞಾನ (ಶುಭ ಮತ್ತು ಅಶುಭ ಶಕುನಗಳ ಜ್ಞಾನ), ಯಂತ್ರ ಮಾತೃಕಾ (ಸಂಚಾರಕಾರ್ಯಕ್ಕಾಗಿ, ಜಲ ಮತ್ತು ಯುದ್ಧೋದ್ಯೋಗಗಳಿಗಾಗಿ ಯಂತ್ರನಿರ್ಮಾಣ ಮಾಡುವುದು.), ಧಾರಣ ಮಾತೃಕಾ (ವಿಷಯಗಳನ್ನು ನೆನಪಿಟ್ಟುಕೊಳ್ಳುವ ವಿದ್ಯೆ. ‘ಕೈಗಳಲ್ಲಿ ವಸ್ತ್ರ ಮತ್ತು ಇತರ ಪದಾರ್ಥಗಳನ್ನು ಹಿಡಿದುಕೊಳ್ಳುವುದು’ ಎಂದೂ ಅರ್ಥೈಸಿದ್ದಾರೆ.), ಸಂಪಾಠ್ಯ (ಒಂದು ಕ್ರೀಡೆ. ಒಬ್ಬನು ಒಂದು ಶ್ಲೋಕವನ್ನು ಹೇಳುತ್ತಾನೆ. ಅದು ಇನ್ನೊಬ್ಬನಿಗೆ ಅಪರಿಚಿತವಾದದ್ದು. ಆದರೂ ಆತನು ಅದನ್ನು ಮತ್ತೊಮ್ಮೆ ಯಥಾರೀತಿ ಹೇಳಿ ಒಪ್ಪಿಸಬೇಕು.), ಮಾನಸೀ (ಇನ್ನೊಂದುಕ್ರೀಡೆ ; ಅನುಸ್ವಾರ ಮತ್ತು ವಿಸರ್ಗಗಳನ್ನು ಯಥಾವತ್ತಾಗಿ ಬರೆದು, ಉಳಿದ ಅಕ್ಷರಗಳೆಡೆಯಲ್ಲಿ ಕೇವಲ ಅವುಗಳ ತಲೆಕೊಟ್ಟು ಕೊಂಬು ಇತ್ಯಾದಿ ಚಿಹ್ನೆಗಳನ್ನು ತೋರಿಸಿ, ಒಬ್ಬನು ಒಂದು ಶ್ಲೋಕವನ್ನು ಬರೆಯುತ್ತಾನೆ. ಇನ್ನೊಬ್ಬ ಆಟಗಾರ ಆ ಚಿಹ್ನೆಗಳಿರುವೆಡೆಯಲ್ಲಿ ಉಚಿತವಾದ ಅಕ್ಷರಗಳನ್ನು ಪೂರ್ತಿಯಾಗಿಬರೆಯಬೇಕು.),ಕಾವ್ಯಕ್ರಿಯಾ(ಕಾವ್ಯರಚನೆ), ಅಭಿಧಾನಕೋಶಛಂದೋವಿಜ್ಞಾನ (ಶಬ್ದಕೋಶ ಮತ್ತು ಛಂದಶ್ಶಾಸ್ತ್ರಗಳ ಜ್ಞಾನ), ಕ್ರಿಯಾಕಲ್ಪ (‘ಕಾವ್ಯ’ ಮತ್ತು ‘ಅಲಂಕಾರ’), ಛಲಿತಕಯೋಗಗಳು (ವಂಚನೆಯ ವಿಧಾನ ಎಂದರೆ ವ್ಯಕ್ತಿಯ ಆಕೃತಿ ಮತ್ತು ಸ್ವರವನ್ನು ಗುರುತು ಹಿಡಿಯಲಾಗದಂತೆ, ಅಥವಾ ಗುರುತಿಸಲಾಗದೆ ಮತ್ತೊಬ್ಬನ ಕಡೆಗೆ ಮುಂದುವರಿಯುವಂತೆ ಮರೆಮಾಡಿಬಿಡುವುದು.), ವಸ್ತ್ರಗೋಪನ (ವಸ್ತ್ರಗಳ ಗೋಪನ ; ವಸ್ತ್ರಗಳನ್ನು ತೊಡುವುದರಲ್ಲಿ ಭ್ರಮೋತ್ಪಾದನೆ ; ತುಂಡುಬಟ್ಟೆಯನ್ನು ತೊಟ್ಟರೂ ತುಂಡುಬಟ್ಟೆಯೆಂದು ಕಾಣದಂತೆ ಮಾಡುವುದು ಇತ್ಯಾದಿ.), ದ್ಯೂತವಿಶೇಷ (ದ್ಯೂತದ ಹಲವು ವಿಧಗಳು; ದುರ್ಯೋದರಾದಿ ಕಪಟಕಲಾ ಪ್ರೌಢತ್ವ.), ಆಕರ್ಷಕ್ರೀಡಾ (ಪಗಡೆಯಿಂದಾಡುವ ಒಂದು ದ್ಯೂತವಿಶೇಷ.), ಬಾಲಕ್ರೀಡೆಗಳು (ಮಕ್ಕಳಿಗಾಗಿ ಆಟಗಳು ; ಚೆಂಡುಗಳು ಗೊಂಬೆ ಇತ್ಯಾದಿಗಳ ಆಟ.), ವೈನಯಿಕೀಯ ವಿದ್ಯೆಗಳ ಜ್ಞಾನ (ವ್ಯಕ್ತಿಯನ್ನು ವಿದ್ಯಾವಂತನನ್ನಾಗಿ ಮಾಡುವ ವಿಜ್ಞಾನ ವಿಷಯಗಳ ಮತ್ತು ಕಲೆಗಳ ತಿಳಿವಳಿಕೆ.), ವೈಜಯಿಕೀಯ ವಿದ್ಯೆಗಳ ಜ್ಞಾನ (ಜಯವನ್ನು ಗಳಿಸಿಕೊಡುವ ವಿದ್ಯೆಗಳ ತಿಳಿವಳಿಕೆ.), ವ್ಯಾಯಾಮಿಕೀಯ ವಿದ್ಯೆಗಳ ಜ್ಞಾನ(ವ್ಯಾಯಾಮ ಅಥವಾ ಅಂಗಸಾಧನೆಯ ವಿದ್ಯೆಗಳ ತಿಳಿವಳಿಕೆ.) (ವಾತ್ಸ್ಯಾಯನಕೃತ ಕಾಮಸೂತ್ರ ಪು.೩೨,೩೩ ಮತ್ತುಯಶೋಧರಕೃತ ಜಯಮಂಗಲಾ ವ್ಯಾಖ್ಯಾನದ ವಿವರಣೆ–ದಿ ಕಲಾಸ್, ಎ.ವೆಂಕಟಸುಬ್ಬಯ್ಯ; ಶ್ರೀಧರ ಸ್ವಾಮಿಗಳ ಭಾಗವತ ಟೀಕೆ ೧೦–೪೫–೩೬; ಶಕದ್ರು. II – ೫೮.). (ಆ)ಯಶೋಧರನ ವಾತ್ಸ್ಯಾಯನ ಕಾಮಸೂತ್ರದ ಜಯಮಂಗಲಾ ವ್ಯಾಖ್ಯಾನದಲ್ಲಿ : ಗೀತ (ಹಾಡುವುದು), ನೃತ್ಯ (ನರ್ತಿಸುವುದು), ವಾದ್ಯ (ವಾದ್ಯಗಳನ್ನು ನುಡಿಸುವುದು), ಲಿಪಿಜ್ಞಾನ (ಲೇಖನ ಮತ್ತು ಅಕ್ಷರಗಳನ್ನು ಕೊರೆಯುವ ವಿದ್ಯೆ), ವಚನೌದಾರ್ಯ (ಉದಾರತೆಯುಳ್ಳ ಮಾತು), ಚಿತ್ರವಿಧಿ (ವಿವಿಧಾಕೃತಿಗಳಲ್ಲಿ ರೂಪಿಸಬಹುದಾದ ಪದ್ಯರಚನೆ ಅಥವಾ ಚಿತ್ರಕಲೆ), ಪುಸ್ತಕರ್ಮ (ವಸ್ತ್ರದ ಮೇಲೆ ಚಿತ್ರಕಾರ್ಯ ಮಾಡುವುದು), ಪತ್ರಚ್ಛೇದ್ಯ (ವಿವಿಧಾಕಾರಗಳಲ್ಲಿ ಎಲೆ ಬಿಡಿಸುವುದು), ಮಾಲ್ಯವಿಧಿ (ಹಾರ, ತುರಾಯಿ ಮೊದಲಾದವನ್ನು ಮಾಡುವ ಕಲೆ), ಆಸ್ವಾದ್ಯ ವಿಧಾನ (ಭೋಜ್ಯ ಪದಾರ್ಥಗಳನ್ನುಮಾಡುವ ಕಲೆ ಎಂದರೆ ಸೂಪಶಾಸ್ತ್ರ),ರತ್ನಪರೀಕ್ಷಾ (ರತ್ನಗಳ ಪರೀಕ್ಷೆ), ಸೀವ್ಯ (ಬಟ್ಟೆ ಹೊಲೆಯುವುದು), ರಂಗ ಪರಿಜ್ಞಾನ (ರಂಗಭೂಮಿಯ ತಿಳಿವಳಿಕೆ), ಉಪಕರಣಕ್ರಿಯಾ (ಯಂತ್ರಗಳು, ಯಂತ್ರೋಪಕರಣಗಳು ಇತ್ಯಾದಿಗಳ ತಯಾರಿಕೆ), ಮಾನವಿಧಿ (ಅಳತೆ ಮಾಡುವುದು ; ಯಾನವಿಧಿ–ಎಂದರೆ ಪಯಣಿಸುವುದು ಎಂಬರ್ಥವಿರುವ ಪಾಠಭೇದವೂ ಉಂಟು.),ಆಜೀವಜ್ಞಾನ (ಉಪಜೀವಿಕೆಯ ಎಂದರೆ ಜೀವನೋಪಾಯದ ತಿಳಿವಳಿಕೆ), ತಿರ್ಯಗ್ಯೋನಿಚಿಕಿತ್ಸಿತ (ಪಶುವೈದ್ಯ), ಮಾಯಾಕೃತ ಪಾಷಂಡಸಮಯ ಜ್ಞಾನ (ಮಾಯೆಯಿಂದ ಕೃತವಾದ ಪಾಷಂಡ ಸಮಯಗಳ ಜ್ಞಾನ), ಕ್ರೀಡಾ ಕೌಶಲ (ಆಟಗಳು, ಸ್ಪರ್ಧೆಗಳಲ್ಲಿ ನೈಪುಣ್ಯ), ಲೋಕಜ್ಞಾನ (ಪ್ರಪಂಚಜ್ಞಾನ), ವೈಚಕ್ಷಣ್ಯ (ವಿಚಕ್ಷಣತೆ), ಸಂವಾಹನ (ಅಂಗ ಮರ್ದನ), ಶರೀರ ಸಂಸ್ಕಾರ (ಶರೀರವನ್ನು ಸಂಸ್ಕರಿಸಿಕೊಳ್ಳುವುದು ಎಂದರೆ ವಸ್ತ್ರವಿಭೂಷಣಾದಿಗಳಿಂದ ಅನುಲೇಪನಾದಿಗಳಿಂದ ಎಂದರ್ಥ), ವಿಶೇಷಕೌಶಲ(ವಿಶೇಷ ಕಲೆಗಳಲ್ಲಿ ಪ್ರೌಢಿಮೆ), ಆಯುಃಪ್ರಾಪ್ತಿ, ಅಕ್ಷವಿಧಾನ, ರೂಪಸಂಖ್ಯಾ, ಕ್ರಿಯಾಮಾರ್ಗ, ಬೀಜಗ್ರಹಣ, ನಯ ಜ್ಞಾನ, ಕರಣಾದಾನ, ಚಿತ್ರಾ ಚಿತ್ರವಿಧಿ,ಗೂಢರಾಶಿ, ತುಲ್ಯಾಭಿಹಾರ, ಕ್ಷಿಪ್ರಗ್ರಹಣ, ಅನುಪ್ರಾಪ್ತಿಲೇಖಾಸ್ಮೃತಿ, ಅಗ್ನಿಕ್ರಮ, ಛಲವ್ಯಾಮೋಹನ, ಗ್ರಹದಾನ (ಪಗಡೆ ಕವಡೆ ಮೊದಲಾದವುಗಳಿಂದ ಆಡುವ ದ್ಯೂತವಿಶೇಷಗಳು), ಉಪಸ್ಥಾನವಿಧಿ (ಹುಂಜ ಇತ್ಯಾದಿಗಳನ್ನು ನಿಲ್ಲುವಂತೆ ಮಾಡುವುದು) ಯುದ್ಧ (ಅವುಗಳನ್ನು ಕಾಳಗವಾಡುವಂತೆ ಮಾಡುವುದು), ರುತ (ಅವುಗಳ ಕೂಗು),

ಗತ (ಕುದುರೆ ಮೊದಲಾದವು ಓಡುವಂತೆ ಮಾಡುವುದು), ನೃತ್ತ (ಹುಂಜ ಮೊದಲಾದವು ನರ್ತಿಸುವಂತೆ ಮಾಡುವುದು), ಪುರುಷನ ಭಾವಗ್ರಹಣ (ಪುರುಷನ ಪ್ರೀತಿಭಾವವನ್ನು ಕಂಡುಕೊಳ್ಳುವ ಕಲೆ), ಸ್ವರಾಗ ಪ್ರಕಾಶನ (ಪ್ರಿಯವ್ಯಕ್ತಿಯಲ್ಲಿ ಸ್ವರಾಗವನ್ನು ಪ್ರಕಾಶ ಪಡಿಸುವುದು), ಪ್ರತ್ಯಂಗದಾನ (—), ನಖದಂತ ವಿಚಾರ (—), ನೀವೀಸ್ರಂಸನ (—), ಗುಹ್ಯ ಸಂಸ್ಪರ್ಶನ ಅನುಲೋಮ್ಯ (—), ಪರಮಾರ್ಥಕೌಶಲ (—), ಹರ್ಷಣ (—), ಸಮಾನಾರ್ಥತೆ-ಕೃತಾರ್ಥತೆ (—), ಅನುಪ್ರೋತ್ಸಾಹನ (—), ಮೃದುಕ್ರೋಧ ಪ್ರವರ್ತನ (ಅಲ್ಪವಾಗಿ ಕೋಪವನ್ನು ಉಂಟುಮಾಡುವುದು), ಸಮ್ಯಕ್‌ಕ್ರೋಧ ನಿವರ್ತನ (ಕೋಪವನ್ನು ಪೂರ್ತಿಯಾಗಿ ನಿವರ್ತಿಸುವುದು), ಕ್ರುದ್ಧಪ್ರಸಾದನ (ಕೋಪಿಷ್ಠನನ್ನು ಸಮಾಧಾನ ಪಡಿಸುವುದು ಮತ್ತು ಅವನ ಕ್ಷಮೆಯನ್ನು ಪಡೆಯುವುದು), ಸಂಪ್ರಾಪ್ತಪರಿತ್ಯಾಗ (—), ಚರಮಸ್ವಾಪವಿಧಿ (—), ಗುಹ್ಯಗೂಹನ (—), ಸಾಶ್ರುಪಾತವಾಗಿ ರಮಣನೆದುರಿನಲ್ಲಿ ಶಾಪನ (ಅಶ್ರುಪಾತ ಪೂರ್ವಕವಾಗಿ ಪ್ರಿಯವ್ಯಕ್ತಿಯೆದುರಿನಲ್ಲಿ ಶಪಥ ಮಾಡುವುದು), ಸ್ವಶಪಥಕ್ರಿಯಾ (ತನ್ನ ಮೇಲೆಯೇ ಶಪಥ ಮಾಡಿಕೊಳ್ಳುವುದು), ಪ್ರಸ್ಥಿತಾನುಗಮನ (ಅಗಲಿದ ಪ್ರಿಯವ್ಯಕ್ತಿಯನ್ನು ಹಿಂಬಾಲಿಸುವುದು), ಪುನಃಪುನರ್ನಿರೀಕ್ಷಣ (ಪ್ರಿಯವ್ಯಕ್ತಿಯನ್ನು ಮೇಲಿಂದ ಮೇಲೆ ನೋಡುವುದು). (ದಿ ಕಲಾಸ್. ಪು.೪೧-೪೪). (೩)ವಿದರ್ಭ ರಾಜನ ಚಂಪೂರಾಮಾಯಣವನ್ನು ಮುಂದುವರಿಸಿದ ಲಕ್ಷ್ಮಣ ಕವಿಯ ಮೊದಲ ಪದ್ಯವನ್ನು ವ್ಯಾಖ್ಯಾನಿಸುತ್ತ ರಾಮಚಂದ್ರನು ಹೇಳಿರುವುದು :–ಇತಿಹಾಸಾಗಮಾದಿಗಳು (ಇತಿಹಾಸ, ವೇದ, ಇತ್ಯಾದಿ), ಕಾವ್ಯಾಲಂಕಾರನಾಟಕ (ಕಾವ್ಯ ಅಲಂಕಾರ, ನಾಟಕ), ಗಾಯಕತ್ವ (ಹಾಡುಗಾರಿಕೆ), ಕವಿತ್ವ (ಕಾವ್ಯರಚನೆ), ಕಾಮಶಾಸ್ತ್ರ, ದುರೋದರ (ದ್ಯೂತ), ದೇಶಭಾಷೆಗಳು, ಲಿಪಿಜ್ಞಾನ, ಲಿಪಿಕರ್ಮ (ಲೆಪ್ಪ, ಲೇಖನ, ಅಕ್ಷರಗಳನ್ನು ಕೊರೆಯುವುದು), ವಾಚಕ(ವಾಚನ), ಸರ್ವ ಅಪದಾನಗಳು (ಎಲ್ಲ ಪೂರ್ವ ವೃತ್ತಾಂತಗಳು), ಸ್ವರಶಾಸ್ತ್ರ (ಉಚ್ಚಾರವಿಧಾನ ವಿದ್ಯೆ), ಶಾಕುನ (ಶುಭಾಶುಭ ನಿಮಿತ್ತಗಳು), ಸಾಮುದ್ರಿಕ (ಹಸ್ತ, ಪಾದ ಮತ್ತು ಶರೀರ ಪರೀಕ್ಷೆಯಿಂದ ವ್ಯಕ್ತಿಯ ಅದೃಷ್ಟ ಇತ್ಯಾದಿಗಳನ್ನು ತಿಳಿಸುವ ಶಾಸ್ತ್ರ), ರತ್ನಶಾಸ್ತ್ರ (ರತ್ನ ಪರೀಕ್ಷೆ), ರಥಗತಿಕೌಶಲ (ರಥಚಾಲನ ಕೌಶಲ), ಅಶ್ವಗತಿ ಕೌಶಲ (ಕುದುರೆಗಳನ್ನು ತಕ್ಕಂತೆ ನಡೆಸುವ ಕೌಶಲ), ಮಲ್ಲಶಾಸ್ತ್ರ (ಕುಸ್ತಿ), ಸೂದಕರ್ಮ (ಸೂಪಶಾಸ್ತ್ರ), ಭೂರುಹಗಳ ದೋಹದ (ಮರಗಳಿಗೆ ಕಸಿಮಾಡುವುದು, ಎಲ್ಲ ಬಗೆಯ ದೊಡ್ಡ ದೊಡ್ಡ ಫಲಗಳನ್ನು ಕೊಡುವಂತೆ ಮಾಡುವುದು ಇತ್ಯಾದಿ,), ಗಂಧವಾದ (ಗಂಧಕವನ್ನು ಮಿಶ್ರಣ ಮಾಡುವುದು, ಭಸ್ಮವಾಗಿ ಇಳಿಸುವುದು, ಶುದ್ಧೀಕರಿಸುವುದು ಇ.,), ಧಾತುವಾದ (ಧಾತುಗಳ ಮಿಶ್ರಣ, ಭಸ್ಮವಾಗಿ ಪರಿವರ್ತಿಸುವುದು, ಬೇರ್ಪಡಿಸುವುದು ಇತ್ಯಾದಿ). ಖನ್ಯಾವಾದ (ನಿಧಿ ನಿಕ್ಷೇಪವನ್ನು ಗುರುತುಹಚ್ಚುವುದು, ಅಧೀನ ಮಾಡಿಕೊಳ್ಳುವುದು ಇ.,), ರಸವಾದ (ಪಾದರಸದ ಮಿಶ್ರಣ ಇ.,), ಜಾಲವಾದ (ಮಂಕುಮಾಡುವುದು ಅಥವಾ ಮರುಳುಮಾಡುವುದು), ಅಗ್ನಿ ಸಂಸ್ತಂಭ (ಅಗ್ನಿಯ ಗುಣಗಳನ್ನು ಅಥವಾ ಶಕ್ತಿಗಳನ್ನು ತಡೆಗೊಳಿಸುವುದು ; ನಿರ್ಬಾಧಿತವಾಗಿ ಬೆಂಕಿಯ ಮೇಲೆ ನಡೆಯುವ, ಕೈಯಲ್ಲಿ ಬೆಂಕಿಯನ್ನು ಹಿಡಿಯುವ ಸಾಮರ್ಥ್ಯವನ್ನು ಗಳಿಸಿಕೊಡುವ ಒಂದು ಮಾಂತ್ರಿಕ ವಿದ್ಯೆ), ಖಡ್ಗಸ್ತಂಭ (ಖಡ್ಗಗಳಿಂದ ಗಾಯಗೊಳ್ಳದಿರಲು ಸಹಾಯಕವಾದ, ಖಡ್ಗದಿಂದ ಗಾಯಗೊಳಿಸುವ ಶಕ್ತಿಯನ್ನು ತಡೆಗೊಳಿಸುವ ಒಂದು ಮಾಂತ್ರಿಕ ವಿದ್ಯೆ), ಜಲಸ್ತಂಭ (ಜಲಶಕ್ತಿಯನ್ನು ಅಥವಾ ಜಲಗುಣಗಳನ್ನು ತಡೆಗೊಳಿಸುವುದು ; ನೀರಿನ ಮೇಲೆ ದಿವಸಗಳವರೆಗೆ ನಡೆಯಲು ಸಹಾಯಕವಾಗುವ ಇನ್ನೊಂದು ಮಾಂತ್ರಿಕ ವಿದ್ಯೆ.), ವಾಚಸ್ತಂಭ (ಇನ್ನೊಬ್ಬನ ವಾಕ್ ಶಕ್ತಿಯನ್ನು ತಡೆಗೊಳಿಸುವ ಎಂದರೆ ಮಾತಾಡದಂತೆ ಮಾಡುವ ವಿದ್ಯೆ), ವಯಸ್ತಂಭ (ವ್ಯಕ್ತಿಯ ಜರೆಯನ್ನೂ ಸ್ಥವಿರತೆಯನ್ನೂ ತಡೆಗೊಳಿಸುವ ವಿದ್ಯೆ.), ವಶ್ಯ (ಅನ್ಯವ್ಯಕ್ತಿಯನ್ನು ಪೂರ್ತಿಯಾಗಿ ತನ್ನ ಪ್ರಭಾವಕ್ಕೆ ಒಳಪಡಿಸಿಕೊಳ್ಳಲು ಸಹಾಯಕವಾದ ವಿದ್ಯೆ.), ಆಕರ್ಷಣ(ಅನ್ಯವ್ಯಕ್ತಿಯನ್ನು ತನ್ನ ಕಡೆಗೆ ಬರುವಂತೆ ಬಲಾತ್ಕರಿಸಲು ಸಹಾಯಕವಾಗುವ ವಿದ್ಯೆ), ವಿದ್ವೇಷಣ (ಒಬ್ಬನು ಇನ್ನೊಬ್ಬನನ್ನು ದ್ವೇಷಿಸುವಂತೆ ಮಾಡಲು ಸಹಕಾರಿಯಾದ ವಿದ್ಯೆ), ಉಚ್ಚಾಟನ (ಓಡಿಸಿಬಿಡುವುದು, ಎಂದರೆ ಮನೆ ಅಥವಾ ಹಳ್ಳಿಯಂತಹ ಯಾವುದೇ ಸ್ಥಳದಿಂದ ವ್ಯಕ್ತಿಯನ್ನು ಓಡಿಸಿಬಿಡುವುದು; ಹಾಗೆಯೇ ಭೂತಗಳು, ಪಿಶಾಚಿಗಳು, ಗ್ರಹಗಳು ಮೊದಲಾದವುಗಳನ್ನು ಆವಿಷ್ಟವಾದ ಮನೆಗಳಿಂದಲೋ ಮನುಷ್ಯರಿಂದಲೋ ಬಿಡಿಸಿ ಅಟ್ಟುವುದು.), ಮಾರಣ (ಅಭಿಚಾರವಿದ್ಯೆಯ ಸಹಾಯದಿಂದ ಇನ್ನೊಬ್ಬನನ್ನು ಕೊಲ್ಲುವುದು), ಕಾಲವಂಚನ (ಸಮಯದ ವಂಚನೆ ಎಂದರೆ ಒಬ್ಬನು ತನ್ನ ಜೀವಿತವನ್ನು ಅಥವಾ ಕಾಲಧರ್ಮವನ್ನು ಮುಂದುವರಿಸಿಕೊಳ್ಳಲು ಸಹಾಯಕವಾಗುವ ವಿದ್ಯೆ), ಪಯಸಿ ಪ್ಲವ ಚಾತುರ್ಯ (ನೀರಿನಲ್ಲಿ ಧುಮುಕ್ಕುವ ಕೌಶಲ), ಪಾದುಕಾಸಿದ್ಧಿ (ಇಷ್ಟಬಂದೆಡೆಗೆ ತಕ್ಷಣವೇ ತೆರಳಲು ಸಹಾಯಕವಾದ ವಿದ್ಯೆ), ಮೃತ್ಸಿದ್ಧಿ (ಮಣ್ಣಿನ ಸಿದ್ಧಿ ; ಮಣ್ಣಿಂದ ತನಗೆ ಇಷ್ಟವಾದುದನ್ನು ಪಡೆಯಲು ಸಹಾಯಕವಾದ ವಿದ್ಯೆ.), ಘುಟಿಕಾಸಿದ್ಧಿ (ಗುಳಿಗೆಗಳ ಸಿದ್ಧಿ ಎಂದರೆ ಸರ್ವವಿಧವಾದ ಅದ್ಭುತಗಳನ್ನೂ ಉಂಟುಮಾಡಲು ಸಹಾಯಕವಾದ ವಿದ್ಯೆ), ಐಂದ್ರಜಾಲಿಕ (ಭ್ರಮೋತ್ಪಾದನೆ), ಅಂಜನ (ಭೂತಾಂಜನ, ದ್ರವ್ಯಾಂಜನ, ಅದೃಶ್ಯಾಂಜನ ಇತ್ಯಾದಿ ಅಂಜನವಿಧಗಳನ್ನು ಮಾಡುವುದು), ನರ ದೃಷ್ಟಿವಂಚನ (ಮನುಷ್ಯನ ದೃಷ್ಟಿಯನ್ನು ವಂಚಿಸುವುದು), ಸ್ವರವಂಚನ (ಸ್ವರವನ್ನು ಮರೆಮಾಚಿ ಇತರರನ್ನು ವಂಚಿಸುವುದು), ಮಣಿಸಿದ್ಧಿ (ಅದ್ಭುತಗಳನ್ನು ಮಾಡಿ ತೋರಿಸಲು ಸಹಾಯಕವಾಗುವ ರತ್ನಗಳ ಸಿದ್ಧಿ), ಮಂತ್ರಸಿದ್ಧಿ (ಮಂತ್ರಗಳ ಸಿದ್ಧಿ), ಔಷಧಸಿದ್ಧಿ (ಮದ್ದು ಮೂಲಿಕೆಗಳ, ಔಷಧಗಳ ಸಿದ್ಧಿ), ಚೋರಕರ್ಮ (ಕಳ್ಳತನ), ವೃತ್ತಕ್ರಿಯಾ (ವೃತ್ತ ಎಂಬ ಜಾತಿಯ ಶಿಲೆಯ ಕೆಲಸ), ಲೋಹಕ್ರಿಯಾ, ಅಶ್ಮಕ್ರಿಯಾ (ಶಿಲೆಯ ಕೆಲಸ), ಮೃತ್‌ಕ್ರಿಯಾ, ದಾರುಕ್ರಿಯಾ, ವೇಣುಕ್ರಿಯಾ, ವರ್ಮಕ್ರಿಯಾ (ಲೋಹಕವಚ ನಿರ್ಮಾಣ), ಅಂಜನಕ್ರಿಯಾ (ಅಂಜನ ತಯಾರಿಕೆ), ಅದೃಶ್ಯಕರಣೀ (ಅದೃಶ್ಯನನ್ನಾಗಿ ಮಾಡಿಕೊಳ್ಳುವ ವಿದ್ಯೆ), ದೂರಕರಣೀ (ತನ್ನನ್ನಾಗಲೀ ಇತರರನ್ನಾಗಲೀ ದೂರಾಂತರಿಸುವ ಒಂದು ವಿದ್ಯೆ), ಮೃಗಯಾರತಿ (ಬೇಟೆಯ ವ್ಯಸನ), ವಾಣಿಜ್ಯ, ಪಾಶುಪಾಲ್ಯ, ಕೃಷಿ, ಆಹವಕರ್ಮ (ಯುದ್ಧವಿದ್ಯೆ), ಲಾವಕಕುಕ್ಕುಟ ಮೇಷಾದಿ ಯುದ್ಧ ಕಾರಣ ಕೌಶಲ (ಲಾವಗೆ, ಹುಂಜ ಮತ್ತು ಟಗರುಗಳನ್ನು ಹೋರಾಡುವಂತೆ ಮಾಡುವ ಕೌಶಲ).(ದಿ ಕಲಾಸ್, ಪು.೪೪–೫೦).(ಈ) ಇತಿಹಾಸ, ಆಗಮ, ಕಾವ್ಯಾಲಂಕಾರ, ನಾಟಕ, ಗಾಯಕತ್ವ, ಕವಿತ್ವ, ಕಾಮಶಾಸ್ತ್ರ, ದುರೋದರ, ದೇವಭಾಷಾಲಿಪಿಜ್ಞಾನ, ಲಿಪಿಕರ್ಮ, ವಾಚನ, ಗಣಕ, ವ್ಯವಹಾರ, ಸ್ವರಶಾಸ್ತ್ರ, ಶಾಕುನ, ಸಾಮುದ್ರಿಕ, ರತ್ನಶಾಸ್ತ್ರ, ಗಜಾಶ್ವರಥಕೌಶಲ, ಮಲ್ಲಶಾಸ್ತ್ರ, ಸೂಪಕರ್ಮ, ಭೂರುಹದೋಹದ, ಗಂಧವಾದ, ಧಾತು

ವಾದ, ಖನಿವಾದ, ರಸವಾದ, ಬಿಲವಾದ, ಅಗ್ನಿಸಂಸ್ತಂಭ, ಖಡ್ಗಸ್ತಂಭ, ಜಲಸ್ತಂಭ, ವಾಚಸ್ತಂಭ, ವಯಸ್ತಂಭ, ವಶೀಕರಣ, ಆಕರ್ಷಣ, ಮೋಹನ, ವಿದ್ವೇಷಣ, ಉಚ್ಚಾಟನ, ಮಾರಣ, ಕಾಲವಂಚನ, ಪರಕಾಯ ಪ್ರವೇಶ, ಪಾದುಕಾಸಿದ್ಧಿ, ವಾಕ್ಸಿದ್ಧಿ, ಘುಟಿಕಾಸಿದ್ಧಿ, ಐಂದ್ರಜಾಲಿಕ, ಅಂಜನ, ಪರದೃಷ್ಟಿವಂಚನ, ಸ್ವರವಂಚನ, ಮಣಿಮಂತ್ರೌಷಧ ಸಿದ್ಧಿ, ಚೋರಕರ್ಮ, ಚಿತ್ರಕ್ರಿಯಾ, ಲೋಹಕ್ರಿಯಾ, ಅಶ್ಮಕ್ರಿಯಾ, ಮೃತ್‌ಕ್ರಿಯಾ, ದಾರುಕ್ರಿಯಾ, ವೇಣುಕ್ರಿಯಾ, ಚರ್ಮಕ್ರಿಯಾ, ಅಂಬರಕ್ರಿಯಾ, ಅದೃಶ್ಯಕರಣ, ದಂತಿಕರಣ, ಮೃಗಯಾವಿಧಿ, ವಾಣಿಜ್ಯ, ಪಾಶುಪಾಲ್ಯ, ಕೃಷಿ, ಆಸವಕರ್ಮ, ಲಾವಕುಕ್ಕುಟ ಮೇಷಾದಿಯುದ್ಧಕಾರಕಕೌಶಲ (ಶಿವತತ್ತ್ವ ರತ್ನಾಕರ. ೧–೨–೪೩–೫೩.) (ಉ) ವೇದಾಸ್ಸರ್ವೇಸವೇದಾಂಗಾ ಇತಿಹಾಸಸ್ತಥಾಗಮ ನ್ಯಾಯಶಾಸ್ತ್ರ, ಕಾವ್ಯಾಲಂಕಾರನಾಟಕ, ಕವಿತ್ವ, ಕಾಮಶಾಸ್ತ್ರ, ದ್ಯೂತನೈಪುಣ್ಯ, ದೇಶಭಾಷಾ ಪರಿಜ್ಞಾನ, ಲಿಪಿಜ್ಞಾನ, ಲಿಪಿಕ್ರಿಯಾ, ಸಮಸ್ತಾವಧಾನ (ಹಲವು ವಿಷಯಗಳ ಮೇಲೆ ಏಕಕಾಲದಲ್ಲಿ ಗಮನಕೊಡುವುದು), ಸ್ವರಶಾಸ್ತ್ರ, ವಾಚಕ, ಸಾಮುದ್ರಿಕ, ಶಾಕುನ, ರತ್ನಪರೀಕ್ಷೆ, ಸ್ವರ್ಣಪರೀಕ್ಷೆ, ತುರಗಲಕ್ಷಣ, ಗಜಶಾಸ್ತ್ರ, ಮಲ್ಲವಿದ್ಯೆ, ಪಾಕಕರ್ಮ, ದಶದೋಹಲವಿದ್ಯೆ, ಗಂಧವಾದ, ಧಾತುವಾದ, ಖನೀವಾದ, ರಸವಾದ, ಅಗ್ನಿಸ್ತಂಭ, ಜಲಸ್ತಂಭ, ಅಸಿಸ್ತಂಭನ, ವಾಯುಸ್ತಂಭ, ವಶ್ಯ, ಮೋಹನ, ಆಕರ್ಷಣ, ಉಚ್ಚಾಟನ, ವಿದ್ವೇಷ, ಮಾರಣ, ಕಾಲವಂಚನ, ವಾಣಿಜ್ಯ, ಪಾಶುಪಾಲ್ಯ, ಕೃಷಿ, ಆಸವಕರ್ಮ, ಲಾವುಕಾಯೋಧನ ಪ್ರೌಢಿ (ಲಾವಗೆಗಳನ್ನು ಕಾದುವಂತೆ ಮಾಡುವ ಕೌಶಲ), ಮೇಷಯುದ್ಧಕೌಶಲ, ರತಿಕೌಶಲ, ಆಖೇಟ, ಅದೃಶ್ಯಕರಣೀ, ಚಿತ್ರರೋಹಕ್ರಿಯಾ (?), ಅಶ್ಮಕ್ರಿಯಾ, ಮೃತ್ಕ್ರಿಯಾ, ದಾರುಕ್ರಿಯಾ, ವೇಣುಕ್ರಿಯಾ, ಚರ್ಮಕ್ರಿಯಾ, ಅಂಬರಕ್ರಿಯಾ, ದೂರಕರಣೀ, ಚೋರಕರ್ಮ, ಅಂಜನಕರ್ಮ, ಮಂತ್ರೌಷಧಸಿದ್ಧಿ, ಸ್ವರವಂಚನ, ದೃಷ್ಟಿವಂಚನ, ಜಲಪ್ಲವನಸಿದ್ಧಿ, ವಾಕ್ಸಿದ್ಧಿ, ಘುಟಿಕಾಸಿದ್ಧಿ, ಪಾದುಕಾಸಿದ್ಧಿ, ಇಂದ್ರಜಾಲ, ಮಹೇಂದ್ರಜಾಲ (ಶ್ರೀತತ್ತ್ವನಿಧಿ, ಪು. ೧೦೨-ದಿ ಕಲಾಸ್ ಪು. ೭೨). (ಊ) ಶುಕ್ರನೀತಿಸಾರದಲ್ಲಿ: ಹಾವಭಾವಾದಿ ಸಂಯುಕ್ತ ನರ್ತನ (ಹಾವಭಾವಾದಿ ಯುಕ್ತವಾದ ನರ್ತನ), ಅನೇಕವಾದ್ಯ ವಿಕೃತಿ ತದ್ವಾದನಜ್ಞಾನ (ಹಲವು ವಾದ್ಯಗಳನ್ನು ಗೋಷ್ಠಿಯಲ್ಲಿ ನುಡಿಸುವುದರ ಕೌಶಲ), ಸ್ತ್ರೀಪುರುಷರ ವಸ್ತ್ರಾಲಂಕಾರ ಸಂಧಾನ (ಸ್ತ್ರೀಪುರುಷರ ವಸ್ತ್ರಾಲಂಕಾರಗಳ ಯೋಜನೆಯಲ್ಲಿ ಸಹಾಯ ಮಾಡುವುದು), ಅನೇಕರೂಪಾವಿರ್ಭಾವಕೃತಿಜ್ಞಾನ (ದಾರುಶಿಲಾದಿಗಳಿಂದ ವಿವಿಧಾಕೃತಿಗಳ ನಿರ್ಮಾಣ), ಶಯ್ಯಾಸ್ತರಣ ಸಂಯೋಗ ಪುಷ್ಪಾದಿಗ್ರಥನ (ಹೂಗಳಿಂದ ಹಾಸಿಗೆಗಳನ್ನೂ ಹಾರಗಳನ್ನೂ ಮಾಡುವುದು), ದ್ಯೂತಾದ್ಯನೇಕ ಕ್ರೀಡಾಭಿರಂಜನ (ದ್ಯೂತಾದಿ ಅನೇಕ ಕ್ರೀಡಾದಿಗಳಿಂದ ಮನೋರಂಜನೆ ಮಾಡಿಕೊಳ್ಳುವುದು), ಅನೇಕಾಸನ ಸಂಧಾನ ರತಿಜ್ಞಾನ (ಅನೇಕ ಆಸನಗಳಲ್ಲಿ ರತಿಯ ಜ್ಞಾನ), ಮಕರಂದಾಸವಾದಿಗಳ ಮದ್ಯಾದಿಗಳ ಕೃತಿ (ಮಕರಂದಾಸವ ಮತ್ತು ಇತರ ಮದ್ಯಾದಿಗಳ ತಯಾರಿಕೆ), ಶಲ್ಯಗೂಢಾಹೃತಿ, ಸಿರಾವ್ರಣ, ವ್ಯಥಜ್ಞಾನ (ನೆಟ್ಟ ಬಾಣಗಳನ್ನೂ ಕತ್ತಿಗಳನ್ನೂ ತೆಗೆಯುವುದು ಮತ್ತು ಗಾಯಗಳನ್ನೂ, ರಕ್ತನಾಳಗಳನ್ನೂ ಕೆರೆದು ತೆಗೆಯುವುದು), ಹೀನಾದಿರಸಸಂಯೋಗಾನ್ನಾದಿ ಸಂಪಾಚನ (ವಿವಿಧರಸ ಸಂಯೋಜನೆಯಿಂದ ವಿವಿಧ ಪಾಕಗಳ ತಯಾರಿಕೆ), ವೃಕ್ಷಾದಿಪ್ರಸವಾರೋಪಪಾಲನಾದಿಕೃತಿ (ಗಿಡಗಳನ್ನು ಕಸಿಮಾಡುವುದು ಮತ್ತು ಪೋಷಣೆ), ಪಾಷಾಣಧಾತ್ವಾದಿದೃತಿಭಸ್ಮಕರಣ (ಪಾಷಾಣ ಧಾತ್ವಾದಿಗಳನ್ನು ಕರಗಿಸುವುದು, 'ಭಸ್ಮ' ಮಾಡುವುದು), ಸಕಲ ಇಕ್ಷುವಿಕಾರಗಳ ಕೃತಿಜ್ಞಾನ (ಕಬ್ಬಿನ ಹಾಲಿನಿಂದ ತಯಾರಿಸಬಹುದಾದ ಎಲ್ಲವನ್ನೂ ತಯಾರಿಸುವುದು), ಧಾತ್ವೌಷಧಿಗಳ ಸಂಯೋಗಕ್ರಿಯಾಜ್ಞಾನ (ಧಾತು ಮತ್ತು ಓಷಧಿಗಳ ಮಿಶ್ರಣ), ಧಾತುಸಾಂಕರ್ಯಪಾರ್ಥಕ್ಯಕರಣ (ಧಾತುಗಳ ಮಿಶ್ರಣ ಮತ್ತು ಪೃಥಕ್ಕರಣ), ಧಾತ್ವಾದಿಗಳ ಸಂಯೋಗಾಪೂರ್ವವಿಜ್ಞಾನ (ಧಾತ್ವಾದಿಗಳ ಹೊಸ ಹೊಸ ಮಿಶ್ರಣಗಳ ಜ್ಞಾನ), ಕ್ಷಾರನಿಷ್ಕಾಸನ ಜ್ಞಾನ (ಧಾತ್ವಾದಿಗಳಿಂದ ಷಡ್ರಸಗಳಲ್ಲಿ ಒಂದಾದ 'ಕ್ಷಾರ'ವನ್ನು ತೆಗೆಯುವುದು), ಪದಾದಿನ್ಯಾಸದಿಂದ ಶಸ್ತ್ರಸಂಧಾನನಿಕ್ಷೇಪ (ಬಿಲ್ಲಿನ ಮೇಲೆ ಹಜ್ಜೆಯನ್ನಿಡುವುದು ಮುಂತಾದುದರಿಂದ ಬಿಲ್ಲನ್ನು ಸಿದ್ಧಗೊಳಿಸುವುದು ಮತ್ತು ಅದರಿಂದ ಬಾಣ ಪ್ರಯೋಗಮಾಡುವುದು), ಸಂಧ್ಯಾಘಾತಾಕೃಷ್ಟಿಭೇದಗಳಿಂದ ಮಲ್ಲಯುದ್ಧ (ಬಗೆಬಗೆಯ ಪಟ್ಟಿನಿಂದ ಬಗೆಬಗೆಯಾಗಿ ಕುಸ್ತಿಮಾಡುವುದು), ಅಭಿಲಕ್ಷಿತ ದೇಶದಲ್ಲಿ ಯಂತ್ರಾದ್ಯಸ್ತ್ರನಿಪಾತನ (ಗುರಿಯನ್ನು ಭೇದಿಸುವಂತೆ 'ಯಂತ್ರಗಳಿಂದ' ಬಾಣಾದಿಗಳನ್ನು ಬಿಡುವುದು), ವಾದ್ಯಸಂಕೇತದಿಂದ ವ್ಯೂಹರಚನಾದಿ (ವಾದ್ಯವಾದನಕ್ಕನುಸಾರವಾಗಿ ಸೇನೆಯನ್ನು ವ್ಯೂಹವಾಗಿ ರಚಿಸುವುದು), ಗಜಾಶ್ವರಥಗಳ ಮೇಲಿಂದ ಯುದ್ಧ ಸಂಯೋಜನ (ಗಜಾಶ್ವರಥಗಳನ್ನು ಹತ್ತಿದವರಾಗಿ ಯುದ್ಧೋನ್ಮುಖರಾಗುವುದು) ವಿವಿಧಾಸನ ಮುದ್ರೆಗಳಿಂದ ದೇವಾತಾತೋಷಣ (ವಿವಿಧ ಆಸನ ಮತ್ತು ಮುದ್ರೆಗಳಿಂದ ದೇವತೆಗಳನ್ನು ಒಲಿಸುವುದು), ಸಾರಥ್ಯ (ರಥಚಾಲನ), ಗಜಾಶ್ವಾದಿಗಳಿಗೆ ಗತಿಶಿಕ್ಷಣ (ಆನೆ ಕುದುರೆಗಳನ್ನು ತರಬೇತು ಮಾಡುವುದು), ಮೃತ್ತಿಕಾಕಾಷ್ಠಪಾಷಾಣ ಧಾತುಭಾಂಡಾದಿ ಸತ್ಕ್ರಿಯೆ (ಮಣ್ಣು, ಮರ, ಕಲ್ಲು ಮತ್ತು ಲೋಹಗಳಿಂದ ಪಾತ್ರೆ ಮೊದಲಾದುವನ್ನು ಮಾಡುವುದು), ಚಿತ್ರಾದ್ಯಾಲೇಖನ (ಚಿತ್ರಲೇಖನ), ತಟಾಕವಾಪೀ ಪ್ರಾಸಾದ ಸಮಭೂಮಿಕ್ರಿಯೆ (ಕೆರೆ, ಕೊಳ, ಮನೆ ಇವುಗಳನ್ನು ನಿರ್ಮಿಸುವುದು, ಭೂಮಿಯನ್ನು ಸಮತಲಗೊಳಿಸುವುದು), ಘಟ್ಯಾದ್ಯನೇಕಯಂತ್ರಗಳ ವಾದ್ಯಗಳ ಕೃತಿ (ಘಟೀಯಂತ್ರಾದಿ ಅನೇಕ ಯಂತ್ರಗಳನ್ನೂ ವಾದ್ಯಗಳನ್ನೂ ತಯಾರಿಸುವುದು), ಹೀನಮಧ್ಯಾದಿ ಸಂಯೋಗ ವರ್ಣಾದಿಗಳಲ್ಲಿ ರಂಜನ (ವಿವಿಧ ಪ್ರಮಾಣಗಳಲ್ಲಿ ಬೆರಸಿದ ಬಣ್ಣಗಳಿಂದ ಚಿತ್ರರಚನೆ), ಜಲವಾಯ್ವಗ್ನಿ ಸಂಯೋಗನಿರೋಧಗಳಿಂದ ಕ್ರಿಯೆ (ನೀರು ಬೆಂಕಿ ಮತ್ತು ಗಾಳಿಗಳನ್ನೊಂದುಗೂಡಿಸಿಯೂ ನಿರೋಧಿಸಿಯೂ ಕೆಲಸ ಮಾಡುವುದು.), ನೌಕಾರಥಾದಿ ಯಾನಗಳ ಕೃತಿಜ್ಞಾನ (ನೌಕಾರಥಾದಿ ಯಾನಗಳನ್ನು ಕಟ್ಟುವ ಜ್ಞಾನ), ಸೂತ್ರಾದಿ ರಜ್ಜುಕರಣ ವಿಜ್ಞಾನ (ನೂಲು, ಹಗ್ಗ ಇತ್ಯಾದಿಗಳನ್ನು ಮಾಡುವುದು), ಅನೇಕ ತಂತು ಸಂಯೋಗಗಳಿಂದ ಪಟಬಂಧ (ನೂಲನ್ನು ನೆಯ್ದು ಬಟ್ಟೆಮಾಡುವುದು), ವೇಧಾದಿ ಸದಸಜ್ಜ್ಞಾನ (ರತ್ನಪರೀಕ್ಷೆಯ ಜ್ಞಾನ ಮತ್ತು ರತ್ನಗಳನ್ನು ಕತ್ತರಿಸುವುದು ಮೆಜ್ಜ ಕೊರೆಯುವುದು ಇತ್ಯಾದಿ), ಸ್ವರ್ಣಾದಿಗಳ ಯಾಥಾರ್ಥ್ಯ ವಿಜ್ಞಾನ (ಸ್ವರ್ಣಾದಿಗಳ ಪರೀಕ್ಷೆಯ ಜ್ಞಾನ), ಕೃತ್ರಿಮಸ್ವರ್ಣರತ್ನಾದಿ ಕ್ರಿಯಾಜ್ಞಾನ (ಕೃತಕವಾಗಿ ಸ್ವರ್ಣ ಮತ್ತು ರತ್ನಾದಿಗಳನ್ನು ತಯಾರಿಸುವ ಜ್ಞಾನ), ಸ್ವರ್ಣಾದ್ಯಲಂಕಾರ ಕೃತಿ (ಚಿನ್ನದಿಂದ ಆಭರಣಗಳನ್ನು ಮಾಡುವುದು), ಲೇಪಾದಿ ಸತ್ಕೃತಿ (ಗಿಲೀಟು, ಪಾಲಿಷ್ ಇತ್ಯಾದಿ ಲೇಪನಕ್ರಿಯೆ), ಚರ್ಮಗಳ ಮಾರ್ದವಾದಿ ಕ್ರಿಯಾಜ್ಞಾನ (ಚರ್ಮವನ್ನು ಹದಮಾಡುವುದ

ಇತ್ಯಾದಿ), ಪಶುಚರ್ಮಾಂಗನಿರ್ಹಾರಜ್ಞಾನ (ಪ್ರಾಣಿಗಳ ಅಂಗಗಳಿಂದ ಚರ್ಮ ಮತ್ತು ಇತರ ಅಂಗಾಂಶಗಳನ್ನು ತೆಗೆಯುವ ತಿಳಿವಳಿಕೆ), ದುಗ್ಧದೋಹಾದಿಘೃತಾಂತ ವಿಜ್ಞಾನ (ಹಾಲನ್ನು ಕರೆಯುವುದು ಅದರಿಂದ ತುಪ್ಪಮಾಡುವುದು – ಇವುಗಳ ಪರಿಕ್ರಮದ ಜ್ಞಾನ), ಕಂಚುಕಾದಿಗಳ ಸೀವನ ವಿಜ್ಞಾನ (ಕಂಚುಕಾದಿಗಳನ್ನು ಹೊಲಿಯುವುದು), ಜಲಬಾಹ್ವಾದಿಭಿಸ್ತರಣ (ತೋಳು ಮುಂತಾದುದರಿಂದ ನೀರಲ್ಲಿ ಈಜುವುದು), ಗೃಹಭಾಂಡಾದಿಮಾರ್ಜನ ವಿಜ್ಞಾನ (ಮನೆಗಳು, ಮನೆಯ ಪಾತ್ರೆ ಪದಾರ್ಥಗಳು ಮೊದಲಾದುವನ್ನು ತೊಳೆಯುವುದರ ಜಾಣ್ಮೆ), ವಸ್ತ್ರಸಮ್ಮಾರ್ಜನ (ಬಟ್ಟೆಗಳನ್ನು ಒಗೆದು ಮಡಿಮಾಡುವುದು), ಕ್ಷುರಕರ್ಮ (ಕ್ಷೌರ), ತಿಲಮಾಂಸಾದಿ ಸ್ನೇಹ ನಿಷ್ಕಾಸನ ಕೃತಿ (ಎಳ್ಳು, ಮಾಂಸ ಮೊದಲಾದವರಿಂದ ಸಾರವನ್ನು ತೆಗೆಯುವುದು), ಸೀರಾದ್ಯಾಕರ್ಷಣಜ್ಞಾನ (ಉಳುವುದು, ಕಳೆಕೀಳುವುದು ಮುಂತಾದುವುಗಳ ಜ್ಞಾನ), ವೃಕ್ಷಾದ್ಯಾರೋಹಣಜ್ಞಾನ (ಮರ ಹತ್ತುವುದು ಇತ್ಯಾದಿಗಳ ಜ್ಞಾನ), ಮನೋನುಕೂಲಸೇವಾ ಕೃತಿಜ್ಞಾನ (ಅನ್ಯರಿಗೆ ಮೆಚ್ಚಿಕೆಯಾಗುವಂತೆ ಸೇವೆಯನ್ನು ಮಾಡುವುದರ ತಿಳಿವಳಿಕೆ), ವೇಣುತೃಣಾದಿಪಾತ್ರ ಕೃತಿಜ್ಞಾನ (ಬಿದಿರು, ಲಾಳದ ಕಡ್ಡಿ ಅಥವಾ ಜೊಂಡು ಮೊದಲಾದವರಿಂದ ಪಾತ್ರೆಗಳನ್ನು ಮಾಡುವುದರ ತಿಳಿವಳಿಕೆ), ಕಾಚಪಾತ್ರಾದಿಕರಣ ವಿಜ್ಞಾನ (ಗಾಜಿನಿಂದ ಪಾತ್ರೆ ಮುಂತಾದುವನ್ನು ಮಾಡುವುದರ ತಿಳಿವಳಿಕೆ), ಜಲಸಂಸೇಚನ ಸಂಹರಣ (ನೀರನ್ನು ತರುವುದು, ತಳಿಯುವುದು), ಲೋಹಾಭಿಸಾರ ಶಸ್ತ್ರಾಸ್ತ್ರಕೃತಿಜ್ಞಾನ (ಲೋಹಗಳಿಂದ ಶಸ್ತ್ರಾಸ್ತ್ರಗಳನ್ನು ಮಾಡುವುದರ ತಿಳಿವಳಿಕೆ), ಗಜಾಶ್ವವೃಷಭೋಷ್ಟ್ರಪಲ್ಯಾಣಾದಿ ಕ್ರಿಯೆ (ಆನೆ ಕುದುರೆ ಎತ್ತು ಒಂಟೆ–ಇವುಗಳ ಸವಾರಿಗೆ ಬೇಕಾದ ಹಲ್ಲಣ ಮೊದಲಾದುವನ್ನು ಮಾಡುವುದು), ಶಿಶುವಿನ ಸಂರಕ್ಷಣ ಧಾರಣ ಕ್ರೀಡನ ಜ್ಞಾನ (ಮಕ್ಕಳನ್ನು ಬೆಳೆಸುವುದು, ಎತ್ತಿಕೊಳ್ಳುವುದು, ಒಡನಾಡುವುದು – ಇವುಗಳ ತಿಳಿವಳಿಕೆ), ಅಪರಾಧಿ ಜನಸುಯುಕ್ತತಾಡನ ಜ್ಞಾನ (ಅಪರಾಧಿಗಳನ್ನು ಚೆನ್ನಾಗಿ ಶಿಕ್ಷಿಸುವುದರ ತಿಳಿವಳಿಕೆ), ನಾನಾದೇಶೀಯವರ್ಣ ಸುಸಮ್ಯಗ್ಲೇಖನ ಜ್ಞಾನ (ನಾನಾ ದೇಶಗಳ–ಅಕ್ಷರಮಾಲೆಯ–ಅಕ್ಷರಗಳನ್ನು ಚೆನ್ನಾಗಿ ಬರೆಯುವುದರ ತಿಳಿವಳಿಕೆ), ತಾಂಬೂಲರಕ್ಷಾದಿಕೃತಿ ವಿಜ್ಞಾನ (ತಾಂಬೂಲ ಮೊದಲಾದುವನ್ನು ಸಿದ್ಧಪಡಿಸುವುದರ ತಿಳಿವಳಿಕೆ), ಆದಾನ (ಕಲೆಗಳನ್ನು ಗ್ರಹಿಸುವುದು ಅಥವಾ ಹೃದ್ಗತ ಮಾಡಿಕೊಳ್ಳುವುದು), ಆಶುಕಾರಿತ್ವ (ಶೀಘ್ರವಾಗಿ ಕಾರ್ಯಮಾಡುವುದು), ಪ್ರತಿದಾನ (ಕಲೆಗಳನ್ನು ಮರಳಿ ಕೊಡುವುದು ಅಥವಾ ಕಲಿಸುವುದು), ಚಿರಕ್ರಿಯೆ (ವಿಳಂಬವಾಗಿ ಕಾರ್ಯಮಾಡುವುದು.) (ಶುಕ್ರನೀತಿಸಾರ. ಪು. ೧೨೬–ದಿ ಕಲಾಸ್ ಪು. ೫೨–೫೬). (ಖ) ಪಾಂಚಲ ಬಾಭ್ರವ್ಯನ ಪ್ರಕಾರವಾಗಿ ಕಾಮಶಾಸ್ತ್ರದ : (i) ಆಲಿಂಗನ ಭೇದಗಳು–ಸ್ಪಷ್ಟಕ, ವಿದ್ಧಕ, ಉದ್ಘೃಷ್ಟಕ, ಪೀಡಿತಕ, ಲತಾವೇಷ್ಟಿತಕ, ವೃಷಾಧಿರೂಢಕ, ತಿಲತಂಡುಲಕ, ಕ್ಷೀರನೀರಕ ; (ii) ಚುಂಬನ ಭೇದಗಳು–ಸಮ, ತಿರ್ಯಕ್, ಉದ್ಭ್ರಾಂತ, ಅವಪೀಡಿತ; (iii) ದಂತಕರ್ಮ–ಗೂಢಕ, ಉಚ್ಛೂನಕ, ಬಿಂದು, ಬಿಂದುಮಾಲಾ, ಪ್ರವಾಸಮಣಿ, ಮಣಿಮಾಲಾ, ಖಂಡಾಭ್ರಕ, ವರಾಹಚರ್ವಿಕ; (iv) ನಖಕ್ಷತ–ಆಚ್ಛುರಿತಕ, ಅರ್ಧಚಂದ್ರ, ಮಂಡಲ, ರೇಖಾ, ವ್ಯಾಘ್ರನಖ, ಮಯೂರಪದಕ, ಶಶಪ್ಲುತಕ, ಉತ್ಪಲಪತ್ರಕ; (v) ಸೀತ್ಕಾರ–ಹಿಂಕಾರ, ಸ್ತನಿತ, ಕೂಜಿತ, ರುದಿತ, ಸೂತ್ಕೃತ, ದೂತ್ಕೃತ, ಫೂತ್ಕೃತ, ಅಂಬಾರ್ಥಕ ಶಬ್ದಗಳು; (vi) ಸಂವೇಶನ–ಉತ್ಫುಲ್ಲಕ, ವಿಜೃಂಭಿತಕ, ಇಂದ್ರಾಣಿಕ, ಸಂಪುಟಕ, ಪೀಡಿತಕ, ವೇಷ್ಟಿತಕ, ವಾಡವಕ; (vii) ಉಪಸೃಪ್ತಕ–ಉಪಸೃಪ್ತಕ, ಮಂಥನ, ಹುಲ, ಅವಮರ್ದನ, ಪೀಡಿತಕ, ನಿರ್ಘಾತ, ವರಾಹಘಾತ, ವೃಷಾಘಾತ, ಚಟಕವಿಲಸಿತ, ಸಂಪುಟ; (viii) ನರಾಯಿತ–ಸಂದಂಶ, ಭ್ರಮರಕ, ಪ್ರೇಂಖೋಲಿತಕ; (ix) ಔಪರಿಷ್ಟಕ–ನಿಮಿತ, ಪಾರ್ಶ್ವತೋದಷ್ಟ, ಬಹಿಸ್ಸಂದಂಶ, ಅಂತಸ್ಸಂದಂಶ, ಚುಂಬಿತಕ, ಪರಿಮೃಷ್ಟಕ, ಆಮ್ರಚೂಷಿತಕ, ಸಂಗರ. (ಕಾಮಸೂತ್ರ. ಪು. ೯೭–೧೭೬–ದಿ ಕಲಾಸ್. ೩೭–೫೮). (ಚು) ಮಹಿಳಾಗುಣಗಳು:– ನೃತ್ಯ, ಔಚಿತ್ಯ, ಚಿತ್ರ, ವಾದಿತ್ರ, ಮಂತ್ರ, ತಂತ್ರ, ಜ್ಞಾನ, ವಿಜ್ಞಾನ, ದಂಭ, ಜಲಸ್ತಂಭ, ಗೀತನಾದ, ತಾಲಮಾನ, ಮೇಘವೃಷ್ಟಿ, ಫಲಾಕೃಷ್ಟಿ, ಆರಾಮರೋಪಣ, ಆಕಾರಗೋಪನ, ಧರ್ಮವಿಚಾರ, ಶಕುನಸಾಗರ, ಕ್ರಿಯಾಕಲ್ಪ, ಸಂಸ್ಕೃತಜಲ್ಪ, ಪ್ರಸಾದ ನೀತಿ, ಧರ್ಮನೀತಿ, ವರ್ಣಿಕಾವೃದ್ಧಿ, ಸುವರ್ಣಸಿದ್ಧಿ, ಸುರಭಿತೈಲಕರಣ, ಲೀಲಾಸಂಚಾರಣ, ಗಜತುರಗ ಪರೀಕ್ಷಣ, ಪುರುಷಸ್ತ್ರೀಲಕ್ಷಣ, ಸುವರ್ಣರತ್ನಭೇದ, ಅಷ್ಟಾದಶಲಿಪಿ ಪರಿಚ್ಛೇದ, ತತ್ಕಾಲಬುದ್ಧಿ, ವಾಸ್ತುಸಿದ್ಧಿ, ವೈದ್ಯಕಕ್ರಿಯಾ, ಕಾಮವಿಕ್ರಿಯ, ಘಟಭ್ರಮ, ಸಾರಿಪರಿಶ್ರಮ, ಅಂಜನ ಯೋಗ, ಚೂರ್ಣಯೋಗ, ಹಸ್ತಲಾಘವ, ವಚನಪಾಟವ, ಭೋಜ್ಯವಿಧಿ, ವಾಣಿಜ್ಯವಿಧಿ, ಮುಖಮಂಡನ, ಶಾಲಿಖಂಡನ, ಕಥಾಕಥನ, ಪುಷ್ಪಗ್ರಥನ, ವಕ್ರೋಕ್ತಿ, ಕಾವ್ಯಶಕ್ತಿ, ಸ್ಫಾರವೇಷ, ಸಕಲಭಾಷಾವಿಶೇಷ, ಅಭಿಧಾನ ಜ್ಞಾನ, ಆಭರಣಪರಿಧಾನ, ಭೃತ್ಯೋಪಚಾರ, ಗೃಹಾಚಾರ, ಕಾವ್ಯಕರಣ, ಪರನಿರಾಕರಣ, ರಂಧನ, ಕೇಶಬಂಧನ, ವೀಣಾನಿನಾದ, ವಿತಂಡಾವಾದ, ಅಂಕವಿಚಾರ, ಲೋಕವ್ಯವಹಾರ, ಅಂತ್ಯಾಕ್ಷರಿಕಾ, ಪ್ರಶ್ನಪ್ರಹೇಲಿಕಾ (ಕಲ್ಪಾಂತರ ವಾಚ್ಯಾನಿ–ದಿ ಕಲಾಸ್. ೭೬–೭೭) (ಶ್ರೀವತ್ಸ ನಿಘಂಟು. ಪುಟ ೯೩ ಮತ್ತು ೩೩೭); ಕವಿ ಗಮಕಿ ವಾದಿ ಗಾಯಕ ವಾಗ್ಮಿ ನಟ ಹಾಸ್ಯದವರಾದಿ ಚೌಷಷ್ಟಿಕಲೆಯುವರು (ಚಲಪು. ೪೭–೪೩). **ಚೌಷಷ್ಟಿಕಳೆ:** ಅತಿಚತುರ ಚೌಷಷ್ಟಿಕಳೆ ಸಾಮಭೇದಾದಿ ಮಂತ್ರಾಳಾಪ ವೀಶಭಕ್ತಿ ನುತವೀರವಿತರಣಗುಣಂ . . . ನೆರೆದು ರೂಪಾದುದೆಂಬಂತೆ (ಹಡಕಾ. ೧–೯೩).

[ ಚೌಷಷ್ಟಿ + ಕಲೆ$_3$ ]

**ಚೌಷಷ್ಟಿಕಳೆ** 'ಚೌಷಷ್ಟಿಕಲೆ' ನೋ.

**ಚೌಷಷ್ಟಿವಿದ್ಯೆ** (ನಾ). =ಚೌಷಷ್ಟಿಕಲೆ: ಚೌಷಷ್ಟಿವಿದ್ಯಾಕಳಾವಿದನೆನಿಸಿಕೊಂಬನಲ್ಲದೆ ಲಿಂಗವಂತನೆನಿಸಿಕೊಂಬುದಿಲ್ಲ (ಮಡಿಮಾ. ೪೩–೬೦): ಚೌಷಷ್ಟಿವಿದ್ಯಾಕಲಾಭರಿತ ಸುಪ್ರೌಢ ಶಿಷ್ಯಾಸಂತತಿಯ ಸನ್ಮಾರ್ಗ ಶೀಲವರ್ತನೆಯೊಳು (ವೀಶ್ವಪು. ೭–೧೭–೨) : ಕಲಿಸಿದನು ಚೌಷಷ್ಟಿವಿದ್ಯಾವಳಿಗಳನು (ನಿಭಾಗ. ೦೦–೪೧–೭) ; ಭರತನಾಟಕ ಮದನಶಾಸ್ತ್ರ ಕವಿತಾರಚನೆ ಪಿರಿದೆನಿಪ ಚೌಷಷ್ಟಿವಿದ್ಯಾಕಳಾಪ್ರೌಢಿ (ಧಿಕ್ಕಾ ಪ. ೩–೯) ; ಚೌಷಷ್ಟಿವಿದ್ಯೆ ಕಲೆಗಳಿಲ್ಲದಂದು . . . ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು (ಅಖಂಡೇ. ೧–೧).

[ ಚೌಷಷ್ಟಿ + ವಿದ್ಯೆ ]

**ಚೌಸರ,** ಚವುಸರ (ನಾ). ನಾಲ್ಕು ಎಳೆಗಳ ಸರ : ತೋರಮುತ್ತಿನ ಕಂಠಮಾಲೆ ಚೌಸರದಿಂದ ವಾರಿಜಗಂಧಿಯೆಸೆದಳು (ಕಂಸವಿ. ೯–೭೦). **ಚವುಸರ :** ಮುತ್ತಿನೋಲೆಯ ಮೂಗುತಿಯ ಮಣಿವಿಸ್ತರದ ಚವುಸರವ ಕೊರಳಲಿ ಹತ್ತಿಗಟ್ಟಿದ ಪದಕ ಹೀರಾವಳಿಯ (ಕಕ್ಕೋಳ. ೧–೪).

[ ಚೌ$_1$ + ಸರ$_6$ ]

**ಚೌಸುತ್ತು** (ನಾ). ನಾಲ್ಕುಕಡೆ; ಸುತ್ತುಮುತ್ತು: ನಮ್ಮ ಸೀಮೆ ಚೌಸುತ್ತು ಸರಹದ್ದಿನ ನಾಲ್ಕುಕಡೆ ಮಾರ್ಗಕ್ಕೂ ಮಂದಿ ಇಟ್ಟು ಬಂದುಬಸ್ತು ಮಾಡಬೇಕು (ರಾಜೇಂದ್ರ. ೯೦). [ ಚೌ$_1$ + ಸುತ್ತು$_2$ ]

**ಚೌಸೊಪ್ಪಿ**, ಚೌಸೊಪ್ಪು (ನಾ). (ಉಕ) ಅಂಗಳದ ಸುತ್ತಲೂ (ಎತ್ತರವಾದ ಕಟ್ಟೆಗಳ ಮೇಲೆ) ಇರುವ ಪಡಸಾಲೆ: ಇವನ್ನ ಚೌಸೊಪ್ಪಿಯ ಕಿಂಡಿಯೊಳಗಿಂದ ಒಳಗಿಳಿಸಿ ಬಾಗಿಲ ತೆಗೆಯಲಿಕ್ಕೆ ಹೇಳೋಣ (ಮೇದಿವು. ೧೭). **ಚೌಸೊಪ್ಪು**: ಮಹಾದ್ವಾರವನ್ನು ದಾಟಿದ ನಂತರ ವಿಶಾಲವಾದ ಕಲ್ಲಿನ ಚೌಸೊಪ್ಪು (ದೀಪಹ. II, ೮೭). [ ←ಮರಾ. ಚೌಸೋಪೀ ]

**ಚೌಸೊಪ್ಪು** 'ಚೌಸೊಪ್ಪಿ' ನೋ.

**ಚೌಹಂಚಿ** 'ಚೌಪಂಚಿ' ನೋ.

**ಚೌಳ** 'ಚೌಲ$_1$' ನೋ.

**ಚೌಳಾರೆ** (ನಾ). "ಚೌಳುಮಣ್ಣು ಏಳುವ ಪ್ರದೇಶ" (ನನ್ನೂರು. ಟಿಪ್ಪಣಿ): ನನ್ನೂರಿನ ಕೆರೆಯ ಹಿಂದಿರುವ ಚೌಳಾರೆಯಲ್ಲಿ ಬೆಳ್ಳನೆ ಚೌಳು ಸಿಕ್ಕುತ್ತದೆ (ನನ್ನೂರು. ೨೯೨). [ ಚೌಳು (<ಸವುಳು$_1$) + ಅರೆ$_6$ ]

**ಚೌಳಿ$_1$**, ಚವುಳಿ (ನಾ). ಒಂದು ಬಗೆಯ ಇರುವೆ; ಕೆಂಜಿಗ; ಉರಿ (ಕರಾ): ಗುರುವ ಮರದ ಮೇಲಿಂದ ಚೌಳಿಮೊಟ್ಟೆಯೊಂದನ್ನು ಕಿತ್ತು ತಂದ (ಅನಾಥ. ೧೯೩). **ಚವುಳಿ**: ಮರದ ತುಂಬಾ ಚವುಳಿ ತುಂಬಿಕೊಂಡಿವೆ (ರೂಢಿ). [ ? ]

**ಚೌಳಿ$_2$** (ನಾ). (?): ರಾಜ್ಯವನಾಳುವ ಕಾಲದಲೂ ಚೌಳಿಯ ಕೇರಿಯ ವೊಳಗೆ (ಸೌಇಂ. ೧೯೩೨, ಉಡುಪಿ. ೨೬೯-೧೦; 1412): ಬಸವಿಸೆಟಿ ಕಯ್ಯಾಲು ಚೌಳಿಯ ಕೇರಿಯ ಅಯಿವರು (ಸೌಇಂ. ೧೯೩೨, ಉಡುಪಿ. ೨೬೮-೦೨; ?).

[ ? ]

**ಚೌಳಿಕ** (ನಾ). ಚೋಳದೇಶದ ರಾಜ: ಚಲಮಂ ಕೈಕೊಣ್ಡ ಕಟ್ಟಾಳ್ಗಲರಧಿಕರಣ(ದಿ)ಂದ ಬಲ್ಲಾಳ್ಕರಂ ತೋಳ್ವಲಮಂ ಕೊಂಡಾಡಿದುರ್ಕ್ಕೊಳಿನಿಸಿದ ಬಿರುದಂ ಚೌಳಿಕಂ ತನ್ನ ಚಾತುರ್ಬ್ಬಲದಿಂ ಬಂದುಡ್ಡೆ ವೆನ್ನಡ್ವಿಷಘಟೆಯುನಿಘೇಂದ್ರಾರಿ ಪೊಕ್ಕಂತೆವೋಲ್ (ಕಇಂ. ೨-೨-೩೦; 1068). [ <ಚೋಳಿಕ ]

**ಚೌಳಿಸು** (ಕ್ರಿ). ಅಗಿ; ಚರ್ವಣಮಾಡು: ಹಸ್ತವಂ ಕೊಳದಲ್ಲ ಖುಳ್ಳಿರ್ದುರ್ವೀಳ್ಯಮಂ ಮತ್ತಲ್ಲಿ ಚೌಳಿಸುತಲಿರೆ ಮದ್ಯಪಾನಗಳ್ಮೆತ್ತಿಗಡರಿತು (ತುರಂಗ. ೮೮-೬). [ ? + – ಇಸು$_3$ ]

**ಚೌಳು** 'ಸವುಳು$_1$' ನೋ.

**ಚೌಳುನೀರು** 'ಸವುಳುನೀರು' ನೋ.

**ಚೌಳುನೆಲ** 'ಸವುಳುನೆಲ' ನೋ.

**ಚೌಳುಪ್ಪು** 'ಸವುಳುಪ್ಪು' ನೋ.

**ಚೌಳುಭೂಮಿ** 'ಸವುಳಂಭೂಮಿ' ನೋ.

**ಚೌಳುಮಣ್ಣು** 'ಸವುಳುಮಣ್ಣು' ನೋ.

**ಚ್ಯವನ** (ಗು). ೧. ಚಲಿಸುವಂತೆ ಅಥವಾ ಹೋಗುವಂತೆ ಮಾಡುವ. (ನಾ). ೨. ಚಲಿಸುವುದು; ಚಲನೆ. ೩. ಬೀಳುವುದು; ಜಾರುವುದು: ಅವನೀಕಂಪನಮಬ್ಧಿಘೋಷಣಮರಣ್ಯೋನ್ಮೂಲನಂ . . . ತಾರಕಾಚ್ಯವನಂ ಪದ್ಮಭವಾಂಡ ನಿರ್ದಳನಮಾಯ್ತುಸ್ಮದ್ಬಲಾಟೋಪದಿಂ (ಜಗವಿ. ೭-೪೩). ೪. ಒಬ್ಬ ಋಷಿಯ ಹೆಸರು: ಚ್ಯವನಂ ಪುರೋಹಿತನಾಗೆ ರಾಜಂ ಯಾಗಮಂ ತೊಡಂಗಿ (ರಾಮಾಶ್ವ. ೭೦-೮). [ ಸಂ. ]

**ಚ್ಯುತ** (ಗು). ೧. ಬಿದ್ದ; ಜಾರಿದ. ೨. ಸ್ರವಿಸಿದ. ೩. ಕಳೆದ; ನಷ್ಟವಾದ: ಸ್ತುತಿಗೆಯ್ವಂ . . . ಶತಪತ್ರಾಕ್ಷ ಕಥಾಮೃತಚ್ಯುತಸ್ತೋಮಾಘನಂ ಮಾಘನಂ (ಜಗವಿ. ೧-೮). ೪. ಭ್ರಷ್ಟ. (ನಾ). ೫. ಕಳೆದುಕೊಂಡವನು: ರೋಷಚ್ಯುತಂ ವಾಲಿ ಶಾಂತನಾದಂ (ಶ್ರೀರಾಮಪಾ. ೩೦೦-೨೩೦). ೬. ಹೊರದೂಡಿಸಿಕೊಂಡವನು. 'ನಾಕಚ್ಯುತ' ಪರಾ.

[ ಸಂ. ]

**ಚ್ಯುತಕ್ರಮ** (ನಾ). = ಚ್ಯುತಯಾಥಾಸಂಖ್ಯ: ಶಬ್ದಪುನರುಕ್ತಿ ಅರ್ಥಪುನರುಕ್ತಿ ಅರ್ಥಲೋಪ ವಿರುದ್ಧಾರ್ಥ ಚ್ಯುತಕ್ರಮ ವ್ಯವಹಿತ ವಿಸಂಧಿ ನೇಯಾರ್ಥವೆಂಬೆಂಟು ಶಬ್ದದೋಷಂಗಳಿಲ್ಲದೆ (ವಿವೇಕ. ೨೨೬).

[ ಚ್ಯುತ + ಕ್ರಮ ]

**ಚ್ಯುತತ್ವ** (ನಾ). ೧. ಚಲಿಸುವ ಸ್ಥಿತಿ. ೨. ಮುಳುಗಿರುವಿಕೆ. [ ಸಂ. ]

**ಚ್ಯುತದತ್ತಾಕ್ಷರ** (ನಾ). [ಕಾವ್ಯಮೀ] ಒಂದು ಬಗೆಯ ಚಿತ್ರಕವಿತೆ; ಪದ್ಯದಲ್ಲಿ ಒಂದು ಅಕ್ಷರವನ್ನು ತೆಗೆದು ಅದೇ ಸ್ಥಾನದಲ್ಲಿ ಮತ್ತೊಂದು ಅಕ್ಷರವನ್ನಿಟ್ಟಾಗ ಹೊಸ ಅರ್ಥವು ಸ್ಫುರಿಸುವಂತೆ ಮಾಡುವುದು: ಚ್ಯುತದತ್ತಾಕ್ಷರಮುಂ ಗೋಪಿತಕ್ರಿಯಾಕಾರಕಂ ನಿಗೂಢಚತುರ್ಥಂ ಪ್ರತಿನಿಯತ ಗತಪ್ರತ್ಯಾಗತಂ ದಲೆಂದಿಂತು ಪೆಱವುಮಕ್ಕುಂ ಚಿತ್ರಂ (ಕಾವ್ಯಾವ. ೫೦೬).

[ ಚ್ಯುತ + ದತ್ತ + ಅಕ್ಷರ ]

**ಚ್ಯುತಯಾಥಾಸಂಖ್ಯ** (ನಾ). [ಕಾವ್ಯಮೀ] ಕಾವ್ಯದೋಷಗಳಲ್ಲಿ ಒಂದು; ಮೊದಲು ಹೇಳಿದ ಉದ್ದೇಶಪದಗಳಿಗೂ ಮುಂದೆ ಹೇಳುವ ವಿಧೇಯಪದಗಳಿಗೂ ಯಥಾಸಂಖ್ಯವಾಗಿ ಅನ್ವಯವಾಗದಿರುವುದು: ಯತಿಭಂಗಮರ್ಥಶೂನ್ಯಂ . . . ಚ್ಯುತಯಾಥಾಸಂಖ್ಯಂ ವ್ಯವಹಿತಮಚ್ಛಂದಂ ವಿಸಂಧಿಕಂ ನೇಯಾರ್ಥಂ (ಕವಿರಾ. ೧-೬೮).

[ ಸಂ. ]

**ಚ್ಯುತಸಂಸ್ಕಾರ** (ನಾ). [ಕಾವ್ಯಮೀ] ಪದದೋಷಗಳಲ್ಲಿ ಒಂದು; ಅಶುದ್ಧಪದಗಳ ಪ್ರಯೋಗ: ದೋಷವುಳ್ಳ ಪದಗಳನ್ನು – ೧. ಶ್ರುತಿಕಟು, ೨. ಚ್ಯುತಸಂಸ್ಕಾರ, ೩. ಅಪ್ರಯುಕ್ತ . . . ೧೩. ವಿರುದ್ಧಮತಿಕೃತ್ ಎಂದು ವಿಭಾಗಿಸಬಹುದು . . . ಚ್ಯುತಸಂಸ್ಕಾರ–ವ್ಯಾಕರಣಕ್ಕೆ ವಿರುದ್ಧವಾಗಿರುವುದು (ಕ್ವಬಿಡಿ. ೨೨೬).

[ ಚ್ಯುತ + ಸಂಸ್ಕಾರ ]

**ಚ್ಯುತಿ** (ನಾ). ೧. ಜಾರುವುದು; ಸ್ಖಲನ. ೨. ಬೀಳುವುದು; ಪತನ. ೩. ನಾಶವಾಗುವುದು; ಹಾನಿ; ಲೋಪ: ಚ್ಯುತಿಯಲ್ಲದ ತಾಣಂ ನಿರ್ವೃತಿಯೊಂದೆ ದಲ್ (ಪಾರ್ಶ್ವಪು. ೭-೬೬): ಹೇಳು ಹೇಳೀ ನಾಸಿಕಚ್ಯುತಿಯಾರ ದೆಸೆಯಿಂದ ಮೇಳವಿಸಿದುದು (ತೊರರಾ. ೩-೫-೪): ನಿರ್ಮಳಕೀರ್ತಿಚ್ಯುತಿಗಧಟನಪ್ಪುಡಂ ಭೂಪತಿಯಳ್ಕಲ್ವೇಳ್ಕುಂ (ರಾ ಜ ಶೇ . ೧ ೩ – ೨ ೨). **ಚ್ಯುತಿಬರು** = ಹಾನಿಯಾಗು; ಭಂಗವಾಗು: ಅತ್ತಾಗಲೆಲ್ಲಾ ಮಗುವಿಗೆ ಹಾಲನ್ನು ಕೊಟ್ಟರೆ, ಮಗುವಿನ ಆರೋಗ್ಯಕ್ಕೆ ಚ್ಯುತಿಬರುತ್ತದೆ (ಗೃಹವಿ. ೧೦೩). [ ಸಂ. ]

✱

**ಛ** (ನಾ). ೧. ಕನ್ನಡ ವರ್ಣಮಾಲೆಯ ಇಪ್ಪತ್ತೇಳನೆಯ ಅಕ್ಷರ ; ಛಕಾರ. ೨. ಏಳು ಎಂಬ ಸಂಖ್ಯೆಯ ಸಂಕೇತ : "ಛಥಸಮದೇಟು" (ಮಂಗರಾ. ೧೧೪-೧೦).

**ಛಂಗನೆ** (ಅ). ಚಕ್ಕನೆ ; ಕೂಡಲೆ ; ಚಂಗನೆ : ಆ ಹುಲಿ . . . ಛಂಗನೆ ಪಕ್ಕಕ್ಕೆ ನೆಗೆದು ಕಾಡಿನಲ್ಲಿ ಕಣ್ಮರೆಯಾಯಿತು (ಕಳಹು. ೬).
[ ಛಂಗ್$_0$ + – ಅನೆ$_1$ ]

**ಛಂದ$_1$,** ಚಂದ$_3$ (ನಾ). ೧. = ಛಂದಸ್ಸು ೫ : ಅಲ್ಲಿ ಉಕ್ತೆ . . . ಉತ್ಕೃತಿ ಎಂದಿಪ್ಪತ್ತಾರುಂ ಛಂದಂಗಳಕ್ಕುಂ (ಛಂದೋಂಬು. ೦-೪೬ ವ) ; ಕನ್ನಡ ಛಂದದಲ್ಲಿ ವಿಷ್ಣುವೇ ಪ್ರಧಾನ ಗಣ (ಛಂದೋವಿ. ೮೬). ೨. ಇಪ್ಪತ್ತಾರು ಎಂಬ ಸಂಖ್ಯೆಯ ಸಂಕೇತ: "ಛಂದಮೆನಲಿಪ್ಪತ್ತಾರುಂ" (ಮಂಗರಾ. ೧೧೪-೯). **ಚಂದ$_3$** : ೧. "ಚಂದಮೆಂದು ಛಂದಂ" (ಕಶಸಾ. ೧೨-೨೪೯); "ಚಂದಮೆನೆ ಛಂದಮದು ತಾಂ" (ಕವಿಕಂ. ೧೦೬) ; ಜಿನೇಂದ್ರ ಕಥಾಪ್ರಸಂಗವನೇಚಂದದಿಂ ಭಾವಿಸುವ ಚಂದದೊಳೊಂದಿಸುವ . . . ಕಬ್ಬಿಗನವೊಲು ಧನ್ಯನವನಾರೋ (ಸಾಳ್ವಭಾ. ೧-೩೮).
[ < ಸಂ. ಛಂದಸ್ ]

**ಛಂದ$_2$** (ನಾ). ೧. ಅಂದವಾದುದು ; ಚೆಲುವಾದುದು ; ರಮ್ಯವಾದುದು : ಜಂಬುಕ ಶಸ್ತ್ರದ ಫಳವ ನುಂಗಿ ಜಂಬೂದ್ವೀಪವೆಲ್ಲಾ ಪ್ರಳಯವಾಯಿತ್ತು ಎಂದಡೆ ಅದು ಛಂದವೇ (ಸರ್ವವ. ೪೨-೧೧೯). ೨. ರೀತಿ ; ಭಂಗಿ : "ಸ್ವಸ್ತಿಕಃ, ವರ್ಧಮಾನಃ, ನಂದ್ಯಾವರ್ತ — ಈ ೩ ಮೊದಲಾಗುಳ್ಳುವು ಅರಮನೆಯ ಛಂದಂಗಳ್" (ಹಲಾಯು. ೫೧-೦೫೦) ; "ಭಂಗಿಯೆನೆ ವ್ಯಾಕೃತಿಯೆನಲು ಛಂದಮೆಂದೆನಿಕು" (ಮಂಗರಾ. ೧೩೨-೨೩); ಕಂದ ನೀಂ ಕಡುಗಾಯ್ದು ಛಂ[ಪಾಠಾ. ಚಂ]ದವಾಯ್ತೆನುತೋವಿ ಕಂದನಂ ನೋಡುತಂ ಕಣ್ಣನೀರಂ ತೀವಿ (ಜಂಜೀರ. ಹ. ೧೩೭-೨೭) ; ಹರಿ ಕಟಕಿಯಲಿ ನಾನಾಛಂದದಲಿ ಮೂದಲಿಸಿ (ಅಕ್ರೂ.ಚ. ೭-೯೦) ; ವೆಂಕಣ್ಣ ದಿನಕ್ಕೊಂದು ಛಂದಾಗಿ ಸೊರಗಹತ್ತಿದ (ಸಾವಿಲಾ. ೨೦೪). ೩. ಸಂತೋಷ ; ಹರ್ಷ: ಬಂದ ಛಂದವನು ಶರಣನಾಡಿನ ವಾರ್ತೆಯಂ ವಿಸ್ತರಿಸಿ ಹೇಳುತ್ತ (ಬಸವು. ೨೯-೧೯) ; ಇಂದುವದನೆಯರಾ ಸುದಾಮಗೆ ಛಂದದಿಂದಾರತಿಯನೆತ್ತಿದರು (ಸುದಾಮು. ೩-೩). ೪. ಇಚ್ಛೆ ; ಪ್ರೀತಿ ; ಆಸಕ್ತಿ :ಪಾಂಡುಪುತ್ರರ ಛಂದವನು ತಾನಱಿಯದೆ (ಕಂವ್ಯಾಳ. ೭೧೩. ೨೪-೦೮). [ ಸಂ. ]

**ಛಂದಂಬಡೆ** (ಕ್ರಿ). ಮನೋಹರವಾಗು : ಛಂ[ಪಾಠಾಂ. ಚಂ]ದಂಬಡೆ [ಪಾಠಾಂ. ಬಿಡಿ]ದಿರೆ ದೇವಚ್ಛಂದಂ ಮಣಿತೋರಣಂಗಳೆಡೆಯೊಳ್(ಪಾರ್ಶ್ವಪು. ೧೩-೭). [ ಛಂದ$_2$ + ಪಡೆ$_1$ ]

**ಛಂದಕ** (ನಾ). ೧. = ಛಂದ$_2$. ೨. ವಿಷ್ಣು. ೩. ಸಂರಕ್ಷಕ. [ ಸಂ. ]

**ಛಂದಶ್ಶಾಸ್ತ್ರ** (ನಾ). ಛಂದಸ್ಸನ್ನು ವಿವರಿಸುವ ಶಾಸ್ತ್ರ; ವೇದದ ಆರು ಉಪಾಂಗಗಳಲ್ಲಿ ಒಂದು : ಪದ್ಯಗಳ ನಿಯಮವನ್ನು ಛಂದಶ್ಶಾಸ್ತ್ರವು ತಿಳಿಸುವುದು (ಕೃಪಿಡಿ. ೬೯) ; ಕಾವ್ಯವೆಂಬ ಸಾಗರವನ್ನು ಪ್ರವೇಶಿಸುವಾತನಿಗೆ ಛಂದಶಾಸ್ತ್ರವು ಹಡಗು (ಸಂಕೋಧ. ೯೪).
[ ಸಂ. (ಛಂದಸ್ + ಶಾಸ್ತ್ರ) ]

**ಛಂದಸಿಗ** 'ಛಾಂದಸಿಗ' ನೋ.

**ಛಂದಸ್ಸು** (ನಾ). ೧. ವೇದ ; ವೇದಮಂತ್ರ : ಹೀಗೆ ಪೂರ್ಣವಾಗಿ ಹುತನಾದ ಪುರುಷನಿಂದಲೇ . . . ಸಾಮವೇದ, ಛಂದಸ್ಸು — ಎಲ್ಲವೂ ಹುಟ್ಟಿದುವು (ಛಾರಿದ. ೨೭). ೨. ಇಚ್ಛೆ ; ಅಪೇಕ್ಷೆ ; ಅಭಿಲಾಷೆ. ೩. ಸ್ವೈರಾಚಾರ; ಸ್ವತಂತ್ರೇಚ್ಛೆ; ಸ್ವಚ್ಛಂದ ವರ್ತನೆ. ೪.=ಛಂದಶ್ಶಾಸ್ತ್ರ: ಛಂದಸ್ಸು ಲಕ್ಷಣಮಲಂಕಾರ ಭಾವರಸವೊಂದೆ ಕಳೆವೆತ್ತ ಸತ್ಕೃತಿ (ಜ್ಞಮಿಭಾ. ೧-೬); ಭಾಷೆಗೆ ವ್ಯಾಕರಣದಂತೆ ಛಂದಸ್ಸೂ ಸಾಧಕವಾಗಿರುವುದು (ಕೃಪಿಡಿ. ೬೯). [ ಸಂ. ಛಂದಸ್ ]

**ಛಂದೋಗತಿ** (ನಾ). ಲಯಬದ್ಧವಾದ ಗಮನ: ಹಗಲಿರುಳು ತಿರುಗಿದವು ಜಗದ ಛಂದೋಗತಿಗೆ (ನೆಲಮು. ೪೪-೧೪). [ ಸಂ. (ಛಂದಸ್ + ಗತಿ) ]

**ಛಂದೋನಿಬಂಧನ** (ನಾ). ೧. ಛಂದಸ್ಸಿನ ಕಟ್ಟುಪಾಡು. ೨. ಛಂದಸ್ಸಿನಲ್ಲಿ ರಚಿತವಾದ ಪ್ರಬಂಧ ; ಪದ್ಯಕಾವ್ಯ : ಛಂದೋನಿಬಂಧನದಂತೆ ಯತಿಗಣಮುಂ . . . ಎಂಬ ಮಹನೀಯ ಮಹಿಮೆಯಂ ತಳೆದು (ಪುಷ್ಪಪು. ೯-೩೦ ವ). [ ಸಂ. (ಛಂದಸ್ + ನಿಬಂಧನ) ]

**ಛಂದೋಭಂಗ** (ನಾ). [ಕಾವ್ಯವಿಮ] ಒಂದು ಬಗೆಯ ಕಾವ್ಯದೋಷ ; ಪದ್ಯದ ರಚನೆಯಲ್ಲಿ ಛಂದಸ್ಸು ತಪ್ಪಿರುವುದು ; ಛಂದಸ್ಸಿನ ನಿಯಮವನ್ನು ಮೀರುವುದು: ಗುರುಲಘುವಿನ್ಯಾಸಕ್ರಮವಿರಚನೆಯೊ ನಾತಿರಿಕ್ತಮಾದೊಡೆ ಕೃತಿಯೊಳ್ ನಿರುತಂ ಛಂದೋಭಂಗಂ (ಕವಿರಾ. ೧-೯೦). [ ಸಂ. (ಛಂದಸ್ + ಭಂಗ) ]

**ಛಂದೋವತಂಸ** (ನಾ). [ಛಂದ] ದೇಶೀಛಂದಸ್ಸಿಗೆ ಸೇರಿದ ಒಂದು ವೃತ್ತ : ಮಂದರಧರಗಣಮೆಸೆದಿರೆ ಮೊದಲೊಳೆ ಬಂದಿರೆಯುಂ ನಾಲ್ಕೆಡೆ ಬಿಸರುಹಜನ್ಮಂ ಸಂದುದು ಲಕ್ಷಣಮವನಿಯೊಳೀ ತೆಱದಿಂ ಛಂದೋವತಂಸ ಕೆಸೆದುದು (ಛಂದೋಂಬು. ೫-೨೫೩). [ ಸಂ. ]

**ಛಂದೋವಿಚ್ಛಿತ್ತಿ** (ನಾ). ೧. [ಛಂದ] ಛಂದಸ್ಸುಗಳ ಭೇದ. ೨. [ಛಂದ] ಛಂದಸ್ಸುಗಳ ವೈಚಿತ್ರ್ಯ,-ಚಮತ್ಕಾರ: ಗೌಡವೈದರ್ಭಮಾರ್ಗದ್ವಯ ರಮಣೀಯಮುಮಂ ಅಪ್ಪ ಕಾವ್ಯಗುಣದೋಷೋದ್ಭಾವಮಂ ಛಂದೋವಿಚ್ಛಿತ್ತಿಯುಮಂ ಪೇಟ್ಟುಂ (ಶಶ್ರ್ಯಪ್ರ. ೬೩).
[ ಸಂ. (ಛಂದಸ್ + ವಿಚ್ಛಿತ್ತಿ) ]

**ಛಂದೋವಿದ್ಯೆ** (ನಾ). = ಛಂದಶ್ಶಾಸ್ತ್ರ : ಮತ್ತಮತಿಲಲಿತಮತಿವಳ ಛಿಚ್ಛಂದಂಗಳಿಂ ಛಂದೋವಿದ್ಯೆಯುಮಂ . . . ವಿವಾಹಮುಮ್ ನನುಕರಿಸಿ ಶೋಭಿಸುವುದು (ಸುಕುಮಾ. ೦೦-೫೦ ವ).
[ ಸಂ. ಛಂದೋವಿದ್ಯಾ (ಛಂದಸ್ + ವಿದ್ಯಾ) ]

**ಛಂದೋವೃತ್ತ** (ನಾ). [ಛಂದ] ಪ್ರತಿಪಾದದಲ್ಲೂ ಇಪ್ಪತ್ತು ಅಕ್ಷರಗಳು ಬರುವ ಒಂದು ಅಕ್ಷರ ವೃತ್ತ: ರಂನಭಂಮಸಸಲಂಗಮ ಛಂದೋವೃತ್ತಮದೆಂದುಱಿ ಪೇಟ್ದಪರ್ (ಕೃಪಿಡಿ. ೮೭). [ ಸಂ. (ಛಂದಸ್ + ವೃತ್ತ) ]

**ಛಕಡಿ** 'ಚಕ್ಕಡಿ$_2$' ನೋ.

**ಛಕಾರ** (ನಾ).=ಛ ೧ : ಛಕಾರಕ್ಕೆ ಚಕಾರಂ— ಛವಿ – ಚವಿ (ಶಮದ. ೨೫೫ ಪ್ರಯೋ). [ ಸಂ. ]

**ಛಕ್ಕ** 'ಚಕ್ಕ$_2$' ನೊ .

**ಛಕ್ಕಡಿ** 'ಚಕ್ಕಡಿ$_2$' ನೋ.

**ಛಗ** (ನಾ). ಗಂಡುಮೇಕೆ ; ಹೋತ : "ಅಜಃ . . . ಛಗಃ— ಈ ೬ ಹೋತು" (ಹಲಾಯು. ೬೪-೦೨೨). [ ಸಂ. ]

**ಛಗಭಕ್ಷ** (ನಾ). ಒಂದು ಬಗೆಯ ಸಸ್ಯ ; ಕಬ್ಬಳ್ಳಿ : "ಛಗಭಕ್ಷಮೆನಲ್ಕೆದೆ ಕಬ್ಬಳಿ" (ಮಂಗರಾ. ೪೪-೪೫). [ ಸಂ. ]

**ಭಗಲಕ,** ಭಗಳಕ (ನಾ).=ಭಗ: "ತುಭಃ, ಛಾಗಃ, ಬಸ್ತಃ, ಭಗಲಕಃ, ಅಜಃ ಶಿ ಆಡುಹೋರಿ, ಗಂಡಾಡು, ಹೋತ" (ಸಿದ್ಧಾಂತಿ. ೨೩೪). **ಭಗಳಕ:** "ಅಜಃ . . . ಭಗಳಕಃ, ಭಗಃ–ಈ ೬ ಹೋತು" (ಹಲಾಯು: ೪೭–೧೨೨). [ ಸಂ. ]

**ಭಗಲಾಂಡಿ** (ನಾ).ಒಂದು ಬಗೆಯ ಸೊಪ್ಪು; ಅನಂತನಗೊಂಡೆಸೊಪ್ಪು: "ಋಕ್ಷಗಂಧಾ, ಭಗಲಾಂಡೀ, ಆವೇಗೀ, ವೃದ್ಧದಾರಕಃ, ಜುಂಗಃ ಶಿ ಅನಂತನಗೊಂಡೇಸೊಪ್ಪು" (ಸಿದ್ಧಾಂತಿ. ೧೨೬). [ ಸಂ. ಭಗಲಾಂಡೀ ]

**ಭಗಲಾಂತ್ರಿ** (ನಾ). = ಭಗಲಾಂಡಿ: "ಭಗಲಾಂಡೀ . . . ಭಗಲಾಂತ್ರೀ ಯೆಂದು ಪಾಠಾಂತರವು" (ಗುವಿವೋ. ೧೭೩). [ ಸಂ. ಭಗಲಾಂತ್ರೀ ]

**ಭಗಳಕ** 'ಭಗಲಕ' ನೋ.

**ಭಜ್ಜ,** ಚಜ್ಜ, ಚೆಜ್ಜ(ನಾ). ೧. ಕಟ್ಟಡದ ಗೋಡೆಯಿಂದ ಹೊರಚಾಚಿ ಕೊಂಡಿರುವ ಛಾವಣಿಯ ಭಾಗ; ಕಿಟಕಿ, ಬಾಗಿಲುಗಳ ಮೇಲೆ ಚಾಚಿ ಕೊಂಡಿರುವ ಛಾವಣಿ: ದ್ವಾರದಲ್ಲಿ ದ್ವಾರಪಾಲಕರು, ಜಾಲಂದ್ರ ಮುಂದಕ್ಕೆ ಚಾಚಿರುವ ಭಜ್ಜ (ಹೊಯ್ಸವಾ. ೧೩೮). **ಚಜ್ಜ: ೨.** ಸಾಮಾನು ಗಳನ್ನಿಡಲು ಗೋಡೆಯಿಂದ ಮುಂದೆ ಚಾಚಿರುವ ಹಲಗೆಯಂತಹ ಭಾಗ; ಬಡು: ಮನೆಗಳಲ್ಲಿ ಚಜ್ಜಗಳಿದ್ದರೆ ಸಾಮಾನುಗಳನ್ನಿಡಲು ಅನು ಕೂಲ (ರೂಢಿ). **ಚೆಜ್ಜ: ೧.** ಕಿಟಕಿ, ಬಾಗಿಲುಗಳ ಮೇಲೆ ಚೆಜ್ಜ ಇರುವುದ ರಿಂದ ಮಳೆಯ ನೀರು ಮನೆಯ ಒಳಗೆ ಬರುವುದಿಲ್ಲ (ರೂಢಿ). **೩.** ಮೇಲ್ಛಾ ವಣಿ; ವಿತಾನ: ಬಾನ ಚೆಜ್ಜದ ಕೆಳಗೆ ಹೆಬ್ಬಾವಿನುಬ್ಬಸದ ಹತ್ತಿಬಲ್ಲಿನ ಕಸದ ಕತ್ತಲೆಯಲಿ ನಿರ್ನಾಮವಾಗಿರುವ ನೀಲ ನಗರಾವಳಿಯ (ಶಿಲಾಲಿ. ೮೧–೫). [ ←ಹಿಂ. ಛಜ್ಜಾ ].

**ಭಟ್** (ನಾ). ೧. ಒಂದು ಅನುಕರಣ ಶಬ್ದ: ಭಟ್ ಅಂತ ಒಂದೇಟು ಕೊಟ್ಟೆ (ರೂಢಿ). ೨. ನಾಶ; ಹಾಳು: ಕುಡ್ಕುರ್ಕೆಗೆ ಸಿಕ್ಕ ಕುಡ್ಕೆ ಹೊನ್ನು/ ಮೂರ್ದಿ ವಸ್ದಲ್ ಭಟ್ (ಸಿಡಿಲು. ೫೫). 'ಚಟ್' ಪರಾ.

**ಭಟಚ್ಛಟ**(ನಾ). ಒಂದು ಅನುಕರಣ ಶಬ್ದ: ನಿಶಾಟರನುಂಡನಗ್ನಿ ಭುಮ್ಮೆಂಬ ಭಟಚ್ಛಟೆಂಬ ಧಗಯೆಂಬ ಧಗದ್ಧಗಯೆಂಬ ಧಟ್ಟುಪೊಟ್ಟೆಂಬ ರವಂ ಕಟು ತ್ತಡಸಿ ಮೆಲ್ಲ ಸರಕ್ಕನುಸಾರಿಯುಪ್ಪಿನಂ (ಕಾವ್ಯಾವ. ೨೮).

**ಭಟಭಟ** (ನಾ). ಒಂದು ಅನುಕರಣ ಶಬ್ದ: ಹೊರಳಿಗಿಡಗಳ ಭಟಭಟ ಧ್ವನಿ ಮಸಗಿತಡಿಗಡಿಗೆ (ಕುವ್ಯಾಳ. ೨೫–೫); ಭಟಭಟ ಧ್ವನಿಯಿಂದೆ ಬಿಸಿಯ ಕೆಂಗಿಡಿ ಗಳು ಪುಟನೆಗೆದುವು ನಭಸ್ಥಳಕೆ (ಮೋಹಜ. ೪೦–೩೮).

**ಭಟಭಟನೆ** (ಅ). ಭಟಭಟ ಎಂಬ ಶಬ್ದದೊಡನೆ: ಭಟಭಟನೆ ಕಿಡಿಯುಲ್ಕೆ ನೋಡುತ (ಬಸಪು. ೨೩–೦೬): ಅಗ್ಗರಣೆಯುಂ ಭಟಭಟನೆ[ಪಾಠಾಂ. ದಟದಟ] ಕೀಳ್ತು (ರಾಜಶೇ. ೬–೧೦ ವ). [ ಭಟಭಟ + – ಅನೆ$_1$ ]

**ಭಟಭಟಿಸು** (ಕ್ರಿ). ಭಟಭಟ ಎಂದಂ ಧ್ವನಿಮಾಡಂ: ಮಕುಟಬದ್ಧ ಮಹೀಶ ವೇಣುಪ್ರಕರದಲಿ ಭಟಭಟಿಸಿ . . . ಬೀದಿವರಿದುದು ಭೀಮದಾವಾಗ್ನಿ (ಕುವ್ಯಾದ್ರೋ. ೧೨–೨೪). [ ಭಟಭಟ + – ಇಸು$_3$ ]

**ಭಟಪಟ** (ನಾ). ಒಂದು ಅನುಕರಣ ಶಬ್ದ: ಕಾಳುಗಳು ಭಟಪಟ ಎಂದು ಸಿಡಿದುವು (ರೂಢಿ). 'ಚಟಪಟ' ಪರಾ.

**ಭಟೆ** (ನಾ). ೧. ಸಮೂಹ; ಗುಂಪು: ಮಂಡಿತೋರುಜಟಾಭಟಾ[ಪಾಠಾಂ. ಟ]ಪ್ರೋದ್ದಂಡಹತಿಯಿಂ (ಬಸಪು.೧೭–೧೮). ೨. ಕಾಂತಿ; ದೀಪ್ತಿ; ಪ್ರಕಾಶ: ಮಂಡಳಿಸಿ ನಿಂದುವೀಕೆಯ ಪಾಂಡುರಲೋಲತ್ಕಟಾಕ್ಷಮಾಲಾಚ್ಛಟೆಗಳ್ ಗಂಡಸ್ಥಳದೊಳೆಸಲ್ (ಜಗವಿ. ೧೧–೧೨೧). [ ಸಂ. ಛಟಾ ]

**ಭಟ್ಟನೆ** (ಅ). ಕೂಡಲೇ; ತಟ್ಟನೆ: ಗುಂಡಪ್ಪ ಭಟ್ಟನೆ ಮೇಲಕ್ಕೆದ್ದ (ಕೊನೆಘೇ. ೧೧). [ ಭಟ್ + – ಅನೆ$_1$ ]

**ಭಟ್ಟಿ,** ಚಟ್ಟಿ$_4$, ಚಿಟ್ಟಿ$_2$ (ನಾ). ೧. ಚಾಂದ್ರಮಾನ ಗಣನೆಯಲ್ಲಿ ಪಕ್ಷದ ಆರನೆಯ ತಿಥಿ; ಷಷ್ಠಿ: ಜ್ಯೇಷ್ಠ ಬಹುಳ ಭಟ್ಟಿ [ಪಾಠಾಂ. ಷಷ್ಠಿ]ಯು ಬೆಳಗಪ್ಪ ಜಾವದೊಳ್ . . . ಷೋಡಶ ಸ್ವಪ್ನಂಗಳಂ ಕಂಡು (ಪಾವುಂಪು II, ೨೫–೧೧); ಪೌಷ್ಯ ಸುದ್ಧ ಭಟ್ಟಿ ಸೋಮವಾರದಂದು (ಎಕ. XI, ಚಿತ್ರದು. ೪೭–೨೧ ; 1067). ೨. (ಉಕ) ಕಾರ್ತಿಕಮಾಸದಲ್ಲಿ ಬರುವ ಅಮಾವಾಸ್ಯೆ: ಭಟ್ಟೀ ಮುಂದಿನ ಬಿಟ್ಟಿ ಮೋಡವು ಬಂದು (ಸವೀಗೀ. ೧೨–೧). **ಚಟ್ಟಿ$_4$:** ೧. "ಷಷ್ಠೀ–ಚಟ್ಟಿ" (ಶಮಜ. ೨೮೨ ಪ್ರಯೋ); "ಚಟ್ಟಿಯೆ ಷಷ್ಠಿಯೊಳ್" (ಕರ್ಣಾನಿ.೨೯); ಮಾಘ ಶುದ್ಧ ಚಟ್ಟಿ ಸೋಮವಾರಂ (ಎಕ. XI, ದಾವಣ. ೧೭–೩: 889); ಚಟ್ಟಿದಿನ ಬಿಟ್ಟಿಗೂ ಹೋಗಬೇಡ (ಗಾದೆ). **ಚಿಟ್ಟಿ$_2$:** ೧. ಆದರದಿಂದಾಶ್ವಯುಜದೊಳಾದಾ ಚಿಟ್ಟಿಯೊಳೆ ಚಂದ್ರನಿರೆ (ಅಟ್ಟಮು. ೮–೧೬). [ <ಪ್ರಾ. ಛಟ್ಠೀ./ಸಂ. ಷಷ್ಠೀ ]

**ಭಡ** 'ಚಢ' ನೋ.

**ಭಡಕಿ** 'ಚಡಿಕೆ' ನೋ.

**ಭಡತ** 'ಚಡಿತ$_1$' ನೋ.

**ಭಡಸವಾಲು** 'ಚಢಸವಾಲು' ನೋ.

**ಭಡಸವಾಲುದಾರ** (ನಾ). ಭಡಸವಾಲನ್ನು ಮಾಡುವವನು ; ಹರಾಜಿ ನಲ್ಲಿ ಹೆಚ್ಚಿನ ಹಣಕ್ಕೆ ಕೂಗುವವನು,–ಬೇಡುವವನು: ಬಹಿರಂಗವಾದ ಹರಾಜು ಮೂಲಕ ಭಡಸವಾಲುದಾರನಿಗೆ ವಿಕ್ರಯಿಸತಕ್ಕದ್ದು (ಗ್ರಾಮಾಕ. ೩೮). [ ಭಡಸವಾಲು (<ಚಢಸವಾಲು) + – ದಾರ್$_4$ ]

**ಭಡಸಾಲ್,** ಚಡ್‌ಸಾಲ್ (ನಾ). ಹೆಚ್ಚಾಗಿ ಕಂದಾಯವು ವಸೂಲಾದ ವರ್ಷ: ಕಂದಾಯದ ಪಟ್ಟಿಯನ್ನು ನೋಡಿದರೆ ಈ ವರ್ಷವೇ ಭಡಸಾಲಾಗಿ ಕಾಣುತ್ತದೆ (ರೂಢಿ). **ಚಡ್‌ಸಾಲ್:** (ರೈಸ್‌ಗೆ. II. ೫೪೫); (ಮ್ಯಾಗೆಜ. IV, ೭೭೭). [ಭಡ (<ಚಢ) + ಸಾಲ್$_3$ ]

**ಭಡಾಭಡಿ** (ಅ). ಜಾಗ್ರತೆಯಾಗಿ: ಭಡಾಭಡಿ ಬರಬೇಕು ಅಲ್ಲೇ ಬೇರು ಬಿಟ್ಟು ಬಿಡಬೇಡ (ರೂಢಿ). [ ←ಹಿಂ. ಚಢಾಚಢೀ ]

**ಭಡಾಯ** 'ಚಡಾಯ' ನೋ.

**ಭಡಾಯಿಸು** 'ಚಡಾಯಿಸು' ನೋ.

**ಭಡಾಯ್ಸು** 'ಚಡಾಯಿಸು' ನೋ.

**ಭಡಾವು** 'ಚಡಾವು' ನೋ.

**ಭಡಾಳ** 'ಚಡಾಳ' ನೋ.

**ಭಡಾಳತನ** (ನಾ). ಹೆಚ್ಚಳ ; ಆಧಿಕ್ಯ ; ಚಡಾಳತೆ: ನಿನ್ನಂಥವಣೆಯು ಭಡಾಳತನವನು ಮುದ್ರಿಸುವೆನೆನುತೆಚ್ಚನಭಿಮನ್ಯು (ಕುವ್ಯಾದ್ರೋ. ೫–೩೧). [ ಭಡಾಳ(<ಚಡಾಳ) + – ತನ ]

**ಭಡಾಳತೆ** 'ಚಡಾಳತೆ' ನೋ.

**ಭಡಾಳನೋಟ** (ನಾ). ಉಗ್ರವಾದ ನೋಟ ; ತೀಕ್ಷ್ಣವಾದ ದೃಷ್ಟಿ: ಅಲಿದಣಿಯದೆ ಮಗುಳೆ ಮಗುಳೆ ಭಡಾಳನೋಟದ ಬಿಲ್ಲ ತಿರುವಿನ ಕೋಲ ತೋಹಿನ ರಾಮನಿರ್ದನು ನೋಡುತಾಹವವ (ತೊರರಾ. ೪–೩–೦೫). [ ಭಡಾಳ (<ಚಡಾಳ) + ನೋಟ ]

**ಭಡಾಳಿ** (ನಾ). ಹೆಚ್ಚಳ ; ಅತಿಶಯ ; ಆಧಿಕ್ಯ: ಕಮಠಫಣಿರಾಜಾಳಿ ಬಿಮ್ಮಗಿಡಲಲ್ಲಿ ಮುಳಿದುದು ಭಾಪು ಚತುರ ವೈಹಾಳಿ ಹರ್ಷದ ಭಡಾಳಿ (ಭಾವಚಿಂ. ೮–೧೨). [ ಭಡಾಳ (<ಚಡಾಳ) + – ಇ$_3$ ]

**ಭಡಾಳಿಕೆ** 'ಚಡಾಳಿಕೆ' ನೋ.

**ಭಡಾಳಿಸು** 'ಚಡಾಳಿಸು' ನೋ.

**ಭಡಿ,** ಚಡಿ$_2$ (ನಾ). ತೆಳ್ಳಗಿರುವ ನೀಳವಾದ ಕೋಲು,–ಬೆತ್ತ: ಅಪರಾಧಿಗೆ ಇಪ್ಪತ್ತು ಭಡಿಯ ಏಟುಗಳ ಶಿಕ್ಷೆ ಕೊಡಲಾಯಿತು (ರೂಢಿ). **ಚಡಿ$_2$:** ಒಡನೆ ಬಂದುದು ವಾನರೇಂದ್ರನ ಗಡಣ ಚಡಿಗಳನೆತ್ತಿ ಹೋಹೋ ತಡೆಯಿ ತಡೆಯಿಯೆನುತ್ತೆ (ರಾಮಾಸಂ. ೫–೫–೨); ಚಡಿ ಹಿಡಿದ ಗಣಿತೇಶ್ವರನು ಅಪೂರ್ಣಾಂಕಗಳನ್ನು . . . 'ಬಿಡಿಸಿರಿ' ಎಂದು ಹೇಳುವನು(ಗಾಳಿಪ. ೧೭೭).

ಛಡಿಯವರು = ವೇತ್ರಧಾರಿಗಳು ; ಕೋಲುಕಾರರು : ಶಾಸ್ತ್ರಿಗಳು ೬, ಪಂಡಿತರು ೮, ಛಡಿಯವರು ೨೫, ಫೌಜುದಾರರ್ರು ೫ (ಗುರುದ. ೧೧). [ ←ಹಿಂ. ಮರಾ. ಛಡೀ ]

**ಛಡಿಕೆ** 'ಚಡಿಕೆ' ನೋ.

**ಛಡಿತ**$_1$ 'ಚಡಿತ್ತ' ನೋ.

**ಛಡಿತ**$_2$ 'ಚಡಿತ$_1$' ನೋ.

**ಛತ್ತರಿಗೆ** 'ಚತ್ತರಿಗೆ' ನೋ.

**ಛತ್ತೀಸ** (ನಾ). ಮೂವತ್ತಾರು : ನಿಲವಿನ ಪದಿನೆಂಟು ಕೋಟಿಗೆ ಛತ್ತೀಸ ಕೋಟಿ ಬಾಹತ್ತರಕೋಟಿಗಳಿಂ ಮಿಗಿಲೆನಿಸಿ (ಬಸರ. ೮-೧೨೩) ; ಮುನ್ನ ಕೊಂಡೊಯ್ಯನೆ ಮಹಾದೇವನ ಪುರಕೆ ಛತ್ತೀಸ ನಗರಿಗಳಾ ಸಾಮವೇದಿಗಳು (ಬಸಪು. ೫೭-೪). [ <ಪ್ರಾ. ಛತ್ತೀಸ./ಸಂ. ಷಟ್ತ್ರಿಂಶತ್ ]

**ಛತ್ತು, ಚತ್ತು** (ನಾ). ಪಲ್ಲಕ್ಕಿ, ಪಲ್ಲಂಗ, ಮಂಟಪ ಮೊದಲಾದುವುಗಳಿಗೆ ಕಟ್ಟುವ ವಸ್ತ್ರದ ಮೇಲ್ಕಟ್ಟು ; ವಿತಾನ : ಆಕಾಶವು ನೀಲವರ್ಣದ ಛತ್ತಿನಂತಿದೆ (ಚೀನಬಾ. ೫) ; ಬಾಳೆಯು ಕಂಬ ತಳಿರು ತೋರಣ ಜುಮುರು ಮೇಲ್ಪಾಸು (ಛತ್ತು)ಗಳಿಂದ ಆ ಭಾಗವೆಲ್ಲ ಅಲಂಕೃತವಾಗಿದ್ದಿತು (ಮಬಲಿ. ೧೩). [←ಹಿಂ. ಮರಾ. ಛತ್./ಸಂ. ಛದಿ ]

**ಛತ್ರ**$_1$ 'ಚತ್ರ' ನೋ.

**ಛತ್ರ**$_2$ (ನಾ). ೧. ಕೊಡೆ ; ಚತ್ತರಿಗೆ ; ಆತಪತ್ರ: "ಆತಪತ್ರಂ, ಛತ್ರಂ— ಈ ೨ ಕೊಡೆ" (ಹಲಾಯು. ೭೦-೨೬೯) ; "ಸತ್ತಿಗೆಯೇ ಛತ್ರ" (ಕವಿಕಂ. ೨೬೧). ೨. ಗೌರವಸೂಚಕವಾಗಿ ದೇವರಿಗೆ ಹಾಗು ರಾಜರಿಗೆ ಹಿಡಿಯುವ ಬಿಳಿಯ ಕೊಡೆ: ಮನ್ಮಥಗೆ ವರವಸಂತಕನೆತ್ತಿ ಹಿಡಿದ ಮುತ್ತಿನ ಛತ್ರದಿರವೆನಿಸಿತು ಚಂದ್ರಬಿಂಬ (ಜೀವಂಸಾಂ. ೦೬-೪೩). ೩. ನಾಯಿಕೊಡೆ; ಅಣಬೆ. ೪. [ಜ್ಯೋತಿ] ಒಂದು ಯೋಗ. 'ಛತ್ರಯೋಗ' ಪರಾ. [ ಸಂ. ]

**ಛತ್ರಕ** (ನಾ). ೧. ಕೊಡೆ ; ಛತ್ರಿ : "ಛತ್ರಕಂ—ಸತ್ತಿಗೆ" (ಕಾಶಬ್ದ. ೨೫೬). ೨. ಅಣಬೆ ; ನಾಯಿಕೊಡೆ. [ ಸಂ. ]

**ಛತ್ರಚ್ಛಾಯೆ** (ನಾ). ೧. ಕೊಡೆಯ ನೆರಳು. ೨. (ಅಲಂ) ರಾಜನ ಆಡಳಿತಕ್ಕೆ ಒಳಪಟ್ಟುದು; ಪ್ರಭುತ್ವ: ಈ ನಮ್ಮ ಪುರಾತನದೇಶವನ್ನು ಒಬ್ಬ ಸಾರ್ವಭೌಮರಾಜನ ಛತ್ರಚ್ಛಾಯೆಯಲ್ಲಿ ಏಕೈಕರಾಜ್ಯವನ್ನಾಗಿ ಕಟ್ಟಬೇಕೆಂಬ ಮನಸ್ಸಂಕಲ್ಪ . . . ತೋರಿಬರುತ್ತದೆ (ರಾಜ್ಯಶಾ. ೯). 'ಏಕಚ್ಛತ್ರಚ್ಛಾಯೆ' ಪರಾ. [ಸಂ. ಛತ್ರಚ್ಛಾಯಾ (ಛತ್ರ + ಛಾಯಾ) ]

**ಛತ್ರಧಾರಕ** (ನಾ). (ರಾಜನ ತಲೆಯ ಮೇಲೆ) ಕೊಡೆಯನ್ನು ಹಿಡಿಯುವವನು ; ಛತ್ರಿಯನ್ನು ಹಿಡಿಯುವ ಸೇವಕ : ಬಳಿವಿಡಿದು ಭೂಭುಜರ ಯಾನಂಗಳೊಳಗಳುಕದೆ ಢಗೆಯ ಸ್ಯರಿಸಿ ಬಳಸುವವನೇ ಛತ್ರಧಾರಕನು (ಕುವ್ಯಾಸ. ೧-೭೪) ; ಅರಸನಭ್ಯುದಯವನು ನೀನಧಿಕರಿಸಿ ಗೆಲುವಡೆ ನಿನ್ನ ಹಂಗೇಕರಿಗಳನು ಜಯಿಸುವರು ನವಿಮ್ಮಾ ಛತ್ರಧಾರಕರು (ಕುವ್ಯಾಕ. ೯-೩೪). [ ಸಂ. ]

**ಛತ್ರಪತಿ** (ನಾ). ೧. ರಾಜತ್ವದ ಸೂಚಕವಾಗಿ ಛತ್ರವನ್ನು ಹಿಡಿಸಿಕೊಳ್ಳುವ ಪ್ರಭು ; ರಾಜ. ೨. ಶಿವಾಜಿಗೆ ಅನ್ವಯಿಸುವ ಒಂದು ಬಿರುದು: ೧೬೭೪ರಲ್ಲಿ ಶಿವಾಜಿ ಶಿವಛತ್ರಪತಿ ಎನಿಸಿಕೊಂಡನು (ಭಾರದ. ೪೨೩). [ ಛತ್ರ$_2$ + ಪತಿ$_2$ ]

**ಛತ್ರಪ್ರಸರ** (ನಾ). ರಾಜ ಚಿಹ್ನವಾದ ಛತ್ರಿಗಳ ಸಮೂಹ,—ಕೊಡೆಗಳ ಸಾಲು : ದೆಸೆಯಂ ಛತ್ರಪ್ರಸರದೆ ಮುಸುಂಕಿ ಕಟ್ಟಿಲೆಯನೊರ್ಮೆ ಮಣಿಭೂಷಣರುಗ್ಮಿಸರದೆ ಮುಸುಂಕಿ ಸಂಜೆಯ ಬಿಸಿಲಂ ಮತ್ತೊರ್ಮೆ ಮಾಡಿದುದು ತದ್ಯಾನಂ (ಚಂದ್ರಪು. ೭-೮೧). [ ಛತ್ರ$_2$ + ಪ್ರಸರ ]

**ಛತ್ರಭಂಗ** (ನಾ). ೧. ಕೊಡೆಯು ಮುರಿದುಬೀಳುವಿಕೆ. ೨. (ಅಲಂ) ಅರಸೊತ್ತಿಗೆ ತಪ್ಪಿಹೋಗುವುದು : ಕೇಳಿಕೆಯ ಮನ ಛತ್ರಭಂಗದ ಮೇಲೆ ಮುಱಿಯದೆ ಛಲಪದದ ಪರಿಪಾಳಿಯಿಂದುಪ್ಪವಡಿಸಿದನುಪ್ಪರದ ಗರ್ವದಲಿ (ಕೊರರಾ. ೬-೧೧-೧) ; ಮಂಗಲೇಶನ ಮರಣಾನಂತರದಲ್ಲಿ ಚಲುಕ್ಯರ ಛತ್ರಭಂಗವಾದುದರಿಂದ ಪುಲಿಕೇಶಿಯು ಉನ್ಮತ್ತರಾದ ರಾಜರನ್ನು ಸೋಲಿಸಿ ವಾತಾಪಿಪುರವನ್ನು ಪ್ರವೇಶಿಸಿದನು (ಕರ್ನಾಇ. ೫೭). [ ಛತ್ರ$_2$ + ಭಂಗ ]

**ಛತ್ರಭವ** (ನಾ). [ಜ್ಯೋತಿ] ಛತ್ರಯೋಗದಲ್ಲಿ ಹುಟ್ಟಿದವನು : ಹಿತಕರನಾತ್ಮಬಾಂಧವಗೆ ಛತ್ರಭವಂ (ಜಾತತಿ. ೧೩-೧೮). [ ಸಂ. ]

**ಛತ್ರಯೋಗ** (ನಾ). [ಜ್ಯೋತಿ] ಜನನ ಕಾಲದಲ್ಲಿ ಸಪ್ತಮಸ್ಥಾನದಿಂದ ಲಗ್ನದವರೆಗೆ ಏಳುರಾಶಿಗಳಲ್ಲೂ ಗ್ರಹಗಳು ಇರುವ ಒಂದು ಯೋಗ: ಛತ್ರಯೋಗದಲ್ಲಿ ಹುಟ್ಟಿದವನು ತನ್ನ ಬಂಧುಗಳಿಗೆ ಅನುಕೂಲಮಾಡುತ್ತಾನೆ (ಜಾತತಿ. ೧೩-೧೮ ಅಡಿಟಿ). [ ಛತ್ರ$_2$ + ಯೋಗ ]

**ಛತ್ರರತ್ನ** (ನಾ). [ಜೈನ] ಚಕ್ರವರ್ತಿಗೆ ದೊರೆಯುವ ಏಳು ಅಜೀವ ರತ್ನಗಳಲ್ಲೊಂದು : ತನ್ನ ನೆಟಿಲೊಳೆ ಕಾವ ಸೂರ್ಯಪ್ರಭಮೆಂಬ ವಿಚಿತ್ರಮಣಿಮಯೂಖಚಿತ್ರಿತಚ್ಛತ್ರರತ್ನಮುಂ (ಆದಿಪು. ೧೧-೩ ವ) ; ಲೀಲಾಸನಾಳಧವಳಶತಪತ್ರಮೆನಿಪ ಸೂರ್ಯಪ್ರಭಮೆಂಬ ವಿಚಿತ್ರಚ್ಛತ್ರರತ್ನಮುಂ (ಚಂದ್ರಪು. ೬-೧೧೧ ವ). 'ಚರ್ಮರತ್ನ' ಪರಾ. [ ಛತ್ರ$_2$ + ರತ್ನ ]

**ಛತ್ರರೇಖೆ** (ನಾ). [ಸಾಮುದ್ರಿ] ಒಂದು ಬಗೆಯ ಸಾಮುದ್ರಿಕ ಲಕ್ಷಣ ; (ಕೈಯಲ್ಲಿಯ) ಕೊಡೆಯಾಕಾರವಾದ ರೇಖೆ : ಶತ್ರುಪಕ್ಷಹಾನಿಯು ರಾಜಮನ್ನಣೆಯು ನಿತ್ಯದಲ್ಲಿಯೂ ಅನ್ನದಾನವೂ ಛತ್ರರೇಖೆಗೆ ಫಲ (ಸಾಮುಲ. ೧೧೦-೧೧). [ ಛತ್ರ$_2$ + ರೇಖೆ ]

**ಛತ್ರವಳಯ** (ನಾ). (ಅಲಂ) ಅರಸಂತನ; ಪ್ರಭುತ್ವ: ಇಹಲೋಕ ಪರಲೋಕ ತಾನಿದ್ದಲ್ಲಿ . . . ಉತ್ತರೋತ್ತರಚ್ಛತ್ರವಳಯ [ಪಾಠಾಂ. ಚತುರ್ವಳಯ] ತಾನಿದ್ದಲ್ಲಿ (ಅವಚಂ. ೮೨-೩೭೦). [ ಛತ್ರ$_2$ + ವಳಯ ( = ವಲಯ) ]

**ಛತ್ರಾಕಾರ** (ನಾ). ವರ್ತುಲಾಕಾರ: ಛತ್ರಾಕಾರದೆ [ಪಾಠಾಂ. ಚಿತ್ರಾಕಾರದ] ಗದೆಯಂ ಚಿತ್ರವಿಧಂ ಬೀಸೆ ಗಗನದೊಳ್ (ಗದಾಯು. ೮-೨೩). [ ಛತ್ರ$_2$ + ಆಕಾರ ]

**ಛತ್ರಾಕಿ** (ನಾ). (ಮುಂಗುಸಿಗಳಿಗೆ ಇಷ್ಟವಾದ) ಒಂದು ಬಗೆಯ ಗಿಡ ; ಹಾವಿನ ವಿಷಕ್ಕೆ ಔಷಧಿಯಾಗುವ ಈಶ್ವರೀಹಂಬು ; ಹಾವುಕಣ್ಣಿನ ಗಿಡ ; ಸರ್ಪಾಕ್ಷಿಗಿಡ : "ನಾಕುಲೀ . . . ಛತ್ರಾಕೀ, ಸುವಹಾ—೮ ಸರ್ಪಾಕ್ಷಿ ಗಿಡದ ಹೆಸರು" (ಸಿದ್ಧಾಂತಿ. ೦೨೦). [ ಸಂ. ಛತ್ರಾಕೀ ]

**ಛತ್ರಿ**$_1$ (ನಾ). ಕೊಡೆಯನ್ನು ಹಿಡಿದುಕೊಂಡಿರುವವನು; ಛತ್ರಿಯನ್ನು ಹೊಂದಿರುವವನು : ಛತ್ರಿಗಳ್ ನಡೆದಪರೆಂದಿಂತು ಅಚ್ಛತ್ರಿಗಳೊಳ್ ಛತ್ರಿವ್ಯವಹಾರಂ ವರ್ತಿಸುವಂತೆ ಸೂತ್ರದಲ್ಲಿ ಮಿಶ್ರಗ್ರಹಣವಿಲ್ಲದೊಡಂ ಸಾಹಚರ್ಯದಿಂ ಮಿಶ್ರಗ್ರಹಣಂ ಘಟಿಯಿಸುಗುಂ (ತತ್ತ್ವಪ್ರ. ೨೨೦). [ ಸಂ. ಛತ್ರಿನ್ ]

**ಛತ್ರಿ**$_2$**, ಚತ್ತರಿ, ಚತ್ರಿ** (ನಾ). ಕೊಡೆ ; ಚತ್ತರಿಕೆ : ಎದ್ದು ವಸ್ತ್ರ ಜಾಡಿಸಿಕೊಂಡು . . . ಛತ್ರಿ ಮಡಿಚಿ ತಯಾರಾಗುತ್ತಾನೆ (ಎತ್ತಿಕ್ಕಿ. ೬೨). **ಚತ್ತರಿ** : (ಈ). **ಚತ್ರಿ** : ಮಳೆಗಾಲಕ್ಕೆ ಚತ್ರಿ ಬೇಕು (ರೂಢಿ). [ ←ಮರಾ. ಛತ್ರೀ. / ಸಂ. ಛತ್ರ ]

**ಛತ್ರಿಕೆ** (ನಾ). ೧.=ಛತ್ರಕ ೧ : "ಛತ್ರಿಕಾ—ಸತ್ತಿಗೆ" (ಶಮದ. ೨೫೬ ಪ್ರಯೋ) ; "ಸತ್ತಿಕೆ ಛತ್ರಿಕೆಯೆಂಬುದು" (ಚತುನಿ. ೬೩). ೨. ಅಣಬೆ; ನಾಯಿಕೊಡೆ: "ಕೆಸವು ಛತ್ರಿಕೆಯಕ್ಕು" (ಮಂಗರಾ. ೪೪-೪೭). [ ಸಂ. ಛತ್ರಿಕಾ

**ಛತ್ರಿ** (ನಾ). ೧. ಅಣಬೆ; ನಾಯಿಕೊಡೆ: "ಛತ್ರಾ, ಅತಿಛತ್ರಃ, ಪಾಲಘ್ನಃ –೩ ಕೊಡೆಹುಲ್ಲಿನ ಹೆಸರುಗಳು" (ಸಿದ್ಧಾಂತಿ. ೧೩೨). ೨. ಸಬ್ಬಸಿಗೆ. ೩. ಕೊತ್ತುಂಬರಿ. [ಸಂ. ಛತ್ರಾ]

**ಛತ್ವ** (ನಾ). = ಛ ೧: ಖತ್ವಕ್ಕಂ ಬಹುಳತೆಯಿಂ ಗತ್ವಂ ಛತ್ವಂ ದ್ವಿರುಕ್ತಿಯಿಂ ಕೂಡಿರೆ ಮೇಣ್ ಯತ್ವಾನ್ವಿತಮಿರೆ ಚತ್ವಂ (ಶಮದ. ೨೫೬). [ಸಂ.]

**ಛತ್ವರ** (ನಾ). ೧. ಮನೆ. ೨. ಲತಾಗೃಹ; ಬಳ್ಳಿಮಾಡ. [ಸಂ.]

**ಛದ** (ನಾ). ೧. ಗವುಸು; ಮುಸುಕು; ಆಚ್ಛಾದನೆ. 'ದಂತಚ್ಛದ' ಪರಾ. ೨. ಹಕ್ಕಿಗಳ ರೆಕ್ಕೆ, –ಗರಿ: "ತನೂರುಹಂ . . . ಛದಃ, ಪಿಂಛಂ, ವಾಜಃ, ಪಕ್ಷಃ–ಈ ೯ ಎಱ(ಂ)ಕೆ" (ಹಲಾಯು. ೪೦–೯೬); ರಾಜಕೀರಚ್ಛದಾನಿಳಲೋಲತ್ಕಣಿಶಾಲಿಶಾಲಿ ಜನಚೇತೋನಂದನಂ ನಂದನಂ . . . ಚಲ್ವಾದುದುರ್ವೀತಳಂ (ಜಗವಿ. ೨–೨). ೩. ಎಲೆ; ಪರ್ಣ: "ಬರ್ಹಂ, ಪರ್ಣಂ, ದಳಂ, ಪತ್ರಂ, ಪಲಾಶಂ, ಛದನಂ, ಛದಃ–ಈ ೭ ಮರದ ಎಲೆ" (ಹಲಾಯು. ೩೦–೩೦); ಶಿಶಿರಪಯಃಕಣವೆರಸಿದ ಕುಶೇಶಯಚ್ಛದಮನಕ್ಷಿಗಳ್ ಬಾಷ್ಪಜಲಪ್ರಶಮಿತ ರುಚಿಗಳ್ ಪೋಲ್ತಿರೆ (ಜಗವಿ. ೩–೮೭); ಆಸವಸದೆ ಬಿಸಿಲ್ಗೆ ತ್ತು ಜೀರ್ಣಚ್ಛದಂಗಳ್ ಮೇಳಂಗೊಂಡೊಪ್ಪೆ ಶಾಖಾಗ್ರದೊಳದರ್ದಲುಂಗಲ್ಲೂಸೆ (ರಾಜಶೇ. ೯–೨೯). [ಸಂ.]

**ಛದನ** (ನಾ). ಮುಸುಕು; ಆಚ್ಛಾದನೆ: ಅದು ಬಳಿಕ ಲೋಕಾಯತಾಂಗಚ್ಛದನಪರನಾರಾಚ ನಿರ್ವಾಣದಲಿ ಭಂಗಿತವಾಯ್ತು ಪಾರ್ಥನ ಬಾಣದೊಡ್ಡವಣೆ (ಕುವ್ಯಾ.ಕ. ೨೦–೨೯). ೨. ರೆಕ್ಕೆ; ಗರಿ: "ತನೂರುಹಂ, ಗರುತ್, ಪತ್ರಂ, ಪತತ್ರಂ, ಛದನಂ, ಛದಃ, ಪಿಂಛಂ, ವಾಜಃ, ಪಕ್ಷಃ–ಈ ೯ ಎಱ(ಂ)ಕೆ" (ಹಲಾಯು. ೪೦–೯೬); ಕಾಕಗೃಧ್ರನಿಕಾಯಚ್ಛದನಾವಗೂಹಿತಮೆನಲ್ ಬಟ್ಟಿರ್ದನಂ ಗೆಲ್ದು (ಜಗವಿ. ೪–೫೮). ೩. ಎಲೆ; ಪರ್ಣ: "ಛದನಂ ಪತ್ರಂ ಪರ್ಣಂ ಛದಂ ಪಳಾಶಂ ದಳಂ ಸಮಮವೇಕಾರ್ಥಂ" (ವಸ್ತು.ಕೋ. ೩೦–೫); "ಪತ್ರಂ ದಳಂ ಛದನಂ[ಪಾಠಾಂ. ಛತ್ರದಳಂ]ಪಲಾಶಮೆನೆ ಪರ್ಣಮಕ್ಕುಂ" (ಮಂಗರಾ. ೩೨–೩). [ಸಂ.]

**ಛದಿ** (ನಾ). (ಮನೆ ಮೊದಲಾದುವುಗಳ) ಮೇಲ್ಛಾವಣಿ; ಮಾಡು; ಮುಸುಕಂ; ಹೊದಿಕೆ; ಆಚ್ಛಾದನೆ: "ಪೊದಯಿಸಿದಾಚ್ಛಾದನಮುಂ ಛದಿಯುಂ ಪಟಳಮುಮೆನಿಪ್ಪುದು" (ವಸ್ತು.ಕೋ. ೪೭–೦೫); "ಪಟಲಂ, ಛದಿಃ –೨ ಮನೆಯ ಮೇಲುಹೊದಿಕೆಯ ಹೆಸರು: ಮನೆಯ ಮೇಲುಮುಚ್ಚಳ" (ಸಿದ್ಧಾಂತಿ. ೯೦). [ಸಂ.]

**ಛದೆ** (ನಾ). = ಛದಿ: "ಮನೆಗೇಱಿಸಿದ ಹೊದಿಕೆ ವಳಛಚ್ಛದೆಯೆನಿಕ್ಕು" (ಮಂಗರಾ. ೫೯–೧೩). [ಸಂ. ಛದ]

**ಛದ್ಮ** (ನಾ). ೧.=ಛದ ೧. ೨. ವೇಷವನ್ನು ಮಾರ್ಪಡಿಸುವುದಂ; ವೇಷಾಂತರ: ಗೋಪ್ಯ, ಛದ್ಮಗಳು ಕೀಟಗಳಲ್ಲಿ ಚೆನ್ನಾಗಿವೆ (ಕೀಟಬಿ. ೨೨). 'ಛದ್ಮವೇಷ' ಪರಾ. ೩. ಮೋಸ; ಕಪಟ; ವಂಚನೆ. ೪. ಕಾರಣ; ನೆಪ; ವ್ಯಾಜ: "ಕೈತವಂ . . . ಛದ್ಮ . . . ವ್ಯಪದೇಶಃ–ಈ ೧೦ ನೆವಂ" (ಹಲಾಯು. ೧೧೭–೨೪). [ಸಂ. ಛದ್ಮನ್]

**ಛದ್ಮಚಮು** (ನಾ). ವೇಷಾಂತರಗೊಂಡ ಸೈನ್ಯ: ಬಂಧು ಬಳಗವು ಮುಂತಕನ ಚಮುವೊ, ಛದ್ಮಚಮು ದಂದುಗದ ಬಾಗಿನಗಳವರ ನಲುಮೆಗಳು (ಮಂಕುತಿ. ೦೭೩). [ಛದ್ಮ + ಚಮು]

**ಛದ್ಮನೆ** (ನಾ). ೧. ಮುಸುಕಂ; ಮರೆ; ಆಚ್ಛಾದನೆ: ನಿಂತುದಾ ಜೀಮೂತಛದ್ಮನೆಯನಾಂತ ರಾವಣರಥಂ ನಿಶ್ಚಲಂ (ಶ್ರೀರಾಮಾ. ೨೩೦–೬೬). ೨. ಮೋಸ; ಕಪಟ; ವಂಚನೆ: ಭೀಮವಿಕ್ರಮವಿಹಗೇಂದ್ರನಂ ವೀಕ್ಷಿಸುತೆ ಶಂಕೆ ಪುಟ್ಟಿತು ನಿಶಾಚರರೊಂದು ಛದ್ಮನೆಯ ಭಯಕೆ (ಶ್ರೀರಾಮಾ. ೦೯೪–೭); ಈಗ ನಮ್ಮ ಭೇಟಿ ಮಾಡಬೇಕೆಂದು ಅಪೇಕ್ಷಿಸುವ ಛದ್ಮನೆಯೂ ನಮಗೆ ತಿಳಿಯಿತು (ಚಿತ್ರಪಾ. ೮೩). [<ಸಂ. ಛದ್ಮನ್]

**ಛದ್ಮಬಾಲಿಶ** (ನಾ). ವೇಷಾಂತರವನ್ನು ಹೊಂದಿ ಹುಡುಗಾಟ ಮಾಡುವವನು; ರೂಪ ಮರೆಸಿ ಲೀಲೆಯಾಡುವವನು: ಅರ್ಗಲ್ಸರೀ ಛದ್ಮಬಾಲಿಶನಂ ದೈವವಿಸೂತ್ರಮಂ ಪುರುಷಕಾರಂ ಮಿಾಱಲೇನಕ್ಕುಮೋ (ಜಗವಿ. ೩–೦೯). [ಛದ್ಮ + ಬಾಲಿಶ]

**ಛದ್ಮರೂಪ** (ನಾ). ವೇಷಾಂತರಗೊಂಡ ರೂಪ; ಮರೆಸಿದ ಆಕಾರ: ಇಳಿಗಿಳಿದು ಪವಡಿಸಿಹ ಚಂದ್ರನೆಯೆ ಅಕಳಂಕ ಛದ್ಮರೂಪದೊಳಿಂತು (ಚಂದ್ರಸ. ೭೮–೮). [ಛದ್ಮ + ರೂಪ]

**ಛದ್ಮವೇಷ** (ನಾ). ನಿಜವಾದ ಸ್ವರೂಪವನ್ನು ಮುಚ್ಚಲು ಧರಿಸಿದ ಬೇರೆ ರೂಪ; ವೇಷಾಂತರ: ಈ ಪ್ರಪಂಚ ಏನೋ ಒಂದು ಛದ್ಮವೇಷ ತಾಳಿ ನಮ್ಮನ್ನು ಮೋಸಗೊಳಿಸುತ್ತಲಿದೆ (ದೇಕನ್ಯ. ೨); ಛದ್ಮವೇಷವನ್ನು ಕಿತ್ತೊಗೆದು ತನ್ನ ನಿಜಸ್ವರೂಪವನ್ನು ಏಕೆ . . . ತೋರದು? (ದೇಕನ್ಯ. ೫). [ಛದ್ಮ + ವೇಷ]

**ಛದ್ಮವೇಷಧಾರಿ** (ನಾ). ನಿಜವಾದ ಸ್ವರೂಪವನ್ನು ಮುಚ್ಚಿ ಬೇರೆ ರೂಪ ಧರಿಸಿದ ವ್ಯಕ್ತಿ; ವೇಷಾಂತರ ಮಾಡಿಕೊಂಡವನು: ಛದ್ಮವೇಷಧಾರಿಯಾದ ಅರ್ಜುನನ ಗುರುತನ್ನು ಯಾರೂ ಹಿಡಿಯಲಾರದಿದ್ದರು (ಭೀಷ್ಮಚ. ೮೦); ಛದ್ಮವೇಷಧಾರಿಯಾದ ಗೂಢಚಾರನೋ? (ಚಾಲತ್. ೮). [ಸಂ. ಛದ್ಮವೇಷಧಾರಿನ್]

**ಛದ್ಮಸ್ಥ** (ನಾ). ೧. ಮರೆಯಲ್ಲಿರುವವನು; ಅಡಗಿಕೊಂಡಿರುವವನು. ೨. [ಜೈನ] ಕೇವಲಜ್ಞಾನಿಯಾಗುವುದಕ್ಕೆ ಹಿಂದಿನ ಅವಸ್ಥೆಯಲ್ಲಿರುವವನು: ಪ್ರಥಮಶುಕ್ಲಧ್ಯಾನಪರಿಣತಿಯಿಂ ಕ್ಷೀಣಕಷಾಯವೀತರಾಗ ಛದ್ಮಸ್ಥ ಗುಣಸ್ಥಾನ ವ್ಯವಸ್ಥಿತನಾಗಿ (ಸುಕುಮಾ. ೮–೭೨ ವ); ಸಾಕಾರಂ ಜ್ಞಾನಮನಾಕಾರಂ ದರ್ಶನಂ ತದುಭಯಂ ಛದ್ಮಸ್ಥರೊಳ್ ಕ್ರಮದಿಂ ನಿರಾವರಣರೊಳಕ್ರಮದಿಂ ವರ್ತಿಸುಗುಂ (ತತ್ತ್ವಪ್ರ. ೮೬). [ಸಂ.]

**ಛದ್ಮಸ್ಥಕಾಲ** (ನಾ). [ಜೈನ] ಛದ್ಮಸ್ಥಾವಸ್ಥೆಯಲ್ಲಿರುವ ಕಾಲ: ಪದಿನಾಲ್ಕು ವರ್ಷಂ ಛದ್ಮಸ್ಥಕಾಲಂ ಪೋಗೆ ಸಹೇತುಕವನದೊಳ್ ಷಷ್ಠೋಪವಾಸಂಗೆಯ್ದು (ಚಾವುಂಪು. ೧೩೦); ಚಂದ್ರಪ್ರಭಮುನಿಪ್ರಭು ಪರಮಪಂಚಮಜ್ಞಾನ ಸಂಜನನಕರಣಾತ್ಯಂತಶುದ್ಧಧ್ಯಾನೋದ್ಯೋಗ ಸಂಸಕ್ತಚಿತ್ತಂ ಛದ್ಮಸ್ಥಕಾಲಂ ಮಾಸತ್ರಯಪ್ರಮಿತಮಾದುದೆಂಬಂದಿಂಗೆ (ಚಂದ್ರಪು. ೧೪–೫೭ ವ). [ಛದ್ಮಸ್ಥ + ಕಾಲ]

**ಛದ್ಮಿಸು** (ಕ್ರಿ). ಮರೆಮಾಡು; ಅಡಗಿಸು: ತಮ್ಮ ಕುಲಂಗಳಂ ಛದ್ಮಿಸಿಯುಂ ಜಾತಿಸಂಕರಂ ಮೊದಲಾದ ದೋಷಂಗಳ್ವೆರಸಿ ಸತ್ಪಾತ್ರಕ್ಕೆ ದಾನಮಂ ಮಾಡಿದವರುಂ . . . ಮೊದಲಾದವರಿಗೆ ಕುಮನುಷ್ಯತ್ವದಾಸ್ರವಮಕ್ಕುಂ (ಪಸಾರ. ೯೨–೧೬). [ಛದ್ಮ + – ಇಸು₃]

**ಛನ್** (ನಾ). ಒಂದು ಅನುಕರಣ ಶಬ್ದ: ಮೊಗವಂ ನೆಱೆ ಚುರ್ಚುತ್ತುಂ ಛನ್ನೆಂದಱುಗುಱಿಗಳ ನೆರವನಱಿದು ಪೋಗದೆ ಪೆಣೆವರ್ (ಧರ್ಮಾಮೃ. ೩–೦೯೦).

**ಛನ್ನ** (ಗು). ೧. ಮುಚ್ಚಿದ; ಹೊದಿಸಿದ; ಆವೃತವಾದ; ಉನ್ನತ ಧವಳಚ್ಛತ್ರಚ್ಛನ್ನವಿಯತ್ತಳನಂ . . . ಪಟುವಿನೊಳಿನ್ನರಸನನಿಂತು ಬಿದಿಯೆ ತಂದಿಕ್ಕುವುದೇ (ಪಂಪಭಾ. ೨–೨೨); ಶಯ್ಯಾಶ್ರಿತ ಸಿತಮೃದುಳ ಪ್ರಚ್ಛದಚ್ಛನ್ನಶಯ್ಯಾತಳದೊಳ್ (ಕಾದಂಪೂ.೮೦). (ನಾ). ೨. ಅಡಗಿರುವುದು; ರಹಸ್ಯವಾದುದು: ಛನ್ನವಾ ಋಣಮಾರ್ಗ (ಮಂಕುತಿ. ೫೦೦). [ಸಂ.]

**ಛನ್ನವೀರ** (ನಾ). ಒಂದು ಬಗೆಯ ಕೊರಳ ಹಾರ, –ಸರ: ಅಭಯ ತ್ರಿಶೂಲ ಮಾಲೆ ಯಜ್ಞೋಪವೀತ ಉದರಬಂಧ ಛನ್ನವೀರಗಳನ್ನು ಹೊಂದಿ ಎಡಗೈಯಿಂದ ನಿಂತಿರುವ ಪಾರ್ವತಿಯನ್ನಾಲಿಂಗಿಸುತ್ತಿರುವನು (ಹೊಯ್ಸಾಪಾ. ೨೨೬). [ಸಂ.]

**ಛಪಾಯಿಸು** (ಕ್ರಿ). ಮರೆಮಾಡಂ; ಅಡಗಿಸು: ಅವನ ಕಾಗದವನ್ನೂ ರತ್ನವನ್ನೂ ಸಹ ಕೊಡದೆ ಛಪಾಯಿಸಿ ಬಿಟ್ಟನು (ಕಥಾಮಂ. IV, ೪೯); ನಾವು ಮಾಡೂದು ಖೂನಿ ಛಪಾಯಿಸುವ ಗುನ್ಹೇನ ಸರಿ (ಗ್ರಾಮಾಯ. ೩೩). [ ಛಪಾವಣೆ + – ಇಸು₃ ]

**ಛಪಾವಣೆ** (ನಾ). ಮರೆಮಾಚುವುದು; ಬಚ್ಚಿಡುವುದು: ಶಿರಸ್ತೆದಾರ ವಗೈರೆ ಜನಗಳ ಖುರ್ದು ಬರ್ದು, ಛಪಾವಣೆ ವಿಚಾರಗಳಲ್ಲಿ ನಡೆಸತಕ್ಕ ಕ್ರಮ (ಮಹಾವಂ. II, ೫೭); ಕಚೇರಿಯಲ್ಲಿ ಒಂದು ಸಣ್ಣ ಛಪಾವಣೆ– ಆದರ ಗೊಂದಲಕ್ಕೆ ಸಿಕ್ಕಿಬಿದ್ದೆ (ನಟಸಾ. ೫೭೭). [ ←ಮರಾ. ಛಪಾವಣೇ, ಛಪವಣೀ ]

**ಛಪ್ಪನ್ನ, ಚಪ್ಪನ್ನ** (ನಾ). ಐವತ್ತಾರು: ಚೌಷಷ್ಟಿ ಪಟ್ಟಣ ಛ[ಪಾಠಾಂ. ಚ]ಪ್ಪನ್ನ ವೀಥಿಗಳ ದಾಂಟಿ (ಅವಜಂ. ೬೧–೨೬೭). **ಚಪ್ಪನ್ನ.** 'ಚಪ್ಪನ್ನದೇಶ' 'ಚಪ್ಪನ್ನಭಾಷೆ' ಪರಾ. [ ←ಮರಾ. ಛಪ್ಪನ್ನ್, ಛಪನ್ನ್; ಹಿಂ. ಛಪ್ಪನ್ ]

**ಛಪ್ಪನ್ನದೇಶ, ಚಪ್ಪನ್ನದೇಶ** (ನಾ). ಐವತ್ತಾರು ದೇಶಗಳಂ: ಛಪ್ಪನ ದೇಶಗಳು: ಮತ್ತಮಾ ಭರತವರುಷದಲ್ಲಿಯೇ ಅಂಗ ವಂಗ ಕಳಿಂಗ ತೆಲುಂಗ ಕೊಂಗ ಲಾಟ ಬಂಗಾಳ ಚೋಳ ಕೇರಳ ಗೌಳ ಪಾಂಚಾಳ ಸಿಂಹಳ ಕುಂತಳ ನೇಪಾಳ ಮಳಯಾಳ ತುಳವ ಸೈಂಧವ ಕೊಂಕಣ ಕುರು ಮಗಧ ಮತ್ಸ್ಯ ವಿದರ್ಭ ಕೋಸಲ ಶೂರಸೇನ ಕಾಶ್ಮೀರ ಮಹಾರಾಷ್ಟ್ರ ಕರ್ಣಾಟ ಕಿರಾತ ತುರುಷ್ಕ ಶಂಕರ ಬರಮ ತ್ರಿಗರ್ತ ನಿಷಧ ಮಧ್ಯ ಜೈನ ಬರ್ಬರ ಬಾಹ್ಲೀಕ ಲಾಟ ಚೈನ ಕರಾಳ ಓಢ್ರ ಘೂರ್ಜರ ಕಾಂಭೋಜ ಸೌರಾಷ್ಟ್ರ ಸೌವೀರ ಪಾಂಡ್ಯ ಹೂಣ ಯವನ ಮ್ಲೇಚ್ಛ ಹೈಹಯ ಆರ್ಯಾವರ್ತ ಭೋಜ ದ್ವೈಪ ಅಮರುಕ ಉತ್ತರಕುರು ಗ್ರೈಟಗಳೆಂಬೈವತ್ತಾಱು ಬಗೆಯ ಜನರಿಂದ . . . ನಿರೂಢಮಾದ್ಯೈವತ್ತಾಱು ಪ್ರಾಂತಂಗಳಿರ್ಪವಾ ದೇಶಂಗಳಲ್ಲಿ (ವಿವೇಕ. ೨೯೩); ಸಂದಣಿಸಿದರು ಛಪ್ಪನ್ನದೇಶದ ಜನವೃಂದ ಜೂದಿನ ವಿಷಯದಲಿ (ಮೋಹತ. ೨೦–೨೦); ಛಪ್ಪನ್ನ ದೇಶದ ನೃಪರು ಖೇಚರರಿಹರೊಪ್ಪವ ಮಾಡು ಹೋಗೆಂದಾ (ಭರಜ. ೫೫–೬೦). **ಚಪ್ಪನ್ನದೇಶ:** ಚಪ್ಪನ್ನದೇಶಾಧಿಪರ ಚಿತ್ರಗಳ ದೂಷಣೆಗೆಯ್ದು ನಿಟ್ಟಿಸಲೊಲ್ಲ ದವಳಾಯಾಸವ ಕಂಡಳು ಕುವರಿ (ಮೋಹತ. ೩೦–೦೯); ಚಪ್ಪನ್ನದೇಶದೊಳ್ನಗೆ ಮಲೆತಿದಿರಾಗಿ ಬಪ್ಪ ಭೂಮಿಪರಿಲ್ಲ (ಜೈಮಿಭಾ. ೨೫–೧೨). [ ಛಪ್ಪನ್ನ + ದೇಶ ]

**ಛಪ್ಪನ್ನಭಾಷೆ, ಚಪ್ಪನ್ನಭಾಷೆ** (ನಾ). ಐವತ್ತಾರು ಭಾಷೆಗಳು: ಛಪ್ಪನ್ನಭಾಷೆಯು ಸುಲಿಪಿಯಲ್ಲವಿದನು ಬಹುಮುಪ್ಪದಪ್ಪುಗರೋದಿದರೆಯೋದುವರು (ಪ್ರಭುಪು. ೬–೦೭). **ಚಪ್ಪನ್ನಭಾಷೆ:** ಚಪ್ಪನ್ನಭಾಷೆಯಱಿವ ಧೀರರೀಗಳೆ ನೋಡಿಯೆಂದು ಬಿಜ್ಜಳನೃಪಂ ಸಾಱಿಸಿದಂ ಡಂಗುರವಂ (ಲಶಿಜಂ. ೩೦–೪೯). [ ಛಪ್ಪನ್ನ + ಭಾಷೆ ]

**ಛಪ್ಪನ್ನೈವತ್ತಾರು, ಚಪ್ಪನ್ನೈವತ್ತಾರು** (ನಾ).=ಛಪ್ಪನ: ಛಪ್ಪನ್ನೈವತ್ತಾರು, ಕುಡುವೊಕ್ಕಲಿಗ ಇವೆ ಮೊದಲಾದ ಶಬ್ದಪ್ರಯೋಗಗಳು ಕಾಲಕ್ರಮದಲ್ಲಿ ಮೂಲಶಬ್ದಾರ್ಥದ ಮರೆವು ಹೆಚ್ಚಾದುದರ ದ್ಯೋತಕಗಳಾಗಿವೆ (ಕನ್ನಸು. ೦–೬). **ಚಪ್ಪನ್ನೈವತ್ತಾರು:** ಚಪ್ಪನ್ನೈವತ್ತಾರು ದೇಶಗಳು ಹಿಂದೆ ಪ್ರಸಿದ್ಧವಾಗಿದ್ದುವು (ರೂಢಿ). [ಛಪ್ಪನ್ನ + ಐವತ್ತು (<ಅಯ್ವತ್ತು) + ಆರು₆ (<ಆಱು₃)]

**ಛಪ್ಪರಿಸು** 'ಚಪ್ಪರಿಸು' ನೋ.

**ಛಪ್ಪಳೆ** 'ಚಪ್ಪಳೆ' ನೋ.

**ಛಪ್ಪಳೆಯಿಡು** (ಕ್ರಿ). ಚಪ್ಪಾಳೆತಟ್ಟು,–ಹೊಡೆ: ಜನನಿ ಛಪ್ಪಳೆಯಿಟ್ಟು ಕರೆಯಲಪ್ಪುವನಾ ಜಿನನಾಟ ಕಡುಚೆಲುವಾಯ್ತು (ಅನಂಜ. ೬–೦೦). [ ಛಪ್ಪಳೆ (<ಚಪ್ಪಳೆ) + ಇಡು₁ ]

**ಛಪ್ಪಿಸು, ಛರ್ಪಿಸು** (ಕ್ರಿ). ಮೇಲೆ ಬೀಳು; ಮಂಠಿತ್ತು; ಆಕ್ರಮಿಸು: ವರ್ಗದ್ವಿತೀಯಾಕ್ಷರಂಗಳ್ಗೆ . . . ಛರ್ಪಿಸಿದಂ (ಛಪ್ಪಿಸಿದಂ) (ಶಮದ. ೦೩ ವೃತ್ತಿ). **ಛರ್ಪಿಸು:** ಮೇಲಿನ 'ಶಮದ' ಪ್ರಯೋಗವನ್ನು ನೋಡಿ. [ ಛಪ್ಪ₀ (P <ಪ್ರಾ. ಚಪ್ಪ) + – ಇಸು₃ ]

**ಛಪ್ಪೆ** 'ಚಪ್ಪೆ₁' ನೋ.

**ಛಪ್ರಾಸಿ** 'ಚಪರಾಸಿ' ನೋ.

**ಛಮ್**(ನಾ). ಒಂದು ಅನುಕರಣ ಶಬ್ದ: ಅನುಕರಣ ಸಂಧಿಗೆ–ಛಮ್ಮೆಂಬ, ಛಟಛಟೆಂಬ (ಶಮದ. ೩೦ ವೃತ್ತಿ).

**ಛಮ್ಮನೆ** (ಅ). ಛಮ್ಮೆಂಬ ಶಬ್ದದೊಡನೆ: ಅನುಕರಣಕ್ಕೆ – ಖಣಿಲ್ಲನೆ, ಖಟಾಲನೆ, ಛಮ್ಮನೆ, ಧುಮ್ಮನೆ (ಶಮದ. ೧೪ ಪ್ರಯೋ). [ ಛಮ್ + – ಅನೆ₁ ]

**ಛರು** (ನಾ). ಕತ್ತಿಯ ಹಿಡಿ,–ಹಿಡಿಕೆ: "ಛರುವಡಾಯುಧಗಳ ಪಿಡಿ [ಪಾಠಾಂ. ತ್ಸರುವೆನಲ್ಪಿಡಿ]" (ಮಂಗರಾ. ೮೮–೩೭); "ಛರು–ತ್ಸರು=ಆಯುಧಗಳ ಹಿಡಿಕೆ" (ತದ್ಭಕೋ. ೦೩). [ <ಪ್ರಾ. ಛರು. / ಸಂ. ತ್ಸರು ]

**ಛರ್ದಿ** (ನಾ). ಕಾರುವಿಕೆ; ವಾಂತಿ; ವಮನ: ಚರಿಗೆವೊಕ್ಕೊಡಾರುಂ ನಿಱಿಸುವೊರಿಲ್ಲಮೂಱಿತ್ತು ನಿಱಿಸಿದೊಡಂ ಛರ್ದಿಯಕ್ಕುಂ (ವಡ್ಡಾರಾ. ೧೬೦–೯); ಎಳಗಱಿಕೆಯನಕ್ಕಿಗರ್ಚನೊಳ್ ಕುಡಿಯೆ ಛ[ಪಾಠಾಂ.ತ]ರ್ದಿಯಂ ಮಾಣಿಸುಗುಂ (ಲೋಕೋಪ. ೯–೩೪); ತಾರೆಕಾಯಿ, ಸಕ್ಕರೆ, ಬಿಸಿನೀರಲ್ಲಿ ಕುಡಿಸಲು ಛರ್ದಿ ಮಾಣ್ಗುಂ (ವಿಷ್ಣವಿ. ೦೦೯). [ ಸಂ. ]

**ಛರ್ದಿಗೆಯ್**(ಕ್ರಿ). ಕಾರು; ವಾಂತಿಮಾಡು; ವಮನಮಾಡು: ಸುವ್ರತೆಯುರೆಂಬ ಕಂತಿಕೆಯರ್ಗನ್ನದಾನಂ ಕೊಟ್ಟೊಡವರುಪವಾಸಶ್ರಮದಿಂ ಛರ್ದಿಗೆಯ್ಯೆ (ಜಾವುಂಪು. ೨೦೩); ತಾನಲ್ಲಿ ಛರ್ದಿಗೆಯ್ಯಲು ನೀನು ಸಮ್ಯಕ್ತ್ವಹೀನದಿ ಜುಗುಪ್ಸೆಗೆಯ್ದುದಱಿಂ (ಶಾಂತೀಜ. ೩–೩೯). [ಛರ್ದಿ + ಕೆಯ್₁]

**ಛರ್ದಿಸು** (ಕ್ರಿ).=ಛರ್ದಿಗೆಯ್: ನಿರವದ್ಯಾಹಾರಮನಿಕ್ಕಲುಂಡಿರ್ದು ಛರ್ದಿಸುವುದುಂ (ನೇಮಿಪು. ೬–೧೮೩ ವ); ಕೊಳ್ಳಿರೆ ನಿಮ್ಮ ಕೂಟನೆನುತಂ . . . ಛರ್ದಿಸಿದಾಗಳ್ ಮನೆ ಪೂಟಿ ಕೂಟ್ ಕವಿವುದಂ ಕಂಡು (ಬಂಹರಿ. ೯–೩೦). [ ಛರ್ದನ₀ + – ಇಸು₃ ]

**ಛರ್ಪಿಸು** 'ಛಪ್ಪಿಸು' ನೋ.

**ಛಲ₁** 'ಚಲ₁' ನೋ.

**ಛಲ₂, ಛಳ** (ನಾ). ೧. ನೆಪ; ವ್ಯಾಜ: ಅನ್ನೆಗಮಿತ್ತ ಲಾಂಛನಚ್ಛಲದಿಂ ಶೋಕಾನಲದಗ್ಧಮಪ್ಪ ಮಹಾಶ್ವೇತಾಹೃದಯಮುಮಂ ವಿಡಂಬಿಸುವಂತೆಯುಂ ಮುನಿಕುಮಾರವಧಮಹಾಪಾತಕಮಂ ತಾಳ್ದಿದಂತೆಯುಮಾಗಿ (ಕಾದಂಪೂ. ೯೮೨); ಸುಧಾಸೂತಿ ಧಾತ್ರಿಯೊಳ್ ಶಿಶುರೂಪಚ್ಛಲದಿಂ ನೆಲೆವಡೆದವೊಲುಜ್ವಲತನು ರೋಹಿಣಿಗನಂತನಂದುದಯಿಸಿದಂ (ಜಗವಿ.೨–೮೮). ೨. ಮೋಸ; ವಂಚನೆ; ಕಪಟ. 'ಛಲಿಸು' ಪರಾ. ೩. [ನ್ಯಾಯ] ನ್ಯಾಯವಿಚಾರಕ್ಕೆ ಬೇಕಾದ ಹದಿನಾರು ಪದಾರ್ಥಗಳಲ್ಲಿ ಒಂದು; ವಾದಿಯು ಹೇಳಿದ ಶಬ್ದಕ್ಕೆ ಬೇರೆ ಅರ್ಥವನ್ನು ಕಲ್ಪಿಸಿ ಪ್ರತಿವಾದಿಯು ಹೇಳುವ ದೂಷಣೆ: ಗೌತಮೋಕ್ತ ನ್ಯಾಯವು ಪ್ರಮಾಣ ಪ್ರಮೇಯ . . . ಛಲ ಜಾತಿ ನಿಗ್ರಹಸ್ಥಾನಂಗಳೆಂಬ ಷೋಡಶ ಪದಾರ್ಥಂಗಳಂ ನಿರೂಪಿಸುತ್ತಲೀ ಪ್ರಪಂಚಕ್ಕೆ ಪರಮೇಶ್ವರ ಕರ್ತೃಕತ್ವಮಂ ನಿಶ್ಚಯಿಸುವದು (ವಿವೇಕ.೦೦); ವಾಕ್ಯಗಳಿಗೆ ಅಪಾರ್ಥವೆಂಬುದು ಛಲ (ಹಿಂದಸಾ. ೧೧೮). ೪. [ಕಾವ್ಯಮೀ] ದಶರೂಪಕಗಳಲ್ಲಿ ಒಂದಾದ ವೀಥಿಯ ಒಂದು ಅಂಗ; ಪ್ರಿಯವಾಗಿರುವಂತೆ ತೋರುವ ಅಪ್ರಿಯ ವಾಕ್ಯಗಳಿಂದ ಮೋಸಗೊಳಿಸುವುದು. **ಛಳ:** ೧. ಜಳಪಾನಚ್ಛಳದಿಂ ಪ್ರಪಾಪ್ರಣಯಿನೀಶೃಂಗಾರಲೀಲಾಸುಧಾಜಳಮಂ ಕಣ್ಗಳಿನೀಂಟಿ . . . ತದ್ವಿಷಯದಧ್ವನ್ಯರ್ ಮನಂ ಬೆರ್ಚುವರ್ (ಚಂದ್ರಪು. ೧–೪೯). [ ಸಂ. ]

**ಭಲಗಾರ** 'ಚಲಗಾರ' ನೋ.

**ಭಲಗಾರ್ತಿ** (ನಾ). ಹಟಸ್ವಭಾವದವಳು: ಎಂಕಮ್ಮನೂ ಒಳ್ಳೆಯ ಭಲ ಗಾರ್ತಿಯೇ ಸೈ (ಒಡ್ಡಿಉ. ೩೨).
[ ಭಲಗಾರ (<ಚಲಗಾರ) + – ತಿ$_1$ (<–ಇತ್ತಿ) ]

**ಭಲಗೆಡು** (ಕ್ರಿ). ಹಟವನ್ನು ಬಿಡು: ಲಜ್ಜೆಗೆಟ್ಟೆನು ನಾಣುಗೆಟ್ಟೆನು ಕುಲ ಗೆಟ್ಟೆನು ಭಲಗೆಟ್ಟೆನು (ಬಸವ. ೫೨೨). [ ಭಲ$_1$ (<ಚಲ$_1$) + ಕೆಡು$_1$ ]

**ಭಲಗೇಡಿ** (ನಾ). ಹಟಮಾರಿತನದಿಂದ ಕೇಡನ್ನು ಅನುಭವಿಸುವವನು: ಆದಲೇಕಿನ್ನು ನಿಮ್ಮಡಿಗೆ ಕೌರವನು ಭಲಗೇಡಿ ವಾತಜನೊಡನೆ ದ್ವೇಷಮಂ ಮಾಳ್ಪನು (ತುರಂಗ. ೭೫-೩೩). [ ಭಲ$_1$ (<ಚಲ$_1$) + ಕೇಡಿ$_1$ ]

**ಭಲಗ್ರಾಹಕ** (ನಾ). ಹಟಹಿಡಿಯುವಿಕೆ; ಹಟಮಾರಿತನ; ಮೊಂಡುತನ: ಸಾಹಸಿಗನೆಂದಿನ ಪರಿಯ ದಾಸೋಹದಿಂ ಬಿಡದಗೆಯಲುಂ ಭಲ ಗ್ರಾ[ಪಾಠಾಂ. ಗಾ]ಹಕದಿನವರೆಯ್ದಿ ಮಿಳಿಯಂ ಪಱಿದು ಬಿಸುಡಿಸಲು (ಬಸಪು. ೪೯-೪೫). [ ಭಲ$_1$ (<ಚಲ$_1$) + ಗ್ರಾಹಕ ]

**ಭಲಚೇತನ** (ನಾ). ಹಟಸ್ವಭಾವದವನು; ಚಲಗಾರ: ಭಲಚೇತನನು ಸಲೆ ಚಂಡಿಯಾದನು ಕಳನ ಚೌಕದಲಿ (ಕುವ್ಯಾಗ. ೩-೧೫).
[ ಭಲ$_1$ (<ಚಲ$_1$) + ಚೇತನ ]

**ಭಲನೆ** (ನಾ). ಕಾಟ; ಪೀಡೆ; ಹಿಂಸೆ: ಇದು ನನ್ನ ಭಲನೆ ಮಾಡಲೆಂದೊ? (ಮುತ್ತ್ರದ. ೬೦): ಹೆಣ್ಣಾದವಳಿಗೆ ಇಷ್ಟೊಂದು ಭಲನೆಯ ಆವಶ್ಯಕತೆ ಉಂಟು (ಇಪ್ಪಕ. ೨೦೨). [ ←ಮರಾ. ಭಲನಾ ]

**ಭಲಮದ** (ನಾ). ಹಟದಿಂದ ಉಂಟಾಗುವ ಗರ್ವ: ಕುಲಮದ ಭಲಮದ ವಿದ್ಯಾಮದದವರ ತೋಱಿದಿರಾ (ಅವಚಂ. ೧೦೨-೪೬೪); ಭಲಮದ ವಿದೇನಯ್ಯಾ ದರುಶನಭ್ರಾಂತಿ ಇದೇನಯ್ಯಾ (ಬಸವ. ೮೯೪).
[ ಭಲ$_1$ (<ಚಲ$_1$) + ಮದ ]

**ಭಲವಾದಿ** 'ಚಲವಾದಿ$_1$' ನೋ.

**ಭಲವಿಡಿ** 'ಚಲಂಬಿಡಿ' ನೋ.

**ಭಲವೇಳು**(ಕ್ರಿ). ಮೊಂಡಾಟ ಮಾಡು; ಹಟಹಿಡಿ: ರಾಮನಾಥನುಬುಬೆಯ ನಿಲಿಸುವ ವೀರರಿಲ್ಲೆನುತ ಬಂದನು ಬೇಗ ಭಲವೆದ್ದು ಮಗ ಹೊಯ್ಸಳನು (ಕುರಾಸಾಂ. ೧೩-೯೧). [ ಭಲ$_1$ (<ಚಲ$_1$) + ಏಳು$_1$ (<ಏೞ್$_1$) ]

**ಭಲಿ** 'ಚಲ್ಲಿ$_2$' ನೋ.

**ಭಲಿಪದ** (ನಾ).ಹಟಗಾರನ ಸ್ಥಾನ; ಹಟಮಾರಿತನ: ಕೇಳಿಕೆಯ ಮನ ಛತ್ರ ಭಂಗದ ಮೇಲೆ ಮುರಿಯದೆ ಭಲಿ[ಪಾಠಾಂ. ಲ]ಪದದ ಪರಿಪಾಲಿಯಿಂದುಪ್ಪ ವಡಿಸಿದನುಪ್ಪರದ ಗರ್ವದಲಿ (ತೊರರಾ. ೬-೧೦-೧).
[ ಭಲಿ (<ಚಲ್ಲಿ$_2$) + ಪದ$_2$ ]

**ಭಲಿಸು, ಭಳಿಸು$_2$** (ಕ್ರಿ). ೧. ವಂಚಿಸು; ಮೋಸಮಾಡು: ಮಾತುಮಾತಿ ಗವನು ಅಮ್ಮನವರ ಆಣೆ ದೇವರ ಆಣೆ ಮಾಡಿ ನನ್ನನ್ನು ಭಲಿಸಿದನು (ಕಥಪಿ. II, ೩೦೪). ೨. ಪೀಡಿಸು; ಕಾಡು: ಆದರೆ ಒಬ್ಬ ಮಂಬಾಜಿ ಯಲ್ಲದೆ ಬೇರೆ ಯಾವ ಕ್ರಿಸ್ತೀಯನೂ ಟಿಳಕರನ್ನು ಭಲಿಸಲಿಲ್ಲ (ಸ್ಮೃತಿಚಿ. ೪೪೦); ಸರ್ಪಗಳ ತಾಯಿಯಾದ ಕದ್ರುವು ಗರುಡನ ತಾಯಿಯಾದ ವಿನತೆಯನ್ನು ಭಲಿಸಿ ಭಲಿಸಿ ಹಣ್ಣುಮಾಡಿದ ಸಂಗತಿಯು ನಿಮಗೆ ಗೊತ್ತಿಲ್ಲವೆ? (ತುಳಸಿ. ೧೦೯); ಸುರಪತಿಯ ಭಲಿಸಿದ ನಿವಾತ ಕವಚರನ್ನೆಲ್ಲ ಲೀಲೆಯಲಿ ನಿರ್ನಾಮಮಾಡಿದನು (ಭಾಸನಾ. ೪೪). **ಭಳಿಸು$_2$**: ೨. ಬಹಳ ವಾಗಿ ಹಿಂಸಿಸಿ, ಭಳಿಸಿದ ಕಥೆಯನ್ನು ಅವಳಿಗೆ ಹೇಳಿದನು (ಟಾಕತ. ೬೮).
[ ಭಲ$_2$ + – ಇಸು$_3$ ]

**ಭಲೋಕ್ತಿ** (ನಾ). ಹಟದ ಮಾತು; ಮೊಂಡುತನದ ನುಡಿ: ನೀವೇ ನಿಮ್ಮ ಶಿಷ್ಯನ ಭಲೋಕ್ತಿಯಂ ಬಿಡಿಸೆಂದು ಸಂತೈಸಲು (ತುರಂಗ. ೭೫-೩೩).
[ ಭಲ$_1$ (<ಚಲ$_1$) + ಉಕ್ತಿ ]

**ಭಲ್ಲಣ** 'ಚಳಣ' ನೋ.

**ಭಲ್ಲಿ$_1$** 'ಚಲ್ಲಿ$_2$' ನೋ.

**ಭಲ್ಲಿ$_2$** (ನಾ). ೧. ಮರದ ಸಿಪ್ಪೆ,–ತೊಗಟೆ: ಅಲರಂ ಬಸಂತದೊಳ್ ತತ್ಫಲಮಂ ಗ್ರೀಷ್ಮದೊಳೆ . . . ಪ್ರಾವೃಡ್ದಿನಂಗಳೊಳ್ ಭಲ್ಲಿ [ಪಾಠಾಂ. ಝಿಲ್ಲಿ, ಬಳ್ಳಿ, ವಲ್ಲಿ]ಗಳಂ . . . ಸಾಧಿಪುದು ಮಹಾಮಾಯ ಹಾಲಾಹಳಕ್ಕೆ ಸಂಗ್ರಹಕಾಲಂ (ಖಮದ. ೧-೭೯). ೨. ಬಳ್ಳಿ; ಲತೆ. ೩. ಒಂದು ಬಗೆಯ ಹೂವು. ೪. ಗಡ್ಡೆ: ಮರದರಿಸಿನದ ಕಪಿತ್ಥದ ವರುಣದ ಪದ್ಮಕದ ಭಲ್ಲಿಯೊಳ್ ಸಮನಿಪುದಂ ಪರಿಶೋಧಿಸಿ (ಲೋಕೋಪ. ೭-೫೬). ೫. ಸಂತತಿ; ಸಂತಾನ. [ ಸಂ. ಭಲ್ಲೀ ]

**ಭವಿ** (ನಾ). ೧. ಕಾಂತಿ; ಹೊಳಪು; ಶೋಭೆ: ಪರಗಳ ತಮಾಳ ನೀಲ ಚ್ಛವಿಯಿಂ (ಪಂಪಭಾ. ೫-೩೪): ಪಕ್ಷಂಗಳ ಶಾದ್ವಲಚ್ಛವಿ ಮನಂಗೊಳೆ ಪಾಱುವ ಕೀರಮಾಲೆ . . . ರಂಜಿಕುಂ (ಜಗವಿ. ೪-೬೬): ಛವಿಕೋಟಿ ಯೆರಚಲ್ ಪ್ರತಿಚ್ಛಾಯೆ ವಿಲಸಿಪುದು (ಮಂಕುಕ. ೧೨೭). ೨. ಚರ್ಮ; ತೊಗಲು. ೩. ಬಣ್ಣ. ೪. ಅಂದ. [ ಸಂ. ]

**ಛವಿಕಲ್ಯಾಣ** (ನಾ). [ಬೌದ್ಧ] ಚರ್ಮದ ಸೌಂದರ್ಯ; ೫ ಹೆಂಗಸಿಗೆ ಇರಬೇಕಾದ ಕೇಶಕಲ್ಯಾಣ, ಮಾಂಸಕಲ್ಯಾಣ, ಅಸ್ಥಿಕಲ್ಯಾಣ, ಛವಿಕಲ್ಯಾಣ ಮತ್ತು ವಯೋಕಲ್ಯಾಣ ಎಂಬ ಐದು ಕಲ್ಯಾಣಗಳಲ್ಲಿ ಒಂದು: ಚಂದನವನ್ನಾಗಲಿ ಇತರ ವರ್ಣಕಗಳನ್ನಾಗಲಿ ಲೇಪಿಸದಿದ್ದರೂ ಚರ್ಮವು ನೀಲೋತ್ಪಲದ ಹಾರದಂತೆ ನುಣುಪಾಗಿರಬೇಕು, ಕರ್ಣಿಕಾರ ಪುಷ್ಪದ ಹಾರದ ಹಾಗೆ ಶುಭ್ರವಾಗಿರಬೇಕು. ಇದು ಛವಿಕಲ್ಯಾಣವೆಂಬುದು (ಹತ್ತುಮ. ೨೧). 'ಕೇಶಕಲ್ಯಾಣ' ಪರಾ. [ ಛವಿ + ಕಲ್ಯಾಣ ]

**ಛವಿವಡೆ** (ಕ್ರಿ). ಕಾಂತಿಯನ್ನು ಹೊಂದು; ಶೋಭೆಯನ್ನು ಪಡೆ: ಪೊಡವಿಯೊಳಗೆಂದುಂ ಪ್ರಭವಿಸದ ಗಿಡುವಿನೊಳು ಛವಿವಡೆದು ನವಕಂಬಡೆದ ನವ್ಯಸಹಸ್ರದಳಶತದಳಮನರ್ಪಿಸುತ(ಬಸಪು. ೩೫-೧೭). [ ಛವಿ + ಪಡೆ$_1$ ]

**ಛಳ** 'ಛಲ$_2$' ನೋ.

**ಛಳಕು** 'ಚಳಕು$_1$' ನೋ.

**ಛಳಛಳಿಸು**(ಕ್ರಿ). ಲಕಲಕಿಸು; ಹೊಳೆ: ಉತ್ತಮಶುಕ್ತಿಯೊಳಗೆ ಛಳ ಛಳಿಸುತ ಮುತ್ತಿನ ಮಣಿ ಬೆಳೆವಂತೆ (ಚಂಪ್ರಸಾಂ. ೨೪-೬೦).
[ ಛಳಛಳ$_0$ + – ಇಸು$_3$ ]

**ಛಳಯ** 'ಚಳೆಯ$_1$' ನೋ.

**ಛಳಿ** 'ಚಳಿ$_2$' ನೋ.

**ಛಳಿಗಾಣ್** (ಕ್ರಿ). ನಡುಕಹೊಂದು; ಹೆದರು: ಛಲವೆತ್ತು ಛದ್ಮನೆಯಿಂ ತುಚ್ಛಭೂಪರು ಛಳಿಪ ಕರ್ಗಣೆಗಣೆಯಾಗೆ ಛಳಿಗಂಡವೊಲು ಮೂರ್ಛೆ ಗೈಸಿ ಪಥಿಸಿದತಿ ಛಲವಾದಿ ಛಂದವಿಡೆನ್ನ (ಶಶಸಾಂ. ೭೯-೪೯).
[ ಛಳಿ (<ಚಳಿ$_2$) + ಕಾಣ್ ]

**ಛಳಿಗಾಲ** 'ಚಳಿಗಾಲ' ನೋ.

**ಛಳಿಜ್ವರ** 'ಚಳಿಜ್ವರ' ನೋ.

**ಛಳಿತು** (ನಾ). (?): ಎಂತು ಮೋಸವ ಗೈದಿರೊಳಿತೆಂದು ಛಳಿತೆಂದು ಇಂತಿದೆಲ್ಲವ ಭರ್ತನಗ್ರದೋಳ್ ಶೀಘ್ರದೋಳ್ ನೀಂ ತೋರಿವೆಂದತ್ತ ಪಱದಲ್ ಸಾರಿದಳ್ (ಜಿನಮು. ೩೪-೨೧). [ ? ]

**ಛಳಿಯೊತ್ತು** (ಕ್ರಿ). ಚಳಿಯಿಂದ ಪೀಡಿತವಾಗು; ತಣ್ಣಗಾಗು: ಹಿಮದ ಧಾಳಿಗೆ ಪಡಬ ಛಳಿಯೊತ್ತುವುದೆ (ಕಾಶಿರಾ. ೩೫-೨೭).
[ ಛಳಿ (<ಚಳಿ$_2$) + ಒತ್ತು$_1$ ]

**ಛಳಿಲ್** 'ಛಟಿಲ್' ನೋ.

**ಛಳಿವೆಟ್ಟು** 'ಚಳಿವೆಟ್ಟು' ನೋ.

**ಛಳಿಸು$_1$** 'ತಳಿಸು$_1$' ನೋ.

**ಛಳಿಸು₂** 'ಛಲಿಸು' ನೋ.

**ಛಳುಕು** 'ಚಳಕು₁' ನೋ.

**ಛಳೆಯ₁** 'ಚಳೆಯ₁' ನೋ.

**ಛಳೆಯು₂** 'ಚಳಯು₂' ನೋ.

**ಛಳೆಯಂಗೊಡು** 'ಚಳೆಯಂಗೊಡು' ನೋ.

**ಛಟಿಲ್, ಛಳಿಲ್** (ನಾ). ಒಂದಂ ಅನುಕರಣ ಶಬ್ದ.

**ಛಟಿಲ್‌ಛಟಿಲ್, ಛಳಿಲ್‌ಛಳಿಲ್** (ದ್ವಿರುಕ್ತಿ) : ಪಟುವಟಿಯಂ ತಗುಳ್ದೆಳರ್ವ ಬೇಗೆವೊಲೆಚ್ಚ ಶರಾಳಿಗಳ್ ಛಟಿಲ್‌ಛಟಿಲೆನೆ ಪಾಯೆ (ಶಂಪಥಾ. ೮-೧೦೩); ಛಳಿಲ್‌ಛಳಿಲೆಂದು ಕೊಳ್ವ ಬಡಿಗಂ ಚಳಿತು (ಧರ್ಮಾಮೃ. ೬-೮೮).

**ಛಾಂದಸ** (ಗುಂ). ೧. ವೇದಕ್ಕೆ ಸಂಬಂಧಪಟ್ಟ,-ಸೇರಿದ. ೨. [ಛಂದ] ಛಂದಸ್ಸಿಗೆ ಸೇರಿದ. (ನಾ). ೩. ವೇದವನ್ನು ಓದಿದವನು ; ಶ್ರೋತ್ರಿಯ : "ಛಾಂದಸ-ವೇದವನೋದಿದಾತನು" (ನಾಚಿರಾ. ೬); ಮಠದಿಂ ಪೊಱಮಟ್ಟು ನಿಂದ ಛಾಂದಸ ಬ್ರಾಹ್ಮಣನಂ ಕಂಡು (ಶಂಚಕಂ. ೧೮೭-೧೯) ; ದಾಮೋದರಭಟ್ಟಂ ಮೊದಲಾದ ಛಾಂದಸರು . . . ನೆರೆದರಮನೆಗೆ ಬಂದು (ಬಸರ. ೧೦-೨೩); ಛಾಂದಸನದೊರ್ಬನು ಭೂಸುರೇಂದ್ರನು ಭಿಕ್ಷವಂ ಬೇಡಿ . . . ಮನೆಗಯ್ತರಲರಿಯುವಂ ಒಸೆದು ತಾನೇ ತಂದು ಭಿಕ್ಷವನಿಕ್ಕಲೊಡಂ (ಬಸವು. ೫೬-೩೯). ೪. ಛಂದಸ್ಸನ್ನು ಅರಿತವನು ; ಛಂದಶ್ಶಾಸ್ತ್ರಜ್ಞ : ಕ್ರಿಯಾಶಾಲಿಯಾದ ಕವಿ ವೈಯಾಕರಣಿಯನ್ನಾಗಲಿ ಛಾಂದಸನನ್ನಾಗಲಿ ಮೆಚ್ಚಿಸುವುದಕ್ಕೆ ಬರೆಯ ಹೊರಡುವುದಿಲ್ಲ (ಸಾಕಾಪ್ರ. ೨೩೨). ೫. (ಆಲಂ) ಹಳೆಯ ಸಂಪ್ರದಾಯಂಗಳಿಗೆ ಅಂಟಿಕೊಂಡಿರುವವನು ; ಕಂದಾಚಾರದವನು : ಅತಿಜಡಂ ಛಾಂದಸಂ ಪದ್ಮಜಂ ನಿಕ್ಕುವಮಲ್ಲಂ ಕರ್ತೃವಾದಂದಿನಿತತಿಶಯಮಂ ತಾಳ್ದುದೇ ಕನ್ನೆಯಂದಂ (ಶಾಪ್ಲಾವ. ೭೨) ; ಬರುಬರನ್ನು ಬಲ್ಲವರೆಂದೂ, ಸಕಲ ಶಾಸ್ತ್ರಕೋವಿದರನ್ನು ಛಾಂದಸರೆಂದೂ ಅವರು ಹೆಸರಿಟ್ಟು ಕರೆಯುತ್ತಾರೆ (ನಂಜುಂಡ. ೦೬೬). ೬. (ಆಲಂ) ಸೋಮಾರಿ ; ಜಡ : ಛಾಂದಸನಧಿಕ ದರಿದ್ರಂ ಘುಂದಂ ಜಿಹ್ವಾನಲಂಪಟಂ ಗತಭಾಗ್ಯಂ (ದಶಕು. ೫-೨೪) ; ಅಣ್ಣಂ ದೊಡ್ಡಹೊಟ್ಟೆಯತಿಛಾಂದಸಂ ಪರಿಕಿಸಲ್ಕೆ ಭಾರಿಯಂಗಂ (ವೀಕೃಪು. ೬-೧೮-೭). [ಸಂ.]

**ಛಾಂದಸಿಕ** (ನಾ). ವೇದಾಧ್ಯಯನದಲ್ಲಿ ನಿರತನಾದವನು; ವೇದಾಭ್ಯಾಸದಲ್ಲಿ ಪ್ರವೀಣ. [ಸಂ.]

**ಛಾಂದಸಿಕೆ** (ನಾ). ಮುಂದಾಲೋಚನೆಯಿಲ್ಲದಿರುವುದು ; ಚಾಂದಸಿಕೆ ; ದಡ್ಡತನ: ನಿನ್ನನಟ್ಟಿರೊಳಾಂ ಮುದ್ದಾಡಿಸೆ ಮುನಿಸನ್ನಿಧಿಯೊಳ್ಮಾಡಿದುದಂ [ದುಂ] ಛಾಂದಸಿಕೆಯೊಂದೊದವಿಂದಂ (ಧರ್ಮಾಮೃ. ೩-೨೫೭).

[ಛಾಂದಸ + - ಇಕೈ₂ (< - ಇಕೆ)]

**ಛಾಂದಸಿಗ, ಚಂದಸಿಗ, ಛಂದಸಿಗ** (ನಾ). ೧. = ಛಾಂದಸಿಕ: ದೇಗುಲಿಗಂ, ಅಕ್ಕರಿಗಂ, ಛಾಂ[ಪಾಠಾಂ. ಚಂ, ಛಂ]ದಸಿಗಂ (ಶಮದ. ೦೯೭ ಪ್ರಯೋ). **ಚಂದಸಿಗ:** ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ೨. (ಆಲಂ) ಚುರುಕಿಲ್ಲದವನು ; ಮಂದ ; ಜಡ : ಅಯ್ಯೋ, ಆ ಚಂದಸಿಗನಿಂದ ಈ ಕೆಲಸ ಆಗುವುದುಂಟೇ ? (ರೂಢಿ). **ಛಂದಸಿಗ:** ೧. ಮೇಲಿನ 'ಶಮದ' ಪ್ರಯೋಗದ ಪಾಠಾಂತರವನ್ನು ನೋಡಿ.

[<ಸಂ. ಛಾಂದಸಿಕ]

**ಛಾಂದೋಗ್ಯ** (ನಾ). ಸಾಮವೇದಕ್ಕೆ ಸೇರಿರುವ ಒಂದು ಉಪನಿಷತ್ತು: ಛಾಂದೋಗ್ಯ . . . ಮೊದಲಾದುವೇ ಶತೋಪನಿಷತ್ತುಗಳು (ವಿವೇಕ. ೪); ಛಾಂದೋಗ್ಯೋಪನಿಷತ್ತು ಸಾಮವೇದದ ಕೌಥುಮಶಾಖೆಗೆ ಸೇರಿದೆ (ಛಾರದ. ೩೮). [ಸಂ.]

**ಛಾಂದೋಗ್ಯಸೂತ್ರ** (ನಾ). ಸಾಮವೇದದ ಒಂದು ಅಂಗ : ಸಾಮವೇದ ಕಲ್ಪಸೂತ್ರಗಳಿಗೆ ಛಾಂದೋಗ್ಯಸೂತ್ರಗಳೆಂದು ಹೆಸರು (ಸುಜ್ಞಾಡಂ. ೧ ಪ್ರಕರಣ). [ಛಾಂದೋಗ್ಯ + ಸೂತ್ರ]

**ಛಾಕಾರ**(ನಾ).(?): ಬಂದನಾ ಪುರಕೆ ಸೆಟ್ಟಿಯು ದೇಹ ತಾನಂದದಿಂದಲೈತಂದು ವಂದಿಸಿ ದೇವರ್ಗೆ ಕುಳ್ಳಿರೆ ಸೆಟ್ಟಿಯುಂ ಬಂದಿ ಛಾಕಾರವಿತ್ತು (ತರ್ಕಳಾ. ೧೧-೨೨). [?]

**ಛಾಗ**(ನಾ). = ಛಗ: "ಅಜಃ, ಸ್ತಭಃ, ಬಸ್ತಃ, ಛಾಗಃ, ಛಗಳಕಃ, ಛಗಃ-ಈ ೬ ಹೋತು" (ಹಲಾಯು. ೪೭-೧೨೨); ಛಾಗದ ತೋವಲಕ್ಕೆ ಕಡುಕರ್ಪಸೆವೆಟ್ಟಿನ ಗಂಗೆದೋವಲಕ್ಕೆ (ಲೋಕೋಪ. ೬-೪೧). [ಸಂ.]

**ಛಾಗರಿ** (ನಾ). (?) : ಮೂಡಲೆಕೆ ಗದೆಯ ವಿವರ ಬಳಕಂಡ ಕಡುವುಂಣ್ಣ ಕೊಡಗೆ ಛಾಗರಿ ಗದೆ ಯಿ ಕೊಡಂಗೆ ದಾಟು ಮಾದಳಿಕ ಕೊಡಂಗೆ (ಕಇ. I, ೫೦-೦೩ : 1432 ?). [?]

**ಛಾಗಲ** (ನಾ). = ಛಗ : ಭಟ್ಟಂಗೆ ಭ್ರಾಂತಿ ಪುಟ್ಟಿ ನಿಂದು ಪೆಗಲೊಳಿರ್ದ ಛಾಗಲಮಂ ಭೂಭಾಗದೊಳಿಟ್ಟು (ಶಂಚಕಂ. ೦೯೭-೧). [ಸಂ.]

**ಛಾಗಿ** (ನಾ). ಹೆಣ್ಣಾಡು; ಮೇಕೆ: "ಅಜಾ, ಛಾಗೀ-೨ ಆಡು" (ಸಿದ್ಧಾಂತಿ. ೨೩೪). [ಸಂ. ಛಾಗೀ]

**ಛಾಟಿ** 'ಚಾಟಿ₁' ನೋ.

**ಛಾಡ** 'ಚಹಡ' ನೋ.

**ಛಾಡಿ** 'ಚಹಡ' ನೋ.

**ಛಾತ** (ಗುಂ). ೧. ಕತ್ತರಿಸಿದ; ಹರಿದ; ವಿಭಾಗಿಸಿದ; ಹೋಳುಮಾಡಿದ. (ನಾ). ೨. ಮಾಂಸಪುಷ್ಟಿಯಿಲ್ಲದವನು ; ದುರ್ಬಲ ; ಕೃಶವಾಗಿರುವವನು : "ಅಮಾಂಸಃ, ದುರ್ಬಲಃ, ಛಾ[ಪಾಠಾಂ. ಶಾ]ತಃ-೩ ಬಡಬಡಕಲುಮೈಯುಳ್ಳವನು, ನರಪೇತಲವನು, ಬಲವಿಲ್ಲದವನು, ಅಶಕ್ತನು" (ಸಿದ್ಧಾಂತಿ. ೧೫೭). [ಸಂ.]

**ಛಾತಿ** (ನಾ). ೧. ಎದೆ ; ವಕ್ಷಸ್ಥಳ. ೨. ಧೈರ್ಯ ; ಸಾಹಸ ; ಕೆಚ್ಚು : ನಿಮ್ಮಲ್ಲಿ ಯಾರಲ್ಲಾದರೂ ಆಯುಧಗಳಿದ್ದರೆ; ನಿಮಗೆ ಛಾತಿಯೂ ಇದ್ದರೆ, ಇಷ್ಟವಿದ್ದರೆ ಮಾತ್ರ ಬರಬಹುದು (ಸಕತ. ೮೧); ಅವಳಿಗೆ ಸಿಟ್ಟು ಮಾಡುವ ಛಾತಿ ಇವರೊಬ್ಬರಿಗೂ ಇಲ್ಲಾ (ಮೂರುದಾ. ೪೮). ೩. ದಕ್ಷತೆಯಿಂದ ಕೆಲಸ ಮಾಡುವುದು : ಛಾತಿಯಿದ್ದ ನಾಲ್ಕು ಜನ ಮಿತವ್ಯಯ ಮಾಡಿ ಲಾಭಗಳಿಸಿದರೆ ಸಾಲದೆ ? (ಶಿಲ್ಪನಾ. ೦೭೮). [←ಹಿಂ. ಛಾತೀ]

**ಛಾತ್ರ** (ನಾ). ಶಿಷ್ಯ ; ವಿದ್ಯಾರ್ಥಿ : "ಶಿಷ್ಯಃ, ಅಂತೇವಾಸಿನ್, ಛಾತ್ರಃ, ಶೈಕ್ಷಃ, ಪ್ರಾಥಮಕಲ್ಪಿಕಃ-ಈ ಐದು ಶಿಷ್ಯಂ" (ಹಲಾಯು. ೬೬-೨೪೭) ; ಪರ್ವತನುಂ ಛಾತ್ರಸಹಿತಂ ಸಾಕೇತನಮಂ ಪೊಕ್ಕು (ಚಾವುಂಪು. ೩೦೪-೨೭) ; ಪೂರ್ಣತುಚ್ಛ್ರಂಖಲಂ ಗೋತ್ರಗಿರಿಚ್ಛಾತ್ರಾನುವಾದಾಧ್ಯಯನ ಗುರು ಜರಾಸಂಧಭೇರೀನಿನಾದಂ (ಜಗವಿ. ೭-೩೯). [ಸಂ.]

**ಛಾತ್ರಪಾಲಕ** (ನಾ). ಶಿಷ್ಯರನ್ನು ನೋಡಿಕೊಳ್ಳುವವನು; ವಿದ್ಯಾರ್ಥಿಗಳ ಯೋಗಕ್ಷೇಮವನ್ನು ನೋಡಿಕೊಳ್ಳುವವನು : ಆದರೆ ಸಾಹೇಬ-ಕುಮಾರಿಗೆ, ಅಖಂಡಜ್ಞಾನಸತ್ರವಿಡುವ, ನಮ್ಮಂಥ ಛಾತ್ರಪಾಲಕನ ಅಗತ್ಯವಿತ್ತು (ದೀಪಹ. II,೦೯). [ಛಾತ್ರ + ಪಾಲಕ]

**ಛಾತ್ರಾಲಯ** (ನಾ). ವಿದ್ಯಾರ್ಥಿಗಳ ವಸತಿ ಮತ್ತು ಊಟಕ್ಕೆ ಏರ್ಪಾಡು ಮಾಡಿರುವ ಆಲಯ; ವಿದ್ಯಾರ್ಥಿನಿಲಯ : ಸಮೀಪದಲ್ಲಿಯೇ ಮಾಯಾಶಂಕರನ ಮಿತ್ರಭವನವಿತ್ತು. ಅದೊಂದು ಚಿಕ್ಕ ಛಾತ್ರಾಲಯಯವೇ ಆಗಿತ್ತು (ಪ್ರೇಮಾಶ್ರ. ೨೪೩). [ಛಾತ್ರ + ಆಲಯ]

**ಛಾದ** (ನಾ). = ಛಾದನ. [ಸಂ.]

**ಛಾದನ** (ನಾ). ಮುಚ್ಚುವುದು ; ಮರೆಮಾಡುವುದು. [ಸಂ.]

**ಛಾದರು** 'ಚಾದರ' ನೋ.

**ಛಾದಿತ** (ಗು). ಮುಚ್ಚಿದ; ಮರೆಮಾಡಿದ. [ಸಂ.]

**ಛಾದ್ಯ** (ಗು). ೧. ಮುಚ್ಚಿಡುವ; ಮರೆಮಾಡುವ. (ನಾ). ೨. ಮೇಲ್ಹೊದಿಕೆ; ಮೇಲ್ಕಟ್ಟು; ವಿತಾನ: ಮುಕ್ತಾಮಣಿಗಣರಚಿತಂ ಛಾದ್ಯ ಹೃದ್ಯಂ . . . ಕಾಯಮಾನಂ ನವೀನಂ (ಚಂದ್ರಪು. ೧೨-೧೦೭). [ಸಂ.]

**ಛಾನಸ** 'ಚಾಂದಸ' ನೋ.

**ಛಾನಸಗಾರ** (ನಾ). ನಿಧಾನಸ್ವಭಾವದವನು; ಜಡಪ್ರವೃತ್ತಿಯವನು; ಸೋಮಾರಿ: (ಕ). [ಛಾನಸ (<ಚಾಂದಸ) + – ಕಾರ$_1$ (<–ಕಾಱ)]

**ಛಾನಸತನ** (ನಾ). ನಿಧಾನಸ್ವಭಾವ; ಸೋಮಾರಿತನ: ಇವರ ಛಾನಸತನದ ಕಾಲಾಗ ನಮ್ಮ ಕೈ ಹೋಗತಾವು (ನಡುಮ. ೧೧೦). [ಛಾನಸ (<ಚಾಂದಸ) + – ತನ]

**ಛಾಪ** 'ಛಾಪು' ನೋ.

**ಛಾಪಖಾನೆ** (ನಾ). ಅಚ್ಚುಮಾಡುವ ಸ್ಥಳ; ಮುದ್ರಣಾಲಯ: ಛಾಪಖಾನೆಗಳಲ್ಲಿ ಮೊಳೆ ಜೋಡಿಸುವವರು ಬೇರೆ (ಮುಂಬಯಿ. ೩-೨೩೩); ಛಾಪಖಾನೆಗಳು ಹೆಚ್ಚಿದ ಬಳಿಕಂತು, ಸಾವಿರಾರು ಜನರಿಗೆ ಛಾಪೆಯ ಸುಖವನ್ನು ಸವಿಯಲು ಅವಕಾಶವಾಗಿದೆ (ಚಾಲಪ್ರ. I, ೮೭); ಬಳ್ಳಾರಿಯಲ್ಲಿ ಒಂದು ಛಾಪಖಾನೆಯನ್ನು ಸುಮಾರು ೧೮೨೦ರಲ್ಲಿ ಸ್ಥಾಪಿಸಿದ್ದೇ ಕನ್ನಡನಾಡಿನಲ್ಲಿ ಮೊದಲನೇದಾಗಿದೆ (ಪಾಶ್ಚಾವಿ. ೨೩೬). [ಛಾಪ (<ಛಾಪು) + ಖಾನೆ. / ಹಿಂ. ಮರಾ. ಛಾಪಖಾನಾ]

**ಛಾಪಾಕಾಗದ** 'ಛಾಪೆಕಾಗದ' ನೋ.

**ಛಾಪಿಸು, ಚಾಪಿಸು** (ಕ್ರಿ). ಮುದ್ರಿಸಂ; ಅಚ್ಚುಹಾಕು: ಛಾಪಖಾನೆಗಳಲ್ಲಿ ಮೊಳೆ ಜೋಡಿಸುವವರು ಬೇರೆ . . . ಛಾಪಿಸುವವರು ಬೇರೆ (ಮುಂಬಯಿ. ೩-೨೩೩); ಅವನ್ನು ಹಿಂದೀಭಾಷೆಗೆ ಅನುವಾದಿಸಿ ಛಾಪಿಸಿಯೂ ಆಗಿದೆ (ಧೂರಾಚಿ. ೧೧೦). **ಚಾಪಿಸು:** ಈ ಪುಸ್ತಕವನ್ನು ಸರಕಾರಿ ಮುದ್ರಣಾಲಯದಲ್ಲಿ ಚಾಪಿಸಲಾಯಿತು (ರೂಢಿ). [ಛಾಪು + – ಇಸು$_3$]

**ಛಾಪು, ಚಪ್ಪೆ$_3$, ಛಾಪ, ಛಾಪೆ** (ನಾ). ೧. ಅಚ್ಚು; ಮುದ್ರೆ: ಗೋರೂರವರ ಕಲೆಯು ಎಲ್ಲಿಂದಲೋ ರಫ್ತಾಗಿ ಬಂದ ಸೀಮೆ ಛಾಪಿನ ಸರಕಲ್ಲ (ಗರುಡಾ. ೭ ಮುನ್ನುಡಿ); ಸರ್ಕಸ್ಸನ್ನು ಸೇರಿದ ಕೂಡಲೆ ಪ್ರತಿಯೊಬ್ಬನಿಗೂ ನಂಬರು ಹಾಕಿ ತಮ್ಮ ಸರ್ಕಸ್ಸಿನ ಛಾಪುಳ್ಳ ಒಂದು ತಾಮ್ರದ ಬಿಲ್ಲೆಯನ್ನು ಕೊಡುತ್ತಿದ್ದರು (ಮೇದಿಮು. ೬೭). ೨. (ಅಲಂ) ಪ್ರಭಾವ; ವರ್ಚಸ್ಸು: ಅಪ್ಪರಾಯಭಟ್ಟರಿಗೆ ಅಂದು ಪಾದ್ರಿ ಸೋಜನು ದಂಬನ ಮೇಲೆ ಒಗೆಯಲು ಹೋದ ಛಾಪು ಯಾವುದೆಂದು ಸಾಕಷ್ಟು ವಿದಿತವಾಗಿತ್ತು (ದಂಬನಾ. ೫೧). **ಚಪ್ಪೆ$_3$:** ೧. ಚಪ್ಪೆ, ಛಾಪಾ – ಸುಂಕದ ಕಟ್ಟೆಯಲ್ಲಿ ಸರಕಿನ ಮೇಲೆ ಒತ್ತುವ ಮುದ್ರೆ (ಕಿಸಂಗ್ರಾ. ೧೪೬). **ಛಾಪ:** ೧.'ಛಾಪಖಾನೆ' ಪರಾ. **ಛಾಪೆ:** ೧. 'ಛಾಪೆಕಾಗದ' ಪರಾ.

**ಛಾಪುಹಾಕು** = (ಅಲಂ) ಪರಿಣಾಮಕಾರಿಯಾಗುವ ರೀತಿಯಲ್ಲಿ ಪ್ರಭಾವ ಬೀರು: ನಿಮ್ಮಂಥವರ ಮ್ಯಾಲೆ ಛಾಪುಹಾಕಲಿಕ್ಕೆ ಹೇಳೋ ಮಾತವು (ಗ್ರಾಮಾಯ. ೩೪೭).

[←ಹಿಂ. ಛಾಪ್, ಛಾಪಾ; ಮರಾ. ಛಾಪ್, ಛಾಪಾ, ಛಪ್ಪಾ]

**ಛಾಪೆ** 'ಛಾಪು' ನೋ.

**ಛಾಪೆಕಾಗದ, ಛಾಪಾಕಾಗದ** (ನಾ). ಸರ್ಕಾರದ ಛಾಪೆಯನ್ನು ಮುದ್ರಿಸಿರುವ ಕಾಗದ; ವ್ಯವಹಾರದ ದಾಖಲೆಗಾಗಿ ಉಪಯೋಗಿಸುವ ಸರ್ಕಾರದ ಅಧಿಕೃತ ಮುದ್ರೆಯಿರುವ ಕಾಗದ: ಸರಕಾರದವರು ಛಾಪೇಕಾಗದ ನೋಂದಣಿ ಮುಂತಾದ ಕಾಯಿದೆಗಳನ್ನು ಮಾಡಿದರು (ಮುಂಬಯಿ. ೬-೦೦೦). **ಛಾಪಾಕಾಗದ:** ಈ ಐವಜಿಗಾಗಿ ಛಾಪಾಕಾಗದದಲ್ಲಿ ಪತ್ರ ಬರೆದುಕೊಡುತ್ತೇನೆ (ಕಥಾಮಂ. IV, ೪). [ಛಾಪೆ (<ಛಾಪು)+ಕಾಗದ]

**ಛಾಯ** (ನಾ). ೧. ನೆಳಲಂ; ನೆರಳು: ತಾಯಿ ಭ್ರಮರಾಂಬೆಯ ಗಾಯಗೊಂಡೇನವ್ವ ಛಾಯದ ತಂಪು ಬೀಸವ್ವ (ಸಿದ್ಧಪು. ೫-೮೪). ೨. ಪ್ರತಿಬಿಂಬ; ಪಡಿಯಚ್ಚು: ಬಹುವರ್ಣದ ಧಾತ್ರಿಯಲ್ಲಿ ಅವಚಿವಚಿ ವರ್ಣಛಾಯ ನಿಂದಿತ್ತು (ಪೋಲೀಮಾ. ೬-೧೯). [ಸಂ. ಛಾಯಾ]

**ಛಾಯಗಾರಿಕೆ** (ನಾ). ಗ್ರಹಗಳಿಗಿರುವ ಒಂದು ಶಕ್ತಿವಿಶೇಷ; ನೆರಳನ್ನು ಹಿಡಿದಂ ಆಯಾಯ ವ್ಯಕ್ತಿಯ ಮೇಲೆ ಪ್ರಭಾವವನ್ನು ಬೀರುವಿಕೆ: ಛಾಯಗಾರಿಕೆಯಿಂದ ದುಷ್ಟಗ್ರಹಗಳ ಸಮುದಾಯ ಪೀಡಿಸಿ ಭಯ ತೋರುತವೇನಯ್ಯಾ (ಪೋಕ್ಷದೀ. ೩೭-೧). [ಛಾಯ + ?]

**ಛಾಯರಂಗ** (ನಾ). ವಜ್ರದಲ್ಲಿ ಒಳಗೆ ಬೆಳಕಂ ಹೊಳೆಯುವ ಸ್ಥಳ: ಬಾಲಾರ್ಕನಿದಿರಿನೊಳು ಹಿಡಿಯೆ ರತ್ನದ ಮಧ್ಯೆ ತಾ ತೋರುತಿರಲು ಪಾಲಿಸದ ಛಾಯರಂಗವುದೆಂದು ಪೇಳ್ವರದನಾಲಿಸೈ ಮಾಣಿಕಕೆ ಕಾಂತಿ ರಂಗುಗಳನ್ನು ಮೇಲೆ ಶಿರದೊಳು ನೋಡಿ (ರತ್ನಶಾ. ೧೦-೧೩). [ಛಾಯ + ರಂಗ]

**ಛಾಯಾಕರಣ** (ನಾ). (ಚಿತ್ರಕಲೆಯಲ್ಲಿ) ವಸ್ತುಗಳ ಮೇಲೆ ಬೀಳುವ ಕತ್ತಲೆ ಬೆಳಕನ್ನು ತೋರಿಸುವುದು: ಮೊಗಲ ಚಿತ್ರಗಳ ಛಾಯಾಕರಣವು (Shading) ಸಹ ಅತಿ ಸೂಕ್ಷ್ಮವಾದುದು (ಛಾಚಿತ್ರ. ೩೨). [ಸಂ.]

**ಛಾಯಾಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು: ಕರ್ಣಾಟಗೌಳ . . . ಛಾಯಾಗೌಳ . . . ದ್ರಾವಿಡಗೌಳವೆಂಬೀಳುಂ ಉಪಾಂಗ ಗೌಳ ರಾಗಂಗಳು (ವಿವೇಕ. ೨೩೪). [ಸಂ.]

**ಛಾಯಾಗ್ರಹ** (ನಾ). ೧. ಪ್ರತಿಬಿಂಬವನ್ನು ಗ್ರಹಿಸುವುದಂ; ಕನ್ನಡಿ. ೨. [ಜ್ಯೋತಿ] ಸೂರ್ಯಚಂದ್ರರಿಗೆ ಕತ್ತಲೆಯನ್ನು ತರುವ ಗ್ರಹ; ರಾಹು ಮತ್ತು ಕೇತಂ: ವಿವಾಹದಲ್ಲೂ ಉಪನಯನದಲ್ಲೂ ಛಾಯಾಗ್ರಹಗಳಾದ ರಾಹುಕೇತುಗಳ ದೋಷವಿಲ್ಲ (ರೂಢಿ). [ಸಂ. (ಛಾಯಾ + ಗ್ರಹ)]

**ಛಾಯಾಗ್ರಹಣ** (ನಾ). ೧. ನೆರಳನ್ನು ತಡೆಹಿಡಿಯುವುದು; ತನ್ನಲ್ಲಿರುವ ಪ್ರಭಾವವಿಶೇಷದಿಂದ ವ್ಯಕ್ತಿಯ ಗಮನವನ್ನು ನಿರೋಧಿಸಲು ಅವನ ನೆರಳನ್ನು ಹಿಡಿಯುವಿಕೆ. 'ಛಾಯಾಗ್ರಹಣಂಗೆಯ್' ಪರಾ. ೨. ಭಾವಚಿತ್ರವನ್ನು ತೆಗೆಯುವುದು; ಫೋಟೋ ತೆಗೆಯುವುದಂ. ೩. (ಅಲಂ) ಸ್ಥೂಲವಾಗಿ ತಿಳಿದುಕೊಳ್ಳುವುದು: ಇಂತಹ ಉಪಕರಣಗಳಿಂದ ವಿಶ್ವತತ್ವದ ಛಾಯಾಗ್ರಹಣವನ್ನು ಮಾಡಲು ಮಾತ್ರ ಸಾಧ್ಯ (ಖುಶ್ಚಾರ. ೪೦ ಪೀಠಿಕೆ). [ಸಂ. (ಛಾಯಾ + ಗ್ರಹಣ)]

**ಛಾಯಾಗ್ರಹಣಂಗೆಯ್** (ಕ್ರಿ). ವ್ಯಕ್ತಿಯ ಚಲನವನ್ನು ನಿರೋಧಿಸಲು ಅವನ ನೆರಳನ್ನು ತಡೆಹಿಡಿ: ವಿಮಾನಾರೂಢಂ ರಣಕ್ರೀಡೆಗೊಡರಿಸುವುದುಂ ಶ್ರೀಶೈಳಂ ತದ್ವಿಮಾನಮಂ ಛಾಯಾಗ್ರಹಣಂಗೆಯ್ದು ನೆಲಕ್ಕಿವರ್ಪುದುಂ (ಪಂರಾಮಾ. ೧೧-೩೨ ವ). [ಛಾಯಾಗ್ರಹಣ + ಕೆಯ್$^1$]

**ಛಾಯಾಗ್ರಹಣಯಂತ್ರ** (ನಾ). ಭಾವಚಿತ್ರವನ್ನು ತೆಗೆಯಲು ಉಪಯೋಗಿಸುವ ಯಂತ್ರ; ಫೋಟೋ ತೆಗೆಯುವ ಯಂತ್ರ; ಕ್ಯಾಮರಾ: ಆ ದೂರದರ್ಶಕಯಂತ್ರಕ್ಕೆ ಒಂದು ಛಾಯಾಗ್ರಹಣಯಂತ್ರ (Camera) ವನ್ನು ಜೋಡಿಸಿ ಛಾಯಾಚಿತ್ರ ಹಿಡಿದರೆ (ಆಕಾಶ. ೭). [ಛಾಯಾಗ್ರಹಣ + ಯಂತ್ರ]

**ಛಾಯಾಗ್ರಾಹಿ** (ಗುಂ). ೧. ನೆರಳನ್ನು ಹಿಡಿಯುವ: ಬರ್ದಿಲವಟ್ಟೆಯೊಳ್ಪತರುತಲಿರ್ದ ಹನುಮಂನಂ, ದೂರದಾಕಾಶದೊಳ್ ಚುಕ್ಕಿಯೋಲಿರ್ದನಂ ತಿಳಿದಳಾ ಸಿಂಹಿಕೆ, ದಶಗ್ರೀವನಾಜ್ಞೆಯಿಂ ಕಡಲ ಕಾವಲುಗಾರ್ತಿ, ಕಾಮರೂಪಿಣಿ, ಕಾಳಿ, ಛಾಯಾಗ್ರಾಹಿ ದನುಜೆ (ಶ್ರೀರಾಮಾ. ೪೧೧-೨೦೮). (ನಾ). ೨. ಭಾವಚಿತ್ರವನ್ನು ತೆಗೆಯುವವನು: 'ಅವರ ಮದುವೆಯಲ್ಲಿ ಪ್ರಸಿದ್ಧ ಛಾಯಾಗ್ರಾಹಿಯನ್ನು ಕರೆಸಿದ್ದರು (ರೂಢಿ). [ಸಂ. ಛಾಯಾಗ್ರಾಹಿನ್]

**ಛಾಯಾಚಿತ್ರ** (ನಾ). ೧. ನೆರಳಿನ ಚಿತ್ರ. ೨. ಛಾಯಾಗ್ರಹಣಯಂತ್ರದ ಸಹಾಯದಿಂದ ತೆಗೆದ ಚಿತ್ರ ; ಭಾವಚಿತ್ರ ; ಫೋಟೋ : ಛಾಯಾಚಿತ್ರಗಳು, ತೈಲಚಿತ್ರಗಳು, ನೀರು ಬಣ್ಣದಿಂದ ಬರೆದ ಚಿತ್ರಗಳು, ಇವೆಲ್ಲವೂ ಹಾಫ್‌ಟೋನ್ ಪಡಿಯಚ್ಚಿಗೆ ಯೋಗ್ಯವಾದ ಮೂಲಪ್ರತಿಗಳು (ಮುದ್ರಕ. ೬೦) ; ಛಾಯಾಚಿತ್ರ ತೆಗೆದುಕೊಳ್ಳುವುದಕ್ಕೆ ಮೊದಲು, ದೂರದರ್ಶಕ ಯಂತ್ರವನ್ನು . . . ಸಿದ್ಧಗೊಳಿಸಿಕೊಳ್ಳುವುದು ಅಗತ್ಯ (ಅಕಾಶ. ೭). [ ಸಂ. (ಛಾಯಾ + ಚಿತ್ರ) ]

**ಛಾಯಾಚಿತ್ರಗಾರ** (ನಾ). ಭಾವಚಿತ್ರಗಳನ್ನು ತಯಾರುಮಾಡುವವನು; ಫೋಟೋ ತೆಗೆಯುವವನು : ಚಿತ್ರಗಾರ, ಶಿಲ್ಪಿ, ಛಾಯಾಚಿತ್ರಗಾರ, ಮೊ.ರು ತಕ್ಕ ಬೆಳಕಿನ ಅನುಕೂಲವಿರುವಂತೆ ಏರ್ಪಡಿಸಿಕೊಂಡಿರುವ ಕೆಲಸದ ಕೋಣೆ (Studio. ಇಂಕನಿ).
[ ಛಾಯಾಚಿತ್ರ + – ಗಾರ (< – ಕಾಱ) ]

**ಛಾಯಾಚಿತ್ರಲೇಖನ** (ನಾ). ಒಂದು ಬಗೆಯ ಚಿತ್ರಕಲೆ : ಛಾಯಾಚಿತ್ರ ಲೇಖನ ಒಬ್ಬನ ನೆರಳನ್ನು ಕಂಡು ಅವನ ಚಿತ್ರವನ್ನು ಬರೆಯುವ ಕಲೆ (ಭಾಚಿತ್ರ. ೨೦). [ ಛಾಯಾಚಿತ್ರ + ಲೇಖನ ]

**ಛಾಯಾತನಯ** (ನಾ). ಛಾಯಾದೇವಿಯ ಮಗ ; ಸೂರ್ಯನ ಮಗ ; ಶನಿ. [ ಸಂ. (ಛಾಯಾ + ತನಯ) ]

**ಛಾಯಾತೋಡಿ** (ನಾ). [ಸಂಗೀತ] ಒಂದು ರಾಗದ ಹೆಸರು : ಛಾಯಾತೋಡಿ ತುರುಷ್ಕತೋಡಿಯೆಂಬೆರಡುಂ ಉಪಾಂಗತೋಡಿರಾಗಂಗಳು (ವಿವೇಕ. ೨೩೪). [ ಸಂ. ಛಾಯಾತೋಡೀ (ಛಾಯಾ + ತೋಡೀ) ]

**ಛಾಯಾದೇವಿ** (ನಾ). ಸೂರ್ಯನ ಹೆಂಡತಿ,–ಪತ್ನಿ : ಸೂರ್ಯವಿಗ್ರಹ ಆರು ಅಡಿ ಎತ್ತರವಿದೆ . . . ಎರಡು ಪಕ್ಕಗಳಲ್ಲಿ ಛಾಯಾದೇವಿಯರು ಬಾಣಗಳನ್ನು ಬಿಡುತ್ತಿರುವರು (ಹೊಯ್ಸವಾ. ೧೪೮).
[ ಸಂ. ಛಾಯಾದೇವೀ (ಛಾಯಾ + ದೇವೀ) ]

**ಛಾಯಾನಂದನ** (ನಾ). = ಛಾಯಾತನಯಂ.
[ ಸಂ. (ಛಾಯಾ + ನಂದನ) ]

**ಛಾಯಾನಟ** (ನಾ). [ಸಂಗೀತ] ಒಂದು ರಾಗದ ಹೆಸರು : ಛಾಯಾನಟ ರಾಗದ ಆಲಾಪನೆ ಮೃದು ಮಧುರವಾಗಿ ಮೂರ್ತೀಭವಿಸತೊಡಗಿತು (ರೂಪಸ. ೨೨೨). [ <ಸಂ. ಛಾಯಾನಾಟ ]

**ಛಾಯಾನಾಟಕ** (ನಾ). ೧. ಪಾತ್ರ ಅಥವಾ ಬೊಂಬೆಯ ನೆರಳು ಮುಂದಿನ ತೆರೆಯ ಮೇಲೆ ಬೀಳುವಂತೆ ಮಾಡಿ ಪ್ರದರ್ಶಿಸುವ ನಾಟಕ ; ನೆರಳಿನನಾಟಕ. ೨. ರೂಪಕದ ಕೆಲವು ಲಕ್ಷಣಗಳು ಮಾತ್ರವಿರುವ ನಾಟಕ : ಇದು ಒಂದು " ಛಾಯಾನಾಟಕ " (ಸಂನಾಟ. ೨೮೦).
[ ಸಂ. (ಛಾಯಾ + ನಾಟಕ) ]

**ಛಾಯಾನುವಾದ** (ನಾ). ಮುಖ್ಯಾಂಶಗಳನ್ನು ಮಾತ್ರ ತಿಳಿಸುವ ಅನುವಾದ : ಸಂಸ್ಕೃತ ಸಾಹಿತ್ಯದ ಅನೇಕ ಕೃತಿಗಳ ಭಾವಾನುವಾದ, ಛಾಯಾನುವಾದ ಮತ್ತು ಅನುವಾದಗಳೂ ಬಂದವು (ಭಾರದ. ೪೬೩).
[ ಸಂ. (ಛಾಯಾ + ಅನುವಾದ) ]

**ಛಾಯಾಪತಿ** (ನಾ). ಛಾಯಾದೇವಿಯ ಗಂಡ; ಸೂರ್ಯ : ಛಾಯಾಪತಿಯನೌಕುವ ತಮೋನಿಧಿಯ ಬಹಳತೆಯ ಭಣಿತೆಯುಲಿ (ತೊರರಾ. ೫-೧-೧೭). [ ಸಂ. (ಛಾಯಾ + ಪತಿ) ]

**ಛಾಯಾಪಥ** (ನಾ). ಆಕಾಶದಲ್ಲಿ ಕಾಣುವ ಬಿಳಿಯ ರಸ್ತೆಯಂತಿರುವ ಪಥ ; ಆಕಾಶಗಂಗೆ : ಛಾಯಾಪಥ (ಆಕಾಶಗಂಗೆ Milky-Way) ಎಂದು ಹೆಸರುಳ್ಳ, ಆಕಾಶದಲ್ಲಿನ ಬಿಳಿಯ ರಸ್ತೆಯು ಅನೇಕ ನಕ್ಷತ್ರಗಳು ಒಟ್ಟಾಗಿರುವುದರಿಂದ ಹಾಗೆ ತೋರುವುದೆಂದು ಅವನು ಕಂಡುಹಿಡಿದನು (ವಿಜ್ಞಾಕ. ೩೬). [ ಸಂ. (ಛಾಯಾ + ಪಥಿನ್ + –) ]

**ಛಾಯಾಯಂತ್ರ** (ನಾ). ನೆರಳಿನಿಂದ ಕಾಲವನ್ನು ಕಂಡುಹಿಡಿಯುವ ಸಾಧನ,–ಯಂತ್ರ : ಚಾಂದ್ರಮಾನದ ಪಂಚಾಂಗ, ಏಳುದಿನಗಳ ವಾರ, ಛಾಯಾಯಂತ್ರ (Sun-dial) ಇವನ್ನು ಬಳಕೆಗೆ ತಂದರು (ಶಿಲ್ಪನಾ. ೬೦).
[ ಸಂ. (ಛಾಯಾ + ಯಂತ್ರ) ]

**ಛಾಯಾಲಕ್ಷಣ** (ನಾ). (ಕುದುರೆಗಳಲ್ಲಿ) ಬಣ್ಣದ ಲಕ್ಷಣ : ಲಕ್ಷಣಮನಿತನಿತಱೊಳುಮಲಕ್ಷಿಸಿ ವಿವಿಧಪ್ರಕಾರದಿಂದಂ ಛಾಯಾಲಕ್ಷಣಮನಱಿದು ನೋಡಿಯಪೇಕ್ಷಿಸುವುದು ಪಂಚವಿಧದಿನಭಿನವಚಂದ್ರಾ (ಅಶ್ವಶಾ. ೩-೪೫).
[ ಸಂ. (ಛಾಯಾ + ಲಕ್ಷಣ) ]

**ಛಾಯಾಲಕ್ಷ್ಯ** (ನಾ). (ಒಂದು ವಸ್ತುವಿನ) ನೆರಳನ್ನು ನೋಡಿ ಹೊಡೆಯಬೇಕಾದ ಗುರಿ : ಛಾಯಾಲಕ್ಷ್ಯಮನೊಡ್ಡಿಯುಮಾಯದ ನೀರೊಳಗೆ ತನ್ನ ನಡಸಿದ ನೆಗಟಿಂ ಬಾಯಟಿವಿನಮಿಸಿಯುಮಾರೆ ಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗಟ್ಟಂ (ಪಂಪಭಾ. ೨-೬೦).
[ ಸಂ. (ಛಾಯಾ + ಲಕ್ಷ್ಯ) ]

**ಛಾಯಾವಿದ್ಯೆ** (ನಾ). ನೆರಳಿನಿಂದ ಕಾಲವನ್ನು ಕಂಡುಹಿಡಿಯುವ ಕಲೆ: "ಸೂರ್ಯ, ಚಂದ್ರ, ನಕ್ಷತ್ರ, ಮೊ.ಗಳಿಂದಾದ ನೆರಳಿನಿಂದ ಹೊತ್ತು ಕಂಡುಹಿಡಿಯುವ ವಿದ್ಯೆ: ಛಾಯಾವಿದ್ಯೆ; ಛಾಯಾ ಕಾಲನಿರ್ಣಯ(ವಿದ್ಯೆ)" (Sciagraphy. ಇಂಕನಿ). [ ಸಂ. ಛಾಯಾವಿದ್ಯಾ (ಛಾಯಾ + ವಿದ್ಯಾ) ]

**ಛಾಯಾವೇರು** 'ಚಾಯಬೇರು' ನೋ.

**ಛಾಯಾಶರೀರ** (ನಾ). ೧. ದೇಹದ ನೆಳಲು. ೨. (ಆಲಂ) ನೆರಳಿನಂತೆ ಯಾವಾಗಲೂ ಅನುಸರಿಸುವವನು : ಭರತಂಗೆ ಛಾಯಾಶರೀರವೆನೆ ಶತ್ರುಘ್ನನಿರ್ದನು (ತೊರಾಮಾ. ೨೭-೬೯೯). [ ಸಂ. (ಛಾಯಾ + ಶರೀರ) ]

**ಛಾಯೆ** (ನಾ). ೧. ನೆಳಲು; ನೆರಳು : ಮೇಯುವಲ್ಲದ ಮಹಿಮೆ ಛಾಯೆಯಾ ಬ್ರಹ್ಮನದು (ಮಂಕುಕ. ೦೧೫) ; ಮಂಟಪದ್ವಾರದ ಛಾಯೆಯಲ್ಲಿ ಕೆಲವು ದುರ್ದೈವಿಗಳು ನಿಂತುಕೊಂಡು ಆರ್ತಧ್ವನಿ ಹೊರಡಿಸುತ್ತ ಭಿಕ್ಷೆ ಬೇಡುತ್ತಿದ್ದರು (ಅಶ್ವಮು. ೨೫). ೨. ಪ್ರತಿಬಿಂಬ ; ಪಡಿಯಚ್ಚು ; ಸಂಪೂರ್ಣವಾಗಿ ಮೂಡುವಿಕೆ : ಇಲ್ಲದಿದ್ದರೆ ಪ್ರತಿಯಲ್ಲಿ ಛಾಯೆಯು ಒಂದೇ ಸಮನಾಗಿರುವುದಿಲ್ಲ (ಮುದ್ರಕ. ೨೫). ೩. ವರ್ಚಸ್ಸು; ಪ್ರಭಾವ: ಮಹಾಭಾರತದಲ್ಲಿ ಕಾವ್ಯದ ಛಾಯೆಯಂತೆಯೇ ಶಾಸ್ತ್ರದ ಛಾಯೆಯೂ ಅನ್ವಯಿಸುತ್ತದೆ (ಧ್ವನ್ಯಾಲೋ. ೨೪೭) : ಸಾಧನೆಯ ಛಾಯೆ ಕಲೆ; ವಿಶ್ವಾತ್ಮವದಕೆ ನೆಲೆ(ಕೋಗಿಲೆ.೮೪-೭); ನಮ್ಮ ದೇಶದಲ್ಲಿ ಆಚಾರ್ಯರುಗಳು . . . ಮತದ ಛಾಯೆಯಲ್ಲಿ ಸ್ವಲ್ಪಮಟ್ಟಿಗೆ ಐಕಮತ್ಯವನ್ನು ಸಾಧಿಸಿರುತ್ತಾರೆ (ಭಾರದ. ೨೬೮). 'ಛತ್ರಚ್ಛಾಯೆ' ಪರಾ. ೪. ಹೊಳಪು; ಪ್ರಕಾಶ : ಅಲ್ಪವಾದ ಛಾಯೆಯುಳ್ಳ ಕಣ್ಣಿನಲ್ಲಿಯೂ . . . ಹೆಚ್ಚಾಗಿ ಚಾರುಗಟ್ಟಿದ ಕಣ್ಣಿನಲ್ಲಿಯೂ ಅಂಜನಕ್ರಿಯೆ ಪ್ರಯೋಗಿಸುವುದು (ಸಕವ್ಯ. ೨೬) ; ಶಾಂತವಾದ ವಿಶಾಲವಾದ ನೀಲಿಯ ಛಾಯೆಯು ಅಂತರಿಕ್ಷವನ್ನೆಲ್ಲಾ ವ್ಯಾಪಿಸಿಕೊಂಡಿತು (ಮಲನಾ. ೬೯). ೫. ಸೂಚನೆ; ಗುರುತು ; ಸುಳಿವು : ಮಳೆಯ ಛಾಯೆ ಕಾಣಿಸುತ್ತಿದೆ (ರೂಢಿ). 'ಛಾಯೆಗಾಣಿಸು' ಪರಾ. ೬. ಬಣ್ಣ. 'ಛಾಯೆಗೆಡು' ಪರಾ. ೭. = ಛಾಯಾದೇವಿ. [ ಸಂ. ಛಾಯಾ ]

**ಛಾಯೆಗಾಣಿಸು** (ಕ್ರಿ). ಸೂಚನೆಯನ್ನು ಕೊಡು ; ಸುಳಿವು ತೋರು : ತಾಯೆ ನೀನೇತಕೆಳಸಿದೆ . . . ರಥಂ ಪಣ್ಣಿ ಬಂದಿದೆ ಕೊ ಬಿಜಯಂಗೈವುದೆಂದು ಮಱುಗಿ ಛಾಯೆಗಾಣಿಸಿ ಸುಮಿತ್ರಾತ್ಮಜಂ ನುಡಿದಭಿಪ್ರಾಯಮಂ ತಿಳಿಯದೆ (ಜೈಮಿಭಾ. ೧೮-೬೦). [ ಛಾಯೆ + ಕಾಣಿಸು ]

**ಛಾಯೆಗೆಡು** (ಕ್ರಿ). ಬಣ್ಣಗೆಡು ; ಬಣ್ಣಗುಂದು : ರಕ್ತವಣುಮಾತ್ರ ಅಂಗವೊಡೆದುಕ್ಕಿದಡೆ ಮುನ್ನಿನ ಹಾಂಗಿರದೆ ಹೊಗೆ ಛಾಯೆಗೆಟ್ಟಡೆ ಇಂಗಳಂ ಕೊಳದಿದ್ದಡಂ (ಬಸವು. ೪೪-೨೭). [ ಛಾಯೆ + ಕೆಡು$_1$ ]

**ಛಾರಾಕ್ಕಿಮುರಸಕೆಲ್ಲ** (ನಾ). ಒಬ್ಬಾತನ ಹೆಸರು : ಛಾರಾಕ್ಕಿಮುರಸಕೆಲ್ಲ ಪುತ್ರೋ ಮಾತ್ರಿವರ್ಮ್ಮಾಣವ್ (ಮೈಆರಿ. ೧೯೦೫, ೧೮-೨೫ ; 400 ಕ್ರಿ.ಶ). [ ? ]

**ಛಾರ್ಜು** 'ಚಾರ್ಜು' ನೋ.

**ಛಾವಟಿ** 'ಚಾಟಿ₁' ನೋ.

**ಛಾವಡಿ** 'ಚಾವಡಿ' ನೋ.

**ಛಾವಣಿ,** ಚಾವಣಿ, ಛಾವನಿ (ನಾ). ೧. ಸೈನ್ಯದ ಪಾಳೆಯ ; ದಂಡಿನ ಬಿಡಾರ ; ಸೇನಾಶಿಬಿರ : ಆ ಬಳಿಕ ಟೀಪುಸುಲ್ತಾನರು ಬೆಟ್ಟ ಕೋಟೆ ತೆಗೆದುಕೊಳ್ಳಬೇಕು ಯಂಬದಾಗಿ ಅಲ್ಲೆ ಛಾವಣಿ ಮಾಡಿಕೊಂಡು ಸನ್ನದ್ಧರಾಗುತ್ತ ಇದ್ದರು (ರಾಜೇಂದ್ರ. ೨೮). ೨. ಮನೆಯ ಮೇಲಿನ ಮುಚ್ಚು ; ಮಾಡು; ಮಾಳಿಗೆ: ಕನ್ನಡಿಯ ಛಾವಣಿಯನ್ನು ಬಹು ಎತ್ತರವಾಗಿ ಹಾಕಿದ್ದಾರೆ (ಮುಂಬಯಿ. ೬-೫೭) : ಛಾವಣಿಯನ್ನು ಹೊದೆಸಿ ಅಲ್ಲೇ ಮಳೆಗಾಲವನ್ನು ಕಳೆಯುವುದು ಎಂದು ನಿರ್ಧರಿಸಿದ (ಅನಾಥ. ೦೫೩). ೩. ಮನೆ: ಆ ಪ್ರಕರಣವೀಗ ತುಳಸಿಯ ವಿರುದ್ಧ ರೂಪಚಂದನ ಛಾವಣಿಯಲ್ಲಿ ಕಳವು ಮಾಡಿದನೆಂದು ಅಲ್ಲ (ಜಮಿನ್ದಾ. ೧೯೯). **ಚಾವಣಿ :** ೨. ಊರ ಕಾಮನ ಕಟ್ಟೆಯ ಚಾವಣಿಯ ಹಂದರದಲ್ಲಿ ಬಲು ದೌಲಿನಿಂದ ಕಾಮನನ್ನಿಡುವ ವಾಡಿಕೆಯಿದೆ (ಕನ್ನಜಾ. ೧೬೨); ಆಮೇಲೆ ನಿಯಾಸ್ ಚಾವಣಿಯ ಮೇಲಕ್ಕೆ ಹೋಗಿ ತಂಗಾಳಿಯಲ್ಲಿ ಮಲಗಿಕೊಂಡನು (ನಗೆಹೊ. ೧೩೪) ; ಚಾವಣಿಯಲ್ಲಿ ಸಮೃದ್ಧವಾದ ನೈದಿಲೆ ತುಂಬಿದ ಕೊಳ . . . ಚಿತ್ರಿತವಾಗಿದೆ (ಭಾರದ. ೫೨೭). **ಛಾವನಿ :** ೧. ಸ್ವಾತಂತ್ರ್ಯಸಮರಕ್ಕೆ ಎರಡು ಚಿಹ್ನೆಗಳು ಕಾಣಿಸಿಕೊಂಡವು–ತಾವರೆ ಮತ್ತು ದವಸಧಾನ್ಯ. ಭಾರತದ ಪ್ರತಿಯೊಂದು ಛಾವನಿಯಲ್ಲೂ ತಾವರೆಹೂವುಗಳು ಹರಡಿದವು (ಶೂರಾಚಿ. ೨೫೫).

**ಛಾವಣಿಮಾಡು**=ಸೇನಾಶಿಬಿರವನ್ನು ಹೂಡು; ಸೈನ್ಯದ ಡೇರೆ ಹಾಕು: ಟೀಪುಸುಲ್ತಾನರು . . . ಕೊಯಮತ್ತೂರಿಗೆ ಹೋಗಿ ಛಾವಣಿಮಾಡಿ ಜಗಳಕ್ಕೆ ಬೇಕಾದ ಸನ್ನಾಹ ಮಾಡುತ್ತ ಇದ್ದರು (ರಾಜೇಂದ್ರ. ೨೪).

[ ←ಮರಾ. ಛಾವಣೀ, ಛಾವನೀ ; ಹಿಂ. ಛಾವನೀ./ ಪ್ರಾ. ಛಾಯಣೀ./ಸಂ. ಛಾದನೀ ]

**ಛಾವಣಿಹೊಡೆ** (ಕ್ರಿ). ವಸತಿ ಮಾಡು; ಗುಡಾರಹಾಕು; ಬೀಡು ಬಿಡು: ಸುತ್ತಮುತ್ತಲಿನ ಹಳ್ಳಿಯ ಜನರೂ ಬಂದು ನಮ್ಮ ಊರಲ್ಲಿಯೆ ಛಾವಣಿ ಹೊಡೆದರು (ಜನಜೀ. ೮). [ ಛಾವಣಿ + ಹೊಡೆ₁(<ಪೊಡೆ₁) ]

**ಛಾವನಿ** 'ಛಾವಣಿ' ನೋ.

**ಛಿಂದಕ** (ನಾ). ಒಂದು ಬಗೆಯ ಬಳ್ಳಿ: ಓರೊಂದೆಡೆ ಛಿಂದಕ ಸುರದಾರು ಲವಂಗಾಸನದ್ರುಮಂಗಳಿನೆಸೆಗುಂ (ವರ್ಧಮಾ. ೫-೪೯) : "ಅಮಂರದವಳ್ಳಿ" (ವರ್ಧಮಾ. ಕೋಶ). [ ? ]

**ಛಿಂದಿಸು** (ಕ್ರಿ). ಚೂರುಮಾಡು; ನಾಶಮಾಡು : ಕೊಂದು ಕೂಗುವ ಕರ್ಮಂಗಳನು ಛಿಂದಿಸಿ ಮೋಕ್ಷಕೆ ತೆರಳುವ ಮಾತನಾನೊಂದನಾಡುವೆ ಕೇಳು ಚದುರ (ಜ್ಞಾನಜ. ೨೨-೪೮). [ <ಛಿಂದಿ₁ + – ಇಸು₃ ]

**ಛೀ, ಛೀ** (ನಾ). ಜುಗುಪ್ಸೆ, ತಿರಸ್ಕಾರ ಮುಂತಾದುವುಗಳನ್ನು ಸೂಚಿಸುವ ಒಂದು ಶಬ್ದ : ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ ಕೂಡಲಸಂಗಮದೇವಾ ನೀ ಸಾಕ್ಷಿಯಾಗಿ ಛೀ ಎಂಬೆನು (ಬಸವ. ೬೫೭). **ಛೀ :** ಬಡಿಯದಿರ್ಬಾಲಮುಂ ಸುಡು ನಾಯೆ ಛೀಯೆಂದು (ಬಿಂಡೋಕ. ಹ. ೫೦೯-೫) ; ಕೊನೆಗೆ ಇಬ್ಬರಿಂದಲೂ ಛೀ ಅನಿಸಿಕೊಂಡರು (ಆಳಿನಿ. ೧೩೮).

**ಛೀಪೆಟ್ಟು ಹಾಕು** = ಛೀಹಾಕು : ಅವನಿಗೆ ಚೆನ್ನಾಗಿ ಛೀಪೆಟ್ಟು ಹಾಕು (ರೂಢಿ). **ಛೀಹಾಕು**=ಆಕ್ಷೇಪಣೆ ಮಾಡು ; ತೆಗಳು ; **ಛೀಮಾರಿಹಾಕು :** ದಿನಾ ಒಂದಿಷ್ಟು ಅವನಿಗೆ ಛೀಹಾಕು (ಮುಗಿಮ. ೪೪) : ಅಣ್ಣಪ್ಪನವರು ತುಂಗಳಮಾಸ್ತರರನ್ನು ಒಳಿತಾಗಿ ಛೀಹಾಕಿದರು (ರಂಗರೋ. ೫೨).

**ಛಿಕ್ಕಾರ** (ನಾ). ಒಂದು ಬಗೆಯ ಜಿಂಕೆ. [ ಸಂ. ]

**ಛಿಟಿಲ್** (ನಾ). ( ಬೆಂಕಿ ಉರಿಯುವಾಗ ಉಂಟಾಗುವ ) ಒಂದು ಅನುಕರಣ ಶಬ್ದ. 'ಛಿಳಿಛಿಟಿಲ್' ಪರಾ.

**ಛಿದುರ** (ಗು). ೧. ಕತ್ತರಿಸುವ ; ಸುಲಭವಾಗಿ ಒಡೆಯುವ ; ಭಂಗುರವಾದ : ಮದವದರಿಹಸ್ತಿಮಸ್ತಕಭಿ[ಪಾಠಾಂ. ಛಿ]ದುರಂ [ಭಯ]ವಿಧುರನನ್ನಬಾಣಚ್ಛಿದುರಂ . . . ವೃಷಸೇನಂ (ಗದಾಯು. ೪-೬೩); ಪ್ರಾಲೇಯಾದ್ರಿನವಪ್ರಸೂನ ಭಿ[ಪಾಠಾಂ. ಛಿ]ದುರಂ . . . ಮಾರುತನೊಯ್ಯನೂದಿ ಕಳೆದತ್ತು ದಂಪತಿಶ್ರಾಂತಿಯಂ (ಕಾವ್ಯಾವ. ೯೪೭). (ನಾ). ೨. ಶತ್ರು. [ ಸಂ. ]

**ಛಿದ್ರ** (ನಾ). ೧. ತೂತು; ಬಿರುಕು; ರಂಧ್ರ; ಕನ್ನ: "ನಿಮ್ನಂ, ಅಗಾಧಂ . . . ಛಿದ್ರಂ . . . ಕುಹರಂ, ದರಂ – ಈ ೧೫ ಕುಟಿ" (ಹಲಾಯು. ೧೦೩-೨) : ಕುಹರಕರುವೆಯನಿಡುಕಿ ಛಿದ್ರಮಂ ಮುಚ್ಚಲಿಕ್ಕಳಸಲು (ಶ್ರೀರಾಮಾ. ೭೭-೬೦೬) ; ಬಾಗಿಲಿಗಿರುವ ಛಿದ್ರಗಳ ಮೂಲಕ ಕಿರಣಗಳು ಕಾಣಿಸುವಂತೆ ಅವನ ವಿಶಾಲನೇತ್ರಗಳಿಂದ ಪ್ರಕಾಶ ಹೊರಚಿಮ್ಮುತ್ತಿತ್ತು (ಅಶ್ವಮ. ೫೨). ೨. ಕೊರತೆ ; ದೌರ್ಬಲ್ಯ ; ನ್ಯೂನತೆ: ಛಿದ್ರಮನೆ ಪಾರ್ವರ್ ಬೇಗಂ ಕೂರ್ತಂತೆ ಭಕ್ತಿಯಂ ಪೊಸಯಿಪರ್ (ಮದತಿ. ೧೦-೬೫). 'ಛಿದ್ರಾನ್ವೇಷಿ' ಪರಾ. ೩. (ಆಲಂ) ವಿರಸ ; ಮನಸ್ತಾಪ : ಅಮ್ಮ ಚಿಕ್ಕಮ್ಮನ ನಡುವೆ ಛಿದ್ರ ದೊಡ್ಡದಾಗಿ ಮನೆ ಪಾಲಾಯಿತು (ಹೊಸಕ್ಷಿ. ೨೪೯). ೪. [ಜ್ಯೋತಿ] ಲಗ್ನದಿಂದ ಎಂಟನೆಯ ಸ್ಥಾನ : ಛಿದ್ರಮದು ಲಗ್ನಕ್ಕಷ್ಟಮಸ್ಥಾನಕಂ (ಜಾತತಿ. ೦-೩೫). [ ಸಂ. ]

**ಛಿದ್ರಕ** (ನಾ). = ಛಿದ್ರ ೧. 'ಛಿದ್ರಕದ್ವಾರ' ಪರಾ. [ ಸಂ. ]

**ಛಿದ್ರಕದ್ವಾರ** (ನಾ). (ನೀರು ಹೊರಗೆ ಹೋಗಲು ಮಾಡಿರುವ) ತೂತು; ನೀರುಗಂಡಿ ; ತೂಬು: ಛಿದ್ರಕದ್ವಾರದ ತೂಂತನುರ್ಚೆ ನೀರಂ ಕಳೆದಾಗಳ್ (ವಡ್ಡಾರಾ. ೨೭-೨೦). [ ಛಿದ್ರಕ + ದ್ವಾರ ]

**ಛಿದ್ರಗೊಳಿಸು** (ಕ್ರಿ). ಚೂರುಮಾಡು ; ಒಡೆ : ಸಮಾಜವನ್ನು ಛಿದ್ರಗೊಳಿಸುತ್ತಿರುವ ಜಾತೀಯ, ಮತೀಯ . . . ಭಿನ್ನತೆಗಳನ್ನು ಮರಸಿ ಭಾರತೀಯತೆಯ ಸಮಗ್ರ ದೃಷ್ಟಿಯಲ್ಲಿ ಜನಾಂತದ ಐಕ್ಯತೆಯನ್ನೂ ರಾಷ್ಟ್ರದ ಭದ್ರತೆಯನ್ನೂ ಪೋಷಿಸಬೇಕು (ಶಿಕ್ಷದ. ೬೬೭). [ ಛಿದ್ರ + ಕೊಳ್₁ + – ಇಸು₃ ]

**ಛಿದ್ರನಿವಾಸ** (ನಾ). ೧. ಬಿಲದಲ್ಲಿ ವಾಸಿಸುವುದು; ಹಾವು. ೨. ಇತರರ ದೌರ್ಬಲ್ಯವನ್ನು ದುರುಪಯೋಗ ಮಾಡಿಕೊಳ್ಳುವವನು. ೧, ೨ : ಛಿದ್ರನಿವಾಸರಂ ಪದವಿಹೀನರಸಶ್ರುತರಂ ದ್ವಿಜಿಹ್ವರಂ . . . ಕೃತಘ್ನರಂ ರೌದ್ರತರಾಸ್ಯರಂ ಬೆರಸುವಾತನನೀತಿಯ ಸೇತುವಲ್ಲವೇ (ನಳಚಂ. ೬೦೦). [ ಛಿದ್ರ + ನಿವಾಸ ]

**ಛಿದ್ರಪಾಷಾಣ** (ನಾ). ಒಂದು ಬಗೆಯ ವಿಷ : ಇಲಿಪಾಷಾಣ, ಛಿದ್ರಪಾಷಾಣ, ಕೆಂಪಿನ ಪಾಷಾಣ . . . ಇಷ್ಟನ್ನೂ ಸಮಾನತೂಕ ವಸ್ತ್ರಗಾಳಿತವು ಮಾಡಿ (ವಿಷ್ವವಿ. ೬೮). [ ಸಂ. ]

**ಛಿದ್ರಾನ್ವಿತ** (ನಾ). ೧. ರಂಧ್ರದಿಂದ ಕೂಡಿಕೊಂಡಿರುವುದು ; ಒಡಕು ಇರುವುದು. ೨. ದೋಷದಿಂದ ಕೂಡಿರುವುದು ; ನ್ಯೂನತೆಯುಳ್ಳುದು. ೧, ೨: ಮತಿ ಕಂಭಂ ಘನಮಾಗುವ ಧೃತಿ ಕೀರ್ಗುಪ್ಪಿಗಳೆ ಪಡಿಗಳಾಗಿರ್ದ ಮಹಾವ್ರತಗೃಹಮಿನಿಸುಂ ಛಿದ್ರಾನ್ವಿತ [ಪಾಠಾಂ. ರಂಧ್ರಾನ್ವಿತ ]ಮಾದೊಡೆ ವಸ್ತುವೆಲ್ಲಮುಂ ಕೋಟ್ಬಡದೇ (ಜೀವಸಂ. ೦೫೯-೨೧). [ ಛಿದ್ರ + ಅನ್ವಿತ ]

**ಛಿದ್ರಾನ್ವೇಷಣ** (ನಾ). ದೋಷವನ್ನು ಹುಡುಕುವುದು : ಈಗಿನ ಕಾಲದಲ್ಲಿ ವ್ಯಕ್ತಿಗಳಲ್ಲಿ ಗುಣ ಹುಡುಕುವುದಕ್ಕಿಂತ ಛಿದ್ರಾನ್ವೇಷಣ ಮಾಡುವುದೇ ಹೆಚ್ಚು (ರೂಢಿ). [ ಛಿದ್ರ + ಅನ್ವೇಷಣ ]

**ಛಿದ್ರಾನ್ವೇಷಿ** (ಗು). ೧. ರಂಧ್ರವನ್ನು ಹುಡುಕುವ: ಛಿದ್ರಾನ್ವೇಷಿ ನಿಶಾಟಂ ರೌದ್ರತ್ವಮನುಟಿದು ಗೋಪ ವೇಷದೆ ಬಂದಂ (ಜಗವಿ. ೪-೪೯). ೨. ಲೋಪದೋಷವನ್ನರಸುವ. (ನಾ). ೩. ತಪ್ಪನ್ನು ಹುಡುಕುವವನು; ದೋಷಗ್ರಾಹಿ : ಆಷಾಢಭೂತಿ ತಾಂ ಛಿದ್ರಾನ್ವೇಷಿಯಪ್ಪುದಱಿಂ ತನ ಗಿಡುವೆ ಪದನೆಂದು ಬಗೆದು(ಪಂಚತಂ. ೭೧-೧೩). [ಸಂ. ಛಿದ್ರಾನ್ವೇಷಿನ್]

**ಛಿದ್ರಿತ** (ಗು). ತೂತುಮಾಡಿದ ; ಕೊರೆದ. [ಸಂ.]

**ಛಿದ್ರಿಸು** (ಕ್ರಿ). ೧. ಭೇದಿಸು ; ಚೂರುಮಾಡು : ಉದ್ರೇಕದಿಂದೆಮ್ಮ ಸೇನೆಯ ಭಟಾಳಿಯಂ ಛಿದ್ರಿಸುತೆ ಮುಂಬರಿದು ಬರ್ಪ ವೀರಂ ವೀರ ಭದ್ರನೋ (ಜೈಬಪು. ೪೩-೪೨). ೨. ವಿರಸವನ್ನುಂಟುಮಾಡು; ಮನಸ್ಸು ಒಡೆಯುವಂತೆ ಮಾಡು : ರಸದಾನಾದಿಗಳೊಳ್ ಛಿದ್ರಿಸುವಮಪ್ಪೊಡವ ರಾಪ್ತವಂತರುಂ ಬುದ್ಧಿವಂತರುಮಾಗಿ ನೆಗಟ್ದರಿನ್ನಾವ ಮಾಟಕ್ಕಿಯೊಳ್ ಪಗೆಯುಂ ಕೆಯ್ಗೆ ಮಾಡುವಂ (ಪಂಪಭಾ. ೬-೬೭ ವ) ; ಪೆಱರುಂ ಛಿದ್ರಿಸುವವರಂ ಕೊಟಿಕೊಟಿದೆರ್ದೆಗಬ್ಬಲಪ್ಪಿನಂ ಛಿದ್ರಿಸುವರ್ (ಸುಕುಮಾ. ೧೧-೪೭). ೩. ಅವಮಾನ ಮಾಡು : ಒಂದು ದಿವಸಂ ದುರ್ಯೋಧನನ ಮಯ್ದುನಂ ಸಿಂಧುದೇಶಾಧೀಶ್ವರಂ ಸೈಂಧವನವರಂ ಛಿದ್ರಿಸಲೆಂದು ಮೆಯ್ಗಟಿದು ಬಂದು (ಪಂಪಭಾ. ೬-೩೦ ವ). ೪. ಮೋಸಮಾಡು ; ವಂಚಿಸು : ಹೆಱರ ಛಿದ್ರಿಸುವುದು ತನು ಕೆಡುವನ್ನಕ್ಕ ಮಾಣದು (ಬಸವ.೧೧). ೫. ಕದಿ ; ಕನ್ನಹಾಕು: ಪರರ ಕಾವ್ಯಾರ್ಥಮುಮಂ ಛಿದ್ರಿಸುವಂಗತಿ ಶಬ್ದದರಿದ್ರಂಗಕ್ಕುಮೆ ನವೀನ ಕಾವ್ಯಾರಂಭಂ (ಗಿರಿಕ. ೧-೨೬). [ಛಿದ್ರ + – ಇಸು$_2$]

**ಛಿನಾಲಿ, ಚಿನಾಲಿ, ಚಿನ್ನಾಲಿ, ಚೀನಾಲಿ** (ನಾ). ಕುಲಟೆ ; ಹಾದರಗಿತ್ತಿ : ಆಕಿ ಛಿನಾಲಿ, ಊರ ಬಸವಿಯ ಹಂಗ . . . ಮಾನಾ ಮಾರಾಕ ಹತ್ತಿದಾಳ (ಮಣ್ಣುಹೆ. ೮೧) ; ಹೇಗಿದ್ದಳು, ಈಗ ಹೇಗಾಗಿ ಬಿಟ್ಟದಾಳೆ. ಛಿನಾಲಿ! (ಸಾಹೇಬ್. ೧೪೪). **ಚಿನಾಲಿ :** ಜಯ ಅದೆಂಥ ಚಿನಾಲಿ ಅಂತೀರಿ (ಕಾಮಿಕಾಂ. ೩೦೭). **ಚಿನ್ನಾಲಿ :** ಈಗ ಒಬ್ಬಳು ಚಿನ್ನಾಲಿ ಬಂದವ್ಳೆ (ಛೀಮಕಾ. ೧೫೫) ; ಇದೆಲ್ಲಾ ಕಲ್ಯಾಣಿಯ ತಾಯಿ ಆ ಚಿನ್ನಾಲಿಯ ಮಾಟ (ಶಿವರಾ. ೧೧೧). **ಚೀನಾಲಿ :** ಯಾಲಕ್ಕೀಗೌಡನ ಮಗಳು ಎಂತ ಚೀನಾಲಿ ಹೆಣ್ಣು (ನಾಪದ. ೧೫೨).
[←ಮರಾ. ಛಿನಾಲೀ ; ಹಿಂ. ಛಿನಾಲ್. / ಪ್ರಾ. ಛಿಣ್ಣಾಲೀ ]

**ಛಿನ್ನ** (ಗು). ೧. ಕತ್ತರಿಸಿದ ; ತುಂಡುಮಾಡಿದ ; ವಿಭಾಗಿಸಿದ. ೨. ಒಡೆದ ; ನಾಶಗೊಳಿಸಿದ. (ನಾ). ೩. ಶ್ವಾಸರೋಗಗಳಲ್ಲಿ ಒಂದು ವಿಧ : ಈ ಶ್ವಾಸರೋಗವು ಕ್ಷುದ್ರಕವೆಂದೂ, ತಮಕವೆಂದೂ, ಛಿನ್ನವೆಂದೂ, ಮಹಾನೆಂದೂ . . . ಐದು ವಿಧವಾಗಿರ್ಪುದು (ಸಕವೈ. ೨೨೮). ೪. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : ಅಲಪಂಕಜದ ಕರಂಗಳ್ ನಿಲೆ ಕಟಿಯೊಳ್ ಕ್ರಮದೆ ಛಿನ್ನಕಟಿಯಂ ಮಾಡಲ್ . . . ಛಿನ್ನಾಖ್ಯಮೆಂಬ ಕರಣಮೆನಿಕ್ಕುಂ (ಲಾಸ್ಯರಂ. ೪-೯೦). ೫. ನೃತ್ಯದಲ್ಲಿ ಉಪಾಂಗವೆನಿಸಿದ ಹಲ್ಲಿನ ಭೇದಗಳಲ್ಲಿ ಒಂದು ; ಹಲ್ಲುಗಳನ್ನು ಕಚ್ಚಿರುವಿಕೆ: ಕುಟ್ಟನ, ಖಾದನ, ಛಿನ್ನ . . . ನಿಷ್ಕರ್ಷ–ಈ ಎಂಟು ಹಲ್ಲಿನ ಭೇದಂಗಳ್ (ಲಾಸ್ಯರಂ. ೩-೮೮ ವ).

**ಛಿನ್ನಛಿನ್ನ** (ದ್ವಿರುಕ್ತಿ) : ಎನ್ನ ಬಾಧೆಯೊಳೆಂತು ಬದುಕುವೆ ಛಿನ್ನಛಿನ್ನಂ ಮಾಡುವೆನು ನಾನಿನ್ನನೆನುತತಿಕೋಪದಿಂದಟಿಯಟ್ಟೆ ಬರೆ (ಬಸಪು. ೧೪-೩೦); ಚೆನ್ನಮಗನಂ ಪಿತನ ಕೈಯಲಿ ಛಿನ್ನಛಿನ್ನಂಗೆಯ್ಸಿದೆಡೆಯಲಿ ಪನ್ನಗೇಂದ್ರಾಭರಣ ಕರುಣದಿನಶ್ರುಜಲವಿಲ್ಲ (ಬಸಪು. ೧೮-೩೨). **ಛಿನ್ನಛಿನ್ನವಾಗು**= ಚೂರುಚೂರಾಗು ; ಕತ್ತರಿಸಿಹೋಗು : ಅರ್ಜುನನು . . . ಮೊಸಳೆಗೆ ಹೊಡೆದನು. ಮೊಸಳೆಯು ಛಿನ್ನಛಿನ್ನವಾಗಿ ದ್ರೋಣನ ಕಾಲನ್ನು ಬಿಟ್ಟಿತು (ವಚಭಾ. ೨೦). [ಸಂ.]

**ಛಿನ್ನಪ್ಪಬಾಪ್ಪು** (ನಾ). ಒಬ್ಬಾತನ ಹೆಸರು : ಶ್ರೀಮತ್‌ಛಿನ್ನಪ್ಪ ಬಾಪ್ಪುಯರು ಬಪ್ಪುಗೆ ಕೊಟ್ಟ ಕಟ್ಟುಗೊಡಗೆ ಸಸನ ಕ್ರಮ (ಮೈಆರಿ. ೧೯೨೩, ೧೪-೨ ; ?). [ ? ]

**ಛಿನ್ನಭಕ್ತ** (ನಾ). [ವೈ್ದ್ಯ] ಸ್ವಲ್ಪಕಾಲ ಬಿಟ್ಟು ಮತ್ತೆ ಭಕ್ತಿತೋರುವವನು ; ನಿರಂತರಭಕ್ತಿ ಇಲ್ಲದವನು : ಛಿನ್ನಭಕ್ತರು ಎನಿಸುತಿಪ್ಪರು ಸುಪರ್ಣ ಶೇಷಾದ್ಯಮರರೆಲ್ಲಾ (ಹಸಾರ. ೨೩-೦೪). [ಛಿನ್ನ + ಭಕ್ತ]

**ಛಿನ್ನರುಹೆ** (ನಾ). ಒಂದು ಬಗೆಯ ಬಳ್ಳಿ ; ಅಮೃತವಳ್ಳಿ : "ವತ್ಸಾದನೀ, ಛಿನ್ನರುಹಾ . . . ಮಧುಪರ್ಣೀ ೯ ಅಮೃತಬಳ್ಳಿ ಹೆಸರು" (ಸಿದ್ಧಾಂತ. ೧೧೩). [ಸಂ. ಛಿನ್ನರುಹಾ]

**ಛಿಲ್** (ನಾ). ಒಂದು ಅನುಕರಣ ಶಬ್ದ : ಖಮ್ಮನೆ, ಘಟಿಲೆನೆ, ಛಿಲ್ಲನೆ, ಪಟಿಲೆನೆ (ಭಾಷಾಭೂ. ೧೧ ಉದಾ) : ಛಿಲ್ಲೆಂದು ರಕ್ತವು ಬಂತು (ದೌಲತ್. ೧೧೩).

**ಛಿಳಿಛಿಟಿಲ್** (ನಾ). ಒಂದು ಅನುಕರಣಶಬ್ದ : ಭುಗುಭುಗಿಲ್ ಛಿಳಿಛಿಟಿಲ [ಪಾಠಾಂ. ಚಗಿಲ್‌ಭುಗಿಲ, ಭುಗುಲ್‌ಭುಗಿಲ]ನೊಗೆದುದು ಮಹಾವಿಷಂ (ನಂಬಿರ. ೦-೧೩) ; ಅಟಿಯಟ್ಟಿ ಕುಟ್ಟಿ ಛಿಳಿಛಿಟಿಲೆಂಬ ಸಿಡಿಲ್ಗಳಿಂ (ಸಾನಂಚ. ೪-೦೪೯).

**ಛೀ** 'ಛೀಃ' ನೋ.

**ಛೀಗುಟ್ಟು** (ಕ್ರಿ). ತಿರಸ್ಕರಿಸು ; ಧಿಕ್ಕರಿಸು ; ಛೀಮಾರಿ ಹಾಕು : ದೇವದತ್ತನು ಅಜಾತಶತ್ರುವನ್ನು ಛೀಗುಟ್ಟಿದನು (ಹತ್ತುಮ. ೬೭) ; ದುರ್ಯೋಧನನು ಈ ಮಾತುಗಳನ್ನು ಕೇಳಿ ದರ್ಪದಿಂದ ವಿದುರನನ್ನು ಛೀಗುಟ್ಟಿ ಪ್ರಾತಿಕಾಮಿಯನ್ನು ಕರೆದು . . . ಎಂದನು (ವಚಭಾ. ೯೬).
[ಛೀ (<ಛೀಃ) + ಕುಟ್ಟು$_1$]

**ಛೀಮಾರಿ** (ನಾ). ತೆಗಳಿಕೆ ; ತಿರಸ್ಕಾರ ; ಧಿಕ್ಕಾರ : ಛೀಮಾರಿ ಪುರಾಣದ ಕಥೀ ಏನು ಸತಿಪತಿಗೆ ನುಗ್ಗಿದಾ ಗತಿ (ಮೂತಿ೯ಕಾ. ೩೦-೪).
**ಛೀಮಾರಿಮಾಡು**=ತೆಗಳು ; ಧಿಕ್ಕರಿಸು : ಗಂಡನಿಗೆ ದಿನಕ್ಕೊಂದೆರಡು ಸಲವಾದರೂ ಛೀಮಾರಿ ಮಾಡದಿದ್ದರೆ ಅವರಿಗೆ ತೃಪ್ತಿಯಿಲ್ಲ (ತಾಯಿಕ. ೭); ನಾಲ್ಕು ದಿವಸ ಕಂಪೆನಿಯಲ್ಲಿಟ್ಟುಕೊಂಡು ಛೀಮಾರಿ ಮಾಡಿ ಆಚೆಗಟ್ಟಬೇಕೂಂತ ಯಜಮಾನ್ರು ಇರಾದೆ (ನಟಸಾ. ೦೦೮). **ಛೀಮಾರಿಹಾಕು** = ಛೀಮಾರಿಮಾಡು : ಏನಾದರೊಂದು ನೆಪ ತೆಗೆದು ಯಾರಿಗಾದರೂ ಛೀಮಾರಿಹಾಕುತ್ತಾ ಪಠಾರದ ಉದ್ದಗಲಕ್ಕೂ ಅವರು ಓಡಾಡಿದರು (ರಂಗವ. ೩೭) ; ನೆರೆದ ಕೇರಿಯ ಹೆಂಗಸರು ಛೀಮಾರಿ ಹಾಕಿದಾಗ . . . ಹರಿಹಾಯ್ದನಂತೆ (ಹೊಸಕ್ಷ. ೧೬೮). [ಛೀ (<ಛೀಃ)+ಮಾರಿ$_0$ (<ಮೋಟಿ)]

**ಛುಚ್ಛುಂದರ** (ನಾ). ಮೂಗಿಲಿ. [ಸಂ.]

**ಛುಮ್** (ನಾ). ಒಂದು ಅನುಕರಣ ಶಬ್ದ : ನಿಶಾಟರನುಂಡನಗ್ನಿ ಛುಮ್ಮೆಂಬ ಛಟಚ್ಛಟೆಂಬ . . . ಥಟ್ಟುಪೊಟ್ಟೆಂಬ ರವಂ ಕಱುತ್ತದಸಿ (ಕಾವ್ಯಾವ. ೨೮).
**ಛುಮ್‌ಛುಮ್** (ದ್ವಿರುಕ್ತಿ) : ಮೊನೆಯಂಬುಗಳ್ ಮಹಾಮುಸಕದೆ ಛುಮ್‌ಛುಮ್ಮೆನೆ ವಿರೋಧಿಭಟರ್ಕಳ ಮೆಯ್ಗಳಲ್ಲಿ ತೆತ್ತಿಸಿ ಪೊಱಪಾಯ್ದು (ಮಹಾನೇ. ೦೨-೨೯).

**ಛುರಣ** (ನಾ). ಹರಡುವಿಕೆ ; ವ್ಯಾಪನೆ : ನಂದನ ಹರಿಚಂದನಚ್ಛಟಾಚ್ಛುರಣದೊಳಮೊಡವಱಿಯದೆ ಪುಡಿಗುಟ್ಟಿದ ಮುತ್ತಿನ ಮಳಲ್ಗೆದಱಿದ ಮಣಿಕುಟ್ಟಿಮದೊಳಂ ಮಾಣದ . . . ವಾರಿಧಾರೆಗಳಿಂ ತಳ್ಪೊಯ್ಯುದಂತಂತೆ ಸಿಡಿಲ ಕಿಚ್ಚಿನಪೊಲಗ್ಗಳಮುರಿವುದು (ಕಾದಂಲು. ೩೨೬). [ಸಂ.]

**ಛುರಿಕೆ** (ನಾ). ೧. ಚೂರಿ ; ಸಂಗಿಗೆ ; ಬಾಕು : ಛುರಿಕೆಯಿಂ ಕುಯ್ದು ಪೋಳಿಸಗದೆ ನರಂಗೆ ತಿನ್ನಲ್ ಸುಲಭಮಲ್ಲ ತೆಗೆ ಪನಸಫಲಗಳ (ಮಲ್ಲಕ. ೯-೧೭) ; ತುಪ್ಪುಳ್ ಮಾಸೆಗಳ ಬಿಂಕಗೊಂಕುಗಳ್ ಕಾವಲಿರ್ದುವು . . . ವದನದುರ್ಗದ್ವಾರಪಾಲಕ ಕರಪ್ರಖರ ಛುರಿಕೆಗಳ ಪೋಲ್

(ಶ್ರೀರಾಮಾ. ೫೭೭-೪೨೫). ೨. [ನಾಟ್ಯ] ದೇಶೀಯ ಭೌಮಚಾರಿಗಳಲ್ಲಿ ಒಂದು ; ಸಮಪಾದದಿಂದ ಮುಂದಕ್ಕೆ ನಡೆಯುವುದು: ರಥಚಕ್ರ . . . ಛುರಿಕೆ . . . ಸಮಸ್ಖಲಿತ: ಈ ಮೂವತ್ತೈದು ದೇಶಿಯ ಸಂಬಂಧದ ಭೌಮಚಾರಿಗಳು (ಲಾಸ್ಯರಂ. ೬-೧೭ ವ). [ಸಂ. ಛುರಿಕಾ]

**ಛುರಿತ** (ಗುಂ). ಒಂದಕ್ಕೊಂದು ಬೆರಸಿದ, – ಕೂಡಿದ : ಉತ್ಪಾತಾಸಿ ಚ್ಛುರಿತ ಭುಜಪರಿಘರೊಂದೊರ್ವರ ಸೆಣಸಿಂ ಲಗ್ಗೆಗೆಯ್ದು ಪಾಯಿಸೆ ಜವದಿಂ (ಶಾಂತಿಪು. ೪-೧೫). [ಸಂ.]

**ಛುಟಿಟ್** (ನಾ). ಒಂದು ಅನುಕರಣ ಶಬ್ದ: ಛುಟಿಟ್ಟೆಂದೆಣ್ಣೆಯೊಳಿಕ್ಕಿಯುಂ ತ್ವರಿತದಿಂ ಕೈಗಾಯದೋರೊರ್ವರಂ ಗಿಟಿಟ್ಟೆಂದಾರ್ದಿದಿರಾಗಿ ಬಂದು ತಲೆ ಜೇಟಿಟ್ಟೇಟಿ ಪೊಯ್ದುಗ್ರದಿಂ (ಧರ್ಮಾಮೃ. ೬-೧೮೯).

**ಛೂ** (ನಾ). ನಾಯಿಯನ್ನು ಇತರರ ಮೇಲೆ ನುಗ್ಗುವಂತೆ ಹೇಳುವ ಮಾತು. 'ಛೂಬಿಡು' ಪರಾ.

**ಛೂಬಾಣ** (ನಾ). ೧. (ಅಲಂ) ವಿಡಂಬನೆಯಿಂದ ಕೂಡಿದ ಚುಚ್ಚುವ ಮಾತು. ೨. ಅಂತಹ ಮಾತಿನಿಂದ ಕೂಡಿದ ಬರಹ: 'ಪ್ರಜಾವಾಣಿ' ದಿನಪತ್ರಿಕೆಯ ಛೂಬಾಣ ಪ್ರಸಿದ್ಧವಾಗಿದೆ (ರೂಢಿ). [ಛೂ + ಬಾಣ]

**ಛೂಬಿಡು** (ಕ್ರಿ). ೧. ನಾಯಿಯನ್ನು ಇತರರ ಮೇಲೆ ನುಗ್ಗುವಂತೆ ಮಾಡು : ಯಾರಾದರೂ ಭಿಕ್ಷಗೆ ಬಂದರೆ ಅದನ್ನು ಅವರ ಮೇಲೆ 'ಛೂ' ಬಿಡುತ್ತಿದ್ದ (ಹೇಮುಕೂ. ೧೨). ಸಂಕಟವು ಭಯವು–ಛೂಬಿಟ್ಟ ವಿಧಿಯ ಕ್ರೂರಾತ್ಮ ಕರ್ಮಶುನಕ (ಅರಳು. ೧೭೯-೭). ೨. (ಅಲಂ) ವಿರುದ್ಧವಾಗಿ ನಿಲ್ಲಿಸು ; ಚುಚ್ಚಿಕೊಡು : ಸಂಪತ್ತುಗೆ ಅವರ ಮಾತಿನಿಂದ ರೇಗಿತ್ತು. ಸಾವೂ ಛೂಬಿಟ್ಟಿವು (ಅಲಹೂ. ೨೯) : ಪ್ರಭಾವಶಾಲಿಗಳ ವಿರುದ್ಧ ಅಲ್ಪರನ್ನು ಛೂಬಿಡುವುದು ಕಷ್ಟ (ರೂಢಿ). [ಛೂ + ಬಿಡು$_1$]

**ಛೂಮಂತ್ರ** (ನಾ). ದೆವ್ವ ಬಿಡಿಸುವ ಮಂತ್ರ.

**ಛೂಮಂತ್ರಗಾಳಿ** = ದೆವ್ವ, ಭೂತ, ಪಿಶಾಚಿ ಮೊದಲಾದುವುಗಳ ಪೀಡೆಯನ್ನು ಪರಿಹರಿಸುವುದಕ್ಕಾಗಿ ಮಾಡುವ ಒಂದು ಬಗೆಯ ಮಂತ್ರ ಪ್ರಯೋಗ: ಇಂತಹ ಮಿಥ್ಯಾಜ್ಞಾನವು ಛೂಮಂತ್ರಗಾಳಿಯಿಂದಾಗಲಿ, ಕಿವಿಕಚ್ಚುವ ಉಪದೇಶದಿಂದಾಗಲಿ ಹೋಗತಕ್ಕದ್ದಲ್ಲ (ಜೀವಾತ್ಮ. ೨೭೪) ; ಸೋಮಣ್ಣ ಅಜ್ಜಿಗೆ ಯಾರೋ ಛೂಮಂತ್ರಗಾಳಿ ಹಾಕಿ ಎಲ್ಲಿಗೆ ತೆಗೆದುಕೊಂಡು ಹೋದರು ? (ಹೊಸಕ್ಕ. ೧೨೦).

[ಛೂ + ಮಂತ್ರ]

**ಛೂರಿ** (ನಾ). = ಛುರಿಕೆ ೧ : ನಾಯರರು . . . ಮುಂಜಿಗೆ ಬದಲಾಗಿ ೧೬ನೇ ವರ್ಷದ ವಯಸ್ಸಿನಲ್ಲಿ ಹುಡುಗರ ನಡುವಿಗೆ ಛೂರಿಯನ್ನು ಕಟ್ಟುವರು (ಕಥಾಗಿ. ೦೦೬). [ಸಂ. ಛೂರೀ]

**ಛೇ** (ಅ). ಮುಂದಲಿಕೆ, ತಾತ್ಸಾರ, ನಿರಾಕರಣ, ನಿಷೇಧ ಮೊದಲಾದ ಭಾವಗಳನ್ನು ಸೂಚಿಸುವ ಒಂದು ಶಬ್ದ : ಛೇ, ಅದಾಗದು. ನೀವು ಕೊಡಲೇ ಬೇಕು (ಎತ್ತಿಕ್ಕ. ೭೧).

**ಛೇಛೇ** (ದ್ವಿರುಕ್ತಿ) : ಛೇಛೇ. ನನಗೆ ಅದೇನೂ ಬೇಡ (ರೂಢಿ).

**ಛೇಕ** (ನಾ). ೧. ಮನೆಯಲ್ಲಿ ಸಾಕಿದ ಮೃಗ, ಪಕ್ಷಿ ಮೊದಲಾದ ಸಾಧು ಪ್ರಾಣಿ; ಸಾಕುಪ್ರಾಣಿ. ೨. ಜಾಣ ; ಬುದ್ಧಿವಂತ. ೩. ಪಟ್ಟಣಿಗ ; ನಾಗರಿಕ. ೪. ರಸಿಕ ; ವಿದಗ್ಧ. [ಸಂ.]

**ಛೇಕಾನುಪ್ರಾಸ** (ನಾ). [ಕಾವ್ಯಮೀ] ಅನುಪ್ರಾಸಗಳಲ್ಲಿ ಒಂದು ಬಗೆ ; ಒಂದು ಬಗೆಯ ಶಬ್ದಾಲಂಕಾರ : ಒಂದು ಪದ್ಯದೊಳೆರಡೆರಡುಮಕ್ಕರಂ ಜತೆಜತೆಯಾಗಿ ಪಲವುಂ ಬಟಿಯೊಳ್ಬರೆಯದು ಛೇಕಾನುಪ್ರಾಸಮೆನಿಪುದು. ಎಂತೆನೆ :– ಕಂದಂ ಕವಿಕೋಕಿಲಮಾಕಂದಂ ಕೋಮಲವಿಕಾಸಿ ಕೃತಿಕಲ್ಪಲತಾ ಕಂದಂ ವಿಸ್ಮಯರ ರಸದುಕ್ಕಂದಂ ಚಿಕದೇವರಾಯಚಂದನ ಚಂದಂ (ಅಪ್ರತಿ. ೨೯-೭). [ಛೇಕ + ಅನುಪ್ರಾಸ]

**ಛೇಕಾಪಹ್ನುತಿ** (ನಾ). [ಕಾವ್ಯಮೀ] ಅರ್ಥಾಲಂಕಾರದಲ್ಲಿ ಒಂದು ಪ್ರಭೇದ ; ಅಪಹ್ನುತಿ ಅಲಂಕಾರದ ಆರು ಭೇದಗಳಲ್ಲಿ ಒಂದು ; ಮತ್ತೊಬ್ಬರಿಗೆ ಉಂಟಾದ ಸಂಶಯವನ್ನು ನಿವಾರಿಸಲು ಜಾಣತನದಿಂದ ನಿಜವನ್ನು ಮರೆಮಾಚುವುದು : ಒಂದು ವಸ್ತುವನಿರ್ದುದ ನಿರ್ದಂತೆ ತಿಳಿಯಲೆಳಸಿದರ್ಗೆ ಅದು ಮಱಸಿ ಪೇೞ್ವುದು ಛೇಕಾಪಹ್ನುತಿಯೆನಿಪುದು. ಎಂತೆನೆ:– ಪಲ್ಲೇಂ ಪೆಬರ್ಾಲೆಯ ಪುಯುಲಲ್ಲಿಯೆ ಮುಱುದುದಿರ್ದುದೆಂದು ಕೇಳ್ವಿನೆಗಂ ತಾಂ ತಲ್ಲಣಿಸಿ ಚನ್ನಬಸವಂ ಸೊಲ್ಲಿಸಿ ಯಳಿನೆತ್ತಿ ತನ್ನದೆಂದಳವಟಿದಂ(ಅಪ್ರತಿ. ೪೮-೧೪). [ಛೇಕ+ಅಪಹ್ನುತಿ]

**ಛೇಕೋಕ್ತಿ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ; ಲೋಕಪ್ರಸಿದ್ಧವಾದ ನಾಣ್ಣುಡಿಗೆ ಬೇರೆ ಅರ್ಥವನ್ನು ಕಲ್ಪಿಸುವುದು : ಈ ನಾಣ್ಣುಡಿಗೆ ಪ್ರಸಿದ್ಧಮಾದರ್ಥಮಲ್ಲದೆ ಪೆಱತೊಂದರ್ಥಮಂ ಕಲ್ಪಿಸಿ ಪೇೞಿಯದು ಛೇಕೋಕ್ತಿಯೆನಿಪುದು. ಎಂತೆನೆ :– ಕತ್ತರಿಸಿ ನೆತ್ತಿದೊವಲಂ ಪತ್ತಿಸಿ ಪೊಸಮೂಗುಗೆಯ್ವುಮೆನಲೆಸವಂತಂ ಸತ್ತಾಂ ಸಗ್ಗಂ ಬಡೆವೆಂ ಮತ್ತೆ ವಿರಕ್ತಂಗೆ ಮೂಗದೇತರ್ಕೆಂದು (ಅಪ್ರತಿ. ೧೩೧-೫).

[ಛೇಕ + ಉಕ್ತಿ]

**ಛೇಗಿ** 'ಚೇಗಿ' ನೋ.

**ಛೇಗೆ** 'ಚೇಗೆ' ನೋ.

**ಛೇಡಿಸು, ಚೇಡಿಸು** (ಕ್ರಿ). ಕುಚೇಷ್ಟೆ ಮಾಡಿ ರೇಗಿಸು ; ಕೆರಳಿಸು ; ಚುಡಾಯಿಸು: ಸ್ಫೂರ್ತಿ ಬಂದಾಗ ಹರಟೆ ಹೊಡೆಯಬೇಕೆಂದು ಗೆಳೆಯನ ಮನೆಗೆ ಹೋದರೆ, 'ಮೊದಲೇ ಕಾರ್ಯಕ್ರಮವನ್ನೇಕೆ ತಿಳಿಸಲಿಲ್ಲ' ಎಂದು ಅವನು ಛೇಡಿಸಿದರೆ ? (ಮುಂಗಾಪು. ೭೬) ; ಯಾವಾಗಲೂ ಆಕೆ ಅವನನ್ನು ಛೇಡಿಸುತ್ತಿರುತ್ತಾಳೆ (ಬನಸಿ. ೩) ಚೇಡಿಸು : ಆದರೂ ಈ ಅಯಾಚಿತ ಜತನಕ್ಕಾಗಿ ಸ್ನಿಗ್ಧವಾಗಿ ಜೇಡಿಸದಿರುವುದು ಅವಳಿಂದಾಗಲಿಲ್ಲ (ಅರಗಿ. ೧೭೫).

[ಛೇಡ$_0$ (P ← ಹಿಂ. ಛೇಡನಾ) + – ಇಸು$_3$]

**ಛೇದ** (ನಾ). ೧. ಕತ್ತರಿಸುವುದು ; ನಾಶಮಾಡುವುದು : ಭೂಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮಂ (ಜಗವಿ. ೧-೧). ೨. ತುಂಡು; ಚೂರು. ೩. [ಗಣಿತ] ಭಿನ್ನರಾಶಿಯಲ್ಲಿ ಭಾಜಕವಾದ ಅಂಕಿ : "ಭಿನ್ನರಾಶಿಯಲ್ಲಿ ಅಡ್ಡಗೆರೆಯ ಕೆಳಗಿನ ಅಂಕಿ : ಛೇದ" (Denominator. ಇಂಕನಿ). 'ಅಂಶ' ಪರಾ. ೪. [ನಾಟ್ಯ] ನೃತ್ಯದಲ್ಲಿ ಹೇಳಿರುವ ಇಪ್ಪತ್ತು ಹಸ್ತಭೇದಗಳಲ್ಲಿ ಒಂದು : ಧೂನನ . . . ಛೇದ, ಭೇದ . . . ಆಹ್ವಾನ, ತರ್ಜನ–ಈ ಇಪ್ಪತ್ತು ಕರಕರ್ಮಭೇದಂಗಳ್ (ಲಾಸ್ಯರಂ. ೪-೧೩ ವ). ೫. [ಜೈನ]ಒಂದು ಆಚಾರದ ಕ್ರಮದಲ್ಲಿ ಭಂಗ : ವಿನಿರ್ಮಳ ತಪಸ್ಸ್ಯೋಪಸ್ಥಾಪನದ್ವಂದ್ವದೊಳ್ ನಿರುತಂ ಛೇದ ವಿಕಲ್ಪದೊಳ್ ನಿಬಿಡ ಕಾಯೋತ್ಸರ್ಗದೊಳ್ ಶುದ್ಧಿ ತಳ್ತಿರೆ ದೋಷ ಪ್ರತಿಕಾರ ಸಾರತಪಮಂ ತತ್ತ್ವಾಪಸಂ ತಾಳ್ದಿದಂ (ಸುಕುಮಾ. ೪-೧೫).

[ಸಂ.]

**ಛೇದನ** (ನಾ). = ಛೇದ ೧ : ಅಯ್ಯಾ ನಿಮ್ಮ ಅನುಭಾವದಿಂದ ಎನ್ನ ಕರ್ಮಛೇದನವಾಯಿತ್ತು (ಬಸವ. ೫೧೦) ; ಘನಮೋಹಪಾಶಛೇದನಂ ಮಾಳ್ಪ ದಂಡಿಯುಳ್ಳಿನ್ನಪ್ಪ ಬಾರಾ (ಬಸಪು. ೨೪-೩೯) ; "ಭಂತೇ, ಮನಸಿಕಾರದ ಲಕ್ಷಣವೇನು ? ಪ್ರಜ್ಞೆಯ ಲಕ್ಷಣವೇನು ?", ಎಂದನು. "ಮಹಾರಾಜ, ಮನಸಿಕಾರದ ಲಕ್ಷಣ ಊಹನ. ಛೇದನವು ಪ್ರಜ್ಞೆಯ ಲಕ್ಷಣ" (ಬುದ್ಧಪ. ೪೩ ಮಿಲಿಂದ). [ಸಂ.]

**ಛೇದಿ** (ಗುಂ). ೧. ಕತ್ತರಿಸುವ ; ಚೂರುಮಾಡುವ. (ನಾ). ೨. ಕತ್ತರಿಸುವ ಸಾಧನ ; ಕತ್ತರಿ : "ಕರ್ತರಿಚ್ಛೇದಿಯಕ್ಕುಂ" (ಮಂಗರಾ. ೧೧೧-೨). ೩. ಕತ್ತರಿಸುವ ವ್ಯಕ್ತಿ ; ಭಂಗಗೊಳಿಸುವವನು : ಸುಖಚ್ಛೇದಿಗಳು ಕಪಟಿಗಳು (ಬಸಪು. ೪೦-೭೩). [ಸಂ. ಛೇದಿನ್]

**ಭೇದಿಸು** (ಕ್ರಿ). ೧. ಕತ್ತರಿಸು; ತುಂಡುಮಾಡು : ಮರನಂ ಭೇದಿಸುವುವು ಷಟ್ಚರಣಂ ಗಂಧಕ್ಕೆ ಸೋಲ್ತು ತಾವರೆಯೊಸಟಂ ಭರದಿಂ ಭೇದಿಸಲಾಱದೆ ಪಿರಿದಪ್ಪತಿಮೋಹದಿಂದಮುೞ್ವುವು ಧರೆಯೊಳ್ (ಧರ್ಮಾಮೃ. ೫-೨೪). ೨. ಸೋಲಿಸು ; ನಾಶಮಾಡು : ಮದ್ವಿರೋಧಿಯಂ ಭೇದಿಸಲಾನೆ ಸಾಲ್ವೆಂ (ಪಂಪಭಾ. ೧೩-೪೩) ; ಕಕ್ಕಸ ನಿನಗಿದು ಹವಣಲ್ಲ ಭೇದಿಸೆ ವೆಕ್ಕಸ ವಹುದು (ಮೋಹತ. ೩೩-೨೧). [ ಭೇದನ + – ಇಸು₃ ]

**ಭೇದೋಪಸ್ಥಾಪನ** (ನಾ). [ಜೈನ] ಏಳು ಬಗೆಯ ಸಂಯಮಗಳಲ್ಲಿ ಒಂದು ; P ಪ್ರಮಾದದಿಂದ ದೋಷವುಂಟಾದರೂ ಅದನ್ನು ದೂರೀಕರಿಸಿ ಶ್ರೇಷ್ಠವಾದ ವಿಕಲ್ಪರಹಿತವಾದ ಸಾಮಯಿಕ ದಲ್ಲಿರುವುದು : ಸಾಮಾಯಿಕಚ್ಛೇದೋಪಸ್ಥಾಪನಾ ಪರಿಹಾರವಿಶುದ್ಧಿ . . . ಸಂಯಮಂ ಸಪ್ತವಿಧಂ (ತತ್ತ್ವಪ್ರ. ೧೭).

[ ಭೇದ+ಉಪಸ್ಥಾಪನ ]

**ಭೇದ್ಯ**(ಗು).೧.ಕತ್ತರಿಸಲ್ಪಡುವ;ತುಂಡುಮಾಡಲ್ಪಡುವ. ೨.ಕತ್ತರಿಸಲು ಯೋಗ್ಯವಾದ ; ತುಂಡುಮಾಡಲು ಸಾಧ್ಯವಾದ. [ ಸಂ. ]

**ಭೊಳ್ಳೆ** (ನಾ). ಒಂದು ಪ್ರದೇಶದ ಹೆಸರು (?): ನೀರ್ಗುಂಧ ಭೊಳ್ಳೆಯ ವೊಳ್ಗೊಳದ ಸೇಂದ್ರಕ ಯೋಧ ಮಹಾಮಾತ್ರ (ಮೈಆರಿ. ೧೯೨೪, ೭೪-೨೭ ; ೪). [ ? ]

**ಭೋಕರ** (ನಾ). ಹುಡುಗ ; ಬಾಲಕ ; ಪೋರ : ಆ ಭೋಕರಾನ ಮಾರಿ ಚಪಾತಿ ಹಾಂಗ ಆಗಿತ್ತಂತ (ಪರಿಲ. ೧೩).

[ ←ಹಿಂ. ಭೋಕರಾ, ಭೋಕಡಾ ]

**ಭೋಟೀನಿಗೂಹನ** (ನಾ). [ಕಾಮಶಾ] ರತಿಕ್ರೀಡೆಗಳಲ್ಲಿ ಒಂದು : ಬಳಿಕ ಸಂಯುತೋರುಕರಣ . . . ಭೋಟೀನಿಗೂಹನ . . . ಮಣಿತೋನ್ಮುಖರವೆಂಬ ಕ್ರಿಯಾವಿಶೇಷಗಳಿಂದಾದಿಮಧ್ಯಾಂತರತಿತಂತ್ರ ಚತುರರಿಂ (ವಿವೇಕ. ೨೩೦). [ ?]

*

# ಜ

**ಜ** (ನಾ). ೧. ಕನ್ನಡ ವರ್ಣಮಾಲೆಯ ಇಪ್ಪತ್ತೆಂಟನೆಯ ಅಕ್ಷರ; ಜಕಾರ. ೨. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : " ಜದಹ ಮೆಂಟು" (ಮಂಗರಾ. ೧೧೪-೧೧). ೩. [ಛಂದ] ಅಕ್ಷರಗಣಗಳಲ್ಲಿ ಒಂದು; ನಡುವೆ ಗುರುವಿರುವ ಗಣ ; ಜಗಣ (∪–∪).

**ಜಂಕಣೆ, ಝುಂಕಣೆ, ಝ್ಮುಂಕಣೆ** (ನಾ). ೧. ಗದರಿಕೆ ; ಬೆದರಿಸುವಿಕೆ ; ಜಬ್ಬು : " ಜರ್ವೆಂದು ಜಂ [ಪಾಠಾಂ. ಝುಂ]ಕಣೆಯು "(ಶಬ್ದಮಂ. ೪೧) ; ವೈಶ್ವಾನರಂ ಈ ಪುರ್ಬಿನೊಂದು ಜಂಕಣೆಗೆ ಬೆದಱಿ ನಡುಗಿ (ರಾಮಾಶ್ವ. ೬೪-೨೪); ತಾಯ ಲಲ್ಲೆಯೊ ತಂದೆಯಕ್ಕರೆಯ ಜಂಕಣೆಯೊ (ಗೂಲೂಥಾ. ೩-೭೭). ೨. (ಪಕ್ಷಿಗಳ) ಕೂಗು ; ಕಂಕಿಲು ; ಚಪ್ಪರಣೆ : "ಬಗ್ಗೆನಲ್ಜಂ [ ಪಾಠಾಂ. ಲ್ಝುಂ]ಕಣೆ " (ಚತುನಿ. ೨೨). ೩. ಹೀಯಾಳಿಸುವಿಕೆ. 'ಜಂಕಿಸು' ಪರಾ. ಝುಂಕಣೆ: ೩. " ಝುಂಕಣೆಯ ಹೀಯಾಳಿಪುದು " (ಕಶರ. ೪೧). **ಝ್ಮುಂಕಣೆ**: ೧. ಗುಣಕೆಱಗುವೆನಹುದಣ್ಣನೆಂದೊಮ್ಮೆ ಝುಂಕಣೆಗೆಱಗುವೆನೆ ತಾನೀಗ (ಭರಜ. ೪೮-೪೧). ೨. " ಚಪ್ಪರಣೆಯುಮೆನ್ನೆ ಝುಂಕಣೆಯು ತಾನಕ್ಕುಂ " (ಕವಿಕಂ. ೧೨೩) ; ಉಲಿವ ಕೋಗಿಲೆಯ ಝುಂಕಣೆಗೆ ನಿಲಲಾಱದಳವಳಿದದಂ ಸಖಿಯರಿಂ ತೆಮರಿಸುತ (ಸೌಂದಪು. ೧೪-೯). ೪. ಗದಾಯುದ್ಧದಲ್ಲಿ ಒಂದು ವರಸೆ: ಝಾಡಿ ಝುಂಕಣೆ ಝಡಪು ಖಾಡಾಖಾಡಿ ದೃಢಗತಿ ದೃಷ್ಟಿಪಾತಾಲೀಢ ಗೋಮೂತ್ರಿಕ ಪರಿಭ್ರಮಣ . . . ಘಲ್ಲಣೆಗಳಲಿ ಗದೆ ಕುಣಿದಾಡಿದವು (ತೊರರಾ. ೬-೧೪-೧೬).

[ ಜಂಕಿಸು + – ಅಣೆ₄ ]

**ಜಂಕಿಸು, ಝುಂಕಿಸು** (ಕ್ರಿ). ೧. ಗದರಿಸು ; ಬೆದರಿಸು : ಬಿಸುಗದಿರನ ಕಡುಗಾಯ್ಪಂ ಮಸುಳಿಸಿದುವು . . . ಮುಳಿದರಂ ಜಂಕಿಸಿದುವು ಬಿಡದಾರ್ದು ಕಾವನೆಚ್ಚಲರ್ಗಣೆಗಳ್ (ಕಬ್ಬಿಕಾ. ೩೧೧) ; ಸೀರೆಗಳ ಮೊಟ್ಟೆಯನು ಸೋಂಕಿದವದಿರನಿಱಿವೆನೆನುತಂ ಜಂ[ಪಾಠಾಂ. ಝುಂ]ಕಿಸುತ (ಬಸಪು. ೨೧-೧೫) ; ಅಂತು ಕಾಯ್ದಾಕ್ಷಿಸಿ ಸಪ್ತಶತಸಂಖ್ಯಾಕರಂ ಜಡಿದು ಜಂ[ಪಾಠಾಂ. ಝುಂ]ಕಿಸಿ ನುಡಿದು (ವೃಷವಿ. ೩೯-೪೩ ವ) ; ಪರರ ಬೆಳಕ ನಳುಪುವಿರೇಂ ? ಸುಡದೆ ನಿಮ್ಮ ಗರಿಯ ? ಜಂಕಿಸಿತಿಂತುಡುಸಂಕುಳ ಹೊಂಚುವ ಮಿಂಚುಹುಳಂಗಳ ಬೇಸಗೆ ಕೊನೆವರಿಯೆ (ಗಿಳಿವಿಂ. ೯೩-೫). ೨. ಹೀಯಾಳಿಸು ; ತಿರಸ್ಕರಿಸು : ಕೊಂಕಿದ ಪುರ್ಬು ನೀಳ್ದ ನಗೆಗಣ್ಬಳಿ ವೆತ್ತ ಮುಖೇಂದು ಶಂಖಮಂ ಜಂ[ಪಾಠಾಂ. ಝುಂ]ಕಿಪ ನುಣ್ಗೊರಲ್ಕೊಳ ಪುರಸ್ಥಳ. . . . ರಂಜಿಕುಮಾ ಕುಮಾರನಾ(ರಾಜಶೇ. ೮-೪೭). ೩. ಕಿರಿಚು; ಕಿರಲು ; ಚೀರು : ದಾಂಟಲನುಗೆಯ್ಯುತೆ ತೂಗುತೆ ಜಂ[ಪಾಠಾಂ. ಝುಂ] ಕಿಸುತ್ತೆ . . . ನಗಿಸಿತ್ತು ತಾಪಸಕುಮಾರರನಲ್ಲಿಯದೊಂದು ಮರ್ಕಟಂ (ಗಿರಿಕ. ೫-೨೧). **ಝುಂಕಿಸು** : ೧. ಬಿಜ್ಜಳಭೂಪಂ ಮೆಲ್ಲಮೆಲ್ಲನೆ ಮಾತುಮಾತಿಂ ಲೆಕ್ಕದ ಮಾತಂ ತೆಗೆದು ಕರಣಿಕರ ಝುಂಕಿಸಿ ಭಂಡಾರದ ಆದಾಯ ಬೀಯಮಂ ನೋಡೆ(ಬಸರ. ೮-೧೧೨); ಘುಡುಘುಡಿಸಿ ಕೋಪಾಟೋಪದಿಂ ಜಱಿದು ಝುಂಕಿಸಿದನವನಿಪನನಾಮಿಕನನು (ಹಚಕಾ. ೧೧-೧೯) ; ಬಡಿವನಲ್ಲಿಯ ಮಕ್ಕಳನು ತಲೆಯೊಡೆವನರೆಬರನವರ ತಾಯ್ದಿರು ಜಡಿದು ಝುಂಕಿಸಿ ಪೊಡೆಯ ಬಂದಡೆ ಕಾಲುವಿಡಿವಂತೆ ಅಡಿವಿಡಿದು ಪೊಡವಿಗೆ ಕೆಡಹಿತಾ ಹಿಡಿದೆಳೆವನು (ಸಾಳ್ವಭಾ. ೨೧-೫೪) ; ಸತ್ಪ್ರಣವಭರಿತ ಚಮ್ಮಟಿಗೆಯಿಂ ವೇದಮಯ ವಾಜಿಗಳನಿರದೆ ಝುಂಕಿಸಲೊಡಂ ರಥಸಹಂ ಹಯಮಭ್ರಮಂಡಲವನಂಡಲೆದುವು (ಚಬಪು. ೪೧-೪೫). ೨. ಸಲೆ ಕೊರಲ್ ಜಡಜಾತ ಶಂಖಮಂ ಝುಂಕಿಸೆ (ಪದ್ಮರಾ. ೩-೨೯). [ ಜಂಕು + – ಇಸು₃ ]

**ಜಂಕು** (ಕ್ರಿ). ಬೆದರು ; ಹಿಂಜರಿ ; ಹೆದರು : ಇದಕ್ಕೆಲ್ಲ ಜಂಕುವನೇ (ಕಾಬಝೂ. ೧೪).

[ ದೇ.॥ ತಮಿ. ಚಙ್ಕು ; ತೆಲು. ಜಂಕು. ; ಕುವಿ. ದಂಗ್ ; ಕುರುಖ್. ಜಂಕ ; ಮಲ್ತೊ. ಜಂಖ್ ]

**ಜಂಕೆ, ಝಂಕೆ$_1$** (ನಾ). ೧. ಗರ್ಜನೆ; ಅಬ್ಬರ; ಆರ್ಭಟ : ಪೊಡೆವ ಬೀರರ ಜಂಕೆಗೆ ಗೊಂಟನಾನೆಗಳ್ ಕೋಡುವಿನಂ (ಕಬ್ಬಿಕಾ. ೨೦೫) ; ಝಕಾರಕ್ಕೆ ಜಕಾರಂ . . . ಝಂಕಾ – ಜಂಕೆ ; ಝಂಝಾ – ಜಂಜು (ಶಮದ. ೨೫೫ ಪ್ರಯೋ) : ಮದವೇದಂಡಂ ಡೆಂಡಣಿಸಿ ಚಂಡನಂಕೆಗೆ ಜಂಕೆಗನುವಾಗ ದಿರುತ್ತಿರೆ (ಹಮ್ಮೀರ. ೯-೫೦ ವ). ೨. ಕೂಗು ; ಧ್ವನಿ : ಪಕ್ಕಿ ಸೋವ ಪಾಮರಿಯರ ಜಂ[ಪಾಠಾಂ. ಝಂ]ಕೆಗಲ್ಲಿ ಗಿಳಿಯಂಜದೆ ಬೆರ್ಚದೆ ನಿಲ್ಕು ಮಾವಗಂ(ಗಿರಿಕ. ೨-೧೫). **ಝಂಕೆ$_1$** : ೧. ನಿಮ್ಮ ಅಂಕೆಗೆ ಝಂಕೆಗೆ ಶಂಕಿಸಿದೆ ನಾದರೆ ಎನ್ನ ಲೆಂಕತನಕ್ಕೆ ಹಾನಿ (ಬಸವ. ೭೨೮) ; ರೋಷಭಯಂಕರಾನನ ನೆದ್ದ . . . ಝಂಕೆ ಮಿಗಲೇಱಿದನು ಮದನಿಶ್ಶಂಕ ಗಜವನು (ನಿಭಾಗ. ೧೦-೬೯-೨೨). ೨. ಉಲಿವ ತೇಜಿಯ ಝಂಕೆಗಳ ಗೊಂದಳದ ಕರಿಘಟೆ ಗಜಱುಗಳ . . . ಕೌರವಸೈನ್ಯಶರಧಿಯಲಿ(ಕುವ್ಯಾದ್ರೋ. ೭ರಿಇ. ಪರಿ. ೨೭೬); ಮೊದಲೆಮಾತುಗಳ್ ಗಡ ಮಹಾನಿಗಮೋಕ್ತಿಗತೀತನೊಳ್ ಜಯಾಹ್ಲಾದದ ಝಂಕೆಗಳ್ ಗಡ (ಶಬಶಂ. ೪-೧೩೦). [ <ಜಂಕು ]

**ಜಂಖಾನ** 'ಜಂಬುಕಾನ' ನೋ.

**ಜಂಗಟ** (ನಾ). (?) : ಘಟ ಕುಂಭದಲ್ಲಿ ಜೀವನೆಂಬ ಜಂಗಟ ಬಂದಿತ್ತು ದೃಷ್ಟವ ಇಷ್ಟದಲ್ಲಿ ಕಟ್ಟಲಾಗಿ ಮೊಳೆ ಮುಱಿದು ಒಡಲಾಯಿತ್ತು (ಸರ್ವವ. ೦೪೧-೬೯೫). [ ? ]

**ಜಂಗಡೆ** (ನಾ). ಮಾಂಸ ; ಖಂಡ : ಬಸೆ ನೆಣನ ಸುಂಟಿಗೆಯ ಹರಹಿದ ಹಸಿಯ ತೊಗಲಿನ ತಳಿತ ಖಂಡದ ಹಸರದುಱುಗಲ ಕಾಳಿಜದ ಜಂಗಡೆಯ ಗಳಗೆಗಳ . . . ಕುಸುರಿದೆಲುವಿನ ಕೋದ ಮಾನಂಗಡಿಯಲ್ಲೆತಂದ (ಕುವ್ಯಾಉ. ೧೫-೮). [ <ಸಂ. ಜಂಗಲ ]

**ಜಂಗಮ$_1$** (ಗು). ೧. ಚಲಿಸುವ ; ಸಂಚರಿಸುವ ; ಚೈತನ್ಯವುಳ್ಳ ; **ಜೀವಿಸಿರುವ :** ಲತೆಗಳ್ ಜಂಗಮರೂಪದಿಂ ನೆರೆದುವೋ(ಪಂಪಭಾ. ೪-೬೯); ಮುನಿಯೋ ಜಂಗಮ ಜೈನಬಿಂಬನನವದ್ಯಾಚಾರನೇ (ಬೆಂಂಶಾ. ೧೯೪೪, ಬಂಕಾಪುರ . ೧-೨೫ ; 1045). (ನಾ). ೨. ಜೀವವುಳ್ಳದು ; ಚಲನೆ ಯುಳ್ಳದಂ ; ಸಂಚಾರವುಳ್ಳದು : ಸ್ಥಾವರಕ್ಕಳಿವುಂಟು ಜಂಗಮಕ್ಕಳಿ ವಿಲ್ಲ (ಬಸವ. ೮೨೦) ; ಸ್ಥಾವರಕೆ ಜಂಗಮಕೆ ನೀನೇ ಜೀವಚೇಷ್ಟಕನು (ಕುವ್ಯಾಉ. ೭-೦೦). ೩. [ವೀಶೈ] ಮಠಮಾನ್ಯಗಳಿಲ್ಲದ ಲೋಕಸಂಚಾರಿ **ಯಾದ ವಿರಕ್ತ ; ಅಯ್ಯ :** ಜಂಗಮವ ಕೂಡಿಕೊಂಡು ಲಿಂಗಾರ್ಚ ನೆಯ ಮಾಡುವುದು ಲೇಸಯ್ಯಾ ಭಕ್ತಂಗೆ (ಬಸವ. ೫೨೪) ; ನಿಚ್ಚ ಸಾವಿರ ಜಂಗಮಂಗಳಿಗೆ ಪಂಚ ವಿಧ ಪಕ್ವಾನ್ನಪಾನಾದ್ಯಂಚಿತಿಷ್ಟಾರ್ಥಂಗಳಂ . . . ನೀಡುತ (ಬಸವು. ೨೪-೩) ; ಜೋಗಿ ಜಂಗಮ ದರವೇಸಿಗಳಿಗೆ ನೆಟಿ ಮೂಗ ಬಧಿರರಂಧಕರಿಗೆ ಬೇಗದೆ . . . ಅನ್ನವನೀವ ರಾಗದ ಭವನವೊಪ್ಪಿದುವು (ಕಂಸವಿ.೨೦-೪೭). ೪. ಹಾವು ಮೊದಲಾದ ಪ್ರಾಣಿಗಳಿಂದ ಉಂಟಾಗುವ ವಿಷ : ಸರ್ಪ, ಚೇಳು ಮೊದಲಾದ ಪ್ರಾಣಿಗಳಿಂದ ಉಂಟಾದ ವಿಷ ಜಂಗಮವೆನಿಸಿಕೊಂಬುದು (ವೈದ್ಯಸಾ. II, ೧೭೫).

ಜಂಗಮವಾಗು = ಜೀವ ತಾಳು ; ಚೈತನ್ಯವನ್ನು ಪಡೆ : ಸಿಡಿಲು ಜಂಗಮವಾಯ್ತೊ ಪ್ರಳಯದ ಮೃಡನು ಬಾಲಕನಾದನೋ ಕೊಲೆಗಡಿ ಕನಹುದೋ ಕಂದ (ಕುವ್ಯಾದ್ರೋ. ೬-೪೮). [ ಸಂ. ]

**ಜಂಗಮ$_2$** (ನಾ). ಒಂದು ಬಗೆಯ ಔಷಧಿ ಸಸ್ಯ : ಗುರುಮಾಡೆ, ಜಂಗಮ, ಮಾಡೆಮಡಿಗೆ (ಮೃಜಿಗಿ. ೩೯-೭೮೦). [ ?. / ತುಳು. ಜಂಗಮೆಮರ ]

**ಜಂಗಮಗಿತ್ತಿ** (ನಾ). ಜಂಗಮನ ಹೆಂಡತಿ : (೬). [ಜಂಗಮ$_1$+ – ಗಿತ್ತಿ]

**ಜಂಗಮತಿ** (ನಾ).=ಜಂಗಮಗಿತ್ತಿ: (೬). [ಜಂಗಮ$_1$+ –ತಿ$_1$ (<–ಇತ್ತಿ)]

**ಜಂಗಮತೆ** (ನಾ). ಚಲಿಸುವಿಕೆ ; ಚಲನೆ : ಜಗದೀ ದೈನಂದಿನ ಜಂಗಮತೆ ನನ್ನೊಳು ಜನಿಯಿಸಿತೇತಕೆ ಮಮತೆ ? (ಸೌಂದಸ. ೧೧).

[ ಸಂ. ಜಂಗಮತಾ ]

**ಜಂಗಮಪ್ರಾಣ** (ನಾ). [ವೀಶೈ] ಜಂಗಮರನ್ನೇ ಜೀವವನ್ನಾಗಿ **ಭಾವಿಸುವ ಸ್ವಭಾವ :** ತ್ರಿವಿಧಭಕ್ತಿನಿಯುಕ್ತ ರಾಜೋತ್ಸವದೊಳಾ ಬಸವಣ್ಣನಿರಲೊಂದೆವಸವಾತನ ಜಂಗಮಪ್ರಾಣವನಱಿಯಲೆಂದು ಶಿವನು . . . ಎಯಿತಂದು (ಬಸವು. ೩೭-೧). [ ಜಂಗಮ$_1$ + ಪ್ರಾಣ ]

**ಜಂಗಮಪ್ರಾಣಿ** (ನಾ). [ವೀಶೈ] ಜಂಗಮರೇ ಪ್ರಾಣವಾದವನು : ಗುರುಲಿಂಗಜಂಗಮಪ್ರಸಾದಪಾದೋದಕಸ್ವರೂಪ ನೀನೆಯಾದ ಕಾರಣ ಜಂಗಮಪ್ರಾಣಿಯಾಗಿ ಸದಾಚಾರಿಯಾದೆ (ಅವಚಂ. ೨೪೦-೧೦೯೫) . ಶರಣರಂ ಸಂಗನೆಂದಲ್ಲದೆ ಕಾಣೆ . . . ಜಂಗಮಪ್ರಾಣಿಯಾಗಿಪ್ಪೆ (ಬಸರ; ೮-೪೩). [ ಜಂಗಮ$_1$ + ಪ್ರಾಣಿ ]

**ಜಂಗಮಪ್ರೇಮಿ** (ನಾ). ಜಂಗಮರನ್ನು ಪ್ರೀತಿಸುವವನು : ದುರ್ವ್ಯಸನಿ ದುರಾಚಾರಿಯೆಂದೆನಿಸದಿರಯ್ಯಾ ಎನ್ನ ಲಿಂಗವ್ಯಸನಿ ಜಂಗಮಪ್ರೇಮಿ ಯೆಂದೆನಿಸಯ್ಯಾ (ಬಸವ. ೨೭೦). [ ಸಂ. ಜಂಗಮಪ್ರೇಮಿನ್ ]

**ಜಂಗಮಲಾಂಛನ** (ನಾ). ೧. [ವೀಶೈ] ಜಂಗಮರ ಗುರುತು,–ಲಕ್ಷಣ. ೨. ಜಂಗಮವೇಷವನ್ನು ತೊಟ್ಟವನು : ಅಯ್ಯಾ ನೀನೆನ್ನ ಭವವ ಕೊಂದಹೆನೆಂದು ಜಂಗಮಲಾಂಛನನಾಗಿ ಬಂದೊಡೆ ನಾನು ಭಕ್ತನೆಂಬ ವಾಹನವಾಗಿರ್ದೆ (ಬಸವ. ೩). [ ಜಂಗಮ$_1$ + ಲಾಂಛನ ]

**ಜಂಗಮಲಿಂಗ** (ನಾ). ೧. [ವೀಶೈ] ಜಂಗಮನ ರೂಪದಲ್ಲಿರುವ ಲಿಂಗ,- -**ಶಿವ :** ನಾನೊಬ್ಬನೆ ಭಕ್ತನು ಮರ್ತ್ಯಲೋಕದೊಳಗಣ ಭಕ್ತರೆಲ್ಲರೂ ಜಂಗಮಲಿಂಗ ನೀನೆ ಅಯ್ಯಾ (ಬಸವ. ೮೯೩) ; ಒಲಿದ ವೃಷಭಾಧಿಪತಿ ದರುಶನದೊಳಗೆ ಜಂಗಮಲಿಂಗರೂಪಂದಳೆದು . . . ಬೆಸಸಿದನು (ಬಸವು. ೩-೧೮). ೨. [ವೀಶೈ] ಆರು ಬಗೆಯ ಲಿಂಗಗಳಲ್ಲಿ ಒಂದು : ಆಚಾರ ಲಿಂಗವ ಅಂಗೈಯೊಳಳವಡಿಸಿ . . . ಆ ಕರದಲ್ಲಿ ಜಂಗಮಲಿಂಗ ನೆಲೆ ಗೊಂಡಿತ್ತು (ಘನವ. ೩೪) : ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ (ಇವು ಆರು, ಷಟ್‌ಸ್ಥಲದ ಷಡ್ಲಿಂಗಗಳು) (ಶಿವಾಸೂ. ೧-೪ ಅಡಿಟಿ). [ ಜಂಗಮ$_1$ + ಲಿಂಗ ]

**ಜಂಗಮವಾಡಿ** (ನಾ).ಜಂಗಮರ ಮಠ: ಜಂಗಮವಾಡಿ-ಕಾಶಿ, ಪ್ರಯಾಗ, ರಾಮೇಶ್ವರಗಳಲ್ಲಿರುವ ಜಂಗಮರ ಮಠಗಳ ಹೆಸರು (ಶರಸಾ. ೨೪-೮).

[ ಜಂಗಮ$_1$ + ವಾಡಿ$_1$ ]

**ಜಂಗಮವಿಕಾರಿ** (ನಾ). = ಜಂಗಮಪ್ರಾಣಿ : ಲಿಂಗವಿಕಾರಿಗೆ ಅಂಗವಿಕಾರ ವೆಂಬುದಿಲ್ಲ ಜಂಗಮವಿಕಾರಿಗೆ ಧನವಿಕಾರವೆಂಬುದಿಲ್ಲ ಪ್ರಸಾದವಿಕಾರಿಗೆ ಮನವಿಕಾರವೆಂಬುದಿಲ್ಲ (ಬಸವ. ೭೯೫). [ ಸಂ. ಜಂಗಮವಿಕಾರಿನ್ ]

**ಜಂಗಮವಿಷ** (ನಾ). ೧. ಹಾವು ಮೊದಲಾದ ಪ್ರಾಣಿಗಳಿಂದಾಗುವ **ವಿಷಬಾಧೆ :** ಸ್ಥಾವರವಿಷ, ಜಂಗಮವಿಷ, ಕುಷ್ಠ . . . ಮುಂತಾದ ರೋಗಗಳು ಕಾಣಿಸಿದಲ್ಲಿಯೇ ಪ್ರತೀಕಾರವಂ ಮಾಡಬೇಕು (ಸಶಾವ್ಯ. ೨೨). ೨. ನಡೆದಾಡುವ ವಿಷ ; ಕೆಡುಕ : ನಿನ್ನಂ ಜಂಗಮವಿಷಮಂ ಪಿಡಿದಾವಂ ಗಡ ಪಿತೃವನಕೆ ತಂದು ತುಡಿಸಿದ ಬಂಟಂ (ಅರ್ಧನೇ. ೫-೩೪).

[ ಜಂಗಮ$_1$ + ವಿಷ ]

**ಜಂಗಮಸ್ವಾಯತ** (ನಾ). [ವೀಶೈ] ಜಂಗಮ ಭಾವದ ಸಾಕ್ಷಾತ್ಕಾರ : ಬ್ರಹ್ಮರಂಧ್ರದಲ್ಲಿ ಲಿಂಗಸ್ವಾಯತ ಭ್ರೂಮಧ್ಯದಲ್ಲಿ ಜಂಗಮಸ್ವಾಯತ (ಅವಚಂ. ೪೭-೨೦೦). [ ಜಂಗಮ$_1$ + ಸ್ವಾಯತ ]

**ಜಂಗಮಿಸು** (ಕ್ರಿ). ನಡೆ ; ಹೋಗು : ಕಂಗಳು ಬಂಭ್ರಮಿಸಿ ಹಮ್ಮುಕ್ಕಿ ಜಂಗಮಿಸಿ ಎದೆ ಮೊಗ ಕೆಳಗಿಳಿಸಿ ನೋಡುತಿರೆ (ಸಪೀಗೀ. ೪೪-೯೦೪).

[ ಜಂಗಮ$_1$ + – ಇಸು$_3$ ]

**ಜಂಗಮೇತರ** (ನಾ). ಅಚಲವಾದುದು ; ಸ್ಥಾವರ.

[ ಜಂಗಮ$_1$ + ಇತರ ]

**ಜಂಗಲ್$_1$** 'ಜಂಗಾಲ್$_1$' ನೋ.

**ಜಂಗಲ್$_2$**, ಜಂಗಲು (ನಾ). ಅರಣ್ಯ ; ಕಾಡು. 'ಜಂಗಲ್‌ಬಾದಾಮಿ' ಪರಾ. **ಜಂಗಲು :** ಆ ಭೂಖಂಡಗಳಲ್ಲಿ ಜಂಗಲಿನ ಜಾನವಾರುಗಳು ಮೇಯುವುದನ್ನು ಸಹಿಸುವರೆ ಹೊರತು (ಜಗಸಂ. ೧೬)..
[ ←ಪಾರ. ಹಿಂ. ಮರಾ. ಜಂಗಲ್./ಸಂ. ಜಂಗಲ ]

**ಜಂಗಲ್‌ಬಾದಾಮಿ** (ನಾ). ಔಷಧಕ್ಕೆ ಬಳಸುವ ಒಂದು ಬಗೆಯ ಗಂದಿಗೆ ಸಾಮಾನು: ಧೂಪ-ಮಹಿಷಾಕ್ಷಿ, ಗುಗ್ಗುಳು, ಗೋರೋಜನ, ಬಿಳಿಸಾಸುವೆ, ವಾಯುವಿಳಂಗ, ಜಂಗಲ್‌ಬಾದಾಮಿ . . . ಪೋಮ ಇವನ್ನೆಲ್ಲಾ ಚೂರ್ಣಮಾಡಿ ಹೊಗೆಹಾಕಲು ಬಿಕ್ಕಳಿಕೆ ನಿಲ್ಲುವುದು (ಸಕವೈ. ೪೪೯ ಪರಿ.).
[ ಜಂಗಲ್$_2$ + ಬಾದಾಮಿ ]

**ಜಂಗಲ** (ನಾ). ೧. ಕಾಡು ; ಅರಣ್ಯ. ೨. ಬಂಜರುಭೂಮಿ ; ಮರಳುಗಾಡು. [ ಸಂ. ]

**ಜಂಗಲಿ** (ಗು). ಅರಣ್ಯಕ್ಕೆ ಸಂಬಂಧಿಸಿದ ; ಕಾಡಿಗೆ ಸಂಬಂಧಪಟ್ಟ. 'ಜಂಗಲಿಜ್ವರ' ಪರಾ. [ ←ಹಿಂ. ಮರಾ. ಜಂಗಲೀ ]

**ಜಂಗಲಿಜ್ವರ** (ನಾ). ಅರಣ್ಯದಲ್ಲಿ ವಿಷಗಾಳಿಯಿಂದುಂಟಾಗುವ ಜ್ವರ : "(ಕಾಡಿನಲ್ಲಿಯ ವಿಷಗಾಳಿಯಿಂದ ಬರುವ) ಜಂಗಲಿಜ್ವರ" (Jungle fever. ಇಂಕನಿ). [ ಜಂಗಲಿ + ಜ್ವರ ]

**ಜಂಗಲು** 'ಜಂಗಲ್$_2$' ನೋ.

**ಜಂಗಳ** (ನಾ). ೧. ಬಿಗಿಯಿಲ್ಲದುದು ; ಸಡಿಲವಾದುದು : "ಜಂಗಳ ಬಟಲು ಸೋರ್ ಸಡಿಲ್ವುದಕ್ಕುಂ" (ಶಬ್ದಮಂ. ೫೦) ; "ಜಂಗಳವೆಂದು ಸಡಿಲ್ವುದೆ[ದೆ]" (ಕವಿಕಂ. ೨೨೪) ; ಕಠಾರಿಯು ಕೋಲಿಂ ಮುಂದಣ ರತ್ನಸ್ತಂಭಮಂ ಕಿಬ್ಬಿಹಿ ಸೋಂಕುತುಂ ಒಂದೆರಡು ಲಾಗಿಂ ಜಂಗಳಮಂ [ಪಾಠಾಂ. ಜಂಗಳಂ] ಸರಳಿಸುತುಂ (ನಂಬಿರ. ೪-೯೬). ೨. ಸುರಿಯಂಬಿಕೆ; ಹೊರಹೊಮ್ಮುವಿಕೆ : ಬಿಡುದಲೆಯ ಸಿಡಿಲಿಂಗಳದ ಜಂಗಳ[ಪಾಠಾಂ. ಣ] ದಕ್ಷಿಯುಂಗಳಗಳ . . . ವಿಲಯಭೈರವನಂತೆ ಮುಂದಕೆ ಸುಳಿಯಲಾಚರಿಸಿ ದಳು ಕಂಡು ಕುಮಾರಿ ಕುಂಭಿನಿಯ (ತೊರರಾ. ೩-೧-೮). ೩. ಕೃಶವಾಗುವಿಕೆ (?) : ಭಾರಿಯು ತೋಳು ಗುತ್ತಿನ ಜಯಲಕುಮಿ ಜಂಗಳವ ಜಾಬಿ ದಡೆ ಭಾಳಲಿಪಿಗಳ ಲೆಕ್ಕವನು ಪ್ರತಿಕೂಲವಿಧಿ ಪಲ್ಲಟಿಸಿ ಬರೆದಡೆ ಹೇಳಿ ಫಲವೇನು (ಕುವ್ಯಾಗ. ೩-೨೮) ; ಅಳಲದಿರಿ ನೀವಿನ್ನು . . . ನಿಮ್ಮಡಿಯರ ಸನನು ತಿಂಗಳಿಗೆ ತಾರದಿರೆ ಬಳಿಕ ತಾ ಡಿಂಗರಿಗನೇ ಜಂಗಳದ ಜಾಡ್ಯವ ಜಾಬಿಬಿಡಿ (ತೊರರಾ. ೫-೩-೧೦೦). [ ? ]

**ಜಂಗಳಂಬರಿ** (ಕ್ರಿ). ತುಂಬಿ ಸೂಸಿ ಹರಿ ; ಪ್ರವಾಹವಾಗಿ ಹರಿ : ಹಿಂಗಿದಸುವಿನ ದುಂದುಭಿಯು ಮೈ ಜಂಗಳಂಬರಿ [ಪಾಠಾಂ. ಜಂಗಳವ ಬರಿ] ದರುಣಜಲ ಮುನಿಯಂಗಲತೆಯುಲಿ ಸಿಡಿಯೆ ಕಿಡಿಕಿಡಿಯೋದನಾ ಮುನಿಪ (ತೊರರಾ. ೪-೨-೩೮). [ ಜಂಗಳ + ಪರಿ$_1$ ]

**ಜಂಗಳಿಸು** (ಕ್ರಿ). ಸಡಿಲಿಸು ; ಕಳಚು : "ಭೃಶತೇ-ಜಂಗಳಿಸಿದಪಂ" (ಕಾಶಶ್ಚ. ೧೩೨). [ ಜಂಗಳ + – ಇಸು$_3$ ]

**ಜಂಗಾಲ್$_1$**, ಜಂಗಲ್$_1$ (ನಾ). ಹಲಗೆಗಳನ್ನು ಜೋಡಿಸಿ ಕಟ್ಟಿದ ಜೋಡಿದೋಣಿ ; ಜೋಡಂತೆಪ್ಪ : (ಕ). **ಜಂಗಲ್$_1$ :** ಪುಣ್ಯಕ್ಕೆ ಒಂದು ಕಾರು ಹೊತ್ತುಕೊಂಡು ಆಚೇ ಕಡೆಯಿಂದ 'ಜಂಗಲ್' ಬರ್ತಿತ್ತು (ಕಳರು. ೯೧). [ ←ಪೋರ್ಚ್. ಜಂಗಡ./ತುಳು. ಜಂಗಾಲ್, ಜಂಗಲ್, ಜಂಗಾರ್./ಮರಾ. ಸಾಂಗಡ ]

**ಜಂಗಾಲ್$_2$**, ಜಂಗಾಲ (ನಾ). ಒಂದು ಬಗೆಯ ಹಸಿರು ಬೆರೆತ ನೀಲಿ ಬಣ್ಣ: "ಪಾಲಾಶಃ-ಪಲಾಶಃ-ಹರಿತಃ-ಹರಿತ್ ಎಲೆಪಚ್ಚೆಬಣ್ಣದ ಹೆಸರುಗಳು, ಅಂದರೆ ಜಂಗಾಲ್" (ಸಿದ್ಧಾಂತಿ. ೪೫). **ಜಂಗಾಲ :** ಜಂಗಾಲಬಣ್ಣ (ಹಸುರಬಣ್ಣ) . . . ಗುಲಾಬನೀರು ಮುಂತಾದವುಗಳು (ಮುಂಬವ್ಯಾ. ೧೦೦).
[ ←ಪಾರ. ಜಂಗಾರ್; ಹಿಂ. ಜಂಗಾಲ್, ಜಂಗಾರ್ ]

**ಜಂಗಾಲ** 'ಜಂಗಾಲ್$_2$' ನೋ.

**ಜಂಗಿ** (ಗು). ೧. ಯುದ್ಧಕ್ಕೆ ಸಂಬಂಧಿಸಿದ. 'ಜಂಗೀಸಾಮಾನು' ಪರಾ. ೨. ಹೇರಳವಾದ ; ಅತಿಶಯವಾದ ; ಹೆಚ್ಚಿನ ; ವಿಶೇಷವಾದ : ಅಂಗಳದ ಬೈಲ್ನಾಗ, ಜಂಗಿ ಚಂಡಿನ ಆಟದಂಗ . . . ರತ್ನಾಲಿ ಕಂಗೆಟ್ಟು ಸೋತು ನೋಡ್ಯಾಳ (ಜನಗೀ. ೬೮); ಇಷ್ಟೆಲ್ಲ ಘಟಾಟೋಪ ನಡೆದ ಮೇಲೆ ಪಾತರದವರ ನಾಚಿನ ವ್ಯವಸ್ಥೆಯಾದರೂ ಜಂಗೀ ಇರಬಹುದು (ದೇಯಾನಿ. ೧೫೩) ; ಆ ದಿವಸ ಒಂದು ಜಂಗೀ ಮಾರಾಮಾರಿ ಚಿತ್ರಪಟ ಬಂದಿತ್ತು (ಭೂಮಿಕಾ. ೩೬) ; ಹೊರಟಾವೆಲ್ಲೊ ಜಂಗಿ ಜಾತ್ರಿಗೇನೊ (ಹಾಡುಪಾ. ೨೨-೭). [ ←ಅರ. ಹಿಂ. ಮರಾ. ಜಂಗೀ ]

**ಜಂಗಿಡು** (ಕ್ರಿ). ೧. ಗೆಜ್ಜೆಸದ್ದಿನೊಡನೆ ಹೆಜ್ಜೆಯಿಡು, –ನಡೆ: ಕಂಗಳು ಮುನ್ನೂಱು ಘನಪಕ್ಷಿಯು ಜಂಗಿಟ್ಟು ನಡೆವ ಕಾಲುಂಗಳು ಹನ್ನೆರಡು (ಅವಕಂ. ೩೦೨-೧೫೧); ಎಸಕದಿಂ ಜಂಗಿಡುತ ಬಂದರು ಶಬರನಾರಿಯರು (ಅನಂರಾ. ೩-೩-೪). [ ಜಂಗು$_2$ + ಇಡು$_1$ ]

**ಜಂಗಿಸರಂಜಾಮು** (ನಾ). ಯುದ್ಧದ ಸಲಕರಣೆ ; ಯುದ್ಧಸಾಮಗ್ರಿ: ಅಲ್ಲಿ ಜಂಗಿಸರಂಜಾಮು ಬಹಳವಾಗಿದೆ (ಚಿತ್ರಪಾ. ೭೭).
[ ಜಂಗಿ + ಸರಂಜಾಮು ]

**ಜಂಗಿಸು** 'ಚೆಂಗಿಸು' ನೋ.

**ಜಂಗೀಕುಸ್ತಿ** (ನಾ). ಭಾರೀ ಕುಸ್ತಿ; ದೊಡ್ಡ ಮಲ್ಲಯುದ್ಧ: ಬೀದಿಯಲ್ಲಿ ಹುಡುಗರೆಲ್ಲ ಗುಂಪು ಕಟ್ಟಿಕೊಂಡು ನೋಡಿದ್ದೊಂದು ಜಂಗೀಕುಸ್ತಿ (ರಂಗವ. ೯) ; ಹಲ್ಲಿನ ಬುಡದಲ್ಲಿ ದೋಷವಿರಬಹುದು . . . ಎಂದು ನುಡಿಯುವಾಗಲೆ ಹಲ್ಲಿನೊಡನೆ ಜಂಗೀಕುಸ್ತಿ ಹಿಡಿದೇ ಬಿಟ್ಟರು (ಹುಚ್ಚುಹು. ೩೦). [ ಜಂಗಿ + ಕುಸ್ತಿ ]

**ಜಂಗೀಲಢಾಯಿ** (ನಾ). ದೊಡ್ಡ ಹೋರಾಟ ; ಭಾರೀ ಹೊಡೆದಾಟ : ಹತ್ತು ಹದಿನೈದು ನಿಮಿಷಗಳವರೆಗೆ ಜಂಗೀಲಢಾಯಿಯೇ ಆಯ್ತು, ನೋಡಿರಿ (ಜರಕಾ. ೧೫೭). [ ಜಂಗಿ + ಲಢಾಯಿ (<ಲಡಾಯಿ) ]

**ಜಂಗೀಸಾಮಾನು** (ನಾ). ಯುದ್ಧದ ಸಾಮಗ್ರಿ : ಈ ಮೇರೆ, ಯರಡು ಜನಕ್ಕೂ ಜಂಗೀಸಾಮಾನು ಕೊಟ್ಟು ತಯಾರುಮಾಡಿ . . . ಕಳುಹಿದಲ್ಲಿ (ರಾಜೇಂದ್ರ. ೫೭); ನಿಂತ ಕಡೆಯಲ್ಲಿ ನಿಲ್ಲದೆ ಬೇಕಾದ ಜಂಗೀಸಾಮಾನುಗಳನ್ನು ಒದಗಿಸುತಾ ಸೇನೆಯವರಿಗೆ ಧೈರ್ಯವನ್ನು ಹೇಳುತಾ ಬಂದನು (ಮುಸುಗ. ೧೬). [ ಜಂಗಿ + ಸಾಮಾನು ]

**ಜಂಗೀಸಿಪಾಯಿ** (ನಾ). ಯುದ್ಧದ ಸಿಪಾಯಿ ; ಸೈನಿಕ : ಕೆಲವು ರಾಜಸ ಸ್ವಭಾವದ ಜನ ಮೆಚ್ಚುವುದು "ಜಂಗೀಸಿಪಾಯಿ" ಯನ್ನೇ (ಬಂಕಿಮು.೨೦೯).
[ ಜಂಗಿ + ಸಿಪಾಯಿ ]

**ಜಂಗು$_1$** (ಕ್ರಿ). ತುಕ್ಕುಹಿಡಿ ; ಕಿಲುಬು : ನನ್ನ ತಂಬಿಗೆ ಎಲ್ಲಿ ಜಂಗುತ್ತದೆ (ಮುಂಬಯಿ. ೧-೨೫). [ ←ಮರಾ. ಜಂಗಣೇ ]

**ಜಂಗು$_2$**, ಜೆಂಗು (ನಾ). ೧. ತುಕ್ಕು ; ಕಿಲುಬು ; ಕಿಟ್ಟ : ಹವೆಯೊಳಗಿನ ಆವ್ಲಜವು ಕಬ್ಬಿಣಕ್ಕೆ ಕೂಡಿ ಜಂಗು ಹುಟ್ಟುತ್ತದೆ (ಮುಂಬಯಿ. ೩-೭) ; ನೇಗಿಲು ಮಾತ್ರ ಜಂಗು ಹತ್ತಿ ಬಲು ಕೆಟ್ಟಿರುವುದು (ಬ್ರಹ್ಮಜೀ. ೧೯೪). ೨. ಜಂಗಮರು ಕಣಕಾಲಲ್ಲಿ ಕಟ್ಟಿಕೊಳ್ಳುವ ಒಂದು ಬಗೆಯ ದಪ್ಪನಾದ ಹಿತ್ತಾಳೆಯ ಗೆಜ್ಜೆ : ಜಂಗಮದ ಸರ್ವಸಂಗವ ಮಾಡುವ ಜಂಗು ಜಂಘೆಯ ಮುಟ್ಟದು (ದಾಸೋಸಂ. ೩೭) ; ಜಂಗಮ ಜಂಗುಕಟ್ಟಿ ಹಿಂಗದೆ ತಿರುಗಲು ಸಂಗನ ಶರಣರಿಗೇನು!ಫಲ (ಶರೀಫ.೭೦ ಕವಿಕಾವ್ಯ ಪರಿಚಯ); ಶಿವ ಕುಣಿದ ಹಂಬಲಿಸಿ ಜಂಗ ಕಟಗೊಂಡು(ಕನ್ನಜಾ. ೩೦೩).೩. ಎತ್ತು, ಕಂದುರೆ ಮುಂತಾದುವುಗಳ ಕೊರಳಿಗೆ ಕಟ್ಟುವ ಗಂಟೆ,–ಗೆಜ್ಜೆ : ಕೋಡಣಸು ಮುಖರಂಭ ಜಂಗು ಘಂಟೆಯು . . . ಶೃಂಗರವ ಮಾಡಿ ನಿಂದಿರ್ದ (ನವಮೋ. ೨೦-೫೦); ಕತ್ತಿಗೆ ಹಾಕಿರುವ ಸಾಮಾನು . . . ೨೬

ಜಂಗು ೨೫ ದೊಡ್ಡದು ಜಂಗು ೧ ಸಹಾ ೨ಯಿಾ ಜಂಗಿನ ಹಗ್ಗದ ಪಟ್ಟಿ (ಎಕ್. XIV, ನಂಜನ. ೨೮೯-೧ನೆಯ ಕಲಂ; 1847): ಸಾವಿರೆತ್ತಿನ ಮುಂದೆ ಹೋಗೋದು ನಮ್ಮೆತ್ತು ಪಾದಕ್ಕೆ ಜಂಗು ಮೊಕರಂಬೆ (ಹಳ್ಳಿಯ. ೩೦). ೪. ಯುದ್ಧ; ಕಾಳಗ: (೬). ೫. ಸೈನ್ಯ; ಸೇನೆ: ಶ್ರೀಮತು ರಾಚಮಲ್ಲದೇವರ ಜಂಗಿನ ಸೇನಬೋವ ಸುಭಕರಯ್ಯ ಬನ್ದಿಸಿದ (ಎಕ್. II, ೧೩೪-೧; 1000). **ಜೆಂಗು:** ೩. ಕರಿಯ ಸಾರಂಗ ಮೇಲ್ಮೆರವ ಹಲ್ಲಣ ಚೆಲ್ಲಿ ತರಗೊಳಿದ ಗೊಂಡೆ ಜೆಂಗು ಬಿರಿದೀನ ಕಾಲಪೆಂಡೆಯು ಬೆಳ್ಳಿ ಸರಪಣಿ ಕೊರಳ ಕಂದರದ ಮೇಲ್ಗಳಸಾ (ಸೌಂದಕಾ. ೩-೬೯). ೬. ಯಕ್ಷಗಾನ, ಬಯಲಾಟದ ಪಾತ್ರಗಳು ಕಣಕಾಲಿಗೆ ಕಟ್ಟುವ ಗೆಜ್ಜೆ: ಜೆಂಗು (ಚೆಂಗು) ಅಥವಾ ಜೆಂಗೆಜ್ಜೆ (ಚೆಂಗೆಜ್ಜೆ)-ರಾಜವೇಷ ರಾಕ್ಷಸವೇಷಾದಿಗಳಲ್ಲಿ ಮೊಣಕಾಲ ಮುಂಗಡೆಗೆ ಕಟ್ಟುವ ಒಂದು ಬಗೆಯ ಗೆಜ್ಜೆ (ಪಾರ್ತಿಸು. ೪೭).

**ಜಂಗುತಿನ್ನು** = ತುಕ್ಕುಹಿಡಿ: ಕಿಡಿಕಿಯ ಜಂಗು ತಿಂದ ಸರಳುಗಳ ಮೇಲೆ ಬೆರಳಾಡಿಸುತ್ತ ಬಾಯಲ್ಲಿ ತುಂಬಿಬಂದ ಕವಳದ ಎಂಜಲವನ್ನು . . . ಉಗುಳಿದ (ಮೂರುದಾ. ೧೩೭). **ಜಂಗುಹಿಡಿ** = ೧. ಜಂಗುತಿನ್ನು: ಜಂಗು ಹಿಡಿದ ತಗಡಿನ ಡಬ್ಬಿಗಳು (ಸ್ಮೃತಿಚ. ೩೦೯). ೨. (ಆಲಂ) ಜಡವಾಗು; ನಿಷ್ಕ್ರಿಯವಾಗು: ಕಳೆದ ಆರುವರ್ಷದಿಂದ ರಾಷ್ಟ್ರೀಯಸಭೆಗೆ ಜಂಗು ಹಿಡಿದಿತ್ತು (ಕಾಂಗ್ರೆಸ. ೯). [ ←ಪಾರ. ಹಿಂ. ಮರಾ. ಜಂಗ್ ]

**ಜಂಗು₃** 'ಚೆಂಗು₄' ನೋ.

**ಜಂಗು₄** (ನಾ). ತೆಕ್ಕೆ; ಹಿಡಿತ. 'ಜಂಗುಜರಿ' ಪರಾ. [ ? ]

**ಜಂಗುಜರಿ** (ಕ್ರಿ). ಹಿಡಿತ ತಪ್ಪು; ತೆಕ್ಕೆ ಸಡಿಲು; ಕುಸಿದು ಬೀಳು: ಜೈನರೆಲ್ಲ ಜಂಗುಜರಿದು ಋಷಿಗಳೆಲ್ಲ ಮಟ್ಟವಾಗೆ (ವೃಷಾರ. ಹ. ೨೬೯-೧೭); ಜಾರೆಯುರು ನಲಿಯಲು . . . ಪೊಣರ್ವಕ್ಕಿಗಳ ಜಂಗು[ಪಾಠಾಂ. ಜಗ್ಗು] ಜರಿಯೆ . . . ತರಣಿ ಪಶ್ಚಿಮಪಯೋರಾಶಿಗೈತಂದನು (ಹಡಕಾ. ೯-೩೭); ಜಂಗುಜರಿದವನಿಜೆಯನೆಡದ ಕರಂಗಳಲಿ ಬಿಡದವಚಿ ಖೇಚರರಂಗದಲಿ ನೆಲ ಕಿಳಿಯಲು (ತೊರರಾ. ೩-೧೦-೧೭). [ ಜಂಗು₄ + ಜರಿ₁ (<ಸರಿ₁) ]

**ಜಂಗುಡಿ** (ನಾ). ಹೆಗಲು; ಭುಜಪ್ರದೇಶ: "ಜಂಗುಡಿಯೆನೆ ಭುಜದೇಶಂ" (ಭಾರನಿ. ೪೭). [ ? ]

**ಜಂಗುಲಿ** 'ಜಂಗುಳಿ' ನೋ.

**ಜಂಗುಳಿ, ಜಂಗುಲಿ** (ನಾ). ೧. ಸಮೂಹ; ಮೊತ್ತ; ಗುಂಪು; ರಾಶಿ: "ಬಂಬಲ್, ತುಱುಗಲ್ . . . ಜಂಗುಳಿ, ದೊಂಮುಳಿ . . . ಗೊಂದಣಿ, (ಉಂದಲ್)—ಈ ೪೦ ಸಮೂಹಂ" (ಕಶಸಾ. ೧೦-೨೨೨); ಸಿಂಗದ ಜಂಗುಳಿ ಯಂತಿರಸುಂಗೊಳೆ ಪೊಱಮಟ್ಟು ಕಾದೆ ವರುಣಕುಮಾರರ್ (ಪಂಪಾಮಾ. ೧೦-೨೦೭); ಸಿಂಗದ ಜಂಗುಳಿಯೊಳಾಂತ ಮಾತಂಗ ಸಂಘಾತದಂತೆಯುಂ (ಚಂದ್ರಪು. ೧೦-೮೭ ವ); ಇತ್ತಲಿದು ಕಲ್ಪಾಂತರುದ್ರನ ಮೊತ್ತ ಕಾಳೋರಗನ ಜಂಗುಳಿ ಮೃತ್ಯುವಿನ ಮೋಹರ ಕೃತಾಂತನ ಥಟ್ಟು (ಕುಮಾ್ವಭೀ. ೨-೧೭); ಪೊಸಬಳ್ಳಿಯ ಜಂಗುಳಿ ಪೊಂಗಳಸದ ಸಂದಣಿಯಲರ್ದಂಬುಜದ ಕದಂಬಮೆ ನಡೆವಂತೆ (ಜಯಕಾ. ೩-೪೦). ೨. ನಾಡಾಡಿಗಳ ಗುಂಪು; ಜನಸಾಮಾನ್ಯರ ಗುಂಪು. 'ಜಂಗುಳಿಜಸ', 'ಜನಜಂಗುಳಿ' ಪರಾ. ೩. ದನದ ಮಂದೆ,— ಹಿಂಡು: ಜಂಗುಳಿಯ ಕಾವ ಗೋವ ಹಲವು ಹಸುವ ನಿವಾಡಿ [ಪಾಠಾಂ. ರಿ]ಸುವಂತೆ ತನು ಭಕ್ತನಾಯಿತ್ತು (ಬಸವ. ೨೮೪); ಜವನ ಕೈಲಿ ಜಂಗುಳಿ ಕಾಯಿಸುವವರು (ಪುರಂದ. ೧-೧೪೩-೧). **ಜಂಗುಲಿ:** ೧. ಮುರಿದುದು ತುಂಬುರಬಲ . . . ಪೆರ್ಬುಲಿಗಂಡು ಬೆದಱಿದ ಮಱಿವುಲ್ಲೆ ಗಳ ಜಂಗುಲಿಯಂತೆ (ತ್ರಿಭುತಿ. ೧೮-೩೦).

**ಜಂಗುಳಿದೇವರು** = ಹಿಂಡುದೇವತೆಗಳು; ಅನೇಕ ದೇವತೆಗಳು: ಜಂಗುಳಿದೇವರನೊಂದಱಿದಿಂಗಳ್ ಕುಳ್ಳಿರ್ದು ಪೂಜಿಸುತ್ತಿರದೆ . . . ಜನನ ಪದಂಗಳನರ್ಚಿಪುದು (ಸಮಷ. ೧-೧೨೭). **ಜಂಗುಳಿಮನ್ನೆಯ ಬೇಂಟೆಕಾಱ** = ಒಂದು ಬಿರುದು: ಆಳಿಂ ಮುಂನಿಱಿವಂ ಶೌರ್ಯ್ಯಮಂ ಮೆಱೆವಂ ಜಂಗುಳಿಮಂನೆಯ ಬೇಂಟೆಕಾಱಂ ಮಾರ್ತಣ್ಡದೇವನಂಕಕಾಱಂ (ಸೌಇಇ. XI-ii, ೧೬೩-೧೦; 1113). [ ದೇ.೫ ತೆಲು. ಜಂಗಿಲಿ. / ಸಂ. ಸಂಕುಲ ]

**ಜಂಗುಳಿಕ** 'ಜಂಗುಳಿಗ' ನೋ.

**ಜಂಗುಳಿಗ, ಜಂಗುಳಿಕ** (ನಾ). ೧. ಹಾವಾಡಿಗ; ಗಾರುಡಿಗ; ವಿಷವೈದ್ಯ: ಜಂಗುಳಿಗಗೇರಿಗಳೊಳಗೆ ರಘಾಡಿಸಿದನು ಶಿಖಾಳಿಗಳ (ತೊರರಾ. ೩-೮-೩೩). **ಜಂಗುಳಿಕ:** ೨. ಐಂದ್ರಜಾಲಿಕ: "ಜಂಗುಳಿಕ—ಜಾಂಗುಲಿಕ = ಐಂದ್ರ ಜಾಲಿಕ, ಗಾರುಡಿಗ" (ತದ್ಭಕೋ. ೧೪). [ <ಸಂ. ಜಾಂಗುಲಿಕ ]

**ಜಂಗುಳಿಗದಿರ್** (ನಾ). ಗುಂಪಾದ ಕಿರಣ: ಅಂಗುಲಿಯ ಮಾಣಿಕ್ಯ ದುಂಗುರಂಗಳೊಳೊಗೆದ ಜಂಗುಳಿಗದಿರ್ಗಿಡಿದ ಕೈದೀವಿಗೆಗಳ ಪೊಳಪಂ ಗೆಲಲು (ಸೌಂದಪು. ೮-೮೩). [ ಜಂಗುಳಿ + ಕದಿರ್₂ ]

**ಜಂಗುಳಿಜಸ** (ನಾ). ಜನಸಾಮಾನ್ಯರಿಂದ ಬಂದ ಯಶಸ್ಸು; ಅಗ್ಗದ ಕೀರ್ತಿ: ಬಜ್ಜರಕ್ಕಿದ್ದಿಲಿನ ಸಾಣೆಯಂ ಪಿಡಿವ ಗಾಂಪಿಗೆ ಜಗುಳ್ವೊಂದು ಜಂಗುಳಿಜಸಕೆ ಬಾಯ್ಬಿಡುವ ನೀರಳ್ಕೆಯೆನ್ನೆಡೆ ಸುಳಿಯದಿರ್ಕೆ (ಶ್ರೀರಾಮಾ. ೫೭೦-೪೯೨). [ ಜಂಗುಳಿ + ಜಸ₁ ]

**ಜಂಗುಳಿಮೋಹಿ** (ನಾ). ನಾಡಾಡಿಗಳನ್ನು ಮೋಹಿಸುವ ವ್ಯಕ್ತಿ: ತಳ ರಡಿಯ ತರಳೆ ಕಿಂಚಿತ್ಕಾಮಿ ಕೋಪಿ ಜಂಗುಳಿಮೋಹಿ ಶೀಘ್ರಗಾಮಿನಿ ರಕ್ತವಸನೆ ಬಾಗಿಲ ದಾಂಟಿ ನಿಂದಿರ್ಪಳಿವಳೆ ಶಂಖಿನಿಯೆಂದು ವಿಟನುಸಿರ್ದನ ವಳಿರವನು (ಚಿಬಪು. ೧೧-೨೪). [ ಜಂಗುಳಿ + ಮೋಹಿ ]

**ಜಂಗುಳಿಸು** (ಕ್ರಿ). ಗುಂಪಾಗಿ ನುಗ್ಗು: ಜಲಧಿಯಲಿ ಜಂಗುಳಿಸಿ ಕುಧರಕೆ ಕುಲಿಶಭೀತಿಯ ಬೀಱ ಕಣೆ ಬಳಿಸಲಿಸಿ ಹರಿದಾಡಿದವು ಸುಭಟರ ಗೋಣ ಗುಱಿಮಾಡಿ (ಕುಮಾ್ವಭೀ. ೪-೧೯). [ ಜಂಗುಳಿ + - ಇಸು₃ ]

**ಜಂಗುಟಿ** (ಕ್ರಿ). = ಜಂಗುಜರಿ: ಮದಸೇವೆಗೆಱಗುವ ಮಧುಕರ ಝಣತ್ಕಾರಮಂ ಮಧುಸಖನ ಧನುಜ್ಯಾರುತಿಯೆಂದು ಜಂಗುಟಿ [ಪಾಠಾಂ. ರಿ]ಯುತಂ (ಶಾಂತೀಶ್ವ. ೧೧-೬೩ ವ). [ ಜಂಗು₄ + ಉಱಿ₁ ]

**ಜಂಗೆ** (ನಾ). ೧. = ಜಂಘೆ: ಜಾನು ಜಂಗೆ[ಪಾಠಾಂ. ಘೆ]ಯಲ್ಲಿ ಹುಟ್ಟಿ ಜಂಗಮವೆನಿಸಿಕೊಳಬಹುದೆ (ಅವಚಂ. ೧೧೪-೪೭೦). ೨. ದಾಪು; ಹೆಜ್ಜೆ. 'ಕುಱಿಜಂಗೆ' ಪರಾ. [ <ಸಂ. ಜಂಘಾ ]

**ಜಂಘಚಾರಣ** (ನಾ). [ಜೈನ] ಎಂಟು ಬಗೆಯ ಚಾರಣ ಶಕ್ತಿಯುಳ್ಳವ ರಲ್ಲಿ ಒಬ್ಬ; ನೂರಾರು ಯೋಜನದವರೆಗೆ ನೆಲಕ್ಕೆ ಕಾಲೂರದೆ ನಡೆ ಯುವವನು; P ಜಲ, ಜಂಘೆ, ಅಗ್ನಿ, ಧೂಮ, ಮೇಘ, ತಂತು, ವಾಣಿ ಮತ್ತು ಶ್ರೇಣಿ ಎಂಬುವು ಎಂಟು ಚಾರಣಗಳು. ಈ ವಿವರ ಗಳಲ್ಲಿ ಫಲ, ಪತ್ರ, ಪುಷ್ಪ ಮತ್ತು ಬೀಜವನ್ನು ಕೆಲವರು ಸೇರಿಸು ತ್ತಾರೆ: ಆತನ ತಂದೆವಿರಪ್ಪ ಶತಬಾಹುಗಳೆಂಬ ಜಂಘಚಾರಣರ್ ಧರ್ಮ ವಾತ್ಸಲ್ಯದಿಂ ಬರ್ಪುದುಂ ದಶಮುಖನಿದಿರೆಟ್ಟು ಭಕ್ತಿಭರದಿಂ ವಂದಿಸಿ (ಪಂಪಾಮಾ. ೧೦-೧೮೧ ವ). [ <ಸಂ. ಜಂಘಾಚಾರಣ ]

**ಜಂಘಾಕರಿಕ** (ನಾ). ೧. ಜೋರಾಗಿ ಓಡಬಲ್ಲವನು; ಚುರುಕು ಕಾಲಿ ನವನು. ೨. ಓಡುವ ಉದ್ಯೋಗದಿಂದ ಜೀವಿಸುವವನು; ದೂತ; ವಾರ್ತಾಹರ: "ಜಂಘಾಕರಿಕಃ, ಜಾಂಘಿಕಃ -೨- ದೂರವಾಗಿ ವೇಗದೊಡನೆ ಹೋಗಿ ಅಲ್ಲಿಯಣ ಸುದ್ದಿಯನ್ನೂ ವಾರ್ತೆಯನ್ನೂ ಬೇಗ ತಿಳಿದು ತಂದು ಹೇಳಿ ಅದರ ಮೆಹನತ್ತಿನಿಂದ ದ್ರವ್ಯವನ್ನು ಪಡೆದು ಜೀವನ ಮಾಡುವವನು" (ಸಿದ್ಧಾಂತಿ. ೨೨೧). [ ಸಂ. ]

**ಜಂಘಾಬಲ** (ನಾ). ಕಾಲುಗಳಲ್ಲಿಯ ಶಕ್ತಿ; ನಡೆಯುವ ಶಕ್ತಿ; ಚಲನ ಶಕ್ತಿ: ಹೆಡ್‌ಮಾಸ್ತರರಿಗೂ ಜಂಘಾಬಲವೇ ಉಡುಗಿಹೋಗಿತ್ತು (ನಟಸಾ. ೧೯೮); ಆ ಘರ್ಜನೆ ಕೇಳಿಯೇ ವೆಂಕಟರಮಣನ ಅರ್ಧ ಜಂಘಾಬಲ ಉಡುಗಿಹೋಯಿತು (ಮೂರುದಾ. ೧೭೭). [ ಸಂ. (ಜಂಘಾ + ಬಲ) ]

**ಜಂಘಾಲ,** ಜಂಘಾಳ (ಗು). ೧. ಓಡುವ ; ವೇಗವಾದ ; ಚುರುಕಾದ. (ನಾ). ೨. ವೇಗದಿಂದ ನಡೆಯಬಲ್ಲವನು; ಚೆನ್ನಾಗಿ ಓಡುವವನು: ಅತಿ ಜಂಘಾಲಂ ಭಯಕಂಪಿತತನು ನಿಜಪತಿಯನಿಂದ್ರನಂ ಕಂಡು ಪದಾನತನೆಂದಂ (ಪಂರಾಮಾ. ೧೧-೧೬೩) ; ಕಡುವುನದ ಕರ್ಣಾದಿಗಳು ಕೈದುಡುಕಿದೊಡೆ ಕೈಗಾಯ್ದು ಧರ್ಮದ ತಡಿಗೆ ಜಾಱ ಜಯಾಧ್ವದಲಿ ಜಂಘಾಲ ರಹಿರೆಂದ (ಕುವ್ಯಾ.ಅ. ೧೫-೩೯). **ಜಂಘಾಳ:** ೧. ಚಂಡಾಜಿ ವಿಕ್ರಾಂತ ಮರ್ತ್ಯನಿಳಾಕ್ರಾಂತಹಯೌಘಮೂರ್ಜಿತಜಯಪ್ರಖ್ಯಾತ ಜಂಘಾಳ ಪತ್ತಿನಿಕಾಯಂ (ಆದಿಪು. ೪-೯೦). ೨. ತಿವಳಿವಿಡಿದುಗ್ರೇಭಂ ಪೋದತ್ತು ಮಾಣದೆ ಪೋಗಿ . . . ವಾರ್ತೆಯನೊಂದೆರಟ್ಟಿವಸದೊಳೆ ತನ್ನಿಂ ನೀಮೆಂದಟ್ಟಿದಂ ಸಮಕಟ್ಟಿ ಕಟ್ಟುವಧಿಗವನೀನಾಥಂ ಜಂಘಾಳಮಂ ಚರಜಾಳಮಂ (ಚಂದ್ರಪು. ೯-೧೦೨) ; ಮನೋವೇಗವನ್ನೂ ಮಿಾರಿ ಮಿಂಚಿ ಸಂಚರಿಸಬಲ್ಲ ಪ್ರಯಾಣಸಾಮರ್ಥ್ಯದ ಕಟ್ಟುರದ ಜಂಘಾಳ–ಆತನಾಗಿರಲೇಬೇಕು (ಬಿಟ್ಟಿಅ. ೨೦೫-೨೩). [ಸಂ.]

**ಜಂಘಾಲಂಘಿತ** (ನಾ). [ನಾಟ್ಯ] ಕುಂಚಿತಪಾದವನ್ನು ಇನ್ನೊಂದು ಕಾಲಿನಿಂದ ದಾಟುವುದು : ದಂಡಪದಮಂಘ್ರಿತಾಡಿತಮಂಡಿತಮೆಂದೆನಿಸಿ ತೋರ್ಪ ಜಂಘಾಲಂಘಿತ ಮಂಡಲಿ ಪಲಾತಕಂಗಳ್ . . . ಕೇಳ ಜಂಘಾವರ್ತಂ (ಲಾಸ್ಯರಂ. ೬-೧೫). [ ಸಂ. (ಜಂಘಾ + ಲಂಘಿತ) ]

**ಜಂಘಾವರ್ತ** (ನಾ). [ನಾಟ್ಯ] ಅಂಗಾಲನ್ನು ಒಳಕ್ಕೆ ತಿರುಗಿಸಿ ಮತ್ತೊಂದು ಮೊಳಕಾಲಿನ ಹಿಂಭಾಗದಲ್ಲಿರಿಸಿ ಹೊರಪಾರ್ಶ್ವದಿಂದ ಮೊಳಕಾಲ ಪಕ್ಕಕ್ಕೆ ತರುವುದು : ದಂಡಪದಮಂಘ್ರಿತಾಡಿತಮಂಡಿತ ಮೆಂದೆನಿಸಿ ತೋರ್ಪ ಜಂಘಾಲಂಘಿತ ಮಂಡಲಿ ಪಲಾತಕಂಗಳ್ . . . ಕೇಳ ಜಂಘಾವರ್ತಂ (ಲಾಸ್ಯರಂ. ೬-೧೫). [ ಸಂ. (ಜಂಘಾ + ಆವರ್ತ) ]

**ಜಂಘಾಳ** 'ಜಂಘಾಲ' ನೋ.

**ಜಂಘಾಳತನ** (ನಾ). ಓಡಿಹೋಗುವಿಕೆ ; ಪಲಾಯನಪಟುತ್ವ : ಜಾಳ ಜಱದು ಜಡಾತ್ಮರಿಗೆ ಜಂಘಾಳತನವನು ಮೆಱದು . . . ಚೂಣಿಯ ಚರರ ಚಪ್ಪರಿಸಿ ಆಳುತನದಲಿ ಬೆರೆವ ನಿನಗವ ಸೋಲಲಱಯನು (ಕುವ್ಯಾ.ಕ. ೧೬-೩೦). [ ಜಂಘಾಳ ( = ಜಂಘಾಲ) + – ತನ ]

**ಜಂಘಾಳಿ** (ನಾ). (?) : ಘೋಳಿಡುವ ಹಾಹಾರವದ ಜಂಘಾಳಿ ಮುಸುಗೆ ದಿಗಂತರವ (ಅನಂರಾ. ೪-೦-೬೫).

[ P ಇದು 'ಜಂಗುಳಿ' ಯ ಅಪಲಿಖಿತವಿರಬಹುದು ]

**ಜಂಘೆ** (ನಾ). ೧. ಕೆಳದೊಡೆ; ಕಿರುದೊಡೆ : "ಕಿಱುದೊಡೆ ಪ್ರಸೃತಮಾ ಜಂಘೆಯಕ್ಕು" (ಮಂಗರಾ. ೯೮-೧೮); ಪರಿವೃತ್ತ ಮನೋಹರ ಜಂಘೆ ಹಸ್ತಿ ಹಸ್ತವನಿಳಿಸುತ್ತಮಿರ್ಪ ತೊಡೆಗಳ್ (ಲೋಕೋಪ. ೧೧-೩) ; ರುದ್ರ ಮುಖದಲ್ಲಿ ವಿಷ್ಣು ಭುಜದಲ್ಲಿ ಜಂಘೆಯಲ್ಲಿ ಅಜ ಜನನವು (ಬಸವ. ೫೩೪). ೨. ಮಿಾನಕಂಡ; ಕಣಕಾಲು. [ ಸಂ. ಜಂಘಾ ]

**ಜಂಚಾಲು** 'ಜಂಜಾಲು' ನೋ.

**ಜಂಜಡ,** ಜಂಜಾಟ, ಜಂಜಾಲ, ಜಂಜಾಳ, ಜೊಂಜಾಟ, ಝುಂಝಾಟ (ನಾ). ೧. ತೊಂದರೆ ; ಕ್ಲೇಶ ; ಕಷ್ಟ : ಎನ್ನ ಜೀವದ ಜಂಜಡವ ಬಿಡಿಸಯ್ಯ (ಮಹಾದೇ. ಬ. ೧೯-೩೯) ; ಹೋಮದ ಜಪದ ಜಂಜಡದೊಳಗೆ ಸಿಲುಕಿ ಜನಾರ್ದನನ ಮಱವ ಅಪಸದರು ನಾವ್ (ಕುವ್ಯಾ.ಅ. ೦೪-೧೫). ೨. ತೊಡಕು; ಸಿಕ್ಕು: ಪ್ರೀತಿವಿರಹಿತ ದುಃಖ ಸುಖದ ಜಂಜಡವಿಲ್ಲದಾ ತಪೋವನದೊಳಗೆ ಋಷಿವಧುಗಳೊಡನೆ ವೈದೇಹಿ ಪದುಳದೊಳಿರ್ದಳು (ಜೈಮಿಭಾ. ೧೯-೪೩). **ಜಂಜಾಟ:** ೧. ನೀನೆನೊರ್ವನು ಹಲಬರ ಹೋರಾಟ ಜ್ಞಾನೋತ್ತರ ಮಾರ್ಗಕ್ಕೆ ಜಂಜಾಟ (ಅವಧೂ. ೧೧). ೨. ಕೊರಳಲ್ಲಿ ವಿಶೇಷಾಭರಣಗಳ ಜಂಜಾಟ ಕಟ್ಟಿಕೊಂಡಿರಲಿಲ್ಲ (ನೂರಜ. ೨೮). **ಜಂಜಾಲ:** ೧. ಈಗ ಈ ಒಣ ಜಂಜಾಲವಿಲ್ಲ (ಕುರಿಹಿಂ. ೧೧೫). **ಜಂಜಾಳ:** ೨. ದೇವಬಲಿ–ಯಜ್ಞಕರ್ಮ ಮುಂತಾದ ಧಾರ್ಮಿಕ ಜಂಜಾಳವು ಅಂದು ಅತ್ಯಂತ ಅವಶ್ಯವಿತ್ತು (ಮಾವಾದ. ೬೩). **ಜೊಂಜಾಟ:** ೧. ಈ ಜೊಂಜಾಟದಲ್ಲಿ ನಿಮ್ಮ ಅಭ್ಯಾಸಕ್ಕೆ ತೊಂದರೆಯಾಗಬಾರದು (ಮುತ್ತ್ಯದ. ೬೧); ಅದೆಲ್ಲ ಜೊಂಜಾಟ ನಿನಗಿಲ್ಲ (ಷೋಡಶಿ. ೧೬). **ಝುಂಝಾಟ:** ೧. ಈ ಸಂಸಾರದ ಝುಂಝಾಟವೇ ನನಗೆ ಹಿಡಿಸುವುದಿಲ್ಲ ! (ಗಂಸಮ. ೨೦೦).

[ ←ಮರಾ. ಜಂಜಾಲ್ ; ಹಿಂ. ಝುಂಝಟ್./ಸಂ. ಜಂಜ ]

**ಜಂಜಣ** (ನಾ). ಒಂದು ಅನುಕರಣ ಶಬ್ದ. 'ಜಂಜಣಿಸು' ಪರಾ.

**ಜಂಜಣಿಸು** (ಕ್ರಿ). ಜಂಜಣ ಎಂದು ಶಬ್ದ ಮಾಡು : (೬).

[ ಜಂಜಣ + – ಇಸು$_3$ ]

**ಜಂಜರ$_1$,** ಜಂಜರಿ, ಜಂಜುರಿ, ಜಿಂಜಿರಿ (ನಾ). ೧. ಸಂಕೋಲೆ ; ಬೇಡಿ ; ಶೃಂಖಲೆ : ಆಶೆ ಪಾಶಗಳೆಂಬ ಹಲವು ಜಂಜರಗಳ ನಾನೊಲ್ಲೆ (ಕನಕ. ೨೧೧-೫). **ಜಂಜರಿ:** ೧. ಕೋಳ ಜಂಜರಿ[ಪಾಠಾಂ. ಜಿಂಜಿರಿ]ಸಂಕೋಲೆಯು ಸೆಱನಿಮ್ಮ ಆಳುವ ದೊರೆಗಳೆಂಬವರ ಕಾಲು ಕೈಯಿಗೆ ಹವಣಾಗಲಾಪವೆ (ಅಮುಸಾಂ. ೨-೪೮). **ಜಂಜುರಿ:** ೧. ಎನ್ನ ಧನ ಎಂಬವಂಗೆ ರುದ್ರನಿಕ್ಕಿದ ಆಸೆ ರೋಷ ಜಂಜುರಿ [ಪಾಠಾಂ. ಜಂಜರಿ, ಜಿಂಜಿಱ] ಹೊಡಿತ್ತು (ಚನ್ನವ. ಕ. ೨೪೩-೫೩೦). **ಜಿಂಜಿರಿ:** ೧. ಸೊಕ್ಕಾನೆಗೆ ಜಿಂಜಿರಿಗಳ ಹೊಡಿಸುವಾ ಸಂಜೆಯ ಕೂಳನಿಕ್ಕಿಸುವ ಜೋದರ (ಶ್ರೀಪಾಲ. ೧೩-೧೦೯); ಕಡಿಯಾಣವನು ಸೂತ್ರ ಗೋಲುಗಳಿಂದಿಕ್ಕಿ ಕಡಿಯಲವರು ಜಂಜರಿಯ ಕಿಡಿ ಸೂಸೆ (ನಾಗಕು. ೮-೫). ೨. ಸಿಕ್ಕು ; ತೊಡಕು ; ಬಂಧನ : ಹಾಳೂರಿನೊಳಗೊಬ್ಬ ಕೋಳ ಜಿಂಜಿರಿಯೊಳು ಕಾಲು ಮೊದಲು ಸಿಕ್ಕಿದಂತೆ (ಅಮುಸಾಂ. ೪-೧೫೫).

[ ←ಪಾರ. ಜಂಜೀರ್ ; ಹಿಂ. ಜಂಜರ್, ಜಂಜೀರ್ ]

**ಜಂಜರ$_2$,** ಜಂಜರು (ಗು). ಸಾಧಾರಣವಾದ ; ಸಾಮಾನ್ಯವಾದ ; ಕ್ರಮವಾದ : (೬). **ಜಂಜರು:** 'ಜಂಜರುನಂಬರು' ಪರಾ.

[ ←ಪಾರ. ಜಂಜೀರಾ ]

**ಜಂಜರಬಂದಿ** (ನಾ). ವಿಷಯಗಳನ್ನು ವಿಭಾಗಿಸದೆ, ಸಾಧಾರಣವಾಗಿ ಒಂದಾದ ಮೇಲೊಂದರಂತೆ ಜೋಡಿಸಿ ಬರೆದ ಕ್ರಮ ; ಸಾಧಾರಣವಾದ ಅನುಪೂರ್ವಿಯಲ್ಲಿ ಬರೆದುದು: (೬). [←ಪಾರ.ಜಂಜೀರಾಬಂದೀ]

**ಜಂಜರಿ** 'ಜಂಜರ$_1$'ನೋ.

**ಜಂಜರು** 'ಜಂಜರ$_2$' ನೋ.

**ಜಂಜರುನಂಬರು** (ನಾ). ಕ್ರಮವಾಗಿ ಬರುವ ಅಂಕಿ ; ಕ್ರಮಸಂಖ್ಯೆ : ಬಾರಾ ನಮೂನೆ ಲೆಕ್ಕಗಳನ್ನೆಲ್ಲ ಅವರು ಬರದದ್ದೇ ಇಲ್ಲ. ಎತ್ತಿಕೊಳ್ಳುತ್ತ ನೋಡಿದರೆ ಜಂಜರುನಂಬರನ್ನೇ ಸರಿಯಾಗಿ ಹಾಕುತ್ತಿರಲಿಲ್ಲ (ನನ್ನೂರು. ೧೫೨). [ ಜಂಜರು(<ಜಂಜರ$_2$) + ನಂಬರು ]

**ಜಂಜಾಟ** 'ಜಂಜಡ' ನೋ.

**ಜಂಜಾಲ** 'ಜಂಜಡ' ನೋ.

**ಜಂಜಾಲು,** ಜಂಚಾಲು (ನಾ). ತಿರಂಗಣಿಯ ಮೇಲೆ ತಿರುಗಿಸಲು ಅನುಕೂಲವಾದ ಒಂದು ಬಗೆಯ ಉದ್ದವಾದ ನಳಿಕೆಯುಳ್ಳ ದೊಡ್ಡ ಫಿರಂಗಿ : ಆ ಸಮಯದಲ್ಲಿ ಅವನ ದಂಡನ್ನು ಶ್ರೀರಂಗಪಟ್ಟಣದ ಕೋಟೆ ಮೇಲಿನಿಂದ ಕೋವಿ ಫಿರಂಗಿಗುಂಡು ಜಂಜಾಲು ತುಪಾಕಿ ಮಕರಡಿಬ್ಬಿ ಜಬರಜಂಗಿ ಬಾಣ ಮುಂತಾದವುಗಳಿಂದ ಹೊಡೆಯುತ್ತಲಿದ್ದರು (ಹಾಮವಂ. ೧೫೦); ಕೋಟೆಯ ಮೇಲಿನಿಂದ ಕೋವಿ, ಫಿರಂಗಿ . . . ಜಂಜಾಲು, ತುಪಾಕಿ . . . ಮುಂತಾದುವುಗಳಿಂದ ಮೈಸೂರಿನ ಸೈನಿಕರು ಹೊಡೆಯುತ್ತಿರಲು (ಒಡಕ. ೫೩). **ಜಂಚಾಲು:** ಜಂಚಾಲುಗಳು ಬಚ್ಚುಗಳು ಜಬರುಜಂಗಿಗಳು ಮಕರದಿಬ್ಬಿ ಮೊದಲಾದ ಯಂತ್ರವಿಶೇಷಗಳು (ಕೃಪಾಅ. ೧೬೪).

[ ← ಹಿಂ. ಜಂಜಾಲ್ ]

**ಜಂಜಾಳ** 'ಜಂಜಡ' ನೋ.

**ಜಂಜಿರ** (ನಾ). = ಜಂಝಾನಿಲ ೨ : ಜಂಜಿರ ಮಳೆ ಶೀತವಾಯು ಸಿಡಿಲು ಮಿಂಚು . . . ಮಂಜು ಮುಸುಕಿ (ಶಾಂತೀಶ. ೪-೮೫). [ ? ]

**ಜಂಜಾ** (ನಾ). ಬೀಸುವ ಗಾಳಿಯ ಅಥವಾ ಬೀಳುವ ಮಳೆಯ ಶಬ್ದ : ಝಕಾರಕ್ಕೆ ಜಕಾರಂ . . . ಝಂಝಾ–ಜಂಜಾ, ಝಂಪ–ಜಂಪ (ಶಮದ. ೨೫೫ ಪ್ರಯೋ). [ <ಸಂ. ಝಂಝಾ ]

**ಜಂಜುರಿ** 'ಜಂಜರ₁' ನೋ.

**ಜಂಜೂರಿ** (ನಾ). ಗೊಂಡೆ ; ಕಂಚ್ಚು (?) : ಕೆಂದ ಬಣ್ಣದ ಬಸವ ಮುಂದ್ಯಾಗ ಬಂದರ ಜಂಜೂರಿಬಾಲ ಮ್ಯಾಲೆತ್ತಿ ನಂ ಬಸವಗ ಕಂದವ್ವ ತಾಯಿ ಕೈಮುಗಿದು (ಲೋಕಗೀ. ೧೯೭). 'ಜಂಡೆ₂' ಪರಾ. [ ? ]

**ಜಂಝಪೂಗ** (ನಾ). ಜಪ ಮಾಡುವವನು; ಭಕ್ತ; ಉಪಾಸಕ; ಮುನಿ: ಸಾಲ ಕುಟಿದಟಿಹಿಗಳ ಕರ್ಮದ ಕೂಲಿಗರ ಜಡ ಜಂಝಪೂಗರ ಜಾಲ ಸಿರಿಯಸುಮಿಷರ ಪುರಿ ಪಶವಾಯ್ತು ನಿನಗೆಂದ (ಕುವ್ಯಾಆ. ೭-೧೫). [ <ಸಂ. ಜಂಜಪೂಕ ]

**ಜಂಝರ** (ನಾ). ಶಿಥಿಲನಾದವನು ; ಜರ್ಜರನಾದವನು : ಪಂಜರದರ ಗಿಳಿಯಾ ಮಂಜೀರನಾ ಕಯ್ಯಾ ಭಂಜನಿಗಾದಂತೆ ಜಂಝರ ನಾನಾದೆ (ಪೋಕ್ಷದೀ. ೧೨೦-೨). [ ℗ ಇದು 'ಜರ್ಜರದ' ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು]

**ಜಂಝಾಡಿ** (ನಾ). ಮೇಲಂಗಿ (?) : ತುರುಕರ ಹುಡುಗನಿಗೆ ತುದಿಗಾಲು ಪಾಪಾಸು ಹರಕಂಗಿ ಮೇಲೆ ಜಂಝಾಡಿ ಹಾಕ್ಕೊಂಡು ಹರಸ್ಯಾಡುತಾನೆ ಹುಡುಗೀರ (ಹಳ್ಳಿಯ. ೪೫). [ ? ]

**ಜಂಝಾನಿಲ, ಜಂಝಾನಿಳ** (ನಾ). ೧. ಮಳೆಹನಿಯೊಡಗೂಡಿದ ಗಾಳಿ: ಕೈವಲ್ಯಾಂಗನಾಲೋಲ ಕಮನೀಯಗುಣಸದನ ಸಂವಿತ್ಸದಾಪಾನ ವದನಾಭ್ರಜಂಝಾನಿಲ (ಜಕೋ ೭ ಪು. ೦-೨). ೨. ಬಿರುಗಾಳಿ : ಯಿಂದು ನಿನ್ನೊಡನಿಹುದೆ ಸಾಕು . . . ಮನ್ಮಥನೆನ್ನಾ ಕೊಂದು ನೆಟಿ ಸುಟ್ಟು ಹುಡಿಯಾದ ಭಸಿತವನೂ ಜಂಝಾನಿಲನೊಳೆತ್ತಿಬಿಡು ಗಂಧವಾಹನ ಕೂಡಿ ಬಯಲ ಭಸ್ಮಾಂಗಕ್ಕೆ (ಗುಭಜ. ೨-೧೫). **ಜಂಝಾನಿಳ :** ೧. ಧಾರಾಳಿಗಳ್ ಸೂಸುವಿನಂ ತಳ್ಪೊಯ್ವ ಜಂಝಾನಿಳಂ . . . ಚೆಲ್ವಾದುದು (ಜಗವಿ. ೪-೨೭). ೨. ಜಂಝಾನಿಳನಂತೆ ದೈತ್ಯಪಟ್ಟಣ ಪೊಕ್ಕು ಕಂಜಮುಖಿ ಗೋಸುಗ ಸಂಚರಿಸಿದ ಚರಣ (ವಿದಾಕ್ಕ. ೨೭-೨) : ಜಂಝಾನಿಳನಿಂ ತಿಟ್ಟಿಂದು ಬಾನೊಳ್ ತಿರುಗಿದಂ (ವಸ್ತುವಂ. ೯-೭೦). [ <ಸಂ. ಝಂಝಾನಿಲ ]

**ಜಂಝಾನಿಳ** 'ಜಂಝಾನಿಲ' ನೋ.

**ಜಂಝಾಪ್ರಭಂಜನ** (ನಾ). = ಜಂಝಾನಿಲ ೨: ಬರ್ಪ ರಿಪುಬಲಬಲಾಹಕ ಪ್ರಬಲಜಂಝಾಪ್ರಭಂಜನನೇ ಕಂಡು (ರಾಜಶೇ. ೬-೮೧ ವ). [ <ಸಂ. ಝಂಝಾಪ್ರಭಂಜನ ]

**ಜಂಝಾಮಾರುತ** (ನಾ). = ಜಂಝಾನಿಲ ೨: ಅಂಥ ಸಂಗೀತದ ಜಂಝಾಮಾರುತದಲ್ಲಿ ಭಾವಕ್ಕೂ ರಸಕ್ಕೂ ಭ್ರಾಂತಿಪಟ್ಟು ಬಂದ ರಸಿಕರಿಗೆ ಬೇಸರವಲ್ಲದೆ ಇನ್ನೇನು ಬಂದೀತು ? (ಗಾನಕ. ೨೫). [ <ಸಂ. ಝಂಝಾಮಾರುತ ]

**ಜಂಝಾರ** 'ಜುಜ್ಝಾರ' ನೋ.

**ಜಂಝಾವಾತ** (ನಾ). = ಜಂಝಾನಿಲ ೨: ಆತನ ಕುವರ . . . ಈತನಾರಾತಿಜೀಮೂತ ಪ್ರಹರ ಜಂಝಾರಾ [ ವಾ ] ತಭಿನವಭೀಮರಾಜಾ (ಭೈರವೇ. ೦-೨೪೭);ಲಕ್ಷ್ಮೀಶನ ನಾದಧಾರೆ ಭಾವತೀವ್ರತೆಯ ಜಂಝಾವಾತವನ್ನು ಶೀನಪ್ಪನ ಮನಸ್ಸಿನಲ್ಲಿ ಸೃಷ್ಟಿಸಿತ್ತು (ಅನಾಥ. ೧೦). [ <ಸಂ. ಝಂಝಾವಾತ ]

**ಜಂಟಿ** (ನಾ). ೧. ಸೇರುವಿಕೆ; ಒಟ್ಟುಗೂಡುವಿಕೆ : ಕೆಂಗರಿಯ ಕೋಲ್ಗಳಂ ಜಂಟನಿಂ[ ಯಿಂ ] ದೈನೂರು ಬಿಲ್ಗಳಿಂ ತೂರಲಂದಾಗಸಂ ತೂಗಿತೊಡನೆ (ಪರಶು. ೧೦-೯): ಉಂಟು ಒಬ್ಬೊಬ್ಬರಿಗೆ ಬೆನ್ನಲಿ ಎಂಟು ಕೋಟಿ ಪ್ರಮಥರು ಟೆಂಟಣಿಸಿ ನಿಂದಿಹರು ಗಣಸಭೆ ಜಂಟಿಯಾಗಿ (ಶರಲೀ. ४೧-೨). ೨. ಒಂದು ವಸ್ತುವು ಮತ್ತೊಂದು ವಸ್ತುವಿಗೆ ಸೇರ್ಪಡೆಯಾಗಿರುವಿಕೆ ; ಜೋಡಣೆ; ಜೊತೆ; ಜೋಡಿ: ತಂಟಿ ನಂಟನು ಸಲ್ಲ ಒಂಟಿ ಪಯಣವು ಸಲ್ಲ ಜಂಟಿಯು ಸಾಲವೆ ಸಲ್ಲ (ಇಂಚಾಪ. ೧೭೦-४೫).

ಜಂಟಿದೇವರ್ = ಅವಳಿಜವಳಿ ದೇವತೆಗಳು; ಅಶ್ವಿನೀದೇವತೆಗಳು: ಜಂಟಿದೇವರ್ಗೆ ಎಂದು ಸುರರೊಳ್ ಪಂಕ್ತಿಗೊಟ್ಟನೇಕೆ ? (ರಾಮಾಶ್ವ. ೬४-೧४). ಜಂಟಿಹಾಕು = ಜೊತೆಗೆ ಸೇರಿಸು ; ಜೋಡಿಸು : (ಕ). [ ದೇ.॥ ತೆಲು. ಜಂಟ, ಜಮಟ ]

**ಜಂಟಿಕಲ್ಲು** (ನಾ). ಎಲ್ಲೆಯ ಗುರುತನ್ನು ಅಥವಾ ಸೀಮಾರೇಖೆಯನ್ನು ಸೂಚಿಸುವುದಕ್ಕಾಗಿ ಸಾಲಾಗಿ ಇಟ್ಟ ಮೂರು ಕಲ್ಲುಗಳು (ಕೈಸ್ಗೆ. II, ೫೫೦). 'ಮುಗ್ಗುಡ್ಡೆ' ಪರಾ. [ ಜಂಟಿ + ಕಲ್ಲು(<ಕಲ್₃) ]

**ಜಂಟಿಕಾರ್ಯದರ್ಶಿ** (ನಾ). ಕಾರ್ಯದರ್ಶಿಯ ಜೊತೆ ವ್ಯವಹರಿಸುವ ಮತ್ತೊಬ್ಬ ಕಾರ್ಯದರ್ಶಿ : ಜಂಟಿಕಾರ್ಯದರ್ಶಿಗಳು ವಂದನಾರ್ಪಣೆ ಮಾಡಿದರು (ರೂಢಿ). [ ಜಂಟಿ + ಕಾರ್ಯದರ್ಶಿ ]

**ಜಂಟಿಗಾರ**(ನಾ). ೧. ಜೊತೆಗಾರ. ೨. ಪಾಲುಗಾರ ; ಪಾಲುದಾರ : (ಕ). [ ಜಂಟಿ + – ಗಾರ(< – ಕಾಱ) ]

**ಜಂಟಿಚೌರಿ** (ನಾ). ಜೋಡಿಚವರಿ ; ಚಾಮರಗಳ ಜೊತೆ : ಕಾಲ ಗಗ್ಗರಗೆಜ್ಜೆಯ, ನೊಸಲ ಜಂಟಿಚೌರಿಯ . . . ಕಾರೊಡಲ ಪೇರಾನೆಗಳ (ರಾಮಾಶ್ವ. ೯४-೭). [ ಜಂಟಿ + ಚೌರಿ₁ (<ಚವರಿ) ]

**ಜಂಟಿಪಟ್ಟೆ** (ನಾ). ಇಬ್ಬರ ಹೆಸರಿನಲ್ಲಿ ಒಟ್ಟಿಗೆ ಇರುವ ಹಕ್ಕುದಾರಿಕೆಯ ಪತ್ರ : (ಕ). [ ಜಂಟಿ + ಪಟ್ಟೆ₃ ]

**ಜಂಟಿಪಟ್ಟೆದಾರ** (ನಾ). ಜಮೀನಿನಲ್ಲಿ ಜೊತೆ ಹಕ್ಕುದಾರ : ಜಾಯಿಂಟ್ ಪಟ್ಟಾದಾರನು . . . ತನ್ನ ಜಂಟಿಪಟ್ಟೆದಾರನಿಂದ ಹಣ ವಸೂಲ್ಮಾಡ ಬೇಕೆಂದು . . . ನೋಟಿಸು ಕೊಟ್ಟಲ್ಲಿ (ಗ್ರಾಮಾಕ. ೭೩). [ ಜಂಟಿಪಟ್ಟೆ + – ದಾರ₄ ]

**ಜಂಟಿವರಸೆ** (ನಾ). [ಸಂಗೀತ] ಸಂಗೀತಶಾಸ್ತ್ರದ ಶಿಕ್ಷಣದಲ್ಲಿ ಹೇಳಿ ಕೊಡುವ ಜೋಡಿ ಸ್ವರಗಳ ಒಂದು ಕ್ರಮ ; ಜೊತೆಜೊತೆಯಾಗಿ ಬರುವ ಸ್ವರಗಳ ವರಸೆ : ಸ್ವರಾವಳಿ, ಜಂಟಿವರಸೆ, ಅಲಂಕಾರಗಳು ಮತ್ತು ಗೀತೆಗಳು–ಅವು ಸಂಗೀತ ಶಿಕ್ಷಣತ್ರಯದ ಪ್ರಥಮಪಾಠಗಳಷ್ಟೆ (ಹೇಮಕೂ. ೧೦४). [ ಜಂಟಿ + ವರಸೆ (<ವರಿಸೆ) ]

**ಜಂಟಿಸು** (ಕ್ರಿ). ಸೇರಿಸು ; ಹೊಂದಿಸು ; ಮೇಳಿಸು : ಭೇರಿಯಾರ್ಭಟಿಸೆ ಕಹಳೆಗಳು ಜಂಟಿಸಿಯೆ ಮೊರೆವುತ್ತ . . . ಆಕಾಶ ತುಂಬಿ ಪೊರಸೂಸು ಪೋಲ್ಮೆರೆಯಲೊಡನೆ (ಜೋರಬ. ४-೨೯): ಜಂಟಿಸಿದ ಹಲವು ಕಂಟಕಗಳೆದು ಮುಕ್ತಿಪಥವಂಟಿಸಿದ (ಜಿನಮು. ४೫-४೫) : ಜಂಟಿಸಿ ವೀಣೆ ಪಿಟೀಲನು ನುಡಿಸುತ ಎಂಟುಜನ ಹುಡುಗಿಯರು (ಬಿನ್ನಹ. ೩೨). [ಜಂಟಿ+ – ಇಸು₁]

**ಜಂಡರಿಗೆ** (ನಾ). ಒಂದು ಬಗೆಯ ಸಸ್ಯ : ಕಾಡುಅಡಿಕೆ, ಜಂಡರಿಗೆ (ವೃಜಿಗಿ. ೬೨-೧೨४೭). [ ? ]

**ಜಂಡು** 'ಜೊಂಡು₂' ನೋ.

**ಜಂಡೆ₁** 'ಝಾಂಡ' ನೋ.

**ಜಂಡೆ₂** (ನಾ). ಗೊಂಡೆ ; ಕುಚ್ಚು : ಕೋಡ ಚಿಮ್ಮಾಡುತ ಕೊಳಗ ನಲ್ಲಾಡುತ ಜಂಡೇದ ಬಾಲ ಎಳವುತಾ ಬರುವಾಗ ರಂಬೇರಾರುತಿ ಬೆಳ್ಗ್ಯಾರೋ (ಕಜಾಗೀ. ೫೨) ; ಕಾಲು ಕಂಕಣ ರುಳಿ ಗೆಜ್ಜೆ ಜಂಡೆಗಳು, ತೋಳಿಗೊಂಕಿ ಬಾಜುಬಂದು ಗೊಂಡೆಗಳು (ಕರ್ನಾಕ. ೨೪೭). [ ? ]

**ಜಂತ$_1$** (ನಾ). ೧. ಹಲ್ಲು ; ದಂತ : "ದಂತ – ಜಂತ" (ಶಮದ. ೨೬೭ ಪ್ರಯೋ) ; "ಪಲ್ಲು ಜಂತಮೆನೆ ರದನಮಕ್ಕುಂ" (ಶಬ್ದಮಂ. ೬೧). ೨. ಆನೆಯ ಕೋರೆ ; ಹಸ್ತಿದಂತ : ಕೋಪಾನಳನಿಂ ಕಣ್ಗಾಣದೆ ಕಲ ದೊಳಿರ್ದ ಜಂತದ ಪಾವುಗೆಯಿಂದಮಿಟ್ಟು(ಧರ್ಮಾಮೃ. ೨-೧೨೦) ; ಜಂತದಿಂ ಕಡೆದು ಕಂಡರಿಸಿದ ಪುತ್ರಬಿಯಂತಿರ್ಪಳ್ (ಕಬ್ಬಿಗಕಾ. ೩೦೫) ; ಜಂತದ ಚಾವಡಿಯೊಳಗೆ ಸಂತತ ಸಿಂಹವಿಷ್ಟರದಲ್ಲಿ ಲಕ್ಷ್ಮಿಯ ಕಾಂತನೊಲಿದು ಕುಳಿತಿರ್ದ (ವೃಷಹತ. ೩-೬೦) ; ಪೀಲಿಯುಡೆಯ ಜಂತದೋಲೆಯ ಪುಲಿ ಯುಗುರ ಬಾವುಲಿಯ . . . ಪುಳಿಂದಿಯರ್ (ರಾಮಾಶ್ವ. ೮೩-೨೭).

[ <ಸಂ. ದಂತ ]

**ಜಂತ$_2$** (ನಾ). ಅಗಲ ; ಪನ್ನ : ಹಂತವಿಲ್ಲದ ಭಾವಿ, ಜಂತವಿಲ್ಲದ ಸೀರೆ, ಸಂತೋಷವಿಲ್ಲದ ಸತಿ ಪುರುಷ್ಯ ಕೈಹಿಡಿದು ಚಿಂತೆ ಮಾಡಿದರೆ ಫಲವೇನು ? (ಹಳ್ಳಿಪಾ. ೬೬). [ ? ]

**ಜಂತಗುಂಟೆ** (ನಾ). ವ್ಯವಸಾಯದ ಒಂದು ಉಪಕರಣ ; ಹಲುಬೆ ; ಸೆಳ್ಳು, ಜಂತಗುಂಟೆ, ರಾಘೋಲು ಮೊದಲಾದ ಉಪಕರಣಗಳನ್ನು ಹೊತ್ತು (ಕನ್ನಜಾ. ೧೩೫). [ ಜಂತ$_1$ + ಕುಂಟೆ$_1$ ]

**ಜಂತಣಿಗೆ** 'ಜಂತವಣಿಗೆ' ನೋ.

**ಜಂತರ** 'ಜಂತ್ರ' ನೋ.

**ಜಂತಲ, ಜಂತಾಲ, ಜಂತಾಳ** (ನಾ). ಒಂದು ಬಗೆಯ ಮರ : ಮರ ಗಳು : – ಹೆಸವ, ಹೆಬ್ಬಲಸು . . . ಜಂತಲ, ಸಾಂಬ್ರಾಣಿ (ನಮ್ಮನು. ೨೩೬). **ಜಂತಾಲ** : ಸಪ್ತಪರ್ಣ, ಜಂತಾಲಮರ . . . ಬಂತಲೆ (ವೃಜಿಗಿ. ೫-೮೩). **ಜಂತಾಳ** : ಕಣಗಿಲೆ (ಕಾಶಿ, ದೇವ) ಜಂತಾಳ, ನಂದೀ ಬಟ್ಟಲು . . . ಜಂಡು, ಬಿದಿರು (ನಮ್ಮನು. ೨೩೮). [ ? ]

**ಜಂತವಣಿಗೆ, ಜಂತಣಿಗೆ**(ನಾ). ಹಸ್ತಿದಂತದ ಬಾಚಣಿಗೆ: ಚದುರೆಯೊರ್ವಳ್ ನವಿರನೊಳ್ಗಿಯ್ಯೆ ಜಂತವಣಿಗೆಯಿನೆತ್ತಿ ಬಾಚಿ ಪೊಜಿಟಳ್ (ಶ್ರೀರಾಮ. ೪-೧೦). **ಜಂತಣಿಗೆ** : ಜಂತಣಿಗೆಯೊಂದನ್ನು ತೆಗೆದುಕೊಂಡು ತಲೆಯನ್ನು ಬಾಚಿಕೊಂಡಳು (ರೂಢಿ). [ ಜಂತ$_1$ + ಪಣಿಗೆ ]

**ಜಂತಾಲ** 'ಜಂತಲ' ನೋ.

**ಜಂತಾಳ** 'ಜಂತಲ' ನೋ.

**ಜಂತಿ** 'ಜಂತೆ' ನೋ.

**ಜಂತಿಗ**(ನಾ). ಹಸ್ತಿದಂತದ ವ್ಯಾಪಾರಿ: ಜಂತಿಗರ್ [ಪಾಠಾಂ. ದಂತವಳೆ ಯರ್] ಸಂತತಿಗೆಟ್ಟರಂತಟಲೆ . . . ಚೊಲ್ಲಿಯರ್ ಗಲ್ಲೆಯುಂಬಲಿಯಂತೆ ನೆಲನಂ ಪತ್ತೆ ಸರ್ವಾಂಗದ್ರೋಹರಂ ಕರ್ವರ್ಂತೆ ಸರ್ವಸ್ವಾಪಹರಣಂ ಮಾಡಿ (ಧರ್ಮಾಮೃ. ೨-೬೯). [ ಜಂತ$_1$ + – ಇಗ ]

**ಜಂತು** (ನಾ). ೧. ಜೀವವನ್ನುಳ್ಳುದು ; ಪ್ರಾಣಿ ; ಜೀವಿ : "ಪ್ರಾಣಿ ಜಂತು ದೇಹಿಯೆನಿಕ್ಕುಂ" (ವಸ್ತುಕೋ. ೧೮-೩). ೨. ಸಣ್ಣ ಕ್ರಿಮಿ : ಅಮಿಬಾ ಎಂಬುದು ಒಂದೇ ಕೋಷ್ಠದಿಂದ ಕೂಡಿದ ಆದಿ ಜಂತು(ಜೀವಾತ್ಮ. ೨೩೩). ೩. ಕರುಳಿನಲ್ಲಿ ಹುಟ್ಟುವ ಒಂದು ಬಗೆಯ ಹುಳು : ಜಂತಿ ನಂತೆ ಬಸಿಱಂ ತಿಂಬರ್ ಪಂದಿಯಂತೆತ್ತುವರ್ (ಧರ್ಮಾಮೃ. ೩-೭೩) ; ಜಂತಿನ ಜನ್ಮಭೂಮಿ ಕ್ರಿಮಿಯ ಗೂಡು . . . ಆದಿವ್ಯಾಧಿಯ ವಾಸ ಇಂತಿದಱೊಳಗೆ ನಿನ್ನ ಕುಲಗೋತ್ರಂಗಳಾವುದು ಹೇಳಾ (ಆದವ. ೧೪೬).

ಜಂತಿನ ಪುಡಿ = ಹೊಟ್ಟೆಯಲ್ಲಿರುವ ಜಂತುಗಳನ್ನು ನಾಶಮಾಡಲು ಸೇವಿಸುವ ಪುಡಿ : ಜಂತು ಆಗಿರಬಹುದು ಅಂದು ಜಂತಿನ ಪುಡಿ ತಗೊಂಡ ನಂತ (ಗಂಗಾಸಾ. ೪). [ ಸಂ. ]

**ಜಂತುಫಲ** (ನಾ). ಒಳಗೆಲ್ಲ ಹುಳು ತುಂಬಿರುವ ಹಣ್ಣುಳ್ಳ ಮರ ; ಅತ್ತಿ, ಉದುಂಬರ: "ಉದುಂಬರಃ, ಜಂತುಫಲಃ, ಯಜ್ಞಾಂಗಃ, ಹೇಮದುಗ್ಧಕಃ–ಳ ಅತ್ತಿಮರದ ಹೆಸರು" (ಸಿದ್ಧಾಂತಿ. ೧೦೨). [ ಸಂ. ]

**ಜಂತುರೋಗ** (ನಾ). ಕರುಳಿನಲ್ಲಿ ಜಂತುಹುಳುಗಳು ಹೆಚ್ಚಿ ಆಗುವ ಕಾಯಿಲೆ : ಚವ್ಯಾದಿಲೇಹ್ಯ . . . ನಿತ್ಯವೂ ಕರ್ಷಪ್ರಮಾಣಂ ಸೇವಿಸಲು ಬಹುದಿವಸದ ಕ್ಷಯರೋಗ . . . ಹೊಟ್ಟೆಯೊಳಿರ್ದ ಜಂತು ರೋಗ, ಜಲೋದರ ಸಹ ಗುಣಮಕ್ಕು (ಸಕವೈ. ೨೫೬).

[ ಜಂತು + ರೋಗ ]

**ಜಂತುಹುಳು**(ನಾ). (ಮನುಷ್ಯರ)ಕರುಳಿನಲ್ಲಿ ಬೆಳೆದು ತೊಂದರೆಕೊಡುವ ಒಂದು ಬಗೆಯ ಹುಳು : ಜಂತುಹುಳು, ಕೊಕ್ಕರೆಕಾಲು . . . ಪಾಸ್ ಬಂಗಲೆ ಖಾಯಿಲೆಗಳೆಲ್ಲಾ ನಮ್ಮ ಮನೇಲೇನೆ! (ತುಟಮಿ. ೨೯) : ನಿಮೆ ಟೊಡಾ . . . ಈ ವರ್ಗಕ್ಕೆ ಜಂತುಹುಳು, ನಾರುಹುಣ್ಣಿನ ಹುಳು . . . ಮುಂತಾದವು ಸೇರುತ್ತವೆ (ಪರಜೀ. ೪೯).

[ ಜಂತು + ಹುಳು$_2$ (<ಪುೞು$_1$) ]

**ಜಂತೆ, ಜಂತಿ**(ನಾ). ಮೇಲ್ಛಾವಣಿಗಳಿಗೆ ಆಧಾರವಾಗಿ ತೊಲೆಗಳ ಮೇಲೆ ಹಾಕುವ ಸಣ್ಣ ಅಡ್ಡಪಟ್ಟಿ; ಹಲಗೆ ಸೇರುವೆಗಾಗಿಯೋ, ತಟ್ಟೆಯಾದ ಮೇಲ್ಛಾವಣಿಗಾಗಿಯೋ ಆಧಾರವಾಗಿ ಹರಡುವ ಪಟ್ಟಿ : ಆಗಳ್ ದ್ರುಪದಂ ಪಚ್ಚೆಯ ನೆಲಗಟ್ಟನೊಳಂ ಪವಳದ ಜಂತೆಯೊಳಂ ಪದ್ಮರಾಗದ ಬೋದಿಗೆಯೊಳಂ . . . ಒಪ್ಪುವ ವಿವಾಹಗೇಹಮಂ ಸಮೆಯಿಸಿ (ಪಂಪಭಾ. ೩-೭೪ ವ) ; ಆ ಲಲಿತಪಚ್ಚೆಗಳ ತೊಲೆ ರನ್ನಬೋದುಗೆಗಳಾ ಪ್ರವಾಳಂ ಗಳಿಂದೆ ಮೇಲೆಸೆವ ಜಂತೆಗಳ್ (ಚಿಬಪು. ೫-೪೮) ; ಬಜ್ಜರದ ಜಂತೆಯಿಂ, ರನ್ನದೊಳ್ಗಂಬದಿಂ . . . ಮದನಗೈಯ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡಮಾಗಿ ರಂಜಿಕುಂ (ರಾಮಾಶ್ವ. ೫೪-೨೦) ; ಉಂಡ ಮನೆ ಜಂತೆ ಎಣಿಸಿದರಂತೆ (ಗಾದೆ). **ಜಂತಿ** : ಉಪ್ಪರು ಕಣ್ಗೆಸೆವ ಪಚ್ಚೆಜಂತಿಯ ಮೇಲೆ . . . ರನ್ನಬುರುಡೆಗಳ್ ಸಾಲ್ಗೊಂಡುವೆಡೆಯೆಡೆಯೊಳು (ಶ್ರೀರಾಮ. ೪-೫೦); ಹಳೆ ಮನೆಯ ಮುರುಕು ಜಂತಿ (ನಡಬಂ. ೭೫-೧೭): ಜಂತಿಯ ಹತ್ತಿರ ಒಂದೆರಡು ಚಿಕ್ಕ ಕಿಡಕಿಗಳಿದ್ದವು (ರಕ್ತಧ್ವ. ೫೭).

[ ದೇ.॥ ತುಳು. ಜಂತೆ, ಜಂತಿ ; ತೆಲು. ದಂತಿಯ, ದಂತೆ ]

**ಜಂತೆತ್ತು** (ಕ್ರಿ). ಕರುಳಿನಲ್ಲಿ ಜಂತುಗಳು ಹೆಚ್ಚಾಗು, –ವೃದ್ಧಿಯಾಗು: ಜಂತೆತ್ತಿದರಂತೋಕರಿಸುತ್ತುಂ (ಧರ್ಮಾಮೃ. ೪-೬೬). [ಜಂತು + ಎತ್ತು$_1$]

**ಜಂತೆವಲಗೆ** (ನಾ). ಜಂತೆಗೆ ಜೋಡಿಸುವ ಹಲಗೆ: ಮಹಾಮನೆಯ ಕಟ್ಟದನಯ್ಯ ಸಂಗನ ಬಸವಣ್ಣನು . . . ಅದಕ್ಕೆ ಕಂಭವೊಂದು ತೊಲೆ ಯಾಱು ಜಂತೆವಲಗೆ ಮುವ್ವತ್ತಾಱು (ಅವಚಂ. ೨೨೨-೦೦೦೮).

[ ಜಂತೆ + ಪಲಗೆ ]

**ಜಂತ್ರ, ಜಂತರ, ಯಂತರ** (ನಾ). ೧. ಯಂತ್ರ ; ಯಾಂತ್ರಿಕರಚನೆ ; ಯಂತ್ರ ಸಹಿತವಾದ ವಸ್ತು : "ಆವರಣೆಯೆನೆ ಜಂತ್ರಮಕ್ಕು" (ಮಂಗರಾ. ೬೧-೨೦) ; ಆ ಬಿಲ್ಲನೇಱಿಸಿ ಆ ಸರಲ್ಗಳಿಂದಾತನ ಮನೆಯ ಮುಂದೆ ನಭ ದೊಳ್ ನಲಿನಲಿದಾಡುವ ಜಂತ್ರದ ವಿಮಾನನೆಚ್ಚನುಮಾಕೆಗೆ ಗಂಡನಕ್ಕುಂ (ಪಂಪಭಾ. ೩-೩೨ ವ) ; ನಮ್ಮ ಬಲಂ ಕೀಲ್ಕಳೆದ ಜಂತ್ರದಂತೆ ಕಟಕುಟ ಮಾಗಿರ್ದಪುದು (ಪಂಚತಂ. ೨೦೬-೨೦) ; ತೊಱೆಯಂ ಜಂತ್ರಂಗಳಿಂ ಕಟ್ಟಿ ನಿಜಾಂತಃಪುರಸಹಿತಂ ನೀರಾಟವಾಡಿ ಜಂತ್ರಂಗಳ್ಗಂ ಕಳಿಯೆ (ಪಂರಾಮಾ. ೧೦-೧೪೦ ವ); ಪ್ರಣವಂ ಶೃಂಖಲೆ . . . ಸ್ಮೃತಿ ಜಂತ್ರಮಾಗಮುಮೆ ಬೆಳ್ಮಾರಂ . . . ನಾರಾಚಂ ತಪೋವಿಸ್ತರಂ (ಶಬಶಂ. ೩-೨೫). ೨. ಒಂದು ಬಗೆಯ ತಂತಿವಾದ್ಯ : ವೀಣೆ ಜಂತ್ರದ ನಾದಭೇದಸ್ವರಂಗಳಂ ಕಾಣಿಸದೆ ಪ್ರಾಣ ತಾನಾಗಿಯಂಗುಲಿಯೊಳಂ (ದೀಕ್ಷಾಬೋ. ೦೩೨-೧೦) ; ವರರುದ್ರವೀಣೆ ಧನುರ್ವೀಣೆ ಜಂತ್ರ ತುಂಬುರುವೀಣೆ ಕೂರ್ಮವೀಣೆಗಳ ಸ್ವರಮಂಡಲ ಮುಖ್ಯ ತಂತ್ರೀವಾದ್ಯದ ಹೆಣ್ಣು ನೆರೆದುದು ಕುವರಿಯೋಲಗದಿ (ವೃಷಹತ. ೨೭-೧೧): ಚೆಂಗು ದಂಡಿಗೆ ತಿತ್ತಿ ಮುಖವೀಣೆ ಜಂತ್ರವುಪಾಂಗ ಮುಂತಾದುವ ನಾಂತು ಅಂಗಜನೋಲಗಕಡಿಯಿಡುತಿದ್ದ ಗಾನಾಂಗನೆಯರ ನೋಡುತಿರ್ದಾ

(ಭರಜ. ೪೭–೪೭). ೩. ರಾಟೆ ; ನೂಲು ತೆಗೆಯುವುದು, ನೀರೆತ್ತುವುದು ಮೊದಲಾದುವನ್ನು ಮಾಡುವ ಯಂತ್ರ : ಚಲುವೆತ್ತು ರಾಟಿಸುವ ತದ್ಗೃಹದ ಮಧ್ಯ ವಿದ್ರುಮದ ಜಂತ್ರದ ಕಾಲ್ಗಳಿಂ (ನವಮೋ. ೧೪–೦೫) ; ಗಾಂಧಿಯುಗವು ಪ್ರಾರಂಭವಾದಂದಿನಿಂದ ಅಲ್ಲೊಂದು ಇಲ್ಲೊಂದು ಜಂತ್ರ (ರಾಟೆ)ಗಳು ಕಾಣಿಸಿಕೊಳ್ಳುತ್ತವೆ (ನಾಣ್ಣುಡಿ. ೪೧). ೪. ಬೊಂಬೆ. 'ಗಿಡಿಗಿಡಿಜಂತ್ರ' ಪರಾ. **ಜಂತರ:** ೧. ಅಂತ್ಯಕಾಲಕೆ ನೆನಸಿ ಅಂತಕನ ಎಡೆಯಾಗಿ ಎಂತು ಮರುಗಿದರೆ ಏನುಂಟು ಎಲೆ ಮನುಜ ಜಂತರದ ಇರಸು ಮುರಿದಂತೆ (ಕನ್ನಜಾ. ೨೭೪). **ಯಂತರ:** ೧. ಜೂಟವಳ ಸೂತ್ರದ ಯಂತರಗಳ ಬಿತ್ತರವನು ಕಂಡರಾಗ (ಕಂಜವಿ. ೧೪–೨೬). [ <ಸಂ. ಯಂತ್ರ ]

**ಜಂತ್ರಗೊಳಿಸು** (ಕ್ರಿ). ಕೀಲುಗೊಳಿಸು ; ಜೋಡಿಸು : ಸೇರಿಸು : ನಳಿನಭವನಂಭೋಜ ಬೆಳ್ಪಟ್ಟಮಂ ಜಂತ್ರಗೊಳಿಸಿ (ನಂದಿಮಾ. ೧೪–೨೬). [ ಜಂತ್ರ + ಕೊಳ್$_1$ + – ಇಸು$_3$ ]

**ಜಂತ್ರದೇವತೆ** (ನಾ). ವಾದ್ಯದ ದೇವತೆ ; ಸಂಗೀತದೇವತೆ : ಜಾಣಿನ ಜಂತ್ರದೇವತೆಗಳೊ ನೂತನ ವಾಣಿಯರುಗಳೆಂತೆನಲು ಕ್ಷೋಣಿಗೆ ನಾನಾ ಬಗೆಯ ವಿದ್ಯೆಗಳ ಪ್ರವೀಣೆಯರೆಸೆದರೇವೇಳ್ವೆ (ಕಂಜವಿ. ೨೪–೦೫). [ ಜಂತ್ರ + ದೇವತೆ ]

**ಜಂತ್ರಬಿಜ್ಜೆ** (ನಾ). ವಾದ್ಯವಿದ್ಯೆ : ಜಾಣಂ ವೀಣೆಯನೀ ಕುಮಾರ ಚಿಕದೇವಂ ಬಾಜಿಸುತ್ತಿರ್ಪನಂ ಪ್ರಾಣಂ ಬಂದುದು ಜಂತ್ರಬಿಜ್ಜೆಗೆ (ಚಿಕವಿ. ೪–೧೧೧). [ ಜಂತ್ರ + ಬಿಜ್ಜೆ$_2$ ]

**ಜಂತ್ರವಾಹ** (ನಾ). (ಯುದ್ಧದ ಸಮಯದಲ್ಲಿ) ಯಂತ್ರವನ್ನು ನಡೆಸತಕ್ಕವನಂ : ಕೋಟೆಯ ಜಂತ್ರವಾಹ ಹೊಲ್ಲಾಜಂಗೆ ಕಾರುಣ್ಯಂಗೆಯ್ದು ಜೀವಿತಮಾರ್ಗ್ಗದಿಂ ಶಾಸಾನವೃತ್ತಿಯಾಗಿ ಕೋಟೆಯ ಕಾಲ್ವಳ್ಳಿಗಳ . . . ಮೂಡಲು ಬಿಟ್ಟ ಎರೆ ಮ ೧೦ ಮನೆ ಮಾನ್ಯ (ಸೌಇಇ. VIII, ೩೭೦–೦೦; 1124). [ <ಸಂ. ಯಂತ್ರವಾಹ ]

**ಜಂತ್ರಿ** (ನಾ). ೧. ಕೋಷ್ಟಕ ; ಸಿದ್ಧಗಣಕ ; ಎಣಿಕೆಗಾಗಿ ಬಳಸುವ ಕೋಷ್ಟಕ (ರೈಶಗಿ. II, ೫೫೦). ೨. (ಉಕ) ಕ್ರಮವನ್ನು ತಿಳಿಸುವ ಪಟ್ಟಿ ; ತಪಶೀಲು ಪಟ್ಟಿ : ಗಿರಣಿಯ ಕೆಲಸವೆಂದರೆ ಒಂದು 'ಜಂತ್ರಿ' ಇದ್ದಂತೆ ಎಂದು ಗಟ್ಟಿಮಾಡಿಕೊಂಡನು (ಅಪವಾ. ೦೦೫). [ ←ಮರಾ. ಜಂತ್ರೀ ]

**ಜಂತ್ರಿಸು** (ಕ್ರಿ). ಯಂತ್ರದಲ್ಲಿ ಕಡೆ ; ಸಾಣೆ ಹಿಡಿದು ಮೆರಂಗುಕೊಡು : ಅದರಾಗ್ರ ಒಸೆದು ಜಂತ್ರಿಸಿದ ಕಾರ್ಮುಣೆಯ ಕೀಲಿಸಿದಂತೆ ಕುಚಚೂಚುಕಂ ಮೆರೆದವು (ನವಮೋ. ೨೩–೨೪). [ ಜಂತ್ರ + – ಇಸು$_3$ ]

**ಜಂಪ$_1$** 'ಜೊಂಪ$_1$' ನೋ.

**ಜಂಪ$_2$** (ನಾ). ನೆಗೆತ; ಕುಪ್ಪಳಿಸುವಿಕೆ; ಹಾರುವಿಕೆ: ಝಕಾರಕ್ಕೆ ಜಕಾರಂ– ಝಂಪ – ಜಂಪ (ಶಮದ. ೨೫೫ ಪ್ರಯೋ.). [ <ಸಂ. ಝಂಪ ]

**ಜಂಪತಿ** (ನಾ). ಗಂಡಹೆಂಡಿರು ; ದಂಪತಿ : ಆ ಜಂಪತಿಗಗ್ರಸುತಂ ಭ್ರಾಜಿಷ್ಣು . . . ವಾವಣಾರ್ಯನ್ನೆಗಟ್ಟಿಂ (ಎಇ. XII, ೨೪೦–೦೪೭; 1077). ಆ ಜಂಪತಿಗಳ ವದನಾಂಭೋಜಂಗಳನಾತ್ಮದೃಕ್ಷಹಸ್ರಭ್ರಮರೀರಾಜಿಗೆಡೆ ಮಾಡಿ ನೋಡಿ (ಪುಷ್ಪಪು. ೦೨–೧೦): ಕರುಣದಿಂದಪ್ಪು ಬಾರೆಂದು ಫಲುಬಿದರಾಗ ಜಂಪತಿಗಳು (ವೆಂಕಾರಾ. ೨–೨೩–೪೨). [ ಸಂ. ಜಂಪತೀ ]

**ಜಂಪತಿವಕ್ಕಿ** (ನಾ). ಜೋಡಿಹಕ್ಕಿ ; ಎಣೆವಕ್ಕಿ ; ಚಕ್ರವಾಕ : ಆ ವೇಳೆಯೊಳ್ ರಾಮರಾಜ್ಯದೊಳಿಂತನುಚಿತಮಾಗಿ ಅಟಿಂಗೆಟ್ಟುದೆಂದು ಬೆದಱಿ ತಾರೆಗಳ್ ದೆಸೆಗೆಟ್ಟುವು; ಚಂದ್ರಮಂ ಕಳೆಗೆಟ್ಟಂ; ಜಂಪತಿವಕ್ಕಿ ಕಂಗೆಟ್ಟುವು (ರಾಮಾಶ್ವ. ೨೭–೨೭). [ ಜಂಪತಿ + ಪಕ್ಕಿ$_1$ ]

**ಜಂಪರ್** 'ಜಂಪರು' ನೋ.

**ಜಂಪರು, ಜಂಪರ್, ಝಂಪರು** (ನಾ). ಒಂದು ಬಗೆಯ ಕುಪ್ಪಸ ; ರವಿಕೆ : ಗೋಡೆಯ ಮಗ್ಗುಲಿಗೆ ಹಿರಿಯ ಮಗಳು ಶಾಂತಳ ಲಂಗ, ಜಂಪರು (ಏಳಜೀ. ೦೭೦) ; ಹುಡುಗನ ಅಂಗಿಗೆ ಎರಡು ಜೋಬುಗಳನ್ನೂ ಹುಡುಗಿಯ ಜಂಪರಿಗೆ ಒಂದು ಜೋಬನ್ನೂ ಬರೆದೆ (ಶಾಲಿಮ. ೧೧೧). **ಜಂಪರ್ :** ಚಿಕ್ಕಹುಡುಗಿಯರಿಗೆ ಅವರ ತಾಯಿ, ಅಕ್ಕಂದಿರುಗಳು ಕುಳ್ಳಿರಿಸಿ ಲಂಗ ಉಡಿಸಿ, ಜಂಪರ್ ತೊಡಿಸಿ, ವಿಧವಿಧದ ಅಲಂಕಾರ ಮಾಡುತ್ತಿದ್ದರು (ಮೂಲಾನ. ೦೨೩); ಅಪ್ಪಾ, ಹಬ್ಬಕ್ಕೆ ನಂಗೊಂದು ಜಂಪರ್ (ನಾಡಿಗೇ. ೯೦). **ಝಂಪರು:** ನೀಲಿಬಣ್ಣದ 'ಶೇಟಿನ್' ಝಂಪರು ಟ್ರಂಕಿನ ಬಾಯಲ್ಲಿ ಸಿಕ್ಕು ಒದ್ದಾಡುತ್ತಿತ್ತು(ಮುತ್ತು.ದ. ೨೩); ಒಬ್ಬಳ ಪರಕಾರವಾದರೆ ಇನ್ನೊಬ್ಬಳ ಪೋಲಕ, ಮತ್ತೊಬ್ಬಳ ಝಂಪರು ಆದರೆ ಮಗದೊಬ್ಬಳ ಝಗಾ, ಹೀಗೆಲ್ಲರ ಕಡೆಯಿಂದ ಒಂದೊಂದು ಅರಿವೆಗಳನ್ನು ಇಸಿದುಕೊಂಡು (ಹೂಬಿಸಿ. ೨೨). [ ←ಇಂ. Jumper ]

**ಜಂಪಳ** 'ಝಂಪಾಳ' ನೋ.

**ಜಂಪಳವಿಡು** (ಕ್ರಿ). ಮೇಲ್ಮುಸುಕು ಹಾಕು ; ಮುಚ್ಚು : ಆವರಿಸು : ಮಟ್ಟ ಮರಕತಶಿಲೆಯ ನೀಲದ ಬೆಟ್ಟದಿರವೆಂಬಂತೆ ಜಂಪಳವಿಟ್ಟು ಝಡಿದುದು ಕಾರ್ಮುಗಿಲು ಕತ್ತಲಿಸೆ ಕುಂಭಿನಿಯ (ತೊರರಾ. ೪–೬–೩). [ ಜಂಪಳ (<ಝಂಪಾಳ) + ಇಡು$_1$ ]

**ಜಂಪಳಿಸು** (ಕ್ರಿ). ಮಾತನಾಡಂ; ಜಲ್ಪಿಸಂ (?): ಜಂಪಿನ ಕಡ್ಡಿಯ ಮೇಲೆ ಕುಳಿತ ಗಿಳಿ ಜಂಪಳಿಸುತ್ತಿರ್ದಿತ್ತು ತನ್ನ ತಾನು ಅಕ್ಕಟಾ ಅಕ್ಕಟಾ ಎಂದು ತನ್ನ ಪೂರ್ವಾಶ್ರಯದ ಅಕ್ಕನೆಂಬಾ ಅಕ್ಕನ ಕರೆಯಿತ್ತು (ಚನ್ನವ. ೯. ೫೮೦–೦೨೪೭): "ತೂಕಡಿಸು" (ಚನ್ನವ. ೯. ಕೋಶ). [ <ಜಲ್ಪನ ? + – ಇಸು$_3$ ]

**ಜಂಪಿಸು** 'ಜೊಂಪಿಸು$_2$' ನೋ.

**ಜಂಪು$_1$** 'ಜೊಂಪು$_1$' ನೋ.

**ಜಂಪು$_2$** 'ಜೊಂಪು$_1$' ನೋ.

**ಜಂಪು$_3$** (ನಾ). ಒಂದು ಬಗೆಯ ಕಿವಿಯ ಆಭರಣ : ತೂಗುವತಿ ಹೊನ್ನೋಲೆ ಮುತ್ತಿನವೋಘ ಜಂಪಿನ ರತ್ನಬುಗಡಿಯ ನಾಗಹೆಡೆ ಮಾಣಿಕ್ಕ ಕೀಲಿತ ತಾಳಿ ಪದಕಗಳ (ಅಂಬಿಕಾ. ೪೪–೨೨). [ ←ತೆಲು. ಜಂಪು ]

**ಜಂಪು$_4$** (ನಾ). ಸೊಗಸು ; ವೈಭವ ; ರಮ್ಯತೆ ; ಮನೋಹರತೆ ; ಆಕರ್ಷಣೆ : ಈ ಜಗ್ಗು ಯಾ ನಿಗ್ಗು . . . ಯಾ ಜಂಪು ಯಾ ಯಿಂಪುಮಾ ಹದುರು ಚದುರುಗಳು . . . ಆರಿಗಳವಡದು (ವೆಂಕಾರಾ. ೫–೯–೧೧). [?]

**ಜಂಪು$_5$** (ನಾ). ೧. ಪಂಜರ : ಜಂಪಿನ ಕಡ್ಡಿಯ ಮೇಲೆ ಕುಳಿತ ಗಿಳಿ (ಚನ್ನವ. ೯. ೫೮೦–೦೨೪೭). ೨. ಬೋನು : ತಳಿದ ಸೂಸಲಿಗೆ ಬಂದಿಲಿ ಜಂಪಿನಲಿ ಬೀಳುವೊಲು (ಫೋಳಿಪು. ೫–೦೦). [ ? ]

**ಜಂಪೆ$_1$** (ನಾ). [ಸಂಗೀತ] ಒಂದು ಬಗೆಯ ತಾಳ ; ಐದು ಮಾತ್ರೆಗಳ ತಾಳ: ಬಳಿಕ ಧ್ರುವ . . . ಜಂಪೆ . . . ಏಕವೆಂಬ ಸಪ್ತತಾಳಭೇದಂಗಳುಂ (ವಿವೇಕ. ೨೩೪); ಝಂಪೆ, ಜಂಪೆ (ಶಬ್ದಾನು. ೦೪೩ ವೃತ್ತಿ); ಸೊಂಪಾಗಿರುವ ಜಂಪೆತಾಳದಿಂದ ದಂಪತಿಗಳ ಆಟವನಾಡಿಸುತ್ತಿರುವ ವಿದೂಷಕನ ಹಾಸ್ಯರಸದಿಂದ ಆನಂದವನ್ನೈದಿ (ಸೌಗಂಧಿ. ೫೦೩–೦೩). [ <ಸಂ. ಝಂಪಾ ]

**ಜಂಪೆ$_2$** (ನಾ). ಮನೆ ಅಥವಾ ನಿವಾಸದಲ್ಲಿ ಒಂದು ವಿಭಾಗ : ತಿವುರಿಗುಡಿ ಗೂಡಾರಂ ಝಂಪಾಳಿ ಚೌಕಿಗೆ ಜಂಪೆ ಮಂಡವಿಗೆ . . . ಮಾಡಿತ್ತು ಕಣ್ಣನುರಾಗವಂ (ಅನಂಪು. ೦೩–೭೩). [ ? ]

**ಜಂಪೆ$_3$** (ನಾ). (?): ಜೊಳ್ಳುಮತಿಯ ಕೊಡುವ ಜಂಪೆ ಜಡದೈವ (ವಿಸಾಸು. ೫೮–೨). [ ? ]

**ಜಂಪೆತಾಳ** (ನಾ). =ಜಂಪೆ$_1$: ಐದು ಮಾತ್ರೆಗೆ ಜಂಪೆತಾಳ (ಸಂಶೋಧ. ೦೨೦). [ ಜಂಪೆ$_1$ + ತಾಳ$_1$ (=ತಾಲ) ]

**ಜಂಬ**$_1$ 'ದಂಬ' ನೋ.

**ಜಂಬ**$_2$ (ನಾ). ಒಂದು ಬಗೆಯ ಕುದುರೆ ; ಮೈಯಲ್ಲಿ ಚುಕ್ಕೆಗಳಿರುವ ಕುದುರೆ: "ತುರಗವರ್ಣಂ ಬಿಳಿಯದಾಗೆ ಕರ್ಕನೆನಿಕ್ಕು . . . ನೀಲಂ ತುಂಬಿ ಚಿಬ್ಬುದೋಱಿರಲು ಜಂಬಂ" (ಮಂಗರಾ. ೮೧-೧೪) : ಜನ್ನವಂ ನೀಲನನಳಗನಂ ತನ್ನಿ ಕತ್ತಳವಮೌಹಳಿಗನಂ ತನ್ನಿ ಜಂಬನನಾ ಕಯಿರನಂ ತನ್ನಿ (ಬಸಪು. ೫೯-೪೦). [ ? ]

**ಜಂಬ**$_3$ (ನಾ). "ದಟ್ಟ" (ಗರತಿ. ಕೋಶ): ತಂದೆ ನನ ಹಡೆದಪ್ಪ ಉಂಡು ಹೊರೆಯಕ ಹೋಂಟ ಜಂಬ ಹಾಸೀದ ಜಮುಖಾನಿ ನನ ಮನಿಯ ಗೊಂಬಿ ಬೀಸ್ಯಾವ ಸುಳಿಗಾಳಿ (ಗರತಿ. ೫೩). 'ಜಂಬುಳಿ' ಪರಾ. [ ? ]

**ಜಂಬಕೊಚ್ಚು** (ಕ್ರಿ). ತನ್ನನ್ನು ತಾನು ಹೊಗಳಿಕೊಳ್ಳು ; ಆಡಂಬರದ ಮಾತುಗಳನ್ನಾಡು : ತಾನು ದಾರ್ಶನಿಕನೆಂದು ಆತ ಜಂಬಕೊಚ್ಚಿ ಕೊಳ್ಳುತ್ತಿದ್ದ (ಅಶ್ವಮ. ೬೭). [ ಜಂಬ$_1$ (<ದಂಬ) + ಕೊಚ್ಚು$_1$ ]

**ಜಂಬಗಾರ** 'ಡಂಬಗಾರ' ನೋ.

**ಜಂಬಗಿತ್ತಿ** (ನಾ). ಜಂಬವುಳ್ಳವಳು ; ಬಿಂಕಗಾತಿ : ಒಳ್ಳೆ ಜಂಬಗಿತ್ತಿ ಕಾಣಾತಿ ನೀನು (ಹೊಸಂಸಾ. ೧೪೭). [ ಜಂಬ$_1$ (<ದಂಬ) + -ಗಿತ್ತಿ ]

**ಜಂಬರ, ಜಮುರ** (ನಾ). ಕೆಲಸ ; ಉದ್ಯೋಗ : ಅತ್ತ ಮೇಲೆ ಕಣ್ಣು ತೆರೆವ ದೇವನೆಂಬ ತಂದೆಯಿನ್ನು ಮುಗಿಲಿನಾಚೆಯಿಂದ ಬರುವ ಜಂಭ ಜಂಬರಂಗಳಿಲ್ಲ (ನಾದಲೀ. ೭೧-೧೧): ಸೈನ್ಯದ ಸಿದ್ಧತೆಗಾಗಿ ಊರಲ್ಲೆಲ್ಲ ದೊಡ್ಡ ಜಂಬರ ನಡೆದಿತ್ತು (ಯುದುರಾ. ೧೦೨) : ಅಣ್ಣಯ್ಯ ನಿನಗೆ ಬೇರೆ ಜಂಬರವಿಲ್ಲ (ಮರಮ. ೬೭): ಜಂಬರದವನಿಗೆ ತಂಬೂರವೋ (ಗಾದೆ). **ಜಮುರ:** ನೇರವಾಗಿ ಮನೆ ಕಡೆಗೋ, ಅಡ್ಡ ಜಮುರ ಏನಾದರೂ ಉಂಟೋ! (ರುದ್ರಿಮು. ೫೦). [ ದೇ.॥ ತುಳು. ಜಂಬರ, ಜಂಬಾರ, ಜಂಬ್ರ ]

**ಜಂಬಾಲ, ಜಂಬಾಳ** (ನಾ). ೧. ಕೆಸರು ; ಬದಿ ; ರಾಡಿ : ಬಾಲಕಂ ಧನುವ ಮಿಡಿಯಲ್ ಬೆದಱಿತವನಿ ಜಂಬಾಲವಾಯ್ತುಬುಧಿ(ಜಬಪು.೩೯-೩೮); ಧೂಳಿ ಮುಸಗಲು ವಾರಿನಿಧಿ ಜಂಬಾಲವಾಯ್ತು (ಅನಂರಾ. ೧-೧೪-೧೧) : ಅಂಗದನ ಮಕುಟತಟವನಪ್ಪಳಿಸಲಂದೊಡೆದು ಬಿಸಿರಕುತ ಸುರಿದುದು ಧರಾತಳಮೆಲ್ಲ ಜಂಬಾಲಮಪ್ಪಂದದೆ (ವೆಂಕಾರಾ. ೬-೩೧-೨೧). ೨. ಹಾವಸೆ; ಪಾಚಿ : ಭೀಷ್ಮಾಕಲಿತಲಲಾಟೇಕ್ಷಣಶಿಖಾಪಟುತರೋಷ್ಮಾವಶೇಷ . . . ಜನ್ಮಾಂತರೋಪಚಿತ ವೃಜಿನಜಂಬಾಲಜಾಲಗ್ರೀಷ್ಮಾಗಮಾಭ (ಉದ್ಭದೇ. ೧-೩೧). **ಜಂಬಾಳ:** ೧. "ಜಂಬಾಳ ನಿಷದ್ವರ ಕರ್ದಮ ಶಾದ" (ವಸ್ತುಕೋ. ೨೫-೨೦). ೨. ಜಳಮಾತ್ರಂ ಪುದಿದಿರ್ಪ ಪಲ್ವಲ ಮಹಾಜಂಬಾಳ ದೊಳ್ಕೇಸರಾವಳಿಯಗ್ರಂ ನಸುದೋಱದಂತೆ (ಶಾಂತೀಶ್ವ. ೧೨-೩೫). [ಸಂ.]

**ಜಂಬಾಲತೆ** (ನಾ). ಕೆಸರಾಗುವಿಕೆ ; ರಾಡಿ : ತರಳ ಸುಕುಮಾರನಂಗದ ಮಹಾಶೋಕದಿಂ ಧರಣಿಯೊಳ್ ಕೆಡೆದು ಪೊರಳುವ ಪರಿಯ ಕಂಬನಿಯ ನಿರದೆರೆದು ಜಂಬಾಲತೆಯನೆಸಗೆ ತಾರೆ ತಜ್ಜಳದಿ ಮುಳುಗಿರುವಳು (ವೆಂಕಾರಾ. ೪-೮-೨೫). [ ಸಂ. ಜಂಬಾಲತಾ ]

**ಜಂಬಾಳ** 'ಜಂಬಾಲ' ನೋ.

**ಜಂಬಿ** (ನಾ). ಬನ್ನಿಮರ ; ಶಮೀವೃಕ್ಷ : "ಜಂಬಿ — ಶಮೀ" (ತದ್ಭಕೋ. ೦೪). 'ಜಂಬಿಸಾರಿ' ಪರಾ.

[ ದೇ.॥ ತೆಲು. ಜಂಬಿ, ಜಮ್ಮಿ. / ಸಂ. ಶಮೀ ]

**ಜಂಬಿಟ್ಟಗೆ, ಜಂಬಿಟ್ಟಿಕೆ, ಜಂಬಿಟ್ಟಿಗೆ, ಜಮ್ಮಿಟ್ಟಗೆ** (ನಾ). ಗಟ್ಟಿಯಾದ ಕೆಂಪುಮಣ್ಣಿನ ನೆಲದಿಂದ ಅಗೆದು ತೆಗೆಯುವ ಇಟ್ಟಿಗೆ: ಕಟ್ಟೆ ಕಟಲ್ಲು ಭಿತ್ತಿಯರೆ ಬಿರ್ದು [ × × × ] ಸಡಿಲ್ದುದಿರ್ದ ಜಂಬಿಟ್ಟಗೆ ಕಂಬಪೊಗಱಾಡಿಸಿ ನೆಟ್ಟನೆ ಬಿರ್ದಪುದು (ನಳಚಂ. ೫೩೫). **ಜಂಬಿಟ್ಟಿಕೆ:** ಶಿವಮೊಗ್ಗಾ ಮತ್ತು ಬೆಳಗಾಂವಿ ಜಿಲ್ಲೆಗಳಲ್ಲಿ ಕೆಲವು ಕಡೆ ಜಂಬಿಟ್ಟಿಕೆಯಿರುವ ಸ್ಥಳಗಳಲ್ಲಿ ಈ ಮಣ್ಣು ದೊರೆಯುತ್ತದೆ (ವ್ಯವಮ. ೫). **ಜಂಬಿಟ್ಟಿಗೆ:** ಅವನ ಮೊಣಕಾಲು ಮಂಡಿ ಮೊಣಕೈಗಳು ಹಾದಿಯ ಜಂಬಿಟ್ಟಿಗೆ ಕಲ್ಲಿಗೆ ತೀಡಿ ಗಾಯವಾಗಿ . . . ಅಳುತ್ತಿದ್ದನು (ಮಲೆಮ. ೪೯೯). **ಜಮ್ಮಿಟ್ಟಗೆ :** ಮಲೆನಾಡಿನಲ್ಲಿಯೂ ಕನ್ನಡಜಿಲ್ಲೆಗಳಲ್ಲಿಯೂ ವಿಶೇಷವಾಗಿ ದೊರೆಯುವ ಜಮ್ಮಿಟ್ಟಗೆಯಲ್ಲಿ (Laterite) ಮಣ್ಣೂ ಕಬ್ಬಿಣವೂ ವಿಶೇಷವಾಗಿ ಬೆರೆದಿರುತ್ತವೆ (ಶಿಲ್ಪನಾ. ೨೭೮). [ ಜಂಬು$_3$ + ಇಟ್ಟಗೆ$_1$ ]

**ಜಂಬಿಟ್ಟಿಕೆ** 'ಜಂಬಿಟ್ಟಗೆ' ನೋ.

**ಜಂಬಿಟ್ಟಿಗೆ** 'ಜಂಬಿಟ್ಟಗೆ' ನೋ.

**ಜಂಬಿಯಾ** (ನಾ). ಕಠಾರಿ ; ಕಿರುಗತ್ತಿ : ಫಾತೀಮ ದಿವಾಣಖಾನೆಗೆ ಧುಮುಕಿ ಜಂಬಿಯಾ ಒಂದನ್ನು ಒರೆಯಿಂದ ಹಿರಿದುಕೊಂಡು ಬಂದು ಉಪ್ಪರಿಗೆಯ ಬಾಗಿಲಿಗೆ ನಿಂತಳು (ನೂರಜ. ೭೧).

[ ←ಪಾರ. ಜಂಬಿಯಾ ; ಮರಾ. ಜಂಬಿಯಾ, ಜಂಬ್ಯಾ ]

**ಜಂಬಿಸಾರಿ** (ನಾ). = ಜಂಬೂಸವಾರಿ ೧: ಧಾರಿಣೀಶ್ವರನರಮನೆ ಬಾಗಿಲಿಂ ಜಂಬಿಸಾರಿ ಪರಿಂಟಪ ಪರಿಯಂತ ಮೇರೆಯಿಲ್ಲದ ರತ್ನತೋರಣ ಕುರುಜು ಗಳ್ ಸೇರಿ ಕಟ್ಟಿದುವರ್ತಿಯಲ್ಲಿ (ಕಂನವಿ. ೨೨-೭೪). [ ಜಂಬಿ + ಸಾರಿ$_1$ ]

**ಜಂಬೀರ** (ನಾ). ೧. ನಿಂಬೆಗಿಡ ಮತ್ತು ಅದರ ಹಣ್ಣು : "ಕರಣಃ, ಜಂಬೀರಃ—೨ ನಿಂಬೆ" (ಹಲಾಯು. ೩೨-೪೦): "ಜಂಬೀರಮನೆ ನಿಂಬೆ" (ಮಂಗರಾ. ೩೪-೧೦) ; ಏಳಾಲುಂಗಲವಂಗಭೂರ್ಜಲವಲೀನಾರಂಗ ಜಂಬೀರಹಿಂತಾಳಾಶೋಕಹಸಂಕುಳಂ (ಶಾಂತಿಪು. ೯-೧೪೩): ಮಿಸುನಿಯ ವಣ್ಣತೆ ನಾನಾಬಗೆ ಪಟಕ ಸುಭ್ರಪಜ್ಜಕೆ ನರರ ರಸನೆಯ ಸವಿಗೆ ನಾವೆಂದಾಗ ಫಲ ಸಹಿತೆಸೆವ ಜಂಬೀರಗಳಿಹುವು (ಕಂನವಿ. ೫-೮೪). ೨. ಒಂದು ಬಗೆಯ ಸುವಾಸನೆಯ ಸಸ್ಯ ; ಮರುಗ. [ ಸಂ. ]

**ಜಂಬೀರಕ** (ನಾ). = ಜಂಬೀರ ೧: ಕಂಕೆಲ್ಲಿ ಕಮ್ಮರನಾಮ್ರಂ ಬೆಳಲಿಂಗುಳಂ ಪನಸು ನಿಂಬಂ ಜಂಬು ಜಂಬೀರಕಂ (ಕಾವ್ಯಸಾ. ೧೧೪೦ ಕೊದ್ರಳ). [ಸಂ.]

**ಜಂಬು**$_1$ (ನಾ). ಒಂದು ಬಗೆಯ ಜವುಗು ಸಸ್ಯ ; ಜೊಂಡು. 'ಜಂಬುಹುಲ್ಲು' ಪರಾ.

[ ದೇ.॥ ತಮಿ. ಚಮ್ಬು ; ತೆಲು. ಜಂಬು, ಜಮ್ಮು ]

**ಜಂಬು**$_2$ (ನಾ). ೧. ನೇರಳೆಮರ ಮತ್ತು ಅದರ ಹಣ್ಣು : "ಜಂಬೂ ನಾಮಂ ನೇಱಲ್" (ವಸ್ತುಕೋ. ೩೪-೧೧): "ಜಂಬುವೆನೆ ನೇಱಲು" (ಮಂಗರಾ. ೩೫-೧೩): ಕಾರ್ತಸ್ವರಪ್ರಾಕಾರದಿಂದೊಳಗೆ ಅಶೋಕವಕುಳತಿಲಕ ಹಿಂತಾಲತಮಾಲಜಂಬುಜಂಬೀರಲವಂಗನಾರಂಗಾದ್ಯನೇಕಾನೋಕಹಾನೀಕ ಕಮನೀಯಮುಂ (ಅಜಿಪು. ೭-೨೦ ವ) : ಕುರವಕ ಬಿಲ್ವ ಜಂಬು ಸುರದಾರು ನಮೇರು ತಮಾಲ ತಾಲಬಂಧುರ (ಶ್ರೀಮಹಾ. ೧-೪೭). ೨. ಸಪ್ತದ್ವೀಪ ಗಳಲ್ಲಿ ಒಂದು. 'ಜಂಬುದ್ವೀಪ' ಪರಾ. [ ಸಂ. ]

**ಜಂಬು**$_3$ (ನಾ). ಒಂದು ಬಗೆಯ ಕೆಂಪು ಗಟ್ಟಿ ಮಣ್ಣು. 'ಜಂಬಿಟ್ಟಗೆ' ಪರಾ. [ ←ಮರಾ. ಜಾಂಬಾ ]

**ಜಂಬುಕ** (ನಾ). ೧. ನರಿ : "ಶಿವೆ ಮೃಗಧೂರ್ತಂ . . . ಜಂಬುಕಂ ಸೃಗಾಲಂ ನರಿ" (ವಸ್ತುಕೋ. ४०-३) ; ಜಂಬುಕ ಶಂಭುಧ್ಯಾನದಲ್ಲಿ ಸೈವೆಱಗವ್ವುದೇ (ದೇದಾವ. ೪೭-೯೪) ; ನಾಳೆ ಹೆಣದೌತಣದಲುಣ ಬಡಿಸುವೆನು ಜಂಬುಕ ಕಾಕಸಂತತಿಗೆ (ಕುಮ್ಮಾ. ೫-೮) : ಜಂಬುಕಂ ಜನಿಸುವುದೆ ಸಿಂಗದುದರದಲಿ (ಜೈಮಿಭಾ. ೧೭-೫೪). ೨. ವರುಣ. ೩. ನೇರಳೆಮರ. [ ಸಂ. ]

**ಜಂಬುಕಾನ, ಜಂಖಾನ, ಜಂಬುಖಾನ, ಜಮಖಾನ, ಜಮಖಾನೆ**$_1$ (ನಾ). ದಪ್ಪನೂಲಿನಿಂದ ಮಾಡಿದ ಹಾಸು ; ನೂಲುಗಂಬಳಿ : ಜಂಬುಕಾ[ಪಾಠಾಂ. ಖಾ]ನದ ಗದ್ದುಗೆಯೊಪ್ಪುವ ರತ್ನಕಂಬಲ ಮಲಗು ಮಂಚಗಳ . . . ಕಳುಹಿದನು (ರಾಮವಿ. ೭-೧೫) ; ಬಂದು ಕಾಣ್ಕೆಯನಿಕ್ಕಿ ಜಂಬುಕಾನದೊಳೋಳಿಯಿಂದ ಭದ್ರಾಸನಾದಿಗಳ ಮುಂದೆ ಪಾಗುಡವಿತ್ತು

ಕೈಮುಗಿದರು (ಭರತೇ. ೩೫-೩೯) ; ಬಂದ ದಿಬ್ಬಣಿಗರಿಗೆ ಚಂದದಿ ಚಪ್ಪರವೂ ಜಂಬುಕಾನವು ಸಕಲಾತಿಗಳಾಸಿ ಚಂದವ ನುಡಿಯೆ ಬಂದ ಬೀಗರು ಸಂಭ್ರಮದಿ ಬಂದು ಕುಳೀತಾರೆ (ಕಜಾಗೀ. ೮೮). **ಜಂಖಾನ:** ಸಾಲ್ ಹಿಪ್ಪೆಯಮರದ ನೆರಳಾಗೆ ಕೆಂಗಪ್ಪ ಸಣ್ಣ ಜಂಖಾನ ಕೊಡವ್ಹಾಸೊ ಜಾಣ (ನಾಪದ. ೩೭) : ಉಪ್ಪಾರದ್ಹೆಣ್ಣೆ ನೀ ತುರುಬು ನೆಟ್ಟಗೆ ಮಾಡು . . . ಜಾಡಿ ಜಂಖಾನ ಒದರ್ಹಾಸು (ಹಳ್ಳಿಯ. ೬೧). **ಜಂಬುಖಾನ:** ಕಾಗೆಯು ಪಟ್ಟೆ ಒಂದಕ್ಕಂ ವೀಸ ರತ್ನಗಂಬಳಿ ಜಂಬುಖಾನದ ಮಳವೆ ಒಂದಕ್ಕಂ ಹಾಗ ಓಲೆಯು ಮಳವೆ (ಎಕ. V, ಬೇಲೂರು. ೭೫-೯೦ ; 1382) ; ಮುಂದು ಗಡೆಯಲ್ಲಿರುವ ಜಂಬುಖಾನದ ಮೇಲೆ, ಸಂಕಣ್ಣ ಕುಳಿತಿದ್ದಾನೆ (ದೇವಮ. ೨೨). **ಜಮಖಾನೆ:** ತನ್ನ ಜಮಖಾನವು ಹರಿದಿರುವೆಡೆಯೊಳೆ ಕುಳಿತುಕೊಳ್ವನು ಯಜಮಾನ (ಚಂದ್ರವೀ. ೧೫೩-೯) ; ಜಮಖಾನ ಹಾಸಿದ ಮೆಟ್ಟಲುಗಳ ಮೂಲಕ ಜಗಲಿ ದಾಟ ಮೆಟ್ಟಲಿಳಿದು ಬಂದಿದ್ದನು (ಪುನರು. ೨೪೭). ; ನೆಲಕ್ಕೆ ಹಾಕಿದ್ದ ಜಮಖಾನದ ಒಂದು ಕಡೆ ತಿಂಡಿಗಳು ತುಂಬಿದ್ದ ಚಿಕ್ಕ ಚಿತ್ರದ ಪೆಟ್ಟಿಗೆ (ರಂಗಕ. ೬೦). **ಜಮಖಾನೆ$_1$:** ಆ ಬಟ್ಟೆ ಬೇಗ ಕಳೆಯಲಿಕ್ಕೆ ಬಾರದಿದ್ದರೆ, ನೆಲದ ಮೇಲೆ ಬಿದ್ದು ಹೊರಳಾಡಬೇಕು ; ಇಲ್ಲವೆ ಜಮಖಾನೆಯನ್ನಾಗಲಿ ಕಂಬಳಿಯನ್ನಾಗಲಿ ಗಟ್ಟಿಯಾಗಿ ಸುತ್ತಿಕೊಂಡು ಮೇಲಿಂದ ಗಸಗಸ ತಿಕ್ಕಬೇಕು (ಮುಂಬಯಿ. ೪-೬೧) ; ಒಂದು ಜಮಖಾನೆ ಒಂದು ಚಾದರನ್ನು ತೆಗೆದುಕೊಂಡು ಅಡಿಗೆಮನೆಯ ಕಡೆಗೆ ಹೊರಟಳು (ಕಮನೆ. ೫೭).

[ ←ಪಾರ. ಜಮ್‌ಖಾನಾಹ್ ; ಮರಾ. ಜಮ್‌ಖಾನ್, ಜಮ್‌ಖಾಣ್, ಜಮಖಾನಾ ]

**ಜಂಬುಕಿ** (ನಾ). ೧. ಹೆಣ್ಣುನರಿ. ೨. (ಆಲಂ) ಉಪಾಯಗಾತಿ ; ತಂತ್ರಗಾತಿ : ಒಂದು ವೇಳೆ ಚಿಕ್ಕವರು ತಾತ್ಸಾರವಾಗಿದ್ದರೂ, ಮನೆಯಲ್ಲಿರುವ ವೃದ್ಧ ಜಂಬುಕಿಯರು ಅವರನ್ನು ಸುಮ್ಮನೇ ಬಿಟ್ಟಾರೆ ? (ಮುಸುಗ. ೪).

[ ಸಂ. ಜಂಬುಕೀ ]

**ಜಂಬುಖಾನ** 'ಜಂಬುಕಾನ' ನೋ.

**ಜಂಬುದ್ವೀಪ** (ನಾ). = ಜಂಬೂದ್ವೀಪ. [ ಸಂ. ]

**ಜಂಬುನಾಯ್ಗಿ** (ನಾ). ಒಬ್ಬಾಕೆಯ ಹೆಸರು: ಸ್ವಸ್ತಿಶ್ರೀ ಜಮ್ಬುನಾಯ್ಗಿರ್ ತೀಟ್ಟಿದೊಳ್ನೋನ್ತು ಮುಡಿಪ್ಪಿದರ್ (ಎಕ. II, ೧೮ : ಸು. 700).

[ ಜಂಬು ? + ನಾಯ್ಗ$_1$ (<ನಾಯಿಗ) + – ಇ$_2$ ]

**ಜಂಬುನೇರಳೆ** 'ಜಂಬುನೇಱಲೆ' ನೋ.

**ಜಂಬುನೇರಿಲು** 'ಜಂಬುನೇಱಲೆ' ನೋ.

**ಜಂಬುನೇರಿಲೆ** 'ಜಂಬುನೇಱಲೆ' ನೋ.

**ಜಂಬುನೇಱಲೆ, ಜಂಬುನೇರಳೆ, ಜಂಬುನೇರಿಲು, ಜಂಬುನೇರಿಲೆ** (ನಾ). ಉತ್ತಮಜಾತಿಯ ನೇರಳೆಮರ ಮತ್ತು ಅದರ ಹಣ್ಣು ; ಅರನೇರಳೆ : ಅಂಬರಚರಿಯರ ತನುಗಂಪಿಗೆಱಗುವ ತುಂಬಿಯ ಬಳಗದಂದದಲಿ ಮುಂಬರಿದೆಸೆವ ಕಪ್ಪಡಿದ ಫಲಾಳಿಯಿಂ ಜಂಬುನೇಱಲೆಗಳೊಪ್ಪಿದುವು (ಕಂನವಿ. ೨-೪೪). **ಜಂಬುನೇರಳೆ:** ಜಂಬುನೇರಳೆ, ನೇರಳೆ (ಮೃಜಗಿ. ೭೩-೦೪೯೪). **ಜಂಬುನೇರಿಲು:** ಚಿಕ್ಕನೇರಿಲು ಜಂಬುನೇರಿಲುಗಳರುಟಾಳ (ರುಕ್ಮಾಂಗ.೧೦-೩). **ಜಂಬುನೇರಿಲೆ:** ಕೊಕ್ಕನು ತೆರೆವುದು ಗಿಣಿಯದನುಣಲೆಂದು ಜಂಬುನೇರಿಲೆಯೆಂದು ನಂಬಿ (ಇಂಚಾಪ. ೧೭೪-೫೮).

[ ಜಂಬು$_2$ + ನೇಱಲೆ$_1$(<ನೇಱಲ್) ]

**ಜಂಬುಮಣ್ಣು** (ನಾ). ಒಂದು ಬಗೆಯ ಕೆಂಪುಮಣ್ಣು : " ರಸ್ತೆ, ಮೊ. ಗಳಿಗಾಗಿ ಉಪಯೋಗಿಸುವ, ಕಬ್ಬಿಣ ಸಂಯುಕ್ತ ಪದಾರ್ಥಗೂಡಿದ, ಪುಡಿಪುಡಿಯಾಗುವ ಕೆಂಪು ಜೇಡು ಮೇಲ್ಮಣ್ಣು ; ಜಂಬುಮಣ್ಣು " (Laterite. ಇಂಕನಿ). [ ಜಂಬು$_3$ + ಮಣ್ಣು(<ಮಣ್) ]

**ಜಂಬುಮಿಾನು** (ನಾ). ಒಂದು ಬಗೆಯ ಮಿಾನಂ : " ನಲಮಿಾನಃ, ಚಿಲಿಚಿಮಃ, ಹುಲ್ಲಿನೊಳು ತಿರುಗುವ ಮಿಾನಿನ ಹೆಸರುಗಳು—ಅಂದರೆ, ಜಂಬುಮಿಾನು, ಹುಲ್ಲುಮಿಾನು " (ಸಿದ್ಧಾಂತಿ. ೭೩).

[ ಜಂಬು$_1$ + ಮಿಾನು$_2$ (<ಮಿಾನ್$_3$) ]

**ಜಂಬುರಿ** (ನಾ). ಜಂಬುಹುಲ್ಲಿನಿಂದ ಮಾಡಿದ ಹುರಿ,-ಹಗ್ಗ : ಎಮ್ಮೆ ಬಸವಣ್ಣನ ಕಾಲಿಗೆ ಜಂಬುರಿಯಂ ಹಾಕಿ (ಕಾಲಸಂ. ೧೩೮-೨).

[ ಜಂಬು$_1$ + ಹುರಿ$_3$(<ಪುರಿ$_3$) ]

**ಜಂಬುವಾವಿಕೆ** (ನಾ). ಒಂದು ಗ್ರಾಮದ ಹೆಸರು : ಯಸ್ಯಾಘಾಟನಾನಿ ಪೂರ್ವ್ವತೋ ಜಮ್ಬುವಾವಿಕಾಗ್ರಾಮ (ಇಆ. XII, ೧೬೦-೪೭; 812).

[ ? ]

**ಜಂಬುಹುಲ್ಲು** (ನಾ). ಒಂದು ಬಗೆಯ ಹುಲ್ಲು : " ಕಾಶಂ ಇಕ್ಷುಗಂಧಾ ಪೋಟಗಳಃ—ಕಿ ಜಂಬುಹುಲ್ಲು, ಗೊರೆಸುಹುಲ್ಲು " (ಸಿದ್ಧಾಂತಿ. ೧೩೧).

[ ಜಂಬು$_1$ + ಹುಲ್ಲು(<ಪುಲ್) ]

**ಜಂಬುಳಿ** (ನಾ). " ಹಾಸಿಗೆ " (ಕನ್ನಜಾ. ೨೧೦) : ಜಾಡಿ ಜಂಬುಳಿ ಹಾಸಿ ಬೆಳ್ಳಿಹರಿವಾಣವಿಟ್ಟು (ಕನ್ನಜಾ. ೩೩೪). [ ? ]

**ಜಂಬೂಘೃತ** (ನಾ). ನೇರಳೆಮರದ ತೊಗಟೆಯ ನಾರಿನಿಂದ ತಯಾರಿಸಿದ ಒಂದು ಬಗೆಯ ಔಷಧ: ಜಂಬೂಘೃತ—ನೇರಿಲ ಒಳನಾರಂ ೧ ಕೊಳಗದಷ್ಟು ನಾಗಳ ನೀರಿನಲ್ಲಿ ಚಾತುರ್ಭಾಗಾವಶೇಷವಾಗಿ ಕಾಸಿ . . . ಪಾಕವಂ ಮಾಡುವಾಗ (ಸಕವೈ. ೧೮೯). [ ಸಂ.(ಜಂಬೂ + ಘೃತ) ]

**ಜಂಬೂದ್ರುಮ** (ನಾ). ನೇರಳೆಮರ : ಜಂಬೂದ್ರುಮೋಪಲಕ್ಷಿತ ಜಂಬೂದ್ವೀಪದ ಮಂದರದ ಅಪರವಿದೇಹದ ಸೀತೋದಾನದಿಯ ಬಡಗಣ ತಡಿಯೊಳ್ (ಚಾವುಂಪು. ೧೨-೩೧), [ ಸಂ.(ಜಂಬೂ + ದ್ರುಮ) ]

**ಜಂಬೂದ್ವೀಪ** (ನಾ). ಪುರಾಣಪ್ರಸಿದ್ಧವಾದ ಜಂಬೂ, ಪ್ಲಕ್ಷ, ಶಾಲ್ಮಲೀ, ಕುಶ, ಕ್ರೌಂಚ, ಶಾಕ ಮತ್ತು ಪುಷ್ಕರ ಎಂಬ ಸಪ್ತದ್ವೀಪಗಳಲ್ಲಿ ಒಂದು; ಭಾರತ ಹಾಗು ಅದರ ಸುತ್ತಮುತ್ತಲಿನ ಪ್ರದೇಶ : ಅತಿವೃತ್ತದೆ ರವಿಬಿಂಬಾಕೃತಿಯೋಜನ ಶತಸಹಸ್ರವಿಷ್ಕಂಭಂ ವಿಶ್ರುತ ಜಂಬೂವೃಕ್ಷ ಮಹಾಪ್ರತೀತಿಯಂ ನೆಗಟ್ದುದಿಳೆಗೆ ಜಂಬೂದ್ವೀಪಂ (ಆದಿಪು. ೧-೪೯); ನಾನಾ ದ್ವೀಪದೊಳಗ್ರಿಮಂ ನೆಗಟ್ದ ಜಂಬೂದ್ವೀಪಮ್ (ಸೌಇಇ. XX,೪೭-೧೨ ; 1074) : ಇರೆ ಜಂಬೂದ್ವೀಪಮಲ್ಲಿಂ ಪೊಱಗಿರೆ ಲವಣಾಂಭೋಧಿ (ಪುಷ್ಪಪು. ೧-೯೧). [ ಸಂ.(ಜಂಬೂ + ದ್ವೀಪ) ]

**ಜಂಬೂಫಲ, ಜಂಬೂಫಳ** (ನಾ). ನೇರಳೆಹಣ್ಣು : ಮಾಕಂದಂ ಫಲಹೀನಮಾದ ಪದದೊಳ್ ಜಂಬೂಫಲಾಸ್ವಾದನಸ್ವೀಕಾರೋತ್ಸವದಿಂದದಂ ಮಱೆದ ಕೀರ ಪ್ರೌಢಿಯಂ ಕಾಣ್ಬುದಲ್ತೆ (ಮಲ್ಲಿಪು. ೮-೯೮). **ಜಂಬೂಫಳ:** ಜಳಜಂ ಬಾಳಂ ಜಂಬೂಫಳಮೆಂಬಿನಿತಱ ಕಷಾಯತೋಯಮನೆಱೆ ಬಂದೆಳಮಾವಿನ ಮೊದಲೊಳ್ ತತ್ಫಳಚಯಮಾಮೋದ ಸುರಭಿಗಂಧಮನಾಳ್ಗುಂ (ಲೋಕೋಪ. ೬-೨೭); ಕಂದಮೂಲಮಂ ನವಜಂಬೂಫಳಮಾಮ್ರಫಳಂ ಕದಳೀಫಳಂಗಳಂ ತೀವಿ ತಂದು ಮುಂದಿಳುಪುತ್ತುಂ (ಗಿರಿಕ. ೯-೯೧). [ ಸಂ. (ಜಂಬೂ + ಫಲ) ]

**ಜಂಬೂಫಳ** 'ಜಂಬೂಫಲ' ನೋ.

**ಜಂಬೂಮೊಡವೆ** (ನಾ). ಒಂದು ಬಗೆಯ ಮೊಡವೆ; ಕೆಂಪು ಮೊಡವೆ (?) : ಸುಣ್ಣ, ಅರಿದಳ, ಆಲದ ಹಣ್ಣೆಲೆ . . . ಅರಿಸಿನ ಇವಂ ಸಮಾನಂಗೊಂಡು ಅರೆದು ಎಣ್ಣೆಯಲ್ಲಿ ಕಲಸಿ ಪೂಸಲು ಬಂಗು, ಜಂಬೂಮೊಡವೆ ಇವೆಲ್ಲಾ ಮಾಣ್ಗುಂ (ವಿವೈವಿ. ೧೩೦). [ ಜಂಬು$_3$ + ಮೊಡವೆ]

**ಜಂಬೂರ್** (ನಾ). ಒಂದು ಊರಿನ ಹೆಸರು : ಇದಕ್ಕೆ ಸಕ್ಕಿ ಜಮ್ಬೂರ ಪೆಮ್ಮಾಡಿಗಾವುಣ್ಡನು ಬಾಗೆಯೂರ ಕಮ್ಮಾಱಗಾವುಣ್ಡನು (ಎಕ. V, ಚನ್ನರಾ. ೨೫೧-೧೨ ; ಸು. 926). [ ? + ಊರ್ ]

**ಜಂಬೂರಿ** (ನಾ).=ಜಂಬುಮಣ್ಣು : ಬೆಳಗಾವಿ, ಕಾರವಾರ, ಮಂಗಳೂರು ಮುಂತಾದ ಕಡೆಯಲ್ಲಿ ಜಂಬೂರೀ ಇಟ್ಟಂಗಿಗಳ ಮನೆಗಳನ್ನು ಕಟ್ಟುವರು (ಮುಂಬಯಿ. ೮-೨೫೦). [ <ಜಂಬು₃ ]

**ಜಂಬೂವಿಟಪ** (ನಾ). = ಜಂಬೂದ್ರುಮ : ತೋರ್ಪ ತೊಂಗಲೆ ಜಂಬೂ ವಿಟಪಪ್ರಹಾರರುಚಿಯಂ ವಕ್ತ್ರಾರುಣಂ ಸಂಜೆಯಂ ಗೆಲೆ ಪೋಲ್ವತ್ತು (ಕಾವ್ಯಸಾ. ೫೨೫ ಕೊಡ್ರಳ್). [ ಸಂ. (ಜಂಬೂ + ವಿಟಪ) ]

**ಜಂಬೂಸವಾರಿ**(ನಾ). ೧. ಬನ್ನಿಮರಕ್ಕೆ ಆನೆಯ ಮೇಲೆ ಹೊರಡುತ್ತಿದ್ದ ಮೆರವಣಿಗೆ. Pಮೈಸೂರುದೇಶದ ಅರಸರು ಸಾಂಪ್ರದಾಯಿಕವಾಗಿ ನಾಡಹಬ್ಬದ ಉತ್ಸವದ ಅಂಗವಾಗಿ ಆನೆಯ ಮೇಲೆ ಬನ್ನಿಮರಕ್ಕೆ ಹೊರಡುತ್ತಿದ್ದ ಮೆರವಣಿಗೆ: ನಾನೊಬ್ಬನೇ ಜಂಬೂಸವಾರಿಗೆ ಹೊರಡುವುದೇ ಸರಿ ಎಂದು ನಿರ್ಧರಿಸಿದೆ (ವೃದ್ಧವಿ. ೯೨). ೨. ಮೆರವಣಿಗೆ: ಭರತನು ರಾಮಪಾದುಕೆಯನ್ನು ತಲೆಯ ಮೇಲಿಟ್ಟುಕೊಂಡು ಜಂಬೂಸವಾರಿ ಹೊರಟನು (ಹುಟ್ಟುಹ. ೦೩೬). [ಜಂಬೂ₀ (P ←ಇಂ. Jumbo) + ಸವಾರಿ]

**ಜಂಬೆ** (ನಾ). ಒಂದು ಬಗೆಯ ಧಾನ್ಯ: ವಿರೋಧಿಸಂವತ್ಸರದಲು ಹೆಚ್ಚಿದ ಜಂಬೆಯಿಂದ ವಿಶ್ವನಾಥಪುರದ ಸ್ವಾಸ್ತಿಯಿಂದ ಬಿಜ ಖ ೧೦ಕೆ ಭತ (ವ್ಯಾಅರಿ. ೦೯೪೩, ೮೮-೬೫; 1711). [ ? ]

**ಜಂಭ₁** 'ದಂಬ' ನೋ.

**ಜಂಭ₂** (ನಾ). ೧. ನಿಂಬೆಯ ಗಿಡ ಮತ್ತು ಅದರ ಹಣ್ಣು ; "ಜಂಬೀರಃ, ದಂತಶಠಃ, ಜಂಭಃ, ಜಂಭೀರಃ, ಜಂಭಲಃ ಇ ನಿಂಬೇಗಿಡದ ಹೆಸರುಗಳು" (ಸಿದ್ಧಾಂತಿ. ೦೦೩); ಪೊಂಗುತಿಹ ಕ್ರಮುಕಾವಳ ಬಿಲ್ವ ಜಂಭ ನಾರಂಗ ಫಲ (ಬಿಬಪು. ೦೦-೨೦). ೨. ದವಡೆ. ೩. ಬಾಯಿ. ೪. ಹಲ್ಲು ; ದಂತ ; ಕೋರೆ. ೫. ಬಾಯಿಂದ ಕಚ್ಚುವುದು; ತಿನ್ನುವುದು. ೬. ಇಂದ್ರನಿಂದ ಹತನಾದ ಒಬ್ಬ ರಾಕ್ಷಸನ ಹೆಸರು : ತಾರಕನ ಕೈಟಭನ ಮಹಿಷನ ವೀರಜಂಭನ ಕಾಲನೇಮಿಯ ತಾರಕಾಕ್ಷನ . . . ಜಜ್ಝರತನವಿವ ನೊಬ್ಬನಲಿ (ಕುವ್ಯಾದ್ರೋ. ೦೬-೩೭) ; ಬರಹೇಳ್ ನಿಕುಂಭನಂ ಶುಂಭನಂ ಜಂಭನಂ ಬರಹೇಳ್ ಸಶಬಲನಂ ಪ್ರಬಲನಂ (ಜಬಪು. ೪೭-೨೦). [ ಸಂ. ]

**ಜಂಭದ್ವಿಷ್ಟ** (ನಾ).= ಜಂಭದ್ವೇಷಿ: "ಸುತ್ರಾಮಾಖ್ಯಂ . . . ಪಾಕನಮುಚಿ ಜಂಭದ್ವಿಷ್ಟಂ" (ವಸುಕೋ. ೬-೩೪). [ ಸಂ. ]

**ಜಂಭದ್ವೇಷಿ** (ನಾ). ಜಂಭ ಎಂಬ ರಾಕ್ಷಸನ ಶತ್ರು ; ಇಂದ್ರ : ದೋಷಿ ಬಂದನೆನುತ್ತ ಜಂಭದ್ವೇಷಿಯಂ ಬೆನ್ನಟ್ಟಿ ಕರವಂ ರೋಷದಿಂ ಕಡಿದಮರ ಜನನಿಯ ಗೋಣಮಂ ಕೊಯ್ದು (ಬಸಪು. ೫೮-೫೨). [ಸಂ. ಜಂಭದ್ವೇಷಿನ್]

**ಜಂಭರಿಪು** (ನಾ). = ಜಂಭದ್ವೇಷಿ : "ಗಿರಿನಮುಚಿಬಲವೃತ್ರಜಂಭರಿಪುವೆನೆ . . . ಶಚೀಪಾಲನೆಂದರೆ ಶಕ್ರನಕ್ಕುಂ" (ಮಂಗರಾ. ೦೨-೨).

[ ಜಂಭ₂ + ರಿಪು ]

**ಜಂಭರಿಪುನಾಥ** (ನಾ). ಇಂದ್ರನಿಗೆ ಪ್ರಭು; ಶಿವ: ಜಯ ಜನಾರ್ದನವಂದ್ಯ . . . ಜಯ ಜಂಭರಿಪುನಾಥ (ಹದಕಾ. ೧೦-೪೦). [ಜಂಭರಿಪು + ನಾಥ ]

**ಜಂಭಲ** (ನಾ). = ಜಂಬೀರ ೧ : ತಿಲಕಾಶೋಕ ರಸಾಲ ಸಾಲವಕುಳಾಶ್ವತ್ಥಾರ್ಜುನಪುಷ್ಪಜಂಭಲ ಜಂಬೂಬದರಿ ತಮಾಲ ಕದಳಿ ಬಂಧೂಕ . . . ಕಣ್ಗೊಪ್ಪಿತು (ವಂಕಮ. ೩-೫). [ ಸಂ. ]

**ಜಂಭಾರಿ**(ನಾ).=ಜಂಭದ್ವೇಷಿ: ಜಂಭಾರಿ ವಿಕೃತಮಾಡುವ ರಂಭಾನಟಿಯಂತೆ ಲಾಸ್ಯದೊಳ್ ತಾಂಡವಮುಜ್ಜೃಂಭಿಸೆ (ಶಾಂತಿಪು. ೧೦-೬೮); ಆರು ಕೊಟ್ಟರು ಶರವನಿದ ಮದನಾರಿಯೋ ನಿಮ್ಮಯ್ಯನಹ ಜಂಭಾರಿಯೋ (ಕುವ್ಯಾದ್ರೋ. ೧೮-೦೫). [ ಜಂಭ₂ + ಅರಿ₂ ]

**ಜಂಭೀರ** (ನಾ). ೧. ನಿಂಬೆಯ ಗಿಡ ಮತ್ತು ಅದರ ಹಣ್ಣು : ಜಂಬೀರಃ . . . ಜಂಭೀರಃ, ಜಂಭಲಃ ಇ ನಿಂಬೇಗಿಡದ ಹೆಸರುಗಳು " (ಸಿದ್ಧಾಂತಿ. ೦೦೩). ೨. ಮರುಗ ; ಮರುವಕ. [ ಸಂ. ]

**ಜಂಭೆ** (ನಾ). ಒಂದು ಬಗೆಯ ಮರ : ಕೆಲವು ಕಡೆಗಳಲ್ಲಿ ತೇಗ, ನಂದಿ, ಹೆಬ್ಬಲಸು, ಬಲಿಗೆ, ದೂಪ, ಜಂಭೆ . . . ಮುಂತಾದ ಗಗನ ಚುಂಬಿತ ವೃಕ್ಷಗಳು (ಪಂಜಪಂ. ೨). [ ? ]

**ಜಕಂ** 'ಜಖಂ' ನೋ.

**ಜಕಜಕನೆ** (ಅ). ಗಾಬರಿಯೊಡನೆ; ಹೆದರಿಕೆಯಿಂದ ಕೂಡಿ : ಪ್ರಜೆಯು ಜಕಜಕನೆ ಜರದು ಗಜಬಜೆಯಾಗೆ (ಗುರುಚಾ. ೦೩-೯೮).

[ ಜಕಜಕ₀ + – ಅನೆ₁ ]

**ಜಕಣ** 'ಜಕ್ಕಿಣ' ನೋ.

**ಜಕಮಿ** 'ಜಖಂ' ನೋ.

**ಜಕಾತಿ, ಜಕ್ಕಾತಿ** (ನಾ). ೧. ಸರಕುಗಳಿಗೆ ಉಕ್ಕಡದ ಬಳಿ ಕೊಡುವ ತೆರಿಗೆ ; ಸುಂಕ : ಸರಕಾರದವರು ಉಪ್ಪಿನ ಜಕಾತಿ ಕೂಡ್ರಿಸಿದ್ದರಿಂದ ಈಗ ಸ್ವಲ್ಪ ಸ್ಥಳಗಳಲ್ಲಿ ಮಾತ್ರ ಉಪ್ಪು ಹುಟ್ಟುತ್ತದೆ (ಕಭಾಗ. ೨೮) ; ನಮ್ಮಲ್ಲಿಯ 'ಜಕಾತಿ' ಹೈದರಾಬಾದ ನಿಜಾಮಶಾಹಿಯಲ್ಲಿ 'ಕರೋಡಗಿರಿ' ಯಾಗುತ್ತದೆ (ಭಾಷಾಶಾ. ೦೨). ೨. "ಸುಂಕದ ಕಟ್ಟೆ"(ಜಾನಕೋ. ೫೮). **ಜಕ್ಕಾತಿ:** ೨. ಹಕ್ಕಿ ಹಾರಿದರೆ ಬೆದರ್ಯಾವ ನಗರದ ಜಕ್ಕಾತಿ ಮೀರಿ ಬರತಾವ (ಹಳ್ಳಿಯ. ೦೦೯)

[ ←ಅರ. ಹಿಂ. ಮರಾ. ಜಕಾತ್ ]

**ಜಕಾತಿಕಟ್ಟೆ** (ನಾ). ಸುಂಕದ ಕಟ್ಟೆ ; ತೆರಿಗೆ ವಸೂಲಿಯ ಉಕ್ಕಡ : ಜಕಾತಿಕಟ್ಟೆಯವರಿಗೆ ಸಿಗುವದೆಂದರೆ ಒಂದೇ–ಜಕಾತಿ ತಪ್ಪಿಸಿ ಮಾಲು ಸಾಗಿಸುವವರಿಂದ ಸಿಗುವ ಲಂಚ (ಪಾತರ. ೦೪೩). [ ಜಕಾತಿ + ಕಟ್ಟೆ₁ ]

**ಜಕಾರ** (ನಾ). = ಜ ೧ : ಚಕಾರಕ್ಕೆ ಜಕಾರಂ–ಕಾಚ–ಗಾಜು (ಶಮದ. ೨೫೫ ಪ್ರಯೋ). [ ಸಂ. ]

**ಜಕೀರ, ಜಕೀರಿ, ಜಕೇರ, ಜಖೀರು** (ನಾ). ದಾಸ್ತಾನು ; ಸಂಗ್ರಹ : ಸಾ ರಿ ಪೆ ವ ರ ಮ ನೆ ಯಾ ಳ್ಕೆ ಯ ದೊಡ್ಡ ಜಕೀರಗೆಂದು ಸರ್ವರಿಗಾ ರಾಯನರಮನೆವಾರಕದೊಳಗುತ್ತಮರೆನಿಸುವೊಬ್ಬೊಬ್ಬ ಮರಾಳನಿತ್ತಂತೆ (ಭಕ್ತಿಸ. II, ೦೦-೦). **ಜಕೀರಿ :** ಬಿದುರೂರ ಪರಿಸ್ತರಣಮಂ ವೇಷ್ಟಿಸಿ ಜಕೀರಿ ರಸ್ತು ಮುಸ್ತೈದೆಗಳೊಳಪೊಗದಂತು ಕಂಡಿ ಕಣಿವೆ ಪಥಂಗಳಂ ಕಟ್ಟಿ (ಕೆಳನೃ. ೫-೮೮). **ಜಕೇರ:** ಎರಡನೇದು, ಅರಮನೆ ಜಕೇರವಂತು ಕಂಡು ಇದೆ (ರಾಜೇಂದ್ರ. ೩೬). **ಜಖೀರು :** ಚಿತ್ರದುರ್ಗದ ಪೂರ್ವದ ದೊರೆಗಳು ತಯಾರ್ಮಾಡಿಸಿ ಹಾಕಿರುವ ಮದ್ದುಗುಂಡು ತೋಪುಖಾನೆ ಬಾಣ ಮುಂತಾದರ ಜಖೀರು ಬಹಳವಾಗಿದೆ (ಚಿತ್ರಪಾ. ೭೩).

[ ←ಮರಾ. ಜಕೀರ್ ; ಅರ. ಪಾರ. ಜಖೀರಾ ]

**ಜಕೀರಿ** 'ಜಕೀರ' ನೋ.

**ಜಕೇರ** 'ಜಕೀರ' ನೋ.

**ಜಕ್ಕ₁** 'ಚಕ್ಕ₁' ನೋ.

**ಜಕ್ಕ₂** (ನಾ). ೧. ಕುಬೇರನ ಪ್ರಜೆಗಳಲ್ಲಿ ಒಬ್ಬ ; ಯಕ್ಷ : ಕುಬೇರನಿಂ ಕಪ್ಪಂಗೊಂಡು ಪೊನ್ನಂ ಜಕ್ಕರೆಕ್ಕೆಯಿಂ ಪೊತ್ತು ಬರೆ ತಡೆಯದಿಂದ್ರಪ್ರಸ್ಥ ಪುರಕ್ಕೆ ಬಂದಂ (ಪಂಪಭಾ. ೬-೩೨ ವ); ಜಕ್ಕರ್ ಪೂಜಿಸಿ ಪೋದ ಬಟಿಕ್ಕಂಗದ ನೇಜ಼್ ಬಾರಿಸುತ್ತಂಕುಶದಿಂ ದಿಕ್ಕರಿಯನಧಃಕರಿಸುವ ತಕ್ಕಿನ ಕಿಷ್ಕಿಂಧಮೆಂಬ ನಿಜವಾರಣಮಂ (ಪಂರಾಮಾ. ೧೮-೯೫). ೨. ಒಬ್ಬಾತನ ಹೆಸರು : ಅನಿತುಯೊಳ್ಗುಣಮುಮಜಿ಼ವು ಧರ್ಮ್ಮಮುಂ ಜಕ್ಕ ನಿನಗಲ್ಲದಿಲ್ಲ ಭುವನದೊಳ್ (ಎಕ. VIII, ನಗರ. ೬೨-೨ : ಸು. 800) ; ಅವರ ಮಗನ ಮಗಂ ಜಕ್ಕ ಪೆಣ್ಡಿರುಡೆಯುಟ್ಟುವ ಪುಯ್ಯಲುಂ ತುಱುಯ್ಯಲುವ ಕೇಳ್ದು ತಾಗಿ ಕಾದಿ (ಎಕ. XII, ಶಿರಾ. ೪೩-೩ : ಸು. 1000). ೩. (ಆಲಂ) ನವೆಯುತ್ತಿರುವವನು; ಕ್ಷೀಣದೇಹದವನು; ಸೊರಗಿ ಹೋಗುತ್ತಿರುವವನು: ದಿನ ಹೋದ ಹಾಗೆಲ್ಲ ಜಕ್ಕನಾಗುತ್ತಿ. ಉಂಡದ್ದೆಲ್ಲಾ ಎಲ್ಲಿ ಹೋಗುತ್ತದೆ? (ರೂಢಿ). [ <ಪ್ರಾ. ಜಕ್ಖ / ಸಂ. ಯಕ್ಷ ]

**ಜಕ್ಕಂಜಱಿ** (ಕ್ರಿ). ಅತಿಯಾಗಿ ನಿಂದಿಸು ; ನಿರ್ದಾಕ್ಷಿಣ್ಯವಾಗಿ ಜರಿ,- ಹೀಯಾಳಿಸು: ಈ ಪೆರ್ಮೆಗೆ ನೋಂತಳೀ ಹರೆಯಮಿಾ ಪಡಪೀ ಸೊಬಗೀ ವಿಳಾಸಮೇಂ ಕಾರ್ಮುಟಿಯೊಳ್ ಬಸಂತನಿವಳಂಗದೊಳ್ ನೆಲೆಗೊಂಡು ದಕ್ಕುವೇಂ ಅಂತು ಜಕ್ಕಂಜಱಿವ ಕಜ್ಜಮಂ ಕೇಳ್ದು (ಅನಂಪು. ೮-೧೯ ವ).
[ ಜಕ್ಕನೆ$_0$ + ಜಱಿ$_1$ (<ಜಱಿ) ]

**ಜಕ್ಕಂದೊಳ** 'ಜಕ್ಕಂದೊಟಲಿ' ನೋ.

**ಜಕ್ಕಂದೊಳಲಿ** 'ಜಕ್ಕಂದೊಟಲಿ' ನೋ.

**ಜಕ್ಕಂದೊಳಲಿದೇರ** 'ಜಕ್ಕಂದೊಟಲಿದೇರ' ನೋ.

**ಜಕ್ಕಂದೊಟ** (ನಾ). ಚಕ್ರಾಕಾರವಾಗಿ ಸುತ್ತುವ ಉಯ್ಯಾಲೆ ; ಗಿರಕಾಲೆ : ಸುಟಿಗಾಳಿಯ ತೂಲದಂತೆ ಜಕ್ಕಂದೊಟದಂತೆ ಜಾಟಣದ ಗುಂಡಿಗೆಯಂತೆ ಕುಳಾಳಚಕ್ರದಂತಿಂದುವರಂ ತೊಟಲ್ತಿರುತುಮಿರ್ದುದೆ ಸಾಲದೆ ಕರ್ಮಯೋಗದಿಂ (ಚಂದ್ರಪು. ೧೩-೯೦); ದೇವಕಾಂತೆಯರಲ್ಲಾಡದೆ ಸಂದ ಸೆಳ್ಳುಗುರ ಸೂಚೀನರ್ತನಂ ಬಾಹುಶೋಭೆಯ ಜಕ್ಕಂದೊಟ ವಂಶಮಂಡಲದ ಲಾಸ್ಯಂ ತನ್ನ ಮೆಯ್ಯುದ್ದಮಂ (ಅನಂಪು. ೫-೯೭).
[ <ಸಂ. ಚಕ್ರಾಂದೋಲ ]

**ಜಕ್ಕಂದೊಟಲಿ, ಜಕ್ಕಂದೊಳ, ಜಕ್ಕಂದೊಳಲಿ, ಜಕ್ಕಂದೋಟ** (ನಾ). ಕೋಣ ; ಮಹಿಷ : ಜವನೇಱಿದೊಂದು ಜಕ್ಕಂದೊಟಲಿಯಂತೆ ಕಣ್ಗೆಸೆದುದೇಱಿದಿಭಂ ಚಲದಂಕರಾವನಾ (ಶಮದ. ೧೭೨ ಪ್ರಯೋ); ಎಂ ಮಲೆಪ್ಪೆ ಜಕ್ಕಂದೊಟಲಿಯ (ಚಿಕವಿ. ೬-೨೭೪); ಜವಹುರದ ಜಕ್ಕಂದೊಟಲಿಯಿಂ ಗೆಲೆವರ್ಪ ಕಾಟಿಕ್ಕೋಣವಳಗದಿಂದೆಯುಂ (ರಾಮಾಶ್ವ. ೩-೨೫). **ಜಕ್ಕಂದೊಳ :** ಜವನೇಱಿದೊಂದು ಜಕ್ಕಂದೊಳದಂತೆ ಸೇವುಣಘರಟ್ಟನ ವೀರವಿಳಾಸಸಿಂಧುರಂ (ಎಕ. VI, ತರೀಕೆ. ೪೫-೪೬; 1196). **ಜಕ್ಕಂದೊಳಲಿ:** ಜವನ ಜಕ್ಕಂದೊಳಲಿಯಂತೆ ಮಾರಿಯ ಮಸಕದಂತೆ ಪಸರಿಸಿ ನಿಂದ ರಥಿಕಪ್ರತಾನದೊಳಂ (ಗಿರಿಕ. ೬-೫೫ ವ); ಜವನ ಜಕ್ಕಂದೊಳಲಿಯಂತಿರ್ದ ಗಜಸಮಾಜದಿಂ (ಹವಿಾರ. ೩-೩೩ವ) : ಕಾರ್ಮುಡುವಣ್ಣ ಜಕ್ಕಂದೊಳಲಿಯ ತಾ ನನ್ನಿಯಿಂದೇರುತ್ತ (ಅರ್ಜಾವಿ. ೮-೧೮). **ಜಕ್ಕಂದೋಟ:** ಜವನ ಜಕ್ಕಂದೋಟದೊಡ್ಡೈದೆ ಮುಮ್ಮುಟಿ ಯುಪ್ಪಂತಿದಿರೇಱಿ ತಳ್ತುವು ರಥಾನೀಕಂ ರಥಾನೀಕದೊಳ್ (ಅನಂಪು.೧೪-೫). [ ? ]

**ಜಕ್ಕಂದೊಟಲಿದೇರ, ಜಕ್ಕಂದೊಳಲಿದೇರ**(ನಾ). ಕೋಣವನ್ನು ವಾಹನವಾಗುಳ್ಳವನು ; ಯಮ : "ಜಕ್ಕಂದೊಟಲಿದೇರನೆನೆ ಯಮನಕ್ಕುಂ" (ಕವಿಕಂ. ೩೭). **ಜಕ್ಕಂದೊಳಲಿದೇರ :** ಈಯೊಡಲ್ಪಿಟದ ಜಕ್ಕಂದೊಳಲಿ ದೇರನಾಲಯವು (ಸಿದ್ಧೇಪು. ೫-೨೮). [ ಜಕ್ಕಂದೊಟಲಿ+ತೇರ್$_2$+ - ಅ$_7$ ]

**ಜಕ್ಕಂದೋಟ** 'ಜಕ್ಕಂದೊಟಲಿ' ನೋ.

**ಜಕ್ಕಜವ್ವನ** (ನಾ). ಪೂರ್ಣ ಯೌವನ ; ತುಂಬು ಯೌವನ : ಅವರೊಳೊರ್ವಳ್ ಜಕ್ಕಜವ್ವನದ ಚೆಲ್ಲಗಾರ್ತಿ (ರಾಮಾಶ್ವ. ೫೦-೧೪) : ಮತ್ತಮೊಂದೆಡೆಯೊಳೊರ್ವಳ್ ಜಕ್ಕಜವ್ವನದ ಚೆಲ್ಲಗಾರ್ತಿ (ಚಂದ್ರಛ್ಛ. ೦೪-೧೧೨ ವ). [ <ಜಕ್ಕನೆ + ಜವ್ವನ ]

**ಜಕ್ಕಡಿ, ಚಕ್ಕಡಿ$_1$, ಜಕ್ಕುಡಿ** (ನಾ). [ನಾಟ್ಯ] ಒಂದು ಬಗೆಯ ನೃತ್ಯ : ಜಕ್ಕಡಿ ಚಿಂದು ಮೊದಲಾದ ಠಾಯುವು (ರೇವಣ. ೩೦-೩೮) : ಅದಿರ್ದು ಜಕ್ಕಡಿಯ ಕೊಂಡರು ಜನಸ್ತುತಿಗೈದರು (ಭರಚ. ೧೨-೧೦೫); ಅನುಗೊಳಿಸಿ ಚಿಂದು ಜಕ್ಕಡಿ ಕೋಲಚಾರಿಗಳ್ . . . ಉಳ್ಳನಿತು ಭೇದಂಗಳಿಂ ನರ್ತಿಸುವ ನೃತ್ಯದಬಲಾಜನಂ ಕಣ್ಗೆಸೆದುದು (ಚಬಪು. ೨-೨೯). **ಚಕ್ಕಡಿ$_1$ :** ಉರುಪ ನೇರಗಳ ಚಕ್ಕಡಿ ಚಿಂತು ಮೊದಲಾದ ಪರಿಪರಿ ನಾಟ್ಯದೋಱಿದನು (ಭರಚ. ೭೪-೯೧). **ಜಕ್ಕುಡಿ :** ಗುಡುಗುಡುಗಳ ನರ್ತನಗಾತಿಯರೊಳು ಪೆರ್ಬಡಿಸುವ ಗೀತಶಬ್ದಗಳ ಪಡಿತಪ್ಪದೆ ಕೋಲಚಾರಿಗಳಿಂದ ಜಕ್ಕುಡಿ ಮೆಱಿದುವು ದೇವಾಲಯದಿ (ಮೋಹತ. ೧೮-೭). [ <ಸಂ. ಜಕ್ಕರೀ ]

**ಜಕ್ಕಣಿ** 'ಜಕ್ಕಿಣಿ' ನೋ.

**ಜಕ್ಕಣಿತಾಳ** (ನಾ). [ಸಂಗೀತ] ಒಂದು ಬಗೆಯ ತಾಳ : ರಾಗ ಮಧ್ಯಮಾವತಿ,-ಜಕ್ಕಣಿತಾಳ (ಪ್ರಸಭಾ. ೬೦)
[ ಜಕ್ಕಣಿ$_0$ (<ಜಕ್ಕಡಿ) + ತಾಳ$_1$ (= ತಾಲ) ]

**ಜಕ್ಕನೆ** (ಅ). ಸಂಪೂರ್ಣವಾಗಿ: ಕೊಳಗೊಳಂಗಳೊಳ್ ತೊಟಲ್ದು ಬಟಲ್ದು ಬೆಂಡಾಗಿ ಬಿಟ್ಟು ಜಕ್ಕನೆ ಜಱಿವ ಜಕ್ಕವಕ್ಕಿಗಳ (ಲೀಲಾವ. ೩-೨೦).
[ ? + - ಅನೆ$_1$ ]

**ಜಕ್ಕಬ್ಬೆ** (ನಾ). ಒಬ್ಬಾಕೆಯ ಹೆಸರು : ಜಕ್ಕಬ್ಬೆ ತಂಗೆ ಜಾಬೆ ಕಲ್ಲ ನಿಱಿಸಿದರ್ (ಎಕ. II, ೪೫೭-೭ ; 972). [ ಜಕ್ಕ$_2$ + ಅಬ್ಬೆ$_1$ ]

**ಜಕ್ಕವಕ್ಕಿ** 'ಚಕ್ಕವಕ್ಕಿ' ನೋ.

**ಜಕ್ಕಸರ** (ನಾ). ಒಂದು ಬಗೆಯ ಕಂಠಾಭರಣ : ಆ ಜಕ್ಕಸರಂ ನಿನ್ನ ರಸಿಗೆ (ರಾಮಾಶ್ವ. ೩೮-೧೮) ; ಆ ಯೆಕ್ಕಸರಂ ತರಳಿಕೆಗೆ ಜಕ್ಕಸರಮಿಾ ಹರಿಣಿಕೆಗೀ ಪಿಂಡುಗಂಕಣಂ ನಿನಗಾಯ್ತು (ಚಂದ್ರಛ್ಛ. ೫-೮೯) [ ಜಕ್ಕ ? + ಸರ$_6$ ]

**ಜಕ್ಕಾತಿ** 'ಜಕಾತಿ' ನೋ.

**ಜಕ್ಕಿ** (ನಾ). ಯಕ್ಷಸ್ತ್ರೀ ; ಯಂಕ್ಷಿ : "ಕನ್ನಿಕೆಯರು ಜಲಾಶ್ರಿತೆಯರೆನಲ್ಕೆ ಜಕ್ಕಿಯರೆನಿಕ್ಕು" (ಮಂಗರಾ. ೫-೧೫) ; ಜಕ್ಕಿಯರೂಟವೆ ಕೂಟದೇಟ್ಗೆಯೊಳ್ ಸುರುಕೆನಬಾರದೆಂಬ ಬೆಲೆವೆಣ್ಗಳ ಕೂಟವನಿಕ್ಕು ಕಿಚ್ಚಿನೊಳ್ (ಅನಂಪು. ೮-೫೭) ; ಶರೀರಿಯಿಂ ನೆಮ್ಮಿದ ಕುತ್ತಮೊತ್ತಿದೊಡೆ ಗಾಳಿ ಗರಂ ನೆಲಮುಕ್ಕಿ ಜಕ್ಕಿಯುರ್ಬೊಮ್ಮಯನೆಂದು ಜೀವಪಥೆಗೆಯ್ದೊಡೆ (ಶಾಸ್ತ್ರಟೀ. ೨೪-೩); ಶಿರಸ್ಸರಸೀಜದಿಂದೆಯುಂ ಜಾನಿಸದಾಗಳಾಂ ಜಲದ ಜಕ್ಕಿಯರ್ಗೇಱಿಸಿದೆಂ ನಿರಂತರಂ (ದಶಕು. ೧೩-೫೦) ; ಜಕ್ಕಿಯ ತೆರೆಯ ತೆಱಿದು ಮೈಯ ತೋರ್ಪಾಗ ಚಿಕ್ಕಮಾತೇಕೆಂದಳಾಕೆ (ಭರಚ. ೪೨-೧೭). [<ಸಂ. ಯಕ್ಷೀ]

**ಜಕ್ಕಿಕೊಳಗ** (ನಾ). ಯಕ್ಷಿಗೆ ಮಿಾಸಲಾದ ಕೊಳಗದಷ್ಟು ಧಾನ್ಯ : ಆ ಊರಹಳ್ಳಿ ಸಹಿತ ಜಕ್ಕಿಕೊಳಗ ಧರ್ಮ್ಮಗೊಳ ದಾನಗೊಳಗ ಕಳದು (ಎಕ. IV, ಚಾಮರಾ. ೮೩-೩೦ ; 1117). [ಜಕ್ಕಿ + ಕೊಳಗ$_1$]

**ಜಕ್ಕಿಣಿ, ಜಕಣಿ, ಜಕ್ಕಣಿ, ಜಿಕ್ಕಿಣಿ**(ನಾ). ೧. ಯಕ್ಷಿಣಿ; P ಮುತ್ತೈದೆಯಾಗಿ ತೀರಿಕೊಂಡವಳು ತಾಳುವಳೆಂದು ನಂಬಲಾದ ದೇವತಾ ರೂಪ : ಜಕ್ಕಿಣಿಯನ್ನು ನಿಮ್ಮಪ್ಪನಾದರೂ ನೋಡಿದ್ದಾನೇನು ? (ನಲದ.೮೭). **೨. = ಜಕ್ಕಡಿ:** ಪಿರಿದು ಪ್ರಬಂಧ ಜಕ್ಕಿಣಿ ರಾಜಕೀರನ ಮೆಱಿವ ಕಟ್ಟಳೆಯಾಟಗಳ ದೊರೆ ರಾಯ ನರಸರಾಜೇಂದ್ರಗೆ ಸಂತಸದೊರೆಯಲಾಡಿದ ರಂಗನೆಯರು (ಕಂಪವಿ. ೮-೬೭). **ಜಕಣಿ :** ೧. ಜಕಣಿಯು ಜಲದೇವರು ಮೊದಲಾದ ಭಿಕಾರಿದೈವಗಳ ಪೂಜಿಸರವರು (ಪುರಂದ. ೦-೦೪೫-೩) ; ಒಂದು ಜಕಣಿ ಹಿಡಿದರೂ ತಡೆಯಬಹುದು. ನಿಮ್ಮ ಪರಾತ ತಡೆಯಲಿಕ್ಕಿಲ್ಲ (ಮರಮ, ೧೩೭) ; ಅದು ಬಂದಾಗಿಂದ ಒಂದು ಥರಾ ಮಂಕಾಗಿ ಕೂತು ಬಿಟ್ಟದೆ. ಜಕಣಿ ಹಿಡಿದು (ಸಂಸ್ಕಾರ. ೧೦೦). **ಜಕ್ಕಣಿ :** ೧. ಇದು ಜನನ ಭಾಗಂಗಳಿದು ವಾಣಿಭದ್ರನೊಡಕಿದು ಜಕ್ಕಣಿ [ಪಾಠಾಂ. ಜಕ್ಕಿಣಿ, ರಘುಕ್ಕಣಿ, ರಘುಕ್ಕಿಣಿ]ಯು ಸೆಕ್ಕಿಯಿದು ಬೊಮ್ಮಯನ ಚೂರ್ಣವಿದು(ಸೋಮಚ.೪-೮೪); ನೆವ್ವ, ಭೂತ, ಜಕ್ಕಣಿ, ಪಂಜೊಳ್ಳಿ ಮೊದಲಾದ ಅಂತರ ಬೆಂತರಗಳಿಗೆಲ್ಲ ಕೋಳಿಗಳನ್ನು ಬಲಿ ಕೊಟ್ಟಿದ್ದಾನೆ (ಕಾನೂರು. ೮೫). **ಜಿಕ್ಕಿಣಿ :** ೧. ಈ ಜಿಕ್ಕಿಣಿ ಹೆಂಡತಿಯದೇ ಚಿಂತೆ (ಮೊಮಗು. ೨೩).
[ <ಪ್ರಾ. ಜಕ್ಖಿಣೀ. / ಸಂ. ಯಕ್ಷಿಣೀ ]

**ಜಕ್ಕಿಯಬ್ಬೆ** (ನಾ). ಒಬ್ಬಾಕೆಯ ಹೆಸರು : ಜಕ್ಕಿಯಬ್ಬೆ ನಾಲ್ಗಾವುಣ್ಗೆಯ್ಯುತ್ತಿರೆ (ಎಕ. VII, ಶಿಕಾರಿ. ೨೧೯-೧೧ ; 918). [ ಜಕ್ಕಿ + ಅಬ್ಬೆ$_1$ ]

**ಜಕ್ಕಿಯೋವೈಜ್ಜ** (ನಾ). ಒಬ್ಬಾತನ ಹೆಸರು : ಜಕ್ಕಿಯೋವೈಜ್ಜರ ಮಗ ಚನ್ದ್ರಸೇಕರ ಮಾಡಿ × × × (ಎಕ. XII, ಪಾವುಗ. ೯೫-೩ ; ಸು. 900).
[ ಜಕ್ಕಿ ? + ಓವೈಜ್ಜ$_0$ (<ಒವರುಂ) ]

**ಜಕ್ಕಿಲಿ, ಜಕ್ಕಿಲೆ, ಜಕ್ಕಿಲ್ಲಿ** (ನಾ). ಒಂದು ಊರಿನ ಹೆಸರು ; **P** ಈಗಿನ ಧಾರವಾಡಜಿಲ್ಲೆಯ ರೋಣ ತಾಲ್ಲೂಕಿನ ಜಕ್ಕಲಿ : ದೇವಾರಕ್ಕೆ ಜಕ್ಕಿಲಿಯೊಳ್ ನಾಲ್ಕು ಮತ್ತಲ್ಕೆಯ್ಯಂ ಕೊಟ್ಟೊಳ್ (ಎಕ. VII, ಶಿಕಾರಿ. ೨೧೯-೧೮ ; 918). **ಜಕ್ಕಿಲೆ :** ಜಕ್ಕಿಲೆಯ ಬಟ್ಟೆ[ಯಿಂ] ಪಡುವ (ಸೌಇಇ. XV, ೪೨-೪೪ ; 12ನೆಯ ಶತ). **ಜಕ್ಕಿಲ್ಲಿ :** ಜಕ್ಕಿಲ್ಲಿಯಾ ಮೇ[ಲಿ] × × [ಯಾ] ದಿತ್ಕನೆಟ್ಟಿಂದೊಡೆ ಊರಟಿವಿನೊಳೆ (ಸೌಇಇ. XI-I, ೩-೨ ; ?). [ ? ]

**ಜಕ್ಕಿಲೆ** 'ಜಕ್ಕಿಲಿ' ನೋ.

**ಜಕ್ಕಿಲ್ಲಿ** 'ಜಕ್ಕಿಲಿ' ನೋ.

**ಜಕ್ಕಿಶರ್ಮ** (ನಾ). ಒಬ್ಬಾತನ ಹೆಸರು: ಜಕ್ಕಿಶರ್ವ್ಮಣ ಏಕಂಶಃ (ಇಆ. VII, ೧೮೭-೩೨ ; 668). [ ಜಕ್ಕಿ ? + ಶರ್ಮ ]

**ಜಕ್ಕಿಸುಂದರಿ** (ನಾ). ಒಬ್ಬಾಕೆಯ ಹೆಸರು : ಆತನ ಸತಿ ಸಕಳಜಗನ್ನೂತೆ ಗುಣವಂತೆ ಜಕ್ಕಿಸುಂನ್ದರಿ ನೆಗಟ್ದಾ ಖ್ಯಾತಿಯ ಕಾಕಂಬಾಟಿಯೊಳ್ಮಾತೆ ಯೊಳ್ಪೆಸೆಯೆ ಬಸದಿಯಂ ಮಾಡಿಸಿದಳ್(ಎಕ. XI, ಚಿತ್ರದು. ೭೪-೧೩ ; 968). [ ಜಕ್ಕಿ + ಸುಂದರಿ ]

**ಜಕ್ಕು, ಜಿರ್ಕು$_2$** (ನಾ). ನಖಕ್ಷತ. 'ಜಕ್ಕುಗೊಳ್' ಪರಾ. **ಜಿರ್ಕು$_2$ :** ಜಿರ್ಕಿಂಗಾ ಕಾದಲರುಚಿಯಳ್ಕದ . . . ಅತನುಸಂಗ್ರಾಮವ ನೀಳ್ಕರಿಸಿದ ಚೆನ್ನಪೊಂಗರಂತೆಸೆದಿರ್ದರ್ (ವೀರವಿ. ೬-೭೯). [ <ಜರ್ಕು ]

**ಜಕ್ಕುಗೊಳ್** (ಕ್ರಿ). ನಖಕ್ಷತ ಹೊಂದು : ಮಂಚಿದೊಂಗಿದೆದ್ದ ಮಿಂಡಿಯರ ಮೇಲುಂದಂ ಸೆಳೆದು ಕುಸಿದು ಕೆಲಕ್ಕೆ ಎಟಿದು ಜಕ್ಕುಗೊಂಡು [ ಡ ] ತಕ್ಕೆಗೆ ತೋರವಾದ ಪೇರುರದ ಮೊಲೆಗಳೊಳಪೊಕ್ಕು ಮುಂಡಾಡಿಯುಂ(ಲೀಲಾವ. ೩-೨೦ ವ). [ ಜಕ್ಕು + ಕೊಳ್$_1$ ]

**ಜಕ್ಕುಡಿ** 'ಜಕ್ಕಡಿ' ನೋ.

**ಜಕ್ಕುಲಿ** (ನಾ). ೧. ಕಚಗುಳಿ ; ನಗುವಂತೆ ಮಾಡಲು ಕೈಗಳಿಂದ ಅಳ್ಳೆಗಳನ್ನು ಮುಟ್ಟುವಿಕೆ ; ಕಟ್ಟಾಡಿಸುವಿಕೆ. 'ಜಕ್ಕುಲಿಗೊಳಿಸು' ಪರಾ. ೨. ಸಂತೋಷ ; ಆಮೋದ ; ಸುಖ. 'ಜಕ್ಕುಲಿತೆ' ಪರಾ.
[ ದೇ.॥ ತಮಿ. ಅಕ್ಕುಳ್ = ಕಂಕುಳು, ಕಕ್ಷ ; ಅಕ್ಕುಳು = ಕಚಕುಳಿಯಿಡು; ಕಟ್ಟಾಡಿಸು ; ಮಲ. ಅಕ್ಕುಳ ; ತೆಲು. ಚಕ್ಕಿಲಿ = ಕಂಕುಳು, ಕಕ್ಷ. ]

**ಜಕ್ಕುಲಿಗಾರೆ** (ನಾ). ಒಂದು ಬಗೆಯ ಸಸ್ಯ ; ಮುಟ್ಟಿದರೆ ಮುನಿ : " ವ್ರೀಡೆ ಜಕ್ಕುಲಿಗಾರೆ " (ಮುಂಗರಾ. ೪೦-೩೨). [ ? ]

**ಜಕ್ಕುಲಿಗೊಳಿಸು** (ಕ್ರಿ). ಕಚಕುಳಿಯಿಡು ; ಚಕ್ಕಳಗುಳಿಯಿಡು : ಜಕ್ಕುಲಿಗೊಳಿಸುವಳ್ ಮುನಿದು ನೋಡುವಳು ತಾ ನಕ್ಕು ತನ್ನೊಳಗೆ ಹಿಗ್ಗುವಳು (ಮೋಹತ. ೧೭-೬೬). [ ಜಕ್ಕುಲಿ + ಕೊಳ್$_1$ + – ಇಸು$_3$ ]

**ಜಕ್ಕುಲಿತೆ** (ನಾ). ಆಮೋದ ; ಸುಖ ; ಸಂತೋಷ : ಮೆಲುವ ಭೂಪರ ಮನಕೆ ಹೊಸ ಜಕ್ಕುಲಿತೆ ಹುಟ್ಟಲು ಬಾಯ ಹಬ್ಬವು ಹೊಳಕಲಮೃತವಿದೆಂಬ ಹಾಲುಂಡೆಗಳನೋರಣಿದಿ ತೆಲುಗನಾರಿಯರ್ಕೆದೆ ಬಡಿಸಿತು(ಕೌಶಿರಾ. ೨-೬೩). [ ಜಕ್ಕುಲಿ + – ತೆ$_2$ ]

**ಜಕ್ಕುಲಿಸು, ಜಕ್ಕುಳಿಸು, ಝುಕ್ಕುಳಿಸು** (ಕ್ರಿ). ೧. ಮೆಲ್ಲಗೆ ಮುಟ್ಟಿ ಅಲುಗಿಸು ; ಕಟ್ಟಾಡಿಸು ; ಕಚಗುಳಿಯಿಡು : ಎತ್ತಿದ ಪಟಯಿಗೆ ಜಕ್ಕುಲಿಸುತ್ತಿರೆ ನಕ್ಕುವು ಗಗನಮಾಶಾಮುಖದಿಂ ಸುತ್ತಲುಮೆನೆ(ವರ್ಧಪು. ೮-೩) ; ಮುದ್ದಂ ಬೇಡುವಳು ಜಕ್ಕುಲಿಸಿ ನಗಿಸುವಳು (ಬಸಪು. ೧೫-೧೪); ಮೆಲ್ಲನೆ ಮಲಗಿರೆ ಕದಪಂ ಮೆಲ್ಲನೆ ಜಕ್ಕುಲಿಸೆ ನಕ್ಕು (ಧರ್ಮನಾ. ೩-೧೨೩); ನಗಿಸಿ ಕೈವೆರಲ್ಗಳಿಂದಳ್ಳೆಯಂ ಜಕ್ಕುಲಿಸಿ (ಭಾವಚಿಂ. ೪-೦೦) ; ಮುದ್ದಿಸಿ ನುತಿಸಿ ಮರ್ಮವ ಜಕ್ಕುಲಿಸಿ ಕೇಳಿದೊಡೆ ಪೇಳಿದಳು (ಸಾಳ್ವಭಾ. ೨೯-೪). ೨. ಆಕರ್ಷಿಸು ; ಮೋಹಗೊಳಿಸು ; ಮೋದಪಡಿಸು : ಮುರಿದು ಸುತ್ತಿದ ಚಂಪಕಮಾಲೆ ಕಣ್ಗಳಂ ಜಕ್ಕುಲಿಸಿತ್ತು (ಅರ್ಧನೇ. ೩-೯೧) ; ಕಿವಿಯಂ ಜಕ್ಕುಲಿಪಂತೆ ನುಣ್ಪಡರ್ದ ಶಬ್ದಂ (ಚಂದ್ರಪು. ೦-೫೦); ರಸಿಕರ ಮನವನಿದು ಜಕ್ಕುಲಿಸದಿರ್ಪುದೇ (ಪದ್ಮರಾ. ೧-೪೧) ; ಚಿತ್ತವ ಜಕ್ಕುಲಿಸದ ಕವಿತ್ವ ಚಂದಿರ ನಿಲ್ಲದೊಂದಿರುಳು (ಸಾಳ್ವಭಾ. ೩-೧೧) ; ಅರಸನ ಮನವ ಜಕ್ಕುಲಿಸಿದರಿಂಪು ಸೊಂಪಿನೊಳು(ಭರಚ. ೩೭-೨೮). ೩. ಅಪಹಾಸ್ಯ ಮಾಡು; ಹೀಯಾಳಿಸು; ಗೇಲಿ ಮಾಡು: ಎಂದು ನುಡಿವ ಜಾಣರ ಜಾಣ್ಮೆಯಂ ಜಕ್ಕುಲಿಸುತ್ತೆ (ಧರ್ಮನಾ.೪-೪೩ ವ) ; ದೇವೇಂದ್ರಸಭೆಯ ಜಕ್ಕುಲಿಸುವ ರತ್ನದ ಚಾವಡಿ (ಭರಚ. ೩೯-೯೩) ; ಹಲುಗಿರಿದು ಜಕ್ಕುಲಿಪ ತಲೆಗಳ (ಮೋಳಿಪು. ೪-೦೬೩). ೪. ಆವರಿಸು ; ವ್ಯಾಪಿಸು : ಭೇರೀನಿನಾದಂ ರೋದೋಂತರ್ಭಾಗಮಂ ಜಕ್ಕುಲಿಸೆ ನೃಪತಿ ಸಾಕೇತಮಂ ಬಂದು ಪೊಕ್ಕಂ (ಪಂರಾಮಾ.೬-೪೨); ಮದನ ವಿಕಾರದ ಜಮ್ಮು . ಜಕ್ಕುಲಿಸಿ ಹಮ್ಮುದಂಬೋಗಿ (ಗಿರಿಕ. ೭-೧೧ ವ) ; ಕಿವಿಯ ಜಕ್ಕುಲಿಪುದು ದಿವೌಕಸರ್ಕಳ ಪರಸ್ಪರಾಹ್ವಾನರವಂ (ಮಹಾನೇ. ೧೫-೧೧೨) ; ಪುಡದಲಿ ಜಕ್ಕುಲಿಸಿ ಮೊಳಗಿದನು ಶಂಖೋತ್ತಮವನಡಿಗಡಿಗೆ (ನಿಭಾಗ. ೧೧-೬೯-೧೨). ೫. ಸೋಲಿಸು; ಅಧೀನಗೊಳಿಸು ; ಹಿಮ್ಮೆಟ್ಟಿಸು: ಜವನಂ ಜಕ್ಕುಲಿಪಂತೆ ಮಾರಿಗಿದಿರಂ ಪೋಪಂತೆ (ಮುಂಬರಾ. X, ೨೪೩-೨೮ ; 1219): ಜಗಮಂ ಜಕ್ಕುಲಿಸುವಿಂಗೋಲ್ವಿಲ್ಲನ ಬಲ್ಲಾಳ್ತನಕ್ಕೆಯ್ದು ಸರಲ್ಗಳೆಯ್ದುವು (ಅನಂಪು. ೨-೨೦ ವ); ಕಪಿಭಟರು . . . ದೈತ್ಯರ ಜಕ್ಕುಲಿಸಿದರು ಕಲ್ಲುಗುಂಡನು ಕಟಿದು ಸದೆಬಡಿದು (ಕೌಶಿರಾ. ೨೨-೩) ; ಆ ವೃಂದಾವನದ ಸಿರಿ . . . ಜಕ್ಕುಲಿಸಿದುದು ರ್ಘುಳವನು (ನಿಭಾಗ. ೧೦-೧೧-೧೮): ಪುಸಿಜಗಳವೆಸಗಿ ಜಕ್ಕುಲಿಪುದು (ಜಕವಿ. ೬-೭೮ ಸಾಂಗತ್ಯ). ೬. ಕಿತ್ತುಕೊಳ್ಳು; ಅಪಹರಿಸು: ಇಕ್ಕುವುದುಂಬುದು ಕುಡುವುದು ತಕ್ಕೆಡೆಗಂ ತೊಳಿತಿಲ್ಲದಿರ್ದೊಡೆ ಧನಮಂ ಜಕ್ಕುಲಿಸಿ ಕೊಳ್ವರ್ (ಶ್ರಾವಕಾ. ೧೬೨-೫). ೭. ಸೆಳೆ ; ಎಳೆ; ತೆಗೆ : ಪವನಜಂ ಕೊರ್ಗಣೆಯ ಜಕ್ಕುಲಿಸಿ ಜಡಿದು ಬಿಡಲು (ತುರಂಗ. ೫೫-೫೪). ೮. ನಾಶಮಾಡು; ಧ್ವಂಸವಮಾಡು : ಆತನ ಜೀವನವ ಜಕ್ಕುಲಿಸಿ ಯೆನ್ನ ವಚೋವಿಳಾಸವ ಕಾಯ್ವೆನೆಂದೆನು (ಕುವ್ಯಾಕ. ೦೭-೮) : ಸೊಕ್ಕಿದಾನೆಯ ಮಟಿಗಳಂತಿರಲೊಕ್ಕಲಿಕ್ಕಿದರಲ್ಲಿಗಲ್ಲಿಗೆ ಜಕ್ಕುಲಿಸಿದರು ತಾಳವನವನು ತುಟುಗಳನು ಹೊಗಿಸಿ(ನಿಭಾಗ. ೧೦-೧೫-೨೫). ೯. ಮುಟ್ಟು; ಸೋಕು : ಜಕ್ಕುಲಿಪಂತೆಯೇಂ ದಿವಮನಚ್ಚರಿಯಾಗಿರೆ ಮೇಗೆ ನೀಳ್ದು . . . ಇರ್ದುದು ವಿಂಧ್ಯಪರ್ವತಂ (ವರ್ಧಮಾ. ೦೬-೫); ಚರಣಾಗ್ರಂ ಜಾನುವಂ ಜಕ್ಕುಲಿಸಡರೆ ನಿತಂಬಕ್ಕೆ ಪಕ್ಕಾಗಿ ಮಧ್ಯಂ ಮುರಿವನ್ನಂ ದಕ್ಷಿಣಕ್ಕವ್ವಳಿಸಿದ ಕುಚದೊಳ್ ಕೈದಳಿರ್ಕೂಡೆ . . . ತರುಣಿ ತಪಂಗೆಯ್ಪುವೋಲ್ ಕಣ್ಗೆವಂದಳ್(ಲೀಲಾವ. ೪-೧೪೫). ೧೦. ಚಾಚು: ಹೊಮ್ಮು (?): ಮಿಕ್ಕು ಚೂರಿಸಲಹಿಯ ನಾಲಗೆ ಜಕ್ಕುಲಿಸಿದ್ದಂತಾಯ್ತು(ಕುವ್ಯಾಭೀ. ೪-೪೨). **ಜಕ್ಕುಳಿಸು :** ೧. ಮತ್ತಮೊರ್ವಗೊರ್ವರ್ ನೀರಂ ಸೂಸಿಯುಂ ಪೂಸಿಯುಂ ಮುಕ್ಕುಳಿಸಿಯುಂ ಜಕ್ಕುಳಿಸಿಯುಂ . . . ಕೊಳನೊಳಾಡಿದರ್ (ರಾಮಾಶ್ವ. ೧೨೩-೨೭). ೨. ನೋಳ್ಪರ ಕಂಗಳನು ಜಕ್ಕುಳಿಸಿ ಬೆಳಗುವ ಪೂರ್ಣಶಶಿಮಂಡಲದ ವೋಲು (ನಿಭಾಗ. ೪-೧೧-೧೭). ೪. ಹೆಬ್ಬಲದ ಹೆಕ್ಕಳ ಜಕ್ಕುಳಿಸಿದುದು ಜಾನಕೀಪತಿಯ (ತೊರರಾ. ೪-೩-೦). ೫. ಮುಕ್ಕುಳಿಸಿ ಕೆಂಡವಂ ಕಾರಿಸುತ ಕಣ್ಣಿನೊಳ್ ಜಕ್ಕುಳಿಸಿ ಕಾಳಗದೊಳ್(ತುರಂಗ. ೮೨-೧೯). ೧೧. ಕೀಟಲೆಮಾಡು ; ಕೆಣಕು : " ಜಕ್ಕುಳಿಸು—ನರ್ಮಕರಣೇ(ಪರಿಹಾಸ ಮಾಡು) " (ಶಮಧಾ). ೧೨. ಜೊತೆಯಾಗು; ಹೊಂದಿಕೊಳ್ಳು : ಒಂದು ದಿನ ಮಂಚದೊಳು ಜಕ್ಕುಳಿಸಿ ಮಲಗಿರುತ (ಪ್ರಾಡರಾ. ೫-೩೮). **ಝುಕ್ಕುಳಿಸು :** ೮. ರಕ್ಕಸನು ಮಹೋಗ್ರದಿಂದ ಝುಕ್ಕುಳಿಸುತ ಬರಲು (ದೇವೀಪ್ರ. ೩೧). [ ಜಕ್ಕುಲಿ + – ಇಸು$_3$ ]

**ಜಕ್ಕುಳಿಕೆ** (ನಾ). ಅಪಹಾಸ್ಯ; ತಿರಸ್ಕಾರ: ತೊಟ್ಟ ಮಹಾರಾಜಮುದ್ರೆಯು ಬಾಳ್ಗುಡುತೆಗೂ, ಹಿಡಿದ ವೀರದಣ್ಣನ ಕಯ್ದುವಿಗೂ ಕಟ್ಟೀವವು ಜಕ್ಕುಳಿಕೆಯುಂ ಅಪಮಾನವು ಅಡಸಿ ಮಸಗುವಂತೆ (ಬಿಟ್ಟಿಆ. ೨೦೪-೦೫). [ <ಜಕ್ಕುಲಿ + – ಇಕೆ ]

**ಜಕ್ಕುಳಿಮಾತು** (ನಾ). ವಾದವಿವಾದ; ವಾಗ್ವಾದ; ಚರ್ಚೆ: "ವಿಗ್ರಹ್ಯ ವಾದಃ–ಜಕ್ಕುಳಿಮಾತು [ಪಾಠಾಂ. ಬಕ್ಕುಡಿಮಾತು]" (ನೀತಿವಾ. ೯-೪೯).
[ ಜಕ್ಕುಳಿ ? + ಮಾತು$_1$ ]

**ಜಕ್ಕುಳಿಸು** 'ಜಕ್ಕುಲಿಸು' ನೋ.

**ಜಖಂ**, ಜಕಂ, ಜಕಮಿ, ಜಖುಮು (ನಾ). ೧. ಗಾಯ ; ಪೆಟ್ಟು: ಬಹು ಜನಕ್ಕೆ ಜಖಂ ಮಾಡಿ (ಹೈದರ. ೭೭). ೨. ನಷ್ಟ ; ಕೇಡು : ಯಂತ್ರಕ್ಕೆ ಆಗಬಹುದಾದ 'ಜಖಂ' ನಿಲ್ಲಿಸಲು ಎರಡು ಕಡೆಯೂ 'ಬಫರ್ಸ್' ಇವೆ (ಮುದ್ರಕ. ೯೩); ಚರ್ಮದ್ದಾದ್ದರಿಂದ ಇನ್ನೂ ಜಖಂ ಆಗದೆ ಉಳಿದು ಕೊಂಡಿದೆ (ನಿಂದನೆ. ೩೦). **ಜಕಂ:** ೧. ಏನಂದಿ? ಜಕಂ ಬಾಳ ಆಗೇತೇನು? (ಕಮ್ಮಟ. ೪೧). **ಜಕಮಿ :** ೧. ಹೇರಳ ಜನ ಮೃತವಾಗಿ ಜಕಮಿ ಆಗಿ ಪಡೆಗೆ ಯದರಿಗೆ ನಿಲ್ಲಲಾರದೆ (ರಾಜೇಂದ್ರ. ೪೩). **ಜಖುಮು :** ೨. ೪೦೦ ಮನೆಗಳು ಪೂರ್ಣ ನಾಶವಾದವು. ೧೪೦೦೦ ಮನೆಗಳು ಜಖುಮಾದವು (ಪ್ರವಾಸಿ. ೧೭).

**ಜಖಂಪಟ್ಟಿ** = ಗಾಯಗೊಂಡ ನೌಕರರಿಗೆ ಔಷಧೋಪಚಾರಕ್ಕಾಗಿ ದೊರೆಯುತ್ತಿದ್ದ ಪರಿಹಾರದ್ರವ್ಯ : ನಂಜರಾಜಯ್ಯನು ಹೈದರನಿಗೂ ಇತರ ಅಧಿಕಾರಿಗಳಿಗೂ ಖಿಲ್ಲತ್ತುಗಳನ್ನು ಗಾಯಪಟ್ಟವರಿಗೆ ಜಖಂಪಟ್ಟಿ ಯನ್ನೂ ಒಬ್ಬ ಅಧಿಕಾರಿಯೊಡನೆ ಕೊಟ್ಟು ಕಳುಹಿಸಿದನು (ಒಡಕ. ೮೩).
[ ←ಪಾರ. ಹಿಂ. ಮರಾ. ಜಖಮ್ ]

**ಜಖುಮು** 'ಜಖಂ' ನೋ.

**ಜಖೀರು** 'ಜಕೀರ' ನೋ.

**ಜಗ** (ಗು). ೧. ದೊಡ್ಡ ; ಶ್ರೇಷ್ಠ. 'ಜಗಜಟ್ಟಿ' ಪರಾ. (ನಾ). ೨. ಲೋಕ ; ಪ್ರಪಂಚ : "ಭುವನಂ, ವಿಷ್ಟಪಂ, ಲೋಕಃ, ಜಗತ್–ಈ ೪ ಜಗದ ಪೆಸರ್" (ಹಲಾಯು. ೨೨-೧೩೩); ಜಗಮಂ ಮಾಡಿದ ಪದ್ಮಜಂ ಪಡೆದನಿಲ್ಲೀ ಕನ್ನೆಯಂ (ಪಂಪಭಾ. ೪-೭೩); ಲಿಪಿಗಳಂ . . . ಆದಿಬ್ರಹ್ಮಂ ದಯೆಯಿಂದಂ ಜಗಕಱಿಪಿ ಪರಮಗುರು ಧರೆಗೆಸೆದಂ (ಸಮಪು. ೨-೧೩); ಆರಿಗಾರೂ ಇಲ್ಲ ಕಟ್ಟವಂಗೆ ಕೆಳೆಯಿಲ್ಲಾ ಜಗದ ನಂಟ ನೀನೆ ಅಯ್ಯಾ (ಬಸವ. ೨೩); ಜಗದ ಮಹಾವಿಭುವಲಾ ವಿಷ್ಣು ವಿಶ್ವವ್ಯಾಪ್ತನು (ತೊರರಾ. ೧-೮-೧೩); ಬಗೆಯಿಂದೆ ಜಗಮನಿತುಮುಂ ಜಾರಿ ಮಗನೆ ಮೂಜಗ ಮಾಯ್ತು! (ಶ್ರೀರಾಮಾ. ೧೭-೪೪೧): ಜಗಾ ಹೊರುವವಳಿಗೆ ಮಗು ಭಾರವೇ ? (ಗಾದೆ).

**ಜಗದಯ್ಯ** = ಲೋಕದ ತಂದೆ : ಜಗದಯ್ಯನನು ಪಡೆದಾಂ ಧನ್ಯ ಳಾದೆನು (ಸಾಕ್ಷಭಾ. ೩೩-೮೭). **ಜಗದಾಳ್ದ** = ಜಗತ್ತಿನ ಒಡೆಯ : ಜಗದಾಳ್ದನಿನ್ನೊರ್ವನಿರ್ದಪನೆಂಬುದಂ ನಮಗೆ ಪೇಳ್ವುದಿಲ್ಲಿಂದುವರೆಗಂ (ಜಬಪು. ೪೭-೧೮). **ಜಗದೊಬ್ಬಗಂಡ** = ಜಗದೇಕವೀರ ; ಒಂದು ಬಿರುದು : ಜಗದೊಬ್ಬಗಂಡನೆಂದೆಂಬ ಬಿರುದನುಱೆ ಪೊಗಳಿಸಿಕೊಳುತ (ಕುರಾಸಾಂ. ೧೧-೩೯). [ <ಸಂ. ಜಗತ್ ]

**ಜಗಂಜ್ಯೋತಿ** (ನಾ). ೧. ಲೋಕವನ್ನು ಬೆಳಗುವಂತಹುದು : ಶಿವಾಣಿಯ ಸಿರದಲ್ಲಿ ಜಗಂಜ್ಯೋತಿಯ ಕಂಡೆನಯ್ಯ (ಸಿದ್ಧೇವ. ೧೨೮-೩೮೧). ೨. ಕಂಬ, ಬೊಂಬು ಮೊದಲಾದುವುಗಳ ತುದಿಯಲ್ಲಿ ಅಳವಡಿಸಿ ಎತ್ತರದಲ್ಲಿ ಉರಿಸುವ ಪಂಜು,–ದೀವಟಿಗೆ : (ಕ).
[<ಸಂ. ಜಗಜ್ಜ್ಯೋತಿ ]

**ಜಗಂಝಳ್ಳು** (ನಾ). ಒಂದು ಅನುಕರಣ ಶಬ್ದ : ಕುರುಬರೆಲ್ಲ ದುರುಗವ್ವ ನಿಗೆ ಜಗಂಝಳ್ಳು ಹಾಕಿದರು (ಹಬ್ಬಬ. ೩೭).

**ಜಗಗನ್ನ** (ನಾ). ದೊಡ್ಡ ಕಳ್ಳ ; ಕದೀಮ ಕಳ್ಳ : ಮಣ್ಣ ಬೆಕ್ಕು ನನ್ನಿಯ ಮೂಷಕನ ಮುಟ್ಟಿದುದುಂಟೇ ಜಗಗನ್ನರ ಕ್ರೀವಿರಕ್ತಿ ಪ್ರಸನ್ನನ ಮುಟ್ಟಿದುದುಂಟೇ (ಮೋಳಿಮಾ. ೭೪-೨೭೩). [ ಜಗ + ಕನ್ನ$_1$ ]

**ಜಗಚ್ಚಕ್ರ** (ನಾ). ಜಗನ್ಮಂಡಲ; ಭೂಮಂಡಲ (?): ಏನುಜ್ಜ್ವಳಿಸಿದುದೊ ಜಗಚ್ಚಕ್ರಮಂ ಚಂದ್ರಬಿಂಬಂ (ಆದಿಪು. ೧೨-೯); ಆಕ್ರಾಂತಸಮಸ್ತಜಗಚ್ಚಕ್ರಂ ನೃಪನೊಂದೆ ವಿಕ್ರಮಂ ನಗುತಿರ್ಕುಂ (ಕಾದಂಪೂ. ೯).
[ ಸಂ. ಜಗಚ್ಚಕ್ರ (ಜಗತ್ + ಚಕ್ರ) ]

**ಜಗಚ್ಚಕ್ಷು** (ನಾ). ಲೋಕಕ್ಕೆ ಕಣ್ಣಾದವನು ; ಸೂರ್ಯ : ಜಗಚ್ಚಕ್ಷು ವೆನಿಪ ಅಂಬುಜಪ್ರಿಯಕುಲಲಲಾಮನು (ಹದಕಾ. ೮-೩೦): ನೀ ಜಗಚ್ಚಕ್ಷುವಾಗೆ ಕುಂದುಕೊಱತೆಯಂ ಕಡೆಗೊತ್ತುತೆನ್ನನುದ್ಧರಿಸೈ (ರಾಮಾಶ್ವ. ೨೭-೧೨). [ ಸಂ. ಜಗಚ್ಚಕ್ಷುಸ್ (ಜಗತ್ + ಚಕ್ಷುಸ್) ]

**ಜಗಜಂಪ** 'ಜಗಜಂಪು$_1$' ನೋ.

**ಜಗಜಂಪು$_1$**, ಜಗಜಂಪ (ನಾ). ೧. ದೊಡ್ಡದಾಗಿರುವಿಕೆ ; ವೈಭವ; ಅತಿಶಯ : (ಕ). ೨. ಕುಚ್ಚುಗಳ ಅಲಂಕಾರ ; ಜಾಲರಿ : ಕತ್ತಿಯ ಹಡಪದ ಪೊಸಜಗಜಂಪಿನ ಸತ್ತಿಗೆಯವರೊಡವರಲು (ಜಂಪ್ರಸಾಂ. ೧೩-೪೩); ಹಗಲುಪಂಜಿನ ಬಿರುದಿನ ಸುಭಟರು ನೆಱೆ ಜಗಜಂಪಿನ ಸತ್ತಿಗೆಯ ವಿಗಡವಿಗ್ರಹವೀರರುಗಳು ದುರ್ಗವ ಏಂಗೆ ಕಾದಿದರೇವೇಳ್ವೆ (ಕಂಸವಿ. ೧೧-೧೪೩); ತೊಂಗಲ್ವಂಟಿಯ ಜೋಡುಶಂಖದ ಜಗಜಂಪಿನ ಸತ್ತಿಗೆಯ ಪಲಬಿರುದುಗಳ್ನೆಗಳ್ತೆವಡೆಯೆ (ರಾಜಶೇ. ೭-೧೧ ವ). **ಜಗಜಂಪ:** ೩. ದೊಡ್ಡ ಛತ್ರಿ; ಜಾಲರಿಯುಳ್ಳ ಕೊಡೆ: ಎನ್ನ ಸುಮನವೇ ವಾಹನವಯ್ಯ ನಿಮಗೆ ಎನ್ನ ಸುಬುದ್ಧಿಯೆ ಜಗಜಂಪವಯ್ಯ ನಿಮಗೆ (ಅಖಂಡೇ. ೨೪೧-೮೭).
[ ←ತೆಲು. ಜಗಜಂಪು ]

**ಜಗಜಂಪು$_2$** (ನಾ). ಜೋಗಿತಿಯರು ಧರಿಸುವ ಉದ್ದವಾದ ನಿಲುವಂಗಿ: (ಕ). [ ? ]

**ಜಗಜಗ** (ನಾ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ. 'ಜಗಜಗನೆ', 'ಜಗಜಗಿಸು' ಪರಾ.

**ಜಗಜಗನೆ** (ಅ). ಪ್ರಕಾಶಮಾನವಾಗಿ : ಜಗಜಗನೆವಡೆಯಲೊ ಜಗದ ಪಟ್ಟೊಡೆಯಲೊ ಅರಮನೇ ಒಳಗೊಬ್ಬ ದೊರೆಮಗಾ ಕುಂತವ್ನೆ (ಹುಟ್ಟಿಹ. ೩೦). [ ಜಗಜಗ + – ಅನೆ$_1$ ]

**ಜಗಜಗಿಸು** (ಕ್ರಿ). ಹೊಳೆ ; ಪ್ರಕಾಶಿಸು : ಶಿವಾಣಿಯ ಸಿರದಲ್ಲಿ ಜಗಂಜ್ಯೋತಿಯ ಕಂಡೆನಯ್ಯ ಅದು ಹಗಲಿರುಳನಱಿಯದೆ ಜಗಜಗಿ ಸುತ್ತಿದ್ದಿತ್ತು ನೋಡಾ (ಸಿದ್ಧೇವ. ೧೨೮-೩೮೧); ಜಗಜಗಿಸುತೊಪ್ಪಿತಾ ರಜತಾಚಲಂ (ಭಾವಚಿಂ. ೧-೨೩); ಪಗಲಾಣ್ಮರ ಕೋಟಿ ತೇಜೋಮಯ ಚಕ್ರ ಜಗಜಗಿಸುವ ಜ್ವಾಲೆವೆರಸಿ ನಗರವ ರಕ್ಷಿಸುತಿರೆ ಕಂಡು (ಮೋಹತ. ೨೯-೨೮). [ ಜಗಜಗ + – ಇಸು$_3$ ]

**ಜಗಜಟ್ಟಿ**, ಜಗಜೆಟ್ಟಿ (ನಾ). ಹೆಸರಾಂತ ಮಲ್ಲ ; ಮಿಗಿಲಾದ ಮಲ್ಲ : ಮಾಚೆಯನಾಯಕನು ರಾಯನಾಯಕ ಹುಲಿಯಗುಳಿ ತೊಲಗದಕಂಭ ತಟಿನ ತಲೆಯ ಕಾವ ಜಗಜಟ್ಟಿ ಎಂಬ ಬಿರಿದು ಸಲ್ವುದು (ಮೈಆರ. ೧೯೩೮, ೮೩-೯ : 1266); ಕಟ್ಟಿತುರಿ ದೆಸೆ ನಾಲ್ಕಱಲಿ ಬೆನ್ನಟ್ಟಿ ಹೊಯ್ದುದು ಬಿನುಗುಗಳ ಜಗಜಟ್ಟಿಗಳನೊಱಗಿಸಿತು ಮಱುಗಿಸಿತಸುರನಾರಿಯರ (ಕುವ್ಯಾಕ. ೭-೪೧); ಮೂಡಣಾವೆಟ್ಟೆಂಬ ಮಲ್ಲಗಂಭಂಗಟ್ಟಿ ಧೈರ್ಯ ಮಳವಟ್ಟು ಪೊಱಮಟ್ಟು ಜಗಜಟ್ಟಿಯೆನೆ ಬಿಸುಗದಿರ್ವಟ್ಟು ಚೆಂಬೊಗರಿ ಗೆಡೆಕೊಟ್ಟು ಕಾಣಿಸಿತು (ನಂದಿಮಾ. ೨೨-೪೮); ಶರ ಜೋಡಿಸಿ ಜಗಜಟ್ಟಿ ಕೋಯೆನುತೆಚ್ಚ ಭೂಪ (ಸೌಂದಕಾ. ೮-೩೮). **ಜಗಜೆಟ್ಟಿ:** ಮುಷ್ಟಿ ಸಾಧನವ ಮಾಡುವನು ಬಾರೆಂದು ಜಗಜೆಟ್ಟಿ ಶಂಬರ ಕರೆಯೆ (ನವಮೋ. ೧೨-೮೭). [ ಜಗ + ಜಟ್ಟಿ$_1$ ]

**ಜಗಜಾಲಿ** (ನಾ). ದೊಡ್ಡ ಮೋಸಗಾರ : ಜಾಲದೋಳ್ ಜಗಜಾಲಿ ಜಾತಿಪ್ರೌಢನವ ಸೋಲನು ಸೋತರೆ ಕೊಡನು (ಸೌಂದಕಾ. ೦-೪೯).
[ ಜಗ + ಜಾಲಿ$_3$ ]

**ಜಗಜೆಟ್ಟಿ** 'ಜಗಜಟ್ಟಿ' ನೋ.

**ಜಗಜ್ಜನ** (ನಾ). ಲೋಕದ ಜನ ; ಮಾನವಜನಾಂಗ : ಜಗಜ್ಜನಕಂ ತೋಱಿದಪಂ ರಿಪುಜನಕಂ ತೇಜದ ಪೊದರ್ಪನಿಱಿವ ಬೆಡಂಗಂ (ಗದಾಯು. ೧-೨೦) ; ನೇತ್ರಾನಂದರೂಪಂ ಜಗಜ್ಜನಚೂಡಾಮಣಿ ಪುಟ್ಟಿದಂ (ಮಲ್ಲಿಪು. ೦೦-೧೩೭). [ಸಂ. (ಜಗತ್ + ಜನ)]

**ಜಗಜ್ಜನಕ** (ನಾ). ಜಗತ್ತಿನ ಹುಟ್ಟಿಗೆ ಕಾರಣನಾದವನು ; ದೇವರು ; ಸೃಷ್ಟಿಕರ್ತ : ಜಗಜ್ಜನಕನಂ ಶಿಶುವೆಂಬುದೊ ಮರ್ತ್ಯನೆಂಬುದೊ (ಶಾಂತಿಪು. ೧೦-೮೨) ; ಜಗಜ್ಜನಕನೆಂಬುದು ಮೇದಿನಿ ಶಾರತಿವರ್ಮನಂ (ಪುಷ್ಪಪು. ೧-೭೩). [ಸಂ. (ಜಗತ್ + ಜನಕ)]

**ಜಗಜ್ಜನನಿ** (ನಾ). ಲೋಕದ ತಾಯಿ ; ಜಗನ್ಮಾತೆ : ಎಲೆ ಧರ್ಮದೇವತೆ ಜಗಜ್ಜನನಿ ಜಾಹ್ನವಿಯ ಸಲಹಿಕೊಳ್ವುದು ತನ್ನ ಮಾತೆಯಂ (ಜೈಮಿಭಾ. ೦೯-೨೭). [ಸಂ. (ಜಗತ್ + ಜನನೀ)]

**ಜಗಜ್ಜಯ** (ನಾ). ಲೋಕವನ್ನು ಗೆಲ್ಲುವಿಕೆ; ಜಗತ್ತೆಲ್ಲವನ್ನು ಗೆಲ್ಲುವಿಕೆ: ಕಂಕೆಲ್ಲಿ ಶುಕಂ ಪಿಕಂ ಶಶಿಯೆನಿಪ್ಪವರಂಗದ ಪಂಗದೇಕೆನುತ್ತಲ್ಲಿ ಜಗಜ್ಜಯಾರ್ಥಮವರಂಗಮನಂಗಜನೊಲ್ದು ಸೇವಿಪಂ (ರಾಜಶೇ. ೧೨-೫೦). [ಸಂ. (ಜಗತ್ + ಜಯ)]

**ಜಗಜ್ಜಯಿ** (ನಾ). ವಿಶ್ವವನ್ನು ಗೆದ್ದವನು ; ಲೋಕವಿಜಯಿ : ಆ ಜಗಜಯಿ ದೈತ್ಯಚಕ್ರೇಶನಂತಲ್ಲಿ ಸಾಷ್ಟಾಂಗದಿಂ ನಮಸ್ಕರಿಸಿರ್ದ ದೃಶ್ಯಮಂ ಕಂಡು ಮಂಡೋದರಿಗೆ ಪೊಳೆತುದು ಮನಶ್ಶಾಂತಿ(ಶ್ರೀರಾಮಾ. ೩೩೦-೩೦೯). [ಸಂ. ಜಗಜ್ಜಯಿನ್]

**ಜಗಜ್ಜಾಹೀರ** 'ಜಗಜ್ಜಾಹೀರು' ನೋ.

**ಜಗಜ್ಜಾಹೀರು, ಜಗಜ್ಜಾಹೀರ** (ನಾ). ಲೋಕಕ್ಕೆಲ್ಲ ಪ್ರಕಟವಾದುದು: ಈ ರಂಗಣ್ಣಕಾಕಾನ ಮಂಗಣ್ಣತನಾ ಜಗಜ್ಜಾಹೀರಾಗಿ ಬಿಡುತ್ತಿತ್ತು (ಬಿಂದಯು. ೦೯). **ಜಗಜ್ಜಾಹೀರ:** ಕಾರವಾರದ ಸ್ಟುಡಿಯೋದಲ್ಲಿ ಆದದ್ದು ಜಗಜ್ಜಾಹೀರವಾಗಿ ಒಂದಕ್ಕೆ ಹತ್ತಾದಾಗ ಯಾವ ಗಂಡುನಾಯಿಯೂ ಕೂಡ ನಿನ್ನ ಮೂಸಲಿಕ್ಕಿಲ್ಲ (ಮೂರುದಾ. ೨೨೪). [<ಜಗತ್ತು + ಜಾಹೀರು]

**ಜಗಜ್ಜೀವನ** (ಗುಂ). ಜಗತ್ತನ್ನು ಬದುಕಿಸುವ: ನದನದೀಕುಳದೊಳ್ ಪರಿವರ್ಧಿಕುಂ ಜಗಜ್ಜೀವನ ಜೀವನಂ (ಜಗವಿ. ೪-೭೭). [ಸಂ. (ಜಗತ್ + ಜೀವನ)]

**ಜಗಜ್ಜೇತ** (ನಾ). ಲೋಕವನ್ನು ಗೆಲ್ಲುವವನು : ಒಲಿಯದ ನಾರಿ ಮಾರಿಯಾದಾಗ ಜಗಜ್ಜೇತನ ಜೀವನವೂ ದುರಂತವಾಗುತ್ತದೆ (ನಂಜುಂಡ. ೭೩). [<ಸಂ. ಜಗಜ್ಜೇತೃ]

**ಜಗಜ್ಜೈತ್ರ** (ಗುಂ). ಜಗತ್ತನ್ನೇ ಗೆಲ್ಲುವ: ಮಧುಮಿತ್ರ ಜಗಜ್ಜೈತ್ರಾಯುಧಗೃಹಮೆನೆ ವಿಕಚ ವಿಚಕಿಳಂ ಸೊಗಯಿಸುಗುಂ (ಚಂದ್ರಪು. ೭-೫೦). [ಸಂ (ಜಗತ್ + ಜೈತ್ರ)]

**ಜಗಜ್ಜ್ಯೋತಿ** (ನಾ). ಲೋಕದ ಬೆಳಕು ; ಸೂರ್ಯ. [ಸಂ. (ಜಗತ್ + ಜ್ಯೋತಿ)]

**ಜಗಜ್ಝಂಪ** (ನಾ). (ತನ್ನ ಶೌರ್ಯದಿಂದ) ಲೋಕವನ್ನು ಗೆದ್ದವನು; ಜಗದ್ವಿಖ್ಯಾತನಾದವನು : ಅರಿರಾಯ ಜಗಜ್ಝಂಪೂ (ಪೋ) (ಎಇ. XIX, ೨೩-೦೯ ; 1250). [ಸಂ. (ಜಗತ್ + ಝಂಪ)]

**ಜಗಜ್ಝಂಪಿ** (ನಾ).=ಜಗಜ್ಝಂಪ : ಸುವರ್ಣ್ಣಗರುಡಧ್ವಜ ಸಹಜವಿದ್ಯಾಧರ ತ್ಯಾಗ ಜಗಜ್ಝಂಪಿ ಮಣ್ಡಲಿಕಶಿಖಾಮಣಿ (ಎಇ. XI, ೨೬೩-೦೮; 1026). [ಸಂ. ಜಗಜ್ಝಂಪಿನ್]

**ಜಗಜ್ಝಂಪೆ** (ನಾ). =ಜಗಜ್ಝಂಪ : ಯಾದವ ಕುಳಕಮಳ ಅರಿರಾಯ ಜಗಜ್ಝಂಪೆ ಮಾಳವರಾಯ ಮದನತ್ರಿಣೇತ್ರ (ಎಇ. XXI, ೧೨-೨೦ ; 1260). [P ಇದು 'ಜಗಜ್ಝಂಪಿ' ಎಂಬುದರ ಅಪಲಿಖಿತವಿರಬಹುದು]

**ಜಗಝಂಪ** (ನಾ).=ಜಗಜ್ಝಂಪ: ಅರಿರಾಯ ಜಗಝಂಪ ಮಾಳವರಾಯ (ಎಕ. VIII, ಸೊರಬ. ೨೭೬-೬೦ ; 1070) ; ಅರಿರಾಯ ಜಗಝಂಪ (ಕೊಲ್ಹಾಶಾ. ೧೬-೩೭ ; 1189). [<ಜಗಜ್ಝಂಪ]

**ಜಗಣ** (ನಾ). [ಛಂದ] ಮಧ್ಯಗುರುವುಳ್ಳ ಅಕ್ಷರಗಣ (⏑–⏑): ಮಗಣಂ ಭೂಮಿಯೆನಿಕ್ಕುಂ . . . ಜಗಣಾರ್ಕಂ ಭಗಣಂ ಶಶಿ ನಗಣ ನಾಕವಂಬುಜವದನೇ (ಛಂದೋಂಬು. ೧-೩೭ ಅಡಿಟಿ). [ಸಂ.]

**ಜಗತಿ₁** (ನಾ). ಕಟ್ಟೆ ; ವೇದಿಕೆ ; ಜಗಲಿ : ಎಸೆವ ಕರ್ಪ್ಪುರದ ಱೊಬ್ಬುನುರ್ವಿದ ಜಗತಿಯೊಳಸುಕೆಯ ಪೊಸದಳಿರ ಪಾಸಿನೊಳ್ ಪಸರಿಸಿದ ಕುಸುಮಸಂಚಯದೊಳ್ (ಸುರಾ) ಸುರೇಂದ್ರವಂದ್ಯನನಿರಿಸಿ (ನೇಮಿಪು. ೧೩-೨೦ ವ) ; ಪಳುಕಿನ ಜಗತಿ ಪಚ್ಚೆಯ ಲೋವೆ . . . ಥಳಥಳಿಸುವ ರತ್ನದ ಪಟಶಾಲೆಯಿಂದಿಳಿಗತಿಚಲುವಾಗಿಹವು (ಅಂಜಜ. ೩-೧೦೨) ; ಸತ್ಯವತಿಯಿಪ್ಪರಸನ ಮನೆಯಿದಿರುಗಟ್ಟಿನ ಭದ್ರದ ಮುಂದಣ ಜಗತಿಯ ಮೇಲಾಕೆ ಕುಳ್ಳಿರ್ದಾಗಳ್ (ಪುಣ್ಯಾಸ್ರ. ೭-೧೧ ವ); ಅಡಿಪಾಯ ಭದ್ರವಾದ ಮೇಲೆ ಅಂಗಳದಲ್ಲಿ ಸುಮಾರು ಐದು ಅಡಿ ಎತ್ತರದ ಜಗತಿಯನ್ನು ಹಾಕುತ್ತಿದ್ದರು (ಹೊಯ್ಸವಾ. ೧೪). [ದೇ.ದ ತೆಲು. ಜಗತಿ]

**ಜಗತಿ₂** (ನಾ). ೧. ನೆಲ ; ಭೂಮಿ : "ಸ್ಥಿರೆ ಧರಣಿ . . . ಮಹಿ ಜಗತಿ ವಿಶ್ವಂಭರೆ" (ವಸ್ತುಕೋ. ೨೭-೧) ; ನಗರ ತಾನದು ನೂಱು ಯೋಜನದ ಗಲವನಿತಱ ನಾಲ್ಕುಭಾಗೆಯ ಜಗತಿ ತಾನೊಳಕೋಟೆಯದಱುನ್ನತಿಯ ವೈಭವವ ಹೊಗಳಲೆನ್ನಳವಲ್ಲ (ತೊರರಾ. ೫-೨-೨೭) ; ಜಗದುದರ ನಸುನಗುತ ಮೂಱಡಿ ಜಗತಿಯನು ತನಗೀವುದುಳ್ಳೊಡೆ ವಿಗಿಲು ಬೇಡೆನೆ ಗಹಗಹಿಸಿದನು (ನಿಘಾಗ. ೮-೧೬-೧೭). ೨. ಲೋಕ; ಪ್ರಪಂಚ. ೩. ಮಂತ್ರಿಮಂಡಲ ; ಸಚಿವಸಮೂಹ : "ನೃಪಸಚಿವರೊಳ್ ಜಗತಿಯೆಂದಱ ಹಕ್ಕು" (ಮಂಗರಾ. ೦೩೯-೪). ೪. ಹೊರೆಯನ್ನು ಹೊತ್ತು ಜೀವನ ಸಾಗಿಸುವವನು : "ಭಾರೋಪಜೀವಿ ಪ್ರಧಾನಕ್ಷ್ಮಾವೇದಿ ಚತುಷ್ಪಯಂ ಜಗತಿ ಶಬ್ದಂ" (ನಾನಾರ. ೮೭). ೫. ಊರಿನ ಪ್ರಾತಿನಿಧಿಕ ಸಂಸ್ಥೆ : ಕಟ್ಟಿಸುವರ್ ಕೆಱೆ ಪಲವ×ಮ ನೆಟ್ಟನೆ ಧರೆ ಹೊಗಳಲೆತ್ತಿಪರ್ . . . ಕಾವೆಡೆಗಿಟ್ಟಳ ಕಳಿಕಟ್ಟಿಯೆಸೆವ ಜಗತಿಸಮೂಹಂ (ಎಕ. V, ಅರಸೀ. ೪೮-೩೪; 1189). ೬. ವಿಜಯನಗರ ಕಾಲದಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಮೊದಲಾದ ಕಡೆ ಇದ್ದ ವ್ಯಾಪಾರಸ್ಥರಿಂದ ಕೂಡಿದ ಗ್ರಾಮ ಕೂಟ,– ಸಂಘ (ಲೋಕಸ. ೭೩). ೭. [ಛಂದ] ಪ್ರತಿಯೊಂದು ಪಾದದಲ್ಲಿ ಹನ್ನೆರಡು ಅಕ್ಷರಗಳಿರುವ ಒಂದು ಸಮವೃತ್ತ ; ಅಕ್ಷರ ಛಂದಸ್ಸಿನಲ್ಲಿ ಹನ್ನೆರಡನೆಯದು: "ತ್ರಿಷ್ಟುಪ್ ಜಗತಿಯತಿಜಗತಿ . . . ಉತ್ಕೃತಿಗಳೆಂದೆನಿಪುವಿಪ್ಪತ್ತಾಱು ಛಂದಂಗಳಕ್ಕುಂ" (ಮಂಗರಾ. ೦೦೭-೦೮).

**ಜಗತಿಯೊಡೆಯ**=ಲೋಕದ ಒಡೆಯ; ಜಗದೀಶ್ವರ: ಜಗದೊಳೆಂದು ಮನಱಿಯವೆಂಬಾ ಜಗತಿಯೊಡೆಯನ ನುಡಿಗೆ ಮೆಲ್ಲನೆ ನಗುತ (ಬಸವಪು. ೫೭-೭೩). [ಸಂ. ಜಗತೀ]

**ಜಗತಿಪ** (ನಾ). ಅರಸು; ರಾಜ; ಭೂಪಾಲ: ಜಗತಿಪಂ ತಪ್ಪೇನುವಿಲ್ಲದೆ ನೀತಿಯಲ್ಲೆಂದು ಬಗೆಯದವರಂ ಕರೆಸಿ ಕಣ್ಣಂ ತೆಗೆಸಿದನು (ಬಸವಪು. ೬೦-೪). [<ಸಂ. ಜಗತೀಪ]

**ಜಗತೀತಲ, ಜಗತೀತಳ** (ನಾ). ಭೂಮಿ; ಭೂತಳ; ಪ್ರಪಂಚ: ಒರ್ವನೆ ಗಂಡನಲ್ತೆ ಜಗತೀತಲ[ಶಾಶಾಂ. ೪]ದೊಳ್ (ಶಮದ. ೪೭ ಪ್ರಯೋ). **ಜಗತೀತಳ :** ಅಭಿಷೇಕಪೂರ್ವಕಂ ಭೂತಭವಿಷ್ಯದ್ವರ್ತಮಾನ ಜಗತೀತಳಮಂ ಪ್ರಭು ಮೇಘರಥಂಗಿತ್ತಂ(ಶಾಂತಿಪು. ೯-೬೨); ಜಗತೀತಳದೊಳಪುತ್ರಸ್ಯ ಗತಿರ್ನಾಸ್ತಿಯುಮೆನಿಪ್ಪ ಮುನಿವಾಕ್ಯಂ ನೆಟ್ಟನೆ ಕಾಮಸುಖದಿನಲ್ಲದೆ ನೆಗಟ್ದುಗೆಮೆ (ಮದಚಿ. ೧-೬೪). [ಸಂ. (ಜಗತೀ + ತಲ)]

**ಜಗತೀತಳ** 'ಜಗತೀತಲ' ನೋ.

**ಜಗತೀಧರ** (ನಾ). ಬೆಟ್ಟ ; ಪರ್ವತ : ದೇವದೇವ ಜಗತೀಧರವಮಂದಿರ ಮಂಗಳಾಕರಾ (ರಾಜಶೇ. ೧೦-೩೯). [ಸಂ.]

**ಜಗತೀನಾಥ** (ನಾ). =ಜಗತಿಪ: ಆ ನಾಗಪಾಶಮಂ ಜಗತೀನಾಥಂ ಪೊಸೆಯೆ ಕಟ್ಟುಗಳ್ ಬಿಟ್ಟಿರೆ ಪೋಲ್ತೀನೆಸೆದುದೊ ನೃಪಸುತನಪದಾನದ ಶಾಸನಕೆ ಲೆಕ್ಕಮಿಟ್ಟಕ್ಕರಮಂ (ಶಾಂತಿಪು. ೮-೩೪) ; ಜಗತೀನಾಥನೆ ಕೊಟ್ಟ . . . ಉಂಡಿಗೆಗಂ ನೀಂ ಬೆಸಕೆಯ್ದು ಮಂಡಲಿಕನಾದೈ (ಅನಂಪು. ೧೩-೫೦). [ಸಂ. (ಜಗತೀ + ನಾಥ)]

**ಜಗತೀಪಾಲ** (ನಾ). = ಜಗತಿಪ : ಜಗತೀಪಾಲರನೊತ್ತಿಕೊಂಡು ಪಿತ್ರ ಗಟ್ಟುತ್ತುಂ (ಪುಷ್ಪಪು. ೫-೫೭). [ಸಂ. (ಜಗತೀ + ಪಾಲ)]

**ಜಗತೀಪಾಲಕ** (ನಾ). = ಜಗತಿಪ : ಕೇಳಿಯಾ ನಿಡುಮಾರ ಜಗತೀಪಾಲಕಂ ತನ್ನವನಿಯೊಳು ಪೆಸರೋಳಿವೆತ್ತಾರುಹತರಂ . . . ಕರೆತರಿಸಿ (ಬಸವು. ೫೦-೪೭). [ಸಂ. (ಜಗತೀ + ಪಾಲಕ)]

**ಜಗತೀವಲಯ** (ನಾ). ಭೂಮಂಡಲ : ಜಗತೀವಲಯದಮಲಸೌಭಾಗ್ಯ ರತ್ನಾಕರಂ ಪೆರ್ಚಿನಿಂ ಮೇರೆವರಿಯೆ (ಜೈಮಿಭಾ. ೧-೧). [ಸಂ. (ಜಗತೀ + ವಲಯ)]

**ಜಗತು** (ನಾ). = ಜಗತ್ತು : ತಾನೆ ಜಗತೆಲ್ಲವಂ ಸೃಜಿಸಿಯಂತರ್ಯಾಮಿಸಿ (ತುರಂಗ. ೮೯-೩೨). [<ಸಂ. ಜಗತ್]

**ಜಗತ್ಕರ್ತ** (ನಾ). ಜಗತ್ತಿನ ಹುಟ್ಟಿಗೆ ಕಾರಣನಾದವನು ; ಸೃಷ್ಟಿಕರ್ತ: ಜಗತ್ಕರ್ತನಾದ ದೇವರು ಹಲವು ಕಡೆಯಲ್ಲಿ ಬೇಕಾದಷ್ಟು ಉಪ್ಪು ದೊರೆಯುವಂತೆ ಮಾಡಿದ್ದಾನೆ (ಮುಂಬಯಿ. ೪-೧೯೮). [<ಸಂ. ಜಗತ್ಕರ್ತೃ]

**ಜಗತ್ಕರ್ತೃ** (ನಾ). =ಜಗತ್ಕರ್ತ: ಹಸನಾಯ್ತು ದಿಗ್ವಿಜಯದೊಳ್ ಗೊರವನೆಂದು ಪಾಲಿಸಿದೆವವನೇ ಜಗತ್ಕರ್ತೃ[ಪಾಠಾಂ ರ್ತ] ಗಡವೆನುತಾಗಲಸವು ದಾನವನಿರದೆ ಮಸಗಿ (ಜೆಬಪು. ೪೭-೧೯). [ಸಂ. (ಜಗತ್ + ಕರ್ತೃ)]

**ಜಗತ್ತರ್ಪಿ** (ನಾ). ಜಗತ್ತಿಗೆ ತೃಪ್ತಿಯುಂಟುಮಾಡುವವನು,-ಸಂತೋಷವನ್ನುಂಟುಮಾಡುವವನು: ಯಶೋಲಹರೀಕಾಮಜ್ಜಜ್ಜಗತ್ತರ್ಪಿತರ್ಪಿತ ಲೋಕಸ್ತುತ ಕೀರ್ತಿ ಕೀರ್ತಿತ ಭುಜಸ್ತಂಭ ಭುಜಸ್ತಂಭ ಸಂಭೃತ ವಿಕ್ರಾನ್ತ ವಧೂಕರೇಣು ಭರತ ಶ್ರೀಮಚ್ಚಮೂವಲ್ಲಭಂ (ಎಕ. VI, ಚಿಕ್ಕಮ. ೧೬೦-೮೦; 1137). [ಸಂ. ಜಗತ್ತರ್ಪಿನ್]

**ಜಗತ್ತು** (ನಾ). ಲೋಕ; ಪ್ರಪಂಚ: ಜಗತ್ತನು ಜೀವರನು ವಿಕ್ಷೇಪಶಕ್ತಿಯೆ ಮಾಡುತಿಹುದೆಂದ (ಅಮೃತ. ೪-೮) ; ಜಗತ್ತು ಅನಾದಿಕಾಲದಿಂದ ಕೆಲಸ ಮಾಡುತ್ತಲೇ ಇದೆ (ಧರ್ಮಸಾ. ೧೦೪) ; ಜಗತ್ತು ಕ್ಷಣಿಕ, ಅಸತ್ಯ ಮತ್ತು ಅನಿತ್ಯವೆಂಬುದು ಬೌದ್ಧರ ವಾದವಾದರೆ, ಪ್ರಪಂಚವು ಸತ್ಯವೆಂಬುದು ದರ್ಶನಗಳ ವಾದ (ಭಾರದ. ೧೩೨) ; ಜಗದೀಶ್ವರನ ದಯೆ ಇದ್ದರೆ ಜಗತ್ತೆಲ್ಲಾ ನನ್ನದು (ಗಾದೆ). [ಸಂ. ಜಗತ್]

**ಜಗತ್ತ್ರಯ** (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳವೆಂಬ ಮೂರು ಲೋಕಗಳು : ಸಿಂಹಾಸನಮಸ್ತಕದೊಳಿರ್ದ ಜಗತ್ತ್ರಯತಿಳಕನ ಪಾದ ಪದ್ಮಂಗಳ್ಗೆ . . . ವಿಹಿತೋಪಹಾರನಾಗಿ (ಆದಿಪು. ೧೩-೮೩ವ) ; ಅದನೇನೆಂದಪೆನೀ ಜಗತ್ತ್ರಯದ ಪುಣ್ಯಂ ರೂಪುಗೊಂಡಿತೊ (ನಂಬಿರ. ೯-೧) ; ನಿರ್ದಾಯದಲಿ ನೆಲನಾಯಿತಲ ಕುರುರಾಯಗೆನುತಿರ್ದುದು ಜಗತ್ತ್ರಯವೊಂದು ನಿಮಿಷದಲಿ (ಕುಮಾವ್ಯದ್ರೋ. ೩-೩೯) ; ಮನದಿ ಮೂರ್ತಿತ್ರಯವು ಕೇಳ್ಳೆ ಮನದಿ ಶಕ್ತಿತ್ರಯವು ಜಗತ್ತ್ರಯ ಮನದಿ ಅಮರಾಸುರರು (ಜ್ಞಾನಸಿಂ. ೦೯-೫೫). [ಸಂ. (ಜಗತ್ + ತ್ರಯ)]

**ಜಗತ್ತ್ರಾಣ** (ನಾ). ಲೋಕವನ್ನು ರಕ್ಷಿಸುವವನು ; ಜಗದ್ರಕ್ಷಕ : ಜಯ ಜಯ ಜಗತ್ತ್ರಾಣ . . . ಎಂದು ಪೊಗಳುತಿಹ ಜೋಕೆಯಿಂ ಮೆಱೆವ ಜಗದೀಶನಂ ನಿಟ್ಟಿಸಿದನು (ಹದಿಕಾ. ೦೦-೪೦). [ಸಂ. (ಜಗತ್ + ತ್ರಾಣ)]

**ಜಗತ್ತ್ರಿತಯ** (ನಾ). =ಜಗತ್ತ್ರಯ : ಅಪ್ರಮೇಯಕಮಧೋಮಧ್ಯೋರ್ಧ್ವಭೇದಂ ಜಗತ್ತ್ರಿತಯಂ (ಸುಕುಮಾ. ೧೧-೪೧). [ಸಂ. (ಜಗತ್+ತ್ರಿತಯ)]

**ಜಗತ್ಪತಿ** (ನಾ). ಲೋಕದ ಒಡೆಯ : ಸೌರಭನಿಧಿ ತೀರ್ಥಕರಕುಮಾರಕನೆಂದಱಿದುಮಾ ಜಗತ್ಪತಿಗಿಂದ್ರಂ ಸಾರಸುಗಂಧವಿಳೇಪನಭೂರಿಜಳಸ್ನಪನ ವಿಧಿಗೊಡರ್ಚಿದನಾಗಳ್ (ಶಾಂತಿಪು. ೧೦-೫೨); ಇರ್ದಂ ಜಗತ್ಪತಿಯೊಡ್ಡೋಲಗದೊಳ್ (ಜಗವಿ. ೦-೨೬). [ಸಂ. (ಜಗತ್ + ಪತಿ)]

**ಜಗತ್ಪರ್ಯುಷ್ಟಿ** (ನಾ). ಲೋಕಪೂಜೆ; ಸಮಾಜಗೌರವ: ಅಷ್ಟಗುಣೌಘದನಂತಚತುಷ್ಟಯದ ಶರೀರವೆನಿಸಿ ಸಿದ್ಧರ್ ಖರಕರ್ಮಾಷ್ಟಕಮಱಿಯೆ ಜಗತ್ಪರ್ಯುಷ್ಟಿಗೆ ನೆಲೆಯಾದರಷ್ಟಮಾವನಿನಿಳಯರ್ (ಶಾಂತಿಪು. ೧೨-೯). [<ಸಂ. ಜಗತ್ಪರ್ಯೇಷ್ಟಿ]

**ಜಗತ್ಪಾಲಕ** (ನಾ). ಲೋಕವನ್ನು ರಕ್ಷಿಸುವವನು ; ಲೋಕಪಾಲಕ : ಎಲೈ ಅಗ್ನಿಯೆ, ಜಗತ್ಪಾಲಕನಾದ ನಿನ್ನನ್ನು ಯಜಮಾನರು ಯಾಗಾದಿ ಕರ್ಮಗಳಿಂದ ಪಿತ್ರುವಿನಂತೆ ಪೂಜಿಸುತ್ತಾರೆ (ಋಕ್ಸಾರ. ೨೨). [ಸಂ. (ಜಗತ್ + ಪಾಲಕ)]

**ಜಗತ್ಪಾವನ** (ಗು). ಲೋಕವನ್ನು ಶುದ್ಧಗೊಳಿಸುವ ; ಲೋಕಕ್ಕೇ ಪವಿತ್ರವಾದ : ಭರತಾನ್ವಯ ಸಮುತ್ಪನ್ನರಾಗಿ ಫಲವೇನಾವ ಕೆಱದಿಂ ಜಗತ್ಪಾವನಾಶ್ವಮೇಧವನಾಗಿಸುವೆನಿದಕೆ ನೀವೆಂಬುದೇನು (ಜೈಮಿಭಾ. ೨-೫೭). [ಸಂ. (ಜಗತ್ + ಪಾವನ)]

**ಜಗತ್ಪ್ರಕಟ** (ಗು). ಲೋಕದಲ್ಲಿ ಪ್ರಸಿದ್ಧವಾದ ; ಲೋಕವಿದಿತವಾದ : ಜಗತ್ಪ್ರಕಟ ಪ್ಲವಸಂವತ್ಸರದ ಕಾರ್ತಿಕಂ ಮುದಮನೀಯೆ (ಆದಿಪು. ೧೩-೭೭). [ಸಂ. (ಜಗತ್ + ಪ್ರಕಟ)]

**ಜಗತ್ಪ್ರತೀತ** (ನಾ). ಲೋಕಪ್ರಸಿದ್ಧನಾದವನು : ಜಗತ್ಪ್ರತೀತನೀತನೇ ಸರಸ್ವತೀಮಣಿಹಾರಂ (ಆದಿಪು. ೧-೨೮). [ಸಂ. (ಜಗತ್ + ಪ್ರತೀತ)]

**ಜಗತ್ಪ್ರಥಿತ** (ಗು). = ಜಗತ್ಪ್ರಕಟ : ಜಗತ್ಪ್ರಥಿತಕ್ಷಾತ್ರಗುಣಂ ಭವತ್ಪದ ಪಯೋಜಾತಾಂತಿಕಕ್ಕಟ್ಟಿದಂ (ಚಂದ್ರಪು. ೯-೯೮). [ಸಂ. (ಜಗತ್ + ಪ್ರಥಿತ)]

**ಜಗತ್ಪ್ರಭು** (ನಾ). =ಜಗತ್ಪತಿ: ಈ ಜಗತ್ಪ್ರಭುವಿನ ಚಕ್ರವರ್ತಿಯ ನೆಗೞ್ತೆಯು ನಮ್ಮನುಮ್ಮಂಗಜನ್ಮಸನ್ನಿಭನುಮುದಾತ್ತನುಂ ಕನಕಶಾಂತಿ ದಲಾ ವಿಭುಗೀವುದೀಕೆಯಂ (ಶಾಂತಿಪು. ೯-೦೬). [ಸಂ. (ಜಗತ್ + ಪ್ರಭು)]

**ಜಗತ್ಪ್ರಾಣ** (ನಾ). ೧. ಲೋಕಕ್ಕೆ ಪ್ರಾಣಸ್ವರೂಪನಾದವನು: ನಿರ್ಧೂಮಶಿಖಾಳಿಯಂ ಜ್ವಾಳಿಯಂ ಕಂಡುದಱಿನಾಶ್ರಿತ ಸಂತರ್ಪಣ ಪ್ರಚಂಡ ತೇಜಃ ಪವಿತ್ರನುಂ ಜಗತ್ಪ್ರಾಣನುಮಪ್ಪಂ (ಪುಷ್ಪಪು. ೯-೧೦೯ ವ). ೨. ಗಾಳಿ ; ವಾಯು. 'ಜಗತ್ಪ್ರಾಣಾಸ್ತ್ರ' ಪರಾ. [ಸಂ. (ಜಗತ್ + ಪ್ರಾಣ)]

**ಜಗತ್ಪ್ರಾಣಾಸ್ತ್ರ** (ನಾ). ಒಂದು ಬಗೆಯ ಅಸ್ತ್ರ ; ವಾಯವ್ಯಾಸ್ತ್ರ : ಶಿವ ಶಿವಾ ಎನೆ ಜಗ ಜಗತ್ಪ್ರಾಣಾಸ್ತ್ರವನು ಹೂಡಿದನು ಕಲಿಕರ್ಣ (ಕುಮಾವ್ಯಾಕ ೨೩-೩೪). [ಜಗತ್ಪ್ರಾಣ + ಅಸ್ತ್ರ]

**ಜಗತ್ಪ್ರಿಯ** (ನಾ). ಲೋಕಕ್ಕೆ ಪ್ರೀತಿಪಾತ್ರನಾದವನು: ಜಗತ್ಪ್ರಿಯನಾದ ದೇವನಂಕದ ಗಣನಾಯಕಂ (ಗದಾಯು. ೦-೧೦). [ಸಂ. (ಜಗತ್ + ಪ್ರಿಯ)]

**ಜಗತ್ಸರ್ಗ** (ನಾ). ಲೋಕಸೃಷ್ಟಿ ; ಪ್ರಪಂಚ ಹುಟ್ಟುವಿಕೆ : ಜಡ (Insentient) ಪ್ರಕೃತಿಯ ಸಾಮ್ಯಾವಸ್ಥೆಯು ಚ್ಯುತಿ ಹೊಂದಿದಾಗ ಜಗತ್ಸರ್ಗವಾರಂಭವಾಗುವುದು (ಭಾರದ. ೨೩೦). [ಸಂ. (ಜಗತ್ + ಸರ್ಗ)]

**ಜಗತ್ಸ್ತುತ್ಯ** (ನಾ). ಲೋಕದ ಹೊಗಳಿಕೆಗೆ ಪಾತ್ರನಾದವನು: ಜಗತ್ಸ್ತುತ್ಯ ಕೃತಕೃತ್ಯನೆನಿಸದೆ ಸತ್ಯಾಶ್ರಯುವೆಸರ್ಗೆ ಮುಯ್ಯಾನಾಂಪನೆ ಭೀಮಂ (ಗದಾಯು. ೦-೬೪). [ಸಂ. (ಜಗತ್ + ಸ್ತುತ್ಯ)]

**ಜಗದಂಡ** (ನಾ). ಬ್ರಹ್ಮಾಂಡ : ದಂಡನಾಥಾಗ್ರೇಸರಂ ಜಗದಂಡಮಂಡಿತ ಸಿತಯಶಂ ಶಶಿಖಂಡ ಚೂಡಾಖಂಡಿತಾಮಳ ಭಕ್ತಿನಿಶ್ಚಳನು(ಬಸಪು. ೯-೧) : ಧೃತಶಶಿಖಂಡ ಜಿತಸುಮಕಾಂಡ ವಿತರಣಶೌಂಡ ಭೃತಜಗದಂಡ(ಶಾಕುಂತ. ೧೧೭ ಅಡಿಟಿ). [ ಸಂ. (ಜಗತ್ + ಅಂಡ) ]

**ಜಗದಂಬಕ** (ನಾ). = ಜಗಚ್ಚಕ್ಷು: ಜಗದಂಬಕಂಗೆ ಸರಿಮಿಗಿಲಾಹ ಪುರುಷರೀ ಜಗದೊಳಿನ್ನಾರು (ನವಮೋ. ೮-೩೦). [ ಸಂ. (ಜಗತ್ + ಅಂಬಕ) ]

**ಜಗದಂಬೆ** (ನಾ). = ಜಗಜ್ಜನನಿ: ದಿವ್ಯರೂಪನಳವಡಿಸಿ ಜಗದಂಬೆ ಜಾಹ್ನವಿ ಸಲಿಲಮಧ್ಯದಿಂದೆದ್ದು ಬಂದಾ ಜ್ವಾಲೆಯಂ ಕೀಳ್ದಳು (ಜೈಮಿಭಾ. ೯-೨೮) ; ಜಗದಂಬೆ . . . ಎನ್ನ ಮತಿಗೆ ಸಾಕಾರವಾಗಿರು (ವಿದಾಕ್ಕ. ೩-೧).
[ ಸಂ. ಜಗದಂಬಾ (ಜಗತ್ + ಅಂಬಾ) ]

**ಜಗದಳ**$_1$(ನಾ). ಭೂಮಿ ; ಜಗತ್ತು : ಸಮುನ್ನಾನ್ಯಚ್ಚುರ ಜಗದಳ ಪವಿತ್ರೀಕೃತ ವಿಶುದ್ಧಕುಳೆ (ಎಇ. XXVIII, ೩-೪೦; 1082). [<ಸಂ. ಜಗತ್ತಲ]

**ಜಗದಳ**$_2$, **ಜಗದಾಳ, ಜಗದುಳ** (ನಾ). ಜಗತ್ತನ್ನು ಸಂತೋಷಪಡಿಸುವವನು ; ಒಂದು ಬಿರುದು (?) : ಮಣ್ಡಲೀಕಕುಮರ ಜಗದಳಂ (ಕಇ. II, ೭-೧೩ ; 1030). **ಜಗದಾಳ :** ನರಪತಿ ಜಗದಾಳ ವೀರಬಿರುದಾಳ ದೇವರಸರು (ಮೈಆರಿ. ೧೯೩೦, ೭೦-೭ ; 1297). **ಜಗದುಳ :** ಬಿರುದಿಂಗೆ– ಜಗ[ಪಾಠಾಂ. ಗಜ]ದುಳ, ಗಜ ಪಾಟು (ಶಮದ. ೧೭೪ ಪ್ರಯೋ). [ ? ]

**ಜಗದಾಧಾರ** (ನಾ). ಜಗತ್ತಿಗೆ ಆಧಾರದಂತಿರುವವನು,–ಆಶ್ರಯವಾದವನು : ದೇವ ಸಕಲ ಜಗದಾಧಾರ ದೇವ ಕರುಣಿಸು (ನಂಬಿರ. ೮-೭೩). [ ಸಂ. (ಜಗತ್ + ಆಧಾರ) ]

**ಜಗದಾಧಾರಕ** (ನಾ). = ಜಗದಾಧಾರ : ಜಗದಾಧಾರಕನ್ಸೆ ನೀ ನಗಧರ (ಜಗವಿ. ೩-೧೧೧). [ ಸಂ. ]

**ಜಗದಾರಾಧ್ಯ** (ನಾ). ಲೋಕಕ್ಕೆ ಪೂಜ್ಯನಾದವನು : ನಮ್ಮುವನು ಕೃಪೆಯಿಂದ ಸಲಹುಗೆ ದೇವ ಜಗದಾರಾಧ್ಯ ಗುರುರಾಯ (ಕುವ್ಯಾಅ. ೧-೧೨).
[ ಸಂ. (ಜಗತ್ + ಆರಾಧ್ಯ) ]

**ಜಗದಾಳ** 'ಜಗದಳ$_2$' ನೋ.

**ಜಗದಿಂಡೆ** (ನಾ). ತುಂಬಾ ಒರಟಾದವಳು ; ಮಹಾಧೂರ್ತೆ ; ಮಹಾದಿಟ್ಟೆ : ಜನದೃಷ್ಟಿಯಲ್ಲಿ ಅತ್ತೆ ಕೆಟ್ಟವಳಾಗಿ ಕಾಣುತ್ತಾಳೆಯೇ ಹೊರತು ಸೊಸೆ ಜಗದಿಂಡೆ ಎನ್ನುವುದಿಲ್ಲ (ಪದ್ಮಸ. ೧೧೧). [ ಜಗ + ದಿಂಡೆ$_2$ ]

**ಜಗದಿಂಡೆಯ** (ನಾ). ಲೋಕಕ್ಕೆ ದಿಟ್ಟನಾದವನು; ಹೆಚ್ಚಿನ ಪರಾಕ್ರಮಿ: ರಾಜಮಕ್ಕಳಿಗೆಲ್ಲ ನೀವು ಜಗದಿಂಡ್ಯರೆಂಬುದು ನಾವು ಕೇಳಿಹೆವು (ತುರಂಗ. ೩೧-೪೭). P ಇಲ್ಲಿ 'ದಿಂಡ್ಯ' ಎಂಬುದು ಛಂದಸ್ಸಿಗಾಗಿ ಮಾಡಿಕೊಂಡ ರೂಪ. [ ಜಗ + ದಿಂಡೆಯ ]

**ಜಗದಿಟ್ಟ** (ನಾ). = ಜಗಚ್ಚಕ್ಷು : "ಜಗದಿಟ್ಟ ಚೆಂಗದಿರನು ನಿಶವಗೆಯು . . . ಸೂರ್ಯನಾಮಂ" (ಶಬ್ದಮಂ. ೧೩). [ ಜಗ + ದಿಟ್ಟ$_2$ ]

**ಜಗದಿಟ್ಟತನ** (ನಾ). ಜಗತ್ತಿನ ಎದುರಿಗೆ ಹೆಚ್ಚಿನ ಧೈರ್ಯವನ್ನು ತೋರಿಸುವಿಕೆ ; ಯಾರಿಗೂ ಜಗ್ಗದ ಸ್ವಭಾವ : ಕಾಮುಕಿಯ ಜಗದಿಟ್ಟತನವೇ ಅದಕ್ಕೆ ಸಮಾಧಾನ (ಮಂತ್ರಶ. ೯೪-೧೯).
[ ಜಗ + ದಿಟ್ಟ$_1$ + – ತನ ]

**ಜಗದೀಶ** (ನಾ). = ಜಗತ್ಪತಿ : ಅದೇನೆಸೆದು ಸೊಗಯಿಸಿ ತೋಱಿತೋ ಜಗದೀಶನಿರೆ ಗರ್ಭಂ ಬಳೆದು (ಶಾಂತಿಪು. ೯-೨೦೩); ಒಳಹೊಱ ಒಂದಾಗದವರಿಗೆ ಅಳಿಯಾಸೆದೋಱ ಬೀಸಾಡುವನವರ ಜಗದೀಶ (ಬಸವ. ೯೭) ; ನೆತ್ತದಾಟವನುಡುಗಿ ನಿನಗನಿಮಿತ್ತಹಾಸ್ಯವದೇಕೆ ಸಂಭವಿಸಿತ್ತು ಸಂಶಯವಾದುದೆನಗೆ ಮದೀಶ ಜಗದೀಶ ಚಿತ್ತವಿಸು (ಬಸಪು. ೪೨-೧೨) ; ಜಗದೀಶಂ ಲಯವಾರ್ಧಿಯಂತೆ ಕವಿತಂದೊಟ್ಟೈಸಿ ಬಂದಲ್ಲಿಯುಂ (ಕಾವ್ಯಸಾ. ೪೩೭).
[ ಸಂ. (ಜಗತ್ + ಈಶ) ]

**ಜಗದೀಶ್ವರ** (ನಾ). = ಜಗತ್ಪತಿ : ಅಖಿಳಲೋಕಾಲೋಕನಿಕರದೊಳಖಿಳ ಜಗದೀಶ್ವರನ ಭಕ್ತರೆ ಅಖಿಳ ಪಾವನರು (ಬಸಪು. ೩೭-೬೩).
[ ಸಂ. (ಜಗತ್ + ಈಶ್ವರ) ]

**ಜಗದುದರ** (ನಾ). ಲೋಕಗಳನ್ನೆಲ್ಲಾ ತನ್ನ ಹೊಟ್ಟೆಯಲ್ಲಿ ಉಳ್ಳವನು; ವಿಷ್ಣು : ಒಗುಮಿಗೆಯ ದೈವದ ಪದಾಂಬುಜಯುಗಳದರ್ಚನೆ ಪೂಜನೆಗಳಿವು ಜಗದುದರನನು ಮುಟ್ಟವೇ (ಕುವ್ಯಾಉ. ೪-೧೧೪) ; ಜಗದುದರ ಕೊಟ್ಟುದನು ಭುಂಜಿಸು (ಜಗದಾ. ೧೯೩). [ ಸಂ. (ಜಗತ್ + ಉದರ) ]

**ಜಗದುಪತಿ** (ನಾ). = ಜಗತ್ಪತಿ : ಸರ್ವಾಭರಣಕಾಂತಿಯು ಜಲಧಿಮಧ್ಯದ ಜಗದುಪತಿಯನು ಕಂಡೆ ನಾನೆಂದ (ನಿಭಾಗ. ೩-೨-೩೪). [<ಸಂ. ಜಗತ್ಪತಿ]

**ಜಗದುಳ** 'ಜಗದಳ$_2$' ನೋ.

**ಜಗದೇಕಚಕ್ಷು**(ನಾ). ೧. ಸೂರ್ಯ. ೨. ಚಂದ್ರ. ೩. ಯಮ. ೪. ಕರ್ಣ. ೫. ಯಶಸ್ಸು ; ಕೀರ್ತಿ : "ಅಂತಕಾರ್ಕ ಶಶಿ ಕರ್ಣ ಯಶಂ ಜಗದೇಕಚಕ್ಷು ವಕ್ಕು" (ನಾನಾರ. ೫೭). [ ಸಂ. ಜಗದೇಕಚಕ್ಷುಸ್ (ಜಗತ್+ಏಕ+ಚಕ್ಷುಸ್)]

**ಜಗದೇಕದೀಪ** (ನಾ). ಲೋಕದ ಏಕಮಾತ್ರ ದೀಪವಾಗಿರುವವನು ; ಸೂರ್ಯ ; ಒಂದು ಬಿರುದು : ಕೋ[ಟಿ]ಯ ನೀಪದ್ವಜ[ತಾಂ]ಸೀಗಿರಿ ದಾರಿಸುವೆ × × × [ಜ]ಗದೇಕದೀಪಂ (ಸೌಇಇ. XX, ೩೦-೮ : 1144).
[ ಸಂ. (ಜಗತ್ + ಏಕ + ದೀಪ) ]

**ಜಗದೇಕದೇವ** (ನಾ). ಲೋಕಕ್ಕೆಲ್ಲ ಒಬ್ಬನೇ ಆದ ಪ್ರಭು ; ಭಗವಂತ: ಮತ್ತ ಕೇಸರಿಪತಿಯೆತ್ತ ವನ್ಯಗಜಮೆತ್ತ ಪೊಣರ್ಕೆಗಿವೆಂತು ನಿಲ್ವುವಾ ಪರಿ ಜಗದೇಕದೇವ ಶಿವನೆತ್ತ ಧನಂಜಯನೆತ್ತ ಧಾತ್ರಿಯೊಳ್ (ಶಬಶಂ. ೪-೦೩೨).
[ ಸಂ. (ಜಗತ್ + ಏಕ + ದೇವ) ]

**ಜಗದೇಕನಾಥ** (ನಾ). = ಜಗದೇಕದೇವ : ದೇವದೇವ ಜಗದ್ಭರಿತ ವಸುದೇವಸುತ ಜಗದೇಕನಾಥ ರಮಾವಿನೋದಿತ . . . ರಕ್ಷಿಸು (ಹರಿಸಾ. ೨).
[ ಸಂ. (ಜಗತ್ + ಏಕ + ನಾಥ) ]

**ಜಗದೇಕಬಂಧು** (ನಾ). ಲೋಕಕ್ಕೆಲ್ಲ ಒಬ್ಬನೇ ಆದ ಬಂಧು ; ವಿಶ್ವಬಂಧು ; ಭಗವಂತ : ಪುರೋಡಾಶ ಕಷಾಯಸ್ನಾನೀಯೋದ್ವರ್ತನ ಸಂಬಾವಳಿ ಸ್ನಾನೋಪಕರಣಂ ಬೆರಸು ಜಗದೇಕಬಂಧುವಂ ಮಜ್ಜನಂಬುಗಿಸಿ (ಶಾಂತಿಪು. ೧೧-೩೭ ವ). [ ಸಂ. (ಜಗತ್ + ಏಕ + ಬಂಧು) ]

**ಜಗದೇಕಮಲ್ಲ** (ನಾ). ೧. ಲೋಕದಲ್ಲಿ ಮಿಗಿಲಾದ ಜಟ್ಟಿ : ಆಗಳುಂ ಮೆಱೆವಾ ಮಹಿಮನ ಮಹಾಗರಿಮೆಯುಂ ಕೇಳಿ ಮುಖದೊಳು ರಾಗಿಸುತ ಜಗದೇಕಮಲ್ಲನ ಸಹ್ಯಭಾವದಲಿ (ಬಸಪು. ೨೩-೨೦). ೨. ಚಾಲುಕ್ಯರ ಇಮ್ಮಡಿ ತ್ರೈಲೋಕ್ಯಮಲ್ಲನ ಬಿರುದು: ಇಳೆ ಕೂಡಿ ಬಣ್ಣಿಕುಂ ವಿಳಸಿತ ವೀರಕಾಮಿನಿಗೆ ನಲ್ಲನನೀ ಜಗದೇಕಮಲ್ಲನ (ಶಾಸಪ. ೧೩); ಜಗದೊಳ್ವಿಖ್ಯಾತಿಯಂ ತಾಳ್ದಿದಂ ಸ್ಥಿರತೇಜಂ ಜಗದೇಕಮಲ್ಲವೆಸರಿಂ ಚಾಳುಕ್ಯ ಚಕ್ರೇಶ್ವರಂ (ಎಕ. VII, ಶಿಕಾರಿ. ೧೧೮-೨೪ ; 1164). [ ಸಂ. (ಜಗತ್+ಏಕ+ಮಲ್ಲ) ]

**ಜಗದೇಕವೀರ** (ನಾ). ಲೋಕದಲ್ಲಿ ಮಿಗಿಲಾದ ಪರಾಕ್ರಮಿ : ಜಗದೇಕವೀರ ಶಬ್ದಂ ನಗೆಗೆಡೆಯಾಯ್ತೆನಗೆ ಪರ್ಬಿದತ್ತೆಣ್ದೆಸೆಯೊಳ್ ನೆಗಳ್ದ ಪಯಶಂ (ಶಬಶಂ. ೪-೯೩); ನಿರ್ಮಲವೃತ್ತಂ ಜಗದೇಕವೀರನಮಳಾಕಾರಂ (ಸಕವ್ಯ. ೨-೯). [ ಸಂ. ( ಜಗತ್ + ಏಕ + ವೀರ) ]

**ಜಗದ್ಗುರು** (ನಾ). ೧. ಲೋಕಕ್ಕೆಲ್ಲ ಪೂಜ್ಯನಾದವನು ; ಶ್ರೇಷ್ಠನಾದವನು: ಜಗದ್ಗುರುಗೆ ಬೇಗಮುಚ್ಚಾಸನದಿಂದಿದಿರೇಱಿಮೆಂದು ಪೇಟ್ವ ಪೊಲ್ (ಆದಿಪು. ೭-೪೦) ; ವಿಜ್ಞಾನದಿಂದಂ ಜಗದ್ಗುರುವಾದಂ (ಗದಾಯು. ೧-೩). ೨. ದೇವರು ; ಭಗವಂತ. ೩. ಮಠಾಧಿಪತಿ : ಜಗದ್ಗುರು ಶ್ರೀ ಶಿವರಾತ್ರೀಶ್ವರಮಹಾಸ್ವಾಮಿಗಳ . . . ದಿವ್ಯಜೀವನ ವಜ್ರಮಹೋತ್ಸವ ಸಂದರ್ಭದಲ್ಲಿ ಸಲ್ಲಿಸಿದ ಕಾಣಿಕೆ (ಶಿವಗೀ. ಅರ್ಪಣೆ).
[ ಸಂ. (ಜಗತ್ + ಗುರು) ]

**ಜಗದ್ದಳ**(ನಾ).೧. ಜಗತ್ತನ್ನು ಸೀಳುವವನು. ೨. ಜಗತ್ತನ್ನು ಸಂತೋಷಪಡಿಸುವವನು ; ಒಂದು ಬಿರುದು (?) : ಮಹಾದೇವಿ ಜಗದ್ದಳ ಮಣ್ಡಳೀಶರಾಜ್ಞೀಶಿರೋವಿಭೂಷಣವೆನಲ್ಕೆ ಜಸಮಂ ತಳೆದಳ್ (ಸೌಇಇ. XI-ii, ೧೫೫-೨೦ ; 1104) ; ಸಿಂಗದವಾರ್ಯ ಶೌರ್ಯಮ ಸುಹೃನ್ನರಲೋಕ ಜಗದ್ದಳಂಗೆ ರಾಜಂಗೆ (ಮುಂಬರಾ. X, ೨೨೪-೩೨ ; 1205) ; ಕಟಕಜಗದ್ದಳ ವೀರಾವತಾರ ಶೃಂಗಾರಪುರೀ ಚಕ್ರವರ್ತಿ (ಮೈಆರಿ. ೧೯೪೨, ೩೨-೨೭ ; 1360). [ಸಂ. ಜಗದ್ದಲ (ಜಗತ್ + ದಲ) ]

**ಜಗದ್ಧರೆ** (ನಾ).ಲೋಕವನ್ನು ಎತ್ತಿ ಹಿಡಿಯುವವಳು,-ಪಾಲಿಸುವವಳು: ದುರ್ವಹ ಜಗದ್ಧರೇ ಸುಪರ್ವನುತವೈಭವೆ ಸಗರ್ವದಿತಿಜಾಪಹೆಯುಖರ್ವ ಗುಣಹಾರೇ (ರಾಜಶೇ. ೮-೧೨೭). [ಸಂ. ಜಗದ್ಧರಾ ]

**ಜಗದ್ಧಾತ್ರಿ** (ನಾ). ಲೋಕದ ತಾಯಿ; ಜಗನ್ಮಾತೆ : ವಿಶ್ವಕುಟುಂಬಿನೀ ಎಂದು ವರ್ಣಿತಳಾಗಿರುವ ಜಗದ್ಧಾತ್ರಿಯು ಅನುಗ್ರಹಿಸಲಿ (ಭಾರದ. ೩೯೪); ಜಗದ್ಧಾತ್ರಿ ಲಕ್ಷ್ಮಿದೇವಿ ಸೀತೆಯ ರೂಪದಲ್ಲಿ ಜನ್ಮ ತಾಳಿ ಯವ್ವನೆಯಾಗಿದ್ದಾಳೆ (ನಿಶಉ. ೩೭). [ಸಂ. ಜಗದ್ಧಾತ್ರೀ (ಜಗತ್ + ಧಾತ್ರೀ) ]

**ಜಗದ್ಧಿತ** (ನಾ). ಪ್ರಪಂಚದ ಒಳಿತು ; ಲೋಕಕಲ್ಯಾಣ : ರಾವಣನ ಕೊಲ್ವೆ ಜಗದ್ಧಿತಕೆ ಮತ್ತೆ ಸಲ್ವೆ (ಕ್ರಾಂಡಧ್ವ. ४३).
[ಸಂ. (ಜಗತ್ + ಹಿತ) ]

**ಜಗದ್ಬಂಧು** (ನಾ). ಲೋಕದ ನಂಟ,-ಹಿತಚಿಂತಕ : ಭದ್ರಾಸನಮಂ ಭುಜವಿಜಯದ್ರವಿಣಂಗವನಿಪತಿಗೆ ಕೊಟ್ಟಿಜಗೆ ಯಶೋಭದ್ರೈಕ ತಿರಸ್ಕೃತ ತುಹಿನಾದ್ರಿ ಜಗದ್ಬಂಧು ಸಿಂಧುದೇವಿಯನರಸಂ ಪೋಗವೇಟ್ಟು (ಶಾಂತಿಪು. ೧೦-೫೭). [ಸಂ. (ಜಗತ್ + ಬಂಧು) ]

**ಜಗದ್ಭರಿತ** (ನಾ). ಜಗತ್ತನ್ನೆಲ್ಲ ತುಂಬಿದವನು ; ಸರ್ವಾಂತರ್ಯಾಮಿ: ದೇವದೇವ ಜಗದ್ಭರಿತ ವಸುದೇವಸುತ . . . ರಕ್ಷಿಸು (ಹರಿಸಾ. ೨).
[ಸಂ. (ಜಗತ್ + ಭರಿತ) ]

**ಜಗದ್ರಕ್ಷಕ** (ನಾ).ಲೋಕವನ್ನು ಕಾಪಾಡತಕ್ಕವನು: ಜನನುತಶೋಭೆ ಗಡ ನಿರಂಜನನೊಳ್ ರಕ್ಕೆ ಗಡ ಜಗದ್ರಕ್ಷಕನೊಳ್ ಕಂಜಿಡೆ ಗಡ ಜಿನನೊಳ್ (ಅಜಿಪು. ೫-೬೩). [ಸಂ. (ಜಗತ್ + ರಕ್ಷಕ) ]

**ಜಗದ್ರಾಜ** (ನಾ). ಜಗತ್ತಿಗೆ ಒಡೆಯ; ಚಕ್ರವರ್ತಿ: ಭದ್ರಾವತೀಶ್ವರನೆನಿಪ ಯೌವನಾಶ್ವಂ ಜಗದ್ರಾಜನಾದ ಪಾಂಡವನೆಡೆಗೆ ಬಂದಂ (ಜೈಮಿಭಾ. ೫-೪).
[ಸಂ. (ಜಗತ್ + ರಾಜನ್) ]

**ಜಗದ್ವಂದಿತ** (ಗು). ಜಗತ್ತಿನ ಎಲ್ಲ ಜನರಿಂದ ನಮಸ್ಕರಿಸಿಕೊಳ್ಳುವ : ವಿಚಾರಿಸೆ ನಾಕಿಗನಿಂ ಪರೆದತ್ತು ಜಗದ್ವಂದಿತ ಪದ್ಮಮುಖೀ ನಿಜನಾಮದೆ ಪದ್ಮಮುಖೀ (ಛಂದೋಂಬು. ೨-೧೭೦). [ಸಂ. (ಜಗತ್ + ವಂದಿತ) ]

**ಜಗದ್ವಲಯ,** ಜಗದ್ವಳಯ (ನಾ). ಭೂಮಂಡಲ. **ಜಗದ್ವಳಯ** : ದೇವಭಕ್ತನೆಂಬುದು ಪತಿಭಕ್ತನೆಂಬುದು ಜಗದ್ವಳಯಂ ಪಡೆವಳ್ಳತೈಲನಂ (ಅಜಿಪು. ೧೨-೨೫). [ಸಂ. (ಜಗತ್ + ವಲಯ) ]

**ಜಗದ್ವಳಯ** 'ಜಗದ್ವಲಯ' ನೋ.

**ಜಗದ್ವ್ಯಾಪಾರ** (ನಾ). ಲೋಕದ ವ್ಯವಹಾರ : ಇದು ಕಾಲ್ಪನಿಕ ಕಾಲವಾದರೂ ಶಾಸ್ತ್ರಾಧಾರ ರಹಿತವಾದ ಕಾಲವೂ ಅಲ್ಲ, ಜಗದ್ವ್ಯಾಪಾರವನ್ನು ನಿರ್ಲಕ್ಷಿಸಿರುವ ಕಾಲವೂ ಅಲ್ಲ (ನಕ್ಷತ್ರ. ೬೩) ; ಶಿವಶಕ್ತಿಗಳು ಪರಸ್ಪರವಾಗಿ ಕೂಡಿಯೇ ಜಗದ್ವ್ಯಾಪಾರಲೀಲೆಯನ್ನು ನಿರ್ವಹಿಸುತ್ತಿರುವರು(ಶಕ್ತಿವಿ.೩೫).
[ಸಂ. (ಜಗತ್ + ವ್ಯಾಪಾರ) ]

**ಜಗದ್ವಿಖ್ಯಾತ** (ಗು). ಲೋಕಪ್ರಸಿದ್ಧವಾದ; ಪ್ರಪಂಚಕ್ಕೆಲ್ಲಾ ಹೆಸರಾದ: ತನ್ನ ನಿರಾಮಯಾಕೃತಿ ಜಗದ್ವಿಖ್ಯಾತಮಾದತ್ತು (ಪುಷ್ಪಪು. ೧-೨೪); ಈತನಭಿಮತವಿದು ಜಗದ್ವಿಖ್ಯಾತ ಸಾಹಸಿ ಪಾರ್ಥ ಹೇಳ್ಳೆ ಮಾತಿನಾಳಾಪವನು (ಕುವ್ಯಾಉ. ೬-೧೨). [ಸಂ. (ಜಗತ್ + ವಿಖ್ಯಾತ) ]

**ಜಗದ್ವಿದಿತ** (ಗು).=ಜಗದ್ವಿಖ್ಯಾತ : ಲಲಾಟಲೋಚನಂ ಜಗದ್ವಿದಿತಾಪಾದಸಾಶ್ವಮೇಧದೀಕ್ಷಿತಕುಳಪ್ರಸೂತಂ ಸತ್ಯರತ್ನಾಕರಂ (ಸೌಇಇ. XX, ४೧-८: 1068); ಎಮಗೆ ಜಗದ್ವಿದಿತಂ ಸೂರ್ಯಮಿತ್ರವೆಸರುಂಟು(ಸುಕುಮಾ. ೨-೫೫).
[ಸಂ. (ಜಗತ್ + ವಿದಿತ) ]

**ಜಗದ್ವಿನಾಶ** (ನಾ). ಪ್ರಪಂಚದ ನಾಶ ; ವಿಶ್ವಪ್ರಳಯ.
[ಸಂ. (ಜಗತ್ + ವಿನಾಶ) ]

**ಜಗದ್ವಿಶ್ರುತ** (ಗು). ೧. = ಜಗದ್ವಿಖ್ಯಾತ. (ನಾ). ೨. ಲೋಕಪ್ರಸಿದ್ಧವಾದುದು : ಸಸಿತಪಕ್ಷಂಗೇನನಂತಾಶ್ರಯಂಗೆ ಜಗದ್ವಿಶ್ರುತವಾಗದೇ ವಿಧುಸಮಾಖ್ಯಾನಂ (ರಾಜಶೇ. ೧೧-೭೪). [ಸಂ. (ಜಗತ್ + ವಿಶ್ರುತ) ]

**ಜಗನ** (ನಾ). ಹೆಂಗಸರ ಕಟಿ ಪ್ರದೇಶ,-ಕಟಿಪುರೋಭಾಗ,-ಕಿಬ್ಬೊಟ್ಟೆ : ಈ ಜಗನಮಿದೇಕೆ ಹೇಮರಶನಾಧ್ವನಿಯಿಲ್ಲದೆ ಮೂಗುವಟ್ಟುದು (ಪಂಪಭಾ. ४-६३). [ <ಪ್ರಾ. ಜಘಣ. / ಸಂ. ಜಘನ ]

**ಜಗನಿರ್ಮಾಣ** (ನಾ).=ಜಗತ್ಕರ್ತ: ಜಗನಿರ್ಮಾಣ ರಕ್ಷಿಸು ನಮ್ಮನನವರತ (ಹರಿಸಾ. ೧೩). [ಜಗ + ನಿರ್ಮಾಣ ]

**ಜಗನುಮಯ** (ನಾ). ಲೋಕವನ್ನೆಲ್ಲ ತುಂಬಿರುವವನು ; ಜಗತ್ತಿನಲ್ಲೆಲ್ಲ ತಾನೇ ತಾನಾಗಿ ನೆಲೆಗೊಂಡವನು : ಜಗನುಮಯ ಕೊಡು ಸಾಯದಂತಿರೆ ವರವ ನನಗೆ (ನಿಭಾಗ. ೭-೩-೫೭). [<ಸಂ. ಜಗನ್ಮಯ]

**ಜಗನುಮಾತೆ** (ನಾ). ಲೋಕದ ತಾಯಿ : ಜಗನು[ಪಾಠಾಂ. ದ]ಮಾತೆಯ ದಾವನುರದಲಿ ಮಂದಿರವ ಮಾಡಿ . . . ಭಜಿಸುವಳು (ನಿಭಾಗ. ೩-೭-೨೭).
[ <ಜಗನ್ಮಾತೆ ]

**ಜಗನ್ನಯನ** (ನಾ). = ಜಗಚ್ಚಕ್ಷು : ಅರಳಿದೆ ಜಗನ್ನಯನಮಾದೊಡಂ, ಮನುನಗರಿ ಮೂಗುವಟ್ಟಿದೆ (ಶ್ರೀರಾಮಾ. ೧೦೫-೧೫೨).
[ಸಂ. (ಜಗತ್ + ನಯನ) ]

**ಜಗನ್ನಾಥ** (ನಾ). ಜಗತ್ತಿನ ಒಡೆಯ ; ವಿಷ್ಣು ; ಕೃಷ್ಣ : ಕತೆ ವಿಷ್ಣುಪುರಾಣಂ . . . ಕಥಾಪತಿ ಕೃಷ್ಣಂ ಕೃತಿಯುಂ ಭುವನುತಮೆ ಜಗನ್ನಾಥ ವಿಜಯಮೆನೆ ಮೆಚ್ಚದರಾರ್ (ಜಗವಿ. ೧-೨೦). [ಸಂ. (ಜಗತ್ + ನಾಥ)]

**ಜಗನ್ನಿಚಯ** (ನಾ). ಲೋಕಸಮೂಹ : ಸಕಲ ಜಗನ್ನಿಚಯದ ಕುಂಭಕಾರ (ವಸ್ತವಂ. ೧೫-೧೧೮). [ಸಂ. (ಜಗತ್ + ನಿಚಯ) ]

**ಜಗನ್ನಿಯಾಮಕ** (ನಾ). ಲೋಕವನ್ನು ನಿಯಮಿಸುವವನು ; ಲೋಕನಿಯಂತ್ರಕ : ಅದಱಿಂ ಶಿವಂ ತಾಂ ಜಗನ್ನಿಯಾಮಕನು (ವೀಶೈಪು. ೫-೧೪-೨೭). [ಸಂ. (ಜಗತ್ + ನಿಯಾಮಕ) ]

**ಜಗನ್ನುತ**(ಗು).೧. ಜಗತ್ತಿನಿಂದ ಹೊಗಳಿಸಿಕೊಂಡ;ಲೋಕಸ್ತುತ್ಯವಾದ: ವ್ಯಗ್ರತೆಯಂ ತಾಳಿ ಕಡುಗಜ್ಜಮೆಸಪುದನೇಳಿಪುದುರ್ವೀಜನಂ ಜಗನ್ನುತ ಚರಿತಾ (ರಾಜಶೇ. ೧೩-೯). (ನಾ). ೨. ಲೋಕದಿಂದ ಹೊಗಳಿಸಿಕೊಂಡವನು: ಕ್ಷಿತಿಪತಿಯಂ ಬರಿಸಿ ಜಗನ್ನುತನಂ ಸಂತೈಸಿ (ಕವಿರಾ. ೨-೮); ಕವಿತಾ ಚತುರತೆಯ ಮೆಱೆದು ಜಗನ್ನುತರೆನಿಸಿದರಲ್ತೆ ಸಿದ್ಧಸೇನಾಚಾರ್ಯರ್ (ಚಾವುಂಪು. ೧-೪) ; ಜಗನ್ನುತನುದಯಾದ್ರಿಮಸ್ತಕಸ್ಥಲಮನೇಱಿದಂ ದಿವಸಕರಂ (ಪಂಚತಂ. ೨೦೭-೧೦). [ಸಂ. (ಜಗತ್ + ನುತ) ]

**ಜಗನ್ನೂತ** (ಗು).=ಜಗನ್ನುತ ೧ : ಆತನ ತನೂಜನುಪಮಾತೀತಂ . . . ಜಗನ್ನೂತ ಪಾದಾಬ್ಜಂ ತ್ರಿಜಗಖ್ಯಾತಂ (ಕಇಆ. ೧-೨-೧೧ ; 1058).
[ಸಂ. (ಜಗತ್ + ನೂತ) ]

**ಜಗನ್ನೇತ್ರ** (ನಾ). = ಜಗಚ್ಚಕ್ಷು : ಸೋಮಜಗನ್ನೇತ್ರವೀತಿಹೋತ್ರಾಂಬಕ . . . ಪಾಲಿಪುದೆನ್ನಂ (ಹಮ್ಮಿರ. ೭-೧). [ಸಂ. (ಜಗತ್ + ನೇತ್ರ) ]

**ಜಗನ್ಮಂಡನ** (ನಾ). ಲೋಕಕ್ಕೆ ಭೂಷಣನಾದವನು : ಕನತ್ಕನಕರಂಜಿತಂ ನಿಜಕರಂ ಜಗನ್ಮಂಡನಂ ವನೇಜಸಖನೇಕಚಕ್ರರಥನಸ್ತದೋಷೋದಯಂ (ಪಂಚತಂ. ೨೫೭-೨೩). [ಸಂ. (ಜಗತ್ + ಮಂಡನ) ]

**ಜಗನ್ಮತಿ** (ನಾ). ಲೋಕಕ್ಕೆಲ್ಲ ಬುದ್ಧಿ ಕೊಡುವವನಂ : ಸೂರ್ಯಚಂದ್ರರ ಗತಿಗೆ ಕಣ್ಣಾಹ ಜಗನ್ಮತಿಗೆ ನಿನ್ನ ಗತಿ, ನಿನ್ನ ಮತಿ, ನಿನ್ನ ಸಾಹಸಕೆ ಕಣ್ಣಾಗಲರಿದೇ ? (ಪಾಂಚಜ. ೫೦-೨). [ ಸಂ. (ಜಗತ್ + ಮತಿ) ]

**ಜಗನ್ಮಯ** (ಗು). ೧. ಜಗತ್ತನ್ನೆಲ್ಲ ತುಂಬಿರುವ. (ನಾ). ೨. ಲೋಕವನ್ನೆಲ್ಲ ವ್ಯಾಪಿಸಿರುವವನಂ ; ಸರ್ವಾಂತರ್ಯಾಮಿ : ಭಯಭರಿತ ಭಕ್ತಿಯಿಂ ಭಾವಿಸಿದನಾ ಜಗನ್ಮಯನಂ (ಜೈಮಿಭಾ. ೧೩-೨೯). [ ಸಂ. ]

**ಜಗನ್ಮಾತೆ** (ನಾ). ೧. ಲೋಕದ ತಾಯಿ; ಜಗದಂಬೆ. ೨. ಮಹಾಲಕ್ಷ್ಮಿ. ೩. ಪಾರ್ವತಿ : ತಾಯೇ ಜಗನ್ಮಾತೆ ಕಾರುಣ್ಯವಾರಿಧಿ (ನಂಬಿರ. ೧೫-೨೬); ಜಗನ್ಮಾತೆಯೂ ಶಿವನಿಗೆ ವಿವಾಹಿತೆ (ಕಪಾಕುಂ. ೩೧). [<ಸಂ. ಜಗನ್ಮಾತೃ]

**ಜಗನ್ಮಾನ್ಯ** (ನಾ). ಲೋಕದ ಜನರಿಂದ ಮನ್ನಿಸಲ್ಪಟ್ಟವನು : ಮುನ್ನ ಧೀಶ್ವರನೀಶ್ವರಕಲ್ಪಂ ಸತ್ಯವಚೋನಿಳಯಂ ಜಗನ್ಮಾನ್ಯಂ (ಪಂಚತಂ. ೨೫೬-೧೯). [ ಸಂ. (ಜಗತ್ + ಮಾನ್ಯ) ]

**ಜಗನ್ಮಾಯ** (ನಾ). ಲೋಕಕ್ಕೆ ಮಾಯೆಯನ್ನುಂಟುಮಾಡುವವನು : ರಚಿತಮಾಯ ವಿಮಾಯ ಮಾಯಾನಿಚಿತಮಾಯಾಧಾರ ಮಾಯಾರುಚಿರ ಮಾಯಾರೂಪ ಮಾಯಾಮಯ ಜಗನ್ಮಾಯ (ಕುವ್ಯಾ.ಅ. ೬-೮೬). [ ಸಂ. (ಜಗತ್ + ಮಾಯಾ + –) ]

**ಜಗನ್ಮಾರ್ಗ** (ನಾ). ಲೋಕದ ಹಾದಿ ; ಲೌಕಿಕಮಾರ್ಗ : ಸಂಚರಿಸೆ ನೀನನ್ನಮಯ ಕಾಲದೇಶದ ಜಗನ್ಮಾರ್ಗದಿಂ ನಿನಗೆ ಬೇಹುದು ದಿನಂ ಪೋಗಿ ಬರ್ಪುದಕೆ (ಶ್ರೀರಾಮಾ. ೬೨೦-೩೨೦). [ ಸಂ. (ಜಗತ್ + ಮಾರ್ಗ) ]

**ಜಗಪತಿ** (ನಾ).=ಜಗತ್ಪತಿ : ಜಗಪತಿಯ ತೋರಮ್ಮ ಎನಗೆ ಕರುಣವ ಮಾಡಮ್ಮ (ವಿದಾಕ್ಕ. ೩೦-೧) ; ಜಗಪತಿಯು ನೀ ಸಾಕ್ಷ ನೀ ನಿಜಬ್ರಹ್ಮವಿಹ (ಜ್ಞಾನಸಿಂ. ೮-೧೨೮). [ ಜಗ + ಪತಿ$_2$ ]

**ಜಗಬಂಡ** (ನಾ). ತುಂಬ ನಾಚಿಕೆಗೆಟ್ಟವನು ; ಮಾನಗೇಡಿ ; ಸಿಗ್ಗಿಲ್ಲದವನು ; "ನಾಚಿಕೆಗೇಡಿ" (ಜಾನಕೋ. ೫೮). [ ಜಗ + ಬಂಡ$_1$ ]

**ಜಗಭಂಡ** (ನಾ).=ಜಗಬಂಡ : ಜಗಭಂಡರಿವರಿಗೆ ಮತ್ತೆ ಬಿರುದುಗಳೆ (ಕುವ್ಯಾದ್ರೋ. ೦೦-೪೩) ; ಜಗಭಂಡ ರಣವಿಜಯದಿದಿರಿನಲಿ ನಿಲದೆ ಪೋಗೆಂದು ತೆಗೆದೆಚ್ಚು ಬೊಬ್ಬಿರಿದನು (ನವಮೋ. ೩೦-೪೬). [ಜಗ+ಭಂಡ$_2$]

**ಜಗಭಂಡಿ** (ನಾ). ತುಂಬ ಮಾನಗೆಟ್ಟವಳು; ತೀರ ನಾಚಿಕೆಯಿಲ್ಲದವಳು: ನೀನು ಭಂಡಿ, ಜಗಭಂಡಿ (ಮಲಿಮ. ೬೩೦). [ ಜಗಭಂಡ + – ಇ$_2$ ]

**ಜಗಭರಿತ** (ನಾ).=ಜಗದ್ಭರಿತ : ಮಣ್ಣನಿತ್ತು ನಿಮ್ಮ ಕಂಡೆಹೆನೆಂದಡೆ ಜಗಭರಿತ ನೀನು (ಮದೇವ. ೨೮೩-೫೨) ; ಪರಮಪುಣ್ಯಶ್ಲೋಕ ಜಯ ಜಗಭರಿತ ನಿರ್ಮಳರೂಪ ಜಯ (ಕುವ್ಯಾ.ಅ. ೨೩-೫೩) ; ಜಗಭರಿತ ನಿನಗೊಂದು ಸ್ಥಳವೇ ಅಗಣಿತದ ರೂಪೆಲ್ಲ ನೀನೇ (ಜ್ಞಾನಸಿಂ. ೮-೨೮). [ ಜಗ + ಭರಿತ ]

**ಜಗಮಗ** (ನಾ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ ; ಚಕಚಕಿಸುವಿಕೆ. 'ಜಗಮಗಿಸು' ಪರಾ.

**ಜಗಮಗಿಸು** (ಕ್ರಿ). ಲಕಲಕಿಸು ; ಪ್ರಕಾಶಿಸು ; ಹೊಳೆ : ಕವಿಪ್ರತಿಭೆ ವಿರಾಟ್‌ಶೂನ್ಯವೊಂದನ್ನು ಭಾವ ಮತ್ತು ಕಲ್ಪನೆಗಳ ಐಶ್ವರ್ಯದಿಂದ ಜಗಮಗಿಸುವಂತೆ ಮಾಡಿದೆ (ಶ್ರೀಪ್ರಪ್ರ. ೧೧೪). [ ಜಗಮಗ + –ಇಸು$_3$ ]

**ಜಗಮೊಂಡ** (ನಾ). ಅತಿ ಮೊಂಡ; ಮಹಾ ಹಟವಾದಿ; ಬಲುಮೊಂಡ; "ಪ್ರಸಿದ್ಧ ದಡ್ಡ" (ಜಾನಕೋ. ೫೮). [ ಜಗ + ಮೊಂಡ ]

**ಜಗಲ** (ನಾ). ೧. ಮೋಸಗಾರ. ೨. ಮದ್ಯವನ್ನು ತಯಾರಿಸಲು ಅನಂಗೊಳಿಸಿದ ನಾನಾ ಪದಾರ್ಥಗಳಿಂದಾದ ಮುದ್ದೆ : "ಮೇದಕಃ, ಜಗಲಃ–ಮದ್ಯ ಮಾಡುವುದಕ್ಕೆ ನಾನಾ ದ್ರವ್ಯಗಳೂ ಕೂಡಿಸಿದ ಮುದ್ದೆಯ ಪೆಸರು" (ಸಿದ್ಧಾಂತಿ. ೨೬೪). ೩. ಮಂಗ್ಗಾರೆಗಿಡ. ೪. ಯುದ್ಧಕವಚ. ೫. ಸಗಣಿ. [ ಸಂ. ]

**ಜಗಲಿ**, ಜಗುಲಿ (ನಾ). ೧. ಕಟ್ಟೆ ; ವೇದಿಕೆ : "ವೇದಿಕಾ, ವಿತರ್ದಿಕಾ – ಈ ೨ ಜಗಲಿ" (ಹಲಾಯು.೫೦-೧೪೪); ಕಪ್ಪುರವಳುಕಿನ ಜಗಲಿಯನಗಲಿತಾಗಿ ಸಮೆದು (ಪಂಪಭಾ. ೫-೬ ವ) ; ಪೊಳೆವ ವಜ್ರಂಗಳ ಕಾಂತಿಗಳಡರೆ ಪರ್ವಿ ಪಚ್ಚೆಯ ಜಗಲಿಯಳೊಪ್ಪಿದುವು ರಂಗವಲಿಯಿಕ್ಕಿದವೋಲ್ (ಮಲ್ಲಿಪು. ೩-೯೫); ಹಸೆಯ ಜಗಲಿಯಲ್ಲಿ ಮುತ್ತಿನ ಹಸೆಯನಿಕ್ಕಿ (ಸೌಗಂಧಿ. ೩೦-೬). ೨. ಯಜ್ಞವೇದಿಕೆ : ವೇದಿ = ಯಾಗಕ್ಕೆಂದು ಮಾಡಿದ ಜಗಲಿ (ನಾಚಿರಾ. ೬). ೩. ವಿಗ್ರಹದ ಪೀಠ : (೬). ಜಗುಲಿ : ೧. "ಜಗುಲಿ ವೇದಿಕೆ ವಿತರ್ದಿಕೆಯುಕ್ಕುಂ" (ಮಂಗರಾ. ೫೯-೧೨) ; ಕಪ್ಪುರವಳುಕಿನ ಜಗುಲಿಯ ಮೇಗಣ ಕುಸುಮದೆಸಟ ಮಿಸುಗುವ ದಳಿಂಬದ ಮೇಗೆ . . . ವಿಶ್ರಮಿಸಿ (ಆದಿಪು. ೧೧-೭೩ ವ); ಕರ್ಪುರದ ಜಗುಲಿಯ ಮೇಲೆ ಕಂಕೆಲ್ಲಿಯ ಪಲ್ಲವಂಗಳಿಂ ಸಮೆದ ತಳಿರ್ವಾಸಿನ ಮೇಲೆ ಪವಡಿಸಿ (ಧರ್ಮಾಮೃ.೧೧-೧೧೫); ಜಗುಲಿಯ ಮೇಲೆ ಕುಳಿತಿರುತ್ತಿದ್ದ ಆತ (ಜೀವನ. ೧).

[ ದೇ.॥ ತುಳು. ಜಗಲಿ ; ತೆಲು. ಜಗಿಲೆ, ಜಗ್ಗಿಲೆ ]

**ಜಗಲಿಗಟ್ಟು** (ಕ್ರಿ). ಜಗತಿಯನ್ನು ಕಟ್ಟು ; ವೇದಿಕೆಯನ್ನು ನಿರ್ಮಿಸು : ಪೂವಿನ ಪುಡಿಯ ಪುಳಿಲಂ ಜಗಲಿಗಟ್ಟಿ ಪಾಸಂ ಕುಸುಮದೆಸಟಿಂ ಪಚ್ಚೆವಡಿಸಿ (ಅರ್ಧನೇ. ೫-೫೬ ವ). [ ಜಗಲಿ + ಕಟ್ಟು$_1$ ]

**ಜಗಲ್ಲಲಾಮಾಯಿತ** (ಗು). ಜಗತ್ತಿಗೆ ಭೂಷಣವಾದ: ಜಗಲ್ಲಲಾಮಾಯಿತ ಶ್ರೀಕಟ್ಟಪ್ಪುತೀರ್ಥಸನಾಥ ಬೆಳ್ಗೊಳನಿವಾಸಿ ( ಎಕ. III, ಶ್ರೀರಂಗ. ೧೪೭-೫ ; 900). [ ಸಂ. ]

**ಜಗವತ್ತಿ** 'ಜಗವರ್ತಿ' ನೋ.

**ಜಗವರ್ತಿ**, ಜಗವತ್ತಿ (ನಾ). ಹಿರಿದಾದ ಬೆಂಕಿ,–ಜ್ವಾಲೆ ; ದೊಡ್ಡ ಉರಿ: ಕೊಂದರಂ ಕೊಂದು ಕಳೆವುದೆ ಧರ್ಮ ಜಗವರ್ತಿಯಂ ಹೊತ್ತಿಸೆಳೆ ಹೊಟೆಯಂ ಹೂಡಿಸು ಸಂದುಸಂದಂ ಕಡಿಸು (ಹಡಕಾ. ೧೩-೮); ಮೊದಲ ಪದನಪಭ್ರಂಶಕ್ಕೆ ಬಾರದೆ, ಪರಪದಂ ತದ್ಭವಮಾದ ಸಮಾಸಕ್ಕೆ–ಉತ್ತರದೇಶ–ಉತ್ತರದೇಸ . . . ಜಗವರ್ತಿ–ಜಗವತ್ತಿ (ಶಮದ. ೨೮೯ ಪ್ರಯೋ). ಜಗವತ್ತಿ : ಮೇಲಿನ ' ಶಮದ ' ಪ್ರಯೋಗವನ್ನು ನೋಡಿ. [ ಜಗ + ವರ್ತಿ ]

**ಜಗವಿಖ್ಯಾತ** (ಗು). = ಜಗದ್ವಿಖ್ಯಾತ : ಮಾತು ಹೋಲುಮೆಯಹುದು ಜಗವಿಖ್ಯಾತ ಸಾರಥಿಯಿರೆ ಕುಮಾರಗೆ ಭೀತಿ ಬಳಿಕೆಲ್ಲಿಯದು (ಕುವ್ಯಾವಿ. ೯-೧೪). [ ಜಗ + ವಿಖ್ಯಾತ ]

**ಜಗವಿದಿತ** (ಗು).=ಜಗದ್ವಿಖ್ಯಾತ: ಕಮ್ಮಾಟಿ ಸಾಂತೋಜ ಜಗವಿದಿತವಾಗಿ ಕಾದಿ ಸುರಲೋಕಪ್ರಾಪ್ತನಾದ (ಸೌಇಇ. XX, ೦೦೩-೪ ; 1146). [ ಜಗ + ವಿದಿತ ]

**ಜಗಸ್ಥಿತಿ** (ನಾ). ಲೋಕದ ಇರವು, – ಸ್ಥಿತಿ : ರೂಪದೆ ಸತ್ವ ರಜಸ್ತಮೋಗುಣಾಧಾರತೆಯಿಂ ಜಗಸ್ಥಿತಿ ಸಮುದ್ಭವ ಸಂಹೃತಿ ಹೇತು (ಕಇಅ. ೧-೨-೩ ; 1058). [ ಜಗ + ಸ್ಥಿತಿ ]

**ಜಗಹಿತ** (ನಾ).=ಜಗದ್ಧಿತ : ಸಾವು ಜೀವಗಳೆರಡು ಭಾವಿಸಲು ಒಂದಯ್ಯ ಜೀವಿಸಲು ಬೀಜ ಸಾವಂತ ಜಗಹಿತಕೆ ಸಾವುದೇ ಜೀವ (ಸರ್ವಜ್ಞ. ೦೦೩೦). [ ಜಗ + ಹಿತ ]

**ಜಗಳ** 'ಜಗಟ' ನೋ.

**ಜಗಳಕೋರ** (ನಾ). ಜಗಳಗಂಟ ; ಕಲಹವಾಡುವ ಸ್ವಭಾವದವನಂ ; ಕಲಹಪ್ರಿಯ : ಕೆಲವು ಮಕ್ಕಳು ಪ್ರಾರಂಭದಲ್ಲಿಯೇ ಶಾಂತಿಪ್ರಿಯರು, ಕೆಲವು ಜಗಳಕೋರರು (ಜೀವಾತ್ಮ. ೧೯೦). [ ಜಗಳ (<ಜಗಟ) + – ಕೋರ$_3$ ]

**ಜಗಳಗಂಟ** (ನಾ).=ಜಗಳಕೋರ : ಜಗಳಗಂಟನಾದರೂ ಅವನ ಹೃದಯ ಬಹಳ ನಿಷ್ಕಪಟವಾದದ್ದು (ನವನೀ. ೪). [ಜಗಳ (<ಜಗಟ)+ – ಗಂಟ$_2$]

**ಜಗಳಗಂಟಿ₁** 'ಜಗಟಿಗಂಟಿ' ನೋ.

**ಜಗಳಗಂಟಿ₂** (ಗು). ೧. ಕಲಹವಾಡುವ ಸ್ವಭಾವದ: ಆ ಕೀಟಗಳಿಗೆ ಪ್ರತಿಯಾಗಿ ಜಗಳಗಂಟಿ ಕೀಟಗಳು . . . ಮೇಲೆರಗುತ್ತವೆ (ಕೀಟಬಿ. ೨೩). (ನಾ). ೨.=ಜಗಳಕೋರ: ನಾರದನು ಜಗಳಗಂಟಿ (ಕೃರಾಕ. ೩೭). [ ಜಗಳಗಂಟ + – ಇ₃ ]

**ಜಗಳಗಂಟಿ₃** (ನಾ). ಒಂದು ಬಗೆಯ ಔಷಧಿ ಗಿಡ: ಕಲನಂದಿ, ಜಗಳಗಂಟಿ, ಬಿಲ್ಕಾನಿಕ (ಮೃಶಿಗಿ. ೩೦–೭೦೨). [ ಜಗಳ (<ಜಗಟ) + ಕಂಟಿ₂ ]

**ಜಗಳಗಂಟಿಕ್ಕು** (ಕ್ರಿ). ಕಲಹವನ್ನು ತಂದುಹಾಕು ; ಜಗಳವಾಡುವಂತೆ ಮಾಡು: ಜಗಳಗಂಟಿಕ್ಕಿ ನೋಡುವೆನೆಂಬ ಹರಕೆಯ (ನವಪೋ. ೨೯-೪೪). [ ಜಗಳ (<ಜಗಟ) + ಗಂಟಿಕ್ಕು ]

**ಜಗಳಗಂಟಿಗ** (ನಾ).=ಜಗಳಕೋರ: ಈ ಮೂವರು ಜಗಳಗಂಟಿಗರಾಗಿರ ಬಹುದೆಂದು ಜರಾಸಂಧನಿಗೆ ತೋರಲೇ ಇಲ್ಲ (ರಾಜಸೂ. ೦೮). [ ಜಗಳಗಂಟ + – ಇಗ ]

**ಜಗಳಗಂಟಿಮರ** (ನಾ). ತೊಬರೆಮರ: (+). [ಜಗಳಗಂಟಿ₃ + ಮರ₁]

**ಜಗಳಗಾತಿ** (ನಾ).=ಜಗಟಿಗಂಟಿ : ಜಗಳಗಾತಿ ಮಗಳನರಿಯಳು (ಗಾದೆ). [ ಜಗಳ (<ಜಗಟ) + – ಕಾತಿ₂ ]

**ಜಗಳಪುರ** (ನಾ). ಒಂದು ಊರಿನ ಹೆಸರು: ಶ್ರೀಮತ್ ಪಿರಿಯಬರಸಿಯರ ಮಗನಯ್ಯಪದೇವಗೆ ಜಗಳ[ಪು]ರದ ಮೊಸಳೆಯರಸರ × × × (ಸೌಇಇ. IX-!, ೩೦–೫ ; 966). [ ? + ಪುರ₃ ]

**ಜಗಳಾಟ** (ನಾ). ಕಲಹ ; ಕಚ್ಚಾಟ : ಸಂಸ್ಕೃತಿಯೆಂಬುದು . . . ಜಗ ಳಾಟಕ್ಕೆ ನೆವವಾಗಿದೆ (ವಿಜಾಮಂ. ೦೫); ಸಾಲೆಗಳಲ್ಲಿಯೂ ಓಣಿಯಲ್ಲಿಯೂ ಜಗಳಾಟ ಬೈದಾಟ (ನಿರಾಭ. ೭೭). [ ಜಗಳ (<ಜಗಟ) + ಆಟ ]

**ಜಗಳಾಶ್ವ** (ನಾ). ಕುದುರೆಯ ಬಾಯಲ್ಲಿಯ ಒಂದು ರೇಖೆಯ ಹೆಸರು (?) : ದಾಡೆಯಲ್ಲಿ ತೆರೆಗಳು ಮೂವತ್ತೆರಡಾಗಿಹವು. ಅದಕ್ಕೆ ಊರ್ಮಿ ಯೆಂಬ ಹೆಸರು. ಅದಟಿ ನಡುವೆ ಉದ್ದವಾಗಿ ಬಂದ ರೇಖೆಗೆ ಜಗಳಾಶ್ವವೆಂಬ ಹೆಸರು (ಅಶ್ವಟೀ. ೫೮–೦೨). [ ? ]

**ಜಗಳೆ,** ಝುಗಳೆ (ನಾ). ಒಂದು ಬಗೆಯ ವಾದ್ಯ ; ಕಂಚಿನ ತಾಳ; ಕಂಸಾಳ: "ಜಗಳೆಯೆ ಕಂಸಾಳ" (ಕವಿಕಂ. ೨೪೯) ; ಝಕಾರಕ್ಕೆ ಜಕಾರಂ– ಝುಗಟಾ – ಜಗಳೆ (ಶಮದ. ೨೫೫ ಪ್ರಯೋ) ; ಕಳಸ ಜಗಳೆ ಜಗಟೆ ಮೊದಲಾದ ಪಂಚಮಹಾವಾದ್ಯ (ಎಕ. IX, ಮಾಗಡಿ. ೦೮–೪೦ ; 1368) ; ಮಂಗಳಗಳ ಪಾಡುತ್ತ ನಿಸ್ಸಾಳ ತಮ್ಮಟೆ ಭೇರಿ ಜಗಳೆ ಪೇರ್ಬೇರಿ ಶಂಖ ಕಹಳಾನಿನದದೊಳು (ಸಿಂಗಿರಾ. ೩೦–೪) ; ಜಗಳೆ ಜಾಗಟೆಯಾರ್ಭಟೆಯ ಚೌಪಟ್ಟಿಯ . . . ಯೋಗಿನಿಯರೂ (ದೇವಾಂಪು. ೪–೪೭). **ಝುಗಳೆ:** "ಝುಗಳೆಯೆಂದು ಕಂಸಾಳಂ" (ಕಕಸಾ. ೨೦–೭೪೭) ; ದಾಳಿಂಬಂ . . . ಝುಗಳೆ ವಿಳಂಗಂ ಇವು ಕೂಡೆ ಡಕಾರಕ್ಕೆ ಪುಟ್ಟಿ ಬಟಿದಪಭ್ರಂಶತೆಯಂ ಪಡೆದುಂ ರೂಢಿಯ ಕುಳಂಗಳ್ (ಶಮದ. ೨೦ ವೃತ್ತಿ). 'ಜೇಗಂಟೆ' ಪರಾ. [ ? ]

**ಜಗಟ,** ಜಗಳ (ನಾ). ಕಲಹ ; ಹೋರಾಟ: "ಯುದ್ಧೋತ್ಸುಕಂ ದೋರ್ವರ್ಧ್ಮಮೆನೆ ಕರೇತರಮೆನಲು ಜಗಟಕ್ಕೆ ನಾಮಮಕ್ಕುಂ" (ಮಂಗರಾ. ೦೩೩–೩೦); "ಪೆಟಕೆನಲ್ ಜಗಟಂ" (ಸಂಜೀವ. ೪); ನುಡಿದ ಜಗಟಮದಿನಿ ಸಾನುಂ ತ್ರಿಪುರಹರನ ಕಿವಿಗೆಯ್ದುವುದುಂ (ಪಂಪಭಾ. ೦೨–೦೪೨): ಜವದ ಜಗಳಕ್ಕೆ ಪುರುಡಿಸುವ ಗರುಡನಂ ಗಜಬುವಂತೆ ದುಂದುಭಿ ಗಭೀರ ಹೇಷಾರವಂಗಳೊಗೆಯೆ (ಪುಷ್ಪಪು. ೨–೯೦ ವ). **ಜಗಳ:** ಸಂಸಾರವೆಂಬ ಹೆಣ ಬಿದ್ದರೆ ತಿನ ಬಂದ ನಾಯ ಜಗಳವ ನೋಡಿರೆ (ಅವಜಂ. ೧೧–೪೭); ಅಂಟದ ಜಗಳದೊಳಗೆ ಮಾರ್ಬಲವನು ಪುಟ್ಟಿಸಿ (ಕಂನವಿ. ೭–೭೦); ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ (ಗಾದೆ).

**ಜಗಳತರು** = ಮನಸ್ತಾಪ ಹುಟ್ಟಿಸು; ಕಲಹವನ್ನುಂಟು ಮಾಡು: ಮಾತು ಬಲ್ಲವ ಮಾಣಿಕ ತಂದ ಮಾತರಿಯದವ ಜಗಳತಂದ (ಗಾದೆ). **ಜಗಳತೆಗೆ** = ಕಲಹವನ್ನು ಪ್ರಾರಂಭಿಸು: ಅವಳು ಸುಮ್ಮಸುಮ್ಮನೆ ಜಗಳ ತೆಗೆಯುತ್ತಾಳೆ (ರೂಢಿ). **ಜಗಳದ ಮದ್ದು** = ಕೋವಿಮದ್ದು ; ತುಪಾಕಿ ಮೊದಲಾದುವನ್ನು ಹಾರಿಸಲು ಬಳಸುವ ಸಿಡಿಮದ್ದು: "ಬಳಪುರ್ದು =ಜಗಳದ ಮದ್ದು" (ಗಂಗಾಮು. ೨೩೦). **ಜಗಳದ ಮರ**=ತೊಬರೆಗಿಡ ; ತುಂಬರಗಿಡ : "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಶಿತಿಸಾರಕಃ–ಳ ತುಂಬರಗಿಡ, ತೂಬರೇಗಿಡ ಇದನ್ನು ಜಗಳದ ಮರವೆಂದು ಕೆಲವರನ್ನು ವರು" (ಸಿದ್ಧಾಂತಿ. ೦೦೭). **ಜಗಳವಾಡು, ಜಗಳಾಡು** = ಕಲಹಮಾಡು ; ಹೊಡೆದಾಡು : ಜಗಳವಾಡುವರಲ್ಲಿ ಕೆಲರು ಮಾತೆಯರಿಕ್ಕಿದುಗುಳ ದಾಂಟಿದರೆಂದು ಕೆಲರು (ಪೋಹತ. ೦೮–೮೦); ಮೂಡುವನು ರವಿ ಮೂಡುವನು ಕತ್ತಲೊಡನೆ ಜಗಳಾಡುವನು (ಕಎಪು. ೫–೧). **ಜಗಳವಾತು**= ಯುದ್ಧದ ಮಾತು ; ಕಲಹದ ಮಾತು : ಜಗಳವಾತಿಂದ ಜಯದ ಜಾಣ್ನುಡಿಯಿಂದ ನಗೆಯಿಂದ ನಲಿದಾಟದಿಂದ ಏಗೆ ಕಳೆದರು ವೀರಭಟರು ರಾತ್ರಿಯನಂದು (ಕುರಾಸಾಂ. ೦೪–೮೨). **ಜಗಳಹಚ್ಚು** = ಕಲಹವನ್ನುಂಟು ಮಾಡು : ತಳ್ಳಿ = ೧. ನಡುವೆ ಬಂದು ಜಗಳ ಹಚ್ಚೋಣ. ೨. ಬಂಡಾಯ (ಗಂಗಾಮು. ೦೫೦). [ <ಪ್ರಾ. ಜಗಡ, ಝಗಡ ]

**ಜಗಟಂಬೊಗು** (ಕ್ರಿ). ಜಗಳತೆಗೆ; ಕಲಹವನ್ನು ಪ್ರಾರಂಭಿಸು: ಜಗಟಂ ಬೊಕ್ಕವರೊಳ್ ಕೆಲರ್ ಪೆಟವರಾಗಿರ್ದರ್ (ಅರ್ಧನೇ. ೨–೮೪). [ ಜಗಟ + ಪೊಗು ]

**ಜಗಟಿಗಂಟಿ,** ಜಗಳಗಂಟಿ₁ (ನಾ). ಕಲಹಮಾಡುವ ಸ್ವಭಾವದವಳು : ಜಗಟಿಗಂಟಿಯಂತೆ ಮಿಡುಮಿಡುಮಿಡುಕಿ (ಧರ್ಮಾಮೃ. ೧–೦೭೮). **ಜಗಳ ಗಂಟಿ₁:** ವಂಚಕಿಯರು ಜಗಳಗಂಟಿಯರು ಕಾಮಾತುರೆಯರತಿದವಡಿತಿ ಯರಂತಃಕರಣಮಲಿನೆಯರು (ಬಸಪು. ೪೦–೫೩); ನಾಲಿಗೆ . . . ಕಪ್ಪಾಗಿ ಯಿದ್ದರೆ ಜಗಳಗಂಟಿ ಆಗುವಳು (ಸೌಗಂಧಿ. ೭೭೦–೨೦) ; ಜಗಳಗಂಟಿಗಳನ್ನು ಪ್ರತ್ಯೇಕಿಸಿದರು (ಪುನರು. ೦೫೦). [ ಜಗಟ + – ಗಂಟಿ₂ + – ಇ₂ ]

**ಜಗಟವಂತ** (ನಾ). = ಜಗಳಕೋರ : ನಿಂದಾಯಾಂ–ಜಗಟವಂತಂ, ದೋಸ ವಂತಂ (ಶಬ್ದಾನು. ೪೦೨ ಪ್ರಯೋ). [ ಜಗಟ + – ವಂತ ]

**ಜಗಾತ್ಮ** (ನಾ). ಬ್ರಹ್ಮ ; ಸೃಷ್ಟಿಕರ್ತ : "ಸರಸಿಜೋದ್ಭವನಜಂ ಶ್ರೇಷ್ಠಂ ಜಗಾತ್ಮಂ . . . ವಿರಂಚಿಯೆನೆ ಬ್ರಹ್ಮನಕ್ಕುಂ" (ಮಂಗರಾ. ೩–೯) . [ ಜಗ + ಆತ್ಮ ]

**ಜಗಿ₁** (ಕ್ರಿ). ೧. ಬಾಯಲ್ಲಿ ನುರಿಸು ; ಅಗಿ ; ಅಗಿದು ತಿನ್ನು ; ಚರ್ವಣ ಮಾಡು: ಅಂಗಳದಲ್ಲಿ ಒಬ್ಬಳು ಪುಟ್ಟಹುಡುಗಿ ಕಬ್ಬು ಜಗಿಯುತ್ತಾ ನಿಂತಿ ದ್ದಳು (ಕಣ್ಣುತಿ. ೭೭) ; "ಈಗ ಸರಿಯಾಪ್ಟೆ" ಎಂದು ಅಡಿಕೆಯನ್ನು ಜಗಿ ಯುತ್ತಾ ಕೇಳಿದರು (ಅಪವಾ. ೭) ; ಇಂದೂ ಅವನು ನಿರ್ದಯತೆಯಿಂದ ತಾಂಬೂಲವನ್ನು ಜಗಿಯುತ್ತಿದ್ದ (ಬಾಡಅ. ೩೭೫). ೨. ಚುಚ್ಚು ; ನೋಯಿಸು : ಅಗೆದು ಗೊಬ್ಬರವಿಕ್ಕಿ ನೀರೆರೆದು ತೋಟಿಗನು ಜಗಿವ ಮುಳ್ಳಿರಿತಗಳ ಸೈರಿಸೆ ಗುಲಾಬಿ ನಗುವುದೊಂದರೆ ನಿಮಿಷ (ಮಂಕುಕ. ೪೭೮). ೩. (ಅಲಂ) ಮೆಲುಕುಹಾಕು ; ಪರ್ಯಾಲೋಚಿಸು : ನೂರ ಚಿಂತಿಸಿ ದಳು. ಯುಸುಫನ ಮಾತುಗಳನ್ನು ಒಂದೊಂದಾಗಿ ಜಗಿದು ನೋಡಿದಳು (ನೂರಜ. ೩೭). 'ಅಗಿ₁' ಪರಾ.

**ಜಗಿ₂** (ಕ್ರಿ). ಹೊಳೆ; ಪ್ರಕಾಶಿಸು; ಹೊಳಪು ಬೀರು: ಜ[ಪಾಠಾಂ. ಜ]ಗಿವ ಪಸುರಂಗಿಗಳ ಗುರುಗುಂಜಿದಂಡೆಗಳ ನಿಗುರಿಸಿಹ ಮಿಸೆಗಳ ಕೆಂಗಣ್ಣ . . . ಬೇಡವಡೆ ನಡೆತಂದುದು (ಪಂಕಾರಾ. ೩–೭–೨೨) ; ದಿನೇ ದಿನೇ ಅವನ ಮೈಕಟ್ಟು ತುಂಬಿ ಜಗಿಯಲಾರಂಭಿಸಿತು (ಭೀಮಕಾ. ೩೪). 'ಜಗಜಗಿಸು' ಪರಾ. [ ದೇ.॥ ತೆಲು. ಜಗ್ಗು = ಹೊಳಪು ]

**ಜಗಿ$_3$** (ಕ್ರಿ). ಭಾರದಿಂದ ಜೋಲು,–ಬಾಗು : ತೋಟದಲ್ಲಿ ಹಣ್ಣು ಹಂಪಲುಗಳು ಜಗಿಯುತ್ತಿವೆ (ಆರ್ಯಧ. ೧೫). [ <ಜರ್ಗು ? ]

**ಜಗಿಸು** 'ಜರ್ಗಿಸು' ನೋ.

**ಜಗು** (ಕ್ರಿ). (?): ಮಘಮಘಿಸುವ ಚಂದನವ ತಿಗುರಿಕ್ಕುವರೆ ಹಸ್ತದುಗುರು ತಾಗಿತೊ ಚೆನ್ನಸ್ವಾಮಿ ಜಗುವ ಕಬಾಯದ ಬಿಗುಹು ಬೆನ್ನೊಳು ಸೋಂಕಿ ಯುಗಿಯಿತೊ (ಕೋಣಜ. ೨-೪೮). [ ? ]

**ಜಗುನಿ** 'ಜಮುನೆ' ನೋ.

**ಜಗುನಿಸಂಗಮ** (ನಾ). ಯಮುನಾ ಮತ್ತು ಗಂಗಾ ನದಿಗಳ ಕೂಡಲು,–ಸಂಗಮ: ಇಡಿಕಿಱಿದ ಪೀವರಸ್ತನಯುಗಳ ಪರ್ವತದ ನಡುವಿತ್ತು ಮುತ್ತಿನೊಚ್ಚರ ಗಂಗೆಯೊಲು ತೊಡರ್ದ ಬಡಬಾಸೆಯೇ ಜಗುನಿಸಂಗಮದೊಳಿಸೆವುತಿರೆ (ರಾಘಪ. ೭-೪೭). [ ಜಗುನಿ (<ಜಮುನೆ) + ಸಂಗಮ ]

**ಜಗುನೆ** 'ಜಮುನೆ' ನೋ.

**ಜಗುಲಿ** 'ಜಗಲಿ' ನೋ.

**ಜಗುಲಿಕಟ್ಟೆ** (ನಾ). =ಜಗಲಿ ೧ : ಜಗುಲಿಕಟ್ಟೆ, ಕೆರೆ, ಭಾವಿಕಟ್ಟೆಗಳಲ್ಲಿ ಕಲಿತ ಹೆಂಗಸರು ಆಡುವ ಆಡಿಕೆಯ ಮಾತಿನಿಂದ ಎಷ್ಟೋ ಸಂಸಾರಗಳು ಹಾಳಾಗಿವೆ (ನಿಂದನೆ. III, ಮುನ್ನುಡಿ). [ ಜಗುಲಿ(<ಜಗಲಿ) + ಕಟ್ಟೆ$_1$ ]

**ಜಗುಳ್** 'ಜಗುಱ್' ನೋ.

**ಜಗುಳಿಕೆ** (ನಾ). ೧. ಜಾರುವಿಕೆ; ಕಳಚುವಿಕೆ. ೨. ಸಾವು: ಮಗನೆ ಕೇಳ್ಕೆ ಕುಶನೆ ಕಾಲನ ನಗರಿಗಭಿಮುಖನಾದ ಮಂತ್ರಿಯು ಜಗುಳಿಕೆಯ ಕೇಳ್ದು ಸುರಪತಿ ಕಳವಳದ ಕರಣದಲಿ ಉಗುಳಿದನು ತಂಬುಲವ (ತೊರರಾ. ೬-೨೦-೧). [ ಜಗುಳ್(<ಜಗುಱ್) + – ಇಕೆ ]

**ಜಗುಳಿತ** (ನಾ). ಜಾರಿಕೆ : ಜಗದ ಮಾಯಾವಲಂಬನವೆಂಬ ಪಲ್ಲವದ ಜಗುಳಿತದ ಪೆರ್ಗಸರ ನೀರಿಂಗೆ ಮೋಹಿಪುದೆ (ದುರಪು. ೨-೩೫).
[ ಜಗುಳ್ (<ಜಗುಱ್) + – ತ$_2$ ]

**ಜಗುಳಿಸು** (ಕ್ರಿ). ಹೋಗಲಾಡಿಸು ; ನಿವಾರಿಸು ; ಕಳೆ : ಜಗದ ಜೀವನ ಪಾಪಕರ್ಮವ ಜಗುಳಿಸಿದ ಶ್ರೀಕಂಠ (ಸಂಭಪ. ೯-೮); ನಿಗಮತತಿದುರ್ಲಭನೆ ಅಗಣಿತ ಮನೋಹರನೆ ಸಗುಣ ನಿರ್ಗುಣನೆ ಬಸವಯ್ಯ ಬಸವಣ್ಣ ಜಗುಳಿಸಿದೆಯೆನ್ನ ಮಱವೆಯಾ (ಗುರುಬೋ.೬೮-೬೧); ನೋಟದಲಾಶ್ರಿತರ ಸಂತಾಪತ್ರಯಗಳನು ಜಗುಳಿಸುವ ಲೋಚನದ ಕರುಣಾಳುಗಳ ದೇವ (ನಿಭಾಗ. ೩-೧೩-೪೦); ಮುನಿಸುಗೊಂಡಿರುವ ಸತಿಪತಿಗಳ ಜಗಳಮಂ ಜಗುಳಿಸುತ (ಸೌಗಂಧಿ. ೧೮೭-೧). [ ಜಗುಳ್ (<ಜಗುಱ್) + – ಇಸು$_3$ ]

**ಜಗುಳು** 'ಜಗುಱ್' ನೋ.

**ಜಗುಳುದಲೆ** (ನಾ). ಜಾರುವಿಕೆ: ವಾಸಿ ತೋಱಿತು ಮನಕೆ ಜನಕಮಹೀಶ ಸುತೆ ನಿನಗಂದು ಭವಬಾಣಾಸನದ ಭಾರಣೆಯ ಬಿಗುಹಿನ ಜಗುಳುದಲೆ [ಪಾಠಾಂ. ಳ]ಯಿಂದ ದಾಶರಥಿಗಾ ರಮಣಿ ರಾಣೀವಾಸವಾದಳು (ತೊರರಾ. ೩-೭-೧೭). [ ಜಗುಳು (<ಜಗುಱ್) + – ದಲೆ ]

**ಜಗುಳುನುಡಿ** (ನಾ). ನುಣುಚಿಕೊಳ್ಳುವ ಮಾತು : ಜಗುಳುನುಡಿ ಜಾಣ್ಮೆನುಡಿ . . . ಬನ್ನಣೆಯ ನುಡಿಯು ಭಾವೆಯರು ಬರುತಿರ್ದರಿಕ್ಕಿಲದೊಳು (ನವಮೋ. ೨೪-೧೫). [ ಜಗುಳು (<ಜಗುಱ್) + ನುಡಿ$_2$ ]

**ಜಗುಱ್**, ಜಗುಳ್, ಜಗುಳು (ಕ್ರಿ). ೧. ಓಡಿಹೋಗು ; ದೂರ ಹೋಗು : "ಜಗುಱ್–ಅಪಸರಣೇ (ಹೊರಟುಹೋಗು)" (ಶಮದಾ) ; ಆಗಳಾಕುಳವ್ಯಾಕುಳರಾಗಿ ನಾಣ್ಚಿ ಜಗುಱ್ದು ಪೆರ್ವರುಮಂದೊಳಸಾರ್ದು ಪೋಪುದುಂ (ಆದಿಪು. ೩-೮೯). ೨. ಜಾರು; ಜಾರಿಕೊಳ್ಳು: "ಜಗುಱೆಂದು ಜಾಱುವುದು" (ಶಶಸಾ. ೨೭-೫೮೦). ೩. ಬೀಳು ; ಕೆಡೆ: ಪಾಪದ ಭರದಿಂ ನರಕಕ್ಕೆ ಜಗುಱ್ದನೆನ್ನಾತ್ಮೇಶಂ (ಧರ್ಮಾಮೃ. ೧೦-೨೧೭). ೪. ತೂಗಾಡು; ಜೋಲು : ಸೊಗಯಿಸುವ ಪಾಲೆಯಿಂ ನಸು ಜಗುಱುತ್ತಿರೆ ಕರ್ಣಪೂರ ಪಲ್ಲವಂ (ಕಾದಂಪೂ. ೫೨). **ಜಗುಳ್** : ೨. ಪರಿಮಳದ ಕೆಸರ್ವಸಗಿದ ವನಸ್ಥಳದೊಳ್ ಬಿನದದಿಂ ನಡೆವಲ್ಲಿ ಕಾಲ್ ಜಗುಳ್ದು ಜೋಲ್ದು (ಗಿರಿಕ. ೨-೭೧ ವ). ೫. ಕಳಚಿಕೊಳ್ಳು: ಜಗುಳ್ದು ತಾವೇ ಬೀಳ್ವ ಕಳಿವದದ ಪಣ್ಗಳಿಂ ನೈವೇದ್ಯಮಂ ವಿರಚಿಸಿ (ಪದ್ಮರಾ. ೮-೩೫) ; ನರೆತ ಮಿಸೆಯು ಜಗುಳ್ದ ಹಲ್ಲುಗಳ ಹಾಯಿದೆಲುಗಳ ನೆಗ್ಗಿದವಯವದ ಅಗಿಯಲಲುಗುವ ತಲೆಯ ಮುಪ್ಪಿನ ಮುಗುದ (ಕುವ್ಯಾಭೀ. ೧-೩೫). **ಜಗುಳು** : ೧. ಮಗಳು ಮದ್ದಳೆಯವನ ಬೆನ್ನಲಿ ಜಗುಳಿ ಹೋದುದ ಕೇಳಿ (ಪ್ರಭುಲೀ. ೮-೩). ಬೆಳೆದಿಹ ಪೈರುಗಳ ಬಿಟ್ಟು ಜನವಂಜಿ ಜಗುಳಿದರು (ಕಂನವಿ. ೧೧-೪೮). ೩. ಮಡದಿಯೊರ್ವಳಿಗೆ ಗಿಂಡಿಯ ತನ್ನ ಕೈಮುಟ್ಟಿ ಕೊಡುವಾಗ ಜಗುಳಿತಾ ಗಿಂಡಿ (ಭರಪ. ೪-೪೭). ೪. ಪರಮೇಶ್ವರನ ಮುಡಿ ಸಡಿಲಿ ಜಗುಳುವ ಜಡೆಗಳೊಯೆಂಬಂತೆ (ಸೌಗಂಧಿ. ೧೮೭-೧೮). ೫. ಜಗುಳಿದೊಱೆಗಳ ಜಾಳಿಗೆಯ ಹೊಗರೊಗಲು (ಕುವ್ಯಾಭೀ. ೧-೪೭). ೬. ಸುರಿಸು ; ವರ್ಷಿಸು : ಜಗುಳಿದುದು ಕಿಸುಕುಳದ ಮಳೆ ಧರಣಿಗೆ ನಿರಂತರ ಮೂತ್ರ ಶೋಣಿತ ಹೇಯ ವೃಷ್ಟಿಗಳ (ನಿಭಾಗ. ೩-೮-೨೪).

**ಜಗುಟ್ಟಿರ್** (ಕ್ರಿ). ಜಾರಿಬೀಳು; ಅಳ್ಳಕವಾಗು; ಸಡಿಲವಾಗು : ಅಲಸಿಕೆ ಜಕ್ಕವಕ್ಕಿಗೆ ಜಗುಟ್ಟಿರೆ ಪಕ್ಕದೊಳಾಱೆವೊಕ್ಕು ಜಕ್ಕುಲಿಸಿ ಸಡಿಲ್ದ ತಾವರೆಯೆಸಟ್ಗಱುಪಿಂದೊಳವಿಟ್ಟು ನಿದ್ದೆಯಂ ತೊಲಗಿಸಿದಂಬೆವೆಣ್ (ಚಂದ್ರಪು. ೮-೯೭) : ನೀವಿ ಜಗುಟ್ಟಿರೆ ನೀಟ್ದು ಕಣ್ಮಲರ್ ತನಿವೆಳಗಂ ಕಡಲ್ವರಿಸೆ (ಕುಸುಮಾ. ೫-೯೯). [ ಜಗುಟ್ + ತರ್ ]

**ಜಗೆ** (ನಾ). [ಸಂಗೀತ] ಆವುಜವೆಂಬ ತಾಳವಾದ್ಯದ ವಾದನದಲ್ಲಿ ಒಂದು ಕ್ರಮ : ಸಂಚತ್ರಯ ಸುಸಂಚನೆಂಬಾವುಜಿಗನಾವುಜವನಳವಡಿಸಿ . . . ಜಗೆ ಜೋಕೆ ರಾಜಿಸೆ ಬಾಜಿಸುತ್ತಿರೆಯುಂ(ಶಾಂತೀಶ್ವ. ೧೭-೭೭ ವ). [ ? ]

**ಜಗ್ಗನೆ** (ಅ). ರಭಸವಾಗಿ ; ತಟ್ಟನೆ ; ಕೂಡಲೆ : ಕುಸಿದನ್ಮದೈವಂಗಳೆಲ್ಲ ಜಗ್ಗನೆ ಜರಿಯೆ (ಚಾವುಂರ. ೮೯-೨೪) ; ಪ್ರಳಯಕಾಲ ತುಂಬದ ಮುನ್ನವೆ ಮಹಾಪ್ರಳಯ ಬಂದಿತ್ತೆಂದು ಜಗ್ಗನೆ ಉರಿವುತ್ತ (ಶೂನ್ಯಸಂ. ೪೧-೨೩) ; ಕರಿಘಟೆಗಳುಪ್ಪರಿಸಿ ಜಗ್ಗನೆ ಜರಿದು ನಿಂದವು (ತೊರರಾ. ೧-೧೭-೪) ; ಎಮ್ಮಯ ಮಾತು ಜಗ್ಗನಿದೊ ನಾಟಿತಾತನ ಮನದೊಳು (ಹರಿಶ್ಚರ. ೧೫-೩). ಅಧ್ಯಕ್ಷನು ಜಗ್ಗನೇ ಮೇಲಕ್ಕೆದ್ದ (ಯೋಧಪು. ೩೨). [ಜಗ್$_0$ + – ಅನೆ$_1$]

**ಜಗ್ಗರಿಸು** (ಕ್ರಿ). (?) : ರಾಧೇಯ . . . ಶೌರ್ಯರಸ ವೆಗ್ಗಳಿಸಿ ಜಗ್ಗರಿಸಿ ಕಲಕಿದಂ ಮೂರಲೆಗಳಂ ನುಡಿದು(ತುರಂಗ. ೬೯-೩೫). [ ? + – ಇಸು$_3$ ]

**ಜಗ್ಗಲಿಗೆ** (ನಾ). ಒಂದು ಬಗೆಯ ವಾದ್ಯ : ಮದ್ದಲಿ, ದಿಮ್ಮ, ದಪ್ಪು, ದುಂದುಭಿ . . . ಜಗ್ಗಲಿಗೆ ಮೊದಲಾದವುಗಳ ಸಂಜೋಡಣೆ ಮಾಡಿ (ಕನ್ನಜಾ. ೨೯). [ ಜಗ್ಗು$_1$ (<ಜರ್ಗು) + ಹಲಿಗೆ (<ಪಲಗೆ) ]

**ಜಗ್ಗಾಟ** (ನಾ). ೧. ಎಳೆದಾಟ ; ಎಳೆದಾಡುವಿಕೆ : ಮನೆಯ ಮತ್ತು ಆಫೀಸಿನ ಜಗ್ಗಾಟದಲ್ಲಿ ಎರಡು ದಿನಗಳನ್ನು ಎರಡು ನಿಮಿಷಗಳಂತೆ ತಳ್ಳಿದೆವು (ರಾಯುಕ. ೯೪) ; ವೇಣುಗೋಪಾಲನು ರತಿಕಾಂತನ ವಾತ್ಸಲ್ಯದ ಜಗ್ಗಾಟವನ್ನು ಬಲುಮೆಯಿಂದ ಬಿಡಿಸಿಕೊಂಡು "ಹೋಗು ನೀನು" ಎಂದನು (ಇಪ್ಪಕ. ೩೦೨). ೨. (ಆಲಂ) ಚೌಕಾಸಿ : ಹೀಗೆ ಜಗ್ಗಾಟವಾಗಿ ಕೊನೆಗೆ ೬೦೦ ರೂಪಾಯಿಗಳಿಗೆ ಗದ್ದೆ ಒಪ್ಪಿತು (ದಾಸಹು. ೬೩).
[ ಜಗ್ಗು$_1$(<ಜರ್ಗು) + ಆಟ ]

**ಜಗ್ಗಾಡು** (ಕ್ರಿ). ೧. ಎಳೆದಾಡು. ೨. ಅತ್ತಿತ್ತ ಓಡಾಡು,–ಸರಿದಾಡು: ತಂತಮ್ಮ ಬಂಡಿಗಳಲ್ಲಿ ಅತ್ತಿತ್ತ ಜಗ್ಗಾಡುತ್ತಿದ್ದ ಬಂಡಿಗಾರರ ಕಪ್ಪುಮೋರೆಗಳಲ್ಲಿ ಅದೇ ವಿಕಾರಭಾವ ಎದ್ದು ಕಾಣುತ್ತಿತ್ತು (ಪುನರು. ೩೧೧). ೩. (ಆಲಂ) ವಿವಾದಮಾಡು ; ಚೌಕಾಸಿಮಾಡು : ಕುದುರೆಯ ಲಗಾಮು ಜಗ್ಗಿ ಜಗ್ಗಿ ಎಲ್ಲ ವಿಷಯಗಳಲ್ಲಿ ಜಗ್ಗಾಡುವದು ಆತನಿಗೆ ಅಭ್ಯಾಸವಾಗಿ ಬಿಟ್ಟಿದೆ (ಕುಂಹಿಂ. ೮೫). [ ಜಗ್ಗು$_1$ (<ಜರ್ಗು) + ಆಡು$_1$ ]

**ಜಗ್ಗಿಯರಸ** (ನಾ). ಒಬ್ಬಾತನ ಹೆಸರು : ಬೀರ ಪೆರ್ಮ್ಮಾನಡಿಯುಂಗೊಟ್ಟ ಕಲ್ನಾಟು ಬೆಳ್ಗಲಿಯ ನೀಗ್ರ್ಗನ್ದ ಜಗ್ಗಿಯರಸರ್ಗ್ಗೆ ಕೊಟ್ಟರ್ (ಎಕ. V, ಅರಕ. ೬೧-೫ ; 920). [ ಜಗ್ಗಿ$_0$ + ಅರಸ$_1$ ]

**ಜಗ್ಗಿಸು** 'ಜರ್ಗಿಸು' ನೋ.

**ಜಗ್ಗು$_1$** 'ಜರ್ಗು' ನೋ.

**ಜಗ್ಗು$_2$** (ನಾ). ಒನಪಿನಿಂದ ಒಲೆಯುವಿಕೆ : ಜಾಣೆಯ ಬಗೆಗಳು ಜಗ್ಗಿನ ಕೇಣದೊಯ್ಯಾರದಲ್ಲಿ (ಕೋಗಯ. ೧೩-೫೦) ; ಜೌವ್ವನದ ಜಗ್ಗು ನಿಗ್ಗುಗಳಂ ತೋರ್ಪಂತೆ (ಸೌಗಂಧಿ. ೧೧-೧೩). [ <ಜರ್ಗು ]

**ಜಗ್ಗು$_3$** (ನಾ). (ಕರಾ) ಒಂದು ಬಗೆಯ ಮೀನು ; ಕುಸುರಿನಂತಿರುವ ಮೀನು : ಈ ಕೊಳದ ಮೀನುಗಳಲ್ಲಿ ಜಗ್ಗುಗಳು ಹೆಚ್ಚು (ರೂಢಿ). [ ←ತುಳು. ಜಗ್ಗ್ ]

**ಜಗ್ಗು$_4$** (ನಾ). ಒಬ್ಬಾತನ ಹೆಸರು: ಶ್ರೀಧರ ಪುತ್ರಾಯ ಜಗ್ಗು ನಾಮ್ನೇ ಬ್ರಾಹ್ಮಣಾಯ (ಎಇ. VI, ೨೧೦-೩೨ ; 769). [ <ಜಗನ್ನಾಥ ]

**ಜಗ್ಗುಗಾತಿ** (ನಾ). ಮೈಯನ್ನು ಅತ್ತಿತ್ತ ಒಲೆಯುವ ಒನಪುಗಾತಿ ; ಒಯ್ಯಾರಿ : ಜವ್ವನದ ಜಗ್ಗುಗಾತಿಯರು (ಸೌಗಂಧಿ. ೨೧೩-೧೭). [ ಜಗ್ಗು$_2$ + – ಕಾತಿ$_5$ ]

**ಜಗ್ಗುಟೆ** 'ಜೇಗಂಟೆ' ನೋ.

**ಜಗ್ಗುಬೀಳು** 'ಜರ್ಗುವೀೞ್' ನೋ.

**ಜಗ್ಧ** (ಗು). ಅಗಿಯಲ್ಪಟ್ಟ ; ತಿನ್ನಲ್ಪಟ್ಟ. [ ಸಂ. ]

**ಜಗ್ಧಿ** (ನಾ). ೧. ತಿನ್ನುವಿಕೆ. ೨. ಆಹಾರ; ಊಟ: "ಉಣಿಸಭ್ಯವಹರಣಂ ಭಕ್ಷಣವಶನಂ-ಜಗ್ಧಿ ಜೇಮನಂ ಭುಕ್ತಿ ಸಮಂ" (ವಸ್ತುಕೋ. ೯೫-೭). [ ಸಂ. ]

**ಜಘನ** (ನಾ). ೧. ನಿತಂಬ ; ಕಟಿಪ್ರದೇಶ : ಬರ್ಹಿರೋಮಾವಳೀ ಕಾಂಚನ ಕಾಂಚೀದಾಮಪಾತ್ರಂ ಜಘನಜಗತಿಯೊಳ್ ಶೋಭಿಸಲ್ಕೆ (ಗದಾಯು. ೮-೫೮) ; ಕಳಶಕುಚೆಯರು ಜಘನಚಳದಳಕಿಯರು ಕುರುರಾಯನೆಡವಂಕದಲಿ ಮೋಹಿದರು (ಕುವ್ಯಾಉ. ೮-೪೪); ಕೋಮಳ ತನುಲತೆ ಘನಜಘನಂ ಸೆಳೆನಡು ಕಳಹಂಸಗಮನಮೆಳೆಯಳ್ಗೆಸೆಗುಂ (ರಾಜಶೇ. ೭-೧೦೩). ೨. ಕಟಿಪುರೋಭಾಗ. ೩. ಸೈನ್ಯದ ಹಿಂಭಾಗದ ಕಾವಲು. [ ಸಂ. ]

**ಜಘನಕೂಪಕ** (ನಾ). ಕುಂಡೆಯ ಕುಳಿ: "ಕುಕುಂದರಃ, ಜಘನಕೂಪಕಃ–ಈ ೨ ಕುಂಡೆಯ ಕುೞಿ" (ಹಲಾಯು. ೮೫-೩೫೯). [ ಜಘನ + ಕೂಪಕ ]

**ಜಘನಸ್ಥಲ, ಜಘನಸ್ಥಳ** (ನಾ). ನಿತಂಬ ಪ್ರದೇಶ : ಸುಲಲಿತ ಜಘನಸ್ಥಲ ಮೇಖಲೆಯಗ್ರದೊಳೆಸೆವ ಮಂಜುಮಣಿ (ರಾಜಶೇ. ೭-೩೪). **ಜಘನಸ್ಥಳ** : ಪುಗೆ ಕೊಳನಂ ಲತಾಲಲಿತೆಯರ್ ಜಘನಸ್ಥಳಮೊತ್ತೆ ಮೇರೆಯಂ ಮಿಗುವುದು (ಶಾಂತಿಪು. ೮-೨೮). [ ಜಘನ + ಸ್ಥಲ ]

**ಜಘನಸ್ಥಳ** 'ಜಘನಸ್ಥಲ' ನೋ.

**ಜಘನೇಫಲೆ** (ನಾ). ಕಲ್ಲತ್ತಿ ಗಿಡ; ಕಾಕೋದುಂಬರ : "ಕಾಕೋದುಂಬರಿಕಾ . . . ಜಘನೇಫಲಾ–೪ ಕಲ್ಲತ್ತಿಗಿಡದ ಹೆಸರುಗಳು" (ಸಿದ್ಧಾಂತಿ. ೧೦೦೦). [ ಸಂ. ಜಘನೇಫಲಾ ]

**ಜಘನೋಪಗೂಢ**(ನಾ).=ಜಘನೋಪಗೂಹನ: ಒಱಗಿದಿನಿಯನನಡರ್ದು ಪೊಱವಾಱು ಪೊಱವಾಱಿನುೞಿ ಸೋಂಕೆ . . . ನಾಣೆಡೆಯುಪ್ಪಿ ನೆಱಿ ತೋರ್ಪುದದುವೆ ಜಘನೋಪಗೂಢಂ (ಜನವ. ೭-೧೨). [ ಸಂ. ]

**ಜಘನೋಪಗೂಹನ** (ನಾ). [ಕಾಮಶಾ] ಹನ್ನೆರಡು ವಿಧವಾದ ಆಲಿಂಗನಗಳಲ್ಲಿ ಒಂದು: ಬಳಿಕ ಪುಷ್ಕರ . . . ಜಘನೋಪಗೂಹನ . . . ಲಲಾಟಕವೆಂಬ ದ್ವಾದಶವಿಧಾಲಿಂಗನಗಳಂ (ವಿವೇಕ. ೩೨೯). [ ಜಘನ + ಉಪಗೂಹನ ]

**ಜಘನ್ಯ** (ಗು). ೧. ಹಿಂಭಾಗದ ; ಹಿಂದಣ ; ಹಿಂದಿರುವ. ೨. ಕಡೆಯ ; ಅಂತ್ಯದ : ಜಂಬೂದ್ವೀಪದ ಹೈಮವತವೆಂಬ ಜಘನ್ಯಭೋಗಭೂಮಿಯೊಳ್ (ವಡ್ಡಾರಾ. ೧೬೪-೫). (ನಾ). ೩. ಕೀಳು ; ನೀಚವಾದುದು ; ಅಧಮವಾದುದು : "ಕುಪ್ರಿಯಮೆನೆ ಜಘನ್ಯಮೆನಲತಿ ಕೀೞದಕ್ಕು" (ಮಂಗರಾ. ೧೩೪-೩೧); ಆ ನಾರಕರೆಲ್ಲಂ . . . ದುರ್ಗಂಧರುಂ ನಪುಂಸಕರುಂ ಜಘನ್ಯದಿಂ ದಶಸಹಸ್ರವರುಷಾಯುಷ್ಯಮುಂ . . . ಉದಯಿಸುಗುಂ (ಸುಕುಮಾ. ೧೦-೪೮ವ). ೪. ಕೊನೆಯ ವರ್ಣದವನು; ಹೀನಕುಲದವನು; ಶೂದ್ರ; ಚಾಂಡಾಲ. ೫. ನೀಚವ್ಯಕ್ತಿ : ಜಘನ್ಯ ಸೌಧರ್ಮಕಲ್ಪದೊಳು ಪಲ್ಯೋಪಮ . . . ಸಮಯಾಧಿಕವಾಗೆ ಮೇಗಣವರು ಜಘನ್ಯಂಗಳು (ಶಾಸ್ತ್ರಟೀ. ೩೮-೧೧).

ಜಘನ್ಯ ಅಂತರಕಾಲ = [ಜೈನ] ಅನ್ಯಗುಣಸ್ಥಾನದಲ್ಲಿರುವ ಜೀವವು ಮತ್ತೆ ತನ್ನ ಗುಣಸ್ಥಾನವನ್ನು ಸಂಪಾದಿಸುವವರೆಗಿನ ಕಡಮೆಯಾದ ವಿರಹಕಾಲ: ಎಲ್ಲಕ್ಕೂ ಕಡಿಮೆಯಾದ ವಿರಹಕಾಲಕ್ಕೆ ಜಘನ್ಯ ಅಂತರಕಾಲವೆಂದೂ . . . ಹೇಳುವರು (ಜೈನಪ. ೩೦೬). [ ಸಂ. ]

**ಜಘನ್ಯಜ** (ನಾ). ೧. ಕಡೆಯಲ್ಲಿ ಹುಟ್ಟಿದವನು ; ಕೊನೆಯ ತಮ್ಮ: "ಜಘನ್ಯಜಃ, ಕನಿಷ್ಠಃ, ಯವೀಯಾಃ, ಅವರಜಃ, ಅನುಜಃ–೫ ತಮ್ಮನ ಹೆಸರುಗಳು" (ಸಿದ್ಧಾಂತಿ. ೧೫೬). ೨. ಕೊನೆಯ ವರ್ಣದವನು; ಶೂದ್ರ. [ ಸಂ. ]

**ಜಘನ್ಯಪಾತ್ರ** (ನಾ). ೧. ಅಧಮಪಾತ್ರ ; ನಾಟಕಾದಿಗಳಲ್ಲಿ ಬರುವ ಸೇವಕ, ಪರಿಚಾರಕ ಮುಂತಾದ ಪಾತ್ರ : ಇದು ಜಘನ್ಯಪಾತ್ರಂ (ಕಾವ್ಯಾವ. ೮೧೩). ೨. [ಜೈನ] ದಾನ ಸ್ವೀಕಾರಕ್ಕೆ ಅರ್ಹರಾದವರಲ್ಲಿ ಕನಿಷ್ಠನಾದವನು : ದರ್ಶನವಿಶುದ್ಧನಾಗಿಯುಂ ಶೀಲಪ್ರತಭಾವನಾ ರಹಿತನಸಂಯುತಂ ಜಘನ್ಯಪಾತ್ರಂ (ಆದಿಪು. ೧೦-೯ ವ). [ಜಘನ್ಯ+ಪಾತ್ರ]

**ಜಜ** (ನಾ). ಸಿಪಾಯಿ ; ಯೋಧ ; ಸೈನಿಕ. [ ಸಂ. ]

**ಜಜೂರಿ** (ನಾ). ದೇವಸ್ಥಾನದ ಪರಿಚಾರಕವರ್ಗದಲ್ಲಿ ಒಬ್ಬ (?) : ಜಜೂರಿಯವನು ಶಂಭುಲಿಂಗನ ಬೆಳ್ಳಿಯ ಗುಡಗುಡಿಯಲ್ಲಿ ನುರಿಯಾಗಿ ನಾದಿದ ಗಾಂಜಾವನ್ನು ಹಾಕಿ ಕೆಂಡವನ್ನು ಹೊತ್ತಿಸಹತ್ತಿದನು(ಗಂಗಾಸಾ. ೪೯). [ ? ]

**ಜಜ್ಜನೆ** (ಅ). ಬಹಳವಾಗಿ ; ಅಧಿಕವಾಗಿ : ಜಜ್ಜನೆ ಜರಿದೆನು ಜಜ್ಜನೆ ಜರಿದೆ ನೋಡಯ್ಯಾ (ಬಸವ. ೩೬೯) ; ಝುಂಕಿಸಲ್ಕಡುಗಿ ಜಜ್ಜನೆ ಜರಿವು ತೊಲಲವರ್ಭೋಂಕನೆ ನಿಟ್ಟಿಸಲು ಬೆಸನಾಂತು (ಮದೇಪು. ೧೪-೩೮). [ ? + – ಅನೆ$_1$ ]

**ಜಜ್ಜರ, ಜರ್ಝರ$_2$, ಝುಜ್ಜರ** (ಗು). ೧. ಶಿಥಿಲವಾದ ; ಸಡಿಲವಾದ : ದೈತ್ಯನ ಚಿತ್ತ ಜಜ್ಜರವಾಗೆ ತಾ ಮಿಗೆ ಕತ್ತರಿಸಿ ಕವಚವನು ಡಂಭನ ಗೆಲಿದ (ಕೋಗಯ. ೯-೧೩). **ಜರ್ಝರ$_2$** : (ನಾ). ೨. ಒಡಕುಧ್ವನಿ ; ಕರ್ಕಶ ಧ್ವನಿ: ಬೆರಸಿರೆ ಕನ್ನಡದೊಳ್ ಬಂಧುರಮಾಗದು ಕಾವ್ಯರಚನೆ ಪೇೞ್ವೊಡೆ ಪೀನಂ ಪರುಷತರಮಕ್ಕುಮೊತ್ತುಂಗರಡೆಯ ಮದ್ದಳೆಯ ಜರ್ಝ [ಪಾಠಾಂ. ಝ್ಝ]ರ ಧ್ವನಿಗಳವೊಲ್ (ಕವಿರಾ. ೦-೫೩) ; ಪಳುಕಿನ ಕೋಡುಗಲ್ಗಳೊಳ್ ಪೊಳೆವ ತಮ್ಮ ನೆೞಲೆ ನೆರೆದ ಮಲ್ಲರ ನೆರವಿಯಾಗಿಯುಂ ನಿಕುಂಜೋಪಾಂತ ಜರ್ಝರ ನಿರ್ಝರ ಧ್ವನಿಯೆ ಮಲ್ಲದಾಳಮಾಗಿಯುಂ (ಚಂದ್ರಪು. ೫-೭೭ ವ). ೩. ತಗ್ಗಿದ ಧ್ವನಿ ; ಅಸ್ಪಷ್ಟವಾದ ಧ್ವನಿ : ಕಮಳಮಧುಪಾನದಿಂ ಸೊಕ್ಕಿದ ಮುತ್ತುಂಚೆಯ ಧ್ವನಿಗಳಂತೆ ಜರ್ಝರವಾದ ಪೊಂಗೆಜ್ಜೆಗಳ ಮೆಲ್ಲುಲಿಯೊಳಂ (ಕಾದಂಪೂ. ೬೭). **ಝುಜ್ಜರ:** ೧. ಬಲುಶೋಕ ಕಷ್ಟ ತಾಪತ್ರಯ . . . ಝುಜ್ಜರ [ಪಾಠಾಂ. ಜರ್ಝರ] ಕ್ರೂರಮಲಮೂತ್ರ ದುರ್ಗಂಧ ನೆಲೆಯೆನಿಪುದೀ ತನು (ವಂಕಾರಾ. ೨-೧೯-೦೦). [<ಪ್ರಾ. ಜಜ್ಜರ./ಸಂ. ಜರ್ಜರ ]

**ಜಜ್ಜರಗೈ** (ಕ್ರಿ). ನುಗ್ಗುಮಾಡಂ ; ಜಜ್ಜು : ದುರ್ವಾರ ಕರ್ಮವ ಜಜ್ಜರಗೈದನಪೂರ್ವಾತ್ಮಸುಖವ ಪಡೆದನು (ಭರಜ. ೫೪-೨೪). [ ಜಜ್ಜರ + ಕೈ$_1$ (< ಕೆಯ್$_1$) ]

**ಜಜ್ಜರಿ$_1$** (ನಾ). ಬಿರುಕು ; ಸೀಳು : ರತ್ನದ ಕಾಂತಿಯ ಕಳೆಯಿಂದ ತನ್ನಂಗದಲ್ಲಿ ಹುಟ್ಟಿದ ಜಜ್ಜರಿ ಕಾಣಿಸಿಕೊಂಬಂತೆ (ಸರ್ವವ. ೧೨೮-೬೫೨). [ < ಜಜ್ಜರ ]

**ಜಜ್ಜರಿ$_2$** 'ಜರ್ಝರ್ಝರ$_1$' ನೋ.

**ಜಜ್ಜರಿತ, ಜಜ್ಝರಿತ, ಜರ್ಝರಿತ, ಜರ್ಝರಿತ** (ಗು). ೧. ಜೀರ್ಣವಾದ; ಶಿಥಿಲವಾದ; ಸಡಿಲಗೊಂಡ: "ಜಜ್ಜರಿತ ಧೈರ್ಯ ದಿಗಿಲ್" (ಜತುನಿ. ಕ. I, ೬೪). (ನಾ). ೨. ಜೀರ್ಣವಾದಂದು; ಶಿಥಿಲವಾದುದು : ಫಣಿಪತಿ ಹೆಡೆಯ ಮಣಿದನು ಕೂರ್ಮ ಜಜ್ಜರಿತಮಾದುದು (ಕಳುಮಾ. ೨೩೬-೧೦) ; ಪಂಪಾಸರಸ್ತಟದಿ ಬಲ್ಬೆಳೆದ ತಾಲತರುವೊಂದೊಂದುಮವನೊಂದೆ ಬಾಣದಿಂ ಜಜ್ಜರಿತವಾಗಿ ಕೆಡೆವುವು ಕಣಾ (ಶ್ರೀರಾಮಾ. ೨೧೭-೩೩೬). **ಜಜ್ಝರಿತ :** ೨. ಗರುಡನನುಬ್ಬಟೆಗಹಿನಿಕರ ಜಜ್ಝರಿತವಾದವೊಲಿವನ ಕಡುನಿಬ್ಬರದ ಧಾಳಿಗೆ ಧೈರ್ಯಗೆಟ್ಟುದು ಕೂಡೆ ಕುರುಸೇನೆ (ಕುವ್ಯಾದ್ರೋ. ೧೬-೧೨). **ಜರ್ಝರಿತ :** ೨. ನರನ ಶರಹತಿಗೆನ್ನ ತನು ಜರ್ಝರಿತವಾಗಲಿ (ಕುವ್ಯಾಕ. ೮-೩೮). **ಜರ್ಝರಿತ :** ೧. ಮಕುಟಬದ್ಧರ ಮುಡಿಯ ರತ್ನಪ್ರಭೆಗಳಲಿ ಜರ್ಝರಿತ ತನುವಾಯ್ತು (ಕುವ್ಯಾದ್ರೋ. ೧೫-೨೭). ೩. ಚೂರು ಚೂರಾಗುವುದು ; ಸೀಳಿಹೋಗುವುದು : ಪವನಜ ಮರಳಿ ತಿವಿದನು ಕೀಚಕನ ಪೇರುರವನೆದೆ ಜರ್ಝರಿತವಾಗಲು (ಕುವ್ಯಾವಿ. ૩-೯೨).

[ < ಸಂ. ಜರ್ಜರಿತ ]

**ಜಜ್ಜರಿಸು, ಜರ್ಜಿಸು, ಜರ್ಝರಿಸು, ಜರ್ಝಿಸು** (ಕ್ರಿ). ೧. ಶಿಥಿಲವಾಗು ; ಜೀರ್ಣಗೊಳ್ಳು : ಶಬ್ದ ತುಂಬಿತು ಅವ್ಯಾಕೃತಾಕಾಶ ಪರಿಯಂತ ನಿಬ್ಬರ ತರುಗಿರಿಗಳು ಜಜ್ಜರಿಸೆ (ವಿದಾಕ್ಯ. ೬೫-೫). **ಜರ್ಜಿಸು :** ೨. ಎದೆಗುಂದಂ; ಧೈರ್ಯಗುಂದಂ: ಅನಿತರೊಳ್ಕುರುಸೇನೆ ಸಮ್ಮೋಹನದ ಸೊಗಡನು ಪರಿಹರಿಸಿಕೊಂಡನುವರಾಂಗಣಭೂಮಿಯಲಿ ಮರೆದೊರಗಿದವರೆಲ್ಲ ಕನಸುಗಂಡಂತೆದ್ದು ಜರ್ಜಿಸಿ ಘನತರದ ಚಿಂತೆಯಲಿ ತಾವಿಹ ವನದ ತಪ್ಪಲ ಪಾಳೆಯಕ್ಕೆಯ್ದಿದರು ಮುಸುಕಿನಲಿ (ಕೋಗಯು. ೨೩-೭). **ಜರ್ಝರಿಸು :** ೨. ನನ್ನ ಮಾತು ಕೇಳಿದೊಡನೆಯೇ ಜರ್ಝರಿಸಿ ಹೋದ ರಂಗಪ್ಪ (ಕತ್ತಬಿ. ೩೫). **ಜರ್ಝಿಸು :** ೩. ಶಕ್ತಿಗುಂದಿಸು ; ಧೈರ್ಯಗುಂದಿಸು : ಎದೆಯನು ಜರ್ಝಿಪ ಕೆಲಸವ ಗೈವಂ ಶ್ಯಾಮಲ ವರ್ಣದ ಭೈರವ ಬಾಲಂ (ತುಟಮಿಾ. ೧೨೭).

[ ಜ್ಜರ + – ಇಸು$_3$ ]

**ಜಜ್ಝಾಡ** 'ಜುಜ್ಝಾರ' ನೋ.

**ಜಜ್ಝಾರ** 'ಜುಜ್ಝಾರ' ನೋ.

**ಜಜ್ಜಿಸು** (ಕ್ರಿ). ಚಚ್ಚಿಸು ; ಪೆಟ್ಟುಕೊಡಿಸಂ.

ಜಜ್ಜಿಸಿಕೊಳ್ = ಬಡಿಸಿಕೊಳ್ಳು ; ಹೊಡೆಸಿಕೊಳ್ಳು : ವಜ್ರೋಪಮ ಶ್ರೀಯಚ್ಯುತಗಾತ್ರದಿ ಜಜ್ಜಿಸಿಕೊಂಡ ಚಾಣೂರ (ಪ್ರಸಭಾ. ೬೪-೨೧).

[ ಜಜ್ಜು (< ಚಚ್ಚು$_1$) + – ಇಸು$_3$ ]

**ಜಜ್ಜು** 'ಚಚ್ಚು$_1$' ನೋ.

**ಜಜ್ಜುಗಂತೆ** (ನಾ). ಜೀರ್ಣವಾದ ಬಟ್ಟೆ; ಚಿಂದಿಬಟ್ಟೆ : (ಮರುಳಸಿದ್ಧನು) ಜಜ್ಜುಗಂತೆಯ ಧರಿಸಿ ಕೊಲ್ಲಾಪುರದ ರಕ್ಕಸಿಯ ಕೊಂದು ಅವಳ ಅವಯವಗಳಿಂದ ಕಿನ್ನರವೀಣೆಯಂ ಮಾಡಿಕೊಂಡನು (ಕವಿಜ. I, ೨೦೫).

[ ಜಜ್ಜು (< ಚಚ್ಚು$_1$) + ಕಂತೆ$_2$ ]

**ಜಜ್ಜುಗಂಥೆ** (ನಾ). = ಜಜ್ಜುಗಂತೆ : ಧಾರಣವೆ ಮಣಿವಿಭೂಷಣ ಜಜ್ಜುಗಂಥೆಯುಂ (ಗುರುಚಾ. ೧-೬೭). [ ಜಜ್ಜು (< ಚಚ್ಚು$_1$) + ಕಂಥೆ ]

**ಜಜ್ಜುಗಾಯ** (ನಾ). ಜಜ್ಜಿದ ಗಾಯ ; ಮೂಗುಪೆಟ್ಟು : "ಜಜು ಗಾಯ ; ಮೂಗು ಪೆಟ್ಟು" (Contusion. ಇಂಕನಿ).

[ ಜಜ್ಜು (< ಚಚ್ಚು$_1$) + ಗಾಯ ]

**ಜಜ್ಜುಗುಟ್ಟು** (ಕ್ರಿ). ಸಣ್ಣಗಾಗುವಂತೆ ಕುಟ್ಟು ; ನುರಿಸಂ: ಕಜ್ಜವೊಂದಿದೆ ಹರಿಯ ಮುಸುಡನು ಜಜ್ಜುಗುಟ್ಟಿಯೆ ನೆಜಿ ತಿವಿದೊಂದುಜ್ಜುಗದಿ ಕೊಲ ಬೇಹುದಹಿತರನೆಂದು ನೇಮಿಸಿದಾ (ಸಾಳ್ವಭಾ. ೨೨-೪೮) ; ಅಜ್ಜನ ಪೆಸರ ನಂದಪ್ಪಾಜಿಯಿಟ್ಟುದು ಪಜ್ಜಳಿಸಿದುದಿಂದು ಭವವಾ ಜಜ್ಜುಗುಟ್ಟಿದೆಯಲಾ ಭಾಪು ಸಾಹಸಿಯೆಂದು ಪಜ್ಜೆಗೆ ನಮಿಸಿದರೊಸೆದು (ಭರಜ. ೬೮-೮) ; ಸಿಹಿಹಾಲೆಬೇರನ್ನು ಜಜ್ಜುಗುಟ್ಟಿ ಕಷಾಯುವಂ ಮಾಡಿ ತುಪ್ಪವೆರಸಿ ಸೇವಿಸೆ ದಾಹಜ್ವರ ನಾಶವಾಗುವುದು (ಸಕವ್ಯ. ೮೩).

[ ಜಜ್ಜು (< ಚಚ್ಚು$_1$) + ಕುಟ್ಟು$_1$ ]

**ಜಜ್ಝರಿತ** 'ಜಜ್ಜರಿತ' ನೋ.

**ಜಜ್ಝಾರ** 'ಜುಜ್ಝಾರ' ನೋ.

**ಜಜ್ಝಾರತನ** 'ಜುಜ್ಝಾರತನ' ನೋ.

**ಜಝಾರೇ** (ನಾ). ಕೊಂಡಾಟದ ಮಾತು,-ನುಡಿ : ಝಾರೇ ಜಝಾರೇ ಹಳುರೇ . . . ಎಂಬುಲಿ ನೆಗೆವಿನೆಗಂ (ಕಬ್ಬಿಕಾ. ೨೬೯).

**ಜರ್ಝರಿತ** 'ಜಜ್ಜರಿತ' ನೋ.

**ಜರ್ಝಾರ** 'ಜುಜ್ಝಾರ' ನೋ.

**ಜಟಕರಿಸು** (ಕ್ರಿ). ೧. ಝಾಡಿಸು; ಒದರು. ೨. (ಅಲಂ) ಅಪಹಾಸ್ಯ ಮಾಡು ; ಅವಹೇಳನ ಮಾಡು ; ತಿರಸ್ಕಾರದಿಂದ ನುಡಿ : ದೇವಸುತ ನಾಗಿದ್ದರೀ ಸಿಲುಬೆಯಿಂದಿಳಿದು ಬಾರ ನೋಡುವ ! ಎಂದು ಜಟಕರಿಸೆ (ಗೊಲ್ಗೊಥಾ. ೦೨-೦೯).

[ ಜಟಕರಣ$_0$ (P ← ಮರಾ. ಝಟಕಣೇ) + – ಇಸು$_3$ ]

**ಜಟಕಾ$_1$** (ನಾ). ಅಲುಗಾಟ; ಹೊಯ್ದಾಡುವಿಕೆ. 'ಜಟಕಾಹೊಡೆ$_1$' ಪರಾ.

[ ← ಹಿಂ. ಮರಾ. ಝಟಕಾ ]

**ಜಟಕಾ$_2$** (ನಾ). ಒಂದೇ ಕುದುರೆಯನ್ನು ಹೂಡಿದ, ಕಮಾನು ಉಳ್ಳ ಬಂಡಿ : 'ಜಟಕಾ ಬರಲಿ' ರಾಣಿಯವರ ಅಪ್ಪಣೆಯಾಯಿತು (ರೂಪಸಂ. ೬); ಅವರ ಶರೀರವು ಬಾಡಿಗೆಯ ಜಟಕಾ ಕುದುರೆಯಂತೆ ಕೊರಗಿ ಕಂದಿ ಹೋಗಿತ್ತು (ಪರಿಚೀ. ೧). [ ← ಮರಾ. ಝಟಕಾ ]

**ಜಟಕಾ$_3$** (ನಾ). ಅಂಬಿಗರ ದೇವತೆ: ಜಟಕಾ ಅಮ್ಮ ಬೊಬ್ರಯಂಬ ದೇವತೆಗಳಿಗೆ ಈ ಅಂಬಿಗರು ನಡಕೊಳ್ಳುವರು (ಕಭಾಗ. ೧೮೩). 'ಜಟ್ಟಿಂಗ' ಪರಾ. [ ? ]

**ಜಟಕಾಗಾಡಿ** (ನಾ). ಕುದುರೆಯ ಗಾಡಿ: ಬೀದಿಯಲ್ಲಿ ಜಟಕಾಗಾಡಿ ಮನೆಯ ಮುಂದೆ ಬಂದು ನಿಂತಿತು (ಮಹಾಗ. ೧). [ ಜಟಕಾ$_2$ + ಗಾಡಿ$_3$ ]

**ಜಟಕಾಬಂಡಿ** (ನಾ). = ಜಟಕಾಗಾಡಿ : ಬದುಕು ಜಟಕಾಬಂಡಿ ವಿಧಿಯದರ ಸಾಹೇಬ (ಮಂಕುಕ. ೬೦೦). [ ಜಟಕಾ$_2$ + ಬಂಡಿ$_1$ (< ಭಂಡಿ$_1$) ]

**ಜಟಕಾಹೊಡೆ$_1$** (ಕ್ರಿ). ಹೊಯ್ದಾಡಂ ; ಕುಲುಕಾಡು ; ಜೋಲಿಹೊಡೆ: ಹಾಳ್ ರಸ್ತೆ! ಗಾಡಿ ತುಂಬಾ ಜಟಕಾಹೊಡೀತದೆ ! ಒಂದು ಸ್ವಲ್ಪ ಮಲಗಿಕೊಳ್ಳಿ ! (ಮಲಮ. ೪೫೮). [ ಜಟಕಾ$_1$ + ಹೊಡೆ$_1$ (< ಪೊಡೆ$_1$) ]

**ಜಟಕಾಹೊಡೆ$_2$** (ಕ್ರಿ). ಜಟಕಾಗಾಡಿಯನ್ನು ಓಡಿಸು : ಅವನು ಜಟಕಾ ಹೊಡೆಯುವುದರಲ್ಲಿ ನಿಸ್ಸೀಮ (ರೂಢಿ).

[ ಜಟಕಾ$_2$ + ಹೊಡೆ$_1$ (< ಪೊಡೆ$_1$) ]

**ಜಟಕಿಸು** (ಕ್ರಿ). ಚಲಿಸು ; ಓಡಾಡು ; ಅಲುಗಾಡು : ಎಚ್ಚರಿರಲಿರದಿರಲಿ, ಜಟಕಿಸುತಿಹುದು ಉಸಿರಿನ ಲಾಳಿಗೆ (ಹಾಡುಪಾ. ೫೦-೧೨).

[ ಜಟಕಾ$_1$ + – ಇಸು$_3$ ]

**ಜಟಗ** 'ಜಟ್ಟಿಂಗ' ನೋ.

**ಜಟಪಟ** 'ಝಟಪಟ' ನೋ.

**ಜಟಪಟನೆ** (ಅ). ವೇಗವಾಗಿ; ಬೇಗನೆ: ಜಟಪಟನೆ ಬಾ ಅಂತ ಹೇಳಿದರು (ರೂಢಿ). [ ಜಟಪಟ (<ಝಟಪಟ) + – ಅನೆ$_1$ ]

**ಜಟಮಟ** (ನಾ). ಮೋಸ; ವಂಚನೆ. 'ಜಟಮಟಿಕೆ', 'ಜಟಮಟಿಸು' ಪರಾ. [ <ಅಟಮಟ ]

**ಜಟಮಟಿಕ** (ನಾ). ಮೋಸಗಾರ; ವಂಚಕ : ಪಟಮಿದೆ ಸಾಲ್ಗು ಮನ್ಮಥವಲ್ಲಭನಂ ಪಟವಿದ್ಯೆಯೆತ್ತಲುಂ ಜಟಮಟಿಕರ್ಕಳಂ[ಪಾಠಾಂ. ಜಟಮತಿಯರ್ಕಳಂ, ಜಟಕುಟಿಕರ್ಕಳಂ] ತೊಡರೆ . . . ತೊಟಲ್ದಱಿಸಿ ನಿನ್ನೊಡಗೂಡಿ (ಆದಿಪು. ೩–೪೫); "ಸಡಗರದವನು" (ಆದಿಪು. ಕೋಶ); ನಿಜದಿಂ ಜಟಮಟಿಕಂ ಜ್ವಳನಜಟಿಕರಂ ಕುಟಿಳವೃತ್ತನಾತನಸದಳಂ (ವರ್ಧಮಾ. ೪–೧೧). [ ಜಟಮಟ + – ಇಕ ]

**ಜಟಮಟಿಗ** (ನಾ). = ಜಟಮಟಿಕ : ಜಟಮಟಿಗರ ಪೇಟ್ಕೋದನೆ ದಿಟ ಮೆಂದದನೊಲ್ದು ಕೇಳ್ವರ್ . . . ಪಂಡಿತರೆನಿಸಿದವರುಮಜ್ಞಾನತೆಯಿಂ (ಸಮಪ. ೧೧–೧೩೪). [ ಜಟಮಟ + – ಇಗ ]

**ಜಟಮಟಿಸು** (ಕ್ರಿ). ಮೋಸಪಡಿಸು; ವಂಚಿಸು : ಜಟಮಟಿಸಿಕೊಂಡು ನಿಮ್ಮಾ ಘಟಿಯಿಸುವೀ ಸಂಧಿ ಕೌರವರ್ಕಳೊಳೆನ್ನಿಂ ಘಟಿತ ಜರಾ ಸಂಧೋರಸ್ಥಟ ಸಂಧಿವೊಲೊಂದೆ ಪೊಟ್ಟಱೊಳ್ ವಿಘಟಿಸದೇ (ಪಂಪಭಾ. ೯–೨೩); "ಸಡಗರದಿಂದ ಕೂಡಿ" (ಪಂಪದೀ. ೩೧೧).
[ ಜಟಮಟ + – ಇಸು$_3$ ]

**ಜಟಮಾಂಸಿ** (ನಾ). = ಜಟಾಮಾಂಸಿ : ಕಚೋರ ಗಂಟುಪರಂಗಿ . . . ಜಟಮಾಂಸಿ ಉಮ್ಮತ್ತದ ರಸದಲ್ಲಿ ಮರ್ದಿಸಿ (ವಾತಾಚಿ. ೧೩–೪).
[ <ಸಂ. ಜಟಾಮಾಂಸೀ ]

**ಜಟಾಖರ್ಜೂರ** (ನಾ). ಒಂದು ಬಗೆಯ ಖರ್ಜೂರ: ಜಟಾಖರ್ಜೂರ ಉತ್ಪತ್ತಿ . . . ಸುಖಾರ್ಹ ಸಾರ್ವರ್ತುಕವಾದ ಫಲಂಗಳುಳ್ಳ ತರು ನಿಕರಂಗಳುಂ (ವಿವೇಕ. ೨೧೧). [ ಸಂ. ]

**ಜಟಾಜೂಟ** (ನಾ). ಜಡೆಮುಡಿ; ಜಡೆಗಟ್ಟಿದ ಕೂದಲು; ಜಟಾ ಸಮೂಹ: ಅಂತು ಸೊಗಯಿಸುವ ಕುರುಜಾಂಗಣವಿಷಯಕ್ಕೆ ರಾಜದ್ರಾಜ ಧಾನಿಯಾಗಿರ್ದು ಹರಜಟಾಜೂಟಕ್ಕೆ ಚಂದ್ರಲೇಖೆಯಿರ್ಪಂ[ತೆ] . . . ಸೊಗಯಿಸುತಿರ್ದುದು ಹಸ್ತಿನಪುರಂ (ಪಂಪಭಾ. ೧–೫೭ ವ).
[ ಸಂ. (ಜಟಾ + ಜೂಟ) ]

**ಜಟಾಧರ** (ನಾ). = ಜಟಾಧಾರಿ : "ಗಿರಿತನಯಾರ್ಧಾಂಗಧರಂ ಪೃಥು ಜಟಾಧರಂ ಚಂದ್ರಧರಂ" (ವಸ್ತುಕೋ. ೩–೧೪). [ ಸಂ. ]

**ಜಟಾಧಾರಿ** (ನಾ). ಜಡೆಗಟ್ಟಿದ ಕೂದಲುಳ್ಳವನಂ; ಜಟೆಗಳನ್ನು ಧರಿಸಿದವನು : ಮುಂಡಧಾರಿಯ ತಲೆ ಮುಂದೆ ಬಪ್ಪುದ ಕಂಡೆ ಜಟಾ [ಪಾಠಾಂ. ಜಡೆಯ]ಧಾರಿಯ ತಲೆ ನಡೆದುಹೋಯಿತ್ತ ಕಂಡೆ (ಅವಚಂ. ೯೫–೪೨೭). [ ಸಂ. ಜಟಾಧಾರಿನ್ ]

**ಜಟಾಪಟಿ** (ನಾ). ಜಗಳ; ಕಲಹ; ವಾದವಿವಾದ : ಅವರಿಬ್ಬರಿಗೆ ಜಟಾಪಟಿ ನಡೆಯಿತು (ಕುಟ್ಟದೊ. ೬೩); ಯುದ್ಧವು ಪ್ರಾರಂಭವಾಯಿತು. ಜಟಾಪಟಿ, ಮಾರಾಮಾರಿ . . . ಮುಂತಾಗಿ ಬಹಳ ಗದ್ದಲವು ಹತ್ತಿತು (ದೇವೀಚಾ. ೧೩೮); ಕುರ್ಕನ ಕೈಲಿ ಜಟಾಪಟಿ ಆದಾಗ ಹಂಗಾಯ್ತು! (ಮಲಮ. ೭೨೦). [ ←ಹಿಂ. ಝುಟಾಪಾಟಾ; ಮರಾ. ಝುಟಾಪಟೀ ]

**ಜಟಾಬಂಧ** (ನಾ). ಕಟ್ಟಿದ ಜಟೆ; ಜಡೆಗಟ್ಟಿದ ಮುಡಿಯನ್ನು ಒತ್ತಟ್ಟಿಗೆ ಸೇರಿಸಿ ಕಟ್ಟಿದ ಗಂಟು : ಕೈಯಲ್ಲಿ ಕಟ್ಟಿಗೆ ಇಲ್ಲ ಕರ್ಣದಲ್ಲಿ ಮುದ್ರೆ ಇಲ್ಲ ಶಿರದಲ್ಲಿ ಜಟಾಬಂಧವಿಲ್ಲ (ಮೋಳಿಮಾ. ೧೫೫–೫೮೩); ಸುತ್ತಿದ ಜಟಾಬಂಧ ದೊಳಗಣ ಸುರನದಿಯೆಂಬ ಸರೋಜನೀತಟದೊಳಗಿರ್ದ . . . ಚಂದ್ರ ಕಳೆಯಿಂ (ಬಸರ. ೪–೧೧). [ ಸಂ.(ಜಟಾ + ಬಂಧ) ]

**ಜಟಾಭರ** (ನಾ). ಜಟೆಗಳ ಸಮೂಹ; ಜಟಾಕಲಾಪ : ಜಟಾಭರದ ಮುನಿನಾಥನು . . . ಮರುತಮಿತ್ರಕಾರ್ಯದ ಪರಿಕರಂಗಳಂ ಸವಕಟ್ಟು ತ್ತಿರಲು (ಹದಕಾ. ೫–೫೪). [ ಸಂ. (ಜಟಾ + ಭರ) ]

**ಜಟಾಮಾಂಸಿ** (ನಾ). ಒಂದು ಬಗೆಯ ಮೂಲಿಕೆ; ಔಷಧದ್ರವ್ಯ; ಸಂಗಂಧಮುಸ್ತೆ; ತಪಸ್ವಿನೀ ಎಂಬ ಮೂಲಿಕೆ : "ತಾಪಸೀ – ಜಟಾ ಮಾಂಸಿ, ಇಂಗಳ" (ಒಷಧಿ. ೬೭); ರಾಸ್ನೆ, ಬೇಲದ ಹಣ್ಣು . . . ಬಜೆಕರಕು, ಜಟಾಮಾಂಸಿ, ನಾಗದಾಳಿ . . . ಇವಂ ಕಷಾಯಂ ಕಾಯಿಸಿ ಕೊಟ್ಟರೆ ವಾತಜ್ವರಂ ಕೆಡಗುಂ (ಸಕವೈ. ೬೯). [ ಸಂ. ಜಟಾಮಾಂಸೀ ]

**ಜಟಾಮುಕುಟ** (ನಾ). ದೇವತಾ ಮೂರ್ತಿಗಳ ಕಿರೀಟದಲ್ಲಿ ಒಂದು ಬಗೆ: ಜಟೆಗಳ ಕಟ್ಟಿನಂತೆ ಕಾಣುವ ಕಿರೀಟ : ಪ್ರತಿಮೆಗಳಿಗೆ . . . ಮುಖ್ಯ ವಾದ ಆಭರಣಗಳು – ಕೌಸ್ತುಭ, ಕುಂಡಲ, ಕಿರೀಟ, ಜಟಾಮುಕುಟ, ಲಂಬಕ . . . ಮುಂತಾದುವು (ಭಾರದ. ೫೧೭). 'ಜಡೆಮುಡಿ' ಪರಾ.
[ ಸಂ. (ಜಟಾ + ಮುಕುಟ) ]

**ಜಟಾಳಿ** (ನಾ). ಜಟೆಗಳ ಗುಂಪು; ಜಡೆಗಟ್ಟಿದ ಕೂದಲಿನ ಬೊಂತೆ : ವಿಜೃಂಭಿಸೆ ಸಿತದೇಹದೊಳ್ಪು ಜಗಮಂಡನಮೊಪ್ಪೆ ಜಟಾಳಿ ಕೆಂಪುವೆತ್ತೆಸೆಯೆ ಶಿರಪ್ರದೇಶದೊಳ್ (ಮಾಧವ. ೨–೧೪). [ಸಂ. ಜಟಾಲಿ (ಜಟಾ + ಆಲಿ)]

**ಜಟಿ$_1$** (ನಾ). ಜಟೆಗಳನ್ನು ಹೊಂದಿರುವ ಹೆಂಗಸು; ಜೋಗಿತಿ; ಯೋಗಿನಿ : ಮಾಲೆಗಾತಿಯು ಜಟಿಯು ಸೂತಕಿಯು ಸೈರಂಧ್ರಿಯು ಕರ್ತವ್ಯ ದಿಂದಿನಿಬರೊಡನಾಡಿದೊಡೆ ಬಾಲೆಯರ್ತವೆ ದುರಾಚಾರಮಂ ಕಲಿವರ್ (ಜ್ಞಮಿಭಾ. ೫–೫೮). [ <ಸಂ. ಜಟಿನೀ ]

**ಜಟಿ$_2$** (ನಾ). ೧. ಜಟೆಯನ್ನು ಹೊಂದಿದವನಂ. ೨. ಋಷಿ; ತಪಸ್ವಿ : ಲಂಪಟನೊರ್ವ ತವಸಿ ಕೌಶಿಕಾಖ್ಯಂ ಆ ಜಟಿಧರ್ಮಪತ್ನಿ ಗುಣಗಣಪಟು ಮಾನಿತೆ (ಶಾಂತಿಪು. ೭–೪೩). ೩. ಶಿವ: (ಶ). ೪. ಸ್ಕಂದನ ಒಬ್ಬ ಸೇವಕ: (ಶ). ೫. ಬಿಳಿಲುಗಳುಳ್ಳ ಆಲ, ಬಸರಿ ಮೊದಲಾದ ಮರ: "ಪ್ಲಕ್ಷ, ಜಟಿ, ಪರ್ಕಟಿ–ಜುವ್ವಿಗಿಡ, ಬಸರೀಗಿಡ, ಕಬ್ಬಸರೀಗಿಡ" (ಸಿದ್ಧಾಂತಿ. ೧೧೯).
[ <ಸಂ. ಜಟಿನ್ ]

**ಜಟಿಕಾವಳಯ** (ನಾ). = ಜಟಾಳಿ: ಕನಕ ಪಿಶಂಗ ತುಂಗ ಜಟಿಕಾವಳಯಂ ಕುಡುಮಿಂಚಿನೋಳಿಯಂ ನೆನೆಯಿಸೆ (ಪಂಪಭಾ. ೭–೫೯).
[ ಸಂ.ಜಟಿಕಾವಲಯ (ಜಟಿಕಾ + ವಲಯ) ]

**ಜಟಿಗ** 'ಜಟ್ಟಿಂಗ' ನೋ.

**ಜಟಿಗಮನೆ** (ನಾ). ಜಟ್ಟಿಂಗ ದೇವತೆಯ ಗುಡಿ : ಉಡುಪಿ, ಭಟ್ಕಲ್ ಮುಂತಾದ ಕಡೆ ಮಾಸ್ತಿಮನೆ, ವೀರಮನೆ, ಜಟಿಗಮನೆಗಳಿವೆ (ಜಟಿಗ ಎಂಬುದು ಊರಿನ ರಕ್ಷಣಾಧಿದೇವತೆ) (ಕಶಾಅ. ೨೫೦).
[ ಜಟಿಗ (<ಜಟ್ಟಿಂಗ) + ಮನೆ ]

**ಜಟಿಲ, ಜಟಿಳ** (ಗು). ೧. ಒಂದಕ್ಕೊಂದು ಹೆಣೆದುಕೊಂಡಿರುವ; ತೊಡಕಾದ; ಸಿಕ್ಕಾದ : ರುರು ಘಂಟಾ ಕರ್ಣನಂಡಾಭರಣನಹಿಧರಂ ಶಂಕುಕರ್ಣಂ ಪ್ರಕುಂಡೋದರನಂಭೋದಸ್ವನಂ ಧೂರ್ಜಟಿ ಜಟಿಲ ಜಟಾಮಾಲಿ ಕಾಲಾಂತಕಂ . . . ವೀರಭದ್ರಂ (ರಾಜಶೇ. ೧೪–೧೫೩). ೨. ಕ್ಲಿಷ್ಟವಾದ; ಕಷ್ಟಕರವಾದ; ಬಿಡಿಸಲಾಗದ : ನಿಜವಾಗಿ ಅಹಂತತ್ತ್ವದ ವಿಮಾಮಾಂಸೆಯು ಜಗತ್ತಿನ ಜಟಿಲ ಸಮಸ್ಯೆಗಳಲ್ಲಿಯೂ ಅತಿ ಜಟಿಲ ಸಮಸ್ಯೆಯಾಗಿದೆ (ಭಾರದ. ೩೯). (ನಾ). ೩. ತೊಡಕು; ಸಮಸ್ಯೆ; ಕ್ಲಿಷ್ಟತೆ : ದೊರೆತನದ ಜಟಿಲಗಳ, ಕುಟಿಲಗಳ, ಕಠಿನಗಳ ಭರತನುಳಿಸಿದನೆ ರಾಮನ ತೀರ್ಪಿಗೆಂದು? (ಮುಂಕುಕ. ೭೦೯); ಅವನ ಗ್ರಂಥ ತುಂಬ ಜಟಿಲ (ಧ್ವನ್ಯಾಲೋ. VI, ಮುನ್ನುಡಿ). **ಜಟಿಳ:** ೧. ರತ್ನರಶ್ಮಿಜಟಿಳಂ ಮಕುಟಂ ಮಣಿಕುಂಡಳಂ ಕನತ್ಕನಕಪಿಶಂಗ ದೇಹರುಚಿ . . . ಪೊಳೆವ ಕಣ ಳು ಮಟ್ಟಿಱಿನೀಯೆ (ಪಂಪಭಾ. ೮–೭). [ ಸಂ. ]

**ಜಟಿಲತೆ** (ನಾ). ಕ್ಲಿಷ್ಟತೆ ; ತೊಡಕು ; ಸಿಕ್ಕು: ಮಾನವಧರ್ಮದ ಜಟಿಲತೆಯನ್ನು ಬಿಡಿಸುವುದಕ್ಕಾಗಿ . . . ಉಪಯೋಗಿಸಿಕೊಂಡಿದ್ದಾರೆ (ಭಾರದ. ೧೦೬); ಈ ಸಮಸ್ಯೆಯ ಬೃಹದಾಕಾರವನ್ನೂ ಜಟಿಲತೆಯನ್ನೂ ತೋರಿಸುತ್ತದೆ (ದ್ರಾವಿವಿ. ೨೧). [ ಸಂ. ಜಟಿಲತಾ ]

**ಜಟಿಲಿತ**, ಜಟಿಳಿತ (ಗು). ಹೆಣೆದುಕೊಂಡ ; ಜಟೆಯಂತೆ ಸಿಕ್ಕಾದ ; ನಿಬಿಡವಾದ: ಸ್ಪಟಿಕಮಣಿ ಕಿರಣಜಾಲ ಜಟಿಲಿತ ಮಧ್ಯರಂಗದಿಂ ಸಂಗೀತಕರಸ ತರಂಗಿತ ಬಾಹ್ಯರಂಗದಿಂ . . . ಮನಂಗೊಳಿಪ ದೇವಪೂಜಾಗೃಹಮಂ ಪೊಕ್ಕು (ಪಂರಾಮಾ. ೧೨-೨ ವ) ; ಷಷ್ಠಿಯ ದೀರ್ಘಾದೇಶಕ್ಕೆ–ವ್ಯಡನಾಗಂಗಾಂಬುಧಾರಾಜಟಿಲಿತಜಟನಾ (ಶಮದ. ೧೦೭ ಪ್ರಯೋ). **ಜಟಿಳಿತ :** ದೆಸೆಯೆಲ್ಲಂ ಪಂಚರತ್ನದ್ಯುತಿಜಟಿಳಿತ ನಾನಾವಿಮಾನಂಗಳೊಳ್ ರಂಜಿಸೆ (ಆದಿಪು. ೬-೧೮). [ ಸಂ. ]

**ಜಟಿಲೆ**, ಜಟಿಳೆ (ನಾ). = ಜಟಾಮಾಂಸಿ. **ಜಟಿಳೆ :** " ಜಟಿಳೆ ಮಾಂಸಿ " (ವಸ್ತುಕೋ. ೩೬-೨೨). [ ಸಂ. ಜಟಿಲಾ ]

**ಜಟಿಳ** 'ಜಟಿಲ' ನೋ.

**ಜಟಿಳಿತ** 'ಜಟಿಲಿತ' ನೋ.

**ಜಟಿಳೆ** 'ಜಟಿಲೆ' ನೋ.

**ಜಟುಲ** (ನಾ). ಮಚ್ಚೆ ; ಹುಟ್ಟುಮಚ್ಚೆ ; ಸಂಗಾತಿ. [ ಸಂ. ]

**ಜಟೆ** (ನಾ). ೧. ಹೆಣೆದುಕೊಂಡು ತೆಕ್ಕೆಯಾದ ತಲೆಗೂದಲು ; ಸುರುಳಿಸುತ್ತಿ ಬಿಡಿಸಲಾಗದಂತೆ ಜಟೆಗೊಂಡ ಕೂದಲು ; ಜಡೆಗಟ್ಟಿದ ಕೂದಲು : ಹುಬ್ಬುಗಂಟಿನಿಂದ ಸುರುಗಿದ ಮುಖದ ಮೇಲೆ ತಲೆಯ ಜಟೆಗಳು ಕವಿತುಕೊಂಡಿದ್ದವು (ಕೋಹಿನೂ. ೮೮). ೨. ಹೆಣೆದ ಕೂದಲು ; ಹೆರಳು; ಜಡೆ. ೩. ಆಲ ಮುಂತಾದ ಮರಗಳ ಬಿಳಲು : "ಜಟಾ, ಶಿಫಾ–ಈ ೨ ಮರದ ಬೀಟಲ್" (ಹಲಾಯು. ೩೦-೨೯). ೪. ಹೆಣೆದುಕೊಂಡ ಬೇರು : ಜಡೆಗಟ್ಟಿದ ಬೇರು. ೫. (ಮರದ) ಬೇರು. ೬. ವೇದದ ಋಕ್ಕುಗಳನ್ನು ಹೇಳುವ ಒಂದು ಕ್ರಮ ; ವೇದಮಂತ್ರಗಳನ್ನು ಹೇಳುವ ಒಂದು ರೀತಿ : " ಶಿಫೆ . . . ಛಂದಂ ಜಟಾಖ್ಯಾನಂ " (ನಾನಾರ. ೧೦೧) ; ಚತುಶ್ಶಾಖೆಯವರ ಬೇರೆ ಬೇರೆ ಜಟೆಗಳ ಮಹಾರಾಜಾಶೀರ್ವಾದ ಪ್ರವಚನಪೂರ್ವಕವಾದ ಫಲಮಂತ್ರಾಕ್ಷತೆಗಳನ್ನೂ ಸಮರ್ಪಿಸಿ (ಬಿಟ್ಟಿಅ. ೩೧-೧೭). ೭. ಕಾಗೆ : " ಶಿಫೆ . . . ವಿಶೇಷ ಬಲಿಭುಕ್ ಜಟಾಖ್ಯಾನಂ " (ನಾನಾರ. ೧೦೧) ; ಜಿಗಣೆಯುಪದ್ರಾ ನೋಡಲೋ ? ಜಟೆಯ ಹಾವಳೀ ನೋಡಲೋ ? (ಗಾದ). [ ಸಂ. ಜಟಾ ]

**ಜಟೆಕಟ್ಟು** (ಕ್ರಿ). (ತಲೆಗೂದಲು) ಒಂದರೊಡನೊಂದು ತೆಕ್ಕೆಗೊಂಡು ಸುರುಳಿಗಟ್ಟು ; ಕೂದಲು ಬೊಂತೆಗಟ್ಟು,–ಗಂಟುಗಂಟಾಗು : ಅವಳು ಕಾವಿಯುಟ್ಟಿದ್ದಳು. ತಲೆ ಜಟೆಕಟ್ಟಿತ್ತು (ವಚಭಾ. ೧೪೪).
[ ಜಟೆ + ಕಟ್ಟು$_1$ ]

**ಜಟ್ಟನೆ** (ಅ). ಕೂಡಲೆ; ತಕ್ಷಣ: ದೇವರಿಗೆ ಬಂದು ಕೈಮುಗಿದು ಜಟ್ಟನೇಳು ಅನ್ನಬಾರದ ! (ಮಲ್ಲಿ. ೧೨). [ ಜಟ್$_0$ + – ಅನೆ$_1$ ]

**ಜಟ್ಟಿ$_1$**, ಜೆಟ್ಟಿ$_1$, ಝಟ್ಟಿ (ನಾ). ಕುಸ್ತಿ ಮಾಡುವ ಕಸಬಿನವನು ; ಮಲ್ಲ ; ಪೈಲ್ವಾನ್ : ಕಠಾರಾಯಿತರ ಬಾಣಾಯಿತರ ಮಲ್ಲಜಟ್ಟಿಗಳ . . . ವರ್ತಕರ ಮೊತ್ತದೊತ್ತರದ ತಿಂಥಿಣಿಯನೊತ್ತರಿಸಿ (ಬಸರ. ೬-೨೩) ; ಜಟ್ಟಿಗಳಂಕದಾಳುಗಳಿದ್ದರಲ್ಲಲ್ಲಿ ಮಿಟ್ಟನೆ ಮಿಡುಕದೆ ನಿಂದು (ಭರಜ. ೧-೬೪) ; ಭಲಾ ಜಟ್ಟಿ ಎಂದರೆ ಕೆಮ್ಮಣ್ಣು ಮುಕ್ಕಿದ (ಗಾದ); ಜಟ್ಟಿ ಜಾರಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲ (ಗಾದ). **ಜೆಟ್ಟಿ$_1$ :** ಅಲ್ಲಿನ ಪ್ರಸಿದ್ಧ ಜೆಟ್ಟಿಯನ್ನು ಸಂಹರಿಸಿ ಬಂದರು (ಸಂಸಕ. ೧೦೪). **ಝಟ್ಟಿ :** ಪರಿವಡಿಯಂಕದಂತೆ ಪೊಚಿಮೆಟ್ಟದೆ ಸೂಟಿಜೋಪೊಳ್ಮಿದುಬ್ ಸಿಡಿಲ್ವರೆ . . . ತಾಗುವ ಝಟ್ಟಿಮಲ್ಲರ್ (ವರ್ಧಪು. ೮-೩೭). [ ದೇ. ತಮಿ. ಚೆಟ್ಟಿ ; ತುಳು. ಜಟ್ಟಿ; ತೆಲು. ಜೆಟ್ಟಿ ]

**ಜಟ್ಟಿ$_2$** (ನಾ). (ಅಂಗಮರ್ದಕಿಯಾದ) ಸಖಿ (?) : ಘನಕುಚ ತಾರಾಹಾರಗಳು ತೊನೆದಾಡೆ ಜಟ್ಟಿಯರ್ ತೊಡೆಯ ತಟ್ಟಿದರು ಜೀವನಗಾತಿ ಕಣ್ಮುಚ್ಚುವಂತೆ (ಮೋಹತ. ೨೭-೩೯). [ ? ]

**ಜಟ್ಟಿಂಗ**, ಜಟಗ, ಜಟಿಗ, ಜಟ್ಟಿಗ$_2$, ಜಟ್ಟುಗ, ಜೆಟಿಗ, ಜೆಟ್ಟಿಂಗ, ಜೋಂಟಿಗ, ಝಟ್ಟಿಂಗ, ಝೊಟ್ಟಿಂಗ, ಝೋಂಟಿಗ (ನಾ). ಒಂದು ಕ್ಷುದ್ರದೇವತೆಯ ಹೆಸರು : ಎಲ್ಲಾಯಿ ಯಕನಾತಿ ಬನದ ಶಂಕರಿ ಮಲ್ಲಗ ಜಟ್ಟಿಂಗ ಮಾಳಿಗೆಮನಿದೇವಿ (ವಿಸಾಸು. ೫೮-೨). **ಜಟಗ :** ಅಂದಿನ ಮಲೆನಾಡಿನಲ್ಲಿ ಭೂತ, ಪ್ರೇತ, ಪಿಶಾಚಿ . . . ಜಕಣಿ, ಜಟಗ, ಬ್ರಹ್ಮ, ಕಲ್ಲುಕುಟಿಗ ಮುಂತಾದ ಹಲವು ಹೆಸರಿನ ಹಲವು ಜಾತಿಯ ದೆವ್ವಗಳಿದ್ದವು (ಪಂಜಪಂ. ೨). **ಜಟಿಗ :** 'ಜಟಿಗಮನೆ' ಪರಾ. **ಜಟ್ಟಿಗ$_2$:** ದಡಿಗ ಜಟ್ಟಿಗರ ಗರ್ಜನೆಗಳಿಂ . , . ಎಸೆವ ದುರ್ಗಾನಿಲಯಮಂ . . . ಪೊಕ್ಕು (ದಶಕು. ೫-೫) ; ಬಟ್ಟೆಯೊಳ್ ಜಟ್ಟಿಗನೊಬ್ಬನಿರ್ದು ಕರಮಂ ಪಿಡಿದಂ ತರಳಾಯತಾಕ್ಷಿಯಾ (ಪುಣ್ಯಾಸ್ರ. ೬-೧೫) : ಕಾಳೆಗದೊಳು ಬೊಮ್ಮ ಜಟ್ಟಿಗ ಬೀರ . . . ಡಾಕಿನಿಯರ ತೂಳದೆ ಹೊಯ್ದಾಡಿ . . . ಬೊಬ್ಬಿಕ್ಕುತಿಹರು (ಮೋಹತ. ೨೯-೧೦) ; ಕುಂಬಾರರು ದುರ್ಗೆ, ಮಡಕೆದೇವಿ, ಜಟ್ಟಿಗ ಈ ದೇವತೆಗಳನ್ನು ಪೂಜಿಸುವರು (ಕಭಾಗ. ೧೪೯). **ಜಟ್ಟುಗ :** ಕಲಕೆ ಕಾದಿಹ ಭೂತಪ್ರೇತವು ಹಲವು ಜಟ್ಟುಗ ಮಾಣಿಭದ್ರರು (ಕಾಶಿರಾ. ೩೮-೨೩) ; ನಿದ್ರೆಯಲ್ಲಿ ಜಟ್ಟುಗ, ಬೊಬ್ಬರ್ಯ ಬಂದ ಹಾಗೆ ಕಾಣಿಸಬಹುದು(ಸ್ವಪ್ನಹೊ. ೮). **ಜೆಟಿಗ:** ಜೆಟಗನ ಪೂಜೆಗೆ ಭತ್ತ ಖ ೫ ಅಯಿದು ಖಂಡುಗ (ಎಕ. VIII, ತೀರ್ಥಹ. ೧೬೬-೪೬ ; 1610). **ಜೆಟ್ಟಿಂಗ :** ಮುಟ್ಟುಗೆಯ ಪೆಣನನೊರ್ವಂ ಜೆಟ್ಟಿಂಗಂ ನೆಗಪೆ ಕಂಡು ಮತ್ತೊರ್ವಂ ಕಣ್ಕಟ್ಟಿರ್ದು ನಿಳ್ಕಿ ನಭಮಂ ಮುಟ್ಟುವಿನಂ ನೆಗೆವುತಿರ್ದರೊರ್ವಗೊರ್ವರ್ (ಮಹಾನೇ. ೪-೩೧). **ಜೋಂಟಿಗ :** ಝಕಾರಕ್ಕೆ ಜಕಾರಂ – ಝೋಂಟಿಗ, ಜೋಂಟಿಗ (ಶಮದ. ೨೫೫ ಪ್ರಯೋ). **ಝಟ್ಟಿಂಗ:** ಬೆಟ್ಟಂ ತಿಟಿಕಲ್ಲಾಡುವ ಝಟ್ಟಿಂಗಂ[ಪಾಠಾಂ. ಜಟ್ಟಿಂಗಂ, ಝೊಟ್ಟಿಂಗಂ]ಶೈಳಯುಗಳಮಂ ಬಿಡೆ ತಾಳಂಗುಟ್ಟುವ ಭೇತಾಳಂ ಬೊಬ್ಬಿಟ್ಟಚಳಂಗಳನೆ ಚಳಿಯಿಸುವ ಭೂತಕುಳಂ (ಪಾರ್ಶ್ವಪು. ೧೫-೧೧೪). **ಝೊಟ್ಟಿಂಗ :** ಮೇಲಿನ 'ಪಾರ್ಶ್ವಪು' ಪ್ರಯೋಗದ ಪಾಠಾಂತರವನ್ನು ನೋಡಿ. **ಝೋಂಟಿಗ :** ಮೇಲಿನ 'ಜೋಂಟಿಗ' ಉಲ್ಲೇಖಕ್ಕೆ ಕೊಟ್ಟಿರುವ 'ಶಮಂದ' ಪ್ರಯೋಗವನ್ನು ನೋಡಿ.
[ ?. / ಪ್ರಾ. ಝೋಟಿಂಗ ]

**ಜಟ್ಟಿಕಾಳಗ** (ನಾ). ಕುಸ್ತಿ ; ಮಲ್ಲಯುದ್ಧ : ಗೀತನಾಟ್ಯಗಳೇನು, ಜಟ್ಟಿ ಕಾಳಗವೇನು (ಕಾವ್ಯಸ. ೬೫). [ ಜಟ್ಟಿ$_1$ + ಕಾಳಗ (<ಕಾಳೆಗ) ]

**ಜಟ್ಟಿಗ$_1$**, ಜೆಟ್ಟಿಗ (ನಾ). ೧. ಕುಸ್ತಿಮಾಡುವವನು ; ಮಲ್ಲ; ಪೈಲ್ವಾನ್: ಕೊಟ್ಟಿಗೆ ಕಾವಮಾಟ ಕ್ರಮುಕ ಬೆಳ್ಳೆಲೆಗರು ಜಟ್ಟಿಗ ಗೀತಪಾಠಕರು ಸೆಟ್ಟಿಗ ಬಲು ಚಿನ್ನವರದರು ಘಟ್ಟಪ ಕಟ್ಟಿಗೆಕಾಚಿರೇಜಿದರು (ಮೋಹತ. ೩೬-೪೩). ೨. ಶೂರ ; ಸಮರ್ಥ : ನಮ್ಮ ಕುಲದೊಳ್ ಮಕ್ಕಳ್ಪೆಚಿರ್ ನೀನೆ ಜಟ್ಟಿಗನೈ . . . ಮಗನೇ ಕೈಕೊಳ್ ಧರಾಭಾರಮಂ (ಪಂಪಭಾ. ೧-೮೧); ಅಟ್ಟಿದ ಜಟ್ಟಿಗರ್ ತಡೆದುದರ್ಕೆ ಕನಲ್ದು ವಿಭೀಷಣಂ . . . ಅಯೋಧ್ಯೆಗೆ ಬಂದು (ಪಂರಾಮಾ. ೩-೨೮) ; ಬಿಟ್ಟಿಗನಾಹವಾಂಗಣಕೆ ಜಟ್ಟಿಗಂ(ಎಕ. XI, ದಾವಣ. ೨೫-೨೪ ; 1224). **ಜೆಟ್ಟಿಗ :** ೨. ಎನ್ನ ಜೆಟ್ಟಿಗರೊಳಗೀತನೆ ಜೆಟ್ಟಿಗಂ (ಪಂಪಭಾ. ೨-೬೧) ; ನಿಮಗೆ ಸಂಶಯಮೇವುದಪಾಯಮಾಗದಾ ಜೆಟ್ಟಿಗನಾಗಿಯುಂ ಬಳೆದಪಂ ಪೆಜತೊಂದೆಡೆಯೊಳ್ (ನೇಮಿಪು. ೬-೬೨); ಜೆಟ್ಟಿಗ ಕಾಳಿಮಯಂಗಂ [ಪೆಟ್ಟುಗೆ] ಘುಚಿಮಾರಕಬ್ಬೆಗಂ ಗಿರಿಗುಹೆಯೊಳ್ ಪುಟ್ಟುವ ಸಿಂಘದ ತೆಜದಿಂ ಪುಟ್ಟಿದಂ . . . ತಿಪ್ಪಗವುಂಡ (ಕಇ. I, ೨೪-೨೭ ; ಸು. 1148). [ ಜಟ್ಟಿ$_1$ + – ಗ$_2$ ]

**ಜಟ್ಟಿಗ$_2$** 'ಜಟ್ಟಿಂಗ' ನೋ.

**ಜಟ್ಟಿಗತನ** (ನಾ). ಕುಸ್ತಿಯ ರೀತಿ,–ವಿದ್ಯೆ : ಶಂಬು ಶಿಷ್ಯನಿಗೆ ಜಟ್ಟಿಗತನದ ಪರಿವಿಡಿಯನ್ನು ತೋರಿಸಿಕೊಡುತ್ತಿರುವನೋ ಎಂಬಂತೆ ಹೋರುತ್ತಿದ್ದನು (ಭಾಮುಹ. ೧೦೪). [ ಜಟ್ಟಿಗ$_1$ + – ತನ ]

**ಜಟ್ಟಿಗರುಡಿ** (ನಾ). ಕುಸ್ತಿಯನ್ನು ಕಲಿಸುವ ಮನೆ ; ಕುಸ್ತಿಯ ಪಟ್ಟುಗಳನ್ನು ಕಲಿಸುವ ಮನೆ ; ಮಟ್ಟಿಮನೆ : ಮೆಯ್ಸಿರಿ ಜಟ್ಟಿಗರುಡಿಗಳೊಳಂ ನಟ್ಟುವ ಗರುಡಿಗಳೊಳಂ ಕಂಡುದಲ್ತು (ಚಿಕವಂ. ೧೬೮).
[ ಜಟ್ಟಿ$_1$ + ಗರುಡಿ ]

**ಜಟ್ಟಿಗಾಸೆ**(ನಾ). ಜಟ್ಟಿಗಳು ತೊಡುವ ಕಾಸೆ; ವೀರಗಾಸೆ: ಹೊಂಬಟ್ಟೆಯ ಜಟ್ಟಿಗಾಸೆಯಿಂದಳವಟ್ಟ . . . ಬಿಲ್ಲಾಳ್ಗಳ (ಹಮ್ಮೀರ. ೩–೩೩ ವ).
[ ಜಟ್ಟಿ$_1$ + ಕಾಸೆ$_1$ ]

**ಜಟ್ಟಿಗೆ** (ನಾ). ಒಂದು ಬಗೆಯ ಬಾಣ : ತನ್ನಮ್ಪಲವುಮ್ಬಳಿಯುಮ್ಬ ಜಟ್ಟಿಗೆಗಳುಮ್ಬಸವುಟಿವಿನ ಕೊಳೆ ತಾಂ ಸತ್ತು . . . ಸ್ವರ್ಗ್ಗಲೋಕದ ಸುರಾಂಗನೆಯರೊಳ್ನೆರದೊ (ಎಕ. XI. ಚಳ್ಳಕೆ. ೮–೪ ; 810 ?) ; ಬೆನ್ನನಟ್ಟಿ ನಟ್ಟ ಜಟ್ಟಿಗೆಯಿಂ ಮಿಟ್ಟೆಗೊಂಬಿಟ್ಟೆಯಂತೆಯುಂ ಬಡಿಗೊಂಡ ಮೊಲದಂತೆಯುಂ ತಲೆಕೆಟಗಾಗಿ ಬಿಟ್ಟರ್ (ಶಾಂತಿಪು. ೪–೩೦ ವ). [ ? ]

**ಜಟ್ಟಿಸಾಧನೆ** (ನಾ). ಮಲ್ಲನು ಮಾಡುವ ಸಾಧನೆ ; ಗರಡಿ ಸಾಧನೆ : ಜಟ್ಟಿಸಾಧನೆಯಲ್ಲಿ ವತ್ತಾನಾಶವು ಆಗುವದು ಇದು ಸಾಧನೆಯ ಗುಣವು (ಖಡ್ಗಟೀ. ೫–೮೩). [ ಜಟ್ಟಿ$_1$ + ಸಾಧನೆ ]

**ಜಟ್ಟಿಹಿಡಿತ** (ನಾ). ಬಿಗಿಮುಷ್ಟಿ : (+). [ ಜಟ್ಟಿ$_1$ + ಹಿಡಿತ ]

**ಜಟ್ಟುಗ** 'ಜಟ್ಟಂಗ' ನೋ.

**ಜಠರ** (ಗು). ೧. ಕರ್ಕಶವಾದ; ಗಡುಸಾದ; ಬಿರುಸಾದ; ಕಠಿನವಾದ. ೨. ಮುಪ್ಪಾದ; ವಯಸ್ಸಾದ. 'ಜರಠ' ಪರಾ. (ನಾ). ೩. ಹೊಟ್ಟೆ; ಉದರ ; ಅನ್ನಕೋಶ : "ಪೊಡೆಯೆನಲ್ ಜಠರಂ" (ಚತುನಿ. ೪೬). ೪. ಬಸಿರು ; ಗರ್ಭ : ಮಂಡೋದರೀ ಜಠರಜಾಹ್ನವೀವಿಕಸಿತಾರವಿಂದಂ ತಂದೆಯ ಮುಖಾರವಿಂದಮುಂ ನೋಡಿ (ಪಂಠಾಮಾ. ೧೩–೧೩೩ ವ) ; ಅಱಿಯದೆ ಜನನಿಯ ಜಠರದಲ್ಲಿ ಬಾರದ ಭವಂಗಳಲ್ಲಿ ಬರಿಸಿದೆ(ಬಸವ. ೨೧).
[ ಸಂ. ]

**ಜಠರದಹನ** (ನಾ). = ಜಠರಾಗ್ನಿ : ನಿನಗಪ್ಪುದನಱಿದೊಳ್ಪಂ ಮಾಳ್ಪುದು ಪುದಿದಂತಕಜಠರದಹನನಳುರದೆ ಬೇಗಂ (ಜೀವಸಂ. ೧೧–೧೬).
[ ಜಠರ + ದಹನ ]

**ಜಠರಪರಾಯಣ**(ನಾ). ಹೊಟ್ಟೆ ತುಂಬಿಸುವುದರಲ್ಲೇ ಆಸಕ್ತನಾದವನು; ಹೊಟ್ಟೆಹೊರಕ : ಕಾಯಿದಿರೆ ಧರ್ಮವನು ಜಠರಪರಾಯಣರ ಪರಿಣತೆಯಲಾದ ಪಲಾಯನದ ಹೆಬ್ಬೆಳಸ ನೋಡು (ಕುವ್ಯಾಭೀ. ೯–೧).
[ ಜಠರ + ಪರಾಯಣ ]

**ಜಠರಭರಣ** (ನಾ). ಹೊಟ್ಟೆಯನ್ನು ತುಂಬಿಸಿಕೊಳ್ಳುವಿಕೆ ; ಹೊಟ್ಟೆಪಾಡು : ಬಿಟ್ಟರೆಮ್ಮನು ಜಠರಭರಣಕೆ ನೆಟ್ಟನಾಶ್ರಯವಿಲ್ಲದಿರೆ ಕಂಗೆಟ್ಟು ಬಂದೆವು (ಕುವ್ಯಾವಿ. ೧–೧೯). [ ಜಠರ + ಭರಣ ]

**ಜಠರರಸ** (ನಾ). ಆಹಾರದಲ್ಲಿನ ಪಿಷ್ಟ ಮತ್ತು ಸಕ್ಕರೆ ಅಂಶಗಳು ಕರಗಿ ರಕ್ತಗತವಾಗುವಂತೆ ಮಾಡಲು ಅನ್ನಕೋಶದಲ್ಲಿ ಉತ್ಪತ್ತಿಯಾಗುವ ಒಂದು ಬಗೆಯ ದ್ರವ ; ಪಾಚಕರಸ : ಜಠರರಸ . . . ಎಂಬ ರಸಗಳೊಡನೆ ಬೆರಸಿ ಹೋಗುತ್ತದೆ (ಪ್ರಾಣಿಶಾ. ೫). [ ಜಠರ + ರಸ ]

**ಜಠರಾಗ್ನಿ** (ನಾ). ೧. ಹೊಟ್ಟೆಯಲ್ಲಿ ಆಹಾರವನ್ನು ಜೀರ್ಣವಾಗುವಂತೆ ಮಾಡುವ ಅಗ್ನಿ : ಪಾರಣೆಯ ದಿನಂಗಳೊಳವಧಾರಿಸಿ ಜಠರಾಗ್ನಿ ನಂದದಂದದಿನರ್ಧಾಹಾರಮನಾರೋಗಿಸುವಾಚಾರದಿಂ(ಸುಕುಮಾ. ೪–೫); ಅಂತು ನಿಜವರೂಥಿನಿಯ ನಾಲ್ವರುಂ ಮಹಾ ಸಾಮಂತರಂತಕಜಠರಾಗ್ನಿಗಾಹುತಿಯಪ್ಪುದುಂ(ಪಂಠಾಮಾ. ೧೩–೧೦೧ ವ) ; ದೇಹದಲ್ಲಿ ಜಠರಾಗ್ನಿಯು ನಾಲ್ಕು ತೆರನಾಗಿರುವುದೆಂತೆಂದೊಡೆ ಮಂದಾಗ್ನಿ, ತೀಕ್ಷ್ಣಾಗ್ನಿ, ವಿಷಮಾಗ್ನಿ, ಸಮಾಗ್ನಿ (ಸಕವೈ. ೧೫) ; ಸಮಗ್ರ ವ್ಯಕ್ತಿತ್ವದ ಜಠರಾಗ್ನಿಯಲ್ಲಿ ಅದು ಕರಗಿದಾಗಲೆ . . . ಆರೋಗ್ಯಕ್ಕೆ, ಪೋಷಣೆಗೆ ರಕ್ತದಾನ ಮಾಡೀತು (ಮೂರುದಾ. ೨೦೫). ೨. ಹಸಿವು. [ ಜಠರ + ಅಗ್ನಿ ]

**ಜಠರಾನಳ** (ನಾ). = ಜಠರಾಗ್ನಿ ೨ : ಉರಿವುರಿಯನೆ ತಲೆನವಿರನುಕರಿಸಿರೆ ಸಂತಪ್ತಕನಕವರ್ಣಮುಮುರಿಯೊಂದುರುಳಿವೊಲಿರೆ ಜಠರಾನಳನುರಿವಿನಮಂತೋರ್ವನುರಿಯ ಬಣ್ಣದ ಪಾರ್ವಂ (ಪಂಪಭಾ. ೫–೬೯).
[ ಸಂ. ಜಠರಾನಲ (ಜಠರ + ಅನಲ) ]

**ಜಠರೆ** (ನಾ). ತೋಟ : ಹಿರಣ್ಣಯ್ಯನ ಮಕ್ಕಳುಮರಿಗಳ ಪೋಷಣೆ, ಜಮೀನು ಜಠರೆಗಳನ್ನು ನೋಡಿಕೊಳ್ಳುವ ಕೆಲಸ ವೆಂಕಪ್ಪಯ್ಯನವರ ಕೊರಳಿಗೇ ಬಿತ್ತು (ವಿದ್ಯಾರಿ. ೫೪). [ ←ಪಾರ. ಜತ್ರ್‌ ]

**ಜಡ** (ಗು). ೧. ಶೀತಲವಾದ. ೨. ಚುರುಕಿಲ್ಲದ ; ಚಟುವಟಿಕೆಯಿಲ್ಲದ ; ಮಾಂದ್ಯದ; ಆಲಸಿಕೆಯ. ೩. ಭಾವನಾರಹಿತವಾದ; ನಿರುದ್ವಿಗ್ನವಾದ. ೪. ಗಟ್ಟಿಯಾದ ; ಬಿರುಸಾದ; ಗಡುಸಾದ. 'ಜಡಾನ್ನ' ಪರಾ. ೫. ಭಾರವಾದ; ತೂಕವಾದ. (ನಾ). ೬. ಅಚೇತನವಾದುದು; ಜಡವಸ್ತು. ೭. ಭಾರವಾದುದು: ಬಣ್ಣದಿಂದ ಸ್ವಲ್ಪ ಮಟ್ಟ ಇದ್ದಾಗ್ಯೂ ಜಡವಾಗಿರಬೇಕು (ಮುಂಬವ್ಯಾ. ೩೨). ೮. ಅರಿಯುವ ಶಕ್ತಿ ಇಲ್ಲದುದು : ಅಸತ್ತು ಜಡ ದುಃಖ ಅನಿತ್ಯ ಖಂಡಿತಮೆಂಬವೇ ಮಾಯಾಪಂಚಲಕ್ಷಣಂಗಳು (ವಿವೇಕ. ೨೮); ಮದ್ದಿಗೆ ಕಿಡಿ ತಗುಳ್ದು ಹೊಮ್ಮುವಂದದಿ ಜ್ಯೋತಿ, ಜಡವೆ ಚಿನ್ಮಯವಾಗಿ ಚಿಮ್ಮಿದಪುದಯ್ (ಶ್ರೀರಾಮೂ. ೫–೧೨೯). ೯. ಆಲಸ್ಯ ; ಸೋಮಾರಿತನ: ಜಡವನು ತೊರೆದೇಳು ಜಗ ನಿನಗಡಿಯಾಳು ಬಾಳೊಂದು ವಿಜಯದ ಬೀಡು (ಇಂಚಾಪ. ೧೫೩–೫೨). ೧೦. ಕಾಯಿಲೆ ; ಅಸ್ವಸ್ಥತೆ : ಮೋಗ್ರೋಳ್ಳಿ ಕಣ್ಣಾಪಂಡಿತ್ರು ಕೊಟ್ರು ಅಂತಾ ನಿಮ್ಮ ಜಡಕ್ಕೂ ಮದ್ದು ತಂದುಕೊಟ್ಟಾರೆ (ಮಲಿಮ. ೪೬೮) ; ೧೧. ಮಂದಮತಿ ; ಮೂರ್ಖ; ದಡ್ಡ ; ತಿಳಿಗೇಡಿ: "ಬಾಲಿಶನಜ್ಞಂ ಮೂರ್ಖಂ ಬಾಲಂ ಮೂಢಂ ಜಡಂ" (ವಸ್ತುಕೋ. ೯೯–೭) ; ನೀ ಪ್ರಾಣಪ್ರಕೃತಿಯೊಳಡಗಿದ ಭೇದವ ಲೋಕದ ಜಡರೆತ್ತ ಬಲ್ಲರೈ (ದೇದಾವ. ೬–೧೦); ದೃಶ್ಯ ಜಡಸಂಧಾನವೆನಿಸುವ ನಶ್ವರದ ಮನನೇತ್ರವಾಗಾದಿ ಸ್ವಚೇಷ್ಟಾ ದುರ್ಬಲಗಳು (ಅಮೃತ. ೩–೭೮). ೧೨. ಆಲಸಿ; ಸೋಮಾರಿ: "ಅಳಸಂ ಮಂದಂ ಜಡಂ"(ವಸ್ತುಕೋ. ೧೦೦–೧೧); ಊರಿನ ಸತ್ರಗಳಲ್ಲಿ ಅನ್ನವನ್ನು ತಿಂದು ಯಾವ ಕೆಲಸವನ್ನೂ ಮಾಡದೆ ಜಡರಾಗುತ್ತಿದ್ದಾರೆ (ನೀತಿಚಿಂ. VIII, ೧೩). ೧೩. ಮಾತನಾಡಲಾರದವನು; ಮೂಕ: "ಜಡನಕ್ಕುಂ ಮೂಕಂ" (ವಸ್ತುಕೋ. ೭೪–೪೦) : "ಜಡು ಕಳನೆನಲು ಸಂದ ಮೂಗನೆನಿಕ್ಕು" (ಮಂಗರಾ. ೧೧೪–೫). ೧೪. ನೀರು ; ಉದಕ : "ಜಲದೊಳು ತುಷಾರದೊಳು ಜಡಮೆನಿಕ್ಕುಂ" (ಮಂಗರಾ. ೧೫೩–೬೦) ; ಘನದ ಬರವಪ್ರಯೋಜನಮೆನುತಱಿದುಂ ಜಡಧಿ ಜಡಮನಿತ್ತುದು (ರಾಜಶೇ. ೧–೯೮). ೧೫. ಗಿರಿ ; ಬೆಟ್ಟ. ೧೬. ಯಾಗ: "ದ್ರವಿಣಂ ತುಷಾರ ಜಲ ಪರ್ವತ ಮೂರ್ಖ ಮುಖಂ ಜಡಾಖ್ಯ" (ನಾನಾರ. ೫೪).

**ಜಡಜಾಪತ್ತು** = ಕಾಯಿಲೆ ಕಸಾಲೆ: ಜಡಜಾಪತ್ತು ಬಂದರೆ ಬೂದಿ ಮಂತ್ರಿಸಿಕೊಡುತ್ತಾರೆ (ಹಹಸ. ೭). **ಜಡವಾಗು** = ಕ್ರಿಯಾಶೂನ್ಯವಾಗು; ಚಟುವಟಿಕೆಯಿಲ್ಲದಿರು : ಒತ್ತುವಶ್ರುಭರದಿಂ ಜಡವಾದುದು ದೃಷ್ಟಿ (ಶಾಕುಂತ. ೫೨–೮೪). **ಜಡಮಾಡು** = ಆಲಸ್ಯಪಡು ; ಬೇಸರಪಡು : ಕಿವಿಗೆ ಪೀಡಾಪರಿಹಾರವೆನಲುಸಿರುವೆ ಜಡಮಾಡದೆ ಕೇಳು ಮತ್ಕೃತಿಯ (ಮೋಹತ. ೩೫–೨). [ ಸಂ. ]

**ಜಡಕರ್ಮಿ** (ನಾ). ಗೊಡ್ಡುಕರ್ಮದಲ್ಲಿ ನಿರತನಾದವನು : ಬರಿಯ ಜಡಕರ್ಮಿಗಳನಾರ್ಜಿಸಿ ಬೆರೆತಿರಲು ನಿಜಮೋಕ್ಷಮಪ್ಪುದೆ(ಗಗತಾ. ೧೬–೫೬).
[ ಸಂ. ಜಡಕರ್ಮಿನ್ ]

**ಜಡಕ್ರಿಯ** (ನಾ). ಕೆಲಸವನ್ನು ನಿಧಾನವಾಗಿ ಮಾಡುವವನು ; ಕಾಲ ಹರಣಮಾಡುವವನು ; ಸೋಮಾರಿ ; ನಿಧಾನಪ್ರಕೃತಿಯುವನು : " ತಳುವ ಮಾಟ್ಟವಂ ಜಡಕ್ರಿಯನಕ್ಕು " (ಮಂಗರಾ. ೭೨-೨೦). [ ಸಂ. ]

**ಜಡಗ್ರಾಹಿ** (ನಾ). ೧. ನೀರನ್ನು ಸಂಗ್ರಹಿಸಿರುವವನು. ೨. ಮಾಂದ್ಯ ವುಂಟಾದವನು ; ಆಲಸ್ಯ ಹೊಂದಿದವನು. ೧, ೨ : ಆ ರಾಜಹಂಸಾ ಹಿತನೆನಿಸಿದೆನೆಂದುಂ ಜಡಗ್ರಾಹಿಯಾನಾದೆನೆನುತ್ತಂ ಚಿಂತೆಯಿಂ ಬೆಳ್ಪಡರ್ದು ದೆನೆ ತದಬ್ಬಂ ಶರನ್ಮೇಘಮಿರ್ಕುಂ (ರಾಜಶೇ. ೬-೪).
[ ಸಂ ಜಡಗ್ರಾಹಿನ್ ]

**ಜಡಜ** (ನಾ). ೧. ನೀರಿನಲ್ಲಿ ಹುಟ್ಟಿದುದು ; ಕಮಲ ; ತಾವರೆ : ಎಡದ ಮಡದಿಂದೊತ್ತಿ ನಾಲ್ಕುದಳಗಳನಾರರೆಡೆಯಲ್ಲಿ ದಕ್ಷಿಣಾಂಘ್ರಿಯನಿಟ್ಟು ದಶದಳದ ಜಡಜಮಂ ಬಲಿದು ಪದಿನಾರು ಸಂವರ್ತಿಕಾಬಂಧನಗೈದು (ವೆಂಕಾರಾ. ೨-೮-೩೦). ೨. ದಡ್ಡನ ಮಗ. 'ಜಡಜಜ' ಪರಾ.
[ ಸಂ. ]

**ಜಡಜಂಗಮ** (ನಾ). ಚರ ಹಾಗು ಅಚರವಾದ ಜಡವಸ್ತು ; ಚರಾ ಚರ : ನಿನ್ನ ತಡೆದಿಡಲೆನ್ನ ಜಾಗರದೊಳಿಲ್ಲ ಜಾಗ ಕಂಡ ಜಡಜಂಗಮಕೆ ಕೈಯ ಜೋಡಿಸುವುದೇ ಕುಶಲವೀಗ (ಮಲಿದೇ. ೪೩-೧೦).
[ ಜಡ + ಜಂಗಮ$_1$ ]

**ಜಡಜಂತು** (ನಾ). ೧. ಅರಿವುಗೆಟ್ಟ ಜೀವಿ ; ತಿಳಿಗೇಡಿ ಮನುಷ್ಯ. ೨. ನೀರಿನ ಪ್ರಾಣಿ ; ಜಲಚರ. ೧, ೨ : ಕೇಡನಾಗೆಂದಾಗಂ ಕಿಡೆಂದು (?) ವಿಪರೀತಂ ಮಾಡಿಯೆ ನೆಗಟ್ದು ಜಡಜಂತು ಮೂಡಿ ಮುಟ್ಟಾಡುಗುಂ ಜನ್ಮಜಡಧಿಯೊಳ್ (ಚಂದ್ರಪು. ೪-೩೪). [ ಜಡ + ಜಂತು ]

**ಜಡಜಗ** (ನಾ). ಜಡರೂಪವಾದ ಜಗತ್ತು ; ಭೌತಿಕವಾದ ಜಗತ್ತು; ನಿಷ್ಕ್ರಿಯವಾದ ಪ್ರಪಂಚ : ಜಡಜಗಂ ತೋರಿದಪುದಂತರಾತ್ಮದ ಸಿರಿಗೆ ಹೊರವೊಗಂ ತಾನಾಗಿ (ಶ್ರೀರಾಮಾ. ೧೩೩-೨೦೯). [ ಜಡ + ಜಗ ]

**ಜಡಜಗರ್ಭ** (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ : ಜಡಜಗರ್ಭಂ ದೇವನೆಂಬುಗ್ಗಡಣೆಯುಡುಗಿತು (ಬಸಪು. ೫೪-೬). [ ಜಡಜ + ಗರ್ಭ ]

**ಜಡಜಜ** (ನಾ). ೧. ಕಮಲದಲ್ಲಿ ಹುಟ್ಟಿದವನು; ಬ್ರಹ್ಮ : ಜಡಧಿಯ ರತ್ನಂಗಳ್ಗೊಂದೊಡವಿನುಪಾಶ್ರಯದಿನೆಸೆವವೋಲ್ ದಶರಥನಿಂ ಜಡಜಜನ ವಿದ್ಯೆಗಳ್ ನೂರ್ಮಡಿಸಿದುವು (ಪಂಪರಾಮಾ. ೩-೫). ೨. ದಡ್ಡನ ಮೊಮ್ಮಗ. ೧, ೨ : ಕಲ್ಯಾಣಗರ್ಭನಾಗಿಯುಮಜನಂತಿರೆ ಜಡಜಜನೆನಿಸದೆ ತದ್ಗುರುಕರಕಂಜಾತಜಾತನೆನಿಸಿದನೀತಂ (ರಾಜಶೇ. ೧-೬೪). 'ಜಡಜಾತಜಾತ' ಪರಾ. [ ಸಂ. ]

**ಜಡಜನ** (ನಾ). ಮಂದಮಂತಿಗಳಾದ ಜನ ; ಸೋಮಾರಿಗಳಾದ ಜನ : ಜಡಜನಮುಮೆಲ್ಲಮೋದಂ ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ (ಕವಿರಾ. ೧-೧೦) ; ಸಾರ್ವಭೌಮರಪ್ಪ ಸಕಳಚಕ್ರವರ್ತಿಗಳಂ ಕಂಡು ಜಡಜನಂಗಳ್ ಮೊದಲಾಗಿದು ಮುನ್ನಿನ ಭವದೊಳ್ ನೆರಪಿದ ಪುಣ್ಯದ ಫಲಮೆಂಬರ್ (ಶಾಂತಿಪು. ೮-೧೩೭ ವ) ; ನೀರ್ಗೆತ್ತು ಬೆಳ್ಳನದಿಂ ಕತ್ತರಿವಾಣಿಯಂ ಜಡಜನಂ ಕೈಗುತ್ತಲೇಟ್ಟಿರ್ಪವೋಲ್ (ಪಂಪರಾಮಾ.೩-೪೮).
[ ಜಡ + ಜನ ]

**ಜಡಜನಾರಾಚ** (ನಾ). ಕಮಲಪುಷ್ಪವನ್ನೇ ಬಾಣವಾಗಿ ಉಳ್ಳವನು ; ಮನ್ಮಥ ; ಕಾಮ : ಮೃಡನ ಮೌಳಿಯೊಳಿರ್ದ ಕಿಡಿಗಣ್ಣ . . . ತೆರೆವಾಗ . . . ಜಡಜನಾರಾಚನವುಳುಹಿಕೊಳದಾದೆಯೆಂದುಡುಪತಿಯ ಶಾಪಿಸಿದಳು (ನವಮೋ. ೬-೨೯). [ ಜಡಜ + ನಾರಾಚ ]

**ಜಡಜಪೀಠ** (ನಾ). ಕಮಲವನ್ನು ಪೀಠವಾಗಿ ಉಳ್ಳವನು ; ಬ್ರಹ್ಮ : ಜಡಜಪೀಠನು ನೀಡಿದೀ ಹೇರೊಡಲ ತುಂಬಿಸಲೇನು ಮಾಡೆಯೊ (ಕಾಶಿರಾ. ೨೫-೩೯). [ ಜಡಜ + ಪೀಠ ]

**ಜಡಜಭವ** (ನಾ). = ಜಡಜಜ೧ : ಜಡಜಭವನಭವನ ಸಮಯಮುಮಂ ಪಡೆ ವನಕ ದೇಗುಲದ ಹೊಜಿಗೆಯೆರಡು ಕರವ ಮುಗಿದಿಹನು (ಬಸಪು. ೪೩-೪೨); ಮುನಿಪನು ಜಡಜಭವನ ಬೆಸಗೊಂಡ (ಕರ್ನಾಕ. ೨೬೫).
[ ಜಡಜ + ಭವ ]

**ಜಡಜಶರ** (ನಾ). = ಜಡಜನಾರಾಚ. 'ಜಡಜಶರಸಂತ' ಪರಾ.
[ ಜಡಜ + ಶರ ]

**ಜಡಜಶರಸುತ** (ನಾ). ಮನ್ಮಥನ ಮಗ ; ಅನಿರುದ್ಧ : ಜಡಜಶರಸುತ ನೆಡೆಗೆ ಉಪೆಸಹಿತ ಚಿತ್ರಲೇಖೆಯು ಬಂದು ಬಿನ್ನೈಸುತ (ಪ್ರೌಢರಾ. ೧೧-೫೬). [ ಜಡಜಶರ + ಸುತ ]

**ಜಡಜಾಕ್ಷ** (ನಾ). ಕಮಲದಂತೆ ಕಣ್ಣುಳ್ಳವನು ; ವಿಷ್ಣು : ಕಡುಗರುವ ನಾತನೆಂದಂತೆ ಕೇಳುವೆವೆಂದು ಜಡಜಾಕ್ಷನಂ ಕರಸಲವನೆಯ್ದಿ ಬಂದೆರಡು ಕಡೆಯ ಸುರರಸುರರಂ ನೋಡಿ ಮತ್ತಿಂತೆಂದನು (ವೀಶೈಪು. ೩-೧೦-೧೮).
[ ಸಂ. (ಜಡಜ + ಅಕ್ಷಿ + –) ]

**ಜಡಜಾತ** (ನಾ). = ಜಡಜ ೧. 'ಜಡಜಾತಜಾತ' ಪರಾ.
[ ಜಡ + ಜಾತ ]

**ಜಡಜಾತಜಾತ** (ನಾ). ೧. ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ. ೨. ಮೂರ್ಖನ ಮಗನ ಮಗ. ೧, ೨ : ಅಜನಜಡನೆಂದು ನುಡಿವುದು ಕುಜನತೆ ಜಡಜಾತಜಾತನೆಂತಜಡನವಂ (ಶಬಶಂ. ೧-೧೭).
[ ಜಡಜಾತ + ಜಾತ ]

**ಜಡಜಾತೋದ್ಭವ** (ನಾ). = ಜಡಜಾತಜಾತ ೧ : ಜಡಜಾತೋದ್ಭವನುಂ ರಜೋದ್ಭವನುಮಪ್ಪಾ ಕಂಜ ಭೂಸೃಷ್ಟಿ ನೋಟಿಸ್ಖೊಡೆ ಸಮ್ಮೋಹನ ಮಾಗದು (ಶಾಂತೀಶ್ವ. ೧-೧೨೯). [ ಸಂ. (ಜಡಜಾತ + ಉದ್ಭವ) ]

**ಜಡಜಾಪ್ತ** (ನಾ). ಕಮಲಕ್ಕೆ ಮಿತ್ರನಾದವನು ; ಸೂರ್ಯ.
[ ಜಡಜ + ಆಪ್ತ ]

**ಜಡಜಾರಿ** (ನಾ). ತಾವರೆಯ ಶತ್ರು ; ಚಂದ್ರ. [ ಜಡಜ + ಅರಿ$_6$ ]

**ಜಡಜೀವ** (ನಾ). ದಡ್ಡ ; ಅಜ್ಞ : ಹರಿಪರಾಙ್ಮುಖರಾದ ಜಡಜೀವರನು ಬಾರದ ಬವಣೆಗೆ ನೆಟಿ ಬರಿಸಿ ಕೊಲುವನು (ನಿಭಾಗ. ೨-೧-೮).
[ ಜಡ + ಜೀವ ]

**ಜಡಜೀವನ** (ನಾ). ಚಟುವಟಿಕೆಯಿಲ್ಲದ ಬಾಳು ; ಉತ್ಸಾಹರಹಿತವಾದ ಜೀವನ ; ಸಪ್ಪೆ ಬದುಕು : ಜನಕ್ಕೆ ಶಿಸ್ತು ನೈರ್ಮಲ್ಯಗಳನ್ನು ಬೋಧಿಸಿ ಅವರ ಜಡಜೀವನಕ್ಕೆ ಹುರುಪು ಕೊಡುವುದು ಅವಶ್ಯವಾಗಿತ್ತು (ರೂಪಸ. ೧೪೨). [ ಜಡ + ಜೀವನ ]

**ಜಡಜೀವಿ** (ನಾ). ಮಂದಬುದ್ಧಿಯುವನು ; ತಿಳಿಗೇಡಿ : ಪಾವಕಾಕ್ಷನ ನರ್ಚಿಸುತ ಜಡಜೀವಿಗಳಿಗೀಕ್ಷಣವನೀವುದದಾವ ಸತ್ಪುಣ್ಯವು ಶಿವಾಗಮ ನಿಗಮ ದೃಷ್ಟದಲಿ (ಬಸಪು. ೬೦-೭); ಬಡ್ಡಿ ಕಾಟನಂತೆ ಒಂದು ಕೊಟ್ಟು ಎರಡು ಪಡೆವ ಜಡಜೀವಿಗಳ ಭಕ್ತರೆನಬಹುದೇನಯ್ಯಾ (ಅಖಂಡೇ. ೮೫-೮೪).
[ ಜಡ + ಜೀವಿ ]

**ಜಡತನ** (ನಾ). ೧. ಆಲಸ್ಯ; ಸೋಮಾರಿತನ: ಓದಿನ ದಿನಗಳು ಗೆಲುವಿನ ದಿನಗಳು ಬಡತವೇನಿದ್ದರೇನು ಆಗಿನ ದಿನಗಳು ನಲಿವಿನ ದಿನಗಳು ಜಡತನವೆನಿತಿದ್ದರೇನು (ಇಂಚಾಪ. ೨೮-೨೭). ೨. ಜಾಡ್ಯ ; ಅನಾರೋಗ್ಯ; ಕಾಯಿಲೆ : ದಿನದಿನದೊಳವಗಡಿಸುತಿರ್ಪುದಂ ಬಹಳ ಜಡತನ ತನಗೆ ಬಂದುದಂ . . . ನೆನೆದು (ಜೈಮಿಭಾ. ೬-೨) ; ಅಡಸಿದ ಜಡತನದೆಡಜಂ ಬಿಡಿಸೆ ಸುರಂಗಾಗ್ನಿವೈದ್ಯದಿಂದಪ್ರತಿಮಂ ಪಿಡಿದು ಪಕಾರಸ್ಮೃತಿಯಂ ಪಡೆದುದು ಚಿಕದೇವರಾಜದುರ್ಗಾಭಿಧೆಯಂ (ಅಪ್ರತಿ. ೫೦-೨) .
[ ಜಡ + – ತನ ]

**ಜಡತಿ** 'ಝುಂಡತಿ' ನೋ.

**ಜಡತೆ** (ನಾ). ೧. ಶೈತ್ಯ ; ಶೀತಲತೆ. ೨. ಅನಾಸಕ್ತಿ ; ಆಲಸ್ಯ ; ನಿರುತ್ಸಾಹ ; ಲವಲವಿಕೆಯಿಲ್ಲದಿರುವಿಕೆ : ಒಡಲೊಣಗಿಸಿಯಿರುಳು ಪಗಲುಂ ಜಡತೆಯ ಬಿಟ್ಟಾತ ಗುಣವ ಪೆರ್ಚಿಸುತಿಹನು (ಭವ್ಯಾಮ್ಮ. ೧೯). ೩. ಮೂರ್ಖತನ ; ಮಂಕು : ಜಡತೆಯೊಳೆ ಬೆಂದನಲ್ಲಂ . . . ತಕ್ಕ ನೆನಿಸಿದೊಳ್ಳಕ್ಕರಿಗಂ (ಸಮುಪ. ೧೩-೪೧) ; ಮಾಯಾಜಡತೆಯಂ ಬಿಡಿಸಲ್ಕೆ (ಬಸವು. ೩೯-೧೫). ೪. [ಕಾವ್ಯಮೀ] ಸಂಚಾರಿಭಾವಗಳಲ್ಲಿ ಒಂದು ; "ಇಷ್ಟಾನಿಷ್ಟಗಳನ್ನು ನೋಡಿದಾಗ ಕೇಳಿದಾಗ ಉಂಟಾಗುವ ಪರವಶತೆ" (ಭಾರಮೀ. ೩೨೦) ; ಮತಿ ಲಜ್ಜೆ . . . ಜಡತೆ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರೀಭಾವಂಗಳಂ ಪರಿವರ್ಧಿಸಿ (ವಿವೇಕ. ೨೨೭). [ ಸಂ. ಜಡತಾ ]

**ಜಡತ್ವ** (ನಾ). ೧. ನಿಷ್ಕ್ರಿಯತೆ ; ನಿಶ್ಚೇತನತೆ ; ನಿಶ್ಚಲತ್ವ : ಜಡತ್ವವು ಧಾತುಗಳ ವಿಶೇಷಧರ್ಮವೆಂದು ಎಣಿಸುತ್ತಿದ್ದರು (ಮುಂಬಯಿ. ४-೯೨). ೨. ದಡ್ಡತನ ; ಮೂರ್ಖತನ : ಈ ಲೋಕದ ಪ್ರಾಣಿಗಳುಂ . . . ತಪೋದಾನಶೀಲವ್ರತೋಪವಾಸಾದಿಗಳಿನೆಲ್ಲುಂ ತೊಗಲುಮಾಗಿರ್ಪರದು ಜಡತ್ವಂ (ಶಾಂತಿಪು. ೮-೧೨೮); ಧರೆಯಂ ಸುತನುಮಿಟೆಕೆಯ್ದನೀ ದುಷ್ಕೃತಮಂ ಸ್ತ್ರೀತ್ವದ ಜಡತ್ವದಿಂದೊಡರಿಸಿದೆಂ (ಪಂರಾಮಾ. ೭-೧೪). ೩. ಭಾರವಾಗಿರುವಿಕೆ ; ತೂಕವಾಗಿರುವಿಕೆ. [ ಸಂ. ]

**ಜಡದೆಜಿ$^{3}$** (ನಾ). ಒಂದು ಬಗೆಯ ತೆರಿಗೆ : ಕಳುಕುಪಣ ೧ ಹಾ ೧೧ ಜಡದೆಜಿಯ ಭಾಗ ಗದ್ಯಾಣ ೯ ಪಣ ೬ ಕುದುರೆಯ ಸೇಸೆ ಗದ್ಯಾಣ ೨೨ (ಎಕ. V, ಬೇಲೂರು. ೭४-೧೩೮ ; 1261). [ ಜಡ + ತೆಜಿ$^{3}_{3}$ ]

**ಜಡದೇಹ** (ನಾ). ೧. ಭೌತಿಕ ಶರೀರ: ದೇಹ ತಾನಭಿಮನ್ಯುವೋ ದಿಟದೇಹಿ ತಾನಭಿಮನ್ಯುವೋ ಜಡದೇಹ ತಾನಭಿಮನ್ಯುವಲ್ಲದು ಕೆಟ್ಟರೇನಾಯ್ತು (ಕುವ್ಯಾದ್ರೋ. ೭-೨೭). ೨. ಸೋಮಾರಿ ; ಅಲಸಿ: ಮಡೆಯುಂಗುತ್ತಮವಿದ್ಯೆ ಬೆಟ್ಟ ಜಡದೇಹಂಗುಜ್ಜುಗಂ ಬೆಟ್ಟ (ಸೋಮೇಶ. ೮೫).

[ ಜಡ + ದೇಹ ]

**ಜಡದ್ರವ್ಯ** (ನಾ). ತಾನಾಗಿ ಸ್ಫುರಣಗೊಳ್ಳದ ವಸ್ತು; ಅಚೇತನ ವಸ್ತು; ಭೌತವಸ್ತು : ಯಾವ ದ್ರವ್ಯವು ತಾನಾಗಿಯೇ ಸ್ಫುರಿಸುವುದಿಲ್ಲವೋ ಎಂದರೆ ಯಾವ ದ್ರವ್ಯದ ಪ್ರಕಾಶವು ಅನ್ಯಾಧೀನವಾಗಿಯೇ ಇರುವುದೋ ಅಂಥ ದ್ರವ್ಯವು ಜಡದ್ರವ್ಯವೆನಿಸಿಕೊಳ್ಳುವುದು (ತತ್ತ್ವಶು. ४) ; ಅಣ್ವಾತ್ಮಕವಾದ ಜಡದ್ರವ್ಯವೇ ಜಗತ್ತಿನ ಉಪಾದಾನಕಾರಣ (ಶುಕ್ಲಾರ. ೨४ ಪೀಠಿಕೆ).

[ ಜಡ + ದ್ರವ್ಯ ]

**ಜಡಧರ** (ನಾ). ಜಲವನ್ನು ಧರಿಸಿರುವುದು; ಮೋಡ; ಮೇಘ: ಕಡಲ ತೆರೆಗಳ ಬುದ್ಬುದಂಗಳೆ ಜಡಧರಂಗಳೆ ಶಕ್ರಚಾಪವೆ ಸೊಡರೆ ಬೀದಿಯ ಗಾಳಿಯೇ ಮಿಂಚುಗಳೆ ಚಂದ್ರಮನೇ (ಬಸವು. ೩೭-೨೫) ; ನಿಡುಗಳಿಲೆಯ ಮೊನೆಯುರ್ಚಿದ ಜಡಧರಮೆಸೆದುದು (ಶಬಶಂ. ೩-೩೭). [ ಸಂ. ]

**ಜಡಧಿ$^{*}$** (ನಾ). ೧. ಕಡಲು ; ಸಾಗರ ; ಸಮುದ್ರ : ಜಡಧಿವೋಲಿರೆ ಸುರಸೈನ್ಯಂ . . . ಸಾಂಯಾತ್ರಿಕಂಬೊಲಿರ್ದಂ ಶಕ್ರಂ (ಚಂದ್ರಪು. ೧೨-೭४) ; ವಡಬಶಿಖಿಯಲ್ಲಾ ವಿನುತವೇಳ್ ಜಡಧಿಗಳು ಕದಡಿದವು (ಬಸವು. ೫೮-೬೨) ; ಜಡಧಿಯನತ್ಯಣಕಂಗೆಯ್ದಾ ವೂರಿನ ಹೇರಗಳೋರಂತೆಸೆದಿರ್ಕುಂ (ಉದ್ಭದೇ. ೨-೩೧) ; ಜಡಧಿ ಪಡೆದುದೊ ಬಿಲಮಿದಗಣಿತಮೆನಲ್ . . . ವಣ್ಣಿಸುವೆನು (ಜಿಬಪು. ४೭-೩೩). ೨. ಮೂರ್ಖರ ಆಶ್ರಯಸ್ಥಾನ ; ಮೂಢರ ನೆಲೆ: ನಾಗೇಂದ್ರಶಯನಾಲಯವ ಜಡಧಿಯೆನಿಸಿ ನುತನಾಗೇಂದ್ರ ವರದಾಯುಧವ ಪೊಳ್ಳುಗಳೆದು . . . ರಾಜಿಸಿತು ಮೂಜಗದೊಳು (ಜೈಮಿಭಾ. ೨-೧೨). ೧, ೨ : ಆ ಜಡಧಿ ಸಂಗತಿಯಿಂ ಜಡಬುದ್ಧಿ ಬುದ್ದೆಯಂ ತೊಲಗಿಸಿ ತಕ್ಕುಮಲ್ಲದೊಡೆ ನೀನಿನಿತಂ ನುಡಿವೈ ಪಳಾಳಮಂ (ಪಂಪಭಾ. ೯-४४).

[ ಸಂ. ]

**ಜಡಧಿಮುದ್ರಿತ** (ಗು). ಕಡಲಿನಿಂದ ಸುತ್ತುವರಿದ, – ಆವರಿಸಿದ : ಹರಿಶ್ಚಂದ್ರಭೂಭುಜಂ ಜಡಧಿಮುದ್ರಿತ ವಸುಧೆಯೆಲ್ಲವಂ ಪಾಲಿಸುತ್ತಿರ್ದನೇ ವಣ್ಣಿಸುವೆನು (ಹಚಕಾ. ೨-೩೫). [ ಜಡಧಿ + ಮುದ್ರಿತ ]

**ಜಡನೀರು** (ನಾ). ಗಡುಸಂ ನೀರು : ಜಡನೀರೆಂದರೆ ನಮ್ಮ ಶರೀರಕ್ಕೆ ಸಲ್ಲದಂಥ ಪದಾರ್ಥಗಳು ಕೂಡಿದ ನೀರು (ಮುಂಬಯಿ. ೫-೧೫೭).

[ ಜಡ + ನೀರು$_1$ (<ನೀರ್$_1$) ]

**ಜಡಪ** 'ಝಂಡಪ' ನೋ.

**ಜಡಪ್ರಕೃತಿ** (ನಾ). ೧. ಚೈತನ್ಯವಿಲ್ಲದ ಪ್ರಕೃತಿ: ಈ ಪ್ರಕೃತಿಯಲ್ಲಿ ಚೇತನಪ್ರಕೃತಿಯೆಂತಲೂ, ಜಡಪ್ರಕೃತಿಯೆಂತಲೂ ಎರಡು ಪ್ರಕಾರ (ಹಸಾರ. ೧४-೧೮ ತಾತ್ಪರ್ಯ). ೨. ಮಂದಸ್ವಭಾವದವನು ; ಸೋಮಾರಿ. ೧, ೨: ಆ ಮಹಾರ್ಣವಂ . . . ಕಾಳಕೂಟ ಪ್ರಭವಮಾಗಿಯುಂ ಅಮೃತೋದಯಕ್ಷೇತ್ರಮುಂ ಜಡಪ್ರಕೃತಿಯಾಗಿಯುಮುದಾತ್ತಸತ್ತ್ವಮುಂ . . . ಎನಿಸಿದುದು (ಜಗವಿ. ೦-४४ ವ). [ ಜಡ + ಪ್ರಕೃತಿ ]

**ಜಡಪ್ರಪಂಚ** (ನಾ). ಅಚೇತನ ಜಗತ್ತು : ಜಡಪ್ರಪಂಚ ಚೇತನಾತ್ಮಕ ಪ್ರಪಂಚವೆರಡೂ ವಿಶ್ವತತ್ತ್ವದ ಎರಡು ಮುಖಗಳು (ಶುಕ್ಲಾರ. ೩೯ ಪೀಠಿಕೆ).

[ ಜಡ + ಪ್ರಪಂಚ ]

**ಜಡಪ್ರಾಸ** (ನಾ). ನಿಷ್ಪ್ರಯೋಜಕವಾದ ಪ್ರಾಸ; ಅರ್ಥಸ್ವಾರಸ್ಯವಿಲ್ಲದ ಪ್ರಾಸ : ಪೆಱರ್ಗಳಂ ಪಾರದೆ ಜಡಪ್ರಾಸ ಸೇರದ ಸದರ್ಥಕ್ಕೆ ಪೋರದ ಶಬ್ದ ಬಗೆಯಾ ತೋಱದೆ . . . ತಿರ್ದುಗೆ ಕೃಪೆಯೊಳು (ಮಂಗರಾ. ೦-೨).

[ ಜಡ + ಪ್ರಾಸ ]

**ಜಡಬಾಳು** (ನಾ). ಲವಲವಿಕೆಯಿಲ್ಲದ ಬಾಳು ; ಬರಡು ಬಾಳು ; ನಿಸ್ಸಾರವಾದ ಬದುಕು : ನನ್ನ ಜಡಬಾಳಿನ ಅರಣ್ಯದಲ್ಲಿ ದಿಕ್ಕೆಟ್ಟು ಅಲೆಯುತ್ತಿರುವಾಗ ನೀವು ತಂಪಾದ ನೆಳಲಿನಂತೆ, ಸೀನೀರಿನಂತೆ, ಊಟೆಯಂತೆ ದೊರೆತಿದ್ದೀರಿ (ಕುಸುಸಂ. ೯೨).

[ ಜಡ + ಬಾಳು$_2$ (<ಬಾೞ್$_2$) ]

**ಜಡಬುದ್ಧಿ** (ನಾ). ಮಂದವಾದ ಬುದ್ಧಿ ; ಮೊದ್ದುತನ ; ಚುರುಕಿಲ್ಲದ ಬುದ್ಧಿ : ಮಂಜನ ಜಡಬುದ್ಧಿಗೆ ಒಂದೂ ತೋಚಲಿಲ್ಲ (ಪದ್ಮಸ. ೨೬೦).

[ ಜಡ + ಬುದ್ಧಿ ]

**ಜಡಭರತ** (ನಾ). ೧. ಆಲಸಿಕೆಯ ಸ್ವಭಾವದವನು ; ಸೋಮಾರಿ : "ಭಾನಸದವನು ; ಮಂದಮತಿ ; ಜಡಭರತ ; ಹಿಂದಿನ ಕಾಲದವನು" (Slow-Coach. ಇಂಕನಿ). ೨. ಒಬ್ಬ ಋಷಿಯ ಹೆಸರು: ಇರದೆ ಸವತಿಯ ಮಕ್ಕಳಿಗೆ ಜಡಭರತನು ಬಳಿಕವರು ಬುದ್ಧಿಸ್ಫುರಣೆ ಕಾಲಕ್ರಮದಲಹುದೆಂದೋವಿದರು ಬಿಡದೆ (ನಿಭಾಗ. ೫-೬-೧೦). [ ಸಂ. ]

**ಜಡಭರಿತ** (ನಾ). ೧. ನೀರಿನಿಂದ ತುಂಬಿದುದು ; ಜಲದಿಂದ ಕೂಡಿದುದು. ೨. ಬುದ್ಧಿಹೀನ ; ಮಂದಮತಿ. ೧, ೨: ಜಡಭರಿತಂ ನೀರದಮಿದಱೊಡನಿರ್ಪುದಯುಕ್ತಮೆಂದು ತಟಿದಂಗನೆ ತಾಂ ಕಡೆಗೋಗೆ ದಂತಿರೆ ಮುಗಿಲಿಂ ಸಿಡಿದು ಕೆಲಕ್ಕೊಗೆದ ಖೇಚರಿಯೇನೊಪ್ಪಿದಳೋ (ಶಬಶಂ. ೧-४೨) ; ಕಾಲಪುರುಷಂ ಜಡಭರಿತನೆಂಬೆಯ ? ಅಂತದನಾರೊರೆದರ್ ? (ರಾಮಾಶ್ವ. ೨-४). [ ಜಡ + ಭರಿತ ]

**ಜಡಭಾವ** (ನಾ). ಜಡತನ ; ಜಡತ್ವ : ದೇಹಮಧ್ಯದಲ್ಲಿ ಪರವಸ್ತು ಉಂಟೆಂದಡೆ ಹರಿಯದು ನೋಡಾ ಆ ದೇಹದ ಜಡಭಾವ (ಅಖಂಡೇ. ೧೦೯-೫೨).

[ ಜಡ + ಭಾವ$_2$ ]

**ಜಡಭಾವಿ** (ನಾ). ೧. ನೀರಿನಿಂದ ಕೂಡಿದುದು. ೨. ಆಲಸ್ಯವುಳ್ಳುದಂ ; ಮಾಂದ್ಯವುಳ್ಳುದು. ೧, ೨ : ವಯೋಧಿಕನಾಗಿ ತಾರ್ಕ್ಷ್ಯನಲ್ಲತಿ ಜಡಭಾವಿಯಾಗಿ ಕಡಲಲ್ಲು ನಿಜಶ್ರುತಿಶೂನ್ಯನಾಗಿ ಮಾರುತಭುಗುವಲ್ಲು (ಪುಷ್ಪಪು. ೧೩-೩೫). [ ಸಂ. ಜಡಭಾವಿನ್ ]

**ಜಡಮತಿ** (ನಾ). ಮೂರ್ಖತನ ; ತಿಳಿಗೇಡಿತನ. ೨. ಮಂದಬುದ್ಧಿಯುಳ್ಳ ವ್ಯಕ್ತಿ; ಮಂದಮತಿ; ಬುದ್ಧಿಹೀನ: ಫಳದಿಂ ಕಲ್ಪದ್ರುಮಮಂ ಜಳದಿಂ ಜಳನಿಧಿಯನುಕ್ತಿಯಿಂ ಸುರಗುರುವಂ ಬೆಳಗಿಂ ದಿನಪನನರ್ಚಿಪ ಜಡಮತಿಗಳ ತೆಜನನಾಮುಮನುಕರಿಸಿರೆವೇ (ಆದಿಪು. ೧೪-೧೧) ; ಗುಣಹಾನಿಗೆ ಬೆರ್ಚದೆ ಧಾರಿಣಿಯಂ ಪ್ರಣಯದಿನಿಳೇಶನಿತ್ತೊಡಮೇಂ ಲಕ್ಷ್ಮಣನೀಯಲೀಯನೆಂಬುದನೆಣಿಸಳೆ ಜಡಮತಿಗಳಾಗದಿರ್ಪರೆ ಪೆಂಡಿರ್(ಪಂರಾಮಾ. ೬-೧೦೭) ; ಸೊಂದು ನುಡಿವ ಜಡಮತಿಗಳಂ ಕೆಲರ್ ಕೃತಿಮತಿಗಳ್ ಮಾರ್ಕೊಂಡು (ಪುಷ್ಪಪು. ೧೩-೯೧ ವ). [ ಜಡ + ಮತಿ ]

**ಜಡಮೂರ್ತಿ**(ನಾ). ೧.ತಣ್ಣಗಿರುವ ಮೂರ್ತಿ; ಶೀತಲವಾದ ಮೂರ್ತಿ. ೨. ಜಡಸ್ವರೂಪನಾದವನು ; ಸೋಮಾರಿ. ೧, ೨ : ಖರಕಿರಣಂ ತೀವ್ರಂ ಶೀತರೋಚಿ ಜಡಮೂರ್ತಿ ಕಲ್ಪವೃಕ್ಷಂ ಸ್ತಬ್ಧಂ ನಿರತಿಶಯಗುಣಂಗೀ ನೃಪವರಂಗೆ ದೊರೆಯಲ್ಲದಿರ್ಪುದೊಂದಚ್ಚರಿಯೋ (ಶಾಂತಿಪು. ೨-೭೭). [ ಜಡ + ಮೂರ್ತಿ ]

**ಜಡರ** (ನಾ). ರತ್ನದ ದೋಷಗಳಲ್ಲಿ ಒಂದು (?) : ಕರ್ಕರೆಂಬುದು ಮೊರಬಿನಂತೆ ಧರಿಸಲು ಪಾಪಮಕ್ಕರಿನ ಜಡರಮೆಂಬುದು ಕಾಂತಿ ಮಸಗಿಹುದು ದುಃಖಮಂ ತೋರಿಪುದು ಶಲಭವೆಂಬುದು ಮತ್ತ ಹಲವು ಹರಿಬಣ್ಣಮಿಹುದು . . . ದೋಷಗಳೇಳನುಳಿದು (ರತ್ನಶಾ. ೧೮-೪). [?]

**ಜಡರಾಶಿ** (ನಾ). ೧. ಬುದ್ಧಿಗೇಡಿತನದ ಗುಂಪು; ದಡ್ಡತನದ ಸಮೂಹ: ಚೆಲುವೆಯು ಮೊಗದೊಳು ಮಿದುನಗೆ ಮೊಳೆದುದು . . . ಬೆರಗಾಗದು ಜಲರಾಶಿ ಜಡರಾಶಿಯಲ್ತೆ (ಇಂಚಾಪ. ೧೬೮-೩೦). ೨. ನೀರಿನ ಸಂಚಯ; ಸಮುದ್ರ. 'ಜಡರಾಶೀಂದ್ರ' ಪರಾ. [ ಜಡ + ರಾಶಿ ]

**ಜಡರಾಶೀಂದ್ರ** (ನಾ). ಸಮುದ್ರರಾಜ ; ವರುಣ : ಕಟ್ಟುವೆಂ ಜಡರಾಶೀಂದ್ರನನೆಯ್ದುವೆಂ ಪವನನಂ ಸರ್ವಸ್ವಮಂ ಕೊಂಡು ಕೂಡಿಪೆಂ ವಿತ್ತಪನಂ (ಜಗವಿ. ೩-೨೦). [ ಜಡರಾಶಿ + ಇಂದ್ರ ]

**ಜಡರು** (ನಾ). ಜಡತೆ ; ಆಲಸ್ಯ ; ಸೋಮಾರಿತನ : ವೇದಾಂತದೊಳ್ ಪ್ರಕಾಶಮಾನವಾದ ನಿಜಸ್ವರೂಪಮಂ ತಿಳಿಪಿ ಎನ್ನ ಮನದ ಜಡರಂ ಕಳೆದು ನಿನ್ನಡಿಯೊಳ್ ಜ್ಞಾನ ಭಕ್ತಿಗಳಂ ಬಲಿಯಿಪುದು (ಚಿಕವಿ. ೧೪-೧೫). [ <ಸಂ. ಜಡ ]

**ಜಡಲ** (ನಾ). ಒಂದು ಸ್ಥಳದ ಹೆಸರು : ಜಡಲ ಎರೆಯಜ್ಜನ್ ಗಾವುಣ್ಡನ ಮಗಂಗೆ (ಎಕ. I, ೯೭-೪; 890). [ ? ]

**ಜಡಲಿಂಗಿ** (ನಾ). ಅಜ್ಞಾನಿಯಾದ ಲಿಂಗಧಾರಕ : ತಿಳಿದರೆ ಪ್ರಾಣಲಿಂಗಿ ತಿಳಿಯದಿದ್ದರೆ ಜಡಲಿಂಗಿಗಳೆಂದನಯ್ಯ ನಿಮ್ಮ ಶರಣ (ವಚಸಂ. ೩೯೭-೨೫). [ ಸಂ. ಜಡಲಿಂಗಿನ್ ]

**ಜಡವಸ್ತು** (ನಾ). ಚೈತನ್ಯರಹಿತವಾದ ವಸ್ತು : ಪರಮಾತ್ಮನಿಗೂ ಜಡವಸ್ತುಗಳಿಗೂ ಪರಸ್ಪರವಾಗಿ ಭೇದವೈಲಕ್ಷಣ್ಯಗಳಿವೆ (ಶಕ್ತಿವಿ. ೧೭). [ ಜಡ + ವಸ್ತು ]

**ಜಡವಾದ** (ನಾ). ಪಂಚಭೂತವಸ್ತುಗಳಿಂದ ಪ್ರಪಂಚದ ಸೃಷ್ಟಿಯಾಗಿದೆ ಎಂಬ ವಾದ ; ನಿರೀಶ್ವರವಾದ ; ನಾಸ್ತಿಕವಾದ : ಮಾಂಸನಯನಾವಿಷಯಮೆಲ್ಲಮಪ್ರತ್ಯಕ್ಷಮೆಂಬೀ ಜಡವಾದಮಂ ಕಂಡು (ಶಾಂತಿಪು. ೮-೧೪೧ ವ). [ ಜಡ + ವಾದ$_3$ ]

**ಜಡವಾದಿ** (ನಾ). ೧. ನಿರೀಶ್ವರ ಸಿದ್ಧಾಂತವನ್ನು ಎತ್ತಿ ಹಿಡಿಯುವವನು: ನೀನೆಮಗೆ ತಾಯೆಂದು ಚೀರುತಿಹರಲ್ಲ! ನೀ ದಾಸಿ ಎಂಬುದನು ಜಡವಾದಿ ಬಲ್ಲ (ಪಾಂಚಜ. ೨೬-೭). ೨. ಜಗತ್ತಿಗೆ ನೀರೇ ಮೂಲವೆಂದು ವಾದ ಮಾಡುವವನು : ಧರೆಯಧಿಕವೆಂದನವನ ಮುಱಿದ ಬಳಿಕಪ್ಪುವುರುತರ ದೈವವೆಂಬ ಜಡವಾದಿ ಗೌತಮನ ಕೂಡರರೆ ನುಡಿದಂ (ವೀಶೈಪು. ೪-೩-೨೫). [ ಸಂ. ಜಡವಾದಿನ್ ]

**ಜಡವಿಕೃತಿ** (ನಾ). ೧. ನೀರಿನ ವಿಕಾರ ; ನೀರಿನ ಇನ್ನೊಂದು ರೂಪ. ೨. ಮೂರ್ಖತನದ ವಿಕಾರ. ೧, ೨ : ಘನಭಂಗಂ ಗಾಂಗತೋಯಂ ಜಡವಿಕೃತಿಮಯಂ ಮೌಕ್ತಿಕಂ ದಕ್ಷಿಣಾವರ್ತನಯುಕ್ತಂ ಪಾಂಚಜನ್ಯಂ (ಚಂದ್ರಪು. ೧೩-೧೭). [ ಜಡ + ವಿಕೃತಿ ]

**ಜಡವೃತ್ತಿ** (ನಾ). ೧. ನೀರಿನಿಂದ ಕೂಡಿರುವಿಕೆ. ೨. ಮಾಂದ್ಯ; ಆಲಸ್ಯ. ೧, ೨ : ಉಪಚಿತ ಜಡವೃತ್ತಿಯನೆಯ್ದೆ ಪೋಲ್ತುದಭ್ರಾಗಮಂ ಸಗರ್ಭಾಂಗನೆಯಂ (ಚಂದ್ರಪು. ೪-೪೩). [ ಜಡ + ವೃತ್ತಿ$_2$ ]

**ಜಡವೆಣ್** (ನಾ). ರಸಿಕಳಲ್ಲದ ಹೆಣ್ಣು ; ನೀರಸಳಾದವಳು: ನಾಣಳಿದೆನು . . . ಜಾಣೋಡಿದತಿಜಡವೆಂಗಳ ನಾಣೆಯದೊಳಗಾದೆ(ಸೊಬಸೊ. ೨೫-೨೨); ಕಡೆಗಣ್ಣನೋಟದಿಂ ಕಾವನ ಕಣೆಗಳ . . . ನೀಱೆಯರ ಗಡಣವಲ್ಲದೆ ನೋಡೆ ಜಡವೆಣ್ಗಳಾ ನಾಡೆಡೆಯೊಳಿಲ್ಲ (ಕುರಾಸಾಂ. ೨-೬೩). [ಜಡ + ಪೆಣ್]

**ಜಡವೇಷ** (ನಾ). ಭೌತಿಕವಾದ ವೇಷ ; ಶರೀರ : ಭಾವಪರಿವೇಷಮಂ ಪಡೆದು, ಜಡವೇಷಮಂ ಹಿಂಗಿದಾವೇಶದಿಂ (ಶ್ರೀರಾಮಾ. ೧೪೫-೯೧). [ ಜಡ + ವೇಷ ]

**ಜಡಸಂಗ** (ನಾ). ೧. ನೀರಿನ ಸಂಪರ್ಕ. ೨. ಮೂರ್ಖರ ಸಹವಾಸ. ೧, ೨: ಜಡಸಂಗಮುಂ ಪುದಿದ ಕಂಟಕಮುಂ ರಜಮುಣ್ಮೆ ತೋರ್ಪುದುಂ ಪರಿಕಿಪೊಡಿಲ್ಲನಿಪ್ಪೆಸಕಮೇದೊರೆಯೆಂದೆನಿಸಿತ್ತೊ ಪದ್ಮನಾ (ಪುಷ್ಪಪು. ೩-೩). [ ಜಡ + ಸಂಗ$_2$ ]

**ಜಡಸಂಸಕ್ತಿ**(ನಾ). ೧. ಮೂಢರ ಒಡನಾಟ; ಮಂದಮತಿಗಳ ಸಂಪರ್ಕ. ೨. ಆಲಸಿಕೆಯಿಂದ ಕೂಡುವಿಕೆ. ೩. ನೀರಡಿಕೆ; ಬಾಯಾರಿಕೆ. ೧, ೨, ೩: ಭಕ್ತದ್ವೇಷಂ ಜಡಸಂಸಕ್ತಿ ಸದಾಚರಿತಲಂಘನಂ ವಿಕಲವಚೋಯುಕ್ತಿ ಕಟುಮುಖತೆ ಕುಂದದಮುಕ್ತಜ್ವರನಂದದಿಂದಮುರಸರೊಳೆಂದುಂ (ಚಂದ್ರಪು. ೧೦-೧೧೮). [ ಜಡ + ಸಂಸಕ್ತಿ ]

**ಜಡಸ್ಥಲ** (ನಾ). ೧. ನೀರಿನ ಸ್ಥಾನ ; ಜಲಾಶಯ. ೨. ಮೂರ್ಖರ ನೆಲೆ. ೧, ೨: ಎನಗೆ ಕುಮುದಾಪ್ತನೆಣೆಯೆ ಎಂದು ಕರಮೆ ಬಕನಿಂದುವಂ ಜಱಿವವೋಲ್ ಜಡಸ್ಥಲದೊಳರರೆ ಅಜ್ಞರ್ ಕಲಾನಿಧಿಗಳಂ ಜಱೆವರ್ ದುರಭಿಮಾನವೇಗೆಯ್ಯದೋ (ಪದ್ಮರಾ. ೧-೩೫). [ ಜಡ + ಸ್ಥಲ ]

**ಜಡಸ್ಥಿತಿ** (ನಾ). ೧. ನೀರಿನಲ್ಲಿರುವಿಕೆ. ೨. ಜಡಸ್ವಭಾವ ; ಸೋಮಾರಿತನ. ೧, ೨ : ದಂಡಭ್ರಮಂ ಕುಲಾಲಚಕ್ರದೊಳ್ ಜಡಸ್ಥಿತಿ ನಕ್ರದೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಚಂದ್ರಪು. ೩-೯ ವ). [ ಜಡ + ಸ್ಥಿತಿ ]

**ಜಡಹೃದಯ** (ನಾ). ಮಂದಬುದ್ಧಿಯುಳ್ಳವನು ; ಮೂರ್ಖತನವುಳ್ಳವನು : ಜಡಹೃದಯರನಾಶ್ರಯಿಸಿದೊಡೆ ಮೂಳೋಚ್ಛಿತ್ತಿಯಪ್ಪುದು (ಪಾರ್ಶ್ವಪು. ೮-೧೮) . [ ಜಡ + ಹೃದಯ ]

**ಜಡಾಕರ**(ನಾ). ೧. ನೀರಿಗೆ ಆಕಾರವಾದುದು; ಸಮುದ್ರ. ೨. ಜಾಡ್ಯಕ್ಕೆ ಆಗರ ; ರೋಗದ ಆಶ್ರಯ. ೧, ೨ : ಅಂಗೀಕೃತ ಕುಟಜಶೋಭಾಪ್ರಭಾವಮಾಗಿಯುಂ ಸಂಶೋಷಿತ ಜಡಾಕರಮಲ್ತು (ಚಂದ್ರಪು. ೪-೪೩ ವ). [ ಜಡ + ಆಕರ$_3$ ]

**ಜಡಾಕರತ್ವ** (ನಾ). ೧. ನೀರಿಗೆ ಆವಾಸಸ್ಥಾನವಾಗಿರುವಿಕೆ; ಸಮುದ್ರವಾಗಿರುವಿಕೆ ೨. ಮೂಢರಿಗೆ ಆಶ್ರಯವಾಗಿರುವಿಕೆ. ೧, ೨ : ವಿಶಿಷ್ಟಪಕ್ಷ ಭೂಭೃನ್ನಿಕರಮಾಗಿಯುಂ ಜಡಾಕರತ್ವೋಪೇತಮಲ್ತು (ಚಂದ್ರಪು. ೧-೧೩೭) . [ ಸಂ. ]

**ಜಡಾತ್ಮ**(ನಾ). ೧. = ಜಡಹೃದಯ : ಭಾವರಸಬಂಧುರಂ ಕವಿತಾವಿಷಯ ಮಕರ್ಣಹೃದಯನಪ್ಪ ಜಡಾತ್ಮಂಗೇವುದೊ ರತಿಯಿನಿದಂ ಕಿವಿಗೀವುದೆ ಬಧಿರಂಗೆ ಸೌಂದರೀಸೀತ್ಕಾರಂ(ಮಲ್ಲಿಪು. ೧-೩೬). ೨. ಅಲಸಿ; ಸೋಮಾರಿ: ಜಾಳ ಜಱಿದು ಜಡಾತ್ಮರಿಗೆ ಜಂಘಾಳತನವನು ಮೆಱೆದು ಖೋಡಿಯ ಖೂಳರನು ಖೊಪ್ಪರಿಸಿ (ಕುವ್ಯಾಕ. ೧೭-೨೧). [ ಸಂ. ಜಡಾತ ನ್

**ಜಡಾನ್ನ** (ನಾ). ಬಿರುಸಾದ ಆಹಾರ; ಅರಗಿಸಲು ಕಠಿನವಾದ ಆಹಾರ: ಅಶಕ್ತಮನುಷ್ಯರಿಗೆ ಬೇಳೆಯು ತಾಳುವುದಿಲ್ಲ, ಹೊಟ್ಟೆ ಉಬ್ಬುತ್ತದೆ, ಆದರಿಂದ ಬೇಳೆಯು ಜಡಾನ್ನವೆಂದನಿಸುತ್ತದೆ (ಮುಂಬಯಿ. ೫-೧೬೬).
[ ಜಡ + ಅನ್ನ$_3$ ]

**ಜಡಾಯಿಸು** (ಕ್ರಿ). ೧. ಒತ್ತಿ ತುಂಬು ; ಗಿಡಿ ; ಬಲವಾಗಿ ತುರುಕು ; (ಮೊಳೆಯಂತೆ ಬಡಿದು) ನೆಡು. ೨. ಬಾಗಿಲಿಗೆ ತಾಳು ಹಾಕಿ ಭದ್ರಪಡಿಸು ; ಬಲವಾಗಿ ಅಗಳಿ ಹಾಕಿ ಬಾಗಿಲನ್ನು ಭದ್ರಪಡಿಸು.
[ ಜಡ$_0$(P ← ಹಿಂ. ಜಡನಾ) + – ಇಸು$_3$ ]

**ಜಡಾವಸಥ** (ನಾ). ೧. ನೀರಿನ ಆಶ್ರಯವುಳ್ಳುದು. ೨. ಮೂರ್ಖರಿಗೆ ಆಶ್ರಯವಾದುದು. ೧, ೨ : ಕೆಸಱೊಳ್ ಪುಟ್ಟಿದುದಂತುಮಲ್ಲದೆ ರಜಸ್ಸಂಲೀಢಮೆಂತುಂ ಜಡಾವಸಥಂ ಚಿಃ ಮಧುಪಪ್ರಸಂಗಿ ಖರದಂಡಂ ಮತ್ತನುತ್ತಬ್ಜಮಂ ಬಿಸುಟು (ಜಗವಿ. ೧-೬). [ ಜಡ + ಆವಸಥ ]

**ಜಡಾವಸ್ಥೆ** (ನಾ). ನಿಶ್ಚೇಷ್ಟಾವಸ್ಥೆ ; ಚೇತನಾರಹಿತವಾದ ಸ್ಥಿತಿ : ಶಕ್ತಿಯು ವಿಶ್ವದಲ್ಲಿ ಎಲ್ಲೆಲ್ಲು ಸಮನಾಗಿ ಹಂಚಿಬಿದ್ದಾಗ ಹೀಗೆ ಬಳಕೆಗೆ ಸಿಗದಿರುವುದು. ಹಾಗೆ ಬಳಕೆಗೆ ಸಿಗದಂತೆ ಶಕ್ತಿಯಿದ್ದರೆ, ಆಗ ಜೀವವೆಂಬುದು ಬದುಕಲಾರದು. ಈ ಸ್ಥಿತಿಯನ್ನು ಜಡಾವಸ್ಥೆ (Atrophy) ಎಂದು ಕರೆಯುತ್ತಾರೆ (ಬಾಲಪ್ರ. III, ೧೩೬೭).
[ ಜಡ + ಅವಸ್ಥೆ ]

**ಜಡಾಶಯ** (ನಾ). ೧. ನೀರಿಗೆ ಆಶ್ರಯಸ್ಥಾನ : ಮದಮದಿರಾಪ್ರಮತ್ತ ಜನತಾಶಯದಂತೆ ಜಡಾಶಯಂ ಕಲಂಕಿದುದು (ಪಂರಾಮಾ. ೭-೧೫೩). ೨. ಮೂರ್ಖರ ನೆಲೆ : ತಿಳಿಯ ಜಡಾಶಯಮೆಸಕಕ್ಕಳವಡೆ ಮಾರ್ಗಂ ದಿಗಂಬರಶ್ರೀ ತನ್ನೊಳ್ ಬೆಳಗೆ . . . ಊರ್ಜದಂದದಿನಾದಂ (ಚಂದ್ರಪು. ೯-೪೩). ೧, ೨ : ಮಿಱುತಮಿರ್ದುದು ಮೇರೆಯನಂದತಿಶಯದೆ ಜಡಾಶಯಂ ಜಡಾಶಯನನ್ನಂ (ಬಾಧಪು. ೧೨-೪೯). [ ಜಡ + ಆಶಯ ]

**ಜಡಾಶ್ರಯ** (ನಾ).= ಜಡಾಶಯ ೧, ೨ : ಅವ್ಯವಸ್ಥೆ ಜಡಾಶ್ರಯದೊಳ್ . . . ಪಙ್ಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ). [ ಜಡ + ಆಶ್ರಯ ]

**ಜಡಿ$_1$, ಝಡಿ$_1$** (ಕ್ರಿ). ೧. ಗದರಿಸು; ಬೆದರಿಸು : "ಜಡಿ–ತರ್ಜನೇ (ಹೆದಱಿಸು), ಅಲ್ಪವೃಷ್ಟೌ ಚ" (ಶಮಧಾ); ವಾಯುಭೂತಿಯುಂ ಮುಳಿದು ಬಯ್ದು ಜಡಿದು ಕಾಲಿಂದಂ ತಲೆಯನೊದೆದು (ವಡ್ಡಾರಾ. ೮-೧೬) : ಪಾಂಚಾಳಿಯುಂ ಕಣ್ಗಿಡೆ ಜಡಿದು ಮುಡಿಯಂ ಪಿಡಿದು (ಪಂಪಭಾ. ೭-೪ ವ); ಜಡಿವ ರವಂಗಳಿಂ ಸೆಳೆದ ಕೈದುಗಳಿಂ . . . ಮಹಾಧ್ವನಿಯ ಕೋಂಬುಗಳಿಂ ಭಯಮಂ ನೆಗಟ್ಟುತಿರ್ದೆಡೆಯೊಳೆ ಮುಂದೆ ಸಂದಣಿಸಿದರ್ ಪುರರಕ್ಷಕರ್ (ದಶಕು. ೮-೧೧೨) : ನಾದಿಪ ವಾದ್ಯವ ನಿಲಿಸಿ ತನ್ನಯ ಬಿರುದೋದುವ ಭಟ್ಟರ ಜಡಿದು (ಕಂನವಿ. ೧೫-೧೨೫). ೨. ಕೂಗು ; ಧ್ವನಿಮಾಡಂ : ಪೋಪುಗಿಲ್ಪುಗಿಲೆನುತೆ ಕರಂ ಕಾಪುಗೊಂಡು ಜಡಿವುದು ಪಿಕನಿಕರಂ (ಸುಕುಮಾ. ೧೦-೫೫) ; ಕೇಗುವ ಪಿಕಂ ಜಡಿವಂಚೆ (ಪುಷ್ಪಪು. ೧೪-೨೩) ; ಹೊಳೆವ ಸಿಂಧದ ಜಡಿವ ಕಹಳಾವಳಿಯ ಲಗ್ಗೆಯ ವಿವಿಧವಾದ್ಯದ (ಕುವ್ಯಾದ್ರೋ. ೬-೨). ಝಡಿ$_1$ : ೧. ಒಡೆಯನಾಗಿಹ ಸುರಥಭೂಪನ ಝಡಿದು ಪಟ್ಟಣದಿಂದ ಹೋಗೆಂದ (ದೇವೀಮ. ೧-೨೬). ೪. ಝಡಿವ ಹೊಂಗಂಟೆಯ (ಕುವ್ಯಾಭೀ. ೪-೬೨). [ ದೇ.II ತೆಲು. ಜಡಿ, ಸಡಿ ]

**ಜಡಿ$_2$, ಝಂಡಿ$_2$** (ಕ್ರಿ). ೧. ಹೊಡೆ ; ಬಡಿ ; ಕುಟ್ಟು : ಧರೆಯಂ ರಕ್ಷಿಸಿ ದುಷ್ಟರಂ ಜಡಿದು ಸದ್ಧರ್ಮಮಂ ಕಾಯ್ದು (ಧರ್ಮಾಮೃ. ೨-೮೪) ; ಸದೆದಸು ಬಱಸಿಡಿಲು ಜಡಿವಂತೆ (ಕುವ್ಯಾದ್ರೋ. ೧೮-೩೩) ; ಜಡಿವ ಕಲ್ಗುಂಡು ಧೂಳಿಡುವ ಬಿಱುಗಾಳಿ ಕಂಗೆಡಿಪ ಕತ್ತಲೆ ಮೇಲೆ ಕೆಡೆವ ಗಿರಿತರುಗಳಿಂದಂ ಜಡಿಯದೆಳಗಾಳಿಯೆಳೆಗಾಳಿಯಿಲ್ಲದಿಹ ಬನವಿಲ್ಲವಾ ನಾಡೊಳು (ಚಬಪು. ೧೧-೫); ಮುತ್ತಿನಿಂ ಜಡಿವ ಪಲ್ಲಕ್ಕಿಯೊಳು ಬಾಣಾಸುರೋತ್ತಮನ . . . ಕುಳ್ಳಿರಿಸಿ (ನವಮೋ. ೩೪-೨೪) ; ಇಲಿಬಿಲಕ್ಕೆ ಕಲ್ಲನ್ನು ಜಡಿ (ರೂಢಿ). ೩. ಕೂಡಿಸು ; ಸೇರಿಸು ; ಕಲಸು : ಮೊಸರೊಳಗೆಯುಪ್ಪ . . . ಕೊತ್ತುಂಬರಿಯನಿಕ್ಕಿ ಜಡಿದುಕೊಂಡು (ಸೂಪಶಾ. ೫-೯). ೪. ವ್ಯಾಪಿಸು ; ಹರಡು : ನುಡಿ ಮೃದುವಾಗೆ ಮುಡಿ ಜಡಿದು ಬೆನ್ನ ಮೇಲೊಲೆಯಲ್ (ಸೋಮಚ. ೧-೭೨) ; ಮೂದಲೆ ಗಾಳಿಯಾಲಿ ದಳ್ಳಿಸುವ ಶೌರ್ಯಜ್ವಾಲೆ ಜಡಿದುದು (ಕುವ್ಯಾಕ. ೫-೮೨). ೫. ಝಳಪಿಸು ; ಬೀಸು : ಕರಿಘಟೆಯಿರ್ಕೆಲಂಬಿಡಿದು ಕತ್ತಿಗೆಯಂ ಜಡಿಯುತ್ತುಮಂಗರಕ್ಕರ ಪಡೆ ತಾಗೆ (ಪಂರಾಮಾ. ೧೩-೭೮); ನಂದಿಕೇಶನೊಪ್ಪುವ ಹಾಸ್ಯಮುಖನಾಗಿ ವೇತ್ರಮಂ ಜಡಿಯುತಾ (ಪದ್ಮರಾ. ೧೧-೧೮೫) : ಜಡಿವ ಬತ್ತೀಸಾಯುಧಗಳ ಸುಭಟರ ಬೆಡಗಿನ ನಿಕರವೊಪ್ಪಿಹವು (ಕಂನವಿ. ೬-೫೯). ೬. ಸ್ರವಿಸಂ ; ಸುರಿ : ಘುಡುಘುಡಿಸಿ ಮಾಗಧಿಯ ಮಗನಲಿ ಜಡಿದವಿಳಗ [ಪಾಠಾಂ. ಜಡಿದು ಸುರಿವ]ಶ್ರುಗಳು (ತೊರರಾ. ೫-೯-೨೫). ೭. ಅಲ್ಲಾಡು ; ನಡುಗು : ಕಂಪಿಸು : ಕೈನಡುಗೆ ಪುರ್ಬಲುಗೆ ವಿಸುಪಧರ ಜಡಿಯೆ (ಹಚಕಾ. ೨-೩೩); ಮೊಱೆವ ಭೇರಿಯ ಘುಳುಘುಳುಧ್ವನಿ ಕೂಡೆ ಜಡಿದುದು ಕಮಲಜಾಂಡಘಟ (ಕುವ್ಯಾದ್ರೋ. ೫-೪೦) ; ಕದುರಭಸಕೆ ಬ್ರಹ್ಮಾಂಡ ಒಡೆಯಲು ಚೌದೆಸೆ ಜಡಿಯಲು (ಕಂನವಿ. ೧೪-೧) ; ಜಡಿವ ಮಣಿಕುಂಡಲದ . . . ಗಣೇಶನಂ ಕಂಡ (ಶಂಕದಾ. ೧೦-೭೩). ೮. ಎಳೆ ; ಸೆಳೆ ; ಬಲಾತ್ಕರಿಸು : ನಾಣ್ಚಿ ಪೋಗಲೆಂದಟ್ಟ ಕನ್ನೆಯಂ ಚೂತಲತಿಕೆಯೆಂಬ ಕೆಳದಿ ಜಡಿದು ಕುಳ್ಳಿರಿಸಿ (ಪಂಪಭಾ. ೫-೧೭ ವ) ; ನೃಪನ ಮುಡುಹ ಪಿಡಿದು ಜಡಿದುಯ್ಯಲಾಡುವರಾಗಿ ಮುಡುಹಿಷ್ಟು ಕಠಿಣವಾಗಿಹುದು(ಭರಚ. ೬-೫೬). ೯. ಭಾರದಿಂದ ಕೆಳಕ್ಕೆ ಜೋಲು ; ಕುಗ್ಗು : ತಿಳಿಗೊಳನ ತಡಿವಿಡಿದಡಸಿ ಫಳಭರದಿ ಜಡಿದೊಱಗುತಿರ್ಪ ನಾನಾಮರಂಗಳಂ (ಹಚಕಾ. ೩-೫೨) ; ತೊಡರ ಝಣರಝಣರವದ ಹೆಗಲಲಿ ಜಡಿವ ಹಿರಿಯುಬ್ಬಣದ ಹೆಚ್ಚಿದ ಮುಡುಹುಗಳ(ಕುವ್ಯಾದ್ರೋ. ೧-೧೪). ೧೦. ಅಲುಗಾಡಿಸು; ಅಲ್ಲಾಡಿಸು: ಅಡಿಗಡಿಗೆ ಎನ್ನ ಮನವ ಜಡಿದು ನೋಡದಿರಯ್ಯ (ಬಸವ. ૩૨૩). ೧೧. ಬಿಗಿಮಾಡು ; ಭದ್ರಪಡಿಸು : ನೀನು ಬಾಯಿಗೆ ಬೀಗ ಜಡಿದಂತೆ ಮೌನವಾಗಿ ಕುಳಿತಿರುವೆಯಲ್ಲ (ಹಾಹುತ್ತ. ೨). ೧೨. ಹೊರಿಸು; ಹೇರು: ನಾನು ಅವನಿಗೆ ಕೊಟ್ಟ ಸಾಲ ಏನು, ಬಡ್ಡಿ ಹೇಗೆ ಜಡಿದಿರಬೇಕು ? (ಗಾಳಿಪ. ೧೮೭). ೧೩. ರತಿಕ್ರೀಡೆಮಾಡು ; ಸಂಭೋಗಿಸು. ೧೪. (ಆಲಂ) ತಿನ್ನು ; ಕಬಳಿಸು : ದಿನಾಲು ಒಂದು ಸೇರು ಮಾಂಸದವರೆಗೆ . . . ಜಡಿಯುತ್ತಿದ್ದರು (ಜೀವಪ್ರ. ೨೫). ಝಡಿ$_2$ : ೧. ಸಮಸ್ತ ನಖಸಂದಿಗಳಲ್ಲಿ ಮೊಳೆಗಳಂ ಝಡಿಸಿಕೊಂಡು (ಶೀಪಧ. ೧೭-೧೪). ೫. ಝಡಿವ ದೂಹತ್ತಿಗಳ ಹಾಯಿಕಿ ಹಿಡಿವ ಲೌಡಿಯ (ಕುವ್ಯಾಭೀ. ೪-೫೫) ; ಝಡಿದನು ಚಂದ್ರಹಾಸವ (ತೊರರಾ. ೬-೨-೪೫) ; ಕರಿಯಭಂಟ ತನ್ನ ಖಡ್ಗವ ಝಡಿದಂ (ಕರಿಕ. ೧೦-೧).

ಜಡಿದಿಡು = ನಾಶಗೊಳಿಸು ; ಹಾಳುಮಾಡು : ಕಲ್ಪವಲ್ಲಿಗಳ ಜಡಿದಿಟ್ಟು ಮುನಿಗಳ ತಪವನಳಿದು ಕಣ್ಗೆಡಿಸಿದರು (ಕಂನವಿ. ೪-೧೪).
[ ದೇ.II ತುಳು. ಜಡಿ ; ತೆಲು. ಜಡಿಯು ]

**ಜಡಿ$_3$** (ನಾ). ಬೆದರಿಕೆ ; ಗದರಿಕೆ. 'ಜಡಿಕೆಯ' ಪರಾ. [ <ಜಡಿ$_1$ ]

**ಜಡಿ$_4$, ಝಡಿ$_3$** (ನಾ). ಹೊಡೆಯುವಿಕೆ ; ಹೊಡೆತ : (ಕ). ಝಡಿ$_3$ : ಕಡುಗಲಿಗಳೇಱಾಟದಲಿ ಮಿಗೆ ಝಡಿ ಪವಾಡ ದೃಢಾಯತಿಕೆಗಿದು ಪಡಿಯ ನಳರೇವಂತರೆಂದುದು ರಾವುತಿಕೆಗಳಲಿ (ಕುವ್ಯಾಆ. ೭-೨). [ <ಜಡಿ$_2$ ]

**ಜಡಿ$_5$, ಚಡಿ$_1$** (ನಾ). ೧. ಎಡೆಬಿಡದಿರುವ ಹನಿಯ ಮಳೆ; ಸೋನೆಮಳೆ : "ಜಡಿ–ತರ್ಜನೇ (ಹೆದಱಿಸು), ಅಲ್ಪವೃಷ್ಟೌ ಚ" (ಶಮಧಾ) ;

ಬಡಹಂ ಕೈಕೊಂಡಾಗಳು ಜಡಿ ಮಾಣದೆ ಸುರಿಯೆ ನಾಂದು (ಪುಣ್ಯಾಸ್ರ. ೬-೫೫); ಜಡಿಯೆಂಬ ನುಡಿ ಮೇಘದುತ್ಪಾತ ವರ್ಷದೊಳು (ಪ್ರಭುಪು. ೩-೧೦). ೨. ಮೋಡ ಮಂಸುಕಿರುವುದುಂ : ಎಡೆಬಿಡದೆ ಮುಸುಕಿರ್ದ ಮೇಘಮಂ ಜಡಿಯೆಂಬರ್ (ಜೈಮಿಭಾ. ೨-೯). **ಚಡಿ$_1$ :** ೧. ಚಡಿಗೆ ಕಡುಸುಗಿದು ತಾಂ ಪೊಣಮಡದೆ (ರಾಮಾಶ್ವ. ೩-೨೯).

**ಜಡಿಕೆಯ್** (ಕ್ರಿ). ಬೆದರಿಸು ; ಗದರಿಸು ; ಬೆದರಿಕೆ ಹಾಕಂ : ಅಂಗನೆಯರನು ಪಡಿಯಜಿತಿಯರು ಸಂಗೊಳಿಸಿ ಜಡಿಕೆಯಿದು ನಿಲಿಸಿದರಿಂಗೊರಳ ನುಣ್ಚರದಿ ಹೋ ಹೋ ಗಲಭೆ ಬೇಡೆಂದು (ಸಾಳ್ವಭಾ. ೩೨-೨೭).

[ ಜಡಿ$_3$ + ಕೆಯ್$_1$ ]

**ಜಡಿಗೊರಡು** (ನಾ). ಕುಟ್ಟುವ ಕೊರಡಂ; (ಯುದ್ಧದಲ್ಲಿ ಉಪಯೋಗಿಸುವ) ಮರದ ದಿಮ್ಮಿ : ಅಷ್ಟದ್ವಾರದ ಬಾಗಿಲ್ಗಳ ರಚನೆಯು ಎಷ್ಟೇ ಆನೆಗಳನ್ನಾದರೂ ಎಂತಹ ಹಾರೆ ಜಡಿಗೊರಡುಗಳನ್ನಾದರೂ ವ್ಯರ್ಥಮಾಡಿಬಿಡುವುದು (ಸುಗುಗಂ. ೮೪-೬).

[ ಜಡಿ$_4$ + ಕೊರಡು$_1$(<ಕೊಱಂಡು) ]

**ಜಡಿತ, ಝಡಿತ** (ನಾ). ೧. ಹೊಡೆತ ; ಬಡಿತ : ಕಳ್ಳನಿಗೆ ನಾಲ್ಕು ಜಡಿತ ಜಡಿದ ನಂತರ ಬಾಯಿಬಿಟ್ಟ (ರೂಢಿ). ೨. ಹೊಂದಿಕೊಂಡ ವ್ಯಕ್ತಿ : ಸುರಬಾಲೆಯಾದರೂ ನನ್ನ ಜೀವನದ ಜೊತೆಗೆ ಎಂದಾದರೂ ಜಡಿತಳಾಗಿದ್ದಳು ಎಂಬ ಮಾತೇ . . . ಉದಯಿಸಲಿಲ್ಲ (ಇಪ್ಪಕ. ೧೧). ೩. ಕೆಂಂದಣಿಸಿದುದಂ; ಖಚಿತವಾದುದು: ರತ್ನಜಡಿತ ಪೋಹಚೆಯನ್ನು ಕೊಟ್ಟು ಅವರನ್ನು ಹಾದಿಗೆ ಹಚ್ಚಿದೆನು (ಮಂಜುಳ. ೧೧೩) ; ಮೂಳೆಮೂಳೆಯಲ್ಲಿಯೂ ಜಡಿತವಾಗಿ ನಾಟಿತು (ದೇವೀಜಾ. ೧೨೯). **ಝಡಿತ :** ೩. ಕಡಗ ಕಂಕಣಮಣಿದೋರೆ ದೋಷವಿದೂರೆ ಝಡಿತದುಂಗುರಶೃಂಗಾರೆ (ವಿದಾಶ್ವ. ೭೦-೩).

[ ಜಡಿ$_2$ + – ತ$_2$ ]

**ಜಡಿತರ್** (ಕ್ರಿ). ಜಡಿದು ತಾ ; ಹೆದರಿಸಿ ತರು : ತಡೆಯದೊಡ್ಡಾ ಪಂದಿ ಮಿಗಗಳ ನಿಡುವಲೆಯು ನೋಡೆಯ್ದೆ ತೋಹುಗರೆಡೆಗವಂ ಸೋವುಗರು ಜಡಿತರೆ ವಿಂಧ್ಯಕನು ಕಡುಗಿ (ಸಾಳ್ವಭಾ. ೫-೨೫). [ ಜಡಿ$_1$ + ತರ್ ]

**ಜಡಿತಿ** 'ಝಡಿತಿ$_1$' ನೋ.

**ಜಡಿತೆ** 'ಝಡಿತಿ$_1$' ನೋ.

**ಜಡಿನುಡಿ**(ನಾ). ಆಕ್ಷೇಪಣೆ; ಗದರಿಸುವಿಕೆ : ಕೈಸರ ತಿಬೇರಿಯನ ಹಿತಶತ್ರುವಾನಹೆನೊ ಮಿತ್ರನೊ ಎಂದು ಝಳಪಿಸಿದ ಜಡಿನುಡಿಗೆ ಮನದ ಧೈರ್ಯಂ ಬೆಳರೆ (ಗೊಲ್ಗೊಥಾ. ೭-೧೮೮). [ ಜಡಿ$_1$ + ನುಡಿ$_2$ ]

**ಜಡಿಪ** (ನಾ). (ಕೋಗಿಲೆ ಮುಂತಾದ) ಪಕ್ಷಿಗಳ ದನಿ; ಕೂಗು : "ಜಡಿಪಮೆಂದು ಕೋಗಿಲೆಯ ಚಪ್ಪರಣೆ" (ಕಶಸಾ. ೧೧-೨೦೭) ; "ಜಡಿಪಮೆನಲದೆ ಪಕ್ಷಿಗಳ ದನಿಯೊಳಕ್ಕು" (ಕಶರ. ೩೯) ; ತನ್ನ ಪಾಡುವಿಂಚರದಿಂದೆಮ್ಮ ಪಾಟಮಂ ಕೀೞ್ಮಾಡಿದಳಿವಳೆಂಬ ಮುಳಿಸಿಂ ಗಜಱಿ ಗರ್ಜಿಸುವಂತಿರ್ದ ಕೋಗಿಲೆಗಳ ಜಡಿಪಕ್ಕೆ ಬೆದಱುವಳ್ (ಕಾದಂಉ. ೩೩೪); ನಲವಿಂದೆ ಪೊಕ್ಕಂ ಬೇಗದೆ ಪಡಿಯಱಿ ಜಡಿಪಮೆಡೆಗೊಳೆ ಬನಮಂ (ಕಬ್ಬಿಕಾ. ೯೯).

[ ಜಡಿ$_1$ + – ಪ$_2$ ]

**ಜಡಿಪು$_1$** (ನಾ). =ಜಡಿಪ: ಮಲೆಯಲರಲೆಪುಂ ಮನಸಿಜನಲೆಪುಂ ಕೋಗಿಲೆಯ ಜಡಿಪುಮೊಡನೆಗಟ್ಟಿನಮೇನಲ ಜಡಿಯಾದಂತಿರ್ಪುವಗಲದಾ ವನಲತೆಯ ಜೊಂಪದೊಳ್ ಜಂಪತಿಗಳ್ (ಆಜಿಪು. ೨-೧೪). [ ಜಡಿ$_1$ + – ಪು$_2$ ]

**ಜಡಿಪು$_2$** (ನಾ). ಝಳಪಿಸುವಿಕೆ ; ಬೀಸುವಿಕೆ : ಎಡೆಗೊಂಡಿರೆ ತನ್ನಯ ತೋಳೆಡೆಯಂ ಜಯಲಕ್ಷ್ಮಿ ಮೊಗದ ಪೊಗರಿಂದತಿ ನೀಳ್ದೊಡನೊಡನೆ ನೃಪನ ಜಡಿಪದೆ ನಡುಗುವಳಸಿಕಾಂತೆ ಕೂರ್ಪಿದೇಂ ಕೈವಸಮೋ (ಪುಷ್ಪಪು.೩-೧೬).

[ ಜಡಿ$_2$ + – ಪು$_2$ ]

**ಜಡಿಮಳೆ** 'ಜಡಿವಳೆ' ನೋ.

**ಜಡಿಮೆ** (ನಾ). ಜಡತ್ವ ; ಜಾಡ್ಯ: ನನ್ನ ಎಲ್ಲ ಜಡಿಮೆಯೂ ಕ್ಷಣಕಾಲದಲ್ಲಿ ಮಾಯವಾಯಿತು (ಬಾಣಳ. ೧೦೨). [ <ಸಂ. ಜಡಿಮನ್ ]

**ಜಡಿವಳೆ,** ಜಡಿಮಳೆ, ಜಿಡಿಮಳೆ (ನಾ). ಸೋನೆಮಳೆ ; ಎಡೆಬಿಡದೆ ನಿರಂತರವಾಗಿ ಸುರಿವ ಸಣ್ಣಹನಿಗಳ ಮಳೆ : ಜಡಿಮಳೆ ಜನಂಂಗು ಬಲ್ಸರಿ . . . ಕಳೆದುವಿರುಳುಂ ಪಗಲುಂ (ವೃಷವಿ. ೦೪-೨೬). **ಜಡಿಮಳೆ :** ಜಡಿಮಳೆ ಸುರಿವೋಲ್, ಬಿರುಮಳೆ ಬರುವೋಲ್ . . . ಬೀಸುತ ಬಂತೈ ತೆಂಕಣಗಾಳಿಯು (ಕಎಪು. ೨೮-೬) ; ಉರಿಯಲ್ಲಿಯೇ ಹೊಮ್ಮಿದ ಜಡಿಮಳೆಯು ಸುರಿಯುತ್ತಿದೆ (ಮಹಾತ್ಮ. ೦೦೯). **ಜಿಡಿಮಳೆ :** ಈ ದಿನ ಜಡಿಮಳೆ ಹಿಡಿದುಬಿಟ್ಟಿದೆ (ರೂಢಿ). [ ಜಡಿ$_5$ + ಮಳೆ (<ಮೞೆ) ]

**ಜಡಿಸು, ಝಡಿಸು** (ಕ್ರಿ). ೧. ಹೊಡೆಯಿಸು ; ಬಡಿಯಿಸು : ಥಡಿಯಿಂದ ನಾಲ್ಕು ಜಡಿಸಿದರೆ ಬುದ್ಧಿ ಬಂದೀತು ಹುಡುಗನಿಗೆ (ರೂಢಿ). ೨. ಹೊಂದಿಸು ; ಕೀಲಿಸು ; ಭದ್ರಮಾಡಂ : ಹಿಡಿಯಾಳಾಗಿ ಸಿಕ್ಕಿದ ಚಿಕ್ಕಹೈದನ ಕಡಿದಡೆ ಕಲಹವಿಲ್ಲೆನುತ ಬಿಡಿಸಿಕೊಂಡಡೆ ನೋಡುವೆನೆಂದು ನಿಗಳವ ಜಡಿಸಿದ ಪದಯುಗಳಕ್ಕೆ (ಮೋಹಚ. ೩೬-೧೯); ಇನ್ನೆಂದಿಗೇ ಇರಲಿ ಸನ್ನಿಧಿಯ ಭರವಸದ ಕೀಲು ಜಡಿಸಿರುವನಲ್ಲಾ (ನನಲ್ಲ. ೩೫-೮). **ಝಡಿಸು:** ೩. ತುಂಬಂ ; ಗಿಡಿ : ಕಳಕಳದ ಕಡುಹಿನ ಚಿತ್ತಚಲನೆಯ ಝಡಿಸಿ [ಪಾಠಾಂ. ಚಲಿಸಿ]ದಂತಸ್ವಾಪವಿಹ್ವಲದ ಹೊತ್ತಿ ಹೊಗೆವ ಸರೋಷಕದ . . . ಅಸುರನಿದ್ದನು ವಿಷಯ ಚಿಂತೆಯಲಿ (ತೊರರಾ. ೬-೧೩-೪).

[ ಜಡಿ$_2$ + – ಇಸು$_3$ ]

**ಜಡೀಕೃತ** (ಗು). ನಿಧಾನವಾದ; ಮಂದವಾದ: ಸ್ವಪರಿಮಳಭರಜಡೀಕೃತ ಗಂಧವಾಹದಿಂ (ಚಂದ್ರಪು. ೬-೧೦೦). [ ಸಂ. ]

**ಜಡೀಭಾವ** (ನಾ). ೧. ಚುರುಕಿಲ್ಲದಿರುವಿಕೆ; ಅಲಸಿಕೆ. ೨. ಔದಾಸೀನ್ಯ; ಉಪೇಕ್ಷೆ. [ ಸಂ. ]

**ಜಡುಲ** (ನಾ). ವೈತಂಬ ಮುಚ್ಚಿಯ ಕಲೆಗಳುಳ್ಳವನು : ವಿನೋದ ಪಾತ್ರಂಗಳುಮಪ್ಪ ಬರ್ಬರಶಾಕ ಬಧಿರ ವರ್ಷಧರ ಮೂಕ ಕಿರಾತ ಜಡುಲ ಗಡುಲ ಖಂಜರಂಜಕ ಸಮಾಜಮುಂ (ಚಂದ್ರಪು. ೬-೮೫ ವ). 'ಜಟುಲ' ಪರಾ. [ ಸಂ. ]

**ಜಡೆ$_1$,** ಜೆಡೆ (ನಾ). ೧. ತೆಕ್ಕೆಯಾದ ಕೂದಲು; ಗಂಟುಗಟ್ಟಿದ ಕೂದಲು ; ಜಟೆ : "ಜಟೆ ಜಡೆ" (ಜತುನಿ. ೯೩) ; ಬಳೆದ ಜಡೆ ನಿಮಿರ್ದ ಬಳ್ಳಿಗಳೊಳ ಪೆಣೆದು ವಿಷೋರಗಾನಳಾರ್ಚಿಗಳಿಂದಂ ಮಿಳಿರ್ದುವು (ಆದಿಪು. ೦೪-೦೩೨) ; ದುರ್ಜನನ ನುಡಿಯಂತೆ ಕೊಂಕಿ ಪರಿದ ಜಡೆಗಳುಂ (ಧರ್ಮಾಮೃ. ೪-೭೫) ; ಜಡೆ ಗಂಗೆಯ ಸ್ಥಾನ ನೊಸಲು ಚಂದ್ರನ ಸ್ಥಾನ (ಬಸವ. ೮೪೪); ಜಡೆಯುಳ್ಳ ಹಿರಿಯರಿಗೆ ಹೆಡೆಯುಳ್ಳ ಸರ್ಪನಿಗೆ ನಡುಗುತ್ತ ನಮಿಸಿ (ಸರ್ವಜ್ಞ. ೫೨೬). ೨. ಹೆಣೆದ ತಲೆಗೂದಲು ; ಹೆರಳು: ತೊಡರ್ದಮರ್ದ ಬಾಳವಣ್ಣದ ತುಡುಗೆ ಪಳಂಚಲೆವ ಪಂಡಜಡೆ ನೊಸಲೊಳೊಡಂಬಡುವರಳೆಲೆಯಿವಱಂ ಚೆಲ್ವಿಡಿದಿರ್ದುದು ಬಾಳಕೇಳಿ ಧರ್ಮಾತ್ಮಜನಾ (ಪಂಪಭಾ. ೨-೪); ಜಡೆಗಳೊಳಗೆ ಮಲ್ಲಿಗೆಯ ಹೂವಿನ ಸರ ಬಿಡದುಟ್ಟ ಸಾಲಿಯ ಸೀರೆ ಕಡುಪರಿಮಳವಾಂತ ದಿವ್ಯಾಂಗದ ಚೆಲ್ವ ಮಡದಿರನ್ನೆಯರೊಪ್ಪಿದರು (ಕಂಎವಿ. ೨-೯೦). ೩. ಆಲ ಮುಂತಾದ ಮರಗಳ ಬಿಳಿಲು: "ಬಿಱಿಲ್=ಮರದಜಡೆ" (ಶಮದ.ಪರಿ.೧); ಬೀಟಿಲ್ಗರೆದ ಜಡೆಗಳಿಂ ನೀಳ್ದು ಚೆಲ್ವಾದ ಶಾಖಾ ಸಮುದಾಯಂ (ದಶಕು. ೧೧-೩). **ಜೆಡೆ:** ೧. "ಜಟಾ, ಸಟಾ–ಈ ೨ ಜೆ[ಪಾಠಾಂ. ಜ]ಡೆ" (ಹಲಾಯು. ೮೮-೩೭೮) ; ಬೂದಿ ಜೆಡೆ ಲಕ್ಕಣಂ ತಪಕಾದುವೆರಟೆಗ್ರೊಣೆ ಶರಾಸನಂ ಕವಚಮಿಮೆಂತಾದುವೊ ಮುತ್ತನ್ನಂ ಮೆಱಸುಂ ಕೋದಂಡತುಟೆ ನಿನ್ನ ತಪದ ಪಾಂಗೆಂತು ಗಡಾ (ಪಂಪಭಾ. ೭-೯೨); ಕವಿವ ಜೆಡೆಯ ತೊಂಗಲಿಂ ಸಂಗಳಿಸಿ ಬೆಡಂಗನೊಳಕೊಂಡ ಗಂಡಮಂಡಲಂಗಳೊಳಂ (ಕಾದಂಪೂ. ೯೨೭).

**ಜೆಡೆಯ ಮೃಗ** = ಕವಲುಗೊಂಬುಗಳು ಮತ್ತು ಬಿಳಿಯ ಕಾಲುಗಳುಳ್ಳ ಒಂದು ಬಗೆಯ ಜಿಂಕೆ : "ಋಷ್ಯ – ಮರೆ, ಜೆಡೆಯ ಮೃಗ" (ಒಷಧಿ. ೦೮). [<ಪ್ರಾ. ಜಡಾ./ಸಂ. ಜಟಾ./ತಮಿ. ಚಟೈ ; ಮಲ. ಜಟ, ಚಟ ; **ಕೊಡ**. ಜಡೆ; **ತುಳು**. ಜಡೆ, ಜೆಡೆ ; **ತೆಲು**. ಜಡ ]

**ಜಡೆ$_2$** (ನಾ). ೧. ಜಡಸ್ವಭಾವದವಳು; ದಡ್ಡಿ : ಜಡೆಯೆಂದವ ನಗುವನೊ ಜಾಣೆಯಲ್ಲೆಂದು ನುಡಿವನೋ (ಸೊಬಸೋ. ೨೫-೨೩). ೨. ನಸುಗುನ್ನಿ ; ನಾಯಿಸೋಂಕು ಗಿಡ. [ ಸಂ. ಜಡಾ ]

**ಜಡೆಕಟ್ಟು** 'ಜಡೆಗಟ್ಟು$_1$' ನೋ.

**ಜಡೆಕಳ್ಳಿ** 'ಜಡೆಗಳ್ಳಿ' ನೋ.

**ಜಡೆಕಾಳಿಂಗ** (ನಾ). ಒಂದು ಬಗೆಯ ನಾಗರ ಹಾವು : ಅಲ್ಲಿ ಹಗಲಿನಲ್ಲೇ ಜಡೆ ಕಾಳಿಂಗನ ಹಾವು ಸಿಳ್ಳುಹಾಕುತ್ತ ತಿರುಗಾಡುತ್ತದಂತೆ (ಸ್ವಪ್ನಹೊ. ೦೨೭). [ ಜಡೆ$_1$ + ಕಾಳಿಂಗ (=ಕಾಲಿಂಗ) ]

**ಜಡೆಕುಚ್ಚು** (ನಾ). ಹೆಣೆದ ಹೆರಳಿನ ತುದಿಗೆ ಜೋಡಿಸುವ ಗೊಂಚಲಿನಂತಹ ಒಡವೆ,–ಅಲಂಕಾರ : ಅಮ್ಮಾ, ನನಗೆ ಜಡೆಕುಚ್ಚು ಹಾಕಮ್ಮ (ರೂಢಿ). 'ಜಡೆಗೊಂಡೆ' ಪರಾ. [ ಜಡೆ$_1$ + ಕುಚ್ಚು$_4$ ]

**ಜಡೆಕೋಲಾಟ** (ನಾ). ಐದು ಅಥವಾ ಒಂಬತ್ತು ಹುರಿಗಳನ್ನು ಹಿಡಿದು, ಜಡೆಯಂತೆ ಹೆಣೆದುಕೊಳ್ಳುವ ಹಾಗೆ ಮತ್ತು ಬಿಚ್ಚಿಕೊಳ್ಳುವ ಹಾಗೆ ಸಂಚಾರಕ್ರಮದಿಂದ ಚಲಿಸುತ್ತ ಒಬ್ಬೊಬ್ಬರು ಒಂದು ನೂಲನ್ನು ಹಿಡಿದು ಗೊತ್ತಾದ ರೀತಿಯಲ್ಲಿ ಸುತ್ತುತ್ತಾ ಕೋಲನ್ನು ಹೊಡೆಯುತ್ತಾ ಆಡುವ ಒಂದು ಬಗೆಯ ಕೋಲಾಟ: ಸೌಂದರ್ಯ ವಿಲಾಸದ ತೊಟ್ಟಿಯ ನರ್ತಕಿಯರು . . . ಜಡೆಕೋಲಾಟದ ಸುನ್ದರಿಯರು (ಜಟ್ಟಅ. ೮-೨೦). [ ಜಡೆ$_1$ + ಕೋಲಾಟ ]

**ಜಡೆಗ** (ನಾ). ಜಟೆಯನ್ನು ಹೊಂದಿದವನು ; ಜಟಾಧರ ; ಶಿವ : "ಎಣ್ಮಯ್ಯವನು ಜಡೆಗ ಮುಪ್ಪುರವಗೆಯಂ" (ಕವಿಕಂ. ೧೭) ; ಜಡೆಗ ತಪಗೇಡಿಯ ಸೂನು ತನ್ನಯ ಪೊಡೆಯೊಳಗಿರಲು ಬಾಲಕನ ನಿಡಿದೋಳ ಮೊದಲ ಭೂಭಾರವ ನೆಲೆದಾಳ್ದು ನಡೆಗಟ್ಟು ಬಿಸುಸುಯ್ದಪಳು (ಮೋಹತ. ೧೭-೯). [ ಜಡೆ$_1$ + – ಗ$_2$ ]

**ಜಡೆಗಟ್ಟು$_1$, ಜಡೆಕಟ್ಟು, ಜೆಡೆಗಟ್ಟು$_1$** (ಕ್ರಿ). ೧. (ಕೂದಲು) ತೆಕ್ಕೆಗಟ್ಟಿ ಗಂಟುಗಂಟಾಗು ; ಜಟೆಯಾಗು : ಕುಚದ್ವಯಂ ಕೊರಗಿದತ್ತು ಕಚಂ ಜಡೆಗಟ್ಟಿತು (ಗಿರಿಕ. ೧೧-೧೫) ; ಹಡೆದ ತಾಯಿಲ್ಲ ತಾಯುಳ್ಳೊಡೆ ತಲೆ ಹೀಗೆ ಜಡೆಗಟ್ಟಿಕೊಂಡು ಮಾಸಿಹುದೇ (ಮೋಹತ. ೨೧-೨೫). ೨. ಹೆರಳು ಹಾಕು; ತಲೆಗೂದಲನ್ನು ಹೆಣೆದು ಸಿಂಗರಿಸು: ಓರೆದುಱುಬಂ ತೆಗೆದು ಜಡೆಗಟ್ಟಿ ಪೊಱಮಟ್ಟು ಕೇರಿಗೊಂಡೈದಿದಳ್ (ಜೈಮಿಭಾ. ೨೬-೯). **ಜಡೆಕಟ್ಟು** : ೧. ತಣ್ಣೀರು ಅಥವಾ ಬಹಳ ಬಿಸಿನೀರಿನಲ್ಲಿ ನಾರನ್ನು ನೆನೆಹಾಕಿ ಉಜ್ಜಿದರೆ ಇದು ಜಡೆಕಟ್ಟಿಕೊಳ್ಳುತ್ತದೆ (ಗೃಹವಿ. ೬೮). **ಜೆಡೆಗಟ್ಟು$_1$** : ೧. ತಲೆರೋಮಂ ಜೆಡೆಗಟ್ಟಿ ಪೇನಿಟ್ಟಿದು ಬಾಯೊಳ್ಳೀವೆ(ಸುಕುಮಾ. ೪-೫೭); ತಾಯಿ ತಪಸಿಯನಾಗಲೀವಳೆ ತಾಯಿಯಿರೆ ಜೆಡೆಗಟ್ಟುವುದೆ ತಲೆ (ಬಸವು. ೦೫-೩). [ ಜಡೆ$_1$ + ಕಟ್ಟು$_1$ ]

**ಜಡೆಗಟ್ಟು$_2$, ಜೆಡೆಗಟ್ಟು$_2$**(ನಾ). ೧. ಗಂಟುಗಟ್ಟಿದ ತಲೆಗೂದಲಿನ ಕಟ್ಟು. ೨. ಹೆರಳು ಹಾಕಿ ಎತ್ತಿ ಕಟ್ಟಿದ ಕೂದಲು : "ಕದ್ದಣಮೆಂದು ಜಡೆಗಟ್ಟು" (ಶಶಸಾ. ೨೨-೪೪೮) ; "ಜಡೆಗಟ್ಟದು ಕಡಣಂ" (ಕವಿಕಂ. ೦೮೮). **ಜೆಡೆಗಟ್ಟು$_2$** : (ಫ). [ ಜಡೆ$_1$ + ಕಟ್ಟು$_2$ ]

**ಜಡೆಗಳ್ಳಿ, ಜಡೆಕಳ್ಳಿ, ಜೆಡೆಕಳ್ಳಿ**(ನಾ). ಕಳ್ಳಿಗಿಡದಲ್ಲಿ ಒಂದು ಬಗೆ; ಚತುರಕಳ್ಳಿ : ವಿಾನ ವಿಷಕ್ಕೆ–ಹಿಡಿಹಿಡಿಕೆಯ ಸೊಪ್ಪನಾದರೂ ಜಡೆಗಳ್ಳಿಯ ಸೊಪ್ಪನಾದರೂ ಗಾಯಕ್ಕೆ ಮುಚ್ಚಿ ಕಟ್ಟುವುದು (ವೈದ್ಯಸಾ. II, ೨೨೦). **ಜಡೆಕಳ್ಳಿ** : (ಫ). **ಜೆಡೆಕಳ್ಳಿ** : (ಫ). [ ಜಡೆ$_1$ + ಕಳ್ಳಿ$_2$ ]

**ಜಡೆಗೊಂಡೆ** (ನಾ). ತುರುಬಿಗೆ ಅಲಂಕಾರಕ್ಕಾಗಿ ಸೇರಿಸಿ ಹೆಣೆಯುವ ಕುಚ್ಚು : ರಾಗಟೆ ಚೌರಿಗಳನು ಮೆರೆವ ಕೇದಕಿ ಚಲ್ವ ಜಡೆಗೊಂಡೆಗಳನು (ಜಂದ್ರಾವ. ೭). [ ಜಡೆ$_1$ + ಗೊಂಡೆ (<ಕೊಂಡೆ$_4$) ]

**ಜಡೆಗೊಳ್, ಜೆಡೆಗೊಳ್** (ಕ್ರಿ). ಕೂದಲು ತೆಕ್ಕೆಯಾಗು,-ಗಂಟುಗಟ್ಟು: ಪೊಸೆದು ಜಡೆಗೊಂಡಿರ್ದುದ್ವೃತ್ತಕುಚಯುಗೆಯ ಕೇಶಮನೆತ್ತಂ ಪಸರಿಸಿದನೆಯ್ದೆ ಪಸರಿಸಿದದಟಿಂ (ಪಂಪಭಾ. ೧೨-೧೫೪) ; ಬೆಮರ ಬಿಂದುಗಳ್ ನಾಂದೆ ಮಂದಯ್ಸಿದಟಿಗ್ಗಿಸಟಿ ಜಳಿಡಿದು ಜ[ಪಾಠಾಂ. ಜೆ]ಡೆಗೊಂಡು ನಗೆಮೊಗಮನಾಗಳಾಗಳ್ ಕಱಂಗಿಸಿದ ಮಸಿಯ ಕುಂಚಿಗಳೆನಿಸಿ ನೊಸಲಂ ಮುಸುಂಕಿದಳಕವಲ್ಲರಿಗಳೊಳಂ (ವರ್ಧಪು. ೯-೬೦ ವ). **ಜೆಡೆಗೊಳ್**: ಮಣಿನೂಪುರಮಂ ತೊಡರ್ಚೆ ಮಂಡನದ ಮಯೂಖಲೇಖೆ ಜೆ[ಪಾಠಾಂ. ಜ]ಡೆಗೊಂಡು ಮಡಲ್ದು ಕವಲ್ತುಲರ್ಚೆ . . . ಜಟಾಯುವೆಸರಾದುದು(ಪಂರಾಮಾ. ೯-೧೬) ; ಜೆಡೆಗೊಂಡ ಪಿಣಿಲಂ ತಾನೆ ಬಿಡಿಸಿ (ಬಂಹರಿ. ೪-೪೨ ವ).

[ ಜಡೆ$_2$ + ಕೊಳ್$_1$ ]

**ಜಡೆದಲೆ, ಜೆಡೆದಲೆ** (ನಾ). ಜಟೆಗಳಿಂದ ಕೂಡಿದ ತಲೆ ; ಜಡೆಗಟ್ಟಿದ ತಲೆ: ಜಡೆದಲೆಯನು ಕಂಡು ಮುಡಿದಲೆಯನು ಕೊಟ್ಟ ಕಡುಗಲಿ ಚೋಳ ನೃಪಾಲ ಮೃಡನ ಪದವ ನೆಱೆ ಪಡೆದ (ಮಡಿಕ್ಕಾ. V, ೦೨೬೪ ಚೋಳರಾಜನ ಸಾಂಗತ್ಯ); ಜಡೆದಲೆಯವೊಲೆವುತ್ತೆ ದಡದಡಿಸಿ ನಡೆಯುತ್ತೆ(ರಾಘಚ. ೨-೪೮). **ಜೆಡೆದಲೆ**: ಬಳಿಕವಾ ತಲೆ ಜೆ[ಪಾಠಾಂ. ಜ]ಡೆದಲೆಯವೊಲು ಬಲಿದಿರಲು ಕಂಡಾಗ ಚಿತ್ತದೊಳಳುಕಿ ಹರಹರ ಎನುತ (ಬಸವು. ೨೭-೩೮) ; ಜೆಡೆದಲೆಗೆ ತನ್ನ ಸಿರಿಮುಡಿದಲೆಯನಿತ್ತು ಶಿವನೊಡನೆ ಸಲೆ ಸಂದ ಕಲಿ ಪಗಲ್ಪೋಳ ನೀನೆಡೆಗೊಂಡಿರೆನ್ನ ಮನದಲಿ (ಅಱುಪು. ೨೦). [ ಜಡೆ$_1$ + ತಲೆ$_1$ ]

**ಜಡೆದಲೆಯ**(ನಾ). ತಲೆಯಲ್ಲಿ ಜಟೆಗಳುಳ್ಳವನು; ಶಿವ: ಎಲ್ಲೆಲ್ಲಿ ನೋಡಲ್ಕೆ ಮೊಗ ಹತ್ತುತೋಳಿನವರೆಲ್ಲೆಲ್ಲಿ ನೋಡಲರೆವೆಱೆದಳೆದ ಜಡೆದಲೆಯರ್ (ಚಬಪು. ೩೦-೭). [ ಜಡೆದಲೆ + – ಅ$_7$ ]

**ಜಡೆದುಱುಂಬು** (ನಾ). ಜಡೆಗಟ್ಟಿದ ತುರುಬು: ಶಂಕರನ ಜಡೆದುಱುಂಬಿಂಗೆ ತನುಲತೆಗೆ ಕಂಬುಕಂಧರಕೆ ರಾಗಂಬಡೆದು . . . ಅಗಜೆ ಸಲಹುಗನಿಶಂ ಬಿಡದೆ (ಉದ್ಭದೇ. ೨-೪). [ ಜಡೆ$_1$ + ತುಱುಂಬು$_2$ ]

**ಜಡೆದುಱುಗಲ್, ಜೆಡೆದುಱುಂಗಲ್** (ನಾ). ಜಡೆಗಳ ಸಮೂಹ ; ಜಟಾಕಲಾಪ : ಪೊಸ ಪೊಂಬಣ್ಣಂ ಪೊದಟ್ಟೊಪ್ಪುವ ಜಡೆದುಱುಗಲ್ ಭೂಷಣಾಹಿಸ್ಫಟಾರತ್ನಸಹಸ್ರಜ್ಯೋತಿ . . . ಪರಿರಕ್ಷಿಕ್ಕೆ ನಮ್ಮಂ ತ್ರಿಯಕ್ಷಂ (ಸೂಕ್ತಿಸು. ೧-೩). **ಜೆಡೆದುಱುಗಲ್** : ಜೆಡೆದುಱುಗಲೆಡೆಯ ಮಡದಿಯ ಮುಡಿಯಗ್ರದೊಳೆಯ್ದೆ ತೊಳಪ ಮುತ್ತಿನ ಪೆಱೆ (ರಾಜಶೇ. ೧೪-೧೦೮).

[ ಜಡೆ$_1$ + ತುಱುಗಲ್ (<ತುಱುಂಗಲ್) ]

**ಜಡೆದೇವ** (ನಾ). ಜಟೆಯುಳ್ಳ ದೇವ ; ಶಿವ : ಜಡೆದೇವರಿಗೇ ನೆಲೆ ಇಲ್ಲ, ಬೋಳದೇವರಿಗೆ ನೆಲೆ ಉಂಟೇ ? (ಗಾದೆ). [ ಜಡೆ$_1$ + ದೇವ ]

**ಜಡೆಧಾರಿ** (ನಾ). ಜಟಾಧಾರಿ : ಕಡುಭಕ್ತನಾದರೂ ಜಡೆಧಾರಿಯಾದರೂ ನಡೆವ ವೃತ್ತಿಯಲಿ ನಡೆಯದಿರಲಾ ಭಕ್ತಿ ಹೊಡೆವ ಶಂಖೆಂದ (ಸರ್ವಜ್ಞ. ೨೫೫). [ <ಸಂ. ಜಟಾಧಾರಿನ್ ]

**ಜಡೆನಾಗರ** (ನಾ). ೧. ಒಂದು ಬಗೆಯ ನಾಗರಹಾವು : ಗೋದಿನಾಗರ, ಕಲ್ಲುಹಾವು, ಜಡೆನಾಗರ (ನಮ್ಮನು. ೨೪೦). ೨. ತುರುಬಿನ ಮೇಲೆ ತೊಡುವ ನಾಗರಹೆಡೆಯ ಚಿತ್ರವಿರುವ ಆಭರಣ. [ಜಡೆ$_1$+ನಾಗರ$_1$]

**ಜಡೆಬಂಗಾರ** (ನಾ). ಹೆಣೆದ ಜಡೆಯಲ್ಲಿ ಧರಿಸುವ ಜಡೆಯಾಕಾರದಲ್ಲಿರುವ ಒಂದು ಬಗೆಯ ಚಿನ್ನದ ಆಭರಣ : ಜಡೆಬಂಗಾರವನಿಟ್ಟು ಫಾಲದೊಳಾಗಲೊಡನೆ ಕಸ್ತೂರಿಯ ಬೊಟ್ಟು (ಕಂನವಿ. ೨೧-೧೭); ರೇಗಟಿ . . . ಜಡೆಬಂಗಾರ ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲಿಮಂ. ೩೮). [ ಜಡೆ$_1$ + ಬಂಗಾರ (<ಭಂಗಾರ) ]

**ಜಡೆಬಂಧ** (ನಾ). ಕೋಲಾಟದಲ್ಲಿ ಜಡೆಯು ಹೆಣಿಕೆಯಂತೆ ನೂಲುಗಳು ಹೆಣೆದುಕೊಳ್ಳುವ ಹಾಗೆ ಒಬ್ಬೊಬ್ಬರು ಒಂದೊಂದು ನೂಲನ್ನು ಹಿಡಿದು ಸುತ್ತುವ ಒಂದು ಬಗೆಯ ಆಟ: ಒಂದೊಂದು ಸಲ ಹುಡುಗರು ಚೌಪದಿಯಿಂದ ಜಡೆಮುಡಿ, ಜಡೆಬಂಧ, ಜಡೆಬಿಡುವುಗಳನ್ನು ನಡೆಸುತ್ತಿದ್ದರು (ಹುಟ್ಟಿಹ. ೯). 'ಜಡೆಕೋಲಾಟ' ಪರಾ.

[ ಜಡೆ$_1$ + ಬಂಧ ]

**ಜಡೆಬತ್ತಿ** (ನಾ). ಗಂಟುಕಟ್ಟಿದ ತಲೆಕೂದಲಿನ ಒಂದು ತೆಕ್ಕೆ ; ಸಿಕ್ಕು ಸಿಕ್ಕಾಗಿ ಹೊಸೆದುಕೊಂಡಿರುವ ಕೇಶ : ವಾಕ್ಯವೆಲ್ಲಾ ಒಂದು ಜಡೆಬತ್ತಿಯಾಗಿ ಹೊಸೆದುಕೊಳ್ಳದ ಹಾಗೆ ನೋಡಿಕೊಂಡು ಮಾತಾಡುವಾಗ ಕೂಡಿಸುವುದಕ್ಕಿಂತ ಹೆಚ್ಚು ಸಂಧಿಗೆ ಹೋಗಬಾರದು (ಕಬಸಾ. ೩೨).

[ ಜಡೆ$_1$ + ಬತ್ತಿ ]

**ಜಡೆಬಸರಿ** (ನಾ). ಒಂದು ಬಗೆಯ ಬಸರಿಮರ ; ಬಿಳಿಲು ಬಿಡುವ ಬಸರಿಮರ: "ಗರ್ದಭಾಂಡಃ, ಕಂದರಾಲಃ . . . ಬಸರೀಗಿಡ, ಜಡೆಬಸರೀ ಮರ, ಇದನ್ನು ಫಣಿಯಾಲವೆನ್ನುವರು " (ಸಿದ್ಧಾಂತಿ. ೧೦೭).

[ಜಡೆ$_1$ + ಬಸರಿ ]

**ಜಡೆಬಿಡುವು** (ನಾ). ಜಡೆಕೋಲಾಟದಲ್ಲಿ ಹೆಣೆದ ನೂಲಿನ ಜಡೆ ಬಿಚ್ಚುವಂತೆ ಚಲಿಸುತ್ತಾ ಸುತ್ತುವ ಒಂದು ಬಗೆಯ ಆಟ : ಒಂದೊಂದು ಸಲ ಹುಡುಗರು ಚೌಪದಿಯಿಂದ ಜಡೆಮುಡಿ, ಜಡೆಬಂಧ, ಜಡೆಬಿಡುವುಗಳನ್ನು ನಡೆಸುತ್ತಿದ್ದರು (ಹುಟ್ಟಿಹ. ೯). 'ಜಡೆಬಂಧ' ಪರಾ.

[ ಜಡೆ$_1$ + ಬಿಡುವು ]

**ಜಡೆಬಿಲ್ಲೆ** (ನಾ). ಹೆಣೆದ ಹೆರಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ: ಸಲ್ಲಲಿತ ಕೇದಿಗೆ ಜಡೆಬಿಲ್ಲೆಗಳನು (ದುಶ್ಯಾಕ. ೧೦); ಬಾಜೂಬಂದಿ ಜಡೆಬಿಲ್ಲೆ ಬೈತಲೆ ಬಟ್ಟು (ಸಿದ್ಧಕಾ. ೧೦-೧೫). [ ಜಡೆ$_1$ + ಬಿಲ್ಲೆ ]

**ಜಡೆಮುಡಿ, ಜೆಡೆಮುಡಿ** (ನಾ). ೧. ಜಟಾಮುಕುಟ : "ಮೌಳಿಃ, ಜುಟ್ಟು, ಕಿರೀಟ, ಜಡೆಮುಡಿ " (ಸಿದ್ಧಾಂತಿ. ೩೬೨) ; ಸತ್ಯಭಾವಾದೇವಿ ಮೊದಲಾದ ಜಡೆಮುಡಿಯಲೆಸೆವಷ್ಟಮಹಿಷಿಯರು (ಕೋಗಯು. ೪-೧೯). ೨. ಜಡೆಗಟ್ಟಿದ ಕೂದಲಿನ ತಲೆ ; ಜಟೆಗಳಿಂದ ತುಂಬಿದ ತಲೆ : ಜಡೆಮುಡಿ ಪಂಚಮುಖಂ ನೆಗೆದುಡುಪತಿಕಳೆ . . . ಪುಲಿದೊವಲುಡಿಗೆಗಳಿಂ ಶಂಕರಂ ಕರಂ ಮೆಱೆದಿರ್ದಂ (೧೦ಿಕ. ೯-೧೦೯); ಜಡೆಮುಡಿಯುವರ ಕರುಳ ನಾರ್ಜಿಸುವರಿದೆ ಕಾರ್ತಿಕಕ್ಕೆಳವಣ್ಣಿಲುರದ ಗುಂಡಿಗೆಯನಟಿಸುವ ಮಹಾವೃತಿಗಳಿದೆ ಬ್ರಹ್ಮರಾಕ್ಷಸರೆಂದನು (ಜೈಮಿಭಾ.೧೬-೨೮). ೩. ಜಡೆಕೋಲಾಟ: ಒಂದೊಂದು ಹುಡುಗರು ಚೌಪದಿಯಿಂದ ಜಡೆಮುಡಿ, ಜಡೆಬಂಧ, ಜಡೆಬಿಡುವುಗಳನ್ನು ನಡೆಸುತ್ತಿದ್ದರು (ಹುಟ್ಟಿಹ. ೯). **ಜೆಡೆಮುಡಿ :** ೨. ಹರನ ಜೆಡೆಮುಡಿಗೆ ಪೂಗೊಯ್ವ ಪೊಸಬೇಟದೊಳು ಅಲ್ಲಿಗಿರ್ವರು ವಿಳಾಸಿನಿಯರಂದೆಯ್ದಿಂದು (ನಂಬಿರ. ೧-೩೪). [ ಜಡೆ$_1$ + ಮುಡಿ$_3$ ]

**ಜಡೆಯಡ್ಡಿಕೆ** (ನಾ). ಜಡೆಯಂತೆ ಹೆಣೆದಂ ಮಾಡಿರುವ ಒಂದು ಬಗೆಯ ಅಡ್ಡಿಕೆ:ಜಡೆಯಡ್ಡಿಕೆಯ ಜಾಣೆಯು ರಂಗಾಯೆಂಬ ಮಡದಿ ಮೈದೋರ್ವಳಿನ್ನೆಂದೊ (ಶತಸಾಂ. ೨೬-೩೫). [ ಜಡೆ$_1$ + ಅಡ್ಡಿಕೆ ]

**ಜಡೆವಾಳ** (ನಾ). ಲಾಮಂಚ : ಅಸಿತೇಕ್ಷುಕಾರ್ಮುಕನೊಡಲನೇಳಿಪದೋರ್ಮೂಲ ಜಡೆವಾಳ ಬೇರ್ಮೂಲವೆರ್ದೆಗೊಳ್ವ . . . ರತಿಗೆ ನೂರ್ಮಡಿಯು ಗಾಡಿವಡೆವರ್ ಮುಂದೆ ಬಂದರಂದು (ಉದ್ಭದೇ. ೫-೨೨).

[ ಜಡೆ$_1$ + ಬಾಳ (<ಬಾಟ) ]

**ಜಡೆವೆಣೆ, ಜಡೆಹೆಣೆ** (ಕ್ರಿ). ಜಡೆಯುನ್ನು ಹೆಣೆ; ಹೆರಳು ಹಾಕು : ಭೃಂಗಕುಂತಲವನು ಬಾಗಿಸಿ ನಿಖಿಲ ಗೋಪಾಂಗನೆಯರು ಜಡೆವೆಣೆಯೆ (ವೋಹತ. ೧೪-೪೨). **ಜಡೆಹೆಣೆ :** ಮಗುವಿಗೆ ಚೆನ್ನಾಗಿ ಜಡೆಹೆಣೆದಿದ್ದಾರೆ (ರೂಢಿ). [ ಜಡೆ$_1$ + ಪೆಣೆ$_1$ ]

**ಜಡೆವೊರು** (ಕ್ರಿ). ಜಟೆಯನ್ನು ಧರಿಸು ; ಜಡೆಯನ್ನು ಹೊಂದಿರು ; ಜಡೆಗಟ್ಟಿದ ಮುಡಿಯಿಂದ ಕೂಡಿರು : ಅಭಯವಚನವನಿತ್ತು ಕಳುಹಿದನ್ ಬೆದರಿದಾ ಜಡೆವೊತ್ತರಂ (ಶ್ರೀರಾಮಾ. ೨೦೪-೨೬೭).

[ ಜಡೆ$_1$ + ಪೊರು (<ಪೊಱು) ]

**ಜಡೆಸರ** (ನಾ). ಹೆರಳಿನ ಮೇಲುಗಡೆ ಧರಿಸುವ ಒಂದು ಬಗೆಯ ಒಡವೆ: ಜಡೆಸರ ಸೂರಿಯಕಾಂತಿ ಮೌಕ್ತಿಕಗಳ ಮುಡಿವಲೆ . . . ಮುತ್ತಿನ ಕುಚ್ಚಿನಿಂದ ಬಲ್ಪೆಡಗಾಗಿ ಮೆಱೆದರು (ಕಂನವಿ. ೨೪-೪೨).

[ ಜಡೆ$_1$ + ಸರ$_6$ ]

**ಜಡೆಹತ್ತಿ** (ನಾ). ಒಂದು ಬಗೆಯ ಹತ್ತಿ ; ಬೀಜಗಳು ಒತ್ತಾಗಿ ಜಡೆಯಂತೆ ಹೆಣೆದುಕೊಂಡಿರುವ ಒಂದು ಬಗೆಯ ಹತ್ತಿ : ಜಡೆಹತ್ತಿ, ಮರಹತ್ತಿ (ಮೃಜಗಿ. ೪೦-೭೯೩). [ ಜಡೆ$_1$ + ಹತ್ತಿ (<ಪಟ್ಟಿ) ]

**ಜಡೆಹೆಣೆ** 'ಜಡೆವೆಣೆ' ನೋ.

**ಜಡೆಹೊಲಿಗೆ** (ನಾ). ಜಡೆಯಂತೆ ಹೆಣೆದುಕೊಳ್ಳುವ ಹೊಲಿಗೆ : "ಎರಡು ದಾರಗಳು ಒಂದರೊಡನೊಂದು ಭದ್ರವಾಗಿ ಹೆಣೆದುಕೊಳ್ಳುವಂತೆ ಹಾಕಿದ ಹೊಲಿಗೆ ಯಂತ್ರದ ಹೊಲಿಗೆ ; ಜಡೆಹೊಲಿಗೆ " (Lock-stitch. ಇಂಕನಿ). [ ಜಡೆ$_1$ + ಹೊಲಿಗೆ (<ಪೊಲಿಗೆ) ]

**ಜಡೇಶ** (ನಾ). ನೀರಿಗೆ ಅಧಿಪತಿಯಾದವನು ; ವರುಣ : ಸುರರಾಜಂ ಶಿಖಿ ಕಾಳ ನೈರುತಿ ಜಡೇಶಂ ಮಾರುತಂ (ಎಕ. VIII, ಸಾಗರ. ೧೦೯-೪೦ ; 1042). [ ಜಡ + ಈಶ ]

**ಜಡೋದಕ** (ನಾ). ಗಡುಸಾದ ನೀರು ; ಉಪ್ಪುನೀರು : ನೀರೊಳಗೆ ಕ್ಷಾರಾಂಶವು ಕಡಿಮೆ ಇದ್ದರೆ ಅದಕ್ಕೆ ಮೃದುಜಲವೆನ್ನುವರು, ಬಹಳ ಇದ್ದರೆ ಅದಕ್ಕೆ ಜಡೋದಕವೆನ್ನುವರು (ಮುಂಬಯಿ. ೬-೩೮).

[ ಜಡ + ಉದಕ$_2$ ]

**ಜಡ್ಜಿ** (ನಾ). ನ್ಯಾಯಾಧಿಪತಿ ; ನ್ಯಾಯಮೂರ್ತಿ : ಒಬ್ಬರಿಗಿಂತ ಹೆಚ್ಚಾದ ಜಡ್ಜಿಗಳು ಸೇರಿದ " ಬೆಂಚ್ " ಯಾನೆ-ಜಡ್ಜಿಗಳ ಸಮುದಾಯದ ಸಮಕ್ಷದಲ್ಲಿ ನಡೆಯತಕ್ಕದ್ದು (ಗ್ರಾಮಾಕ. ೧೫); ಡೈವೋರ್ಸ್(ದಾಂಪತ್ಯವಿಚ್ಛೇದನ) ಕೇಸುಗಳಲ್ಲಿ ಜಡ್ಜಿ ಆ ಜಗಳವಾಡಿ ಬಂದ ದಂಪತಿಗಳಿಗೆ ರಾಜಿ ಮಾಡಿಸುವುದಕ್ಕೆ ಮೊದಲು ಪ್ರಯತ್ನಪಡುತ್ತಾನೆಯೋ ಇಲ್ಲವೋ ? (ಮುಹಾಗ. ೪೫).

[ ←ಇಂ. Judge ]

**ಜಡ್ಡಮತಿ** 'ಜಡ್ಡುಮತಿ' ನೋ.

**ಜಡ್ಡು$_1$** (ಕ್ರಿ). ೧. ಉಂಟುಮಾಡು : ಒಡ್ಡಿದ ಭೈರವ ಬಲರಾಮನ ಪೆಟ್ಟು ದೊಡ್ಡಿತೆನುತ್ತ ನಿಷ್ಠುರದಿ ಒಡ್ಡಿಯು ನುಡಿದು ಕೃಷ್ಣಾಗ್ರಜಾತನ ಮೇಲೆ ಜಡ್ಡಿದ ಗದೆಯ ಗಾಯವನು (ವೋಹತ. ೩೯-೧೩). ೨. ಹಿಂದಕ್ಕೆಳೆ : ಹಗ್ಗ ವಿಡಿದು ಜಡ್ಡಬೇಡ ಕರು ಜಡ್ಡುತಿದೆ (ಕಸಾಪ. ೦-೧೪೦). ೩. (?): ಖಡ್ಡಿ ಮುರಿವಗೆ ಕುಳಿತನು ನೆಲನನು ಜಡ್ಡಿ ಬರೆವಗೆ . . . ನಿಲ್ವಳಿ ಭಾಗ್ಯವಧು (ಅಂಬಿಕಾ. ೪೬-೯೪). [ <ಜಡ್ಡಿ$_2$ ]

**ಜಡ್ಡು$_2$** 'ದಡ್ಡು$_1$' ನೋ.

**ಜಡ್ಡು$_3$** 'ಜಿಡ್ಡು$_1$' ನೋ.

**ಜಡ್ಡು$_4$** (ನಾ). ೧. ಜಡತೆ ; ಸೋಮಾರಿತನ ; ಮಾಂದ್ಯ : ಗುರುವಿಗೆ ಜಡ್ಡಳಿದ ಭಕ್ತಂಗೆ ಭಕ್ತಿಯ ಜಡ್ಡು ಏಕಯ್ಯ (ಸಿದ್ಧವ. ೭೦-೩೯೦) ; ಜವದೂತರ ಜಡ್ಡಂ ಕೂಱಾಡುವರಾ ಬಱಿಸಿಡಿಲಂ ಪಿಡಿದು ಮೆಱೆವಪ್ರರ್ತಿಯಪ್ಪವನಂ ಜವಂಗೆ ಕುಡುವರ್ತ್ರವತವಗೋರೊರ್ವ್ವರೊಲ್ಲಡೀವಕರ್ಪವರ್ (ಸೌಇಇ. IX-i, ೩೯೦-೬ ; 1195). ೨. (ಉಕ)ಕಾಯಿಲೆ ; ಬೇನೆ : ಅವನು ಯಾವ ಪ್ರಕಾರದ ವ್ಯಾಯಾಮವನ್ನು ಮಾಡುತ್ತಿರಲಿಲ್ಲ. ಆದರಿಂದ ಅವನ ಮೈಯಲಿ ಆಗಾಗ್ಗೆ ಜಡ್ಡಾಗುತ್ತಿತ್ತು (ಮುಂಬಯಿ. ೪-೦೦೮) ; ತಮ್ಮ ಜಡ್ಡು ಜನ್ಮದ ಗಂಟು (ಮಾವಿತೋ. ೯). ೩. ಬಂಜರು ನೆಲ ; ಬೀಳಂ

ಭೂಮಿ ; ಪಾಳುಭೂಮಿ : ಜಡ್ಡುಬಿದ್ದಿದ್ದ ಗದ್ದೆಯನ್ನು ಸಾಗು ಮಾಡುವುದು ಗಿರಿಯಪ್ಪಗೌಡರಿಗೆ ಒಂದು ಸಮಸ್ಯೆಯೇ ಆಗಿತ್ತು (ಪಂಜಪಂ. ೧೯); ಹಳ್ಳದ ಆಚೆಯ ದೂರದಲ್ಲಿ ಲಕ್ಕುಂದದ ಗದ್ದೆಕೋಗಿನ ಜಡ್ಡಿನಲ್ಲಿ, ಪದೇ ಪದೇ ಬೀಸುತ್ತಿದ್ದ ದೊಂದಿಗಳೂ, ಲಾಟೀನುಗಳೂ ಕಾಣಿಸಿತು (ಮಲಮ. ೫) ; ಬೇಡ ಅಯ್ಯ . . .ಸ್ವಲ್ಪ ಮುಂದೆ ಹೋದರೆ ಒಂದು ಜಡ್ಡಿದೆ. ಕುಳಿತುಕೊಳ್ಳುವುದಕ್ಕೂ ಜಾಗ ಅನುಕೂಲ (ಪದ್ಮಸ. ೧೮೦). ೪. ಗೊಡ್ಡಾದುದು ; ನಿಸ್ಸಾರವಾದುದು : ಈ ಲಿಂಗಲೀಲಾವಿಲಾಸ ಚಾರಿತ್ರವೇ ಶರಣಚಾರಿತ್ರವೆಂದು ಪುರಾತರವಚನಂಗಳಿಂದ ಕಾಣಲಾಯಿತ್ತಾಗಿ ಮಿಕ್ಕಿನ ವೇದಾಗಮಂಗಳು ಜಡ್ಡು ಗೊಜಡೆಂದು ಅವ ಬಿಟ್ಟು (ಲಿಂಗಲೀ. ೪೧೯). [ <ಪ್ರಾ. ಜಡ್ಡ./ ಸಂ. ಜಾಡ್ಯ ]

**ಜಡ್ಡುಕಟ್ಟು** 'ದಡ್ಡುಗಟ್ಟು' ನೋ.

**ಜಡ್ಡುಗಟ್ಟಿಸು** (ಕ್ರಿ). ಗಡುಸಾಗಿಸು ; ಬಿರುಸುಗೊಳಿಸು ; ಗಟ್ಟಿಯಾಗುವಂತೆ ಮಾಡು: " ಜಡ್ಡುಗಟ್ಟಿಸು; ಜಡ್ಡುಗಟ್ಟಿಹೋಗು; ಕಲ್ಲೆದೆ ಮಾಡು ; ರೂಢಮೂಲವಾಗು " (Indurate. ಇಂಕನಿ).

[ ಜಡ್ಡುಗಟ್ಟು (<ದಡ್ಡುಗಟ್ಟು) + – ಇಸು$_3$ ]

**ಜಡ್ಡುಗಟ್ಟು** 'ದಡ್ಡುಗಟ್ಟು' ನೋ.

**ಜಡ್ಡುದೇಹ** (ನಾ). ಗಂಟುಗಂಟಾದ ದೇಹ ; ದಡ್ಡುಗಟ್ಟಿದ ಶರೀರ : ಜ[ಪಾಠಾಂ. ಜೆ]ಡ್ಡುದೇಹದ ಗುಜ್ಜುಗೊರಲಿನ ಗಿಡ್ಡುರೂಪಿನ ಹರುಕು ಗಡ್ಡದ ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂ ಪ (ನಳಚ. ೬-೧೪).

[ ಜಡ್ಡು$_2$ (<ದಡ್ಡು) + ದೇಹ ]

**ಜಡ್ಡುಮತಿ, ಜಡ್ಡಮತಿ** (ನಾ). ಮಂದಬುದ್ಧಿಯವನು ; ಚೂಟಿಯಿಲ್ಲದವನು ; ದಡ್ಡ ; ಮಂದಮತಿ : ಜಡ್ಡುಮತಿಗಳು ಪಾರಮಾರ್ಥದ ಛಡ್ಡೆಯಿನಿತಿಲ್ಲದರು (ಸದ್ಗುರು. ೬-೨೦). **ಜಡ್ಡಮತಿ :** ಖಿಡ್ಡಿಸಿದರೆಂತೆನ್ನ ನಜಿಿವರು ಜಡ್ಡಮತಿಗಳು (ನಿಭಾಗ. ೧೦-೮-೮). [ ಜಡ್ಡು$_4$ + ಮತಿ$_1$ ]

**ಜಡ್ಡುವಕ್ಕಿ** (ನಾ). ಒಂದು ಬಗೆಯ ಕಾಡುಪಕ್ಷಿ : (ಕ).

[ ಜಡ್ಡು$_3$ (<ಜಿಡ್ಡು$_1$) + ಪಕ್ಕಿ$_1$ ]

**ಜಡ್ಡುಸೀರೆ** (ನಾ). ಒರಟಾದ ಕಡಮೆ ದರ್ಜೆಯ ಸೀರೆ: ಕೊಡುತ್ತಿದ್ದುದು ಜಡ್ಡುಸೀರೆ, ಅದನ್ನು ಹರಡು ಮುಚ್ಚುವಂತೆ ಉಟ್ಟುಕೊಂಡರೆ ಗ್ರಹಚಾರ ಬಿಡಿಸುತ್ತಿದ್ದರು (ಮಲಮ. ೩೬). [ ಜಡ್ಡು$_2$ (<ದಡ್ಡು$_1$) + ಸೀರೆ$_2$ ]

**ಜಡ್ತಿ** 'ಝಡತಿ' ನೋ.

**ಜಣ್** (ನಾ). ಒಂದು ಅನುಕರಣ ಧ್ವನಿ ; ಗೆಜ್ಜೆ, ಗಂಟೆ, ನಾಣ್ಯ ಮೊದಲಾದುವುಗಳ ಧ್ವನಿ.

**ಜಣ್‌ಜಣ್** (ದ್ವಿರುಕ್ತಿ) : ಬೆಳ್ಳಿರೂಪಾಯಿ ಕೆಳಗೆ ಬಿದ್ದೊಡನೆ ಜಣ್ ಜಣ್ ಶಬ್ದ ಬಂತು (ರೂಢಿ).

**ಜಣ** (ನಾ). ಜನ; ಮನುಷ್ಯ ; ವ್ಯಕ್ತಿ : ದುಟ್ಟಜಣಂಗಳಿತ್ತೊಲವು ನಿತ್ಯವೆ ನಾಳೆ ಬಸಂತಮುಂಟೆ (ಶಾಂತೀಶ್ವ. ೫-೧೦೯). [ <ಪ್ರಾ. ಜಣ./ಸಂ. ಜನ ]

**ಜಣಜಣ** (ನಾ). ಗೆಜ್ಜೆ, ಗಂಟೆ, ನಾಣ್ಯ ಮೊದಲಾದುವುಗಳ ಅನುಕರಣ ಧ್ವನಿ. 'ಜಣಜಣಿಸು' ಪರಾ.

**ಜಣಜಣಿಸು** (ಕ್ರಿ). ಜಣಜಣ ಎಂದು ಶಬ್ದಮಾಡು : (ಕ).

[ ಜಣಜಣ + – ಇಸು$_3$ ]

**ಜಣತ್ಕರಿಸು** (ಕ್ರಿ). ಜಣಜಣ ಎಂದು ಶಬ್ದ ಮಾಡು : ವರರತ್ನ ಕಂಕಣ ಜಣತ್ಕರಿಸೆ (ಸೌಂದಪು. ೧೫-೩೧). [ ಜಣತ್ಕರಣ$_0$ + – ಇಸು$_3$ ]

**ಜಣಬೆ** 'ಜಳವೆ' ನೋ.

**ಜಣರು** (ನಾ). ಜಣಜಣವೆನ್ನುವ ಕೊರಳ ಗಂಟೆ,–ಗೆಜ್ಜೆ (?) : ಕನ್ನೆಣ್ಣೆ ನಿನಗೇಕೆ ಕೆನ್ನೆ ಮೇಲಿನ ತುರುಬು ಉತ್ನೆತ್ತಿಗೇಕೆ ಹುರಿಗೆಜ್ಜೆ ಗಾಣಿಗನ ಮೊನ್ನೆತ್ತಿಗೇಕೆ ಜಣರೆಂಬೆ (ಹಳ್ಳಿಯು. ೧೪೩). [ <ಜಣ್ ]

**ಜಣಿಸು** (ಕ್ರಿ). (?) : ಶಸ್ತ್ರಾಸ್ತ್ರಗಳಲಿ ಮುಣಿಗಿಸಂಬರದಿಕ್ಕನೆಲನಂ ಯದೋಲೊಮ್ಮೆಯಣಾಕುವರ್ ಜಣಿಸುವರ್ ಶರಜಾಲ ಜಾಲಮಂ ಕ್ಷಣಕೆದಾಹುತಿಗೊಳಿಪರ್ (ಜಿನಮು. ೨೬-೨೦). [ ? ]

**ಜತನ** 'ಯತನ' ನೋ.

**ಜತನಗೆಯ್** 'ಯತನಗೈ' ನೋ.

**ಜತನದಪ್ಪು** (ಕ್ರಿ). ಜೋಕೆತಪ್ಪು ;ಎಚ್ಚರತಪ್ಪು ; ಜೋಪಾನವಿಲ್ಲದಿರು: ಸಿತರಾಜಾನ್ನ ಸದ್ಘೃತ ತೊವ್ವೆಗೂಡಿ ನಿರ್ಮಿತವಾದ ತೋರದುತ್ತುಗಳ ಜತನದಪ್ಪದೆ ಕೈಕೊಂಡರು ಕೃಷ್ಣಾರ್ಪಿತವೆಂದು ಪರಿತೋಷವಡೆದು (ಮೋಹತ. ೩-೫೫). [ ಜತ್ತನ (<ಯತನ) + ತಪ್ಪು$_1$ ]

**ಜತನಪೊದ್ದು** (ಕ್ರಿ). ಜೋಪಾನವಾಗಿರು; ರಕ್ಷಣೆಹೊಂದು; ಸುಭದ್ರತೆಯನ್ನು ಹೊಂದು : ಒಣಗಿದ ಗಜ್ಜುಗದ ಕಾಯೊಳಗದರ ಬೀಜ ಅನುಸರಿಸಿ ಇದ್ದಂತನಾದಿಯಿಂದ ಗುಣತ್ರಯಾತ್ಮಕವಾದ ಲಿಂಗದೊಳಗೆ ಜತನಪೊದ್ದಿಪ್ಪ ಆ ಸಮ್ಮಂಧದಲ್ಲಿ (ವಿದಾಕ್ಕ. ೪೪-೩).

[ ಜತನ (<ಯತನ) + ಪೊದ್ದು$_2$ (<ಪೊರ್ದು$_1$) ]

**ಜತನವಂತ** (ನಾ). ಪ್ರಯತ್ನಮಾಡುವವನು : "ಯಸ್ತಃ, ಯಸ್ತವಾನ್ . . . ಯಸಕಃ, ಈ ೫ ಜತನವಂತಂ" (ಕಾಶಕ್ಕ. ೧೯೧).

[ ಜತನ (<ಯತನ) + – ವಂತ ]

**ಜತನಿಗ** (ನಾ). ಪ್ರಯತ್ನಮಾಡುವ ಸ್ವಭಾವದವನು : " ಯೋಷತೇ = ಜತನಂಗೆಯ್ದಪಂ; ಯೋಷಕಃ, ಯೋಷಮಾಣಃ, ಈ ೨ ಜತನಿಗಂ" (ಕಾಶಕ್ಕ. ೧೨೦). [ ಜತನ (<ಯತನ) + – ಇಗ ]

**ಜತನಿಸು** (ಕ್ರಿ). ಪ್ರಯತ್ನಿಸು; ಉದ್ಯೋಗಿಸು: "ಯಸ್ಯತಿ=ಜತನಿಸಿದಪಂ" (ಕಾಶಕ್ಕ. ೧೯೧). [ ಜತನ (<ಯತನ) + – ಇಸು$_3$ ]

**ಜತಿ$_1$** (ನಾ). ೧. ಯತಿ ; ಮುನಿ ; ಋಷಿ: "ಜತಿ ಜೋಗಿ ತಪಸಿ ರಿಸಿಯೆಸೆ ಕಿತ್ತಡಿಯೆಂದೆನೆಲ್ ಋಷಿಗೆ ಪೆಸರಕ್ಕು" (ಕಬ್ಬಿಕ್ಕ. ೩೨) ; ಓಲಗದೊಳ್ ಕುಳ್ಳಿರ್ದ ಜತಿಗಳೇನೊಪ್ಪಿದರೋ (ಕಬ್ಬಿಕಾ. ೧೬೨) ; ಯತ್ವಕ್ಕೆ ಜತ್ವಂ– ಯತಿ–ಜತಿ (ಶಮದ. ೨೫೯ ಪ್ರಯೋ) ; ಥಳಿಥಳಿಪ ನಗೆಮೊಗವೊಪ್ಪುತ್ತಿರೆ ವಿರಾಜಿಸುತಮಿರ್ದಳು ಜತಿಗಳೆರ್ದೆವರಂ ಭೇದಿಸುವ ವಜ್ರಮಯ ಸೂಚಿಯಾ ಪರವೆನಾಚಿ (ಸೌಂದಪು. ೬-೪) ; ಚಲಗಯ್ಯೆಂಬುದು ಜತಿಗಳ್ ವ್ರತವಮಂ ಪಿಡಿವಲ್ಲಿ (ಉದ್ಭದೇ. ೨೨-೧೩). ೨. [ಸಂಗೀತ] ವಿಶ್ರಾಮಸ್ಥಾನ; ನಿಲುಗಡೆಯ ಸ್ಥಾನ: ಪೆಸರಜಿಯದಮರತೂರ್ಯ ಪಸರಂಗಳ ಜತಿಗೆ ತೊಡರದಿನಿಸೆಟಿಲದೆ ಬಣ್ಣಸರಂಗೊಂಡಂತಿರೆ (ಆದಿಪು. ೯-೩೧) : ಜತಿಯುಂ ಸೈತೋಜೆಯುಂ ತಾಳ್ದಿ ಗೋವಳರಾಯುಂ ಕೊಟಲೂದಿದಂ (ಜಗವಿ. ೫-೨) ; ಜಾಣಾಣ್ಮೆ ಜೋಕೆಯಿಂ ಜತಿ ರೀತಿ ತಾಳ ಪ್ರಮಾಣ ಕಂಪಿತ ಮೂರ್ಛೆ ರಸ ಪಾಡು ಬೆಡಗು . . . ಕೇಳಿಸಿದರವರು (ಜೈಮಿಭಾ. ೨೧-೫೭). ೩.=ಜತಿಸ್ವರ: ಗೀತ ಜತಿಗಳ ಮೇಳವಕೆ ಕೆಲರೋತು ಕುಣಿವರು (ಬಸಪು. ೪-೮) ; ಎರಡನೆಯ ಆವರ್ತದಲ್ಲಿ ಸುಂದರವಾದ ಜತಿಗಳು ಮಾತ್ರ ಇವೆ(ಸಂಗೀತ. ೧೪): ಪ್ರಚಾರದಲ್ಲಿರುವ ಅಡವುಗಳನ್ನೆಲ್ಲ ಯುಕ್ತರೀತಿಯಲ್ಲಿ ಹೆಣೆದು ಜತಿಗಳನ್ನೋ ಜತಿಸ್ವರಗಳನ್ನೋ . . . ಮಾಡುವರು (ಅಭಾನ್ನ. ೩೨). ೪. [ಛಂದ]ಪದ್ಯದ ಪಾದಗಳನ್ನು ಓದುವಾಗ ಉಸಿರು ನಿಲ್ಲಿಸುವ ಸ್ಥಳ ; ಉಸಿರ್ದಾಣ ; ಯಂತಿ : ಮನಸಿಜನೋಜೆ ಕಣ್ಣಮಸ ಜಾಣ್ನುಡಿ ಪಂಪನ ರೀತಿ ಚಂದ್ರಭಟ್ಟನ ಜತಿ ಪೊನ್ನಮಯ್ಯನ ಬೆಡಂಗು (ಜಗವಿ. ೧-೧೧). [ <ಸಂ. ಯತಿ ]

**ಜತಿ$_2$** (ನಾ). ಒಂದು ಬಗೆಯ ಔಷಧಿ ಸಸ್ಯ: "ಮಯೂಖಃ–ಜತಿ, ಕಿರಣ" (ಓಷಧಿ. ೧೧೭) ; ಜತಿ, ಹೊಡೆಮೂಲಂ, ಚಿತ್ರಮೂಲ, ಬಜೆ ಇಷ್ಟು ಪುಡಿ ಮಾಡಿ . . . ಕೊಳ್ಳೆ ಅಂಡಜದ ಕಾಟ ಮಾಣ್ಗುಂ (ವಿಷ್ಮವಿ. ೧೯೬). [?]

**ಜತಿಗುಡು** 'ಜತಿಗೊಡು' ನೋ.

**ಜತಿಗೆ** 'ಜೊತ್ತಗೆ' ನೋ.

**ಜತಿಗೊಡು,** ಜತಿಗುಡು (ಕ್ರಿ). [ಸಂಗೀತ] ಹಾಡಿನೊಂದಿಗೆ ಸರಿಗೂಡು; ಶ್ರುತಿಗೆ ಹೊಂದಿಕೆಯಾಗು : ಜತಿಗೊಡೆ ನೂಪುರಧ್ವನಿ . . . ನಡೆ ನೋಡಿದಳಾ ವೃಷೇಂದ್ರುನಂ (ವೃಷವಿ. ೫-೯). **ಜತಿಗುಡು :** ಮಂಜು ಮಂಜೀರ ಸಂಜನಿತಧ್ವನಿ ಪದನಖಮಯೂಖಮಾಲಾನರ್ತನಕ್ಕೆ ಜತಿಗುಡೆ ಮಂದಯಾನದಿಂ ನಡೆತಂದು (ರಾಜಶೇ. ೮-೧೮ ವ); ಮರ್ದಳೆಯ ತಾಳದ ಲಯಂ ಜತಿಗುಡೆ (ರಾಮಾಶ್ವ. ೨೩-೧೯). [ ಜತಿ$_1$ + ಕೊಡು$_1$ ]

**ಜತಿಮೆಟ್ಟು** (ಕ್ರಿ). [ನಾಟ್ಯ] ನೃತ್ಯದಲ್ಲಿ ಲಯಕ್ಕನುಸಾರವಾಗಿ ಹೆಜ್ಜೆ ಹಾಕು : ಲತೆ ತೆಂಬಲಗೊರ್ಯ್ಯನೆ ನರ್ತಿಪಂದದಿಂ ಸೊಗಯಿಸೆ ಗೋಪಿ ಡಕ್ಕೆಯ ಲಯಕ್ಕೆ ಪೆಬಿಳ್ ಜತಿಮೆಟ್ಟುತಾಡಿದಳ್ (ಜಗವಿ. ೫-೧೫).
[ ಜತಿ$_1$ + ಮೆಟ್ಟು$_1$ ]

**ಜತಿರಾಯ** (ನಾ). ಮುನಿಶ್ರೇಷ್ಠ ; ಯತಿರಾಜ : ವಾಣಿದೇವಿಗೆಯೋದಂ ಕಲಿಸುವ ಜತಿರಾಯನೆಸೆದನಲ್ಲಿ (ಜಯಕಾ. ೨-೨೬). [ ಜತಿ$_1$ + ರಾಯ ]

**ಜತಿವಗೆ** (ನಾ). ೧. ಯತಿಗಳ ಶತ್ರುತ್ವ. 'ಜತಿವಗೆಯ' ಪರಾ. ೨. ಯತಿಗಳಿಗೆ ಶತ್ರುವಾದವನು ; ಕಾಮ: " ಕುಡುವಿಲ್ಲ ಜತಿವಗೆ ಪಿರಿದಿಂ ಗೋಲ್ವಿಲ್ಲ ಕಾವ " (ಕವಿಕಂ. ೨೬). [ ಜತಿ$_1$ + ಪಗೆ$_2$ ]

**ಜತಿವಗೆಯ** (ನಾ).=ಜತಿವಗೆ ೨ : "ಇಂಗೋಲ್ವಿಲ್ಲಂ . . . ಜತಿವಗೆಯಂ, ಕುಡುವಿಲ್ಲಂ, ಅಯ್ಸರಳಂ, ಗಿಳಿದೇರಂ—ಇವು ೧೩ಕಾಮದೇವಂಗೆ ಪೆಸರ್" (ಕಶಸಾ. ೪೬-೧೩). [ ಜತಿವಗೆ + – ಅ$_7$ ]

**ಜತಿವೆಱು** (ಕ್ರಿ). ೧. [ನಾಟ್ಯ] ನೃತ್ಯದಲ್ಲಿ ಜತಿಯನ್ನು ಹೊಂದು. ೨. [ಛಂದ] ಕಾವ್ಯವಾಚನದಲ್ಲಿ ನಿಲುಗಡೆಯನ್ನು ಹೊಂದು,—ಯತಿಯನ್ನು ಪಡೆ. ೧, ೨ : ಜತಿವೆತ್ತೊಪ್ಪುವ ಮೃದು ಪದಗತಿಯುಂ . . . ತಳ್ತಿರೆ ವಿಳಸತ್ಕೃತಿಯಂ ಪೋಲ್ತುಬಳೆ ರಸಿಕರಂ ಮೆಚ್ಚಿಸಿದಳ್ (ರಾಜಶೇ. ೧೨-೧೬). [ ಜತಿ$_1$ + ಪೆಱು$_1$ ]

**ಜತಿಸ್ವರ** (ನಾ). [ನಾಟ್ಯ] ನೃತ್ಯಕ್ಕೆಂದು ನಿರ್ಮಿಸಿದ ಸ್ವರಯೋಜನೆ : ಪದವರ್ಣ ಜತಿಸ್ವರ ಮುಂತಾದ ಹಲವು ಬಾಬುಗಳನ್ನು ಅವರು ರಚಿಸಿದರು (ಭಾರದ. ೫೫೫) ; ಸಂಗೀತದ ಹಿನ್ನೆಲೆಯಲ್ಲಿ ಸಮ್ಮಿಳಿತವಾಗಿ ತಾಳಬದ್ಧವಾದ ಸರಳ ಸ್ಪಷ್ಟ ನರ್ತನವೇ ನೃತ್ತವು. ಈಗ ನಾವು ನೋಡುತ್ತಿರುವ ಜತಿ ಸ್ವರಗಳು ನೃತ್ಯಕ್ಕೆ ಸೇರಿದುವುಗಳು (ಅಭಾನ್ನ. ೨೬) ; ಸಾಹಿತ್ಯರಹಿತವಾದ ಈ ರಚನೆ ಜತಿಸ್ವರ ಎನಿಸಿಕೊಂಡಿದೆ. ಜತಿಸ್ವರಕ್ಕೆ ನೃತ್ಯದಲ್ಲಿ ಪ್ರಾಧಾನ್ಯವಿದೆ (ಸಂಗೀಜಂ. ೬೦). 'ಸ್ವರಜತಿ' ಪರಾ. [ ಜತಿ$_1$ + ಸ್ವರ ]

**ಜತು$_1$** (ನಾ). ಅರಗು ; ಲಾಕ್ಷ : ಶಿವಸಾನ್ನಿಧ್ಯದಿರವಿನಿಂದಗ್ನಿಯೊಳ್ಪತು ಕರಗುವಂತೆ ಭಾಸುರವಾರಿಯೊಳುಪ್ಪು ತವಿಪಂತೆ (ಅರಾಜ. ೧೧-೪೬) ; ಶಂಬರವಿಂಬುವೆತ್ತ ಚಮರಂ ಜತು ಪೇರುಡ ಪೀಲಿಯೆಂಬಿವಂ . . . ತಳೆದದೇಂ ತಳರ್ದತ್ತೊ ಪುಳಿಂದಸಂಕುಳಂ (ರಾಜಶೇ. ೫-೧೦೮). [ ಸಂ. ]

**ಜತು$_2$** (ನಾ). (?): ತೆಂಗಿನ ಮರ ಜತು ಆದ ಹನವುಲ್ಲ ಗದ್ದೆಯ (ಸೌಇಎ. ೧೯೩೨, ಉಡುಪಿ. ೩೩೮-೬ ; ?). [ ? ]

**ಜತುಕ** (ನಾ). ೧. ಹಿಂಗು; ಇಂಗು: "ಜತುಕ–ಇಂಗು" (ಗಂಗಾಮು. ೧೩೬). ೨. ಅರಗು. ೩. ಬಾವಲಿ ; ಕಣ್ಣುಕಪ್ಪಡಿ : ಒಂದೊಂದೆಡೆಯೊಳೊಗೆವ ದಾವಶಿಖಿಯ ಪೊಗೆಗೆ ಬೆಗಡುಗೊಂಡು ಪುಟುಗಳ್ ಬಿಟ್ಟುಪೋದ ನಟ್ಟ ಗೊಂಬಿನ ಜೇನಪುಟ್ಟಿಯಂ ಸಾರ್ದು ಪೀರ್ವ ಜತುಕನಿಕರಂಗಳುಂ (ಜಂದ್ರಪು. ೫-೬೫ ವ). [ ಸಂ. ]

**ಜತುಕೃತ್ತು** (ಗು). ೧. ಅರಗನ್ನು ಮಾಡುವ. (ನಾ). ೨. ಅರಗನ್ನುಂಟು ಮಾಡುವ ಒಂದು ಬಗೆಯ ಸುವಾಸನೆಯ ಮರ ; ಅರಗಿನ ಹುಳು ಗೂಡು ಕಟ್ಟಿಕೊಳ್ಳುವ ಒಂದು ಬಗೆಯ ಸುವಾಸನೆಯ ಮರ ; ಮುಳ್ಳಗಸೆ. [ ಸಂ. ಜತುಕೃತ್ ]

**ಜತುಕೆ** (ನಾ). ೧. ಅರಗು. ೨. ಮಯಣ; ಮೇಣ ; ಒಂದು ಬಗೆಯ ಗೋಂದು. ೩. ಬಾವಲಿ. ೪. ಒಂದು ಬಗೆಯ ಸುಗಂಧದ್ರವ್ಯ : " ಜತುಕೆ ಪಾಪಟೆಯೆನಿಕ್ಕುಂ " (ಮಂಗರಾ. ೪೨-೩೯).
[ ಸಂ. ಜತುಕ ]

**ಜತುಗೃಹ** (ನಾ). ಅರಗಿನ ಮನೆ ; ಲಾಕ್ಷಾಗೃಹ : ಕನಕನೆಂಬಂ ಬಂದು ಪಾಂಡವರಂ ಕಂಡೇಕಾಂತದೊಳ್ . . . ಜತುಗೃಹ ಕವಾಟಪುಟಸಂಧಿ ಗಳೊಳ್ಸುರಂಗಮಂ ಗಂಗೆಯೊಳ್ಮೂಡುವಂತಾಗೆ ಸಮೆದು ಪೇಟ್ದು ಪೋಪುದುಂ (ಪಂಪಭಾ. ೩-೪ ವ); ಅಂದು ಕುಶಸ್ಥಲಂ ಜತುಗೃಹಜ್ವಲನಕ್ಕೆ . . . ವಾರಣಾವತಂ ಸಂದ ಸಭಾಪ್ರತಾರಣಕೆ ಕಾರಣವೆಂದಳಿಪಲ್ಕೆ ಬೇಡಿದರ್ (ಗದಾಯು. ೩-೨೦). [ ಜತು$_1$ + ಗೃಹ ]

**ಜತುಗೇಹ** (ನಾ). = ಜತುಗೃಹ : ಜತುಗೇಹಾನಲ ಬೀಜಮುಗ್ರವಿಷ ಸಂಜಾತಾಂಕುರಂ (ಗದಾಯು. ೫-೫೬) , ಸೈರಿಸಿದರೇ ಪಾಂಡುಸುತ ರಂಭೋರುಹಾಕ್ಷಿ ರಜಸ್ವಲೆಯ ಸುಲಿಸೀರೆಯಲಿ ತತ್ಪೂರ್ವಕೃತ ಜತುಗೇಹ ದಾಹದಲಿ (ಕುವ್ಯಾ.ಗ. ೧೧-೪). [ ಜತು$_1$ + ಗೇಹ ]

**ಜತುಭವನ** (ನಾ). = ಜತುಗೃಹ : ಕೃತಕದ್ಯೂತೋದ್ಯುಕ್ತಂ ಜತುಭವನವ ಚುರ್ಚಿದಾತನುದ್ಧತಗರ್ವಂ (ಧನ್ಯಾಲೋ.೨೩೦).
[ ಜತು$_1$ + ಭವನ ]

**ಜತುಮುದ್ರೆ** (ನಾ). ೧. ಅರಗಿನ ಮುದ್ರೆ. ೨. (ಆಲಂ) ಮುಚ್ಚಿಡುವಿಕೆ; ರಹಸ್ಯ : ಮನವನೊರೆಯನೆ ನಿನಗೆ, ಮನದನ್ನ ಕೋರ್ದುದಂ ಕೊಡುವೆ ನೆಂದಾಣೆಯಿಟ್ಟಾಡಿದೊಡೆ, ಚುಂಬನದ ಜತುಮುದ್ರೆಯೊತ್ತಿ (ಶ್ರೀರಾಮಾ. ೬೯-೪೦೩). [ ಜತು$_1$ + ಮುದ್ರೆ ]

**ಜತುರಸ** (ನಾ). ಅರಗಿನ ರಸ ; ಅಲತಿಗೆ : ಸುದತಿಯ ಕೇಸಡಿಯನೂಡಿ ದಳ್ ಜತುರಸದಿಂ (ಜಗವಿ. ೧೦-೧೦೮). [ ಜತು$_1$ + ರಸ ]

**ಜತೂಕೆ** (ನಾ). " ಸಾರಣೆಗಿಡ, ಮುಳ್ಳಗಸೆ " (ಅಮರ. ಟೀಕ) : " ಜನೀ, ಜತೂಕಾ, ಜನನೀ, ಜತುಕೃತ್, ಚಕ್ರವರ್ತಿನೀ, ಸಂಸ್ಪರ್ಶಾ—೬ ಕೋರಿಂದೇ ಗಿಡದ ಹೆಸರು ಚಕ್ರವರ್ತೀಸೊಪ್ಪು " (ಸಿದ್ಧಾಂತಿ. ೧೨೯).
[ ಸಂ. ಜತೂಕಾ ]

**ಜತೆ** 'ಜೊತೆ$_1$' ನೋ.

**ಜತೆಕಟ್ಟು** 'ಜತೆಗಟ್ಟು' ನೋ.

**ಜತೆಗಟ್ಟು,** ಜತೆಕಟ್ಟು (ಕ್ರಿ). ೧. ಜೊತೆಗೂಡಿಸು ; ಒಟ್ಟುಗೂಡಿಸು : ಸತತ ನಿರ್ಮಾಲ್ಯಪುಷ್ಪವನು ಪೊಸಕುಸುಮಕ್ಕೆ ಜತೆಗಟ್ಟುವರೆ (ನವಮೋ. ೨೬-೭೪). **ಜತೆಕಟ್ಟು:** ೨. ಸ್ನೇಹಮಾಡು; ಗೆಳೆತನ ಮಾಡು : ಮಾತು ಬಿಟ್ಟಿದ್ದ ಅವರಿಬ್ಬರೂ ಈಗ ಜತೆಕಟ್ಟಿದರು (ರೂಢಿ). 'ಜತೆಬಿಡು' ಪರಾ.
[ ಜತೆ (<ಜೊತೆ$_1$) + ಕಟ್ಟು$_1$ ]

**ಜತೆಗಾತಿ** 'ಜೊತೆಗಾತಿ' ನೋ.

**ಜತೆಗಾರ** 'ಜೊತೆಗಾರ' ನೋ.

**ಜತೆಗಾರ್ತಿ** 'ಜೊತೆಗಾರ್ತಿ' ನೋ.

**ಜತೆಗೂಡು** 'ಜೊತೆಗೂಡು' ನೋ.

**ಜತೆಬಿಡು** 'ಜೊತೆಬಿಡು' ನೋ.

**ಜತ್ತ$_1$** 'ಯತನ' ನೋ.

**ಜತ್ತ$_2$** (ನಾ). ಒಬ್ಬಾತನ ಹೆಸರು (?) : ಜತ್ತ ತಳವಾರ ಪೊಗುಣ್ಡ ಕಾಳೆ ಗದುಳ ಎಱಿದು ಸತ್ತ (ಎಕ. IX, ನೆಲಮಂ. ೩೪-೩ ; ಸು. 750 ?). [ ? ]

**ಜತ್ತ$_3$** (ನಾ).ಬತ್ತ ಮೊದಲಾದ ಧಾನ್ಯಗಳ ಅಳತೆಯ ಒಂದು ಪ್ರಮಾಣ (?) : ಗದ್ದೆಯಿಂ ಭತ್ತ ಮುಳಬ೧೫ಕು ಜತ್ತಂ ಬೆಟ್ಟಿನಕುಂ ಜತ್ತವನ ಬಾಳಿಕೆಯಿಂದ(ಸೌಇಎ. ೧೯೩೦, ಮಂಗಳೂರು. ೫೨೬-೨೬ ; 1375). [ ? ]

**ಜತ್ತ್ರಕ$_1$** 'ಜತ್ತುಕ' ನೋ.

**ಜತ್ತಕ₂** (ನಾ). ಮನೋಹರನಾದವನು ; ಚೆಲುವ : ತತ್ತನೆಯಂ ಸಕಳ ಮಹೀಪೋತ್ತಮನನವರತದಾನಿ ವೈರಿನೃಪಾಳೋನ್ಮತ್ತಗಜಸಿಂಹನಬಳಾ ಜತ್ತಕನೆಱೆಯಜ್ಞ ಪೊಯ್ಸಳಂ ಭೂವಿನುತ (ಎಕ. V, ಅರಸೀ. ೧೦೨-೧೨ ; 1100 ?) ; ಜತ್ತಕರಂ ಸುತ್ತಿಂದೊಳಗುಮಾಟ್ಟಿ ವಾತ್ಸ್ಯಾಯನನಂ ಪೊಱ ಪೊರಸು ಮಾಟ್ಟಿ (ಜಗವಿ. ೨-೨೦ ಅಡಿಟ); "ಜತ್ತಕನೆಂದು ವೇಶ್ಯಾವರಂ" (ಅಯ್ಯಾಶಾ). [ ? ]

**ಜತ್ತಕಿ** (ನಾ). ಮನೋಹರೆ ; ಚೆಲುವೆ : ತನುವಂ ತೆತ್ತಿಸಲ್ಕಮರಕಾಂತಾ ಜತ್ತಕಿಯರುಯ್ಯೆ ದೇಕಂ ನಾಕಕ್ಕೋದಂ (ಎಕ. XII, ಚಿಕ್ಕನಾ. ೧೮-೩೦ ; 1149) ; ಪೊಸಯಿಪ ಬೇಟವಮಂ ಬೆಳಸುವಿಚ್ಚೆಯ ಜತ್ತಕಿ ತಾನೆ ಲೋಕ ದೊಳ್ ಬಸನದ ಬಿತ್ತನಿಪ್ಪಳೊಡಗೂಡಿದೊಡಲ್ಲದಲಂಪು ಪೋಪುದೇ (ಸೂಕ್ತಿಸು. ೮-೪೦೦). [ ಜತ್ತಕ₂ + - ಇ₂ ]

**ಜತ್ತಕುಱ** 'ಜತ್ತುಕಱು' ನೋ.

**ಜತ್ತಕುಱೆಾಡು** 'ಜತ್ತುಕುಱೆಾಡು' ನೋ.

**ಜತ್ತಕುಱು** 'ಜತ್ತುಕಱು' ನೋ.

**ಜತ್ತಗನ್ನಡಿ** (ನಾ). ಜೋಡಿಗನ್ನಡಿ (?) : ನಿಲುವಗನ್ನಡಿ ಹಿಡಿದು ಮುಕ ನೋಡಿ ಅರಸರು ಜತ್ತಗನ್ನಡಿ ಎದಿರೆದುರು ಹಿಡಿಹಿಡಿದು ಸುತ್ತ ನೋಡಾಡಿ ಬಲು ತಿದ್ದಿ (ಲೋಕಗೀ. ೨೦೧). [ಇದು 'ಜೊತೆಗನ್ನಡಿ' ಇರಬಹುದು]

**ಜತ್ತನ** 'ಯತನ' ನೋ.

**ಜತ್ತರಟ್ಟ** (ನಾ). ಯುದ್ಧದಲ್ಲಿ ಬಳಸುತ್ತಿದ್ದ ಒಂದು ಬಗೆಯ ಯಂತ್ರ: ರಣರಂಗನೀಱನುಂ ಬಿಲ್ಲಂಕಕಾಱನುಂ ಆಹವಜತ್ತರಟ್ಟ . . . ಶರಣಾಗತ ವಜ್ರಪಂಜರನುಂ ವೈರಿದಿಕ್ಕುಂಜರನುಂ (ಎಕ. VI, ಕಡೂರು. ೧೪೮-೪೭ ; 1202) ; ತರಿಸಿ ಲೋಹದ ಜತ್ತರಟ್ಟವ [ಪಾಠಾಂ. ಜಂತ್ರರಾಟವ, ಜತ್ತ ಗಂಟವ] ಹರಹಿದರು ಸೂಲಿಗೆಯ ಬಂಡಿಯನಿರಿಸಿವರು (ಕುವ್ಯಾಕ. ೨-೧೧). [ ? ]

**ಜತ್ತರಟ್ಟೆ** (ನಾ). [ಛಂದ] ಒಂದು ಬಗೆಯ ವೃತ್ತ : ಆದ್ಯಂತ ಪ್ರಾಸ ಯಮುಕಮುಂ ಜತ್ತರಟ್ಟೆಯುಮೆಂಬುದಕ್ಕುಂ (ಮದತಿ. ೧-೪೩). [ ? ]

**ಜತ್ತವಟ್ಟ** (ನಾ). (?) : ಶಕ್ರನೃತ್ಯದೊಳೊಡಂಬಡೆ ನರ್ತಿಸುವಲ್ಲಿ ಜತ್ತವ [ಪಾಠಾಂ. ಲ]ಟ್ಟದ ಮಣಿಯಂತದೇಂ ಪದುಳವಾದುದೊ ದಿವ್ಯವಧೂ ಕದಂಬಕಂ (ಆದಿಪು. ೭-೧೨೪). [ ? ]

**ಜತ್ತಾಯತ, ಜತ್ತಾಯಿತ** (ನಾ). ಅಧಿಕವಾದ ಜೋಕೆ,-ಜೋಪಾನ,- ಎಚ್ಚರಿಕೆ : ಇತ್ತ ನಾವೀ ಶರಣರೊಳಗೆ ಕೆಲಬರ್ ಸಹಿತೆ ಜತ್ತಾಯತ ದೊಳಾನೆ ಕುದುರೆ ಕಾಲಾಳುಗಳ ಮೊತ್ತಸಹಿತತಿಜತನವಾಗಿ ನಮ್ಮರ ಮನೆಯನೇ ಕಾದುಕೊಂಡಿರ್ಪೆವು (ಚೆಬಪು. ೬೨-೨೨) ; ಮೈಸೂರವರೆತ್ತಿದ ಬಿರುದಿನ ಭಟರು ಕತ್ತಲೆ ಹಗಲಂತಿರುವುದವರಿಗೆ ನೀವು ಜತ್ತಾಯತದೆ ತೆರಳೆಂದ (ಕಂಠವಿ. ೧೧-೧೦೮). **ಜತ್ತಾಯಿತ :** ಅಲ್ಲಿ ಮಾಱಾಂಕದವನೊಪ್ಪೆ ಸಿಂಗರಿಸಿ ಭರದಿಂದೆ ಜತ್ತಾಯಿ[ಪಾಠಾಂ. ಯ]ತಂ ಮಿಗಲು ತರಹರಿಸಿ ಗಳೆಯೊಡ್ಡೆ ಸರಸರನೆ ನಡುಗಳಕೆ ನಡೆತರಲು (ಬಿಡಾರ. ದೇ. ೧೧೮-೨) ; ದೂರಗತಿ ಚಿತ್ರಗತಿಗಳಂ ತೋಱೆ ಜತ್ತಾಯಿತಂ ಮಿಕ್ಕು ಹಲಗೆಯ ಹಲ್ಲಣೆಯಂ ತೆಱೆದು . . . ನಾಲ್ಕು ತೆಱದ ಧಾರೆಯಂ ಮೂಱು ತೆಱದ ನಿವಾರಣೆಯಂ ನಾಲ್ಕು ತೆಱದ ಪೊಯ್ಲಂ ಬಿತ್ತರಿಸಿ (ತ್ರಿಪುವಿ. ೨೩-೧೪ ವ). [ ಜತ್ತ₁ (<ಯತನ) + ಆಯುತ₄ ]

**ಜತ್ತಾಯುತವಡೆ** (ಕ್ರಿ). ಎಚ್ಚರಿಕೆಯಿಂದ (ಪೂರ್ವ) ಸಿದ್ಧತೆಯನ್ನು ಹೊಂದು,-ಸನ್ನಾಹಗೊಳ್ಳು,-ಸಜ್ಜಾಗು : ಬಾಣಾಸುರ ಬರ್ಪ ಸಮಯಕ್ಕೆ ನವ ಪಂಚಬಾಣ ಹರ್ಮ್ಯವನಡರ್ದೊಡನೆ ಬಾಣನಂದನೆಯ ಕುಸ್ತರಿಸಿ ಬಂದನು ಬಿಲ್ಲು ಬಾಣ ಜತ್ತಾಯುತವಡೆದು (ಮೋಹತ. ೩೩-೧೦). [ ಜತ್ತಾಯುತ + ಪಡೆ₁ ]

**ಜತ್ತಾಯುತವೇಱು** (ಕ್ರಿ). ಅಧಿಕವಾದ ಎಚ್ಚರಿಕೆ ಹೊಂದು; ವಿಶೇಷ ಗಮನ ವಿಡು ; ತುಂಬ ಜೋಪಾನವಾಗಿರು : ಒತ್ತರಿಸಿದ ಸಂಜೆಗೆಂಪು ನುಂಗಿದ ಕರ್ಗತ್ತಲೆಯೊಳು ನಿಶಾಚರನು ಜತ್ತಾಯುತವೆತ್ತು ನಡೆತಂದು ಕಂಡ ದೇವೋತ್ತಮನಿರ್ದ ಪಟ್ಟಣವ (ಮೋಹತ. ೧೧-೧೮). [ ಜತ್ತಾಯುತ + ಪೆಱು₁ ]

**ಜತ್ತಾಯಿತ** 'ಜತ್ತಾಯತ' ನೋ.

**ಜತ್ತಿ** (ನಾ). ಜಟ್ಟಿ; ಮಲ್ಲ : ಮಱುವಕ್ಕದ ಜತ್ತಿಭಟರ್ಕ್ಕಳ ಪಲರುಮಂ ಕೊನ್ದು (ಎಕ. VIII, ಸೊರಬ. ೨೨-೪; ಸು.800). [ <ಜಟ್ಟಿ₁ ]

**ಜತ್ತಿಗೆ** 'ಜೊತ್ತಗೆ' ನೋ.

**ಜತ್ತಿಳ** (ನಾ). ಕಾಡಿನಲ್ಲಿ ಬೆಳೆಯುವ ಎಳ್ಳು ; ಕಾಡೆಳ್ಳು : "ಜತ್ತಿಳ ಮೆಂಬುದು ಕಾಡೆಳ್ಳು" (ಹಲಾಯು. ೯೩-೪೨೯). [< ಸಂ. ಜರ್ತಿಲ ]

**ಜತ್ತು** 'ಜೊತ್ತು₁' ನೋ.

**ಜತ್ತುಕ, ಜತ್ತಕ₁** (ನಾ). ೧. ಮೋಸ ; ಕಪಟ ; ವಂಚನೆ : 'ಜತ್ತುಕ ಮೆನೆ ಕೈತವಂ" (ಚತುನಿ. ೧೨) ; "ಕೈದವಂ ಕೈತ ಜತ್ತುಕಮೆಂದು ಕಪಟಕ್ಕೆ ಐದಿರ್ಪ ನಾಮ" (ಶಬ್ದಮಂ. ೫೩) ; ಜತ್ತುಕದ ಮಾರಣದ ಹೋಮಧ್ವಿ ಹೊತ್ತಿ ದಳ್ಳುರಿ ನಭವನಡರಿತು (ಕೌಶಿರಾ. ೧೯-೬೭) ; ಎತ್ತಣ್ಣು ವರದನಾಥನ ಜತ್ತುಕದಲ್ಲಾಟವೆಂದು ಬಿತ್ತಿಗರಂ ಬಲ್ ಬಿತ್ತರಿಸಿ (ಹಮ್ಮೀರ. ೭-೫) ; ಇಂದಿನೀ ವಿಸಸನದೊಳಾಱಿಯ ಜತ್ತುಕದ ನಿಶಾಟ ಸುಬ್ಬಿನ ಬಲಮಂ ಗೋಣ್ಮುಱಿದು (ರಾಮಾಶ್ವ. ೦೧೧-೧೨). **ಜತ್ತಕ₁ :** ೧. "ಜತ್ತಕಮೆಂದು ಕೈತವಂ" (ಕಶಸಾ. ೭೦-೫೬೨) ; ಮೃತ್ಯುಹರ ನಿನ್ನಾಜ್ಞೆ ಪೊತ್ತು ಬೊಮ್ಮಾಳಿಯಂ ತುತ್ತುವೆನಗಘವೇಕೆ ಪೊರ್ದದೆಂದು ಹತ್ತಿತೇ ನಿನಗೆ ಬಿಡು ಜತ್ತಕವಿದೇಕೆಂದು ಮೃತ್ಯು ನಗುತೆಂದುದು (ಸಾನಂಚ. ೨-೨೩) ; ಆಸೆಯ ಪಕ್ಕೆ ಪಳಾಳದ ಪಾಸಂ ಜತ್ತಕದ ಜನ್ಮಭೂಮಿ . . . ಎನೆ ಸೂಳೆಗೇರಿ ಕಣ್ಗೆಸೆದಿರ್ಕುಂ (ವೀರವಿ. ೬-೯೭); ಈ ಇವನ ವಿಸ್ಪಷ್ಟ ಕಲ್ಪನೆಯ ಜತ್ತಕವನ್ನು ಭೇದಿಸಿ (ಮಂತ್ರಶ. ೯೩-೧೭). ೨. ವಂಚನೆಯ ಮಾತು : ಈ ದೂದವಿ ಜತ್ತಕಮಂ ನುಡಿದು ಜವಕವಿಲ್ಲದೆ ಕೂಡಿದಳೆಂದು ನುಡಿಯುತ್ತುಂ ಪೋಗೆ(ಅನಂಪು. ೮-೨೯ ವ). ೩. ಕಪಟಿ ; ಮೋಸಗಾರ: ಜತ್ತಕನ ನುಡಿಗೆ ತೆಕ್ಕಿದನೆ ತೆರಳಿದನೆ ತಲೆಗುತ್ತಿದನೆ (ಹಚಕಾ. ೮-೫೫). [ ದೇ.॥ ತಮಿ. ಮಲ. ಚತಿ ; ಕೊಡ. ಚದಿ ; ತೆಲು. ಜಿತ್ತು ]

**ಜತ್ತುಕಱು, ಜತ್ತಕುಱ, ಜತ್ತಕುಱು, ಜತ್ತುಕುಱು** (ನಾ). ಚೇಷ್ಟೆ; ಲೀಲೆ ; ವಿನೋದ : ತೆತ್ತುತನಕ್ಕೆ ತೆತ್ತುತನಮಂ ಪುಸಿನಲ್ಮೆಗೆ ಪೋದಿ ನಲ್ಮೆಯಂ ಜತ್ತುಕಱುಂಗೆ ಜತ್ತುಕಱನಾಸೆಗಮಾಸೆಯನಾದಲಂಪಿನಿಂ . . . ಪೊಣರ್ಚುರ್ತ್ತುಂ (ಕಾವ್ಯಸಾ. ೯೮೫ ಶೂದ್ರಕ). **ಜತ್ತಕುಱ :** ಕಾದಿದ ಕಾಳೆಗಂ ಜವನ ಜತ್ತಕುಱಕ್ಕೆ ಸಮಾನವಾದುದು (ಅನಂಪು. ೧೦-೭೪). **ಜತ್ತಕುಱು :** ಕೊಲ್ಲುವ್ವದಹಿ ಮುಂ ತಪ್ಪಿತ್ತೆನೆ ಪೊಡೆವುದು ಬಱಸಿಡಿ ಲೆತ್ತಿದು ಮಾನವರ್ಗೆ ಜವನ ಜತ್ತಕುಱಲ್ತೇ (ಚಂದ್ರಪು. ೯-೦೩) ; ಜವನ ಜತ್ತಕುಱುಮಂ ಪೇಱೆಯ್ವಡೆ (ಅನಂಪು. ೩-೭೦ ವ). **ಜತ್ತುಕುಱು :** 'ಜತ್ತುಕುಱೆಾಡು' ಪರಾ. [ ? ]

**ಜತ್ತುಕುಱು** 'ಜತ್ತುಕಱು' ನೋ.

**ಜತ್ತುಕುಱೆಾಡು, ಜತ್ತಕುಱೆಾಡು** (ಕ್ರಿ). ಚೇಷ್ಟೆಮಾಡು ; ವಿನೋದ ಮಾಡು ; ಲೀಲೆಯಾಡು : ಜಡಿವಂ ಜತ್ತು[ಪಾಠಾಂ. ತ್ತ]ಕುಱೆಾಡುವಂ ಬಳಸುವಂ ಬೆನ್ನಟ್ಟುವಂ ಮುಟ್ಟುವಂ ಪಿಡಿವಂ ಮಕ್ಕಳನೇಂ ಕರಂ ವಿಕರಿಯೊ ಕೂಸಾಟದೊಳ್ ಕೇಶವಂ(ಅರ್ಥನೇ. ೭-೮೫). **ಜತ್ತಕುಱೆಾಡು:** ಜತ್ತಕಱೋ [ಕುಱಾ] ಡಿ ಕಾಡೆ ಮದನಂ . . . ತಳರದಿರ್ದುದು[ರಾಜ] ಕುಮಾರನಂಗದೊಳ್ (ವರ್ಧಮಾ. ೧೦-೨೦). [ ಜತ್ತುಕುಱು (<ಜತ್ತುಕಱು) + ಆಡು₁ ]

**ಜತ್ತುಗ** (ನಾ). ಚಂದ್ರ. 'ಜತ್ತುಗದಲೆಯಂ' ಪರಾ. [<ಸಂ. ಜೈವಾತೃಕ]

**ಜತ್ತುಗದಲೆಯ** (ನಾ). ಚಂದ್ರಶೇಖರ; ಶಿವ: "ಎಲುಗೈಯ . . . ಜತ್ತು [ಪಾಠಾಂ. ಜೈತು]ಗದಲೆಯನೆನೆ ಸತ್ಕವೀಂದ್ರರ್ ಸಲೆ ಪೇಳ್ವರ್ ಸ್ಮರಹರಂಗೆ ನಾಮವಿದೆನುತುಂ" (ಕವಿಕಂ. ೧೮). [ಜತ್ತುಗ + ತಲೆ$_1$ + – ಅ$_7$]

**ಜತ್ತುಗೊಳ್ಳು** (ಕ್ರಿ). ಜೊತೆಯಾಗಿರು ; ಕೂಡಿಕೊಂಡಿರು : ಚಿತ್ರಭವ ರತಿ ದೇವಿಯರು ತಮ್ಮ ವಾಸದಲ್ಲಿ ಜತ್ತುಗೊಂಡಿರಲು (ನವಮೋ. ೩೩-೩೭).
[ಜತ್ತು (<ಜೊತ್ತು$_1$) + ಕೊಳ್ಳು$_1$ (<ಕೊಳ್$_1$)]

**ಜತ್ತುವೆ** (ನಾ). ಒಂದು ಬಗೆಯ ಸಸ್ಯ : ಯಕ್ಕೆ, ಜತ್ತುವೆ, ಹಂಬುಕಳ್ಳಿ, ನಂಜಿನ ಕೊರಡು, ಸಮುದ್ರಪಾಲ, ಕಾಚಿ (ನಮ್ಮನು. ೨೩೮). [?]

**ಜತ್ತುಳ$_1$** (ನಾ). ಕಪಟ; ಮೋಸ; ಠಕ್ಕು: ಅತ್ತಲಾ ಸೆರಗಾಳ್ಗಳಿದನೆಲ್ಲಮಂ ನೋಡಿ ಜತ್ತುಳವಿದೆಂದೊರೆದು ನಗೆ ಹೊಗೆಯೊಳಿಹರು (ಶಾಲೂರ. ೧೬೮-೩೭೪). [<ಜತ್ತುಕ]

**ಜತ್ತುಳ$_2$** (ನಾ). ನೊರೆ : "ಜತ್ತುಳಮೆಂದು ಫೇನಂ" (ಕಕಶಾ. ೫೩-೧೪೪) ; "ಜತ್ತುಳವೆಂದು ಪೆಸರಕ್ಕು ನೊರೆಗೆ" (ಕಬ್ಬಿಗ. ೧೨) ; "ಜತ್ತುಳವೆನಲ್ ನೊರೆಯಕ್ಕು" (ಕಬ್ಬ.ಮಂ. ೩೭) ; ನಗೆ ಜತ್ತುಳಂ ಜಠರದೊಳ್ ತೊರ್ಪಬ್ಬ ಪಾತಾಂಡಸಂಕುಳಮೋ ಬುದ್ಬುದವಾಗೆ ವಿಷ್ಣುವೆನೆ ಕಣ್ಗೊಪ್ಪಿತ್ತು ನೀರಾಕರಂ (ಉದ್ಭಟ. ೧-೩೮). [?]

**ಜತ್ತೆ** (ನಾ). ಜೊತೆ (?) : ನೋಡಲಿಬಾರದ ಆಡಲಿಬಾರದ ಈಡೆಂಬುದು ಅದಕ್ಕಿಲ್ಲದುದಾ ಕೂಡದ ಮನ ಬುದ್ಧಿಯ ಯಿಂದ್ರಿಯಗಳ ಝಾಡಿಯ ವೆಳಗಿನ ಜತ್ತೆ ಆದಾ (ಚಿದಾಕೋ. ೧೨೧೦-೩). [?]

**ಜತ್ರು** (ನಾ). ಕೊರಳಿನ ಎಲುಬು : ಸುಭಟನುನ್ನತವಕ್ಷನುದಾರಂ ನೆಟ್ಟನೆ ಸಂಗತಜತ್ರುವಿಂ ವಿಭವದೈಶ್ವರ್ಯಹೀನನೆನಿಕ್ಕುಂ ನೋಟಗ್ಗೋಡಡಂಗಿದ ಜತ್ರುವಿಂ (ಲೋಕೋಪ. ೧೧-೮) ; ಕಂಠದ ಕೆಟಗಂ ಜತ್ರುವೆ ತಾನೆಂಬ ಪೆಸರುಂ (ಅಶ್ವಶಾ. ೯-೩೦); ಶ್ವಾಸದ ಕೊಳವೆಯು ತ್ವಚೆಯಿಂದ ಹುಟ್ಟಿ ಆ ರಂಧ್ರದಿಂದ ಜತ್ರುಗಳವರೆಗೆ ನೆಟ್ಟಗೆ ಕೆಳಗಿಳಿದಿದೆ (ಮುಂಬಯಿ. ೬-೩೦೭).
[ಸಂ.]

**ಜತ್ವ** (ನಾ). ಜ ಎಂಬ ವರ್ಣ : ಇರೆಯಲರಹಿತ ವ್ಯಂಜನ ಪರಮಾಗಿ ಸಕಾರವಮಲ್ಲಿ ಬಹುಳಂ ಚತ್ವಂ ಅರೆವಿಡೆಯೊಳ್ ಜತ್ವಂ ಮೇಣರೆವಿಡೆಯೊಳ್ ಸಂಖ್ಯೆಯಾಗೆ ನಿಯತಂ ಛತ್ವಂ (ಶಮದ. ೬೮). [ಸಂ.]

**ಜದುಗೂರ್** (ನಾ). ಒಂದು ಊರಿನ ಹೆಸರು : ನಾಯರ್ಖಣ್ಣಮುಂ ಜದುಗೂರಾಳ್ಗೆಯನಾಳುತ್ತು (ಇಆ. XIX, ೧೮೬-೪: 7ನೆಯ ಶತ).
[? + ಊರ್]

**ಜನ** (ನಾ). ೧. ವ್ಯಕ್ತಿ; ಮನುಷ್ಯ: ಜನ ನೋಡಿ ಬೇಡಬೇಕು ಜಾಗ ನೋಡಿ ಉಗುಳಬೇಕು (ಗಾದೆ). ೨. ಮನುಷ್ಯರ ಸಮುದಾಯ; ಪ್ರಜೆ : "ಲೋಕಂ ಜನಮುಂ ಜಗಮುಂ" (ವಸ್ತುಕೋ. ೧೨೧-೨೦) ; "ಜನಃ, ಲೋಕಃ, ಪ್ರಜಾ–ಈ ೩ ಪ್ರಜೆ" (ಹಲಾಯು. ೪೭-೦೨೯) ; ಪೊಟಲ ಜನಂಗಳೆಲ್ಲಂ ಕೇಳ್ದು (ವಡ್ಡಾರಾ. ೮೩-೪) ; ಜನಮಿನಿತದೇಕೆ ಭಯದಿಂ ತನತನಗೋಡುತ್ತುಮಿರ್ಪುದು (ಕಾಸುಮಾ. ೧೧-೭) ; ಜನ ಮರುಳೋ, ಜಾತ್ರೆ ಮರುಳೋ (ಗಾದೆ). ೩. ಏಳು ಊರ್ಧ್ವಲೋಕಗಳಲ್ಲಿ ಒಂದು; ಭೂಮಿಯಿಂದ ಮೇಲೆ ಐದನೆಯ ಲೋಕ ; ಮಹರ್ಲೋಕದ ಮೇಲಿನ ಲೋಕ ; ಜನಲೋಕ : "ಬಿತ್ತರದ ಭೂರ್ಭುವಂ ಸ್ವರ್ಮಹಂ ಜನ ತಪಂ ಸತ್ಯಮೆಂದೇಟು ಮೇಲಣ ಲೋಕಮಕ್ಕು" (ಮಂಗರಾ. ೧೧-೩೨). [ಸಂ.]

**ಜನಂಗಮ** (ನಾ). ಹೊಲೆಯ; ಚಾಂಡಾಲ: "ಅಂತಾವಸಾ[ಶಾ]ಯಿ, ಚಂಡಾಳಃ, ನಿಷಾದಃ, ಜನಂಗಮಃ – ಈ ೪ ಪೊಲೆಯಂ" (ಹಲಾಯು. ೯೮-೪೪೪) ; "ನಿಷಾದಂ ಜನಂಗಮನು ದುಷ್ಕರ್ಮನೆನೆ ಹೊಲೆಯ" (ಮಂಗರಾ. ೧೧೨-೬). [ಸಂ.]

**ಜನಕ** (ಗು). ೧. ಹುಟ್ಟಿಸುವ; ಉತ್ಪತ್ತಿಮಾಡುವ; ಉಂಟುಮಾಡುವ. (ನಾ). ೨. ಉತ್ಪತ್ತಿಗೆ ಕಾರಣವಾದುದು; ಹುಟ್ಟಿಸುವುದು: "ಜನಿಯಿಸೆ ಮುನ್ನಂ ಜನ್ಮಂ ಜನಕದಿನದು ಪೂರ್ವಮೆಂಬುದಕ್ಕುಂ" (ಕಾವ್ಯಾವ. ೭೪೦). 'ಸಾರಜನಕ', 'ವಿದ್ಯುಜ್ಜನಕ' ಪರಾ. ೩. ತಂದೆ ; ಅಪ್ಪ : "ವಪ್ತಾ, ತಾತಃ, ಜನಕಃ, ಪಿತಾ – ಈ ೪ ತಂದೆ" (ಹಲಾಯು. ೮೩-೩೫೦) ; ಜನಕನೆನಾಂ ನಿನಗೆನಗಾ ದನುಜಹರಂ ಜನಕಂ (ಜಗವಿ. ೦-೩೪) ; ಜನಕಾದೇಶದೆ ಬಂದನಲ್ಲಿಗೆ ಕುಮಾರಂ (ಪುಷ್ಪಪು. ೪-೮೦). ೪. ವಿದೇಹರಾಜ ; ಸೀತೆಯ ತಂದೆ : ಮುನಿಪತಿಯ ಬಳಿಗೆ ಬಂದರು ಜನಕಭೂಪನ ಬಳಿಯ ಮಣಿ ಹಾಜಿರು (ತೊರರಾ. ೧-೧೨-೨) ; ರನ್ನ ಸೀತೆಯೆತ್ತವೋದಳ್? ಜನಕಂ ಜನಕಂ ಕರೆದುಯ್ದಿರ್ದನೇಂ (ರಾಮಾಶ್ವ. ೧೭-೧೪). [ಸಂ.]

**ಜನಕರಾಗ** (ನಾ). [ಸಂಗೀತ] ಸಂಪೂರ್ಣರಾಗ ; ಮೇಳಕರ್ತರಾಗ : "ಜನಕರಾಗ – ಸಪ್ತಸ್ವರಗಳು, ಆರೋಹಣ ಅವರೋಹಣ ಕ್ರಮದಲ್ಲಿ, ಕ್ರಮವಾಗಿ ಮೇಳೈಸಿದರೆ ಜನಕ ಅಥವಾ ಮೇಳಕರ್ತರಾಗವಾಗುತ್ತದೆ" (ಸಂಗೀಅಂ. ೩೦). [ಜನಕ + ರಾಗ]

**ಜನಕುಕ್ಕಲು** (ನಾ). ಜನರ ನಿಂದೆ,–ಮೂದಲಿಕೆ : ಜನಕುಕ್ಕಲನ್ನು ಕೇಳದೆಯೂ ಬ್ರಾಹ್ಮಣ ಹಾಳಾಗುವನಲ್ಲ! ಎಂಬ ಭಾವನೆಯಿಂದಲೂ ಏಷ್ಟೋ ಜಗಳವಾಡುವರು (ಬಾಗಿನ. ೫೨). [ಜನ + ಕುಕ್ಕಲು$_1$]

**ಜನಕೂಟ** (ನಾ). ಜನ ಸಮುದಾಯ: ಕರ್ಣನು ಅರ್ಜುನನನ್ನು ಯುದ್ಧಕ್ಕೆ ಕರೆದ ಕೂಡಲೆ ಜನಕೂಟ ಕುತೂಹಲಗೊಂಡು ಎರಡು ಕಕ್ಷಿಯಾಗಿ ಒಡೆಯಿತು (ವ್ಯಾಸಜಿ. ೪೯). [ಜನ + ಕೂಟ$_1$]

**ಜನಕೆ** (ನಾ). ತಾಯಿ; ಜನನಿ: ಕ್ಷೀರಾಪಾರಿಧಿಕನ್ನಿಕೆ ಮಾರಜನಕೆ ಈರೇಳು ಲೋಕನಾಯಿಕೆ (ವಿದಾಕ್ಷ. ೫೫ ಪಲ್ಲವಿ). [<ಸಂ. ಜನಿಕಾ]

**ಜನಕೋಟಿ** (ನಾ). ಕೋಟ್ಯಂತರ ಜನ ; ಅಸಂಖ್ಯಾತ ಜನ; ಜನಸಮುದಾಯ : ತಮ್ಮ ಸಾತ್ವಿಕಪ್ರಭಾವದಿಂದ ಜನಕೋಟಿಯನ್ನು ದೈವದ ಕಡೆಗೆ ಸೆಳೆಯುತ್ತಿರುವ ಮಂತ್ರಾಲಯದ ಶ್ರೀ ರಾಘವೇಂದ್ರಸ್ವಾಮಿಗಳು (ಭಾರದ. ೨೯೩). [ಜನ + ಕೋಟಿ$_1$]

**ಜನಗಣತಿ** (ನಾ). ಜನರ ಎಣಿಕೆ; ಖಾನೇಷುಮಾರಿ; ಸೆನ್ಸಸ್ಸು: ಕೊನೆಯ ಸಾರಿ ನಡೆದ ಜನಗಣತಿಯ ಮೇರೆಗೆ . . . ಏರ್ಪಡಿಸತಕ್ಕುದು (ಭಾಧಾನ. ೪೦); ೧೯೬೧ರ ಜನಗಣತಿಯ ವರದಿಯ ಅನುಸಾರವಾಗಿ ಸುಮಾರು ೧೫೫೩ ದ್ರಾವಿಡಭಾಷೆ – ಉಪಭಾಷೆಗಳಿವೆ (ದ್ರಾವಿವಿ. ೧ ಹಿನ್ನಲೆ).
[ಜನ + ಗಣತಿ$_2$]

**ಜನಗಣನೆ** (ನಾ). =ಜನಗಣತಿ: (Census. ಪತ್ರಿನಿ. ೧೪). [ಜನ+ಗಣನೆ]

**ಜನಗಿ$_1$** 'ಜನ್ನಿಗೆ' ನೋ.

**ಜನಗಿ$_2$** (ನಾ). ಒಂದು ಬಗೆಯ ಮರ: ಜನಗಿ–ಮಧ್ಯಮ ವೃಕ್ಷ, ಹಳದೀ ಬಣ್ಣದ ಫಲಗಳಾಗುತ್ತವೆ. ಅರದಾಳದಂಥ ಅಂಟು ಅವುಗಳಿಂದ ಸೋರುತ್ತದೆ (ಕಥಾಗಿ. ೩೯). [?]

**ಜನಜಂಗುಳಿ** (ನಾ). ಜನಸಮೂಹ,–ಸಮುದಾಯ : ಸುದ್ದಿ ಕಿಚ್ಚಿನಂತೆ ಜನಜಂಗುಳಿಯಲ್ಲಿ ಪಸರಿಸಿತು (ಹುಲಿಹಾ. ೧೨೮); ಪ್ರತಿಯೊಂದು ನಿಲ್ದಾಣದಲ್ಲಿಯೂ ಜನಜಂಗುಳಿ ವಿಶೇಷವಾಗಿ ನೆರೆದಿತ್ತು (ಮೂರಾನ. ೫).
[ಜನ + ಜಂಗುಳಿ]

**ಜನಜನಿತ** (ಗು). ೧. ಜನರಿಂದ ಉತ್ಪತ್ತಿಯಾದ,–ಲಭಿಸಿದ: ಅವನಿಯಲ್ಲಿ ಜನಜನಿತ ಧನಧಾನ್ಯವನು ಕಳಹಲಗೈದು . . . ಒಂದಕೆ ನೂರುಮಡಿಯಾಗಿ ಲವಲವಿಕೆ ಮಿಗಲಿತ್ತು ಸಪ್ತಾಂಗವನು ಸಲಹುತ್ತಿರಲುಬೇಹುದು(ಕುವ್ಯಾಉ. ೩-೧೨೫). ೨. ಜನರಲ್ಲಿ ಹಬ್ಬಿರುವ; ಎಲ್ಲರಿಗೂ ತಿಳಿದಿರುವ; ಪ್ರಸಿದ್ಧವಾದ : ಲೋಕಗುರು ಶಂಖಚಕ್ರಗದಾಕರನತಿಶಯ ಚತುರ್ಭುಜಂ ಜನಜನಿತ ವ್ಯಾಕುಳದೆ ಬಂದಂ (ಪಂಶಭಾ.೯-೩೦). (ನಾ). ೩. ಎಲ್ಲರಿಗೂ

ತಿಳಿದಿರುವ ಸಂಗತಿ; ಪ್ರಸಿದ್ಧವಾದ ವಿಷಯ: ಕೌರವಕುಲಕೆ ಕಣು ಗತಿಮತಿಯೆನಿಸಿ ನೀ ಕರ್ಣನೆಂಬುದು ಸಕಲ ಜನಜನಿತ (ಕುವ್ಯಾ,ಕ. ೦೯-೬೦) ; ನಿನ್ನವ್ವೆ ತೊತ್ತಲ್ಲವೆಂದೆನಿಸಿ ಜನಜನಿತವಂ ಮಾಡಿಸಿ (ತುರಂಗ. ೪-೪೬); ಅವರ ಚರಿತ್ರೆ . . . ಸುತ್ತಮುತ್ತ ಹಳ್ಳಿಗಳಲ್ಲೆಲ್ಲ ಜನಜನಿತವಾಗಿತ್ತು (ಮುರಳಿ. ೪). ೪. ಸಾಮಾನ್ಯವಾದ ಜನ: ಲಿಂಗಧಾರಿಗಳುಳಿದು ಜನಜನಿತಂಗಳಲಿ ಸದ್ಗತಿಯ ಕಾಣ್ಬುತ್ತುಂಗರರಿದೀ ಲೋಕರೊಳಗೆಂದಾಡಿಸಲ್ಲರಲಿ (ಬಿಜ್ಜ.ಪು. ೪೮-೫೦).

**ಜನಜನಿತಂಮಾಡು** = ಎಲ್ಲರಿಗೂ ತಿಳಿಸು; ಪ್ರಕಟಪಡಿಸು: ಇನಿಯನ ಮೊಗವಂ ಕಾಣಾತ ಮುತ್ತುಗಳನಿಮಿಷದೊಳ್ ಸಂಜನಿಸುವುದಂ ಜನಜನಿತಂಮಾಡುವ ತೆಱದಿಂ ಕಣ್ಗಳೊಳಶ್ರು ಜನಿಸಲಾಗ (ಜಯಕಾ. ೨-೪೪).

**ಜನಜನಿತವಾಗು** = ಜನರಲ್ಲಿ ಹರಡಂ,-ಪ್ರಚಲಿತವಾಗು : ಅವರನ್ನು ಒಂದೆರಡು ವಾರಗಳಲ್ಲಿ ಬಿಡುಗಡೆ ಮಾಡಬಹುದೆಂಬ ಸುದ್ದಿ ಜನಜನಿತವಾಗಿತ್ತು (ಪುನರು. ೩೩೯). [ ಜನ + ಜನಿತ ]

**ಜನಜಾಗೃತಿ** (ನಾ). ಜನಸಾಮಾನ್ಯರಲ್ಲಿ ಉಂಟಾಗುವ ಎಚ್ಚರ,-ಪ್ರಜ್ಞೆ ಏಷಿಯಾಭೂಖಂಡವೆಲ್ಲ ಜನಜಾಗೃತಿಯಿಂದ ತಳಮಳಗುಟ್ಟುತ್ತಿತ್ತು (ರಾಜ್ಯಶಾ. ೦೫) : ಭಕ್ತಿಪಂಥ ಪ್ರಚಂಡ ಜನಜಾಗೃತಿಯನ್ನುಂಟುಮಾಡಿತು (ಕರ್ನಾಕ. ೪೨) ; ಜನಜಾಗೃತಿ ಹೆಚ್ಚಿದ ಹಾಗೆಲ್ಲಾ ಲೋಪದೋಷಗಳು ಕ್ರಮೇಣ ಕಡಮೆಯಾಗುತ್ತಾ ಹೋಗುತ್ತವೆ (ಶಂಖಷಂ. ೦೮೫).

[ ಜನ + ಜಾಗೃತಿ ]

**ಜನಜಾತ್ರೆ** (ನಾ). ಬಹಳ ಜನ ಒಂದೆಡೆ ಸೇರಿರುವ ಗುಂಪು,-ಜಾತ್ರೆ : ಜನಜಾತ್ರೆಗೆ ಹೋದವನಂತೆ ಕೂಟದಲ್ಲಿ ಗೋಷ್ಠಿ ಹರಿದಲ್ಲಿ ತಮ್ಮ ತಮ್ಮ ಮನೆಯ ಇರವಿನ ಹಾದಿ (ಮೋಕಮಾ. ೭-೨೪) ; ಜನಜಾತ್ರೆಯಾಗಿ ಕವ್ವರೆಗೊಂಡು ಆ ನಾಡ ಜನವೆಲ್ಲವು ನೋಡುತಿರೆ (ಶ್ರೀಪಾಲ. ೭-೦೫೦) ; ಒಂದು ಲೋಕಲ್ ಗಾಡಿ ಬಂದು ಜನಜಾತ್ರೆಯೆಲ್ಲವೂ ಬಯಲಾಯಿತು (ಕಮಣಿ.೧).

[ ಜನ + ಜಾತ್ರೆ ]

**ಜನಜಾಲ** (ನಾ). ಜನಸಮೂಹ : ಸುರಿವ ಬಿಸುರಕ್ತದಿಂದಾ ಜನಜಾಲ ವೃದಿತು ದೆಸೆದೆಸೆಗೆ (ಕಂಪವಿ. ೦೦-೫೦). [ ಜನ + ಜಾಲ₂ ]

**ಜನತಂತ್ರ** (ನಾ). "ಪ್ರಜಾರಾಜ್ಯ ; ಪ್ರಜಾಸತ್ತೆ ; ಪ್ರಜಾಪ್ರಭುತ್ವ" (Democracy. ಪತ್ರಿನಿ. ೩೦). [ ಜನ + ತಂತ್ರ ]

**ಜನತಾಧಾರ** (ನಾ). ಪ್ರಜೆಗಳಿಗೆ ಆಧಾರವಾದವನು,-ಆಶ್ರಯವಾದವನು ; ಒಂದು ಬಿರುದು : ಜನತಾಧಾರನುದಾರನನ್ಯವನಿತಾದೂರಂ (ಎಕ. II, ೭೩-೮ ; 1148). [ ಸಂ. (ಜನತಾ + ಆಧಾರ) ]

**ಜನತಾಧೀಶ** (ನಾ). ಅರಸ; ರಾಜ: ಜನತಾಧೀಶನ ಕಾರ್ಯಮಂ ಬರಿಸಮಂ . . . ಪ್ರಯೋಜನಮಂ ತಾನಱಿದಲ್ಲಿಯುಂ ಬರೆದವಂಗೊಳ್ಪಕ್ಕುಂ (ಸೂಕ್ತಿಸು. ೦೬-೨೫). [ ಸಂ. (ಜನತಾ + ಅಧೀಶ) ]

**ಜನತಾಧೀಶ್ವರ** (ನಾ). = ಜನತಾಧೀಶ: ಜನತಾಧೀಶ್ವರ ಬಿನ್ನಪಂ (ಕಾದಂಪೂ. ೨೪). [ ಸಂ. (ಜನತಾ + ಅಧೀಶ್ವರ) ]

**ಜನತಾಶಯ** (ನಾ). ಜನರ ಮನಸ್ಸು,-ಚಿತ್ತ : ಮದಮದಿರಾಪ್ರಮತ್ತ ಜನತಾಶಯದಂತೆ ಜಡಾಶಯಂ ಕಲಂಕಿದುದು (ಶಂರಾಮಾ. ೭-೦೫೩).

[ ಸಂ. (ಜನತಾ + ಆಶಯ) ]

**ಜನತೆ** (ನಾ). ಜನಸಮೂಹ ; ಜನ ; ಮಾನವ ಸಮಾಜ: "ಜನತೆ ಜನ ಸಮಿತಿ" (ವಸುಕೋ. ೦೦೩-೩೦) ; ಪರಮಬ್ರಹ್ಮಶರೀರವೃಷ್ಟಿ ಜನತಾಂತ ರ್ದೃಷ್ಟಿ . . . ಸರ್ವಾಂಗಸುಂದರಿ ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯ ಸ್ಥಲೀರಂಗದೊಳ್ (ಶಂರಾಮಾ. ೧-೬); ವಿವೇಕಾನಂದರು ತಮ್ಮ ಪುಟ್ಟದಾದ ಆಶುಭಾಷಣದಿಂದ ಅಮೇರಿಕೆಯ ಜನತೆಯನ್ನು ಗೆದ್ದರು (ಧರ್ಮಸಾ. ೫೦).

[ ಸಂ. ಜನತಾ ]

**ಜನದಟ್ಟಣೆ** (ನಾ). ಕಿಕ್ಕಿರಿದ ಜನಸಂದಣಿ : ಜನದಟ್ಟಣೆಯು ವಿಶೇಷವಾಗಿತ್ತು (ಬಂಗಾಹ. ೭೬). [ ಜನ + ದಟ್ಟಣೆ ]

**ಜನದ್ರೋಹಿ** (ಗು). ೧. ಜನರಿಗೆ ದ್ರೋಹವಮಾಡುವ: ಆ ಜನದ್ರೋಹಿ ವಂಚಕರನ್ನು ವಿಚಾರಣೆಯಿಲ್ಲದೆ ಸೆರೆಮನೆಗೆ ತಳ್ಳಿರಿ (ರೂಪಸಂ. ೨೫). (ನಾ). ೨. ಜನರಿಗೆ ದ್ರೋಹ ಮಾಡುವವನು. [ಜನ + ದ್ರೋಹಿ ]

**ಜನನ** (ಗು). ೧. ಹುಟ್ಟಿಸುವ; ಸೃಷ್ಟಿಸುವ; ಉಂಟುಮಾಡುವ. (ನಾ). ೨. ಹುಟ್ಟಿಸುವುದು ; ಉತ್ಪತ್ತಿಮಾಡುವುದು. ೩. ಹುಟ್ಟುವುದು ; ಹುಟ್ಟು ; ಉತ್ಪತ್ತಿ : "ಜನನಂ ಜನ್ಮಂ ಪ್ರಸವಂ ಜನಿ ಜನುರುತ್ಪತ್ತಿ ಸೂತಿಯೇಕಾರ್ಥಮಿವಿಂತಿನಿತುಂ" (ವಸುಕೋ. ೦೮-೩) ; ಜನನ ಜರಾ ಮೃತಿಗೊಳಗಾಯ್ತಿನಿತು ಜಗಂ (ಮಲ್ಲಿಪು. ೦೩-೫೫) ; ಪೃಥ್ವಿಯಿಂದ ಸಕಲ ಜನನವು (ಬಸವ. ೯೫೬); ರಸವೆ ಜನನ ವಿರಸ ಮರಣ ಸಮರಸವೇ ಜೀವನ (ಗರಿ. ೦೦೪-೪) ; ಜೀವನು ಶರೀರವನ್ನು ಧರಿಸುವುದೇ ಜನನ (ಜೀವಾತ್ಮ. ೦೫೮). ೪. ವಂಶ : "ಸಂತತಿ ವಂಶಂ ಗೋತ್ರ ಸಂತಾನಂ ಜನನಮನ್ವವಾಯಂ ಕುಲಂ" (ವಸುಕೋ. ೫೬-೨೯). ೫. ಜನ್ಮ ; ಭವ : ಹಿಂದಣ ಜನನವೇನಾದಡಾಗಲಿ ಇಂದಿನ ಭೋಗವು ಕೆಯ್ಯ ಮೇಲೆ (ಬಸವ. ೦೭೦).

[ ಸಂ. ]

**ಜನನಪತ್ರಿಕೆ** (ನಾ). ಮಗು ಹುಟ್ಟಿದ ಕಾಲದ ಗ್ರಹಗತಿಯನ್ನು ವಿವರಿಸಿ ಬರೆಯುವ ಪತ್ರಿಕೆ ; ಜನ್ಮಪತ್ರ ; ಜಾತಕ. [ ಜನನ + ಪತ್ರಿಕೆ ]

**ಜನನಬೀಜ** (ನಾ). ಹುಟ್ಟಿನ ಮೂಲ,-ಕಾರಣ : ಜನನವೇ ಲಯಬೀಜ ಮರಣವೆ ಜನನಬೀಜವು ತೋಱೆ ಕಡುವೀ ತನುವಿನಭಿರಂಜನೆಯ ಸೌಖ್ಯಕೆ ಮಾಜದಿರು ಮನವ (ಕುವ್ಯಾ,ದ್ರೋ. ೭-೦೫). [ ಜನನ + ಬೀಜ ]

**ಜನನಮರಣದೂರ** (ನಾ). ಹುಟ್ಟುಸಾವುಗಳಿಲ್ಲದವನಂ ; ಪರಮಾತ್ಮ : ಜಯ ಜಯ ಜನನಮರಣದೂರ ಜಗದೀಶ (ಶತಸಾಂ. ೬೨-೮).

[ ಜನನ + ಮರಣ + ದೂರ ]

**ಜನನಮರಣವರ್ಜಿತ** (ನಾ). = ಜನನಮರಣ ದೂರ: ಅಮಮ ಬಂದಂ ಜನನಮರಣವರ್ಜಿತಂ (ಸಂಬಿರ. ೭-೦೦೬). [ ಜನನ + ಮರಣ + ವರ್ಜಿತ ]

**ಜನನರಹಿತ** (ನಾ). ಜನ್ಮವಿಲ್ಲದವನಂ; ಹುಟ್ಟಿಲ್ಲದವನು; ಪರಮಾತ್ಮ: ಜನನರಹಿತನ ಕರುಣವಿಲ್ಲದ ಮನುಜರಿಗೆ ದೊರಕುವುದೆ ಶಾಂತು (ಬಸಪು. ೦೨-೫೦). [ ಜನನ + ರಹಿತ ]

**ಜನನಸೂತಕ** (ನಾ). ಮಗು ಹುಟ್ಟಿದಾಗ ತಂದೆ, ತಾಯಿ ಮೊದಲಾದವರಿಗೆ ಉಂಟಾಗುವ ಮೈಲಿಗೆ ; ಪುರುಡು ; ವೃದ್ಧಿ : ಜಾತಿಸೂತಕ ಪ್ರೇತಸೂತಕ ಜನನಸೂತಕ ಉಚ್ಛಿಷ್ಟಸೂತಕ ರಜಸ್ಸೂತಕವೆಂಬ ಪಂಚ ಸೂತಕಂಗಳ ಕಳೆದು (ಅಬಂದೇ. ೮೭-೯೦). [ ಜನನ + ಸೂತಕ ]

**ಜನನಸ್ಥಳ** (ನಾ). ಹುಟ್ಟಿದ ಊರು,-ಪ್ರದೇಶ : ಬಾಕ್ . . . ಪಾರಸಿ ಮತವನ್ನು ಕಂಡುಹಿಡಿದ ಜೋರಾಷ್ಟರ್ ಎಂಬವನ ಜನನಸ್ಥಳವೆಂದು ಎಣಿಸೋಣವಾಗಿದೆ (ಭೂಗೋಳ. ೯೯). [ ಜನನ + ಸ್ಥಳ(=ಸ್ಥಲ) ]

**ಜನನಹರ** (ನಾ). (ಮರಳಿ) ಹುಟ್ಟುವುದನ್ನು ತಪ್ಪಿಸುವವನಂ; ಸಂಸಾರದ ಬಂಧನದಿಂದ ಪಾರಂಮಾಡುವವನು : ಜನನಹರ ಮುನಿ ದೊಡ್ಡೊಡಂ ಹಾಸಿನ ನಡುವೆ ಬಿದ್ದಂದವಾಯಿತ್ತನಗೆ (ಬಸಪು. ೪೩-೭೦).

[ ಸಂ. ]

**ಜನನಾಂಗ** (ನಾ). = ಜನನೇಂದ್ರಿಯ: ಕೀಟದ ಬಗೆಗಳನ್ನು ವರ್ಗೀಕರಿಸಲು ಬಾಹ್ಯ ಜನನಾಂಗಗಳು ಗಣನೆಗೆ ಬರುತ್ತವೆ (ಕೀಟಬಿ. ೬೦).

[ ಜನನ + ಅಂಗ₂ ]

**ಜನನಾಂಧ** (ನಾ). ಹುಟ್ಟಿನಿಂದಲೂ ಕುರುಡನಾದವನಂ ; ಹುಟ್ಟು ಗುರುಡ : ಸರಸೀಜಾತಸಖಂ ನಿಜಗ್ರಹಣಕಾಲಂ ಕೂಡೆ ಲಗ್ನಸ್ಥನಾಗಿರೆ ಮತ್ಕರ್ಂ ಜನನಾಂಧನಕ್ಕುಂ (ಜಾತಕ. ೨೦-೦೯). [ ಜನನ + ಅಂಧ ]

**ಜನನಾಥ** (ನಾ). ಜನರ ಒಡೆಯಂ ; ಅರಸ ; ರಾಜ : ತೂಗಿ ತಲೆಯಂ ಜನನಾಥಂ ವಿಸ್ಮಯಸ್ಮಿತಂಬೆರಸು (ಆದಿಪು. ೪-೭೦) ; ವಿಪುಳ ನಗರಾಧಿಪತಿ ಜಯವರ್ಮನೆಂಬೊಂ ಜನನಾಥಂ (ಚಂದ್ರಪ್ರ. ೬-೧೧ ವ). [ ಜನ+ನಾಥ ]

**ಜನನಾಥಸ್ಥಾನ** (ನಾ). ಅರಸನಿರುವ ಸ್ಥಳ,– ನಗರ; ರಾ ಜ ಧಾ ನಿ : "ಜನನಾಥಸ್ಥಾನಂ . . . ಶಿಬಿರನಿವೇಶಂ ಪತ್ತನ ನಿಗಮ ನಗರ ಪುಟಭೇದನ ನಗರೀ ಪೂಃ ಸಮಾಹ್ವಯಂ ಪುರಮಕ್ಕುಂ" (ವಸ್ತುಕೋ. ೪೬-೩). [ ಜನನಾಥ + ಸ್ಥಾನ ]

**ಜನನಿ₁** (ಗು). ೧. ಉಂಟುಮಾಡುವ ; ಕೊಡುವ. (ನಾ). ೨. ಹೆತ್ತವಳು ; ತಾಯಿ : "ಜನನಿ ಸವಿತ್ರಿ ಮಾತೃ ಸುಷು ತಾಯ್" (ವಸ್ತುಕೋ. ೩೪-೧೭); ಎಲೆ ಮಾಯಾದೇವಿ ಲೋಕತ್ರಯಜನನಿ (ಜಗವಿ. ೨-೩೮) ; ಜನನಿಗೆನಗತ್ತಿಗೆಗೆ ನಿನ್ನಯ ತನುಜರಿಗೆ ಮತವಲ್ಲ ಬಲ್ಲೆನು (ಕೌಶಿರಾ. ೧೪-೨೪).. ೩. ಒಂದು ಬಗೆಯ ಸಸ್ಯ ; ಕಳವಿಗೆ : "ಜನನಿ ಕಳವಿ[ಪಾಠಾಂ. ಲ]ಗೆಯೆನಿಕ್ಕುಂ" (ಮಂಗರಾ. ೪೨-೩೯). [ ಸಂ. ]

**ಜನನಿ₂** (ನಾ). = ಜನ್ನಿ : (ಪ್ರಾಎಚಿ. ೧೯೩೧, ೩೫೯, ೩೬೦; 1398) ; (ಲೋಕಸ. ೫೮, ೭೩). [P ಇದು 'ಜನ್ನಿ'ಯ ಅಪಲಿಖಿತವಿರಬಹುದು].

**ಜನನಿಬಿಡ** (ಗು). ಜನರಿಂದ ಕಿಕ್ಕಿರಿದು ತುಂಬಿದ : ಜನನಿಬಿಡವಾಗಿದ್ದ ಮೂರು ಅಂತಸ್ತುಗಳನ್ನು ದರ್ಪದಿಂದ ಏರಿ ಹೋಗಿ ಜರಾಸಂಧನನ್ನು ಕಂಡರು (ವಚಭಾ. ೭೮). [ ಜನ + ನಿಬಿಡ ]

**ಜನನೀಚರ** (ಗು). [ಜೈನ] ಹಿಂದಿನ ಜನ್ಮದಲ್ಲಿ ತಾಯಿಯಾಗಿದ್ದ : ಏನಗಿ ನಿವಿರಿದು ಸುಖಂ ಮಜ್ಜನನೀಚರದಿವಿಜನಿಂದಮಾಯ್ತೆಂದು ಕೃತಂ ಮನದೊಳ್ ಪುದಿದು (ಆದಿಪು. ೩-೫೮). 'ಮಾತೃಚರ' ಪರಾ. [ ಸಂ. ]

**ಜನನೀರಾಗ** (ನಾ). ೧. ತಾಯಿಯಂ ಪ್ರೀತಿ. ೨. ಜನರ ಬೇಸರ,– ಬೇಜಾರು. ೧, ೨ : ಚರಣವಿನ್ಯಾಸದೊಳಪ್ರಗಲ್ಭನು ತಾನು ಜನನೀರಾಗ ಕಾರಣನು . . . ಕುಕವಿಯು ಬಾಲಕನಿವನು (ಇಂಚಾಪ. ೧೭೩-೫೫). [ ಸಂ. (ಜನನೀ + ರಾಗ ; ಜನ + ನೀರಾಗ) ]

**ಜನನುತ** (ಗು). ೧. ಜನರಿಂದ ಸ್ತುತ್ಯವಾದ ; ಪ್ರಸಿದ್ಧವಾದ : ಇದು ಜನನುತ ಶೋಭೆ ಗಡ(ಅಜಿಪು. ೫-೭೦) ; ಜನನುತ ಶಾಂತಿಭೂಷನ ಜಗಜ್ಜನವಂದ್ಯನ (ರಾಜಶೇ. ೧-೬೭). (ನಾ). ೨. ಜನರಿಂದ ಸ್ತುತ್ಯನಾದವನು : ನಿನ್ನ ಜನ್ಮದಿಂ ಜನನುತರಾದೆವಾವಮಳವಮೌಕ್ತಿಕರತ್ನಕೆ ಜನ್ಮಭೂಮಿಯಾದನುಪಮ ಶುಕ್ತಿಸಂಪುಟದವೋಲ್(ಪುಷ್ಪಪು. ೧೨-೯೨). [ ಜನ + ನುತ ]

**ಜನನೇಂದ್ರಿಯ** (ನಾ). ಸಂತಾನೋತ್ಪತ್ತಿಗೆ ಕಾರಣವಾಗುವ ಇಂದ್ರಿಯ: ಕೀಟಕಗಳ ಹೊಟ್ಟೆಯ ಹಿಂಭಾಗದ ತುಂಡುಗಳಲ್ಲಿ ಚುಚ್ಚುವ ಮುಳ್ಳಾಗಲಿ ಇಲ್ಲವೆ ಜನನೇಂದ್ರಿಯಗಳ ಕಾರ್ಯಗಳಲ್ಲಿ ನೆರವಾಗುವ ಅಂಗಗಳಾಗಲಿ ಇರುತ್ತವೆ (ಕೀಟಬಿ. ೫). [ ಜನನ + ಇಂದ್ರಿಯ ]

**ಜನನೋತ್ಸವ** (ನಾ). ಮಗು ಹುಟ್ಟಿದಾಗ ಮಾಡುವ ಉತ್ಸವ ; ಜನ್ಮೋತ್ಸವ : ಕಂದಂಗೆ ರಾಜ್ಯಚಿಹ್ನಮನೊಂದೆರಡುಮನುಟಿಸಿ ಮಂದಿಗೆರೆದರ್ಥಮನಾ ಮಂದಾರಂ ಕೆಯ್ಯಂದಪೊಲೆಂದಿತ್ತೆಸಗುವನೊ ನೃಪತಿ ಜನನೋತ್ಸವಮಂ (ಪುಷ್ಪಪು. ೩-೯೦). [ ಜನನ + ಉತ್ಸವ ]

**ಜನಪ** (ನಾ). ದೊರೆ ; ಅರಸ ; ರಾಜ : ಜನಪನ ಕಾದು ರಕ್ಷಿಸುವ ನೀತಿ . . . ಏಂ ಪಿರಿದೊ (ಅನಂಪು. ೧-೮೭) ; ಇನಿತು ವೃತ್ತಾಂತವನಱಿದು ತಜ್ಜನಪನದಱಿಂ ಮುನ್ನ ತನ್ನಾನನದ ಹಾಸ್ಯರಸಂ ಬಱಿತು (ಬಸವು. ೨೧-೪೬) ; ಜನಪ ಮೆಚ್ಚಿದರೀವ ಧನವಾಹನ ವಿಭೂಷಣ ವಸನ ಭೂಮಿಯು ತನುಮನಗಳಿತ್ತಾದರಿಪರುಂಟೇನೊ ಲೋಕದೊಳು(ಹಸಾರ. ೨-೧೭). [ಸಂ.]

**ಜನಪತನ** (ನಾ). ದೊರೆತನ ; ರಾಜಪದವಿ : ವನನಿವಾಸ ಧರಾಧಿಪತ್ಯದ ಜನಪತನದುಡುಗೊಱೆಯಿದೀಗೆಂದೆನುತ . . . ಹರಸಿದಳು (ತೊರರಾ. ೨-೩-೪೫). [ ಜನಪ + – ತನ ]

**ಜನಪತಿ** (ನಾ).=ಜನಪ : ಬುಧಭೌಮರ್ ದ್ವಿತೀಯದೊಳಿರೆ ಜನಪಸೂನು ಜನಪತಿಯಕ್ಕುಂ (ಜಾತಿತಿ. ೧೨-೨೫) ; ತನಯುರ್ ಪಲರುಳ್ಳೊಡಮಾ ಜನಪತಿ ರಂಜಿಸುವನಾ ಕುಮಾರಕನಿಂ(ಚಂದ್ರಪ್ರ. ೨-೨೬) ; ರೂಢಿ ಮಿಗೆ ಬರೆದಾ ಜನಪತಿಗೆ ನೀಡಲೆರಡುಮನೀಸಿಕೊಂಡು (ಬಸವು. ೫೦-೩೬). [ ಜನ + ಪತಿ₂ ]

**ಜನಪಥ** (ನಾ). ಜನರು ಓಡಾಡುವ ದಾರಿ,–ಮಾರ್ಗ : ಸಂಸಾರವೆಂಬ ಹೇರಡವಿಯ ಅಂಧಕಾರವೆಂಬ ಜನಪಥದ . . . ಅಹಂ ಮಮತೆಯ ಹೊತ್ತು ನಡೆವ ನರಗುಱಿಗಳಾದ ಜೀವರಿಗೆ ಭವಬಂಧನ ಹಱಿದು ಗುರು ಪಥವಪ್ಪುದು (ಸರ್ವವ. ೧೬೧-೮೧೭). [ ಜನ + ಪಥ ]

**ಜನಪದ** (ನಾ). ೧. ಜನ ; ಜನತೆ ; ಜನಾಂಗ : ಕೇವಲ ಶಾಸನದೃಷ್ಟಿಯಿಂದ ಯಾವುದು ರಾಜ್ಯವೋ ಅದೇ ಸಂಸ್ಕೃತಿಯ ದೃಷ್ಟಿಯಿಂದ ಜನಪದ ಅಥವಾ ಜನಾಂಗ (ರಾಜ್ಯಶಾ. ೧೦೯). ೨. ದೇಶ ; ರಾಜ್ಯ ; ರಾಷ್ಟ್ರ : "ನಿವೃತ್, ಜನಪದಃ, ದೇಶಃ, ಉಪವರ್ತನಂ–ಈ ೪ ನಾಡು "(ಹಲಾಯು. ೪೭-೧೨೯) ; ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಳಯ ವಿಲೀನ ವಿಶದ ವಿಷಯ ವಿಶೇಷಂ (ಕವಿರಾ.೧-೩೬) ; ಜನಪದಂಗಳನೈದೆ ಮಾಡಿ ಪುರಂಗಳಂ ಸಮಕಟ್ಟಿ (ಆದಿಪು. ೮-೭೫) ; ಧೃತರಾಷ್ಟ್ರ ವಿದುರರ್ಕಳ್ಗೆ ಬೇಱೆವೇಱೆ ವಿಸ್ತರದ ಜನಪದಂಗಳಂ ನಿರೂಪಿಸಿ (ನೇಮಿಪು. ೧೨-೨೭೦) ; ತಜ್ಜನಪದದ ಧನವ ಕುಂದಿಸದೆ ನೃಪಮಂತ್ರಿಗಳು ಸಾ ನಂ ದ ದ ಲಿ ರಕ್ಷಿಸಲು ಬಳಿಕವರಿಂದ ಸಕಲೈಶ್ವರ್ಯಪದವಹುದು (ಕುವ್ಯಾಉ. ೩-೨೪). ೩. ಗ್ರಾಮಂಪ್ರದೇಶ. 'ಜನಪದಸಾಹಿತ್ಯ' ಪರಾ. [ ಜನ + ಪದ₂ ]

**ಜನಪದಕಜ್ಜ** (ನಾ). ರಾಜ್ಯದ ಕಾರ್ಯ: ಜನಪದಕಜ್ಜಮಂ ಕೆಡಿಸಿ ಕೊಳ್ಳಿದನೆಂದೊಡೆ ಕೊಳ್ವನನ್ಯಕಾಮಿನಿ ತನಗೊಲ್ದಳೆಂದೊಡದನಾರಿಸಿಯಾಳ್ದನಿನಿಪ್ಪ ಪಾಯಮುಂಟೆನೆ ಬೆ ದ ಱಿ ಂ . . . ಇಂತುಟುಪಧಾಪರಿಶುದ್ಧನಮಾತ್ಯನಕ್ಕುಮೆ (ಸೂಕ್ತಿಸು. ೧೬-೫೦). [ ಜನಪದ + ಕಜ್ಜ ]

**ಜನಪದಸಾಹಿತ್ಯ** (ನಾ). ಹಳ್ಳಿಗರು ತಾವಾಡುವ ಭಾಷೆಯಲ್ಲಿ ರಚಿಸಿ, ಉಳಿದಿಂ ಬಂದಿರುವ ಸಾಹಿತ್ಯ: ಸಾಹಿತ್ಯಚರಿತ್ರೆಯಲ್ಲಿ ಜನಪದಸಾಹಿತ್ಯಕ್ಕೆ ಮೇಲಾದ ಸ್ಥಾನವಿದೆ (ಕಸಾಚ. ೧): ಜನಪದಸಾಹಿತ್ಯದ ಬಹುಭಾಗ ತ್ರಿಪದಿಯಲ್ಲಿಯೋ ಸಾಂಗತ್ಯದಲ್ಲಿಯೋ ಇರುತ್ತದೆ (ಇಂಚಾಪ. 111, ಅಡಿಕೆ): ಈಶ್ವರ ಮದನರ ಯುದ್ಧದ ಕಥೆಯ ಮೂಲವು ಎಲ್ಲಿಯೋ ಜನಪದಸಾಹಿತ್ಯದಲ್ಲಿ ಅಡಗಿರಬೇಕು (ಸಾಹಿಸ. ೦೩೩). [ ಜನಪದ + ಸಾಹಿತ್ಯ ]

**ಜನಪದಾಧಿಕಾರ** (ನಾ). ರಾಜ್ಯದ ಅಧಿಕಾರ ; ಅರಸೊತ್ತಿಗೆ : ಜನಪದಾಧಿಕಾರಂ ದೊರೆಕೊಳ್ಗುಂ ಧನಮುಮಕ್ಕು (ಜಾತಿತಿ. ೯-೨೯). [ ಜನಪದ + ಅಧಿಕಾರ ]

**ಜನಪಲ್ಲಯಪೇಱು** (ನಾ). ಒಂದು ಬಗೆಯ ಸುಂಕ(?): ಪನ್ನಾಯದಲುಂ ಪೆರ್ಜ್ಜುಂಕದಲುಂ ಕೂಡಿ ಸಮುದಾಯದಲುಂ ತಿಂಗಳಿಗೆ ಜನಪಲ್ಲಯಪೇಱಿನ ಸುಂಕಮನಾಚಂದ್ರಾರ್ಕತಾರಂಬರಂ ಬಿಟ್ಟರು(ಕೊಲ್ಹಾಶಾ. ೪-೧೩; 1083). [ ? ]

**ಜನಪಸೂನು** (ನಾ). ಅರಸನ ಮಗ ; ರಾಜಪುತ್ರ : ಜನಪಸೂನು ಜನಪತಿಯಕ್ಕುಂ (ಜಾತಿತಿ. ೧೨-೨೫). [ ಜನಪ + ಸೂನು ]

**ಜನಪಾಧ್ವರ** (ನಾ). ರಾಜಸೂಯಯಾಗ : ಇವರ ಜನಪಾಧ್ವರವನಡ ಹಾಯ್ದುವನನಾಗಳೆ ದೇವಕೀಸುತ ಸವಱಿದನು (ಕುವ್ಯಾಸ. ೧೩-೭೭). [ ಜನಪ + ಅಧ್ವರ ]

**ಜನಪಾಲ** (ನಾ). ಜನರನ್ನು ಸಂರಕ್ಷಿಸುವವನಂ ; ದೊರೆ ; ರಾಜ : ಜನಪಾಲಂ ಮಿಗೆ ಭೀತಿವಟ್ಟು ನಡೆತಂದು (ವೃಷವಿ. ೧೨-೬೬). [ ಸಂ. (ಜನ+ ಪಾಲ) ]

**ಜನಪಾಲಾಗ್ರಣಿ** (ನಾ). ಅರಸರಲ್ಲಿ ಶ್ರೇಷ್ಠನಾದವನು : ಜನಪಾಲಾಗ್ರಣಿ ಪಂಚಾಕ್ಷರಮನಮುಮ ಜಪಿಸಿದನಾಗಳ್ (ರಾಜಶೇ. ೦೩-೫೬). [ ಜನಪಾಲ + ಅಗ್ರಣಿ ]

**ಜನಪ್ರಿಯ** (ಗು). ೧. ಜನರಿಗೆ ಪ್ರಿಯವಾದ ; ಎಲ್ಲರಿಗೂ ಬೇಕಾದ. (ನಾ). ೨. ಜನರಿಗೆ ಪ್ರಿಯವಾದಂದು : ವೇಮನನ ಪದ್ಯಶತಕ ಜನಪ್ರಿಯವಾಗಿದೆ (ಭಾರದ. ೪೦೩) ; ಜೋಳ: ದಕ್ಷಿಣ ಹಿಂದೂಸ್ಥಾನದಲ್ಲಿ ಅಷ್ಟೊಂದು ಜನಪ್ರಿಯವಾಗಿಲ್ಲ (ಆಡುಸಾ. ೭೫). [ ಜನ + ಪ್ರಿಯ ]

**ಜನಪ್ರಿಯತೆ** (ನಾ). ಜನರ ಮೆಚ್ಚಿಕೆಗೆ ಪಾತ್ರವಾಗಿರಂವಿಕೆ : ಆತನ ಪ್ರತಿಭೆ ಮತ್ತು ಜನಪ್ರಿಯತೆಗಳಿಗೆ ಬೇರೆ ಸಮರ್ಥನೆಯೇ ಅಗತ್ಯವಿಲ್ಲ (ಸಂಗೀತ. ೬) ; ವಿದ್ಯಾರ್ಥಿಗಳಂತೆ ಕುಣಿದು ಗಳಿಸುವ ಜನಪ್ರಿಯತೆ ನನಗೆ ಬೇಡ (ರಂಗರೋ. ೫೮). [ ಸಂ. ಜನಪ್ರಿಯತಾ ]

**ಜನಬಲ** (ನಾ). ೧. ಜನರ ಶಕ್ತಿ : "ಕೆಲಸಕ್ಕೆ ಒದಗಬಹುದಾದ, ಆಳುಬಲ, ಜನಶಕ್ತಿ, ಜನಬಲ" (Man-power. ಪತ್ರಿನಿ. ೫೨). ೨. ಜನರ ಬೆಂಬಲ,–ಸಹಾಯ : ಒಂದು ಮಹತ್ಕಾರ್ಯ ನೆರವೇರಬೇಕಾದರೆ ಜನಬಲ ಧನ ಬಲ ಎರಡೂ ಬೇಕು (ರೂಢಿ). [ ಜನ + ಬಲ ]

**ಜನಬಳಕೆ** (ನಾ). ಜನರು ಬಳಸುವುದು,–ಉಪಯೋಗಿಸುವುದು : ಜನಬಳಕೆಯಲ್ಲಿಯ ಅಂಕಿಗಳನ್ನು ಉಪಯೋಗಿಸಿ . . . ವರ್ಗೀಕರಿಸಲು ಕ್ಲಿಷ್ಟವೆನಿಸಲಾರದು (ಗ್ರಂಥಾಲ. ೦೮). [ ಜನ + ಬಳಕೆ ]

**ಜನಬಾಹುಳ್ಯ** (ನಾ). ಜನರು ಹೆಚ್ಚಾಗಿರುವುದು ; ಜನಸಂದಣಿ : ಐಶ್ವರ್ಯದಲ್ಲಿಯೂ, ಜನಬಾಹುಳ್ಯದಲ್ಲಿಯೂ ವಿಸ್ತೀರ್ಣದಲ್ಲಿಯೂ ಇಂಡ್ಯದ ಯಾವ ಭಾಗವೂ ಬಂಗಾಳದ ಕೆಳಗಿನ ರಾಜ್ಯಗಳಿಗೆ ಸಮಾನವಾಗಿಲ್ಲ (ಭೂಗೋಳ. ೪೦). [ ಜನ + ಬಾಹುಳ್ಯ ( = ಬಾಹುಲ್ಯ) ]

**ಜನಭರಿತ** (ನಾ). ಹೆಚ್ಚಾದ ಜನಸಂಖ್ಯೆಯಿಂದ ಕೂಡಿದುದಂ ; ಜನ ನಿಬಿಡವಾದುದಂ: ಬೇಹಾರ್‌ದೇಶವು ಇಂಡಿಯಾದಲ್ಲಿ ಅತ್ಯಂತ ಜನಭರಿತವಾದುದು (ಭೂಗೋಳ. ೪೯). [ ಜನ + ಭರಿತ ]

**ಜನಮನ** (ನಾ). ಜನತೆಯ ಮನಸ್ಸು : ಹುಟ್ಟುಮೂಕನೆಂದು ದಟ್ಟೀಶು ಜನಮನ (ಸಿದ್ಧಪು. ೪-೫೭) ; ಹರಿಹರನ ಕಾಲಕ್ಕಾಗಲೆ ಈ ಧ್ವನಿಯು ವಿಚಾರದಲ್ಲಿ ಜನಮನದಲ್ಲೂ ಕವಿಕಾವ್ಯಗಳಲ್ಲೂ ಗೊಂದಲ ಗಾಬರಿಗಳು ಪ್ರಾರಂಭವಾಗಿದ್ದುವು (ದ್ರಾವಿವಿ. ೩೨೭). [ ಜನ + ಮನ ]

**ಜನಮನ್ನಣೆ** (ನಾ). ಜನರ ಆದರಣೆ : ಮೇಳವು ಗಳಿಸಿತು ಜನಮನ್ನಣೆಯನು (ಇಂಚಾಪ. ೦೦-೪೪). [ ಜನ + ಮನ್ನಣೆ ]

**ಜನಯಿತ್ರಿ** (ನಾ). ಜನನಿ; ತಾಯಿ: "ಜನನೀ, ಜನಯಿತ್ರೀ ಈ ೨ ತಾಯಿ" (ಶಾಶಕ್ಕ. ೦೯೯). [ ಸಂ. ಜನಯಿತ್ರೀ ]

**ಜನಯಿಸು**(ಕ್ರಿ).=ಜನಿಸು ೨: ಸಂಸರ್ಗಂ ಜನಯಿಸುಗುಂ ಗುಣದೋಷೋಭನ ತತ್ವಮನೆಲ್ಲಿಯುಂ ಮಹೀಮಂಡಳದೊಳ್ (ಶಾಂತಿಪು. ೩-೭೯). [ ಜನನ + – ಇಸು₃ ]

**ಜನರಂಜನ** (ನಾ). ಜನರನ್ನು ಸಂತೋಷಪಡಿಸಂವುದಂ,–ಮೆಚ್ಚಿಸುವುದು : (ಕಿ). [ ಜನ + ರಂಜನ ]

**ಜನರಂಜನಿ** (ಗು). ೧. ಜನರನ್ನು ರಂಜಿಸುವ. (ನಾ). ೨. [ಸಂಗೀತ] ಒಂದು ರಾಗದ ಹೆಸರು : ಜನರಂಜನೀರಾಗದಲ್ಲಿ ಅವರು ರಚಿಸಿರುವ ಸಂಸ್ಕೃತಕೀರ್ತನೆ "ಪಾಹಿಮಾಂ ಶ್ರೀ ರಾಜರಾಜೇಶ್ವರಿ"ಯಲ್ಲಿ ಸೊಗಸಾದ ಚಿಟ್ಟೆಸ್ವರಗಳಿವೆ (ಸಂಗೀತ. ೦೪). [ ಸಂ. ಜನರಂಜನೀ ]

**ಜನರಂಜಿನಿ** (ನಾ). = ಜನರಂಜನಿ ೨ : ಜನರಂಜನಿ–೨೯ನೇ ಮೇಳಕರ್ತ ಧೀರಶಂಕರಾಭರಣದಲ್ಲಿ ಜನ್ಯ (ಸಂಗೀಶಂ. ೧೫೦). [ ಸಂ. ಜನರಂಜನೀ ]

**ಜನರಮಣ** (ನಾ). ಅರಸ ; ರಾಜ : ಜನರಮಣ ಯಾ ವಿಪ್ರರಬ್ಬೆಯರೆಯೆಂದೆನಲು ಕೇಳ್ದು (ಬಸಪು. ೫೭-೭೩). [ ಜನ + ರಮಣ ].

**ಜನರಲ್** 'ಜನರಲ್ಲು' ನೋ.

**ಜನರಲ್ಲು, ಜನರಲ್, ಜನರಾಲ್** (ನಾ). ಸೇನಾಧಿಪತಿ; ದಂಡನಾಯಕ: ನಾವೀ ವಿಭುವಿನಿದಿರೊಳ್ ಸಾಹಸವ ತೋರ್ಪೆವೆಂದಾವರಿಸಿ ಜನರಲ್ಲು ಕರ್ನಲ್ಲು ಮೊದಲಾದ ಸರಕಾರರೈತಂದರು (ಅಜ್ಞಾವಿ. ೨೪-೫೪). **ಜನರಲ್:** ಆಹ್ಲಾದದಿಂದ ಜನರಲ್ಲುರುಟ ನೋಡಲ್ಕೆ ಪೊರಮಟ್ಟನು (ಅಜ್ಞಾವಿ. ೨೪-೪೬). **ಜನರಾಲ್:** ಜನರಾಲ್ ಮೆತ್ಕ್ಯಸರವರು ಬಂದು (ರಾಜೇಂದ್ರ.೦೬). [ ←ಇಂ. General ]

**ಜನರಾಗ** (ನಾ). ಪ್ರಜೆಗಳ ಪ್ರೀತಿ: ನೀತಿವಿಡಿದರಸಂಗೆ ಬಹಳ ಖ್ಯಾತವದು ಜನರಾಗ ರಾಗವ್ರಾತದಿಂ ಧನ ಧನದಿ ಪರಿಕರ ಪರಿಕರದಿ ಜಯವು (ಶುವ್ಯಾಸ. ೦-೪೮). [ ಜನ + ರಾಗ ]

**ಜನರಾಲ್** 'ಜನರಲ್ಲು' ನೋ.

**ಜನರೌದ್ರ** (ನಾ). ಜನರಿಗೆ ಭಯಂಕರನಾದವನು : ಶ್ರೀವೀರಭದ್ರನಂ ಕರುಣಾಂಬುರಸಮಯಸಮುದ್ರನಂ ಜನರೌದ್ರನಂ (ವೀಶೈಪು. ೩-೫-೩೨). [ ಜನ + ರೌದ್ರ ]

**ಜನರ್ಲೋಕ** (ನಾ). ಏಳುಂ ಊರ್ಧ್ವಲೋಕಗಳಲ್ಲಿ ಐದನೆಯ ಲೋಕ : ವಕ್ಷದಲ್ಲಿ ಮಹರ್ಲೋಕ ಕಂಠದಲ್ಲಿ ಜನರ್ಲೋಕ (ಅಖಂಡೇ. ೧೪೨-೦೨೪). [ ಸಂ. (ಜನರ್ + ಲೋಕ) ]

**ಜನಲೋಕ** (ನಾ). = ಜನರ್ಲೋಕ : (ಕಿ). [ ಜನ + ಲೋಕ ]

**ಜನವಡೆ** (ನಾ). ಜನಸಮುದಾಯ : ಈ ಜನವಡೆಯೊಳಾರಾನುವಿಾ ಬಿಲ್ಲನೇಱಿಸಲಾರ್ಪೊಡೆ ಬನ್ನಿಮೆಂದು ಸಾಱುವುದುಂ (ಪಂಪಭಾ. ೩-೬೦ ವ). [ ಜನ + ಪಡೆ₄ ]

**ಜನವರ** (ನಾ). ರಾಜ ; ಅರಸ : ಜನವರನೆ ಕೇಳನ್ಯದೈವದ ಮನೆಗದೇತಕೆ ಬಾರರವರೆಂದೆನಲಹುದೆ (ಬಸಪು. ೫೩-೩೫). [ ಜನ + ವರ₃ ]

**ಜನವಶ್ಯ** (ಗು). ೧. ಜನರನ್ನು ವಶಪಡಿಸಿಕೊಳ್ಳುವ. 'ಜನವಶ್ಯ ಚೂರ್ಣ' ಪರಾ. (ನಾ). ೨. ಕನ್ನಡದಲ್ಲಿ ಕಲ್ಲರಸನಂ ಬರೆದ ಒಂದು ಕಾಮಶಾಸ್ತ್ರಗ್ರಂಥ : ಚತುರಿಂ ನವೀನಪದ್ಧತಿಯಿಂ . . . ವಿರಾಜಿಸುಗೆ ರತಿಯವೊಲ್ ಜನವಶ್ಯಮಾತಾರಕಂ (ಜನವ. ೦೩-೮೦). [ಜನ + ವಶ್ಯ]

**ಜನವಶ್ಯಚೂರ್ಣ** (ನಾ). ಜನರನ್ನು ವಶಪಡಿಸಿಕೊಳ್ಳುವ ಒಂದು ಬಗೆಯ ಚೂರ್ಣ,–ಪುಡಿ : ಕಂತುನಿರ್ಮಿತ ಜನವಶ್ಯಚೂರ್ಣಮೆನೆ ಪಾಂಸುಗಳಂ ಕೆದಱುತ್ತೆ ವೀಕ್ಷಣಾಮೃತಮಯ ಕಂದಳಂ ಪೊಸತರಲ್ದುದು ಕೇದಗೆ ಮೇಘಕಾಲದೊಳ್ (ಮಲ್ಲಿಪು. ೮-೮೦). [ಜನವಶ್ಯ + ಚೂರ್ಣ₂]

**ಜನವಾಣಿ** (ನಾ). ಜನರು ಆಡುವ ಮಾತಂ ; ಆಡುನುಡಿ : ಪಂಪನಿಗೆ ಜನಜೀವನದ ಮತ್ತು ಜನವಾಣಿಯ ಪರಿಚಯವು ಎಷ್ಟು ಯಥಾರ್ಥವೂ ಗಾಢವೂ ಆಗಿತ್ತು (ತವನಿ. ೩೬). [ ಜನ + ವಾಣಿ₁ ]

**ಜನವಾದ** (ನಾ). ೧. ಜನರಾಡುವ ಮಾತು : ಲೋಕದಲ್ಲಿ ಕೆಲವರು ಸ್ನೇಹಾತಿಶಯದಿಂದಲೂ ಕೆಲವರು ದಾನಾಪೇಕ್ಷೆಯಿಂದಲೂ ಕೆಲವರು ವಿಚಾರಿಸದೆಯೂ ಕಾರ್ಯಸ್ವರೂಪವನ್ನು ಹೇಳುವರು, ಜನವಾದವು ಹೀಗೆ ಬಹುಪ್ರಕಾರವಾಗಿ ಪ್ರವರ್ತಿಸುವುದು (ಕೃವಾಸ. ೨೩). ೨. ಜನರಲ್ಲಿ ಪ್ರಚಾರವಾದ ಮಾತು ; ವದಂತಿ ; ಗಾಳಿಸುದ್ದಿ ; ಸಮಾಚಾರ : "ಜನವಾದಂ ಕಿಂವದಂತಿ ವಾರ್ತೆಯದಕ್ಕುಂ" (ವಸ್ತುಕೋ. ೮೦-೩೨) ; ಜನಮಱಿಯದನ್ನೆಗಂ ಮುನ್ನಂ ನಯಮಱಿದಱಿಪಲಾರ್ಪೊಡದು ಮಂತ್ರಿಗುಣಂ ಜನವಾದಂ[ಪಾಠಾಂ. ದಾ]ನೆಗಟೆ ನಗಧ್ವನಿವೋಲನುಕರಣವಾರ್ತೆ ಮಂತ್ರಿಯ ಗುಣಮೇ (ಕವಿರಾ. ೩-೦೪೩); ವಿಕೃತಕ್ಕೆ ಸಂದ ನಾಗ್ನ್ಯಮುಮ ಪಹಿಂಸೆಯೆಂಬ ಜನವಾದಮುಮಲ್ಲದೆ ಪೇಟಿ ಜೀವತತ್ತ್ವಮುಮನಜೀವ ತತ್ತ್ವಮುಮನೆತ್ತಱಿವರ್ ಜನತತ್ತ್ವತಾಶ್ರಿತ್ವಕರ್ (ಶಾಂತಿಪು. ೮-೦೩೨). ೩. ಜನಾಪವಾದ ; ಲೋಕನಿಂದೆ. [ ಜನ + ವಾದ₃ ]

**ಜನವಾರ್ತೆ** (ನಾ). ಜನರ ಆಡಿಕೆ ಮಾತು ; ಜನವದಂತಿ.
[ ಜನ + ವಾರ್ತೆ ]

**ಜನಶಕ್ತಿ** (ನಾ). = ಜನಬಲ ೧ : (ಕೆಲಸಕ್ಕೆ ಒದಗಬಹುದಾದ) ಆಳುಬಲ, ಜನಶಕ್ತಿ, ಜನಬಲ (Man-power. ಪತ್ರಿನಿ. ೫೨). [ ಜನ + ಶಕ್ತಿ ]

**ಜನಶ್ರುತಿ** (ನಾ). = ಜನವಾರ್ತೆ : "ಕಿಂವದಂತೀ, ಜನಶ್ರುತಿಃ, ಕೌಳೀನಂ, ಲೋಕವಾದಃ–ಈ ೪ ಜನವಾರ್ತೆ" (ಹಲಾಯು. ೨೪–೧೪೬) : ರಾವಣನು ಆರ್ಯದೇವತೆಗಳನ್ನು ಸೋಲಿಸಿದ್ದನೆಂದು ಜನಶ್ರುತಿ (ನಿಬಂಧ. I, ೧೦೪); ಆ ದೇವರ ಹೆಸರಿನಿಂದ ಆ ಊರಿಗೆ ಆ ಹೆಸರು ಉಂಟಾಯಿತೆಂದು ಜನಶ್ರುತಿಯಾಗಿದೆ (ಲಕ್ಷ್ಮೀಶ್ವ. ೧). [ ಜನ + ಶ್ರುತಿ ]

**ಜನಸಂಕೀರ್ಣ** (ಗು). ೧. ಜನರಿಂದ ತುಂಬಿದ. (ನಾ). ೨. ಜನರ ಗುಂಪು: ಪ್ರಾಸಾದದ ಮೇಗಿರ್ದು ಜನಸಂಕೀರ್ಣದ ನಡುವೆ ನಾಲ್ಕು ಪೊಟ್ಟಳಿಗೆಯ ನೀಡಾಡಿದೊಡೆ (ವಡ್ಡಾರಾ. ೦೫-೬). [ ಜನ + ಸಂಕೀರ್ಣ ]

**ಜನಸಂಗ** (ನಾ). ಒಂದು ಬಗೆಯ ಮರ ; ಮೇಷಶೃಂಗಿ : ಜನಸಂಗ (ಖರಸಿಂಗ)–ದೊಡ್ಡಮರ ಕಟ್ಟಿಗೆ ನುಣುವು ಶೋಭೆಯುಳ್ಳದ್ದು. ಇವಾರತಿಗೂ ಶೋಭೆಯ ಸಾಮಾನುಗಳಿಗೂ ಬರುತ್ತದೆ (ಕಥಾಗಿ. ೩೯).
[ ? ]

**ಜನಸಂಧಿ** (ನಾ). ಜನರ ಸಮೂಹ: ಬಂದ ಎದೆ ಬಾವ್ಮಂದದಲಿ ಇಳಿತಂದು ಜೋಲುವ ಕರಡಿಗೆಯ ಜನಸಂಧಿಯೊಳಗೆಲ್ಲೂರಕೊಬ್ಬಿಹನವನ ಲೋಚನಕೆ (ಬಿಜ್ಜಪು. ೬೮-೨೦). [ ಜನ + ಸಂಧಿ ]

**ಜನಸಂಮರ್ದ** (ನಾ). ಜನರ ಗುಂಪು,–ಸಮೂಹ : ಜನಸಂಮರ್ದೋತ್ಥ ಕೋಳಾಹಳ ಕುಪಿತ ಹಯಸ್ಕಂಧಮೂಲಸ್ಥಳಾಸ್ಫಾಳನಲೀಲಂ ತಾಂ ಕುಮಾರಂ (ಚಂದ್ರಪು. ೬-೯೬) ; ಜನಸಂಮರ್ದವನು ತಡೆಯಲು ಶಾಂತ ಗೊಳಿಸಲು . . . ನಾಲ್ಕು ಮಾತು ಹೇಳುತ್ತಾರೆ (ಧರ್ಮಸಾ. ೫೦).
[ ಜನ + ಸಂಮರ್ದ ]

**ಜನಸಂಮೋಹನ** (ಗು). ಜನರನ್ನು ಮೋಹಗೊಳಿಸುವ,–ಮರುಳುಗೊಳಿಸುವ : ಜನಸಂಮೋಹನವಿದ್ಯೆ ತನ್ನ ಮಧುವಿಂ ಪುಟ್ಟಿತ್ತು (ಮಲ್ಲಪು. ೩–೫೦). [ ಜನ + ಸಂಮೋಹನ ]

**ಜನಸಾಂದ್ರತೆ** (ನಾ). ಜನರ ದಟ್ಟಣೆ: ಚೀನ ಮತ್ತು ಅಮೆರಿಕದ ಸಂಯುಕ್ತಸಂಸ್ಥಾನಗಳಲ್ಲಿ ಜನಸಾಂದ್ರತೆ ಬಹಳ ಹೆಚ್ಚು (ಭೂವಿವ. ೦೬೨).
[ ಜನ + ಸಾಂದ್ರತೆ ]

**ಜನಸೂಡಿಗ** (ನಾ). ಲೋಕವನ್ನು ಸುಡುವವನು ; ಪ್ರಳಯಂಕಾರಿ ; ರುದ್ರ : ತನಗಿಂದ ಬಲ್ಲಿದರೊಳು ಕಾದಿ ಕೈಸೋತು ಕನಲುವ ದುಕ್ಕ ವಂಕಿರಲಿ ಜನಸೂಡಿಗನ [ಪಾಠಾಂ. ಗೆಯ] ಸೈರಿಸಬಲ್ಲರಾರೆಂದು ಮನಸಿಜ ನುಡಿದ ಜೀವನೊಳು (ಮೋಹತ. ೫–೪೭).
[ ಜನ + ಸೂಡು + – ಇಗ ]

**ಜನಸ್ಥಾನ** (ನಾ). ಪ್ರಾಚೀನ ದಂಡಕಾರಣ್ಯದಲ್ಲಿ ಒಂದು ಭಾಗದ ಹೆಸರು ; ಜನರು ವಾಸಮಾಡುವ ದಂಡಕಾರಣ್ಯಪ್ರದೇಶ : ಬಳಿಕ ಹಾಹಾರವದ ರವಳಿಯಲಾ ಜನಸ್ಥಾನವನು ಹೊಕ್ಕಳು ಸಾರಿದಳು ಸಭೆಯನು ಖರಾಸುರನ (ತೊರರಾ. ೩–೫–೨) ; ಬಲ್ಮೆಯಿಂ ನಾಂ ಕಳುಹಿದೊಡೆ ಜನಸ್ಥಾನದಿಂ ಹೋದೆ ರಾಘವನ ಬಳಿಗೆ (ಜೈಮಿಭಾ. ೦೯–೨೦) : ನರ್ಮದಾ ಗೋದೆಯರ ನಡುವಣ 'ಜನಸ್ಥಾನ'ವು ಮೂಲ 'ದೇಶಿ'ಗೆ ಪೂರ್ಣ ಎರವಾಗಿತ್ತು (ಕರ್ನಾಟ. ೮೭). [ ಜನ + ಸ್ಥಾನ ]

**ಜನಹರಲೆ** (ನಾ). ಜನಾಪವಾದ ; ನಿಂದೆ : ಬಂಜೆಗೆ ಬಂಜೆತನದ ಚಿಂತೆ ; ಜನಹರಲೆಯ ಚಿಂತೆ (ಕನ್ನಜಾ. ೧೦೩) : ಗಂಡನು ಸೂಳೆಯ ಸೋಬತಿ (ಸಹವಾಸ) ಮಾಡಿರುವನೆಂದು ಹೆಂಡತಿಯು ಸಂಶಯದಿಂದ ಜನಹರಲೆ ಬರುವುದೆಂದು ಹೇಳಿ (ಕನ್ನಜಾ. ೧೦೨). [ ಜನ + ಹರಲೆ ]

**ಜನಹಿತ** (ನಾ). ಜನರ ಹಿತ; ಲೋಕ ಕಲ್ಯಾಣ: ಜನಹಿತದ ಎಲ್ಲ ಕಾರ್ಯಗಳಿಗೆ ಅವರು ಮುಂದಾಳಾಗಿ ದುಡಿಯುತ್ತಿದ್ದರು (ಕಪಪು. ೫-೬೦).
[ ಜನ + ಹಿತ ]

**ಜನಾಂಗ** (ನಾ). ೧. ಒಂದು ದೇಶಕ್ಕೆ ಅಥವಾ ಪಂಗಡಕ್ಕೆ ಸೇರಿದ ಜನವರ್ಗ,– ಜನತೆ ; ಬುಡಕಟ್ಟು : ಯೆಹೂದ್ಯರು, ಮುಸಲ್ಮಾನರು ಮತ್ತು ಕ್ರೈಸ್ತರು ಇವರ ವಿನಹ ಉಳಿದ ಎಲ್ಲಾ ಜನಾಂಗದವರಲ್ಲೂ ಈ ಸಿದ್ಧಾಂತ ಪ್ರಚಾರದಲ್ಲಿತ್ತು (ಜೀವಾತ್ಮ. ೧೮೪). ೨. ಪೀಳಿಗೆ; ತಲೆಮಾರು; ಹಿಂದಿನಿಂದಲೂ ಬಂದ ಹಲವು ಶಾಸ್ತ್ರಸಾಹಿತ್ಯವನ್ನೂ ಆಚಾರ ವ್ಯವಹಾರಗಳನ್ನೂ ಮಕ್ಕಳಿಗೆ ಕಲಿಸಿ ಆ ಮೂಲಕ ಅವು ಮುಂದಿನ ಜನಾಂಗಕ್ಕೂ ಸಾರೋದ್ಧಾರವಾಗಿ ಬರುವಂತೆ ಮಾಡುವುದೇ ಮೂಲ ಉದ್ದೇಶವಾಗಿತ್ತು (ಶಿಕ್ಷದ. ೩೬) ; ಇಂದಿನ ಮಕ್ಕಳೇ ಮುಂದಿನ ಜನಾಂಗ (ಕ್ರಿಯೂಶಿ. ೧).
[ ಜನ + ಅಂಗ ]

**ಜನಾಂತ** (ನಾ). ೧. ಜನರು ವಾಸಮಾಡದೆ ಇರುವ ಸ್ಥಳ ; ನಿರ್ಜನ ಪ್ರದೇಶ. ೨. ಜನರಿರುವ ಪ್ರದೇಶ,–ಪ್ರಾಂತ್ಯ,–ದೇಶ : ಅರಿಂಜಯ ಜನಾಂತದ ವಿಪುಳ ನಗರಾಧಿಪತಿ ಜಯವರ್ಮನೆಂಬೊಂ ಜನನಾಥಂ(ಚಂದ್ರಪು. ೬–೧೦ ವ): ತಿಂತಿಣಿಗೊಂಡೆಸೆವೈವತ್ತಾರು ಜನಾಂತಂ ನೆಲೆಸಿಹುವು (ಜಯುಶಾ. ೧–೩೫). [ ಸಂ. (ಜನ + ಅಂತ) ]

**ಜನಾಂತಿಕ** (ನಾ). ೧. ಜನರ ಸಮೀಪ. ೨. ಗುಟ್ಟು ; ರಹಸ್ಯ : ಆತನಂ ಜನಾಂತಿಕದೊಳಾ ತಳೋದರಿ . . . ಇನ್ನಿರಲಾಗದೆಂದು ಕಳುಪಿದಳ್ (ಅನಂಪು. ೮–೪೪ ವ). ೩. [ನಾಟ್ಯ] ನಟನಟಿಯರು ಮುಖಕ್ಕೆ ಕೈಯನ್ನು ಅಡ್ಡವಾಗಿಟ್ಟುಕೊಂಡು ಪಕ್ಕದಲ್ಲಿದ್ದವರಿಗೆ ತಿಳಿಯದಂತೆ ಮಾತನಾಡುವುದು; "ಒಬ್ಬರನ್ನು ಮರೆಮಾಡಿಕೊಂಡು ಮತ್ತೊಬ್ಬರೊಡನೆ ಮಾತನಾಡುವುದು" (ಸಂನಾಟ. ೦೫). [ ಜನ + ಅಂತಿಕ ]

**ಜನಾಕೀರ್ಣ** (ನಾ). ಜನರಿಂದ ತುಂಬಿದುದು ; ಜನಸಮೂಹ: ನೋಡೆ ರಹಸ್ಯದೊಳ್ ಬಳಕಿವೆತ್ತೀ ಚಿತ್ರದಭ್ಯಾಸದಿಂ ದಹನಾಕ್ರಾಂತಮೆನಿಪ್ಪ ಮುಂದಿರದವೋಲ್ ಕಾಣ್ಬೆಂ ಜನಾಕೀರ್ಣಮಂ (ಶಾಕುಂತ. ೬೪–೫).
[ ಜನ + ಆಕೀರ್ಣ ]

**ಜನಾಚಾರ** (ನಾ). ಜನರಲ್ಲಿ ರೂಢವಾಗಿರುವ ಆಚಾರ,–ಸಂಪ್ರದಾಯ: ಧರ್ಮದ ತಂತು ಬಹುಸೂಕ್ಷ್ಮವಾದದ್ದು . . . ಜನಾಚಾರವನ್ನನುಸರಿಸಿಯೇ ಅದನ್ನು ತಿಳಿಯುವುದಕ್ಕಾಗುವುದಿಲ್ಲ (ವಂಶವ್ಯ. ೪೭೬). [ಜನ + ಆಚಾರ]

**ಜನಾಧಿಪ** (ನಾ). ಅರಸ ; ರಾಜ : ಜಿನವಚನರಸಾಯನಮಂ ಜನಾಧಿಪಂ ಶ್ರೋತ್ರಪಾತ್ರದೊಳ್ ತೀವಿ (ಶಾಂತಿಪು. ೯–೬೦). [ ಜನ + ಅಧಿಪ ]

**ಜನಾನ** 'ಜನಾನಾ' ನೋ.

**ಜನಾನಂದನ** (ನಾ). ಜನರಿಗೆ ಆನಂದವನ್ನುಂಟುಮಾಡುವವನು : ಎಮ್ಮಯ್ಯನುಮಿಂದಾನುಮೊಡವೋಗಿ ಕಂಡು ಜನಾನಂದನರುರ್ವರಾಸ್ಯ ತಿಲಕರಂ (ಶಾಂತಿಪು. ೬–೩೦) : ತಂದಿರಿಸಿದ ಜೀವರಾಶಿಯಂ ಬಿಡಿಸಿ ಜನಾನಂದನರಂ ತನ್ನನುಜೆಯ ನಂದನರಂ ಮಾರಿದತ್ತವಿಭು ಲಾಲಿಸಿದಂ (ಯಶೋಚ. ೪–೭೪). [ ಜನ + ಆನಂದನ ]

**ಜನಾನಖಾನೆ, ಜನಾನಾಖಾನೆ, ಝನಾನಖಾನೆ** (ನಾ). = ಜನಾನಾ : ನೀವು ಶತ್ರುಗಳನ್ನು ಹಣಿದು ಅವರು ಸಾಗಿಸಿಕೊಂಡು ಹೋಗುತ್ತಿರುವ ಜನಾನಖಾನೆಯನ್ನು ಹಿಡಕೊಂಡು ಬರಬೇಕು (ಮಾಧವ. ೩೦೯). **ಜನಾನಾಖಾನೆ :** ಅವರನ್ನು ಕೃಷ್ಣ ತನ್ನ ಜನಾನಾಖಾನೆಗೆ ಸೇರಿಸಿಕೊಳ್ಳುವುದು ಅತ್ಯಂತ ಕ್ರಮಪ್ರಾಪ್ತವಾಗುತ್ತದೆ (ಪ್ರಹಾರ. ೮೯). **ಝನಾನಖಾನೆ:** ವರಿಷ್ಠನನ್ನು ಸುಲ್ತಾನನ ಸ್ಥಾನಕ್ಕೇರಿಸಿ ನವಕರರನ್ನೆಲ್ಲ ಅವನ ಝನಾನಖಾನೆಗೆ ಸೇರಿಸಿಬಿಟ್ಟನೆಂದು ನವಕರರ ಪೌರುಷ ನೊಂದುಕೊಳ್ಳದಿರಲಿ (ಗಾಳಿಪ. ೫೯). [ ←ಪಾರ. ಹಿಂ. ಜನಾನಖಾನಾ ]

**ಜನಾನಾ**, ಜನಾನ, ಜನಾನಿ, ಝನಾನಾ (ನಾ). ಅಂತಃಪುರ ; ರಾಣೀವಾಸ : ಮುಸಲ್ಮಾನ ಅಧಿಕಾರಿಗಳಂತೆ ಜನಾನಾ ಸಡಗರವಿರಲಿಲ್ಲ (ಕಥವಿ. II, ೨೪೨) : ಲುತ್ಫುಉನ್ನೀಸೆಯನ್ನು ತನ್ನ ಜನಾನಾಕ್ಕೆ ಸೇರಿಸಲು ಹಿಂಜರಿದಿದ್ದನು (ಕಪಾಕುಂ. ೬೪). **ಜನಾನ:** ಜನಾನಕ್ಕೆ ತೆರಳಿ ನೂರುನ್ನೀಸಾಬೇಗಂ ಸಾಹೇಬರಿಗೆ . . . ತಿಳಿಸು (ಅನ್ನಾವ. ೨೯): ಬಲಿಷ್ಠ ಗಂಡುಗಳು ತಮ್ಮ ಕೊಂಬಿನ ಬಲದಿಂದ ಕೆಲವೊಂದು ಹೆಣ್ಣುಗಳ 'ಜನಾನ'ವನ್ನೇ ಕೂಡಿಸುವುದುಂಟು (ಬಾಲಪ್ರ. III, ೦೭೬೨). **ಜನಾನಿ:** ಜನಾನಿ ಸಂಬಂಧದ ಕೆಲಸಗಳನ್ನೆಲ್ಲಾ ಇವರೇ ನೋಡಿಕೊಳ್ಳುತ್ತಾ ಇದ್ದರು (ಕುರಾಜ. ೪೮) : ಒಳಗೆ ಹೋದರೆ ರಾಣಿವಾಸದವರ ಜನಾನಿ, ಹೊರಗೆ ಬಂದರೆ ಶಿವನ್ನೆಯ್ಯನವರ ಮರದಾನಿ (ಮುಸುಗ. ೪೬). **ಝನಾನಾ:** ರುಸ್ತುಮನು ಝನಾನಾದ ಗೋಡೆಯನ್ನೇರಿ ಬಂದದ್ದೇ ನಿಜವಾಗಿದ್ದರೆ (ಜಿರಂಗ. ೨೦).
[ ←ಹಿಂ. ಜನಾನಾ; ಪಾರ. ಜನಾನ್ ]

**ಜನಾನಾಖಾನೆ** 'ಜನಾನಖಾನೆ' ನೋ.

**ಜನಾನಿ** 'ಜನಾನಾ' ನೋ.

**ಜನಾನುರಾಗ** (ನಾ). ಜನರ ಪ್ರೀತಿ,–ಮಮತೆ; ಜನಪ್ರಿಯತೆ: ಜನಾನುರಾಗವಿಲ್ಲದ ಪೊಟಲತ್ಕುದಾತ್ತಗುಣವಿಲ್ಲದ ಮಾನವರಿಲ್ಲದೆಲ್ಲಿಯುಂ (ಪುಷ್ಪಪು. ೨-೧೧). [ ಜನ + ಅನುರಾಗ ]

**ಜನಾನುರಾಗಿ** (ನಾ). ಜನರ ಪ್ರೀತಿಯನ್ನು ಹೊಂದಿದವನು; ಜನಪ್ರಿಯನಾದವನು : ರಾಯರು ಬೇಗ ಜನಾನುರಾಗಿಗಳಾಗಿ ದಕ್ಷಶಿಕ್ಷಕರೆನಿಸಿದರು (ಇಂಚಾಪ. ೮-೨೬). [ ಸಂ. ಜನಾನುರಾಗಿನ್ ]

**ಜನಾಪವಾದ** (ನಾ). ಜನರಿಂದ ಬರುವ ಅಪನಿಂದೆ; **ಲೋಕಾಪವಾದ:** ಜನಾಪವಾದಮುಮಂ ಪೆಱಗಿಕ್ಕಿ ಕುಲೋದ್ಭೂತರುಂ ತತ್ತ್ವವೇದಿಗಳುಂ ಮನೆವಾಟನಾಸೆವಡಲಾಗದು (ಶಾಂತಿಪು. ೪-೮೨ ವ) ; ನಿಜನಾಥಭೀತಿ ಸುಚರಿತ್ರೆ ಗುಣವತಿ ಮಾನಿನಿ ಜನಾಪವಾದವಿರಹಿತೆಯೆನಿಪ ನಾರಿ (ಜೈಮಿಭಾ. ೫-೫೦). [ ಜನ + ಅಪವಾದ ]

**ಜನಾಬ್**, ಜನಾಬು (ನಾ). ೧. ಧನವಂತ ; ಸ್ವಾಮಿ; ಮಹಾಶಯ: ದಯಮಾಡಿಸಬೇಕು ಜನಾಬ್ (ರೂಢಿ). **ಜನಾಬು: ೨.** ಸನ್ನಿಧಿ; ಸಮಕ್ಷ: ತಮ್ಮ ಜನಾಬಿಗೆ ಕೆಲವು ಸಮಾಚಾರಗಳನ್ನು ತಿಳಿಸಬೇಕೆಂಬುದಾಗಿ ಅರ್ಜಿದಾರನು ಬಹಳ ವಿನಯದಿಂದ ಬೇಡಿಕೊಳ್ಳುವದೇನೆಂದರೆ (ಚಾಮುವಂ. ೨೪೯); ಯಜಮಾನರ ಜನಾಬಿನಲ್ಲಿ ನಾನು ದುರ್ನಿರತನೆಂಬ ಅನ್ವಯವಾಗುವ ಅಪವಾದಕ್ಕೆ ಬೀಳುವ ಸಂಭವ ಒದಗಿರುವದೆಂದು . . . ಬೆಂಡಾಗಿರುತ್ತೇನೆ (ವಾಗ್ಮಿವಿ. ೦೮೮). [ ←ಅರ. ಪಾರ. ಹಿಂ. ಜನಾಬ್ ]

**ಜನಾಬು** 'ಜನಾಬ್' ನೋ.

**ಜನಾಮಳಪಳಿ** (ನಾ). (?) : × × × ವಿಳದಿತ ಜನಾಮಳಪಳಿ ಕಣ್ಣುಗ ಮುವತ್ತಮೂವೀಸಯುಮನ್ನಿಟ್ಟು ಸರ್ವ್ವಪರಿಹಾರಂ ಕೊಟ್ಟಾರ್ (ಎಕ. VI, ಕೊಪ್ಪ. ४೧-೧೨ : ಸು. 1090). [ ? ]

**ಜನಾರ್ದನ** (ನಾ). ೧. ಜನರನ್ನು ಕೊಲ್ಲುವವನು; ಲಯಕರ್ತ; ರುದ್ರ: "ಜನಾನರ್ದಯತಿ=ಜನರಂ ಕೊಂದಪಂ; ಜನಾರ್ದನಃ = ಕಾಲಾಗ್ನಿರುದ್ರಂ" (ಶಾಶಕ್ತ. ೨೯೮). **೨.** ವಿಷ್ಣು; ಕೃಷ್ಣ: "ಜನಾರ್ದನಂ . . . ಕೇಶವನಚ್ಯುತಂ ಮುರಹರಂ ವೈಕುಂಠನಬ್ಜೋದರಂ" (ವಸ್ತುಕೋ. ४-೨೦) ; ಮುಂದೆ ನಿಂದಿರ್ದ ಜನಾರ್ದನಂಗೆ ಬದ್ಧಾಂಜಲಿಯಾಗಿ (ಜಗವಿ. ೩-४ ವ); ಜಯ ಜನಾರ್ದನವಂದ್ಯ ಜಯ ಜಲಜಭವಪೂಜ್ಯ (ಹಡಕಾ. ೧೭-४೦). ೩. [ಜೈನ] ವಾಸುದೇವ (ಲಕ್ಷ್ಮಣ) : ಪುರ್ಬನೇಱಸುವ ಮಾಟಿಕ್ಕಿಯಿನಶ್ರಮದಿಂ ಪೊಡರ್ಪು ಕೈಮಿಗೆ ರಿಪುಮರ್ದನಂ ಧನುವನೆತ್ತಿದನೇಱಸಿದಂ ಜನಾರ್ದನಂ (ಪಂರಾಮಾ. ೫-೧೦೦). ४. ಜನ್ನಕವಿ: ಕವಿ ಭಾಳಲೋಚನ ಜನಾರ್ದನದೇವ ವಿರಚಿತಮಪ್ಪ (ಅನಂಪು. ೧-೧೨೦ ವ). [ ಸಂ. ]

**ಜನಾವರ** 'ಜಾನುವಾರು' ನೋ.

**ಜನಾಶ್ರಯ** (ನಾ). ಮಂಟಪ; ಚಪ್ಪರ; ಸಭಾಮಂಟಪ: "ಜನಾಶ್ರಯಃ, ಮಂಡಪಃ–ಈ ೨ ಸಭಾಮಂಟಪಂ" (ಹಲಾಯು. ೫೦-೧४೩); "ಮಂಟಪಂ ಜನಾಶ್ರಯಂ" (ವಸ್ತುಕೋ. ४೮-೧೯). [ ಜನ + ಆಶ್ರಯ ]

**ಜನಿ**$_1$ (ಕ್ರಿ). ಜಿನುಂಗು ; ಒಸರು ; ಸ್ರವಿಸು ; ಸೋರು ; ಹರಿ : ಸ್ಯನ್ನಂ, ರೀಣಂ, ಸ್ರುತಂ, ಸ್ನುತಂ–४ ಸೋರಿಹೋದುದು, ಜನಿದು ಹೋದುದು (ಸಿದ್ಧಾಂತಿ. ೨೯೯) ; ಶ್ಚ್ಯೋತಃ, ಪ್ರಾಘಾರಃ – ೨ ಸೋರಿಹೋಗುವಿಕೆ ಸೋರುವಿಕೆ, ಜನಿಯುವಿಕೆ (ಸಿದ್ಧಾಂತಿ. ४೦೮); ಧಾತುಪಾಠದಲ್ಲಿ ಮಾತ್ರವಲ್ಲ ದರ್ಪಣದ ಇತರ ಭಾಗಗಳಲ್ಲಿಯೂ ಇಲ್ಲವೆಂದು ಕಿಟ್ಟೆಲ್‌ರ ನಿಘಂಟಿನಿಂದ ಎಣಿಸಬಹುದಾದ ಕೆಲವು ಸಿದ್ಧಧಾತುಗಳನ್ನು ಕೆಳಗೆ ಕಾಣಿಸಿದ್ದೇನೆ–ಇಣಿಕು, . . . ಸೆಂದು, ಜನಿ, ತಲಪು (ಕಸಾಪ. I, ೨४೦). [ <ಜಿನುಂಗು$_1$ ]

**ಜನಿ**$_2$ (ನಾ). ೧. ಹುಟ್ಟು ; ಉತ್ಪತ್ತಿ ; ಜನನ: ಮೂಜಗದ ಜನಿಸ್ಥಿತಿ ನಾಶಕರ್ಮದ ಹೊಱಗೆ ನಿನ್ನಲಿ ತೋರ್ಪ ಗುಣ ಮೂಱಱ ವಿಕಾರವ ಪೊದ್ದದು(ನಿಭಾಗ. ೧೦-೫೦-೨೬);ಜಗದೊಡೆಯನ ಚರಣಾಂಬುಜಯುಗಮಂ ಮರವೊಕ್ಕರ್ ದಾಂಟಿದಪರ್ ಜನಿಯೆಂಬಗಾಧಸಾಗರಮಂ (ನೀತಿಮಂ. II, ೧೧) : ಜನಿ ಮೊದಲಾಗಿರೆ ಮೋಸವನಿನಿಸುಂ ಕಾಣದರ ನುಡಿಯಸತ್ಯಂ ಪರವಂಚನೆ ವಿದ್ಯೆ (ಶಾಕುಂತ. ೭೦-೧೨೩). **೨.** ಹೆಂಗಸು; ಸ್ತ್ರೀ. ೩. ಸೊಸೆ: "ಸ್ನುಷಾ, ಜನೀ, ಪುತ್ರವಧೂಃ, ವಧೂಃ – ಈ ४ ಸೊಸೆ" (ಹಲಾಯು. ೮೩-४೫೦). ४. ಒಂದು ಬಗೆಯ ಸುಗಂಧದ ಸಸ್ಯ ; ಕಳವಿಗೆ : (+).
[ ಸಂ. ಜನಿ, ಜನೀ ]

**ಜನಿಕ** (ನಾ). ಜೀವಾಣುವಿನಲ್ಲಿರುವ ಎರಡು ಅಂಶಗಳಲ್ಲಿ ಒಂದು ; ವಂಶವಾಹಿ: ಗೊತ್ತಾದ ಜಾಗದಷ್ಟು ದೂರದಲ್ಲಿರುವ ಜನಿಕಗಳು(ಜೀನ್ಸ್) ಇರುವ ದಾರದಂಥ ಬಣ್ಣದಂಡಗಳು (ಕ್ರೋಮೊಸೋಮ್ಸ್) ಇದರ ನಬ್ಬೀಜದಲ್ಲಿ ಇರುತ್ತವೆ (ಕವಿಕೋ. I, ೫೦). [ ಸಂ. ಜನಿಕಾ ]

**ಜನಿಗೆ** 'ಜನ್ನಿಗೆ' ನೋ.

**ಜನಿತ** (ಗು). ೧. ಹುಟ್ಟಿದ ; ಉತ್ಪತ್ತಿಯಾದ ; ಸೃಷ್ಟಿಸಿದ : ಜನಿತ ಪುನಸ್ಸ್ವಯಂವರದ ವಾರ್ತೆಯನಾಗಳೆ ಕೇಳ್ದು (ನಳಚಂ. ೬೯೪). (ನಾ). **೨.** ಉತ್ಪತ್ತಿ; ಹುಟ್ಟು: ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ (ಬಸವ.೦೫): "ಜನ್ಮಸಂಬಂಧ" (ಬಸವ. ಕೋಶ). ೩. [ನಾಟ್ಯ] ನೃತ್ಯದ ನೂರೆಂಟು ಕರಣಗಳಲ್ಲಿ ಒಂದು: "ತಲಪುಷ್ಪಪುಟ . . . ನೀವೇಶ ವಿಲಾಕ್ರೀಡಿತ ಜನಿತ . . . ಗಂಗಾವತರಣ–ಈ ನೂಱೆಂಟು ಕರಣಂಗಳ್" (ಲಾಸ್ಯರಂ. ४-४೨ವ). ४. ನೃತ್ಯದ ಹದಿನಾರು ಭೌಮಚಾರಿಗಳಲ್ಲಿ ಒಂದು : "ಸಮಪಾದ, ಸ್ಥಿತಾವರ್ತ . . . ಜನಿತ ಊರೂದ್ವೃತ್ತ ಈ ಹದಿನಾಱು ಮಾರ್ಗ ಭೌಮಚಾರಿಗಳು" (ಲಾಸ್ಯರಂ. ೬-೧೭ವ); ಚರಣಮೊಂದಗ್ರತಲ ಸಂಚರಮಂ ಮಾಡುತ್ತಮೆರ್ದೆಯೊಳೊಲ್ದು ಮುಷ್ಟಿಯ ಕರವಿರಿಸುತನ್ಯಕರ ಪದಮಿರೆ ಶೋಭೆಯಿನೊಪ್ಪಿ ತೋಱೆ ಜನಿತಮೆನಿಕ್ಕುಂ (ಲಾಸ್ಯರಂ. ೬-೩೫).
[ ಸಂ. ]

**ಜನಿತವಿಭಾಗ** (ನಾ). ಉಂಟಾದ ಭಾಗ,–ಪ್ರಭೇದ : ಜನಿತವಿಭಾಗಂಗಳ್ ವಾಙ್ಮನಸಾತೀತಂಗಳಿಂತು ಮಾರ್ಗೋಕ್ತಿಗಳೊಳ್ ನೆನೆದಱಪಲಾರ್ಪರಾರ ದನನಿಶ್ಚಿತಕ್ರಮ ವಿಶೇಷಗುಣಯುಕ್ತಕ್ರಮಂ (ಕವಿರಾ. ೨-४೮).
[ ಜನಿತ + ವಿಭಾಗ ]

**ಜನಿಯಿಸು** 'ಜನಿಸು' ನೋ.

**ಜನಿವಾರ** 'ಜನ್ನವಿರ' ನೋ.

**ಜನಿಸಿತು** (ನಾ). ಹುಟ್ಟಿದಂದು ; ಜನಿಸಿದಂದು : ಮಹಿಮಾಕರಂ ಸಿದ್ಧಪತಿಯುಂ ಜನಿಸಿತಕ್ಕೆ ಭೂಲೋಕದ ಸಮಸ್ತ ಜೀವಾಳಿಗಪವರ್ಗಮಂ ತೋರ್ಪೆನೆಂದನುಗೆಯ್ದನು (ಸಿದ್ಧರಾ. ४-೦೬). [ <ಜನಿಸು ]

**ಜನಿಸು, ಜನಿಯಿಸು** (ಕ್ರಿ). ೧. ಹುಟ್ಟು ; ಉದ್ಭವಿಸು : ಕರ್ಣದೊಳಗೆ ಜನಿಸಿದವರುಂಟೆ ಜಗದೊಳಗೆ (ಬಸವ. ೫೮೯) ; ಶುಕ್ಲ ಶೋಣಿತದಿಂದ ತನುವಮನ ಜನಿಸಿತ್ತು (ಆದಪ. ೨೭-೮೦) ; ಆತನ ಶಾಂತಿಯಿಂದ ಶಶಿ ಚಾರಿತ್ರದಿಂ ಗಂಗೆ . . . ಉದಾರತ್ವದಿಂ ಸುರಕುಜಂ ಜನಿಸದಿರವೆಂದು ಕೊಂಡಾಡುತಿರ್ದಂ (ಹಚಕಾ. ೬-೧೩) ; ದೇವಕೀಸುತನೇನು ಬ್ರಂಡಿಯ ಬೋವಗುಲದಲಿ ಜನಿಸಿದನೆ (ಕುವ್ಯಾ.ಕ. ೫-೩೪) ; ಶಿಲಾಯುಗದ ಕೆಲವು ಗುರುತುಗಳ ಬಳಕೆಯಿಂದ ಬ್ರಾಹ್ಮೀಲಿಪಿ ಜನಿಸಿತೆಂದು ಒಬ್ಬಿಬ್ಬರು ತಿಳಿಸಿದ್ದಾರೆ (ದ್ರಾವಿವಿ. ೫೨). ೨. ಹುಟ್ಟಿಸು ; ಉಂಟುಮಾಡು : ತಿನಸು ಗೂಳಿಯ ಬಾಳು ಕನಸಿನಲಿ ಉಂಡಂತೆ ತೊಣಸಿ ಮುದಿ ಎತ್ತ ಹರಿ ತಿಂದು ಹುಳಗಳನು ಜನಿಸಿ ಬಿಟ್ಟಂತೆ (ಸರ್ವಜ್ಞ. ೧೦೫೭). **ಜನಿಯಿಸು** : ೧. ಜನಿಯಿಸಿ ದಂದು ತೊಟ್ಟಗಲದಾತನನಿಂತಿರಗಲ್ದ ಪಾಪಕರ್ಮನಂ (ಕಾದಂಉ. ೪೫೨) ; ಅಲ್ಲಿ ಜನಿಯಿಸಿ ಬಳಿಕ್ಕಂದು ಬಪ್ಪಂ ದೇವ (ಬಸರ. ೧-೭೩) ; ಅನುಕೂಲಪವನನಿಂ ಜೀವನಿಪ್ಪದಿಂ ನಾಭಿಮೂಲದೊಳ್ ಕಹಳೆಯ ಪಾಂಗಿನ ವೋಲ್ ಶಬ್ದದ್ರವ್ಯಂ ಜನಿಯಿಸುಗುಂ (ಶಮದ. ೨) ; ವರಸೋಮಪ್ರಭ ರಾಜೇಂದ್ರಂಗಂ ತರುಣಿಗೆ ಸೌಂದರಿಗಂ ಜನಿಯಿಸಿ (ಜಯುಕಾ. ೨ ಸೂಚನೆ). ೨. ಜನಕಂಗೆ ಹರ್ಷದೊದವಂ ಜನಿಯಿಸಿ (ಶಂರಾಮಾ. ೪-೩೩) ; ನಭೋಂತಕ್ಕೊಗೆದಿರ್ದ ಸುಭಟತತಿ ಖಚರಬಲಭ್ರಾಂತಿಯನಿನಿಸಂ ಜನಿಯಿಸೆ (ಜಗವಿ. ೭-೫೭) ; ಏನೇನುಣಿಸನುಣಲ್ಕೀಹಾರಂ ಜನಿಯಿಸಿದವ್ಯ್ಕತಾನ್ನವನೀವ ಮಣಿಪಾತ್ರೆಯುಮಂ ನೆನೆದು (ಜಯುಕಾ. ೩-೭೦). ೩. ಒದಗು ; ಉಂಟಾಗು ; ಆಗು : ಪುನರುಕ್ತಮೆಂಬುದಕ್ಕುಂ ನೆನೆಯದೆ ಪದಾರ್ಥಮದಱಿದೀ ಪೂರ್ವೋದಿತಾರ್ಥ ಪದಪದ್ಧತಿಗೊಂದಿನಿಸುಂ ವಿಶೇಷಮಿಲ್ಲದೆ ಜನಿಯಿಸಿದ ದೃಷ್ಟಾಂತಂ (ಕವಿರಾ. ೧-೮೩) ; ಕೊಲ್ ಮೇಲ್ ಎನೆ ಬಗೆದು ಬಗೆದು ಮನದೊಳ್ ಜನಿಯಿಸುಗುಮವಂಗೆ ಖಳವಿಭಂಗ ಜ್ಞಾನಂ (ಆದಿಪು. ೫-೮೫) ; ನನಮಯಯಗಣಮಿಂತೀ ನಾಲ್ಕುಮೆತ್ತಂ ಜನಿಯಿಸೆ ಯತಿಸಪ್ತಸ್ಥಾನದಿಂದಂ ನಿನಗಱಿವುವೆನಿಂತೀ ಪಾಂಗಿನೊಳ್ಮಾಲಿನಿ ಬಗೆ ಘಟಂ (ಛಂದೋಂಬು. ೨-೧೩೭) ; ಇನಿವಿರಿದಟ್ಟಲಸ್ಕರೊಳಂ ಜನಿಯಿಸಿತು (ಕಾದಂಉ. ೪೭೫) ; ಶತ್ರುವಿಂ ಜನಿಸಿದ ಕಟ್ಟಲೆಯೆಂಬುದು ರತ್ನದ ಬೆಳಗಿಂದಂ ಬಿಸಿಲಿಂದಂ ಕಿರ್ಚಿಂದಂ ಕಿಡುವುದಲ್ಲ (ಪಂಚತಂ. ೧೬೯-೧) ; ಗೀತಮಂ ಮುದಂ ಜನಿಯಿಸೆ ಪಾಡುವಲ್ಲಿ (ಚಂದ್ರಪು. ೨-೭). ೪. ಗೋಚರಿಸಂ ; ಸ್ಫುರಿಸು : ಎನಲೊಡಮಾ ಭವದೊಳ್ ತೊಟ್ಟನಿತುಂ ವೃತ್ತಾಂತಮಂತರಂಗ ದೊಳಾಗಳ್ ಜನಿಯಿಸೆ (ಸುಕುಮಾ. ೭-೫೦). [ ಜನ್ಮಿ + - ಇಸು೨ ]

**ಜನುಮ, ಜಲ್ಮ** (ನಾ). ೧. ಹುಟ್ಟು ; ಜನ್ಮ : ಪರಮನ ಹಾದಿಯನು ಅಱಿದು ಸುಖಿಯಾಗು ಜನುಮದ ಹಾದಿಗೊಳಬೇಡ (ಸರ್ವಜ್ಞ. ೪೭೭). ೨. ಜೀವನ ; ಬಾಳುವೆ : ನೆರಳಿನಂತಿದೆ ಜನುಮ ನಮಗೆ ಧರೆಯೊಳಗೆ (ಕಎಪು. ೧೨-೭) ; ಚಂದ್ರನ ಬೆಳುದಿಂಗಳಿನ ತಣ್ಪನರಿಯದ ತಾವರೆ ಜನುಮವೆ ವ್ಯರ್ಥ (ಇಂಚಾಪ. ೧೪೯-೩೫). **ಜಲ್ಮ** : 'ಜಲ್ಮಾಂತ' ಪರಾ. [ <ಸಂ. ಜನ್ಮನ್ ]

**ಜನುಸ್ಸು** (ನಾ). ಹುಟ್ಟು ; ಜನ್ಮ : "ಜನನಂ ಜನ್ಮಂ ಪ್ರಸವಂ ಜನಿ ಜನುರುತ್ಪತ್ತಿ ಸೂತಿಯೇಕಾರ್ಥಮಿವಿಂತಿನಿತುಂ" (ವಸುಕೋ. ೧೮-೩). [ ಸಂ. ಜನುಸ್ ]

**ಜನೆ** 'ತನೆ' ನೋ.

**ಜನೇಶ** (ನಾ). ಅರಸ ; ರಾಜ : ಜನೇಶನಿಂತೇಕೆ ಕಟಿದು ಪೋದನೊ ಪೇೞಿಂ (ಕವಿರಾ. ೨-೩೦). [ ಜನ + ಈಶ ]

**ಜನೇಶ್ವರ** (ನಾ). = ಜನೇಶ : ಜಯವರ್ಮ ಜನೇಶ್ವರನಲ್ಲಿಗೆ . . . ಉದ್ಧವನೆಂಬ ದೂತಮುಖ್ಯನನಟ್ಟಿದೊಡೆ (ಚಂದ್ರಪು. ೬-೧೮ ವ). [ ಜನ + ಈಶ್ವರ ]

**ಜನೋಕ್ತಿ** (ನಾ). ೧. ಜನರು ಆಡುವ ಮಾತು : ಮುನ್ನಮೆಂಬ ಬಟಿಕೆಂಬ ಜನೋಕ್ತಿಯೊಳಾಯ್ತು ಸೂಚಿಶಕ್ತಿಗೆ ನೃಪರಾನೆ ದಾರದವೊಲಾದುವು ರಾಜಕುಮಾರರಾನೆಗಳ್ (ಗದಾಯು. ೧-೧೬) ; ಆತನ ಪೂಣ್ದ ಪೂಣ್ಕೆ ಶಿಲಾತಳಾಕ್ಷರಮೆನಿಸಿರ್ಪ ಜನೋಕ್ತಿಯಂ ಪುಸಿ ಮಾಟ್ಪನೇ (ಗದಾಯು. ೧-೭೧). ೨. ಗಾದೆ ; ನಾಣ್ಣುಡಿ ; ಲೋಕೋಕ್ತಿ. [ ಜನ + ಉಕ್ತಿ ]

**ಜನೋದಯ** (ನಾ). ೧. ಜನತೆಯ ಏಳಿಗೆ,-ಅಭಿವೃದ್ಧಿ. ೨. [ಛಂದ] ಪ್ರತಿಯೊಂದು ಪಾದದಲ್ಲಿ ನಾಲ್ಕು ಅಕ್ಷರಗಳಿರುವ ಒಂದು ಅಕ್ಷರ ವೃತ್ತದ ಹೆಸರು : ದಿನೇಶ ರುದ್ರ ನಿಶ್ಚಿತಂ ಜನೋದಯಂ ತನೂದರೀ (ಛಂದೋಂಬು. ೨-೦೨). [ ಜನ + ಉದಯ ]

**ಜನೋಪಕಾರ** (ನಾ). ೧. ಜನಕ್ಕೆ ಮಾಡುವ ಉಪಕಾರ. ೨. ಜನಕ್ಕೆ ಹಿತಕರವಾದುದು ; ಜನರಿಗೆ ಕಲ್ಯಾಣಮಾಡುವಂಥದು : ಲೋಕ ಕಲ್ಯಾಣವಾಗಬೇಕೆಂಬುದು ಈ ಕವಿಯ ಹಿರಿಯ ಉದ್ದೇಶ, ಕಿರಾತಾರ್ಜು ನೀಯ ಜನೋಪಕಾರವಾದ ಕಾವ್ಯ (ಭಾರದ. ೪೫೨). [ಜನ+ಉಪಕಾರ]

**ಜನೋಲೋಕ** (ನಾ). = ಜನಲೋಕ : ಜನೋಲೋಕವೆಂದು ತಿಳಿಯ ಬೇಕು (ಉತ್ತಟೀ. ೪೩-೧೨). [ ಸಂ. (ಜನಸ್ + ಲೋಕ) ]

**ಜನ್ನ**೧ (ನಾ). ಯಜ್ಞ ; ಯಾಗ : "ಯಜ್ಞಂ ಜನ್ನಮೆಂದಕ್ಕು" (ಕಬ್ಬಿಕೈ. ೪೭) ; ಜನ್ನಮಲ್ಲದೆ ಬನ್ನಮಿಲ್ಲ (ಅಜಿಪು. ೧-೨೭ವ) ; ಜನ್ನಕ್ಕೆ ತಂದ ಕನ್ನೆ ಯಾಡು ಶ್ರುತಿಯಿಂದ ಹೊಱಗು (ಜನ್ನವ. ಕ. ೨೪೯-೫೪೨) ; ಸಾಮವೇದಿಯ ಜನ್ನಕಾವುದ್ದಾಮನಂದಿಯನೇಱಿ ಹೋದೈ (ಬಸಪು. ೨೪-೭೪) ; ಜನ್ನಕ್ಕೆ ಕರ್ತನಮರೇಂದ್ರು ವೇದಕ್ಕೆ ಕರ್ತಂ ನಾಲ್ಮೊಗಂ (ಸೌಂದಪು. ೭-೫).

ಜನ್ನವನುಣ್ಬಣ್ಣರ್ = ದೇವತೆಗಳು : ಜನ್ನವನುಣ್ಬಣ್ಣರನಾರ್ದು ಕೊಂದು (ಕಬ್ಬಿಕಾ. ೦೫೮). [ <ಪ್ರಾ. ಜನ್ನ, ಜಣ್ಣ. / ಸಂ. ಯಜ್ಞ ]

**ಜನ್ನ**೨ (ನಾ). ೧. ಒಬ್ಬಾತನ ಹೆಸರು : ಶ್ರೀಜನ್ನ ಕಲ್ಲ ನಿಱಿಸಿ ಪನ್ನಿರ್ಕ ಣ್ಣುಗ ಬೆದೆ ಮಣ್ಗೊಟ್ಟಾರ್ (ಮೈಆರಿ. ೧೯೪೪, ೭-೩ ; ಸು. 808) ; ಶ್ರೀ ನೆಕುಣ್ಣರಾ ವಾಜಪೇಯಾಜಿಯಾ ಮಗನ್ ಜನ್ನನ್ಕೊಟ್ಟದು ಸಲೆ ಆಚನ್ದ್ರತಾರಕಂ (ಎಕ. VII, ಶಿಕಾರಿ. ೪೫-೫೯ ; ಸು. 890). ೨. ಕನ್ನಡ ಸಾಹಿತ್ಯದಲ್ಲಿ ಪ್ರಸಿದ್ಧನಾದ ಒಬ್ಬ ಕವಿಯ ಹೆಸರು : ಜನ್ನನ ದೇಸೆ ಪಂಪನ ಗುಣಂ ಗುಣನಂದಿಯ ತೊಂಡು (ಸೂಕ್ತಿಸು. ೧-೨೬) ; ಮನ್ನಿಸಿ ಸಲಹುಗೆ ಸತ್ಕವಿ ಜನ್ನಂ ಜಾಣೆಸೆಯಲಿತ್ತು ನುಡಿಗಳನೆನ್ನಂ (ಧರ್ಮನಾ. ೧-೪೦). [<ಸಂ. ಜನಾರ್ದನ ]

**ಜನ್ನ**೩ (ನಾ). ಒಂದು ಬಗೆಯ ಕುದುರೆ ; ಬಿಳುಪಿನಿಂದ ಕೂಡಿದ ಕೆಂಬಣ್ಣದ ಕುದುರೆ: "ಬಿಳಿದುಮಾಗೊರೆದ ಕೆಂಪಿರೆ ಜನ್ನಂ" (ಮಂಗರಾ. ೮೧-೧೪) ; ಜನ್ನ ಚೆನ್ನಾರ ಚಿನ್ನಳಗ ಚೆಲುವ ಚೀರ . . . ಸನ್ನುತ ಸಾಂಬ್ರಾಣಿಯನೇಱಿ ನೃಪಕುಲರನ್ನರಿಗಂದು ತೋಱಿದರು (ಅಂಜಚ. ೬-೮೩) ; ಜನ್ನನಂ ನೀಲನನೆಳಗನಂ ತನ್ನಿ ಕತ್ತಳ ಮೌಹಳಿಗನಂ ತನ್ನಿ . . . ವಾಹಕರಿರಾ ನೀವು (ಬಸಪು. ೫೯-೪೦) ; ಪೊಳೆವಳಗ ತಿಳಗ ಕೊಂಗ ಸವಳ ಚಂಬೆಯ ನೀಲ ಜನ್ನ ಜಂಬ . . . ಎನಿಪ್ಪಗ್ಗಳಿಕೆಯ ಹಯಮಂ ತುರಂಗಿಗಳ್ ಕೈಗೆಯ್ದರ್ (ತ್ರಿಪುವಿ. ೨೪-೨೯೪). [ ? ]

**ಜನ್ನ**೪ (ನಾ). ಮಾನ್ಯ ; ದಾನ ಕೊಟ್ಟ ಭೂಮಿ (?) : ಕುಂದಾಪುರದ ಪುರೋಹಿತ ಅಧಿವಾಸದ ಜಂನಿ ನಾರಾಯಣ ಕಾರಂತರ ಮಗ ಜಂನಿ ನಂದಿಕಾರಂತರ ಮೂಲದ ಜಂನ ಸರ್ವಸ್ವದ ಚತುಸೀಮೆಯ ವಿವರ (ಸೌಇಇ. IX-ii, ೪೭೫-೩೭ ; 1472) ; ಆ ಕುದುರವೊಳಗೆ ಅರ್ಧ ಅರುವಾರ ಮೂಲಾದಿ ಮಯಿಸಾಲ ಜಂನ ಸರ್ವಸ್ವ ಎಲ್ಲವನೂ . . . ಬರಸಿಕೊಟ ಶಾಸನ (ಸೌಇಇ. IX-ii, ೪೭೦-೩೮ ; 1482) ; ಯಿ ಜಂನಕ್ಕೆ ಉಂಟಾದ ಉಡುಗರೆ ಉತ್ತರ ಸೀಮೆ ಸಾಮ್ಯವೇನುಂಟದು ಸಹ ಬಿಡಾರು ವಾರವ ಬಿಟ್ಟು (ಸೌಇಇ. IX-ii, ೬೨೦-೨೦ ; 1546). 'ಜಮ್ಮ' ಪರಾ. [ ? ]

**ಜನ್ನಂಗೆಯ್,** ಜನ್ನಂಗೈ (ಕ್ರಿ). ಯಜ್ಞಮಾಡು: ಜನ್ನಂಗೆಯ್ವುದು ಶಂಭು ಭಕ್ತತತಿಗಂ ಸಂತೃಪ್ತಿಯಂ ಮಾಳ್ಪುದೌ (ಹಾಲಾಸ್ಯ. ೨-೭-೨೮). **ಜನ್ನಂಗೈ:** ಜನ್ನಂಗೈವೆ ಜಾಣ್ಗೆಡಲ್ ದಕ್ಷನಂ ತುಡುಕಿ . . . ಗೋಣ್ಗೊರೆದ ವೀರಭದ್ರಂ (ನಂದಿಮಾ. ೧-೮). [ ಜನ್ನ$_1$ + ಕೆಯ್$_1$ ]

**ಜನ್ನಂಗೈ** 'ಜನ್ನಂಗೆಯ್' ನೋ.

**ಜನ್ನಕೊಂಡ** 'ಜನ್ನಗೊಂಡ' ನೋ.

**ಜನ್ನಗುದಿರೆ** 'ಜನ್ನಗುದುರೆ' ನೋ.

**ಜನ್ನಗುದುರೆ,** ಜನ್ನಗುದಿರೆ (ನಾ). ಯಜ್ಞಾಶ್ವ: ಅಗ್ಗಳಿಕೆಯನ್ನು ತಲೆಯಲ್ಲಾಂತು ಜನ್ನಗುದುರೆ ತಿರುಗಲು ಹೊರಟಿತು (ಬಿದುರೆ. ೩೪). **ಜನ್ನಗುದಿರೆ:** ಸುಡುಸುಡು ನಿನ್ನ ಜನ್ನಗುದಿರೆಯಂ (ರಾಮಾಶ್ವ. ೩೯-೧೫). [ ಜನ್ನ$_1$ + ಕುದುರೆ ]

**ಜನ್ನಗೂಳ** 'ಜನ್ನಗೂಟಿ' ನೋ.

**ಜನ್ನಗೂಟಿ,** ಜನ್ನಗೂಳ (ನಾ). ಯಜ್ಞದಲ್ಲಿ ಅರ್ಪಿತವಾಗುವ ಹವಿಸ್ಸನ್ನೇ ಆಹಾರವಾಗಿ ಉಳ್ಳವನು; ದೇವತೆ: "ಅಮರ್ದುಣಿಸುಗಳ್, ಕನಸಿಲ್ಲದರ್ . . . ಜನ್ನಗೂಟಿರ್, ಬಿಜ್ಜೋದರರ್, ಗಾಳಿವಟ್ಟಿಗರ್, ಅಚ್ಚರರ್ (ಬೋಳೆಯರ್) – ೯ ದೇವರ್ಕಳ ಪೆಸರ್" (ಕಶಸಾ. ೨-೧೯). **ಜನ್ನಗೂಳ:** ಜನ್ನಗೂಳರ್ಕಳೆರೆಯಂ ಮಹಾಭೀತಿಯಿಂ ರನ್ನವಂ ಕೊಟ್ಟು ಸಂತೈಸಿದನೊಯೆನೆ ರತ್ನಶೃಂಗಂಗಳೆಸೆದಿರ್ದವು(ವಂಕಾರಾ. ೨-೨೯-೯). [ ಜನ್ನ$_1$ + ಕೂಟ್$_1$ + – ಅ$_7$ ]

**ಜನ್ನಗೊಂಡ,** ಜನ್ನಕೊಂಡ (ನಾ). "ಯಜ್ಞಕುಂಡ" (ಪ್ರಭಣ್ಣ). **ಜನ್ನಕೊಂಡ:** ಬೇಳ್ವ ಬೇಳಂಬದಿಂ ಜನ್ನಕೊಂಡಂ ಬಳಸಿ . . . ಹವಿಯನರ್ಪಿಸುತಿರ್ದಂ (ಶ್ರೀರಾಮಾ. ೧೨-೩೦೨). [ ಜನ್ನ$_1$ + ಕೊಂಡ$_2$ ]

**ಜನ್ನಣಿ** (ನಾ). ಯಜ್ಞಶಾಲೆ; "ಯಾಗಶಾಲೆ" (ಜಕುನಿ. ಕ. I, ೭೦). 'ಜನ್ನವನೆ' ಪಠಾ. [ ? ]

**ಜನ್ನದಾರ** (ನಾ). ಜನಿವಾರ; ಯಜ್ಞೋಪವೀತ: ಜನ್ನದಾರದ ಪನ್ನಗಭೂಷಣಂ ಪವಿತ್ರದ ಪರಮಾತ್ಮಂ (ಗಿರಿಕ. ೧೦-೭೯ ವ); ಮೂಜಿಟಿಯ ಜನ್ನದಾರದಾಣೆ (ರಾಮಾಶ್ವ. ೧೧೭-೨೪). [ ಜನ್ನ$_1$ + ದಾರ$_1$ ]

**ಜನ್ನಲು** (ನಾ). ಕಿಟಕಿ: "ಕಿಟಕಿ, ಜನ್ನಲು, ವಾತಾಯನ" (Window. ಇಂಕನಿ). [ ←ಪೋರ್ಚ್. Janella. / ತಮಿ. ಜನ್ನಲ್ ]

**ಜನ್ನವಗೆಯ** (ನಾ). ೧. ಯಜ್ಞಕ್ಕೆ ಶತ್ರುವಾದವನು; ದಕ್ಷಯಜ್ಞವನ್ನು ಧ್ವಂಸಮಾಡಿದವನು; ವೀರಭದ್ರ: "ಜನ್ನವಗೆಯಂ, ಎಂಟಡಿವರಿಜಂ, ಬೀರಂ, ಬಿಸುಗಣ್ಣಮಗಂ, ಅರೆವಾನಿಸವಗೆಯಂ – ಈ ೫ ವೀರಭದ್ರಂಗೆ ಪೆಸರ್" (ಕಶಸಾ. ೧-೬); "ಎಂಟಡಿವರಿಜ ಜನ್ನವಗೆಯ ಬಿಸುಗಣ್ಣಮಗನು ಬೀರನರೆವಾನಿಸವಗೆಯನೆಂದು ಸಲ್ವುದಾ ವೀರಭದ್ರನ ನಾಮ" (ಶಬ್ದಮಂ. ೫); ಜನ್ನವಗೆಯಂಗೆ ಸುಗ್ರೀವಂ ಬಿಗುರ್ವರಿಜಂಗಂಗದಂ ನಂದಿಗೆ ನೀಲಂ ಮಸಗಿ ಮಾಱಾಂತರ್ (ರಾಮಾಶ್ವ. ೧೩೩-೧೭). ೨. ಈಶ್ವರ; ಶಿವ: "ಕಪರ್ದಿ ಜನ್ನವಗೆಯಂ" (ಕರ್ಣಾನಿ. ೬). [ಜನ್ನ$_1$ + ಪಗೆ$_2$ + – ಅ$_7$]

**ಜನ್ನವನೆ** (ನಾ). ಯಜ್ಞಶಾಲೆ; ಯಾಗಮಂಟಪ: ಆ ಹರಕೆ ಜನದ ಹೃದಯದಿಂ ಜನ್ನವನೆಯಿಂದೇಳ್ವ ಹೋಮಧೂಮಂಬೋಲೆ ವ್ಯೋಮಾಂತರಕೆ ಪರ್ವಿದತ್ತು (ಶ್ರೀರಾಮಾ. ೧೧-೨೮೮). [ ಜನ್ನ$_1$ + ಮನೆ ]

**ಜನ್ನವರ** 'ಜನ್ನವಿರ' ನೋ.

**ಜನ್ನವಳ** (ನಾ). ಯಜ್ಞದ ಹವಿಸ್ಸನ್ನು ಬಯಸುವವನು; ಇಂದ್ರ: "ಪಲಗಣ್ಣನಿಂದಿರಂ ಮಂಗಿಲ್ದೇರನುಱ್ ಜನ್ನವಳನು ಸಗ್ಗಿಗರಾಣ್ಮನೆನೆ ಸುರಪ" (ಕಬ್ಬಿಕೈ. ೧೦೨). [ ಜನ್ನ$_1$ + – ವಳ ( < – ವಾಳ$_1$) ]

**ಜನ್ನವಿರ್** (ಕ್ರಿ). ಯಜ್ಞದಲ್ಲಿ ತೊಡಗು; ಯಜ್ಞಮಾಡು: ಯಮುನಾಜಳೋದ್ಗಮಮುಮ್ ಮಿಗೆ ಜನ್ನವಿರ್ಪ್ಪ ಭೂವಳಿ[ಯು]ವಿನೂತ ವಿಪ್ರವರರಿಂದೆಸೆದಿರ್ಪುದೆತ್ತ ನೋೞ್ಪ ಡಂ (ಎಕ. XIII, ೪೪-೩೮ : 1112); (ಶಾಪಮಂ. ೨೦೭ ನೋ). [ ಜನ್ನ$_1$ + ಇರ್$_1$ ]

**ಜನ್ನವಿರ,** ಜನಿವಾರ, ಜನ್ನವರ, ಜನ್ನಿವರ, ಜನ್ನಿವಾರ, ಜನ್ನುರ (ನಾ). ಯಜ್ಞೋಪವೀತ; ಬ್ರಹ್ಮಸೂತ್ರ: ಕಾಸೆಯನುಟ್ಟು ಜನ್ನವಿರಮಂ ಪೆಗಲೊಳ್ ತೆಗೆದಿಕ್ಕಿ ವೇದದಭ್ಯಾಸಮನುಂಟುಮಾಡಿ (ಕಾವ್ಯಸಾ. ೫೩೫ ಉದ್ಧೃತ); ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರವೊಡಂಬಡೆ (ಶಂಪಭಾ. ೬-೮); ಒಳ್ಪುವೆತ್ತ ಜನ್ನವಿರಮುಮಂದಂಶುಕಂಡಳಯುಗಂ (ವರ್ಧಪು. ೦೬-೪). **ಜನಿವಾರ:** ಜನಿವಾರವ ಹೆಸರಿಗೆ ಹಾಕಿಹನು ಜೀನಗಾರನುಯೆಂದೆಂಬೆ (ಚಿದಾವ. ೧೪-೬); ಎದೆಯ ಮೇಲೆ ಹೊತ್ತ ಉತ್ತರೀಯದ ಸಂದಿನಿಂದ ಜೋಲಾಡುವ ಜನಿವಾರ (ಕಳಹು. ೨); ಜನಿವಾರದೊಳಗಿನ ಕೃಷ್ಣಾಜಿನ ಆಗಾಗ ಕೊರೆಯುತ್ತಿತ್ತು (ವ್ಯನಿ. ೧೮೩). **ಜನ್ನವರ:** ನೇರಿತೆನಿಪ್ಪ ಜನ್ನವರದಿಂ ಕರಯುಗ್ಮದೊಳಾಂತ ದರ್ಭೆಯಿಂ ಚಾರು ಶಿಖಾಕಮಂಡಲುಗಳೊಪ್ಪಿರೆ ವಾಮನರೂಪುವೆತ್ತ ಗಂಭೀರನುದಾತ್ತನಾ ಬಲಿಯ ಬೇಟ್ಪುದುಂ (ನೇಮಿಪು. ೫-೨೦); ಗಿಳಿವಿಂಡು ದರ್ಭೆ ಮಲ್ಲಿಗೆ ಜನ್ನವರ ಕಾಸೆ ತಳಿರಾಗೆ ಕುಸುಮಾಕ್ಷತೆಯಿತ್ತು ಅಲರಂಬನ ಪರಸುವ ವಿಪ್ರನಂದದೆ ಚಲುವಾದುದೊಂದು ಚೂತಕುಜಾತ (ತ್ರಿಭುತಿ. ೦೪-೩೮). **ಜನ್ನಿವರ:** ಅವನ ಜನ್ನಿವರಮಂ ಸಾಭಿಜ್ಞಾನದುಂಗುರಮಂ ನಗೆಯೊಳೊತ್ತೆಯೆಂದು ಕೊಂಡು (ಚಾವುಂಪು. ೩೫-೧೫); ಅಬ್ಜತಂತುವಿನ ಜನ್ನಿವರಂ ಸುರಭೂಜವಲ್ಕವೊಪ್ಪಿರೆ ಪೊಜಮಟ್ಟನಾ ಕೊಳದಿನಾಗಳ ದೊರ್ಪ ಕುಮಾರತಾಪಸಂ (ಕಾದಂಬ. ೭೦೭); ಓಜೆವೆತ್ತಿರೆ ಬೆಳ್ಪಿಯುತ್ತರಿಗೆ ಜನ್ನಿವರಂ ಬೆಡಂಗಳವಟ್ಟು ಬಾಲದಿನೇಶನಂತಿರೆ (ಧರ್ಮಾಮೃ. ೫-೨೦೭); ಒಡಲೊಳೆಸವುದ್ಧೂಳನ ತ್ರಿಪುಂಡ್ರಗಳೊಪ್ಪಿಡೆ ಜನ್ನಿವರದಿಂದೆ . . . ದೇಸೆವಡೆದಿಹ ತಪೋಧನರು (ರಾಘಪಂ. ೦೭-೫೮). **ಜನ್ನಿವಾರ:** "ಜನ್ನಿವಾರಂ ಬ್ರಹ್ಮಸೂತ್ರಮುಪವೀತಮೆನಿಕ್ಕು" (ಮಂಗರಾ. ೭೫-೮); ಏಟುಸರದ ಜನ್ನಿವಾ[ಪಾಠಾಂ. ವಿ]ರಮನಿಕ್ಕುವುದುರೋಲಿಂಗಂ (ಚಾವುಂಪು. ೬೨); ಕರ್ಪೂರಲತೆಯಂತಿರ್ದ ಜನ್ನಿವಾರಮಂ ಕಳೆದು ಬಿಸುಟು (ಬಸರ. ೨-೪೨); ಕಳೆದು ಮುನಿಪತಿ ಜನ್ನಿವಾರವ ಧರೆಗೆ ಬಿಸುಡುತಲಿ (ಕಾಶಿರಾ. ೩-೦೯). **ಜನ್ನುರ:** ಕತ್ತುರಿಯ ಕಂಪು ಕೈಸುರಿಗೆ ಹೊಂನೊಱ್ ಹಟ್ಟಿಗೆ ಸಣ್ಣ ಗಗ್ಗರಂ ಮುತ್ತಿನ ದಂಡೆ ತೋಳಮಣಿ ಬೈತಲೆ ನೆಯ್ದಲೆ ತೂಲ ಜನ್ನುರಂ . . . ಮೆಯಿವೆತ್ತಿರೆ (ಎಕ. V, ಅರಸೀ. ೮೮-೨ : 1184). [ ಜನ್ನ$_1$ + ?. / ಪ್ರಾ. ಜಣ್ಣೋವಈಯ, ಜಣ್ಣೋವವೀಯ. / ಸಂ. ಯಜ್ಞೋಪವೀತ ]

**ಜನ್ನವಿರವಂತ**(ನಾ). ಯಜ್ಞೋಪವೀತವನ್ನು ಧರಿಸಿದವನು; ಬ್ರಾಹ್ಮಣ: ಜನ್ನವಿರವಂತಂ ಪಾರ್ವಂ (ಶಬ್ದಾನು. ೪೦೨ ಪ್ರಯೋ). [ ಜನ್ನವಿರ + – ವಂತ ]

**ಜನ್ನಶಾಲೆ** (ನಾ). ಯಜ್ಞಶಾಲೆ; ಯಾಗಮಂಟಪ: ಭಸ್ಮಭಾವನೆ ಬೇಡ ನಡೆವುದು ಜನ್ನಶಾಲೆಗೆ ನೀವು (ನಿಭಾಗ. ೧೦-೨೦-೨೯). [ಜನ್ನ$_1$+ಶಾಲೆ$_3$]

**ಜನ್ನಿ** (ನಾ). ಗ್ರಾಮದ ಮಹಾಜನ; ಧರ್ಮದರ್ಶಿಗಳ ಸಭೆ: ಶ್ರೀಪಾರಿಸ್ವದೇವರಿಗೆ ನಾಡೇಳುಮಂದಿ ಜಂನಿಗಳು ಇಪ್ಪತನಾಲ್ಕು ಬಳಿಯ ಸಮಸ್ತನಾಡು . . . ಅರ್ತ್ಥವ ಕೊಟು (ಕಇ. I, ೫೦-೪ : 1482); ಧಾರಾಪೂರ್ವಕವಾಗಿ ಬಾಳಿಯೆಂದು ಬರಸಿಕೊಟ್ಟ ಶಿಲಾಶಾಶನ . . . ಹಾಱುನಾಡು ಸಮಸ್ತರ ವೊಪ ಬೆಲತೂರ ಜಂನಿಗಳ ವೊಪ (ಸೌಇಇ. IX-II, ೪೭೯-೧೫ : 1510); ಕೋಟ ಅಧಿವಾಸದ ಉ[ರ]ನಾಲ್ವರು ಜಂನಿಗಳ ವೊಪ್ಪ (ಸೌಇಇ. IX-II, ೫೨೦-೩೦ : 1526). [ ? ]

**ಜನ್ನಿಗ** (ನಾ). ಯಜ್ಞ ಮಾಡುವವನು; ಅಧ್ವರ್ಯು: "ಜನ್ನಿಗ (ಗೆ)-ಯಾಜ್ಞಿಕ = ಅಧ್ವರಿ" (ತದ್ಭಕೋ. ೧೪). [ <ಸಂ. ಯಾಜ್ಞಿಕ ]

**ಜನ್ನಿಗೆ, ಜನಗಿ$_1$, ಜನಿಗೆ** (ನಾ). ೧. ದೇವರ ನೈವೇದ್ಯದ ಹಾಲಿಗಾಗಿ ಮೀಸಲು ಬಿಟ್ಟ ಗೋವು, – ಆವು: ದೆಯ್ವದ ಜನ್ನಿಗೆಯುಮನಾ ದೆಯ್ವದ ಬಣ್ಣಮುಮನಚ್ಚುಮಾ ಕಳ್ಳರ್ಕೊಂಡೊಯ್ವಲ್ಲಿ ಕಾಯಲಾರದ ದೆಯ್ವಂಗಂಳ್ತಮಗೆ ಭಕ್ತರಂ ಕಾದಪವೆ (ಸಮಪು. ೯-೧೦೬): ಜಂಗುಳಿ ದೈವಕ್ಕೆ ಜನ್ನಿಗೆ ಬಿಟ್ಟಾರು ಕೇಡ ನೋಡಿ (ಕಾಲಸಂ. ೮೩-೩): ಕಾಂತೆ ಮಡಗಿದ ಜನ್ನಿಗೆಯ ಪಾಲಂ ತೆಗೆದು ಚೆನ್ನಾಗಿ ಕಾಸಿದನಂತರದೊಳ್ (ಬಸಪು. ೧೪-೩): ಕುನ್ನಿಗಳು ಮನೆ ಪೊಕ್ಕು ಮಡಿಕೆಯ ಜನ್ನಿಗೆಯ ಮೀಸಲನು ಕುಡಿದಂತಾಯ್ತು (ನಿಭಾಗ. ೧-೦೩-೧೧). ೨. ಜನಿವಾರ; ಯಜ್ಞೋಪವೀತ: ಕಟ್ಟದೆನೊಱೆಯ ಬಿಟ್ಟೆ ಜನ್ನಿಗೆಯ ಓಡದಿರೋಡದಿರು ಶರಣರ ಮನೆಯ ಬಿರುದಿನಂಕಕ್ಕೆ ಹಿಮ್ಮೆಟ್ಟದಿರೆಲೆ ದೇವ (ಬಸರ. ೦೨-೨೮): ಮೀಸಲ ಮಾರವ ಮರೆಯು ಜನ್ನಿಗೆಯ ಕಿತ್ತೊಗೆಯು . . . ಅಜ್ಞಾನ ಕಳೆಯು (ಚಿದಾವ. ೧೧೦-೯). **ಜನಗಿ$_1$:** ೧. ಮೇಲಾಗಿ ದೇವರಿಗೆ ಜನಗಿ ಬಿಟ್ಟದ್ದು (ಅಕೋಶ. ೮೪). **ಜನಿಗೆ:** ೧. "ದೇವರಿಗೆ ಬಿಟ್ಟ ಆಕಳು" (ಜಾನಕೋ. ೩೯). [ <ಪ್ರಾ. ಜಣ್ಣಯ./ಸಂ. ಯಾಜ್ಞಿಕ ]

**ಜನ್ನಿಗೆಯ** (ನಾ). ಯಜ್ಞ ಮಾಡುವವನು; ಬ್ರಾಹ್ಮಣ: ಕಟ್ಟದೆ ಒಱೆಯ ಬಿಟ್ಟೆ ಜನ್ನಿಗೆಯರ ಮುಟ್ಟಿ ಬಂದಿಱದರೆ ಓಸರಿಸುವನಲ್ಲ (ಬಸವ. ೭೦೦). [ ಜನ್ನಿಗೆ + – ಅ$_6$ ]

**ಜನ್ನಿಗೆಯಾವು** (ನಾ). = ಜನ್ನಿಗೆ ೧: ಜನ್ನಿಗೆಯಾವಂ ಪರಸಿದ ಪೊನ್ನಂ ಪರಿಯಳಮನೊಯ್ವ ಕಳ್ಳರನಂತಿಂತೆನ್ನದು ಗಡ ಮನೆದೈವದ ಸನ್ನಿಧಿಕೆಯ ನೋಡೆ ಮನೆಯ ಕುನ್ನಿ ವಿಶೇಷಂ (ಪುಸಾರ. ೪೭೩). [ ಜನ್ನಿಗೆ + ಆವು ]

**ಜನ್ನಿವರ** 'ಜನ್ನವಿರ' ನೋ.

**ಜನ್ನಿವಾರ** 'ಜನ್ನವಿರ' ನೋ.

**ಜನ್ನಿವಾಸ, ಜಾನ್ವಾಸ, ಜೆನ್ನೀವಾಸ** (ನಾ). ೧. ಬಿಡದಿಯ ಮನೆ; ದಿಬ್ಬಣದ ಮನೆ: ಮಾಡಿದರಮನೆ ಜನ್ನಿವಾಸದ ಬೀಡಿಕೆಗಳಾದವು (ತೊರರಾ. ೧-೦೬-೦೬). **ಜಾನ್ವಾಸ:** ೨. ಮದುವೆಗೆ ಮುಂಚೆ ಬೀಗರನ್ನು ಸ್ವಾಗತಿಸುವ ಉತ್ಸವ: ರಾಯರ ಮನೆ ಜಾನ್ವಾಸ ಬಲು ಭರ್ಜರಿಯಾಗಿತ್ತು (ರೂಢಿ). **ಜೆನ್ನೀವಾಸ:** ೧. ಬಂದು ಭೂಮೀಶ್ವರರು ನಳನೃಪಗಂದು ನಿಬ್ಬಣವಾಯ್ತು ಪೊಸಗೆಯ ದುಂದುಭಿಯ ರಭಸದಲಿ ಜೆನ್ನೀವಾಸ ಕೆಸಗಿದರು (ಅಂಬಿಕಾ. ೪೮-೪೮).

[ <ಸಂ. ಜನ್ಯವಾಸ./ಮರಾ. ಜಾನ್ವಸಾ, ಜಾನವಸಾ ]

**ಜನ್ನುರ** 'ಜನ್ನವಿರ' ನೋ.

**ಜನ್ಮ** (ನಾ). ೧. ಹುಟ್ಟು; ಜನನ: "ಜನನಂ ಜನ್ಮಂ ಪ್ರಸವಂ ಜನಿ ಜನುರುತ್ಪತ್ತಿ ಸೂತಿಯೇಕಾರ್ಥಮಿಂತಿನಿತುಂ" (ವಸ್ತುಕೋ. ೦೮-೩): ಎನ್ನ ಜನ್ಮವ ತೊಡೆದ ನೀ ಧರ್ಮಿ (ಬಸವ. ೪೮೦): ಆಱೆವಾವೆಲೆ ದೇವ ಹತ್ತಕೆ ಮೂಱುಳಿಯಲುಳಿದಿರ್ದ. ಜನ್ಮಕ್ಕೆ ಮೂಱು ಜನ್ಮವೆ ಸಾಕು (ತೊರರಾ. ೧-೮-೨೦): ಪರತರಾಕುಂಚನೆಯ ಬಲ್ಲವ ಮರಳಿ ಜನ್ಮಕೆಯೂ ಪರಮ ಪರತರ ಬ್ರಹ್ಮವಾಗಿಯೇ ನೆರೆ ವಿರಾಜಿಸುತಿರುವನು (ಗಗತಾ. ೨೦-೭೩): ಜನ್ಮ ಕುಲ ಧನ ಜಾತಿ ವರ್ಣಪ್ರಭೇದಮಂ ಗಣಿಸದೆಯೆ . . . ಪಾಲಿಸಿರ್ದನು ತನ್ನ ರಾಜ್ಯಮಂ(ಶ್ರೀರಾಮಾ.೭-೧೮೦): ಜನ್ಮವೆಂದರೆ ಆತ್ಮನಿಗೆ ಶರೀರ ಇಂದ್ರಿಯ ಬುದ್ಧಿ ಇವುಗಳ ಸಂಘಾತಸಂಬಂಧ (ಹಿಂದಸಾ. ೧೨೨). ೨. ಜೀವಮಾನ; ಜೀವಿತ; ಬಾಳ್ವೆ; ಇರುವಿಕೆ: ವಿದ್ಯೆಯಿಲ್ಲದ ನರನು ನರಪಶುವವನ ಜನ್ಮ ನಿರರ್ಥಕರವೆಂದ (ಕುವ್ಯಾಉ. ೩-೧೧೩): ಜನ್ಮ ಇರುವ ವರೆಗೂ ತಮ್ಮ ಉಪಕಾರ ನೆನಸುವೆನು (ಮುಂಬಯಿ. ೪-೩೦): ಜನ್ಮಕ್ಕೆ ಹತ್ತಿದ ಶನಿಯಾಗಿ ನೊಣೆದು ನುಂಗಿ ಬಿಡುತ್ತದೆ (ಬಂಕಿಮ. ೦೦೮).

**ಜನ್ಮಕೊಡು**=ಹೆರು; ಹಡೆ: ಜನ್ಮ ಕೊಟ್ಟ ತಾಯಿ ಪರಮಪೂಜ್ಯಳು (ರೂಢಿ). **ಜನ್ಮನೀಗು** = ಜೀವನವನ್ನು ನೂಕು, –ಸಾಗಿಸು: ಯಾರು ಯಾರನ್ನೋ ಇದಿರುಹಾಕಿಕೊಳ್ಳುವುದರಲ್ಲೇ ಜನ್ಮನೀಗಿದ ಹುಡುಗಿ ಸಾವಿನಲ್ಲೂ ಯಾರನ್ನೋ ಇದಿರುಹಾಕಿಕೊಂಡುತಿತ್ತು (ಮೂರುದಾ. ೩೪೪).

[ ಸಂ. ಜನ್ಮನ್ ]

**ಜನ್ಮಕಲ್ಯಾಣ** (ನಾ). [ಜೈನ] ಪಂಚಮಹಾಕಲ್ಯಾಣಗಳಲ್ಲಿ ಒಂದು; ಜಿನಶಿಶು ಹುಟ್ಟಿದ ಕೂಡಲೆ ದೇವೇಂದ್ರನು ತನ್ನ ಪರಿವಾರದೊಂದಿಗೆ ಬಂದು ನಡೆಸುವ ಒಂದು ಉತ್ಸವ; ಜನ್ಮಾಭಿಷೇಕ ಎಂಬ ಕಲ್ಯಾಣ: ತೀರ್ಥಕರ ಜನ್ಮಕಲ್ಯಾಣಾರ್ಥಂ ಬಂದಿಂತೆ ನೆಲಸಿದವುವಿಲ್ಲಿ (ಚಂದ್ರಪು. ೧೧-೭೬). [ ಜನ್ಮ + ಕಲ್ಯಾಣ ]

**ಜನ್ಮಕುಂಡಲಿ** (ನಾ). [ಜ್ಯೋತಿ] ಜನನಕಾಲದ ಗ್ರಹಗಳ ಸ್ಥಿತಿಯನ್ನು ಸೂಚಿಸುವ ಪತ್ರ; ಜನ್ಮಪತ್ರಿಕೆ; ಜಾತಕ: ಜನ್ಮಕುಂಡಲಿ ತಂದ ಹೊರತು ಕೂಡುವಳಿ ನೋಡುವುದಕ್ಕಾಗುವುದಿಲ್ಲ (ರೂಢಿ).

[ ಜನ್ಮ + ಕುಂಡಲಿ$_2$ ]

**ಜನ್ಮಕುಂಡಲಿಕ** (ನಾ). = ಜನ್ಮಕುಂಡಲಿ: ಶ್ರೀರಾಮ, ಶ್ರೀಕೃಷ್ಣರ ಕುಂಡಲಿಗಳಿಗೆ ಸರಿಹಚ್ಚಿ ನೋಡಲಾಗಿ ನನ್ನ ಜನ್ಮಕುಂಡಲಿಕವು ಅವುಗಳಿಗಿಂತ ದೊಡ್ಡದಾಗಿ ಕಂಡುಬಂದೀತು (ನಿರಾಭ. ೧೨೮).

[ ಸಂ. ಜನ್ಮಕುಂಡಲಿಕಾ (ಜನ್ಮ + ಕುಂಡಲಿಕಾ) ]

**ಜನ್ಮಕ್ಷೇತ್ರ** (ನಾ). ಹುಟ್ಟುವ ಸ್ಥಳ; ಯೋನಿ: ಮೂತ್ರನಿವಾಸಂ ಜನ್ಮಕ್ಷೇತ್ರಂ ಗಡ ಶುಕ್ಲಶೋಣಿತಂ ಬಿತ್ತು ಗಡೇಂ ಪಾತ್ರಂ ದೇಹಂ ದೇಹಿಗೆ ಮೈತ್ರೀಭಾವಮನೊಡರ್ಚಲುಂ ಮೋಹಿಸಲುಂ (ಮಲ್ಲಿಪು. ೯-೭೭).

[ ಜನ್ಮ + ಕ್ಷೇತ್ರ ]

**ಜನ್ಮಚಕ್ರ** (ನಾ). ಪುನಃ ಪುನಃ ಹುಟ್ಟುವುದು: ಭವದುಃಖವೆಂಬ ಕ್ರೂರ ಜನ್ಮಚಕ್ರಕ್ಕೀಡಾಗಿ ಅಲ್ಲಿ ತನ್ನ ಮಱೆದು . . . ಮುಳುಗಾಡುತಿಪ್ಪ ಅಜ್ಞಾನಿಜೀವಿಗಳು ನಿಮ್ಮನೆತ್ತ ಬಲ್ಲರಯ್ಯಾ (ಮೋಳಿಮಾ. ೨೮೭-೬೩).

[ ಜನ್ಮ + ಚಕ್ರ$_1$ ]

**ಜನ್ಮಜನ್ಮಾಂತರ** (ನಾ). ಅನೇಕ (ಹಿಂದಿನ ಅಥವಾ ಮುಂದಿನ) ಜನ್ಮಗಳು: ಜನ್ಮಜನ್ಮಾಂತರದೊಳಾದೊಡಂ ಪೇಳ್ವೆನೋ ನಿನಗೆ ಬೆಸನಂ ಮಗನೆ (ಜೈಮಿಭಾ. ೦೩-೩೪): ಮತ್ತೆ ಋಣಸೂತಕವು ಜನ್ಮಜನ್ಮಾಂತರಕೆ ಎತ್ತೆತ್ತಲೂ ಬೆನ್ನುಹತ್ತಿಕೊಂಡಿಹುದು (ಕವಿಪು. ೨೩-೪): ಜನ್ಮಜನ್ಮಾಂತರದಾವುದೊ ಕರ್ಮವು ಕಾಡುತಲಿಹುದೆನ್ನನಿರದೆ (ಇಂಚಾಪ. ೯೯-೮೩).

[ ಜನ್ಮ + ಜನ್ಮಾಂತರ ]

**ಜನ್ಮತಾರೆ** (ನಾ). ೧. [ಜ್ಯೋತಿ] ಜನ್ಮಕಾಲದ ನಕ್ಷತ್ರ; ಜನ್ಮನಕ್ಷತ್ರ: ನವ ಪರಿಶೋಧ್ಯಂ ಸ್ಥಿರರಾಶಿ ದಾನಶೋಭನ ವಿರಹಿತಮಾ ಜನ್ಮತಾರೆಯುಂ ತರ್ಪಡೆಯೊಳ್ (ಜಾತತಿ. ೨೪-೨೪). ೨. ತಾರಾಬಲಗಣನೆಯಲ್ಲಿ ಮೊದಲನೆಯದು: ಆ ದಿನ ವರನಿಗೆ ಜನ್ಮತಾರೆಯಾಗುತ್ತದೆ. ಬೇರೆಯ ಲಗ್ನ ಹುಡುಕಿ (ರೂಢಿ). [ ಜನ್ಮ + ತಾರೆ$_2$ ]

**ಜನ್ಮದಾತ** (ನಾ). ಜನ್ಮ ಕೊಟ್ಟವನು; ತಂದೆ: ನಾನು ಜನ್ಮದಾತನನ್ನು ತಬ್ಬಿಕೊಂಡು . . . ಮೆಲುಮಾತಿನಿಂದ ನುಡಿದೆನು (ಮಹಿಸ. ೩).

[ ಜನ್ಮ + ದಾತ$_1$ ]

**ಜನ್ಮದಿನ** (ನಾ). ೧. ಹುಟ್ಟಿದ ದಿನ; ಜನನದ ತಿಥಿ: ಸರಸಿರುಹಬಾಂಧವಂ ನಿಂದ ರಾಶಿಯೊಳ್ ಭುಕ್ತಭಾಗಮಿತಿಯಿಂ ಸಾಂವತ್ಸರಿಕಂ ಪೇಟ್ವುದು ಪೃಚ್ಛಕ ನರಂಗೆ ತಜ್ಜನ್ಮದಿನಮನತಿಪರಿಣತಿಯಿಂ (ಜಾತತಿ. ೨೪-೯). ೨. ಹುಟ್ಟುಹಬ್ಬ; ವರ್ಧಂತಿ; ಜಯಂತಿ: ಗಾಂಧೀಜಿಯ ಜನ್ಮದಿನವಾದ ಐದುದಿನಗಳಲ್ಲಿ . . . ಲಾಹೋರ್ ಮೊಕದ್ದಮೆಯ ತೀರ್ಪು ಪ್ರಕಟವಾಯಿತು (ಆತ್ಮಾರ್ಪ. ೧೪೪). [ ಜನ್ಮ + ದಿನ ]

**ಜನ್ಮದೇಶ** (ನಾ). ಹುಟ್ಟಿದ ದೇಶ ; ತಾಯ್ನಾಡು ; ಮಾತೃಭೂಮಿ.
[ ಜನ್ಮ + ದೇಶ ]

**ಜನ್ಮಧಾರಣೆ** (ನಾ). ಜನ್ಮವನ್ನು ತಳೆಯುವಿಕೆ ; ಹುಟ್ಟುವಿಕೆ.
**ಜನ್ಮಧಾರಣೆಮಾಡು** = ಜನ್ಮತಾಳು ; ರೂಪುಗೊಳ್ಳು : ಮುಗ್ಧ ಬಾಲಕನಾಗಿ ಕಳೆದ ಬೇಸಗೆಯ ಸುಖಕರವಾದ ದಿನಗಳು ಅವನ ಕಲ್ಪನೆಯಲ್ಲಿ ಹೊಸದಾಗಿ ಜನ್ಮಧಾರಣೆ ಮಾಡಿದುವು (ಪುನರು. ೨೯೭).
[ ಜನ್ಮ + ಧಾರಣೆ$_1$ ]

**ಜನ್ಮನಕ್ಷತ್ರ** (ನಾ).=ಜನ್ಮತಾರೆ ೧: ರೋಹಿಣಿಯು ಶ್ರೀಕೃಷ್ಣನ ಜನ್ಮನಕ್ಷತ್ರ ವೆಂಬುದನ್ನು ಎಲ್ಲರೂ ಬಲ್ಲರು (ನಕ್ಷತ್ರ. ೮). [ ಜನ್ಮ + ನಕ್ಷತ್ರ ]

**ಜನ್ಮನಾಥ** (ನಾ). [ಜ್ಯೋತಿ] ಜನನರಾಶಿಯ ಅಧಿಪತಿ : ಇನಜನ್ಮಂ ಬಲಹೀನ ಜನ್ಮಪತಿಯಂ ನೋಟ್ಪಂದು ಮೇಣ್ ಜನ್ಮನಾಥನನನ್ಮರ್ ನಡೆ ನೋಡದಿರ್ದೊಡಿನಜಂ ನೋಟ್ಪಂದು . . . ದೀಕ್ಷಾಮಾತ್ರಮಂ ಪೊರ್ದುಗುಂ (ಜಾತಿ. ೧೭-೪). [ ಜನ್ಮ + ನಾಥ ]

**ಜನ್ಮನಾಮ** (ನಾ). ೧. ಮಗು ಹುಟ್ಟಿದಾಗ ಇಟ್ಟ ಹೆಸರು ; ಹುಟ್ಟು ಹೆಸರು : ಲಕ್ಷ್ಮೀಮಹಾದೇವಿಯೆಂಬ ಸಕಲಕಲ್ಯಾಣಾಭಿರಾಮನಾಮ ಮುಮಂ ಧನಶ್ರೀಯೆಂಬ ಜನ್ಮನಾಮಮುಮಂ ತಳೆದು (ಮಲ್ಲಿಪು. ೩-೫೨). ೨. ಜನ್ಮನಕ್ಷತ್ರವನ್ನು ಅನುಸರಿಸಿ ಇಟ್ಟ ಹೆಸರು ; ನಕ್ಷತ್ರನಾಮ : ಹುಡುಗಿಯ ಜನ್ಮನಾಮ ತಿಳಿಸಿರಿ (ರೂಢಿ). [ ಜನ್ಮ + ನಾಮ ]

**ಜನ್ಮನಿವಾಸ** (ನಾ). ಹುಟ್ಟಿದ ಸ್ಥಳ ; ಜನ್ಮಭೂಮಿ : ಈ ಕಥೆ ಭವ್ಯ ಮ ಧು ವ್ರ ತಾ ವ ಳೀ ಬಂ ಧು ಸಮಸ್ತಸೌಖ್ಯಫಳಜನ್ಮನಿವಾಸಮೆನಿಪ್ಪು ದೊಪ್ಪುದೇ (ಮಲ್ಲಿಪು. ೧-೫೨). [ ಜನ್ಮ + ನಿವಾಸ ]

**ಜನ್ಮನಿವೃತ್ತಿ** (ನಾ). ಪುನರ್ಜನ್ಮದಿಂದ ಬಿಡುಗಡೆ ; ಮೋಕ್ಷ : ಮುಕ್ತಿ ಪದಕ್ಕೇರಿದ ಆತ್ಮಕ್ಕೆ ಪುನರ್ಜನ್ಮದ ಬಾಧೆಯಿಲ್ಲ. ಈ ಸ್ಥಿತಿಗೆ ಜನ್ಮನಿವೃತ್ತಿ ಎಂದೂ ಇವರು ಕರೆಯುವರು (ಜೈನಸಪ. ೫೦೭). [ ಜನ್ಮ + ನಿವೃತ್ತಿ ]

**ಜನ್ಮಪತಿ** (ನಾ). = ಜನ್ಮನಾಥ : ಇನಜನ್ಮಂ ಬಲಹೀನ ಜನ್ಮಪತಿಯಂ ನೋಟ್ಪಂದು . . . ದೀಕ್ಷಾಮಾತ್ರಮಂ ಪೊರ್ದುಗುಂ (ಜಾತಿ. ೧೭-೪).
[ ಜನ್ಮ + ಪತಿ$_2$ ]

**ಜನ್ಮಪತ್ರ** (ನಾ). = ಜನ್ಮಕುಂಡಲಿ : ಈ ರೀತಿಯ ಜನ್ಮಪತ್ರವನ್ನು ನಾನು ಯಾವಾಗಲೋ ಈ ಮೊದಲು ನೋಡಿದ್ದೇನೆ (ಭೂರಾಜ. ೨೭).
[ ಜನ್ಮ + ಪತ್ರ ]

**ಜನ್ಮಪತ್ರಿಕೆ** (ನಾ). = ಜನ್ಮಕುಂಡಲಿ : ಅದು ಜನ್ಮಪತ್ರಿಕೆಯ ಹಾಗೆ ಸುರುಳಿಯಾಗಿ ಸುತ್ತಿದ್ದಿತು (ಇಪ್ಪಕ. ೩೩೪). [ ಜನ್ಮ + ಪತ್ರಿಕೆ ]

**ಜನ್ಮಭವನ** (ನಾ). ಹುಟ್ಟಿದ ಮನೆ ; ಜನ್ಮಸ್ಥಳ ; ತವರು: ಆವಾಸಂ ಮದನಂಗೆ ಜನ್ಮಭವನಂ ಚೈತ್ರಕ್ಕೆ ಲಾಸ್ಯೈಕಲೀಲಾವೇಶ್ಮಂ ರತಿಗಾಸ ವಾವಸಥಮುನ್ಮತ್ತಾಳಿಗೆಂಬಂದದಿಂ . . . ನಂದನಶ್ರೀವಿಸ್ತಾರಮನಾಂತು ದುಚ್ಛ್ರಿತದಳಚ್ಛಾಯಾತ್ತಶೀತಾತಪಂ (ಚಂದ್ರಪು. ೩-೧೪).
[ ಜನ್ಮ + ಭವನ ]

**ಜನ್ಮಭೀರು** (ನಾ). ಹುಟ್ಟಿಗೆ ಹೆದರುವವನು ; ಮೋಕ್ಷವನ್ನು ಬಯಸುವವನು: ಇದನಱಿದು ಜನ್ಮಭೀರುಗಳುದಾತ್ತಮನರಖಿಳಕರ್ಮ ವೈರಿವಿನಾಶಪ್ರಥಮೆಂದುಱಿಯರ್ . . . ಸಚ್ಚರಿತ್ರದ ಬಟೆಯಂ (ಚಂದ್ರಪು. ೭-೨೨). [ ಜನ್ಮ + ಭೀರು ]

**ಜನ್ಮಭೂಮಿ** (ನಾ). = ಜನ್ಮದೇಶ: ಉತ್ತರಕುರುವೆಂಬುತ್ತಮ ಭೋಗ ಭೂಮಿಯೆ ಜನ್ಮಭೂಮಿಯಾದುದು (ಆದಿಪು. ೫-೨೭ ವ) : ಹಿಮವದ ಗೇಂದ್ರಮೆ ಭೂರ್ಜದ್ರುಮರಾಜಿಗೆ ಜನ್ಮಭೂಮಿ (ಕಾವ್ಯಾವ. ೮೮೪): ಖೂಳರಿಗೆ ತಾ ಜನ್ಮಭೂಮಿ ವಿಟಾಳಚರಿತರ ತೌರುಮನೆ(ಕುವ್ಯಾಕ. ೯-೨೦).
[ ಜನ್ಮ + ಭೂಮಿ ]

**ಜನ್ಮಮಂದಿರ** (ನಾ). =ಜನ್ಮಭವನ: ಅದು ಪೊಸ ಪೊನ್ನಘಂಟೆಯ ದುಕೂಲ ವಿತಾನದ . . . ವಿಳಸತ್ಕವಾಟದ ವಿಚಿತ್ರವಿಭೂತಿಗೆ ಜನ್ಮಮಂದಿರಂ (ಪುಷ್ಪಪು. ೨-೯೩). [ ಜನ್ಮ + ಮಂದಿರ ]

**ಜನ್ಮರಾಶಿ** (ನಾ). [ಜ್ಯೋತಿ] ಹುಟ್ಟಿದ ನಕ್ಷತ್ರವು ಸೇರಿರುವ ರಾಶಿ : ಹುಟ್ಟಿದ ರಾಶಿ . [ ಜನ್ಮ + ರಾಶಿ ]

**ಜನ್ಮರ್ಕ್ಷದಿನ** (ನಾ). ಜನ್ಮನಕ್ಷತ್ರವಿರುವ ದಿನ ; ಹುಟ್ಟಿದ ದಿನ : ತಂದೆ ಬಾ ಜನ್ಮರ್ಕ್ಷದಿನ ನಿನಗಿಂದು ವಿಪ್ರರಿಗಾಕಳನು ಕೊಡು (ನಿಭಾಗ. ೧೦-೧೦-೫೦). [ ಜನ್ಮ + ಋಕ್ಷ + ದಿನ ]

**ಜನ್ಮವತ್ಸರ** (ನಾ). ಹುಟ್ಟಿದ ವರ್ಷ : ಮೊದಲ ವಿಶ್ವದ ಯುದ್ಧ ತೊಡಗಿದ ವರ್ಷವು ಅದೆ ನನ್ನ ಜನ್ಮವತ್ಸರವು(ಇಂಚಾಪ. ೮-೩೦). [ ಜನ್ಮ + ವತ್ಸರ ]

**ಜನ್ಮವೆತ್ತು** (ಕ್ರಿ). ಜನ್ಮತಾಳು ; ಹುಟ್ಟು ; ಜನಿಸು : ರಾಜಮನೆತನದಲ್ಲಿ ಜನ್ಮವೆತ್ತಿದರೂ ಅವನು ಎಲ್ಲಾ ಕಷ್ಟಗಳನ್ನು ಸಹಿಸಿಕೊಂಡು ಗಟ್ಟಿ ಮುಟ್ಟಾಗಿ ಬೆಳೆದನು (ಮಹಸ. ೭೪) : ಬಸವೇಶ್ವರನು ಬಡಗಣ ಸಿಂದವಾಡಿ ಯಲ್ಲಿ ಜನ್ಮವೆತ್ತಿದನೆಂದು ನಿಷ್ಪನ್ನವಾಗುತ್ತದೆ (ಮೂರುಉ. ೮೮).
[ ಜನ್ಮ + ಎತ್ತು$_1$ ]

**ಜನ್ಮವ್ರತ** (ನಾ). ಜೀವನದುದ್ದಕ್ಕೂ ಪಾಲಿಸುವ ವ್ರತ-ನೇಮ : ದುಷ್ಟರನ್ನು ನಿಗ್ರಹಿಸುವುದು ನಮ್ಮಗಳ ಜನ್ಮವ್ರತವೇ ಆಗಿರುವುದು (ಬಿನ್ನಬೀ. ೧೦೩). [ ಜನ್ಮ + ವ್ರತ ]

**ಜನ್ಮಶಯ್ಯೆ** (ನಾ). ಹುಟ್ಟಿದ ಕೂಡಲೇ ಮಗುವನ್ನು ಮಲಗಿಸುವ ಹಾಸಿಗೆ : ಜನ್ಮಶಯ್ಯೆಯಲ್ಲಿದ್ದ ಕುಮಾರಸ್ವಾಮಿಯಂತೆ ಶರಶಯ್ಯೆಯಲ್ಲಿ ಕಣ್ಣು ಮುಚ್ಚಿ ಮಲಗಿದ್ದ ಆ ಮಹಾತ್ಮನನ್ನು ನೋಡಿದನು (ವಚಭಾ. ೨೭೭).
[ ಜನ್ಮ + ಶಯ್ಯೆ ]

**ಜನ್ಮಸದನ** (ನಾ). = ಜನ್ಮಭವನ : ಕುಸುಮಾಯುಧಮಂಗಳಜನ್ಮಸದನ (ಪಂಚತಂ. ೦೭೨-೭). [ ಜನ್ಮ + ಸದನ ]

**ಜನ್ಮಸವನ** (ನಾ). [ಜೈನ] ಪಂಚಕಲ್ಯಾಣಗಳಲ್ಲಿ ಒಂದು ; ಜಿನಶಿಶು ಹುಟ್ಟಿದ ಕೂಡಲೆ ದೇವೇಂದ್ರನು ತನ್ನ ಪರಿವಾರದೊಂದಿಗೆ ಬಂದು ಆ ಮಗುವಿಗೆ ಮಾಡುವ ಅಭಿಷೇಕ; ಜನ್ಮಾಭಿಷೇಕ ಎಂಬ ಕಲ್ಯಾಣ: ದಿಟ್ಟಿಗೆ ಪೊನಲಾದುದು ಪೊಂಬೆಟ್ಟಂ ಜಿನ ಜನ್ಮಸವನ ಮಣಿಮಯಪಟ್ಟಂ (ಪಂರಾಮಾ. ೧-೪೪). [ ಜನ್ಮ + ಸವನ$_2$ ]

**ಜನ್ಮಸಾಫಲ್ಯ**(ನಾ). ಜೀವನದ ಸಾರ್ಥಕತೆ-ಸಫಲತೆ: ಹರ್ಷಿತೆ ಹರ್ಷಾಶ್ರು ಜಲಾರ್ದ್ರನೇತ್ರೆ ಫಲಪೂರಂ ಜನ್ಮಸಾಫಲ್ಯಸಂಸ್ಥಿತಿಯುರ ಮಾಡಿದುದೆಂದು ನೋಡಿದಳಲಂಪಿಂ (ಪುಷ್ಪಪು. ೩-೦೦೭). [ ಜನ್ಮ + ಸಾಫಲ್ಯ ]

**ಜನ್ಮಸಾರ್ಥಕ** (ನಾ). = ಜನ್ಮಸಾಫಲ್ಯ : ಬಾದಷಹನ ಹೆಂಡತಿಯಾಗುವು ದೇನೋ ಜನ್ಮಸಾರ್ಥಕವೇ ಅಹುದು (ಕಪಾಕುಂ. ೭೭). [ಜನ್ಮ+ಸಾರ್ಥಕ]

**ಜನ್ಮಸ್ಥಳ** (ನಾ). ಹುಟ್ಟಿದ ಊರು : ಈಪೂರೆಮಗೆ ಜನ್ಮಸ್ಥಳ ಪೂರ್ವ ದೊಳಾವಿರ್ದೆವಿಲ್ಲಿ (ತ್ರಿಭುತಿ. ೧೦-೧೧). [ ಜನ್ಮ + ಸ್ಥಳ ( = ಸ್ಥಲ) ]

**ಜನ್ಮಸ್ಥಾನ** (ನಾ). = ಜನ್ಮಸ್ಥಳ : ಯಾವನೊಬ್ಬ ನಾಗರಿಕನ ವಿರುದ್ಧವಾಗಿ . . . ಜಾತಿ, ಲಿಂಗ, ಜನ್ಮಸ್ಥಾನ ಅಥವಾ ಅವುಗಳಲ್ಲಿ ಯಾವುದೊಂದರ ಆಧಾರದ ಮೇಲೆ ಮಾತ್ರವೇ ಯಾವ ತಾರತಮ್ಯವನ್ನೂ ಮಾಡತಕ್ಕದಲ್ಲ (ಭಾಧಾನ. ೮). [ ಜನ್ಮ + ಸ್ಥಾನ ]

**ಜನ್ಮಸ್ನಪನ** (ನಾ). = ಜನ್ಮಸವನ : ಇದು ಜನ್ಮಸ್ನಪನಕ್ಕೆ ನೂರ್ಮಡಿ ಮಿಗಿಲ್ ಕಲ್ಯಾಣಂ (ಆದಿಪು. ೮-೨೨). [ ಜನ್ಮ + ಸ್ನಪನ ]

**ಜನ್ಮಾಂತ** (ನಾ). ಹುಟ್ಟಿನ ಕೊನೆ ; ನಿರ್ವಾಣ ; ಮೋಕ್ಷ : ಕಾರ್ಯ ಜೀವಾಸ್ತಮಯಸಮಯ ಜನ್ಮಾಂತ[ಪಾಕಾಂ. ತ್ಯ] ಕೈವಲ್ಯ ದೇಹೋತ್ತರ ಕರ್ಮಂ . . . ಇಂತೈದೆ ನಿರ್ವಾಣಮಕ್ಕುಂ (ನಾನಾರ. ೨೦).
[ ಜನ್ಮ + ಅಂತ$_2$ ]

**ಜನ್ಮಾಂತರ** (ನಾ). ಇನ್ನೊಂದು ಜನ್ಮ ; ಹಿಂದಿನ ಅಥವಾ ಮುಂದಿನ ಜನ್ಮ : ಓರಿದುಂ ಮದೀಯ ಜನ್ಮಾಂತರಪುಣ್ಯದಿನೆಮಗೆ ನಿನ್ನ ದೊರೆಯ ತನೂಜಂ ದೊರೆಕೊಂಡಂ (ಜಗವಿ. ೩-೯೩) : ಆವ ಜನ್ಮಾಂತರದ ಸುಕೃತದ ಲೋವಿ ಕೂಡಿತೊ ನಿಮ್ಮ ಚರಣದ ಸೇವೆ (ಕಾಶಿರಾ. ೪೪-೯). [ ಸಂ. ]

**ಜನ್ಮಾಂತರಜ್ಞಾನ** (ನಾ). ಹಿಂದಿನ ಮತ್ತು ಮುಂದಿನ ಜನ್ಮದ ಅರಿವು,- ತಿಳಿವಳಿಕೆ: ಪರಕಾಯಪ್ರವೇಶ, ಜನ್ಮಾಂತರಜ್ಞಾನ, ಆಕಾಶಗಮನ, ತ್ರಿಕಾಲಜ್ಞಾನ, ಖಗೋಳಜ್ಞಾನ ಮೊದಲಾದವುಗಳು ಅವಾಂತರಸಿದ್ಧಿಗಳು (ಭಾರದ. ೧೬೫). [ ಜನ್ಮಾಂತರ + ಜ್ಞಾನ ]

**ಜನ್ಮಾಂತರವೈರ** (ನಾ) . ಪೂರ್ವಜನ್ಮದ ದ್ವೇಷ : ಅನಂತವೀರ್ಯಂ ಜನ್ಮಾಂತರವೈರಂ ಕಾರಣಮಾಗೆ ವಿರೋಧಿಯನಾಂತು(ಶಾಂತಿಪು. ೪-೪೩ ವ): ದೈತ್ಯನತ್ಯಂತ ದುರ್ಧರ ಜನ್ಮಾಂತರವೈರ ದಾರುಣವನಂ ಭೂಪಾಂತಿಕಾಸೀನ ನಾಗಿರೆ ಕಂಡಂ ಶನಿ ಕಾಣ್ಬವೊಲ್ ಕುವರನಂ ವಿಸ್ಫಾರತಾರೇಕ್ಷಣಂ (ಚಂದ್ರಪು. ೫-೪). [ ಜನ್ಮಾಂತರ + ವೈರ ]

**ಜನ್ಮಾಂತರೀಯ** (ಗು). ಜನ್ಮಾಂತರದ ; ಪೂರ್ವಜನ್ಮದ : ಕಾವ್ಯವು ಜನ್ಮಾಂತರೀಯ ಪುಣ್ಯದಿಂದ ಪ್ರತಿಭಾವಂತರಾದ ಕವಿಗಳಿಗೆ ಮಾತ್ರ ಗೋಚರವಾಗುವುದೇ ಹೊರತು ಸರ್ವಸಾಮಾನ್ಯರಿಗಲ್ಲ (ಭಾರದ. ೪೪೪).
[ ಸಂ. ]

**ಜನ್ಮಾಂತ್ರಿಯ** (ಗು). ೧.=ಜನ್ಮಾಂತರೀಯ. (ನಾ). ೨. ಜನ್ಮಾಂತರಕ್ಕೆ ಸಂಬಂಧಪಟ್ಟುದು : ಮಾಲಿನ್ಯಕ್ಕೆ ಮೂರು ವಿಧದ ಕಾರಣಗಳು: ಒಂದು ಜನ್ಮಾಂತ್ರಿಯ, ಒಂದು ಸ್ವಯಂಕೃತ, ಒಂದು ಆಗಂತುಕ. ಜತೆಯಲ್ಲಿಯೇ ಹುಟ್ಟಿ ಬರುವುದು ಜನ್ಮಾಂತ್ರಿಯ (ಆರ್ಯಧ. ೯೭).
[ < ಸಂ. ಜನ್ಮಾಂತರೀಯ ]

**ಜನ್ಮಾಂಧಕಿ** (ನಾ). ಹುಟ್ಟಿನಿಂದಲೇ ಕುರುಡಿಯಾದವಳು ; ಹುಟ್ಟುಗುರುಡಿ : ನಂದನವನೋದ್ದೇಶದೊಳಿರ್ದ ಜನ್ಮಾಂಧಕಿಯಲ್ಲಿಗೆ ಬಂದು (ಸುಕುಮಾ. ೫-೨೩ ವ). [ ಜನ್ಮ + ಅಂಧಕಿ ]

**ಜನ್ಮಾನುಬಂಧಿ** (ನಾ). ಜನ್ಮಜನ್ಮದಿಂದಲೂ ಸಂಬಂಧವುಳ್ಳುದು ; ಜನ್ಮಾಂತರ ಸಂಬಂಧಿಯಾದುದಂ : ಜನ್ಮಾನುಬಂಧಿಯಪ್ಪ ಸ್ನೇಹಂ ಕಾರಣಮಾಗಿ ದುಃಖಮಂ ಸೈರಿಸಲಾಱದೆ (ಪಂಪಾರಾ. ೩೫-೨೯).
[ ಜನ್ಮ + ಅನುಬಂಧಿ ]

**ಜನ್ಮಾಭಿಷವ** (ನಾ). = ಜನ್ಮಸವನ : ಇದು ಜನ್ಮಾಭಿಷವಕ್ಕವತ್ಯಧಿಕ ವೆಂಬನ್ನಂ ಸುರಶ್ರೇಣಿ ನೀಡಿದ ದುಗ್ಧಾರ್ಣವ ದುಗ್ಧಪೂರ್ಣ ಘಟ ಸಂಘಾತಂ ಗಳಂ ಕೊಂಡು (ಮಲ್ಲಿಪು. ೧೩-೧೬೬). [ ಜನ್ಮ + ಅಭಿಷವ ]

**ಜನ್ಮಾಭಿಷವಣ** (ನಾ). = ಜನ್ಮಸವನ : ದೇವನಿಕಾಯಮನುಚಿತಸ್ಥಾನ ದೊಳ್ ನಿಱಿಸಿ ಜನ್ಮಾಭಿಷವಣ ಪರಿಣತಾಂತಃಕರಣನಾದಾಗಳ್ (ಆದಿಪು. ೭-೭೬ ವ) ; ಜನ್ಮಾಭಿಷವಣಮಂಗಳವಿಧಿಯೊಳ್ ತ್ರಿದಶಾಧಿಪರೇಱಲ್ಕಿಕ್ಕಿದ ಭದ್ರಾಸನಮವೆರಡುಮೇನೊಪ್ಪಿದುವೋ (ಚಂದ್ರಪು. ೧೨-೧೧೧).
[ ಜನ್ಮ + ಅಭಿಷವಣ ]

**ಜನ್ಮಾಭಿಷೇಕ** (ನಾ). = ಜನ್ಮಸವನ : ಅಮರೇಂದ್ರಾವಳಿಯಿಂದಮಿಂದ್ರ ಗಿರಿಯೊಳ್ ಜನ್ಮಾಭಿಷೇಕಕ್ಕೆ ನೋಂತು (ಆದಿಪು. ೬-೨೦) : ಅವರ್ಗೆ ಜನ್ಮಾಭಿಷೇಕಮಂ ಸಕಲ ಸುರವರರ್ ಸುರಗಿರಿಮಸ್ತಕದೊಳ್ ಮಾಡ್ಪು ದಂ ನೋಡುತ್ತುಮಿರ್ದು (ಪಂರಾಮಾ. ೧೫-೧೫ ವ) : ಅಘಶಾಸನಂಗೆ ಪಾಕ ಶಾಸನಂ ಮಾಡ್ಪ ಜನ್ಮಾಭಿಷೇಕವಿಧಾನಮಂ ನಿರ್ವರ್ತಿಸಿ (ಪುಷ್ಪಪು. ೧೧-೫೩ ವ). [ ಜನ್ಮ + ಅಭಿಷೇಕ ]

**ಜನ್ಮಾವನಿ** (ನಾ). = ಜನ್ಮದೇಶ : ಆ ವಧು . . . ವಿಶ್ವಜಗದ್ವಿಲಾಸ ಜನ್ಮಾವನಿ ಯೋಷಿದಾತ್ಮ ಗುಣನಾಮಮೆನಿಪ್ಪಳದೇಂ ಸುರೂಪೆಯೋ (ಚಂದ್ರಪು. ೩-೨೬). [ ಜನ್ಮ + ಅವನಿ ]

**ಜನ್ಮಾವಸರ** (ನಾ). ಹುಟ್ಟಿದ ಸಮಯ ; ಜನನ ಕಾಲ : ದಿವಸಕರ ಚಂದ್ರಯುತ ಭಾರ್ಗವನಂ ಜನ್ಮಾವಸರದೊಳೀಕ್ಷಿಸುವೊಡೆ ದೇವವಿನೂತಂ ಪುಟ್ಟಿದ ಮಾನವನಿರದೆ ನವಾಬ್ದದಿಂ ಪುನರ್ಭವನಕ್ಕುಂ (ಜಾತಿತಿ. ೬-೨೯).
[ ಜನ್ಮ + ಅವಸರ ]

**ಜನ್ಮಾವಳಿ** (ನಾ). ಜನ್ಮಗಳ ಪರಂಪರೆ ; ಭವಾವಳಿ : ದೇವೇಂದ್ರನು ಮಾಗಳ್ ದೇಶಾವಧಿಯಿಂ ಚಿತ್ತದೊಳ್ ಪ್ರಯೋಗಿಸಿ ನಿಜ ಜನ್ಮಾವಳಿ ಸಮೇತಮಾತ್ಮೀಭಾವಮನಱಿದಂ ವ್ಯತೀ[ತ]ಭವಸಂತತಿಯಂ (ಶಾಂತಿಪು. ೫-೭) ; ಮನದೊಳೆನಗೀಶ ಮತ್ಪ್ರಾಕ್ತನ ಜನ್ಮಾವಳಿಯನೆಯ್ದೆ ಕೇಳ್ವಟ್ಟು ಕರಂ ಜನಿಯಿಸಿದಪುದು(ಚಂದ್ರಪು. ೩-೮). [ ಜನ್ಮ + ಆವಳಿ$_1$( =ಆವಲಿ) ]

**ಜನ್ಮಾವಾಸ** (ನಾ). = ಜನ್ಮಭವನ : ಶ್ರೀವಧುಗೆ ವೇರುರಂ ಜನ್ಮಾವಾಸಂ (ಪಂರಾಮಾ. ೧೧-೧). [ ಜನ್ಮ + ಆವಾಸ ]

**ಜನ್ಮಾಹ** (ನಾ). ಹುಟ್ಟಿದ ದಿನ: ದೊರೆಕೊಂಡು ಬಂದುದಯದಾ ದ್ರೇಕ್ಕಾಣ ದೊಳ್ ಸಂದ ಭಾಗಮನಾರಯ್ದನುಪಾತದಿಂದಱಿಗೆ ತಜ್ಜನ್ಮಾಹಮಂ ತದ್ವಿದಂ (ಜಾತಿತಿ ೨೪-೮). [ ಸಂ. ಜನ್ಮಾಹನ್ (ಜನ್ಮ + ಅಹನ್) ]

**ಜನ್ಮಾಳಿ** (ನಾ). = ಜನ್ಮಾವಳಿ : ಜೀವತತ್ವಕ್ಕೆ ಪಾಪದೊಳಂ ಪುಣ್ಯದೊಳಂ ವಿಮಿಶ್ರಣದೊಳಂ ಜನ್ಮಾಳಿ ಸಲ್ಗುಂ (ಶಾಂತಿಪು. ೮-೧೩೯).
[ ಜನ್ಮ + ಆಳಿ$_4$ (=ಆಲಿ$_4$) ]

**ಜನ್ಮಿ** (ನಾ). ಜೀವಿ ; ಪ್ರಾಣಿ. [ ಸಂ. ಜನ್ಮಿನ್ ]

**ಜನ್ಮಿಗ** (ನಾ). = ಜನ್ಮಿ : ದೈವಬಲವಿಲ್ಲದ ಸೇವಕನಂತೆ ಮುಟ್ಟುಗೆಟ್ಟು ಗ್ರಹಬಲಮಿಲ್ಲದ ಜನ್ಮಿಗನಂತೆ ಪೆರ್ಚಿಲ್ಲದೆ (ಶಾಂತಿಪು. ೪-೩೦ ವ).
[ <ಸಂ. ಜನ್ಮಿಕ ]

**ಜನ್ಮಿಸು** (ಕ್ರಿ). ಜನ್ಮತಾಳಂ ; ಹುಟ್ಟು : ಧರಣಿಯೊಳಗುದಯಿಸಿದ ಫಲ ವಿಂತಿರಲುವೇಡಾ ನಾವು ಜನ್ಮಿಸಿದಿರವದೇತಕೆ ಬಾತೆ (ಬಸಪು. ೪-೭೨) : ಮಗು ತನ್ನ ಹಿಂದಿನ ಜನ್ಮದ ಅನುಭವಗಳೊಂದಿಗೆ ಈಗ ಜನ್ಮಿಸುತ್ತದೆ (ಜೀವಾತ್ಮ. ೧೭೭). [ ಜನ್ಮ + – ಇಸು$_3$ ] .

**ಜನ್ಮೇಶ** (ನಾ). = ಜನ್ಮನಾಥ : ಜನ್ಮೇಶಂ ಬಳಯುಕ್ತನಾಗಿರೆ ಸುಹೃತ್ಸ್ವಾಮ್ಯ ಗ್ರಹಂ ನೋಡೆ ಮೇಣ್ ಜನ್ಮೇಶಂ ನಿಲೆ ಜನ್ಮಲಗ್ನಗೃಹದೊಳ್ . . . ಕೂಸಂ ಸುಧಾಜನ್ಮಂ ರಕ್ಷಿಸುವಂ (ಜಾತಿತಿ. ೭-೫). [ ಜನ್ಮ + ಈಶ ]

**ಜನ್ಮೋತ್ಸವ** (ನಾ). ೧. ಮಗು ಹುಟ್ಟಿದಾಗ ಮಾಡುವ ಉತ್ಸವ,- ಸಂತೋಷದ ಸಮಾರಂಭ: ಸೂರದತ್ತನಾತ್ಮೀಯಾತ್ಮಜನ ಜನ್ಮೋತ್ಸವಾ ಕರ್ಣನದೊಳತ್ಯಂತಹರ್ಷೋತ್ಕರ್ಷಾಂತರಂಗನಾಗಿ ರಾಗಿಸಿ (ಸುಕುಮಾ. ೧೧-೨೭ ವ) : ಅನ್ತು ವಿಜಯೋತ್ಸವಮುಂ ಕುಮಾರಜನ್ಮೋತ್ಸವಮು ಮಾಗೆ ಸಂತುಷ್ಟಚಿತ್ತನಾಗಿರ್ದ್ದ ವಿಷ್ಣುದೇವಂ (ಎಕ. V, ಬೇಲೂರು. ೧೨೪-೫೯;1183). ೨. = ಜನ್ಮಕಲ್ಯಾಣ: ಆ ತ್ರಿಳೋಕತಿಳಕನ ಜನ್ಮೋತ್ಸವ ದೊಳ್(ಆದಿಪು. ೭-೩೬ ವ) ; ಅಭಿವೀಕ್ಷಿಸುವ ಜನಕ್ಕೆಯ್ದೆ ಜಿನನ ಜನ್ಮೋತ್ಸವ ಮಂ ಬೆಸಕೆಯ್ದ ಮಣಿವಿತಾನದೊಳೆಸೆದಂತೆಸೆದತ್ತಶೇವಿದೇವನಿಕಾಯಂ (ಶಾಂತಿಪು. ೧೦-೨೩). [ ಜನ್ಮ + ಉತ್ಸವ ]

**ಜನ್ಯ** (ಗು). ೧. ಹುಟ್ಟುವ ; ಉಂಟಾಗುವ ; ಉದ್ಭವಿಸುವ. 'ಜನ್ಯ ಭಾಷೆ', 'ಜನ್ಯರಾಗ' ಪರಾ. (ನಾ). ೨. ಜನರಿಗೆ ಸಂಬಂಧಿಸಿದುದು. ೩.ಜನ. ೪. ಸುದ್ದಿ; ವದಂತಿ. ೫. ಮದುಮಗನ ಗೆಳೆಯ,-ಸ್ನೇಹಿತ. ೬. ಯುದ್ಧ ; ಕಲಹ : " ಸಮರಂ ಸಂಗ್ರಾಮಂ ಯುದ್ಧಮಾಜಿ . . . ಜನ್ಯಮಾಹವಂ ಸಂಯುಗಂ ಪ್ರಘಾತಂ ಕಲಹಂ " (ವಸ್ತುಕೋ. ೮೨-೧) ; ದೇಹದಿಂ ಪುಲಕಂ ಪೊಣ್ಮರೆ ನೋಡುವಂ ಪರಿವಿಳದ್ರಾಜನ್ಯಮುಂ ಜನ್ಯಮುಂ (ಜಗವಿ. ೧೫-೧೭) ; ವನ್ಯಕಿರಾತನೆಂದು ಬಗೆದೆಚ್ಚೆನಿದಿರ್ಚಿದೆನಜ್ಞಭಾವದಿಂ ಜನ್ಯಮನಾಂತು ನಿಂದು ಮಿಗೆ ಮೆಯ್ವೊಣರ್ದೆಂ (ಶಬಶಂ. ೪-೧೨೭) : ನಿನ್ನೊಳುಱಿದೆನಗಾವುದನ್ಯಂ ಜನ್ಯಂ ? (ರಾಮಾಶ್ವ. ೧೪೪-೨೪). [ ಸಂ. ]

**ಜನ್ಯಜನಕಭಾವ** (ನಾ). ಮೂಲವಸ್ತು, ವ್ಯಕ್ತಿ ಮತ್ತು ಅವರಿಂದ ಉತ್ಪನ್ನವಾದ ವಸ್ತು, ವ್ಯಕ್ತಿ–ಇವುಗಳಿಗೆ ಇರುವ ಸಂಬಂಧ : ಸ್ಥಾಯಿಭಾವಕ್ಕೆ ವಿಭಾವಗಳೊಡನೆ "ಜನ್ಯಜನಕಭಾವ" ಎಂದೂ . . . ಅನ್ವಯಿಸಿಕೊಳ್ಳಬೇಕು (ಭಾರಮೀ. ೩೬೦). [ ಜನ್ಯ + ಜನಕ + ಭಾವ$_2$ ]

**ಜನ್ಯಜನಕಮೋಹ** (ನಾ). ತಂದೆ ಮಕ್ಕಳಲ್ಲಿ ಇರುವ ವ್ಯಾಮೋಹ,– ಮಮತೆ : ತಮ್ಮ ಮೂಲಿನೆಯ ಭವದ ಜನ್ಯಜನಕಮೋಹಂ ಕಾರಣ ಮಾಗಿ (ಶಾಂತಿಪು. ೯–೫೫ ವ). [ ಜನ್ಯ + ಜನಕ + ಮೋಹ ]

**ಜನ್ಯಭಾಷೆ** (ನಾ). ಒಂದು ಭಾಷೆಯಿಂದ ಜನಿಸಿದ ಭಾಷೆ; ಉಪಭಾಷೆ: ಪಿಡ್ಗಿನ್ ಎಂಬುದು ಇಂಗ್ಲಿಷ್‌ಭಾಷೆಯಿಂದ ರೂಪಗೊಂಡ ಒಂದು ಜನ್ಯಭಾಷೆ (ದ್ರಾವಿವಿ. ೧೪೦). [ ಜನ್ಯ + ಭಾಷೆ ]

**ಜನ್ಯರಾಗ** (ನಾ). [ಸಂಗೀತ] "ಜನಕರಾಗದ ಆರೋಹಣದಲ್ಲಾಗಲಿ, ಅವರೋಹಣದಲ್ಲಾಗಲೀ ಅಥವಾ ಎರಡರಲ್ಲೂ ಕೆಲವು ಸ್ವರಗಳು ವರ್ಜ್ಯವಾಗಿ ಹುಟ್ಟಿದ ರಾಗಗಳು ಜನ್ಯರಾಗಗಳು" (ಸಂಗೀಶಂ. ೩೦). 'ಜನಕರಾಗ' ಪರಾ. [ ಜನ್ಯ + ರಾಗ ]

**ಜನ್ಯವರ್ಣ** (ನಾ). "ಎರಡು ಮೂಲವರ್ಣಗಳ ಮಿಶ್ರಣದಿಂದಾದ ವರ್ಣ" (Secondary Colour. ಇಂಕೆನಿ). [ ಜನ್ಯ + ವರ್ಣ ]

**ಜನ್ಯು** (ನಾ). ೧. ಹುಟ್ಟು ; ಜನನ ; ಉತ್ಪತ್ತಿ. ೨. ಜೀವಿ ; ಪ್ರಾಣಿ. [ ಸಂ. ]

**ಜನ್ಯೆ** (ನಾ). ಮದುಮಗಳ ದಾಸಿ : ಅಂಗರಾಜನೊಳದಿರ್ಚಿದ ಭಾವನೆ ಪೊಚ್ಚವಾಗೆ ಹೇಮಾಂಬುರುಹಾಸ್ಯೆ ಸೋಲ್ವುದೆನೆ ಕನ್ನಿಕೆ ಜನ್ಯೆಯನೊತ್ತೆ ಪೋಯ್ತು ಯಾನಂ (ಶಾಂತಿಪು. ೫–೧೦೬). [ ಸಂ. ಜನ್ಯಾ ]

**ಜಪ** (ನಾ). ಮಂತ್ರವನ್ನು ವಿಧಿಪೂರ್ವಕವಾಗಿ ಮತ್ತೆ ಮತ್ತೆ ಮೆಲ್ಲನೆ ಉಚ್ಚರಿಸುವುದು : ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣಮೋನಾನುಷ್ಠಾನ ಜಪ ಸಮಾಧಿ ಶೀಳಸಂಪನ್ನರ್ (ಸೌಇಇ. XX, ೪೬–೧೭ : 1072); ಮೃದುವಚನವೇ ಸಕಲ ಜಪಂಗಳಯ್ಯಾ (ಬಸವ. ೨೪೪) ; ಜಪ ಸಮಾಧಿಯೊಳಿಪ್ಪ ಮೌಂಜಿಮೇಖಲೆ ಗಟ್ಟುವ . . . ಚಾರುಮುನಿಪುತ್ರರ್ಗೆ ವಂದಿಸುತ (ಹರಿಕಾ. ೫–೫೫) ; ಆವ ಸೇರಿಕೆ ಜಪಕೆ ಚಾಪ ಶರಾವಳಿಗೆ ಶಮೆ ದಮೆಗೆ ಖಡ್ಗಕಿದಾವ ಸಮ್ಮೇಳನ (ಕುವ್ಯಾಆ. ೪–೪೫) ; ಪ್ರಣವಾದಿ ಮಂತ್ರಂಗಳಂ ಸಾಂಗಕವಾಗಿ ಉಚ್ಚರಿಸುವದೇ ಜಪವೆನಿಸುವದು (ವಿವೇಕ. ೧೩೯) ; ಮಾಡಲರಿಯದೆ ಜಪತಪಂಗಳ ಆಡಲರಿಯದೆ ಸಾಧುಮಾರ್ಗದೊಳ್ (ಗಗಶಾ. ೨೦–೨).

**ಜಪಮಾಡು** = ೧. ಮಂತ್ರವನ್ನು ವಿಧಿಪೂರ್ವಕವಾಗಿ, ಮೆಲ್ಲಗೆ ಪುನಃ ಪುನಃ ಉಚ್ಚರಿಸು : ಬಡತನ ಹೋಗಲು ಇವನು ಲಕ್ಷ್ಮೀಮಂತ್ರವನ್ನು ಜಪಮಾಡುತ್ತಿದ್ದನು (ನೀತಿಶಂ. II, ೮). ೨. ಒಂದೇ ಸಮನೆ ಧ್ಯಾನಿಸು,–ಚಿಂತಿಸು : ಅವನು ಪರೀಕ್ಷೆಯ ಫಲಿತಾಂಶ ಯಾವಾಗ ಬರುತ್ತದೋ ಎಂದು ಜಪಮಾಡುತ್ತಿದ್ದನು (ರೂಢಿ). [ ಸಂ. ]

**ಜಪಕವಳಿಗೆ** (ನಾ). ಜಪಸರವನ್ನಿಡುವ ಕೋಶ,–ಚೀಲ: ಬಗಲಲ್ಲಿ ಒಂದು ಕಟ್ಟು ದರ್ಭೆ . . . ಇನ್ನೊಂದು ಕೈಯಲ್ಲಿ ಜಪಕವಳಿಗೆಯನ್ನು ಹಿಡಿದುಕೊಂಡು ಜಗಲಿಗೆ ಬಂದಾಗ (ಪದ್ಮಸ. ೦೭೫). [ ಜಪ + ಕವಳಿಗೆ$_2$ ]

**ಜಪಕಾಮ** (ನಾ). ಜಪದಲ್ಲಿ ಆಸಕ್ತಿಯುಳ್ಳವನು: ರತಿಕಾಮರಿಂದಖಿಳಸಿದ್ಧಿ ಸಾಧನಮಕ್ಕುಮತಿತಪೋಕಾಮರಿಗೆ ನೈಷ್ಠೆ ಚಲಿಸದ ರತಿಯು ಸತತ ಜಪ ಕಾಮರಿಗೆ ಜಾಗ್ರ ತಪ್ಪದ ರತಿಯು (ನವಮೋ. ೧೩–೫೦). [ಜಪ+ಕಾಮ]

**ಜಪಗುಟ್ಟು** (ಕ್ರಿ).=ಜಪಗೆಯ್ : ತಾಪಸರು ಜಪಗುಟ್ಟೆ ಜಿನುಗಿದಡವರನು ಜ್ಜೀವಿಸಿದ ಠಾವಿದಲ (ಕುವ್ಯಾಉ. ೧–೨೦) : ನಾವು ಆ ನಿನ್ನ ಬೆಟ್ಟಪ್ಪನಲ್ಲ ವೆಂಬುದನ್ನು ಎಡೆಬಿಡದೆ ಜಪಗುಟ್ಟಿಕೊಳ್ಳುತ್ತ ಮರೆಯದಿರು (ಬೆಟ್ಟಅ. ೨೦೮–೨೨). [ ಜಪ + ಕುಟ್ಟು$_1$ ]

**ಜಪಗೆಯ್, ಜಪಗೈ** (ಕ್ರಿ). ಜಪಿಸು; ಜಪಮಾಡು: ಕುಸುಮದ ಸಂತತಿಯು ಸುರಿದೆಱಗಿ ನುತಿಯಿಸಿ ಸಂತಸದೆ ಜಪಗೆಯ್ವು[ಪಾಠಾಂ. ಗೈದು]ಬಳಿಯಂ ಕೈಗಳನು ಮುಗಿದು (ಸಾಳ್ವಭಾ. ೩–೩೦). **ಜಪಗೈ :** ಎಮ್ಮಡಿಯಿಂದ ಮೂಱಡಿ ನೆಲನ ಕೊಡು ಜಪಗೈವುತಿಹೆವಿಲ್ಲಿ (ಸಾಳ್ವಭಾ. ೧೮–೨೬); ಜಪಗೈವನಿಗೆ ಪಾಪವಿಲ್ಲ (ಇಂಚಾಪ. ೮೦–೯೦). [ ಜಪ + ಕೆಯ್$_1$ ]

**ಜಪಗೈ** 'ಜಪಗೆಯ್' ನೋ.

**ಜಪತಾವಾಡ** (ನಾ). ತಾವರೆಬೀಜದ ಜಪಮಾಲೆ : ಕಾವಿ ಜೋಳಿಗೆ ದಂಡಕೋಲು ಬೂದಿಯ ಚೀಲ ಪಾವಿಗೆ ಕರ್ಣಕುಂಡಲವು ಆವಾಗೆ ಶಿವ ಧ್ಯಾನಕೆ ಜಪತಾವಾಡ ವೈಯ್ಯಾರದಿಂದಿತ್ತನವರ್ಗೆ (ಬಿಜ್ಜರಾ. ೨–೨೬). [ ಜಪ + ತಾವಾಡ$_0$ (<ತಾವಡ) ]

**ಜಪನ** (ನಾ).=ಜಪ : ಸ್ವಪರಪ್ರಕಾಶಭಾಸುರಮಪರಂ ಮುನಿಗಿಂದುಕಾಂತ ಪಾತ್ರದೊಳಚ್ಚಾಚ್ಚಪಯಂ ನಿಂದವೊಲೆಸೆದುದು ಜಪನವಿಕಲ್ಪ ಪ್ರಪಂಚ ಹೀನಧ್ಯಾನಂ (ಅನಂಪು. ೯–೯೫). [ ಸಂ. ]

**ಜಪಮಣಿ** (ನಾ). ಜಪ ಮಾಡುವಾಗ ಎಣಿಸುವ ಮಣಿ: ಕರದಲಿ ಜಪಮಣಿ ಬಾಯಲಿ ಮಂತ್ರವು ಅಱವೆ ಮುಸುಕು ಮೋಱಿಗೆ ಹಾಕಿ (ಪುರಂದ. ೨–೨೫–೩). [ ಜಪ + ಮಣಿ$_3$ ]

**ಜಪಮಾಲಿಕೆ** (ನಾ). ಜಪ ಮಾಡುವಾಗ ಎಣಿಸುವ ಮಣಿಗಳ ಸರ; ಜಪ ಸರ : ಕರದಿ ಜಪಮಾಲಿಕೆಯ ಕಂಠದಿ ಮೆರೆವ ರುದ್ರಾಕ್ಷಿಯ ಮಣಿಯ (ಗಗಶಾ ೨–೭). [ ಜಪ + ಮಾಲಿಕೆ ]

**ಜಪಮಾಲೆ** (ನಾ). = ಜಪಮಾಲಿಕೆ : ಸಂದಿಹ ಸೂರ್ಯನ ನೆನಪಿಗೆ ಭಾನು ಎಣಿಸುವದಿರುಳೆಲ್ಲವು ತಾನು ಅಗಣಿತತಾರಾ ಜಪಮಾಲೆಯನು (ನೆಲಮು. ೯೫–೩); ವೃದ್ಧಾಪ್ಯವೆಂದಿತು: ' ನಾನು ಭಕ್ತಿಯ ಜಪಮಾಲೆ.' ಜಗತ್ತು ಕೂಗಿ ಹೇಳಿತು: ' ನಾನು ಕರ್ತವ್ಯದ ಯಜ್ಞಶಾಲೆ! ' (ಕಲ್ಲೋಲ. ೬–೦೦). [ ಜಪ + ಮಾಲೆ ]

**ಜಪಸರ** (ನಾ). = ಜಪಮಾಲಿಕೆ: ಪೊಳೆವ ಪಳಿಕಿನ ಜಪಸರಂ ಕುಸುಮಮಾಗೆ (ನಂದಿಮಾ. ೨–೨೪) ; ನಿನ್ನ ಜಪಸರವನ್ನಪ್ಪು ತಾ (ಗಾಳಿಪ. ೧೮೯). [ ಜಪ + ಸರ$_6$ ]

**ಜಪಾಕುಸುಮ** (ನಾ). ದಾಸವಾಳದ ಹೂವು : ಜಪಾಕುಸುಮದೊಲು ಉಷಾರಮಣಿಯಿರೆ ಜಪಾನವಿದೆ ರಮ್ಯ (ಅರಳು. ೩೩೯–೧೭). [ ಸಂ. (ಜಪಾ + ಕುಸುಮ) ]

**ಜಪಾಕ್ಷಿತಿಜ** (ನಾ). ದಾಸವಾಳದ ಗಿಡ : ರಕ್ತರಸಖಂಡಂಗಳ್ ತುಱುಗಿರೆ ವರೂಥಿಗಳ್ಪೆಱ ಮೆಱೆದರ್ಕುಸುಮಿತ ಜಪಾಕ್ಷಿತಿಜಂಗಳವೋಲ್ (ರಾಜಶೇ. ೬–೭೮). [ ಸಂ. (ಜಪಾ + ಕ್ಷಿತಿಜ) ]

**ಜಪಾಟಿ** 'ಝಪಾಟಿ' ನೋ.

**ಜಪಾತಿ** (ನಾ). ಸಮಾನ ; ಸರಿಸಮ: ಈಗಿನ ಕಾಲದ ಹುಡುಗೀರೇ ಆಟು. ಹಿಂದಿನ ಕಾಲದೋರ ಜಪಾತಿ ಕೆಲಸ ಮಾಡಲಾರೊ (ಸರ್ವಮಂ. ೯). [?]

**ಜಪಾನುಷ್ಠಾನ** (ನಾ). ಜಪವನ್ನು ಮಾಡುವುದು ; ಜಪದ ಆಚರಣೆ : ರಿಪುಭಟಮಲ್ಲರೊಡನೆಯು ಕದನವಿದು ಜಡರೆಲ್ಲರಿಗೆ ಸುಲಭವೆ ಜಪಾನುಷ್ಠಾನವಲ್ಲೆಂದ (ಕುವ್ಯಾವಿ. ೬–೧೪) ; ಕಾಲಕಾಲದ ಜಪಾನುಷ್ಠಾನ ಪೂಜೆಗಳಿಗಾಲಸ್ಯಮಂ ಮಾಡದೆನ್ನ ಪರಿಚರ್ಯೆಗನುಕೂಲೆಯಾಗಿರ್ದು ಮನವಾಳ್ತೆಯಂ ಸಾಗಿಪುದು (ಜೈಮಿಭಾ. ೦೦–೨೩). [ ಜಪ + ಅನುಷ್ಠಾನ ]

**ಜಪಾಪುಷ್ಪ** (ನಾ). ೧. = ಜಪಾಕುಸುಮ. ೨. "ಮಂದ್ದುಗುಣಿಕೆಯ ಹೂವು" (ಗಂಗಾಮ. ೦೩೭). [ ಸಂ. (ಜಪಾ + ಪುಷ್ಪ) ]

**ಜಪಾಪ್ರಸವ** (ನಾ). = ಜಪಾಕುಸುಮ : ಮುದಮುಂ ಜಪಾಪ್ರಸವ ರಕ್ತಾಶೋಕ ಬಂಧೂಕ ಶೋಣಮಣಿ ಜ್ಯೋತಿಗಳಿಕ್ಕೆಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ (ಆದಿಪು. ೧೭–೩). [ ಸಂ. (ಜಪಾ + ಪ್ರಸವ) ]

**ಜಪಾಪ್ರಸೂನ**(ನಾ). = ಜಪಾಕುಸುಮ : ದೆಸೆದೇವತೆಗಳ್ಗೆ ಜಪಾಪ್ರಸೂನಮಂ ರಕ್ತಬಲಿಯುಮಂ ತಾಮೆ ಕುಡುವಂತೆಸೆದಿರ್ದರೊ ಕಡೆಗಣ್ಣೊಳ್ ಪಸರಿಸೆ ಕಡುಗೆಂಪು ಭೀಮ ದುರ್ಯೋಧನರಾ (ಗದಾಯು. ೮-೩).
[ ಸಂ. (ಜಪಾ + ಪ್ರಸೂನ) ]

**ಜಪಿತ** (ನಾ). ಜಪ ಮಾಡಿದವನು.
**ಜಪಿತನಾಗು** = ಜಪಿಸು ; ಧ್ಯಾನಿಸು : ವಿಪರಿತಾಹತ ಶಾಸ್ತ್ರಗಳ ಜನಕುಪಮೆಗೊಳಿಸುವುಪಾಧ್ಯರನು ನಿಜ ಜಪಿತನಾಗುವೆ ಕಾವ್ಯವಿದು ರಕ್ಷಿಸಲಿ ಯನವರತ (ಬಿಜ್ಜ ಪು. ೨-೬). [ ಸಂ. ]

**ಜಪಿಯಿಸು** 'ಜಪಿಸು' ನೋ.

**ಜಪಿಸು, ಜಪಿಯಿಸು** (ಕ್ರಿ). ಮಂತ್ರವನ್ನು ವಿಧಿಪೂರ್ವಕವಾಗಿ, ಮೆಲ್ಲಗೆ ಪುನಃ ಪುನಃ ಉಚ್ಚರಿಸು ; ಜಪಮಾಡು : ಮೋನಂಗೊಂಡು ಪಂಚನಮಸ್ಕಾರಮಂ ಜಪಿಸುತ್ತುಮುಸಿರದಿರ್ಪುದುಂ (ಧರ್ಮಾಮೃ. ೩-೯೮) ; ಓಂ ನಮಃ ಶಿವಾಯ ಎಂಬ ಮಂತ್ರವ ಜಪಿಸುತ್ತಿರ್ದನಯ್ಯಾ (ಬಸವ. ೨೦) ; ಸಲೆ ಯಥಾವಿಧಿಯನೀಶಾಣುವಂ ಜಪಿಸುತೆ (ಪದ್ಮರಾ. ೧೧-೭೬); ಮಹಾಸ್ತ್ರ ಮಂತ್ರವ ಜಪಿಸಿದನು ಪಾರ್ಥ (ಕುಮಾ.ದ್ರೋ. ೯-೩೪) ; ರಾಮಮಂತ್ರವ ಜಪಿಸೊ ಹೇ ಮನುಜ (ಪುರಂದ. ೨-೨ ಪಲ್ಲವಿ). **ಜಪಿಯಿಸು** : ಜಿನಶ್ರೀ ಪದಾಬ್ಜಂಗಳಂ ಪಂಚನಮಸ್ಕಾರಂಗಳಂ ನಾಲಗೆ ಜಪಿಯಿಸೆ' (ಪಂಚಾಮೂ. ೨-೫೪) ; ನಿಯಮದಿ ಜಪಿಯಿಸೆ ಮೃತ್ಯುಂಜಯ ಮಂತ್ರಮಂ (ಸಮುಪ. ೧೨-೩೭); ಜಪಿಯಿಪ ಜನ್ನ ಮಾಡುವ ವೇದವೋದುವ (ಶ್ರೀಪಾಲ. ೭-೨೮).
[ ಜಪ + – ಇಸು$_3$ ]

**ಜಪೆ** (ನಾ). ದಾಸವಾಳದ ಗಿಡ ಮತ್ತು ಅದರ ಹೂವು : "ರಂಧ್ರಪುಷ್ಪಂ, ಜಪಾ – ಈ ೨ ದಾಸವಣಂ" (ಹಲಾಯು. ೩೫-೫೪). [ ಸಂ. ಜಪಾ ]

**ಜಪೋಪೇತ** (ನಾ). ೧. ಜಪದಿಂದ ಕೂಡಿದುದಂ. ೨. ದಾಸವಾಳದಿಂದ ಕೂಡಿದುದು. ೧, ೨ : ಆ ಮಹಾವನಂ ಯೌವನದಂತೆ ಮದನೋತ್ಕಳಿಕಾ ಕಮನೀಯಮುಂ . . . ಆರಾಧಕನಂತಕ್ಷಮಾಲಾಗಣಿತ ಜಪೋಪೇತಮುಂ (ಚಂದ್ರಪು. ೫-೫೨ ವ).
[ ಸಂ. (ಜಪ + ಉಪೇತ ; ಜಪಾ + ಉಪೇತ) ]

**ಜಪ್ತ** 'ಜಪ್ತಿ' ನೋ.

**ಜಪ್ತಿ, ಜಪ್ತ, ಜಪ್ತು, ಜಫ್ತಿ, ಜಫ್ತಿ** (ನಾ). (ಸಾಲಗಾರರ ಅಥವಾ ತಪ್ಪಿತಸ್ಥನ ಆಸ್ತಿ ಮೊದಲಾದುವನ್ನು) ಬಲಾತ್ಕಾರವಾಗಿ ವಶಪಡಿಸಿಕೊಳ್ಳುವುದು ; ಮುಟ್ಟುಗೋಲು ಹಾಕುವುದು : ದಿವಾಣಿ ಕೋರ್ಟಿನ ಬೇಲೀಫರು ಜಪ್ತಿಯ ವಾರಂಟನ್ನೂ ತುರಂಗವಾರಂಟನ್ನೂ ಕೈಯಲ್ಲಿ ಹಿಡಕೊಂಡು ಎಡತಾಕುತ್ತಾರೆ (ಮೋಹಿನೀ. ೫); ಹಣ ಪಾವತಿ ಮಾಡದಿದ್ದರೆ ಮನೆ ಜಪ್ತಿಯಾಗುತ್ತದೆ (ಕಾವೇರಿ. ೧೦೨) : ಇದ್ದ ಆಸ್ತಿಪಾಸ್ತಿ ಸೊತ್ತು ವಗೈರೆ ಜಪ್ತಿಯಾಗದುಳಿಯದು (ಕುರುಕಾ. ೧೨೨). **ಜಪ್ತ** : ಆತನು ತನ್ನ ಜಹಾಗೀರಿಗೆ ಸೇರಿದ ಕೆಲಸಗಳನ್ನು ದುರ್ಲಕ್ಷಿಸಿದನು. ಆದುದರಿಂದ ಆತನ ಉತ್ಪನ್ನವು ಜಪ್ತವಾಯಿತು (ಜ್ಯೋತಿಶ್ಯಾ. ೧೭). **ಜಪ್ತು** : ಅವರ ಮನೆ ಈ ದಿನ ಜಪ್ತಾಗುತ್ತದೆ (ರೂಢಿ). **ಜಫ್ತಿ** : ಅಮೀನನು ಜಫ್ತಿ ಮೂಲಕ ಸ್ವತ್ತನ್ನು ವಶಪಡಿಸಿಕೊಂಡನು (ರೂಢಿ). **ಜಫಿ** : ಜಫ್ತಿ ಮೂಲಕ ವಸೂಲುಮಾಡುತ್ತಿದ್ದರು (ಮಹಾವಂ. II, ೪೭).
**ಜಪ್ತಿಮಾಡು, ಜಪ್ತಮಾಡು, ಜಪ್ತುಮಾಡು, ಜಫ್ತಿಮಾಡು, ಜಫ್ತಿ ಮಾಡು** = ೧. ಬಲಾತ್ಕಾರವಾಗಿ ವಶಪಡಿಸಿಕೊಳ್ಳು : ನಿಮ್ಮ ಮನೆ ಜಪ್ತಿಮಾಡಿ ಬೀಗಮುದ್ರೆ ಮಾಡಿರುವರು (ವಿಧಿವ್ಯ. ೧೯೦); ಸದರೀ ಕಳವಿನ ಪತ್ರಿಕೆಯನ್ನು ಜಪ್ತಮಾಡತಕ್ಕದ್ದು (ಗಾಳಿಪ. ೩೪) ; ದ್ರಾವಕದ ತೆರವಾದ ಸೀಸೆಯೂ ಜಪ್ತಮಾಡಲ್ಪಟ್ಟಿದೆ (ಸ್ಕೂಲಮಿ. ೧೭೪) : ಸ್ಥಿರಸ್ವತ್ತು ಜಫ್ತಿ ಮಾಡಲ್ಪಡಲೂ ಕೂಡದು (ಗ್ರಾಮಾಕ.೩೪). ೨. ಹುಡುಕು; ಶೋಧಿಸು; ತಪಾಸಣೆಮಾಡು; ಜಡತಿಮಾಡು: ಅವರ ಸಮಕ್ಷದಲ್ಲಿ ಆಟಗಾರರನ್ನು ಜಪ್ತಿಮಾಡಿದರು (ಕೊತಕಾ. ೨೭); ನೂಲಿಗೇನು ನಿನ್ನ ಚೀಲ ಜಪ್ತು ಮಾಡಿದರೆ ಒಂದು ಹೊರೆ ಸಿಗಬಹುದು (ಕೈಲಾಕ. ೧೧); ಸ್ವಾಮಿ ದಿಂಬು, ಜಮಖಾನ ಎಲ್ಲವನ್ನೂ ಚೆನ್ನಾಗಿ ಜಫ್ತಿಮಾಡಿದ (ಸ್ವಾಮಿಸ್ನೇ. ೭೯) : ಅಡಿಗೆ ಮನೆಯನ್ನೆಲ್ಲಾ ಜಫ್ತಿ ಮಾಡುತ್ತಿದ್ದಳು (ಅವತಂ. ೦೯೯).
[←ಮರಾ. ಜಪ್ತೀ, ಜಪ್ತ್; ಹಿಂ. ಜಬ್ತೀ, ಜಪ್ತ್, ಜಬ್ತ್; ಅರ. ಜಬ್ತ್]

**ಜಪ್ತು** 'ಜಪ್ತಿ' ನೋ.

**ಜಪ್ಪನೆ** (ಅ). ತಟಕ್ಕನೆ ; ಬೇಗನೆ : ಅಗಲಾ ಬ್ರಾಹ್ಮಣನು ಜಪ್ಪನೆ ಹೋಗಿ (ಮುಂಬಯಿ. ४-೧೭೬). [ ಜಪ್$_0$ + – ಅನೆ$_1$ ]

**ಜಪ್ಪಯ್ಯ** (ನಾ). ಅಂಗಲಾಚುವ ಒಂದು ಮಾತು.
**ಜಪ್ಪಯ್ಯಅನ್ನು** = ೧. ಆಗ್ರಹಪೂರ್ವಕವಾಗಿ ಕೇಳಿಕೊಳ್ಳು ; ಒತ್ತಾಯಮಾಡು : ನನ್ನಂತವಳಾಗಿದ್ದರೆ 'ಜಪ್ಪಯ್ಯಾ' ಅಂದರೂ ಹೊಸಿಲು ದಾಟುತ್ತಿರಲಿಲ್ಲ (ನಿಂದನೆ.೬೫) : ನಾನಂತೂ ಜಪ್ಪಯ್ಯ ಅಂದರೂ ಗುಟ್ಟು ಬಿಟ್ಟುಕೊಡಲಿಲ್ಲ (ಪುನರು. ೩೮೬). ೨. ಸ್ವಲ್ಪಮಟ್ಟಿಗಾದರೂ ಸೋಲು,–ತಗ್ಗು ; ನಿರ್ಧಾರದಿಂದ ಕದಲು: ಒಳ್ಳೆಯ ಮಾತಿನಲ್ಲಿ ಹೇಳಿನೋಡಿದ. ಸೀತಮ್ಮ ಜಪ್ಪಯ್ಯ ಅನ್ನಲಿಲ್ಲ (ನಟಸಾ. ೫); ಜಪ್ಪಯ್ಯ ಅನ್ನದೆ ಸೀದ ಹಾಳು ಕಿತ್ತಳಿತೋಟಕ್ಕೆ ಹೋದರು (ಪ್ರಶ್ನೆ. ೨೭). 'ಜಪ್ಪೆನ್ನು' ಪರಾ. [ ? ]

**ಜಪ್ಪಿಸು** (ಕ್ರಿ). (ಉಕ) ೧. (ಸರಿಯಾದ ಸಮಯಕ್ಕಾಗಿ) ಕಾಯು; ನಿರೀಕ್ಷಿಸು; ಹೊಂಚುಹಾಕು: ಬೆಕ್ಕು . . . ಇಲಿಗಳ ಗುದ್ದಿನ ಬಳಿಯಲ್ಲಿ ಜಪ್ಪಿಸಿ ಕಾದುಕೊಂಡು ಕುಳಿತುಕೊಳ್ಳುತ್ತವೆ (ಮುಂಬಯಿ. ೩-೩೦); ಕಳ್ಳಹುದುಲಿನ ದಂಡೆ ಆಚೆ ಈಚೆಗೆ ಚಾಚಿಕೊಂಡು ಜಪ್ಪಿಸುವಂತೆ ಸದ್ದಿಲ್ಲದಲೆ ಬಿದ್ದುಕೊಂಡಿಹುದು (ಉಯ್ಯಾಲೆ. ೭೯-೧೦) ; ಬೀಜಗಾಳೀ ನೀನು ಗಾಳಿಯಲಿ ತೇಲಿ ಬಹೆ ನಿನಗಾಗಿ ಜಪ್ಪಿಸಿಹೆನು (ಪಯಣ. ೧೦೯-೯). ೨. ಎಚ್ಚರಿಕೆಯಿಂದಿರು; ಮುಂಜಾಗರೂಕತೆ ವಹಿಸು : ಆದರೆ ತಾವುವನ್ನು ಬಹಳ ಜಪ್ಪಿಸಿ ಕೊಡಬೇಕು (ಜಿಪಧೀ. ४೭) : ನಿಮ್ಮ ಪ್ರಕೃತಿ ಜಪ್ಪಿಸಿಕೊಳ್ಳಿರಿ (ಸಮಜೀ. ೫೦೨) : ಎಷ್ಟು ಜಪ್ಪಿಸಿ ನಡೆದರೂ ಜನರು ಹಾಯುತ್ತಿದ್ದರು (ಹೊಸಕ್ಷ. ೨೦೫) ; ಆ ಬಟ್ಟಲನ್ನು ಜಪ್ಪಿಸಿ ಹಿಡಿ (ಕಸಾಪ. I, ೦೩೨).
[ ಜಪ್ಪು (P ←ಮರಾ. ಜಪಣೇ) + – ಇಸು$_3$ ]

**ಜಪ್ಪು** 'ಜರ್ವು$_1$' ನೋ.

**ಜಪ್ಪೆನ್ನು** (ಕ್ರಿ). ಜಪ್ಪಯ್ಯ ಅನ್ನು ; ಒತ್ತಾಯಮಾಡು : ಗಣೇಶನು ಜಪ್ಪೆಂದರೂ ಶಾಲೆಯ ಮೆಟ್ಟಲೇರಲಿಲ್ಲ (ಕನಕ. ೧೨೦).
[ ಜಪ್$_0$ + ಎನ್ನು(<ಎನ್$_1$) ]

**ಜಪ್ಯ** (ಗು). ೧. ಜಪಿಸಬೇಕಾದ. (ನಾ). ೨. ಜಪಿಸಬೇಕಾದ ಮಂತ್ರ.
[ ಸಂ. ]

**ಜಫ್ತಿ** 'ಜಪ್ತಿ' ನೋ.

**ಜಫ್ತಿ** 'ಜಪ್ತಿ' ನೋ.

**ಜಬಡು** (ಕ್ರಿ). ಜಗಿ ; ಅಗಿ ; ತಿನ್ನು : "ಕಡಿ, ಕಚ್ಚು, ನುರಿ, ಹರಿ, ಹೋಳು, ಜಬಡು, ಜಜ್ಜು, ಕುಟ್ಟು" (ಕಂನುಹು. ೮೦); ಆ ನಿಂಬೆಯ ಮರದ ಕೆಳಗೆ ಯಾರೋ ಬಾಯಲ್ಲಿ ಹುಲ್ಲುಕಡ್ಡಿಯನ್ನು ಜಬಡುತ್ತ ಕುಳಿತುಕೊಂಡದ್ದು ಮಕರಂದೆಗೆ ಕಾಣಿಸಿತು (ಬೆವರಿ. ೨೬೪).
[ ದೇ.॥ ತಮಿ. ಚವಟ್ಟು ; ಕೊಡ. ಚವೆಂಟ್ ]

**ಜಬರಜಂಗಿ** 'ಜಬರು ಜಂಗಿ' ನೋ.

**ಜಬರಜಂಗು** 'ಜಬರು ಜಂಗಿ' ನೋ.

**ಜಬರದಸ್ತ್** 'ಜಬರ್ದಸ್ತು' ನೋ.

**ಜಬರದಸ್ತಿ** 'ಜಬರ್ದಸ್ತಿ' ನೋ.

**ಜಬರದಸ್ತಿತನ** (ನಾ). ಜಬರದಸ್ತಿಯಿಂದ ಕೂಡಿರುವಿಕೆ; ಜೋರು; ದರ್ಪ: ತನ್ನೊಡನೆ ಮಾತಾಡುವಾಗಿನ ಜಬರದಸ್ತಿತನ ಅವಳೊಡನೆ ಮಾತಾಡುವಾಗಿನ ಹಲ್ಲುಕಿರಿತ (ವಾಮನೆ. ೨೭).
[ ಜಬರದಸ್ತಿ (<ಜಬರ್ದಸ್ತಿ) + – ತನ ]

**ಜಬರದಸ್ತು** 'ಜಬರ್ದಸ್ತು' ನೋ.

**ಜಬರಿಸು, ಜಬ್ಬರಿಸು** (ಕ್ರಿ). ಗದರಿಸು; ಬಯ್ಯು: ಎನಗುಣನೀಡಿ ನೀಂ ಪೋಪುದೆಂದು ಬಲು ಕಾಡುತಿರಲು ಜಗುಳಿ ಜಬರಿಸಿಕೊಂಡು ಪೋಗಿ (ಪ್ರೌಢರಾ. ೪-೬೩); ಜವನ ದೂತರು ಬಂದು ಜಬರಿಸಿ ಒಯ್ಯುವ ಸಮಯಕ್ಕೆ (ತೀರ್ಥವು. ೧೭೦); ಆಳುಹೋಳುಗಳನ್ನು ಜಬರಿಸುತ್ತಿದ್ದಳು (ಜಮೀನ್ದಾ. ೭೩); ಹುಡುಗರು ಹಾವಳಿ ಮಾಡಿದವು, ಜಬರಿಸಿದ, ಬಯ್ದ, ಜಗಳ ಮುಗಿಯಿತು (ಪ್ರೇಮಾಶ್ರ. ೩೦). **ಜಬ್ಬರಿಸು:** (ಕ). 'ಜರ್ಬಿಸು' ಪರಾ. [ ಜಬರು + – ಇಸು$_3$ ]

**ಜಬರು**(ಗು). ಬಲಶಾಲಿಯಾದ; ಸಮರ್ಥವಾದ: (ಕ). ೨. ಭಾರಿಯಾದ; ಬೆಲೆಬಾಳುವ: (ಕ). (ನಾ). ೩. ಜೋರು; ಬಲಾತ್ಕಾರ; ದರ್ಪ: ನನ್ನ ಮ್ಯಾಗೆ ಇವನ ಜಬರು! ನಾ ಹೋದೆ ಅಂದ್ರು ಯಾರ ಮ್ಯಾಗ ಜಬರ ಮಾಡ್ತಾನ ತಿಳಿತೇತಿ (ಪುರುಷ. ೧೧೯); ನಿಮ್ಮಂತಾ ನಿಮಗ ಅಂತಾನ ಅಂದ್ರು ಈ ಕಳ್ಳನ ಜಬರೆಷ್ಟಿರಬೇಕು (ಹೊಸಂಸಾ. ೧೦೩). ೪. ಭಾರಿಯಾದ ಬೆಲೆ: ಈ ಜರದ ಸೀರಿ ಜಬರು ನೋಡಿದ್ರು ಖಬರ ಹಾರೂ ಹಾಂಗ ಅದ ಅಲ್ಲಾ (ಮಿಂಚಿಹು. ೧೩೯) [ ←ಪಾರ. ಹಿಂ. ಮರಾ. ಜಬರ್ ]

**ಜಬರುಜಂಗಿ,** ಜಬರಜಂಗಿ, ಜಭರಜಂಗಂ, ಜಬರಂಜಂಗು, ಜಭರಜಂಗಿ, ಜವರಂಜಂಗಿ (ನಾ). ಒಂದು ಬಗೆಯ ಫಿರಂಗಿ,–ತೋಪು: ಹೊಡೆ ಬಲು ಜಬರುಜಂಗಿಯಲಿ ಕೋಟೆಯನೆಂಬ ಕಡುರಭಸಗಳೊಪ್ಪಿದುವು (ಕಂಠವಿ. ೦೪-೪). **ಜಬರಜಂಗಿ:** ಆ ಸಮಯದಲ್ಲಿ ಅವನ ದಂಡನ್ನು ಶ್ರೀರಂಗಪಟ್ಟಣದ ಕೋಟೆ ಮೇಲಿನಿಂದ ಕೋವಿ ಪಿರಂಗಿಗುಂಡು ಮಕರ ಡಿಬ್ಬಿ ಜಬರಜಂಗಿ ಬಾಣ ಮುಂತಾದುವುಗಳಿಂದ ಹೊಡೆಯುತ್ತಲಿದ್ದರು (ಚಾಮವಂ. ೧೩೦); ಮಕರಡಬ್ಬಿ, ಜಬರಜಂಗಿ ಬಾಣ ಮುಂತಾದುವುಗಳಿಂದ . . . ಹೊಡೆಯುತ್ತಿರಲು (ಒಡಕ. ೩೩). **ಜಬರಜಂಗಂ:** ಪಂದಿಗೊಬಿಡು ಬಲೆ ಮರುಳೆಕ್ಕೆ ಜಬರಜಂಗೆಂದೆಂಬ ಪಲವು ತಂತ್ರದೊಳು ಕೊಂದರಿರದೆ ಬಂದು ಮುಸುಕಿದ ಪಟುಭಟವೃಂದವ ಕೋಂಟೆಯ ಭಟರು (ನಾಗಕು. ೧೭-೩೦). **ಜಬರುಜಂಗು:** (ಕ). **ಜಭರಜಂಗಿ:** ಕಡುದೊಡ್ಡ ಜಭರಜಂಗಿಗಳ ಕೊತ್ತಳದಿಂದಿಡೆ ಘುಡುಘುಡಿಸುತ ಹೋಗಿ ಕೆಡೆನೂಂಕಿ ತಳಿಗಳ ತೇರಾನೆ ಕುದುರೆಯ ಒಡಲೊಳು ಪೊಕ್ಕು ದಾಂಟುವವು (ಜ್ಞಾನಚ. ೧೩-೭೩). **ಜವರುಜಂಗಿ:** ವಿಚಿತ್ರವಾದ ಕೋಟೆಗಳು ಬಚ್ಚುಗಳು ಜವರು ಜಂಗಿಗಳು . . . ಮೊದಲಾದ ಯಂತ್ರವಿಶೇಷಂಗಳು (ಕೃವಾಅ. ೦೬೪).
[ ←ಮರಾ. ಜಬರ್‌ಜಂಗ್ ]

**ಜಬರುಜಂಗು** 'ಜಬರಂಜಂಗಿ' ನೋ.

**ಜಬರ್ದಸ್ತಿ,** ಜಬರದಸ್ತಿ (ನಾ). ೧. ಒತ್ತಾಯ; ಬಲಾತ್ಕಾರ; ಜೋರು; ದರ್ಪ: ಜಬರ್ದಸ್ತಿ ನಡದ್ದು ನಮ್ಮ ಕಡೆಯಿಂದಲೋ ಅವರ ಕಡೆಯಿಂದಲೋ? (ರಾಜೇಂದ್ರ. ೪೯); ಇಂಥ ಜಬರ್ದಸ್ತಿ ಪ್ರಾಯಶ್ಚಿತ್ತದಿಂದ ಪಾಪ ತೊಳೆಯುವುದಿಲ್ಲ (ನಿಬಂಧ. I, ೩೦೭). ೨. ವೈಭವ; ವಿಜೃಂಭಣೆ: ಒಳ್ಳೇ ಜಬರ್ದಸ್ತಿಯಿಂದ ನಡೆಯಿತು (ಕಸಾಪ. ೮೦). **ಜಬರದಸ್ತಿ:** ೧. ತಾವು ಜಬರದಸ್ತಿಯಿಂದ ಹದ್ದುಮೀರಿ, ಲಡಾಯ ಮಾಡೀರಿ (ಕಗವಿ. ೦೧೭); ನಾನು ಸ್ವಾಮಿಯೂ ಅಲ್ಲ ಪಾಳೆಯಗಾರನೂ ಅಲ್ಲ ನಿಮ್ಮ ಮೇಲೆ ಜಬರದಸ್ತಿ ಸವಾರೀ ಮಾಡಲಿಕ್ಕೆ (ಚಿತಸ. ೬೩); ನಾನಾ ಬಗೆಯ ಕಳೆಗಿಡಗಳೂ ಹಕ್ಕಿಲ್ಲದೆ ಬಂದು, ಜಬರದಸ್ತಿ, ಅಧಿಕಾರದ ಬಾವುಟವನ್ನು ಏರಿಸಿಬಿಟ್ಟಿದ್ದುವು (ನಿಬಂಧ. II, ೪೩). [←ಪಾರ. ಹಿಂ. ಜಬರ್‌ದಸ್ತೀ]

**ಜಬರ್ದಸ್ತು,** ಜಬರದಸ್ತ್, ಜಬರದಸ್ತು (ಗು). ೧. ಬಲಶಾಲಿಯಾದ; ದೃಢವಾದ; ಮಂಜಬೂತಾದ. (ನಾ). ೨. ಒತ್ತಾಯ; ಜೋರು; ದರ್ಪ: 'ಹುಂ ಮರ ಹತ್ತು! ಹಣ್ಣು ಬೀಳಿಸು!' ಎಂದು ಜಬರ್ದಸ್ತಿನಿಂದ ಅಪ್ಪಣೆ ಕೊಡುತ್ತಿದ್ದರು (ಮಸಕಶೂ. ೧೩); ನೆಚ್ಚು ಮೂಡಿತ್ತು ಅವನಿಗೆ, ಅವರ ಜಬರ್ದಸ್ತಿನ ಮಾತು ವೇಷಭೂಷಣ ಮತ್ತು ಠೀವಿಗಳನ್ನು ಕಂಡು (ಮಲಮು. ೭೦೭). ೩. ಠಾಕುಠೀಕಂ; ವೈಭವ; ಠೀವಿ; ವಿಜೃಂಭಣೆ: ಬರೇ ಬಟ್ಟೆ ಜಬರ್ದಸ್ತು ನಿಮ್ಮದು (ಮೂಲಾನ. ೮೩); ಈ ಪರದೇಶಿಗಳು ಬಹಳ ಜಬರ್ದಸ್ತಾಗಿ ಉಡುಪು ಹಾಕುತ್ತಿದ್ದರು (ಪ್ರವಾಇ. II, ೩೩೪); ನಾಟಕದ ಪತ್ರಿಕೆ ಇಷ್ಟು ಭವ್ಯವಾಗಿರದಿದ್ದರೂ ಆದರ ಠೀವಿ ಬಹಳ ಜಬರ್ದಸ್ತಾಗಿತ್ತು (ಗಾಳಿಪ. ೭೭); ಬ್ಯಾಂಡು . . . ರಾಳು ಎಲ್ಲಾ ಬಹಳ ಜಬರ್ದಸ್ತಿನಿಂದ ಏರ್ಪಾಡಾಗಿತ್ತು (ಗರುಡಾ. ೩೦). **ಜಬರದಸ್ತ್:** ೧. ಸಿಡಿಲಿನ ಹಾಗೆ ಜಬರದಸ್ತ್ ಆಳಾಗಿದ್ದ ಗುಮ್ಮಪ್ಪಯ್ಯನವರು ಸಿಡಿಲಿಗೇ ಹೆದರುತ್ತಿದ್ದರು (ಕಂಬಹು. ೩೩). **ಜಬರದಸ್ತು:** ೨. ಆಫೀಸಿನಲ್ಲೆಲ್ಲ ಬಹಳ ದರ್ಪ, ಜಬರದಸ್ತು (ಮುನಿಪಾ. ೬೪); ಆದರೆ ಗಂಡನ ಜಬರದಸ್ತಿನ ಮುಂದೆ ಅದೊಂದೂ ಸಾಗಲಿಲ್ಲ (ರಾಜವ. ೨೭); ಅಷ್ಟು ಜಬರದಸ್ತಿನಿಂದ ಮಾತಾಡಿ, ತನ್ನನ್ನು ಗೋಳಾಡಿಸಿದ್ದೂ ಇಷ್ಟಕ್ಕೇನೇ! ಎಂದು ಪ್ರಮೀಳೆಗೆ ನಗು ಬಂತು (ಮರಳಿ. ೦೦೧).
[ ←ಪಾರ. ಹಿಂ. ಮರಾ. ಜಬರ್‌ದಸ್ತ್ ]

**ಜಬಾನಿ** (ನಾ). ಹೇಳಿಕೆ; ಸಾಕ್ಷಿ: ನೀನು ಜಬಾನಿ ಮುಗಿಸಿಕೊಂಡು ಕೊಡೋ ನಿರ್ಣಯ ಕೊಟ್ಟುಬಿಡು (ಹೊಸಂಸಾ. ೦೬೪); ರಾಧಾಬಾಯಿಯ ಕೊಲೆ ಮಾಡಬಂದವನು ಸುರೇಂದ್ರರಾಯನಿರಬಹುದೆಂದು ಜಬಾನಿ ಕೊಟ್ಟಳು (ಸ್ಕೂಲಮಿ. ೯೭); ಉಳಿದ ಅನೇಕ ಜಬಾನಿಗಳು ಅದಕ್ಕೆ ಬೆಂಬಲವಾಗಿವೆ (ಜನನಾ. ೯೦). [ ←ಪಾರ. ಮರಾ. ಜಬಾನೀ ]

**ಜಬಾಬು** 'ಜವಾಬು' ನೋ.

**ಜಬಾಬುಸವಾಲು** 'ಜವಾಬ್‌ಸವಾಲ್' ನೋ.

**ಜಬ್ಬ** (ನಾ). ೧. "ಅಶಕ್ತತೆ" (ಮದೇಪು. ಕೋಶ): ಸಬ್ಬೆರೆಯನೆರೆಯಲ್ಕೆ ತಿಬ್ಬದೊಳ್ಪಿರಿಗಿಯಾ ಸಬ್ಬಸಗ್ಗಿ ಗರಿದಿರಿಗುಬ್ಬಸದಿನೆಳ್ತರಲ್ ಜಬ್ಬಮಿನಿತಿಲ್ಲದೆ ಲ್ಲೊಬ್ಬುಳಿಯೊಳೀಜಿಸಿ (ಮದೇಪು. ೦೨-೨೦): ಗಬ್ಬಗಡಲೆಡೆಯೊಳೆಡೆವಡೆ ದಾವೆಯೊಳ್ಗರಲಿನಿಬ್ಬಾಗದೊಳ್ನಿಂದು ರತಿಗೆಳೆಸಿ ತಿಬ್ಬದೊಳ್ಜಬ್ಬಮಿಲ್ಲದೆ ಥಳಥಳಿಪ ತಿಮಿತಿಮಿಂಗಳಮೆನಿಪ ಮಿನುಗಳ (ಮದೇಪು. ೦೪-೦೯). ೨. ಅಶಕ್ತತೆಯನ್ನು ಹೊಂದಿದವನಂ; ಮುದುಕ; ವೃದ್ಧ: ಅಂಥ ನರೆತ ಕೂದಲಿನ ಕಡ್ಡಿಯಂತೆ ಒಣಗಿದ ಜಬ್ಬನನ್ನು ಕೈಹಿಡಿಯುವುದು ನ್ಯಾಯವೇ (ನಿಷ್ಕಾಮ. ೦೦೭). 'ಜಬ್ಬು$_3$' ಪರಾ. [ ? ]

**ಜಬ್ಬರಿಸು** 'ಜಬರಿಸು' ನೋ.

**ಜಬ್ಬಲು,** ಜಬ್ಬುಲ್, ಜಬ್ಬುಲಿ$_1$ (ನಾ). ೧. (ಮುಂಚಿನಿಂದ) ಶಕ್ತಿಗುಂದಿರುವುದು, – ದುರ್ಬಲವಾಗಿರುವುದು: ಗಂಟಿಕ್ಕಿದ ಹುಬ್ಬುಗಳ, ಜಬ್ಬಲು ಜಬ್ಬಲಾದ ಗಲ್ಲದ . . . ತೀಕ್ಷ್ಣದೃಷ್ಟಿಯ ಆ ಹೆಂಗಸು (ಪುನರು. ೦೪೦). 'ಜಬ್ಬಲುಬೀಳು' ಪರಾ. ೨. ಬಾಡಿರುವುದು; ಮಂದುರಿರುವುದು: (ಕ). ೩. (ಹಣ್ಣು ಮೊದಲಾದುವುಗಳಂತೆ) ಜಜ್ಜಿಹೋಗಿರುವುದು; ಮೆತ್ತಗಾಗಿರುವುದು: ಅವನ ಮುಖ ಕೊಳೆತು ಜಬ್ಬಲಾದ ಕಲ್ಲಂಗಡಿಹಣ್ಣಿನಂತಿತ್ತು (ನಗಹೂ. ೯೦). **ಜಬ್ಬುಲ್:** ೧. "ಕ್ಲೀಬನಂ, ಕ್ಲೀಬನೀಯಂ, ಈ ೨ ಜಬ್ಬುಲ್" (ಶಾಶಕ್ಕ. ೦೦೩). **ಜಬ್ಬುಲಿ$_1$:** ೧. ಜೋಡಿಯ ಮನದ ಕೊಳ್ಗುದಿಯ ಜಬ್ಬುಲಿಯ ಜಾಣೆಕೆಯ ಚಿಂತೆಯ ಹಬ್ಬುಗೆಯ ಹರವಸದ ಖೇದದ ಮಬ್ಬಿನಲಿ ಹಣಗಿದರು (ಕುಮ್ವಾಸ. ೦೭-೫೭).
[ ಜಬ್ಬ + – ಅಲು (<–ಅಲ್$_2$). / ತಮಿ. ಚಪ್ಪಲ್; ತುಳು. ಜಬುಲು ]

**ಜಬ್ಬಲುಬೀಳು** (ಕ್ರಿ). ಸಡಿಲವಾಗಿ ಜೋಲುಬೀಳು: ಕಿವುಡುತನ ತಪ್ಪೀತೆ ರನ್ನಕುಂಡಲದಿಂದ ತೊವಲು ಜಬ್ಬಲುಬೀಳದೆ ವ್ಯಾಖ್ಯಾನ್ನದಿಂದ (ಮಂಕುಕ. ೬೩೨). [ ಜಬ್ಬಲು + ಬೀಳು$_1$ (<ಬೀೞ್$_1$) ]

**ಜಬ್ಬಿಸು$_1$** (ಕ್ರಿ). ೧. (ಮಾವಿನ ಹಣ್ಣು ಮೊದಲಾದುವುಗಳನ್ನು) ಚೀಪಿಸು; ಸೀಪಿಸು: (+). ೨. ಚೀಪು.

[ ಜಬ್ಬು$_1$ (<ಚಪ್ಪು) + -ಇಸು$_3$ ]

**ಜಬ್ಬಿಸು$_2$** 'ಜರ್ವಿಸು' ನೋ.

**ಜಬ್ಬು$_1$** 'ಚಪ್ಪು' ನೋ.

**ಜಬ್ಬು$_2$** 'ಜರ್ವು$_1$' ನೋ.

**ಜಬ್ಬು$_3$** (ನಾ). ಮುದಿಯಾದ ವ್ಯಕ್ತಿ: ಈ ಕೋಟದ ಊರು ಎಂದರೆ . . . ನನ್ನಂತಹ ಕಣ್ಣು ಕಾಣದ ಜಬ್ಬುಗಳು, ಇನ್ನು ಬೇರೆ ದಾರಿ ಇಲ್ಲದವರು ಇರುವ ತಾವು (ಮರವು. ೩೦೨). [ ದೇ.॥ ತುಳು. ತೆಲು. ಜಬ್ಬು ]

**ಜಬ್ಬು$_4$** 'ಜರ್ವು$_2$' ನೋ.

**ಜಬ್ಬು$_5$** (ನಾ). (ಕುಷ್ಠ ಮೊದಲಾದ ರೋಗಗಳಲ್ಲಿ ಚರ್ಮದ ಮೇಲೆ ಏಳುವ) ಗುಳ್ಳೆ,-ತದ್ದು,-ದದ್ದು: ನೆಲ್ಲಿಯ ಕಾಯಿಯ ರಸ . . . ಪುಟೋದ್ವರ್ತನಂ ಮಾಡಿ ಪೂಸಲು ಮುನ್ನಾದ ಜಬ್ಬುಗಳನ್ನು ಕೆಡಿಸುವುದು. ಮರಳಿ ಮತ್ತೊಂದು ತೆಜನಾದ ಜಬ್ಬುಗಳೂ ಆಗವು (ವಿವೈವಿ. ೦೫೯). 'ಚಿಬ್ಬು' ಪರಾ. [ ? ]

**ಜಬ್ಬು$_6$** (ನಾ). [ಸಂಗೀತ]ವೀಣೆ ಮೊದಲಾದ ತಂತಿವಾದ್ಯಗಳಲ್ಲಿ ಒಂದು ನಾದಕಟ್ಟು: ಬಿರಟೆ ಚಕ್ಕು ಸನ್ನೆ ಬಿಗಿ ಜಬ್ಬು ಜೀವಾಳವೆಂಬಾಟು ಬಗೆಯಾದ ನಾದಕಟ್ಟುಗಳಿಂ ತಂತ್ರಿಗಳಿಂ ವರಿಸಿ (ವಿವೇಕ. ೨೩೭). [ ? ]

**ಜಬ್ಬುದುಳಿ** (ಕ್ರಿ). ಜಜ್ಜಿಹೋಗುವಂತೆ ತುಳಿ; ಜರ್ಜರಿತಗೊಳಿಸು; ಮರ್ದಿಸು: ಒಬ್ಬರದಟೊಳಗುಳಿಯದಂತಿರೆ ಜ[ಪಾಠಾಂ. ದೊ, ಬೊ]ಬ್ಬುದುಳಿದನು ಜೋಹವಿಕ್ಕಿದ ಹಬ್ಬದಭಿನಯದಂತೆ ಹರುಷವನೈದ ಲವುರಗಣ (ತೊರರಾ. ೬-೫೯ ೨೩).

[ ಜಬ್ಬು$_2$ (<ಜರ್ವು$_1$) + ತುಳಿ$_1$ (<ತುೞ್$_1$) ]

**ಜಬ್ಬುರುಕೊರ್ಲೆಹುಲ್ಲು** (ನಾ). ಒಂದು ಬಗೆಯ ಹುಲ್ಲು: ನರಿಮಿಾಸೆ ಹುಲ್ಲು, ಜಬ್ಬುರುಕೊರ್ಲೆಹುಲ್ಲು (ಮೃಶಿಗಿ. ೬೦-೦೨೦೮).

[ ಜಬ್ಬುರು$_0$ + ಕೊರ್ಲೆ (<ಕೊಱಲೆ) + ಹುಲ್ಲು (<ಪುಲ್) ]

**ಜಬ್ಬುಲ್** 'ಜಬ್ಬಲು' ನೋ.

**ಜಬ್ಬುಲ** 'ಜಬ್ಬುಲು' ನೋ.

**ಜಬ್ಬುಲಿ$_1$** 'ಜಬ್ಬಲು' ನೋ.

**ಜಬ್ಬುಲಿ$_2$** (ನಾ). ಅಶಕ್ತನಾದವನು; ದುರ್ಬಲ: ಕಿಸುಗುಳಿಗಂ ವಿಕಾರಿ ಕಡುನಾಣಿಲಿ ಜಬ್ಬುಳಿ ಬೂತು ಕಾತರಂ (ಲೀಲಾವ. ೨-೬೮).

[ಜಬ್ಬುಲ್ (<ಜಬ್ಬಲು) + -ಇ$_3$ ]

**ಜಬ್ಬುಲು, ಜಬ್ಬುಲ** (ನಾ). ೧. ಹುಲ್ಲುಗಾವಲು; ಹಸಲೆ; "ಹುಲ್ಲು ಬೆಳೆದ ಸ್ಥಳ" (ಗಂಗಾಮು. ೦೩೭). ೨. "ಕೆಸರು; ಪಂಕ" (ಪ್ರಭಣ್ಣ). **ಜಬ್ಬುಲ:** ೧. "ಹುಲ್ಲ ದಡ್ಡು" (ಜಾನಕೋ. ೫೯). [ ? ]

**ಜಭರಜಂಗಿ** 'ಜಬರುಜಂಗಿ' ನೋ.

**ಜಮ, ಜವ$_1$** (ನಾ). ೧. ನಿಗ್ರಹ; ನಿರ್ಬಂಧ: ರಾಕ್ಷಸನು ಇನಿತು ಜಮನೇಕೆ ಪುತ್ರಿಯ ಬಂಧನವ ಮಾಳ್ಪೆ ಯಾಕೈ (ಪ್ರಭುಪು. ೮-೩೯). **ಜವ$_1$:** ೨. ದಕ್ಷಿಣ ದಿಕ್ಕಿನ ಅಧಿಪತಿ; ವೈತ್ಯದೇವತೆ; ಯಮ: "ಅಟಿಂ . . ಜವಂ, ಜಗುನೆಯ ಪಿರಿಯಂ-ಈ ೫ ಯಮಂಗೆ ಪೆಸರ್" (ಕಶಸಾ. ೩-೩೫); ಜವನನವಯವದೊಳ್ ಗೆಲ್ದು ಪಾರ್ವರ ಪಿಳ್ಳೆಯ ಪೋದ ಪ್ರಾಣಮಂ ತಂದ (ಪಂಪಭಾ. ೯-೫೨ ವ); ಜವನ ಜನನಿಯೊ ಮೇಣು ಲಯಭೈರವನ ಭಗಿನಿಯೊ (ತೊರರಾ. ೦-೧೦-೭).

**ಜವನದಾಡೆ** = ಜವಂದಾಡೆ: ಸಬಳ ಜವನದಾಡೆ ಕಣೆಯ ಕಂಪಣ ಗದೆ ಪ್ರಭುವೆತ್ತ ಶಕ್ತಿಯಾದಿಯನು (ಅನಂತ. ೦೪-೦೪). **ಜವನ ಬಾರಿ** = ಯಮನ ಪಾಶ: ಪೆಂಡತಿಯ ಮೂಗನಕಾರಣದಿನರಿವವನಂ ಜವನ ಬಾರಿಗಟ್ಟುವುದೆ ಧರ್ಮಂ (ಪಂಚತಂ. ೭೯-೯). **ಜವನ ಭಗಿನಿ** = ಯಮನ ತಂಗಿ; ಯಮುನಾ ನದಿ: ಜಹ್ನುಮುನಿಯಿಂದ ಪುಟ್ಟಿ ಹಿಮಗಿರಿ ದಾಟಿ ಜವನ ಭಗಿನಿಯ ಕೂಡಿ ಮಣಿಕರ್ಣಿಕೆಯ ನೆರೆದೆ (ವಿದಾಕ್ಷ. ೮೮-೩). **ಜವನ ಮಗ** = ಯಮನ ಮಗ; ಯುಧಿಷ್ಠಿರ: ಜವನ ಮಗನಿರ್ಕೆ ಸುಭಟರ ಜವನಿರ್ಕೆ (ಗದಾಯು. ೭-೫); ಜವನ ಮಗ ಸಂನ್ಯಾಸಿವೇಷದಿ . . . ದಿವಿಜರಾಯನ ತನಯನಿದ್ದ ಶಿಖಂಡಿವೇಷದಲಿ (ಕುವ್ಯಾವಿ. ೦೧೩. ೨-೨). **ಜವನವರು** = ಯಮದೂತರು: ಜವನವರೆಡೆಯಾಡಲಣ್ಮರಾ ಮುನಿವನದೊಳ್ (ಶಬಶಂ. ೨-೬೬); ಹೇಭವನೆ ಶಿವನೆ ಜವನವರ ಜವಕೆ ಶವವಾಗದಂತೆ ಮಾಡು (ಅರಳು. ೩-೦೧). **ಜವನೊಂದಿಗ**= "ಯಮನ ಜೊತೆಯವನು; ಸತ್ತವನು" (ಪ್ರಭಣ್ಣ): ಮೊನೆಯೊಳಿದಿರ್ಚಿದೊಡವನಂ ಜವನೊಂ [ಪಾಠಾಂ. ನಂ]ದಿಗನ ನಾಗಿಸಿದ ರಕ್ಕಸದಲ್ಲಣಂಗೆ (ರಾಮಾಶ್ವ. ೧೬೦-೦). [ <ಪ್ರಾ. ಜಮ./ಸಂ. ಯಮ ]

**ಜಮಕಾಯಿಸು** (ಕ್ರಿ). ಜಮಾಯಿಸು; ಕೂಡಿಸು; ಸೇರಿಸು: ತಮ್ಮ ಓಲಗ ಕೊಂಬು ತಮಟೆ ಸಂಕು ಜಾಗಟೆ ತುತ್ತೂರಿ ಕಹಳೆಗಳೊಂದಿಗೆ ಜಮಕಾಯಿಸುತ್ತಾರೆ (ಗರುದಾ. ೧೭೦). [ <ಜಮಾಯಿಸು ]

**ಜಮಖಾನ** 'ಜಂಬುಕಾನ' ನೋ.

**ಜಮಖಾನೆ$_1$** 'ಜಂಬುಕಾನ' ನೋ.

**ಜಮಖಾನೆ$_2$** (ನಾ). ವ್ಯಾಯಾಮ ರಂಗ; ಕ್ರೀಡಾರಂಗ; ಆಟದ ಸ್ಥಳ: ಮನೆಯಲ್ಲಿ ಮಾತ್ರವಲ್ಲ . . . ಜಮಖಾನೆಯಲ್ಲಿಯೂ ಅವನು ತನ್ನ ಕಡತ ಬಿಚ್ಚುತ್ತಿದ್ದನು (ನಟಿಸಾ. ೯). [ ← ಇಂ. Gymkhana ]

**ಜಮುಜಮ** (ಗು). ಅಪ್ಪಟ; ಪಕ್ಕಾ: ಅವರು ತೋರಿಕೆಗೆ ಮಾತ್ರ ಒಳ್ಳೆಯವರಾಗಿದ್ದರು. ಆದರೆ ನಿಜವಾಗಿ ಜಮುಜಮ ಕಳ್ಳರು (ಈಕಥ. ೦೦೩). [ ? ]

**ಜಮದಂಡ, ಜವದಂಡ** (ನಾ). ೧. ಅರಮನೆ, ಗುರುಮನೆಗಳ ಬಿರುದಿನ ಲಾಂಛನಗಳಲ್ಲಿ ಒಂದು: ಸಾಧಾರಣ ಬಿರುದುಗಳು . . . ಡಮರುಗ, ಪಂಚಘಂಟೆ, ಆಸಾಸೋಟ, ಜಮದಂಡ (ಗುರುದ. ೦೦). **ಜವದಂಡ:** ೨. ಯಮನು ವಿಧಿಸುವ ಶಿಕ್ಷೆ; ಯಮನ ಆಜ್ಞೆ: ಪೂರ್ವಪದಂ ತದ್ಭವ ಮಾದುದರ್ಕೆ-ಯಮದಂಡ-ಜವದಂಡ (ಶಮದ. ೨೮೯ ಪ್ರಯೋ). ೩. ಯಮನ ಕೈಯಲ್ಲಿರುವ ದಂಡ,-ಆಯುಧ: ವೀಷಳರತಯಕು[ವ]ರ[ಜವ]ದಣ್ಣ (ಸೌಇಇ. XX, ೭೦-೦೨: 1109). [ಜವ + ದಂಡ ]

**ಜಮದಂಡೆ, ಜವದಂಡೆ** (ನಾ). ೧. ಒಂದು ಬಗೆಯ ಆಯುಧ: "ಕಂಜುರಂ=ಜಮದಂಡೆ" (ಕಾಶಕ್ಕ. ೬೫); ಪುಡಿಬಾಣ . . . ಜಮದಂಡೆ ಪುಡಿ ಸಸ್ಯ ಹೊಗೆ ಬಾಣವುರಿಯಾ (ದೇವಾಂಪು. ೩-೨೦೩). **ಜವದಂಡೆ:** ೨. ಯಮನು ವಿಧಿಸುವ ಶಿಕ್ಷೆ,-ಆಜ್ಞೆ: ಐವಾಯ್ಯುಲಿಯೆನೆ ನಗರ ರಕ್ಷಕನಿರ್ಕುಂ; ಎಂತುಂ ಕಟ್ಟಾಣತಿ ಜವದಂಡೆ (ರಾಮಾಶ್ವ. ೦೨-೦೧).

[<ಜಮದಂಡ ]

**ಜಮದಗ್ನಿ** (ನಾ). ೧. ಪ್ರಜ್ವಲಿಸುವ ಅಗ್ನಿ. ೨. ಒಬ್ಬ ಋಷಿ; ಪರಶುರಾಮನ ತಂದೆ: "ಕಪಿಲಂ ಮರೀಚಿ . . . ಜಹ್ನು ಜಮದಗ್ನಿ . . . ಸುಮಾಂಡವ್ಯರೆಂದು ತಪಗೆಯ್ದ ಮುಖ್ಯ ಋಷಿಯರೆನಿಕ್ಕು" (ಮಂಗರಾ. ೬೬-೧೧). [ ಸಂ. ]

**ಜಮದಗ್ನಿತನಯ** (ನಾ). ಜಮದಗ್ನಿಮಹರ್ಷಿಯ ಮಗ; ಪರಶುರಾಮ: ಲಲನೆಯೊಳು ಜಮದಗ್ನಿತನಯನೊಳು ಮುಸಲಿಯೊಳು ಚೆಲುವಿನೊಳು ದಶರಥಾತ್ಮಜನೊಳತಿಕಪ್ಪಿನೊಳು ಬಿಳುದಿನೊಳು ರಾಮವೆನಿಸಿಕ್ಕು (ಮಂಗರಾ. ೦೪೭-೪೦). [ ಜಮದಗ್ನಿ + ತನಯ ]

**ಜಮದಾಡೆ,** ಜವದಾಡೆ (ನಾ). ಒಂದು ಬಗೆಯ ಆಯುಧ ; ಕಠಾರಿ ; **ಬಾಕು:** ಕರವಾಳ ಕಕ್ಕಡೆಯು . . . ಜಮ[ಪಾಠಾಂ. ವ]ದಾಡೆಯ ಚಾಪದ (ರಾಜಶೇ. ೬-೧೧ ವ) ; "ಕೋರೆಯುಳ್ಳ ಈಟಿ" (ರಾ ಜ ಶೇ. ಕೋಶ). **ಜವದಾಡೆ:** ಸಿಂಗಾಡಿಗತ್ತಿ ಜವದಾಡೆ (ಸುಂಕಬಂ. ೬೪) ; ಮುತ್ತಿನ ಮೊಳೆಕಟ್ಟು ಜೆಡೆಯ ಗೊಂಡೆಯು ಬಿಗಿದೊತ್ತಿ ಕಟ್ಟಿದ ಜವದಾಡೆ (ಕುರಾಸಾಂ. ೧೮-೧೯) ; ರಮಣಿಯೊರ್ವಳು . . . ಘಮಘಮಿಸುವ ಸೊನ್ನೆಗೇದಗೆ ಎಸಳೆಂಬ ಜವದಾಡೆಯುವಳೊಪ್ಪಿದಳು (ವೀರಹತ. ೫-೩೪) ; ಆರ ನೋಡಲು ಜವದಾಡೆಯ ತಿರಿಗೂಳ ಪೂರ್ಯಿಸಿದ ಗಾಯುದವರು (ಕಂಠವಿ. ೧೪-೬೨).

[ ಜವ + ದಾಡೆ./ತಮಿ. ಚವುದಾಡು ; ತೆಲು. ಜವುದಾಡಿ, ಜಮುದಾಳಿ./ಹಿಂ. ಜಮಡಾಢ್, ಜಮಧರ್ ]

**ಜಮರ** 'ಜಂಬರ' ನೋ.

**ಜಮಶೇರಿ** (ನಾ). ಒಂದು ಬಗೆಯ ನಾಣ್ಯ: ಮಲಾಪಹಾರಿಯ ದಕ್ಷಿಣದಲ್ಲಿ ೧೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡಿಯುತ್ತಿದ್ದವು. ಅವುಗಳ ವಿವರ-೧ ಗಜಪತಿ . . . ೬ ದುರ್ಗಿ, ೭ ಜಮಶೇರೀ (ಕಭಾಗಿ. ೨೮೦). [ ? ]

**ಜಮಳ,** ಜವಳ$_1$, ಜವಳಿ$_3$, ಜವುಳಿ$_2$ (ನಾ). ೧. ಜೊತೆ ; ಜೋಡಿ ; **ಅವಳಿ :** ಯತ್ವಕೆ ಜತ್ವಂ-ಯತಿ-ಜತಿ ; ಯುಮಳ-ಜಮಳ (ಶಮದ. ೨೫೯ ಪ್ರಯೋ); ಜಮಳದೋಲೆಗಳನ್ನು ಲಿಂಗಾಭಟ್ಟನಿಗೆ ಒಪ್ಪಿಸುವವನು (ಮಂತ್ರಶ. ೦೬೫-೧೭). 'ಅವಳ್' ಪರಾ. **ಜವಳ$_1$ :** ೧. "ಪೊಣರಮಳ್ ಜುಗಂ ಜವಳ ಜೋಡೆಂದೊಡೆರಡಕ್ಕೆ ನಾಮಂ" (ಕಬ್ಬಿಕ್ಕೆ. ೧೫೩) ; ಮಕಾರಕ್ಕೆ ವಕಾರಂ . . . ಯಮಳ-ಜವಳ (ಶಮದ. ೨೬೭ ಪ್ರಯೋ). 'ಜವಳಂಬಂ' ಪರಾ. **ಜವಳಿ$_3$ :** ೧. "ಜವಳಿ ಯುಗಂ" (ಕರ್ಣಾನಿ. ೨೭) ; "ಜುಗ ಜುಗುಮ ಜವಳಿ ಪೊಣರಮಳೆನ್ನಲ್ ತೋಱುವುದು ಯುಗಳ ಸಂಖ್ಯೆಯು" (ಕವಿಕಂ. ೨೦೨) ; ಕುಠಾರರ ಜವಳಿಯನು ಕರೆಸಿದನು ರಾಧಾಸುತನ ಸೌಬಲನ (ಕುವ್ಯಾಸ. ೦೬-೩) ; ಕುವಲಯನೇತ್ರದ ಕುಲಿಶರದಂಗಳ ಜವಳಿಗಳಸಮೊಲೆಗಳ . . . ಯುವತೀ ರೂಪದ ಚಿತ್ರಮನಾ ಸುಕುಮಾರಂ ನೋಡಿದನು (ಜಯಕಾ. ೩-೧೦). ೨. ಒಂದೇ ತೆರನಾಗಿರುವುದು ; ಸಮಾನವಾಗಿರುವುದು; **ಸಾಟಿ:** "ಪಡಿ ಪಾಟಿ ಪಾಂಗು ಪಾಸಟಿ ಜವಳಿ ಜೋಡಣೆಯು ಸಡಗರದೆ ತೋಡು ಜೋಡಿಯು ಭಂಗಿ ಸಾಮ್ಯ" (ಶಬ್ದಮಂ. ೫೭). **ಜವುಳಿ$_2$ :** ೩. ಸೀರೆಗಳ ಮೊತ್ತವನ್ನು ಲೆಕ್ಕ ಮಾಡುವ ಒಂದು ಪ್ರಮಾಣ ; **ಜೋಡಿ ಸೀರೆ; ಜೊತೆ :** ಜವುಳಿಯೆನೆ ಸೀ(ರೆ) ಯೆರಡುಂ ಜವುಳಿಗಳಿಪ್ಪತ್ತು ಎನಿಪ ಕೋಡಿಗೆಯೊಂದುಂ ಜವುಳಿ ಚತುಸಂಖ್ಯೆ ಚೌಕುಳಿ ಜವುಳಿಯು ಪರಿಭಾಷೆ ಪೇಳ್ದಿ ರಾಜಾದಿತ್ಯಂ (ವ್ಯವಹಾ. ೦-೩ ಅನುಬಂಧ).

**ಜವಳಿಮಕ್ಕಳು=ಅವಳಿ ಮಕ್ಕಳು; ಅವಳಿ ಜವಳಿ :** ತವಕದಿಂದೆಬಿಗಿದಡೆ ಮಾದ್ರಿಯು ಜವಳಿಮಕ್ಕಳನಪ್ಪಿದನು (ಕುವ್ಯಾಗ. ೧೧-೯೨). **ಜವಳಿಯನಿಕ್ಕು= ಜೋಡಿಹಾಕು ; ಒಂದಕ್ಕೊಂದು ಸೇರಿಸು :** ಸೂಕಳಾಶ್ವಮಂ ಜವಳಿ ಯನಿಕ್ಕಿಯೋಡಿಸುವ . . . ಮಱಿಗಳ್ಗೆ ಪಾಲನೆಱೆವುಜ್ಜುಗವಂ ತಳೆದಿರ್ಪನಾವಗಂ (ನಳಚಂ. ೬೪೯).

[ <ಪ್ರಾ. ಜಮಲ./ಸಂ. ಯಮಲ ]

**ಜಮಳಿ** (ನಾ). (?) : ಕೊಳಗುಪ್ಪೆ ಪಟ್ಟವಸಿ ಅರ್ಧಂ ಕಾನಸೊಪ್ಪಿನರ್ಧಂ ವಾರಲರ್ಧಂ ಕರ್ಸಣಿಣ್ದಂ ನೂರಿರ್ಪತ್ತೆಣ್ಬು ಕೊಂಬೆಗಾರೊಡಂ ಪಡೆಯಂ ಮೆಣ್ಬು ಮೂಡೆ ಜಮಳಿ ಒನ್ದು ಇದು ಗೋಪಾಲದೇವರಾ ದತ್ತಿ (ಎಇ. XXI, ೨೯-೦೭; ೫ನೆಯ ಶತ).

[ P ಇದು 'ಜವಳಿ$_1$' ಎಂಬುದರ ಅಪಲಿಖಿತವಿರಬಹುದು ]

**ಜಮಾ** 'ಜಮ್ಮೆ$_2$' ನೋ.

**ಜಮಾಖರ್ಚು** (ನಾ). ಆಯಂವ್ಯಯಂ ; ಆದಾಯ ಮತ್ತು ವೆಚ್ಚ : ಜಮಾಖರ್ಚು ಮುಂತಾದ ಬಾಬುಗಳಲ್ಲಿಯೂ ಖಾವಂದರವರು ವಿಚಕ್ಷಣೆ ಯಿಂದ ಅಜ್ಞೆ ದಯಪಾಲಿಸಿದ ಕ್ರಮವು ವ್ಯಕ್ತವಾಗುತ್ತೆ (ಮಹಾವಂ. II, ೫೪) ; ಖಾಸಗಿ ಜನರು ತಂತಮ್ಮ ಜಮಾಖರ್ಚುಗಳನ್ನು ಇದರಲ್ಲಿ ಬರೆಯುತ್ತಿದ್ದರು (ಕನ್ನಸಂ. ೯೦) ; ನೀನೊಮ್ಮೆ ಮಾಡಿ ನೋಡೋ ಈ ನಾಡ ಜಮಾಖರ್ಚು (ಮಾನಸ. ೬೮-೩೦).

[ ಜಮಾ (<ಜಮ್ಮೆ$_2$) + ಖರ್ಚು (<ಕರ್ಚು$_4$) ]

**ಜಮಾದಾರ,** ಜಮೇದಾರ (ನಾ). ೧. ಸೇವಕರ ತಂಡದ ಮುಖ್ಯಸ್ಥ ; ಅಂಗರಕ್ಷಕ ದಳದ ಮುಖ್ಯಸ್ಥ; **ಹೋಬಳಿದಾರ:** (ಕೈಸ್‌ಗಿ. II, ೫೫೦). ೨. ಹಿಂದಿನ ಮೈಸೂರು ಸಂಸ್ಥಾನದಲ್ಲಿದ್ದ ಅಶ್ವದಳದ ಅಧಿಕಾರಿ: (ಮೈಗೆಜ. IV, ೭೭೨) ; ಧೊರೆಗಳ ಅಪ್ಪಣೆಯಾಗಿದೆ ಎಂದು ಪಿತೂರೀ ಕಾಗದವನ್ನು ಬರೆದು, ತನ್ನ ಕಡೆ ಜಮಾದಾರ ಹರಿಸಿಂಗನನ್ನು ಕಳುಹಿಸಿ ಕೊಟ್ಟು (ಜಾಮವಂ. ೧೭೯). ೩. ಪೋಲೀಸ್ ಖಾತೆಯಲ್ಲಿ ಒಬ್ಬ **ಅಧಿಕಾರಿ :** ಜಮಾದಾರರು ಕಚೇರಿಗೆ ಹೋದರು (ಬಂಗಾರ. ೪೭) ; ಅತ್ತ ಗುಪ್ತಪೋಲೀಸನೂ ಜಮಾದಾರನೂ . . . ದೇವಾಲಯಕ್ಕೆ ಬಂದರು (ಮೂಪಾಸಾ. ೩೯) ; ಜಮಾದಾರನೆಂದರೆ ನನಗಿಂತಲೂ ಮೇಲಿನ ಅಧಿಕಾರಿ (ನಾಪೋಲೀ. ೧೬೨). **ಜಮೇದಾರ :** ೨. ಜಮೇದಾರರು ವಸ್ತುತಃ ದೇಶದ ಸೀಮೆಗಳನ್ನು ಕಾಯತಕ್ಕವರಾಗಿದ್ದಾಗ್ಯೂ, ಮೆಲ್ಲಮೆಲ್ಲಗೆ ಅರಸುತನದ ಅಧಿಕಾರವನ್ನು ನಡಿಸಹತ್ತಿದರು (ಮುಂಬಯಿ. ೫-೨೫೭).

[ ←ಅರ. ಪಾರ. ಹಿಂ. ಮರಾ. ಜಮಾದಾರ್ ]

**ಜಮಾಬಂದಿ** (ನಾ). ಸರಕಾರಕ್ಕೆ ಸಲ್ಲಬೇಕಾದ ಆಯಾ ವರ್ಷದ ಕಂದಾಯ ವನ್ನು ನಿಗದಿ ಪಡಿಸುವುದು; ಕಂದಾಯವನ್ನು ನಿಗದಿಪಡಿಸುವ ವ್ಯವಸ್ಥೆ : ಜಮಾಬಂದಿ ಬೇರೀಜು ವಿಶೇಷವಾಗಿದ್ದ ಸ್ಥಳಗಳಲ್ಲಿ ಬೇರೆ ಒಬ್ಬನನ್ನು . . . ನೇಮಿಸಲ್ಪಡುವುದು (ಗ್ರಾಮಾಕ. ೨) ; ನಿತ್ಯದ ಊಟ ಏನೇ ಇರಲಿ ಜಮಾಬಂದಿಯ ದಿವಸಗಳಲ್ಲಿ ದಿನಕ್ಕೊಂದು ಬಗೆ ಭಕ್ಷ್ಯ, ಖೀರು . . . ಆಗಲೇ ಬೇಕು (ದುಂಬಿಕ. ೫೭).

[ ←ಪಾರ. ಹಿಂ. ಮರಾ. ಜಮಾಬಂದೀ ]

**ಜಮಾಯತ್ತು,** ಜಮಿಯತ್ತು, ಜಮಿಯಿತ್ತು (ನಾ). ೧. ವಿಭಾಗ ; **ಫಿರಕಾ :** ಕೆಲವೂ ಜಮಾಯತ್ತು ಕಣಿವೆ ಕೆಳಗಣ ಸತ್ಯಮಂಗಲ ಮುಂತಾದ ತಾಲೋಕುಗಳ ಸಾಧಿಸುವ ಹಾಗೂ ಕಳುಹಿಸಿ (ಹೈದರ. ೦೧೫). **ಜಮಿಯತ್ತು:** ೨. ಸೈನ್ಯದ ತುಕಡಿ: ಸಾದ್ರಿ ಬೇಹಾರಿ ಕಡೆ ಜಮಿಯತ್ತಿನ ಮೇಲೆ ಬಿದ್ದು ಜಗಳ ಮಾಡಿದಲ್ಲಿ (ರಾಜೇಂದ್ರ. ೯೭). **ಜಮಿಯಿತ್ತು :** ೨. ವಿಜಯನಗರದಿಂದಲು ಕೃಷ್ಣರಾಯರು ಈ ದೇಶಕ್ಕೆ ಜಮಿಯಿತ್ತು ಸಹ ಸವಾರಿ ಬರುವಾಗ್ಯೆ (ಕೆಳದಿ. ೦೩-೭).

[ ←ಅರ. ಪಾರ. ಜಮಾಅತ್ ; ಮರಾ. ಜಮಾತ್ ; ಜಮಿಯತ್ ]

**ಜಮಾಯಿಸು** (ಕ್ರಿ). ೧. ಒಟ್ಟುಗೂಡು ; ಒಂದೆಡೆ ಸೇರು : ಬಹಳ ವಿಷ ಜಮಾಯಿಸಿ ಬಿದ್ದು ಕೊಂಡಿತ್ತು ಆ ಜಾಗದಲ್ಲಿ ! (ಸಾಹೇಬ್. ೧೨). ೨. ಒಟ್ಟುಗೂಡಿಸು ; **ಸೇರಿಸು :** ಆ ಶೀಮೆ ಸಹಾ ಸಾಧಿಸಿಕೊಳ್ಳ ಬೇಕೆಂಬದಾಗಿ ಫವುಜು ಜಮಾಯಿಸಿ ತಯಾರಾಗುತ್ತಾ ಇದ್ದರು (ರಾಜೇಂದ್ರ. ೨) ; ದೊಡ್ಡದಾರರುಗಳು ಸುಗ್ಗಿಕಾಲದಲ್ಲಿ ಒಣಹುಲ್ಲನ್ನು ಜಮಾಯಿಸಿಕೊಂಡಿದ್ದರೆ ಅನುಕೂಲ (ಗ್ರಾಮಾಕ. ೦೦೫). ೩. ಚೆನ್ನಾಗು ; **ಭರ್ಜರಿಯಾಗು :** ಇವೊತ್ತು ಮನೋಹರದಾಸರ ಕೀರ್ತನೆ-ಗಾಯನ ಅಷ್ಟು ಜಮಾಯಿಸಲಿಲ್ಲ (ಶ್ರೀಕಾಂತ. ೨೦೦). ೪. ಹೊಂದಾಣಿಕೆ ಯಾಗು; **ಕೂಡಿಬರು ; ಮೇಳಹೊಂದು.** ೫. (ಕೆಲಸ, ಉದ್ಯೋಗ, ವ್ಯವಹಾರ, ವ್ಯಾಪಾರ ಮೊದಲಾದುವು) ಯಶಸ್ವಿಯಾಗು ; ಸಫಲವಾಗು : (+). [ ಜಮಾ (<ಜಮ್ಮೆ$_2$) + - ಇಸು$_3$ ]

**ಜಮಾವಟ್ಟು** (ನಾ). ಹೊಂದಿಕೆ; ಸಾಮರಸ್ಯ ; ಮೇಳ : ಅಂತೂ ಒಳ್ಳೆ ಜಮಾವಟ್ಟಿನ ಮುಕ್ತಾಯಕ್ಕೆ ತಲೆದೂಗದವನಲ್ಲಿ ಮೂರ್ಖನೆಗೆ ಕಣ್ಣಂ ಮುಚ್ಚಿ ಅರೆನಿದ್ರೆಯಂ ಮಾಡುವನಂತೆ ಅಪ್ರಯತ್ನವಾಗಿ ಸ್ತಬ್ಧವಾಗದವನಲ್ಲಿ . . . ಗುಣವಿಲ್ಲ (ಕಾಂಪೂಕ. ೧೧). [ ←ಹಿಂ. ಜಮಾವಟ್ ]

**ಜಮಾವಣೆ** (ನಾ). ೧. ಒಟ್ಟುಗೂಡಿಸುವಿಕೆ ; ಶೇಖರಣೆ ; ಸಂಗ್ರಹ ; ದಾಸ್ತಾನಂ : ಸಣ್ಣಪುಟ್ಟ ಪಾಳೆಯಗಾರರಿಗೆ ಹೇಳಿಕಳುಹಿಸಿ ಸೈನ್ಯದ ಜಮಾವಣೆಯನ್ನು ಮಾಡಿದರು (ಶ್ರೀರಾಯ. ೧೩೩) : ಸುಲ್ತಾನನು ಈಗ ತನ್ನ ಸೈನ್ಯ ಜಮಾವಣೆ ಮಾಡುತ್ತಿರುವುದು ಚೀನಾದ ಮೇಲೆ ದಂಡೆತ್ತಿ ಹೋಗಲು (ರಾಜ್ಯೋದ. ೧೯೫). ೨. ಹೊಂದಾಣಿಕೆ ; ಹೊಂದಿಕೆ ; ಸಾಮರಸ್ಯ : ಲಯಃ, ಸಾಮ್ಯಂ, ನೃತ್ತಗೀತ ವಾದ್ಯಗಳು, ಆ ವಾದ್ಯಗಳು ಸರಿಯಾಗಿರುವುದಕ್ಕೆ ಹೆಸರು ಅಂದರೆ ಜಮಾವಣೆ (ಸಿದ್ಧಾಂತಿ. ೫೫); ನನಗೂ ಕಲೆಗಾರರಿಗೂ ಜಮಾವಣೆ ಇಲ್ಲ (ಅಲೆಮ. ೧೬೯). [ ಜಮಾ (<ಜಮ್ಮೆ$_2$) + – ಅಣೆ$_4$ ]

**ಜಮಿಯತು** 'ಜಮಾಯತ್ತು' ನೋ.

**ಜಮಿಯಿತ್ತು** 'ಜಮಾಯತ್ತು' ನೋ.

**ಜಮೀನದಾರ** 'ಜಮೀನುದಾರ' ನೋ.

**ಜಮೀನು**(ನಾ). ನೆಲ ; ಭೂಮಿ : ಹೇಮಾವತೀ ನದಿಗೆ ದಕ್ಷಿಣದ ಜಮೀನಿಗೆ ಪಶ್ಚಿಮ (ಎಕ. I, ೧೧-೯ ; 1693) ; ನದಿತೀರದಲಿ ಬಂಜರ ಜಮೀನು. ಗಿಡ ಕಡದು ಸಾಗುವಳಿ ಮಾಡಿ (ಎಕ. VI, ಕೊಪ್ಪ. ೪೮-೩೯ ; 1311) ; ಆ ಬಗ್ಗೆ ಜಮೀನು ಸರಕಾರದ ಜಪ್ತಿ ದಾಖಲಾದ್ದರಿಂದ (ಮೈಆರಿ. ೧೯೪೨, ೩೯-೧೧ ; 1813) ; ಈ ದೇಶದ ಜಮೀನು ಹೆಚ್ಚು ಸಾಗುವಳಿಯಾಗಿಲ್ಲ (ಪ್ರವಾಇ. II, ೪೦) ; ಗ್ರಾಮಗಳನ್ನು ಹಂಚಿಕೊಳ್ಳುವಾಗ ದೇವರಿಗೆ ಮೀಸಲಾಗಿ ಜಮೀನು ತೆಗೆದಿಡಲು ಚರ್ಚೆಯಾಯಿತು (ಹುಟ್ಟಹ. ೪).

[ ←ಪಾರ. ಹಿಂ. ಮರಾ. ಜಮೀನ್ ]

**ಜಮೀನುದಾರ, ಜಮೀನದಾರ, ಜಮೀನ್ದಾರ** (ನಾ). ೧. ವತನದಾರ; ವಂಶಪರಂಪರೆಯಿಂದ ಅಧಿಕವಾದ ಭೂಮಿಯಂ ಒಡೆತನ ಹೊಂದಿದವನಂ : ಭೂತನಾಥಪುರವೆಂಬ ಗ್ರಾಮದಲ್ಲಿ ಹರವಲ್ಲಭನೆಂಬ ದೊಡ್ಡ ಜಮೀನುದಾರನಿದ್ದನು (ಬಂಕಿಮ. ೨೭೪) : ಜಮೀನುದಾರ ಮಕ್ಕಳಿಂದ ಕಾಳು ಕಡಿಗಳನ್ನು ಸ್ವೀಕರಿಸುತ್ತಿದ್ದರು (ರಂಗರೋ. ೫೦). ೨. ಭೂಮಿಯ ಮೇಲ್ವಿಚಾರಣೆಯ ಅಧಿಕಾರಿ. **ಜಮೀನದಾರ :** ೧. ಬಸವಾಪಟಣದ ಹವಾಲದಾರ ಬಾಬಸಾಹೇಬರ ಬಗೆ ಜಮೀನದಾರ ತ್ರಿಯಂಬಕಸಖಜಿ ಪಂಡಿತರ ಕಾರಕಿರದಿಯಲು (ಎಕ. XI, ಹೊಳಲ್ಕೆ. ೬೩-೬ ; 1716) : ಸಾವಿರಾರು ಜಹಗೀರದಾರರು, ತಾಲೂಕುದಾರರು, ಜಮೀನದಾರರು . . . ದುರ್ದಶೆಗೀಡಾಗಿದ್ದರು (ಪ್ರಬಂಧ. ೫೪). **ಜಮೀನ್ದಾರ :** ೧. ಜಮೀನ್ದಾರನ ಮಗಳ ಮದುವೆ ನಡೆದಿತ್ತು (ಜಮೀನ್ದಾ. ೬).

[ ಜಮೀನು + – ದಾರ$_4$. / ಪಾರ. ಹಿಂ. ಮರಾ. ಜಮೀನ್ದಾರ್ ]

**ಜಮೀನುಬಾಬು** (ನಾ). ಜಮೀನಿಗೆ ಸಂಬಂಧಪಟ್ಟದ್ದು ; ಜಮೀನಿನ ಕಂದಾಯಂ: ಜಮೀನುಬಾಬಿನ(Land Revenue)ಜಮಾಬಂದಿಯು ದಿವಾನ್ ಪೂರ್ಣಯ್ಯನವರ ಕಾರಕರ್ದಿಯಲ್ಲಿ ಮೊದಲನೆಯ ವರ್ಷ ೫೯ಕ್ಕೆ ಲಕ್ಷ ರೂಪಾಯಿ ಇದ್ದುದು ವೃದ್ಧಿಯಾಗಿ (ಮಹಾಮಂ. II, ೮೦).

[ ಜಮೀನು + ಬಾಬು$_1$ ]

**ಜಮೀನ್ದಾರ** 'ಜಮೀನುದಾರ' ನೋ.

**ಜಮೀನ್ದಾರಿ** (ನಾ). ೧. ಜಮೀನುದಾರನ ಸ್ವಾಮ್ಯಕ್ಕೆ ಒಳಪಟ್ಟ ಪ್ರದೇಶ,–ಪ್ರಾಂತ: (ಮೈಗೆಜ. IV, ೬೯೦): ವೈಜಾಗಪಟಾಂ ಡಿಸ್ಟ್ರಿಕ್ಟ್ (ಇದಕ್ಕೆ ಸೇರಿದ ಜಮೀನ್ದಾರಿಗಳು ಸಹಾ ಸೇರಿ) ಅತ್ಯಂತ ದೊಡ್ಡದು (ಭೂಗೋಳ.೮೦). ೨. ಜಮೀನುದಾರನ ಹಕ್ಕು,-ಹಂದ್ದೆ. 'ಜಮೀನ್ದಾರಿ ಪದ್ಧತಿ' ಪರಾ. [ ←ಹಿಂ. ಮರಾ. ಜಮೀನ್ದಾರೀ ]

**ಜಮೀನ್ದಾರಿಪದ್ಧತಿ** (ನಾ). ಗುತ್ತಿಗೆದಾರನಿಂದ ಸಾಗುವಳಿ ಮಾಡಿಸಿಕೊಳ್ಳುವ ಭೂಸ್ವಾಮ್ಯ ಪದ್ಧತಿ: ಗೇಣೀಗಾರರಿಂದ ಗೊತ್ತಾದ ಗುತ್ತಿಗೆ ಪಡೆದು ಭೂಸ್ವಾಮ್ಯವನ್ನು ಅನುಭವಿಸುವ ಜಮೀನ್ದಾರಿಪದ್ಧತಿ, ಆ ಪದ್ಧತಿಯನ್ನು ಹಿಡಿದ ವಾದ (Landlordism. ಇಂಕನಿ).

[ ಜಮೀನ್ದಾರಿ + ಪದ್ಧತಿ ]

**ಜಮೀಯತ್** 'ಜಮೀಯತಂ' ನೋ.

**ಜಮೀಯತು, ಜಮೀಯತ್** (ನಾ). (ಧನ, ಧಾನ್ಯ ಮುಂತಾದುವು) ಒಟ್ಟುಗೂಡಿದುದು; ಸಂಗ್ರಹ; ಶೇಖರಣೆ; ದಾಸ್ತಾನು: ಶಿವರಾತ್ರಿ ದಿವಸ ಸೇತುವೆ ಬಾಗಿಲು ಬಳಿಯಿಂದ ಜಮೀಯತನ್ನು ಲೂಟಿಮಾಡಿ ಹೋದರು (ಹೈದರ.೧೦೬); ಕೊಡಗಿನ ರಾಜರಿಗೆ ಪ್ರಾಕು ಸ್ವಲ್ಪ ಜಮೀಯತು ಇತ್ತು. ಈಗ ಅವರಿಗೆ ಜಮೀಯತು ಹೆಚ್ಚಾಗಿ ಇದೆ (ರಾಜೇಂದ್ರ. ೫೫). **ಜಮೀಯತ್:** ಜಮೀಯತ್ ಅಥವಾ ಸಂಚಯ ಎಂದರೆ ಏಸ್ಸಂಗ ಮತ್ತು ದೇವಧ್ಯಾನ (ಇಸ್ಲಾಂಸಂ. ೨೯೭). [ ←ಪಾರ. ಜಮೀಯತ್ ]

**ಜಮುನೆ, ಜಗುನಿ, ಜಗುನೆ** (ನಾ). ಯಮುನೆ ; ಯಮುನಾ ನದಿ : ಜಮುನೆಯ ತೀರದಲ್ಲಿ ರಾಸಕ್ರೀಡೆಯಾಡಿದ ಆ ಮುದ್ದು ಗೋಪಾಲ ಕೃಷ್ಣನ ಮೂರುತಿ ಯಾರ ಮನಸ್ಸನ್ನು ಸಂತೋಷಗೊಳಿಸಲಿಕ್ಕಿಲ್ಲ (ಗಾಳಿಗು. ೭೯). **ಜಗುನಿ :** 'ಜಗುನಿಸಂಗಮ' ಪರಾ. **ಜಗುನೆ :** "ಜಗುನೆಯೆ ಯಮುನೆಯುದಕ್ಕುಂ" (ಕವಿಕಂ. ೯೩) : ಜಗುನೆಯಂ ಪಾಯ್ದು ಮೂಡವೊಗದೆ ಪಯಣಂಬೋಗಿ ಮತ್ಸ್ಯದೇಶಮಂ ಪುಗುತಂದರ್ (ಪಂಪಭಾ. ೮-೫೦ವ); ಮೃಗಮೆಲ್ಲಂ ಕೃಷ್ಣಮೃಗಂ ಖಗಮೆಲ್ಲಂ ಕೋಗಿಲೆಯೆ ನದೀನದಮೆಲ್ಲಂ ಜಗುನೆಯೆ (ವರ್ಧಪು. ೬-೩೦) : ಯತ್ವಕ್ಕೆ ಜತ್ವಂ– ಯಮುನಾ–ಜಗುನೆ (ಶಮದ. ೨೫೯ ಪ್ರಯೋ) ; ಬಡಬಾಸೆಯೆಂಬ ಜಗುನೆಯೊಳೊಡವೆರೆಯಲ್ಕುಚಹಿಮಾದ್ರಿಯಿಂದ್ಯೆದುವ ಬಾಂಗಡಲೆನೆ ಹಿಮಾಂಬು . . . ಸುರಿವುತಂ ಸೊಗಯಿಸುಗುಂ (ರಾಜಶೇ. ೧೧-೮೨).

ಜಗುನಿಯಯ್ಯ=ಯಮುನೆಯ ತಂದೆ; ಸೂರ್ಯ: "ಜಗುನಿಯಯ್ಯಂ ಜವನ ತಂದೆ" (ಕಶರ. ೩೮). ಜಗುನೆಯ ಪಿರಿಯ=ಯಮುನೆಯ ಅಣ್ಣ; ಯಮ: "ಅಜಂ . . . ಜಗುನೆಯ ಪಿರಿಯಂ–ಈ ೫ ಯಮಂಗೆ ಪೆಸರ್" (ಕಶಸಾ. ೩-೩೫). [ <ಸಂ. ಯಮುನಾ ]

**ಜಮೆ$_1$** 'ಜವಿ$_1$' ನೋ.

**ಜಮೆ$_2$, ಜಮಾ** (ನಾ). ೧. ಆಯ ; ಆದಾಯ ; ಹುಟ್ಟುವಳಿ. ೨. ಸಂದಾಯ : ವಸೂಲಾದ ಹಣದ ಮೂರು ಪಾಲಲ್ಲಿ ಎರಡು ಪಾಲು ಸರ್ಕಾರಕ್ಕೆ ಜಮೆಯಾಗಿ ಉಳಿದ ಒಂದು ಪಾಲು . . . ವಕೀಲರಿಗೆ ಫೀಜಾಗಿ ಸಲ್ಲುತ್ತಿತ್ತು(ಮಹಾಮಂ. II, ೪೫). ೩. ಸಂಗ್ರಹ ; ಶೇಖರಣೆ : ಬೇರೆ ಕೆಲವು ಚೀಲಗಳಲ್ಲಿ ರಕ್ತದೊಳಗಿಂದ ನೀರು ಬಂದು ಜಮೆಯಾಗುತ್ತದೆ (ಮುಂಬಯಿ. ೫-೧೬೯) : ಅಂಗರೆಗಂತೂ ಕಟ್ಟಿಗೆ ಜಮೆ ಮಾಡುವ ಕೆಲಸ ವಿಶೇಷವಾಯಿತು (ರಕ್ತರೂ. ೪೭). ೪. ಕೂಡಿದುದು ; ಸೇರಿದುದು ; ಸೇರ್ಪಡೆ : ತಾಯೆ ಮರೆ ಚಿಂತೆಯನು ಕ್ಷತ್ರಿಯರಾಉಲುಹನಡಗಿಸದಿರಲು ತಾಪಸರೊಳಗೆ ಜಮೆಯಲ್ಲ (ಪಟುಭಾ. ೭-೨೬) : ಕಳೆಯ ಪಡೆಯದಡಾನು ಶಿಷ್ಯರವೊಳಗೆ ಜಮೆಯಲ್ಲೆಂದು ಶಪಥವ ತಳೆದನಾಹಾ ಕೇಳು ಗೌತಮನಾಗ ಸಂತಸದಿ (ಮುಲ್ಲಾಶಾ. ೩-೫೪). **ಜಮಾ :** ೧. 'ಜಮಾಖರ್ಚು' ಪರಾ. [ ←ಅರ. ಹಿಂ. ಮರಾ. ಜಮಾ ]

**ಜಮೇದಾರ** 'ಜಮಾದಾರ' ನೋ.

**ಜಮ್ಮ** (ನಾ). ಅರಸನಿಗೆ ಸೇವೆ ಸಲ್ಲಿಸಿದುದಕ್ಕಾಗಿ, ಅರಸನಂ ಕೊಟ್ಟ ಭೂಮಿ : ದೊರೆಗಳಿಂದ ಜಮ್ಮ ಉಂಬಳಿಗಳನ್ನು ಪಡೆದವರು ಅವರ ಸೇವೆ ಮಾಡಬೇಡವೆ (ಹುಲಿಹಾ. ೯೨) ; ನಮ್ಮ ಕೊಡಗಿದು ಜಮ್ಮದು ; ಜಮ್ಮ ಕೊಡಗಿದು ನಮ್ಮದು (ಕನ್ನಬಾ. ೧೧೧-೧೧).

ಜಮ್ಮದವರು = ಅರಸನಿಂದ ಉಂಬಳಿಯನ್ನು ಪಡೆದವರು : ಜಮ್ಮದವರೆಲ್ಲ ತೋಕು ಕತ್ತಿಯಾಗಿ ಕರೆ ಕೊಟ್ಟೊಡನೆ ಪಡೆಗೆ ಹೋಗಬೇಕಂತೆ (ಹುಲಿಹಾ. ೯೩). 'ಜಮ್ಮಗಾರ' ಪರಾ. [ ←ಕೊಡ. ಜಮ್ಮ ]

**ಜಮ್ಮಗಾರ** (ನಾ). ಜಮ್ಮವನ್ನು ಪಡೆದವನು ; ಉಂಬಳಿದಾರ : ಆಯಾ ಭೂಮಿ ಮನೆ ಜಮ್ಮಗಾರರಿಗೆ ಕೊಡಿಸಿ ನಿರ್ಭಯದಿಂದ ನಿಮ್ಮ ನಿಮ್ಮ ಮನೆಯಲ್ಲಿ ಒಕ್ಕಲಾಗಿ ಬಾಳುತ್ತ ಇರಿ ಎಂದು ಅಭಯವನ್ನು ಕೊಟ್ಟು (ರಾಜೇಂದ್ರ. ೨೦). [ ಜಮ್ಮ + – ಗಾರ (< – ಕಾಱ) ]

**ಜಮ್ಮಿ** (ನಾ). ಒಂದು ಬಗೆಯ ಮರ: ಜಮ್ಮಿ (ತಿರಘಳ). – ಮಧ್ಯಮ ವೃಕ್ಷ. ಕಟ್ಟಿಗೆ ಸಾಧಾರಣ. ಬೀಜಗಳ ಯೆಣ್ಣೆ ಔಷಧಿಯು (ಕಭಾಗ. ೩೯). [-? ]

**ಜಮ್ಮಿಟ್ಟಿಗೆ** 'ಜಂಬಿಟ್ಟಿಗೆ' ನೋ.

**ಜಮ್ಮು** 'ಜೊಂಪು$_1$' ನೋ.

**ಜಯ** (ನಾ). ೧. ಗೆಲ್ಲುವುದು ; ಗೆಲ್ಲ ; ಗೆಲವು : "ಜಯಮೆನೆ ಗೆಲ್ಲಂ" (ಶಕುನಿ. ೩೫) ; ಜಯಮೆನಗಪಜಯಮಿದು ಯಶಮಯಶಮೆಂಬಿದಂ ಬಗೆಯದೆ ನಿಶ್ಚಯಿಸಿ ಕಲಹಮನೆ . . . ಕಲಿ ಸುಯೋಧನಂ ಪೊಱಮಟ್ಟಂ (ಪಂಪಭಾ. ೧೦-೨೭) ; ನಿನಗಭಿವೃದ್ಧಿಯಕ್ಕೆ ಶುಭಮಕ್ಕೆ . . . ಜಯಮಕ್ಕಜರಾಮರಮಕ್ಕೆ (ಕಇಳ. ೯೭-೪-೪೩ ; 13ನೆಯ ಶತ). ೨. ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ; ಆತ್ಮನಿಗ್ರಹ ; ಇಂದ್ರಿಯ ಸಂಯಮ : ಜಯಮೆಂಬುದು ಕರ್ಣತ್ವಗಕ್ಷಿ ಜಿಹ್ವಾ ಘ್ರಾಣೇಂದ್ರಿಯಂಗಳ ವಿಷಯಕಮಪ್ಪ ಶಬ್ದ ಸ್ಪರ್ಶ ರೂಪ ರಸ ಗಂಧಂಗಳೊಳಗಾಸಕ್ತಿಯಿಲ್ಲದುದು (ಚಾವುಂಪು. ೩೧೫-೨೦). ೩. ಆಕರ್ಷಕವಾದದು; ಮನೋಹರವಾದುದು: "ಜಯಂ ಮಂಜುಳಂ . . . ರಮ್ಯರುಚಿರಂ ಪ್ರವೇಕಮೆನೆ ಸೌಮ್ಯಕ್ಕೆ ನಾಮಮಕ್ಕುಂ" (ಮಂಗರಾ. ೧೨೭-೨). ೪. ಗೆಲವನ್ನು ತಂದುಕೊಡುವ ಸೂತ್ರ: (+). ೫. ಪ್ರಭವ ಮೊದಲಾದ ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತೆಂಟನೆಯದು : ವರುಷವೇ ಪ್ರಭವ ವಿಭವ ಶುಕ್ಲ . . . ವಿಜಯ ಜಯ ಮನ್ಮಥ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೦) . ೬. ಅರ್ಜುನ : ಅನುಪಮಮಪ್ಪ ದಿಗ್ವಿಜಯದಿಂ ಜಯನೊಳ್ ಪಡಿಯಾಗಿ (ಎಕ. V, ಬೇಲೂರು. ೦೭-೭೦ ; 1136). ೭. ವೈಕುಂಠದ ದ್ವಾರಪಾಲಕರಲ್ಲಿ ಒಬ್ಬ : ಜಯನ ವಿಜಯನ ದೈತ್ಯಜನ್ಮವನು ಈತನೊದೆದನು(ಕುಮಾವ್ಯಾ. ೯-೫೪). ೮. ಮಹಾಭಾರತ ಗ್ರಂಥ: ಭಾರತಕ್ಕೆ ಜಯವೆಂಬ ಮತ್ತೊಂದು ಹೆಸರಿನಿಂದ ಕರೆಯುತ್ತಿದ್ದರು (ವಾರಾಕ್ಕ. ೧೭) ; ನಮಿಸಿ ನಾರಾಯಣನ ನರನ ಪುರುಷೋತ್ತಮನ ವ್ಯಾಸ ವಾಗ್ದೇವಿಯರ ಬಳಿಕ ಪೇಳ್ವುದು ಜಯವ (ವಚಭಾ. ೧).

**ಜಯಜಯ** (ದ್ವಿರುಕ್ತಿ): ಹರಿಗರ್ಭ್ಯಮನಿತ್ತರ್ ಜಯಜಯಾನ್ವಿತರ್ ಬ್ರಹ್ಮಾದ್ಯರ್ (ಜಗವಿ. ೦-೫೩) ; ಪುರಜನಂ ಬೆಱಗಾಗಿ ನೋಡುತ್ತಿರಿದರಿದು ವಿಪರೀತವೆನುತೆಲ್ಲರು ಜಯಜಯಧ್ವನಿಗಳಿಂ(ಬಸವು. ೩೩-೪೦) ; ಸುಮನಸರು ಜಯಜಯಯೆನಲು (ತೊರರಾ. ೧-೭-೫೫). **ಜಯಜಾಯಾಶರಣ** = ಗೆಲುವೆಂಬ ಸ್ತ್ರೀಗೆ ಆಶ್ರಯವಾದವನು ; ಒಂದು ಬಿರುದು : ಜಯಜಾಯಾಶರಣಂ ರಣಕ್ಷಿತಿಹತಕ್ಷತ್ರಂ(ಎಕ. VI, ಚಿಕ್ಕಮ. ೧೬೧-೫೫ ; 1137). **ಜಯದುತ್ತರಂಗ** = ಅನೇಕ ಗೆಲವಿನಿಂದ ಶ್ರೇಷ್ಠನಾದವನು ; ಒಂದು ಬಿರುದು : ಸಮಸ್ತ ಕೊಂಗುಳಿವರ್ಮ್ಮ ಧರ್ಮ ಮಹಾರಾಜಾಧಿರಾಜಂ ಕೋಳಾಳಪುರವರೇಶ್ವರಂ ನನ್ದಗಿರಿನಾಥಂ ಜಯದುತ್ತರಂಗಂ ಗಂಗಚೂಡಾಮಣಿ (ಸೌಇಇ. XX, ೩೫-೩ ; 1055). **ಜಯಧಾಮ** = ಜಯಕ್ಕೆ ಆಶ್ರಯನಾದವನು ; ಸದಾ ಜಯಶಾಲಿಯಾದವನು ; ಒಂದು ಬಿರುದು : ಚಟ್ಟನೃಪನೊಳ್ಕಹಿವೋದ್ದಾಮತೆಯಂ ಪಡೆದಂ ಜಯ[ಧಾ]ಮಂ ವಿಬುಧತ[ರ]ದಾನಧರ್ಮ್ಮಕಂ ಬಮ್ಮಂ (ಸೌಇಇ. XX, ೩೦-೭ ; 1044). **ಜಯಮಿತ್ರ**=ಗೆಲುವಿನ ಗೆಳೆಯ; ಜಯಶಾಲಿ ; ಒಂದು ಬಿರುದು : ಭಾನುದಾಸನ್ ಜಯಮಿತ್ರನ್ ಊನರ ವೈಶಿಕನ್ (ಮ್ಯಾಆರಿ. ೦೯೩೯ ; ೨೨-೯ ; ೩ನೆಯ ಶತ). **ಜಯಮೂಲಸ್ತಂಭ** = ಜಯಕ್ಕೆ ಆಧಾರಸ್ತಂಭದಂತಿರುವವನು ; ಒಂದು ಬಿರುದು : ಜಿತವೀರಲಕ್ಷ್ಮೀ ಆಶ್ರಿತಭಕ್ತಮುಲಾಪಕರ್ಷಣ ಭೂಮಿ ಸಂಚರಣ ಜಯಮೂಲಸ್ತಂಭಂ (ಎಕ. III, ಮಂಡ್ಯ. ೭೮-೪ ; 1022). [ ಸಂ. ]

**ಜಯಂತ** (ನಾ). ೧. ಇಂದ್ರನ ಮಗ : "ಇಂದ್ರನ ಮಗನಂ ಜಯಂತನೆಂಬುದು" (ಹಲಾಯು. ೦೦-೫೫) ; ಅನಿರುದ್ಧಂ ನಳಕೂಬರಂ ವರ ಜಯಂತಂ ನೋಡೆ ಸಾಮಾನ್ಯರೇ (ಹಮ್ಮೀರ. ೨-೭೪). ೨. ದಶರಥನ ಮಂತ್ರಿಗಳಲ್ಲಿ ಒಬ್ಬ : ಇರಿಸಿ ದೃಷ್ಟಿ ಜಯಂತರನು ಪುರಕರಸ ಗಥ ಪೇಱಿದನು (ತೊರರಾ. ೧-೦೭-೦೩). ೩. [ಜೈನ]ಹದಿನಾಲ್ಕು ವಿಮಾನಗಳಲ್ಲಿ ಒಂದು: ಸುರಾಧೀಶರ್ಜನಾಧೀಶಂ ಮನದಿಂ ಬೇಗಮೆನಲ್ ಜಯಂತ ಶಿಬಿಕಾಸ್ಕಂಧರ್ವಿಚಿತ್ರಾನಕಧ್ವನಿಗಳ್ ಘೂರ್ಣಿಸೆ ತಂದರಾರೊ ಬೆಸಕೆಯ್ಯೆಪೂರ್ಣ್ಯಸಾಮರ್ಥ್ಯದಿಂ (ಮಲ್ಲಿಪು. ೦೩-೦೭೭). 'ವಿಮಾನ' ಪರಾ. ೪. [ಸಂಗೀತ] ಒಂದು ರಾಗದ ಹೆಸರು. [ ಸಂ. ]

**ಜಯಂತಿ** (ನಾ). ೧. ಬಾವುಟ ; ಧ್ವಜ. ೨. ಗತಿಸಿದ ವಿಭೂತಿಪುರುಷರ ಜನ್ಮದಿನ,–ಹುಟ್ಟುಹಬ್ಬ. 'ಕೃಷ್ಣಜಯಂತಿ' ಪರಾ. ೩. ಒಂದು ಬಗೆಯ ಗಿಡ; ನೇತ್ರಮೂಲಿ : "ನೇತ್ರ ಮೂಲಿ ಜಯಂತಿ" (ಮಂಗರಾ. ೩೯-೨೭). ೪. ದುರ್ಗೆ. ೫. ಇಂದ್ರನ ಮಗಳು. [ ಸಂ. ಜಯಂತೀ ]

**ಜಯಕಾರ** (ನಾ). ಜಯವಾಗಲಿ ಎಂಬ ಘೋಷ : ಉದ್ದಕ್ಕೂ ಜನತಿಲಕರಿಗೆ ಜಯಕಾರ ಮಾಡುತ್ತಿದ್ದರು (ಸ್ವಾವೀರ. ೮೫).

**ಜಯಜಯಕಾರ**(ದ್ವಿರುಕ್ತಿ): ಜನರ ಜಯಜಯಕಾರ ಧ್ವನಿ ಮುಗಿಲನ್ನು ಮುಟ್ಟುತ್ತಿತ್ತು (ರೂಢಿ). [ ಸಂ. ]

**ಜಯಗಂಟೆ** (ನಾ). ಕಂಚಿನ ತಟ್ಟೆಯಾಕಾರದ ಒಂದು ವಾದ್ಯ; ಜಾಗಟೆ: ಗಂಟೆ ಜಯಗಂಟೆ ತಾಳ ಕೌಸಾಳ ಮೊದಲಾದ ವಾದ್ಯವನಱಿವುದು ಪ್ರಸಾದಲಿಂಗದಲ್ಲಿಯ ಆಚಾರಲಿಂಗ (ಆದವ. ೬-೦೨): ಪಾರಿಶ್ವನಾಥಸ್ವಾಮಿ ಬಸದಿಗೆ . . . ಹಂಪ್ಪಣ್ಣ ಕೊಟ್ಟ ಜಯಗಣ್ಟೆ (ಎಕ. XVI, ಪಾವುಗ. ೦೦೫ ; ?). 'ಜೇಗಂಟೆ' ಪರಾ. [ <ಜಯಘಂ ]

**ಜಯಗಜ** (ನಾ). ರಾಜನು ದಿಗ್ವಿಜಯಕ್ಕೆ ಹೊರಡುವಾಗ ಏರುವ ಆನೆ: ಕಟದ್ವಂದ್ವದಿಂ ದಾನಧಾರಾಸಾರಂ ಕೈಗಣ್ಮೆ ಕಣ್ಗೊಪ್ಪುವ ಜಯಗಜಮಂ ಲೀಲೆಯಿಂದೇಱಿ (ಆದಿಪು. ೦೩-೪೩). [ ಜಯ + ಗಜ ]

**ಜಯಗಾಥ** (ನಾ). ಗೆಲವಿನ ಹಾಡು ; ಜಯಗೀತೆ ; ವಿಜಯ ಸೂಚಕವಾದ ಗೀತೆ: ಅಯೋಧ್ಯೆಯ ಜನಂ ತೇಂಕಾಡುತಿದೆ . . . ಜಯಗಾಥಮಂ ಪಾಡಿ (ಶ್ರೀರಾಮಾ. ೩೨೦-೫೯). [ ಜಯ + ಗಾಥ ]

**ಜಯಗಾಥೆ**(ನಾ). = ಜಯಗಾಥ : ಬಂದುದೊಯ್ಯೊಯ್ಯನೆಯೆ ಕಿವಿಗೆ . . . ಜಯಗಾಥೆಯ ಮಹಾನಿನಾದಂ (ಶ್ರೀರಾಮಾ. ೮೭೫-೦೯೯). [ಜಯ+ಗಾಥೆ]

**ಜಯಘಂಟೆ** (ನಾ). ೧. ವಿಜಯ ಸೂಚಕವಾಗಿ ಬಾರಿಸುವ ಗಂಟೆ : ಕಣದ ಮಧ್ಯದಿ ಕೋಟಿ ರಕ್ಕಸಗಣವು ಬಿದ್ದರೆ ಕುಱುಹಿಗೋಸುಗ ಘಣಲು ಗುಟ್ಟುವುದೊಮ್ಮೆ ರಾಮನ ಬಿಲ್ಲ ಜಯಘಂಟೆ (ಕಾಶಿರಾ. ೨೨-೪೭). ೨.= ಜಯಗಂಟೆ: ಬಣ್ಣಕೆ ೩ ಫಲಂ ೬ ಜಯಘಂಟೆ ೧ ಫಲಕಾಳೆ ೩ ಫಲ ೧೫ (ಮ್ಯಾಆರಿ. ೦೯೪೭, ೩೮-೦೭ ; 1032) ; ಅಡಿಗಡಿಗೆ ಜಯಘಂಟೆಯಂ ಹೊಯಿದೆಡೆಗೆಡೆಗೆ ಸಾಱುತ್ತ ಶರಣನು ಮಠಕೆ ನಡೆತಂದು (ಬಸವು. ೨೦-೦೦). [ ಜಯ + ಘಂಟೆ ]

**ಜಯಘೋಷ** (ನಾ). ೧. ಗೆಲವನ್ನು ಸಾರಿ ಹೇಳುವ ಘೋಷ : (+). ೨. ಮಂಗಳವನ್ನು ಸಾರಿ ಹೇಳುವ ಘೋಷ: ಅವರನ್ನು ಜಯಘೋಷದೊಂದಿಗೆ ಸ್ವಾಗತಿಸಲಾಯಿತು (ರೂಢಿ). [ ಜಯ + ಘೋಷ ]

**ಜಯಜಯವಂತಿ** (ನಾ). [ಸಂಗೀತ] ಒಂದು ರಾಗದ ಹೆಸರು : ಜಯ ಜಯವಂತಿ ರಾಗವು ಪಾರ್ಶ್ವವಾಯುವನ್ನು ಗುಣಪಡಿಸುವುದೆಂಬ ನಂಬಿಕೆಯಿದೆ (ಭಾರದ. ೩೪೪). [ ←ಹಿಂ. ಮರಾ. ಜಯಜಯವಂತೀ ]

**ಜಯಧ್ವಜ** (ನಾ). ೧. ವಿಜಯವನ್ನು ಸೂಚಿಸುವ ಪತಾಕೆ,-ಬಾವುಟ: ವಿರಚಿತ ತೋರಣವಾಳಾಕರಮುತ್ತಂಭಿತ ಜಯಧ್ವಜೋತ್ಕರಮೆನಿಪಾ ಪುರಮಂ . . . ಪೊಕ್ಕಂ (ಚಂದ್ರಪ್ರ. ೬-೪೨). ೨. ಕಾರ್ತವೀರ್ಯಾರ್ಜುನನ ಮಗ. [ ಜಯ + ಧ್ವಜ ]

**ಜಯಧ್ವನಿ** (ನಾ). ಜಯವಾಗಲಿ ಎಂಬ ಘೋಷಣೆ; ಜಯಜಯಕಾರ: ಭೋರ್ಗರೆವಷ್ಟತೂರ್ಯರವವಾರ್ಗೆ ಜಯಧ್ವನಿಯಾರ್ಗೆ . . . ಉಲಿವ ವಂದಿಗಳಾರ್ಗೆ (ಶಾಂತಿಪು. ೬-೧೫). [ ಜಯ + ಧ್ವನಿ ]

**ಜಯಧ್ವಾನ** (ನಾ). = ಜಯಧ್ವನಿ : ಸುರಯೋಗೀಂದ್ರಸಮಾಜಸಂಸ್ತವ ಜಯಧ್ವಾನಂ (ಜಗವಿ. ೧-೪೬). [ ಜಯ + ಧ್ವಾನ ]

**ಜಯನ**(ನಾ). ೧. ಗೆಲ್ಲುವುದು ; ಗೆಲವು ; ಜಯ. ೨. ಯಂದ್ಧ ಕವಚ. ೩. ಆಯುಧ ; ಶಸ್ತ್ರಾಸ್ತ್ರ. 'ಜಯನಶಾಲೆ' ಪರಾ. [ ಸಂ. ]

**ಜಯನಶಾಲಿಕೆ** (ನಾ). = ಜಯನಶಾಲೆ : ವಿಪುಳಪಾತಾಳನಿವಾಸಾಶಂಕೆಯ ನೀವುದು ನಿಚಿತಾಶೇಷಾಸ್ತ್ರಾಳಿ ಜಯನಶಾಲಿಕೆಯದಱೊಳ್ (ಚಂದ್ರಪ್ರ. ೧-೦೪೯). [ ಸಂ. ಜಯನಶಾಲಿಕಾ (ಜಯನ + ಶಾಲಿಕಾ) ]

**ಜಯನಶಾಲೆ** (ನಾ). ಆಯುಧಶಾಲೆ ; ಶಸ್ತ್ರಾಗಾರ: "ಅಸ್ತ್ರಪ್ರಸರಾಗಾರಂ ತಾಂ ಜಯನಶಾಲೆ" (ವಸ್ತುಕೋ. ೪೮-೦೯) : ಅರಮನೆಯೊಳ್ ಕಿರ್ಚೆ ದೆರ್ೊಡುಟಿದ ಮಕ್ಕಳೆಲ್ಲಂ ಭಂಡಾರಂಗಳುಮಾನೆಗಳುಂ ಕುದುರೆಗಳುಂ ಜಯನಶಾಲೆ [ಪಾಠಾಂ. ಜಿವಣಸಾಲೆ, ಜೈವಣಶಾಲೆ]ಯುಮಂ ಕೈಕೊಂಡರ್ (ವಡ್ಡಾ.ರಾ. ೧೬೫-೨) ; ಅಲ್ಲಿಯ ಸೌಂದರೀಜನಂ . . . ಲೀಲೆಯೊಳೊಪ್ಪಿ ತೋಱುಗುಂ (ಪಂಚತಂ. ೧೪-೮). [ ಜಯನ + ಶಾಲೆ$_3$ ]

**ಜಯನಸಾಲೆ** (ನಾ). = ಜಯನಶಾಲೆ : ಮನಸಿಜನ ಜಯ[ನ]ಸಾಲೆಯು ಮೆನೆ ಸೊಗಯಿಸುವುವು ಮನೋಹರೇಕ್ಷುವನಂಗಳ್ (ಸುಕುಮಾ. ೯-೫೫). [ ಜಯನ + ಸಾಲೆ$_3$ ]

**ಜಯನಿನದ** (ನಾ) =ಜಯಧ್ವನಿ: ಜಯನಿನದಂ ಸುರದುಂದುಭಿಚಯನಿನದಂ . . . ಪರ್ವುತಿರೆ (ಆದಿಪು. ೧೪-೧೪೬) ; ಜಯನಿನದವಳ್ಳಿಱಿಯೆ . . . ರಥಸಂಚಯವ ವೆಂಠಣಿಸಿದರು (ಕುಮಾ.ಭೀ. ४-೯೨). [ ಜಯ + ನಿನದ ]

**ಜಯಪತಾಕೆ** (ನಾ). = ಜಯಧ್ವಜ ೧ : ಕಳಿಸಿರಿವನನು ಮೊದಲು ದೂರದ ಹಿಮಾಲಯಕೆ ಅಲ್ಲಿಯೇ ಹಿಡಿದಿರಲಿ ಜಯಪತಾಕೆ (ನೆಲಮು. ೩೯-೧೧). [ ಜಯ + ಪತಾಕೆ ]

**ಜಯಪತ್ರ** (ನಾ). ಜಯವನ್ನು ಘೋಷಿಸುವ ದಾಖಲೆ ಪತ್ರ; ವಾದದಲ್ಲಿ ಗೆದ್ದವನಿಗೆ ಆತನ ವಿಜಯವನ್ನು ಒಪ್ಪಿ ಬರೆದು ಕೊಡುವ ಪತ್ರ : ಪರವಾದಿಗಳ ಮೊಗಂಗಳ್ ಕರಿಂಕುವರಿದಂತೆ ಕಂದಿ ಕುಂದಿರೆ ಖಚರೇಶ್ವರ ನೀಯೆ ಪಡೆದನತ್ಯಾದರದಿಂ ಜಯಪತ್ರಮಂ ಸ್ವಯಂಬುದ್ಧಬುಧಂ (ಆದಿಪು. ೨-೨೩) ; ರಾಮಯ್ಯ[ಂ]ಗಳಿಗೆಲ್ಲರುವಱಿಯೆ ಜಯಪತ್ರಮಂ ಕೊಟ್ಟಂ (ಎಇ. V, ೨೪೯-೫೦ ; 1200) ; ಏಕಾಂತರಾಮನು ಭೂತಳೇಶನ ಕೈಯಲಾ ಜಯಪತ್ರಮಂ ಕೊಡಲು (ಬಸವು. ೫೨-೪೬). [ ಜಯ + ಪತ್ರ ]

**ಜಯಪತ್ರಿಕೆ** (ನಾ). ಪ್ರಶಸ್ತಿಲೇಖ : ಸರ್ವರಿಂ ಪೂಜಿತನಾಗಿ . . . ಅಲ್ಲಲ್ಲಿ ತನ್ನ ಶಾಸನಗಳನ್ನಿಟ್ಟು ವೃಷಭಾದ್ರಿಯೊಳ್ ತನ್ನ ಜಯಪತ್ರಿಕೆಯನ್ನು ಸ್ಥಾಪಿಸಿದನು (ಪುರುಚ. ೧೬೫). [ ಜಯ + ಪತ್ರಿಕೆ ]

**ಜಯಪ್ರಮೋದ** (ನಾ). ೧. ಗೆಲವಿನ ಸಂತೋಷ. ೨. ವಿಜಯೋತ್ಸಾಹ ವುಳ್ಳವನು : ಖರನಂ ಮುರಾರಿ ಸಂಹರಿಸೆ ಜಯಪ್ರಮೋದಸುಮನರ್ ಸುಮನರ್ ಸುಮನಸ್ಸುವೃಷ್ಟಿಯಂ ಸುರಿಯೆ (ಜಗವಿ. ४-४೨). [ಜಯ+ಪ್ರಮೋದ]

**ಜಯಬಾಡಿ** (ನಾ). ಒಂದು ಬಗೆಯ ಆಯುಧ : ಬಿಲ್ಲು ನಾರಾಚ . . . ಜಯಬಾಡಿ ಶೃಂಗಾರ ತೊಡುಪೂ ಸಂಣಚಂದ್ರಾಯುಧಾ ಚಿಲುತಲಿ ಮೊದಲಾದಾ ಬತ್ತೀಶಾಯುಧಾ (ಎಕ. XV, ಗುಬ್ಬಿ.೭೪-೨೨ ; 1672). [ ? ]

**ಜಯಭೇರಿ** (ನಾ). ಜಯವನ್ನು ಘೋಷಿಸುವ ಭೇರಿ.

**ಜಯಭೇರಿಹೊಡೆ** = ಜಯವನ್ನು ಗಳಿಸು ; ಜಯಶಾಲಿಯಾಗು ; ಯಶಸ್ವಿಯಾಗು: ಹೊಸದೊಂದು ಬಿಲ್ಲುಗಾರಿಕೆಯನು ತೋರಿದೆ ಮುಗ್ಧೆಯೆ ಜಯಭೇರಿ ಹೊಡೆದೆ (ಇಂಚಾಪ. ೦೫೦-೪೩). [ ಜಯ + ಭೇರಿ ]

**ಜಯಮಂಗಲ**, ಜಯಮಂಗಳ (ನಾ). ೧. ಗೆಲವಿನ ಹಬ್ಬ ; ವಿಜಯೋತ್ಸವ: ಆಲಿ ರಂಗವಲಿ ಬದ್ದವಣಂ ಜಳದರವವಮಾಗೆ ಜಯ ಮಂಗಲ[ಪಾಠಾಂ. ಳ] ಸೂಚಕವಮಾದುದತನುಗಾ ಘನಸಮಯರೆ (ಚಂದ್ರಪ್ರ. ४-४೨). ೨. ಪಟ್ಟದಾನೆ : (+). **ಜಯಮಂಗಳ** : ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ೩. ಗೆಲವೂ ಶುಭವೂ ಆಗಲೆಂಬ ಹಾರೈಕೆಯ ಮಾತು : ಜಯಮಂಗಳಂ ನಿತ್ಯಶುಭಮಂಗಳಂ (ಪುರಂದ. ೫-೧೫೬ ಪಲ್ಲವಿ). [ ಜಯ + ಮಂಗಲ ]

**ಜಯಮಂಗಳ** 'ಜಯಮಂಗಲ' ನೋ.

**ಜಯಮತ್ತ** (ಗು). ಗೆಲವಿನಿಂದ ಮದಿಸಿದ,-ಅಹಂಕಾರಗೊಂಡ : ಜಯಮತ್ತ ರುದ್ರಮಾರುತಿಯ ಕಂಡೆ ! (ಕೋಗಿಲೆ. ೩೯-೧೮). [ ಜಯ + ಮತ್ತ$_3$ ]

**ಜಯಮುಖ** (ನಾ). ಗೆಲ್ಲುವ ಉಪಾಯ ; ವಿಜಯದ ಮಾರ್ಗ : ಬೊಮ್ಮನ ಕೇಳ ಬಂದೆವೆ ನಾವು ನಾಳಿನ ಕಾಳಗದ ಜಯಮುಖವ ಬೆಸಗೊಳ ಬಂದೆವು (ಕುಮಾ.ದ್ರೋ. ೮-೬೪). [ ಜಯ + ಮುಖ ]

**ಜಯಯಾತ್ರೆ** (ನಾ). ದಿಗ್ವಿಜಯಕ್ಕಾಗಿ ಮಾಡುವ ಪ್ರಯಾಣ ; ದಂಡಯಾತ್ರೆ : ಆ ರಾಜೇಂದ್ರನ ಜಯಯಾತ್ರಾರಭಸದೊಳೊಗೆದ ಸೈನ್ಯ ರಜವರಿಭೂಭೃನ್ನಾರಿಯರ ಕಣ್ಗಳೊಳ್ ಕಣ್ಣೀರಂ ದೂರದೊಳೆ ಮಾಟ್ಟುದು (ಚಂದ್ರಪ್ರ. ೬-೩೯). [ ಜಯ + ಯಾತ್ರೆ ]

**ಜಯರತ್ನಾಕರ** (ನಾ). ಗೆಲವಿನ ಸಾಗರದಂತಿರುವವನಂ ; ಸದಾ ಜಯಶಾಲಿಯಾದವನು : ಔಕಿ ತಲೆವರಿಗೆಯಲಿ ತೆರಳಿದನೇಕ ಸುಭಟರ ಸೀಳಿ ಜಯರತ್ನಾಕರನು ಕಲಕಿದನು ಪಾಂಡವ ಸೈನ್ಯಸಾಗರವ (ಕುಮಾ.ದ್ರೋ. ೨-೩೭). [ ಜಯ + ರತ್ನಾಕರ ]

**ಜಯಲಕ್ಷ್ಮಿ** (ನಾ). ಗೆಲವಿನ ಸಿರಿ; ವಿಜಯದ ಅಧಿದೇವತೆ: ವರರನಱಸಲ್ಕೆ ಸೊಯಂಬರದ ಕುಡುಗೂಸಿನಂತಿರ್ದರುಮಂ ಜಯಲಕ್ಷ್ಮಿ ಬಯಸಿ ನೋಡಿದ ಳಾಗಳ್ (ಶಾಂತಿಪು. ४-೪೬). [ ಜಯ + ಲಕ್ಷ್ಮಿ ]

**ಜಯಲಿಂಗ** (ನಾ). [ಜೈನ] (?) : ಸ್ತ್ರೀಲಿಂಗಂ ಸರಸ್ವತಿಲಿಂಗಮೆಂದುಂ ಪತಿವ್ರತಲಿಂಗಮೆಂದುಂ ಕೇಶಪ್ರತಿಲಿಂಗಮೆಂದುಂ ಅಲ್ಲಿ ಜಯಲಿಂಗಮೆಂದುಂ ಚತುರ್ವಿಧಮಕ್ಕುಂ . . . ಅಲ್ಲಿ ಜಯಲಿಂಗಂ ತೃಪ್ತಿಲಕ್ಷಣಂ (ಚಾವುಂಪು. ೨೪೧). [ ಜಯ ? + ಲಿಂಗ ]

**ಜಯಲುಬ್ಧಕ** (ನಾ). ಜಯದಲ್ಲಿ ಅತ್ಯಾಸಕ್ತಿಯುಳ್ಳವನು ; ಗೆಲವನ್ನು ಅರಸುವವನಂ : ನಿಯತ ಜಯಲುಬ್ಧಕನು ರಣಭೂಮಿಯಲಿ ಹರಿಸಲು ಜಯದ ಸಿರಿಯನು ಭಯವಿಹೀನರು ಬೆಱಗುಗೊಂಡರು ಭೀಮನುರವಣೆಗೆ (ಕುಮಾ.ಕ. ೧೯-೯೭). [ ಜಯ + ಲುಬ್ಧಕ ]

**ಜಯಲೇಖೆ** (ನಾ). = ಜಯಪತ್ರ : [ಪೊ]ತುಲ ತಿಂಮಗೌಂಡನ ಮಗ ಕಾಪಗೌಂಡಗೆ ಕೊಟ್ಟ ಜಯ[ಲೇ]ಖೆಯ ಶಾಸನದ ಕ್ರಮವೆಂತೆಂದರೆ (ಸೌಇಇ. VIII, ೩೭೨-४ ; 1507). [ ಜಯ + ಲೇಖೆ ]

**ಜಯಲೋಲುಪ** (ನಾ). =ಜಯಲುಬ್ಧಕ: ರಿಪುಬಲವ ಗೆಲುವಲ್ಲಿ ಶಾಪಾದಪಿ ಶರಾದಪಿಯೆಂಬ ಜಯಲೋಲುಪನು ಸಂಗ್ರಾಮದಲಿ ಮಡಿದನು ಪುತ್ರ ಮೋಹದಲಿ (ಕುಮಾ.ದ್ರೋ. ೧೮ ಸೂಚನೆ). [ ಜಯ + ಲೋಲುಪ ]

**ಜಯವಂತ** (ನಾ). ಗೆಲ್ಲುವವನು ; ಜಯಶಾಲಿ : ವಂತ ಪ್ರತ್ಯಯಕ್ಕೆ – ಸಿರಿವಂತಂ, ಜಯವಂತಂ, ಜಸವಂತಂ (ಶಮದ. ೨೦೬ ಪ್ರಯೋ) : ೧೭೫೭ ರ ಪ್ಲಾಸಿಯ ಯುದ್ಧದಲ್ಲಿ ಜಯವಂತರಾದ ಬ್ರಿಟಿಶರು ಮತ್ತ್ರ ರಾದರು (ಪ್ರಬಂಧ. III, ೩೬೫). [ ಜಯ + – ವಂತ ]

**ಜಯವಂತಿ** (ನಾ). ಒಂದು ಬಗೆಯ ಹತ್ತಿ : ನಮ್ಮ ನೆಲಕ್ಕೆ ಜಯವಂತಿ ಬೀಜ ಆಗದು. ದೇಸೀ ಹತ್ತಿಯೇ ಚೆನ್ನಾಗಿ ಬೆಳೆಯುವುದು (ಶ್ರೀಯಾಂಸ. ೪೬). [ ? ]

**ಜಯವಡೆ** (ಕ್ರಿ). ಗೆಲವನ್ನು ಪಡೆ; ಜಯಿಸು: ಜಯವಡೆದಾ ಪುಳಿಂದಪತಿ ಯಾಡುವ ಬೇಂಟೆಗೆ ಬೆರ್ಚಿ (ಅರ್ಜುನೀ. ೩-೫೪): ಕಷ್ಟದೊಳಿದ್ದರು ಸತ್ತ್ವ ಸಂಪನ್ನರು ಕಡೆಯೊಳು ಜಯವಡೆದಪರು (ಇಂಚಾಪ. ೧೩೪-೯೦). [ ಜಯ + ಪಡೆ$_1$ ]

**ಜಯವಾದ** (ನಾ). ಜಯಜಯಕಾರ; ಜಯಧ್ವನಿ: ಜಯವಾದಮನಖಿಳ ಜಗಜ್ಜಯಪತ್ರಮನಹಿತಪಕ್ಷಪತಿತರ್ ಕುಡೆ ಕೊಂಡಯನಯವಿನ[ಯ] ಪರಂ ಪರಾಣಿಯನವಮನ್ನಿಸದೆ ವಿಭು ಕರಂ ಮನ್ನಿಸಿದಂ (ಶಾಂತಿಪು.೮-೧೫೦). [ ಜಯ + ವಾದ$_3$ ]

**ಜಯವಿಡಿ** (ಕ್ರಿ).ಗೆಲವನ್ನು ಹೊಂದು: ಭಲರೆ ಭಲರೇ ಎನುತ ಭಕ್ತಾವಳಿಗೆ ಶರಣಾರ್ಥಿನುತ ನಮ್ಮದು ಗೆಲವೆನುತ ಜಯವಿಡಿಯೆನುತ ಬಿಟ್ಟಾರ್ದು ಬೊಬ್ಬಿಡುತ (ಬಸವು. ೫೨-೪೨). [ ಜಯ + ಪಿಡಿ$_1$ ]

**ಜಯವಿಡು** (ಕ್ರಿ). ಜಯವಾಗಲಿ ಎಂದು ಕೂಗು ; ಜಯಜಯಕಾರ ಮಾಡು: ದಿಕ್ಕುಂ ದೆಸೆಯು ನೀವೆಮಗೆನುತೆ ಜಯವಿಡುತ (ಬಸವು.೫೭-೫೦). [ ಜಯ + ಇಡು$_1$ ]

**ಜಯವೈಜಯಂತಿ** (ನಾ). = ಜಯಂಧ್ವಜ ೧ : ಕನ್ನಡತಾಯಿಯ ಜಯ ವೈಜಯಂತಿಯ ಏರಿಸು ಹಾರಿಸು (ಇಂಚಾಪ. ೨೪೪-೧೦೮). [ ಜಯ + ವೈಜಯಂತಿ ]

**ಜಯಶಾಲಿ** (ನಾ). ಜಯವನ್ನು ಪಡೆದವನು ; ಗೆದ್ದವನು : ಜಯಶಾಲಿ [ಪಾಠಾಂ. ಳಿ] ನವಮಸ್ಸಿದ್ದೇಭ್ಯಯೆನುತ್ತುಂ (ಮಲ್ಲಿಪು. ೧೩-೧೮೭) : ಅವನು ಯುದ್ಧದಲ್ಲಿ ಜಯಶಾಲಿಯಾಗಿ ಹಿಂದಿರುಗಿದನು (ರೂಢಿ). [ ಸಂ. ಜಯಶಾಲಿನ್ ]

**ಜಯಶೀಲ** (ನಾ). ೧. ಗೆಲ್ಲುವ ಸ್ವಭಾವದವನು: "ಜಿತ್ವರ–ಜಯಶೀಲನು" (ಗಂಗಾವು. ೧೪೦). ೨. ಗೆದ್ದವನು; ಯಶಸ್ವಿಯಾದವನು: ಜಯಶೀಲಂ ಪ್ರಭು . . . ಸ್ಮರಭಸ್ಮಾವಯವಂ ತಾನಾದನತುಳಬಳನಪ್ರತಿಮಂ (ಗಿರಿಕ. ೮-೫೩): ದಾದಾಭಾಯಿ ಚುನಾವಣೆಯಲ್ಲಿ ಜಯಶೀಲರಾಗಿ ಪಾರ್ಲಿಮೆಂಟಿನ ಸದಸ್ಯರಾದರು (ಸ್ವಾವೀರ. ೧೭). [ ಜಯ + ಶೀಲ ]

**ಜಯಶೌಂಡ** (ನಾ). ಗೆಲ್ಲುವುದರಲ್ಲಿ ನಿಪುಣ; ವಿಜಯಕೌಶಲವುಳ್ಳವನು: ಪರಸಮಯ ಜಯಶೌಂಡ ಶಂಕರಶರಣ ರತ್ನಕರಂಡ (ಬಸವು. ೩೭-೩೯). [ ಜಯ + ಶೌಂಡ ]

**ಜಯಸ್ತಂಭ** (ನಾ). ಗೆಲವಿನ ನೆನಪಿಗಾಗಿ ನೆಡುವ ಕಂಭ; ಗೆಲ್ಗಂಬ: ಚೋಳನ ಪಡೆಯಂ ಬೆಂಕೊಣ್ಡು ತಪ್ಪುದಣ್ಡಾಧೀಶಂ ನಡಿಸಿ ಜಯಸ್ತಂಭಮಂ (ಮೈಆರಿ. ೧೯೩೦, ೭೬-೨೨; 1080): ಚಕ್ರಿತನಯಂ ಸೋಮೇಶ್ವರರೋರ್ವ್ವೀಶ್ವರಂ ಸಕಳಶ್ರೀವರನಿಂತಿದಂ ನಿಱಿಸಿದಂ[ಶ್ರಿಮ]ಜ್ಜಯಸ್ತಂಭಮಂ (ಕಇಅ. ೫೪-೪೩-೭೭ ; 1125) ; ಕಡಲತಡಿದಡಿಯೊಳೆಂತಂ ನಡಿಸಿದ ಕಾಂಚನ ಜಗಜ್ಜಯಸ್ತಂಭಂಗಳ್ ಕುಡಿನಿಮಿರ್ದು ನಾಕಿನಿಳಯಮನಡರ್ವ ಯಶೋಲತೆಗಡರ್ಪನಿಟ್ಟವೊಲೆಸೆಗುಂ (ಚಂದ್ರಪು. ೭-೩೧). [ ಜಯ + ಸ್ತಂಭ ]

**ಜಯಸ್ವರ** (ನಾ).[ಸಂಗೀತ]ಒಂದು ಬಗೆಯ ರಾಗ : ಎನ್ನ ಮಾಟ ಕುರುಡ ಸಭೆಯಲ್ಲಿರ್ದು ನಗೆಯ ನಕ್ಕಂತಾಯಿತ್ತು ಶ್ರೋತ್ರನಾಶನಲ್ಲಿ ಜಯಸ್ವರನ ಪಾಡಿದಂತಾಯಿತ್ತು (ಮೋಳಿಮಾ. ೧೦-೩೩). [ ಜಯ + ಸ್ವರ ]

**ಜಯಾಧ್ವ** (ನಾ). ಗೆಲವನ್ನು ಪಡೆಯುವ ಮಾರ್ಗ: ಕಡುಮುನದ ಕರ್ಣಾದಿಗಳು ಕೈದುಡುಕಿದೊಡೆ ಕೈಗಾಯ್ದು ಧರ್ಮದ ತಡಿಗೆ ಜಾಱ ಜಯಾಧ್ವದಲಿ ಜಂಘಾಲರಹಿರೆಂದ (ಕುವ್ಯಾಆ. ೧೫-೨೯). [ ಜಯ + ಅಧ್ವ ]

**ಜಯಾಭ್ಯುದಯ** (ನಾ). ಗೆಲವಿನ ಶ್ರೇಯಸ್ಸು: ಸ್ವಸ್ತಿಶ್ರೀ ಜಯಾಭ್ಯುದಯಶ್ಚ ಜಯತ್ಯಾವಿಷ್ಕೃತಂ ವಿಷ್ಣೋರ್ವಾರಾಹಂ(ಸೌಇಇ. IX–I,೧೬೬-೧: 1099) : ದಾನವರು ಬಲುಗೈಗಳಪ್ರತಿಮಾನರಹುದಾದಡೆಯು ಸಮರದೊಳಾನಲಸದಳವಸುರರಿಗೆ ಸುರರಿಗೆ ಜಯಾಭ್ಯುದಯ (ಕುವ್ಯಾದ್ರೋ. ೧೦-೬೩). [ ಜಯ + ಅಭ್ಯುದಯ ]

**ಜಯಾವಸಥ** (ನಾ). ಜಯಕ್ಕೆ ಆಶ್ರಯನಾದವನು; ಜಯಶೀಲ : ರಾವಣರನೇಕರುಂ . . . ಸುತ್ತಿ ಮುತ್ತೆ ಜಯಾವಸಥಂ ಲಕ್ಷ್ಮಣಂ ರಣೋತ್ಸುಕನಾದಂ (ಪಂರಾಮಾ. ೧೪-೧೬೫). [ ಜಯ + ಅವಸಥ ]

**ಜಯಾಶೀರ್ಘೋಷ** (ನಾ). ಜಯವಾಗಲಿ ಎಂದು ಹರಸುವ ಧ್ವನಿ ; ಜಯಂಜಯಕಾರ : ದಾನಪ್ರಮೋದ ವಾಚಾಳ ಷಟ್ಚರಣ ಚಾರಣ ಗಣೋಚ್ಚಾರ ಝಂಕಾರ ಜಯಾಶೀರ್ಘೋಷಮುಮಪ್ಪ ವಿಜಯಗಜದ ಬೆಂಗೆ ವಂದು (ಆದಿಪು. ೧೪-೯೦ ವ). [ಸಂ. (ಜಯ+ಆಶೀಸ್+ಘೋಷ)]

**ಜಯಾಳ** (ನಾ). [ಸಂಗೀತ] ಒಂದು ಬಗೆಯ ತಾಳ: ಧ್ರುವ . . . ಜಯಾಳ ವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೪). [ ? ]

**ಜಯಿಸು, ಜೈಸು** (ಕ್ರಿ). ಗೆಲ್ಲು ; ಜಯವನ್ನು ಪಡೆ : ರಣದೆ ಜಯಿಸಲೆ ನಾರಾಯಣನೊಳಮುದಾತ್ತನಾರಾಯಣನೊಳಮಿಂತೆತ್ತಿಕೊಂಡ ಗಂಡರುಮೊಳರೇ (ಪಂಪಭಾ. ೧೦-೧೧) : ವಾದಿಗಳನಿರದೆ ಜಯಿಸಿ (ಪದ್ಮರಾ. ೨-೩೩) ; ಎನ್ನೊಳು ಸೆಣಸಿ ಜಯಿಸಿದರೆ ಧನುವ ಹಿಡಿಯೆನು (ಕುವ್ಯಾದ್ರೋ. ೬-೧೫). **ಜೈಸು :** ಪೊಚ್ಚ ಪೊಸ ಜೌವನಂ ತಳರಲೊಯ್ಯನೆ ತಳರ್ದನಂದು ರತಿವಲ್ಲಭಂ ಮೂಜಗವ ಜೈಸಲೆಂದು (ಸೌಂದಪು. ೧೨-೪): ಈಸಬೇಕು ಇದ್ದು ಜೈಸಬೇಕು (ಪುರಂದ. ೦-೧೨ ಪಲ್ಲವಿ) ; ಆ ಪಟ್ಟಣವನು ಜೈಸಾ ರಾಯನ ಸೆಱಿಗೈದು . . . ಪ್ರತಾಪದೆ ಮುಂದಡಿಯಿಟ್ಟ (ಕಂನವಿ. ೦೬-೨೮) ; ಕಪಿಯೊರ್ವನ್ಯೆತಂದು ಜೈಸಿ ಮತ್ತಮರನಗರಿಗೆ ಕಳುಪಿದಂದು (ವಂಕಾರಾ. ೫-೩-೨೦). [ ಜಯ + – ಇಸು$_3$ ]

**ಜಯೆ** (ನಾ). ೧. ಒಂದು ಬಗೆಯ ಔಷಧಿ ಗಿಡ ; ಜಯಂತಿ : ಜಯಾ, ಜಯಂತೀ, ತರ್ಕಾರಿ, ನಾದೇಯಾ, ವೈಜಯಂತಿಕಾ–ಶಿ ತಕ್ಕಿಲೆಗಿಡ, ತಗ್ಗೀಸೊಪ್ಪಿನ ಗಿಡ " (ಸಿದ್ಧಾಂತಿ. ೧೧೦). ೨. [ಜ್ಯೋತಿ] ತೃತೀಯೆ, ಅಷ್ಟಮಿ ಮತ್ತು ತ್ರಯೋದಶಿ ತಿಥಿಗಳು : ಅಭಿಧಾನ ಕ್ರಮದಿಂ ನಂದೆ ಭದ್ರೆ ಜಯೆ ರಿಕ್ತೆ ಪೂರ್ಣೆಯಿನಿತುಂ ಪ್ರತಿಪತ್ಪ್ರಭೃತಿದಿನಂಗಳುಂ (ಲೋಕೋಪ. ೦-೨) ; ೩೦ ತಿಥಿಗಳಲ್ಲಿ ನಂದಾ, ಭದ್ರಾ, ಜಯಾ, ರಿಕ್ತಾ, ಪೂರ್ಣಾಯೆಂಬ ಸಂಕೇತವು ಪಾಡ್ಯ ಮೊದಲು ಪಂಚಮಿ ವರೆಗೂ ಆಗುವವು ಹೀಗೆ . . . ಕೃಷ್ಣಪಕ್ಷ ಅಮಾವಾಸ್ಯೆ ಪರ್ಯಂತ ೬ ಸಲ ಸುತ್ತಿ ಬರುವವು (ಹಸಾರ. ೬-೨೮ ಪದ್ಯಾರ್ಥ). [ ಸಂ. ಜಯಾ ]

**ಜಯೆವೊಡೆ** 'ಜೇವೊಡೆ$_1$' ನೋ.

**ಜಯೋದ್ದಾಮ** (ನಾ). ಜಯದಿಂದ ಘನತೆಯನ್ನು ಪಡೆದವನು : ಕೊಂದನದಱಿಂ ಭೀಮಂ ಜಯೋದ್ದಾಮನೆಂಬುದನೆಂಬಂತಿದು ವಸ್ತು (ಗದಾಯು. ೦-೩೩). [ ಜಯ + ಉದ್ದಾಮ ]

**ಜಯ್ಯ** (ಗು). ೧. ಗೆಲ್ಲಬೇಕಾದ ; ಜಯಿಸಬಹುದಾದ. (ನಾ). ೨. ಗೆಲವು ; ಜಯಂ : " ಜೇಯಂ, ಜಯನಂ, ಜಯ್ಯಂ, ಜೇತವ್ಯಂ, ಜಯನೀಯಂ ಈ ೫ ಗೆಲ್ವು " (ಕಾಶಕ್ತ. ೭೮). [ ಸಂ. ]

**ಜರ$_1$** (ನಾ). ಮೈ ಬಿಸಿಯಾಗುವುದು; ಜ್ವರ: ವತ್ವ ಲೋಪಕ್ಕೆ–-–ಈಶ್ವರ–ಈಸರ . . . ಜ್ವರ–ಜರ (ಶಮದ. ೨೮೧ ಪ್ರಯೋ) : ಧ್ವನಿ, ದನಿ ; ಜ್ವರ, ಜರ (ಶಬ್ದಾನು. ೦೬೦ ಪ್ರಯೋ). [ <ಸಂ. ಜ್ವರ ]

**ಜರ$_2$** (ನಾ). ಮುಪ್ಪು; ವೃದ್ಧಾಪ್ಯ: ಕಡುಜರದಿಂ ಕರಂ ನವೆದು ವಾಯುವಿಕಾರದೊಳಟ್ಟು ಕಂಡಕಂಡೆಡೆಗೆ ನಿಜೇಚ್ಛೆಯಿಂ ಪರಿಯಲ್ (ದಶಕು. ೮-೩೦೩). [ ಸಂ. ಜರಾ ]

**ಜರ$_3$** (ನಾ). ೧. ಚಿನ್ನ ; ಬಂಗಾರ : "ಜರನೆನೆ ಪೊನ್ನುಂ" (ಭಾರನಿ. ೧೩). ೨. ಚಿನ್ನದ ಅಥವಾ ಬೆಳ್ಳಿಯ ಸೂಕ್ಷ್ಮವಾದ ತಂತಿಯು ಎಳೆ ; ಕಲಾಬತ್ತು ; ಸರಿಗೆ; ಜರಿ ; ಜರತಾರಿ: ಬೆಳ್ಳಿಯ ತಂತಿಯ ಸುತ್ತಲೂ ಚಿನ್ನದ ಬಹು ತೆಳ್ಳನ್ನ ತಗಡು ಸುತ್ತಿ ಬಳಿಕ ಆ ತಂತಿಯನ್ನು ತುಸು ಬಡಿದು ಚಪ್ಪಟೆ ಮಾಡಿದರೆ, ಜರವು ಆಗುವುದು (ಮುಂಬಯಿ. ೪-೧೩೧) ; ಸರಸ ಸುಂದರ ಕಾಯ ನಿನ್ನದು ಬರಿದೆ ಭಸ್ಮವದಾಗಿಯಿರುತಿರಲೆಂತು ನಾನದಕೆ . . . ಜರದ ವಸ್ತ್ರಗಳನ್ನು ತೊಡಿಸಲಿ (ಪಾರ್ವಪ. ೧-೨೮) ; ತೊಟ್ಟ ಮುತ್ತಿನ ನವರತ್ನ ಕಂಚುಕಿ ಜರ ಕಟ್ಟಿದಡ್ಡಿಕಿ ಕಟ್ಟಾಣಿಮುತ್ತಿನ ಸರ (ಕರ್ನಾಕ.೨೮೭).
[ ←ಪಾರ. ಹಿಂ. ಮರಾ. ಜರ ]

**ಜರಕ್** (ನಾ). ಒಂದು ಅನುಕರಣ ಶಬ್ದ. 'ಜರಕ್ಕನೆ' ಪರಾ.

**ಜರಕಟ್ಟು** (ನಾ). ಜರದ ಅಂಚು ಕಟ್ಟಿದುದುಂ: ಅವರ ಆ ಜರಕಟ್ಟಿನ ಮೈಸೂರು ರುಮಾಲು ಅವರ ತಲೆಗೇ ಒಪ್ಪುವುದು (ಗೊತ್ತುಗು. ೧೨೯).
[ ಜರ$_3$ + ಕಟ್ಟು$_2$ ]

**ಜರಕಾಟಿ** (ನಾ). ಜರಕಟ್ಟು ; ಕಲಾಬತ್ತಿನ ಅಂಚು ; ಜರಿಯ ಅಂಚು: ಕೈಯಲ್ಲಿ ಕೈಕಡಗ ಕಿವಿಯಲ್ಲಿ ಬಾವುಲಿ ಜರಕಾಟ ರುಮಾಲು (ಬರಹಾ. ೫೩); ಜರಕಾಟಿಯ ಹೊಸರುಮಾಲು ಸುತ್ತಿಕೊಂಡು (ಗಂಗಾಗೌ. ೧೮).
[ ಜರ$_3$ + ಕಾಟ$_6$ ]

**ಜರಕ್ಕನೆ** (ಅ). ಸರ್ರನೆ ; ಇದ್ದಕ್ಕಿದ್ದಂತೆ : ಅವನು ದಾರಿಯಲ್ಲಿ ಜರಕ್ಕನೆ ಜಾರಿ ಬಿದ್ದ (ರೂಢಿ). [ ಜರಕ್ + – ಅನೆ$_1$ ]

**ಜರಗಿಸು** 'ಜರುಗಿಸಂ' ನೋ.

**ಜರಗು$_1$** 'ಜರುಗಂ$_1$' ನೋ.

**ಜರಗು$_2$, ಜರುಂಗು$_2$, ಜಲಗು$_2$** (ನಾ). ೧. ಚಿನ್ನದ ಸಣ್ಣ ಸಣ್ಣ ಕಣಗಳು ಬೆರೆತಿರುವ ಮಣ್ಣು: ಜರಗನೊಯ್ಯನೆ ಕರ್ಚೆ ರಾಶಿಯ ಮಣ್ಣೊಳೊಪ್ಪುವ ಪೊನ್ನನಚ್ಚರಿಯೆನಲ್ಕೆ ಟಿಕಾಣ್ಬವೊಲ್ (ಧರ್ಮಾಮ್ಮ. ೪-೩೩) ; ಇಳೆಯಧಿನಾಥಗೆ ಜರಗೆಂಬ ನೆವದಿಂದ ಬೆಳೆವುದು ಹೊನ್ನನಾ ಧರೆಯು (ಚಂಪ್ರಸಾಂ. ೨೩-೭). ೨. ಚಿನ್ನ; ಬಂಗಾರ : ಉತ್ತುಂಗ ಕುಚಾದ್ರಿಯ ಪೊಮ್ಮತ್ತಿಯ ಮೊಳೆ ಮೊಳೆತ ಜರಗಿನಂತಿರೆ ಕಾಣಲ್ಬೆತ್ತ ಸತಿಗಾಯ್ತು ಸುತನಂ ಪೆತ್ತಂತಪ್ಪೊಂದು ಸಂತಸಂ ತತ್‌ಕ್ಷಣದೊಳ್ (ಅರ್ಧನೇ. ೨-೪); ನದಿ ಪುಟ್ಟದೊಸಜ್ ನಮೇರು ಪುಟ್ಟದ ಪುರನಂದನಂ ಜರಗು ಪುಟ್ಟದ ಭೂತಳಮಿಲ್ಲ ದೇಶದೊಳ್ (ಸೂಕ್ತಿಸು. ೪-೭). **ಜರುಗು$_2$:** ೧. ಜರುಗಿನಲಿ ಛಾಂಬೂನದದ ಸಂವರಣೆಕಾಬಿಂಗೆಡೆಯಲಿದ್ದುದು ಪರಮನಿಧಿ (ಕುಮಾ.ಆ.೧೦-೨೭). **ಜಲಗು$_2$:** ೧. ಇನ್ನೀ ಬಸದಿಯೂರ್ಗ್ಗಳಲು ಪುಟ್ಟಿದ ಜಲಗು ನಿಧಿನಿಕ್ಷೇಪ ತಣ್ಣಕ ವರ್ತ್ತಿಯೆಂಬಿವಂ ಸರ್ವ್ವಬಾಧಾಪರಿಹಾರಂ ಮಾಡಿ ಬಿಟ್ಟರು (ಎಕ. VII, ಶಿವಮೊ. ೪-೮೧; 1122); ಎನ್ನ ಮನವು ನಿಧಾನವನೊಲ್ಲದೆ ಜಲಗ ಮಚ್ಚಿತ್ತು ನೋಡಾ (ಬಸವ. ೩೧) ; ಪರುಷವಂ ಕಂಡವಂ ಜಲಗಿಗೆಳಸುವನೆ (ವಾಗೀರ. ದೇ. ೨೬೫-೧೫).

**ಜರಗಂ ಕರ್ಚು, ಜಲಗಂ ಕಚ್ಚು**=ಮಣ್ಣಿನಲ್ಲಿ ಬೆರೆತಿರುವ ಚಿನ್ನದ ಕಣಗಳನ್ನು ಶೋಧಿಸಿ ತೆಗೆ: ದೊರೆಕೊಂಡ ನಿಧಿಯನೊಲ್ಲದೆ ಜರಗಂ ಕರ್ಚುವುದೆ (ಪಂರಾಮಾ. ೫-೨೦) : ಅಚ್ಚರಿಯ ನಿಧಿಯಿರಲು ಜಲಗಂ ಕಚ್ಚುವರೆ (ಬಸಪು. ೨-೨೩). **ಜರಗ ತೊಳೆ, ಜಲಗಂ ತೊಳೆ, ಜಲಗ ತೊಳೆ** = ಜರಗಂ ಕರ್ಚು: ಮೇರುಮಂದಿರದೊಳಗಿದ್ದು ಜರಗ ತೊಳೆವ ಚಿಂತೆಯೇಕೆ (ಅವಚಂ. ೨೫-೧೦೩) ; ಮೇರುವಂ ಬಿಟ್ಟು ಜಲಗಂ ತೊಳೆವನಂತೆ (ಜೀರಮು. ೬-೪೯) ; ಕಡವರಂ ಮನೆಯೊಳಿರೆ ಜಲಗ ತೊಳೆವವನಂದದೆ (ವೀಶೈಪು. ೧-೧-೮).

**ಜರಗಿನ ತೆಱೆ** = ಜರಗನ್ನು ಶೋಧಿಸಿ ಚಿನ್ನವನ್ನು ತೆಗೆಯುವ ಕಸಬಿನ ಮೇಲೆ ಹಾಕುವ ತೆರಿಗೆ: ಜರಗಿನ ತೆಱೆಯ ಸರ್ವ್ವಾಧಿಕಾರಿ ಶ್ರೀಮದ್ದಣ್ಣನಾಯಕ ಸೆಲ್ಲಪಯ್ಯಂಗಳ ಸನ್ಧಿವಿಗ್ರಹಿ ಸಮಸ್ತಗುಣಗಣಾಳಂಕೃತನಪ್ಪ ಕೇಶರಾಜಂ ತಮ್ಮ ಜರಗಿನ ತೆಱೆಯೊಳಗೊನ್ದು ದ್ರೋಣಿಯ ತೆಱೆಯುಮಂ . . . ದೇವರ್ಗ್ಗೆ ಬಿಟ್ಟರು (ಸೌಇಇ. XI-ii, ೨೦೦-೮ ; 1126). **ಜರಗಿನ ಪೊನ್**=ಮಣ್ಣಿನಲ್ಲಿ ಹುಡಿಹುಡಿಯಾಗಿ ಬೆರೆತ ಚಿನ್ನ : ಉರಿವ ನಿದಾಘತಾಪದೊಳೆ ಮೇರುನಗಂ ಪೊಱಪೋಗೆ ಸುತ್ತಲುಂ ಕರಗಿ . . . ಕಾಟ್ಟುರಂ ಬರಿದು ಬಿಲಸ್ಥಲಂಗಳೊಳಪೊಕ್ಕುಱದಿರ್ದುದದಲ್ಲದಂದು ಪೇೞ್ ಜರಗಿನ ಪೊಂಗವಿಾ ನೆಲಕಮಾವುದೊ ಸಂಗತಿವೆತ್ತ ಕಾರಣಂ (ಚಂದ್ರಪು. ೯-೭೦).
[ ದೇ.॥ ತಮಿ. ಚರಕ್ಕು ; ತೆಲು. ಜಲಗಡುಗು=ಮಣ್ಣಿನಲ್ಲಿ ಬೆರೆತ ಹೊನ್ನನ್ನು ಶೋಧಿಸಿ ತೆಗೆ ]

**ಜರಗು$_3$** (ನಾ). ೧. ಬಟ್ಟೆಯ ವಿರಳವಾದ ನೆಯ್ಗೆ,–ಜಾಳುಜಾಳಾದ ನೆಯ್ಗೆ : (+). ೨. ಜೊಳ್ಳು ; ಗಟ್ಟಿಯಲ್ಲದುದು. 'ಜಳ್ಳು ಜರಗು' ಪರಾ. [ ? ]

**ಜರಗುಂಡೆ** (ನಾ). ಇಳಿಜಾರು ಪ್ರದೇಶದಲ್ಲಿ ಕುಳಿತಂ ಜಾರಂವ ಆಟ ; ಜಾರಂಗುಪ್ಪೆ ; ಜಾರುಬಂಡೆ : ಆ ಇಳಿಜಾರಿನಿಂದ ಕೆಳಗೆ ಮೂವರೂ ಜರಗುಂಡೆಯಾಡಿದಂತೆ ಜರಿದೆವು(ಮೇದಿಮ. ೨೦೩). 'ಜಾರಂಗುಂಡಿ' ಪರಾ.
[ ಜರಗು$_1$ ( <ಜರುಗು$_1$) + ಕುಂಡೆ$_1$ ]

**ಜರಗುಗರ್ಚು** (ಕ್ರಿ). ಚಿನ್ನದ ಹುಡಿ ಬೆರೆತ ಮಣ್ಣನ್ನು ತೊಳೆದಂ ಶೋಧಿಸಿ ಚಿನ್ನವನ್ನು ತೆಗೆ ; ಜಾಲಿಸಿ ಚಿನ್ನವನ್ನು ತೆಗೆ : ನಿಧಿಗಂಡು ಜರಗುಗರ್ಚುವನೊಳನೆ (ಉಸಾರ. ೨೬೨) ; ನಿಧಿಯಿರಲುಱೆ ಜರಗುಗ[ಪಾಠಾಂ. ಕ]ರ್ಚುವನ ತೆಱದಿಂದಂ (ತ್ರಿಪುವಿ. ೨೯-೧೫).
[ ಜರಗು$_2$ + ಕರ್ಚು$_2$ ( <ಕಟ್ಟು) ]

**ಜರಚು** 'ಜಱುಂಚು$_1$' ನೋ.

**ಜರಜರ**(ನಾ).ಒಂದು ಅನುಕರಣ ಶಬ್ದ ; ಯಾವುದಾದರೂ ವಸ್ತುವನ್ನು ಎಳೆಯುಂವಾಗ ಉಂಟಾಗುವ ಶಬ್ದ : ಮಗುವಿನ ಕೈಯನ್ನು ಹಿಡಿದು ಜರಜರ ಎಂದು ಎಳೆದುಕೊಂಡು ಹೋದ (ರೂಢಿ).

**ಜರಟಿ** (ನಾ). = ಜರತಿ : ಪುರದಗ್ಗದೆಸೆಯನೊಂದಿದ ಜರಟಿಯ ಮುಂಬದೆ ಅಕೋ (ಹಾಲಾಸ್ಯ. ೪-೧೩-೯). [ <ಸಂ. ಜರತೀ ]

**ಜರಟಿಹುಲ್ಲು** (ನಾ). ಒಂದು ಬಗೆಯ ಹುಲ್ಲು : "ಗರ್ಗ್ರೋಟಿಕಾ–ಜರಟಿ ಹುಲ್ಲು" (ಓಷಧಿ. ೪೭). [ ಜರಟಿ ? + ಹುಲ್ಲು (<ಪುಲ್) ]

**ಜರಠ** (ಗು). ೧. ಶಿಥಿಲವಾದ ; ಜೀರ್ಣವಾದ ; ಹಳೆಯಂ : ಜರಠಮಹಾಶಾಲ್ಮಲೀವೃಕ್ಷಮಿರ್ಕುಂ (ಕಾದಂಪೂ. ೧೨೦): ಜರಠಾಸ್ಥಿ ಚರ್ಮದಾ ನರೆ ನವಿರಿನಾ ಸ್ಥವಿರೆ . . . ತೊಲಗಿದಳಯೋಧ್ಯೆಯಿಂ (ಶ್ರೀರಾಮಾ. ೧೨೨-೧೬೫). ೨. ಬಾಗಿದ; ಜೋಲಂ ಬಿದ್ದ. ೩. ಒರಟಾದ; ಕಠಿನವಾದ; ನಿಷ್ಠುರವಾದ : "ಕಠಿನಂ ನಿಷ್ಠುರಂ ಕಠೋರಂ ಜರಠಂ" (ವಸ್ತುಕೋ. ೧೦೫-೪೫) ; ಜರಠ ಕಮಠ ಪಾಠೀನಚಯ ಡಿಂಡೀರ ಪಿಂಡ ಪಂಡ . . . ವ್ಯಾಳ ಕೋಳಾಹಳಧ್ವಾನವೆರಸಿ ಜಲನಿಧಿ ಮೆಱೆದುದು (ಹಕಾ. ೧-೩೩) ; ಭೂ ಜರಠ ಜಠರಾಂತರದ ಪಲ್ಲಟದ ಪರಿಣಾಮದಿಂದಂ ಪ್ರಕೋಪಿಸುತೆ ಭೋರ್ಗುದಿದು ಮೇಲ್ವಾಯ್ಯುವದಟ್ಲಾಂಟಿಕಾಂಭೋಧಿ (ಶ್ರೀರಾಮಾ. ೧೬೫-೩೫೪). ೪. ಕೆಸರಾದ; ರಾಡಿಯಾದ: "ತೀವ್ರಮುಂ ಪಂಕಿಲಮುಂ ಪುರಾಣಮೆನಿಪೀ ತ್ರಿತಯಂ ಜರಠಾಭಿಧಾನಂ" (ನಾನಾರ. ೧೪೭). (ನಾ). ೫. ಮುದುಕ ; ವೃದ್ಧ : ಉಂಡು ಹೊಱವಡುತಿಪ್ಪ ಪಂಡಿತತಂಡದೊಳಗತಿಜರಠನೊಬ್ಬನ . . . ಕಂಡು ನಗುತವೆ (ಕೌಶಿರಾ. ೨-೭೦) ; ನನ್ನ ಮನಸ್ಸಿನಲ್ಲಿ ಪ್ರೇಮದ ಸೆಲೆಯು ಉತ್ಪನ್ನವಾಗಿದ್ದರಷ್ಟೇ ಆ ಜರಠನನ್ನು ಪ್ರೀತಿಸುವದು ? (ಧರ್ಮರಿ. ೯೦). [ ಸಂ. ]

**ಜರಡ** (ನಾ). ೧. ಅಶಕ್ತ ; ಕೈಯಲ್ಲಾಗದವನಂ: ಅರಸ ಕೇಳಾ ಪೂರ್ವದತ್ತವು ಹರಿವಿರಿಂಚಿಗಳಳವೆ ಲೋಕದ ಜರಡರೇತಕೆ ದುಃಖಬಡುವರು ದೇಹಧರ್ಮದಲಿ (ಸಂಭಪ. ೧೭–೫೫); ಮುದದಲಭಿಷೇಚನವ ರಚಿಸುವೆನಧಿಕ ಜರಡನು ತಾನು ಮಾಡುವ ಹದನದಾವುದು ಮುನಿಪ ಚಿತ್ತವಿಸೆಂದನಾ ಭೂಪ (ಅರಾಮ. ೨–೨–೨). ೨. ಗಟ್ಟಿಯಾದುದು : (ಈ). ೩. ಕ್ರೂರ ವ್ಯಕ್ತಿ : (ಈ). [ <ಪ್ರಾ. ಜರಡ. / ಸಂ. ಜರಠ ]

**ಜರಡಿ** 'ಜಲ್ಲಡೆ' ನೋ.

**ಜರಡಿಹುಣ್ಣು** (ನಾ). ಜರಡಿಯಂತೆ ತೂತಾಗಿ ಕೀವು ಬರುವ ಹುಣ್ಣು: ಮೊಣಕಾಲಿನಲ್ಲಿ ಜರಡಿ ಹುಣ್ಣಾಗಿದೆ (ರೂಢಿ).
[ ಜರಡಿ (<ಜಲ್ಲಡೆ) + ಹುಣ್ಣು (<ಪುಣ್) ]

**ಜರಡು**$_1$ (ಗು). ೧.ಹುರುಳಿಲ್ಲದ; ನಿಷ್ಪ್ರಯೋಜಕವಾದ: ಮಿಕ್ಕಿನ ಜರಡು ಕವಿಗಳ ಲೆಕ್ಕಿಸುವನೆ ಕುಮಾರವಾಲ್ಮೀಕಿ (ತೊರರಾ. ೬–೫೫–೬೭). (ನಾ). ೨. ಹುರುಳಿಲ್ಲದುದು ; ಜೊಳ್ಳು ; ನಿಷ್ಪ್ರಯೋಜಕವಾದುದು: "ಜಳ್ಳನೆ ಜರಡೆನೆ ಜಾಳನೆ ಪೊಳ್ಳನೆ ತಾಂ ನಿಷ್ಪ್ರಯೋಜನಾರ್ಥವಂದಕ್ಕುಂ" (ಛಾರನಿ. ೫೭) ; ಬರಲಿ ಕರ್ಣದ್ರೋಣರುಳಿದೀ ಜರಡ ಜೋಡಿಸಬೇಡ (ಕುವ್ಯಾದ್ರೋ. ೧೫–೬೮). ೩. ಶಿಥಿಲವಾದುದು ; ಕೃಶವಾದುದು ; ಮುದಿಯಾದುದು : ವರತಪೋವ್ರತ ಕರುಷಿತಾತ್ಮರು ಜ[ಪಾಠಾಂ. ಬ]ರಡುಗಾತ್ರರು (ನಿಘಾಗ. ೧೦–೧೦೩–೧೨). [ ಜರಡ + – ಉ$_4$ ]

**ಜರಡು**$_2$ (ನಾ). ಕವಚ (?): ಹಯವಿದ್ಯಾವಿಶಾರದ ವೀರಘೋಟಿಕಾಯಿಲರಿಕ್ಕಿದ ಲೋಹಘಟದ ಸೀಸಕದ ತೊಟ್ಟ ಜರಡಿನ ಶರೀರಸನ್ನಾಹದ ಕಂಧರದ ಝಣಝಣಾಯಮಾನಮಪ್ಪ ಝಳವ ಟಿಗೆಯ ಕಟ್ಟಿದ ಪಟಿಯಿ ಪಾಂಗಿನ ಪಂಚವಣ್ಣಿಗೆಯ (ಮಹಾನೇ. ೧೨–೩೩ ವ). [ ? ]

**ಜರಡುಜಂತ್ರ** (ನಾ). ಹಳೆಯದಾದ ಅಥವಾ ಜೀರ್ಣವಾದ ಯಂತ್ರ : ಜರಡು ಜಂ[ಪಾಠಾಂ. ತಂ]ತ್ರದ ಮಾನನೆಚ್ಚೊಡೆ . . . ಧುರಕೆ ಧೀರನೆ ಪಾರ್ಥ (ಕುವ್ಯಾವಿ. ೮–೭). [ ಜರಡು$_1$ + ಜಂತ್ರ ]

**ಜರಡುಮಖ** (ನಾ). ಜೊಳ್ಳಾದ ಯಾಗ ; ನಿಷ್ಪ್ರಯೋಜಕವಾದ ಯಜ್ಞ : ಜರಡುಮಖವೀ ಮಖಕೆ ಹೋಲುವ ಧರಣಿಪತಿ (ಕುವ್ಯಾಸ. ೮–೩೭). [ ಜರಡು$_1$ + ಮಖ ]

**ಜರಡೆ**$_1$ 'ಜಲ್ಲಡೆ' ನೋ.

**ಜರಡೆ**$_2$ (ನಾ). ಒಂದು ವಂಶದ ಹೆಸರು (?) : ಬಸರೂರ ಪಡುವ ಕೇರಿಯ ಒಳಗಣ ಜರಡೆಯ ಬಳಿಯ ಕೋಟೀಸರದಹನ ಮೊಂಮಗಳು ತುಳು[ವ]ಕ ಹೆಗ್ಗಡಿತಿ (ಸೌಇಇ. IX-ii, ४೨೪–೮ : 1401). [ ? ]

**ಜರಣ** (ಗು). ೧. ಶಿಥಿಲವಾದ ; ಜೀರ್ಣವಾದ ; ಮುದಿಯಾದ. ೨. ಜೀರ್ಣಶಕ್ತಿಯನ್ನು ಹೆಚ್ಚಿಸುವ. (ನಾ). ೩. ಜೀರಿಗೆ. [ ಸಂ. ]

**ಜರಣಕ** (ನಾ). ಇಂಗು ; ಹಿಂಗು : "ರಾಮಠಂ ಹಿಂಗು ಜರಣಕಂ ಬಾಹ್ಲೀಕಂ" (ವಸ್ತುಕೋ. ೩೮–೩೨). [ ಸಂ. ]

**ಜರತಾರ** (ನಾ). ಚಿನ್ನದ ಲೇಪವನ್ನು ಕೊಟ್ಟ ಬೆಳ್ಳಿಯ ತಂತಿ ; ಜರಿ ; ಕಲಾಬತ್ತು ; ಸರಿಗೆ : ಮಿಸುನಿಯ ಜರತಾರ ರುಮ್ಮಾಲು ಪೈರಣೆ ಪೊಸತಾದ ದುಪ್ಪಟದಿಂದ . . . ರಂಜಿಸಿದನು (ಕಂನವಿ. ೨೩–೮೦) ; ಸಣ್ಣ ಚಂದಿರಗಾವೆ ಸೀರೆ ಜರತಾರಂಚು (ಶ್ರೀಕೃಪಾ. ೧೧).
[ ←ಪಾರ. ಹಿಂ. ಮರಾ. ಜರತಾರ್ ]

**ಜರತಾರಿ** (ಗು). ೧. ಕಲಾಬತ್ತಿನ ; ಜರಿ ಕೆಲಸಮಾಡಿದ : ಹೊದೆಯಲು ಜರತಾರಿ ಶಲ್ಯೆ, ಕೈಯಲ್ಲಿ ಮಿಂಚುತ್ತಿರುವ ಕರೀಕೋಲು (ರಾಯುಕ. ४३). (ನಾ). ೨. = ಜರತಾರ : ದುಕೂಲದಲ್ಲಿ ನೆಯ್ದಿರುವ ಜರತಾರಿಯ ಚುಕ್ಕಿಗಳಂತೆ ಅಲ್ಲಿ ಇಲ್ಲಿ ಮ್ಲಾನ ನಕ್ಷತ್ರಗಳು ಮಿನುಗುತ್ತಿದ್ದುವು (ರಾಮಾನಿ. ೮೦). [ ←ಹಿಂ. ಮರಾ. ಜರತಾರೀ ]

**ಜರತಾರಿನೊಣ** (ನಾ). ಕಲಾಬತ್ತಿನ ವಸ್ತ್ರದಂತೆ ಕುಸುರು ಕುಸುರಾದ ಪಕ್ಕವುಳ್ಳ ಒಂದು ಬಗೆಯ ನೊಣ : ಗೆಣಸಿನ ದುಂಬಿ, ಜರತಾರಿ ನೊಣ (Lacewinged fly) ಗಳ ಮರಿಗಳು ವಿಲಕ್ಷಣವಾಗಿ ತಮ್ಮನ್ನು ರಕ್ಷಿಸಿಕೊಳ್ಳುತ್ತವೆ (ಕೀಟಬಿ. ೨೨). [ ಜರತಾರಿ + ನೊಣ(<ನೊಳವು) ]

**ಜರತಾರಿಸೀರೆ** (ನಾ). = ಜರಿಸೀರೆ : ಅವಳು ಜರತಾರಿ ಸೀರೆಯನ್ನುಟ್ಟಿದ್ದಳು (ಹಾಹುತ್ತ. ೮೯). [ ಜರತಾರಿ + ಸೀರೆ$_2$ ]

**ಜರತಿ** (ನಾ). ಮುದುಕಿ ; ವೃದ್ಧೆ : ನೀನೇಕೆ ಜರತಿಯಾದೆಯೆನೆ ನಕ್ಕು ಸುಖಾವತಿ ನಿನಗೇಕೆ ಮುಪ್ಪಾಯ್ತೆನೆ (ಚಾವುಂಪು. ೬೮) ; ಬಡಿವ ಬಲ್ಗೊಲೆ ಜೊಲ್ಲುವಾಯ್ದೊಟಿ ಮೊಗದಿಂ ಕಡುಸೊಗಸಿದಳಾ ಜರತಿ(ಶ್ರೀಪಾಲ. ४–೬೦); ಅನತಿ ಜರತಿಯಲ್ಲವೆ (ಭರಚ. ೫೯–೯೧). [ ಸಂ. ಜರತೀ ]

**ಜರತ್ಕಂಚುಕಿ** (ನಾ). ೧. ವೃದ್ಧನಾದ ಕಂಚುಕಿ, – ಅಂತಃಪುರದ ಅಧಿಕಾರಿ. ೨. ಮುದಿಯಾದ ಹಾವು. ೧, ೨ : ಆ ಮಹಾವನಂ . . . ರಾಜ್ಞೀನಿವಾಸದಂತೆ ಜರತ್ಕಂಚುಕಿಶತೋದಂಚಿತಮುಂ(ಚಂದ್ರಪು. ೫–೫೨ ವ)
[ ಸಂ. ಜರತ್ಕಂಚುಕಿನ್ (ಜರತ್ + ಕಂಚುಕಿನ್) ]

**ಜರದಾ, ಜರ್ದಾ** (ನಾ). ೧. ತಾಂಬೂಲದೊಂದಿಗೆ ಸೇವಿಸುವ ಪರಿಮಳ ಬೆರೆತ ಹೊಗೆಸೊಪ್ಪು,–ತಂಬಾಕು : ರಾಯರ ಕೈಯಲ್ಲಿ ಒಂದು ಎಲೆ ಪಟ್ಟ. ಅದನ್ನು ದವಡೆಯಲ್ಲಿ ಸೇರಿಸಿಕೊಂಡು ಮೇಲೆ ಜರದಾ ಹಾಕಿಕೊಳ್ಳುತ್ತ (ತಿಡುಗು. ೩೦) ; ಆಗಾಗ್ಗೆ ಜರದಾ, ತಂಬಾಕದ ಖಾಟವೂ ಈ ವೀಟೀರಸಕ್ಕೆ ತನ್ನ ಶಾಕ ಪೂರೈಸುವ ಭಾಸವಾಗುವದು (ಗಾಳಿಪ. VIII, ಮುನ್ನುಡಿ). ೨. ಮಾಸಲು ಬಣ್ಣದ ಕುದುರೆ; ಬೂದುಬಣ್ಣದ ಕುದುರೆ: (ಈ). **ಜರ್ದಾ** : ೧. ಅವನಿಗೆ ಜರ್ದಾ ಎಂದರೆ ಪ್ರಾಣ. ಅಡಕಲೆ ಬಾಯಲ್ಲಿಲ್ಲದಿದ್ದರೂ ಒಂದು ಚೂರು ಜರ್ದಾ ಇರಬೇಕು (ಮಲ್ಲಿ. ೧೧೨).
[ ←ಪಾರಾ. ಹಿಂ. ಮರಾ. ಜರದಾ, ಜರ್ದಾ ]

**ಜರದಾಲು, ಜರದಾಳು, ಜಲದಾರು** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಸಕ್ಕರೆ ಬಾದಾಮಿ: ರಕ್ತದಲ್ಲಿ ಕಬ್ಬಿಣದ ಧಾತು ಕಡಿಮೆಯಾದರೆ ಅದನ್ನು ಸರಿಗೊಳಿಸಲು ಜರದಾಲು ಹಣ್ಣು ಉತ್ತಮ (ಅಡುಸೌ. ೬೦). **ಜರದಾಳು :** ಸಕ್ಕರೆಬಾದಾಮಿ, ಜರದಾಳು (ಮೃಜಿಗಿ. ೬४–೧४೦೭). **ಜಲದಾರು :** ಅಂಜೂರ . . . ಜಲದಾರು, ಸೇಬು ಮೊದಲಾದ ಹಣ್ಣುಗಳನ್ನು ಪರವೂರುಗಳಿಂದ ಕೊಂಡುಕೊಳ್ಳುತ್ತಿದ್ದನು (ಈಕಥ. ೧೪४). [←ಪಾರಾ. ಹಿಂ. ಜರದಾಲೂ ; ಮರಾ. ಜರದಾಳೂ]

**ಜರದಾಳು** 'ಜರದಾಲು' ನೋ.

**ಜರದ್ವಧು** (ನಾ). ವಯಸ್ಸಾದ ಹೆಣ್ಣು ; ಮುದುಕಿ; ವೃದ್ಧಸ್ತ್ರೀ: ವಿರ(ಸಂ) ಕರಮವು ದೇಸಿಗೆ ಜರದ್ವಧೂವಿಷಯಸುರತ ರಸರಸಿಕತೆವೊಲ್ (ಕವಿರಾ. ೧–೫೦). [ ಸಂ. ಜರದ್ವಧೂ (ಜರತ್ + ವಧೂ) ]

**ಜರಬು** 'ಜರ್ಬು$_2$' ನೋ.

**ಜರಹಾಯ್** (ಕ್ರಿ). ಅಗುಳಿಹಾಕು : ಆಗ ಗುರುಸಿದ್ಧಲಿಂಗೇಶ್ವರನೊಡನೆ ಪರಮಯೋಗಿಗಳೆನಿಪ ಷಟ್ಸ್ಥಲಜ್ಞಾನಿಗಳು ಸಾನುರಾಗದಿಂದವನ ಬಿನ್ನಪ ಕೊಡಂಬಟ್ಟು ಬಿಜಯಂಗೆಯ್ಯಲಾವೂರೊಳು ಬೇಗದಿಂದಂ ವಣಿಜರೆಲ್ಲಂ ತಮ್ಮಂಗಣದ ಬಾಗಿಲುಗಳಿಕ್ಕಿ ಜರಹಾಯ್ದುವನ ಸದನಕ್ಕೆ ಯೇಗೆಯ್ಯಲುಂ ತಳಿಗೆಗುಡಲಾಗದುಜಿದೆ ಪಾತ್ರದ ಬೆಂಬಳಿಯೊಳು ಬಹುದು (ಸಿದ್ಧೇಪು. ೧४–೧೬). [ <ಜರುಗು ? + ಹಾಯ್$_1$ (<ಪಾಯ್$_1$) ]

**ಜರಾಯಿತ** 'ಜಿರಾಯಿಂತು' ನೋ.

**ಜರಾಯು** (ನಾ). ೧. ಭ್ರೂಣವನ್ನು ಆವರಿಸಿರುವ ಪೊರೆ ; ಗರ್ಭದಲ್ಲಿ ಕೂಸಿರುವ ಚೀಲ ; ಗರ್ಭವೇಷ್ಟನದ ಚರ್ಮ ; ಮಾಸು ; ಸೆತ್ತೆ : "ಕೂಸಿರ್ಪ ಚೀಲಂ ಜರಾಯುವೆನಿಕ್ಕು" (ಮಂಗರಾ. ೯೦–೮). ೨. ಗರ್ಭಾಶಯ ; ಗರ್ಭಕೋಶ. [ ಸಂ. ]

**ಜರಾಯುಜ** (ನಾ). ಗರ್ಭಕೋಶದಿಂದ ಹುಟ್ಟಿಬರುವಂತಹುದು; **ಪ್ರಾಣಿ**: "ಮಾನವ ಪಶುನಿವಹಂ ಜರಾಯುಜಂ" (ವಸ್ತುಕೋ. ೧೮-೪): ಅಂಡಜ ಸ್ವೇದಜ ಉದ್ಭಿಜ ಜರಾಯುಜರೆಂಬ ಪ್ರಾಣಿಗಳಿಗೆ ಭವಿತವ್ಯವ ಕೊಟ್ಟವರಾರೋ (ಬಸವ. ೨೨೨): ಸ್ವೇದಜಮಂಡಜಮುರ್ವಿಜಮಾದರದ ಜರಾಯುಜಂಗಳೆನಿಸಿದ ನಾಲ್ಕುಂ ಭೇದದ ಸತ್ಪ್ರೋತ್ಪತ್ತಿಗೆ ಮೇದಿನಿ ಜಲಮರ್ಕರಶ್ಮಿ ಪವನಂ ಮುಖ್ಯಂ (ಜಟ್ಟಮ. ೧-೩೦). 'ಅಂಡಜ' ಪರಾ. [ ಸಂ. ]

**ಜರಾರ್ದಿತ** (ನಾ). ಮುಪ್ಪಿನಿಂದ ಪೀಡಿಸಲ್ಪಟ್ಟವನು,-ಹಣ್ಣಾದವನು; **ವೃದ್ಧ**: "ಪ್ರವಯಂ ಜೀರ್ಣಂ ಜರಾರ್ದಿತಂ ದಶಮಿಸ್ಥಂ" (ವಸ್ತುಕೋ. ೫೬-೨೭). [ ಸಂ. (ಜರಾ + ಅರ್ದಿತ) ]

**ಜರಾವಿಭೇದ** (ನಾ). ಮುಪ್ಪಿನಿಂದ ದೇಹದಲ್ಲಿ ವಿಕಾರವನ್ನು ಹೊಂದಿದವನು: ಪ್ರಿಯಹಿತವಾದಿತ್ವಮುಮಲ್ಲದೆ ಜರಾವಿಭೇದಂ ದಂತಮಳಾದಿ ವಿರಹಿತನುಂ . . . ಪರಮಸುಖಸಾಧನಮುಮಪ್ಪ ಪರಮಔದಾರಿಕ ಚರಮದೇಹಮಂ ತಾಳ್ದಿ (ಆಜಿಪು. ೫-೯೩ ವ). [ ಸಂ. (ಜರಾ+ವಿಭೇದ) ]

**ಜರಾಶಿಥಿಲ** (ಗು). ಮುಪ್ಪಿನಿಂದ ಬಿಗುವಳಿದ,-ಸಡಿಲಾದ: ಜರಾಶಿಥಿಲ ದೀರ್ಘಬಾಹುಯುಗಳದಿಂದಟ್ಟಿಱಿಲಿ ತಟಿಕ್ಕೈಸಿ (ಕಾದಂಉ. ೭೯೬). [ ಸಂ. (ಜರಾ + ಶಿಥಿಲ) ]

**ಜರಿ$_1$** 'ಸರಿ$_1$' ನೋ.

**ಜರಿ$_2$** 'ಜಱಿ' ನೋ.

**ಜರಿ$_3$** 'ಸಱಿ$_1$' ನೋ.

**ಜರಿ$_4$, ಝರಿ$_1$** (ನಾ). ಅನೇಕ ಕಾಲುಗಳುಳ್ಳ ಒಂದು ಬಗೆಯ ಹುಳು; **ಲಕ್ಷ್ಮಿಚೇಳು; ಶತಪದಿ**: "ಕರ್ಣಜಲೂಕಾ, ಶತಪದೀ-೨ ಜರೀ ಹೆಸರುಗಳು. ಜರೀ ಸರಸ್ವತೀಪುತ್ರನೆಂಬ ಹುಳು" (ಸಿದ್ಧಾಂತಿ. ೧೩೭); ಕೀಟಗಳೇ ಅಲ್ಲದೆ ಶೀಗಡಿ, ಜರಿ, ಎರೆಹುಳು ಮೊದಲಾದವುಗಳ ಶರೀರಕ್ಕೂ ಭಾಗಗಳಿವೆ (ಕೀಟಜ. ೧೧). **ಝರಿ$_1$**: ಝರಿ ಕಂಡರೆ ಸಿರಿ (ರೂಢಿ). [ ದೇ.॥ ತೆಲು. ಜೆಱಿ, ಜೆಱ್ಱಿ; ಪರ್ಜಿ. ಜೆರ್‍ರಿ, ಚೆರ್‍ರಿ ]

**ಜರಿ$_5$** (ನಾ). ಬೆಟ್ಟದ ಕೊರಕಲಿನಲ್ಲಿ ಹರಿಯುವ ನದಿ; ಗಿರಿನದಿ; ಝರಿ: "ಜರಿ-ಝರೀ" (ತದ್ಭಕೋ. ೧೪). [ <ಸಂ. ಝರೀ ]

**ಜರಿ$_6$, ಝರಿ$_2$** (ನಾ). ೧. ಚಿನ್ನದ ಅಥವಾ ಬೆಳ್ಳಿಯ ಎಳೆಗಳಿಂದ ಮಾಡಿದುದು; ಕಲಾಬತ್ತು; ಜರತಾರಿ: ಆ ಚಂದ್ರಶಾಲೆಗಳ ಮೇಲುಗಡೆ ಕನಾತಿನ ಫರದೆಗಳು ಜರಿಯ ಮೇಲುಕಟ್ಟುಗಳೂ ಕಟ್ಟಲ್ಪಟ್ಟಿದ್ದವು (ಶ್ರೀರಾಯ. ೪೫); ಹೊಸ ಹಸುರಿನ ಜರಿಯ ನಡೆಮುಡಿಯ ಮೇಲೆ . . . ವಿಷ್ಣುವರ್ಧನನು ನಡೆದಾಗ (ಸವತಿ. ೨). **ಝರಿ$_3$**: ಸೀರೆಯ ಬೆಲೆಯನು ಜನರು ನಿರ್ಣಯಿಪರು ಸೆರಗಿನ ಝರಿಯನು ನೋಡಿ (ಇಂಚಾಪ. ೨೦೮-೨೯). [ ←ಪಾರ. ಹಿಂ. ಮರಾ. ಜರೀ ]

**ಜರಿಕೆ$_1$** (ನಾ). ಜರಿಯುವುದು; ಹೀಯಾಳಿಸುವುದು; ತೆಗಳಿಕೆ: ಅವನ ಜರಿಕೆಯ ಮಾತು ಮುಗಿಯುವುದರೊಳಗೆ ಅಂತರಿಕ್ಷದಲ್ಲಿ ದೊಡ್ಡ ಉರಿಯೆದ್ದಂತಾಗಿ ಮೋಡಗಳೆಲ್ಲಾ ಕೆಂಪಾದವು (ಯೋಧಪು. ೬೦). [ ಜರಿ$_2$ (<ಜಱಿ) + -ಇಕೆ ]

**ಜರಿಕೆ$_2$** (ನಾ). ತ್ವರೆ; ಆತುರ: ಒಮ್ಮೆಲೆ ಹೋಗಿ ಅಕ್ಕನ ಬಗಲೊಳಗಿನ 'ರಾಗಿ' ಯನ್ನು ಎತ್ತಿಗೊಳ್ಳಲಿಕ್ಕೆ ಏನೋ ಜರಿಕೆ ಬಂತು (ವೈನಿ. ೨೬೦). [ ←ಮರಾ. ಝರಕಾ]

**ಜರಿಕೊಳ್ಳು** (ಕ್ರಿ). ಬಡವಾಗು; ಸೊರಗು: ಬೆಂಗಳೂರಿಗೆ ಹೋಗಿದ್ದಾಗ ಅವನಿಗಾಗಿ ಮಗು ಜರಿಕೊಂಡುಬಿಟ್ಟು ಉಳಿಯುತ್ತೋ ಸಾಯುತ್ತೋ ಅನ್ನುವ ಹಾಗಾಗಿತ್ತು (ಕುಸುಸಂ. ೪೫). [ ಜರಿ$_1$ (<ಸರಿ$_1$) + ಕೊಳ್ಳು$_1$ (<ಕೊಳ್$_1$) ]

**ಜರಿಗಿಡ** (ನಾ). ಒಂದು ಬಗೆಯ ಗಿಡ: "ಹಕ್ಕಿಯ ಗರಿಗಳಂಥ ಎಲೆಗಳುಳ್ಳ ರಸನಾಳಗಳಿರುವ ಗುಪ್ತ ಪುಷ್ಪೀಯ ವರ್ಗದ, ಒಂದು ಸಸ್ಯ: ಜರೀಗಿಡ" (Fern. ಇಂಕನಿ); ಜರೀಗಿಡದ ಪಾಠಮಾಡುವಾಗ . . . ನಿಜವಾದ ಜರೀಗಿಡ ತೋರಿಸಿದರೆ ವಿಷಯ ಚೆನ್ನಾಗಿ ಗೊತ್ತಾಗುತ್ತದೆ (ಶಿಕ್ಷದ. ೨೮೪). [ ಜರಿ$_0$ + ಗಿಡ (<ಗಿಡು) ]

**ಜರಿಗುಟ್ಟು** (ಕ್ರಿ). ಕುಸಿದು ಬೀಳುವಂತೆ ಮಾಡು; ನಾಶಮಾಡು: ನಷ್ಟವಹುದೀ ಲೋಕ ಕಮಲಜನಟ್ಟಿ ಕೆಡೆವಾ ಹೊತ್ತು ನೆಱಿ ಜರಿ[ಪಾಠಾಂ. ನೆಱಿ]ಗುಟ್ಟಿ ಭುವನವನು ಭೌತಿಕನಿಕರವನು ಜಱಿದಟ್ಟಿ ಹೊಗಿಸಲು ಕಾಲನು (ನಿಘಾಗ. ೧೧-೩-೫೦). [ ಜರಿ$_1$ (<ಸರಿ$_1$) + ಕುಟ್ಟು$_1$ ]

**ಜರಿಟೋಪಿ** (ನಾ). ಕಲಾಬತ್ತಿನ ಕುಸುರಿಗೆಲಸ ಮಾಡಿದ ಟೊಪ್ಪಿಗೆ: ಇಱಿದರು ತಱಿದರು ಕೊಱಿದರು ಮೂಗನು ಜರಿಟೋಪಿ ಜೋಡು ದಗಲೆಯ ಪರಿಪಟ್ಟಮಾಡಿ (ಕಂನವಿ. ೩-೬೮). [ ಜರಿ$_6$ + ಟೋಪಿ (<ಟೊಪ್ಪಿಗೆ) ]

**ಜರಿತ** (ನಾ). ಜೀರ್ಣವಾದವನು; ಕೃಶವಾದವನು: ಜರಿತಂಗೆ ನೇತ್ರರೋಗಿಗೆ . . . ಕರ್ಣಶೂಲಿಗೆ ನೀರೋದರಿಗೆ ರುಜಾಹರಣಂ ತಚ್ಚರಣಯುಗ ಸ್ಮರಣಮಾತ್ರದಿಂ ದೊರೆಕೊಳ್ಗುಂ (ಎಇ. XII, ೨೮೨-೯೪; 1077). [ ಸಂ. ]

**ಜರಿಪೇಟ** (ನಾ). ಕಲಾಬತ್ತಿನ ಅಂಚುಳ್ಳ ಪೇಟ: ಜರಿಪೇಟ . . . ಸುತ್ತಿಕೊಂಡು . . . ಹಾಡುತ್ತಿರಲಾಗಿ (ಕಥಾಮಂ. V, ೧೧): ಶುಭ್ರ ಜರಿಪೇಟ: ಮೇಧಾಕಿರೀಟ (ನಲಮು. ೬೩-೫). [ ಜರಿ$_6$ + ಪೇಟ ]

**ಜರಿಯಿಸು** 'ಸರಿಯಿಸು' ನೋ.

**ಜರಿವೊನಲ್** (ನಾ).=ಜರಿ$_5$: ಸುತ್ತಲುಂ ಪರಿವ ಜರಿವೊನಲ್ಗಳಿಂದೆತ್ತಲುಂ ನಲಿವ ಪೊಸನವಿಲ್ಗಳಿಂ (ಪಂಪಭಾ. ೩-೨೨ ರಗಳೆ). [ ಜರಿ$_5$ + ಪೊನಲ್ ]

**ಜರಿಸೀರೆ, ಝರಿಸೀರೆ** (ನಾ). ಕಲಾಬತ್ತಿನ ಕುಸುರಿಗೆಲಸ ಮಾಡಿದ ಸೀರೆ; ಜರತಾರಿಸೀರೆ: ಅವಳು ಜರಿಸೀರೆ ಉಟ್ಟಿದ್ದಾಳೆ (ರೂಢಿ). **ಝರಿಸೀರೆ**: ಉಟ್ಟಿಹೆ ಮೇಲ್ ಝರಿಸೀರೆಯ (ಕುಮೂವಿ. ೩೨). [ ಜರಿ$_6$ + ಸೀರೆ$_2$ ]

**ಜರಿಸು** 'ಸರಿಯಿಸು' ನೋ.

**ಜರಿಹು, ಜರುಹು** (ಕ್ರಿ). ಜರಿಸು; ಕೆಡಹು; ಉರುಳಿಸು: ವಾದ್ಯದ ಹರುಷತರ ನಿರ್ಘೋಷದಬ್ಬರ ಜರಿ[ಪಾಠಾಂ. ರು]ಹಿತಡಕಿಲು ಜಗದ ಜೋಡಿಯನು (ಕುವ್ಯಾಶ. ೨-೫). **ಜರುಹು**: ಹಯವೋಹರವ ಜರುಹಿದನೌಕಿ ಹರಿತಹ ವರರಥವ ಹುಡಿಮಾಡಿದನು (ಕುವ್ಯಾದ್ರೋ. ೫-೧೨); ಜೋಡ ಜೋಕೆಯ ಜರುಹಿದನು ಜವಗೆಡಿಸಿದನು ನಿನ್ನಾತನನಿಲಜನ (ಕುವ್ಯಾಕ. ೧೪-೨); ಜರುಹಿದರು ಬಳಿಕದರಿ[ಪಾಠಾಂ. ಜರಿಯಗೆಡಹಿದರಿವರು]ಚಾಮಿಕರದ ಚಟುಳಪ್ರಭೆಯ ಕೋಟೆಯನುರುಳಿಸಿದರು (ತೊರರಾ. ೬-೧೧-೧೪). [ ಜರಿ$_1$ (<ಸರಿ$_1$) + -ಹು$_1$ ]

**ಜರಿಹುಲ್ಲು** (ನಾ). ಒಂದು ಬಗೆಯ ಹುಲ್ಲು: ಕೊಡಿಮರ ಹುಲ್ಲು, ಗೊದುರಹುಲ್ಲು, ಜರಿಹುಲ್ಲು (ವ್ಯಜಿಗಿ. ೩೪-೬೪). [ ಜರಿ? + ಹುಲ್ಲು (<ಪುಲ್) ]

**ಜರೀಪಟಕ** (ನಾ). ೧. ತಲೆಗೆ ಸುತ್ತುವ ಕಲಾಬತ್ತಿನ ಅಂಚುಳ್ಳ ವಸ್ತ್ರ; ಜರಿಪೇಟ. ೨. ಪೇಶ್ವೆಗಳ ಚಿಹ್ನೆಯನ್ನುಳ್ಳ ಬಾವುಟ: (+). ೩. ಕಲಾಬತ್ತಿನ ಸೊಂಟಪಟ್ಟಿ,-ನಡುಕಟ್ಟು: (+). [ ←ಮರಾ. ಜರೀಪಟಕಾ]

**ಜರೀಬ್** 'ಜರೀಬು' ನೋ.

**ಜರೀಬು, ಜರೀಬ್** (ನಾ). ೧. ಭೂಮಿಯನ್ನು ಅಳೆಯುವ ಸಾಧನ,-ಸರಪಳಿ: (+). ೨. ಭೂಮಿಯನ್ನು ಅಳೆಯುವುದು; ಪಹಣಿ. 'ಜರೀಬುಗಾರ' ಪರಾ. **ಜರೀಬ್**: ೨. (ವ್ಯಗೆಜಿ. IV, ೬೬೨). [ ←ಅರ. ಹಿಂ. ಮರಾ. ಜರೀಬ್ ]

**ಜರೀಬುಗಾರ** (ನಾ). " (ಉಪಯೋಗಿಸುವ ಪದಾರ್ಥಗಳ ಮೊತ್ತದ ಪಟ್ಟಿಗಳನ್ನು ತಯಾರಿಸುವುದು, ಆದ ಕೆಲಸವನ್ನು ಅಳೆದು ಅದರ ಬೆಲೆ ಗೊತ್ತುಮಾಡುವುದು, ಮೊ. ನ್ನು ನಿರ್ವಹಿಸುವ) ಕಟ್ಟಡ ಕೆಲಸದ ಅಳತೆಗಾರ ; ಜರೀಬಂಗಾರ" (Quantity Surveyor. ಇಂಕನಿ).
[ ಜರೀಬು + – ಕಾರ$_1$ (<– ಕಾಱ) ]

**ಜರುಗಿಸು**, ಜರಗಿಸು (ಕ್ರಿ). ೧. ಪಕ್ಕಕ್ಕೆ ಸರಿಸು,–ನೂಕು,–ತಳ್ಳು : ಜಗತ್ತ್ರಯವ ಜರುಗಿಸುವೆನು ಮಹಾಜಲದಲಿ (ತೊರರಾ. ೩-೧೧-೫೩). ೨. ನಡಸು ; ನೆರವೇರಿಸು ; ಸಾಗಿಸು ; ನಿರ್ವಹಿಸು : ಸಂಸ್ಥಾನದ ಸಕಲವಿಧ ಕಾರ್ಯಕಲಾಪಗಳನ್ನೂ ಜರುಗಿಸಿ (ಗುರುದ. ೧೧); ಖದೀವನ ಮೇಲೆ ಯಾವ ವಿಧವಾದ ಕ್ರಮವನ್ನೂ ಜರುಗಿಸುವುದಿಲ್ಲ (ಇಸ್ಲಾಂಸಂ. ೫೯). **ಜರಗಿಸು :** ೨. ಹರವಲ್ಲಭನು ಸಾಲವನ್ನು ಹರಿಸುವ ಪ್ರಯತ್ನವನ್ನು ಜರಗಿಸಲಿಲ್ಲ (ದೇವೀಚಾ. ೧೩೩). [ ಜರುಗು$_1$ + – ಇಸು$_3$ ]

**ಜರುಗು$_1$**, ಜರಗು$_1$ (ಕ್ರಿ). ೧. ಪಕ್ಕಕ್ಕೆ ಸರಿ; ಜರಿ: ಸ್ವಲ್ಪ ಜರುಗಿ ಕುಳಿತುಕೊಳ್ಳಿ, ಇನ್ನೂ ಒಬ್ಬರಿಗೆ ಜಾಗವಾಗುತ್ತದೆ (ರೂಢಿ). ೨. ಹಿಂಜರಿ ; ಹಿಮ್ಮೆಟ್ಟು : ಹೊರಳಿಯೊಡೆದರು ಭಟರು ಸಿಡಿದರು ಜರುಗಿದರು (ಶಬ್ದಾದ್ರೋ. ೧೬-೧೨): ಬೀಳುವ ಶೈಲದುರುಬೆಯಲಿ ಜರುಗಿ[ಪಾಠಾಂ. ಹಿ]ದವು ತೆರೆ (ತೊರರಾ. ೬-೫-೩೦). ೩. ನಡೆ; ಸಾಗು: ಪುತ್ರೋತ್ಸವವು ಬಹಳ ವಿಜೃಂಭಣೆಯಿಂದ ದೇಶದಲ್ಲೆಲ್ಲಾ ಜರುಗಿತು (ಮಹಿಸ. ೪೧) ; ಪೊಳ್ಳು ಜಂಭವು ಅಲ್ಪಕಾಲ ಮಾತ್ರ ಜರುಗುತ್ತಿದ್ದಿತು (ಧೂರಾಹ. ೫). ೪. (ಕಾಲದಂತೆ) ಕಳೆದುಹೋಗು ; ವ್ಯತೀತವಾಗು : (ಕ). **ಜರಗು$_1$ :** ೩. ದೇವಾಲಯದ ಜಾತ್ರೆ ಜರುಗುತ್ತದೆ (ಕುಡಿಕೊ. ೧೮೩).
[ ದೇ.॥ ತಮಿ. ಚರುಕ್ಕು ; ಮಲ. ಚರ್ಕು ; ತೆಲು. ಜರುಗು, ಜರಗು ; ಕೊಲಾ. ಜರಾಗ್ ; ಕುವಿ. ಜರ್ಗಿನ್ನೈ ; ಮಲ್ತೊ. ಜರ್ಕೆ ]

**ಜರುಗು$_2$** 'ಜರಗು$_2$' ನೋ.

**ಜರುಗುಪಟ್ಟಿ** (ನಾ). ಸರಿದಾಡುವ ಪಟ್ಟಿ : "ಕೆಲವು ಗಣನಾ ಸಲಕರಣೆಗಳಲ್ಲಿ ಮಾನಫಲಕದ ಮೇಲೆ ಓಡಾಡಿಸಲು ಅಳವಡಿಸಿರುವ ಗುರುತುಪಟ್ಟಿ: ಜರುಗುಪಟ್ಟಿ" (Cursor. ಇಂಕನಿ). [ ಜರುಗು$_1$ + ಪಟ್ಟಿ$_2$ ]

**ಜರುಗುಪೀಠ** (ನಾ). ಹಿಂದಕ್ಕೂ ಮುಂದಕ್ಕೂ ಸರಿಸಲು ಬರುವ ಪೀಠ: "(ಮು. ಜೂಜು ದೋಣಿಗಳಲ್ಲಿ) . . . ಹಿಂದಕ್ಕೂ ಮುಂದಕ್ಕೂ ಸರಿದಾಡುವ, ಹುಟ್ಟು ಹಾಕುವವನು ಕುಳಿತುಕೊಳ್ಳುವ ಪೀಠ; ಜರುಗುಪೀಠ" (Sliding Seat. ಇಂಕನಿ). [ ಜರುಗು$_1$ + ಪೀಠ ]

**ಜರುಗೆಡಹು** (ಕ್ರಿ). ಜರಿದು ಬೀಳುವಂತೆ ಮಾಡು ; ಕೆಡಹು ; ಉರುಳಿಸು : ಜೋಡ ತಱಿದನು ಛತ್ರ ಚಮರಿಯ ಝಾಡಿಯನು ಜರುಗೆಡಹಿ[ಪಾಠಾಂ. ತಱಿದೊಟ್ಟಿ]ದನು ಕಲಿಪಾರ್ಥ ನಿಮಿಷದಲಿ(ಕುಷ್ಟಾ.ಕ. ೨೫-೯). [ <ಜರುಗು$_1$ + ಕೆಡಹು (<ಕೆಡಪು) ]

**ಜರುಚು** 'ಜಱುಚು$_1$' ನೋ.

**ಜರುಬು** 'ಜರ್ವು$_2$' ನೋ.

**ಜರುವು** 'ಜರ್ವು$_1$' ನೋ.

**ಜರುಹು** 'ಜರಿಹು' ನೋ.

**ಜರೂರ** 'ಜರೂರು' ನೋ.

**ಜರೂರಿ** (ಗು). ೧. ಅತ್ಯಗತ್ಯವಾದ ; ಕೂಡಲೇ ಆಗಬೇಕಾದ ; ಅತ್ಯಾವಶ್ಯಕವಾದ : ಜರೂರಿ ಕೆಲಸ ಅದೆ (ಮೋದಿಮ. ೧೮). (ನಾ). ೨. ಆವಶ್ಯಕತೆ ; ಅಗತ್ಯ : ಅವಳೊಡನೆಯ ಮಾತಿನ ಜರೂರಿ ನನಗೇನೂ ಇರಲಿಲ್ಲ (ಕಾಗಕ. ೧೧೩). ೩. ಒತ್ತಾಯ: ಒಂದು ಸಾರಿ ನಮ್ಮ ಮನೆಯತನಕ ಬರಬೇಕು ಎಂದು ಜರೂರಿಯಿಂದ ಮಾತನಾಡಿದ (ಜಾರುದಾ. ೨೫೬).
[ ←ಪಾರ. ಹಿಂ. ಮರಾ. ಜರೂರೀ ]

**ಜರೂರು**, ಜರೂರ (ಗು). ೧. ಅಗತ್ಯವಾದ ; ಕೂಡಲೇ ಆಗಬೇಕಾದ: ಒಂದು ಜರೂರು ಕೆಲಸ ನಿಮಿತ್ತ ಅವನು ತಕ್ಷಣವೇ ಬೇರೊಂದು ಊರಿಗೆ ಹೊರಡಬೇಕೆಂದು ಆಜ್ಞೆಯಾಯಿತು (ನಾಪೋಲಿ. ೧೬೪). (ನಾ). ೨. ಅಗತ್ಯ ; ಆವಶ್ಯಕತೆ: ಶಿವಪ್ಪನ ವಿಷಯಕ್ಕೆ ನೀ ಏನೂ ಕಾಳಜೀ ಮಾಡೂ ಜರೂರಿಲ್ಲ (ಪ್ರಣಸ. ೮೧). ೩. ಕೂಡಲೇ ಆಗಬೇಕಾದುದು ; ಅಗತ್ಯವಾದುದು: ಒಂದು ವೇಳೆ ಜರೂರಿನ ಕೆಲಸಕ್ಕಾಗಿ ಕಡಿದರೆ (ಮುಂಬಯಿ.೫-೪): ಸರಕಾರದ ಕೆಲಸ ಬಹಳ ಜರೂರಾಗಿದೆ (ಕಥಾಮಂ. IV,೩೨). **ಜರೂರ :** ೨. ಇಷ್ಟೆಲ್ಲ ದುಂಡು ಸುತ್ತೂದೇನು ಜರೂರ ಇರಲಿಲ್ಲ (ಗ್ರಾಮಾಯ. ೨೭೬): ಈಗ ಜರೂರ ಅದ ಹೋಗೋದು (ಅಕೋಕ. ೩೦).
**ಜರೂರಾಗಿ** = ಕೂಡಲೇ ; ಬೇಗನೆ ; ಅವಸರದಿಂದ : ಈಗ ನಾನು ಸ್ವಲ್ಪ ಜರೂರಾಗಿ ಕಚೇರಿಗೆ ಹೋಗಬೇಕಾಗಿದೆ (ಯೋಧಪು. ೯): ಬೆಳಗ್ಗೇನೇ ಜರೂರಾಗಿ ಮನೆ ಬಿಟ್ಟು ಬಂದೆ (ಮನೋಸಂ. ೨೫).
[ ←ಅರ.ಪಾರ. ಹಿಂ. ಮರಾ. ಜರೂರ್ ]

**ಜರೂರುಟಪ್ಪಾಲು** (ನಾ). ಕೂಡಲೇ ಮುಟ್ಟಿಸಬೇಕಾದ ಕಾಗದ; ವೇಗವಾಗಿ ತಲುಪಿಸುವ ಅಂಚೆ : ಅದು ಸಕಾಲದಲ್ಲಿ ಮುಟ್ಟಲೆಂದು ಜರೂರು ಟಪ್ಪಾಲು ಕಳಿಸಿದ್ದರು (ರೂಢಿ). [ಜರೂರು + ಟಪ್ಪಾಲು (<ಟಪಾಲು)]

**ಜರೆ$_1$** 'ಜಱೆ' ನೋ.

**ಜರೆ$_2$** 'ಸರಿ$_1$' ನೋ.

**ಜರೆ$_3$** (ನಾ). ೧. ಮುಪ್ಪು ; ವೃದ್ಧಾಪ್ಯ : "ಜರಾ, ವಿಸ್ರಸಾ–ಈ ೨ ಮುಪ್ಪು" (ಹಲಾಯು. ೮೩-೩೪೯): ಜರೆ ಬಂದೊಟ್ಟೈಸೆ ಮಾಣ್ದಿರ್ದಳಿಪೆನಗೆ ಮುಂ ಸಾಲದೇ (ಆದಿಪು. ೨-೪೯) : ಜರೆಯಿಂದಂ ಪುರ್ಬು ಜೋಲಲ್ (ಕಾದಂಪೂ. ೧೭೫) : ತನುವಿಡಿದ ಜರೆಯನೋವದೆ ತೊಳೆದು ಕಳೆವಂತೆ (ತಿರುರ. ದೇ. ೨೫-೧೦) ; ಬಾಲ್ಯ ಕೌಮಾರದಿಂ ಯೌವನವನತಿಗಳೆದು ಜರೆಗೆ ದಾಂಟಿದಳಹಾ ನರೆಯೇರಿ (ಶ್ರೀರಾಮಾ. ೨೪-೬೨೯) . ೨. ಹಳೆಯದು ; ಜೀರ್ಣವಾದುದು. 'ಜರೆಯುರುವೆ' ಪರಾ. [ ಸಂ. ಜರಾ ]

**ಜರೆತ** (ನಾ). ತೆಗಳಂಪುದು ; ನಿಂದೆ : "ಗರ್ಹೆ, ಗಹ್ನ, ಗರ್ಹನಂ, ಗರ್ಹನೀಯಂ ಈ ೪ ಜರೆತಂ" (ಕಾಶಕ್ಕ. ೧೨೩).
[ ಜರೆ$_1$ (<ಜಱೆ) + – ತ$_2$ ]

**ಜರೆನರೆ** (ನಾ). ಮುಪ್ಪಿನಿಂದಾದ ಬಿಳಿಯ ಕೂದಲು ; ನರೆಗೂದಲು : ಹೆಂಡಿರನು ಜರೆನರೆ ಪುದಿದ ವೃದ್ಧಪಿತಾಮಹರನೆಳೆವದುಭುತದ ಕಳಕಳಿಕೆ ಬಲಿದುದು ನಗರದಗಲದಲಿ (ತೊರರಾ. ೫-೮-೬೯). [ ಜರೆ$_3$ + ನರೆ$_2$ ]

**ಜರೆಪಡು** 'ಜರೆವಡು' ನೋ.

**ಜರೆಯುರುವೆ** (ನಾ). ಹಳೆಯ ಬಟ್ಟೆ ; ಚಿಂದಿ : ಹಳಿಯ ಕರ್ಪರದ ಮಸಿಯುಟ್ಟು ಕಳೆದ ಜರೆಯುರುವೆ ಗ್ರಾಮಸಿಂಹದ ಬಾಲ ಬಚ್ಚಲಿಂ ಹರಿವ ಜಲ (ಲಿಂಗಪು. ೨೭-೩೦). [ ಜರೆ$_3$ + ಅರುವೆ$_0$ (<ಅಱುವೆ) ]

**ಜರೆವಡು**, ಜರೆಪಡು (ಕ್ರಿ). ಮುಪ್ಪಾಗು ; ಮುದಿಯಾಗು : ಎನ್ನ ಹರೆಯಂ ಬಿಟ್ಟು ಜರೆವಟ್ಟು ಹೊಲೆಗೆಟ್ಟು (ಸಿದ್ಧರಾ. ೧-೪೧). **ಜರೆಪಡು:** ಜರೆಪಟ್ಟು ಮೂರ್ಛೆದಟ್ಟಿರದೆಮ್ಮ ತಾಯ್ಗಳು ಸುರರು ಜೀಯೆನೆ ಯಿದಿರ್ಗೊಂಡ ಸಿರಿಗೆ ನಾ ವರ್ತಿಸಬೇಕಲ್ಲದಿದಕೆ ನೋವರೆ ಕಂದ (ಭರತ. ೫೮-೧೦೨). [ ಜರೆ$_3$ + ಪಡು$_1$ ]

**ಜರ್ಕು**, ಜೆರ್ಕು$_1$ (ಕ್ರಿ). ಉಗುರಿನಿಂದ ಗೀರು,–ಗಾಯಮಾಡು : "ಜರ್ಕು–ನಖಘಾತನೇ (ಉಗುರಿನಿಂದ ಹೊಡೆ)" (ಶಮಥಾ). **ಜೆರ್ಕು$_1$ :** "ಜೆರ್ಕು–ನಖಕ್ಷತೇ (ಉಗುರಿನಿಂದ ಗಾಯಮಾಡು)" (ಶಮಥಾ). [ ? ]

**ಜರ್ಗನೆ** (ಅ). ರಭಸವಾಗಿ ; ತಟ್ಟನೆ ; ಕೂಡಲೇ : ನಕ್ಕು ಕುಕಿಲುತ್ತುಂ ಜರ್ಗನಾಡುತ್ತೆ ತೋರ್ಪ ವಿಕಾರಂ ಸಭೆಗಾಗಳೇಂ ಪಡೆದುದೋ ವಕ್ತ್ರಪ್ರಕಾಶೋದಿತಾರವಮಂ ಕಂಠದೆ (ರಸರ. ೨-೯೮). [ಜರ್ಗು + – ಅನೆ$_1$]

**ಜರ್ಗಿಸು,** ಜಗಿಸು, ಜಗ್ಗಿಸು (ಕ್ರಿ). ೧. ಕುಗ್ಗಿಸು ; ಕುಸಿಯಿಸು ; ಬಗ್ಗಿಸು : ಜರ್ಗಿಸಿ, ಗೂಳಿಯನೊಂದನ್ ನಾಲಗೆಯುನ್ ಸೀಳ್ದನವನ್ (ಅಶ್ವತ್ಥಾ. ೧೦-೨೦೮). **ಜಗಿಸು :** ೧. ಕರೆಸಿದಂ ಸಚಿವರಂ ಸೇನಾಧಿನಾಯಕರನು ಜ[ಪಾಠಾಂ. ಚಿ]ಗಿಸಿದಂ ಚತುರಂಗಮಂ ನೆರಹಿ ಧಾತ್ರಿಯಂ (ಜೈಮಿಭಾ. ೧೭-೫೭). **ಜಗ್ಗಿಸು :** ೧. ತಗ್ಗಿ ನಡೆಯುವ ಕುಲವಧೂಜನ ಪತಿಯ ಜಗ್ಗಿಸಿ ಕಿರಿಚಿಸಿ ನಗುತ ನಿಸ್ಸಂಕೋಚ ಬಾಚುವ ಸರಸಕಿವೆ ತವರೆನ್ನಿಸಿ (ಗಣೇಶ. ೭೨-೧೩). ೨. ಸಗ್ಗುವಂತೆ ಮಾಡು ; ಸೋಲಿಸು : ಕೆಟ್ಟ ಮಾತು ಯಾವುವೂ ಅವನನ್ನು ಜಗ್ಗಿಸಲಿಲ್ಲ (ಮುನಿಮಾ. ೩೭). ೩. ತೂಗು; **ಒಲೆದಾಡು :** ಸೋಗೆಯು ನವಿಲಂತೆ ಕೊರಳು ಕಾಣೆ ಮೈಯು ಜಗ್ಗಿಸಿ ನಡೆವ ನೋಟ ಅಂಬು ಕಾಣೆ (ನಾಪದ. ೨೦೮). ೪. ಎಳೆ ; ಜಗ್ಗು : ಬಲಿಷ್ಠವಾದ ಆ ಎತ್ತುಗಳು ತಾವು ಹೊತ್ತಿರುವ ಭಾರವನ್ನು ಲಕ್ಷಿಸದೆ ಲೆಕ್ಕವಿಲ್ಲದಂತೆ ಗಾಡಿಯನ್ನು ಜಗ್ಗಿಸುತ್ತಿದ್ದುವು (ಪೂಲಾನ. ೧೧೯). ೫. **ವಿಶೇಷವಾಗು ; ವಿಪುಲವಾಗು ; ಹೆಚ್ಚಾಗು :** ನನ್ನ ತೌರೂರಿನ ಮುಂದೆ ಜಗ್ಗಿಸಿ ಹುಯ್ಯೋ ಮಳೆರಾಯ (ನನ್ನೂರು. ೦೧೯). 'ತಟ್ಗಿಸು' ಪರಾ. [ ಜರ್ಗು + – ಇಸು$_3$ ]

**ಜರ್ಗು,** ಜಗ್ಗು$_1$ (ಕ್ರಿ). ೧. ಕುಗ್ಗು ; ಕುಸಿ ; ಜರಿ : ಇಂತು ಪನ್ನೆರಡು ಕಾಲಂಬರಂ ತಪದೊಳಿರ್ಪುದುಂ ಕಡಲ್ ಕುದಿವನ್ನಂ ನೆಲವೆಟ್ಟು ಜರ್ಗುವನ್ನಂ . . . ತಪಃಪ್ರಭಾವಮೊಂದೇಟ್ಗಿವೆತ್ತು ದೆಸೆದೆಸೆಯೊಳಂ ಮಸಗೆ (ರಾಮಾಶ್ವ. ೫೫-೧೭) ; ಈ ನೀಚ ನಿರ್ದ್ಯೆವಿಯನ್ ಎಂದುಂ ಜರ್ಗಿ ಜಗುಟದ ವಜ್ರಸಮ ಸಂಕಲೆಗಳಿಕ್ಕಿ ಬೆಟ್ಟದೆಟ್ಟರದ ಮುಡಿಗೆ ಕಟ್ಟುವುದು (ಬದ್ಧಪ್ರ. ೧-೫೪). 'ಜರ್ಗುವೀಟ್' ಪರಾ. **ಜಗ್ಗು$_1$:** ೧. ಭೊಗ್ಗನೊಂದೇ ದಿನದೊಳು ತೋಟನಾತ್ಮನು ಬಗ್ಗಿದಾಗಳೆ ಬಾಗಿಲಹುದೆ ನುಗ್ಗೆಯ ಮರನಲ್ಲ ಕರ್ಮವೆಂಬುದು ಕರ್ಮ ಜಗ್ಗಲೊಯ್ಕನೆ ತೋಟು ತಿಹನು (ಭರಜ. ೨-೭೭) ; ಭೂಮಿಯು ಉತ್ತರದಿಕ್ಕಿನಲ್ಲಿ ಜಗ್ಗಲಾಗಿ ದಕ್ಷಿಣ ಪ್ರದೇಶ ಮುನ್ನತಮಾದುದು (ಕಕುಮಾ. ೨೩೭) ; ಜಗ್ಗಿತಾಗಳೆ ಮನಸು ದೇಹವು ಕುಗ್ಗಿದುದು ವೈರಾಗ್ಯದಿಂ ಶಿರ ತಗ್ಗಿದುದು (ಆದಿಪ. ೯-೮) ; ಸಾವಿರಾರು ರೂಪಾಯಿ ಖರ್ಚುಮಾಡಿ ಔಷಧ ಕೊಡಿಸಿದರೂ ರೋಗ ಜಗ್ಗಲಿಲ್ಲವಂತೆ (ಹಬ್ಬಿಬ. ೦೯). ೨. **ಭಾರದಿಂದ ಬಾಗು,–ತೂಗು ; ಜೋಲುಬೀಳು :** ಹೆಂಗಳ ರನ್ನೆಯ ಹೇಮವಕ್ಷವನಾಂತ ಕಂಗೊಳಿಸುವ ಬಟ್ಟಮೊಲೆಯ ಅಂಗನೆಯುಡಿಯಿಡಲಲುಗಿ ಜಗ್ಗುವುದೆಂದು ಮಂಗಳಬವಕೆಯಿಕ್ಕಿದರು (ಮೋಹತ. ೨೩-೪೩). ೩. ದಕ್ಕು ; ಸಗ್ಗು ; ಆಳವಿನಲ್ಲಿ ಬರು : ಹೆರಿಗೆ ಅವಳಿಗೆ ಜಗ್ಗದೆ ಹೋಯಿತು (ಮುನಿಮಾ. ೮೦) ; ಪೋಲೀಸರು ಅಡ್ಡಿಪಡಿಸಿದರು . . . ಆದರೆ ಕ್ರಾಂತಿಕಾರರು ಜಗ್ಗಲಿಲ್ಲ (ಅಹ್ಮಾರ್ಪ. ೦೨೪). ೪. **ಒಲೆದಾಡು ; ತೂಗಾಡು ; ತೊನೆದಾಡು :** ಪೊಟಿಗೆಟ್ಟು ಮಾತನಾಡುವರು ಪಾಡುವರು ಕೈಪಟಿ ತಾಳಗತಿಗೆ ಜಗ್ಗುವರು (ಮೋಹತ. ೦೮-೯೩). ೫. **ಎಳೆ ; ಸೆಳೆ ; ಸೇದು :** ಅತ್ತಿತ್ತ ಜಗ್ಗಿದಾನಂದದೆಳೆಗಳ ಹಿಡಿದು. ಒಂದೆಡೆಗೆ ಸುತ್ತಿರುವ ಕೊನೆಯ ಹಾಡು (ನೆಲಮು. ೪೪-೩) ; ಕರುವೂ ಅಷ್ಟೇ ಬಲವಾಗಿ ಹಗ್ಗವನ್ನು ಜಗ್ಗುತ್ತಿದೆ ಓಡುವುದಕ್ಕೆ (ಆಕಾಶ. ೪೩) ; ನೀರು ಜಗ್ಗಿಕೊಂಡು ಬಾವಿಯ ಮೇಲೆ ಸ್ನಾನ ಮುಗಿಸಿದರು (ದೀಪಹ. II, ೦೦೪). 'ತಟ್ಗು' ಪರಾ.

**ಜಗ್ಗುಹಾಕು** = ಮೈ ಅತ್ತಿತ್ತ ಒಲೆಯುವಂತೆ ನಡೆ: ಮೆರವಣಿಗೆಯ ಗಜರಾಜ ಜಗ್ಗುಹಾಕಿ . . . ಸಾಗುವ ಗತ್ತು, ಗಾಂಭೀರ್ಯ, ರಾಜವೈಖರಿ (ಕಓಸಾ. XXI, ೬೮೫). [ ದೇಶಿ. ತುಳು. ಜಗ್ಗ್ ]

**ಜರ್ಗುವೀಟ್,** ಜಗ್ಗುಬೀಳು (ಕ್ರಿ). ಕಂಸಿದು ಬೀಳು ; ಭಾರದಿಂದ ಜೋಲುಬೀಳು : ನುರ್ಗಿದುದೆನೆ ತರ್ಗಿದುದೆನೆ ಕಿರ್ಗಿದುದೆನೆ ಜರ್ಗುವಿಟ್ಟುದೆನೆ . . . ಮಾರ್ಗದೊಳ್ ಸರೇಫಪದಂಗಳ್ (ಶಮದ. ೩೮) ; ಬಿರ್ದ ಮೊಲೆ ಪೊರ್ಕುಟನಳ್ಳಿಟಿದಾಡುವನ್ನಮೆದ್ದಾಡುವ ಜರ್ಗುವಿಟ್ಟ ಮದುವೆಂಡಿರ ಭಂಗಿಯೆ ಹಾಸ್ಯಭಾವಮಂ ನಾಡೆ ಮನಕ್ಕೆ ಸಂಗಳಿಸಲಾರ್ತುದು ನೋಡುವ ನೋಟಕರ್ಕಳಾ (ಶೃಂಗಾರ. ೧-೪೯). **ಜಗ್ಗುಬೀಳು :** ಗೊನೆ ಜಗ್ಗುಬಿದ್ದಿದೆ, ಆನಿಕೆ ಕೊಡಬೇಕು (ರೂಢಿ).

[ ಜರ್ಗು + ಬೀಟ್$_1$ ]

**ಜರ್ಜರ** (ಗು). ೧. ಹಳೆಯ; ಶಕ್ತಿಗುಂದಿದ; ಶಿಥಿಲವಾದ. ೨. ಚೂರುಚೂರಾದ ; ಒಡೆದಂ ಹೋದ ; ಚೆಲ್ಲಾಪಿಲ್ಲಿಯಾದ : "ಸರಸಿಜ ನಷ್ಟ ಜರ್ಜ[ಪಾಠಾಂ. ರ್ಝ]ರ ಪತಾಕೆಗಳ್ಳೆದೆ ವಿಶೀರ್ಣಮಕ್ಕು" (ನಾನಾರ. ೪೨). (ನಾ). ೩. ಗಾಯಗೊಂಡುದು; ಬಿರಿದುದು; ಛಿದ್ರಛಿದ್ರವಾದುದು: ಔದುಂಬರ ಕುಷ್ಠಮಾಗಿ ಸರ್ವಾಂಗೋಪಾಂಗಾವಯವ ಪ್ರದೇಶಂಗಳೆಲ್ಲಂ ರೂಪಟಿಯಲಾಗದಂತು ಜರ್ಜರಮಾಗಿ ಜರಿಯೆ (ಸುಕುಮಾ. ೫-೧೧ ವ). ೪. ಮಾಸಿದುದು ; ವಂಸಂಕಾದುದು : ಬಿಚ್ಚಿದ ಕೇಶಪಾಶಮುಬ್ಬರಿಸಿದ ರೇಖೆಗಳ್ ಸುಗಿದು ಪೋಗದ ಜರ್ಜರವಾದ ಬೊಟ್ಟು ಸೌಂದರತರಮಾಗೆ ದಂಪತಿಗಳಿಂತೆಸೆದರ್ ಸುರತಾವಸಾನದೊಳ್ (ಸೂಕ್ತಿಸು. ೧೪-೭೩). ೫. ಮುದುಕ ; ವೃದ್ಧ : ಇವನುಂ ತರುಣನೆಯಾನುಂ ಯುವನೆನೆ ಸುರಾಪಗಾನಂದನಂ ಮಹಾಜರ್ಜರನೇ (ಗದಾಯು. ೪-೫೮). [ ಸಂ. ]

**ಜರ್ಜರತೆ** (ನಾ). ಶಿಥಿಲತೆ ; ದುರ್ಬಲತೆ : ವೀರಶೈವಸಾಹಿತ್ಯದ ಜನಪ್ರಿಯತೆ, ಜೊತೆಗೆ ಜೈನರ ಜರ್ಜರತೆ ಇವುಗಳ ಹಿನ್ನೆಲೆಯುನ್ನು ಲಕ್ಷ್ಯದಲ್ಲಿ ತೆಗೆದುಕೊಂಡರೆ ಹರಿಹರನ 'ಗಿರಿಜಾಕಲ್ಯಾಣ'ವು ಆಗಲೆ ಪ್ರಸಿದ್ಧಿಯನ್ನು ಪಡೆದಿರುವಂತೆ ತೋರುತ್ತದೆ (ಸಾಹಿಸ. ೧೩೭). [ ಸಂ. ಜರ್ಜರತಾ ]

**ಜರ್ಜರಿ** (ನಾ). = ಜರ್ಜರ ೩: ಸಿಡಿಯೆ ಮಕುಟವು ಬಿದ್ದ ರಕ್ಕಸನೊಡಲು ಜರ್ಜರಿಯಾಯ್ತು (ಕೌಶಿರಾ. ೨೧-೪೩). [ <ಸಂ. ಜರ್ಜರಿತ ]

**ಜರ್ಜರಿಗೆ**(ನಾ). ಒಂದು ಬಗೆಯ ಮೂಲಿಕೆ: "ಪಿಕಮೂಲಂ-(ಜ)ರ್ಜರಿಗೆ" (ಓಷಧಿ. ೯೮). [ ? ]

**ಜರ್ಜರಿಗೆಣಸು** (ನಾ). ಒಂದು ಬಗೆಯ ಗೆಣಸು : "ಪಿಂಗಮೂಲಕಂ– ಜರ್ಜರಿಗೆಣಸು" (ಓಷಧಿ. ೯೮). [ಜರ್ಜರಿ ? + ಗೆಣಸು (<ಗೆಟಸು)]

**ಜರ್ಜರಿತ** (ಗು). ೧. ಒಡೆದ ; ಚೂರುಚೂರಾದ ; ಭಗ್ನವಾದ ; ಭಿನ್ನವಾದ. ೨. ಗಾಯಗೊಂಡ; ನುಗ್ಗುನುಗ್ಗಾದ; ಜಜ್ಜಿದ: ಸುಭಟರೆದೆ ಜರ್ಜ[ಪಾಠಾಂ ರ್ಝ]ರಿತವಾದುದು (ಕುವ್ಯಾದ್ರೂ. ೧೪-೨೮); ಮರಳಿ ತಿವಿದರೆ ದೈತ್ಯನೆದೆ ಜರ್ಜರಿತವಾಯಿತು (ಕೌಶಿರಾ. ೩೨-೪೦). ೩. ದಣಿದ; ನಿರ್ವಿಣ್ಣವಾದ: ಮನೆಯಲ್ಲಿ ತನ್ನ ಮದುವೆಯ ಪ್ರಶ್ನೆಯ ಬಗ್ಗೆ ನಡೆದ ತಿಕ್ಕಾಟದಿಂದ ಕುಸುಮಾ ಜರ್ಜರಿತಳಾಗಿದ್ದಳು (ಸಮುಜೀ. ೨೫೩). ೪. ಅಸ್ತವ್ಯಸ್ತವಾಗಿ ಕೆದರಿದ ; ಚಲ್ಲಾಪಿಲ್ಲಿಯಾಗಿ ಹರಡಿದ : ಸಂಗ್ರಾಮರಂಗದೊಳಗನೆ ಮುಂದಿಟ್ಟೊಡಗೊಂಡನೇಕ ನೃಪಶಿರಃಕಪಾಳಶಕಳ ಜರ್ಜರಿತಮುಂ . . . ನರ್ತಿತಾನೇಕಕಬಂಧಬಂಧುರಮುಮಪ್ಪ ವಿಷಮ ಪ್ರದೇಶಂಗಳೊಳ್ ತೊಲಗಿ ತೊಲಗಿ ಪೋಗೆ (ಪಂಪಭಾ. ೧೩-೫೦ ವ) ; "ಚುಚ್ಚಿ ಗಾಯಮಾಡುವ" (ಪಂಪನಿ) ; "ರಾಜರ ತಲೆಯೋಡಂಗಳಿಂದ ಕಿಕ್ಕಿರಿದದ್ದು" (ಪಂಪದೀ. ೫೨೯). (ನಾ). ೫. ಚೂರುಚೂರಾದುದಂ ; ಒಡೆದಂದು ; ಭಗ್ನವಾದುದು : ಜರೆ ಬಿಟುಗಾಳಿಯ ತೆಟದಿಂದಿರದೆಯ್ದೆ ಮದೀಯ ಕಾಯತೃಣಕುಟಿಯಂ ಜರ್ಜ[ಪಾಠಾಂ. ರ್ಝ]ರಿತಂ ಮಾಡದ ಮುನ್ನಮೆ ಪರಮತಪೋಭರಮನಾಂಪ ಬಗೆಯಂ ಬಗೆದೆಂ (ಚಂದ್ರಪ್ರ. ೪-೧೭). [ ಸಂ. ]

**ಜರ್ಜರಿತಾಂಗ** (ನಾ). ಜಜ್ಜಿದ ದೇಹವುಳ್ಳವನು ; ಗಾಯಂಗೊಂಡ ದೇಹವುಳ್ಳವನು : ಕರಾಳ ರಣರಂಗದಲ್ಲಿ ಬರೆವರೆ ಕಂಡಂ ನರಕರ ವಿಮುಕ್ತಶರಜರ್ಜರಿತಾಂಗನನಂಗರಾಜನಂ ಕುರುರಾಜಂ (ಗದಾಯು. ೫-೯).

[ ಜರ್ಜರಿತ + ಅಂಗ$_2$ ]

**ಜರ್ಜರಿಸು** (ಕ್ರಿ). ೧. ಗಾಯಂಗೊಳಿಸಿ ನಂಗ್ನುನುಗ್ಗು ಮಾಡು ; ಶಿಥಿಲಗೊಳಿಸು : ನರಶರಕೋಟಿ ಜರ್ಜರಿಸೆ ತನ್ನ ಶರೀರಮನಸ್ತ್ರ ವೇದನಾಪರವಶನಾಗಿಯುಂ ಮಱೆದನಿಲ್ಲ ಮುಕುಂದನನೇಕಚಿತ್ರದಿಂ ಸ್ಮರಿಯಿಸುತಿರ್ದಂ (ಗದಾಯು. ೫-೩೮) ; ನೆತ್ತರ್ ತೆರಳ್ದುಣ್ಮುವಿನಂ ಮೆಯ್ಯೆಲ್ಲಮಂ ಜರ್ಜರಿಸಿ ಜವಜವಾಗಿರ್ದನಂ ಗುರ್ದಿ (ಸುಕುಮಾ. ೭-೩೫). ೨. ಶಕ್ತಿಗುಂದಂ ; ಧೈರ್ಯಗುಂದಂ : ಗರ್ಜನೆಯ ದನಿಗಖಿಳಲೋಕದ ಜನಂ ಬೆರ್ಚಿ ನಿರ್ಜೀವವಾಯ್ತು . . . ಜರ್ಜರಿಸಿದಂ ನಾರದಂ (ಚಬಪು. ೪೭-೨೦) ; ಈ ಚೀತ್ಕಾರಗಳಿಂದ ಆ ಮಹಾಧೀರನ ಎದೆಯೂ ಜರ್ಜರಿಸಿತು (ಶಾಂತಲಾ. ೭೩). [ ಜರ್ಜರ + – ಇಸು$_3$ ]

**ಜರ್ಝಾರ** ‘ಜುಜ್ಝಾರ’ ನೋ.

**ಜರ್ಝಾರವ** (ನಾ). ರಥವು ಓಡುವಾಗ ಆಗುವ ದಡಬಡ ಶಬ್ದ : ತೇರ ವಂಗಡದ ಜರ್ಝಾರವಂ ಗಜದ ಘಂಟಾರವಂ ಹಯದ ಹೇಷಾರವಂ (ಜೈಮಿಭಾ. ೨೨-೪). [ ? + ರವ ]

**ಜರ್ಜಿಸು** ‘ಜಜ್ಜರಿಸು’ ನೋ.

**ಜರ್ಜು** ‘ಚಚ್ಚು$_1$’ ನೋ.

**ಜರ್ಝರ$_1$**, ಜಜ್ಜರಿ$_2$ (ನಾ). ೧. ಒಂದು ಬಗೆಯ ಚರ್ಮವಾದ್ಯ : ಮೊರೆವ ಕಹಳಾರವದ ಡಿಂಡಿಮ ಮುರಜ ಗೋಮುಖ ಪಟಹ ಜರ್ಝರ ಕರಡೆ (ಕುಮ್ಯಾಶ. ೨-೫) ; ನುಡಿವ ಡಿಂಡಿಮ ಢಕ್ಕೆ ಡಮರು ಜರ್ಝರ ಮಾಸ ಪೊಡೆವ ತಂಬಟ . . . ಗಡಣದೊಳಗೆ ಬಂದು ಪೊಕ್ಕನು ದುರ್ಗವ (ಕುರಾಸಾಂ. ೪೨-೮೪) ; ಚೀರಿದುವು ಕಹಳೆ ಜರ್ಝರ ಕಾಂಸ್ಯ ಗೋಮುಖಂ (ತುರಂಗ. ೮೦-೪೪). **ಜಜ್ಜರಿ$_2$** : ೨. (ನೀರಂ ಬೀಳುವ) ಧ್ವನಿ : ಅಲ್ಲಿಗನತಿದೂರದೊಳು ಶಶಿಕಾಂತದ ಕಲ್ಲ ಜಜ್ಜರಿಯೊಳುಜ್ವಲಿಪಾ ತಣ್ಣೀರ ಕಾಲುವೆಗಂಡು (ಶ್ರೀಪಾಲ. ೪-೬೨). [ <ಸಂ. ಝರ್ಝರ ]

**ಜರ್ಝರ$_2$** ‘ಜಜ್ಜರ’ ನೋ.

**ಜರ್ಝರಿತ** ‘ಜಜ್ಜರಿತ’ ನೋ.

**ಜರ್ಝರಿಸು** ‘ಜಜ್ಜರಿಸು’ ನೋ.

**ಜರ್ಝಾರ** ‘ಜುಜ್ಝಾರ’ ನೋ.

**ಜರ್ಝಿಸು** ‘ಜಜ್ಜರಿಸು ನೋ.

**ಜರ್ತಿಲ** (ನಾ). ಕಾಡಿನಲ್ಲಿ ಬೆಳೆಯುವ ಎಳ್ಳು ; ಕಾಡೆಳ್ಳು. [ ಸಂ. ]

**ಜರ್ದಾ** ‘ಜರದಾ’ ನೋ.

**ಜರ್ಬಾಡು** (ಕ್ರಿ). ಗದರಿಸು ; ದರ್ಪದಿಂದ ನುಡಿ ; ಜಂಕಿಸು (?) : ಕುಡಿದಾನಂದದೆ ಸೊರ್ಕಿ ಬಟ್ಟೆಯುವರಂ ಕಂಡೆಯ್ದೆ ವಸ್ತ್ರಾಂತಮಂ ಪಿಡಿದ್ಯೆ ಭಾವ ಎನುತ್ತು ಮಿಾಗ ಕುಡುತಾರಾ ಮೂಗನಾ ಮೂಗನಂಗಡಿ ಗೊಯ್ದಾ ಹರದಂಗೆ ಮಾಱೆದೆಯಲಾ ಪೂಯೆಂದು ತಾಂ ಮೂಗು ಹೊಂದೊಡವೇನೇ ಕುಟಿಲಕ್ಕ ದೀವಳಿಗೆ ಬಾಳೆಂದುರ್ಬಿ ಜರ್ಬಾಡಿದರ್ಳ್(?) (ಸೂಕ್ತಿಸು. ೧೩-೩೦). [ ಜರ್ಬು$_2$ (<ಜರ್ವು$_2$) + ಆಡು$_1$ ]

**ಜರ್ಬು$_1$** ‘ಜರ್ವು$_1$’ ನೋ.

**ಜರ್ಬು$_2$** ‘ಜರ್ವು$_2$’ ನೋ.

**ಜರ್ಮಾಲ** (ನಾ). ಒಂದು ಬಗೆಯ ಮರ : ಜರ್ಮಾಲ (ಉಗಾದ) – ಒಂದು ಬಗೆಯ ಬಹುದೊಡ್ಡ ಮರ. ಆದರೆ ಯಾವ ಕೆಲಸಕ್ಕೂ ಬರುವುದಿಲ್ಲ (ಕಭಾಗ. ೩೯). [ ? ]

**ಜರ್ರನೆ** ‘ಜಬ್ಬನೆ’ ನೋ.

**ಜರ್ವಿಸು**, ಜಬ್ಬಿಸು$_2$ (ಕ್ರಿ). ಗದರಿಸು ; ಬೆದರಿಸು ; ಜಂಕಿಸು : ಉರ್ವಿಯೊಳಿರುತಿಹ ಗರ್ವದ ಕ್ಷಿತಿಪರ ಜ[ಜ]ರ್ವಿಸಿ ತಂದಿಹ ಸರ್ವಾಭರಣವ (ಹಮಚ. ೪೬). **ಜಬ್ಬಿಸು$_2$** : ಎಲ್ಲೆಲ್ಲಿಯೂ ಜಬ್ಬಿಸುತ್ತೀ ಪರಿಯೊಳೆಸಗೆಸಗಿ (ಪರಶು. ೩೭-೧೯). [ ಜರ್ವು$_1$ + – ಇಸು$_3$ ]

**ಜರ್ವು$_1$**, ಚರ್ವು, ಜಪ್ಪು, ಜಬ್ಬು$_2$, ಜರಂಪು, ಜರ್ಬು, ಜೆಪ್ಪು (ಕ್ರಿ). ೧. (ಕಣ್ಸನ್ನೆಯಿಂದ) ಗದರಿಸು ; ಜಡಿ ; ಜಂಕಿಸು : ಮುಳಿಸಂ ಪುರುಡುಂಟುಮಾಡೆ ಜರ್ವಿದ ಕಡೆಗಣ್ಣ ಜರ್ಬುಗಳೊ (ಆದಿಪು. ೪-೧೦) ; ಜಲರುಹನಾಭಂ ಕಂಡೆರ್ದೆ ಕಲಂಕಿ ಕಣ್ಣುರ್ವು ಜ[ರ್ವಿ]ದಂ ಗಾಂಡಿವಿಯಂ (ಗದಾಯು. ೮-೩೦) ; ತಾಂಬೂಲಕರಂಡಕವಾಹಿನಿಯರಂ ಪುರ್ವಿನಿಂ ಜರ್ವಿಯುಂ (ಜಗವಿ. ೧೧-೭ ವ). ೨. (ಹುಬ್ಬಿನಿಂದ) ಭಾವವನ್ನು ಪ್ರಕಟಿಸು; ವಿಲಾಸವನ್ನು ತೋರು: ಕೊನೆವುರ್ವಿಂ ನಸು ಜರ್ವಿ ಪದ್ಮಭವ ಚಂದ್ರೇಂದ್ರಾರ್ಕ ಮುಖ್ಯಾ ಮೃತಾಶನರ್ಗಂತಪ್ಪ ಪದಂಗಳಂ ಕುಡುವ (ಜಗವಿ. ೬-೧೦೬) ; ಕಡೆಗಣ್ಣಿಂ ಕಾವನಂಬಂ ಕಱೆವುತೆ ಕುಡುವುರ್ವಿಂದೆ ಜರ್ವುತ್ತೆ (ರಾಜಶೇ. ೨-೧೪೨). **ಚರ್ವು**: ೩. (ಮಿಾಸೆ ಮೊದಲಾದವನ್ನು) ಹುರಿಮಾಡು; ಸೊಗಸುಗೊಳಿಸು: ಪರ್ವಿತ್ತು ಪುರದೊಳಗೆ ರಣವಾರ್ತೆ ಭಟನಿಕರವುರ್ವಿತ್ತು ರಥಿಕಸಂಕುಲವಲ್ಲಿ ಮಿಾಸೆಯಂ ಚರ್ವಿತ್ತು (ಜೀರಮ. ೪-೧೩). **ಜಪ್ಪು** : ೪. ಹೊಡೆ ; ಚಚ್ಚು ; ಜಜ್ಜು : ಕಂದಲ್ಲ ಕಲ್ಲಿಂದ ಜಪ್ಪಿದ ತಾಯಿ ಹಿಂದಟ್ಟಿ ಬರಲೋಡಿ ತಪ್ಪಿದ (ವಾದಿಕೀ. ೧೨೭-೩) ; ಗದೆಯುಗ್ರದೊಳ್ಮರುತಸುತ ಸಿಂಹನಾದಂಗೈದು ಜಪ್ಪಿದಂ (ತುರಂಗ. ೬೭-೧೨) ; ಸುಳ್ಳು ಹೇಳಿದರೆ ತಲೆಯ ಮೇಲೆ ಜಪ್ಪಿ ಬಿಡ್ತೇನೆ (ಮೂರುದಾ. ೧೮೦). ೫. ಎಸೆ ; ಬಿಸುಡು : ಇದ್ದಕ್ಕಿದ್ದಂತೆ ಸುಂಟರಗಾಳಿಯು ಎದ್ದಿತು . . . ಮರಗಳನ್ನೆಲ್ಲಾ ತಿರಿಚಿ ಜಪ್ಪಿತು (ಶಿವರಾ. ೧೪೮) : ಒಕ್ಕಲಿಗರು ದವನವನ್ನು ಸಿಕ್ಕಿಸಿದ ಬಾಳೆಹಣ್ಣನ್ನು ಅವರಿಗೆ ಜಪ್ಪುವರು (ಗರುದಾ. ೬೩). **ಜಬ್ಬು$_2$** : ೪. ದೂಷಿಸುವ ನಾಲಗೆಯ ಜಬ್ಬಿತೆಮ್ಮಯ ಬಸವನಾಗಮದ ಹೊಂಗೊಂಡ ಹೊಳ್ಳು ಮಾಡಿತು ಕಟಕಿಯ (ಸಿಂಗಿರಾ. ೪೮-೩೮) ; ಕೊಬ್ಬಿದ ದಡಿಗ ದೈತ್ಯರು ಬಂದು ತುಡುಕಲು ಜಬ್ಬಿದನವರೊಡಲುಗಳ (ಮೋಹತ್ನ. ೩೭-೧೭) ; ಹರಿಯನು ಜಬ್ಬಿ ಪಂಕಣೆಗರದು ವಿತಳಕ್ಕಿಳಿವುತೊಡನೊಡನೆ (ಅಂಬಿಕಾ. ೩೮-೪೨) ; ಗರುಡಗಿರುಡಾದಿಗಳ ಜಬ್ಬುವೆವೆನುತ್ತ ಹರಿ ತಂದ ಮೃತಪಾನವಂ ಮಾಡಲ್ಕೆ (ತುರಂಗ. ೪-೪೮). **ಜರುಂಪು** : ೬. ಹೀಯಾಳಿಸು; ಹೀಗಳೆ : “ ಜರುವೆನಲ್ ಹೀಯಾಳಿಪುದು ” (ಕಶರ. ೩೮) ; ನಿಮ್ಮ ಜಾತಿ ಕುಲ ಗೋತ್ರವನು ನಾವು ಕಾಣೆವು ಎಂದು ಜರುವಿದನು (ನವರಾ. II, ೧೪) ; ರಾಜನ ಮಗಳು ಅರಮನೆಯ ಒಬ್ಬ ಅಧಿಕಾರಿಯನ್ನು ಮದುವೆಯಾಗುವುದು ಉಂಟೇ ಎಂದು ಮಲತಾಯಿ ಜರುವಿದಳು (ಸಣ್ಣಕ. VIII, ೪೬). **ಜರ್ಬು$_1$**: ೧. “ ಜರ್ಬು–ಆಕ್ರಮಣ ಧ್ವನೌ (ಆಗ್ರಹಧ್ವನೌ) (ಗದರಿಸು) ” (ಶಮಧಾ) : ಜವದಿಂ ಬಂದುದು ದಳ್ಳೆನುತ್ತುರಿವ ಮೆಯ್ಯುಂ ಧೂಮದುರ್ಬೆಂಬ ಜರ್ಬುವ ಪುರ್ಬುಂ ಕುಡುದಾಡೆಗಳ್ ಪೊಳೆವ ಬಾಯುಂ (ಜಗವಿ. ೦೮-೧೩) : ಆರ್ದು ಭಲ್ಲುಕಂ ಜರ್ಬಿಯವುಂಡೆ ಬಲ್ಮಿದುಟಿಟಲ್ವ ಶಿರಂಗಳನೊತ್ತುತಿರ್ಪವರ್ (ದಶಕು. ೫-೪೦); ಗಣತತಿ ಕಿರಿಯಂ ಸದೆಯಲ್ ಕಣೆದುಡುತಿರೆ ಪುರ್ಬಿನಿಂದೆ ಜರ್ಬುತೆ ನಿಲಿಸುತ್ತೆ (ಶಬಶಂ. ೪-೦೯). **ಜೆಪ್ಪು**: ೪. ದೊಡ್ಡ ಬಂಡೆಯೊಂದಕ್ಕೆ ಜೆಪ್ಪಿ ಜೆಪ್ಪಿ ಆ ತಲೆಯನ್ನು ಪುಡಿಪುಡಿ ಮಾಡಿದನು (ಈಕಥ. ೪೯). [ ? ]

**ಜರ್ವು$_2$**, ಜಬ್ಬು$_4$, ಜರಬು, ಜರುಬು, ಜರ್ಬು$_2$ (ನಾ). ೧. ಗದರಿಕೆ ; ಮೂದಲೆ ; ಜಂಕಣೆ : “ ಜರ್ವನೆ ಝುಂಕಣೆ ”(ಚತುನಿ. ೪೯) : “ ಬಿಪ್ಪಂಡ ಜರ್ವು ಬಗ್ಗುಂ ಚಪ್ಪರಣೆಯುಮೆನ್ನೆ ಝುಂಕಣೆಯು ” (ಕವಿಕಂ. ೦೨೩). ೨. ಹುಬ್ಬಿನ ಚಲನೆ ; ಭ್ರೂವಿಲಾಸ,–ವಿಕ್ಷೇಪ : ಕುಱುಪಂ ಪುರ್ವಿನ ಜರ್ವೆ ತೋಱೆ ಬಗೆಯಂ ಕಣ್ಸನ್ನೆಗಳ್ ಪೇೞೆ (ಪಂಪಭಾ. ೪-೮೨) ; ಪೊಳೆವಳರ್ಗಣ್ಣ ಬೆಳ್ಪುಗಳ ಪುರ್ವಿನ ಜರ್ವಿನ ಚೆಲ್ವುಗಳ್ ಮನಂಗೊಳೆ (ಅಜಿಪು. ೫-೧೭) ; ಪುರ್ವಿನ ಜರ್ವು ಚುಂಬನದಗುರ್ವು (ಬಾಧಪು. ೨-೬೭) ; ಭ್ರೂಲತೆಗಳೊಳ್ ಜರ್ವು ಮೇಳವಿಸಿ ಶಿವೆಯಿಂತು ಜವ್ವನದ ಸಿರಿಯಾಂತು (ಚಬಪು. ೩೪-೬). ೩. ದರ್ಪ ; ಠೀವಿ ; ಗರ್ವ ; ಅಹಂಕಾರ : ಅಣ್ಮುವೊಡಣ್ಮ

ದಿರ್ದೊಡಿರವೇಡಾಂ ಬರ್ಪವೀ ಜರ್ವು ಸಂಗರಮಂ ನೋಡುವ ದೇವ ಕೋಟಿಯ ಮನಂ ಕೌತೂಹಳಾವಗ್ರಹಂಬೆರಸಾಂತಿರ್ವರ ಬಾಳ ಬಾಯ್ಗಳ ಬಟಿಂ ಪಿಂಗಲ್ಕೆವೇಡಂ ಗಡಾ (ಅನಂಪು. ೧೩–೫೧) ; ಜಸಮೇಂ ಪೊನ್ನಿಗೆ ಬರ್ಪುದಲ್ಲದು ಮಹಾಪುಣ್ಯೈಕಲಭ್ಯಂ ಗಡಾ ಬಸವಮಲ್ಲಾಣ್ಮರ ಜರ್ವಿಗಂ ಸುಚರಿತೋದರ್ಕಂಗಳಿಂದುಣ್ಮುಗುಂ (ಪ್ರಮಸೂಮ. ೧–೧೭) ; ಬೆಳ್ಳಿಯ ಭದ್ರಾಸನವನ್ನು ಬಳಸುಗಟ್ಟಿ ಬಿಚ್ಚುಗತ್ತಿಯ ಕಡುಗಾವಲ್ಲುಡುತ್ತಿರುವ ಸಾರ ವೀರಗಂಭೀರಿಕೆಯ ಜರ್ವಿನ ಅಂಗರಕ್ಷಕರ ಜಂಗುಳಿ (ಬಟ್ಟಿಅ. ೩೦–೧೭). **ಜಬ್ಬು₄ :** ೨. ಕಬ್ಬುವಿಲ್ಲುಗಳ ಕೊಂಕನೇಳಿಸುವಾ ಕುಡುಹುಬ್ಬಿನದೊಂದಿಂಪುವಡೆದ ಜಬ್ಬಿನಿಂದಾ ಮುನಿಕುಲತಿಲಕನ ಮನಸುಬ್ಬಿ ಕಾಡಿದಳಾ ಕುಲಟೆ (ಪ್ರಭಂಜ. ೪–೯೭) ; ಹುಬ್ಬುಗಳ ಜಬ್ಬಿಗೆ ಪಡಿಯೆಂಬೊಲಧರವ ಸವಿದನು (ವರ್ಧಪ. ೫–೮೩). ೩. ಉಬ್ಬಿದನು ನಿನ್ನಾತನಾತನುಬ್ಬಿನಲಿ ಕುರುಬಲದ ಹರುಷದ ಜಬ್ಬುರಿಯ ಹುರಿಗೂಡಿ ತೋಱಿತು ಚಾರು ಚತುರಂಗ (ಕುಮ್ವಾ.ಕ. ೨೬–೫೦) ; ಕಟಕಟ ಕಾರ್ಬೊಗೆ ಹಬ್ಬಿಗೆ ಮೊಬ್ಬಿಗೆ ಉಬ್ಬಿಗೆ ಇದರ ತಬ್ಬಿಬ್ಬಿಗೆ ಜಬ್ಬಿಗೆ ಲುಬ್ಧಭಟರೆದೆ ಇಬ್ಬಗೆ ಆರಾಟ (ವಿಸ್ಮೋಸು. ೩–೫). **ಜರಬು :** ೪. ಆಡಂಬರ ; ವೈಭವ : ಆಮೋದ ಪ್ರಮೋದಗಳೆಲ್ಲ ಜರಬಾಗಿ ನಡೆದವು (ದಾಲತ್. ೨೯). **ಜರುಬು :** ೩. ಇನಾಮದಾರರೆಂಬ ಜರುಬು ಇಟ್ಟುಕೊಳ್ಳಲು ಬೇಕಾಗುವಷ್ಟು ಜಮೀನು ಇದ್ದವು(ಅನ್ನ. ೧೯೦) ; ಆ ಇಬ್ಬರಲ್ಲಿ ರಾಜಪುತ್ರನೇ ಎತ್ತರವಾಗಿಯೂ ಜರುಬಾಗಿಯೂ ಇದ್ದನು (ಭಾರವೀ. ೮೭). **ಜರ್ಬು₂ :** ೧. ಪುರ್ಬಿನ ಜರ್ಬಿನಿಂ ಪೊಗೆನೆಗೆಯಲ್ಕತ್ತ ನಾಕಲೋಕಮುರಿಯುತ್ತಿರ್ದುದು (ಜಗವಿ. ೨–೩೯ ವ) ; ಮರನ ಮೊದಲೊಳ್ ಹಯಮುಮಂ ಕಂಡು ಕಟ್ಟಿದರಾರೆಂದು ಜರ್ಬಿಂ ಮಸಗಿ ನುಡಿವುದುಂ(ರಾಮಾಶ್ವ.೧೫೩–೧೭).೨. ಒದವಿದ ಬೇಟದತ್ತಳಗದೊಳ್ ಮುಳಿಸಂ ಪುರುಡುಂಟುಮಾಡೆ ಜರ್ವಿದ ಕಡೆಗಣ್ಣ ಜರ್ಬುಗಳೊ (ಆದಿಪು. ೪–೧೧) ; ಚಂಚದ್ದೃಷ್ಟಿ ವಿಕ್ಷೇಪಣದೊಳನುನಯಂ ಪುರ್ಬಿನೊಳ್ ಜರ್ಬು (ದಶಕು. ೮–೨೦೦) ; ಅಱಿಪೆಱಿ ನೊಸಲೊಳ್ ಮಿಱುಪ ಕಱಿಗೆಱಿಯೆನೆ ನಿಱಿಗೊಳ್ವ ಪುರ್ಬುಗಳಿಂ ಜರ್ಬುವೆರಸಿಯೆನಸು ನಾಣ್ಚೆರಸಿದ ಮುನಿಸಿನೆಸಕಮನೆರ್ದೆಗೊಳಿಸಿ (ಚಿಕವಂ. ೭೨–೯). ೩. ಬರ್ದುಗರೊಳ್ ಜರ್ಬಾರ್ಗ ಮುಂಟುಮಾಡವೆ ಕೇಡಂ (ನೀತಿಮಂ. I, ೧೦೫) ; ಗೊಬ್ಬರದ ಗಾಡಿಯನ್ನು ಹೊಡೆದರೂ ಅರುಣನು ಸೂರ್ಯನ ರಥವನ್ನು ನಡೆಸುವ ಜರ್ಬಿನಿಂದಲೇ ಹೊಡೆಯುತ್ತಾನೆ (ಹಳ್ಳಿಬಾ. ೩೪) ; ಎಚ್ಚರದಿಂದ ನೆಟ್ಟಗೆ ಜರ್ಬಾಗಿ ಕುಳಿತುಕೊಂಡನು (ಮಲನಾ. ೦೩); ಇವನ ಮೇಲೇನೆಂದು ಜರ್ಬು ಮಾತಾಡುವರ್ (ಅಶ್ವತ್ಥಾ. ೩೯–೭೬೦). ೪. ಇವರು ಬಟ್ಟೆಗಳನ್ನು ಜರ್ಬಾಗಿ ಧರಿಸಿಕೊಳ್ಳುತ್ತಾರೆ (ಪ್ರವಾಇ. II, ೨೬೭); ಮಿಷಾಟಂಗಿನ ದಿನ ಬಹಳ ಜರ್ಬಾಗಿತ್ತು (ಮರಳ. ೧೦೭). [ <ಜರ್ವು₁./ಅರ. ಹಿಂ. ಜರಬ್ ; ಮರಾ. ಜರಬ್, ಜರ್ಬ್ ]

**ಜಲ್** (ನಾ). (ಭಯ, ಆಶ್ಚರ್ಯ ಮೊದಲಾದಂವುಗಳಿಂದ)ಹೃದಯವು ವೇಗವಾಗಿ ಬಡಿದುಕೊಳ್ಳುವುದನ್ನು ಅನುಕರಿಸುವ ಶಬ್ದ. 'ಜಲ್ಲನ್' ಪರಾ.

**ಜಲ₁, ಜಳ₁, ಝಳ** (ನಾ). ೧. ಪ್ರಕಾಶ ; ಕಾಂತಿ ; ಹೊಳಪು ; ತೇಜಸ್ಸು: ಕೋದಂಡ ಚಂದ್ರನಲಿ ಪೊನ್ನಜೊನ್ನದ ಜಲಂ ಪೊಳೆವಂತೆ ತಳತಳ ನಲಿದು ಕುಣಿಯೆ (ಶ್ರೀರಾಮಾ. ೧೩–೩೪೯). **ಜಳ₁ :** ೧. ಜಳ ಹತ್ತಿ ಬರಲು ಮನೆಯೊಳಗುಳ್ಳ ಬೆಳಗು ಕತ್ತಲೆಯೆನಿಸಿ ಮತ್ತಮಾ ಬೆಳಗ ತೋರ್ಪಂತೆ (ಅನುಸಾ. ೧–೮–೪); ತಳಪವೆತ್ತಿಹ ಖಡ್ಗ ಹಸ್ತದ ಜಳದೊಳೆಸೆವ ಜಟಾಕುಸುಮಸರಗಳ ವಿಡಾಯದಿ ಭೈರವಂ (ಶಂಕದಾ. ೧೫–೩೪). ೨. ಸೆಕೆ; ಶಾಖ ; ಉಷ್ಣತೆ : " ಉಮ್ಮೆಯೆಂದುಂ, ಸೆಗಳ್ಕೆಯೆಂದುಂ, ಜಳಮೆಂದುಂ ಉಷ್ಣಕ್ಕೆ ಪೆಸರ್ " (ಕಶಸಾ. ೩–೨೯) ; ನಿಡುಸುಯ್ಲು ಧಾಳಿಯ ಜಳಕೆ ಚೆಂದುಟಿರಸವೊಡನೆ ಬಱಿತುದು (ಕಂನವಿ. ೯–೧೭೨) ; ಅವುಗಳ ಜಳದಿಂದ ಮೈ ಸುಡುವುದು (ಮುಂಬಯಿ. ೪–೭೦). ೩. (ಆಲಂ) ಪರಿಣಾಮದ ತೀವ್ರತೆ : ದಂಡಿತನಿಗಿಂತಲೂ ದಂಡನೆ ಮಾಡಿದವನಿಗೆ ಇದರ ಜಳ ಹೆಚ್ಚು ತಾಕುವದು(ರಂಗರೋ. ೫೭). **ಝಳ :** ೧. ಎರಳೆಗಳು ಬಿಸಿಲಿನ ಬೇಗೆಯಿಂದ ಬೆಂದು ಬೆಂಡಾಗಿ ನೀರಡಿಸಿ ಝಳವನ್ನು ಜಲವೆಂದು ತಿಳಿದು (ಕಗದ್ಯ. ೮೪). ೨. ಜೇಷ್ಠ ಮಾಸದ ಬಿಸಿಲುಂ ಝಳಮುಂ ಬೆಂಕೆಯುಂ ಕಿಚ್ಚುಮಂ ಸೈರಿಸಿ (ವದ್ಧಾರಾ. ೧೧೪–೧೭) ; ಅಂಬಿನ ಝುಗೆಯ ಝಳದಲಿ ಮುಳುಗಿ ಮೋನದೊಳಿರ್ದನಾ ಕರ್ಣ (ಕುಮ್ವಾ.ಕ. ೪–೧೩).

**ಜಳಜಳ, ಝಳಝಳ** (ದ್ವಿರುಕ್ತಿ): ೧. ಸ್ವಚ್ಛತೆ; ಶುದ್ಧತೆ: ದೇವರು ನೋಡುವದು ಒಳಗಿನ ಜಳಜಳ, ಮನುಷ್ಯರು ನೋಡುವುದು ಹೊರಗಿನ ಜಳಜಳ (ಮಾಧವ. II, ೮೭). ೨. ಪ್ರಕಾಶಮಾನವಾದುದು ; ಸ್ವಚ್ಛವಾದುದು : ಪಾತ್ರಗಳನು ಭಾಂಡಗಳೆಲ್ಲಮಂ ಬೆಳಗಿ ತೊಳೆದೊರಸಿ ಜಳಜಳಂಗೈದು (ಮಲ್ಲಚ. ೨–೧೭). ೩. ಸ್ಪಷ್ಟವಾಗಿ; ನಿಸ್ಸಂದಿಗ್ಧವಾಗಿ: ದೀಕ್ಷೆ ತಕ್ಕೊಂಡ ಕಾಲಕ್ಕೆ ಗುರುವಿನಿದಿರು ಎಲ್ಲ ಝಳಝಳ ಒಪ್ಪಿಕೊಂಡು ಬಿಟ್ಟೆ (ಹುಚ್ಚಾಟ. ೪೭–೧೭) ; ನಿಮ್ಮವ್ವ ನನ್ನ ಕಡೆಗೆ ದುಡ್ಡು ಇಟ್ಟಿಲ್ಲಾ, ಅಂತ ಝಳಝಳ ಹೇಳು (ಗಂಮಾಯಿ. ೧೨೪). **ಜಳಜಳಮಾಡು, ಝಳಝಳ ಮಾಡು :** ೧. ಸ್ವಚ್ಛಮಾಡು ; ಶುಚಿಗೊಳಿಸು : ಪ್ರತಿದಿನ ಸ್ನಾನಮಾಡಿ ಮೈ ಜಳಜಳಮಾಡಿಕೊಳ್ಳಬೇಕು (ಮುಂಬಯಿ. ೪–೨೫) ; ಪಾತ್ರೆಗಳನ್ನೆಲ್ಲಾ ಬೆಳಗಿ ಝಳಝಳಮಾಡಿದ್ದಳು (ರೂಢಿ). ೨. ನಿರ್ಣಯಿಸು; ಬಗೆಹರಿಸು: ಯುವರಾಜ ದಳಪತನಲ್ಲಿಗೆ ಹೋಗಿ ಝಳಝಳಮಾಡಿ ಬಿಡೋಣ! (ಧಾರ್ಮಿಕೀ. ೨೭). [ <ಪ್ರಾ. ಜಲ./ಸಂ. ಝಲಾ ]

**ಜಲ₂, ಜಳ₂** (ನಾ). ೧. ನೀರು : " ಜಲಮೆಂದುಂ ಮುಗಿಲ ಹೂವೆನಿಕ್ಕುಂ ಬುಧರಿಂ " (ಕವಿಕಂ. ೯೦) ; ನೆಲದ ಬೊಂಬೆಯ ಮಾಡಿ ಜಲದ ಬಣ್ಣವ ನುಡಿಸಿ (ಅವಚಂ. ೫–೧೭) ; ಜಲವೊಂದೇ ಶೌಚಾಚಮನಕ್ಕೆ (ಬಸವ. ೮೭೮). ೨. ಜಡ; ಮಂಕ ; ದಡ್ಡ. ೩. ಕಪಟ ; ಮೋಸ : " ಉದಕಂ ಕಪಟಂ ಜಲಾಂಕಿತಂ " (ನಾನಾರ. ೮೪). ೪. ಮಂಡಿವಾಳ; ಲಾಮಂಚ ; ಬಾಳದ ಬೇರಂ. ೫. ಮೂತ್ರ : ಕನ್ನೆಕುಮಾರಿ ಕಿರುಕುಸಾಲೆ ಸಹ ಹಾಲೊಳರೆದು ಕುಡಿಯೆ ಜಲ ಬಿಡುವುದು (ಸಕವ್ಯ. ೩೭೪). 'ಜಲಬಾಧೆ' ಪರಾ. ೬. ಅಪರಾಧಿಗಳನ್ನು ಪತ್ತೆಹಚ್ಚುವುದಕ್ಕಾಗಿ ಹಿಂದೆ ಮಾಡುತ್ತಿದ್ದ ಪರೀಕ್ಷೆಗಳಲ್ಲಿ ಒಂದು ; ಅಪರಾಧಿಯು ಒಂದು ನಿರ್ದಿಷ್ಟಕಾಲ ನೀರಿನಲ್ಲಿ ಮುಳುಗಿರುವಂತೆ ಮಾಡುವ ಪರೀಕ್ಷೆ; ದಿವ್ಯಗಳಲ್ಲಿ ಒಂದು : ಕನ್ನಡ ಶಾಸನಗಳಲ್ಲಿ ಕೋಶ . . . ರವಿ, ತಂಡುಲ, ಅಗ್ನಿ, ತಪ್ತಮಾಷ, ಜಲ, ವಿಷ–ಎಂಬ ಏಳು ದಿವ್ಯಗಳನ್ನು ಹೇಳಿದೆ (ಕಶಾಅ. ೧೯೭). ೭. [ಛಂದ]ಅಕ್ಷರಗಣಗಳಲ್ಲಿ ಒಂದು; ಯಗಣ (ᴗ– –): "ಮುಂತೆರಡು ಗುರುವಿರಲ್ ಜಲಮಕ್ಕುಂ " (ಮಂಗರಾ. ೧೧೭–೨೦) ; ಧರಣಿ ಜಲಾಗ್ನಿ ಮರುದ್ವ್ಯೋಮ ರವಿ ಶಶಾಂಕೇಂದ್ರನಿಲಯಮಿವು ಗಣನಾಮಂ (ಛಂದೋಂಬು. ೧–೩೭). **ಜಳ₂ :** ೧. ಬಾಡವಾನಳಾವಿಳ ಜಳಮಂ ಮನಂಬಯಸಿ ನೋಡಿದಂ (ಪಂಪಭಾ. ೪–೨೫); ಜಳದೊಳ್ ಮಿಸಿರ್ಪವೊಲ್ ನೀಂ ಕೊಳದೊಳೆ ಮುಟುಗಿರ್ದಕ್ಕಟಾ ಕೋಡಸೇಡಿಂಗೊಳಗಾದಯ್ (ಗದಾಯು. ೭–೧೩) ; ಕಡೆಗಣ್ಣ ಕಾಂತಿ ಸುಲಿಪಲ್ಗಳ ನಖದ ಬೆಳ್ಪಡಸಿ ಪಸರಿಸೆ ಕೊಳನ ಜಳಮೈದೆ ಚೆಲ್ವ ಪಾಲ್ಗಡಲಂತೆ ಮೆಱಿಯಲು (ಭಾಪಚಂ. ೪–೨೫). [ ಸಂ. ]

**ಜಲ₃, ಜಾಲ್₃**.(ನಾ).=ಜರಗು₂ : 'ಜಲಗಾರ₂' ಪರಾ. **ಜಾಲ್₂:** 'ಜಾಲಗಾರ₁' ಪರಾ. [ ? ]

**ಜಲಂಧರ** (ನಾ). ೧. ನೀರನ್ನು ತರುವವನು : (*). ೨. ಒಬ್ಬ ರಾಕ್ಷಸ: ಜಲಂಧರಮಂರಾಳ ಮೇಘಗರ್ಜಿತಂ ಅಂಧಕಾಸುರಾರಣ್ಯದಾವಾನಳಂ (ಗಿರಿಕ. ೧೦–೧೧೧ ವ). [ ಸಂ. ]

**ಜಲಕ** 'ಜಳಕ' ನೋ.

**ಜಲಕಂಟಕ** (ನಾ). ೧. ಮೊಸಳೆ. ೨. ಒಂದು ಬಗೆಯ ಸಸ್ಯ; ನೀರು ನೆಗ್ಗಿಲುಗಿಡ. ೩. ನೀರಿನಿಂದ ಒದಗುವ ಅಪಾಯ,–ಗಂಡಾಂತರ : ಅವನ ಜಾತಕದಲ್ಲಿ ಹನ್ನೆರಡನೇ ವರ್ಷದಲ್ಲಿ ಜಲಕಂಟಕವೆಂದಿದೆ (ರೂಢಿ). 'ಜಲಗಂಡ' ಪರಾ. [ ಜಲ$_2$ + ಕಂಟಕ ]

**ಜಲಕಣಿಕೆ** (ನಾ). ನೀರಿನ ಹನಿ : ಜಲಕಣಿಕೆಯಂತೆ ನಳಿನೀದಳಂಗಳ ಮೇಲಿರ್ದು ನಡುಗುವಳ್ (ಕಾದಂಉ. ೩೪೦). [ ಜಲ$_2$ + ಕಣಿಕೆ$_4$ ]

**ಜಲಕನೆ** 'ಜಲಕ್ಕನೆ' ನೋ.

**ಜಲಕನ್ನಿಕಾನಾಟ್ಯ** (ನಾ). ಜಲಕನ್ನಿಕೆಯರನ್ನು ಅನುಕರಿಸುವ ಒಂದು ಬಗೆಯ ನರ್ತನ,–ಕುಣಿತ: ದಳದುಳನಾಗಳೆ ಕೂಡೆಂಟು ಮಂದಿ ಕೋಮಲೆಯರು ರಾಯನ ಮುಂದೆ ಜಲಕನ್ನಿಕಾನಾಟ್ಯಕೆಂದು ನಿಂದರು 'ಮರುಳು ಚೆಲುವನದೇನ ಬಣ್ಣಿಪೆನು (ಭರಜ. ೧೩–೯೩).
[ ಸಂ. (ಜಲಕನ್ನಿಕಾ + ನಾಟ್ಯ) ]

**ಜಲಕನ್ನಿಕೆ** (ನಾ). ನೀರಿನಲ್ಲಿ ವಾಸಿಸುವ ಸ್ತ್ರೀ. 'ಜಲಕನ್ನಿಕಾನಾಟ್ಯ' ಪರಾ. [ ಜಲ$_2$ + ಕನ್ನಿಕೆ$_1$ ]

**ಜಲಕನ್ನೆ** (ನಾ). = ಜಲಕನ್ನಿಕೆ : ಅಮಿತ ಶಿವಲಿಂಗಾರ್ಚನಾ ಸಂಭ್ರಮಕಲಿತ ಮಾನಸದೊಳೈತಪ್ಪಮರಿಯರುಮಮರರು ದಿಶಾರಮಣಿಯರು ದಿಗ್ವರರು ವಿಮಲ ಜಲಕನ್ನೆಯರ ಮೊತ್ತದಿಂ(ಬಸಪು. ೧೯–೯೩). [ ಜಲ$_2$ + ಕನ್ನೆ$_1$ ]

**ಜಲಕನ್ಯಕಾಮಸ್ತ** (ನಾ). ತಲೆಯಲ್ಲಿ ಗಂಗೆಯನ್ನು ಧರಿಸಿದವನು; ಗಂಗಾಧರ ; ಶಿವ : ಬಲುಹೋರಿಯೋಟಿಯಡವಯ್ಯನಗಜೆಗೆ ಕೊಟ್ಟು ಜಲಕನ್ಯಕಾಮಸ್ತ ನಗ್ನವಿಷಗಳ . . . ಮಸಣವಂ ಕಾಯ್ದುವಂ ದೈವವೇ (ವೀಸ್ಮಪು. ೮–೭–೧೯). [ ಸಂ. (ಜಲಕನ್ಯಕಾ + ಮಸ್ತ) ]

**ಜಲಕನ್ಯಕೆ** (ನಾ). ಗಂಗೆ. 'ಜಲಕನ್ಯಕಾಮಸ್ತ' ಪರಾ. [ ಜಲ$_2$ + ಕನ್ಯಕೆ ]

**ಜಲಕನ್ಯೆ** (ನಾ). = ಜಲಕನ್ನಿಕೆ : ಜಲಕನ್ಯೆಯರಿಂದ–ಎಂದರೆ ಹೊನಲುಗಳಿಂದ ಅಸಂಖ್ಯ ಹೊನಲುಗಳಿಂದ ಇದನ್ನು ಸಾಧಿಸಿದ (ಬದ್ಧಪ್ರ.IX ೬೬೩). 
[ ಜಲ$_2$ + ಕನ್ಯೆ ]

**ಜಲಕರಿ** (ನಾ). ನೀರಾನೆ : ಜಲಕರಿ ನಿಕರಂ . . . ಪೂತ್ಕರಿಸೆ ಸಿಡಿದ ಲಸಜ್ಜಲಕಣಮನಮಳ ಮುಕ್ತಾಫಳಮೆಂದುಟಿ ಮುಗ್ಧಖಚರಿಯರ್ ಕೈಯಿಡುವರ್ (ರಾಜಶೇ. ೦–೯೩). [ ಜಲ$_2$ + ಕರಿ$_4$ ]

**ಜಲಕಾಂತಮಣಿ**(ನಾ). "ನೀರಿನಲ್ಲಿಟ್ಟಾಗ ನೀರನ್ನು ಹೀರಿಕೊಂಡು ಪಾರದರ್ಶಕವಾಗುವ ಒಂದು ಬಗೆಯ ಕ್ಷೀರಸ್ಫಟಿಕ ; ಜಲಕಾಂತಮಣಿ" (Hydrophane. ಇಂಕನಿ). [ ಜಲ$_2$ + ಕಾಂತ$_2$ + ಮಣಿ$_3$ ]

**ಜಲಕಾಂತಶಿಲೆ** (ನಾ). ಚಂದ್ರಕಾಂತಶಿಲೆ (?) : ಜಲಕಾಂತಶಿಲೆಯಿಂದ ನಿರ್ಮಿಸಿದ ತೊಟ್ಟಿಲಕ್ಕಿಲದಲ್ಲಿ ತೆತ್ತಿಸಿದ ವಿವಿಧ ಮಣಿದೀಪ್ತಿಯಿಂ(ಜ್ಞಾನಚಂ. ೧–೪೭). [ ಜಲ$_2$ + ಕಾಂತ$_2$ + ಶಿಲೆ ]

**ಜಲಕಾಕ, ಜಳಕಾಕ** (ನಾ). ನೀರುಕಾಗೆ : " ಮದ್ಗು ಜಲ[ಪಾಠಾಂ. ಳ]ಕಾಕಮೆನೆ ನೀರ್ಗಾಗೆ " (ಮಂಗರಾ. ೫೦–೫). **ಜಳಕಾಕ :** " ಜಳಕಾಕಂ ಮದ್ಗು ನಾಮಂ " (ವಸ್ತುಕೋ. ೪೨–೧೪). [ ಜಲ$_2$ + ಕಾಕ$_2$ ]

**ಜಲಕು** 'ಚಲಂಕು' ನೋ.

**ಜಲಕುಂಭ** (ನಾ). ನೀರಿನ ಕೊಡ : ಶಕುಂತಳೆ . . . ಜಲಕುಂಭವನ್ನು ತೆಗೆದುಕೊಂಡು ಪ್ರವೇಶಿಸುವಳು(ಶಾಕುಂತ. ೮–೧೩). [ ಜಲ$_2$ + ಕುಂಭ ]

**ಜಲಕುಜ**(ನಾ). ನೀರಿನಲ್ಲಿಬೆಳೆಯುವ ಸಸ್ಯ; "ಜಲವೃಕ್ಷ" (ಜಾತತಿ.ಟಿಪ್ಪಣಿ) : ಆ ಹೋರೆಗ್ಗೆ ಜಲಗೃಹಪತಿ ನೆಲಸೆ ಜಲಕುಜಂ ಜನಿಯಿಸುಗುಂ (ಜಾತತಿ.೫–೮).
[ ಜಲ$_2$ + ಕುಜ ]

**ಜಲಕುಲ್ಯ** (ನಾ). ನೀರಿನ ಕಾಲುವೆ : ಸೌಗಂಧಿಕಾಗಂಧ ಜಲಕುಲ್ಯ ಪರಿನಿಚಿತ ಹಸಿತ ನಂದನಸಾರ (ದುರಪು. ೧೭–೨). [ ಜಲ$_2$ + ಕುಲ್ಯ$_1$ ]

**ಜಲಕೂರ್ಮ** (ನಾ). ೧. ಒಂದು ಬಗೆಯ ಜಲಚರ ಪ್ರಾಣಿ. ೨. ಒಂದು ಬಗೆಯ ರೋಗ : ದೇಹದಲ್ಲಿ ಶ್ಲೇಷ್ಮ ಪ್ರಕೋಪಿಸಿ . . . ಬಲಹಾನಿಯನು ಪಾಂಡುವರ್ಣವನು ಉಂಟುಮಾಡುತ್ತಿಹುದು. ಅದನು ವೈದ್ಯರು ಜಲಕೂರ್ಮವೆಂದೆಂಬರು (ವೈದ್ಯಸಾ. I, ೩೨೩).
[ ಜಲ$_2$ + ಕೂರ್ಮ ]

**ಜಲಕೇಳಿ, ಜಳಕೇಳಿ** (ನಾ). ನೀರಿನಲ್ಲಿ ಕ್ರೀಡಿಸುವುದು ; ನೀರಾಟ : ತಲ್ಲತಾಲಳಿತೆಯರ್ಗಿತ್ತುದಿಂತು ಜಲಕೇಳಿ ಮನೋಭವಕೇಳಿಲೀಲೆಯಂ (ಆದಿಪು. ೧೧–೧೫೦) ; ಜಲಕೇಳಿಗಳೊಳೊಮ್ಮೆ ಖಗವಿನೋದದೊಳೊಮ್ಮೆ . . . ಕಳಿಯುತಂ ಪೊತ್ತನವನೀಶ್ವರಂ ವನದೊಳು ವಸಂತಸುಖಮಂ ಸವಿದನು (ಹಚಕಾ. ೩–೬೦). **ಜಳಕೇಳಿ :** ಜಳಕೇಳಿ ನಿಮಿರ್ಗೆ ಭರತನ ಲಳಿತಾಂತಃಪುರದೊಳ್ (ಆದಿಪು. ೧೦–೧೪೪) ; ದೆಸೆಯಾನೆಗಳಂ ಜಳಕೇಳಿಗೆ ಕರೆವಂತಿರೆ ಜಳಖಾತಿಕೆ ಬಳಸಿ ಚೆಲ್ವನೊಳಕೊಂಡಿರ್ಕುಂ (ಮಲ್ಲಿಪು. ೨–೫೦).
[ ಜಲ$_2$ + ಕೇಳಿ$_2$ (=ಕೇಲಿ) ]

**ಜಲಕ್ಕಗೆ** (ಅ). = ಜಲಕ್ಕನೆ : ಈ ಧರ್ಮಮಂ ನೀಂ ಜಲಕ್ಕಗೆ ಮಾಡಲ್ವಗೆ ದರ್ಪುದು (ಆದಿಪು. ೭–೨). [ ಜಲಕ್$_0$ + – ಅಗೆ$_3$ ]

**ಜಲಕ್ಕನೆ, ಜಲಕನೆ, ಜಳಕನೆ, ಜಳಕ್ಕನೆ**(ಅ).೧. ಸ್ವಚ್ಛವಾಗಿ; ಶುಭ್ರವಾಗಿ; ತಳತಳನೆ : " ವಿಮಲಾಹ್ವಯದೊಳ್ ಜಲಕ್ಕನೆಂದು " (ಕರ್ಣಾನಿ. ೫೦) : ಅನಂತನುಂ ತಾನುಂ ಜಲಕ್ಕನಿರೆ ಪಲ್ಲಂ ಸುಲಿದಗಣ್ಯಪುಣ್ಯ ತೀರ್ಥೋದಕಂಗಳಂ ಮಿಂದು(ಪಂಪಭಾ. ೧೦–೪೬ ವ) ; ಪರೆಯೆ ಮುಗಿಲ್ಜಲಕ್ಕನಿರ[ಲೆ]ಣ್ದೆಸೆ (ಕಾದಂಉ. ೬೩೪) ; ಗಗನಂ ಕೂಡೆ ಜಲಕ್ಕನಾಗಿ ಮೆಟಿಯಲ್ . . . ಬಂದುದು ನೋಡೆ ನಾಡೆ ಶರದಂ (ಪುಣ್ಯಾಸ್ರ. ೨–೬) ; ಕೋವಣಮುಂ ಗುಂಡಿಗೆಯುಂ ನೇವರಿಸಿದ ಬೂದಿಯುಂ ಜಲಕ್ಕನೆ ಚೆಲ್ವಿಂ ತೀವಿರೆ(ಕಬ್ಬಿಕಾ. ೨೯೦). ೨. ಸ್ಪಷ್ಟವಾಗಿ ; ವಿಶದವಾಗಿ : ಸಂದೆಯಂಬಡದೆ ಜಲಕ್ಕನೀಗಳಟಿದಂ ಸಿರಿ ಕಳ್ಗೊಡವುಟ್ಟಿತೆಂಬುದಂ (ಪಂಪಭಾ. ೨–೪೯) ; ಆ ಲಲನೆಯ ದೇನಾದಳದಂ ಜಲಕ್ಕನಾಗೆನಗೆ ಬೆಸಸಿಮಿಗಾಳ್ ಮುನಿಪಾ(ಕಾದಂಉ. ೬೨೫); ಕನ್ನಡಿಯೊಳಗೆ ಜಲಕ್ಕನೆ ತೋರ್ಪವೊಲಿಭದ ರೂಪು ವಿಸ್ತರದಿಂದಂ (ಧರ್ಮಾಮೃ. ೧–೫೫) ; ಕಾಟ್ಬುರವಾಗೆ ಕಾವ್ಯರಸಮರ್ಥಮುಮಕ್ಕರಮುಂ ಪ್ರತೀತಿಯಂ ಮಾಟ್ಪಿನೆಗಂ ಜಲಕ್ಕನಿರೆ ಪೇಟದೆ ಕೆಮ್ಮ[ನೊಗಂಟು] ವೇಟ್ದು ಚೀ ನೋಟ್ಪುದೆ ಮುಯ್ಯಂ (ಕಾವ್ಯಾವ. ೨೯೯). ೩. ತಟ್ಟನೆ ; ಕೂಡಲೇ ; ಒಮ್ಮೆಲೆ : ಬೇಗಮುಂದನ್ವದಂತರ ನಿವಾಸಿಗಳಾಸನಕಂಪದಿಂ ನೃಪೇಂದ್ರಾಗ್ರಮಮಂ ಜಲಕ್ಕನಟಿದು (ಶಾಂತಿಪು. ೧೦–೧೬೭) ; ಬೆಟ್ಟುಗಳುಂ ಪೊಲನುಂ ಬಾನುಂ ದೆಸೆಯುಂ ಜಲಕ್ಕನಲರಿಂದೆ ಸಮೆದವೊಲಾಯ್ತೆತ್ತಂ (ಕಬ್ಬಿಕಾ. ೩೦೨); ಕಂಬುಲಲಿತಕಂಧರ ಮುನ್ನೆಟಿದ ನವಾಂಬು ಜಲಕ್ಕನೆ ತೀವಲು (ಜಯಕಾ.೧–೪೩); ವಾಣಿಯೆನೆ ಜಾಣೆ ಜಲಕ್ಕನೆ ನಿಂದು ನೋಡಿದಳ್ (ರಾಜಶೇ. ೭–೬). **ಜಲಕನೆ:** ೧. "ನಿಮ್ಮಾಳಿಕೆಯು ಬೆಳ್ಪಳಿಯುಂ ಗಮ್ಮನೆ ತಾಂ ಜಲಕನೆಂದು ಪಳಚನೆಯೆನ್ನಲ್ . . . ನಿರ್ಮಲಾಹ್ವಯಂ ತಾನಕ್ಕುಂ " (ಕವಿಕಂ. ೧೦೧) ; ಇರುಳ ತಣ್ಪಿಸಿಲೆಬ್ಬಳತಿಗೆ ಮಿಂಚಿರ್ಪಲ್ಲದಿಂಗಡಲ್ವಿಧು ಸರ್ಪನ ಪೆರೆ ಜಲಕನಾಯ್ತು ಪೊಸವೆಳ್ದಿಂಗಳ್ (ಮಲ್ಲಿಪು. ೭–೪೪) ; ಪರೆದ ರಜದಿಂದೆ ಮಾಸಿದ ಹರಿದಂಬರಮೆಯ್ದೆ ಜಲಕನಾಯ್ತಿದು ಚಿತ್ರಂ (ಪುಷ್ಪಪು. ೮–೩೭). ೨. ಮಾನವರ್ ಪೊಲೆಗಿಡದಂತು ದುಃಖ ಸುಖಹೇತುಗಳಂ ನಿಜದಿವ್ಯ ಭಾಷೆಯಿಂ ಜಲಕನೆ ತೋಟಿದೈ ಸಕಲ ದೇಹಿಗೆ ನೀನೆ ಶರಣು ಜನೇಶ್ವರಾ (ಪಂರಾಮಾ. ೫–೮). **ಜಳಕನೆ:** ೧. ಎಳೆಯಂ ಪೊಸ ಮೂಸೆ ಮಾಡಿ ಶಶಿಮಂಡಳಮಂ ಗುಳಿಗೆಯಿಡೆ ತಿಮಿರಕಾಳಿಕೆ ತಿಳಿದಂತಿರೆ ಜಳಕ[ಪಾಠಾಂ. ಜಲಕ್ಕ]ನಾಯ್ತು ಪೊಸವೆಳ್ದಿಂಗಳ್ (ಕಾವ್ಯಸಾ. ೯೪೫) ; (ಅನಂಪು. ೭–೮೫ ನೋ). **ಜಳಕ್ಕನೆ :** ೧. " ಜಳಕ್ಕನೆಂದುಂ ಪಳಚ್ಚನೆಂದುಂ ನಿರ್ಮಲಂ" (ಕಶಸಾ.೫೭–೨೦೪).೩. ಅತನು ಜಳಕ್ಕನೆ ನದಿಗೆ ಹಾರಿದನು(ಮುಂಗಾಮುಉ.೫೮).

**ಜಲಕ್ಕನಾಗು, ಜಳಕನಾಗು** = ೧. ಸ್ಪಷ್ಟವಾಗಂ; ಖಚಿತವಾಗು: ಮನದೊಳ್ ತದ್ವೃತ್ತಕಂ ಶಾಸನಂಬರೆದಿರ್ದಂತೆ ಜಲಕ್ಕನಾಗೆ (ಸುಕುಮಾ. ೬-೫): ಪುರೋಹಿತನ ಮೊಗಮಂ ನೋಟ್ಟುದುಮಾತನಾ ಸ್ವಪ್ನವಿಶೇಷ ಫಲಂಗಳಂ ಜಲಕ್ಕನಾಗೆ ತಿಳಿದಿಂತೆಂದಂ (ಪುಷ್ಪಪು. ೩-೧೨೦ ವ). ೨. ತಳ ತಳಿಸು; ಹೊಳೆ: ನೀಲದ ಪೊಳೆವ ಪರಲ್ಗಳ ಕೀಲಣೆಯಿಂ ಜಳ [ಪಾಠಾಂ. ಲ]ಕನಾದ ಜಳದೇವಿಯ ಪೊನ್ನೋಲೆಯೆನಿಸಿದುದು ಪತ್ರಕಪೋಲಗತಂ ಕನಕನಳಿನವೊಂದಳಿವಳಿನಂ (ಅರ್ಧನೇ. ೫-೧೦೭);(ಪದ್ಯಸಾ. II, ೮೪೦ ನೋ).
[ ಜಲಕ್$_0$ + – ಅನೆ$_1$ ]

**ಜಲಕ್ರೀಡೆ, ಜಳಕ್ರೀಡೆ** (ನಾ). = ಜಲಕೇಳಿ: ಗಂಗಾಜಲ ಲವಣಾಬ್ಧಿ ವೇಳಾವನ ಸರಸೀಸಲಿಲಂಗಳೊಳ್ ಜಲಕ್ರೀಡೆಯಾಡಲುಂ (ಆದಿಪು. ೮-೩೨ವ). **ಜಳಕ್ರೀಡೆ:** ವನ ಜಳಕ್ರೀಡೋಪಯೋಗ್ಯ ಕತಿಪಯ ಪರಿವಾರ ಸಮೇತನುಂ (ಚಂದ್ರಪು. ೬-೮೩ ವ). [ ಜಲ$_2$ + ಕ್ರೀಡೆ ]

**ಜಲಕ್ಲಿನ್ನ** (ಗು). ನೀರಿನಿಂದ ಒದ್ದೆಯಾದ,-ತೊಯ್ದ; ಜಲಧರಗಳಿತ ಧಾರಾಜಲಕ್ಲಿನ್ನ ತೀರ ತರುತಳಮುಂ (ಕಾದಂಬ. ೫೬೯).
[ ಜಲ$_2$ + ಕ್ಲಿನ್ನ ]

**ಜಲಕ್ಲೇದ** (ನಾ). ನೀರಿನಿಂದಾದ ತೇವ, – ಒದ್ದೆ: ಜಲಕ್ಲೇದವಿಶಿಷ್ಟ ಮೃತ್ತಿಕಾಬಂಧಮುಪ್ಪುದರಿಂ (ತತ್ತ್ವಪ್ರ. ೩೬೦). [ಸಂ. (ಜಲ + ಕ್ಲೇದ)]

**ಜಲಖಾತಿಕೆ, ಜಳಖಾತಿಕೆ** (ನಾ). ನೀರಿನ ಕಂದಕ,-ಅಗಳು: ನಿರ್ಮಳ ಸುಗಂಧಿಸಲಿಲಭರಿತಮುಮಪ್ಪ ಜಲಖಾತಿಕೆಯುಮಂ (ಜಾವುಂಪು. ೪೦). **ಜಳಖಾತಿಕೆ:** ದೆಸೆಯಾನೆಗಳಂ ಜಳಕೇಳಿಗೆ ಕರೆವಂತಿರೆ ಜಳಖಾತಿಕೆ ಬಳಸಿ ಚೆಲ್ವನೊಳಕೊಂಡಿರ್ಕುಂ (ಮಲ್ಲಿಪು. ೨-೫೦); ಬಳಸಿರೆ ಜಳಖಾತಿಕೆ ತಳ ತಳಿಸುವ ಪೊಸವಳಕಿನೆಸೆವ ಕೋಂಟೆ ಕರಂ ಕಣ್ಗೊಳಿಪುದು (ಚಂದ್ರಪು. ೧೧-೬೩). [ ಜಲ$_2$ + ಖಾತಿಕೆ ]

**ಜಲಗ** 'ಜಲಿಕ' ನೋ.

**ಜಲಗಂಡ** (ನಾ). ನೀರಿನಿಂದ ಒದಗುವ ಗಂಡಾಂತರ, – ಅಪಾಯ: ಕನಕಸಭೆಯನ್ನು ಜಲಗಂಡದಿಂದ ಕಾಪಾಡಿದ ಸಂನ್ಯಾಸಿಯೂ . . . ಮುಂದಾಗಿ ಬಂದು (ಪ್ರತಾಪ. ೧೬). [ ಜಲ$_2$ + ಗಂಡ$_3$ ]

**ಜಲಗಜ** (ನಾ). ನೀರಾನೆ: ದಿಗ್ಗಜ ಜಲಗಜಂ . . . ವಿಶದಂ ತತ್ಕೀರ್ತಿ ದುಗ್ಧಾಂಬುಧಿ ಗಗನಘನಶ್ರೀಶನಂ ತಾಳ್ದು ತೋರ್ಕುಂ (ರಾಜಶೇ. ೫-೩).
[ ಜಲ$_2$ + ಗಜ ]

**ಜಲಗಡಿ** (ನಾ). ಜಲಾಶಯಂ ಅಥವಾ ನದಿ ಮೊದಲಾದುವುಗಳಿಂದ ಸೂಚಿತವಾಗುವ ಗಡಿ,-ಮೇರೆ: ಪ್ರಾದೇಶಿಕ ಜಲಗಡಿ (ರೂಢಿ).
[ ಜಲ$_2$ + ಗಡಿ$_1$ ]

**ಜಲಗರ$_1$** (ನಾ). ಹೊಟ್ಟೆಯಲ್ಲಿ ನೀರಂ ತುಂಬಿಕೊಳ್ಳುವ ರೋಗ; ಜಲೋದರ: ತರುರಾಜಬೀಜಮಂ . . . ತೊಯ್ದೊಣಗಿಸಿ ನೆಯ್ವೆರಸು ತಿನೆ ಜಲಗರಂ ಬಿಡೆ ಪರಿಗುಮುಗುರ್ವಾಗಿ ತೂಂಬನುರ್ಚಿದ ತೆಱದಿಂ (ಲೋಕೋಪ. ೯-೧೦೭); ಅಡಿಗಡಿಗೆ ತೊಳೆದು ಕುಡಿದರೆ ಹೊಟ್ಟೆಯ ಜಲಗರ ಕುತ್ತ ಬೆಳೆಯಿತ್ತ (ಅವಜಂ. ೧೦೫-೫೨೦): ಜಲಗರ ಬೆಳೆಯಿತ್ತೆಂದು ಅಂಜ ಹೇಮರಸವ ಕುಡಿದಡೆ ಉದರದೊಳಗಿರ್ದ ಕಪಿ ಶೃಂಗಾರವಾಗನೆ (ಚನ್ನವ. ಕ. ೨೭-೬೦); ನೀರಂ ಪಿರಿದುಂಡೊಡಮುಂಡು ಪರಿದೊಡಂ . . . ಜಲಗರಮುಕ್ಕುಂ ವಾಜಿಗೆ (ಅಶ್ವಶಾ. ೧೪-೨೧). [ ಜಲ$_2$ + ಗರ$_4$ ]

**ಜಲಗರ$_2$** 'ಜಾಲಗಾಱ' ನೋ.

**ಜಲಗರ್ಭನಾವೆ** (ನಾ). ಸಮುದ್ರದಲ್ಲಿ ನೀರಿನ ಒಳಗೆ ಸಂಚಾರಮಾಡುವ ನೌಕೆ; ಜಲಾಂತರ್ನೌಕೆ: ವ್ಯಾಪಾರದ ಹಡಗುಗಳನ್ನು ಮುಳುಗಿಸುವ ಸಲುವಾಗಿ, ವೈರಿಗಳು ಜಲಗರ್ಭನಾವೆ (Submarine)ಗಳನ್ನು ಉಪಯೋಗಿಸುತ್ತಾರೆ (ಬಾಲಪ್ರ. I, ೫೯೦). [ಜಲ$_2$ + ಗರ್ಭ + ನಾವೆ]

**ಜಲಗಾಡಿಸು** (ಕ್ರಿ). ಕಲಕು; ಅಲ್ಲೋಲ ಕಲ್ಲೋಲ ಮಾಡು; ಅಲ್ಲಾಡಿಸು: ಲೋಕವನೆ ಜಲಗಾಡಿಸುವ ಶಕ್ರ್ಯಾಕರನು ಕಲಿ ವಾಲಿಯಾತ್ಮಜನೇಕ ಸಾಹಸಿಯಾದ ಅಂಗದ ನಿಂದನಾಹವಕೆ (ಜೈರಾಮಾ. ೨೫೨-೮). [ ಜಲಗಾಡು + – ಇಸು$_3$ ]

**ಜಲಗಾಡು** (ಕ್ರಿ). ಜಾಲಿಸು; ಜಾಲಾಡು: ನಿತ್ಯ ಕಪಿಲೆ ಹೊಡೆಯುತ್ತೇನೆ ಭಾವಿಯೆಲ್ಲಾ ಜಲಗಾಡುತ್ತೇನೆ (ಕಥವಿ. II, ೬೩).
[ ಜಲಗು$_1$ + ಆಡು$_1$ ]

**ಜಲಗಾರ$_1$** 'ಜಾಲಗಾಱ' ನೋ.

**ಜಲಗಾರ$_2$, ಜಾಲಗಾರ$_1$** (ನಾ). ೧. ನದಿಯ ಮರಳು ಮೊದಲಾದುವು ಗಳಲ್ಲಿ ಬೆರೆತ ಚಿನ್ನದ ಕಣಗಳನ್ನು ಶೋಧಿಸಿ ತೆಗೆಯುವವನು. ೨. ಕಸಗುಡಿಸುವವನು; ಜಾಡಮಾಲಿ: ವಿರೂಪಾಕ್ಷ ನಟರಾಜನಿಗೆ ಜಲಗಾರ, ಕಲೆಗಾರ ಇಬ್ಬರೂ ಒಂದೆ (ತುಂಗಭ. ೯೩). **ಜಾಲಗಾರ$_1$:** ೧. ಬಳಿಕ ಪತ್ತಾರನು ಪೊಂದು ರೂಪಾಯಿ ಮೊಕದ ಬೆಳ್ಳಿಯ ತುಂಡನ್ನು ಕಡಿದುಕೊಂಡು ಅದಕ್ಕೆ ಅಷ್ಟೆ ಸೀಸು ಕೂಡಿಸಿ ಸಣ್ಣ ಮುಶಿಯೊಳಗೆ ಹಾಕಿ ಜಾಲಗಾರನ ಕೈಯಲ್ಲಿ ಕರಗಿಸಲಿಕ್ಕೆ ಕೊಡುವನು (ಕಥಾಗ. ೨೮೨); ಜಾಲಗಾರನು ಉಸುಕು ಜಾಳಿಸುವ ಹಾಗೆ (ಉಯ್ಯಾಲೆ. ೧೧-೯). [ ಜಲ$_3$ + – ಗಾರ (< – ಕಾಱ) ]

**ಜಲಗಾರಿಕೆ** (ನಾ). ಜಲಗಾರನ ವೃತ್ತಿ; ಕಸಗುಡಿಸುವ ಕೆಲಸ: ಅಹಂಕಾರದ ಕಾಳಿಕೆಯ ಒಂದು ಕಣವೂ ಬೆರೆತಿರದ ಜಲಗಾರಿಕೆಯಲ್ಲಿಯೇ ಶಿವನಿಗೆ ಹೆಚ್ಚಿನ ಮೆಚ್ಚು (ತುಂಗಭ. ೯೩). [ ಜಲಗಾರ$_2$ + – ಇಕೆ ]

**ಜಲಗಾಱ** 'ಜಾಲಗಾಱ' ನೋ.

**ಜಲಗು$_1$** (ಕ್ರಿ). ಕದಡು; ಜಾಲಾಡು. 'ಜಲಗಾಡಂ' ಪರಾ. [ ? ]

**ಜಲಗು$_2$** 'ಜರಗು$_2$' ನೋ.

**ಜಲಗೊಟ್ಟೆ, ಜಲಗೋಟಿ** (ನಾ). ಒಂದು ಬಗೆಯ ಔಷಧಿ ಮೂಲಿಕೆ: ರಕ್ತಪಿತ್ತಕ್ಕೆ-ನೆಲ್ಲಿಚೆಟ್ಟು ಅರ್ಧಪಲಂ, ಜಲಗೊಟ್ಟೆ ೪ ತೂಕ, ಅಷ್ಟಮಧುಕ ೨ ತೂಕ, ಇವಂ ಹಾಲಲ್ಲರದು . . . ೭ ದಿನ ಕೊಂಬುದು(ವಿಪ್ರವಿ. ೦೪೯). **ಜಲಗೋಟಿ:** ಯವೆ, ಮೆಣಸು, ಸೈಂಧವಂ, ಜಲಗೋಟಿಯಂ ಮರದರಿ ಸಿನವಂ ತುತ್ತಮಂ . . . ಪುಡಿಮಾಡಿ ಕಬ್ಬಿಣದ ಭಾಜನದೊಳು ಇರಿಸೆ (ವಿಪ್ರವಿ. ೧೬೦). [ ? ]

**ಜಲಗೊಳ್** (ಕ್ರಿ). ನೀರನ್ನು ತೆಗೆದುಕೊಳ್ಳು,-ಹೀರಿಕೊಳ್ಳು,-ಕುಡಿ: ತೆರೆಯಿವು ನೀರ್ವಾವಿವು ಸಲಿಲದ ಮದಕರಿಯಿವು ಜಲಗೊಳ್ವ[ಪಾಠಾಂ. ಜಗದೊಳ್ವ]ಮುಗಿಲಿವು ನೊರೆಯಿವು ಶಂಕಿವು . . . ಎಂದಱವರಿಗರಿದವು (ಸೂಬಸೋ. ೧೫-೩೧). [ ಜಲ$_2$ + ಕೊಳ್$_1$ ]

**ಜಲಗೋಟಿ** 'ಜಲಗೊಟ್ಟೆ' ನೋ.

**ಜಲಗೋಳ**(ನಾ). ಜಲ ಮಂಡಲ: ಈ ಭೂಮಿಯನ್ನು ಬಳಸಿಕೊಂಡಿರುವ ಸಮುದ್ರ ಹೈಡ್ರೋಸ್ಫಿಯರ್ ಅಥವ ಜಲಗೋಳ (ಭೂವಿವ. ೯).
[ ಜಲ$_2$ + ಗೋಳ$_2$(=ಗೋಲ) ]

**ಜಲಗ್ರಹ** (ನಾ). ಮೊಸಳೆ: ಆಶೆಯೆಂಬಾ ನದಿಯು ಅದರೊಳು ವಾಸವಿಹ . . . ರಾಗಾದಿಯೆ ಜಲಗ್ರಹವು (ಜ್ಞಾನಸಿಂ. ೪೨-೬೩).
[ <ಸಂ. ಜಲಗ್ರಾಹ ]

**ಜಲಘಟ** (ನಾ). ನೀರು ತುಂಬಿದ ಕೊಡ: ಬಹು ಜಲಘಟದೊಳು ಪ್ರಾಕಟದೆ ಹೊಳೆವ ಪೂರ್ಣ ಮಿಯ ಚಂದ್ರನವೋಲು (ವೀಶೈಪು. ೨-೮-೩೪).
[ ಜಲ$_2$ + ಘಟ ]

**ಜಲಘಡಿ** (ನಾ). (ಕಾಲವನ್ನು ಅಳೆಯಲು ಉಪಯೋಗಿಸುತ್ತಿದ್ದ) ಗಳಿಗೆ ಬಟ್ಟಲು: ಕಾಲನಿರ್ಣಯ ಮಾಡಲು ಜಲಘಡಿ ತಿಳಿಸಲ್ಪಟ್ಟಿದೆ (ತತ್ತ್ವಪ್ರಾ. ४೮३). [ ಜಲ$_2$ + ಘಡಿ$_0$(<ಘಟಿ) ]

**ಜಲಚಕ್ರ** (ನಾ). ಸಮುದ್ರದಿಂದ ಹೊರಟು ಮೋಡವಾಗಿ ಮತ್ತೆ ಸಮುದ್ರವನ್ನು ಸೇರುವ ನೀರಿನ ಸುತ್ತಾಟ,–ಅಲೆದಾಟ : ಸಮುದ್ರದಿಂದ ಹೊರಟು ಮತ್ತೆ ಸಮುದ್ರಕ್ಕೆ ಸೇರುವವರೆಗೂ ಈ ನೀರಿನದೊಂದು ವೃತ್ತಾಕಾರ ಚಲನೆ. ಇದನ್ನು ಜಲಚಕ್ರವೆಂದು ಕರೆಯಬಹುದು (ಭೂವಿವ. ೮೧). [ ಜಲ$_2$ + ಚಕ್ರ$_1$ ]

**ಜಲಚರ,** ಜಳಚರ (ನಾ). ೧. ನೀರಿನಲ್ಲಿ ಸಂಚರಿಸುವ,–ವಾಸಿಸುವ ಮೊಸಳೆ ಮೊದಲಾದ ಜಲಜಂತು : ಜಲಚರಸಂಭೂತ ಸಂಪದ್ವಿಧಾನಂ . . . ಪ್ರಬಳ ಘುಳುಘುಳುಧ್ವಾನವಂಭೋನಿಧಾನಂ (ಜಗವಿ. ೧-೨೩): ಅಬ್ಜಾಕರ ತಟಾಕ ಪ್ರಪೂರ್ಣೋದಕದಿ ಜಲಚರಂ ಸುಳಿಯಲವ್ಮವು (ನಂದಿಮಾ. ೧-೨೨). ೨. ಮೀನು : "ವೈಸಾರಿಣಃ, ವಿಸಾರಃ, ಪೃಥುರೋಮಾ, ಜಲಚರಃ, ಝಷಃ . . . ಪಾಠೀನಃ–ಈ ೧೩ ಮೀನ್" (ಹಲಾಯು. ೧೦೮-೩೫). **ಜಳಚರ :** ೧. ಅವಱೊಳ್ ಪಂಚೇಂದ್ರಿಯಂಗಳ್ ಜಳಚರ ಸ್ಥಳಚರ ಗಗನಚರ ಪ್ರಕಾರದಿಂ ಮೂದೆಱನಕ್ಕುಂ (ಶಾಂತಿಪು. ೦೨-೧೧ ವ). [ ಸಂ. ]

**ಜಲಚಲನವಿಜ್ಞಾನ** (ನಾ). ನೀರಿನ ಗುಣನಿಯಮಗಳನ್ನು ತಿಳಿಸುವ ಶಾಸ್ತ್ರ : ಭೂಮಿಯ ಜನನವಾದ ಮೇಲೆ ಅದರ ಹೊರಮೈಯು ಘನ ರೂಪ ತಾಳಲು ಎರಡು ಮೂರು ಕೋಟಿ ವರ್ಷಗಳು ಸಾಕೆಂದು ಜಲಚಲನ ವಿಜ್ಞಾನ ನಿಯಮಗಳಿಂದ ಗುಣಿಸಬಹುದು (ಜಗತ್ತು. ೧೨).
[ ಜಲ$_2$ + ಚಲನ + ವಿಜ್ಞಾನ ]

**ಜಲಚಿಕಿತ್ಸೆ** (ನಾ). ರೋಗಿಗಳಿಗೆ ಕೇವಲ ನೀರಿನಿಂದಲೆ ಮಾಡುವ ಚಿಕಿತ್ಸೆ: "ನೀರನ್ನು (ದೇಹದ) ಹೊರಗೂ ಒಳಗೂ ಪ್ರಯೋಗ ಮಾಡುವ ಚಿಕಿತ್ಸೆ, ಜಲಚಿಕಿತ್ಸೆ" (Hydropathy. ಇಂಕನ್ನಿ). [ ಜಲ$_2$ + ಚಿಕಿತ್ಸೆ ]

**ಜಲಚಿಹ್ನೆ** (ನಾ). ಕಾಗದದಲ್ಲಿ ಬೆಳಕಿನ ಎದುರಿಗೆ ಹಿಡಿದಾಗ ಮಾತ್ರ ಕಾಣುವ ಗುರುತು; P ಇದು ಇಂಗ್ಲಿಷಿನ 'watermark' ಎಂಬುದರ ಅನುವಾದ : ರಚನೆ, ರೂಪ, ಅಳತೆ ಮತ್ತು (ಒಂದು ವೇಳೆ ಇದ್ದ ಪಕ್ಷದಲ್ಲಿ) ಜಲಚಿಹ್ನೆಗಳ ಅಧ್ಯಯನದಿಂದ ಹಸ್ತಪ್ರತಿಗಳನ್ನು ರಚಿಸಿರುವ ಕಾಗದ ತನ್ನ ಕಾಲವರ್ಗೀಕರಣಕ್ಕೆ ಅವಕಾಶ ಕೊಡಬಹುದು (ಭಾರಪ. ೧೭). [ ಜಲ$_2$ + ಚಿಹ್ನೆ ]

**ಜಲಜ,** ಜಳಜ (ನಾ). ೧. ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : ಜಲಜದ ಕನ್ನವುರಂ ತೆಂಬೆಲರಲೆಪದಿನಲುಗುವಂದಮೇನೆಸೆದುದೊ (ಲೀಲಾವ. ೧೧-೦೩) : ಈರಾಱ್‌ದಳ ಜಲಜಮಂ ಸೋಂಕಿ ಮೋಡಶಪತ್ರ ಕಮಳದಲಿ (ಬಸಪು. ೩-೮). 'ಜಲಜಗಂಧಿ' ಪರಾ. ೨. ಕಪ್ಪೆಚಿಪ್ಪು ; ಸಿಂಪು ; ಶಂಖ : ಗರುಡಾರೂಢನುಪಾತ್ತ ಚಕ್ರಜಲಜಂ ಕೌಮೋದಕೀ ಶಾರ್ಙ್ಗ ಮೊಪ್ಪಿರೆ ನಾರಾಯಣಿಗೂಡಿ ನೈಋತದಿಶಾದ್ವಾರಸ್ಥಿತಂ ಕಣ್ಗೆ ಬಂಧುರನಾದಂ . . . ಕ್ರೋಡಾಹ್ವಯಂ ಭೈರವಂ (ಶಬಶಂ. ೧-೬೦). ೩. ಉತ್ತಮ ಬಗೆಯಂ ಸಾಲಿಗ್ರಾಮಶಿಲೆ. ೪. = ಜಲಜನಕ: ನಿರ್ಗಂಧ ವಾಯುವಿಲ್ಲದ ಆಹಾರದೊಳಗೆ ಆಮ್ಲಜ, ಜಲಜ, ಕಾರ್ಬೊನ್ನು ಎಂಬ ಮೂರು ಮೂಲ ತತ್ತ್ವಗಳಿರುತ್ತವೆ (ಮುಂಬಯಿ. ೫-೧೬೦ ಆಡಿಟ). ೫.ಠೇವಣಿ; ಇಡುಗಂಟು: "ನಿಕ್ಷೇಪ, ಜಲಜ (ಠೇವಣಾತಿ)" (Deposit. ಪಾರಿಭಿ. ೨೮). **ಜಳಜ :** ೧. ಜಳಜದ ಮೊಗ್ಗೆಯಂತೆ ಮುಗುಳಂತೆಳೆಯೆಕ್ಕೆಯ ಕಾಯ್ಗಳಂತೆ . . . ಕೋಮಳ ಶುಕ ಶಾಬಕ ಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ (ಕಾದಂಪೂ. ೦೭೮) ; ಜಳಜದೊಳು ಸಿಕ್ಕಿ ಮೊರೆವಳಿಗಳಂ ಬಿಡಿಸುತುಂ ಪಿಕದ ದನಿಗೇಳುತ್ತೆ ನವಿಲ್ಗಳಂ ಕುಣಿಯಿಸುತೆ . . . ಶಶಿಭೂಷಣನ ಸುಕುಮಾರನೊಪ್ಪಿದಂ (ನಂಬಿರ. ೦೧-೧೯೪). [ ಸಂ. ]

**ಜಲಜಂತು** (ನಾ). = ಜಲಚರ : ಯಾದಾಂಸಿ, ಜಲಜಂತವಃ–೨ ಜಲಜಂತುಗಳ ಹೆಸರುಗಳು (ಸಿದ್ಧಾಂತಿ. ೭೪). [ ಜಲ$_2$ + ಜಂತು ]

**ಜಲಜಂತ್ರ,** ಜಳಜಂತ್ರ (ನಾ). ೧. ಜೀರ್ಕೊಳವೆ ; ಜೀಕಳಿ ; ಪಿಚಕಾರಿ: ಕೊಂಡು ಕುಂಕುಮವಾರಿಗಳ ಹೊನ್ನಂಡೆ ಜಲಜಂ[ಪಾಠಾಂ. ಸೂ]ತ್ರಂಗಳಲಿ ಮುಂಕೊಂಡು . . . ಹೊಯ್ದಾಡಿದರು ವೋಕುಳಿಯ (ತೊರರಾ. ೦-೦೭-೫೩). ೨. ನೀರನ್ನು ತುಂತುರು ತುಂತುರಾಗಿ ಸುರಿಸುವ ಯಂತ್ರ; ಕಾರಂಜಿ; ಧಾರಾಯಂತ್ರ: ಜಲಜಂತ್ರದೆಡೆಯೊಳ್ವರ್ಷಸಯ ತಾಣದೊಳ್ಮಲಯಜದ ಮಾಡದೊಳ್ . . . ನಿಲಲಱಿಯದುಪ್ಪರಿಗೆದುದಿನೆಲೆಯ ಚಂದ್ರಶಾಲೆಗೆ ಬಂದಳಂಬುಜಾಕ್ಷಿ (ಜೈಮಿಭಾ. ೩೦-೩೭). **ಜಳಜಂತ್ರ :** ೧. ಕೊಳನೊಳಗೆ ಹೊಕ್ಕು ಸತಿಯರ ಕೂಡೆ ಹರ್ಷದಿಂ ಜಳಜಂತ್ರದಿಂದಾಡಿ ಮುಳುಗಾಡಿ ತುಳುಕಾಡಿ ತಿಳಿದಾಡಿ ತೀರದಾಡಿ (ಹಡಕಾ. ೩-೫೪).
[ <ಸಂ. ಜಲಯಂತ್ರ ]

**ಜಲಜಗಂಧಿ** (ನಾ). ತಾವರೆಯಂತೆ ಸುಗಂಧವನ್ನುಳ್ಳವಳು; ಪದ್ಮಗಂಧಿ; ಪದ್ಮಿನೀಜಾತಿಯ ಸ್ತ್ರೀ : ಜಲಜಗಂಧಿಯ ತಂದು ರಾಮಂಗಳುಕಿ ರಾವಣ ಮರಳಿ ಕೊಟ್ಟನು ಛಲವು ಸಾಕೆಂದೆನ್ನ ನಗರೀ ಸತಿಯು ನಾ ಬಿಡಲು (ಕೌಶಿರಾ. ೩೮-೨೦). [ ಸಂ. ]

**ಜಲಜಜ** (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ : ಜಲಜಜಮುಖ್ಯರ್ ಕಾಂತಾವಳಿಗೆಱಗುವರೆಂದು ತೋರ್ಪವೊಲ್ . . . ಸಪ್ತಪದಿಗಳಂ ಮೆಟ್ಟಿಸಿದಂ (ತ್ರಿಪುವಿ. ೧೮-೬೫). [ ಸಂ. ]

**ಜಲಜಜಠರ** (ನಾ). ಪದ್ಮನಾಭ ; ವಿಷ್ಣು : ಮಗನಿಂದುವಬ್ಬವಾಸಿನಿ ಮಗಳಳಿಯಂ ಜಲಜಜಠರನಿದು ಪೆಂಪು (ಸೂಕ್ತಿಸು. ೨-೧೨).
[ ಜಲಜ + ಜಠರ ]

**ಜಲಜಜಾಂಡ** (ನಾ). ಬ್ರಹ್ಮಾಂಡ : ಛಿಳಿಛಿಳಿಲ್ ಛಿಳಿಲೆಂದು ಚಿಮ್ಮಿತು ಜಲಜಜಾಂಡದ ಚಿಪ್ಪು (ತೊರರಾ. ೫-೮-೬೦). [ ಜಲಜಜ + ಅಂಡ$_2$ ]

**ಜಲಜದಲ,** ಜಳಜದಳ (ನಾ). ತಾವರೆಹೂವಿನ ಎಸಳು ; ಕಮಲದ ದಳ : ಜನರವರು ಭಕ್ತಿಗೆ ಹೊಱಗು ಹೇಳಾ ಜಲಜದಲ[ಪಾಠಾಂ. ಳ] ನಯನೆ (ಬಸಪು. ೪೪-೫೯). **ಜಳಜದಳ :** ಜಳಜದಳಪೀಠದೊಳ್ ನಲ್ಲಳ ನುಣ್ಗಾಲ್ ಸೋಂಕೆ ಸೋಂಕಿ ಕುಳ್ಳಿರ್ದಳಿನೀಕಳಗೀತರವಮನಾಲಿಪ ವಿಳಾಸಮಂ (ಚಂದ್ರಪು. ೮-೯). [ ಜಲಜ + ದಲ ]

**ಜಲಜದೃಷ** (ನಾ). ಕಮಲಾಕ್ಷ ; ವಿಷ್ಣು : ಜಲಜದೃಷನು . . . ಹಲಧರಂಗಿಂತೆಂದನು (ನಿಭಾಗ. ೦೦-೪೭-೨೩). [ < ಸಂ. ಜಲಜದೃಶ್ ]

**ಜಲಜನಕ** (ನಾ). ನೀರಿನ ಒಂದು ಘಟಕ; ಒಂದು ಅನಿಲ; ಹೈಡ್ರೋಜೆನ್: ಈ ಜಲಜನಕದೊಡನೆ ಆಮ್ಲಜನಕವು ಸೇರಿ ನೀರಾಗಿ ಮಾರ್ಪಡುವಂತೆ (ಭೌತವಿ. ೩೩೦). [ ಜಲ$_2$ + ಜನಕ ]

**ಜಲಜನಕಾನಿಲ** (ನಾ). = ಜಲಜನಕ : ಅದರಲ್ಲಿ ಜಲಜನಕಾನಿಲವನ್ನು ಹಾಯಿಸಿದಾಗ ಎಣ್ಣೆ ಅನಿಲವನ್ನು ಹೀರಿಕೊಂಡು ತುಪ್ಪದಂತೆ ಗಟ್ಟಿಯಾಗುತ್ತದೆ (ನಿರಹಾ. ೨೦). [ ಜಲಜನಕ + ಅನಿಲ ]

**ಜಲಜನಾಭ** (ನಾ). ಹೊಕ್ಕುಳಲ್ಲಿ ತಾವರೆಹೂವುಳ್ಳವನು ; ಪದ್ಮನಾಭ ; ವಿಷ್ಣು : ಇಂದು ನಮಗೆ ಜಲಜನಾಭ[ಪಾಠಾಂ. ಲಕ್ಷುಮಿವಲ್ಲಭ]ನ ಸಂಗ ದೊರಕುವುದು ರಮಣಿ (ಪುರಂದ. ೫-೮೦ ಪಲ್ಲವಿ).
[ ಸಂ. ( ಜಲಜ + ನಾಭಿ + – ) ]

**ಜಲಜಪತ್ರ** (ನಾ). ಕಮಲದ ಎಲೆ ; ತಾವರೆಯೆಲೆ : ಗಾರುಡಿಗನನಾ ಫಣಿಯಂಟದಾ ರೀತಿಯಿಂ ಜಲಜಪತ್ರೋದಕಂ ನಿರ್ಲೇಪಿಯಾ ತೆಱಂ (ವೀಶೈಪು. ೬-೬-೫೪). [ ಜಲಜ + ಪತ್ರ ]

**ಜಲಜಪ್ರಿಯ** (ನಾ). ಕಮಲಕ್ಕೆ ಪ್ರಿಯನಾದವನು ; ಸೂರ್ಯ : ಜಲಜಪ್ರಿಯರವಿಜಕುಜೋತ್ಪಲಪ್ರಿಯರ್ ನಿಧನ ಧನ ರಿಪು ವ್ಯಯಗೃಹದೊಳ್ ನೆಲಸಿರೆ . . . ಅಧಿಕದೋಷದಿಂ ಕಣ್ಗೆಡುಗುಂ (ಜಾತತಿ. ೨೦-೧೬).
[ ಜಲಜ + ಪ್ರಿಯ ]

**ಜಲಜಭವ,** ಜಳಜಭವ (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ : ಜಲಜಭವನುಮದೆಂಭತ್ತು ನಾಲ್ಕು ಲಕ್ಷಯೋನಿಮುಖ ಜೀವದಲ್ಲಿ ಉಲನೆ ಮಾನುಷಯೋನಿ ದುರ್ಲಭಂ (ಮದತಿ. ೧-೬೧). **ಜಳಜಭವ:** ಜಳಜಭವಂ ಮಾನ ಪುರಾಚಳದಸುರಾಚಳದ ವೈಮೆಯಂ ತೂಗೆ ಸುರಾಚಳದಡರ್ದ ಕೊಬಿತೆಗಿಕ್ಕಿದ ತೊಳಗುವ ಗುಂಜೆಯೆನೆ ರಂಜಿಸಿದನು ದಯಾರ್ಕಂ (ಪುಷ್ಪಪು. ೮ ೧೦೯). [ ಜಲಜ + ಭವ ]

**ಜಲಜಲ** (ನಾ). ೧. ನೀರಂ ಹರಿಯುವುದನ್ನು ಸೂಚಿಸುವ ಅನುಕರಣ ಶಬ್ದ. 'ಜಲಜಲನೆ' ಪರಾ. ೨. ಹೆಚ್ಚಾಗಿ ಹೊಳೆಯುವುದನ್ನು ಸೂಚಿಸುವ ಅನುಕರಣ ಶಬ್ದ. 'ಜಲಜಲಿಸು' ಪರಾ.

**ಜಲಜಲನೆ** (ಅ). ಜಲಜಲ ಎಂಬ ಶಬ್ದದೊಡನೆ : ಜಲಜಲನೊ[ಟ್ಟು] ತಿರ್ಪ ಪರಿಕಾಲ್ (ಪಂಪಭಾ. ೧-೫೨); ಜಲಜಲನೊಟ್ಟುತಿರ್ದುದು ನದೀತತಿ (ಜಗವಿ. ೧೪-೭); ಈಗ ಮುಡಿಪೆನಗೆನಿಸಿ, ಜಲಜಲನೆ ಬೀಗಿ (ಇಂಗೀತ. ೮೩-೯). [ ಜಲಜಲ + – ಅನೆ$_1$ ]

**ಜಲಜಲಿಸು,** ಜಳಜಳಿಸು (ಕ್ರಿ). ೧. ಜಲಜಲ ಎಂದು ಸದ್ದುಮಾಡು ; ಜುಳುಜುಳು ಎಂದು ಹರಿ: ಸಾನುತಳದೊಳ್ ಕನಲ್ದು ಜಲಜಲಿಸಿ ಪರಿವ ಪರಿಪೊನಲೆಸೆಗುಂ (ವರ್ಧಪು. ೧೦-೧೪). ೨. ಒಸರು ; ಸ್ರವಿಸು : ಅಲರಾಯ್ದು ಬಟಲೆ ನೊಸಲೊಳ್ ಜಲಜಲಿಸುವ ಬೆಮರನೊರಸಿ ಕಳಿವ (ಲೀಲಾವ. ೧೩-೧೦೫). ೩. ತಳತಳಿಸು; **ಹೊಳೆ**; ಪ್ರಜ್ವಲಿಸು: ಜಲಜಲಿಸೆ ದಶನಕಿರಣಾವಲಿ (ಪಂರಾಮಾ. ೮-೬೪) ; ಪಲ ತೆಱದ ಕನಕಭಾಜನ ಕುಲದಿಂ ಜಲಿಜಲಿಪ ಭಾಜನಾಂಗಮಹೀಜಕ್ಕೆ (ಚಂದ್ರಪು. ೭-೫೬) ; ಪಲಪಸದನದರುಣರುಚಿಯ ಮಣಿದೀಧಿತಿ ಜಲಜಲಿಸುತ್ತಿರಲು (ಜಯುಕಾ.೨-೬೪). **ಜಳಜಳಿಸು:** ೩. ಜಳಜಳಿಸೆ ಮಣಿಮಕುಟರುಚಿ(ನೇಮಿಪು. ೩-೧೪೦) ; ಜಳಜಳಿಸುವ ವಿಮಲಾತ್ಮನೊಳಗೆ ಮೂಡಿ ಮುಳುಗಾಡು ತಿರ್ದನಾ ಸ್ವಾಮಿ (ಭರತ. ೭೪-೦೫) : ಆತನ ಮೋರೆಯಲ್ಲಿ . . . ಗಂಭೀರಚ್ಛಾಯೆ ಜಳಜಳಿಸುತ್ತಿತ್ತು (ವೀರಬಂ. ೮೦): ಆ ವೀರಾಗ್ರೇಸರನ ಮುಖಮಂಡಲವೆಂದರೆ ಬೇರೆ ಬೇರೆ ಭಾವಗಳ ಹೊನಲುಗಳಿಂದ ಬೆರೆದಿದ್ದರೂ ವೀರರಸವೇ ಅಲ್ಲಿ ಜಳಜಳಿಸುತ್ತಿದ್ದುದು (ವೀರಬಂ. ೬೬). **ಜಲಜಲಜಲಿಸು** (ದ್ವಿರುಕ್ತಿ) : ಜಲಜಲಜಲಿಸುವ ನವಮಾಣಿಕ್ಯದ ಸುಲಲಿತವಹ ಕುರುಜೆಲ್ಲಂ (ಜಯುಕಾ. ೪-೪೯). [ಜಲಜಲ + – ಇಸು$_3$]

**ಜಲಜವಿಶಿಖ** (ನಾ). ಕಮಲದ ಹೂವಿನ ಬಾಣವುಳ್ಳವನು ; ಮನ್ಮಥ: ಜಗವ ಕೆಡಹಲು ಜಲಜವಿಶಿಖನು ಬಿಗಿದ ಬಲೆ ಇವಳಲ್ಲಲೇ (ಕುಮಾ.ವಿ. ೨-೯). [ ಜಲಜ + ವಿಶಿಖ ]

**ಜಲಜಸಂಭವ,** ಜಳಜಸಂಭವ (ನಾ). = ಜಲಜಭವ : ಎಲೆ ಜಗನ್ಮಯ ನಿನ್ನ ನಾಭಿಯ ನಳಿನದಿಂದಾನಾದೆನದಱಿಂ ಜಲಜಸಂಭವನೆನಿಪ ಹೆಸರೆನಗಾಯ್ತು (ಕಾಶಿರಾ. ೪೩-೪೪). **ಜಳಜಸಂಭವ:** 'ಜಳಜಸಂಭವ ಗಣ' ಪರಾ. [ ಜಲಜ + ಸಂಭವ ]

**ಜಲಜಾಕರ** (ನಾ). ಹೂಗೊಳ; ತಾವರೆ ಕೊಳ: ಜಲಜಾಕರದೆಣ್ದೆಸೆಯಂ ತಳತಂತ್ರದಿನೆಯ್ದೆ ರಕ್ಷಣೆಗೆಯ್ದು (ದಶಕು. ೧೩-೪೯). [ ಜಲಜ + ಆಕರ$_3$ ]

**ಜಲಜಾತ,** ಜಳಜಾತ (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ: ಜಲಜಾತ ಕುಮುದ ನೀಲೋತ್ಪಲ . . . ಪೂಗಳವು (ಲೋಕೋಪ. ೬-೨೩); ವನದೊಳಗೆ ಜಲಜಾತವಿಹವೆನಲು ಆತನಾಡಿದ . . . ಜಲಜಾತಷಂಡಂ ವನದೊಳಿಹವೇ (ಶಂಕದಾ.೧೧-೨೨); "ಸಿಂಪಿ" (ಶಂಕದಾ. ಕೋಶ). **ಜಳಜಾತ:** 'ಜಳಜಾತಸಖ' ಪರಾ. [ ಸಂ. ]

**ಜಲಜಾತವಿರೋಧಿ** (ನಾ). ಕಮಲದ ಶತ್ರು; ಚಂದ್ರ: ಜಲಜಾತವಿರೋಧಿಗೆ ಶೀತಲಂ ಒಪ್ಪುಗುಂ (ಧರ್ಮಾಮೃ. ೬-೨೨೩). [ ಜಲಜಾತ + ವಿರೋಧಿ ]

**ಜಲಜಾತಸಖ,** ಜಳಜಾತಸಖ (ನಾ). ಕಮಲದ ಮಿತ್ರ ; ಸೂರ್ಯ: ಜಲ[ಪಾಠಾಂ. ಳ]ಜಾತಸಖಬಿಂಬಗ ಸುಧಾಮಯಕದಂಬಕರಜಾಲ (ರಾಜಶೇ ೧೩-೫೪). **ಜಳಜಾತಸಖ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಜಲಜಾತ + ಸಖ ]

**ಜಲಜಾರಿ** (ನಾ). ಕಮಲದ ವೈರಿ; ಚಂದ್ರ. 'ಜಲಜಾರಿಶೇಖರ' ಪರಾ. [ ಜಲಜ + ಅರಿ$_6$ ]

**ಜಲಜಾರಿಶೇಖರ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಚಂದ್ರಶೇಖರ ; ಶಿವ : ಜಲಜಾರಿಶೇಖರನು ಜಲಜಾಕ್ಷ ಜಲಜಭವರ್ಗಳ . . . ತಿಕ್ಕಿಮುಕ್ಕದೆ ಬಿಡುವನೆ (ನವಮೋ. ೨೪-೭೯). [ ಜಲಜಾರಿ + ಶೇಖರ ]

**ಜಲಜಿನಿ,** ಜಳಜಿನಿ (ನಾ). ತಾವರೆಗಳುಳ್ಳ ಕೊಳ; ಕಮಲ ಸರೋವರ : ಈ ಜಲಜಿನಿ ರಾಜಹಂಸೆಯುತ ಮಧುಪರವಮ್ಯಾಜದೆ ನಕ್ಕಪಳ್ (ರಾಜಶೇ. ೧೨-೧೪). **ಜಳಜಿನಿ :** ಜಳಜಿನಿ ದಿನಕರನಿಂ . . . ಬೆಳಪಂತೆ ಕೃಷ್ಣನಿಂದಂ ಬೆಳಗಿದುವೆನಿತೊಳವು ರಾಜವಿದ್ಯೆಗಳನಿತುಂ (ಜಗವಿ. ೭-೧೧). [ ಸಂ. ಜಲಜಿನೀ ]

**ಜಲಡಿ** 'ಜಲ್ಲಡೆ' ನೋ.

**ಜಲಡಿನಲ್ಲಿ** (ನಾ). ಜಲ್ಲಡಿಯಂತೆ ರಂಧ್ರಗಳುಳ್ಳ ಬಾಯಿಯಿರುವ ನಲ್ಲಿ: ಈ ಜಲಡಿನಲ್ಲಿಯನ್ನು ತಿರುಗಿಸಿ, ಅಕಾಲದಲ್ಲಿ ಸ್ನಾನಮಾಡಿ, ಮನಸ್ಸಿನ ಆಸೆಯನ್ನು ತೀರಿಸಿಕೊಳ್ಳುತ್ತಿದ್ದೆ (ನಿಬಂಧ. II, ೪೫). [ ಜಲಡಿ (<ಜಲ್ಲಡೆ) + ನಲ್ಲಿ$_1$ ]

**ಜಲಡೆ** 'ಜಲ್ಲಡೆ' ನೋ.

**ಜಲತರಂಗ** (ನಾ). ೧. ನೀರಿನ ಅಲೆ,–ತೆರೆ. ೨. ಬೇರೆ ಬೇರೆ ಗಾತ್ರದ ಪಿಂಗಾಣಿ ಬಟ್ಟಲುಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ನೀರನ್ನು ತುಂಬಿ ಕಡ್ಡಿಯಿಂದ ಬಡಿದು ನುಡಿಸುವ ಒಂದು ಬಗೆಯ ವಾದ್ಯ : ಉಕ್ಕು, ಉತ್ಸಾಹಗಳಿಗೆ ತಬಲಾತರಂಗವೂ ಜಲತರಂಗವೂ ಸಹಾಯ (ಚಾಲಪ್ರ. II,೯೭೯) ; ಪರದೇಶದವರ ಸಹವಾಸದಿಂದ ಎಷ್ಟೋ ವಾದ್ಯಗಳು ನಮ್ಮಲ್ಲಿ ಬಂದಿವೆ . . . ಬುಲ್‌ಬುಲ್ ತರಂಗ, ಅಗ್ನಿತರಂಗ, ಜಲತರಂಗ (ಗಾನಕ. ೦೦೦). [ ಜಲ$_2$ + ತರಂಗ ]

**ಜಲತರ್ಪಣ** (ನಾ). ಗತಿಸಿದವರಿಗಾಗಿ ಅವರ ಹೆಸರಿನಿಂದ ಎಳ್ಳು ನೀರು ಬಿಡುವುದು : ನಾನು ಸತ್ತರೆ ನೀನು ನನಗೆ ಜಲತರ್ಪಣ ಕೊಡುತ್ತೀಯೆ (ವಚಭಾ. ೪೪). [ ಜಲ$_2$ + ತರ್ಪಣ ]

**ಜಲತ್ಕಾಲ** (ನಾ). (?): ಮಹದಾಕಾಶದ ಮನೆಯಲ್ಲಿ ಪಂಚಕಾಲಿನ ನೆಲಹು ಕಟ್ಟಿರಲಾಗಿ ಅದಕ್ಕೆ ಜಲತ್ಕಾಲ[ಪಾಠಾಂ. ದ]ವೆಂಬ ಗಡಿಗೆಯಿದ್ದಿತ್ತು (ಅಣಿಮಾ. ೭೦-೪೨). 'ಜಲಾಕಾರ' ಪರಾ. [ ? ]

**ಜಲದ,** ಜಳದ (ನಾ). ೧. ನೀರನ್ನು ನೀಡುವುದು ; ಮೋಡ ; ಮೇಘ: ಕಲುಷ ಜಲದ ವಾತಂ ಪ್ರಣತ ಪಾರಿಜಾತಂ (ಪದ್ಮರಾ. ೫-೮). ೨. ಒಂದು ಬಗೆಯ ಸುಗಂಧದ ಹುಲ್ಲು; ಕೊನ್ನಾರಿಗಡ್ಡೆ ; ಭದ್ರಮುಸ್ತೆ. **ಜಳದ:** ೧. ಕವಿದುವು ಕಾಳ ನೀಳ ಜಳದಾವಳಿ (ಪಂಪಭಾ. ೨-೭೬) ; ಪಿರಿದುಂ ಬೇಸಱಿಸಿದುವು ಬಿರಯಿಯಂ ಜಳದಂಗಳ್ (ಚಂದ್ರಪು.೪-೩೪). ೨. ಜಳದಂ ಶುಂಠಿ ಗುಳೂಚಿ . . . ಎಂಬಿನಿತುಮಂ ಕಷಾಯಂಗೊಂಡಾಗಳೆ ಕುಡಿಯೆ ವಾತದೋಷಂ . . . ಉಪಶಮಿಕುಂ (ಲೋಕೋಪ. ೯-೧೭). [ ಸಂ. ]

**ಜಲದನಿನದ** (ನಾ). ಗುಡುಗು ; ಮೇಘಗರ್ಜನೆ : ಜಲದನಿನದಕೆ ಕುಣಿವ ನವಿಲ್ಗಳೆವೊಲು (ಬಸವು. ೩೭-೫೪). [ ಜಲದ + ನಿನದ ]

**ಜಲದಮಾರ್ಗ** (ನಾ). ಮೋಡಗಳು ಚಲಿಸುವ ಹಾದಿ ; ಆಕಾಶ : ಅಮರಗುರುವೆರಸು ಯತಿ ಜಲದಮಾರ್ಗಗತಿಯಾದಂ (ಶಾಂತಿಪು. ೭-೬೬). [ ಜಲದ + ಮಾರ್ಗ ]

**ಜಲದವರ್ಣ** (ನಾ). ೧. ಮೇಘವರ್ಣ ; ಕಪ್ಪುಬಣ್ಣ. ೨. ವಿಷ್ಣು : ಜಲನಿಧಿತಲ್ಪನುಂ . . . ಜಲದವರ್ಣನುಂ (ಜಗವಿ. ೧೭-೭೬). [ ಜಲದ + ವರ್ಣ ]

**ಜಲದಾಗಮ**, ಜಳದಾಗಮ (ನಾ). ಮೋಡಗಳು ಬರುವ ಕಾಲ ; ಕಾರ್ಗಾಲ ; ಮಳೆಗಾಲ : "ಕಾರ್-ಪ್ರಾವನೇ (ಕಚ್ಚು), ಜಲದಾಗಮೋ ಚ(ವರ್ಷಾಕಾಲ), ಘವನೇ ಚ"(ಶಮಧಾ); ಜಲದಾಗಮದಿಂ ಚಿತ್ತಸ್ಖಲಿತಂ ಕೇಕಿನರ್ತನಂ ಜಲದಾಗಮದಿಂ ಚಿತ್ತಸ್ಖಲಿತಂ ಕೇಳ ನಲ್ಲನಂ (ಕವಿರಾ. ೨-೧೨೬) ; ಕಾರ್ಮುಗಿಲಿಂ ಜಲಲವತತಿ ಕಾರ್ಮುಕದಿಂ ಸ್ಮರಶರಂ . . . ಬಿಡುತಂದುವ್ವೆದೆ ಜಲದಾಗಮದೊಳ್ (ಚಂದ್ರಪು. ೪-೬೯). **ಜಳದಾಗಮ:** ಎಸೆದತ್ತು ರಾಜ್ಯವಿಭವಂ ಜಳದಾಗಮಚಕ್ರವರ್ತಿಯಾ (ಜಗವಿ. ೪-೩೫) ; ಜಳದಾಗಮ ಭೈರವ ಕರತಳದೊಳ್ ಥಳಥಳಿಸಿ ಪೊಳೆವ ಕೂರಸಿ (ತ್ರಿಪುವಿ. ೮-೨೪). [ ಜಲದ + ಆಗಮ ]

**ಜಲದಾಧ್ವ**, ಜಳದಾಧ್ವ (ನಾ). = ಜಲದಮಾರ್ಗ: ಜಲದಾಧ್ವಂಬರ ಮೆತ್ತಿ ದಂಷ್ಟ್ರಿಯ ನಖಾಂಶುಶ್ರೇಣಿ ತಾರಾಗಣಚ್ಛಲದಿಂದಿರ್ಪಿನಂ (ಜಗವಿ. ೧-೫೯). **ಜಳದಾಧ್ವ :** ಜಳದಾಧ್ವಂ ಸ್ವರ್ಧುನೀಫೇನನೆವದೆ ಪೆಱುತಿರ್ದುದೋ ತಾನದಭ್ರಾಮಳ ಶುಭ್ರಜ್ಯೋತಿಯಂ (ಕು ಸು ಮಾ. ೪-೫೨). [ ಜಲದ + ಅಧ್ವ ]

**ಜಲದಾನ**, ಜಳದಾನ (ನಾ). = ಜಲತರ್ಪಣ. 'ಜಲದಾನಕ್ರಿಯೆ' ಪರಾ. **ಜಳದಾನ :** ಕಳೇವರಂಗಳಂ ಸಂಸ್ಕರಿಸಿ ಜಳದಾನಾದಿ ಕ್ರಿಯೆಗಳಂ ಮಾಡಿ (ಪಂಪಭಾ. ೩-೮ ವ). [ ಜಲ₂ + ದಾನ ]

**ಜಲದಾನಕ್ರಿಯೆ**, ಜಳದಾನಕ್ರಿಯೆ (ನಾ). = ಜಲತರ್ಪಣ : ರಾಮ ಲಕ್ಷ್ಮಣರ್ವೆರಸು ಪದ್ಮ ಸರೋವರದೊಳ್ ಜಲದಾನಕ್ರಿಯೆಯಂ ನಿರ್ವರ್ತಿಸಿ (ಪಂರಾಮಾ. ೧೪-೨೦೪ ವ). **ಜಳದಾನಕ್ರಿಯೆ :** ಜಳದಾನಕ್ರಿಯೆಯಂ ವಾಗ್ಜಳದಿಂ ಕೋಪಾಗ್ನಿಯಿಂದೆ ದಹನಕ್ರಿಯೆಯಂ ಕಿಳಿಯಂಗೆ ಮಾಡಿದ್ದೆ (ಗದಾಯು. ೫-೩೨). [ ಜಲದಾನ + ಕ್ರಿಯೆ ]

**ಜಲದಾರು** 'ಜರದಾಲು' ನೋ.

**ಜಲದಾವಳಿ** (ನಾ). ಮೋಡಗಳ ಸಮೂಹ : ಬಳಸುವ ತುಂಬಿವಿಂಡು ಜಲದಾವಳಿ ಸೂಸುವ ಬೆಳ್ಮುಗುಳ್ ಘನೋಪಳತತಿ (ಪುಷ್ಪಪು. ೨-೭೮). [ ಜಲದ + ಆವಳಿ₁ (=ಆವಲಿ) ]

**ಜಲದಿ** 'ಜಲ್ದಿ₂' ನೋ.

**ಜಲದಿವ್ಯ** (ನಾ). = ಜಲಟಿ : ಮನುವು ಎರಡು ದಿವ್ಯಗಳನ್ನೂ (ಅಗ್ನಿದಿವ್ಯ ಮತ್ತು ಜಲದಿವ್ಯ) . . . ಬೃಹಸ್ಪತಿ ಮುಂತಾದವರು ಒಂಬತ್ತನ್ನೂ ಹೇಳುತ್ತಾರೆ (ಕಶಾಅ. ೧೯೫). [ ಜಲ₂ + ದಿವ್ಯ ]

**ಜಲದು** 'ಜಲ್ದಿ₂' ನೋ.

**ಜಲದುರ್ಗ**, ಜಳದುರ್ಗ (ನಾ). ನೀರಿನ ನಡುವೆ ಇರುವ ದುರ್ಗ,-ಕೋಟೆ : ಜಾನುದಘ್ನಜಲದುರ್ಗನುಮಾಗಿ ನಡೆದು (ಆದಿಪು. ೧೪-೫೨ ವ); ಕಾನನದುರ್ಗಕ್ಕೆ ಮಹಾದವಾಗ್ನಿ ಜಲದುರ್ಗಕ್ಕುರ್ವಿದೌರ್ವಾಗ್ನಿ (ಪುಷ್ಪಪು. ೫-೫೦). **ಜಳದುರ್ಗ:** ಬಂಧು ಚಿಂತಾಮಣಿ ಸುಜನ ರಕ್ಷಾಮಣಿ ಜಳದುರ್ಗ್ಗ ಬಡವಾನಳಂ ವನದುರ್ಗ್ಗದಾವಾನಳಂ (ನಾಂದೇಡ್. ೩-೨೨ ವ ; 1047) ; ಅನ್ಯೋನ್ಯ ಸೈನ್ಯ ರಜೋವ್ರಾತ ಸಮಾಕ್ರಾಂತ್ಯಜಳದುರ್ಗವ್ರಾತಂ (ಚಂದ್ರಪು. ೪-೨೭). [ ಜಲ₂ + ದುರ್ಗ ]

**ಜಲದೇವತೆ**, ಜಳದೇವತೆ (ನಾ). ನೀರಿನ ಅಭಿಮಾನಿ ದೇವತೆ ; ನದಿ ಮೊದಲಾದುವುಗಳ ಅಧಿದೇವತೆ: ಜಲದೇವತೆಗಳ್ ತಡೆಯುದಿದಿರ್ವಂದು ನೃಪನೊಡನೊಡನೆ ಸರೋವರಮನೊಸೆದು ಪುಗುವಂತಾಗಳ್ (ಶಾಂತಿಪು. ೮-೨೭); ಗಂಗೆಯೊಳ್ಜಲದೇವತೆಯನರ್ಚಿಸಿದ (ಜೈಮಿಭಾ. ೩೪-೧). **ಜಳದೇವತೆ :** ಜಳದೇವತೆಗಳ್ಗೆ ಪೊಡೆವಟ್ಟು ಜಳಮಂತ್ರಾಕ್ಷರಂಗಳಿಂ ಸರೋವರಮನಭಿಮಂತ್ರಿಸಿ (ಪಂಪಭಾ. ೧೩-೭೩ ವ); ಜಳದೇವತೆ ಕೋಡುವ ತಿಳಿಗೊಳದೊಳಗಿರ್ಪಂತೆ ಶೀಲವತಿ ಸೀತೆ ವಿನಿಶ್ಚಳಮಿರೆ ಮನದೊಳ್ ಜಿನಪತಿಚಳಣಂ ದಳ್ಕುರಿಯ ನಡುವೆ ಕೋಡುತ್ತಿರ್ದಳ್ (ಪಂರಾಮಾ.೧೩-೨೮). [ ಜಲ₂ + ದೇವತೆ ]

**ಜಲದೋಷ** (ನಾ). ಒಂದು ಬಗೆಯ ರೋಗ : ಧೂಮಪಾನ ಮಾಡಲು ಶ್ವಾಸ, ಖಾಸ . . . ಅಗ್ನಿಮಾಂದ್ಯ, ಉದರವ್ಯಾಧಿ, ಜಲದೋಷ, ಪಾಂಡು ರೋಗ . . . ಇವಿಷ್ಟೂ ಗುಣವಹುದು (ಸಕಪ್ರ. ೨೭). [ ಜಲ₂ + ದೋಷ ]

**ಜಲದ್ರೋಣಿ**(ನಾ). ನೀರು ತುಂಬುವ ತೊಟ್ಟಿ,-ದೋಣಿ : "ಅವಗಾಹಃ, ಜಲದ್ರೋಣೀ – ಈ ೨ ನೀರ ದೋಣಿ" (ಶಲಾಯು. ೧೨೪-೯೯). [ ಜಲ₂ + ದ್ರೋಣಿ ]

**ಜಲಧರ**, ಜಳಧರ (ನಾ). ೧. ಮೋಡ ; ಮುಗಿಲು ; ಮೇಘ : ಆಗಳಕಾಲಜಲಧರಂಗಳಂತೆ ನಿಖಿಲನೃಪಸುತರ್ ಸುತ್ತಿ ಮುತ್ತಿ ಶರವರ್ಷಮಂ ಕಱೆಯೆ (ಪಂರಾಮಾ. ೩-೫೦ ವ); ಜಲಧರ ಬಲಿದು ಅತಿಬೇಗ ಘೋಷದಿಂದಾಲಿಕಲ್ ಸಹಿತ ಬಹು ಮಳೆಗಱೆಯೆ (ಪ್ರೌಢರಾ. ೨೦-೨೫). **ಜಳಧರ :** ೧. ಜಳಧರದೊಳಗಿಂದಂ ಶಶಿಕಲೆ ಪೊಱಮಡುವಂತೆ . . . ಘಳಿಲನೆ ಪೊಱಮಟ್ಟಳ್ (೧೦ಕ. ೯-೬೬); ತೊಳಗುವ ರವಿಯುಂ ಮಸುಳಿಪ ಜಳಧರಮದದಂತೆ ಜಗಮನೇಂ ಬೆಳಗುಗುಮೇ (ರಾಜಶೇ. ೧-೪೮). ೨. ಚಿಲುಕೀರೆ ಸೊಪ್ಪು : "ತಂಡುಲೀಯಕಂ ಜಳಧರನಾಮಂ" (ವಸ್ತುಕೋ. ೩೭-೨೮). [ ಸಂ. ]

**ಜಲಧರಪಟಲ**(ನಾ). ಮೋಡಗಳ ಹಿಂಡು,-ಗುಂಪು: ಜ್ಯೋತಿರ್ಲೋಕಂಗಳ ವಿಮಾನಂಗಳ್ ತೊಲಗೆಯುಮಿದಿರಾದ ಜಲಧರಪಟಲಂಗಳರಲೆಯುಂ (ಶಾಂತಿಪು. ೧೦-೨೪ ವ) ; ಲುಳಿತ ಜಲಧರ ಪಟಲ ಜಠರದೊಳಿಳಿದ ರವಿ ಮಂಡಲದವೋಲರೆಘಳಿಗೆ ಕರ್ಣನ ಕಾಣೆನೈ (ಕುಪ್ರಾಭ. ೧೦-೨೨). [ ಜಲಧರ + ಪಟಲ₂ ]

**ಜಲಧರಪಥ**, ಜಳಧರಪಥ (ನಾ). = ಜಲದಮಾರ್ಗ : ಜಲಧರಪಥ ಪರ್ಯಟನಕ್ಕಲಸಿ ಸುಧಾಸೂತಿ ಧಾತ್ರಿಯೊಳ್ ಶಿಶುರೂಪಚ್ಛಲದಿಂ ನೆಲೆವಡೆದವೊಲ್ (ಜಗವಿ. ೨-೪೮). **ಜಳಧರಪಥ :** ಅತಿಧವಳ ಜಳದ ಜಳಧರ ಪಥಮುಂ ತೊಳಪೆಳವೆಱೆಯುಂ ಕಳೆದುವು ಮುಳಿಸಂ ಕಾಮಿಗಳ ಚಿತ್ತದೊಳ್ ನೆಲಸಿದುದು (ಕವಿರಾ. ೩-೧೬೭). [ ಜಲಧರ + ಪಥ ]

**ಜಲಧರಮಾರ್ಗ**, ಜಳಧರಮಾರ್ಗ (ನಾ). = ಜಲದಮಾರ್ಗ. **ಜಳಧರಮಾರ್ಗ :** ನಾಲ್ಕುಂ ತೆಱದ ದಿವಿಜ ಜೀಮೂತಕುಳಂ ಬರೆ ಕೇರಿಲ್ಲದ ಚಿತ್ರದ ವಿರಚನೆಯಂ ಪೋಲ್ತುದಮಳ ಜಳಧರಮಾರ್ಗಂ (ಶಾಂತಿಪು. ೧೧-೪೯) ; ಜಳಮಯಮಿಳೆ ಜಳದಮಯಂ ಜಳಧರಮಾರ್ಗಂ (ರಾಜಶೇ. ೮-೧೧೯). [ ಜಲಧರ + ಮಾರ್ಗ ]

**ಜಲಧಾರೆ**, ಜಳಧಾರೆ (ನಾ). ನೀರಿನ ಧಾರೆ : "ತಟತಟ-ಜಲಧಾರೆ" (ಶಾಶಕ್ಕ. ೨೫೮). **ಜಳಧಾರೆ :** ಅನೇಕ ನೃಪತಿ ಮಕುಟತಟಘಟಿತ ಮಣಿಗಣ ಕಿರಣ ಜಳಧಾರಾಧೌತಾವದಾತ ಪೂತ ಚರಣಾರವಿನ್ದರು[ಂ] (ಶಾಇಇ. XX, ೪೬-೨೬ ; 1072) ; ಕೂರಸಿಯಂ ಪೊರ್ದಿದ ಜಳಧಾರೆಯುಮತಿತೀಕ್ಷ್ಣಮಪ್ಪ ಪೊಲ್ಲಂಡಗುಣಂ ವೀರಶ್ರೀಗಾದುದು ನೃಪವೀರಭುಜೋನ್ನಪವೀರ ಭುಜೋತ್ಖಾತ ಖಡ್ಗಧಾರಾಶ್ರಯದಿಂ (ಮಲ್ಲಿಪು. ೩-೧೩). [ ಜಲ₂ + ಧಾರೆ ]

**ಜಲಧಿ**, ಜಳಧಿ(ನಾ). ೧. ಕಡಲು ; ಸಮುದ್ರ :"ಕಡಲು ಮುನ್ನೀರೆಂದು ಜಲಧಿನಾಮಂ" (ಶಬ್ದಮಂ. ೨೭) ; ಜಲಧಿತರಂಗ ತಾಟಿತಧರಾತಲ ಧಾರವಿದೆತ್ತ ಬಾಲನೆತ್ತ(ಆದಿಪು.೪-೮೪); ಜಲಧಿಯೊಳಿರ್ದ ಮರ್ದಿನ ಮುಕ್ಕುಳನುಗುಟುತ್ತಿಳಿಗೆವಂದುದು (ಕಾದಂಪೂ. ೪೫೪) ; ಅವರದ್ವಿದರ್ಭಯುಜಲಧಿಯಲಿ

(ತ್ರಿಪುಸಾಂ. ೧೮೪). ೨. ನಾಲ್ಕು ಎಂಬ ಸಂಖ್ಯೆಯ ಸಂಕೇತ : "ಜಲಧಿ – ಸಂಖ್ಯೆ ನಾಲ್ಕು" (ಜಾತಕಿ. ೩೭೨ ಪರಿ. ೩). **ಜಳಧಿ:** ೧. ಜಳಧಿ ದ್ವೀಪ ರಸಾತಳಾಂಬರ ಕುಲಾದ್ರೀಂದ್ರಂಗಳ್ (ಪಂಪಭಾ. ೧೪-೩೪): ಜಳಧಿ ತರಂಗತಾಟಿತ ಮಹೀತಳದೊಳ್ ನೆಗಟ್ದಿತ್ತು ವೆಂಗಿವುಂಡಲಂ (ಅಜಿಪು. ೧-೨೪); ಜಳಧಿ ಜಂಬೂದ್ವೀಪಮಂ ಸುತ್ತಿ ಸೌಂದರಮಾಗಿರ್ಪವೊಲ್ (ಪುಷ್ಪಪು. ೨-೬೨). ೨. ಚೌ ಚತು ಜಲನಿಧಿ . . . ಜಳಧಿ ಸಮುದ್ರ ಕಷಾಯ ಇಂತಿನಿತುಂ ಳಿಕ್ಕೆ ಹೆಸರು (ವ್ಯವಹಾ. ೧೦-೧೪). [ಸಂ.]

**ಜಲಧಿತಲ್ಪ** (ನಾ). ಸಮುದ್ರವನ್ನು ಹಾಸಿಗೆಯಾಗುಳ್ಳವನು ; ವಿಷ್ಣು : ಚತುರಾಸ್ಯೇಂದ್ರಾದಿ ದೇವರ್ ನಡೆದು ಜಲಧಿತಲ್ಪಂಗೆ ದೈತ್ಯೇಂದ್ರ ರುದ್ಧ್ವೃತ್ತತೆಯಂ ಪುಯ್ಯಲ್ಚೆ (ಜಗವಿ. ೨-೪೪). [ಜಲಧಿ + ತಲ್ಪ]

**ಜಲಧಿಪ** (ನಾ). ಸಮುದ್ರರಾಜ; ವರುಣ: ಜಲಧಿಪ ಸಾರ್ವ ವಹ್ನಿಯನೆ ಸಾರ್ದಂ . . . ಇಂತೊಗೆದ ಮಾಗೆಯ ವಿಶ್ರುತ ಶೀತಪಾತದೊಳ್ (ಕುಸುಮಾ. ೬-೧೧). [ಸಂ.]

**ಜಲನದಿ** (ನಾ). ಪೂರ್ಣಪ್ರವಾಹದಿಂದ ಕೂಡಿದ ನದಿ ; "ಸೂಸಿ ಹರಿಯುವ ಹೊಳೆ" (ಮೋಳಿಮಾ. ಕೋಶ) : ಜಲನದಿಯಲ್ಲಿ ಹೋಹ ಬಲು ಮರನಂತೆ ಇವರ ನೆಲೆ ಇಲ್ಲವೆಂದೆ (ಮೋಳಿಮಾ. ೩೦-೨೨೨).

[ಜಲ್ಮ + ನದಿ]

**ಜಲನಾಡು** (ಕ್ರಿ). ನೀರಾಟವಾಡು ; ಜಲಕ್ರೀಡೆಯಾಡು : ಶೋಧಿಸಿ ಕೊಂಡು ಬರುತಲಿ ಜಲನಾಡುವ ಪ್ರಭಂಜನನ (ಪ್ರಭಂಜ. ೨-೧೪೫) ; ಆತನ ಲೋಚನಪುತ್ರಿಕೆಗಳ್ . . . ಹೊರ್ಕುಟಿ ತಿಳಿಗೊಳದೊಳಗೆಳಸಿ ಮುಳುಂಗಿ ವಿನೋದದಿ ಜಲನಾಡಿದವು (ಜಯಕಾ. ೫-೫೭). [ಜಲ್ಮ + ಆಡು$_1$]

**ಜಲನಿಧಿ,** ಜಳನಿಧಿ (ನಾ). ೧.=ಜಲಧಿ ೧ : ಜಲನಿಧಿ ಮೇಖಲಾವಲಯಿತಾಂಗಿ ಕರಂ ಸೊಗಯಿಪ್ಪುದಾಯ್ತು ಭೂಲಲನೆ (ಕವಿರಾ. ೨-೧೦೮) ; ನೆಗಟ್ದುದನಿದನಾಂ ಪಾತಾಳಕ್ಕಟಿಪುವೆನೆಂಬೀ ತೆಱದೊಳೆ ದಿನಪನಪರ ಜಲನಿಧಿಗಿೞಿದಂ (ಪಂಪಭಾ. ೧೦-೧೨೪); ಜಲನಿಧಿ ಜಲಮಂ ಜಲಭೃತ್ತುಳಕ್ಕೆ ನಲಿದಿತ್ತುದತ್ತಮಿತ್ತ ನದೀ ನಿರ್ಮಲಸಲಿಲಂ ದೊರೆದುದು ಗಡ (ರಾಜಶೇ. ೧-೯೭). ೨. = ಜಲಧಿ ೨: ಚೌ ಚತು ಜಲನಿಧಿ ವಿಷನಿಧಿ . . . ಕಷಾಯ ಇಂತಿನಿತುಂ ಳಿಕ್ಕೆ ಹೆಸರು (ವ್ಯವಹಾ. ೧೦-೧೪), **ಜಳನಿಧಿ:** ೧. ಪೂರ್ವಾಪರ ಜಳನಿಧಿ ವೇಳಾತರಂ ಗೋಚ್ಚಳದ್ರುತ್ನ ವಿನಿದ್ರ ಪ್ರಾಂತದೇಶಂ ಸೊಗಯಿಪುದು (ಕಾದಂಪೂ. ೯೩) ; ಜಳನಿಧಿಗೆ ನೀರನಡಸುವ . . . ಮಾ [ಟ್ಕೆಯದು](ವರ್ಧಮಾ. ೧೩-೫):ನೆಲವನಳೆವಂದು . . . ಈ ಜಳನಿಧಿಗಳೀ ಗಗನವೀ ಬ್ರಹ್ಮಾಂಡ ಪವಣಿಸಿದವಿಲಸಿತದ ವಿಭುವಿಂಗೆ(ತೊರರಾ. ೧-೮-೭೭).

[ಜಲ್ಮ + ನಿಧಿ]

**ಜಲನಿಧಿತಲ್ಪ** (ನಾ). ಸಮುದ್ರದ ಮೇಲೆ ಮಲಗಿರುವವನು ; ವಿಷ್ಣು : ಜಲನಿಧಿತಲ್ಪನುಂ ಜಲರುಹೋದರನುಂ . . . ಜಲದವರ್ಣನುಮೆಂಬುದನೀ ನಿದಾಘಮುಂ ಕಳೆಯಲೆ ಪಣ್ಣಿ ಕೊಂಡನಸುರಾರಿ (ಜಗವಿ. ೭-೬೭).

[ಜಲನಿಧಿ + ತಲ್ಪ]

**ಜಲನಿರ್ಗಮ** (ನಾ). ನೀರು ಹರಿದು ಹೋಗುವುದಕ್ಕೆಂದು ಮಾಡಿದ ಹಾದಿ ; ಮೋರಿ : "ಭ್ರಮಃ, ಜಲನಿರ್ಗಮಃ – ೨ ನೀರು ಹರಿಯುವುದಕ್ಕೆ ತಕ್ಕಹಾಗೆ ಕಟ್ಟಲ್ಪಟ್ಟ ತೂಬು, ಬಚ್ಚಲು, ಮೊಹರಿ, ನಾಲೆ, ಕೋಡಿ ಮುಂತಾದವುಗಳ ಹೆಸರುಗಳು" (ಸಿದ್ಧಾಂತಿ. ೬೯).

[ಜಲ್ಮ + ನಿರ್ಗಮ]

**ಜಲನಿಲಯ** (ನಾ). ನೀರನ್ನು ಮನೆಯಾಗಿ ಹೊಂದಿರುವವನು; ನೀರೇ ನೆಲೆಯಾದವನು : ಅಂತು ಕುರುಕುಲಮಹೀಪಾಲಂ ಮಧ್ಯಮಲೋಕ ಪಾಲಕ ನಾಗಿಯುಂ ಪಶ್ಚಿಮ ಲೋಕಪಾಲಕನಂತೆ ಜಲನಿಲಯನಾಗಿ (ಗದಾಯು. ೬-೧೪ ವ). [ಜಲ್ಮ + ನಿಲಯ]

**ಜಲನೀಲಿ** (ನಾ). ಪಾಚಿ; ಹಾವಸೆ. [ಸಂ. ಜಲನೀಲೀ]

**ಜಲನೀಲಿಕೆ,** ಜಳನೀಳಿಕೆ (ನಾ). = ಜಲನೀಲಿ ; ಸಾಮಾನ್ಯವಾಗಿ ಹಾವುಚಿ, ಜಲನೀಲಿಕಾ, ಶಿಲಾವಲ್ಕಗಳು ಇಲ್ಲಿ ಬೆಳೆಯುತ್ತವೆ (ಭೂವಿವ. ೧೬೭). **ಜಳನೀಳಿಕೆ:** "ಶೈವಾಳಂ ಜಳನೀಳಿಕೆ ಶೈವಳಮದು ನೀರೊಳಾದ ಪಾವಸೆ ಯೆನಿಕುಂ" (ವಸ್ತುಕೋ. ೨೫-೧೮). [ಜಲ್ಮ + ನೀಲಿಕೆ]

**ಜಲಪಕ್ಷಿ,** ಜಳಪಕ್ಷಿ (ನಾ). ನೀರಂಹಕ್ಕಿ; ಸಾರಸ : "ಪುಷ್ಕರಾಹ್ವಃ, ಸಾರಸಃ ೨ ಸಾರಸಹಕ್ಕಿ ಹೆಸರು.ನೀರುಹಕ್ಕಿ, ಜಲಪಕ್ಷಿ, ತಾವರೇಹಕ್ಕಿ, ಕೊಳದ ಹಕ್ಕಿ" (ಸಿದ್ಧಾಂತಿ. ೧೪೦). **ಜಳಪಕ್ಷಿ:** ಜಳಪಕ್ಷಿವ್ರಾತ ಕೋಳಾಹಳವೊಗೆವಿನೆಗಂ (ಲೀಲಾವ. ೧೩-೧೦೫) ; ಜಳಪಕ್ಷಿಗಳುಲಿಯಿಂದಂ . . . ಇಳೆಯರಸನೇಳ್ದಂ (ರಾಜಶೇ. ೪-೨೭). [ಜಲ್ಮ + ಪಕ್ಷಿ]

**ಜಲಪಥ** (ನಾ). ನೀರಿನ ಮಾರ್ಗ ; ಕಾಲುವೆ ; ಜಲಮಾರ್ಗ : ಹಾಯ್ಗಡಗಳನ್ನೂ ಮೀನಕ್ಷೇತ್ರಗಳನ್ನೂ ರಸ್ತೆಗಳನ್ನೂ ಜಲಪಥಗಳನ್ನೂ ಸ್ಥಾಪನೆ ಮಾಡಬಹುದು (ಭಾಧಾನ. ೨೬೭). [ಜಲ್ಮ + ಪಥ]

**ಜಲಪದ್ಧತಿ,** ಜಳಪದ್ಧತಿ (ನಾ). ಕಟ್ಟಡಗಳ ಮೇಲಿನಿಂದ ಮಳೆನೀರು ಹರಿದು ಹೋಗುವಂತೆ ಮಾಡಿರುವ ಹರಿ ; ದೋಣಿ ; ಹರಿನಾಳಿಗೆ. **ಜಳಪದ್ಧತಿ:** "ಪ್ರಣಾಳೀ, ಜಳಪದ್ಧತಿಃ – ಈ ೨ ಹರಿನಾಳಿ" (ಹಲಾಯು. ೧೧೩-೬೩). [ಜಲ್ಮ + ಪದ್ಧತಿ]

**ಜಲಪನ** (ನಾ). = ಜಲ್ಪನ : ಈ ಜಲಪನ ನನಗೆ ಮರೆತು ಹೋಗಿದ್ದರೂ ನಮ್ಮ ಕಾಕಂದಿರು ಇದನ್ನು ನೆನೆನೆನೆದು ನಗುವರು (ಕಲಿಸಿ. ೩೪೪).

[<ಸಂ. ಜಲ್ಪನ]

**ಜಲಪರ್ಯಟನ** (ನಾ). ನೀರಿನ ಮೇಲೆ ಸಂಚಾರ : ಎರಡು ಹಡಗುಗಳು ಇಂದು ನಸುಕಿನಲ್ಲಿ ಜಲಪರ್ಯಟನ ಕೈಕೊಂಡವು (ಇಪ್ಪಕ. ೩೨೩).

[ಜಲ್ಮ + ಪರ್ಯಟನ]

**ಜಲಪಾತ** (ನಾ). ೧. ನೀರು ಧುಮುಕುವುದು. ೨. ನೀರು ಧುಮುಕುವ ಸ್ಥಳ; ನೀರ್ಬೀಳು ; ತಡಸಲು ; ಧಬಧಬೆ (ಉಕ) : ಭೀಷ್ಮವಹ ಜಲಪಾತವ್ರಾತಂಗಳಿಂ ಭೀಕರಮರಣ್ಯಂ (ಶ್ರೀರಾಮಾ. ೮೪-೨೯೦).

[ಜಲ್ಮ + ಪಾತ]

**ಜಲಪಾತ್ರೆ** (ನಾ). ನೀರಿನ ಪಾತ್ರೆ ; ಕಮಂಡಲು : "ಜಲಪಾತ್ರೆಯ ಕಮಂಡಲಂ" (ಮಂಗರಾ. ೬೩-೨೫) : "ಗುಂಡಿಗೆಯೆನಲ್ ಜಲಪಾತ್ರೆಯ [ಪಾಠಾಂ. ತ್ರಮು]ಕ್ಕುಂ (ಕಬ್ಬಿಕ್ಕ. ೩೦). [ಜಲ್ಮ + ಪಾತ್ರೆ]

**ಜಲಪಿಪ್ಪಲಿ** (ನಾ). ಒಂದು ಬಗೆಯ ಹಿಪ್ಪಲಿ. 'ಜಲಹಿಪ್ಪಲಿ' ಪರಾ.

[ಜಲ್ಮ + ಪಿಪ್ಪಲಿ]

**ಜಲಪಿಸು** (ಕ್ರಿ). ಅಸಂಬದ್ಧವಾಗಿ ಮಾತನಾಡು ; ಹರಟು ; ಗಳಹು : ಕುಲಗೆಡುಕರಾಗಿರುವ ಹೊಲತಿಯರ ನುಡಿಗಳನು ಜಲಪಿಸದಿರೆನ್ನೊಳಗೆ ಲಲಿತದೊಳು ಮುನಿಯೆ (ಹಮುಚ. ೬೫). [<ಜಲ್ಪ + – ಇಸು$_3$]

**ಜಲಪುರುಷ** (ನಾ). ನೀರಿನಲ್ಲಿ ವಾಸಮಾಡುವ ಮನುಷ್ಯ ; ಅರ್ಧ ಮಾನವ, ಅರ್ಧ ಮೀನು–ಈ ಆಕಾರದ ವ್ಯಕ್ತಿ : ವಿಮಲ ಜಲಕನ್ಯೆಯರ ಮೊತ್ತದಿಂ . . . ಕ್ರಮದಿ ಜಲಪುರುಷರುಗಳಿಂದೊಪ್ಪುವ ಬಲ ಪುರುಷರು (ಬಸವು. ೧೯-೮೩). 'ನೀರ್ಮಾನಸ' ಪರಾ. [ಜಲ್ಮ+ಪುರುಷ]

**ಜಲಪುಷ್ಪ** (ನಾ). ೧. ನೀರಿನಲ್ಲಿ ಬೆಳೆಯುವ ಹೂವು ; ನೀರುಹೂವು; ಕಮಲ, ನೈದಿಲೆ ಮುಂತಾದುವು. ೨. ಮೀನು : (ಕ).

[ಜಲ್ಮ + ಪುಷ್ಪ]

**ಜಲಪೊಟ್ಟಣ** (ನಾ). ಮೋಡ ; ಮೇಘ : ಕುಂಭದ ಕುಲಾಲಜ್ಞಾನಮೊಗೆ ವಂತನಂತ ಜಲಪೊಟ್ಟಣದೆ ಮಳೆಜ್ಞಾನಮೆಸೆವಂತೆ ಸಂತತಂ ಶಾಸ್ತ್ರ ದರ್ಶನ ದಿಂದೆ ನಾಕನರಕಂಗಳು ಸಲೆ ಸಿದ್ಧವು (ಅರಾಜ. ೭-೨೨). 'ನೀರ್ಪೊಟ್ಟಣ' ಪರಾ. [ಜಲ್ಮ + ಪೊಟ್ಟಣ]

**ಜಲಪ್ರಣಾಲ** (ನಾ). ನೀರು ಹರಿದು ಹೋಗುವುದಕ್ಕಾಗಿ ಕಟ್ಟಿಗೆ ಮಾಡಿರುವ ತೂಬು; ನೀರಗಂಡಿ : "ಜಲಪ್ರಣಾಲ [ಪಾಠಾಂ. ಮಾಣ]ದೊಳು . . . ವೃಂತದೊಳು ತುಂಬು" (ಶಬ್ದಮಂ. ೧೦೩).
[ ಜಲ್$_2$ + ಪ್ರಣಾಲ ]

**ಜಲಪ್ರಲಯ, ಜಲಪ್ರಳಯ** (ನಾ). ನೀರಿನಿಂದಾಗುವ ಪ್ರಳಯ; ಯುಗಾಂತರದಲ್ಲಿ ನೀರು ಉಕ್ಕಿ ಜಗತ್ತನ್ನೆಲ್ಲಾ ಮುಳುಗಿಸುವುದು. **ಜಲಪ್ರಳಯ :** ಬಳಿಕಂ ಜಲಪ್ರಳಯವಾದಲ್ಲಿ ತಾಂ ಮೇಲೆ ತೊಳತೊಳಗಿ ನೆಗೆದು ತೇಂಕಾಡುತಿರ್ದುದು (ನಂಬಿರ. ೯-೫); ಬಾರಿಬಾರಿಗೆ ಜಲಪ್ರಳಯಂಗಳಾಗಲ್ಕೆ ಭೂರಿಶಾಖೆಗಳಿಂದೆ ತಳಿತೆಸೆವುದೊಂದು ವಟ ಭೂರುಹವದರದೊಂದೆಲೆಯ ಮೇಲೆ . . . ಮಲಗಿಕೊಂಡಿಹನೊರ್ವ ಬಾಲಕಂ (ಜೈಮಿಭಾ. ೩೨-೩೨). [ ಜಲ್$_2$ + ಪ್ರಲಯ ]

**ಜಲಪ್ರಸರ, ಜಳಪ್ರಸರ** (ನಾ). ನೀರಿನ ಹಬ್ಬುಗೆ,–ವಿಸ್ತಾರ : ಪಸರಿಸಿ ದುಗ್ಧಾಬ್ಧಿ ಜಲ[ಪಾಠಾಂ. ಳ]ಪ್ರಸರಮನೊಡವೇೞ್ ಬಂದು ಕೞ್ವುವು ಮೇಘಪ್ರಸರಂಗಳಲ್ಲಿಯೆನೆ ರಸವೊಸರ್ವುವು ಪುಂಡ್ರೇಕ್ಷುವಾಟಕೋಟಿಗಳದೞೊಳ್ (ಆದಿಪು. ೧-೫೯). **ಜಳಪ್ರಸರ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಜಲ್$_2$ + ಪ್ರಸರ ]

**ಜಲಪ್ರಳಯ** 'ಜಲಪ್ರಲಯ' ನೋ.

**ಜಲಪ್ರಾಂಗಣ** (ನಾ). ಒಂದು ದೇಶಕ್ಕೆ ಹೊಂದಿಕೊಂಡು, ಅದರ ಅಧಿಪತ್ಯಕ್ಕೆ ಒಳಪಟ್ಟ ಜಲಪ್ರದೇಶ,–ಸಮುದ್ರ : "ದೇಶೀಸಮುದ್ರ, (ಸೀಮೆ);(ಪಾರಿ) ಸಮುದ್ರಸೀಮೆ, ಜಲಪ್ರಾಂಗಣ" (Territorial Waters. ಶಕ್ರನಿ. ೮೪); ಭಾರತದ ಜಲಪ್ರಾಂಗಣದಲ್ಲಿನ ಸಮುದ್ರದ ಕೆಳಗಿರತಕ್ಕ ಎಲ್ಲ ಭೂಮಿಗಳೂ, ಖನಿಜಗಳೂ . . . ಸಂಘದ ವಶದಲ್ಲಿ ನೆಲಸತಕ್ಕುದು (ಭಾಧಾನ. ೧೭೧). [ ಜಲ್$_2$ + ಪ್ರಾಂಗಣ ]

**ಜಲಪ್ರಾಂತ** (ನಾ). ನೀರಿನ ಸಮೀಪದ ಪ್ರದೇಶ; ನೀರಿನ ಅಂಚು; ತಟ; ತೀರ. [ ಜಲ್$_2$ + ಪ್ರಾಂತ ]

**ಜಲಪ್ರಾಣಿ** (ನಾ). ನೀರಿನಲ್ಲಿ ವಾಸಮಾಡುವ ಪ್ರಾಣಿ : "ಜಲೇಶಯಃ– ಜಲಪ್ರಾಣಿ" (ಓಷಧಿ. ೬೧). [ ಜಲ್$_2$ + ಪ್ರಾಣಿ ]

**ಜಲಪ್ರಾಯ** (ಗು). ೧. ನೀರು ಸಮೃದ್ಧಿಯಾಗಿರುವ; ನೀರನ್ನುಳ್ಳ. (ನಾ). ೨. ನೀರಿನಿಂದ ತುಂಬಿದ ಪ್ರದೇಶ; "ನೀರಂ ಬಹಳವಾಗಿರುವ ದೇಶ" (ಅಮರ. ៥೯೯). [ ಸಂ. ]

**ಜಲಫಣಿ** (ನಾ). ಒಂದು ಬಗೆಯ ನೀರಂಹಾವು : "ಅಳಗರ್ತ [ಪಾಠಾಂ. ಅಲಗರ್ದ]ನೆನಲು ಜಲಫಣಿಯಕ್ಕು" (ಮಂಗರಾ. ೦೧೯-೩).
[ ಜಲ್$_2$ + ಫಣಿ$_2$ ]

**ಜಲಬಂಧ** (ನಾ). ಹಡಗುಗಳು ಅಥವಾ ದೋಣಿಗಳು ಸಂಚರಿಸಬೇಕಾದ ಕಾಲುವೆ ಒಂದೇ ಮಟ್ಟದಲ್ಲಿ ಇಲ್ಲದಿರುವಾಗ ನೀರಿನ ಮಟ್ಟವನ್ನು ತಕ್ಕಂತೆ ಎತ್ತರಿಸಲು ಮತ್ತು ಕಡಮೆ ಮಾಡಲು ಏರ್ಪಡಿಸಿದ ವ್ಯವಸ್ಥೆ; ಮಟ್ಟ ಬದಲಾವಣೆಯ ವ್ಯವಸ್ಥೆ : ಈ ರೀತಿಯ ಕಾಮಗಾರಿಗೆ 'ಜಲಬಂಧ'(Locks)ವೆನ್ನುತ್ತಾರೆ (ಜಾಲಪ್ರ. II: ೭೭೦).
[ ಜಲ್$_2$ + ಬಂಧ ]

**ಜಲಬರಿದಾನ** (ನಾ). ಧಾರಾಪೂರ್ವಕವಾದ ದಾನ : ಕಟ್ಟೇರಿ ಗ್ರಾಮಕಾರ್ಯ್ಯಮಂ ಮೊದಲಾದ ಮಾವುಳುದ ಕೃತ್ತುದೊಳು ಜಲಬರಿದಾನಮಂ ಕೊಡಳಾಗಮುವ ನಿಮಿತ್ಯದಿಂದ ಬಹುತ್ತಲೆಕ್ಕದಿಂ (ಎಕ. VI, ತರೀಕ. ೭-೩; ಸು. 1260 ?). [ ಜಲ್$_2$ + ಪರಿ$_2$ + ದಾನ ]

**ಜಲಬಾಧೆ** (ನಾ). ಮೂತ್ರ ವಿಸರ್ಜನೆ; ಮೂತ್ರಶಂಕೆ : ಪಾಳು ಪ್ರದೇಶಕ್ಕೆ ಜಲಬಾಧೆಗಾಗಿ ಹೋದೆ (ಕಲನೆ. ೨೫೮).
[ ಜಲ್$_2$ + ಬಾಧೆ ]

**ಜಲಬಿಂದು** (ನಾ). ನೀರಿನ ಹನಿ; ತುಂತುರು : ಪದ್ಮಪತ್ರದ ಜಲಬಿಂದುವಿನಂತೆ ಚಲಿತವಾದುದು ಚಿತ್ತಂ (ಪಂರಾಮಾ. ೯-೭೬); ಆಕಾಶಕ್ಕುಚ್ಚಳಿಪಭಿಷೇಕದ ಜಲಬಿಂದುಮಾಲೆ ಮುಕ್ತಾನೀಕದ ತೇಜದಿಂ . . . ಪಡೆದು ದಿರ್ಮಡಿ ಚೆಲ್ವಂ (ಪುಷ್ಪಪು. ೧೧-೩೨). [ ಜಲ್$_2$ + ಬಿಂದು ]

**ಜಲಬುದುಬುದ** (ನಾ). = ಜಲಬುದ್ಬುದ (ಕ). [ <ಜಲಬುದ್ಬುದ ]

**ಜಲಬುದ್ಬುದ, ಜಳಬುದ್ಬುದ** (ನಾ). ನೀರಿನ ಗುಳ್ಳೆ; ಬೊಬ್ಬುಳಿಕೆ : ಸಲಿಲದ ಹೊೞಗೆ ಬೊಬ್ಬುಳಿಕೆಗಳ ತೆರೆ ನೊರೆದುಱುಗಿದವು ಘುಳುಘುಳಿಸಿ ಜಲಬುದ್ಬುದದ ಚೋಣಿಯಲಿ (ಕುವ್ಯಾ. ಗ. ೫-೩೨). **ಜಳಬುದ್ಬುದ :** ಜಳಬುದ್ಬುದಮಂ ಕರ್ಬೊನ್ನೊಳೆ ಕಟ್ಟಿಪೆನೆಂಬ ಮರುಳ ಗುರುಮಾಗದಿರು ವಿಳಯಸ್ವಭಾವಮಂ ಸಲೆ ತಳೆದೊಡಲಂ ನಿಟ್ಟಿಮಾಡಲುಜ್ಜುಗಿಪಾತಂ (ಚಂದ್ರಪು. ೪-೫೭). [ ಜಲ್$_2$ + ಬುದ್ಬುದ ]

**ಜಲಬ್ರಾಹ್ಮಿ** (ನಾ). ಒಂದು ಬಗೆಯ ಔಷಧಿ ಸಸ್ಯ : ನೆಗ್ಗಿಲುಬೇರು, ಜಲಬ್ರಾಹ್ಮೀ, ಸೊಗದೆಬೇರು ಅಷಾಡೀಬೇರು (ಸಕವ್ಯ. ೪೩೮ ಪರಿ).
[ ಜಲ್$_2$ + ಬ್ರಾಹ್ಮಿ ]

**ಜಲಭಂಗ** (ನಾ). ನೀರಿನ ತೆರೆ,–ಅಲೆ : "ಜಲಭಂಗಂ ವಿರಹಂ ಕಮಂಡಲು ಚಣಂಗಂ ಕೋರಕಾವಲ್ಲಿಯುತ್ಕಲಿಕಾಖ್ಯಂ" (ನಾನಾರ. ೧೦೩).
[ ಜಲ್$_2$ + ಭಂಗ ]

**ಜಲಭೃಚ್ಚಾಪ** (ನಾ). ಕಾಮನ ಬಿಲ್ಲು; ಇಂದ್ರಚಾಪ : ಆ ಪುರದ ರತ್ನಭವನ ಕಳಾಪದ್ಯುತಿ ನೆಗೞ್ ಗಗನತಳದೊಳ್ ಜಲಭೃಚ್ಚಾಪರುಚಿಗೆತ್ತು (ಅಜಿಪು. ೨-೧೭). [ ಸಂ. (ಜಲಭೃತ್ + ಚಾಪ) ]

**ಜಲಭೃತ್ತು** (ನಾ). ಮೋಡ; ಮೇಘ : ಜಲನಿಧಿ ಜಲಮಂ ಜಲಭೃತ್ಕುಲಕ್ಕೆ ನಲಿದಿತ್ತುದು (ರಾಜಶೇ. ೧-೯೭). [ ಸಂ. ಜಲಭೃತ್ ]

**ಜಲಭ್ರಮ** (ನಾ). ನೀರಿನ ಸುಳಿ,–ಆವರ್ತ : "ಆವರ್ತಂ ಜಲಭ್ರಮಂ ಸುೞಿಯೆನಿಕ್ಕುಂ" (ಮಂಗರಾ. ೦೨೩-೦೨). [ ಜಲ್$_2$ + ಭ್ರಮ ]

**ಜಲಮಂತ್ರ, ಜಳಮಂತ್ರ** (ನಾ). ಜಲಸ್ತಂಭನ ಮಂತ್ರ : ಜಲಮಂತ್ರಮನೇನುಮಂ ಬಗೆಯದೆ ಕೋಪೋದ್ರೇಕಮನೆ ಬಗೆದು (ಗದಾಯು. ೭-೨೨ ವ). **ಜಳಮಂತ್ರ :** ಎನ್ನ ಪೇೞ್ವ ಜಳಮಂತ್ರೋಪದೇಶಮಂ ಕೆಯ್ಕೊಂಡು . . . ವೈಶಂಪಾಯನ ಸರೋವರದೊಳ್ ಮುೞುಗಿ (ಪಂಪಭಾ. ೦೩-೭೦ ವ). [ ಜಲ್$_2$ + ಮಂತ್ರ ]

**ಜಲಮಂದಿರ** (ನಾ). ಕಾರಂಜಿಗಳಿರುವ ಮನೆ; ಧಾರಾಗೃಹ : ಉದ್ಯಾನವನದ ಮಧ್ಯ ಭಾಗದಲ್ಲಿ ಏಳು ಅಂತಸ್ತುಗಳುಳ್ಳ ವಿಸ್ತೀರ್ಣವಾದ ಜಲಮಂದಿರವಿದ್ದು (ಮಂಜುಕ. ೪). [ ಜಲ್$_2$ + ಮಂದಿರ ]

**ಜಲಮಣಿ** (ನಾ). ನೀರಿನ ಹನಿ; ಜಲಬಿಂದು : ಜಲಮಣಿಯ ಬೆಡಗನಿಕ್ಕಬಹುದೆ ಬಯಲ ಬಂಧಿಸಬಹುದೆ (ಪೋಳೆಮಾ. ೦೦೮-೪೭೪).
[ ಜಲ್$_2$ + ಮಣಿ$_3$ ]

**ಜಲಮಯ** (ಗು). ನೀರಿನಿಂದ ಕೂಡಿದ; ನೀರಿನಿಂದಾದ : ಪೃಥಿವೀಮಯ ಶರೀರದ ಹಾಗೆ ಜಲಮಯ ತೇಜೋಮಯ ವಾಯುಮಯ ಶರೀರಗಳೂ ಆಯಾ ಜೀವ ಕರ್ಮಾನುಸಾರ ಉಂಟು (ಹಿಂದಸಾ. ೫೯). [ ಸಂ. ]

**ಜಲಮಲಿ** (ನಾ). ಒಂದು ಬಗೆಯ ಸಸ್ಯ; "ಮುಕ್ತವರ್ಚೆ" (ಪಂಡಿತ. ೩೩೭).
[ ? ]

**ಜಲಮಾನುಷಿ** (ನಾ). = ಜಲಕನ್ಯೆ : ಉದಧಿಯ ತೋರ ಮುತ್ತೆನಿಸೆ ತಾರಗೆ ಶೀತಮರೀಚಿ ಶಂಖದಂದದಿನಿರೆ ನೀರ ಮೇಲೆ ನಲಿವಚ್ಚರಿಯುರ್ಜಲಮಾನುಷೀಪ್ರಕಾರದಿನಿರೆ (ಮಲ್ಲಿಪು. ೦೨-೦೫೩). [ ಜಲ್$_2$ + ಮಾನುಷಿ ]

**ಜಲಮಾರ್ಗ** (ನಾ). ೧. ಸಮುದ್ರ ಮಾರ್ಗ; ನದೀಮಾರ್ಗ : ನಾಗರಿಕವಾದ ಪ್ರತಿಯೊಂದು ಜನಾಂಗದವರೂ ತಮ್ಮ ದೇಶದ ಭೂಮಾರ್ಗ ಜಲಮಾರ್ಗಗಳನ್ನು ವೃದ್ಧಿಪಡಿಸಿಕೊಳ್ಳುತ್ತಿರುವರು (ಭೂರಚ. ೯೨).

೨. ಕೊಳಾಯಿ; ನಲ್ಲಿ. ೩. ಹರಿ; ಕಾಲುವೆ; ಚರಂಡಿ : "ಪ್ರಮಾಃ, ಜಲನಿರ್ಗಮಾಃ–೨ ನೀರು ಹರಿಯುವುದಕ್ಕೆ ತಕ್ಕಹಾಗೆ ಕಟ್ಟಲ್ಪಟ್ಟ ತೂಬು, ಬಚ್ಚಲು, ಮೊಹರಿ, ನಾಲೆ, ಕೋಡಿ ಮುಂತಾದವುಗಳ ಹೆಸರುಗಳು. ಚಕಾರಾದಿಗಳು – ೪ – ಪದಗಳೂ ಜಲಮಾರ್ಗಕ್ಕೆ ಹೆಸರು ಅಂದರೆ ನೀರು ಹರಿಯುವ ಹಾದಿ, ನೀರು ದಾರಿ" (ಸಿದ್ಧಾಂತಿ. ೬೯). [ ಜಲ₂ + ಮಾರ್ಗ ]

**ಜಲಮುಕ್ಸಮಿತಿ** (ನಾ). ಮೋಡಗಳ ಗುಂಪು,–ಸಮೂಹ : ದೃಕ್ಸುಭಗ ಮೂರ್ತಿ ರಿಪುಜಲಮುಕ್ಸಮಿತಿಸಮಿರಾರ (ವಿಷ್ಣುಪು. ೧–೭).
[ ಸಂ. (ಜಲಮುಚ್ + ಸಮಿತಿ) ]

**ಜಲಮುಚ** (ನಾ). ಮೋಡ ; ಮೇಘ : ಮಳೆಯ ಕಾಲದ ಜಲಮುಚದ ರುಚಿ ತಳೆದ ಭ್ರಮರಗಳಿಂದ (ರಘುವಂ. ೯–೪೪). [ <ಸಂ. ಜಲಮುಚ್ ]

**ಜಲಯಂತ್ರ,** ಜಳಯಂತ್ರ (ನಾ). ೧. ಜೀರ್ಕೊಳವೆ ; ಪಿಚಕಾರಿ ; ಚಿಮ್ಮಲು : "ಜೀರ್ಕೊಳವೆ = ಜಲಯಂತ್ರಂ" (ಶಮದ. ಪರಿ. ೧) ; ರಾಜ ಕುಮಾರನೆತ್ತಿದ ಜಲಯಂತ್ರ ಪಯೋಭಿಘಾತದಿಂದಮರಸಿಯರ ತೊಟ್ಟ ಪೂದುಡಿಗೆಗಳೆಲ್ಲಂ ಬಟಲ್ತು ಕಟಲ್ದು (ಶಾಂತಿಪು. ೮–೩೧ ವ) ; ಬಿತ್ತರದಿಂ ಜಲ[ಪಾಠಾಂ. ಳ]ಯಂತ್ರಮನೊತ್ತುವ ಕಾಂತಾಳಿ ಪುತ್ರಿಕಾಸಂತತಿ ಯಂತೆತ್ತಮಿರೆ ಸರಸಿ ಪೋಲ್ತುದು ಚಿತ್ರಜನ ನಿಯಂತ್ರ ಯಂತ್ರಧಾರಾ ಗೃಹಮಂ (ಚಂದ್ರಪು. ೭–೧೪೪). ೨. ನೀರನ್ನು ಎತ್ತುವ ಯಂತ್ರ ; ರಾಟಳ : ಅಂಧಕಾರಮಯವಾದ ತೋಟದ ಕಡೆಗೆ ನೋಡುತ್ತ, ಜಲ ಯಂತ್ರದ ಶಬ್ದವನ್ನೂ ಬುಲ್‌ಬುಲ್ ಪಕ್ಷಿಯ ಹಾಡನ್ನೂ . . . ಕೇಳಿಸಿ ಕೊಳ್ಳುತ್ತ (ಪುನರು. ೩೯೭). **ಜಳಯಂತ್ರ :** ೧. ಅದೇಂ ನಿಮಿರ್ದುಪೊ ಲೀಲೆಯಿಂದೆ ಜಳಯಂತ್ರಮನಂದು ಮಹೀಶನೊತ್ತೆ, ಕುಂಕುಮಜಳ ಚಂದನೋದಕ ಮೃಗೋದ್ಭವ ವಾರಿ ನಿಯುಕ್ತಧಾರೆಗಳ್ (ಚಂದ್ರಪು. ೭–೧೩೩). [ ಜಲ₂ + ಯಂತ್ರ ]

**ಜಲಯಾತ್ರೆ,** ಜಳಯಾತ್ರೆ (ನಾ). ನೀರಿನ ಮೇಲೆ ಮಾಡುವ ಪ್ರಯಾಣ; ಸಮುದ್ರಯಾನ : ಜಲಯಾತ್ರೆಗೆ ಪೋಗಿ ತನ್ನ ಪಡೆದ ರತ್ನಂಗಳಂ ಕೊಂಡು (ಚಾವುಂಪು. ೧೭೨) ; ಆ ಪರದನೊರ್ವ ಜಲಯಾತ್ರೆಗೆ ಪೋಗಿ ಪಿರಿದಪ್ಪರ್ಥಲಾಭಮಾಗಿರ್ಪುದುಂ (ಧರ್ಮಾಮೃ. ೧೨–೧೯೨); ನಾನು ಈಗ ದೀರ್ಘ ಜಲಯಾತ್ರೆಯನ್ನು ಕೈಗೊಳ್ಳಲಿರುವುದರಿಂದ (ಬೆಂಜನ್. ೬೦). **ಜಳಯಾತ್ರೆ :** ಜಳಯಾತ್ರೆಗೆ ಪೋಪವರ್ಗಳ್ . . . ಜಳಮಂ ಪೊಗೆ ದೊಯ್ವರ್ (ಸಮಪ. ೨–೪೯). [ ಜಲ₂ + ಯಾತ್ರೆ ]

**ಜಲಯಾನ** (ನಾ). ೧. ಜಲಮಾರ್ಗವಾಗಿ ಪ್ರಯಾಣ ಮಾಡುವ ಸಾಧನ; ನಾವೆ ; ಹಡಗು : ಉರಗಾವೃತಂ ಸುವರ್ಣಾಭರಣಂ ಜಲಯಾನವಾಸಿತಂ ಚಿಪಿಟಾಸ್ಯಂ . . . ಕುಳೀರದಂತೆತ್ರ್ಯಂಶಂ (ಜಾತತಿ. ೧೯–೧೨). ೨. = ಜಲಯಾತ್ರೆ : ರಾಜಕುಮಾರನು ಮೊದಲು ನೀಲನದಿಯಲ್ಲಿ ಜಲಯಾನ ಮಾಡಿದನು (ಮಹಸ. ೪೪). [ ಜಲ₂ + ಯಾನ ]

**ಜಲಯುದ್ಧ,** ಜಳಯುದ್ಧ (ನಾ). ನೀರಿನಲ್ಲಿ ನಿಂತು ನೀರನ್ನು ಎರಚಿ ಮಾಡುವ ಕಾಳಗ : ಬಾಹುಬಲಿ ಭರತನಂ ದೃಷ್ಟಿಯುದ್ಧ ಜಲಯುದ್ಧ ದೊಳ್ಗೆಲ್ದು (ಚಾವುಂಪು. ೪೪–೨೨). **ಜಳಯುದ್ಧ :** ಭರದಿಂದಂ ತುಳುಕಿದ ನೀರುರದೊಳ್ ಹಾರಾಂಶು ರುಚಿಯನಿರ್ಕುಟಿಗೊಳೆ ದುರ್ಧರ ಜಳ [ಪಾಠಾಂ ಲ]ಯುದ್ಧಮುಮಾದಮೆ ಪರಿಭವಮಂ ಚಕ್ರವರ್ತಿಗಿತ್ತತ್ಯಾಗಳ್ (ಆದಿಪು. ೦೪–೦೦೮). [ ಜಲ₂ + ಯುದ್ಧ ]

**ಜಲರಂಕು,** ಜಳರಂಕು (ನಾ). ಒಂದು ಬಗೆಯ ನೀರುಹಕ್ಕಿ ; ನೀರು ಕಾಗೆ. **ಜಳರಂಕು :** "ದಾತ್ಯೂಹಃ, ಜಳರಂಕುಃ– ಈ ೨ ಜಾಮಹಂ" (ಹಲಾಯು. ೪೨–೯೭) ; "ಜಳರಂಕು ಕಾಳಕಂಠಂ" (ವಸ್ತುಕೋ. ೪೨–೦೩) ; "ಜಳರಂಕು ದಾತ್ಯೂಹಮೆನಲಾ ನಿರುಗನಕ್ಕು" (ಮಂಗರಾ. ೫೨–೦೦).
[ ಸಂ. ]

**ಜಲರಾಶಿ,** ಜಳರಾಶಿ (ನಾ). ಕಡಲು ; ಸಮುದ್ರ : ಜಲಮಯಮೆನಿಸಳ್ ಸಾಲ್ದುದು ಜಲರಾಶಿ ನಭಕ್ಕೆ ನೆಗೆದ ಪೆರ್ಚುಗೆಯಿಂದಂ (ಸೂಕ್ತಿಸು. ೨–೩೪); ಜಲರಾಶಿ ಜಡರಾಶಿಯಲ್ತೆ (ಇಂಚಾಪ. ೧೬೮–೩೦). **ಜಳರಾಶಿ :** "ರತ್ನಾಕರಃ . . . ಜಳರಾಶಿಃ, ಸಾಗರಃ, ಸಮುದ್ರಃ–ಈ ೧೨ ಸಮುದ್ರಂ" (ಹಲಾಯು. ೧೦೭–೩೦) ; ಜಳರಾಶಿ ಶ್ರೇಣಿಯೊಳ್ ಪಾಲ್ಗಡಲಮರ ಕುಜ ಶ್ರೇಣಿಯೊಳ್ ಪಾರಿಜಾತಂ(ಶಾಪಮಂ. ೭೩); (ಎಇ. XV, ೮೭; 1060 ಸೋ.)
[ ಜಲ₂ + ರಾಶಿ ]

**ಜಲರಾಶಿಪ್ರಭವೆ** (ನಾ). ಸಮುದ್ರದಲ್ಲಿ ಹುಟ್ಟಿದವಳ್ ; ಲಕ್ಷ್ಮಿ : ಜಲರಾಶಿಪ್ರಭವೆಯಂ . . . ಲಕ್ಷ್ಮೀ ಲಲನೆಯನಾಂತು ವಕ್ಷಸ್ಥಲದೊಳ್ಪೇ ಟೆಂತುದಾರಚರಿತನೆ ಅಪ್ಪೆ (ಕವಿರಾ. ೩–೧೬೦).
[ ಸಂ. ಜಲರಾಶಿಪ್ರಭವಾ (ಜಲರಾಶಿ + ಪ್ರಭವ + –) ]

**ಜಲರಾಸಿ** (ನಾ). = ಜಲರಾಶಿ : ಇತ್ತಲು ಸಂದಣಿಸಿತರಿರಾಯದಳ ಜಲರಾಸಿ ಜರಿವಂತೆ (ಕುಮಾರವ್ಯಾ. ೬. ೨–೧೯). [ <ಜಲರಾಶಿ ]

**ಜಲರಿ** 'ಝಾಲರಿ' ನೋ.

**ಜಲರುಹ,** ಜಳರುಹ (ನಾ). ನೀರಿನಲ್ಲಿ ಹುಟ್ಟಿದುದು; ತಾವರೆ; ಕಮಲ: ಜಲರುಹ ಬೀಜರಾಜಿಗಳನಾಚಿಪ (ಕಾದಂಪೂ. ೨೨೪) ; ಅಲಿಗಳ ಸೋಂಕಿಂ ಪ್ರಾಂತರ್ಜಲರುಹಮಲರ್ವಂತೆ (ಜಗವಿ. ೩–೩೨). **ಜಳರುಹ :** 'ಜಳರುಹ ಕಾಂಡ', 'ಜಳರುಹಪತ್ರ' ಪರಾ. [ ಸಂ. ]

**ಜಲರುಹನಾಭ** ಜಳರುಹನಾಭ (ನಾ). ಕಮಲನಾಭ ; ವಿಷ್ಣು : ಜಲರುಹನಾಭನ ನಾಭಿಯೊಳಗುಟಿದರ್ ನಿನ್ನ ಮಂತ್ರಬಲದಿಂ ಬ್ರಹ್ಮರ್ (ಗದಾಯು. ೭–೫೭). **ಜಳರುಹನಾಭ :** ಜಳರುಹನಾಭನ ನಾಭಿಯ ಜಳಬುದ್ಬುದದೊಳಗೆ . . . ಒಗೆದಂ ಹಿರಣ್ಯಗರ್ಭ ಬ್ರಹ್ಮಂ (ಪಂಪಭಾ. ೧–೫೯). [ ಸಂ. (ಜಲರುಹ + ನಾಭಿ + –) ]

**ಜಲರುಹರಿಪು,** ಜಳರುಹರಿಪು (ನಾ). ತಾವರೆಯ ವೈರಿ ; ಚಂದ್ರ. **ಜಳರುಹರಿಪು:** ಜಳರುಹರಿಪುವಾಳಿ ತಾಪಸಂಗಿಂತೆಂದಂ (ಶಬಶಂ. ೨–೧೦೪).
[ ಜಲರುಹ + ರಿಪು ]

**ಜಲರುಹಾಕ್ಷ** (ನಾ). ಕಮಲದಂತೆ ಕಣ್ಣುಳ್ಳವನು ; ಕೃಷ್ಣ : ಬಲನ ವಜ್ರನ ಕಾಲನೇಮಿಯ ಜಲರುಹಾಕ್ಷನ ರಾವಣನ ರಘುಕುಲನ ದೆಖ್ಖಾದಿಖ್ಖಿ ಜೋಡಿಸಿತಾತನೀತನಲಿ (ಕುಮಾವ್ಯಾ.ಕ. ೨೦–೨೨). [ಸಂ.(ಜಲರುಹ+ಅಕ್ಷಿ + –)]

**ಜಲರುಹಾಹಿತ** (ನಾ). = ಜಲರುಹರಿಪು : ಜಲರುಹಾಹಿತಬಿಂಬಮಂ ಸಾರ್ದಲರ್ವ ತಾರಕೆಯಂತೆ ಮಿಱುಗುವುದು . . . ಮೂಕುತಿಯ ಮುತ್ತು (ಬಸವು ೪–೩೯). [ ಜಲರುಹ + ಅಹಿತ ]

**ಜಲರುಹೋದರ** (ನಾ). ಕಮಲನಾಭ ; ವಿಷ್ಣು : ಜಲನಿಧಿತಲ್ಪಂ ಜಲರು ಹೋದರನುಂ ಜಲಜಾತನೇತ್ರನುಂ (ಜಗವಿ. ೭–೭೪).
[ ಜಲರುಹ + ಉದರ ]

**ಜಲಲವ** (ನಾ). ನೀರಿನ ಹನಿ,–ಬಿಂದು : "ಜಲಲವಮುದು ಬಿಂದು" (ವಸ್ತುಕೋ. ೨೪–೦೪): ಕಾರ್ಮುಗಿಲಿಂ ಜಲಲವತತಿ ಕಾರ್ಮುಕದಿಂ ಸ್ಮರಶರಂ . . . ಬಿಡುತಂದುಮೈದೆ ಜಲದಾಗಮದೊಳ್ (ಚಂದ್ರಪು. ೪–೩೯).
[ ಜಲ₂ + ಲವ ]

**ಜಲಲಿಪಿ** (ನಾ). ೧. ನೀರಿನ ಮೇಲೆ ಬರೆದುದು. ೨. (ಆಲಂ) ಸ್ವಲ್ಪ ಹೊತ್ತಿನಲ್ಲಿಯೆ ನಶಿಸಿ ಹೋಗುವಂಥದು; ಕ್ಷಣಭಂಗುರವಾದುದು: ಆರುಂ ಕೊಲಲಾರ್ಪರೆ ಸಾಯದರಂ ಲಲಾಟದೊಳ್ ವಿಧಿಯ ಬರೆದ ಲಿಪಿ ಜಲಲಿಪಿಯೇ (ಪಂಚಾಮಾ. ೩–೩೦) ; ಗಣಿಕೆಯ ಸ್ನೇಹವು ಜಲಲಿಪಿಯಂತೆ (ಕಾವ್ಯಸ. ೦೯); ಜಲಲಿಪಿಯು ತೆರದೆ ಈ ಮಾತನೊರೆದೆ (ಮುಕ್ತಕಂ. ೧೫–೮). ೩. ಒಂದು ಬಗೆಯ ಲಿಪಿ : ಗಗನಲಿಪಿ, ಧೂಮಲಿಪಿ, ಜಲಲಿಪಿ, ಪಿಶಾಚಲಿಪಿ (ಭಾಸ್ಕರ. ೭೭–೪). [ ಜಲ₂ + ಲಿಪಿ ]

**ಜಲಲೇಖ** (ನಾ). = ಜಲಲಿಪಿ: ಕರ್ಮ, ಜ್ಞಾನ, ಭಕ್ತಿ ಇವು ಮೂರು ಕ್ರಮವಾಗಿ ಶಿಲಾಲೇಖ, ಸ್ಥಲಲೇಖ, ಜಲಲೇಖಗಳಾಗಿರುವವು (ಶಿವಾಸೂ. ೧೩೦). [ ಜಲ್ಲ + ಲೇಖ ]

**ಜಲವಟೆ** (ನಾ). ಒಂದು ಬಗೆಯ ಕಂಠಾಭರಣ ; ಜಳವಟ್ಟಿಗೆ: ಬಿಗಿದ ಟೆಂಚೆಯ ಹೊಮ್ಮಿಣಿಯ ಹೊರಜೆಗಳ ಜೋಡಿಯ ಪಕ್ಕಘಂಟೆಯ ರಘುಗೆಯ ಮೊಗರಂಬದ ನವಾಯಿಯ ಮಣಿಯ ಜಲವಟೆಯ ಬಿಗಿದ ಕೂರಂಕುಶದ (ಕುಪ್ಯಾಸ. ೧೨-೯೭). [ ? ]

**ಜಲವರ್ಣ** (ನಾ). ನೀರಿನಲ್ಲಿ ಕಲಸಿ ಲೇಪಿಸುವ ಬಣ್ಣ : ಅಜಂತದ ಗೋಡೆಗಳ ಮೇಲೆ ಬರೆದ ಜಲವರ್ಣ ಚಿತ್ರಗಳು ದೊಡ್ಡ ಪ್ರಮಾಣದವು (ಬಾಲಪ್ರ. I, ೨೧೭). 'ತೈಲವರ್ಣ' ಪರಾ. [ ಜಲ್ಲ + ವರ್ಣ ]

**ಜಲವಸತಿ** (ನಾ). ನೀರು ಇರುವಿಕೆ ; ನೀರಿನ ಅಸ್ತಿತ್ವ : ಭೂಮಿಯ ಒಳಭಾಗದಲ್ಲಿ ಎಲ್ಲೆಲ್ಲಿ ಜಲವಸತಿ ಇದೆಯೋ ಅಲ್ಲೆಲ್ಲಾ ಓಯಸಿಸ್‌ಗಳು ಇರುತ್ತವೆ (ಭೂವಿವ. ೪೪೭). [ ಜಲ್ಲ + ವಸತಿ ]

**ಜಲವಾಯಸ**, ಜಳವಾಯಸ (ನಾ). ನೀರುಕಾಗೆ. **ಜಳವಾಯಸ:** " ಮದ್ಗುಃ, ಜಳವಾಯಸಃ–ಈ ೨ ನೀರ ಕಾಗೆ " (ಹಲಾಯು. ೪೨-೯೭). [ ಜಲ್ಲ + ವಾಯಸ ]

**ಜಲವಾಹ** (ನಾ). ಮೋಡ ; ಮೇಘ. [ ಸಂ. ]

**ಜಲವಿಕಳ** (ನಾ). ನೀರಿಲ್ಲದುದು ; ಬತ್ತಿದುದಂ : ಜಲವಿಕಳಮಾಗಿರ್ದ ಜಲಾಶಯದೊಳ್ ಶಿಶುಕುಳೀರಂ ನೀರಂ ಪಡೆಯದೆ ಮಲುಮಲನೆ ಮಱುಗುತ್ತಿರ್ದುದಂ ಕಂಡು ಕರುಣಿಸಿ (ಪಂಚತಂ. ೨೯೮-೧೭). [ ಜಲ್ಲ + ವಿಕಳ(=ವಿಕಲ) ]

**ಜಲವಿಡಿ** (ಕ್ರಿ). ನೀರು ತುಂಬು: ಜಲವಿಡಿ[ಪಾಠಾಂ. ೪]ದವಕ್ಷಿಯುಲಿ ಕರುಣಾ ಜಲನಿಧಿಗೆ (ತೊರರಾ. ೪-೫-೨೩). [ ಜಲ್ಲ + ಇಡಿ್ಞ ]

**ಜಲವಿದ್ಯುತ್ತು** (ನಾ). ಜಲಶಕ್ತಿಯಿಂದ ಉತ್ಪಾದಿಸಿದ ವಿದ್ಯುಚ್ಛಕ್ತಿ : ದಕ್ಷಿಣ ಭಾರತದ ನದಿಗಳು ಸಾಕಷ್ಟು ಜಲವಿದ್ಯುತ್ತನ್ನು ಒದಗಿಸುತ್ತವೆ (ರೂಢಿ). [ ಜಲ್ಲ + ವಿದ್ಯುತ್ತು ]

**ಜಲವಿಹಂಗ**, ಜಳವಿಹಂಗ (ನಾ). ನೀರುಹಕ್ಕಿ; ಜಲಪಕ್ಷಿ. **ಜಳವಿಹಂಗ:** ಕತ್ತುರಿವಾಣಿಯೊಳೆಱಗುವ ಚಿತ್ತದೆ ಕವಿತರ್ಪ ಜಳವಿಹಂಗಂಗಳವೋಲ್ ಎತ್ತಂ ಕವಿತಂದುವು . . . ಖಚರರೆಚ್ಚ ಶರಂಗಳ್ (ಚಂದ್ರಪು. ೬-೩೨). [ ಜಲ್ಲ + ವಿಹಂಗ ]

**ಜಲವೈದ್ಯ** (ನಾ). ನೀರಿನಿಂದ ಮಾಡುವ ರೋಗಚಿಕಿತ್ಸೆ ; ಜಲಚಿಕಿತ್ಸೆ: ದೊಡ್ಡ ಸ್ನಾನಗೃಹವಂತೂ ಜಲವೈದ್ಯದ ಭಾರಿ ವ್ಯವಸ್ಥೆಗೆ ಸೇರಿದ ಒಂದು ಈಜುವ ಕೊಳ (ಭಾರದ. ೩೭೭). 'ಜಲಚಿಕಿತ್ಸೆ' ಪರಾ. [ ಜಲ್ಲ + ವೈದ್ಯ ]

**ಜಲವ್ಯಾಲ**, ಜಳವ್ಯಾಳ (ನಾ). ನೀರುಹಾವು ; ಒಳ್ಳೆ. **ಜಳವ್ಯಾಳ :** " ಅಲಗರ್ದಃ, ಜಳವ್ಯಾಳಃ–ಈ ೨ ನೀರ್ವಾವು " (ಹಲಾಯು. ೧೦೬-೨೧) ; ಜಳಮೃಣಾಳನಾಳಮಂ ಜಳವ್ಯಾಳಮೆಂದು ಕೆಲದ ಬಿಲದಿಂ ಪಿಡಿಯಲೆಂದು ಧೀಂಕಿಡುವ ವಿಷಾಪಹಾರ ಶಾಲೂರ ಜಾಲಂಗಳೊಳಂ (ಚಂದ್ರಪು. ೫-೪೦ವ). [ ಜಲ್ಲ + ವ್ಯಾಲ ]

**ಜಲಶಂಕೆ** (ನಾ). ೧. ನೀರಿನಿಂದಾಗುವ ಭಯ. ೨. ಮೂತ್ರ ವಿಸರ್ಜನೆ: ಜಲಶಂಕೆಗೆ ಹೋಗಬೇಕಾಗಿತ್ತು (ರೂಢಿ). [ ಜಲ್ಲ + ಶಂಕೆ ]

**ಜಲಶಯನ** (ನಾ). ನೀರಿನಲ್ಲಿ ಮಲಗಿರುವವನು ; ವಿಷ್ಣು: " ವಿಷ್ಣುಃ, ಕೃಷ್ಣಃ . . . ಜಲಶಯನಃ, ಚತುರ್ಭುಜಃ . . . ಈ ೪೫ ನಾರಾಯಣನ ಪೆಸರ್" (ಹಲಾಯು. ೫-೨೩): ಜಲಶಯನೋದರಾಂತರದಿನೀ ತ್ರಿಜಗಂ ಪೊಱಮಟ್ಟುದೀಗಳೆಂಬುಲಿ ಸಲೆ (ಪಂಪಭಾ. ೧೦-೫೨). [ ಜಲ್ಲ + ಶಯನ ]

**ಜಲಶಿಲೆ** (ನಾ). ನೀರಿನ ತಳದಲ್ಲಿ, ನೀರಿನ ಒತ್ತಡದಿಂದಾದ ಶಿಲೆ; ಪ್ರಸ್ತರ ಶಿಲೆ; ಅವಸಾದನ ಶಿಲೆ: ಭೂಮಿಯಲ್ಲಿ ದೊರೆಯುವ ಯಾವತ್ತೂ ಶಿಲೆಗಳಲ್ಲಿ ಅಗ್ನಿಶಿಲೆ, ವಿಕೃತಶಿಲೆ, ಜಲಶಿಲೆ ಎಂಬ ಮೂರು ಮುಖ್ಯ ವರ್ಗಗಳಿರುತ್ತವೆ (ಮುಂಬಯಿ. ೬-೨೩೮) : ಜಲಶಿಲೆಗಳು ಕೆಲವು ನಿಯಮಿತ ಪ್ರದೇಶಗಳಲ್ಲಿ ಮಾತ್ರ ಸಿಕ್ಕುತ್ತವೆ (ಕಥಾಗಿ. ೨೫). [ ಜಲ್ಲ + ಶಿಲೆ ]

**ಜಲಶಿಲ್ಪಿ** (ನಾ). ಬಾವಿಯನ್ನು ಅಗೆಯಬೇಕಾದರೆ ಎಲ್ಲಿ ಚೆನ್ನಾಗಿ ನೀರು ಬರುತ್ತದೆ ಎಂಬುದನ್ನು ತಿಳಿಯಬಲ್ಲ ವಿಜ್ಞಾನಿ: ಉದಕವು ಹೊರಡವ ಹಾಗಿದ್ದರೆ ಅದನ್ನು ಜಲಶಿಲ್ಪಿಯ ಪ್ರಮಾಣದಿಂದ ಪರೀಕ್ಷಿಸಿ . . . ಬಾವಿಯನ್ನು ಅಗಿಸಬೇಕು (ಕೃಷಿಪ್ರ. ೯೮): ಈ ಎರಡು ಸಮಸ್ಯೆಗಳಿಗೂ ಕಾರಣವನ್ನೂ ನಿವಾರಣೆಯನ್ನೂ ಜಲಶಿಲ್ಪಿಯು ತಿಳಿದಿದ್ದಾನೆ (ಶಿಲ್ಪನಾ. ೪೨೭). [ ಜಲ್ಲ + ಶಿಲ್ಪಿ ]

**ಜಲಶೀಕರ** (ನಾ). ನೀರಿನ ತುಂತುರು,–ತುಂಷಾರ: ಸುಯ್ಯಲೊಡಂ ಪುಷ್ಕರದಿನೊಗೆದತಿವಿಶದ ಜಲಶೀಕರಮೆನಿಸಿದುದುದಯಿಪಮಳ ತಾರಕನಿಕರಂ (ಚಂದ್ರಪು. ೮-೨೨). [ ಜಲ್ಲ + ಶೀಕರ ]

**ಜಲಶುಕ್ತಿ** (ನಾ). (ನೀರಿನೊಳಗಿರುವ) ಕಪ್ಪೆಚಿಪ್ಪು ; ಸಿಂಪು. [ ಜಲ್ಲ + ಶುಕ್ತಿ ]

**ಜಲಶೂಕ**, ಜಳಶೂಕ (ನಾ). ನೀರಿನ ಮೇಲೆ ಬೆಳೆಯುವ ಒಂದು ಬಗೆಯ ಸಸ್ಯ ; ಪಾಚಿ ; ಹಾವಸೆ ; ಅಂತರಗಂಗೆ. **ಜಳಶೂಕ:** " ಶೈವಾಳಂ, ಶೈವಳಂ, ಜಳಶೂಕಂ, ನೀಳಿಕಾ–ಈ ೪ ಪಾವಸೆ" (ಹಲಾಯು. ೧೧೩-೬೧). [ ಜಲ್ಲ + ಶೂಕ ]

**ಜಲಶೇಖರ** (ನಾ). ಗಂಗೆಯನ್ನು ತಲೆಯಲ್ಲಿ ಧರಿಸಿದವನು; ಗಂಗಾಧರ; ಶಿವ : ಜಲಶೇಖರನ ಉದಕವನೆಱೆದರೆ ಆಸೆ ಎಂಬ ಹೂಗಳು ಹುಟ್ಟದವು ನೋಡಾ (ಸರ್ವವ. ೩೨-೧೬೩). [ ಜಲ್ಲ + ಶೇಖರ ]

**ಜಲಸ** 'ಜಲಸಾ' ನೋ.

**ಜಲಸಂದು** (ನಾ). = ಜಲಸಂಧಿ: ಆಗ ಆಸ್ಯ ಅಮೇರಿಕವನ್ನು ಪ್ರತ್ಯೇಕಿಸುವ ಬೇರಿಂಗ್ ಜಲಸಂದುವು ಆ ಕಾಲದಲ್ಲಿ ಇದ್ದಿರಲಿಲ್ಲ (ಬಾಲಪ್ರ. I, ೯೮) : ಮುಂದೆ ಹಾದಿಯಲ್ಲಿ ಒಂದು ಜಲಸಂದು ಸಿಗುವುದು (ಮಚಿಸ. ೮೦). [ <ಸಂ. ಜಲಸಂಧಿ ]

**ಜಲಸಂಧಿ** (ನಾ). ಎರಡು ಸಮುದ್ರಗಳನ್ನು ಅಥವಾ ವಿಸ್ತಾರವಾದ ಜಲಭಾಗಗಳನ್ನು ಕೂಡಿಸುವ ಇಕ್ಕಟಾದ ಜಲಪ್ರದೇಶ : ಜಲಸಂಧಿ ಅಥವ ಸ್ಟ್ರೇಟ (Strait) ಅಂದರೆ ಎರಡು ಸಮುದ್ರಗಳನ್ನು ಜೋಡಿಸುವ ಇಕ್ಕಟ್ಟಾದ ನೀರು (ಭೂಗೋಳ. ೧೨); ೭೦ ಮೈಲಿ ಅಗಲವಿರುವ ಜಲಸಂಧಿಯೊಂದು ಈ ದ್ವೀಪವನ್ನು ಚೀನಾದೇಶದಿಂದ ಪ್ರತ್ಯೇಕಿಸಿದೆ (ಭೂವಿವ. ೪೨೨). [ ಜಲ್ಲ + ಸಂಧಿ ]

**ಜಲಸಮಾಧಿ** (ನಾ). ನೀರಿನಲ್ಲಿ ಮುಳುಗಿ ಹೋಗುವುದಂ; ನೀರಲ್ಲಿಯೆ ಮುಳುಗಿ ಸಾಯುವಿಕೆ.

ಜಲಸಮಾಧಿಯಾಗು = ನೀರಿನಲ್ಲಿ ಮುಳುಗಿ ಸಾಯು : ಗಂಗಾ ಪ್ರವಾಹದ ಮಧ್ಯದಲ್ಲಿ . . . ಕಪಾಲಕುಂಡಲೆಯೂ ನವಕುಮಾರನೂ ಜಲಸಮಾಧಿಯಾಗಿ ಹೋದರು (ಕಪಾಕುಂ. ೧೩೦). [ಜಲ್ಲ + ಸಮಾಧಿ]

**ಜಲಸಾ**, ಜಲಸ (ನಾ). ೧. ಸಂತೋಷ ಕೂಟ : ಅಲ್ಲೊಂದ್ ಜಲಸಾ, ಇಲ್ಲಿ ಖುಲಾಸಾ, ಮದರಸ, ಮೀಟಿಂಗ, ಫಂಕ್‌ಶನ್ (ಚಿಂತನ. ೫೯-೧೧). ೨. ನೃತ್ಯ, ಸಂಗೀತ ಮೊದಲಾದುವುಗಳ ಪ್ರದರ್ಶನ ಸಭೆ; ಬೈಠಕ್ಕು: ಸುಮಾರು ನೂರು ಜನ ಕುಳಿತು ಜಲಸಾ ಕೇಳುವಷ್ಟು ಸಭಾಂಗಣ ವಿಸ್ತಾರವಾಗಿತ್ತು (ರಾಗಿಣಿ. ೨೫೪). **ಜಲಸ:** ೨. ಒಂದು ಕಡೆಯಲ್ಲಿ ಕೆಲವು ತರುಣರು ಸೇರಿ ಒಂದು ಸಂಗೀತ ಜಲಸವನ್ನು ಜರುಗಿಸುತ್ತಿರುವರು (ಕಸ್ಯಾಬ. ೭).

**ಜಲಸಾಹೊಡೆ**=ಖುಷಿಪಡು; ಸಂತೋಷಕೂಟದಲ್ಲಿ ಪಾಲ್ಗೊಳ್ಳು: ಜಲಸಾ ಹೊಡೀಲಿಕ್ಕೆ ಹೊರಟೇ ಬಿಟ್ಟಿದ್ದಾನೋ (ಮರಳಿ. ೦೬೬). [ ←ಅರ. ಹಿಂ. ಜಲಸಾ; ಫಾರ. ಜಲಸ್ಸಾ; ಮರಾ. ಜಲಸಾ, ಜಲ್ಸಾ ]

**ಜಲಸೂತ್ರ** (ನಾ). ನೀರಿನ ಧಾರೆ.

**ಜಲಸೂತ್ರದ ಮನೆ** = ಧಾರಾಗೃಹ: ಎಲೆ ಕದಳಿ, ನವಿಲ ಮರಿಗಳನು ಜಲಸೂತ್ರದ ಮನೆಯಲ್ಲಿರಿಸು (ವಡಕಾ. ೫೦). [ ಜಲ₂ + ಸೂತ್ರ ]

**ಜಲಸೇಕ, ಜಳಸೇಕ** (ನಾ). ನೀರನ್ನು ಸಿಂಪಡಿಸುವಿಕೆ; ಜಲಸೇಚನ: ಆ ತ್ರಿಮೂರ್ತಿಗಳಾ ಮಂತ್ರಿತ ಜಲಸೇಕ ಮಾತ್ರದೆ . . . ಅತ್ರಿಯ ಸತಿಗನಸೂಯಾದೇವಿಗೆ ಪುತ್ರರಾದರು ಪೂರ್ವದೊಳು (ಹದಿಬ. ೨-೪೬). **ಜಳಸೇಕ**: ಜಳಸೇಕಂ ಪೂಗೆ ಜೊನ್ನಂ ಕೊರಗಿದ ಸಸಿಗೆ . . . ಆಶಾನುಬಂಧಂ ವಿರಹಿಗೆ ಪಿರಿದುಂ ಜೀವನಾಧಾರಮಲ್ತೇ (ಲೀಲಾವ. ೧೦-೮೫). [ ಜಲ₂ + ಸೇಕ₂ ]

**ಜಲಸೇಚನ** (ನಾ). = ಜಲಸೇಕ: ವಿಶ್ವಕ್ಕೆ ಕರುಣೆಯ ಜಲಸೇಚನ ಮಾಡಿ ಸತ್ಯ, ಶಾಂತಿ, ಅಹಿಂಸೆಯ ಮಹಾತತ್ವಗಳನ್ನು ಬೋಧಿಸಿದ ಭಗವಾನ್ ಬುದ್ಧನು (ಆತ್ಮಾಶ. ೨). [ ಜಲ₂ + ಸೇಚನ ]

**ಜಲಸೇವಂತಿಗೆ** (ನಾ). ಸೇವಂತಿಗೆಯಲ್ಲಿ ಒಂದು ಬಗೆ: "ಶೇಷಾಲಂ— ಜಲಸೇವಂತಿಗೆ" (ಓಷಧಿ. ೧೬೦). [ ಜಲ₂ + ಸೇವಂತಿಗೆ ]

**ಜಲಸ್ತಂಭ, ಜಳಸ್ತಂಭ** (ನಾ). ೧. = ಜಲಸ್ತಂಭನ ೨: ಎತ್ತಣಗ್ನಿ ಸ್ತಂಭವಾ ಜಲಸ್ತಂಭವಾದತ್ತವಂಗೆ (ವೀಶೈಪು. ೨-೩-೪೨): ಜಲಸ್ತಂಭದಿಂ ಗೆಲ್ದವಾವಿಂದು ಜೈನರ್ . . . ಬಂದಿರ್ಪನಂ (ಹಾಲಾಸ್ಯ. ೪-೦೫-೬೬). ೨. ಕಂಬದ ಆಕಾರವಾಗಿ ನಿಂತ ನೀರು: ಭಯಂಕರವಾದ ಬಿರುಗಾಳಿ ಸಮುದ್ರದಲ್ಲಿ ಕಾಣಿಸಿಕೊಂಡಾಗ . . . ಆಲಿಕೆಯ (Funnel) ಆಕಾರದ ಮೇಘಗಳು ಕೆಲವು ವೇಳೆ ನೀರಿನ ಮಟ್ಟಕ್ಕೂ ಇಳಿದು ನೀರನ್ನು ಸೆಳೆದು ಕೊಂಡು ಹೋಗಿ ಮೇಘಮಂಡಲಕ್ಕೆ ಮುಟ್ಟಿಸುತ್ತವೆ. ಹೀಗೆ ಉಂಟಾಗುವ ನೀರಿನ ಧಾರೆಗೆ (Waterspout) ಜಲಸ್ತಂಭ ಎನ್ನುತ್ತಾರೆ (ಭೂವಿವ. ೬೭). **ಜಳಸ್ತಂಭ**: ೧. 'ಜಳಸ್ತಂಭವಂತ್ರ' ಪರಾ. [ ಜಲ₂ + ಸ್ತಂಭ ]

**ಜಲಸ್ತಂಭನ** (ನಾ). ೧. ನೀರನ್ನು ತಡೆಯುವುದು. ೨. ನೀರಿನಲ್ಲಿದ್ದೂ ನೀರಿನ ಬಾಧೆ ತಟ್ಟದಂತೆ ತಡೆಯುವ ಮಂತ್ರವಿದ್ಯೆ: ಶಸ್ತ್ರವಿದ್ಯೆ ಮಲ್ಲ ವಿದ್ಯೆ ಧನುರ್ವಿದ್ಯೆ ಅಗ್ನಿಸ್ತಂಭನ ಜಲಸ್ತಂಭನ ವಾಯುಸ್ತಂಭನ . . . ಇವೆಲ್ಲವ ಕಲಿತಡೇನೋ (ಮುಡಿಮಾ. ೪೩-೬೧); ಒಂದು ಮಡುವಿನೊಳಗೆ ಜಲ ಸ್ತಂಭನ ವಿದ್ಯೆಯಿಂದ ಮುಳುಗಿಕೊಂಡಿದ್ದನು (ವಚಭಾ. ೩೦೩). [ ಜಲ₂ + ಸ್ತಂಭನ ]

**ಜಲಸ್ಪರ್ಶ** (ನಾ). ಕೈಕಾಲು ತೊಳೆದುಕೊಳ್ಳುವುದು; ಮೂತ್ರ ವಿಸರ್ಜನೆ; ಜಲಶಂಕೆ. [ ಜಲ₂ + ಸ್ಪರ್ಶ ]

**ಜಲಹರಿ** (ನಾ). ೧. ನೀರಿನ ಜರಿ,–ಪ್ರವಾಹ: ಉಗಮದಲಿ ತೋಡುವದು ಯಾವುದೊ ಎದೆಯ ಆಳದ ಜಲಹರಿ (ಹೃದಸ. ೫೮-೫). ೨. ಲಿಂಗಕ್ಕೆ ಅಥವಾ ವಿಗ್ರಹಕ್ಕೆ ಅಭಿಷೇಕ ಮಾಡಿದ ನೀರು ಪಾಣಿವಟ್ಟಲಿನಿಂದ ಹರಿದು ಹೋಗುವುದಕ್ಕಾಗಿ ಮಾಡಿರುವ ದಾರಿ: ಶಿವಶಿವ ಕರುಣಿ ಮಹಾದೇವಾ ಎಂದು ಮನವೊಡೆಯಲೊಟ್ಟಿ ಒಱಲೆ ಜಲಹರಿಯಿಂದೊಂ ದೂಱುಗೋಲು ಪೊಱಮಡಲದಂ ಕೊಂಡು (ನಂಬಿರ. ೧೪-೧೦೪); ದನಿ ಯಾಗದ ತೆಱದಿ ಜಲಹರಿಯ ದಿಕ್ಕಿಂಗಾಗಿ ತೊಲಗುತ್ತ (ಬಸಪು. ೨೬-೨೬). [ ಜಲ₂ + ಹರಿ₃ (<ಪರಿ₃) ]

**ಜಲಹಿಪ್ಪಲಿ** (ನಾ). ಜಲಪಿಪ್ಪಲಿ; "ನೀರುಹಿಪ್ಪಲಿ" (ಅಮರ. ಟೀಕ): "ಲಾಂಗಲೀ ಶಾರದೀ, ತೋಯಪಿಪ್ಪಲೀ, ಶಕುಲಾದನೀ ಈ ೪ ಜಲ ಹಿಪ್ಪಲಿ" (ನಾಜಿರಾ.೧೧೧); "ಮತ್ಸ್ಯಾದನೀ—ಜಲಹಿಪ್ಪಲಿ ಕಟುಕರೋಹಿಣಿ" (ಓಷಧಿ. ೧೧೯). [ ಜಲ₂ + ಹಿಪ್ಪಲಿ ]

**ಜಲಾಂಜಲಿ, ಜಳಾಂಜಳಿ** (ನಾ). = ಜಲತರ್ಪಣ: ಸತ್ತರೊಡಸಾಯದೆ ನಿಂದೊಡೆ ಮಾಡಲಕ್ಕುಮಿತ್ತವರ್ಗೆ ಜಲಾಂಜಲಿ ಪ್ರಭೃತಿ ದಾನವಿಶೇಷ ಮಹೋಪಕಾರಮಂ (ಕಾದಂಪೂ. ೯೬೨). **ಜಳಾಂಜಳಿ**: ಧರಾತಳಮಂ ಕೊಟ್ಟನಿವಂ ಜಳಾಂಜಳಿಯುಮಂ ನಾಂ ಕೊಟ್ಟೆನಿಲ್ಲ (ಗದಾಯು. ೫-೩೦). [ ಜಲ₂ + ಅಂಜಲಿ ]

**ಜಲಾಂತರ್ನೌಕೆ** (ನಾ). ಸಮುದ್ರದ ಒಳಗಡೆ ಸಂಚರಿಸುವ ಹಡಗು: ಡ್ರೆಬ್ಬೆಲ್ . . . ಜಲಾಂತರ್ನೌಕೆಯನ್ನು (Submarine) ನಿರ್ಮಿಸಿ ಥೇಮ್ಸ್ ನದಿಯಲ್ಲಿ ಪ್ರದರ್ಶನ ಮಾಡಿದನು (ಶಿಲ್ಪನಾ. ೦೩೨). 'ಜಲಗರ್ಭನಾವೆ' ಪರಾ. [ ಸಂ. ಜಲಾಂತರ್ನೌಕಾ (ಜಲ + ಅಂತರ್ + ನೌಕಾ) ]

**ಜಲಾಕರ** (ನಾ). ೧. ಸರೋವರ; ಕೊಳ; ಜಲಾಶಯ: ಅಂಗೀಕೃತ ಕುಟಜಶೋಭಾಪ್ರಭಾವಮಾಗಿಯುಂ ಸಂಶೋಷಿತ ಜಲಾ[ಪಾಠಾಂ. ಡಾ] ಕರಮಲ್ತು (ಚಂದ್ರಪು. ೪-೪೨ ವ). ೨. ಚಿಲುಮೆ; ಊಟೆ: (ಕ).
[ ಜಲ₂ + ಆಕರ₃ ]

**ಜಲಾಕರ್ಷಣಯಂತ್ರ** (ನಾ). (ಬಾವಿಯಿಂದ) ನೀರನ್ನು ಎತ್ತುವ ಯಂತ್ರ; ರಾಟಳ: "ರಾಟಾಳಃ – ಜಲಾಕರ್ಷಣಯಂತ್ರಂ" (ಕಾಶಕ. ೧೬). [ ಜಲ₂ + ಆಕರ್ಷಣ + ಯಂತ್ರ ]

**ಜಲಾಕಾರ** (ನಾ). (?): ಕಳಾಬಿಂದು ವಟಾಮುಖಿಯೆಂಬ ಹೆಂಗೂಸಿನ ಕೈಯಲು ಜಲಾಕಾರವೆಂಬ ಗಡಿಗೆ ಇದ್ದಿತ್ತು, ಆ ಗಡಿಗೆಯಲ್ಲಿ ಚನ್ನಬಸವಣ್ಣ ನೀರು ತಂದ ಮಡಿವಾಳಯ್ಯ ಸಯದಾನವ ತಂದ (ಬಸವ. ೮೮೯). 'ಜಲತ್ಕಾಲ' ಪರಾ. [ ? ]

**ಜಲಾಗಮ** (ನಾ). ನೀರನ್ನು ತರುವುದು,–ತರುವಿಕೆ: ಆನೆಗಳ ಮೇಲೆ ಕುವರಿಯರಿರ್ದು ಮುತ್ತುಗಳ ಸೋನೆಗಳನಡಿಗಡಿಗೆ ಸೂಸುತಿರೆ . . . ಜಲಾಗಮಕೆ ಹರಿ ತಾನೆ ಬರೆ ಮೊಳಗಿದುವು ದೇವದುಂದುಭಿ ಕಟಿದುದರಳ ಮಳೆ ಗಗನದಿಂದ (ಜೈಮಿಭಾ. ೩೩-೪೫). [ ಜಲ₂ + ಆಗಮ ]

**ಜಲಾಧಾರ** (ನಾ). ಜಲಾಶಯ; ಕೆರೆ: "ತಟಾಕಂ ಜಲಾಧಾರಮೆನೆ ಕೆಱೆ" (ಮಂಗರಾ. ೦೨೩-೦೪). [ ಜಲ₂ + ಆಧಾರ ]

**ಜಲಾಧಿದೈವತ** (ನಾ). ನೀರಿನ ಅಭಿಮಾನಿ ದೇವತೆ; ವರುಣ: "ವರುಣಃ . . . ಜಲಾಧಿದೈವತಂ, ಪ್ರತ್ಯಗಾಶಾಪತಿಃ — ಈ ೬ ವರುಣನ ಪೆಸರ್" (ಹಲಾಯು. ೦೩-೬೪). [ ಜಲ₂ + ಅಧಿದೈವತ ]

**ಜಲಾಧಿವಾಸ** (ನಾ). ದೇವತಾವಿಗ್ರಹವನ್ನು ಪ್ರತಿಷ್ಠೆ ಮಾಡುವ ಮೊದಲು ನೀರಿನಲ್ಲಿ ಮುಳುಗಿಸಿ ಇರಿಸುವ ವಿಧಿ: ಚೈತ್ರಶುದ್ಧ ಪಂಚಮಿ ಸ್ಥಿರವಾರದಿಂದ ತ್ರಯೋದಶಿವರೆಗೂ ಜಲಾಧಿವಾಸ ಮುಂತಾದ ಕರ್ಮಗಳು ನಡೆದ ಮೇಲೆ . . . ಕೇಶವಪ್ರತಿಷ್ಠೆ ಮಾಡಿಸಿದರು (ಹೊಯ್ಸವಾ. ೨೦). [ ಜಲ₂ + ಅಧಿವಾಸ₁ ]

**ಜಲಾಧಿವಾಸನ** (ನಾ). = ಜಲಾಧಿವಾಸ: ಜಲಾಧಿವಾಸನಮೆಂಬ ಮಹೋತ್ಸವಮಂ . . . ಮಾಡುವುದು (ಪ್ರತಿಷ್ಠಾ. ೫-೧).
[ ಜಲ₂ + ಅಧಿವಾಸನ ]

**ಜಲಾಧೀಶ್ವರ** (ನಾ). = ಜಲಾಧಿದೈವತ: ಭೂಮಿಗಧಿಪನೇ ಶರ್ವನೆಂಬಾ ಪೆಸರಿನಿಂ ರಾಮಣೀಯಕ ಜಲಾಧೀಶ್ವರಾ ರುದ್ರಾಖ್ಯದಾಮಹಿತವಹ್ನಿಗ ಧಿಪನೆ (ವೀಶೈಪು. ೬-೧-೪೪). [ ಜಲ₂ + ಅಧೀಶ್ವರ ]

**ಜಲಾನಯನ** (ನಾ). ನೀರನ್ನು ತರುವುದು,–ಒದಗಿಸುವುದು. 'ಜಲಾ ನಯನ ಪ್ರದೇಶ' ಪರಾ. [ ಜಲ₂ + ಆನಯನ ]

**ಜಲಾನಯನಪ್ರದೇಶ** (ನಾ). ನದಿಗೆ ಅಥವಾ ಕೆರೆ ಕೊಳಗಳಿಗೆ ಸೇರುವ ನೀರು ಹರಿದು ಬರುವ ಪ್ರದೇಶ: "ಜಲಾನಯನಪ್ರದೇಶ (ನದಿಗೆ ಬರುವ ಮಳೆನೀರು ಬಿದ್ದ ಪ್ರದೇಶ); ಇಳಿಮೋಡು" (Catchment area. ಇಂಕನಿ). [ ಜಲಾನಯನ + ಪ್ರದೇಶ ]

**ಜಲಾಯುತಾಸ್ತ್ರ** (ನಾ). ಜಲವನ್ನು ಸುರಿಸುವ ಅಸ್ತ್ರ ; ವರುಣಾಸ್ತ್ರ : ನಾರಾಯಣನ ನುಡಿಯಿಂದ ಮುನ್ನ ಜಲಾಯುತಾಸ್ತ್ರವನರ್ಜುನನು ಗಾಂಡಿವದಲುಗುಳಿಸಿದ (ಕುಮಾ.ದ್ರೋ. ೧೯-೪೭).
[ ಜಲ$_2$ + ಆಯತ$_4$ + ಅಸ್ತ್ರ ]

**ಜಲಾಯಿಸು** (ಕ್ರಿ). ಸುಡು ; ದಹಿಸು : (ಶ).
[ ಜಲಾಯು$_0$ (P ←ಹಿಂ. ಜಲಾನಾ) + - ಇಸು$_3$) ]

**ಜಲಾರಿ** (ನಾ). ನೀರು ಹರಿಯುವ ಮಾರ್ಗ: "ಜಲಾರಿ=ನೀರ ಮಾರ್ಗಂ" (ಶಾಶಕ್ಕ. ೦೪೭). [ <ಜಲಹರಿ ]

**ಜಲಾರ್ದ್ರ** (ಗು). ನೀರಿನಲ್ಲಿ ನೆನೆದ, -ಒದ್ದೆಯಾದ: ಸಮಂತು ಸೂಸುವ ಜಲಾರ್ದ್ರಾಲಸದ್ಧವಳಾಕ್ಷತಂಗಳೊಳ್ಪೆರಸಿದ ತಣ್ಬನೆತ್ತಿ (ಪಂಪಭಾ. ೨-೯೫).
[ ಜಲ$_2$ + ಆರ್ದ್ರ ]

**ಜಲಾಲಿ** (ನಾ). ಮೊಹರಂ ಹಬ್ಬದಲ್ಲಿ ಹಾಕುವ ಒಂದು ವೇಷ : (ಶ).
[←ಪಾರ. ಜಲಾಲೀ ]

**ಜಲಾವತಾರ** (ನಾ). ನದಿಗಳಲ್ಲಿ ನೀರಿಗಾಗಿ ಇಳಿಯುವ ಸ್ಥಳ; ನದಿಯ ಘಟ್ಟ; ನದಿಗಳ ದಡದಲ್ಲಿರುವ ಸೋಪಾನಮಾರ್ಗ.
[ಜಲ$_2$ + ಅವತಾರ ]

**ಜಲಾವರ್ತ** (ನಾ). ನೀರಿನಲ್ಲಿಯ ಸುಳಿ : "ಸುಟು=ಕೆಲಸಗಳ್ಗಂ; ಸಸಿಯು ಸುಟು; ಸುಟುವ ಭಾವಂ; ಜಲಾವರ್ತಂ" (ಶಮದ. ಪರಿ. ೦). 'ಜಲಾವರ್ತಾಕ್ಷರ' ಪರಾ. [ ಜಲ$_2$ + ಆವರ್ತ ]

**ಜಲಾವರ್ತಾಕ್ಷರ** (ನಾ). = ಜಲಲಿಪಿ ೨ : ಪರಿವೃತ್ತಿಪ್ರ ಮರೀಚಿಕಾಜಲ ಜಲಾವರ್ತಾಕ್ಷರಂ ತೋಟುಮ್ಪೆಸಿರಿ ಪುಲ್ಲಗ್ರುದ ತುಂತುರ್ಕೈ (ಸೋಮೇಶ. ೯೦).
[ ಜಲಾವರ್ತ + ಅಕ್ಷರ ]

**ಜಲಾವು** (ಗು). ಉರಿಸುವ ; ಉರಿಸುವುದಕ್ಕೆ ಯೋಗ್ಯವಾದ : ಇಲ್ಲಿ ಜಲಾವು ಕಟ್ಟಿಗೆ ದೊರೆಯುತ್ತದೆ (ರೂಢಿ). [ ←ಹಿಂ. ಜಲಾಊ ]

**ಜಲಾಶಯ, ಜಳಾಶಯ** (ನಾ). ೧. ನೀರಿಗೆ ಆಶ್ರಯವಾದುದು; ಕೊಳ, ಸರೋವರ ಮೊದಲಾದುದು: ಆಧುನಿಕ ಕಾಲದಲ್ಲಿ ದೊಡ್ಡ ಜಲಾಶಯಗಳನ್ನು ನಿರ್ಮಿಸಿ ನಾನಾವಿಧಗಳಲ್ಲಿ ಪ್ರಯೋಜನ ಪಡೆಯುತ್ತೇವೆ (ನನದಿ.೪). ೨. ಲಾಮಂಚ; ಬಾಳದ ಬೇರು. ೩. ಮಿನಾನಂ. **ಜಳಾಶಯಂ:** ೧. ಕಳಶಜನುದಯದೊಳೊದವಿದ ಜಳಾಶಯಂ ತಿಳಿದುವೊಡನೆ ಕದಡಿದು ಮನವನೀತಳಪತಿಯು ಪಡೆಯೊಳರಿನೃಪಜಳಾಶಯಂ ಶರದಮೇವಿರುದ್ಧಾರ್ಥಕಮೋ (ಶಾಂತಿಪು. ೦೦-೧೪೯). [ ಜಲ$_2$ + ಆಶಯ ]

**ಜಲಾಶ್ರಯ** (ನಾ). = ಜಲಾಶಯ. [ ಜಲ$_2$ + ಆಶ್ರಯ ]

**ಜಲಾಶ್ರಿತೆ** (ನಾ). ನೀರಿನಲ್ಲಿ ವಾಸವಾಗಿರುವವಳು ; ಯಕ್ಷಿಣಿ : "ಕನ್ನಿಕೆಯರು, ಜಲಾಶ್ರಿತೆ[ಪಾಠಾಂ. ತ]ಯರೆನಲ್ಕ ಜಕ್ಕಿಯರೆನಿಕ್ಕುಂ" (ಮಂಗರಾ. ೫-೦೫). [ಸಂ. ಜಲಾಶ್ರಿತಾ (ಜಲ + ಆಶ್ರಿತ + -) ]

**ಜಲಾಸ್ತ್ರ** (ನಾ). ನೀರನ್ನು ಸುರಿಸುವ ಅಸ್ತ್ರ ; ವರುಣಾಸ್ತ್ರ : ಉರಿಯ ವಿಶಿಖವನಿವರು ನಂದಿಸಿದರು ಜಲಾಸ್ತ್ರದಲಿ (ಕುಮಾ.ಭೀ. ೯-೪೪).
[ ಜಲ$_2$ + ಅಸ್ತ್ರ ]

**ಜಲಿಕ, ಜಲಗ** (ನಾ). ೧. ಮೋಸಗಾರ ; ಮಾಯಾವಿ ; ಕುಹಕಿ : "ಧೂರ್ತನಾ ವ್ಯಂಸಕಂ ಜ[ಪಾಠಾಂ. ಜ]ಲಿಕನೆನೆ ಮಾಯೆಗೈವವನಕ್ಕು" (ಮಂಗರಾ. ೭೭-೭). **ಜಲಗ:** ೨. ಮಿನಾನುಗಾರ; ಬೆಸ್ತ: ಅಂಗೈಯಗಲದ ಪಟ್ಟಣದೊಳಗೆ ಆಕಾಶದುದ್ದ ಎತ್ತು ತಪ್ಪಿತ್ತು . . . ಜಲಗರ ಕರಸಿ ಜಲವ ತೊಳಯಿಸಿ . . . ಅಬಿಸಿಕೊಂಡು ಬಾರಯ್ಯ (ಸರ್ವವ. ೨೦೩-೯೨೦) ; ಸಾಗರದೊಳಗಿರ್ದ ಜಲಗನ ಬಲೆಯೊಳಗಾಗಬರ್ಪುದೆ (ಮೋಹತ. ೦೮-೩೯).
[ <ಸಂ. ಜಾಲಿಕ ]

**ಜಲಿಕೆ** (ನಾ). ಜಿಗುಳೆ ; ಜಿಗಣೆ. [ ಸಂ. ಜಲಿಕಾ ]

**ಜಲಿಸು** (ಕ್ರಿ). ೧. ಸುಡು ; ಜ್ವಲಿಸು : ಬಲವಾಗಿ ಒದಗಿರ್ದ ಜಲಿಪ ಕಂಟಕವು . . . ಕಳೆದುಪೋಯಿತು (ಹಮುಣ.೬೨). ೨. ಹೊಳೆ; ಮಿರುಗು; ಪ್ರಕಾಶಿಸು: ಜಲಿಪಸಿಮಯ್ಯನು ಕಲಕಿಸಿ ಕೂಗೆ ಮಲಕಿಸಿ ಮುಖವನು ಕುಲಿಕಿಸಿ ಸಾಗೆ (ಹಮುಣ. ೨೨). [ <ಜ್ವಲಿಸು ]

**ಜಲುಕೆ** (ನಾ). = ಜಲಿಕೆ. [ ಸಂ. ಜಲುಕಾ ]

**ಜಲುಗು** (ನಾ). ನೀರು ಜಿನುಗುವ ಅಥವಾ ಹನಿಯುವ ಸ್ಥಳ : ಗುಹೆ ದೊಣೆ ಮೊರಡಿ ಪಳ್ಳ ಕೊಳ್ಳ ಜರಿ ಸರಿ ಜಲುಗು ಗಹನ ಗಹ್ವರದ ವಿಂಧ್ಯಾದ್ರಿಯು ಫಲುಗುಣನ ಸೇನೆ ತುಳಿದಸಿಯರೆದುದು (ಜೈಮಿಭಾ. ೧೦-೮). 'ಜವುಗು' ಪರಾ.
[ದೇ॥ ಪರ್ಜಿ. ಜಲುಗ್, ಜಲುಬ್; ಕುವಿ. ಜಲ್ಲ = ಊಟೆ ]

**ಜಲೂಕ, ಜಳೂಕ** (ನಾ). = ಜಲಿಕೆ: ಮಂಡೂಕ ಮಕರ ವ್ಯಾಳಕುಲವು ಜಲೂಕ ಕರ್ಕಟ ತಿಮಿ ತಿಮಿಂಗಿಲ (ಶಂಕರಾ. ೦-೩೦). **ಜಳೂಕ:** ಮೆಯ್ಯಂ ಜಳೂಕಾವಳಿಗಳ್ ಪೀರ್ವಲ್ಲಿ (ಸುಕುಮಾ. ೪-೯) ; ತಿಮಿತಿಮಿಂಗಿಳೋತ್ಕರ ಜಳೂಕ ವ್ಯಾಳಕೋಳಾಹಳಧ್ವಾನವೆರಸಿ ಜಲನಿಧಿ ಮೊಟಿದುದು (ಹಹರಾ. ೦-೩೩); ಜಳೂಕ—ಜಿಗುಳೆ (ಶಮದ. ೨೬೯ ಪ್ರಯೋ). [ಸಂ. ಜಲೂಕಾ]

**ಜಲೂಕೆ, ಜಳೂಕೆ** (ನಾ). = ಜಲಿಕೆ. **ಜಳೂಕೆ:** "ಜಳೂಕಾ, ಜಳೌಕಾ— ಈ ೨ ಜಿಗುಟೆ" (ಹಲಾಯು. ೦೧೯-೩೯). [ಸಂ. ಜಲೂಕಾ]

**ಜಲೂಟಿ** (ನಾ).ಜೂಲು ; ಗೌಸು (?) : ವಿಳಸಿತಾಭ್ರೋತ್ತುಂಗ ಮಾತಂಗ ಕಮರಿಸಿದ ಮುತ್ತಿನ ಜಲೂಟಿಯಿರವೋ (ನಂದಿಮಾ. ೦೮-೨೭). [ ? ]

**ಜಲೇಶ, ಜಳೇಶ** (ನಾ). ನೀರಿನ ಅಧಿಪತಿ ; ವರುಣ : ಪವಳದ ಬೀಡು ಕಂಬುಗಳ ನಾಡು ಜಲೇಶನ ಜೋಡು . . . ಮಣಿಗಳಾಗರಮಂದೆಸೆದತ್ತು ಸಾಗರಂ (ಸೂಕ್ತಿಸು. ೨-೩೭). **ಜಳೇಶ:** ಸುರಪತಿ ಶಿಖಿ ದಂಡಧರಂ ನಿರುತಿ ಜಳೇಶಂ ಸಮೀರಣಂ ಧನದನುಮೀಶ್ವರನೆಂಬ ಲೋಕಪಾಲರನಿರವೇಟ್ಟು (ಶಾಂತಿಪು. ೦೦-೫೧). [ ಜಲ$_2$ + ಈಶ ]

**ಜಲೋಕೆ** (ನಾ). = ಜಲಿಕೆ. [ ಸಂ. ಜಲೋಕಾ ]

**ಜಲೋಚ್ಛ್ವಾಸ, ಜಳೋಚ್ಛ್ವಾಸ** (ನಾ). ೧. ಕೆರೆ ಮೊದಲಾದುವುಗಳಲ್ಲಿ ಹೆಚ್ಚಾದ ನೀರನ್ನು ಹರಿಯಬಿಡಲು ಮಾಡಿರುವ ಮಾರ್ಗ; ಕೋಡಿ; ಕಡೆಗೋಡಿ : "ಪರಿವಾಹಮೆನೆ ಜಲೋಚ್ಛ್ವಾಸಮೆನೆ ಕಡೆಗೋಡಿ" (ಮಂಗರಾ. ೦೨೩-೦೫) . ೨. ಸಮುದ್ರದ ಉಬ್ಬರ ; ಭರತ : ಜಲೋಚ್ಛ್ವಾಸವಿದ್ದ ಕಾಲದಲ್ಲಿ ಹಡಗು ದಡದಲ್ಲಿದ್ದರೆ ಅಲೆಗಳ ಹೊಡೆತದಿಂದೊಡೆದು ಚೂರಾಗಿ ಹೋಗುತ್ತದೆಂದು ಅವರು ತಿಳಿದಿದ್ದರು (ಕಪಾಕುಂ. ೭). **ಜಳೋಚ್ಛ್ವಾಸ:** ೧. "ಪರೀವಾಹಃ, ಜಲೋಚ್ಛ್ವಾಸಃ— ಈ ೨ ಕಡೆಗೋಡಿ" (ಹಲಾಯು. ೦೦೨-೫೫). [ ಜಲ$_2$ + ಉಚ್ಛ್ವಾಸ ]

**ಜಲೋದರ, ಜಳೋದರ** (ನಾ). ಹೊಟ್ಟೆಯಲ್ಲಿ ನೀರು ತುಂಬಿಕೊಳ್ಳುವ ಒಂದು ಬಗೆಯ ರೋಗ ; ಉದರರೋಗ : ಹೊಟ್ಟೆಯ ಬಾವು, ಹೊಟ್ಟೆಯೊಳಿರ್ದ ಜಂತುರೋಗ, ಜಲೋದರ ಸಹ ಗುಣಮಕ್ಕು (ಸಕವ್ಯ. ೨೩೭). **ಜಳೋದರ:** ಹಿರಿದು ಹುಸಿಗಬುಧಿಪತಿ ಮುನಿದು ಮಾಡಿದ ಜಳೋದರವ ಭಾವಿಸದೆ (ಹಹರಾ. ೨-೦೯). [ ಜಲ$_2$ + ಉದರ ]

**ಜಲೋದ್ಧತರತ** (ನಾ). [ಛಂದ] ಪ್ರತಿಪಾದದಲ್ಲಿ ಹನ್ನೆರಡು ಅಕ್ಷರಗಳಿರುವ ಒಂದು ಸಮಪಾದವೃತ್ತ: ಗುಣಾಗ್ರಣಿ ದಿನೇಶವಾಯುಯುಗಳಂ . . . ಜಲೋದ್ಧತರತಂ (ಛಂದೋಂಬು. ೨-೦೩೪). [ ಸಂ. ]

**ಜಲೋಪಲ** (ನಾ). ಆಣೆಕಲ್ಲು; ಆಲಿಕಲ್ಲು: ಘನ ಕಾಟಿದುವು ಮೇಣಿಂದ್ರು ಗೋಪ ಜಲೋಪಲಂಗಳನು (ಶಂಕರಾ. ೫-೦೨). [ ಜಲ$_2$ + ಉಪಲ ]

**ಜಲೌಕಸ, ಜಲೌಕಸ** (ನಾ). ಜಿಗುಳೆ. **ಜಳೌಕಸ:** "ಜಳೂಕಂ ಜಳೌಕಸಮೆನಲಂ ಜಿಗುಟೆಯೆಂದೆನಿಕ್ಕು" (ಮಂಗರಾ. ೦೨೨-೮).
[ <ಸಂ. ಜಲೌಕಸ್ ]

**ಜಲೌಕೆ** (ನಾ). = ಜಲಿಕೆ. [ಸಂ. ಜಲೌಕಾ]

**ಜಲೌಘ** (ನಾ). ನೀರಿನ ಸಮೂಹ : ಪ್ರಕಟಂ ವಾರಿಧಿವೇಳೆ ವಾರ್ಧಿಗೆ ಜಲೌಘಸ್ಪರ್ಧೆಯೊಳ್ ಬಾಧ್ಯಬಾಧಕಭಾವಂ ನೆಗಟಲ್ಕೆ (ಜಗವಿ. ೧-೩೧). [ಜಲ$_2$ + ಓಘ]

**ಜಲ್ದಿ$_1$** (ನಾ). ಮೊಹರಂ ಹಬ್ಬದ ಕೊನೆಯ ದಿನದ ಉತ್ಸವ : ಹಿಂದೆ ಹೆಮ್ಮಳ್ಳಿಯಲ್ಲಿ ಬಾಬಯ್ಯನ ಜಲ್ದಿ ಎಂದರೆ ಹಿಂದುಗಳಿಗೆ ಒಂದು ದೊಡ್ಡ ಹಬ್ಬ (ಮಗಮೂ. ೧) ; 'ಜಲ್ದಿ'ಯಲ್ಲಿ ಬೇರೆ ಊರುಗಳ ಮುಸಲ್ಮಾನರು ಕೊರಟಿಯ ಬಾಬಯ್ಯನ ಮಂಟಪ ಚನ್ನಾಗಿದೆ ಎಂದು ಹೊಗಳಿದರೆ ಅವನಿಗೆ ತಲೆಯ ಮೇಲೆ ಕೋಡು ಮೂಡಿದಷ್ಟು ಹರ್ಷವಾಗುತ್ತಿತ್ತು (ಊರುಕೆ. ೩೦). [←ಪಾರ. ಜಲ್ದೀ]

**ಜಲ್ದಿ$_2$, ಜಲದಿ, ಜಲದು, ಜಲ್ದು** (ಅ). ಬೇಗನೆ ; ಶೀಘ್ರವಾಗಿ : ನಿಮ್ಮ ಕಡೆ ಮಂದಿ ಜಲ್ದಿ ಕಳುಹಿಸಿ ಕೊಟ್ಟು (ರಾಜೇಂದ್ರ. ೨೯); ಜಲ್ದಿ ಬಂದು ಬಿಡು (ರೂಪಸಂ. ೭). **ಜಲದಿ :** (ಈ). **ಜಲದು :** ಜವಾಬು ಜಲದು ಬರೆದು ಕಳುಹಿಸಬೇಕು (ರಾಜೇಂದ್ರ. ೪೮) ; ಕುಮುಕು ಜಲದು ಆಗದಿದ್ದರೆ (ಹೈದರ. ೭೭). **ಜಲ್ದು :** ಈಗ ಮಾತ್ರ ಕೈ ಸ್ವಲ್ಪ ಜಲ್ದು ಬಿಟ್ಟೆ (ವೀನಾದ. ೧೦). [←ಅರ. ಪಾರ. ಹಿಂ. ಜಲ್ದೀ]

**ಜಲ್ದು** 'ಜಲ್ದಿ$_2$' ನೋ.

**ಜಲ್ಪ** (ನಾ). ೧. ಮಾತು; ನುಡಿ. ೨. ಅಸ್ಪಷ್ಟವಾದ ಮಾತು,–ನುಡಿ: ಜನನಿರ್ದಂ ಮನದೊಳಗೊಂದೊಂದವ್ಯಕ್ತ ನಿಜಾಕ್ಷರ ಜಲ್ಪ ಮೆ ಸೆಯೆ ಮಂದರಕಲ್ಪಂ (ಅಜಪು. ೭-೦೨) ; ಬಾ ಕೆಳೆಯ ಹೋಗೋಣ ಬಾ . . . ಜಲದ ಜಲ್ಪವ ಕೇಳಿ ಕೊಳದ ತಡಿಗೆ (ಗಣೇಶ. ೬೬-೭) ; ಮಂಜು ಜಲ್ಪವ ತೋರಿ ಮುಗ್ಧ ವೀಕ್ಷಣವ ಬೀರಿ (ನಿವೇದ. ೪೦-೬) ೩. ಅಸಂಬದ್ಧವಾದ ಮಾತು ; ವ್ಯರ್ಥವಾದ ಮಾತು ; ಹರಟೆ : ಇದು ಮತ್ತೋನ್ಮತ್ತಜಲ್ಪಂ ಕುಲವಧುವರ ಮಾತಲ್ತು (ಹಿಂರಾಮಾ. ೯-೦೬೯). ೪. ವಾದ ; ಚರ್ಚೆ. ೫. ನ್ಯಾಯದರ್ಶನ ನಿರೂಪಿತವಾದ ಹದಿನಾರು ಪದಾರ್ಥಗಳಲ್ಲಿ ಒಂದು ; ಪರಮತವನ್ನು ಖಂಡಿಸಿ ಸ್ವಮತವನ್ನು ಸ್ಥಾಪಿಸುವುದು : ಆಯತಾಖಿಳ ತರ್ಕವಾದೋಪಾಯ ಜಲ್ಪವಿದಂಡತತಿಯೊಳು ಧೀಯುತಂ ಬಾಚಯ್ಯಂ (ಬಸವು. ೫೩-೮) ; ತರ್ಕ ನಿರ್ಣಯವಾದ ಜಲ್ಪ ವಿತಂಡಾ ಹೇತ್ವಾಭಾಸ ಛಲ ಜಾತಿ ನಿಗ್ರಹಸ್ಥಾನಂಗಳೆಂಬ ಷೋಡಶ ಪದಾರ್ಥಂಗಳಂ ನಿರೂಪಿಸುತ್ತಲು (ವಿವೇಕ. ೧೦); ಸ್ವಲ್ಪ ಜನರಳ್ಕಿಸುವ ಶತಕೋಟಿ ಭಟ ಸುಭಟ ಜಲ್ಪವಂಬರ ಚಲಿತರಗ್ರ ಕೊಳದಾ ಚೂಣಿ ಜಲ್ಪಮುಪಹರಗೈದು ಕರ್ತುಚೇದ್ಯನ ಕೇಳ್ವ ಚಿತ್ರ ಬಲ ಚಿತ್ರಮಾಲಿ ಜಲ್ಪವಿರಿಸದೆ ವಿಜಯ ಕೀರ್ತಿ ಚರಣಾಬ್ಜಕಾ ತಲ್ಪಿಸುವೆನೆನಲು (ಜಿನಮು. ೨೭-೦೭). [ಸಂ.]

**ಜಲ್ಪಕ** (ನಾ). ೧. ಹರಟೆಮಲ್ಲ; ವಾಚಾಳ. ೨. ಹೊಗಳುಭಟ್ಟ; ವಂದಿ: ಪ್ರಕಟತರ ಬಿರುದಾಂಕಮಾಲಾ ವಿಶಾಲ ಜಲ್ಪಕ ಪಾಠಕೌಘ ಪರಿವೃತನಾಗಿ . . . ಬಂದು ಘನವಿಭವದಿಂ (ಪದ್ಮರಾ. ೯-೩೮). [ಸಂ.]

**ಜಲ್ಪನ** (ನಾ). ವ್ಯರ್ಥವಾಗಿ ಮಾತನಾಡುವುದು ; ಹರಟುವುದು. [ಸಂ.]

**ಜಲ್ಪನೆ** (ನಾ). = ಜಲ್ಪನ : ಜಲ್ಪನೆಯ ಬೇಸರಿಕೆ ಬಂತೆನಗೆ (ಸಬೀಗೀ. ೫೯-೫). [ಸಂ. ಜಲ್ಪನ]

**ಜಲ್ಪಾಕ** (ನಾ). = ಜಲ್ಪಕ ೧ : "ವಾಚಾಳಂ ಜಲ್ಪಾಕಂ ವಾ ಚಾ ಟಂ ವಾವದೂಕನಕ್ಕುಂ ಗಟಪಂ" (ವಸ್ತುಕೋ. ೦೦೦-೧೩). [ಸಂ.]

**ಜಲ್ಪಾಕಿ** (ನಾ). ಹರಟೆಮಲ್ಲಿ ; ಮಾತಿನ ಮಲ್ಲಿ. [ಸಂ. ಜಲ್ಪಾಕೀ]

**ಜಲ್ಪಿತ** (ಗು). ೧. ಮಾತನಾಡಿದ ; ಹೇಳಿದ. (ನಾ). ೨. ಮಾತು ; ಹರಟೆ : ಪರಿಹಾಸ ಜಲ್ಪಿತಂಗಳಂ ಕೇಳುತ್ತಂ ಪೋಗಲ್ (ಕಾದಂಪೂ. ೦೦೦೦). [ಸಂ.]

**ಜಲ್ಮ** 'ಜನುಮ' ನೋ.

**ಜಲ್ಮಾಂತರ** (ನಾ). = ಜನ್ಮಾಂತರ: ಬಲ್ಮೆಯಿಂ ತನುವ ದಂಡಿಸಲು ಜಲ್ಮಾಂತರದೆ ಬಂದ ದುರಿತ ಜೀವನ ಬಿಟ್ಟು . . . ಪೋದಪುದೆ (ರಾಮವಿ. ೨೦-೦೦೮). [<ಸಂ. ಜನ್ಮಾಂತ]

**ಜಲ್ಲ$_1$** 'ಜಲ್ಲೆ$_1$' ನೋ.

**ಜಲ್ಲ$_2$** (ನಾ). ದೇಹದ ಕೊಳೆ ; ಒಣಗಿ ಮೈಗೆ ಅಂಟಿದ ಬೆವರು. 'ಜಲ್ಲ ಮಲ' ಪರಾ. [<ಪ್ರಾ. ಜಲ್ಲ]

**ಜಲ್ಲ$_3$** (ನಾ). ಒಂದು ಬಗೆಯ ತೆರಿಗೆ : ಅಲಂದೆಯ ಸ್ವಯಂಭು ಸೋಮೇಶ್ವರ ದೇವರ್ಗಾಳ್ವ ೧೨ರಡೂರ್ಗ್ಗಳಾ ಜಲ್ಲಂ ಕಳ್ಳವಳಿಕೆ ಸಾದಂ ಬಣ್ಣಿಗೆಯನೆ ಪರಿಹಾರಂ ಮಾಡಿ ಬಿಟ್ಟಂ (ಎಇ. XXVIII, ೫-೫೪ ; 1082). [?]

**ಜಲ್ಲಡಿ** 'ಜಲ್ಲಡೆ' ನೋ.

**ಜಲ್ಲಡೆ, ಜರಡಿ, ಜರಡೆ$_1$, ಜಲಡಿ, ಜಲಡೆ, ಜಲ್ಲಡಿ, ಝಲ್ಲಡಿ** (ನಾ). ಒನಲಿ ; ಒಂದರಿ ; ಚಾಳನಿ ; ಸಾರಣೆ : (ಈ). **ಜರಡಿ :** ಜರಡಿಯಲ್ಲಿ ಹಿಂಡಿ ಗಾಳಿಸಿ ಕಾಳಿನ ಹಿಟ್ಟನ್ನು ಅದರೊಡನೆ ಸೇರಿಸಿ ಕುದಿಸಬೇಕು (ಅಡುಶಾ. ೧೦೭) ; ಕಾಲನ ಜರಡಿಯಲ್ಲಿ ತೂರಿಹೋದದ್ದೆಷ್ಟೊ (ನಂಜುಂಡ. ೦೭). **ಜರಡೆ$_1$ :** (ಈ). **ಜಲಡಿ :** 'ಜಲಡಿನಲ್ಲಿ' ಪರಾ. **ಜಲಡೆ :** (ಈ). **ಜಲ್ಲಡಿ :** "ಚಾಲನೀ, ತಿತಉಃ–೨ ಜಲ್ಲಡಿ . . . ವಂದರಿ" (ಸಿದ್ಧಾಂತಿ. ೨೪೦); ಹಿಡಿಗೆ ಜಲ್ಲಡಿ ಪಂಚಪಾತ್ರ (ಸಿದ್ಧಕಾ. ೦೩-೪೪). **ಝಲ್ಲಡಿ:** ಝಲ್ಲಡಿಯ ನೆಳಲಂತೆ ಭವಸುಖ ತಲ್ಲಣಗೊಳಿಸುವುದು ನಿಶ್ಚಯವಲ್ಲ (ಹಸೂರ. ೨೨-೨೭).

**ಜರಡಿಯಾಡು** = ಕಾಳು ಅಥವಾ ಹಿಟ್ಟನ್ನು ಜಲ್ಲಡಿಯಲ್ಲಿ ಹಾಕಿ ಆಡಿಸು,–ಶೋಧಿಸು : ರಾಗಿ ಹಿಟ್ಟನ್ನು ಜರಡಿಯಾಡಿದ್ದೀಯಾ ? (ರೂಢಿ).

**ಜರಡಿಹಿಡಿ** = ಜರಡಿಯಾಡು : ಹಿಟ್ಟು ಜರಡಿ ಹಿಡಿ (ರೂಢಿ).

[ದೇ.॥ ತಮಿ. ಚಲ್ಲಟೈ ; ಮಲ. ಚಲ್ಲಡ ; ತೆಲು. ಜಲ್ಲೆಡ]

**ಜಲ್ಲಣ** (ನಾ). ಏಟು ; ಹೊಡೆತ (?) : ಪಲ್ಲಣೆಯ ಬೆಲ್ಲಂಗೋಲ್ವಿಲ್ಲನ ಮಲ್ಲಿಗೆಸರಲ ಜಲ್ಲಣಗೆ ತಲ್ಲಣಂಗೊಂಡು (ರಾಮಾಶ್ವ. ೭೩-೬) ; "ಒಂದು ಅನುಕರಣಧ್ವನಿ" (ರಾಮಾಶ್ವ. ಕೋಶ). [?]

**ಜಲ್ಲನೆ** (ಅ). ಇದ್ದಕ್ಕಿದ್ದಂತೆ ; ಥಟ್ಟನೆ ; ಬೇಗನೆ : ಜಲ್ಲನೆ[ಪಾಠಾಂ. ಛಲ್ಲನೆ] ತುಂಬಿಗಳ್ ಕೆದಱಿ ಬಂದುವು ಬಿಂಕದಿನಂಕದಾನೆಗಳ್ (ಕಬ್ಬಿಕಾ. ೨೦೩) ; ನೆರೆದ ಜನಂ ಕಲ್ಲೊಳಿಟ್ಟ ಕವಡಿಕೆಯ ರಾಶಿಯಂತೆ ಜ[ಪಾಠಾಂ. ಝ]ಲ್ಲನೆ ಕೆದಱಿ (ರಾಜಶೇ. ೭-೦೦ ವ) ; ಮೈಯೆಲ್ಲ ಜಲ್ಲನೇ ನವಿರೆದ್ದು ನಿಂತಿತ್ತು (ಕಎಪು. ೪-೩).

**ಜಲ್ಲಜಲ್ಲನೆ** (ದ್ವಿರುಕ್ತಿ) : ಕಲ್ಲವ್ವ ಮಾತಾಯಿ ಮೆಲ್ಲವ್ವ ರಾಗಿಯ ಜಲ್ಲಜಲ್ಲನೆ ಉದುರವ್ವ (ನಾಪದ. ೬೪). [ಜಲ್ + – ಅನೆ$_1$]

**ಜಲ್ಲಮಲ** (ನಾ). = ಜಲ್ಲ$_2$ : ಉಲ್ಲಾಘತೆಯಿಂ ರೋಗಿಗಳೆಲ್ಲಂ ತಳೆವಲ್ಲಿ ಗೌಷಧಂ ಸ್ವತನುಭೃತಂ ಜಲ್ಲಮಲಮಾದುದೆನೆ ಮುನಿವಲ್ಲಭನಾ ಸಕಳ ಸತ್ತ್ವ ಹಿತಕರನಾದಂ (ಚಂದ್ರಪು. ೦೪-೩೬) ; ತನುವಿನೊಳಾದ ಜಲ್ಲಮಲಮಾಭರಣಂ ಪುಲಿಯಿರ್ಪುದೊಂದು ಕಾನನದ ಗುಹಾಂತರಂ ಮನೆ (ಜೀವಸಂ. ೫೦-೨೨). [ಜಲ್ಲ$_2$ + ಮಲ$_3$]

**ಜಲ್ಲರಿ$_1$, ಜಲ್ಲಳಿ, ಜಲ್ಲಱಿ, ಝಲ್ಲಳಿ, ಝಲ್ಲಱಿ** (ನಾ). ೧. ಕಂಚ್ಚು ; ಗೊಂಡೆ; "ಜಲ್ಲರಿ[ಪಾಠಾಂ. ಳಿ, ಱಿ]ಯೆಂದು ಝಲ್ಲರಿ" (ಕಶಸಾ. ೨೮-೫೯೫) ; ದೃಗ್ಸರ ಚಪಲಗತಿಯಶ್ವಗಳ ನಿಱಿಗುರುಳ ಜಲ್ಲರಿಯ ಭರದ ವೇಣೀಧ್ವಜದ (ಜೀವಂಚ. ೮-೪೦) ; ಮುತ್ತಿನ ಜಲ್ಲರಿಯಿಂ ಪುಷ್ಪಪರಾಗದ ಪೊಸಂತಿಲಿಂ (ರಾಮಾಶ್ವ. ೫೪-೨೨). ೨. ಒಂದು ಬಗೆಯ ಚರ್ಮವಾದ್ಯ ; ಹುಡುಕ್ಕ ವಾದ್ಯ ; ಬುಡಂಬುಡುಕೆ : ಅಡಿ ವೇತ್ರಾಸನದಂತಿರೆ ನಡು ಜ[ಪಾಠಾಂ. ಝ]ಲ್ಲರಿಯಂತೆ ಮೇಗು ಮುರಜ(ವ)ದ ತೆಱದಿಂದೆಡೆವಿಡದೆ ಮೂಱು

ಲೋಕವಮುಮೊಡನನಿಲತ್ರಯದೆ ಸುತ್ತಿ ನಿಂದತ್ತೆತ್ತಂ (ಜೀವಸಂ. ೯೪-೧).

**ಜಲ್ಲಳಿ :** ೨. "ಜಲ್ಲಳಿ–ಝಲ್ಲರಿ=ವಾದ್ಯ ವಿಶೇಷ" (ತದ್ಭಕೋ. ೧೪).

△**ಜಲ್ಲಟಿ :** ೧. "ಜಲ್ಲಟಿಯೆನೆ ಜಲ್ಲರಿಯಕ್ಕು" (ಕವಿಕಂ. ೨೪೦); ಝಲ್ಲರಿ. ಜಲ್ಲಟಿ; ಪುರಿಚಂ, ಮೆಟಿಸು (ಶಬ್ದಾನು. ೧೪೦ ವ್ಯಾಖ್ಯಾ).

**ಝಲ್ಲಳಿ :** ೧. ಚಾಮರದ ಸುತ್ತು ಝಲ್ಲಳಿ[ಪಾಠಾಂ. ರಿ]ಯ ನೆತ್ತಿಯ ಬೆಳ್ಗೞಿಯ . . . ತರಂಗೊಂಡ ತುರಗಸಂಘಾತದಿಂ (ರಾಜಶೇ. ೬-೧೧ ವ). ೨. "ಝಲ್ಲಳಿ (ಜಲ್ಲಳಿ)–ಝಲ್ಲರೀ=ಒಂದು ವಾದ್ಯ" (ತದ್ಭಕೋ. ೧೬); ಪಲ್ಲವ ಸತ್ತಿಗೆ ಸಂಕಂ ಝಲ್ಲಳಿ ಜಯಮಂಗಲಂಗಳಂ ಚೋಳ ಮಹೀವಲ್ಲಭ ನಿತ್ತಡೆ (ಎಇ. VI, ೨೧೬-೧೦ ; 1057); ಪಿರುತ್ತಿರುವ ಬೊಂಬುಳಿಯ ಝಲ್ಲಳಿಯ ಸಬಳಗೆಜ್ಜೆಗಳ, ತಳಾರಗೋಲ ಗಗ್ಗರಿಗಳ, ಬಾಜಣೆ(ಮಂತ್ರ.ಶ. ೩೦-೫). △**ಝಲ್ಲಟಿ :** ೨. ರೇಫಕ್ಕೆ–ಕೂರಂ–ಕೊಟ್; ಝಲ್ಲರಿ–ಝಲ್ಲಟಿ (ಶಮದ. ೨೦ ಪ್ರಯೋ); ಜಯಘಂಟೆ ಝಲ್ಲರಿಯದಾದೇಶವಾಳೆ ಝಲ್ಲಟಿಯಾದುದು (ಸಂಜೀವ. ೨೦).

[ <ಸಂ. ಝಲ್ಲರೀ./ತಮಿ. ಚಲ್ಲರಿ ]

**ಜಲ್ಲರಿ₂** (ನಾ). ಬಿದಿರಿನ ಬುಟ್ಟಿ ; ಜಲ್ಲಿ : ಸಾವಿರಾರು ಹೋಳಿಗೆಗಳಿಗೆ ಸಾಲುವ ಜಲ್ಲರಿ ಮಾರುತಿಯ ಸಮೀಪದಲ್ಲಿಯೇ ವಿರಾಜಮಾನವಾಗಿತ್ತು (ಹಬ್ಬಿಬ. ೫). [ <ಜಲ್ಲಿ₃ ]

**ಜಲ್ಲಳಿ** 'ಜಲ್ಲರಿ₁' ನೋ.

△**ಜಲ್ಲಟಿ** 'ಜಲ್ಲರಿ₁' ನೋ.

**ಜಲ್ಲಿ₁** 'ಚಲ್ಲಿ₁' ನೋ.

**ಜಲ್ಲಿ₂, ಜೆಲ್ಲಿ₁, ಝಲ್ಲಿ₁** (ನಾ). ೧. ಕಂಚುಟ್ಟ ; ಗೊಂಡೆ ; ಚೌರಿ : ಪುಷ್ಪಸರದ ಜಲ್ಲಿಯುಂ[ಪಾಠಾಂ. ಕನ್ನಡಿ]ಕಮಳದ ಎಲೆಯಾಲವಟ್ಟ(ಹಜಕಾ. ೩-೪೫); ಹಳದಿಯ ತೋಳ ಪಾವಡೆ ಹೀಲಿಯ ಜಲ್ಲಿ ಬೆಳಗಿಡುವಾಭರಣಗಳ (ಕಂನವಿ. ೧೨-೩೬); ಸಾಲಿಡಿದು ತೊಡರ್ಚಿದ ಜ[ಪಾಠಾಂ. ಝ] ಲ್ಲಿಗಳ ಕೀಲಿಸಿದ ಪೊನ್ನ ಬಿಂಗಾರಿಗಳ (ರಾಜಶೇ. ೮-೫ ವ). ೨. ಆನೆ, ಕುದುರೆ ಮೊದಲಾದುವುಗಳಿಗೆ ತೊಡಿಸುವ ಒಂದು ಆಭರಣ (?) : ಕಲಾಬತ್ತಿನ ಕೆಲಸದ ಆನೆ ಜೀನು ಮೈಲಾರ ಜಲ್ಲಿ (ಎಕ. XIV, ನಂಜನ. ೨೯೨-ಪು. ೧೪೨ ; 1847). **ಜೆಲ್ಲಿ₁** : ೧. ಬೆಳುಮುಂಗಿಲೆದ್ದಂತೆ ಗಳೆಯ ತುದಿಯ ಜೆಲ್ಲಿ ಥಳಥಳಿಸುವ ದೇವನಡಿಯ ಬಳಸಿ ಕಾವೇರಿ ಕಾಲುವೆಯುಂ ಪತಾಕೆಯುಂ ಪೊಳೆವ ಸಾಲೊಡ್ಡು ಮೆರೆದವು (ಸೌಂದಕಾ. ೫-೩೩). **ಝಲ್ಲಿ₁** : ೧. ವರ್ಗ ಚತುರ್ಥಾಕ್ಷರಂಗಳ್ಗೆ–ಘಳಿಯಂ . . . ಝಾಳಿಸಿತು, ಝಳಪಿಸಿತು, ಝಲ್ಲಿ (ಶಮದ. ೧೫ ಪ್ರಯೋ); ಕನ್ನಡಿ ತೋರಣಾವಳಿ ವಿಳಿರ್ವ ಝಲ್ಲಿ ಪತಾಕ ಝಲ್ಲರಿ (ಸನತ್ಕು. ೧೨-೫೭): ನೆಗಳ್ದುವಲ್ಲಲ್ಲಿ ನಾನಾ ಪಟ್ಟೆ ಝಲ್ಲಿ ಕನ್ನಡಿ ಕಳಸದಿಂ ನಿಳಯ ನಿಳಯದ ಮುಂದೆ ಬಲ್ಗುರುಜುಗಳ್ (ಚಬಪು. ೫-೨). ೨. ತುರಗ ದಂಡಕೆ ಬಲು ಝಲ್ಲಿಯ ಕಟ್ಟಿದ ಬಿರುದುಳ್ಳ ರಾವುತ ನಿಮ್ಮ ಹಿರಿಯಯ್ಯ (ಕುರಾಸಾಂ. ೧-೭೦); ಇಕ್ಕಿದ ಪಕ್ಕರಕ್ಕೆ ನಿಡುಝಲ್ಲಿ ತೊಡಂಕುವ ತೋರ ಗೊಂಡೆಯಂ (ಚಕವಿ. ೨-೯೬). ೩. ಚಾಮರ : ಪೀನಪೂರ್ಣ ಘಟೋದಕದಲಿ ನವೀನ ಝಲ್ಲಿಗಳಿಕ್ಕಿ ತೋದವಧಾನದಲಿ ಬೀಸಲ್ಕೆ ಜಲಕಣ ಕೆದಲಿದಾ ಸಭೆಗೆ (ಸನತ್ಕು. ೧೬-೩೦).

**ಜಲ್ಲಿಯ ಬಿಲ್ಲು** = ಕೊಪ್ಪಿಗೆ ಕಂಚುಟ್ಟ ಕಟ್ಟಿದ ಬಿಲ್ಲು : ಜವದಾಡೆ ಜಲ್ಲಿಯ ಬಿಲ್ಲು ಕೈಗತ್ತಿಯ ಬವರಿಗರತಿಹರುಷದಲಿ . . . ಸುವಿಲಾಸದೊಳೊಪ್ಪಿಹರು (ಕಂನವಿ. ೧೧-೦೪೬): ಜಲ್ಲಿಯಬಿಲ್ಲವರು ಸಲ್ಲಿಸುತಲೆಲ್ಲವನು (ಸರ್ವಜ್ಞ. ೧೦೪೮). **ಜಲ್ಲಿಯ ಮೃಗ, ಝಲ್ಲಿಯ ಮೃಗ** = ಜಲ್ಲಿಮಿಗ : ಗೆಲ್ಲವಟಿಯ ಗತಿಗೋಲಾಡಿ ಬಂದರು ಜಲ್ಲಿಯ ಮೃಗ ಬೆಚ್ಚಿದಂತೆ(ಭರಜ. ೨೩-೨೦); ಝಲ್ಲಿಯ ಮೃಗಗಳ ಗಲ್ಲಿಸಿ ಪಿಡಿಯುತ್ತ . . . ವಿಪಿನದೊಳು (ಹಮಜ. ೧೬). [ ದೇ. ॥ ತಮಿ. ಚಲ್ಲಿ ; ತೆಲು. ಜಲ್ಲಿ ]

**ಜಲ್ಲಿ₃, ಜಲ್ಲೆ₂, ಜೆಲ್ಲಿ₂** (ನಾ). ಬಿದಿರಿನ ದೊಡ್ಡ ಬುಟ್ಟಿ : ಕನ್ನಡ ರಸಿಕರ ಪಂಕ್ತಿಗೆ ಬಡಿಸಲು ನಮ್ಮನ್ನು ಕರೆದು ಈ ಪಕ್ವಾನ್ನದ ಜಲ್ಲಿಯನ್ನು ಕೈಗಿತ್ತು (ಪಾಣಿ. ೧, ನಿವೇದನೆ); ಒಮ್ಮೆ ನಮ್ಮ ಮನೆಯಲ್ಲಿ ಮೂರು ಜಲ್ಲಿ ತುಂಬ ನೀರಲಹಣ್ಣುಗಳನ್ನು ಇಡಲಾಗಿತ್ತು (ಸ್ಮೃತಿಚಿ. ೧೮). **ಜಲ್ಲೆ₂** : ಮತ್ತು ವಯ್ಯೂರ್ವರ್ಪ ಬಾಡುಕಾಯ ಮಾಡುವ ಜಲ್ಲೆಗೆರಡು ಸೂಡು ಹೇಜಂಗೆ ನಾಲ್ಕುಕಾಯ ಕೊಟ್ಟರ್ (ಮುಂಬರಾ. X, ೨೭೦-೬೫: 1229); ಜಲ್ಲೆ ಹಿಡಿದು ಕಣಕಣವನ್ನೂ ತಿರುಗಿ ಹುಲ್ಲು ಹೊಟ್ಟು ಎತ್ತಿ ಬಣವೆ ಹಾಕಿಕೊಂಡಿದ್ದಾನೆ (ಬೆಳುಮ. ೮೬). **ಜೆಲ್ಲಿ₂** : "ಬುಟ್ಟಿ, ಪುಟ್ಟಿ, ಜೆಲ್ಲಿ, ಕೆರಸಿ" (ಕಂನುಹು. ೮೮).

[ ದೇ.॥ ತೆಲು. ಜಲ್ಲ ]

**ಜಲ್ಲಿ₄** 'ಜಲ್ಲೆ₁' ನೋ.

**ಜಲ್ಲಿ₅, ಜೆಲ್ಲಿ₃** (ನಾ). ೧. ಚರ್ಮ ಅಥವಾ ಮೂಳೆಯನ್ನು ಬೇಯಿಸಿ ತಯಾರಿಸಿದ ಒಂದುಬಗೆಯ ಪಾಕ: ಕಾಯಿಲೆಬಂದಾಗ . . . ಬೆಲೆಯಾದ ಚರ್ಮ ಮತ್ತು ಎಲುಬುಗಳನ್ನು ಬೇಯಿಸಿ ತಯಾರಿಸಿದ ಜಲ್ಲಿಯನ್ನೋ ಕೊಂಡು ಉಪಯೋಗಿಸುತ್ತಾರೆ (ಪ್ರವಾಇ. I, ೨೮೮). ೨. ಮೆತ್ತಗಿರುವ, ಪಾರದರ್ಶಕವಾದ ಒಂದು ಬಗೆಯ ಮೀನು; **ಲೋಳೆಮೀನು** : ಶಂಖ ಅಥವಾ ಎಲುಬುಗಳಿಲ್ಲದ ಜಲ್ಲಿಯಂತಹ ಮೆತ್ತಗಿನ ವಸ್ತುಗಳೆ ಭೂಮಿ ತಣ್ಣಗಾದ ಕೂಡಲೆ ಹುಟ್ಟಿದ ಜೀವವುಳ್ಳ ಮೊದಲನೆ ಪದಾರ್ಥಗಳೆಂದು ತೋರುತ್ತದೆ (ಮತಂಓ. ೧೪). **ಜೆಲ್ಲಿ₃**: ೩.ಹಣ್ಣಿನಿಂದ ತಯಾರಿಸಿದ ಪಾಕ: ಪೇರಳೆ ಜೆಲ್ಲಿ . . . ಜೆಲ್ಲಿಯ ಪಾಕ ಸರಿಯಾಗುವವರೆಗೆ ಕುದಿಸುವುದು (ಆಡುಸೌ. ೧೦೮). [ ←ಇಂ. Jelly ]

**ಜಲ್ಲಿಕಲ್ಲು** (ನಾ). ರಸ್ತೆ ಮೊದಲಾದುವನ್ನು ಗಟ್ಟಿಮಾಡುವುದಕ್ಕಾಗಿ ಹಾಕುವ ಸಣ್ಣ ತುಂಡಂ ಕಲ್ಲು,–ಕಲ್ಲಿನ ಚೂರು : ಮಾರ್ಗಕ್ಕೆ ಹಾಕಿದ ಜಲ್ಲಿಕಲ್ಲಿನ ಘರ್ಷಣೆ ಅವಳ ಪಾದದಡಿಗೆ ಸಹಿಸದಾಯಿತು (ರಕ್ತರೂ. ೬೦); ಜಲ್ಲಿಕಲ್ಲುಹಾಕಿ ದಮ್ಮಸು ಮಾಡಿದ ರಸ್ತೆಯಾದರೂ ಒಂದೊಂದು ಕಡೆ . . . ಒರಟೊರಟಾಗಿತ್ತು (ಸಾಹೇಬ್. ೬೬).

[ ಜಲ್ಲಿ₁ (<ಚಲ್ಲಿ₁) + ಕಲ್ಲು (<ಕಲ್₃) ]

**ಜಲ್ಲಿಕಾಗದ** (ನಾ). ನಾಜೂಕಾದ ವಸ್ತುಗಳನ್ನು ರಕ್ಷಿಸುವುದಕ್ಕಾಗಿ ಉಪಯೋಗಿಸುವ ನವುರಾದ ಕಾಗದ,–ಪೊರೆಯಂತಹ ಕಾಗದ : ಜಲ್ಲಿಕಾಗದದಲ್ಲಿ ಓಲೆಯನ್ನು ಸುತ್ತಿಡು (ರೂಢಿ). [ ಜಲ್ಲಿ₅ + ಕಾಗದ ]

**ಜಲ್ಲಿಗಾರೆ** (ನಾ). "ಕಟ್ಟಡದಲ್ಲಿ ಉಪಯೋಗಿಸುವ ಜಲ್ಲಿಕಲ್ಲು, ಸಿಮೆಂಟು, ಮೊ.ಗಳ ಸಂಮಿಶ್ರಣ; ಜಲ್ಲಿಗಾರೆ" (Concrete. ಇಂಕಪಿ).

[ ಜಲ್ಲಿ₁ (<ಚಲ್ಲಿ₁) + ಗಾರೆ₁ ]

**ಜಲ್ಲಿದುಂಬಿ** (ನಾ). ಚಿಕ್ಕದುಂಬಿ; ಮರಿದುಂಬಿ; ಪರಮೆಯಂಮರಿ : ಅಲ್ಲಿ ಗಲ್ಲಿಗೆ ಜಾಜಿ ಸುರಹೊನ್ನೆ ಸಂಪಗೆ ಮಲ್ಲಿಗೆ ಹೊಗರೇಱುದುವು ಜಲ್ಲಿದುಂಬಿಗಳ ಝುಂಕಾರಕೆ ಮುನಿಜನ ಡಿಳ್ಳಿಸಿತೇನ ಹೇಳುವೆನು (ಮೋಹತ. ೭-೧೦).

[ ಜಲ್ಲಿ₁ (<ಚಲ್ಲಿ₁) + ತುಂಬಿ₁ ]

**ಜಲ್ಲಿಪಟ್ಟೆ, ಝಲ್ಲಿಪಟ್ಟೆ** (ನಾ). ಅಂಚುಗಳಲ್ಲಿ ಕುಚ್ಚುಗಳುಳ್ಳ ಮೇಲ್ಕಟ್ಟಿನ ರೇಷ್ಮೆಬಟ್ಟೆ : ಷಡಂಗಂಗಳೆಂಬ ಮೊಳೆಗಳಂ ಬಲಿದು ಸಪ್ತಧಾತುವೆಂಬ ಜ[ಪಾಠಾಂ.ಝ]ಲ್ಲಿಪಟ್ಟೆ [ಪಾಠಾಂ.ಟ್ಟ]ಯನಲಂಕರಿಸಿ (ಅವಚಂ.೩೬೧-೧೦೦೬): ನೀಲದ ರನ್ನದ ಸುತ್ತ ಮೆಱೆವ ಲಂಬಣಗಳ ಮೊತ್ತಕಟ್ಟಿದ ಜಲ್ಲಿಪಟ್ಟೆ ರಾಜಿಸಲ್ (ಕುರಾಸಾಂ. ೨೦-೧೧); ಮೇಲುವರಿವ ಜಲ್ಲಿಪಟ್ಟೆಯ ಮೇಲ್ಕಟ್ಟು ಸಾಲುಗೊಂಡೆಸೆವ ಪೂಮಾಲೆ (ಕಂನವಿ. ೨೨-೬೨). **ಝಲ್ಲಿಪಟ್ಟೆ**: ನೆಲನಗಲದೊಳು ಝಲ್ಲಿಪಟ್ಟೆಯ[ಪಾಠಾಂ. ದಲಿ] ಕಟ್ಟಿ ಕೇರಿಯನಳವಡಿಸಿದರು (ಕುವ್ಯಾವಿ. ೧೦-೪೪); ಸಿಂಗರಿಸಿದ ಝಲ್ಲಿಪಟ್ಟೆ ಪೂಮಾಲೆ ಬೆಡಂಗಾದ ಮಂಟಪದಲ್ಲಿ . . . ವಸಂತರಾಜಂಗೆಸೆಯಾದನಾ ಸೊಬಗಾ (ಭರಜ. ೧-೨೮).

[ ಜಲ್ಲಿ₂ + ಪಟ್ಟೆ₂ ]

**ಜಲ್ಲಿಬೇರು** (ನಾ). ಕೋಮಲವಾದ ಎಳೆಯ ಬೇರು; – ಚಿಕ್ಕಬೇರು : ನೀರು ಹೆಚ್ಚಾದರೆ ಜಲ್ಲಿಬೇರು ಕೊಳೆತುಹೋಗುತ್ತವೆ (ತರಬಿ. ೬).
[ ದೇ.॥ ತಮಿ. ಚಲ್ಲಿವೇರ್ ; ತೆಲು. ಜಲ್ಲಿವೇರು ]

**ಜಲ್ಲಿಮಿಗ, ಝಲ್ಲಿಮಿಗ** (ನಾ). ಬಾಲದಲ್ಲಿ ಕುಚ್ಚುಳ್ಳ ಒಂದು ಬಗೆಯ ಪ್ರಾಣಿ ; ಚಮರೀಮೃಗ : ಪೊದಱಿದ್ದ ಜಲ್ಲಿಮಿಗ ಕಾಳ್ಕೋಣ . . . ಮೆಱೆದವದ್ರಿಯಲ್ಲಿ (ಪ್ರಹ್ಲಾಚ. ೪–೧೩); ಎಳ್ತರದ ಕುರುಳ್ಗಳಂ ಪರೆಪಿ ಜಲ್ಲಿ ಮಿಗಕ್ಕೆ ವರಾಹಯೂಥಮೆಳ್ತರೆ ಮಣಿಕಾಲ್ಗಳಂ ಮಡಿದು ತೋಱಿದ ರೊಯ್ಯನೆ ಸನ್ನೆವೇಂಟೆಯೊಳ್ (ಶಬಶಂ. ೩–೪೭). **ಝಲ್ಲಿಮಿಗ :** ಮರೆ ಹುಲ್ಲೆ ಝಲ್ಲಿಮಿಗ ಮುಸು ತೋಳಗಳಿರಲೊಪ್ಪಿತಾ ಕಾಡು (ಶ್ರೀಪಾಲ. ೭–೧೬). [ ಜಲ್ಲಿ$_2$ + ಮಿಗ ]

**ಜಲ್ಲಿಮೃಗ, ಝಲ್ಲಿಮೃಗ** (ನಾ). = ಜಲ್ಲಿಮಿಗ : ಜಲ್ಲಿಮೃಗ ವೀಥಿಯಂ ಕಸ್ತೂರಿಯ ವೀಣೆಯುಂ ಚೆಲ್ಲಿರ್ದ ಸಾಮಜದ ಮಸ್ತಕದ ಮುತ್ತಿನಿಂ (ಲಿಂಗಪು. ೬–೦೯). **ಝಲ್ಲಿಮೃಗ:** ಝಲ್ಲಿಮೃಗ ಜಮ್ಬಾಜಿಮೃಗವು . . . ಪಕ್ಷಿಗಳು ಗುಂಪುಗುಂಪಾಗಿ ಯಿನ್ನು ಲಕ್ಷ ಲಕ್ಷವು ಯಿಹವು (ಯನಳ. ೭೦) ; ಕಪಿಲೆ ಗೂಳಿಗಳೆರಳೆಯು ಹರಿಣ ಸಾರಂಗ ಝಲ್ಲಿಮೃಗವೂ(ನವಮೋ. ೮–೧೦).
[ ಜಲ್ಲಿ$_2$ + ಮೃಗ ]

**ಜಲ್ಲಿಸು$_1$** (ಕ್ರಿ). ೧. ಜಲ್ಲಡಿಯಲ್ಲಿ ಹಾಕಿ ಶೋಧಿಸು ; ಜರಡಿ ಹಿಡಿ ; ಒಂದರಿಯಾಡು : ಹಿಟ್ಟು ಜಲ್ಲಿಸುವ ಸಾಣಿಗೆಯಲ್ಲಿ ಹಾಕಿ ಜಲ್ಲಿಸಿದರೆ (ಕೃಷಿಪ್ರ. ೬೯). ೨. (ಅಲಂ) ಕೊಲ್ಲು; ಸಂಹರಿಸು : ಕಟ್ಟಿದಿರ ಪುಲಿಯಂ ತೊಟ್ಟನೆ ಕಂಡು ಭೋಂಕನೆಳ್ದು . . . ಪಾಯ್ದು ಪೊಯ್ದು ಕೋಡಿಟ್ಟು ಜಲ್ಲಿಸಿ ಬಿಸುಟಟ್ಟು . . . ಪಲವೋತ್ಕರದಿಂ ಪೊಱಮಟ್ಟು ಕಾಳರಕ್ಕಸರಂತಿರ್ಪ ಕಾಳ್ಕೋಣಂಗಳಿಂ (ಧಿರಿಶ. ೧–೦೨೮ ವ). [ ←ತೆಲು. ಜಲ್ಲಿಂಚು ]

**ಜಲ್ಲಿಸು$_2$** (ಕ್ರಿ). ಹೊಳೆ ; ಪ್ರಕಾಶಿಸು : ಚಕ್ರಿ ಸಲ್ಲಲಿತಾತ್ಮಭಾವಕನು ಜಲ್ಲಿಸುತಿದ್ದುದು ತನುಕಾಂತಿಯದಱಿಂದಲಲ್ಲವೆ ಧ್ಯಾನಸಾಮರ್ಥ್ಯ (ಭರಚ. ೫೦–೬೫). [ <ಜಲ$_1$ + –ಇಸು$_3$ ]

**ಜಲ್ಲಿಱ್** (ಕ್ರಿ). ಜಲ್ಲೆಂದು ಸೂಸು, – ಹರಡು, – ಚೆಲ್ಲು : ಮತ್ತಮತಂಗ ಮದಂಗದೊಳೊಜ್ಜರಿಸುತ್ತ ನೆಲಕೆ ಜ[ಪಾಠಾಂ. ಜ]ಲ್ಲಿಱಿದುಗುತಹ ಬಿಸು ನೆತ್ತರ ಪೊನಲೆಸೆದುದು (ಜಯುಕಾ. ೭–೨೨); ಉಗುಳ್ವಾ ಸೀರ್ಪನಿ ಸಿರಿಮೊಗದಿಂ ಸೂಸಿತು ಮೃಗಲಕ್ಷ್ಮೋದರದಿಂ ಜನಿಯಿಸಿ ಜಲ್ಲಿಱಿವೆಳಗದಿರ್ದೊಂಗಲಿ ವೆಂಬಂತೆ (ಜಯುಕಾ. ೧೦–೨೨). [ ಜಲ್ + ಇಱ್$_1$ ]

**ಜಲ್ಲು$_1$** (ಕ್ರಿ). ಕುಟ್ಟು ; ಪುಡಿಮಾಡು (?) : ಕರಿಯ ಎಳ್ಳು ಹುಣಿಸೆ ಅಂಕೋಲೆ ಅವರೆ ಇವಱ ಜಲ್ಲಿ ಅಂಬಿಲದಲ್ಲಿ ಅರೆದು ಕುಡಿಸಿ ಶಾಖವ ಮಾಡುವುದು (ಅಶ್ವಟೀ. ೧೧೦–೪). [ ? ]

**ಜಲ್ಲು$_2$** 'ಜಲ್ಲೆ$_1$' ನೋ.

**ಜಲ್ಲು$_3$** 'ಜೊಲ್ಲು' ನೋ.

**ಜಲ್ಲು$_4$, ಝಲ್ಲು$_2$** (ನಾ). ೧. ಸಂಕೋಚ : ನಿನ್ನಿಷ್ಟವಂ ನಿಲ್ಲದಿತ್ತಪೆನು ಕರಿಮುಖನಾಣೆ ನಿನ್ನೆದೆಯ ಜಲ್ಲಳಿದು ಪೊಲಿಯೆಂದು ಕಲ್ಲಣಾಗಿ ನುಡಿಯಲ್ಕೆ (ಪ್ರಾಥರಾ. ೬–೫೪) : ಆ ಸಪ್ಪಳದ ಗೊಂದಲದಲ್ಲಿ ಜಲ್ಲು ಬಿಟ್ಟು ಕೆಮ್ಮಲು ಅವಕಾಶ ಸಿಕ್ಕಿತೆಂದು . . . ಸಡಿಲು ಬಿಟ್ಟು ಜೋರಾಗಿ ಕೆಮ್ಮುತ್ತಾನೆ (ಜೀನಬಾ. ೦೫). ೨. ಚಿಂತೆ : ಮಗನ ಜಲ್ಲು ಹತ್ತಿ ಇಷ್ಟು ಲಗೂ ತೀರಿ ಕೊಂಡ ಸಾವುಕಾರ (ನೀನಮು. ೧೨೭). **ಝಲ್ಲು$_2$ :** ೩. ಗಾಬರಿ ; ಭಯ : ಖುಲ್ಲ ಮನುಜಬರಿ ಝಲ್ಲಿನೊಳೇನ್ ಫಲ (ರತ್ನಕಾ. ೨೩). 'ಝಲ್ಲುಗೊಳ್' ಪರಾ. [ ? ]

**ಜಲ್ಲುಗೋಡಿ** (ನಾ). "ಕೆರೆ ತುಂಬಿ ನೀರು ಕೋಡಿಯ ಮೇಲಿಂದ ಕೆಳಕ್ಕೆ ತೆಳ್ಳಗೆ ಬೀಳುವುದು" (ನನ್ನೂರು. ಟಿಪ್ಪಣಿ) : ಕೆರೆ ತುಂಬಿ ಜಲ್ಲು ಗೋಡಿ ಬಿದ್ದಿತ್ತು (ನನ್ನೂರು. ೦೪೦). [ <ಜಲುಗು + ಕೋಡಿ$_1$ ]

**ಜಲ್ಲುಪಾಗು** (ನಾ). ಒಂದು ಬಗೆಯ ಪಾಗು, – ರುಮಾಲು : ತುಂಡು ಚೊಗೆಯುಂ ತೊಟ್ಟು ಜಲ್ಲುಪಾಗಂತಿಂತು ಸುತ್ತಿಕೊಂಡು (ಅಪ್ಪಾಜಿವಿ. ೩೧–೩೭),
[ ಜಲ್ಲು ? + ಪಾಗು$_2$ ]

**ಜಲ್ಲೆ$_1$, ಜಲ್ಲ$_1$, ಜಲ್ಲಿ$_4$, ಜಲ್ಲು$_2$**(ನಾ). ೧. ಗಳೆ; ಕೋಲು: ಕಬ್ಬಿನ ಜಲ್ಲೆಯು ಸ್ವಲ್ಪ ಹೆಚ್ಚು ಕಡಿಮೆ ಮೊಳ ಅಜಮಾಸು ಬೆಳೆಯುವದು (ಕೃಷಿಪ್ರ. ೧೫೨); ಕಬ್ಬಿನ ಜಲ್ಲೆಯನ್ನು ತುಂಡು ತುಂಡಾಗಿ ಕತ್ತರಿಸಿ (ವ್ಯವಮ. ೪೮) : ಒಂದು ಕಬ್ಬಿನ ಜಲ್ಲೆ ಹಿಡಿದುಕೊಂಡು ಹೋದರೆ ಯಜಮಾನನಿಗೆ ಬಲು ಸಂತೋಷ (ಹುಟ್ಟಿಹ. ೨೪). ೨. ದೋಣಿ ಮೊದಲಾದುವನ್ನು ನಡಸುವಾಗ ಹುಟ್ಟು ಹಾಕುವ ಕೋಲು ; ಹುಟ್ಟು : ಜಲ್ಲೆಯ ಹಿಡಿದು ಎಲ್ಲೆಯ ಹಾಯಿಸುವನಂತೆ ಇವರೆಲ್ಲರು ಬಲ್ಲರೆ (ಮೋಳಿಮಾ. ೪೦–೧೬೮) ; ನಾನು ಜಲ್ಲೆ ಊರಿ ಲಂಗರು ಬಿಟ್ಟು ದೋಣಿ ನಿಲ್ಲಿಸುತ್ತೇನೆ (ಮೃಲಿಮೂ. ೫೩) ; ಜಲ್ಲೆಯನ್ನು ಹಿಡಿದು . . . ಬಾಲಿಕೆಯೊಬ್ಬಳು ಹರಿಗೋಲನ್ನು ನಡೆಸು ತ್ತಿದ್ದಳು (ಶ್ರೀರಾಯ. ೨). **ಜಲ್ಲ$_1$:** ೨. ದೂಮ ಪೂಜಾರಿ ಜಲ್ಲ ಬೇಗ ಬೇಗನೇ ಒತ್ತುವುದಕ್ಕೆ ಆರಂಭಿಸಿದ (ಕಳರು. ೯೯). **ಜಲ್ಲಿ$_4$ :** ೧. ಜಡಿದ ಕಬ್ಬಿನ ಜಲ್ಲಿಗಳ ಕನ್ನಡಿ ಕಳಸ ಪೊಂಬಾಳೆ ಪಲ್ಲವವಿಡಿದು ಸಿಂಗರವಾಗಿ (ಶಂಕರದಾ. ೫–೨೫). **ಜಲ್ಲು$_2$ :** ೨. ಜಲ್ಲು ತಗಲದಾಳವೆಲ್ಲಿ ಒಡವೋಡಿತು (ಗಿಳಿವಿಂ. ೭೮–೮೩) ; ಒಡಕು ದೋಣಿಗೆ ಗಿಡ್ಡ ಜಲ್ಲು (ಗಾದೆ).
[ ದೇ.॥ ಮಲ. ಚಲ್ಲ ; ತುಳು. ಜಲ್ಲ, ಜಳ್ಳ ; ಕೊಡ. ಜಲ್ಲೆ ]

**ಜಲ್ಲೆ$_2$** 'ಜಲ್ಲಿ$_3$' ನೋ.

**ಜಲ್ಲೆಗೋಡು** (ನಾ). (ಜಲ್ಲೆಯಂತೆ) ಉದ್ದವಾದ ಕೋಡು, – ಕೊಂಬು: ಜಲ್ಲೆಗೋಡಿನ ಬಸವ ಇಲ್ಲೇಕೆ ನೀವು ನೆಲೆಸಿದಿರಿ (ಜಗೀತ. ೯೦):
[ ಜಲ್ಲೆ$_1$ + ಕೋಡು$_5$ ]

**ಜಲ್ಲೆನ್, ಜಲ್ಲೆನ್ನು** (ಕ್ರಿ). ಭಯದಿಂದ ಹೃದಯದ ಬಡಿತ ಹೆಚ್ಚಾಗು: ಎದೆ ಹೊಡೆದುಕೊಳ್ಳು ; ಗಾಬರಿಯಾಗು : ಭ್ರಮೆಗವಿದೆದೆಗಳುಱೆ ಜ[ಪಾಠಾಂ. ಝ]ಲ್ಲೆನುತ್ತೇಗುವೆನೆನುತ್ತಂ ತನುಗಳ್ ಸೆಗಳು ಧಿಗಿಲು ಧಿಗಿಲೆನುತ (ಬಸವು. ೯–೩) ; ಇಕ್ಕೆಲದೊಳಿರ್ದ ಮುಗ್ಧೆಯರ್ ಜಲ್ಲೆನುತ ಕೆಟ್ಟೋಡೆ (ಜೀರಮ. ೨–೩೨). **ಜಲ್ಲೆನ್ನು:** ಅಲ್ಲದವರ ತಡವಿ ,ಜಲ್ಲೆಂದು ನನ ಮನವ ಕಲ್ಲಾಗ ಕಡ್ಲಿ ಬಡಿದ್ಹಾಂಗ (ಕನ್ನಜಾ. ೦೦೦).

ಜಲ್ಲನೆ = ಒಮ್ಮೆಂದೊಮ್ಮೆಲೆ ; ಇದ್ದಕ್ಕಿದಂತೆ ; ರಭಸವಾಗಿ : ಆದಱ ಕರ್ಣಚಮರದ ಝಲ್ಲಿಯಂತೆ ಜಲ್ಲನೊಳ್ಕಿ ಧಾರೆಗೆದಱಿ ಪೇರ್ಬೆಸಿ ಸೂಸುವುಭಯಕಟದ ಸೊರ್ಕು ಕದಡಿನ ತೆರೆಗಡಲ್ಗಳೊಕ್ಕೈಸಿ (ಅನಂಪು. ೦೩–೨೦ ವ). [ ಜಲ್ + ಎನ್$_1$ ]

**ಜಲ್ಲೆನ್ನು** 'ಜಲ್ಲೆನ್' ನೋ.

**ಜಲ್ಲೆವಲೆ** (ನಾ). ಒಂದು ಬಗೆಯ ಬಲೆ : ಎರಳೆವಲೆ ಹಂದಿವಲೆ . . . ಮರೆವಲೆಗಳಾ ಗೂಡುವಲೆ ಜಲ್ಲೆವಲೆ ಕೊಲ್ಲಿವಲೆ (ಸಾಳ್ವಭಾ. ೫–೦೯). 'ಕೋಲ್ವಲೆ' ಪರಾ. [ ಜಲ್ಲೆ$_1$ + ಬಲೆ$_1$ ]

**ಜಲ್ಲೊಡೆ**(ಕ್ರಿ). ಎದೆಹಾರು; ಗಾಬರಿಗೊಳ್ಳು; ಹೌಹಾರು; "ಜಲ್ಲೊಡೆದು =ಎದೆಯೊಡೆದು ; ಗಾಬರಿಯಾಗಿ; ಹೌಹಾರಿ" (ಜಾನಕೋ. ೫೯).
[ಜಲ್ಲು$_4$ + ಒಡೆ$_1$ ]

**ಜವ$_1$** 'ಜಮ' ನೋ.

**ಜವ$_2$** (ನಾ). ೧. ವೇಗ; ರಭಸ: "ರಂಹಃ, ತರಃ . . . ಜವಃ, ವಾಜಃ—ಈ ೮ ಕುದಿರೆಯ ವೇಗಂ" (ಹಲಾಯು. ೭೩–೨೮೯); ಮಸಕಂ ಕಾಯ್ದು ಜವಂ ಜವಂಗಮಿದಿರೊಳ್ ನೋಡಲ್ಕಗುರ್ವಾಗೆ (ಪಂಪಭಾ. ೮–೩೭); ಬೋಧಿಸವೆ ಪೆಱವು ಜಿನಗೃಹಕ್ಕಾಧಿಕ್ಯಮದಿಲ್ಲೆನಿಪ್ಪುದಂ ಸನ್ಯಸನಾರಾಧನೆಯ ಜವದಿ ಸನ್ದ ನಿಶೀಧಿಗೆಯಡ್ಡಣಿಗೆ ತಳಿಗೆ ಪಟ್ಟಮಿವಿ[ನಿ]ತುಂ . . . ರಕ್ಷಿಸುವರ್ (ಸೌಇಇ. XI-1, ೫೨–೭೯ ; 1007) : ಜವದ ಜಗಟಿಕ್ಕೆ ಪುರುಡಿಸುವ

ಗರುಡನಂ ಗಜಬುವಂತೆ ದುಂದುಭಿಗಭೀರ :ಹೇಷಾರವಂಗಳೊಗೆಯೆ (ಪುಷ್ಪಪು. ೨-೧೧ ವ) ; ಸೂಜಿಗಲ್ಲಿದಿರ ಕಾಬೆರ್ೂನ್ನಂತೆ ತಿರುಗಿದೆಡೆಗಾ ಜವದೊಳೊಡದಿರುಗಿ (ಚಬಪು. ೨೦-೨೦). ೨. ಶಕ್ತಿ; ಸಾಮರ್ಥ್ಯ; ಸತ್ತ್ವ: ಸವತಿ ನೂಕಿದಳೆನ್ನನೆಡವಿಗೆ ಜವವುಳಿವುತ್ತೈತಂದೆನಬುಸುತ ನಿನ್ನ ಸನ್ನಿಧಿಗೆ (ಸಿಥಾಗ. ೮-೭-೪೩). 'ಜವಂಗಿಡಿಸು', 'ಜವಂಗೆಡು' ಪರಾ. ೩. ಹೆಚ್ಚಾದ ವೇಗದಿಂದ ಕೂಡಿದವನು: "ಜವನುಂ ತಾಂ ವಾಯುವೇಗಯುತನುಂ ಯುವನುಂ" (ವಸ್ತುಕೋ. ೧೧೮-೩).

ಜವಂಜವ (ದ್ವಿರುಕ್ತಿ) : ಪ ಜ್ಜ ಳಿ ಸು ತ ರಿ ಲೊಂ ದು ಬಾನ್‌ಪಟ ದೊಳುರಿದುರಿದು . . . ಜವಂಜವದಿಂದೆ ಮರೆಯಾಯ್ತು ಮುಳುಗಿ (ಶ್ರೀರಾಮಾ. ೧೦೩-೮೮). [ ಸಂ. ]

**ಜವಂಗಿಡಿಸು,** ಜವಗಿಡಿಸು, ಜವಗೆಡಿಸು (ಕ್ರಿ). ಸತ್ತ್ವವನ್ನು ಕುಗ್ಗಿಸು ; ಶಕ್ತಿಗುಂದಿಸು ; ಸೋಲಿಸು : ತೆಬಪಬಿಧೋಪನಪ್ಪಿದೊಡೆ ಮೆಯ್ಯಾಟಿ ವಪ್ಪು ಸಡಿಲ್ದುದಕ್ಕೆ ಮೆಯ್ಯಾಟಿವ ಪೊದಟ್ಟ ಬಾಯುಗಿಗೆ ಮೆಯ್ಯಾಟಿ ವಂತದು ಮೆಲ್ಲನಾಗೆ ಮೆಯ್ಯಾಟಿವ ಜವಂ ಜವಂಗಿಡಿಸೆ ಮೆಯ್ಯಾಟಿವಾಸನ ಪಲ್ಲಟಕ್ಕೆ ಮೆಯ್ಯಾಟಿವಡೆ ಸಾವ ಪುಟ್ಟುವೆಡೆಯಾದುದವಳ್ಗೆ ರತಾತಿರೇಕ ದೊಳ್ (ಲೀಲಾವ. ೧೩-೨೦) ; ಜವನ ಬಲ್ಪಂ ಜವಂಗಿಡಿಸುವೆಂ (ಅದ್ಭುತ. ೪೧-೬). **ಜವಗಿಡಿಸು :** ಅಡಸಿದರು ಚತುರಂಗಬಲವನು ಕಡಿದು ಧುರದಿ ವಿರಾಟನನು ಜವಗಿಡಿಸಿ (ಕುಮಾವ್ಯಾ. ೦೭-೩೪) ; ಅವರ ಲಾವಣ್ಯಾಬ್ಧಿ ವಿಟರ ಕಣ್ಮೀಂಗಳ ಜವಗಿಡಿಸಿದುವು ಗೋಪ್ಪದಲಿ (ಮೋಹತ. ೨೪-೨೭) : ಜವನಂ ಜವಗಿಡಿಸುವ ಕುಳಿಕನಂ ಗುಳಿಗೆಗಟ್ಟುವ ಪೆರ್ಕಳದ ಕಾಲ್ಗಳ್ಗಳ್ ಪಡೆಯ (ರಾಮಾಶ್ವ. ೪೯-೧೭). **ಜವಗೆಡಿಸು:** ತೇಜಯು ಜವಗೆಡಿಸಿ ತಲೆಯಾರ ತಡೆದರು ತುಡುಕಿದ್ದರು ನೊಗನ (ಕುಮಾವ್ಯಾ.ಕ. ೦೪-೦೪); ಜವಗೆಡಿಸಿ ಸೇನೆಯಂ ಮುತ್ತಿದುವು ಕುತ್ತಿದುವು . . . ಸುಭಟರಂ ಬಾಣಂಗಳು (ಚಬಪು. ೨೫-೧೮) ; ಕೃತವರ್ಮ ಸಾಂಬಾನುಸಾಲ್ವರಂ ಜವಗೆಡಿಸಿ (ಜೈಮಿಭಾ. ೦೪-೩).

[ ಜವ್ವ + ಕೆಡಿಸು (<ಕೆಡಿಸು) ]

**ಜವಂಗಿಡು** 'ಜವಂಗೆಡು' ನೋ.

**ಜವಂಗುಂದಿಸು** (ಕ್ರಿ).=ಜವಂಗಿಡಿಸು: ಜವಂಗಿಡದ ಮುಟ್ಟಿ ಬರ್ಪ ಜವನಂ ಜವಂಗುಂದಿಸಲ್ ಜವಂಗೆ ಜವನಾಗಲಿಂ ಪೆಱಗೆ ತೀರ್ಗುಮೋ (ಆದಿಪು. ೧೩-೮೮). [ ಜವ್ವ + ಕುಂದಿಸು ]

**ಜವಂಗುಂದು,** ಜವಗುಂದು (ಕ್ರಿ). ಶಕ್ತಿಗುಂದು ; ಸತ್ತ್ವವಳಿ : ಅಮಿತ ಬಲದೆರಡು ಕಡೆಗಂ ನಿಮಿರ್ದ ಜವಂಗುಂದಿ ಪಾಯ್ದು ಕಳವಳಿದು ತುರಂಗಮ ಸ ಮಿ ತಿ ಯೊ ಳೆ ಯೊ ಳಂ (ಕಾವ್ಯಸಾ. ೪೬೬ ಶೂದ್ರಕ) ; ಒಂದು ಗೊಳ್ಳೆರಡುಗೊಳ್ಳೆಂದುರ್ವಿ ಪೊಯ್ವಂದು ಪೊಯ್ಗೆ ಜವಂಗುಂದಿ ಸಿಡಿಲ್ದು . . . ಬೀಟ ದಿಗ್ಗಜವುಂ ಪೊಲ್ವ ಗಜಂಗಳುಂ ಪಲವುಮಂಕೊಂದಂ ಮರುನ್ನಂದನಂ (ಪಂಪಭಾ. ೧೧-೧೦೨). **ಜವಗುಂದು:** ಮಧ್ಯಾಹ್ನದುರಿ ಬಿಸಿಲೊಳಿದೆ ಬಿರಿಯೆ ಜವಗುಂದಿ ತಲೆ ಕುಸಿದು ನಡೆಗೆಟ್ಟು ಬಾಯಾಱ (ಹಜಕಾ. ೧೨-೭) ; ಎಲ್ಲಿಯದು ಹೆಬ್ಬಂದಿ ಮುನಿವಧೆಯೆಲ್ಲಿ ಕೂಡಿತೊ ಯೋಗವೆಂದೆದೆ ಝಲ್ಲೆನಲು ಜವಗುಂದಿ ಲಕ್ಷ್ಮಣನೊಲದನವಯುವವ (ತೊರರಾ. ೩-೩-೨೨). [ ಜವ್ವ + ಕುಂದು₁ ]

**ಜವಂಗೆಡು,** ಜವಂಗಿಡು, ಜವಗಿಡು, ಜವಗೆಡು (ಕ್ರಿ). ೧.= ಜವಂಗುಂದು: ಭಯಮನೆಡಗಲಿಸಿ ಬೆಳ್ಪೋಟವೋಡಿ ಜವಂಗೆಟ್ಟು ಕಾಲ್ ವೆಡಂಗಲಸೆ ಬೀಟುತ್ತುವೇಟುತ್ತುಮೆಂತಾನುಮೆಯ್ದಿ (ಶಾಂತಿಪು. ೭-೪೦ ವ) ; ಇನ್ನೆತ್ತಂ ಪೋಪೆಂ ಕುದುರೆಯುಂ ಜವಂಗೆಟ್ಟುದು (ಪಂಚತಂ. ೦೦೬-೯) ; ಅಂತು ಪಲವು ಸೂಟ್ ಕಾದಿ ಸಾಡೆಯುಂ ಬಟಲ್ದು ಕಡೆಯ ಸೂಟಿಳೆ ಜವಂಗೆಟ್ಟು (ನೇಮಿಪು. ೮-೦೦೭ ವ). **ಜವಂಗಿಡು:** ೧. ಜವಂಗಿಡದ ಮುಟ್ಟಿ ಬರ್ಪ ಜವನಂ ಜವಂಗುಂದಿಸಲ್ ಜವಂಗೆ ಜವನಾಗಲಿಂ ಪೆಱಗೆ ತೀರ್ಗುಮೋ (ಆದಿಪು. ೧೩-೮೮) ; ಇನ್ನಿವಱ ಪೋರ್ದು ಜವಂಗಿಡದೆ ಪಪ್ಪುಕ ವಾದಂದವುಮವುಂ ಕೇಳ್ (ಶಾಂತಿಪು. ೯-೪೯ ವ). **ಜವಗಿಡು :** ೧. ಜವಗಿಡದೆನ್ನೊಳು ಕಡಿದಾಡಬಪ್ಪುದೆಂದವಗಡಿಸಿದನಾರ್ಭಟದಿ (ಮೋಹತ. ೩೯-೩). **ಜವಗೆಡು:** ೧. ರವಿರಶ್ಮಿಗಾಱದೆ ಜವಗೆಡುವ ಹಿಮುವನ್ನಗೇಂದ್ರದ ಘನತರವದೆನಿತು (ಬಸವು. ೦೯-೨೭). ೨. ವೇಗ ಕುಗ್ಗು,-ಮಂದವಾಗು; ತಡವಾಗು: ಪೊಳ್ತಂ ಸನ್ನೆಯುಂ ಜಾತಿಯಂ ಜವಗೆಡ [ಪಾಠಾಂ. ಜವಂಗೆಡ] ದಱ್ಱಿವ ಬಿನ್ನಣಂಬಡೆದ ಬೇಡರೊಡವರೆ (ರಾಜಶೇ. ೩-೧೦೪ ವ).

[ ಜವ್ವ + ಕೆಡು₁ ]

**ಜವಂಜವ** (ನಾ). ಹುಟ್ಟುಸಾವುಗಳ ಪರಂಪರೆ ; ಸಂಸಾರ : "ಭವ ಸಂಸೃತಿ ಸಂಸರಣಂ ಜವಂಜವಂ ಜನ್ಮಮೆಂಬುದದು ಸಂಸಾರಂ" (ವಸ್ತುಕೋ. ೦೮-೦); ಜವನಂ ಜವಂಗುಂದಿಸಲ್ . . . ಪೆಱಗೆ ತೀರ್ಗುಮೋ ತೀರದಾ ಜವಂ ಜವಜವಾಗಿ ಮುಟ್ಟುಗಿಡುವನ್ನಮಿನ್ನು, ಜವಂಜವ ವ್ಯಸನಪುಂಜಮಂ ಕಿಡಿಪುದಾದಿತೀರ್ಥೇಶ್ವರಾ (ಆದಿಪು. ೦೩-೮೮) ; ತನ್ನಂ ನಿರ್ದಾಟಿಸಿ ಕಳೆಯೆ ಪೋಗಿ ಸತ್ತು ವಿವಿಧ ಜವಂಜವ ಚಕ್ರಾಕ್ರಮಣದಿಂ ಬಂದು (ಶಾಂತಿಪು. ೭-೪೨ ವ). 'ಅಜವಂಜವ' ಪರಾ. [ ? ]

**ಜವಂಬೆಱು** (ಕ್ರಿ). ವೇಗಗೊಳ್ಳು ; ತ್ವರಿತವಾಗು : ಪೊದಲ್ದ ದೇಶಿ ಮೈವೆತ್ತಿರೆ ತೇನತೇನವೊದಗುತ್ತಿರೆ ತಾನರವಂ ಲಯಂ ಜವಂಬೆತ್ತಿರೆ ಮೂರ್ಛನಾಪ್ರಸಾರವೊಂದಿರೆ (ವೃಷವಿ. ೧೧-೮). [ ಜವ್ವ + ಪೆಱು₁ ]

**ಜವಕ** (ನಾ). ತಡ ; ನಿಧಾನ (?) : ಸಾಹಿತ್ಯ ಸಾರೋದಯಂಗೀ ದೂದವಿ ಜತ್ರಕವಂ ನುಡಿದು ಜವಕಮಿಲ್ಲದೆ ಕೂಡಿದಳೆಂದು ನುಡಿಯುತ್ತುಂ ಪೋಗೆ (ಅನಂಪು. ೮-೨೪ ವ). [ <ಸಂ. ಯಾಪಕ ]

**ಜವಕಣೆ** (ನಾ). ಒಂದು ಬಗೆಯ ತಂತೀವಾದ್ಯ : (ಎಸಮ್ಮ. XVII, ೩೦).

[ ? ]

**ಜವಕಾರ** (ನಾ). ಒಂದು ಬಗೆಯ ಉಪ್ಪು; ಯವಕ್ಷಾರ : "ಜವಕಾರ – ಯವಕ್ಷಾರ" (ತದ್ಭಕೋ. ೦೪). [ <ಸಂ. ಯವಕ್ಷಾರ ]

**ಜವಗ** (ಗು). ವೇಗವಾಗಿ ಓಡುವ : ಜವಗ ಚತುರೇಕಲಕ ಪ್ರವಿಮಳ ಶೃಂಗಾರಸಾರ ಜಾತ್ಯಶ್ವಂಗಳ್ (ಹಮ್ಮೀರ. ೩-೦೦). [ ಸಂ. ]

**ಜವಗತಿ** (ನಾ). ವೇಗವಾದ ನಡಗೆ; ಓಟ : ಮದದೇಕ್ಕಲನ ಕುಕ್ಕುರಿಪ ಲುಳಿಯ ಜಂಘೆಯ ಜವಗತಿಯ . . . ನಾಯ್ತುಡುಕಿದವು ತಡೆದಖಿಳ ಮೃಗಕುಲವ (ತೊರರಾ. ೩-೩-೦೪). [ ಜವ್ವ + ಗತಿ ]

**ಜವಗಾತಿ** (ನಾ). ಬಹಳ ವೇಗವುಳ್ಳವಳು; ವೇಗದಿಂದ ನಡೆಯುವವಳು: ಪವನವೇಗವ ಕೀಳ್ಪಡಿಸಿ ದೂವಾಳಿಪ ಜವಗಾತಿಯ ಬೆನ್ನೊಳಿರ್ದು ಕುಪರ ಕಂಗೆಟ್ಟು ತಕ್ಕೆಗೊಂಡವಳ ನುಣ್ಣೊಲೆಯ ಬಲ್ಪಿಡಿದ (ಮೋಹತ. ೩೧-೨೭).

[ ಜವ್ವ + – ಕಾತಿ₆ ]

**ಜವಗಿಡಿಸು** 'ಜವಂಗಿಡಿಸು' ನೋ.

**ಜವಗಿಡು** 'ಜವಂಗೆಡು' ನೋ.

**ಜವಗುಂದು** 'ಜವಂಗುಂದು' ನೋ.

**ಜವಗೆಡಿಸು** 'ಜವಂಗಿಡಿಸು' ನೋ.

**ಜವಗೆಡು** 'ಜವಂಗೆಡು' ನೋ.

**ಜವಚರ** (ನಾ). ಓಡುತ್ತ ಹೋಗಿ ಸಮಾಚಾರವನ್ನು ತಿಳಿಸುವ ಸೇವಕ; ಹರಿಕಾರ : ಬಹರಾಗವುನವನರಿದು ಜವಚರರಿಂದ ಶ್ರೀವರ್ಮನಾಗ ಗಿರಿಪುರಕಪ್ಪಮಂಗಲವ ರಚಿಯಿಸಿದ (ಜಿನಮು. ೩-೨೨).

[ ಸಂ. ]

**ಜವಜವ** (ನಾ). ೧. ಶಿಥಿಲವಾದುದು ; ಶಕ್ತಿಗುಂದಿದುದು. ೨. ಮಂದ ವಾದುದು. 'ಜವಜವಾಗು' ಪರಾ. [ ? ]

**ಜವಜವನೆ** (ಅ). ದುರ್ಬಲವಾಗುವಂತೆ ; ಕುಗ್ಗುವಂತೆ.

**ಜವಜವಜವನೆ** (ದ್ವಿರುಕ್ತಿ) : ಜವನಟ್ಟಿ ಕೊಲ್ವ ಕೊಲೆಗಾ ಜವಂಜವ ಸ್ಥಿತಿಗೆ ಮೆಯ್ಯ ನೀರ್ತೆಗೆವನ್ನಂ ಜವಜವಜವನಂಜಿಸಿದುವು ಜವನಾಳ್ಗಳ ತೆಱದಿನೆನ್ನ ಕೆನ್ನೆಯ ನರೆಗಳ್ (ಅಜಿಪು. ೨-೬೯). ಜವಜವನಾಗು = ಜವಜವಾಗು : ಬಟ್ಟೆಯ ಕಿಱುಗಲ್ಲ ಬಡಿಯ ಕೋಟಿಂದಂ ಕಾಲ್ ಕೆಟ್ಟುವು ಜವಜವನಾದುವು ನೆಟ್ಟನೆ ಮೆಯ್ (ಧರ್ಮಾಮೃ. ೬-೮೯).

[ ಜವಜವ + – ಅನೆ$_1$ ]

**ಜವಜವಾಗು** (ಕ್ರಿ). ೧. ದುರ್ಬಲವಾಗು ; ಜರ್ಜರಿತವಾಗು : ಆ ಜವಂ ಜವಜವಾಗಿ ಮುಟ್ಟುಗಿಡುವನ್ನಮಿನ್ನಾ ಜವಂಜವವ್ಯಸನಪುಂಜಮಂ ಕಿಡಿಪುದಾದಿ ತೀರ್ಥೇಶ್ವರಾ (ಆದಿಪು. ೧೩-೮೮) ; ಕುರವದಿಂ ಕೂಡೆ ನೆತ್ತರ್ ತೆರಳ್ದುಣ್ಮಿವಿನಂ ಮೆಯ್ಯೆಲ್ಲಮಂ ಜರ್ಜರಿಸಿ ಜವಜವಾಗಿರ್ದನಂ ಗುರ್ದಿ (ಸುಕುಮಾ. ೬-೩೫). ೨. ಆಲಸ್ಯವಾಗು ; ಮಾಂದ್ಯವಾಗು : ಬಳುವಳ ಬಳೆಯೆ ತೆಳುವಸಿರ್ಕೊರ್ಗೀಮಳಾಂಗವುಂ ಜವಜವಾಗೆ ಬೆಳದುದು ಗರ್ಭಂ (ಕೊಲ್ಹಾ. ಶಾ. ೦೫-೫೦ ; 1186). [ ಜವಜವ + ಆಗು$_1$ ]

**ಜವಣ** 'ಜೇವಣ' ನೋ.

**ಜವಣಿ** 'ಜೇವಣಿ$_2$' ನೋ.

**ಜವಣಿಗೆ** (ನಾ). ಉದ್ದವಾದ ಬಿದಿರಿನ ಕೋಲು; ಜಲ್ಲೆ: ಜವಣಿಗೆಯನ್ನು ತೆಗೆದುಕೊಂಡು ಅನುಭವಶಾಲಿಗಳಾದ ಬೆಸ್ತರು ನಡುಗೆರೆಯನ್ನೆಲ್ಲ ಕೆದಕಿದರು (ದೂರಸ. ೨೬೮). [ <ಜವಣಿ ]

**ಜವಣಿ** 'ಜಳವೆ' ನೋ.

**ಜವತುರಂಗ** (ನಾ). ವೇಗವಾಗಿ ಓಡುವ ಕುದುರೆ : ಸಾಸಿರ ಗೋವುಗಳ ಜವತುರಂಗವ ಬ್ಯಾಸರಿಯದೆ ತಂಗಿಗಿತ್ತ (ಕರ್ನಾಕ. ೨೮೨).

[ ಜವ$_2$ + ತುರಂಗ$_1$ ]

**ಜವತೂಣ** (ನಾ). ಯಮನನ್ನು ಹಿಂಸಿಸಿದವನು; ಶಿವ : ಏಣಾಂಚಿತಧರ ಜವ ತೂಣಾ ಶರಣಜನ ಪ್ರಾಣಾ . . . ಜಿತಸೌರಭಬಾಣಾ ರಕ್ಷಿಸು (ಉದ್ಭದೇ. ೪-೩) [ ಜವ$_1$ (<ಜಮ) + ತೂಣ$_4$ ]

**ಜವತ್ಸವಡಿ** (ನಾ). ಮಲ್ಲಯುದ್ಧದ ಒಂದು ವರಸೆ: ಕಮ್ಮರಿ ಮುಹುಡಂ ಜವತ್ಸವಡಿ ಪಾಸಗೆ . . . ಎನಿಪ್ಪ ಜಟ್ಟಿಗರ ಬಿನ್ನಣವೊಪ್ಪೆ ಕಡಂಗಿ ಕಾದಿದರ್ (ಶ್ರೀಪುವಿ. ೨೬-೦೮). [ ? ]

**ಜವದಂಡ** 'ಜಮುದಂಡ' ನೋ.

**ಜವದಂಡೆ** 'ಜಮುದಂಡೆ' ನೋ.

**ಜವದಾಡೆ** 'ಜಮುದಾಡೆ' ನೋ.

**ಜವನ** (ನಾ). ೧. ವೇಗ ; ರಭಸ. ೨. ವೇಗವುಳ್ಳುದು ; ವೇಗಶಾಲಿಯಾದುದು ; ಚುರುಕಾದುದು: ಜವನಮೆನಿಸಿರ್ದ ನಿಜದಶೆ ಜವನನಧಃಕರಿಸೆ ವಿಳಯಜಳಧರಕುಳಭೈರವರವಮನಿಳಿಸೆ (ಪಾರ್ಶ್ವಪು. ೪-೦೦೩). ೩. ವೇಗವಾಗಿ ಓಡಬಲ್ಲವನು; ಹರಿಕಾರ: "ಜಂಘಾಳಃ, ಜವನಃ, ವೇಗೀ– ಈ ೩ ಹರಿಕಾಱಂ" (ಹಲಾಯು. ೫೯-೨೦೩). ೪. ವೇಗವುಳ್ಳ ಕುದುರೆ.

[ ಸಂ. ]

**ಜವನಿಕೆ** (ನಾ). ೧. ತೆರೆ ; ಕಾಂಡಪಟ : ಪರದೆ : "ಅಪಟೀ ಪ್ರತಿಸೀರಾ ಕಾಂಡಪಟಿ ತಿರಸ್ಕರಿಣಿಕಾಖ್ಯೆ ಜವನಿಕೆಯಕ್ಕುಂ" (ವಸ್ತುಕೋ. ೪೯-೨೩) : "ಜವನಿಕೆ ಮುಸುಕುಂ" (ಭಾರನಿ. ೦೫) ; ಅನಂಗಜಂಗಮಲತೆವೊಲ್ ನಿಲ್ವು ಜವನಿಕೆಯ ಮಱೆಯೊಳ್ ಪೊಲ್ತುಳವಳ್ ಮುಗಿಲ ಮಱೆಯ ವಿದ್ಯುಲ್ಲತೆಯಂ (ಆದಿಪು. ೯-೨೦) : ಹರನ ಶಾಂತಿಯ ಜವನಿಕೆಯನೋಸರಿಸುವಂತೆ (ಸೌದರ. ದೇ. ೬೬-೧೨); ಮೇಲೆ ಜವನಿಕೆಯಂ ಪಿಡಿದು ಸಮ್ಮೇಳನದೊಳಿಯ್ದುಂದು (ಬಸಪು. ೦೨-೪೪). ೨. ಮರೆ ; ಮುಂಚಟ್ಟು ಮರೆ: ಜೀಯ ಜವನಿಕೆಯೇಕೆ ನೀವೆಂದೀಯ ಶೇಷಗುಣಂಗಳಾ ಕಾತ್ಯಾಯಿನೀಪತಿಗುಂಟು (ತೊರರಾ. ೪-೦೨-೦೦). ೩. (ಆಲಂ) ಮಿಥ್ಯೆ ; ನಟನೆ ; ಮಾಯೆ : ಇದು ಕಣಾ ಜಗದೀಶ್ವರನ ಜನನದ ಜಗದ್ವ್ಯಾಪಾರ ಜವನಿಕೆಯುದಿಸಿ ತೋಱಿದನೆಂಬುದಿದು ಮಿಥ್ಯಾಪ್ರಪಂಚವಲೆ (ತೊರರಾ. ೦-೮-೭೨). ೪. ಕತ್ತಲೆ (?) : ಜವನಿಕೆಯೋಡಲಿರ್ವ್ವಲದ ವೀರ ಭಟಾವಳಿ ನೋಡೆ ಖಳ್ಗದಿಂದವೆ ಕಲಿರತ್ನಪಾಳನ ಶಿರೋಂಬುಜಮಂ ಜಯಲಕ್ಷ್ಮಿಗಿತ್ತು ತಜ್ಜವನಿಕೆಗೊಂಡ ಗಂಡಪೆರುಮಾಳೆ ಚಮೂಪತಿಗಿಂತು ಸಾದ್ರ್ದುದಾ ಜವನಿಕೆನಾರಣಾಂಕ ವಿದುರಾಉತರಾಯನುದಗ್ರದೋರ್ವ್ವಲಂ (ಎಕ. XI, ಚಿತ್ರದು. ೦೨-೯ ; 1286).

[ < ಪ್ರಾ. ಜವಣಿಆ./ಸಂ. ಯವನಿಕಾ ]

**ಜವನಿಕೆಗಳೆ** (ಕ್ರಿ). ಮುಸುಕನ್ನು ತೆಗೆ ; ತೆರೆಯನ್ನು ಸರಿಸು : ಆ ಜಯಸೇನೆ ರಂಗಂಬೊಕ್ಕನಂಗಶಸ್ತ್ರಾಧಿದೇವತೆಯ ಮುಖವಸ್ತ್ರಂಗಳೆದುವೆನಿಸಿ ಜವನಿಕೆಗಳೆದು . . . ನರ್ತಿಸೆ (ನೇಮಿಪು. ೩-೦೮೦ ವ).

[ ಜವನಿಕೆ + ಕಳೆ$_1$ ]

**ಜವನಿಕೆದೆಗೆ** (ಕ್ರಿ). = ಜವನಿಕೆಗಳೆ : ಮೊಗದ ಜವನಿಕೆದೆಗದು ನೆತ್ತಿಯ ಬಗಿದು (ಕುಮಾರವ್ಯಾ. ದ್ರೋ. ೩-೦೩) : ಸುರುಚಿರ ಸೂತ್ರಧಾರಕ ತತ್ಕಾರವ ವಿರಚಿಸಿ ಜವನಿಕೆದೆಗೆಯೆ . . . ಸುಪ್ರೌಢೆಯರುರು ಪುಷ್ಪಗಳ ಸೂಸಿದರು (ಕಂನವಿ. ೮-೬೦). [ ಜವನಿಕೆ + ತೆಗೆ$_1$ ]

**ಜವಪುರ** (ನಾ). ಯಮನ ಪಟ್ಟಣ : ಜವಪುರಕೆ ಬಿದ್ದವರಿಗಹುದೈ ಅವಧರಿಸಲಾ ಪಿಂಡಶ್ರಾದ್ಧವು (ಕುಮಾರವ್ಯಾ. ದ್ರೋ. ೩-೦೩).

[ ಜವ$_1$ (<ಜಮ) + ಪುರ$_3$ ]

**ಜವಪುರಿ** (ನಾ). = ಜವಪುರ : ವಿಂದಾನುವಿಂದರ ಜೀವ ಧುಮ್ಮಿಕ್ಕಿದುದು ಜವಪುರಿಗೆ [ಪಾಠಾಂ. ರಕೆ] (ಕುಮಾರವ್ಯಾ. ಕ. ೩-೦೦).

[ ಜವ$_1$ (<ಜಮ) + ಪುರಿ$_5$ ]

**ಜವಪ್ರಸರ** (ನಾ). ವೇಗದ ಹೆಚ್ಚಳ : ಪವಮಾನಾತ್ಮಜನಂ ಜವಪ್ರಸರದಿಂ . . . ಮಿಗುವ ಜಾತ್ಯಶ್ವಂಗಳ್ (ಪುಷ್ಪಪು. ೨-೫೮). [ ಜವ$_2$ + ಪ್ರಸರ ]

**ಜವರಕ್ಕೆ** (ನಾ). ಕವಚ ; ಚಿಲಖತ್ತು : " ಕವಚಕಿಂತೊಪ್ಪುವುದು ಜವರಕ್ಕೆ [ಪಾಠಾಂ. ಕುಂಚಕಿಂತೊಪ್ಪುವುದು ಚವರಮುಂ] ಅವುತೆಯೆಂಬೀ ಪೆಸರ್ " (ಕಬ್ಬಿಕ್ಕೆ. ೯೩). [ P 'ಜೀವರಕ್ಕೆ' ಎಂಬುದರ ಅಪಲಿಖಿತ ]

**ಜವರಾಜ** (ನಾ). ಯಮರಾಯ : ಕೋಪಕ್ಕೆ ಯಮರಾಜ ಪಾಪಕ್ಕೆ ಜವರಾಜ ಕೋಪಪಾಪಗಳ ಅಳಿದಂಗೆ ಯಮನು ತಾ ಕೂಪನಾಗಿಹನು (ಸರ್ವಜ್ಞ ೪೬೮). [ ಜವ$_1$ (<ಜಮ) + ರಾಜ ]

**ಜವರಾಯ** (ನಾ). = ಜವರಾಜ : ಮಿಗೆ ದೀರ್ಘಾಯುಮಿರೆ ಮುನಿದು ಕಲಿ ಜವರಾಯಂ ಕೊಲಲಾಱಂ (ಹಮ್ಮಿರ. ೮-೨೮) : ಸಾಯುವನ ಕಣ್ಣಿಗೆ ಸುಳಿದವನೇ ಜವರಾಯ (ಗಾದೆ). [ ಜವ$_1$ (<ಜಮ) + ರಾಯ ]

**ಜವರುಜಂಗಿ** 'ಜಬರುಜಂಗಿ' ನೋ.

**ಜವವಳಿ** (ಕ್ರಿ). ಕಸುವು ಕಡಮೆಯಾಗು ; ಶಕ್ತಿಗುಂದು ; ದುರ್ಬಲವಾಗು : ಜವವಳಿಯಲೆಂತಾದೊಡಂ ಶಿವಶಿವಯೆನುತ ನಡೆಯಂ ನಡೆವೆ ನಾನವನಿಯೊಳಗೆ (ಬಸಪು. ೪೪-೦೨) : ಪವನಸುತನವತರಿಸೆ ಪಾರ್ಥಿವನಿವಹ ನಡುಗಿತು ದೈತ್ಯಗಣವುಱೆ ಜವವಳಿಯೆ (ಸಂಭಪ. ೦೫-೫೬).

[ ಜವ$_2$ + ಅಳಿ$_1$ (<ಅಱಿ$_1$) ]

**ಜವವೇಳು** (ಕ್ರಿ). ಒತ್ತರಿಸಿ ಬರು ; ತೀವ್ರವಾಗಿ ಬರು : ಬಲಿದ ತೂಕಡಿಕೆಗಳ ನಸು ಬೆದಱೊಲಹುಗಳ ಜವವೆದ್ದ ರೆಪ್ಪೆಯ ಬಲೆಗೆ ಸಿಲುಕಿದ ಬಲವನರ್ಜುನದೇವನೀಕ್ಷಿಸಿದ (ಕುಮಾರವ್ಯಾ. ದ್ರೋ. ೦೭-೪).

[ ಜವ$_2$ + ಏಳು$_1$ (<ಏೞ್$_1$) ]

**ಜವಪೊಳಲ್** (ನಾ). = ಜವಪುರ : ಈ ಸನ್ನಿಪಾತಂ ಮುಟ್ಟಿದ ಪುರುಷನು ಜವಪೊಳಲ್ಗೆಯ್ದುವನೆಂದು ಪೇಳಿಹುದು (ಸಕವೈ. ೦೬೫).

[ ಜವ$_1$ (<ಜಮ) + ಪೊಳಲ್ (<ಪೊೞಲ್) ]

**ಜವಹೀನ** (ನಾ). ವೇಗವಿಲ್ಲದುದು; ವೇಗವಾಗಿ ಓಡಲಾರದುದು: × × × ಅಧಿಕವಲ್ಪಮಲಮಪ್ಪೊಡಂತು ನೊಸಲಸಿದಾಗುವುದುಮದು ಕಳೆಯಲಾಗದು ಜವಹೀನಂ ವಾಜಿ ನಾಲ್ಕು ಸಂವತ್ಸರಮಂ (ಅಶ್ವಶಾ. ೬-೫).
[ ಜವ$_2$ + ಹೀನ ]

**ಜವಹುರ** (ನಾ).=ಜವಪುರ: ಎರಡು ಪದಂಗಳೆಪಭ್ರಂಶಕ್ಕೆ–ಅಚ್ಛಸ್ಫಟಿಕ–ಅಚ್ಚವಳಿಕು . . . ಯಮಪುರ–ಜವಹುರ (ಶಮದ. ೨೮೯ ಪ್ರಯೋ); ಆ ಜವಹುರಕೆಯಿಂಬುಮಾಡುವ ನಿಷ್ಠುರಪರಿಗ್ರಹವನ್ನು ನಂಬಿದೆನಾನಿಂದುವರ (ಶ್ರೀಪಾಲ. ೦೪-೪೨); ಜವಹುರದ ಜಕ್ಕಂದೊಟಲಿಯಂ ಗೆಲೆವರ್ಪ ಕಾಟಿಙ್ಕೀಣವಳಗದಿಂದೆಯುಂ (ರಾಮಾಶ್ವ. ೩-೨೫).
[ <ಸಂ. ಯಮಪುರ ]

**ಜವಹುರಿ** (ನಾ).=ಜವಪುರ: ಜವದಿಂದಂ ಜವಹುರಿಗೆ ಗಳಿಪುವವೊಲಾದವೆ ಕಾಳಿಕೆ ತೆಂಕದೆಸೆಯೆ ಮೊಗವಾಗಿಪ್ಪರ್ಗಳು (ಶಾಸಪ. ೮೮).
[ <ಸಂ. ಯಮಪುರೀ ]

**ಜವಳ$_1$** 'ಜಮಳ' ನೋ.

**ಜವಳ$_2$**(ನಾ). ತೂಕದ ಒಂದು ಪ್ರಮಾಣ,–ಅಳತೆ: ಧಾರಾಪೂರ್ವಕವಾಗಿ ಕೊಟ್ಟಾಯಮೆಂತೆಂದೊಡೆ ಅಡಕೆ ಹೇಱಿಂಗೆ ಅಯ್ವತ್ತು ಜವಳಕ್ಕಿಪ್ಪರ್ತ್ತು . . . ಹತ್ತಿ ಮಳವೆಗಯ್ವಲಂ ಭಂಡಿಯ ಕರುಸೆಯ ಮಳವೆಗೆರಡು ಬೀಸಿಗೆ ಜವಳಕ್ಕೆ ಪಲಂ ಪತ್ತು (ಎಇ. XIX, ೩೩-೨೬; 1136); ಸು(ಶು)ಕ್ರವಾರದ ಸಂತೆಯಂ ಮಾಡಿ ಬಿಟ್ಟಾಯಮೆಂತೆ[ಂ]ದೊಡೆ ಮಾಱಿದ ಅಡಕೆಯ [ಜವ]ಳಕ್ಕಡಕೆಯಿಪ್ಪರ್ತ್ತು . . . ಎತ್ತಿನ ಜವಳಮಂ ಬಿರಿಚಿದಲ್ಲಿಯಡಕೆಯ ಯ್ವತ್ತು (ಎಇ. XIX, ೩೮-೨೨,; 1144); ಮೆಳಸಿನ ಹೇಱಿಂಗೆ ಮೆಳ ಸೊಮ್ಮಾರ್ನಂ ಆ ಜವಳಕ್ಕೆ ಅರೆವಾನಂ (ಎಇ. XIII, ೨೦-೫೫; 1204); ಬಿಟ್ಟ ಜವಳಕ್ಕೆ ಹತ್ತಡಕೆ ಅರಸಿನ ಅಲ ಸರ್ಕ್ಕರೆ ಬಿಟ್ಟ ಜವಳಕ್ಕೆ ಅಯ್ವಲ ಹತ್ತಿಯ ಮಳವೆಗೆಯ್ವಲಂ (ಸೌಇಇ. XX, ೨೯೯-೯; 12ನೆಯ ಶತ). [ ? ]

**ಜವಳಂಗೊಳ್, ಜವಳಿಗೊಳ್** (ಕ್ರಿ). ಬೆರೆ; ಕೂಡಿಕೊಳ್ಳು; ಸೇರು: ಗರುಗ, ಹುರುಳಿ, ನೀಲಿ, ಈ ಮೂರನ್ನು ಜವಳಂಗೊಳ್ಳೆ ಕಳರಿ ಎಂಟು ಹಲ ನೀರಿಂದ ನೆನೆಯಲಿಡುವುದು (ವಿಶ್ವವಿ. ೨೦೮). **ಜವಳಿಗೊಳ್**: ಬಂದರಂದು ಬಲ್ಸೋಕೆವಡೆದು ಸಿಂಗರದಿಂಗಡಲ ತೆರೆಯ ಸಾಲ್ಜವಳಿಗೊಂಡವೊಲ್ (ಉದ್ಭದೀ. ೫-೨೬). [ ಜವಳ$_1$ (<ಜಮಳ) + ಕೊಳ್$_1$]

**ಜವಳಂಬು** (ನಾ). ಬಾಣಗಳ ಜೊತೆ; ಎರಡು ಬಾಣ: ಕಾದುವಲ್ಲದೆ ಕಲಹವಲ್ಲದೀಕ್ಷಣವೆಂದು ಜವಳಂಬನಿಟ್ಟು ಲವನು ಪಾದಕೊಂದನೆಗ್ಗೆದು (ಜಿನಮು. ೩೯-೪೪). [ಜವಳ$_1$ (<ಜಮಳ) + ಅಂಬು$_2$ ]

**ಜವಳಗೆಯ್** (ನಾ). ಒಂದು ಪ್ರದೇಶದ ಹೆಸರು (?): ಮಣ್ಣಳಿಕಂ ಕಾಟಿಯಣಂ ಜವಳಗೆಯ ಮೂಡವೊಲದಲು ಬೆಂಕೊಳ್ವನ ಕೋಲಲು ಬಿಟ್ಟ ಕೆಯಿ ಮತ್ತರ್ರೈವತ್ತು (ಎಇ. XXVII, ೬೩-೫೦; 1114). 'ಜವಳಿ$_5$' ಪರಾ. [ ಜವಳ? + ಕೆಯ್$_4$ ]

**ಜವಳಾಗು** (ಕ್ರಿ). ಜೊತೆಯಾಗು; ಕೂಡು: ಧವಳ ಸರೋಜಾಕ್ಷ ತಾನಲ್ಲದನ್ಯರೊಳ್ ಜವಳಾಗದಂತೆ ವ್ಯಸಿಕದ ಕವಳವ ಕುಡುವಂತೆ ರತ್ನಸಂಬಳಿಗೆ ದಾಳ್ದವಳಿರ್ದಳತಿಸಮ್ಮುದದಿ (ಮೋಹತ. ೪-೭). 'ಜವಳಂಗೊಳ್' ಪರಾ.
[ ಜವಳ$_1$ (<ಜಮಳ) + ಆಗು$_1$ ]

**ಜವಳಿ$_1$, ಜವುಳಿ$_1$, ಜೌಳಿ** (ನಾ). ಬಟ್ಟೆ; ಅರಿವೆ; ವಸ್ತ್ರ: "ಸೀರೆಗಂ ಜುಗದೊಳಂ ಜವಳಿ" (ಶಬ್ದಮಂ. ೦೦೩); ಮೆಟ್ಟುವೆಡೆಗಳೊಳೆಲ್ಲಂ ಪಾಸಿ ಕಾರೋಹಣದ ಕಕ್ಕರವಟಯಿಗೆಯ ಚಿತ್ರಾವಟಿಯ . . . ಬಣ್ಣದ ಕಣದ ಬಣ್ಣವಣ್ಣಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪-೩೪ ವ); ತುಡುವ ತೊಡಿಗೆಗಳುಂ ಉಡಲ್ಕುಡುವ ಜವಳಿಗಳುಂ . . . ಪೂಜಿಸುವ ಕಣೆಶಂಗಳುಮೆಸೆಯೆ (ಲೀಲಾವ. ೭-೩೮ ವ); ಮಂಗಳಾರತಿ ಗಳೆತ್ತಿದರು ನಿವಾಳಿಯ ಮಂಗಳ ಜವಳಿ ಚಲ್ಲಿದವು (ಕುರಾಸಾಂ. ೪೦-೮೦); ಎತ್ತುವಾರತಿ ನಿವಳಿಪ ಜವಳಿಯ ದಿಂಡು ಮುತ್ತುರತ್ನಗಳ ಕಾಣಿಕೆಯ ನಿತ್ತು (ಮೋಹತ. ೨೫-೪೩). **ಜವುಳಿ$_1$**: ಮಂಗಳ ಜವುಳಿ ರಘುಳಂಬ ಮನುಂಗುರಮಾ ಕರ್ಣಶೋಭೆಯಂ ಪ್ರಿಯದಿಂ ವೈದ್ಯಂಗಿತ್ತು (ಅಶ್ವಶಾ. ೮-೩೦); ವಿಶೇಷವಾಗಿ ಜವುಳೀವ್ಯಾಪಾರವು ನಡಿಯುತ್ತದೆ (ಭೂಗೋಳ. ೪೪). **ಜೌಳಿ**: ಜನಿಸಿ ಜೌಳಿ ಮುನ್ತಾದರಿಂದ (ಎಳ. I, ೦೭-೨೪; 1820); ಅಡೋನಿ (ಆದಿವಾನಿ) ಎಂಬ ಊರು ಜೌಳೀವ್ಯಾಪಾರದಿಂದ ಪ್ರಸಿದ್ಧವಾದದ್ದು (ಭೂಗೋಳ. ೮೪).

**ಜವಳಿಯ ಮಳಿಗೆ** = ಬಟ್ಟೆಯ ಅಂಗಡಿ: ನಾನಾವರ್ಣದ ಜವಳಿಯ ಮಳಿಗೆಗಳೆಸೆದುವರ್ತಿಯಲಿ (ಕಂನವಿ. ೬-೭೦). **ಜವಳಿಯರು** = ವಸ್ತ್ರದ ವ್ಯಾಪಾರಿಗಳು: ಹೊಳೆವ ಹೊಂಬಣ್ಣದ ಹೊದಕೆಯ ಮಾರುವ ಜವಳಿಯರಿರ್ದರೊಂದೆಸೆಯ (ಅಬ್ಬಲೂ. ೩-೭೯).
[ ದೇ. ತಮಿ. ಮಲ. ಚವಳಿ ; ತುಳು. ಜವಳಿ, ಜವುಳಿ, ಜೌಳಿ ;
ತೆಲು. ಜವಳಿ ]

**ಜವಳಿ$_2$** 'ಜವುಳು' ನೋ.

**ಜವಳಿ$_3$** 'ಜಮಳ' ನೋ.

**ಜವಳಿ$_4$** 'ಚವಳಿ' ನೋ.

**ಜವಳಿ$_5$** (ನಾ). ಒಂದು ಬಗೆಯ ಭೂಮಿ (?): ಹೊಂನ ಜವಳಿಯಾಗಿ ಹತ್ತು ಕೇರಿ ಕಟ್ಟಳೆಯ × × (ಸೌಇಎ. ೦೯೩೨, ಉಡುಪಿ. ೩೦೩-೦೨; 1397); ಅಣ್ಣಸೆಟಿಯ ಹಿರಿಯ ಗದ್ದೆಯಿಂದಂ ಪಡುವಲು ತೆಂಕಲು ಹೆಗ್ಗಡಿತಿಯ ಮೂಲದ ಜವಳಿಯ ತಾಱ ಗಡಿಯಿಂದಂ ಬಡಗಲು (ಸೌಇಇ. IX-ii, ೪೨೪-೨೪; 1401); ಮಾಂನ್ಯ ಹೊಂನ ಜವಳಿಯೆಂದು ಪಾಲಿಸಿದು (ಸೌಇಎ. ೦೯೩೦, ಉಡುಪಿ. ೫೯೫-೦೩; ?). [ ? ]

**ಜವಳಿಅಂಗಡಿ** 'ಜವಳಿಯಂಗಡಿ' ನೋ.

**ಜವಳಿಕ** (ನಾ). ಬಟ್ಟೆಯ ವ್ಯಾಪಾರಿ; "ದೂಸಿಗ" (ಜತುನಿ. ೬. I, ೮೩).
[ ಜವಳಿ$_1$ + –ಕ$_3$ ]

**ಜವಳಿಕಾಯಿ** 'ಚವಳಿಕಾಯಿ' ನೋ.

**ಜವಳಿಕಾರ** (ನಾ).=ಜವಳಿಕ: (೬). [ಜವಳಿ$_1$ + –ಕಾರ$_1$ (< –ಕಾಱ)]

**ಜವಳಿಗ** (ನಾ). = ಜವಳಿಕ: ಹೊಂಬಣ್ಣದ ಹೊದಕೆಯ ಮಾರುವ ಮಳಿಗೆಯೊಳ್ ಜವಳಿಗರೆಸೆಯೆ[ಪಾಠಾಂ. ಜವಳಿಯರಿರ್ದರೊಂದೆಸೆಯ] (ಅಬ್ಬಲೂ. ೩-೮೯). [ ಜವಳಿ$_1$ + –ಗ$_2$ ]

**ಜವಳಿಗಟ್ಟು** (ನಾ). ಎರಡನ್ನು ಕೂಡಿಸಿ ಕಟ್ಟಿದ ಕಟ್ಟು; ಜೊತೆಕಟ್ಟು: ಪುರ್ವೆಂಬ ಜವಳಿಗಟ್ಟಿನ ಕರ್ವಿನ ವಿಲ್ಗಳ್ಗೆ ಬಿಗಿದ ಮಧುಕರಮಾಲಾ ಮೌರ್ವಿಯೆನೆ . . . ಮೆಱೆದುದವರ ತಳ್ತಮೊದುಱುಗಲ್ (ಯಶೋಚ. ೨-೨೬). [ ಜವಳಿ$_3$ (<ಜಮಳ) + ಕಟ್ಟು$_2$ ]

**ಜವಳಿಗದ** 'ಜವಳಿಗದವು' ನೋ.

**ಜವಳಿಗದವು, ಜವಳಿಗದ, ಜವಳಿಗದಹು** (ನಾ). ಎರಡು ಪಡಿ; ಜೋಡಿ ಕದ: ಒಂದು ಶಿವಲಿಂಗವಂ ತಂದನೆರಡೆವೆಯೆಂಬ ಜವಳಿಗದವಿನ ಬೀಯಗದ ಕೈಯ ತರ್ಪಂತಿರೆ (ಸೋಮಚ. ೧-೮೮). **ಜವಳಿಗದ**: ಜವನಿಕೆಯ ಸೆಱಗು ಸರಿವಂತೆ ಘಳಿಘಳಿಲೆಂದು ಜವಳಿಗದದೆಗೆಯೆ (ಸೋಮಚ. ೫-೩೫); ಜವಳಿಗದವಂ ದ್ವಾರವಟ್ಟದ ಹವಣಿಗಾ ಬಾಗಿಲೊಳಮರ್ಚಿಸಿ (ಬಸವು. ೧೬-೯); ಎನ್ನಧರ ಜವಳಿಗದ ಎನ್ನ ನಾಸಾಪುಟವು ನನ್ನಿಯಿಂ ಸೌರಭ್ಯ ರಸಘಟಿತವು (ಸುಶಾರ. ೧೬-೩). **ಜವಳಿಗದಹು**: ಅಲರ್ಗಣ್ಣೆವೆಯ ಜವಳಿಗದಹುಗಳನುಗಿದೆದ್ದು ನಿಂದು (ಸೌಂದಪು. ೦೨-೪೨). 'ಅಮಳ್ಗದ' ಪರಾ.
[ ಜವಳಿ$_3$ (<ಜಮಳ) + ಕದವು$_1$ ]

**ಜವಳಿಗದಹು** 'ಜವಳಿಗದವು' ನೋ.

**ಜವಳಿಗವಾಟ** (ನಾ). =ಜವಳಿಗದವು : ಜವಳಿಗವಾಟದ ಬೀಯಗದ ಬಲು ಲಾಳವಿಂಡಿಗೆಯ ಹುಲಿಮುಖದ ಹರಿಯುಗವ ಸುತ್ತಲು ನಿಲಿಸಿ . . . ರಾಜಾಲಯದ ಬಲ್ಮೆಯ ನೋಡಿ ಬೆಜಗಾದ (ಮೈರಾಕಾ. ೩-೩೦).
[ಜವಳಿ$_3$ (<ಜವಳ) + ಕವಾಟ]

**ಜವಳಿಗಹಳೆ,** ಜವಳಿಗಾಳೆ (ನಾ). ಜೋಡಂಕಹಳೆ : ಧವಳಶಂಖಂ ಕರೆವ ಜವಳಿಗಹಳೆಗಳಲ್ಲಿ . . . ನೆರೆದುದು ಚಾತುರಂಗಬಲ (ಇಹರ. ದೇ. ೩೮-೧). **ಜವಳಿಗಾಳೆ:** ಪಟಹದ ಢಕ್ಕೆಯ ಧವಳಶಂಖದ ಜವಳಿಗಾಳೆಯ ತಿತ್ತಿರಿಯ ಕಿನ್ನರಿಯ . . . ಕೋಳಾಹಳಂ ನೆಗಳೆ (ಗಿರಿಕ. ೬-೬೬ ವ).
[ಜವಳಿ$_3$ (<ಜವಳ) + ಕಹಳೆ]

**ಜವಳಿಗಾಳೆ** 'ಜವಳಿಗಹಳೆ' ನೋ.

**ಜವಳಿಗುಳ** (ನಾ). ಎರಡು ಬಗೆಯ ತೆರಿಗೆ : ಧರ್ಮ್ಮಗುರುಗಳಲ್ಲಿ ಜವಳಿ [ಗು]ಳವಂ ಮನ್ನಣೆ ಪ್ರತಿಪತ್ತಿವೆರಸು ಬ್ರಹ್ಮಪುರಿಗೆ ಕೇರಿಯ[ಕೆ]ಯ್ಯುಮಂ . . . ಪಡೆದು (ಸೌಇಇ. XI-I. ೬೪-೧೬ ; 1028).
[ಜವಳಿ$_3$ (<ಜವಳ) + ಕುಳ$_2$]

**ಜವಳಿಗೊಡೆ** (ನಾ). ಜೋಡು ಕೊಡೆ, -ಛತ್ರಿ : ಲಲನೆಯ ಬಾಸೆಯ ಕರ್ವೇಂ ಗೆಲೆವಂದುದೊ . . . ಮೊಲೆಯೆಂಬ ಜವಳಿಗೊಡೆಗಳ್ಗಲರಂಬಂ ತಿರ್ದಿ ಪಿಡಿದ ನೀಲದ ಕಾವಂ (ಅನಂಪು. ೧೨-೭೪). 'ಅವಳ್ಗೊಡೆ' ಪರಾ.
[ಜವಳಿ$_3$ (<ಜವಳ) + ಕೊಡೆ$_2$]

**ಜವಳಿಗೊಳ್** 'ಜವಳಂಗೊಳ್' ನೋ.

**ಜವಳಿಗೊಳಿಸು** (ಕ್ರಿ). ಜೊತೆಗೂಡಿಸಂ ; ಸೇರಿಸಂ : ಸೆಜ್ಜೆಯ ಮನೆಯ ಸಿರಿಮಂಚದ ಹಂಸತೂಳತಳ್ಪದೊಳ್ಜವಳಿಗೊಳಿಸಿ ತಾನುಂ ಸಖೀಜನಮುಮಂ ಜಾಣಿಂ ಜಾಣಿಲ್ (ಮಲುರ. ಹ. ೧೬೯-೨೪) ; ಅಗಲ್ದೋರ್ಪರ್ಗಿದು ಜವಳಿ ಗೊಳಿಪ ಮಂತ್ರದ ಸದನಂ (ವೀರವಿ. ೦-೩೪). [ಜವಳಿಗೊಳ್ + -ಇಸು$_3$]

**ಜವಳಿಜಂತ್ರ** (ನಾ). ಜೋಡಿ ಯಂತ್ರ ; ಅವಳಿಯಾಗಿರುವ ಯಂತ್ರ : ಸಾನಂದದಿಂದೆ ನೆರೆದವರ್ನಿರ್ನಾನಾಂಕನ ಜವಳಿಜಂತ್ರವೆಂಬಿನವಿುನಿಯರ್ (ಉದ್ಭಟ. ೮-೧೧೬) ; ಸೂಳೋಸರಿಸೆ ಕೆಡಪಿದ ಜವಳಿಜಂತ್ರದ ಬೊಂಬೆ ಯೆನಲೀರ್ವರು ಮಚಿದರೊಡಲ (ಸಾಳ್ವಭಾ. ೧೮-೩೭). 'ಅವಳ್ಜಂತ್ರ' ಪರಾ. [ಜವಳಿ$_3$ (<ಜವಳ) + ಜಂತ್ರ]

**ಜವಳಿಜೀವ** (ನಾ). ಒಂದೇ ಬಗೆಯಾದ ಎರಡು ಜೀವ ; ಅವಳಿಜೀವ : ಹವಣಿಗೆ ನಿಲ್ಲುವದೇ ಕೊನರಿ ಕೊಬ್ಬಿದ ಸ್ನೇಹದವಳನು ತೊರೆಯೆಂದರೆನಗೆ ಜವಳಿಜೀವಗಳಂತೆ ಸುರತದೊಳಿರ್ದೆಲ್ಲದಿವತಿಯನೆಂತು ಪೊಲಿಸುವೆ (ಸೌಂದರಾ. ೪-೬೩). [ಜವಳಿ$_3$ (<ಜವಳ) + ಜೀವ]

**ಜವಳಿಝುಣಂಬ** (ನಾ). ಒಂದು ಬಗೆಯ ಜೋಡಿ ವಸ್ತ್ರ, -ಗೌರವದ ಉಡಂಗೊರೆ : ಜವಳಿಝುಣಂಬವುಂ ಕೊಡೆಯುನನ್ದಳವುಂ ಚಮರೀ ರುಹಂಗಳಂ (ಬೊಂಕಶಾ. ೧೯೩೪, ಹಿರೇಕೆರೂರ್. ೨೦-೨೪ ; 1121).
[ಜವಳಿ$_3$ (<ಜವಳ) + ಝುಣಂಬ (<ಜಳಂಬ)]

**ಜವಳಿದಟ್ಟೆ** (ನಾ). ತಟ್ಟೆಗಳ ಜೊತೆ ; ಎರಡು ತಬಕ : ಜವಳಿದಟ್ಟೆಗಳು ಗೋಮುಖವು ದೀಪಸ್ತಂಭ ಚವುರಿಸತ್ತಿಗೆಗಳು (ಕೃಷ್ಣವಿ. ೨-೪೩).
[ಜವಳಿ$_3$ (<ಜವಳ) + ತಟ್ಟೆ]

**ಜವಳಿದಲೆ** (ನಾ). ಜೋಡಿತಲೆ ; ಎರಡುತಲೆ : ಬೇರೊಂದಬಿನೆರಡಾದ ಲತಿಕೆಯೋ ಮಾರಾನಲನ ಜವಳಿದಲೆಯೋ . . . ಎಂಬಂತೆ (ಜಯುಕಾ. ೨-೯). 'ಜವಳಿದಲೆಗ', 'ಜವಳಿದಲೆವಕ್ಕಿ' ಪರಾ.
[ಜವಳಿ$_3$ (<ಜವಳ)+ ತಲೆ$_1$]

**ಜವಳಿದಲೆಗ** (ನಾ). =ಜವಳಿದಲೆವಕ್ಕಿ : ಜವಳಿದಲೆಗನಳಲಿಸಿ ಬಂದು ತಾಂ ಗಜದ ಮೆಯ್ಮೆಳಲ ಸಾರ್ದು ಸ್ಯೆತಳಿಸುವುವು (ನಂದಿಮಾ. ೨-೨೫).
[ಜವಳಿದಲೆ + -ಗ$_2$]

**ಜವಳಿದಲೆವಕ್ಕಿ** (ನಾ). ಎರಡು ತಲೆಯ ಹಕ್ಕಿ ; ಗಂಡಭೇರುಂಡ : ಜವಳಿದಲೆವಕ್ಕಿಗಳಿನೇಳ್ಗೆವೆತ್ತುದು (ರೇವಣ. ೩೬-೭). 'ಅವಳ್ದಲೆವಕ್ಕಿ' ಪರಾ. [ಜವಳಿದಲೆ + ಪಕ್ಕಿ$_1$]

**ಜವಳಿದುಂಬಿ** (ನಾ). ತುಂಬಿಗಳ ಜೋಡಿ: ಎಕ್ಕಲದುಂಬಿಯಿಂ ಜವಳಿದುಂಬಿ ಯಿಂ . . . ಬಗೆಗೊಂಡುದು ಕೂಡೆ ಬನಂ ಬಸಂತದೊಳ್ (ಸೂಕ್ತಿಸು. ೧೧-೧೦). [ಜವಳಿ$_3$ (<ಜವಳ) + ತುಂಬಿ$_1$]

**ಜವಳಿದುಮ್ಮಾನ** (ನಾ). ಇಮ್ಮಡಿಯಾದ ದುಃಖ, - ಚಿಂತೆ : ದುರ್ಯೋಧನನ ಜನನಿಯು ಜವಳಿದುಮ್ಮಾನವನು ಬಣ್ಣಿಸಲಜಿಯೆ (ಕುಮ್ಮಾಅ. ೭-೪೬). [ಜವಳಿ$_3$ (<ಜವಳ) + ದುಮ್ಮಾನ]

**ಜವಳಿದೆಗೆ** (ಕ್ರಿ). ದ್ರುವವಿಲ್ಲದಂತಾಗು ; ಒಣಗಿಹೋಗಂ : ತವಕ ತಗ್ಗಿತು ಭಟರ ತಾಳಿಗೆ ಜವಳಿ[ಪಾಠಾಂ. ದ್ರುವವ]ದೆಗೆದುದು ಮನಕೆ ಭೀತಿಯ ಗವಸಣಿಗೆ ಘಾಡಿಸಿತು ಜಾಳಿಸಿತದಟರ ಪಸರಣ (ಕುಮ್ಮಾದ್ರೋ. ೧೩-೩೮).
[ಜವಳಿ$_2$ (<ಜವುಳು) + ತೆಗೆ$_1$]

**ಜವಳಿನುಡಿ** (ನಾ.) ೧. ಎರಡು ಮಾತಂ ; ಎರಡು ಶಬ್ದ : ಅವಿರತಂ ಕಲ್ಯಾಣದೊಳಗೆಣಿಸುವರೆ ಜನನುಂ ಬಸದಿಯೆಂಬೀ ಜವಳಿನುಡಿಯಿಲ್ಲೆನಲು ಹುಡಿಹುಡಿಮಾಡಿ . . . ಅತಿಶೌರ್ಯ ಗುಣವರ್ಧನನೆನಿಸಿದ (ಬಸವು. ೩೨-೪೮). ೨. ಇಬ್ಬಗೆಯಾದ ಮಾತಂ; ಮೊದಲು ಆಡಿದುದನ್ನು ಅಲ್ಲಗಳೆಯುವ ಎರಡನೆಯ ಮಾತು : ಜವಳಿನುಡಿಗಂಜುವೆನು ಘನ ಚಾಪವನು ಪೂಡಿ ದವಂಗೆ ಮಗಳನು ಜವದಿ ಕುಡುವಾ ಭಾಷೆ ತನ್ನದು (ರಾಮಾಸಂ. ೧-೪-೨೩).
[ಜವಳಿ$_3$ (<ಜವಳ) + ನುಡಿ$_2$]

**ಜವಳಿಪಡಿ** 'ಜವಳಿವಡಿ' ನೋ.

**ಜವಳಿಮದ್ದಳೆ** 'ಜವಳಿವದ್ದಳೆ' ನೋ.

**ಜವಳಿಯಂಗಡಿ,** ಜವಳಿಅಂಗಡಿ (ನಾ). ಬಟ್ಟೆಯಂಗಡಿ: ಚಕಚಕಿಸುತಿರ್ದವಾ ಜವಳಿಯಂಗಡಿಗಳತಿ ಸಿಂಗರಿಸಿ ಸೊಬಗುವೆರಸಿ (ಗುರುಚಾ. ೦-೩೨). **ಜವಳಿಅಂಗಡಿ:** ಝಗಝಗಿಸುವ ಜವಳೀಅಂಗಡಿ ಸಾಲುಗಳಿಂದಲೊಪ್ಪ (ಸೌಗಂಧಿ. ೫೦೯-೦೨). [ಜವಳಿ$_1$ + ಅಂಗಡಿ (<ಅಂಗಾಡಿ)]

**ಜವಳಿವಡಿ,** ಜವಳಿಪಡಿ (ನಾ). =ಜವಳಿಗದವು : ಎಳದಿಂಗಿನೆಳೆಯೆಲೆ ಯನವರ್ಕವಡೆಯ ಪೆಣೆದು ಸಂಪಗೆಯ ಮುಗುಳ ನಗೆ[ನೆ]ಗಳಿಂ ತೆತ್ತಿಸಿ ಬಿತ್ತರಂಬಡೆದ ಜವಳಿವಡಿಗಳೊಳಂ (ಚಂದ್ರಪು. ೭-೯೫ ವ). **ಜವಳಿಪಡಿ:** ಪಚ್ಚೆಯ ಲೋವೆ ಪವಳದ ಪೊಳೆವ ಜವಳಿಪಡಿಯಿಂದ . . . ಇಳೆಗತಿ ಚಲುವಾಗಿಹುವು (ಅಂಜಜ. ೩-೧೦೨). [ಜವಳಿ$_3$ (<ಜವಳ) + ಪಡಿ$_2$]

**ಜವಳಿವದ್ದಳೆ,** ಜವಳಿಮದ್ದಳೆ (ನಾ). ಜೋಡಿಮದ್ದಳೆ ; ಮದ್ದಳೆಗಳ ಜೊತೆ : ಯಮಳಮರ್ದಳ - ಜವಳಿವದ್ದಳೆ (ಶಮದು. ೨೯೨ ಪ್ರಯೋ). **ಜವಳಿಮದ್ದಳೆ:** ಬೀಣೆಯ ಜವಳಿಮದ್ದಳೆಯ ಕಂಸಾಳೆಯ ಸಂಕಿನ ಕಾಳೆಯುದ ಮೇಳದವರ್ (ರಾಮಾಶ್ವ. ೭೮-೧೯).
[ಜವಳಿ$_3$ (<ಜವಳ) + ಮದ್ದಳೆ (<ಮದ್ದಲಿ)]

**ಜವಳಿವಸರ** (ನಾ). =ಜವಳಿಯಂಗಡಿ: ನಮ್ಮಂತೆ ಧರೆಯೊಳಗೆ ಪೆಣ್ಗಾಳಗಳ ಲಜ್ಜೆಯಂ ಕಾಯ್ವ ಪಿರಿಯತನಮೆಲ್ಲಿಯದೆನಿಪ್ಪ ಪೆರ್ಮೆಯೊಳಲ್ಲಿ ಜವಳಿವಸರಗಳೆಸೆದುವು (ಜಬಪು. ೧೧-೪೫). [ಜವಳಿ$_1$ + ಪಸರ]

**ಜವಳಿವಾತು** (ನಾ). = ಜವಳಿನುಡಿ ೨ : ಬಿಡು ಜಾಳುನುಡಿಗಳ ಜವಳಿ ವಾತನೆನುತ್ತ ನರನೆಚ್ಚ (ಕುಮ್ಮಾಕ. ೨೨-೨೪).
[ಜವಳಿ$_3$ (<ಜವಳ) + ಮಾತು$_1$]

**ಜವಳಿವಿಡಿ** (ಕ್ರಿ). ಜೊತೆಯಾಗಿ ಹಿಡಿ; ಜೋಡಿಸಿ ಹಿಡಿ: ಹರಿ ನಗುತೆರಡು ಕೈಯಲಿ ಜವಳಿವಿಡಿದಿಬ್ಬರನು ವರಕೈಲಾಸಪರ್ವತಕೆ ಅವದಿರನು ತಿರಿಹಿಟ್ಟಡೆ . . . ಬಿದ್ದರು (ನಿಭಾಗ. ೧೧-೫೬-೧೩).
[ಜವಳಿ$_3$ (<ಜವಳ) + ಹಿಡಿ$_1$]

**ಜವಳಿವೆಟ್ಟು** (ನಾ). ಎರಡು ಬೆಟ್ಟ; ಬೆಟ್ಟಗಳ ಜೋಡಿ: ಜವಳಿವೆಟ್ಟುಗಳ ಮೇಲೆ ಮಳೆಗರೆವ ಮೇಘಗಳಂತೆ ಕರ್ಣ ದುರ್ಯೋಧನರ ಮೇಲೆ ಬಾಣದ ಮಳೆಯಂ ಕರೆವುತ್ತಂ (ಭಾರತಂ. ೮). [ಜವಳಿ₂ (<ಜವಳ) + ಬೆಟ್ಟು₂]

**ಜವಳಿವೆಱೆ** (ನಾ). ಚಂದ್ರರ ಜೋಡಿ: ಜವಳಿವೆಱೆ ಮನುಜರೂಪದಿ ನವನಿಯೊಳೊಗೆದಂತೆ ಕಾಂತಿ ಮೆಱೆವವುವಿಂದಿಂತಿವರ್ಗಳ ಚೆಲ್ವಿಕೆ (ಯಶೋಚ. ೧-೬೨): ಪೊಳೆವವರ್ದಂ ಕಾಂಚನಯುಗ ಕಳಶಕ್ಕಂ ಜವಳಿ ವೆಱೆಯೆ ಕರೆವಂತೆರಡುಂ ಬಿಳಿಯಾನೆ ಮಿಸಿಸೆ . . . ಲಕ್ಷ್ಮಿಯಂ ಸತಿ ಕಂಡಳ್ (ಅನಂಪು. ೪-೧೦೩). [ಜವಳಿ₂ (<ಜವಳ) + ವೆಱೆ]

**ಜವಳಿಸು** (ಕ್ರಿ). ಜೊತೆಗೂಡು; ಒಂದೆಡೆ ಸೇರು; ಕೂಡಿಕೊಳ್ಳು: ಎಳೆಮುತ್ತುಗಳ ಚಂದ್ರಿಕೆ ಜವಳಿಸಿದವೊಂದೊಂದನೌಕಿದವವಿರಳಿತ ಮಣಿ ಕಿರಣವೇಣೀಬಂಧಬಂಧುರದಿ (ಕುಮ್ಮಾ.ಸ. ೧೩-೨೬); ಒಸೆದೆರಡುಕಡೆಯಾನೆ ಗಳು ಜವಳಿಸಿ ಬರಲು ಹರವೀಥಿಯಲಿ ಈಕ್ಷಿಸುವ ಜನಗಳ ಕಣ್ಣ ಪುಣ್ಯದ ಪುಂಜವೆನಿಸಿದರು (ಶಾಳ್ವಭಾ. ೦೩-೧೧). [ಜವಳ₁ (<ಜವಳ)+ -ಇಸು₃]

**ಜವಳು** 'ಜವುಳು' ನೋ.

**ಜವಳೆ** 'ಜಳವೆ' ನೋ.

**ಜವಳೆಪಾದ** (ನಾ). ಗಳುವಿನಂತಹ ಕಾಲು; ಉದ್ದವಾಗಿದ್ದು, ತೆಳು ವಾಗಿರುವ ಕಾಲು (?): ಆವ ಸ್ತ್ರೀಯು ವಿದ್ರೂಪವು ಬೆಳ್ಳಾಗಿಯಿದ್ದವಳು ಜವಳೆಪಾದವುಳ್ಳವಳು . . . ಪುರುಷಂಗೆ ವೈರಮನೆಯ್ದುವರು (ಸಾಮುಲ. ೩೬-೧೩). [ಜವಳೆ (<ಜಳವೆ) + ಪಾದ]

**ಜವಾಜಿ** 'ಜವಾದಿ' ನೋ.

**ಜವಾಜಿಮಿಗ** 'ಜವಾದಿಮಿಗ' ನೋ.

**ಜವಾದಿ,** ಜವಾಜಿ, ಜವ್ವಾಜಿ, ಜವ್ವಾದಿ (ನಾ). ಒಂದು ಬಗೆಯ ಸಂಗಂಧದ್ರವ್ಯ; ಪುನುಗು: "ಪುಣುಗು ಮಾರ್ಜಾಲಿಯೆನೆ ಜವಾದಿ ಯೆನಿಕ್ಕು" (ಮಂಗರಾ. ೯೯-೨೨); ಮೃಗಮದದ ಚಂದನದ ಕರ್ಪೂರದಗಿಲು ಸಾದು ಜವಾದಿಗಳ ಸಿಂಪುಗಳೆನೆಸೆದುದು ನೋಡೆವಾರವಧೂಟಿಕಾನಿಳಯ (ಬಸಪು. ೦೨-೧೧): ವರ ಜವಾದಿ [ಪಾಠಾಂ. ಜಿ]ಯ ಶೃಂಗಗಳ ಕರ್ಪೂರದ ತವಲಾಯಿಗಳ ಸಾದಿನ ಭರಣಿಗಳ ಮೃಗನಾಭಿಗಳನಡಕಿದರು ಬಂಡಿಯಲಿ (ಕುಮ್ಮಾ.ಆ. ೦೨-೦೬). **ಜವಾಜಿ:** ಅಗಿಲು ಸಾದು ಜವಾಜಿ [ಪಾಠಾಂ. ದಿ] ಚಂದನ ಮೃಗಮದಂ ಘನಸಾರ ಗಂಧಾದಿಗಳನೆಲ್ಲಂ ತೆಗೆದು ಪನ್ನೀರಿಂದ ಮೇಳಯಿಸಿ (ಬಸಪು. ೪. ೩೫); ಸಾಧು ಜವಾಜಿ ಕತ್ತುರಿ ಗಂಧಲೇಪದಲಿ . . . ಆಹವಕ್ಕನುವಾದನಭಿಮನ್ಯು (ಕುಮ್ಮಾ.ದ್ರೋ. ೪-೪೯). **ಜವ್ವಾಜಿ:** ಕಪ್ಪುರಕೆ ಕುರುಜು ಎಂಬುದು ಪೊಪ್ಪುವ ಜವ್ವಾಜಿಗೆ ವಂಕಿ ಚಿನ್ನ ಬೆಳ್ಳಿಗೆ ತೂಕಂ (ವ್ಯವಹಾ. ೩-೦೬ ಅನು. ೦); ಶ್ರೀಗಂಧವನ್ನು ಕರಿ ಅಗರುಗಂಧ ದಿಂದಲೂ, ಜವ್ವಾಜಿ ಕಸ್ತೂರಿ ಮುಂತಾದವುಗಳನ್ನು ಸೇರಿಸಿ ಧರಿಸಿದಲ್ಲಿ ಹೆಚ್ಚು ವಾತಾದಿ ದೋಷಗಳು ಪರಿಹಾರವಾಗುವುವು (ಸಕಲವೈ.೮೦). **ಜವ್ವಾದಿ:** ಓರಣದ ಬೀದಿಯಲಿ ತಳಿತುವು ತೋರಣಂಗಳು ಹಲವು ಪರಿಯಲಿ ಸಾರಿಸಿತು ಮುಗಿಲುಗಳು ಸಾದು ಜವ್ವಾದಿ ಕೆಸರಿನಲಿ (ಸಂಭಶ ೨೦-೯೯).

**ಜವಾದಿಕೋಲಾಹಲ,** **ಜವಾದಿಕೋಳಾಹಳ,** **ಜಾವಾದಿಕೋಳಾಹಳ** = ಜವಾಜಿಯ ಪರಿಮಳದಂತೆ ಪಸರಿಸಿದ ಕೀರ್ತಿಯುಳ್ಳವನು; ಒಂದು ಬಿರುದು: ನರಲೋಕದಲ್ಲಣಂ . . . ನೃಪತಿಕೋಲಾಹಲಃ; ಜವಾದಿ ಕೋಲಾಹಲಂ (ಶಬ್ದಾನು. ೨೯೩ ವ್ಯಾಖ್ಯಾ); ಜವಾದಿಕೋಳಾಹಳ ಪೇಸಾಳಿ ಹನುಮವ್ಲಾಅರಸಂಗ ಮೊನೆಗಾಣಿ ಗೇಣಾಂಕ (ಮೈಆರಿ. ೧೯೯೬, ೨೩-೨; 1495); ಜವಾದಿಕೋಳಾಹಳ! ಘೇಣಾಂಕ ಚಕ್ರೇಶ್ವರ! (ಬಿರುಗಂ. ೨೮-೧೮); ಶ್ರೀವೀರ ಘೇಣಂಕಚಕ್ರೇಶ್ವರ ಜಾವಾದಿಕೋಳಾಹಳ ಪೇಸಾಳಿ ಹನುಮ ಗಜ ಬೇಂಟೆಗಾಣಿ ಬಿರುದುಳ್ಳ (ಎಕ. XIV, ಎಳಂದೂ. ೦೩-೪; ?).

[ ←ಹಿಂ. ಮರಾ. ಜವಾದೀ; ಪಾರ. ಜಬಾದ್; ಅರ. ಜಬ್ಬಾದ್ ]

**ಜವಾದಿಮಿಗ,** ಜವಾಜಿಮಿಗ (ನಾ). ೧. ಪುನುಗಿನ ಬೆಕ್ಕು. ೨. ಕಸ್ತೂರಿ ಮೃಗ: (೬). **ಜವಾಜಿಮಿಗ:** (೬). [ಜವಾದಿ + ಮಿಗ]

**ಜವಾಧಿಕ** (ಗು). ಹೆಚ್ಚಾದ ವೇಗವುಳ್ಳ; ಬಲು ಚುರುಕಾದ: (೬). [ಜವ₂ + ಅಧಿಕ]

**ಜವಾನ** (ನಾ). ಸೇವಕ; ಆಳು; ಚಪರಾಸಿ: ಉದುಪಿನಿಂದಲೂ ರುಮಾಲಿನಿಂದಲೂ ಸರ್ಕಾರಿ ಜವಾನರೆಂದು ತಿಳಿಯಿತು (ಹೆಂಗಾಳ್ವ. ೦೧೧); ತಮ್ಮ ಮನೆಯ ಜವಾನನಿಗೆ ಬಟ್ಟೆಗಳನ್ನು ಒಗೆದು ಇಸ್ತ್ರೀ ಮಾಡಿಕೊಡು ವಂತೆ ಹೇಳಿದನು (ಕಲಾಸಾ. ೫). [ ←ಪಾರ. ಹಿಂ. ಮರಾ. ಜವಾನ್ ]

**ಜವಾನಿ** (ನಾ). ಕೆಲಸದವಳು; ಒಕ್ಕಲಗಿತ್ತಿ: ಕುಸುಮಳ ಮನೆಯ ಜವಾನಿ ಬಂದಳು (ಏಕಾಂಗಿ. ೧೧೪). [ಜವಾನ + -ಇ₂]

**ಜವಾಬ್** 'ಜವಾಬು' ನೋ.

**ಜವಾಬ್‌ಸವಾಲ್,** ಜಬಾಬುಸವಾಲು(ನಾ). ಪ್ರಶ್ನೆ ಕೇಳುವುದು ಮತ್ತು ಉತ್ತರವನ್ನು ಪಡೆಯುವುದು; ಪ್ರಶ್ನೋತ್ತರ; ವಿಚಾರಣೆ: ಈ ಪ್ರಕಾರ ಜವಾಬ್‌ಸವಾಲ್ ಆಗುತ್ತಾ ಇರುವಾಗ್ಯೆ (ರಾಜೇಂದ್ರ. ೧೧). **ಜಬಾಬುಸವಾಲು:** ಜಬಾಬುಸವಾಲು ಮಾಡುವ ನಿಮಿತ್ತಾ ಹೈದರಲ್ಲಿ ಖಾನರು ದಿಂಡಿಗಲ್ಲಿಂದ ಪಟ್ಟಣಕ್ಕೆ ಬಂದರು (ಹೈದರ್. ೭೩).

[ ←ಪಾರ. ಹಿಂ. ಜವಾಬ್‌ಸವಾಲ್; ಮರಾ. ಜವಾಬ್‌ಸವಾಲ್, ಜಬಾಬ್‌ಸವಾಲ್ ]

**ಜವಾಬದಾರ** 'ಜವಾಬುದಾರ' ನೋ.

**ಜವಾಬದಾರಿ** 'ಜವಾಬುದಾರಿ' ನೋ.

**ಜವಾಬು,** ಜಬಾಬು, ಜವಾಬ್ (ನಾ). ೧. ಉತ್ತರ; ಮರು ನುಡಿ; ಎದುರುನುಡಿ: ಆ ಮೈಸೂರವರು ಮಾಡಿದ್ದಕ್ಕೆ ಪ್ರತಿಜವಾಬು ಕೊಡುವ ಬಗ್ಗೆ . . . ನಾವು ಹಾಜರು ಇದ್ದೇವೆ (ರಾಜೇಂದ್ರ. ೩); ಮಾತಿಗೆ ಮಾತು ಜೋಡಿಸಿಕೊಂಡು ನನಗೆ ಜವಾಬು ಹೇಳುತ್ತಿದ್ದಳು (ಹೆಂಗಾಳ್ವ. ೧೩೪). ೨. ಮೊಕದ್ದಮೆಯ ವಿಚಾರಣೆಯಲ್ಲಿ ಆರೋಪಿ ಅಥವಾ ಸಾಕ್ಷಿ ದಾರನು ನೀಡುವ ಹೇಳಿಕೆ: ರಾಮಪ್ಪನ ತಾಯಿ ಅಕ್ಕ ಇಬ್ಬರ ಜವಾಬನ್ನೂ ಈಗಲೇ ತೆಗದುಕೊಂಡು ಬಿಡೋಣ (ನಾಪೋಲೀ. ೨೦೨). ೩. ಹೊಣೆ; ಜವಾಬ್ದಾರಿ. 'ಜವಾಬುದಾರಿ' ಪರ್ಯಾ. ೪. ಪತ್ರ; ಕಾಗದ: ಕಾಗದ ಬರೆದು ಹತ್ತುದಿನಗಳಾದರೂ ಜವಾಬು ಬರಲೇ ಇಲ್ಲ (ರೂಢಿ). **ಜಬಾಬು:** ೧. 'ಜಬಾಬುಸವಾಲು' ಪರ್ಯಾ. **ಜವಾಬ್:** ೧. ಸಿಡಿಲಿಗೆ ಸಿಡಿಲಾಗಿ ಜವಾಬ್ ಕೊಡುವುದು ತಾನೆ (ಕೊನಪ್ಪ. ೧೮).

[ ←ಅರ. ಪಾರ. ಹಿಂ. ಜವಾಬ್; ಮರಾ. ಜವಾಬ್, ಜಬಾಬ್ ]

**ಜವಾಬುದಾರ,** ಜವಾಬದಾರ, ಜವಾಬ್ದಾರ (ನಾ). ಜವಾಬುದಾರಿ ಯುಳ್ಳವನು; ಹೊಣೆಗಾರ: ಮನೆಯ ಖರ್ಚಿಗೆಲ್ಲಾ ಅವನೇ ಜವಾಬು ದಾರನಾಗಿದ್ದಾನೆ (ರೂಢಿ). **ಜವಾಬದಾರ:** ಇವನು ಅರಸನಿಗೆ ಜವಾಬ ದಾರನಾಗಿದ್ದನು (ಹಿಂದುಇ. ೧೫೦); ಅವನ ತರುವಾಯ ವ್ಯವಹರಿಸಿದ ಯಾವತ್ತರು ಹುಂಡಿಯ ಹಣವನ್ನು ಕೊಡಲಿಕ್ಕೆ ಜವಾಬದಾರರಿರುತ್ತಾರೆ (ಮೋಹಿನೀ. ೩೦). **ಜವಾಬ್ದಾರ:** ಇಂತಹ ಗ್ರಾಮಗಳಲ್ಲಿ ಮೊದಲನೆ ಚೀಫ್ ಕರಣೀಕರುಗಳೇ ಹಣ ವಸೂಲಿ ಲೆಖ್ಖಗಳಿಗೆ ಜವಾಬ್ದಾರರಾಗಿರುವರು (ಗ್ರಾಮಾಕ. ೩). [ ←ಪಾರ. ಹಿಂ. ಮರಾ. ಜವಾಬ್‌ದಾರ್ ]

**ಜವಾಬುದಾರಿ,** ಜವಾಬದಾರಿ, ಜವಾಬ್ದಾರಿ (ನಾ). ಹೊಣೆ; ಹೊಣೆ ಗಾರಿಕೆ: ನಿಮ್ಮ ಜವಾಬುದಾರಿಯನ್ನು ತಿಳಿದುಕೊಂಡು ವರ್ತಿಸಿರಿ (ರಂಗರೋ. ೫೮). **ಜವಾಬದಾರಿ:** ನಮ್ಮ ಕಣ್ಣ ಮುಂದ ಇದ್ದ ಮ್ಯಾಲಿ ಜವಾಬದಾರಿ ಹೊತಗೊಳ್ಳಬೇಕಾಗತದ (ಪ್ರನಿ. ೩೦೨). **ಜವಾಬ್ದಾರಿ:** ಮನೆಯವರಿಗೆ ಅನ್ನ-ಪಾನಗಳನ್ನು ತಯಾರಿಸಿಕೊಡುವ ಜವಾಬ್ದಾರಿಯು ಮನೆಯ ಗೃಹಿಣಿಯದು (ಅರುಸಾ. ೫೬). [ ←ಮರಾ. ಜವಾಬ್‌ದಾರೀ ]

**ಜವಾಬ್ದಾರ** 'ಜವಾಬುದಾರ' ನೋ.

**ಜವಾಬ್ದಾರಿ** 'ಜವಾಬುದಾರಿ' ನೋ.

**ಜವಾಬ್ದಾರಿಕೆ** (ನಾ). = ಜವಾಬುದಾರಿ: ಒಂದೊಂದು ಸಲ ಆ ಜವಾಬ್ದಾರಿಕೆಯ ಬಿಕ್ಕಟ್ಟು ಬಂದಾಗ (ಮುಂಗಾಮು. ೧೦೧); ಜವಾಬ್ದಾರಿಕೆ ಮೈಮೇಲೆ ಹಾಕಿಕೊಂಡುದುದರಿಂದ . . . ನಗಲೂ ನನಗೆ ಸಾಧ್ಯವಿಲ್ಲ (ನಡದಾ. II, ೯೩೦). [ ಜವಾಬ್ದಾರ (<ಜವಾಬುದಾರ) + – ಇಕೆ ]

**ಜವಾಯಿಲ, ಜವಾಯ್ಲ** (ಗು). ಚುರುಕಾದ; ವೇಗವುಳ್ಳ; ವೇಗಶಾಲಿಯಾದ. 'ಜವಾಯಿಲತನ' ಪರಾ. ಜವಾಯ್ಲ: ಜೋಡಿಸಿದನಂದು ಜವಾಯ್ಲ ಜಾಯಿಲನ (ಕುವ್ಯಾ.ಅ. ೧೩-೧೯); ಆಯುಧದ ಮಳೆಗಳಲಿ ನನೆದ ಜವಾಯ್ಲ ತೇಜಿಗಳ . . . ಕರೆಕರೆದು ಬವರಕೆ ಕಳುಹಿಸಿದನು (ಕುವ್ಯಾದ್ರೋ. ೦೩-೧೭). [ ಜವ₂ + – ಆಯಿಲ₂ ]

**ಜವಾಯಿಲತನ** (ನಾ). ಚುರುಕುತನ; ಚಟುವಟಿಕೆ; ವೇಗ: ಹಾಜಿದವು ಹಂಸಾವಳಿ ಜವಾಯಿಲತನದಿ ಜಗುಳ್ದವು ಜಕ್ಕವಕ್ಕಿಗಳು (ಕುವ್ಯಾಗ. ೩-೨). [ ಜವಾಯಿಲ + – ತನ ]

**ಜವಾಯ್ಲ** 'ಜವಾಯಿಲ' ನೋ.

**ಜವಾರಿ₁** (ಗು). ಸ್ವದೇಶದಲ್ಲಿ ಹುಟ್ಟಿ ಬೆಳೆದ; ದೇಶೀಯ; ನಾಟಿ: ಸಣಬು ಜವಾರಿ ಚಲೋ ಕಾಗದಗಳನ್ನು ಮಾಡುವದಕ್ಕೂ ಗಚ್ಚಿನ ಹದಕ್ಕೂ ಬರುತ್ತದೆ (ಕೃಷಿಪ್ರ. ೫೭)'; ಇಲ್ಲಿಯೇ ಹುಟ್ಟಿ ಬೆಳೆದ ದನಗಳಿಗೆ ಜವಾರಿ ದನಗಳೆನ್ನುವರು (ಜೀವ. ೩೨); ಮುಂದೆ ಬಣ್ಣಬಣ್ಣದ ಸಮವೇಷದಲ್ಲಿದ್ದ ಬ್ಯಾಂಡಿನವರು, ಅವರ ಹಿಂದೆ ಜವಾರಿ ಬಜಂತ್ರಿಯವರು (ಅನ್ನ. ೨೭೦). [ ←ಮರಾ. ಜವಾರೀ, ಜವಾರ್ ]

**ಜವಾರಿ₂** 'ಜವಾಹಿರಿ' ನೋ.

**ಜವಾರಿಬಟ್ಟೆ** (ನಾ). ಸ್ವದೇಶಿ ಬಟ್ಟೆ: ಕೆಲವರು ಉರುಟಾಗಲೀ ತುಟ್ಟಿಯಾಗಲಿ ಜವಾರೀಬಟ್ಟೆಗಳನ್ನೇ ಉಪಯೋಗಿಸುತ್ತಾರೆ (ಮುಂಬಯಿ. ೪-೦೬೦). [ ಜವಾರಿ₁ + ಬಟ್ಟೆ₂ ]

**ಜವಾರಿಮಂದಿ** (ನಾ). ಗ್ರಾಮೀಣ ಜನ; ಹಳ್ಳಿಯ ಜನ: ಜವಾರಿ ಮಂದಿಗೆ ಅವೆಲ್ಲ ತಿಳಿಯೋದುಲ್ಲ (ಧನಂಜ. ೩೨). [ಜವಾರಿ₁ + ಮಂದಿ₁]

**ಜವಾಹಿರ** 'ಜವಾಹಿರಿ' ನೋ.

**ಜವಾಹಿರಿ, ಜವಾರಿ₂, ಜವಾಹಿರ, ಜವಾಹಿರು, ಜವಾಹೀರ₁, ಜವಾಹೀರು** (ನಾ). ೧. ಬೆಲೆಯುಳ್ಳ ಮಣಿ; ರತ್ನ: ಇದ್ದ ನಗದು ಜವಾಹಿರಿ ಸಾಗಿದಷ್ಟು ಹಣದ ಥೈಲಿಗಳ ಕಟ್ಟಳಿ (ಹೃದರ. ೧೦೯). ೨. ರತ್ನಖಚಿತವಾದ ಒಡವೆ,–ಆಭರಣ: ಮೈಸೂರಿನ ಅರಮನೆಯ ಕರ್ಮಚಾರಿಗಳು ಜವಾಹಿರಿಗಳೆಲ್ಲವನ್ನೂ ತಂದು ಹಜಾರದಲ್ಲೆಲ್ಲಾ ಅಣಿಮಾಡಿಟ್ಟದ್ದರು (ಶ್ರೀರಾಯ. ೨೬೩); ಸಂಜೆ ಜವಾಹಿರಿ ಅಂಗಡಿಗೆ ಕರೆದುಕೊಂಡು ಹೋಗುತ್ತಾರೆ (ಚಂಗೂಲಿ. ೦೪೯). **ಜವಾರಿ₂**: (ಈ). **ಜವಾಹಿರ**: ೧. ಮುತ್ತು ಹವಳ ಮುಂತಾದ ಜವಾಹಿರ ಮಾಲಿನ ಖರೀದಿಗೆ ಅಡತಿ ಹಾಂಗು ಧರ್ಮಾದಾಯ (ಮುಂಬಮ್ಯಾ. ೩೨, ಪ್ರಸ್ತಾವನೆ). **ಜವಾಹಿರು**: ೨. ಖಜಾನೆ ಹಣ ಜವಾಹಿರು ದೇವಸ್ಥಾನದ ವಡವೆಗಳು ಮುಂತಾಗಿ ವಂದು ಹಿಸ್ಸೆ ಸರಿ ಮಾಡಿಕೊಟ್ಟು (ಹೃದರ. ೬೨); **ಜವಾಹೀರ₁**: ೧. ಜವಾಹೀರ (ರತ್ನ, ಹರಳು ಮುಂತಾದವುಗಳು) (ಮುಂಬಮ್ಯಾ. ೦೩೮). **ಜವಾಹೀರು**: (ಈ). [←ಅರ. ಫಾರ. ಜವಾಹಿರ್, ಜೌಹರ್; ಹಿಂ. ಜವಾಹಿರ್, ಜವಾಹರ್; ಮರಾ. ಜವಾಹೀರ್, ಜವಾಹರ್]

**ಜವಾಹಿರಿಹಿಡಿ** (ನಾ). (ಕತ್ತಿಯ) ರತ್ನಖಚಿತವಾದ ಹಿಡಿ: ಇದರಲ್ಲಿದ್ದ ಜವಾಹಿರಿಹಿಡಿ ಮತ್ತು ಮಖಮಲ್ ಒರೆ ಸಹಿತವಾದ ಒಂದು ಕತ್ತಿಯು ಹೋಳ್ಕರ್ ಮಹಾರಾಜರದೆಂದು ತಿಳಿಯಬಂತು (ಮಹಾಪಂ. II, ೪೯). [ ಜವಾಹಿರಿ + ಹಿಡಿ₂ (<ಪಿಡಿ₂) ]

**ಜವಾಹಿರು** 'ಜವಾಹಿರಿ' ನೋ.

**ಜವಾಹೀರ₁** 'ಜವ್ಹಾಹಿರಿ' ನೋ.

**ಜವಾಹೀರ₂** (ನಾ). ೧. ರತ್ನಪಡಿ ವ್ಯಾಪಾರಿ: ಪೇಟೆಯಲ್ಲಿ ಗಂಧೀಜನರ, ಜವಾಹೀರರ . . . ಅಂಗಡಿಗಳು ಅಂದವಾಗಿ ಕಾಣುತ್ತವೆ (ಮಂಜುಕ. ೮). ೨. ರತ್ನಪರೀಕ್ಷಕ. [ ←ಫಾರ. ಜೌಹರೀ; ಹಿಂ. ಜವಾಹರೀ, ಜೌಹರೀ ]

**ಜವಾಹೀರು** 'ಜವಾಹಿರಿ' ನೋ.

**ಜವಿ₁, ಜವೆ₁, ಜವೆ₁** (ನಾ). ಕೂದಲು; ಕೇಶ: ಪಿಡಿದ ಗೋವಳಿಗೋಲ ಮಾಲೆಗಳ ಹಾಹೆಯಿಂ ತೊಡರ ಬಾವುಲಿಯೊಳಗೆ ಜವಿ . . . ಎಸೆವುತಿರೆ ಬಂದು ಮಹಮನೆಯ ಗೋವಳಂ (ಬಸರ. ೯-೯೮); ತುದಿಯ ಬಾಲದ ಜವಿಯ ಬಿಡದವರಥಟನಿಂದಟ್ಟಿದರು (ಜನಭಾ. ೫೭-೨೨); ಅವುಗಳ ಕತ್ತಿನ ಮೇಲಿನ ಕೂದಲು ಕತ್ತರಿಸಿರಲಿಲ್ಲ . . . ಆ ಜವಿಯು ಎಳೆಬಿಸಿಲಿನಲ್ಲಿ ಹೊಳೆಯುತ್ತಿತ್ತು (ಚಂಗಾಳ್. ೬೨೦). **ಜವೆ₁**: (ಈ). **ಜವೆ₁**: ಈ ಗಾದಿಯೊಳಗೆ ಕುದುರೆಯ ಜವೆಯನ್ನು ತುಂಬಿರುವ ಕಾರಣ (ಮುಂಬಯಿ. ೫-೨೦೬); ಜವೆ ಕತ್ತರಿಸುವವರು ನಿನಗೆ ನೆನಪಿದೆಯೆ (ಬುದ್ಧಕ. ೪೩ ಮಿಂಚು). 'ಜವೆಗೊಂಕು' ಪರಾ. [ ದೇ.॥ ತೆಲು. ಜವ್ವಿ ]

**ಜವಿ₂** (ಗು). ೧. ಚುರುಕಾದ; ವೇಗಶಾಲಿಯಾದ; ವೇಗವಾಗಿ ಓಡುವ. (ನಾ). ೨. ವೇಗವುಳ್ಳವನು; ವೇಗವಾಗಿ ಓಡುವವನು: ಅವನಿವಲ್ಲಭನ್ನ ಮಕ್ಕಳ ಯುವತಿಯರ್ಕಳ ಜಯಿಸಲಜಿಯದೆ ಜವಿಗಳಪಗತಮಾನ ರೈದಿದರಾತ್ಮಗಳ (ಫಹಿಜ. ೨-೪). ೩. ಕುದುರೆ. ೪. ಒಂಟೆ. [ ಸಂ. ಜವಿನ್ ]

**ಜವಿವಲೆ** (ನಾ). ಒಂದು ಬಗೆಯ ಬಲೆ: ಜ್ಯೋಯಿಸರ ಜವಿವಲೆ[ಪಾಠಾಂ. ಜವನಿಕೆ]ಗೆ ಸಿಲುಕೆನೆನುತ್ತ ಹೊಟವಂಟ (ಕುವ್ಯಾ.ಅ. ೨೨-೪); ಕರಿಯ ಜವಿವಲೆ ಮುಸುಕುವಲೆ ಬಿತ್ತರದ ನೇಣ್ವಲೆ (ಸಾಳ್ವಭಾ. ೫-೦೯). [ ಜವಿ ? + ಬಲೆ₁ ]

**ಜವುಗಿಡು, ಜೌಗಿಡು**(ಕ್ರಿ). ತೇವವಾಗು; ಆರ್ದ್ರವಾಗು: ಇಟ್ಟ ಕತ್ತುರಿಯ ತಿಲಕದ ಕಪೋಲದೊಳು ಜವುಗಿಟ್ಟೊ[ಪಾಠಾಂ. ಚಲುವಿಟ್ಟ]ಸರುವಂ ತೊಟ್ಟಿಕೊಂಡ ಪುಣುಗಿನ ಕಂಪನೊಟ್ಟೈಸಿ (ಸೋಮಜ. ೨-೦೭). **ಜೌಗಿಡು**: "ಜೌಗಿಡು–ಜೌಳಿಸು, ದ್ರವಿಸು, ಜಿನುಗು, ಜವುಳಿಸು" (ಪ್ರಭಣ್ಣ). [ ಜವುಗು + ಇಡು₁ ]

**ಜವುಗು, ಜೋಗು₂, ಜೌಗು** (ನಾ). ೧. ತೇವ; ಒದ್ದೆ; ಜಿನುಗು: ಉಚ್ಚೆಯ ಜವುಗಿನ ಬಚ್ಚಲ ತಂಪಿನಲ್ಲಿ ನಿಚ್ಚಕ್ಕೆ ನಿಚ್ಚ ಹೊರಳುವ ಹೀಹಂದಿಯಂತೆ (ಅವಹಂ. ೭೦-೩೦೭); ನೆಲನೆಲ್ಲ ಜವುಗಾಯ್ತು ಮೊದಲು ಮತ್ತುಟಿ ತೇದು ತೊಳೆದುಹೋದುವು ಬಡ ಬೆಟ್ಟ (ಭರಜ. ೩೪-೬೦); ಕೆಳಗಡೆಗೆ ಜವುಗಾಗಿ ನೀರು ಜಿನುಗಿ (ಕಲ್ಯಾತ. ೭೬). ೨. ಯಾವಾಗಲೂ ನೀರು ಒಸರುವ ಪ್ರದೇಶ; ಜಿನುಗುವ ಭೂಮಿ; ಸದಾ ತೇವವಾಗಿರುವ ನೆಲ: (ಈ). **ಜೋಗು₂**: ೧. ಉರ್ವೀತಳಮದು ನೆಟ್ಟಿ ಜೋಗಿರ್ದು ಮೆಟ್ಟಲ್ಕೆ ಬಲ್ಪೊಂದೆಡೆಯಿಲ್ಲೆಂಬಂತೆ ಪಂಕಂ ಮಸಗೆ ನೆನೆದು (ಕುಸುಮಾ. ೬-೩೩). **ಜೌಗು**: ೧. ಸರ್ವಾಯುಧ ಪ್ರೋಚ್ಚಳಿತ ಪ್ರದ್ಯೋತದಿಂ ಭೂತಳಮದು ನೆಟ್ಟಿ ಜೌಗಾಗೆ (ಕುಸುಮಾ. ೦೩-೦೦೩); ಸುರಿವ ಕರುಳೋಳಿಯಿಂ ಮಡಿದ ತುರಗಾಳಿಯಿಂ ಬಿಡುವಿಡುದುಳ ಜೌಗಿನಿಂದೆ . . . ರಣಭೂಮಿ ಕಣ್ಗೆಸೆದುದು (ಚಿಬಪು. ೪೪-೪೦); ಅಲ್ಲಿ ಜೌಗು ಹೆಚ್ಚು, ಪಾಚಿ ಕಟ್ಟಿದೆ, ಎಚ್ಚರಿಕೆ! (ಶಾಂತಲಾ. ೨೧೭). 'ಜೌಗೇಟ್' ಪರಾ. [ದೇ.॥ ತೆಲು. ಜವುಕು, ಜೌಕು]

**ಜವುಗೇಳ್** 'ಜವುಗೇಟ್' ನೋ.

**ಜವುಗೇಟ್, ಜವುಗೇಳ್, ಜೌಗೇಳು, ಜೌಗೇಟ್** (ಕ್ರಿ). ೧. ಒಸರು; ಜಿನುಗು; ತೇವವಾಗು. ೨. ಬಗ್ಗಡವಾಗು; ರಾಡಿಯಾಗು: 'ಜವುಗೇಟಿಸು' ಪರಾ. **ಜವುಗೇಳ್**: ೧. ರಥಿಲ್ಲನೆ ಸೂಸೆ ಪೂವಳಿ

ಮಕರಂದರಸಂ ಜವುಗೇಳೆ ತುಂಬಿಗಳ್ ನಿಲ್ಲದೆ ಝಂಕೃತಿಧ್ವನಿಯನೀಯೆ (ಪಾಲಾಸ್ಕ. ೦-೩-೨೯). ೨. ಬೀದಿಬೀದಿಗೂ ತೀವಿ ಕಾಲುವೆಗಟ್ಟಿ ಹರಿಯೆ ಗಜಾವಳಿಯಮದಘಟ್ಟಣದಿ ಜವು[ಪಾಠಾಂ.ಜೌ]ಗೆದ್ದ ಕೆಸರ್(ಬಸಪು. ೦೦-೩). **ಜೌಗೇಳು :** ೨. ನೆಣವಸೆ ಕರುಳ್ಗಳ್ ಸುತ್ತಲುಂ ತೀವಿ ಜೌಗೆದ್ದಡಿಯಿರ್ಕಲ್ ಬಾರದೆಂಬಂತಿರೆ (ಸಕಪ್ಪ. ೩. ಪ್ರಸ್ತಾವನೆ). **ಜೌಗೇಟ್ :** ೨. ಬಡಹಂ ಕೈಕೊಂಡುದುರ್ವೀತಳಮದು ನೆಱ ಜೌಗೆಟ್ಟು ಮೆಟ್ಟಲ್ಕೆ ಬಲ್ಪೊಂದೆಡೆ ಯಿಲ್ಲೆಂಬಂತೆ ಕಂಪಲ್ಮಸಗೆ (ಶಾಂತೀಶ್ವ. ೧೨-೫೬). [ ಜವುಗು + ಏಟ್$_1$ ]

**ಜವುಗೇಟಿಸು,ಜೌಗೇಟಿಸು** (ಕ್ರಿ). ಬಗ್ಗಡಗೊಳಿಸು; ರಾಡಿಯಾಗುವಂತೆ ಮಾಡು: ದೆಸೆಯಂ ಖಡ್ಗಾಂಶುಜಾಲಂ ಬೆಳಗೆ ಧರಣಿಯಂ ದಾನಧಾರಾಂಬು ಜವು[ಪಾಠಾಂ. ಜೌ]ಗೇಟಿಸೆ . . . ಮಾಮುಸಕಂಗೊಂಡೆತ್ತಿ ಬಂದಂ (ಚಂದ್ರಪು. ೦೦-೩೮). **ಜೌಗೇಟಿಸು :** ದಂತಿದಾನಪ್ಲವದಿನವನಿಯಂ ಕೂಡೆ ಜೌಗೇಟಿ ಸುತ್ತುಂ ಇಳೆ ಕಂಪನಗೊಳ್ವಿನಂ ಸಂಭ್ರಮದಿ ನಡೆತರುತ್ತಿರ್ಪ ಸೇನೆ (ಶಾಂತೀಶ್ವ. ೦೫-೦೦೮). [ ಜವುಗೇಟ್ + – ಇಸು$_3$ ]

**ಜವುಳಿ$_1$** 'ಜವಳಿ$_1$' ನೋ.

**ಜವುಳಿ$_2$** 'ಜವಳ್' ನೋ.

**ಜವುಳಿಗ** (ನಾ). (?) : ತಳವಾರನು ಸೂಳೆಗಾರ ಜವುಳಿಗ ಭಂಗಿಗ ಕಳುಗುಡಿ ಜೂಜಿಗ (ಕರಿಕ. ೦೦೪-೦೦). [ ? ]

**ಜವುಳು, ಜವಳ್ಕ, ಜವಳು,** (ನಾ). ೧. ತೇವ ; ಒದ್ದೆ : ಹೊಳೆಗಳ ದಂಡೆಗಳಲ್ಲಿಯೂ ನೀರಿನ ಜವುಳು ಆಡುವ ಸ್ಥಳಗಳಲ್ಲಿಯೂ ಮೂರು ಜಾತಿಯ ಕಬ್ಬು ಒಳಿತಾಗಿ ಬೆಳೆಯುತ್ತದೆ (ಕಭಾಗ. ೨೭೬). ೨. ತೇವವಾದುದು ; ಒದ್ದೆಯಾದುದು : ಜವುಳ ಅಡವಿಯಲ್ಲಿಯೂ ಕೊಬ್ಬೇರಿ ಬೆಳೆದ ಹುಲ್ಲಿನಲ್ಲಿಯೂ ಅವು ಮೇಯುವುದಿಲ್ಲ (ಮುಂಬಯಿ. ೩-೦೦); ಗುಡ್ಡದ ಓರೆಯಲ್ಲಿ ಜವುಳ ಹಳ್ಳದೊಳಗೆ ಸಾವಿರಾರು ಕಪ್ಪೆಗಳು ಇರುತ್ತಿದ್ದವು (ಕಸಾಪ. I, ೦೩೮). **ಜವಳ್ಕ:** ೧. 'ಜವಳಿದೆಗೆ' ಪರಾ. **ಜವಳು:** ೨. ನಿನ್ನ ಸೇವಕರು ಜವಳುಪ್ರದೇಶವೆಂದು ತಿಳಿದು ನಿನ್ನ ತೀರ್ಥೋದಕಗಳಿಗಾಗಿ ತೋಡಿ ಸಿದ್ಧಪಡಿಸಿರುವರು (ತುಳಸಿ. ೨೦೦) ; ಮಡವುಗಟ್ಟಿ ಮಲೆತು . . . ಒಂದು ಅಸಹ್ಯ ಜವಳುರಾಡಿಯ ವಿಸ್ತಾರವನ್ನೇ ಉಂಟುಮಾಡಿದವು (ವಿಜಾಪಾ. ೦೬); ಜವಳು ಭೂಮಿಗಳಲ್ಲದೆ ಮಾರ್ಗದಲ್ಲಿ ಬೇರೆ ಮನೋಹರವಾದದ್ದು ಏನೂ ಕಾಣಲಿಲ್ಲ (ಮೇದಿಮು. ೦೭೯). [ <ಜವುಗು ]

**ಜವುಳುಗೊಳಿಸು** (ಕ್ರಿ). = ಜವುಗೇಟಿಸು; ಶೀತಹವೆಯಲ್ಲಿ ಭಾರವಾದ ಬಂಡಿಗಳ ಚಕ್ರಗಳು ಅವುಗಳನ್ನು ಉತ್ತು ಜವುಳುಗೊಳಿಸುತ್ತಿದ್ದವು (ಬೆಂಜನ್. ೨೦೦). [ ಜವುಳು + ಕೊಳ್$_1$ + – ಇಸು$_3$ ]

**ಜವುಳೇಳು** (ಕ್ರಿ). = ಜವುಗೇಟ್ ೨ : ಜವದಿ ಕಾರ್ಮೇಘ ಒಡ್ಡೈಸಿ ಪೆರ್ಮಳೆ ಸುರಿದು ಜವುಳೇ[ಪಾಠಾಂ. ಗೇ]ಳೆ ಮೂರುದಿನ ಬಿಡದಿರಲು ದೂಷಕರು ತವತವಗೆ ಬಂದು ಪದಾಂಬುಜಕ್ಕೆಱಗುತಿರೆ (ಗುರುಚಾ. ೦೦-೩೬).

[ ಜವುಳು + ಏಳು$_1$ (<ಏಟ್$_1$) ]

**ಜವೆ$_1$** 'ಜವಿ$_1$' ನೋ.

**ಜವೆ$_2$** (ನಾ). ೧. ಒಂದು ಬಗೆಯ ಧಾನ್ಯ ; ಯವಧಾನ್ಯ ; ಜವೆಗೋಧಿ : "ಯವೆಯೆನಲು ಜವೆ" (ಮಂಗರಾ. ೦೦೦-೩) ; ಜವೆಯ ಜಾಗರದೊಳಂ ಮಲರ್ವಂಡಿನ ಜಗಲಿಯೊಳಂ (ಕಾದಂಬ. ೭೮೩) ; ಜವೆ ಜೋಳಂ ಕೊಱ ಮೊದಲಾದುವರ್ಕೆ ಗಣೆವೊಂದು ತೆನೆಗಳೆರಡಾದಂದುಂ . . . ಅಱಗೆ ತತ್ಪತಿಯಟ್ಟಿವಂ (ಲೋಕೋಪ. ೪-೫೬) ; ಜವೆ ದಿವ್ಯೌಷಧಿ ಪಾರಿಜಾತ ಕುಸುಮಂ ಸಿದ್ಧಾರ್ಥಮಾರ್ದ್ರಾಕ್ಷತಂ . . . ಕಸ್ತೂರಿ ಕಾಶ್ಮೀರಮೆಂಬಿವಱಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುವಾ ಸದ್ಮದೊಳ್ (ಜಗವಿ. ೦೦-೯೮). ೨. ಒಂದು ಯವೆಯ ಕಾಳಿನಷ್ಟು ತೂಕ: ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ ಒಂದು ಜವೆ ಕೊಱತೆಯಾದರೆ ಎನ್ನನದ್ದಿ ನೀನೆದ್ದು ಹೋಗು (ಬಸವ. ೪೪೦). ೩. ಉದ್ದವನ್ನು ಅಳೆಯುವ ಒಂದು ಪ್ರಮಾಣ ; ಅಂಗುಲದ ಎಂಟನೆಯ ಒಂದು ಭಾಗ : "ಕರಿ ಸಾಸಿವೆಯಾಗಲೊಂದು ಜವೆಯೆನಿಸಿರ್ಕುಂ ಕರಿ ಜವೆಯಾಗಲ್ಕಂಗುಲ" (ವ್ಯವಹಾ. ೮-೩೯ ಅನು. ೧).

**ಜವೆಯ ಕೆಯ್** = ಯವೆಯನ್ನು ಬೆಳೆಯುವ ಹೊಲ : "ಜವೆಯ ಕೆಯ್ ಯವ್ಯಮೆಂಬುದು" (ಹಲಾಯು. ೨೭-೮).

[ <ಪ್ರಾ. ಜವ./ಸಂ. ಯವ ]

**ಜವೆ$_3$** (ನಾ). (ಮಾಟದ) ಮಂತ್ರ ; "ಮಾಯೆ" (ಪ್ರಭಕ್ಕ್ಯಾ) : ಎವೆಯಿಟ್ಟು ಕಣ್ಮುಚ್ಚಿದಂತೆ ಮೂಲೋಕಕೆ ಜವೆಯ ಮೋಜವ ಕಲ್ಪಿಸಿದಳು (ಪೋಹತ ೨೯-೮). 'ಜವೆಬೂದಿ' ಪರಾ.

[ <ಪ್ರಾ. ಜವ./ಸಂ. ಜಪ ]

**ಜವೆಗೊಂಕು** (ಕ್ರಿ). (ಅಲಂ) ಕೂದಲು ಕೊಂಕಂ ; ತೊಂದರೆಯಾಗಂ : ರವಿಸುತನಿಂತು ರಕ್ಷಿಸಿದ ಕಾರಣದೆ ಕೌರವನಂದು ರಾಯಕುವರಿಯ ಜವೆಗೊಂಕದಂತಿರೆ ಸೆಱಗೊಂಡು ನಾಗಪುರವ ಪೊಕ್ಕನತಿ ಹರುಷದೊಳು (ಕರ್ಣಪ್ಪ. ೫-೨೨).

[ ಜವೆ$_1$ (<ಜವಿ$_1$) + ಕೊಂಕು$_1$ ]

**ಜವೆಗೋದಿ, ಜವೆಗೋಧಿ** (ನಾ). ಗೋಧಿಯಲ್ಲಿ ಒಂದು ಬಗೆ; ಯವ: "ಜವೆಗೋದಿ – ಯವಗೋಧೂಮ" (ಶಬ್ದಕೋ. ೦೪). **ಜವೆಗೋಧಿ ;** ಜವೆಗೋಧಿ ಬಗೆಬಗೆಯ ನೆಲ, ಬಗೆಬಗೆ ವಾಯುಗುಣಗಳಿರುವ ಪ್ರದೇಶಗಳಲ್ಲಿ ಬೆಳೆಯುತ್ತದೆ (ಭೂವಿವ. ೦೫೭).

[ ಜವೆ$_2$ + ಗೋದಿ$_1$ (<ಗೋದುವೆ) ]

**ಜವೆಗೋಧಿ** 'ಜವೆಗೋದಿ' ನೋ.

**ಜವೆಬೂದಿ** (ನಾ). ಮಂತ್ರಿಸಿದ ಬೂದಿ ; ಮಂಕುಬೂದಿ: ಅಸುರ ಮಾಯಾಮಂತ್ರಮಂ ಜಪಿಸಿ ಫಣೆಯೊಳಂ ಭಸಿತಮನು ಧರಿಸಿ ದಿಗ್ಬಂಧನಂಗಳಗೈದು ಶಶಿಯ ಮಂಡಲಕೆ ಕಾವಲಗೈಸಿ ಗ್ರಹಗಣರ ಕಂಗಳಿಗೆ ಜವೆಬೂದಿಯಾ ಸಸಿನೆ ಚೆಲ್ಲುತ ದುರ್ಗಿ ಭೈರವರ ಬಲಗೊಂಡು (ನವಮೋ. ೨೭-೦೩). [ ಜವೆ$_3$ + ಬೂದಿ ]

**ಜವ್ವನ, ಜೌವನ** (ನಾ). ೧. ಹರಯ; ಪ್ರಾಯ; ಯೌವನ; ತಾರುಣ್ಯ: ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು . . . ಕರ್ಣನಿನಗುಳ್ಳನಿತೇನೆನಗುಂಟೆ (ಪಂಪಭಾ. ೦೦-೨೩); ಸಿರಿಯೊಂದೊದವಂ ಜವ್ವನಭರಮಂ ನಚ್ಚಿರ್ದು ಕೆಡುವರ್ (ಧರ್ಮಾಮೃ. ೩-೨೦೨) ; ಇಂದು ಹುಟ್ಟಿದ ಕೂಸಿಂಗೆ ಇಂದೆ ಜವ್ವನವಾಯಿತ್ತಯ್ಯ (ಬಸವ. ೫೦೭) ; ಏನೆಂಬೆನುತ್ಕಟದ ಜವ್ವನಂ ಬರುತಮಿರೆ (ನಂಬಿರ. ೩-೨); ನೀನು ಮಿಗೆ ಮೇಲಱಯ ಜವ್ವನ ದುಬ್ಬುಗೊಬ್ಬಿನಲಿ (ಕುಮ್ಮಾಭೀ. ೦-೩೭) ; ಸಿರಿಯು ಬಂದರೆ ಲೇಸು ತಿರದ ಜವ್ವನ ಲೇಸು (ಸರ್ವಜ್ಞ. ೦೨೯). ೨. ಮೊಲೆ ; ಸ್ತನ: "ಜವ್ವನಮೆಂದು ಕುಚಂ" (ಕಶಸಾ. ೨೦-೪೩೦); "ಜವ್ವನಮೆನಲ್ಕೆ ಕುಚಮಕ್ಕು" (ಕಬ್ಬಿಕ್ಕ. ೩೦); ಅಚ್ಚ ಜವ್ವನಮೆಂಬ ದರ್ಪಕಪಟ್ಟಕುಂಜರಕುಂಭಮಂ ಚೆಚ್ಚರಂ ರತಿದೇವಿ ಸರ್ವಲತಾಂತಮಾಲಿಕೆಯಿಂ ಸಮಂತರ್ಚಿಪಂತೆಳವೆಣ್ಣದೊರ್ವಳಮರ್ಚಿ ದಿಳ್ಪುಲರನ್ನದೊಳ್ಪಚ್ಚವಮಂ ನಲಿದಾ ಕುಮಾರಿಯ ಪೀವರ ಸ್ತನಭಾಗದೊಳ್ (ಉದ್ಭಟ. ೮-೩೪) ; ಚುಂಬಿಸೆನ್ನಧರವ ಚುಬುಕಾಗ್ರವಿಡಿಯುತ ತುಂಬುಜವ್ವನಕೆ ಕೈನೀಡಿ ನಂಬಿಸಿ (ಶಶಸಾಂ. ೩೨-೬೯). **ಜೌವನ :** ೧. ಪೋದುದು ಜೌವನಂ ಕ್ರಮದಿನಾದುದು ಮುಪ್ಪು (ಆದಿಪು. ೨-೩೫) ; ಉದಯಿಸಿ ಜೌವನಮಂ ತಳೆದೊದವಿದ ಮುಪ್ಪಿನೊಳೆ ಕಟಿವರಿಲ್ಲಿಂ ಬಟಿಯಂ (ಪಂಚಾಮಾ. ೧-೮೪); ಜೌವನದೇಟಿಗ್ಗೆ ಕಯ್ಗೆ ಕನ್ನಡಿಯೆನಿಸಿತ್ತು (ಕಬ್ಬಿಗಕಾ ೪೭) ; ಜೌವನವಾದುದು ಮತ್ತನುಜೆಗೆ (ಜಯಚಾ. ೩-೭೦).

[ <ಪ್ರಾ. ಜೊವ್ವಣ. / ಸಂ. ಯೌವನ ]

**ಜವ್ವನಂನೆಟು, ಜೌವನಂನೆಟು** (ಕ್ರಿ). ಯೌವನ ತುಂಬು ; ಪ್ರಾಯಕ್ಕೆ ಬರು : ಎಂತೆಂತೇಟ್ಗೆಯ ಜವ್ವನಂನೆಟ್ಟುವಂತಂತೊಪ್ಪೆ ಲಾವಣ್ಯಂ (ಶಾಂತಿಪು. ೯-೧೭) ; ದಿವ್ಯವಸ್ತ್ರಭೂಷಣಮಣಿಮಾಳೆಗಳ್ನೆಟ್ಟಿದು ತನ್ನೊಡ ವುಟ್ಟಿರೆ ಬೇಗವೇಗಮಾ ಕ್ಷಣದೊಳೆ ಜವ್ವನಂನೆಟ್ಟಿಯೆ ನೆಟ್ಟನೆ ತೊಟ್ಟನೆ ಬಂದು ಪುಟ್ಟಿದಂ (ಸುಕುಮಾ. ೯-೧೮). **ಜೌವನಂನೆಟು :** ಜೌವನಂನೆಟ್ಟಿದ ಪ್ರಭಾವತಿಯನಾರ್ಗೆ ಕುಡುವಮೆಂದು . . . ಆಳೋಚಿಸಿ (ಜಾವುಂಪು. ೯೦-೩೫). [ ಜವ್ವನ + ನೆಟು$_1$ ]

**ಜವ್ವನಂಬಡೆ** (ಕ್ರಿ). ತಾರುಣ್ಯವನ್ನು ಹೊಂದು: ಗೆಲ್ಲಂಪಡೆದ ಪಂದೆಯಂತೆ ಜವ್ವನಂಬಡೆದ ಮುದುಪನಂತೆ (ಧರ್ಮಾಮೃ. ೫-೧೩೫). [ಜವ್ವನ+ಪಡೆ$_1$]

**ಜವ್ವನವೆಱು** (ಕ್ರಿ). = ಜವ್ವನಂಬಡೆ : ತಿಣ್ಣ ಜವ್ವನವೆತ್ತ ಕೆಳದಿ ಕೇಳ್ (ಮೋಹತ. ೩೦-೩೪). [ ಜವ್ವನ + ಪೆಱು$_1$ ]

**ಜವ್ವನಿ** (ನಾ). =ಜವ್ವನೆ: ಕನ್ನೆವೇಟಕ್ಕೆ ತನ್ನಂ ಮಾಱುಗೊಟ್ಟ ಪಾಱುಗೆಯ್ವುದ ಜವ್ವನಿಗಿನಿಯನಿತ್ತ ನಖರದಕ್ಷತಂಗಳನೆ ತೊಡವು ಮಾಡಿ ಮೆಱೆವುದನವ ಳೊಡನಾಡಿ ನೋಡಿ ಕಂಡು (ಚಂದ್ರಪ್ರ. ೮-೫೫ ವ). [ ಜವ್ವನ + - ಇ$_2$ ]

**ಜವ್ವನಿಕೆ** (ನಾ). ಹರಯ ; ತಾರುಣ್ಯ ; ಯೌವನ : ತನ್ನ ಜವ್ವನಿಕೆಯ ಕಾಲದಲ್ಲಿ ಉಳ್ಳವರ ಒಕ್ಕಲಾಗಿದ್ದಳು (ದೀಪಕ. II, ೧೯೩).

[ ಜವ್ವನ + - ಇಕೆ ]

**ಜವ್ವನಿಗ, ಯವ್ವನಿಗ** (ನಾ). ಹರಯದವನು ; ತರುಣ ; ಯುವಕ : "ದಾರಕಃ, ತರುಣಃ, ಯುವಾ–ಈ ೩ ಜವ್ವನಿಗಂ" (ಹಲಾಯು ೮೩-೩೪೯); ಪೆಸರೇನಾರ್ಗೀತನೀ ಜವ್ವನಿಗ ತವಸಿ (ಕಾದಂಪೂ. ೭೭೦) : ಪಾಂಥರೊಳಗೆ ಬಳಲ್ದು ಬರ್ಪ ಜವ್ವನಿಗನಂ ಕಂಡು (ಗಿರಿಕ. ೨-೧೮ ವ). **ಯವ್ವನಿಗ :** ಇವನಸುರ ಮಧುಗುಡಿಗ ಯವ್ವನಿಗ ಮದನಗೃಹವ್ಯಾಧಿಗಂ (ನವಮೋ. ೯-೦೭). [ ಜವ್ವನ + - ಇಗ ]

**ಜವ್ವನಿಗಿತಿ** (ನಾ).=ಜವ್ವನೆ: ಆರೂಕಿರಿಯ ಜವ್ವನಿಗಿತಿಯರು ಇಲ್ಲವಾಗಿದೆ (ಬಿಟ್ಟಳ. ೦೮೦-೪). [ ಜವ್ವನಿಗ + - ಇತಿ$_1$ (< - ಇತ್ತಿ) ]

**ಜವ್ವನಿಗೆ** (ನಾ).=ಜವ್ವನೆ : ಈ ತೆಱದ ಮೆಱೆವ ಮಿಱಿಪಿಗರ ಮುಱುಕಮಾ ದೊರೆಯ ಭರದ ಜವ್ವನಿಗೆಯನೆಮ್ಮ ಕೆಯ್ಸಾರಲಿತ್ತಪ್ಪುದೆ (ವರ್ಧಪು. ೯-೪೩ ವ). [ ಜವ್ವನಿಗ + - ಎ$_2$ ]

**ಜವ್ವನೆ, ಜೌವನೆ, ಯವ್ವನೆ** (ನಾ). ಯುವತಿ ; ತರುಣಿ : "ವಧೂಟೀ, ಚಿರಂಟೀ – ಈ ೨ ಜವ್ವನೆ" (ಹಲಾಯು. ೭೯-೩೩೦); ಜವ್ವನೆ ಗಡಮಾಡಲ್ ಪಾಡಲವಳ್ ಬಲ್ಲಳ್ (ಅಜಿಪು. ೫-೪೩) ; ಜವ್ವನೆಯ ಮೊಲೆಯಂತೆ . . . ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೭-೧೨೨); ಎನ್ನ ಮನೆಯೊಳ್ ತುಂಬಿದ ಜವ್ವನೆಯನಿರಿಸಲಣ್ಮೆಂ (ದಶಕು. ೧೧-೬೬). **ಜೌವನೆ :** "ಪಡ್ಡಾ–ಜೌವನೆ" (ಕಾಶಕ್ತ. ೨೪). **ಯವ್ವನೆ :** ಬಾಲಕಿಯರುಂ ಯು[ ಪಾಠಾಂ. ಯೌ ]ವ್ವನೆಯರುಂ . . . ವಯೋ ಧರ್ಮರಗಳಂ ತಿಳಿದು (ಬಸಪು. ೪೦-೧೮). [ ಜವ್ವನ + - ಎ$_2$ ]

**ಜವ್ವರಿಸು, ಚವ್ವಲಿಸು** (ಕ್ರಿ). ಶೋಭಿಸು ; ವಿಜೃಂಭಿಸು: ಜವ್ವನ ಜವ್ವನ ಕೊಪ್ಪುವಲಂಕಾರ ಜವ್ವರಿಸುವ [ಪಾಠಾಂ. ಚವ್ವಲಿಸುವ] ಹಾವಭಾವ ಕವ್ವರಿಸುವ ಕಾಂತಿರಸದಿಂದ ನೃಪನ ಕಣ್ಣವ್ವಳಿಸುವವೊಲೆಸೆದರು (ಶೈಂಜ. ೧೩-೫೫). **ಚವ್ವಲಿಸು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ?. / ತೆಲು. ಜುವ್ವರಿಂಚು = ವಿಜೃಂಭಿಸು ]

**ಜವ್ವಾಜಿ** 'ಜವಾದಿ' ನೋ.

**ಜವ್ವಾದಿ** 'ಜವಾದಿ' ನೋ.

**ಜಷ್ಟೆ** (ನಾ). ಉದಾಸೀನತೆ; ಆಲಸ್ಯ; ಸೋಮಾರಿತನ: ಜೇಷ್ಟ ಮೂಲ ಹಿಡಿದರೆ ಜಷ್ಟೇ ಮುಚ್ಚಿದ ಹಾಗೆ (ಎಸಜ್ಞ. XV, ೩೨); ಸ್ವಲ್ಪ ತಲೆ ಬಾಚು ಅಂದರೆ ಏನೋ ಜಷ್ಟೆ (ರೂಢಿ). [ <ಸಂ. ಜ್ಯೇಷ್ಠಾ ]

**ಜಸ$_1$, ಝಸ$_1$** (ನಾ). ೧. ಒಳ್ಳೆಯ ಹೆಸರು ; ಯಶಸ್ಸು ; ಕೀರ್ತಿ : "ಜಸಂ ಕೀರ್ತಿಯೆ" (ಕಣಾಗನಿ. ೫೨) ; ಕುಸುಮಂಗಳೆಂಬ ಮಾತದು ಪುಸಿ ದಹನಮಯಂಗಳೆಂಬುಗಳ್ಕನಿಜನಾ ಜಸಮಱಿಯೆ ಸುಡುವುದೆ(ವೆ)ರ್ದೆಯಂ (ಕವಿರಾ. ೩-೧೮೪); ಕೇಸವಯ್ಯನವಾಪೂರ್ಗ್ಗಳರ್ನೆ ಗಟ್ಟಿಗುಪಮಾಗಿ ಜಸಂ ಭುವನಾನ್ತರಾಳದೊಳ್ (ಎಕ. III, ನಂಜನ. ೭೮-೧೮; ಸು. ೯೦೦); ಒಡಲುಂ ಪ್ರಾಣಮುಮೆಂಬಿವು ಕಿಡಲಾದುವು ಜಸಮ ದೊಂದೆ ಕಿಡದದನಾಂ ಬಲ್ವಿಡಿವಿಡಿದು ನೆಗಟ್ದಿಂ (ಪಂಪಭಾ. ೧೨-೧೮೦) ; ಜಸಮ ತನಗೆ ಮೆಯ್ಸಿರಿಯೆಂಬುದನಱಿವುದಂತೆ ಪೂಸಿದ ಬೂದಿಯೊಳಂ . . . ಚೆಲ್ವನಾಂತು (ಕಬ್ಬಿಗಕಾ. ೧೬೭) ; ಋಷಿವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ ಜಸವು ಜನಜೀವನಕೆ (ಮಂಕುತಿ. ೫೨೨). ೩. **ಶೋಭೆ :** ವೈಭವ: ಹಸಿವು ವಸನ ತೃಷೆಯಾಲಸ್ಯಮೋಹವೆಂಬೆಸಕವುಳ್ಳುದು ನರದೇಹ ಉಸಿರಿದ ಕೃತಿಯೊಳು ಮಱೆದೆಡಹಿರೆ ತಿದ್ದಿ ಜಸವ ಮೆಱೆವುದು ಕೋವಿದರು (ಕಂಸವಿ. ೧-೧೫) ; ಮಿಸುನಿಗಂಬದ ಪಟ್ಟಸಾಲೆ ನಾನಾ ಬಗೆಯೆಸೆವ ಮೇಲ್ಕಟ್ಟುಗಳಿಂದ ಜಸವ ಬೀಱಿದುವು ನಾಟಕಶಾಲೆಯ ಬಲೆಯರೆಸೆದಿಹ ಮಣಿಮಯ ಭವನ (ಕಂಸವಿ. ೭-೪೩). **ಝಸ$_1$ :** ೧. ಬಿರುದಿನ ಬಂಕದಱದ ವಿರೋಧಿಗಳಂ ತಱಿದಿಕ್ಕಿ ದಿಕ್ಕರಿಪರಿಯನ್ನಮುಂ ಝಸಮನಾರ್ಜ್ಜಿಸಿ ವೀರರಸಂ ತುಳ್ಕಾಡಿ ಕಾದಿದಂ (ಶಾಇಇ. XX, ೧೬೯-೧೩ ; 1183).

[ <ಪ್ರಾ. ಜಸ. / ಸಂ. ಯಶಸ್ ]

**ಜಸ$_2$, ಝಸ$_2$** (ನಾ). ವಿಮಾನ ; ಝಡಿತಿ – ಜಡಿತಿ; ಝಷ – ಜಸ (ಶಬ್ದಾನು. ೦೪೩ ಪ್ರಯೋ). **ಝಸ$_2$ :** 'ಝಸಕೇತು' ಪರಾ.

[ <ಪ್ರಾ. ಝಸ. / ಸಂ. ಝಷ ]

**ಜಸಂದಳೆ** (ಕ್ರಿ). ಕೀರ್ತಿಯನ್ನು ಪಡೆ ; ಯಶಸ್ಸನ್ನು ಹೊಂದು : ಆವ ನರನಾವ ಕೃತ್ಯಕ್ಕಿಗೆಯ್ಯಲು ಬೀಯದ ಜಸಂದ[ಪಾಠಾಂ. ಬ]ಳೆವುದಿಲ್ಲಿ ನಾರಕದ ಬಿಱುಬೀಯದ ಸುಖಂ ಪರದೊಳೆಂತು ದೊರಕೊಂಬುದೆಂಬೀ ಯವಸ್ಥೆಯನೆನಗೆ ವಿಸ್ತರಿಸಿ ಪೇಳ್ವುದು(ಜೈಮಿಭಾ. ೫-೪೮). [ಜಸ$_1$+ತಳೆ$_1$]

**ಜಸಂಬಡೆ, ಜಸವಡೆ, ಝಸಂಬಡೆ** (ಕ್ರಿ). ಹೆಸರುವಾಸಿಯಾಗು ; ಹೆಸರಾಗು ; ಪ್ರಸಿದ್ಧವಾಗು: ನಮ್ಮೊವಜರ್ ಜಸಂಬಡೆದ ಭಾರ್ಗವರ್ (ಶಂಪಭಾ. ೧೨-೫೭) ; ತನ್ನೊಡಮೆಯನನವರತ ದಾನದಿಂ ತವಿಸಿ ಜಸಂಬಡೆದಳ್ (ಅಜಿಪು. ೧-೦೫೧); ವಾಜಿವಂಶದಜ್ಜಾಡುವಿನಂ ಜಸಂಬಡೆದ ನೆಂಬುದು ಧಾರಿಣಿ ನಾಗರಾಜನ (ನಾಂದೇಡ್'. ೨೩-೩೨ ; 1122) ; ಗುಣಾಂ ಗೊಂಡಂ, ಜಸಂಬಡೆದಂ, ಕಳಸವಿಟ್ಟಂ(ಭಾಷಾಭೂ. ೧೩೪ ಉದಾ). **ಜಸವಡೆ:** ಮೂಜಗದೊಳೆನಿಸು ಜಸವಡೆದೊಡಂ ಗುಹ್ಯಕಾಸ್ಪದಮೆನಿಪುದಳಕಾ ಪುರಂ (ಜೈಮಿಭಾ. ೩-೧೫) ; ಎಸೆವಾ ಕಾವೇರಿಯ ತಟದೊಳು ಬಹು ಪುಣ್ಯದೆಸಕದ ದಿವ್ಯಸ್ಥಳಗಳು ಜಸವಡೆದಿಹುವು (ಕಂಸವಿ. ೨-೨೦); ಸಕಲ ವೇದಾವಳಿಯೊಳು ಜಸವಡೆದ ಪಾವನಚರಿತೆಯ . . . ವಂದಿಪೆನು (ಹರಿಬ. ೮-೨). **ಝಸಂಬಡೆ:** ಶಂಕರನಾರಾಯಣನ ಪೆಸರಿಂ ಕಡುಝಸಂಬಡೆದ ಭೂಸುರನಿಂ ಕೃತವಿದಧ್ಯಾತ್ಮರಾಮಾಯಣಂ (ಅಧ್ಯಾರಾ. ೧-೨).

[ ಜಸ$_1$ + ಪಡೆ$_1$ ]

**ಜಸಯುತ** (ನಾ). ಕೀರ್ತಿಶಾಲಿಯಾದವನು ; ಯಶೋವಂತ : ಕರಣ ತ್ರಯಂಗಳೊಳ್ ಜಸಯುತನೊಳ್ ಗೃಹೋಪಕರಣಂಗಳೊಳುತ್ತಮ ಕಾರ್ಯದಲ್ಲಿ ವರ್ತಿಸುವುದು ಸಾಧನಾಹ್ವಯ (ನಾನಾರ. ೦೧೫).

[ ಜಸ$_1$ + ಯುತ ]

**ಜಸವಂತ** (ನಾ). ಕೀರ್ತಿಶಾಲಿ ; ಕೀರ್ತಿವಂತ : ವಂತ ಪ್ರತ್ಯಯಕ್ಕೆ – ಸಿರಿವಂತಂ, ಜಯವಂತಂ, ಜಸವಂತಂ (ಶಮುದ. ೨೦೬ ಪ್ರಯೋ) ; ಜಸಮುಂಟೀತಂಗೆ, ಜಸವಂತಂ (ಶಬ್ದಾನು. ೪೦೦ ಪ್ರಯೋ).

[ ಜಸ$_1$ + - ವಂತ ]

**ಜಸವಡು** (ಕ್ರಿ). ಅಂದವಾಗು; ಶೋಭಿಸು: ಮಿಸುನಿಯ ಹಡಪ ಚಾಮರ ಕುಂಚ ಕಾಳಾಂಜಿ. ಪೊಸವಟ್ಟೆಯ ಪಾವಡೆಯ ಜಸವಟ್ಟೊಳಗದವರ ಮೇಳದೊಳಾಗ ವಸುಧೇಶ ಸಾರಿಗೈದಿದನು (ಕಂನವಿ. ೨೨-೮೮).
[ ಜಸ$_1$ + ಪಡು$_1$ ]

**ಜಸವಡೆ** 'ಜಸಂಬಡೆ' ನೋ.

**ಜಸವೆಱು** (ಕ್ರಿ). = ಜಸಂಬಡೆ : ಜಸವೆತ್ತ ಗರುಡಬಾಣದಿ ಕೃಷ್ಣರಾಯ ಖಂಡಿಸಲದು ಬಯಲಾದುದು (ವೋಹಕ. ೩೯-೨೮) ; ಜಸವೆತ್ತು ಪೆರ್ಮೆ ಮಿಗೆ ರಂಜಿಸೆ (ರಾಜಶೇ. ೧-೬೪). [ ಜಸ$_1$ + ಪೆಱು$_1$ ]

**ಜಸೆ** 'ದಸೆ$_1$' ನೋ.

**ಜಸ್ತು** (ನಾ). ತವರ ಮತ್ತು ಸೀಸಗಳಿಂದಾದ ಒಂದು ಬಗೆಯ ಮಿಶ್ರ ಧಾತು : ಎಣ್ಣೆಯ ಪೀಪಾಯಿ ಮತ್ತು ಜಸ್ತಿನ ಡಬ್ಬಿಯಲ್ಲಿಯ ತುಪ್ಪ (ಮುಂಬವ್ಯಾ. ೮೦). [ ←ಮರಾ. ಜಸ್ತ್ ; ಹಿಂ. ಜಸ್ತಾ/ಜ್ತಾ. ಜಸದ. ]

**ಜಹಂಗೀರು** 'ಜಹಾಂಗೀರು' ನೋ.

**ಜಹಗೀರದಾರ** 'ಜಹಗೀರುದಾರ' ನೋ.

**ಜಹಗೀರಿ** 'ಜಹಗೀರು' ನೋ.

**ಜಹಗೀರು**, ಜಹಗೀರಿ, ಜಾಗಿರಿ, ಜಾಗೀರ್, ಜಾಗೀರಿ, ಜಾಗೀರು (ನಾ). ೧. ಮಾನ್ಯವಾಗಿ ದೊರೆತ ಭೂಮಿ, ಗ್ರಾಮ ಮೊದಲಾದುವು: ನಿನಗೆ ಹರದನ ಹಳ್ಳಿಯನ್ನು ಜಹಗೀರು ಕೊಡಿಸುತ್ತೇವೆ (ಹೈದರ. ೩೪) ; ಆ ಜಹಗೀರಿನ ವಾರ್ಷಿಕ ವರಮಾನವು ೭೪೮ ಸಾವಿರಗಳಷ್ಟು ಇದ್ದಿತು (ಘೂರಾಜಿ. ೫). **ಜಹಗೀರಿ:** ೧. ಕೊಡಗರ ಭೂಮಿ ಮನೆಯನ್ನು ಆ ಮುಸಲ್ಮಾನರಿಗೆ ಜಹಗೀರಿ ಆಗಿ ಕೊಟ್ಟು (ರಾಜೇಂದ್ರ. ೧೭). (ಗು). ೨. ಜಹಗೀರಿಗೆ ಸಂಬಂಧಿಸಿದ: ಶೀಮೆಯೇನಾದರೂ ಜಹಗೀರಿ ಇನಾಮಾಗಿ ಬೇಕೆಂಬ ಅಪೇಕ್ಷೆಯೂ ಇಲ್ಲಾ (ರಾಜೇಂದ್ರ. ೧೦೫). **ಜಾಗಿರಿ :** ೧. ಒಂದು ಜಾಗಿರಿನಲ್ಲಿಯ ಜಾಗಿರದಾರರು ತಮ್ಮ ಹಳ್ಳಿಯ ಜನರ ಮೇಲೆ ನಡೆಸುವ ಕ್ರೂರವಾದ ಒತ್ತಾಳಿಕೆ (ಸಾಸಮೂ. ೬೮). **ಜಾಗೀರ್ :** ೧. (ಕೃಸ್‌ಗೆ. II, ೫೫೦). **ಜಾಗೀರಿ :** ೧. ಅಖಂಡ ಜಾಗರದ ಜಾಗೀರಿ ಸನದನ್ನು ಪಡೆದವರಂತೆ (ದೀಪಹ. II, ೨೨೯). **ಜಾಗೀರು :** ೧. 'ಜಾಗೀರುದಾರ' ಪರಾ.
[ ←ಮರಾ. ಜಹಾಗೀರ್, ಜಾಹಾಗೀರ್ ; ಪಾರ. ಹಿಂ. ಜಾಗೀರ್, ಜಾಗೀರಿ ]

**ಜಹಗೀರುದಾರ**, ಜಹಗೀರದಾರ, ಜಹಾಗೀರದಾರ, ಜಾಗೀರದಾರ, ಜಾಗೀರುದಾರ, ಜಾಗೀರ್ದಾರ್ (ನಾ). ಜಹಗೀರನ್ನು ಪಡೆದವನು; ಜೋಡಿದಾರ: ದೊಡ್ಡದೊಡ್ಡ ಜಹಗೀರುದಾರರು ತಮ್ಮತಮ್ಮೊಳಗೆ ಯುದ್ಧಮಾಡಿಕೊಳ್ಳುತ್ತಿದ್ದರು (ಯೋಧಪು. ೧). **ಜಹಗೀರದಾರ :** ಸಾವಿರಾರು ಜಹಗೀರದಾರರು ತಾಲೂಕುದಾರರು . . . ದುರ್ದಶೆಗೀಡಾಗಿದ್ದರು (ಪ್ರಬಂಧ. ೫೪). **ಜಹಾಗೀರದಾರ :** ಆ ಜಹಾಗೀರದಾರರ ಮನೆಯ ವಿಷಯವಾಗಿ ನೀನು ವಿಚಾರಿಸುತ್ತಿಯಷ್ಟೇ ? (ಮೋಹಿನೀ. ೩). **ಜಾಗೀರದಾರ :** ಆಗರ್ಭಶ್ರೀಮಂತರು . . . ಜಾಗೀರದಾರರು !! (ಇತಿಶ್ರೀ. ೬). **ಜಾಗೀರುದಾರ:** (೩). **ಜಾಗೀರ್ದಾರ್:** (ಕೃಸ್‌ಗೆ. II, ೫೫೦).
[ ←ಮರಾ. ಜಹಾಗಿರದಾರ್, ಜಾಗೀರ್ದಾರ್ ; ಪಾರ. ಹಿಂ. ಜಾಗೀರ್ದಾರ್ ]

**ಜಹಜು**, ಜಾಜು$_2$ (ನಾ). ಹಡಗು : ಫರಾಶೀಸರ ದೊಡ್ಡ ಜಹಜು ಹದಿಮೂರು ಇಂಗ್ರೇಜಿಯವರ ಜಹಜು ಹದಿಮೂರು (ರಾಜೇಂದ್ರ. ೬೦) ; ಸಮುದ್ರದಲ್ಲಿ ಒಂದು ಪ್ರಚಂಡಮಾರುತ ಪ್ರಾರಂಭವಾಗಿ ಅನೇಕ ಜಹಜುಗಳು ಕಷ್ಟಕ್ಕೆ ಒಳಗಾದವು (ಇಬದು. ೯೦). **ಜಾಜು$_2$ :** ಅವರು ಇಳಿದು ಜಾಜು ಹತ್ತಿ ಹೋದರು (ರಾಜೇಂದ್ರ. ೧೭).
[ ←ಅರ. ಹಿಂ. ಮರಾ. ಜಹಾಜ್ ]

**ಜಹದಜಹಲ್ಲಕ್ಷಣ** (ನಾ). [ಕಾವ್ಯಮಿ] ಮೂರು ಬಗೆಯ ಲಕ್ಷಣಾವೃತ್ತಿಯ ಒಂದು ಪ್ರಕಾರ ; ವಾಚ್ಯಾರ್ಥದಲ್ಲಿ ಒಂದು ಅಂಶವನ್ನು ಬಿಟ್ಟು ಒಂದು ಅಂಶವನ್ನು ಬಿಡದಿರುವುದು: ಸೋಯಂಶಬ್ದಂಗಳಿಂದ ದೇವದತ್ತ ಗತಮಾದ ಐಕ್ಯಮಂ ಲಕ್ಷಿಸಿ ಬಳಿಕೀತನೆ ಆತನು ಆತನೇ ಈತನೆಂದು ಪರಸ್ಪರಾಭೇದ ತಾದಾತ್ಮ್ಯಂ ಘಟಿಸುವಂತೆ ಬೋಧಿಪುದೇ ಜಹದಜಹಲ್ಲಕ್ಷಣ (ವಿವೇಕ. ೪೭); ವಾಚ್ಯಾರ್ಥದಲ್ಲಿ ಏಕದೇಶವ ಬಿಟ್ಟು ಏಕದೇಶದಲ್ಲಿ ಪ್ರವರ್ತಿಸುವದು ಜಹದಜಹಲ್ಲಕ್ಷಣವೆಂತಾ ಹೇಳಲ್ಪಡುವದು (ಈಶ್ವಸ್ಸ. ೨೦-೮).
[ ಸಂ. ಜಹದಜಹಲ್ಲಕ್ಷಣಾ (ಜಹತ್ + ಅಜಹತ್ + ಲಕ್ಷಣಾ) ]

**ಜಹದಜಹಲ್ಲಕ್ಷಣಾವೃತ್ತಿ** (ನಾ). = ಜಹದಜಹಲ್ಲಕ್ಷಣ : ಲಕ್ಷಣಾವೃತ್ತಿಯಿಂದ ಬೋಧಿತವಾಗುವ ಅರ್ಥವು ಶಕ್ಯಾರ್ಥದ ಏಕದೇಶವಾಗಿರುವ ಕಲ್ಪದಲ್ಲಿ ಆ ಲಕ್ಷಣಾವೃತ್ತಿಯು ಜಹದಜಹಲ್ಲಕ್ಷಣಾವೃತ್ತಿ ಎನ್ನಿಸುವುದು (ಭಾತತ್ತ್ವ. ೬೦೦). [ ಸಂ. (ಜಹತ್ + ಅಜಹತ್ + ಲಕ್ಷಣಾವೃತ್ತಿ) ]

**ಜಹದಜಹಲ್ಲಕ್ಷಣೆ** (ನಾ). = ಜಹದಜಹಲ್ಲಕ್ಷಣ: ಜಹದಜಹಲ್ಲಕ್ಷಣೆಯೆಂದರೆ, ಪದಗಳ ಸಹಜವಾದ ಅರ್ಥದಲ್ಲಿ ಒಂದಂಶವನ್ನು ಬಿಟ್ಟು ಒಂದಂಶವನ್ನು ಬಿಡದಿರುವುದು (ಹಿಂದಸಾ. ೨೦೬).
[ ಸಂ. ಜಹದಜಹಲ್ಲಕ್ಷಣಾ (ಜಹತ್ + ಅಜಹತ್ + ಲಕ್ಷಣಾ) ]

**ಜಹಪನಾ** 'ಜಹಾಪನಾ' ನೋ.

**ಜಹರ್** 'ಜೋಹರ್$_2$' ನೋ.

**ಜಹಲ್ಲಕ್ಷಣೆ** (ನಾ). [ಕಾವ್ಯಮಿ] ಲಕ್ಷಣಾವೃತ್ತಿಯ ಒಂದು ಪ್ರಕಾರ; ವಾಚ್ಯಾರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳುವುದು : "ಕೇರಿಯೆಲ್ಲ ಕಣ್ಣೀರು ಸುರಿಸಿತು" . . . "ಕೇರಿ" ಎಂಬುದರಲ್ಲಿ ವಾಚ್ಯಾರ್ಥವು ಪೂರ್ತಿಯಾಗಿ ತಿರಸ್ಕೃತವಾಗುತ್ತದೆ ; ಅದಕ್ಕೆ ಸಂಬಂಧಪಟ್ಟದ್ದರೂ ಅದನ್ನೊಳಕೊಳ್ಳದೆ ಬೇರೆಯಾಗಿರುವ "ಜನರು" ಎಂಬ ಅರ್ಥವು ಲಕ್ಷಿತವಾಗುತ್ತದೆ. (ಜನರು ಕಣ್ಣೀರು ಸುರಿಸಿದರೇ ಹೊರತು, ಕೇರಿ ಕಣ್ಣೀರು ಸುರಿಸಲಿಲ್ಲ.) ಈ ಬಗೆಯ ಲಕ್ಷಣೆಗೆ "ಜಹಲ್ಲಕ್ಷಣಾ" ಎಂದು ಹೆಸರು (ಭಾರಮೀ. ೨೫೨). [ ಸಂ. ಜಹಲ್ಲಕ್ಷಣಾ (ಜಹತ್ + ಲಕ್ಷಣಾ) ]

**ಜಹಾಂಗೀರು**, ಜಹಂಗೀರು, ಜಾಂಗೀರು (ನಾ). ಉದ್ದಿನ ಹಿಟ್ಟಿನಿಂದ ಸುತ್ತುಸುತ್ತಾಗಿ ಮಾಡಿ, ಸಕ್ಕರೆಯ ಪಾಕದಲ್ಲಿ ನೆನೆಸಿದ ಒಂದು ಬಗೆಯ ಸಿಹಿಖಾದ್ಯ : ನನಗೆ ಜಹಾಂಗೀರು ಕೊಡಿಸು (ರೂಢಿ). **ಜಹಂಗೀರು:** ನೀವು ಮಾಡಿರುವ ಜಹಂಗೀರು ತುಂಬ ಚೆನ್ನಾಗಿದೆ (ರೂಢಿ). **ಜಾಂಗೀರು:** ಜಲೇಬಿ . . . ಜಾಂಗೀರು, ಹೋಳಿಗೆ (ರೂಪಸಂ. ೧೭).
[ ←ಪಾರ. ಹಿಂ. ಜಹಾಂಗೀರೀ = ಒಂದು ಬಗೆಯ ಹಸ್ತಾಭರಣ ]

**ಜಹಾಗೀರದಾರ** 'ಜಹಗೀರುದಾರ' ನೋ.

**ಜಹಾದ್** (ನಾ). ಧರ್ಮಯುದ್ಧ : ನಿನ್ನ ಭಿಕ್ಷಾಪಾತ್ರವನ್ನು ಎತ್ತಿ ಹಿಡಿದು ಜಹಾದ್ ಜಹಾದ್ ಎಂದು ಕೂಗುತ್ತ ಉತ್ತರಾಭಿಮುಖವಾಗಿ ಹೋಗಬೇಕಾಗಿದೆ (ಕೈಲಾಸ. ೬೮). [ ←ಪಾರ. ಜಹಾದ್, ಜಿಹಾದ್ ]

**ಜಹಾಪನಾ**, ಜಹಪನಾ (ನಾ). ಚಕ್ರವರ್ತಿ, ಮಹಾಪ್ರಭು ಎಂಬಂತೆ ಸಾರ್ವಭೌಮರನ್ನು ಸಂಬೋಧಿಸುವಾಗ ಬಳಸುವ ಶಬ್ದ : ಜಹಾಪನಾ! [ಮಹಾಸ್ವಾಮಿ!] ಈ ದಾಸಿಯು ಶುಭಸಮಾಚಾರವನ್ನು ತಂದು ಹೇಳಿದಳು (ಕಪಾಕುಂ. ೬೯) ; ಹಾಗಲ್ಲ ಜಹಾಪನಾ, ಗುಲಾಮಿನ ಕಾಲೆಲ್ಲ ತೀರಬೇಕೊ ಬೇಡವೊ (ಗಾಳಿಪ. ೧೨೦). **ಜಹಪನಾ :** ಜಹಪನಾ — ಇಂಗ್ರೇಜಿ ಪಿಶಾಚಿಗಳು ಪಹರ್‌ಗಂಜನ್ನು ಲೂಟಿಗೊಳ್ಳುತ್ತಿದ್ದಾರೆ (ಅನ್ನಾವ. ೨೦). [ ←ಪಾರ. ಹಿಂ. ಜಹಾಂಪನಾಹ್ ]

**ಜಹ್ನುಜಾಂಬು** (ನಾ). ಗಂಗಾನದಿಯ ನೀರು ; ಪವಿತ್ರವಾದ ನೀರು : ಜಹ್ನುಜಾಂಬುಗಳಿಂದಂ ತುಂಬಿ ಸಹಸ್ರ ಕುಂಭದಭಿಷೇಕಮನಾಗಿಪೆಂ. (ರಾಜಶೇ. ೩-೨೮). [ ಸಂ. (ಜಹ್ನುಜಾ + ಅಂಬು) ]

**ಜಹ್ನುಜಾತೆ** (ನಾ). ಜಹ್ನುಮುನಿಯ ಮಗಳು ; ಜಾಹ್ನವಿ ; ಗಂಗಾ ನದಿ : ಜಹ್ನುಜಾತೆಯನುತ್ತರಿಸಿ, ನಾವೆಯಿಂದಿಳಿದು (ಶ್ರೀ ರಾ ಮಾ. ೧೨೬-೫೦). [ ಸಂ. ಜಹ್ನುಜಾತಾ (ಜಹ್ನು + ಜಾತಾ) ]

**ಜಹ್ನುಜೆ** (ನಾ).=ಜಹ್ನುಜಾತೆ. 'ಜಹ್ನುಜಾಂಬು' ಪರಾ.
[ ಸಂ. ಜಹ್ನುಜಾ ]

**ಜಹ್ನುಸುತೆ** (ನಾ). = ಜಹ್ನುಜಾತೆ : ಹೋಮದ ಕಿಚ್ಚು ತುಡುಕದ ಮುನ್ನ ತೆಗೆದನು ಬಿಚ್ಚುಜಡೆಗಳ ಜಹ್ನುಸುತೆಯಲಿ ನಾದಿದನ ಭಟನ (ಕುವ್ಯಾಗ. ೯-೨೩). [ ಸಂ. ಜಹ್ನುಸುತಾ (ಜಹ್ನು + ಸುತಾ) ]

**ಜಳ$_1$** 'ಜಲ$_1$' ನೋ.

**ಜಳ$_2$** 'ಜಲ$_2$' ನೋ.

**ಜಳಂಬ, ಝಣಂಬ, ಝಳಂಬ** (ನಾ). ೧. ಮೇಲ್ಮುಸುಕು ; ಹೊದಿಕೆ; ತೆರೆ : "ಮೇಲುಮುಸುಕಿಗೆ ಜಳಂಬಮದು" (ಶಬ್ದಮಂ ೬೦); "ಮುಸುಕಿ ಜಳಂಬಂ" (ಕವಿಕಂ. ೧೭೮). ೨. ಬೀಸಣಿಗೆ. 'ಜಳಂಬಾಯ್ತ' ಪರಾ. **ಝಣಂಬ:** ೧. ಇಂದ್ರಜಾಲಿಗರ ಪಾಪೆಗಳುಂ ಸೀರೆಗಳುಂ ಝಣಂಬಮಂ ಕೊಂಡೊಂದು ಪ್ರತಿಮುಖಮಂ ಕೊಂಡು ತನ್ನ ಮುಖದೊಳಿಟ್ಟು ಪುಲಿಯ ಝಣಂಬಮುಮಂ ತೊಟ್ಟು (ವಡ್ಡಾರಾ. ೧೯-೧೨) ; ಜವಳಿ ಝಣಂಬಮಂ ಕೊಡೆಯನನ್ನಳಮಂ (ಬೊಂಕಶಾ. ೧೯೩೮, ಹಿರೇಕೆರೂರ್. ೨೦-೨೪ ; ?). **ಝಳಂಬ :** ೧. "ಝಳಂಬಮೆಂದು ಮೇಲ್ಮುಸುಕು" (ಕಶಸಾ. ೨೦-೩೯೮) ; ಚಿತ್ರದಣ್ಣಂ ಪಳಿಯೆಸೆವ ಝಳಂಬಂ ಗಜೇನ್ದ್ರಂ ತುರಂಗಂ (ಎಇ. XIII, ೩೩೦-೦೩ ; 929) ; ಬಣ್ಣದ ಸೀರೆ ಮೇಘ ವಣ್ಣಗೆಯ ಝಳಂಬಮೆಂಬಿವಳವಟ್ಟಿರೆ . . . ನಡೆತಂದನಂದು ನವ ಯೌವನನೊರ್ವನಪೂರ್ವ ಚಿತ್ರಿಕಂ (ಮಲ್ಲಿಪು. ೫-೨೯); ಪಟಿಯ ಝಳಂಬ ಮುಜ್ಜಳಿಪ ಮುದ್ರಿಕೆ ಬಣ್ಣದ ಸೀರೆ . . . ತನ್ನೊಳೊಳ್ಪಳವಡೆ ಬಂದಂ (ಲೀಲಾವ. ೯-೫೫) ; ಕಡಲುಡಿಗೆಗೊಂಡ ಪೊಡವಿವೆಣ್ಗಂಬರಾಂಬುಜನೇತ್ರ ನಿತ್ತ ಪೀತಾಂಬರದ ಝಳಂಬಮೆಂಬ ಬೆಡಗನವುರ್ಚಿಯುಂ (ರಾಜಶೇ. ೧೨-೩೯ ವ) ; (ತನ್ನ ಕಯ್ಯುದರ ಝಳಂಬವನ್ನು ಸುಲಿಯುತ್ತ ಎಯ್ದಿ ಹೋಗಿ) (ಬಿಟ್ಟಿಅ. ೧೯೧೦-೦೪). ೨. 'ಝಳಂಬಾಯ್ತ' ಪರಾ.
[ ?./ಮರಾ. ಝಳಂಬ ]

**ಜಳಂಬಾಯ್ತ, ಝಳಂಬಾಯತ, ಝಳಂಬಾಯ್ತ** (ನಾ). ಬೀಸಣಿಗೆ ಬೀಸುವವನು; ಚಾಮರಿಗ: "ಬಿಜ್ಜಣಿಗೆಯವನೇ ಜಳಂಬಾಯ್ತನಕ್ಕುಂ" (ಶಬ್ದಮಂ. ೪೬); "ಜಳಂಬಾಯ್ತ ಬಿಜ್ಜಣಿಗೆವಿಡಿವಾತಂ" (ಕವಿಕಂ. ೧೬೦); ಅರಮನೆಯೊಳಿರಿಸುವುದು ರಾಯ ಕೀಳ್ಕುಲಪರಂಪರೆಯಿಂದೆ ಬಂದ ವಿಶ್ವಸನೀಯರಪ್ಪ ಪಡಿಯರರಂ ಜಳಂಬಾಯ್ತರಂ ಬೆಜ್ಜರಂ ಸಜ್ಜೆವಳರಂ (ಶೀಷರಾ. ೨-೩೨). **ಝಳಂಬಾಯತ :** ಪಡಿಯಱರೆಕ್ಕಟಿಗರ ಲೆಕ್ಕಿಗರೆಸೆವ ಝಳಂಬಾಯತರ . . . ಮಾಸ್ವಾರರ ಸಂದಣಿ ಸಲೆ ಸೊಗಯಿಸಿತು (ಜಯಿಕಾ. ೦೨-೦೯). **ಝಳಂಬಾಯ್ತ :** "ಝಳಂಬಾಯ್ತನೆಂದು ಬಿಜ್ಜಣಿಗೆ ವಿಡಿವಾತಂ" (ಕಶಸಾ. ೧೭-೩೪೨); ಅಬ್ಧಿಯ ಘೂರ್ಣಿಸುವಂತಾಯ್ತರಮನೆ ಯೊಳಗೆ ಪುಗುವ ಪೊಱಮಡುವ ಝಳಂಬಾಯ್ತರ ಸೂಟಾಯ್ತರ ಕಲ್ಲಾಯ್ತರಡಂಗಾಯ್ತರಚ್ಚುಕಾಯ್ತರ ರಭಸಂ (ಶಮುದ. ೧೯೮ ಪ್ರಯೋ): ತಿಂತಿಣಿಸಿ ತುಟಿಲ್ಗೆಯ್ವ . . . ಪಡೆವಳರಂ ಘೋಟಾಯ್ಲರಂ ಝಳಂ ಬಾಯ್ತರಂ ಪಸಾಯ್ತರಂ ಪ್ರೇಮದಿಂದವರವರಂತರವಱಿತು ಮಧುರೋಕ್ತಿಗಳಿಂ ಸಂತಸವಡಿಸುತ್ತ (ಚಿಕವಂ. ೭೪-೯).
[ ಜಳಂಬ + – ಆಯ್ತ ]

**ಜಳಕ, ಜಲಕ, ಝಳಕ$_1$** (ನಾ). ಮೈತೊಳೆಯುವುದಂ; ಮಿಹಾ; ಸ್ನಾನ: ಜಳಕವನೇ ಮಾಡಿ ಯೋಗ ಕಂಪನಿಕ್ಕಿ ಹೋದಿಹೆನಯ್ಯ (ಸಿದ್ಧವ. ೪೧ ೨೨೦); ಬೆಡಗಡರೆ ಪಾಕಪ್ರಯುತ್ನದ ಕಡೆಯೊಳಾ ಜಂಗಮದ ಜಳಕಕೆ ಹಿಡಿದು (ಬಸಪು. ೨೪-೬೦) : ಖಳಕುಲೋತ್ತಮನ ಬಾಣಾರುಣಾಂಬುವಿನಿಂದೆ ಜಳಕ ವಾದುದು ಕುಮಾರನಿಗೆ (ಪ್ರೋಹತ. ೩೪-೦೮) ; ಅವರನ್ನು ಜಳಕದ ಮನೆಗೆ ಕರೆದುಕೊಂಡು ಹೋಗ್ರೀಯಾ (ತುಂಗಭ. ೧೦). **ಜಲಕ:** ಪನ್ನೀರಿನಿಂ ಜಲಕ ವಂ ಮಾಡಿ (ಸೌಗಂಧಿ. ೧೬೬-೪). **ಝಳಕ$_1$ :** ಝಳಕಂ ಝಳಪಿಸಿದಂ ಜೊಂಗುಳಿ ಬೊಂಬುಳಿಯಾಳವಾಳವುಂತೆ ರವಾಳಂ . . . ಜಟಿ ಸಂದೇಹಂ (ಶಮುದ. ೨೫): ನಿದ್ರೆ ಹಿಂಗಿ ಎಬ್ಬಿ ಝಳಕ ದೇವತಾರ್ಚನೆ . . . ಜಪತಪ ಸಮಾಧಿಯುಂ ನಿರ್ವರ್ತಿಸಿ (ಧರ್ಮಪ. ೩-೧೨೦ ವ) ; ಝ[ಪಾಠಾಂ. ಜ] ಳಕವನುಲೇಪನ ವಿಭೂಷಣ ವಿಳಸದವ್ಯ್ಯಾಹಾರ ಮೊದಲಹ ಹಲವು ಸೇವೆಗೆ ಯೋಜಿಸಲು ನೆರೆತಂದುದೋರಂತೆ (ಸಾ ಕೃ ಭಾ. ೩೨-೧೫) : ಝಳಕಕ್ಕೆಂದು ಇವರು ಬಚ್ಚಲ ಮನೆಗೆ ಹೋದಾಗ (ಮೂರುದಾ. ೮೩).
[ ದೇ.॥ ತಮಿ. ಚಲಕ, ಚಲಕ್ಕ ; ತೆಲು. ಜಲಕ, ಜಲ್ಕ ]

**ಜಳಕಂ** (ಅ). ಬೇಗನೆ; ಕೂಡಲೆ: "ಜಳಕಂ ಸುಶೀಘ್ರದಲ್ಲಿ" (ಕರ್ಣಾನಿ.೯೧). 'ಜಳಕನೆ' ಪರಾ. [ ? ]

**ಜಳಕಂಗೈ** (ಕ್ರಿ). ಸ್ನಾನ ಮಾಡು: ಜಳಕಂಗೆಯ್ದುಂಡುಟ್ಟುಂ ಬಳಿಕಂ ಕದನಕ್ಕೆ ಖಡ್ಗ ಫಲಕಂಗಳನಾವಿಳಮತಿಸಿದ್ಧಂ ಪಿಡಿದುಂ ಗಳಿಲನೆ ನಡೆತಂದಂ (ಹಾಲಾಸ್ಯ. ೨-೧೧-೨೩); ಸರಯೂತೀರಮಂ ಸಾರ್ದು ಜಳಕಂಗೈದು (ರಾಮಾಶ್ವ. ೨೭-೪).
[ ಜಳಕ + ಕೈ$_1$ (<ಕೆಯ್$^1$$_1$) ]

**ಜಳಕಂಬೊಗಿಸು** (ಕ್ರಿ). ಸ್ನಾನಮಾಡಿಸು ; ಮಿಾಯಿಸು : ಸುರಲತೆಗೆ ಸುರನಾರಿಯರ್ ಸುರಭಿಪಯಮಂ ಸುರಿವಂತೆ ಸುರಭಿಸಲಿಲದಿಂ ಜಳಕಂ ಬೊಗಿಸಿ (ವೃಷವಿ. ೫-೦೫ ವ). [ ಜಳಕಂಬೊಗು + – ಇಸು$_3$ ]

**ಜಳಕಂಬೊಗು, ಝಳಕಂಬೊಗು** (ಕ್ರಿ). ಮಿಾಯು; ಸ್ನಾನ ಮಾಡು : ಚೇರಮಮಹೀಶ್ವರಂ ಜಳಕಂಬೊಗಲ್ಕೆ ತೈಲಾಭ್ಯಂಗನಂ ಮಾಡಿಕೊಳುತಿರ್ದ ಕಾಲದೊಳು (ಚೇರಮ. ೧೧-೩೧) ; ಪರಿಮಳೋದಕದಿಂ ಜಳಕಂಬೊಕ್ಕು ದಣಿಂಬುಮನುಟ್ಟು (ವೃಷವಿ. ೯-೭೦ ವ). **ಝಳಕಂಬೊಗು :** ಝಳಕಂ ಬೊಕ್ಕಂ (=ಮಜ್ಜನವಿಡಿದಂ) (ಶಮುದ. ಸ. ೩೫ ಅಡಿಟಿ).
[ ಜಳಕ + ಪೊಗು ]

**ಜಳಕನೆ** 'ಜಲಕ್ಕನೆ' ನೋ.

**ಜಳಕಾಕ** 'ಜಲಕಾಕ' ನೋ.

**ಜಳಕಿಸು** (ಕ್ರಿ). ಹಿಮ್ಮೆಟ್ಟಿಸು : ಧುರದೊಳರಿಭೂಭುಜರನಂಜಿಸುವ ನಡು ಗಿಸುವ ಕೊರಗಿಸುವ ಕೋಡಿಸುವ ಬಳುಕಿಸುವ ಜಳಕಿಸುವ [ಪಾಠಾಂ. ಬಾಡಿಸುವ ಬಳುಕಿಸುವ] ಬಿರುದಂಕಮಲ್ಲ ನೀ ನಡುಗಲೇತಕ್ಕೆ (ಹಡಕಾ. ೬-೫೪). [ಜಳಕು + – ಇಸು$_3$ ]

**ಜಳಕು, ಜಳುಕು** (ಕ್ರಿ). ೧. "ಬಳುಕಂ ; ಕಂಪಿಸಂ" (ಲೋಕಗೀ. ಕೋಶ) : ಕಿಂಪಿಲಿ ಚೆಲುವೀರ ಪಂಚಸರ ಕೊಪ್ಪೂರ ಒಂಕಿ ಭಾರಕ ಜಳಕೂರ (ಲೋಕಗೀ. ೦೨). ೨. ಹಿಂಜರಿ ; ಹಿಂದೆಗೆ ; ಹಿಮ್ಮೆಟ್ಟು : 'ಜಳಕಿಸು' ಪರಾ: **ಜಳುಕು:** ೩. ಎಸೆ ; ಬಿಸುಡು: ಅಳುಕಾದೆ ಬಳುಕಾದೆ ಕಳುಕಾದೆ ಮನದೊಳು ಅಳಿನೀಲಕುಂತಳೆವೂರಿಯೋಳ್ ಜಳುಕಾದೆ ತಳುಕಾದೆ ವಳಕೀಸಿ ಬೆದರಾದೆ ದಳನೇತ್ರೆ ಹರುಷಾದಿ ಪೊರಟು (ಹಮುಡ. ೬೦): ಭರದಿ ಕೊಡಗಳ ಜಳುಕಿ ಧರೆಯಲಿ ಕರೆದು ಬಸವನ ಎಲ್ಲ ಬಿಸುಡುಲಿ ಧರೆಗೆ ಬೀಳದೆ ಒಡೆಯದಿರ್ದಡೆ ನೋಡು ಪರಿಕಿಸುತ (ಶರಲೀ. ೨೩೩-೩). 'ಜಳಿಕ' ಪರಾ. [ ? ]

**ಜಳಕೇಳಿ** 'ಜಲಕೇಳಿ' ನೋ.

**ಜಳಕೇಳಿಗೈ** (ಕ್ರಿ). ನೀರಾಟವಾಡು: ಜಳಕೇಳಿಗೈವ ಪನ್ನಗವಿಳಾಸಿನೀಜನಂ (ವೃಷವಿ. ೪-೭೦). [ ಜಳಕೇಳಿ (=ಜಲಕೇಳಿ) + ಕೈ$_1$ (<ಕೆಯ್$^1$$_1$) ]

**ಜಳಕ್ಕನೆ** 'ಜಲಕ್ಕನೆ' ನೋ.

**ಜಳಕ್ರೀಡೆ** 'ಜಲಕ್ರೀಡೆ' ನೋ.

**ಜಳಖಾತಿಕೆ** 'ಜಲಖಾತಿಕೆ' ನೋ.

**ಜಳಗುಡಿ** (ನಾ). ಒಂದು ಬಗೆಯ ಧಾರಾಗೃಹ; ಕಾರಂಜಿಮನೆ: ಬಾಣಸಿನ ಗುಣಿನೆಯ ಮಜ್ಜನದ ದೇಹಾರದ ಜುಂಚೆಯ ಕೊಂಚೆಯುದ ಕೊರವದ ಕೊಟ್ಟಗೆಯ ಗುಡಿಯ ಜಳಗುಡಿಯ ಗೊಲ್ಲಣಿಗೆಯ ಮಂಡವಿಗೆಯ ವಿಳಾಸನಿವಾಸಂಗಳಿಂದಂ (ಶಾಂತಿಪು. ೧೦-೧೪೭ ವ).
[ ಜಳ್$_2$ (=ಜಲ್$_2$) + ಗುಡಿ$_3$ ]

**ಜಳಚರ** 'ಜಲಚರ' ನೋ.

**ಜಳಜ** 'ಜಲಜ' ನೋ.

**ಜಳಜಂತ್ರ** 'ಜಲಜಂತ್ರ' ನೋ.

**ಜಳಜದಳ** 'ಜಲಜದಲ' ನೋ.

**ಜಳಜದಳಾಕ್ಷಿ** (ನಾ). ಕಮಲದ ಎಸಳಿನಂತೆ ಕಣ್ಣುಳ್ಳವಳು: ಜಳಜದಳಾಕ್ಷಿಯ ಕಣ್ಮಲರಂದಂ ಪೊಟೆಜಳಮಿಾಂಗಳ ಪೊಣರ್ಗಳ ಚಂದಂ (ಸುಕುಮಾ. ೫-೫೦).
[ ಸಂ. ಜಲಜದಲಾಕ್ಷೀ (ಜಲಜದಲ + ಅಕ್ಷಿ + –) ]

**ಜಳಜಭವ** 'ಜಲಜಭವ' ನೋ.

**ಜಳಜಭವಾಂಡ** (ನಾ). ಬ್ರಹ್ಮಾಂಡ: ಜಳಜಭವಾಂಡಂ ಜಂಬೂಫಳರಸದಿಂ ತೀವಿತೆಂಬಿನಂ ಜಗಮಂ . . . ಪರ್ವಿದುದು ಸಾಂದ್ರಸಂಧ್ಯಾರಾಗಂ (ಕಾದಂಪೂ. ೯೬೮). [ ಜಳಜಭವ (= ಜಲಜಭವ) + ಅಂಡ$_2$ ]

**ಜಳಜಸಂಭವ** 'ಜಲಜಸಂಭವ' ನೋ.

**ಜಳಜಸಂಭವಗಣ** (ನಾ). [ಛಂದ] ಅಂಶಗಣಗಳಲ್ಲಿ ಒಂದು; ಬ್ರಹ್ಮಗಣ: ಜಳಜಸಂಭವಗಣಮಕ್ಕೆ ಮೊದಲೊಳೆ . . . ನಡುವಣಕ್ಕರಕೆ ಸಖೀ (ಛಂದೋಂಬು. ೫-೨೪೪). [ ಜಳಜಸಂಭವ (= ಜಲಜಸಂಭವ) + ಗಣ ]

**ಜಳಜಸಖ** (ನಾ). ಕಮಲದ ಗೆಳೆಯ; ಸೂರ್ಯ: ಜಳಜಸಖನನಿಲಸಖನೆಂದಿಳೆಯೊಳ್ ರಸವೆಸರನಾನದಿರ್ದೊಡೆ ಸೂರ್ಯಾನಳರೋವೋ ಸಂತಮಿರ್ಪರೆ ಘಳಿಲನೆ ನಿಂದುರಿದು ಹೋಗರೇ ಬೇಸಗೆಯೊಳ್ (ಗಿರಿಕ. ೯-೨೭); ತರುಗಳಲ್ಲಿ ಹಯಖುರಹತಿಯಿಂದಳುರ್ದೆಳ್ದ ಧೂಳಿ ಪರಿಣತ ಜಳಜಸಖಾಭಂ ಪತಂಗತತಿವೊಲ್ ಬೀಳ್ಗುಂ (ಶಾಕುಂತ. ೧೭-೩೨).
[ ಜಳಜ (= ಜಲಜ) + ಸಖ ]

**ಜಳಜಲಿಸು** 'ಜಲಜಲಿಸು' ನೋ.

**ಜಳಜಾತ** 'ಜಲಜಾತ' ನೋ.

**ಜಳಜಾತಸಖ** 'ಜಲಜಾತಸಖ' ನೋ.

**ಜಳಜಿನಿ** 'ಜಲಜಿನಿ' ನೋ.

**ಜಳದ** 'ಜಲದ' ನೋ.

**ಜಳದವೃಂದ** (ನಾ). ಮೋಡಗಳ ಸಮೂಹ: ಪೊಳೆವ ಮಿಂಚುಗಳಂತಿರೆ ಕೇತುಗಳ್ ಜಳದವೃಂದದವೋಲಿರೆ ಹಸ್ತಿಗಳ್ (ಕವಿರಾ. ೧-೧೪೩).
[ ಜಳದ (= ಜಲದ) + ವೃಂದ ]

**ಜಳದಾಗಮ** 'ಜಲದಾಗಮ' ನೋ.

**ಜಳದಾಧ್ವ** 'ಜಲದಾಧ್ವ' ನೋ.

**ಜಳದಾನ** 'ಜಲದಾನ' ನೋ.

**ಜಳದಾನಕ್ರಿಯೆ** 'ಜಲದಾನಕ್ರಿಯೆ' ನೋ.

**ಜಳದುರ್ಗ** 'ಜಲದುರ್ಗ' ನೋ.

**ಜಳದೆ** (ನಾ). ನೀರಿನಿಂದ ನೆನೆಸಿದ ಬೀಸಣಿಗೆ; "ಬಾಳದ ಬೇರಿನ ಬೀಸಣಿಕೆ" (ಆದಿಪು. ಕೋಶ): ಕುಳಿರ್ವ ತಿಳಿನೀರನುಡುಗದೆ ತಳಿ ತಳಿರಂ ಪಾಸು ಜಳದೆಯಿಂ ಬೀಸೆಂದುಮ್ಮಳಿಸಿ ಕಳವಳಿಸಿ ವಿರಹಾಕುಳನವೊಲಾ ಖಚರನಿಂತು ತಳವೆಳಗಾದಂ (ಆದಿಪು. ೨-೧೪).
[ <ಪ್ರಾ. ಜಲದ್ದಾ. / ಸಂ. ಜಲಾರ್ದ್ರಾ ]

**ಜಳದೇವತೆ** 'ಜಲದೇವತೆ' ನೋ.

**ಜಳದೌಘ** (ನಾ). = ಜಳದವೃಂದ: ಜಳದೌಘಶ್ಯಾಮಧೂಮಪ್ರತತಿ ಚಳತಟಿನ್ಮಾಳಿಕಾಲೋಲ ಕೀಲಾವಳಿ (ಚಂದ್ರಪು. ೪-೨೯).
[ ಜಳದ (= ಜಲದ) + ಓಘ ]

**ಜಳಧರ** 'ಜಲಧರ' ನೋ.

**ಜಳಧರಪಥ** 'ಜಲಧರಪಥ' ನೋ.

**ಜಳಧರಮಾರ್ಗ** 'ಜಲಧರಮಾರ್ಗ' ನೋ.

**ಜಳಧಾರೆ** 'ಜಲಧಾರೆ' ನೋ.

**ಜಳಧಿ** 'ಜಲಧಿ' ನೋ.

**ಜಳನಿಧಾನ** (ನಾ). ನೀರಿಗೆ ಆಶ್ರಯವಾದುದು; ಕಡಲು; ಸಮುದ್ರ: ವಿನಯಾದಿತ್ಯಾಭಿಧಾನನತ್ರಿನಿಧಾನಂ ವಿನತಜನಜಳನಿಧಾನಂ ಜನಿಯಿಸಿದಂ ಶತ್ರುಘಾತಶರಸಂಧಾನಂ (ಎಕ. V, ಬೇಲೂರು. ೧೯೩-೯ : 1161).
[ ಜಳ್$_2$ (= ಜಲ್$_2$) + ನಿಧಾನ ]

**ಜಳನಿಧಿ** 'ಜಲನಿಧಿ' ನೋ.

**ಜಳನೀಳಿಕೆ** 'ಜಲನೀಲಿಕೆ' ನೋ.

**ಜಳಪಕ್ಷಿ** 'ಜಲಪಕ್ಷಿ' ನೋ.

**ಜಳಪದ್ಧತಿ** 'ಜಲಪದ್ಧತಿ' ನೋ.

**ಜಳಪಾನ** (ನಾ). ನೀರು ಕುಡಿಯುವುದು: ಜಳಪಾನಚ್ಛಳದಿಂ ಪ್ರಪಾಪ್ರಣಯಿನೀಶೃಂಗಾರಲೀಲಾಸುಧಾಜಳಮಂ ಕಣ್ಗಳಿನೀಂಟಿ . . . ಭಾವರತಕೇಳೀಸೌಖ್ಯ ಪೀಯೂಷಸಂಕುಳಮಂ ಚಿತ್ತದಿನೀಂಟಿ ತದ್ವಿಷಯದಧ್ವನ್ಯರ್ ಮನಂಬೆರ್ಚುವರ್ (ಚಂದ್ರಪು. ೦-೯೯).
[ ಜಳ್$_2$ (= ಜಲ್$_2$) + ಪಾನ ]

**ಜಳಪಿಸು** 'ಝಳಂಪಿಸು' ನೋ.

**ಜಳಪು** 'ಜಳುಪು' ನೋ.

**ಜಳಪ್ಪ** 'ಝಳಪ್ಪ' ನೋ.

**ಜಳಪ್ರತ್ಯಯ** 'ಜಲಪ್ರತ್ಯಯ' ನೋ.

**ಜಳಪ್ರಸರ** 'ಜಲಪ್ರಸರ' ನೋ.

**ಜಳಪ್ಲವ** (ನಾ). ನೀರಿನ ಪೂರ,–ಪ್ರವಾಹ: ಜಳಪ್ಲವದೊಳ್ ನಸುದೇಂಕು ದೇಕೆ (ವರ್ಧಮಾ. ೮-೯೦); ಅವಳಸಿಯ ಬಾಸೆಯೆಂಬೀ ನವಯೌವನವನದ ಲತೆಯ ಲಾವಣ್ಯ ಜಳಪ್ಲವಮನೊಳಕೊಳ್ವುದೆಂದಾಳವಾಳಮೆನೆ ನಿಮ್ನನಾಭಿಮಂಡಲಮೆಸೆಗುಂ (ಮಲ್ಲಿಪು. ೩-೩೨).
[ ಜಳ್$_2$ (= ಜಲ್$_2$) + ಪ್ಲವ ]

**ಜಳಬುದ್ಬುದ** 'ಜಲಬುದ್ಬುದ' ನೋ.

**ಜಳಮಂತ್ರ** 'ಜಲಮಂತ್ರ' ನೋ.

**ಜಳಮನುಷ್ಯ** (ನಾ). ಜಲಪುರುಷ; ನೀರುಮನುಷ್ಯ: ಮನುಜ ಜಳಮನುಷ್ಯಂ ಮಹಾ ಕೂರ್ಮ ಕೂರ್ಮಂ ವಿಶದಂ ತತ್ಕೀರ್ತಿ ದುಗ್ಧಾಂಬುಧಿ ಗಗನಘನಶ್ರೀಶನಂ ತಾಳ್ದು ತೋರ್ಕುಂ (ರಾಜಶೇ. ೫-೩).
[ ಜಳ್$_2$ (=ಜಲ್$_2$) + ಮನುಷ್ಯ ]

**ಜಳಮಲ್ಲಿಕೆ** (ನಾ). ಒಂದು ಬಗೆಯ ಗಿಡ: "ಖರಚ್ಛದಾ–ಜ (ಚಿ?)ಳಮಲ್ಲಿಕೆ" (ಓಷಧಿ. ೪೩). [ ಸಂ. ಜಲಮಲ್ಲಿಕಾ (ಜಲ + ಮಲ್ಲಿಕಾ) ]

**ಜಳಯಂತ್ರ** 'ಜಲಯಂತ್ರ' ನೋ.

**ಜಳಯಾತ್ರೆ** 'ಜಲಯಾತ್ರೆ' ನೋ.

**ಜಳಯುದ್ಧ** 'ಜಲಯುದ್ಧ' ನೋ.

**ಜಳರಂಕು** 'ಜಲರಂಕು' ನೋ.

**ಜಳರಾಶಿ** 'ಜಲರಾಶಿ' ನೋ.

**ಜಳರುಹ** 'ಜಲರುಹ' ನೋ.

**ಜಳರುಹಕಾಂಡ** (ನಾ). ಕಮಲದ ನಾಳ ; ಮೃಣಾಲ : ಹರಿ . . . ತದೀಯ ಶರೀರಕಾಂಡಮಂ ಜಳರುಹಕಾಂಡಮಂ ಪಿಡಿವವೋಲ್ ಪಿಡಿದಾಡಿದ ನಂದು ಲೀಲೆಯಿಂ (ಜಗವಿ. ೩-೯೯). [ಜಳರುಹ ( = ಜಲರುಹ)+ಕಾಂಡ]

**ಜಳರುಹನಾಭ** 'ಜಲರುಹನಾಭ' ನೋ.

**ಜಳರುಹಪತ್ರ** (ನಾ). ತಾವರೆಯ ಎಸಳು ; ಕಮಲದಳ : ಜಳರುಹಪತ್ರ ಪತ್ರಗಳ ಮೇಲೆಸಸುಂ ಕುಣಿವಂಗನಾಜನಂಗಳ ನಳಿತೋಳ ತೆಕ್ಕೆ (ಪುಷ್ಪಪು. ೧೦-೪೬). [ ಜಳರುಹ ( = ಜಲರುಹ) + ಪತ್ರ ]

**ಜಳರುಹರಿಪು** 'ಜಲರುಹರಿಪು' ನೋ.

**ಜಳರೇಖೆ** (ನಾ). ೧. ನೀರಿನ ಮೇಲೆ ಎಳೆದ ಗೆರೆ. ೨. (ಆಲಂ) ಕ್ಷಣಿಕವಾದುದು ; ಭಂಗುರವಾದುದು : ಜಳರೇಖಾಸಂಚಳಂ ಜವ್ವನ ಮಮರ ಧನುರ್ಜಾಲಮಂಗಂ (ಪುಷ್ಪಪು. ೧೩-೪೪).

[ ಜಳ$_2$ ( = ಜಲ$_2$) + ರೇಖೆ ]

**ಜಳವಟಿಗೆ** 'ಜಳವಟ್ಟಿಗೆ' ನೋ.

**ಜಳವಟ್ಟಿಗೆ, ಜಳವಟಿಗೆ, ಝಳವಟಿಗೆ, ಝಳವಟ್ಟಿಗೆ** (ನಾ). ಒಂದು ಬಗೆಯ ಆಭರಣ : ಪೇರುರದ ಪರೆಪು ಕರಿಯ ದಂಡೆಯ ಜಳವಟ್ಟಿಗೆಯ ಬೆರಕೆವೆಳಗಿಂ ಸುರಧನುವಿನ ಹೊರಜೆ ಹತ್ತಿದೈರಾವತಕ್ಕೆ ವೈರಮನೊಡರ್ಚೆ (ಅನಂಪು. ೨-೨೬ ವ). **ಜಳವಟಿಗೆ :** ತೋರಹಾರದ ಜಳವಟಿಗೆಯ ಪದಕದ ಬಾಹುಪೂರಯದ . . . ಸೊಬಗನಡಿಯಿಟ್ಟಂ (ಹಜಶಾ. ೪-೨); (ಸೋಮಜ. ೨-೧೬ ನೋ) ; ಖಡೆಯ ಸರಪಣಿ ತೋಳಬಂದಿಗೆ ಪೆಡೆವಣೆಯ ಮಣಿವಾವುಗಳನಳವಡಿಸಿದನು ಜೋಡಿಸಿದ ಶೇಷನ ಜಳವಟಿಗೆ ಮೆಚಿಯೆ (ಕುವ್ಯಾಕ. ೬-೧೨). **ಝಳವಟಿಗೆ :** ತರಿಸಿದನು ಭಂಡಾರದಲಿ ಪರಿಪರಿಯ ಪೆಟ್ಟಿಗೆ ಗಳನು . . . ಚರಣನೂಪುರ ಝಳವಟಿಗೆಯುಂಗುರ ಕಿರೀಟಾಂಗದ ಸುಕರ್ಣಾಭರಣವನು ತೆಗೆಸಿದನು (ಕುವ್ಯಾಸ. ೫-೪೩) ; ಜಲಕಮಲದ ಕಾಂಚಿಯ ಕಟಿಸೂತ್ರದ ಝಳವಟಿಗೆಯ ಜೂಳೆಯದ . . . ಕಾಂತಾಬಲವೆಯ್ದಿತು (ಕುರಾಸಾಂ. ೪೦-೭೮); ತ್ರಿಸರದ ಪಂಚಸರದ ಝಳವಟಿಗೆಯ ಹೊಸಮುತ್ತಿನೇಕಾವಳಿಯ . . . ಒಸೆದಿತ್ತನಾ ಸುರುತಾಳ (ಕುರಾಸಾಂ. ೪೦-೩೬). **ಝಳವಟ್ಟಿಗೆ :** ಪ್ರಚಂಡಮಂಡಳಿಕರ ವಲಯದ ಕರ್ಣಾಭರಣದ ಕೇಯೂರದ ರತ್ನಹಾರದ ಝಳವಟ್ಟಿಗೆಯ ತೊಡರ . . . ಉಣ್ಮಿ ಪೊಣ್ಮುವ ರಘಣರ್ಝಣತ್ಕಾರದೊಳಂ (ಅನಂಪು. ೩-೯೫ ವ).

[ ಜಳ$_1$ (<ಜಲ$_1$) + ಪಟ್ಟಿಗೆ ]

**ಜಳವಾಯಸ** 'ಜಲವಾಯಸ' ನೋ.

**ಜಳವಾಸ** (ನಾ). ನೀರಿನಲ್ಲಿ ಇರುವಿಕೆ, ವಾಸಮಾಡುವುದು : ಬಿಳಿಯಲರ್ಗಣ್ಗೆ ಕೆಂಪನರುಣಾಧರಕೊಪ್ಪುವ ಬೆಳ್ಪನೆಯ್ದೆ ಪಜ್ಜಳಿಸುವ ದೇಹದೀಪ್ತಿಗೆ ಬೆಳರ್ತೆರವಂ ಪಡೆದುಂ ನಿಕಾಮಕೋಮಳೆಯರುದಾತ್ತವೃತ್ತಿ ಕಿಡುಗುಂ ಜಳವಾಸದೊಳ್ (ಶಾಂತಿಪು. ೮-೪೦).

[ ಜಳ$_2$ (=ಜಲ$_2$) + ವಾಸ$_2$ ]

**ಜಳವಿಹಂಗ** 'ಜಲವಿಹಂಗ' ನೋ.

**ಜಳವಿಹಗ.** (ನಾ). ನೀರಂಹಕ್ಕಿ ; ಜಲಪಕ್ಷಿ : ಜಳವಿಹಗಪಕ್ಷವಿಕ್ಷೇಪದಿಂ ಪರಿದು . . . ಮಂದಮಾದ ಪೊಂದಾವರೆಯ ರಜದೊಳಂ (ಮಲ್ಲಿಪು. ೨-೩೩) ; ಎನಿತು ಜಳವಿಹಗಮಿರೆಯುಂ ವನಜವನಂ ರಾಜಹಂಸನಿಂ ರಾಜಿಪವೋಲ್ (ಚಂದ್ರಪು. ೨-೨೬). [ ಜಳ$_2$ ( = ಜಲ$_2$) + ವಿಹಗ ]

**ಜಳವಿಹಗಿ** (ನಾ). ಹೆಣ್ಣು ನೀರುಹಕ್ಕಿ ; ಹೆಣ್ಣು ಜಲಪಕ್ಷಿ : ಜಳವಿಹಗೀಸಹಸ್ರವಿರುತಂ ಮರುತಂ (ಪುಷ್ಪಪು. ೯-೨೪).

[ ಸಂ. ಜಲವಿಹಗೀ (ಜಲ + ವಿಹಗೀ) ]

**ಜಳವೆ, ಜಣಬೆ, ಜವಣೆ, ಜವಳೆ, ಜೆವಳೆ** (ನಾ). ೧. ಬಿದಿರಿನ ಗಳು ; ಬೊಂಬು; ಕೋಲು ; ಜಲ್ಲೆ : ಮೇಲಿದ್ದವರನ್ನು ದೊಡ್ಡ ಜಳವೆಗಳಿಂದ ಕೆಳಕ್ಕೆ ಉರುಳಿಸಿಬಿಡುವರು (ಭಾರವಿ. ೧೬); ಹೊದರಿನಲ್ಲಿ ಹೊಕ್ಕವುಗಳನ್ನೂ ಜಳವೆಗಳಿಂದ ಬಡಿದು ಓಡಿಸುತ್ತಾ . . . ಹೋಗುತಿದ್ದರು (ಪೇಟೀಮಾ. ೩). ೨. ಹುಟ್ಟುಗೋಲು. **ಜಣಬೆ :** ೧. ಅತ್ತಿಮಬ್ಬೆ ಒಂದು ಕತ್ತಿಯನ್ನು ತೆಗೆದುಕೊಂಡು ಅದನ್ನು ಜಣಬೆಯಂತೆ ಬಾಗಿಸಿ ಹದವನ್ನು ಪರೀಕ್ಷಿಸಿದಳು (ದಾನಚಿಂ. ೧೨೮). **ಜವಣೆ :** ೧. ಎರಡು ಜವಣೆಯನ್ನು ತರಿಸಿ ಎರಡರ ತುದಿಗೂ ಹುಂಜಗಳನ್ನು ಕಟ್ಟಿ ಕೋಟೆ ಬಾಗಿಲ ಮೇಲೊಂದನ್ನು ನೆಡಿಸಿದರು (ಹುಟ್ಟಿಹ. ೬೧) ; ಬಿದಿರಿನ ಜವಣೆಯಿಂದ ಎಳನೀರನ್ನು ಕೆಡವಿ ನಮ್ಮಿಬ್ಬರಿಗೂ ಕೊಟ್ಟರು (ಧರ್ಮಶ್ರೀ. ೨೯೮). **ಜವಳೆ :** ೧. ಭುವನ ವಾಂಛೆಯಿಂದ ಯಾತವನ್ನು ತುಳಿಸುವವನ ಕೈಯ ಜವಳೆಯಂತೆ ತದನು ಬಂಧ ಕಾರ್ಯಮಾತ್ರದಿಂದ (ಭಕ್ತಸ. IV, ೫೯-೩). **ಜೆವಳೆ:** ೧. ನಳಿತೋಳ ನೆತ್ತಿ ಪಾಮರಿಯರು ಸೋವುವ ಚಳಕವೊಪ್ಪಿತು ಗಿಳಿಗಳನು ಘಳಿಲನಂಗಜ ಧೀವರ ಮೋಹಿ ಮೀನ್ಗಳ ಸೆಳೆವ ಕೈ ಜೆವಳೆ[ಪಾಠಾಂ. ಳಬೆ]ಗಳಂತೆ (ಜ್ಞಾನಜ. ೧-೧೦೭). 'ಜಲ್ಲೆ$_1$' ಪರಾ.

ಜಳವೆ ಆಡಿಸು = ಕೋಲಿನಿಂದ ಮಿಾಟಿ ತೆಪ್ಪವನ್ನು ಮುಂದೆ ತಳ್ಳು: ನಾನು ನಮ್ಮ ಹೈದ ಇಬ್ಬರೂ ಜಳವೇ ಆಡಿಸಬೇಕು(ತುರಾಯಿ. ೮೫).

**ಜಳವ್ಯಾಳ** 'ಜಲವ್ಯಾಲ' ನೋ.

**ಜಳಶಯ** (ನಾ). ನೀರಿನ ಮೇಲೆ ಮಲಗಿರುವವನು ; ವಿಷ್ಣು : ಜಳಶಯನವತರಿಸುವುದಂ ತಿಳಿದು (ಜಗವಿ. ೨-೭೪). [ ಸಂ. ಜಲಶಯ ]

**ಜಳಶೂಕ** 'ಜಲಶೂಕ' ನೋ.

**ಜಳಸೇಕ** 'ಜಲಸೇಕ' ನೋ.

**ಜಳಸ್ತಂಭ** 'ಜಲಸ್ತಂಭ' ನೋ.

**ಜಳಸ್ತಂಭಮಂತ್ರ** (ನಾ).=ಜಲಸ್ತಂಭನ ೨ : ರಾಜರಾಜಂ ಸ್ಯೆರಿಸದೆ ಚಿತ್ತಸ್ಖಲನೆಯಾಗೆ ಜಳಸ್ತಂಭಮಂತ್ರಮೆಲ್ಲಂ ಮಾಯಾಮಂತ್ರಮಾಗೆ (ಪಂಪಭಾ. ೧೩-೮೦ ವ). [ ಜಳಸ್ತಂಭ (= ಜಲಸ್ತಂಭ) + ಮಂತ್ರ ]

**ಜಳಾಂಜಳಿ** 'ಜಲಾಂಜಲಿ' ನೋ.

**ಜಳಾವಗಾಹ** (ನಾ). ನೀರಿನಲ್ಲಿ ಮುಳುಗಿ ಸ್ನಾನಮಾಡುವುದು; ಸ್ನಾನ: ಕೋಳ್ಗುದಿಗೊಂಡು ಜಳಾವಗಾಹಾಸೆಯಿಂ ವೈತರಣಿಯ ಪಿರಿಯ ದರಿಯಂ ಮೆಟ್ಟಿ (ಶಾಂತಿಪು. ೭-೯೧ ವ). [ ಜಳ$_2$ ( = ಜಲ$_2$) + ಅವಗಾಹ ]

**ಜಳಾಶಯ** 'ಜಲಾಶಯ' ನೋ.

**ಜಳಿ** (ನಾ). ಹಡಗಿನ ಒಂದು ಭಾಗ : "ಆ ಜಳಿ ಕತ್ತವಕ್ಕುಂ [ಪಾಠಾಂ. ಬಳ್ಳಿ ಕರ್ತಮೆನಿಕುಂ] " (ಮಂಗರಾ. ೧೨೦-೫). [ ? ]

**ಜಳಿಕ, ಜಳುಕ** (ನಾ). ೧. ಸತ್ತ್ವಹೀನನಾದವನು ; ದುರ್ಬಲ : "ಜಳಿಕಂ ಸತ್ತ್ವವಿಹೀನನೊಳ್ " (ಕರ್ಣಾನಿ. ೪೫) ; ನಮ್ಮ ಆಸ್ಥಾನವನ್ನು ಲಘು, ನಿರ್ಬಲ ಜಳಿಕವೆಂದಾಗಿಸಿರುವನೆಂದೂ . . . ಎರಡನೆಯ ವೃತ್ತಾಂತ (ಬಿಟ್ಟಿಅ. ೭೮-೧೮) . ೨. ಸತ್ತ್ವಹೀನವಾದುದು ; ಜಳ್ಳು. (ಗು). ೩. ಸತ್ತ್ವಹೀನವಾದ ; ದುರ್ಬಲವಾದ : ಎಂತೆಂತೊ ಜಳಿಕ ರಕ್ಕಸರಂ ಗೆಲ್ದೊಂದು ಟಕ್ಕಿನ ಬಲ್ಮೆಯನ್ನೀ ತೋಳ್ವಲಕೇಂ ಬಾರ್ತೆಯ ? (ರಾಮಾಶ್ವ. ೧೧೨-೭). **ಜಳುಕ:** ತನು ಕೆಲಸಕ್ಕೆಳಸಿದೊಡಂ ಮನವವಳಂ ನೆನವುತಿರ್ಪುದದು ಕಾರಣದಿಂದೆನಸುಂ ಮಾಡಿದ ಕೆಲಸಂ ಮನದಂತಿರೆ ಜಳುಕನಾ[ಪಾಠಾಂ. ಬಳಿಕೆವಾ]ದುದಾಕೆಯ ದೆಸೆಯಿಂ (ಧರ್ಮಪ. ೭-೧೫).

[ <ಜಾಳು$_2$ ? ]

**ಜಳಿಕತನ** (ನಾ). ಸತ್ತ್ವಹೀನತೆ ; ದೌರ್ಬಲ್ಯ : ಒಗೆದೊಡಂಬಿ ಬಳೆದು ಕೊರ್ಬಿ ನಸೆಯ ತೀರ್ಚಿ ಜಳಿಕತನದೆ ಕಂದಿಯಿರ್ಕುಳಾಗಿ ಸಾವ ಯನ್ನಶಾಲಿ ಧರೆಯಿದಕಟ ! (ಸಂಸಪ. ೧೫-೧). [ ಜಳಿಕ + – ತನ ]

**ಜಳಿಪಿಸು** 'ಝಳಂಪಿಸು' ನೋ.

**ಜಳುಕ** 'ಜಳಿಕ' ನೋ.

**ಜಳುಕು** 'ಜಳಕು' ನೋ.

**ಜಳುಪಿಸು** 'ಝುಂಳಂಪಿಸು' ನೋ.

**ಜಳುಪು, ಜಳಪು** (ಕ್ರಿ). ಜಾರು ; ಕಳಚು : ಮೆಲ್ಲನೆ ಹತ್ತಿ ತಿರಿವ ಹಣ್ಣು ಕೊಟ್ಟರಲ್ಲಿ ಬಿಳ್ದುದು ಕೈ ಜಳುಪಿ (ನೇಮಿಸಂ. ೨-೧೦೯) ; ಪಾವನದ ಭಕ್ತಿ ಸುಜ್ಞಾನ ವೈರಾಗ್ಯವೆಂದೆಂಬೊಂದು ವಜ್ರದ ಮಹಾರಾವವಹ ಗುಂಡಾಗಿ ಗಣನಿಕರ ಮಧ್ಯದೊಳಗಾ ವೇಳೆಯೊಳು ಜಳುಪಿ ಬಿದ್ದು (ವೀಶೈಪು. ೮-೨೦-೧೫). **ಜಳಪು:** ಸರಸಿಜಾಂಬಕಿಯೋರ್ವಳು ಉಯ್ಯಾಲಾಡಲು ತುರುಬು ಜಳಪಿ (ಜ್ಞಾನಜ. ೨೫-೧೦೬). [ ? ]

**ಜಳುವು** (ನಾ). (?) : ನೃಪನ ಆಳುವಿನಿಂ ಜಳುವಿನಿಂದಿತ್ತರದ ಸೇನೆ ಸಹಿತ (ಜಿನಮು. ೨೪-೨೩). [ ? ]

**ಜಳೂಕ** 'ಜಲೂಕ' ನೋ.

**ಜಳೂಕಿಕೆ** (ನಾ). ಜಿಗಳೆ ; ಜಿಗಣೆ : "ಜಳೂಕಿಕೆ ಜಿಗುಳೆ ಜಳೂಕಂ" (ವಸ್ತುಕೋ. ೨೩-೮). [ ಸಂ. ಜಲೂಕಿಕಾ ]

**ಜಳೂಕೆ** 'ಜಲೂಕೆ' ನೋ.

**ಜಳೇಶ** 'ಜಲೇಶ' ನೋ.

**ಜಳೋಚ್ಛ್ವಾಸ** 'ಜಲೋಚ್ಛ್ವಾಸ' ನೋ.

**ಜಳೋದರ** 'ಜಲೋದರ' ನೋ.

**ಜಳೌಕಸ** 'ಜಲೌಕಸ' ನೋ.

**ಜಳ್ಳಾಡು** (ಕ್ರಿ). (?) ; ಮನೆಯ ಗೋಕೃತ್ಯಗಳಿಗೋಸ್ಕರ ವನಿತೆಯೊಳು ಜಳ್ಳಾಡಿ ತಾಯೆಂದೆನುತ (ಪಠುಭಾ. ೧೦-೨೯). [ ಜಳ್ಳು ? + ಆಡು$_1$ ]

**ಜಳ್ಳಿಸು, ಝುಳ್ಳಿಸು** (ಕ್ರಿ). ಪೊಳ್ಳುಮಾಡು ; ಸತ್ತ್ವಗುಂದಿಸು : ಗೋಲ ಕೊಂಡೆಯುಂ ಜಳ್ಳಿಸಿಯೊಕ್ಕಲಿಕ್ಕಿ ವಿಜಯಾಪುರಮಂ (ಚಿಕವಿ. ೫) ; ಅಳ್ಳಾಡ ದಿರು ಹೆಮ್ಮೆಯೊಳಗೆಂದನಾಕ್ರೋಶಕೆ ಜಳ್ಳಿಸುತಲಪರಾಧದೊಳ್ಳಿಗನ ಸಲಹು (ಜಿನಮು. ೬-೬೭). **ಝುಳ್ಳಿಸು :** ಸಾಂಬಳ್ಳಿಯಂ ಝುಳ್ಳಿಸಿ ಕೊಳ್ಳಿ ಯಿಂದಂ (ಚಿಕವಿ. ೨-೧೫೩). [ ಜಳ್ಳು + – ಇಸು$_3$ ]

**ಜಳ್ಳು, ಜೊಳ್ಳು** (ನಾ). ೧. ಹುರುಳಿಲ್ಲದುದು ; ಪೊಳ್ಳಾದುದು ; ನಿಸ್ಸತ್ತ್ವವಾದುದು ; ಪ್ರಯೋಜನವಿಲ್ಲದುದು : "ಜಳ್ಳೆನೆ ಜರಡನೆ ಜಾಳೆನೆ ಪೊಳ್ಳೆನೆ ತಾಂ ನಿಷ್ಪ್ರಯೋಜನಾರ್ಥಮದಕ್ಕುಂ" (ಭಾರನಿ. ೫೭) ; ಮಿಥ್ಯಾಪ್ರಪಂಚದ ಜಳ್ಳು ಆನಂದವೇ ಸರ್ವಸ್ವವೆಂದು ಭ್ರಮಿಸಿ(ಅಶ್ರಮ. ೪). ೨. ಪೊಳ್ಳಾದ ಕಾಳು ; ತಿರುಳಿಲ್ಲದ ಕಾಳು : ಸಂಸಾರವೆಂಬ ಜಳ್ಳು ನಿತ್ಯಾನಿತ್ಯ ವಿವೇಕವೆಂಬ ಕೊಳಗವ ಹಿಡಿದಳೆಯಲಾಗಿ ನೂಱೊಂದು ಕೊಳಗವಾಯಿತ್ತು (ಮೋಳಿಮಾ. ೨೧೭-೭೭೦) ; ಒಮ್ಮನದಿ ಬಿತ್ತಕ್ಕು ಇಮ್ಮನದಿ ಜಳ್ಳಕ್ಕು (ಸರ್ವಜ್ಞ. ೪೪೪) ; ಜಳ್ಳೂ ಕಾಳೂ ಬೇರೆ ಮಾಡುವ ಕೆಲಸ ಸಂಸ್ಕೃತಿಯದು (ಸಾಹಿಸಂ. ೮೨). ೩. ಹೊಟ್ಟು ; ತೌಡು ; ಜಳ್ಳು ಕುಟ್ಟಿದರೆ ಕಾಳು ಸಿಕ್ಕೀತೆ ? (ರೂಢಿ). ೪. (ಅಲಂ) ನಿಷ್ಪ್ರಯೋಜಕ; ಹೇಡಿ ; ಕೈಲಾಗದವನು : ಚೆಲ್ಲಿತೀ ನೃಪಯೂಥ ಜಾಱಿಲಿ ಜಳ್ಳುಗಳು ಜಲಜಾಕ್ಷನಪ್ರತಿಮಲ್ಲ ತಾನೇ ಸಾಲದೇ (ಕುಭಾಸ. ೧೦-೬೭). **ಜೊಳ್ಳು :** ೧. ಪೊಳ್ಳು ಜೊಳ್ಳು ಅದು ಅಭಾವಶೂನ್ಯ (ಅರಳು. ೪೦೭-೯) ; ಜೀವನವೆನು ವುದು ಬರಿ ಸುಳ್ಳು ಬರಿ ಜೊಳ್ಳು ಹೀಗೆನುವವರುಂಟು ಕೆಲರು (ಇಂಚಾಪ. ೧೦೭-೭೫). ೨. ಜೊಳ್ಳು ತೂಱಿದಲ್ಲಿ ಬತ್ತ ಉಂಟೆ (ದೇದಾವ. ೨೨-೩೮).

ಜಳ್ಳಾಗು = ಅರ್ಥರಹಿತವಾಗು ; ವ್ಯರ್ಥವಾಗು : ಜ[ಪಾಠಾಂ. ಹೊ]ಳ್ಳಾದವೆಮ್ಮ ಸಮಾಧಿ ಸ್ವೈರಣೆ ಶಮದಮಾದಿಗಳು (ಕುಭಾಅ. ೫-೨೦) ; ಹಾಗಲ್ಲವಾದರೆ, ಮಹಾಕವಿ ಪಂಪನ ಆ ಸೊಲ್ಲು ಗಳೆಲ್ಲವೂ ಜಳ್ಳಾಗ ಬೇಕಾದೀತು (ನಾಡೋಜ. ೯೯೦).

[ ದೇ.II ತಮಿ. ಚೊಳ್ಳೈ ; ಮಲ. ಚಳ್ಳು, ಚೊಳ್ಳ್ ; ತುಳು. ಚಳ್ಳ್, ಚಲ್ಲ್ ]

**ಜಳ್ಳುಕಾಳು, ಜೊಳ್ಳುಗಾಳು** (ನಾ). ತಿರುಳಿಲ್ಲದ ಕಾಳು : (ಕ). **ಜೊಳ್ಳು ಗಾಳು :** (ಕ). [ ಜಳ್ಳು + ಕಾಳು$_2$ (<ಕಾೞ್$_2$) ]

**ಜಳ್ಳುಗ**(ನಾ). ಸತ್ತ್ವಹೀನನಾದವನು; ಕೆಲಸಕ್ಕೆ ಬಾರದವನು ; ಹೇಡಿ: ಬಗುಳುನಿವದಿರು ಹರಿಯ ಬಡಿಹೋರಿಗಳಲಾ ಜಗವಱಿಯದೇ ಜಳ್ಳುಗರ [ಪಾಠಾಂ. ೪] ಜೋಡಿಯ ಜಂಜಡಕೆ ನೀ ಜರುಗುವೈ ಭೂಪ (ಕುಭಾಸ. ೧೦-೯). [ ಜಳ್ಳು + – ಗ$_2$ ]

**ಜಳ್ಳುಜಂಭ** (ನಾ). ಒಣಜಂಬ ; ಹುಸಿಹೆಮ್ಮೆ : ಅಸಂಸ್ಕೃತರ ಜಳ್ಳು ಜಂಭಕ್ಕೆ ಮಾತ್ರ ನಾವು ತಲೆತಗ್ಗಿಸಬೇಕಾಗಿದೆ (ಕೆಜಸಾ. ೪೩). [ ಜಳ್ಳು + ಜಂಭ$_1$ (<ದಂಬ) ]

**ಜಳ್ಳುಜರಗು**(ನಾ). ಸತ್ತ್ವಹೀನವಾದಂದು; ದುರ್ಬಲವಾದುದು: ಜರಿಸ ಬಾರದ ಸಂದಿಗೊಂದಿಯ ತಿರಿಕ ಜಾತಿಯ ಜಳ್ಳುಜರಗಿನ[ಪಾಠಾಂ. ಜಳ್ಳುಗರ ನಿಜ, ಜಳ್ಳುಜರಿಗನ, ಜಳ್ಳು ಜರಿಗಿದ] ನೆರವಿಗರ ನಿಳಯದಲಿ ಬಾಲವ ನೀಡಿದನು ಹನುಮ (ತೊರರಾ. ೫-೮-೫೭). [ ಜಳ್ಳು + ಜರಗು$_3$ ]

**ಜಳ್ಳುತೆನೆ** (ನಾ). ಪೊಳ್ಳಾದ ಕಾಳುಗಳಿಂದ ಕೂಡಿದ ತೆನೆ : ಕಡಂಗರಃ, ಬುಸಂ – ಪೊಳ್ಳು ಜಳ್ಳುತೆನೆಯು ಹುಲ್ಲು (ಸಿದ್ಧಾಂತಿ. ೨೪೦). [ ಜಳ್ಳು + ತೆನೆ$_1$ ]

**ಜಳ್ಳುಬತ್ತ** (ನಾ). ತಿರುಳಿಲ್ಲದ ಬತ್ತ ; ಪೊಳ್ಳುಬತ್ತ : ಪುಲಾಕಃ, ಜಳ್ಳು ಬ[ಪಾಠಾಂ. ಭ]ತ್ತ ಮುಂತಾದ ಕ್ಷುದ್ರಧಾನ್ಯ, ಸಂಕ್ಷೇಪ, ಅನ್ನದ ಅಗಳು (ಸಿದ್ಧಾಂತಿ. ೩೨೦). [ ಜಳ್ಳು + ಬತ್ತ$_1$ ]

**ಜಳ್ಳುಮಾತು, ಜೊಳ್ಳುಮಾತು** (ನಾ). ಹುರುಳಿಲ್ಲದ ಮಾತು ; ನಂಬಿಕೆಗೆ ಯೋಗ್ಯವಲ್ಲದ ಮಾತು : ಜಳ್ಳು ಮಾತಿನಿಂದ ಪೊಳ್ಳುಗಳೆ ಯುತ್ತಾನೆ (ಗಾದೆ). **ಜೊಳ್ಳುಮಾತು :** (ಕ). [ ಜಳ್ಳು + ಮಾತು$_1$ ]

**ಜಳ್ಳುಮೆರೆತ** (ನಾ). ಹುರುಳಿಲ್ಲದ ತೋರಿಕೆ ; ಒಣ ಡಂಭ : 'ಶರಣಾಗತ ಪರಿಪಾಲಕ' ಎಂಬ ನಿಜಾವಳಿಯ ಬಿರುದು ಒಳಗಳಿದ–ಟಕ್ಕಿನ ಜಳ್ಳುಮೆರೆತ ವಾಗಿ (ಪಟ್ಟಅ. ೭೪-೧೦). [ ಜಳ್ಳು + ಮೆರೆತ ]

**ಜಳ್ಳುರಕ್ಕಸ**(ನಾ). ಅಲ್ಪನಾದ ರಾಕ್ಷಸ ; ದುರ್ಬಲನಾದ ರಕ್ಕಸ : ಜಳ್ಳು ರಕ್ಕಸನಿವನನೀ ಹೆಂಗಳ್ಳನನು . . . ಕಡಿಖಂಡ ಮಾಡಿಯೆ ಹೋಳ್ಳುವಾಱಿ ಸಲೂದುವೆನು (ತೊರರಾ. ೫-೭-೩೭). [ ಜಳ್ಳು + ರಕ್ಕಸ ]

**ಜಳ್ಳುವೋಗು** (ಕ್ರಿ). ಸತ್ತ್ವಗುಂದು; ಕೆಚ್ಚಳಿ: ಕಳ್ಳಿಯ ಬೇಲಿವಳ್ಳಿಯೊಳ ಗಳ್ಳಿಱಿದಾಡುತೆ ಜಳ್ಳುವೋದೆವೇಂ (ಅಪ್ರತಿ. ೧೪-೧೧). [ ಜಳ್ಳು + ಪೋಗು$_1$ ]

**ಜಳ್ಳೆಳ್ಳು** (ನಾ). ತಿರುಳಿಲ್ಲದ ಎಳ್ಳಿನ ಕಾಳು: "ತಿಲಪಿಂಜಃ, ತಿಲಪೇಜಃ–ಈ ೨ ನ್ನು–ನಿಷ್ಪಲೇ ತಿಲೇ, ಜಳ್ಳೆಳ್ಳು[ಪಾಠಾಂ. ಜಳ್ಳು ಎಳ್ಳು] ಹುಚ್ಚೆಳ್ಳಿಗೂ ಹೆಸರು" (ಸಿದ್ಧಾಂತಿ. ೨೩೯); ದುಶ್ಶಾಸನನು ಪಾಂಡವರನ್ನು ಜಳ್ಳೆಳ್ಳು ಕಾಳು ಎಂದು ಅವಮಾನ ಮಾಡಿದನು (ವಜಭಾ. ೨೩೪). [ ಜಳ್ಳು + ಎಳ್ಳು (<ಎಳ್) ]

**ಜಱಗಪೊಲ** 'ಜಱಗವೊಲ' ನೋ.

**ಜಱಗವೊಲ, ಜಱಗಪೊಲ** (ನಾ). ಒಂದು ಬಗೆಯ ಭೂಮಿ : ಮೂಡ ವಾಗಿಲ ನೆಲಸಣ ಕ್ಕೈ ೫ ಜಱಗವೊಲದ ಕೆಯಿಮ ೨೦ ಗಾಣ ಒ ೧ (ಸೌಇಇ. IX-i, ೦೬೬-೫೩ ; 1099). **ಜಱಗಪೊಲ :** ಜಱಗಪೊಲದಿಂ ತೆಂಕ ಕರು×ನ ಮಾಳದ ಇಬ್ಬಡಗದ ಹಾಳ ಮತ್ತರು ೧೧ (ಸೌಇಇ. IX-i, ೦೬೬-೨೬ ; 1099). [ ಜಱಗ ? + ಪೊಲ$_1$ ]

**ಜಱಚು** 'ಜಱಂಚು$_1$' ನೋ.

**ಜಱಹು** (ನಾ). = ಜಱಹ : ತುಱುಗಿತಲ್ಲಿಯದಲ್ಲಿ ಲಗ್ಗೆಯ ಬಿಱುದನಿಯ ನಿಸ್ಸಾಳ ಕಹಳೆಯ ಜಱಹು ಜೋಡಿಸಿ ಜಱಹಿತಡಕಿಲು ಜಗದ ಜೋಡಿಗಳ (ಕುಭಾಶ. ೧೫-೨). [ <ಜಱ$^3$ + – ಹು$_2$ ]

**ಜಱಿ₁** 'ಜಱೆ' ನೋ.

**ಜಱಿ₂** 'ಸಱಿ₁' ನೋ.

**ಜಱಿಗೊಳ್** (ಕ್ರಿ). ನಿಂದೆಗೆ ಒಳಗಾಗಂ; ತಿರಸ್ಕೃತವಾಗು: ಜಱಿ[ಪಾಠಾಂ. ರು]ಗೊಂಡಳ್ಪರ್ದೆಯಿನ್ನು ಮಾಱದಲರ್ಗಣ್ಣಂದತ್ತ ಕೆಂಪಿನ್ನುಮೋಸರದು (ಲೀಲಾವ. ೨-೬೫); ನೆಱೆ ನೃಪತಿ ದೀಕ್ಷೆಗೊಂಡೊಡೆ ಜಱಿಗೊಂಡಂ ಗೂಡು ಗೊಂಡನಾರ್ತಂಗೊಂಡಂ . . . ಸ್ಮರನಸ್ತ್ರಕಾಂಡನಪಕೋದಂಡಂ(ಪುಷ್ಪಪು. ೯-೯). [ ಜಱಿ₁ (<ಜಱೆ) + ಕೊಳ್₁ ]

**ಜಱಿಚು** 'ಜಱುಚು₁' ನೋ.

**ಜಱಿಹ** (ನಾ). ಜರಿಯುಂವಿಕೆ; ಮೂದಲೆ; ತಿರಸ್ಕಾರ: "ಅಭಿಭವ ಪರಿಭವಂ ಪ್ರತ್ಯಾಕಾರಮಕ್ಕು ಜಱಿ[ಪಾಠಾಂ. ಱ]ಹಕ್ಕೆ ನಾಮಂ" (ಮಂಗರಾ. ೧೨೭-೬). [ ಜಱಿ₁ (<ಜಱೆ) + -ಹ₂ ]

**ಜಱುಚ**(ನಾ). ಬಹಳ ಮಾತನಾಡುವವನು,; ವ್ಯರ್ಥಾಲಾಪ ಮಾಡುವವನಂ: ತಪ್ಪಂ ಮಱಸಿ ಪುಸಿ ನುಡಿವ ಜಱುಚರ ತೆಱನಂ ಕಂಡಱಿಯದಂತು ಕುಳಿಯುರುಮೊಳರೇ (ಕಾವ್ಯಾವ. ೩೯೩). [ ಜಱುಚು₂ + -ಅ₇ ]

**ಜಱುಚಾಡು** (ಕ್ರಿ). ಹೆಚ್ಚಾಗಿ ಧ್ವನಿಮಾಡು; ಕೂಗಾಡು: ನಿರ್ನೆರಂ . . . ಜಱುಚಾಡಿ ಬಟಲ್ವ (ರಾಮಾಶ್ವ. ೧೯-೧೮); ಜಱುಚಾಡುತ್ತೆ ಮೃಗಾಲಯಂಗಳಿರವಿಂದಿರ್ಪಾನೆ ಸಿಂಗಂಗಳುಂ (ಮೃಸೂಮ. ೩-೩೦). [ಜಱುಚು₂+ಆಡು₁]

**ಜಱುಚು₁**, ಜರಚು, ಜರುಚು, ಜಱಚು, ಜಱಿಚು (ಕ್ರಿ). ೧. ಬಹಳವಾಗಿ ಮಾತನಾಡು ; ಗಳಹು ; ಹರಟೆ ಕೊಚ್ಚು ; ವ್ಯರ್ಥಾಲಾಪ ಮಾಡು : "ಜಱುಚು–ಬಹುಭಾಷಾಯಾಂ" (ಶಮಧಾ) ; ಆಜಿಭರಮುಂ ಸಾರ್ಚಿತ್ತದೇನೆಂದು ಮುನ್ನಱುದಿಂಗಳ್ ಜಱುಚುತ್ತುಮಿರ್ಪುದೆ (ಪಂಪಭಾ. ೯-೯೨) ; ಅಱಿಕೆಯ ರೂವಿಲ್ಲದ ನಿನ್ನೆಱೆಯಂಗುಬ್ಬಟೆಯ ಬೀರಮುಂಟೆಂದುದ್ದಂ ಜಱುಚಿದೆ (ಕಬ್ಬಿಕಾ. ೧೮೦) ; ಮಿಱುಗುವ ನೆಱೆವೆಱೆಯೊಳ್ನಱುಗರೆಯಂ ಜಱುಚುತ್ತಿಹರಿಕ್ಕಟ್ಟಂ ಕಬ್ಬಿಗರಱಿಯದೆ ಮೊಲಪುತ್ತಾಲವೆರಲೆ ನೆಲವೆಣ್ಮೆಯ್ನಳಲೆಂದು (ಉದ್ಭದೇ. ೪-೨೦) ; ನಿರ್ನೆರಂ ಜಱುಚುವ, ಜಱುಚಾಡಿ ಬಟಲ್ವ (ರಾಮಾಶ್ವ. ೧೯-೪). ೨. ಧ್ವನಿಮಾಡು: ಬೆಳಗಾಗಲೆಬ್ಬು ಗಟಪುವ ಗಿಳಿಗಳ ಜಱುಚುವ ಪಿಕಂಗಳ (ಲೀಲಾವ. ೩-೧೦). **ಜರಚು:** ೧. "ಗಳಹು, ಜರಚು, ಹರಟು" (ಕಂನುಹು. ೮೩). **ಜರುಚು:** ೧. ಪರೆಯ ತೆರದಿಂದೊಳಗೆ ಪೊಳ್ಳಹ ಹರನ ಧನುವನು ಮುರಿದೆನೆಂಬಾಗರುವ ಗರಮೆಡೆಗೊಂಡು ಜರುಚುವೆಯೆಮ್ಮೊಳಿಂತಕಟಾ (ರಾಮಾಸಂ. ೧-೫-೧೪). **ಜಱಚು :** ೧. ಜಿತೇಂದ್ರಿಯತೆಗೆ ಬಱಿದೆ ಜಱಚುವೆಗ್ಗರ ಜಡಾಶಯಂಗಳೊಡನೆ ಜಡಾಶಯಂಗಳೊಳಗೆಱೆಯಾಗೆಯುಂ(ಚಂದ್ರಪು. ೭-೬೧ ವ); ನಿನ್ನೊಂದು ಸಂಪತ್ತಿಯಿಂ ಜಱಚುತ್ತಿರ್ದಪೆ ಪಾಣ್ಬ (ಅನಂಪು. ೧೧-೯೦) ; ನಾಲಗುಂಟೆಂದು ಸತತಂ ಜಱಚುವೈ (ಅರಾಜ. ೩-೨೩) : ನೀ ಜಱಚಬೇಡ (ಹಾಲಾಸ್ಯ. ೩-೧೨-೧೬). **ಜಱಿಚು :** ೧. ನೆಱನೆತ್ತಿ ಬೈವ ಪುರುಡಿಪ ಜಱಿಚುವ . . . ವಿಟನೆಗ್ಗನಲ್ತೆ (ಮದತಿ. ೧೦-೪೮); ಅವಗೆ ಬೀಱುತಿರ್ದಪೆಯೆ ಮೋಹವನೆಂದು ಪದ್ಮಾವತಿ ಚೀಱಿ ಜಱಿಚಲುಂ (ಪ್ರಭುಪು. ೩-೫೩).

**ಜಱುಚು₂** (ನಾ). ೧. ಅತಿಯಾದ ಮಾತು : ಪೆಱಗೆ ರವಿ ನಡುವೆ ಶುಕ್ರಂ ಜಱುಚೇಂ ಶನಿ ಮುಂದೆ ನಡೆಯೆ ಕಱೆಗುಂ ಮಱೆಗಳ್ (ಅಟ್ಟಮ. ೭-೯೩). ೨. ಅರ್ಥವಿಲ್ಲದ ಮಾತು; ವ್ಯರ್ಥಾಲಾಪ: "ಜಱುಚು=ವ್ಯರ್ಥಾಳಾಪಂ" (ಶಮದ.ಪರಿ. ೨); "ಜಱುಚೆಂದು ವ್ಯರ್ಥಾಲಾಪಂ" (ಕಶಸಾ. ೨೪-೪೯೯); ಪೆಱರ್ ಚತುರ್ಗತಿಯ ಬಟ್ಟೆಯಂ ನೆಱೆಯೆ ಕಂಡರಂತುಂ ಕರಸ್ಥಿತಾಮಲಕಮೆಂಬರಾ ಜಱುಚದೇವುದಿಂದ್ರಾರ್ಚಿತಾ (ಆದಿಪು. ೧೩-೮೫); ಜಱುಚಲ್ತು ಬಾಯ ಬಾಯೊಳ್ ಕಿಱಿದೆಡೆಯೊಳ್ನಡೆಯಲಕ್ಕುಮಲ್ಲದೆ . . . ನೆಱೆ ದಾರ್ಹತದಲ್ಲಿ ನಡೆಯಬಾರದಿದಾರ್ಗಂ (ಸಮುಪ. ೧೫-೫೫) ; ಬಱುಜಱುಚಿನ ಸೊಲ್ಲಂ ಸೊಲ್ವುದು ನಿನಗೇಂ ಮೊಗ್ಗೆ (ಉದ್ಭದೇ. ೩-೭೦). [<ಜಱುಚು₁]

**ಜಱೆ**, ಜರಿ₂, ಜರೆ₁, ಜಱಿ₁ (ಕ್ರಿ). ೧. ಬಯ್ಯು ; ಹಳಿ ; ನಿಂದಿಸು : "ಜಱೆ–ಅವಗ್ರಹೇ (ತಡೆಯಾಗು), ಆಕ್ರಮಣಾಲಾಪೇ (ದೂಷಿಸಿ ಮಾತನಾಡು)" (ಶಮಧಾ) ; ಅತಿ ಧೂರ್ತನೆಂದು ಕಂಡರೆಲ್ಲಂ ಜಱೆಯೆ (ಧರ್ಮಾಮೃ. ೯-೧೩೨) ; ನಮ್ಮ ಆದ್ಯರ ವಚನಂಗಳನೆಲ್ಲ ಜಱೆದಾರು ತಮ್ಮ ಕವಿತ್ವವ ಮೆಱೆದಾರು (ಚನ್ನಪ. ಕ. ೨೨೦-೪೯೦) ; ಪೊಂಗಿ ಜಱೆವುತ್ತೆಲವೊ . . . ನಡೆಯೆನುತ (ಬಸಪು. ೯-೧೦); ಪಾರ್ಥನ ಮುಳಿದು ಜಱೆದನು ಕೃಷ್ಣನು (ಕುವ್ಯಾದ್ರೋ. ೧೪-೩೭) ; ಬಾನೆಡೆಯೊಳಗಿಹ ಚಂದ್ರನೆನ್ನಯ ಮೊಗಕಾನಲಾಪನೆಯೆಂದು ಜಱೆದು ತಾನೊದೆವವೊಲು ನವಿಲುಯ್ಯಲನಾಡುವ (ಕಂನವಿ. ೨-೯೩). ೨. ಮೂದಲಿಸು; ತಿರಸ್ಕರಿಸು; ಹೀಯಾಳಿಸು: ಮುದದಿಂದಂ ಕಾಮುವಂ ಕೋಪಮನುಱೆ ಜಱೆದಾ ಮೋಹಮಂ ದಾಂಟಿ ಲೋಭತ್ವದ ಬೇರಂ ಕಿಳ್ತು (ರಕ್ಷಾಶ. ೭೯) ; ಬಾಳ ಹೊಳಹನು ಜಱೆದು ದಾಡೆಯ ಥಾಳ ಮಿಗೆ ಗಜಗಲಿಸೆ (ಕುವ್ಯಾದ್ರೋ. ೧೫-೪೮) ; ರತಿಯ ಜಱೆದವರು ಚೆಲುವಿನಿಂ (ಸಾಳ್ವಭಾ. ೨-೧೦) ; ಆ ತೋಳ್ಗಳುದ್ದಾಮ ದಿಕ್ಕರಿಕರಮನುಱೆ ಜಱೆದುವು (ಚಬಪು. ೫-೪೪). ೩. ಕುಗ್ಗು ; ಕುಸಿ ; ಹಿಮ್ಮೆಟ್ಟು : ಧನು ಮುಱಿದ ಬಳಿಕಿಮ್ಮಡಿಸಿತೀತನ ಪರಾಕ್ರಮವೆನುತ ಸೇನಾಪನಧಿ ಜಱೆದುದು ಭಟರು ಹರಿದರು ಬಿಟ್ಟಮಂಡೆಯಲಿ (ಕುವ್ಯಾದ್ರೋ. ೬-೪೯) ; ಇಱಿತ ಮೆಱೆದುದು ನಿನ್ನವರ ಬೊಬ್ಬಱಿತ ಜಱೆದುದು ವಿಜಯಲಕ್ಷ್ಮಿಯ ಸೆಱಗು ಸೋಂಕಿತು ಕೌರವೇಶ್ವರಗರಸ ಕೇಳೆಂದ (ಕುವ್ಯಾಕ. ೧೪-೭). ೪. ಕೆಣಕು ; ಚುಚ್ಚಿ ಮಾತನಾಡು : ಅವರಿವರ ಹವಣಲ್ಲ ಗುರು ಮುನಿದವಗಡಿಸಿದರೆ ನಿಲುವನಾವನು ಬವರಕೇಳೇಳೆಂದು ಜಱೆ[ಪಾಠಾಂ. ಱಿ]ದರು ದೂತರರ್ಜುನನ (ಕುವ್ಯಾದ್ರೋ. ೪-೨೫); ಪಾರ್ಥನ ಬಾಯಲುಗಿ ಸೂತಜನನೆಂದರು ಜಱೆದು ಕುರುಪತಿಯ (ಕುವ್ಯಾಶ. ೧-೧೧). **ಜರಿ₂ :** ೧. ಸಲೆ ಸುಲಕ್ಷಣ ಕೃತಿಯ ಜರಿವವರಾರು ಭೂತಳದಿ (ಅಂಬಿಕಾ. ೧-೧೨) ; ಸೀತೆಯನ್ನು ಒಪ್ಪಿಸಿ ಬಿಡು ಎಂದು ಜರಿದು ಹೇಳಿದನು (ನೀತಿಚಿಂ. XIV, ೧೬). **ಜರೆ₁ :** ೧. ಬೇಡಿದನ ಜರೆದು ಬೈಗಳ ಮಳೆಗರೆದು (ಕಗದ್ಯ. ೭೪) ; ಹೊರಲೆಬೇಕಾಂತಾದೊಡಿಹದ ಹೊರೆಗಳನೆಲ್ಲ ಜರೆವುದೇಕಿನ್ನದನಂ (ಮಂಕುಕ. ೨೫೭). **ಜಱಿ₁ :** ೧. ಒಯ್ಯನೆ ಶಿಕ್ಷಿಸಿ ಮುನಿಸಿಂ ಬಯ್ಯದೆ ಪೊಲ್ಲಮೆಗೆ ಜಱಿಯಲಾಱದೆ (ಧರ್ಮಾಮೃ. ೨-೧೨); ಕಾಣದ ಠಾವಿನಲ್ಲಿ ಜಱಿದರೆಂದರೆ ಕೇಳಿ ಪರಿಣಾಮಿಸಬೇಕು (ಬಸವ. ೨೫೦) ; ಓಹಿಳಯ್ಯನ ಜಱಿದು[ಪಾಠಾಂ. ನುಱದೆ]ನುಡಿವ ಶಿವೈಕ್ಯನೆಂತುಂ ಹೋಗದಿರೆಯಲ್ಲ (ಬಸಪು. ೪೪-೬೮) ; ಆರನಳಲಿಸಿದೆನೊ ಮಹಾತ್ಮರನಾರ ಜಱಿದೆನೊ (ನಳಚ. ೮-೫). ೨. ಶತಕೋಟಿ ಸೂರ್ಯರಂ ಜಱಿವ ಮಿಱುಮಿಱುಪ ತೇಜದಲಿ ಕಱೆಗೊರಲ ಮೆಱೆದ (ಸೌಂದಪು. ೧೭-೬೯); ಸುರವಧುಗಳ ಚೆಲ್ವಿಕೆಯ ನೋಡಿ ಜಱಿವೊಡೆ ಮರುತಮಾರ್ಗಕೆ ಪೋಪಂತೆ (ಕಂನವಿ. ೬-೧೧೪). ೩. ಅಬ್ಬರಿಸು ; ಶಬ್ದಮಾಡು : ಜಱಿವ ಕಹಳೆಯ ರಭಾಡಿಸುವ ಜರ್ಝರದ ಡಿಂಡಿಮ ಡಮರು ಪಟಹದ ಧರಧುರದ ದನಿ ಧೈರ್ಯಗೆಡಿಸಿತು ಸಕಲ ಸಾಗರವ (ಕುವ್ಯಾಕ. ೧೦-೮). ೪. ಝುಂಕಿಸು; ಗದರಿಸು: ಓರ್ವ ವಧೂಟಿಯಾಕೆಯಂ ತಾಂ ಜಱಿದೆಲ್ಲಿ ತೋಱುಯೆನುತ್ತೆ ನೋಡಿದಳ್ (ಉದ್ಭಟ. ೫-೭೮) ; ನಿಲ್ಲಿ ಕಳಕಳವೇಕೆ ಹೋಯೆಂದಲ್ಲಿ ಕಂಚುಕಿನಿಕರ ಜಱಿಯಲದೆಲ್ಲ ರಾಸ್ಥಾನದಲಿ ಮೌನದೊಳಿರಲು (ಸಂಭಪು. ೨೦-೫೦).

ಜರಿದಾಟ=ಬಯ್ಯುವುದಂ; ಹೀಯಾಳಿಸುವುದು: (+). ಜರಿದಾಡು= ಬಯ್ಯು; ಮೂದಲಿಸು : ಅವರೀಣಃ, ಧಿಕ್ಕೃತಃ – ಧಿಕ್ಕರಿಸಲ್ಪಟ್ಟವನು, ಜರಿದಾಡಲ್ಪಟ್ಟವನು(ಸಿದ್ಧಾಂತಿ. ೩೦೦). ಜಱಿಸಿಕೊಳ್ಳು=ನಿಂದೆಗೊಳಗಾಗು: ಜಱಿಸಿ[ಪಾಠಾಂ. ಜಱಿಯಿಸಿ, ಜಱೆಯಿಸಿ]ಕೊಂಡು ಭಕ್ತರಾದರೆಮ್ಮವರು (ಬಸವ. ೨೫೫). [ ದೇ.॥ ತುಳು. ಜರಿ, ಜರೆ ]

**ಜಟ್ಟನೆ, ಜರ್ರನೆ** (ಅ). ಕೂಡಲೆ ; ವೇಗವಾಗಿ ; ತಟ್ಟನೆ ; ರಭಸದಿಂದ: ಮಾಗಿಯ ಕೋಗಿಲೆಯಂತೆ ಬಾಯ್ವಿಟ್ಟಾಡದೆ ಮಳಲೇಱಿಯಂತೆ[ಜಟ್ಟನೆ] ಜರಿದು (ಧರ್ಮಾಮೃ. ೧-೧೫೭). **ಜರ್ರನೆ:** ಎಷ್ಟು ಏರಿದ ಹುರುಪಿನಿಂದ ಅವಳು ಬಂದಿದ್ದಳೋ ಅಷ್ಟೇ ಜರ್ರನೆ ಇಳಿದು ಹೋದಳು (ಬಾಬಲ. ೧೧೧); ಮುಖದಮೇಲೆ ಮೂಡಿದ್ದ ಬಿಂಕವೆಲ್ಲಾ ಜರ್ರನೆ ಇಳಿದು ಹೋಯಿತು (ನಾಪೋಲೀ. ೨೦೨). [ಜಟ್$_0$ + – ಅನೆ$_1$ ]

**ಜಾಂ** 'ಜಾವಂ' ನೋ.

**ಜಾಂಗಟೆ** 'ಜೇಗಂಟೆ' ನೋ.

**ಜಾಂಗಲ, ಜಾಂಗಳ$_1$**(ಗು). ೧. ಜಲವಸತಿಯಿಲ್ಲದ; ಬತ್ತಿದ; ಬಂಜರಾದ: ಜಾಂಗಲಸ್ಥಾನದೊಳ್ ಯಿೂ ಕುಱಿಪಿಂದಗುಟಿಸ್ದುಡಯ್ದಾಳ ಮಟ್ಟದೊಳಕ್ಕು . . . ಜಲಂಗಳಿಕ್ಕೆ (ಜಟ್ಮ. ೧೧-೫೪). ೨. ಅನಾಗರಿಕ ; ವನ್ಯ ; ಕಾಡುತನವುಳ್ಳ. (ನಾ). ೩. ನೀರು ಕಡಿಮೆಯಾಗಿರುವ ಪ್ರದೇಶ ; ಬಂಜರುಭೂಮಿ: ದೇವಮಾತೃಕ ಸಾಧಾರಣಾನೂಪಜಾಂಗಲ ಭೇದಂ ಗಳುಂ (ಆದಿಪು. ೮-೬೩ವ); ದೇಶ ಭೇದವು ಜಾಂಗಲ, ಅನೂಪ ಸಾಧಾರಣ ವೆಂದು ಮೂರು ತೆರನಾಗಿರುವುದು. ಅಲ್ಪನೀರುಳ್ಳದ್ದಾಗಿಯೂ ಅಲ್ಪ ವೃಕ್ಷಂಗಳುಳ್ಳದ್ದಾಗಿಯೂ ಇರುವ ದೇಶವೇ ಜಾಂಗಲದೇಶವೆನಿಸಿ ಕೊಂಬುದು(ಸಕವೈ.೧೫). ೪. ಕಾಡುಮನುಷ್ಯ: ಅನಾಗರಿಕ; ಅಸಂಸ್ಕೃತ; ೫. ಮಾಂಸ : "ಪಲಲಂ . . . ಜಾಂಗಲಾಖ್ಯಂ ಮಾಂಸಂ" (ವಸ್ತುಕೋ. ೬೨-೩೦) ; "ಬಿಕ್ಕೆನಲಡಗೆನಲ್ಜಾಂಗಲಂ" (ಕಬ್ಬಿಕ್ಕೆ. ४೦) ; ಗಲಜ್ಜಾಂಗಲ [ಪಾಠಾಂ. ಳ] . . . ಆಕ್ರಂದತ್ಸ್ವರ ಪರಿಗತರ್ (ಆದಿಪು. ೫-೮೭ ವ) ; ಭೂತಭೇತಾಳಗಣಕ್ಕೋರಂತೆ ಪಲವು ಜಾಂಗಲವಾರಿ[ತ್ರರ್]ಘಂಟೆ ನೃಪತಿ ನಿನ್ನಯ ತೆಱದಿಂ (ಬೀಳವಂ. ೧-೮೭). ೬. ತಿತ್ತಿರಿಪಕ್ಷಿ : ಚಕ್ರವರ್ತ ಪುಳ್ಳಂ ಪುರುಚೆ ಜಾಂಗಲಮಾಂಸಾ . . . ಇಷ್ಟು ಪಥ್ಯ ಕರವಹುದು (ವಿಷಚಿ. ೧೩-४). **ಜಾಂಗಳ$_1$:** ೩. "ಜಳಬಹುಳಮನೂಪಂ ಜಾಂಗಳಮಜಳಂ" (ವಸ್ತುಕೋ. ೨೭-೫). ೫. ಕ್ವಥಿತ ಪೃಥುಳಹೃಜ್ಜಾಂಗಳಂ ಸಿಂಗಳಂ . . . ವಿಕ್ರಮಾದಿತ್ಯ ದೇವಂ (ಎಕ. VII, ಶಿಕಾರಿ. ೧೩೭-೧೭ : 1114). [ಸಂ.]

**ಜಾಂಗಲಿಕ, ಜಾಂಗಳಿಕ**(ನಾ). ೧. ಹಾವುಗಳನ್ನು ಹಿಡಿಯುವ ಕಲೆಯನ್ನು ತಿಳಿದವನು; ಹಾವಾಡಿಗ. ೨. ವಿಷಕ್ಕೆ ಚಿಕಿತ್ಸೆ ಮಾಡುವವನು; ವಿಷ ವೈದ್ಯ. ೩. ಮಾಟಗಾರ ; ಐಂದ್ರಜಾಲಿಕ; ಗಾರುಡಿಗ. **ಜಾಂಗಳಿಕ:** ೧. ಜಾಂಗಳಿಕ . . . ಸಾಸಿರಪೆಡೆಯುಳ್ಳ ಕೆಡುಕ ಕಾಳೋರಗವಿಡಿದು (ಜ್ಞಾನಚ. ೨೩-८೧). ೨. ಧಾತುಗಳಂ ಪರೀಕ್ಷಿಸುವುದೊಪ್ಪುವ ಜಾಂಗ(ಗು) ಳಿಕಂ ಧರಿತ್ರಿಯೊಳ್ (ಖಮದ. ೧-೭೩). [ಸಂ.]

**ಜಾಂಗಳ$_1$** 'ಜಾಂಗಲ' ನೋ.

**ಜಾಂಗಳ$_2$** (ನಾ). ಕುದುರೆಯ ದೇಹದ ಒಂದು ಭಾಗ: ದಾವದ ಕೆಳಗಂ ಬಾಹ್ಯವೆ ಭಾವಿಪೊಡಾ ಬಾಹ್ಯಮೂಲದೊಳ್ ಜಾಂಗಳಮೆಂಬೀ ವಿಧದ ಪೆಸರ್ (ಅಶ್ವಶಾ. ೯-೩೨) : ಬಾಹ್ಯದ ಮೂಲದ ಕ್ರೋಡದೆಡೆಗೆ ಜಾಂಗಳ ಮೆಂಬ ಪೆಸರಕ್ಕುಂ (ಅಶ್ವಶಾ. ८८-೧೯). [ ? ]

**ಜಾಂಗಳಿಕ** 'ಜಾಂಗಲಿಕ' ನೋ.

**ಜಾಂಗೀರು** 'ಜಹಾಂಗೀರು' ನೋ.

**ಜಾಂಗು** 'ಚಾಂಗಂ' ನೋ.

**ಜಾಂಗುಲ, ಜಾಂಗುಳ** (ನಾ). ೧. ನಂಜು ; ಗರಳ ; ವಿಷ : ಸೂನೆಗರು ಬಂದು ಕೊಂಡು ಪೋಗಿರ್ದ ಜಾಂಗುಲಗಳಂ (ಲಿಂಗಪು. ೨४-೨೯). ೨. ವಿಷ ಚಿಕಿತ್ಸೆಯ ಜ್ಞಾನ ; ವಿಷವೈದ್ಯ. ೩. ಮಾಯಾವಿದ್ಯೆ ; ಇಂದ್ರಜಾಲ ; ಗಾರುಡಿ. **ಜಾಂಗುಳ :** ೨. ಭೋಜನಗೃಹಕ್ಕೆ ರಾಜಾಧಿರಾಜಂ ಜಾಂಗ [ಗು]ಳ ವಿದ್ಯಾವಿದುರರ್ಬೆರಸು ಬಿಜಯಂಗೆಯ್ವುದುಂ (ಪಾರ್ಶ್ವಪು. ८-४೯ ವ).' ಜಾಂಗುಳಿಕ' ಪರಾ. [ಸಂ.]

**ಜಾಂಗುಲಿಕ, ಜಾಂಗುಳಿಕ** (ನಾ). ೧. ವಿಷವೈದ್ಯ : ಭರದಿ ಜಾಂಗುಲಿಕನು ಹಲುತಿಂದು ಮೊಱೆದದ್ದು ಹರನಾದರು ಬೆಚ್ಚಿ ಬೆದರ್ವ . . ಪವನಾಶನ ವನು ಬಿಡಲು (ಜ್ಞಾನಚ. ೨೩-೭೮). ೨. ಗಾರುಡಿಗ; ಐಂದ್ರಜಾಲಿಕ : "ಜಾಂಗುಲಿಕನೊಪ್ಪೆ ಗಾರುಡಿಗನಕ್ಕು" (ಮಂಗರಾ. ೧೧೫-೮). **ಜಾಂಗುಳಿಕ:** ೧. ಪ್ರಶಸ್ತಮೆಂದೞಿಪುವರ್ ಜಾಂಗುಳಿಕರ್ (ಖಮದ. ೭-८४). ೨. "ಜಾಂಗುಳಿಕಃ, ವಿಷಭಿಷಕ್-ಈ ೨ ಗಾರುಡಿಗಂ" (ಹಲಾಯು. ೧೧೦-४೫೯). [ಸಂ.]

**ಜಾಂಗುಳ** 'ಜಾಂಗುಲ' ನೋ.

**ಜಾಂಗುಳಿಕ** 'ಜಾಂಗುಲಿಕ' ನೋ.

**ಜಾಂಡಲಕೆ** (ನಾ). ಒಂದಂ ಬಗೆಯ ವನಸ್ಪತಿ : ಜಾಂಡಲಕೆಯ ಬೀಜಂ ಭೂಮಂಡಲದೊಳ್ ಪಸುರಡಂಗಿ ಪಾಱುವ ತೆಱದಿಂ (ಧರ್ಮಾಮೃ. ೯-೧೨೭). [ ? ]

**ಜಾಂಡೆ** 'ಝಾಂಡ' ನೋ.

**ಜಾಂಡೇಯ** 'ಝಾಂಡ' ನೋ.

**ಜಾಂಪಲ** (ನಾ). ಸೀಬೆಹಣ್ಣು ; ಪೇರಲಹಣ್ಣು : ಪೇರಲವೆಂದರೂ ಜಾಂಪಲವೆಂದರೂ ಒಂದೇ ಪರಿಯಾಯವು (ಕೃಷಿಪ್ರ. ೧೭೯). [ ←ಮರಾ. ಜಾಂಬ್‌ಫಳ್ ]

**ಜಾಂಬ** 'ಜಾಂಬು' ನೋ.

**ಜಾಂಬವ** (ಗು). ೧. ನೇರಳೆಮರಕ್ಕೆ ಸಂಬಂಧಪಟ್ಟ. (ನಾ). ೨. ಚಿನ್ನ: ಪೊಸಬಿಸಿಲದು ಪೆಱದೆಗೆದಿರೆ ಕಿಸುಸಂಜೆಯುಮುಂಡು ಸಮೂಹವಂ ಮಿಸುಪಪೊಲೇನೆಸೆದುದೊ ಪವಳಂ ಮುಕ್ತಾವಿಸರಂ ಜಾಂಬವ ಜಳಂ ಪೆಡಂಮೆಟ್ಟಲೊಡಂ (ರಾಜಶೇ. ೬-೧೧४). ೩. ನೇರಳೆಹಣ್ಣು. [ಸಂ.]

**ಜಾಂಬಾಯಾರ** (ನಾ). [ಸಂಗೀತ] ಒಂದು ತಾಳದ ಹೆಸರು: ಅವುಗಳೊಳು ಚಂಚತ್ಪುಟ . . . ಜಾಂಬಾಯಾರ[ಪಾಠಾಂ. ಜಂಭಾಯಾರ, ಜೊಂಬಾಯರ] . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩४). [ ? ]

**ಜಾಂಬು, ಜಾಂಬ** (ನಾ). (ಉಕ) ನೀರು ಕುಡಿಯುವ ಪಾತ್ರೆ ; ಲೋಟ: ದೇಸಾಯಿಯ ಹೆಂಡತಿಯು ಆಕೆಗೆ ಒಂದು ಗದ್ದುಗೆ ಕಳಚಿದ ಜಾಂಬು ಕೊಟ್ಟಿದ್ದಳು (ಮುಂಬಯಿ. ೫-೨೭८); ನೀರು ಕುಡಿಯುವ ಹಿತ್ತಾಳೆಯ ಉದ್ದ ಜಾಂಬುವನ್ನು ಜಾನಕಿಬಾಯರು ಕಾಮಾಕ್ಷಿಯ ಮೇಲೆ ಬೀಸಿ ಒಗೆದರು (ಸಮಜೀ. ೨೨೯). **ಜಾಂಬ :** (೬). [ ←ಮರಾ. ಜಾಂಬ್; ಪಾರ. ಜಾಮ್ ]

**ಜಾಂಬೂನದ** (ಗು). ೧. ಚಿನ್ನದಿಂದ ಮಾಡಿದ. (ನಾ). ೨. ಚಿನ್ನ; ಸುವರ್ಣ : "ಹೇಮ . . . ಜಾಂಬೂನದಂ, ಹಿರಣ್ಯಂ – ಈ ೨೫ ಪೊನ್" (ಹಲಾಯು. ೨೯-೨೦); ಆ ಗಂಧಸ್ನಪನೋದಕಂ ಮೇರುಮಹೀಧರ ಜಾಂಬೂನದ ನಿತಂಬಂಬಿಡಿದಿೞಿದು (ಶಾಂತಿಪು. ೧೦-೫೨ ವ) : ಮತ್ತಮಾ ಮಹಾವನಂ ... ಜಾಂಬೂನದ ಪ್ರದೇಶದಂತೆ ಅಷ್ಟಾಪದೋತ್ಪತ್ತಿ ಸ್ಥಾನಮುಂ (ಚಂದ್ರಪು. ೫-೫೨ ವ); ತಪ್ತ ಜಾಂಬೂನದದ ದೀಪ್ತಿಯು ನಣಕವಾಡಿ (ಶ್ರೀರಾಮಾ. ೧೩-೩४೭). [ಸಂ.]

**ಜಾಂಭಾಭೂಮಿ** (ನಾ). ಒಂದು ಬಗೆಯ ಫಲವತ್ತಾದ ನೆಲ: ಜಾಂಭಾ ಭೂಮಿ: ಇದು ದಕ್ಷಿಣ ಕೊಂಕಣ ಮತ್ತು ಮಲಬಾರುಗಳ ಕರಾವಳಿಯಲ್ಲಿ ಸಿಗುತ್ತದೆ. ಇದರಲ್ಲಿ ಆರ್ದ್ರತೆಯು ಬಹಳ ವೇಳೆಯವರೆಗೆ ಉಳಿಯುತ್ತದೆ (ಸಸ್ಯಶಾ. ೧೨೭). [ಜಾಂಭಾ$_0$ (P ←ಮರಾ. ಜಾಂಬಾ) + ಭೂಮಿ ]

**ಜಾಕಣಬ್ಬೆ** (ನಾ). ಒಬ್ಬಾಕೆಯ ಹೆಸರು : ಧರಣೀಜಾತೆಗರುಂಧತಿಗೆ ರತಿಗೆ ದೊರೆಯೆನಿಸಿದ ವಿಖ್ಯಾತ ಯಶೋನಿಧಿ ನೃಪವನಿತಾತಿಳಕಂ ಜಾಕಣಬ್ಬೆ (ಎಕ. VIII, ಸಾಗರ. ೦೧೯-४೫ : 1042). [ಜಾಕಣ$_0$ + ಅಬ್ಬೆ$_1$ ]

**ಜಾಕಣೆ** 'ಝಾಕಣೆ' ನೋ.

**ಜಾಕಬ್ಬೆ** (ನಾ). ಒಬ್ಬಾಕೆಯ ಹೆಸರು : ನರಸಿಂಗಂಗಂ ಜಾಕಬ್ಬರಸಿಗವಳ ವೊದವೆ ಪುಟ್ಟೆ ಪುಟ್ಟೆಯುಮರಿಕೇಸರಿಯೆನೆ ನೆಗಟ್ದಂ (ಪಂಪಭಾ ೧೨-೧೩೨); ನೆಗಟ್ದ ಜಾಕಬ್ಬರಸಿಯ ತನ್ನಗ್ರಮಹಿಷಿ (ಎಕ. VIII, ಸಾಗರ. ೧೦೮-೨೩; 1042); ಅನ್ತಾಂ ಜವನಯ್ಯಂಗಂ ಕಾನ್ತಾ ಜನತಿಲಕಮೆನಿಪ ಜಾಕಬ್ಬೆಗ ಮೊಳ್ಪನ್ತಳೆಯ ಪುಟ್ಟಿದಂ (ಎಕ. IV, ಹೆಗ್ಗಡ. ೦೮-೫; 1057). [?+ಅಬ್ಬೆ$_1$]

**ಜಾಕವ** (ನಾ). ಒಬ್ಬಾತನ ಹೆಸರು : ಪೆನ್ನಲೂರ ಕೊಂಗಳಾಚಾರಿಯ ಮಗಂ ಜಾಕವ ಸತ್ತಂ (ಎಕ. V, ಅರಕ. ೭೬-೭ ; 1026). [ ? ]

**ಜಾಕವ್ವೆ** (ನಾ). ಒಬ್ಬಾಕೆಯ ಹೆಸರು : ರಾಷ್ಟ್ರಕೂಟಕುಲತಿಲಕಾತ (ತ್) ಲಕ್ಷ್ಮೀರಿವ ಸಲಿಲನಿಧೇ ಶ್ರೀಜಾಕವ್ವಾಹ್ವಯಾ ಕನ್ಯಾ (ಇಆ. XV, ೨೩-೪೪ ; 1009). [ ? + ಅವ್ವ$_1$ (<ಅವ್ವೆ) ]

**ಜಾಕಾಯಿ** 'ಜಾದಿಕಾಯ್' ನೋ.

**ಜಾಕಾಯಿಮರ** 'ಜಾಯಿಕಾಯಿಮರ' ನೋ.

**ಜಾಕಿ$_1$** (ನಾ). ೧. ಇಸ್ಪೀಟಿನ ಎಲೆಗಳಲ್ಲಿ ಒಂದು ; ಗುಲಾಮನ ಚಿತ್ರವಿರುವ ಎಲೆ : ಜಾಕಿ–ಹಾ, ಅದು–ಜೇ ಅಕ್ಷರದ್ದು–ಅದಕ್ಕೆ ಮೂವತ್ತು (ಗಾಳಿಪ. ೨೦). ೨. ಇಸ್ಪೀಟು ಆಟಗಳಲ್ಲಿ ಒಂದು ಬಗೆ : ಬೇಜಾರಾದರೆ ಜಾಕಿ ಆಡಿರೋ, ಪರೇಲು ಆಡಬೇಡಿ (ರೂಢಿ). [ ←ಇಂ. Jack ]

**ಜಾಕಿ$_2$** (ನಾ). "ಜೂಜುಕುದುರೆಯ ಸವಾರ" (Jockey . ಇಂಕನಿ.) [←ಇಂ. Jockey ]

**ಜಾಕೀಟು** (ನಾ). ೧. ಒಂದು ಬಗೆಯ ಅಂಗಿ; ಮೇಲಂಗಿ : ಜಯಪ್ರಕಾಶ ಜಾಕೀಟು, ಪಟೇಲ ಪಂಚೆ ಧರಿಸಿದ ತಿಂಮ ಅಧ್ಯಕ್ಷಸ್ಥಾನದಲ್ಲಿ ರಾರಾಜಿಸುತ್ತಿದ್ದಾನೆ (ಹನ್ನೊಂದ. ೨). ೨. ರವಿಕೆ; ಕುಪ್ಪಸ: ಅವಳು ಬಿಳಿಯ ಜಾಕೀಟು ಮತ್ತು ಲಂಗಗಳ ಮೇಲೆ ಬೂದುಬಣ್ಣದ ಕಿರಿಗೆಯೊಂದನ್ನು ಹೊದೆದಿದ್ದಳು (ಪುನರು. ೪). ೩. ಪುಸ್ತಕಗಳ ಮೇಲಿನ ಹೊದಿಕೆ. [ ←ಇಂ. Jacket ]

**ಜಾಗ$_1$** 'ಚಾಗ$_1$' ನೋ.

**ಜಾಗ$_2$** (ನಾ). = ಜಾಗರ$_1$: ಜಾಗದ ನೆಲೆವಡಲಗೆಗಳ ಜಾಗಂಗಳ ಪಸುರ್ಗಳಿಸೆಯೆ (ಆದಿಪು. ೪-೩೦); ಕಲಶಂ ಜಾಗಂ ಧ್ವಜಂ ಕನ್ನಡಿ ಗುಡಿ ಸುಮನೋಮಾಳೆ ಶುಭಾಕ್ಷತಂ ಪೊಂಬಳೆ ತೂರ್ಯಂ (ಸುಕುಮಾ. ೫-೬೦); ಪಸುರ್ವೊನ್ನ ಜಗಲಿ . . . ನೀಲದ ಜಾಗಂ(ಕಾವ್ಯಾವ. ೨೩೬):ಕುಸುಮಶರನ ಹಸುರ್ಗಣೆಯ ಹೊದೆಗೆ ಹುರುಡಿಸುವ ಜಾಗದ ನೆಲೆಯ ಹಡಲಿಗೆಗಳೊಳಂ (ವರ್ಧಪು. ೭-೩೨ ); ಫಳವಕ್ಷತೆ ಜಾಗಂ ಮಂಗಳ ಪರಿಕರಮೆಸೆದುವು (ಪುಷ್ಪಪು.೧೦-೮೭); ಸಿಂಗರಿಸಿದವೊಲೆಸೆವ ಪೊಸಜಾಗದ ಜಂಗುಳಿಯಿಂ (ಜಯಕಾ. ೮-೧೧).

**ಜಾಗ$_3$** (ನಾ). ಯಜ್ಞ; ಯಾಗ: "ಜಾಗಮೆ ಯಾಗಂ" (ಚತುನಿ. II, ೪೩); ಯಾಗ–ಜಾಗ (ಶಬ್ದಾನು. ೧೪೧ ಪ್ರಯೋ). [ <ಸಂ. ಯಾಗ ]

**ಜಾಗ$_4$, ಜಾಗೆ** (ನಾ). ೧. ಸ್ಥಳ ; ನೆಲ ; ಎಡೆ ; ಅವಕಾಶ : ಕೊಮಾರು ಗಡದ ವೀರ ಚವುಡ ಕಟಿಸ್ಥ ಜಾಗ (ಎಕ. XII, ಮಧ್ಗಿ. ೪೮-೭ ; ?) ; ತನ್ನ ವನಿಯಲಿ ಜಾಗವನು ಕೊಡ (ಅರ್ಜಾವಿ. ೦೬-೭): ಆ ಜಾಗವು ದೆವ್ವಗಳ ಸಂಚಾರಕ್ಕೂ ಕಳ್ಳತನಕ್ಕೂ ಹೆಸರಾಗಿತ್ತು (ಕಳಕು. ೪). ೨. ಉದ್ಯೋಗಾವಕಾಶ : ಈ ಕಚೇರಿಯಲ್ಲಿ ಒಂದು ಜಾಗ ತೆರವಾಗಿದೆ (ರೂಢಿ). **ಜಾಗೆ** : ೧. ನಿಮ್ಮ ಜಾಗೆಯಲ್ಲಿ ಬಂದು ಕುಳಿತುಕೊಳ್ಳಿ (ಮೇದಿಮ. ೯) ; ನಿಲ್ಲುವುದಕ್ಕೂ ಸಹ ಜಾಗೆಯಿಲ್ಲದಂತಹ ವಾಹನದಲ್ಲಿ (ಮುಂಗಾಪು. ೨೬). [ ←ಮರಾ. ಜಾಗಾ ; ಪಾರ. ಹಿಂ. ಜಗಹ್ ]

**ಜಾಗಂಟೆ** 'ಜೇಗಂಟೆ' ನೋ.

**ಜಾಗಂಬೊಯ್** (ಕ್ರಿ). ಹಸಿರು ಬಣ್ಣವನ್ನು ಬಳಿ : ಜಾಗದ ನೆಲೆವಡಲಗೆಗಳ ಜಾಗಂಗಳ ಪಸುರ್ಗಳಿಸೆಯೆ ರತ್ನದ ಕೇರ್ಗಳ್ ಜಾಗಂಬೊಯ್ದಂತಿರೆ ಪರಭಾಗಂಬಡೆದುವು ವಿವಾಹಗೇಹಾಂತರದೊಳ್ (ಆದಿಪು. ೪-೩೦). [ ಜಾಗ$_1$ (<ಚಾಗ$_1$) + ಪೊಯ್$_1$ ]

**ಜಾಗಗೆಡ್ಡೆ** (ನಾ). ಔಷಧಕ್ಕಾಗಿ ಉಪಯೋಗಿಸುವ ಒಂದು ಬಗೆಯ ಗೆಡ್ಡೆ : ವಂಗಭಸ್ಮ, ಜಾಗಗೆಡ್ಡೆ . . . ಇವೆಲ್ಲವಂ ಚೂರ್ಣಿಸಿ (ಸಕವೈ. ೨೯೭). [ ಜಾಗ$_0$ + ಗೆಡ್ಡೆ (<ಗಡ್ಡೆ) ]

**ಜಾಗಜೂಗ** (ನಾ). (ಉಕ) ಏರ್ಪಾಡು ; ತರದೂದು ; ವ್ಯವಸ್ಥೆ : ಎರಡು ತಾಸಿನ್ಯಾಗ ನನ್ನ ಶಕ್ತಿಮೀರಿ ದುಡ್ಡಿನ ಜಾಗಜೂಗ ಮಾಡಲಿಕ್ಕೆ ಪ್ರಯತ್ನ ಮಾಡತೇನಿ (ಗಂಮಾಯಿ. ೧೩೮). [ ? ]

**ಜಾಗಟ** 'ಜೇಗಂಟೆ' ನೋ.

**ಜಾಗಟೆ** 'ಜೇಗಂಟೆ' ನೋ.

**ಜಾಗತಿಕ** (ಗು). ಇಡೀ ಜಗತ್ತಿಗೆ ಸಂಬಂಧಿಸಿದ : ಜಾಗತಿಕ ಮಟ್ಟದಲ್ಲಿ ಆಗುತ್ತಿರುವ ಜ್ಞಾನವಿಕಾಸದ ಪರಿಚಯವಾಗಲಿಕ್ಕೂ ಇಂಗ್ಲೀಷಿನ ಆವಶ್ಯಕತೆ ಇದ್ದಿತು (ಕರ್ನಾಟ. ೦೦೯) ; ಅಡುಗೆಮನೆಯ ಹೊಗೆಯು ಒಂದು ಜಾಗತಿಕ ಸಮಸ್ಯೆಯಾಗಿರುವುದು (ಅಡುಸಾ. ೨೨). [ ಸಂ. ]

**ಜಾಗರ$_1$** (ನಾ). ಶುಭಕಾರ್ಯಗಳಲ್ಲಿ ಅಂಕುರಾರ್ಪಣವೆಂಬ ಕರ್ಮದ ಅಂಗವಾಗಿ ಪಾತ್ರೆಗಳಲ್ಲಿ ಬೆಳೆಸುವ ಪೈರು–ಅಂಕುರ : ನಾಲ್ದೆಸೆಯೊಳೆಸೆವ . . . ಪಸುರ್ಪೆಸೆದುನಿಮಿರ್ದ ಜಾಗರ ಗಳಿಂ (ಕಾದಂಪೂ. ೫೭೭) ; ನೆಲವಡಲಿಗೆಗಳ ಪಲವಾದುಱ್ ಜಾಗರಂಗಳಿಂ . . . ಕಂಬಂಗಳ ಬೆಳಗುಂ ಪೊಲಗೆಡಿಸಿದತ್ತು ಸುರರೀಕ್ಷಣಮಂ (ಜಾಧಪು. ೮-೪೫) ; ವಿಲಸಿತ ಧೂಪದ ವರಪರಿಮಳದಿಂ ಬಳಸಿದ ಜಾಗರಗಳ ಪಂಕ್ತಿಗಳಿಂ (ಜ್ಞಾನಚಂ. ೭-೬೦).

**ಜಾಗರ$_2$** (ನಾ). ನವಿಲಿನ ಕುಣಿತ : ಜಾಗರದ ನವಿಲಂತೆ ಬಾಗುತ್ತ ಬಳುಕುವ ಬಾಲೆಯ ಕಂಡು ಭ್ರಮಿಸದೆ (ಹಳ್ಳಿಪ. ೭೬) ; ಎರಡು ಗಂಡು ನವಿಲುಗಳು ಗರಿಗೆದರಿ 'ಜಾಗರ' ಆಡುತ್ತಿದ್ದವು (ಸರ್ಪಮಂ. ೩೫).

**ಜಾಗರ$_3$** (ನಾ). ೧. ಎಚ್ಚರ ; ನಿದ್ರೆಯಿಲ್ಲದಿರುವಿಕೆ ; ಜಾಗರಣೆ : ಆ ಯಿರುಳ ನಾಲ್ಕು ಜಾವಮುಂ ಕಾಮನ ಜಾಗರದಂತವರ್ಗೆ ಕೆಂದಿನೊಳೆ ಬೆಳಗಾಗೆ (ಪಂಪಭಾ. ೩-೮೩ ವ) ; ರವಿಸೂನು ದರ್ಭಾಂಕುರದ ಶಯನ ಸ್ಥಾನದಲಿ ಮಾಡಿದನು ಜಾಗರವ (ಕುಮ್ವ್ಯಾಕ. ೮-೯). ೨. ಜಾಗ್ರದವಸ್ಥೆ : ಜಾಗರ, ಸ್ವಪ್ನ, ಸುಷುಪ್ತಿ ಮುಂತಾದ ಅವಸ್ಥೆಗಳೂ ಉಪಾಧಿಯಿಂದಲೇ (ಭಾರದ. ೨೩೬) ; ಸ್ವಪ್ನದಲ್ಲಿ ಶಿವನೆಂದಂತೆ ಜಾಗರದಲ್ಲಿ ಜಗತ್ತು ಅಚ್ಚರಿ ಪಡುವ ರೀತಿಯಲ್ಲಿ ದೊರೆತ ಕುಮಾರ (ಶರಜ. ೬೯೪). ೩. ಯುದ್ಧದಲ್ಲಿ ತೊಡುವ ಕವಚ ; ಚಿಲಕುತ್ತು.

**ಜಾಗರಮಾಡು** = ನಿದ್ರೆಮಾಡದಿರು ; ಎಚ್ಚರವಾಗಿರು : ಎಲ್ಲರೂ ಏಕಾದಶಿಯ ಜಾಗರಮಾಡಿ ಫುಲ್ಲನಾಭನ ಭಜಿಸುವರು (ಕರ್ಣಾಕ. ೨೬೭) ; ಜಾಗರ ಮಾಡುವೆ ಪವಡಿಸಿ ಇರುಳೊಳ್ (ಅಂತಿಗೊ. ೩೬-೭೨೬). [ ಸಂ. ]

**ಜಾಗರಗೈ** (ಕ್ರಿ). ನಿದ್ರೆಮಾಡದಿರು ; ಜಾಗರಣೆಮಾಡು : ನಿದ್ರಿಸಲರಿಯದೆ ಕಣ್ಣೆವೆ ಮುಚ್ಚದೆ ಜಾಗರಗೈವರು ಬರಿದೆ (ಇಂಚಾಪ. ೯೬-೬೭). [ ಜಾಗರ$_3$ + ಕೈ$_1$ (<ಕೆಯ್$_1$) ]

**ಜಾಗರಣ** (ನಾ). ೧. ನಿದ್ರೆಮಾಡದಿರುವಿಕೆ. ೨. ರಾತ್ರಿಯೆಲ್ಲಾ ಎಚ್ಚರವಿದ್ದು ನಡೆಸುವ ಪೂಜೆ–ಸಂಕೀರ್ತನೆ : ರಾಗದಿಂದಿರಲಲ್ಲಿ ಜನರು ನಾಗೇಶ್ವರ ಶುಭಾಗಾರ ಪುಷ್ಪವಾಟಿಯೊಳು ಶಿವರಾತ್ರಿ ಜಾಗರಣವಿರೆ (ಚತುಪು. ೩-೫-೬೦) ; ಈ ದಿನ ರಾತ್ರಿ ಜಾಗರಣ ಎಷ್ಟು ಕಷ್ಟ (ತ್ಯಾಗಮ. ೩೪). ೩. ಜಾಗ್ರದವಸ್ಥೆ : ನಿರುತ ಹಮ್ಮಿದು ತಾಮಸದಲುಱ್ ಬೆರೆಯೆ ಸುಪ್ತಿ ರಜೋಗುಣದಿ ಸಂಚರಿಸೆ ಸ್ವಪ್ನವು ತೀವಿ ಸತ್ತ್ವ ಧರಿಸೆ ಜಾಗರಣ (ಅಮೃತ. ೯-೧೧). [ ಸಂ. ]

**ಜಾಗರಣೆ** (ನಾ). ೧.=ಜಾಗರಣ ೧ : ಧೂಪದೀಪಾದಿಗಳಿಂದ ಪೂಜೆಯಂ ಮಾಡಿ ಆ ಸುರಭಿಯ ಸಮೀಪದಲ್ಲಿಯೆ ಜಾಗರಣೆಯಂ ಮಾಡುತ್ತಾ (ಸಾಗಂಧಿ. ೩೮೨-೭). ೨.=ಜಾಗರಣ ೨ : ರಾತ್ರಿಯೆಲ್ಲ ದ್ವಾರವತಿಗೆ ಪೂರ್ಣ ಜಾಗರಣೆ (ಶಾಂತಲಾ. ೦೦೧). [ ಸಂ. ಜಾಗರಣ ]

**ಜಾಗರವಾಡು** (ಕ್ರಿ). (ನವಿಲು) ಕುಣಿ; ನರ್ತಿಸು: ಅವಳ ಅಂತರಂಗದಲ್ಲಿ ಸಂತಸದ ನವಿಲು ತನ್ನ ಗರಿಗಳೆಲ್ಲವನ್ನೂ ಎತ್ತಿ ನಿಂತು ಜಾಗರ ವಾಡಲಾರಂಭಿಸಿತ್ತು (ನನ್ನರ. ೪೩). [ ಜಾಗರ$_2$ + ಆಡು$_1$ ]

**ಜಾಗರಿಗ** (ನಾ). ಒಂದು ಬಗೆಯ ಹಕ್ಕಿ : ಕಾಗೆ ನವಿಲಿಬ್ಬಾಯು ಗುಬ್ಬಿ ಪಾರಿವ ಕೊಂಚ ಗೂಗೆ . . . ಗಿಳಿ ಜಾಗರಿಗ ಹರಡೆ (ಹಜಕಾ. ೫-೪೩); ಮರಕುಟಿಗ ಚಂಬೋತ ಶುಕ ಜಾಗರಿಗನರಳಿಗನಸಗ ಸಾಳುವ ಸರಟ ಸಾರ ಸಮೂಹ ಮೇಳಗಳತ್ತಲವೆಯೆಂದ (ತೊರರಾ. ೩-೦-೩೨); ಕಾಗೆ ನವಿಲು . . . ಜಾಗರಿಗನು ಹರಡೆಯು (ಹರಿಸಾಂ. ೧-೭೨). [ ? ]

**ಜಾಗರಿತ** (ಗು). ಎಚ್ಚರವಾಗಿರುವ; ಎಚ್ಚರಿಸಲ್ಪಟ್ಟ; ಎಚ್ಚರಗೊಂಡ: ಜಾಗರಿತವಾಗುತ್ತಿದೆ ಪ್ರಜ್ಞೆಯಿಲ್ಲದ ಬೈಲು (ಕೋಗಿಲೆ. ೫೪-೫); ಶಂಕೆಯು ದೇವೇಂದ್ರನ ಮನದಲ್ಲಿ ಜಾಗರಿತವಾಗಿದ್ದುದರಿಂದ ಆತನು . . . ಇಣಿಕಿ ನೋಡುತ್ತಾ ಕುಳಿತಿದ್ದನು (ಬಿನ್ನಬೇ. ೧೩೪). [ ಸಂ. ]

**ಜಾಗರಿಸು** (ಕ್ರಿ). ಎಚ್ಚರಿಸು ; ಎಚ್ಚರಗೊಳಿಸು : ಬಸವಂತಿಯೇ ಶ್ಯಾಮ ರಾಯನನ್ನು ಜಾಗರಿಸಿ ಕರೆದಳು (ದೀಪಹ. II, ೧೩೪)

[ ಜಾಗರ$_3$ + – ಇಸು$_3$ ]

**ಜಾಗರೂಕ** (ಗು). ೧. ಎಚ್ಚರಿಕೆಯಿಂದಿರುವ ; ಎಚ್ಚರದಿಂದಿರುವ ಸ್ವಭಾವದ. (ನಾ). ೨. ಎಚ್ಚರವಾಗಿರುವವನು : ರತ್ನತ್ರಯೋಪ ಮಾನರ ಪರಭಿರಕ್ಷಿತ ವರ್ಣಾಶ್ರಮರವದ್ಯಮಾದ್ಯದ್ದಂದಶೂಕಭಯ ಜಾಗರೂಕರವನಿಪಾಶ್ರಮಗಳರಸುಗೆಯ್ಯುತ್ತುಮಿರೆ (ಶಾಂತಿಪು. ೭-೦೩೩ ವ); ಜನಗಳೂ ಬಹಳ ಜಾಗರೂಕರಾಗಿಯೇ ಇದ್ದರು (ಕಿಂಕಥ. ೨೭): ನೀನು ಬಹಳ ಜಾಗರೂಕನಾಗಿದ್ದೀಯೆ (ಬರಜಾ. ೧೩೦). [ ಸಂ. ]

**ಜಾಗರೂಕತೆ** (ನಾ). ಮೈಮರೆಯದಿರುವಿಕೆ ; ಎಚ್ಚರವಾಗಿರುವಿಕೆ ; ಹುಷಾರು; ಜೋಕೆ: ಅವನನು ಜಾಗರೂಕತೆಯಿಂದೆ ನೋಡುವುದೆಂದು ಯಾಚಿಸುತೆ (ರಾಮಾಸಿ. ೨-೨-೪೨); ಈ ನಾಯಿಯು ಸಾಹುಕಾರನ ಮನೆ ಯಲ್ಲಿ ಜಾಗರೂಕತೆಯಿಂದ ನೋಡಿಕೊಳ್ಳುತ್ತಿತ್ತು (ನೀತಿಚಿಂ. VIII, ೫).

[ ಸಂ. ಜಾಗರೂಕತಾ ]

**ಜಾಗರೂಕತ್ವ** (ನಾ). = ಜಾಗರೂಕತೆ : ಜಾಗರೂಕತ್ವದೆ ತಿಳಿಯದು ನಿನ್ನಂ ವಲಂ ಲೋಕಮೆಲ್ಲಂ (ವಂಕಮು. ೯-೦೮). [ ಸಂ. ]

**ಜಾಗರೆ** (ನಾ). = ಜಾಗರೂಕತೆ. [ ಸಂ. ಜಾಗರಾ ]

**ಜಾಗರ್ಯೆ** (ನಾ). = ಜಾಗರ$_3$. [ ಸಂ. ಜಾಗರ್ಯಾ ]

**ಜಾಗವರಲ್** (ನಾ). ಹಸಿರುಬಣ್ಣದ ರತ್ನ ; ಪಚ್ಚೆಮಣಿ ; ಮರಕತ : "ಜಾಗವರಲ್, ಪಸುರ್ವಣಿ—ಈ ೨ ಮರಕತಂ" (ಕಶಸಾ. ೪-೫೯); "ಪಸುರ್ವಣಿಯುಂ ಜಾಗವರಲ್ ಪೆಸರಿಂ ಮರಕತಮವಕ್ಕು" (ಕವಿಕಂ. ೫೨); ಕಂದುಗೊರಲನ ಬೆಳ್ಗೊರಲೊಳ್ ಜಾಗವರಲ ಮಲಕನಮರ್ಚಿ (ರಾಮಾಶ್ವ. ೦೩೧-೦೦). [ ಜಾಗ$_1$ (<ಚಾಗ$_1$) + ಪರಲ್ ]

**ಜಾಗಿರಿ** 'ಜಹಗೀರು' ನೋ.

**ಜಾಗಿಸು** (ಕ್ರಿ). ಬಾಗಿಸು ; ಒಲೆಸು : ಕೈನೆಗಪಿ ಜಾಗಿಸಿ [ಪಾಠಾಂ. ಕೆಯ್ಗಳನೆ ಕೂನಿಸಿ]ಕುರ್ಗುತೆ ಯೆಡಿಸುತ್ತೆ ತಾಂ ನಗಿಸಿತ್ತು ಒಂದು ಮರ್ಕಟಂ (ಗಿರಿಕ. ೫-೨೦): ಲಲನೆಯರು ಪರಭೃತ ಧ್ವನಿಯಿಂದೆ . . . ತಿರುಪುಲಾಗಿನಿಂ ಜಾಗಿಸಿಯೆ ತೂಗಿ ಬೀಗುತ್ತಮಿರದೇ (ನವಮೋ. ೨೩-೪೮); ಕನಕವಲ್ಲಿಯು ಒಮ್ಮೆಲೆ ಕಿಡಿಕಿಯು ಕಡೆಗೆ ಜಾಗಿಸಿ ನೋಡಿ ಮಾತನಾಡಿದಳು(ಧರ್ಮಸಿ. ೫೨).

[ ಜಾಗು$_1$ + – ಇಸು$_3$ ]

**ಜಾಗೀರ್** 'ಜಹಗೀರು' ನೋ.

**ಜಾಗೀರದಾರ** 'ಜಹಗೀರುದಾರ' ನೋ.

**ಜಾಗೀರಿ** 'ಜಹಗೀರು' ನೋ.

**ಜಾಗೀರು** 'ಜಹಗೀರು' ನೋ.

**ಜಾಗೀರುದಾರ** 'ಜಹಗೀರುದಾರ' ನೋ.

**ಜಾಗೀರ್ದಾರ್** 'ಜಹಗೀರುದಾರ' ನೋ.

**ಜಾಗು$_1$** (ಕ್ರಿ). ಬಾಗು ; ಒಲೆ. 'ಜಾಗಿಸು' ಪರಾ. [ ? ]

**ಜಾಗು$_2$** 'ಚಾಂಗು' ನೋ.

**ಜಾಗು$_3$** (ನಾ). ೧. ಸದ್ದಿಲ್ಲದಿರುವಿಕೆ ; ನಿಶ್ಶಬ್ದತೆ ; "ಮೌನ" (ಚತುನಿ. ೬. I, ೭೦). ೨. ಉದಾಸೀನತೆ ; ವಿಳಂಬ : ಜತನದಿಂದೆನ್ನ ಕರದೊಯ್ದಲ್ಲಿ ಜವ್ವನೆಯು ಜೊತೆಗೊಳಿಸಿ ಪೊರೆಯದೇತಕೆ ಜಾಗನೆಸಗುತಿಹೆ (ವೆಂಕಾರಾ. ೨-೩೭-೪೭).

**ಜಾಗುಮಾಡು** = ಉದಾಸೀನಮಾಡು; ತಡಮಾಡು: ಈಗಲೆ ಭಜಿಸೆಲೆ ಜಿಹ್ವೆ ನೀ ಜಾಗುಮಾಡದೆ ಹರಿಯ ಪದಾಂಬುಜವ (ಪುರಂದ. ೧-೦೭೩-೧); ಅಗೆವ ಶಬ್ದವ ಕೇಳಿ ತಾ ಬಂದ ಜಾಗಿನಿಂ ಜಂಗಮನೋರ್ವ ಜಾಗುಮಾಡದೆ (ಶರಲೀ. ೩೩೭-೬). [ ದೇ.॥ ತೆಲು. ಜಾಗು ]

**ಜಾಗುಗೊಳಿಸು** (ಕ್ರಿ). (?) : ಸಾಗರದಗಲ ಹೊನ್ನಿನ ಹಾಸಿಗೆ ಹಾಕಿ ಜಾಗುಗೊಳಿಸದಲೆ ಹೊರಳಿದ ಕಾಲಕ್ಕು ಈ ಗುಣ ಬಿಡದಯ್ಯಾ (ವಿಶಾಸು. ೪೭-೪). [ ಜಾಗುಗೊಳ್$_0$ + – ಇಸು$_3$ ]

**ಜಾಗುಡ** (ನಾ). ಕುಂಕುಮಕೇಸರಿ ; ಕುಂಕುಮ : " ಕುಂಕುಮಂ . . . ಕಾಶ್ಮೀರಜಂ, ಕಾಲೇಯಂ, ಜಾಗುಡಂ[ಪಾಠಾಂ.ಜಾಪಕಂ]-ಈ೭ಕುಂಕುಮಂ" (ಜಲಾಯು. ೮೯-೩೮೯). [ ಸಂ. ]

**ಜಾಗುಮತಿ** (ನಾ). ಉದಾಸೀನತೆಯಿಂದ ಕೂಡಿದ ಬುದ್ಧಿಯುಳ್ಳವನು ; ಮಂದಮತಿ ; ಸೂಕ್ಷ್ಮಬುದ್ಧಿಯಿಲ್ಲದವನು : ಆ ಗಜದಿರವನಿತಿನಿತೆಂದು ಪೇಳ್ವೊಡೆ ನಾಗೇಂದ್ರನಿಗಲ್ಲದುಳಿದ ಜಾ[ಪಾಠಾಂ. ಚಾ]ಗುಮತಿಗೆ ಗೋಚರ ವಲ್ಲ (ರಾಮವಿ. ೪-೦೦೦). [ ಜಾಗು$_3$ + ಮತಿ ]

**ಜಾಗುರಿ** (ನಾ). ಒಂದು ಬಗೆಯ ವನಸ್ಪತಿ : ಅಜ್ಜನಪಟ್ಟೆ, ಅರಂಜೆ, ಬೈರಿ, ಜಾಗುರಿ, ವಿಷವೃಕ್ಷ (ಮೈಜಿಗಿ. ೭-೦೩೫). [ ? ]

**ಜಾಗುರೆ** 'ಚಾಗುರೆ' ನೋ.

**ಜಾಗುಹಾಕು** (ಕ್ರಿ). ಕೂಗುಹಾಕು : ಅನಂತರ ಅದನ್ನೇ ಹುಡುಕಿಕೊಂಡು ಬಾಲಪ್ಪ ನರಿ ಹೊರಟಿತು—ಜಾಗುಹಾಕಿಕೊಂಡು ಹೊರಟಿತು . . . ಜಗ್ಗು ಜಗ್ಗು ಎಂದು ಜಾಗುಹಾಕಿಕೊಂಡು ಹೊರಟಿತು (ಪುಟ್ಕರ. ೦೯); ಗದ್ದೆಯ ಬದುವಿನ ಮೇಲಿನ ಗಿಡಗಳ ತಲೆಗಳನ್ನು ಹಾರಿಸುತ್ತಾ ಜಾಗುಹಾಕುತ್ತ ಬರುತ್ತಲಿದ್ದನು (ದಿನಾರಿ. ೯೩). [ ಜಾಗು$_0$ + ಹಾಕು (<ಪಾಯ್ಕು$_1$) ]

**ಜಾಗ್ರತ** (ಗು). ೧. (ನಿದ್ರೆಯಿಂದ) ಎಚ್ಚತ್ತಿರುವ ; ಎಚ್ಚರಿಕೆ ಯಿಂದಿರುವ : ಮನಸ್ಸಿನ ಮೊದಲನೆಯ ಭಾಗವನ್ನು ಜಾಗೃತ ಮನಸ್ಸೆಂದೂ . . . ಕರೆಯುವರು (ಶಿಕ್ಷದ. ೭೪೮) (ನಾ). ೨. ಎಚ್ಚರ ಗೊಂಡವನು : ಸ್ವಪ್ನಲೋಕವ ಜಾಗ್ರತಂ ಸುಳ್ಳೆನುವನಲ್ತೆ ಸುಪ್ತಂಗೆ ಜಾಗ್ರತನ ಲೋಕಮುಂ ಸುಳ್ಳೇ (ಮಂಕುಕ. ೮೯೩); ಆದರೆ ಮರುಕ್ಷಣ ನಾನು ಜಾಗ್ರತನಾಗಿದ್ದೆನು (ಹೇಮಂತ. ೩೫೮). [ ಸಂ. ]

**ಜಾಗ್ರತಗೊಳ್ಳು** (ಕ್ರಿ). ಎಚ್ಚರಗೊಳ್ಳು : ಅವನು ಜಾಗ್ರತಗೊಂಡವನಂತೆ . . . ಪರಿಪರಿಯಾಗಿ ಹಲವರಿದನು (ಪುನರು. ೨೭೭).

[ ಜಾಗ್ರತ + ಕೊಳ್ಳು$_1$ (<ಕೊಳ್$_1$) ]

**ಜಾಗ್ರತವಿಡು** (ಕ್ರಿ). ಎಚ್ಚರಿಸಿ ಇಡಂ; ಉದ್ದೀಪ್ತವಾಗಿಡು : ನಾವು ತಿನ್ನುವ ಅನ್ನದಲ್ಲಿ ಮುಖ್ಯವಾಗಿ ಶಾರೀರಾಗ್ನಿಯನ್ನು ಜಾಗ್ರತವಿಡತಕ್ಕ ಗುಣಬೇಕು (ಮುಂಬಯಿ. ೪-೩೨). [ ಜಾಗ್ರತ + ಇಡು$_1$ ]

**ಜಾಗ್ರತಸ್ಥಾನ** (ನಾ). (ಉಕ) ದೇವತಾಶಕ್ತಿಯುಂ ಗೋಚರಿಸುವ ಸ್ಥಳ ; ದೇವತಾಮಹಿಮೆಯುಳ್ಳ ಪ್ರದೇಶ : ಜಾಗ್ರತಸ್ಥಾನವೆಂದು ಹೆಸರು ಗೊಂಡ ಕೇಶವದೇವರ ಗುಡಿಯೊಂದು (ಸಮುಜೀ. ೧).

[ ಜಾಗ್ರತ + ಸ್ಥಾನ ]

**ಜಾಗೃತಿ** (ನಾ). ೧. ನಿದ್ರೆ ಮುಗಿಯುವಿಕೆ; ಎಚ್ಚರಗೊಂಡಿರುವಿಕೆ; ಎಚ್ಚರ. ೨. ಆಲಸ್ಯವನ್ನು ಬಿಟ್ಟು ಕಾರ್ಯೋನ್ಮುಖವಾಗುವಿಕೆ: ರಾಷ್ಟ್ರದ ಧಾರ್ಮಿಕ ಜಾಗೃತಿಯೇ ಮೈವೆತ್ತು ಬಂದಂತೆ ಶಂಕರಾಚಾರ್ಯರು ಜನ್ಮತಾಳಿದರು (ಕರ್ನಾಕ. ೩೩) : ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಜಾಗೃತಿಯ ಚಿಹ್ನೆ ಮೂಡಿಬಂತು (ಆತ್ಮಾರ್ಪ. ೨). [ <ಸಂ. ಜಾಗರ್ತಿ ]

**ಜಾಗೃತಿಸು** (ಕ್ರಿ). ಜಾಗೃತಿಯನ್ನುಂಟುಮಾಡು; ಎಚ್ಚರಿಸು: ವ್ಯಾಕೃತ ದಿನವ್ಯಾಕೃತಾದಿ ಸತ್ತ್ವಕೆ ನಿನ್ನ ಜಾಗೃತಿಪ ಮತಿ ಧರ್ಮ (ಮುಕುಳ. ೯೮). [ ಜಾಗೃತಿ + -ಇಸು$_3$ ]

**ಜಾಗೆ** 'ಜಾಗ$_4$' ನೋ.

**ಜಾಗ್ರ** (ನಾ). ಎಚ್ಚರವಾಗಿರುವ ಸ್ಥಿತಿ: "ಅಜಿದೀಕ್ಷಿಸಲು ಜಾಗ್ರಂ" (ಮಂಗರಾ. ೯೪-೩) ; ಜಾಗ್ರದಲ್ಲಿ ಕಾಬುದು ಬ್ರಹ್ಮನ ಇರವು ಸ್ವಪ್ನದಲ್ಲಿ ಕಾಬುದು ವಿಷ್ಣುವಿನ ಇರವು (ಮೋಳಿಮಾ. ೩೦-೧೨೩) ; ಜಾಗ್ರ ಸ್ವಪ್ನ ಸುಷುಪ್ತಿಯಲ್ಲಿ ಮತ್ತೊಂದ ನೆನೆದಡೆ ತಲೆದಂಡ (ಬಸವ. ೬೯೩); ನೀನಂಜಿ ನಿದ್ರೆಗೈಯ್ಯದಿರ್ದುದೆ ಜಾಗ್ರವಾಯಿತ್ತು (ಭೈರಸೂ. ೨೨೫). [ ಸಂ. ಜಾಗ್ರತ್ ]

**ಜಾಗ್ರಗಾವಲು** (ನಾ). ಎಚ್ಚರಿಕೆಯಿಂದ ಮಾಡುವ ಕಾವಲು: ಆರು ಸಾವಿರ ಜಂಗಮರನ್ನು ಜಾಗ್ರಗಾವಲಿನಿಂದ ತನ್ನಲ್ಲಿಟ್ಟುಕೊಂಡು (ಮೋಳಿಮಾ. ೭೦ ಪ್ರಸ್ತಾವನೆ). [ ಜಾಗ್ರ + ಕಾವಲು (<ಕಾವಲ್$_1$) ]

**ಜಾಗ್ರತ** (ನಾ). ೧. ಎಚ್ಚತ್ತವನು; ಎಚ್ಚರವುಳ್ಳವನು : ಮೌನಿಯಾದವನಿಗೆ ಕಲಹವೆಂಬುದಿಲ್ಲ ಜಾಗ್ರತನಿಗೆ ಭಯವಿಲ್ಲ (ಇಂಜಾಪ. ೮೦-೯೦). ೨. ಗಮನ; ಅವಧಾನ; ಲಕ್ಷ್ಯ. [ <ಸಂ. ಜಾಗೃತ ]

**ಜಾಗ್ರತಗೊಳಿಸು** (ಕ್ರಿ). ಎಚ್ಚರಗೊಳಿಸು: ತಾನೇ ಮುಂದೆ ಬಿದ್ದು ಎಲ್ಲರನ್ನೂ ಜಾಗ್ರತಗೊಳಿಸುವ ಗುತ್ತಿಗೆ ಹೊತ್ತುಕೊಂಡವರಂತೆ ಕೆಲಸ ಮಾಡುತ್ತಿದ್ದ (ಅಪನಾ. ೨೩೨). [ ಜಾಗ್ರತ + ಕೊಳ್$_1$ + -ಇಸು$_3$ ]

**ಜಾಗ್ರತವಿಡು** (ಕ್ರಿ). ಗಮನವಿಡು; ಅವಧರಿಸು; ಮನಸ್ಸಿಟ್ಟು ಕೇಳು: (ಕ). [ ಜಾಗ್ರತ + ಇಡು$_1$ ]

**ಜಾಗ್ರತಿ** (ನಾ). ೧. ಎಚ್ಚರಗೊಂಡಿರುವಿಕೆ; ಎಚ್ಚರ. ೨. ಆಲಸ್ಯವನ್ನು ಬಿಟ್ಟು ಕಾರ್ಯೋನ್ಮುಖವಾಗುವಿಕೆ: ಜನತೆಯಲಿ ಎಂತಹ ಜಾಗ್ರತಿಯಿದು (ಪ್ರಣಸ. ೨೭) ; ಠಾಕೂರರ ಮನೆತನ ಈ ಆಂದೋಲನದಲ್ಲಿ ಅನೇಕ ರಾಷ್ಟ್ರೀಯ ಜಾಗ್ರತಿ ಕಾರ್ಯೋತ್ಸಾಹಗಳ ನೆಲೆಯಾಗಿತ್ತು (ನಿಬಂಧ. I, ೭). [ <ಜಾಗೃತಿ ]

**ಜಾಗ್ರತು** (ನಾ). ಜೀವನು ಅನುಭವಿಸುವ ಮೂರು ಅವಸ್ಥೆಗಳಲ್ಲಿ ಒಂದು; ಎಚ್ಚರದಿಂದಿರುವ ಸ್ಥಿತಿ; ಜಾಗ್ರದವಸ್ಥೆ: ಸಕಲ ಭೋಗಂಗಳಿಗೆ ಆವಾಸಸ್ಥಾನವಾಗಲಾಗಿ ಜಾಗ್ರತುಯೆಂತಾ ಹೇಳಲ್ಪಡುವದು (ಈಶ್ವಸ್ತ. ೧೮-೯). [ <ಸಂ. ಜಾಗ್ರತ್ ]

**ಜಾಗ್ರತೆ** (ನಾ). ೧. ಬೇಗ; ಶೀಘ್ರತೆ: ನೀ ಜಾಗ್ರತೆಯೊಳವನೊಡಗೂಡಿ ಬಹುದೆಂದಾಡಿ ದಾದಿಯ ಕಳುಹಲಿಂದುಮುಖಿ (ಜಿನಭಾ. ೨೯-೧೨) ; ಹೇಳಿದ್ದನ್ನು ಅತಿ ಜಾಗ್ರತೆಯಾಗಿ ಮನಸ್ಸಿಗೆ ತಂದುಕೊಳ್ಳುತ್ತಿದ್ದ (ಕಲಾಸಾ. ೩೨). ೨. ಎಚ್ಚರಿಕೆ; ಜೋಪಾನ; ಜೋಕೆ; ಸಾವಧಾನತೆ: ಹಾಗಾದರೆ ಆಕೆಯನ್ನು ಜಾಗ್ರತೆಯಾಗಿ ಕಾಪಾಡಿಕೊ (ಶಾಕುಂತ. ೨೫-೧೨) ; ಆದರೂ ನೀನು ಜಾಗ್ರತೆಯಿಂದ ಅವಳೊಡನೆ ಮಾತಾಡು (ಹಳ್ಳಿಹಾ. ೯೭) ; ಜಾಗ್ರತೆ, ಮೆಲ್ಲನೆ . . . ಎಂದು ನಾವಿಕನು ಆಗಾಗ ಎಚ್ಚರಿಕೆ ಕೊಡುತ್ತಿದ್ದ (ಮಹಾತ್ಮಾ. ೦೨೧). ೩. ಕಾರ್ಯೋನ್ಮುಖತೆ: ಹೆಂಗಸರಲ್ಲಿ ಹೆಚ್ಚು ಜಾಗ್ರತೆ, ತಿಳಿವಳಿಕೆ ಉಂಟಾದಂದಿನಿಂದ (ಗೃಹವಿ. ೧೯೭). [ಸಂ. ಜಾಗ್ರತಾ]

**ಜಾಗ್ರತೆಗೊಳ್ಳು** (ಕ್ರಿ). ಎಚ್ಚರಿಕೆ ತೆಗೆದುಕೊಳ್ಳು; ಹುಷಾರಾಗಿರು: (ಕ). [ ಜಾಗ್ರತೆ + ಕೊಳ್ಳು$_1$ (<ಕೊಳ್$_1$) ]

**ಜಾಗ್ರಾವಸ್ಥೆ** (ನಾ). = ಜಾಗ್ರ: ಸ್ಥೂಲತನುವಿನಲ್ಲಿಪ್ಪ ವಿಶ್ವನು ಜಾಗ್ರಾವಸ್ಥೆಯ ವ್ಯಾಪಾರದಲಿ ಚರಿಸುತ್ತಿಹನು (ಮೋಳಿಮಾ. ೨೨೭-೭೮೦ ಟೀಕೆ) ; ಎನ್ನ ಸ್ಥೂಲತನುವಿನ ಜಾಗ್ರಾವಸ್ಥೆಯಲ್ಲಿ ಸಕಲದೃಶ್ಯದ ಲೀಲೆಯನಾಡುವಾತನು ನೀನೆ ಅಯ್ಯಾ (ಅಖಂಡೇ. ೩೦೮-೯೩). [ <ಸಂ. ಜಾಗ್ರದವಸ್ಥಾ ]

**ಜಾಚೇಲಿ** 'ಜಾಚೇಲು' ನೋ.

**ಜಾಚೇಲು, ಜಾಚೇಲಿ, ಜಾಟೇಲಿ** (ನಾ). (ಉಕ) ಹಲ್ಲಿಗೆ ಕಪ್ಪುಬಣ್ಣವನ್ನುಂಟುಮಾಡುವ ಒಂದು ಬಗೆಯ ಹಲ್ಲುಪುಡಿ; "ಹಲ್ಲಿಟ್ಟು" (ಜಾನಕೋ.೫೯). **ಜಾಚೇಲಿ:** "ಹೆಣ್ಣುಮಕ್ಕಳು ಬಳಸುವ ಹಲ್ಲುಪುಡಿ" (ಗರತಿ. ಕೋಶ) ; ಬಾತೀಗೆ ಬಾರದ್ದು ಯಾತಕ ನೆನಿಯಲಿ ಜಾತಮಲ್ಲೀಗಿನನ ಮನವ ಬಾಯಾನ ಜಾಚೇಲಿ ಮಾಡಿ ಉಗುಳೇನ (ಗರತಿ. ೨೯). **ಜಾಟೇಲಿ:** ಜಾತಮಲ್ಲೀಗಿ ನನಮನವ ಬಾಯಾನ ಜಾಟೇಲಿ ಮಾಡಿ ಉಗುಳೇನ (ಕನ್ನಜಾ. ೧೦೩). [ ? ]

**ಜಾಜಮ, ಜಾಜಮು, ಜಾಜೀಮು, ಜಾಜೂಮ, ಜಾಜೂಮು** (ನಾ). ರಂಗುರಂಗಿನ ಚಿತ್ರಗಳುಳ್ಳ ನೆಲಕ್ಕೆ ಹಾಸುವ ಹಾಸು: ಅಲ್ಲಿಯೇ ಕೆಳಗೆ ಜಾಜಮದ ಮೇಲೆ ಅಜ್ಜಿ ಘಾರೂಮಾಯಿ ಇವರೆಲ್ಲಾ ಒಂದು ಬದಿಗೆ ಮಲಗಿದರು (ಸ್ಮೃತಿಚಿ. ೭೭). **ಜಾಜಮು:** ಇಡಿಯ ಪಡಸಾಲೆಯ ತುಂಬ ಕೆಂಪು ಜಾಜಮು ಹಾಸಲ್ಪಟ್ಟಿತ್ತು (ಗಂಮಾಯಿ. ೩೫) : ನೆಲದ ತುಂಬ ಹುಲ್ಲು ಹಾಸಿ ಮೇಲೆ ಮೆತ್ತಗಿನ ಜಾಜಮು ಹಾಸಿದ್ದಾರೆ (ಪ್ರಣಸ. ೬೨). **ಜಾಜೀಮು:** ಈ ಗ್ರಾಮಗಳಲ್ಲಿ ಖಾದಿಯ ವಸ್ತ್ರಕ್ಕೆ ಅಚ್ಚು ಹಾಕಿ ಜಾಜೀಮುಗಳನ್ನೂ. . .ಮಾಡುವರು (ಕಭಾಗ. ೩೦೧). **ಜಾಜೂಮ:** ನೆಲದಮೇಲೆ ಕಂಬಳಿಗಳು ಹಾಸಲ್ಪಟ್ಟಿದ್ದವು. ಮೇಲೆ ಜಾಜೂಮ ಹಾಸಲ್ಪಟ್ಟಿತ್ತು (ಭಾಮಿನಿ.೯೪). **ಜಾಜೂಮು:** ಒಂದು ಹಳೇ ಜಾಜೂಮಿನ ಮೇಲೆ ತನ್ನ ಹಳೇ ಮಡಿಸೀರೆಯನ್ನು ಮಡಿಚಿ ಹಾಸಿದಳು (ಅನ್ನ. ೨೩೦) : ಇಲ್ಲಿ ಬಾ, ಈ ಜಾಜೂಮು ಇಷ್ಟು ಮಡಚು (ಒತ್ತಿಕ್ಕೆ. ೭). [ ←ಹಿಂ. ಜಾಜಮ್; ಮರಾ. ಜಾಜಮ್, ಜಾಝುಮ್; ಪಾರ. ಜಾಜಿಮ್ ]

**ಜಾಜಮು** 'ಜಾಜಮ' ನೋ.

**ಜಾಜಿ$_1$** 'ಜಾದಿ' ನೋ.

**ಜಾಜಿ$_2$** 'ಜಾದು$_1$' ನೋ.

**ಜಾಜಿಕಾಯ್** 'ಜಾದಿಕಾಯ್' ನೋ.

**ಜಾಜಿಕಾಯಿ** 'ಜಾದಿಕಾಯ್' ನೋ.

**ಜಾಜಿಪತ್ರೆ, ಜಾಪತ್ರೆ, ಜಾಯಿಪತ್ರೆ** (ನಾ). ಜಾಯಿಕಾಯಿ ಮರದ ಒಣಗಿದ ಹೂವು: "ಜಾಜಿಪತ್ರೆ (ಜಾಪತ್ರಿ)–ಜಾತಿಪತ್ರೀ" (ತದ್ಭಕೋ. ೧೪). **ಜಾಪತ್ರೆ:** ಜಾಜಿಕಾಯಿ, ಜಾಪತ್ರೆ (ಮೈಜಿಗಿ. ೫೫-೧೧೧೫). **ಜಾಯಿಪತ್ರೆ:** "ಜಾತಿಪತ್ರಿಕಾ - ಜಾಯಿಪತ್ರೆ" (ಓಷಧಿ. ೬೨) ; ಜಾಯಿಕಾಯಿ, ಜಾಯಿಪತ್ರೆ . . . ಜೇನು ತುಪ್ಪದಿಂದ ಮರ್ದಿಸಿ (ಸಕವೈ. ೯೫). [ ಜಾಜಿ$_1$ (<ಜಾದಿ) + ಪತ್ರೆ ]

**ಜಾಜಿಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ: ಜಾಜಿಮಲ್ಲಿಗೆ ಮುಡಿಯುವುದಕ್ಕೆ ತುಂಬಾ ಚೆನ್ನಾಗಿರುತ್ತದೆ (ರೂಢ). [ಜಾಜಿ (<ಜಾದಿ) + ಮಲ್ಲಿಗೆ]

**ಜಾಜೀಮು** 'ಜಾಜಮ' ನೋ.

**ಜಾಜು$_1$** 'ಜಾದು$_1$' ನೋ.

**ಜಾಜು$_2$** 'ಜಹಜು' ನೋ.

**ಜಾಜು$_3$** (ನಾ). (?) : ಇವರೀರ್ವರಲ್ಲಿ ಜಾಜು[ಪಾಠಾಂ. ಜೂಜು]ಇಟ್ಟು ಚಲಿಸುತ್ತದೆ (ಸಿದ್ಧವ. ೭೩೮). [ ? ]

**ಜಾಜುಗಾರನಹಂಬು** (ನಾ). ಒಂದು ಬಗೆಯ ಬಳ್ಳಿ: (ಮೈಜಿಗಿ. ೫೦-೯೯೮). [ ? ]

**ಜಾಜುವೆಟ್ಟ** (ನಾ). ಕಾವಿಕಲ್ಲುಗಳಿಂದ ತುಂಬಿದ ಬೆಟ್ಟ; ಗೈರಿಕ ಧಾತುವಿನಿಂದ ಕೂಡಿರುವ ಪರ್ವತ: ಕಡು ನಿಡಿಯುವಹ ಜಾಜುವೆಟ್ಟದಡಿವಡೆದು ನಡೆತಂದವೋಯೆನೆ . . . ಅಡಿಯಿಡುವ ಚಾಣೂರಮುಖ್ಯರು (ಸಾಳ್ವಭಾ. ೨೨-೫೬). [ ಜಾಜು$_1$ (<ಜಾದು$_1$) + ಬೆಟ್ಟ (<ಬೆಟ್ಟು$_2$) ]

**ಜಾಜೂಮ** 'ಜಾಜಮ' ನೋ.

**ಜಾಜೂಮು** 'ಜಾಜಮ' ನೋ.

**ಜಾಜ್ವಲ್ಯಮಾನ** (ಗುಂ). ೧. ಉರಿಯುತ್ತಿರುವ. ೨. ಹೆಚ್ಚು ಪ್ರಕಾಶಿಸುವ; ಅತಿಶಯವಾಗಿ ಹೊಳೆಯುವ: ಜಾಜ್ವಲ್ಯಮಾನಮಣಿ ಮಕುಟಾಂಶೂಜ್ಜ್ವಳಿತೇಚರೇಂದ್ರ ಪರಿಷದ್ವಳಯಂ (ಶಾಂತಿಪು. ೫-೧೫೦); ಆಲಯದೊಳಗೆ ಸೂರ್ಯದೇವನ ಮುಂದಿದ್ದ ಅಖಂಡದೀಪ ಜಾಜ್ವಲ್ಯಮಾನವಾಗಿ ಉರಿಯುತ್ತಿತ್ತು (ಶಾಂತಲಾ. ೨೭೬). [ ಸಂ. ]

**ಜಾಟ** (ನಾ). = ಜಾಟಕ ೧. 'ಜಾಟಗಾತಿ' ಪರಾ. [ <ಸಂ. ಚಾಟ ]

**ಜಾಟಕಾತಿ** 'ಜಾಟಗಾತಿ' ನೋ.

**ಜಾಟಗಾತಿ, ಜಾಟಕಾತಿ, ಜಾಟಿಗಾತಿ** (ನಾ). ಮಾಯಾವಿನಿ; ಮೋಸಗಾತಿ: ನಾನು ಎಂತಾ ಜಾಟಗಾತಿಯೆಂಬುದ ಅರಿಯಲಿ (ಕರಿಕ. ೫೬-೮). **ಜಾಟಕಾತಿ:** ಎಂತ ಜಾಟಕಾತಿಯೆನಗೆ ಸರಿಯಾದವರಾರು ಪಂಥ ದಕ್ಕಿತೆಂದು ಪಾಡುತಲೀ (ಕರಿಕ. ೬೨-೨). **ಜಾಟಿಗಾತಿ:** ಜಾಟಿಗಾತಿಯರಿರವಿಗೆಳ ನಗೆಯಾಟದಿಂ ಬರುವಾಗಲೊಂದೆಡೆ ಕೂಟಿಗರು ಯೆಸದಿರ್ದರು (ಜಿನಭಾ. ೮೦-೫೦). [ ಜಾಟ + - ಕಾತಿ$_5$ ]

**ಜಾಟಲಿ** (ನಾ). ಒಂದು ಬಗೆಯ ಸಸ್ಯ; ಗೋಲೀಢ. [ <ಸಂ. ಝಾಟಲ ]

**ಜಾಟಿಗಾತಿ** 'ಜಾಟಗಾತಿ' ನೋ.

**ಜಾಟೇಲಿ** 'ಜಾಚೇಲು' ನೋ.

**ಜಾಠರ** (ನಾ). ಹೊಟ್ಟೆ; ಉದರ: ಸಮವರ್ತಿಗಳು ಜಗದೊಳಿಬ್ಬರೇ ದಿಟವರಿಯೆ ಯಮರಾಜನೊಬ್ಬ ಜಾಠರರಾಜನೊಬ್ಬ (ಮಂಕುಕ. ೨೪೩). [ ಸಂ. ]

**ಜಾಠರಾನಲ** (ನಾ). ಆಹಾರ ಪಚನಕ್ಕೆ ಕಾರಣವಾದ ಅಗ್ನಿವಿಶೇಷ; ಜಠರಾಗ್ನಿ: ಬಳಿಕೆಂತು ಜೀವಿಸುವೆನೀ ಘೋರ ಜಾಠರಾನಲಬಾಧೆಗೆ(ಕಿರೀಟೀ. ೬-೩೩). 'ಜಠರಾಗ್ನಿ' ಪರಾ. [ ಜಾಠರ + ಅನಲ ]

**ಜಾಡ$_1$** 'ಜೇಡ' ನೋ.

**ಜಾಡ$_2$** 'ಝಾಡ' ನೋ.

**ಜಾಡ$_3$** (ನಾ). ಒಂದು ಬಗೆಯ ಕುದುರೆ: "ತುರಗವರ್ಣಂ . . . ಎಡನಾಗೆ ಜಾಡಂ" (ಮಂಗರಾ. ೮೧-೦೪). [ ? ]

**ಜಾಡಗಿತ್ತಿ** (ನಾ). ನೇಕಾರರ ಹೆಂಗಸು: ಜಾಡಗಿತ್ತಿಯು ಗಂಡನಾದರೂ ನೆಯ್ದಲ್ಲದೆ ಬಟ್ಟೆಯಾಗದು (ಗಾದೆ). [ ಜಾಡ$_1$ (<ಜೇಡ) + - ಗಿತ್ತಿ ]

**ಜಾಡಗೊತ್ತಳಿ** (ನಾ). ನೇಕಾರರ ಸಂಘ,-ಸಮೂಹ; ನೇಯ್ಗೆಯವರ ಸಂಘ: ಪ್ರಿಯಪುತ್ರರುಮಪ್ಪ ಸಕಲ ಜಾಡಗೊತ್ತಳಿಗಳ ಕುಲದೇವ ದೇವನಪ್ಪ ಗೊಜ್ಜೇಶ್ವರ ದೇವರ ಪೂಜೆ (ದೇದಾಪ್ರ. ೭). [ ಜಾಡ$_1$ (<ಜೇಡ) + ಕೊತ್ತಳಿ (<ಕೊತ್ತಟಿ) ]

**ಜಾಡಜ** (ನಾ). ತಾವರೆಗಳ ಸಮೂಹ. 'ಜಾಡಜಪ್ರಿಯಂ' ಪರಾ. [ ಸಂ. ]

**ಜಾಡಜಪ್ರಿಯ** (ನಾ). ಕಮಲಗಳಿಗೆ ಪ್ರಿಯನಾದವನು; ಸೂರ್ಯ: ಕೂಡೆ ನದಿಯೊಳ್ ಮಿಂದು ಕುಳ್ಳಿರ್ದು ತತ್ತಟದಿ ಜಾಡಜಪ್ರಿಯಗರ್ಘ್ಯಮನಿತ್ತು ಧ್ಯಾನಿಸುತಿರಲ್ (ವೆಂಕಾರಾ. ೧-೨-೩೮). [ ಜಾಡಜ + ಪ್ರಿಯ ]

**ಜಾಡಣಿ** 'ಝಾಡಣಿ' ನೋ.

**ಜಾಡಣಿಹೊಡೆ** (ಕ್ರಿ). ಬಲವಾಗಿ ಜಾಡಿಸಿ ಕೊಡಹು,-ಜಗ್ಗು: ಕಡಿವಾಣವನ್ನು ಜಗ್ಗಿ ಜಗ್ಗಿ ಜಾಡಣಿ ಹೊಡೆದನು (ಮಾಧವ. I, ೩೦೨). [ ಜಾಡಣಿ (<ಝಾಡಣಿ) + ಹೊಡೆ$_1$ (<ಪೊಡೆ$_1$) ]

**ಜಾಡಣೆ** 'ಝಾಡಣೆ' ನೋ.

**ಜಾಡಬಲೆ** (ನಾ). ಜೇಡರಹುಳು ಕಟ್ಟುವ ಬಲೆ: ಜಾಡಬಲೆಯಲ್ಲಿ ಸಿಕ್ಕು ಸುಖಪಡುವ ಕಾಮಿಯಂತೆ (ವೃದ್ಧರಾ. ೧೦ ಮುನ್ನುಡಿ). [ ಜಾಡ$_1$ (<ಜೇಡ) + ಬಲೆ$_1$ ]

**ಜಾಡಬುಡ, ಜಾಡಬೂಡ, ಜೇಡಬುಡ** (ನಾ). ೧. ಜೇಡರಹುಳು: ಅದರ ಹತ್ತಿರ ಯಾವ ನೊಣಾನೂ ಹಾರೋಹಾಂಗಿಲ್ಲ, ಬ್ಯಾರೆ ಜಾಡಬುಡಾ ಸಹಿತ ಬರೋಹಾಂಗಿಲ್ಲ (ಹೊಸಂಸಾ. ೧೬೭). **ಜಾಡಬೂಡ:** ೨. ಜೇಡರ ಹುಳುವಿನ ಬಲೆ: ಜಾಡಬೂಡವನ್ನು ಬಡಿಯಲು ಒಂದು ಗಳಕ್ಕೆ ಕಟ್ಟಿದ ಕಸಬರಿಗೆಯಂತಿತ್ತು (ಬಾಬಲ. ೬). **ಜೇಡಬುಡ:** ೧. ಕತೆಗೆ ಜೇಡಬುಡದ ಬಲೆಯ ಆಕಾರ ವಿಕಾರವನ್ನುಂಟುಮಾಡುವುದು (ಸಾಹಿವಿ. ೧೦೯); [ ←ಮರಾ. ಜಾಡಬುಡೀ ]

**ಜಾಡಬೂಡ** 'ಜಾಡಬುಡ' ನೋ.

**ಜಾಡಮಾಲಿ** 'ಝಾಡಮಾಲಿ' ನೋ.

**ಜಾಡಿ$_1$** 'ಝಾಡಿ$_1$' ನೋ.

**ಜಾಡಿ$_2$, ಝಾಡಿ$_2$** (ನಾ). (ತುಪ್ಪ, ಉಪ್ಪಿನಕಾಯಿ ಮುಂತಾದುವನ್ನು ಹಾಕಿಡುವ) ಪಿಂಗಾಣಿ ಪಾತ್ರೆ; ಗಾಜಿನ ಅಥವಾ ಮಣ್ಣಿನ ಪಾತ್ರೆ: "(ಮಣ್ಣಿನ, ಗಾಜುಮ್ಮೆಯ, ಗಾಜಿನ, ಸಾ., ಉರುಳೆಯಾಕಾರದ) ಪಾತ್ರೆ (ಹಿಡಿಯುಳ್ಳದ್ದು ಅಥವಾ ಇಲ್ಲದ್ದು): ಜಾಡಿ" (Jar. ಇಂಕನಿ). **ಝಾಡಿ$_2$:** ಜಂಪಾಶೆಟ್ಟಿ ರಝಾಡಿ ತಾರೋ ಅಂದರೆ ಜಲಪ್ರಮಾಣವೆಷ್ಟು ಅಂದಹಾಗೆ (ಗಾದೆ). [ ←ಅರ. ಜಾರಹ್. / ತಮಿ. ಚಾಟಿ ; ಮಲ. ಚಾಡಿ; ತುಳು. ಜಾಡಿ ]

**ಜಾಡಿ$_3$** ಝಾಡೆ ನೋ.

**ಜಾಡಿ$_4$, ಝಾಡಿ$_4$** (ನಾ). ದಪ್ಪವಾದ ಕಂಬಳಿ: ಕಾವಿ ಕಷಾಯಾಂಬರವು ಕಂತೆ ಜಾಡಿಯುಬೊದಡೆ ತೀವಿ ಮೈಯೊಳು ಭಸಿತ ದೇವಗಣ ನಡೆಯೆ (ಶರಲೀ. ೧೬೮-೫); ಜಗಲಿಯ ಮೇಲೆ ನೆಲ್ಲಹಳ್ಳಿ ಪೆದ್ದೇಗೌಡರು ಬಲವಾಗಿ ಜಾಡಿ ಹೊದೆದುಕೊಂಡು ಮಲಗಿದ್ದರು (ಕಾನೂರು. ೩೩೪); ರಾಧೆಯು ಒಂದು ಜಾಡಿಯನ್ನು ಹಾಸಿ ಕೆಲಹೊತ್ತು ಅದರ ಮೇಲೆ ವಿಶ್ರಮಿಸಲು ಬಿನ್ನೈಯಿಸಿಕೊಂಡಳು (ಹೇಮಂತ. ೧೦೯). **ಝಾಡಿ$_4$:** ೧. ಇಲ್ಲಿ ದೊಡ್ಡ ರಝಾಡಿಯಿದೆ (ಜನನಾ. ೧೩೦). ೨. ಒರಟಾದ ದಪ್ಪಬಟ್ಟೆ: ಈ ಅರಣ್ಯವಾಸಿಗಳು ವನಸ್ಪತಿಗಳ ಎಲೆ, ಕಾಯಿ (ಹಣ್ಣು) ತಿಂದು ಬದುಕುತ್ತಾರೆ. ರಝಾಡಿ (ಬಟ್ಟೆ) ಉಡುತ್ತಾರೆ (ಕರ್ನಾಟ. ೨೪೦). **ಜಾಡಿಜಂಬಳಿ, ಜಾಡಿಜಂಬೂಳಿ**(ದ್ವಿರುಕ್ತಿ): "ಜಾಡಿ-ಹಾಸುವ ಕಂಬಳಿ (ಜಾಡಿಜಂಬಳಿ)" (ಜಾನಕೋ. ೫೯); ಜಾಡಿ ಜಂಬೂಳಿ ಹಾಸಿ ಬೆಳ್ಳಿ ಹರಿವಾಣ ವಿಟ್ಟು (ಕನ್ನಜಾ. ೩೩೪). **ಜಾಡಿಯವರು** = ಕಂಬಳಿ ನೇಯುವವರು: ಕುರು(ಂ)ಬರಲ್ಲಿ ಜಾಡಿಯವರುಂಟು; ಇವರು ನೇಯುವುದು ಕಂಬಳಿ (ಕರ್ನಾಪೂ. ೨೦). [ ? ]

**ಜಾಡಿ$_5$** (ಗುಂ). (ಕರಾ) ಹಳೆಯ; ಮುದಿಯಾದ: ಆ ಜಾಡಿ ತೆಂಗಿನ ಮರಕ್ಕೆ ಯಾರೂ ಹತ್ತುವುದಿಲ್ಲ (ರೂಢಿ). [ ? ]

**ಜಾಡಿಕರೆ** (ನಾ). ಕಂಬಳಿಯ ಕರೆ; ಕಂಬಳಿಯ ತುದಿಯಲ್ಲಿ ನೇಯದೆ ಬಿಟ್ಟ ಭಾಗ: ಆಕೆ ಕಷ್ಟದಿಂದ ಜಡೆ ಹೆಣೆದು, ಜಾಡಿಕರೆಯ ಟೇಪು ಕಟ್ಟಿದಳು (ನನ್ನೂರು. ೨೮೮). [ ಜಾಡಿ$_4$ + ಕರೆ$_4$ ]

**ಜಾಡಿಕಾರ** (ಗುಂ). ಆಕರ್ಷಿಸುವ; ಸೆಳೆಯುವ (?): ಅಂತು ಮೆಚಿದು ಕರಣಜಾಳ ಜಾ [ಪಾಠಾಂ. ಝಾ ]ಡಿಕಾರ ಶೈಶವ ಪ್ರಾಪ್ಯಪೇಣ್ಮೋಸರಿಸಲೊಡಂ (ಅನಂಪು. ೬-೯ ವ). [ ? ]

**ಜಾಡಿಕೆ** (ನಾ). (ಉಕ) ೧. ನೆಯ್ಗೆಯವನ ಉದ್ಯೋಗ,-ವೃತ್ತಿ. ೨. ನೆಯ್ಗೆಯವರ ಗುಂಪು,-ಸಮಾಜ. [ ಜಾಡ$_1$ (<ಜೇಡ) + - ಇಕೆ ]

**ಜಾಡಿಗೆದಱು** 'ಝಾಡಿಗೆದಱು$_1$' ನೋ.

**ಜಾಡಿಬೀಡಿ** (ನಾ). ಹೊಗೆಬತ್ತಿಯಲ್ಲಿ ಒಂದು ಬಗೆ; ದಪ್ಪವಾದ ಬೀಡಿ: ಈ ಕಾರಣದಿಂದಲೇ ನಾವು ರಹೀಂ ಜಾಡಿಬೀಡಿಯನ್ನು ಸೇದಬೇಕು (ಕಸಬು. ೨). [ ಜಾಡಿ$_1$ (<ಝಾಡಿ$_1$) + ಬೀಡಿ$_2$ ]

**ಜಾಡಿಸು, ಝಾಡಿಸು** (ಕ್ರಿ). ೧. (ಕಸವನ್ನು) ಗುಡಿಸು,–ಉಡುಗು: ತಾಯಿಯು ಬಂದು ನನ್ನ ಕೋಣೆಯ ಧೂಳು ಜಾಡಿಸಿ ಹೋಗಲಾರಂಭಿಸಿದಳು (ನಾಚಿಕೆ. ೮). ೨. ಕೊಡಹು; ಒದರು: ಮನ್ಮಥಂ ತ್ರಿಜಗಮಂ ಗೆಲ್ವೆಡೆಯೊಳೊದವಿದ ಪಲವು ಕೈದುಗಳನಲ್ಲಿ ಜಾಡಿಸಿ ತೊಳೆದು (ಜೈಮಿಭಾ. ೩೦-೧೪); ಮುಸುಂಕುವ ಕೆಂದೂಳಂ ಬೀಸಿ ಜಾಡಿಸುತಂ (ರಾಮಾಶ್ವ. ೧೦೨-೬); ಹಿಂಗಾಲು ಜಾಡಿಸಿ ಕೊಸರಿಕೊಂಡು ಓಡಿಹೋಯಿತು (ಮುಂಬಯಿ. ೪-೭೯); ಒಂದು ಎಲೆಯ ಮೂಲೆಯನ್ನು ಹಿಡಿದು, ಧೂಳು ಜಾಡಿಸಿ (ದೀಪಹ. II, ೩): ಬಾಲ ಜಾಡಿಸುವಿಕೆಯಿಂದ . . . ಉಳಿದ ದನಗಳೂ ಏಳುವುದುಂಟು (ಬಂಗಾಹೆ. ೫೫). ೩. ದೂರಮಾಡು; ಕಳಚು; ಬಿಸಾಡು: ಎನ್ನ ಸಮಾನ ಮಾಯೆಯ ಜಱಿದು ಜಾಡಿಸುವ ಬಲ್ಲಿದರದಾರುಂಟು (ಪ್ರಭುಲೀ. ೮-೧೪); ಮುಂದಿರ್ದ ಗೋವ ಕೈಯಿಂ ತಡಹಲು ಬೀಳುತಂದು ಜೀವವ ಜಾಡಿಸಿದುದು (ಕಂನವಿ. ೫-೧೭). ೪. ರಭಸಗೊಳ್ಳು; "ಶಕ್ತಿಯನ್ನೆಲ್ಲಾ ಉಪಯೋಗಿಸು" (ಪ್ರಭಣ್ಣ): ಕನಕದೀಪಸ್ತಂಭವನು ತುದಿಮನೆಯ ಜಾಡಿಸಿ ನೋಡಿ ಕಿತ್ತನು ಬಾಲದಂಡದಲಿ (ಮೈರಾಕಾ. ೪-೫೦); ಜಾಡಿಸಿ ಬರುವ ಪೆಟಲ ಗುಂಡುಗಳ ಮೇಲೀಡಿಱಿದರಿವ ಬಾಣಗಳ (ಕಂನವಿ. ೧೪-೨೨). ೫. ನಿಂದಿಸು; ಹೀಯಾಳಿಸು: ನಮ್ಮಯ ಗುರುವನೀಪರಿ ಜಱಿದು ಜಾಡಿಸಿ . . . ನುಡಿಯಲಮ್ಮುವರೆ (ಪ್ರಭುಲೀ. ೦೩-೮): ಈ ವಿಷಯವನ್ನು ಕುರಿತು ತನ್ನ ಭಾಷಣದಲ್ಲಿ ಚೆನ್ನಾಗಿ ಜಾಡಿಸಿಬಿಟ್ಟನು (ರೂಢಿ). ೬. ಚಿಮ್ಮು; ಹೊರಸೂಸು; ವ್ಯಾಪಿಸು: ಜಾಡಿಸುವ ಝಲ್ಲರಿಯ ಮೋಱಿಗೆ ನೀಡಿ ಮರಳುವ ಸೀಗುರಿಯ (ಕುವ್ಯಾಕ. ೪-೨೭); ಕಾಡುಗಿಚ್ಚಿದ್ದು ಕಾದಿಹ ಬೂದಿ ತನಿಗೆಂಡ ಜಾಡಿಪ ಕಿಡಿ ಹೊಗೆಮಸಗಿ ನೀಡುವ ದಳ್ಳುರಿಗಳ ದಾವದಿಂ (ಕಂನವಿ. ೧೮-೪೭). ೭. ಸಿಡಿಸು; ಕೆಡಹು: ಬಳೆಗಾಱ ಬೋಗಾಱ ತಿಲವಿಘಾತಕ ವಾಸಿಗ . . . ಜಂಗುಳಿಗ ಕೇರಿಗಳೊಳಗೆ ಜಾ[ಪಾಠಾಂ. ಝಾ]ಡಿಸಿದನು ಶಿಖಾಳಿಗಳ(ತೊರರಾ. ೫-೮-೫೩). ೮. ಭೇದಿಯಾಗು; ವಿರೇಚನವಾಗು: ಕಾಲರಾ ಬಂದಂತೆ ಹೊಟ್ಟೆ ಜಾಡಿಸಿ ವಾಂತಿಯಾಗಿ (ಗ್ರಾಮಾಯ. ೧೫೮): ಒಂದು ಸಲ ಜಾಡಿಸಿಹೋಯಿತು, ಆಮೇಲೆ ಹೊಟ್ಟೆ ಹಗುರವಾಯಿತು(ರೂಢಿ). ೯. (ಮಳೆಯ ವಿಷಯದಲ್ಲಿ) ರಭಸದಿಂದ ಬೀಳು; ಸುರಿ: ಮಳೆಗಿಳೆ ಏನಾದರೂ ಜಾಡಿಸುತ್ತದೋ ಏನೋ (ಹೊಸಕ್ಕ. ೧೦೬). ೧೦. ಏಟುಕೊಡು; ಹೊಡೆ; ಬಾರಿಸು: ಜಯಂತನ ಜಡೆಯಂ ಪಿಡಿದು ಜಾಡಿಸಿರಿ (ಸೌಗಂಧಿ. ೫೦೪-೧೦); ಜಾಡಿಸುವನಾಗೆ ಜಾಡಿಸಿದೊಡೂಣೆಯುವೇನು(ಹಬ್ಬರ. ೪-೧೪). **ಝಾಡಿಸು:** ೨. ಪಕ್ಕ ದ್ವಂದ್ವಂಗಳಂ ಝಾಡಿಸಿ . . . ಕೂಗಿತಾ ತಾಮ್ರಚೂಡಂ (ಸೂಕ್ತಿಸು. ೯-೩೦): ಬ್ಯಾರಿಗಳು ಕಾಲನ್ನೊಮ್ಮೆ ಝಾಡಿಸಿ ಆ ಉರುಳಿನ ಕಡೆಗೆ ಉಪೇಕ್ಷೆಯಿಂದ ನೋಡಿ (ಮುಂಗಾಮು. ೫). ೫. ರಾಯನಹಿತರ ಜಱಿದು ಝಾಡಿಸಿ ಬೀದಿವರಿವನು ರಾಯದಳದೊಳಗೆ (ಕುವ್ಯಾಗ. ೪-೩). ೬. ಮಂಗಳದ ರಿಂಗಣ ಝಾಡಿಸಿತು ವೈವಾಹ ಮಂಟಪವ (ಕುವ್ಯಾಆ. ೧೨-೧೫). ೮. ಮುಂಜಾನೆಯಿಂದ ಝಾಡಿಸತದ, ನಾಳೆ ಡಾಕ್ಟರಿಗೆ ತೋರಿಸಬೇಕು (ರಕ್ತಧ್ವ. ೬೦). ೧೦. ಜಱಿವ ಕಹಳೆಯ ಝಾಡಿಸುವ ಜರ್ಝರದ ಡಿಂಡಿಮ ಡಮರು ಪಟಹದ (ಕುವ್ಯಾಕ. ೧೦-೮); ಬಾರಕೋಲಿನಿಂದ ಎತ್ತುಗಳಿಗೆ ಝಾಡಿಸಿದನು (ಜಾಬಲ. ೩೫). ೧೧. ನಿರ್ದಾಕ್ಷಿಣ್ಯದಿಂದ ವರ್ತಿಸು; ದಬಾಯಿಸು: ನೀವು ಪಾಲಿಟಿಕ್ಸ್ ಮೇಲೆ ಏನಾದರೂ ಝಾಡಿಸಿ ಬರೆದರೆ ಒಳ್ಳೆಯದು (ಕಮಕ. ೧೩೭).

ಜಾಡಿಸಿಕೊಳ್ಳು=೧. ಬಾರಿಸು: ಡವುಡೆ ಜೇಗಟೆ ಮಲಹರಿಯ ಜಾಡಿಸಿಕೊಂಬ ಪ್ರವುಡೆಯರಿರ್ದರಿಕ್ಕೆಲದಿ (ಪೋಹತ. ೨೦-೩೯). ೨. ಒರಸಿಕೊಳ್ಳು: ಮೈಮೇಲೆ ಚೆಲ್ಲಿದ್ದ ಕುರುಳನ್ನೆಲ್ಲಾ ಪಿಂಛದಿಂದ ಮೃದುವಾಗಿ ಜಾಡಿಸಿಕೊಂಡರು (ದಾನಚಿಂ. ೧). [ ← ತೆಲು. ಜಾಡಿಂಚು ]

**ಜಾಡು, ಜಾಡೆ$_1$, ಜೇಡು** (ನಾ). ೧. ನಡೆದು ನಡೆದು ಸವೆದ ದಾರಿ; ಹಾದಿ: ಆ ಜಾಡು ಬಹಳ ಸವೆದು ಹೋಗಿರುವುದರಿಂದ ಅಲ್ಲಿ ಆಗಾಗ್ಗೆ ಗಾಡಿಗಳು ಬೀಳುತ್ತಲೇ ಇರುತ್ತವೆ (ನಮ್ಮೂರ. ೧೩೦); ರಥವು ಬಂದ ಮಾರ್ಗವನ್ನು ನಿರೀಕ್ಷಿಸಲು ದಾರಿಯ ಜಾಡೂ ಕಾಣಬರಲಿಲ್ಲ(ಶ್ರೀರಾಪ. ೧೬); ಆಗಾಗ್ಗೆ ನೆಕ್ಕಲ್ದೋವನ ಬಂಡಿ ಸವೆದ ಜಾಡಿನಿಂದ ಹೊರಗೆ ಬರಬೇಕಾಗುತ್ತಿತ್ತು (ಪುನರು. ೫೫೬). ೨. ಸುಳಿವು; ಗುರುತು: ಕಳ್ಳರುಂ ಕಂಡು ಜಾಡ ತೋರ್ದಪನೆನುತಲಿ ಕರೆದೊಯ್ದು (ಗುರುಚಾ. ೮-೬೪); ಬೇಡ ನೀನೀ ಪೆಂಗಳಿರುತಿಹ ಜಾಡ ಕಂಡೈದುವರೆ ನಡೆನಡೆ (ಅರ್ಜಾವಿ. ೦೬-೩೮); ಮೃಗಗಳ ಜಾಡನು ತಿಳಿಯುತ ನೀಡುತ ಕೈಗಳ (ಹಮಚ. ೧೬). ೩. ರೀತಿ; ಕ್ರಮ; ಸಂಪ್ರದಾಯ: ನಮ್ಮ ಸಾಹಿತ್ಯ ವಿಮರ್ಶೆಯೂ ಇಂಗ್ಲಿಷಿನ ಜಾಡನ್ನೇ ಬಲುಮಟ್ಟಿಗೆ ಹಿಡಿಯುತ್ತಿದೆ (ಸಮಾಲೋ. ೧೧೧). ೪. (ಹಳ್ಳವಾದ) ಗೀರು,–ಗೆರೆ: ಕೆಳತುಟಿಯ ಜಾಡಿ (Groove)ನಲ್ಲಿರುವ ನಾಲ್ಕು ಗಟ್ಟಿ, ಚೂಪು ಬಾಕುಗಳು ಅಥವಾ ಸೂಜಿಗಳು . . . ರಸವನ್ನು ಎಳೆಯುತ್ತವೆ (ಕೀಟಜೆ. ೭೬). **ಜಾಡೆ$_1$:** ೧. ದೇವಯಾನಿಯು ನಡೆದ ಮಾರ್ಗದ ಜಾಡೆಯನ್ನು ಹಿಡಿದುಹೋಗಿ (ಕೃವಾಆ. ೦೨೦). ೨. ಉಚ್ಚೈಶ್ರವಸ್ಸುವಲ್ಲಿರುವ ಜಾಡೆಯರಿತೊಯ್ಯಲೋಸುಗ ಬಂದು ಯಿಹೆರು (ಸೌಗಂಧಿ. ೧೦-೯೯). ೩. ಅವರೂ ಅವರ ಜಾಡೆಯನ್ನು ಹಿಡಿಯುವರು (ಭೀಷ್ಮಜ. ೧೨೫). **ಜೇಡು:** ೧. ನೇಱಿಲಕೆಱೆಯಿಂ ಸೇತು ಬಡಗ ಕಗ್ಗಲ್ಲ ಜೇಡು ವಿಡಿದ ಹಿರದು ಹಾಳಕೊಕ್ಕರಣೆ ವಿಡಿದು (ಎಕ. XII, ತುಮಕೂ. ೩೮-೪೮; ಸು. 1160). [ ದೇ.॥ ತಮಿ. ಚಾಟ್ಟೈ; ಮಲ. ಚಾಡ, ಚಾಡೆ; ತೆಲು. ಜಾಡ ]

**ಜಾಡುಹಿಡಿ** (ಕ್ರಿ). ೧. ದಾರಿಯನ್ನು ಹಿಡಿ. ೨. ಸುಳಿವನ್ನು ತಿಳಿ; ಸುಳಿವು ಹಿಡಿ: ಕಡುಜಾಣನಾದ ಪವನಜನು, ಆ ಸೂಚನೆಯ ಜಾಡು ಹಿಡಿದು ಸರಿಯಾಗಿ ಅರಿತುಕೊಂಡನು (ಭಾಮುಚ. ೭೯). ೩. ಸಂಪ್ರದಾಯವನ್ನು ಅವಲಂಬಿಸು. [ ಜಾಡು + ಹಿಡಿ$_1$ (<ಪಿಡಿ$_1$) ]

**ಜಾಡೆ$_1$** 'ಜಾಡು' ನೋ.

**ಜಾಡೆ$_2$** 'ಝಾಡೆ' ನೋ.

**ಜಾಡ್ಯ** (ನಾ). ೧. ಚಳಿ; ಕುಳಿರು; ಶೈತ್ಯ. ೨. ನಿರುತ್ಸಾಹ; ಔದಾಸೀನ್ಯ: ಇಂದಿನೀ ಸಂಗ್ರಾಮಜಯದಲಿ ಬಂದ ಜಾಡ್ಯವಿದೇನು (ಕುವ್ಯಾಗ. ೪-೪೯); ಸೂರ್ಯಾತಪವೆ ಚಂದ್ರಿಕಾರೂಪದಿಂ ಪರಿಣಮಿಸಿ ಲೋಕದ ಜಾಡ್ಯಸಂತಾಪಂಗಳಂ ಪರಿಹರಿಸುವಂತೆ (ಸೌಗಂಧಿ. ೭೧೫-೨೦); ಮಧುವಿನೊಲುಮೆ ಗನಸು ಸುಳಿದು ಮರದ ಜಾಡ್ಯವನ್ನು ತಿವಿದು (ಮಾಂದಳೆ. ೩೪-೨೦). ೩. ಅನಾರೋಗ್ಯ; ಬೇನೆ; ಜಡ್ಡು: ಒಂದು ಹೊಟ್ಟೆಯನೋವು ಮತ್ತೊಂದು ತಲೆನೋವು ಜಾಡ್ಯಗಳೆರಡನು ಹೀಗೆ ಕರೆದಾಗ ಬರುವಂತೆ ಕೊಟ್ಟಿದೆ ದೈವವು (ಇಂಚಾಪ. ೧೮೧-೯೫): ಇದೇನು ಜಾಡ್ಯ ಬಂತಪ್ಪ (ಮುನಿಮಾ. ೬೦). ೪. ದಡ್ಡತನ. 'ಜಾಡ್ಯಬುದ್ಧಿ' ಪರಾ. [ ಸಂ. ]

**ಜಾಡ್ಯತನ** (ನಾ). ಆಲಸ್ಯ; ಜಡತೆ: ಸಕಳವ್ಯಾಪಕನಾಗಿ ಜಾಡ್ಯತನೆಮಂ ಬಿಟ್ಟಿರ್ದ ಪದ್ಮಾಸನಂ (ಎಇ. XVIII, ೨೦೪-೨೦; 1162); ಜಪದ ಜಿಹ್ವೆಗೆ ಜಾಡ್ಯತನ[ಪಾಠಾಂ. ಗುಣ]ವಾಯ್ತು (ತೊರರಾ. ೩-೯-೨೬).

[ ಜಾಡ್ಯ + – ತನ ]

**ಜಾಡ್ಯತೆ** (ನಾ).=ಜಾಡ್ಯತನ: ಅತಿ ಬಿಸಿಲು ಗಾಳಿ ಕಲುಮುಳು ಕ್ಷುತ್ಪಿಪಾಸೆ ಜಾಡ್ಯತೆಗಳೆಂಬಂತಿವಱ ಕಾಟದಿಂ ಮೊಳೆವ ಧಾವತಿಯನಱಿಯದೆ (ಹಚಕಾ. ೯-೩೦). [ ಸಂ. ಜಾಡ್ಯತಾ ]

**ಜಾಡ್ಯಬುದ್ಧಿ** (ನಾ). ೧. ದಡ್ಡತನದಿಂದ ಕೂಡಿದ ಬುದ್ಧಿ ; ಮಂದ ಬುದ್ಧಿ. ೨. ದಡ್ಡ ; ಅವಿವೇಕಿ : ಅದನಾಕರ್ಣಿಸಿ ಜಾಡ್ಯಬುದ್ಧಿ ತೊಲಗೆಂದೇಳ್ತಂದಂ (ರಾಜಶೇ. ೧-೭೫). [ ಜಾಡ್ಯ + ಬುದ್ಧಿ ]

**ಜಾಣ್**, ಜಾಣು (ನಾ). ಜಾಣತನ ; ಚಾತುರ್ಯ ; ನಿಪುಣತೆ ; ಬುದ್ಧಿವಂತಿಕೆ: ಪೂರ್ವಕಾವ್ಯರಚನೆಗಳಂ ತಾಂ ಮೊದಲೊಳ್ ಕಲ್ತಂಗಲ್ಲದೆ ಪದದೊಳ್ ಜಾಣುಂ ಬೆಡಂಗುಮಕ್ಕುಮೆ ಕೃತಿಯೊಳ್ (ಕವಿರಾ. ೧-೯) ; ಎನ್ನೀ ಕಬ್ಬದೊಳೆಂದುಂ ಸನ್ನಿದಮಾಗಿರ್ಕೆ ಕಣ್ಣಮಯ್ಯನ ಕಡುಜಾಣ್ (ಕಬ್ಬಿಕಾ.೪); ಜನ್ನನ ಜಾಣ್ ಮಧುರನ ಮಾಧುರ್ಯಂ ರನ್ನನ ರಸಿಕತ್ವಂ ಗುಣವರ್ಮನ ಬಿನ್ನಣಂ (ಜಯಕಾ. ೧-೧೧) ; ಜಾಣಿರ್ಕೆ ಜನದೊಳೆಲ್ಲಂ (ಚಿಕವಿ. ೧-೯೭). **ಜಾಣು:** ಜಾಣಿನ ಬೆಡಂಗು ವಿಬುಧ ಪ್ರೀಣನಕರಮೆನಿಸಿ ನೇರ್ಪು ನೇರ್ಪೊಡೆ ಪೇಳ್ದಂ (ಸುಕುಮಾ. ೧-೩೯) ; ಜಾಣಿನಲಿ ಭೃಗು ಮುಖ್ಯ ಋಷಿಗಳಿಗೆಂದನಾ ಮುನಿಪ (ಕುಮಾ.ಆ. ಓರಿಇ. ೨೫-೫೭). [ <ಪ್ರಾ. ಜಾಣ. / ಸಂ. ಜ್ಞಾನ]

**ಜಾಣ** (ನಾ). ಬುದ್ಧಿವಂತ ; ಕುಶಲ ; ಚತುರ : " ಕೃತಹಸ್ತಂ ಕುಶಲಂ ಶಿಕ್ಷಿತಂ . . . ಜಾಣಂ " (ವಸ್ತುಕೋ. ೯೯-೫) ; ಕುಱಿತವರಲ್ಲದೆ ಮತ್ತಂ ಪೆಱರುಂ ತಂತಮ್ಮ ನುಡಿಯೊಳೆಲ್ಲರ್ ಜಾಣರ್ (ಕವಿರಾ. ೧-೩೯); ಆತನ ನೋಡು ಗರುಡಿಯ ಜಾಣ ದ್ರೋಣನನು (ಕುಮಾ.ಭೀ. ೩-೮) ; ಮಾತಿನಲಿ ಸೋತವನೆ ಜಾಣ (ಸರ್ವಜ್ಞ. ೧೩೪೨) ; ಜಾಣಂ ಬೀಣೆಯನೀ ಕುಮಾರ ಚಿಕದೇವಂ ಬಾಜಿಸುತ್ತಿರ್ಪಿನಂ (ಚಿಕವಿ. ೪-೧೧೧) ; ಜಾಣನಿಗೆ ಮಾತಿನ ಪೆಟ್ಟು ಕತ್ತೆಗೆ ಲತ್ತೇಪೆಟ್ಟು (ಗಾದೆ). [ ಜಾಣ್ + – ಅ$_{7}$ ]

**ಜಾಣಗ** (ನಾ). = ಜಾಣ. 'ಜಾಣಗಿತಿ' ಪರಾ.
[ <ಪ್ರಾ. ಜಾಣಗ. / ಸಂ. ಜ್ಞಾಯಕ ]

**ಜಾಣಗಾತಿ** (ನಾ). ಬುದ್ಧಿವಂತೆ; ಜಾಣೆ : ಅತ್ಯಂತ ಜಾಣಗಾತಿಯರು ಸೊಲ್ಲಿಸುವ ಸಾಹಿತ್ಯ ಪಾಠಕ ಪ್ರಮದೆಯರು . . . ಬಂತು ಮತ್ತೇಭಗಮನೆಯಿರ್ದೆಡೆಗೆ (ಮೋಹತ. ೨೭-೧೦). [ ಜಾಣ + – ಕಾತಿ$_{5}$ ]

**ಜಾಣಗಿತಿ** (ನಾ). = ಜಾಣಗಾತಿ : ಜಾಣಗಿತಿ, ಬಳೆಗಾರಿತಿ, ಬಾಣಸಿಗಿತಿ (ಭಾಷಾಭೂ. ೧೯೪ ಉದಾ). [ ಜಾಣಗ + – ಇತಿ$_{1}$ (< – ಇತ್ತಿ) ]

**ಜಾಣಗಿವುಡು** (ನಾ). ತನಗೆ ಬೇಡದುದನ್ನು ಕೇಳದವನಂತೆ ಇರುವುದು: ಈಚೀಚೆಗೆ ಈತನಿಗೆ ಜಾಣಗಿವುಡು ಹೆಚ್ಚಾಗಿದೆ (ರೂಢಿ).
[ ಜಾಣ + ಕಿವುಡು (<ಕಿವುಂಡು) ]

**ಜಾಣತನ** 'ಜಾಣ್ಮನ' ನೋ.

**ಜಾಣಪಣ** (ನಾ). = ಜಾಣತನ : ಜಾಣಪಣವಿಡಿದು ಶಿವಸುದರ್ಶನಪಾಣಿಗಳಿಗಹುದು (ಕುಮಾ.ವಿ. ೭-೪೫) ; ತಾಗುವ ಸೀಳುವೇಳುವ ಜಾಣಪಣವಿಬ್ಬರಲಿ ಸರಿಯಾಯ್ತು (ಉತ್ತರಾ. ೧೭-೪೭) ; ಒಡ್ಡವಣೆ, ಚಡ್ಡಣೆ . . . ಅವುಗಳ 'ಣೆ' ಅಂತ್ಯವೂ ವೀರಪಣ, ಜಾಣಪಣ, ವಿಸ್ತಾರಪಣ ಈ ಭಾವನಾಮಗಳಲ್ಲಿಯ 'ಪಣ' ಉಪಪದವೂ ಮರಾಠಿಯ ಕಂಡಿತವಾದ ಪ್ರಭಾವವನ್ನು ತೋರಿಸುತ್ತವೆ (ಕಸಾಜ. ೨೭೦). [ ಜಾಣ + – ಪಣ$_{1}$ ]

**ಜಾಣಪ್ಪು** (ಕ್ರಿ). ಚಾತುರ್ಯವನ್ನು ಹೊಂದು; ಕೌಶಲತೆಯನ್ನು ಪಡೆ: ಪೊಳೆವ ಪಲ್ಗಳನಂದುಱಿ ತೊಗಲೆಂದು ಜಾಣಪ್ಪಿ ವಿರಿಂಚಿ ಮಾಡಿದ ಸುವರ್ಣತುಳಾವರದಂಡಮೆಂಬವೋಲೊಪ್ಪುಮನಾಳ್ದುದಾ ನರಪಕಾಂತೆಯ ಸೌಂದರ ನಾಸಿಕಾಂಕುರಂ (ಬಾಧಪು. ೨-೫೦). [ ಜಾಣ್ + ಅಪ್ಪು$_{1}$ ]

**ಜಾಣವಕ್ಕಿ** 'ಜಾಣ್ವಕ್ಕಿ' ನೋ.

**ಜಾಣವಿಕೆ** 'ಜಾಣಿಕೆ' ನೋ.

**ಜಾಣವೆಣ್**, ಜಾಣವೆಣ್ಣು (ನಾ). ಬುದ್ಧಿವಂತೆ ; ಜಾಣೆ ; ಚತುರೆ : ಮಂಡಲದೊಳಗೀ ನೀಱಿಯಂದದ ಜಾಣವೆಂಡಿರ ಕಾಣೆ ನಿನ್ನಾಣೆ (ಕಂನವಿ. ೧೦-೧೫). **ಜಾಣವೆಣ್ಣು :** ಕಣ್ಣಮನವನಿರ್ಕುಳಿಗೊಳ್ವ ಕಡುಜಾಣವೆಣ್ಣುಗಳಧಿದೇವಿ ಕೇಳು (ಮೋಹತ. ೪-೨). [ ಜಾಣ + ಪೆಣ್ ]

**ಜಾಣವೆಣ್ಣು** 'ಜಾಣವೆಣ್' ನೋ.

**ಜಾಣಸೇಕರ** (ನಾ). ಬುದ್ಧಿವಂತರಲ್ಲಿ ಶ್ರೇಷ್ಠ; ಚತುರರಲ್ಲಿ ಅಗ್ರೇಸರ: ಜಾಣಸೇಕರ ನಿನ್ನೆಡೆಯೊಳಗೆಳ್ಳಿನಿತೂಣೆಯವಿಡಿದ ಕಾರ್ಯಗಳ ಕಾಣಿಸಿಕೊಂಡೆನಾದೊಡೆ ಕೇಳು (ಕಂನವಿ. ೭-೧೭೮). [ ಜಾಣ +ಸೇಕರ ]

**ಜಾಣಾಂಕಿ** 'ಚಾಳಾಂಕಿ' ನೋ.

**ಜಾಣಾಯಿಲ**, ಜಾಣಾಯ್ಲ (ನಾ). = ಜಾಣ: "ಜಾಣಾಯಿಲ [ಪಾಠಾಂ. ಯ್ಲ]ನೆನಲ್ಕೆ ಜಾಣನೆಂದಱಿಗೆ ಬುಧರ್ " (ಧಾರನಿ. ೨೭). **ಜಾಣಾಯ್ಲ:** ಅವರು ಪೂರ್ವರು ಪರಶುರಾಮಪ್ರವರರನು ಮೆಚ್ಚಿಸಿದೆವೀಗಳಿನವರು ಕಡುಜಾಣಾಯ್ಲರೆಂದು ಸುರೇಖರೆಂದಿಹರು (ಕುಮಾ.ಭೀ. ೯-೩೩).
[ ಜಾಣ್ + – ಆಯಿಲ$_{2}$ ]

**ಜಾಣಾಯ್ಲ** 'ಜಾಣಾಯಿಲ' ನೋ.

**ಜಾಣಾಯ್ಲತನ** (ನಾ).=ಜಾಣತನ: ವಿಪ್ರವೇಷದ ಜವನಿಕೆಯ ಜಾಣಾಯ್ಲತನದಿಂದವಗಡಿಸಿ ಹೊಕ್ಕಿರಿಯಪದ್ವಾರದಲಿ ನೃಪಸಭೆಯ(ಕುಮಾ.ಸ. ೨-೭೮).
[ ಜಾಣಾಯ್ಲ (<ಜಾಣಾಯಿಲ) + – ತನ ]

**ಜಾಣಿ$_{1}$** (ನಾ).=ಜಾಣೆ: ಜಾಣಿ ಬಾರೆ ಕಮಲಪಾಣಿ ಬಾರೇ (ತೀರ್ಥಮ. ೧೯): ಇಲ್ಲಿ ಬಾ, ಹೆಜ್ಜೆಗಳ ಕುಣಿಸಿ ತೋರಿಸು, ಜಾಣಿ (ನಲಮು. ೬-೧೯).
[ ಜಾಣ + – ಇ$_{2}$ ]

**ಜಾಣಿ$_{2}$** (ನಾ). (?) : ಇವ ಮೂಱು ಕಾಳಿಕೆಯ ಕಳೆದು ಈ ಹನ್ನೆರಡ ಜಾಣಿಯಲ್ಲಿ ದಾಂಟಿ ಒಂದಱ ಮೇಲೆ ನಿಂದು ಅಂದವಳಿಯದೆ (ವಚಸಂ. ೫೨೩-೧೨೦). [ ? ]

**ಜಾಣಿಕೆ**, ಜಾಣವಿಕೆ (ನಾ). = ಜಾಣ್ : ಇಂತಿದು ಲಿಂಗಜಂಗಮದ ಜಾಣಿಕೆ [ಪಾಠಾಂ. ಜಾಣ್ಮೆ] ಕಾಣಿರೆ (ಚನ್ನವ. ಕ. ೨೦೪-೪೫೪); ಆಂ ಕೀರ್ತಿವರ್ಮನೆಲ್ಲಾ ವೀಣೆಗಳೊಳು ಜಾಣಿಕೆಯುಂಟು (ಪುಣ್ಯಾಸ್ರ. ೭-೬೭. ವ); **ಜಾಣವಿಕೆ:** ಜಾಣವಿಕೆ ಲೇಸಾದುದೇನೆನ್ನಬೇಕಿದಕೆ ಪ್ರಾಣೇಶನುಂ ಮುಳಿದರಾರಿನ್ನು ಕಾವವರು (ಪರಶು. ೧೭-೧೩). [ ಜಾಣ್ + – ಇಕೆ ]

**ಜಾಣಿಮೆ** 'ಜಾಣ್ಮೆ' ನೋ.

**ಜಾಣಿಲಿ** (ಗು). ಬುದ್ಧಿಯಿಲ್ಲದ. 'ಜಾಣಿಲಿವೆಣ್' ಪರಾ.
[ ಜಾಣ್ + – ಇಲಿ$_{3}$ ]

**ಜಾಣಿಲಿವೆಣ್** (ನಾ). ದಡ್ಡ ಹೆಂಗಸು ; ಕೌಶಲ್ಯವಿಲ್ಲದ ಹೆಣ್ಣು : ನಿನ್ನೀ ಕಬ್ಬದ ಸೊಗಸನೆಮ್ಮನ್ನರಪ್ಪ ಜಾಣಿಲಿವೆಣ್ಗಳೆ ಕೊಂಡಾಡುವರಲ್ಲದೆ ಬಲ್ಲರೇ ನೊಲ್ವರೆ (ರಾಮಾಶ್ವ. ೧೧೮-೨೫). [ ಜಾಣಿಲಿ + ಪೆಣ್ ]

**ಜಾಣಿಸು** (ಕ್ರಿ). ತಿಳಿ ; ಅರ್ಥವಾಗು; ಗ್ರಹಿಸು (?) : ಕಳವಳಿಸಿ ತನ್ನರ್ಥ ಜಾಣಿಸದೆಂದು ದುಗುಡದಲಿ (ಸಂಭಪ. ೧೦-೨೩). [ ಜಾಣ್ + – ಇಸು$_{3}$ ]

**ಜಾಣು** 'ಜಾಣ್' ನೋ.

**ಜಾಣುಮೆ** 'ಜಾಣ್ಮೆ' ನೋ.

**ಜಾಣುವೆ** 'ಜಾಣ್ಮೆ' ನೋ.

**ಜಾಣೆ** (ನಾ). ಬುದ್ಧಿವಂತೆ ; ಚತುರೆ ; ನಿಪುಣೆ: ಜಾಣೆಯಲ್ಲದ ಸ್ತ್ರೀಯಿಲ್ಲ ಹುಸಿಯದ ವ್ಯವಹಾರಿಯಿಲ್ಲ (ಪಂಚತಂ. ೯೫-೩) : ತೂಗಿ ನಲಿದರ್ ಶರ್ವಾಣಿಯುಂ ಜಾಣೆಯರ್ (ಗಿರಿಕ. ೩-೬೯); ಜನರಿವಳನು ಪೋಲ್ವ ಜಾಣೆ ಜಗದೊಳಿಲ್ಲೆನೆ ಚಾತುರ್ಯವಡೆವಳು (ಹದಿಬ. ೧-೫೪) ; ಕೆಟ್ಟ ಅಡಿಗೆ ಅಟ್ಟೋಳೆ ಜಾಣೆ (ಗಾದೆ). [ ಜಾಣ + – ಎ$_{2}$ ]

**ಜಾಣೆವೆಣ್ಣು** (ನಾ).=ಜಾಣೆ: ಜಾಣೆವೆಣ್ಣುಗಳರಸಿ ನೀ ಕೇಳು ಸರೋಜಾಂಬಕನ ಸತ್ಕೃತಿಯ (ಮೋಹತ. ೩೭-೨). [ ಜಾಣೆ + ಪೆಣ್ಣು (<ಪೆಣ್) ]

**ಜಾಣೊಡೆಯ** (ನಾ). ಜಾಣತನ ಉಳ್ಳವನು ; ಬುದ್ಧಿವಂತ : ಒಡೆಯ ಪ್ರತ್ಯಯಕ್ಕೆ – ಪೆರ್ಮೆಯೊಡೆಯಂ . . . ಜಾಣೊಡೆಯಂ (ಶಮದ. ೨೦೭ ಪ್ರಯೋ). [ ಜಾಣ್ + – ಒಡೆಯ$_{2}$ ]

**ಜಾಣ್ಕೆಡು** 'ಜಾಣ್ಗೆಡು' ನೋ.

**ಜಾಣ್ಗೆಡು** 'ಜಾಣ್ಗೆಡಂ' ನೋ.

**ಜಾಣ್ಗೂಡು** (ಕ್ರಿ). ಚತುರತೆಯನ್ನು ಹೊಂದು; ಕಂಶಲತೆಯಿಂದ ಕೂಡಿರು: ಜಾಣ್ಗೂಡಿ ವಿಳಾಸದಿಂ ಸುಳಿದೊಡಿನ್ನು ಮಿವಳ್ಳುಳಿದ್ದೈದಳೇ (ರಾಜಶೇ. ೧೧-೧೧೧). [ ಜಾಣ್ + ಕೂಡು$_1$ ]

**ಜಾಣ್ಗೆಡು, ಜಾಣ್ಕೆಡು, ಜಾಣ್ಗೆಡು** (ಕ್ರಿ). ಬುದ್ಧಿಗೆಡು; ಮತಿಗೆಡಂ: ಮುಟುಕಂ ತೊಟ್ಟನೆ ಪುಟ್ಟಿ ನೊಂದು ಮತಿಗೆಟ್ಟೋವೆಂದು ಜಾಣ್ಗೆಟ್ಟು ಬೆಂದು (ಧರ್ಮಾಮೃ. ೧೩-೬೪); ಗಾಂಪಂ ಪುಣ್ಗೆಟ್ಟಿವ ಮಕ್ಷಿಕಂಬೋಲ್ ಜಾಣ್ಗೆಟ್ಟುಟಿ ಮಗ್ನನಪ್ಪಂ (ಉದ್ಭಟ. ೧೧-೯೩). **ಜಾಣ್ಕೆಡು:** ಜಾಣ್ಕೆಡೆ ಮುತ್ತುಂ ಮೆಟಸುಂಗೋದಂತಿರೆ (ಶಮದ. ೭೫ ಪ್ರಯೋ). **ಜಾಣ್ಗೆಡು:** ರಂಜಿಸಿದರವುರಲಂಜಿಕೆಯುರ್ ಜಾಣ್ಗೆಡದಾಡಿ (ಅಜಿಪು. ೫-೪೧); ಕಡಲತ್ತಣ್ಗೆ ಹರಿ ಬಂದುದಂ ಕಡುಜಾಣ್ಗೆಡದಟಿದಾಗಳ್ (ಕಾವ್ಯಾವ. ೨೮೨); ಜಾಣ್ಗೆಡಲ್ ದಕ್ಷನಂ ತುಡುಕಿ (ನಂದಿಮಾ. ೦-೮). [ ಜಾಣ್ + ಕೆಡು$_1$ ]

**ಜಾಣ್ಗೊಳ್** (ಕ್ರಿ). = ಜಾಣ್ಗೂಡು: ನೃಪನಂ ಜಾಣ್ಗೊಂಡ ನಿಜಪ್ರುಗಲ್ಭ ವಚನದೆ ನುಡಿದಳ್ (ಕಾದಂಬು. ೭೬೩). [ ಜಾಣ್ + ಕೊಳ್$_1$ ]

**ಜಾಣ್ನಡೆ** (ನಾ). ಬುದ್ಧಿವಂತಿಕೆಯಿಂದ ಕೂಡಿದ ನಡವಳಿಕೆ: ಪಂಡಿತೆ ಸ್ತ್ರೀವಿದೂಷಕಳಂತೆ ಜಾಣ್ನುಡಿ ಜಾಣ್ನಡೆಯಿಂದ ಅರಸನನ್ನೂ ಅರಸಿಯನ್ನೂ ಒಂದುಗೂಡಿಸುತ್ತಾಳೆ (ಕಸಾಜ. ೩೭೩). [ ಜಾಣ್ + ನಡೆ$_2$ ]

**ಜಾಣ್ನುಡಿ** (ನಾ). ಜಾಣತನದಿಂದ ಕೂಡಿದ ಮಾತು; ಚತುರೋಕ್ತಿ: ಅನುನಯದಿಂದೆ ಪೊಚ್ಚ ಪೊಸ ಜಾಣ್ನುಡಿಯಿಂದಮಿದಾದುದು(ಛಂದೋಂಬು. ೦-೪೯ ಅಡಿಟಿ); ಇನಿತುಮಿವರ್ಕೆ ಮತ್ಕೃತಿಯೊಳೀಧರೆ ಬಣ್ಣಿಸೆ . . . ಕಣ್ಣಮನ ಜಾಣ್ನುಡಿ ಪಂಪನ ರೀತಿ (ಜಗವಿ. ೧-೧೧); ಆತನೀಗಾವಗಮೊನ್ನ ಜಾಣ್ನುಡಿಗೆ ಮೆಯ್ಸಿರಿಯಂ (ಕಬ್ಬಿಕಾ. ೧); ನಯವಿದರೆಲ್ಲರುಂ ಪೊಗಳೆ ಜಾಣ್ನುಡಿ ಮಿಕ್ಕಿರೆ ಕಾವ್ಯಮಂ . . ಮಾಡಿ (ಬಾಧಪು. ೧-೪೯).

[ ಜಾಣ್ + ನುಡಿ$_2$ ]

**ಜಾಣ್ನುಡಿಕಾರ್ತಿ** (ನಾ). ಚಮತ್ಕಾರವಾಗಿ ಮಾತನಾಡುವವಳು; ಮಾತಿನಲ್ಲಿ ಜಾಣೆ: ನಗೆಕಾರ್ತಿಯರ್ ಸಮಂತೋಲೆಯಕಾರ್ತಿಯರ್ ನೆಗಟ್ದ ಜಾಣ್ನುಡಿಕಾರ್ತಿಯರ್ (ಪಾರ್ಶ್ವಪು. ೧೩-೯).

[ ಜಾಣ್ನುಡಿಕಾಟ + – ತಿ$_1$ (<– ಇತ್ತಿ) ]

**ಜಾಣ್ನುಡಿಕಾಟ** (ನಾ). ಬುದ್ಧಿವಂತಿಕೆಯಿಂದ ಕೂಡಿದ ಮಾತುಗಳನ್ನು ಆಡುವವನು; ಚತುರೋಕ್ತಿಗಳನ್ನು ಆಡುವವನು; ವಾಕ್ಚತುರ: 'ಜಾಣ್ನುಡಿಕಾರ್ತಿ' ಪರಾ. [ ಜಾಣ್ನುಡಿ + – ಕಾಟ ]

**ಜಾಣ್ಮನ, ಜಾಣತನ** (ನಾ). = ಜಾಣ್: ಒಳ್ಗಣಕ್ಕೆ ಕಣಿ ಶೌಚಕ್ಕಾಸ್ಪದಂ ಜಾಣ್ಮನಕ್ಕೆಱವಟ್ಟೊಳ್ನುಡಿಗಾಣ್ಮಂ (ಪಂಚತಂ. ೧೧-೫); ಸಾಸಿರ–ಜಿಹ್ವೆಯವಗೆ ಜಾಣ್ಮನದೊಳು ಸಾಸಿರವಮಡಿ (ಜಯಕಾ. ೧೫-೧). **ಜಾಣತನ:** ಆಳ್ತನಂ, ಜಾಣತನಂ, ಎಗ್ಗತನಂ (ಶಮದ. ೨೧೧ ಪ್ರಯೋ); ಜಾಣತನದಲಿ ಕಾದಿ ಹಿಂಗುವ ದ್ರೋಣನಲ್ಲಳವಿಯಲಿ (ಕುವ್ಯಾಕ. ೧೭-೨೧).

[ ಜಾಣ್ + – ತನ ]

**ಜಾಣ್ಪಡೆ** (ಕ್ರಿ). ಜಾಣತನವನ್ನು ಹೊಂದು; ಚಾತುರ್ಯವನ್ನು ಪಡೆ: ಕಣ್ಪೊಲದೊಳ್ ನಿವೃತ್ತಿಪರಿಣಾಮಮೊಡಂಬಡೆ ಧರ್ಮಶುಕ್ಲದೊಳ್ ಜಾಣ್ಪಡೆದಿಕ್ಕೆ ಕೈಯನು (ಪಂರಾಮಾ. ೨-೫೩); ಜಾಣ್ಪಡೆದೆತ್ತಂ ಕೂಡಿ ಕೋಲಾಹಲಮನೆಸಪ ಚಕ್ರಾಳಿಯಿಂ (ರಾಜಶೇ. ೭-೨೩). [ ಜಾಣ್ + ಪಡೆ$_1$ ]

**ಜಾಣ್ಬಾಣೆ** (ನಾ). ಜಾಣತನದಿಂದ ಕೂಡಿದ ಮಾತು; ಚಮತ್ಕಾರಯಂಕ್ತವಾದ ವಚನ; ಚತುರೋಕ್ತಿ: ಕಣ್ಣಿಗೊರಟಾದೊಡೇಂ ನಿನ್ನ ರೂಪಂ? ಕಿವಿಗೆ ದಲ್ ಮಂತ್ರಮಧುರಂ ನಿನ್ನ ಜಾಣ್ಬಾಣೆ (ಶ್ರೀರಾಮಾ. ೩೯೦-೭೭೮). [ ಜಾಣ್ + ಬಾಣ್ಕೆ ]

**ಜಾಣ್ಬಿಡು** (ಕ್ರಿ). ಜಾಣತನವನ್ನು ಬಿಡು; ಮೂಢನಾಗು: ಕಣ್ಬರಿ ಪುತ್ರಮಿತ್ರವನಿತಾಜನದೊಳ್ ಸಮಸಂದು ರಾಜ್ಯಮಂ ಜಾಣ್ಬಿಡೆ ದುಃಖಹೇತುವನಿದಂ ನೆಟಿ ತಾಳ್ದಿ (ಚಂದ್ರಪು. ೨-೪೦). [ ಜಾಣ್ + ಬಿಡು$_1$ ]

**ಜಾಣ್ಮತಿ** (ನಾ). ಜಾಣತನದಿಂದ ಕೂಡಿದ ಬುದ್ಧಿ; ಚುರುಕಾದ ಬುದ್ಧಿ: ಸುತ್ತಲುಂ ಕಾವಲಿರ್ಪುದನವಳ ಜಾಣ್ಮತಿಗೆ ತಿಳುಹಿ (ಶ್ರೀರಾಮಾ. ೪೯೭-೩೦೮). [ ಜಾಣ್ + ಮತಿ ]

**ಜಾಣ್ಮರುಳ್** (ನಾ). ತಾನು ಜಾಣನೆಂದು ತಿಳಿದುಕೊಂಡಿರುವ ದಡ್ಡ: ರಾಮಸತಿ ತಾನಿರ್ಕೆ ಸಾಮಾನ್ಯಯಾದೊಡಂ ಪತಿತೆಯಪ್ಪಳೆ ಪೇಳ್ ಪತಿವ್ರತಾನಿಷ್ಠೆಯಿಂ ಜಾಣ್ಮರುಳೆ ಓ ಕೋಣಪಕಿರೀಟಿ (ಶ್ರೀರಾಮಾ. ೭೫೪-೧೩೨). [ ಜಾಣ್ + ಮರುಳ್$_3$ ]

**ಜಾಣ್ಮಾತು** (ನಾ). ಚತುರವಾದ ಮಾತು; ಬುದ್ಧಿವಂತಿಕೆಯು ನಂಡಿ; ಚಮತ್ಕಾರದ ಮಾತು: ಕನ್ನಡದಿನೊಪ್ಪಂಬೆತ್ತು ಜಾಣ್ಮಾತಿನಿಂ ಪಲವುಂ ದೇಸೆಯಿಂ ಸಂದು (ಧರ್ಮಾಮೃ. ೦೪-೧೭೭). [ ಜಾಣ್ + ಮಾತು$_1$ ]

**ಜಾಣ್ಮೆ, ಜಾಣೆಮೆ, ಜಾಣುಮೆ, ಜಾಣುವೆ** (ನಾ). ಜಾಣತನ; ಚಾತುರ್ಯ: "ಪ್ರಗಲ್ಭತೆಯೆನಲು ಜಾಣ್ಮೆ" (ಮಂಗರಾ. ೧೩೫-೩೭); ಬಣ್ಣಿಸುವನ ಜಾಣ್ಮೆಗತರ್ಕ್ಯಮತುಳಮನುಪಮಮಧಿಕಂ (ಗಿರಿಕ. ೪-೪); ಜಾಣ್ಮೆ, ಕಡುಮೆ, ಮೈಮೆ(ಶಮದ.೨೧೧ ಪ್ರಯೋ); ಅನುನಯಾಲಾಪಂಗಳಿಂ ಮಾನಿನಿಗೆ ತನ್ನಯ ಜಾಣ್ಮೆ ಮೆಱೆಯಲು (ಬಸಪು. ೪೦-೨೩); ಪಕ್ಷಿಗೇತಕೆ ಬಹುದೀ ಜಾಣ್ಮೆಯೆಂದುದು ಚೊಕ್ಕ ಮಾತಿನ ರಾಜಕೀರ (ಭರಚ. ೭-೯೯). **ಜಾಣೆಮೆ:** ವಿತತ ಜಾಣೆಮೆಗೆ ಶಾರದೆಯೆಂದು ಭೂಪನ ಸತಿಯ ಜಗವು ಪೊಗಳುವುದು (ಕಂನವಿ. ೭-೭೧). **ಜಾಣುಮೆ:** ಸಮೇಳಂ ಮೆಱೆವ ಜಾಣುಮೆಗೆಳಸಿ ನೆನೆವಂ(ಬಸಪು. ೪೨-೨೫); ಹರಿವ ಯಮುನಾನದಿಯನಲ್ಲಿಗೆ ತರಿಸಿದವರಾರೆನಲು ಮಣಿಬಂಧುರದ ಬೆಳಗಿನ ಲಹರಿ ಮುಱಿದುದು ತನ್ನ ಜಾಣುಮೆಯ (ಕುವ್ಯಾಸ. ೧೩-೩೩); ಸುರೋರಗನರರ ಜಾಣುಮೆಗಾಣದ (ಕೈವಲ್ಯ. ೯-೭-೩); **ಜಾಣುವೆ:** ಹುರುಡು ಜಾಣುವೆ[ಪಾಠಾಂ. ಮೆ] . . . ಮಾಯಾಮಯದ ಮಹಿಳಾಜನ ವಿರಾಜಿಸಿತು (ತೊರರಾ. ೧-೫-೬೨); ಕವಿಗೆ ಗಡ ನಿನ್ನ ಜಾಣುವೆಯೆನಿತೊ ಫಾಸಿಯಲ್ಲವೆ (ಗಿಳಿವಿಂ. ೯-೧೨೦).

[ ಜಾಣ್ + – ಮೆ$_1$ ]

**ಜಾಣ್ವಕ್ಕಿ, ಜಾಣವಕ್ಕಿ** (ನಾ). ಒಂದು ಬಗೆಯ ಹಕ್ಕಿ; ಪಂಡಿತವಕ್ಕಿ; ಗಿಳಿ: ವಲಿಯ ಭಾರದ್ವಾಜ ಪಿಕ ಪಿಂಗಲಿ . . . ಜಾಣ್ವಕ್ಕಿ ಚಕೋರಿ ಕಳಿಂಗ ಕಳವಿಂಕ (ತೊರರಾ. ೩-೧-೩೩); ಉಗ್ಗಡಿಸುವ ರಾಜಕೀರ ಜಾಣ್ವಕ್ಕಿಗಳಿಗ್ಗಡೆಯೊಳು ಮುಂದೆ ಮೆಱೆಯೆ (ಮೋಹತ. ೭-೨೧). **ಜಾಣವಕ್ಕಿ:** ನಲಿದಾಡುವ ಕನ್ನಡವಕ್ಕಿ ಮುದ್ದುಮಾತಾಡುವ ಜಾಣವಕ್ಕಿ (ಶಬ್ದಾನು. ೯೭ ವ್ಯಾಖ್ಯಾ). [ ಜಾಣ್ + ಪಕ್ಕಿ$_1$ ]

**ಜಾತ** (ಗು). ೧. ಹುಟ್ಟಿದ; ಉಂಟಾದ; ವ್ಯಕ್ತವಾದ; ಪ್ರಕಟವಾದ. (ನಾ). ೨. ಹುಟ್ಟಿದವನು: "ಜಾತಂ ಪ್ರಜಾತಂ"(ಮಂಗರಾ. ೯೧-೮); ಜಾತನಲ್ಲ ಅಜಾತನಲ್ಲ ಕೂಡಲಸಂಗನ ಶರಣರು ನಿಸ್ಸೀಮರಯ್ಯಾ (ಬಸವ. ೭೧೧); ಮೃತಜಾತ ತಾನಲ್ಲೆಂದು ಕಂಡರವಂಗೆ ಪಾಪವಿಲೇಪವಿಲ್ಲೆಂದ (ಕುವ್ಯಾಭೀ. ೩-೪೯). ೩. ಹುಟ್ಟಿದುದು; ಉತ್ಪನ್ನವಾದುದು: ನೂತ್ನ ಭಕ್ತಿ ಜಾತವಾಗಲೋತು ಪಾಡಿ (ಕಾವ್ಯಸ. ೧೨೪). ೪. ಪ್ರಾಣಿ; ಜೀವಿ. ೫. ಮಗ; ಪುತ್ರ: ವಾತಹಿತಜಾತ ನಿಜತಾತ . . . ಘನಪೂತ (ಗುರುಚಾ. ೧೧-೧). ೬. ಜನ್ಮ; ಉತ್ಪತ್ತಿ. ೭. ಗುಂಪು; ಸಮೂಹ: ಜೀವಜಾತದಿಂದೆನಗೆ ಬಲಿಯನಿತ್ತೊಡೆ ಮುನಿವೆಂ (ಯಶೋಚ. ೪-೭೩). ೮. ಸತ್ಕುಲಪ್ರಸೂತ; ಸಂಭಾವಿತ; ಮನ್ನೆಯ: ಮಾತುಮಾತಿಗೆ ಮಥನವ ಮಾಡುವಾತನೆ ಜಾತ (ವಚಸಂ. ೨೨೪-೮೭); ಜಾತಿ ವಿಜಾತಿಯೆನಬೇಡ ದೇವನೊಲಿದಾತನೇ ಜಾತ (ಸರ್ವಜ್ಞ. ೯೭೭). [ ಸಂ. ]

**ಜಾತಕ** (ನಾ). ೧. ಜನ್ಮಕಾಲದ ತಿಥಿ, ವಾರ, ನಕ್ಷತ್ರ, ಲಗ್ನ ಮೊದಲಾದ ವಿವರಗಳನ್ನೂ ಆಗಿನ ಗ್ರಹಗಳ ಸ್ಥಿತಿಯನ್ನೂ ತಿಳಿಸುವ ಪತ್ರಿಕೆ; ಜನ್ಮಪತ್ರಿಕೆ: ಪುರೋಹಿತರ್ ನಾಮಕರಣಂಗೆಯ್ದು, ನುಡಿದು ನಲ್ವರಕೆಯಂ, ಜಾತಕಂ ಬರೆದು ಕಣಿವೇಳ್ದರಾ ನಾಲ್ವರುಂ ನೆಲ ಕೊಳ್ಳಿತಂ ಗೆಯ್ದು (ಶ್ರೀರಾಮಾ. ೧೭-೪೩೧); ಜಾತಕ ಮಾತ್ರ ಸರಿಯಾಗಿ ಹೊಂದ ಬೇಕು ಅದಿಲ್ಲದೆ ನಾನು ಒಪ್ಪುವವನೇ ಅಲ್ಲ (ಸ್ಮೃತಿಚಿ. ೨೧); ಯಾವುದು ಸುಳ್ಳಾದರೂ ಜಾತಕ ಸುಳ್ಳಾಗುತ್ತದೆಯೆ (ಪದ್ಮಸ. ೩೨). ೨. ಜಾತಕಕ್ಕೆ ಸಂಬಂಧಪಟ್ಟ ವಿಷಯಗಳನ್ನೆಲ್ಲಾ ತಿಳಿಸುವ ಗ್ರಂಥ: ಮುನ್ನಾರುಂ ಜಾತಕವಮಂ ಕನ್ನಡದಿಂ ವ್ಯಕ್ತಮಾಗಿ ಪೇಟ್ದನ್ವಿತರಿಲ್ಲಿನ್ನುಂ ಪೇಟ್ದವರಿಲ್ಲು ತ್ಪನ್ನಂ ಶ್ರೀಧರನೆ ಪೇಟ್ದುಂ (ಜಾತತಿ. ೧-೧೬). ೩. (ಆಯಾ ರಾಶಿಯಲ್ಲಿ ಅಥವಾ ನಕ್ಷತ್ರದಲ್ಲಿ) ಹುಟ್ಟಿದವನು,-ಜನ್ಮವೆತ್ತಿದವನು: ಮೀನ ರಾಶಿಯಲ್ಲಿರುವ ಚಂದ್ರನನ್ನು ಶುಕ್ರ ನೋಡಿದರೆ ಜಾತಕನು ಪಂಡಿತ ನಾಗುತ್ತಾನೆಂದು ಬೃಹಜ್ಜಾತಕದಲ್ಲಿದೆ (ಜಾತತಿ. ೨೦-೧೨ ಅಡಿಟಿ). ೪. ಗೌತಮಬುದ್ಧನ ಜನ್ಮಾಂತರಗಳ ಕತೆ: ಬುದ್ಧನ ಜಾತಕಗಳು ಎಂಬ ಪುಸ್ತಕದಿಂದ ಆಯ್ದ ಎಂಟು ಜಾತಕಗಳು (ಬುದ್ಧಪ. ೯). [ಸಂ.]

**ಜಾತಕಭಾವ** (ನಾ). ಜಾತಕದ ಸ್ಥಿತಿ,-ವಿದ್ಯಮಾನ: ನಾಲ್ಕನೆಯ ಮಗನ ಜಾತಕಭಾವವಂ ವಿಚಾರಿಸಿ ಕಲಿಮಿತ್ರನೆಂದು ನಾಮಕರಣವಂ ಮಾಡಿದ ವರಾಗಲು (ಅರ್ಕಮಾ. ೯೨). [ಜಾತಕ + ಭಾವ$_2$]

**ಜಾತಕರ್ಮ** (ನಾ). ಮಗು ಹುಟ್ಟಿದಾಗ ಅದಕ್ಕೆ ಮಾಡುವ ಒಂದು ಸಂಸ್ಕಾರ; ಹದಿನಾರು ಸಂಸ್ಕಾರಗಳಲ್ಲಿ ಮೊದಲನೆಯದು: ಅರ್ಹತ್ಪ ರಮೇಶ್ವರಂಗೆ ಮಹಾಮಹಮಂ ಮಾಡಲ್ವೇಟ್ದು ಜಾತಕರ್ಮೋತ್ಸವಮ ನೊಡರ್ಚಿ (ಚಂದ್ರಪು. ೩-೧೦೨ ವ); ವಿಹಿತ ಜಾತಕರ್ಮಮಂ ಮಾಡಿಸಲ್ಬು ಧರುತ್ತರೋತ್ತರವನು ತಿಳಿದು (ಜೈಮಿಭಾ. ೨೮-೭೦); ಶಿಶುವು ಜನಿಸಿದೊಡ ನೆಯೇ ನಾಳಚ್ಛೇದಕ್ಕೆ ಮೊದಲೇ ಜಾತಕರ್ಮವನ್ನು ಮಾಡಬೇಕೆಂದು ಶಾಸ್ತ್ರವಿದೆ (ಆರ್ಯಧ. ೧೨೩).

[ಜಾತ + ಕರ್ಮ]

**ಜಾತಕೇಳಿ** (ನಾ). [ಕಾಮಶಾ] ಕಾಮಶಾಸ್ತ್ರದಲ್ಲಿ ಹೇಳಿರುವ ಹನ್ನೆರಡು ಬಗೆಯ ಆಲಿಂಗನಗಳಲ್ಲಿ ಒಂದು; P ಅಜಾತಕೇಳಿ ಎಂಬ ಆಲಿಂಗನ ಪ್ರಕಾರ ನಾಲ್ಕು, ಜಾತಕೇಳಿ ಎಂಬ ಆಲಿಂಗನ ಪ್ರಕಾರ ಎಂಟು: ಜಾತಕೇಳಿಯೆಂದು ಸಂದಜಾತಕೇಳಿಯೆಂದುಮವರ ರೀತಿಯೆಂಟು ನಾಲ್ಕೆನಿಪ್ಪವಂಬುಜಾನನೆ (ಜನವ. ೭-೧). [ಜಾತ + ಕೇಳಿ$_2$(=ಕೇಲಿ)]

**ಜಾತಗೈಸು** (ಕ್ರಿ). ಉಂಟಾಗುವಂತೆ ಮಾಡು; ರಚಿಸು; ನಿರ್ಮಿಸು: ವನದಿ ಮಂಟಪವಾ ಜಾತಗೈಸೆನೆ ಚದುರ ಚಾವಡಿ ನೂತನವ ಗೈಸಿ (ಜಿರಾಮಾ. ೭೮-೩೦). [ಜಾತ + ಕೈ$_1$(<ಕೆಯ್$_1$) + - ಇಸು$_3$]

**ಜಾತನಿರ್ವೇದ** (ನಾ). ವಿರಕ್ತಿಯುಂಟಾದವನು; ವೈರಾಗ್ಯವನ್ನು ಹೊಂದಿದವನು: ಸಂಸೃತಿ ಕೃತಾನುಶಯನುಂ ಜಾತನಿರ್ವೇದಾಶಯನು ಮಾಗಿ (ಚಂದ್ರಪು. ೨-೩೦). [ಜಾತ + ನಿರ್ವೇದ]

**ಜಾತಪುಣ್ಯ** (ನಾ). ಪುಣ್ಯವಂತ; ಅದೃಷ್ಟಶಾಲಿ; ಭಾಗ್ಯವಂತ: ಆತು ಕೊಳಲಿಂದೀ ಸುಯೋಧನ ಜಾತಪುಣ್ಯನೊ ಧರ್ಮಪುತ್ರನೆ ಭೂತ ಭಾಗ್ಯನೊ (ಕುವ್ಯಾಪ. ೨೦-೧೧). [ಜಾತ + ಪುಣ್ಯ]

**ಜಾತಪ್ರಿಯ**(ನಾ). ಎಲ್ಲ ಪ್ರಾಣಿಗಳ ಮೇಲೆ ದಯೆ ಉಳ್ಳವನು; ಕರುಣಾ ಮಯಿ: ಜಾತಪ್ರಿಯನಾತಂ ತನುಜಾತನೆ ತಾನಾಗೆ (ಅಜಿಪು. ೫-೫೩).

[ಜಾತ + ಪ್ರಿಯ]

**ಜಾತಮೂರ್ಖ** (ನಾ). ಹುಟ್ಟುಮೂರ್ಖ; ಮಹಾಮೂರ್ಖ; ಅತಿ ದಡ್ಡ: ಇವನು ಜಾತಮೂರ್ಖ (ರಾಜಾಮ. ೩೦).

[ಜಾತ + ಮೂರ್ಖ]

**ಜಾತರಂಗ** (ನಾ). ಒಂದು ಬಗೆಯ ರತ್ನ; ಪದ್ಮರಾಗದಲ್ಲಿ ಒಂದು ಪ್ರಭೇದ: ಪದ್ಮರಾಗವದು ತಾನೆ ಜಾತರಂಗಂ ಕುರುವಿಂದಂ ಸೌಗಂಧಿಕಂ ಗದಾಂಗ ನೀಲಯುಗ್ಮನಾಮಕವೆಂಬೀ ನಾಲ್ದೆಱನಾಗಿರ್ಕುಂ (ಹಾ ಲಾ ಸ. ೨-೧-೭೦ ವ): ಬ್ರಹ್ಮ ಜಾತಿಯಾದ ಜಾತರಂಗವೆಂಬ ಕೆಂಪು ರತ್ನಕ್ಕೆ ಹತ್ತು ಬಗೆ ಹೊಳಹು (ಸೌಗಂಧಿ. ೩೩೭-೪). [ಸಂ.]

**ಜಾತರಸ** (ನಾ). ಒಬ್ಬಾತನ ಹೆಸರು: ಶ್ರೀಮತ್ ಜಾತರಸರ್ ಕದಂಬಳಿಗೆ ಸಾಯಿರಮುಮಂ ಉತ್ತರೋತ್ತರಮಾಗಿ ಆಳುತ್ತಿರೆ (ಎಕ. XI, ದಾವಣ. ೧೦೪-೧೦: ೧೧೭). [?]

**ಜಾತರಾಸಿ** 'ಚೇತರಾಶಿ' ನೋ.

**ಜಾತರೂಪ** (ನಾ). ೧. ಹುಟ್ಟಿದ ಸ್ಥಿತಿ; ಬೆತ್ತಲೆ; ದಿಗಂಬರತ್ವ. ೨. ದಿಗಂಬರ ಜೈನರ ಸಂನ್ಯಾಸ: ಭಕ್ತಿಯ ಭರದಿಂದಂ ಜಾತರೂಪವಮಂ ಕೈ ಕೊಂಡರ್ (ಆದಿಪು. ೯-೮೦); ಅದು ನಿಸ್ಸಂಗತೆಯಿಂದಲ್ಲದಾಗದದು ಜಾತ ರೂಪದಿಂದಲ್ಲದೆ ತೀರದದು (ಶಾಂತಿಪು. ೭-೧೦೫): ಪರಿಹರಿಸಿ ಜಾತರೂಪೋ ತ್ಕರಮಂ ಮತ್ತೊಂದು ಜಾತರೂಪಮನರಸಂ ಧರಿಯಿಸಿದಂ (ಚಂದ್ರಪು. ೨-೫೯). ೩. ದಿಗಂಬರನಾದ ಸಂನ್ಯಾಸಿ; ಜೈನಮುನಿ: ದಿಗಂಬರ ಮುನಿ ಗಳನ್ನು ಜಾತರೂಪರೆಂದು ಕರೆಯುವುದು ವಾಡಿಕೆಯಾಗಿದೆ (ಭಾರದ. ೧೮೫). ೪. ಚಿನ್ನ; ಬಂಗಾರ: "ಮಹಾರಜತಮಾ ಜಾತರೂಪಂ ಹಿರಣ್ಯಂ . . . ಸ್ವರ್ಣಮೆನೆ ಹೊನ್ನಿಂಗೆ ನಾಮಮಕ್ಕುಂ" (ಮಂಗರಾ. ೩೦-೪); ಪರಿಸ ದೊಳೊಂದುವವೊಲ್ ಜಾತರೂಪ ವಿಳಸಿತ ನಿಧಾನಮಂ ಕಂಡಧನಂ (ಚಂದ್ರಪು. ೧೨-೫೨); ಜಾತರೂಪದ ಲೇಸು ಹೊಲ್ಲೆಹ ವೀತಿಹೋತ್ರನ ದೇಹ ಕಾರಣಭೂತವಾಗಿಹುದವಗೆ (ಕುವ್ಯಾಉ. ೩-೧೨೪); ವರಜಾತರೂಪ ಮಯವಾಯ್ತು ಮನೆಯೆಲ್ಲಮುಂ (ಜೈಮಿಭಾ. ೧೮-೧೨): ಪರುಸದ ಸೋಂಕಿಂ ವರಜಾತರೂಪಮಪ್ಪಂತೆ ಲೋಹಂ (ವಿಷ್ಣುಪು. ೫-೫-೭). [ಸಂ.]

**ಜಾತರೂಪವಿಧಿ** (ನಾ). ದಿಗಂಬರ ವ್ರತ,-ದೀಕ್ಷೆ: ದೊರೆಕೊಳೆ ಜಾತ ರೂಪವಿಧಿ ಪಂಚಮಹಾವ್ರತಧಾರಿಯಾದಂ (ಅನಂಪು. ೪-೧೧).

[ಜಾತರೂಪ + ವಿಧಿ]

**ಜಾತವೇದ** (ನಾ). ೧. ಬೆಂಕಿ; ಅಗ್ನಿ: ಗಣನಾತೀತಾಜ್ಯಾಹುತಿಗಣದಿಂದಂ ತಣಿಯೆ ಜಾತವೇದನುಂ (ಪಂಪಭಾ. ೭-೩೭); ನಾಕವಾಸಿಗಳಂಜಬೇಡವೆಂದ ವರಿಗೆ ವಿವೇಕದಿಂ ನುಡಿದಭಯವಿತ್ತನಾ ಜಾತವೇದಂ (ವೀಶೈಪು. ೩-೨೦-೫೫). ೨. [ಛಂದ] ಅಕ್ಷರಗಣಗಳಲ್ಲಿ ಒಂದು; ರಗಣ(-u-): ಮರುತಂ ಜಾತವೇದಂ ಹರನಂ ಕೂಡಿ ಬಂದಂದರವಿಂದಾಯತಾಕ್ಷೀ ಸರಲಂ ವೃತ್ತನಾಮಂ (ಛಂದೋಂಬು. ೨-೮೮). [ಸಂ. ಜಾತವೇದಸ್]

**ಜಾತವೇದಸ**(ನಾ). =ಜಾತವೇದ ೧: "ವಸು . . . ಅನಲಂ ಸ್ವಾಹಾಪ್ರಿಯಂ ಜಾತವೇದಸನಪ್ಪಿತ್ತ್ರಮುಷರ್ಬುಧಂ ಹುತವಹಂ ಧೂಮಧ್ವಜಂ ಪಾವಕಂ" (ವಸ್ತುಕೋ. ೭-೩೯): "ವಸು . . . ಜಾತವೇದಸನಾಶ್ರಯಾಶನನಲಂ ಧೂಮಕೇತನಂ ಶುಚಿ ವಿರೋಚನನೆನಿಕ್ಕುಂ" (ಮಂಗರಾ. ೧೪-೬).

[<ಸಂ. ಜಾತವೇದಸ್]

**ಜಾತವೇದಾಕ್ಷ** (ನಾ). ಅಗ್ನಿನೇತ್ರ; ಶಿವ: ಜಯ ವೇದಾಕ್ಷ . . . ಎಂದು ಪೊಗಳುತಿಹ ಜೋಕೆಯಿಂ ಮೆಚ್ಚಿವ ಜಗದೀಶನಂ ನಿಟ್ಟಿಸಿದನು (ಹಚಕಾ. ೧೧-೪೦). [ಸಂ. ಜಾತವೇದಾಕ್ಷ (ಜಾತವೇದ + ಅಕ್ಷಿ + -)]

**ಜಾತವೇದೋಜಾತೆ** (ನಾ). ಅಗ್ನಿಯಲ್ಲಿ ಹುಟ್ಟಿದವಳು; ದ್ರೌಪದಿ: ಅಂತಿರ್ದ ಜಾತವೇದೋಜಾತೆಯ ಪಾರಿಜಾತಪಲ್ಲವೋಲ್ಲಸಿತ ನಿಕಾಮ ಕೋಮಲ ಕರತಳಸ್ಪರ್ಶನದೊಳಂ (ಗದಾಯು. ೮-೭೧ ವ).

[ಸಂ. ಜಾತವೇದೋಜಾತಾ(ಜಾತವೇದಸ್ + ಜಾತಾ)]

**ಜಾತಶಂಕಿ** (ನಾ). ಸಂಶಯದಿಂದ ಕೂಡಿರುವವನು: ನಿಶ್ಶಂಕಿ ನೀನು ಈ ಜಾತಶಂಕಿಯನ್ನು ಶಮಿಯಾಗಿ ಶಮಿಸಿ(ಹೃದಸ. ೨೨-೯). [ಸಂ. ಜಾತಶಂಕಿನ್]

**ಜಾತಸೂತಕ** (ನಾ). (ಹಿಂದೂಧರ್ಮಶಾಸ್ತ್ರದಂತೆ) ಮಗು ಹುಟ್ಟಿದಾಗ ಮಾತಾಪಿತೃಗಳಿಗೆ ಮತ್ತು ಜ್ಞಾತಿಗಳಿಗೆ ಉಂಟಾಗುವ ಮೈಲಿಗೆ; ಪುರುಡು; ವೃದ್ಧಿ: ಪ್ರೇತಸೂತಕ ಜಾತಸೂತಕ ಜಾತಿ ವಿರಹಿತನಾಗಿ (ಬಸವು. ೧೮-೯೮). [ ಜಾತ + ಸೂತಕ ]

**ಜಾತಹರ್ಷ** (ನಾ). ಸಂತೋಷವುಂಟಾದವನು; ಸಂತೋಷಗೊಂಡಿರುವವನು: ಜಲಕೇಳಿಯಾಡಿ ಪೊಱಮಟ್ಟು ನಿಂದು ಜಾತಹರ್ಷನಾಗಿ ಬೆಟ್ಟುಗಳ್ ಬಿರಿಯೆ ನಿಷ್ಕುರಧ್ವಾನಂಗೆಯ್ದು (ಪಂಚತಂ. ೪೫-೨೦).

[ ಜಾತ + ಹರ್ಷ ]

**ಜಾತಾ₁** (ನಾ). ಒಂದು ನಿರ್ದಿಷ್ಟವಾದ ಸ್ಥಳಕ್ಕೆ ಹೊರಟಿರುವ ಜನರ ವ್ಯವಸ್ಥಿತವಾದ ತಂಡ,-ಗುಂಪು,-ಮೆರವಣಿಗೆ: ದೇಶದ ನಾನಾ ಕಡೆಯಿಂದ ಜಾತಾಗಳು ಬಂದುವು (ರೂಢಿ).

**ಜಾತಾಹೊರಡು** = ನಿರ್ದಿಷ್ಟ ಸ್ಥಳಕ್ಕೆ ಗುಂಪುಗೂಡಿ ಪ್ರಯಾಣ ಮಾಡು: ಚಳುವಳಿಕಾರರು ವಿಧಾನಸೌಧಕ್ಕೆ ಜಾತಾಹೊರಡುವಂತೆ ವ್ಯವಸ್ಥೆ ಮಾಡಿದ್ದಾರೆ (ರೂಢಿ). [ ←ಹಿಂ. ಮರಾ. ಜಥಾ ]

**ಜಾತಾ₂** (ಅ). ಹೋಗಲಾಗಿ; ಕಳೆಯಲಾಗಿ; ಬಿಡಲಾಗಿ: ಹನುಮಂತರಾಯನಿಗೆ ಈ ಮನೆ ಒಂದು ಜಾತಾ ಅವರ ಮಿಕ್ಕ ಆಸ್ತಿಯೆಲ್ಲವನ್ನೂ 'ವಿಲ್' ಮಾಡಿಟ್ಟುಬಿಟ್ಟಿದ್ದಾರೆ (ಅವತಂ. ೧೮೩). 'ಜಾತಾಬಾಕಿ' ಪರಾ.

[ ←ಹಿಂ. ಜಾನಾ ]

**ಜಾತಾಪತ್ಯೆ** (ನಾ). ಹಡೆದವಳು; ಹೆತ್ತವಳು; ಬಾಣಂತಿ; "ಸೂತಿಕೆ ಜಾತಾಪತ್ಯೆ ವಿಜಾತೆ ವಿಶಲ್ಯಾಭಿಧಾನೆ ತಾನೆನಿಕುಂ" (ವಸ್ತುಕೋ. ೩೪-೧೭).

[ ಸಂ. ಜಾತಾಪತ್ಯಾ (ಜಾತ + ಅಪತ್ಯ + –) ]

**ಜಾತಾಬಾಕಿ** (ನಾ). ಕೊಡಬೇಕಾದಂದು ಕಳೆದು ಉಳಿದಿರುವುದು,-ವಿಂಕ್ಕಿರುವುದು; ಶಿಲ್ಕು: ಹದಿನೆಂಟು ಹಣ ಜಾತಾಬಾಕಿ ಬೇರೀಜು ಕಂಠೀರಾಯಿ ೩೩೩ (ಮೈಆರಿ. ೧೯೩೯. ೪೨-೩೪; 1825); ಜಾತಾಬಾಕಿ ಇಷ್ಟು ಎಂಬುದಾಗಿ . . . ಪಟ್ಟಿ ಕಳುಹಿಸುವುದು (ಮಹಾವಂ. II, ೭೭).

[ ←ಮರಾ. ಜಾತಾಬಾಕೀ ]

**ಜಾತಾಶೌಚ** (ನಾ). = ಜಾತಸೂತಕ: ಯಾರಾದರೂ ಜನಿಸಿದರೂ ಮೃತರಾದರೂ ನಿಯಮವಾದ ಕಾಲಪರ್ಯಂತವಾಗಿರುವ ಕರ್ಮಕ್ಕೆ ಅಧಿಕಾರವಿಲ್ಲದ ಅವಸ್ಥೆ. ಇದನ್ನು ಜಾತಾಶೌಚವೆನ್ನುತ್ತಾರೆ (ಆಯ ರ್ ಧ. ೯೫): ಅವರಿಗೆಲ್ಲ ಒಂದು ಜಾತಾಶೌಚ ಬಂದು ಮದುವೆ ಆ ಲಗ್ನದಲ್ಲಿ ನಡೆಯಲೇ ಇಲ್ಲ (ರೂಢಿ). [ ಜಾತ + ಆಶೌಚ ]

**ಜಾತಿ** (ನಾ). ೧. ಹುಟ್ಟು; ಜನನ. ೨. ಹುಟ್ಟಿದ ಕುಲ; ವಂಶ; ಪೀಳಿಗೆ; ತಳಿ: ಜಾತಿಗೆ ತಕ್ಕ ಮಾತು ತೂತಿಗೆ ತಕ್ಕ ಬೆಣೆ (ಗಾದೆ). ೩. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದ ಕುಲ ಅಥವಾ ಮತ: ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ . . . ಜಿನೇಂದ್ರ ಧರ್ಮಮೆ ಮಲಂ ದೊರೆ ಧರ್ಮದೊಳ್ (ಪಂಪಭಾ. ೧೪-೪೮). 'ಅಷ್ಟಾದಶಜಾತಿ' ಪರಾ. ೪. ಜನಾಂಗ. ೫. ವರ್ಗ; ಗುಂಪು: ವೇದ ಬೋಧಿಪ ಜಾತಿಗಳು ಎರಡಾದಿಯಲಿ (ಬಸವು. ೫೫-೧೯). ೬. ರೀತಿ; ಸ್ವಭಾವ; ತರಹ. ೭. ಉತ್ತಮವಾದುದು; ಮೇಲಾದುದು; ಒಳ್ಳೆಯ ನಡತೆಯುಳ್ಳುದು: ಭಾಸ್ಕರನು ಈ ಜಾತಿ ಸಾಧ್ವಿಯರೆಸಕದೇಳಿಗೆಯಿಂದ ತೇಜವಡೆದು ತಿರುಗುವನು (ಹದಿಬ. ೨-೮). ೮. ಸಾದೃಶ್ಯ; ಸಮಾನತೆ: "ಜಾತಿಯೆಂಬುದು ಸಾದೃಶ್ಯಕಂ" (ತಸೂವ್ಯ. ೫). ೯. ಜಾಯಿಕಾಯಿ. ೧೦. ಜಾಜಿಗಿಡ ಮತ್ತು ಅದರ ಹೂವು: ಸೊಗಯಿಸಿ ಬಂದ ಮಾಮರನೆ ತಳ್ತೆಲೆವಳ್ಳಿಯೆ ಪೂತ ಜಾತಿ ಸಂಪಗೆಯೆ . . . ಬನವಾಸಿ ದೇಶದೊಳ್ (ಪಂಪಭಾ. ೪-೨೮); ತಿಲತೈಲದೊಳ್ . . . ಜಾತಿಯ ಪೊಸ ಪೂಗಳನಿಕ್ಕಿ (ಲೋಕೋಪ. ೭-೨೦). ೧೧. "ನೆಲ್ಲಿಗಿಡ" (ಗಂಗಾಮ. ೧೭೯). ೧೨. ಚಳ್ಳೆಮರ: "ಶ್ಲೇಷ್ಮಾತಕಂ ಜಾತಿ ಚಳ್ಳಕ್ಕು" (ಮಂಗರಾ. ೩೭-೨೨); "ಸನಯಂ ಸಾಹಿತ್ಯ ಭೇದಂ ಕುಲಕುಸುಮಗಳುಂ ಜಾದಿಯುಂ ಜಾತಿಯಕ್ಕುಂ" (ನಾನಾರ. ೭೭). ೧೩. ಒಲೆ. ೧೪. [ತರ್ಕಶಾ] ವ್ಯರ್ಥವಾದ ಉತ್ತರ. ೧೫. [ಸಂಗೀತ] ಸಪ್ತಸ್ವರಗಳು. ೧೬. [ಕಾವ್ಯಮೀ] ಸ್ವಭಾವೋಕ್ತಿ ಅಲಂಕಾರ: ಭಾವಿಸಿ ಸಮಸ್ತವಸ್ತು ವಿಭಾವಿತ ಜಾತಿ ಕ್ರಿಯಾಗುಣ ದ್ರವ್ಯ ಸ್ವಾಭಾವಿಕ ಗುಣಮಂ ಪೇೞ್ವುದು ಕೇವಲಮಾ ಜಾತಿಯೆಂಬ ಸದಳಂಕಾರಂ (ಕವಿರಾ. ೩-೬); ಜಾತಿಯೆನಿಕುಂ ಸ್ವಭಾವಾಖ್ಯಾತಿ ಯಥಾವಸ್ಥಿತಾರ್ಥ ವಿಷಯಾರ್ಥಕೃತೋದ್ಯೋತ ನಮ ವೈಪರೀತ್ಯಂ ಜಾತಿ ದ್ರವ್ಯ ಕ್ರಿಯಾಗುಣ ಪ್ರತಿಬದ್ಧಂ (ಕಾವ್ಯಾವ. ೬೦೮). ೧೭. [ಗಣಿತ] ಹದಿನೆಂಟು ಎಂಬ ಸಂಖ್ಯೆಯ ಸಂಕೇತ: "ಜಾತಿ ಸ್ಥಳಂ ಪದಿನೆಂಟು" (ಮಂಗರಾ. ೦೦೪-೯). [ ಸಂ. ]

**ಜಾತಿಕರ್ಮ** (ನಾ). ಆಯಾ ಜಾತಿಗೆ ಸಂಬಂಧಪಟ್ಟ ಶಾಸ್ತ್ರೀಯವಾದ ಅಥವಾ ಆಚಾರದಿಂದ ಬಂದ ಕರ್ಮ,-ವಿಧಿ,-ಅನುಷ್ಠಾನ,-ಆಚರಣೆ: ಅವರವರ ಜಾತಿಕರ್ಮ ಅವರವರಿಗೆ ಹೆಚ್ಚು (ರೂಢಿ). [ ಜಾತಿ + ಕರ್ಮ ]

**ಜಾತಿಕಾರ** 'ಜಾತಿಗಾಱ' ನೋ.

**ಜಾತಿಕೂಟ, ಜಾತಿಗೂಟ**(ನಾ). ಒಂದು ಬಗೆಯ ತೆರಿಗೆ: ಮಗ್ಗಮೇಳಿದರಿಗೆ ಜಾತಿಕೂಟ ಕಾಣಿಕೆ ಕಂದಾಯ ಮದುವೆ ಸುಂಕ ಚರಾದಾಯ ತೆರಿಗೆ ಮುಂತಾದ ಯೇನು ಉಂಟಾದರೂ ನಿಮಗೆ ಸಲುವದು (ಮೈಆರಿ. ೧೯೪೦, ೪೭-೧೮; 1669); ಕುರಿದೆರಿಗೆ ಜಾತಿಕೂಟ ದೇವರಾಯುವಟ್ಟ . . . ಇವು ಮೊದಲಾದ ಸಕಲ ಸ್ವಾಮ್ಯವನು (ಎಕ. XIV, ನಂಜನ. ೨೯೫-೩೦೩; 1716).

**ಜಾತಿಗೂಟ**: ಅಶ್ವತ್ಥವಣಿಗೆ ಸಲುವ ಪೈರುಸುಂಕ ಪೊಂಮು ದೇವಸ್ಥಾನಗಳಿಗೆ ಸಲ್ಲ ಪೈರು ದುತ್ತಂ ಮಣಿಹ್ಯಸ್ಯಕಕ್ಕೆ ಸಲುವುದು ಜಾತಿಗೂಟ (ಎಕ. III, ಶ್ರೀರಂಗ. ೧೦೦-೧೭೩; 1724). [ ಜಾತಿ + ಕೂಟ₁ ]

**ಜಾತಿಕೋಶ** (ನಾ). ಜಾಯಿಪತ್ರೆ. [ ಜಾತಿ + ಕೋಶ ]

**ಜಾತಿಕ್ಷತ್ರಿಯ** (ನಾ). ಹುಟ್ಟುಕ್ಷತ್ರಿಯ: ಷಟ್ಕರ್ಮನಿರತ ಜಾತಿಕ್ಷತ್ರಿಯರೆಂದುಂ ತೀರ್ಥಕ್ಷತ್ರಿಯರೆಂದುಮಿತ್ತೆಱನಪ್ಪುವು (ಚಾವುಂಪು. ೨೪೭).

[ ಜಾತಿ + ಕ್ಷತ್ರಿಯ ]

**ಜಾತಿಗ** (ನಾ). = ಜಾತಿಗಾಱ: ಜಾತಿಗರು ಕೂಡಿದರು ಕೋತಕುಳ್ಳ ಚೌಡನಿಗೆ ನೀತಿಯಲಿ ಆಡಿ ರೂಪಗಳ ಜಗದೊಳಗೆ ಸೋತು ಪರಮತವು ಕೈಮುಗಿದು (ಕನ್ನಜಾ. ೨೯೬). [ ಜಾತಿ + – ಗ₂ ]

**ಜಾತಿಗತ** (ಗು). ಜಾತಿಗಳಲ್ಲಿರುವ; ಜಾತಿಗೆ ವಿಶಿಷ್ಟವಾದ: ಈ ಬೃಹತ್ ಸತ್ತ್ವಯಲ್ಲಿ ಅದಕ್ಕಿಂತ ಸಣ್ಣ ವಿಭಾಗವಿರುತ್ತದೆ. ಅದನ್ನು ಜಾತಿಗತ ಸತ್ತೆ ಎನ್ನಬಹುದು (ನಿಬಂಧ. II, ೨೩೪). [ ಜಾತಿ + ಗತ₂ ]

**ಜಾತಿಗಳ್ಳ** (ನಾ). ಹುಟ್ಟುಗಳ್ಳ; ಪಕ್ಕಾಕಳ್ಳ: ಜಾತಿಗಳ್ಳನಾದ ಹುಡುಗ ಆ ಗುಂಪಿಗೆ ಸೇರಿದವನು (ಪುನರು. ೪೦೩). [ ಜಾತಿ + ಕಳ್ಳ₁ ]

**ಜಾತಿಗಾದೆ** (ನಾ). [ಛಂದ] ಪ್ರತಿಸಾಲಿನಲ್ಲಿಯೂ ಇಪ್ಪತ್ತುಮೂರು ಮಾತ್ರೆಗಳಿರುವ, ಮೂರು ಸಾಲಿನ ಪದ್ಯ: ಪದ(ಮುಂ) ಮೂಱಾಗಿಯುಂ ಶ್ಲೋಕದ ಲಕ್ಷಣಮಾಗಿಯುಂ ವಿದಿತಂ ಜಾತಿಗಾದೆ [ಪಾಠಾಂ. ಧೆ]ಯೆಂಬುದು ಸಂದಭಿಧಾನದಿಂದಿದನೋದು ವಿಲೋಲಪಟ್ಟದ ಸನ್ನಿಭಕುಂತಳೇ (ಛಂದೋಂಬು. ೩-೨೦): ಜಾತಿಗಾದೆ (ಸಂಸಪ. ೩೮).

[ ಜಾತಿ + ಗಾದೆ ]

**ಜಾತಿಗಾಯನ** (ನಾ). ಹದಿನೆಂಟು ಬಗೆಯ ವಿಶಿಷ್ಟರೀತಿಯ ಸ್ವರಗಳ ಹಾಡುಗಾರಿಕೆ: ಭರತನು ನಿರೂಪಿಸಿದ ಜಾತಿಗಾಯನ ಪದ್ಧತಿಯು ಫಲಭರಿತವಾಗಿ ಯಥೇಚ್ಛವಾಗಿ ಜನತೆಗೆ ಆನಂದಿಸಲನುವಾದುದೇ ಅಲ್ಲದೇ, ಇಂದೂ ಸಾರೋದ್ಧಾರವಾಗಿ ಫಲ ಬಿಡುತ್ತಲೇ ಇದೆ (ಭಾರದ. ೩೪೦).

[ ಜಾತಿ + ಗಾಯನ ]

**ಜಾತಿಗಾರ** 'ಜಾತಿಗಾಱ' ನೋ.

**ಜಾತಿಗಾಣ**, ಜಾತಿಕಾರ, ಜಾತಿಗಾರ (ನಾ). ಯಕ್ಷಗಾನ, ಬಯಲಾಟ, ನಾಟಕ ಮೊದಲಾದುವುಗಳಲ್ಲಿ ಅಭಿನಯಿಸುವುದೇ ವೃತ್ತಿಯಾದವನು; ನಟ: ಜಾತಿ[ಪಾಠಾಂ. ಲ,ಲೆ]ಗಾಣನ ಕಾಲು ಮುಳ್ಳು ತಾಗಿ ನೊಂದಿತ್ತೆಂಬಂತೆ ಸೊನೆಗಾಣನ ಮನೆಯಲ್ಲಿ ಹೆಣ ಹೋಗಿ ಅಳುವಂತೆ (ಅವಜಂ. ೨೯-೧೨೨). **ಜಾತಿಕಾರ**: ಹೊಟ್ಟೆಯ ಹೊರೆವ ಜಾತಿಕಾರನಂತೆ ನಾನೊಬ್ಬ ವೇಷಧರಿಸಿ (ವಿಶಾಸು. ೬೭-೧). **ಜಾತಿಗಾರ**: ನಮ್ಮ ಹಿರಿಯರು ಜಾತಿಗಾರರಿಂದ ಇಂಥ ಆಟಗಳನ್ನು ಆಡಿಸಿ ಅವರಿಗೆ ಯೋಗ್ಯ ಬಹುಮಾನವನ್ನು ಕೊಟ್ಟು ಕಳುಹಿಸುತ್ತಿದ್ದರಂತೆ (ಬೆಳುಮ. ೨೧೩); ನೀರ, ನೇಹಿಗ, ನಂಟ, ಬಂಟ, ಸಂವಾದಿ, ಗುರು, ಶಿಷ್ಯ, ಪ್ರೀತಿಯ ಜಾತಿಗಾರ ! (ಉಯ್ಯಾಲೆ. ೧೬-೪). [ ಜಾತಿ + – ಕಾಣ ]

**ಜಾತಿಗೂಟ** 'ಜಾತಿಕೂಟ' ನೋ.

**ಜಾತಿಗೊಯ್ಕ** (ನಾ). ಜಾತಿಯನ್ನು ಕೆಡಿಸುವವನು, – ಹಾಳುಮಾಡುವವನಂ; "ಧರ್ಮಲಂಡ" (ಜಾನಕೋ. ೬೦). [ ಜಾತಿ + ಕೊಯ್ಕ$_2$ ]

**ಜಾತಿಗೊಲ್ಲ** (ನಾ). ಹುಟ್ಟಿನಿಂದಲೆ ಗೊಲ್ಲನಾದವನು: ಗೊಲ್ಲನಲ್ಲದೆ ಜಾತಿಗೊಲ್ಲನು ಗೊಲ್ಲನೆ ತಾನೆಲ್ಲೆಡೆಯೊಳಂ ಗೊಲ್ಲನಾದೊಡೆ (ಬಸವು. ೪೦-೩೨). [ ಜಾತಿ + ಗೊಲ್ಲ$_2$ ]

**ಜಾತಿಜ** (ನಾ). ದೊಡ್ಡ ವಂಶದಲ್ಲಿ ಹುಟ್ಟಿದವನು; ಉತ್ತಮ ಕುಲದಲ್ಲಿ ಹುಟ್ಟಿದವನು. 'ಜಾತಿಜಾಂಗಣ' ಪರಾ. [ ಸಂ. ]

**ಜಾತಿಜಾಂಗಣ** (ನಾ). ದೊಡ್ಡ ವಂಶದಲ್ಲಿ ಹುಟ್ಟಿದವರ ಮನೆಯ ಪರಿಸರ; ಮನ್ನೆಯರ ಮನೆಯ ಅಂಗಳ: ಇಲ್ಲ . . . ಬಂದ ಮಾವಿಲ್ಲದ ನಂದನಂ ಕುಳಿರ್ವ ನಂದನವಿಲ್ಲದ ಜಾತಿಜಾಂಗಣಂ (ಅನಂಪು. ೩-೯). [ ಜಾತಿಜ + ಅಂಗಣ ]

**ಜಾತಿಜಾಣಕೆ** (ನಾ). ಸಹಜವಾದ ಜಾಣತನ; ಹುಟ್ಟುಗುಣವಾಗಿ ಬಂದ ಬುದ್ಧಿವಂತಿಕೆ: ಅಂದು ವಿಮಳೆಗೆ ಜಾತಿಜಾಣಕೆಯಿಂದಲಭಿನವ ಪಾಡುನೋಟಗಳಿಂದ ಬಳಿಕಲ್ಲಮನ ತೋಱಿಸುತಿರ್ದಳಾ ಮಾಯೆ(ಪ್ರಭುಲೀ. ೬-೨೮). [ ಜಾತಿ + ಜಾಣಕೆ ]

**ಜಾತಿಜಾರೆ** (ನಾ) ಹುಟ್ಟು ಹಾದರಗಿತ್ತಿ; ವ್ಯಭಿಚಾರದಲ್ಲಿ ಸಹಜ ಆಸಕ್ತಿಯುಳ್ಳವಳು: ಗಂಡನ ಕೈಯಿಂದ ಕರೆಯಿಸಿಕೊಂಬರು, ಮಿಂಡನ ಜಾತಿ ಜಾರೆಯರು (ಕುಂರಾಸಾಂ. ೨೫-೩೬). [ ಜಾತಿ + ಜಾರೆ ]

**ಜಾತಿಡೊಂಬ** (ನಾ). ಮಹಾ ಡಂಭಾಚಾರಿ; ಪಕ್ಕಾ ಮೋಸಗಾರ: ಮಾತಿನಂತೆ ಮನವಿಲ್ಲದ ಜಾತಿಡೊಂಬರ ನೋಡಿ ನಗುವ ನಮ್ಮ ಕೂಡಲ ಸಂಗಮದೇವ (ಬಸವ. ೬೫೦). [ ಜಾತಿ + ಡೊಂಬ$_2$ (<ದಂಬ) ]

**ಜಾತಿದ್ವೇಷ** (ನಾ). ೧. ಸ್ವಭಾವಸಿದ್ಧವಾದ ದ್ವೇಷ; ನೈಸರ್ಗಿಕವಾದ ಹಗೆತನ ೨. ವಿಭಿನ್ನಜಾತಿಗಳಲ್ಲಿ ಪರಸ್ಪರ ದ್ವೇಷ. ೩. ತನ್ನ ಜಾತಿಗೆ ಸೇರಿದವರೊಂದಿಗೆ ಹಗೆತನ. [ಜಾತಿ + ದ್ವೇಷ]

**ಜಾತಿಧರ್ಮ** (ನಾ). ೧. ಸಹಜಸಿದ್ಧ ಗುಣ; ಹುಟ್ಟುಗುಣ: ನೆಗಳದೀ ಚೌಷಷ್ಟಿಲಕ್ಷಣ ಜಾತಿಧರ್ಮದಲಿ (ಹರಿಸಾ. ೮೪); ದೊಡ್ಡ ಮೀನು ಸಣ್ಣ ಮೀನನ್ನು ನುಂಗುವುದು ಅದರ ಜಾತಿಧರ್ಮ (ರೂಢಿ). ೨. ಜಾತಿಯ ಸಂಪ್ರದಾಯ,–ಪದ್ಧತಿ,–ಆಚಾರ; ಶಾಸ್ತ್ರೋಕ್ತವಾದ ಅನುಷ್ಠಾನ: ಯುದ್ಧಮಾಡುವುದೇ ಕ್ಷತ್ರಿಯನಿಗೆ ಜಾತಿಧರ್ಮ (ರೂಢಿ). [ ಜಾತಿ + ಧರ್ಮ ]

**ಜಾತಿಪತ್ರೆ** (ನಾ). ಜಾಯಿಪತ್ರೆ: "ಜಾಯಿಫಳಮಾ ಜಾತಿಪತ್ರೆಯುಕ್ಕುಂ" (ಮಂಗರಾ. ೪೩-೪೨). [ ಸಂ. ಜಾತಿಪತ್ರ ]

**ಜಾತಿಪದ್ಧತಿ** (ನಾ). ಜಾತಿಗಳಾಗಿ ವಿಭಾಗಿಸುವುದು: ಗುಣಗಳೇ ಪೂಜಾಸ್ಥಾನವೆಂಬುದು ಅಂದಿನ ತತ್ತ್ವ. ಅದಕ್ಕೆ ಭಂಗವುಂಟಾದಂದಿನಿಂದ ಜಾತಿಪದ್ಧತಿಯು ಅಸಹ್ಯವಾಯಿತು (ಭಾರದ. ೩೮೯). [ ಜಾತಿ + ಪದ್ಧತಿ ]

**ಜಾತಿಪುರುಷ** (ನಾ). ಉತ್ತಮನಾದವನು; ಶ್ರೇಷ್ಠನಾದ ಮನುಷ್ಯ: ದುಡಿದುಂಬಿತನದಿಂದೆ ಓಡಿಯೆ ಪೆಣ್ಗಳು ಮೆಯ್ಮಱವರೆ ಜಾತಿಪುರುಷರು (ಕುಂರಾಸಾಂ. ೩೬-೧೦). [ ಜಾತಿ + ಪುರುಷ ]

**ಜಾತಿಫಲ** (ನಾ). ಜಾಯಿಕಾಯಿ. [ ಜಾತಿ + ಫಲ ]

**ಜಾತಿಬಧಿರ** (ನಾ). ಹುಟ್ಟಿದಂದಿನಿಂದಲೇ ಕಿವಿಕೇಳದವನು; ಹುಟ್ಟು ಕಿವುಡ: ಜಾತಿಬಧಿರನಂತನ್ಯರ ಕಿವಿಯೊಳ್ ಕೇಳ್ದುದಂ ನುಡಿವನಲ್ಲೆಂ (ಪಂಚತಂ. ೯೩-೫). [ ಜಾತಿ + ಬಧಿರ ]

**ಜಾತಿಬೆಳ್** (ನಾ). ಹುಟ್ಟಿನಿಂದಲೇ ದಡ್ಡನಾದವನು; ಅತಿ ದಡ್ಡ: ಸುಹೃದ್ಬಲಮಿಲ್ಲಮನಿಕ್ಕಿ ಯುದ್ಧಮಂ ಮಾಡಿದ ಜಾತಿಬೆಳ್ ನಿನಗದೇ ವಿರಿದೀಯೆಡಱ್ (ಪಂಪಭಾ. ೧೩-೫೪). [ ಜಾತಿ + ಬೆಳ್$_2$ ]

**ಜಾತಿಬ್ರಾಹ್ಮಣ** (ನಾ). ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವನು: ಜಾತಿಬ್ರಾಹ್ಮಣನಿಗಿಂತಲೂ ಗುಣಬ್ರಾಹ್ಮಣನು ಪೂಜ್ಯನೆಂದು ಸಿದ್ಧಾಂತವಿರುವುದು (ಹಿಂದಸಾ. ೧೫೬). [ ಜಾತಿ + ಬ್ರಾಹ್ಮಣ ]

**ಜಾತಿಭಂಗ** (ನಾ). ೧. ತನ್ನ ಜಾತಿಯನ್ನು ಪರಾಭವಗೊಳಿಸುವಿಕೆ. ೨. ಮಾಲತೀಪುಷ್ಪದ ನಾಶ; ಜಾಜಿಹೂವನ್ನು ಹಾಳುಮಾಡುವಿಕೆ. ೧, ೨: ಶಿಶಿರಸಮಯದಂತೆ ಜಾತಿಭಂಗಭಂಗುರಮುಂ . . . ಭದ್ರಲಕ್ಷಣಲಕ್ಷಿತಮುಮಪ್ಪ ಪಟ್ಟವರ್ಧನಮನೇಱ (ಮಲ್ಲಿಪು. ೫-೬೫ ವ). [ ಜಾತಿ + ಭಂಗ ]

**ಜಾತಿಭೇದ** (ನಾ). ಜಾತಿಜಾತಿಗಳಲ್ಲಿರುವ ಭಿನ್ನತೆ,–ಒಡಕು: ಜಾತಿಭೇದವಿಲ್ಲ ಸೂತಕವಿಲ್ಲ ಅಜಾತಂಗೆ ಕುಲವಿಲ್ಲ (ಬಸವ. ೪೦೬): ಹಿಂದುಗಳಲ್ಲಿ ಒಗ್ಗಟ್ಟಿಲ್ಲದಿರುವುದಕ್ಕೆ ಹಿಂದೂಜನಾಂಗದಲ್ಲಿರುವ ಜಾತಿಭೇದವೂ ಒಂದು ಮುಖ್ಯ ಕಾರಣವಾಗಿದೆ (ರೂಢಿ). [ ಜಾತಿ + ಭೇದ ]

**ಜಾತಿಭ್ರಂಶಕ**(ನಾ). ಜಾತಿಯನ್ನು ಕೆಡಿಸುವುದು,–ಹಾಳುಮಾಡುವುದು; ಹತ್ತು ಬಗೆಯ ಪಾಪಗಳಲ್ಲಿ ಒಂದು: ಜಾತಿಭ್ರಂಶಕವೆಂದು ಸಂಕೀರ್ಣಕವೆಂದು . . . ಪಾಪರಾಶಿಗಳೊಳು ದಶವಿಧವಾಗಿ ಮುಖ್ಯಪಾಪಗಣಂಗಳಿರ್ಕುಂ (ವಿವೇಕ. ೧೮೩). [ ಸಂ. ]

**ಜಾತಿಭ್ರಷ್ಟ** (ನಾ). ಜಾತಿಕೆಟ್ಟವನು: ಘೋಷಾಲನು ಜಾತಿಭ್ರಷ್ಟನೆಂದು ತಿಳಿದು ಆ ಪರಿವಾರಕ್ಕೆ ಸೇರಿದ್ದ ತನ್ನ ಸೊಸೆಯನ್ನೂ ತ್ಯಜಿಸಿಬಿಟ್ಟನು (ಕಪಾಕುಂ. ೩೪). [ ಜಾತಿ + ಭ್ರಷ್ಟ ]

**ಜಾತಿಮಣಿಯ** (ನಾ). ಒಂದು ಬಗೆಯ ತೆರಿಗೆ: ಮನೆದೆರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು. ೧. ಮನೆದೆರಿಗೆ . . . ೧೪. ಜಾತಿಮಣಿಯ (ಮಹಾವಂ. I, ೧೨೪). [ <ಸಂ. ಜಾತಿಮಾನ್ಯ ]

**ಜಾತಿಮದ** (ನಾ). ತಾನು ಮೇಲುಜಾತಿಯವನೆಂಬ ಗರ್ವ,–ಅಹಂಕಾರ: ಕುಲಮದವೊಂದು ರೂಪಮದವೊಂದು . . ಜಾತಿಮದವೊಂದು (ಪಂರಾಮಾ. ೬-೧೪); ಜಾತಿಮದ – ಇದೇ ಪ್ರಕಾರ ಸತ್ಪುರುಷರು ಜಾತಿಯ ಗರ್ವವನ್ನೂ ಕೂಡ ಮಾಡುವುದಿಲ್ಲ (ಶ್ರಾವಕಾ. ೮೦). 'ಕುಲಮದ' ಪರಾ. [ ಜಾತಿ + ಮದ$_1$ ]

**ಜಾತಿಮಲ್ಲಿಗೆ** (ನಾ). ಉತ್ತಮ ಬಗೆಯ ಮಲ್ಲಿಗೆ: ಮಾತಿನಲಿ ಜಾತಿಮಲ್ಲಿಗೆ, ಕೃತಿಯು ಬೂತುಮಡಕೆ (ನಲಮು. ೨೩-೬). [ಜಾತಿ+ಮಲ್ಲಿಗೆ]

**ಜಾತಿಮಾನ್ಯ** (ನಾ). = ಜಾತಿಮಣಿಯ: ಇವು ಪೂರ್ವಕಾಲದ ತೆರಿಗೆಗಳು; ಮನತೆರಿಗೆ, ಹುಲ್ಲಪಣ . . . ಜಾತಿಮಾನ್ಯ, ಮಗ್ಗಕಂದಾಯ (ನಮ್ಮನು. ೨೪೩). [ ಸಂ. ]

**ಜಾತಿಮುತ್ತು** (ನಾ). ಶ್ರೇಷ್ಠವಾದ ಮುತ್ತು; ಬಹಳ ಮೇಲುಮಟ್ಟದ ಮುತ್ತು: ಸ್ವಾತಿಯ ಹನಿ ಬಿದ್ದು ಜಾತಿಮುತ್ತಾದಂತೆ (ಸರ್ವಜ್ಞ. ೬೦೬); ಜಾತಿಮುತ್ತುಗಳೇ ಅವರಲ್ಲಿ ಅಪರೂಪವೆನ್ನಬೇಕು (ಹೇಮಕೂ. ೧೫). [ ಜಾತಿ + ಮುತ್ತು$_5$ ]

**ಜಾತಿರತ್ನ** (ನಾ). ಉತ್ತಮವಾದ ರತ್ನ ; ಶ್ರೇಷ್ಠವಾದ ಮಣಿ : ಇವನ ಮಾತುಗಳು ಯಾವಾಗಲೂ ಜಾತಿರತ್ನಗಳಂತೆ ಅಪರೂಪವಾಗಿರುವುವು (ರಾಜಾಮ. ೧೨೬). [ ಜಾತಿ + ರತ್ನ ]

**ಜಾತಿರಸಿಕ** (ನಾ). ಹುಟ್ಟುಗುಣವಾಗಿ ಬಂದ ರಸಿಕತೆಯುಳ್ಳವನು ; ಉತ್ತಮನಾದ ರಸಿಕ : ಜಾತಿರಸಿಕನೆ ನೀನು ಹಿಡಿದುದೆ ತಿರುಳು, ನುಡಿದುದೆ ಹುರುಳು (ಉದ್ಯಾ.ಲಿ. ೧೭-೭). [ ಜಾತಿ + ರಸಿಕ ]

**ಜಾತಿಲಿ** (ನಾ). ಒಂದು ಬಗೆಯ ವನಸ್ಪತಿ : (ವೃಜಿಗಿ. ೨೦-೩೭೦) [ ? ]

**ಜಾತಿವಂತ** (ಗು). ಜಾತಿಗೆ ಸೇರಿದ ; ಮೇಲುವುಟ್ಟಿದ ; ಉತ್ಕೃಷ್ಟವಾದ : ನಾಲ್ವತ್ತು ಗೆಳೆಯರ ಕೈ ಉಬ್ಬಿಸಿದವನ ತಲೆಯಿಂದ ನೆತ್ತರು ಪುಟಯಿಸದಿದ್ದರೆ ನಾನು ಜಾತಿವಂತ ಅಂಬಿಗನಲ್ಲ (ರಂಗರೋ. ೮೨). [ ಜಾತಿ + – ವಂತ ]

**ಜಾತಿವಳ** (ನಾ). ಉತ್ತಮಂ ಜಾತಿಗೆ ಸೇರಿದವನು: ತವೆ ಜೀವಿಪಪ್ಪಾದಶಂ ಗಳೆಂದೆನಿಪ ಜಾತಿವಳವ[ಪಾಠಾಂ. ಗ]ರ್ ನೂಱೊಂದು ಕುಲದವರ್ (ಜಿಬಪು. ೪೭-೪೩). [ ಜಾತಿ + – ವಳ (< – ವಾಳ$_1$) ]

**ಜಾತಿವಾಚಕ** (ನಾ). [ವ್ಯಾಕ] ವರ್ಗ ಅಥವಾ ಸಮೂಹವನ್ನು ತಿಳಿಸುವ ಪದ : ಜಾತಿವಾಚಕ, ಸಂಖ್ಯೇಯ ವಾಚಕ, ವಿಧೇಯವಾಚಕಗಳ ಮೇಲೆ ಬಹುವಚನಕ್ಕೆ ಪ್ರತಿಯಾಗಿ ಏಕವಚನವು ವಿಕಲ್ಪದಿಂದ ಬರುವುದು (ಕೈಪಿಡಿ. ೫೭). [ ಜಾತಿ + ವಾಚಕ ]

**ಜಾತಿವಾಡಿಕೆ** (ನಾ). ಜಾತಿಯ ಪದ್ಧತಿ ; ಕುಲದ ಸಂಪ್ರದಾಯ ; ಕುಲಾಚಾರ : ಇದೇ ನಮ್ಮ ಜಾತಿವಾಡಿಕೆ ಆಗಬೇಕು (ಮುನಿಮಾ ೫೭). [ ಜಾತಿ + ವಾಡಿಕೆ ]

**ಜಾತಿವಾದಿ** (ನಾ). ತನ್ನ ಜಾತಿಯು ಮಾತ್ರ ಮುಖ್ಯವೆಂಬ ಭಾವನೆಯಿಂಧ ವರ್ತಿಸುವವನು : ತಮ್ಮ ಜಾತೀಯತೆಯ ವ್ಯವಹಾರಕ್ಕೆ ಯಾರಾದರೂ ಅಡ್ಡಿಬಂದರೆ ಆ ರೀತಿ ಅಡ್ಡಿ ಬಂದವರನ್ನೇ ಜಾತಿವಾದಿಗಳೆಂದು ಕರೆಯುತ್ತಾರೆ (ಪಂಜಪಂ. ೦೬೭). [ ಸಂ. ಜಾತಿವಾದಿನ್ ]

**ಜಾತಿವಾಸ** (ನಾ). ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು : ಹದಿನೆಂಟಂಗುಳ ಮೊದಲಾಗಿ ಒಂದಂಗುಳ ಪರ್ಯಂತಮಾದ ಪರಿಮಾಣ ಕ್ರಮವಿಡಿದು ಜಾತಿವಾಸ . . . ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವಱಿತು (ವಿವೇಕ. ೨೩೭). [ ಜಾತಿ + ವಾಸ$_1$ ]

**ಜಾತಿವೀರ** (ನಾ). ಹುಟ್ಟುವೀರ ; ಸ್ವಭಾವದಿಂದಲೇ ಶೂರನಾಗಿರುವವನು ; ಶ್ರೇಷ್ಠವೀರ : ಜಾತಿವೀರರು ಸಾವ ಭೀತಿಗಂಜುಳಿವರೇ (ಸರ್ವಜ್ಞ. ೭೧೨). [ ಜಾತಿ + ವೀರ ]

**ಜಾತಿವೆಣ್** (ನಾ). ಉತ್ತಮಳಾದ ಮಹಿಳೆ ; ಶ್ರೇಷ್ಠನಾರಿ: ಜಾತಿವೆಣ್ಗಳ ವಾಸನೆಯಱಿಯದರಂತೆ ಅಸುರರತಿಗೆಳಸುವರೆ ವಿವೇಕವಿಲಾಸವಿಭವಮುಳ್ಳವರು (ಕುರಾಸಾಂ. ೩೭-೧೧). [ ಜಾತಿ + ಪೆಣ್ ]

**ಜಾತಿವೈರ** (ನಾ). = ಜಾತಿದ್ವೇಷ : ಜಾತಿವೈರಂಗಳಿಲ್ಲದ ಪಕ್ಷಿಮೃಗದ ಸಂಘಾತದಿಂ (ಜೈಮಿಭಾ. ೦೯-೪೩); ಇಲ್ಲಿ ಪ್ರಾಣಿಗಳೆಲ್ಲ ತಮ್ಮ ತಮ್ಮ ಜಾತಿವೈರವನ್ನು ಬಿಟ್ಟಿರುವುವು (ಸೀತಿಚಂ. XV, ೦೯); ನನಗೂ ನಿನಗೂ ಜಾತಿವೈರ (ವಚಭಾ. ೩೩೯). [ ಜಾತಿ + ವೈರ ]

**ಜಾತಿವ್ಯಾಪ್ತಿ** (ನಾ). ಒಂದು ಪದದ ಅರ್ಥದಲ್ಲಿ ಸೇರಬಹುದಾದ ಅರ್ಥವಿಸ್ತಾರ ; ಪದಗತವಾದ ಅರ್ಥಬೋಧಕಶಕ್ತಿಯ ಪ್ರಸಾರ ; ಅರ್ಥವ್ಯಾಪ್ತಿ : ಯಾವುದೇ ಸುಸಂಸ್ಕೃತ ಶಬ್ದದ ಜಾತಿವ್ಯಾಪ್ತಿ (denotation) ಮತ್ತು ಗುಣವ್ಯಾಪ್ತಿ (Connotation)ಗೆ ಪೂರ್ಣವಾಗಿ ಸರಿಹೋಗುವ ಶಬ್ದವು ಮತ್ತೊಂದು ಭಾಷೆಯಲ್ಲಿ ದೊರೆಯುವುದು ಅಸಾಧ್ಯವೇ ಆಗಿದೆ (ಸಾಹಿವಿ. ೧೨೦). 'ಗುಣವ್ಯಾಪ್ತಿ' ಪರಾ. [ ಜಾತಿ + ವ್ಯಾಪ್ತಿ ]

**ಜಾತಿಸಂಕರ** (ನಾ). ೧. ಜಾತಿಗಳ ಬೆರಕೆ ; ಬೇರೆ ಬೇರೆ ಜಾತಿಗಳು ಕಲಬೆರೆಕೆಯಾಗುವುದು; ವರ್ಣಸಂಕರ. ೨. ವರ್ಣಸಂಕರವಾದವನು: ಕುಲವನಱಸುವರೆ ಶರಣರಲ್ಲಿ ಜಾತಿಸಂಕರನಾದ ಬಳಿಕ (ಬಸವ. ೭೦೭); ಬಾಲಾಶೋಕಂ ವಿಗ್ರಹಲೀಲೆ ರಜೋವಿಕೃತಿ ಜಾತಿಸಂಕರಮನಿಲೋಲ್ಲಾಲತರ ಶಿಖಿಶಿಖಾಕುಳಕೋಳಾಹಳಮಿಲ್ಲ ಬನದೊಳಲ್ಲದೆ ಜನದೊಳ್ (ಪುಷ್ಪಪು. ೨-೨೮). [ ಜಾತಿ + ಸಂಕರ$_2$ ]

**ಜಾತಿಸಂಮೋಹನ** (ನಾ). ಜಾತಿಯ ಮೇಲಿನ ಮಮತೆ,–ಪ್ರೇಮ,–ಅಭಿಮಾನ : ಪೂರ್ಣವರ್ಜಿಕ್ಕೆಗಳೆಂದೆ ಜಕ್ಕವಕ್ಕಿಗಳಗಲದೆ ಮೊಗಸಿದುವು ಜಾತಿಸಂಮೋಹನದಿಂ (ಮಲ್ಲಿಪು. ೬-೧೦೦). [ ಜಾತಿ + ಸಂಮೋಹನ ]

**ಜಾತಿಸಿಂಗರ** (ನಾ). ಸಹಜಶೃಂಗಾರ ; ಹುಟ್ಟುಗುಣವಾದ ಸೊಗಸು : ಹರೆಯದ ಕೋಮಲಾಂಗಿಯರು ಸರ[ರಿ] ಸರಿಕೆಯೊಳೆಯ್ದುತಿದ್ದರು ಜಾತಿಸಿಂಗರಗೂಡಿ ಕಣ್ಗೆ ಮೋಹಿಸುತ (ಭರಚ. ೪೩-೩೦). [ ಜಾತಿ + ಸಿಂಗರ (<ಸಿಂಗಾರ) ]

**ಜಾತಿಸಿಪಾಯಿ** (ನಾ). ಶ್ರೇಷ್ಠ ಸಿಪಾಯಿ ; ಉತ್ತಮನಾದ ಸಿಪಾಯಿ : ಪಾಳೆಗಾರ ಮಾತ್ರ ನಮ್ಮ ಕೈಗೆ ಜೀವಸಹಿತ ಸಿಕ್ಕುವವನಲ್ಲ, ಜಾತಿಸಿಪಾಯಿಯಾಗಿದ್ದಾನೆ (ಚಿತ್ರಪಾ. ೯೦). [ ಜಾತಿ + ಸಿಪಾಯಿ ]

**ಜಾತಿಸು** (ಕ್ರಿ). ಹುಟ್ಟಿಸು ; ಉತ್ಪತ್ತಿಮಾಡು : ಮಾತೆ ಕೇಳೌ ಎನ್ನ ಮಾತನು ತಾತರಿಬ್ಬರದೇನು ನಿಮ್ಮೊಳು ಜಾತಿಸಿದ ಪರಿಯೇನು ನಿಮ್ಮಲಿ ಬಂದ ಪರಿಯೇನು (ಕುವ್ಯಾಉ. ಒರಿಇ. ೧೧-೩೦ ಅಡಿಟಿ). [ ಜಾತಿ + – ಇಸು$_3$ ]

**ಜಾತಿಸೂತಕ** (ನಾ). ಪಂಚಸೂತಕಗಳಲ್ಲಿ ಒಂದು; ಹೀನಜಾತಿಯವರ ಸ್ಪರ್ಶದಿಂದ ಉಂಟಾಗುವುದೆಂದು ಭಾವಿಸಲಾದ ಮೈಲಿಗೆ; ಅಶುಚಿ: ಭಕ್ತಿಗೆಯೂ ಬೇಟಕ್ಕೆಯೂ ಜಾತಿಸೂತಕವುಂಟೆ (ಬಸವ. ೫೩೯); ಜಾತಿಸೂತಕ ಜನನಸೂತಕ ಪ್ರೇತಸೂತಕ ಉಚ್ಛಿಷ್ಟಸೂತಕ ಪ್ರಜಾಸೂತಕವೆಂಬ ಪಂಚಸೂತಕಗಳನಳಿದಾತನಾಗಿ (ವಿವೇಕ. ೧೧೧). [ ಜಾತಿ + ಸೂತಕ ]

**ಜಾತಿಸ್ಮರ** (ನಾ). ಪೂರ್ವಜನ್ಮದ ನೆನಪುಳ್ಳವನು,–ಸ್ಮರಣೆಯುಳ್ಳವನು: ಆದಿನಾಥನ ಮುನಿರೂಪಮಂ ಕಾಣಲೊಡಂ ಜಾತಿಸ್ಮರನಾಗಿ ಮಾರ್ಗಸ್ಥಿತಿಯನಱಿದು (ಆದಿಪು. ೧೦-೮ ವ); ಎನಿತಂ ಜಾತಿಸ್ಮರನಪ್ಪನಿಮೇಷಂ ಜೀವಿತಾಂತ್ಯದೊಳ್ (ಯಶೋಚ. ೩-೩೧). [ ಸಂ. ]

**ಜಾತಿಸ್ಮರತೆ** (ನಾ). ಹಿಂದಿನ ಜನ್ಮದಲ್ಲಿ ನಡೆದ ಸಂಗತಿಗಳ ನೆನಪು,–ಸ್ಮರಣೆ : ಜಾತಿಸ್ಮರತೆ ವಿರಕ್ತಿಗೆ ಹೇತುವೆನುತ್ತಿರ್ಪರ್ (ಕಾದಂಉ. ೬೯೫). [ ಸಂ. ಜಾತಿಸ್ಮರತಾ ]

**ಜಾತಿಸ್ಮರತ್ವ** (ನಾ). = ಜಾತಿಸ್ಮರತೆ : ಜಾತಿಸ್ಮರತ್ವದಿಂದಂ ಭೂತಳದೊಳ್ ತಮ್ಮ ಭವಮನಱಿವರ್ ಕೆಲರುಂ (ಧರ್ಮಾಮೃ. ೯-೧೦೦); ಭೋಗಾವತೀ ನದಿಯ ಪುಳಿನಸ್ಥಳಂಗಾಣುತೆ ಪಿರಿದೆನಗೆ ಜಾತಿಸ್ಮರತ್ವಮುಂ ತೋಱಿತ್ತು (ಅರಾಚ. ೯-೭೧); ಪಿಂದಣ ಜಾತಿಸ್ಮರತ್ವ ಕೆಟ್ಟು ಮತಿ ಮಸುಳಿಸಿ ತನ್ನ ಮಲಮೂತ್ರಂಗಳಲ್ಲಿ ತಾ ಹೊರಳಾಡಿ (ಅಬುಂದೀ. ೦೦-೭). [ ಸಂ. ]

**ಜಾತಿಸ್ಮರೆ** (ನಾ). ಹಿಂದಿನ ಜನ್ಮದ ನೆನಪುಳ್ಳವಳು : ಋಷಿಯರಂ ಕಂಡು ಜಾತಿಸ್ಮರೆಯಾಗಿ (ವಡ್ಡಾರಾ. ೧೨-೨೩). [ ಸಂ. ಜಾತಿಸ್ಮರಾ ]

**ಜಾತಿಹಗಿನು** (ನಾ). ಒಂದು ಬಗೆಯ ಮೇಣ,–ಅಂಟು : "ವತ್ಸನಾಭಃ–ನಾಭಿ, ಜಾತಿಹಗಿನು" (ಒಷಧಿ. ೧೪೮). [ ಜಾತಿ$_1$ + ಹಗಿನು (<ಪಗಿನ್) ]

**ಜಾತಿಹೀನ** (ನಾ). ಜಾತಿಯಿಂದ ಕೀಳಾದವನು; ಕೀಳುಜಾತಿಯವನು: ಜಾತಿಹೀನರ ಕರ್ಮವೃತ್ತಮಜಾತಿಗಳ ಕರ್ತವ್ಯ ತಿರ್ಯಗ್ಜಾತಿಗಳ ಗತಿಧರ್ಮ ವೃತ್ತಿಯ ಸೇರುವೆಯನಱಿದು (ಕುವ್ಯಾಕ. ೫-೩೦); ಜಾತಿಹೀನರ ಮನೆಯ ಜ್ಯೋತಿ ತಾ ಹೀನವೇ (ಸರ್ವಜ್ಞ. ೯೭೬). [ ಜಾತಿ + ಹೀನ ]

**ಜಾತೀಪತ್ರ** (ನಾ). = ಜಾತಿಪತ್ರೆ : ಮಲಯಜ ಕುಂಕುಮ ಜಾತೀಫಳ ಜಾತೀಪತ್ರ . . . ಲವಂಗ ಪ್ರಮುಖ ಸುರಭಿಪರಿಕರಯುತಮಂ (ಪುಷ್ಪಪು. ೦೦-೪೩). [ ಸಂ. ]

**ಜಾತೀಫಲ, ಜಾತೀಫಳ** (ನಾ). = ಜಾತಿಫಲ : ಕಾಳಾಗರು ಕರ್ಕೋಳ ಜಾತೀಫಲ ಜಾತೀಪತ್ರ . . . ಕುಂದುರುಷ್ಕಾದಿ ಸುಗಂಧದ್ರವ್ಯ ಸಹಿತನಾಗಿ (ಅಜಪು. ೪-೭೦ ವ). **ಜಾತೀಫಳ** : ಮಲಯಜ ಕುಂಕುಮ ಜಾತೀಫಳ ಜಾತೀಪತ್ರ . . . ಪ್ರಮುಖ ಸುರಭಿಪರಿಕರಯುತಮಂ (ಪುಷ್ಪಪು. ೦೦-೪೩). [ ಸಂ. ]

**ಜಾತೀಫಳ** 'ಜಾತೀಫಲ' ನೋ.

**ಜಾತೀಯತೆ** (ನಾ). ೧. ಜಾತಿಗೆ ಸಂಬಂಧಪಡುವಿಕೆ. ೨. ಜಾತಿ, ಕೋಮುಗಳಿಗೆ ಪ್ರಾಶಸ್ತ್ಯವನ್ನು ಕೊಡುವಿಕೆ ; ಕೋಮುವಾರು ಭಾವನೆ : ನಮ್ಮ ದೇಶದಲ್ಲಿ ಜಾತೀಯತೆಯು ತಲೆಹಾಕಿ ರಾಷ್ಟ್ರಪ್ರಗತಿಯನ್ನೇ ಕುಂಠಿತಗೊಳಿಸುತ್ತಿದೆ (ರೂಢಿ). [ ಸಂ. ಜಾತೀಯತಾ ]

**ಜಾತೀಲತೆ** (ನಾ). ಜಾಜಿಬಳ್ಳಿ; ಮಾಲತಿಬಳ್ಳಿ: ಜಾತೀಲತೆಯ ಯೂಥಿಕಾಲತೆಯ ವಿಚಕಿಲಲತೆಯ ಮಂಡಪಂಗಳುಂ ಮನೋಹರಂಗಳೆನಿಸಿರ್ದುವು (ಚಂದ್ರಪು. ೦-೦೦೬). [ ಸಂ. ಜಾತೀಲತಾ ]

**ಜಾತುಚಿತು** (ಅ). ಎಂದಾದರೂ ; ಯಾವಾಗಲಾದರೂ : ತಾತನಾಡಿದ ನುಡಿಗೆ ಜಾತುಚಿತು ಪುಸಿಯೆಂಬ ಮಾತುಂಟೆ (ವೆಂಕಾರಾ. ೨-೮-೧೨). [ ಸಂ. ಜಾತುಚಿತ್ ]

**ಜಾತೆ** (ನಾ). ೧. ಹುಟ್ಟಿದವಳು ; ಜನಿಸಿದವಳು. 'ಅಗಜಾತೆ' ಪರಾ. ೨. ಮಗಳು ; ಪುತ್ರಿ : ಜಾತೆ, ನಿಜಗುಣಗಳಿಂದೆ ಯಯಾತಿಗೆ ಶರ್ಮಿಷ್ಠೆಯಂತೆ ಪತಿಹಿತೆಯಾಗು (ಶಾಕುಂತ. ೫೨-೮೫). [ ಸಂ. ಜಾತಾ ]

**ಜಾತೋತ್ಸವ** (ನಾ). ಜಾತಕರ್ಮದ ಸಮಾರಂಭ ; ಹುಟ್ಟುಹಬ್ಬ : ಅಂತಮಳಂ ಪೆತ್ತು ಮಹಾವಿಭೂತಿಯಿಂ ಜಾತೋತ್ಸವಮಂ ಮಾಡಿ (ಪಂಚಾಮೂ. ೧೬-೨ ವ). [ ಜಾತ + ಉತ್ಸವ ]

**ಜಾತ್ಯ** (ಗು). ೧. ಒಳ್ಳೆಯ ಜಾತಿಯಲ್ಲಿ ಹುಟ್ಟಿದ ; ಸತ್ಕುಲ ಪ್ರಸೂತವಾದ. (ನಾ). ೨. ಸತ್ಕುಲದಲ್ಲಿ ಹುಟ್ಟಿದವನಂ ; ಕುಲೀನ. ೩. ಚೆಲುವ; ಸುಂದರ : "ಸತ್ಕುಲನೊಳು ಸೌಮ್ಯನೊಳು ಜಾತ್ಯನೆಂಬುದು" (ಮಂಗರಾ. ೦೪೨-೦೮). ೪. ಉತ್ತಮ ; ಶ್ರೇಷ್ಠ. ೫. ಪರಾಕ್ರಮ; ಶಕ್ತಿ: "ಅತಿಬಲ್ಪು ಕುಲೀನ ಸೌಮ್ಯಮೊಳ್ಪೆನಿಪುವು ಜಾತ್ಯಶಬ್ದಂ" (ನಾನಾರ. ೭೫). [ ಸಂ. ]

**ಜಾತ್ಯಂತರ** (ನಾ). ಬೇರೆ ಜಾತಿ,-ಗುಂಪು,-ವರ್ಗ : ಕ್ಷೀರಗುಡಾದ್ಯಂತರ ರಸಾಂತರಂ ಜಾತ್ಯಂತರಮಪ್ಪಂತನಂತಮಂತರ್ಭೇದಂ (ಕವಿರಾ. ೨-೯೫) : ಜಾತ್ಯಂತರವನ್ನು ಗ್ರಹಣಮಾಡಿ ಸಪರಿವಾರವಾಗಿ ಎಲ್ಲರೂ ಮಹಮ್ಮದೀಯ ಹೆಸರನ್ನು ಧಾರಣೆಮಾಡಿದರು (ಕಪಾಳುಂ. ೩೪). [ ಸಂ. ]

**ಜಾತ್ಯಂತರವಿವಾಹ** (ನಾ). ಒಂದು ಜಾತಿಗೆ ಸೇರಿದವರು, ಬೇರೆ ಜಾತಿಗೆ ಸೇರಿದವರೊಂದಿಗೆ ಮಾಡಿಕೊಳ್ಳುವ ಮದುವೆ ; ಅಂತರ್ಜಾತೀಯ ವಿವಾಹ : "ಬೇರೆ ಬೇರೆ ಮನೆತನ, ಕುಲ, ಬುಡಕಟ್ಟು, ಜಾತಿ, ಮೊ.ಕ್ಕೆ ಸೇರಿದ ಗಂಡು ಹೆಣ್ಣಿಗೆ ಮದುವೆ; ಕುಲಾಂತರ, ಜಾತ್ಯಂತರ,-ವಿವಾಹ" (Inter marriage. ಇಂಕನಿ). [ ಜಾತ್ಯಂತರ + ವಿವಾಹ ]

**ಜಾತ್ಯಂಧ** (ನಾ). ೧. ಹುಟ್ಟಿನಿಂದಲೇ ಕುರುಡನಾದವನಂ ; ಹುಟ್ಟುಗುರುಡ : ಜಾತ್ಯಂಧನಂತೆ ಪೆಱರ ಕಾಣ್ಕೆಯೊಳ್ ಕಂಡುದಂ . . . ನುಡಿವನಲ್ಲಂ (ಪಂಚತಂ.೯೩-೪); ಇಳೆಯೊಳಗೆ ಜಾತ್ಯಂಧನಾಗಿರ್ದಲಘುಮತಿ ಶಿವಮಜ್ಜನಾರ್ಥಕೆ ಕೊಳನನಗೆಯಲು (ಬಸವು. ೪೮-೪೩) ; ಜಾತ್ಯಂಧಂ ಕಣ್ಬಡೆದಂತೆ ನಿರತಿಶಯ ಸಂಮದಮನೊಳಕೊಂಡು (ಶಬಶಂ. ೫-೦೪ ವ). ೨. ಜಾತಿಯಂ ವಿಷಯದಲ್ಲಿ ದುರಭಿಮಾನವುಳ್ಳವನು ; ಜಾತಿಯ ಅಭಿಮಾನದಿಂದ ಯುಕ್ತಾಯುಕ್ತ ವಿಚಾರಶೂನ್ಯನಾದವನು : ಈ ಜಾತ್ಯಂಧನು ದೇಶದ ಮುಖಂಡನೆನಿಸಿಕೊಳ್ಳಲು ಅರ್ಹನೇ ಅಲ್ಲ (ರೂಢಿ). [ ಜಾತಿ + ಅಂಧ ]

**ಜಾತ್ಯಂಧಕ** (ನಾ). ಹುಟ್ಟುಗುರುಡ. 'ಜಾತ್ಯಂಧಕಿ' ಪರಾ. [ ಜಾತಿ + ಅಂಧಕ ]

**ಜಾತ್ಯಂಧಕಿ** (ನಾ). ಹುಟ್ಟುಗುರುಡಿ : ದುರ್ವರ್ಣೆ ಜಾತ್ಯಂಧಕಿ ಗೋಳಾಂಗೂಳ ಲೋಳಾನನೆಯೆನಿಸಿದ ಪಾಪಕ್ಕೆ ಪಕ್ಕಾಗಿ (ಸುಕುಮಾ. ೫-೩೦). [ ಜಾತ್ಯಂಧಕ + - ಇ$_2$ ]

**ಜಾತ್ಯಂಧೆ** (ನಾ). = ಜಾತ್ಯಂಧಕಿ : ನೇಱಲಪಣ್ಣಳಂ ತಡವರಿಸಿ ಆಯ್ದು ತಿನ್ಬ ಜಾತ್ಯಂಧೆಯಪ್ಪ ಪೊಲೆಯರ ಕೂಸಂ ಕಂಡು (ವಡ್ಡಾರಾ. ೯-೦೭) : ಪುರುಷನಂ ಜಾತ್ಯಂಧೆಯಾದ ವಧುವಱಿವಳೇ (ವೀಶ್ವಪು. ೩-೬-೩೭). [ಸಂ. ಜಾತ್ಯಂಧಾ ]

**ಜಾತ್ಯತೀತ** (ಗು). ೧. ಜಾತಿಯನ್ನು ಮೀರಿದ ; ಜಾತಿಭಾವನೆಯನ್ನು ಬಿಟ್ಟ: ಪ್ರಾಚೀನ ಭಾರತದಲ್ಲಿ ಸೂತಮಂಡಲ ಜಾತ್ಯತೀತ ಸಂಸ್ಥೆಯಾಗಿತ್ತು (ಭಾರದ. ೧೩೮). (ನಾ). ೨. ಜಾತಿಯನ್ನು ಮೀರಿದವನು ; ಜಾತಿಯ ದುರಭಿಮಾನವನ್ನು ಬಿಟ್ಟವನು : ಪ್ರಭುಗಳು . . . ಜಾತ್ಯತೀತರು, ಭಗವದ್ಭಕ್ತರು (ಶಾಂತಲಾ. ೧೩೫). [ ಜಾತಿ + ಅತೀತ ]

**ಜಾತ್ಯಶ್ವ** (ನಾ). ಉತ್ತಮ ಬಗೆಯ ಕುದುರೆ ; ಶ್ರೇಷ್ಠವಾದ ಕುದುರೆ: ದಂಡಕಂ ಬಂದನೆಂಬ ವಾರ್ತೆಯಂ ಕೇಳಲೊಡಂ ಜಾತ್ಯಶ್ವಮನೇಱಿ ಓಡುವನ ಮಂತ್ರಿ ತಗುಳ್ದೋಡಲೀಯದೆ ಮಾಣಿಸಿ (ವಡ್ಡಾರಾ. ೦೭೩-೦೨) ; ಎಲ್ಲಿ ಗಜ ಜಾತ್ಯಶ್ವವೆಲ್ಲಿ ವರೂಥ ಸಂದೋಹ . . . ಅಲ್ಲಿ ತನ್ನಾಧೀನಮಾಡಲು ಬಲ್ಲವನೆ ನೃಪನು (ಕುವ್ಯಾಉ. ೩-೭೪) ; ಹರಿಹರನ ಕ್ರಮ ಕಡಿವಾಣಗಳ ಪರಿವೆಯಿಲ್ಲದೆ ದೂರದೇಶಕ್ಕೆ ಹೊರಟ ರಥದ ಜಾತ್ಯಶ್ವಗಳ ಓಟಕ್ಕೆ ಸಮಾನವಾಗಿರುವುದು (ಸಾಹಿಸ. ೦೪೦). [ ಜಾತಿ + ಅಶ್ವ ]

**ಜಾತ್ರೆ** (ನಾ). ೧. ಪುಣ್ಯಕ್ಷೇತ್ರದರ್ಶನವೇ ಮೊದಲಾದ ಧಾರ್ಮಿಕೋದ್ದೇಶದಿಂದ ಮಾಡುವ ಪ್ರಯಾಣ; ಯಾತ್ರೆ: ಜಾತ್ರೆಗಳಂ ಪೊರಮಡುವಲ್ಲಿ (ಸೌಗಂಧಿ. ೪೯೬-೯). 'ಜಾತ್ರೆಗ' ಪರಾ. ೨. ಯಾವುದಾದರೊಂದು ದೇವತೆಯ ರಥೋತ್ಸವವೇ ಮೊದಲಾದ ವಿಶೇಷ ಕಾರ್ಯಕ್ರಮ : ಎಕ್ಕಲದೇವಿಗೆ ಮಾಮಾಲಕ್ಕನಿಗಂ . . . ಜಾತ್ರೆಯ ಮಾಟ್ಟಂ ವೊಕ್ಕಳಗಂ ಜೈನನಲ್ಲಂ (ಸಮುಪ. ೪-೦೨೩); ಆ ದೇವಿಯ ಜಾತ್ರೆಗೆ . . . ಬಂದುದಂದು ಬಸಂತಂ (ಯಶೋಚ. ೧-೩೩); ವರುಷ ವರುಷಕ್ಕೆ ಮಾರ್ಗಸಿರಮಾಸದೊಳ್ ಜಾತ್ರೆಯಾಗಲ್ (ಪುಣ್ಯಾಸ್ರ. ೪-೦೦ ವ) ; ವೀರಭದ್ರನ ಜಾತ್ರೆಗೆಲ್ಲಾ ನಾರಿಯರು ಹೋಗುತಮಿರಲು (ಬಸಪು. ೪೨-೦೦). ೩. ದೇವರ ರಥೋತ್ಸವ ಮುಂತಾದ ಸಂದರ್ಭದಲ್ಲಿ ಸೇರುವ ಜನರ ಗುಂಪು,-ಸಮೂಹ ; ಪರಿಸೆ : ಸೂಚಿಸಿದಲ್ ನೆರೆದ ಜಾತ್ರೆ ನೆಱೆ ಕೇಳ್ವಿನೆಗಂ (ಯಶೋಚ. ೪-೭೩): ವಿಸ್ಮಯವನುನೋಡುವೆವೆಂದು ಜನ ಜಾತ್ರೆಯಾದುದಾಗ (ಸಮ್ಯಕೌ. ೨-೬೪) ; ಇಂತಹ ಗಾದೆಯ ಮುಕ್ತಕಗಳನೋದೆ ಜನವೇಕೆ ಜಾತ್ರೆಯ ಮರುಳು (ಇಂಜಾಪ. ೨೩೦-೪೯); ತೇರಾದ ಮೇಲೆ ಜಾತ್ರೆ ನೆರೆಯಿತು (ಗಾದೆ). [ <ಸಂ. ಯಾತ್ರಾ ]

**ಜಾತ್ರೆಗ** (ನಾ). ೧. ತೀರ್ಥಯಾತ್ರೆಗಾಗಿ ಪ್ರಯಾಣ ಹೊರಟವನಂ ; ಯಾತ್ರಾರ್ಥಿ: ತೋರ್ಪೀ ಸಂಗಮದೊಳ್ ಮೊದಲೊರ್ಮೆ ಮಿಾಯದಿರ್ಪ ಜಾತ್ರೆಗರ್ಗೆ ಬೆಟ್ಟಂ ದಿಟ್ಟಿಗೆ ಬಾರದೈಸೆ (ರಾಮಾಶ್ವ. ೮೨-೬) ; ಜಾತ್ರೆಗರ ಸಂತೆಯ ಕೋಲಾಹಲ (ಬಿರುಗಂ. ೦೨-೧). ೨. ಪ್ರಯಾಣಿಕ : ಅರಿದರಿಯದೆಯೆ ಕಾವ್ಯಮಾರ್ಗದಲ್ಲಿ ನರಂ ತರುಗಳಂ ಮಾಲಿಸುತೆ ಪೋಪ ಜಾತ್ರೆಗರಂ ಪರಿಕಿಸುತೆ (ಸಂಸಪ. ೨೦-೫೪). [ ಜಾತ್ರೆ + - ಗ$_2$ ]

**ಜಾತ್ರೆಮಾಳ** (ನಾ). ಜಾತ್ರೆ ನೆರೆಯುವ ಮೈದಾನ,-ಸ್ಥಳ : ಒಂದೊಂದು ಕರುವಿಗೂ ಒಂದೊಂದು ಹಾಗದ ಕಾಸು ಕೊಟ್ಟರೂ ಅದು ಸಾಲದೆಂದು ಜಾತ್ರೆಮಾಳದಲ್ಲಿ ಕಟ್ಟುವುದಕ್ಕೆ ಜಾಗ ಕೊಡದೆ (ಜಂಗಾಳ್ಕ. ೩೩೨).
[ ಜಾತ್ರೆ + ಮಾಳ$_4$ ]

**ಜಾತ್ರೆಯೋಗು** (ಕ್ರಿ). ಪ್ರಯಾಣಮಾಡು,-ಹೋಗು; ಗುಂಪುಗುಂಪಾಗಿ ಹೋಗು: ಮಲ್ಲಿಕಾರ್ಜುನನೆರಟ್ಟೋಳಾದುದಂ ಕಂಡುಗಂಡು ಸಮುಗ್ರಂ ಸಲೆ ಜಾತ್ರೆಯೋ[ಪಾಠಾಂ.ಯಾ]ಗಿ ಭರದಿಂ ಬೆಟ್ಟೇರಿಯುಂ ಮತ್ತೆ ಪೂಜಿಸುವರ್ (ಸಮುಪ. ೯-೯). [ ಜಾತ್ರೆ + ಪೋಗು$_1$ ]

**ಜಾದಗೆ** 'ಚಾದಗೆ' ನೋ.

**ಜಾದಗೆವಕ್ಕಿ** 'ಚಾದಗೆವಕ್ಕಿ' ನೋ.

**ಜಾದಾ** (ಗು). ಹೆಚ್ಚಾದ ; ಅಧಿಕವಾದ ; ಜಾಸ್ತಿಯಾದ : ಯುಗಾದಿ ಹಬ್ಬಕ್ಕಾಗಿ ಒಂದು ಜಾದಾ ಸಂಚಿಕೆ ಹೊರಡಿಸುತ್ತೇವೆ (ರೂಢಿ).
[ ←ಮರಾ. ಜಾದಾ ; ಹಿಂ. ಜ್ಯಾದಾ ; ಅರ. ಜಿಯಾದಹ್ ]

**ಜಾದಿ, ಜಾಜಿ$_1$, ಜಾಯಿ$_1$** (ನಾ). ೧. ಜಾಜಿಗಿಡ ಮತ್ತು ಅದರ ಹೂವು; ಮಾಲತಿ : "ಜಾದಿಯೆಂದು ಮಾಲತಿ" (ಕಶಸಾ. ೯-೧೮೨) ; "ಜಾದಿ ಮಾಲತಿಯಕ್ಕುಂ" (ಕವಿಕಂ. ೭೩) ; ಪೊದಟ್ಟ ಜಾದಿಯೊಳ್ ಮಸಗಿದ ಕಂಪು (ಪಂಪಭಾ. ೧೦-೪) ; ಜಾದಿ ಮೊದಲಾದನೇಕಂ ಪೂದೋಂಟಂ ಸುರಭಿ ಪರಿಮಳಾಮೋದಂಗಳ್ (ಎಕ. VIII, ಸಾಗರ. ೧೦೯-೫೦ ; 1042) ; ಅಂಡಲೆದು ಜಾದಿಯಂ ಬಂಡುಂಡಳಿಯಂ ಮಿಕ್ಕು ಮಧುಕರಂಗಳ್ ಭರದಿಂ ಬಂಡುಣ್ಬುವೆನೆ (ಗಿರಿಕ.೨-೭೭). ೨. ಜಾಯಿಕಾಯಿ ಎಂಬ ಸುವಾಸನೆಯ ಪದಾರ್ಥ . 'ಜಾದಿಕಾಯ್' ಪರಾ. **ಜಾಜಿ$_1$ :** ೧. "ಸುಮನಾ, ಮಾಲತೀ, ಜಾತೀ, ಈ ೩ ಜಾಜಿ" (ನಾಚಿರಾ. ೧೦೮); ಸೊದರ ಬೆಳಗಿನೊಳ್ ಕೊರಗುವ ಜಾಜಿ[ಪಾಠಾಂ.ದಿ]ಯಂ ತುಂಬಿಯೊಳ್ ಪಗೆಗೊಂಡ ಸಂಪಗೆಯುಂ (ಆದಿಪು. ೧೧-೧೦೯) ; ಅಲ್ಲಿಗಲ್ಲಿಗೆ ಜಾಜಿ ಸುರಹೊನ್ನೆ ಸಂಪಗೆ ಮಲ್ಲಿಗೆ ಹೊಗರೇರಿದುವು (ಮೋಹತ. ೬-೧೧) ; ಕತ್ತುರಿ ಸೇವಂತಿಗೆ ದುಂಡುಮಲ್ಲಿಗೆ ಮೊತ್ತದ ಜಾಜಿ ಸಂಪಗೆಯು (ಕಂಸವಿ. ೬-೮೨). ೨. 'ಜಾಜಿಕಾಯ್' ಪರಾ. **ಜಾಯಿ :** ೨. 'ಜಾಯಿಕಾಯಿ' ಪರಾ.
[ <ಸಂ. ಜಾತಿ/ಪ್ರಾ. ಜಾಇ. ]

**ಜಾದಿಕಾಯ್, ಜಾಕಾಯಿ, ಜಾಜಿಕಾಯ್, ಜಾಜಿಕಾಯಿ, ಜಾಯಿಕಾಯಿ** (ನಾ). ಅಡಕೆ ಮೊದಲಾದುವುಗಳ ಜೊತೆಯಲ್ಲಿ ಸೇರಿಸಲ್ಪಡುವ ಒಂದು ಬಗೆಯ ಪರಿಮಳವನ್ನು ಕೊಡುವ ಕಾಯಿಯನ್ನು ಬಿಡುವ ಮರ ಮತ್ತು ಅದರ ಕಾಯಿ ; ಜಾತಿಫಲ : ಸಿರಿಕಂಡಂ ಕುಂಕುಮಂ ಮ ಗುರುರೇಣುಕಂ ಜಾದಿಕಾಯ್ . . . ಶಶಾಂಕ ತಕ್ಕೋಲಂಗಳ್ (ಲೋಕೋಪ. ೬-೯). **ಜಾಕಾಯಿ :** ಮೆಣಸು, ಜಾಕಾಯಿ, ಲವಂಗ, ತಪಸ್ವಿನೀಗಿಡ ಮುಂತಾದ ಬೆಲೆಯಾದ ಸಂಬಾರದ ಪದಾರ್ಥಗಳು ದೊರೆಯುತ್ತವೆ (ಪ್ರವಾಇ. II, ೧೮). **ಜಾಜಿಕಾಯ್:** ಹುರಿದು ಪೊಸಭಂಗಿ ಹದಗೈದ ಪಿನಿ ಕೂಟದೋಳ್ಪೆರೆದಮಲ ಜಾಜಿ[ಪಾಠಾಂ. ಯಿ]ಕಾಯ್ ಪತ್ರೆ ಕಸಕಸೆಯೆಂಬ ತರತರದೊಳೆಸೆವ ಲಹರಿಗಳಂ (ಚಬವು. ೪೭-೪೫) ; ಜಾಜಿಕಾಯ ತೋರದಿ ಕುಂಕುಮದ ಛಾಯೆ (ರತ್ನಶಾ. ೨೦-೧೨). **ಜಾಜಿಕಾಯಿ:** "ಜಾಜೀ-ಜಾಜಿಕಾಯಿ" (ಶಾಶಕ್ಕ. ೧೪) ; "ಜಾತಿಕೋಶಂ, ಜಾತಿಫಲಂ ೨ ಜಾಜಿಕಾಯಿಯ ಹೆಸರುಗಳು ; ಜಾಕಾಯಿ" (ಸಿದ್ಧಾಂತಿ. ೦೮೧) ; ಜಾಜೀಕಾಯಿ ಪತ್ರಿ ದಾಲಚಿನ್ನಿ ಮೊದಲಾದ ಇನ್ನೂ ಕೆಲವು ಪದಾರ್ಥಗಳನ್ನು ಬೇರೆ ಬೇರೆ ದೇಶಗಳಲ್ಲಿ ಬೆಳೆಸುತ್ತಾರೆ (ಕೃಷಿಪ್ರ. ೧೮೦). **ಜಾಯಿಕಾಯಿ:** ಜಾಯಿಕಾಯಿ, ಗರಿಕೆ ಎಲೆ, ರಕ್ತಚಂದನ, ಸೊಗದೆ ಇಷ್ಟನೂ ಸಮಾಂಶವಾಗಿ ಒಂದೆಲಗನ ರಸದಲ್ಲಿ ಮರ್ದಿಸಿ (ವೈದ್ಯಸಾ. I, ೪೭೭).
[ ಜಾದಿ + ಕಾಯ್$_4$ ]

**ಜಾದಿಗಾಲು** (ನಾ). ಒಂದು ಪ್ರದೇಶದ ಹೆಸರು (?) : ಕೊಕಂದಿಯುಂ ಮಯಿಲುರಗಯುಂ ಮೇಲ್ವಾಳಂ ಜಾದಿಗಾಲು ಕೋಲಿಗನ್ನೆಟಿಕ್ಕಾಲು ಒನ್ನು (ಮೈಆರಿ. ೧೯೨೫, ೧೦೬-೧೯ ; ?). [ ? ]

**ಜಾದಿಯೂರ್** (ನಾ). ಒಂದು ಊರಿನ ಹೆಸರು : ಕಿಟಿಯೂರ ಜಾದಿಯೂರ ಕೊಡಂಗನೂರ ಬಾಡದ ಮಹಾಜನವುಂ (ಎಕ. XI, ಚಿತ್ರದು. ೭೪-೨೮ ; 968). [ ಜಾದಿ$_0$ + ಊರ್ ]

**ಜಾದು$_1$, ಜಾಜಿ$_2$, ಜಾಜು$_1$** (ನಾ). ೧. ಕೆಂಪು ಬಣ್ಣದ ಶಿಲೆ ; ಗೈರಿಕ ; ಮನಶ್ಶಿಲೆ: ಕೆಂಪೆಸೆದು ತೊಟ್ಟನೆ ಬೆಳ್ಳಿಯ ಬೆಟ್ಟಮಲ್ತು ಜಾದಿನ ನಗಮೆಂಬ ಶಂಕೆಯನೆ ಮಾಡಿದುದಾ ವಿಜಯಾರ್ಧಪರ್ವತಂ (ಶಾಂತಿಪು. ೪-೩೩); ಜಾದು ಕೆಚ್ಚನಾಗಿಯುಂ ಕುಂಕುಮಮಲ್ಲದಂತೆ (ಧರ್ಮಾಮೃ. ೦೦-೦೮೬) ; ಜಾದಿನ ಬೆಟ್ಟು ಮಗುಟ್ಟುವಂತೆ (ಕಬ್ಬಿಗಾ. ೨೮೪) ; ಅರೆ ಜರಿದ ಜಾದಿನ ಕೋಡುವೆಟ್ಟನೊತ್ತುಗೊಂಡು (ರಾಮಾಶ್ವ. ೭೨-೨೦). ೨. ಕಾವಿಬಣ್ಣ ; ಕೆಂಬಣ್ಣ : ಜಾದಿನ ಸೇಲೆಗಳನುಟ್ಟು ಭಗವಂತವೇಷವಂ ಕೈಕೊಂಡು (ವಡ್ಡಾರಾ. ೧೪೬-೬); ಅದ್ವಿತ್ವ ಧಕಾರಕ್ಕೆ ಜಕಾರಂ-ಧಾತು-ಜಾದು (ಶಸಂದ. ೨೮೩ ಪ್ರಯೋ). **ಜಾಜಿ$_2$ :** ೨. ಚಾವಡಿಯ ಜಾಜಿ ಒರೆದ ನೆಲದ ಮೇಲೆ ಉಸ್ಸೆಂದು ಮೈಚಾಚಿ . . . ಗೊರಕೆಹೊಡೆಯುತ್ತಾರೆ (ಮರಮು. ೬). **ಜಾಜು$_1$ :** ೧. "ಜಾಜದು ಸಾರಾಷ್ಮಭವಂ ಮನಶ್ಶಿಲಾದಿಗಳೆನಿಕುಂ" (ವಸ್ತುಕೋ. ೨೮-೫); ಅಂತೆರಡುಂ ಬಲದ ಕರಿಘಟೆಗಳೊಂದೊಂದರೊಳ್ ತಾಗಿ . . . ಜಾಜಿನ ಪರ್ವತಂಗಳಂತೆ ಕೆಡೆದಟ್ಟಿ ತಟ್ಟಿದಾಗಳ್ (ಪಂಪಭಾ. ೧೦-೯೬ ವ) ; ನನೆದ ಜಾಜಿನ ಗಿರಿಯೊಲಿರ್ದುದು ಕಳೇವರಂ ರಕ್ತಾಂಬು ಸರ್ವಾಂಗಮಂ ಮುಸುಕಲು (ಚಬಪು. ೪೦-೨೦).
[ < ಸಂ. ಧಾತು ]

**ಜಾದು$_2$** 'ಜಾದೂ' ನೋ.

**ಜಾದುಕಲ್** 'ಜಾದುಗಲ್' ನೋ.

**ಜಾದುಗಲ್, ಜಾದುಕಲ್, ಜಾದಂಗಲ್ಲು** (ನಾ). ಕೆಂಪುಕಲ್ಲು; ಕಾವಿಕಲ್ಲು; ಗೈರಿಕಧಾತು : "ಜಾದುಗಲ್ಲೆನೆ ಕಾವಿಕಲ್ಲು" (ಕಕರ. ೪೦) ; ಪೊಱಮೆಯ್ಯ ಸುಲ್ಲ ಸನ್ನಣದಂತೆ ಕೆಂಕಮಾಗೆಸೆವ ಜಾದುಗಲ್ಲ ನಿಡುಗೋಂಟೆಯಿಂದೊಳಗೆ (ರಾಮಾಶ್ವ. ೧೦೨-೪). **ಜಾದುಕಲ್:** "ಜಾದುಕಲ್ಲೆನೆ ಕಾವಿ" (ಶಬ್ದಮಂ ೫೩); ದೇವಕೀಪುತ್ರಂ ಪೀರ್ದ ಪೂತನಿಯ ಸತ್ತ ನೆತ್ತರ ಪಲ್ಲೆಗಳಿಂ ಜಾದುಕಲ್ಲ ಕಣಿಯಂದಮಂ ಮೆರ್ದು (ಅರ್ಧನೇ. ೮-೨೨ ವ). **ಜಾದುಗಲ್ಲು :** ಜಾದುಗಲ್ಲ ಜಲ್ಲರಿಗಳು, ಕೆಂಕವಿಟ್ಟಳಿಸಿದ ಕುಚ್ಚುಗಳು (ಮಂತ್ರಶ. ೧೦೯-೯).
[ ಜಾದು$_1$ + ಕಲ್$_3$ ]

**ಜಾದುಗಲ್ಲು** 'ಜಾದುಗಲ್' ನೋ.

**ಜಾದುಗಾರ** 'ಜಾದೂಗಾರ' ನೋ.

**ಜಾದುಹ** (ನಾ). ಒಂದು ಬಗೆಯ ಹಕ್ಕಿ ; ನೀರುಕಾಗೆ: "ದಾತ್ಯೂಹಃ, ಜಳರಂಕುಃ-ಈ ೨ ಜಾದು[ದು]ಹಂ" (ಹಲಾಯು. ೪೨-೯೭); "ಜಾದುಹ-ದಾತ್ಯೂಹ = ಒಂದು ಪಕ್ಷಿ" (ತದ್ಭಕೋ. ೧೪). [ <ಸಂ. ದಾತ್ಯೂಹ ]

**ಜಾದೂ, ಜಾದು$_2$** (ನಾ). ಕಣ್ಣುಕಟ್ಟು ವಿದ್ಯೆ; ಮಾಯೆ; ಇಂದ್ರಜಾಲ; ಗಾರುಡಿವಿದ್ಯೆ : ಜಂಗಮರು, ಗುರುವರ್ಗದವರು ಈ ತರದ ಶಬ್ದ ಸಮುಚ್ಚಯಗಳಲ್ಲಿ ಒಂದು ಬಗೆಯ ಜಾದೂ ಇದೆ (ಯುಕ್ತಪ್ರ. ೧೨೯) ; ಮಾಯಾದೀಪ ಹಿಡಿದು ಜಾದೂ ಮಾಡುತ್ತಾರಲ್ಲ ಹಾಗೆ (ಬದುಕ. ೬). **ಜಾದು$_2$ :** ಪಲ ಜಾದುಗಳವುತೆಯ ಶಂಬರನುಜ್ವಲತಪನಾ ಮುನಿ ಗೌತಮನುಂ ತಾಂ ಲಲನೆಯರಿಂ ಪಿರಿದುಂ ರಜಮಾಂತರ್ (ಸೌನಂದ. ೮-೪೫) ; ಎಂಥ ಕಡುಲೋಭಿಯ ಕೈಯಿಂದಲೂ ಹತ್ತಿಪ್ಪತ್ತು ರೂಪಾಯಿಗಳ ದಕ್ಷಿಣಾದ್ರವ್ಯವನ್ನು ಕೀಳುವ ಜಾದು ಅವರಲ್ಲಿದೆ (ಅಳನಿ. ೧೫೨).
[ ←ಪಾರ. ಹಿಂ. ಜಾದೂ ]

**ಜಾದೂಕೋಲು** (ನಾ). ಮಂತ್ರಗಾರರು ತಮ್ಮ ಪ್ರಯೋಗ ,ಕಾಲದಲ್ಲಿ ಉಪಯೋಗಿಸುವ ಕೋಲು ; ಮಾಟದ ಕೋಲು : ಜಾದೂಕೋಲು ತಿರುಗಿಸುವವಳಂತೆ ಅವನ ಮೇಲೆ ವಿಚಿತ್ರ ಪ್ರಭಾವ ಬೀರಿದಳು (ಬದುಜ. ೧೭೫). [ ಜಾದೂ + ಕೋಲು$_1$ (<ಕೋಲ್$^1$) ]

**ಜಾದೂಗಾರ,** ಜಾದುಗಾರ (ನಾ). ಮಾಟಗಾರ ; ಮೋಡಿಗಾರ ; ಗಾರುಡಿಗ; ಯಕ್ಷಿಣೀವಿದ್ಯೆಯನ್ನು ಬಲ್ಲವನು: ಬ್ರಹ್ಮದೇಶದ ಜನರು ಜಾದೂಗಾರರೆಂದು ಸಿಪಾಯಿರಿಗೆ ಹೆದರಿಕೆ ಹುಟ್ಟಿತ್ತು (ಹಿಂದುಇ. ೩೩೪). **ಜಾದುಗಾರ:** ಸಾಹಿತ್ಯಪ್ರಕಾರಗಳು ಜಾದುಗಾರನ ಮಾವಿನ ಗಿಡದಂತೆ ಅರೆಕ್ಷಣದಲ್ಲಿ ಸಂಪೂರ್ಣ ವಿಕಾಸವನ್ನು ಹೊಂದುವುದಿಲ್ಲ (ನಿರಾಥ. ೧೮, ಮುನ್ನುಡಿ) ; ಮನಸ್ಸು ಈಶ್ವರನಂತೆಯೇ ಜಾದುಗಾರವಾಗಿದೆ (ಬ್ರಹ್ಮಜೀ. ೨೭೪). [ ←ಪಾರ. ಹಿಂ. ಜಾದೂಗರ್ ]

**ಜಾದೂಗಾರಿಕೆ,** ಜಾದುಗಾರಿಕೆ (ನಾ). ಮಾಟಗಾರಿಕೆ ಮಾಯಾವಿದ್ಯೆ: ಜೀವನವನ್ನು ಆಡಾಡುತ್ತ ಕತೆಯಾಗಿ ಮಾರ್ಪಡಿಸಬಲ್ಲ ಜಾದೂಗಾರಿಕೆ ಯಿದೆ (ಆಬೋಲೀ. IV, ಮುನ್ನುಡಿ). **ಜಾದುಗಾರಿಕೆ:** ಗುಟ್ಟಿನ ಮಾತಿನಲ್ಲಿದ್ದ ಜಾದುಗಾರಿಕೆ ಗುಟ್ಟನ್ನು . . . ತುಂಗಕ್ಕ ಅರಿಯಳೆ (ಮೂರುದಾ. ೧೫೫). [ ಜಾದೂಗಾರ + – ಇಕೆ ]

**ಜಾದೂಗಾರ್ತಿ** (ನಾ). ಮಾಟಗಾತಿ ; ಮಾಯಾವಿನಿ ; ಜಾದೂಗಾರ್ತಿ ನೀ ಅಂತ (ಹೊಸಂಸಾ. ೧೭೬).

[ ಜಾದೂಗಾರ + – ತಿ$_1$ (< – ಇತ್ತಿ)]

**ಜಾದೂಗಿರಿ** (ನಾ). "ಜಾದುತನ, ಮೋಡಿತನ, ಗಾರುಡಿತನ" (ಜಾನಕೋ. ೬೦). [ ಜಾದೂ + – ಗಿರಿ$_2$ ]

**ಜಾನ** (ನಾ). ೧. ಚಿಂತನೆ ; ಮನಸ್ಸಿನಲ್ಲೇ ಯೋಚಿಸುವುದು; ಮನನ. ೨. ಇಷ್ಟದೇವತೆಯನ್ನು ಒಂದೇ ಮನಸ್ಸಿನಿಂದ ನೆನೆಯುತ್ತಿರುವುದು; ಧ್ಯಾನ : "ಧ್ಯಾನಂಗಳೊಳ್ ಜಾನಗಳ್" (ಕರ್ಣಾನಿ. ೪೯) ; ಯಮರಾಜ ನನದ್ಭುತತೇಜನಂ ಸರೋಜಾನನೆ ಜಾನದಿಂ ಬರಿಸೆ (ಪಂಪಭಾ. ೧–೧೧೯) ; ಕಿಚಿ॰ದುಂ ಪೊಟ್ಟು ಜಾನದಿಂ ಮೋನಮಿರ್ದು (ಚಿಕವಿ. ೬–೧೨೬ ವ); ಸಿರಿ ಸರಸ್ವತಿ ಗೌರಿಯರು ಮಾಳ್ಪ ಜಾನಕುಂ ಸಿಲ್ಕದಿಹ ಪರಬೊಮ್ಮನು (ವೆಂಕಾರಾ. ೨–೧೯–೪೪). [ <ಸಂ. ಧ್ಯಾನ ]

**ಜಾನಪದ** (ಗು). ೧. ನಾಡಿನಲ್ಲಿರುವ; ಜನಸಾಮಾನ್ಯಕ್ಕೆ ಸಂಬಂಧಿಸಿದ ; ದೇಶಕ್ಕೆ ಸಂಬಂಧಪಟ್ಟ : ಬಂದುದು ಜಾನಪದ ಜನವೈದೆ ಕುಂತೀ ಸೂನುವನು ದರುಶನವ ಮಾಡಿತು (ಕುವ್ಯಾಗ ೧೨–೨೪). ೨. ಗ್ರಾಮಾಂತರ ಪ್ರದೇಶಗಳಿಗೆ ಸಂಬಂಧಿಸಿದ ; ಹಳ್ಳಿಗಾಡಿನ ; ಗ್ರಾಮೀಣ: ಜಾನಪದಾಂಗನಾಜನದ ಗಾಡಿಗೆ ಸೋಲ್ತಳಿನೀ ನಿನಾದಮಂ ಜಾನಿಸಿ ಕೇಳ್ದು (ಮಲ್ಲಿಪು. ೨–೨೮) ; ಇವರು ಚಿತ್ರಿಸಿರುವ ಸ್ತ್ರೀ ಆಕೃತಿಗಳಲ್ಲಿ ಜಾನಪದ ಕಲಾಸೌಂದರ್ಯ ಎದ್ದು ಕಾಣುವುದು (ಭಾರದ.೩೩೩); ಸೊಕ್ಕಿನಿಂದ ಬೆಳೆದ ತರುಣ ಜಾನಪದ ರೀತಿಯವಳು (ಅಪನಾ. ೮೩). (ನಾ). ೩. ಹಳ್ಳಿಗಾಡಿಗೆ ಸೇರಿದಂದು : ಜಾನಪದವಾದ ಕಲೆಗಳನ್ನು ಜನರು ಉಳಿಸಿಕೊಳ್ಳದಿದ್ದರೆ ಜನಪದದ ಸರಕಾರಗಳು ಅವನ್ನು ರಕ್ಷಿಸಬಹುದು (ಯುಕ್ಷಬ. ೫). ೪. ದೇಶದ ನಿವಾಸಿ ; ದೇಶದಲ್ಲಿ ವಾಸಮಾಡುವವನು; ನಾಡಿನ ಪ್ರಜೆ: ನಂದನರ ಮಣಿಗಳು ದಿಸು ವರತು ಲ ಚತುರ ಚತುರಾಸ್ಯರೆಂದುಲಿಯುತಿರೆ ಜಾನಪದರು (ವೆಂಕಾರಾ. ೧–೮–೧೪). ೫. ನಾಡು ; ದೇಶ : ಶ್ರೀರಾಮ ಪುರದರಸ ಭೂಮಿತಳದ ಮನುಜನುದದಿ ಜಾನಪದದಿ ಗೋಚರಿಸುತ್ತ (ವೆಂಕಾರಾ. ೬–೧೪–೩೦). 'ಜನಪದ' ಪರಾ. [ ಸಂ. ]

**ಜಾನಪದಗೀತೆ** (ನಾ). ಹಳ್ಳಿಗಾಡಿನ ಹಾಡು; ಜನಪದಗೀತೆ: ಹೀಗೆ ಅವರ ಜಾನಪದಗೀತೆಗಳನ್ನು ಕೇಳುತ್ತ ಊರನ್ನು ಸಮೀಪಿಸಿದೆ (ಗಾಳಿಗು. ೧೬). [ ಜಾನಪದ + ಗೀತೆ ]

**ಜಾನಪದಸಾಹಿತ್ಯ** (ನಾ). ಹಳ್ಳಿಗಾಡಿನ ಸಾಹಿತ್ಯ ; ಗ್ರಾಮೀಣ ಹಾಡುಗಳು, ಕಥೆಗಳು ಮೊದಲಾದುವುಗಳ ಸಂಗ್ರಹ ; ಜನಪದಸಾಹಿತ್ಯ : ಜಾನಪದಸಾಹಿತ್ಯದ ರಸರುಚಿಯು ವಿದ್ವಾಂಸರ ಮನ ಸೆಳೆದಿದ್ದು ಇತ್ತೀಚೆಗೆ (ಕನ್ನಜಾ. ೨, ಅರಿಕೆ). [ ಜಾನಪದ + ಸಾಹಿತ್ಯ ]

**ಜಾನಪದಿಕ** (ಗು). ನಾಡಿಗೆ ಸಂಬಂಧಿಸಿದ ; ದೇಶಕ್ಕೆ ಸಂಬಂಧಪಟ್ಟ ; ಜನಪದಕ್ಕೆ ಸಂಬಂಧಪಟ್ಟ: ಅಂಥಾತ್ಮಶೀಥುಗಳ ಸಿಂಧುವೆನಲೆಸೆವುದೀ ದೈವಸುಂದರಭಾವ ಜಾನಪದಿಕ (ಮಲೆದೇ. ೪೦–೬). [ ಸಂ. ]

**ಜಾನಪದೀಯ** (ಗು) ೧.=ಜಾನಪದಿಕ. (ನಾ). ೨. ಜನಪದಕ್ಕೆ ಸಂಬಂಧಿಸಿದುದು : ವಸ್ತು, ಶೈಲಿ, ತಂತ್ರ, ಗುರಿಗಳಲ್ಲಿ ಅದು ಜಾನಪದೀಯ (ಸುವರ್ಣ. ೨೯). [ ಸಂ. ]

**ಜಾನವಾರು** 'ಜಾನುವಾರು' ನೋ.

**ಜಾನಶಾಲೆ** 'ಜೇಣಶಾಲೆ' ನೋ.

**ಜಾನಸಾಲೆ** 'ಜೇಣಶಾಲೆ' ನೋ.

**ಜಾನಿ** (ನಾ). ತಿಳಿವಳಿಕೆಯುಳ್ಳವನು ; ಅರಿವುಳ್ಳವನು ; ಜ್ಞಾನಿ : ಪರಬೊಮ್ಮನಂ ಕವಿತೆಯಂ ಪರಮಪ್ರೇಮವನದೆಂತೊ ನಿಕ್ಕಿದ ಧನ್ಯಂ ಸೊರಹನದಂ ಪೇಳ್ತಿಳಿಪೆನಲರಿಯೆಂ ಬೆಸಗೊಳ್ಳದಂದೆ ಜಾನಿಯೆನೆಂಬಂ (ಸಂಸಪ. ೪–೧೨). [ <ಪ್ರಾ. ಜಾಣಿ. / ಸಂ. ಜ್ಞಾನಿನ್ ]

**ಜಾನಿಸು** 'ಧೇನಿಸು' ನೋ.

**ಜಾನು$_1$** (ನಾ). ಮೊಳಕಾಲು; ಮಂಡಿ: ನಿತಂಬಿನಿ ಮೆಲ್ಲನೆ ವಾಮಜಾನುವಂ ಕರತಳದಿಂದಮೂಱಿ॰ (ಕಾದಂಪೂ. ೩೯೬) ; ಕುಮತಿಯಿಳಿದನು ಜಾನುಕಟಿ ಹೃತ್ಕಮಲಗಳ ಮುಖ ಮೂರ್ಧಪರಿಯಂತ (ಕುವ್ಯಾಗ. ೩–೪೩). [ ಸಂ. ]

**ಜಾನು$_2$** (ನಾ). (?) : ಹೊನ್ನ ಗಿಂಡಿಯಲಿ ಪನ್ನೀರ ಪಿಡಿದವರು ಕೆಲರು ಕಸ್ತೂರಿಗಂಧ ಅತ್ತರು ಹೊಸ ಚಿನ್ನಮಯ ತಬಕಿನಲಿ ಪಿಡಿದವರು ಕೆಲರು ಸಣ್ಣ ಜಾನು ಜಾಜಿಬೊಟ್ಟು ಮಲ್ಲೆಮರುಗ ಬಣ್ಣದ ಬೀಸಣಿಗೆಯ ಪಿಡಿದವರು ಕೆಲರು (ಶ್ರೀಕೃಪಾ. ೩೭). [ ? ]

**ಜಾನುಗುಪ್ಪಾಳಿ** (ನಾ). ಒಂದು ಬಗೆಯ ಆಟ ; ಜಾರುಗುಪ್ಪೆ (?) : ಭಾಗವಾಡಿಯ ಬಸವಂಗೆ ಮಹಾಮೇರು ಪರ್ವತಂ ಜಾನುಗುಪ್ಪಾಳಿ ಯಾಡುವ ಬೆಟ್ಟದಂತೆ ಆಚರಿಸಿದವುದು (ಕಾಶಕ್ಕ. ೩೦೦). [ ? ]

**ಜಾನುದಘ್ನ** (ಗು). ೧. ಮೊಳಂಗುವಷ್ಟು ಆಳವುಳ್ಳ ; ಮಂಡಿಯವರೆಗೆ ಬರುವ ; ಮೊಳಕಾಲುದ್ದವಾದ : ಶತಸಹಸ್ರ ಮುಖ ಪ್ರವಹ ಜಾನುದಘ್ನ ದೀರ್ಘಕಾಂಭಃಕುಲ್ಯಾಪ್ರವಾಹಂಗಳಂ (ಆದಿಪು. ೮–೪೦ ವ) ; ಪೆಣ್ಬಡೆ ನಿಂದುದು ಪೊಕ್ಕು ಜಾನುದಘ್ನೋರುದಘ್ನ ಕಟಿದಘ್ನ ನಾಭಿದಘ್ನಸ್ಥಳದೊಳ್ (ಅಜಿಪು. ೧೪–೯೫) ; ಇಳಿದು ಮೊನೆ ಮುಂಜೆರಗನಗ್ರುಕೆ ಬಲಿದು ಹೊಕ್ಕನು ಜಾನುದಘ್ನ ಸ್ಥಳವನು (ಕುವ್ಯಾಅ. ೨೩–೧೭). (ನಾ). ೨. ಮಂಡಿಯವರಗೂ ಬರುವುದು; ಮೊಳಕಾಲು ಮುಳುಂಗುವಷ್ಟು ಆಳವಾಗಿರುವುದು : ಜವನ ಡಾಮರವಾದುವು ಜಾನುದಘ್ನಮಾದುವು ತರವಾರಿಯಿಂದಿಱಿಯೆ ಲೋಹಿತವಾರಿಗಳಾಸವಾರಿಗಳ್ (ಪಂಪಾಮಾ.೧೩–೬೦);ಸರಸ್ಸಂಕುಳಂ ಕಂಠದಘ್ನಂ ಬಿಚ್ಚಿತ್ತಾ ನಾಭಿದಘ್ನಂ . . . ಜಾನುದಘ್ನಂ (ಶಾಥಪು. ೧೪–೨೯). [ ಸಂ. ]

**ಜಾನುಮಂಜರಿ** (ನಾ). ಕುದುರೆಯ ಮಂಡಿಯ ಕೀಲು,–ಸಂದು : ಅದಱಿಂದೆ ಮೇಲೆನಿಪ್ಪಾ ಮಂದಿ(ಡಿ)ಸಂದಿಗೆ ಜಾನುಮಂಜರೆಂಬಭಿಧಾನಂ (ಅಶ್ವಶಾ. ೯–೩೪). [ ಜಾನು$_1$ + ಮಂಜರಿ ? ]

**ಜಾನುವಾರು,** ಜನಾವರ, ಜಾನವಾರು (ನಾ). ದನ ; ಕಾಲ್ನಡೆ ; ಚತುಷ್ಪಾದಿ : ಜಾನುವಾರುಗಳಿಗೆ ಹುಲ್ಲು, ಅಕ್ಕಚ್ಚು ಇರಿಸಿ (ಬಣ್ಣಮಾ. ೧೩೮); ಜಾನುವಾರುಗಳು, ವಾಹನಗಳು, ದೋಣಿಗಳು ಅಥವಾ ಮನೆಯ ಸಾಮಾನುಗಳ ಬಾಡಿಗೆ (ಗ್ರಾಮಾಕ. ೧೭೪); ಕಾಡಲ್ಲಿ ಮೇಯುವ

ಎಮ್ಮೆ, ದನಕರು ಮೊದಲಾದ ಜಾನುವಾರುಗಳನ್ನು ಕಂಡು ಸಂತೋಷಪಟ್ಟಿತು (ಜಾನಗೀ. ೬೩). **ಜನಾವರ :** ಜನಾವರ ಮನೆಯಲ್ಲಿಟ್ಟುಕೊಂಡು ಕಷ್ಟಪಡುವುದಕ್ಕೆ ಅವರು ಅನೇಕ ಕಾರಣಗಳನ್ನು ಹೇಳುವರು (ಚಂದ್ರಶಾ. ೩೦) ; ಜನರಿಗೂ ಜನಾವರಗಳಿಗೂ ತುಂಬಾ ತೊಂದರೆಯಾಗಹತ್ತಿತು (ಅನಂತ. ೬). **ಜಾನವಾರು :** ಜಾನವಾರುಗಳಿಂದ ಸಿಗುವ ಮಾಂಸವೂ ಹಾಲುಹೈನವೂ ಇಕಾಫೆ ಪ್ರದೇಶದ ಜನಗಳಿಗೆ ಸಾಲುವುದಿಲ್ಲ (ಏಶಿಸಂ. ೪೫)

[ ←ಪಾರ. ಹಿಂ. ಜಾನ್‌ವರ್ ; ಮರಾ. ಜನಾವರ್ ]

**ಜಾನುಶೀರ್ಷಾಸನ**(ನಾ). [ಯೋಗ] ಯೋಗಾಸನಗಳಲ್ಲಿ ಒಂದು : ಮುಖ್ಯವಾದ ಕೆಲವು ಆಸನಗಳು . . . ೬ ಜಾನುಶೀರ್ಷಾಸನ (ಎಡ – ಬಲ ೨) (ಭಾರದ. ೦೬೭). [ ಜಾನು$_1$ + ಶೀರ್ಷ + ಆಸನ ]

**ಜಾನೆ** (ನಾ). ಒಂದು ಬಗೆಯ ಗಿಡ : ಜಾಲಿ ಜಾನೆಯು ಬೋರೆ ತೆರೆಯು . . . ಬಹುಲತೆಗಳು ಕಿಕ್ಕಿಕಿಕ್ಕಿರಿಪ ಕಾನನದೊಳು (ನವಮೋ. ೮–೯). [ ? ]

**ಜಾಪಕ** (ನಾ). ೧. ಮಂತ್ರಗಳನ್ನು ಜಪಿಸುವವನು ; ಜಪಮಾಡುವವನು: ಜಾಪಕರಿಗೆ ಸುಯೋಗಿಗಳಿಗೆ ಮಹಾಪೃಥುಲ ಪುಣ್ಯಂಗಳಂಟು (ತಿಮ್ಮಶಾಂ. ೬–೭೭) ; ಅಡ್ಡ ಮಲಗಿರುತೆ ಪರ್ಯಂಕದೊಳು ವಿಮಲ ಶಿವಮಂತ್ರಮಂ ಜಪಿಸಲಾಗದು ಜಾಪಕಂ (ಶಾ ಖ ಜ. ೧೦–೧೧). ೨.=ಜಾಯಕ. ೩. ಕುಂಕುಮ : "ಕುಂಕುಮಮಂ . . . ಜಾಪಕಂ – ಈ ೭ ಕುಂಕುಮಮಂ" (ಹಲಾಯು. ೮೯–೩೮೯). [ ಸಂ. ]

**ಜಾಪತ್ಕಾಲ** (ನಾ). (ಉಕ) ಕಷ್ಟಕಾಲ ; ತೊಂದರೆಯ ಕಾಲ : ಅದರಂತೆಯು ಜಾಪತ್ಕಾಲ (ಅಶಕ್ತತೆಯ ಕಾಲ)ದಲ್ಲೂ ನಡೆದುಕೊಳ್ಳಬೇಕು (ಅಗರ. ೯೦). [ ಜಾಪತ್ತು + ಕಾಲ ]

**ಜಾಪತ್ತು** (ನಾ). (ಉಕ) ಕಷ್ಟ ; ಆಪತ್ತು. 'ಜಾಪತ್ಕಾಲ' ಪರಾ. [ ? ]

**ಜಾಪತ್ರಿ** (ನಾ). = ಜಾಪತ್ತು : ಜಡ್ಡು ಜಾಪತ್ರಿ ಎಂದು ರಜಾ ಬೇಡಿ (ಧನಂಜ. ४೦). [ ? ]

**ಜಾಪತ್ರೆ** 'ಜಾಜಿಪತ್ರೆ' ನೋ.

**ಜಾಪರ, ಚೋಪಾರ$_2$, ಜಾಪಾರ** (ನಾ). ೧. ಒಂದು ಬಗೆಯ ಸುಗಂಧ ಪದಾರ್ಥ ; ಕುಂಕುಮದ ಹೂವು ; ಕೇಸರಿ : ಪರಿಪರಿ ಕೇಸರಿಯೆ ಬಗೆಬಗೆ ಬೆರಸಿದ ಜಾಪರವೆ . . . ಶ್ರೀಹರಿಯ ಶಿರದಲ್ಲಿಟ್ಟು (ಪುರಂದ. ೫–೬೯–೯). ೨. ಅಜವಾನ ; ಓಮ ; ವಾದಕ್ಕಿ. **ಚೋಪಾರ$_2$ :** (ಈ). **ಜಾಪಾರ:** ೨. ಜಾಪಾರ ನಾಮಂ ಯವಾನಿಯೆನಲ್" (ಮಂಗರಾ. ४೦–३४).

[ ←ಅರ. ಹಿಂ. ಜಾಫ್‌ರಾನ್ ]

**ಜಾಪಾರ** 'ಜಾಪರ' ನೋ.

**ಜಾಪಾಳ, ಜಾವಾಳ** (ನಾ). ಒಂದು ಬಗೆಯ ಗಿಡ ಮತ್ತು ಅದರ ಬೀಜ; P ಇದರ ಬೀಜಗಳನ್ನು ಸೇವಿಸಿದರೆ ಭೇದಿಯಾಗುತ್ತದೆ : ಸುಣ್ಣ, ಜಾಪಾಳ . . . ಅರೆದು ಗುಂಜಾಪ್ರಮಾಣ ಕೊಡಲು ಶೀತಜ್ವರಗಳು ಮಾಣುವುವು (ವಿಷ್ಣುವಿ. ೩೮) ; ಇದರಲ್ಲಿ ಜಾಪಾಳವಂ ಧೂಪವ ಹಾಕಿ (ಸಕಪ್ಪ. ೧೭೯). **ಜಾವಾಳ :** (ಈ).

**ಜಾಪಾಳದ ಶತ್ರು** = ಜಾಪಾಳದ ಸೊಪ್ಪು : ವೃದ್ಧವೈದ್ಯರು ದಂತಿಯೆಂದರೆ ಜಾಪಾಳದ ಶತ್ರುಯೆಂತಲೂ ಕೆಲರು ಕರೇಉಮ್ಮತ್ತವೆಂತಲೂ ಹೇಳುವರು (ಸಿದ್ಧಾಂತಿ. ೧೩೭) ; **ಜಾಪಾಳವನ್ನು ಕೊಡು** = ಹೆದರಿಸು ; ಶಾಸ್ತಿಮಾಡು : ಅವನಿಗೆ ಸರಿಯಾಗಿ ಜಾಪಾಳವನ್ನು ಕೊಟ್ಟಿದ್ದೇನೆ. ಈಗ ತೆಪ್ಪಗಿದ್ದಾನೆ (ರೂಢಿ). 'ಜೇಪಾಳ' ಪರಾ. [ <ಸಂ. ಜೇಪಾಲ ]

**ಜಾಪಾಳಮಾತ್ರೆ** (ನಾ). ಜಾಪಾಳದ ಬೀಜದಿಂದ ತಯಾರಿಸಿದ ಗುಳಿಗೆ ; ವಿರೇಚನವನ್ನುಂಟುಮಾಡುವ ಮಾತ್ರೆ : ಹೊಟ್ಟೆ ಸರಿ ಇಲ್ಲವಾದರೆ ಒಂದು ಸಾಸಿವೆಯಷ್ಟು . . . ಜಾಪಾಳಮಾತ್ರೆ ತೆಯ್ದು ತೆಗೆದುಕೋ (ಸರಸ. ೫೫); ಜಾಪಾಳ ಮಾತ್ರೆ ವೈಕುಂಠ ಯಾತ್ರೆ (ಗಾದೆ).

[ ಜಾಪಾಳ + ಮಾತ್ರೆ ]

**ಜಾಪು** 'ಚಾಪು$_1$' ನೋ.

**ಜಾಪುಗಾಲು** 'ಚಾಪುಗಾಲು' ನೋ.

**ಜಾಪುಹಾಕು** (ಕ್ರಿ). ಮಾರುಗಾಲು ಹಾಕು ; ದಾಪುಗಾಲು ಹಾಕು : ಎರಡು ಮೂರು ಜಾಪುಹಾಕಿ ಮತ್ತೆ ತಟ್ಟೂಕುದುರೆಯು ಕುಕ್ಕೋಟದ ನಡಿಗೆಯನ್ನು ಬಿಟ್ಟನು (ಧರ್ಮಸಿ. ೩೩).

[ ಜಾಪು (<ಚಾಪು$_1$) + ಹಾಕು (<ಪಾಯ್ಯು$_1$) ]

**ಜಾಪ್ಯ$_1$** (ನಾ). ೧. ಕಾಲಹರಣ; ತಡ ; ವಿಲಂಬ ; ಔದಾಸೀನ್ಯ : ಗೋಪ್ಯವೆ ಇದು ಜನಮಹಿಮೆಯೆಂದೆನುತಾಗ ಜಾಪ್ಯವ ಮಾಡದೆಯ್ದಿದರು (ಭರಜ. ೬೭–೫) ; ರೋಗಗಳು ಕಾಣಿಸಿದಲ್ಲಿಯೇ [ಜಾ]ಪ್ಯಮಾಡದೆ ಶೀಘ್ರದಲ್ಲಿಯೇ ಪ್ರತೀಕಾರವಂ ಮಾಡಬೇಕು (ಸಕಪ್ಪ. ೩೨) ; ಬೇರೆ ಮೂವರು ಯತಿಗಳು ಸಮ್ಮತಿಯನ್ನು ಕೊಡಲಿಕ್ಕೆ ಜಾಪ್ಯಮಾಡಲಿಲ್ಲ (ವಾಗ್ಮಿವಿ.೨೦೭). ೨. ಉದಾಸೀನ ಮಾಡುವವನು ; ಸೋಮಾರಿ ; ಆಲಸಿ : (ಈ).

[ <ಸಂ. ಯಾಪ್ಯ ]

**ಜಾಪ್ಯ$_2$** (ನಾ). ಜಪಿಸಲು ಯೋಗ್ಯವಾದುದು; ಜಪಮಾಡಲು ಯೋಗ್ಯವಾದ ಮಂತ್ರ : ಅಡಿಯಿಡುವುದೇ ಬಲವಪ್ಪುದು ಸತತಂ ನುಡಿವುದೆ ಜಾಪ್ಯಂ ಸಮತೆಯ ಮಜ್ಜನಮದರ್ವ ಸುಮನವೇ ಸುಮನಂ (ಉದ್ಭದೇ. ೨–४೩). [ ಸಂ. ]

**ಜಾಪ್ಯಗಾರ** (ನಾ). ಉದಾಸೀನಮಾಡುವವನು ; ಆಲಸಿ: (ಈ).

[ ಜಾಪ್ಯ$_1$ + – ಕಾರ$_1$ (< – ಕಾಱ) ]

**ಜಾಫಲ** 'ಜಾಯಿಫಲ' ನೋ.

**ಜಾಬಯ್ಯೆ** (ನಾ). ಒಬ್ಬಾಕೆಯ ಹೆಸರು: ಶ್ರೀದಯಿತನ ಬಾಯಿಕನ ಮನೋದಯಿತೆಗೆ ಜಭದೊಳೆಸೆದ ಜಾಬಯ್ಯೆಗೆ ತಾಮಾದರ್ ತನಯರ್ (ಎಕ. II, ೧४೯–४ ; 950). [ ? ]

**ಜಾಬಾದ** (ಗು). ಮಿಗಿಲಾದ; ಮೇಲಾದ; ಅತಿಶಯವಾದ: ಯಾಕಂದರೆ ರಾಮಣ್ಣ ಕಾಕಾ ರಮಾ ಕಕ್ಕಿ ಈ ಜಾಬಾದ ಜಗಳಗಂಟ ಜೋಡಿಯ ಕೂಸದು (ಬಾಂಡಾಯ. ೯).

[ ←ಮರಾ. ಜಾಹಂಬಾಜ್, ಜಾಹಂಬಾದ್ ; ಪಾರ. ಜಾನ್‌ಬಾಜ್ ]

**ಜಾಬಾಲ, ಜಾಬಾಳ$_1$** (ನಾ). ೧. ಆಡುಕುರಿಗಳನ್ನು ಮೇಯಿಸಿ ಜೀವಿಸುವವನು ; ಕುರುಬ. ೨. ಉಪನಿಷತ್ತುಗಳಲ್ಲಿ ಒಂದು : ವೇದದಿಂ ಜಾಬಾಲ ಕೈವಲ್ಯಾದಿ ಶಾಖೆಗಳೊಳ್ ಪ್ರವರ್ಧಿತವಾದ ಭಸ್ಮೈಶ್ವರ್ಯ ಪದವಿ ಸಮಗ್ರವಾಯ್ತೆನಗೆ (ಬಸವು. ४३–೭५); ಜಾಬಾಲ ಮೊದಲಾದವೇ ಶತೋಪನಿಷತ್ತುಗಳು (ವಿವೇಕ. ४). **ಜಾಬಾಳ$_1$ :** ೧."ಜಾಬಾಳಃ, ಅಜಾಜೀವಃ-ಈ ೨ ಆಡಿನಿಂ ಬರ್ದುಂಕುವವಂ"(ಹಲಾಯು. ೬३–३३೭). [ ಸಂ. ]

**ಜಾಬಾಳ$_1$** 'ಜಾಬಾಲ' ನೋ.

**ಜಾಬಾಳ$_2$** (ನಾ). ೧. ಜಾಳುಜಾಳಾದುದು. ೨. ನೀರಸವಾದುದು; ಶುಷ್ಕವಾದುದು : ಇಂಥ ಸಂಪ್ರದಾಯಶರಣ ವರ್ಣನೆಗಳಿಂದ ಕಾವ್ಯವು ಅಲ್ಲಲ್ಲಿ ಜಾಬಾಳವಾಗಿದೆ (ಕಸಾಚ. ೦೮४).

[ ←ಮರಾ. ಜಾಬಳಾ, ಜಾಭಳಾ ]

**ಜಾಬಿಕ್ಕು** (ಕ್ರಿ). ವೇಗವಾಗಿ ಮುತ್ತಿಗೆ ಹಾಕು: ಲಾಲಾಮಹಾದೇಶಕಚ್ಯುತಂ ಜಾ[ಪಾಠಾಂ. ಚಾ]ಬಿಕ್ಕಿ ಜವಗತಿಯೊಳು ಕಂಕನೆಂಬಾ ಮಹೀಪಾಲನಂ ತುಂಡರಿಸಿ (ಪರಶು. ३೯–೦४).

[ ಜಾಬು$_0$ + ಇಕ್ಕು ]

**ಜಾಬಿತಾ, ಜಾಬಿತ್ತೆ, ಜ್ಯಾಬೀತೆ** (ನಾ). ೧. ಕಾಯಿದೆ; ಕಾನೂನು; ಕಟ್ಟಳೆ; ನಿಯಮ. ೨. ಪರವಾನಿಗೆ; ಅಪ್ಪಣೆಪತ್ರ; ಜ್ಞಾಪಕಪತ್ರ; ನಿವೇದನಪತ್ರ. ೩. ವಿವರಣೆ ಪಟ್ಟಿ; ಸರಕು ಸಾಮಾನುಗಳ ಪಟ್ಟಿ. **ಜಾಬಿತ್ತೆ:** ೧. ಈ ಜಾಬಿತ್ತ ಮೇರೆಗೆ ಐವಜು ವಸೂಲುಮಾಡಿಕೊಂಡು ನಿಮ್ಮ ತಾಲ್ಲೂಕಿನ ಸಾಗುವಳಿಗೆ (ಮಹಾವಂ. II, ೬೭). **ಜ್ಯಾಬೀತೆ:** ೧. ಕ್ರಯ ಭರ್ತಿ ಆದ ಮೇಲೆ ಜ್ಯಾಬೀತೆ ಮೇರೆಗೆ ಪೂರಾ ಕಂದಾಯ ತೆಗೆದು ಕೊಳ್ಳಬೇಕು (ಮಹಾವಂ. II, ೬೨).
[← ಅರ. ಜಾಬಿತಾ, ಜಾಬ್ತಾ; ಹಿಂ. ಜಾಬ್ತಾ; ಮರಾ. ಜಾಬಿತಾ]

**ಜಾಬಿತ್ತೆ** 'ಜಾಬಿತಾ' ನೋ.

**ಜಾಬು₁** (ನಾ). ತೆಂಗಿನ ಹೆಡೆಮೊಟ್ಟೆ ಮೇಲೆ ಬರುವ ನಾರು: ಜಾಬು ಎಬ್ಬಿ ಅದರಿಂದ ಹೊರೆಕಟ್ಟು (ರೂಢಿ). [?]

**ಜಾಬು₂** (ನಾ). ಬುಡುಬುಡುಕೆಯವರು ಹೇಳುವ ಭವಿಷ್ಯ. 'ಜಾಬು ಕಟ್ಟು' ಪರಾ. [?]

**ಜಾಬು₃** (ನಾ). ಸ್ಥಳ; ಗೊಂತು (?): ಹೋತ ತನ್ನ ಜಾಬಿನಲ್ಲಿ ಮಲಗಿದ್ದುದು ದೀಪವನ್ನೂ ಮನುಷ್ಯರನ್ನೂ ಕಂಡು ಎದ್ದು ನಿಂತು (ಕಾನೂರು. ೪೫೭). [?]

**ಜಾಬುಕಟ್ಟು** (ಕ್ರಿ). ೧. ಹಕ್ಕಿಶಕುನ ಮೊದಲಾದ ಕ್ರಮದಿಂದ ಭವಿಷ್ಯವನ್ನು ನಿರ್ಧರಿಸು,-ತಿಳಿಸು. ೨. ಭವಿಷ್ಯವನ್ನು ನುಡಿ: ನೀನು ಜಾಬುಕಟ್ಟಿದಂತೆಯೇ ಆಯ್ತಲ್ಲಯ್ಯ (ರೂಢಿ). [ಜಾಬು₂ + ಕಟ್ಟು₁]

**ಜಾಬೆ** (ನಾ). ಒಬ್ಬಾಕೆಯ ಹೆಸರು: ಜಕ್ಕಬ್ಬೆ ತಂಗೆ ಜಾಬೆ ಕಲ್ಲ ನಿಱಿಸಿದಳ್ (ಎಕ. VIII, ಸೊರಬ. ४೫೭-೭; 972). [<ಜಾಯಬ್ಬೆ?]

**ಜಾಮ₁** 'ಜಾವ' ನೋ.

**ಜಾಮ₂** (ನಾ). ಸುಡುವಿಕೆ; ದಹನ. 'ಜಾಮಿಸು' ಪರಾ.
[<ಪ್ರಾ. ಝಾಮ]

**ಜಾಮಾತ** (ನಾ).=ಜಾಮಾತೃ: ಗಿರಿಸಾರ್ವಭೌಮ ಜಾಮಾತ (ಪ್ರಾಭರಾ. ೩-೧). [<ಸಂ. ಜಾಮಾತೃ]

**ಜಾಮಾತೃ** (ನಾ). ೧. ಮಗಳ ಗಂಡ; ಅಳಿಯ: "ತನ್ನ ಮಗಳ ಪತಿ ಜಾಮಾತೃವಕ್ಕುಂ" (ಮಂಗರಾ. ೯೩-೧೪); ಅಂತಾ ಸಂಗ್ರಾಮದೊಳ್ ತನ್ನನುಜ ತನುಜ ಜಾಮಾತೃವರ್ಗಂ ಪಡಲ್ವಟ್ಟಂತಾಗಳ್ ಮೊಟ್ಟಿ ಕಟ್ಟಿರ್ಪುದುಂ (ಶಾಂತಿಪು. ೫-೫೮); ಪಿತೃವಿರಹದೆ ಜಾಮಾತೃವಿನ್ನಿರ್ಪನಲ್ಲಂ (ಚಂದ್ರಪು. ೬-४೩); ಇನ್ನೆವರಮೆಮ್ಮ ಮಾತಂ ಮನ್ನಿಸಿ ಜಾಮಾತೃವಿರ್ದನಿದೆ ಸಾಲ್ಗುಂ (ರಾಜಶೇ. ೯-೩೭). ೨. ಸಹೋದರಿಯ ಮಗ; ಸೋದರಳಿಯ: ಕಂಸ ನಿನ್ನ ಜಾಮಾತೃಗಳೆಂದೊಡಾವ ದುರಿತಂಗಳು ಮೆಯ್ಯೊಳ ಪೊರ್ದಲಂಜುಗುಂ (ಜಗವಿ. ೭-೭೦). [ಸಂ.]

**ಜಾಮಾರು** (ನಾ). ಅಂಚಿಲ್ಲದ ಬಣ್ಣದ ಉದ್ದವಾದ ಬಟ್ಟೆ; ಸಾಮಾನ್ಯವಾಗಿ ಕೆಲವು ಕಡೆ ವಿಧವೆಯರು ಉಡುವ ಅಂಚಿಲ್ಲದ ಸೀರೆ: (ಶ).
[←ತೆಲು. ಜಾಮಾರು]

**ಜಾಮಿ** (ನಾ). ೧. ಒಡಹುಟ್ಟಿದವಳು; ಸಹೋದರಿ. ೨. ಕುಲಾಂಗನೆ; ಪತಿವ್ರತೆ: "ಜಾಮಿ ಕುಳವಧೂ ಸ್ವಸ್ರನಾಮಂ" (ವಸ್ತುಕೋ. ೦೩೯-೦೨೮); "ಸಹಭವೆಯುಂ ಪತಿವ್ರತೆಯುಮೆಂಬಿವು ಜಾಮಿಯೆನಿಕ್ಕು" (ನಾನಾರ. ೧೧೦). [ಸಂ.]

**ಜಾಮಿತಿ** (ನಾ). ರೇಖಾಗಣಿತ: ಸ್ಕೂಲಿನಲ್ಲಿ ವ್ಯಾಕರಣ ಸಾಹಿತ್ಯ ಜಾಮಿತಿಗಳನ್ನು ಓದುವುದು ವಿದ್ಯೆಯಲ್ಲ (ಬಂಕಿಮ. ४೭೮).
[<ಸಂ. ಜ್ಯಾಮಿತಿ]

**ಜಾಮಿತ್ರ** (ನಾ). [ಜ್ಯೋತಿ] ಲಗ್ನದಿಂದ ಏಳನೆಯ ಸ್ಥಾನ,-ಸಪ್ತಮ ಸ್ಥಾನ: ಜಾಮಿತ್ರಮೆಂದು ಸಪ್ತಮರಾಶಿ (ಜಾತಕ. ೧-೩೩ ಅಟಿಟ). ೨. ಏಳನೆಯ ಸ್ಥಾನದಲ್ಲಿರುವವನು; ಸಪ್ತಮಕೇಂದ್ರಗತ: ಹಿಮರಶ್ಮಿ ಭೃಗುಗೆ ಜಾಮಿತ್ರಮೆನಲ್ ಚಂದ್ರನನೆ ಕಾಣೆ ಶುಭವಾತಿ ಶುಭದಂ (ಜಟ್ಕಮ. ೭-೫೦). [ಸಂ.]

**ಜಾಮಿನಿ** (ನಾ). ಸಹೋದರಿ: "ಭಗಿನಿ ಜಾಮಿನಿ ಸ್ವಸೃವೆಂದೊಡೊಡ ಹುಟ್ಟಿದಳು" (ಮಂಗರಾ. ೯೩-೧೪). [?]

**ಜಾಮಿಸು** (ಕ್ರಿ). ಸುಡು; ದಹಿಸು: ಮೂವತ್ತು ಗಾವುದ × × × ದೇವಸದೊಳೆಯ್ದು ಅರಸನಂ ಜಾಮಿಸಿ ನುರಿವುತ್ತಿಟ್ಟುದಂ ಕಣ್ದು (ಸೌಇಇ. XI-1, ೧೧-೧೮; 865); ಉರುತರ ಹರಿಚಂದನೇಂಧನ ನಿಕಾಯದಿಂ ರೋಹಿಣೇಯಂ ಜಾಮಿಸುತ್ತಿರೆ (ನೇಮಿಪು. ೧४-೧೦೭ ವ); ಇಂಧನಂಗಳಂ ತರಿಸಿ ಆ ಋಷಿಯರ ಶರೀರವಂ ಸಂಸ್ಕಾರವಿಧಿಯಿಂ ಜಾಮಿಸಿ (ಜೀವಸಂ. ೧೨೦-೬೬ ವ).
[ಜಾಮ₂ + - ಇಸು₃]

**ಜಾಮಿನ್** 'ಜಾಮೀನು' ನೋ.

**ಜಾಮೀನು, ಜಾಮೀನ್** (ನಾ). ೧. ಈಡು; ಹೊಣೆ: ಖಂಡಣೆ ಹಣಕ್ಕೆ ಕೊಡಗಿನ ಸಂಸ್ಥಾನದ ದೊರೆಗಳ ಜಾಮೀನು ಹೇಳಿಸಿ (ರಾಜೇಂದ್ರ. ೬೨); ತಕ್ಕ ಜಾಮೀನು ಇಲ್ಲದೆ ಸಾಲ ಕೊಡುವುದೇ ಇಲ್ಲ (ವಿಧಿಷ್ಟ. ೯೦); ಇಸ್ಮಾಲಿಗೆ ಎಲ್ಲ ಬಿಟ್ಟು, ಜಾಮೀನು ನಿಲ್ಲಲೂ ಯಾರೂ ಮುಂದೆ ಬರಲಿಲ್ಲ (ಜಗುಬ. ४೬). ೨. ಹೊಣೆಗಾರ; ಜವಾಬ್ದಾರಿ ಹೊತ್ತವನು: ನನ್ನ ಅಣ್ಣಂದಿರು ತಮ್ಮ ಒಬ್ಬ ಸ್ನೇಹಿತನಿಗೆ ಜಾಮೀನಾಗಿ ನಿಂತು (ಮುಹಾಗ. ೩೩೩). **ಜಾಮೀನ್:** ೧. ದೇಣೇದಾರನು ಬರವಣಿಗೆಯ ಮೂಲಕವಾಗಿ ಸಾಕಾದಷ್ಟು ಜಾಮೀನ್ ಕೊಟ್ಟ ಪಕ್ಷದಲ್ಲಿ ಅದನ್ನು ಆತನ ಸ್ವಾಧೀನದಲ್ಲಿಯೇ ಬಿಟ್ಟರಬಹುದು (ಗ್ರಾಮಾಕ. ೩೬). [←ಅರ. ಮರಾ. ಜಾಮೀನ್]

**ಜಾಮೀನುಕರಾರು** (ನಾ). ಒಬ್ಬ ವ್ಯಕ್ತಿಯು ಒಂದು ವಿಷಯದಲ್ಲಿ ಜಾಮೀನಾಗಿರುವುದಾಗಿ ಬರೆದುಕೊಟ್ಟ ಒಪ್ಪಂದ ಪತ್ರ: (Bond of Security. ಪಾರಿನಿ. ೯); ಜಾಮೀನುಕರಾರು ಬರೆದುಕೊಟ್ಟು ಅವನನ್ನು ಬಿಡಿಸಿಕೊಂಡು ಬಂದೆ (ರೂಢಿ). [ಜಾಮೀನು + ಕರಾರು₁ (<ಕರಾರ)]

**ಜಾಮೀನುದಾರ, ಜಾಮೀನ್ದಾರ** (ನಾ). ಜಾಮೀನಾಗಿರುವ ವ್ಯಕ್ತಿ; ಹೊಣೆಗಾರ: (ಮೃಗಜ. IV, ೭೭೨); ಅವನನ್ನು ಬಿಡಿಸುವಾಗ ಜೋಡಿದಾರರೇ ಜಾಮೀನುದಾರರಾಗಿದ್ದರು (ರೂಢಿ). **ಜಾಮೀನ್ದಾರ:** ಲಗ್ನಕಃ, ಪ್ರತಿಭೂಃ ೨ ಹೊಣೆಗಾರ, ಜಾಮೀನ್ದಾರ (ಸಿದ್ಧಾಂತಿ. ೨೭೫).
[ಜಾಮೀನು + - ದಾರ₄]

**ಜಾಮೀನುಪತ್ರ** (ನಾ).=ಜಾಮೀನುಕರಾರು: ರಂಗಣ್ಣನ ಮುಖಾಂತರ ನನಗೆ ಜಾಮೀನುಪತ್ರವನ್ನು ಬರೆಯಿಸಿ ಕೊಟ್ಟು ಇರುತ್ತಾನೆ (ಜಾಮವಂ. ೧೮೦). [ಜಾಮೀನು + ಪತ್ರ]

**ಜಾಮೀನ್ದಾರ** 'ಜಾಮೀನುದಾರ' ನೋ.

**ಜಾಮು, ಜಾಂ** (ನಾ). ಸಕ್ಕರೆ ಪಾಕದಲ್ಲಿ ಕುದಿಸಿ ಮಾಡಿದ ಹಣ್ಣಿನ ಪಾಕ: ಕಿತ್ತಳೆಹಣ್ಣಿನ ಸಿಪ್ಪೆಯಿಂದ ಕೂಡ ಜಾಮುಗಳನ್ನು ತಯಾರಿಸಬಹುದು (ಅಡುಸಾ. ೧೧೭). **ಜಾಂ:** ಸಕ್ಕರೆಯಿಂದ ತಯಾರಾದ ಜಾಂ ಮತ್ತು ಜಲ್ಲಿಗಳು ಈ ಸೂಕ್ಷ್ಮಾಣುಗಳ ಹಾವಳಿಯಿಂದ ಬಹಳ ಬೇಗ ಕೆಟ್ಟು ಹೋಗುವುವು (ಗೃಹವಿ. ೫೬). [← ಇಂ. Jam]

**ಜಾಮೂನ್** 'ಜಾಮೂನು' ನೋ.

**ಜಾಮೂನು, ಜಾಮೂನ್** (ನಾ). ಹಾಲುಖೋವ ಮತ್ತು ಮೈದಾ ಹಿಟ್ಟಿನಿಂದ ಉಂಡೆಮಾಡಿ ತುಪ್ಪದಲ್ಲಿ ಕರಿದು ಸಕ್ಕರೆ ಪಾಕದಲ್ಲಿ ಹಾಕಿ ಮಾಡುವ ಒಂದು ಸಿಹಿತಿಂಡಿ: ಹುಳಿಷಿಕಾರಿ ಮಾಡುವುದು ಜಾಮೂನು ತಿನ್ನುವಷ್ಟು, ಏತಕ್ಕೆ, ಅದಕ್ಕಿಂತ ಸುಲಭ ಎಂದು ಎನಿಸುತ್ತಿತ್ತು (ರಾಯಚ. ೦೬). **ಜಾಮೂನ್:** ಜಾಮೂನ್, ಜಿಲೇಬಿ (ಮುಹಾಂ. ४೬). [←ಹಿಂ. ಜಾಮುನ್]

**ಜಾಮೇಯ** (ನಾ). ಒಡಹುಟ್ಟಿದವಳ ಮಗ; ಸೋದರಳಿಯ. [ಸಂ.]

**ಜಾಯಕ** (ನಾ). ಹಳದಿ ಬಣ್ಣದ ಅಗಿಲುಮರ ; ಶ್ರೀಗಂಧದ ಗುಂಪಿಗೆ ಸೇರಿದ ಒಂದು ಸುವಾಸನೆಯ ಮರ; ಕಾಲೇಯಕ. 'ಜಾಪಕ' ಪರಾ. [ಸಂ.]

**ಜಾಯಜಖಮಿ** (ನಾ). ಹಿಂಸೆ ; ಕೊಲೆ : ದಿನವಂದಕ್ಕೆ ಅವರ ಕಡೆ ಐವತ್ತು ಅರವತ್ತು ಜನದ ಮೇಲೆ ಜಾಯಜಖಮಿ ಮಾಡುತ್ತ ಇರಲಾಗಿ (ರಾಜೇಂದ್ರ. ೨೨). [ <ಜಾಯಾ + ಜಖಮಿ$_0$ (<ಜಖಂ) ]

**ಜಾಯಬ್ಬೆ** (ನಾ). ಒಬ್ಬಾಕೆಯ ಹೆಸರು: ನೀತಿಮಾರ್ಗ ಪೆರ್ಮ್ಮಾಡಿಯ ತಙ್ಗಿ ಜಾಯಬ್ಬೆಯೆಮ್ಬೊಳ್ (ಎಕ. XII, ಶಿರಾ. ೨೪-೧೮; 900). [? + ಅಬ್ಬೆ$_1$]

**ಜಾಯಮಾನ** (ಗು). ೧. ಹುಟ್ಟಿತಕ್ಕ ; ಹುಟ್ಟಲಿರುವ ; ಉಂಟಾಗಲಿರುವ. (ನಾ). ೨. ಸ್ವಭಾವ ; ಹುಟ್ಟುಗುಣ ; ವಿಶಿಷ್ಟಗುಣ : ಪತನಕ್ಕೆ ಹೇತುವಾದ ತಪ್ಪು ಸಲಹೆಗಳನ್ನು ಕೊಡುವುದು ರಾಜನ ಜಾಯಮಾನದಲ್ಲಿ ಬಂದಿರಲಿಲ್ಲ (ನಟಸಾ. ೧೦೫); ಇಷ್ಟಾದರೂ ನಂಬುವ ಜಾಯಮಾನ ಅವನದಲ್ಲ (ವಿಕಾಸ. ೪); ಆದರೂ ಕನ್ನಡದ ಜಾಯಮಾನಕ್ಕೆ ಭಂಗ ಬಂದಿಲ್ಲ (ಸಮಾಲೋ. ೦೮). [ಸಂ.]

**ಜಾಯಾ** (ಗು). ೧. ಹಾಳಾದ ; ನಾಶವಾದ ; ಕೆಟ್ಟುಹೋದ ; ನಷ್ಟವಾದ. (ನಾ). ೨. ನಷ್ಟ ; ನಾಶ : ಅವನ ಆಸ್ತಿಪಾಸ್ತಿಯೆಲ್ಲಾ ಜಾಯಾ ಆಗಿ ಹೋಯಿತು (ರೂಢಿ).

**ಜಾಯಾಮಾಡು**=ನಷ್ಟಗೊಳಿಸು ; ಹಾಳುಮಾಡು : ಅವರ ಫೌಜನ್ನು ಹೊಡೆದು ಜಾಯಾಮಾಡಬೇಕು (ರಾಜೇಂದ್ರ. ೩೯). [ ←ಅರ. ಮರಾ. ಜಾಯಾ ]

**ಜಾಯಾಜೀವ** (ನಾ). ೧. ಹೆಂಡತಿಯ ಗಳಿಕೆಯಿಂದ ಜೀವಿಸುವವನು. ೨. ನಟ : "ಶೈಲಾಲಿ ನಟಂ ತಾಂ ಭರತಂ ಶೈಲೂಷಾಹ್ವಂ ಕೃಶಾಶ್ವಿ ಜಾಯಾಜೀವಂ" (ವಸ್ತುಕೋ. ೬೪-೭೪); ಬಹುರೂಪಮಂ ತಳೆದು ಜಾಯಾಜೀವನೆಂತಂತೆವೋಲ್ ತಿಱಿಗುಂ . . . ಜೀವಂ ಭವಾರಣ್ಯದೊಳ್ (ವರ್ಧಮಾ. ೧೦-೫೦). [ಸಂ. (ಜಾಯಾ + ಆಜೀವ) ]

**ಜಾಯಾಜೀವಿ** (ನಾ). ನಟ: ರಸಿಕರ್ ಬಣ್ಣಿಸೆ ಭಾವುಕರ್ ಪೊಗಟ್ ಜಾಯಾಜೀವಿಗಳ್ ಕೂರ್ತು ಕೀರ್ತಿಸೆ (ಪುಷ್ಪವು. ೧೨-೫೦). [ಸಂ. ಜಾಯಾಜೀವಿನ್]

**ಜಾಯಾಸ್ಥಾನ** (ನಾ). [ಜ್ಯೋತಿ] ಜನ್ಮಕುಂಡಲಿಯಲ್ಲಿ ಪತ್ನಿಯ ಶುಭಾಶುಭಗಳನ್ನು ತಿಳಿಸುವ ಸ್ಥಾನ ; ಜನ್ಮಲಗ್ನದಿಂದ ಏಳನೆಯ ಸ್ಥಾನ : ನನ್ನ ಭಾಗ್ಯದ ಜಾಯಾಸ್ಥಾನದಲ್ಲಿ ಮನ್ಮಥದೇವನ ಸಹಕಾರವೂ ನನಗೆ ಉಂಟೆಂದು ತಿಳಿದೆನು (ಇಷ್ಟಕ. ೪೪೯). [ಸಂ. (ಜಾಯಾ + ಸ್ಥಾನ) ]

**ಜಾಯಿ$_1$** 'ಜಾದಿ' ನೋ.

**ಜಾಯಿ$_2$**, ಝಾಯಿ (ನಾ). ೧. ಒಂದು ಬಗೆಯ ಚರ್ಮವಾದ್ಯ ; ಮೃದಂಗ. ೨. [ಸಂಗೀತ] ತಾಳವಿನ್ಯಾಸದಲ್ಲಿ ಒಂದು ಕ್ರಮ: ಜಾಯಿ ಅನುಜಾಯಿಗಳ ಜೋಕೆ ತಪ್ಪದೆ (ವಿರೂಪಾ. ೭೨). 'ಅನುಜಾಯಿ' ಪರಾ. **ಝಾಯಿ**: ೧. ಝುರ್ಝುರವೆಂಬ ಝಾಯಿ (ವಿವೇಕ. ೨೩೭). [ ? ]

**ಜಾಯಿಕಾಯಿ** 'ಜಾದಿಕಾಯ್' ನೋ.

**ಜಾಯಿಕಾಯಿಮರ**, ಜಾಕಾಯಿಮರ (ನಾ). ರಫ್ತು ಮಾಡಲು ತಯಾರಿಸುವ ಪೆಟ್ಟಿಗೆಗಳಿಗೆ ಉಪಯೋಗಿಸುವ ಒಂದು ಬಗೆಯ ಮರ ಮತ್ತು ಅದರ ಹಲಗೆ : ಜಾಯಿಕಾಯಿಮರವು ತುಂಬಾ ಹಗುರವಾಗಿರುತ್ತದೆ (ರೂಢಿ). **ಜಾಕಾಯಿಮರ**: ಜಾಕಾಯಿಮರದ ಹಲಗೆಗಳು ಪಾರ್ಸಲ್ ಪೆಟ್ಟಿಗೆಗೆ ತುಂಬಾ ಉಪಯೋಗವಾದುವು (ರೂಢಿ). [ ಜಾಯಿ$_0$ + ಕಾಯಿ$_4$ (<ಕಾಯ್$_4$) + ಮರ$_1$ ]

**ಜಾಯಿಪತ್ರ** (ನಾ).=ಜಾಜಿಪತ್ರೆ: "ಕಾಲಕೂಟಃ–ಜಾಯಿಪತ್ರದ ಹಗಿನು" (ಒಷಧಿ. ೩೦). [ಜಾಯಿ$_1$ (<ಜಾದಿ) + ಪತ್ರ ]

**ಜಾಯಿಪತ್ರೆ** 'ಜಾಜಿಪತ್ರೆ' ನೋ.

**ಜಾಯಿಪಳ** (ನಾ).=ಜಾಯಿಫಲ: "ಜಾಯಿಪಳಮಾ ಜಾತಿಪತ್ರೆಯಕ್ಕುಂ" (ಮಂಗರಾ. ೪೩-೪೨) ; "ಜಾಯಿಪಳ – ಜಾತಿಫಲ" (ತದ್ಭಕೋ. ೧೫). [ ಜಾಯಿ$_1$ (<ಜಾದಿ) + ಪಳ$_2$ ]

**ಜಾಯಿಫಲ**, ಜಾಫಲ, ಜಾಯಿಫಳ (ನಾ).=ಜಾದಿಕಾಯ್ : "ಜಾತಿಕೋಶಂ, ಜಾತಿಫಲಂ-ಈ ೨ ಜಾಯಿಫಲಂ" (ನಾಚಿರಾ ೧೨೪); "ಜಾತಿಸಾರಂ, ಜಾತಿಕೋಶಂ, ಜಾತಿಶೂಕಂ–ಈ ಮೂಱುಂ ಜಾಯಿಫಲ" (ಒಷಧಿ. ೬೨); ಜಾಯಿಫಲ, ಸೈಂಧವ, ನಾರಂಗಿ, ಹೊಂಗರುಗ . . . ಇವನ್ನು ಸಮಾನಂಗೊಂಡು ಚೂರ್ಣಮಂ ಮಾಡಿ (ವಿಷ್ಣವಿ. ೭೮). **ಜಾಫಲ**: ಅರ್ತಿಯಿಂ ವೀಳ್ಯೆಯವ ಕರ್ಪೂರಮಿಶ್ರ ಜಾಫಲ ಜಾಪತ್ರ ಸಹ ಚರ್ವಿಸಿದ (ಶಬುಧಾ. ೨-೭೦) ; ಕೊಟ್ಟು ಪನ್ನೀರ್ವೀಳ್ಯವನು ಮೆಲುಗೊಟ್ಟು . . . ಜಾಫಲ ಪತ್ರೆಯನು (ಜಿರಾಮಾ. ೮೮-೬). **ಜಾಯಿಫಳ**: "ಮಾಯಾಫಳಂ-ಜಾಯಿಫಳ" (ಒಷಧಿ. ೧೨೪) ; ಹಲಸಿನ ಹಣ್ಣಿನ ವಿಷಮಂ . . . ವಿಳಸಜ್ಜಾಯಿಫಳ ಹಿಂಗು ತಕ್ರಂ ಕಳೆಗುಂ (ಖಮುದ. ೨-೮೪). [ಜಾಯಿ$_1$ (<ಜಾದಿ) + ಫಲ]

**ಜಾಯಿಫಳ** 'ಜಾಯಿಫಲ' ನೋ.

**ಜಾಯಿಲ$_1$** (ನಾ). ನಾಯಿ; ಶುನಕ; ಸೊಣಗ: "ಜಾಯಿಲಂ ಕುಕ್ಕುರಂ" (ಕಲಸಾ. ೬-೧೦೮) : ಝುಲುಮ್ಮೆನಲ್ ಸೆಡೆಯೆ ಚಾಳಿಪ ಜಾಯಿಲನಂತೆ ಮೊಕ್ಕಳಂಬಡುವ ಬದಂಗನಂ ದುರ್ಬೆಸನಿಯಲ್ಲದಳಾತನನೊಟ್ಟಿ ಸುಟ್ಟಪಳ್ (ಲೀಲಾವ. ೨-೭೦) ; ಮತ್ತಮವಱೊಳಗೊಂದು ಜಾತಿ ಜಾಯಿಲಂ ಪೋಗದೆ ನಿಂದು (ಗಿರಿಕ. ೦-೦೦೩ ವ); ಅಂತು ಸೊಕ್ಕಿದೆಕ್ಕಲಂ ದಕ್ಕದೆ ಬೇಂಟೆಯ ಜಾಯಿಲಂಗಳವಿಕ್ಕಡೆಗೆಯ್ದು ಪಾಯ್ದು ಪೋಗುತ್ತಿರೆ (ಹಮ್ಮಿರ. ೪-೪೭ ವ); ಜಾಯಿಲಂಗಳಂ ಕೂಡಿ ನಡೆತಂದು ನೆರೆದರು (ರಾಮಾಶ್ವ. ೮೪-೧). [ದೇ.॥ ತೆಲು. ಜಾಗಿಲ ]

**ಜಾಯಿಲ$_2$**(ನಾ). ಜಾತಿಯ ಕುದುರೆ; ಉತ್ತಮವಾದ ಕುದುರೆ: ಜಾಯಿಲ ಮೊಂದೆರಡೆಂದು ತೋಱೆ ನೆಟ್ಟನೆ ಪದಿನೆಂಟು ಕೋಟಿವರೆಗಂ ತಳರ್ದತ್ತು ತುರಂಗಸಾಧನಂ (ಆದಿಪು. ೧೧-೬೦) ; ಆಯೆಡೆಗೆ ನೀರುಣಲ್ಬರೆ ಜಾಯಿಲಂ (ಯಶೋಚ. ೩-೬೫) ; ಆಯುಧಂಗಳ ಬಿಸುಟು ಕರಿರಥ ಜಾಯಿಲಂಗಳನಿಳಿದು ಬದುಕುವುಪಾಯಮೆಂದಸುರಾರಿ ಸಾಱಿದನಂದು ಕೈನೆಗಹಿ (ಕುಮಾರವ್ಯಾ. ೧೯-೩೭). 'ಜವಾಯಿಲ', 'ಜಾತ್ಯಶ್ವ' ಪರಾ. [ ? ]

**ಜಾಯು** (ನಾ). ಔಷಧಿ; ಮದ್ದು: "ಭೇಷಜಮೌಷಧಮಗದಂ ಭೇಷಜ್ಯಂ ಜಾಯು ತಂ[ತ್ರ]ಮಂತೇಕಾರ್ಥಂ" (ವಸ್ತುಕೋ. ೭೪-೪೨) ; "ಭೈಷಜ್ಯಂ, ಭೇಷಜಂ, ಜಾಯುಃ, ಅಗದಂ, ತಂತ್ರಂ, ಔಷಧಂ–ಈ ೬ ಮದ್ದು" (ಹಲಾಯು. ೦೦೦-೪೫೯). [ಸಂ.]

**ಜಾಯೆ** (ನಾ). ಮಡದಿ ; ಹೆಂಡತಿ ; ಪತ್ನಿ : ಇರ್ದುದೊಂದು ಶುಕಂ ತನ್ನಯ ಜಾಯೆವೆರಸು (ಕಾದಂಪೂ. ೧೩೨) ; ಜೀಯೆನುತ ಹರಿದೈದಿ ರಾಮನ ಜಾಯೆಗೆಱಗಿದ ಕೈಯ ಮುಗಿದು (ಶಾರಿರಾ. ೪೩-೩); ನಿದ್ದೆ ಬಾರದೆ ಸುಮ್ಮನುರುಳಾಡುವಳು ಜಾಯೆ ಸುಖನಿದ್ರೆಗೈವುದು ಹಳ್ಳಿ (ಗಾಥಾಸ. ೮-೩೦). [ಸಂ. ಜಾಯಾ ]

**ಜಾರ** (ನಾ). ಹಾದರ ಮಾಡುವವನು; ಹಾದರಿಗ; ಮಿಂಡ; ಉಪಪತಿ: "ಉಪಪತಿ ಜಾರಂ" (ವಸ್ತುಕೋ. ೫೭-೨೫) ; "ಹಾದರಿಗನುಪಪತಿ ಜಾರನೆನಿಸಿಕ್ಕು" (ಮಂಗರಾ. ೭೨-೨೨) ; ಜಾರಚೋರವೀರರ ಕಥೆಯಂತೆ ಬಾಯ್ಸವಿಯ ಮಾತುಗಳಂ ಬಱಿಕೆಯ್ದು ಚರ್ಚೆಯಲ್ಲ (ಅನಂಪು. ೧-೩೭) ; ಚೋರನನು ಕಂಟಕನ ಹಿಸುಣನ ಜಾರನನು ಷಂಡನನು . . . ದೂರದಲಿ ವರ್ಜಿಸುವುದು (ಕುಮಾರ. ೪-೪೭) ; ಸರಿಯೆ ನಿನಗಿವ ಜಾರ ತೆಗೆ (ಶಾರಿರಾ. ೨-೦೭) ; ತಸ್ಕರ ಜಾರ ವೀರವಿಟ ವೇಶ್ಯಾಕಾವ್ಯಮಂ ಕೇಳ್ದು ಮೆಯ್ ಮಱೆವರ್ ಪುಣ್ಯಪುರಾಣದತ್ತಳಸರಯ್ಯೋ (ರತ್ನಾಕ. ೮೭). [ಸಂ.]

**ಜಾರಕರ್ಮಿ** (ನಾ). ಹಾದರಿಗ ; ವ್ಯಭಿಚಾರಿ : ಆ ಇಂದ್ರನೇ ಜಾರಕರ್ಮಿಯಾದನೆಂದು ಹೇಳುವ ಪುರಾಣಗಳು ಹೊರಡುತ್ತವೆ (ಕರ್ಣಾಟ. ೩೭). [ ಸಂ. ಜಾರಕರ್ಮಿನ್ ]

**ಜಾರಜ** (ನಾ). ಜಾರನ ಸಂಬಂಧದಿಂದ ಹುಟ್ಟಿದವನು ; ಹಾದರದಿಂದ ಹುಟ್ಟಿದವನು. [ ಸಂ. ]

**ಜಾರಜಾತ** (ನಾ).=ಜಾರಜ : "ಉಪಪತಿ ಜಾರನವಂಗಜೆಯೆ ಪುಟ್ಟಿದಂ ಜಾರಜಾತನಾತಂ ಕುಂಡಂ" (ವಸ್ತುಕೋ. ೩೬-೨೩); ದುರ್ಜನರ ಜಾರಜಾತರ ವಿಜಾತಿಗಳ್ಗೆ ಯೋಗ್ಯಮಪ್ಪಯೋಗ್ಯಮಂ ಗೆಯ್ದರೆಂದು ಪಾರ್ವರ ಸಭೆಯ ನಡುವೆ ನುಡಿದೊಡೆ ವಾಯುಭೂತಿಯುಂ ಮುಳಿದು (ವಡ್ಡಾರಾ. ೮-೧೪). [ ಜಾರ + ಜಾತ ]

**ಜಾರಟೆ** (ನಾ). ಒಂದು ಬಗೆಯ ಹುಳು ; ಕಪ್ಪರಚೆಟ್ಟೆ ; ಬೆಟ್ಟೆಬೆನಕ (ಉಕ) : ಹೊಸ ಜೀವನವನ್ನು ವೇಗದ ಹೆಜ್ಜೆಗಳನ್ನು ಕಂಡರೆ ನಾವು ಇರುವೆಯಂತೆ ಅಲ್ಲ, ಜಾರಟೆಯಂತೆ . . . ಕಾಲಿಡುತ್ತಿದ್ದೇವಲ್ಲ (ಕನ್ನನು. I, ೦೩೨). [ ? ]

**ಜಾರಣ** (ನಾ). ಅರಗುವುದು ; ಜೀರ್ಣವಾಗುವುದು. 'ಜಾರಣಂಗೈ' ನೋಡಿ. [ ಸಂ. ]

**ಜಾರಣಂಗೈ** (ಕ್ರಿ) ಅರಗಿಸಿಕೊಳ್ಳು ; ಜೀರ್ಣಮಾಡಿಕೊಳ್ಳು : ಎಲ್ಲರ ಭೀತಿಗೊಳಿಸಿ ಬಾಧಿಸುತ ತಿನುವ ಜಾರಣಂಗೈವ ರಾವಣನನುಜ (ವಂಕಾರಾ. ೨-೩೬-೩). [ ಜಾರಣ + ಕೈ$_1$ (<ಕೆಯ್$_1$) ]

**ಜಾರತನ** (ನಾ). ಹಾದರ; ವ್ಯಭಿಚಾರ : ಜಾರತನದಲಿ ಸುರಪ ಧರಿಸನೆ ಸಾವಿರಾಲಿಗಳ (ಕೌಶಿರಾ. ೦೪-೦೩) ; . ಕೇವಳವು ಸಲೆ ಜಾರತನಗಳ ಕಾವಿಸಿಹರವರವರ ಮಾರ್ಗದ ಭಾವವಲ್ಲದೆಯಿರದು ದುರ್ಗುಣ ದೇವರೊಳು ನಿರುತಾ (ಜನಸಾ. ೦೦). [ ಜಾರ + – ತನ ]

**ಜಾರತೆ** (ನಾ). = ಜಾರತನ : ಗೋಪೀಕೃಷ್ಣನಿಗೆ ಪುರಾಣದಲ್ಲಿ ಜಾರತೆಯ ಕೋಡು ಮೂಡಿಸಿದ "ಪುಟ್ಟವಿಧವೆ" ಯ ಬಗ್ಗೆ ನಾನೇನು ಹೇಳಲಿ (ಸಪೀಗೀ. ೭, ಟಿಪ್ಪಣಿ). [ ಸಂ. ಜಾರತಾ ]

**ಜಾರತ್ವ** (ನಾ). = ಜಾರತನ : ಪತ್ನಿಯ ವಿಷಯದಲ್ಲಿ ಜಾರತ್ವಶಂಕೆಯನ್ನು ಇಟ್ಟುಕೊಂಡು ಹೊಂದತಕ್ಕ ಮನೋವ್ಯಥೆಯು ಅತ್ಯಧಿಕವಾದುದು (ಕವಿಕ. ೩೭). [ ಸಂ. ]

**ಜಾರನಾರಿ** (ನಾ). ಹಾದರ ಮಾಡುವ ಹೆಣ್ಣು : ಇರುಳೊಳ್ ಜಾರನಾರೀಕದಂಬಂ (ಜಗವಿ. ೪-೨೯). [ ಜಾರ + ನಾರಿ$_2$ ]

**ಜಾರಮುಜಟ್ಟೆ** (ನಾ). ಸೋಮಾರಿತನ; ಔದಾಸೀನ್ಯ; ಆಲಸ್ಯ : ಚೆನ್ನಣ್ಣನ ಹಸ್ತಗುಣ ಒಳ್ಳೇದು. ಅವನು ಜಾರಮುಜಟ್ಟೆಯವನು ಅನ್ನೋದು ಒಂದೇ. (ಜೊಂಗಾಳ್ಯ. ೦೩೦). [ ? ]

**ಜಾರಲ್ಬು** (ನಾ). ಪತನ ; ಸಾವು (?) : ನೀಂ ಪೊಗಟದೆ × × ತೆ ಪಡಿವನ್ನ ಮ್ಮಾಡಿದಂ ಪೊಗಟ್ವೆಟಿಗನ ಜಾರಲ್ಬು ಕೇಳ ಪೆಂಜ್ಜೆಟಿಲ್ಲಂ ಪೊಗಟಲ್ಕೆ ವೀಟಿನ ಸಾವು ಕತೆಯಾಗಿ ಪರೆದುದು ಮೂರುವೀಲೋಕದೊಳಗೆಲ್ಲ (ಸೌಇಇ. IX-1, ೩೦-೦೪; ೯೬೬). [ <ಜಾಱು$_1$ ]

**ಜಾರವನಿತೆ** (ನಾ). ಹಾದರ ಮಾಡುವ ಹೆಂಗಸು ; ಹಾದರಗಿತ್ತಿ ; ವ್ಯಭಿಚಾರಿಣಿ : ಮುಗುಳುನಗೆಯುಲಿ ಜಡಿದು ಜಾಱುವ ಜಾರವನಿತೆಯ ಗೊಡವೆಗೊಳಗಾಗದವರುತ್ತಮಪುರುಷರುಗಳು (ಕುವ್ಯಾಉ. ೪-೪೦). [ ಜಾರ + ವನಿತೆ ]

**ಜಾರವೆಣ್** (ನಾ). = ಜಾರವನಿತೆ : ಗಂಡರ ಮನವನೊಲಿಸಿಕೊಂಬುದಿದು ಜಾರವೆಂಡಿರಿಂಗಚ್ಚರಿಯಲ್ಲ (ಕುರಾಸಾಂ. ೨೩-೦೭). [ ಜಾರ + ಪೆಣ್ ]

**ಜಾರಸ್ತ್ರೀ** (ನಾ). = ಜಾರವನಿತೆ : ತಳರ್ದಾತ್ಮಾಲಯದಿಂದಿರುಳ್ ಸುೞಿವ ಜಾರಸ್ತ್ರೀಯ ವಕ್ತ್ರೇಂದುವಂ . . . ಕಂಡು (ಜಗವಿ. ೪-೨೮) ; ಜಾರಸ್ತ್ರೀಯರ ಕೂಡಿ ಅವರೊಳು ಪೋರಮಾತುಗಳಾಡಿ (ಗಗಶಾ. ೦೪-೨). [ ಜಾರ + ಸ್ತ್ರೀ ]

**ಜಾರಿ** (ನಾ). ಆಚರಣೆ ; ಅನುಷ್ಠಾನ ; ಕಾರ್ಯರೂಪ ; ಚಾಲತಿ : ಹಾಲಿ ಯಿನಾಮತ್ತಿಯಲ್ಲು ಜಾರಿಯಿರುವುದು (ಮ್ಯಆರಿ. ೦೯೩೪, ೩೨-೯ ; 1812) ; ಆಗಿನ ಕಾಲದಲ್ಲಿ ಜಾರಿಯಲ್ಲಿದ್ದ ಕೆಲವು ಗೌಣ ಸಿದ್ಧಾಂತಗಳನ್ನೆಲ್ಲಾ ವಿಮರ್ಶಿಸಿ ಖಂಡಿಸಿರುವರು (ತತ್ವಪ್ರಾ. ೩೦೩).

**ಜಾರಿಗೆ ತರು**=ಕಾರ್ಯಗತ ಮಾಡು:ಅದರ ಉಪಬಂಧಗಳನ್ನು ಜಾರಿಗೆ ತರುವುದಕ್ಕಾಗಿ . . . ಅವಶ್ಯವಾಗಬಹುದಾದಂಥ ಉಪಬಂಧಗಳು (ಭಾಧಾಸ. ೩) ; ವಿಚಾರಣಾ ಸಮಿತಿಯವರು ಕೊಟ್ಟಿರುವ ತೀರ್ಪನ್ನು ಜಾರಿಗೆ ತರಕೂಡದೆಂದು ಈಗಲೇ ಅವರಿಗೆ ಬರೆದು ಕಳುಹಿಸುತ್ತೇನೆ (ಪ್ರಕಾಪ. ೬೪). **ಜಾರಿಮಾಡು** = ಜಾರಿಗೆ ತರು : ವಾರಂಟ್ ಜಾರಿಮಾಡೇ ಮಾಡುತ್ತಾನೆ (ಜಂಗೂಲಿ. ೯೦) ; ಆಜ್ಞೆಯನ್ನು ಜಾರಿಮಾಡಕೂಡದು (ದಾಲಕ್. ೩೬೪); ಈ ವಾರಂಟು ಕೊಲೆಯ ಅಪರಾಧದಿಂದ ಜಾರಿಮಾಡಿದ್ದಾರೆ (ಜಮಿನ್ನಾ. ೧೩೩). **ಜಾರೀಭಟಮಾನ್ಯ** = (ಈಗಲೂ ಜಾರಿಯಲ್ಲಿರುವ) ಯುದ್ಧದಲ್ಲಿ ಪೌರುಷವನ್ನು ತೋರಿಸಿದ ಯೋಧನಿಗೆ ಕೊಡುವ ದತ್ತಿ,–ಮಾನ್ಯ : ಪುರ್ನಸಾಗರ ಹೋಬಳಿ ಪೈಕಿ ಗೊಲ್ಲಹಳಿ ಬಳಿಯ ನವಿಗೆ ನಡಿಯುವ ಜಾರೀಭಟಮಾನ್ಯ ಹೊಲ ಕೊಟ್ಟುಯಿದೆನೆ (ಎಕ. X (8), ಚಿಕ್ಕಬ. ೭೭–೩ : ?). [ ←ಅರ. ಹಿಂ. ಮರಾ. ಜಾರೀ ]

**ಜಾರೀನಾಂ** (ನಾ). ಅವುಲಿನಲ್ಲಿರುವ ಭೂಮಿಯೇ ಮೊದಲಾದ ದತ್ತಿ,–ಇನಾಮತಿ : (ಮ್ಯಗೆಜಿ. IV, ೭೭೨). [ ಜಾರಿ + ಇನಾಂ ]

**ಜಾರೀನಾಂತಿ, ಜಾರೀನಾಮತಿ, ಜಾರಿಯಿನಾವಂತಿ, ಜಾರಿಯಿನಾಮತ್ತಿ** (ನಾ). ಜಾರಿಯಲ್ಲಿರುವ (ಕಂದಾಯವಿಲ್ಲದಂತೆ) ಮಾನ್ಯವಾಗಿ ಕೊಟ್ಟಿರುವ ಜಮೀನು,–ದತ್ತಿ: (ಕೈಸ್‌ಗೆ.II, ೩೩೦). **ಜಾರೀನಾಮತಿ:** (ಮ್ಯಗೆಜಿ. IV, ೭೭೨). **ಜಾರಿಯಿನಾವಂತಿ :** ಜಾರಿಯಿನಾವಂತಿ ಸದರಿ ತಪಶೀಲ ಮೇರಿಗೆ (ಮ್ಯಆರಿ. ೦೯೩೯, ೪೨-೪೩; 1825). **ಜಾರಿಯಿನಾಮತ್ತಿ :** ಜಾರಿಯಿನಾಮತ್ತಿ ೨೪ (ಮ್ಯಆರಿ. ೦೯೩೯, ೪೨-೭೦ ; 1825). [ ಜಾರಿ + ಇನಾಂತಿ ]

**ಜಾರೀನಾಮತಿ** 'ಜಾರೀನಾಂತಿ' ನೋ.

**ಜಾರಿಕೆ** (ನಾ). ೧. ಕೆಳಗೆ ಸುರಿಸುವ ಗುಣ,–ಬೀಳಿಸುವ ಗುಣ; ಜಾರುವುದು : "ವಿಷಣಂ, ವಿಷಣೀಯುಂ–ಈ ೨ ಜಾರಿಕೆ" (ಕಾಶಕ್ಕ. ೧೨೦) ; ದಡದಲ್ಲಿ ಜಾರಿಕೆ ಇದ್ದದ್ದರಿಂದ . . . ಕೆಸರಲ್ಲಿ ಬಿದ್ದುಬಿಟ್ಟನು (ಇಪ್ಪಕ. ೩೩) . ೨. ನುಣುಚಿಕೊಳ್ಳುವುದು ; ತಪ್ಪಿಸಿಕೊಳ್ಳುವುದು : ರೋಹಿಣಿ ಜಾರಿಕೆಯ ಉತ್ತರ ಕೊಟ್ಟಳು (ರಂಗರೋ. ೨೮) ; ಬೌದ್ಧಿಕತೆಯು ಆ ಎಲ್ಲೆಗಳ ಮೇಲಿಂದ ಒಂದು ಪ್ರಕಾರದ ಅನಿರೀಕ್ಷಿತವಾದ ಜಾರಿಕೆಯನ್ನು ಸಾಗಿಸಿರುವುದು (ಪ್ರಬಂಧ. ೦೩೪). [ ಜಾರು$_2$ (<ಜಾಱು$_2$) + – ಇಕೆ ]

**ಜಾರಿಗೆ** (ನಾ). ಹುಳಿಹಣ್ಣು ಬಿಡುವ ಒಂದು ಬಗೆಯ ಮರ : (೬). [ ←ತುಳು. ಜಾಲೆ ]

**ಜಾರಿಣಿ** (ನಾ) = ಜಾರವನಿತೆ : ಮುನ್ನ ತಾ ಜಾರಿಣಿಯಾಗಿ ಕುಲಧರ್ಮವನೀಗಿ (ಕರ್ಣಾಕ. ೩೯); ಜಾರಿಣಿ ಸಂಕೇತಸ್ಥಾನಕ್ಕೆ ಹೋಗುವಂತೆ ಹೊರಟೇಬಿಡುತ್ತೇನೆ (ಭಾರದ. ೨೩). [ ಸಂ. ಜಾರಿಣೀ ]

**ಜಾರಿಯಿನಾಮತಿ** 'ಜಾರೀನಾಂತಿ' ನೋ.

**ಜಾರಿಯಿನಾಮತ್ತಿ** 'ಜಾರೀನಾಂತಿ' ನೋ.

**ಜಾರಿಸು** 'ಜಾಱಿಸು' ನೋ.

**ಜಾರು$_1$** 'ಜಾಱು$_1$' ನೋ.

**ಜಾರು**₂ 'ಜಾಋು₂' ನೋ.

**ಜಾರು**₃ (ನಾ). ಕಣ್ಣಿನ ಕೊಳೆ ; ಪಿಚ್ಚು ; ಪಿಸುರು : ಕಿವಿಯಲ್ಲಿ ಗುಗ್ಗೆ ಕಣ್ಣಿನಲ್ಲಿ ಜಾರು ಮೂಗಿನಲ್ಲಿ ಸುರಿವ ಸಿಬುಳು ಸಿಂಬಳ (ಸಿದ್ಧೇವ. ೫೦-೧೪೩) ; ಒಂದು ದಿವಸ ಬಿಸಿಲೊಳು ಪೋಗಿ . . . ವಿಂಗೆ ಮಲವುಣ್ಮಲಾ ಕಣ್ಣಿಂದ ಸುರಿವ ಜಾರಿನಿಂದ (ನೇಮಿಸಂ. ೭-೧೦೩). [ ? ]

**ಜಾರುಕವಾಟ** (ನಾ). "ಅಡ್ಡಲಾಗಿ ಸರಿದು ಕಂಡಿಯನ್ನು ಮುಚ್ಚುವ ಅಥವಾ ತೆರೆಯುವ ಕವಾಟ" (Slide-valve. ಇಂಕನಿ) : ಉಗಿಯನ್ನು ಕೋಶದೊಳಕ್ಕೆ ಪ್ರವೇಶಿಸಲು ಬಿಡುವ ದ್ವಾರಗಳನ್ನು ಮುಚ್ಚಿ ತೆರೆಯುವ ಕೆಲಸ ಜಾರುಕವಾಟದ್ದಾಗಿರುತ್ತದೆ (ವಿಜ್ಞಾವಿ. ೪೮).

[ ಜಾರು₁ (<ಜಾಋು₁) + ಕವಾಟ ]

**ಜಾರುಗಣ್ಣು** (ನಾ). ಪಿಸುರು ತುಂಬಿರುವ ಕಣ್ಣು ; ಕೊಳೆಯಿಂದ ಕೂಡಿರುವ ಕಣ್ಣು ; ಪಿಚ್ಚುಗಣ್ಣು : ಕರಕಷ್ಟ ಜಾರುಗಣ್ಣಂ ಜಲಜದಳ ವೆಂಬರೆಲೆ ಗುರುವೆ ಕವಿಗಿವಿಗಳು (ಷತಿಲ. ೩-೫೪) ; ಕಾವುಗಣ್ಣು, ಉಷ್ಣ ಗಣ್ಣು, ನೀರುಗಣ್ಣು, ಜಾರುಗಣ್ಣು, ಸಂಜೆಗಣ್ಣು (ಶುಕಸ. ೬೩೮).

[ ಜಾರು₃ + ಕಣ್ಣು (<ಕಣ್) ]

**ಜಾರುಗಲ್ಲು** 'ಜಾಋುಂಗಲ್' ನೋ.

**ಜಾರುಗಾಡಿ** (ನಾ). ಹಿಮಾವೃತವಾದ ಸ್ಥಳಗಳಲ್ಲಿ ಜಾರಿಕೊಂಡು ಹೋಗುವ, ಚಕ್ರವಿಲ್ಲದ ಬಂಡಿ ; ಜಾರುಬಂಡಿ : ಹಳ್ಳಿಯೊಂದಕ್ಕೆ ಹೋಗುವ ಸಲುವಾಗಿ ಜಾರುಗಾಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು ದಾಗಿ ಅವನು [illegible]ಸಿದನು (ಪುನರು. ೫೧೮).

[ ಜಾರು₁ (<ಜಾಋು₁) + ಗಾಡಿ₃ ]

**ಜಾರುಗುಂಡಿ** (ನಾ). ಒಂದು ಬಗೆಯ ಮಕ್ಕಳಾಟ; ಇಳಿಂಕಲ ಮೇಲೆ ತೆವಳುತ್ತಾ ಜಾರುವ ಆಟ : ಕೆರೆಯ ಒಡ್ಡಿನ ಮೇಲೆ ಕುಳಿತು ಜಾರುಗುಂಡಿ ಆಡುವರು (ಅಲ್ಪವಿ. ೧೦೩) ; ಜಾರುಗುಂಡಿ ಆಡುವ ಮಕ್ಕಳಂತೆ ನುಸುಳಿಕೊಂಡು ಕೆಳಗೆ ಹೋದಂತೆ ಸೊಗಸು ಹೆಚ್ಚು (ಗಾಳಿಪ. ೫೮).

[ ಜಾರು₁ (<ಜಾಋು₁) + ಕುಂಡಿ₁ (<ಕುಂಡೆ₁) ]

**ಜಾರುಗುಪ್ಪೆ** (ನಾ). ೧. ಮಕ್ಕಳ ಆಟಕ್ಕಾಗಿ ಕಟ್ಟಿರುವ ಜಾರುಬಂಡೆ : ಪುಷ್ಪಶರನ ಕಾಂತೆ ನಲಿದಾಡುವ ಜಾರುಗುಪ್ಪೆಯಂದದಲಿ ರಂಜಿಸುತ ಒಪ್ಪುವ ಪೊಱಮಾಱ ನೀಱನ ಕರೆ ಬಿಗಿಯಪ್ಪಿಕೊಂಬೆನು (ಕಂನವಿ. ೯-೧೦೮); ಕಾಮನ ಬಿಲ್ಲಿನ ಜಾರುಗುಪ್ಪೆಯೊಳು ಜಾರುತ ಬಂದಳು ಮುಗಿಲಿಂದ (ಅಹಲ್ಯ. ೪-೧೧). ೨. ಜಾರುಬಂಡೆಯ ಆಟ: ಜಾರುಗುಪ್ಪೆ ಆಡುವುದು, ಓಡುವುದು–ಇವೇ ಮುಂತಾದವುಗಳನ್ನು ಮಾಡಲು ಪ್ರೋತ್ಸಾಹಿಸಬೇಕು (ಶಿಕ್ಷದ. ೧೦೮). [ ಜಾರು₁ (<ಜಾಋು₁) + ಕುಪ್ಪೆ₁ ]

**ಜಾರುಗೊರಡು** (ನಾ). "ಭಾರವಸ್ತುಗಳನ್ನು ಸಾಗಿಸಲು ಉಪಯೋಗಿಸುವ ಉರುಳಿ" (Runner. ಇಂಕನಿ).

[ ಜಾರು₁ (<ಜಾಋು₁) + ಕೊರಡು₁ (<ಕೊಱಡು) ]

**ಜಾರುದಾರಿ** (ನಾ). ಹೆಜ್ಜೆಯ ಹಿಡಿತ ತಪ್ಪಿಸುವ ಹಾದಿ : ಮೊದಲೆ ಮಳೆಗಾಲ, ಬೆಟ್ಟದ ಜಾರುದಾರಿಯಲ್ಲಿ ಹೋಗುವುದು ಕಷ್ಟ (ರೂಢಿ). ೨. (ಆಲಂ) ಅಪಾಯಗಳನ್ನುಳ್ಳ ವ್ಯವಹಾರ ಮಾರ್ಗ : ಆಧರೆ ಈ ದಾರಿ ಜಾರುದಾರಿ ಎಂಬ ಎಚ್ಚರು ಮಾತ್ರ ಬೇಕು (ತವನಿ. ೨೯).

[ ಜಾರು₁ (<ಜಾಋು₁) + ದಾರಿ ]

**ಜಾರುನಡಿಗೆ** (ನಾ). ಕುದುರೆಯ ಒಂದು ಬಗೆಯ ನಡಿಗೆ,–ಗತಿ : "ಬಿಗುನಡೆ, ಜಾರುನಡಿಗೆ, ನಿಡುನಡಿಕೆ, ವಲ್ಗಿತಂ, ಪ್ಲುತಂ ಈ ನಡಿಕೆಗಳೈದೂ ಅಶ್ವಧಾರೆಗಳು" (ಸಿದ್ಧಾಂತಿ. ೨೧೫).

[ ಜಾರು₁ (<ಜಾಋು₁) + ನಡಿಗೆ₁ (<ನಡಗೆ) ].

**ಜಾರುಬಂಡಿ** (ನಾ).=ಜಾರುಗಾಡಿ: ಜಾರುಬಂಡಿಗಳ ಪಂಕ್ತಿ . . . ಗಿಡ್ಡನೆಯ ಫರ್‌ಮರಗಳ ನಡುವೆ ಬಿರುಬಿರನೆ ಉರುಳುತ್ತಿದೆ (ಪುನರು. ೨೨೦).

[ ಜಾರು₁ (<ಜಾಋು₁) + ಬಂಡಿ ]

**ಜಾರುಬಂಡೆ** (ನಾ).=ಜಾರುಗುಪ್ಪೆ ೧ : ಜಾರು ಬಂಡೆಯ ಮೇಲೆ ಕುಳಿತು ಜಾರಿದೆ (ನೆಲಮು. ೬೪-೩). [ ಜಾರು₁ (<ಜಾಋು₁) + ಬಂಡೆ ]

**ಜಾರುಮೆಟ್ಟು** (ನಾ). ಹಿಮದ ಮೇಲೆ ಜಾರಿಕೊಂಡು ಹೋಗುವಾಗ ಹಾಕಿಕೊಳ್ಳುವ ಪಾದರಕ್ಷೆ : ನೀರ್ಗಲ್ಲ ಮೇಲೆ ಜಾರುಮೆಟ್ಟುಗಳಿಲ್ಲದೆ ಓಡಿ ಬಂದು ಎರಡೂ ಕಾಲುಗಳ ಮೇಲೆ ಜಾರಿಕೊಂಡು ಹೋಗು (Slide. ಇಂಕನಿ). [ ಜಾರು₁ (<ಜಾಋು₁) + ಮೆಟ್ಟು₂ ]

**ಜಾರುಹೊಡೆತ** (ನಾ). ೧. ಜಾರಿ ಬೀಳುವ ಏಟು. ೨. "(ಕ್ರಿಕೆಟ್) ಓರೆಯಾಗಿ ತಗಲುವಂತೆ ದಾಂಡನ್ನು ಓಲಿಸಿ ಹೊಡೆದ ಹೊಡೆತ" (Glance. ಇಂಕನಿ). [ ಜಾರು₁ (<ಜಾಋು₁) + ಹೊಡೆತ (<ಪೊಡೆತ) ]

**ಜಾರೂಲ** (ನಾ). ಒಂದು ಬಗೆಯ ಮರ : ಜಾರೂಲ, ಮುತ್ತುಗ, ಗಜನಿಂಬೆಗಳಲ್ಲಿ ಸ್ಪರ್ಧೆ ನಡೆಯುತ್ತಿದೆ (ನಿಬಂಧ. II, ೧೬೫). [ ? ]

**ಜಾರೆ**₁ (ನಾ). = ಜಾರವನಿತೆ: "ಪುಂಶ್ಚಲೀ . . . ಸ್ವೈರಿಣೀ, ಪಾಂಸುಲಾ, ಜಾರಾ-ಈ ೯ ಜಾರೆಯ ಪೆಸರು" (ನಾಚಿರಾ. ೧೧೭): ಬೆದೆಗಾರ್ತಿಯು ಪಾಣ್ಬೆಯೆನಲು ಜಾರೆಯರಕ್ಕುಂ" (ಕವಿಕಂ. ೧೬೮); ಜಾರೆಯ ಮಗನಂ ಗಡಿಘು ನಾಯಕನಂ ನಂಬಿಸಿ ಕೊಲ್ವವನಂ (ಧರ್ಮಾಮೃ. ೫-೧೩೫) ; ನಲಿವ ಜಾರೆಯರೊಸರ್ವ ಪಳುಕು ಮೂಡುವ ತಾರೆ . . . ಸಂಜೆಯೊಳೆಸೆದುವು (ಹಚಕಾ. ೩-೭೫); ಸೊಗಸು ಬೇಱೊಬ್ಬರಲಿ ನೇಹದ ತಗಹು ಬೇಱೊಬ್ಬರಲಿ ಸತಿಯರ ವಿಗಡತನವಿದು ಸಹಜ ಜಯವಧು ಜಾರೆ ನೋಡೆಂದ (ಕುವ್ಯಾಕ. ೨೪-೨೧). [ ಸಂ. ಜಾರಾ ]

**ಜಾರೆ**₂ 'ಝಾರಿ' ನೋ.

**ಜಾರೇಟು** (ನಾ). ೧.=ಜಾರುಹೊಡೆತ. ೨. "ವೇಗವಾದ ಮತ್ತು ಓರೆಯಾದ ಚಲನೆ, ಹೊಡೆತ, ಓರೆಹೊಡೆತ" (Glance. ಇಂಕನಿ).

[ ಜಾರು₂ (<ಜಾಋು₂) + ಏಟು₂ ]

**ಜಾರ್ಜೆಟ್** (ನಾ). ನಯವಾದ ರೇಷ್ಮೆಯ ತೆಳುಬಟ್ಟೆ : ಸ್ಯಾಟೀನ್, ಜಾರ್ಜೆಟ್‌ಗಳನ್ನು ಈ ನೇಯ್ಗೆಯನ್ನುಪಯೋಗಿಸಿ ತಯಾರು ಮಾಡುವರು (ಗೃಹವಿ. ೭೪) : ನಿಮ್ಮಣ್ಣಯ್ಯ ನಿನಗೆ ಒಂದು ಮೈಸೂರು ಜಾರ್ಜೆಟ್ ಸೀರೇನೂ ಉಡುಗೊರೆಯಾಗಿ ಕಳುಹಿಸಿದ್ದಾನೆ (ನಿಕಉ. ೭).

[ ←ಇಂ. Georgette ]

**ಜಾರಾ್ರಮರ** (ನಾ). ಒಂದು ಬಗೆಯ ಮರ: (ಮೃಜಿಗಿ. ೬೫-೭೮೬).

[ ? + ಮರ₁ ]

**ಜಾಲ**₁, **ಜಾಳ**₂ (ನಾ). ೧. ಮೃಗಪಕ್ಷಿಗಳನ್ನು ಹಿಡಿಯಲು ಉಪಯೋಗಿಸುವ ನೂಲು ಅಥವಾ ಹುರಿಯಿಂದ ಮಾಡಿದ ಸಣ್ಣ ಸಣ್ಣ ಕಂಡಿಗಳುಳ್ಳ ಒಂದು ಬಗೆಯ ಸಾಧನ; ಬಲೆ: ಒಂದು ದಿವಸಮಾ ಮೀನ ನೊರ್ವ ಜಾಲಗಾಱಂ ಜಾಲದೊಳ್ಪಿಡಿದು (ಪಂಪಭಾ. ೧-೬೮ ವ); ಮುತ್ತ ಸಿಂಗಕ್ಕೆ ತನ್ನ ಕೇಸರಮೆ ಜಾಲಮಾಗಿ ಪರಿಣಮಿಸೆ (ರಾಮಾಶ್ವ. ೪೨-೩೫); ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ (ನಾದಲೀ. ೮೪-೯). ೨. ಹೆಣೆದು ಮಾಡಿರುವ ಸರಪಳಿಯ ಕವಚ,–ಅಂಗಿ ; ಚಿಲಖತ್ತು. ೩. ಕಿಂಡಿ; ಕಿಟಕಿ; ಜಾಲಂದ್ರ; ಗವಾಕ್ಷ. ೪. ಕಪಟ; ಮೋಸ; ಸುಳ್ಳು; ಕಣ್ಕಟ್ಟು : ಬಾಲೆಯರ ಜಾಲಕೊಳಬೀಳದಾ ಜ್ಞಾನಿ ಶೂಲಿಯಂತಕ್ಕು (ಸರ್ವಜ್ಞ. ೪೦೦) ; ಎಷ್ಟೋ ಸದ್ಗುಣಗಳು ಅವರ ಜಾಲದಲ್ಲಿ ಸಿಲುಕಿ ತಮ್ಮ ಶೀಲವನ್ನು ಮಾರಿಕೊಂಡಿರುವರು (ಸ್ಕೂಲಮಿ. ೨೧೯). ೫. ಗರ್ವ ; ಕೊಬ್ಬು ; ಹಮ್ಮು ; ಅಹಂಕಾರ. ೬. ಮೊತ್ತ ; ರಾಶಿ ; ಗುಂಪು : ದರಹಾಸಾಮೃತವಾರಿ ಮಜ್ಜನಜಲಂ ದೇಹಪ್ರಭಾ

ಜಾಲಮಂಬರಶೋಭಾವಹಂ (ಆಜಿಪು. ೨-೯೨); ಕರೆಕರೆ ಸಮಸ್ತ ಬೇಂಟೆಯು ಶಬರಜಾಲವುಂ (ಹಕಶಾ. ೫-೧) ; ಗಾನವ ಮಾಡೆ ಅರಸನತಿ ಮೆಚ್ಚಿ ವನಿತಾ ಜಾಲದೊಳು ಕಾಣೆನೆನುತಂ (ಪ್ರಾಂತರಾ. ೧೦-೧೩). ೭. ಒಂದು ಬಗೆಯ ಮರ; ಕದಂಬವೃಕ್ಷ: ಆಲಂ ಜಾಲ[ಪಾಠಾಂ. ತಿ.ಲಿ]ಬೇಲಂ ಬಿಳಿಲರಳಿಯೆರಂ ಕಕ್ಕೆ ಹೂರಂ ಬೆಳಲ್ (ಗಿರಿಕ. ೧-೭೨) ; ನರುಗುಂಪು ನೆಳಲಾಂತ ಜಾಲ ದಿಂದಾಲದಿಂದೆ (ರಾಘಜ. ೧೮-೫೪) ; ಅತ್ತಿಯಾಲವು ಜಾಲ ಹಾಲೆ ತಾಳೆ ಬಾಳೆ . . . ಮುಂತಾದ ಹೆಮ್ಮರಗಳು (ಸೌಗಂಪ. ೨೩೪). ೮. ಹಂಚಿಕೆ ; ಉಪಾಯ : ಇದೇ ಸಮಯವೆಂದು ನಾನು ಒಂದು ಹೊಸ ಜಾಲವನ್ನು ಪಸರಿಸಿದ್ದೇನೆ (ಪ್ರಕಾಶ. ೫೦). ೯. (ಜಾಲರಿಯಂತೆ) ಓತ ಪ್ರೋತವಾಗಿರುವುದು ; ಹಾಸುಂಹೊಕ್ಕಾಗಿ ಕೂಡಿರುವುದು : ಸತ್ಯವಿಗಳಲ್ಲಿ ಋಷಿಗಳಲ್ಲಿ ಪಾತಿವ್ರತಾಂಗನೆಯರಲಿ ವಿಷ್ಣುಜಾಲನಾಗಿರ್ದು (ಲಕ್ಷ್ಮೀಭಾ. ೫-೨-೩೫). ೧೦. ಗೋವುಗಳ ಗುಂಪು. ೧೧. ಮುಚ್ಚಳ ; ಪಟಲ. ೧೨. ಹೂವಿನ ಮೊಗ್ಗು. ೧೩. ಒಡವೆ ; ಆಭರಣ. ೧೪. ಇಂದ್ರಿಯ. ೧೫. ಆಕಾಶ : "ಆಕಾಶಂ ಬಲೆ ಪಟಲಂ ಪೋಕಂ ಶೃಂಗಾರ ಗೋವುಸಭೆಯೇಳಕ್ಕುಂ ತಾಕಿರೆ ಜಾಲಾಹ್ವಯ ಸಲೆ" (ನಾನಾಕಂ. ೭೬); "ಇಂದ್ರಿಯದೊಳಾಗಸದೊಳ್ಬಲೆಯೊಳ್ ಸಮೂಹದೊಳ್ ಸಿಂಗರ ಗೋನಿಕಾಯ ಪಟಲಂಗಳೊಳಿಂತವು ಜಾಲವಾಚಕಂ"(ನಾನಾರ. ೩೫); ೧೬. ಒಂದು ಬಗೆಯ ಕಣ್ಣಿನ ರೋಗ. 'ಜಾಲಪಟಲ' ಪರಾ. ಜಾಳ್: ೧. ಪಾಸಿದ ನಿರ್ಮಳ ಜಾಳಮೆಂದು ಪಾಲ್ದೆನೆಗಳ ದೆಸೆಗಂ ಸಾರವಂಜ ಕೆಲವರಗಿಳಿಗಳ್ (ಪುಷ್ಪಪು. ೨-೧೮); ಅರ್ಧೇಂದು ಸಮ್ಮೇಳಕ್ಕೆ ಬರುವ ತಾರಕೆಯ ಜಾಳವೆಂಬಂತೆ (ಮೋಹಕ. ೨೩-೩೧). ೨. ಮೇಲೆ ಮಣಿ ವೊಕ್ಕವನ ದೃಢದಲಿ ಜಾಳ ಬಗೆಯಲಿ ನಂಬ ಮಣಿವೊಗು ಪಾಲಿಸುವ ತಿರುವೇಂಕಟೇಶನ ಚಕ್ರದುರುಬೆಯನು (ಕೋಗಳು. ೭-೨೩). ೬. ಇಟುಂಕಿ ನಿಱಿಯಂ ಲುಳಿತಾಳಕ ಜಾಳಹಮಂ ಕೊಡಂಕೆಗೆ ತೆಗೆದು (ಕಾದಂಪೂ. ೭೧)
[ ಸಂ. ]

ಜಾಲ₂ 'ಜಲ್ಕ' ನೋ.

ಜಾಲಂದರ, ಜಾಳಂದರ, ಜಾಳಾಂದರ, ಜಾಳಾಂದ್ರ, ಜಾಳಾಂಧರ (ನಾ). ೧. ಬಲೆಯಂತೆ ಕಿಂಡಿಗಳನ್ನು ಉಳ್ಳ ರಚನೆ ; ಕಿಂಡಿಗಳ ಚೌಕಟ್ಟು: ಮುತ್ತಿನ ಮಲಕಿನ ಜಾಲಂದರದ ಗವಾಕ್ಷದೊಳ್ ಮೆಲ್ಲಮೆಲ್ಲನೆ ನೋಡುತ್ತ (ಸೌಗಂಧಿ. ೩೩೯-೭) ; ಕಿಟಕಿಯ ಜಾಲಂದರಗಳ ಮೂಲಕ ಕಾಣುತ್ತಿದ್ದ ಪ್ರದೇಶಗಳಲ್ಲಿ ದೃಷ್ಟಿಯಿಟ್ಟು ಸ್ವಲ್ಪಕಾಲ ತನ್ನಲ್ಲೇ ಲೋಚನೆ ಮಾಡುತ್ತಾ ಕುಳಿತಿದ್ದಳು (ಭಾರವೀ. ೩೦). ಜಾಳಂದರ: ೧. ಜಾಳಂದರದ ಬಾಗಿಲುಗಳಿಂದ ಬರುವ ಕೆಂಪಿನ ರತ್ನದ ಬೆಳಕಿಗೆ ಬಿಸಿಲೆಂದು ಕೈಮಣಿಯ ಮಾಡಿಕೊಳುತಲಿದ್ದೆ (ವಡಕಾ. ೫೦). ೨. ಕಿಟಕಿ ; ಗವಾಕ್ಷ : ಕಾಳಮೇಘ ಮಂದಿರದ ಜಾಳಂದರದ ಮನೆಯಲ್ಲಿ ವೊಬ್ಬ ಸೂಳೆಯ ಬಾಗಿಲಲ್ಲಿ (ಕಲ್ಯಾಶಾಂ. ೧೦೮-೧೭). ಜಾಳಾಂದರ : ೨. ಬೆಮರನಾಱಿಸುವ ಕತದಿಂದ ಬಂದು ಜಾಳಾಂದರದ ಪೊಱಗೆ ತನುಲತೆಯನ್ನೆದೆ ತಂಗಾಳಿಗೊಡ್ಡುವ ಕೋಮಲಾಂಗಿಯರನು (ಹಕಶಾ. ೪-೩೯ ಪಠಿ) ; ಕರುಮಾಡದಿ ಖಂಡರಿಸಿದ ಜಾಳಾಂದರದೊಳು ರಾಜಾಂಗನೆಯರು ತರಹರಿಸದೆ ಬಂದು ನೋಡಿದರಂದು (ಕುರಾಸಾಂ. ೪೦-೭೩). ೩. ತೂತಂತೂತಾಗುವುದು : ವೀರದಧಿ ಮುಖಿನುರವನೊಂದಂಬಿಂದ ಜಾಳಾಂದರವ ಮಾಡಿದನು (ಕೌಶಿರಾ. ೩೨-೩೭). ಜಾಳಾಂದ್ರ: ೨. "ಜಾಳಾಂದ್ರ (ಜಾಳಂದ್ರ)– ಜಾಲಂಧರ=ತೂತುಗಳುಳ್ಳ ಕಿಟಕಿ; ಕಿಂಡಿ" (ತದ್ಭಕೋ. ೫೦); ಬಳಸಿಕೊಂಡಿಹ ರತ್ನ ಜಾಳಾಂದ್ರ ಭಿತ್ತಿಯೊಳಳವಟ್ಟು ವೋಹವ ಬೀರ್ವ ವಿಲಸಿತ ಪ್ರತಿಮೆಗಳಿಂದಾಗ ಸೌಂದರ್ಯನಿಳಯ ರಾಜಿಸಿದುದು (ಕಂಠವಿ. ೭-೪೦) ; ಇಂಪುಗರೆವ ಇಂದುವಿನ ಕಿರಣ ಜಾಳಾಂದ್ರದಿಂದ ಸುರಿಯೆ (ಮೋಹದೂ. ೨೫). ೪. ಒಂದು ದೇಶದ ಹೆಸರಂ ; ತ್ರಿಗರ್ತ : ಜಾಳಾಂದ್ರ ದೇಶದ ಅರಸು ಆನೆಯನೇಱಿ (ಸರ್ವವ. ೨೦೫-೯೩೦). ಜಾಳಾಂಧರ: ೨. ಸುಪುತ್ರ ಮಾಕಯ್ಯನು ಮಾಡಿಸಿದ ದೇವರ ಪೀಠ ಜಾಳಾಂಧರ, ದಾರವಂದ (ಎಕ. XII, ಚಿಕ್ಕನಾ. ೨೫-೬ ; 1312).
[ <ಸಂ. ಜಾಲಂಧರ ]

ಜಾಲಂದ್ರ, ಜಾಳಂದ್ರ (ನಾ). = ಜಾಲಂಧ್ರ : ಸುರಿವ ಕಂಬನಿಗಳಲಿ ಬಾಹುಕ ಮಱುಗುತಿರಲಂದು ಮಱೆಯ ಜಾಲಂದ್ರದಲಿ ಕಂಡಳು ತರುಣಿ (ನಳಚ. ೮-೪೯) ; ಈ ದೇವಾಲಯದ ಜಾಲಂದ್ರಕ್ಕೆ ಸೇರಿರುವ ಗೋಡೆಯ ಮೇಲೆ ವಿಷ್ಣುವರ್ಧನನ ದರ್ಬಾರನ್ನು ಕೆತ್ತಿದೆ (ಭಾರದ. ೫೦೪). ಇವುಗಳ ಮೇಲೆ ದೊಡ್ಡ ವಿಗ್ರಹಗಳೂ ಜಾಲಂದ್ರಗಳೂ ಇವೆ (ಹೊಯ್ಸವಾ. ೧೬). ಜಾಳಂದ್ರ. 'ಜಾಳಂದ್ರಗೆಯ್' ಪರಾ. [<ಸಂ. ಜಾಲಂಧ್ರ]

ಜಾಲಂಧರ, ಜಾಳಂಧರ (ನಾ). ೧.=ಜಾಲಂಧ್ರ. ೨. ಒಂದು ದೇಶದ ಹೆಸರು ; ಭರತಖಂಡದ ವಾಯುವ್ಯ ಪ್ರಾಂತ ; ತ್ರಿಗರ್ತದೇಶ. ೩. ತ್ರಿಗರ್ತದೇಶಕ್ಕೆ ಸಂಬಂಧಿಸಿದುದು. ೪. [ಯೋಗ] ಒಂದು ಬಗೆಯ ಬಂಧ . 'ಜಾಲಂಧರಬಂಧ' ಪರಾ. ಜಾಳಂಧರ : ೩. ಕಾಂಬೋಜ ಜಾಳಂಧರಂ ತುರಗಂ ಮೂಡಣ ಕೊಂಗ ಕೋಶಲ ವರಾಳಂ ಬರ್ಬರಂ (ಅಶ್ವಶಾ. ೭-೭೭). [ ಸಂ. ]

ಜಾಲಂಧರಬಂಧ (ನಾ). [ಯೋಗ] ಹಠಯೋಗದ ಒಂದು ಬಂಧ: ಕಂಠಸ್ಥಾನದ ಬಂಧಗಳ ಸಂಕೋಚವನೆಸಗಿ ತನ್ನ ಚುಬುಕವನಿಳುಹಿ ಹೃದಯ ತಾಣದೊಳಗಿಟ್ಟು ಚಲಿಸದಿರಲು ಜಾಲಂಧರಬಂಧ (ಕೈವಲ್ಯ. ೫-೧೫-೩) ; ಆದರೆ ಪೂರಕವಾದ ನಂತರ ಜಾಲಂಧರಬಂಧವನ್ನೂ ಮಾಡಬೇಕು (ಭಾರದ. ೧೬೧). [ ಜಾಲಂಧರ + ಬಂಧ ]

ಜಾಲಂಧ್ರ (ನಾ). ಬಲೆಯಂತೆ ಕಂಡಿಗಳನ್ನು ಒಳಗೊಂಡಿರುವ ಕಿಟಕಿ,– ಗವಾಕ್ಷ : "ಜಾಲಂಧ್ರಂ ಬೆಳಕಿಂಡಿ" (ಕಾಶಕ್ಕ. ೧೪೬) ; ನೋಡುತಿರ್ದರು ಪುರಜನರು ನೆಲೆಮಾಡದುಪ್ಪರಿಗೆಯಲಿ ಮಿಗೆ ಕರುಮಾಡದೆಡೆಯಲಿ ಸೌಧಗಳ ಜಾಲಂಧ್ರಶಿಖರದಲಿ (ನಳಚ. ೯-೬೧) . [ ಸಂ. ]

ಜಾಲಕ, ಜಾಳಕ (ನಾ). ೧. ಬಲೆ ; ಹೆಣಿಕೆ : ಬಿಸಿಲೆಲ್ಲಂ ಬಿಸನಾಳಜಾಲಕದಿನಾಗಳ್ಕೂಡೆ ಪೀರ್ತಂದುದು (ಕಾದಂಉ. ೧೦೩) ; ಕುರುಡು ನಂಬುಗೆಯ ಕುರುಡುವಿಚಾರದ ಜಾಲಕಗಳ ನೀಗಿ (ಚಿಂತನ. ೫೭-೧). ೨. ಕಿಟಕಿ ; ಗವಾಕ್ಷ; ಕಂಡಿ : ಕನಕಹರ್ಮ್ಯಂಗಳೆಡೆಯೊಳಾ ಲೋಕಿಪರು ಕೆಲರು ಜಾಲಕದೆಡೆಗಳೊಳು ಕೆಲರು (ಭಾವಚಿಂ. ೮-೧೫). ೩. ಜೇಡನ ಬಲೆ. ೪. ಮೊಗ್ಗು. ೫. ಗುಂಪು; ಸಮೂಹ: ವಿಚಕಿಲ ನಲಿನೀಜಾಲಕಂ ಜಾಲಕಂ (ಅನಂಪು. ೮-೨೮). ಜಾಳಕ : ೫. ಅಹಿತೋದ್ಭದ್ಭಳ ಜಾಳಕಂ ಕದನದೊಳ್ ಮಾಱಾನ್ತು ತಾಗಲ್ ಮಹಾಮಹಿಮಂ ಸೂಱಿಗೆಗೊಣ್ಡು (ಎಇ. XX, ೧೨-೧೧ : 1167) ; ಅರ್ಚಿಸಿದಂ ಭೂಪಾಳಂ ನಿರ್ಭರಭಕ್ತಿಯ ಜಾಳಕಮೆನೆ ಮೆಯ್ಯೊಳೊಗೆದ ರೋಮಾಂಚಂಗಳ್ (ಮಲ್ಲಿಪು. ೮-೫). ೨, ೫ : ಎಸೆಯಲ್ ಜಾಳಕ ಜಾಳಕಂ ದೃಢಕವಾಟಂ ದ್ವಾರಶಾಖಾಳಿ ಬಾಣಸು . . . ಮಾಡಿಸಿದನೀ ಬಲ್ಲಾಳ ಭೂಪಾಳಕಂ (ಎಕ V, ಬೇಲೂರು. ೭೨-೨೭೭ : 1185). ೬. ಒಂದು ಬಗೆಯ ಶಿರೋಭೂಷಣ. ೭. ಮೋಸ ; ವಂಚನೆ ; ಮಾಯಾವಿತನ. ೨, ೫, ೬, ೭ : ಜಾಳಕದರ್ಶನ ವಧುಗಳ ಜಾಳಕಮಂ ನೋಡಿ ನಡೆಯೆ ಮುಂದೊಂದೆಡೆಯೊಳ್ ಜಾಳಕ ಜನದೊಳ್ಪೆಣ್ಗಳ ಜಾಳಕಮಂ ನೋಡಿನೋಡಿ ನಡೆದಂ ಭೂಪಂ (ಹಮ್ಮೀರ. ೨-೯೧). ೮. ಅಂಕುರ : ಅನ್ಯೋನ್ಯ ಪ್ರೀತಿ ಬೀಜದಿಂ ಜನಿಸಿದ ನಿರ್ಭರಸ್ವೇದಸಲಿಲಸೇಚನದಿಂ ನಯಂಬಡೆದ ಪುಳಕಜಾಳದಿಂ ಜಾಳಕಮನಪ್ಪುಕೆಯ್ದು (ಜಗವಿ. ೨-೫೨ ವ). ೯. ಬಲೆಯಲ್ಲಿ ಸಿಕ್ಕಿಕೊಂಡವನು: ಅಲ್ಲಿ ರವಿ ನಿತ್ಯದೊಳ್ ಜಾಲಕನು ಗಿಡಮರಗಳೆಲ್ಲ ಮಂಜಿನ ಮೊತ್ತಗಳು (ತುರಂಗ. ೯೫-೨). [ ಸಂ. ]

**ಜಾಲಕಾಟಿ** 'ಜಾಲಗಾಟಿ' ನೋ.

**ಜಾಲಗಟ್ಟ** (ನಾ). ಒಂದು ಪ್ರದೇಶದ ಹೆಸರು: ಆಗ್ನೇಯಕ್ಕೆ ಕಲ್ಲಪುಂಜಿಗೆ ತೆಂಕಲು ಲಿಂಗದ ಕಲ್ಲು ನೈರಿತ್ಯಕ್ಕೆ ಕಲ್ಲಗುತ್ತಿ ಪಡುವ ಜಾಲಗಟ್ಟದ ಕೆಱಿಯೇ ಶೀಮೆ (ಕಇ. I, ೧೭-೪೫; 1055). [ ಜಾಲ$_0$ + ಗಟ್ಟ$_1$ ]

**ಜಾಲಗಾತಿ** 'ಜಾಲಗಾರ್ತಿ' ನೋ.

**ಜಾಲಗಾರ$_1$** 'ಜಲಗಾರ$_2$' ನೋ.

**ಜಾಲಗಾರ$_2$** 'ಜಾಲಗಾಟಿ' ನೋ.

**ಜಾಲಗಾರನಹಕ್ಕಿ** (ನಾ). ಒಂದು ಬಗೆಯ ಹಕ್ಕಿ ; ಬಿಳಿಯ ಬಣ್ಣದ ಎದೆರೋಮವುಳ್ಳ ಮೀನುಗುಲಿಗಹಕ್ಕಿ ; ಮೀನುಚುಳ್ಳಿ : (ಕ).
[ ಜಾಲಗಾರ$_2$ (<ಜಾಲಗಾಟಿ) + ಹಕ್ಕಿ$_1$ (<ಪಕ್ಕಿ$_1$) ]

**ಜಾಲಗಾರ್ತಿ,** ಜಾಲಗಾತಿ (ನಾ). ೧. ಬೆಸ್ತರ ಜಾತಿಯ ಹೆಂಗಸು ; ಅಂಬಿಗಿತ್ತಿ ; ಮೀನುಗಾರ್ತಿ: ಒಗೆದಂ ವ್ಯಾಸಂ ಗಡ ಜಡೆಗಳ್ವೆರಸು ಜಾಲಗಾರ್ತಿ[ಪಾಠಾಂ. ಱಿತಿ]ಯ ಬಸಿಱೊಳ್ (ಸಮಭ. ೧೦-೧೫೦) ; ಸಮಾಸ ಲಕ್ಷಣಕ್ಕೆ — ಜಾಲಗಾರ್ತಿ, ಬಳೆಗಾರ್ತಿ (ಶಮದ. ೨೦೯ ಪ್ರಯೋ). **ಜಾಲಗಾತಿ :** ೨. ಮೋಟಗಾತಿ ; ಮಾಯ, ಮಂತ್ರ ಮಾಡುವ ಹೆಂಗಸು : (ಕ). [ ಜಾಲಗಾಟಿ + – ತಿ$_1$(<– ಇತ್ತಿ) ]

**ಜಾಲಗಾಟಿ,** ಜಲಗರ$_2$, ಜಲಗಾರ$_1$, ಜಲಗಾಟಿ, ಜಾಲಕಾಟಿ, ಜಾಲಗಾರ$_2$, ಜಾಲರ (ನಾ). ೧. ಮೀನು ಹಿಡಿಯುವ ವೃತ್ತಿಯನ್ನು ಅವಲಂಬಿಸಿರುವವನು; ಬೆಸ್ತ; ಅಂಬಿಗ: "ಕೈವರ್ತಃ, ದಾಶಃ, ಧೀವರಃ ಈ ಮೂರು ಜಾಲಗಾಱನ ಪೆಸರು" (ನಾಚಿರಾ. ೧೦೦); ಆ ಮೀನನೊರ್ವಂ ಜಾಲಗಾಱಂ ಜಾಲದೊಳ್ ಪಿಡಿದು (ಪಂಪಭಾ. ೧-೬೪ ವ) ; ಅಲ್ಲಿಗೊಂದು ದಿವಸಂ ಜಾಲಗಾಱರ್ ಬಂದು . . . ಜಾಲಮಂ ಬೀಸಿ ಮತ್ಸ್ಯಂಗಳಂ ಪಿಡಿವಮೆಂದು (ಪಂಚತಂ. ೧೫೮-೦೯) ; ಮುಂದೊಪ್ಪುತಿಹ ಮಲ್ಲ ಜಾಲಗಾಱರ ಗೃಹ ಚೆಂದದಿಂದೊಪ್ಪಿದುವಾಗ (ಕಂನವಿ. ೬-೫೪). **ಜಲಗರ$_2$ :** ೧. ರಘುಪ ನುಂಗಲದನು ಜಲಗರನು ತಂದಿತ್ತಡೆ (ನವಮೋ. ೧೨-೩೦); **P** ಇದು ಛಂದಸ್ಸಿಗಾಗಿ ಬಳಸಿಕೊಂಡ ರೂಪವಿರಬಹುದು. **ಜಲಗಾರ$_1$ :** ಜಲಗಾರರು ಮೀನು ಹಿಡಿಯುತ್ತಿದ್ದರು (ವಾಲಶ್. ೩೬೦). **ಜಲಗಾಟಿ :** ೧. ಮಾಣಿಕ ಮೆಯ್ಬಣ್ಣದ ಚಾಯಮೀನ ಕಂಡಾಣಿಕಾಱಿಕೆ ಜಲಗಾಟಿ ಕ್ಷೋಣೀಶ್ವರನಾಸ್ಥಾನಕೆ ತಂದು ಕೈಗಾಣಿಕೆ ಕೊಟ್ಟ ರಕ್ಕಸಗೆ (ಮೋಹತ. ೦೦-೩೪) : ವರನಾವೆಯಲಿ ಜನ ದಾಟಿಪ ಜಲಗಾಟಿಱಿರವನಾನೇನ ಬಣ್ಣಿಸುವೆ (ಕಂನವಿ. ೫-೫೯). **ಜಾಲಕಾಟಿ :** ೧. ಕೈವರ್ತಕನ ಮನೆಗೆ ಬಂದು ಬೇಗಂ ತುಹಿನಗಿರಿನಂದನಾಪತಿ . . . ಜಾಲಕಾಟಿನಾಗುತಂ (ಹಾಲಾಸ್ಯ. ೪-೯-೪೪). **ಜಾಲಗಾರ$_2$:** ೧. ಮಲ್ಲರು, ಜಾಲಗಾರರು ಮೊದಲಾದ ಜಾತಿಯವರೂ ಅಲ್ಲಿ ವಾಸಿಸುತ್ತಿದ್ದರು (ಕರ್ನಾಜ. ೧೫೭). ೨. ಮೋಸಗಾರ ; ವಂಚಕ ; ಧೂರ್ತ : ನೂಲೆಳೆಯಿಂದ ಕೊರಳನೆ ಕೊಯ್ಯುವ ಜಾಲಗಾರ ಬೇಡ (ಚಿಂತನ. ೫೭-೯) ; ಕೆಕ್ಕ, ನೀನು ಊರಿಗೆ ಹೋಗದಿದ್ದರೆ ನಾನು ಆ ನನ್ನ ಜಾಲಗಾರ ಅಣ್ಣನ ಸಂಗಡ ಹೊರಟು ಬಿಡುವೆ (ಇಪ್ಪಳ. ೨೦೪). **ಜಾಲರ :** ೧. ವ್ಯಾಧನಂತೆ ಜಾಲರನಂತೆ ಹೇಮಚೋರನಂತೆ (ಸರ್ವವ. ೧೦೯-೫೮೩). [ ಜಾಲ$_1$ + – ಕಾಟಿ ]

**ಜಾಲತನ** (ನಾ). ಮೋಸ ; ವಂಚನೆ ; ಕಪಟ : ಅವಳಾ ಜಾಲತನವಾ ನೋಡುವೆನೂ ಜಾಹ್ನವೀಜನಕಾ (ಶ್ರೀಕೃಪಾ. ೧೦೯).
[ ಜಾಲ$_1$ + – ತನ ]

**ಜಾಲತೋರು** (ಕ್ರಿ). ಜಾಲವನ್ನು ತೋರಿಸು ; ಮಾಯೆಯನ್ನು ತೋರಿಸು (?) : ಬಾಲ ನಾನೆಲೆ ನೆಲಜಲದ; ಸಲೆ ಲೀಲೆಯಾಡುವ ಗಗನದಿ ಜಾಲ ತೋರುವೆ ; ಅಡಗಿ ಸಾರುವೆ ; ಕಾಲವೆಂಬುದನರಿಯೆನ್ನೆ (ಕಎಪು. ೩೦-೧೨). [ ಜಾಲ$_1$ + ತೋರು (<ತೋಱು) ]

**ಜಾಲದುಪ್ಪ** (ನಾ). ಒಂದು ವಿಧವಾದ ಔಷಧೋಪಯೋಗಿ ದ್ರವ್ಯ : ಕೆಲವು ಜಿನಸಗಳ ಹೆಸರು :– ಲೋಭಾನ ಕಾಚು . . . ಬೇರೋಜಾ (ಜಾಲದುಪ್ಪ), ಪತ್ರಿ (ಮುಂಬವ್ಯಾ. ೧೦೦). [ ? ]

**ಜಾಲಪಟಲ** (ನಾ). ಕಣ್ಣಿನಲ್ಲಿರುವ ಒಂದು ಬಗೆಯ ಪೊರೆ : ನಮ್ಮ ಕಣ್ಣಿನ ಹಿಂಭಾಗದಲ್ಲಿ ರೆಟಿನಾ ಅಥವಾ ಜಾಲಪಟಲವೆಂಬ ನರಗಳಿಂದಾದ ಪೊರೆಯಿದೆ (ಭೌತವಿ. ೧೫೩). [ ಜಾಲ$_1$ + ಪಟಲ$_2$ ]

**ಜಾಲಪಾದ** (ನಾ). ೧. ಈಜಲು ಅನುಕೂಲವಾಗಿ ಬೆರಳುಗಳ ನಡುವೆ ತೆಳುವಾದ ಪೊರೆಯು ಅಂಟಿಕೊಂಡಿರುವ ಕಾಲು : ಬಾತುಕೋಳಿಯಂತೆಯೆ ಜಾಲಪಾದಗಳಿವೆ (ಒಂದೇಗಾ. ೧೭) ; ಅದರ ಹಿಂಗಾಲುಗಳಲ್ಲಿ ಜಾಲಪಾದವಿದ್ದರೂ ಮುಂಗಾಲಿನ ಉಗುರುಗಳು ಬೇರೆಯಾಗಿ ಕಾಣಿಸುತ್ತಿದ್ದುವು (ಬಾಲಪ್ರ. III, ೧೩೪೬). ೨. ಹಂಸಪಕ್ಷಿ. ೩. ಬಾತುಕೋಳಿ.
[ ಜಾಲ$_1$ + ಪಾದ ]

**ಜಾಲಪಾದಿ** (ನಾ). "ಜಾಲಪಾದವುಳ್ಳ (ಪಕ್ಷಿ)" (Palmiped. ಇಂಕನಿ).
[ ಸಂ. ಜಾಲಪಾದಿನ್ ]

**ಜಾಲಮಂಗಲ** (ನಾ). ಒಂದು ಊರಿನ ಹೆಸರು : ಇಡಿಗೂರ್ವ್ವಿಷಯ ಮಧ್ಯವರ್ತಿನ ಜಾಲಮಂಗಲಂ ನಾಮಧೇಯ ಗ್ರಾಮಂ (ಇಆ. XII, ೧೧೬-೭ ; 813). [ ಜಾಲ$_0$ + ಮಂಗಲ ]

**ಜಾಲರ** 'ಜಾಲಗಾಟಿ' ನೋ.

**ಜಾಲರಿ** 'ಝಾಲರಿ' ನೋ.

**ಜಾಲರಿತಾಳ** (ನಾ). ಒಂದು ಬಗೆಯ ಕಂಚಿನ ತಾಳ : ಹೋಲಿಯ ರಾತ್ರಿ ಹಿಂದುಸ್ಥಾನಿ ದರವಾನರ ಜಾಲರಿತಾಳದಂತೆ, ಗಾಳಿಯ ಲಯವು ಕ್ರಮವಾಗಿ ದ್ರುತಕ್ಕೆ ಏರುತ್ತ ಬಂತು (ನಿಬಂಧ. II, ೯೮೭).
[ ಜಾಲರಿ (<ಝಾಲರಿ) + ತಾಳ$_1$ ( = ತಾಲ) ]

**ಜಾಲರಿಬಟ್ಟೆ** (ನಾ). ಜಾಲರಿಯಂತೆ ರಂಧ್ರಗಳನ್ನು ಒಳಗೊಂಡಿರುವ ಬಟ್ಟೆ : (ಟೋಪಿ, ಮುಖಪರದೆ ಮೊದಲಾದುವುಗಳಿಗೆ ಉಪಯೋಗಿಸುವ) ಒಂದು ಬಗೆಯ ಹತ್ತಿಯ ಜಾಲರಿಬಟ್ಟೆ (Leno. ಇಂಕನಿ).
[ ಜಾಲರಿ (<ಝಾಲರಿ) + ಬಟ್ಟೆ$_2$ ]

**ಜಾಲರಿಸೌಟು** (ನಾ). ಎಣ್ಣೆ ತುಪ್ಪಗಳಲ್ಲಿ ಕರಿಯಲು ಉಪಯೋಗಿಸುವ ರಂಧ್ರಗಳನ್ನು ಹೊಂದಿರುವ ಸೌಟು : " ಕೆನೆ ಮೊದಲಾದುವುಗಳನ್ನು ಬಾಚಿ ತೆಗೆಯುವ ಸೌಟು ; ಗೋರುಸೌಟು, ಜಾಲರಿಸೌಟು" (Skimmer. ಇಂಕನಿ) ; ಅಕ್ರೂರನು ಹುರಿದ ಬೋಂಡಾಗಳನ್ನು ಜಾಲರಿಸೌಟಿನಲ್ಲಿ ಎತ್ತಿ ಎತ್ತಿ ಹಾಕುತ್ತಾ ಇರುವಾಗ (ಸಾಹೇಬ್. ೪)
[ ಜಾಲರಿ (<ಝಾಲರಿ) + ಸೌಟು (<ಸವುಟು) ]

**ಜಾಲವಾತಾಯನ** (ನಾ). ತಂತಿಯ ಬಲೆಯುಳ್ಳ ಕಿಡಿಕೆ,–ಗವಾಕ್ಷ ; ಜಾಳಂದರವಿರುವ ಕಿಡಿಕೆ. [ ಜಾಲ$_1$ + ವಾತಾಯನ ]

**ಜಾಲಾಂತರ** (ಗು). "ಕಿಟಕಿಯಿಂದ್ದಂತೆ ಸಣ್ಣಸಣ್ಣ ರಂಧ್ರಗಳಿರುವ; ಕಣ್ಣು ಕಣ್ಣಾದ" (Fenestrate. ಇಂಕನಿ). [ ಜಾಲ$_1$ + ಅಂತರ ]

**ಜಾಲಾಡು** (ಕ್ರಿ). ೧. ಒಂದರಿಯಲ್ಲಿ ಶೋಧಿಸು ; ಜರಡಿಹಿಡಿ : ಬಾನ ಜಾಲಾಡುತ್ತ ತಾರೆಗಳನಳೆವರಿವು (ಮಲದೇ. ೪೮-೩). ೨. ಕೊಳೆ ಹೋಗುವಂತೆ ನೀರಿನಲ್ಲಿ ಚೆನ್ನಾಗಿ ಅಲ್ಲಾಡಿಸು ; ಅಲುಬು : ಗಡ್ಡ ತೊಳೆಯುವುದಕ್ಕೆ ಇಲ್ಲಿ ನೀರಿಲ್ಲ. ಅಲ್ಲೇ ಹೋಗಿ ನದಿಯ ಪ್ರವಾಹದಲ್ಲಿ ಜಾಲಾಡಿಕೊಳ್ಳಿ (ಗರುಡಾ. ೫೩). ೩. ಪರೀಕ್ಷಿಸು ; ಒರೆಹಚ್ಚು : ಅವನ ಯೋಗ್ಯತೆಯನ್ನು ತಮಗೆ ತೃಪ್ತಿಯಾಗುವಷ್ಟು ಮಟ್ಟಿಗೆ ಜಾಲಾಡಿದರು (ರಾಗಿಣಿ. ೧೨೦). ೪. ತಪ್ಪನ್ನು ತೋರಿಸಿ ಮೂದಲಿಸು; ತರಾಟೆಗೆ ತೆಗೆದುಕೊಳ್ಳು : ಆಕೆ ಜನ್ಮ ಜಾಲಾಡಿ ಬಿಡ್ತೇನೆ (ಜಂದತೋ. ೧೨೭). 'ಜಾಲಿಸು' ಪರಾ. [ ಜಾಲ$_1$ + ಆಡು$_1$ ]

**ಜಾಲಾದ** (ನಾ). ಒಂದು ಬಗೆಯ ವನಸ್ಪತಿ : ಜಾಲಾರಿ, ಜಾಲಾದ (ವೃಜಿಗಿ. ೭೦-೧೪೩೬). [ ? ]

**ಜಾಲಾರಿ** (ನಾ).=ಜಾಲಾದ : ಜಾಲಾರಿ, ಜಾಲಾದ (ವೃಜಿಗಿ. ೭೦-೧೪೩೬); ವರ ಪಾರಿಜಾತ ಬಂಧೂಕ ತಾವರೆಯು ಚಂದ ಜಾಲಾರಿ ಇಂದ್ರವಾಣಿಯು ಬಿಲ್ವ (ಹಮುಜ. ೭೮). [ ? ]

**ಜಾಲಿ$_1$** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಮರ; ಬೊಬ್ಬುಳಿ ಮರ; ಗೊಬ್ಬಳಿಮರ : ಜಾಲಿ ಜೇನೊಡವಿಪ್ಪೆ ಪಿಪ್ಪಲ ಮಾಲೆಯಿವ ನೋಡಬಲೆ (ತೊರರಾ. ೩-೧-೩೮); ಜಾಲಿಯ ಮರದಂತೆ ಧರೆಯೊಳು ದುರ್ಜನರು (ಪುರಂದ. ೦-೧೧೬-೧): ಆಲಕ್ಕೆ ಹೂವಿಲ್ಲ ಸಾಲಕ್ಕೆ ಕೊನೆಯಿಲ್ಲ ಜಾಲಿಯ ಮರವು ನೆರಳಲ್ಲ ಹೆಣ್ಣಿಗೆ ತಾಯಿಯ ಮನೆಯು ಸ್ಥಿರವಲ್ಲ (ಜಗೀತ. ೮೮) : ಜಾಲಿ ಬಿತ್ತಲು ಕಾಲಿಗೆ ಮೂಲ (ಗಾದೆ).

[ ದೇ.॥ ತಮಿ. ಚಾಲಿ ; ತುಳು. ಜಾಲಿ ]

**ಜಾಲಿ$_2$** (ನಾ). ಪಡವಲ ಬಳ್ಳಿ : "ಜ್ಯೋತ್ಸ್ನೀ, ಪಟೋಲಿಕಾ, ಜಾಲೀ- ೩ ಪಡವಲದ ಗಿಡದ ಹೆಸರು" (ಸಿದ್ಧಾಂತಿ. ೧೩೩). [ ಸಂ. ಜಾಲೀ ]

**ಜಾಲಿ$_3$** (ನಾ). ೧. ಮೋಸಗಾರ; ಮಾಯಾವಿ; ವಂಚಕ : ಹಿಸುಣರ ಜಾಲಿಗಳ[ಪಾಠಾಂ. ಚಾಳಿಗಳ, ಜಾಳಿಗರ]ಚದುರೋಕ್ತಿ ನಮಗೇಕೆ (ತೊರರಾ. ೨-೧-೨೭). ೨. ಬೆಸ್ತರವನು; ಮೀನು ಹಿಡಿಯುವವನು; ಬಲೆಗಾರ: "ಜಾಲಿ–ಬಲೆಗಾರನಲ್ಲಿಯೂ . . . ಸೂತಾಖ್ಯ–ಸೂತ ಎಂದಾಗುವುದು" (ನಾನಾರ. ೩೩ ಟೀಕು). [ ಸಂ. ಜಾಲಿನ್ ]

**ಜಾಲಿಕ$_1$, ಜಾಳಿಕ$_1$** (ನಾ). ೧. ಬಲೆ : "ಜಾಲಿಕಂ ವಾಗುರಂ ಬೆಳ್ಳಾರವೆನಿಸಿಕ್ಕು" (ಮಂಗರಾ. ೧೧೨-೫). **ಜಾಳಿಕ$_2$** : ೨. ಕವಚ ; ಚಿಲಖತ್ತು : "ಜಾಳಿಕಂ ವಾರಿ ವರ್ಮಂ ಕವಚಂ" (ಮಂಗರಾ. ೮೬-೩೦).

[ ಸಂ. ಜಾಲಿಕಾ ]

**ಜಾಲಿಕ$_2$, ಜಾಳಿಕ$_2$** (ನಾ). ೧. ಬಲೆಗಾರ; ಬೆಸ್ತ : "ಜಾಲಿಕಂ ಧೀವರಂ ಕೈವರ್ತನೆಂದೆನಲು ಜಾಲಗಾಱಂ" (ಮಂಗರಾ. ೧೧೧-೩). ೨. ಜೇಡ; ಜೇಡರ ಹುಳು. ೩. ಮಂತ್ರವಾದಿ; ಜಾದೂಗಾರ; ಮಾಯಾವಿ; ಐಂದ್ರಜಾಲಿಕ : "ಜಾಲಿಕನೆನೆ ಕಾಪಟಿಕಂ" (ವಸ್ತುಕೋ. ೬೪-೭೬); "ಜಾಲಿಕಃ, ಕೌಸೃತಿಕಃ, ಧೂರ್ತಃ, ವ್ಯಂಸಕಃ, ಮಾಯಾವೀ, ಮಾಯಿಕಃ, ಮಾಯೀ–ಈ ೧೧ ಮಾಯಾವಿ" (ಹಲಾಯು. ೫೮-೧೯೪); ಗಗನತರಂಗಿಣೀವಿಭವಮಂ ಸುರಕಾಂತೆಯರಿಂ ನಿರೀಕ್ಷಿಸಿಲ್ಲಿಗೆ ತರಲಾರ್ಪನೆನ್ನಧಿಕ ವಿದ್ಯೆಯಿನೆಂದೊಱಲ್ದು ಜಾಲಿಕಂ (ದಶಕು. ೬-೧೩೩). ೪. ಒಂದು ಜಿಲ್ಲೆಯ ಅಥವಾ ಪ್ರಾಂತ್ಯದ ಅಧಿಪತಿ. **ಜಾಳಿಕ$_1$** : ೧. "ಧೀವರ ಜಾಳಿಕದಾಶನಾವು ಮೀಂಗುಲಿಗಂ" (ವಸ್ತುಕೋ. ೬೬-೮೪). [ಸಂ.]

**ಜಾಲಿಗ** (ನಾ). = ಜೇಡರ ಹುಳು. 'ಜಾಲಿಗಕೀಟಕ' ಪರಾ.

[ <ಸಂ. ಜಾಲಿಕ ]

**ಜಾಲಿಗಕೀಟಕ** (ನಾ). ಜೇಡರ ಹುಳು : ಬಾಲಂ ಬೀಸದು ಸಂತಾಪಾಲಸನಾಗಿರ್ಕುಮಿಕ್ಕುಗುಂ ಮೆಯ್ಯುಂ ಕಣ್ಣಾಲಿಗಳಂ ಬಿಟ್ಟಿರ್ಕುಂ ಜಾಲಿಗಕೀಟಕಮನಡಸಿ ಮೆಲ್ಲ ತುರಂಗಂ (ಅಶ್ವಶಾ. ೧೧-೩೧). [ ಜಾಲಿಗ + ಕೀಟಕ$_2$ ]

**ಜಾಲಿಗುಱುವ** (ನಾ). ಜಾಲಿಮರದಿಂದ ಕೂಡಿದ ದ್ವೀಪ : ಒಂದು ದಿನ ಕೆರೆಯ ನಡುವಣ ಜಾಲಿಗುಱುವಕ್ಕೆ ಬಂದು ಪದ್ಮಾಸನದಿ ಕುಳ್ಳಿತ್ತು ಶಿವಯೋಗದಿಂದಿರಲು (ರಾಘಚ. ೧೫-೨೯). [ ಜಾಲಿ$_1$ + ಕುಱುವ$_1$ ]

**ಜಾಲಿಗೆ** (ನಾ). ಕೋವಿಯನ್ನು ಹಾರಿಸುವಾಗ ಹತ್ತಿಸಲು ಉಪಯೋಗಿಸುವ ಬತ್ತಿ : ಮಾವಿನ ಚಿಗುರೆಂಬ ಜಾಲಿಗೆಯ ಬತ್ತಿಯಂ ಹತ್ತಿಸಿ (ಸೌಗಂಧಿ. ೧೬೭-೧೩) ; ಈರಣ್ಣ . . . ಜಾಲೀಗೆ ಬತ್ತೀ ಬಲಗೈಲಿ ಹಿಡ್ಕೊಂಡು ಒಬ್ಬಾನೆ ಹೊಡೆದಾನೋ ದೊರೆಮಗಾ (ಹುಟ್ಟಿಹ. ೪೪). 'ಜಾವುಗೆ' ಪರಾ. [ ? ]

**ಜಾಲಿಜಪ್ಪಟೆ** (ನಾ). ಒಂದು ಬಗೆಯ ಮರ: ಅಂಡ್ರಿಕೆ ಹುಲ್ಲು, ಕಡಗೋಲು ಗಿಡ, ಮುಳ್ಳುಮುತ್ತ, ಜಾಲಿಜಪ್ಪಟೆ–ಇಂಥ ನೂರಾರು ಕಾಡು ಜಾತಿಯ ಹುಲ್ಲು ಹೊದರು ಗಿಡಮರ ಬಳ್ಳಿ (ಬೆಳುಮ. ೫೩). [ಜಾಲಿ$_1$ + ಜಪ್ಪಟೆ$_0$]

**ಜಾಲಿನಿ, ಜಾಳಿನಿ** (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ; ಹೀರೆ: "ಪೀರೆ ಜಾಲಿನಿ" (ವಸ್ತುಕೋ. ೩೬-೨೧). **ಜಾಳಿನಿ:** "ಹೀರೆ ಮೃದಂಗಿ ಫಲಿನಿ ಜಾಳಿನಿಯಕ್ಕು" (ಮಂಗರಾ. ೪೪-೪೪). [ ಸಂ. ಜಾಲಿನೀ ]

**ಜಾಲಿಬಂಕೆ** (ನಾ). ಒಂದು ಬಗೆಯ ಮರ: ಜಾಲಿಬಂಕೆ, ಇಪಿಕಾಕುನ್ಹ (ವೃಜಿಗಿ. ೬೫-೧೩೧೬). [ ? ]

**ಜಾಲಿಮ, ಜಾಲೀಮ, ಜಾಲೀಮು**(ಗು). ೧. ಉಗ್ರವಾದ; ದಾರುಣವಾದ; ತೀಕ್ಷ್ಣವಾದ : ಆದರೆ ಆ ಜಾಲಿಮ ವಿಷದಿಂದ ಅವನ ಹಲ್ಲುಗಳು ಕೂಡ ಗಿಟಕಿರಿದಿದ್ದವಾದ್ದರಿಂದ ಆ ಔಷಧವು ಅವನ ಹೊಟ್ಟೆಯಲ್ಲಿ ಹೋಗಲಿಲ್ಲ (ಅಂಬಿಕೆ. ೧೬೦). **ಜಾಲೀಮ:** ೧. ಮಕ್ಕಾದ ಕಡೆಗೆ ಮುಖಮಾಡಿ, ನಮಾಜು ಬೀಳುವಾಗಲೇ ಜಾಲೀಮ ಪಣವನ್ನು ಪುಕಾರಿಸಿದರು (ದೀಪಹ. II, ೪೦). **ಜಾಲೀಮು:**(ನಾ). ೨. ಉಗ್ರವಾದುದು; ದಾರುಣವಾದುದು: ಕೊಟ್ಟ ಮದ್ದು ತುಸು ಜಾಲೀಮು ಮಾತ್ರ ಇತ್ತೆಂದು ಅದರ ಪರಿಣಾಮದಿಂದ ಅವನು ಕಂಡುಕೊಂಡನು (ಜಾಬಲ. ೮೪). [ ←ಅರ. ಮರಾ. ಜಾಲೀಮ್ ]

**ಜಾಲಿಸು, ಜಾಳವಿಸು$_1$, ಜಾಳಿಸು$_2$, ಜಾಳೈಸು** (ಕ್ರಿ). ೧. (ಅಕ್ಕಿ ಮೊದಲಾದವುಗಳಲ್ಲಿ ಕಸಕಡ್ಡಿ ಹೋಗುವಂತೆ) ನೀರಿನಲ್ಲಿ ತೊಳೆ : ಮಿದಿದಕ್ಕಿಗಳ ಮಾಡಿ ತೂಗಿ ಜಾಲಿಸಿ (ಗೋಮಟೀ. ೪-೭೭). ೨. ಕಲಕು; ಅಲ್ಲಾಡಿಸು; ಕ್ಷೋಭೆಗೊಳಿಸು : ಜಗಾ ಜಾಲಿಸುವ ಬಡ್ಡಿ ಮಗು ತೂಗಲಾರಳೊ (ಗಾದೆ). ೩. ಶೋಧಿಸು; ಪರಿಶುದ್ಧಿಗೊಳಿಸು : ಜಾಲಿಸಬೇಕೊ ಜಾಲಸಾಗರನಾಗಿ ಪಾಪಜಾಲಂಗಳ ಕಸ ಪೋಗುವಂತೆ (ವಿದಾಕ್ಯ. ೧೫೨-೧) ; ಅದರಲ್ಲಿ ಮನಸ್ಸನ್ನು ಜಾಲಿಸಿ ತೊಳೆದು (ಪಂಯಾತ್ರ. ೬೯). **ಜಾಳವಿಸು$_1$:** ೪. ಮೋಸ ಮಾಡು; ವಂಚಿಸು. 'ಜಾಳವಣೆ' ಪರಾ. **ಜಾಳಿಸು$_2$:** ೧. ಕಲ್ಮಷವೆಂಬ ತೌಡಂ ಹಾಱಿಸಿ ಸಮತೆಯೆಂಬ ಸಲಿಲದಲ್ಲಿ ಜಾಳಿಸಿ (ಅವಚಂ. ೨೭೭-೧೨೭೦); ಜಾಲಗಾರನು ಉಸುಕು ಜಾಳಿಸುವ ಹಾಗೆ (ಉಯ್ಯಾಲೆ.೧೧-೯). ೫.ಕೊಡವು; ಒದರು: ಆರ್ದ್ರಮಂ ಜಾಳಿಸಿ ಜಾಲಮಂ ಬಿಸಿಲೊಳಿಕ್ಕುವ . . . ಶಬರರ್ಕಳಿನಿಂತೆಸೆದತ್ತು ಪೆರ್ಕಣಂ (ಶಾಂತೀಶ್ವ. ೩-೭೪). ೬. ಸೋಲಿಸಂ; ಜಳ್ಳುಮಾಡಂ: "ಜಾಳಿಪುದೆಂದು ಸೋಲಿಪುದು" (ಕಶಸಾ. ೩೧-೬೫೪) ; "ಜಾಳಿಪುದೆನೆ ಸೋಲಿಪುದು" (ಕವಿಕಂ. ೨೪೪): ಜಾಳಿಸಿದನಾ ಕಾಶಿರಾಜನ ಧಾಳಿಯಲಿ (ಕುವ್ಯಾಸ. ೪-೫) ; ನಿಮ್ಮ ಬಲ ಜಾಳಿಸಲ್ವೀರ ವೃಷಸೇನ ಬೊಬ್ಬಿರಿದು . . . ನುಡಿದನು (ತುರಂಗ. ೬೭-೧). ೭. ಒಂದರಿಯಾಡು; ಜರಡಿಹಿಡಿ: ಹಾಲಿನ ಹುಡಿಯನ್ನು ನಯವಾಗಿ ಅರೆದು ಸರಿಗೆಯ ಜರಡಿಯಲ್ಲಿ ಎರಡು ಮೂರು ಸಲ ಜಾಳಿಸಬೇಕು (ಅಡುಸಾ. ೧೧೧). **ಜಾಳೈಸು:** ೮. ತಗ್ಗಿಸು; ಅಧೀನದಲ್ಲಿಡು : ಗಾಳಿ ಬೆಂಬಲವಾಗಲುರಿಯ ಭಡಾಳವನು ಜಾಳೈಸಬಹುದೆ (ಕುವ್ಯಾಆ. ೩೪-೧೫). [ಜಾಲ$_1$+ –ಇಸು$_3$]

**ಜಾಲೀಮ** 'ಜಾಲಿಮ' ನೋ.

**ಜಾಲೀಮು** 'ಜಾಲಿಮ' ನೋ.

**ಜಾಲೆ$_1$, ಜಾಳ$_2$, ಜಾಳೆ** (ನಾ). ಬೆಂಕಿ; ಉರಿ; ಜ್ವಾಲೆ : "ಜಾಲೆಯುರಿಯೆನಲ್ ಜ್ವಾಲೆಯೊಳು ಸಲೆ ವರ್ತಿಸುಗು" (ಶಬ್ದಮಂ. ೧೨); ಜಾಲೆಯಿಂ ಮರ ಕೆಡುಗು ಮೋಳೆಯಿಂ ಕೆಱೆ ಕೆಡುಗು ಆಳು ಇಲ್ಲದನ ಹೊಲ ಕೆಡುಗು (ಸರ್ವಜ್ಞ. ೧೯೫೩) ; ಶೂಲದ ಪೆಣನುಂ . . . ಜಾಲೆಯ ಬಿಸಿಗಂ ಬೆರ್ಚುತೆ (ಜಾಲಾಸ್ಯ. ೧-೭-೨೩) : ಕೂರಂಬಿನ ನನೆಯೊಂದು ಕುತ್ತಿಸಳ ಜಾಲೆಗೆ ಸೀಕರಿವೋಗದೇಂ ಮಾಣ್ಗುಂ (ರಾಮಾಶ್ವ. ೫೬-೧೪). **ಜಾಳ$_2$.** 'ಜಾಳವಿಸು' ಪರಾ. **ಜಾಳೆ** : ವತ್ವಲೋಪಕ್ಕೆ–ಜ್ವಾಲಾ–ಜಾಳೆ (ಶಮುದ. ೨೮೧ ಪ್ರಯೋ).

[ <ಪ್ರಾ. ಜಾಲಾ / ಸಂ. ಜ್ವಾಲಾ ]

**ಜಾಲೆ$_2$** (ನಾ). ಮಾಟಗಾತಿ ; ಥಳಕುಬೆಳಕಿನಿಂದ ಜನರನ್ನು ವಶಪಡಿಸಿಕೊಳ್ಳುವವಳು ; ಧೂರ್ತೆ : ನುಡಿಗಳಿಂ ನಡೆಗಳಿಂ ಜಾಲೆಯರ ಕೊನಬುಗಾಱಿಕೆ ಸುಳುಹು ತಾಪಸರಿಗಂ ಪ್ರಾಣಗುಂದಿರ್ದು (ತುರಂಗ. ೮೦-೪೦).
[ ಜಾಲ$_1$ + – ಎ$_2$ ]

**ಜಾಲೆ$_3$** (ನಾ). = ಜಾಲ$_1$. 'ಜಾಲೆಗಾಱ' ಪರಾ. [ ಸಂ. ಜಾಲ ]

**ಜಾಲೆ$_4$** (ನಾ). ೧. ಒಂದು ಬಣ್ಣ : ಒಂದು ಪೂರ್ವಕ್ಕೆ ಹೊಂಟರೆ, ಮತ್ತೊಂದು ಉತ್ತರಕ್ಕೆ, ಇನ್ನೊಂದು ಮರಳಿ ಮನೆಗೆ ಓಡುವ ಜಾಲೆಯ ಜಾನುವಾರುಗಳು (ದಂಬಜಾ., ೦೮). ೨. ಒಂದು ಬಗೆಯ ಬಣ್ಣದ ಹಸು : ಬಟ್ಟಗಡಸು ಕೆಂದ ಹುರಿಗ ಕಾರಿಯು ಬೆಳ್ಳ ನೆಟ್ಟಕ್ಕೊಂಬಿನ ಕಾರಿ ಜಾಲೆ ದಿಟ್ಟಿಸಿ ನೋಡುವ ಪಸುಗಳು ಎಸೆದುವು ಪಟ್ಟೆಯ ಸೀರೆಯಂದದಲಿ (ಮಾದೇಸಾಂ. ೧-೪೧). 'ಜಾಲೆಯಾಡು' ಪರಾ. ೩. ಒಂದು ಬಗೆಯ ವನಸ್ಪತಿ ; ಶೂಲಿಕೆ : "ಶೂಲಿಕೆಯೆನಲ್ ಜಾಲೆ" (ಮಂಗರಾ. ४३-೩೭). ೪. (?) : ಅಲ್ಲದ ನೆಲನು ಬೆಳವುದಕೆ ಹುಲ್ಲಲ್ಲದ ಜಾಲೆಯುಂಟೇ ? (ವೋಳೀಮಾ. ೧೭೩-೬೫೦). [ ? ]

**ಜಾಲೆಗಾಱ** (ನಾ). =ಜಾಲಗಾಱ : ವಿಗೆ ಬಸನದಿಂದೆ ಕೊಲೆಕೊಂದು ಗಡಂ ಸಗ್ಗಕ್ಕೆ ಪಾಪಿ ಸಲುವಡೆ ಮತ್ತೀ . . . ಸೂನೆಗಾಱನುಂ ಜಾಲೆ[ಪಾಠಾಂ. ಲ]ಗಾಱನುಂ ಮಾಣ್ದಪರೆ (ಸಮಪು. ೧೪-೮೭); ಜಾಲೆಗಾಱನ ಕಾಲು ಮುಳ್ಳುತಾಗಿ ನೊಂದಿತ್ತೆಂಬಂತೆ . . . ಠಕ್ಕನ ಪೂಜೆಗೆ ಮೆಚ್ಚುವನೆ ನಮ್ಮ ಗುಹೇಶ್ವರನು (ಅವಚಂ. ३೯-೧೩३); ಮಾಲಿಕ ವ್ಯವಹಾರ ಕಮ್ಮಡಿವಾಳ . . . ತಳವಾಱ ಜಾಲೆಗಾಱ ಕಳಾಕುಶಲ ತಾಂಬೂಲಿಕರ . . . ಆಳಬೇಹುದು ಚದುರ ಕುಶಲರಿಗೆಂದು ವಿಟ ನುಡಿದ (ಜೀವಂಚ. ೧೭-೮೭).
[ ಜಾಲೆ$_3$ + – ಕಾಱ ]

**ಜಾಲೆಯಾಡು** (ನಾ). ಒಂದು ಬಗೆಯ ಆಡು : ತನ್ನ ಕಟ್ಟಿದ ಗೇಣಂ ಪರದನಂ ಜಾಲೆಯಾಡಂ ಕೊಲ್ವಂತೆ ಪೊರಟ್ಟಿ ಕೊಂದು (ಧರ್ಮಾಮೃ. ೧३-೮೦) : ಏಳನೆಯ ಭವದೊಳುಕ್ಕದೇಶದಲ್ಲಿ ಜಾಲೆಯಾಡಾಗಿ ಜನಿಸಿರ್ದ (ಪುಣ್ಯಾಸ್ರ. ೫-३೯ ವ). [ ಜಾಲೆ$_4$ + ಆಡು$_3$ ]

**ಜಾಲ್ಮ** (ಗು). ೧. ಕ್ರೂರವಾದ ; ದಯಾಹೀನ. ೨. ಪಾಮರವಾದ ; ನೀಚವಾದ ; ತುಚ್ಛವಾದ. (ನಾ). ೩. ನೀಚನಾದವನು ; ದುಷ್ಟನಾದವನು: ಎಲೆ ಜಾಲ್ಮ ಎತ್ತ ಪೋದಪೆ (ಚಾಲಭಾ. ೯-೪೭). ೪. ವಿಚಾರ ಮಾಡದೆ ಕಾರ್ಯಮಾಡುವವನು ; ಹಿಂದು ಮುಂದು ನೋಡದೆ ಕೆಲಸ ಮಾಡುವವನು; ದುಡುಕುಗಾರ. ೫. ತಿಳಿಯದವನು; ದಡ್ಡ; ಮೂಢ : "ವೈಧೇಯಃ, ಬಾಲಿಶಃ, ಬಾಲಃ, ಜಡಃ, ಜಾಲ್ಮಃ . . . ಮಾತೃಶಾಸಿತಃ–ಈ ೧೧ ಅಱಿಯದವಂ" (ಹಲಾಯು. ೫೭-೧೮೧); ಜಡನೊ ಜಾಲ್ಮನೊ ವ್ಯರ್ಥಜನ್ಮನೊ ಕಡುಮರುಳೊ ಕಾಕನೊ ವಲಂ ಬಾಯ್ಬಡಿಕನೊ (ಪ್ರಹ್ಲಾಚ. ೭-३३). [ ಸಂ. ]

**ಜಾಲ್ಮಜಲ್ಪ** (ನಾ). ದಡ್ಡತನದ ಮಾತು; ಅವಿವೇಕದ ಮಾತು: ಇಂತಹ ಜಾಲ್ಮಜಲ್ಪಗಳನ್ನು ಶ್ರೀಮನ್ಮಹಾರಾಜಾಸ್ಥಾನದಲ್ಲಿ ನೀವು ಪುನಃ ಕೇಳಿಸದಿರಬೇಕು (ಮಂತ್ರಶ. ೧೧-೧೮)
[ ಜಾಲ್ಮ + ಜಲ್ಪ ]

**ಜಾಲ್ಮತೆ** (ನಾ). ಕ್ರೂರತೆ; ಕ್ರೌರ್ಯ ; ಹಿಂಸೆ : ಜಾಲ್ಮತೆಗೆ ಜಾಲ್ಮತೆಯ ನೊಡ್ಡಿ ಸೆಣಸುವ ರೂಢ ರಾಜನೀತಿಯನೊಡೆದನೀ ಸಾಹಸಿ (ಅಮತಂ. ೫೪-೩). [ ಸಂ. ಜಾಲ್ಮತಾ ]

**ಜಾಲ್ವರಿ** (ಕ್ರಿ). ಗುಂಪು ಚೆದರಿಸು (?) : ಪಳ್ಳಿಪುರಗಳ ಪೊಕ್ಕು ಕೊಳ್ಳಿಯಾಡಲ್ಕೆ ಬಲ್ಲಿದನು ಅವ ತನ್ನ ಬಲವೆಲ್ಲಗೂಡಿ ತಾಗಿ ಚೂಣಿಯ ಬಲವ ತಟ್ಟಿ ಜಾಲ್ವರಿದು ನೂಕಿ ಬಹುಜನರುಗಳ ಮುಕ್ಕಿರಿಯಲಿಕ್ಕಿದನು (ಕರಿಕ. ೧೭-೫). [ <ಜಾಲ$_1$ + ಪರಿ$_2$ ]

**ಜಾವ$_1$**, **ಜಾವಂ$_1$**, **ಜಾವು**, **ಝಾಮು**, **ಝಾವ** (ನಾ). ದಿವಸದ ಎಂಟನೆಯ ಒಂದು ಭಾಗದಷ್ಟು ಕಾಲ ; ಏಳೂವರೆ ಗಳಿಗೆ ; ಒಂದು ಪ್ರಹರ ; ಮೂರುಗಂಟೆಗಳಷ್ಟು ಕಾಲ : "ಪ್ರಹರಃ, ಯಾಮಃ–ಈ ೨ ಜಾವಂ" (ಹಲಾಯು. ೧೮-೧೦೭) ; "ಪ್ರಹರವೆನಲು ಯಾಮವೆನೆ ಜಾವಂ" (ಮಂಗರಾ. ३೦-೬) ; ಬೆಳಗಪ್ಪ ಜಾವದಯ್ಯಿಲ್ ಕೊಳೆ ಶೀತಕ್ಕಾಱದಳ್ಕಿ (ಕಾವ್ಯಸಾ. ೬೯೪ ಶೂದ್ರಕ): ಅಂತಾಯಿರುಳ ನಾಲ್ಕು ಜಾವಮುಂ . . . ಕೆಂದಿನೊಳೆ ಬೆಳಗಾಗೆ (ಪಂಪಭಾ. ೩-೮३ ವ) ; ಇರುಳ್ ನಾಲ್ಕುಂ ಜಾವಮುಂ ಮೌಹೂರ್ತಿಕನಂತೆ ಪೊತ್ತಿನಳವಿಯಂ ನೋಡುತ್ತುಂ (ಧರ್ಮಾಮೃ. ೧-೧೬೦) ; ಒಂದರೆಗಳಿಗೆಯನೊಂದು ಬರಿಸದಂತೊಂದು ಜಾವವ ಯುಗದಂತೆ . . . ಎಣಿಪಳು (ಹದಿಬ. ೭-३೭); ಚೇಳಿಗೆ ಪಾರುಪತ್ಯ ಕೊಟ್ಟರೆ ಜಾವಕ್ಕೊಂದು ಸರ್ತಿ ಮುಟ್ಟಿಸಿತು (ಗಾದೆ). ೨. ಜಾವ ಜಾವದಲ್ಲೂ ಮಾಡುವ ನಗರ ಮೊದಲಾದುವುಗಳ ಕಾವಲು; ಪಹರೆ; ಗಸ್ತು: ಬಲಿದು ಕಾಲ್ಗಾಪಿನಣಿವೆರಸು ನಿಂದ ಜಾವದ ಮಾದಗಜಂಗಳುಮಂ (ವರ್ಧಪು. ೯-೫೭ ವ). ೩. ಕಾವಲಿನ ಎಡೆ,–ಸ್ಥಾನ ; ಪಹರೆಯವರು ಕಾವಲಿಗಾಗಿ ಇರುವ ನೆಲೆ ; ಕಾವಲುಗಾರರ ಠಾಣೆ : ಅಲ್ಲಲ್ಲಿ ಜಾವ ಮುಕ್ಕಡ(ಗ)ರವಟಿಗೆ ತಳವ(ಱಿಕೆ)ಯ(ಮೆ)ಕ್ಕೆಕ್ಕೆಯೊಳಂ ಠಾಣಾಂತರಮಂ ನಿರವಿಸೆಯುಂ (ಪುಷ್ಪಪು. ೭-೬೯ ವ) ; ಹೃದಯಪ್ರಿಯರಂತೊಱಗಿದ ಪದದೊಳ್ ಗರಟಿಗೆಯ ಜಾವದುಕ್ಕಡದುಲಿ ಮುಟ್ಟಿದ ಪೊತ್ತು (ಯಶೋಚ. ३-३೭). **ಜಾಮು** : ೧. ಆ ಪುಲಿಯು ಕೊಲ್ವೆನೆನ್ದು ಪ್ರತಿಜ್ಞೆ ಕಡಿದು ಜಾಮದಿನ್ದೊಳಗೆ ಕೊನ್ದಂ (ಎಕ. X, ಮುಳಬಾ. ೧೬३-४ ; 950) ; ಬುಧವಾರ ಮೂರನೆಯ ಜಾಮದಲು ಕಾದಿ (ಎಕ. VIII, ಸೊರಬ.೧೬೭-೯; 1454) ; ರಾತ್ರಿ ಮೊದಲನೆಯ ಜಾಮದ ಗಂಟೆ ಆಗತಾನೆ ಹೊಡೆದಿತ್ತು (ಕೃಪ್ಣಭೂ. ४೯). **ಜಾವು** : ೧. ಕಲ್ಲುಮಂಟಪದ ನೆರಳಿನಲ್ಲಿ ಮಲಗಿದಿರಿ ಒಂದು ಜಾವು (ಹೃದಸ. ೭೫-೭). **ಝಾಮು**: ೧. ಬೆಳಗಿನ ಝಾಮುಕ್ಕೆ ಬಂದು ಮಲಗಿದೆನಲ್ಲ (ದೇವೀಚಾ. ४೦). **ಝಾವ** : ೧. ಘಳಿಗೆಯೆಂಟಾಗಲೊಂದು ಝಾವವಹುದು (ವಿವೇಕ. ३३೦) ; ಎಂಟು ಝಾವಗಳಲ್ಲಿ ಒಮ್ಮೆ ಹರಿಯ ಕೊಂಡಾಡೊ (ವಿದಾಕ್ಕ. ೯೫-೬) ; ಒಂದು ಝಾವ ರಾತ್ರಿ ಇದ್ದದ್ದು ಅವಳಿಗೆ ತಿಳಿಯಲಿಲ್ಲ (ಅನಾಥ. ३೮೮).

**ಜಾವದವರ್**, **ಜಾವದವರು** = ಕಾವಲಿನವರು ; ರಕ್ಷಕರು : ಅಯಾಮಿಕಸ್ಸ=ಜಾವದವರಿಲ್ಲದೊಂಗೆ (ನೀತಿವಾ. ೧३-೭);ಕರೆದು ತಂದವ್ಯಾತನ್ನ ಪೂಡುವರಿರುಳು ಪಗಲದಗಲದೆಯು ಜಾವದವರು ಮಹಾ ಸುವಿಧಾನದಿಂ ಬಿಡರಂಗರಕ್ಷಕರು (ಸಾಳ್ವಭಾ. ३३-೧೧೫). **ಜಾವದಾನೆ** = ಕಾವಲಿನ ಕೆಲಸಕ್ಕಾಗಿ ಉಪಯೋಗಿಸಿಕೊಳ್ಳುವ ಆನೆ : ರಾಜಾಂಗಣದ ಬಯಲ ಬಾಳ್ಗಂಬಂಗಳೊಳ್ ಸೆಱಿಗೆಯ್ದಿರ್ದ ಜಾವದಾನೆಗಳ ಮೇಲೆಡೆಗೆಡೆದು (ಚಂದ್ರಪು. ೮-४३ ವ). **ಜಾವಮಿರ್** = ಕಾವಲಿರು : ನಿದ್ರಾಭರ ಪರವಶರಾಗಿರೆ ಭೀಮಂ ಜಾವಮಿರ್ದು (ಪಂಪಭಾ. ३-೧೦ ವ). **ಜಾವಮಿರಿಸು** = ಕಾವಲಿಗೆ ಇರಿಸಂ ; ರಕ್ಷಣೆ ಏರ್ಪಡಿಸು : ಸಾಹಸಭಟರಪ್ಪ ಸುಭಟರ್ಗೆ ನಾಲ್ಸಾಸಿರ ಪೊನ್ನಂ ನುಡಿದು ಜಾವಮಿರಿಸಿ (ಸುಕುಮಾ. ೭-೮೮).
[ <ಪ್ರಾ. ಜಾವ. / ಸಂ. ಯಾಮ ]

**ಜಾವ$_2$**(ನಾ). ಒಂದು ಬಗೆಯ ವನಸ್ಪತಿ: ಮಧುಪಿಪ್ಪಲಿ ಮೂಲದ ಭಲ್ಲಾತಕದರುಗದ ಜಾವದ ಪುಡಿಯಂ ಕುದಿಯಿಸಿ (ಲೋಕೋಪ. ೯-೧४೫). [ ? ]

**ಜಾವಕ್** (ಗು). ಹೊರಕ್ಕೆ ಕಳುಹಿಸುವ. 'ಆವಕ್' ಪರಾ.
[ ←ಮರಾ. ಜಾವಕ್ ]

**ಜಾವಕ** (ನಾ). ೧. ಒಂದು ಬಗೆಯ ಧಾನ್ಯ ; ಅಲಸಂದೆ; ತಡಂಗುಣಿ. ೨. ಅರಗು : "ಜಾವಕ–ಯಾವಕ = ಅರಗು" (ತದ್ಭಕೋ. ೦೫). ಯಾವಕ, ಜಾವಕ (ಶಬ್ದಾನು. ೧೪೧ ಪ್ರಯೋ). [ <ಸಂ. ಯಾವಕ]

**ಜಾವಗಹಳೆ** (ನಾ). ಕಾವಲುಗಾರರು ಊದುವ ಕಹಳೆ; ಪಹರೆಯವರು ಜನರನ್ನು ಎಚ್ಚರಿಸುವುದಕ್ಕಾಗಿ ಊದುವ ಕಹಳೆ : ಹೊಡೆವ ಹೆಬ್ಬರೆ ಜಾವಗಹಳೆ ತಂಬಟೆಗಳ ಕಡುರವವ್ರೊಳಟುಗುದಿಗೆಯು ಜಡಿವ ದನಿಗಳಿಂದ (ಕಂಸವಿ. ೧೧-೧೪೧). [ ಜಾವ$_1$ + ಕಹಳೆ ]

**ಜಾವಗುತ್ತಿಗೆ** (ನಾ). ಕಾವಲು ಕಾಯುವ ಗುತ್ತಿಗೆ : ನಿತ್ಯಪೂಜೆಯನು ಮಲ್ಲಯ್ಯಂಗೆ ಮಾಡಿನೋಡುತ್ತ ತೋಟವನು ಕೆಟಿಯನು ಜಾವಗುತ್ತಿಗೆಯನಿತ್ತು ತಾಂ ಹರುಷದಿಂ ಕವಿಲೆಗಳ ಕಱುವ ನೋಡುತ್ತ (ಸಿದ್ಧರಾ. ೫-೧೭); [ ಜಾವ$_1$ + ಗುತ್ತಿಗೆ (<ಗುತ್ತಗೆ) ]

**ಜಾವಟೆ**(ನಾ). ಚಪಲತೆ; ಚಾಪಲ್ಯ (?): ತೀವಿದರು ಭಂಡಿಯಲಿ ಮುಂದಣ ಜಾ[ಪಾಠಾಂ. ಚಾ]ವಟೆಯು ಚಪಳರಿಗೆ ಹರಿಯೆ ನೃಪಾವಳಿಗಳಲ್ಲಲ್ಲಿ ತೆತ್ತರು ಕಂಡ ವಸ್ತುಗಳ (ಕುಮ್ಯಾಸ. ೬-೬); ರಾವುತರು ಸಮತಳಿಸಿ ಮುಗ್ಗಲು ಮಾವುತರು ತಲೆದೋರಿತಿತ್ತಲು ಜಾವಟೆಯು ಟಾವಲ್ಲ (ಮೂಲರಾ. ೪-೧೭). [ ? ]

**ಜಾವಡಿ$_1$** 'ಜಾವಳಿ$_1$' ನೋ.

**ಜಾವಡಿ$_2$** (ನಾ). (?) : ಮುಮುಕ್ಷು ಮಧ್ಯದಿ ನಿಂದ ಕಾಲಭ್ರುವಿನ ತೆರ ಅಮಮ ಶಿವನ ಜಾವಡಿಗಳು ರಮಣೀಯ ಪಂಚಬ್ರಹ್ಮಗಳೆ ಭಿತ್ತಿಗಳಾಗಿ ವಿಮಲವೇದದ ಸಾಲಗಂಬ (ದೇವಾಂಪು. ೨-೩೮).

[ P ಇದು 'ಚಾವಡಿ' ಎಂಬುದರ ಅಪಲಿಖಿತವಿರಬಹುದು ]

**ಜಾವಡಿಕಾರ** (ನಾ). ಜಾವಡಿಗೀತೆಗಳನ್ನು ರಚಿಸುವವನು : ಜಾವಡಿಕಾರರು, ತುಮ್ರಿಕಾರರು ನಿತ್ಯಜೀವನದ ಲೀಲಾವಿಲಾಸವನ್ನು ಬಣ್ಣಿಸಿದ್ದಾರೆ (ಭಾರದ. ೫೮೦).

[ ಜಾವಡಿ$_1$ (<ಜಾವಳಿ$_1$) + – ಕಾರ$_1$ (< – ಕಾಱ) ]

**ಜಾವನಿಗಾಲೆ** (ನಾ). ಒಂದು ಬಗೆಯ ವನಸ್ಪತಿ : ಜಾವನಿಗಾಲೆ, ಸಣ್ಣ ಸಲ್ಲೆ, ಕಾಯೋರಿ, ಕರಿಸೆಲ್ಲಿ, ಕಾಡುಪತಂಗ, ಮುರಿಗೆ (ವ್ಯಾಜಿಗಿ. ೪೦-೬೯೯). [ ? ]

**ಜಾವಯಿ** (ನಾ). ಮಗಳ ಗಂಡ; ಅಳಿಯ; ಜಾಮಾತ: ನಮ್ಮ ಜಾವಯಿನ್ನ ಆಶೀರ್ವದಿಸಿರಿ, ಸ್ವಾಮಿಜಿ (ಏರಿಳಿ., ೬೦೬); ನಮ್ಮ ಜಾವಯೀ ಅಂಥಾವಲ್ಲ ತಗೀರಿ (ಗ್ರಾಮಾಯ. ೬೮).

[ ←ಮರಾ. ಜಾವಯೀ./ಪ್ರಾ. ಜಾಮಾಊ./ಸಂ. ಜಾಮಾತೃ ]

**ಜಾವರಿ** (ನಾ). (?) : ವಳ್ಳಿಯ ಪುರದ ಭೂಪದೇವರ ಜಾವರಿ ಗೊಬ್ಬರ ಸಿಣಂಡಿವಾಡಿ × × × ದಿವಾಳಿ ಸತ್ರಸಾತ (ಕಳುಲ. ೩-೫; 1071). [ ? ]

**ಜಾವಲ$_1$** 'ಚಾವಲ' ನೋ.

**ಜಾವಳ$_2$** (ನಾ). ೧. ಸಾಮಾನ್ಯ; ಸಾಧಾರಣ : "ಜಾವಳವೆಂದು ಸಾಮಾನ್ಯಮುಂ ಚಾಪಲಮುಮಪ್ಪುದು" (ಕಬ್ಬಿಕೈ. ೫೫); ಇಳೆಯೊಳು ತ್ರಿಮಕೀರ್ತಿಗಳು ಜಾವಳದ ಪುರುಷರೆ ಧರ್ಮಪುತ್ರನ ಗೆಲುವ ಪರಿಯೆಂತೈ (ಕುವ್ಯಾಉ. ೩-೧೩೦); ಸುಂದರಿಯರನೊಲ್ಲದಿಪ್ಪುದದು ಜಾವಳಮೋ (ಹಮ್ಮಿರ. ೬-೪೦). ೨. ಸಾಮಾನ್ಯ ಮನುಷ್ಯ; ನಾಡಾಡಿ : ಭೂವಳಯದೊಳಗುಳ್ಳ ಸರ್ವಜೀವಾಳಿಗಳ ಪಾವನಂಮಾಡಲೆಂದನುಗೆಯ್ದ ಶಿವ ಸಿದ್ಧ ಜಾವಳನೆ (ಸಿದ್ಧರಾ. ೧ ಸೂಚನೆ); ಬಸವನೇಂ ಜಾವಳನೆ ಭಕ್ತರೊಳು (ಬಸಪು. ೧-೨೮); ಬಾಲರಾದಡೆ ಭಂಗವೇ ಜಾವಳನೆ ಅಭಿಮನ್ಯು (ಕುವ್ಯಾಕ. ೪-೧೪); ಸತಿಯ ಮಚ್ಚು ಜಾವಳರ್ಗೆಂತು ದೊರಕುವುದು ಮುನ್ನೀಶನಂ ಭಜಿಸಿದಂಗಲ್ಲದೆ (ರಾಘಚ. ೬-೩೪). ೩. ಕೀಳಾದವನು; ಹೀನ : ಮುನಿದೊಡೆ ನಲ್ಲನೋಪಳ ಪದಾಂಬುರುಹಕ್ಕೆ ವಿನಮ್ರನಾಗೆ ಜಾವಳ ಮೊಱೆಯಲ್ಲು ನೀನೆನಗೆ ಮುಟ್ಟದೆ ಪೋಗೆನೆ (ಶೃಂಗಾರ. ೩-೮೮); ಈ ಮಹಿಯೊಳ್ ಜಾವಳನುಂ ಕರಂ ಕುಪಥದೊಳ್ ಶಾಲಿಕ್ಕಂ (ಶಾಕುಂತ. ೬೪-೧೦೦). [ ? ]

**ಜಾವಳ$_3$**, ಜಾವುಳ (ನಾ). (ಉಕ). ೧. ಜುಟ್ಟು; ಕೂದಲು. ೨. ಮಂಡೆಗೂದಲು; ಹುಟ್ಟುಗೂದಲು: ಶಿರಿಮೂಗುತೀ ಸಣ್ಣನಾಮಾ ಶಿರದ ಜಾವಳ ಜಡೆ ಕಡೆಗೋಲು ನೇಣುಸಹಿತ (ವಾದಿಕೀ. ೬೩-೭); ಹುಟ್ಟಿದ ಕೂಸಿನ ಜಾವಳವನ್ನು ತೆಗೆಯುವಾಗ (ಕಭಾಗಿ. ೧೦೦); ಐದನೆಯ ವರುಷಕ್ಕೆ ಅವನ ಜಾವಳವನ್ನು ಕೋಟೆಯ ಮೇಲೆ ತೆಗಸುವದೆಂದೂ ಬೇಡಿಕೊಂಡಿದ್ದರು (ಸ್ಕೃತಿಚ. ೧೦೫). ೩. ಷೋಡಶ ಸಂಸ್ಕಾರಗಳಲ್ಲಿ ಒಂದು; ಮೊದಲನೆಯ ಸಲ ಕೂದಲು ತೆಗೆಸುವ ಸಂಸ್ಕಾರ; ಚೌಲ; ಚೂಡಾಕರ್ಮ : ಇವರಲ್ಲಿ ಜನ್ಮ, ಜಾವಳ, ಲಗ್ನ, ಮರಣ ಇಷ್ಟರ ಸಂಸ್ಕಾರಗಳು ಮಾತ್ರ ಉಂಟು (ಕಭಾಗಿ. ೧೩೪); ತನ್ಮಧ್ಯೆ ಒಮ್ಮೆ ಶಾಮರಾಯ ತೃತೀಯ ಕುಮಾರನ ಜಾವಳಿಕ್ಕೆಂದು ಊರಿಗೆ ಬಂದರು (ದೀಪಹ. I, ೪೩). **ಜಾವುಳ**: ೧. "ಜಾವುಳ=ನವಿರು,ಕೂದಲು, ಜಡೆ" (ಕಂನುಹು. ೮೬); ಕರಿಯುಂಗಿ ಕಸೂತಿ ತಲೆತುಂಬ ಜಾವುಳ (ಹಳ್ಳಿಯ. ೭೦).

[ ← ಮರಾ. ಜಾವಳ./ಸಂ. ಜಾತವಾಲ ]

**ಜಾವಳದವಸಿ** (ನಾ). ಹೀನನಾದ ತಪಸ್ವಿ; ನಾಡಾಡಿಯಾದ ಋಷಿ : ಜಾವಳದವಸಿಯ ಕವಡುಮಾಯೆಗೊಳಗಪ್ಪರೇಂ (ರಾಮಾಶ್ವ. ೬೭-೧೧)

[ ಜಾವಳ$_2$ + ತವಸಿ$_1$ ]

**ಜಾವಳಿ$_1$**, ಜಾವಡಿ$_1$ (ನಾ). [ಸಂಗೀತ] ಶೃಂಗಾರ ಗೀತೆ; ಕಾಮ ಪ್ರಧಾನವಾದ ಗೀತೆ : ಪದವರ್ಣಗಳು ತಿಲ್ಲಾನಗಳು ಮತ್ತು ಜಾವಳಿಗಳನ್ನು ರಚಿಸಿದರು (ಸಂಗೀತ. ೨೮); ಶೃಂಗಾರಭಾವದಿಂದ ಕೂಡಿದ ಪದಗಳನ್ನೂ ಜಾವಳಿಗಳನ್ನೂ . . . ಅಳವಡಿಸಿಕೊಂಡಿದ್ದಾರೆ (ಅಭಾನ್ಯ. ೫೭). **ಜಾವಡಿ$_1$** : "ಶೃಂಗಾರ ಕಾವ್ಯ; ಪ್ರಣಯಗೀತೆ; ಜಾವಡಿ" (Erotic. ಇಂಕನಿ); ಜಾವಡಿಗಳನ್ನು ಹಾಡುತ್ತಿದ್ದರು (ಮಾಮುರಾ. ೧೩೯); ಮೋಹನ ರಾಗದಲ್ಲಿ ಒಂದು ಜಾವಡಿಯನ್ನೂ ರಾಗಮಾಲಿಕೆಯಲ್ಲಿ ಯಾವುದಾದರೂ ಒಂದು ಸಂಸ್ಕೃತ ಶ್ಲೋಕವನ್ನೂ ಹಾಡಬಹುದು (ಇಬದು. ೧೨೦).

[ ದೇ.॥ ತಮಿ. ಚಾವಳಿ; ತೆಲು. ಜಾವಳಿ ]

**ಜಾವಳಿ$_2$** (ನಾ). ಕಿವಿಗೆ ಹಾಕಿಕೊಳ್ಳುವ ಮುತ್ತಿನ ಒಡವೆ; ಚೌಕಳಿ; ನಾಲ್ಕು ಮುತ್ತುಗಳ ಹತ್ತಕಡುಕು : ನೋವ ಗುರು ಇದಕ್ಕಂಜಿ ಹೇಳದ ಶಿಷ್ಯ ಕಿವಿಮೂಳ ಮೌಕ್ತಿಕದ ಜಾವಳಿಯು ಥಳಿಸಿದಂತೆ ನಾರಾಯಣ ಪ್ರಿಯ ರಾಮನಾಥ (ಗುಪ್ಪಮಂ. ೮೬). [ <ಚೌಕಳಿ ]

**ಜಾವಳಿಗ** (ನಾ). ಸಾಮಾನ್ಯ ವ್ಯಕ್ತಿ; ಸಾಧಾರಣ ಮನುಷ್ಯ : ದೇವಿಯನು ನೀ ಮರುಳು ಮಾಡಿದೆ ಜಾವಳಿಗನಲ್ಲ (ಪ್ರಭುಲೀ. ೫-೩೯) ;ಜಾವಳಿಗರೊಳು ಲಿಂಗಸಂಗ ಸುಖಾವಳಿಯನಱಿದೆನೊ (ಮದೇಪು. ೩-೨೬); ಈ ಜವ್ವನಂ ಬಱಿದೆ ಬಂದುದುಂಟೆ ರಾಯಕುವರಿಯಂ ಮರುಳಗೊಳಿಸಿದೆ ಜಾವಳಿಗ (ಪ್ರಭುಪು. ೫-೫೨). [ ಜಾವಳ$_2$ + – ಇಗ ]

**ಜಾವಳಿಸು** 'ಚಾವಲಿಸು' ನೋ.

**ಜಾವಳೆ** (ನಾ). ಚಂಚಲೆ; ಹೀನೆ : ಗಾಡಿಯ ಮೋಡಿಯ ಕವಡುವಲೆಯನೊಡ್ಡಿ ಮಿಡುಕಿನ ಸೆಡಕುಗಾರ್ತಿ ಜಾವಳೆ ಸೀತೆ ತಾನೆ ತನಗೊಲ್ದನೀಱನಂ ರಾವಣನಂ ಕೆಯ್ಯಾಱಿ ಕೊಂದು ಕುಡಿದಳ್ (ರಾಮಾಶ್ವ. ೧೦೩-೨).

[ ಜಾವಳ$_1$ (<ಚಾವಲ) + – ಎ$_2$ ]

**ಜಾವಾಳ** 'ಜಾಪಾಳ' ನೋ.

**ಜಾವಿಗೆ** 'ಜಾವುಗೆ' ನೋ.

**ಜಾವಿಗೆಬತ್ತಿ** (ನಾ). = ಜಾವುಗೆ : (ಸುಡುಮದ್ದಿನ ಬಾಣವನ್ನೂ) (ಗಣಿ ಮೊದಲಾದವುಗಳಲ್ಲಿ) ಸಿಡಿಮದ್ದನ್ನೂ ಹೊತ್ತಿಸಲು ಉಪಯೋಗಿಸುವ ಒಂದು ಬಗೆಯ ಜಾವಿಗೆ ಬತ್ತಿ (Port-fire. ಇಂಕನಿ). 'ಜಾಲಿಗೆ' ಪರಾ.

[ ಜಾವಿಗೆ (<ಜಾವುಗೆ) + ಬತ್ತಿ ]

**ಜಾವು** 'ಜಾವ$_1$' ನೋ.

**ಜಾವುಗೆ,** ಜಾವಿಗೆ (ನಾ). ಸುಡುಮದ್ದುಗಳನ್ನು ಹತ್ತಿಸಲು ಉಪಯೋಗಿಸುವ ಸಾಧನ,–ಬತ್ತಿ : ಹಿಂದು ಮುಂದಾಗಿ ಕೋವಿಯನಾಂತು ಕೆಲಬರು ತಂದು ಎದೆಗೆ ಜಾವುಗೆಯ (ಜ್ಞಾನಜ. ೧೩-೪೦). **ಜಾವಿಗೆ.** 'ಜಾವಿಗೆಬತ್ತಿ' ಪರಾ. [ ←ಮರಾ. ಝಾವ ]

**ಜಾವುಳ** 'ಜಾವಳ$_3$' ನೋ.

**ಜಾಸುದ್ದಾರ** (ನಾ). = ಜಾಸೂದು : ಸರ್ಕಾರಿ ಕಾಗದಗಳನ್ನು ತಲಪಿಸುವುದಕ್ಕೂ ಬೇಹುಗಾರರು, ಜಾಸುದ್‌ದಾರರು. ವರದಿಯವರು ಎಂದು ನೇಮಕವಾಗಿದ್ದರು (ಪಾಳೆಗಾ. ೫೫). [ <ಜಾಸೂದು + – ದಾರ್$_4$ ]

**ಜಾಸೂದ** 'ಜಾಸೂದು' ನೋ.

**ಜಾಸೂದು,** ಜಾಸೂದ (ನಾ). ಗೂಢಚಾರ; ಗುಪ್ತಚಾರ ; ಬೇಹುಗಾರ; ಹೇರಿಗ : "ಜಾಸೂದು ವೇಷಧಾರಿಗಳು=ಗೂಢಚಾರರು" (ಚಿತ್ರಪಾ. ೨, ಅನು). **ಜಾಸೂದ :** ಯುದ್ಧ ಜರುಗುತಾ ಇರುವಲ್ಲಿ ಇಬ್ಬರು ಜಾಸೂದರ ವೇಷಾ ಹಾಕಿಕೊಂಡು ದುರ್ಗದ ಸಮಿಪಾಪಕ್ಕೆ ಬರುತ್ತಿದ್ದರು (ಚಿತ್ರಪಾ. ೮೭). [ ←ಮರಾ. ಜಾಸೂದ್ ; ಅರ. ಹಿಂ. ಜಾಸೂಸ್ ]

**ಜಾಸ್ತಿ** (ನಾ). ಹೆಚ್ಚು ; ಅಧಿಕ ; ಅತಿಶಯಂ : ಯಾದವರಲ್ಲಿ ಯೆಷ್ಟು ಜಾಸ್ತಿ ಹುಟ್ಟುವಳಿಮಾಡಿಕೊಂಡಾಗ್ಯು (ಮೈಅರಿ. ೧೯೩೯, ೪೨-೧೧೨ ;1826); ಕಮ್ಮಿ ಜಾಸ್ತಿಯ ಲೆಕ್ಕವಿದ್ದರಹಿತರು ಸಹಿತ ಫೈಸಲಿಗೆ ಬರುವಂತೆ ಕರಣಿಕರಿಗುಸುರು ನೀನೂ (ಅರ್ಜಾವಿ. ೩೦-೩೮) ; ಸಭೆಯಲ್ಲಿ ಗಲಾಟೆ ಜಾಸ್ತಿಯಾಯಿತು (ರಾಯಕ. ೭೦) ; ನಮ್ಮೂರು ಸುತ್ತ ಕಿರುಬನ ಕಾಟ ಜಾಸ್ತಿ (ಜೀಂಗೂಲಿ. ೨೧). [ ←ಹಿಂ. ಮರಾ. ಜಾಸ್ತೀ ]

**ಜಾಹಕ** (ನಾ). ಇಲಿಯನ್ನು ಹಿಡಿಯಲಂ ಹೊಂಚು ಹಾಕುವ ಬೆಕ್ಕು : "ಜಾಹಕಃ, ಗಾತ್ರಸಂಕೋಚೀ, ಮಂಡಲೀ–ಈ ೩ ಇಲಿಯಂ ಹಿಡಿಯಲನುಗೆಯ್ವ ಬೆಕ್ಕು" (ಹಲಾಯು. ೪೦-೮೪). [ ಸಂ. ]

**ಜಾಹಿರಾತು** 'ಜಾಹೀರಾತು' ನೋ.

**ಜಾಹಿರು** 'ಜಾಹೀರು' ನೋ.

**ಜಾಹಿರ್ನಾಮ** 'ಜಾಹೀರುನಾಮೆ' ನೋ.

**ಜಾಹೀರನಾಮೆ** 'ಜಾಹೀರುನಾಮೆ' ನೋ.

**ಜಾಹೀರಾತಿ** 'ಜಾಹೀರಾತು' ನೋ.

**ಜಾಹೀರಾತು,** ಜಾಹಿರಾತು, ಜಾಹೀರಾತಿ (ನಾ). ಬಹಿರಂಗಪಡಿಸುವುದು; ಸಾರ್ವಜನಿಕರಿಗೆ ತಿಳಿಸುವುದು; ಪ್ರಕಟನೆ: ಕಣ್ಣು ಕೋರೈಸುವಂತೆ, ಬಣ್ಣಬಣ್ಣದ ದೀಪಗಳ ಪ್ರಕಾಶದಡಿ ಹೊಳೆಯುವ ಜಾಹೀರಾತುಗಳು (ವಾತ್ಸಲ್ಯ. ೫೯); ಪತ್ರಿಕೆಗಳು ಬಾಳಿ ಬದುಕಿ ಜನ ಸೇವೆ ಮಾಡಬೇಕಾದರೆ ಜಾಹೀರಾತುಗಳು ಅವಶ್ಯ (ಗಾಳಿಗು. ೨೭) ; ಪ್ರತಿಭೆಯೊಂದಿರಬೇಕು ವ್ಯುತ್ಪನ್ನಮತಿಬೇಕು . . . ಕವಿಗೆ ಜಾಹೀರಾತು ಬೇಕು (ಇಂಜಾಪ. ೧೭೮-೭೮). **ಜಾಹಿರಾತು :** ತಾವಾಗಿ ಮೆರೆವುವು ಸುಜನರ ಗುಣಗಳು ಅದಕೆ ಜಾಹಿರಾತು ಬೇಕೆ? (ಇಂಜಾಪ. ೨೦೯-೮೩) ; ಪತ್ರಿಕೆ ಪುನಃ ಆರಂಭವಾಗುವುದು ಎಂಬ ಸುದ್ದಿಯನ್ನು ಬೇರೆ ಬೇರೆ ಪೇಪರುಗಳ ಜಾಹಿರಾತುಗಳಲ್ಲಿ ಪ್ರಕಟಿಸಿದ (ಅಪನಾ. ೧೭). **ಜಾಹೀರಾತಿ :** ಹಣದಿಂದ ಮಂದಿಯ ಮಾನಮಟ್ಟವನ್ನು ಅಳೆಯುವ ನೀತಿ ಜಾಹೀರಾತಿಯ ಜಗತ್ತು (ಮಾವಾದ. ೧೧೩). [ ←ಅರ. ಮರಾ. ಜಾಹೀರಾತ್ ]

**ಜಾಹೀರು,** ಜಾಹಿರು (ನಾ). ಪ್ರಸಿದ್ಧಪಡಿಸುವಿಕೆ ; ಪ್ರಕಟನೆ : ಅವನ ಉತ್ತರಾಧಿಕಾರಿಗಳಾಗಿ ಮಕ್ಕಳಿಬ್ಬರು ಇರುವುದರಿಂದಲೂ . . . ಒಂದು ಪ್ರಕಟನೆಯ ಜಾಹೀರು ಕೊಡಬೇಕು (ತ್ಯಾಗಮು. ೬೨) ; ಹೊಲೆಯರ ಕೆಂಚ ಪದ್ಧತಿಯಂತೆ ಈ ಸುದ್ದಿಯನ್ನು ತಮಟೆ ಹೊಡೆದು ಊರಿಗೆಲ್ಲ ಜಾಹೀರು ಮಾಡಿದ (ಊರುಕ. ೫). **ಜಾಹಿರು :** ಟೀಪುಸುಲ್ತಾನರಿಗೆ ಪಿರಿಯಾದಿಯಾಗಿ ಜಾಹಿರು ಮಾಡಿದ್ದರಿಂದ (ರಾಜೇಂದ್ರ. ೨೦).

**ಜಾಹೀರುಮಾಡು** = ಜಾಹೀರುಪಡಿಸು : ಆತನ ರೋದನ ನಾರಾಯಣಿಯ ಸಾವನ್ನು ಜಾಹೀರು ಮಾಡಿತು (ರಂಗವ. ೧೧) ; ನಗರಕ್ಕೆ ಮತ್ತೊಮ್ಮೆ ಪ್ಲೇಗು, ಇಲಿಗಳು ಜಾಹೀರುಮಾಡಿದವು (ಸ್ಮೃತಿಜಿ. ೩೦೮). [ ←ಮರಾ. ಜಾಹೀರ್; ಅರ. ಹಿಂ. ಜಾಹಿರ್ ]

**ಜಾಹೀರುನಾಮೆ,** ಜಾಹಿರ್ನಾಮ, ಜಾಹೀರನಾಮೆ (ನಾ). ಪ್ರಸಿದ್ಧಪತ್ರಿಕೆ ; ಪ್ರಕಟನಪತ್ರ : ಈ ಎಲ್ಲಾ ಜಾಹೀರುನಾಮೆಗಳಲ್ಲಿ ಇಂಗ್ಲಿಷ್ ಶಬ್ದಗಳನ್ನು ತುಂಬಿದ್ದು ನೋಡುವಾಗ (ಪಾಶ್ಚಾವಿ. ೪೪೪). **ಜಾಹಿರ್ನಾಮ:** (ಮೈಗೆಜಿ. IV, ೭೭೧) ; (ಕೈಸ್‌ಗೆ. II, ೫೫೦). **ಜಾಹೀರನಾಮೆ:** ಮಾಂಟಗೂಮ ಸಾಹೇಬರು ೧೯೧೭ರಲ್ಲಿ ಒಂದು ಜಾಹೀರನಾಮೆಯನ್ನು ತೆಗೆದರು (ಕಾಂಗ್ರೆಸ್. ೦೦) ; ಟ್ಯೂಡರ ಅರಸರು ತಮ್ಮ ಮಂತ್ರಿಗಳ ಸಲ್ಲಾ ತೆಗೆದು ಕೊಂಡು ಜಾಹೀರನಾಮೆಗಳನ್ನು ತೆಗೆಯುತ್ತಿದ್ದರು (ಇಂಗ್ಲಇ. ೦೮೭). [ ←ಹಿಂ. ಮರಾ. ಜಾಹೀರನಾಮಾ ]

**ಜಾಹೀರುಪಡಿಸು** (ಕ್ರಿ). ಪ್ರಸಿದ್ಧಪಡಿಸು ; ಎಲ್ಲರಿಗೂ ತಿಳಿಯಪಡಿಸು : ಹೆಮ್ಲೆಟ್ ನಾಟಕವೆಂದು ಜಾಹೀರುಪಡಿಸಿರುವದು (ಶ್ಯಾಮಕಾ. ೨೩). [ ಜಾಹೀರು + ಪಡು$_1$ + – ಇಸು$_3$ ]

**ಜಾಹೆ$_1$** (ನಾ). ಜಾಗರ (?) : ಅರ್ಪಿತ ಅವಧಾನವನಱದ ಸತ್ಯನ ನಿತ್ಯನ ಇರವು ಮಯೂರನ ಜಾಹೆಯಂತೆ ಪಟುಭಟನ ಎಚ್ಚಱಿಕೆಯಂತೆ (ಶಿವಮಂ. ೯೭). [ ? ]

**ಜಾಹೆ$_2$,** ಜಾಹ್ಯೆ (ನಾ). ನಿದ್ರೆ ; ನಿದ್ರಾವಸ್ಥೆ ; ಸುಷುಪ್ತಿ ; ಜಡತೆ : ಜಾಹೆಯಲ್ಲಿ ಮಱದೊಱಗಿರಲಾಗಿ ತನುವ ತಟ್ಟದಡೆ ಆತ್ಮನೆಚ್ಚಱುವಂತೆ (ಶಿವಮಂ. ೭೪) ; ಕಾಲ ಪಸರಿಸಿ ಕಚ್ಚಿಕೊಳ್ಳುತ್ತ ಜಾಹೆಯಾಗಿ ಸುಮ್ಮನೆ ತಲೆಯ ಕುತ್ತುತ ಧನಹೀನನಾಗಿ (ಅಕ್ಷಮ್ಮ. ೪-೨ ಟೀಕೆ). **ಜಾಹ್ಯೆ:** ದಿನದಲ್ಲಿ ಚಲನೆ ರಾತ್ರಿಯಲ್ಲಿ ಜಾಹ್ಯೆಗೊಳಗಪ್ಪುದು ಜೀವನೋಪರಮನೋ (ಬಾಪೊಮ್ಮ. ೨೯); ಪೂರ್ವದಿಂದ ಉತ್ತರಕ್ಕೆ ಬಂದ ಸೂರ್ಯನಂ ಅಸ್ತಮಯವಾಯಿತ್ತೆಂದು ಜಾಹ್ಯೆಗೆ ಓಡಲಾಗಿ (ಅವರೇ. ೭೭). [ ? ]

**ಜಾಹ್ನವಿ** (ನಾ). ಜಹ್ನುಮುನಿಯ ಮಗಳು ; ಜಹ್ನುಮುನಿಯ ಕಿವಿಯಿಂದ ಹೊರಕ್ಕೆ ಬಂದ ನದಿ ; ಗಂಗಾನದಿ : ಏದೊರೆ ಪೆಂಪೂ ಲಕ್ಷ್ಮಿ ನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕಂ (ಜಗವಿ. ೦-೨೦) ; ಜಾಹ್ನವಿಯೇ ತೀರ್ಥದೊಳುತ್ತಮಂ (ಸೋಮೇಶ. ೪) ; ದಿವ್ಯರೂಪವನಳವಡಿಸಿ ಜಗದಂಬೆ ಜಾಹ್ನವಿ ಸಲಿಲಮಧ್ಯದಿಂದೆದ್ದು ಬಂದು (ಕ್ರಮಿಥಾ. ೯-೨೮). [ ಸಂ. ಜಾಹ್ನವೀ ]

**ಜಾಹ್ನವೀಧರ** (ನಾ). ಗಂಗೆಯನ್ನು ತಲೆಯಲ್ಲಿ ಧರಿಸಿರುವವನಂ ; ಗಂಗಾಧರ ; ಶಿವ : ನರಶರದ ಜೋಡಿನ ಜುಂಜುಮೊಳೆಯುಲಿ ಜಾಹ್ನವೀಧರ ಜಾಱುವನೆ (ಕುವ್ಯಾಆ. ೬-೪೦). [ ಸಂ. ]

**ಜಾಹ್ನವೀಮಕುಟ** (ನಾ). ಗಂಗಾನದಿಯನ್ನು ತಲೆಯಲ್ಲಿ ಧರಿಸಿರುವವನು ; ಗಂಗಾಧರ : ಜಯ ಜಾಹ್ನವೀಮಕುಟ ಜಯ ಜರಾಮರಣದೂರ (ಹಡಕಾ. ೧೦-೪೦). [ ಸಂ. (ಜಾಹ್ನವೀ + ಮಕುಟ) ]

**ಜಾಹ್ಯೆ** 'ಜಾಹೆ$_2$' ನೋ.

**ಜಾಳ್$_1$** 'ಜಾಲ್$_1$' ನೋ.

**ಜಾಳ್$_2$** 'ಜಾಲ$_1$' ನೋ.

**ಜಾಳಂದರ** 'ಜಾಲಂದರ' ನೋ.

**ಜಾಳಂದ್ರು** 'ಜಾಲಂದ್ರು' ನೋ.

**ಜಾಳಂದ್ರುಗೆಯ್** (ಕ್ರಿ). ತೂತುಮಾಡು ; ಚುಚ್ಚು ; ಜರ್ಜರಿತವಾಗುವಂತೆ ಮಾಡು : ವಕ್ರೋಕ್ತಿನಖದಿಂ ನೃಸಿಂಹಾವತಾರಮಂ ಪುನರಭಿನಯಿಸುವಂತೆ ಕೋಮಲೆಯ ಹೃದಯಮಂ ಜಾಳಂದ್ರುಗೆಯ್ಕೆ (ಶ್ರೀರಾಮಾ. ೮೪೩-೪೩೫). [ ಜಾಳಂದ್ರು (<ಜಾಲಂದ್ರು) + ಕೆಯ್$_1$ ]

**ಜಾಳಂಧರ** 'ಜಾಲಂದರ' ನೋ.

**ಜಾಳಕ** 'ಜಾಲಕ' ನೋ.

**ಜಾಳಗಪ್ಪೆ** (ನಾ). ಒಂದು ಬಗೆಯ ಕಪ್ಪೆ: ಮೊದಲು ಕೋಳಿಯಂತೆ ನಡೆದು ಒಡನೆ ಜಾಳಗಪ್ಪೆಯಂತೆ ನಡೆದರೆ ವಾತಶ್ಲೇಷ್ಮನಾಡಿಯೆಂದರಿವುದು (ವಾತಾಜಿ. ೭೫-೫). [ ಜಾಳ್$_0$ + ಕಪ್ಪೆ$_1$ ]

**ಜಾಳಗೆ** (ನಾ). ಹೆಣೆದು ಮಾಡಿದ ಚೀಲ; ಬಲೆಚೀಲ; ಕಲ್ಲಿಚೀಲ: ಕೆಲಜಗಲಿಯೊಳಿರ್ದೂಟಿಗದವನಿಂದೊಂದು ಜಾಳಗೆಯಂ ಕೊಂಡು (ಚಕವಿ. ೬-೨೩೭ ವ). 'ಜಾಳಿಗೆ' ಪರಾ. [ <ಸಂ. ಜಾಲಕ ]

**ಜಾಳತಿಯೋಗು** (ಕ್ರಿ). ಜರ್ಜರಿತವಾಗು; ತೂತಾಗು: ಅನೇಕ ಶಸ್ತ್ರ ಮುಖದಿಂ ತನು ಜಾಳತಿಯೋದ ನೋವಿನೊಳ್ ಕೂಗಿಡೆ (ಅನಂಪು. ೯-೩೯). [ P ಇದು 'ಜಾಳರಿಯೋಗು' ಎಂಬುದರ ಅಪಲಿಖಿತವಿರಬಹುದು. ]

**ಜಾಳಮಾರ್ಗ** (ನಾ). ಕಿಟಕಿ; ಗವಾಕ್ಷದ ಕಿಂಡಿ: ಗಣಿಕೆಯರ ವಿಳಾಸಾಗಾರದೊಳ್ ಜಾಳಮಾರ್ಗಪ್ರಣಯಿನಿಯರಪಾಂಗ ಶ್ರೇಣಿಯೊಳ್ ಮೂಱು ಬಣ್ಣಂ ಪೆಣೆದೊದವೆ (ಆದಿಪು. ೧೦-೩೩): ಚಿನ್ನದ ಕಂಬದ ರಮ್ಯ ಜಾಳ ಮಾರ್ಗದ ವಿಳಸತ್ಕವಾಟದ ವಿಚಿತ್ರ ವಿಭೂತಿಗೆ ಜನ್ಮಮಂದಿರಂ (ಪುಷ್ಪಪು. ೨-೯೩). [ ಜಾಳ್$_2$ (=ಜಾಲ$_1$) + ಮಾರ್ಗ ]

**ಜಾಳರ** 'ಝಾಲರಿ$_2$' ನೋ.

**ಜಾಳರಂಬೋಗು** (ಕ್ರಿ). ಜಾಲರದಂತಾಗು; ತೂತುತೂತಾಗು: ನಿಶಿತಾಸ್ತ್ರಹತಿಯಿನಾ ಮುನಿಯ್ಯ ಶರೀರಂ ಕೂಡೆ ಜಾಳರಂಬೋಗಿರೆ . . . ಕಂಡು (ಪಾರ್ಶ್ವಪು. ೧೨-೮೫). [ ಜಾಳರ (<ಝಾಲರಿ) + ಪೋಗು$_1$ ]

**ಜಾಳರಿಗೆ** (ನಾ). ಜಾಲರಿಯಿಂದ ಕೂಡಿದ ಕಿಡಿಕೆ: ಇಂದ್ರನೀಲದ ಭದ್ರದೊಳಂ ಕರ್ಕೇತನದ ಜಾಳರಿಗೆಯೊಳಂ (ಪಂಪಭಾ. ೩-೭೪ ವ): [ <ಸಂ. ಝಲ್ಲರಿಕಾ ]

**ಜಾಳರಿಗೆವೋಗು** (ಕ್ರಿ). = ಜಾಳರಂಬೋಗು: ಅಂಗೋಪಾಂಗಗಳೆಲ್ಲಂ ಶರಜಾಳಂಗಳ್ ಜಾಳರಿಗೆವೋಗೆ ನಟ್ಟವು ಪಲರಂ (ವರ್ಧಮಾ. ೪-೫೮). [ ಜಾಳರಿಗೆ + ಪೋಗು$_1$ ]

**ಜಾಳವಣೆ** (ನಾ). ಮೋಸ; ಕಪಟ; ಮಾಟ; ಮಾಯೆ: ಹುರುಡು ಜಾಣುಮೆ ಜಾಳವಣೆ [ಪಾಠಾಂ. ಚಳಬಳಿಕೆ, ಚಾಳವಣೆ] ಚಪ್ಪರಣೆ ವಂಚನೆ ನೇಹವೆಂಬೀ ಪರಿಯ ಮಾಯಾಮಯದ ಮಹಿಳಾಜನ ವಿರಾಜಿಸಿತು (ತೊರರಾ. ೦-೫-೩೨). [ ಜಾಳವಿಸು$_1$ (<ಜಾಲಿಸು) + - ಅಣೆ$_4$ ]

**ಜಾಳವಿಸು$_1$** 'ಜಾಲಿಸು' ನೋ.

**ಜಾಳವಿಸು$_2$** (ಕ್ರಿ). ಹೊತ್ತಿಸಂ; ಪುಟವಿಡು; ಉರಿಗೊಳಿಸಂ: ಚಪಳರು ಜಾಳವಿಸಿದರು ಹವ್ಯವಾಹನನ (ನಿಭಾಗ. ೭-೪-೪೮). [ ಜಾಳ್$_1$ (<ಜಾಲ್$_2$) + - ಇಸು$_3$ ]

**ಜಾಳಾಂದರ** 'ಜಾಲಂದರ' ನೋ.

**ಜಾಳಾಂದ್ರ** 'ಜಾಲಂದರ' ನೋ.

**ಜಾಳಾಂಧರ** 'ಜಾಲಂದರ' ನೋ.

**ಜಾಳಿ** (ನಾ). (ಕುದುರೆಗಳಿಗೆ ಬರುವ) ಒಂದು ಬಗೆಯ ರೋಗ: ಆ ತಿರುಳಂ ನಾರುವ ಬೇಳೆಯುಮಿರದಲ್ಬೆಣ್ಣೆಯೊಳಗೆಯಿಕ್ಕ ಜಾಳಿಗಳಳಿಗುಂ (ಅಶ್ವವೈ. ೦೭-೦೭). [ ?./ಸಂ. ಜಾಲ = ಕಣ್ಣಿನ ಒಂದು ರೋಗ ]

**ಜಾಳಿಕ$_1$** 'ಜಾಲಿಕ$_1$' ನೋ.

**ಜಾಳಿಕ$_2$** 'ಜಾಲಿಕ$_2$' ನೋ.

**ಜಾಳಿಗೆ$_1$** (ನಾ). ೧. ಬಲೆ; ಜಾಲ ಎಲುವಿನ ಪಂಜರ ಕರುಳಿನ ಜಾಳಿಗೆ (ವಚಸಂ. ೪೫-೬೨); ಹೇಳು ಹೇಳೆನ್ನಾಣೆ ಮಾತಿನ ಜಾಳಿಗೆಯ ಮಱೆ ಬೇಡ (ಕುವ್ಯಾಕ. ೧-೧೧); ನಾನಿರುವ ಸ್ಥಳವು ದುಃಖವೆಂಬ ಜಾಳಿಗೆಯಿಂದ ತುಂಬಿದೆ (ಮಂಜುಕ. ೧೧೯); ಅದರ ಜೊತೆಗಾರ ಹಕ್ಕಿ ಬಲೆಯ ಬಳಿ ಬಂದು ತನ್ನ ಚಂಚುವಿನಿಂದ ಜಾಳಿಗೆಯನು ಕಡಿದೆಸೆಯುವದರಲ್ಲಿ ತೊಡಗಿತ್ತು (ಅಶ್ವಮು. ೦೩). ೨. ಜೇಡನ ಬಲೆ,-ಗೂಡು: ಅದು (ಜೇಡ) ತನ್ನ ಆಹಾರದ ಜಂತುಗಳನ್ನು ಹಿಡಿಯುವುದಕ್ಕಾಗಿ ಒಂದು ತರದ ಸೂಕ್ಷ್ಮವಾದ ಜಾಳಿಗೆಯನ್ನು ಮಾಡುತ್ತದೆ (ಮುಂಬಯಿ. ೪-೦೦೮); ದೂರದರ್ಶಕ ಯಂತ್ರದ ನಳಿಕೆಯಲ್ಲಿ ಜೇಡವೊಂದು ಜಾಳಿಗೆ ಕಟ್ಟಿದರೆ (ವಿಜಾವಾ. ೭೯). ೩. ಜಾಳು ಜಾಳಾಗಿರುವ ಬಟ್ಟೆ,-ವಸ್ತ್ರ; ಜೀರ್ಣವಸ್ತ್ರ: ಬಟ್ಟೆಗಳೊಳು ಜಾಳಿಗೆಗಳು ಬಿದ್ದಿರೆ ಮುಟ್ಟಲಮ್ಮವು ಗೆದ್ದಲುಗಳು (ನಾಗಕು. ೨-೯೭). ೪. ಮುತ್ತು ಅಥವಾ ಮಣಿಗಳ ಸರಗಳಿಂದ ಮಾಡಿದ ಕುಚ್ಚು: ಸಾಲು ಮುತ್ತಿನ ಜಾಳಿಗೆ ಗೊಂಡ್ಯ ಶಿರದಲ್ಲಿ (ವಿದಾಕ್ಕ. ೦೦-೩): (ಕೊಂಕಣಿಗರು)- ಲಗ್ನದಲ್ಲಿ ಇವರು ಮದುಮಗನ ಬಾಸಿಂಗಕ್ಕೆ ಬಿಳೀನೂಲಿನ ಜಾಳಿಗೆಯನ್ನು ಕಟ್ಟುವರು (ಕಭಾಗ. ೮೭). ೬. ಮಂಟಪ ಮೊದಲಾದುವುಗಳನ್ನು ಸಿಂಗರಿಸುವಾಗ ಕಟ್ಟುವ ಕುಚ್ಚು: ರಘುಗೆಯ ಲಹರಿಯ ಜಾಳಿಗೆಯ ಪಚ್ಚೆಗಳ ಪಾಗಾರದ ಸುರತ್ನಾಳಿಗಳಲೆಸೆದುದು ರಾಜಸಭೆ (ಕುವ್ಯಾಸ. ೦೩-೨೫): ಸಾಲ ರತುನಸ್ತಂಭನಿಕರದ ಜಾಳಿಗೆಯ ಮುತ್ತುಗಳ ಭಿತ್ತಿ (ನಿಭಾಗ. ೧೦-೯೭-೨೦). ೭. ಗುಂಪು; ಸಮೂಹ: "ಜಾಳಿಗೆ, ಕಿಕ್ಕಿಂದು . . . ಈ ಆಱು ಸಮೂಹಂ" (ಕಶಸಾ. ೦೦-೨೨೨); "ಜಾಳಿಗೆ ತೆವ್ವಲ್ ಗುಂಡೊಗ್ಗು ಗೊಚ್ಚೆವೊಟ್ಟಿಲ್ ಪಂಡಿತರಿಂ ಗಡಣವಂಗಡಂ ಕಿಕ್ಕಿಂದಂ" (ಕವಿಕಂ. ೦೦೭). ಹೇಳಲೇನದನುಬ್ಬಸದ ಬಲುಗೋಳದಲಿ ತನು ಸಿಲುಕಿ ಕ್ರಿಮಿಗಳ ಜಾಳಿಗೆಗೆ ತುತ್ತಾಗಿ (ನಿಭಾಗ. ೩-೦೪-೨೦). ೮. ಹೆಣಿಕೆಯ ಚೀಲ; ಕಲ್ಲಿ: ಕಳ್ಳನ ಜಾಳಿಗೆಯಂತೆ ಒಳ್ಳೆಯ ಮುದ್ರೆಯನಿಕ್ಕಿದಡೆ ಸುರಿದಲ್ಲಿಯೆ ಕಾಣಬಂದಿತ್ತು (ಬಲೀಶ್ವ. ೨೫); ಕಾಯಿಪಲ್ಲೆಗಳ ಜಾಳಿಗೆಗಳಿಗೆ ಎಣಿಕೆಯಿಲ್ಲ (ಬಿಟ್ಟಿಹೊ. ೨). ೯. ಹಣದ ಚೀಲ; ಥೈಲಿ; ಹಮ್ಮಿಣಿ: ಆರಾಧನೆಗೆ ಚಿತ್ರವುರವಣಿಸಿ ಜಾಳಿಗೆಗಳಂ ತರಿಸುತಂ ಮುದ್ರೆಗಳನೊಡೆದು (ಬಸರ. ೮-೨೦); ಧನವಿಲ್ಲವೆಂದು ಜಾಳಿಗೆಗಳಂ ಹೇಳದಿರಿಸಿಯೆ ಪೋಗಲ್ (ಲಿಶಿಜಂ. ೩೭-೬೫): ಮಾಳಿಗೆ ಮನೆಯೂ ಇರಲಿ ಜಾಳಿಗೆ ತುಂಬಿ ಹೊನ್ನಿರಲಿ (ಪುರಂದ. ೨-೫೦-೮); ನಿಡುಬೊಂಬೆ ಪಟ್ಟೆ ಪಚ್ಚಡವಿತ್ತು ವೀಳೆಯಗೊಡುತ ಜಾಳಿಗೆ ನೂಱಗೊಟ್ಟಾ (ಭರತೆ. ೨-೯೯); ಅರಸುಗಳೆಲ್ಲರು ಜಾಳಿಗೆ ಜಾಳಿಗೆ ಸುರಿದು ಸೇಸೆಯನಿಕ್ಕಿದರು (ಜಿನರಾ. ೯-೭೩). ೧೦. (ಉಕ) ಬುಗುರಿಯನ್ನು ಆಡಿಸಲು ಉಪಯೋಗಿಸುವ ಹುರಿ,-ಚಾಟಿ: ಬೆಲ್ಲವತ್ತ್ರದ ಕಾಯ ಬುಗುರಿಯುಲಿ ಜಾಳಿಗೆಯ ಸುತ್ತಿ ಬಿಚ್ಚಲು ನಾದ ಭೋಂಕಾರವು (ಭಾವಜೀ. ೪-೭೫). ೧೧. (ಆಲಂ) ತಂತ್ರ; ಕಪಟ; ವಂಚನೆ: ಅನೇಕ ಅಬಲೆಯರನ್ನು ಜಾಳಿಗೆಯಲ್ಲಿ ತೊಡಗಿಸಿ ಅವರ ಸತ್ವವನ್ನು ಹರಣಮಾಡಿದೆ (ಸ್ಕೂಲಮಿ. ೦೮೭). [ <ಸಂ. ಜಾಲಿಕಾ ]

**ಜಾಳಿಗೆ$_2$** (ನಾ). ೧. ಜಾಲಿಸುವಿಕೆ; ಚೆನ್ನಾಗಿ ಕೊಳೆಹೋಗುವಂತೆ ನೀರಿನಲ್ಲಿ ಜಾಲಾಡುವಿಕೆ. ೨. (ಆಲಂ). ಶುಚಿತ್ವ; ಪರಿಶುದ್ಧಿ: ವಿಜಯವಿಠಲನ ಸನ್ನಿಧಿಯಲ್ಲಿ ಜಾಳಿಗೆಯಿಂದ ಜನನ ನೀಗಲಿಬೇಕೋ (ವಿದಾಕ್ಕ. ೦೫೦-೬). [ <ಜಾಳಿಸು$_1$ + - ಗೆ ]

**ಜಾಳಿನಿ** 'ಜಾಲಿನಿ' ನೋ.

**ಜಾಳಿಯೂರು** (ನಾ). ಒಂದು ಊರಿನ ಹೆಸರು: ತಸ್ಯಪೂರ್ವ್ವತಃ ಜಾಳಿಯೂರು ನಾಮಗ್ರಾಮಃ (ಮ್ಯಆರಿ. ೦೯೩೫, ೪೦-೫೮ : 951). [ ? + ಊರು$_3$ (<ಊರ್) ]

**ಜಾಳಿಸು$_1$** (ಕ್ರಿ). ೧. ಚಲಿಸು; ನಡೆ; ಹೋಗು: ಶಕುಂತಪಾಳಿಕೆಯುರ್ ಪೊಱಗೆ ವಾಸಯಷ್ಟಿಗಳೊಳ್ ನಿಱಿದ ಪೊನ್ನ ಪಂಜರದ ಪುಗಿಲ್ಗಳಿಂ ಜಾಳಿಸಿ ಪೊಕ್ಕು (ಚಂದ್ರಪು. ೮-೪೩ ವ): ಕುಣಿವುತುಂ ಕೂಗುತುಂ ಜಾ[ಪಾಠಾಂ.ಚಾ]ಳಿಸುತ್ತುಂ ಜರಿವುತುಂ ನೋಡಿ ಹಿಗ್ಗುತುಂ (ನಂಚಿರ. ೦೦-೬೮); ಜಾಳಿಸಿದ ಜಯಕಾಮಿನಿಯ ಜಂಘಾಳತನವನ್ನು ನಿಲಿಸಿ ನಿನ್ನಯ ತೋಳಿನಲಿ

ತೋಱುವೆವು (ಕುವ್ಯಾ.ಗ. ೪-೩೪) : ಪಿಸುಣರಿಂದಾರ್ಯೈಶ್ವರಿಯ ಜಾಳಿಸದು ಜಗದಲಿ (ತೊರರಾ. ೨-೦-೪೦) : ಜಾಳಿಸಿದನಿಂದ್ರನನಲಂ ಪೋದನಂತಕಂ ಕಾಲ ಬೇಗಂದೋಱಿದಂ (ಚ.ಬ.ಪು. ೩೯-೩೭). ೨. ಹರಿ ; ಸುರಿ : ನೆರೆದ ಪೌರಜನ ಜಾಳಿಸುವ ಕಂಬನಿಗಳಲಿ ಬಿಱುನಾಲಿಗೆಯು ಬೈಗುಳಲಿ ಮುನಿಯನು ಕೀಳುನುಡಿಯಲಿ ಜಱಿವುತಿರ್ದುದು (ತೊರರಾ. ೧-೯-೪೩) : ಜಾಳಿಸುವ ರಕ್ತಪ್ರವಾಹದೊಳ್ ಕೌರವನೃಪಾಲ ಭೂಶಯನಮಂ ತಾಳಿರಲ್ (ತುರಂಗ. ೭೭-೧). ೩. ಅಲುಗು ; ಕಂಪಿಸು ; ನಡುಗು : ತೋಳ ತೊವಲುಗಳೆಳ್ದು ನೀಳದಿಂ ಜೋಲುತಿರೆ ಜಾಳಿಸುತ ಕಾಲುಡುಗಿ ಕೋಲೂಱಿ ನಿಲ್ಲುತಿರೆ (ಪಿಂಡೋರ. ಹ. ೫೦೫-೧೭). ೪. ಸೇರು ; ಕೂಡು ; ಬೆರೆ: ತುಂಬಿಗಳ ನುಣ್ಣುರದೊಡನೆ ಜಾ[ಪಾಠಾಂ. ಜೋ]ಳಿಸಿ ಮಾಣವಾಣಿತಿಗೊಡುವ ಗಾಯಕರ (ಮಲರ. ೧೦೭-೨೦) : ಜಾ[ಪಾಠಾಂ. ಚಾ]ಳಿಸಿದು ದಪಕೀರ್ತಿಯಕಟಾ ವಿಟ್ಟಾಳಿಸಿತು ಯದುವಂಶವೆನೆ (ಕುವ್ಯಾ.ಅ. ೧೯-೪೦). ೫. ಬೀಸು ; ಜಳಪಿಸು : ತೋಳಡವಿಯೊಳು ಪೊಕ್ಕು ಕೊಡಲಿಯ ಜಾಳಿಸಿಯೆ ಪಱಿದೊಟ್ಟಿ ಸಮಿಧೆಯ ಮಾಳಿಗೆಯ ಮಾಡಿದನು (ಕು.ವ್ಯಾ. ಅ. ೭೨೩. ೨೭-೩೨). ೬. ಅಟ್ಟು ; ಕಳುಹಿಸಂ : ತಡೆದ ರಕ್ಕಸ ತಳವಱ ಜವನೆಡೆಗೆ ಜಾಳಿಸುತಾಳುವೇರಿಯ ತಡಿವಿಡಿದು ಶೋಧಿಸಿದನಲ್ಲಿ ಸದನ ಸಂಕುಲವ (ತೊರರಾ. ೫-೨-೧೭). ೭. ನೀಗು ; ಹೋಗಲಾಡಿಸು ; ಕಳೆ ; ನಿವಾರಿಸು : ಅಸುವಿದ್ದೇನಿದ್ದೇನು ಫಲವೆಂದುಸುರಲಾ ಜಾಬಾಲಿ ಮುನಿ ಜಾಳಿಸಿದನಂತಸ್ತಾಪವನು ಬಳಿಕಾ ನೃಪಾಲಕನ (ತೊರರಾ.೩-೨-೭): ಆ ಸೈಂಧವನ ಸಾಳೆ ಕೊಲ್ಲದೊಡುರಿಗೆಂಡದೊಳಗೆ ಬಿಳ್ದು ಜಾಳಿಸುವೆನು ದೇಹವನು (ನೇಮಿಸಂ. ೨೮-೧೮೮). ೮. ಇಳಿ ; ಕುಗ್ಗು : ನಸ್ಯವಿಾಯಲ್ ಜಾಳಿಸುಗುಂ ಸರ್ಪವಿಷಂ (ಖಮುದ. ೭-೧೭). ೯. ನಿಂದಿಸು ; ಬಯ್ಯು : ಮುಳುಗಿದನು ಮನದೊಳಗೆ ವಿಧಿಯನು ಜಱಿದು ಜಾಳಿಸಿ[ಪಾಠಾಂ. ಧ್ಯಾನಿಸಿ] ಯಕಕಟ್ಟಾಸರು ಮಹಾರಾಜರಿಗೆ ಬಂದುದೆ ಶಿವಶಿವಾಯೆಂದ (ತೊರರಾ. ೯-೨-೫). ೧೦. ಜೋಡಿಸು ; ಕೂಡಿಸು; ಸೇರಿಸಂ: ಜಾ[ಪಾಠಾಂ. ಚಾ]ಳಿಸಿದ ಹದವಿಲ್ಲುಗಳ ಬಡಿಕೋಲುಗಳ ಸಂಕಲೆಯ ನಾಯ್ಗಳ (ಕುವ್ಯಾ.ಅ. ೫-೩೩) : ಅಖಿಳ ವೇದಮಂ ಜಾಳಿಸಿಯೆ ಕದ್ದು ಪೊಕ್ಕಂಬುಧಿಯೊಳ್ (ಲಶಿಜಿಂ. ೭-೧). [ <ಚಾಲಿಸು ]

**ಜಾಳಿಸು₂** 'ಜಾಲಿಸು' ನೋ.

**ಜಾಳು₁** (ನಾ). ೧. ಹುರುಳಿಲ್ಲದುದು ; ಪೊಳ್ಳಾದುದು ; ನಿಸ್ಸತ್ತ್ವವಾದುದು : "ಜಾಳೆನೆ ಪೊಳ್ಳೆನೆ ತಾಂ ನಿಷ್ಪ್ರಯೋಜನಾರ್ಥಮದಕ್ಕುಂ" (ಛಾರನಿ. ೫೭) ; ಶ್ರೀರಾಮನಾಳೀಕ ವೇಗದಿಂ ಪೋಪೆನಗೆ ಜಳರಾಸಿ ಜಾಳಿನಿಸದಿದಿರಾಗಲೆನಿತುಂಟು (ವಂಕಾರಾ. ೫-೦-೧೮). ೨. (ಅಲಂ) ಕೈಲಾಗದವ; ಹೇಡಿ ; ನಿಷ್ಪ್ರಯೋಜಕ : ಜಾಳ ಜಱಿದು ಜಡಾತ್ಮರಿಗೆ ಜಂಘಾಳತನವನು ಮೆಱಿದು (ಕುವ್ಯಾ.ಕ. ೧೭-೨೦) : ಕಾಳಗಕೆ ಮೈದೋಱ ಬಾರದೆ ಭೀಮಫಲುಗುಣರು ಜಾ[ಪಾಠಾಂ. ಚಾ]ಳ ನೂಕಿಸಿ ಪೊತ್ತುಗಳೆವರು ಹೇಳಿ ಫಲವೇನಿನ್ನು (ಕುವ್ಯಾ.ಭೀ.೯-೧೭); ಜಾಳುಗಳೊಳಗುಗಾಣಿಸುವುದಲ್ಲದೆ ತತ್ವಶೀಲನೊಳಗ ಕಾಣ್ಬರಾರು (ಭರತ. ೫-೦೦೩).

**ಜಾಳಾಗು** = ದೃಢಭಾವವಿಲ್ಲದವನಾಗು ; ಯಾವ ಕಾರ್ಯಕ್ಕೂ ಬಾರದವನಾಗು : ಇಹದಲ್ಲಿ ಪರದಲ್ಲಿ ಪರಿಣಾಮಿಗಳಗಲಿ ಇಂತಿವಕ್ಕೆ ದೂರವಾಗಿ ಬಾಳುಗೆಟ್ಟಿ ಬೀಳಾದ ಜಾಳಾದ (ಮೋಳಿಮಾ. ೯೭-೩೭೯).

**ಜಾಳುಬೋಳು** = ಬೆಲೆಯಿಲ್ಲದ ವ್ಯಕ್ತಿ : (ಕ). [ <ಜಳ್ಳು ]

**ಜಾಳು₂** (ನಾ). ನೆಯ್ಗೆಯಲ್ಲಿ ಎಳೆಗಳು ಒಂದಕ್ಕೊಂದು ದೂರವಾಗಿರುವುದು ; ಒತ್ತೊತ್ತಾಗಿ ಇಲ್ಲದಿರುವುದು : ಜಾಳಾಗಿ ನೆಯ್ದ ಬಟ್ಟೆಗಳು ಹೆಚ್ಚುದಿನ ಬಾಳಿಕೆ ಬರುವುದಿಲ್ಲ (ಗೃಹವಿ. ೭೯) ; ಆ ಪಾಣಿಪಂಚೆ ಎಷ್ಟು ಜಾಳಾಗಿತ್ತೆಂದರೆ (ಮಲಿಮು. ೯೮).

ಜಾಳುಜಾಳು (ದ್ವಿರುಕ್ತಿ) : ಅಂಥ ಸಂದರ್ಭದಲ್ಲಿ ಅವನ ನುಡಿಮುಗ್ಗ ಜಾಳುಜಾಳಾಗಿ ಕಾಣುತ್ತದೆ (ನಂಜುಂಡ. ೧೦೭). [ <ಜಾಲ₁ ]

**ಜಾಳುಗೊಳಿಸು** (ಕ್ರಿ). ಹೀನಗೊಳಿಸು ; ಹಾಳುಮಾಡು : ಖಳ ಮಾತಾಕೃತ್ಯ ಕುಲದ ಸಚ್ಚರಿತೆಯಂ ಜಾಳುಗೊಳಿಸಿದುದು (ವಂಕಾರಾ. ೨-೨೭-೦). [ ಜಾಳು₁ + ಕೊಳ್₁ + – ಇಸು₃ ]

**ಜಾಳುಜೀವ** (ನಾ). ಉಪಯೋಗವಿಲ್ಲದ ಪ್ರಾಣಿ ; ಯಾವ ಪುರುಷಾರ್ಥವನ್ನೂ ಸಾಧಿಸಲಾಗದವನು ; ಬಣಗು ಮನುಷ್ಯ : ಕೇಳಿದ್ಯೆ ಶ್ರುತಿ ವಾಕ್ಯವಾದುದ ಜಾಳುಜೀವರು ಹಲರು ಹರಿಯಲಿ ಕೀಳುಗಳು ಬ್ರಹ್ಮಾದಿ ದೇವಪರೆಂಬ ಶ್ರುತಿಕೋಟಿ (ಸಂಭಪ. ೮-೭೩). [ ಜಾಳು₁ + ಜೀವ ]

**ಜಾಳುದಕ** (ನಾ). ಸೋಸಿದ ನೀರು (?) : ನೀಳಮಾಗುತ್ತರಿಸಿ ಲವಣಿಸುತ ಪಚನಿಸುತ ಜಾಳುದಕಮಂ ತೆಗೆದು ಗುಡಮನಿಡುತಲಱಿದು ಮೇಳವಿಸಿ ತಿಲಕುಟಜಗಂಧಕೃಚ್ಛ್ರವಣವಣ ಜವಾಳುಕಮರೀಚರಜವ ಬಾಳುಕದೊಡನೆ ತಳಿದು ಹದವಡವುದನುಗ್ಗೈದು (ಲಿಂಗಪು. ೮-೩೭).

[ <ಜಾಳಿಸು₂ + ಉದಕ₂ ]

**ಜಾಳುದೈವ** (ನಾ). ಕ್ಷುದ್ರದೇವತೆ: ಜಾಳುದೈವದ ಪಾಳೆಯವನು ಸದೆಬಡಿದು ಕಾಲನ ಪುರಕೀಡಾಡಿದ ಜ್ವಾಲಾಮಾಲಿನಿಗಾನೆಱಗುವೆನು (ಅಂಜಪ. ೧-೩೯).

[ ಜಾಳು₁ + ದೈವ ]

**ಜಾಳುನುಡಿ, ಜಾಳ್ನುಡಿ** (ನಾ). ೧. ಪೊಳ್ಳುಮಾತು ; ಕೆಲಸಕ್ಕೆ ಬಾರದ ಮಾತು ; ವ್ಯರ್ಥಾಲಾಪ : ಬಿಡು ಜಾಳುನುಡಿಗಳ ಜವಳಿವಾತನೆನುತ್ತ ನರನೆಚ್ಚ (ಕುವ್ಯಾ.ಕ. ೨೨-೨೪). ೨. ಸುಳ್ಳು : ನಾಳೆ ನಾಳಿದ್ದು ಬರುತ್ತಾರೆಂದು ಜಾಳುನುಡಿಗಳಿಂದ ಸಾರಿ ಸಾರಿ ವ್ಯರ್ಥವಾಗುವುದು ಸರಿಯಲ್ಲ (ಕಾಲಸಂ. ೧೩, ಪ್ರಸ್ತಾವನೆ): ಜಾಳ್ನುಡಿ: ೧. ಮನಬಂದಂತೆ ಬೋಧ ಜಾಳ್ನುಡಿಗಳಿಂದ ಖಿಲರಾಡುತಮಿರ್ದರ್ (ವಂಕಾರಾ. ೪-೦೮-೨೮). [ ಜಾಳು₁ + ನುಡಿ₂ ]

**ಜಾಳುಮನುಜ** (ನಾ). ಕ್ಷುದ್ರ ಮನುಷ್ಯ ; ಕೈಲಾಗದವನು : ಗಾಳಿ ಬೀಸುವ ವೇಳೆಯಲ್ಲಿ ತೂರಿಕೊಳ್ಳಿರೋ ಬೇಗ ಬೇಗ . . . ಜಾಳ[ಳು] ಮನುಜರಿರಾ (ಅಖಂಡೇ. ೬೪-೨೨). [ ಜಾಳು₁ + ಮನುಜ ]

**ಜಾಳುಮಾತು** (ನಾ). = ಜಾಳುನುಡಿ ೧ : ಕೂಳು ಪ್ರಸಾದವೆಂದು ನುಡಿವ ಜಾಳುಮಾತ ಕೇಳಿ ಕೂಳಿಂಗೆ ಆಳಾಗಿ (ಅದವ. ೨೪-೭೦) : ಹಾಳುಗುಡಿಯಲಿ ಕುಳಿತು ಜಾಳುಮಾತುಗಳಾಡಿ ಮೇಳಗಳ ಬಿಡದ ಶಿವಯೋಗಿ ಶಿವನಾಗಿ ಬಾಳುವನೆ (ಸರ್ವಜ್ಞ. ೫೮೭). [ ಜಾಳು₁ + ಮಾತು₁ ]

**ಜಾಳುವಲೆ** (ನಾ). ಒಂದು ಬಗೆಯ ಬಲೆ : ಕಾಲಸುಭಟರು ದೋಣಿದಲೆಗಳ ತೋಳ ಖಂಡಿಯ ಜಾಳುವಲೆಗಳವೋಲಿಯೇರಿನ ದೋರಿವಲೆಗಳಲ್ಲೈದೆ ಕೂಡಿದರು (ಸಂಭಪ. ೮-೦೦೬). [ ಜಾಳು₀ + ಬಲೆ₁ ]

**ಜಾಳುವೆಣ್** (ನಾ). ದುರ್ಬಲಳಾದ ಹೆಂಗಸು; ಕೈಲಾಗದ ಹೆಣ್ಣು: ಜಾಳುವೆಣ್ಣುಗಳುಪವಾಸವ ಮಾಡಿದರೇಳಲಾಱರು (ಭರತ. ೧೮-೧೩೫).

[ ಜಾಳು₁ + ಪೆಣ್ ]

**ಜಾಳೆ** 'ಜಾಲೆ₁' ನೋ.

**ಜಾಳೆದೆ** (ನಾ). ಪೊಳ್ಳಾದ ಹೃದಯ ; ಹೇಡಿ ಮನಸ್ಸು : ಜಾಳೆದೆ[ಪಾಠಾಂ. ಲೆ] ಧೈರ್ಯದಲಿ ಸರ್ಪನ ಹೇಳಿಗೆಯ ಶಾಂತಿಯಲಿ . . . ಖಳ ತನ್ನೋಲಗಕೆ ನಡೆತಂದು ಮಂತ್ರಿಪ್ರಕರಕಿಂತೆಂದ (ಅಳ್ಯೂಚ. ೭-೮).

[ ಜಾಳು₁ + ಎದೆ (<ಎರ್ದೆ) ]

**ಜಾಳೈಸು** 'ಜಾಲಿಸು' ನೋ.

**ಜಾಳ್ಕ** (ನಾ). (?) : ಮಾಯಮುಮಂ ಪರಿದೊಡನೆ ಶಿಖರಾಗ್ರದಲ್ಲಿರ್ಪ ಪೀಯೂಷ ಫೇನಮಂ ಜಿಹ್ವಾಗ್ರದಲ್ಲುಣಬೇಕವಂ ನೆರೆ ಜಾಳ್ಕನು (ಪರಶು. ೯-೫). [ ? ]

**ಜಾಳ್ನುಡಿ** 'ಜಾಳುನುಡಿ' ನೋ.

**ಜಾಱಾಗು** (ಕ್ರಿ). ತಪ್ಪಿಹೋಗು ; ಇಲ್ಲದಂತಾಗು ; ನಷ್ಟವಾಗು : ಜಯಸಮರ ಜಾಱಾಯ್ತು ತೆಗೆ ಪಾಳಯಕೆ ಮರಳಿಚು ರಥವನು (ಕುವ್ಯಾ.ಕ. ೧೪-೫). [ ಜಾಱು₂ + ಅಗು₁ ]

**ಜಾಱಿಸು, ಜಾರಿಸು** (ಕ್ರಿ). ೧. ಹೋಗುವಂತೆ ಮಾಡು; ಕಳೆದುಬಿಡು: ಜವ್ವನಮಂ ಜಾಱಿಸಿ ಸುಖಮಂ ಸೂಱೆಗಳೆದು (ನಂಬಿರ. ೧೬-೨೮). ೨. ಬಿಟ್ಟುಕೊಡು ; ಹೋಗಗೊಡು ; ಸೋಲು : ತೋಱಿ ನುಡಿದರೆ ಭೀಷ್ಮದ್ರೋಣರು ಜಾಱಿಸಿದ ರಣವೆಮಗೆ ಸದರವೆ ದೂಱುವವರಾವಲ್ಲವೆಂದನು ಭಾನುಸುತ ನಗುತ (ಕುವ್ಯಾ.ಕ. ೦-೨೪). ೩. ಎಸೆ ; ಬಿಸುಡು : ಪಾಳೆಯವ ಸೂಱೆಯನಾಡಿ ಗೂಡಾರಗಳನು ಕಿತ್ತು ಜಾಱಿಸಿದರು ದೆಸೆದೆಸೆಗೆ (ಕಂನವಿ. ೧೭-೮೦). ೪. ಸರಿಸು ; ಕದಲಿಸು ; ಓಸರಿಸು : ಹೇಳಿಗೆಯ ಮುಚ್ಚುಳ ಜಾಱಿಸಿದ ಫಣಿಯಂತೆ ಭುಲ್ಲವಿಸಿತ್ತು ಕುರುಸೇನೆ (ಕುವ್ಯಾ.ಕ. ೨೩-೩೮) : ಮಱೆದು ಮಲಗಿದಳವಳು ಮಗ್ಗುಲ ಸೆಱಗ ಮೆಲ್ಲನೆ ಜಾಱಿಸುತಲಾಗರಸ ವಸನವ ಕೊಂಡು ಮಲಗಿದ ಸತಿಯನೀಕ್ಷಿಸುತ ಮಱುಗಿದನು (ನಳಚ. ೫-೧೭) : ಸುರತಾಂತದ ಶ್ರಮವಳಿವೊಡೆ ಮೈದಿಲ ಸೆಱಗ ಜಾಱಿಸಲಂಗನೆಯ ಮಿಱುಗುವ ಬಡ ಬಾಸೆಯೊಪ್ಪಿತು ಮುಖಚಂದ್ರಗುರವಣಿಸುವ ರಾಹುವೆನಲು (ಕಂನವಿ. ೬-೧೨೯). ೫. ಹಿಮ್ಮೆಟ್ಟಿಸು ; ಹಿಂದಕ್ಕೆ ತಳ್ಳು : ಹಿಮದಿಂದೆ ತಣ್ಣಸಂ ಬಡೆದಿರ್ದ ಮಾಗಿಯುಂ ಕ್ರಮದಿಂದೆ ಜಾಱಿಸಿ ವಸಂತರ್ತು ತಲೆದೋರ್ಪ ಸಮಯದವೊಲು (ಜೈಮಿಭಾ. ೩೦-೧೭). **ಜಾರಿಸು:** ೧. ಪ್ರೀತಿಕರ ನುಡಿಗಳು ಬೀರಿ ಜಾರಿಸಿದನತ್ಯಾತುರದ ದುಃಖವಂ (ವೆಂಕಾರಾ. ೨-೨೨-೩೭). ೪. ಕುಕ್ಕೆಗಳನ್ನು ಒಂದಾದಮೇಲೆ ಒಂದನ್ನು ಹೆಗಲ ಮೇಲಕ್ಕೆ ಜಾರಿಸಿ ಕೊಳ್ಳುತ್ತಿದ್ದೆ (ಜಂಗಾಳ್ಯ.೮೦). ೬. (ಆಲಂ) ಲಪಟಾಯಿಸು; ಅಪಹರಿಸು: ಮನೆಯಜನರೆಲ್ಲ ಬೇರೆ ಬೇರೆ ಕಾಮಗಾರಿಕೆಯಲ್ಲಿ ಮಗ್ನರಾಗಿದ್ದಾಗ . . . ಒಂದು ರೂಪಾಯಿ ಜಾರಿಸಿಯೇ ಬಿಟ್ಟಿದ್ದನು (ಕಲಕ. ೨೪).

[ ಜಾಱು₂ + – ಇಸು₃ ]

**ಜಾಱು₁, ಜಾರು₁** (ಕ್ರಿ). ೧. ಜಗುಳು ; ನುಣುಚಿಕೊಳ್ಳು ; ಕಳಚಿ ಕೊಳ್ಳು ; ತಪ್ಪಿಸಿಕೊಳ್ಳು : "ಪೈಸರಿಸಿತನಲ್ಕೆ ಜಾಱಿತೆಂದಱಿಗೆ" (ಭಾರವಿ. ೩೫) ; "ಜಗುಳಿತೆನಲ್ ನುಣ್ಚಿತೆನಲು ಜಾಱಿದುದದು ತಾಂ" (ಕವಿಕಂ. ೨೩೭): ತನ್ನ ಭೀಕರ ಗದಾಘಾತದೊಳಂ ಜಾಱಿ ಪಱಿವಱಿದು ತೂಱು ಪಾಱಾದ . . . ತುರಂಗಮಂಗಳಡಿಯೊಳಡಂಗಿದನೆ ಗೆತ್ತು (ಗದಾಯು. ೬-೨೮ ವ) : ಪರಬಲಕೆ ಜಾಱುವ ಜಯಸಿರಿಯ ಮುಂದಲೆಯ ಹಿಡಿಹಿಡಿಯೆನುತ ಹೆಕ್ಕಳಿಸಿದನು ಕುರುರಾಯ (ಕುವ್ಯಾ.ಕ. ೨-೫೦) : ಜಾಱಿತು ಜಾಣ್ಕೆ ಬಿಂಕಮರೆಗೊಂಕಿತು (ಚಕವಿ. ೬-೨೦೯). ೨. ಹೆಜ್ಜೆಯ ಹಿಡಿತ ತಪ್ಪು : ಬಾವಿಯ ಸೋಪಾನಮನಡರುತ್ತುಂ ಜಾಱುವಂದು (ಚಾವುಂಪು. ೨೦-೨೪). ೩. ಮೇಲಿನಿಂದ ಕೆಳಗೆ ಸರಿ : ಜನಬಸದಿಗಳನೇಱಿ ಯಲ್ಲಿಂದಿಳಿಯ ಜಾಱುತೆ (ಬಸಪು. ೫೨-೧೩) : ಕೈಪಱೆಗುಟ್ಟುವಂಡಲೆಗೆ ತೇಲ್ದು ಮೇಲುದು ಜಾಱೆ (ಜೈಮಿಭಾ. ೩-೭). ೪. ತಪ್ಪು ; ಹಾಳಾಗು : ನುಡಿದ ನುಡಿ ಜಾಱಿದಡೆ ಮನಕ್ಕೆ ಮನ ನಾಚಬೇಕು (ಬಸವ. ೬೬೭). ೫. ಕಳ್ಳ ಹೆಜ್ಜೆಯಲ್ಲಿ ಹೋಗು; ಕದ್ದುಹೋಗು: ಜಾಱೆ ನಿಱಿ ಜಾಱೆ ಸೋರ್ಮುಡಿ ಜಾಱೆ ಬೆಮರ್ಜಾಱೆ ಮೇಲುದಂ ಮುಡಿದಲರ್ಗಳ್ ಜಾಱೆ ಮುದಂ ಜಾಱೆ ಮದಂ ಜಾಱೆ ಪದಂಜಾಱೆ ಜಾರೆ ಜಾಱಿದ ಳೊರ್ವಳ್ (ರಾಜಶೇ. ೦೨-೯). ೬. ಹಿಮ್ಮೆಟ್ಟು ; ಹಿಂಜರಿ : ಸರಳಿಂಗೆ ತಮ್ಮನ ನೀಡಿ ತೋಱಿಸಿ ಜಾಱುತದೆಯಣ್ಣಂದಿರಾದವರು (ಕುವ್ಯಾ.ಕ. ೨೪-೧೮) : ಜಾಱಿತು ಮಹದಾದಿ ಶೀತ ಬೇಸಗೆ ಮೆಯ್ದೋಱಿತು (ಮೋಹತ. ೪-೪೮). ೭. ಮೀರು : ಜಾಱಿದೆನೆ ದಿನದಿನಕೆ ನಿಯಮಾಚಾರ ಭಾಷೆಗಳ (ಬಸಪು. ೪೪-೧೮). **ಜಾರು₁ :** ೧. ಹೊರಬರುವಳು ಶಿವನೆಡದಿಂ ಜಾರಿ ಜಗನ್ಮಾತೆ ರುದ್ರಜಾಯೆ ಗೌರಿ (ಗಣೇಶ. ೦೩-೪೨೦) : ಜವಾನನ ಮುಖಾಂತರ ನನಗೆ ತಿಳುಹಿ ಜಾರಿ ಬಿಟ್ಟಿದ್ದಳು (ಮಧುವ. ೪೮): ಏಳೇಳು ರಾಜಕುವರ, ಶುಭಗಳಿಗೆ ಜಾರುತಿದೆ (ಸ್ವದರ್ಶಿ. ೯). ೩. ಮಕ್ಕಳು ಜಾರುಬಂಡೆಯ ಮೇಲಿಂದ ಜಾರುತ್ತಿದ್ದಾರೆ (ರೂಢಿ). ೪. ಜೀವನದಲ್ಲಿ ಒಮ್ಮೆ ಜಾರಿಬಿಟ್ಟರೆ ಎಚ್ಚೆತ್ತುಕೊಳ್ಳುವುದು ಕಠಿನ (ರೂಢಿ).

**ಜಾರಿಕೊಳ್ಳು** = ತಪ್ಪಿಸಿಕೊಳ್ಳು ; ಪಾರಾಗು : ಹಿಂದಕ್ಕೆ ಮುನಿಗಳ ಕೋಪ ಶಾಪಗಳಿಂದ ಅನೇಕರು ಅಳಿದುಳಿದು ಬನ್ನಬಟ್ಟಿದ್ದಾರೆ ; ನಾನೊಲ್ಲೆ ಎಂದು ಅಗ್ನಿ ಜಾರಿಕೊಂಡ (ಬಿದುರ. ೩೨). **ಜಾಱಗೆಡಹು**=ಜಾರಿಬೀಳುವಂತೆ ಮಾಡು ; ಉರುಳಿಸು : ಏಱುವುದು ನಿಮ್ಮವರ ಬಲವದ ಜಾಱಗೆಡಹು ವರವರು (ತೊರರಾ. ೬-೧೧-೧೧). **ಜಾಱಿಬೀಳು, ಜಾರಿಬೀಳು** = ಕಾಲುತಪ್ಪಿ ಕೆಳಗೆ ಬೀಳು; ಪತನಹೊಂದು; ಭ್ರಷ್ಟನಾಗು: ಸೌರಾಷ್ಟ್ರ ಸೋಮೇಶ್ವರ ಲಿಂಗವ ಹಿಡಿದು ನಿಲಲಱಿಯದೇಱಿದವರು ಜಾಱಿಬಿದ್ದು ಸೂಱೆ ಹೋದರು ಕಾಲಂಗೆ (ಆದವ. ೨೭-೭೬): ಗವಯ ಗತಿಗೆಟ್ಟು ಜಾಱಿ ಬಿದ್ದನು ಪನಸ (ಕಾಶಿರಾ. ೩೫-೧೭): ಜಾರಿ ಬಿದ್ದು ಉಣ್ಣೆಯಂಥ ನೆಲ ಅಂದ (ಗಾದೆ). **ಜಾಱಿವರಿ** = ಜಾರುವಂತೆ ಓಡು : ಪರಿವಾತಂ ವಾಪೀಸೋಪಾನ ಮನಡರುತ್ತುಂ ಜಾಱಿವರಿದು ಕೆಡೆದು (ಆದಿಪು. ೨-೧೪ ವ).

[ ದೇ.॥ ತಮಿ. ಚಾಱು; ಮಲ. ಚಾರು; ತುಳು. ಜಾರು; ತೆಲು. ಜಾಱು ]

**ಜಾಱು₂, ಜಾರು₂** (ನಾ). ೧. ಜಾರುವಿಕೆ ; ಸರಿಯುವಿಕೆ ; ತಪ್ಪುವಿಕೆ : ಆಱುಂ ಗುಣಂಗಳಿಂದಂ ಜಾಱಿಲ್ಲದೆ ಸಂದ ತುಬಿಲಸಂದರ್ (ನೇಮಿಪು. ೧೧-೧೧೮): ಹೇಳಿರೇ ಭೀಷ್ಮಾದಿ ಹಿರಿಯರು ಮೇಲುದಾಯುವ ಬಲ್ಲವರು ಹೆಬ್ಬಾಳುತನದಲಿ ಹಿಗ್ಗಿ ಕಂಡಿರೆ ಜಯದ ಜಾಱುಗಳ (ಕುವ್ಯಾ.ಕ. ೦-೦). ೨. ಇಳಿಜಾರಾದ ಪ್ರದೇಶ ; ನುಣುಚಿ ಬೀಳುವ ಜಾಗ : ಪಾಱುವ ಪಕ್ಕಿಗೆ ಸಂಚರಮುಂ ಜಾಱಿನೊಳೆ ನೆರೆವರ್ಪಲರುಂ . . .ಪಾಱುಗಳಂ ಮಿಗೆ ನಂಬುವದೆ (ಮದತಿ. ೧೦-೭೦) ; ಬಲೆದೊಡಕುಗಳು ಕರ್ಮಮಾರ್ಗಂಗಳ ಮೊಳೆಗಳುಗ್ರಂಗಳಾಶಾವಳಯಿತಂಗಳು ಜಾಱುಗಳು ಬೀಱುಗಳು ರವಣೆ ಗಳು (ಬಸಪು. ೪೦-೫೭). ೩. ಹಿಮ್ಮೆಟ್ಟುವ ಗರಣವುಳ್ಳುದು ; ಅಪಸರಣವುಳ್ಳುದು : ಪಾಱುವ ಪಾಱುಂಬಳ ಕೊಳೆ ಜೀಱಿಟ್ಟುಂಬರಕೆ ತಲೆ ಸಿಡಿಲ್ದೊಡಮಾ ಕಾಯ್ಪಾಱದೆ ಹರಣಂಗೆಯ್ದುವು ಜಾಱಲ್ಲದೆ ಜೋದರಟ್ಟೆಗಳ್ ಕೆಲವಾಗಳ್ (ಶಂಪಥಾ. ೦೦-೯೫). ೪. ಮಾಯೆ ; ಕಪಟ : ಮಾಱಾಂತ ದಾನವರ್ಕಳ ಜಾಱಿಂದರ್ವಿಸುವ ಬಳಮನೊರ್ವನೆ ರಣದೊಳ್ ಪಾಱಿಸಿದಂ ವಿದ್ಯೆಗಳಿಂ (ನೇಮಿಪು. ೦೨-೨೪). ೫. ಸಂಶಯ ; ಸಂದೇಹ: ಕುಲಿಶಂ . . . ಮತ್ಸ್ಯಮೊಂದಿಂತಿವು ತಳದೊಳ್ ಪಾದದೊಳ್ ತೋಱೆ ಜಾಱೀಂ . . . ಪುಣ್ಯಾವಹಂ ತಾನೆನಿಕ್ಕುಂ (ಲೋಕೋಪ. ೧೦-೦೪); ನೀಱೆಯರ ಮನಮನೆಱಗಿಸೆ ಜಾಱೀಂ ಜವ್ವನದಿನಮರನೆಸೆದಂ ನಿಸದಂ (ಪಾರ್ಶ್ವಪು. ೫-೦೦೨): ಜಾಱಿಲ್ಲದೆ ಕೇಳ್ (ಜಟ್ಟಮ. ೮-೨೦). **ಜಾರು₂ :** ೨. 'ಇಳಿಜಾರು' ಪರಾ. [ <ಜಾಱು₁ ]

**ಜಾಱುಂಗಲ್, ಜಾರುಗಲ್ಲು, ಜಾಱುಕಲ್, ಜಾಱುಗಲ್ಲು** (ನಾ). ೧. ಜಾರುವ ಕಲ್ಲು ; (ಪಾಚಿ ಕಟ್ಟಿರುವ) ನುಣುಪಾದ ಕಲ್ಲು. ೨. ಇಳಿ ಜಾರಾದ ಕಲ್ಲು; ಜಾರುಗುಪ್ಪೆಯಂತಿರುವ ಕಲ್ಲು: ಸಂದಣಿಸಿ ಬರ್ಪ ಸೊರ್ಕಾನೆಗಳ ಕಾಲ್ವೊಱೆಗೆ ನೆಲನೊಂದೆಸೆಗೊಲೆದು ಜಾಱುಂಗಲ್ಲಂತೆ ತೋಱೆಯುಂ (ಕಬ್ಬಿಕಾ. ೨೮೮). **ಜಾರುಗಲ್ಲು :** ೧. ಕೆರೆಯ ಕೋಡಿಯ ಜಾರುಗಲ್ಲಿನ ಮೇಲೆ ಜಾರಿಬಿದ್ದನು (ರೂಢಿ). **ಜಾಱುಕಲ್ :** ೧. ಜಾಱುಕಲ್ಪರಿ ಮಂತಾಸೆಯ ಪೈಸರಂ ಮೆಱೆವ ಚೆಲ್ವಂ ದೇವ ನೀವೇಱಿ ನೋಡಿರೆ ಚಿತ್ತಂಬಡೆದಪ್ಪುವೆಂದು ಮೆಱೆದರ್ ವಾಹಂಗಳಂ ವಾಹಕರ್ (ಅನಂಪು. ೨-೩೦). **ಜಾಱುಗಲ್ಲು :** ೧. ಹುಲ್ಲುಗಳ್ ಬೆಳೆದಾಗ ದಾರಿಬಿಡದೆ ಜಾಱುಗಲ್ಲ ಮಱಸಿಕೊಂಡಿಹುವು (ಕಂನವಿ. ೧೮-೩೯). [ಜಾಱು₂+ಕಲ್₂ ]

**ಜಾಟುಕಲ್** 'ಜಾಟುಂಗಲ್' ನೋ.

**ಜಾಟುಗಲ್ಲು** 'ಜಾಟುಂಗಲ್' ನೋ.

**ಜಾಟುವಲೆ** (ನಾ). ಒಂದು ಬಗೆಯ ಬಲೆ: ಹಾಟುವಲೆ ಜಾ[ಪಾಠಾಂ. ಬೀ]ಟುವಲ ಬಡಿಗೆವಲೆ . . . ಮಂದಸಿನವಲೆಯು ಹೊಱಗಳ ಬೇಡವಡೆ ನೆರೆದುದು (ಹಡಕಾ. ೫-೮). [ಜಾಟು₂ + ಬಲೆ₁]

**ಜಾಟುವೊಯ್ಲು** (ನಾ). ಒಂದು ಬಗೆಯ ಏಟು; ಓರೆಯಾದ ಹೊಡೆತ: ಜಾಟುವೊಯ್ಲುಡವೊಯ್ಲು . . . ಉಬ್ಬೇಟುವೊಯ್ಲಿನಲೊದಗಿದರು ಭಟರಸಮುಸಮರದಲಿ (ತೊರರಾ. ೪-೪-೩೪). [ಜಾಟು₂ + ಪೊಯ್ಲು]

**ಜಾಟುವೋಗು** (ಕ್ರಿ). ಹಿಮ್ಮೆಟ್ಟು: ಜಾಱಬಿದ್ದನು ಪನಸ ದಧಿಮುಖರೂರುಗೆಡಿಸಿದ ನಳನು ಮುಗ್ಗಿದ ಜಾ[ಜಾ]ಟುವೋದನು ನೀಲನು (ಕೌಶಿರಾ. ೩೫-೧೭). [ಜಾಟು₂ + ಪೋಗು₁]

**ಜಾಟಿಗೆ** 'ಸಾಟಿಗೆ' ನೋ.

**-ಜಿ** (ಪ್ರ). ಗೌರವಾರ್ಥವಾಗಿ ನಾಮವಾಚಕಗಳ ಕೊನೆಯಲ್ಲಿ ಸೇರುವ ಪ್ರತ್ಯಯ. 'ಅಕ್ಕಾಜಿ', 'ಅಣ್ಣಾಜಿ', 'ಜೀಯ' ಪರಾ.
[<ಪ್ರಾ. ಜಇ./ಸಂ. ಜಯಿನ್]

**ಜಿಂಕರ** (ನಾ). ಒಂದು ಬಗೆಯ ವಾದ್ಯ: ಪೊಯ್ವೆಕ್ಕಪದ್ದಳೆಯ ದನಿಯುಂ ಊದುವ ಟುಂಬಿಯ ರವಮುಂ ಬಾಜಿಪ ಜಿಂಕರಮುಂ ರವಳಿಯಂ ನೆರಪೆ (ಅರ್ಧನೇ. ೮-೭೫ ವ). [?]

**ಜಿಂಕರಿಸು** 'ಜೀಂಕರಿಸು' ನೋ.

**ಜಿಂಕು** (ನಾ). ಒಂದು ಅನುಕರಣ ಶಬ್ದ: ಪೆಣ್ದುಂಬಿಯ ಜಿಂಕು ತುಂಬಿಗಟಪಂ ಕೈಸಾರ್ಕೆ ಕೈವರ್ಪ ಚೆಲ್ವನೆ ಪೋಲ್ತಿರ್ದುವು ನಂದನಾವಳಿಗಳೊಳ್ ಮಾಕಂದಮಾ ಕಂದನಂ (ಸೂಕ್ತಿಸು. ೧೦-೨೭).

**ಜಿಂಕುವರಿ** (ಕ್ರಿ). (ನೊಣಗಳು ಮುತ್ತಿ) ಝೇಂಕಾರಮಾಡು; ಮೊರೆ: ಪೊಲೆ ಮಸಗಿ ಜಿಂಕುವರಿವಂ[ಪಾಠಾಂ. ದಿಕ್ಕುವರೆಗಂ]ತಲಸದೆ ಭಾರತ ಮನೆಯೊಳ್ದು ಕಿಡೆಪೇಟ್ದುದಱಂ ಪೊಲೆಯರ ಬಸಿಱೊಳ್ಬಂದಮ್ಮಳಿನಾತ್ಮಂ ವ್ಯಾಸನೆಂಬರ್ (ಸಮಪ. ೧೦-೧೭೮). [ಜಿಂಕು + ಪರಿ₂]

**ಜಿಂಕೆ** (ನಾ). ಚಿಗರೆ; ಎರಳೆ; ಹರಿಣ: ಉಬ್ಬನೇರ್ದುದೆ ಜಿಂಕೆ ? ಕೂಡೆ ಏರಿದನದಂ (ಶ್ರೀರಾಮಾ. ೨೩೫-೨೦೭).
[ದೇ. ॥ ತುಳು. ಜಿಂಕೆ; ತೆಲು. ಜಿಂಕ]

**ಜಿಂಗಿ₁** (ನಾ). ಮಂಜಿಷ್ಠೆಯೆಂಬ ಗಿಡ ಮತ್ತು ಅದರಿಂದ ತಯಾರಿಸುವ ಒಂದು ಬಗೆಯ ಔಷಧ: "ಮಂಜಿಷ್ಠಾ ವಿಕಸಾಖ್ಯಂ ತಾಂ ಜಿಂಗಿ" (ವಸ್ತುಕೋ. ೩೩-೨೩). [ಸಂ. ಜಿಂಗೀ]

**ಜಿಂಗಿ₂** (ನಾ). (ಉಕ) ಮಾದಕದ್ರವ್ಯದ ಸೇವನೆಯಿಂದುಂಟಾಗುವ ಮೈಮರೆವು,-ಮಾದಕತೆ. [←ಮರಾ. ಝಿಂಗೀ]

**ಜಿಂಜರಗಿ** (ನಾ). ಒಂದು ಬಗೆಯ ಗಿಡ: ಕೆಲವು ಕಡೆಗಳಲ್ಲಿ ಗುರಗಿ, ಬಿದಿರು . . . ಜಿಂಜರಗಿ, ಮುಕ್ಕಡಕ ಮುಂತಾದ ಗಿಡ ಬಳ್ಳಿ ಪೊದೆಗಳಿದ್ದವು (ಪಂಜಾಪಂ. ೨). [?]

**ಜಿಂಜಿ** (ನಾ). ಒಂದು ಅನುಕರಣ ಶಬ್ದ: ಪದಿರ ಪಱ ಮುಂದೆ ಗುಡಿ[ಯ]ಗ್ಗದ ಬಂಧು ತಗುಳ್ದು ಪೊಗಟ್ಟುಗೇಳ್ವರ್ ಪೆಱಗಂ ಪುದಿದೊದವಿದ ಜಿಂಜಿ ಕರಂ ಹೃದಯಂಗಮಮಾಗೆ ನಾಯಕರ್ ನಡೆಗೊಂಡರ್ (ವರ್ಧಮಾ. ೮-೪೭).

**ಜಿಂಜಿಣಿ** (ನಾ). ಹೊಂದಿಕೆ; ಸಂಬಂಧ (?): ಕೆಂದಳಿರ ಸೆಜ್ಜೆಯ ಜಿಂಜಿಣಿ[ಪಾಠಾಂ. ಸಿಂಜಿನಿ] ಪೋಕೆ ನಿನ್ನ ಕೂಟದೊಳಿನಿದಕ್ಕೆ ಮತ್ತ ಖಿಗೆ (ಪಂಪಭಾ. ೫-೦೮); ನನ್ನ ಅಸ್ಥಿಗಳನೆ ನನ್ನ ಹೆಸರಿನಿಂದ ಲಿಂಗವಾಗಿ ಪೂಜೆಗೊಳ್ಳಿ ನನ್ನ ಚರ್ಮವನೆ ಜಿಂಜಿಣಿಯಾಗಿ ಉಟ್ಟು (ಭೈರಸೂ. ೦೨೦).
[?]

**ಜಿಂಜಿತ** (ನಾ). "ಕಾಮಚೇಷ್ಟೆ" (ಪ್ರಭುಪು. ಕೋಶ). 'ಜಿಂಜಿತಂಗೆಯ್' ಪರಾ. [?]

**ಜಿಂಜಿತಂಗೆಯ್** (ಕ್ರಿ). ಕಾಮಚೇಷ್ಟೆ ಮಾಡು: ಚಿಂದುಟಿಯ ಕರ್ದುಕುತ ಭರದಿಯಿಂಬಿನಿಂ ಜಿಂಜಿತಂಗೆಯ್ವುತಂ ಕೊರಲ್ಮುಕಿಂ ಎದೆ ಪಾರ್ಶ್ವಗಳೊಳು (ಪ್ರಭುಪು. ೫-೭೦). [ಜಿಂಜಿತ + ಕೆಯ್₁]

**ಜಿಂಜಿರ** (ನಾ). ಮೂಳೆಮಾತ್ರ ಉಳ್ಳವನು; ಜೀರ್ಣನಾದವನು: ಕರಮೆ ಜಿಂಜಿರಾಗಿ ಮರುಳ ರೂಪಿನೊಳ್ ಸಮಾನರಂ . . . ಕನ್ನಡಿಯೊಳ್ ಕಂಡು ಬೆರ್ಚಿ (ಬಂಹರಿ. ೦೩-೩೩). [?]

**ಜಿಂಜಿರಿ** 'ಜಂಜರ₁' ನೋ.

**ಜಿಂಜಿರಿಸಂಕಲೆ** (ನಾ). ಸರಪಳಿಯ ಬೇಡಿ,-ಸಂಕೋಲೆ: ಕಂಜಾಕ್ಷಿ ಕಾಲಸಂಕಲೆ ಮಕ್ಕಳಾದರೆ ಗುಂಜಿನ ಕೊರಳ ಸಂಕಲೆಯು ಜಿಂಜಿರಿಸಂಕಲೆಯೊಳಗಾರು ಬಾಳ್ವರೆಂದಂಜಿದರವರು ದಂದುಗಕೆ (ಭರತ. ೬೫-೨೯).
[ಜಿಂಜಿರಿ (<ಜಂಜರ₁) + ಸಂಕಲೆ]

**ಜಿಂಟುಕ** (ನಾ). (?): ಎಱಗಲಱಯದೆ ಜಿಣ್ಣುಕಮ್ಮಗುಟ್ದುಂ ಬರಲಱಯದೆ ತಪ್ಪಂ ಪಿನ್ದುಂ ತೆಱನನಱಯದೆ ಭಂಗಮನಿಕ್ಕಿಯುಂ (ಎಕ. II, ೦೩೩-೦೩೭; 982). [?]

**ಜಿಂಡು** (ನಾ). (?): ತಲೆಗಳ್ ಸೆಂಡುವೊಯ್ದಂತೆ ಪಾರುತ್ತಿರೆ ಮುಂಡಂ ಜಿಂಡು ಮುಂದಾಗುರುಳುತಿರೆ ರಣಕ್ಷೋಣಿಯೊಳ್ (ಎಕ. VIII, ಸೊರಬ. ೦೩೮-೨೭; ಸು. 1145).
[P ಇದು 'ಹಿಂದು' ಎಂಬುದರ ಅಪಲಿಖಿತವಿರಬಹುದು]

**ಜಿಂದಗಾನಿ** (ನಾ). = ಜಿಂದಗಿ: (೬). [←ಪಾರ. ಹಿಂ.ಮರಾ. ಜಿಂದಗಾನೀ]

**ಜಿಂದಗಿ, ಜಿಂದಿಗಿ, ಜಿಂದಿಗೆ** (ನಾ). ೧. ಒಬ್ಬ ವ್ಯಕ್ತಿಗೆ ಸೇರಿದ ದನಕರು ಮೊದಲಾದ ಚರಾಸ್ತಿ ಹಾಗೂ ಜಮೀನು ಮುಂತಾದ ಸ್ಥಿರಾಸ್ತಿ: ಜಪ್ತಮಾಡಿದ ಜಿಂದಗಿಯ ಬೆಲೆ ೧೩೫ ರೂ. ಇದ್ದರೆ ಪಂಚನಾಮೆಯಲ್ಲಿ ಕಾಣಿಸಿದ್ದು ೨೪ ರೂ. (ಕರವೀ. ೯೩); ಮಿಕ್ಕುಳಿದ ತತ್ವಗಳನ್ನು ಮನ್ನಿಸದವರನ್ನು ಕುರಿತು ೧ನೆಯ ತಪ್ಪಿಗೆ ಅವರ ಜಿಂದಗಿಯನ್ನು ಜಪ್ತಮಾಡುವದು (ಇಂಗ್ಲಇ. ೩೩); ಚರ ಜಿಂದಗಿ ವಿಷಯವಾದ ಹಕ್ಕು ಅಥವಾ ಅಂಥಾ ಜಿಂದಗಿಯ ಮೌಲ್ಯವನ್ನು ಕುರಿತ ದಾವೆ (ಗ್ರಾಮಾಕ. ೨೦). ೨. ಬದುಕಂ; ಜೀವನ. **ಜಿಂದಿಗಿ:** ೧. ಸಾಹೇಬನ ಜಿಂದಿಗೆಲ್ಲ ಚೆನ್ನಮ್ಮನ ಪಾಲಿಗೆ (ಲೋಕಗೀ. ೨೨೨); ತಮ್ಮ ಜಂದಿಗಿಯನ್ನೆಲ್ಲ ಸುರಕ್ಷಿತವಾಗಿ ಇಟ್ಟುಕೊಳ್ಳುವುದಕ್ಕೆ ಎಂಥದೇ ಆದರೂ ಸರಿ, ಒಂದು ಬಾಗಿಲುಳ್ಳ ಮನೆಯಾದರೆ ಸಾಕು (ಕಾಳರಾ. ೨೫). **ಜಿಂದಿಗೆ:** ೧. ಇಲ್ಲಿ ಯಾವತ್ತೂ ಜಿಂದಿಗೆಯನ್ನು ನಾನು ಸ್ವತಃ ಸಂಪಾದಿಸಿರುತ್ತೇನೆ (ಶಿಭ್ರಮ. ೩೮); ನನ್ನ ಜಿಂದಿಗೆಯು ಬರಿದಾಗುತ್ತ ಬಂದಿದೆ (ಅಜಿತ. ೦೭); ಸಾಯುವ ಪೂರ್ವದಲ್ಲಿ ಅವನು ಮನೆಯಲ್ಲಿ ತಕ್ಕಮಟ್ಟಿಗೆ ಜಿಂದಿಗೆಮಾಡಿದ್ದನು (ಉತ್ತಗ್ಗ. ೩೨).
[←ಪಾರ. ಹಿಂ. ಮರಾ. ಜಿಂದಗೀ]

**ಜಿಂದಾಬಾದ್** (ನಾ). ಜಯವಾಗಲಿ, ಗೆಲುವಾಗಲಿ ಎಂಬುದನ್ನು ಸೂಚಿಸುವ ಒಂದು ಶಬ್ದ: ಇಂಕ್ವಿಲಾಬ್ ಜಿಂದಾಬಾದ್ (ಅತ್ಮಾರ್ಪ. ೦೨೪). [←ಹಿಂ. ಜಿಂದಾಬಾದ್; ಪಾರ. ಜಿಂದಹ್‌ಬಾದ್]

**ಜಿಂದಿಗಿ** 'ಜಿಂದಗಿ' ನೋ.

**ಜಿಂದಿಗೆ** 'ಜಿಂದಗಿ' ನೋ.

**ಜಿಂಭಳಿ** (ನಾ). (?): ಸಂಭಳವಂ ಕಟ್ಟಿ ಭಯದಾ ಬಟ್ಟೆಯಂ ಹೊಗದೆ: ಪೂಂಭುರಿಗರೆಯನಿಕ್ಕದೇ ಜಿಂಭಳಿ ಆಪತ್ತಿನಲ್ಲೀ ಬಂದರೆ ಸಾಕೇ (ಗುಭಜ. ೯-೫೦). [?]

**ಜಿಂಹ** (ನಾ). ಆಲಸ್ಯ; ಜಡತೆ. 'ಜಿಂಹಭಾವ' ಪರಾ.
[<ಸಂ. ಜಿಹ್ಮ]

**ಜಿಂಹಭಾವ** (ನಾ). ಆಲಸ್ಯ ; ಮಾಂದ್ಯ : ಮಸುಳೆ ನಿಜಾಂಗಂ ಮಂದ ಮಂದಾಯಮಾನಂ ತರುತಿರೆ ಮುಖ ಜೃಂಭಾರಂಭಮಂ ಜಿಂಹಭಾವಂ (ಶಾಂತಿಪು. ೭-೩೮). [ ಜಿಂಹ + ಭಾವ$_2$ ]

**ಜಿಕವಕ್ಕಿ** (ನಾ). (?) : ಕುಂಕುಮ ಜಿಕವಕ್ಕಿನಂಕಿಸು ಕೆಳದಿ ಅಂಕವಾಲೆಯ ಬುಡ ಮೇಲಿನ್ನು ಕೆಳದಿ (ಗುರುಭ. ೩೬-೦೪). [ ? ]

**ಜಿಕಿಜಿಕಿ** (ನಾ). (ಉಕ) ಖರ್ಚುಮಾಡುವಾಗ ಹಿಂದುಂ ಮುಂದುಂ ನೋಡುವುದು; ಜಿಪುಣತನ: ಮಲ್ಲಪ್ಪ ಜಿಕಿಜಿಕಿ ಮಾಡಿದ (ನಿಸರ್ಗ.೧೩೦). [ ←ಮರಾ. ಜಿಗಜಿಗ ]

**ಜಿಕೀರಿ, ಜಿಕೇರಿ, ಜಿಖೀರಿ** (ನಾ). (ಉಕ) ಚೌಕಾಸಿ : ಕೊನೆಗೆ ಜಿಕೀರಿಯಿಂದ ಐದು ರೂಪಾಯಿ ಕೊಟ್ಟರು (ಅನ್ನ. ೪೦), ವಿನಾಕಾರಣ ಜಿಕೀರಿಯ ಪತ್ರವ್ಯವಹಾರ ನಡೆಯಲಿಕ್ಕಿಲ್ಲ (ಮುಂಬವ್ಯಾ. ೮ ಪ್ರಸ್ತಾವನೆ). **ಜಿಕೇರಿ :** ಶೇಷಣ್ಣ ಟಾಂಗಾದವನೊಂದಿಗೆ ಜಿಕೇರಿ ಮಾಡಲಿಲ್ಲ (ವೃನಿ. ೨೬೦); ಆಚಾರ್ಯರು ಜಿಕೇರಿ ಮಾಡಿ ಐದಾಣೆ ಕೊಟ್ಟು ನಡೆದರು (ಸಾವಿಲು. ೮೪). **ಜಿಖೀರಿ :** ಒಂದು ಮಾತು ಹೇಳಪ್ಪಾ, ಜಿಖೀರಿ ಬ್ಯಾಡ (ಅಸ್ತಿಪಂ. ೧೬೦). [ ←ಹಿಂ. ಮರಾ. ಜಿಕೀರ್; ಪಾರ. ಜಿಕರ್ ; ಅರ. ಜಿಕ್ರ್ ]

**ಜಿಕೇರಿ** 'ಜಿಕೀರಿ' ನೋ.

**ಜಿಕ್ಕಿಣಿ** 'ಜಕ್ಕಿಣಿ' ನೋ.

**ಜಿಕ್ಕು** (ನಾ). ಚಿಕ್ಕದು ; ಎಳೆಯದು : ಬಾಳೆಯ ಕಾಯಿ ಎಳೆಯ ಜಿಕ್ಕು; ಈಗ ಹಣ್ಣಾಗುವ ಹಾಗಿಲ್ಲ (ರೂಢಿ). [ <ಚಿಕ್ಕ$_1$ ]

**ಜಿಖೀರಿ** 'ಜಿಕೀರಿ' ನೋ.

**ಜಿಗಟ** (ನಾ). ೧. ಬೆನ್ನು ಹಿಡಿದರೆ ಬಿಡದವನು : ಅವನೊಬ್ಬ ಜಿಗಟ, ಅವನ ಸಹವಾಸ ಕಷ್ಟ (ರೂಢಿ). ೨. ಜಿಪುಣ : ಹಣದ ವಿಚಾರದಲ್ಲಿ ಅವನು ತುಂಬಾ ಜಿಗಟ (ರೂಢಿ). [ ಜಿಗಟು$_2$ + -ಅ$_7$ ]

**ಜಿಗಟು$_1$** 'ಚಿವುಂಟು' ನೋ.

**ಜಿಗಟು$_2$, ಜಿಗುಟು$_2$, ಜಿಗುಡು** (ನಾ). ೧. ಜಿಡ್ಡು ; ಅಂಟು ; ಜಿಗಿ : ನಾಯುಡಗು ನರಕನಿಳಯಂ ಮಾಯೆಯ ಕಣಿ ಬಿಡದ ಜಿಗ[ಪಾಠಾಂ. ಗು]ಟು ಪಾಪದ ಪುಂಜಂ (ಶ್ರಾವಕಾ. ೧೨೨-೮); ಆ ಕೆಸರು ತುಳಿದು ತುಳಿದು ಜಿಗಟು ಆದ ಮೇಲೆ (ಮುಂಬಯಿ. ೦-೯). ೨. ಹಕ್ಕಿಗಳ ಶಿಕಾರಿಯಲ್ಲಿ ಬಳಸುವ ಒಂದು ಬಗೆಯ ಅಂಟು (ಎಸಮ್ಮ. XIII, ೨೨). ೩. ಅಂಟುಸ್ವಭಾವ; ಗಟ್ಟಿಯಾಗಿ ಅಂಟಿಕೊಳ್ಳುವುದು: ಅಂಥ ಜಿಗಟು ರಿಪಿಜಿಡ್ಡು ಹುಡುಗರಿಗೆ ಕೂಡ ಎಷ್ಟು ಪ್ರಯತ್ನಮಾಡಿದರೂ ಅವರ ಕೈಯಿಂದ ಒಂದು ಕಪರ್ದಕವನ್ನೂ ಉಚ್ಚಿಕೊಳ್ಳಲು ಸಾಧ್ಯವಾದ್ದಿಲ್ಲ (ಇಪ್ಪಕ. ೨೯೯). **ಜಿಗುಟು$_2$:** ೧. ಮದುವೆ ಸಂಭ್ರಮದಲ್ಲಿ ಹಸಿ ಜಿಗುಟಾದ ವ್ಯಕ್ತಿಗೆ ಸೋಸಿ ತಂದರು (ಶರಲೀ. ೧೫೨-೪); ತಲೆಯ ಕೂದಲುಗಳಿಗೆ . . . ಜಿಗುಟನ್ನು ತೊಡೆದು ಬಾವಾಜಿಗಳಂತೆ ಜಟಾಧಾರಿಯಾದೆನು (ಇಂದುಮು. ೮೨). ೪. ಕೆಚ್ಚು ; ಧೈರ್ಯ : ಕುಮ್ಮಟದುರ್ಗವನ್ನು ಸಂರಕ್ಷಿಸುವ ಜಿಗುಟುಳ್ಳ ಶೂರರಾರೂ ಇಲ್ಲವೆಂದು ನೇಮಿಖಾನನು ಸ್ವಸ್ಥಚಿತ್ತದಿಂದಿದ್ದನು (ಕವೀರ. ೯೬); ಕೆಲವು ದಿನಗಳ ಹಿಂದೆ ನಿಂತೇ ಹೋಗಲಿರುವ ಪತ್ರಿಕೆ ಮತ್ತೆ ಹೊಸ ಜಿಗುಟಿನಿಂದ ಪ್ರಾರಂಭವಾಗಲಿದೆ (ಅಪನಾ. ೯). **ಜಿಗುಡು :** ೧. ಜಿಡ್ಡೆಂಬ ಜಿಗುಡು ಹಚಿದು ಶೂನ್ಯವೆಂಬ ಸುಳುಹು ಸತ್ತು ಮತ್ತಾವುದೂ ತಲೆದೋಱದೆ (ಮಾಧೂಳ. ೪೬೦-೩೬); ಜಿಡ್ಡು ಜಿಗುಡೆಂಬ ಸಂದೇಹವ ತಾನುಂಡು ತೇಗಿದಂತೆ (ಸರ್ವಪ. ೦೪೦-೬೯೨); ಉಪಮೆ ನಿರುಪಮೆಗಳೆಂಬ ಜಿಗುಡಿನ ಜಿಡ್ಡುಗಳ ಚಿತ್ತರಂಗ ನಿಸ್ಸರಂಗಳೆಂಬ ಭಾವದ ಸೂತಕವಳಿದು (ಆದವ. ೭೭-೦೦೬).

**ಜಿಗಟಾಗು** = ಬಲವಾಗು ; ಹೆಚ್ಚು ಗಟ್ಟಿಯಾಗು : ತಮ್ಮದೇ ಆದ ಸಣ್ಣ ಗುಂಪುಗೂಡಿಕೊಂಡಿರುವಿಕೆಯು ಮಾತ್ರ ಇನ್ನೂ ಜಿಗಟಾಗುತ್ತಿದೆ (ದೂರಸ. ೦೬೯). [←ತೆಲು. ಜಿಗಟ. / ಮರಾ. ಚಿಕಟ್ ]

**ಜಿಗಟುಮಣ್ಣು** (ನಾ). ಜೇಡಿಮಣ್ಣು ; ಅಂಟಂಟಾಗಿರುವ ಮಣ್ಣು : ಪಾತ್ರೆಗಳನ್ನು ಹುಟ್ಟಿಸಲಿಕ್ಕೆ ತಾಮ್ರ, ಹಿತ್ತಾಳಿ, ಕಾಜು, ಜಿಗಟುಮಣ್ಣು ಮುಂತಾದ ಮೂಲದ್ರವ್ಯಗಳು ಬೇಕು (ಮುಂಬಯಿ. ೫-೨೫೦); ಒಂದು ಮೂಲೆಯಲ್ಲಿ ಹದಮಾಡಿದ ಜಿಗಟುಮಣ್ಣು ಇತ್ತು (ಕಪಪು. ೩-೬೦). [ ಜಿಗಟು$_2$ + ಮಣ್ಣು (<ಮಣ್) ]

**ಜಿಗಣ** 'ದಿಗಣ' ನೋ.

**ಜಿಗಣೆ$_1$** 'ಜಿಗಂಟಿ' ನೋ.

**ಜಿಗಣೆ$_2$** (ನಾ). ಕಸೂತಿ ಕೆಲಸದಲ್ಲಿ ಬಳಸುವ ಹೊಳೆಯುವ ವಸ್ತು ; ನಕ್ಕಿ : ಸೀರೆಯ ಜಿಗಣೆ ಕೆಲಸ ಸೊಗಸಾಗಿದೆ (ರೂಢಿ). [ ? ]

**ಜಿಗಳಿ** 'ಜಿಗುಟಿ' ನೋ.

**ಜಿಗಳು** 'ಜಿಗುಳು' ನೋ.

**ಜಿಗಳೆ** 'ಜಿಗುಟಿ' ನೋ.

**ಜಿಗಿ$_1$** 'ಚಿಗಿ$_1$' ನೋ.

**ಜಿಗಿ$_2$** (ನಾ). ೧. ಅಂಟು ; ಸರಿ ; ಜಿಗುಟು : ಸಂಜಯನು ಬರಬರಲು ಕಂಡನು ದೂರದಲಿ ನಿಱಿಗರುಳ ಕಾಲ್ತೊಡಕುಗಳ ಖಂಡದ ಜಿಗಿಯ ಜಾಱುಗಳ (ಕುವ್ಯಾಗ. ೩-೮); ರಕುತದ ಜಿ[ಪಾಠಾಂ. ಚಿ]ಗಿಯ ಜೋರಿನಲಿ ಸೆದುವಾ ಹೋಳೆರಡು ರಕ್ಕಸಿಯಾ (ತೊರರಾ. ೫-೦-೨೩); ಪರಿವ ನೆತ್ತರ ಬಸೆಯ ಜಿಗಿಯ ದಾರುಣಮಯಂ . . . ಸಲೆ ಭಯಂಕರಮಾದುದಂದು ರಣರಂಗಂ (ಜೈಮಿಭಾ. ೨೨-೩೩); ಮಣ್ಣಿನೊಳಗೆ ಜಿಗಿಯ ಪ್ರಮಾಣವು ತಕ್ಕಷ್ಟಕ್ಕಿಂತ ಹೆಚ್ಚಿದ್ದರೆ ಹಸಿ ಬಹಳವಾಗಿ ಬೆಳೆಕೊಳೆಯುವುದು (ಮುಂಬಯಿ. ೬-೨೯೧). ೨. ಹತ್ತಿಗಿಡಕ್ಕೆ ಬರುವ ಒಂದು ಬಗೆಯ ರೋಗ; ಕಾಡಿಗೆ ರೋಗ : (ಶ). 'ಕರಿಜಿಗಿ' ಪರಾ.

**ಜಿಗಿಜಿಗಿ** (ದ್ವಿರುಕ್ತಿ) : ಎಣ್ಣೆಯಿಂದ ಅಲ್ಲಲ್ಲಿ ಜಿಗಿಜಿಗಿಯಾಗಿವೆ (ಗಂಗಾಸಾ. ೭). **ಜಿಗಿಬೀಳು** = ಅಂಟಿಕೊಳ್ಳು ; ಭದ್ರವಾಗಿ ಹಿಡಿದುಕೊಳ್ಳು : ನತದೃಷ್ಟ ನಾಣ್ಯ ಜಿಗಣೆಯಂತೆ ಕಂಡವರ ಕೈಹಿಡಿದು ಜಿಗಿ ಬೀಳುತ್ತದೆ (ಗಾಳಿಪ. ೦೫೪). [ ದೇ.॥ ತೆಲು. ಜಿಗಿ ]

**ಜಿಗಿತ** (ನಾ). ನೆಗೆತ ; ಹಾರುವಿಕೆ : ಅಲ್ಲೇ ಕೂಡಲಿಕ್ಕೆ ಹೇಳಿ ಒಂದೆರಡು ಜಿಗಿತದಲ್ಲಿ ಪೊದೆಯನ್ನು ಹೊಕ್ಕಳು (ಮೇದಿಮ. ೯೪).

**ಜಿಗಿತಕೊಡು** = ಪರಾರಿಯಾಗು ; ಓಡು : ಹೇಣ್ತಿನ್ನ ಕಟಗೊಂಡು ಕೊಪ್ಪಳಕ್ಕ ಜಿಗಿತಾ ಕೊಟ್ಟಂತ (ಸಶೂರ. ೨೬). [ಜಿಗಿ$_1$(<ಚಿಗಿ$_1$) + -ತ$_2$]

**ಜಿಗಿದೋಱು** (ಕ್ರಿ). ಜಿಗುಟಾಗು ; ಅಂಟಂಟಾಗು : ಏಱುಗಳು ಬುದುಬುದಿಸಿ ರಕುತವ ಕಾಱಿ ಕಾಳಿಜ ಖಂಡ ನೆಣ ಜಿಗಿದೋಱಿ ಬೆಳುನೊರೆ ಮಸಗಿ ನಸುಬಿಸಿರಕುತ ಹೊನಲಿಡಲು (ಕುವ್ಯಾದ್ರೋ. ೧೧-೬). [ ಜಿಗಿ$_2$ + ತೋಱು ]

**ಜಿಗಿಬಾಲ** (ನಾ). ಬಾಲದ ಆಧಾರದಿಂದ ಮುಂದಕ್ಕೆ ಹಾರುವ ಒಂದು ಬಗೆಯ ಕೀಟ: ಬೆಳ್ಳಿಹುಳು (Silver-fish), ಜಿಗಿಬಾಲ (Spring-tail) ರೆಕ್ಕೆರಹಿತ ಕೀಟಗಳ ಉದಾಹರಣೆ (ಕೀಟಬಿ. ೦೮). [ ಜಿಗಿ$_1$ (<ಚಿಗಿ$_1$) + ಬಾಲ$_1$ ]

**ಜಿಗಿಬಿಗಿ** (ನಾ). ಒತ್ತೊತ್ತಾಗಿರುವಿಕೆ (?) : ಸೊಗಸಿನಿಂ ಮಘಮಘಿಸಿ ಮರಿದುಂಬಿಗಳನುಯ್ಯಲೆಯಾಡಿಸುತ ಜಿಗಿಬಿಗಿಯೊಳೊಲದಾಡಿದವು ಚರಮಾಂಗದಲಿ ಮಯಸುತೆಯ (ಅನಂರಾ. ೬-೭-೭).

**ಜಿಗಿಬಿಗಿಯಾಗು** = ಒತ್ತೊತ್ತಾಗು ; ಹತ್ತೆಯಾಗು : ಇಕ್ಕಟ್ಟಾದ ಹಂತದ ಮೇಲೆ ಜಿಗಿಬಿಗಿಯಾಗಿ ನಿಂತುಕೊಂಡರು (ಭಾರವೀ. ೮೦). [ ಜಿಗಿ$_2$ + ಬಿಗಿ$_3$ ]

**ಜಿಗಿಲ್, ಚಿಗಿಲ್** (ಕ್ರಿ). ೧. ಜಿಡ್ಡಾಗು ; ಅಂಟಾಗು : "ಜಿಗಿಲ್—ಸ್ನಿಗ್ಧ (ಜಿಡ್ಡಾಗು) ಸಂಕ್ಲೇಶಯೋಃ" (ಶಮಧಾ). ೨. ಅಂಟಿಕೊಳ್ಳು ; ತಗುಲಿ

ಕೊಳ್ಳು; ಹತ್ತಿಕೊಳ್ಳು : ನೆತ್ತರ ಕೆಸಱೊಳ್ ಗಾಲಿಗಳೆತ್ತಂ ತಳರದೆ ಜಿಗಿಲ್ತು ನಿಲೆ (ಪಂಪಭಾ. ೧೦-೯೦); ಮದಕರಿ[ಕ್ಕೆ]ತೀಂಟೆಗೊಲ್ದೊರಸೆ ಭೂರುಹ ಕಂಧರದೊಳ್ ಜಿಗಿಲ್ತು ಪತ್ತಿದ ಮದ ಸೌರಭಕ್ಕೆ ಸುಱಿಗೊಳ್ವಳಿ ಮಾಲೆಯನೆಯ್ದೆ ಕಂಡು (ಕುಸುಮಾ. ೧೪-೧೩೦); ಮರದ ನಿಡುಗೋಡೊಳಱಿಯದೆಱಗಿ ಮಱಿವೆರಸಿ ಕುಳ್ಳಿರ್ದ ಪಸಿಯ ಪಗಿನದೊಳ್ ಕಾಲ್ ಜಿಗಿಲ್ತು ತಳ್ಪಂಕಂಗೊಳ್ವ ಸಮಯದೊಳ್ (ರಾಜಶೇ.೫-೫೫ ವ). ೩. ಸ್ನೇಹಪೂರ್ಣವಾಗು; ಆರ್ದ್ರವಾಗು: ನೆನೆವಂದಾನಂದದಿಂ ತಣ್ಣನೆ ತಣಿದು ಜಿಗಿಲ್ಕುಂ ಮನಂ (ಪುಷ್ಪಪು. ೧-೨ ಪರಿ): ತೊಡೆ ತೊಡೆಯೊಳ್ ಜಿಗಿಲ್ತಡರೆ (ಕಾವ್ಯಸಾ. ೬೫೭) ೪. ಕಷ್ಟಕ್ಕೊಳಗಾಗು; ತೊಂದರೆಪಡು : ಮೇಲಿನ 'ಶಮಧಾ' ಪ್ರಯೋಗವನ್ನು ನೋಡಿ. ಚಿಗಿಲ್: ೨. "ಚಿ[ಪಾಠಾಂ. ಜಿ]ಗಿಲ್ತುದೆಂದು ಸಱಿಗೊಂಡುದು" (ಕಶಸಾ. ೯-೧೮); ಶಿವನ ನಿಷ್ಕ್ರಿಯಾತ್ಮಕ ನಿರುಪಾಧಿಕ ನಿರಾವರಣ ಸ್ವಾನುಭವ ಸಂವೇದ್ಯ ಸ್ವಯಂಪ್ರಕಾಶಮಂ ಸುತ್ತಿಮುತ್ತಿ ಪತ್ತಿ ಚಿ[ಪಾಠಾಂ. ಜಿ]ಗಿಲ್ತು ಬಿಡದಿರೆ (ಗಿರಿಕ. ೮-೪೫ ವ). 'ಜಿಗಿ₂' ಪರಾ.

ಜಿಗಿಲ್ತಿರು=ಅಂಟಿಕೊಂಡಿರು: ಚಿತ್ತದೊಳೀಶಂ ನೆಱೆ ಪತ್ತಿ ಜಿಗಿಲ್ತಿಪ್ಪಂ ಮನದೊಳು (ತಿರುನಾ. ದೀ. ೩೨೭-೮).

**ಜಿಗಿಲು** (ನಾ). ೧. ಅಂಟಾದುದು; ಜಿಗಿಜಿಗಿಯಾದುದಂ : ಹಾಸುವಲೆ ಕಟ್ಟುವಲೆ . . . ದಡಿವಲೆಗಳಿಂದ ಜಿಗಿಲಿನ ಕೋಲ್ಗಳಿಂ (ಚತುಪು. ೨-೧-೦೮). ೨. ಸ್ನೇಹ; ಪ್ರೀತಿ : ಚೊಕ್ಕಳಮಪ್ಪಂತುಸಿರ್ದಂ ಜಿಗಿಲಿಂ ಲಾಲಿಸಿ ಸದ್ಬುಧರು (ಪ್ರಭುಪು. ೧-೫೦). [ <ಜಿಗಿಲ್₁ ]

**ಜಿಗೀಷು** (ಗು). ೧. ಜಯವನ್ನು ಹೊಂದಲು ಅಥವಾ ಪಡೆಯಲು ಬಯಸುವ. (ನಾ). ೨. ಜಯದ ಅಪೇಕ್ಷೆಯುಳ್ಳವನು; ಜಯಿಸಲು ಅಪೇಕ್ಷೆಯುಳ್ಳವನು : ನವ್ಯಾ ಬೃಹದ್ಧ್ವಜಿನೀಸಂಕುಳಮಾ ಜಿಗೀಷುವ ನಿದೇಂ ಸಂಗ್ರಾಮದೊಳ್ ಗೆಲ್ಗುವೇ (ಆದಿಪು. ೧೩-೫೭); ಓಳಿಯೊಳಿರ್ದ ಮಹೀಭೃನ್ಮೌಳಿಯೊಳೆಸೆದಾ ನತಾರಿ ಸೊಗಯಿಸುಗುಂ ತಾರಾಳಿಯೊಳೆಸೆವ ಹಿಮದ್ಯುತಿಮಾಳೆವೊಲಿನಿತಿಲ್ಲದಂ ಜಿಗೀಷುವೆ ನೃಪರೊಳ್ (ಶಾಂತಿಪು. ೨-೪೪): ಜಿಗೀಷುಗಳಾದ ವೈರಿಗಳ ಮುಂದೆ ನಿನ್ನ ಪ್ರತಾಪವನ್ನು ತೋರಿಸು (ಭೀಷ್ಮಜ. ೨೫). [ ಸಂ. ]

**ಜಿಗೀಷೆ** (ನಾ). ೧. ಜಯವನ್ನು ಹೊಂದುವ ಅಥವಾ ಗೆಲ್ಲುವ ಅಪೇಕ್ಷೆ. ೨. ಜೀವನದ ಉದ್ಯೋಗ,-ಹವ್ಯಾಸ,-ವೃತ್ತಿ. [ ಸಂ. ಜಿಗೀಷಾ ]

**ಜಿಗುಟು₁** 'ಚಿವುಟು' ನೋ.

**ಜಿಗುಟು₂** 'ಜಿಗಟು₂' ನೋ.

**ಜಿಗುಟುತನ** (ನಾ). ೧. ಅಂಟುವಿಕೆ; ಅಂಟಿಕೊಳ್ಳುವ ಗುಣ; ಹಿಡಿದುದನ್ನು ಬಿಡದ ಗುಣ: ಈ ಜಿಗುಟುತನವು(Plasticity)ಅವುಗಳ ಅಣುರಚನೆಯನ್ನು ಹೊಂದಿದೆ (ಬಾಲಪ್ರ. III, ೦೭ ೬೬). ೨. ಜಿಪುಣತನ; ಕೃಪಣತನ: ಅವನದು ವಿಪರೀತ ಜಿಗುಟುತನ (ರೂಢಿ). [ಜಿಗುಟು₂(<ಜಿಗಟು₂)+-ತನ]

**ಜಿಗುಡು** 'ಜಿಗಟು₂' ನೋ.

**ಜಿಗುಣೆ** 'ಜಿಗಂಱಿ' ನೋ.

**ಜಿಗುಪ್ಸೆ** (ನಾ). ೧. ಅಸಹ್ಯತೆ : ಆ ತಪೋನಿಧಿ ಕುಷ್ಠರೋಗ ಪರೀತ ಜಿಗುಪ್ಸೆಯಲಿ ಹುದುಗಿರಲೀ ತಳೋದರಿ ಭಜಿಸುತಿರ್ದಳು ಭಾವ ಶುದ್ಧಿಯಲಿ (ಕುಮಾ.ಆ. ೦೬-೪೪) : ಸುಮತಿಗೆ ಇತ್ತಿತ್ತ ಮದುವೆಯೆಂದರೇ ಒಂದು ಬಗೆ ಜಿಗುಪ್ಸೆ ಹುಟ್ಟಹತ್ತಿದೆ (ಅಬೋಲೀ. ೬೩) ; ಜೀವನದಲ್ಲಿ ಅವರಿಗೆ ಜಿಗುಪ್ಸೆಯುಂಟಾಗಿದೆ (ರೂಢಿ). ೨. [ಕಾವ್ಯವಿಾ] ಬೀಭತ್ಸರಸದ ಸ್ಥಾಯಿಭಾವ : ಜಿಗುಪ್ಸೆ . . . ಶೃಂಗಾರಾದಿ ನವರಸಂಗಳಿಗೆ ಬೀಜಭೂತಂಗಳಾದ ಸ್ಥಾಯಿಭಾವಂಗಳು (ವಿವೇಕ. ೨೨೭).

[ <ಸಂ. ಜುಗುಪ್ಸಾ ]

**ಜಿಗುಪ್ಸೆಪಡು** (ಕ್ರಿ). ಅಸಹ್ಯಪಡು : ಮೊದಲಿನಿಂದಲೂ ಸರಕಾರೀ ನೌಕರೀ ಎಂದರೆ ಜಿಗುಪ್ಸೆಪಡುವವ (ಅಪನಾ. ೯). [ ಜಿಗುಪ್ಸೆ + ಪಡು₁ ]

**ಜಿಗುರ್** (ಕ್ರಿ). ಅಂಟಿಕೊಳ್ಳು; ಸೇರಿಕೊಳ್ಳು : ಅಪ್ಪುಗೆ ಬೆಂಗೆ ಮೂಡಲಂಟು ಸಡಿಲದೊತ್ತಿ ಪತ್ತಿದನಿದಕ್ಕೆ ಮನಂಗೊಳೆ ತಾಂ ಜಿಗುರ್ತುರ್ದ ರಂಜಿಸಿದುದು ಭೋಗಿರಾಜಿ (ಉದ್ಭಟ. ೪-೩೮). 'ಜಿಗಿಲ್' ಪರಾ. [ ? ]

**ಜಿಗುರು** (ನಾ). ಬೇಡರು ಹಕ್ಕಿಗಳನ್ನು ಹಿಡಿಯಲು ಮರದ ಕೊಂಬೆಗಳ ಮೇಲೆ ಬಳಿಯುವ ಅಂಟು : ಬಿಡುವಲೆಯು ಕಡುವಲೆಯು ಕಣ್ಣವಲೆ ಕರ್ತರಿಯ ತೊಡರುವಲೆ ಬೀಸುವಲೆ ಸೊಕ್ಕು ಜಿಗುರಿಕ್ಕುಗಳ ತುಡುಕಿರುವ ಗಾಳ ಮತ್ತೀಣ ಗಿಡುಗಾದಿಗಳ ಪರಿಪರಿಯ ಸಾಧನಗಳ ಸಡಗರಿಸಿ (ವೆಂಕಾರಾ. ೩-೬-೨೩).

[ <ಜಿಗುರ್. / ತೆಲು. ಜಿಗುರು, ಜೀಗುರು ]

**ಜಿಗುಳಿಗಂಟು** 'ಜಿಗುಳಂಗಂಟು' ನೋ.

**ಜಿಗುಳು, ಜಿಗಳು** (ನಾ). ಸಣ್ಣ ಕಾಲುವೆ : (+). **ಜಿಗಳು** : (+). [ ? ]

**ಜಿಗುಳುಗಂಟು, ಜಿಗುಳಿಗಂಟು** (ನಾ). ಜಾರುಗಂಟು; ಸರಿಗಂಟು; ಜೀರ್ಗುಣಿಕೆ : ಒಂದು ತಾರಗಂಟು ಒಂದು ಜಿಗುಳುಗಂಟು ಒಂದು ಕುಱುಹುಗಂಟು ಮುೞಱ ಮುದ್ರೆಯ ವಿಾಱ ಹಾಱಿತ್ತು ಹಕ್ಕಿ (ಮನುಗುಂ. ೨೫೯-೫೦) : ಮುಂದೊಬ್ಬ ರಾವುತ ತನ್ನಂಗಕಿಕ್ಕಿದ ಹೊಂದೊಡಿಗೆಯ ತೆಗೆದಿತ್ತಾ ಚಿಂದಿಯ ತೆಗೆದು ಜಿಗುಳೊ[ಳು] ಗಂಟನಿಕ್ಕಿದ (ಭರಜ. ೫೦-೭೧). **ಜಿಗುಳಿಗಂಟು** : ಬಿಗಿದು ಕಟ್ಟಿದ ಬಾಕು ಜಿಗುಳಿಗಂಟನ ಕುಲಾಯಿ (ಜಿನರಾ. ೫-೧೩೦).

[ <ಜಗುಳ್ + ಗಂಟು ]

**ಜಿಗುಳೆ** 'ಜಿಗುಱಿ' ನೋ.

**ಜಿಗುಱು** 'ಸಿವುಱು₁' ನೋ.

**ಜಿಗುಱಿ, ಜಿಗಣೆ₁, ಜಿಗಳಿ, ಜಿಗಳೆ, ಜಿಗುಣೆ, ಜಿಗುಳೆ** (ನಾ). ೧. ಜಲವಾಸಿಯಾದ ರಕ್ತ ಹೀರುವ ಒಂದು ಬಗೆಯ ಹುಳು : ಜಿಗುಱಿಯಂತೆ ನೆತ್ತರನೆ ಪೀರ್ವ ಡಾಕಿನಿಯರಿಂ (ಕಾವ್ಯಸಾ. ೫೨೯ ಶೂದ್ರಕ); ಪರಬಲದ ನೆತ್ತರ ಕಡಲೊಳಗಣ ಜಿಗುಱಿ ಬಳೆವ ತೆಱದೊಳೆ ಬಳೆದಂ (ಪಂಪಭಾ.೧-೪೭); ಜಿಗುಱಿಯ ಮಾಟ್ಕೆಯಂ ತಳೆದ ಕೆಯ್ (ಲೋಕೋಪ. ೧೧-೭೨) : ಜಿಗುಱಿಯಂತೆ ನೆತ್ತರಂ ಕುಡಿವರ್ (ಧರ್ಮಾಮೃ. ೩-೭೩); ಕನ್ನೆತ್ತರನೆ ಜಿಗುಱಿ ಪೀರ್ವಂದದಿಂ ಪೀರ್ದು (ಅರ್ಥನೀ. ೭-೭೦). ೨. ನೇಗಿಲಗುಳವನ್ನು ಭದ್ರವಾಗಿ ಹಿಡಿಯುವ ಒಂದು ಸಾಧನ,-ಕೊಂಡಿ : "ವಶಿಯೆನಲು ಜಿಗುಱಿದೋಳಂ ಕೂಂಟೆಹರಿಕೆ ಕೋಟಿಶಮುಕ್ಕು" (ಮಂಗರಾ. ೧೦೯-೧). **ಜಿಗಣೆ₁**: ೧. "ದುನಾರ್ಮಾ, ದೀರ್ಘಕೋಶಿಕಾ-೨ ಆನೆಗಳ ರಕ್ತವನ್ನು ಹೀರಲುಳ್ಳದೊಡ್ಡ ಜಿಗಣೆ ಪೆಸರು"(ಸಿದ್ಧಾಂತಿ. ೬೫);ಜಿಗಣೆ ಹಾವು ಚೇಳು ಕಚ್ಚಿದರೆ ಪುತ್ರಲಾಭ (ಸೌಗಂಧಿ. ೫೯೦-೧೭); ಎಲ್ಲರೂ ಜಿಗಣೆಗಳೆ ನನ್ನ ನೆತ್ತರಿಗೆ (ಕೋಗಿಲೆ. ೦೫-೪) ; ಜಿಗಣೇ ಉಪದ್ರಾ ನೋಡಲೋ ಜಟೆಯ ಹಾವಳಿ ನೋಡಲೋ?(ಗಾದೆ). ೨: ಜಿಗಣೆಗಾಗುವಷ್ಟು ಕಬ್ಬಿಣ ಇಲ್ಲ(ರೂಢಿ). **ಜಿಗಳಿ**: ೨. ನಾಲ್ಕು ಕಾಸು ಹೆಚ್ಚಿಗೆ ಬಿದ್ದರೂ ಮೇಡಕ್ಕಿಂತ ಜಿಗಳಿಯೇ ಉತ್ತಮ (ರೂಢಿ). **ಜಿಗಳೆ** : ೧. ನೆತ್ತರವ ಹೀರುವೀ ಹೇಡಿ ಜಿಗಳೆಯ ಕುಲವ ಕೊಲ್ಲಬೇಡ (ಅರರೋ. ೬೧) ; ಜಗಳವಿಲ್ಲದೆ ಜಾಹೊತ್ತಿದ್ದರೆ ಜಿಗಳೆ ಬಂದು ಕಚ್ಚಿದ ಹಾಗೆ ಆಗುತ್ತದೆ (ಗಾದೆ). **ಜಿಗುಣೆ** : ೧. ನಿಮ್ಮ ಹೊಗಳದವನನಾಲಿಗೆ ಭವಿಯ ನಾಲಿಗೆ ಬಚ್ಚಲ ತಂಪಿನ ಜೌಗಿನಲ್ಲಿ ಹುಟ್ಟಿದ ಜಿಗುಣೆಯಯ್ಯಾ (ಗಣಭಾ. ೬೫-೧). **ಜಿಗುಳೆ**: ೧. ಳಕಾರಕ್ಕೆ ಗಕಾರಂ—ಜಳೂಕಾ—ಜಿಗುಳೆ (ಶಮದ. ೨೭೬ ಪ್ರಯೋ);ರಕುತದ ಜಿಗುಳೆ ನೀ ನಿನ್ನೊಡಲ ನಿಗುಚುವೆ (ಕುವ್ಯಾಕ. ೨೦-೪) ; ಜಿಗುಳೆ ಕೆಂಜಿಗ ಕಟ್ಟಱುಹೆಯೋತಿಯು ಗೊದ್ದ ನೆಗೆವ ಹಾವರಣೆ ಕೆಂಜೇಳು (ಕಂನವಿ. ೦೮-೮೦).

**ಜಿಗ್ಗು** (ನಾ). ಮರದಿಂದ ಉದುರಿ ಬೀಳುವ ಸಣ್ಣ ಸಣ್ಣ ಒಣಕಡ್ಡಿ ; ಪುಳ್ಳೆ ; ಪುರಲೆ : ಬೆಂಕಿಯನ್ನು ಹೊತ್ತಿಸಿ ಅದಕ್ಕೆ ಜಿಗ್ಗು, ಒಣಗಿದ ಸೌದೆ–ಇವನ್ನು ಹಾಕಿ ಕ್ರಮೇಣ ಅಗ್ನಿಯನ್ನು ಬಳಕೆಮಾಡಿಕೊಂಡಿದ್ದಾನೆ (ಶಿಲ್ಪನಾ. ೧೩) ; ಬಾವಾಜಿ ಒಲೆಯ ಬೆಂಕಿಗೆ ಒಣಗಿದ ಜಿಗ್ಗನ್ನು ಮುರಿದು ಹಾಕಿದ್ದರಿಂದ ಭುಗಿಲ್ ಎಂದ ಕೆಂಪು ಜ್ವಾಲೆ (ಮೂರುದಾ. ೩೯೪); ಒಂದು ಸಣ್ಣ ಕೊಳ್ಳಿಯನ್ನೂದಿ, ಜಿಗ್ಗು ಕಟ್ಟಿ, ಬೆಂಕಿ ಮಾಡಿದಳು (ಮಲಮ. ೫೮೮). [ ? ]

**ಜಿಘತ್ಸು** (ನಾ). ಹಸಿದವನು ; ಕ್ಷುದ್ಬಾಧೆಯುಳ್ಳವನು : "ಕ್ಷುದ್ವಾನ್, ಬುಭುಕ್ಷಿತಃ, ಶ್ರಾಂತಃ, ಜಿಘತ್ಸುಃ, ಕ್ಷುಧಿತಃ – ಈ ೫ ಹಸಿದಾತಂ" (ಹಲಾಯು. ೫೯–೨೦೫). [ ಸಂ. ]

**ಜಿಘತ್ಸೆ** (ನಾ). ಹಸಿವು; ಕ್ಷುಧೆ : "ಅಶನಾಯಾ . . . ಜಿಘತ್ಸಾ, ಕ್ಷುತ್, ಕ್ಷುಧಾ–ಈ ೬ ಹಸಿವು" (ಹಲಾಯು. ೫೯–೨೦೬). [ ಸಂ. ಜಿಘತ್ಸಾ ]

**ಜಿಘಾಂಸು** (ಗು). ೧. ಕೊಲ್ಲಲು ಬಯಸುವ. ೨. ಮತ್ಸರವಿಡುವ ; ಹಗೆಕಾರನಾದ ; ದ್ವೇಷ ಸಾಧಿಸುವ. (ನಾ). ೩. ಶತ್ರು ; ಹಗೆ ; ದ್ವೇಷಿ: "ಜಿಘಾಂಸುಃ, ಪರಿಪಂಥೀ, ಪರಃ . . . ದ್ವಿಷತ್–ಈ ೨೪ ಹಗೆ" (ಹಲಾಯು. ೭೫–೩೦೦). [ ಸಂ. ]

**ಜಿಜಿಯಾ** (ನಾ). ಹಿಂದೆ ಕೆಲವು ಮುಸಲ್ಮಾನ ದೊರೆಗಳು ಮುಸಲ್ಮಾನ ರಲ್ಲದವರ ಮೇಲೆ ವಿಧಿಸುತ್ತಿದ್ದ ತಲೆಗಂದಾಯ : "ಜಿಜಿಯಾ" ಎಂಬ ಹಿಂದೂಗಳ ಮೇಲೆ ಹಾಕಿದ್ದ ತೆರಿಗೆಯನ್ನೆತ್ತುವುದರಲ್ಲಿ ಅನೇಕವೇಳೆ ಅವನು ವಿಶೇಷ ಪರಾಕ್ರಮವನ್ನು ತೋರಿದನು (ಕೋಹಿನೂ. ೧೧). [ ←ಹಿಂ. ಜಿಜಿಯಾ ; ಮರಾ. ಝಿಜಿಯ ; ಅರ. ಜಿಯಹ್ ]

**ಜಿಜ್ಞಾಸು** (ನಾ). ತಿಳಿದುಕೊಳ್ಳುವ ಅಪೇಕ್ಷೆಯುಳ್ಳವನು; ತಿಳಿವಿಗಾಗಿ ಹಾತೊರೆಯುವವನು : ಅಂಧಶ್ರದ್ಧೆ ಮತ್ತು ಸ್ವಾರ್ಥಪರತೆಗಳು ಜಿಜ್ಞಾಸುಗಳ ಕಟುವಾದ ಅವಹೇಳನಕ್ಕೆ ಪಾತ್ರವಾದುವು (ಮುಕ್ತಾರ. ೦೪ ಪೀಠಿಕೆ) ; ಧರ್ಮ ಎಂದರೇನು ಎಂದು ಕಾಲಕಾಲಕ್ಕೆ ಸಾಧಕರು, ಜಿಜ್ಞಾಸುಗಳು ಕೇಳುತ್ತ ಬಂದಿದ್ದಾರೆ (ಧರ್ಮಸಾ. ೧) ; ಜಿಜ್ಞಾಸುಗಳು ಕುತೂಹಲಪೂರ್ಣವಾದ ಬುದ್ಧಿಯಿಂದ ಅದರ ಕಡೆಗೆ ನೋಡುವುದು ಸ್ವಾಭಾವಿಕ (ಸಾಹಿಸ. ೧೧೩) [ ಸಂ. ]

**ಜಿಜ್ಞಾಸೆ** (ನಾ). ೧. ತಿಳಿಯುವ ಬಯಕೆ ; ಅರಿತುಕೊಳ್ಳುವ ಇಚ್ಛೆ : ಜಿಜ್ಞಾಸೆಯೆಂದರೆ ಅರಿಯುಬೇಕೆಂಬ ಇಚ್ಛೆ (ಬೃಹ್ಮಭಾ. ೧೪). ೨. ಸಂಶೋಧನೆ; ಪರಿಶೀಲನೆ: ಈಸು ಮೆಗ್ಗಲರಾರಸಿವ ಜಿಜ್ಞಾಸೆ ಬೇಡಾ (ಕುವ್ಯಾಆ. ೬–೧೭); ಪ್ರಾಚೀನಗ್ರಂಥಗಳಲ್ಲಿ ಬಗೆಬಗೆಯ ಜಿಜ್ಞಾಸೆ ನಡೆದಿದೆ (ದ್ರಾವಿವಿ. ೩೩); ಮಾನವನು ಜೀವನದಲ್ಲಿ ಮಾಡಬೇಕಾದ ಕರ್ತವ್ಯ ಹಾಗೂ ಹೊಂದಬೇಕಾದ ಗುರಿಯ ವಿಚಾರವಾಗಿ ಸಾಕಷ್ಟು ಜಿಜ್ಞಾಸೆ ಸಮಾಧಾನ ಗಳೂ ಬಂದಿವೆ (ಭಾರದ. ೧೧೩); "ನಾನು" ಎಂಬುದರ ಶುದ್ಧಸ್ವರೂಪದ ಜಿಜ್ಞಾಸೆಯು "ನನ್ನ" ಎಂಬುದರ ಜಿಜ್ಞಾಸೆಗಿಂತ ಅತ್ಯಂತ ಕಷ್ಟತಮ ವಾಯಿತು (ಜೀವಾತ್ಮ. ೩೯). [ ಸಂ. ಜಿಜ್ಞಾಸಾ ]

**ಜಿಜ್ಞಾಸ್ಯ** (ನಾ). ಜಿಜ್ಞಾಸೆಗೆ ತಕ್ಕುದು ; ತಿಳಿಯಲು ಅರ್ಹವಾದುದು : ಜಿಜ್ಞಾಸ್ಯವೆಂದು ಪರಿಕಿಸತೊಡಗೆ ವಿಜ್ಞಾನಿ ಸ್ವಜ್ಞಪ್ತಿಶೋಧಿ ಮುನಿ (ಮುಂಕುಕ. ೦೦೭). [ ಸಂ. ]

**ಜಿಟಿಜಿಟಿ** (ನಾ). ಒಂದು ಅನುಕರಣ ಶಬ್ದ : ಮನೆಯನ್ನು ಸಮೀಪಿಸುವ ಸಮಯಕ್ಕೆ ಜಿಟಿಜಿಟಿ ಮಳೆ ಆರಂಭವಾಯಿತು (ಅಲ್ಪವಿ. ೩೩).

**ಜಿಟ್ಟೆ₁** 'ಚಿಟ್ಟೆ₆' ನೋ.

**ಜಿಟ್ಟೆ₂** (ನಾ). ಚರ್ಮದಲ್ಲಿ ಉಂಟಾಗುವ ಕೀವುತುಂಬಿದ ಬೊಕ್ಕೆ: (ಕ). 'ಕಣ್ಣೆಟ್ಟೆ' ಪರಾ. [ ? ]

**ಜಿಟ್ಟೆ** 'ಚಿಟ್ಟೆ₆' ನೋ.

**ಜಿಡಿ₁** 'ಜಡಿ₅' ನೋ.

**ಜಿಡಿ₂** (ನಾ). ಒಂದು ಬಗೆಯ ಸಸ್ಯ: ಗೋಡಂಬಿ, ಗೇರುಪಪ್ಪು, ಮುಂದಿರಿ ಪಪ್ಪು, ಜಿಡಿ (ಮೃಶಿಗಿ. ೬–೦೦೫). [ ? ]

**ಜಿಡಿಮಳೆ** 'ಜಡಿವಳೆ' ನೋ.

**ಜಿಡುಕು** (ನಾ). ಕಿರಿಕಿರಿ ; ಹಿಂಸೆ ; ಕಿರುಕುಳ : ಅವರ ಮನಸ್ಸು ತುಂಬಾ ಜಿಡುಕಿಗೆ ಬಲಿಯಾಯಿತು (ಮರಮ. ೧೩೭) ; ಸಂಸಾರದ ಸಮಸ್ಯೆ ಅನೇಕ ಮಾನಸಿಕ ಜಿಡುಕುಗಳಿಗೆ ಕಾರಣವಾಗುತ್ತಿದೆ (ಒಂಟದ. ೩೩೩) ; ಇಂಥ ವಾದದ ಜಾಡ್ಯ ಇಲ್ಲವೇ ಜಿಡುಕು ಭೌತಿಕ ತತ್ತ್ವಜ್ಞಾನದ ಜಾಡಾಗಲಾರದು (ಮಾವಾದ. ೪೭). [ ? ]

**ಜಿಡ್ಡಳಿಗೆ** 'ಜಿಡ್ಡುಳಿಗೆ' ನೋ.

**ಜಿಡ್ಡಿ** (ನಾ). ಗಂಟುಹಾಕಿದ ಎರಡು ತೆಂಗಿನಕಾಯಿಗಳ ಜೊತೆ: ಗೌಡರ ಮನೆಯ ಅಟ್ಟದಲ್ಲಿ ಸಾಕಷ್ಟು ಜಿಡ್ಡಿ ಸೇರಿತ್ತು (ರೂಢಿ). [ ? ]

**ಜಿಡ್ಡು₁**, ಜಡ್ಡು₃, ಸಿಂಡು (ನಾ). ೧. ಎಣ್ಣೆ, ತುಪ್ಪ ಮುಂತಾದುವುಗಳ ಜಿಗಿ,–ಜಿಗುಟು: ಘೃತಂ ಪೊರೆಯೆ ಕೈ ಜಿಡ್ಡಹುದು (ಚೀರಮ. ೬–೦೩). ೨. ದುರ್ವಾಸನೆ ; ಕಮಟುವಾಸನೆ ; ಗಬ್ಬುನಾತ : ದೊಡ್ಡನಾಗಿ ಬೆಳೆದ ಜಿಡ್ಡಹೋತುಗಳಿಗೆ ಗಡ್ಡದ ವೃದ್ಧ ವೈಶಿಕರ ಮೆಚ್ಚ ಮಹಾದೇವ (ಸರ್ವವ. ೧೬೩–೭೭೫) : ನಿಮ್ಮರಸನ ಜಾಣ್ಮೆ ತೊಳೆದು ಲೋಕದ ಜಿಡ್ಡ ಕಮ್ಮನೆ ಮಾಡುತಿದ್ದಪುದು (ಭರತೆ. ೨೦–೨೪). ೩. (ಆಲಂ) ಸೊಕ್ಕು ; ಕೊಬ್ಬು ; ಅಹಂಕಾರ : ಬಿಟ್ಟಡೆ ಸಮಯವಿಲ್ಲ ಜಿಡ್ಡ ಹಿಡಿದಡೆ ಜ್ಞಾನವಿಲ್ಲ (ಅಂಬಿವ. ೩೯೩–೫೮); ಉಭಯ ಶುದ್ಧವಾದಲ್ಲಿ ಆಚಾರವೆ ಪ್ರಾಣವಾದ ರಾಮೇಶ್ವರ ಲಿಂಗದಲ್ಲಿ ಜಿಡ್ಡು ಹಱಿಯಿತ್ತು (ಏಲೇಶ್. ೬೬); ಹೆಡ್ಡ ಹೆಂಗಳೊಳಂತು ದೊರೆ ಸೋತುನುಡಿದರೆ ಜಿಡ್ಡುಬ್ಬಿ ಮಂಡೆಗೇಱುವರು (ಭರತೆ. ೧೦–೦೫); ಇನ್ನೊಮ್ಮೆ ನನಗೆ ಹಾಗೆ ಅಂದು ನೋಡು ನಿನ್ನ ತಲೆಯೊಳಗಿನ ಜಿಡ್ಡನ್ನೆ ಬಿಡಿಸುತ್ತೇನೆ (ರಂಗರೋ. ೩೦). **ಜಿಡ್ಡು₃:** ೨. ಗೊಡ್ಡುಸಾರಿಗೆ ಜಿಡ್ಡುತುಪ್ಪ (ಗಾದೆ). **ಸಿಂಡು :** ೨. "ಸಿಂಡು–ದುರ್ಗಂಧ" (ಗುವಿಮೋ. ೧೭೦). ೪. "ಹುರುಪು ; ಹಗರು ; (ಮು.) ತಲೆಯಹೊಟ್ಟು, ಸಿಬ್ಬು, ಸಿಂಡು" (Scurf. ಇಂಕನ).

**ಜಿಡ್ಡುಹತ್ತು** = ಬೇಸರ ಉಂಟಾಗು : ನನಗೆ ಬಹಳ ಜಿಡ್ಡುಹತ್ತಿ ಹೋಗಿದೆ (ಕೈಲಾಕ. ೭೨). **ಜಿಡ್ಡುಹಿಡಿ** = ಜಿಡ್ಡುಗಟ್ಟು.

[ ದೇ.॥ ತುಳು. ಜಿಡ್ಡ್, ಜಿಡ್ಡ ; ಕೊಡ. ಸಿಂಡೀ ; ತೆಲು. ಜಿಡ್ಡು ]

**ಜಿಡ್ಡುಗಂಬ** (ನಾ). ಎಣ್ಣೆ ಅಥವಾ ಜಿಡ್ಡು ಲೇಪಿಸಿದ ಕಂಬ ; ಎಣ್ಣೆ ಗಂಬ : (ವ್ಯಾಯಾಮದ ಆಟಗಳಲ್ಲಿ . . . ಇಟ್ಟಿರುವ) ಜಿಡ್ಡು ಬಳಿದಿರುವ ಕಂಬ ; ಜಿಡ್ಡುಗಂಬ (Greasy Pole. ಇಂಕನ).

[ ಜಿಡ್ಡು + ಕಂಬ₁ (<ಕಂಭ) ]

**ಜಿಡ್ಡುಗಟ್ಟು** (ಕ್ರಿ). ಜಿಗುಟಾಗು ; ಕೊಳೆಯಿಂದ ಅಂಟಂಟಾಗು : ಮೈಮೇಲೆಲ್ಲ ಜಿಡ್ಡುಗಟ್ಟಿದ ಬಟ್ಟೆ–ಬರೆಗಳು (ಜನಜೀ. ೦೦೦).

[ ಜಿಡ್ಡು + ಕಟ್ಟು₁ ]

**ಜಿಡ್ಡುಮುಳ್ಳು** (ನಾ). ಒಂದು ಬಗೆಯ ಮುಳ್ಳಿನ ಗಿಡ : ಆಸಿನಗೊಟ್ಟೆ ಮುಳ್ಳು, ಗಜಗೊಟ್ಟೆಮುಳ್ಳು, ಜಿಡ್ಡುಮುಳ್ಳು (ಮೃಶಿಗಿ. ೭೯–೦೬೨೬).

[ ಜಿಡ್ಡು ? + ಮುಳ್ಳು (<ಮುಳ್₂) ]

**ಜಿಡ್ಡುಳಿಗೆ, ಜಿಡ್ಡಳಿಗೆ, ಜಿಡ್ಡುಟಿಗೆ** (ನಾ). ಒಂದು ಪ್ರದೇಶದ ಹೆಸರು: ಜಿಡ್ಡುಳಿಗೆ ೭೦ ರ ಬಳಿಯ ರಾಜಧಾನಿ ಬಳ್ಳಿಗಾವೆಯ ಪುಲ್ಲೆಯ ಬಯ ಲೊಳ್ (ಎಕ. VII, ಶಿಕಾರಿ. ೦೨೦–೦೫ : 1048). **ಜಿಡ್ಡಳಿಗೆ :** ಜಿಡ್ಡಳಿಗೆ ಯೆಪ್ಪತ್ತಱ ಅರಸಿಮಯ್ಯಂ (ಎಕ. VII, ಶಿಕಾರಿ. ೮೩–೦೩ ; 1068). △**ಜಿಡ್ಡುಟಿಗೆ :** ಜಿಡ್ಡುಟಿಗೆಯು ಕಂಪಣದ ಬಱಿಯ ಬಾಡಂ (ಎಕ. VII, ಶಿಕಾರಿ. ೯೬–೩೦ ; 1179). [ ? ]

△**ಜಿಡ್ಡುಟಿಗೆ** 'ಜಿಡ್ಡುಳಿಗೆ' ನೋ.

**ಜಿಡ್ಡೂರ್** (ನಾ). ಒಂದು ಪ್ರದೇಶದ ಹೆಸರು: ಜಿಡ್ಡೂರಾಳ್ಗೆಟ್ಟತ್ತ...ಬಿ ನಾಟ್ಟಾವುಣ್ಣಂ × × × ಕಲಿವಿಟ್ಟನೊಳೆ ವಿರೋಧವಾಗಿ (ಎಕ್. VIII, ಸೊರಬ. ೮೮-೫: 912); ಶ್ರೀ ಬಿಟ್ಟಿಗಂ ಮೌಳಿಕೋಸಿಗರಾಣ್ಮಂ ನೆಗರ್ಚ್ಚಿನಣುವಂ ಜಿಡ್ಡೂರಾಳ್ಗೆಯೆ ಟ್ಟಶ್ರೆಕ್ಕರ್ಕಂ ಬಳ್ಳಿ ಗಾಮೆಯ ಬಾಟಿಗೆ ಸಹಿತ ನಾಟ್ಟಾವುಣ್ಣುಗೆಯ್ಕೆ (ಮೈಆರಿ. ೧೯೩೯, ೬೮-೭: 964). [ಜಿಡ್ಡು ? + ಊರ್]

**ಜಿಡ್ಡೆಣ್ಣೆ** (ನಾ). ಕಚ್ಚಾಎಣ್ಣೆ; ಶೋಧಿಸದ ಎಣ್ಣೆ: ತೀರ ದಪ್ಪವಾದ ಜಿಡ್ಡೆಣ್ಣೆ(Crude oil)ಯನ್ನು ಉಪಯೋಗಿಸುವ ತೈಲಎಂಜಿನುಗಳೂ ಚಿಮಣಿಎಣ್ಣೆಯನ್ನು ಉಪಯೋಗಿಸುವ ಎಂಜಿನುಗಳೂ ಸಿದ್ಧವಾದುವು (ಬಾಲಪ್ರ. I, ೩೫೦). [ಜಿಡ್ಡು + ಎಣ್ಣೆ]

**ಜಿಣುಗು** 'ಜಿನುಗ್ಗು' ನೋ.

**ಜಿಣುಗುಗೆರೆ** (ನಾ). ಸಪೂರಾದ ಗೆರೆ; ತೆಳುವಾದ ಗೆರೆ: ಐದೈದು ಜಿಣುಗುಗೆರೆಗಳು ಅಂತರದಿಂದ ಒಂದೊಂದು ಹೆಚ್ಚಿಗೆ ಉದ್ದಾದ ಗೆರೆ ಯುಂಟು (ಮುಂಬಯಿ. ೫-೦೦೭). [ಜಿಣುಗು ($<$ಜಿನುಗು$_3$) + ಗೆರೆ ($<$ಗೆಱೆ)]

**ಜಿಣುಗುನಸ್ಯ** (ನಾ). ನಯವಾದ ನಸ್ಯ: ನಸ್ಯಗಾರರು . . . ಕರೆವುಡಿ ಯೆಂಬ ಉರುಟುನಸ್ಯವನ್ನೂ ಜಿಣುಗುನಸ್ಯವನ್ನೂ ಮಾಡುವರು (ಕಥಾಗ. ೪೫೩). [ಜಿಣುಗು ($<$ಜಿನುಗು$_3$) + ನಸ್ಯ]

**ಜಿತ** (ನಾ). ೧. ಜಯಿಸಲ್ಪಟ್ಟುದು; ಗೆಲ್ಲಲ್ಪಟ್ಟುದು; ಕೈವಶ ಮಾಡಿ ಕೊಂಡುದು. 'ಜಿತಕರ್ಮ' ಪರಾ. ೨. ಸಂಪಾದಿಸಲ್ಪಟ್ಟುದು; ಪಡೆದುದು; ಗಳಿಸಿದುದು. ೩. ಸ್ಥಿರವಾದುದು; ಅಚಲವಾದುದು; ದೃಢವಾದುದು: ಈ ಕಲಿಕಲುಷಂಗಳೆಲ್ಲಮುಮುಡಂಗಿ ಕೃತಂ ಜಿತಮಾಗಿ ರಂಜಿಕುಂ (ಚಿಕವಿ. ೪-೧೫). [ಸಂ.]

**ಜಿತಕರ್ಮ** (ನಾ). ಕರ್ಮವನ್ನು ಗೆದ್ದವನು; ಕರ್ಮವಿಮುಕ್ತ: ಜಿತಕರ್ಮಂ ಸಮುಪಾತ್ತ ತತ್ತ್ವಚಯಮುಮರ್ಮಂ ಶುದ್ಧರತ್ನತ್ರಯಾಧೃತಧರ್ಮಂ (ಚಂದ್ರಪ್ರ. ೧-೮). [ಜಿತ + ಕರ್ಮ]

**ಜಿತಕಾಮ** (ನಾ). ೧. ಮನ್ಮಥನನ್ನು ಗೆದ್ದವನು: ಸತತ ಜಪಕಾಮರಿಗೆ ಜಾಗ್ರ ತಪ್ಪದ ರತಿಯು ಜಿತಕಾಮರೆನಿಸುವವರ್ಗೆ ಸತಿಯರತಿಶಯ ರೂಪು ನೋಡಿ ಯೆಳಸದ ರತಿಯು (ನವಮೋ. ೧೩-೫೦). ೨. ಯತಿ; ಮುನಿ; ತಪಸ್ವಿ. ೩. ಬುದ್ಧ. ೪. ಅರ್ಹಂತ. ೫. ಶಿವ; ಶಂಕರ: ಜಿತಕಾಮನ ಲಂಪಿನೊಳಗಸುತೆಯೊಳ್ಪೆರೆಯಲ್ಕೆ ಬಲ್ಲನೆನೆ ಪಾವನಮುಂ ಹುತವಹನ ಮುಖದೊಳಿಡುವನೆ (ಸಮುಪ. ೮-೬೮); ಜಿತಕಾಮ . . . ಪಂಪಾಧಿಪತಿ ವಿರೂಪಾಕ್ಷ ಕರುಣಿಸುವುದೆಮಗೆ (ಹಚಕಾ. ೧-೩); "ಯತಿಬುದ್ಧಂ ಶಂಕರಾರ್ಹಂ . . . ಜಿತಕಾಮಾಹ್ವಯಂ" (ನಾನಾರ. ೪೫). [ಜಿತ+ಕಾಮ]

**ಜಿತಕಾಮೆ** (ನಾ). ಪತಿವ್ರತೆ; ಸಾಧ್ವಿ; ಸುಶೀಲೆ: "ವರವಧು ಜಿತಕಾಮಾಹ್ವಯಂ" (ನಾನಾರ. ೪೫). [ಸಂ. ಜಿತಕಾಮಾ (ಜಿತ + ಕಾಮ+–)]

**ಜಿತಕಾಶಿ** (ನಾ). ವಿಜಯದಿಂದ ಶೋಭಿಸುವವನು; ಜಯಹೊಂದಿದವನು: "ಜಿತಕಾಶೀ, ಜಿತಾಹವಃ—ಈ ೨ ಗೆಲ್ದವಂ" (ಹಲಾಯು.೬೯-೩೨೫). [ಸಂ. ಜಿತಕಾಶಿನ್]

**ಜಿತತ್ರಿತಾಪ** (ನಾ). ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕವೆಂಬ ಮೂರು ತಾಪಗಳನ್ನು ಗೆದ್ದವನು: ಅತಿಭಕ್ತಿವಶೀಕೃತಶೈಲಚಾಪ ನಾತ್ತ್ರದಯ ಜಿತತ್ರಿತಾಪ ಬಸವೇಶ್ವರನೀಗೆಮಗೀಶಭಕ್ತಿಯಂ (ರಾಜಶೇ. ೧-೧೧). [ಜಿತ + ತ್ರಿತಾಪ]

**ಜಿತಪಂಚಬಾಣ** (ನಾ). ಕಾಮನನ್ನು ಗೆದ್ದವನು; ಶಿವ: ಶ್ರೀ ಬಾಣಾ ಸುರೇಂದ್ರನತಿತಪದಿಂದ ಜಿತಪಂಚಬಾಣನಂ ವಲಿಸಿ (ನವಮೋ. ೨೦-೫). [ಜಿತ + ಪಂಚಬಾಣ]

**ಜಿತಪಡಿಸು** (ಕ್ರಿ). ಸ್ಥಿರಗೊಳಿಸು; ನೆಲೆಯೂರಿ ನಿಲ್ಲುವಂತೆ ಮಾಡು: (ಕ). [ಜಿತಪಡು + –ಇಸು$_3$]

**ಜಿತಪಡು** (ಕ್ರಿ). ಸ್ಥಿರವಾಗು; ದೃಢವಾಗು: (ಕ). [ಜಿತ + ಪಡು$_1$]

**ಜಿತಬುದ್ಧಿ** (ನಾ). ಮನೋನಿಗ್ರಹವುಳ್ಳವನು; ದೃಢಚಿತ್ತ. [ಜಿತ + ಬುದ್ಧಿ]

**ಜಿತಮದ** (ನಾ). ಅಹಂಕಾರವನ್ನು ಗೆದ್ದವನು: ಅಪರಾಜಿತಂ ಜಿತಮದಂ ಕೊಟ್ಟಟ್ಟಿದಂ ಗಾಯಿಕಾನವರತ್ನಂಗಳನಿತ್ತ ನೋಟ್ಪುದು (ಶಾಂತಿಪು. ೩-೫೨); ಜಿತಮದ ಬಸವೇಶಂಗಂ ನುತನಲ್ಲಮನೆಯ್ದೆ ವೇಳ್ದನ ನಿಮಿಷನಿರವಂ (ಹಮ್ಮಿರ. ೧-೩೨). [ಜಿತ + ಮದ$_1$]

**ಜಿತಮನಸ್ಕ** (ನಾ). ಮನಸ್ಸನ್ನು ಜಯಿಸಿದವನು; ಮನೋನಿಗ್ರಹಿ: ಎಲ್ಲರುಂ ಜಿತಮನಸ್ಕರೆ ದೈವ ವಿಧಿವಮಾಯೆ ಚೆಲ್ವುರೂಪಿಂ ಬಂದು ಕಣ್ಣುಕಕ್ಕುವನಕ (ಮುಂಕುಕ. ೨೭೭). [ಸಂ.]

**ಜಿತಮಾಯ** (ನಾ). ಮಾಯೆಯನ್ನು ಗೆದ್ದವನು: ನುತಕಾಯ ಜಿತಮಾಯ . . . ಗಿರಿಜೇಶ (ಹಚಕಾ. ೧-೫); ಜಿತಮಾಯಂ ನಿರಪಾಯಂ . . . ಅಲ್ಲಮಪ್ರಭುವರಂ (ವೃಷವಿ. ೧-೦೦). [ಸಂ. (ಜಿತ + ಮಾಯಾ + –)]

**ಜಿತಮಾರ** (ನಾ). (ರೂಪಿನಲ್ಲಿ) ಮನ್ಮಥನನ್ನು ಸೋಲಿಸಿದವನು; ಬಹಳ ಸುಂದರ: ಇಱಿದೆಯಲಾ ಎನ್ನನು ಸುಕುಮಾರಾ ಕೊಱಿದೆಯಲಾ ಕೊರಳೆನು ಜಿತ[ಪಾಠಾಂ. ಸುಕು]ಮಾರಾ (ಹಚಕಾ. ೧೨-೩೦ ರಗಳೆ); ಸಂತಂ ಬಳೆಯುತಿರ್ದರಾ ಜಿತಮಾರರ್ ಕುಮಾರರ್ (ರಾಮಾಶ್ವ. ೧೫೦-೨೩). [ಜಿತ + ಮಾರ]

**ಜಿತಶತ್ರು** (ನಾ). ಹಗೆಗಳನ್ನು ಗೆದ್ದವನು; ಶೂರ; ಕಲಿ: ಜಿತಶತ್ರು ವೃದ್ಧರಾಜ್ಯೋನ್ನತಿಯಿಂದಜಿತೇಂದ್ರನಾದಿರಾಜ್ಯೋನ್ನತಿಯಿಂ ಸುತನೆಸೆದಂ (ಅಜಿಪು. ೬-೩೩); ಮತ್ತಿತ್ತಲ್ ಜಿತಶತ್ರುವೆಂಬ ಪೆಸರಾಯ್ತನ್ವರ್ಥಮೆಂಬನ್ನಂ (ಪಂರಾಮಾ. ೧೧-೭೩). [ಜಿತ + ಶತ್ರು]

**ಜಿತಶ್ರಮ** (ನಾ). ಶ್ರಮವನ್ನು ನಿಗ್ರಹಿಸುವವನು; ಧೈರ್ಯಶಾಲಿ: ಜಿತಶ್ರಮನರಿಕಟಕಭೇದಕನ ನಾನಾಯುಧವಿಶಾರದನ ಭರಿತಧೈರ್ಯನ . . . ಸೇನಾಪತಿಯ ಮಾಡುವುದು (ಕುವ್ಯಾಉ. ೩-೮೮). [ಜಿತ+ಶ್ರಮ]

**ಜಿತಸಂಗ್ರಾಮ** (ನಾ). ಯುದ್ಧವನ್ನು ಗೆಲ್ಲುವವನು; ರಣಧೀರ; ಸುಭಟ: ಶಿವನ ನೊಸಲುದದಲಿ ಮೆಱೆವವನಿವನು ಜಿತಸಂಗ್ರಾಮ ನಶ್ವತ್ಥಾಮ ನೋಡೆಂದ (ಕುವ್ಯಾವಿ. ೬-೫೫). [ಜಿತ + ಸಂಗ್ರಾಮ]

**ಜಿತಸಂಸಾರಿ** (ನಾ). ಸಂಸಾರವನ್ನು ಗೆದ್ದವನು; ಹುಟ್ಟುಸಾವುಗಳನ್ನು ಜಯಿಸಿದವನು: ಚಿತ್ತಂ ನಟ್ಟು ನಟ್ಟಿಯನು ಸಾರಲಿಟ್ಟಾಡುವನು ಜಿತಸಂಸಾರಿ (ಬಸವು. ೪೩-೭). [ಸಂ. ಜಿತಸಂಸಾರಿನ್]

**ಜಿತಾಂತಕ** (ನಾ). ಯಮನನ್ನು ಗೆದ್ದವನು; ಶಿವ: ಜಿತಾಂತಕನೊಳ್ ಮಿಗೆ ಮುಷ್ಟಿಯುದ್ಧದಿಂ ಕಾದುವ ಕಜ್ಜಮುಂ ಗಡ ನಿರಂಗನೊಳಿಂತಿದು ಚಿತ್ರಮಲ್ಲವೇ (ಶಬಶಂ. ೪-೦೫೧). [ಜಿತ + ಅಂತಕ]

**ಜಿತಾಕ್ಷ** (ನಾ). ೧. ಇಂದ್ರಿಯಂಗಳನ್ನು ಗೆದ್ದವನು; ಜಿತೇಂದ್ರಿಯ: "ಜಿತಾಕ್ಷ-ಇಂದ್ರಿಯಗಳನ್ನು ಗೆದ್ದವನು, ಯತಿ" (ಗಂಗಾಮು. ೧೯೦). ೨. ಅಕ್ಷಕುಮಾರನೆಂಬ ರಾಕ್ಷಸನನ್ನು ಗೆದ್ದವನು; ಹನುಮಂ. [ಜಿತ+ಅಕ್ಷ]

**ಜಿತಾಕ್ಷರ** (ನಾ). ಮೋಕ್ಷವನ್ನು ಪಡೆದವನು; ಋಷಿ: ಬೆಲೆವೆಂಡಿರುಗಳ ನೆಲೆವೊಲೆಗಳಂಗಜನ ಪೆರ್ಮಲೆಗಳ್ಪಿಟರ ತಲೆಯ ಬೆಲೆಗಳ್ ಜಿತಾಕ್ಷರರ ಗೊಲೆಗಳ್ (ಉದ್ಭದೇ. ೪-೨೦). [ಜಿತ + ಅಕ್ಷರ]

**ಜಿತಾತ್ಮ** (ನಾ). ಮನಸ್ಸನ್ನು ಗೆದ್ದವನು; ಆತ್ಮಸಂಯಮಿ: ಉಭಯ ಕುಲವಿಶುದ್ಧರ್ ನ್ಯಾಯಮಂತರ್ ಜಿತಾತ್ಮರ್ ಪ್ರಭುಗಳಧಿಕಪುಣ್ಯರ್ (ಶಾಂತಿಪು. ೩-೭೭); ಸಮಸ್ತಾಧಿಕಾರಿ ಜಿತಾತ್ಮಂ . . . ವಿದ್ವಜ್ಜನಾಳಂ ಕೃತಂ (ಸುಕುಮಾ. ೨-೩೯). [ಜಿತ + ಆತ್ಮ]

**ಜಿತಾಹವ** (ನಾ). = ಜಿತಸಂಗ್ರಾಮಂ : "ಜಿತಕಾಶೀ, ಜಿತಾಹವ — ಈ ೨ ಗೆಲ್ದವಂ" (ಹಲಾಯು. ೬೯-೩೨೫). [ ಜಿತ + ಆಹವ ]

**ಜಿತೇಂದ್ರಿಯ** (ನಾ).=ಜಿತಾಕ್ಷ ೧: ಜಿತೇಂದ್ರಿಯರೆಂದು ಯೋಗಪಂಕರುಹ ದಿನೇಶರೆಂದು . . . ಕೊರ್ತ್ತು (ಸೌಇಇ. XX, ೪೯-೫೭ : 1076); ಎಳಸು ವಬಲೆಯರ ನಡುವಿರ್ದತಿಜಿತೇಂದ್ರಿಯಾಮಳನೆನಿಪುದರಿಲ್ಲದಕಟ ನಿರ್ಜರ ಭೂಮಿಯೊಳಗಿರ್ದು ನಾಂ ಜಿತೇಂದ್ರಿಯನೆಂಬುದೇನರಿದು (ಹಹಕಾ.೬-೪೯): ಜಿತೇಂದ್ರಿಯಂ ತಾನಂತಸೆಗುವೋಲೆಸೆಗಿದತ್ತು ವಜ್ರವಿಧಿ (ಶ್ರೀರಾಮಾ. ೦೬೦-೫೦೭). [ ಜಿತ + ಇಂದ್ರಿಯ ]

**ಜಿತೇಂದ್ರಿಯತ್ವ** (ನಾ). ಇಂದ್ರಿಯನಿಗ್ರಹ; ಆತ್ಮಸಂಯಮಂ : ಎಲ್ಲಿತ್ತೊ ಧೈರ್ಯಮು ಪ ಶ ಮ ಮೆ ಲ್ಲಿ ತ್ತೊ ಜಿತೇಂದ್ರಿಯತ್ವಗುಣಮೆಲ್ಲಿತ್ತೋ (ಕಾದಂಪೂ. ೭೭೫). [ ಸಂ. ]

**ಜಿತ್ಯ** (ನಾ). ೧. ನೇಗಿಲಿನ ಗುಳ. ೨. ಕುಂಟೆ ; ಹಲುಂಬೆ. [ ಸಂ. ]

**ಜಿತ್ವರ** (ನಾ). ಜಯಂಶಾಲಿ ; ವಿಜಯಿ: "ಜೇತ, ಜಿಷ್ಣುಃ, ಜಿತ್ವರಃ ೩ ಗೆಲ್ಲುವ ಸ್ವಭಾವವುಳ್ಳವನು. ಜಯದಲ್ಲಿ ಒಳ್ಳೇ ಅದೃಷ್ಟಶಾಲಿಯೆಂದು ಭಾವ" (ಸಿದ್ಧಾಂತಿ. ೨೨೩); ಜಿತ್ವರಸಾತ್ರವೇದಿ ಗಮಕಿತ್ವಮುಮಂ [ಪರವಾ]ದಿಭೇದಿ ವಾದಿತ್ವಮುಮಂ . . . ನೃಪಾಲಸಭೆ ಮೆಚ್ಚೆ (ಪಾರ್ಶ್ವಪು. ೧-೦೭). [ ಸಂ. ]

**ಜಿದ್ದು** (ನಾ). ೧. ಬದ್ಧಮಾತ್ಸರ್ಯ ; ದುರಾಗ್ರಹ : ಮೊದ್ದು ಸಂಗಕೆ ಸಲ್ಲ ಸದ್ದು ಧ್ಯಾನಕೆ ಸಲ್ಲ ಜಿದ್ದು ಬೋಧಕನಿಗೆ ಸಲ್ಲ (ಇಂಚಾಪ. ೦೯೦-೪೩). ೨. ಪೈಪೋಟಿ ; ಮೇಲಾಟ; ಸ್ಪರ್ಧೆ: ನಮ್ಮ ಜಿದ್ದಿನೊಳಗೆ . . . ಕರಾರ ಇದ್ದಿದ್ದಿಲ್ಲ (ರಕ್ತ್ರಧ್ವ. ೯); ಮರಣದೊಡನೆ ಜಿದ್ದೆಸಗಿ ಅವರನ್ನು ನೋಡಿಯೇ ತೀರುವೆನೆಂದು ಪಟೇಲನು ಒಂದು ವರ್ಷದ ಮೇಲೆ ತನ್ನ ಅಸ್ಥಿ ಪಂಜರಕ್ಕೆ ಅಂಟಿಕೊಂಡಿದ್ದ (ಸಮಜೀ. ೯೭೭). ೩. ಪಣ ; ಪಂಥ : ಧರ್ಮರಾಜನು . . . ದ್ರೌಪದಿಯನ್ನು ಜಿದ್ದಿಗೆ ಹಚ್ಚಿರುವನು (ಮಭಾರ.೯೭).

**ಜಿದ್ದಾಜಿದ್ದಿ** = ತೀವ್ರವಾದ ಮೇಲಾಟ,-ಪೈಪೋಟಿ : ಜಿದಾಜಿದ್ದಿ ಕುಸ್ತಿಯನ್ನು ನೋಡಲು ಬಹಳ ಜನ ನೆರೆದಿದ್ದರು (ರೂಢಿ). **ಜಿದ್ದಿಗೆ ಬೀಳು** = ಪಣಕಟ್ಟು ; ಹಟಕ್ಕೆ ಬೀಳು: ನಾನು ಸಹ . . . ಜಿದ್ದಿಗೆಬಿದ್ದು, ಸ್ನಾನ, ಆಹ್ನಿಕ, ವ್ರತ, ಉಪವಾಸ ಮಾಡಿ ಗಂಗಾತೀರದಲ್ಲಿ ಸದ್ಗತಿ ಲಾಭ ಹೊಂದಬಹುದಾಗಿತ್ತು (ಇಪ್ಪಕ. ೪೭೩); ಜಿದ್ದಿಗೆ ಬಿದ್ದು ಕಾಫೀ ಕುಡಿಯು ವುದನ್ನು ತ್ಯಜಿಸಿದ್ದಾನೆ (ಚಿಂದುಟ. ೫೫). **ಜಿದ್ದುಮಾಡು**=ದ್ವೇಷಸಾಧಿಸು : ಇತಃಪರ ಸ್ನೇಹವೇ ಹೊರತು ಜಿದ್ದುಮಾಡುವುದಿಲ್ಲ (ಚಿತ್ರಪಾ. ೯೭) ; ವಂದಕ್ಕೊಂದು ಜಿದ್ದುಮಾಡುವಂಥಾದ್ದು ವಿಹಿತವಲ್ಲ (ರಾಜೇಂದ್ರ. ೦೨೮).

[←ಅರ. ಹಿಂ. ಮರಾ. ಜಿದ್ ]

**ಜಿದ್ದುಕಟ್ಟು** (ಕ್ರಿ). ಪಣತೊಡು; ಪಂಥ ಕಟ್ಟು; ಬಾಜಿಕಟ್ಟು: ರಣಹಲಗೆ ಸದ್ದಿನಲಿ ಜಿದ್ದುಕಟ್ಟಿದ್ದಿರುವ ಜಡಿಮಳೆಯು ರುದ್ರಾವತಾರ (ನಲಮು. ೦೪-೮) ; ಇದಕ್ಕೆ ಬೇಕಾದಷ್ಟು ಜಿದ್ದುಕಟ್ಟುತ್ತೇನೆ (ಮೋಹಿನೀ. ೦೧೩) : ವಾದದ ಭರದಲ್ಲಿ ಕೊರಳಿಗೊಂದು ಜಿದ್ದುಕಟ್ಟಿಕೊಂಡೆ (ದಾಸಹು. ೯೪).

[ ಜಿದ್ದು + ಕಟ್ಟು$_1$ ]

**ಜಿದ್ದುತೀರಿಸು** (ಕ್ರಿ). ಹಗೆ ತೀರಿಸು ; ದ್ವೇಷ ಸಾಧಿಸು : ಪ್ರತಿ ಯೊಬ್ಬರೂ ತನ್ನ ಮೇಲೆ ಜಿದ್ದುತೀರಿಸಿಕೊಳ್ಳಲು ಹವಣಿಸುತ್ತಿದ್ದಂತೆ ಅವನಿಗೆ ತೋರಿತು (ಪುನರು. ೦೨೯). [ ಜಿದ್ದು + ತೀರಿಸು ]

**ಜಿನ$_1$** 'ಚಿನ್ನ$_2$' ನೋ.

**ಜಿನ$_2$** (ಗು). ೧. ವಿಜಯಿಯಾದ; ಜಯಂಶಾಲಿಯಾದ. ೨. ಸ್ಥಿರವಾದ; ಅಚಲವಾದ.(ನಾ). ೩. ಬೌದ್ಧ ಅಥವಾ ಜೈನ ಗುರು. ೪. ಅರ್ಹಂತ: ಜಿನನ ಪೂಜಿಸಿ ಬತ್ತಲೆಯಿಪ್ಪುದ ಕಂಡೆ (ಬಸವ. ೫೭೮); ಉದ್ಭವಿಸಿದಂ ತ್ರೈಲೋಕ್ಯನಾಥಂ ಜಿನಂ (ಪುಷ್ಪಪು. ೧೦-೨): ಕಿಡಿಸಲ್ಪಡುಗೆಮ್ಮ ದುಃಖ ಸಂತತಿ ಜಿನನಿಂ (ಶಮದ. ೨೫೦ ಪ್ರಯೋ.); ದೇಗುಲಂ ಬಸತಿಯೆ ಜಿನನೆ ತಾಂ ಮೇಗೆ ದೈವವು (ಬಸಪು. ೪೯-೦೨). ೫. ಬುದ್ಧ : "ಜಿನಃ ಷಡಭಿಜ್ಞಃ . . . ಮುನೀಂದ್ರಃ – ೧೮ ಬುದ್ಧದೇವರ ಹೆಸರುಗಳು" (ಸಿದ್ಧಾಂತಿ.೧೫). ೬. ಇಂದ್ರಿಯಗಳನ್ನು ಗೆದ್ದವನು; ಮನೋನಿಗ್ರಹಿ: "ಅರುಹಂ ಬುದ್ಧ ಧೀರಂ ಜಿನಾಖ್ಯಂ" (ನಾನಾರ. ೬೩). ೭. ವಿಷ್ಣು. ೮. [ಗಣಿತ] ಇಪ್ಪತ್ತು ನಾಲ್ಕು ಎಂಬ ಸಂಖ್ಯೆಯ ಸಂಕೇತ : "ಜಿನವುದಿಪ್ಪತ್ನಾಲ್ಕು" (ಮಂಗರಾ. ೦೦೪-೯). [ ಸಂ. ]

**ಜಿನಂಗಿ** 'ಜೀನಂಗಿ' ನೋ.

**ಜಿನಕ** (ನಾ). ಒಂದು ಬಗೆಯ ಔಷಧಿದ್ರವ್ಯ : ಜಿನಕ, ಕರ್ಪೂರ, ಯಷ್ಟಿ ಮಧುಕ . . . ಇವುಗಳನ್ನು ಅಕ್ಕಿಗಚ್ಚಿನಿಂದರೆದು ಮೊಲೆಹಾಲಿನಿಂದ ನಸ್ಯಂಗೆಯಲು ದಾಹಜ್ವರ ಮಾಣುವುದು (ಸಕವೈ. ೯೭). [ ? ]

**ಜಿನಗಹಳೆ** 'ಚಿನ್ನಂಗಾಳೆ' ನೋ.

**ಜಿನಗಾಳೆ** 'ಚಿನ್ನಂಗಾಳೆ' ನೋ.

**ಜಿನಗೃಹ** (ನಾ). ಜೈನದೇವಾಲಯಂ ; ಬಸದಿ : "ಜಿನಗೃಹದಲ್ಲಿಯುಂ ವಸತಿಯೆಂಬುದು" (ಹಲಾಯು. ೧೩೪-೨೦) ; ಜಿನಗೃಹಮಂ ಮನೋ ಮುದದೆ ಮಾಡದನಾಪ್ತ ಗೃಹಂಗಳಂ ಮಹಾಜನಮನೆ ನೋಡಿ ಮಾಡಿಸುವವಂ (ಸಮಪ. ೪-೧೨೭). [ ಜಿನ$_2$ + ಗೃಹ ]

**ಜಿನಗೇಹ** (ನಾ). = ಜಿನಗೃಹ: ಜಿನಗೇಹಾಳಿಯೊಳುನ್ನತ ಮುನಿವರರೊಳ್ ಭವ್ಯತತಿಯೊಳ್ . . . ಜಿನಮತಮಂ ಕೇಳ್ದ ಸೌಖ್ಯಮಂ ಬಯಸುವವಂ (ಧರ್ಮಾಮೃ. ೬-೨೦೬) ; ಜಿನಪೂಜೋತ್ಸವಕ್ಕೆ, ಜಿನಕಥಾಲಾಪಗಳಿಗೆ, ಜಿನ ಮುನಿಗಳಿಗೆ ಜಿನಗೇಹಗಳಿಗೆ ನೀನು ವೆಚ್ಚಮಾಡುವುದಕ್ಕೆ ಲೆಕ್ಕ ಉಂಟೆ (ಶಕಾರ. ೨೨೨). [ ಜಿನ$_2$ + ಗೇಹ ]

**ಜಿನಚರಿತ** (ನಾ). ತೀರ್ಥಂಕರನ ಚರಿತ್ರೆ: ಕೇವಣಿಸು ವಾಕ್ಸುವರ್ಣ ದೊಳೊಲವಿಂ ಸಂದ ಜಿನಚರಿತರತ್ನಮಂ (ಚಂದ್ರಪು. ೧-೬೦).

[ ಜಿನ$_2$ + ಚರಿತ ]

**ಜಿನಚರಿಯೆ** (ನಾ). ಜೈನಯಂತಿಗಳ ಆಚಾರ,-ವ್ಯವಹಾರ : ಜಿನರ ನುಡಿ ಯುಕ್ತಿಯುಕ್ತಂ ಜಿನರ ನೆಗಟ್ಟಿಗಳುಮಂತೆ ದೋಷವಿವಿಕ್ತಂ ಜಿನಚರಿಯೆ ಪೆಣ್ಗೆ ಕೂಡದು ವಿನಯೋಲ್ಲಂಘನದೆ ಕೆಲರದಂ ಪ್ರಕಟಿಸುವರ್ (ಪಸಾರ ೧೦೦೦-೧). [ ಜಿನ$_2$ + ಚರಿಯೆ ]

**ಜಿನಚೈತ್ಯ** (ನಾ). ಜೈನ ದೇವಾಲಯ; ಬಸದಿ: ಏನೊಪ್ಪಿರ್ಪುವೊ ಪೋಲು ದಿವ್ಯ ಜಿನಚೈತ್ಯಂಗಳ್ ಬಹಿತ್ರಂಗಳಂ (ಪುಷ್ಪಪು. ೨-೭೪).

[ ಜಿನ$_2$ + ಚೈತ್ಯ ]

**ಜಿನತಾಪಸ** (ನಾ). ಜೈನ ಮುನಿ,-ತಪಸ್ವಿ : ಜಿನತಾಪಸರದನೀಕ್ಷಿಸಿ ಮನ ದೊಲವಿಂ ಕರಿಗೆ ಕಟ್ಟುಮಾಡಿದರಾಗಳ್ (ಹಾಲಾಸ್ಯ. ೨-೬-೨೨).

[ ಜಿನ$_2$ + ತಾಪಸ ]

**ಜಿನದಾಸಿ** (ನಾ). ಒಬ್ಬಾತನ ಹೆಸರು (?) : ಭಂಗಿಯಿನ್ನೊಳಗುಳ್ಳಂಗನೆ ಯರ ಪುತ್ರುಂ ಗಂಗೆಯಂಗೆರಡಲ್ಲಾಲ್ದೀ ಜಿನದಾಸಿ ತುಂಗ ಪರಾಕ್ರಮಂ . . . ವಾಮದೇವಂ (ಸೌಇಇ. XX, ೨೪-೨೪ ; 1034). [ ? ]

**ಜಿನದೀಕ್ಷಿತ** (ನಾ). ಜಿನದೀಕ್ಷೆಯನ್ನು ಹೊಂದಿದವನು ; ಜೈನಸಂನ್ಯಾಸಿ: ಜಿನದೀಕ್ಷಿತನಂತ್ಯದೊಳಮರನಾಗಿ ಮುನ್ನಿನ ನಿದಾನದಿಂದಶ್ವಗ್ರೀವನಭಶ್ಚರ ನಲ್ತೆ (ಶಾಂತಿಪು. ೭-೭೪). [ ಜಿನ$_2$ + ದೀಕ್ಷಿತ ]

**ಜಿನದೀಕ್ಷೆ** (ನಾ). ಜೈನಸಂನ್ಯಾಸ ದೀಕ್ಷೆ: ದುರ್ಧರ ಜಿನದೀಕ್ಷೆಯನಘಕುಳಕರ ಚಂಡಂ ಮೂಱು ಜಾವದಾಗಳ್ ಕೊಂಡಂ (ಆದಿಪು. ೯-೭೯) ; ಆ ಮಹಾತ್ಮಂ ಸುಷೇಣರೆಂಬ ಮುನಿಮುಖ್ಯರಲ್ಲಿ ಜಿನದೀಕ್ಷೆಯಂ ತಾಳ್ದಿದಂ (ಸುಕುಮಾ. ೧೦-೩೦) ; ಜಿನದೀಕ್ಷೆಯನ್ನು ಸ್ವೀಕರಿಸಿ, ಮಾಘ ಬಹುಳ ಚತುರ್ದಶಿಯ ದಿವಸ ಮೋಕ್ಷವನ್ನೈದಿದನು (ಭಾರದ. ೧೭೩). [ ಜಿನ$_2$ + ದೀಕ್ಷೆ ]

**ಜಿನದೇವಣ** (ನಾ). ಒಬ್ಬಾತನ ಹೆಸರು: ಜಿನದೇವಣನಜಿತಸೇನ ಮುನಿಪರ ಗುಡ್ಡಂ (ಎಕ. II, ೧೨೦-೨; 995). [ಜಿನ್ನ$_2$ + ದೇವ+ಅಣ$_0$ (<ಅಣ್ಣ$_1$)]

**ಜಿನಧರ್ಮ** (ನಾ). ಜೈನಧರ್ಮ: ನಿಮಗಮೆಮಗಮಾವ್ನಾಯದಿಂ ಬಂದು ದಿಂತೀ ಜಿನಧರ್ಮಂ (ಆದಿಪು. ೨-೨೦); ಜಿನಧರ್ಮದ ಪೆಂಪಂ ಮೇದಿನಿ ಗಱಿಪುವ ತೆಱದಿನಮರರ್ . . . ಧಾತ್ರಿಯಂ ಬಲವಂದರ್ (ಧರ್ಮಾಮೃ. ೯-೨೪೦). [ಜಿನ್ನ$_2$ + ಧರ್ಮ]

**ಜಿನನಾಥ** (ನಾ). ತೀರ್ಥಂಕರ: ಜಿನನಾಥಸ್ನಪನಾಂಬು ತಜ್ಜನತನು ಶ್ರೀ ಸಂಗದಿಂ ತಾನೆ ಪಾವನಮಾಯ್ತೇ (ಆದಿಪು. ೭-೯೫); ತೀರ್ಥೇಶ್ವರ ಪಾದಾರ ವಿಂದ ಸಮುಕ್ಷದೊಳ್ ಜಿನನಾಥರೂಪಮಂ ತಾಳ್ದಿ (ಶಾಂತಿಪು. ೪-೧೦೮ ವ); ಜಿನನಾಥನನಱಿಯದನುಂ ಜಿನನಾಥನ ಮಾರ್ಗದಲ್ಲಿ ರುಚಿಯಿಲ್ಲದನುಂ . . . ಬಹಿರಾತ್ಮಂ (ಪರಮಾ. ೫೭-೧೭). [ಜಿನ್ನ$_2$ + ನಾಥ]

**ಜಿನನಿಕೇತ** (ನಾ). = ಜಿನಗೃಹ: ರತ್ನಚ್ಛವಿಯಿಂ ದಿಗ್ಭಿತ್ತಿಯಂ ಚಿತ್ರಿಸುವ ಜಿನನಿಕೇತಂಗಳಂ ಮಾಡಿಸುತ್ತುಂ (ಆದಿಪು. ೧೫-೪೭). [ಜಿನ್ನ$_2$ + ನಿಕೇತ]

**ಜಿನನುತಿ** (ನಾ).=ಜಿನಸ್ತುತಿ: ಜಿನನುತಿಗಲ್ಲದೆ ಪರಮುಶ್ರೀವಿಭವಮೆಯ್ದುದು (ಪುಷ್ಪಪು. ೧-೪೪). [ಜಿನ್ನ$_2$ + ನುತಿ]

**ಜಿನಪ** (ನಾ).=ಜಿನನಾಥ: ಜಿನಪಂ ತ್ರಿಸಾಕ್ಷಿಕಂ ತಾನೆನಿಸಿ ತಪಂಗೊಂಡ ಪದ ದೊಳ್ (ಪಾಧಪು. ೧೭-೭೨); ಹರಿಯೊಳು ಮನೋಜನೊಳು ಜಿನಪನೊಳು ಶಾಲಿಯೊಳು . . . ಹೋತಿನೊಳು ನಿಯತದಿಂದಲಜನಾಮಮುಕ್ಕುಂ (ಮಂಗರಾ. ೧೫೨-೬೦). [ಸಂ.]

**ಜಿನಪತಿ** (ನಾ).=ಜಿನನಾಥ: ಬಗೆಗೊಂಡು ಜಿನಪತಿಯಂ ಪೂಜಿಸು ಪಡೆವೆ ಯಿನಿಯನಂ ಮಱುಭವದೊಳ್ (ಆದಿಪು. ೩-೧೭); ನಿಜೈಶ್ವರ್ಯಪದವಿ ಗೆಱಗಿದರ್ . . . ಜಿನಪತಿಗೆ ಭವ್ಯರೆಱಗುವ ತೆಱದಿಂ (ಚಂದ್ರಪು. ೭-೩೦); ಮಾಡಲ್ಪಡುಗೆಮಗೆ ಸಂಪದಂ ಜಿನಪತಿಯಿಂ (ಶಮದ. ೨೫೦ ಪ್ರಯೋ). [ಜಿನ್ನ$_2$ + ಪತಿ$_2$]

**ಜಿನಪ್ರತಿಮೆ** (ನಾ). ಜಿನನ ವಿಗ್ರಹ,–ಮೂರ್ತಿ: ಪಸರಿಪ ಚಂದ್ರಿಕೆ ಯಿಂದಿರುಳೊಸರ್ತು ಸಲಿಲಾಭಿಷೇಕಮಂ ತಮ್ಮೊಳ್ ರಂಜಿಸುವ ಜಿನಪ್ರತಿ ಮಾಳಿಗೆ ಪೊಸಯಿಪುವವಱಿಂದುಕಾಂತಮಣಿಕೂಟಂಗಳ್ (ಚಂದ್ರಪು. ೧-೧೨೨). [ಜಿನ್ನ$_2$ + ಪ್ರತಿಮೆ]

**ಜಿನಪ್ರಬುದ್ಧಿ**(ನಾ). ಜೈನ ತತ್ತ್ವ,–ಸಿದ್ಧಾಂತ: ಓಲಗಿಸಲಾ ಮುನಿಗಳೆಲ್ಲಕೆ ಮೇಲೆನಿಪ ಗುರುವೊಬ್ಬನಾ ಭೂಪಾಲಕಂಗಾಚಾರ್ಯನಾಗಿ ಜಿನಪ್ರಬುದ್ಧಿ ಯಲಿ ಮನುಜರಂ ಬೋಧಿಸುತಿರಲ್ಕೆ (ಬಸವು. ೫೦-೧). [ಜಿನ್ನ$_2$ + ಪ್ರಬುದ್ಧಿ]

**ಜಿನಬಸದಿ** (ನಾ). = ಜಿನಗೃಹ: ಹಾಱಿ ಕೆಡೆವುತ ಜಿನಬಸದಿಗಳನೇಱಿ ಯಲ್ಲಿಂದಿಳಿಯ ಜಾಱುತ (ಬಸವು. ೫೨-೧೩). [ಜಿನ್ನ$_2$ + ಬಸದಿ]

**ಜಿನಬಿಂಬ** (ನಾ).=ಜಿನಪ್ರತಿಮೆ: ಜಿನಬಿಂಬಮಚೇತನಮೆಂತು ನಿಗ್ರಹಾನು ಗ್ರಹಕ್ಕೆ ನಾಯಕಮಕ್ಕುಂ (ಪಾರ್ಶ್ವಪು. ೧೩-೧೨); ಈ ಧರ್ಮಶಾಸನಕ್ಕಾವ ನೊಬ್ಬ ಜೈನನಾದವ ತಪ್ಪಿದರೆ ಬೆಳಗುಳದ ಗೊಮ್ಮಟನಾಥ . . . ಮೊದ ಲಾದ ಜಿನಬಿಂಬಂಗಳನೊಡೆದ ಪಾಪಕ್ಕೆ ಹೋಹರು (ಎಇ. XX, ೯೪-೬೫; 1556); ಒಂದು ಸಾವಿರದ ಐನೂರು ಜಿನಬಿಂಬಗಳನ್ನು ಚೊಕ್ಕಬಂಗಾರದಲ್ಲಿ ಈಕೆ ಮಾಡಿಸಿ (ದಾನಚಿಂ. ೧೭೪). [ಜಿನ್ನ$_2$ + ಬಿಂಬ]

**ಜಿನಭವನ** (ನಾ). = ಜಿನಗೃಹ: ಆ ಜಂಬೂದ್ವೀಪದ ನಟ್ಟನಡುವೆ . . . ರತ್ನತೋರಣಾಂಚಿತ ಜಿನಭವನಪರಿವೃತಮುಂ (ಆದಿಪು. ೧-೪೯ ವ); ಪೊಳಲೊಳೆಲ್ಲಕೆ ಹಿರಿಯ ಬಸದಿಯೆನಲು ಮೆಱೆವ ಘನ ಜಿನಭವನವದು (ಬಸವು. ೫೨-೩೨). [ಜಿನ್ನ$_2$ + ಭವನ]

**ಜಿನಮಂದಿರ** (ನಾ).=ಜಿನಗೃಹ: ಜಿನಮಂದಿರಂಗಳಂ ಬಂದಿಸಿ (ಶಾಂತಿಪು. ೯-೭೪ ವ). [ಜಿನ್ನ$_2$ + ಮಂದಿರ]

**ಜಿನಮತ** (ನಾ). ಜೈನಧರ್ಮ: ನಿಮ್ಮಾದುದನಪ್ಪಂ ದುರ್ಜನನಾದುದ ನಪ್ಪಂತು ಕಲ್ತೆನೇ ಜಿನಮತಮಂ (ಶಾಂತಿಪು. ೭-೫೮). [ಜಿನ್ನ$_2$ + ಮತ]

**ಜಿನಮಹಾಕಲ್ಯಾಣ** (ನಾ). ತೀರ್ಥಂಕರನ ಜೀವನದಲ್ಲಿಯ ಐದು ಕಲ್ಯಾಣಗಳಂ: ಸುರಲೋಕಾವತರೋತ್ಸವಂ ಪರಿಕ್ರಮಂ ಜನ್ಮಾಭಿಷೇ ಕೋತ್ಸವಂ . . . ಜಿನಮಹಾಕಲ್ಯಾಣಮಯ್ದುಂ ಸವಿಸ್ತರದಿಂದಿರ್ದುವು (ಅಜಿಪು.೧-೯೬). [ಜಿನ್ನ$_2$ + ಮಹಾಕಲ್ಯಾಣ]

**ಜಿನಮಾರ್ಗ** (ನಾ). = ಜಿನಮತ: ಜಿನಮಾರ್ಗಂ ಸ್ವೈರಮಾರ್ಗಂ ಜಿನ ಮತಮೆ ಮತಂ (ಸುಕುಮಾ. ೧-೪೯); ತತ್ಪುರದ ಜನವೆಲ್ಲ ಧರಣಿಯೊಳು ಜಿನಮಾರ್ಗವಾಗಿಯೆ ಚರಿಸಲು (ಬಸವು. ೫೨-೧). [ಜಿನ್ನ$_2$ + ಮಾರ್ಗ]

**ಜಿನಮುದ್ರೆ** (ನಾ). ಜಿನೇಶ್ವರನ ರೂಪ: ಆದಾರ್ಗೆ ಜಿನಮುದ್ರೆ ಮೂಡಿ ಸದೊ ಮುದದೊದವಂ (ಚಂದ್ರಪು. ೬-೯). [ಜಿನ್ನ$_2$ + ಮುದ್ರೆ]

**ಜಿನಮುನಿ** (ನಾ). ೧. ಜೈನ ಸಂನ್ಯಾಸಿ,–ಯತಿ: ಜಿನಮುನಿಗಳೆಂದರು ಶಿವಕುಮಾರಂಗೆ (ಬಸವು. ೫೦-೩೩). ೨. ತೀರ್ಥಂಕರ; ಅರ್ಹಂತ: ಪೂಜಿ ಸಿದಂ . . . ಜಿನಮುನಿ ಪದಾಂಬುಜಯುಗಂಗಳಂ (ಪುಷ್ಪಪು. ೯-೫). [ಜಿನ್ನ$_2$ + ಮುನಿ$_3$]

**ಜಿನಯತಿ** (ನಾ). = ಜಿನಮುನಿ ೧: ಸತಿಯೆ ನಿನಗೆಲ್ಲಿಯ ಗುರುಗಳೀ ಗತಿ ಯನುಳಿದವರಂ ಕಳುಹು ಜಿನಯತಿಗಳಱದಡೆ ಮೇಲೆ ವಿಪರೀತಂಗಳಹ ವಿನ್ನು (ಬಸವು. ೫೦-೭). [ಜಿನ್ನ$_2$ + ಯತಿ]

**ಜಿನಯೋಗಿ** (ನಾ). ಜೈನ ತಪಸ್ವಿ: ಇನನಿಂದಂ ಗೌರವಂ . . . ಶನಿಯಿಂದಂ ಜಿನಯೋಗಿಯಪ್ಪ ತಪಮಂ ಕೆಯ್ಕೊಳ್ಗುಮಾ ಮಾನವಂ (ಜಾತಕತಿ. ೧೬-೨). [ಜಿನ್ನ$_2$ + ಯೋಗಿ]

**ಜಿನರಾತ್ರಿ** (ನಾ). ಆದಿತೀರ್ಥಂಕರನಂ ಮೋಕ್ಷವನ್ನು ಪಡೆದ ರಾತ್ರಿ: ವೃಷಭಸ್ವಾಮಿಯು . . . ಮಾಘ ಬಹುಳ ಚತುರ್ದಶಿಯ ದಿವಸ ಮೋಕ್ಷ ವನೈದಿದನು . . . ಆ ರಾತ್ರಿಯನ್ನು ಜಿನರಾತ್ರಿಯೆಂದೂ ಶಿವರಾತ್ರಿ ಯೆಂದೂ ಕರೆದು ನಲಿದಾಡಿದರು (ಭಾರದ. ೧೮೨). [ಜಿನ್ನ$_2$ + ರಾತ್ರಿ]

**ಜಿನರೂಪ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯಂ ಕ್ರಿಯೆಗಳಲ್ಲಿ ಒಂದು: (ತಪಸ್ವಿಗಾಗಿ ಹೊಂದುವ) ನಗ್ನತೆ; ದಿಗಂಬರತ್ವ: ಗೃಹತ್ಯಾಗದೀಕ್ಷಾಜಿನರೂಪಮೌನಾಧ್ಯಯನ . . . ಎಂಬಯ್ವತ್ತು ಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ (ಆದಿಪು. ೧೫-೧೫ ವ): ವಾನಪ್ರಸ್ಥನು ವಸ್ತ್ರಾದಿಗಳಂ ತ್ಯಜಿಸಿ ಜಾತರೂಪ ನಾಗಿ ನಿಸ್ಸಂಗತ್ವವಂ ಪಡೆವುದೇ ಜಿನರೂಪವೆಂಬ ೨೪ನೆಯ ಕರ್ಮವು (ಪುರುಚ. ೨೦೦). [ಜಿನ್ನ$_2$ + ರೂಪ]

**ಜಿನರೂಪು** (ನಾ). = ಜಿನಪ್ರತಿಮೆ: ಜಿನಮುನಿಗಳ ತಲೆಗಳಂ ಹೊಡೆದು ಕೆಡಹುತ ಮುಳಿದು ಜಿನರೂಪುಗಳ ತಲೆಗಳನರಿದು ಹುಡಿಗುಟ್ಟಿ (ಬಸವು. ೫೦-೭೨). [ಜಿನ್ನ$_2$ + ರೂಪು]

**ಜಿನವರ್ತನ** (ನಾ). ಜೈನಧರ್ಮಾಚರಣೆ: ಅಮಳಶ್ರೀ ಜಿನವರ್ತನಂ ಕಿಡದು . . . ಅಭೀಷ್ಟವೃಷ್ಟಿ ಕಱೆಯುತ್ತಿರ್ಕುಂ (ಪುಷ್ಪಪು. ೨-೩). [ಜಿನ್ನ$_2$ + ವರ್ತನ]

**ಜಿನವೃಂದಾರಕ** (ನಾ). ಜಿನದೇವ; ತೀರ್ಥಂಕರ: ಜಿನವೃಂದಾರಕರಿರ್ಪತ್ತು ನಾಲ್ವರಾ ತೀರ್ಥನಾಥ ಸಮುದಾಯದ ಶಾಸನದೇವಿಯರ್ಕಳಿರ್ಪತ್ತು ನಾಲ್ವರೀಗೆಮಗೆ ಯಕ್ಷರಕ್ಷಯಸುಖಮಂ (ಅಜಿಪು. ೧-೬). [ಜಿನ್ನ$_2$ + ವೃಂದಾರಕ]

**ಜಿನಶಾಸನ** (ನಾ). ಜೈನ ಸಿದ್ಧಾಂತ,–ಧರ್ಮ: ಜಿನಶಾಸನದೀಪಕನುಂ ಮುನಿವೈರೋಚನನುಮಪ್ಪ ಜಿನಚಂದ್ರಮುನೀಂದ್ರಂ (ಶಾಂತಿಪು. ೧-೩೫): ಜಿನಶಾಸನಲಕ್ಷ್ಮಿಗೆ ಲೋಚನಯುಗಳರ್ ವೀರಸೇನಜಿನಸೇನಾಖ್ಯರ್ (ಚಂದ್ರಪು. ೧-೧೬). [ಜಿನ್ನ$_2$ + ಶಾಸನ]

**ಜಿನಶಿ** 'ಜಿನಸು' ನೋ.

**ಜಿನಶಿಕಛೇರಿ** (ನಾ). ಹದಿನೆಂಟು ಕಚೇರಿಗಳಲ್ಲಿ ಒಂದು: ಕಛೇರಿಗಳು–೧. ದಿವಾನ್‌ಕಛೇರಿ . . . ೧೫. ಜಿನಶಿಕಛೇರಿ (ಮಹಾವಂ. II, ೩೯). 'ಅಠಾರಾಕಚೇರಿ' ಪರಾ. [ಜಿನಶಿ (<ಜಿನಸು) + ಕಛೇರಿ (<ಕಚೇರಿ)]

**ಜಿನಸಪರ್ಯೆ** (ನಾ). ತೀರ್ಥಂಕರರ ಪೂಜೆ,–ಸೇವೆ: ಪುಣ್ಯದ ಬಂಧವು ನಾವರಿಸುವ ಜಿನಸಪರ್ಯೆ ತೊಡರ್ದುದು ಬಗೆಯೊಳ್ (ಆದಿಪು. ೩–೨೮). [ಜಿನ‌್ನ + ಸಪರ್ಯೆ]

**ಜಿನಸಮಯ** (ನಾ). ೧. ಜೈನಧರ್ಮ,–ಮಾರ್ಗ: ವಿಭುಸದ್ಮಂಗಂಡು ಬಂದಂ ಜಿನಸಮಯಸರಸ್ಸಾರಕೇಳೀಮರಾಳಂ (ಚಂದ್ರಪು. ೭–೧೫೩). ೨. = ಜಿನಸಮಯಿ: ಕ್ಷಯವ್ಯಜಿನಂ ಜಿನಸಮಯಂ ಸ್ಮಯರಹಿತಂ . . . ಸರಸ್ವತೀ ಮುಖ ಮುಕುರಂ (ಸುಕುಮಾ. ೧–೫೦). [ಜಿನ‌್ನ + ಸಮಯ]

**ಜಿನಸಮಯಿ** (ನಾ). ಜೈನಮತೀಯ: ಜಿನಸಮಯಿಗಳಿಟ್ಟರೆ ತನ್ನನೊತ್ತೆಯಿಟ್ಟಾಪೊಡಂ . . . ಜೈನನಿಕ್ಕುಗುಮನವರತಂ ಪೆಱರದೆಂತು ಮುಣಲಿಕ್ಕುವರೆ (ಸಮಪ. ೪–೫೦); ಜೈನರು ಭೂತಳೇಶಂಗಙಹಲಾತನು ಜಿನಸಮಯಿಯಾಗಿ ಖಾತಿಗೊಳುತಿಂತೆಂದನು (ಬಸವ. ೫೦–೫). [ಸಂ. ಜಿನಸಮಯಿನ್]

**ಜಿನಸವನ** (ನಾ). ಜಿನನ ಅಭಿಷೇಕ; ತೀರ್ಥಂಕರನ ಅಭಿಷೇಕ: ಜಿನಸವನ ಮಂಗಳಕ್ಕಾನೆ ನೋಂತೆನೆಂಬಂತೆ ಶಿಖರಿ ನಿಜಶಿಖರದ ಪೆಂಪನೆ ಮೆಟೆದು (ಆದಿಪು. ೭–೬೪); ಸಿಡಿಲ್ದರ್ದಿಂಬಾದುವು ಜಿನಸವನ ಜನಿತ ಜಲಲವಮವರೊಳ್ (ಪುಷ್ಪಪು. ೧೧–೩೪). [ಜಿನ‌್ನ + ಸವನ‌್ನ]

**ಜಿನಸಿದ್ಧ** (ನಾ). ಸಿದ್ಧಿಯನ್ನು ಹೊಂದಿದ ಜಿನದೇವ. ₽ 'ದೇವದೇವ', 'ಶಿವಶಿವ' ಎಂಬಂತೆ ಇದರ ಪ್ರಯೋಗವುಂಟು: ಜಿನಸಿದ್ಧ ವರ್ಷ ತಾನಪ್ಪಾಯ್ತೆ ಅಮ್ಮಾಜಿ (ಭರತ. ೪೭–೫೦); ಜಿನಸಿದ್ಧ ದೇವರಿಂತುಟು ನಿರೂಪಿಸಲಾಗದು (ಭರತ. ೫೯–೨೯). [ಜಿನ‌್ನ + ಸಿದ್ಧ]

**ಜಿನಸು, ಜಿನಶಿ, ಜಿನಿಸು, ಜಿನ್ನಸು, ಜೀನಸು, ಜೀನಿಸು, ದಿನಸಿ, ದಿನಸು, ದಿನಿಸು, ದೀನಸು** (ನಾ). ೧. ಸಾಮಾನು; ಸರಕು; ಪದಾರ್ಥ; ಸಾಮಗ್ರಿ: "ಜಿನಸು–ಅನೇಕ ತರ ಒಡವೆ, ಸಾಮಾನು" (ಜಾನಕೋ. ೬೦): ಗೋಧಿ ಕಡಲೆ ಬೆಲ್ಲಂ ಬೇಳೆ ಭತ್ತುದ್ದು ಪೆಸಱು ಘೃತ ಮುಂತಾದ ಜಿನಸುಗಳ (ಸಿದ್ಧಕಾ. ೧೦–೯); ಆತ ಸನಿಯದಲ್ಲೆ ಜಿನಸಿನ ಅಂಗಡಿ ಇಟ್ಟಿದ್ದ (ತ್ಯಾಗಮ. ೫೫). ೨. ಕಾಳು; ಧಾನ್ಯ: ಜಿನಸುಗಳೆಲ್ಲಾ ಹುಳಿತು ಕೊಳೆತು ಹಾಳಾಗಿ ಹೋಗುತ್ತಿವೆ (ಮುದ್ರಾಮಂ. ೦೦೬). ೩. ಪ್ರಕಾರ; ಬಗೆ: ನಾನಾ ಜಿನಸಿನ ವ್ಯವಹಾರಿಗಳು (ಬಿಜ್ಜರಾ. ೦೨–೨೩). **ಜಿನಶಿ:** ೨. ಭಟವರ್ಮಾನ್ಯ ಯಿಸಂ ಶಿಕೆ ಗ್ರಾಮದಲ್ಲಿ ಜಿನಶಿಯಿಂದ ಸಹಾ (ಮೈ ಆರ್. ೦೯೩೯, ೪೨–೪೭; 1825). **ಜಿನಿಸು:** ೧. ಅಲ್ಲಾವುದ್ದೀನನ ಅದ್ಭುತದೀಪದಂತಹ ಆಶ್ಚರ್ಯಕರ ಅನುಕೂಲವುಳ್ಳ ಜಿನಿಸು ಇನ್ನೊಂದಿಲ್ಲ (ನಿಬಂಧ. I, ೫೦೪). ೨. ಜಿನಿಸು ಅಡಕೆ ಮೆಣಸು ರಘುಲ್ಲಿಪಟ್ಟೆ . . . ಜವಳಿ ಮುಂತಾಗಿ (ಎಕ. VII, ಶಿವಮೊ. ೨೮–೧೫; 1670): ಮಾನ್ಯದ ಯೆತ್ತು ನಡೆ ವಿರ ಮೇಲೆ ಅಡಕೆ ಮೆಣಸು . . . ಮುಂತಾದ ಫಡಿಸಿನ ಸರಕು ಹೊರತಪ್ಪಾಗಿ ಹೇರಿಕೊಂಬ ಜಿನಿಸು ಅಕ್ಕಿ ಭತ್ತ ರಾಗಿ (ಮೈಆರ್. ೦೯೩೬, ೨೬–೩೫; 1708). ೩. ಜಿನಿಸು ಜಿನಿಸಿನ ಕಾಮಕ್ರೋಧವು (ಜ್ಞಾನಸಿಂ. ೦೯–೬). ೪. ಬೆಲೆಬಾಳುವಂತಹುದಂ; ಅಮೂಲ್ಯವಾದುದು: ಮಣಿಭೂಷಣಗಳ ಜಿನಿಸಿನ ಕರಂಡಗಳ ನೂತನಾಂಕುರಗಳ ವನಜ ಕುಸುಮಂಗಳಿಂದಲಿ ಪುದಿದ ಭಾಜನಗಳನುಪಿಡಿದು ಕೆಲರು . . . ಐತಂದರು (ವೆಂಕಾರಾ. ೧–೨೨–೬). **ಜಿನ್ನಸು:** ೧. ಅಲ್ಲಿಯ ಜನರಿಗೆ ಯಾವ ಜಿನ್ನಸು ಹೆಚ್ಚಾಗಿದೆಯೋ ಅದನ್ನು ನಮಗೆ ಪ್ರತಿಯಾಗಿ ಕಳುಹಿಸಲು ಒಪ್ಪಬೇಕು (ಕುಮಾಕಾ. ೦೫೯). **ಜೀನಸು:** ೧. ಆಡಲು ಅವರಿಗೆ ಗೊಂಬೆ ಮೊದಲಾದ ಜೀನಸುಗಳೂ ಬೇಕು (ಕನ್ನಜಾ. ೩೭); ಏನಾದರು ತಿನ್ನುವ ಜೀನಸು ತೆಕ್ಕೊಂಡು ಬರುವಾ (ಮುಂಬಯಿ ೩–೯೭): ಬಾಬಣ್ಣನಿಗೆ ಎಣ್ಣೆಯಲ್ಲಿ ಕರಿದ ಜೀನಸೆಂದರೆ ತುಂಬ ಪ್ರೀತಿ (ಅಶೋಕ. ೫೦). ೩. ಕಾಂಚನಕ್ಕೆ ಕಯ್ಯೊದ್ದುತ ಕಂಚಗಾಱನಂತೆ ನಾನಾ ಜೀನಸಿನ ಕಂಚ ನೆರಹಿ ಹರವಿಕೊಂಡು (ಮಡಿಮಾ. ೩೯–೫೪). ೫. ವರ್ತನೆ; ವ್ಯವಹಾರ: ಸೋನನ ಸೂಳೆಯು ಜೀನಸೆರಡೊಂದಯ್ಯ ಕಾನನದ ಹೆಣನ ಹಟಿ ತಿಂದು ಹಂದರವ ತಾನು ಬಿಟ್ಟಂತೆ (ಸರ್ವಜ್ಞ. ೧೮೮೪). **ಜೀನಿಸು:** ೨. ಆ ನಳಂ ಸ್ನಾನವಂ ಮಾಡಿ ಹಸಿಯಾಗಿರ್ದ ಜೀನಿಸಿನ ಸೋಪಸ್ಕರಂಗಳಂ ಕಣ್ಣೊಳ್ ತಾ ನೋಡಲಾಗಿ ನಳಪಾಕದಿಂದಡಿಗೆ ಭೋಜನಗಳಂ ಮಾಡ್ದರೆಂದು . . . ಉಸುರಲ್ಕೆ (ತುರಂಗ. ೩೨–೧೫). **ದಿನಸಿ:** ೨. ಕಣದ ಕೆಲಸವೂ ಮುಗಿದು ಹುಲ್ಲನ್ನೂ ದಿನಸಿಗಳನ್ನೂ ಅಲ್ಲಿಂದ ಸಾಗಿಸಿ ಆಗಲೇ ಎರಡು ತಿಂಗಳು ಕಳೆದಿತ್ತು (ದೂರಸ. ೦೦೬); ಅದಕ್ಕೆ ಮೊದಲು ಬಟವಾನ್ಯವೆಂದು ಬೆಳೆದಿದ್ದರಲ್ಲಿ ಅರ್ಧ ದಿನಸಿಯು ವೃತ್ತಿವಂತರಿಗೆ ಬರುತ್ತಿತ್ತು (ಹುಟ್ಟಿಹ. ೪); ಒಳಗೆಲ್ಲ ದಿನಸಿ ತುಂಬಿಕೋಕೆ ಜಾಗಾ, ಗಡಂಗು (ಜಂಗೂಲಿ. ೭೭): ದಿನಸಿಯ ಜವಳಿಯ ಅಂಗಡಿ ತೆರೆಯಿತು(ಇಂಚಾಪ.೭–೨೪). **ದಿನಸು:** ೧. ಅತ್ತಿ ಅರಳೆಯು ಬಿಲ್ವಪತ್ರೆಯು ಮತ್ತೆ ಪರಿಮಳ ದಿನಸು (ಶರಲೀ. ೦೭೦–೨); ಪೆಟ್ಲುಉಪ್ಪು, ಪಟಿಕಾರ, ತುರಶೀ ಯಿಾ ಮೂರು ದಿನಸನ್ನು ಪುಡಿಮಾಡಿ (ಗಂಧಪ್ರ. ೦–೨). ೨. ದಿನಸುಗಳೆಲ್ಲ ತರಿಸಿ ಇಂಗನು ಸಹಿತ ಅರಸಿರೆ ಖಾರವಂ ಅಂಗನೆಯರು (ಸೌಗಂಧಿ. ೦೮–೫); ಅಂಗಡಿಗಳಲ್ಲಿ ದವಸ ದಿನಸುಗಳನ್ನು ಮಾರುವಂತೆ ಸಂಗೀತವನ್ನು ಕೆಲವರು ಮಾರುತ್ತಾರೆ (ಕನ್ನಸು. I, ೦೦). **ದಿನಿಸು:** ೧. ನಿಜಸುತೆಗೆಬಳುವಳಿಯಾಗಿದಿ[ವಾಕಾಂ. ಮಿ]ನಿಸಿನಾಭರಣಗಳ ಧೇನು ಹಯ ರಥಗಜಾಂದೋಳಿಕಂಗಳ(ನು)...ಬಿನದದಿಂ ತಹುದು(ವೆಂಕಾರಾ. ೧–೨೩–೦೮); ಅತಿಮನೋಹರವಾದ ದಿನಿಸುಗಳ ಸಂತಸವ ಪೆರ್ಚಿಸುವ ನಂದನಕೆ ಬರ್ಪಳು (ವೆಂಕಾರಾ. ೫–೭–೦೯). ೩. ಪರುಷವೇ ಬಂದು ಮುಟ್ಟಿದ ಮೇಲೆ ಕೀಟುವೋಲೆರಡು ದಿನಿಸಹುದೆ(ಕವಿಪ. III, ೭೩ ತಿರುವೇಂಗಡಾಚಾರ್ಯ ಶತಕ). ೫. ದಾನವರ ದಿನಿಸೆನ್ನೊಳಿಲ್ಲ (ವೆಂಕಾರಾ. ೬–೪೨–೩೮) ೬. ಗುರುತು; ಚಿಹ್ನೆ: ಪಾತಕಂಗಳು ದಿನಿಸಿಗಿಲ್ಲದೆ ಸುಟ್ಟುಹೋಹವು (ಜ್ಞಾನಸಿಂ. ೦–೨೩). **ದೀನಸು:** ೨. ಮೂಡಲಾಗಿ ದೀನಸು ಪಾನಸು ತರುವದಕ್ಕೆ ಹೋಗುವಂಥವರಿಗೆ ರಹದಾರಿ ಕೊಡುವ ಜಂಬ್ರುವಿದೆ (ರಾಜೇಂದ್ರ. ೦೪೫). [←ಅರ. ಹಿಂ. ಜಿನ್ಸ್; ಮರಾ. ಜಿನಸ್, ಜಿನ್ನಸ್]

**ಜಿನಾಂಗ** (ನಾ).=ಜಿನಬಿಂಬ: "ತ್ರಿದಶಾವಾಸ ಜಿನಾಂಗ ಚಿತ್ಯಮಿನಿತುಂ ಚೈತ್ಯಾಹ್ವಯಂ" (ನಾನಾರ. ೦೩೫). [ಜಿನ‌್ನ + ಅಂಗ‌್ನ]

**ಜಿನಾಂಬಿಕೆ** (ನಾ). ಅರ್ಹಂತನ ತಾಯಿ; ತೀರ್ಥಂಕರನ ತಾಯಿ: ಜಗದ್ಗುರು ಜನಕಂ ನೃಪಾಂಗನೆ ಜಿನಾಂಬಿಕೆ ಬಣ್ಣಿಸಲಾರ್ಪೊನಾವೊಂ (ಶಾಂತಿಪು. ೯–೧೫೮). [ಜಿನ‌್ನ + ಅಂಬಿಕೆ]

**ಜಿನಾಗಮ** (ನಾ). ಜೈನಧರ್ಮ: ಆ ಯತಿನಾಥರ ಶಿಷ್ಯರಜೇಯ ಜಿನಾಗಮ ಪಯೋಧಿ ಪಾರೋತ್ತೀರ್ಣಕ್ಷಾಯಿಕ ಸಮ್ಯಗ್ದೃಷ್ಟಿಗಳ್ (ಶಾಂತಿಪು. ೦–೨೦). [ಜಿನ‌್ನ + ಆಗಮ]

**ಜಿನಾಗಾರ** (ನಾ). = ಜಿನಗೃಹ: ಜಿನಾಗಾರಂಗಳ್ ತನ್ನ ಜಸದವೊಲ್ ವಸುಧೆಗೆಳಂಕಾರಂಗಳಾಗೆ (ಆದಿಪು. ೦೬–೦). [ಜಿನ‌್ನ + ಆಗಾರ]

**ಜಿನಾಭಿಷವಣ** (ನಾ).=ಜಿನಸವನ: ನೆಗಟ್ದಸ್ಮಜ್ಜಳಮಂ ಜಿನಾಭಿಷವಣಕ್ಕೊಯ್ದೆಮ್ಮ ಜನ್ಮಕ್ಕೆ ಮಾಡುಗೆ ಸಾಫಲ್ಯಮನಿಂದ್ರನೆಂದೆಟಿದು ಗಂಗಾದೇವಿ ಪೇಟ್ದು (ಪುಷ್ಪಪು. ೧೧–೨೪). [ಜಿನ‌್ನ + ಅಭಿಷವಣ]

**ಜಿನಾಭ್ಯಂಜನ** (ನಾ).=ಜಿನಸವನ: ಜಿನಧರ್ಮಪ್ರತಿಪಾಳನಂ ಜಿನಕಳಾಳಾಪಂ ಜಿನಾಭ್ಯಂಜನಂ . . . ಜಿನಮಹಾಸ್ತೋತ್ರಂ (ಸೌಇಇ. XI–ii ೦೨೦–೪೩; 1044). [ಜಿನ‌್ನ + ಅಭ್ಯಂಜನ]

**ಜಿನಾರ್ಭಕ** (ನಾ). ಜಿನಶಿಶು ; ಶಿಶುವಾಗಿರುವ ತೀರ್ಥಂಕರ : ಮಾಯಾರ್ಭಕನನಿರಿಸಿ ಜಿನಾರ್ಭಕನನೆತ್ತಿಕೊಂಡು ಬರೆ (ಶಾಂತಿಪು. ೧೦-೯ ವ): ತಿಳಕಮನಿಟ್ಟು ಕಜ್ಜಳಮನೆಚ್ಚಿ . . . ಕೆಯ್ಗೆಯ ಕಣ್ಗೆಸೆದಂ ಜಿನಾರ್ಭಕಂ (ಪುಷ್ಪಪು. ೧೧-೭೩). [ ಜಿನ$_2$ + ಅರ್ಭಕ ]

**ಜಿನಾಲಯ** (ನಾ).=ಜಿನಗೃಹ: ಜಿನಾಲಯಗಳಲ್ಲಿ ಬರೆಸಿ ಶ್ರವಣಬೆಳಗುಳದ ಯಾತ್ರೆಯ ವಿಷಯವನ್ನು ಪ್ರಕಟಪಡಿಸಿದಳು (ದಾನಚಿಂ. ೧೮೪).
[ ಜಿನ$_2$ + ಆಲಯ ]

**ಜಿನಾವಸಥ** (ನಾ).=ಜಿನಗೃಹ : ಜಿನಾವಸಥಮಂ ಗುಣಾವಸಥನೆಯ್ದಿದಂ ಭೂಭುಜಂ (ಮಲ್ಲಿಪು. ೧೧-೧೧೫). [ ಜಿನ$_2$ + ಅವಸಥ ]

**ಜಿನಾವಾಸ** (ನಾ).=ಜಿನಗೃಹ : ಕಳಶಂ ಕನ್ನಡಿ . . . ಲತಾಮಂಟಪಮೆಂಬಿವಿಲ್ಲದ ಜಿನಾವಾಸಂಗಳಿಲ್ಲೆಲ್ಲಿಯುಂ (ಪುಷ್ಪಪು. ೨-೭೩). [ಜಿನ$_2$+ಆವಾಸ]

**ಜಿನಿಗಿಸು** (ಕ್ರಿ). ಅಲ್ಲಾಡದಂತೆ ಮಾಡು; ಚಲನವಿಲ್ಲದಂತಾಗಿಸು : ನಿಶ್ಚೇಷ್ಟವಾಗಿಸು: "ಜಿನಿಗಿಸು—ನಷ್ಟಚೇಷ್ಟಾಯಾಂ (ಚಲನವಿಲ್ಲದೆ ಆಗು, ಮಾಡು) " (ಶಮಧಾ). [ ಜಿನಿಗು? + _ ಇಸು$_3$ ]

**ಜಿನಿಜಿನಿ** (ನಾ). ಒಂದು ಬಗೆಯ ಮೂಲಿಕೆ : ಇನವಾರದಂದು ತಪ್ಪದು ಜಿನಿಜಿನಿಯಂ ಹಸ್ತಿಕರ್ಣಿಯಂ ತೊಳಸುಗೆ (ಖಮದ. ೧೪-೩೬). [ ? ]

**ಜಿನಿಸು** 'ಜಿನಸು' ನೋ.

**ಜಿನುಂಗು$_1$**, ಜಿನುಗು$_1$ (ಕ್ರಿ). ೧. ಸೋನೆಯಿಡು ; ಹನಿಹನಿಯಾಗಿ ಬೀಳು ; ತೊಟ್ಟಿಕ್ಕು : "ಜಿನುಗು, ಜಿನುಂಗು—ಅವ್ಯಕ್ತಧ್ವನೌ, ವರ್ಷಭೇದೇ ಚ" (ಶಮಧಾ). ೨. ಅಸ್ಪಷ್ಟವಾಗಿ ಧ್ವನಿಮಾಡು; ಝೇಂಕರಿಸು; ಮೊರೆ : "ಜಿನುಗು, ಜಿನುಂಗು—ಅವ್ಯಕ್ತ ಧ್ವನೌ, ವರ್ಷಭೇದೇ ಚ" (ಶಮಧಾ) : ಮಧುಕರಮದು ಭೋಂಕನೆ ಪಾಯ್ದೆಱಂಕೆ ನಾಂದೊಡೆ ಜಿನುಂಗಿ ನೆಲಸಿದುದು ವಿಕಚ ಕನಕಾಬ್ಜನಿಯೊಳ್ (ಆದಿಪು. ೧೦-೬೨) : ಪಿಸುಣನಂತೆ ಜಿನುಂಗುವ ನೊಣಗಳಿಂ (ಧರ್ಮಾಮೃ. ೧೩-೧೦೦); ಮಧುವ್ರತಪ್ರತಾನದಿನೆಸೆವುತ್ಪಳಪ್ರಕರದೊಳ್ ನೆಱೆ ಸಿಲ್ಕಿ ಜಿನುಂಗುತಿರ್ಪ ಷಟ್ಪದಶಿಶುವ್ರಂದದಿಂ (ಗಿರಿಜಾ. ೪-೧೬) : ತೋಱೆ ಚೋದ್ಯಮಂ ಸುದತಿಯರ್ಗೀವುದಲ್ಲಿ ನಡೆದುಂ ಜಡಿದುಂ ನುಡಿದುಂ ಜಿನುಂಗಿಯುಂ (ಅನಂಪು. ೧೦-೨೫). **ಜಿನುಗು$_1$:** ೧. ವ್ಯಥೆ, ಶೋಕ, ಅಪಮಾನ . . . ಹೃದಯದೊಳಗಿನಿಂದ ಜಿನುಗುತ್ತಲೇ ಇದ್ದವು (ಕೀಲುಗೂಂ. ೪೬). ೨. ಕೋಗಿಲೆಯಿರ್ಕೆದಾಣದೊಳ್ ಜಿನುಗುವ ತುಂಬಿ (ಆದಿಪು. ೧-೬೫) : ಪೂವಲಿಯಲ್ಲಿ ಜಿನುಗುತಿರ್ದುದು ಬಲವಂದಳಿ ಮಾಲೆ ಮಧುರಮಂದ್ರಧ್ವನಿಯಿಂ (ಕಾದಂಬ. ೨೦೦) : ಮುನಿವುತುಂ ಜಿನುಗುತಂ ಜೀವಿಸುತೆ ನಡೆ ನೋಡಿ (ಅನೀರ. ಹ. ೬೨-೨೦). ೩. (ಬೆಲ್ಲ ಮೊದಲಾದುವು) ಕರಗಿ ನೀರು ಬಿಡು ; ದ್ರವಿಸು ; ಜೋನೆಯಾಗು: ಬಿಸಿಲಿಗೆ ಬೆಲ್ಲವೆಲ್ಲ ಜಿನುಗಿ ಹೋಯಿತು (ರೂಢಿ). ೪. ಕರಗು ; ನಾಶವಾಗು : ನೆನೆದರಖಿಳಭವಾಂತರಂಗಳ ನೆನೆಯಬಾರದ ಘೋರಪಾತಕ ಜಿನುಗುವವು ತಾನೆಂಬ ಶ್ರುತಿಮತ ಸಿದ್ಧವಾಯಿತಲ (ತೊರರಾ. ೧-೧೨-೨೦); ಜಿನುಗದಿರು ಪರನಾರಿಗೆಳಸಿ (ನವಮೋ. ೯-೧೩). ೫. ಮತ್ತೆ ಮತ್ತೆ ಹೇಳು; ಅನೇಕಸಲ ಹೇಳು: ಮಂತ್ರ ಪದಾಕ್ಷರಂಗಳಂ ಜಿ[ಪಾಠಾಂ. ಮಿ]ನುಗುತು ಮಿರ್ದನಾ ಪರಮಯೋಗಿಯ ಪೋಲ್ಪಣಿರಾಜಕೇತನಂ (ಗದಾಯು. ೬-೦೫): ತಾಪಸರು ಜಪಗುಟ್ಟಿ ಜಿನುಗಿದಡವರನುಜ್ಜೀವಿಸಿದ ಠಾವು (ಕುಮಾ.ಉ. ೧-೨೦). ೬. ಪಿಸುಮಾತನಾಡು : ಏಕಾಂತಮಂ ಪೇಳ್ವಪೊಲೆ ಜಿನುಗುತಿರ್ದಪ್ಪೆ ಕರ್ಣಾಂತದೊಳ್ (ಶಾಕುಂತ. ೧೧-೨೪).
[ ದೇ.॥ ತಮಿ. ಚಿಣುಙ್ಕು, ಚಿಣುಕ್ಕು ; ಮಲ. ಚಿನಕ್ಕು ;
ತೆಲು. ಸನುಗು, ಸಣುಗು ]

**ಜಿನುಂಗು$_2$**, ಜಿನುಗು$_2$ (ನಾ). ೧. ಸೋನೆಮಳೆ ; ಜಡಿಮಳೆ ; ಸಣ್ಣಗೆ ಹನಿಯುವ ಮಳೆ : ಸೋನೆಗಳ ಜಿನುಂಗಿಗಂ ಬಿಱುಗಾಳಿಯ ಗಾಸಿಗಂ (ಗಿರಿಜಾ. ೯-೫೮ ವ) : ಹಗಲುಮಿರುಳುಂ ಸುರಿವ ಬಲ್ಸೋನೆಯ ಜಿನುಂಗಿನತ್ತಣಿನೆನ್ನ ಬಗೆಯುಂಬೇಸತ್ತುದು (ರಾಮಾಶ್ವ. ೪-೧೫). ೨. ಅಸ್ಪಷ್ಟವಾದ ಧ್ವನಿ : "ಅವ್ಯಕ್ತರವ ವ್ಯಷ್ಟಿಗಳೊಳು ಜಿನುಂಗು ಶಬ್ದಂ" (ಶಬ್ದಮಂ. ೮೪). **ಜಿನುಗು$_2$** : ೧. ಜಿನುಗಿನಲಿ ಬಲುಮಳೆಗಳಲಿ ನೆನೆನೆನೆದು ಸಾಗರ ತೀರದಲಿ ಬಂದನು ಕಿರೀಟ (ಕುಮಾ.ಆ. ೧೯-೨೦) : ಜಡಿ ಜಿನುಗು ಜುಂಜು ತುಂತುರ್ ಬಿಡದಡಿಯಿಡಗೊಡದೆ ಕಱೆದುವು (ತ್ರಿಪುವಿ. ೮-೩೯). ೩. (ಆಲಂ) ಕ್ಲೇಶ ; ತೊಂದರೆ : ಜನ್ಮದ ಜಿನುಗಿಗಾನಿನ್ನಾಱೆನೆಂಬಾ ಮನುಜನೇ ಕೃತಕೃತ್ಯನಹನ್ಯೆ (ಪ್ರಭುಲೀ. ೧೬-೧೦) ; ಪುರಾಣದ ಗಾದೆಗಳ ಜಂಜಡದ ಜಾಡ್ಯದ ಜಿನುಗು ತಾನಲ್ಲ (ಸದ್ಗುರು. ೧-೭); ಹೊರಳಿದನು ಸಹಜಾತ ಶೋಕಜ್ವರದ ಜಾಡ್ಯದ ಜಿನುಗಿನಲಿ (ತೊರರಾ. ೬-೨೯-೪) ; ಏಕೀಕರಿಸಿದ ಜಿನುವನ ಜಿನುಗ ನಿರಾಕರಿಸುತ ವಿಮಲಾದ್ವಯನೆನಿಸಿ (ಕಲ್ಯಾ.ಕೀ. ೪೬).
[ <ಜಿನುಂಗು$_1$ ]

**ಜಿನುಗು$_1$** 'ಜಿನುಂಗು$_1$' ನೋ.

**ಜಿನುಗು$_2$** 'ಜಿನುಂಗು$_2$' ನೋ.

**ಜಿನುಗು$_3$**, ಜಿಣುಗು (ನಾ). (ಉಕ) ೧. ಬಹಳ ಸೂಕ್ಷ್ಮವಾದುದು ; ತೆಳ್ಳಗಿರುವುದು ; ನವುರಾದುದು ; ನಯವಾದುದು : ಅವರು ಜಿನುಗಾದ ನೂಲ ಬಟ್ಟೆಗಳನ್ನು ಧರಿಸುತ್ತಾರೆ (ಮುಂಬಯಿ. ४-೧೪೦). ೨. ನಯವಾದ ಕೆಲಸ ; ಕುಸುರಿಗೆಲಸ: ಮಳೆಗಾಲದ ಮುಗಿಲುಗಳಿಗಿಂತಲೂ ಬಣ್ಣದಲ್ಲಿ ಮಿಗಿಲಾದ ನಿನ್ನ ಕಣ್ಣ ನೋಡುತ್ತಲೆ ಕಾಣುವುದು ಜೀನುಗಾರರ ಜಿನುಗಿನ ಗೊತ್ತು (ಉಯ್ಯಾಲೆ. ೯೬-೬). (ಗು). ೩. ಸೂಕ್ಷ್ಮವಾದ; ತೆಳುವಾದ ; ನವುರಾದ. 'ಜಿನುಗುದಾರ' ಪರಾ. ೪. ಅತ್ಯಲ್ಪವಾದ; ತುಚ್ಛವಾದ. 'ಜಿನುಗುವಾಸನೆ'ಪರಾ. **ಜಿಣುಗು:** ೩. ಆ ಪ್ರಕಾಶದಲ್ಲಿ ಜಿಣುಗು ಅಕ್ಷರವುಳ್ಳ ಪುಸ್ತಕವನ್ನು ಓದಬಹುದು (ಮುಂಬಯಿ. ४-೩೪೮).
[ದೇ.॥ ತೆಲು. ಜಿನುಂಗು, ಜಿಲುಂಗು, ಜಿಲುವು, ಜಿಲು ]

**ಜಿನುಗುದಾರ** (ನಾ). ತೆಳುವಾದ ದಾರ,—ನೂಲು : ಆ ಕೊಕ್ಕೆಗಳಲ್ಲೊಂದಕ್ಕೆ ಜಿನುಗುದಾರ ಕಟ್ಟಿ ಅದನ್ನು ಬದಿಯ ಕೋಣೆಯಲ್ಲಿಟ್ಟಿದ್ದರು (ಸ್ಮೃತಿಚಿ. ೩೯೯). [ ಜಿನುಗು$_3$ + ದಾರ$_1$ ]

**ಜಿನುಗುದುಂಬಿ** (ನಾ). ಮೊರೆಯುತ್ತಿರುವ ದುಂಬಿ ; ಧ್ವನಿಮಾಡುತ್ತಿರುವ ದುಂಬಿ : ಜಿನುಗುದುಂಬಿ[ಪಾಠಾಂ. ಬೆ]ಯ ಜಾಳಿಗೆಯ ತನಿಮಿನುಗು ಮೋಱೆಯ ಕಣ್ಣ ಕೆಂಪಿನ ಘನ ಭಯಂಕರರೂಪ ಭೀಮನ ಕಂಡನವನೀಶ (ಕುಮಾ.ಆ. ೧೦-೪).
[ ಜಿನುಗು$_1$ (<ಜಿನುಂಗು$_1$) + ದುಂಬಿ (<ತುಂಬಿ$_1$) ]

**ಜಿನುಗುನೀರು** (ನಾ). ತೊಟ್ಟಿಕ್ಕುವ ನೀರು; ಹನಿಯುತ್ತಿರುವ ನೀರು ಹೀಗೆ ಜಿನುಗುವ ನೀರನ್ನು ಜಿನುಗುನೀರು (ವ್ಯಾಡೋಸ್‌ವಾಟರ್) ಎನ್ನುತ್ತಾರೆ (ಕವಿಕೋ. I, ೬೩).
[ ಜಿನುಗು$_1$ (<ಜಿನುಂಗು$_1$) + ನೀರು$_1$ (<ನೀರ್$_1$) ]

**ಜಿನುಗುಬೆಲ್ಲ** (ನಾ). ಕರಗಿ ದ್ರವವಾದ ಬೆಲ್ಲ ; ಜೋನಿಬೆಲ್ಲ.
[ ಜಿನುಗು$_1$ (<ಜಿನುಂಗು$_1$) + ಬೆಲ್ಲ ]

**ಜಿನುಗುಮತಿ** (ನಾ). ತುಚ್ಛವಾದ ಬುದ್ಧಿಯುಳ್ಳವನು ; ಅಲ್ಪಬುದ್ಧಿಯವನು : ಜಿನುಗುಮತಿಗಳ ಸಿದ್ಧ ಸಾಧಕ ಮುನಿಗಳೆಂಬವದಿರುಗಳನು ನಾ ಮುನಿದು . . . ದಂಡಿಸುವೆನು (ಪ್ರಭುಲೀ. ೬-೫೬).
[ ಜಿನುಗು$_3$ + ಮತಿ ]

**ಜಿನುಗುವಳೆ** (ನಾ). ಸೋನೆಮಳೆ ; ಸಣ್ಣಹನಿಗಳಿಂದ ಕೂಡಿದ ಮಳೆ; ತುಂತುರುಮಳೆ : ಜಿನುಗುವಳೆಯಲಿ ಪರ್ವತದ ಶಿಲೆ ನೆನೆವುದೇ (ಕುಮಾ.ಗ. ೧-೫೫). [ ಜಿನುಗು$_2$ (<ಜಿನುಂಗು$_2$) + ಮಳೆ (<ಮಱೆ) ]

**ಜಿನುಗುವಾತು** (ನಾ). ಅಸ್ಪಷ್ಟವಾದ ಮಾತು ; ಮೆಲುದನಿಯ ನುಡಿ ; ಪಿಸುಮಾತು : ಜಿನುಗುವಾತಿನ ಹೂತ ಹರುಷದ ಹೊಂಗಿದುತ್ಸವದ . . . ರಾಗರಸಧುಬ್ಬಿನಲಿ ಹೊಂಪುಳಿಹೋದನು (ಕುವ್ಯಾ.ಅ. ೧೬-೬೩). [ ಜಿನುಗು$_1$ (<ಜಿನುಂಗು$_1$) + ಮಾತು$_1$ ]

**ಜಿನುಗುವಾಸನೆ** (ನಾ). ಹೇಯವಾದ ಸಂಸ್ಕಾರ; ತುಚ್ಛವಾದ ಅಭೀಪ್ಸೆ: ಜನನಕಾರಣವಾದ ವಿದ್ಯೆಯ ಜಿನುಗುವಾಸನೆಯಿಂದವವನಾ ವನಜನಾಭನ ನೆನಹಿನಿಂ ಕೇಡಹುದೆ (ನಿಭಾಗ. ೧೧-೬-೦೫). [ ಜಿನುಗು$_3$ + ವಾಸನೆ ]

**ಜಿನುಗುಸಿರು** (ನಾ). ಸೂಕ್ಷ್ಮವಾದ ಉಸಿರು : ಭೂಮಿಯ ಬದಿಯಲಿ ವ್ಯೋಮದ ತುದಿಯಲಿ ಆಡುವುದಾವನ ಜಿನುಗುಸಿರೊ (ಜಾಸಿಗೆ. ೦-೧೧). [ ಜಿನುಗು$_3$ + ಉಸಿರು$_3$ (<ಉಸಿರ್$_2$) ]

**ಜಿನುಗುಸುಖ** (ನಾ). ಅಲ್ಪಸುಖ ; ಕ್ಷಣಿಕಸುಖ : ತಾಮಸ ತನುಗಳ ದುಃಖ ಬೆರಸಿದ ಜಿನುಗುಸುಖಗಳ ಕೂಡಿಕೊಂಡಿಹವು (ನಿಭಾಗ. ೧೦-೨೦-೯) [ ಜಿನುಗು$_3$ + ಸುಖ ]

**ಜಿನುಮಿನುಗು** (ಕ್ರಿ). ಮಂದವಾಗಿ ಪ್ರಕಾಶಿಸು : ನಟ್ಟಿರುಳು ಮೆತ್ತಗೆ ಹಾಸಿ ಮೈ ಮರೆಸಿ, ಸಣ್ಣಗೆ ದೀಪ ಜಿನುಮಿನುಗೆ (ನೆಲಮು. ೬೪-೭). [ <ಜಿನುಗು$_3$ + ಮಿನುಗು$_1$ ]

**ಜಿನುವ** (ನಾ). (?) : ಏಕೀಕರಿಸಿಹೆ ಜಿನುವನ ಜಿನುಗ ನಿರಾಕರಿಸುತ ವಿಮಲಾದ್ವಯನೆನಿಸಿ (ಕೈವಲ್ಯಕೇ. ೪೭). [ ℙ ಇದು 'ಜನುಮ' ಎಂಬುದರ ಅಪಲಿಖಿತದಿರಬಹುದು ]

**ಜಿನೆ, ಜಿನ್ನೆ$_2$** (ನಾ). (ಉಕ)ಮೆಟ್ಟಿಲುಗಳ ಸಾಲು; ಸೋಪಾನಮಾರ್ಗ : ಈ ಕೊತ್ತಳಗಳ ಬಳಿಯಲ್ಲಿ ಪೊಳಮೈಯಲ್ಲಿ ಮಲಸೂತ್ರದಂಥ ಜಿನೆಯಲ್ಲಿ ಮೇಲೆಯೇರಲಿಕ್ಕೆ ಪಾವಟಿಗೆಗಳಿರುತ್ತವೆ. ಈಗ ಮೂರು ಜಿನೆಗಳನ್ನು ಇಕ್ಕಿದ್ದಾರೆ; ನಾಲ್ಕನೇದೊಂದೇ ತೆರೆದಿರುತ್ತದೆ (ಕಭಾಗೆ. ೫೩೦) ; ಅನಿಲ ಎದ್ದು ಅಟ್ಟದ ಜಿನೆಗೆ ಬಂದು ನೋಡಿದ (ಅಪನಾ. ೧೮೪). **ಜಿನ್ನೆ$_2$ :** ಕೈಯೊಳಗೆ ಕಸದ ಪೊರಿಕೆ ಹಿಡಿದುಕೊಂಡು ಇನ್ನೊಂದು ಹಾದಿಯಾದ ಅಡಿಗಿಮನೆಯ ಜಿನ್ನೆಯಿಂದ ಮೇಲೆ ಹತ್ತಿದೆ (ವ್ಯನಿ. ೦೬) ; ಕೋಣೆಯು ನೆಲಮನೆಗೆ ಇಳಿಯುವ ಜಿನ್ನೆಯ ಬಾಗಿಲು (ದೀಪಹ. II, ೯೩). [ ←ಮರಾ. ಜಿನಾ; ಪಾರ. ಜೀನಾ ]

**ಜಿನೇಂದ್ರ** (ನಾ). ಅರ್ಹಂತ ; ತೀರ್ಥಂಕರ : "ಜಿನೇಂದ್ರಃ, ವೀತರಾಗಃ, ಅರ್ಹನ್ . . . ತ್ರಿಕಾಲವಿತ್—ಈ ೮ ಜಿನೇಶ್ವರನ ಪೆಸರ್" (ಹಲಾಯು. ೦೫-೮೬) ; ಇದು ಜಿನೇಂದ್ರಚರಣಸರಸೀರುಹ ಶಿಲೀಮುಖಾಯಮಾನ ಶ್ರೀಮದುಭಯ ಕವಿಚಕ್ರವರ್ತಿ ನಿರ್ವರ್ತಿತಮುಂ (ಶಾಂತಿಪು. ೬-೦೨೬ ವ) ; ಜಿನೇಂದ್ರನಂ ಜಗನ್ಮಂಗಳ ವಸ್ತುವಿಂದಧಿಕಭಕ್ತಿಯಿನರ್ಚಿಸಿ (ಪುಷ್ಪಪು. ೩-೦೨೦). [ ಜಿನ$_2$ + ಇಂದ್ರ ]

**ಜಿನೇಶ್ವರ**(ನಾ). = ಜಿನೇಂದ್ರ: ಜಿನನಿಗೆ ಅರ್ಹನ್, ಜಿನೇಶ್ವರ, ತೀರ್ಥಂಕರ, ಪರಮೇಷ್ಠೀ, ವೀತರಾಗ, ಪರಮಾತ್ಮಾ ಮೊದಲಾದ ಹೆಸರುಗಳುಂಟು (ಭಾತತ್ತ್ವ. ೨೨೭). [ ಜಿನ$_2$ + ಈಶ್ವರ ]

**ಜಿನ್ನ$_1$, ಜೀರಣ$_1$** (ಗು). ೧. ಜೀರ್ಣವಾದ ; ಶಿಥಿಲವಾದ ; ಹಳೆಯದಾದ: "ಜಿನ್ನಮೆಂದು ಜೀರ್ಣ" (ಕಶಸಾ. ೨೫-೪೭೦) : ಮೇಲಣ ಣತ್ವಕ್ಕೆ ಣತ್ವಂ . . . ಜೀರ್ಣ—ಜಿನ್ನ (ಶಮದ. ೨೬೫ ಪ್ರಯೋ). **ಜೀರಣ$_1$:** (ನಾ). ೨. ಜೀರ್ಣವಾಗುವಿಕೆ ; ಅರಗುವಿಕೆ : ತಂದುಕೊಂಬೆನೆ ಜೀರಣಕೆನಲು ಸುವರ್ಣಬಿಂದು ವಿಜಯ ವಿಠ್ಠಲನೆಂದೆಂದಿಗೆ ಎನ್ನಿಂದಾಗದು ದೇವ (ಮೋಕ್ಷದೀ. ೮-೩). [ <ಪ್ರಾ. ಜಿಣ್ಣ, ಜೀರಣ. / ಸಂ. ಜೀರ್ಣ ]

**ಜಿನ್ನ$_2$, ಜಿನ್ನೆ$_1$** (ನಾ). ಅರ್ಹಂತ ; ಜಿನ ; ತೀರ್ಥಂಕರ : ಕ್ಷಪಣರಿಸಗಿದ ವಿಪತ್ತಿನನುಗೆಡದವರ ಜಿನ್ನ ಸಹ ಭಂಗಿಸನೆ ವಾಗೀಶನೆಲವೊ ಜೈನರ (ಮದೇಪು. ೨೫-೩). **ಜಿನ್ನೆ$_1$.** 'ಜಿನ್ನೆದೇವ' ಪರಾ. [ <ಸಂ. ಜಿನ ]

**ಜಿನ್ನ$_3$** (ನಾ). (?): ಮುದುವರ್ತ್ತಿ ಗ್ರಾಮ ೧ಕ್ಕೆ ಆದಾಯ ಕಾಟಿ ೧೨೬೦ಕ್ಕೆ ಕಕ್ಕುಂಜೆಯಲ್ಲು ಕಾಟ್ಟ ೩೬ ಜಿಂನಿಗಳ ಉಡುಗರೆಯಂಟ್ಟು ಜಿಂನ ಸಹಾ ಕಾಟ್ಟ ೨೨ (ಮೈಆರಿ. ೧೯೩೪, ೨೮-೧೪ ; 1459). [ ? ]

**ಜಿನ್ನದೇವ, ಜಿನ್ನೆದೇವ** (ನಾ). ಅರ್ಹಂತ ; ಜಿನ : ಜಿನ್ನದೇವರು (ರೂಢಿ). **ಜಿನ್ನೆದೇವ:** ಜಿನ್ನೇದೇವರ ಮನೆಗೆ ಬೈರೇದೇವರು ಹೋಗಿ ಅಣ್ಣಾ ಛಳಿಗೆ ಅದುರುತ್ತೇನೆ. ಹೆಚ್ಚಡವಾದರೂ ಕೊಡಬಾರದೇ (ಕಥಾಮಂ. IV, ೨೦) : ಜಿನ್ನೇದೇವರ ಮನೆಗೆ ಭೈರವದೇವರು ಬಂದ ಹಾಗೆ (ಗಾದೆ). [ ಜಿನ್ನ$_2$ + ದೇವ ]

**ಜಿನ್ನಸು** 'ಜಿನಸು' ನೋ.

**ಜಿನ್ನಾರ** (ನಾ). ಒಂದು ಬಗೆಯ ಕುದುರೆ : ಜನ್ನ ಜಿನ್ನಾರ ಚಿನ್ನಳಗ ಚೆಲುವ ಚೀರ ಕನ್ನೀಲ ಭೈರ ಕಂಕರಿಗಂ ಸನ್ನುತ ಸಾಂಬ್ರಾಣಿಯನೇಱ ನೃಪಕುಲರನ್ನರಿಗಂದು ತೋಱದರು (ಅಂಜಜ. ೬-೮೩). [ ? ]

**ಜಿನ್ನಿ** (ನಾ). (?) : ಮುದುವರ್ತ್ತಿ ಗ್ರಾಮ ೧ಕ್ಕೆ ಆದಾಯ ಕಾಟಿ ೧೨೬೦ಕ್ಕೆ ಕಕ್ಕುಂಜೆಯಲ್ಲು ಕಾಟ್ಟ ೩೬ ಜಿಂನಿಗಳ ಉಡುಗರೆಯಂಟ್ಟು ಜಿಂನ ಸಹಾ ಕಾಟ್ಟ ೨೨ (ಮೈಆರಿ. ೧೯೩೪, ೨೮-೧೪ : 1459). [ ? ]

**ಜಿನ್ನೀವಾಸ** 'ಜನ್ನಿವಾಸ' ನೋ.

**ಜಿನ್ನು, ಜೀನು$_2$** (ನಾ). ಹತ್ತಿಯಿಂದ ಬೀಜವನ್ನು ಬೇರ್ಪಡಿಸುವ ಯಂತ್ರ ಮತ್ತು ಅದರ ಕಾರ್ಖಾನೆ : ನಮ್ಮ ಮನೆ ಹತ್ತಿರ ಒಂದು ಜಿನ್ನು ಇದೆ (ರೂಢಿ). **ಜೀನು$_2$ :** ಈ ಜೀನು(ಗಾಣ)ಗಳ ಕಬ್ಬಿಣದ ಹೊರಳುಗಳ ಎಡೆಯಲ್ಲಿ ಹತ್ತಿಯನ್ನು ಕೊಡುವರು (ಬಾಲಪ್ರ. I, ४೦೬) : ಇದನ್ನು ಊರ ಹತ್ತಿರ ಜೀನಿನ (Ginning factory) ಬಳಿ ಎಳೆಸಿ ತಂದು ಬಿಟ್ಟಿದ್ದರು (ಜಾಸಪ. ೩೯). [ ←ಇಂ. Gin ]

**ಜಿನ್ನೆ$_1$** 'ಜಿನ್ನ$_2$' ನೋ.

**ಜಿನ್ನೆ$_2$** 'ಜಿನೆ' ನೋ.

**ಜಿನ್ನೆದೇವ** 'ಜಿನ್ನದೇವ' ನೋ.

**ಜಿಪರಿ** 'ಜುಪರಿ' ನೋ.

**ಜಿಪುಣ** (ನಾ). ಲೋಭಿ ; ಕೃಪಣ : ಬೋಳನಂ ಕಡುಜಿಪುಣನೆಂದೂರಪಡೆಯಿಲರ್ಬಗೆದು (ಕಾಲೂರ. ೦೩೫-೨೮೯) ; ಸೋಮಾರಿಯಾದ ತಂದೆ; ಜಿಪುಣಳಾದ ತಾಯಿ (ಆಶ್ರಮ. ४೭) ; ತಂದೆ ಮಹಾಜಿಪುಣ, ಕೃಪಣ. (ಬಂಕಿಮ. ೨೯೧).

**ಜಿಪುಣತನ** (ನಾ). ಕೃಪಣತ್ವ ; ಲೋಭ : ಕೈಲಿ ಕಾಸು ಹಿಡಿತ ಮಾಡುವುದೇನೋ ಸರಿಯಾದರೂ ನನಗೆ ಇಷ್ಟು ಜಿಪುಣತನ ಹಿಡಿಸುವುದಿಲ್ಲ (ಬಾಡಿಬ. ೦೦೦). [ ಜಿಪುಣ + – ತನ ]

**ಜಿಪುಣಾಗ್ರೇಸರ** (ನಾ). ಜಿಪುಣರಲ್ಲಿ ಹೆಚ್ಚಿನವನು ; ಅತಿಲೋಭಿ : ಮಹಾಕೃಪಣ : ಶ್ರೀನಿವಾಸನಾಯಕ ಜಿಪುಣಾಗ್ರೇಸರನಾಗಿದ್ದವನು . . . ಪುರಂದರದಾಸನಾದದ್ದು ವಿಶೋಬನಾದ ಪಾಂಡುರಂಗನ ಅನುಗ್ರಹದಿಂದ (ಭಾರದ. ೨೯೩). ℙ ಇದಂ ಅಸಾಧು ರೂಪ. [ ಜಿಪುಣ + ಅಗ್ರೇಸರ ]

**ಜಿಪುಣೆ** (ನಾ). ಲೋಭಿಯಾದ ಹೆಣ್ಣು ; ಜಿಪುಣತನವುಳ್ಳವಳು : ಅವಳು ಎಲ್ಲ ಹೆಂಗಸರಂತೆ ಜಿಪುಣೆಯಲ್ಲ (ಬಂಕಿಮ. ೯೯). [ ಜಿಪುಣ + – ಎ$_2$ ]

**ಜಿಪ್ಪು** (ನಾ). ಪಾದ; ಕಾಲಿನ ಅಡಿಯ ಭಾಗ ; "ಹೆಜ್ಜೆ" (ಜಾನಕೋ. ೬೦) [ ? ]

**ಜಿಬಟ** (ನಾ). ಜಿಪುಣ ; ಲೋಭಿ : ಜಿಬಟ ಪೇಮಜಿಯೇ ಅವರಿಗೆ ಇಪ್ಪತ್ತೆರಡು ಸಾವಿರ ಸಾಲ ಕೊಟ್ಟಿದ್ದ (ನಿರಾಥ. ೧೦೩). [ ಜಿಬಟು + – ಅ$_7$ ]

**ಜಿಬಟಿಗ** 'ಚಿಬಟಿಗ' ನೋ.

**ಜಿಬಟು, ಜಿಬಡು** (ನಾ). ಅಂಟುಸ್ವಭಾವ ; ಜಿಪುಣತನ ; ಲೋಭ : ನಮ್ಮವ್ವ ಬಲೇ ಜಿಬಟು (ತಿರುಗು. ೬೪). **ಜಿಬಡು.** 'ಜಿಬಡುತನ' ಪರಾ. [ <ಜಗಟು₂ ]

**ಜಿಬಡು** 'ಜಿಬಟು' ನೋ.

**ಜಿಬಡುತನ** (ನಾ). ಹಿಡಿದ ಕೆಲಸಬಿಡದಿರುವಿಕೆ ; ಅಂಟುಸ್ವಭಾವ ; ಜಿಗುಟುತನ : ಇವನ ಸ್ವಭಾವದಲ್ಲಿ ಮೊದಲಿನಿಂದಲೂ ಒಂದು ಬಗೆಯ ಹಟವಾರಿತನ ಜಿಬಡುತನ ಇದ್ದುವು (ಮೂರುದಾ. ೬೮).

[ ಜಿಬಡು (<ಜಿಬಟು) + – ತನ ]

**ಜಿಬರು, ಜಿಬರೆ, ಜಿಬುರು** (ನಾ). ಕಣ್ಣಿನ ಅಂಚಿನಲ್ಲಿ ಶೇಖರವಾಗುವ ಪಿಸುರು ; ಕಣ್ಣಿನ ಕೊಳೆ ; ಪಿಚ್ಚು ; ನೇತ್ರಮಲ : ಆಕೆಯ ಕಣ್ಣಲ್ಲಿ ಸದಾ ಜಿಬರು ಕಟ್ಟಿರುತ್ತದೆ (ರೂಢಿ). **ಜಿಬರೆ :** ಅವಳ ತೊಡೆಯ ಮೇಲೆ ವರ್ಷದ ಕೂಸೊಂದು ; ಅದರ ತಲೆಗೆ ಒಂದು ಮೇಣಗಟ್ಟಿದ ಕುಲಾವಿ ; ಕಣ್ಣಿನಲ್ಲಿ ಜಿಬರೆ (ರಾಮಾನಿ. ೧೦೦). **ಜಿಬುರು:** ಕಣ್ಣಿನಿಂದ ನೀರು, ಜಿಬುರು ಸೋರುತ್ತಿತ್ತು (ಅಜಿ. ೭). [ ? ]

**ಜಿಬರೆ** 'ಜಿಬರು' ನೋ.

**ಜಿಬಳ, ಜಿಬ್ಬಳ** (ನಾ). ಅಂಟು ; ಜಿಗುಟು: (ಕ). **ಜಿಬ್ಬಳ.** 'ಜಿಬ್ಬಳಿಕೆ' ಪರಾ.

**ಜಿಬಳಡಿಕೆ**=ಉಂಡೆ ಅಡಕೆಯನ್ನು ಹದವಾಗಿ ಬೇಯಿಸಿ ಎರಡು ಹೋಳಾಗಿ ಕತ್ತರಿಸಿ ಮಾಡಿದ ಮೆದುವಾದ ಅಡಿಕೆ; ಹೋಳಡಿಕೆ:(ಕ).

[ ←ತುಳು. ಜಿಬಳು, ಜಿಬುಲು, ಜಿಬುಳು=ಬೇಯಿಸಿದ ಹದವಾದ ಅಡಿಕೆ ]

**ಜಿಬಿ** 'ಜಿಬ್ಬು' ನೋ.

**ಜಿಬಿಲಿ, ಜಿಬ್ಲಿ** (ನಾ). (ಕರಾ) ಒಂದು ಬಗೆಯ ಆಟ ; ಕುಂಟುಬಿಲ್ಲೆ: ಆ ಕಟ್ಟೆಯ ಎದುರುನೆಲದಲ್ಲಿ ಜಿಬಿಲಿ ಕಣಗಳನ್ನು ಬರೆದು, ಹಲ್ಲೆಯ ಕಾಯನ್ನು ಎಸೆದು ಒಂಟಿಗಾಲಿನಿಂದ ಒಂದೆರಡು ತಾಸುಗಳನ್ನು ಆಟ ವಾಡುತ್ತ ಕಳೆಯಬಹುದು (ಸ್ವಪ್ನಹೊ. ೩೭). **ಜಿಬ್ಲಿ:** ಹಳ್ಳಿಯ ಆಟಗಳಾದ ಚಿಣಿಕೋಲು, ಜಿಬ್ಲಿ, ಗೊಡ್ಡು (ಒಂದು ಬಗೆಯ ಕ್ರಿಕೆಟ್), ಹುಲಿದನ ಇವು ನಮ್ಮ ವಿನೋದಗಳು (ಹುಮುಖ. ೨೦).

[ ←ತುಳು. ಜಿಬಲಿ, ಜಿಬುಳಿ ]

**ಜಿಬುರು** 'ಜಿಬರು' ನೋ.

**ಜಿಬ್ಬ** (ಗು). ಒಡೆದ; ಜಜ್ಜಿಹೋದ (?): ಹಬ್ಬವನು ಹೂಡಿದನು ಉಬ್ಬ ಊಳಿಗಕೆಲ್ಲ ಜಿಬ್ಬ ಕವಡೊಂದು ಬಳಿಯಿಲ್ಲ ಚೌಡನಿಗೆ ನಬ್ಬುನಸಕಿನಲಿ ಮನೆಬಿಟ್ಟ (ಕನ್ನಜಾ. ೨೯೩). [ <ಜಿಬ್ಬು ? ]

**ಜಿಬ್ಬಳ** 'ಜಿಬಳ' ನೋ.

**ಜಿಬ್ಬಳಿಕೆ** (ನಾ). ಅಂಟಂಟು; ಜಿಗಿಜಿಗಿ : 'ಜಿಬ್ಬಳಿಕೆ ಆಗ್ತದೆಯೆ!' ಎಂದೆಷ್ಟು ಹೇಳಿದರೂ ಬಿಡದೆ (ಮಲೆಮ. ೨೦೪). [ ಜಿಬ್ಬಳ (<ಜಿಬಳ) + – ಇಕೆ ]

**ಜಿಬ್ಬಿ** 'ಜಿಬ್ಬು' ನೋ.

**ಜಿಬ್ಬು, ಜಿಬಿ, ಜಿಬ್ಬಿ, ಜಿಬ್ಬೆ** (ನಾ). ೧. ಅಂಟಾಗಿರುವಿಕೆ; ಮೆತ್ತಿಕೊಳ್ಳುವಿಕೆ. ೨. ಮಾವಿನ ಅಂಟು ಅಥವಾ ಸೊನ್ನೆ. ೩. ಅಂಟು; ಲೋಳೆ : ಈ ಪುರಾತನ ಜಿಬ್ಬನ್ನು (ಸ್ಲೈಮ್) ಶೋಧನೆ ಮಾಡಿ, ವಿವರಿಸಿದವನು ಫೆಲಿಕ್ಸ್ ಡುಜಾರ್ಡಿನ್ (ಕವಿಕೋ. I. ೩೦). **ಜಿಬಿ:** ೪. ಕಳಿತ ಹಣ್ಣಿನಂತೆ ತುಂಬ ಮೆದುವಾಗಿರುವಿಕೆ. **ಜಿಬ್ಬಿ:** ೫. ಅಜಿಗಿಜಿಯಾದುದು ; ನುಗ್ಗಾದ ಸ್ಥಿತಿ ; ಜಜ್ಜಿ ಹೋಗಿರುವಿಕೆ ; ಮೆತ್ತಗಾಗಿರುವಿಕೆ: ಬೀಳೊ ಮಗನೆ, ಜಿಬ್ಬಿ ಆಗಿ ಸಾಯು (ಚೀನಸಾ. ೨೦೨). **ಜಿಬ್ಬೆ:** ೫. ಹನುಮಂತನು ಇಂತಹ ಅನೇಕ ವಿಚಾರಗಳ ಸುಳಿಗೆ ಸಿಕ್ಕು ಜಿಬ್ಬೆಯಾದನು (ಮುಗಿಮ. ೦೫೩);

**ಜಿಬಿಜಿಬಿ, ಜಿಬ್ಬೆಜಿಬ್ಬೆ** (ದ್ವಿರುಕ್ತಿ): "ಜಿಬಿಜಿಬಿ–ಅಂಟಂಟು" (ಜಾನಕೋ. ೬೦): ಈ ಭೈರವಿಯ ತೊತ್ತಳದುಳಿತಕ್ಕೆ ಪರಕೀಯ ಸೊತ್ತಿನ ನೊಗ ಜಿಬ್ಬೆಜಿಬ್ಬೆಯಾಯಿತು (ಸುವರ್ಣ. ೨೨೬). **ಜಿಬ್ಬಡಿಕೆ**=ಅಂಟಂಟಾದ ಅಡಕೆ : (ಕ). **ಜಿಬ್ಬಿಯಾಗು, ಜಿಬ್ಬೆಯಾಗು**=ಹಣ್ಣಾಗು; ಮೆತ್ತಗಾಗು; ನುಗ್ಗಾಗು: ಕಚೇರಿ ಕಟ್ಟೆಯ ವೆಚ್ಚದೊಳಗೆ ಮನುಷ್ಯ ಜಿಬ್ಬಿಯಾಗಿ ಹೋಗುತ್ತಾನೆ (ಪ್ರೇಮೂಶ್ರ. ೯೦) : ನೀಲನು ತುಸು ಅಲಕ್ಷ್ಯಮಾಡಿದ್ದರೆ ಅವನೂ ಅವನ ಕುದುರೆಯೂ ದನಗಳ ಕಾಲಲ್ಲಿ ಸಿಕ್ಕು ಅವುಗಳ ತುಳಿದಾಟದಿಂದ ಜಿಬ್ಬಿ ಯಾಗುತ್ತಿದ್ದರು (ಬಂಗಾಹೆ. ೫೦) ; ಹೆಂಡತಿ ಈ ಸಾಂಪ್ರದಾಯಿಕ ಭಾವದ ಮೂಢರ ಮಧ್ಯೆ ಸಿಕ್ಕಿ ಜಿಬ್ಬೆಯಾಗಲು ತೊಡಗಿರುವಳು (ರಾಮೂಕ. ೪೬).

[ ದೇ.H ತೆಲು. ಜಿಬ್ಬು ]

**ಜಿಬ್ಬೆ** 'ಜಿಬ್ಬು' ನೋ.

**ಜಿಬ್ಲಿ** 'ಜಿಬಿಲಿ' ನೋ.

**ಜಿಮಕಿ** 'ಜುಮುಕಿ' ನೋ.

**ಜಿಮಿಗುಡು** (ಕ್ರಿ). ಕೊಚ್ಚೆಯಾಗು ; ಅಜಿಗಿಜಿಯಾಗು : ರಸ್ತೆಯ ಜಿಮಿಗುಡುವ ಕೆಸರು ಕವಿದು ಮಳೆಯ ಮುಸುಗಿನೊಳಗೆ ದೂರದೃಶ್ಯಗಳೆಲ್ಲ ಸರಿದು ನಿಂತಿದ್ದವು (ಹೊಸಕ್ಷ. ೦೦೩).

[ ಜಿಮಿ₀ + ಕುಡು₁ (<ಕೊಡು₁) ]

**ಜಿಮ್ಮಂಡೆ** 'ಚಿಮ್ಮಂಡೆ' ನೋ.

**ಜಿಮ್ಮಿ** (ನಾ). ಒಂದು ಬಗೆಯ ಸಸ್ಯ : ತೇಜಫಲ, ಜಿಮ್ಮಿ, ತುಂಬುರು (ಮೈಜಿಗಿ. ೬೯–೦೬೨೦). [ ? ]

**ಜಿಮ್ಮೆ, ಜುಮ್ಮೆ** (ನಾ). ಅಧೀನ ; ವಶ ; ಸ್ವಾಧೀನ : ಶ್ರೀಮುಖ ಸಂವತ್ಸರದಾರಭ್ಯ ಗ್ರಾಮವನ್ನು ಆಚಾರ್ರಿ ಜಿಮ್ಮೆಮಾಡಿ ಕೊಟ್ಟು ವರುಷಂಪ್ರತಿಯಲೂ ಐದುವರಹದ ಮೇರೆಗೆ ಜೋಡಿ ತೆಗೆದುಕೊಳ್ಳುತ್ತಾ (ಮೈಆರಿ. ೧೯೨೯, ೯೪–೩೬ ; 1813); ಒಂದು ಡಿಸ್ಟ್ರಿಕ್ಟಿನ ರೆವಿನ್ಯೂ ಆಡಳಿತದ ಜಿಮ್ಮೆಯಲ್ಲಿರುವ ಮುಖ್ಯವಾದ ಸ್ಥಳೀಯ ಅಧಿಕಾರಿ (ಗ್ರಾಮೂಕ. ೮೬). **ಜುಮ್ಮೆ :** ಗಡಿಗಳ ಬದುಕೆಲ್ಲಾ ಮಾರಸಾಬರ ಕೈದಲ್ಲಿ ವೆಂಕಪ್ಪಯ್ಯನವರ ಜುಮ್ಮೆಮಾಡಿದರು (ಹೃದರ. ೦೧೪). [ ←ಅರ. ಹಿಂ. ಜಿಮ್ಮಾ ]

**ಜಿಯುಚಾಯ** (ನಾ). ಒಬ್ಬಾತನ ಹೆಸರು : ವೋದೂರ ಜಿಯುಚಾಯರುಂ ನರಸಾಕ್ಷಿ (ಮೈಆರಿ. ೧೯೨೬, ೧೧೯–೪೫ ; 726). [ ? ]

**ಜಿರಗುಟ್ಟು** (ಕ್ರಿ). ಜಿರ್ರೆಂದು ಶಬ್ದಮಾಡು: ಜಿರಗುಟ್ಟುವ ದುರಗುಟ್ಟುವ ಕತ್ತಲೋ ಕತ್ತಲೇ (ಹೃದಸ. ೩೭–೭). [ ಜಿರ₀ + ಕುಟ್ಟು₁ ]

**ಜಿರಲೆ** 'ಜಿರಲೆ' ನೋ.

**ಜಿರಳೆ** 'ಜಿಟಿಲೆ' ನೋ.

**ಜಿರಾ** (ನಾ). ಚಿಲಖತ್ತು ; ರಕ್ಷಾಕವಚ : ಸಕಲಾಯುಧಗಳಂ ತೆಗೆದುಕೊಂಡು ಅಂಗಿ ಪಾಗು ಜಿರಾ ಮೊದಲಾದ ವಸ್ತ್ರಗಳನ್ನು ಧರಿಸಿ (ಶಿವದ. ೯೩–೦೦). [ ←ಪಾರ. ಜಿರಹ್ ; ಮರಾ. ಜಿರಾ ]

**ಜಿರಾತಿ** 'ಜಿರಾಯಿತು' ನೋ.

**ಜಿರಾಪತಿ** 'ಜಿರಾವರ್ತಿ' ನೋ.

**ಜಿರಾಫೆ** (ನಾ). ಒಂಟೆಯ ಜಾತಿಗೆ ಸೇರಿದ ತುಂಬಾ ಉದ್ದವಾದ ಕೊರಳುಳ್ಳ, ಮೈಮೇಲೆ ಕರಿಯ ಮಚ್ಚೆಗಳುಳ್ಳ ಒಂದು ಬಗೆಯ ಪ್ರಾಣಿ : ಜಿರಾಫೆ ಎಂಬುದು ಬಹಳ ವಿಚಿತ್ರವಾದ ಒಂದು ಪ್ರಾಣಿಯ ಹೆಸರು (ಪ್ರಾಚಿಪ್ರ. ೩೦).

[ ←ಅರ. ಜಿರಾಫಾ ; ಪಾರ. ಸುನಾರ್ಘ್. /ಇಂ. Giraffe ]

**ಜಿರಾಯತ** 'ಜಿರಾಯಿತು' ನೋ.

**ಜಿರಾಯತಿ** 'ಜಿರಾಯಿತು' ನೋ.

**ಜಿರಾಯಿತ** 'ಜಿರಾಯಿತು' ನೋ.

**ಜಿರಾಯಿತದಾರ** 'ಜಿರಾಯಿತುದಾರ' ನೋ.

**ಜಿರಾಯಿತಿ** 'ಜಿರಾಯಿತು' ನೋ.

**ಜಿರಾಯಿತು,** ಜರಾಯಂತ, ಜಿರಾತಿ, ಜಿರಾಯಂತು, ಜಿರಾಯಂತಿ, ಜಿರಾಯಿಂತ, ಜಿರಾಯಿತಿ (ನಾ). ೧. ವ್ಯವಸಾಯ; ಬೇಸಾಯ. 'ಜಿರಾಯಿಂತುದಾರ' ಪರಾ. ೨. ವ್ಯವಸಾಯಕ್ಕೆ ಅರ್ಹವಾದ ನೆಲ,–ಭೂಮಿ. **ಜರಾಯತ:** ೧. ಜರಾಯತ ಮಾಡಬೇಕೆಂದು ದೂರ ದೇಶಕ್ಕೆ ಹೋಗಿ ಇದ್ದಂಥಾ ರೈತರನ್ನು ಕರೆಸಿ (ರಾಜೇಂದ್ರ. ೪೮). ೨. ನೀಲಿಯ ಬೀಜವನ್ನು ಜರಾಯತ ಪೈಕಿ ಯಾವ ಭೂಮಿಯಲ್ಲಾದರೂ ಬಿತ್ತಿದರೂ ಬೆಳೆಯುತ್ತದೆ (ಕೃಷಿಪ್ರ. ೯೩). **ಜಿರಾತಿ:** ೩. ತೋಟಗಾರಿಕೆ: (ವ್ಯಗಜಿ. IV, ೭೮೦). **ಜಿರಾಯತ:** ೨. ಜರಾಯತದಲ್ಲಿ ಎರಿಯ ಭೂಮಿಯೇ ಉತ್ತಮವು (ಕೃಷಿಪ್ರ. ೧೬೫). **ಜಿರಾಯತಿ:** ೧. ಮತ್ತೆ ಕೆಲವರು ವಂಶಪಾರಂಪರ್ಯವಾಗಿ ಬಂದ ಜಿರಾಯತಿಯಿಂದಲೂ . . . ಲಾಭದಾಯಕ ಬೇಸಾಯದಿಂದಲೂ ಸಾಕಷ್ಟು ಅನುಕೂಲವಾಗಿದ್ದರು (ಊರುಕ. ೪೧). **ಜಿರಾಯಿತ:** ೧. ಒಂದೆಕರೆ ಗದ್ದೆಯೂ ಜಿರಾಯಿತ ಆಗುತ್ತಿದೆ (ನಾಲ್ಕಮ. ೮). **ಜಿರಾಯಿತಿ:** ೧. ಯುದ್ಧವಿಲ್ಲದ ಕಾಲದಲ್ಲಿ ಜಿರಾಯಿತಿ ಕೆಲಸಗಳನ್ನು ಮಾಡಿಕೊಳ್ಳುತ . . . ಹಾಜರಾಗುತ್ತಿದ್ದರು (ಮಹಾವಂ. II, ४८); ಆಚಾರಿಗಳು . . . ಜಿರಾಯಿತಿಗೆ ಉಪಯುಕ್ತವಾದ ಉಪಕರಣಗಳನ್ನು ಮಾಡುತ್ತಿದ್ದರು (ಸರ್ವಮಂ. ೩೪೯).

**ಜಿರಾಯಿತುಜನ** = ರೈತಾಪಿಜನ; ಬೇಸಾಯಗಾರರು; ಒಕ್ಕಲಮಂದಿ: ದೊಡ್ಡ ದೊಡ್ಡ ಸರದಾರರು, ಮತ್ತು ಎಕ್ಕಂಡೆ ಸಿಪಾಯಿ, ಜಿರಾಯಿತು ಜನ, ಖಾಸಾಬಾರು, ಕಂದಾಚಾರ ಪಗ್ಗೆರೆ ಜನರಿಗೆ ಸೇರಿಸಿಕೊಂಡು ನಿಂತರು (ಚಿತ್ರಪಾ. ೬೪).
[ ←ಅರ. ಜಿರಾಅತ್; ಹಿಂ. ಜಿರಾಯತ್ ]

**ಜಿರಾಯಿತುದಾರ,** ಜಿರಾಯಿಂತದಾರ (ನಾ). ವ್ಯವಸಾಯವನ್ನು ವೃತ್ತಿಯನ್ನಾಗಿ ಹೊಂದಿರುವವನು; ಬೇಸಾಯವನ್ನೇ ಕಸುಬಾಗಿ ಉಳ್ಳವನು; ಬೇಸಾಯಗಾರ; ಒಕ್ಕಲಿಗ: ಹಣಗಾರರು ಹುಳ ಸಾಕುವ ಜಿರಾಯಿತುದಾರರಿಗೆ ಸಾಲ ಸೋಲ ಕೊಟ್ಟುಕೊಂಡು ಸಾಹುಕಾರರು ಎಂಬ ಬಿರುದನ್ನು ಪಡೆದು (ಕಲಸಿ. ೩೦೦). **ಜಿರಾಯಿಂತದಾರ:** ತಮ್ಮ ದನಗಳಿಗೆ ಅಲಂಕಾರವಮಾಡಿ ಊರಿನ ಸುತ್ತ ಓಡಿಸಿ ಆನಂದಪಡುವದೇ ಜಿರಾಯಿತದಾರನ ಸಂತೋಷ (ಭೀಮಕಾ. ೧೨೯). [ ಜಿರಾಯಿತು + – ದಾರ್$_4$ ]

**ಜಿರಾವರ್ತಿ,** ಜಿರಾಪತಿ (ಗು). ಹೆಚ್ಚಾದ; ಪ್ರಬಲವಾದ; ಜೋರಾದ: ಗಾಳಿಮಳೆ, ಹನಿಹನಿಮಳೆ, ಜಡಿಮಳೆ, ಜಿರಾವರ್ತಿ ಮಳೆಯೂ ಸುರಿಯ ತೊಡಗಿತು (ಬಾಳಗಿ. ೫೩). **ಜಿರಾಪತಿ:** ಆ ಜಿರಾಪತಿ ಮಳೆಯಲ್ಲಿ ವಾಲಗದವರು ಬರದಿದ್ದ ಪ್ರಯುಕ್ತ (ಮಲಮ. ೬೩೨); ಅಂಥಾ 'ಜಿರಾಪತಿ' ಮಳೆಯಲ್ಲಿ ಮನೆಬಿಟ್ಟು . . . ಮದುವೆಗೆ ಹೊರಡುವ ಮನುಷ್ಯ ಯಾರು (ಮರಮ. ೨). [ ? ]

**ಜಿರಿ** (ನಾ). ಹಳೆಯದಾಗಿ ಶಿಥಿಲವಾದದ್ದು; ಜೀರ್ಣವಾದದ್ದು: ಮುಪ್ಪಾಗಿ ಜಿರಿಯಾದ ಬಟ್ಟೆಯನು ಬೀಸಾಡಿ (ಸಹೀಗೀ. ೬೬–೯); ನೋವುಗಳ ಜಾಲದಲಿ ಜಿರಿಯಾದ ಜೀವಕ್ಕೆ ನಿತ್ಯದಾ ಗಾಯತ್ರಿ "ಮರಣವೇ ಶರಣ" (ಬಿಪಾಸಿ. ೩–೦೯). [ <ಪ್ರಾ. ಜೀರ ]

**ಜಿರಿಕೆ** (ನಾ). ಜೀರಂಗಂಟ್ಟುವಿಕೆ; ಶಬ್ದಮಾಡುವಿಕೆ: ಕರಿಯ ಘೋಷಣೆ ರಥದ ತುರಗ ಗರ್ಜನೆ ಜಿರಿಕೆ ಮೊರೆವ ವಾದ್ಯಬ್ಬರದ ಬಿರಿದು ಬೊಬ್ಬಿರಿವ ರವ ಧುರದ ಧನು ಠೇಂಕಾರನಾದವಾ ಯಮಲೋಕವಮಂ ತುಂಬಿತು (ತುರಂಗ. ೪೬–೨೬). [ ಜಿರ್ + – ಇಕೆ ]

**ಜಿರುದುಂಬಿ** 'ಜೀರ್ದುಂಬಿ' ನೋ.

**ಜಿರ್ಕರೆ** (ನಾ). ಜಿರ್ ಎಂದಂ ಶಬ್ದಮಾಡಂ: ತಿಳಿಯದೆನೆ ಕಾರ್ಮುಗಿಲ್ ಜಿರ್ಕರೆಯುತಿಹುದು (ಕಾಲೂರ. ೫೦–೬೩). 'ಜೀರ್ಗರೆ' ಪರಾ.
[ ಜಿರ್ + ಕರೆ$_1$ ]

**ಜಿಲ್** (ನಾ). ಒಂದಂ ಅನುಕರಣ ಶಬ್ದ. 'ಜಿಲ್ಲಿಟು' ಪರಾ.
ಜಿಲ್ಲೆನ್ನು=ಚಳಿಯಿಂದ ಜುಮ್ಮೆನ್ನು: (೩).

**ಜಿಲಿಬಿಲಿ** 'ಜಿಲೇಬಿ' ನೋ.

**ಜಿಲಿಬಿಲಿಗ** (ನಾ). ಒಂದಂ ಬಗೆಯಂ ಪಕ್ಷಿ; "ಹಾಲುಹಕ್ಕಿ" (ನಳಚ. ಟೀಕು): ಶುಕ ನವಿಲು ಜಲಿಬಿಲಿಗ ಗೀಜುಗ ಬಕ ಹಸುಬ . . . ವಿನಾಂಬುಲಿಗ ಹಕ್ಕಿಗಳು ರಂಜಿಸಿತು (ನಳಚ. ೧–೪೨). 'ಚಿಲಿಪಿಲಿಹಕ್ಕಿ', 'ಚಿಲಿವಿಂಲಿಗ' ಪರಾ.

**ಜಿಲಿಬಿಲ್ಲಿ** (ನಾ). ಒಂದಂ ಬಗೆಯ ಆಟ: ಗುಲಗಂಜಿ ಗುಪ್ಪೆಂದೆ ಬಿಲ್ಲೈಹರಳು ಬಿಲ್ಲು ಜಿಲಿಬಿಲ್ಲಿ ಜಿಂಕೆ ಭೊಗರಿ ಚೆಂಡು (ವಿಸ್ವಾಸು. ೦೯–೩).
[ <ಜಬಿಲಿ ? ]

**ಜಿಲೀಪು** 'ಜಿಲೀಬಿ' ನೋ.

**ಜಿಲೀಬಿ,** ಜಿಲೀಪು (ನಾ). ಊಳಿಗ; ಚಾಕರಿ. 'ಜಿಲೀಬಿದಾರ' ಪರಾ. **ಜಿಲೀಪು:** ಊರೊಳಗೆ ಬರುವಾಗ ನೇಮದ ಜಿಲೀಪಿನವರೂಳಿಗದ ಹರಿಕಾರರನ್ನು ಕಳುಹಿ (ಕೃಷ್ಣವಿ. ೩–೩).
[ ←ಮರಾ. ಜಲೀಬ್; ಪಾರ. ಜಲಬೀ ]

**ಜಿಲೀಬಿದಾರ** (ನಾ). ಸೇವಕ; ಚಾಕರ: ನ್ಯಾಯಾಧಿಪತಿಯು ಈ ಒಕ್ಕಲಿಗನನ್ನು ಹಿಂಗಟ್ಟುಮುಂಗಟ್ಟು ಕಟ್ಟಿಸಿ, ಜಿಲೀಬಿದಾರಾ ಇವನಿಗೆ ನೂರಿಪ್ಪತ್ತು ಕೊರಡಾ ಹೊಡಿ . . . ಎಂದನು (ಕಥಾಮಂ. IV, ४१).
[ ಜಿಲೀಬಿ + – ದಾರ್$_4$ ]

**ಜಿಲೆಯ** (ನಾ). ಲೋಹದ ಕವಚ; ಚಿಲಖತ್ತು; ಸವಂಗ: ಆ ಬೊಕ್ಕಸಿಗನ ಕ್ರೂರಾಸಿವಿಘಾತಿಯಿಂ ಸದಾಶಿವನಾಯಕಂ ತೊಟ್ಟಿರ್ದ ಜಿಲೆಯಂ ಪರಿದು . . . ಮಸೆದೋಱಲಾಗಳಾ ಗಾಯಮಂ ಸೈರಿಸಿ (ಕೆಳನೃ. ೨–೮); ದಂತದ ಸೂನಗೆ ಸೊಂಡಿಲೊಳಾಂತಸಿ ವ್ಯೆಗಮರ್ದ ಜಿಲೆಯ ಬಕತರ ಚೂಡಾಲಂ . . . ಇದಿರಾಂತಂ (ಕೆಳನೃ. ೨–೨೬). 'ಜಿರಾ' ಪರಾ. [ ← ಪಾರ. ಜಿರಹ್ ]

**ಜಿಲೇಬಿ,** ಜಿಲಿಬಿಲಿ (ನಾ). (ಮೈದಾಹಿಟ್ಟಿನಿಂದ ತಯಾರಿಸಿ) ಕರಿದಂ ಸಕ್ಕರೆಯಂ ಪಾಕದಲ್ಲಿ ನೆನೆಸಿದ ಒಂದಂ ಬಗೆಯಂ ಚಕ್ಕುಲಿಯಾಕಾರದ ಸಿಹಿತಿಂಡಿ: ಏನು ಕೊಡಲಿ ಸಾರ್, ಜಾಮೂರ್ನ್, ಜಿಲೇಬಿ (ಮಹಾಲ. ೪೬); ಒಂದು ಜಿಲೇಬಿ ಮಾಡಿಸಿ ಬಿಟ್ಟರೆ ಸಾಕಲ್ಲ? (ತಿಮಗು. ೫೪). **ಜಿಲಿಬಿಲಿ:** ಕಸಕಸಿ ಕೊಬ್ಬರಿ ಹಸನುಳ್ಳ ಜಲಿಬಿಲಿ ಬಿಸಿಯ ಹೂರಣಗಡಬ ಬಿಳಿಯ ಬೆಲ್ಲ . . . ಮುಂದಿಟ್ಟರ ಇಸಮಾಡಿ ಒಂದು ತುತ್ತ ತಿಂದೇನ (ಮಲ್ಲಿಗೆ. ೮೩–೧). [ ←ಹಿಂ. ಜಲೇಬೀ, ಜಲೇಬೀ; ಮರಾ. ಜಲಬೀ, ಜಿಲೇಬೀ ]

**ಜಿಲೇವು** (ನಾ). (ಉಕ) ಹೊಳಪು; ಕಾಂತಿ; ಮೆರುಗಂ; ಪ್ರಕಾಶ: (೩).
[ ←ಅರ. ಜಿಲಾ; ಪಾರ. ಜಿಲ್ಹಈ ]

**ಜಿಲ್ಲಡಿ** (ನಾ). ಎಕ್ಕದಗಿಡ: (ಎಸಮ್ಮ. I, ೩೦). [ ? ]

**ಜಿಲ್ಲಾ,** ಜಿಲ್ಲೆ, ಜಿಲ್ಹೆ (ನಾ). ಹಲವು ತಾಲ್ಲೂಕಂಗಳನ್ನೊಳಗೊಂಡ ದೇಶದ ಒಂದಂ ಭಾಗ; ಪರಗಣೆ: ಇವರಿಗೆ ಬೊಂಬೈ ಜಿಲ್ಲಾದಲ್ಲಿ ನಾಡು ಪಟೇಲ ಹೆಗ್ಗಡೆ ಎಂತಲೂ ಹೆಸರುಂಟು (ಗ್ರಾಮಾಕ. ೦). **ಜಿಲ್ಲೆ:** ಕರ್ನಾಟಕದ ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನ ಮುಖ್ಯವಾದ ಸ್ಥಳ ನಿಟ್ಟೂರು (ನಿಟ್ಟೂಶಾಂ. ೩); ಕೇರಳದ ಕಾಡಾರ್, ದಕ್ಷಿಣಕನ್ನಡ ಜಿಲ್ಲೆಗಳ ಹವ್ಯಕರ ಕನ್ನಡ – ಇವು ಈ ಗುಂಪಿಗೆ ಸೇರಿದ ಉಪಭಾಷೆಗಳು (ದ್ರಾವಿವಿ. ೦೩೫). **ಜಿಲ್ಹೆ:** ಸನ್‍ಲಾಯಿ ಈ ಜಿಲ್ಹೆಯ ಮುಖ್ಯಸ್ಥಳ (ಬಂಗಾಹೆ. ೩೬).
[ ←ಅರ. ಜಿಲಅ; ಹಿಂ. ಜಿಲಾ; ಮರಾ. ಜಿಲ್ಹಾ ]

**ಜಿಲ್ಲಾಧಿಕಾರಿ** (ನಾ). ಜಿಲ್ಲೆಯಂ ವರಿಷ್ಠಾಧಿಕಾರಿ: ಅಂದು ಜಿಲ್ಲಾಧಿಕಾರಿಗಳು ಮುಖ್ಯ ಅತಿಥಿಗಳಾಗಿ ಬಂದಿದ್ದರು (ರೂಢಿ).
[ ಜಿಲ್ಲಾ + ಅಧಿಕಾರಿ ]

**ಜಿಲ್ಲಾಮಂಡಲಿ** (ನಾ). ಜಿಲ್ಲೆಯ ಆಡಳಿತಕ್ಕೆ ಸಂಬಂಧಿಸಿದ ಸಭೆ,-ಸಮಿತಿ : ನಗರಪಾಲಿಕೆಗಳ ಜಿಲ್ಲಾಮಂಡಲಿಗಳ . . . ಸದಸ್ಯರುಗಳಿಂದ ಕೂಡಿ (ಭಾಧಾನ. ೯೦). [ ಜಿಲ್ಲಾ + ಮಂಡಲಿ ]

**ಜಿಲ್ಲಿ** (ನಾ). ಮಣ್ಣಿನ ಪಾತ್ರೆಗೆ ಬಿದ್ದ ಅಥವಾ ಮಾಡಿದ ಸಣ್ಣ ತೂತು : (ಈ). [ ದೇ.॥ ತಮಿ. ಇಲ್ಲಿ ; ಮಲ. ತೆಲು. ಚಿಲ್ಲಿ ]

**ಜಿಲ್ಲಿದುಂಬಿ** (ನಾ). ಮರಿ ದುಂಬಿ : ಮಲ್ಲಿಗೆಯಲರ್ದಂಡೆವಿಡಿಯೆ ಬಂದೆಱಗುವ ಜಿಲ್ಲಿದುಂಬಿಗೆ ಬೆರ್ಚಿ ನಿಂದು ಸೊಲ್ಲಿಪ ಪೂಮಾಲೆಗಾರ್ತಿ (ಮೋಹತ. ೩-೧೭). [P ಇದು 'ಜಲ್ಲಿದುಂಬಿ' ಎಂಬುದರ ಅಪಲಿಖಿತವಿರ ಬಹುದು]

**ಜಿಲ್ಲಿಱು** (ಕ್ರಿ). ಜಿಲ್ ಎಂದಂ ಚಿಮ್ಮು : ಮತ್ತಮತಂಗಮದಂಗದೊಳೊಜ್ಜರಿಸುತ್ತ ನೆಲಕ್ಕೆ ಜ[ಪಾಠಾಂ. ಜ]ಲ್ಲಿಱಿದುಗುತಹ ಬಿಸೊನೆತ್ತರ ಪೊನಲ್ (ಜಯಚಾ. ೭-೩೨). [ ಜಿಲ್ + ಇಱು$_1$ ]

**ಜಿಲ್ಲು** (ಕ್ರಿ). ಸಂತ್ರಮಯತ್ತ ಹಾರು ; "ಸುತ್ತಲೂ ಸಿಡಿ" (ಜಾನಕೋ. ೭೦). [ ? ]

ಜಿಲ್ಲೆ 'ಜಿಲ್ಲಾ' ನೋ.

**ಜಿಲ್ಲೆದಾರ** (ನಾ). ಗ್ರಾಮಾಧಿಕಾರಿ : ಮಾಮಲೇದಾರನ ಕೈಕೆಳಗೆ ಮೂವರಾಗಲಿ ನಾಲ್ವರಾಗಲಿ ಜಿಲ್ಲೇದಾರರೆಂಬ ಕಾರಕೂನರಿರುತ್ತಿದ್ದರು (ಕಭಾಗ. ೩೬೭). [ ←ಅರ. ಹಿಂ. ಜಿಲೇದಾರ್ ]

ಜಿಲ್ಹೆ 'ಜಿಲ್ಲಾ' ನೋ.

**ಜಿವಸ್ನಾನ** (ನಾ). (?) : ಪತಿತನ ಭಿನ್ನಭಾರ್ಯಾದವನಾ ಜಿವಸ್ನಾನ ವಿವರ್ಜಿತನಾದವನ ವೇದಶಾಸ್ತ್ರವಿಹೀನನಾದವನ ನಿಮಂತ್ರಣಕ್ಕೆ ಹೇಳಬಾರದು (ಶೀಷಧ. ೦೬). [ P ಇದು 'ದಿವಾಸ್ನಾನ' ಎಂಬುದರ ಅಪಲಿಖಿತ ವಿರಬಹುದು ]

ಜಿವಿ 'ಜಂಮ್ಮು' ನೋ.

ಜಿವಿರು 'ಸಿವುಱು$_1$' ನೋ.

ಜಿವಿಹಿಡಿ 'ಜಂಮ್ಮುಹಿಡಿ' ನೋ.

ಜಿವುಳಿ 'ಚಿಗುಳಿ' ನೋ.

ಜಿವುಳಿದುಱು 'ಚಿಗುಳಿದುಱು' ನೋ.

**ಜಿಷ್ಣು** (ನಾ). ೧. ವಿಜಯಿ ; ಜಯಶಾಲಿ ; ಗೆದ್ದವನು : ಪರಭೂಪಾಳಕ ಜಿಷ್ಣು ಶತ್ರುದಹನಂ ದುಷ್ಟಾರಿಕಾಳಂ (ಎಕ. V, ಅರಸೀ. ೦೬೨-೩೦; 1163); ಲೋಕತ್ರಯೀಜಿಷ್ಣುವನೆನ್ನಂ ಭೂಪನಂದಂ ತೃಣ[ವೆನೆ]ಲಘುವಂ ಮಾಡಿತು (ಪುಷ್ಪಪು. ೩-೨೩) : ಸತ್ಯ ಪರಾಕ್ರಮನಾಗಿರುವುದರಿಂದ ಜಿಷ್ಣುವೆಂದು ಹೆಸರು (ಭಾರತಾಂ. ೪೩). ೨. ಕಾಮನೆಗಳನ್ನು ನಿಗ್ರಹಿಸಿದವನಂ ; ಜಿನ; ಅರ್ಹಂತ. ೩. ಸ್ವರ್ಗಾಧಿಪತಿ; ದೇವೇಂದ್ರ: ಅಂತು ವಿಷ್ಣು ಜಿಷ್ಣುಗಳ್ ಪರಸ್ಪರಂ ಶರವರ್ಷಮಂ ಕಱೆಯೆ (ಜಗವಿ. ೦೩-೯೩ ವ) ; ಎಲೆ ಜಲಧಿ ಜಿಷ್ಣು ಚಕಿತಾಚಲಪಾಲಕ ಕಾವುದೆಮ್ಮಂ (ರಾಜಶೇ. ೧-೯೫). ೪. ವಿಷ್ಣು ಅಥವಾ ಕೃಷ್ಣ. ೫. ಶಿವ ; ಈಶ್ವರ. ೬. ಅರ್ಜುನ ; ಧನಂಜಯ : ನಸುನಗುತರ್ಜುನನು ಫಲುಗುಣ ಧನಂಜಯ ಜಿಷ್ಣು . . . ಸವ್ಯಸಾಚಿ ಗಳೆನಿಪ ಪೆಸರನು ತಿಳುಹಿ (ಕುಮ್ಮಾವಿ. ೭-೪೭) : "ಅನಂತ ಗಿರಿಜೇಶ ಧನಂಜಯ ವೀತರಾಗ ಜಂಭಾರಿ ವಿರೋಧಿಮರ್ದನರೊಳೊಪ್ಪುವುದಿಂತಿವು ಜಿಷ್ಣುವಾಚಕಂ" (ನಾನಾರ. ೩೯). [ ಸಂ. ]

**ಜಿಷ್ಣುಚಾಪ** (ನಾ). ಕಾಮನ ಬಿಲ್ಲಂ ; ಇಂದ್ರಚಾಪ : ಘನಾಗಮದಂತೆ ಜಿಷ್ಣುಚಾಪಶರಕರಕೋದಂಚಿತಮುಂ (ರಾಜಶೇ. ೭-೧೭ ವ).

[ ಜಿಷ್ಣು + ಚಾಪ ]

**ಜಿಷ್ಣುಸಾರಥಿ** (ನಾ). ಅರ್ಜುನನ ಸಾರಥಿಯಾದವನು ; ಕೃಷ್ಣ : ಜಿಷ್ಣುಸಾರಥಿ ರಾಮ ಅಚ್ಯುತಾಧೋಕ್ಷಜ ಸೃಷ್ಟಿಗೊಡೆಯ ಭಾರ್ಗವಮೂರುತಿ (ವಿದಾಕ್ಯ. ೭೭-೬). [ ಜಿಷ್ಣು + ಸಾರಥಿ ]

**ಜಿಹಾಸೆ** (ನಾ). ೧. ತ್ಯಜಿಸುವ ಅಪೇಕ್ಷೆ ; ಬಿಟ್ಟುಕೊಡುವ ಬಯಕೆ : ಇನ್ನು ಬೇಡ ಈ ನಿರಾಶೆ, ಮನವೆ; ಬೇಡ ಈ ಜಿಹಾಸೆ (ಸುನೀತ. ೬೯-೨). ೨. ಬೇಸರ ; ನಿರುತ್ಸಾಹ; ಜಂಗುಪ್ಸೆ: ಯುಧಿಷ್ಠಿರನಿಗೆ ತುಂಬ ಜಿಹಾಸೆಯುಂಟಾಗಿಬಿಟ್ಟಿತ್ತು (ವಚಭಾ. ೩೨೮) ; ಸರ್ವವಿಷಯದಲ್ಲಿಯೂ ಅವನಿಗೆ ಜಿಹಾಸೆ (ರಾಜಸೂ. ೬೮). [ ಸಂ. ಜಿಹಾಸಾ ]

**ಜಿಹ್ಮ** (ನಾ). ೧. ವಕ್ರವಾದುದು; ಕುಟಿಲವಾದುದು; ಡೊಂಕಾದುದು: "ವೇಲ್ಲಿತಂ ಜಿಹ್ಮಂ ವೃಜಿನಮೆನಲು ಪೊರೆದ ಕೊಂಕಕ್ಕು" (ಮಂಗರಾ. ೦೨೭-೭). ೨. ಜಡ ; ಸೋಮಾರಿ ; ಆಲಸಿ : "ಅಲಸಃ, ಶಿಥಿಲಃ, ಮಂದಃ, ಜಡಃ, ಜಿಹ್ಮಃ, ಮಂಥರಃ-ಈ ೬ ಸೋಂಬಂ" (ಹಲಾಯು. ೬೯-೨೩೩); ಲೊಡಕ ಲೊಡಕ ಜಿಹ್ಮರ ಕೆಟ್ಟ ಸಂಸಾರವು ನೋಡಮ್ಮಮ್ಮ (ಪುರಂದ. ೫-೦೦೦-೧). [ಸಂ. ]

**ಜಿಹ್ಮಗ** (ನಾ). ವಕ್ರವಕ್ರವಾಗಿ ಚಲಿಸುವ ಪ್ರಾಣಿ ; ಹಾವು ; ಸರ್ಪ : "ಓಂಡಲಂ . . . ಜಿಹ್ಮಗಂ ಕುಂಡಲಯೆನಿಕು" (ಮಂಗರಾ. ೦೧೯-೨). [ಸಂ.]

**ಜಿಹ್ಮ$_1$** (ನಾ). ೧. ಕಪಟ ; ಮೋಸ : ಜಗದೊಳು . . . ಕರಿ ತೇರುವಾಜಿಯಾಳುಗಳವರಿಂದ ಜಂಹೆ[ಜಿಹ್ಮ]ಗಳನೊಡ್ಡಿ ಜಯದ್ರಥನಲ್ಲಿ ಪೊಕ್ಕು (ಕಱಿಕಂ. ೩೦). ೨. [ನಾಟ್ಯ] ವ್ಯಭಿಚಾರಿ ಭಾವಯಂಕ್ತವಾದ ದೃಷ್ಟಿಭೇದಗಳಲ್ಲಿ ಒಂದಂ ; ಅಸೂಯೆ, ನಿಗೂಢಾರ್ಥ, ಜಡತ್ವ, ಆಲಸ್ಯ ಇವುಗಳನ್ನು ತೋರಿಸುವಾಗ ಅರೆಗಣ್ಣಿನಿಂದ ಪಕ್ಕವನ್ನು ನೋಡಂವಿಕೆ: ಪೊಳೆವರೆಗಣ್ಣಂ ಕೆಲದೊಳ್ ಕಳಲ್ಚಿ ಬೀಳ್ವಾಲಿಯಾಗೆ ಜಿಹ್ಮೆಯೆನಿಕ್ಕುಂ (ಲಾಸ್ಯರಂ. ೩-೩೦). [ ಸಂ. ಜಿಹ್ಮ ]

**ಜಿಹ್ಮೆ$_2$** (ನಾ). ಶರೀರದ ಹದಿನಾಲ್ಕು ಮಂಖ್ಯನಾಡಿಗಳಲ್ಲಿ ಒಂದಂ : ತರಳ ತಿಳಿ ನಾಡಿಗಳ ಚೌದಶಗಳಿಗೆ ನಾಮಗಳಾಯುರು ಸುಷುಮ್ನೆ . . . ಜಿಹ್ಮೆಯಾ ಅಶ್ವಿನಿ (ಗಗತಾ. ೯-೦೦). [ ಸಂ. ಜಿಹ್ವಾ ]

**ಜಿಹ್ವ** (ನಾ). ನಾಲಗೆ ; ರಸನೇಂದ್ರಿಯ : ಮಾಣದೆ ಮಮ ಜಿಹ್ವದಿ ನೆಲೆಗಾಣಿಸೆ ದಯದಿಂದಲೀಗೆನಗೆ ಸನ್ಮತಿಯಂ (ನೀಲಧ್ವ. ೭). [ ಸಂ. ಜಿಹ್ವಾ ]

**ಜಿಹ್ವಕ** (ನಾ). ೧. ಹದಿಮೂರು ವಿಧವಾದ ಸನ್ನಿಪಾತ ಜ್ವರಗಳಲ್ಲಿ ಒಂದಂ ; ಶ್ವಾಸ, ಕೆಮ್ಮು, ವೈಯಂರಿತ, ಕಂಗೆಡಿಕೆ, ನಾಲಿಗೆಯಂಲ್ಲಿ ಬಿರುಸು ಮಂಂತಾದ ಲಕ್ಷಣವುಳ್ಳ ಸನ್ನಿಪಾತ: ಮತ್ತಮಾ ತ್ರಯೋದಶ ಸನ್ನಿಪಾತಮಾವುದೆಂದೊಡೆ:-ಸಂಧಿಗ, ಅಂತಕ . . . ಜಿಹ್ವ[ಪಾಠಾಂ. ಹ್ವಾ]ಕ, ಅಭಿನ್ಯಾಸ, ಪ್ರಳಾಪಗಳು (ಸಕವ್ಯ. ೦೫೦). ೨. [ಕಾಮಶಾ] ನಿಮಿತ್ತಕ, ಸಂಘಟಕ, ಸ್ಫುರಿತಕ, ಭ್ರಾಂತಕ, ತಿರ್ಯಗಾಯಿತಕ, ಅತಿದೃಷ್ಟಕ, ಉತ್ತರ, ಸಂಘಟ್ಟಿತಕ, ಜಿಹ್ವಾಮೇಳನಕ, ಜಿಹ್ವಕ, ಅತಿಜಿಹ್ವಾಯೋಗ, ಸೀತ್ಕಾರ, ದಂಶನಕ ಎಂಬ ಚುಂಬನದ ಹನ್ನೆರಡು ವಿಧಗಳಲ್ಲೊಂದು : ರಸನೆಯಿಂದೊಯ್ಯನಲೆದು . . . ಜೀವೇಶಂ ಚುಂಬನಮನೊಡರ್ಚೆ ಜಿಹ್ವಕಮೆನಿಕುಂ (ಮನ್ಮವಿ. ೦೨-೯) ; ಜಿಹ್ವಕ . . . ಸೀತ್ಕಾರ ದಂಶನಕವೆಂಬ ದ್ವಾದಶವಿಧ ಚುಂಬನ ಸಂಭ್ರಮಗಳಿಂ (ವಿವೇಕ. ೨೨೯). [ ಸಂ. ]

**ಜಿಹ್ವಾಗ್ರ** (ನಾ). ನಾಲಗೆಯ ತುದಿ; ತಂದಿನಾಲಗೆ: ವಾಣಿ ಬಂದು ಸಮಂತಿರ್ಕೆ ನವೀನ ಸೌರಭದವೋಲ್ ಜಿಹ್ವಾಗ್ರದೊಳ್ ರುದ್ರನಾ (ಜಗವಿ. ೧-೬); ಎನ್ನ ಜಿಹ್ವಾಗ್ರದೊಳಾವಗಂ ಸರಸತಿಯಿರ್ಪುದಿಲ್ಲಂ (ಅದ್ಭುತ. ೧೭-೦೨).

[ ಸಂ. (ಜಿಹ್ವಾ + ಅಗ್ರ) ]

**ಜಿಹ್ವಾಚಾಪಲ್ಯ** (ನಾ). ೧. ಕಂಡಂದನ್ನೆಲ್ಲಾ ತಿನ್ನಬೇಕೆಂಬ ಆಸೆ; ನಾಲಗೆಯ ಚಪಲತೆ. ೨. ಮನಸ್ಸಿನಲ್ಲಿ ಇರುವುದನ್ನೆಲ್ಲಾ ಆಡಿಬಿಡಬೇಕೆಂಬ ಆಸೆ ; ಮಾತನಾಡುವ ಚಪಲ : ಅವರ ಜಿಹ್ವಾಚಾಪಲ್ಯ ನನ್ನ ಶ್ರವಣ ಚಾಪಲ್ಯಕ್ಕೆ ಒಗ್ಗಿ ಸಿಹಿಯಾಗಿತ್ತು (ಹೊಸಕ್ಷ. ೦೭೫).

[ ಸಂ. (ಜಿಹ್ವಾ + ಚಾಪಲ್ಯ) ]

**ಜಿಹ್ವಾಪ** (ನಾ). ನಾಲಗೆಯಿಂದ ಲೊಚಗುಟ್ಟಿ (ನೀರು) ಕುಡಿಯುವ ಹುಲಿ, ಬೆಕ್ಕು, ನಾಯಿ ಮೊದಲಾದ ಪ್ರಾಣಿ: ಬೇಳಾಗದೆ ಜಿಹ್ವಾಪಂ ಮೇಳಿಸಿ ಬಂದಡಸಿ ಪಿಡಿಯಲೊಡನಾ ದಷ್ಟಂಗೇಳಿಸದಿರದು ಗಡ ನೀಂ ಕೋಟಿಯ ವಿಷ್ಮೆಯನೆ ಪೂಸೆ ತದ್ವಿಷಮಬ್ಗುಂ (ಖಮದ. ೧೩-೪೧). [ಸಂ.]

**ಜಿಹ್ವಾಪ್ರತ್ಯಕ್ಷ** (ನಾ). ನಾಲಗೆಯ ಮೂಲಕ ರುಚಿಯನ್ನು ಪ್ರಮಾಣಿಸಿ ತಿಳಿಯುವಿಕೆ: ನಾಲಗೆಯಿಂ ಸವಿಯೆ, ಇದು ಮಧುರಂ ಇದು ಪುಳಿ ಇದುರ್ಪು ಎಂಬಿವು ಮುಂತಾಗಿ ಪುಟ್ಟುವ ತಿಳಿವು ಜಿಹ್ವಾಪ್ರತ್ಯಕ್ಷವೆನಿಪುದು (ಜಿಕಬಿ. ೩). [ಸಂ. (ಜಿಹ್ವಾ + ಪ್ರತ್ಯಕ್ಷ)]

**ಜಿಹ್ವಾಬಂಧ** (ನಾ). ನಾಲಗೆಯ ಮೂಲ, -ಬುಡ: ಎರಡುಮಣಿಗೆಯೊಳಗಣ ಭಾಗದ ನಡುವಣ ಪ್ರದೇಶಕ್ಕೆ ಜಿಹ್ವಾಬಂಧಮೆಂಬ ಪೆಸರಕ್ಕುಂ (ಅಶ್ವಶಾ. ೮೭-೪ ಟೀಕು): ನಾಲಗೆಯ ಮೊದಲಿಗೆ ಜಿಹ್ವಾಬಂಧವೆಂಬ ಹೆಸರು (ಅಶ್ವಟೀ. ೬೮-೮). [ಸಂ. (ಜಿಹ್ವಾ + ಬಂಧ)]

**ಜಿಹ್ವಾಮೂಲ** (ನಾ). = ಜಿಹ್ವಾಬಂಧ: ಕೊರಲುಂ ಜಿಹ್ವಾಮೂಲಮುಮುರಮುಂ . . . ದಂತಮುಮೆಂದಕ್ಕರಮುದಯಿಪ ತಾಣಮಾದುವೀ ಪೇಟ್ದೆಂಟುಂ (ಶಮದ. ೩೦). [ಸಂ. (ಜಿಹ್ವಾ + ಮೂಲ)]

**ಜಿಹ್ವಾಮೂಲೀಯ** (ನಾ). [ವ್ಯಾಕ] 'ಕ' ಕಾರದ ಹಿಂದಿರುವ ವಿಸರ್ಗದಂತಿರುವ ವರ್ಣ: 'ಕ'ಕಾರಮುಚ್ಚಾರಣಾರ್ಥಮಾಗುಟಿದ ಪಸುಂಬೆಯ ಲಕ್ಷಣದಂತಿರ್ದ ವರ್ಣಂ ಜಿಹ್ವಾಮೂಲೀಯಮೆಂಬುದು (ಕಕಾರದ ಸಂಗಡದ) ಅದಱ ಸ್ವರೂಪಂ (ᵡ) (ಶಮದ. ೧೭ ವೃತ್ತಿ). [ಸಂ.]

**ಜಿಹ್ವಾಮೇಳನಕ** (ನಾ). [ಕಾಮಶಾ] ಚುಂಬನದ ಹನ್ನೆರಡು ವಿಧಗಳಲ್ಲಿ ಒಂದು; ಪ್ರಣಯಿಗಳು ಪರಸ್ಪರ ನಾಲಗೆಯನ್ನು ಕೂಡಿಸುವುದು: ಜಿಹ್ವಾಮೇಳನಕ . . . ಸೀತ್ಕಾರ ದಂಶನಕವೆಂಬ ದ್ವಾದಶ ವಿಧ ಚುಂಬನ ಸಂಭ್ರಮಿಗಳಂ (ವಿವೇಕ. ೩೩೪). 'ಜಿಹ್ವಕ' ಪರಾ. [ಸಂ. ಜಿಹ್ವಾಮೇಲನಕ]

**ಜಿಹ್ವಾರವ** (ನಾ). ಸೀತ್ಕಾರ: "ಶ್ವಾಸಕಂ ಜಿಹ್ವಾರವಂ" (ಮಂಗರಾ. ೯೭-೧೬). [ಸಂ. (ಜಿಹ್ವಾ + ರವ)]

**ಜಿಹ್ವಾರಾಜಿ** (ನಾ). ಗಂಟಲ ಮೇಲಟ್ಟ; ಅಂಗುಳು: ನಾಲಗೆಯ ಮೇಲಣ ಅಂಗಳಿಗೆ ಜಿಹ್ವಾರಾಜಿಯೆಂಬ ಹೆಸರು (ಅಶ್ವಟೀ. ೫೮-೯).

[ಸಂ. (ಜಿಹ್ವಾ + ರಾಜಿ)]

**ಜಿಹ್ವಾಲಸ** (ನಾ). ನಾಲಗೆಯಲ್ಲಿ ಉಂಟಾಗುವ ಒಂದು ರೋಗ; ನಾಲಗೆಯು ಊದಿಕೊಳ್ಳುವಿಕೆ: ನಾಲಿಗೆಯ ಮೇಲಣ ಪ್ರದೇಶದಲ್ಲಿ ಶೋಫೆಯು ಶ್ಲೇಷ್ಮ ಮತ್ತು ರಕ್ತಗಳಿಂದ ಉಂಟಾಗುವದು. ಅದನು ಜಿಹ್ವಾಲಸವೆಂಬರು (ವೃದ್ಧಸಾ. II, ೦೦೬). [ಸಂ. (ಜಿಹ್ವಾ + ಅಲಸ)]

**ಜಿಹ್ವಾಸ್ತಂಭ** (ನಾ). ನಾಲಗೆ ಸೇದಿಕೊಳ್ಳುವಿಕೆ; ಮಾತು ನಿಂತು ಹೋಗುವುದು: ಮೂಗಿಗೆ ಆ ತುಪ್ಪವನ್ನೇ ಇಪ್ಪತ್ತನಾಲ್ಕು ದಿನ ನಸ್ಯವಂ ಮಾಡಿದರೆ ಸಕಲಮದ, ಅಪಸ್ಮಾರ, ಸ್ಮೃತಿಭ್ರಂಶ, ಜಿಹ್ವಾಸ್ತಂಭಗಳು, ಈ ಮೊದಲಾದವುಗಳೆಲ್ಲಾ ಮಾಣುವುವು (ವಿಷ್ಣವಿ. ೭೩).

[ಸಂ. (ಜಿಹ್ವಾ + ಸ್ತಂಭ)]

**ಜಿಹ್ವೆ** (ನಾ). ೧. ರುಚಿಯನ್ನು ಗ್ರಹಿಸಲು ಮತ್ತು ಮಾತನಾಡಲು ಸಾಧಕವಾದ ಇಂದ್ರಿಯ; ನಾಲಗೆ: ಅಡಿ ಹುಸಿಯೆನೆನ್ನ ಜಿಹ್ವೆಯಲ್ಲಿ (ಬಸವ. ೭೩೭); ಸುಡು ಸೂಪಂ ಘೃತಮಿಲ್ಲದೂಟವ ಪರಾನ್ನಾಪೇಕ್ಷೆಯಾ ಜಿಹ್ವೆಯಂ ಸುಡು ದಾರಿದ್ರ್ಯದ ಬಾಟ್ಕೆಯಂ (ಸೋಮೇಶ. ೩೦); ಶಾರದೆಯ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ (ಕುವ್ಯಾಅ. ೦-೫). ೨. ಉರಿಯ ನಾಲಗೆ; ಅಗ್ನಿಯ ಜ್ವಾಲೆ: "ಜಿಹ್ವಾ, ಅರ್ಚಿಃ—ಈ ೨ ಕಿಚ್ಚಿನ ನಾಲಗೆ" (ಹಲಾಯು. ೧೩-೬೭). ೩. ರುಚಿ: ಜಂಗಮಕ್ಕೆ ಧನವೆಂಬುದಿಲ್ಲ ಪ್ರಸಾದಕ್ಕೆ ಜಿಹ್ವೆ ಎಂಬುದಿಲ್ಲ (ಮೋಳಿಮಾ. ೧೩೯-೫೦೦). [ಸಂ. ಜಿಹ್ವಾ]

**ಜಿಱಿಲೆ, ಜಿರಲೆ, ಜಿರಳೆ, ಜಿಱುಲೆ** (ನಾ). ೧. ಶತಪದಿ; ಸಾವಿರಕಾಲು ಹುಳು; ಲಕ್ಷ್ಮೀಚೇಳು: "ಕರ್ಣಜಲೌಕ, ಶತಪದಿ ಎಂದೊಡೆ ಪಟ್ಟಪೂಣಿಜ ಜಿಱಿಲೆಯು ಹುಳುವೆಂದೂ ಎಂಬರು" (ನಾಚಿರಾ. ೬). ೨. ಆತೆಹುಳು; ಜೊಂಡಿಗ; ಅಕ್ಕಳಿ; ತೊಂಡಂಗಿ: "ಪಟಹಾರಿ ಜಿಱಿಲೆ[ಪಾಠಾಂ. ಜಿಱುಲಿ, ಜೀಱುಲೆ]ಯಕ್ಕು" (ಮಂಗರಾ. ೪೯-೧೩). **ಜಿರಲೆ:** ೨. ಜಿರಲೆಯಲ್ಲಿ ೮ ನಾಳಗಳ ವ್ಯಾಸ ೦.೧ ರಿಂದ ೦.೨ ಮೈಕ್ರಾನ್ (ಕೀಟವಿ.೮); ಜಿರಲೆ ಹತ್ತಲಿ, ಗಂಧ ಬಳಿಯಲಿ (ಜಂಗಪಲಿ. ೦೬೦). **ಜಿರಳೆ:** ೨. ಜಿರಳೆಯ ಮೂಗಿನ ಮುಂದಿರುವ ಕೂದಲನ್ನು (ಉಡುಗೊ. ೧೭). **ಜಿಱುಲೆ:** ೨. "ಜತುಕಿ, ಅಜಿನಪತ್ರ ಎಂದೊಡೆ ಹೆಬ್ಬಾವಲು; ಜಿಱುಲೆ ಎಂದೂ ಎಂಬರು" (ನಾಚಿರಾ. ೬). 'ಜರಿ₄' ಪರಾ. [ದೇ.॥ ಗೊಂಡಿ. ತಿಱುಲ್]

**ಜಿಱಿಲೆ** 'ಜಿಱಿಲೆ' ನೋ.

**ಜೀ** 'ಜೀಯ' ನೋ.

**ಜೀಂಕರಿಸು,** ಜಿಂಕರಿಸು (ಕ್ರಿ). ೧. ಹೊಗಳು; ಪ್ರಶಂಸೆಮಾಡು: ಗಜಪ್ರಿಯಾಂಬರಚರರ್ ಜೀಯಯ್ಯ ಭಾಪ್ಪೆಂದು ಜೀಂಕರಿಪನ್ನಂ ವನದಂತಿ ಪೋರ್ವುದು ನಿಷಾದ್ಯಾರೂಢದಿಂ ಪೋರ್ವವೊಲ್ (ಶಾಂತಿಪು. ೩-೧೦೦); ವಿಸ್ತರದಿಂ ಮಾಡಿಸಿ ಬೇಱ ಕನ್ನೆ[ಗೆಱ]ಯಂ ಜೀಹಯ್ಯ ಭಾಪ್ಪೆಂದು ಜೀಂಕರಿಪನ್ನಂ ಸಲೆ ಪೂಣ್ದು ಕಟ್ಟಿಸಿದನೆ ಕಾಳಂ ಮಹಾದಾನಿಯೋ (ಸೌಇಇ. XX, ೩೦-೩೦: 1044): ದ್ರೋಣರ್ ಜೀಂಕರಿಸೆ ಕರಿಯ ನರಿಯನುಯ್ಯಂತೆ ಪೂರ್ವಸ್ಥಾನಕೊಯ್ದು ಕಟ್ಟುವುದುಂ (ಧರ್ಮಾಮೃ. ೦೩-೬೦ ಅಡಿಟ). ೨. (?): ಜೀಂಕರಿಸಂ ಜಿನುಗನವನಿಸಂ ಕೊಕ್ಕರಿಸಂ (ಅಜಿಪು. ೫-೮೯). **ಜಿಂಕರಿಸು:** ೧. ಜಯಕೇಶಿನೃಪಾಳನೆತ್ತಿ ಬಂದೇಳ್ಕರಲಕ್ಕೆ ಜಿಂಕರಿಸಲೊಡಿಸಿ ತೆತ್ತಿಸಿದಂ (ಎಇ. XIII, ೩೦೩-೩೨: 1125). [?]

**ಜೀಂಗರೆ** (ಕ್ರಿ). ಚೀರು; ಸೀತ್ಕಾರಮಾಡು: ಅವರದಱ ತಣ್ಪಿನಿಂ ಜೀಂಗರೆವ ಬಿನದವುಂ ನೋಡಾ (ಮಿತ್ರಗೋ. ೯).

[ಜೀಂ ? + ಕರೆ₁]

**ಜೀಕ** 'ಜೀಕ್ಕು₃' ನೋ.

**ಜೀಕಹೊಡೆ** (ಕ್ರಿ). ಉಯ್ಯಾಲಾಡು; ತೂಗಾಡು: ಬೇರು ಹಿಡಿದುಕೊಂಡು ಜೀಕಹೊಡೆದು ಆಚೆಯ ದಂಡೆಗೆ ಉಡ್ಡಾಣಮಾಡಿದ (ವೃನಿ. ೭೦); ಯಾವ ಸರ್ಕಸ್ಸಿನ ಜೋಕಾಲಿಗೂ ನಾಕದಂತಹ ಜೀಕ ಹೊಡೆದು ಆಕಾಶದಿಂದ ಭೂತಳದವರೆಗೆ ದೀರ್ಘ ವರ್ತುಳಗಳನ್ನು ತೀಡತೊಡಗುತ್ತದೆ (ಗಾಳಿಪ. ೩).

[ಜೀಕ(<ಜೀಕು₃) + ಹೊಡೆ₁ (<ಪೊಡೆ₁)]

**ಜೀಕಲಿ** 'ಜೀಕರ್ಲಟಿವಿ' ನೋ.

**ಜೀಕು₁** (ಕ್ರಿ). (ಉಕ) ಉಯ್ಯಾಲೆ, ತೊಟ್ಟಿಲು ಮುಂತಾದವನ್ನು ತೂಗು; ಉಯ್ಯಾಲಾಡು: ಹುಡುಗರಿಗೆ . . . ಕಾಲುವೆಯಲ್ಲಿ ಈಜುವುದು ಗಿಡಗಳಿಗೆ ಜೋಕಾಲೆ ಕಟ್ಟಿ ಜೀಕುವುದು—ಕೈಲಾಗದ ಕಾರ್ಯಗಳಾಗಿದ್ದವು (ವಿವಧು. ೮); ಕ್ಷಣಕಾಲ ಜೊಂಪು ಹತ್ತಿಸಿ ಕೈವಲ್ಯದ ತೊಟ್ಟಿಲಲ್ಲಿ ಹಾಕಿ ಜೀಕಿ ತೇಲಿಬಿಟ್ಟ ಅನುಭವ (ಮಾಮನ. ೦೬೦); ಟೊಂಗೆಯನ್ನೇರಿ ಜೋಕಾಲಿಮಾಡಿ ಜೀಕುವಳು (ಬಸ್ಸುಹಿಂ. ೩೯); ಸಂಜೆಯ ಮುಂದೆ ಜೋಕಾಲಿ ಜೀಕುವರು (ಕನ್ನಜಾ. ೧೪೫). [?]

**ಜೀಕು₂** (ನಾ). ೧. ಒಂದು ಅನುಕರಣ ಶಬ್ದ: ಕರ ಸೋಂಕಲೊಡನೆ ವಜ್ರದ ವಿತಂಡಗಳುರ್ಚಿ ತೆಱದವು ಜೀಕು ಗಿರ್ರೆಂದು (ಜ್ಞಾನಚ. ೧೮-೧೩೮). ೨. ಮೆಟ್ಟಿನ ತೊಗಲಿನಿಂದ ಹೊರಡುವ ಮರ್ಮರ ಶಬ್ದ; ಗಿರಕಿ ಚಡಾವಿನ ಶಬ್ದ: ಅವನ ಮೆಟ್ಟಿನ ಜೀಕು ಕೇಳಿ ಇಲ್ಲಿಂದಲೇ 'ಮಾಸ ಸವಾರಿ' ಎಂದು ಕಾಣುತ್ತದೆ ಎನ್ನಬಲ್ಲರು (ಡಹಸ. ೨೭); ಹೇಳಿಮಾಡಿಸಿದ ಸುಮಾರು ಒಂದೇ ಗೇಣು ದಪ್ಪವುಳ್ಳ ಜೀಕಿನ ಜೋಡು (ಸುವಸಂ. ೫೩). 'ಜೀಗು' ಪರಾ.

**ಜೀಕು₃, ಜೀಕ** (ನಾ). ೧. ತೂಗಾಟ ; ಹೊಯ್ದಾಟ : ಯಾರಿಗೇನಾತ್ಮ ವಿಶ್ವಾಸವೇ ಒಳಗುರುವು ಒಳಗಿನಂತೇ ಹೊರಗೆ ನಮ್ಮ ಜೀಕು (ನನಲ್ಲ. ೩೨-೦೬) ; ನದಿಯನ್ನು ಬಣ್ಣಿಸುವಾಗ ಅಲ್ಲಿ ತರಂಗದ ಗತಿ ಇರಬೇಕು. ಆ ಜೀಕು (Swing) ಇರಬೇಕು (ವಿಜಾಮಂ. ೧೪೪) ; ತೊಟ್ಟಿಲದ ಜೀಕಿಗೆ ಮಗು ಮತ್ತೆ ಮಲಗಿತು (ನಡದಾ. II, ೧೦೫೩). ಹಾಗೆ ಇದು, ಹೀಗೆ ಇದು, ಎನುತ ಜೀಕು ಜೀಕಿನ ವಿಲಾಸದಲಿ ತನ್ಮಯವಾಗಿ (ಉಯ್ಯಾಲೆ. ೩-೩). ೨. ಚಕ್ರಾಕಾರವಾಗಿ ತಿರುಗುವ ಸಾಧನ ; ಗಿರಗಟ್ಟೆ ; ಗಿರಕಾಲೆ : ಕುದುರೆಯ ಜೀಕಿನಲ್ಲಿ ಕುದುರೆಗಳು ತಿರುಗುವಂತೆ ಈ ಸೂರ್ಯಮಾಲೆಯಲ್ಲಿ ಭೂಮಿಯೂ ಸೂರ್ಯನ ಸುತ್ತಲು ತಿರುಗುತ್ತದೆ (ಜ್ಯೋತಿಶ್ಶಾ. ೨೪). **ಜೀಕ:** ೧. ಕಾಲ್ಗಳಿಗೆ ತೆರೆಗೆ ಕೊಳಗಳಿಗೆ ತೊರೆಗೆ ಜವ್ವನದ ಜೀಕವಾಗಿ ಕಾರ್ಗಾಲ ಬಂತು (ಕರುಶ್ಯಾ. ೪೦-೭) ; ಕೂಸಿಗೆ ಜೀಕವನ್ನು ಮೊಣಕಾಲುಗಳನ್ನೆತ್ತಿ ಎತ್ತಿ ಕೊಡುವನು (ಕನ್ನಜಾ. ೪೩). ೨. ನಾವು ತೊಟ್ಟಿಲ ಜೀಕದ ಬಳಿಗೆ ಹೋದೆವು (ಕಸಾಪ. I-೧೩೭).

**ಜೀಕಾಡು, ಜೀಕವಾಡು** = ತೊನೆದಾಡು ; ಅತ್ತಿತ್ತ ತೂಗಾಡು : ತಂತಿಯ ಮೇಲೆ ಜೀಕಾಡುವ ಡೊಂಬನಂತೆ ಆಯಿತು ನನ್ನ ಚಿತ್ತ (ಮುಂಗಾಪು. ೪೨) ; ಎದೆಯ ಹೂವ ತೊಟ್ಟಲಲ್ಲಿ ತೂಗಿತೂಗಿ ಜೀಕವಾಡಿ (ಕರುಶ್ಯಾ. ೧೩-೬) ; ನೆಮ್ಮದಿ, ತುಷ್ಟಿ, ಹರುಷಗಳಲ್ಲಿ ಈಗ ಆತನ ಬದುಕು ಜೀಕವಾಡುತ್ತಿದೆ (ಬನಸಿ. ೬೨). [ <ಜೀಕು₁ ]

**ಜೀಕುಳಿ** 'ಜೀಕೊರ್ಳಟಿವಿ' ನೋ.

**ಜೀಕೊಳವಿ** 'ಜೀಕೊರ್ಳಟಿವಿ' ನೋ.

**ಜೀಕೊಳವೆ** 'ಜೀಕೊರ್ಳಟಿವಿ' ನೋ.

**ಜೀಗು** (ನಾ). ಒಂದು ಅನುಕರಣ ಶಬ್ದ : ಪಾಲ್ದೆನೆಗಳಿಗೆರಗುವ ಜೀರಂಗಿಗಳ ಜೀಗು ಶ್ರುತಿಹಿಡಿದಂತಿದ್ದಿತು (ಶ್ರೀರಾಪ. ೬೪). 'ಜೀಕು₂'ಪರಾ.

**ಜೀಗುಟ್ಟು** (ಕ್ರಿ). ಜೀರ್ ಜೀರ್ ಎಂದು ಶಬ್ದಮಾಡು (?) : ಕಕ್ಕೆಕಾಯ್ಹಂಗೆ ಹಾಕ್ಯಾರೆ ಹುಲಿಬಣ್ಣ ಜೀಗುಟ್ಟುತಾವೇ ಸರಮುತ್ತು (ಹುಟ್ಟಿಹ. ೪೫). [ <ಜೀರ್₃ + ಕುಟ್ಟು₁ ]

**ಜೀಟು₁** (ನಾ). (ಉಕ) ಊರೆ ; ಆಧಾರ ; ಆಶ್ರಯ : ಕವಲು ಇದ್ದ ಉದ್ದವಾದ ತೊಲೆಗಳನ್ನು ಜೀಟುಗೋಲು ಕೊಟ್ಟ ಹಾಗೆ . . . ಜೀಟು ಕೊಟ್ಟು ಆ ತೊಟ್ಟಿಲಕ್ಕೆ ಬಿಗಿಮಾಡಿ ಮೊಟ್ಟೆಯನ್ನೂ ಸಾಗಿಸಿಕೊಳ್ಳಬೇಕು (ಕೃಷಿಪ್ರ. ೦೦೫). 'ಜೀಟುಗೋಲು' ಪರಾ. [ ? ]

**ಜೀಟು₂** (ನಾ). (?) : ಕೈಯ್ಯ ಮಾಟದಿಂ ಜಗಶ್ರುತಿಯ ಪಾಠದಿಂ ದೂರತವ ಕೂಟದಿಂ ಭವಸಂಹರಾ ಜೀಟನಿಂ ಮಂತ್ರನುತಿ ವೇಟದಿಂದೊಲವಹಮಿ ನೋಟದಿಂ ಕೃಪೆ ಶ್ರದ್ಧೆ (ಲಿಂಗಪು. ೦೨-೧) ; ಜೀಟು ಜೀಟಿಗೆ ರತಿಪ್ರೌಢಿ ಸಮನಿಸಿ ವಿಟರ ದಾಟಲೀಯ್ಯದೆ ಪಲ್ಲವಾಸ್ತ್ರದಿಂದೆಸುತ (ಲಿಂಗಪು. ೨೫-೨೫). [ ? ]

**ಜೀಟುಗಾಲು** (ನಾ). ಆಧಾರವಾಗಿಟ್ಟುಕೊಂಡ ಕಾಲು ; ಊರುಗಾಲು : (ಕ). [ ಜೀಟು₁ + ಕಾಲು₁ (<ಕಾಲ್₁) ]

**ಜೀಟುಗೋಲು** (ಕ್ರಿ). ಆಧಾರಕ್ಕಾಗಿ ಇಟ್ಟ ಕೋಲು ; ಊರೆಗೋಲು : ಆ ಕಂಭಗಳಿಗೆ ಹಿಂದಿನ ಮೈಯಿಗೆ ಮುಂದಿನ ಮೈ ಕಡೆಗೆ ಜೀಟುಗೋಲು ಕೊಟ್ಟ ಹಾಗೆ ಕವಿಗಂಭಗಳನ್ನಾಗಲಿ . . . ಜೀಟುಕೊಟ್ಟು ನಿಲ್ಲಿಸಿ (ಕೃಷಿಪ್ರ. ೪೦). [ಜೀಟು₁ + ಕೋಲು₁ (<ಕೋಲ್₁) ]

**ಜೀಣ** 'ಜೀನ₁' ನೋ.

**ಜೀತ** (ನಾ). ೧. ಜೀವಿತ ; ಬದುಕು : (ಕ). ೨. ಕೂಲಿ ; ಸಂಬಳ ; ದಂಡಿತದ ಹಣ : ಹಲರು ಸೆಟಿಕಾಱರು ಯಿಳುಹಿ ಕೊಡುವ ಜೀತಗಳ ಹೊಂನು . . . ಯೂ ನಾಲ್ಕು ಹೊಂನ ಜೀತವನೂ ಯಿಳುಹಿ ಕೊಟ್ಟು (ಸೌಇಇ. IX-ii, ೪೪೯-೨೨ ; 1449) ; ಕೂಳ ಹಂಗಿನಿತಿಲ್ಲ ತನ್ನ ವಿಶಾಲಭವನಾಂತರದಲಣುಗಗೆ ಮೇಲೆ ಕೊಡುತಿಹ ಜೀತವಿನಿತಿಲ್ಲ (ಕೋಗಯು. ೨೪-೩೦) ; ವೇತನಗಳಂ ಪರಿವಾರ ಜನಕ್ಕೆ ಕೊಡಿಸುವುದಕ್ಕೆ ಈ ವರೆಗೂ ಒಬ್ಬರೂ ಬಂದಿಲ್ಲ. ಅವರ ಜೀತಗಳು ಕಟ್ಟಿ ಇರಿಸಲ್ಪಟ್ಟಿವೆ (ಮುದ್ರಾಮಂ. ೨೧೯) ; ಕೆಲಸಕ್ಕೆ ತಕ್ಕ ಜೀತವನ್ನು ಕೊಡುವೆವಲ್ಲ (ಸವತಿ. ೧೯೧) ; ಮೋಲ್‌ಕೆಳಗಾದರು ಸಾಧಿತವೊಂದೇ : ಜೀತದ ಉದರಂಭರಣ (ಚಿಂತನ. ೭೧-೦೬). ೩. ಕೆಲಸ ; ಊಳಿಗ ; ಸೇವೆ ; ದುಡಿಮೆ ; ಚಾಕರಿ : ಗಾಳಿ ಬೆಳಕು ಬಾನ ಸೆಳಕು ಮೂಲ ಮರುಳು ಜೀತಕೆ (ಪಲಾನ. ೮-೮) ; ಬಲಾತ್ಕಾರದ ಜೀತವನ್ನು ನಿಲ್ಲಿಸಲಾಯಿತು (ದಾದಾಸ. ೭೦). ೪. ಗುಲಾಮ ಗಿರಿ : ಈಗ ಜೀತಪದ್ಧತಿ ರದ್ದಾದುದರಿಂದ ಜೀತದಿಂದಾಗುತ್ತಿದ್ದ ಅನ್ಯಾಯ ತಪ್ಪಿತು (ರೂಢಿ).

**ಜೀತಕ್ಕಿರು** = ನಿಗದಿಯಾದ ಅವಧಿಯವರೆಗೆ, ನಿಗದಿಪಡಿಸಿದ ಸಂಬಳದ ಕರಾರಿನಿಂದ ಊಳಿಗ ಮಾಡು : ತಮ್ಮ ಅಣ್ಣನ ಬಳಿ ಜೀತಕ್ಕಿದ್ದನು (ದೇಶಾಂಕ. ೩೩). **ಜೀತದ ಪತ್ರ** = ಜೀತಕ್ಕಾಗಿ ಕರಾರುವಾಕ್ಕಾಗಿ ಬರೆಸಿಕೊಳ್ಳುವ ಪತ್ರ : ನಮ್ಮ ಹೃದಯವಂತೂ ಬಿಳಿಯರಿಗೆ ಜೀತದ ಪತ್ರ ಬರೆದು ಕೊಟ್ಟಿದೆ (ನಿಬಂಧ. I, ೪೧೨). **ಜೀತದಾಳು** = ನಿಗದಿಯಾದ ಅವಧಿಯವರೆಗೆ, ನಿಗದಿಯಾದ ಸಂಬಳಕ್ಕಾಗಿ ಅಥವಾ ಕೊಂಡ ಸಾಲಕ್ಕಾಗಿ ದುಡಿಯುವ ಆಳು : ನಿನ್ನ ಜೀತದಾಳು ನಾ (ಮಣ್ಣುಹ. ೧೭೯) ; ದೊಡ್ಡ ಚೌಕಿಮನೆಯ ಹೆಬ್ಬಾಗಿಲು ದಾಟಿದ ಅವರ ಜೀತದಾಳು (ಮಲೆಮ. ೧). **ಜೀತಮಾಡು**=ಚಾಕರಿಮಾಡು ; ಸೇವೆಮಾಡು : ನಮ್ಮನ್ನು ಬದುಕಿಸಿದೋರು ಅಂತ ನಿನಗೂ ಐತಣ್ಣಗೂ ಜೀತ ಮಾಡಿ ಕೊಂಡು ಬೇಕಾದ್ರೂ ಇರ್ತೀವಿ (ಮಲೆಮ. ೬೦೦) ; ಜೀವನಕ್ಕಾಗಿ ಜೀತ ಮಾಡಿ ಕಾಲ ಕಳೆದು ಪರೀಕ್ಷೆಯಲ್ಲಿ ಮೊದಲನೇ ತರಗತಿಯಲ್ಲಿ ತೇರ್ಗಡೆ ಹೊಂದಲು ಅವಕಾಶವಾಗುವುದಿಲ್ಲ (ಇಬದು. ೮೫). [ <ಸಂ. ಜೀವಿತ ]

**ಜೀತಕಾರ,** 'ಜೀತಗಾರ' ನೋ.

**ಜೀತಗಾರ, ಜೀತಕಾರ** (ನಾ). ೧. ಊಳಿಗದವನು ; ಜೀತದ ಆಳು : ಒಬ್ಬ ಒಕ್ಕಲಿಗನು ಜೀತಗಾರನಾಗಿದ್ದು . . . ಹಣವನ್ನು ಕೊಡಿಸಿ (ಕಥಾಮಂ. IV, ೦೬). ೨. ವಂಶಪಾರಂಪರ್ಯವಾಗಿ ಬಂದ ಜೀತದಾಳು ; ಆನುವಂಶಿಕ ಗುಲಾಮ ; ಚಾಕರಿದಾರ : ಈ ಸೀಮೆಜೀತಗಾರ ಹೊಲೆಯರ ಹಿಡಿದುಕೊಂಡು (ರಾಜೇಂದ್ರ. ೨೦) ; ಇಷ್ಟರಲ್ಲಿ ಜೀತಗಾರರಾದ ಹೊಲೆಯರ ಕರಿಯನೂ ಮಾದಿಗರ ಕಾಳನೂ ಬಂದರು (ಚಿಂಗಾಳ್ಳ. ೬) ; ಜೀತಗಾರರಿಗೆ ಯಾತಕ್ಕೆ ಜೇರಿಗೆ ಬೆಲ್ಲ (ಗಾದೆ). **ಜೀತಕಾರ:** ೧.ಸಂಬಳ ಮೂಱು ಹೊನ್ನಿನ ಜೀತಕಾರರು ಯಿಂಬಿನೊಳ್ ತುಱುವ ಕಾದಿಹರು (ಮಾದೇಸಾಂ. ೧-೪೦). [ ಜೀತ + -ಗಾರ (<-ಕಾಱ) ]

**ಜೀನ₁, ಜೀಣ** (ನಾ). ಕೃಪಣ ; ಲೋಭಿ ; ಜಿಪುಣ : ವಿತ್ತವು ಜೀನರಿಗ ಮೃತವು ಅಮೃತವು ಚಿರಶಾಂತಿ ಸಂನ್ಯಾಸಿಗಳಿಗೆ (ಇಂಜಾಪ. ೭೩-೫೩) ; ಅವರಲ್ಲಿಯ ಕೆಲವರು ಅವನ ಗುಣಗಾನ ಮಾಡಹತ್ತಿದರು. ಉಳಿದವರು ಜೀನನೆಂದು ಹಳಿಯ ಹತ್ತಿದರು (ಜಯಂತ. ೩೪೪) ; ಅಷ್ಟರವಟ್ಟಿಗೆ ಬೆಳೆದ ಶೀನ, ಮಹಾಜೀನನಾಗಿ (ಹೇಮುಕೂ. ೧೪) ; ಜೀನ ಗಳಿಸಿದ್ದನ್ನ ಜಾಣ ಉಂಡ (ಗಾದೆ). **ಜೀಣ :** ಬಹಳ ಜೀಣ ಕಾಸು ಬಿಚ್ಚುವುದಿಲ್ಲ (ಮಧುಸಂ. ೬೬). [ ದೇ.॥ ತುಳು. ಜೀನ, ಜೀನೆ ]

**ಜೀನ₂** (ನಾ). ಮುದುಕ ; ವೃದ್ಧ : " ಪ್ರವಯಾಃ, ಸ್ಥವಿರಃ, ವೃದ್ಧಃ, ಜೀನಃ, ಜೀರ್ಣಃ, ಜರನ್-ಓ ಮುದುಕನ ಹೆಸರುಗಳು " (ಸಿದ್ಧಾಂತಿ. ೦೫೬). [ ಸಂ. ]

**ಜೀನ₃, ಜೀನು₁** (ನಾ). ೧. ತೊಗಲು ; ಚರ್ಮ : 'ಜೀನಗಾರ' ಪರಾ. ೨. ಕಂಳಿತಂಕೊಳ್ಳಲು ಕುದುರೆಯ ಬೆನ್ನಮೇಲೆ ಹಾಕುವ ಚರ್ಮದ ತಡಿ : ಕುದುರೆಗಳ ಜೀನ ಹಲ್ಲಣ ಲೇವೆ ಕಬ್ಬಿ ಕಂದದ ಹಕ್ಕರಿಕೆ ಚಬುಕು

ವೊಗರಂಬ ವಾಘೆಗಳ್ (ಜಬಪು. ೪೭-೪೪) ; ಎತ್ತಿಗೇತಕೆ ಜೇನವದು (ಜ್ಞಾನಸಿಂ. ೧-೪೦). ಕುದುರೇನ ತರಿಸಣ್ಣ ಜೀನವ ಬಿಗಿಸಣ್ಣ ನನ್ನ ಊರಿಗೆ ಕಳುಹಣ್ಣ (ನಾಪದ. ೮೯) ; ಹರದನ ಕುದುರೆಗೆ ಹರಕು ಜೀನ (ಗಾದೆ). **ಜೇನು$_1$ :** ೨. ಮನಸಿಜನೇಱುವ ಮದನ ಮುತ್ತಿನ ಚೆಂಡು ಕನಕದ ಜೇನು ಹಕ್ಕರಿಕೆ . . . ನಿಂದಿಹುದು (ಸೌಂದಕಾ. ೫-೬೮) ; ಕುದುರೆಗಳಿಗೆ ಜೇನು ಹಾಕುವವರೂ . . . ಯುದ್ಧ ಸನ್ನಾಹ ಕೋಲಾಹಲದಿಂದ ಒಪ್ಪುತಲಿರುವ ಸಮಯದಲ್ಲಿ (ಕೃವಾಆ. ೩೪೬); ಜೀನಿಗೆ ಕಟ್ಟಿದ ಬೆಳ್ಳಿಯ ಸಣ್ಣ ಘಂಟೆಯ ನಾದವೂ ಇಲ್ಲ (ಬಂಗಾಹ. ೫). ೩. ಒಂದು ಬಗೆಯ ಚರ್ಮವಾದ್ಯ : ಕುಕ್ಕುರು ಡುಮುಡುಮು ಪಾವುಂಜೆಯು ಜೇನು ಡಕ್ಕೆ (ಜ್ಞಾನಜ. ೪೦-೧೦೩).

[ ←ಪಾರ. ಜೀನ್. / ಪ್ರಾ. ಜೀಣ. / ಸಂ. ಅಜಿನ ]

**ಜೇನ್$_4$** (ನಾ). ಜೈನವಂತ : ಜೈನಮತಾಗಮಶರಧಿಶಶಾಂಕನೆ ಜೇನದ ಮನಸಿಜರೂಪ ಭೂನಾಥ ವರಗುಣಭೂಷಣ (ಬಿಜ್ಜಳ. ೩-೮೨).

[ <ಜೈನ ? ]

**ಜೇನಂಗಿ, ಜಿನಂಗಿ** (ನಾ). ಒಂದು ಬಗೆಯ ಗಿಡ. 'ಕರಿಜೀನಂಗಿ' ಪರಾ. **ಜಿನಂಗಿ :** ನೀಲಿ, ಜಿನಂಗಿ, ಗುರಗುಂಜಿ, ಕಾಡವರೆ (ನಮ್ಮನು. ೨೩೮). [?]

**ಜೇನಕ** (ನಾ). ಒಂದು ದೇಶದ ಜನ : ಜೇನಕರ ಬೋಟಕ ಕಿರಾತರನೂನ ಬಲ ಸಹಿತೀ ಮಹೀಪತಿಸೂನು ಕಾದಿದನೀತನಲಿ (ಕುವ್ಯಾಸ. ೩-೧೯). [ ? ]

**ಜೇನಗ** (ನಾ). ಜಿಪುಣ ; ಲೋಭಿ : ಆನೆ ಮೇಲೆ ಬರುವೋರು ದಾನಕ್ಕೆ ಯೊಡ್ಡೋರು ಎಂಥಾ ಜೇನಗರೇ (ಜಗೀತ. ೭೪). [ ಜೇನ್$_1$ + – ಗ$_2$ ]

**ಜೇನಗಾರ$_1$, ಜೇನುಗಾರ$_1$** (ನಾ). ೧. ಚರ್ಮದ ಕೆಲಸ ಮಾಡುವವನು: ಜೇನಗಾರನಿಗೆ ಶಿಕಲಿಗಾರ ಸಾಕ್ಷಿ (ಗಾದೆ). **ಜೇನುಗಾರ$_1$ :** ೨. ಕುದುರೆಯ ಜೇನು ಮುಂತಾದುವನ್ನು ಸಜ್ಜು ಮಾಡುವವನು ; ಅಚ್ಚುಳಾಯ್ತು : ಅವನು ದೊರೆಯ ಬಳಿ ಜೇನುಗಾರನಾಗಿದ್ದನು (ರೂಢಿ).

[ ಜೇನ್$_3$ + – ಕಾರ$_1$ (< – ಕಾಱ) ]

**ಜೇನಗಾರ$_2$, ಜೇನುಗಾರ$_2$** (ನಾ). ಚಿತ್ರಗಾರ ; ಶಿಲ್ಪಿ ; ಬಣ್ಣಗಾರ : ಬರಿಯ ಪ್ರತಿಷ್ಠೆಲಿ ಸಾಧುರಿಗೊಂದಿಸ ಬರದು ಗೊಡ್ಡುಯೆಂದೆಂಬೆ ಜನಿವಾರವ ಹೆಸರಿಗೆ ಹಾಕಿಹನನು ಜೇನಗಾರನು ಯೆಂದೆಂಬೆ (ಜಿದಾವ. ೦೪-೬); ಗಣೇಶ ಚತುರ್ಥಿಯ ಪೂರ್ವದಲ್ಲಿ ದೊಡ್ಡ ಪಟ್ಟಣಗಳಲ್ಲಿ ಪೊತ್ತಾರರು, ಜೇನಗಾರರು ಮುಂತಾದವರು ಗಣಪತಿಗಳನ್ನು ಮಾಡುತ್ತಾ (ಮುಂಬಯಿ. ೫-೨೪೭); ಜೇನಗಾರರು . . . ಇವರಿಗೆ ಚಿತ್ರಗಾರ ರೆಂತಲೂ ಅನ್ನುವರು (ಕಥಾಗಿ. ೦೩೦). **ಜೇನುಗಾರ$_2$ :** ಮಳೆಗಾಲದ ಮುಗಿಲುಗಳಿಗಿಂತಲೂ ಬಣ್ಣದಲ್ಲಿ ಮಿಗಿಲಾದ ನಿನ್ನ ಕಣ್ಣ ನೋಡುತ್ತಲೆ ಕಾಣುವುದು—ಜೇನುಗಾರರ ಜಿನುಗಿನ ಗೊತ್ತು (ಉಯ್ಯಾಲೆ. ೯೭-೬).

[ ಜೇನ ? + – ಕಾರ$_1$ (< – ಕಾಱ) ]

**ಜೇನಗೆಲಸ** (ನಾ). ಸೂಕ್ಷ್ಮವಾದ ಕೆಲಸ; ಕುಸುರಿಗೆಲಸ : ರಥ ಹಯದ ವಾಘೆಯು ಜೇನಗೆಲಸದ ಹಕ್ಕರಿಕೆಗಳ ನೊಗನ ಜೊತ್ತಗೆಯ ಭಾನುಸುತ ಮುಱಿಯೆಚ್ಚ (ಕುವ್ಯಾಕ. ೨೪-೪) ; ವಿಮಾನ ಚಿಪ್ಪಿನ ಲೋಹಬದ್ಧದ ಜೇನ ಗೆಲಸದ ಮೃಗನಖದ ಪರಿಧಾನಕದ ಪಾರಿಯದ ಪಚ್ಚೆಯ ಪಳಿ ಸುವರ್ಣ ಗಳ . . . ಅಸುರರಾವ್ತರು ಬಳಸಿದರು ಖಳನ (ತೊರೆರಾ. ೬-೨೯-೦೯) ; ಮುತ್ತಿನ ಗುಡಿ ಹೊಯ್ದವು ಸಾಗರದಾನವೆತ್ತಿತು ಜೀನಗೆಲಸದ ವೊತ್ತದ ಗುಡಿಗಳು ನೆಗೆದವು (ಕುರಾಸಾಂ.೪೨-೫೪).

[ ಜೇನ ? + ಕೆಲಸ ]

**ಜೇನತನ** (ನಾ). ಜಿಪುಣತನ ; ಕೃಪಣತನ ; ಲೋಭ : ಜೇನತನ ಮಾಡುವುದರಲ್ಲಿ ಭೀಮರಾಯರು ಹೆಸರಾಗಿದ್ದರು (ಕುಂಕುಮ. ೫೮) ; ಪಂಡಿತರಿಗೆ ನಾಲ್ಕು ದುಡ್ಡು ಕೊಡಲಿಕ್ಕೆ ಇಷ್ಟೇಕೆ ಜೇನತನ (ಅಶೋಕ ೪).

[ ಜೇನ್$_1$ + – ತನ ]

**ಜೇನವೆಸ** (ನಾ). = ಜೇನಗೆಲಸ : ಪಾನಕ ತುಪ್ಪ ಸಕ್ಕರೆ ರೊಟ್ಟಿಯಿಂದ ಸನ್ಮಾನಿಸಿ ಸಹಣೆಗಳದಕೆ ಜೇನವೆಸದ[ಪಾಠಂ. ಜೇನವಸರ, ಜೇನವೆಸವ] ಹಲ್ಲಣವನು ಹಾಯ್ಕಿದರು (ಕುರಾಸಾಂ. ೯-೮೬). [ ಜೇನ? + ಬೆಸ$_1$ ]

**ಜೇನಶಾಲೆ** 'ಜೇಣಶಾಲೆ' ನೋ.

**ಜೇನಸು** 'ಜಿನಸು' ನೋ.

**ಜೇನಹಂಕ, ಜೇನುಹಂಕ** (ನಾ). (ಉಕ) ತುಂಬಾ ಜಿಪುಣ ; ಮಹಾ ಲೋಭಿ : ಈ ಜೇನಹಂಕರೂ, ಜೇನುಹುಳುಗಳೂ ಒಂದೆ ನಕ್ಷತ್ರದಲ್ಲಿ ಹುಟ್ಟಿದವರು (ಗಾಳಿಪ. ೫೯) ; ಹಳ್ಳಿಯವರೆಲ್ಲ ಅವನನ್ನು ಜೇನಹಂಕನೆಂದು ಕರೆಯುತ್ತಿದ್ದರು (ಜೋಳಬಿ. ೦೪) **ಜೇನುಹಂಕ :** ರೊಕ್ಕದ ಬಾಬತ್ತಿನಲ್ಲಿ ದಾದಲ್ಲಾ ಜೇನುಹಂಕ (ದೀಪಹ. II, ೩೩೫). [ ಜೇನ್$_1$ + ಹಂಕ ? ]

**ಜೇನಹಂಕತನ** (ನಾ). ಜಿಪುಣತೆ ; ಲೋಭ ; ಕೃಪಣತೆ : ನಾನೂ ಒಳ್ಳೇ ಜೇನಹಂಕತನಾ ಮಾಡಿ ಇಟ್ಟುಕೊಂಡು ಕೂತೇನಿ (ಮಿಂಚುಹು. ೯೪).

[ ಜೇನಹಂಕ + – ತನ ]

**ಜೇನಿ** (ನಾ). ಜಿಪುಣೆ ; ಕೃಪಣೆ ; ಲೋಭಿ : ಅವಳೋ ತುಂಬ ಜೇನಿ (ರೂಢಿ). [ ಜೇನ್$_1$ + – ಇ$_2$ ]

**ಜೇನಿಸು** 'ಜಿನಸು' ನೋ.

**ಜೇನು$_1$** 'ಜೇನ್$_3$' ನೋ.

**ಜೇನು$_2$** 'ಜಿನ್ನು' ನೋ.

**ಜೇನುಗಾರ$_1$** 'ಜೇನಗಾರ$_1$' ನೋ.

**ಜೇನುಗಾರ$_2$** 'ಜೇನಗಾರ$_2$' ನೋ.

**ಜೇನುಹಂಕ** 'ಜೇನಹಂಕ' ನೋ.

**ಜೇಪು$_1$** 'ಚಾಪು$_1$' ನೋ.

**ಜೇಪು$_2$** (ನಾ). ಒಂದು ಬಗೆಯ ಮೋಟಾರುವಾಹನ : ಸಿಪಾಯಿಗಳು ಜೇಪಿನಲ್ಲಿ ಬಂದರು (ರೂಢಿ). [ ←ಇಂ. Jeep ]

**ಜೇಪುಕೊಡು** 'ಜೇಪುಗೊಡು' ನೋ.

**ಜೇಪುಗಾಲು** 'ಚಾಪುಗಾಲು' ನೋ.

**ಜೇಪುಗೊಡು, ಜೇಪುಕೊಡು** (ಕ್ರಿ). ಹಾರು; ಜಿಗಿ ; ನೆಗೆ: ಜೇಪುಗೊಟ್ಟು ಸಾಲಾಗಿ ನಿಲ್ಲಬೇಕು (ಹೊಸಂಸಾ. ೩೯). **ಜೇಪುಕೊಡು :** ಕುದುರಿ ಒಂದು ಜೇಪುಕೊಟ್ಟು ಓಡಾಕ ಹತ್ತುತ್ತ ನೋಡು (ಅಮನಿ. ೬).

[ ಜೇಪು$_1$ (<ಚಾಪು$_1$) + ಕೊಡು$_1$ ]

**ಜೇಬಿ$_1$** (ನಾ). ಒಂದು ಬಗೆಯ ವಸ್ತ್ರ: ವಿಚಿತ್ರ ನವೀನ ಪಳಿಗಳ ಜೇಬಿಗಳ . . . ಹರಿಣ ಪಂಚಾನನಾಂಚಿತ ದಿವ್ಯವಸ್ತ್ರವ (ತೊರೆರಾ. ೬-೫೫-೪೩) ; ನವದುಕೂಲಂ ಜೇಬಿ ಪಟ್ಟಾವಳಿಯ ವಿವಿಧವರ್ಣಾವಳಿಯ ವಸ್ತ್ರಗಳ ಭಕ್ತಿಯಿಂ . . . ಅರ್ಪಿಸಲು (ಗುರುಚಾ. ೭-೯) ; ಪಟ್ಟು ಪಟ್ಟಾವಳಿಯು ಜೇಬಿನಾಕ್ಯಾದಿಯ ದುಕೂಲಂಗಳಾ (ನವವೋ. ೩೩-೨೩).

[ ←ತೆಲು. ಜೇಬು ]

**ಜೇಬಿ$_2$** (ನಾ). ಕೋಟೆಯ ಹೊರಗೋಡೆ ಮತ್ತು ಒಳಗೋಡೆಗಳ ನಡುವಣ ಪ್ರದೇಶ ; ಊರಿನ ಹೆಬ್ಬಾಗಿಲುಗಳೆರಡರ ಮಧ್ಯದ ಆವರಣ: ಶ್ರೀಹರಿಗುಂ ಪಶ್ಚಿಮ ಜೇಬಿಯಲ್ಲಿ ಪ್ರತ್ಯಕ್ಷನಾದಾಂಜನೇಯಗುಂ . . . ದೇವಾಲಯಂಗಳಂ ಕಲ್ಪಿಸಿ (ಅರ್ಜಾವಿ. ೩೦-೪೦ ಪ) ; ಹುಲೀ ಮುಖದ ಬಾಗಿಲಿಂದ ಕೋಟೆಯ ಜೇಬಿಯೊಳಕ್ಕೆ ಸ್ವಲ್ಪ ಸೈನ್ಯದೊಡನೆ ಹೋದನು (ಚಾಮವಂ. ೦೦೯). [ ? ]

**ಜೇಬ್ರ** (ನಾ). ಮೈಮೇಲೆ ಉದ್ದುದ್ದವಾದ ಕರಿಯ ಪಟ್ಟೆಗಳುಳ್ಳ, ಕುದುರೆ ಜಾತಿಯ ಒಂದು ಪ್ರಾಣಿ: ಜೇಬ್ರವೂ ಜಿರಾಫೆಯೂ ಜೀವಿಸುವ ಸ್ಥಳಗಳಲ್ಲಿ ಅವಕ್ಕಿಂತಲೂ ಭಯಂಕರವಾದ ಬಲಿಷ್ಠವಾದ ಮೃಗವೊಂದು ಮನೆ ಮಾಡಿಕೊಂಡಿರುತ್ತದೆ (ಪ್ರಾಜಪ್ರ. ೨೮). [ ←ಇಂ. Zebra ]

**ಜೀಮತಿ** (ನಾ). ಒಂದು ಬಗೆಯ ಔಷಧಿ ವಸ್ತು: ಹಿಪ್ಪಲಿ, ಕಿರುನೆಲ್ಲಿ, ಜೀಮತಿ . . . ಸಮಾನಗೊಂಡರೆದು ತುಪ್ಪದಿಂ ಸೇವಿಸೆ ರಾಜಕ್ಷಯಾದಿ ರೋಗಂ ಪರಿಹಾರ (ಸಕವ್ಯ. ೨೪೮). [ ? ]

**ಜೀಮೂತ** (ನಾ). ೧. ಮುಗಿಲು; ಮೋಡ; ಮೇಘ: "ಅಭ್ರಂ, ಅಬ್ದಃ, . . . ಜೀಮೂತಃ, ಬಲಾಹಕಃ-ಈ ೧೦ ಮುಗಿಲ ಪೆಸರ್" (ಹಲಾಯು. ೧೦-೫೮); ಅಭಿನವ ಜೀಮೂತವಾಹನನ ದಿವ್ಯಾಸ್ತ್ರದ ಕೋಳ್ಗಿರಲಾರದೆ ಜೀಮೂತಂಗಳೆಲ್ಲಂ ತೆರಳ್ದೋಡಿದೊಡೆ (ಪಂಪಭಾ. ೫-೯೬ ವ); ಎನ್ನ ರಶ್ಮಿಯ ಪ್ರತಾಪಮಂ ಜೀಮೂತಂಗಳ್ ಮುಸುಕಲೀಯದೆ (ಪಂಚತಂ. ೨೫೮-೧೩); ದಾವಾನಳನ ದಳ್ಳುರಿಗಳುಕುವುದೆ ಜೀಮೂತಸಂದೋಹ (ಕುವ್ಯಾಕ. ೯-೩೦). ೨. ಬೆಟ್ಟ; ಪರ್ವತ: "ಅದ್ರಿಸಂಕುಳದಲ್ಲಿ ಜೀಮೂತಮೆನಿಸಿರ್ಪುದು" (ಮಂಗರಾ. ೧೩೮-೫). ೩. ಕರಿ; ಆನೆ. ೪. ಕಪ್ಪು; ಕೃಷ್ಣವರ್ಣ. ೫. ಒಂದು ಬಗೆಯ ಸಸ್ಯ; ಕೊನ್ನಾರಿ: "ಕರಿಕುತ್ಕೀಲ ಪಯೋಧರಾಸಿತಮಿವ್ರುಂ ಜೀಮೂತನಾಮಂ" (ನಾನಾರ. ೫೮). [ ಸಂ. ]

**ಜೀಮೂತಪಥ** (ನಾ). ಮೇಘಮಾರ್ಗ; ಆಕಾಶ: ಸುಪರ್ಣಕೇತು ಜೀಮೂತಪಥದಿಂದತಿವೇಗದಿಂ ಪೋಗೆವೋಗೆ (ಜಗವಿ. ೧೨-೪ ವ).
[ ಜೀಮೂತ + ಪಥ ]

**ಜೀಮೂತವಾಹನ** (ನಾ). ೧. ಮೋಡವನ್ನು ವಾಹನವಾಗಿ ಉಳ್ಳವನು; ಇಂದ್ರ: ಮಳೆಗಱೆದು ಮುನ್ನಂ ತನ್ನನೋವಿದ ಲೇಸಂ . . . ನೆನೆನೆನೆದು ಜೀಮೂತವಾಹನಂಗೆ ಸುಧಾರಸಮಂ . . . ನೀಡಿದಪಳೆಂಬಂತೆ (ಶಬಶಂ. ೨-೪೨ವ). ೨. ಗರುಡನಿಂದ ನಾಗಗಳನ್ನು ರಕ್ಷಿಸಿದ ಒಬ್ಬ ವಿದ್ಯಾಧರ: ವಿನತಾಪುತ್ರನ ವಜ್ರತುಂಡಹತಿಗಂ ಮೆಯ್ಯಾಂತು . . . ಜೀಮೂತವಾಹನನೆಂಬಂಕದ ಚಾಗಿ (ಪಂಪಭಾ. ೪-೨೬). ೩. ಒಂದು ವಂಶದ ಹೆಸರು: ಜೀಮೂತವಾಹನಾನ್ವಯ ಪ್ರಸೂತ (ಎಇ. XIX, ೩೨-೨; 1135). [ ಜೀಮೂತ + ವಾಹನ ]

**ಜೀಯ, ಜೀ, ಜೀಯ್ಯ** (ನಾ). ೧. ಒಡೆಯ; ಪ್ರಭು; ದೇವ: ಷೋಡಶ ರಾಜರಿಂ ಕಡೆಯೊಳಿರ್ಪುದು ಜೀಯ ಪಸಾದಮೆಂಬುದುಂ (ಪಂಪಭಾ. ೬-೧೬); ನಿನ್ನ ಕೆಳೆಯಂ ಸುಯೋಧನನನ್ನೋಡದೆ . . ಜೀಯೆನ್ನದೆ ದೇವೆನ್ನದ ದೇಕುಸಿರದಿರ್ಪೆ (ಗದಾಯು. ೫-೧೬); ಜೀಯೆನಿಸಿ ಬಾಳ್ವಡಿಗಳ ಜೀಯಂ ಶ್ರೀನೇಮಿದೇವರ್ (ಎಕ. VII, ಶಿಮೊ. ೬೪-೮೦; 1112); ಒಡನೆ ಸುರಾಳಿ ದೇವ ಬೆಸನಾವುದು ಜೀಯ ಮಹಾಪ್ರಸಾದ ನಿಮ್ಮಡಿ ಬೆಸಸೆಂದು ಮುಂದಿರೆ (ಧರ್ಮಾಮೃ. ೬-೧೬೩); ಗುಡಿಯ ಕಟ್ಟಿಸು ಜೀಯ ಬಱಿತುದು ಕಡಲು (ಕುವ್ಯಾಕ. ೦-೩); ಸೆಳೆದರಿನೃಪರ ದುರ್ಗಗಳ ಠಾಣೆಯುವನು ಬಲಿದು ಬಹುಳ ಧನಗಳನು ತಳುವದೆ ತಂದೀವೆನು ಜೀಯ ಬೆಸಸು (ಕಂನವಿ. ೮-೩೮); ಜೀಯ ಬಸವನಿಗೆ ಸೇವೆಯನು ತಪ್ಪಿಸಿದೆ (ಕನ್ನಜಾ. ೨೪೬). ೨. (ಹಿರಿಯರ ಅಪ್ಪಣೆಗೆ) ಒಪ್ಪಿಗೆಯನ್ನು ಸೂಚಿಸುವ ಮಾತು: ಆ ಖಚರ ಜೀಯೆಂದು ಕೈಮುಗಿದಪ್ಪಿದನು (ಸಾಳ್ವಭಾ. ೦೬-೯೦). **ಜೀ:** ೩. ಪ್ರಶಂಸೆಯ ಮಾತು: ರಸಭಾವವೃತ್ತಿಯ ವಿರಚಿಸಿದನಹುದಯ್ಯ ಜೀ ಮರಳು ಭಾಪೆನಲು ಸಭೆಯು (ಸಾಳ್ವಭಾ. ೩೩-೦೦೦). **ಜೀಯ್ಯ:** ೧. ಕಂಡರ್ ಶಿವನನಗಲದಾ ಭಕ್ತನಂ ಜೀಯ್ಯರಾಗಳ್ (ಉದ್ಭಟ. ೦೦-೫೬); ಸದ್‌ಭಾವ ಸನ್ನಹಿತ ಕ್ಷಮಾಮಯ ಭಾವ ಸಾಕ್ಷಾತ್ ಸಂಗಮೇಶ್ವರ ಜೀಯ್ಯ [ಪಾಠಾಂ. ಯ]ಚಿತ್ತೈಸು (ಬಸಪು. ೮-೫೩).

**ಜೀಯರ್, ಜಿಯ್ಯರ್, ಜೀಯರು** = ಗುರುಗಳು; ಆಚಾರ್ಯರು: ತ್ರಿಮೃತರಾಶಿ ಜೀಯರ್ಗ್ಗೆ (ಎಇ. IV, ೨೦೫-೧೨; 1072); ಮಧುಪೇಶಾನ್ವಿಕೆ ಯಮೆರ್ದಲಾಗೆ ಅಯ್ನೂತ್ತು ಸಾಸಿರ್ವರ್ ಜೀಯರುಂ (ಮಲ್ಲಿಪು. ೧೪-೧೬೯); ರಾಮಾನುಜ ಜಿಯ್ಯರ ಹವಾಲಿನಲ್ಲಿ ನಡೆಸಿಕೊಂಡು ಬರುತ್ತಾಯಿದ್ದರಾದ ಕಾರಣ (ಎಕ. III, ಶ್ರೀರಂಗ. ೧೦೦-೦೫೨; 1724); ಆ ಸ್ಥಳದ ಪ್ರಜೆಗಳೂ ಆ ಪೊನಚ್ಚ ಸೆಟ್ಟಿ ಜೀಯರೂಂ ತ ಗವುಡುಗಳೂ . . . . ನೆರೆದು (ಎಕ. V, ಅರಸೀ. ೪೯-೭೭; 1215 ?). ಜೀಯರು ಆ ಶಂಕರದೇವ[ರ] ಪೂಜಿಸಿದವರುಂ (ಮೈಆರಿ. ೧೯೩೦, ೫-೩; ?);
[ <ಪ್ರಾ. ಜಇ./ಸಂ. ಜಯಿನ್./ಮರಾ. ಹಿಂ. ಜೀ ]

**ಜೀಯಗಉಡ** (ನಾ). ಒಬ್ಬಾತನ ಹೆಸರು: ಶ್ರೀ ಅನಂತವೀರ್ಯ್ಯದೇವರ ಪ್ರಿಯ ಗುಡ್ಡಗಳು ಜೀಯಗಉಡ ಮಲ್ಲಿಗಉಡನ ಮಗ (ಮೈಆರಿ. ೧೯೨೫, ೦೦೯-೨; ?). [ ಜೀಯ + ಗಉಡ (<ಗಾವುಂಡ) ]

**ಜೀಯ್ಯ** 'ಜೀಯ' ನೋ.

**ಜೀರ್$_1$** 'ಜೀಱು' ನೋ.

**ಜೀರ್$_2$, ಜೀರು$_2$** (ಕ್ರಿ). ೧. ಬಿಗಿಮಾಡು; ಎಳೆ. 'ಜೀರ್ಗುಣಿಕೆ' ಪರಾ. ೨. ಚಿಮ್ಮು; ಎರಚು. 'ಜೀಕೊರ್ಳವೆ' ಪರಾ. **ಜೀರು$_2$:** ೧. ಈಶ್ವರಯ್ಯನು ಆವನ ಎದೆಯ ಮೇಲೆ ಕುಳಿತು ಶಲ್ಯವನ್ನು ಜೀರುವನು (ಉಮಾಶಿ. ೦೬೫). 'ಜೀರಂಗುಣಿಕೆ' ಪರಾ. [ ? ]

**ಜೀರ್$_3$** (ನಾ). ಒಂದು ಅನುಕರಣ ಶಬ್ದ. 'ಜೀರೆನ್', 'ಜೀರ್ಗರೆ' ಪರಾ.

**ಜೀರ$_1$** (ನಾ). ೧. ವೇಗದಿಂದ ಕೂಡಿದ ಚಲನೆ; ಶೀಘ್ರಗಾಮಿತ್ವ. ೨. ಕತ್ತಿ; ಖಡ್ಗ. ೩. ಜೀರಿಗೆ. [ ಸಂ. ]

**ಜೀರ$_2$** (ನಾ). ಹೂಗಾರ; ಹೂವಾಡಿಗ; ಮಾಲೆಗಾರ; ಜೀರರಿಗೂ (ಹೂಗಾರರ) ಒಕ್ಕಲಿಗನ ಕಣದಲ್ಲಿ ರಾಶಿಗೆ ಪತ್ರಿ ಹೂ ದಂಡೆಗಳನ್ನು ಕೊಡುವ ಬಾಬಿದೆ (ಕನ್ನಜಾ. ೦೩೪); ಅದೇ ಊರಲ್ಲಿಯ ಎರಡನೆಯ ಲಿಪಿ ಜೀರರ ಓಣಿಯಲ್ಲಿ ಹಾದಿಯ ಮೇಲೆ ಬಿದ್ದಿತ್ತು (ಶಾಸಪ. ೩೧). [ ? ]

**ಜೀರಂಗಿ** (ನಾ). ಮಳೆಗಾಲದಲ್ಲಿ ಹಾರಾಡುವ ಹಸಿರು ಬಣ್ಣದ ಕೀಟ; ಜೀರುಂಡೆ: ಪಾಲ್ದನೆಗಳಿಗೆರಗುವ ಜೀರಂಗಿಗಳ ಜೀಗು ಶ್ರುತಿ ಹಿಡಿದಂತಿದ್ದಿತು (ಶ್ರೀರಾಪ. ೬೯); ಕಣಜ, ಜೇನು, ಜೀರಂಗಿ (–ರುಂಡೆ) (ನಮ್ಮನು. ೨೪೦). [ ? ]

**ಜೀರಕ** (ನಾ). ಒಂದು ವಿಧವಾದ ಸಾಂಬಾರದ ಧಾನ್ಯ; ಜೀರಿಗೆ: ಕಾರ್ಪಾಸ ಸರ್ಷಪ ಜೀರಕಧಾನ್ಯಕಾದಿ ವಿವಿಧ ಧಾನ್ಯಭೇದಂಗಳುಂ (ಆದಿಪು. ೬-೭೨ ವ); ಬಗೆಗೊಳ್ವುವು ಹಾರಿದ್ರಕ ಜೀರಕಾರ್ದ್ರಕೇಕ್ಷುವನಂಗಳ್ (ಪುಷ್ಪಪು. ೯-೨೨). [ ಸಂ. ]

**ಜೀರಗಂಡಿ** 'ಜೀರುಗಂಡಿ' ನೋ.

**ಜೀರಗೆ** (ನಾ). = ಜೀರಕ: "ಅಜಾಜೀ, ಜೀರಕಃ – ಈ ೨ ಜೀರಗೆ" (ಹಲಾಯು. ೧೦೦-೪೭೨); ಎಣ್ಣೆ ವರಹ ತೂಕ ಗ ೧ ಜೀರಗೆ ಮೆಂತಯ (ಎಕ. XV, ಬೇಲೂರು. ೭೦-೩೭; 1484); ದೀಪ್ಯಕಃ – ಓಮ, ಅಜಮೋದ, ಜೀರಗೆ (ಓಷಧಿ. ೭೬). 'ಜೀರಗೆಯೊಕ್ಕಲ್' ಪರಾ. [ <ಸಂ. ಜೀರಕ ]

**ಜೀರಗೆಯೊಕ್ಕಲ್** (ನಾ). ಜೀರಗೆ ಧಾನ್ಯವನ್ನು ಒಕ್ಕುವಿಕೆ. 'ಜೀರಗೆಯೊಕ್ಕಲಿಕ್ಕು' ಪರಾ.

**ಜೀರಗೆಯೊಕ್ಕಲ್ಮಾಡು** = ಸದೆಬಡಿ; ಸಣ್ಣಸಣ್ಣ ಚೂರಾಗುವಂತೆ ನಾಶಪಡಿಸು: ಅಂತು ಕುರುಬಲಮೆಲ್ಲಮಂ ಜೀರ[ಪಾಠಾಂ. ರಿ]ಗೆಯೊಕ್ಕಲ್ಮಾಡಿ ತುಱಿದು ಕೊಲೆ (ಪಂಪಭಾ. ೧೨-೯ ವ).
[ ಜೀರಗೆ + ಒಕ್ಕಲ್$_1$ ]

**ಜೀರಗೆಯೊಕ್ಕಲಿಕ್ಕು** (ಕ್ರಿ). ೧. ಜೀರಿಗೆಯನ್ನು ಒಕ್ಕು. ೨. (ಅಲಂ) ಸದೆಬಡಿ; ಬೀಳಗೆಡಹು; ಚೂರುಚೂರಾಗುವಂತೆ ನಾಶಪಡಿಸು: ಮುಂತಿದಿರಾಂತನಂತ ರಿಪುಸೈನಿಕರಂ ಸಿಡಿಲಂತೆ ಸಿಂಗದಂತಂತಕನಂತೆ ಸಂಗರದೊಳೋವದೆ ಜೀರಗೆಯೊಕ್ಕಲಿಕ್ಕಿ ಸಾಮಂತಲಲಾಮನೀ ನೆಗಳ್ದಂ ತೆಂಕಣರಾಯಂ (ಎಕ. IV, ನಾಗಮಂ. ೭೦-೩೫; 1177).
[ ಜೀರಗೆಯೊಕ್ಕಲ್ + ಇಕ್ಕು ]

**ಜೀರಟ್ಲೆ** (ನಾ). ಜೀರ್‌ಜೀರ್ ಎಂದು ಶಬ್ದಮಾಡುವ ಒಂದು ಬಗೆಯ ಹುಳು ; ಜೀರುಂಡೆ (?) : ಅರಣ್ಯದ ನೀರವತೆಯಲ್ಲಿ, "ಜೀ . . . ಈ . . . ರ್" ಎಂದು ಕೂಗುವ ಜೀರಟ್ಲೆಹುಳುಗಳ ನಾದವು ಒಂದು ಬಗೆಯ ಭಯವನ್ನು ಹುಟ್ಟಿಸುವಂತಿತ್ತು (ಪಂಜಪಂ. ೧೫). [ ? ]

**ಜೀರಣ$_1$** 'ಜಿನ್ನ$_1$' ನೋ.

**ಜೀರಣ$_2$** (ನಾ). = ಜೀರಗೆ: "ಜೀರಕಃ, ಜೀರಣಃ, ಅಜಾಜೀ, ಕಣಾ — ೪ ಜೀರಿಗೆ ಹೆಸರುಗಳು" (ಸಿದ್ಧಾಂತಿ. ೨೪೪). [ ಸಂ. ]

**ಜೀರದಂಡ** (ನಾ). ಒಂದು ಬಗೆಯ ಸೀರೆ: ಹೊಂಬಟ್ಟೆ ಪಟ್ಟಾವಳಿಯು ಅಶ್ವಾವಳಿಗಳು ತುಂಬ ಬಣ್ಣವು ಜೀರದಂಡ . . . ಎಂಬ ಸೀರೆಗಳೊಟ್ಟಿ ಮೆಚಿಸಿಯೆ (ಅಮುಸಾಂ. ೪-೧೩). [ ? ]

**ಜೀರಿಗೆ** (ನಾ). = ಜೀರಗೆ : "ಜೀರಿಗೆಯಜಾಜಿ ಪೃಥ್ವಿಕೆಯಕ್ಕು" (ಮಂಗರಾ. ೪೦-೩೫); ಬಿಳಿಯಕ್ಕಿಯುದ್ದಿನ ಸಣ್ಣ ಸಂಪಳೆಯೊಳಗೆ . . . ಜೀರಿಗೆಯಿಕ್ಕಿ (ಸೂಪಶಾ. ೧-೬೫) ; ಒಂದು ದಿನ ಅವನ ಅಂಗಡಿಗೆ ಜೀರಿಗೆ ಕೊಳ್ಳುವುದಕ್ಕಾಗಿ ಒಂದು ಗಿರಾಕಿ ಬರಲು (ಮುಂಬಯಿ. ೪-೬೨). 'ಜೀರಿಗೆಯೊಕ್ಕಲ್' ಪರಾ.

**ಜೀರಿಗೆಸಂಭಾರದ ಭತ್ತ** = ಒಂದು ಬಗೆಯ ಸಣ್ಣನೆಲ್ಲು,-ಭತ್ತ : "ಅಣುಃ—ವ್ರೀಹಿಭೇದಃ ಕಿರುಭತ್ತ, ಸಣ್ಣಭತ್ತ, ಜೀರಿಗೆಸಂಭಾರದ ಭತ್ತ" (ಸಿದ್ಧಾಂತಿ. ೨೪೦). [ < ಸಂ. ಜೀರಿಕಾ ]

**ಜೀರಿಗೆಬೆಲ್ಲ** (ನಾ). (ಮದುವೆಯಲ್ಲಿ ವಧೂವರರು ಪರಸ್ಪರ ತಲೆಯ ಮೇಲೆ ಹಾಕುವ) ಜೀರಿಗೆ ಮತ್ತು ಬೆಲ್ಲ : ಸರಿಸಂಬರಿದುದು ಜೀರಿಗೆಬೆಲ್ಲದ ಪರಿಯಿಂ ಮುಳಿದಿಟ್ಟ ಭಸಿತಂ (ಗಿರಿಕ. ೯-೧೨೦); ಮದುವಣಿಗನಂ ಕಂಡು ನಿಷ್ಮೆನೇಮಂಗಳ ಜೀರಿಗೆಬೆಲ್ಲಂಗಳಂ ತಳಿದು (ಬಸರ. ೪-೧೦೩). [ ಜೀರಿಗೆ + ಬೆಲ್ಲ ]

**ಜೀರಿಗೆಮಾವು**(ನಾ). ಒಂದು ಬಗೆಯ ಮಾವಿನ ಮರ ಮತ್ತು ಜೀರಿಗೆಯ ವಾಸನೆಯುಳ್ಳ ಅದರ ಹಣ್ಣು : "ಸಹಕಾರಃ—ಅತಿಸೌರಭಃ ಕೇವಲ ಪರಿಮಳವುಳ್ಳ ಮಾವಿನ ಗಿಡ ಕಸ್ತೂರಿ ಮಾವು, ಜೀರಿಗೆಮಾವು" (ಸಿದ್ಧಾಂತಿ. ೧೦೫). [ ಜೀರಿಗೆ + ಮಾವು ]

**ಜೀರಿಗೆಯೊಕ್ಕಲ್** (ನಾ). = ಜೀರಗೆಯೊಕ್ಕಲ್ : ಭೀಮಭ್ರೀಮುಗದಾದಂಡ ವಿಘಾತದಿಂ ಕುರುಸ್ವಪಾನೀಕಂ ಪಡಲ್ವಟ್ಟು ಜೀರಿಗೆಯೊಕ್ಕಲ್ಗೆಣೆಯಾಗಿ [ಪಾಠಾಂ. ಜೀರಿಗೆಯೊಳ್ಕಾಲೆಣೆಯಾಗಿ]ಬಿಟ್ಟ ಭಟರಿಂ (ಗದಾಯು. ೩-೨). [ ಜೀರಿಗೆ + ಒಕ್ಕಲ್$_1$ ]

**ಜೀರಿಗೆರಾಜಾನ್ನ** (ನಾ). ಸುವಾಸನೆಯುಳ್ಳ, ಜೀರಿಗೆಯ ಕಾಳಿನಂತೆ ತುಂಬ ಚಿಕ್ಕದಾದ ಒಂದು ಬಗೆಯ ಭತ್ತ : ಜೀರಿಗೆರಾಜಾನ್ನವು ಮರುತರ ಸೊಗಸು ರಾಜಾನ್ನ ಪರಿಶೋಭಿಸುವ ವರಶಾಲಿಯು ಗದ್ದೆಯಿಹುವು (ಕಂನವಿ. ೫-೬೮). [ ಜೀರಿಗೆ + ರಾಜಾನ್ನ ]

**ಜೀರಿಗೆಸಣ್ಣಕ್ಕಿ** (ನಾ). = ಜೀರಿಗೆರಾಜಾನ್ನ: (ಕ). [ ಜೀರಿಗೆ + ಸಣ್ಣಕ್ಕಿ ]

**ಜೀರಿಗೆಸಾಲೆ** (ನಾ). = ಜೀರಿಗೆರಾಜಾನ್ನ : ಬಟ್ಟೆ ಇಲ್ಲದವಗೆ ಪಟ್ಟೆ, ಊಟಕ್ಕಿಲ್ಲದವಗೆ ಜೀರಿಗೆಸಾಲೆ (ಗಾದೆ). [ ಜೀರಿಗೆ + ಸಾಲೆ$_4$ ]

**ಜೀರು$_1$** 'ಜೀಬು' ನೋ.

**ಜೀರು$_2$** 'ಜೀರ್$_2$' ನೋ.

**ಜೀರು$_3$** (ಕ್ರಿ). ಗೀರು ; ಪರಚು : ಬಳಿಯೊಡಕ ತಕ್ಕೊಂಡು ಕೊರಳ ಕುಚವನೆಲ್ಲವ ಜೀರಿಕೊಂಡು (ಸಾರಂಗ. ೧೩) ; ಕೈ ಗುದ್ದುಗಳಿಂದ ನೋಯಿಸಿ, ಉಗುರುಗಳಿಂದ ಜೀರಿ . . . ಹೋರುತಲಿದ್ದರು (ಕ್ರಾಭಿ. ೧೫೦). [ < ಗೀರು$_1$ ]

**ಜೀರು$_4$** (ನಾ). ೧. ನಾದಕ್ಕಾಗಿ ತಂಬೂರಿಯ ತಂತಿಗೆ ಕಟ್ಟುವ ದಾರ; ಜೀವಾಳ. ೨. [ಸಂಗೀತ] ಮಂದ್ರಸ್ವರ. [ ←ಪಾರ. ಜೀರ್ ]

**ಜೀರುಂಡೆ** 'ಜೀಬುಂಡೆ' ನೋ.

**ಜೀರುಂಬೆ** 'ಜೀರ್ದುಂಬಿ' ನೋ.

**ಜೀರುಗುಣಿಕೆ** 'ಜೀಗುರ್ಣಿಕೆ' ನೋ.

**ಜೀರುಗೂಡು** (ಕ್ರಿ). ಮಂದ್ರಸ್ವರದಿಂದ ಕೂಡು ; ನಾದಭರಿತವಾಗು : ಬೇಕಾದ ಆಧಾರ ಷಡ್ಜಕ್ಕೆ ತಂತಿಗಳು ಶ್ರುತಿಮಾಡಲ್ಪಟ್ಟ ನಂತರ . . . ಒಂದು ಸ್ಥಾನದಲ್ಲಿ ಆ ತಂತಿ ಜೀರುಗೂಡಿ ಹೆಚ್ಚು ಧ್ವನಿ ಮಾಡುತ್ತದೆ (ಸಂಗೀಚಿ. ೧೦೨). [ಜೀರು$_4$ + ಕೂಡು$_1$ ]

**ಜೀರುಜಿಂಬೆ** (ನಾ). = ಜೀರ್ದುಂಬಿ : "ಮಧುವ್ರತಃ . . . ಬಂಭರಃ— ೧೫ ತುಂಬಿಯ ಹೆಸರುಗಳು. ತುಂಬೆಹುಳ, ದುಂಬೆ, ಕಚ್ಚುಪ ಜೀರುಜಿಂಬೆ, ಭೃಂಗ" (ಸಿದ್ಧಾಂತಿ. ೧೪೨). [ < ಜೀರ್ದುಂಬಿ ]

**ಜೀರುಬುಗುರಿ** (ನಾ). ಜೀರ್ ಎಂದು ಶಬ್ದಮಾಡುತ್ತಾ ತಿರುಗುವ ಬುಗುರಿ: ಮೊದಲೇ ಚನ್ನಪಟ್ಟಣದ ಬಣ್ಣದ ಬುಗುರಿಯಂತೆ ತಿರುಗುತ್ತಿದ್ದ ಭಾಗೀರಥಮ್ಮನ ಮನಸ್ಸು ಈಗ ಜೀರುಬುಗುರಿಯೇ ಆಯಿತು (ಕುರಾಯಿ. ೧೮). [ ಜೀರು$_1$ (< ಜೀಬು) + ಬುಗುರಿ ]

**ಜೀರುಮುತ್ತಿಗೆ** (ನಾ). ತಪ್ಪಿಸಿಕೊಳ್ಳಲಾಗದಂತೆ ಸುತ್ತಲೂ ಹಾಕಿದ ಮುತ್ತಿಗೆ : ಕುಮಾರರಾಮನ ಪಕ್ಷದವರು ಜೀರುಮುತ್ತಿಗೆ ಹಾಕಿ, ನಾನಾ ಕಡೆಗಳಿಂದ ಮೇಲೇರಿ ಬರಲು ಮಾರಭೂಪಾಲನ ಸೇನೆ ತತ್ತರಿಸಿತು (ಕುಮಾಸಾಂ. ೧೦೬). [ P ಇದು 'ಜೇರುಮುತ್ತಿಗೆ' ಎಂಬುದರ ಅಪಲಿಖಿತವಿರಬಹುದು ].

**ಜೀರೆನ್** (ಕ್ರಿ). ಜೀರ್ ಎಂದು ಶಬ್ದಮಾಡು : ಇರುಳುಂ ಪಗಲುಂ ಜೀರೆನುತುಂ ತೆಱಪುಗುಡದೆ ಕಱದುವು ಮಳೆಗಳ್ (ಗಿರಿಕ. ೯-೪೯). [ ಜೀರ್$_3$ + ಎನ್$_1$ ]

**ಜೀರೇಳ್** 'ಜೀಱೇಱ್' ನೋ.

**ಜೀಕೊರ್ಳಳವಿ** 'ಜೀಕೊರ್ಳಟವಿ' ನೋ.

**ಜೀಕೊರ್ಳಳವೆ** 'ಜೀಕೊರ್ಳಟವಿ' ನೋ.

**ಜೀಕೊರ್ಳಟವಿ,** ಚೀಕೊಳವೆ, ಚೀಕೊರ್ಳಳವಿ, ಚೀಕೊರ್ಳಳವೆ, ಚೀಕೊರ್ಳಟವೆ, ಚೀಗೊರ್ಳಳವೆ, ಜೀಕಳಿ, ಜೀಕುಳಿ, ಜೀಕೊಳವಿ, ಜೀಕೊಳವೆ, ಜೀಕೊರ್ಳಳವಿ, ಜೀಕೊರ್ಳಳವೆ, ಜೀಕೊರ್ಳಟವೆ, ಜೀಗೊರ್ಳಳವಿ, ಜೀಗೊರ್ಳಳವೆ (ನಾ). ನೀರು, ಓಕುಳಿ ಮುಂತಾದುವನ್ನು ಎರಚುವುದಕ್ಕಾಗಿ ಬಳಸುವ ನಳಿಕೆ ಅಥವಾ ಕೊಳವೆ; ಪೀಚುಗೊಳವೆ ; ಪಿಚಕಾರಿ : "ಜಳಯಂತ್ರಮದು ಜೀಕೊರ್ಳಟವಿ" (ಸಂಜೀವ. ೨); ನಾನಾ ಪ್ರಕಾರದ ಯಂತ್ರಂಗಳಿಂದಂ ಜೀಕೊರ್ಳಟವಿಗಳಿಂದಂ ತಳಿಯುತ್ತಂ ನೀರ್ಗಳಂ ಸೂಸುತ್ತಂ (ಪದ್ಮರಾ. ೧೩೬-೩) ; ವಜ್ರಾಯುಧಂ ಜೀಕೊರ್ಳಟವಿಯಿಸಮ್ಮತಸ್ಕಂದಿ ಸಂಧಾನಿಯಪ್ಪಂಬುವನಾಗಳ್ ಪೋಗದೊತ್ತುತ್ತ (ಶಾಂತಿಪು. ೮-೩೧); ಜೀಕೊರ್ಳಟವಿಗಳಿಂ ಕುಳಿರ್ವ ಮಳಬುಜದ ರಸವುಂ ಸಿಂಪಿಸುವೀ ಸಾಲಭಂಜಿಕೆಗಳ್ (ಲೀಲಾವ. ೧೦-೫೫ ವ) ; ಜೀಕೊರ್ಳಟವಿಗಳಿಂದಮುಚ್ಚಳಿಪ ನೆತ್ತರ ಕುಂಕುಮವಾರಿಯಂ ದಿಶಾಲಳನೆಯರೊತ್ತಿ ಸಿಂಪಿಸುತೆ ಸಿಂಪಿಣಿಯಾಡೆ(ಜಗವಿ. ೧೬-೮೮). **ಚೀಕೊಳವೆ :** ಆ ಮಹೋತ್ಸವದಲ್ಲಿ ಕುಂಕುಮದ ಹುವ್ವಿನಿಂದ ವಸಂತವಂ ಮಾಡಿಸಿ ಚೀಕೊಳವೆಯಿಂದ ವೋಕುಳಿಯಾಡಿ (ಕ್ರಾಅ. ೯೫). **ಚೀಕೊರ್ಳಳವಿ :** ರನ್ನದಂಡೆಗಳುಮಂ ಚೀಕೊರ್ಳಳವಿಗಳುಮನವರ್ಗಿತ್ತು (ಪದ್ಮರಾ. ೮-೪೪). **ಚೀಕೊರ್ಳಳವೆ:** ಅಳಿಪಡಲುದ್ಭಟೋರ್ವಿಪತಿಯೊತ್ತಿದೊಡೊಯ್ಯನೆ ಪೊಚ್ಚಪೊನ್ನ ಚೀಕೊರ್ಳಳವೆಯನುಣ್ಮೆ ಪೊಣ್ಮೆ (ಉದ್ಭಟ. ೯-೧೧೬). **ಚೀಕೊರ್ಳಟವೆ :** ನರಪತಿ ಕೊಂಡು ಚೀಕೊರ್ಳಟವೆಯಂ ಬಿಡದೊಯ್ಯನೆ ಕೂರ್ಮೆಯಿಂ ಮನೋಹರಿಯರ ಮೇಲೆ ಚಿಮ್ಮೆ (ಧರ್ಮಾಮೃ. ೧೪-೧೫). **ಚೀಗೊರ್ಳಳವೆ :** ವಿಷದ ಚೀಗೊರ್ಳಳವೆ ಮಳಲರಾಸಿಯುಕ್ಕಿನ ಮಸೆದಲಗಿನ

ಸಾಅ ಸಬಳ . . . ಕಣ್ಗೆಸೆದುವು ತೆನೆಯ ಸಂದಿನಲಿ (ಕಂಸವಿ. ೬-೨೨). **ಜೀಕಳಿ:** ತರುಣ ಪ್ರಮದಾಜನರು ಚಾಮೀಕರದ ಜೀಕಳಿಗಳಲಿ ವರಕೇಸರದ ದ್ರವವನು ತುಂಬಿ (ರಘುವಂ. ೧೯೪); ರಸದೋಕುಳಿ! ಹೊಡೆ ಜೀಕಳಿ! (ಕ್ರಾಂಡಧ್ವ. ೦೦-೦೦); ಜೀಕಳಿಯೊಳಗೆ ನೀರು ತುಂಬಿ . . . ಬೆಣೆಯನ್ನು ಬೇಕಾದಷ್ಟು ಸಾಮರ್ಥ್ಯದಿಂದ ಒತ್ತಿದರು (ಮುಂಬಯಿ. ೫-೫೮). **ಜೀಕುಳಿ:** ಶರದಲಿ ಚುಚ್ಚಿದನು ಜೀಕುಳಿಯ [ಪಾಠಾಂ. ಬೆಮ್ಮಡಿಯು ಜಗುಳಿಯನು, ಜೀರ್ಕೊಳವೆ] ಬಿಟ್ಟನು ನೆತ್ತರನು ನೆಲಕೆ (ಕುಮ್ವಾ.ಕ. ೩-೩೦); ರಾಜರಾಣಿಯರ ಮೇಲೆ ಕೂಡ ಕೆಂಪು, ಕೇಸರಿ ಬಣ್ಣಗಳನ್ನು ಜೀಕುಳಿಗಳಿಂದ ಎರಚುವರು (ಕರ್ನಾಜ. ೮೨). **ಜೀಕೊಳವಿ:** ಶಾಕಿನಿಯರೋಕುಳಿಯ ಧಾರೆಯ ಜೀಕೊಳವಿ [ಪಾಠಾಂ. ಜೀಕೊಳುವೆ, ಜೀಕೊಳವೆ]ಯೋ (ಕುಮ್ವಾದ್ರೋ. ೬-೪೪). **ಜೀಕೊಳವೆ:** ಮೇಲಿನ 'ಕುಮ್ವಾದ್ರೋ.' ಪ್ರಯೋಗದ ಪಾಠಾಂತರವನ್ನು ನೋಡಿ. **ಜೀರ್ಕೊಳವಿ:** ಭಸಿತದ ಧಾರೆ ಪೊಱವಡೆ ಜೀರ್ಕೊಳವಿ[ಪಾಠಾಂ. ವೆ]ಯಲ್ಲಿ ಚಿಮ್ಮಿದಂತಾಯ್ತು (ಬಸವು. ೪೪-೦೫); ಹೆಗಲ ಪಕ್ಕಲೆಗಳಲಿ ಕವಿದುದು ವಿಗಡ ಪೂತನಿವ್ರಂದ ಜೀರ್ಕೊಳವಿಗಳ ಕೈಚಾಟಳದೊಳ್ಳೆದಿತು ಶಾಕಿನೀ ನಿಕರ (ಕುಮ್ವಾ.ಭೀ. ೫-೩೦). **ಜೀರ್ಕೊಳವೆ:** ಕಾಸಾರದಂಬುಗಳನೆಸೆವ ಜೀರ್ಕೊಳವೆ [ಪಾಠಾಂ. ವಿ]ಗಳ . . . ಅಳವಡಿಸಿ (ಜೈಮಿಭಾ. ೩೦-೭). **ಜೀರ್ಕೊಟವೆ:** "ಜೀರ್ಕೊಟವೆ ಜೀವನಯಂತ್ರದ ನಾಮಧೇಯದೊಳ್" (ಕರ್ಣಾನಿ. ೮೩); ಬರೆ ತೆಗೆದೊತ್ತೆ ಜೀರ್ಕೊಟವೆಯಿಂ ಪ್ರಿಯನೊತ್ತಿದ ವಾರಿಧಾರೆ (ಲೀಲಾವ. ೦೩-೦೪೭); ಪರಿದೊಳಪೊಯ್ದು ಜೀರ್ಕೊಟವೆಯಿಂ– ತೆಗೆದೆತ್ತಿದ ಕೆಯ್ಯೊಳೊರ್ವರೊರ್ವರನಿರದೊತ್ತೆ (ಅನುಪು. ೬-೨೮); ಜೊತ್ತಿನೊಳೊತ್ತಿ ಜೀರ್ಕೊಟವೆಯಂ ಪಿಡಿದು (ದಶಕು. ೧೦-೭೮). **ಜೀರ್ಗೊಳವಿ:** ಪೊನ್ನ ಜೀರ್ಗೊಳವಿಗಳ ಮುಖದಿಂದೆ . . . ಸೂಸಿದರ್ (ಶೀಷರಾ. ೨೪-೪೫). **ಜೀರ್ಗೊಳವೆ:** ಮಾಣಿಕ್ಯದಂಡೆಯ ಪೊನ್ನ ಜೀರ್ಗೊಳವೆಯನೇಕಾಕ್ಷಿಯರು ಪಿಡಿದೊಲವಿಂ (ಶಾಂತೀಶ. ೭-೦೦೦). [ಜೀರ್₂ + ಕೊಟವಿ]

**ಜೀರ್ಕೊಟವೆ** 'ಜೀರ್ಕೊಟವಿ' ನೋ.

**ಜೀರ್ಕೋವಿ** (ನಾ). = ಜೀರ್ಕೊಟವಿ: ಕಾರಿದತ್ತೆರ್ದೆಗೆ ಚುರ್ಚಿದ ಸರಳ್ ನೆತ್ತರಂ ಜೀರ್ಕೋವಿಯಂತೆ ಪೊಲ್ (ಶ್ರೀಪಾಮಾ. ೦-೦೦).

[ಜೀರ್₂ + ಕೋವಿ₁]

**ಜೀರ್ಗರೆ** (ಕ್ರಿ). ಜೀರ್ ಎಂದು ಶಬ್ದಮಾಡು; ಚೀತ್ಕರಿಸು: ಅರಿಂ ಪುಟಮೆರಡುಂ ಜೀರ್ಗರೆದುಮರಲ್ದಂದಮೆಂತುಟಾಯ್ತು (ಆದಿಪು.೦೩-೩೭); ಪೊಱಗಣರಿಗೆ ಜಯಾಂಗನೆ ಪಲ್ಕೊಱಿದವಳೆನೆ ಪರಿದುವು ಜೀರ್ಗರೆವುತ್ತುಂ ಚತುರಶೀತಿ ಲಕ್ಷ ರಥಂಗಳ್ (ಶಾಂತಿಪು. ೦೦-೦೨೯); ಜೀರ್ಗರೆಯೆ ತೆಗೆದು ಬಿಲ್ಲಂ ಭೋರ್ಗರೆದು ವರೂಥಿಯೂಥಮಿಸಲ್ (ಜಗವಿ. ೭-೬೩).

[ಜೀರ್₃ + ಕರೆ₁]

**ಜೀರ್ಗುಣಿಕೆ, ಜೀರುಗುಣಿಕೆ** (ನಾ). ಎಳೆದೆಳೆದಂತೆ ಮತ್ತೂ ಬಿಗಿದು ಕೊಳ್ಳುವ ಒಂದು ವಿಧವಾದ ಗಂಟು: ತನ್ನ ರೂಪೇ ತನಗೆ ಕೊರಳ ಜೀರ್ಗುಣಿಕೆಯಾಗಬಹುದೆಂಬ ವಾಸನೆ ಅವನಿಗೆ ಮನದಟ್ಟಾಗುತ್ತದೆ (ನಂಜುಂಡ. ೫೯). **ಜೀರುಗುಣಿಕೆ:** ಆ ಕ್ರೂರ ಅವರನ್ನು ಕತ್ತಿಗೆ ಜೀರುಗುಣಿಕೆ ಹಾಕಿ ಎಳೆದುಕೊಂಡು ಹೊರಟುಹೋಗಿದ್ದ (ಸುಖವಿ. ೭).

[ಜೀರ್₂ + ಕುಣಿಕೆ₂ (<ಕುಳಿಕೆ₁)]

**ಜೀರ್ಗೊಳವಿ** 'ಜೀರ್ಕೊಟವಿ' ನೋ.

'ಜೀರ್ಕೊಟವಿ' ನೋ.

**ಜೀರ್ಣ** (ಗುಂ). ೧. ಮುಪ್ಪಾದ; ಹಳತಾದ; ಪುರಾತನ: "ಜೀರ್ಣಂ, ಜರತ್, ಪುರಾಣಂ, ಪ್ರತ್ನಂ, ಪ್ರತನಂ, ಪುರಾತನಂ – ಈ ೬ ಪ(ಹ)ಳದು" (ಹಲಾಯು. ೦೦೮-೨೩); ಜೀರ್ಣವಸನವು ಸರಿಯಲಿ (ಕಲ್ಲೋಲಿ. ೧೦-೦೨). ೨. ಕುಗ್ಗಿದ; ಕುಂಸಿದ: ಜೀರ್ಣವಾದ, ಶೀರ್ಣವಾದ ದೇಹವನ್ನು ದೇಹಸ್ಥನಾದ ಆತ್ಮನು ತ್ಯಜಿಸಿ ನವದೇಹಧಾರಿಯಾಗಿ ಹುಟ್ಟುತ್ತಾನೆ (ಭಾರದ. ೧೧೪). ೩. ಜರ್ಜರಿತವಾದ; ಶಿಥಿಲವಾದ; ಜರಿಜರಿಯಾದ; ಹಾಳಾದ: ಪರೇತವನಭೂಮಿಯೊಳ್ ಜೀರ್ಣ ಶೀರ್ಣ ಚೀರಂಗಳಿಂದಂ ಪುದಿದಿರಿಸಿ (ಆದಿಪು. ೩-೩೪ ವ). ೪. ಕೊಳೆತ; ಬಾಡಿದ; ಕ್ಷಯಿಸಿದ. ೫. ಅರಗಿದ; ಪಚನಗೊಂಡ. (ನಾ). ೬. ಮುದಿತನ; ಮುಪ್ಪು; ಇಳಿಪ್ರಾಯ; ಇಳಿವಯಸ್ಸು. ೭. ಮುದುಕ; ವೃದ್ಧನಾದವನು: ವೃದ್ಧಂ ಸ್ಥವಿರಂ . . . ಜೀರ್ಣಂ ಜರಾರ್ದಿತಂ ದಶಮಿಸ್ಥಂ" (ವಸ್ತುಕೋ. ೫೭-೨೭). ೮. ಕರಗಿ ಹೋಗುವಿಕೆ; ಇಲ್ಲವಾಗುವಿಕೆ; ನಾಶ: ಇದ್ದ ನೆಲನೊಳಕೊಳ್ಳದೇ ಜೀರ್ಣವಾಗನೇ (ತಿರುರ. ದೇ. ೨೦-೪). ೯. ಪಚನವಾಗುವಿಕೆ. [ಸಂ.]

**ಜೀರ್ಣಕಾರಿ** (ನಾ). ಪಚನಗೊಳಿಸಲು ಸಹಾಯಕಾರಿಯಾದುದು: ಅಟ್ಟ ಆಹಾರ ರುಚಿಕರವಾಗಿರುವುದು ಮಾತ್ರವಲ್ಲದೆ ಜೀರ್ಣಕಾರಿಯೂ ಆಗಿದೆ (ಆರುಸಾ. ೮೮). [ಸಂ. ಜೀರ್ಣಕಾರಿನ್]

**ಜೀರ್ಣಕೋಶ** (ನಾ). ತಿಂದ ಆಹಾರವು ಪಚನಗೊಳ್ಳುವಂತೆ ಮಾಡುವ ದೇಹಭಾಗ: ಸಿಕ್ಕಹಾಗೆ ತಿನ್ನಬಾರದು; ತಿಂದರೆ ನಿಶ್ಚಯವಾಗಿ ಜೀರ್ಣಕೋಶದ ಪಾಚಕಶಕ್ತಿಯು ಕಡಿಮೆಯಾಗುವುದು (ಮುಂಬಯಿ. ೪-೨೫).

[ಜೀರ್ಣ + ಕೋಶ]

**ಜೀರ್ಣಚ್ಛದ** (ನಾ). ಹಳೆಯದಾದ ಎಲೆ; ಹಣ್ಣೆಲೆ: ಜೀರ್ಣಚ್ಛದಂಗಳ್ ಮೇಳಂಗೊಂಡೊಪ್ಪೆ ಶಾಖಾಗ್ರದೊಳ್ (ರಾಜಶೇ. ೯-೨೯). [ಜೀರ್ಣ+ಛದ]

**ಜೀರ್ಣಜ್ವರ** (ನಾ). ಬಹಳ ಕಾಲದಿಂದ ಇರುವ ಜ್ವರ; ಹಳೆಯ ಜ್ವರ: ಎಲಚಿಸೊಪ್ಪಿನ ಕಷಾಯುವಂ ಮಾಡಿ ಸೇವಿಸೆ ಜೀರ್ಣಜ್ವರಂ ಪರಿಹಾರಮಕ್ಕುಂ (ಸಕವ್ಯ. ೦೦೪). [ಜೀರ್ಣ + ಜ್ವರ]

**ಜೀರ್ಣತನ** (ನಾ). ೧. ಮುದಿಯಾಗಿರುವಿಕೆ; ಮುಪ್ಪು: (ಕ). ೨. ಕ್ಷೀಣತೆ; ಶಿಥಿಲತೆ: "ಜ್ಯಾನಿ – ಜೀರ್ಣತನ" (ಗಂಗಾಮು. ೦೪೩).

[ಜೀರ್ಣ + – ತನ]

**ಜೀರ್ಣರಸ** (ನಾ). ಆಹಾರವನ್ನು ಅರಗಿಸುವ ರಸ; ಪಾಚಕ ರಸ: ನೀರು ದ್ರಾವಕ, ಆಮ್ಲ, ಕ್ಷಾರ, ಪ್ರಾಣಿಗಳ ಜೀರ್ಣರಸ ಇತ್ಯಾದಿಗಳಿಗೆ ನಾಟುವುದಿಲ್ಲ (ಕೀಟಬಿ. ೫). [ಜೀರ್ಣ + ರಸ]

**ಜೀರ್ಣಾಂಗ** (ನಾ). ಆಹಾರವು ಅರಗಲು ನೆರವಾಗುವ ಅಂಗ; ಪಚನಾಂಗ: ಬಾಯಿ, ಜಠರ, ಕರುಳು ಮೊದಲಾದ ಜೀರ್ಣಾಂಗಗಳು ಪ್ರಾಣಿಗಳಲ್ಲಿರುತ್ತವೆ (ಪ್ರಾಣಿಶಾ. ೭); ಪದೇಪದೇ ಮಕ್ಕಳು ವಾಂತಿ ಮಾಡುತ್ತಿದ್ದರೆ ಅವುಗಳ ಜೀರ್ಣಾಂಗಗಳು ಸರಿಯಾಗಿ ಕೆಲಸ ಮಾಡುತ್ತಿಲ್ಲವೆಂದು ವ್ಯಕ್ತವಾಗುತ್ತದೆ (ಗೃಹವಿ. ೦೪೪). [ಜೀರ್ಣ + ಅಂಗ₂]

**ಜೀರ್ಣಾವಸ್ಥೆ** (ನಾ). ಹಳೆಯದಾದ ಸ್ಥಿತಿ; ಶಿಥಿಲತ್ವ: ಹಾಳುಸುರಿಯುತ್ತಿದ್ದ ಮನೆಯ ಜೀರ್ಣಾವಸ್ಥೆ, ಮೊಟ್ಟಮೊದಲು ಅವನ ಕಣ್ಣಿಗೆ ಬಿತ್ತು (ಪುನರು. ೨೭೨). [ಜೀರ್ಣ + ಅವಸ್ಥೆ]

**ಜೀರ್ಣೆ** (ನಾ). ೧. ಮುದಿತನ; ಮುಪ್ಪು. ೨. ಇಳಿದು ಹೋಗುವಿಕೆ; ಜರ್ಜರಿತವಾಗುವಿಕೆ; ಶಿಥಿಲಗೊಳ್ಳುವಿಕೆ; ನಾಶ; ಕ್ಷಯ. ೩. ಜೀರ್ಣವಾಗುವಿಕೆ; ಪಚನವಾಗುವಿಕೆ; ಅರಗುವಿಕೆ. [ಸಂ.]

**ಜೀರ್ಣಿಸು** (ಕ್ರಿ). ೧. ಕೊಳೆ; ಹಾಳಾಗು: "ಕೊಟಿತುದು=ಜೀರ್ಣಿಸಿದುದು; ಮಲಮೇಱಿದುದು; ಮಸಮಿಕ್ಕಿದುದು" (ಶಮದ. ಪರಿ. ೦). ೨. ಅರಗು; ಪಚನವಾಗು. ೩. ಅರಗಿಸು; ಪಚನಗೊಳಿಸು: ಅನಲಯೋಗದೊಳನ್ನವನು ಜೀರ್ಣಿಸುತ ಮೇಲಲ್ಲಿಂದ ತನುವಂ ದಿನದಿ ಜೀಪ್ಪಿಸಿ ಧರಿಸಿಹುದೆ ಕೇಳ್ ಪ್ರಾಣಧರ್ಮವದು (ಗಗತಾ. ೯-೬೫); ದೇಹವು ಆಹಾರವನ್ನೆಲ್ಲ ಜೀರ್ಣಿಸುವುದಿಲ್ಲ (ಗೃಹವಿ. ೮).

**ಜೀರ್ಣಿಸಿಕೊಳ್ಳು**=೧. ಅರಗಿಸಿಕೊಳ್ಳು: ಕರಿದ ಆಹಾರ ರುಚಿಯಾಗಿರುತ್ತದೆ. ಆದರೆ ಅದನ್ನು ಜೀರ್ಣಿಸಿಕೊಳ್ಳುವುದು ಸುಲಭವಲ್ಲ (ಅದುಸಾ. ೮೯): ಕೆಲವು ಕೀಟಗಳು, ಸಸ್ತನಿಗಳು ಜೀರ್ಣಿಸಿಕೊಳ್ಳದಂತಹ ಮರದ ಪುಡಿ, ಉಣ್ಣೆ, ರೇಶ್ಮೆ, ಗರಿಗಳನ್ನು ತಿಂದು ಬೆಳೆಯುತ್ತವೆ (ಕೀಟಜೀ. ೨೫). ೨. ಪೂರ್ಣವಾಗಿ ಅರ್ಥಮಾಡಿಕೊಳ್ಳು; ಚೆನ್ನಾಗಿ ತಿಳಿದುಕೊಳ್ಳು: ವಲ್ಲಭಾಚಾರ್ಯ . . . ಸಮಕಾಲೀನ ವೇದಾಂತವಿದ್ಯೆಯನ್ನೆಲ್ಲಾ ಜೀರ್ಣಿಸಿಕೊಂಡನು (ಭಾರದ. ೨೮೮); ಅಭಿನಯದ ಮೂಲದ ಬುಡವನ್ನೇ ಜೀರ್ಣಿಸಿಕೊಂಡಿರುವ ರಾಯರಂತಹ ಮಹಾವ್ಯಕ್ತಿ (ರಾಯಕ. ೬೫).

[ ಜೀರ್ಣ + – ಇಸು$_3$]

**ಜೀರ್ಣೀಕರಿಸು** (ಕ್ರಿ). ಅರಗುವಂತೆ ಮಾಡು; ಪಚನಗೊಳಿಸು: ಆತ್ಮನು ಅನುಭವಿಸಿದಂಥ ಅನ್ನಪಾನಾದಿಗಳನ್ನು ಜೀರ್ಣೀಕರಿಸಿ ಒಡಲ ತಾಪಿಸುವಂತಹ ದೀಪನತಾಪವೇ ಉದರಾಗ್ನಿಯು (ವಚಶಾ. II, ೧೦೦).

[ ಜೀರ್ಣೀಕರಣ$_0$ + – ಇಸು$_3$ ]

**ಜೀರ್ಣೋದ್ಧಾರ** (ನಾ). ಹಳತಾಗಿ ಶಿಥಿಲವಾದುದನ್ನು ಊರ್ಜಿತಗೊಳಿಸುವುದು; ಹಳೆಯದನ್ನು ಸರಿಪಡಿಸುವುದು; ದುರಸ್ತಿಗೊಳಿಸುವುದು: ಹನ್ನೆರಡು ಮತ್ತರು ಕೆಯ್ಯ ಜೀರ್ಣ್ಣೋದ್ಧಾರಕ್ಕಂ ಪಡಿಸಲಿಕೆಗೆ × × × ಸಲಿಸುತ್ತಮಿಪ್ಪರು (ಸೌಇಇ. XX, ೩೨-೪೦ : 1045); ಪಲವುಂ ಜೀರ್ಣ್ಣೋದ್ಧಾರಮನೊಲವಿಂ ಮಾಡಿಸಿದ ಬಿಟ್ಟಿದೇವಂ ಕೃತಾರ್ಥಂ (ಮ್ಯಆರಿ. ೧೯೩೭, ೨೮-೪೮; 1148); ಆ ಪುರಾತನ ದೇವಸ್ಥಾನದ ಜೀರ್ಣೋದ್ಧಾರವಾಗುತ್ತಿದೆ (ರೂಢಿ). [ ಜೀರ್ಣ + ಉದ್ಧಾರ ]

**ಜೀರ್ದನಿ** (ನಾ). ಜೀರ್ ಎಂಬ ಧ್ವನಿ; ಕೀಚು ಸ್ವರ: ಆ ಜೀರ್ದನಿಯಲ್ಲಿ ಏನೊ ಒಂದು ದುಶ್ಶಕುನದ ಕರೆಕರೆ ಅಡಗಿದ್ದು (ಮಲೆಮ. ೪೩೫).

[ ಜೀರ್$_3$ + ದನಿ$_2$ ]

**ಜೀರ್ದುಂಬಿ, ಜಿರುದುಂಬಿ, ಜೀರುಂಬೆ** (ನಾ). ಜೀರ್ಎಂದು ಶಬ್ದಮಾಡುವ ಒಂದು ಬಗೆಯ ದುಂಬಿ: ಜೀರ್ದುಂಬಿಗಳ್ ಚೀರಿಡಲ್ ತೊಡಗಿದುವು (ಶ್ರೀರಾಮಾ. ೧೨೯-೧೦೫). **ಜಿರುದುಂಬಿ**: ನಡುನಡುವೆ ಚಿಟ್ಟೆ, ಜಿರುದುಂಬಿ . . . ರೆಕ್ಕೆಬಡಿದು ಹಿಡಿದಾಟವಾಡುತ್ತಿರುವುವು (ಜಾಂಪ್ರ. II, ೧೦೬೩). **ಜೀರುಂಬೆ**: ದೂರದ ಪೊದರುಗಳಿಂದ ಜೀರುಂಬೆಗಳು ಜೀರೆನುತ್ತ ಮಲೆನಾಡಿನ ಕಾರ್ಗಾಲದ ವೈಭವವನ್ನು ಹಾಡಿ ಹೊಗಳಿ ಹಾಡುತ್ತಿದ್ದವು (ತುಂಬಿಕೊ. ೪೯). [ ಜೀರ್$_3$ + ತುಂಬಿ$_1$ ]

**ಜೀಲಿ** (ನಾ). ಮೋಸ; ವಂಚನೆ: ನಿಮ್ಮಲ್ಲಿದ್ದರೆ ಎಲ್ಲಿ ಹೋಗ್ತದೆ. ನೀವು ಜೀಲಿಮಾಡುವವರಲ್ಲವೆಂದು ನಮಗೆ ಗೊತ್ತಿಲ್ಲವೆ? (ಮಗಮೂಂ. ೭೦). [?]

**ಜೀಲಿಗ** (ನಾ). ಒಂದು ಬಗೆಯ ಪಕ್ಷಿ: ಬೆಳವ ಪಾರಿವಗೊಳಲು ಜೀಲಿಗಗವುಜು ಗನ್ನಡಿಗಾ (ಅನಂರಾ. ೩-೩-೧೭). [ ? ]

**ಜೀಲ್ಕೈತ** 'ಚೀಲ್ಕೈತ' ನೋ.

**ಜೀವ** (ಗು). ೧. ಪ್ರಾಣವುಳ್ಳ; ಬದುಕಿರುವ. (ನಾ). ೨. ಪ್ರಾಣವುಳ್ಳುದು; ಪ್ರಾಣಿ; ಜಂತು. ೩. ಎಲ್ಲ ಪ್ರಾಣಿಗಳಲ್ಲೂ ಇರುವ ಚಿದ್ವಸ್ತು; ಜೀವಾತ್ಮ: "ಅಸ್ರುವಃ, ಜೀವಿತಂ, ಪ್ರಾಣಾಃ, ಜೀವಃ, ಜೀವಾ – ಈ ೫ ಪ್ರಾಣದ ಪೆಸರ್" (ಹಲಾಯು. ೨೨-೧೩೪): ಜೀವಾಜೀವ ಪುಣ್ಯಪಾಪಾಸ್ರುವ ಸಂವರ ನಿರ್ಜರ ಬಂಧಮೋಕ್ಷಮೆಂದಿಂತು ನವಪದಾರ್ಥಂಗಳುಂ (ವರ್ಧಾರಾ. ೬-೧೮); ಕಾಯ ತಾನುಂಬಡೆ ಕಾಯ ಮಣ್ಣು ಜೀವ ತಾನುಂಬಡೆ ಜೀವ ಬಯಲು (ಬಸವ. ೮೬೨); ಜೀವನಾರೆಂದೆನಲು ಹೆಮ್ಮೆಯ ಭಾವವುಳ್ಳವನು (ಅಮ್ಮತ. ೩-೨೦); ನಿನ್ನ ಶರೀರಮೆನಿಸಿರ್ಪ ತತ್ವಂಗಳ್ ಜೀವನೆಂದುಂ ಪ್ರಕೃತಿಯೆಂದು ಎರಡಾಗಿರ್ಕುಂ (ಚಿಕಬಿ. ೦೨); ಜೀವನೆಂದರೆ ಜ್ಞಾನದರ್ಶನಸ್ವರೂಪಿಯಾದ ಚೈತನ್ಯವಸ್ತು. ಜೀವನು ನಿತ್ಯ (ಹಿಂದಸಾ. ೮೩). ೪. ಜೀವನ; ಬದುಕು; ಬಾಳು: ಜೀಯ ಜೀವವ ಹೊರೆಯಲಟ್ಟಿಯೆವು ವೈರಿ ದಶಕಂಧರನುಪದ್ರುದಲಿ (ತೊರರಾ. ೦-೮-೬೦). ೫. ದೇವತೆಗಳ ಗುರು; ಬೃಹಸ್ಪತಿ: "ಆಂಗಿರಸನಮರಗುರು ವಾಕ್ಪತಿ ಗುರು ಬೃಹಸ್ಪತಿ ಧಿಷಣನೆನಲು ಜೀವಂ" (ಮಂಗರಾ. ೧೦-೬); ಬಹುವಕ್ತ್ರಂ ಪದ್ಮಗರ್ಭಂ ದನುಜಗುರು ಗುರುದ್ವೇಷಿ ಜೀವಂ ಸುರಾಧೀಶ ಹಿತಾತ್ಮಂ ಸುಪ್ರುವೃದ್ಧೋದ್ಧವನೆನಿಪವನುಂ ತಾನಕಾರ್ಯ್ಯ ಪ್ರಯುಕ್ತಂ . . . ಎನೆ ನೆಗಳ್ದಂ (ಎಕ. VIII, ಸೊರಬ. ೧೪೦-೫೭ ; 1198). ೬. ಸೊಲ್ಲು; ಮಾತು; ನುಡಿ. ೭. ನೀರು; ಉದಕ. ೮. ಕುದುರೆ; ತುರಗ. ೯. ಹೆದೆ; ಬಿಲ್ಲಿನ ದಾರ. ೧೦. ಜೀವನೋಪಾಯ,–ವೃತ್ತಿ; ಜೀವಿಕೆ: ವಾಗ್ಬೃಹಸ್ಪತಿ ಮೌರ್ವ್ಯಂಭಸ ವಾಜಿ ಜಂತುನಿಕರಂಗಳ್ಗಿಂತು ಜೀವಾಹ್ವಯಂ" (ನಾನಾರ. ೭೪); "ಬಿಲ್ಲ ನಾರಿಯೊಳು ಸುರಗುರುವಿನೊಳು ತುರಗದೊಳಗೆಲ್ಲ ಜೀವವೆನಿಕ್ಕು" (ಮಂಗರಾ. ೧೫೦-೫೩). ೧೧. [ಜ್ಯೋತಿ] ಗ್ರಹಗಳಲ್ಲೊಂದು; ಗುರುಗ್ರಹ; ಜೀವಂ ಬಲವಂತನಾಗೆ ತದ್ಬಾಲನಕ್ಕಟೆಂತುಂ ಬಾಟಂ (ಜಾತತಿ. ೬-೪೭); ಇನನಿರ್ದ ರಾಶಿಗಂತೇಟನೆಯೆಡೆಯೊಳ್ ಜೀವನಿರ್ದು (ಅಟ್ಟಮ. ೮-೧೦೪). ೧೨. (ಆಲಂ). ಬಹಳ ಆಸೆ,–ಇಷ್ಟ: ಅವನಿಗೆ ಕಿರಿಯ ಮಗನೆಂದರೆ ಜೀವ (ರೂಢಿ).

**ಜೀವಕ್ಕೆ ಜೀರಿಗೆಯರೆ**=ಹಿಂಸೆಪಡಿಸು: ಬಂದು ಶಂಬರನ ಜೀವಕ್ಕೆ ಜೀರಿಗೆಯರೆಯಬಂದನೆಂಬಂತೆಯಾಸ್ತಾನಮಂ ಪೊಗಲು ಮುದದಿಂದ ಖಳರಾಯನೆದ್ದೇಳ್ತಂದು ವಂದಿಸುತ (ನವಮೋ. ೧೦-೧೪). **ಜೀವದ ಸುತ್ತು ಬರು**=ಪ್ರಾಣ ಹೋಗುವಷ್ಟು ತೊಂದರೆಯೆನಿಸು; ಬಹಳ ಪೀಡೆಯೆನಿಸು: ದಿನದ ಕೆಲಸ ಬಿಟ್ಟು ಆಡುವುದೆಂದರೆ ಅವನ ಜೀವದ ಸುತ್ತು ಬರುತ್ತಿತ್ತು (ನಿರಾಧ. ೮೦). **ಜೀವದೊರಿಸೆ, ಜೀವದರಿಸೆ**=ಜೀವಸಹಿತವಾಗಿ; ಜೀವ ಬೆರಸಿ: ನಾನು ಜೀವದೊರಿಸೆ ಇದ್ದು ಏನು ಫಲ? (ವ್ಯಾಸಜಿ. ೦೦೩); ನನ್ನೂ ನನ್ನೆಂಡರನೂ ಜೀವದೊರಿಸೆ ಈರಿ ಬಿಡುತಾರೆ (ಮೂಂಗಲ್ಯ. ೬೮); ನೆಲೆ ಬಲ್ಲ ಕಳ್ಳರು ಜೀವದರಿಸೆ ಬಿಡರು (ಮೋಕ್ಷದೀ. ೫೩). **ಜೀವಭಯ**=ಪ್ರಾಣ ಹೋದೀತೆಂಬ ಹೆದರಿಕೆ: ದುಷ್ಟಪ್ರಾಣಿಗಳಿಗೂ ಜೀವ ಭಯವಿರುತ್ತದೆ (ರೂಢಿ). **ಜೀವಹಿಡಿ, ಜೀವವಹಿಡಿ**=೧. ಉಸಿರು ಹಿಡಿದಿರು; ಬದುಕಿರು: (ಶ). ೨. ತಾಳ್ಮೆಯಿಂದಿರು; ಸಹನೆಯಿಂದಿರು: ಕೇಳಿದ್ದನ್ನ ಕೊಡೋವರೆಗೂ ಸ್ವಲ್ಪ ಜೀವಹಿಡಿ (ರೂಢಿ); ಇನ್ನು ಮೇಲಣ ಕಾಳೆಗದ ಮಾತುಗಳನಕಟಾ ಕೇಳಿ ಜೀವವ ಹಿಡಿಯಲಾಪ್ಪೆ ತಂದೆ ಧೃತರಾಷ್ಟ್ರ (ಕುವ್ಯಾಕ.೨೭-೦). **ಜೀವೋಪಳು**=ನಲ್ಲೆ; ಪ್ರಿಯೆ: ತನ್ನ ಜೀವೋಪಳ ನೋಡುವುತ್ಸವದಿಂ (ಅಂಜಜ. ೦೦-೨೭೨).

[ ಸಂ. ]

**ಜೀವಂಗಿಡಿಸು** (ಕ್ರಿ). ಶಕ್ತಿಗುಂದಿಸು; ಚೈತನ್ಯಗುಂದಿಸು: ಇಂದಗಿಯಂ ಪಂದೆಯಂ ಕಾಡುವಂತೆ ಕಾಡಿ ರಾಮುನಂ ಧೂಮಂ ಸುತ್ತಿದಂತೆ ಜೀವಂಗಿಡಿಸಿ (ಧರ್ಮಾಮ್ರ. ೭-೯೫). [ ಜೀವ + ಕಿಡಿಸು (<ಕೆಡಿಸು) ]

**ಜೀವಂಜೀವ** (ನಾ). ೧. ಒಂದು ಬಗೆಯ ಪಕ್ಷಿ; ಹೊರಸು: "ಜೀವಂಜೀವಃ . . . ಕಪೋತಃ – ಈ ೬ ಹೊಟಸು" (ಹಲಾಯು. ೪೨-೧೦೦): ಚಕೋರಪಕ್ಷಿ ನಕ್ಷತ್ರ ಸಂಕುಲಲಾಜೋತ್ಕರಮಂ ಕರಂ ತಳಿದು ಜೀವಂಜೀವ ಸಂರಾವ ಮಂಗಲಗಾನಂ ಬೆರಸೆತ್ತುವಾರತಿಯು ಚೆಂಬೊಂದಟ್ಟೆಯೋ ಚಂದ್ರನೋ (ಚಿಳವಿ. ೬-೧೮). ೨. ಚಕೋರ. [ ಸಂ. ]

**ಜೀವಂಜೀವಕ** (ನಾ). ೧. = ಜೀವಂಜೀವ ೧: ಮಂಡೂಕ ಜೀವಂಜೀವಕ ಚಕೋರಾದಿ ಜಲಚರವಿಹಂಗ ಸಮೂಹಂಗಳಂ (ವರ್ಧಾರಾ. ೦೩೭-೦); ರಾಜಕುಮಾರರಾರೋಗಿಸುವಮೃತಾಹಾರ ಪರೀಕ್ಷಾಯೋಗ್ಯಂಗಳೆನಿಪ್ಪ ಜೀವಂಜೀವಕ ಸಮೂಹಮಂ (ಪಂಚತಂ. ೨೨೫-೧೮). ೨. = ಜೀವಂಜೀವ ೨: ಕಂದಳಿಕೆಯಂ ಜೀವಂಜೀವಕ ಮಿಥುನಂಗಳಂ ಕ್ರೀಡಾಪರ್ವತಮನೇಱಿಸಲುಂ (ಕಾದಂಪೂ. ೧೧೦೬). [ ಸಂ. ]

**ಜೀವಂತ$_1$** (ಗು). ೧. ಬದುಕಿರುವ ; ಜೀವಿಸಿರುವ. 'ಜೀವಂತಸಾಕ್ಷಿ' ಪರಾ. (ನಾ). ೨. ಬದುಕಿರುವುದು ; ಜೀವಸಹಿತವಾಗಿರುವುದು : ಈ ಚಿತ್ರ ಜೀವಂತವಿದೆ (ಕಾಲೂರ. ೧, ಮುನ್ನುಡಿ); ತಮಿಳು, ಮಲೆಯಾಳದ –ಈ ಟಿ–ಟ ಎಂಬ ಎರಡು ಧ್ವನಿಗಳೂ ಇಂದಿಗೂ ಜೀವಂತವಾಗಿ ಇವೆ (ದ್ರಾವಿವಿ. ೩೫೨). ೩. ಬದುಕಿರುವವನು: ನಿಂಬಿಯ ಪುತ್ರನಂ ಜೀವಂತ ನಾಗಲು ನೋಡಿ ಕೈಲಾಸಕ್ಕೆ ಕಳುಹಿದನು (ಬಸವು. ೨೭-೮೮). [ಸಂ. ಜೀವತ್]

**ಜೀವಂತ$_2$** (ನಾ). ಕೆಂಪು ಹರಿವೆಸೊಪ್ಪು : ಜೀವಂತ (ಕೆಂಪು ದೇಟಿನ ಹರಿವೆ) . . . ಮಧುರ (ಅಷ್ಟಾಂಗ. ೧೩೮-೯೩ ಅರ್ಥ). [ಸಂ.]

**ಜೀವಂತಒಗ್ಗರಣೆ** (ನಾ). ಸೌಟಿನಲ್ಲಿ ಎಣ್ಣೆಯನ್ನು ಹಾಕಿ ಕಾಸಿ ಕೊಡುವ ಒಗ್ಗರಣೆ : ಅವುರಿಗೆ ಜೀವಂತಒಗ್ಗರಣೆಕೊಡು (ಸ್ವ್ಯತಿಚಿ. ೫೨). [ಜೀವಂತ$_1$ + ಒಗ್ಗರಣೆ]

**ಜೀವಂತಗೊಳಿಸು** (ಕ್ರಿ). ಸತ್ವಶಾಲಿಯಾಗಿಸು ; ಶಕ್ತಿಯುತವಾಗಿಸು ; ಕಾಂತಿಗೊಳಿಸು : ನಾಟ್ಯಸಾಕ್ಷೀ ನಾಟಕೀಹೃದಯವು ಸತ್ವವನ್ನು ಜೀವಂತ ಗೊಳಿಸುವುದು (ಪ್ರಬಂಧ. ೩೦). [ಜೀವಂತ$_1$ + ಕೊಳ್$_1$ + – ಇಸು$_3$]

**ಜೀವಂತತನ** (ನಾ). ಜೀವದಿಂದಿರುವಿಕೆ ; ಚೈತನ್ಯದಿಂದ ಕೂಡಿದ ಸ್ಥಿತಿ: ಆಸೆ ನಿರಾಸೆಗಳ ಜೀವಂತತನವನ್ನು ದಾಟಿ, ಅಪ್ರಾಪ್ಯತೆ ಮತ್ತು ಪ್ರಲೋಭನ ಗಳ ಅನಿರ್ವಚನೀಯವಾದ ಸಂಕಟದ ಸುಳಿಯಲ್ಲಿ ಈ ವ್ಯಕ್ತಿಗಳು ಸಿಕ್ಕು ಬಿದ್ದಿವೆ (ಹೊಸಕ್ಕೆ. ೨೯೪) ; ಅವಳ ಚಲನವಲನದಲ್ಲಿ . . . ಜೀವಂತತನ ಜಿನುಗಿ ಮಿನುಗುತ್ತಿದೆ (ಇಪ್ಪಳ. ೪೭೦). [ಜೀವಂತ$_1$ + – ತನ]

**ಜೀವಂತತೆ** (ನಾ). ಚೈತನ್ಯದಿಂದ ಕೂಡಿದ ಸ್ಥಿತಿ; ಜೀವಂತತನ: ಆರಾಮ ವಾಗಿ ವೈಚಾಟಿ ಕುಳಿತ ಯುವತಿಯರ ಭಂಗಿ, ಒಂದು ನವೀನ ಜೀವಂತತೆ ಯನ್ನೇ ಪ್ರಕಟಿಸುತ್ತಿದ್ದುವು (ವಾತ್ಸಲ್ಯ. ೧೪೪). [<ಜೀವಂತ$_1$ + – ತೆ$_3$]

**ಜೀವಂತಸಾಕ್ಷಿ** (ನಾ). ಪ್ರತ್ಯಕ್ಷ ಸಾಕ್ಷಿ : ಆ ಗಾದೆಗೆ ಅವನೇ ಜೀವಂತಸಾಕ್ಷಿ ಯಾಗಿದ್ದನು (ಪುನರು. ೫೭೫). [ಜೀವಂತ$_1$ + ಸಾಕ್ಷಿ]

**ಜೀವಂತಿ** (ನಾ). ಒಂದು ಬಗೆಯ ಸಸ್ಯ ; ಅಮೃತಬಳ್ಳಿ : "ಅಮೃತಂ ಗುಡೂಚಿ ಜೀವಂತಿ ಸೋಮಮುಮಮೃರ್ತಾವಳ್ಳಿಯುಕ್ಕುಂ" (ಮಂಗರಾ. ೪೩-೪೩). [ಸಂ. ಜೀವಂತೀ]

**ಜೀವಂತಿಕೆ$_1$** (ನಾ). = ಜೀವಂತತನ : ಈ ದೇಸಿಯ ಅಡಕವು . . . ಆಯಾ ಸಂದರ್ಭದ ಜೀವಂತಿಕೆಯನ್ನೂ ಧ್ವನಿಸ್ವಾರಸ್ಯವನ್ನೂ ಬೆಳಗುತ್ತದೆ (ಕವನಿ. ೬೪). [ಜೀವಂತ$_1$ + – ಇಕೆ]

**ಜೀವಂತಿಕೆ$_2$** (ನಾ). ೧. ಒಂದು ಬಗೆಯ ಪರಾವಲಂಬಿ ಸಸ್ಯ ; ಬದನಿಕೆ. ೨. "ಅಮೃತಬಳ್ಳಿ" (ಪಂಡಿತ). [ಸಂ. ಜೀವಂತಿಕಾ]

**ಜೀವಂಬಡೆ** (ಕ್ರಿ). ಪ್ರಾಣವನ್ನು ಕೊಡು ; ಚೈತನ್ಯವನ್ನುಂಟುಮಾಡು: ಜನಾನುರಾಗಮನರಸಂ ಪಡೆದುಮಣಂ ತಣಿಯದೆ ಕಣ್ಬಡೆದಂ ನೀತಿಗೆ ಜಸಕ್ಕೆ ಜೀವಂಬಡೆದಂ (ಮಲ್ಲಿಪು. ೩-೪). [ಜೀವ + ಪಡೆ$_1$]

**ಜೀವಂಬೆರಸು** (ಅ). ಪ್ರಾಣದೊಡಗೂಡಿ ; ಜೀವಸಹಿತವಾಗಿ : ಗುರು ಗಳ್ಸಾವೇನನೊಂದಂ ಬೆಸಸಿದರದನೇಕೊಳ್ವುದಿನ್ನೆನ್ನ ಜೀವಂಬೆರಸಾನಿಂತಿ ರ್ಪುದಂ ತಾಂ ಬಯಸುವ ಬಗೆಯೆಂತು (ಕಾದಂಪೂ. ೯೮೦). [ಜೀವ + ಬೆರಸು$_3$]

**ಜೀವಂಬೊಯ್** (ಕ್ರಿ). ಪ್ರಾಣವನ್ನು ತುಂಬು ; ಶಕ್ತಿಯನ್ನುಂಟು ಮಾಡು : ಜಂಹಾಕ್ಷಂ ಚಿರಂಜೀವಿಯ ಕಾಯಕ್ಕೆ ಜೀವಂಬೊಯ್ದಂತೆ (ಶಂಕರಂ. ೨೬೩-೯) : ಹರಿನೀಲರತ್ನಮಂ ಕಂಡರಿಸಿದ ಕಣ್ದೆಯಿವಿಗೆಯ್ದೆ ಜೀವಂಬೊಯ್ದಂತಿರೆ (ಶಂಕಾಮೂ. ೩-೧೫೭) : ಕಡೆದು ಜೀವಂಬೊಯ್ದ ನೀಲದ ಕಡುಚೆಲುವ ಪುತ್ಥಳಿಯೊ (ಸಾಳ್ವಭಾ. ೨೭-೩೦). [ಜೀವ + ಪೊಯ್$_1$]

**ಜೀವಕ** (ಗು). ೧. ಬದುಕಿರುವ ; ಜೀವಿಸಿರುವ. ೨. ಜೀವನವನ್ನು ನಡೆಸುವ. (ನಾ). ೩. ಸೇವಕ ; ಜೀತಗಾರ. ೪. ಹಾವಾಡಿಗ: ಗಾರುಡಿಗ. ೫. ಜೈನಸನ್ಯಾಸಿ ; ಸವಣ ; ಕ್ಷಪಣಕ : "ನಗ್ನಾಟಃ, ದಿಗ್ವಾಸಾಃ, ಕ್ಷಪಣಃ, ಶ್ರಮಣಃ, ಜೀವಕಃ, ಜೈನಃ, ಅಜೀವಃ, ಮಲಧಾರೀ, ನಿರ್ಗ್ರಂಥಃ, ಸಾಧುಃ–ಈ ೧೦ ಸವಣರ ಪೆಸರ್" (ಹಲಾಯು. ೫೭-೧೮೪). ೬. ಒಂದು ಬಗೆಯ ಮರ ; ಹೊನ್ನೆಮರ : "ಪೀತಸಾಲಕಃ, ಸರ್ಜಕಃ, ಅಸನಃ, ಬಂಧೂಕಪುಷ್ಪಃ, ಪ್ರಿಯಕಃ, ಜೀವಕಃ–೬ ಹೊನ್ನೇಮರದ ಹೆಸರುಗಳು" (ಸಿದ್ಧಾಂತಿ. ೧೦೭). ೭. ಮುಖ್ಯವಾದ ಎಂಟು ಮೂಲಿಕೆ ಗಳಲ್ಲಿ ಒಂದು ; ಒಂದು ಬಗೆಯ ಔಷಧಿ ಸಸ್ಯ ; ಹಕ್ಕಿಸಿಳ್ಳೆ ಗಿಡ ; ಮಧುರಕ : "ಕೂರ್ಚಶೀರ್ಷಃ, ಮಧುರಕಃ, ಶೃಂಗಃ, ಹ್ರಸ್ವಾಂಗಃ, ಜೀವಕಃ–೫ ಜೀವಕವೆಂಬುವ ಔಷಧ, ಹಕ್ಕಿಸಿಳ್ಳೇಗಿಡ" (ಸಿದ್ಧಾಂತಿ. ೧೨೭); ಜೀವಕ, ವೃಷಭಕ . . . ಚೂರ್ಣಿಸಿ ಹಾಲಿನಲ್ಲಿ ಕಲಸಿಹಾಕುವುದು (ಸಕವೈ. ೪೫೦ ಪರಿ). 'ಅಷ್ಟವರ್ಗ' ಪರಾ. ೮. ಬಡ್ಡಿಯ ವ್ಯವಹಾರದಿಂದ ಜೀವಿಸುವವನು. [ಸಂ.]

**ಜೀವಕಣ** (ನಾ). ಶರೀರ ರಚನೆಗೆ ಅತ್ಯಗತ್ಯವಾದ, ದೇಹದಲ್ಲಿರುವ ಸೂಕ್ಷ್ಮಾಣು : ದೇಹದಲ್ಲಿರುವ ಜೀವಕಣಗಳಿಗೆ ಸಸಾರಜನಕಗಳು ತಳಹದಿ (ಆಡುಸಾ. ೫೮) ; ಜೀವರಸವನ್ನೊಳಗೊಂಡ ಜೀವಕಣಗಳು ಜೀವಿಯ ರಚನೆಯ ತಳಹದಿ (ಪ್ರಾಣಿಶಾ. ೫) ; ಸಾಮಾನ್ಯವಾಗಿ ಪ್ರಾಣಿಗಳ ದೇಹ ಜೀವಕಣಗಳು ಎಂಬ ಕನಿಷ್ಠಭಾಗಗಳಿಂದಾಗಿವೆ (ಪರಜೀ. ೧೫). [ಜೀವ + ಕಣ$_3$]

**ಜೀವಕಲೆ, ಜೀವಕಳೆ** (ನಾ) ೧. ಜೀವನಕ್ಕೆ ಅವಶ್ಯವಾದ ಕಲೆ,–ಸೊಗಸು ತರುವ ಕಲೆ: ಜೀವಕಲೆಗಳ ಕಲಿಸಿ ಸುಖದಲಿ ಸೊಬಗ ಬೆಳಸುತ ಬಂದನು (ಹೊಂಗಳು. ೨-೧೪). **ಜೀವಕಳೆ :** ೨. ಪ್ರಾಣಶಕ್ತಿ ; ತೇಜಸ್ಸು ; ಕಾಂತಿ; ದೀಪ್ತಿ ; ಚೈತನ್ಯ ; ಜೀವಂತಿಕೆ : ಮದನವಿಕಾರದ ಜಮ್ಮು ಜಕ್ಕುಳಿಸಿ ಹಮ್ಮುದಂಬೋಗಿ ಜೀವಂ ಸುಖದ ಜೀವಕಳೆಯ ಕಳಾಸದ ಕುಣಿಕೆ ಕಳಲ್ಚಿ ತನ್ನನಱಿಯದಿದಿರನಱಿಯದೆ ಬಂದುದಂ ಮುಱಿದು (೧ರಿಳ. ೭-೧೧ ವ) ; ಮೊದಲಲಿದ್ದುದು ಜೀವಕಳೆ ಹೃದಯದಲಿ ಹೃದಯವ ನೊಡೆದು ಮಿಗೆ ಕಂಠದಲಿ ಕವಿಹುದು ಮಂಚದಲಿ ಮೈಮುಱಿದು ಮಲಗಿದನು (ಕುಮಾಳ. ೧-೪) ; ಜೀವಿಗಳ್ಗೆಲ್ಲ ನಿಜ ಜೀವಕಳೆಯಿತ್ತು (ವಿಸೀಗೀ. ೧೭-೫) ; ಚತುರ ಸಂಗೀತಗಾರನ ಕೈಯಲ್ಲಿ ಸಪ್ತಸ್ವರಗಳು ಜೀವಕಳೆಯನ್ನು ಪಡೆದು ಸ್ವರಸೌಧಗಳಾಗುತ್ತವೆ (ಭಾರದ. ೫೪೦). [ಜೀವ + ಕಲೆ$_3$]

**ಜೀವಕಳೆ** 'ಜೀವಕಲೆ' ನೋ.

**ಜೀವಕಳೆತುಂಬು** (ಕ್ರಿ). ಪ್ರಾಣತುಂಬು ; ಜೀವಂತವಾಗಿ ಮಾಡು : ಕಾಳಿದಾಸನು ಜೀವಕಳೆತುಂಬಿ ನಿರ್ಮಿಸಿದ ಶಕುಂತಲೆ ಪುಟವಿಟ್ಟ ಸ್ವರ್ಣ ಪ್ರತಿಮೆ (ಭಾರದ. ೪೮೭). [ಜೀವಕಳೆ (<ಜೀವಕಲೆ) + ತುಂಬು$_1$]

**ಜೀವಕಾಲ** (ನಾ). ಬದುಕಿರುವಷ್ಟು ಕಾಲ ; ಬದುಕಿನ ಪೂರ್ಣಕಾಲ : ಆವ ಕಾಲವು ವನದಿ ಜೀವಕಾಲವ ಕಳೆದು ಜೀವಚಯದಲ್ಲಿ ದಯವಿಲ್ಲ ದಿರುವವನ ಕಾವನೇ ಶಿವನು (ಸರ್ವಜ್ಞ. ೨೫೩). [ಜೀವ + ಕಾಲ]

**ಜೀವಕಿ** (ನಾ). ಅಳಿಲೆ ಗಿಡ ಮತ್ತು ಅದರ ಕಾಯಿ: "ಜೀ[ವಾಕಾಂ. ಶ್ರೈ]ವಕಿ ಹರೀತಕಿ ಹರಿದ್ರೆ ಶಿವೆಯೆನಲಣಲೆ" (ಮಂಗರಾ. ೩೭-೨೦). [ಸಂ. ಜೀವಕೀ]

**ಜೀವಕೊಡು** (ಕ್ರಿ). ೧. ಜೀವತುಂಬು. ೨. ಮತ್ತೊಬ್ಬರಿಗಾಗಿ ಪ್ರಾಣ ಕೊಡು ; ಬಲಿದಾನಮಾಡು : ಅವರು ಜೀವಕ್ಕೆ ಜೀವಕೊಡುವಂಥಾ ಗೆಳೆಯರು (ರೂಢಿ). [ಜೀವ + ಕೊಡು$_1$]

**ಜೀವಕೋಟಿ** (ನಾ). ಜಗತ್ತಿನ ಎಲ್ಲ ಜೀವಿಗಳ ಸಮೂಹ ; ಜೀವರಾಶಿ: ಒಟ್ಟಿನಲ್ಲಿ ಇಡೀ ಜೀವಕೋಟಿಯು ಗುರಿ, ವಿಶ್ವಾತ್ಮನಲ್ಲಿ ಒಂದಾಗುವುದೇ (ನಿಶಉ. ೨೩೫). [ ಜೀವ + ಕೋಟಿ$_1$ ]

**ಜೀವಕೋಶ** (ನಾ). (ದೇಹದಲ್ಲಿ) ಜೀವಕಣವಿರುವ ಭಾಗ : ಈ ಬೇರು ರೋಮಗಳು ಬೇರಿನ ಹೊರಚರ್ಮದ ಜೀವಕೋಶಗಳಿಂದ ಹೊರಟಿರುವ ಕೊಳವೆಗಳು (ಸಸ್ಯಶಾ. ೮೫). [ ಜೀವ + ಕೋಶ ]

**ಜೀವಕ್ರಿಯೆ** (ನಾ). ಜೀವದ ಕ್ರಿಯೆ; ಜೀವ ಕೈಗೊಳ್ಳುವ ಕೆಲಸ : ಸಸ್ಯಗಳಲ್ಲಿಯೂ ಸಹಿತ ಹಲವು ವ್ಯಾಪಾರಗಳು ನಡೆಯುತ್ತಿರುತ್ತವೆ . . . ಇವುಗಳನ್ನು ಜೀವಕ್ರಿಯೆಗಳೆಂದು ಕರೆಯಬಹುದು (ಸಸ್ಯಶಾ. ೨). [ಜೀವ+ಕ್ರಿಯೆ]

**ಜೀವಗ** (ನಾ). =ಜೀವಕ : ಜೀವಕ–ಜೀವಗ (ಶಮದ. ೨೫೫ ಪ್ರಯೋ).
[ <ಸಂ. ಜೀವಕ ]

**ಜೀವಗಳ್ಳ** (ನಾ). ಹೇಡಿ ; ಪುಕ್ಕಲು ಸ್ವಭಾವದವನು ; ಪ್ರಾಣ ಉಳಿಸಿಕೊಳ್ಳಲು ಓಡಿಹೋಗುವವನು : ನಿರ್ಧರದ ಭಟ ಜೀವಗಳ್ಳನಲ್ಲಿ ಅದ್ದಲಿಸಿಕೊಂಬನೆ (ಸರ್ವವ. ೧೨೦-೬೨೦); ನೇಟಿ ನಪುಂಸಕರಾವು ಸಾವವರಲ್ಲ ಲೋಕದ ಜೀವಗಳ್ಳರಿಗಾವು ಗುರುಗಳು ಬಿಟ್ಟು ಕಳುಹು (ಕುವ್ಯಾವಿ. ೬-೨೦). ರಣದೊಳ್ಜೀವಗಳ್ಳನಾದೊಡೆ ಮತ್ಪಿತಾಮಹನೆ ಬೀಳದಿರ್ಪನೆ ಗಗನಮಾರ್ಗದಿಂದೆ (ಜೈಮಿಭಾ. ೨೩-೧೦) ; ಅವನು ಜೀವಗಳ್ಳನಾಗಿ ಹಸುಗಳನ್ನೊಡಗೊಂಡು ದಕ್ಷಿಣದ ದಾರಿಯಿಂದ ಹೋಗುತ್ತಿರಬಹುದು (ವಚಭಾ. ೨೦೩).
[ ಜೀವ + ಕಳ್ಳ$_1$ ]

**ಜೀವಗುಣ** (ನಾ). ಜೀವಾತ್ಮನ ಗುಣ : ಕಾಯಗುಣವ ಕರ್ಮದಿಂದ ಕಳೆದು ಜೀವಗುಣವ ಅಱಿವಿನಿಂದ ಮಱೆದು ಭಾವ ನಿರ್ಭಾವವಾದಲ್ಲಿ (ಮೋಮಾ. ೧-೨) : ಈ ಪ್ರಕಾರದಿಂದಂ ದರ್ಶನಮುಂ ಜ್ಞಾನಮುಂ ಸಮ್ಯಕ್ತ್ವಮುಂ ಜೀವಗುಣಂಗಳಪ್ಪುವು (ಗೊಮ್ಮಸಾ. ೨-೦) : ವೈಷಮ್ಯ ವೈವಿಧ್ಯಗಳೇ ಜೀವಗುಣಗಳು (ಶಕ್ತಿವಿ. ೯೬). [ ಜೀವ + ಗುಣ ]

**ಜೀವಗೇಹ** (ನಾ). [ಜ್ಯೋತಿ] ಗುರುಂಗ್ರಹದ ಕ್ಷೇತ್ರ ; ಗುರುವಿನ ಸ್ವಕ್ಷೇತ್ರ ; ಧನೂರಾಶಿ ಮತ್ತು ಮೀನರಾಶಿ : ಇರೆ ಚಂದ್ರಂ ಕರ್ಕಿಗೇಹಾಂತರದೊಳುಪಚಯಂ ತತ್ಸಮಂ ಜೀವಗೇಹಾಂತರದೊಳ್ (ಜಾತಿ. ೯-೦೬). [ ಜೀವ + ಗೇಹ ]

**ಜೀವಗೊಳು** (ಕ್ರಿ). ಚೈತನ್ಯಹೊಂದು ; ಶಕ್ತಿಹೊಂದು ; ಚಟುವಟಿಕೆ ಹೊಂದು : ನಿಶೆಯ ಮಡಿಲನುಳಿದು ಜಗವು ಜೀವಗೊಳುತಿದೆ (ಮಾಂದಳಿ. ೯-೪). [ ಜೀವ + ಕೊಳು (<ಕೊಳ್$_1$) ]

**ಜೀವಗ್ರಾಹ** (ನಾ). ೧. ಜೀವಸಹಿತ ಸೆರೆಹಿಡಿಯುವುದು : ದ್ರೋಹಿ ಸಿಲುಕಿದನೆನುತೆ ಜೀವಗ್ರಾಹವೋ[ಪಾಠಾಂ. ಗ್ರಹಣವೋ, ಗ್ರಾಹಿಯೋ] ಸಾಹಸ ವಿಚಾರಿಸು ಬೇಹವರನೆನುತೊಱಲಿ (ಕುವ್ಯಾದ್ರೋ. ೧೮-೪೬) ; ಸಾಮಂತರನೂ ಮಂನಿಯರನೂ ಜೀವಗ್ರಾಹವಾಗಿ ಹಿಡಿದುಕೊಂಡು (ಸೌಇಇ. IX-ii, ೫೦೦-೦೨; 1516). ೨. ಐದು ಶಕ್ತಿಮಂತ್ರಗಳಲ್ಲಿ ಒಂದು: ಜೃಂಭಕ ಪ್ರಸ್ವಾಪನ ಅಪ್ರತಿಹತ ನಿಶ್ಶೇಷೀಕರಣ ಜೀವಗ್ರಾಹಗಳೆಂಬ ಪಂಚ ಶಕ್ತಿಮಂತ್ರಗಳಂ (ವಿವೇಕ. ೮೦). [ ಜೀವ + ಗ್ರಾಹ ]

**ಜೀವಘಾತ** (ನಾ). ಪ್ರಾಣಹತ್ಯೆ ; ಕೊಲೆ : ಕ್ರಮದಿಂದಾ ಜೀವಘಾತಾನೃತವಚನ ಪರಾರ್ಥಾಪಹಾರಾನ್ಯನಾರೀಗಮಬಹ್ವಾರಂಭಪಾರಿಗ್ರಹಮೆನಿಸುವವಯ್ದುಂ ಮಹಾಪಾತಕಂಗಳ್ (ಸುಕುಮಾ. ೫-೪೩) [ಜೀವ+ಘಾತ$_2$]

**ಜೀವಚಕ್ರ** (ನಾ). ಜೀವವು ಪಡೆಯುವ ಬೇರೆ ಬೇರೆ ಅವಸ್ಥೆಗಳ ಸುತ್ತಾಟ : ಜೀವಚರಿತ್ರೆ ಅಥವಾ ಜೀವಚಕ್ರವೆಂದರೆ ಕೀಟ ಸ್ವಾಭಾವಿಕವಾಗಿ ಮಾಡುವ ಎಲ್ಲ ಚರ್ಯೆಯ . . . ಪ್ರತಿಹಂತದಲ್ಲೂ ಕಳೆದ ಸನ್ನಿವೇಶ, ಕಾಲ, ಹಂತಗಳ ಅವಧಿಯ ವರದಿ (ಕೀಟವಿ. ೯೪).
[ ಜೀವ + ಚಕ್ರ$_1$ ]

**ಜೀವಚಯ** (ನಾ). ಪ್ರಾಣಿ ಸಮೂಹ ; ಜೀವಕೋಟಿ : ಜೀವಚಯದಲ್ಲಿ ದಯೆಯಿಲ್ಲದಿರುವವನ ಕಾವನೇ ಶಿವನು (ಸರ್ವಜ್ಞ. ೨೫೩).
[ ಜೀವ + ಚಯ ]

**ಜೀವಚೇಷ್ಟಕ** (ನಾ). ಜೀವನದ ಚಟುವಟಿಕೆಗಳಿಗೆ ಮೂಲಕಾರಣವಾದವನು ; ಚೈತನ್ಯದಾಯಕ : ಸ್ಥಾವರಕೆ ಜಂಗಮಕೆ ನೀನೇ ಜೀವಚೇಷ್ಟಕನು (ಕುವ್ಯಾಉ. ೭-೧೧). [ ಸಂ. ]

**ಜೀವಚ್ಛವ** (ನಾ). ಶವದಂತೆ ಇರುವವನು ; ಉತ್ಸಾಹವಿಲ್ಲದವನು; ಚಟುವಟಿಕೆಯಿಲ್ಲದವನು ; ನಿರರ್ಥಕಜೀವಿ : ಬದುಕು–ಸಾವನ್ನು ಪ್ರಕೃತಿಯ ಮಡಿಲಲ್ಲಿ ಹಾಕಿ ಜೀವಚ್ಛವದಂತೆ ನಡೆದು ಬಂದೆ (ಜಯಂತ. ೪೮೦). [ ಸಂ. (ಜೀವತ್ + ಶವ) ]

**ಜೀವಜ** (ನಾ). ೧. ಜೀವದಿಂದ ಹುಟ್ಟಿದುದು ; ಪ್ರಾಣಕ್ಕೆ ಸಂಬಂಧಪಟ್ಟುದು : ಅನ್ನಜ ಜೀವಜ ಮಾನಜ ಭೀತಿಗಳಂ ನಿರ್ಧರಿಸಲೆ ಬಾಲಕ (ಯೋಗಾಂವಿ. ೩. ೩೦). ೨. ನೀರಲ್ಲಿ ಹುಟ್ಟಿದುದು ; ಕಮಲ. 'ಜೀವಜಾಂಬಕ' ಪರಾ. [ ಸಂ. ]

**ಜೀವಜಾಂಬಕ** (ನಾ). ಕಮಲಾಕ್ಷ; ವಿಷ್ಣು : ಭಾವಶುದ್ಧಿಯಲೀ ಕಥಾಮೃತಪಾನವನೊಂದಕ್ಷರವ ಕೇಳ್ದರೆ ಜೀವಜಾಂಬಕನೊಲಿದು ಕೊಡುವನು ಅವರ ಕಾಮಿತವ (ಸುದಾಮ. ೧-೦೩). [ ಜೀವಜ + ಅಂಬಕ ]

**ಜೀವಜಾತ** (ನಾ). =ಜೀವಚಯ: ಜೀವಜಾತಗಳ ಮಾತೆಯಾದ ಧರಿತ್ರಿಯು ನಾನಾ ಜಾತಿಗಳನ್ನು ಧಾರಣಮಾಡಿರುವಳು (ಇಪ್ಪಕ. ೧೭೨).
[ ಜೀವ + ಜಾತ ]

**ಜೀವಣಿ** (ನಾ). ಒಬ್ಬಾತನ ಹೆಸರು : ಶ್ರೀಮದು ಜೀವಣಿಯ ಮಗನ್ ನಿಟ್ಟರಾಮನ್ (ಎಕ. XVI, ಪಾವುಗ. ೦೩-೧ : 754). [ ? ]

**ಜೀವತತ್ತ್ವ** (ನಾ). [ಜೈನ] ಏಳಂ ತತ್ತ್ವಗಳಲ್ಲಿ ಮೊದಲನೆಯದು : ಸಪ್ತತತ್ತ್ವಗಳೊಳಗೆ ಚೇತನಾಲಕ್ಷಣಮಪ್ಪುದು ಜೀವತತ್ತ್ವ (ಆದಿಪು. ೧೦-೬೦ ವ). 'ಅಜೀವತತ್ತ್ವ' ಪರಾ. [ ಜೀವ + ತತ್ತ್ವ ]

**ಜೀವತುಂಬು** (ಕ್ರಿ). ಚೈತನ್ಯವೊದಗಿಸು ; ಶಕ್ತಿಕೊಡು ; ಪುಷ್ಟಿಕೊಡು : ಫಾದರ್ ಹೆರಾಸನೂ ಈ ವಾದಕ್ಕೆ ಜೀವತುಂಬಿದನು (ದ್ರಾವಿವಿ. ೨೫).
[ ಜೀವ + ತುಂಬು$_1$ ]

**ಜೀವತೆಗೆ** (ಕ್ರಿ). ೧. ಪ್ರಾಣವನ್ನು ತೆಗೆ : ಸಾಯಿಸು ; ಕೊಲ್ಲು: ಜೀವತೆಗೆಯಲೂ ಹೇಸುವಂತ ಜನರಲ್ಲ (ರೂಢಿ). ೨. (ಆಲಂ) ಕಾಡು ; ಹಿಂಸಿಸು : ಆ ಪುಸ್ತಕವನ್ನು ಕೊಡು ಎಂದು ಒಂದೇ ಸಮನೆ ಜೀವತೆಗೆಯುತ್ತಾನೆ (ರೂಢಿ). [ ಜೀವ + ತೆಗೆ$_1$ ]

**ಜೀವತೇಯು** (ಕ್ರಿ). ಶ್ರಮಪಡು ; ತುಂಬಾ ಕಷ್ಟಪಡು: ಅಲ್ಲಿ ಮಾಡಲಿ ಅಂಥ ಜೀವತೇಯುವ ಕೆಲಸ (ನಡದಾ. I, ೩೭೬).
[ ಜೀವ + ತೇಯು (<ತೇ$_1$) ]

**ಜೀವತೋಕೆ** (ನಾ). = ಜೀವತ್ತೋಕೆ : "ಮಕ್ಕಳು ಬಾಳ್ವ ಸತಿ ಜೀವತೋಕೆಯಕ್ಕು" (ಮಂಗರಾ. ೮೯-೩).
[ <ಸಂ. ಜೀವತ್ತೋಕಾ ]

**ಜೀವತ್ತೋಕೆ** (ನಾ). ಮಕ್ಕಳಂ ಬದುಕಿರುವಾಕೆ ; ಮಕ್ಕಳು ಜೀವಂತವಾಗಿರುವ ತಾಯಿ : "ಜೀವತ್ತೋಕಾ, ಜೀವಸೂ–ಈ ೨ ಮಕ್ಕಳ್ ಬಾಳ್ವವಳ್" (ಹಲಾಯು. ೮೦-೩೩೨)
[ ಸಂ. ಜೀವತ್ತೋಕಾ (ಜೀವತ್ + ತೋಕ + –) ]

**ಜೀವತ್ಪತಿ** (ನಾ). ಗಂಡನು ಬದುಕಿರುವವಳು ; ಮುತ್ತೈದೆ; ಸುಮಂಗಲಿ. [ ಸಂ. (ಜೀವತ್ + ಪತಿ) ]

**ಜೀವತ್ಪಿತೃ** (ನಾ). ತಂದೆ ಬದುಕಿರುವವನು ; ತಂದೆ ಇರುವವನು.
[ ಸಂ. (ಜೀವತ್ + ಪಿತೃ) ]

**ಜೀವತ್ಯಾಗ** (ನಾ). ಪ್ರಾಣತ್ಯಾಗ ; ಜೀವವನ್ನು ತ್ಯಜಿಸುವಿಕೆ: ರಾಗದಿಂ ಕೃತಮೆಂದು ಜೀವತ್ಯಾಗಕೋವಿದ ಸರಸಮುಚಿತೋದ್ಯೋಗವಂ ನಿನಗಿತ್ತು ಹೋದರು (ಬಸಪು. ೫೯-೦೬). [ ಜೀವ + ತ್ಯಾಗ ]

**ಜೀವತ್ರಯ** (ನಾ). ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ಬಗೆಯ ಜೀವ : ಕಾಯತ್ರಯಂಗಳ, ಜೀವತ್ರಯಂಗಳ, ಭಾವತ್ರಯಂಗಳ ಒಂದು ಮಾಡಿ (ಚನ್ನವ. ಕೆ. ೩೮೦-೭೯೮) ; ವಿವರವಹ ಜೀವತ್ರಯಂಗಳ ಭವರಹಿತ ಯೋಗಿಗಳ ಚರಿತೆಯ ಸುವಿಮಲಾತ್ಮಕ ನಿರ್ಗುಣಾರಾಧನೆಯ ನಿರ್ಣಯವ (ಅಮೃತ. ೦-೦೭) ; ಜೀವತ್ರಯಂಗಳ ಜೀರ್ಣೀಕರಿಸಿ (ಅಖಂಡೇ. ೦೯೪-೦೪). [ ಜೀವ + ತ್ರಯ ]

**ಜೀವತ್ವ** (ನಾ). ಜೀವವಾಗಿರುವಿಕೆ ; ಜೀವಾತ್ಮನಾಗಿರುವಿಕೆ : ಶಕ್ತಿಯ ಸಂಕೋಚ ವಿಕಾಸವೇ ಜೀವತ್ವ ಶಿವತ್ವಗಳು (ಭಾರದ. ೧೩೦). [ ಸಂ. ]

**ಜೀವದಯಾಷ್ಟಮಿ** (ನಾ). [ಜೈನ] ವ್ರತಗಳಲ್ಲಿ ಒಂದು ; ಆಶ್ವಯುಜ ಮಾಸ ಶುಕ್ಲಪಕ್ಷ ಅಷ್ಟಮಿಯಂದು ಮಾಡುವ ಒಂದು ವ್ರತ : ಶ್ರಾವಕಜನದುಪವಾಸಂ ಜೀವದಯಾಷ್ಟಮಿಯೊಳಾಗೆ ಪಾರಣೆ ಕಿವಿಗಳ್ಗೀ ವಸ್ತುಕಥನದಿಂದೆ (ಯಶೋಚ. ೦-೩).

[ ಸಂ. ಜೀವದಯಾಷ್ಟಮೀ (ಜೀವ + ದಯಾ + ಅಷ್ಟಮೀ) ]

**ಜೀವದಯೆ** (ನಾ). ಜೀವಿಗಳಿಗೆ ತೋರಿಸುವ ಕರುಣೆ; ಪ್ರಾಣಿದಯೆ : ಜೀವದಯೆ ಧರ್ಮಂ (ಪಂಚತಂ. ೧೨೦-೦೭); ಜೀವದಯೆ ಜೈನಧರ್ಮಂ (ಯಶೋಚ. ೩-೦೮). [ ಜೀವ + ದಯೆ ]

**ಜೀವದಾನ** (ನಾ). ಪ್ರಾಣವನ್ನು ಉಳಿಸುವುದು; ಜೀವ ಉಳಿಸುವುದು: ಗೆಳೆಯನೇ ನೀನು ಇಲ್ಲಿಗೆ ಬಂದು ನನ್ನ ಕಾಲು ಮುರುಕೈ ಹಚ್ಚಿದರೆ ನನಗೆ ಜೀವದಾನ ಕೊಟ್ಟಂತೆ ಆಗುವುದು (ಮುಂಬಯಿ. ೪-೦೭೭).

**ಜೀವದಾನಮಾಡು** = ಜೀವತುಂಬು ; ಜೀವಕೊಡು ; ಜೀವವನ್ನು ಉಳಿಸು : ನೀನೇ ಅದಕ್ಕೆ ಜೀವದಾನಮಾಡಿ, ಅದರಲ್ಲಿ ಚಿಗುರು, ಕೊಂಬೆ, ಫಲಪುಷ್ಪಗಳು ಉದ್ಭವಿಸುವಂತೆ ಹಣಗಾಡಬೇಕು (ಹಳ್ಳಿಹಾ. ೧೦೩).

[ ಜೀವ + ದಾನ ]

**ಜೀವದ್ಭಾಷೆ** (ನಾ). ಜೀವಂತವಾದ ಭಾಷೆ; ವ್ಯವಹಾರದಲ್ಲಿರುವ ಭಾಷೆ: ಪ್ರವಾಹದ ನೀರಿನಂತೆ ನಿರಂತರವೂ ವ್ಯತ್ಯಾಸವನ್ನು ಹೊಂದುತ್ತಾ ಹೋಗುತ್ತಿರುವುದೇ ವ್ಯಾವಹಾರಿಕ ಅಥವಾ ಜೀವದ್ಭಾಷೆಯ ನೈಸರ್ಗಿಕ ಲಕ್ಷಣ (ಕೈಪಿಡಿ. ೨೧೪). 'ಮೃತಭಾಷೆ' ಪರಾ.

[ ಸಂ. ಜೀವದ್ಭಾಷಾ (ಜೀವತ್ + ಭಾಷಾ) ]

**ಜೀವದ್ರವ್ಯ** (ನಾ). ೧. ಜೈವಿಕ ದ್ರವ್ಯ: ಕೀಟಗಳ ಜೀವದ್ರವ್ಯ ಪರಿಣಾಮದಿಂದ ಜೀವದ್ರವ್ಯ . . . ಇತರ ರಾಸಾಯನಿಕ ವಸ್ತುಗಳು ಫಲಿಸುತ್ತವೆ (ಕೀಟಚಿ. ೪೦). ೨. [ಜೈನ] ಆರು ದ್ರವ್ಯಗಳಲ್ಲಿ ಒಂದು: "ಜೀವದ್ರವ್ಯ ಮೊದಲಾದ ಷಡುದ್ರವ್ಯಗಳು" (ನಾನಾರ. ಟಿ. ೦೬೪) ; ಜೀವದ್ರವ್ಯ . . . ಕಾಲದ್ರವ್ಯಮೆಂಬ ಷಡ್ದ್ರವ್ಯಂಗಳ ಗುಣಪರ್ಯಾಯಮುಮಂ (ಸುಕುಮಾ. ೩-೩೯ ವ). [ ಜೀವ + ದ್ರವ್ಯ ]

**ಜೀವಧನ** (ನಾ). ೧. ಪಶುಸಂಪತ್ತು : "ಹಸು-ಎಮ್ಮೆ ಮೊದಲಾದುವೆಲ್ಲಂ ಜೀವಧನಮೆಂಬುದು" (ಹಲಾಯು. ೦೪-೮೦) ; ಪಲಂಬರ್ ಮ್ಲೇಚ್ಛರಾ ಜರನವರವರ ಜೀವಧನ ಕುಲಧನಂಗಳ್‌ವೆರಸು ಮುಂದಿಟ್ಟು (ಆದಿಪು. ೧೩-೩೯ ವ); ತಲೆಕೆಟಗಾಗಿ ಮೇಗುಗಾಣದೆ ಮತ್ತಂ ಪೆಱರ ಪಲವುಂ ಜೀವಧನಂಗಳನರಸರ ಕಾಪಿನ ಪೊಲನಂ ಪೊಕ್ಕುವೆಂದುಂಡಿಗೆಯೊತ್ತಿಕೊಳುತ್ತುಂ (ಸುಕುಮಾ. ೭-೩೫ ವ) ; ಚಟ್ಟನೃಪಾಳಕಂಬೆರಸು ಪಾಂಡ್ಯನುಮೋವದೆ ನೇಲಿವರ್ತಿಯಂ ತೊಟ್ಟನೆ ಪಾಯ್ದು ಜೀವಧನಮೆಲ್ಲಮನಾಗಳೆ ಕೊಂಡು ಪೋಗೆ (ಎಕ. VII, ಹೊನ್ನಾಳಿ. ೩೫-೩ ; 1187)

[ ಜೀವ + ಧನ ]

**ಜೀವಧಾತ್ರಿ** (ನಾ). ಬದುಕನ್ನು ರಕ್ಷಿಸುವವಳು; ಜೀವವನ್ನು ಕಾಪಾಡುವವಳು : ಈ ಜೀವಧಾತ್ರಿಯೂ, ಸಸ್ಯಶಾಲಿಯೂ ಆದ ದೊಡ್ಡ ವಸುಂಧರೆ (ನಿಬಂಧ. II, ೪೧೨). [ ಜೀವ + ಧಾತ್ರಿ ]

**ಜೀವಧಾರಣ** (ನಾ). ಬದುಕಿರುವುದು; ಪ್ರಾಣವನ್ನು ಧರಿಸಿರುವುದು: ಇದರಿಂದ ನಿಮ್ಮೆಲ್ಲರ ಹೊಟ್ಟೆ ತುಂಬಲಾರದು ; ಆದಾಗ್ಯೂ ಜೀವಧಾರಣವಾದರೂ ಆಗುವುದು (ಮುಂಬಯಿ. ೪-೭೫). [ ಜೀವ + ಧಾರಣ ]

**ಜೀವಧಾರೆ** (ನಾ). ಚೈತನ್ಯ ಶಕ್ತಿ ; ಸ್ಫೂರ್ತಿ: ಆ ಮಂದಹಾಸವು ಆ ಸ್ತ್ರೀಯರಿಗೂ, ಬಾಲಕಿಯರಿಗೂ ಜೀವಧಾರೆಯನ್ನು ಕೊಡುವಂತಿದ್ದಿತು (ಘೂರಾಡಿ. ೭೦). [ ಜೀವ + ಧಾರೆ ]

**ಜೀವನ** (ನಾ). ೧. ಬದುಕು ; ಬಾಳು ; ಅಸ್ತಿತ್ವ : ಭೇಡುವವರ ನೋಡಿ ನೋಡಿ ಈಯಲಿಲ್ಲದವನ ಜೀವನವದೇಕೆ (ಬಸವ. ೪೩೮) ; ದಾರಿದ್ರ್ಯಮಲ್ತೆ ಆ ನಾಗರಿಕ ಜೀವನಂ ಈ ವನ್ಯಸಂಸ್ಕೃತಿಯ ಮುಂದೆ (ಶ್ರೀರಾಮಾ. ೩೨-೦೦೨). ೨. ಜೀವನೋಪಾಯ ; ಉದ್ಯೋಗ ; ವೃತ್ತಿ ; ಕಸಬು: "ಜೀವನಂ, ವೃತ್ತಿಃ, ಆಜೀವಃ, ವಾರ್ತಾ – ಈ ೪ ಬಾಟ್ಕೆ" (ಹಲಾಯು. ೯೩-೪೦೭). ೩. ಚೈತನ್ಯವನ್ನು ನೀಡುವಿಕೆ ; ಗೆಲವುಂಟುಮಾಡುವಿಕೆ. ೪. ನೀರು; ಉದಕ ; ಜಲ: "ಆಪಃ(ಪ್), ತೋಯಂ, . . . ಜೀವನಂ, ಜೀವನೀಯಂ – ಈ ೨೬ ನೀರ್" (ಹಲಾಯು. ೦೦೭-೨೬) ; ಬಾಣಾವಳಿಯಿಂ ಮಹೋದಧಿಯ ಜೀವನಮಂ ತವೆ ವೆನ್ನಮಿಾಂಟಿದಂ (ಪಂಪಾಮಾ. ೦೩-೯೯) ; ನಾಡೆಂನಂ ನಡುವಿಟ್ಟುಕೊಂಡುದುದಱಿಂ ಮಜ್ಜೀವನಂ ಸಾರ್ಥಕಂ (ಎಕ. V, ಬೇಲೂರು. ೦೯೩-೦೦೦ ; 1161) ; ನದನದೀಕುಳದೊಳ್ ಪರಿವರ್ಧಿಕುಂ ಜಗಜೀವನ ಜೀವನಂ (ಜಗವಿ. ೪-೭೭); ಜೀವನಮಂ ಬೇಡುತ್ತಿರೆ ಚದುರಂ ಜೀವನಮೆಲ್ಲಂ ಸವೆಯತ್ತೆವ್ಮಯ ಜೀವನವರೆಗೆ (ಉದ್ಭದೇ. ೨-೨೯). ೧, ೪: ಸತತ ಗಭೀರವೃತ್ತಿಯಿನುದಾರತೆಯಿಂ ಜಗದೇಕಜೀವನಸ್ಥಿತಿಯಿನತಿ ಪ್ರಸಾದಗುಣದಿಂ ರಸಭಾವವಿಳಾಸದಿಂ . . . ಸರಸ್ವತಿ ದಯೆಗೆಯ್ಗೆ (ಕಾದಂಪೂ. ೨). ೩, ೪ : ಸ್ಥಾವರ ಜಂಗಮಮೆಂಬೀ ಜೀವಚಯಕ್ಕೆಂತು ನೋಟಕ್ಕೊಡಂ ಜೀವನಮೇ ಜೀವನಮೆಂದುದಕಾರ್ಗಳಕೋವಿದ ನಿದನೆಸೆಯೆ ಪೇಟ್ಟುಂ (ಲೋಕೋಪ. ೫-೦). ೫. ಚೈತನ್ಯವನ್ನು ನೀಡುವವನು ; ಚೈತನ್ಯದಾಯಕ : ಪಾವನಕೆ ಪಾವನನು ಜೀವರ ಜೀವನನು ಮೃತ್ಯುವಿಗೆ ಮೃತ್ಯುವಿದಾವ ಲೆಕ್ಕದೊಳೀತನಹನೆಂದಱಿವರಾರೆಂದ (ಕುಮಾ.ಸ. ೯-೨೭). [ ಸಂ. ]

**ಜೀವನಗಾತಿ** (ನಾ). (?) : ಜನನಸ್ಥಾನದಿಂದಗಲದ ಬಿರುದುಳ್ಳ ಘನಕುಚ ತಾರಹಾರಗಳು ತೊನೆದಾಡೆ ಜಟ್ಟಿಯರ್ ತೊಡೆಯ ತಟ್ಟಿದರು ಜೀವನಗಾತಿ ಕಣ್ಮುಚ್ಚುವಂತೆ (ಮೋಹತ. ೨೭-೩೯).

[ ? ಜವ್ವನ + – ಕಾತಿ, ಎಂದಿರಬಹುದೆ ? ]

**ಜೀವನಚರಿತ್ರೆ** (ನಾ.) ಒಬ್ಬ ವ್ಯಕ್ತಿಯ ಬಾಳಿನ ವಿಚಾರವಾಗಿ ಬರೆದ ಕಥೆ: ಮುದ್ದಣನ ಜೀವನಚರಿತ್ರೆಯಲ್ಲಿ ನಮ್ಮ ಕನಿಕರ – ಕೈವಾರಗಳನ್ನು ಸೆಳೆದುಕೊಳ್ಳುವ ವಿಶೇಷವಿದೆ (ಕಸಾಚ. ೩೮೦). [ ಜೀವನ + ಚರಿತ್ರೆ ]

**ಜೀವನಜಾತ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : ಲಸಜ್ಜೀವನಜಾತದ ಗರ್ಭದ ಭಾವನೆಯಂ ಬಗೆಗೆ ತಂದು ನಲಿಯಿಕ್ಕುಮೆಮ್ಮಂ (ವಸ್ತುಕಂ. ೦-೮). [ ಜೀವನ + ಜಾತ ]

**ಜೀವನತತ್ತ್ವ** (ನಾ). ಜೀವನದ ಮಾರ್ಗದರ್ಶಕ ಸಿದ್ಧಾಂತ ; ಬಾಳಿಗೆ ಮಾರ್ಗದರ್ಶಕವಾದ ಸಿದ್ಧಾಂತ : ಸೂಕ್ಷ್ಮವಾಗಿ ಅವಲೋಕಿಸಿದಾಗ ನಮ್ಮೆದುರು ಮೂರೇ ಮೂರು ಜೀವನತತ್ತ್ವಗಳು ದೃಗ್ಗೋಚರವಾಗುತ್ತವೆ (ಧರ್ಮಸಾ.೩). [ ಜೀವನ + ತತ್ತ್ವ ]

**ಜೀವನದರ್ಶನ** (ನಾ). ಬಾಳಿನ ತತ್ತ್ವಜ್ಞಾನ : ಇದೊಂದು ಜೀವನದರ್ಶನಗ್ರಂಥವಾಗಿದೆ (ಪ್ರಬಂಧ. ೦೦೦). [ ಜೀವನ + ದರ್ಶನ ]

**ಜೀವನದಾಯಿ** (ನಾ). ಚೈತನ್ಯವನ್ನು ಕೊಡುಂವವನು: ಪರಮಾತ್ಮನೇ ಪ್ರಪಂಚಕೆಲ್ಲ ಜೀವನದಾಯಿ, ಸಂರಕ್ಷಕ (ಜಗದಾ. ೨೦೨). [ ಸಂ. ಜೀವನದಾಯಿನ್ ]

**ಜೀವನದಾಯಿನಿ** (ನಾ). ಚೈತನ್ಯವನ್ನು ಕೊಡುಂವವಳು: ಈಗ ಈ ಜೀವನ ಶಾಲಿನಿಯೂ ಜೀವನದಾಯಿನಿಯೂ ಆದ ಮಾತೃಭಾಷೆಯು ಅದರ ಮಕ್ಕಳ ಗುಂಪಿನಲ್ಲಿ ತನ್ನ ಅಧಿಕಾರವನ್ನು ಕೇಳುತ್ತಿದೆ (ನಿಬಂಧ. II, ೨೯೨). [ ಸಂ. ಜೀವನದಾಯಿನೀ ]

**ಜೀವನದಿ** (ನಾ). ಸದಾ ನೀರಿರುವ ನದಿ; ಎಂದೂ ಬತ್ತದ ನದಿ: ಆ ಜೀವನದಿಗೆ ತನ್ನ ಭಕ್ತಿ ಅರ್ಪಿಸಿಕೊಂಡ (ಸುಖವಿ. ೧೯). [ಜೀವ + ನದಿ]

**ಜೀವನದೃಷ್ಟಿ** (ನಾ). = ಜೀವನದರ್ಶನ: ಎಲ್ಲಕ್ಕಿಂತ ಮಿಗಿಲಾಗಿ ಮಾಲ್ತೀವ ಈ ಜೀವನದೃಷ್ಟಿಗೆ ಬಹಳ ಬೆಲೆ ಕೊಟ್ಟಿದ್ದಳು (ಪುನರು. ೧೯೮). [ ಜೀವನ + ದೃಷ್ಟಿ ]

**ಜೀವನನಾಥ** (ನಾ). ನೀರಿನ ಒಡೆಯಂ; ವರುಣ: ಆವಾವೆಡೆಯೊಳ್ ನವರತ್ನಾವಳಿ ತೀವಿರ್ಪುವೆಂದು ಮಕರಾರೂಢಂ ಜೀವನನಾಥಂ ವರುಣಂ ಕಾವಂ ಧೃತಪಾಶನೆನೆಸೆವ ರತ್ನಾಕರಮಂ (ಸೂಕ್ತಿಸು. ೨-೧೭). [ ಜೀವನ + ನಾಥ ]

**ಜೀವನಬಿಂದು** (ನಾ).=ಜೀವಕಣ: ಇಲ್ಲಿ ರತಿದೇವಿ ಬಸುರೊಳಗೆ ಜೀವನ ಬಿಂದುವಲ್ಲಿ ಪ್ರವೇಶಿಸಿದ ಮೂಹೂರ್ತಮಂ ಮೊದಲ್ಗೊಂಡು . . . ವೇರ್ಚುತಲಿರ್ದುದು (ನವಮೋ. ೦೪-೩೪). [ಜೀವನ + ಬಿಂದು ]

**ಜೀವನಮಟ್ಟ** (ನಾ). ೧. = ಜೀವಮಾನ: ಒಬ್ಬ ತನ್ನ ಜೀವನಮಟ್ಟದಲ್ಲಿ ಮಾಡಬೇಕಾದ ಕರ್ತವ್ಯಗಳನ್ನು ನಿಸ್ಪೃಹ ಭಾವನೆಯಿಂದ ನಿರ್ವಹಿಸಿದರೆ . . . ಮುಕ್ತಿಯನ್ನು ತಪ್ಪದೆ ಮುಟ್ಟುವನು (ತತ್ವಪ್ರಾ. ೩೭೮). ೨. ಬದುಕಿನ ಅಂತಸ್ತು,-ದರ್ಜೆ: ಅಡುಗೆಮನೆ ಜೀವನಮಟ್ಟದ ಅಳತೆಗೋಲು (ಅಡುಗೆ ೨೦). [ ಜೀವನ + ಮಟ್ಟ$_1$ ]

**ಜೀವನಯಂತ್ರ** (ನಾ). ಜೀಕಳಿ; ಜಲಯಂತ್ರ: "ಜೀರ್ಕೊಟವೆ ಜೀವನ ಯಂತ್ರದ ನಾಮಧೇಯದೊಳ್" (ಕರ್ಣಾನಿ. ೮೩). [ ಜೀವನ + ಯಂತ್ರ ]

**ಜೀವನಯಾಪನೆ** (ನಾ). ಜೀವನ ನಡೆಸುವುದು; ಬದುಕಿನ ನಿರ್ವಹಣೆ: ಮಾರ್ಕೆಲ್ . . . ಮನೆಪಾಠ ಹೇಳಿ ಜೀವನಯಾಪನೆ ಮಾಡಿಕೊಳ್ಳುತ್ತಿದ್ದನು (ಪುನರು. ೩೨೫). [ ಜೀವನ + ಯಾಪನೆ ]

**ಜೀವನವಕ್ಕಿ** (ನಾ). ನೀರಹಕ್ಕಿ; ಜಲಪಕ್ಷಿ: ಜೀವನವಕ್ಕಿ ಕುಳಿರ್ಗೆಯ್ಯ ಕೊಳರ್ವಕ್ಕಿ . . . ಜೀವಿಪುವು ಭಯವನುಳಿದು (ಪ್ರಭುಪು. ೩-೦೪). [ ಜೀವನ + ಹಕ್ಕಿ$_1$ (<ಪಕ್ಕಿ$_1$) ]

**ಜೀವನವಾಹ** (ನಾ). ನೀರನ್ನು ಒಯ್ಯುವುದು; ಮುಗಿಲು; ಮೋಡ: "ವಾರಿಧರಪುಬ್ದ ಮಭ್ರಂ . . . ಜೀವನವಾಹ ವೈರಾವತೀಶಂ ಬಳಾಹಕಂ ಜೀಮೂತಮೆನಲು ಮೇಘಕ್ಕೆ ನಾಮಂ" (ಮಂಗರಾ. ೦೩-೩). [ ಸಂ. ]

**ಜೀವನವಿಕಾಸ** (ನಾ). ಬಾಳಿನ ಬೆಳವಣಿಗೆ: ಸ್ತ್ರೀ ಹಾಗು ಪುರುಷ ಇವರಿಬ್ಬರಿಗೂ ಜೀವನ ವಿಕಾಸಕ್ಕೆ ವಿಲಾಸವು ಅತ್ಯಾವಶ್ಯಕವಾಗಿದೆ (ಪ್ರಬಂಧ. ೦೦೪). [ ಜೀವನ + ವಿಕಾಸ ]

**ಜೀವನವೇತನ** (ನಾ). ಬಾಳಿನ ನಿರ್ವಹಣೆಗೆ ಸಾಕಾಗುವ ಸಂಬಳ: (Living wage. ಪತ್ರಿನಿ. ೫೨). [ ಜೀವನ + ವೇತನ ]

**ಜೀವನಶಾಲಿನಿ** (ನಾ). ಚೈತನ್ಯವನ್ನು ಹೊಂದಿರುಂವವಳು: ಈಗ ಈ ಜೀವನಶಾಲಿನಿಯೂ ಜೀವನದಾಯಿನಿಯೂ ಆದ ಮಾತೃಭಾಷೆಯು ಅದರ ಮಕ್ಕಳ ಗುಂಪಿನಲ್ಲಿ ತನ ಅಧಿಕಾರವನ್ನು ಕೇಳುತ್ತಿದೆ (ನಿಬಂಧ. II, ೨೯೨). [ ಸಂ. ಜೀವನಶಾಲಿನೀ ]

**ಜೀವನಸತ್ವ** (ನಾ). = ಜೀವಸತ್ವ: ಮಾಡಿ ಉಂಡಿದ್ದೇವೆ ಸಮುನಮಗೆ ಸೇರಿದ ಅಡಿಗೆ. ಇರಬಹುದು ಇದರಲ್ಲಿ ಕೆಲಭಾಗ ಜೀವನಸತ್ವ ಕಡಮೆ (ನಲಮು. ೩೭-೦೫). [ ಜೀವನ + ಸತ್ವ$_2$ ]

**ಜೀವನಸಾಲೆ** (ನಾ). ನೀರಿನ ಮನೆ; ಅರವಟ್ಟಿಗೆ: ತನ್ನಯ ಕಣ್ಗಳ ತಣ್ಣದಿರಿಂ ಜೀವನಮಂ ಬಟಿ ಕುಳಿರ್ಗಲ್ಗಳಸಂ ತೀವುವೊಲುಣ್ಮಿಸುತೆಚಿಯಲ್ ತನ್ನಯ ಜೀವನ ದಣಿವಂತಿರ್ದಂ ಬೆಟಗಿಂ ಜೀವನಸಾಲೆಯೊಳು (ಉದ್ಭಟ. ೨-೨೯). [ ಜೀವನ + ಸಾಲೆ$_3$ ]

**ಜೀವನಾಂಶ** (ನಾ). ಜೀವನಕ್ಕೆಂದು ಕೊಡುವ ಹಣ; ಪೋಟಗಿ (ಉಕ): ನಾನೇನೂ ಸೀತಕ್ಕನಿಗೆ ಜೀವನಾಂಶ ಕೊಡಿ ಎಂದು ಕೇಳಲು ಬಂದಿಲ್ಲವಲ್ಲ (ಪ್ರಶ್ನೆ. ೦೦೯). [ ಜೀವನ + ಅಂಶ ]

**ಜೀವನಾಡಿ** (ನಾ). ೧. ದೇಹದೊಳಗೆ ಪ್ರಾಣಧಾರಣೆಗೆ ಅತ್ಯವಶ್ಯಕವಾದ ನಾಡಿ; ಮುಖ್ಯನಾಡಿ. ೨. (ಆಲಂ) ಮುಖ್ಯ ಆಧಾರ; ಕೇಂದ್ರಶಕ್ತಿ: ಹೇಮಾವತಿ ನದಿಯು ನಮ್ಮ ಪ್ರಾಂತ್ಯಕ್ಕೆ ಜೀವವನ್ನು ಕೊಡುವ ಜೀವನಾಡಿ (ಗರುಡಾ. ೦೫೭); ಚಾಮುಂಡರಾಯ ಗಂಗರಾಜ್ಯದ ಜೀವನಾಡಿ (ದಾನಚಿಂ. ೪೮); ನವರಸಗಳು ಸಾಹಿತ್ಯದ ಜೀವನಾಡಿಗಳೆನಿಸಿದಾಗ (ಸುತ್ತುಮು. ೦). [ ಜೀವ + ನಾಡಿ$_1$ ]

**ಜೀವನಾರ್ಥ** (ನಾ). ೧. ಜೀವಿತ; ಬದುಕು ಅಥವಾ ಜೀವನೋಪಾಯ: "ಬಾಟ್-ಜೀವನಾರ್ಥಂ" (ಶಮದ. ಪರಿ. ೦). ೨. = ಜೀವನಾಂಶ. [ ಜೀವನ + ಅರ್ಥ ]

**ಜೀವನಾದರ್ಶ** (ನಾ). ಬಾಳಿನ ಗುರಿ; ಬದುಕಿನ ಉದ್ದೇಶ: ಸಾಹಿತ್ಯದಲ್ಲಿ ತನ್ನ ಜೀವನಾದರ್ಶವನ್ನು ಕಂಡುಕೊಂಡಿರುವ ಕವಿ ಬೇರೆಬೇರೆ ವಿಧಾನಗಳನ್ನು ಅನುಸರಿಸಬೇಕಾದ ಅಗತ್ಯವಿಲ್ಲ (ಧರ್ಮಸಾ. ೮೦). [ ಜೀವನ + ಆದರ್ಶ ]

**ಜೀವನಾಲ** (ನಾ).=ಜೀವನಾಡಿ: ನೀನು ವಿಶ್ವದ ಜೀವನಾಲವನೆ ಕೊಯ್ಯಲಯ್ದಿದೆಯೊ, ಪಾಪೀ (ಅಮಕಂ. ೧೯-೫). [ ಜೀವ + ನಾಲ$_1$ ]

**ಜೀವನಿ** (ನಾ). ಕಿರಿಯ ಹಾಲೆ ಗಿಡ ಮಂತ್ತು ಅದರ ಸೊಪ್ಪು; ಸಿಹಿ ಹಾಲೆ: "ಜೀವಂತೀ, ಜೀವನೀ, ಜೀವಾ, ಜೀವನೀಯಾ, ಮಧುಃ – ಶಿ ಕಿರಿಹಾಲೆಸೊಪ್ಪು" (ಸಿದ್ಧಾಂತಿ. ೦೨೭). [ ಸಂ. ಜೀವನೀ ]

**ಜೀವನಿಧಿ** (ನಾ). ಕಡಲು; ಸಮುದ್ರ: ಜೀವನಿಧಿಯೊಳು ಬಿರ್ದನೋಯೆ ನಲಾ ವಿಭಾಕರನಸ್ತಮಿಸಿದನು (ಬಸಪು. ೦೦-೪೪); ಆ ವಾರ್ಧಿಮಧ್ಯ ಭುವನಜಕರ್ಣಿಕೆಯೊ ಕೂರ್ತು ಭೂವನಿತೆಗಿನಕುಲದ ನೃಪನೊಸಗೆಗಟ್ಟಿಸಿದ ಜೀವನಿಧಿವಸನದೊಡನೆಸೆವ ರವಿಯುಂಗುರವೊ (ಭಾವಚಿಂ. ೦-೨೪). [ ಜೀವ + ನಿಧಿ ]

**ಜೀವನಿವಹ** (ನಾ). ಜೀವಿಗಳ ಸಮೂಹ: ಭವವಾರ್ಧಿ ಪ್ರತಿಮಗ್ನ ಜೀವನಿವಹಂ ಪ್ರೇಮಾನುಬಂಧಂ . . . ತಟ್ಟಿರ್ಪ ಬಯಕ್ಕೆಯುಂ ಬಯಸುಗುಂ (ಶಾಂತಿಪು. ೯-೭). [ ಜೀವ + ನಿವಹ ]

**ಜೀವನೀಯ** (ಗು). ೧. ಆಯುಸ್ಸನ್ನು ವರ್ಧಿಸುವ. 'ಜೀವನೀಯಪಂಚಮೂಲ' ಪರಾ. (ನಾ). ೨. ನೀರು; ಉದಕ: "ಕುಶಮಪ್ಪು ಪಯು ಪುಷ್ಕರಂ ಜೀವನೀಯಂ . . . ಘನರಸಮೆನಲ್ ನೀರಿಂಗೆ ಪೆಸರಕ್ಕು" (ಮಂಗರಾ. ೦೦೯-೦). [ ಸಂ. ]

**ಜೀವನೀಯಪಂಚಮೂಲ** (ನಾ). ಆಯುಸ್ಸನ್ನು ವರ್ಧಿಸತಕ್ಕ ಶ್ರೇಷ್ಠವಾದ ಐದು ಮೂಲಿಕೆ: "ಆಷಾಢಿ, ರೊಡ್ಡಿ, ಸಿಹಿವಾಲೆ, ಎಕ್ಕೆವಾಲೆ, ಕಹಿಹಾಲೆ ಈ ಐದು ಜೀವನೀಯಪಂಚಮೂಲ" (ವೈದ್ಯಸಾ. II, ೦೦೪). [ ಜೀವನೀಯ + ಪಂಚಮೂಲ ]

**ಜೀವನೀಯೆ** (ನಾ). = ಜೀವನಿ. [ ಸಂ. ಜೀವನೀಯಾ ]

**ಜೀವನೋದ್ಯೋಗ** (ನಾ).=ಜೀವನೋಪಾಯ: ಕೆಟ್ಟ ರಾಜ್ಯದಲ್ಲಿ ಕ್ಷೇಮವಿಲ್ಲ, ಕೆಟ್ಟ ದೇಶದಲ್ಲಿ ಜೀವನೋದ್ಯೋಗವಿಲ್ಲ (ವಚಭಾ. ೩೯೦).
[ ಜೀವನ + ಉದ್ಯೋಗ ]

**ಜೀವನೋಪಾಯ** (ನಾ). ಹೊಟ್ಟೆಪಾಡಿಗಾಗಿ ಕೈಗೊಳ್ಳುವ ವೃತ್ತಿ; ಜೀವಿಕೆ: ಅಂತು ನಾಲ್ವತ್ತೊಂಭತ್ತು ದಿವಸದಿಂ ಬಟಿಯುಮುವರ್ಗಂ ಜೀವನೋಪಾಯ ಭೋಗೋಪಭೋಗ ವಿತರಣನಿರತ ಸುರತರುಪ್ರಕರಂಗಳೊಳ್ (ಶಾಂತಿಪು. ೬-೧೦೭ ವ); ಕಾಯದ ಕಳವಳಕ್ಕಂಜಿ ಕಾಯಯ್ಯಾ ಎನ್ನೆನು ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು (ಬಸವ. ೬೯೫).
[ ಜೀವನ + ಉಪಾಯ ]

**ಜೀವನೋಪಾಯಿ** (ನಾ). ಹೊಟ್ಟೆಪಾಡಿಗಾಗಿ ಮಾತ್ರ ಚಿಂತಿಸುವವನು; ಜೀವನೋಪಾಯವನ್ನು ಹುಡುಕುವವನು: ಇನನಿಂದಂ ಗೊರವಂ ತುಷಾರಕರನಿಂ ಕಾಪಾಲಿಕಂ ಭೂಮಿನಂದನನಿಂ ಬೌದ್ಧ ತಪಸ್ವಿ ಸೋಮಸುತನಿಂದಂ ಜೀವನೋಪಾಯಿ . . . . ತಪಮಂ ಕೆಯ್ಕೊಳ್ಗುಮಾ ಮಾನವಂ (ಜಾತತಿ. ೧೬-೨). [ ಸಂ. ಜೀವನೋಪಾಯಿನ್ ]

**ಜೀವನೌಷಧ** (ನಾ). ಬದುಕಿಸತಕ್ಕ ಮದ್ದು; ಪ್ರಾಣಕೊಡುವ ಔಷಧಿ; ಸಂಜೀವಿನಿ: "ಜೀವಾತುಃ, ಜೀವನೌಷಧಂ – ೨ ಬದುಕಿಸುವ ಮದ್ದು, ಸಂಜೀವನ ಮದ್ದು" (ಸಿದ್ಧಾಂತಿ. ೨೩೪). [ ಜೀವನ + ಔಷಧ ]

**ಜೀವನ್ಮುಕ್ತ** (ನಾ). ಬದುಕಿನಲ್ಲಿರುವಾಗಲೇ ಬ್ರಹ್ಮಾನಂದವನ್ನು ಅನುಭವಿಸುವವನು; ಆತ್ಮಾನಂದವನ್ನು ಪಡೆದಿರುವವನು: ಭ್ರಾಂತಿಗಳು ಕೆಡಲಾತನೆ . . . ಮುಕ್ತನುಮಪ್ಪ ತದ್ಬ್ರಹ್ಮನೆಂತು ಜೀವನ್ಮುಕ್ತನೆನಿಪನೆನಿಪುದು ನಿಜಂ ಶೋಕದ್ವಯಂಗಳರ್ಥಂ (ವೀಶೈಪು. ೫-೧೭-೩೨); ವ್ಯರ್ಥವಾಗಿಯೆ ಕೆಡುವನು . . . ಜೀವನ್ಮುಕ್ತನಾಗದೆ ಸರ್ವಥಾ ಸಂಸಾರ ಸುಖವಿಲ್ಲ (ಅಮೃತ. ೨-೧೦೭); ನಿಜಮೋಕ್ಷವೊದಗುವುದಾವ ಸಂಶಯಮಿಲ್ಲ ಜೀವನ್ಮುಕ್ತರಾದರಿಗೆ (ಗಗತಾ. ೮-೫೫); ಮುಕ್ತನಾದೆ, ಇಂದು, ಜೀವನ್‌ಮುಕ್ತನಾದೆ (ಅನಿಕೇ. ೫೯-೦). [ಸಂ. (ಜೀವತ್+ಮುಕ್ತ)]

**ಜೀವನ್ಮುಕ್ತಿ** (ನಾ).ಬದುಕಿರುವಾಗಲೇ ಬ್ರಹ್ಮಾನಂದವನ್ನು ಅನುಭವಿಸುವುದು; ಆತ್ಮಾನಂದವನ್ನು ಪಡೆಯುವುದು: ದೃಷ್ಟಿಸಲು ಶ್ರುತಿಗಳಿಗೆ ಪವಣೆ ವಿಶಿಷ್ಟ ಜೀವನ್ಮುಕ್ತಿಯುತ ಸಂತುಷ್ಟ ತತ್ತ್ವಾತ್ಮಕವಿದಕ್ಕೆ ಸಮಾನವೊಂದುಂಟೆ (ಬಸಪು. ೩-೭೦): ಎಂತು ಜೀವನ್ಮುಕ್ತಿಯಾಗುವುದು . . . ತಿಳುಹೆಂದು ಬಿನ್ನಯಿಸಿದನು (ಅಮೃತ. ೯-೪); ಆ ಬೇಡತಿ . . . ಪ್ರಬಲಸಿದ್ಧಿಯನ್ನು ಜೀವನ್ಮುಕ್ತಿಯನ್ನು, ಸಾಧಿಸಿದ ಧನ್ಯೆ (ಭಾರದ. ೪೮೩).

**ಜೀವನ್ಮುಕ್ತಿಪಟ** = ಒಂದು ಬಗೆಯ ಆಟದ ಪಟ; ಪರಮಪದ ಸೋಪಾನ ಪಟ: (ಕ). [ ಸಂ. (ಜೀವತ್ + ಮುಕ್ತಿ) ]

**ಜೀವನ್ಮೃತ** (ನಾ). ಜೀವಿಸಿದ್ದರೂ ಸತ್ತವನಂತೆ ನಿಸ್ಸತ್ತ್ವನಾದವನು; ಕಳಾಹೀನನಾದವನು: ಮಾನವ ಜೀವನ್ಮೃತನಿರೆ ಕಾಲಗೆ ಜೇಡನ ಪರಿವೇಷ (ಚಿಂತನ. ೫೬-೧೪); ಒಬ್ಬರನ್ನು ಕೇಳುವವನು ಜೀವನ್ಮೃತನು (ಮುಂಬಯಿ. ೬-೩೩೪). [ ಸಂ. (ಜೀವತ್ + ಮೃತ ]

**ಜೀವನ್ಮೃತಕ** (ನಾ).=ಜೀವನ್ಮೃತ: ನೀಳ್ದೊದವಿದ ಜಸಮುನುಪಾರ್ಜಿಸದಧಮನದೇತರ್ಕೆ ಬಾರ್ತೆ ಜೀವನ್ಮೃತಕಂ(ಆದಿಪು. ೧೨-೯೭); ಜೀವನ ಸಂಗತಿಯಿಂದಂ ಪಾವನಮುಟಿದಂದಪಾವನಂ ತಾನೆನೆ ಮೆಯ್ಯಾವನೋ ಬಸದಪ್ಪನವಂ ಜೀವನ್ಮೃತಕಂ ವಿವೇಕಶೂನ್ಯನಮಾನ್ಯಂ (ಮಲ್ಲಿಪು. ೯-೬೩); ಜೀವಮಂ ಪಡೆದು ಜೀವನ್ಮೃತಕನಾಗಿರ್ದೆ (ವಾಗೀರ. ದೇ. ೨೬೦-೦೭). [ ಸಂ. ]

**ಜೀವನ್ಮೃತೆ** (ನಾ). ಬದುಕಿದ್ದೂ ಸತ್ತಂತಿರುವವಳು; ಕಳಾಹೀನೆ: ನಾಡ ಪೆಣ್ಗಳ ಬಿಱುನುಡಿಗೆ ತಡೆದು ಬಾಟ್ಟ ವಂಧ್ಯೆಯರೆ ಜೀವನ್ಮೃತೆಯರ್ ವಲಂ (ರಾಮಾಶ್ವ. ೦೮-೦೫).
[ ಸಂ. ಜೀವನ್ಮೃತಾ (ಜೀವತ್ + ಮೃತಾ) ]

**ಜೀವಪಂಚಕ** (ನಾ). [ದ್ವೈತ] ದೇವತೆಗಳಂ, ಗಂಧರ್ವರಂ, ಪಿತೃಗಳು, ಮಂನುಷ್ಯರು, ಅಸುರರೆಂಬ ಐದು ವರ್ಗಗಳ ಸಮೂಹ: ಶೇಷಫಣಾತಪತ್ರಗೆ ಜೀವಪಂಚಕವ್ರಾತವೆಂದಿಗು ಭಿನ್ನಪಾದಾಹ್ವಯದಿ ಕರೆಸುವದು (ಹಸಾರ. ೨೪-೦೮). [ ಜೀವ + ಪಂಚಕ ]

**ಜೀವಪಚ್ಚೆ** (ನಾ). ಶ್ರೇಷ್ಠವಾದ ಹಸಿರು ಬಣ್ಣದ ಹರಳು; ಮರಕತ: ಬರುತ ಕಂಡನು ಜೀವಪಚ್ಚೆಯ ಸುಸಿಲೆಗಳಿಂ ವಿರಚಿಸಿದ ತೆರದಿ ಪರಿಪರಿ ಪುಷ್ಪಲತೆಗುಲ್ಮ ಗುರುಪಚ್ಚೆ ಪಸುರಿನಿಂದೆಸೆವ ಕುಸುಮಾವತಿಯ ಪಟ್ಟಣವ ಪೊಗಲು (ನವಮೋ. ೪-೩೫). [ ಜೀವ + ಪಚ್ಚೆ$_1$ (<ಪಸು$_2$) ]

**ಜೀವಪಡೆ**(ಕ್ರಿ). ಜೀವಂತವಾಗು; ಶಕ್ತಿಹೊಂದು: ಮೊದಲ ಸಂಕೋಚದಲ್ಲಿ ಹೊಳೆಯದೇ ಇದ್ದ ಅನೇಕಾನೇಕ ಸಣ್ಣ ಸಣ್ಣ ವಿವರಗಳು ಈಗ ಮಾತಿನಲ್ಲಿ ಜೀವಪಡೆದುವು (ಮೂರುದಾ. ೦೯೬). [ ಜೀವ + ಪಡೆ$_1$ ]

**ಜೀವಪತ್ನಿ** (ನಾ). ಗಂಡನು ಬದುಕಿರುವವಳು; ಸುಮಂಗಲಿ; ಮುತ್ತೈದೆ. [ ಸಂ. ಜೀವಪತ್ನೀ ]

**ಜೀವಪದಾರ್ಥ** (ನಾ). [ಜೈನ] ಒಂಬತ್ತು ಪದಾರ್ಥಗಳಲ್ಲಿ ಮೊದಲನೆಯದು; ಜೀವವೆಂಬ ತತ್ತ್ವ: ಜೀವಪದಾರ್ಥಮಜೀವಪದಾರ್ಥಂ ಮೋಕ್ಷ ಪದಾರ್ಥಂ ಆಸ್ರವ ಪದಾರ್ಥಂ ಸಂವರ ಪದಾರ್ಥಂ ನಿರ್ಜರ ಪದಾರ್ಥಂ ಬಂಧ ಪದಾರ್ಥಂ ಮೋಕ್ಷ ಪದಾರ್ಥಮೆಂಬ ನವ ಪದಾರ್ಥಮುಮಂ (ಸುಕುಮಾ. ೩-೩೯ ವ). [ ಜೀವ + ಪದಾರ್ಥ ]

**ಜೀವಪುರುಷ** (ನಾ). ಪೌರುಷವುಳ್ಳವನು; ಗಂಡುಗಲಿ: ಆಡಲೇಕಿದನಿನ್ನು ಹಿಂದಣ ಕೇಡನೆಣಿಸಿದಡೇನು ಫಲ ತಾಗೂಡಿ ಹಲವರು ಜೀವಪುರುಷರು ಹೆಂಗಳಾದೆವಲೆ (ಕುವ್ಯಾಕ. ೨೨-೪೬). [ ಜೀವ + ಪುರುಷ ]

**ಜೀವಪ್ರದೇಶ** (ನಾ). [ಜೈನ] ಜೀವಿಗಳು ಇರುವ ಪ್ರದೇಶ: ತದನಂತರ ಸಮಯದೊಳ್ ವಾತವಳಯಮುಟಿಯೆ ಜೀವಪ್ರದೇಶಂಗಳಿಂ ಲೋಕಪ್ರದೇಶಮಂ ಪರ್ವಿ (ಆದಿಪು. ೦೬-೪೯ ವ). [ ಜೀವ + ಪ್ರದೇಶ ]

**ಜೀವಭಾವ** (ನಾ). ಜೀವಿಯ ಸ್ವಾಭಾವಿಕ ಸ್ಥಿತಿ; ಜೀವತ್ವ: ಜೀವಭಾವದ ಭ್ರಮೆಯುಳಿದು ದೇಹಾವಸಾನದಲಿ (ಗಗತಾ. ೨-೧೦); ಜೀವನ ಸ್ವಾಭಾವಿಕ ಸ್ಥಿತಿ ಜೀವಭಾವ, ಅವನ ವಾಸ್ತವಿಕ ಸ್ಥಿತಿ ಶಿವಭಾವ (ಶಕ್ತಿವಿ. ೬೦).
[ ಜೀವ + ಭಾವ$_2$ ]

**ಜೀವಭಾವಿ** (ನಾ). ಜೀವನದಲ್ಲಿ ಆಸಕ್ತಿಯುಳ್ಳವನು; ಸಂಸಾರಿ: ಎನ್ನ ಜೀವಭಾವಿಯೆಂದೆನಿಸದೆ ಶಿವಭಾವಿಯೆಂದೆನಿಸಿದ ಗುರುವೆ (ಅಖಂಡೇ. ೦೯-೬).
[ ಸಂ. ಜೀವಭಾವಿನ್ ]

**ಜೀವಭ್ರಮೆ** (ನಾ). [ವೇದಾಂತ] ತಾನು ಬ್ರಹ್ಮನೇ ಆಗಿದ್ದರೂ ಅಜ್ಞಾನದಿಂದ ತಾನು ಜೀವನೆಂದುಕೊಳ್ಳುವ ಭ್ರಾಂತಿ; ಮಿಥ್ಯಾಜ್ಞಾನ: ಜೀವಭ್ರಮೆಯ ಕವಚವ ಕಳೆದು ಹೊಳೆಹೊಳೆವಾತ್ಮನಂದದಲಿ (ಕುವ್ಯಾವಿ. ೧೦-೫); ಇಂಬುಗೊಂಡಿಹ ಜೀವಭ್ರಮೆಯಾಡಂಬರವು ಗುರುಬೋಧನಾಮುಖದಿಂದಡಂಗುವುದು (ಗಗತಾ. ೦೩-೪೦). [ಜೀವ+ಭ್ರಮೆ]

**ಜೀವಭ್ರಾಂತಿ** (ನಾ).=ಜೀವಭ್ರಮೆ: ಕಲ್ಪನೆ ಹರಿದು ಜೀವಭ್ರಾಂತಿ ಬೀತಡೆ ಪರಮು ತಾನಿಹನು (ಕುವ್ಯಾಭೀ. ೩-೫೨). [ ಜೀವ + ಭ್ರಾಂತಿ ]

**ಜೀವಮಾನ** (ನಾ). ಬದುಕಿನ ಕಾಲ; ಜೀವನಕಾಲ: ಅವಳ ಜೀವಮಾನದಲ್ಲಿ ಅವಳು ಯಾವುದೊಂದು ಪಾಪಕಾರ್ಯವನ್ನೂ ಮಾಡಿದವಳೇ ಅಲ್ಲವಲ್ಲ (ಹಿಂಕಿರು. ೫); ತನ್ನ ತಂದೆ ಬಿಜ್ಜಳನ ಜೀವಮಾನದಲ್ಲಿಯೇ ಕಾಲವಾಗಿರಬೇಕು (ಮೂರುಉ. ೯೬). [ ಜೀವ + ಮಾನ ]

**ಜೀವರಕ್ಕೆ** (ನಾ). ಪ್ರಾಣರಕ್ಷಕವಾದ ಕವಚ: "ಜೀವರಕ್ಕೆ=ಕವಚಂ" (ಕಮುದ. ಪರಿ. ೨); "ಜೀವರಕ್ಕೆಯೆ ಕವಚಂ" (ಕರ್ಣಾನಿ. ೪೪); ಪ್ರತಾಪಾಗ್ರ್ಯಂಗೆ ಜೀವರಕ್ಕೆ ಬೆಸುಗೆವಿಟ್ಟುದು (ರಾಮಾಶ್ವ. ೯೦-೨೮); ಒಳ್ನಡೆಯ ಜೀವರಕ್ಕೆಯು ಸೋಮುವರ್ಮಂ (ಸೌನಂದ. ೭-೪೨). [<ಸಂ. ಜೀವರಕ್ಷಾ]

**ಜೀವರಕ್ತ** (ನಾ). ೧. ಜೀವವನ್ನು ಉಳಿಸುವ ರಕ್ತ. ೨. (ಆಲಂ). ಚೈತನ್ಯಕೊಡುವ ಶಕ್ತಿ: ಅವರು ಚೈತನ್ಯದುಸಿರು, ಜೀವರಕ್ತ, ವಾಹಕಶಕ್ತಿ ಯಾಗಿದ್ದರು (ಕಒಸಾ. VIII, ೩೬೩). ಇದು ಇಂಗ್ಲೀಷಿನ 'Lifeblood' ಎಂಬುದರ ಅನುವಾದ. [ಜೀವ + ರಕ್ತ]

**ಜೀವರಕ್ಷೆ** (ನಾ). ೧. ಜೀವರಕ್ಷಣೆ. ೨. = ಜೀವರಕ್ಕೆ. ೩. ಒಂದು ಬಗೆಯ ಔಷಧಿ ಗಿಡ: "ಕುಚಪಲಃ – ಖವ್ವಲು ?, ಬೇಳ, ಜೀವರಕ್ಷೆ" (ಒಷಧಿ. ೩೬). [ಜೀವ + ರಕ್ಷೆ]

**ಜೀವರತ್ನ** (ನಾ). ೧.ಶ್ರೇಷ್ಠವಾದ ರತ್ನ: ಜೀವರತ್ನಕಣೆಯೇ ಮಿಕ್ಕಾದ ಪಾಷಾಣಗಳ್ (ಸೋಮೇಶ. ೦೦). ೨. [ಜೈನ] ಚಕ್ರವರ್ತಿಯಾದವನಿಗೆ ತಾನಾಗಿ ಬಂದೊದಗುವ ಪುರೋಹಿತ,ಮಂತ್ರಿ, ಸ್ಥಪತಿ ಮೊದಲಾದ ಏಳು ಶ್ರೇಷ್ಠ ಸೇವಾಸಾಧನಗಳು: ಸೇನಾಪತಿ ಸ್ಥಪತಿ ಗೃಹಪತಿ ಪುರೋಹಿತ ಗಜ ವಾಜಿ ಸ್ತ್ರೀರತ್ನಂಗಳೆಂಬೇೞುಂ ಜೀವರತ್ನಂಗಳುಮಂ . . . ಅನುಕ್ರಮದೊಳರ್ಚಿಸಿ ಬಂದು (ಚಂದ್ರಪ್ರ. ೬-೧೦೦ ವ). 'ಅಜೀವರತ್ನ', 'ಚತುರ್ದಶರತ್ನ' ಪರಾ. [ಜೀವ + ರತ್ನ]

**ಜೀವರಸ** (ನಾ). ಚೈತನ್ಯವನ್ನುಂಟುಮಾಡುವ ದ್ರವ; ಜೀವದ್ರವ್ಯ: ಏಳು ಬಯಕೆಯ ಬಳ್ಳಿಯೇ . . . ಜೀವರಸ ಚಿಮ್ಮೀಳು (ಹೃದಸ. ೨೯-೩); ಜೀವರಸವನ್ನೊಳಗೊಂಡ ಜೀವಕಣಗಳು ಜೀವಿಯ ರಚನೆಯ ತಳಹದಿ (ಪ್ರಾಣಿಶಾ. ೫); ಮರವನ್ನು ಕೊಯ್ಯುವುದಕ್ಕೆ ಮುಂಚೆ ಸಸ್ಯದ ಜೀವರಸವು (Sap) ಸಂಪೂರ್ಣವಾಗಿ ಆರಿ ಅದರ ತೂಕವು ಕಡಿಮೆಯಾಗಿರಬೇಕು (ಶಿಲ್ಪಸಾ. ೨೮೦); ಶ್ರೇಷ್ಠ ಸಾಹಿತ್ಯದಲ್ಲಿ ಎರಡೂ ಗುಣಗಳಿವೆ. ಒಂದು ಅದರ ಮೂಲ ಜೀವನದಲ್ಲಿದ್ದು ಜೀವನದಿಂದ ಅದು ತನ್ನ ಜೀವರಸವನ್ನು ಪಡೆಯುತ್ತದೆ (ಪತ್ರಿಕಾ. ೫೮). [ಜೀವ + ರಸ]

**ಜೀವರಾಶಿ** (ನಾ). = ಜೀವಚಯ: ಸೃಷ್ಟಿಕರ್ತನು ಹುಟ್ಟಿಸಿದ ಇರುವೆ ಮೊದಲುಗೊಂಡು ೮೦ ಕೋಟಿ ಜೀವರಾಶಿಗಳಲ್ಲಿ ತಾರತಮ್ಯ ಮಾಡಿರುವು ದಿಲ್ಲ (ಶರೀಫ. ೬೨, ಕವಿಕಾವ್ಯಪರಿಚಯ). [ಜೀವ + ರಾಶಿ]

**ಜೀವಲ, ಜೀವಳ** (ಗು). ೧. ಚೈತನ್ಯಮಯವಾದ; ಜೀವಂತವಾದ. (ನಾ). ೨. ಬದುಂಕಂ; ಬಾಳಂ. **ಜೀವಳ**: ಕಾಯ ನಿರ್ಣೀಯವದರೊಳು ಮನವನಿರ್ಣೀಯ ಸ್ನಾಯು ಸಂಪ್ಯೇಯ ಜೀವಳಮಸಂಖ್ಯೇಯ (ಮಂಕುಕ. ೦೦೨); ಇದು ನನ್ನ ಜೀವಳದ ಹೋಳಿ (ರಂಗರೋ. ೦೦೩). [ಸಂ.]

**ಜೀವವಂಚಕ** (ನಾ). = ಜೀವಗಳ್ಳ: ಕಾಯವಂಚಕನಲ್ಲ ಜೀವವಂಚಕನಲ್ಲ ಶಂಕೆಯಿಲ್ಲದ ಮಹಾಮಹಿಮ ನೋಡಯ್ಯಾ (ಬಸವ. ೮೬೪); ಸಾಯಲಾಜಿದೆ ಜೀವವಂಚಕ ಕಾಯಧಾರಿಗೆ ಕೋಟಿಗಜ್ಞಾನಾಯತಂಗುಪಜೀವಕಂಗತಿ ಕುಟಿಲನಾದಂಗೆ ಶ್ರೀಯುಮಾರ್ಥಶರೀರಿ ಮಾಯಿಕವಾಯಿಕಂ ಮೆಚ್ಚುವನೆ (ಬಸಪು. ೬೦-೦೫). [ಜೀವ + ವಂಚಕ]

**ಜೀವವಧೆ** (ನಾ). ಪ್ರಾಣಿಗಳನ್ನು ಕೊಲ್ಲುವಿಕೆ; ಪ್ರಾಣಿಹತ್ಯೆ: ಜೀವವಧೆ ಯಿಂದೆ . . . ನಾನಾವಿಧ ದುಃಖಕ್ಕೆ ತಾನೆ ಭಾಜನನಕ್ಕುಂ (ಸಮುಪ. ೧೦-೦೦೯); ಜೀವವಧೆಯಾಗದಂತಖಿಳಾವನಿತಳಪೂಜ್ಯ ಪೋಗಿ ಪಿಂಗಿಸುವುದು (ಧರ್ಮಾಮೃ. ೯-೦೯೪). [ಜೀವ + ವಧೆ]

**ಜೀವವಧೆಗೆಯ್** (ಕ್ರಿ). ಪ್ರಾಣಿಗಳನ್ನು ಕೊಲ್ಲು; ಪ್ರಾಣಿಹತ್ಯೆಮಾಡು; ಜೀವವಧೆಗೆಯ್ದರೆ . . . ನಾರಕದುಃಖಮನ್ನೆದಿರ್ಪರೇ (ಶಾಸ್ತ್ರಸಾರ. ೬). [ಜೀವವಧೆ + ಕೆಯ್$_1$]

**ಜೀವವಾಣಿ** (ನಾ). ಚೈತನ್ಯಯುತವಾದ ಮಾತು: ಶರೀಫರ ಹಾಡುಗಳಲ್ಲಿ ಆಡುವ ವಾಣಿ ಜೀವವಾಣಿ (ಶರೀಫ. ii, ಮೊದಲಮಾತು). [ಜೀವ+ವಾಣಿ$_1$]

**ಜೀವವಾರ** (ನಾ). ಬೃಹಸ್ಪತಿವಾರ; ಗುರುವಾರ: ಶ್ರಾವಣ ಬಹುಳ ಪಕ್ಷ ದಶಮೀ ಜೀವವಾರದೊಳಾದಿ ವೃಷಭೇಂದ್ರಾವತಾರದ ಬಸವಚರಿತೆ ಸಮಾಪ್ತವಾಯಿತು (ಬಸಪು. ೬೦-೯೨). [ಜೀವ + ವಾರ$_3$]

**ಜೀವವಿಕಾರಿ** (ನಾ). ಸಂಸಾರದ ವಿಕಾರಕ್ಕೆ ಒಳಪಟ್ಟವನು: ಇಂತೀ ಭಾವದ ಭ್ರಮೆಯ ಮಱೆದು ಜೀವವಿಕಾರಿಗಳಾಗದೆ ಸರ್ವಜ್ಞಾನಿಗಳಾಗಿ (ಪ್ರೋಲೆಮಾ. ೦೯೨-೬೨೩); ಮಜ್ಜನಕ್ಕೆಱೆವೆನಯ್ಯ ಜೀವವಿಕಾರಿಯಾನು (ಬಸವ. ೨೫೯) 'ಅಂಗವಿಕಾರಿ' ಪರಾ.

[ಸಂ. ಜೀವವಿಕಾರಿನ್]

**ಜೀವವಿಕಾಸವಾದ** (ನಾ). ಜೀವಿಗಳು ಹಂತಹಂತವಾಗಿ ಕ್ರಮೇಣ ಹೇಗೆ ಮಾರ್ಪಾಟನ್ನು ಹೊಂದಿದುವೆಂಬುದನ್ನು ವಿವರಿಸುವ ಸಿದ್ಧಾಂತ: ಡಾರ್ವಿನ್ . . . ಪ್ರತಿಪಾದಿಸಿದ ಜೀವವಿಕಾಸವಾದವು ಎರಡು ಮುಖವುಳ್ಳದು (ಮುಕ್ತಾರ. ೩೫, ೩೬೩).

[ಜೀವ + ವಿಕಾಸ + ವಾದ$_3$]

**ಜೀವವಿಜ್ಞಾನ** (ನಾ). ಜೀವಿಗಳ ಲಕ್ಷಣಗಳನ್ನೂ, ವ್ಯಾಪಾರಗಳನ್ನೂ ವಿವರಿಸುವ ಶಾಸ್ತ್ರ: ಇವು ಜೀವಕಣಗಳಲ್ಲಿ (Cell) ಜೀವರಾಸಾಯನಿಕ ಕ್ರಿಯೆಗಳಾಗಿ, ಅಂಗ ಸಮುದಾಯಗಳಲ್ಲಿ ಜೀವವಿಜ್ಞಾನ . . . ಸಮಗ್ರ ವಾಗಿದೆ (೬೬ಟಬಿ. ೨೪). [ಜೀವ + ವಿಜ್ಞಾನ]

**ಜೀವವಿಪಾಕಿ** (ನಾ). [ಜೈನ] ಮೂರುವಿಧವಾದ ನಾಮಕರ್ಮಗಳಲ್ಲಿ ಒಂದು: ಜೀವವಿಪಾಕಿಯುಂ ಪುದ್ಗಲವಿಪಾಕಿಯುಂ ಕ್ಷೇತ್ರವಿಪಾಕಿಯು ಮೆಂದಿಂತು ನಾಮಕರ್ಮಂ ತ್ರಿವಿಧಮಕ್ಕುಂ (ಗೊಮ್ಮಸಾ. ೨-೬).

[ಸಂ. ಜೀವವಿಪಾಕಿನ್]

**ಜೀವವಿಮೆ** (ನಾ). ಒಂದು ಗೊತ್ತಾದ ಮೊಬಲಗನ್ನು ಕಂತುಗಳಲ್ಲಿ ಕೊಡಲು ಒಪ್ಪಿದವನ ಪ್ರಾಣನಷ್ಟದ ಅಥವಾ ಕಾರ್ಯಶಕ್ತಿ ನಷ್ಟದ ಸಂದರ್ಭದಲ್ಲಿ ಹಿಂದೆಯೇ ಗೊತ್ತುಮಾಡಿಕೊಂಡಿರುವ ಒಟ್ಟು ಮೊತ್ತವನ್ನು ಕಂತು ಕೊಡುತ್ತ ಬಂದವನಿಗೆ ಅಥವಾ ಅವನ ವಾರಸು ದಾರರಿಗೆ, ವಿಮಾಸಂಸ್ಥೆಯು ಆ ಮೊಬಲಗನ್ನು ಕೊಡುವ ಕರಾರಿನ ಪದ್ಧತಿ: ಈ ಕೆಂಬೂತಯ್ಯ 'ಜೀವವಿಮೆಮಾಡು' ಎಂದು ಅನೇಕ ತಿಂಗಳಿಂದ ಕೇಳುತ್ತಿದ್ದಾನೆ (ಶಿವರಾ. ೨೦); ಉತ್ತಮವಾದ ವಿಮೆಯ ಸಂಘಗಳಲ್ಲಿ ಜೀವವಿಮೆಯನ್ನು ಮಾಡಿದರೆ ಬಹಳ ಉಪಯೋಗಗಳಿರುವುವು (ಗೃಹವಿ. ೨೦೦). [ಜೀವ + ವಿಮೆ]

**ಜೀವವೇದಾವರಣ** (ನಾ). (?): ಸೂಕ್ಷ್ಮನಿತ್ಯವಾದಂಥಾವು ಕಾರಣ ತಾ ನಿತ್ಯವಾದಂಥಾವು ಪ್ರವಾಹತಃ ನಿತ್ಯವಾದಂಥಾವು ಕಾಲಕರ್ಮ ಅವ್ಯಾಕೃತಾಕಾಶ ಜೀವವೇದಾವರಣ (ಅಧ್ಯಾಮಾ. ೦೦೦). [?]

**ಜೀವವ್ರಯ** (ನಾ). ಪ್ರಾಣಹತ್ಯೆ; ಜನರ ನಾಶ: ಏಕೆ ನಾಚಿಕೆ ಧರ್ಮಹಾನಿವ್ಯಾಕುಳತೆಯಿನ್ನೇಕೆ . . . ಜೀವವ್ರಯಕೆ ಕುಲವುಂಟೆ [ಪಾಠಾಂ. ಜೀವನ್ಯಾಯ ಕೊಲಲುಂಟೆ] (ಕುವ್ಯಾದ್ರೋ. ೦೯-೪೦).

[ಜೀವ + ವ್ರಯ]

**ಜೀವವ್ರಾತ** (ನಾ). = ಜೀವರಾಶಿ: ಆದಿತ್ಯಾದಿ ನವಗ್ರಹಂ ಧರಣಿ ಜೀವ ವ್ರಾತಮಾ . . . ತಪಮುಂ ಗ್ರಹಾಖ್ಯಂ (ನಾನಾರ. ೩೪); ಕೊಲು ವನನ್ಯರನ್ನರಿಂದವೆ ಕೊಲಿಸುವನು ಕಮಲಾಕ್ಷನಲ್ಲದೆ ಉಳಿದ ಜೀವ ವ್ರಾತಕೀ ಸ್ವಾತಂತ್ರ್ಯವಿಲ್ಲ (ಕುವ್ಯಾಉ. ೯-೬೨). [ಜೀವ + ವ್ರಾತ]

**ಜೀವಶಂಖ** (ನಾ). ಹೆಚ್ಚು ಶಬ್ದಮಾಡುವ ಶಂಖ: "ಬಹುನಾದಃ – ಜೀವಶಂಖ" (ಒಷಧಿ. ೦೦೬); "ದೀರ್ಘರಾವಃ – ಜೀವಶಂಖ" (ಒಷಧಿ. ೦೭೬). [ಜೀವ + ಶಂಖ]

**ಜೀವಶಾಕ** (ನಾ). ಒಂದು ಮೂಲಿಕೆ (?): "ಮೇಷಕಾ – ಜೀವಶಾಕ" (ಒಷಧಿ. ೦೨೯). [?]

**ಜೀವಶಾಸ್ತ್ರ** (ನಾ).=ಜೀವವಿಜ್ಞಾನ: ವಿಜ್ಞಾನಶಾಸ್ತ್ರದ ಶಾಖೆಗಳಾದ ಭೌತ ಶಾಸ್ತ್ರ . . . ಜೀವಶಾಸ್ತ್ರ ಮುಂತಾದವು ಸೇರಿಹೋದುವು (ಶಿಕ್ಷದ. ೨೦).

[ಜೀವ + ಶಾಸ್ತ್ರ]

**ಜೀವಶೂನ್ಯ** (ಗು). ಜೀವವಿಲ್ಲದ ; ನಿರ್ಜೀವವಾದ : ಖೈದಿಯ ಜೀವ ಶೂನ್ಯ ಶರೀರವನ್ನು ತೋಳುಗಳಲ್ಲಿರುಕಿಕೊಂಡು (ಪುನರು. ೪೪೭).
[ ಜೀವ + ಶೂನ್ಯ ]

**ಜೀವಶ್ರುವ** (ನಾ). = ಜೀವಚ್ಛವ : (+). [ ಜೀವ + ಶ್ರುವ ]

**ಜೀವಸಂಕುಲ, ಜೀವಸಂಕುಳ** (ನಾ). =ಜೀವರಾಶಿ: ಜೀವಸಂಕುಲ ಮುಂದು ವರಿಯಲು ನಾನೇ ಕಾರಣ (ಸ್ವಪ್ನಹೊ. ೨೪೪). **ಜೀವಸಂಕುಳ**: ಫಳ ಕುಸುಮ ಪ್ರವಾಳ ಹರಿತಾಂಕುರರಾಜಿಯೊಳಲ್ಲಿ ಜೀವಸಂಕುಳಮುಳವಲ್ಲ ದುಂಟದಱಿನಾಗದು ಪರ್ವದಿನಂಗಳೊಳ್ ಬ್ರತಂಗಳನೊಡಗೂಡಿನಿಂದಮುಗೆ ಮೆಟ್ಟಲ್ (ಆದಿಪು. ೧೫-೦೦). [ ಜೀವ + ಸಂಕುಲ ]

**ಜೀವಸಂಕುಳ** 'ಜೀವಸಂಕುಲ' ನೋ.

**ಜೀವಸಂಬಂಧ** (ನಾ). ಜೀವನ ಸಂಬಂಧ : ಕಾಯಸಂಬಂಧ ಜೀವ ಸಂಬಂಧ ಪ್ರಾಣಸಂಬಂಧ ಇಂತೀ ತ್ರಿವಿಧಸಂಬಂಧವನಱಿದಡೆ ಆತನೆ ಸಂಬಂಧಿ ಕಾಣಾ (ಅವಚಂ. ೪೩-೧೮೨). 'ಕಾಯಸಂಬಂಧ' ಪರಾ
[ ಜೀವ + ಸಂಬಂಧ ]

**ಜೀವಸಂಭಾವನೆ** (ನಾ). ಜೀವದ ಕಲ್ಪನೆ ; ಜೀವಸಂಬಂಧವಾದ ವಿಚಾರ : ಈ ನಿಮ್ಮ ಜನಮತದ ಜೀವಸಂಭಾವನೆಯೊಳ್ ಪೃಥಿವ್ಯಪ್ತೇ ಜೋವಾತಾಭಿಧಾನ ಭೂತಚತುಷ್ಟಯದಿಂದಂ ಬೇಱೆ ಜೀವತ್ವಗ್ರಾಹಕ ಪ್ರಮಾಣಮಿಲ್ಲಂ (ಶಾಂತಿಪು. ೮-೦೨೮ ವ). [ ಜೀವ + ಸಂಭಾವನೆ ]

**ಜೀವಸಂಹಾರಿ** (ನಾ). ಜೀವವನ್ನು ನಾಶಗೊಳಿಸುವವನು ; ಲಯಕಾರಿ: ಭಾವದಲ್ಲಿ ಪ್ರತಗೆಟ್ಟುದಾಗಿ ಆ ಭಾವದಲ್ಲಿ ಜೀವಸಂಹಾರಿ ಕೂಡಲಸಂಗಮ ದೇವ ಸರ್ವನಿವಾಸಿಯಾಗಿ (ಬಸವ. ೯೪೫). [ ಸಂ. ಜೀವಸಂಹಾರಿನ್ ]

**ಜೀವಸತ್ವ** (ನಾ). ಶರೀರದ ಪೋಷಣೆಗೆ ಅತ್ಯಾವಶ್ಯಕವಾದ ಆಹಾರಾಂಶ; ಜೀವಾತು; ಅನ್ನಾಂಗ : ಆರೋಗ್ಯದಿಂದಿರಬೇಕಾದರೆ ನಮಗೆ ಜೀವಸತ್ವ ಗಳು ಅತ್ಯಾವಶ್ಯಕ (ನಿಮ್ಮದ್ರ. ೬೩); ದೇಹಕ್ಕೆ ಬೇಕಾದ ಲೋಹಾಂಶಗಳನ್ನು (Minerals) ಜೀವಸತ್ವಗಳನ್ನು (Vitamins) ನೀರನ್ನು ಒದಗಿಸಬೇಕು (ಕಲಿಶೋ. ೪೮). [ ಜೀವ + ಸತ್ವ ]

**ಜೀವಸಮಾಧಿ** (ನಾ). ತತ್ವಜ್ಞಾನ ಸಾಧನೆ (?) : ನಾರುಬೇರಿನ ಕುಟಿಲ ಕಪಟದ ಯೋಗವಲ್ಲಿದು ನಿಲ್ಲಿ ಭೋ. ಕಾಯಸಮಾಧಿ ಕರಣಸಮಾಧಿ ಯೋಗವಲ್ಲಿದು ನಿಲ್ಲಿ ಭೋ. ಜೀವಸಮಾಧಿಯೆಂಬುದಲ್ಲ ನಿಜಸಹಜಸಮಾಧಿ ಗುಹೇಶ್ವರ (ಅವಚಂ. ೦೩೯-೬೪೦). [ ಜೀವ + ಸಮಾಧಿ ]

**ಜೀವಸಮಾಸ** (ನಾ). [ಜೈನ] ಜೀವಗಳ ಸಮೂಹ: ಯಾವ ಸಂಜ್ಞೆಯಲ್ಲಿ ಜಗತ್ತಿನೊಳಗಿನ ಎಲ್ಲ ಜೀವಿಗಳ ಸಮಾವೇಶವಾಗುವುದೋ, ಆ ಸಂಜ್ಞೆಗೆ ಜೈನ ಪರಿಭಾಷೆಯಲ್ಲಿ 'ಜೀವಸಮಾಸ' ವೆಂದು ಹೇಳಲಾಗುತ್ತದೆ (ಜೈನಪ. ೨೯೨). [ ಜೀವ + ಸಮಾಸ ]

**ಜೀವಸಮಾಸೆ** (ನಾ). = ಜೀವಸಮಾಸ: ಅಗಲ್ದಂ ಸಂಸ್ಥಾನಂಗಳಿನಗಲ್ದಂ ಮಾರ್ಗಣೆಗಳಿಂ ಗುಣಸ್ಥಾನಕದಿನಗಲ್ದಂ ಜೀವಸಮಾಸೆಯಿನಗಲ್ದಂ ಸಂಹನನ ದಿಂದಮಾತ್ಮಂ ದಿಟದಿಂ (ಪರಮಾ. ೫೭-೪೦).
[ <ಸಂ. ಜೀವಸಮಾಸ ]

**ಜೀವಸಾಕ್ಷಿ** (ನಾ). [ವೇದಾಂತ] ಅಂತಃಕರಣದಲ್ಲಿರುವ ಚೈತನ್ಯ ; ಅಂತರಾತ್ಮ : ಅಂತಃಕರಣವೇ ಉಪಾಧಿಯಾಗಿ ಉಳ್ಳ ಚೈತನ್ಯಕ್ಕೆ ಜೀವ ಸಾಕ್ಷೀ ಎಂದು ಹೆಸರು. ಜೀವನಿಗೆ ಅಂತಃಕರಣವು ವಿಶೇಷಣ, ಜೀವಸಾಕ್ಷಿಗೆ ಅಂತಃಕರಣವು ಉಪಾಧಿ (ಭಾಕತ್ತ್ವ. ೫೮೯). [ ಜೀವ + ಸಾಕ್ಷಿ ]

**ಜೀವಸಾಸನ** (ನಾ). ಬದುಕಿರುವಷ್ಟು ಕಾಲವೂ ಇರಲೆಂದು ಆಸ್ತಿಯನ್ನು ಬರೆದುಕೊಟ್ಟ ದಾಖಲೆ ; ಶಾಶ್ವತವಾದ ದತ್ತಿ : ಇವರ್ಗ್ಗಳ್ ಜೀವ ಸಾಸನವಾಗೆ ನಾಗಾಳ ವಸದಿಗೆ ಕೊಟ್ಟ ಮ[ಣ್ಣು] (ಕಇ. II, ೫-೦೭: 859).
[ ಜೀವ + ಸಾಸನ ]

**ಜೀವಸಿದ್ಧಿ** (ನಾ). [ಜೈನ] ಜೀವನ ಅಸ್ತಿತ್ವವನ್ನು ಪ್ರಮಾಣಪೂರ್ವಕವಾಗಿ ಸಿದ್ಧಪಡಿಸುವಿಕೆ : ಅನುಭೂತ ಶ್ರುತದೃಷ್ಟ ಖೇಚರ ಕಥಾನೀಕಂಗಳಿಂ ಯುಕ್ತಿಯಿಂದಿನಿತಂ ಸಾಧಿಸಿ ಜೀವಸಿದ್ಧಿಯನಿದಂ ನಿಶ್ಚೈಸಿ (ಆದಿಪು. ೨-೨೨): ಉಳ್ಳುದನಲ್ಲದಿಲ್ಲೆನಲ್ಬಾರದು ಎಂಬ ನಿಷೇಧವಚನಮನೆ ಪಿಡಿದು ಜೀವಸಿದ್ಧಿ ಗೆಯ್ವೊಡೆ ಗಗನಕುಸುಮಮನತ್ಯಂತಾಭಾವಮಂ ನಿಷೇಧಮಾತ್ರದಿಂದ ಮುಂಟುಮಾಡಲಕ್ಕುಮೆ (ಶಾಂತಿಪು. ೮-೧೩೮ ವ). [ ಜೀವ + ಸಿದ್ಧಿ ]

**ಜೀವಸ್ಥಾನ** (ನಾ). ೧. ಕೀಲು; ಸಂಧಿಬಂಧ ; ಸಂಧಿ. ೨. ಮರ್ಮಸ್ಥಳ ; ಮರ್ಮಾಂಗ ; ಆಯ : "ಜೀವಸ್ಥಾನಂ, ಮರ್ಮ – ಈ ೨ ನೆಱಂ" (ಹಲಾಯು. ೮೭-೩೭೫). ೩. [ಜೈನ] ಜೀವದ ಲಕ್ಷಣಗಳನ್ನು ಹೇಳುವ ಪ್ರಕಾರ (?): ಗುಣಸ್ಥಾನ ಜೀವಸ್ಥಾನ ಮಾರ್ಗಣಾಸ್ಥಾನಂಗಳುಮಂ . . . ಕೇಳ್ದು (ಜಾವುಂಪು. ೭೪). [ ಜೀವ + ಸ್ಥಾನ ]

**ಜೀವಸ್ಫೂರ್ತಿ** (ನಾ). ಚೈತನ್ಯದ ಮಿಡಿತ,–ಸ್ಫುರಣ,–ಉತ್ಸಾಹ : ಈ ಮಣ್ಣಿನ ಮರೆಯೊಳೆಂಥ ಜೀವಸ್ಫೂರ್ತಿಯಡಗಿದೆ ಇದರ ಒಂದು ಕಣಕಣವೂ ಹೊಸಸೃಷ್ಟಿಗೆ ತೊಡಗಿದೆ (ನೆಲಮು. ೯-೨೦). [ಜೀವ+ಸ್ಫೂರ್ತಿ]

**ಜೀವಸ್ಮೃತಿ** (ನಾ). ಜೀವನದ ನೆನಪು : ಜೀವನದ ಘಟನೆಗಳನ್ನು ನೆನಪಿ ನಿಂದ ಬರೆದಿಟ್ಟ ಬಖೈರು: ಬಾಬರ್ ತನ್ನ ಜೀವಸ್ಮೃತಿಗಳಲ್ಲಿ ಬಿಹಾಜದ ನನ್ನು ಸ್ಮರಿಸುತ್ತಾ ಅವನನ್ನು 'ಮಹಾಕಲಾವಿದ' ನೆಂದು ಕರೆದಿದ್ದಾನೆ (ಭಾರದ. ೫೭೮). [ ಜೀವ + ಸ್ಮೃತಿ ]

**ಜೀವಹತಿ** (ನಾ). ಪ್ರಾಣಿವಧೆ ; ಪ್ರಾಣಿಗಳನ್ನು ಕೊಲ್ಲುವಿಕೆ ; ಜೀವ ಹಿಂಸೆ : ಆ ಪುರದ ತೆಂಕವಂಕದೊಳಾಪೊತ್ತುಮನೇಕ ಜೀವಹತಿ ತನಗೆ ಸುಖೋದ್ದೀಪನಮೆನಿಸುವ ಪಾ ಪ ಕ ಳಾ ಪ ಂ ಡಿ ತೆ ಚಂಡಮಾರಿದೇವತೆ ಯಿರ್ಪಳ್ (ಯಶೋಚ. ೦-೭). [ ಜೀವ + ಹತಿ ]

**ಜೀವಹಾನಿ** (ನಾ). ಜೀವದ ನಾಶ : ಪ್ರಾಣಹಾನಿ: ಯುದ್ಧದ ಪರಿಣಾಮ ವೃಥಾ ಜೀವಹಾನಿ (ರೂಢಿ). [ ಜೀವ + ಹಾನಿ ]

**ಜೀವಹಾಲೆ** (ನಾ). ಔಷಧಿಗಾಗಿ ಬಳಸುವ ಒಂದು ಬಗೆಯ ಬಳ್ಳಿ : "ಜೀರಕಃ – ಜೀವಹಾಲೆ" (ಓಷಧಿ. ೬೨) : ಜೀ ವ ಹಾ ಲೇ ಬ ಳ್ಳಿ, ಪಲಕೀರೆಸೊಪ್ಪು (ಮೃಡಿಗಿ. ೪೪-೮೭೦). [ ? ]

**ಜೀವಹಿಂಡು** (ಕ್ರಿ). ಬಹಳ ತೊಂದರೆ ಕೊಡು : ಅಯ್ಯೋ ಈ ಶಕ್ಕತೆಯೇ ಜೀವಹಿಂಡುತ್ತಿದೆಯಲ್ಲ (ಮೂರುದಾ. ೨೭೭) ; ಇದ್ದವರ ಜೀವಹಿಂಡುತ್ತ ಸತ್ತವರಿಗಾಗಿ ಮರುಗಬೇಡಿರಿ (ಜಟ್ಟಿಹೊ. ೭೪).
[ ಜೀವ + ಹಿಂಡು$_1$ (<ಪಿಂಡು$_1$) ]

**ಜೀವಹಿಂಸೆ** (ನಾ). = ಜೀವಹತಿ. [ ಜೀವ + ಹಿಂಸೆ ]

**ಜೀವಳ** 'ಜೀವಲ' ನೋ.

**ಜೀವಾಂತ** (ನಾ). ಬಾಳಿನ ಕೊನೆ ; ಜೀವಿತದ ಅಂತ್ಯ ; ಮರಣ.
[ ಜೀವ + ಅಂತ್ಯ ]

**ಜೀವಾಂತಕ** (ನಾ). ೧. ಹಕ್ಕಿಗಳನ್ನು ಹಿಡಿಯುವವನು ; ಬೇಡ. ೨. ಕೊಲೆಗಡುಕ ; ಕಟುಕ ; ಹಿಂಸಕ. [ ಜೀವ + ಅಂತಕ ]

**ಜೀವಾಕರ್ಷಣ** (ನಾ). ಪ್ರಾಣವನ್ನು ಸೆಳೆಯುವಿಕೆ ; ಕೊಲ್ಲುವಿಕೆ : ಕುರುಕುಲಜೀವಾಕರ್ಷಣಪರಿಣತಮಿದು ಕಾಳಹಸ್ತಮಲ್ಲದೆ ಪರಮೇಶ್ವರಿ ಕೇಶಹಸ್ತಮಕ್ಕುಮೆ (ಗದಾಯು. ೦-೭೭). [ ಜೀವ + ಆಕರ್ಷಣ ]

**ಜೀವಾಕ್ಷರ** (ನಾ). ಸ್ವರಾಕ್ಷರ; ಸ್ವರ: ವರ್ಣಮಾಲೆಯಲ್ಲಿ ಸ್ವರಾಕ್ಷರಗಳನ್ನು ಜೀವಾಕ್ಷರಗಳೆಂದೂ ಅಚ್ಚುಗಳೆಂದೂ ಕರೆಯುತ್ತಾರೆ (ಸಂಕೋಧ. ೦೪).
[ ಜೀವ + ಅಕ್ಷರ ]

**ಜೀವಾಚರಣ** (ನಾ). [ಜೈನ] ಜೀವವು ಒಂದು ಜನ್ಮದಿಂದ ಇನ್ನೊಂದು ಜನ್ಮಕ್ಕೆ ಚಲಿಸುವುದು : ಸಂತಾನಕ್ರಮದಿಂದಮಾಗತ ಜೀವಾಚರಣಕ್ಕೆ ಗೋತ್ರಮೆಂಬ ಸಂಜ್ಞೆಯಕ್ಕುಂ (ಗೊಮ್ಮಸಾ. ೨-೮). [ಜೀವ + ಆಚರಣ]

**ಜೀವಾಚ್ಛಾದಿಕ** (ನಾ). ಜೀವನಿಗೆ ತನ್ನ ಸ್ವರೂಪವು ಕಾಣದಂತೆ ಮುಂತ್ತಿಕೊಂಡಿರುವ ಆವರಣ ; ಮಾಯೆ : ಜೀವಾಚ್ಛಾದಿಕವು ನಾಶವಾದರೆ ಜೀವನ ಸ್ವರೂಪವು ಕಾಣುವುದು (ಹಸಾರ. ೯-೧೪ ಟೀಕು). [ ಸಂ. ]

**ಜೀವಾಣು** (ನಾ).=ಜೀವಕಣ : ಅವನಿಗೆ ಜೀವಕೋಶ ಮತ್ತು ಜೀವಾಣುಗಳ ಬಗ್ಗೆ (Cytology) ವಿಶೇಷ ಆಸಕ್ತಿ (ಸಸ್ಯಕ. ೭೭) ; ನಮ್ಮ ಶರೀರದಲ್ಲಿಯೇ ಅಸಂಖ್ಯಾತ ಜೀವಾಣುಗಳಿಂದ ಕೂಡಿದ ಸಣ್ಣಪುಟ್ಟ ಶರೀರಗಳಿವೆಯೆಂದು ಹೇಳಲುಪಕ್ರಮಿಸಿರುತ್ತಾರೆ (ಜೀವಾತ್ಮ. ೧೨೫). [ ಜೀವ + ಅಣು ]

**ಜೀವಾತು** (ನಾ). ೧. ಜೀವನ ; ಬಾಳು ; ಬದುಕು. ೨. ಆಹಾರ. ೩. ಅನ್ನಾಂಗ; ಜೀವಸತ್ತ್ವ : ಜೀವಾತು (Vitamin) ಸತ್ವವು ಶರೀರವನ್ನು ರೋಗರಹಿತವಾಗಿ ಮಾಡುವುದಕ್ಕೂ ಅದರ ಚಟುವಟಿಕೆಗೂ ಅವಶ್ಯವಾದುದು (ಬಾಲಪ್ರ. II, ೬೨೭) ; ಜೀವಾತುಗಳನ್ನು ಸಂರಕ್ಷಕ ಆಹಾರಗಳೆಂದು ಹೇಳಬಹುದು (ಆರುಸಾ. ೫೭). ೪. ಪ್ರಾಣವನ್ನು ಉಳಿಸುವ ಔಷಧ; ಬದುಕಿಸುವ ಔಷಧ; ಸಂಜೀವಿನಿ: "ಸಂಜೀವಿನೀ, ಜೀವಾತುಃ, ಜೀವನೌಷಧಂ—ಬದುಕಿಸುವ ಮದ್ದು, ಸಂಜೀವನ ಮದ್ದು" (ಸಿದ್ಧಾಂತಿ. ೨೩೪) ; ದುರಿತವ್ರಾತ ವಿನಾಶಹೇತು ದಿವಿಜವ್ಯೂಹೈಕ ಜೀವಾತು (ವಸ್ತ್ರಪಂ. ೧೧-೭೫). [ ಸಂ. ]

**ಜೀವಾತುಮ** (ನಾ). = ಜೀವಾತ್ಮ : ಜವನಿಕೆಯೋ ಜೀವಾತುಮನ ಜಂಜಡಕೆ ಧ್ಯಾನವೋ ಮೋಕ್ ಧ್ಯೇಯವೋ . . . ಎನಲಾಯ್ತು ಚಿತ್ತದ ಶುದ್ಧಿಯರ್ಜನನ (ಕುಪ್ಪಾಅ. ೫-೭) ; ವಿಗತಜೀವಾತುಮನನಿನಿಯನಂ ನಡುಮನೆಯೊಳಿರಲೊಯ್ದು ಬೈತು ಕೋಣೆಯೊಳು ಕದಹಂ ಸಾರ್ಚಿ (ಸೌಂದಪು. ೦೭-೪೭). [ <ಸಂ. ಜೀವಾತ್ಮನ್ ]

**ಜೀವಾತ್ಮ** (ನಾ). ಪ್ರತಿಯೊಂದುಂ ಜೀವಿಯ ಶರೀರದಲ್ಲಿರುವ ಚೈತನ್ಯ ವಸ್ತು; ಪ್ರಾಣ: ಜೀವಾತ್ಮ ಅಂತರಾತ್ಮನ ಸುದ್ದಿಯ ಬೆಸಗೊಂಬರೆ ಹೇಳಿಹೆ (ಬಸವ. ೯೨೭) ; ತನು ನಾಲ್ಕುಟಲಿ ಜೀವಾತ್ಮ ನೀವೆಮಗೆ (ಕುಪ್ಪಾವಿ. ೦-೯) ; ತಪ್ತಾಯಃಪಿಂಡದಂತೆ ದೇಹಾದಿಗಳೊಡನೆ ತನ್ನ ಸಂಬಂಧದಿಂ ಸಕಲ ಸಂಸಾರವ್ಯವಹಾರಮುಳ್ಳಾತನೇ ಜೀವಾತ್ಮನು (ವಿವೇಕ. ೨೪); ಜೀವಾತ್ಮನು ಚೈತನ್ಯ ಸ್ವರೂಪಿ (ಭಾರದ. ೧೫೦); ಪರಮಾತ್ಮನು ಅಷ್ಟಮೂರ್ತಿಯೆಂದು ಅನುಭವಿಗಳು ಹೇಳುತ್ತಾರೆ. ಪೃಥಿವಿ . . . ಜೀವಾತ್ಮ—ಇವು ಅವನ ಎಂಟು ಅವಯವಗಳು (ಶಕ್ತಿವಿ. ೩೭). [ ಸಂ. ಜೀವಾತ್ಮನ್ ]

**ಜೀವಾನುಕಂಪಿ** (ನಾ). ಪ್ರಾಣಿಗಳಲ್ಲಿ ಕರುಣೆ ತೋರುವವನು : ಸಾವಂ ತಿಳಿಯದೆ ಬಟಿದೆ ಗಾವದಿಗೆಲಸಕ್ಕೆ ಯೋಗ್ಯನಾದಂ ಭಕ್ತಂ ಜೀವಾನುಕಂಪಿಯಾಗದೆ ಧಾವತಿಗೊಳಗಾದನು (ಹಮ್ಮೀರ. ೬-೪೯).
[ ಸಂ. ಜೀವಾನುಕಂಪಿನ್ (ಜೀವ + ಅನುಕಂಪಿನ್) ]

**ಜೀವಾಪಹಾರ** (ನಾ). ಪ್ರಾಣದ ಅಪಹಾರ; ಜೀವಹಾನಿ : ನೀ ಪತಿವ್ರತೆ ನಿನ್ನ ಖತಿ ಜೀವಾಪಹಾರವು ತಮಗೆ (ಕುಪ್ಪಾಗ. ೧೧-೬೫).
[ ಜೀವ + ಅಪಹಾರ ]

**ಜೀವಾಭಿಲಾಷ** (ನಾ). ಬದುಕುವ ಆಸೆಯುಳ್ಳವನು : ಮೈಮುಚಿದ ಮಾರಿಯು ಮುಸುಕನುಗಿವುದು ಬುದ್ಧಿಯೋ ಜೀವಾಭಿಲಾಷರಿಗೆ (ಕುಪ್ಪಾಕ. ೯-೭). [ ಸಂ. (ಜೀವ + ಅಭಿಲಾಷ) ]

**ಜೀವಾವಧಿ** (ನಾ). ಜೀವಿತದ ಪೂರ್ಣಕಾಲ ; ಇಡಿಯ ಜೀವಮಾನ : ಜೀವಾವಧಿ ಸುಖವಾಗಿರುವಂತೆ ಈ ಹಣವನ್ನು ನಿನಗೇ ಕೊಡುತ್ತೇವೆ ಎಂದು ಹೇಳಿದನು (ಒಡಕ. ೧೭) ; ಮರಣ, ಜೀವಾವಧಿಯ ಗಡೀಪಾರು . . . ಕಾರಾಗಾರವಾಸದಿಂದ ದಂಡನೀಯವಾದ ಅಪರಾಧಗಳ ವಿಚಾರಣೆಗಾಗಿ (ಭಾಧಾನ. ೨೭೭). [ ಜೀವ + ಅವಧಿ ]

**ಜೀವಾಸ್ತಿಕಾಯ** (ನಾ). [ಜೈನ] ಐದು ಅಸ್ತಿಕಾಯಗಳಲ್ಲಿ ಒಂದು : ಜೀವಾಸ್ತಿಕಾಯಂ ಪುದ್ಗಲಾಸ್ತಿಕಾಯಂ ಧರ್ಮಾಸ್ತಿಕಾಯಂ ಅಧರ್ಮಾಸ್ತಿಕಾಯಂ ಆಕಾಶಾಸ್ತಿಕಾಯಮೆಂಬ ಪಂಚಾಸ್ತಿಕಾಯ ನಿಕಾಯಮುಮಂ (ಸುಕುಮಾ. ೩-೩೯ ವ) ; ಅಸ್ತಿಕಾಯವೆಂದರೆ ಬಹುಪ್ರದೇಶವುಳ್ಳ ವಸ್ತುವೆಂದರ್ಥ. . .ಜೀವಾಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಆಕಾಶಾಸ್ತಿಕಾಯ, ಪುದ್ಗಲಾಸ್ತಿಕಾಯ ಎಂದು ವ್ಯವಹಾರವಿರುವುದು (ಹಿಂದಸಾ. ೮೦). 'ಅಸ್ತಿಕಾಯ' ಪರಾ.
[ ಜೀವ + ಅಸ್ತಿಕಾಯ ]

**ಜೀವಾಳ** (ಗು). ೧. ಪ್ರಾಣದಿಂದ ಕೂಡಿರುವ; ಜೀವದಿಂದ ಕೂಡಿರುವ. (ನಾ). ೨. ಜೀವದಾಯಿಯಾದುದು : ಸೂರ್ಯನುದಯ ತಾವರೆಗೆ ಜೀವಾಳ. ಚಂದ್ರಮನುದಯ ನೆಯ್ದಿಲೆಗೆ ಜೀವಾಳ. ಕೂಪರ ಠಾವಿನಲ್ಲಿ ಕೂಟ ಜೀವಾಳ. ಒಲಿದ ಠಾವಿನಲ್ಲಿ ನೋಟ ಜೀವಾಳವಯ್ಯಾ. ಕೂಡಲ ಸಂಗನ ಶರಣರ ಬರವೆನಗೆ ಪ್ರಾಣ ಜೀವಾಳವಯ್ಯಾ (ಬಸವ. ೩೬೬). ೩. ಹುರುಳು : ಸತ್ವ ; ಸಾರ : ಆತುಕೋ ಛಾಯವನು ನೀ ನಿರ್ಭೀತ ರಣರಂಗದೊಳು ವೀರರ ಜಾತಿಯುಳ್ಳಿ ಜೀವಾಳವುಳ್ಳವನೆಂಬುದೀ ಲೋಕ (ತೊರರಾ. ೬-೨೩-೦೭) ; ಗಾದೆಗಳ ಹಾಗೆ ಹರಡಿದ ಮಾತುಗಳಲ್ಲಿ ಬಹುಶಃ ನಾವು ಒಂದು ಸಂಸ್ಕೃತಿಯ ಜೀವಾಳವನ್ನು ಕಂಡುಕೊಳ್ಳಲವಕಾಶವುಂಟು (ಭಾರದ. ೪೦೫) ; ತೋರಿ ಮರೆಯಾಗುವ ವಾಚ್ಯಾರ್ಥಗಳ ಹಿಂದೆ ಇರುವ ರಸದರ್ಶನವೇ ಕಾವ್ಯದ ಜೀವಾಳ (ಸೌಂದಸ. ೧೦೨) ; ಸಿಗಲೊಲ್ಲಿ ಬೇಕು ನೀ ನನಗ ಜೀವ ಜೀವಾಳಾ ರಾಜಘನನೀಳಾ (ನಾದಲೀ. ೪೭-೨೩). ೪. ಮರ್ಮ; ರಹಸ್ಯ: ನಾವೊಂದು ಮಹಾಕೃತಿಯನ್ನು ತೆಗೆದುಕೊಂಡು ಅದರ ವೈಯಕ್ತಿಕ ಜೀವಾಳದೊಳಕ್ಕೆ ಸಾಧ್ಯವಾದಷ್ಟೂ ಪ್ರವೇಶಿಸುತ್ತೇವೆ (ಸಾಹಿಪ್ರ.೧೨); ಒಂದು ದಿನ ನನ್ನೊಳಗೆ ಹುದುಗಿರುವ ಜೀವಾಳವನು ನಾನು ಕಾಣಲಿಹುದು (ನಲಮು. ೯೨-೪). ೫. ತಂಬೂರಿ ಮೊದಲಾದ ವಾದ್ಯಗಳ ತಂತಿಗೆ ಮಣೆಯ ಹತ್ತಿರ ಜೀರು ಬರುವುದಕ್ಕಾಗಿ ಸೇರಿಸಿದ ನೂಲಿನ ಎಳೆ : ಜೀವಾಳವನ್ನು ಕಚ್ಚಿಸಿದ ಹೊರತು ನಾದವು ಇಂಪಾಗುವುದಿಲ್ಲ (ನಗೆಗ. ೩೩) ; ಸಾಹಿತ್ಯಸಂಸ್ಕಾರವಿಲ್ಲದ ಸಂಗೀತ ಜೀವಾಳವಿಲ್ಲದ ತಂಬೂರಿಯ ತಂತಿಯಂತೆ ಸೊರಗಿ ಹೋಗುವುದು (ಜಗದಾ. ೬೫). ೬. [ಸಂಗೀತ] ಆರು ಬಗೆಯ ನಾದಕಟ್ಟುಗಳಲ್ಲಿ ಒಂದು : ವೀಣೆಯ ನಿಶ್ಚಣಿಗೆಯಂತೆ . . . ಎಂಟು ಲಕ್ಷ ಜೀವಾಳದಲ್ಲಿ ಅಡಗಿ ಆ ಜೀವಾಳ ನಾದಕ್ಕೆ ಅರಸಾಗಿ (ಪ್ರಭೂಲಿಂಗ. ೯೭) ; ಬಿರಟೆ ಚಕ್ಕು ಸನ್ನೆ ಬಿಗಿ ಜಬ್ಬು ಜೀವಾಳವೆಂಬಾಱು ಬಗೆಯಾದ ನಾದಕಟ್ಟುಗಳಿಂ ತಂತ್ರಿಗಳಂ ವರಿಸಿ (ವಿವೇಕ. ೨೩೭) ; ಶ್ರುತಿಕಾಷ್ಠ ಜೀವಾಳದಿಂ ಸೊರವಾತಿನಿಂ ಕಟ್ಟಿ ಬಾರಿಸಿದೊಡೊಳ್ನುಡಿಯ ಪುರುಷನೊಳ್ ನುಡಿವ ದಾರದ ತೆಱದಿ ರಂಜಿಸುವ ಕರವಮಾ ಪುವಾಳದಿಂದೆಸೆವ ದಂಡಿಗೆವಿಡಿದು ಜಾಣ ಗಾಣಂ ಪಾಡಿದಂ (ಭಾವಚಿಂ. ೭-೭).

ಜೀವಾಳಕಟ್ಟು = ನಾದವನ್ನು ಹೆಚ್ಚಿಸಲು ಶ್ರುತಿಮಾಡು ; ತಂತಿಗಳಿಗೆ ಜೀರು ಬರುವಂತೆ ಮಾಡು : ತಂತಿಗಳ ಧ್ವನಿ ಸುಶ್ರಾವ್ಯವಾಗಿ . . .ಸ್ವಯಂಭು ಸ್ವರಗಳೂ ಕೇಳಿ ಬರುತ್ತವೆ. ಈ ರೀತಿಯ ನಾದವರ್ಧನ ಕ್ರಮಕ್ಕೆ ಜೀವಾಳಕಟ್ಟುವುದು ಎಂದು ಹೆಸರು (ಸಂಗೀಶಂ. ೧೦೨).
[ <ಸಂ. ಜೀವಲ./ಮರಾ. ಜಿವ್ಹಾಳಾ ]

**ಜೀವಿ₁** (ಗು). ೧. ಬದುಕಿರುವ; ಚಲನೆಯುಳ್ಳ ; ಜೀವಂತವಾಗಿರುವ. (ನಾ). ೨. ಬದುಕಿರುವ ಪ್ರಾಣಿ ; ಚೈತನ್ಯವುಳ್ಳ ಜೀವ ; ಜಂತು : ಪಸರಿಸಿತು ಕಟಕಂ ಬದುಕಿತಾ ಸರ್ವಜೀವಿಗಳುಂ (ಬಸಪು. ೨೮-೬೦) ; ಒಂದೇ ಬಗೆಯ ಜೀವಿಗಳಲ್ಲಿ ವ್ಯತ್ಯಾಸಗಳಿರುತ್ತವೆ (ಕೀಟಬಿ. ೧).
[ ಸಂ. ಜೀವಿನ್ ]

**ಜೀವಿ₂** (ನಾ). ಒಂದು ಬಗೆಯ ಸಸ್ಯ : ಪೀಲಾಲದ ಮರ, ಕಿರಿಗೋಳಿ, ಜೀವಿ ಪಿನಪಾಲ (ವೃಜಿಗಿ. ೩೭-೭೨೪). [ ? ]

**ಜೀವಿಕ** (ನಾ). = ಜೀವಿಕೆ ೨: ವಿದ್ಯಾವಂತರು ತಮ್ಮ ಪ್ರೌಢಿಮೆಯನ್ನು ತೋರಿಸಿ ಜೀವಿಕಗಳನ್ನು ಸಂಪಾದಿಸಿಕೊಳ್ಳಲು . . . ಹೋಗುತ್ತಿದ್ದರು (ಅದೂಟ. ೧೭೨). [ ಸಂ. ಜೀವಿಕಾ ]

**ಜೀವಿಕುಡಿ** (ನಾ). ಜೀವಾಂಕುರ ; ಜೀವದ ಮೊಳಕೆ : ತಡ್ಡಿನ (ವೃಷಣ) ಪದರಗಟ್ಟಿದ ಜೀವಿಕುಡಿಯು (ಜರ್ಮಿನಲ್), ಮೇಲ್ಪೊರೆಯಲ್ಲಿರುವ ಜೀವಗಳು ತೆರತೆರನಾಗಿರುತ್ತವೆ (ಕವಿಕೋ. I, ೫೩). [ ಜೀವಿ₁ + ಕುಡಿ₂ ]

**ಜೀವಿಕೆ** (ನಾ). ೧. ಜೀವನ ; ಬಾಳು ; ಬದುಕು ; ಜೀವಿಸಿರುವಿಕೆ : ಹಸುಗಳ ಹಾಲನ್ನು ಕುಡಿದುಕೊಂಡು ತನ್ನ ಜೀವಿಕೆಯನ್ನು ಸಾಗಿಸಿದನು (ನೀಗಟ್ಟು. ೪೦). ೨. ಜೀವನೋಪಾಯ ; ವೃತ್ತಿ ; ಉಪಜೀವನ : ಉಪನಯನಮಾಡಿ ವೇದಾಧ್ಯಯನವನ್ನು ಮಾಡಿಸುವವನು ಬ್ರಾಹ್ಮಣನು. ಅವನಿಗೆ ಅದು ಜೀವಿಕೆ (ಹಿಂದಸಾ. ೧೫೮) ; ಜೀವಿಕೆಯನ್ನು ಸಂಪಾದಿಸುವ ಕಡೆಗೆ ಮನಸ್ಸುಕೊಟ್ಟರೆ ಒಳಮನೆಯಲ್ಲಿ ಕೆಲಸ ನಡೆಯುವುದಿಲ್ಲ (ನಿಬಂಧ. II, ೧೯೬). [ ಸಂ. ಜೀವಿಕಾ ]

**ಜೀವಿತ** (ಗು). ೧. ಬದುಕಿದ ; ಬಾಳಿದ. ೨. ಜೀವಿಸಿರುವ ; ಬದುಕಿರುವ. ೩. ಪ್ರಾಣ ; ಜೀವ : "ಅಸವಃ, ಜೀವಿತಂ, ಪ್ರಾಣಾಃ, ಜೀವಃ, ಜೀವಾ—ಈ ೫ ಪ್ರಾಣದ ಪೆಸರ್" (ಹಲಾಯು. ೨೨-೧೩೪) ; "ಜೀವಿತವಸು ಪ್ರಾಣ ಜೀವವೆನೆ ಪ್ರಾಣವಕ್ಕು" (ಮಂಗರಾ. ೯-೨೯) ; ಅಜಿಸುತ ಕೊಂಡು ಕೊಳ್ಳಲು ಬಂದೆನೆಲವೋ ನಿನ್ನ ಜೀವಿತವ (ಕೌಶಿರಾ. ೩೩-೨೭). ೪. ಬಾಳು; ಬದುಕು : ತನ್ನೊಂದು ಜೀವಿತಕೆ ರಾಜಪುತ್ರಿಯ ಸರ್ವಸುಖಮಾಗೆ ಮರೆತಳನ್ನಾಯಮಂ (ಶ್ರೀರಾಮಾ. ೨೪-೬೨೪). ೫. ಜೀವನೋಪಾಯದ ಸಾಧನ,—ವೃತ್ತಿ; ಉಪಜೀವನಕ್ಕಾಗಿ ನೀಡಿದ ಕೊಡುಗೆ: ಅಲ್ಲಿ ಮಹಾಜನಮಾನ್ಯರೆದು ನಿಗಳ ಬಾಟ್ಟನ್ನು ಜೀವಿತಂ ಬೇಡಿಕೊಳ್ಳಿಮೆನ್ನೊಡೆ (ಸೌಇಇ. IX-l, ೪೭-೪; 800); ಗಾಯಕ ಸತ್ತ್ರ ಪ್ರತಿಹಾರ ವೃತ್ತಪಾಠಕತತಿ ಗಿತ್ತನಗ್ಗಳದ ಮಾವಿನ ಪೂವಿನಂಕುರದ ಮಾವಿನೊಳ್ಮಿಡಿಯು ಜೀವಿತಮಂ ಮದನಂ ಬಸಂತದೊಳ್ (ಶಾಂತಿಪು. ೭ ೦೨೯) ; ಶ್ರೀ [ಜೋತೀ]ಶ್ವರ ದೇವ ರಂಗಭೋಗಕ್ಕಂ ಸರ್ವ್ವಪ್ರಜೆ ಪೂಜಾರಿ ಬ್ರಾಹ್ಮಣನ ಜೀವಿತಕ್ಕಂ ಜೀರ್ಣ್ನೋದ್ಧಾರಕ್ಕಂ . . . ಸರ್ವ್ವಮಾನ್ಯವಾಗಿ ಬೋಪಂಗೆ ಬಿಟ್ಟ ಮತ್ತ ೨ (ಸೌಇಇ. XX, ೬೭-೦೭; 1107). ೬. ಸಂಬಳ; ವೇತನ; ತಲುಬು : ಕೊಟ್ಟ ಜೀವಿತಕ್ಕೆ ಒಲ್ಲೆಸುವಂಗೆ ರಾಜ್ಯದ ಕಟ್ಟೇಕೆ (ಮೋಣಮಾ. ೨-೫) ; ಧನವದೆಲ್ಲಂ ತನ್ನಿಮಿತ್ತದೊಳಿನಿತು ಸವೆದೊಡಂ ಪರಿಜನಕೆ ಜೀವಿತವಿಕ್ಕಲಿಲ್ಲದೆ (ಬಸವು. ೧೬-೧೬); ಕೊಂಡಿಹೆವು ಜೀವಿತವ ಕೆಲರಲಿ ಉಂಡು ತೀರಿತು (ಕೌಶಿರಾ. ೩೩-೨೭). [ ಸಂ. ]

**ಜೀವಿತಂಬಡೆ** (ಕ್ರಿ). ಸಂಬಳವನ್ನು ಪಡೆ : ವೇತನವನ್ನು ಪಡೆ : ಜೀವಿತಂಬಡೆದ ಬಂಟನಂತೆ ರಾಗಿಸಿ (ಧರ್ಮಾಮೃ. ೮-೨೦೫).
[ ಜೀವಿತ + ಪಡೆ₁ ]

**ಜೀವಿತಕಾಲ** (ನಾ). ಬದುಕಿರುವ ಕಾಲ ; ಜೀವನದ ಪೂರ್ಣ ಅವಧಿ ; ಆಯುಷ್ಯ : "ಆಯುಸ್, ಜೀವಿತಕಾಲಃ — ೨. ಆಯುಷ್ಯದ ಹೆಸರು, ಬದುಕಿರುವ ಕಾಲ" (ಸಿದ್ಧಾಂತಿ. ೨೩೪). [ ಜೀವಿತ + ಕಾಲ ]

**ಜೀವಿತಗಾಱ** (ನಾ). ಜೀತಗಾರ ; ಸೇವಕ ; ಊಳಿಗದವನು : ನೂರು ಹೊನ್ನು ಪರಿಯಂತರದ ಜೀವಿತಗಾಱರಿಗೆ ಪ್ರತಿಜನ ಒಂದಕ್ಕಂ ಪಣ ಒಂದು ನೂಱು (ಎಕ. V, ಬೇಲೂರು. ೭೫-೧೩೦; 1382). [ ಜೀವಿತ + – ಕಾಱ ]

**ಜೀವಿತಾತ್ಯಯ** (ನಾ). ಪ್ರಾಣಬಿಡುವುದು ; ಸಾವು ; ಜೀವನದ ಮುಕ್ತಾಯ ; ಪರಿನಿಷ್ಕ್ರಮಣ : ಪರಮತಪಃಪ್ರದೀಪ ಸ್ನೇಹಭೂತ ಜೀವಿತಂ ನಭಸ್ತಿಲಕಾಚಲದೊಳುಪಜೀವಿತ ಪ್ರಾಯೋಪಗಮನವಿಧಾನ ನಾತ್ಮೀಯ ಜೀವಿತಾತ್ಯಯದೊಳ್ (ಚಂದ್ರಪು. ೯-೪೫ ವ).
[ ಜೀವಿತ + ಅತ್ಯಯ ]

**ಜೀವಿತಾಶಯ** (ನಾ). ಸಮುದ್ರ (?) : ವಿವಾಹಗೇಹದಂತೆ ಸಂಗತಮಂಗಲಪರಿಕರಮುಂ ಜೀವಿತಾಶಯದಂತತ್ಯಾಯತಮುಂ (ಆದಿಪು. ೧೩-೪೬ ವ). [ ಜೀವಿತ + ಆಶಯ ]

**ಜೀವಿತೇಶ** (ನಾ). ೧. ಅಧಿಪತಿಯಾದವನು ; ಬಾಳಿನ ಒಡೆಯ ; ಜೀವನದ ಒಡೆಯ. ೨. ಇನಿಯ ; ಪತಿ ; ಯಜಮಾನ ; ನಾಥ : ಉಪಾಕಾಮಿನೀಜೀವಿತೇಶಂ . . . ರಕ್ಷಿಸುಗೆ (ಜಗವಿ. ೧-೩); ಮಜ್ಜೀವಿತೇಶ ನಿಂದೆನ್ನಂ ಕಾರಡವಿಯೊಳ್ ಬಿಟ್ಟು ಬಾರೆಂದನೇ (ರಾಮಾಶ್ವ. ೩೫-೩೦).
[ ಜೀವಿತ + ಈಶ ]

**ಜೀವಿತೇಶ್ವರ** (ನಾ). ೧. = ಜೀವಿತೇಶ ೨ : ಅದಱಿಂದಂ ಬೇಗಂ ಪೋಗಿ ತಂದಿರ್ವರುಂ ಮದೀಯ ಜೀವಿತೇಶ್ವರನಂ ಕಾಯಲ್ವೇಳ್ಕುದು (ಶಾಂತಿಪು. ೬-೩೪ ವ) ; ಭೂಸುತೆ ತನ್ನ ಜೀವಿತೇಶ್ವರನ ನೆನೆದನಶನವ್ರತೆಯಾಗಿ ಕಳೆದಳೇಳ್ಪಗಲ್ಗಳಂ (ಶ್ರೀರಾಮಾ. ೩೨೪-೧೩೪). ೨. ಯಮ : ಜೀವಿತೇಶ್ವರ ಜೀವಮದರಾಜೀವಪೂರ್ಣವಿಭಾವರೀಶ ಗುಣಾವತಂಸ ಶುಭಾವಹ ಬಸವ (ಬಸವು. ೫೫-೧). [ ಜೀವಿತ + ಈಶ್ವರ ]

**ಜೀವಿತೇಶ್ವರಿ** (ನಾ). ಬಾಳಿನ ಒಡತಿ ; ನಲ್ಲೆ ; ಪ್ರಿಯೆ : ಜೀವಿತೇಶ್ವರೀ, ನನಗೆ ಅನುಜ್ಞೆಯನ್ನು ಕೊಡು ಹೋಗಿಬರುವೆನು (ಕವಿಕ. ೪೯).
[ ಜೀವಿತ + ಈಶ್ವರಿ ]

**ಜೀವಿಧರ್ಮ** (ನಾ). ಪ್ರಾಣಿಧರ್ಮ; ಜೀವದ ಸ್ವಭಾವ: ಪ್ರಕೃತಿಸಂಭವವಾದ ಗುಣಗಳಿಗೆ ಅಧೀನನಾಗಿ ಅವಶನಾಗಿ ಏನನ್ನಾದರೂ ಮಾಡುತ್ತಲೇ ಇರುವುದೇ ಜೀವಿಧರ್ಮ (ಆರ್ಯಧ. ೪೦). [ ಜೀವಿ₁ + ಧರ್ಮ ]

**ಜೀವಿಶುದ್ಧೀಕರಣ** (ನಾ). ಕ್ರಿಮಿಗಳು ಉಳಿಯದಂತೆ ಶುದ್ಧಗೊಳಿಸುವಿಕೆ: ಪೂತಿನಾಶಕ ವಸ್ತುಗಳನ್ನು ಚರ್ಮವನ್ನು ಜೀವಿಶುದ್ಧೀಕರಣ(Sterilization)ಕ್ಕಾಗಿ ಉಪಯೋಗಿಸಿದಾಗ ಈ ಜೀವಂತ ಕ್ರಿಮಿಗಳು ಸಾಯಬಹುದು (ಕಲರೋ. ೯). [ ಜೀವಿ₁ + ಶುದ್ಧೀಕರಣ ]

**ಜೀವಿಸು** (ಕ್ರಿ). ಬದುಕು ; ಜೀವಂತವಾಗಿ ಉಳಿ ; ಬಾಳು : ನಿಸದಂ ಕಪಿಂಜಲಂ ಜೀವಿಸುತಿರೆ ನಿನ್ನಲ್ಲಿಗೆಯ್ದದಿರಂ (ಕಾದಂಪೂ. ೯೪೭); ಓರೊಂದಂ ಕುಡುಗುಂ ದಶಾಂಗಸುರಭೂಜಂ ಬೇಟ್ಟುದಂ ಭೂತಲಕ್ಕಾರೇನಂ ಪಡೆದೆಂತು ಜೀವಿಸುವರ್ (ಪಂಚಾಮಾ. ೧-೯೦) ; ಜೀವಭಾವವ ಹಿಂಗಿ ಶಿವಭಾವದಿಂ ಜೀವಿಸಿಪ್ಪನಯ್ಯ (ಆದವ. ೨೦-೫೦) ; ಕೌರವ ಜೀವಿಸಲಿ ಮೇಣಳಿಯಲಿ ಮಗಿನ್ನಾವ ತೊಡಕಿಲ್ಲ (ಕುವ್ಯಾಕ. ೦-೧೨). [ ಜೀವ + – ಇಸು₃ ]

**ಜೀವಿಸುಹ** (ನಾ). ಬದುಕುವಿಕೆ ; ಬಾಳುವಿಕೆ : ಚಿತ್ರಮೆಂದುಂ ಸುಖಂ ಬಡೆಯುದು ಜೀವಿಸುಹವುಂ ನಂಬುಗೆಯಿಲ್ಲದುದು (ಪಂಚತಂ. ೧೩೩-೪).
[ ಜೀವಿಸು + – ಹ₀ ]

**ಜೀವು** 'ಚೀವು' ನೋ.

**ಜೀವುಂಡಿಗೆ** (ನಾ). ಜೀವಿಗಳ ದೇಹದಲ್ಲಿ ಪರೀಕ್ಷಾರ್ಥವಾಗಿ ಕೊರೆದು ತೆಗೆದ ಚೂರು : ರೋಗಿಯಲ್ಲಿರುವ ಯಾವುದಾದರೂ ಅನುಮಾನ ಇರುವ ಬೆಳೆತದಿಂದ ಸಣ್ಣ ಚೂರನ್ನು ಪರೀಕ್ಷೆಗಾಗಿ ಕೊಯ್ದು ತೆಗೆದುಕೊಳ್ಳುವ, ಜೀವುಂಡಿಗೆಯ (ಬಯೊಪ್ಸಿ) ಪದಾರ್ಥವನ್ನು ಹಲವೇಳೆ ಹೀಗೆ ಮಾಡುವುದುಂಟು (ಕವಿಕೋ. I, ೫೪). [ ಜೀವ + ಉಂಡಿಗೆ₄ ]

**ಜೀವೆ** (ನಾ). ೧. ಬದುಕು ; ಜೀವನ. ೨. ಬಿಲ್ಲಿನ ಹೆದೆ; ಧನುಸ್ಸಿನ ದಾರ: "ಮೌರ್ವೀ, ಜ್ಯಾ, ಶಿಂಜಿನೀ, ಗುಣಃ, ಜೀವಾ—ಈ ೫ ಬಿಲ್ಲ ತಿರು" (ಹಲಾಯು. ೬೬-೩೦೨) ; ಚಾಪಲತಾಯೋಗಂ ಜೀವೆಯೊಳ್ . . . ಮಹಾಮಾತ್ರವರ್ತನಂ ಸೃಣಿಯೊಳಲ್ಲದಿಲ್ಲಮೆಲ್ಲಿಯುಂ (ಚಂದ್ರಪು. ೩-೯ ವ); ಸುಮನೋಬಾಣಮನಿಕ್ಷುಚಾಪಲತೆಯಂ ಭೃಂಗಾವಳೀ ಜೀವೆಯಂ . . . ಕಾಮನಾರಾಧಿಪಂ (ಅನಂಪು. ೨-೧೫) : ಕೋದಂಡದ ಜೀವೆಯು ನೀವಿ (ವರ್ಧಆ. ೭-೭). [ ಸಂ. ಜೀವಾ ]

**ಜೇಹಾಸ** (ನಾ). ಬಿಡಂವ ಬಯಕೆ ; ಬೇಸರ ; ಜುಗುಪ್ಸೆ : ತನಗೆ ತಾನೇ ಸಹಜದೊಳ್ ಸಂಜನಿಸದೇ ಜೇಹಾಸ ನರಕದವನೆಯಲಿ (ಗಗಜಾ. ೧೧-೩೨).
[ <ಸಂ. ಜಿಹಾಸಾ ]

**ಜೇಱ್** 'ಜೇಱು' ನೋ.

**ಜೇಱು, ಜೇರ್$_1$, ಜೇರು$_1$, ಜೇಱ್** (ಕ್ರಿ). ೧. ಚೀರು ; ಚೀತ್ಕಾರ ಮಾಡು ; ಕಿರಿಚು : ಸಾರು ಕೆಲಸಾರತ್ತಹೋಗುತ್ತರದ ನಾಯವೊಲು ಜೇ[ಪಾಠಾಂ. ಚೇ]ಱಿಕೊಳ್ಳದಿರೆನಲು ಬಳಿಕುಬ್ಬೇಱ್ ನಿಂದನು ಕಾಳಗಕೆ (ತೊರರಾ. ೬-೧೦-೫೭). ೨. ಕೀರಲಂಧ್ವನಿ ಮಾಡು : (ಶ). ೩. ಝೇಂಕರಿಸು: (ಶ). **ಜೇರ್$_1$:** ೩. 'ಜೇರಂಡೆ' ಪರಾ. **ಜೇರು$_1$ :** ೧. 'ಜೇರೇಳ್' ಪರಾ. **ಜೇಱ್ :** ೧. ವನನಿಧಿ ಪರೀತ ವಿಶ್ವಾವನಿಪತಿಯ ಮಹಾಪ್ರತಾಪದಿಂ ಜೇರ್ದಪಳೆಂಬಿನೆಗಂ ಛತ್ರಚ್ಛಾಯೆಯನಿನಿಸಗಲದೆ ರಾಜ್ಯಲಕ್ಷ್ಮಿ ಸಲೆ ನೆಲಸಿರ್ಪಳ್ (ಕಾದಂಪೂ. ೩೦೩); ತಾಪಿಸುವ ಕರ್ಮಿಗಳು . . . ಜೇ[ಪಾಠಾಂ. ಬೇ]ರ್ವನಿತು ದುಃಖದಿಂ ಬಳಲುವರ ನೋಡುತಿರ್ಪಾ ಪೊತ್ತು (ಸಿದ್ಧರಾ. ೮-೨೨). [ <ಕೀಱು$_1$ ]

**ಜೇಱುಂಡೆ, ಜೇರಂಡೆ** (ನಾ). ಜೇರ್ ಜೇರ್ ಎಂದಂ ಧ್ವನಿ ಮಾಡುವ ದುಂಬಿಯ ಜಾತಿಗೆ ಸೇರಿದ ಹುಳು : "ಭೃಂಗಾರಿ, ಝಿರಿಕೆ, ಚೀರಿ, ಝಿಲ್ಲಿಕೆ" (ನಾಚಿರಾ. ಶ). **ಜೇರುಂಡೆ:** "ಭೃಂಗಾರೀ–ಕೆಂಬಕ, ಭ್ರಮರಾರಿ, ಜೇರುಂಡೆ" (ಓಷಧಿ. ೧೦೩); ಸೆರೆ ಬಿದ್ದಿಹ ಕಾಲ ಹುಯಿಲಿಡುವುದೊ ಎನೆ ಜಿರ್ರನೆ ಜೀರುಂಡೆಯು ಮೇಳ (ಗಡೀಶ. ೨೮-೮). ಜೀರುಂಡೆಗಳ ಕೂಗು ಕಿವಿಗೆ ಚಿಟ್ಟುಹಿಡಿಸುತ್ತಿತ್ತು (ಮಲಮ. ೩). 'ಜೇರ್ದುಂಬಿ' ಪರಾ. [ <ಜೇಱು ]

**ಜೇಱೇಳು** 'ಜೇಱೇಱ್' ನೋ.

**ಜೇಱೇಱ್, ಜೇರೇಳ್$_2$, ಜೇಱೇಳ್** (ಕ್ರಿ). ೧. = ಜೇಱು ೧: "ಜೇಱೇಱ್ (ಜೇಱು + ಏಱ್)–ಧ್ವನಿವಿಕಾರೇ" (ಶಮಧಾ); ತನ್ನ ಬಲದ ಪದಾಭಿಘಾತದೊಳಂ ಕುಲಗಿರಿಗಳ್ ಜೇಱೇಱ್ದು ಪಾಱೇಱಿಯುಂ (ಪಂಪಭಾ. ೦೦-೩೦೨); ಈ ನಿಷ್ಠುರನಪ್ಪ ತಳಾಱನ ಕೈಯೊಳ್ ಕಡಿಗಂಡವಾಗೆ ಜೇಱೇಱಿ ಪೊಯ್ಸಿಕೊಂಡು ಸಾಯದೆ (ಧರ್ಮಾಮೃ. ೬-೯೪); ಮಗನೆ ಕಾದು ಕೊಳ್ಳೆಂದುಕರಂ ಜೇಱಿರ್ದು ನಭಕೆ ತಲೆ ಸಲೆ ಪಾಱಿ ಮಹೋಗ್ರ ಪ್ರತಾಪಿ ಸೈಂಧವನೆಚ್ಚಂ (ಬಂಹರಿ. ೧೨-೨೪); ಘನಕೋಪಾಟೋಪದಿಂ ಗರ್ಜಿಸಿದ ಮೃಗ ಪ್ರತಿಧ್ವಾನದಾ ವಜ್ರಪಾತಕ್ಕನಿತುಂ ಜೇಱೇಱ್ದು ಪಾಱುತ್ತ (ಶಾಂತೀಶ್ವ. ೩-೦೫). ೨. ಜಿರ್ರೆಂದಂ ಮೇಲೆ ಏಳು; ಸಶಬ್ದವಾಗಿ ನೆಗೆ: ನಡು ಕಡಿವೋಗಲ್ಕೆ ಜೇಱೇಱಿ ಮೂರ್ಧಂ ಕರವಾಳೊಳ್ಬಾಳ್ಪಳಂ ಚುತ್ತುರಿಯನುಗುಱಿ ಕಾದಿತ್ತು ಖಡ್ಗಿ ಪ್ರತಾನಂ (ಜಗವಿ. ೬-೫೭). **ಜೇರೇಳ್$_2$ :** ೨. ಕಬಂಧಂ ಕುಣಿದಾಡೆ ವೀರರ ಸಿರಂ ಜೇರೇಳೆ (ಪ್ರಅರಿ. ೧೯೪೩, ೨೯-೩೭ ; 1174). **ಜೇಱೇಳ್ :** ೧. ಸಿಡಿಲಂ ಜೇಱೇಳೆ ಹೊಯ್ವಂ ಬಿಡೆ ಬೆದರಿಸುವಂ ಸಿಂಗಮಂ (ಎಕ. VIII, ತೊರಬ. ೦೩೮-೩೦ ; 1145) ; ಪಂದಲೆಗಳನೆರ್ದೆಯಂ ಮೆಟ್ಟಿ ಜೇಱೇಳ್ವಿನಂ ಬೇರ್ಪಱಿವನ್ನಂ ಕಿಳ್ತು ಕಿಳ್ತಪ್ಪಳಿಸಿ (ರಸರ. ೪-೨೩೦). [ ಜೇಱ್ (<ಜೇಱು) + ಏಱ್$_1$ ]

**ಜುಂ, ಜುಮ್$_2$, ಜುಮು, ಜುಮ್ಮು, ಝೊಮ್ಮು** (ನಾ). ೧. ಮೈನವಿರೇಳುವಿಕೆ ; ರೋಮಾಂಚನ ; ಪುಳಕ. 'ಜುಂಗುಟ್ಟು' ಪರಾ. **ಜುಮ್$_2$ :** ೧. 'ಜುಮ್ಮೆನ್' ಪರಾ. ೨. ಶೈತ್ಯಾನುಭವ : (ಶ); ೩. ಗಾಯ ಅಥವಾ ಹುಣ್ಣಿನಿಂದ ಉಂಟಾಗುವ ಉರಿ : (ಶ). **ಜುಮು :** ೧. ನಲ್ಲೆಯ ಮೈಯೆಲ್ಲ ಹಿಗ್ಗಿನ ಮುಳ್ಳಿಗೆ ಸಿಕ್ಕಾಂಗ ಜುಮ್ ಜುಮು ರುಮುಜುಮು ಗುಂಗುಣು ದುಮುದುಮು (ಸಖೀಗೀ. ೫೧-೦೩). **ಜುಮ್ಮು :** ೧. 'ಜುಮ್ಮುದಟ್ಟು' ಪರಾ. **ಝೊಮ್ಮು :** ೧. ಬಿಱು ವನಿಯ ಕಣ್ಣಾಲಿಗಳ ಝೊಮ್ಮೆದ್ದ ರೋಮದ ಜಡಿವ ಬಿಡುದಲೆಯ (ಕುಮ್ಯಾಸ. ೨-೭೬).

**ಜುಂಕ** (ನಾ). ಒಂದು ಬಗೆಯ ವಾದ್ಯ : ಪಳವದ ತಿವಳಿಯ ಜುಂಕದ ವೊಳಸಿನ ಜೇಕಿರದ ಸಿವಿಱಿ ಸಿಟ್ಟಿನ ಲಯದಿಂದೆಡಬಲದೆ ಕುಣಿದರ್ ಕೆಲಬರ್ (ಅಜಿಪು. ೫-೩೨). [ ? ]

**ಜುಂಗ** (ನಾ). ಅನಂತನಗೊಂಡೆ ಸೊಪ್ಪು "ಯಕ್ಷಗಂಧಾ, ಭಗಲಾಂಡೀ, ಆವೇಗೀ, ವೃದ್ಧಧಾರಕಂ, ಜುಂಗಃ – ಇ ಅನಂತನಗೊಂಡೇ ಸೊಪ್ಪು" (ಸಿದ್ಧಾಂತಿ. ೦೨೬). [ ಸಂ. ]

**ಜುಂಗಿಸು** (ಕ್ರಿ). ಗುಂಜಾಡಂ ; ಎಳೆ ; ಜಗ್ಗಿಸಂ : ತನ್ನ ಸೆರೆಮನೆಯ ಕಬ್ಬಿಣದ ಸಲಾಕಿಗಳನ್ನು ಹಾಗೆ ಜುಂಗಿಸಾಡುವುದು . . . ಮರುಕವನ್ನು ತರುತ್ತದೆ (ಕುಡಳ. ೦೨೨). [ ಜುಂಗು$_1$ + –ಇಸು$_3$ ]

**ಜುಂಗು$_1$** (ಕ್ರಿ). ಎಳೆ ; ಜಗ್ಗು. 'ಜುಂಗಿಸು' ಪರಾ.
[ <ಗುಂಜು$_1$ ]

**ಜುಂಗು$_2$** (ನಾ). ೧. ತೆಂಗು, ಬಿದಿರು ಮೊದಲಾದಂವುಗಳಿಂದ ಕೀಸಿ ತೆಗೆದ ಎಳೆಗಳ ರಾಶಿ ; ನಾರಂ : ಅರ್ಧ ಜುಂಗು ತೆಗೆದ ತೆಂಗಿನಕಾಯ ಹಾಗೆ (ಹೊಸಕ್ಷ. ೧೭೫); ಪಾತ್ರೆಗಳನ್ನು ಜುಂಗಿನಿಂದ ಚೆನ್ನಾಗಿ ತಿಕ್ಕಿ ತೊಳೆ (ರೂಢಿ). ೨. ಶರೀರದ ಗುಪ್ತಭಾಗಗಳ ರೋಮಂ : (ಶ).
[ <ಗುಂಜು$_2$ ]

**ಜುಂಗು$_3$** (ನಾ). ಕಂಚಟ್ಟು ; ಗೊಂಚಲು : ತಿಂಗಳ ಕಣ್ಣದಿರ್ದೊಂಗಲ ಸಿರಿಯಂತಿಂಗಡಲಿನ ರಸದಂತೆ ರಂಗುವಡೆದ ಮಾಣಿಕದ ಮಂಜರಿಯ ಜುಂಗಿನಂತಿವೆ ನಿನ್ನ ಮಾತು (ರಾಮವಿ. ೦-೮೨).
[P ಇದು 'ಚುಂಗು' ಎಂಬುದರ ಅಪಲಿಖಿತವಿರಬಹುದು]

**ಜುಂಗುಟ್ಟು, ಜುಮುಂಗುಟ್ಟು, ಜುಮ್ಮುಗುಟ್ಟು** (ಕ್ರಿ). ೧. 'ಜುಂ' ಎನಿಸು ; ಮೈನವಿರೇಳಂ; ರೋಮಾಂಚನವುಂಟಾಗು : ಮೆಯ್ ರಕ್ತ ಜುಂಗುಟ್ಟಲದರ ಬಿಸಿ ತಾಕಿಹುದು (ಹೂಹಾದಿ. ೦೯-೦೨). **ಜುಮುಗುಟ್ಟು :** ೧. ಮೈ ಜುಮುಗುಟ್ಟುವಂತೆ ಮಾಡುವ ಕಟ್ಟುಕಥೆಯೊಂದನ್ನು ಬರೆಯು ವುದಕ್ಕೆ ಬೇಕಾದ ಸಾಮಗ್ರಿಗಳಷ್ಟು ದೊರೆಯುವುದರಲ್ಲಿ ಸಂದೇಹವಾವುದೂ ಇಲ್ಲ (ಜ್ಯೋತಿರ್ವಿ. ೧೫೭). **ಜುಮ್ಮುಗುಟ್ಟು :** ೨. ಹೆದರಿಕೆಯುಂಟಾಗು : ಭಯದಿಂದ ನಡುಂಕವುಂಟಾಗು : ನಿಮ್ಮ ಚೂರಿಯ ನೋಡಲೆದೆಯೊಳು ಜುಮ್ಮುಗುಟ್ಟುವುದೈ (ಬಿಜ್ಜಪು. ೧೦೭-೭೫). [ ಜುಂ + ಕುಟ್ಟು$_1$ ]

**ಜುಂಜು$_1$** 'ಚುಂಚು$_1$' ನೋ.

**ಜುಂಜು$_2$** (ನಾ). ತೂಪರು; ತೂರಲು: ಜಡಿ ಜಿನುಗು ಜುಂಜು ತುಂತುರ್ ಬಿಡದಡಿಯಿಡಗೊಡದೆ ಕಱಿದುವಿರುಳುಂ ಪಗಲುಂ (ತ್ರಿಪುವಿ. ೮-೩೯).
'ಜುಂಜುವಳೆ' ಪರಾ. [ ? ]

**ಜುಂಜುಕೇಶ** 'ಜುಂಜುಗೇಶ' ನೋ.

**ಜುಂಜುಗೇಶ, ಜುಂಜುಕೇಶ** (ನಾ). ೧. ಕೆದರಿದ ಕೂದಲು : ಹೊಗೆ ಮೊಗದ ಕಿಡಿಗಣ್ಣ ಕವಿಮ್ಮಾಸೆಗಳ ಗುಜುರಿನ ಜುಂಜುಗೇ[ಪಾಠಾಂ. ಕೇ]ಶದ ವಿಗಡನೆದ್ದನು ಬಂದು ಹಿಡಿದನು ದ್ರೌಪದಿಯ ಸೆಱಗ (ಕುಮ್ಯಾಸ. ೦೯-೧೦೦). **ಜುಂಜುಕೇಶ :** ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ೨. ಸುರುಳಿಗೂದಲು ; ಗುಂಗುರುಕೂದಲಂ : (ಶ).
[ ಜುಂಜು$_1$ (<ಚುಂಚು$_1$) + ಕೇಶ ]

**ಜುಂಜುದಲೆ** 'ಚುಂಚುದಲೆ' ನೋ.

**ಜುಂಜುಮುಳೆ** 'ಜುಂಜುವಳೆ' ನೋ.

**ಜುಂಜುಮೀಸೆ** 'ಚುಂಚುಮೀಸೆ' ನೋ.

**ಜುಂಜುರಿ** (ಗು). ಸುರುಳಿಕೂದಲುಳ್ಳ; ಜೂಲುಕೂದಲುಳ್ಳ: ಜುಂಜುರಿ ಬಾಲದ ನಾಯಿ (ಜಾನಕೋ. ೬೦). [ <ಜುಂಜುಱು ]

**ಜುಂಜುರು** 'ಜುಂಜುಱು' ನೋ.

**ಜುಂಜುರ್ದಲೆ** 'ಜುಂಜುಱುದಲೆ' ನೋ.

**ಜುಂಜುಮಳೆ, ಜುಂಜುಂಮಳೆ** (ನಾ). ಜಿನುಗು ಮಳೆ; ತುಂತುರು ಮಳೆ: ಕಂಜನಾಳದಿ ಕಟ್ಟುವಡೆವುದೆ ಕುಂಜರನು ನರಶರದ ಜೋಡಿನ ಜುಂಜುಮಳೆ [ಪಾಠಾಂ. ಮೊಳೆ]ಯಲಿ ಜಾಹ್ನವೀಧರ ಜಾರುವನೆ (ಕುವ್ಯಾಅ. ೭-೧೧). **ಜುಂಜುಮಳೆ:** ನರಶರದ ಜುಂಜುಮಳೆಯಲ್ಲಿ ಜಾಹ್ನವೀಧರ ಜಾರುವನೆ (ಭಾಮಹ. ೧೧೧). [ಜುಂಜು$_2$ + ಮಳೆ (<ಮಳ$^3$)]

**ಜುಂಜುಳಿಸು** (ಕ್ರಿ). ಹರಡು; ಕೆದರು: ಕಂಜ ಮುಕುಳಿತವಾಗಲಲ್ಲಿ ಪ್ರಭಂಜನಂ ತೀಡಿದುದು ತೀಡಲ್ಕನ್ನಳಿನ ನಳಿನಪುಂಜದೊಳ್ಪಾಟಾಡಿ ತುಪ್ಪುಳ ಜುಂಜುಳಿಸಿದವು (ಮದೇಪು. ೭-೩೭). [ಜುಂಜುಳು + -ಇಸು$_3$]

**ಜುಂಜುಳು, ಚುಂಚುಳು, ಜುಂಜುರು** (ನಾ).=ಚುಂಚು$_1$: ಸುಳಿದಲೆಯ ಕಬ್ಬೊಗೆಯ ಜುಂಜುಳಿನ [ಪಾಠಾಂ. ಜುಂಜುಗಳ] (ಕುವ್ಯಾಅ. ೨೦-೧೩). **ಚುಂಚುಳು:** 'ಚುಂಚುಳುದಲೆ' ಪರಾ. **ಜುಂಜುರು:** ಕಾರೊಡಲ ಜುಂಜುರಿನ ತಲೆಗಳ ಕೋರೆಗಳ ಅತಿ ದೀರ್ಘದೇಹದ (ಕೋಗಯ. ೨೩-೩೭). ಸುರೆಯ ಘಟಿಗಳು ಮುಕ್ಕುಳಿಸಿ ಜೋಂಪಿರುವ ಕಂಗಳ ತೊಗಲಿನುಡಿಗೆಯ ತಲೆಯ ಜುಂಜುರಿನಾ (ಅನಂರಾ. ೧-೨೦-೨). [ದೇ.॥ ತೆಲು. ಜುಂಜುಳು]

**ಜುಂಜುಳುದಲೆ, ಚುಂಚುಳುದಲೆ, ಜುಂಜುರ್ದಲೆ** (ನಾ).=ಚುಂಚುದಲೆ ೧: ಜುಂಜುಳುದಲೆಯ ಸೆಜ್ಜೆಯೊಳಳವಡಿಸಿ ಕೇದಗೆದೊಳಿಯ ನಿರ್ಮಳ ಸಲಿಲಮಂ ಮುಕ್ಕುಳಿಸಿ (ಬಸಪು. ೧೮-೩೧); ಕಸರುಗಂಗಳ ಕರ್ಕಶಾಂಗದ ಮಿಸುಪ ದಂತಾವಳಿಯ ಜುಂ[ಪಾಠಾಂ. ಗುಂ]ಜುಳುದಲೆಯ ಹೆಗ್ಗಿವಿಯ (ತೊರರಾ. ೫-೨-೭೦); ಜುಂಜುಳುದಲೆಯೂರ್ಧ್ವರೋಮ ಕೆಮ್ಮಾಸೆ ಕೈಪಂಜುಗಳೆನೆ (ಮೋಹತ. ೨೯-೧೧). **ಚುಂಚುಳುದಲೆ:** ಯಮಂಗೆ - ಶಿ ಪಾದ ಚವುದಂತಾ ಚುಂಚುಳುದಲೆ ಕಾರೊಡಲು (ರುದ್ರಭಾ. ೮೯). **ಜುಂಜುರ್ದಲೆ:** ನೆಳಲಾಕಾರದಿನೊನಕೆಯನಳಸದೆ ಕರದೊಳಗೆ ಪಿಡಿದು ಜುಂಜುರ್ದಲೆಯಿಂ ಗಳಗಳನೆ ಬೆನ್ನನೆಯ್ತರಲು (ಹಾಲಾಸ್ಯ. ೧-೧-೭೯). [ಜುಂಜುಳು + ತಲೆ$_1$]

**ಜುಂಜೂಟಿ** 'ಜುಂಜೋಟಿ' ನೋ.

**ಜುಂಜೂರಿ** (ನಾ). (ಉಕ) ದೊಡ್ಡ ಹಂಕ್ಕಾ: (+). [?]

**ಜುಂಜೋಟಿ, ಜುಂಜೂಟಿ** (ನಾ). [ಸಂಗೀತ] ಒಂದು ರಾಗದ ಹೆಸರು: ಜುಂಜೋಟಿ-೨೮ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ (ಸಂಗೀಜಂ. ೧೭೨). **ಜುಂಜೂಟಿ:** ರಾಗ - ಜುಂಜೂಟಿ; ಛಾಪುತಾಳ (ಹನುಮ. ೫೨). [←ಹಿಂ. ಝಿಂಝೋಟೀ]

**ಜುಕಾಯಿಸು** (ಕ್ರಿ). ೧. ಬಾಗು; ಮಣಿ. ೨. ಓಲಾಡುತ್ತಾ ಹೋಗು; ತೊನೆದಾಡು; ತಲೆಯನ್ನು ತೂಗುತ್ತಾ ನಡೆ. ೩. ತತ್ತರಿಸು; ತೂರಾಡು; ಅಲ್ಲಾಡು: (+). [ಜುಕಾ$_0$ (ಪ ← ಹಿಂ. ಝುಕಾನಾ) + -ಇಸು$_3$]

**ಜುಕುತಿ** 'ಯುಕುತಿ' ನೋ.

**ಜುಕ್ಕಜುಲುಮೆ** 'ಜುಕ್ಕುಜುಲುಮೆ' ನೋ.

**ಜುಕ್ಕು** (ಕ್ರಿ). ಚುಚ್ಚು; ಇರಿ (?): ಮಕ್ಕಳನು ಕೊಂದಿರುವ ಅಕ್ಕಯ್ಯಗಳನೆಲ್ಲ ಇಕ್ಕಿ ಸಂಕೋಲೆಯಲಿ ಜುಕ್ಕಿ ಕಡಿಯುವುದು (ಹಮಜ. ೧೯೭). [?]

**ಜುಕ್ಕುಜುಲುಮೆ, ಜುಕ್ಕಜುಲುಮೆ** (ನಾ). ಅಧಿಕವಾದ ಒತ್ತಾಯ; ಬಹಳವಾದ ಬಲವಂತ: ತಾಯಿಯಾದ ಶಚಿದೇವಿಯು ಏನಾದರೂ ಜುಕ್ಕು ಜುಲುಮೆಯಿಂದ ನಾಲ್ಕು ತುತ್ತುಗಳನ್ನು ಬಾಯಲ್ಲಿ ಹಾಕಿದರೆ ಸರಿ (ಗೌರಾಂಗ. ೫೦); ಜುಕ್ಕುಜುಲುಮೆಯಿಂದ ಮನೆಗೆ ಹೊರಡುತ್ತಿದ್ದುದರಿಂದಲೂ (ಬಿಟ್ಟಹೊ. ೨೩). **ಜುಕ್ಕಜುಲುಮೆ:** ಮೋರೆ ಗಂಟುಹಾಕಿ ಜುಕ್ಕಜುಲುಮೆಯಿಂದ ತಾನೇ ತಂಬಿಗೆಯೆತ್ತಿ (ಅನ್ನ. ೧೧೨). [ಜುಕ್ಕು$_0$ + ಜುಲುಮೆ]

**ಜುಕ್ತಿ** 'ಯುಕುತಿ' ನೋ.

**ಜುಗ** (ನಾ). ೧. ಜೋಡಿ; ಜವಳಿ; ಎರಡು: "ಜುಗಂ ಎರಡರ್ಕೆ ಪೆಸರ್" (ಕಶಸಾ. ೨೫-೫೩೮); "ಜುಗ ಜುಗುಮ ಜವಳಿ ಪೊಣರಮಳಿನ್ನಲ್ ತೋಱುವುದು ಯುಗಳ ಸಂಖ್ಯೆ" (ಕವಿಕಂ. ೨೧೨). ೨. ಯುಗ; ಕಾಲ: "ಜುಗ ಯುಗಮಕ್ಕು" (ಕವಿಕಂ. ೨೭೩); ಯುಗ ಜುಗಂಗಳು ಪ್ರಮಾಣಿಸುವುದಕ್ಕೆ ಮುನ್ನವೇ (ಮೋಳಿಮಾ. ೭೯-೩೧೨); ಯುಗದಲಾದ ಮೂರ್ತಿಯಲ್ಲ, ಜುಗದಲಾದ ಮೂರ್ತಿಯಲ್ಲ (ಅವಚಂ. ೨೦೭-೨೩೩): ಯುಗ ಜುಗಂಗಳ ಆಗು ಹೋಗುವನರಿಯದೆ (ಸಿದ್ಧಪು. ೩೨-೪೧). [<ಸಂ. ಯುಗ]

**ಜುಗಮು** 'ಜುಗುಮು' ನೋ.

**ಜುಗಾರಿ, ಜುಗಾರು** (ನಾ). ಜೂಜು; ಜಿದ್ದಿನ ಆಟ: ಕುಡಿತ, ಕೋಳಿ ಅಂಕ, ಜೂಜು, ಜುಗಾರಿ . . . ಇತ್ಯಾದಿ (ಮಲಮ. ೨೦೩); ಜನ ಹೋಗುತ್ತಿರುವುದು ರಾತ್ರಿ ಜುಗಾರಿ ಆಡಲು (ಚಿಗುಕ. ೧೫೩); ಜುಗಾರಿ ಆಡುವುದರಲ್ಲಿ ಅವನನ್ನು ಮೀರಿಸಿದವರಿಲ್ಲವಂತೆ (ರಕ್ತರೂ. ೭೨). **ಜುಗಾರು:** ನಂದೂಲಾಲನ ಮನೆಯಲ್ಲಿ ನಾವು ಜುಗಾರಾಡುತ್ತಿದ್ದಾಗ ಬಂದ ಪೋಲೀಸು ಫೌಜುದಾರ (ವಿಧಿವ್ಯ. ೨೩); ಅದು ಜುಗಾರು, ದಗಾ ಮೋಸ, ಆಪತ್ತು . . . ಇಂಥವಕ್ಕೇ ಮೀಸಲು (ಒಂಟಿದ. ೧೨೪). [←ಮರಾ. ಜುಗಾರ್. / ಪ್ರಾ. ಜೂಆರ = ಜೂಜುಗಾರ]

**ಜುಗಾರಿಕೋರ** (ನಾ). ಜುಗಾರಿಯನ್ನಾಡುವವನು; ಜೂಜುಗಾರ: ಅವನು ಜುಗಾರಿಕೋರರ ಗುಂಪಿಗೆ ಸೇರಿದ ಬಳಿಕ ಅವನ ಒಡನಾಟ ಅವಳಿಗೆ ತೀರ ಕಡಿಮೆ (ರಕ್ತರೂ. ೭೫). [ಜುಗಾರಿ + -ಕೋರ$_3$]

**ಜುಗಾರಿಮಂಡ** (ನಾ). ಜುಗಾರಿ ಆಟವನ್ನಾಡುವ ಸ್ಥಳ; ಜೂಜಿನ ಕಟ್ಟೆ: ಕಾಫಿ ಹೋಟಲು, ಜುಗಾರಿಮಂಡ, ಹೆಂಡದಂಗಡಿಗಳು ಯಾವುವೂ ನಮ್ಮೂರಿನಲ್ಲಿಲ್ಲ (ಚಿಗುಕ. ೭೭). [ಜುಗಾರಿ + ಮಂಡ$_1$]

**ಜುಗಾರು** 'ಜುಗಾರಿ' ನೋ.

**ಜುಗುತಿ** 'ಯುಕುತಿ' ನೋ.

**ಜುಗುಪ್ಸನ** (ನಾ).=ಜುಗುಪ್ಸೆ ೧: ಚಿಃ ಇಸ್ತ್ರೀಗಳ್ ತಾವೊಗೆದು ಜುಗುಪ್ಸನಾರ್ಥದೊಳ್ .ವರ್ತಿಸುಗುಂ (ಶಮದ. ೩೧೮). ೨.=ಜುಗುಪ್ಸೆ ೨: ಭಯಾನಕಂ ಕೃತ ಜುಗುಪ್ಸನಂ ಬೀಭತ್ಸಂ (ಕಾವ್ಯಾವ. ೮೨೧). [ಸಂ.]

**ಜುಗುಪ್ಸನೀಯ** (ಗು). ಜುಗುಪ್ಸೆಯನ್ನುಂಟುಮಾಡುವ; ಅಸಹ್ಯವಾದ: ಹಸಿತವೂ . . . ಜುಗುಪ್ಸನೀಯ ಆಶ್ಚರ್ಯ ಸೌಮ್ಯಾಸ್ಪದಂಗಳೆಂಬ ರಸಾಷ್ಟಕರೂಪವಾಗಿ (ವಿವೇಕ. ೨೨೮). [ಸಂ.]

**ಜುಗುಪ್ಸಿತ** (ಗು). ೧. ಅಸಹ್ಯವಾದ; ಹೇಸಿಗೆಯನ್ನುಂಟುಮಾಡುವ: ಜುಗುಪ್ಸಿತ ವಸ್ತುವೂ ಬೀಭತ್ಸ ರಸಸ್ಯಂದಿಯಾಗಿ ಸಮ್ಮೋದವನ್ನೇ ಕೊಡುತ್ತದೆ (ಕಾವ್ಯಕು. ೩೦). (ನಾ). ೨. [ನಾಟ್ಯ] ಎಂಟು ರಸದೃಷ್ಟಿಗಳಲ್ಲಿ ಒಂದು: ಪೇಸಿಗೆಯಿಂದಂ ಮಿಸುಗುವ ನೋಟಂ ಜುಗುಪ್ಸಿತಾಖ್ಯಮೆನಿಕ್ಕುಂ (ಲಾಸ್ಯರಂ. ೩-೨೪). [ಸಂ.]

**ಜುಗುಪ್ಸೆ** (ನಾ). ೧. ಅಸಹ್ಯತೆ; ಹೇಸಿಗೆ: ಆದರೆ ಗಂಡಸರ ಸಲುಗೆ ಕೆಳೆತನಗಳಲ್ಲಿ ಅವಳಿಗೀಗ ಜುಗುಪ್ಸೆ ಮೂಡಿತ್ತು (ಪುನರು. ೩೨೭); ಅವರೆಲ್ಲರ ಮುಖವನ್ನು ನೋಡಲು ನನಗೇ ಜುಗುಪ್ಸೆ ಎನಿಸಿತು (ಕೇಮೋದ. ೩೭); ಆ ಪಾಪಿಗಳ ಹೆಸರೆತ್ತಿದರೆ ನನಗೆ ಜುಗುಪ್ಸೆಯಾಗುತ್ತದೆ (ಪ್ರತಾಪ. ೧೨೨). ೨. [ಕಾವ್ಯಮೀ] ಸ್ಥಾಯಿಭಾವಗಳಲ್ಲಿ ಒಂದು; ಬೀಭತ್ಸರಸದ ಸ್ಥಾಯಿಭಾವ: ಹೃದ್ವಿಸ್ತಾರಂ ವಿಸ್ಮಯಂ ಆಕೂತ ವೈಕ್ಲಬ್ಯಂ ಭಯಂ ಮನಸ್ಸಂಕೋಚಂ ಜುಗುಪ್ಸೆ (ರಸರ. ೧-೧೭ ವ); ಸ್ಥಾಯಿಭಾವಗಳು ಎಂಟು (ಅಥವಾ ಒಂಬತ್ತು) ಅವು ಯಾವುವೆಂದರೆ:-ರತಿ (ಪ್ರೀತಿ) . . . ಜುಗುಪ್ಸೆ (ಅಸಹ್ಯತೆ) (ಕೈಪಿಡಿ. ೧೮೭). [ಸಂ. ಜುಗುಪ್ಸಾ]

**ಜುಗುಮ,** ಜುಗಮ (ನಾ). ಜೊತೆ ; ಜೋಡಿ ; ಎರಡು : "ಅಮಳ್, ಪೊಣರ್, ಜುಗುಮಮಂ, ಜುಗಂ–ಎರಡರ್ಕೆ ಪೆಸರ್" (ಕಶಸಾ. ೨೫–೫೩೮) ; "ಜುಗುಮವು ಜವಳಿ . . . ತೋಱುವುದು ಯುಗಳ ಸಂಖ್ಯೆ" (ಕವಿಕಂ. ೨೦೨); ಯುಗ್ಮ–ಜುಗುಮವು (ಶಮದ. ೨೫೯ ಪ್ರಯೋ). **ಜುಗಮ :** "ಜುಗುಮ (ಜುಗಮ)–ಯುಗ್ಮ = ಜೊತೆ" (ತದ್ಭಕೋ. ೦೫). [ <ಸಂ. ಯುಗ್ಮ ]

**ಜುಗ್ಗ** (ನಾ). ಜಿಪುಣ ; ಕೃಪಣ ; ಲೋಭಿ : ಜುಗ್ಗ ಮಾಗಿ ಬಚ್ಚಿಟ್ಟ ಸಂಪತ್ತು ಮಿಾಸಲಾಯಿತೋ ಮಧುವಿಗೆ (ಅಹಲ್ಯ. ೬೨–೩) ; ಅವನು ಒಬ್ಬ ಜುಗ್ಗ (ಊರುಕ. ೯೫); ಅವನು ಬಹು ಜುಗ್ಗ, ಹಣಕಾಸಿಟ್ಟಿದ್ದಾನೆ ಎಂದು ಹೇಳುತ್ತಿದ್ದರು (ನಡದಾ. II, ೮೫೮). [ ಜುಗ್ಗು + – ಅ$_7$ ]

**ಜುಗ್ಗಾಡು** (ಕ್ರಿ). ೧. ಜಿಪುಣತನ ಮಾಡು : ದುಡ್ಡಿನ ವಿಷಯದಲ್ಲಿ ಆತ ತುಂಬ ಜುಗ್ಗಾಡುತ್ತಾನೆ (ರೂಢಿ). ೨. "ಜುಗ್ಗಾಡು, ಕೊಸರಾಡು, ಚೌಕಸಿಮಾಡು" (Palter. ಇಂಕನಿ.). ೩. ಮುದುರು ; ಸಂಕೋಚ ಗೊಳ್ಳು : ಬೀದಿಯ ಎಡಗಡೆ ಮಾತ್ರ ಜುಗ್ಗಾಡಿಕೊಂಡು ತಿರುಗಾಡಬೇಕು (ಪ್ರವಾಇ. I, ೧೯೭). 'ಜಗ್ಗಾಡು' ಪರಾ. [ ಜುಗ್ಗು + ಆಡು$_1$ ]

**ಜುಗ್ಗಿ** (ನಾ). ಜಿಪುಣೆ ; ಕೃಪಣೆ : ಜುಗ್ಗಿ ನೀನು ಕಾಸು ಬಿಚ್ಚುವುದು ಎಂದರೆ ಪ್ರಾಣಸಂಕಟವಲ್ಲವೇ ನಿನಗೆ ? (ಪರೀಕ್ಷೆ. ೬೯).

[ ಜುಗ್ಗ + – ಇ$_2$ ]

**ಜುಗ್ಗು** (ನಾ). ಕೃಪಣತೆ; ಜಿಪುಣತೆ; ಲೋಭ. 'ಜಂಗ್ಗುತನ' ಪರಾ.

**ಜುಗ್ಗುತನ** (ನಾ). = ಜುಗ್ಗು : ಆದರೆ ಬಹು ಜುಗ್ಗುತನ ! ಭಿಕ್ಷುಕರಿಗೆ ಒಂದು ಒಡಕು ಕಾಸೂ ಕೊಡೊಲ್ಲ (ಹೇಮಕೂ. ೯). [ ಜುಗ್ಗು + – ತನ ]

**ಜುಜಬಿ,** ಜುಜಿಬಿ, ಜುಜುಬಿ, ಜುಜುವಿ (ಗು). ಸಾಮಾನ್ಯವಾದ ; ಅಲ್ಪವಾದ ; ಸಣ್ಣ : ಎಲ್ಲಾ ಜುಜಬಿ ಮಾಲು (ಅಲಹೂ. ೨೦). **ಜುಜಿಬಿ :** ಜುಜಿಬಿ ವಿಷಯಗಳಿಗೆ ಕೈಹಾಕುವವನಲ್ಲ (ನಟಸಾ. ೪೫೦). **ಜುಜುಬಿ :** ನನಗೆ ಬರುತ್ತಿದ್ದ ಜುಜುಬಿ ಸಂಬಳದಲ್ಲಿ ಸತ್ಯವಂತನಾಗಿ ಜೀವನ ಸಾಗಿಸುತ್ತಿದ್ದೆ (ಪಂಜಪಂ. ೧೬೦) ; ಅವರದು . . . ಜುಜುಬಿ ಪಾಳೇಪಟ್ಟು (ಕಿಲನಿ. ೦೧೬). **ಜುಜುವಿ :** ಅರಸುಮಗನ ಸಂಗಡ ಜುಜುವಿ ಮಂದಿ ಕೋಟಿವಳಕ್ಕೆ ಕಳುಹಿಸಿ ಕೊಟು (ಹೈದರ. ೩೪).

[ ←ಅರ. ಜುಜ್ವೀ, ಜುಜ್ವೀ : ಮರಾ. ಜುಜಬೀ ;
ಹಿಂ. ಜುಜಬೀ, ಜುಜವೀ ]

**ಜುಜಿಬಿ** 'ಜುಜಬಿ' ನೋ.

**ಜುಜುಬಿ** 'ಜುಜಬಿ' ನೋ.

**ಜುಜುವಿ** 'ಜುಜಬಿ' ನೋ.

**ಜುಜ್ಝಾರ,** ಜಂರಝಾರ, ಜಜ್ಝಾಡ, ಜಜ್ಝಾರ, ಜಜ್ಝಾರ, ಜರ್ಝಾರ, ಜರ್ಝಾರ, ಜರ್ಝರ್ಝಾರ, ಜೆರ್ಝಾರ, ಝುರ್ಝುರ$_1$ (ನಾ). ೧. ಶೂರ ; ಧೀರ ; ಧೈರ್ಯಶಾಲಿ ; ದಿಟ್ಟ : ಆರಿವರು ನಕುಲಾಂಕರೇ ಜುಜ್ಝಾರರೇ (ಕುವ್ಯಾಕ. ೨೦–೧೩). **ಜಂರಝಾರ :** ೧. ವೀರ ಕುಂಭ ನಿಕುಂಭ ರಣ ಜಂರಝಾ [ಪಾಠಾಂ. ಜಜ್ಝಾ]ರ ದೇವಾಂತಕ ನರಾಂತಕ ಘೋರಬಲ ಮಕರಾಕ್ಷ . . . ವೀರಯುದ್ಧೋನ್ಮತ್ತ ಸಮರೋದ್ಧಾರ ರಿದ್ದುದು ತವಕದಲಿ (ತೊರರಾ. ೬–೨೦–೩೭). ೨. ಶಕ್ತಿ ; ಪರಾಕ್ರಮ : ಓಡಿದನು ಕಪಿಯೆಂದು ಮನದಲಿ ಮಾಡದಿರಿ . . . ನಾವಾಡಿ ತಪ್ಪೆವು ನಮ್ಮ ರಣ ಜಂರಝಾರ [ಪಾಠಾಂ. ಜಜ್ಝಾಡ] ಜೋಕೆಯ ತೋಱುಸುವೆವಿನ್ನೊಮ್ಮೆ ನಿಮಗೆಂದ (ತೊರರಾ. ೫–೯–೧). **ಜಜ್ಝಾಡ :** ೨. ಮೇಲಿನ 'ತೊರರಾ' ಪ್ರಯೋಗದ ಪಾಠಾಂತರವನ್ನು ನೋಡಿ. **ಜಜ್ಝಾರ :** ೧. ಭಾರಿಯಂಕದ ಭಟರಿವರು ಜಜ್ಝಾರ [ಪಾಠಾಂ. ಜುಜ್ಝಾರ]ರೈ (ಕುವ್ಯಾಕ. ೨೦–೨೬). ೨. ವೀರವಾನರಬಲದ ಬಲು ಜಜ್ಝಾ [ಪಾಠಾಂ. ಜ್ಝಾ]ರ ರಕ್ಕಸದಳದ ಧರಧುರದಾರುಭಟೆಯಂಜಿಸಿತು ದೇವಾಸುರ ನರೋರಗರ (ತೊರರಾ. ೬–೧೩ ಸೂಚನೆ). ೩. ಕಾಳಗ ; ಯುದ್ಧ : ತೀರಿದವು ಹದಿನೇಳು ದಿನ ಜಜ್ಝಾರ ನಡೆದುದು ಬಿಡದೆ (ತೊರರಾ. ೬–೫೦–೪೪). ೪. ಚೂರು ಚೂರು ಮಾಡುವವನು: ನರಿ ಮೊಲಗಳಿಗೆ ದಡಿವೊಯಿಲನೆಂಬ ಕರಡಿಯ ಗಂಡನೆಂಬ ಬಿಟ್ಟುಡೆ ತೋಳ ಜಜ್ಝಾ [ಪಾಠಾಂ. ಜ್ಝಾ]ರನೆಂಬ ನರಿದಿನಿಹಿ ಯೆಂದೆಂಬ ಕುನ್ನಿಗಳನಾಯ್ದು ಗಡಣದಿಂ ಬೇಡವಡೆಯೊಡೆಯರೆಲ್ಲರು ನೆರೆದು (ಹಡಕಾ. ೫–೭): "ಹಿಂಸಕ" (ಪ್ರಭಿ). ೫. ವೀರರ ಸಮೂಹ ; ಸೈನ್ಯ : (೬). **ಜಜ್ಝಾರ :** ೧. ಮಾರಿ ಮೊಗವಡೆದೆಱೆದವೊಲು ಜಜ್ಝಾರ ಮಾಸಾಳುಗಳು ನಿಜದಾತಾರನವಸರಕೊದಗಿ ಹಣವಿನ ಋಣನ ನೀಗಿದರು (ಕುವ್ಯಾದ್ರೋ. ೧–೫೦). (ಗು). ೬. ತೀವ್ರವಾದ: ಅಂತರಾಳದಲ್ಲಿ ತಾಂಡವ ನೃತ್ಯದಂತೆ ಜಜ್ಝಾರ ಘರ್ಷಣೆ ನಡೆಯುತ್ತಿತ್ತು (ಬೆಂದಜೀ. ೦೧೭). **ಜರ್ಝಾರ :** ೧. ವೀರಭಟರಾಹವವ ಹೊಗಿ ಜರ್ಝಾರರಿತ್ತಲು ನಡಯಿ (ಕುವ್ಯಾಕ. ೮–೩೨). **ಜರ್ಝಾರ :** ೧. "ಜರ್ಝಾ [ಪಾಠಾಂ. ಜ್ಝಾ]ರರೆ ಯುದ್ಧ ತರು" (ಭಾರನಿ. ೬೨). **ಜರ್ಝರ್ಝಾರ :** (ನಾ). ೭. (ಅಲಂ) ಕ್ರೌರ್ಯ ; ಹಿಂಸೆ : ರುಚಿ ತಲೆಗೇರಿಯುಡವರಿಯಾಡುತಿಹ ನರರಾರುಮರಿಯದ ವೋಲು ಕೊಲಿಸುವನೊಂದು ದಿನ ಬಿಡದೆ ದೂರು ಹೊರಹೊಮ್ಮಿದುದು ಜನ ಜರ್ಝರ್ಝಾರದಿಂ ಭಯುಗೊಂಡು ಒಂದೆಡೆ ಸಾರಿ ಮಂಥಣಗೈದರು (ಜಿನಭಾ. ೧೫–೩೨). **ಜೆರ್ಝಾರ :** ೧. ವೀರಶುಂಭ ನಿಶುಂಭ ರಣ ಜೆರ್ಝಾರ ಚಾಮುಂಡಕನು ಚಂಡನುದಾರಬಲ ವಜ್ರಬಾಹುಕ ದೀರ್ಘ ದೌಷ್ಟಕನು . . . ಭಾರಿಭುಜಬಲರೈದಿತಾ ಕ್ಷಣ ಕೋಟಿಸಂಖ್ಯೆಯಲಿ (ಅಂಬಿಕಾ. ೮–೩೭). **ಝುರ್ಝುರ$_1$ :** ೪. ದುರುಳದೈತ್ಯರಿಗೆ ಝುರ್ಝುರನೊ ದುರಿತ ಕದಳಿಗೆ ಕುಂಜರನೊ (ವಿದಾಕ್ಕ. ೫೦–೩).

[ <ಪ್ರಾ. ಜುಝ್ಝು. / ಮರಾ. ಜುಜಾರ್, ಜುರ್ಝಾರ್ ]

**ಜುಜ್ಝಾರತನ,** ಜಜ್ಝಾರತನ (ನಾ). ೧. ಯುದ್ಧಾಸಕ್ತಿ; ಶೂರತನ ; ದಿಟ್ಟತನ : ಆರಿವರು ನಕುಲಾಂಕರೇ ಜು [ಪಾಠಾಂ. ಜ]ಜ್ಝಾರತನವೇ ನವ್ಮೊಡನೆ (ಕುವ್ಯಾಕ. ೪–೧೧) ; ಸೈರಿಸಿದರೊಪ್ಪುವುದಲೇ ಜುಜ್ಝಾರತನ ಕಾಭರಣವಹುದು (ಕುವ್ಯಾಶ. ೨–೨೨). **ಜಜ್ಝಾರತನ :** ೨. (ಅಲಂ) ಕ್ರೌರ್ಯ ; ಹಿಂಸೆ: ಬಾಲಿಕೆಯ ಬೇಳಂಬವನು ಜೂಜಾಳಿಗಳ ಜಜ್ಝಾರ ತನವನು ಕೇಳಿ ಬೈದುದು ಸೇನೆ ಖತಿಯಲಿ ಖಳಚತುಷ್ಟಯವ (ಕುವ್ಯಾಸ. ೦೬–೧). [ ಜುಜ್ಝಾರ + – ತನ ]

**ಜುಟ್ಟು** (ನಾ). ೧. ಕೂದಲು ; ಮುಡಿ : ಹೊಟ್ಟೆಗೆ ಹಿಟ್ಟಿಲ್ಲ ಜುಟ್ಟಿಗೆ ಮಲ್ಲಿಗೆ ಹೂವು (ಗಾದೆ). ೨. ಚಂಡಿಕೆ ; ಶಿಖೆ : ಕುಸುಮಮಾಲೆಗಳನ್ನು ಜುಟ್ಟಿಗಳವಡಿಸುತ್ತ (ಅರ್ಜಾವಿ. ೨೪–೯) : ನನ್ನ ಜುಟ್ಟನದಾರು ಮೆಚ್ಚರು ನೋಡು (ಗಹಚ. ೬೨–೧) ; ತಲೆಯ ಮೇಲೆ ಜುಟ್ಟು ಹಣೆಯ ಮೇಲೆ ನಾಮ (ಭಾರತಿ. ೧); ಅವರು ಎಳೆದ ರಭಸಕ್ಕೆ ತನ್ನ ಜುಟ್ಟು ಬಿಚ್ಚಿಹೋಗಲು (ಮುದ್ರಾಮಂ. ೨೭). ೩. ನವಿಲು, ಹುಂಜ ಮೊದಲಾದುವುಗಳ ತಲೆಯ ಮೇಲಿನ ಕೊಟ್ಟು : (೬).

ಜುಟ್ಟು ಕೈಗೆ ಸಿಗು = ಅಂಕಿತಕ್ಕೆ ಒಳಪಡು ; ಅಧೀನವಾಗು : ಈಗ ನಿನ್ನ ಜುಟ್ಟು ನನ್ನ ಕೈಗೆ ಸಿಕ್ಕಿರುವುದು (ಕವಿಕ. ೩೦).

[ ದೇ.ಶಿ ತುಳು. ಜುಟ್ಟು ; ಕೊಡ. ಜಿಟ್ಟ ; ತೆಲು. ಜುಟ್ಟು;
ಕೊಲಾ. ಜುಟ್ಟ. / ಸಂ. ಜೂಟ ]

**ಜುಟ್ಟುಕಟ್ಟು** (ಕ್ರಿ). ೧. ಜುಟ್ಟನ್ನು ಗಂಟುಹಾಕು. ೨. (ಅಲಂ) ಸಿದ್ಧ ವಾಗು ; ಸನ್ನದ್ಧವಾಗು : ರವಿಜ ನುಡಿದನು ತನ್ನ ಸೇನೆಗೆ ತವಕದಲಿ ಪಡೆ ಜುಟ್ಟುಕಟ್ಟಿಯೇ ಬರಲಿ ತಾವೀಗ (ಕಾಶಿರಾ. ೯–೦೨).

[ ಜುಟ್ಟು + ಕಟ್ಟು$_1$ ]

**ಜುಟ್ಟುಗಂಟು** (ನಾ). ಜುಟ್ಟನ್ನು ಕಟ್ಟಿಹಾಕಿರುವ ಗಂಟು ; ತಲೆಗೂದಲ ಗಂಟು : (೬). [ ಜುಟ್ಟು + ಗಂಟು ]

**ಜುಟ್ಟುಬಿಡಿಸು** (ಕ್ರಿ). ಚೌಲಕರ್ಮ ಅಥವಾ ಚೂಡಾಕರ್ಮವನ್ನು ಮಾಡುವಾಗ ನೆತ್ತಿಯ ಮೇಲೆ ಸ್ವಲ್ಪ ಕೂದಲನ್ನು ಉಳಿಸು ; ಚಂಡಿಕೆ ಬಿಡಿಸು: ಅವರ ಮಗನಿಗೆ ಈವತ್ತು ಜುಟ್ಟು ಬಿಡಿಸುತ್ತಾರೆ (ರೂಢಿ). [ ಜುಟ್ಟು + ಬಿಡಿಸು ]

**ಜುಟ್ಟುಬಿಡು** (ಕ್ರಿ). ನೆತ್ತಿಯ ಮೇಲೆ ಸ್ವಲ್ಪ ಕೂದಲನ್ನು ಬಿಡು,–ಬೆಳೆಯಿಸು; ಚಂಡಿಕೆ ಬಿಡು: ಹಿಂದೆ ಜುಟ್ಟುಬಿಡುವುದೇ ಒಂದು ನಿಯಮವಾಗಿತ್ತು (ರೂಢಿ). [ ಜುಟ್ಟು + ಬಿಡು$_1$ ]

**ಜುಟ್ಟುವೆಬಳ್ಳಿ** (ನಾ). ಒಂದು ಬಗೆಯ ಸಸ್ಯ ; ಹಾಲುಕುರುಟಿಗೆ : ಜುಟ್ಟುವೆಬಳ್ಳಿ, ತಳವಾರನ ಬಳ್ಳಿ, ಉಗುರುಸುತ್ತುಬಳ್ಳಿ, ಹಾಲುಕೊರಟಿಗೆ, ಕುಂಟಗ (ಮೈಔಗಿ. ೬೦–೧೨೧೫). [ ಜುಟ್ಟುವೆ ? + ಬಳ್ಳಿ ]

**ಜುಟ್ಟುಸುತ್ತಿಗೆ** (ನಾ). ಮೊಳೆ ಮುಂತಾದುವುಗಳನ್ನು ಕೀಳುವುದಕ್ಕೆ ಉಪಯೋಗಿಸುವ, ಸೀಳಿದ ಬಾಗುಕೊನೆಯುಳ್ಳ ಒಂದು ಬಗೆಯ ಸುತ್ತಿಗೆ ; ಮೊಳೆಸುತ್ತಿಗೆ : (ಕ). [ಜುಟ್ಟು + ಸುತ್ತಿಗೆ ]

**ಜುಡುಪು** 'ಝುಂಡುಪು' ನೋ.

**ಜುಣಕ, ಝುಣಕ** (ನಾ). ಕಡಲೆಯ ಹಿಟ್ಟನ್ನು ಬೇಯಿಸಿ ಮಾಡಿದ ಒಂದು ಬಗೆಯ ಮೇಲೋಗರ : ಅತ್ತೆ ಮಾಡಿಕೊಟ್ಟ ದಶಮಿ, ಕೊರೆದ ಜುಣಕಾ . . . ಚಟ್ನಿಪುಡಿ ಕಟ್ಟಿದೆ (ಕಪ್ಪುಹು. ೫೯). **ಝುಣಕ :** ಮತ್ತೆ ಒಲೆ ಹೊತ್ತಿಸಿ ಝುಣಕವನ್ನು ಮಾಡಿ ಇಳಿಸಿದಳು (ಗೀಚುಗ. ೬೯).

[ ← ಮರಾ. ಝುಣಕಾ ]

**ಜುಣು** (ನಾ). ಒಂದು ಅನುಕರಣ ಶಬ್ದ ; ತಂಪಾಗಿರುವಿಕೆಯನ್ನು ಸೂಚಿಸುವ ಶಬ್ದ. 'ಜುಣುಂಗುಟ್ಟು' ಪರಾ.

**ಜುಣುಂಗು, ಚುಣುಕು$_1$, ಚುಣುಗು, ಜುಣುಗು$_1$** (ಕ್ರಿ). ೧. ಜಾರಿಕೊಳ್ಳು ; ನುಣುಚಿಕೊಳ್ಳು : ಅವಟಿ ಹಿಂದೆ ಹಿಂದೆ ನೆಲನಂ ಹತ್ತಿ ಹಣುಗಿ ಜುಣುಂಗಿ [ಪಾಠಾಂ. ಜುಣುಗಿ] ಜೂಜಾಡುವ ಕಿಱುವುಲಿಗಳುಮಂ (ನೇಂಬಿರ. ೧೮–೯). **ಚುಣುಕು$_1$ :** ೨. ತೋರಿ ಪಕ್ಕನೆ ಅಡಗು ; ಮರೆಯಾಗು; ಮಿಂಚು: ಮುಗಿಲಲ್ಲಿಯೆಂದರೆ ಆಗಾಗ ಚುಣುಕುತಲಿದ್ದ ಕೋಲ್ಮಿಂಚಿನ ಬೆಳಕೇ ಹೊರತು ಚಿಕ್ಕೆ ಚಂದ್ರಮರ ಬೆಳಕಿರಲಿಲ್ಲ (ಹೂಬಿಸಿ. ೪೫). **ಚುಣುಗು :** ೧. ಕಿರುಕುಳನೆಂಬ ಬಗೆಯದು ನಿನಗೆ ಮುಂದಿನ್ನರಿಕೆ ತೋರ್ಪುದು ಚುಣುಗುವವನಲ್ಲಧಟ ತೋರು (ಅಂಬಿಕಾ. ೪೨–೮೫). **ಜುಣುಗು$_1$ :** ೧. ನೆಲಕೋರಂತೆಯಡಗಿ ತನ್ನನುವಿನಳವಿಗೆ ಜುಣುಗಿ ನಡೆದು ಬಳಿಕೇಗೆಯ್ವುದು (ಜಜಕಾ. ೫–೩೦) : ಸೋಂಕಿ ತಿವಿದರೆ ಹೆಣನ ತೋಱುವ ಹಜ್ಜೆದೆಗೆದರೆ ಜುಣುಗಲೀಯದೆ ಮೇಲೆ ಕವಿಸುವ (ಕುವ್ಯಾಭೀ. ೪–೨೩) : ವಿಭೀಷಣನಾವ ದಿಕ್ಕಿನಲಿ ಜುಣುಗಿದನೊ (ತೊರರಾ. ೬–೧೨–೨೩). ೨. ಮಿಂಚು ಪೊಳೆವಂದದಿಂ ರಕ್ಕಸಂ ಜುಣುಗುವಂ (ಜಬಪು. ೨೫–೩೩). ೩. ಉಡುಗು ; ಕುಗ್ಗು : ಜೀವತ್ವ ಭ್ರಾಂತಿಯು ಜುಣುಗುವುದು ವೇದಾಂತ ಗುರುವಾಕ್ಯಗಳ ದೆಸೆಯಿಂದ (ಗಗಶಾ. ೧೩–೩೯); ಧರ್ಮರಾಯನ ಮುಖ ಬಾಡಿತು . . . ಉತ್ಸಾಹ ಜುಣುಗಿತು (ರಾಜಸೂ. ೧೨೯).

[ ದೇ. ✱ ತೆಲು. ಜುಣುಂಗು, ಜುಡುಂಗು ]

**ಜುಣುಗ** (ನಾ). ನುಣುಚಿಕೊಳ್ಳುವವನು ; ತಪ್ಪಿಸಿಕೊಳ್ಳುವವನು : ವಿವೇಕದ ಜಾಱುಗಂಡಿಯು ಜು[ಪಾಠಾಂ. ಜ]ಣುಗನೇ ಕಲಿಯೇಱಿಸಿಯೆ ರಕ್ಕಸರು ನುಡಿದರೆ ಹಿತವರೇ ನಿನಗೆ (ತೊರರಾ. ೬–೨–೨೭).

[ ಜುಣುಗು$_2$ + – ಅ$_7$ ]

**ಜುಣುಗಿಸು** (ಕ್ರಿ). ಝಳಪಿಸು ; ಮಿಂಚಿಸು : ಮೆಱೆವ ಹಜ್ಜೆಯ ದಂಡೆವಲಗೆಯ ಮಱೆಯ ಕೈದಂಡೆಗಳ ಜುಣುಗಿಸಿ ತಱುಬಿ ನಿಂದರು (ಕುವ್ಯಾಭೀ. ೪–೩೪). [ ಜುಣುಗು$_1$ ( < ಜುಣುಂಗು ) + – ಇಸು$_3$ ]

**ಜುಣುಗು$_1$** 'ಜುಣುಂಗು' ನೋ.

**ಜುಣುಗು$_2$** (ನಾ). ೧. ನುಣುಚಿಕೊಳ್ಳುವಿಕೆ ; ಜಾರಿಹೋಗುವಿಕೆ. 'ಜುಣುಗ' ಪರಾ. ೨. ಕುಗ್ಗುವಿಕೆ ; ಉಡುಗುವಿಕೆ. ೩. ಹಿಂದೆಗೆಯುವವನು ; ಹೇಡಿ : ರಣರಭಸ ಹುಟ್ಟಿಸಿತಜಾಂಡದ ಹಣೆಗೆ ಬೇನೆಯ ನಳಿದ ಸುಭಟರ ಜುಣುಗುಗಳ[ಪಾಠಾಂ. ಳು] ಜವರಾಜ ಕರಣಕೆ ಬಾರದಾಯ್ತೆಂದ (ತೊರರಾ. ೬–೧೩–೩೫). [ < ಜುಣುಂಗು ]

**ಜುಣುಗು$_3$** (ನಾ). ಸೊಣಗ ; ನಾಯಿ : ಪುಣುಗು ತೆಗೆಯಲಿಕ್ಕೆ ಜುಣುಗು ಬಿಟ್ಟರೆ ಆದೀತೇ ? (ಗಾದೆ. ಕ). [ ? ]

**ಜುಣುಗುಗಿಡಿ** (ನಾ). ಮಿಂಚುವ ಕಿಡಿ: ಅಣೆದಣೆದು ತಿವಿತಿವಿದ ಮುಷ್ಟಿಯ ಜುಣುಗುಗಿಡಿ ಗುಡಿಯುಱಿದು ಗಗನಾಂಗಣವ ತುಂಬಿದವಾ ಲಯಾನಲ ನುಗುಳುಗಿಡಿಯಂತೆ (ತೊರರಾ. ೬–೧೭–೩೯).

[ ಜುಣುಗು$_1$ ( < ಜುಣುಂಗು ) + ಕಿಡಿ ]

**ಜುಣುಗುಗಿವಿ** (ನಾ). (ರಕ್ತ) ಸುರಿಯುತ್ತಿರುವ ಕಿವಿ: ಹಣೆದ ಮೂಗಿನ ಹಱಿದ ತುಟಿಗಳ ಜುಣುಗುಗಿವಿಗಳ . . . ಮಹಾಭೀಷಣದ ರಕ್ಕಸಿ ಬಂದಳು (ತೊರರಾ. ೩–೭–೧೨). [ಜುಣುಗು$_0$ (<ಜಿನುಂಗು$_1$ ) + ಕಿವಿ$_3$]

**ಜುಣುಗುಟ್ಟು** (ಕ್ರಿ). (ಶೀತದಿಂದ) ಜುಂ ಎನ್ನು ; ಕೊರೆ : ಬರ್ಫದಲಿ ಸಾರಿಸಿದಂತೆ ನೆಲವು ಜುಣುಗುಟ್ಟುವದು (ನೆಲಮು. ೧೬–೨೦) ; ಜುಣು ಗುಟ್ಟುವ ನೀರಲ್ಲಿ ಇಳಿದು ಮೈ ತಿಕ್ಕಿ ತಿಕ್ಕಿ ಜಳಕಮಾಡಿದನು (ಕನಕ. ೧೦೮).

[ ಜುಣು + ಕುಟ್ಟು$_1$ ]

**ಜುತ್ತಿ** 'ಯುಂಕುತಿ' ನೋ.

**ಜುದ್ದ** (ನಾ). ಕಾಳಗ ; ಕದನ ; ಹೋರಾಟ ; ಯುದ್ಧ : "ಭಂಡಣಂ, ಮೊನೆ, ಕೊಳುಗುಳಂ, ಜುದ್ದಂ—ಈ ೪ ಸಂಗ್ರಾಮಂ" (ಕಶಸಾ. ೧೪–೨೬೫); "ಜುದ್ದಮೆನೆ ಯುದ್ಧಂ" (ಕರ್ಣಾನಿ. ೬೦) ; ಯುದ್ಧ – ಜುದ್ದ (ಶಮದ. ೨೫೯ ಪ್ರಯೋ) ; ಜುದ್ದಕಸಹಾಯನಾಗೊರ್ವನೆ ನೀನ್ಯೆದುವುದು ಯುಕ್ತಮಲ್ಲ (ಶೀಷರಾ. ೩೦–೧೩) : ನೂಂಕಿನ ಹಾಣಾಹಾಣಿಯ ಕೇಶಾಕೇಶಿಯ ಜುದ್ದಂ (ರಾಮಾಶ್ವ. ೯೭–೧೩). [ < ಸಂ. ಯುದ್ಧ ]

**ಜುನ್ನ** (ನಾ). ಚತುರ; ಪ್ರವೀಣ; ಕುಶಲ : ಪನ್ನಗನಾಗತಲ್ಪಾ ನಾಗಭಯ ವಿನಾಶ ಜುನ್ನಾ ಚೋರಾ ಚತುರಾ ಚತುರ್ಮಗನ್ಯೆಯಾ (ತೀರ್ಥಮ.೧೬೫).

[ < ಪ್ರಾ. ಜುಣ್ಣ ]

**ಜುಪರಿ, ಜಿಪರಿ** (ನಾ). (ಉಕ) ಅಸ್ತವ್ಯಸ್ತವಾಗಿ ಹರಡಿದ ತಲೆಗೂದಲು; ಕೆದರುಗೂದಲು : ನಿನ್ನ ಜುಪರಿ ಕಿತ್ತು ಇಟ್ಟೇನು. ನನ್ನ ಮನೆಗೆ ಬಂದು ಬಲ್ಲಂಗ ಮಾತಾಡುತೀಯಾ ? (ಬೀದಿಬಿ. ೭೩). **ಜಿಪರಿ :** ಒಣಗು ಮೋರೆ ಸೊರಗಿದ ಮೈಕಟ್ಟು ಅಸಡ್ಡಾಳ ಕೂದಲಿನ ಜಿಪರಿ . . . ಒಡೆದು ಕಾಣಿಸುತ್ತಿದ್ದವು (ಬಿಟ್ಟಹೊ. ೩೦). [ ←ಮರಾ. ಝಿಪರೀ ]

**ಜುಬಕಿ** 'ಜುಮಕಿ' ನೋ.

**ಜುಬರು, ಜುಬ್ಬರ$_2$, ಜುಬ್ಬರು** (ನಾ). ೧. ಹಣ್ಣು, ಕಾಯಿ ಮೊದಲಾದುವುಗಳಲ್ಲಿರುವ ನಾರು ; ಗುಂಜು : ಈ ಮಾವಿನ ಹಣ್ಣೇ ಹೀಗೆ. ರಸಕ್ಕಿಂತ ಜುಬರೇ ಜಾಸ್ತಿ (ರೂಢಿ). **ಜುಬ್ಬರ$_2$ :** ೧. ಬಲಿತ ಕೈ ಚಳಕದಲಿ ಹಿಳಿವೆ ರಸವ, ಜುಬ್ಬರದ ಜಂಜಡ ಸವರಿ (ಉಯ್ಯಾಲೆ. ೨೫–೪). ೨. (ನಾರಿನಿಂದ ಮಾಡಿದ) ಹಗ್ಗದ ಬಿರುಸಾದ ಎಳೆ,_ನಾರಿನ ಎಳೆ : ಮೂರು ಚರ್ಮದ ಪಟಲಗಳು ಹರಿದು ಹೋದಂತೆ ಜುಬ್ಬರದ ಎಣುಗಳು ಅವಳ ಅಂಗೈಗೆ ನಡಹತ್ತಿದವು (ರಕ್ತಧ್ವ. ೩೧೫). **ಜುಬ್ಬರು :** ೧. "ಜುಬ್ಬರು–ನಾರು ; ನಾರುನಾರು ; ಎಳೆಎಳೆ" (ಜಾನಕೋ. ೬೦). [ ? ]

**ಜುಬಾನ್** (ನಾ). ೧. ನಾಲಗೆ ; ಜಿಹ್ವೆ. ೨. ಬಾಯಿಂದ ಹೇಳಿದುದು; ಮೌಖಿಕ : (ವ್ಯಗೆಜಿ. IV, ೭೯೦).

[ ←ಪಾರ. ಮರಾ. ಜಬಾನ್ ; ಹಿಂ. ಜುಬಾನ್, ಜಬಾನ್ ]

**ಜುಬಿಕಿ** 'ಜುಮಕಿ' ನೋ.

**ಜುಬ್ಬ** (ನಾ). ಒಂದು ಬಗೆಯ ಉದ್ದನೆಯ ಅಂಗಿ : ಬಿಳೀ ಖಾದಿಯ ಒಂದು ಜುಬ್ಬ, ಪಂಚೆ, ಮೇಲೊಂದು ಹೊದಿಕೆ (ಸುವಸಂ. ೧) ; ಕೆಲವರು ಜುಬ್ಬ ಧರಿಸಿದ್ದರು (ಪುನರು. ೨೩); ನಮ್ಮ ಜುಬ್ಬದ ಮಾದರಿಯ ಒಂದು ಬಗೆಯ ಉಡುಪನ್ನು ಅವರು ತೊಟ್ಟಿದ್ದರು (ಕಾಲಯಾ. ೨೦).

[ ←ಅರ. ಜುಬ್ಬಹ್ ; ಪಾರ. ಹಿಂ. ಜುಬ್ಬಾ ]

**ಜುಬ್ಬರ್₁** 'ತೂಪರಂ' ನೋ.

**ಜುಬ್ಬರ್₂** 'ಜುಬರು' ನೋ.

**ಜುಬ್ಬರು** 'ಜುಂಬರು' ನೋ.

**ಜುಮ್₁** (ನಾ). ಒಂದು ಅನುಕರಣ ಶಬ್ದ : ಕನಕಲತಾಂಗಿಗೆ ಪುಳಕಂಗಳು ಜುಮ್ಮೆನುತೆಳ್ದು ಕರಂ ಪಡೆದುವು ಪರಿರಂಜನೆಯುಂ (ಜಯಕಾ. ೯-೧೫) : ಮೈಯ ರೋಮವು ಜುಮ್ಮೆಂದು ಮನದ ಮೂರ್ಛೆಯಲಿ ಹಮ್ಮೈಸಿದಳು (ಮೋಹತ. ೩೦-೩೩) .

**ಜುಮ್₂** 'ಜುಂ' ನೋ.

**ಜುಮಕಿ, ಜಿಮಕಿ, ಜುಬಕಿ, ಜುಬಿಕಿ, ಜುಮಂಕಿ, ಝುಮಕಿ** (ನಾ). ಕಿವಿಯ ಓಲೆಗೆ ನೇತಾಡುವಂತೆ ಹೊಂದಿಸಿದ ಸಣ್ಣ ಛತ್ರಿಯಾಕಾರದ ಮುತ್ತಿನ ಅಥವಾ ಹರಳಿನ ಕುಚ್ಚು : ಅವಳು ಮುತ್ತಿನ ಜುಮಕಿಯನ್ನು ಹಾಕಿಕೊಂಡಿದ್ದಾಳೆ (ರೂಢಿ). **ಜಿಮಕಿ :** ಜೋಪಾನ ಜಿಮಕೀನ ಕಿವಿಗಿಟ್ಟ ಗರತೀ (ನವರಾ. IV, ೨೭). **ಜುಬಕಿ :** ಕಿವಿಗಳಿಗೆ ವಜ್ರದ ಓಲೆ ಜುಬಕಿಗಳನ್ನು ಹಾಕಿದಳು (ರೂಲೇಜಾ. ೩೯). **ಜುಬಿಕಿ :** ರನ್ನದೋಲೆಯ ಜುಬಿಕಿ ಚಿನ್ನದೊಂಕಿಯು ಬುಗುಡಿ(ಹಮಜ.೭೯).**ಜುಮುಕಿ :** ಅವಳು ಹಾಕಿಕೊಂಡಿರುವ ಕೆಂಪಿನ ಜುಮುಕಿ ತುಂಬ ಚೆನ್ನಾಗಿದೆ (ರೂಢಿ). **ಝುಮಕಿ :** ಕಿವಿಯಲ್ಲಿ ಹಾಕಿದ ಝುಮಕಿಗಳ ವಜ್ರಗಳು ಫಳಫಳನೆ ಹೊಳೆಯುತ್ತಿವೆ (ಸಾಹೇಬ್. ೧೫೪).

ಜುಮಕಿಯೋಲೆ = ಜುಮಕಿಯೊಡನೆ ಕೂಡಿದ ಓಲೆ ; ಜುಮಕಿ ಮತ್ತು ಓಲೆ : (೬). [ ←ಮರಾ. ಹಿಂ. ಝುಮಕಾ ]

**ಜುಮಲಾ, ಜುಮ್ಲಾ** (ನಾ). ಒಟ್ಟು ; ಮೊತ್ತ : ಕುಂಬಾರಗುಂಡಿಯನ್ನು ಸೇರುವಾಗ ಜುಮಲಾ ಸಾವುಗಳ ಸಂಖ್ಯೆ ಮೂವತ್ತಕ್ಕೆ ಮಾರಿತ್ತು (ಜಾರುದಾ. ೨೦೫); ಸದಸ್ಯರ ಜುಮಲಾ ಸಂಖ್ಯೆ ೭೨೫ ಇರುವುದು (ಪ್ರವಾಸಿ. ೭೯). **ಜುಮ್ಲಾ :** ಇಂದು ಈ ವ್ಯಾಪಾರವು ಅಷ್ಟೇ ಜನರೊಳಗೆ ವರುಷಕ್ಕೆ ಜುಮ್ಲಾ ರೂ. ೨೫,೦೦೦ ಯಷ್ಟು ಬೆಳೆದಿದೆ (ಬಾಲಪ್ರ. III, ೧೫೫೩).

[ ←ಅರ. ಜುಮ್ಲಹ್; ಮರಾ. ಜುಮಲಾ, ಜುಮ್ಲಾ; ಹಿಂ. ಜುಮಲಾ ]

**ಜುಮಿಕಿಹೂ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು : (ಮೈಜಿಗಿ. ೬೦-೦೩೦೨). [ <ಜುಮುಕಿ + ಹೂ₂ (<ಪೂ₂) ]

**ಜುಮಿಸು** (ಕ್ರಿ). ಮೀರು ; ಅತಿಕ್ರಮಿಸು : ತಮದಿಪೋರ್ವಳೆಯೆನ್ನ ಆಜ್ಞೆಯ ಜುಮಿಸಿ ಬಂದಿರುವೆ (ಹಮಜ. ೦೬೨). [ ? + – ಇಸು₃ ]

**ಜುಮು** 'ಜುಂ' ನೋ.

**ಜುಮುಕಿ** 'ಜುಮಕಿ' ನೋ.

**ಜುಮುಗುಟ್ಟು** 'ಜುಂಗುಟ್ಟು' ನೋ.

**ಜುಮುರು, ಝುಮರು** (ನಾ). ಅಲಂಕಾರಕ್ಕಾಗಿ ಇಡುವ, ಗೊಂಚಲಿನ ಆಕಾರದ,ದೀಪದ ಗಾಜಿನ ಉಪಕರಣ:ಬಾಳೆಯ ಕಂಬ ತಳಿರು ತೋರಣ ಜುಮುರು ಮೇಲ್ಕಾಸುಗಳಿಂದ ಆ ಭಾಗವೆಲ್ಲ ಅಲಂಕೃತವಾಗಿದ್ದಿತು (ಮಬಲಿ. ೧೩); ಕುಸುರುಕುಸುರಿನ ಗಾಜಿನ ಜುಮುರು, ಗುಂಡು, ಹಂಡೆಯ ದೀಪಗಳು ಮೇಲ್ಕಾಸಿನ ಕೆಳಕ್ಕೆ ನೇತುಕೂಡಿವೆ (ಅಶಾಂತಿ. ೧೩೨). **ಝುಮರು :** ಪರಿವೃತದಳಕಾವಳಿ ಝುಮರುಗಳೊ (ಕಥವಿ. II. ೪೦೩); ಝುಮರುಗಳೊಳಗೆ ದೀಪಗಳು ರಾತ್ರಿಯಲ್ಲಿ ಬೆಳತನಕ ಉರಿಯುತ್ತಿರುತ್ತವೆ(ಮುಂಬಯಿ. ೬-೨೭). [ ←ಅರ. ಝುಮರಾ; ಮರಾ. ಝುಂಬರ್ ]

**ಜುಮ್ಮನೆ** (ಅ). ೧. ಒಡನೆ ; ಕೂಡಲೆ ; ಒಮ್ಮೆಗೆ ; ತಕ್ಷಣ : ಮಬಿವೆ ಜುಮ್ಮನೆ ತಿಳಿದುದು . . . ಚೇತನವೆರ್ದೆಗೊಂಡುದು (ತ್ರಿಭುತಿ. ೦೯-೩೮). ೨. ತಡೆಯಿಲ್ಲದೆ ; ನಿರಾತಂಕವಾಗಿ : ನಮ್ಮ ಪಯಣ ನಿಂದು ನಾಗರಂಕನು ನಿಂದರುಮ್ಮಳ ಹೆಚ್ಚದೆ ಪಿತಗೆ ಜುಮ್ಮನೆ ಹೋಗಲಿ ತಡೆಬೇಡೆಂದನು (ಭರಜ. ೫೭-೬೯): ಬಾಹ್ಯವಿಷಯವ್ಯತ್ರಿಯಂ ಮಬಿ ದು ಜುಮ್ಮನೆ ಕೂರ್ತು ಬೆಮರ್ತು (ವೃಷವಿ. ೨೩-೮). [ಜುಮ್₁+ –ಅನೆ₁]

**ಜುಮ್ಮಮಸೀದಿ** 'ಜುಮ್ಮಾಮಸೀದಿ' ನೋ.

**ಜುಮ್ಮಾಮಸಿತ್ತಿ** 'ಜುಮ್ಮಾಮಸೀದಿ' ನೋ.

**ಜುಮ್ಮಾಮಸೀದಿ, ಜುಮ್ಮಮಸೀದಿ, ಜುಮ್ಮಾಮಸಿತ್ತಿ** (ನಾ). ಮಹಮದೀಯರು ಶುಕ್ರವಾರದ ದಿನ ಪ್ರಾರ್ಥನೆಗಾಗಿ ಸೇರುವ ಊರಿನ ಮುಖ್ಯವಾದ ದೊಡ್ಡ ಮಸೀದಿ: ದೆಹಲಿಯ ಜುಮ್ಮಾಮಸೀದಿ ಬಹಳ ಸುಂದರವಾಗಿದೆ (ರೂಢಿ). **ಜುಮ್ಮಮಸೀದಿ :** ಪ್ರತಿಯೊಂದು ದೊಡ್ಡ ಊರಿನಲ್ಲಿಯೂ ಮುಖ್ಯವಾದ ಒಂದು ದೊಡ್ಡ ಮಸೀದಿ ಇರುತ್ತದೆ. ಅದಕ್ಕೆ ಜುಮ್ಮಮಸೀದಿ ಎಂದು ಹೆಸರು (ಮೈವಾಸ್ತು. ೦೫೭). **ಜುಮ್ಮಾಮಸಿತ್ತಿ :** ಯಾ ಕೋಟೆಯಲ್ಲು ಯಿಹುವಲ್ಲಿ ಬೇಗನ ಜುಮ್ಮಾಮಸಿತ್ತಿ (ಎಕ್.VIII, ಸೊರಬ.೩೫೫-೦೦; 1768)

[ ←ಅರ. ಜುಮುಅ ಮಸ್ಜಿದ್; ಹಿಂ. ಜುಮಾ ಮಸಜಿದ್ ]

**ಜುಮ್ಮಿಡು, ಝೊಮ್ಮಿಡು, ಝೋಮ್ಮಿಡಂ** (ಕ್ರಿ). ಜಡವಾಗು; ನಿಷ್ಕ್ರಿಯವಾಗು; ಮರಗಟ್ಟಿದಂತಾಗು : ಕರ್ಣ ಜುಮ್ಮಿಟ್ಟುದ ಕಂಡು ಧರಣೀಶ ಹೆದೆಬಿ ಕಂಗೆಟ್ಟು (ಬಸಪು. ೩-೫೨). **ಝೊಮ್ಮಿಡು :** ಝುಮ್ಮನೆ ಬೆಮರ್ತು . . . ಝೊಮ್ಮಿಡುತ ಕರೆದನೀಶನನೇಕನಿಷ್ಠೆಯಿಂ (ಮಣಿರ. ದೇ. ೭೪-೨೦). **ಝೋಮ್ಮಿಡು :** ನೋಟಕರಾಲಿ ಝೋಮ್ಮಿಡೆ ಕರ್ಣ ತುಳುಕಿದನಂಬಿನಂಬುಧಿಯ (ಕುಮ್ಮಾವಿ. ೮-೨೦). [ ಜುಮ್ಮು₃ + ಇಡು₁ ]

**ಜುಮ್ಮಿಮರ** (ನಾ). ಒಂದು ಬಗೆಯ ಮರ : ಜುಮ್ಮಿಮರ, ಅರಮಾದಳ (ವೈಜಿಗಿ. ೭೯-೦೬೨೦). [ ಜುಮ್ಮಿ ? + ಮರ₁ ]

**ಜುಮ್ಮು₁** 'ಜೊಂಪು₁' ನೋ.

**ಜುಮ್ಮು₂** 'ಜುಂ' ನೋ.

**ಜುಮ್ಮು₃, ಜಿವಿ, ಜೊಮ್ಮು₂, ಜೋಗು₁, ಜೋಮು₂, ಜೋವು, ಝೋಮು** (ನಾ). ಮರಗಟ್ಟಿದಂತೆ ಆಗುವಿಕೆ ; ಜಡತೆ. 'ಜುಮ್ಮು ಹಿಡಿ' ಪರಾ. **ಜಿವಿ :** 'ಜಿವಿ ಹಿಡಿ' ಪರಾ. **ಜೊಮ್ಮು₂.** 'ಜೊಮ್ಮುಮ್ಮೈ' ಪರಾ. **ಜೋಗು₁ :** 'ಜೋಗೇಟು' ಪರಾ. **ಜೋಮು₂ :** 'ಜೋಮುಹಿಡಿ' ಪರಾ. **ಜೋವು :** ಜೋವು ಹಿಡಿಸು (Benumb. ಇಂಕನಿ). **ಝೋಮು :** ಏನಾರೂ ಮಾಡಿ ತಲೇನ ಬಿಗಿಯುತ್ತಿರುವ ಈ ಝೋಮನ್ನು ಬಿಡಿಸಿ, ಡಾಕ್ಟರೇ (ಮನೋನಂ.೧೦೨). 'ಝೋಮ್ಮಿಡು' ಪರಾ. [ ದೇ.೩ ತೆಲು. ಜುಮ್ಮು ]

**ಜುಮ್ಮು₄**(ನಾ). ಜೂಜು. 'ಜುಮ್ಮುಗಾರ' ಪರಾ. [ ←ಹಿಂ.ಜುವಾ ]

**ಜುಮ್ಮುಗಾರ** (ನಾ). ಜೂಜುಗಾರ; ಜೂಜಾಡುವವನು: ಜುಮ್ಮುಗಾರಗೆ ಹಮ್ಮು ಹೆಚ್ಚು (ಗಾದೆ). [ ಜುಮ್ಮು₄ + – ಗಾರ (<–ಕಾಱ) ]

**ಜುಮ್ಮುಗುಟ್ಟು** 'ಜುಂಗುಟ್ಟು' ನೋ.

**ಜುಮ್ಮುದಟ್ಟಿಸು** (ಕ್ರಿ). ಜುಮ್ಮೆನ್ನುವಂತೆ ಮಾಡು; ರೋಮಾಂಚನಗೊಳಿಸು : ಬಿಮ್ಮನೆ ಬಿಗಿಯಪ್ಪಿಕೊಂಡು ಜುಮ್ಮುದಟ್ಟಿಸಿ ಮೈಯ (ಚಂಪ್ರಸಾಂ. ೦೮-೦೬೧) ; ನಿಟ್ಟಿಸಿದರೆ ಮುತ್ತಮುದುಕಿಗಾದರು ಜುಮ್ಮುದಟ್ಟಿಸುತಿಹುದು ರೂಪವನ (ಭರಜ. ೧-೫೦); ಕಲೆಯ ತಾಣಗಳ ತುಡುಕಿ ತಾಡನಗೈದು ಜುಮ್ಮುದಟ್ಟಿಸಿ ಮೋಹಗಡಲೊಳಾಳಿಸಿದಳಂದವನ (ಕಂನವಿ. ೧೦-೯೫) ; ನಸುನಗೆಯಿಂದ ಅವರ ಕಣ್ಣು ಕಿವಿ ಮೈ ಮನಸ್ಸುಗಳಿಗೆ ಜುಮ್ಮುದಟ್ಟಿಸುವವನು (ಮಾಮಲ್ಲಿ. ೮೭). [ ಜುಮ್ಮುದಟ್ಟು + – ಇಸು₃ ]

**ಜುಮ್ಮುದಟ್ಟು** (ಕ್ರಿ). ರೋಮಾಂಚನವಾಗು; ನವಿರೇಳು; ಪುಳಕವೇರು: ನೆಗಹಿ ಮಾಲೆಯನಿಕ್ಕುವಾಗ ಗಂಡನ ಮುದ್ದುಮೊಗಗಾಣುತದೆ ಜುಮ್ಮುದಟ್ಟಿ (ಭರಚ. ೪೧-೨೭) : ಕಟ್ಟೆಚಿಕದ ಚೆಲುವನ ಕಂಡು ಮೈ ಜುಮ್ಮುದಟ್ಟಿತು ಕೆಳದಿ (ಕಂನವಿ. ೯-೧೧೫).

[ ಜುಮ್ಮು$_2$ (<ಜುಂ) + ತಟ್ಟು$_1$ ]

**ಜುಮ್ಮುಹಿಡಿ, ಜಿವಿಹಿಡಿ, ಜೋಮುಹಿಡಿ** (ಕ್ರಿ). (ಕೈಕಾಲುಗಳನ್ನು ದೀರ್ಘಕಾಲ ಒಂದೇ ರೀತಿಯಲ್ಲಿಟ್ಟುಕೊಂಡಾಗ) ಮರಗಟ್ಟಿದಂತಾಗು,-ಜಡವಾಗು: ಕೈಕಾಲುಗಳಿಗೆ ಯಾವಾಗಲೂ ಜುಮ್ಮು ಹಿಡಿಯುವುದು (ಬ್ರಹ್ಮಜೀ. ೨೩). **ಜಿವಿಹಿಡಿ:** ನನ್ನ ಕಾಲುಗಳು ಜಿವಿಹಿಡಿದವು (ಹಿಂದುಟ. ೧-೦೦). **ಜೋಮುಹಿಡಿ:** ಮನಸ್ಸಿಗೆ ಜೋಮು ಹಿಡಿದಂತಾಗಿತ್ತು (ಅಗ್ರಹ. ೧೨) ; ಬುದ್ಧಿಗೆ ಜೋಮುಹಿಡಿದಂತೆ ಲಿಂಗಣ್ಣ ತತ್ತರಿಸಿಹೋದ (ನದೀಹ. ೩೦). [ ಜುಮ್ಮು$_3$ + ಹಿಡಿ$_1$ (<ಪಿಡಿ$_1$) ]

**ಜುಮ್ಮೆ** 'ಜಿಮ್ಮೆ' ನೋ.

**ಜುಮ್ಮೆನ್$_1$** (ಕ್ರಿ). ಜುಂ ಎಂದು ಶಬ್ದಮಾಡು; ಮೊರೆ: ನೊಣಗಳ್ಮುಸುಂಕಿ . . . ದುರ್ಗಂಧಕ್ಕೆಳಸಿ ಮುನಿಪತಿಯನಗಲದೆ ಸುಳಿವುವು ಜುಮ್ಮೆಂದು ಕಂಡವರ್ವೆಸುವಿನಂ (ಧರ್ಮಾಮೃ. ೪-೭೬).

[ ಜುಮ್$_1$ + ಎನ್$_1$ ]

**ಜುಮ್ಮೆನ್$_2$** (ಕ್ರಿ). ರೋಮಾಂಚನವಾಗು; ಪುಳಕವುಂಟಾಗು: ಆ ದೃಶ್ಯವನ್ನು ನೋಡಿ ಅವನ ಮೈ ಜುಮ್ಮೆಂದಿತು (ರೂಢಿ).

**ಜುಮ್ಮು ಜುಮ್ಮೆನ್** (ದ್ವಿರುಕ್ತಿ): ಆಗಮುವಧ್ಯಾತ್ಮವಳವಟ್ಟು . . . ಭೋಗಿಯೋಗಿಗಳೆದೆ ಜುಮ್ಮುಜುಮ್ಮೆನೆ ನೇಮವಾಗಿ ಸೊಲ್ಲಿಸುವೆ (ಭರಚ. ೧-೧೪). [ ಜುಮ್$_2$ (<ಜುಂ) + ಎನ್$_1$ ]

**ಜುಮ್ಮೇರು** 'ಜೊಮ್ಮೇಱು' ನೋ.

**ಜುಮ್ಲಾ** 'ಜುಮಲಾ' ನೋ.

**ಜುಮ್ಲೆದಾರ** (ನಾ). ನೂರು ಕಾಲಾಳಂಗಳ ದಳಪತಿ,-ನಾಯಕ: ಎರಡು ಹವಾಲ್ದಾರರಿಗೊಬ್ಬ ಜುಮ್ಲೆದಾರನೂ . . . ಇರುತ್ತಿದ್ದರು (ಛತ್ರಶಿ. ೧೩೨). [ ←ಮರಾ. ಜುಮ್ಲೇದಾರ್ ]

**ಜುರ್** 'ಜುಱ್' ನೋ.

**ಜುರಮಾನು** 'ಜುರ್ಮಾನೆ' ನೋ.

**ಜುರಿ$_1$** 'ಸುರಿ$_1$' ನೋ.

**ಜುರಿ$_2$, ಜುರಿ, ಝುರಿ** (ನಾ). (ಉಕ) ೧. ಬೀಡಿ, ಸಿಗರೇಟು ಮೊದಲಾದುವುಗಳ ಹೊಗೆಯನ್ನು ದೀರ್ಘವಾಗಿ ಎಳೆದುಕೊಳ್ಳುವಿಕೆ; ಎಳೆತ; ದಮ್ಮು: ಸಿಗರೇಟು ಒಂದೇ ಜುರಿಗೆ ಅರ್ಧದಕ್ಕಿಂತಲೂ ಹೆಚ್ಚು ಸುಟ್ಟುಹೋಯಿತು (ಶ್ರೀಕಾಂತ. ೬). ೨. ಜೀಕ; ಒಂದು ಸಲ ತೂಗಿ ಬಿಡುವಿಕೆ: ತೊಟ್ಟಿಲಕ್ಕೆ ನಾಲ್ಕಾರು ಜುರಿಗಳನ್ನು ಕೊಟ್ಟನು (ಜೀವಪ್ರ. ೩೧). **ಜುರಿ:** ೧. ಹೊಗೆಬತ್ತಿಯನ್ನು ಒಂದು ಜುರಿ ಎಳೆದು ಮುದುಕನು ಕೆಮ್ಮತೊಡಗಿದನು (ರೂಢಿ). ೨. ಜೋಕಾಲಿಯ ಜುರಿಯಿಂದ ಮರದ ಕೊಂಬೆ ಜಿರುಗುಡುತ್ತಿತ್ತು (ರೂಢಿ). **ಝುರಿ:** ೨. ಹೊಡೆದ ಝುರಿಗೆ ಜೋಕಾಲಿ ಏರಿ ಅಡರ್ಯಾವ ಮರಕ ಹಾರಿ (ಹಾಡುಪಾ. ೩೪-೧೧).

**ಜುರಿ ಹಾಕು** = ತೂಗಾಡು; ಒಲೆದಾಡು: ಅತ್ತೊಮ್ಮೆ ಇತ್ತ ಕಡೆಗೊಮ್ಮೆ ಜುರಿ ಹಾಕುವಂತಿದ್ದಿತು (ಬಿಗಾಳಿ. ೮೬). [ ? ]

**ಜುರಿಕೆ, ಝುರಕಿ, ಝುರಿಕೆ, ಝುರಂಕಿ, ಝುರುಕೆ** (ನಾ). = ಜುರಿ$_2$ ೧: ಚಿಲುಮೆಯನ್ನು ಹೊತ್ತಿಸಿ ಒಂದು ಜುರಿಕೆಯನ್ನು ಹೊಡೆದು ಇನ್ನೊಬ್ಬನಿಗೆ ಕೊಡುವನು (ಕಮ್ಮಟ. ೦೫). **ಝುರಕಿ:** ಬೀಡಿಯ ಝುರಕಿಯನ್ನೆಳೆದ (ಮೂರುದಾ. ೨೯೨). **ಝುರಿಕೆ:** ಮಾತನಾಡದೆ ಸುಮ್ಮನೇ ತಂಬಾಕದ ಝುರಿಕೆ ಎಳೆಯುತ್ತ ಕುಳಿತನು (ಅಶೋಕ. ೫೫). **ಝುರುಕಿ:** ಚೆನ್ನ ಆರೇಳು ಝುರುಕಿ ಚೆನ್ನಾಗಿ ಜಗ್ಗಿದ (ಚೆನ್ನಹಿಂ. ೩೮) : ಒಂದು ಬಿಳಿಬತ್ತಿ ತೆಗೆದು ಹಚ್ಚಿಕೊಂಡು ಆಪ್ಯಾಯಮಾನವಾಗಿ ಝುರುಕಿ ಎಳೆದು ಹೊಗೆಯುಗುಳಿದ (ದೀಪಹ. I, ೧೫೬). **ಝುರುಕೆ:** ರೈತನು ತಂಬಾಕದ ಝುರುಕೆಯನ್ನು ಎಳೆದು ಕೆಮ್ಮಹತ್ತಿದನು (ಮಡಮ. ೩೦೦). [ ← ಮರಾ. ಝುರಕಾ ]

**ಜುರು** 'ಜುಱ್' ನೋ.

**ಜುರುಮಾನೆ** 'ಜುರ್ಮಾನೆ' ನೋ.

**ಜುರ್ಜಣ** (ನಾ). ಆಕ್ಷೇಪಣೆ (?): ಪರಿಮಳಿಲ್ಲದ ಕಣಗಲಹೂ ಮುಡಿದು ಬರಿಯ ಜುರ್ಜಣಕೆ ಒಳಗಾದೆ (ನನ್ನೂರು. ೧೨). [ ? ]

**ಜುರ್ಮಾನೆ, ಜುರಮಾನು, ಜುರುಮಾನೆ, ಜುಲುಮಾನೆ, ಜುಲ್ಮಾನೆ** (ನಾ). ತಪ್ಪಿಗಾಗಿ ತೆರಬೇಕಾದ ಹಣ,-ದಂಡ: ಅದರ ತರುವಾಯ ನಡೆಯುವ ಆಪಾದನೆಗೆ ಅಯಿವತ್ತಾರು ರೂಪಾಯಿಗೆ ಮೀರದ ಜುರ್ಮಾನೆಗೂ ಗುರಿಯಾಗತಕ್ಕದ್ದು (ಗ್ರಾಮೂಕ.೪, ೬೬೦೮). **ಜುರಮಾನು:** (೬). **ಜುರುಮಾನೆ:** ಕಳೆದ ತಿಂಗಳಲ್ಲಾದ ಜುರುಮಾನೆ ಎಷ್ಟು (ಕಸಡ. ೪೯): ೨ ಲಕ್ಷ ೪೦ ಸಾವಿರ ರೂಪಾಯಿಗಳನ್ನು ಜುರುಮಾನೆಯಾಗಿ ಜನರಿಂದಲೇ ವಸೂಲು ಮಾಡುವ ಏರ್ಪಾಡು ಮಾಡಿದರು (ರಾಜವ. ೩೬). **ಜುಲುಮಾನೆ:** ಅವರ ಲೆಕ್ಕದಿಂದ ಕಳವಾದ ಸಾಮಾನುಗಳ ಕ್ರಯವಲ್ಲದೆ ಜುಲುಮಾನೆ ಕೂಡ ವಜಾ ಆಗುವುದು (ರಕ್ತರೂ. ೮೯). **ಜುಲ್ಮಾನೆ:** ಅವನಿಗೆ ಹತ್ತು ರೂಪಾಯಿ ಜುಲ್ಮಾನೆ . . . ವಿಧಿಸಲಾಯಿತು (ನಾಡಿಗೇ. ೯೪): ಹಾಗಾದರೆ ಜುಲ್ಮಾನೆ ಬಿಸಾಡು (ಪುನರು. ೨೮೬): ಆ ದಿನ ಅದನ್ನು ಹಿಂತಿರುಗಿಸದಿದ್ದರೆ ಜುಲ್ಮಾನೆ ಕೊಡಬೇಕಿತ್ತು (ಕೀಲುಗೊಂ. ೧೧೬).

[ ← ಅರ. ಜುರ್ಮಾನಹ್ ; ಪಾರ. ಹಿಂ. ಜುರ್ಮಾನಾ ]

**ಜುರ್ರನೆ** (ಅ). ಜುರ್ ಎಂದು ಶಬ್ದವಾಗುವ ಹಾಗೆ: ತಿರ್ರನೆ ತಿರುಗುತ ಕರ್ರನೆ ಕವಿಯುತ ಜುರ್ರನೆ ಜರಿಯುತಲಿ (ಹಮಜ. ೦೯).

[ ಜುರ್ (<ಜುಱ್) + ಅನೆ$_1$ ]

**ಜುಲಾಬು** (ನಾ). ಭೇದಿ; ವಿರೇಚನ: ಎರಡು ಮೂರು ಸಲ ಹದ ಜುಲಾಬಾಗಿ ಹೊಟ್ಟೆ ಸರಿಯಾಗುವುದು (ಮನಮ. ೧೦) ; ಅವನಿಗೆ ವಾಂತಿ ಜುಲಾಬು ಪ್ರಾರಂಭವಾಯಿತು (ಪಂಜಪಂ. ೧೭೬); ಆಚಾರ್ರು 'ಜುಲಾಬಿ'ಗೆ ಕೊಡುವುದರಲ್ಲಿ ಅಗ್ರಗಣ್ಯರು (ನನ್ನೂರು. ೦೯೫).

[ ←ಮರಾ. ಹಿಂ. ಜುಲಾಬ್ ; ಅರ. ಜುಲ್ಲಾಬ್ ]

**ಜುಲಿಪೆ$_1$, ಜುಲುಪಿ, ಜುಲುಪೆ$_1$, ಜುಲ್ಪಿ, ಜುಲ್ಪು** (ನಾ). ೧. ಚೌಲಕರ್ಮದಲ್ಲಿ (ಮುಂದಲೆ ಮತ್ತು ಕಿವಿಗಳ ಪಕ್ಕದಲ್ಲಿ) ಕತ್ತರಿಸದೆ ಉಳಿಸುವ ತಲೆಗೂದಲು; ಶಿಖೆ; ಕಾಕಪಕ್ಷ: ಮಾರವಾಡಿಗಳು . . . ಗಂಡಸರು ತಲೆಯ ಮೇಲೆ ಚಂಡಿಕೆಯಿಲ್ಲದೆ ಜುಲಿಪೆಗಳನ್ನು ಕಾಯುವರು (ಕಭಾಗ. ೦೦೫). **ಜುಲುಪಿ:** ೧. ಮುಂದಲೆಯಲ್ಲಿ ಅವನಿಗೆ ಜುಲುಪಿಗಳಿದ್ದಿಲ್ಲ (ಸಿವಭಾ. ೬೫); ಆ ಹುಡುಗನ ಎರಡೂ ಕೆನ್ನೆಗಳ ಮೇಲಿನ ಜುಲುಪಿಗಳು ಗಾಳಿಗೆ ಹಾರಾಡುತ್ತಿದ್ದುವು (ಮುಂಬಯಿ. ೫-೩೦೦) ; ಕತ್ತರಿಯನ್ನು ತೆಗೆದುಕೊಂಡು ತನ್ನ ಎಳೆಯ ಜುಲುಪಿಯನ್ನು ಕತ್ತರಿಸಿಕೊಂಡು ಬಿಟ್ಟ (ದೀಪಹ. I, ೩೨). **ಜುಲುಪೆ$_1$:** ೧. ಜುಲುಪೆಯನ್ನು ಕತ್ತರಿಸಿಕೊಂಡು ಪುಣೆಯಿಂದ ಪರಾಗಂದಾ ಆಗಿ ಬಂದ ಕಥೆಗಳನ್ನು ಕೇಳುತ್ತಿದ್ದ (ದೀಪಹ. II, ೦೯೮) ; ಮುಂಗೈಯ ಚಾಚಿ ಜುಲುಪೆಗಳ ಜಗ್ಗಿದನು (ಕನ್ನಜಾ. ೧೮೩). **ಜುಲ್ಪಿ:** ೧. ಕೆಲವಾತಗಳ ಮುಖಗಳಿಗೆ ಗಡ್ಡ ಬವರಿ ಮೀಸೆ ಜುಲ್ಪಿ ಹಣೆಯ ಉಂಗುರಗುರುಳು (ಮಂತ್ರಶ. ೯೧-೨). **ಜುಲ್ಪು:** ೨. ನೆತ್ತಿಯ ಮೇಲಿನ ಕೂದಲು: ಅದರ ನೆತ್ತಿಯ ಜುಲ್ಪಿನ ಕೆಳಗೆ . . . ಇಳಿಬಿಟ್ಟಿದ್ದ ಗೆಜ್ಜೆಯ ಕುಚ್ಚಿನಿಂದ ಗಲಿರುಗಲಿರೆಂದು ಕಿಂಕಿಣಿನಾದ ಹೊಮ್ಮುತ್ತಿತ್ತು (ಮಲಿಮ. ೪೨೨).

[ ←ಪಾರ. ಹಿಂ. ಜುಲ್ಫ್; ಮರಾ. ಜುಲೂಪ್, ಝುಲೂಪ್ ]

**ಜುಲಿಪ್ಪೆ₂** (ನಾ). ಒಂದು ಬಗೆಯ ಮರ : ಜುಲಿಪೆ, ಆಲಿವ್ ಎಣ್ಣೆ (ವೃಜಿಗಿ. ೫೮-೧೧೫೭). [ ? ]

**ಜುಲುಂ** 'ಜುಲುಮೆ' ನೋ.

**ಜುಲುಪಿ** 'ಜುಲಿಪ್ಪೆ₁' ನೋ.

**ಜುಲುಪ್ಪೆ₁** 'ಜುಲಿಪ್ಪೆ₁' ನೋ.

**ಜುಲುಪ್ಪೆ₂** (ನಾ). ವೇಶ್ಯೆಯ ಮಗಳು ಮೈನೆರೆದ ಮೇಲೆ ಆಕೆಯನ್ನು ಒಬ್ಬನಿಗೆ ಸ್ವಾಧೀನಪಡಿಸುವ ಸಮಾರಂಭ ; ಗೆಜ್ಜೆಪೂಜೆ : ಮೊನ್ನೆ ಅಕ್ಕಸಾನಿ ಮಗಳ ಜುಲುಪೆಯ ಕಾಲಕ್ಕೆ ನಿಮ್ಮ ಶ್ರೇಯಾಂಸನೇ ಅವರ ಮನೆಯಲ್ಲಿ ಕಾಗದದ ಮಲ್ಲಿಗೆಯ ಬಳ್ಳಿ ತಯಾರಿಸಿದ್ದನಂತೆ (ಶ್ರೇಯಾಂಸ. ೬೯).
[ ←ಮರಾ. ಝುಲವಾ ]

**ಜುಲುಮಾನೆ** 'ಜುರ್ಮಾನೆ' ನೋ.

**ಜುಲುಮು** 'ಜುಲುಮೆ' ನೋ.

**ಜುಲುಮೆ, ಜುಲುಂ, ಜುಲುಮು, ಜುಲ್ಮೆ** (ನಾ). ೧. ಒತ್ತಾಯ ; ಬಲವಂತ ; ಬಲಾತ್ಕಾರ ; ಆಗ್ರಹ : ಕರ್ತವ್ಯಗಳೆಂದರೆ ಜುಲುಮೆಯಿಂದ ಮಾಡಬೇಕಾದ ಕೆಲಸಗಳೆಂದು ನಾವೇಕೆ ತಿಳಿದುಕೊಳ್ಳಬೇಕು (ಜೀಪಾಠ. ೨೩). **ಜುಲುಂ:** ೨. ಆಕ್ರಮಣ ; ಅತ್ಯಾಚಾರ : ಸರಕಾರದವರ ಮೇಲೆ ಜುಲುಂ ನಡೆಸೋಣ(ಗ್ರಾಮಾಕ.೧೭೯). **ಜುಲುಮು:** ೨.ಜುಲುಮು, ಜಬರದಸ್ತಿ, ಪೆಟ್ಟು, ಕೊಲೆ ಮಾಡಿದವರಿಗೆ ಚೆನ್ನಾಗಿ ಶಿಕ್ಷೆಮಾಡಿ (ಮಹಾಪಂ. II, ೬೩); ಬ್ರಿಟಿಷ್‌ಸರಕಾರದ ಆಡಳಿತದಲ್ಲಿ ನಾವು ಹೆಚ್ಚಾದ ಜುಲುಮನ್ನು ಅನುಭವಿಸುತ್ತಿಲ್ಲ (ದಾದಾಸ. ೨೫). **ಜುಲ್ಮೆ:** ೧. ಬರಿ ಮೈಮೇಲೆ ಬಡಿಯುವುದು, ಜುಲ್ಮೆಯಿಂದ ಸಲಾಂ ಮಾಡಲು ಹಚ್ಚುವುದು (ಕಾಂಗ್ರೆಸ. ೧೨). ೨. ಗೆದ್ದ ಬಳಿಕತ್ತಲು ಯುಧಿಷ್ಠಿರನ ಜುಲ್ಮೆಯಿಂ ಗೆದ್ದು ಮಾದ್ರೇಶ ನಿರಲ್ (ತುರಂಗ. ೪೫-೧೬) ; ಜುಲ್ಮೆಯಿಂ ಮುತ್ತಿರ್ದ ಪಟುಭಟರು ದ್ರೋಣನಂ ಬಲ್ಮೆಯಿಂ . . . ಅಡ್ಡಗಟ್ಟಲು (ತುರಂಗ. ೪೯-೧೪).

**ಜುಲುಮೆ ಮಾಡು, ಜುಲುಂ ಮಾಡು** = ಒತ್ತಾಯ ಮಾಡಂ ; ಬಲಾತ್ಕರಿಸು : ತಾನು ಆಗ ಚಹಕ್ಕಾಗಿ ತಾಯಿಗೆ ಹೆಚ್ಚು ಜುಲುಮೆ ಮಾಡಲಿಲ್ಲ (ಗಂಮಾಯಿ. ೦೫) ; ಜುಲುಂಮಾಡಿ ಎರಡು ತುತ್ತು ನುಂಗಿದರೆ ಮರುಕ್ಷಣದಲ್ಲೇ ವಾಂತಿಯಾಗಿಬಿಡ್ತಿತ್ತು (ಮನೋನಂ. ೭೮).
[ ←ಅರ. ಜುಲ್ಮ್; ಹಿಂ. ಜುಲ್ಮ್ ; ಜುಲುಮ್; ಮರಾ. ಜುಲೂಮ್ ]

**ಜುಲ್ಪಿ** 'ಜುಲಿಪ್ಪೆ₁' ನೋ.

**ಜುಲ್ಪು** 'ಜುಲಿಪ್ಪೆ₁' ನೋ.

**ಜುಲ್ಮಾನೆ** 'ಜುರ್ಮಾನೆ' ನೋ.

**ಜುಲ್ಮೆ** 'ಜುಲುಮೆ' ನೋ.

**ಜುವ್ವಾಕೋರ** (ನಾ). ಜೂಜುಗಾರ : ಹೋಗಲಿ, ನೇರವಾಗಿ ಆದರೂ ಇದ್ದಾನಾ ? ಶುದ್ಧ ಜುವ್ವಾಕೋರ (ಮಲ್ಲಿ. ೮೮).
[ ←ಹಿಂ. ಜುವಾಖೋರ್ ]

**ಜುವ್ವಾರೆ** (ನಾ). ಒಂದು ಬಗೆಯ ಮರ ; ಹಬ್ಬೆಮರ ; ಮಂತ್ರಿಮರ : ವೇತಸ್ವಾನ್ ಬಹುವೇತಸೇ ಬಹಳ ಮತ್ತೀಮರಗಳುಳ್ಳದ್ದು. ಪ್ರಬ್ಬಲಿ ಗಿಡಗಳುಳ್ಳದ್ದು. ಇದನ್ನು ಜುವ್ವಾರೇಕಾಡೆಂದು ಕೆಲವರಾರಣ್ಯಕರನ್ನುವರು (ಸಿದ್ಧಾಂತಿ. ೮೪). [ ? ]

**ಜುವ್ವಿ** (ನಾ). ಒಂದು ಬಗೆಯ ಮರ : "ಪ್ಲಕ್ಷಃ, ಜಟೀ, ಪರ್ಕಟೀ ೩ ಜುವ್ವೀಗಿಡ, ಬಸರೀಗಿಡ, ಕಬ್ಬಸರೀಗಿಡ" (ಸಿದ್ಧಾಂತಿ. ೧೦೪).
[ ದೇ.॥ ತಮಿ. ಚುವಿ ; ಮಲ. ಚುವನ್ನಾಲ್ ; ತೆಲು. ಜುವ್ವಿ ; ಕೋಲಾ. ಜುವಿ ]

**ಜುಹು** (ನಾ). ಅರ್ಧಚಂದ್ರಾಕಾರದ ಹೋಮದಲ್ಲಿ ಬಳಸುವ ಮಂತ್ರಾಂಗದ ಸೌಟು : "ಧ್ರುವಾ, ಉಪಭೃತ್, ಜುಹೂ, ಸ್ರುವಃ ೪ —ಸ್ರುಚಃ ಭೇದಾ ಸ್ರುಕ್ಕುಯೆಂಬ ಆಜ್ಯಗ್ರಹಣಪಾತ್ರದ ಆಯಾ ನಾಮಗಳು" (ಸಿದ್ಧಾಂತಿ. ೧೯೦); ವಿಹಿತಸಂಸ್ಥಾಪಿತ ಮಖಾವಳಿಗಳಿಂದೆ ಶತ ಜುಹುಗಳಿಂ ವೈಕಂಕತದ ಷಷ್ಟಿಸ್ರುಕ್ಸ್ರುವನಿವಹದಿಂದೆ (ಜೈಮಿಭಾ. ೩೩-೩೮).
[ ಸಂ. ಜುಹೂ ]

**ಜುಳಿಗೆ** 'ಜೂಳಿಗೆ' ನೋ.

**ಜುಳುಕು₁** 'ಝುಂಳಂಕಂ' ನೋ.

**ಜುಳುಕು₂** (ನಾ). ಸಂದೇಹ ; ಶಂಕೆ : ಇಕ್ಕುವಾತನು ಮನದಲಿ ಅಳುಕು ಜುಳುಕಿಲ್ಲದೆ ಇಕ್ಕುವುದು (ಗಣಭಾ. ೨೭೫-೨). [ ? ]

**ಜುಳುಜುಳು** (ನಾ). ಒಂದು ಅನುಕರಣ ಶಬ್ದ ; ನೀರು ಹರಿಯುವಾಗ ಉಂಟಾಗುವ ಶಬ್ದ : ಜುಳುಜುಳು ಹರಿಯುತ್ತಿರುವ 'ಅಗಸರ ಘಡಿ' ಯಲ್ಲಿ ನೀರಿನೊಡನೆ ಚಲ್ಲಾಟವಾಡುತ್ತಿದ್ದನು (ರಂಗರೋ. ೩೩).

**ಜುಚ್, ಜುರ್, ಜುರು** (ನಾ). ಒಂದು ಅನುಕರಣ ಶಬ್ದ : ಬಿಸಿನೆತ್ತರ ಜುಚ್ಚೆಂದು ಪೀರಿಯಾನಂದಿಸುತ ವಲಿದು (ವೀರಮ. ೪-೧೫). **ಜುರ್:** 'ಜುರ್ರನೆ' ಪರಾ. **ಜುರು:** (೬).

**ಜುಚುಜುಚ್, ಜುರುಜುರು** (ದ್ವಿರುಕ್ತಿ): ಅವಧಾನ ಚಿತ್ತದೊಳೊಂದಿ ಯಾರೋಗಿಸುತ ಜುಚುಜುಚ್ಚೆಂದು ಸುಚಿವುತ ಘಟ್ಟಘಟ್ಟನೆ ತೇಗುತೊಲೆ ವುತ್ತ (ಬಸವು. ೫೯-೧೯) ; ರಕ್ಕಸನ ರಕ್ತವ ಕುಡಿದು ಗರ್ರೆಂದು ತೇಗಿದವ ನೊಡಲಿಂದಲ್ಲಲ್ಲಿ ಜುರುಜುರ್ರೆನುತ ನೆತ್ತರ್ . . . ಸುರಿಯಲು (ವೀಕ್ಷಪು. ೩-೬-೨೪) ; ಬಾಯಲ್ಲಿ ಬೆಟ್ಟಟ್ಟರೂ ಜುರುಜುರು ಚೀಪುವ . . . ಪ್ರಾಣಿ ಯಾಗಿದ್ದ (ದೀಪಹ. II, ೦೪).

**ಜುಟಿ** 'ದುಟಿ' ನೋ.

**ಜುಟುಜುಟಿಸು** 'ದುಟುದುಂಟಿಸು' ನೋ.

**ಜುಟುಜುಟು** (ನಾ). ಹೊರಸೂಸುವಿಕೆ : ಕಟಿಯ ಮಾಂಸದ ಕೋಳಿ ಕೋಣನ ಮುಟಿದಲೆಯ ಘ್ರಿಸಲಿನ ರಕುತದ ಜುಟುಜುಟಿನ ದೊಂಡೆ ಯಲಿ ಕಲಸಿದ ಕೂಳ ಮುದ್ದೆಗಳ (ಕುಮಾರಹರ್ರ. ೭೮೫. ಪರಿ. ೨೮೫).
[ ? ]

**ಜೂ₁** (ನಾ). ಒಂದು ಅಳತೆಯ ಪ್ರಮಾಣ ; ಅಂಗುಲದ ಒಂದು ಭಾಗ : ಎಂಟು ಲಿಕ್ಷಾಗಳಿಂದ ಒಂದು ಜೂ, ಎಂಟು ಜೂಗಳಿಂದ ಒಂದು ಯವ (ಯವ-ಮಧ್ಯ), ಎಂಟು ಯವಗಳಿಂದ ಒಂದು ಅಂಗುಲವಾಗುತ್ತದೆ (ಜೈನಪ. ೩೦೮). [ <ಪ್ರಾ. ಜೂಅ. / ಸಂ. ಯೂಕಾ ]

**ಜೂ₂** (ನಾ). ಪ್ರಾಣಿ ಸಂಗ್ರಹಾಲಯ: ಅದೊಂದು ಕಟಕಟೆಯಿಲ್ಲದ ಜೂ, ಆ ಕಾಡುಮೃಗಗಳೊಂದಿಗೆ ನಾನೊಂದು ಕಾಡುಮೃಗ (ನಾಡಿಗೇ. ೬).
[ ←ಇಂ. Zoo ]

**ಜೂಂಟ, ಜೂಟ₁** (ನಾ). ೧. ಮೋಸಗಾರ ; ವಂಚಕ : ನಿನಗಾವೆಡೆ ಯೊಳಮಲ್ಲದ ಜೂಂಟರಂ ನಂಟರೆಂದು ನಂಬಿ ಮೋಹಮನುಂಟು ಮಾಡಲುಂ ಧರ್ಮಮಂ ಗೆಂಟುಮಾಡಲುಂ ಬೇಡ (ಜೀವಸಂ. ೪-೧೧೦ ವ). **ಜೂಟ₁ :** ೨. ಸುಳ್ಳು ; ಸಟೆ : (೬).
[<ಪ್ರಾ. ಜುಟ್ಠ./ಮರಾ. ಝೂಟ್ ; ಹಿಂ. ಝೂಠ್, ಝೂಠಾ ]

**ಜೂಕ** (ನಾ).[ಜ್ಯೋತಿ] ತುಲಾರಾಶಿ : ತರಣಿಸುತ ಜೂಕದಲಿ ಮೆಟಿದಿರೆ ಪರರ ಮನೆಗಳನುಳಿದು ಚಂದ್ರನುಯಿರಲು ಪುತ್ರೋದಯಗಳಾದವು ಭೂಪ ದಶರಥಗೆ (ಕೌಶಿರಾ. ೧-೬೬). [ ಸಂ. ]

**ಜೂಕರಿಸು** 'ಜುಂಗರಿಸು' ನೋ.

**ಜೂಗ್₁** (ನಾ). ಒಂದು ಬಗೆಯ ಪಕ್ಷಿ: ಉರಿಗಣ್ಣ ಬೆಳ್ಳಕ್ಕಿ ವಲಿಯಂ ಚಿಟ್ಟೆ ಜೂಗ ಹದ್ದೆಂಬಿವಂ ಸಾಳುವಂಗಳು ನೆಗೆದು ತಾಗಿ ಹೊಡೆಹೊಡೆದಿಳಿ ಯೊಳಿಕ್ಕಿದಡೆ ಹಕ್ಕಿಗಳ ಮಳೆಗಟಿಯುವಂತಾದುದು (ಹಜಿಲಾ. ೫-೪೩).
[ ? ]

**ಜೂಗ$_2$, ಜೋಗ$_3$** (ನಾ). ಒಂದು ಬಗೆಯ ನಾಯಿ: ತರವೇಟ್ ಸಾಳುವ ವೇಗನಂ ತೊಗರನಂ ಹೆಗ್ಗಾಳನಂ ಜೂಗನಂ (ನಳಚಂ. ೬೬); ಹಂದಿಗೆ ಸಾಳುವಂ ಮರೆಗೆ ಜಾಯಿಲನೇಣಕುಲಕ್ಕೆ ಚಂಚುವಾಲಂ ದಣಿದಿರ್ದ ಕೊಂಡಗುಟಿಗೀ ತೊಗರಂ ರುರುಸಂಕುಳಕ್ಕೆ ಜೂಗಂ ದಿಟಮಲ್ತು ಮಾರಿಯಲೆ (ದಶಕು. ೨-೧೦೯). **ಜೋಗ$_3$:** ಸಾಳುವನ ರಘುಂಕಿಸಿ ಜೋಗನ ಬಾಯ ಬಾಡುವುಂ ಸಲೆ ನಿಲೆ ಕೋದು ಚಂದ್ರನ ಮೊಲಕ್ಕೆಣೆಯಪ್ಪಿನ ಮಾಟಿಪೋಯ್ತು . . . ಠಕ್ಕಿನದೊಂದು ಪೆರ್ವೊಲಂ (ಸೂಕ್ತಿಸು. ೩-೨೨೨) : ಸರಳು ಕವಲಂಬುಗಳು ಬಡಿಗೋಲುರುವ ಸಾಳುವ ಡೇಗೆ ಸಿವ್ವಂಗಿಗಳು ಜೋಗಗಳಾ ಥರಥರದಿ ಪಿಡಿಪಿಡಿದು (ಅನಂತಾ. ೩-೩-೬). [ ? ]

**ಜೂಗರ, ಜೂಗಳ** (ನಾ). ೧. ತೂಕಡಿಕೆ. 'ಜೂಗರಿಸು' ಪರಾ. ೨. ಜಡತನ ; ಆಲಸ್ಯ : ಎಚ್ಚರವಾಯಿತು. ಆದರೆ ಕಣ್ಣು ಬಿಡಲು ಜೂಗರ (ತುರಾಯಿ. ೫೮). **ಜೂಗಳ:** ೧. 'ಜೂಗಳಿಸು' ಪರಾ. [ ? ]

**ಜೂಗರಿಸು, ಜೂಕರಿಸು, ಜೂಗಳಿಸು, ಸೂಗುರಿಸು$_2$** (ಕ್ರಿ). ೧. ತೂಕಡಿಸು : ಸರ್ವಕಾಲದಲ್ಲಿಯೂ ಜೂಗರಿಸುವ ನಿದ್ರೆಯಂ ಮಾಡುತ ಲಿರುವವು ಪಿತ್ತ ಪ್ರಕೃತಿಗಳು (ಸೌಗಂಧಿ. ೩೦೯-೧೭): ಮಿಕ್ಕೆಲ್ಲರಂತೆ ನಾನು ಹಾಯಾಗಿ ಕೊನೆಯ ಪಕ್ಷ ಆರುಘಂಟೆಯವರೆಗಾದರೂ ಜೂಗರಿಸುತ್ತ ಸುರುಟಿಕೊಂಡಿರಬಹುದಾಗಿತ್ತು (ನಿಬಂಧ. II, ೩೨೬); ನಾವಿನ್ನೂ ಹಾಸಿಗೆಯ ಮೇಲೆ ಜೂಗರಿಸುವುದನ್ನು ನೋಡಿ . . . ಲಕ್ಷಣವಾಯ್ತು ಎಂದಳು (ಮುಚ್ಚಿಟಾ. ೨). ೨. ನಿಧಾನವಾಗಿರು ; ಆಲಸ್ಯದಿಂದ ಕೂಡಿರು ; ಜಡತೆಯಿಂದ ಕೂಡಿರು: ಹಗಲಿನ ಕೆಲಸ ವಿಧಿಯಿಲ್ಲದೆ ಹೇಗೋ ಜೂಗರಿಸಿ ಕೊಂಡು ಸಾಗುತ್ತಿತ್ತು (ರಂಗನಾ. ೯೧); ಇವನು ಹಗಲೆಲ್ಲಾ ಜೂಗರಿಸುತಾ ಯಾವ ಕೆಲಸವನ್ನೂ ಮಾಡದೆ ಜಡನಾಗಿ ಕೂತಿರುತಿದ್ದ (ಸುಮಚ. ೩೨). **ಜೂಕರಿಸು :** ೨. ಬಂಧನಕ್ಕೆ ಬಂದಾನೆಯಂತೆ ಜೂಕರಿಸಿ (ಧರ್ಮಾಮೃ. ೧-೧೬೮). **ಜೂಗಳಿಸು:** ೧. ಕಾವಲಿನ ರೋಮುಕಶತಾಧಿಪತಿ ಕುದುರೆಯಲಿ ಜೂಗಳಿಸೆ (ಗೊಮ್ಮಟಿ. ೧೩-೩೪೫). **ಸೂಗುರಿಸು$_2$ :** ೨. ಸೂಗುರಿಸಿ ರ್ಘೊಮ್ಮಿನಲಿ ಮುಂದಕೆ ಬಾಗಿ ಬಿದ್ದನು . . . ನಕುಳನು (ಕುವ್ಯಾಕ. ೪-೧೫); ತೂಗುವೊಡಲರೆಮುಚ್ಚುಗಂಗಳ ಸೂಗುರಿಸುವಂಗದಲಿ . . . ರವಿಸೂನು ಮೈಮುಟಿದ (ಕುವ್ಯಾಕ. ೧೧-೩೦). [ ಜೂಗರ + – ಇಸು$_3$ ]

**ಜೂಗಳ** 'ಜೂಗರ' ನೋ.

**ಜೂಗಳಿಸು** 'ಜೂಗರಿಸು' ನೋ.

**ಜೂಗಾಡು** 'ತೂಗಾಡು' ನೋ.

**ಜೂಗಾಯಿ** (ನಾ). ಒಂದು ಬಗೆಯ ಖಾದ್ಯ,–ಭಕ್ಷ್ಯ: ಮಿಗೆ ಪಾಲೋಗರ ಬೋನವಿಡ್ಡಲಿಗೆಯಂ ಜೂ[ಪಾಠಾಂ. ಜೋ]ಗಾಯಿ ಪಾಲುಂಡೆ ಮಂಡಗೆ . . . ಭಕ್ಷ್ಯಚಯಮಂ ತಂದಿಕ್ಕಿದರ್ಕರ್ಬಂತೆಯುರ್ (ಧರ್ಮಾಪ. ೨-೫೪). [ ? ]

**ಜೂಗು** 'ತೂಂಕಂ$_1$' ನೋ.

**ಜೂಜಕ್ಕಿ** (ನಾ). ಒಂದು ಬಗೆಯ ಮೂಲಿಕೆ : ಜೂಜಕ್ಕಿ ಸಮೂಲವನ್ನು ಮಜ್ಜಿಗೆಯಲ್ಲಿ ತೆಗೆದುಕೊಳ್ಳೆ ಬಿಳಿದು ಹೋಗುವುದು ಮಾಣ್ಗುಂ (ವಿವ್ಮವಿ.೪). [ ? ]

**ಜೂಜಲು** (ನಾ). ಸುಕ್ಕು (?): ಹಣೆಯ ಜೂಜಲ[ಪಾಠಾಂ. ಜೂಬಿನ] ಜೂಲುಗೂದಲ ಕಣುಗಿಡಿಯ ಕಡು ಕಾಹುರದ ಸಿಂಗಣಿಕಗಳನರ್ಬುದವ ನಶಿಬಲ ತಾರ ತೋಟಿಸಿದ (ತೊರರಾ. ೪-೭-೨೩). [ ? ]

**ಜೂಜಾಟ** 'ಜೂದಾಟ' ನೋ.

**ಜೂಜಾಟಿಕೆ** (ನಾ). = ಜೂದಾಟ : ಜೂಜಾಟಿಕೆ ಸೂಳೆಬಂಟಿಕೆ ರುಣದ ಸಂವಾಜ ಪೆರ್ಗುಡಿಗಳ ಚರ್ಚೆ ರಾಜವೀಧಿಯೊಳಿಟಿದಾಡುವ ಸಂದಣೆ ಮಾಜದು ನಿತ್ಯಕೃತ್ಯದಲಿ (ಮೋಹತ. ೨೦-೨೬).
[ ಜೂಜಾಟ (<ಜೂದಾಟ) + – ಇಕೆ ]

**ಜೂಜಾಡಿಗ** (ನಾ). ಜೂಜಂ ಆಡುವವನಂ ; ಜೂ ಜಂ ಕೋ ರ : ಯುಧಿಷ್ಠಿರನು ಪುಣ್ಯಾತ್ಮನೆಂದು ಎನಿಸಿಕೊಂಡಿದ್ದರೂ ಜೂಜಾಡಿಗನಿದ್ದನು (ಪ್ರಾಚೀಹಿಂ. ೫೫). [ ಜೂಜು$_1$ (<ಜೂದು) + – ಆಡಿಗ$_2$ ]

**ಜೂಜಾಡಿಸು** (ಕ್ರಿ). ಜೂಜಾಡಂವಂತೆ ಮಾಡಂ; ಜೂಜಾಟವನ್ನಾಡಿಸಂ: (೩). [ ಜೂಜಾಡು (<ಜೂದಾಡು) + – ಇಸು$_3$ ]

**ಜೂಜಾಡು** 'ಜೂದಾಡಂ' ನೋ.

**ಜೂಜಾಳಿ** 'ಜೂದಾಳಿ' ನೋ.

**ಜೂಜಿಗ** (ನಾ). = ಜೂದುಗ : ಕಳುಗುಡಿ ಜೂಜಿಗ ಸುಂಕಿಗ (ಕರಿಕ. ೧೦೪-೧೦). [ ಜೂಜು$_1$ (<ಜೂದು) + – ಇಗ ]

**ಜೂಜು$_1$** 'ಜೂದು' ನೋ.

**ಜೂಜು$_2$** (ನಾ). ಭೀಕರನಾದವನು, ಭಯವುಂಟುಮಾಡುವವನು (?): ಮೂವಡಿ ಜೂಜು (ಬೊಂಕೆಶಾ. ೧೯೩೮, ಹಾನಗಲ್. ೭೩-೦೩; 1053); ಗಣ್ಡರ ಜೂಜು ಶ್ರೀಮತ್ ಸತ್ಯಾಶ್ರಯದೇವರ್ (ಎಇ. XIII, ೧೭೨-೩೮ ; 1055) : ಮೂವಡಿ ಗಂಡರ ಜೂಜು ನಾಮಾದಿ ಸಮಸ್ತ ಪ್ರಶಸ್ತಿ ಸಹಿತ (ಎಇ. XVI, ೩೫೪-೧೪; 1068); ಎಡಱುವವರಿದೇಂ ಬರ ಸಿಡಿಲಡಸುವ × × ಪಾರಿಜವನ ಚಾರಿಯ ಸೂಲಂ ಕುಡುದಾಡೆಯ ರಕ್ಕಸ ನಾಗಡುವುಳ್ಳಿಪ ಜೂಜು ಪಡವಳಿಟಿಗಂ ಜಗದೋಳ್ (ಎಕ. VIII. ಸಾಗರ. ೮೦-೨೨ ; 1092). 'ಜೂಬು' ಪರಾ. [ ? ]

**ಜೂಜುಂಗಾಱ** 'ಜೂದುಂಗಾಱ' ನೋ.

**ಜೂಜುಕಟ್ಟು** (ಕ್ರಿ). ಪಂದ್ಯವನ್ನು ಒಡ್ಡು ; ಪಣ ಕಟ್ಟು : (೩).
[ ಜೂಜು$_1$ (<ಜೂದು) + ಕಟ್ಟು$_1$ ]

**ಜೂಜುಕಟ್ಟೆ** (ನಾ). ಜೂಜಾಡುವ ಸ್ಥಳ : ಪೋಲೀಸರು ಜೂಜುಕಟ್ಟೆಯ ಮೇಲೆ ಧಾಳಿ ಮಾಡಿದರು (ರೂಢಿ). [ ಜೂಜು$_1$ (<ಜೂದು) + ಕಟ್ಟೆ$_1$ ]

**ಜೂಜುಕೋರ** (ನಾ). = ಜೂದುಂಗಾಱ : ಮಾರಾಟಕ್ಕೆ ಬಂದ ಮುದಿ ಕುದುರೆಯ ಹಾಗೆ ಜೂಜುಕೋರನಿಂದ ಯಾರಿಗೂ ಯಾವ ಪ್ರಯೋಜನವೂ ಇಲ್ಲ (ಭಾರದ. ೨೫). [ ಜೂಜು$_1$ (<ಜೂದು) + – ಕೋರ$_3$ ]

**ಜೂಜುಗಾರ** 'ಜೂದುಂಗಾಱ' ನೋ.

**ಜೂಜುಗಾರ್ತಿ** (ನಾ). ಜೂಜಾಡುವವಳು ; ಜೂಜಾಡುವ ಸ್ವಭಾವ ದವಳು : ಮಾಲೆಗಾರ್ತಿ, ಬಳೆಗಾರ್ತಿ, ಜೂಜುಗಾರ್ತಿ (ಶಬ್ದಾನು. ೨೦೦ ಪ್ರಯೋ). [ ಜೂಜುಗಾಱ (<ಜೂದುಂಗಾಱ) + – ತಿ$_1$ (< – ಇತ್ತಿ) ]

**ಜೂಜುಗಾಱ** 'ಜೂದುಂಗಾಱ' ನೋ.

**ಜೂಜುದೋಣಿ** (ನಾ). ಪಂದ್ಯಕ್ಕಾಗಿ ನಿರ್ಮಿಸಿದ ದೋಣಿ : ಹಡಗಿ ನಲ್ಲಿಟ್ಟಿರುವ, ಹುಟ್ಟು ಹಾಕಿಯೊ ಪಟ ಕಟ್ಟಿಯೊ ನಡಸಬಹುದಾದ (ಒಂದು ಬಗೆಯ)ಹಗುರವಾದ ಕಿರಿದು ದೋಣಿ ; (ಹುಟ್ಟು ಹಾಕಿ ನಡಸುವ) ಜೂಜು ದೋಣಿ (Gig. ಇಂಕನಿ). [ ಜೂಜು$_1$ (<ಜೂದು) + ದೋಣಿ$_3$ ]

**ಜೂಟ$_1$** 'ಜೂಂಟ' ನೋ.

**ಜೂಟ$_2$** (ನಾ). ಜಡೆಗಟ್ಟಿದ ಕೂದಲು ; ಜಡೆ ; ಜಟೆ ; ಜಡೆಮುಡಿ : ಗಿರಿಶ ಚಂಚಜ್ಜಟಾಜಾಲ ಜೂಟ ವ್ಯೋಮವ್ಯೋದ್ವ್ಯಾಪಿ ಚಂದ್ರಂ ತ್ರಿಭುವನ ಜನಕಾನಂದವಮಂ ಮಾಡುಗೆಂದುಂ (ಕಾದಂಪೂ. ೧); ಶಿವನ ಜೂಟದ ಶಶಿಯ ಬೆಳುದಿಂಗಳಿಳಿದಂತೆ (ಚಂಡೀರ. ದೇ. ೨೪೬-೨೦) ; ವಿಯನ್ನದೀಜೂಟನಂ ಕುಱಿತು ನುತಿಗೆಯ್ದು ಮಳಿವಡೆದು ಕೆಱಿದುಂಬಿಸಿದ ಮಹಿಮ (ಪದ್ಮರಾ. ೧-೨೩). 'ಜಟಾಜೂಟ' ಪರಾ. [ ಸಂ. ]

**ಜೂಟ$_3$** 'ಜೂಟು'$_2$ ನೋ.

**ಜೂಟಬಂಧ** (ನಾ). ಜಡೆಗಳ ಕಟ್ಟು,–ರಚನೆ: ಉಪನಿಟಲ ಕುಟಿಲ ಘಟಿತ ಜೂಟಬಂಧವಮಂ . . . ಅತಿ ಸುಭಟಮದೋತ್ಕಂಠಮಿದು ಕರ್ಣಾಟಬಲಂ (ಆದಿಪು. ೧೩-೪೫ ವ). [ ಜೂಟ$_2$ + ಬಂಧ ]

**ಜೂಟಾಟ** 'ಚೂಟಾಟ' ನೋ.

**ಜೂಟು₁** (ನಾ). ಚಾತುರ್ಯ; ಚಮತ್ಕಾರ: ಚೇತನಾತ್ಮಕಿಯನಂಜಿಸು ತೊಡನೆ ಜೂಟನಿಂ ಘಾತಿಸುವೆನೆಂಬನಿತರೊಳು (ದೇವೀಪ್ರ. ೩೨). 'ಜೂಟಿಂ ನುಡಿ' ಪರಾ. [ದೇ.॥ ತೆಲು. ಜೂಟ = ಸಮರ್ಥ]

**ಜೂಟು₂, ಜೂಟ₃** (ನಾ). ೧. ಗೋಣಿನಾರಂ : ಪ್ರಪಂಚದಲ್ಲಿ ಬೆಳೆಯುವ ಜೂಟಿನ ನೂರಕ್ಕೆ ೯೮ರಷ್ಟು ಭಾಗವು ಕೇವಲ ಅಖಂಡ ಹಿಂದೂಸ್ಥಾನ ದೊಳಗೆ ಬೆಳೆಯುತ್ತಿತ್ತು (ಸಸ್ಯಶಾ ೧೩೫). ೨. "ರೇಷ್ಮೆಯ ಗೂಡಿನಿಂದ ದಾರವೆಲ್ಲ ತೆಗೆದು ಸುತ್ತಿದ ಮೇಲೆ ಉಳಿಯುವ ರೇಷ್ಮೆಯ ಕಳಪೆ" (Cappadine. ಇಂಕನಿ). **ಜೂಟ₃** : ೧. ಬಂಗಾಲದೇಶದಿಂದ ಎಣ್ಣೆಯ ಕಾಳೂ ಜೂಟ ಎಂಬುದೊಂದು ತರದ ನಾರೂ . . . ಇಂಗ್ಲೆಂಡಕ್ಕೆ ಹೋಗುತ್ತವೆ (ಮುಂಬಯಿ. ೪-೦೫೯) : ಕಲಕತ್ತೆಯು ವಿಶ್ವದ ಜೂಟದ ದೊಡ್ಡ ಕೇಂದ್ರವು (ಅನ್ನದಾ. ೧). [←ಇಂ. Jute]

**ಜೂಟುನುಡಿ** (ನಾ). ಚಾತುರ್ಯದ ನುಡಿ; ಚಮತ್ಕಾರದಿಂದ ಕೂಡಿದ ಮಾತು : ಈ ಜೂಟುನುಡಿ ಸರಸಗಳಿವು ಮಕರಂದಾಜಿಯ ತಂತ್ರವೆಂದ ಱಿದು ಆ ಜಾಣ್ಮೆಗರಸ ಮೆಚ್ಚಿದನು (ಭರಜ. ೯-೫೦). [ಜೂಟು₁ + ನುಡಿ₂]

**ಜೂಟುರೇಷ್ಮೆ** (ನಾ). "ಸಣ್ಣ ಎಳೆಯ ನೂಲು ಬೆರಕೆಯ,–ಕಳಪೆ ರೇಷ್ಮೆ" (Spun-silk. ಇಂಕನಿ). [ಜೂಟು₂ + ರೇಷ್ಮೆ (<ರೇಶ್ಮೆ)]

**ಜೂಡಿ** 'ಜೋಡಿ₂' ನೋ.

**ಜೂಡಿದಾರ** 'ಜೋಡಿದಾರ₂' ನೋ.

**ಜೂಡೆ** (ನಾ). ಸಮೂಹ ; ಗೊಂಚಲು : ಹಾಲ್ವಕ್ಕೀ ಒಕ್ಕಲಿಗರು . . . ಹೆಂಗಸರು . . . ಕರಿಮಣಿಯ ಸರಗಳ ಜೂಡೆಗಳಿಂದ ಯೆದೆಯನ್ನು ಮುಚ್ಚಿ ಕೊಳ್ಳುವರು (ಕಥಾಗಿ. ೧೩೪); ಹೆಂಗಸರು ಹಾಲ್ವಕ್ಕೀ ಒಕ್ಕಲಿಗರಂತೆ ಕೊರಳಲ್ಲಿ ಕರಿಮಣಿಗಳ ಜೂಡೆಗಳನ್ನು ಹಾಕಿಕೊಳ್ಳುವರು (ಕಥಾಗಿ. ೧೫೦). [←ಮರಾ. ಜುಡಾ, ಜುಡೀ]

**ಜೂತಿ₁** (ನಾ). ೧. ಶೀಘ್ರತೆ ; ತ್ವರೆ. ೨. ವೇಗ ; ರಭಸ. ೩. ಉದ್ವೇಗ; ಆವೇಗ : ಮತಿ ಮನೀಷಾ ಜೂತಿ (ದುಃಖಸ್ವಭಾವ) . . . ಈ ಹದಿನಾರು ಮನಸ್ಸಿನ ವಿಕಾರಗಳೆಂದಿರುವವು (ಅಮೃತ. ೬-೨೬ ಟೀಕು). [ಸಂ.]

**ಜೂತಿ₂** (ನಾ). ಚಪ್ಪಲಿ ; ಪಾದರಕ್ಷೆ : ಜಾತೀ ಬಾಯಲ್ಲಿ ಜೂತಿ ಅಂದರೆ ಆಳಿಗೆ ಒಂದು ದುಡ್ಡು ತೂಕ (ಗಾದೆ). [←ಹಿಂ. ಜೂತೀ, ಜೂತಾ]

**ಜೂದ** 'ಜೂದು' ನೋ.

**ಜೂದಾಟ, ಜೂಜಾಟ** (ನಾ). ಜೂಜಿನ ಆಟ ; ಜಿದ್ದಿನ ಆಟ ; ಜೂಜಾಟಿಕೆ. 'ಜೂದಾಡು' ಪರಾ. **ಜೂಜಾಟ** : 'ಜೂಜಾಟಿಕೆ' ಪರಾ. [ಜೂದು + ಆಟ]

**ಜೂದಾಡು, ಜೂಜಾಡು** (ಕ್ರಿ). ಜೂಜನ್ನು ಆಡು; ದ್ಯೂತವನ್ನು ಆಡು: ವರಸೇನನೆಂಬೊಂ ಜೂದಾಡಿ ಯಕ್ಷಧೂರ್ತನೆಂಬೊಂಗೆ ಸಾಸಿರ ದೀನಾರಮಂ ಸೋಲ್ತು (ವಡ್ಡಾರಾ. ೧೪-೪) ; ಜೂದಾಡಿ ಸೋಲ್ತು ನನ್ನಿಗೆ ಮೇದಿನಿಯಂ ಕೊಟ್ಟು (ಪಂಪಭಾ. ೭-೧೮) ; ಧರ್ಮಪುತ್ರಂ ಜೂದಾಡಿ ಮೇದಿನಿಯಂ ಸೋಲ್ತು (ಪಂಚತಂ. ೨೧೮-೧೦) ; ಜೂದಾಡಿ ಸೋಲ್ತುದಂ ತಾಂ ಸೌಧರ್ಮಿಕೆ ಬಗೆಯದೀವುದು (ಬಂಹರಿ. ೧೧-೨೪). **ಜೂಜಾಡು** : ಅರಿಗಳೊಳು ಕಾದಿ ಜೂಜಾಡಿ ಸೋಲದೆ (ಹಚಕಾ. ೧೧-೧೨) ; ಎಲವೊ ಕೌರವ ಹಿಂದೆ ವಂಚಿಸಿ ಕಳವಿನಲಿ ಜೂಜಾಡಿ ರಾಜ್ಯವ ಗೆಲಿದ ಗರ್ವವನುಗುಳು (ಕುಮಾದ್ರೋ. ೧೦-೪೯) ; ಪಾಂಡವರ ಸಂಗಡ ಕೌರವರು ಪಗಡೆ ಆಟದ ಜೂಜಾಡಿದರು (ನೀತಿಚಿಂ. I, ೧೦). [ಜೂದು + ಆಡು₁]

**ಜೂದಾಳಿ, ಜೂಜಾಳಿ** (ನಾ). ಜೂಜಾಡುವ ಪ್ರವೃತ್ತಿಯುಳ್ಳವನು,–ಸ್ವಭಾವದವನು : "ಜೂದಾಳಿ ದ್ಯೂತಶೀಲಂ" (ಕರ್ಣನಿ. ೫೦) : ಶಾಸ್ತ್ರ ಕುಶಲಂ ಜೂದಾಳಿ ಚೆಲ್ವಂ ನಿಕುಂಚಿತಕೇಶಂ (ಜಾತಕಿ. ೧೭-೩); ನೀಱಿಂ ಜೂದಾಳಿ ಕರಂ ನೀಱಿಂ ಮಾತಾಳಿ ಕರೆಯೆ ಸಿಗ್ಗಾಳಿಯಿವಳ್ (ಕಾವ್ಯಾವ. ೩೫೩); ಅನಂತರ ಜೂದಾಳಿಯು ಅರ್ಚಕನಿಲ್ಲದಿರುವುದಂ ಕಂಡು (ಮುದಮೋ. ೯೨). **ಜೂಜಾಳಿ** : ಬಾಲಕಿಯ ಬೇಳಂಬವನು ಜೂಜಾಳಿಗಳ ಜಜ್ಝಾರ ತನವನು ಕೇಳಿ ಬೈದುದು ಸೇನೆ(ಕುಮಾಸ. ೧೬-೧). [ಜೂದು + – ಆಳಿ₃]

**ಜೂದು, ಜೂಜು₁, ಜೂದ** (ನಾ). ದ್ಯೂತ ; ಪಣವನ್ನಿಟ್ಟು ಆಡುವ ಆಟ; ಪಂದ್ಯವನ್ನು ಒಡ್ಡಿ ಆಡುವ ಆಟ; ಪಂಥದ ಆಟ: "ಜೂದೆಂದುಂ ದ್ಯೂತನಾಮಂ" (ಕರ್ಣನಿ. ೫೦) ; ದಾಯಿಗಂಗೆ ನೆಲಂ ಜೂದಿನೊಳೊತ್ತೆ ವೋಗೆ (ಪಂಪಭಾ. ೮-೫) ; ಗುರುವನಿದಿರ್ಪುದೆ ನಿಜಪ್ರಭುತೆ ಜೂದು ವಿನೋದಂ ಕಳ್ಗುಡಿವುದೆ ವಿಲಾಸಂ (ಕಾದಂಪೂ. ೫೬೭) ; ನಾರಿಕೇಳ ಫಲವ ಕಟ್ಟಿ ತೂಗಿ ಬೀಳಲಿಱಿದು ಕೊಲುವಂತೆ ತೆಂಗಿನಕಾಯ ಹೋಳ ಮಾಡಿದರು ಜೂದಿನಲಿ (ಮೋಹತ. ೨೦-೨೨). **ಜೂಜು₁** : ನಗರಾಭ್ಯಂತರ ದೇವತಾ ಭವನದೊಳ್ ಚೌವಟ್ಟದೊಳ್ ಬೀದಿಬೀದಿಗಳೊಳ್ ಜೂಜಿನ ದಿಂಡೆಯೊಳ್ . . . ನೀತಿಗೆಟ್ಟಾಡುವರ್ (ಸುಕುಮಾ. ೨-೭); ಜೂಜುಂ ಬೇಂಟೆಯುಂ ಕಳ್ಳುಂ . . . ಕಳವುಮೆಂಬ ಸಪ್ತವ್ಯಸನಂಗಳಂ ಪೊರ್ದದಿರ್ಪುದುಂ (ಧರ್ಮಾಮೃ. ೫-೧೨೫); ಜೂಜಿನ ವೇಧೆಯುಂಟು ಜಾಗರದ ಬಲವಿಲ್ಲ ಆಗಳೂ ಗೆಲಲುಂಟೆ ಪ್ರಾಣಪದತನಕ (ಅವಚಿಂ. ೧೨೮-೫೮೩) : ಜೇಯವೆನಿಸಿದೆ ಜೂಜಿನಲಿ ರಣಜೇಯನಹನೀ ಕೌರವನು (ಕುಮಾಶ. ೩-೩೦). **ಜೂದ** : ಜೂದದಲಿ ಬಹುದುಷ್ಟಸಂಗದಿ ವಾದವಿದ್ಯೆ ಕುತರ್ಕ ಪರರಪವಾದ ಕಥನ . . . ಬೀದಿ ವರಿದರ್ಶಿಯಲಿ ಕೇಳ್ವುದು ಮೇದಿನೀಜನ (ಕೌಶಿರಾ. ೦-೬).

**ಜೂದ ಕಟ್ಟು**=ಜೂದನಿಕ್ಕು: ಕೆಲಬರು ಕೃಷ್ಣನೆಂಬರು ಕೃಷ್ಣನಲ್ಲೆಂದು ಕೆಲಬರು ಜೂದ ಕಟ್ಟುವರು (ಮೋಹತ. ೧೩-೨೨). **ಜೂದನಿಕ್ಕು**=ಪಣವಿಡು; ಪಂದ್ಯವನ್ನೊಡ್ಡು : ಎನಿತಾನುಮಂದದಿಂ ಜೂದನಿಕ್ಕಿಯುಂ ದ್ರುಪದ ಸುತೆಯನೆಟ್ಟಿದುಯ್ಯೆಯುಮಿಂತಿನಿತೊಂದಾದುದು (ಪಂಪಭಾ. ೭-೨೦). [<ಪ್ರಾ. ಜೂಅ. / ಸಂ. ದ್ಯೂತ]

**ಜೂದುಂಗಾಱ, ಜೂಜುಂಗಾಱ, ಜೂಜುಗಾರ, ಜೂಜುಗಾಱ, ಜೂದುಗಾರ, ಜೂದುಗಾಱ** (ನಾ). ಜೂಜಾಡುವವನು ; ಜೂದಾಳಿ : ಏಱ್ ಬರೆಗೊಂಡ ಜೂದುಂಗಾಱನವೊಲ್ ಲಗ್ಗೆ ಮಾಡಲೊಲ್ಲದೆ (ಅನಂಪು. ೧೨-೨೭) : ಓದುಂಗಾಱಂ, ಜೂದುಂಗಾಱಂ (ಶಮದ. ೨೦೦ ಪ್ರಯೋ) : ಪಾಡುಂಗಾಱಂ,ಜೂದುಂಗಾಱಂ(ಶಬ್ದಾನು.೩೮೪ ಪ್ರಯೋ). **ಜೂಜುಂಗಾಱ**: ಕಳೆದ ಪಲ್ಗಳ ಕವಡೆಯ ಗುಪ್ಪೆಯ ಮಾಡಿ . . . ಆಡುವಜೂಜುಂಗಾಱ ಮರುಳ್ಗಳ ಬಳಗವಲ್ಲಲ್ಲಿಯೊಪ್ಪಿದುದು (ನೇಮಿಸಂ. ೮-೯೩): ನೀಂ ಕಾಮಿ ಸಂಸಾರಿ ಭೂಪನುಗ್ಗಡದ ಜೂಜುಂಗಾಱ ನರಲೋಕಚರ (ವೀಶ್ವಪು. ೮-೫-೫೦). **ಜೂಜುಗಾರ** : ಅಲ್ಲಿ ಕುಡುಕರು, ಜೂಜುಗಾರರು, ಕಳ್ಳರು ಎಲ್ಲರೂ ಇದ್ದರು (ಬಾಣಆ. ೧೫೨) ; ನಾನು ಜೂಜುಗಾರನಾಗಿದ್ದರೂ ನನ್ನ ಪತ್ನಿಯು ನನ್ನ ಮೇಲೆ ಕೋಪಗೊಳ್ಳಲಿಲ್ಲ (ಮುಕ್ಕಾರ. ೩೦೪). **ಜೂಜುಗಾಱ** : "ದ್ಯೂತಕರನೆನೆ ಕಿತವನೆನೆ ಜೂಜುಗಾಱ" (ಮಂಗರಾ. ೭೨-೨೪) ; ಜೂಜುಗಾಱನ ಮಾತು . . . ಓಡಿನೊಳಗೆ ಅಗೆಯ ಹೊಯ್ದಂತೆ (ಬಸವ. ೬೩೪); ಚಪಳರ್ ಚೋರರು ಜೂಜುಗಾಱರು ವಿಟರ್ ತಾರ ಶ್ರೇಷ್ಠರೆಂದೆನ್ನುವರ್ (ಸೋಮೇಶ. ೫೯) ; ಪರಮೇಶ್ವರಂ ಜೂಜುಂಗಾಱನ ಮಾಟ್ಕೆಯಿಂ ನಡೆತಂದು (ಉದ್ಭಟ. ೧೨-೯೩); ಜೂಜುಗಾಱರ ಕುಲ ಶಿರೋಮಣಿ ತಾನೆಯೆಂದನು ಶಕುನಿ ಕೌರವಗೆ (ಕುಮಾಸ. ೧೨-೧೮) : ಬಿಸಿನೀರ ಕೇಣಿಗರ್ ಜೂಜುಗಾಱರ್ ಮುಖ್ಯರೊದಗಿ ಬರುತಿರ್ದರು (ಜೆಬಪು. ೪೭-೪೧). **ಜೂದುಗಾರ** : "ಜೂದುಗಾರ–ದ್ಯೂತಕಾರ" (ಶಬ್ದಕೋ. ೦೫). **ಜೂದುಗಾಱ** : "ಕಿತವಃ, ದ್ಯೂತಕಾರಃ – ಈ ೨ ಜೂದುಗಾಱಂ" (ಹಲಾಯು. ೬೪-೨೩೪). [ಜೂದು + – ಕಾಱ]

**ಜೂದುಗ** (ನಾ). = ಜೂದುಂಗಾಱ : ಪಾಡುಗಂ, ಜೂದುಗಂ (ಶಬ್ದಾನು. ೩೮೪ ಪ್ರಯೋ). [ ಜೂದು + – ಗ$_2$ ]

**ಜೂದುಗಾರ** 'ಜೂದುಂಗಾಱ' ನೋ.

**ಜೂದುಗಾಳೆಗ** (ನಾ). ಜೂಜು ಕಟ್ಟಿ ಆಡಿಸುವ ಕಾಳಗ,–ಪಂದ್ಯ : ವಿಕ್ಕ ಪೊಟ್ಟಂ ಕೋಟಿ ತಗರ್ಗಳ ಜೂದುಗಾಳೆಗದೊಳ್ ಕಳೆದು (ಚಿಕಪಂ. ೩–೧೬). [ ಜೂದು + ಕಾಳೆಗ ]

**ಜೂದುಗಾಱ** 'ಜೂದುಂಗಾಱ' ನೋ.

**ಜೂದುಜಾಣ** (ನಾ). ಜೂಜಿನಲ್ಲಿ ಜಾಣ; ದ್ಯೂತಪ್ರವೀಣ : ಜೂದಿನೊಳ್ ಜಾಣಂ ಜೂದುಜಾಣಂ (ಶಬ್ದಾನು. ೩೦೫ ಪ್ರಯೋ).

[ ಜೂದು + ಜಾಣ ]

**ಜೂದುಬೆಸನಿ** (ನಾ). ಯಾವಾಗಲೂ ಜೂಜಿನಲ್ಲಿ ಕಾಲ ಕಳೆಯುವವನು: ಜೂದುಬೆಸನಿ ನೀನಾತನೀಶ್ವರಾರ್ಚನವ್ಯಸನಿ ಸಂಸಾರಿ ನೀನು ಅಲಘುತರ ಸಂಸ್ಕೃತಿ ವಿರಕ್ತನಾತಂ ನಿಜಂ (ಪಾಸೋಪು. ೭–೬೭).

[ ಜೂದು + ಬೆಸನಿ ]

**ಜೂದೋಡು** (ನಾ). ಜೂಜಿನಲ್ಲಿ ಓಡುವಂಥದು ; ಜೂಜಿನ ಕುದುರೆ: ಉಚ್ಚೈಶ್ರವಸ್ಸನ್ನು ಜೂದೋಡುಗಳ ಹೊರಸಾಲಿಂದ ಪಟ್ಟದಕುದುರೆಯ ಮನ್ನುರಕ್ಕೆ ಏರಿಸಿ ಮುದ್ರಿಸಬಾರದಾಗಿದ್ದಿತು (ಚಟ್ಟಅ. ೧೮೦–೩).

[ ಜೂದು + ಓಡು$_1$ ]

**ಜೂಪರ** 'ತೂಪರು' ನೋ.

**ಜೂಬ$_1$** 'ಜೂಬು' ನೋ.

**ಜೂಬ$_2$** (ನಾ). ಒಂದು ಬಗೆಯ ವಾಹನ (?): ಜೂಬಂಗಳಗ್ಗದ ಪ್ರಯಾಣ ಪ್ರಕಾರದಿಂದೆ ಭೈತ್ರಸಂದೋಹ ಸ್ಯಂದನಗಳಿಂದುಱೆ ಗುರಾಬಂಗಳತ್ಕಂತ ಘೋಟಕಗಳಿಂ . . . ಓಲೈಸಲು (ಮದೇಪು. ೧–೨೨): "ತುಂತುರು" (ಮದೇಪು. ಕೋಶ). [ ? ]

**ಜೂಬು, ಜೂಬ$_1$, ಜೂಭ** (ನಾ). ೧. ಪಿಶಾಚಿ; ದೆವ್ವ; ಸೈತಾನ: (*). ೨. ಹೆದರಿಕೆಯನ್ನು ಹುಟ್ಟಿಸುವಂತಹದು ; ಭಯಾನಕವಾದುದು: ಒಂದಕ್ಕಂಜುವೆ ಒಂದಕ್ಕಳುಕುವೆ ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ (ಬಸವ. ೪೪೬); ಅಸುರರ ಶಿರೋಮಾಲೆಯ ಕೊರಳಲ್ಲಿ ಉರದಲ್ಲಿ ಹಾರವಾಗಿ ಧರಿಸಿ ಜಗಕ್ಕೆ ಜೂಬಾಗಿಪ್ಪಲ್ಲಿ ಶಂಕೆಯಿಲ್ಲದೆ ನಿಶ್ಶಂಕನೆಂಬ ಗಣೇಶ್ವರನಾಗಿರ್ದನು (ಚನ್ನವ. ಕ. ೯–೧೮); ಯಮನನಳಿಕಿಪ ಜೂಬು ಯಮಮ್ಮಗದ ಬೆಳ್ಮಾರವಮಮ ಯಮಹರಿಣಗಿಕ್ಕಿದ ಬೆಚ್ಚಿದು (ಸಾಕಂಪ. ೧–೪೨). ೩. ಹೆದರಿಕೆಯನ್ನು ಹುಟ್ಟಿಸುವವನು : ಚೋಳನ ಜೂಬು ಮಾಳವನ ಗೌಳನ ಗೋಳ್ಮುರಿ (ಎಕ. VII, ಶಿವಮೊ. ೮೭–೮ : 1245) : ಗಾಯಿಗೋವಾಳ ಗಣ್ಡಪೆಣ್ಡಾರ ಮಣ್ಡಳಿಕ ಜೂಬು ಸೋಮೆಯ ದಣ್ಣಾಯಕರಳಿಯ (ಎಕ. XIV, ಮಂಡ್ಯ. ೩೦–೨೭ ; 1261). **ಜೂಬ$_1$** : ೩. ಮಾಳವರಾಯರಾಜ್ಯಮಥನಂ ಮಲೆವಾಳ ಮಹೀಸ ಜೂಬ (ಕೊಲ್ಹಾಶಾ. ೧೮–೧೫ ; 1235) : ಗೋತ್ರಪವಿತ್ರಮಂ ಮಂಡಳಿಕಜೂಬಂ ಗಾಯ ಗೋವಳಂ ಗಂಡಪೆಂಡಾರಂ ಸ್ವಾಮಿವಂಚಕರ ಗಂಡಂ (ಎಕ. XI, ದಾವಣ. ೩೭–೮೩ ; 1268). **ಜೂಭು** : ೧. ನಮ್ಮ ಪ್ರಾಣಕ್ಕೆ ಬಂದಡೆ ಬರ್ಕೆ ಭವಿ ದೊರೆಯ ನೆಮ್ಮಿ ಕುವರಿಯ ಕೊಟ್ಟಡಂ ಮಹದೇವನತಿಹೆಮ್ಮೆಯಿಂ ಹೆಕ್ಕಳಿಪ ಜೂಭ ನರಕದೊಳು ಬೀಳಿಸುವನೆನಲ್ (ಪ್ರಭುಪು. ೮–೫೬).

ಜೂಬು ಮಾಡು = ಹೆದರಿಕೆಯನ್ನುಂಟುಮಾಡು; ಹೆದರಿಸು: ತನಗೆ ಮಂಗುಟ್ಟುವಮಾತ್ಮ ಪರಿವೃಢಪ್ರತಾಪಮನತಿಶಯಿಸಿ ಜೂಬುಮಾಡ್ಪ ಚರನಂ ಜ್ವಳನಜಟ ಕಟಾಕ್ಷಿಸಿ (ವರ್ಧಪು. ೭–೫೭ ವ).

**ಜೂಭು** 'ಜೂಬು' ನೋ.

**ಜೂರತ್** 'ಜೂರತ್ತು' ನೋ.

**ಜೂರತ್ತು, ಜೂರತ್** (ನಾ). ಸಾಹಸ; ಧೈರ್ಯ; ಕೆಚ್ಚು : ಆ ಬಡಕಲಗೆ ಎಲ್ಲಿ ಬಂತು ಜೂರತ್ತು, ಶಕ್ತಿ ಬೇಸಾಕೆ ? (ಮಲಮ. ೫೭೫). **ಜೂರತ್** : ಮುಖ್ಯವಾಗಿ ಪೋಲಿಸ್‌ಆಫೀಸರಿಗೆ ಇರಬೇಕಾದ ' ಜೂರತ್ ' ಅಷ್ಟೇನೂ ಇರಲಿಲ್ಲ (ಕಲನ. ೨೦೭). [ ← ಅರ. ಜುರಅತ್ ]

**ಜೂರಿ** 'ಜುರ್ರಿ$_2$' ನೋ.

**ಜೂರ್ತಿ** (ನಾ). ೧. ಜ್ವರ : " ಜ್ವರಃ, ಜೂರ್ತಿಃ ೨ ಜ್ವರವು, ಅಜೀರ್ಣದಿಂದ ಮೈ ಬಿಸಿಯಾಗುವಿಕೆ " (ಸಿದ್ಧಾಂತಿ. ೩೦೭). ೨. ಆತಂಕ ; ಕ್ಲೇಶ : ವಾಚಸ್ಪತಿಪ್ರಣುತವಾಗ್ವಿಲಾಸಸ್ಫೂರ್ತಿಶಮಿತಸಂಸಾರಜೂರ್ತಿ (ಪದ್ಮರಾ. ೯–೨೭) : ಜೂರ್ತಿವಿರಹಿತನೇ ಜೋ ಮಾಯಾವಿದೂರ ಜೋ (ಲಶಿಚಂ. ೩೦–೩೯) ; ಜೂರ್ತಿ ಹಱಿವುದು ಜ್ಞಾನಸ್ವಾರ್ಥ ಕೈಸಾರುಗು ಯಥಾರ್ಥ ಚಿತ್ತ ಪ್ರಭುವರನ ಕೃತಿಗೇಳಲು (ಪ್ರಭುಪು. ೨–೬) ; ಕಾರುಣ್ಯರಸ ಪೂರ್ತಿ ಯವಧೂತಭವಜೂರ್ತಿ (ಗುರುಚಾ. ೫–೧) ; ಆ ಪುರದ ಸತ್ಕೀರ್ತಿ ಸೂರ್ಯನಂದನಜೂರ್ತಿ ಆ ಪುರದ ಸುವಿಲಾಸ ರಸಿಕ ಜನಕಾವಾಸವೆನಿಸಿ ರಾಜಿಸುತಿರ್ಪುದು (ಏಕೋಪು. ೩–೩೬). [ ಸಂ. ]

**ಜೂಲ** 'ಝೂಲು$_2$' ನೋ.

**ಜೂಲು$_1$** (ನಾ). ೧. ಕುದುರೆ, ನಾಯಿ ಮುಂತಾದ ಪ್ರಾಣಿಗಳ ಕುತ್ತಿಗೆಯ ಮೇಲಿನ ಕೂದಲು; ಅಯಾಲು. 'ಜೂಲ್ನಾಯಿ' ಪರಾ. ೨. ಉದ್ದವಾದ ಕೂದಲು. 'ಜೂಲುಗೂದಲು' ಪರಾ. ೩. ಹರಿದು ಹೋದ ಬಟ್ಟೆ; ಚಿಂದಿ. 'ಜೂಲುಬಟ್ಟೆ' ಪರಾ.

[ ದೇ.೩ ತಮಿ. ಚುವಲ್ ; ತೆಲು. ಜೂಲು ]

**ಜೂಲು$_2$, ಜೂಲ, ಜೋಲಿ$_2$, ಝೂಲ, ಝೂಲು** (ನಾ). (ಆನೆ, ಕುದುರೆ ಮುಂತಾದ ಪ್ರಾಣಿಗಳ ಮೈಮೇಲೆ) ಅಲಂಕಾರಕ್ಕಾಗಿ ಹೊದಿಸುವ ಬಟ್ಟೆ,–ಹೊದಿಕೆ ; ಸಬರ: ಮೇಲುತರದ ಪಟ್ಟೆ ವರಸೂಪು ಸಕಲಾತಿ ಜೂಲುಗಳಿಂದೆ ರಂಜಿಸುವ . . . ಕಿರಾತರು ಸಾಲಿಟ್ಟು ನಡೆದರೊಗ್ಗಿನಲಿ (ಮೋಹತ. ೧೯–೦೦) : ಆನೆಗೆ ಹಳದೀ ಬನಾತಿನ ಬಬ್ರೀ ಜೂಲುರೇಶ್ಮೆ ಜಾಲರು ಸಹ ೧ (ಎಕ. XIV, ನಂಜನ. ೨೯೨–೪೦ ; 1847). **ಜೂಲ** : ನಾಲನು ಬಡಿಸದ ಜೂಲವ ಹೊದಿಸದ (ಕ ಪ ಪು. ೧–೫೦). **ಜೋಲಿ$_2$** : ಕಟ್ಟಿದ ಮೊಗದ ಮಾಸರಣೆ ಬೆಳ್ಳೊಳಗಳವಟ್ಟು ಪಟ್ಟೆಯ ಜೋಲಿಯೆಸೆಯೆ . . . ಕುದುರೆಗಳು ಎಯ್ತಂದುವಾಗ (ಪ್ರಭಂಜ. ೨–೧೨೮); ರನ್ನದ ಗಗ್ಗರ ಬಣ್ಣ ಬಗೆಯ ಜೋಲಿ ಹೊನ್ನ ಹೂವೆಸೆವ ಬಾಸಿಗದಿ ಮನ್ನೆಯರೊಡೆಯನ ತೇಜಯಿದ್ದುವು (ಭಂಜ.೨೦–೫೦). **ಝೂಲ**: ಝೂಲ ಹಾಕಿದ ಮೂವತ್ತು ಎತ್ತಿನ ಜೋಡಿಯ ಬಂಡಿಯನ್ನು ಸಿದ್ಧಗೊಳಿಸಿದ್ದ (ಸಮುಜೀ. ೧೨೩೫). **ಝೂಲು** : ಮದ್ದಾನೆಗಳಿಗೆ ಕನಕಾಭರಣಗಳಿಂದಲೂ ಝೂಲುಗಳಿಂದಲೂ ಅಲಂಕಾರ ಮಾಡಿ (ಕೃವಾವಿ. ೫೬) : ಎತ್ತುಗಳನ್ನು ಝೂಲು ಗೆಜ್ಜೆಗಳಿಂದ ಸಿಂಗರಿಸಿದ್ದರು (ಅಕೋಕ. ೨೦೨).

[ ← ಹಿಂ. ಝೂಲ್, ಝೂಲೀ ; ಮರಾ. ಝೂಲಾ ]

**ಜೂಲು$_3$** (ನಾ). ಆಫ್ರಿಕದ ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ : ಆಫ್ರಿಕದ ಜೂಲುವೂ ಯುದ್ಧಕ್ಕೆ ಹೋಗುವ ಮೊದಲು ನರ್ತಿಸುವನು (ಬಾಲಪ್ರ. II, ೯೧೭) ; ಅವನು ನಿಜಕ್ಕೂ ಫ್ರೆಂಚ್ ನಾಗರಿಕನೆ ? ಅವನೊಬ್ಬ ಜೂಲು (ಪುನರು. ೨೫೨). [ ← ಇಂ. Zulu ]

**ಜೂಲುಕೂದಲು** 'ಜೂಲುಗೂದಲು' ನೋ.

**ಜೂಲುಗೂದಲು, ಜೂಲುಕೂದಲು** (ನಾ). ಉದ್ದವಾದ ಕೂದಲು: ಹಣೆಯ ಜೂಬಿನ ಜೂಲುಗೂದಲ ಕಣುಗಿಡಿಯ ಕಡುಕಾಹುರದ ಸಿಂಗಣಿಕಗಳನರ್ಬುದವನತಿಬಲ ತಾರ ತೋಱಿಸಿದ (ತೊರರಾ. ೪–೭–೨೩). **ಜೂಲುಕೂದಲು** : ಅದರ ಮೈತುಂಬ ಜೂಲುಕೂದಲಿದೆ (ಬಾಲಪ್ರ. III, ೧೪೪೨).

[ ಜೂಲು$_1$ + ಕೂದಲು (<ಕೂಂದಲ್) ]

**ಜೂಲುನಾಯಿ** 'ಜೂಲ್ನಾಯ್' ನೋ.

**ಜೂಲುಬಟ್ಟೆ** (ನಾ). ಹರಿದು ಹೋದ ಬಟ್ಟೆ; ಚಿಂದಿ ಚಿಂದಿಯಾದ ಬಟ್ಟೆ; ಎಳೆ ಬಿಟ್ಟು ಹೋಗಿರುವ ಬಟ್ಟೆ: ಸುಧಾಮನು ಹರಕು ಬಟ್ಟೆಯನ್ನುಟ್ಟು ಜೂಲುಬಟ್ಟೆಯನ್ನು ಹೊದ್ದು ಬಡತನದಿಂದ ಬಹು ಕಷ್ಟಪಡುತ್ತಿದ್ದನು (ನೀತಿಚಿಂ. VIII, ೨೮). [ಜೂಲು$_1$ + ಬಟ್ಟೆ$_2$]

**ಜೂಲ್ನಾಯ್,** ಜೂಲುನಾಯಿ, ಜೂಲ್ನಾಯಿ (ನಾ). ಮೈಮೇಲೆ ಉದ್ದವಾದ ಕೂದಲನ್ನುಳ್ಳ ಒಂದು ಬಗೆಯ ನಾಯಿ: ಕೆಲಸಾರ್ ಪೋಗದಿರಿತ್ತ ಬಾ ತುಡುಕದಿರ್ ಜೂಲ್ನಾಯ್ಗಳಂ ಬಿಟ್ಟು (ನಳಚಂ. ೭೩). **ಜೂಲುನಾಯಿ:** ಜೂಲುನಾಯಿಗೆ ಉದ್ದಕೂದಲು ಇರುವವು (ಮುಂಬಯಿ. ೩-೩೯); ಹಣ್ಣುಮುದುಕನನೆಳೆವ ಜೂಲುನಾಯಿ (ಶಿಲಾಲ.೬೯-೧೦); ಜೂಲುನಾಯಿ ರೂಬಿಯು ಬಾಗಿಲಲ್ಲಿ ಕಾಣಿಸಿಕೊಂಡಿತು (ಸಾವಿಸ. ೨೦). **ಜೂಲ್ನಾಯಿ:** ಮೇಳೈಕವ ಹಿಡಿವ ಜೂಲ್ನಾಯಿಗಳ ತರಿಸು (ರಾವಜೀ. ೨೮). [ಜೂಲು$_1$ + ನಾಯ್]

**ಜೂಲ್ನಾಯಿ** 'ಜೂಲ್ನಾಯ್' ನೋ.

**ಜೂವ** (ನಾ). ಒಂದು ದುರ್ಗದ ಹೆಸರು (?): ಸಂದ ಜಳದುರ್ಗ್ಗಂ ಜೂವವಮಂ ಕೊಣ್ದು ಗಣ್ಡಗುಣಕ್ಕಾಸ್ಪದಮಾದ ಜೆಟ್ಟಿಗನಿವಂ ಗೋವಿನ್ದ ದಣ್ಡಾಧಿಪ (ಸೌಇಇ. XX, ೮೭-೪೫: ?). [?]

**ಜೂಳಯ** 'ಚೂಳೆಯ' ನೋ.

**ಜೂಳಿ,** ಜೂಳೆ, ಜೋಳಿ$_4$ (ನಾ). (ಮುಚ್ಚಳವನ್ನುಳ್ಳ) ಪಾತ್ರೆಯು ಅಥವಾ ಗಿಂಡಿಯ ಸೊಂಡಿಲಿನಾಕಾರದ ಕೊಳವೆ.–ನಳಿಕೆ: ಒಂಭತ್ತು ಜೂಳಿಯ ತಣ್ಣೀರ ಕಣಿಕೆಯಂ ಹೊತ್ತು ತಿತ್ತಿಗೆ ನೀರ ಕಾಣದ (ಗುಪ್ತಮಂ. ೧೫-೧೮೭): ಕಾರ್ಪಣ್ಯದಿಂ ನುಡಿಯಲ್ಕಾ ನುಡಿಗಂಜಿ ತಾನರರೆ ಕಾರುಣ್ಯ ಕರಂ ಜೂಳಿಯಿಂ ಕುಡಿದಂ (ಪಂಪಾಶ. ೭೭); ಗಿಂಡಿಯ ಬಾಯೊಳಗೆ ಹೊಕ್ಕು ಜೂಳಿಯೊಳು ಹೊಱಡುವೆನೆಂಬ ಮಾಯಾವಿ (ಚೀರಮು. ೨-೧೦); ತನ್ನ ಶಿಷ್ಯಂ ಕೆಡುವನೆಂದು ಜೂಳಿಗೆ ಮೊಗವನಿಟ್ಟು (ವೀಶೈಪು. ೩-೦೪-೧೨): ಸೂಳೆಯ ತುಟಿ ಶುದ್ಧ ಎಳ್ಗೆಯಿಂ ಹರಿವ ಜಲ ಶುದ್ಧ ಸಗ್ಗಳೆಯ ಜೂಳಿ ತಾ ಶುದ್ಧ (ಸರ್ವಜ್ಞ. ೧೯೧೮). **ಜೂಳೆ:** ತುಂಬುವ ಘಟವೊಂದು ಸೂಸುವ ಜೂಳೆ ಬೇಱಾದಂತೆ (ಡಬೊಮ್ಮ. ೨೩೮-೭೭). **ಜೋಳಿ$_4$:** ಅಱಿದು ವಾಮನ ವಿಪ್ರನುದಕವೀ ಜೋಳಿಯಿಂ ಪೊಱಮಡದೆನುತ್ತ (ವೀಶೈಪು. ೩-೧೪-೦೩). [?]

**ಜೂಳಿಗಿಂಡಿ** (ನಾ). ಸೊಂಡಿಲಿನಾಕಾರದ ನಳಿಗೆಯನ್ನುಳ್ಳ ಗಿಂಡಿ; ಜೂಳಿಯ ಗಿಂಡಿ: ತಿಳಿ – ನೈರ್ಮಲ್ಯೇ, ಜ್ಞಾನಪ್ರಸನ್ನಭಾವಯೋಃ ಕಾಂಜಿಕೇ[ಪಾಠಾಂ. ಚಷಕೇ] ಚ ಜೂಳಿಗಿಂಡಿ (ಶಮಧಾ. ನ. ೮೦೭).
[ಜೂಳಿ + ಗಿಂಡಿ]

**ಜೂಳಿಗೆ,** ಜುಳಿಗೆ (ನಾ). = ಜೂಳಿ: ಕಂದಲೊಳಗಣ ಹಾಲು ಜೂಳಿಗೆ ಯೆರಡು ಬಹುದೆನಲು . . . ಕೊಂದುಕೊಂಡಿರಿ ನಿಮ್ಮನೇ ನೀವೆಂದ ನಸುರಾರಿ (ನಿಭಾಗ. ೧೦-೬೩-೯). **ಜುಳಿಗೆ:** ತೆರೆ ತಳರೆಡೆಯೊಳಿರ್ದ ಮಾವಿನ ತೋರತನಿವಣ್ಣ ಗಿಳಿ ಕರ್ದುಂಕಿದೊಡೆ ರಸಮೊಸರಿ ಸೋರ್ವಂತೆ ಹೆಂಗಳ ಕರತಳದ ಪೊಂಗಳಸದ ಜುಳಿಗೆಯೊಳಿಟ್ಟ ಬೆರಳಂ ತೆಗೆದು ಬಿಡಲ್ಕೆ . . . ಕೆಂಪಿಡಿದ ಜಳಧಾರೆ ಕಂಗೊಳಿಸುತಿರ್ಪುದು (ಜೈಮಿಭಾ. ೩-೧೧).
[<ಜೂಳಿ]

**ಜೂಳೆ** 'ಜೂಳಿ' ನೋ.

**ಜೂಳೆಯ** 'ಚೂಳೆಯ' ನೋ.

**ಜೃಂಭ** (ನಾ). ೧. ಆಕಳಿಕೆ; ಆಗುಳಿಕೆ: "ಜೃಂಭಃ, ಜೃಂಭಣಂ – ಈ ೨ ಆಗುಳಿಕೆಯ ಪೆಸರು" (ನಾಚಿರಾ. ೯೮). ೨. (ಹೂವಿನಂತೆ) ಅರಳುವಿಕೆ. ೩. ಊದುವಿಕೆ. ೪. ವಿಸ್ತಾರಗೊಳ್ಳುವಿಕೆ; ಹೆಚ್ಚುವಿಕೆ. [ಸಂ.]

**ಜೃಂಭಕ** (ನಾ). ೧. (ನಿದ್ದೆಯನ್ನುಂಟುಮಾಡುವ) ಒಂದು ಬಗೆಯ ಮಂತ್ರಾಸ್ತ್ರ: ಇವು ಜೃಂಭಕಾದಿ ಮಂತ್ರಾಸ್ತ್ರಗಳು (ಉತ್ತರಾ. ೮). ೨. ಶಕ್ತಿ ಮಂತ್ರಗಳಲ್ಲಿ ಒಂದು: ಜೃಂಭಕ ಪ್ರಸ್ವಾಪನ ಅಪ್ರತಿಹತ ನಿಶ್ಶೇಷೀಕರಣ ಜೀವಗ್ರಾಹಗಳೆಂಬ ಪಂಚಶಕ್ತಿ ಮಂತ್ರಂಗಳಂ (ವಿವೇಳ. ೫೦).
[ಸಂ.]

**ಜೃಂಭಕಾಸ್ತ್ರ** (ನಾ). ಒಂದು ಬಗೆಯ ದಿವ್ಯಾಸ್ತ್ರ: ನೆರೆ ಸಂಪಾದಿಸಿದರ್ ಮಹಾಮಹಿಮೆಯುಳ್ಳೀ ಜೃಂಭಕಾಸ್ತ್ರಂಗಳಂ (ಉರಾಚ. ೦೨-೦೩).
[ಜೃಂಭಕ + ಅಸ್ತ್ರ]

**ಜೃಂಭಣ** (ನಾ). ೧. ಆಗುಳಿಕೆ: ಅನಾಲಸ್ಯನೆಂಬೆಂ ನಾಸ್ತಿಕ್ಯ ದೈನ್ಯ ನಿದ್ರಾದಿ ನಿರೀಕ್ಷಣ ಜೃಂಭಣ ವಿವರ್ಜಿತಂ (ಚಾವುಂಪು. ೬). ೨. ಹಿಗ್ಗುವಿಕೆ; ಹೆಚ್ಚಾಗುವಿಕೆ. 'ಜೃಂಭಿಸು' ಪರಾ. [ಸಂ.]

**ಜೃಂಭಾಸ್ತ್ರ** (ನಾ). = ಜೃಂಭಕಾಸ್ತ್ರ: ಜೃಂಭಾಸ್ತ್ರದಿನಸೆ ಸೈನ್ಯಂ ಸ್ತಂಭಿಸೆ (ಜಗವಿ. ೧೫-೩೪). [ಸಂ.]

**ಜೃಂಭಿತ** (ಗುಂ). ೧. ಹೆಚ್ಚಾದ; ಅಧಿಕವಾದ: ಸಂಭಿನ್ನಮಹಾವಂತಿಗಳ್ ಗಂಭೀರನಿಗೋದದೊಳ್ ತಮೋಮಯದೊಳ್ ದುಃಖಾಂಭೋಧಿಯ ಕಡೆಗಾಣದೆ ಜೃಂಭಿತ ದುಷ್ಕರ್ಮದಿಂದೆ ನಮದಪರಿನ್ನುಂ (ಆದಿಪು. ೫-೭೬). ೨. ಅರಳಿದ; ವಿಕಸಿತ. (ನಾ). ೩. ಆಕಳಿಕೆ: ಗುರು ಕಂಪ ನಿನಗೇಕೆ ಬಲಭೇದಿ ಜೃಂಭಿತವು (ಧ್ವನ್ಯಾಲೋ. ೯೯). [ಸಂ.]

**ಜೃಂಭಿನಿ** (ನಾ). ಒಂದು ಬಗೆಯ ಚೋರವಿದ್ಯೆ; ಪ್ರತ್ಯಕ್ಷವಾಗುವ ಮತ್ತು ಮಾಯವಾಗುವ ವಿದ್ಯೆ: ವಿದ್ಯುಚ್ಚೋರನೆಂಬೊಂ ಕಳ್ಳನಾತಂ ಜೃಂಭಿನಿ ಸ್ತಂಭಿನಿ ಮೋಹಿನಿ . . . ಘುಟಿಕಾಂಜನವೆಂದಿವು ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳಾದಮಾನುಂ ಕುಶಲಂ (ವಡ್ಡಾರಾ.೦೨೨-೦೬).
[<ಸಂ. ಜೃಂಭಿಣೀ]

**ಜೃಂಭಿಸು** (ಕ್ರಿ). ಅತಿಶಯವಾಗು; ವಿಜೃಂಭಿಸು: ಕಾಳಗದೊಳು ಬೊಮ್ಮಜಟ್ಟಿಗ ಬೀರ ಭೇತಾಳ ಶಾಕಿನಿ ಡಾಕಿನಿಯರ ತೂಳದೆ ಹೊಯ್ದಾಡಿ ಜೃಂಭಿಸಿ ಗಗನಾಂತರಾಳದಿ ಬೊಬ್ಬಿಕ್ಕುತಿಹರು (ಮೋಹತ. ೨೯-೧೦).
[ಜೃಂಭಣ + – ಇಸು$_3$]

**ಜೃಂಭೆ** (ನಾ). ಆಗುಳಿಕೆ. [ಸಂ. ಜೃಂಭಾ]

**ಜೃಂಭೆಗೆಯ್** (ಕ್ರಿ). ಆಕಳಿಸು: ನೀಳ್ಕಾಲಾನೆಗಳೆಂದು ಸೊಪ್ಪಳಿಸದಾ ಶಬ್ದಂಗಳಂ ಕೇಳುತಂ ಬೀಳ್ಕೇಡಂ ಪಡೆಯಲ್ ಸಮಂತುಳಿದ ಸಿಂಹಂ ಜೃಂಭೆಗೆಯ್ವುತ್ತಿರಲ್ (ಹಾಲಾಸ್ಯ. ೩-೮-೯). [ಜೃಂಭೆ + ಕೆಯ್$_1$]

**ಜೆಂಗು** 'ಜಂಗು$_2$' ನೋ.

**ಜೆಂಗೆಜ್ಜೆ** (ನಾ). ಯಕ್ಷಗಾನದಲ್ಲಿ ಬರುವ ರಾಜ ಅಥವಾ ರಾಕ್ಷಸಾದಿ ವೇಷಧಾರಿಗಳು ಮೊಳಕಾಲಿನ ಬಳಿ ಕಟ್ಟುವ ಗೆಜ್ಜೆ: ಜೆಂಗು (ಚೆಂಗು) ಅಥವಾ (ಜೆಂಗೆಜ್ಜೆ) ರಾಜವೇಷ, ರಾಕ್ಷಸವೇಷಾದಿಗಳೆಲ್ಲ ಮೊಣಕಾಲ ಮುಂಗಡೆಗೆ ಕಟ್ಟುವ ಒಂದು ಬಗೆಯ ಗೆಜ್ಜೆ (ಪಾರ್ತಿಸು. ४೭).
[ಜೆಂಗು (<ಜಂಗು$_2$) + ಗೆಜ್ಜೆ$_1$]

**ಜೆಂದ್‌ಅವಸ್ತ** (ನಾ). ಜೆಂದ್ ಎಂಬ ಭಾಷೆಯಲ್ಲಿ ರಚಿತವಾಗಿರುವ ಪಾರಸಿಜನರ ಅತ್ಯಂತ ಪ್ರಾಚೀನವಾದ ಧರ್ಮಗ್ರಂಥ: ಇವರು ಖೊರಾನನ್ನು ಜೆಂದ್‌ಅವಸ್ತವನ್ನು ಒಪ್ಪಿ ಅರಿತರು (ಜೊಂಗಳು. VI, ೫೫೦೩).
[←ಪಾರ. ಜಂದ್‌ಅವಸ್ತ]

**ಜೆಂಬಾಳಿ** (ನಾ). ಜೋಳದ ಬೆಳೆಯನ್ನು ನಾಶಮಾಡುವ ಒಂದು ಬಗೆಯ ಹಸಿರು ಬಣ್ಣದ ಹುಳು,–ಕೀಟ: (ಕ). [?]

**ಜೆಂಬುದೀವಿ** (ನಾ). ಜಂಬೂದ್ವೀಪ: ಈ ಜೆಂಬುದೀವಿಯೊಳ್ ತೆಂಕಲ್ಗೆ ಅಲ್ಲಿಗಲ್ಲಿಗೆ ಸಂಚರಿಪ ಕೇರಳಿಯರ ತಳಿರಡಿಯ ಲೆಪ್ಪದಲತಿಗೆವೊನ್ನಿಂ ಕೊರ್ವಿ ಬೆಳೆದ ಕೆಯ್ವೊಲನಿಂ (ರಾಮಾಶ್ವ. ೭೪-೦೪). [<ಸಂ. ಜಂಬೂದ್ವೀಪ]

**ಜೆಕರ್ಮದ** (ನಾ). ಒಂದು ಬಗೆಯ ಮೂಲಿಕೆ: ಯವಹಿತ್ರ, ಜೆಕರ್ಮದ ಈ ಎರಡನ್ನು ಜೇನುತುಪ್ಪದಲ್ಲಿ ಹಚ್ಚಲು ಇರುಳುಗಣ್ಣು ಮಾಣ್ಗುಂ (ವಿಷ್ಯವಿ. ೬೩). [ ? ]

**ಜೆಜ್ಜು** 'ಚಚ್ಚು$_1$' ನೋ.

**ಜೆರ್ಝ್ಝಾರ** 'ಜುಜ್ಝಾರ' ನೋ.

**ಜೆಟಿಗ** 'ಜಟ್ಟಿಂಗ' ನೋ.

**ಜೆಟ್ಟಿ** 'ಜಟ್ಟಿ$_1$' ನೋ.

**ಜೆಟ್ಟಿಂಗ** 'ಜಟ್ಟಿಂಗ' ನೋ.

**ಜೆಟ್ಟಿಕೋಟಿ** (ನಾ). ಪಂದ್ಯದ ಕೋಳಿ; ಕಾಳಗಮಾಡುವುದಕ್ಕೆ ತರಬೇತಾದ ಕೋಳಿ: ಜೆಟ್ಟಿಕೋಟಿಗಳ ಮೇಲೆ ತವ್ಮ ವಿದ್ಯೆಗಳಂ ಸಂಕ್ರಮಿಸಿದರ್ (ಜಾವುಂಪು. ೩೨೪). [ಜೆಟ್ಟಿ$_1$ (<ಜಟ್ಟಿ$_1$)+ಕೋಟಿ$_1$ ]

**ಜೆಟ್ಟಿಗ** 'ಜಟ್ಟಿಗ$_1$' ನೋ.

**ಜೆಟ್ಟಿದೆಟಿ** (ನಾ). ಒಂದು ಬಗೆಯ ತೆರಿಗೆ: ಮುಕುಡಿದೆಟಿ ಜೆಟ್ಟಿದೆಟಿ ಕೂನೆದೆಟಿ . . . ಯೆಲ್ಲವನೂ ಕೊಟ್ಟರು (ಎಕ. VI, ಕಡೂರು. ೯೯-೯೨; 1291). [ ಜೆಟ್ಟಿ$_1$ (<ಜಟ್ಟಿ$_1$) + ತೆಟಿ$_3$ ]

**ಜೆಟ್ಟಿಶರ್ಮ** (ನಾ). ಒಬ್ಬಾತನ ಹೆಸರು: ಸರ್ವ್ವಶರ್ಮ್ಮಣ ಪುತ್ರ ಜೆಟ್ಟಿಶರ್ಮ್ಮಂ (ಇಆ. VII, ೪೨-೨೬; 668). [ ಜೆಟ್ಟಿ ? + ಶರ್ಮ ]

**ಜೆಟ್ಟೆ, ಜೇಟೆ, ಜೇಷ್ಟೆ, ಜೇಷ್ಠೆ** (ನಾ). = ಜ್ಯೇಷ್ಠೆ: ಜ್ಯೇಷ್ಠಾ – ಜೆಟ್ಟೆ; ಸೃಷ್ಟಿ – ಸುಟ್ಟಿ (ಶಬ್ದಾನು. ೦೬೦ ಪ್ರಯೋ). **ಜೇಟೆ:** ಷಕಾರಕ್ಕೆ ಅದ್ವಿತ್ವಟಕಾರಂ – ಜ್ಯೇಷ್ಠಾ – ಜೇಟೆ (ಶಮದ.೨೮೩ ಪ್ರಯೋ). **ಜೇಷ್ಟೆ:** "ಜೇಷ್ಟೆ ಜೇಷ್ಠೆಯೊಳ್" (ಕಶರ. ೪೦) **ಜೇಷ್ಠೆ:** ಮೇಲಿನ 'ಕಶರ ೪೪'ರ ಪ್ರಯೋಗವನ್ನು ನೋಡಿ. [ <ಸಂ. ಜ್ಯೇಷ್ಠಾ ]

**ಜೆಟ್ಟೆಮುಗೊಳ್** (ನಾ). ಒಂದು ಪ್ರದೇಶದ ಹೆಸರು: ಪುತ್ತೂರಾ ಜೆಟ್ಟೆಮುಗೊಳುತ್ತಿಟ್ಟು ಪುತ್ತೂರಕ್ಕಾಣಿಗೆ ಅಯ್ದ್ಯುಂಬು ಕಟನಿಯಂ . . . ಕೊಟ್ಟರ್ (ಎಕ. X, ಕೋಲಾರ. ೨೨೯-೪; 750). [ ? ]

**ಜೆಡೆ** 'ಜಡೆ$_1$' ನೋ.

**ಜೆಡೆಕಳ್ಳಿ** 'ಜಡೆಗಳ್ಳಿ' ನೋ.

**ಜೆಡೆಗಟ್ಟು$_1$** 'ಜಡೆಗಟ್ಟು$_1$' ನೋ.

**ಜೆಡೆಗಟ್ಟು$_2$** 'ಜಡೆಗಟ್ಟು$_2$' ನೋ.

**ಜೆಡೆಗೊಳ್** 'ಜಡೆಗೊಳ್' ನೋ.

**ಜೆಡೆದಲೆ** 'ಜಡೆದಲೆ' ನೋ.

**ಜೆಡೆದುಬುಗಲ್** 'ಜಡೆದುಂಬುಗಲ್' ನೋ.

**ಜೆಡೆದೆರೆ** (ನಾ). ಒಂದು ಬಗೆಯ ತೆರಿಗೆ: ಜೋಲಕಾರುಣ್ಯ ಜೆಡೆದೆರ್ರೆ ಪ ೩ ॥ ಬಿಟ್ಟೆಯಭಂ ೧ಕ್ಕಂ ಗ ೨ ಎತ್ತಿಲು ಪೊತ್ತರ ಪ ೫ (ಎಕ. XVI, ಚಿಕ್ಕನಾ. ೭೦-೩೦; 1330). [ ಜೆಡೆ? + ತೆರೆ$_2$ (<ತೆಟಿ$_3$) ]

**ಜೆಡೆಮುಡಿ** 'ಜಡೆವಂುಡಿ' ನೋ.

**ಜೆಡ್ಡು** 'ದಡ್ಡು$_1$' ನೋ.

**ಜೆಡ್ಡುಗಟ್ಟು** 'ದಡ್ಡುಗಟ್ಟು' ನೋ.

**ಜೆಡ್ಡುಬಿತ್ತ** (ನಾ). ಒಂದು ಬಗೆಯ ಸಸ್ಯ: ಜೆಡ್ಡುಬಿತ್ತ, ಕುಮರಿಬಿತ್ತ (ಪುಷ್ಪಗಿ. ೦೩-೨೮೦). [ ಜೆಡ್ಡು ? + ಬಿತ್ತ ]

**ಜೆಪ್ಪು** 'ಜರ್ವು$_1$' ನೋ.

**ಜೆರ್ಕು$_1$** 'ಜರ್ಕು' ನೋ.

**ಜೆರ್ಕು$_2$** 'ಜಕ್ಕು' ನೋ.

**ಜೆರ್ಕು$_3$** (ನಾ). ಪತನ (?): ಅಂದಿನ ಮಹಿರಾವಣ ರಾವಣ ಕುಂಭಕರ್ಣಾದ್ಯರ ಸೊರ್ಕುಂ ಜೆರ್ಕುಂ ನಿವ್ಮವರ ತರಣದ ನೆಲೆಯಂ ಪೇಟವೆ! (ರಾಮಾಶ್ವ. ೦೦೨-೦೯). [ ? ]

**ಜೆಲಕೊಂಜೋಳ** (ನಾ). ಒಂದು ಬಗೆಯ ಜೋಳ: ಪಟ್ಟಣಸಾಳಿ . . . ಜೆಲಕೊಂಜೋಳ ಈ ಎಂಟು ಜಾತಿಗಳನ್ನು ಮುಖ್ಯ ಪೈರುಗಳಾಗಿ (ಕಥಾಗ. ೨೬೦). [ ? + ಜೋಳ ]

**ಜೆಲ್ಲನೆ** (ಅ). ಜೆಲ್ಲೆಂದು; ರಭಸದಿಂದ ಕೂಡಿ: (+). [ಜೆಲ್$_n$ + – ಅನೆ$_1$]

**ಜೆಲ್ಲಿ$_1$** 'ಜಲ್ಲಿ$_2$' ನೋ.

**ಜೆಲ್ಲಿ$_2$** 'ಜಲ್ಲಿ$_3$' ನೋ.

**ಜೆಲ್ಲಿ$_3$** 'ಜಲ್ಲಿ$_4$' ನೋ.

**ಜೆವಳೆ** 'ಜಳವೆ' ನೋ.

**ಜೆಳುಗೂರ್** (ನಾ). ಒಂದು ಊರಿನ ಹೆಸರು: ಸೇನ್ದ್ರಕ ಮಹಾರಾಜರ್ನಾಯರ್ಖಣ್ಣ ವಂ ಜೆಳುಗೂರಾಳ್ಗೆಯೂನಾಳುತ್ತು ಕಾನ್ದರ್ಬೊರಧಿಕಾರಿಗಳಾಗೆ (ಎಕ. VII, ಶಿಕಾರಿ. ೦೫೯-೪ : 685). [ ? + ಊರ್ ]

**ಜೆಟಿ** (ನಾ). (?) : ಮಟಿ, ವೊಟಿ, ಕಟಿ . . . ಜೆಟಿ [ಪಾಕಾಂ. ಚೆಟಿ] ಕಟಿತ್ತಿ, ಬಾಟಿತ್ತಿ . . . ಇತಿ ಅವಗಟಿಯಾದಯಃ (ಶಬ್ದಾನು. ೦೪೦ ವ್ಯಾಖ್ಯಾ). [ ? ]

**ಜೇ$_1$** 'ಜೈ' ನೋ.

**ಜೇ$_2$** (ನಾ). ಬಿಲ್ಲಿನ ಹಗ್ಗ; ಹೆದೆ: "ಜೇ – ಜ್ಯಾ=ಹೆದೆ" (ತದ್ಭಕೋ. ೦೫): ಜೇಯನೇಟಿಸಿ ಬಿಲ್ಲಜೇಯ ಹರಿಸೂನು ಸಹಸಾಯುತಿಕೆಯಿಂದೆ ನಿಜಸಾಯಕವನುಗಿಯುತಡಹಾಯಿದಂ (ಜೈಮಿಭಾ. ೦೨-೨೮). [<ಸಂ. ಜ್ಯಾ]

**ಜೇಂಕರ** (ನಾ). ಪ್ರಶಂಸೆ; ಹೊಗಳಿಕೆ; ಸ್ತುತಿ. 'ಜೇಂಕರಿಸು' ಪರಾ. [ ? ]

**ಜೇಂಕರಿಸು** (ಕ್ರಿ). ಹೊಗಳು; ಪ್ರಶಂಸಿಸು; ಕೊಂಡಾಡು: "ಜೇಂಕರಿಸು– ಪ್ರಶಂಸಾಯಾಂ (ಕೊಂಡಾಡು)" (ಕಮಧಾ); ಕಾವಗುಣಂಗಳೆ ಸಾಜವೆಂದು ಕೇಳ್ದರ್ಗ್ಗದೆಗೊಣ್ಣು ಜೇಂಕರಿಸೆ (ಎಕ. VII, ಶಿವಮೊ. ೦೦-೪೦; 1085); ಪಿರಿದುತ್ಸವದಿಂದುಟಿ ಜೇಂಕರಿಸೆ ಬುಧರ್ನಚ್ಚಿ ಮೆಚ್ಚಿ ಬಣ್ಣಿಸೆ (ಧರ್ಮಾಮೃ. ೩-೨೩). [ ಜೇಂಕರ + – ಇಸು$_3$ ]

**ಜೇಂಕಾರ** (ನಾ). = ಝುಂಕಾರ. [ <ಸಂ. ಝುಂಕಾರ ]

**ಜೇಂಗುಟ್ಟು** (ಕ್ರಿ). ಝೇಂಕಾರಮಾಡು (?): ದಣಿದ ಜೀವದ ವ್ಯಾಳೆ ಜೇನಿನ ಸುರಿಮಳೆ ಜೇಂಗುಟಿ ಹನಿಹನಿ ಇಳಿದಾಂಗ (ಸಹೀಗೀ. ೪೬-೮). [ ಜೇನ್$_0$ + ಕುಟ್ಟು$_1$ ]

**ಜೇಂಗೊಡ** 'ಜೇನ್ಗೊಡ' ನೋ.

**ಜೇಂಜರಿ** (ನಾ). ಜೇನುತುಪ್ಪದ ಧಾರೆ: ಪೊಚ್ಚ ಪೊಸ ಜೇನ್ಗೊಡನಂ ಪಿಟಿವಂದು ಸೋರ್ವ ಜೇಂಜರಿ (ಚಿಕವಿ. ೯-೦೦೭). [ ಜೇನ್$_1$ + ಸರಿ$_6$ ]

**ಜೇಂಬನಿ** (ನಾ). ಜೇನುತುಪ್ಪದ ಹನಿ; ಜೇನುಹನಿ: ಜೇಂಬನಿಯನ್ನು ಪಟಲಗಳಲ್ಲಿ ತುಂಬಿಸಿ (ನಾಡೋಜ. ೩೪೮). [ ಜೇನ್$_1$ + ಪನಿ$_2$ ]

**ಜೇಂಬಾಲು** (ನಾ). ಜೇನಂ ಬೆರಸಿದ ಹಾಲು; ಹಾಲ್ಜೇನು: ಆರೋಗಿಸು ನನ್ನ ಚಿಣ್ಣ, ನಿನ್ನ ಮೆಚ್ಚಿನ ಜೇಂಬಾಲು (ಬಟ್ಯಅ. ೯೨-೨೩). [ ಜೇನ್$_1$ + ಪಾಲು$_1$ (<ಪಾಲ್$_1$) ]

**ಜೇಂಬುಳು** 'ಜೇಂಬುಟು' ನೋ.

**ಜೇಂಬುಟು, ಜೇಂಬುಳು, ಜೇನುಂಬುಳು, ಜೇನುಹುಳು** (ನಾ). ಹೂವಿನ ರಸವನ್ನು ಹೀರಿ ಜೇನುಮಾಡಿ ಕೂಡಿಡುವ ಒಂದು ಬಗೆಯ ಹುಳು; ಜೇನ್ನೊಣ: ಮುಸುಕುಟಿತು ಕೋಂಟೆಯಂ ಮಸಗಿ ಜೇಂಬುಟುಗಳ್ ಪೊಸವುಟ್ಟಯಂತೆ (ಚಿಕವಿ. ೨-೦೦೭). **ಜೇಂಬುಳು:** ಲಕ್ಕಲಕ್ಕದಲಿ ಕಿಕ್ಕಿರಿದಿರೆ ಜೇಂಬುಳು ವೇಣ್ ದುಂಬಿ (ಕೋಗಿಲ. ೮೭-೨೦). **ಜೇನುಂಬುಳು:** ಹೂವಿನ ಮರದಲಿ ಜೇನುಂಬುಳುಂಗಳು ವೊರೆವುದು ರಾಜನ ಭಯದಿಂದಲ್ಲ (ಪಾ ಂ ಜ ಜ. ೩೬-೩). **ಜೇನುಹುಳು:** ಜೇನುಹಲ್ಲೆಗೆ ಜೇನುಹುಳು ಕವಿಯುವಂದದಲಿ (ಅಗ್ನಿಹಂ. ೮೦-೨೮). [ ಜೇನ್$_1$ + ಪುಟು$_1$ ]

**ಜೇಂಬೊರೆ** (ನಾ). ಜೇನಿನ ಗೂಡು : ಆ ವರ್ಣನಾದಿಗಳಿಂದ ಪುಷ್ಟವಾಗಿ ಪಾಕವಡೆದ ಕಾವ್ಯವೆಂದರೆ ಜೇಂಬೊರೆಯಂತೆ ರಸನಿಷ್ಯಂದಿಯಾಗಿರ ಬೇಕು (ನಾಡೋಜ. ೩೬೩). [ ಜೇನ್$_1$ + ಪೊರೆ$_6$ ]

**ಜೇಕಿರ** (ನಾ). ಒಂದು ಬಗೆಯ ವಾದ್ಯ (?): ಪಳವದ ತಿವಳಿಯ ಜುಂಕದ ವೊಳಸಿನ ಜೇಕಿರದ ಸಿವಿರ ಸಿಬ್ಬನ ಲಯದಿಂದೆಬಲದೆ ಕಣಿದರ್ (ಅಜಿಪು. ೫-೩೨). 'ಜಿಂಕರ' ಪರಾ. [ ? ]

**ಜೇಕು** 'ಗೇಕು' ನೋ.

**ಜೇಗ** (ನಾ). (?) : ಅಲ್ಲಿಯ ಸಿದ್ಧಾಯುಮುಂ[ಜೇ]ಗ ಮೂಲೋಪಭೋಗಿ . . . ಗಣ್ಡಯ್ಯ ಜೇಗಮಂ (ಇಎ. ೧೯೪೭, ಕರೀಂನ. ೦೬೨-೬೨; 955). [?]

**ಜೇಗಂಟೆ**, ಜಗ್ಗುಟೆ, ಜಾಂಗಟೆ, ಜಾಗಂಟೆ, ಜಾಗಟ, ಜಾಗಟೆ, ಜೇಗಟ, ಜೇಗಟೆ, ಜೇಗಳೆ, ಜೇಘಂಟೆ, ಝಾಂಗಟೆ, ಝಾಗಟೆ (ನಾ). (ದೇವಸ್ಥಾನಗಳಲ್ಲಿ ಬಾರಿಸುವ) ಒಂದು ಬಗೆಯ ವರ್ತುಲಾಕಾರದ ಲೋಹವಾದ್ಯ: (+). **ಜಗ್ಗುಟೆ :** ಜಗ್ಗುಟೆ ಜರ್ಝರಿಗಳಿಂ ಕುಂಭ ಕುಕ್ಕಿಱಿದಾರ್ದಳುಂಬವಾಗಿರೆ ಗಿರಿನಿತಂಬದೊಳು ರಾಕ್ಷಸರು ನೆರೆದಿರ್ದರು (ಕುಮುರಾ. ೭-೫೭). **ಜಾಂಗಟೆ:** ಗಂಟೆ ಜಾಂಗಟೆ ವೊದಲಾದುವನ್ನು ಬಾರಿಸಿ (ಕನ್ನಜಾ. ೦೭೦) ; ಇನ್ನು ಮುನ್ನೂಕೋಟಿ ಜಾಂಗಟೆಯ ಬಡಿದಿಹವು (ನಲಮು. ೦೯-೯). **ಜಾಗಂಟೆ:** ಮದ್ದಳೆ ಜಾಗಂಟೆ[ಪಾಠಾಂ. ಜಾಗಂಟೆ, ಜಾಗಟೆ] ತಾಳ ದಂಡಿಗೆ ಭೇರಿ ತದ್ಧಿಮಿದಿಮಿಕೆಂದು ರಭಸಗಳು (ಪುರಂದ. ೪-೪-೧). **ಜಾಗಟ :** ಜಾಗಟ[ಪಾಠಾಂ. ಜೇಗಟ]ದೊಳಗಣ ಧ್ವನಿ ಜಾಗಟ[ಪಾಠಾಂ. ಜೇಗಟ]ವ ನುಂಗಿತ್ತು (ಮೋಳಿಮಾ. ೨೦೨-೬೬೭). **ಜಾಗಟೆ :** ನಿನ್ನ ನೆರೆಮನೆಯವರ ಭಾಗ್ಯಮಂ ಪಂಚಿ ಕೊಡುವೆನೆಂದು ಒಂದು ಜಾಗಟೆ [ಪಾಠಾಂ. ಜಯಘಂಟೆ]ಯಂ ಕೊಟ್ಟನದಂ ನೀನೇನಾದೊಡದಾಗಲಿಯೆಂದು ಬಾರಿಸಿಯಾಕ್ಷಣದೊಳೆ ಬಕ್ಕರ್ವಮದರರ್ಧಂ ನೆರೆಮನೆಯವರ್ಗೆ ಬರ್ಕು (ಧರ್ಮಪ. ೪-೧೩ ವ); ಘುಂಡಿಘುಂಡಿಪ ಹೆಗ್ಗಾಳೆ ವೊಳಗುವ ಬೆಡಗು ಜಾಗಟೆ ಬೊಬ್ಬೆಯಲಿ ಜಗ ನಡುಗೆ ಗಜಪುರದಿಂದ ಬಂದರು ಪಯಣಗತಿಗಳಲಿ (ಕುವ್ಯಾವಿ. ೬೦೩. ೪-೦೮) ; ಈ ಶ್ರೀರಂಗಪಟ್ಟಣಕಳವಡದ ಪುರ ತ್ರಿಜಗದ ನೆಲದೊಳಗಿಲ್ಲೆಂದು ಗಡಿಯಾರ ಜಾಗಟೆಯುಲಿವುದು ಗೋಪುರದೊಳಗೆ (ಕಂನವಿ. ೭-೧೧೫) ; ಪೂರ್ವದಿಶಾನಾಥ ಸಂಮದದಿ ಡಂಗುರಿಸಲೆತ್ತಿದ ವೆಳ್ಳಿ ಜಾಗಟೆಯ ಮಾಳ್ಕೆಯಿಂ ಸಸಿಬಿಂಬಮುದಯಿಸಿದುದು (ನಂದಿಮಾ. ೦೯-೦೭) ; ಗಂಟೆ ಜಾಗಟೆಗಳಿಂ ಬಡಿದು ಕುತ್ತಿಗೆ ಹಿಡಿದು ಕಡಲಡಿಗೆ ತಳ್ಳಿರ್ದೈ (ಪಾಂಚಜ. ೩೯-೯). **ಜೇಗಟ:** ಜೇಗಟ[ಪಾಠಾಂ. ಜಾಗಟ]ದೊಳಗಣ ಧ್ವನಿ ಆ ಜೇಗಟ [ಪಾಠಾಂ. ಜಾಗಟ]ವ ನುಂಗಿತ್ತು (ಮೋಳಿಮಾ. ೨೦೨-೬೬೭). **ಜೇಗಟೆ :** "ಡಿಂಡಿಮಃ, ಜೇಗಟೆಯ ಪೆಸರು" (ನಾಜಿರಾ. ೯೭) ; ತನ್ನ ದಶಶತಕರದಿ ಗಗನವೆಂದೆಂಬ ಜೇಗಟೆಯಿಂದ ಧರೆಗೆ ಡಂಗುರವೊಯ್ಕಲೆಂದಂದು ನಿಂದಿರ್ದನೋ (ಸಿದ್ಧರಾ. ೨-೮) : ವೀರರಿಂ ಪೊಡೆವ ಜೇಗಟೆಯಿಂ (ದಶಕು. ೮-೧೧೨) ; ಭಟರು ಸೂಡುತೆ ಬಾಸಿಂಗ ಡೌಡೆ ಜೇಗಟೆ ದನಿಮಾಡಿಸು ತ್ತಿದಿದರ್ (ಮೋಹತ. ೩೩-೩೪); ಜೇಗಟೆ ವೊಳಗಿತು (ಸವತಿ. ೨). **ಜೇಗಳೆ:** ಮಸಣೋಜಂಗೆ ಧೂಪ ಜೇಗಳೆಯಂ ಬಾರಿಸಲು ಬಿಟ್ಟ ಮತ್ತರು ಅಱುವತ್ತು (ಕಇ. II, ೦೬-೫೫ ; 1122). **ಜೇಘಂಟೆ:** ಗೌಡುಗಳು . . . ಜೇಘಂಟೆಯಂ ತಾಗಿಸಿ ಕಾಲಂ ತೊಳದು ಧಾರಾಪೂರ್ವಕವಾಗಿ ಕೊಟ್ಟರು (ಎಕ. VIII, ಸೊರಬ. ೨೩೭-೨೦; 1221). **ಝಾಂಗಟೆ:** ತಾಳ ತಂಬೂರಿ ಝಾಂಗಟೆ ಮದ್ದಳೆ ಸಮ್ಮೇಳನದಿಂದ ಕೂಡಿ (ವಿದಾಕ್ಕ. ೯೭-೫): ಅಲ್ಲಿ ಎಲ್ಲೆಡೆ ತಾಳ, ಮದ್ದಲೆ, ಭೇರಿ, ಝಾಂಗಟೆ, ಗಂಟೆ ಇತ್ಯಾದಿ ವಾದ್ಯಗಳು ಬಾರಿಸ ಲಾಗುತ್ತವೆ (ಪರಪ. ೦೯೨). **ಝಾಗಟೆ:** ಒಡಲ ಝಾ[ಪಾಠಾಂ. ಜಾ]ಗಟೆಯ ಮಾಡಿ ನುಡಿವ ನಾಲಗೆಯ ಪಿಡಿದು ಬಿಡದೆ ಢಣಢಣರೆಂದು ಬಡಿದು ಚಪ್ಪಳಿ ಕ್ಕುತ್ತಾ (ಪುರಂದ. ೦-೫೩-೦). [ <ಸಂ. ಜಯಘಂಟಾ ]

**ಜೇಗಟ** 'ಜೇಗಂಟೆ' ನೋ.

**ಜೇಗಟೆ** 'ಜೇಗಂಟೆ' ನೋ.

**ಜೇಗಳೆ** 'ಜೇಗಂಟೆ' ನೋ.

**ಜೇಗೆಯ್**, ಜೇಗೈ (ಕ್ರಿ). ಬಿಲ್ಲಿನ ಹೆದೆಯನ್ನು ಧ್ವನಿಮಾಡು; ಧನುಷ್ಟಂ ಕಾರವಮಾಡು : ನಿಮಿಷದೊಳ್ ಚಾಪಮಂ ಜೇಗೆಯ್ದುರುಭಯ ವೀರರ್ (ಜಬಪು. ೧೬-೨೩) ; ನಿನ್ನಶ್ವಮಂ ತಡೆದೆ ನಾಂ . . . ಬಿಡಿಸಿಕೊಳ್ವ ಬಗೆಯಾವುದಿನ್ನಳವಿಯೊಳ್ಕಾಣಬಹುದೆನುತೆ ಬಿಲ್ದೆಗೆದು ಜೇಗೆಯ್ಯೆ(ಜೈಮಿಭಾ. ೦೬-೯). **ಜೇಗೈ :** ಹತ್ತಿಸಿದ ಚಾಪಮಂ ಜೇಗೈದು ಕೂಡೆ ಮಸೆವೆತ್ತ ಕೂರಂಬುಗಳನಾರ್ದಿಸಲ್ಸೇನೆ ಮುಱಿದತ್ತವನ ಬಾಣಘಾತಿಗೆ (ಜೈಮಿಭಾ. ೪-೩೦). [ ಜೇ$_2$ + ಕೆಯ್$_1$ ]

**ಜೇಗೈ** 'ಜೇಗೆಯ್' ನೋ.

**ಜೇಘಂಟೆ** 'ಜೇಗಂಟೆ' ನೋ.

**ಜೇಟೆ** 'ಜೆಟ್ಟೆ' ನೋ.

**ಜೇಟೆಗಾಱ** (ನಾ). (?) : ಸಾಜಗುಣಮಲ್ಲದಱಿಯದ ಮುಗ್ಧೆಯರ್ ಬಳಿಕ್ಕೀ ಜೇಟೆಗಾಱ[ಪಾಠಾಂ. ಜಗಾಧಾರ, ಜಟ್ಟಿಗಾಱ]ನಂ ಕಂಡು ಮರುಳಪ್ಪುದಿದು ಸೋಜಿಗಮೆ (ಜಬಪು. ೨೦-೨೦). [ಜೇಟೆ? + – ಕಾಱ]

**ಜೇಡ**, ಜಾಡ$_1$, ಜೇಡುವ (ನಾ). ೧. ನೇಯುವವನು; ನೆಯ್ಗೆಯವನು; ನೇಕಾರ : ಗಿರಿಜೇಶಂ ತೆಱದಂ ಜೇಡರ ದಾಸಿಗೆ ಪಡಿಯನೊರ್ವ (ಸಮುಪ. ೯-೨೮) : ಬೇಡ ಕಾಯದೆ ಕೆಟ್ಟ ಜೇಡ ನೇಯದೆ ಕೆಟ್ಟ (ಸರ್ವಜ್ಞ. ೦೨೦೦). ೨. ಬಲೆ ನೇಯುವ ಹುಳು ; ಜೇಡರಹುಳು : "ಲೂತಾ, ತಂತುವಾಯಃ, ಊರ್ಣನಾಭಃ, ಮರ್ಕಟಕಃ – ಈ ೪ ಜೇಡನ ಹುಟು" (ನಾಜಿರಾ. ೦೦೩) : "ಗುಣವೃಷ್ಟಮೆನೆ ಜೇಡನೆನಿಸಿಕ್ಕು" (ಮಂಗರಾ. ೪೯-೧೪) ; ವಲ್ಲಭಂ ಬಿಸಿಲೊಳಗೊಣಗಿದಹನೆನುತವಾ ಜೇಡ ಪರಿವಿಡಿಗಳಿಂ ತನ್ನ ನೂಲಿಂ ತೆರೆಯವೊಲು ಮೇಲ್ಕಟ್ಟ (ಬಸಪು. ೧೭-೩೭). **ಜಾಡ$_1$:** ೧. ಪ್ರಿಯಪುತ್ರರುಮಪ್ಪ ಸಕಲ ಜಾಡಗೊತ್ತಳಿಗಳ ಕುಲದೇವ ದೇವನಪ್ಪ ಗೊಜ್ಜೇಶ್ವರದೇವರ ಪೂಜೆ (ದೇದಾಪ್ರ. ೭) : ಪಂಜು ಇರುಳಲಿ ಲೇಸು ಪಂಜರವು ಲೇಸು ಅರಗಿಳಿಗೆ ಜಾಡಂಗೆ ಗಂಜಿ ಲೇಸೆಂದ (ಸರ್ವಜ್ಞ. ೦೦೩೪): ಬಣ್ಣ ಬಿಳಿದಂ ನೇಯ್ವ ಜಾಡರುಂ ಲಾಡರುಂ ಚೆನ್ನಾಗಿ ಹೊಲಿವುತಿಹ ಚಿಪ್ಪಿಗರು (ನವಮೋ. ೨-೪೭) ; ಗಾಣಿಗ, ಈಡಿಗ, ಜಾಡ, ಬೇಡರೇ ಮುಂತಾದ ಕಸುಬುದಾರರಲ್ಲಿ (ಶಬ್ದವಿ.೦೦). ೩. ಜೇಡರ ಹುಳುವಿನ ಬಲೆ: ಕೆಲವರು . . . ತೊಲೆಗಳವರೆಗೆ ಬಂಡಬಂಡವಾಗಿ ನೇಲು ಬಿದ್ದ ಇಲ್ಲಣ ಜಾಡಗಳನ್ನು ಸವರಿದರು (ರಕ್ತಧ್ವ. ೨೭೦). **ಜೇಡುವ :** ೧. ಪೆಱಾಯದ ಜೇಡುವರ ಎಱೆಯಂಗ ಗಾವುಣ್ಡನುಂ (ಮ್ಯಆರಿ. ೦೯೩೫, ೦೬-೦೦ : 1010 ?). [ ದೇ.॥ ತುಳು. ಜಾಡೆ, ಜಾಡ್ಯ ; ತೆಲು. ಜೇಂಡ್ರು, ದೇಂಡ್ರು ]

**ಜೇಡಬುಡ** 'ಜಾಡಬುಡ' ನೋ.

**ಜೇಡಿ** (ನಾ). ೧. ಒಂದು ಬಗೆಯ ಮೃದುವಾದ ಜಿಗುಟುಮಣ್ಣು ; ಮಡಕೆ ವೊದಲಾದುವನ್ನು ಮಾಡಲು ಉಪಯೋಗಿಸುವ ಅಂಟು ಮಣ್ಣು : ಕೆಂಪು ಮಣ್ಣನಲ್ಲಿ ಜೇಡಿ, ಗೋಡು, ಮರಳು, ಮಣ್ಣುಗಳೂ ಇರುವುವು (ವ್ಯವಮ. ೩). ೨. ಗೋಡೆಗಳಿಗೆ ಬಳಿಯುವ ಒಂದು ಬಗೆಯ ಬಿಳಿಯ ಮಣ್ಣು ; ಬಿಳಿಯ ಆವೆಮಣ್ಣು : ಗೋಡೆಗಳಿಗೆ ಜೇಡಿಯನ್ನು ಬಳಿದಿದ್ದರು (ಟಾಕತೆ. ೦೦).

[ ದೇ.॥ಮಲ. ಚೇಟ ; ತುಳು. ಜೇಡಿ, ಸೇಡಿ./ಮರಾ. ಶೇಡೀ, ಶೇಡೂ, ಶಾಡೂ ]

**ಜೇಡಿಪದರಕಲ್ಲು** 'ಜೇಡಿಪದರಗಲ್ಲು' ನೋ.

**ಜೇಡಿಪದರಗಲ್ಲು**, ಜೇಡಿಪದರಕಲ್ಲು (ನಾ). ಸುಲಭವಾಗಿ ಒಡೆದು ತೆಳುಪದರಗಳಾಗುವ ಒಂದು ಬಗೆಯ ಕಲ್ಲು: (ಸುಲಭವಾಗಿ ತೆಳುಪದರ

ಗಳಾಗಿ ಒಡೆಯುವ) ಸ್ಲೇಟು ಕಲ್ಲಿನಂತಿದ್ದು ಅದಕ್ಕಿಂತಲೂ ಮೃದುವೂ ಕಡಮೆ ಗಟ್ಟಿಯೂ ಆದ, ಹಲವು ಬಗೆಯ ಜೇಡಿಪದರಗಲ್ಲು (Shale. ಇಂಕನಿ). **ಜೇಡಿಪದರಕಲ್ಲು :** ಇಪ್ಪರಲ್ಲೇ ಕಲ್ಲಿದ್ದಲು ಹಾಗೂ ಜೇಡಿ ಪದರಕಲ್ಲು (ಸುಲಭದಲ್ಲಿ ತೆಳು ಪದರಗಳಾಗಿ ಒಡೆಯುವ ಕೆಲವು ಬಗೆಯ ಕಲ್ಲು)ಗಳಿಂದ ಪೆಟ್ರೋಲನ್ನು ತಯಾರಿಸುವ ನೂತನ ವಿಧಾನಗಳೂ ಕಂಡುಹಿಡಿಯಲ್ಪಟ್ಟಿವೆ (ವಿಜ್ಞಾವಿ. ೬೩).

[ ಜೇಡಿ + ಪದರ (<ಪದರು₃) + ಕಲ್ಲು (<ಕಲ್₃) ]

**ಜೇಡಿಮಣ್ಣು** (ನಾ).=ಜೇಡಿ ೧ : ಹುಣ್ಣಾದ ಕಾಲಿಗೆ ಜೇಡಿಮಣ್ಣನ್ನಾಗಲಿ ಅಥವಾ ರಾಗಿಹಿಟ್ಟಿನ ಪೋಟ್ಲೀಸನ್ನಾಗಲಿ ೪-೫ ದಿವಸಗಳು ಕಟ್ಟಿದರೆ ನೋವು ಕಡಿಮೆಯಾಗುವುದು (ಗ್ರಾಮಾಕ. ೧೪೩) ; ಈ ಮಣ್ಣೂ ಜೇಡಿ ಮಣ್ಣೂ ಸೇರಿ ಬೆಟ್ಟದಿಂದ ನದಿಗಳ ಜತೆಯಲ್ಲಿ ಇಳಿದು ಬರುವುವು (ಬಾಲಪ್ರ. I. ೧೮೭). [ ಜೇಡಿ + ಮಣ್ಣು (<ಮಣ್) ]

**ಜೇಡು** 'ಜಾಡಂ' ನೋ.

**ಜೇಡುವ** 'ಜೇಡ' ನೋ.

**ಜೇಣ, ಜೇನ** (ನಾ). ಉಣ್ಣೆಯ ಬಟ್ಟೆ; ಕಂಬಳಿ : "ಮೇಷಕಂಬಲಃ, ಊರ್ಣಾಯುಃ=ಕಂಬಳಿಯ ಜೇಣ " (ನಾಚರಾ. ೬). **ಜೇನ :** (೬).

[ ?./ಮರಾ ಜೇನ್ ]

**ಜೇಣಶಾಲೆ, ಜಾನಶಾಲೆ, ಜಾನಸಾಲೆ, ಜೀನಶಾಲೆ, ಜೇನಸಾಲೆ** (ನಾ). ಆಯುಧಗಳ ಶಾಲೆ; ಆಯುಧಾಗಾರ : ಆ ರಮಣಿ ಬಾಲೆಯೊ ಕಾಮನ ಜೇಣಶಾಲೆಯೊ (ಪುಷ್ಪಪು. ೯-೪೩). **ಜಾನಶಾಲೆ :** ಭಂಡಾರ ಜಾನಶಾಲೆ ಯುಗ್ರಾಣ ಪಣತವಾನೆಯ ಮಹಲು . . . ನಿರ್ವಾಣಂಗೈಸಿ (ಕಳನ್ನ. ೫-೬೦). **ಜಾನಸಾಲೆ :** ಜಾನಸಾಲೆ ಶ್ಯಾನಭಾಗರ ಜ ವಿ ಕೆ (ಮೈಅರಿ. ೦೯೩೭, ೩೦-೩೩ ; 1659) ; ಈ ಪಟ್ಟಣದಲ್ಲಿ ಗುಡಿ, ಹಳೆಯ ಮನೆ, ಜಾನಸಾಲೆ ಮದ್ದಿನ ಮನೆ . . . ಒಂದೊಂದನ್ನುವೆ ನಾವು ಕಂಡು ಕೊಂಡಿದ್ದೇವೆ (ಮಂತ್ರಶ. ೫೩-೬) : ಶ್ರೀರಂಗಪಟ್ಟಣದ ಕೋಟೆಯೊಳಗೆ ಕಟ್ಟಿಸಿರುವ ಜಾನಸಾಲೆ (ಮಹಾವಂ. I, ೧೨೮). **ಜೀನಶಾಲೆ:** "ಶಸ್ತ್ರಾಜೀವಾ ವಾಸಮನೆ ಜೀನಶಾಲೆ" (ಮಂಗರಾ. ೫೮-೮). **ಜೇನಸಾಲೆ:** ಮಾಲೆಗಾರ್ತಿಯ ರೆಸೆದೊಪ್ಪೆ ಪುಂಜಿಸಿದ ಕಾಮನ ಕೆಯ್ದುಗಳೆರ್ಪ ಜೇನಸಾಲೆಯ ನವಸಾಲ ಭಂಜಿಕೆಗಳೆಂದು (ಶಾಂತಿಪು. ೮-೭೩) ; ಒದವಿದಗಣಿತ ಗೋಮೃಗಂಗಳ ಸದನ ಶಾಲೆಯ ಜೇನಸಾಲೆಯ ವಿದಳಧಾನ್ಯದ ಕಣಜಗಳನೀಕ್ಷಿಸುತ ನಡೆತಂದ (ಮೈರಾಕಾ. ೨-೫೭). [ <ಜಯನಶಾಲೆ ]

**ಜೇತಾರ** (ನಾ). ಗೆಲ್ಲುವವನು ; ಜಯಿಸುವವನು ; ಜಯಶೀಲ : ತರುಣರ ಹೆಂಡಿರೂ ಕೂಡ ಈ ವಿಶ್ವಜೇತಾರನ ಕೀರ್ತಿಗೆ ಮರುಳಾಗಿ ಸನ್ನೆಮಾಡಿದಷ್ಟಕ್ಕೆ ಅವನ ಮಡಿಲಿಗೆ ಬಂದು ಬೀಳುತ್ತಿದ್ದರು (ಸಣ್ಣಕ. VIII, ೮೦) : ಕ್ರಿಸ್ತಶಕ ಪ್ರಾರಂಭದಿಂದ ಕೂಡ, ಅನೇಕ ಸಲ ದ್ರಾವಿಡರು ವಂಗರಾಜ್ಯದ ಮೇಲೆ ಅಭಿಯೋಗವಮಾಡಿ ಜೇತಾರರಾಗಿದ್ದಾರೆ (ಭಾಷಾಶಾ. ೨೨೭). [ <ಸಂ. ಜೇತೃ ]

**ಜೇನ್₁, ಜೇನು₁, ತೇನು** (ನಾ). ೧. ಜೇನಂಹುಳ ಹುಟ್ಟಿಯಲ್ಲಿ ಕೂಡಿಡುವ ಮಧು ; ಜೇನುತುಪ್ಪ : ಜೇನ ಮಟಿಕೊಂಡಮರ್ದಿನ ಸೋನೆಯೆ ಸುರಿದತ್ತು (ಆದಿಪು. ೭-೦೭) ; ಜೇನ ನೊಟಂಗಳ್ ತುಪ್ಪದ ನಿರಿಸಿದೊಡೆ ಲೋಗರ್ ಕೊಂಡು ಪೋಪರ್ (ಪಂಚತಂ. ೭೨-೮): ಚಂದ್ರಾ ದಿತ್ಯಗ್ರಹಂಗಳ್ ಕಳ್ಳಡಗುಂ ಜೇನುಂ ಗಿಣ್ಣಾಣಂಬೆ ಮೊದಲಾದುವಲ್ಲದೆ ಶುದ್ಧಮಪ್ಪಾಹುತಿಯಂ ಕೊಳ್ಳವು (ಧರ್ಮಾಮೃ. ೯-೧೦೦) ; ಜೇನ ಹುಟ್ಟಿನ ಹುಳುವ ಬಡಿದ ಸಗಾನತನ ತಾನೇನು ಚೂಣಿಯ ಸೇನೆಗೀನೆಯ ಸವಡಿ ಲಾಯಿತೆ ಶೌರ್ಯ ಸಿರಿ ನಿನಗೆ (ಕುಮ್ಯಾಭೀ. ೮-೩೪). **ಜೇನು₁:** ಕೊಡದೊಳ್ ತುಂಬಿರೆ ಜೇನು (ಸೋಮೇಶ. ೬೩): ಜೇನು ಸವಿಯಂತ ಮೇಣ ಸಹ ತಿಂದ ಹಾಗೆ (ಗಾದೆ). ೨. ಜೇನುಹುಳಂವಿನ ಗೂಡು: ಮುತ್ತಿದವು ಶರಜಾಲ ಜೇನಿನ ಹತ್ತುಗೆಯ ನೊಣದಂತೆ (ತೊರರಾ. ೫-೬-೨೦) : ಜೇನು ಬೇಕೆ ಬೇಕು (ಕಪಪು. ೪-೧). **ತೇನು :** ೧. ಇನಿಯಳ ನುಡಿ ಜೇನಿನೊಳ್ ಗೆಳೆಯನ ನುಡಿ ತೇನಿನೋಳ್ ನಿನ್ನ ನನೆಯ, ಕೊನೆಯ ಮನೆಯ ನಾನು ಕಾಂಬೆನು (ಪಯಣ. ೧೩-೮).

ಜೇನ ದಸಿ = ಜೇನುಗೂಡು: ಜೇನದಸಿಯನು ಹಾಯ್ದು ಪಾಡಾಯ್ತು ಏನ ಹೇಳುವೆ (ಕಾಶಿರಾ. ೧೨-೨೦). ಜೇನ ಪುಟ್ಟಿ, ಜೇನ ಹುಟ್ಟಿ = ಜೇನು ವುಟ್ಟಿ: ತಲೆಗಳ್ ತೊಡರ್ದಿರ್ದ ಜೇನ ಪು[ಪಾಠಾಂ. ಗ]ಟ್ಟಿಗಳೆನೆ ಪೋಲ್ತುವು (ಪಂಪಭಾ. ೧೦-೮೦) ; ಜೇನ ಹುಟ್ಟಿಯ ಬಸಿವ ವಿಷದಲಿ ಬಂದುದುರಗಾಸ್ತ್ರ (ಕುಮ್ಯಾಕ. ೨೫-೦೮). **ಜೇನ ಹಳಿ**=ಜೇನ ದಸಿ: ಉರಿದೋಟಿ ಜೇನ ಹಳಿಯ ಬಿಟ್ಟಾ ನೊಣನಿರದೆ ತೆರಳುವ ತೆಱದೊಳು ಸರಿದುದು ಸುರುತಾಳ ಲಗ್ಗೆ ದುರ್ಗವ ಬಿಟ್ಟು (ಕುರಾಸಾಂ. ೩೯-೨೮).

[ ದೇ.॥ ತಮಿ. ಮಲ. ತೇನ್; ಕೊಡ. ತೇನಿ ; ತೆಲು. ತೇನೆ ; ಗಡಬ. ತೀನ್, ತೀನು ; ಮಾಲ್ತೊ. ತೆನಿ ]

**ಜೇನ್₂, ಜೇನು₂, ಜೇನೆ** (ನಾ). ಒಂದು ಬಗೆಯ ಹಣ್ಣಿನ ಮರ: ಜಾಲಿ ಜೇನೊಡವಿಪ್ಪೆ ಪಿಪ್ಪಲ ಹಾಲೆಯಿವ ನೋಡಬಲೆ (ತೊರರಾ. ೩-೧-೨೮). **ಜೇನು₂:** ಭದ್ರಾಕ್ಷಿ ಮರ, ಜೇನುಮರ, ರುದ್ರಾಕ್ಷಿಮರ (ಮೈಜಿಗಿ. ೪೦-೮೦೦). **ಜೇನೆ :** ನೇಬಿಯ ಹಣ್ಣಳತ್ತಿಯ ಹಣ್ಣು ಹುಣಸೆಯ ಹಣ್ಣು ಜೇನೆಯ ಹಣ್ಣುಯಿಪ್ಪೆಯ ಹಣ್ಣದಟ ಹೂ ಮಧುರ ಮಧುವುಂಟು(ಬಸಪು. ೧೮-೦೬).

[ ? ]

**ಜೇನ** 'ಜೇಣ' ನೋ.

**ಜೇನವರೆ** (ನಾ). ಒಂದು ಬಗೆಯ ಉತ್ತಮ ಜಾತಿಯ ಅವರೆ : (೬).

[ ಜೇನು₁ (<ಜೇನ್₁) + ಅವರೆ₁ ]

**ಜೇನಸಾಲೆ** 'ಜೇಣಶಾಲೆ' ನೋ.

**ಜೇನಿಡು** (ಕ್ರಿ). (ಜೇನು ಹುಳು) ಗೂಡನ್ನು ಕಟ್ಟು: ಪುಟ್ಟಿದುವಲ್ಲಿಗಲ್ಲಿಗೆ ಶಿಲೀಂದ್ರುಚಯಂ ಕರುಮಾಡದಲ್ಲಿ ಜೇನಿಟ್ಟುದು (ಜಗವಿ. ೧೨-೪).

[ ಜೇನ್₁ + ಇಡು₁ ]

**ಜೇನು₁** 'ಜೇನ್₁' ನೋ.

**ಜೇನು₂** 'ಜೇನ್₂' ನೋ.

**ಜೇನುಂಡೆ, ಜೈನುಂಡೆ** (ನಾ). ಒಂದು ಬಗೆಯ ಪಟಾಕಿ : ಪಟಾಕಿ ಜೇನುಂಡೆ ಗರ್ನಾಲುಗಳನ್ನು ಸುಡುವುದು ಮಕ್ಕಳಿಗೆ ತುಂಬಾ ಸಂತೋಷ (ನಿಷ್ಠಾಮು. ೧೦೪). **ಜೈನುಂಡೆ :** ದಿಬ್ಬಣ ಹೋಗುವಾಗ ಜೈನುಂಡೆ ಹೊಡೆಯಲು ಚಟ್ಟಪ್ಪನೇ ಮುಂದಾಳು (ಈಕಥ. ೪೨). [ ? ]

**ಜೇನುಂಬುಳು** 'ಜೇಂಬುಟು' ನೋ.

**ಜೇನುಕಡ್ಡಿ** (ನಾ). ಒಂದು ಬಗೆಯ ಸಸ್ಯ : ಜೇನುಕಡ್ಡಿ, ತುರಿಕಡ್ಡಿ (ಮೈಜಿಗಿ. ೧೩-೨೩೮). [ ಜೇನು₀ + ಕಡ್ಡಿ ]

**ಜೇನುಕಾತಾಳ** (ನಾ). ಒಂದು ಬಗೆಯ ಮರ : ಜೇನುಕಾತಾಳ, ಹುಲಿ ತೊರಡು ಮರ (ಮೈಜಿಗಿ. ೭೨-೧೪೭೭). [ ? ]

**ಜೇನುಕಿಟ್ಟಲು** (ನಾ). ಒಂದು ಬಗೆಯ ಮರ: ಮರಗಳು: ಹಸವ . . . ಅಶೋಕ, ಜೇನುಕಿಟ್ಟಲು, ಚಿಲ್ಲು (ನಮ್ಮನು. ೨೩೭). [ ? ]

**ಜೇನುಕೃಷಿ** (ನಾ). ಜೇನುಸಾಕಣೆ ವ್ಯವಸಾಯ : "ಜೇನುಕೃಷಿ" (Apiculture. ಇಂಕನಿ.). [ ಜೇನು₁ (<ಜೇನ್₁) + ಕೃಷಿ ]

**ಜೇನುಕೃಷಿಕ** (ನಾ). ಜೇನು ಸಾಕುವವನು; ಜೇನುಸಾಕಣೆ ವ್ಯವಸಾಯ ವನ್ನು ನಡೆಸುವವನು : "ಜೇನುಕೃಷಿಕ" (Apiarist. ಇಂಕನಿ.).

[ ಜೇನು₁ (<ಜೇನ್₁) + ಕೃಷಿಕ ]

**ಜೇನುಗನಸು** 'ಜೇನ ನಸು' ನೋ.

**ಜೇನುಗೂಡು** (ನಾ). ೧. ಜೇನುಹುಳುವಿನ ಗೂಡು; ಜೇನುಹುಟ್ಟಿ : ಜೇನುಗೂಡಿಗೆ ಬೆಂಕಿ ಇಟ್ಟು ಜೇನುನೊಣಗಳನ್ನು ಚೆದರಿಸುತ್ತಾರೆ (ರೂಢಿ). ೨. ಜೇನುಕೃಷಿ : ಜೇನುಗೂಡು: ಇದುಬಹಳ ಸುಲಭವಾದ ಮತ್ತು ವೆಚ್ಚವಿಲ್ಲದ ಕೆಲಸ (ವ್ಯವಮು. ೬೯). ೩. ಭತ್ತದಲ್ಲಿ ಒಂದು ಬಗೆ: ಈ ಸಾರಿ ಗದ್ದೆಗೆ ಜೇನುಗೂಡನ್ನು ಹಾಕಿಸಿದ್ದಾರೆ (ರೂಢಿ).

[ ಜೇನು$_1$ (<ಜೇನ್$_1$) + ಗೂಡು ]

**ಜೇನುಗೊಳಿಸು** (ಕ್ರಿ), ಜೇನುತುಪ್ಪವನ್ನಾಗಿ ಮಾಡು; ಜೇನಾಗಿಸು ; ಸಿಹಿಯಾಗಿಸು: ಜೇನುಗೊಳಿಸುವವೀಗ ಹೂರಸ ಜೀವದಾ ಜೇನ್ನೊಣಗಳು (ಮುಕ್ತಕಂ. ೪೦-೧೫). [ ಜೇನು$_1$ (<ಜೇನ್$_1$) + ಕೊಳ್$_1$ + – ಇಸು$_3$ ]

**ಜೇನುಣಿ** (ನಾ).=ಜೇನ್ನೊಣ: ಮುಗಿದಿಹ ಬಾಯ್ದೆರೆಯದುರಲು ಹಲುಬುತೆ ದೆಸೆಗೇರಿತು ಜೇನುಣಿಯೊಂದು (ಕವಿಕಾ. ೭೧-೪). [ ಜೇನ್$_1$ + – ಉಣಿ ]

**ಜೇನುತುಪ್ಪ** (ನಾ). = ಜೇನ್$_1$ ೧ : ಜೇನುತುಪ್ಪ ಹೊತ್ತು ಮಾರುವವಳ ಮಡಕೆಯು ಮೇಲೆ ಮೂರು ತುಂಬಿ (ಅಣ್ಣಮಾ. ೬೪-೩೦); ಜೇನುತುಪ್ಪಕ್ಕೆ ಸಕ್ಕರೆ ಸಲ್ಲುವುದು (ಶಮದ. ೧೩೦ ಪ್ರಯೋ); ಮಾಧವನ ಅಪ್ಪವಣೆದು ಬಿತ್ತರಿಸುವ ಕೃತಿ ಜೇನುತುಪ್ಪದ ತೊಱೆಯಾಗಲೆಱೆಯಾ (ಮೋಹತ. ೧೮-೧) : ಪುಲಿದೊಗಲ ಪೊಱೆ ಜೇನುತುಪ್ಪದ ನಳಿಗೆ ಮೇಣದ ಮುದ್ದೆ (ಸಾಳ್ವಭಾ. ೧೭-೭೯). [ ಜೇನು$_1$ (<ಜೇನ್$_1$) + ತುಪ್ಪ ]

**ಜೇನುನೊಣ** 'ಜೇನ್ನೊಣ' ನೋ.

**ಜೇನುಪೆಟ್ಟಿಗೆ** (ನಾ). ಜೇನು ಹುಳುವನ್ನು ಸಾಕಲು ಮಾಡಿದ ಪೆಟ್ಟಿಗೆ : ನಮಗೆ ಒಂದು ಜೇನುಪೆಟ್ಟಿಗೆಯನ್ನು ಮಾಡಿಕೊಡು (ಕಪಪು. ೪-೪).

[ ಜೇನು$_1$ (<ಜೇನ್$_1$) + ಪೆಟ್ಟಿಗೆ ]

**ಜೇನುಮೇಣ** (ನಾ). ಜೇನುಹುಟ್ಟಿನಿಂದ ಸಿಗುವ ಮೇಣ : ಮುಲ್ತಾನ್ ಡಿಸ್ಟ್ರಿಕ್ಟಿನಲ್ಲಿ . . . ಜೇನೂ,ಜೇನುಮೇಣವೂ ವಿಶೇಷವಾಗಿ ತಯಾರಾಗುತ್ತವೆ (ಭೂಗೋಳ. ೫೯) ; ಕೆಳಗಡೆ ಜೇನುಮೇಣದಂತಹ 'ಲಿಪಿಡ್' ಕಣಗಳಿಂದಾದ ಮೇಣದ ಪದರ (ಕೀಟಜ. ೮).

[ ಜೇನು$_1$ (<ಜೇನ್$_1$) + ಮೇಣ (<ಮಯಣ) ]

**ಜೇನುವುಟ್ಟಿ, ಜೇನುಹುಟ್ಟಿ$_1$, ಜೇನುಹುಟ್ಟು** (ನಾ). ೧.=ಜೇನುಗೂಡು: ವನತರುಗಳೊಂದೊಂದನೊರಸೆ ಪುಟ್ಟಿದನಲನಳವಿಗಳಿದೊಗೆದ ಪೆರ್ಮೊಗೆಗೆ ಪುಳುಗಳ್ಪೋಗೆ ನಟ್ಟಗೊಂಬಿನೊಳ್ ಮಿಸುಪ ಜೇನುವುಟ್ಟಿ[ಪಾಠಾಂ. ಟ್ಟ,ಟ್ಟೆ] ಗಳ ಮಧುರಸಮಂ ಬಳಿಯನಡರ್ದು ಪೀರ್ವ ಮರವಾವುಗಳಿಂ (ರಾಜಶೇ. ೫-೫೫ ವ). **ಜೇನುಹುಟ್ಟಿ$_1$** : ೨. = ಜೇನುಪೆಟ್ಟಿಗೆ : ಹುಲ್ಲು, ಆವು ಮೊ.ಗಳಿಂದ ಮಾಡಿದ ಜೇನುಹುಟ್ಟಿ (Skep. ೩೦೯೩). **ಜೇನುಹುಟ್ಟು** : ೨. ನಿನ್ನ ಜೇನುಹುಟ್ಟಿನಲ್ಲಿರಿಸುವುದಕ್ಕೆಂದು . . . ಜೇನ್ನೊಣವೊಂದನ್ನು ತಂದಿದ್ದೇನೆ (ಅಶ್ರುಮ. ೧೨೫). [ ಜೇನು$_1$ (<ಜೇನ್$_1$) + ಪುಟ್ಟಿ$_3$ ]

**ಜೇನುಸಾಕಣೆ** (ನಾ). ಜೇನುಹುಳುಗಳನ್ನು ಸಾಕುವಿಕೆ ; ಜೇನುಕೃಷಿ : ರಾಜ್ಯಸರ್ಕಾರವು ಜೇನುಸಾಕಣೆಯನ್ನು ಪ್ರೋತ್ಸಾಹಿಸುತ್ತಿದೆ (ರೂಢಿ).

[ ಜೇನು$_1$ (<ಜೇನ್$_1$) + ಸಾಕಣೆ ]

**ಜೇನುಹಲ್ಲೆ** (ನಾ). ಜೇನುಗೂಡು; ಜೇನುಹುಟ್ಟಿ: ಜೇನುಹಲ್ಲೆಗೆ ಜೇನು ಹುಳು ಕವಿಯುವಂದದಲಿ (ಅಗ್ನಿಹಂ. ೮೦-೩೮).

[ ಜೇನು$_1$ (<ಜೇನ್$_1$) + ಹಲ್ಲೆ$_2$ ]

**ಜೇನುಹುಟ್ಟಿ** 'ಜೇನುವುಟ್ಟಿ' ನೋ.

**ಜೇನುಹುಟ್ಟು** 'ಜೇನುವುಟ್ಟಿ' ನೋ.

**ಜೇನುಹುಳು** 'ಜೇಂಬುಂಬು' ನೋ.

**ಜೇನೂಡು** (ಕ್ರಿ). ೧. ಜೇನನ್ನು ತಿನ್ನಿಸು,–ಉಣಿಸು. ೨. (ಆಲಂ) ಸವಿಯನ್ನು ತುಂಬು: ಅಂದಿನಿಂದವರೇಕರೀತಿಯೊಳಿರುವರು ಬಾಳಿಗೆ ಜೇನೂಡುತಿಹರು (ಇಂಚಾಪ. ೨೫-೧೨) [ಜೇನು$_1$ (<ಜೇನ್$_1$) + ಊಡು$_1$]

**ಜೇನೆ** 'ಜೇನ್$_2$' ನೋ.

**ಜೇನೆಯ್** 'ಜೇನ್ನೆಯ್' ನೋ.

**ಜೇನ್ನೈ** 'ಜೇನ್ನೆಯ್' ನೋ.

**ಜೇನೊಣ** 'ಜೇನ್ನೊಣ' ನೋ.

**ಜೇನ್ಗಜ್ಜ** (ನಾ). ಸವಿಯಾದ ಕೆಲಸ ; ಪ್ರಿಯವಾದ ಕೆಲಸ : ಬೈಗು ಗೆಂಪೋಕುಗಳಿಗೆ ಮುನ್ ಪೂವಿಂಪಿನಾ ಜೇನ್ಗಜ್ಜಮಂ ಪಡೊಳಿಸವೇಳ್ಕುಂ (ಬಿಗಾಳಿ. ೬೦). [ ಜೇನ್$_1$ + ಕಜ್ಜ$_1$ ]

**ಜೇನ್ಗಱೆ** (ಕ್ರಿ). ಜೇನನ್ನು ಕರೆ,–ಸುರಿ : ಬಿಟ್ಟನಾಜರ್ುನಿ ಮತ್ತೆ ಮಧುಶರವನಾ ಕ್ಷತಂಗಳ ಮೇಲೆ ಜೇನ್ಗಱೆವೊಲು (ಜೈಮಿಭಾ. ೨೪-೨೪).

[ ಜೇನ್$_1$ + ಕಱೆ$_1$ ]

**ಜೇನ್ಗನಸು, ಜೇನುಗನಸು** (ನಾ). ಸವಿಯಾದ ಕನಸು : ಆಃ ಅದೆಂತಪ್ಪ ಜೇನ್ಗನಸಿನಿಂದೆಳ್ಚರ್ತೆ ನಾಂ (ಚಂದ್ರಸ. ೮೦). **ಜೇನುಗನಸು**: ಜೇನುಗನಸು! ಕನಸೆಂದರೆ ಬರಿಯ ಕನಸಲ್ಲ. ಒಂದು ಸುಂದರ ಸ್ವಪ್ನ (ಹೇಮುಕೂ. ೪).

[ ಜೇನ್$_1$ + ಕನಸು ]

**ಜೇನ್ಗೊಡ, ಜೇಂಗೊಡ** (ನಾ). ೧. ಜೇನು ತುಂಬಿದ ಕೊಡ,–ಪಾತ್ರೆ : ಮಡದಿಯ ಮಂಡೆಮಾಣಿಕವೆ ಕೀಳೊಸರ್ವ ಜೇನ್ಗೊಡದಂತೆ ಮತ್ಕಾವ್ಯ ರುಚಿಯು (ಮೋಹತ. ೨೩-೨) ; ಬಲು ಗಜದಂತ ಜೇನ್ಗೊಡನು . . . ಪುಳಿಂದಿಯರ್ಪೊತ್ತು ನಡೆಯೆ (ಅಬ್ಬಲೂ. ೩-೪೦). ೨. ಒಂದು ಬಗೆಯ ಖಾದ್ಯ,–ಭಕ್ಷ್ಯ: ಸಣ್ಣಸೇವಗೆ ಹಾಲುಂಡೆ ಜೇನ್ಗೊಡ ಶುಭ್ರವಣ್ಣದುದ್ದಿನ ಸವಿಗಡುಬು (ಕಂನವಿ. ೮-೮೭). **ಜೇಂಗೊಡ** : ೧. ಪಾಲ್ಗಡಲ ತೆರೆಯ ಬೊಂಬಲ್ಗಳಲಿ ಜೇಂಗೊಡನ ಸಾಲ್ಗಳಂ (ವೀಶೈಪು. ೩-೧-೧); ಫಣಿಮಣಿಯ ನಮರ್ದ ಜೇಂಗೊಡಮಂ ಕಂಪೊತ್ತರಿಸುವ ಬಾವನ್ನಮನಿತ್ತಂ . . . ಪುಳಿಂದಂ (ರಾಜಶೇ. ೫-೨೫). ೩. ಜೇನಿನ ಹುಟ್ಟು,–ಗೂಡು: ಜೇಂಗೊಡದಿಂಬನಿ ವರ್ಷಮಾಗಲಗ್ಗಲಿಸಿದುದಾ ಮ ಹಿ ೀ ೦ ಧ್ರ ವಿ ಭು ನೀರದಕಾಲಮುದೆಂಬ ಮಾಟ್ಕೆಯಿಂ (ಉದ್ಭಟ. ೨-೪೭).

[ ಜೇನ್$_1$ + ಕೊಡ$_2$ ]

**ಜೇನ್ದುಂಬಿ** (ನಾ). ಜೇನುಹುಳು ; ಜೇನ್ನೊಣ : ಜೇನ್ದುಂಬಿಯ ಮೊರೆ, ಹಕ್ಕಿಯ ಇಂಚರ (ಆನಿಕೇ. ೨೬-೯).

[ ಜೇನ್$_1$ + ತುಂಬಿ$_1$ ]

**ಜೇನ್ನುಡಿ** (ನಾ). ಜೇನಿನಂತಹ ನುಡಿ; ಇಂಪಾದ ಮಾತು; ಸವಿಮಾತು ಸ್ವಕಾರ್ಯಮಾತ್ರೋಚಿತಮಪ್ಪ ಜೇನ್ನುಡಿಗಳಂ (ಧ್ವನ್ಯಾಲೋ. ೧೬೦) ; ಆಕೆಯಂ ತೋಳ್ಗಳಿಂದಮರ್ದಪ್ಪಿ ಮುಂಡಾಡಿ ಮುದ್ದಿಸುತೆ ಜೇನ್ನುಡಿಗರೆದ ನಿಂತು (ಶ್ರೀರಾಮಾ. ೬೮-೩೭೯).

[ ಜೇನ್$_1$ + ನುಡಿ$_2$ ]

**ಜೇನ್ನೆಯ್, ಜೇನೆಯ್, ಜೇನ್ನೈ** (ನಾ). = ಜೇನ್$_1$ : ಒಂದು ಕೊಡ ಜೇನ್ನೆಯ್ಯುಮಂ (ಪಸಾರ.೬೫-೭); ಆ ಮಹಾಪರ್ವತಪ್ರಾಂತದುತ್ತಮವನಂ . . . ಸೋಮಾದಿವಲ್ಲಿಗಳಿನಖಿಳ ತೃಣನಿಚಯದಿಂ ಜೇನ್ನೆಯ್ಯ ತಂದಲ್ಗಳಿಂ . . . ರಾಜಿಸುತಿರ್ದುದು (ವೀಶೈಪು. ೩-೯-೭). **ಜೇನೆಯ್** : ಮಧುಮದ್ಯ ಮಾಂಸಗಳುಮಯ್ದು ಪಾಲ್ಮರದ ಪಣ್ಗಳುಂ ಜೇನೆಯ್ಯುಂ [ಪಾಠಾಂ. ಮಾಳಂಬೆಯುಂ] . . . ಸೇವಿಸುವರಂ (ಪಡ್ಮಾರಾ. ೧೨೭-೧೮) ; ಕರಡಿಯ ತೋಲಂ ಕಜ್ಜಲ ಪರಾಗದಿಂ ಪೊರೆದು ಪಿರಿದು ಜೇನೆಯ್ಯೊಳ್ ತಂದಿರಿಸಿದ ವೊಲ್ (ಶಾಂತಿಪು. ೮-೧೨೭) ; ಆ ತಿರುಳಂ ಜೇನೆಯ್ಯಂ ಕಪ್ಪುರವುಂ ಬೆರಸೆಚ್ಚೆ ಕಣ್ಣ ಪೂಗಳ್ ಕಿಡುಗುಂ (ಲೋಕೋಪ. ೯-೭೭); ಖಡ್ಗಧಾರೆಯ ಜೇನೆಯ್ಯಂ ನೆಕ್ಕುವಂತೆ (ಪಂರಾಮಾ. ೨-೧೮). **ಜೇನ್ನೈ** : ಮೃದುಸ್ಮೇರ ಮಿಂಗಡಲಂ ತುಳ್ಕಿದ ಮಾಳ್ಕೆಯಿಂದೊಗೆಯೆ ಜೇನ್ನೈಸೋನೆಯಂ ಸೂಸೆ ಮೆಲ್ನುಡಿ (ರಾಜಶೇ. ೭-೧೩). [ ಜೇನ್$_1$ + ನೆಯ್$_2$ ]

**ಜೇನ್ನೊಣ, ಜೇನುನೊಣ, ಜೇನೊಣ**(ನಾ).=ಜೇಂಬುಟು: ಭೋಂಕರಿಸು ತೊಗ್ಗಿದರ್ಕವಿದು ಜೇನ್ನೊಣದಂತೆ (ಜೈಮಿಭಾ. ೮-೩೨): ಪುಷ್ಪಗಳಿಲ್ಲದ ಕಡೆ ಹಾರಾಡುತ್ತಿದ್ದ ಜೇನ್ನೊಣವೊಂದನ್ನು ತಂದಿದ್ದೇನೆ (ಅಶ್ರಮ. ೧೨೫). **ಜೇನುನೊಣ :** "ಸರಘಾ, ಮಧುಮಕ್ಷಿಕಾ – ಈ ೨ ಜೇನುನೊಣ" (ನಾಚಿರಾ. ೧೧೫): ಜೇನುನೊಣದ ಮಧೂಪಚಯುಪವಕಿಲ್ಲಲೇ ಸರ್ವಾಪಹಾರವು ಪರರಿಗಾ ಕೌರವನ ಸಿರಿ (ಕುಮ್ಮಾ.ಅ. ೪-೧೧). **ಜೇನೊಣ:** ಜೇನೊಣ ಕಡಿದಂತೆ ಮಂಡೆಯು ಕೊಡಹುವರು (ಭರಜ. ೬೦-೫೦).

[ ಜೇನ್$_1$ + ನೊಣ ( <ನೊಟಿ) ]

**ಜೇನ್ಮಳೆ** (ನಾ). ಜೇನಿನ ಮಳೆ : ತಾನರವಂ ಲಯಂ ಜವಂಬೆತ್ತಿರೆ ಮೂರ್ಛನಾಪ್ರಸರವೊಂದಿರೆ ಜೇನ್ಮಳೆ ಸೂಸಿದಂತೆ (ವೃಷವಿ. ೧೧-೮).

[ ಜೇನ್$_1$ + ಮಳೆ (<ಮಟಿ³) ]

**ಜೇನ್ಸೊಗ** (ನಾ). ಜೇನಿನಂತೆ ಮಧುರವಾದ ಸುಖ : ಜನಕಜೆಗೆ ನಾಳನಾಳದಿ ದುಮುಕುತಿರೆ ಜೇನ್ಸೊಗಂ (ಶ್ರೀರಾಮಾ. ೫೦೫-೧೩೬).

[ ಜೇನ್$_1$ + ಸೊಗ ]

**ಜೇಪಾಳ** (ನಾ). ಒಂದು ಬಗೆಯ ಔಷಧ ಗಿಡ : "ಜ್ವರಾಂತಕಃ – ಕಕ್ಕೆ, ಬೇವು, ಜೇಪಾಳ" (ಒಷಧಿ. ೬೧) : ಜೇಪಾಳ – (ಜಮಾಲಗೋಟಾ) ಇದೊಂದು ಗೋವೇದ ಔಡಲ ಜಾತಿಯ ಬೀಜವದೆ (ಗೃಹವೈ. ೭) : ಇಂಗಲೀಕ ೩, ಜೇಪಾಳ ೪ ಇವ ಕೂಡಿ ಜೇಪಾಳದ ಕಷಾಯದಲ್ಲಿ ಎರಡು ಜಾವ ಮರ್ದಿಸಿ (ವಿವೈವಿ. ೧೩೭). 'ಜಾಪಾಳ' ಪರಾ. [ಸಂ. ಜೇಪಾಲ]

**ಜೇಬು, ಜೋಬು** (ನಾ). ತೊಡುವ ಬಟ್ಟೆಗಳಲ್ಲಿ ಹಣವೇ ಮೊದಲಾದುವನ್ನು ಇಟ್ಟುಕೊಳ್ಳಲು ಅನುಕೂಲವಾಗುವ ಹಾಗೆ ಮಾಡಿದ ಚೀಲದಂತಹ ಭಾಗ ; ಕಿಸೆ ; ಬೊಕ್ಕಣ : ಖಾಲಿ ಜೇಬಿನ ಜ್ಞಾಪಕ ನನ್ನ ಮೆದುಳಿನಲ್ಲಿ ಮಿಂಚಿತು (ಮುಗಮಾಂ. ೪೧) : ಜೇಬಿನಲ್ಲಿಯ ಪೆಪ್ಪರುಮೆಂಟುಗಳನ್ನೆಲ್ಲ ಕಸಿದುಕೊಂಡು (ರಂಗರೋ. ೩೦). **ಜೋಬು :** ಆಮೇಲೆ ಹಣ್ಣುಗಳನ್ನು ಅವರಿಬ್ಬರೂ ತಮ್ಮ ಜೋಬುಗಳಲ್ಲಿ ತುಂಬಿಕೊಂಡಿರಬೇಕು ಎನ್ನಿಸಿತು (ಕಾಲಿಮ. ೧೦೭): ಪೆಟ್ಟಿಗೆಯಲ್ಲಿದ್ದ ಹಣವನ್ನೆಲ್ಲಾ ಜೋಬಿನ ಒಳ ಸೇರಿಸಿದ (ಪದ್ಮಸ. ೨೦೫).

**ಜೋಬಿಗೆ ಹಾಕಿಕೊಳ್ಳು** = ೧. ಜೇಬಿನಲ್ಲಿ ಇಡು,-ಸೇರಿಸು. ೨. (ಅಲಂ) ವಶಪಡಿಸಿಕೊಳ್ಳು ; ಅಧೀನಪಡಿಸಿಕೊಳ್ಳು : ಇಂಜನಿಯರುಗಳನ್ನೂ ದೊಡ್ಡ ದೊಡ್ಡ ಅಧಿಕಾರಿಗಳನ್ನೂ ತನ್ನ ಜೋಬಿಗೆ ಹಾಕಿಕೊಳ್ಳುವ ಉದ್ದೇಶದಿಂದ ಆ ಅತಿಥಿಗೃಹವನ್ನು ಕಟ್ಟಿಸಿದ್ದನು (ಪಂಜಪಂ. ೧೦೦).

[ ←ಪಾರ. ಅರ. ಹಿಂ. ಮರಾ. ಜೇಬ್ ]

**ಜೇಬುಗಳ್ಳ** (ನಾ). ಜೇಬಿನಿಂದ ದುಡ್ಡನ್ನು ಕದಿಯುವವನು; ಕಿಸೆಗಳ್ಳ: ಅಹಮ್ಮದ್ . . . ಒಬ್ಬ ಜೊತೆಗಾರನೊಡನೆ ಸೇರಿ ಜೇಬುಗಳ್ಳನಾಗಿದ್ದ (ಮುಂಗಾಮು. ೯). [ ಜೇಬು + ಕಳ್ಳ$_1$ ]

**ಜೇಬುಳಗೇರಿ** (ನಾ). ಒಂದು ಊರಿನ ಹೆಸರು : ಜೇಬುಳಗೇರಿಗೆ ಕಲಿಯುಮ್ಮಗಾಮುಣ್ಣುಗೆಯ್ದಾ ಚೇದಿಯಮಾನ್ ಮಾಡಿಸಿದೊನ್ (ಎಇ. XXI, ೨೦೭-೬ ; 751). [ ಜೇಬುಳ್$_0$ + ಕೇರಿ ]

**ಜೇಮಣ** 'ಜೇವಣ' ನೋ.

**ಜೇಮನ** (ನಾ). ೧. ಊಟಮಾಡುವುದು. ೨. ಆಹಾರ ; ಊಟ : "ಆ ಜೇ[ಪಾಠಾಂ. ಜೇ] ಮನಂಸ್ವಾದನಮಾಹಾರಮಶನಮೆನಲ್"(ಮಂಗರಾ. ೬೫-೭). ೩. ಗ್ರಾಸ ; ತುತ್ತು. [ ಸಂ. ]

**ಜೇಯ** (ನಾ). ೧. ಗೆಲವು : "ಜೇಯಂ, ಜಯನಂ, ಜಯ್ಯಂ, ಜೇತವ್ಯಂ, ಜಯನೀಯಂ ಈ ೫ ಗೆಲ್ವು" (ಕಾಶಕ್ಕೆ. ೭೮). ೨. ಗೆಲ್ಲಲು ಶಕ್ಯವಾದುದು,-ಸಾಧ್ಯವಾದುದು. 'ಅಜೇಯ' ಪರಾ. [ ಸಂ. ]

**ಜೇರು$_1$** (ನಾ). ಗೋಡೆ : (ಕ). 'ಜೇರುಗಂಡಿ' ಪರಾ. [ <ಕೇರ್$_1$ ]

**ಜೇರು$_2$** (ನಾ). ೧. ಅಶಕ್ತಿ ; ದುರ್ಬಲತೆ ; ನಿತ್ರಾಣ. ೨. ಬೇನೆ ; ಕಾಯಿಲೆ : ಹುಮಾಯುನನಿಗೆ ಜೇರು ಆದಾಗ ಬಾಬರನು . . . ಅವನ ಹಾಸಿಗೆಯ ಸುತ್ತಲೂ ಮೂರು ಪ್ರದಕ್ಷಿಣೆ ಮಾಡಿದನು (ಚರಿಸಂ.೭): ಆದರೆ ಅವಳ ಅಜ್ಜಿ ಆಯತ್ತ ವೇಳೆಯಲ್ಲಿ ಜೇರಾದವಳು . . . ಇನ್ನೂ ಜೀವ ಕಣ್ಣಲ್ಲಿ ಹಿಡಿದುಕೊಂಡಿದ್ದಳು (ದೀಪಹ. I, ೧೯). ೩. ಇಕ್ಕಟ್ಟು ; ಕಷ್ಟ ; ಸಂಕಟ : ಆದ್ದರಿಂದ ಸರ್ವಾಧಿಪತಿಯು ನಿಜಾಮನನ್ನು ಜೇರಿಗೆ ತಂದು ಸಹಾಯ ಸೇನಾಪದ್ಧತಿಗೆ ಒಡಂಬಡಿಸಿದಂತೆ (ಚರಿಸಂ. ೧೮೨) : ತೋಫಿನ ಗುಂಡುಗಳನ್ನು ಹಾರಿಸುತ್ತಲೂ ಅವರನ್ನು ಜೇರಿಗೆ ತರುತ್ತಿದ್ದ (ಹಂಸಾ. ೨೫).

**ಜೇರಿಗೆ ಬರು** = ಕಂಗ್ಗು : ದುರ್ಬಲನಾಗು : ಕೂಡಲೇ ತ್ರಿಯಂಬಕರಾಯನು ಬೆನ್ನಟ್ಟಿ ಹೋಗಿದ್ದರೆ ಹೈದರನು ತುಸುದಿವಸದಲ್ಲೇ ಜೇರಿಗೆ ಬರುತ್ತಿದ್ದನು (ಚರಿಸಂ. ೧೯೦). **ಜೇರು ಮಾಡು** = ಜೇರಂಗೆಯ್: ಅಲ್ಲಿಯ ನಿಜಾಮನನ್ನು ಜೇರು ಮಾಡಿದ್ದರಿಂದ ಅವನು ಬಾಬರನಿಗೆ ಶರಣು ಬಂದು ಬಿಯಾನದ ಕೋಟೆಯನ್ನು . . . ಒಪ್ಪಿಸಿದನು (ಮೋಬಾದ. ೨೫).

[ ←ಪಾರ. ಹಿಂ. ಮರಾ. ಜೇರ್ ]

**ಜೇರುಗಂಡಿ, ಜೇರಗಂಡಿ** (ನಾ). ೧. ಕೋಟೆಯ ಗೋಡೆಯಲ್ಲಿ ಬಂದೂಕನ್ನು ತೂರಿಸಿ ಹೊಡೆಯಲು ಮಾಡಿದ ರಂಧ್ರ,-ಕಿಂಡಿ; ಅಂಬುಗಂಡಿ: (ಕೋಟೆಯ)ಕೈಪಿಡಿ ಗೋಡೆಯಲ್ಲಿ, ಒಳಗಡೆಯಿಂದ ಅಗಲವಾಗುತ್ತ ಬರುವ ಫಿರಂಗಿ(ಬಂದೂಕು)ಗಂಡಿ, ಜೇರುಗಂಡಿ ; ಫಿರಂಗಿಜಾಲಕ (Embrasure ಇಂಕನಿ). **ಜೇರಗಂಡಿ :** ೨. ಬೆಳಕಿಂಡಿ : ನನಗೆಲ್ಲಾ ಗೊತ್ತಾಯ್ತು. ನಾ ಜೇರಗಂಡಿ ಹತ್ತಿರವೇ ನಿಂತಿದ್ದೆ (ತುಂಗಭ. ೯) ; ಆ ಯುವತಿಯು . . . ಜೇರಗಂಡಿಯ ಬಳಿಗೆ ಹೋಗಿ ನಿಂತಳು (ಅಂಬಿಕೆ. ೨೯). [ಜೇರು$_1$ + ಕಂಡಿ$_1$]

**ಜೇರುಗಿಂಡಿ** (ನಾ). ಗವಾಕ್ಷ : ಕಮಲೆ ಕುತೂಹಲದಿಂದ ಜೇರುಗಿಂಡಿಯ ಕಡೆಗೆ ನೋಡಿದಳು . . . ಗೋವರ್ಧನರಾಯರು ಜೇರುಗಿಂಡಿಗೆ ಮುಚ್ಚಳ ಹಾಕಿದರು (ರಕ್ತದ್ಧ. ೧೮೪). [ ಜೇರು$_1$ + ಕಿಂಡಿ ]

**ಜೇರುಗೆಯ್** (ಕ್ರಿ). ಇಕ್ಕಟ್ಟಿಗೆ ಸಿಲುಕಿಸು ; ದುರ್ಬಲಗೊಳಿಸು : ಜಕೇರಿರಸ್ತುಮುಸ್ತೈದೆಯೊಳಪುಗದಂತು ಪಥ ಪೈಕ ಕಂಡಿ ಕಣಿವೆಗಳಂ ಕಟ್ಟಿ ಕೋಟೆಯಂ ಜೇರುಗೆಯ್ಯಲೊಳಗೆ ನಿತ್ತರಿಸಲಮ್ಮದೆ ಪೊರಗಣ್ಗೈದಿ (ಕಳನ್ನ. ೫-೫೯). [ ಜೇರು$_2$ + ಕೆಯ್$_1$ ]

**ಜೇರುಬಂದ** 'ಜೇರುಬಂದು' ನೋ.

**ಜೇರುಬಂದು, ಜೇರುಬಂದ** (ನಾ). ೧. ಕುದುರೆ ಜೀನನ್ನು ಬಿಗಿದು ಕಟ್ಟುವ ನಡುಪಟ್ಟಿ: ಉಚ್ಚೈಶ್ರುವಸ್ಸೆಂಬ ಅಶ್ವರತ್ನದ ಆಭರಣದ ಲೆಖ್ಖಾ . . . ಜೇರುಬಂದು ಕಂಚ್ಚು (ಎಕ. XIV, ನಂಜನ. ೨೯೩-೨೭ ; 1847). ೨. ಚಾವಟಿ ; ಚಬುಕಂ : (ಕ). **ಜೇರುಬಂದ :** ೧. ಸಮ್ಮ ಜೇರುಬಂದ ಪಟ್ಟೆಹಂಗಳಂ ವಲಂ ಮೊತ್ತದಿಂದೆ ತಾಳ್ದು . . . ಸೇನೆಯೆಯ್ದಿತು (ಹಾಲಾಸ್ಯ. ೨-೧೪-೩೩). [ ←ಪಾರ. ಹಿಂ. ಮರಾ. ಜೇರ್‌ಬಂದ್ ]

**ಜೇರುಮುತ್ತಿಗೆ** (ನಾ). ಇಕ್ಕಟ್ಟಿಗೆ ಸಿಕ್ಕಿಸುವ ಮುತ್ತಿಗೆ ; ಪ್ರಬಲವಾದ ಮುತ್ತಿಗೆ : ಕಂಡಿ ಕಣಿವೆ ಪಥಂಗಳಂ ಕಟ್ಟಿ ಜೇರುಮುತ್ತಿಗೆಯಂ ರಚಿಸಲ್ (ಕಳನ್ನ. ೫-೪೪). [ ಜೇರು$_2$ + ಮುತ್ತಿಗೆ ]

**ಜೇರ್ಯಿಸು** (ಕ್ರಿ). ನೋವನ್ನುಂಟುಮಾಡು; ಸಂಕಟಪಡಿಸು: ಅಯ್ಯನನರಿವೆನೆಂದೆನುತ ಸಾನುರಾಗದೆ ಹಠದ ಭಕ್ತಿಯಿಂ ನಿಶ್ಚೈಸಿ ತಾನಿರುತ್ತಿರೆ ಕಾಲ್ಗೆ ನಾರಾಗಿ ಜೇರ್ಯಿಸಿ ಬಾಧಿರ್ದುದು (ದುರಪು. ೨೪-೬).

[ <ಜೇರು$_2$ + – ಇಸು$_3$ ]

**ಜೇಲಖಾನೆ** (ನಾ).=ಜೇಲು : ಇಂದಿನ ಜಗತ್ತಿನಲ್ಲಿ ನಾರಿಯರಿಗೆ ಇದೊಂದು ಜೇಲಖಾನೆಯಾಗಿರುತ್ತದೆ (ಆಗರ. ೨೭).

[ ←ಹಿಂ. ಜೇಲ್‌ಖಾನಾ, ಜೇಹಲ್‌ಖಾನಾ ]

**ಜೀಲು** 'ಜೈಲು' ನೋ.

**ಜೀವಡಿಸು** (ಕ್ರಿ). ಬಿಲ್ಲಿನ ಹೆದೆಯೇರಿಸಿ ಧ್ವನಿಯನ್ನುಂಟುಮಾಡು ; ಧನುಷ್ಟಂಕಾರಮಾಡು : ಸುರರಾಯನಂದನನೊಲವಿನಲಿ ಗಾಂಡೀವವ ಜೀವಡಿಸಿ (ಕುವ್ಯಾವಿ. ೬-೫೦). [ ಜೀವಡೆ$_1$ (<ಜೀವೊಡೆ$_1$) + – ಇಸು$_3$ ]

**ಜೀವಡೆ$_1$** 'ಜೀವೊಡೆ$_1$' ನೋ.

**ಜೀವಡ್ಡೆ$_2$** 'ಜೀವೊಡ್ಡೆ$_2$' ನೋ.

**ಜೀವಡೆಗೆಯ್** 'ಜೀವೊಡೆಗೆಯ್' ನೋ.

**ಜೀವಡೆಗೈ** 'ಜೀವೊಡೆಗೆಯ್' ನೋ.

**ಜೀವಣ, ಜವಣ, ಜೀವಮಣ, ಜೀವಣಿ$_1$, ಜೀವಳಿ** (ನಾ). ೧. ಊಟ ; ಆಹಾರ ; ಭೋಜನ : ಅಂಬುಜಸೌರಭಂ ತನಗೆ ಗಾವಣ ಜೀವಣಮತ್ತ ಪೂರ್ವಮಾಸ್ಯಾಂಬುಜಗಂಧಮೆಂದೆಟಗಿ ಬಗ್ಗಿಸೆ (ಶಾಂತಿಪು. ೮-೮೭) : ಹಯ ದಂತಿಶಾಲೆಗೆ ಪೋಗಿ ಭಿಕ್ಷವನೆ ಕುದಿವ ಜೋಳದ ಜೀವಣವ ಪೊಯ್ಯಲು (ಪ್ರಭುಪು. ೪-೪೯) ; ಎಲ್ಲಾದರೂ ಊಟ, ಜೀವಣ ಇದ್ದುಬಿಟ್ಟರಂತೂ ಅವಳ ತಾಯಿಗೆ ಇಲ್ಲದ ಭಯವಾಗಿ ಬಿಡುತ್ತಿತ್ತು (ಇಪ್ಪಕ. ೧೬೭). ೨. ತುತ್ತು; ಗ್ರಾಸ: "ಜೀವಣಂ, ವಳಿಗೆ, ಕವಳಂ—ಈ ೩ ತುತ್ತಿಂಗೆ ಪೆಸರ್" (ಕಶಸಾ. ೨೨-೪೬೩) ; "ಜೀವಣವೆಂದೆನೆ ಜೇಮನಾರ್ಥದಲ್ಲಿ" (ಕರ್ಣಾನಿ.೯೦). **ಜವಣ:** ೧. ಎರಡು ಪದಂಗಳಪಭ್ರಂಶಕ್ಕೆ—ಅವನಜೇಮನ-ಅವಣಜವಣ (ಶಮದ. ೨೮೯ ಪ್ರಯೋ). **ಜೀಮಣ :** ೧. ತಿಂಗಳಿಗೊಮ್ಮೆ ಜೀಮಣವ ಸೇಮಿಸುತ ತೊಂಬತ್ತು ವತ್ಸರಂ ಕಾಮವಿಧ್ವಂಸ ಸುಜ್ಞಾನ ಮೊಳಗಿರಲು (ಪ್ರಭುಪು. ೯-೧೯). **ಜೀವಣಿ$_1$ :** ೨. ನಂದೋಪನಂದರು ಜವಗೆ ಜೀವಣಿ [ಪಾಠಾಂ. ಣೆ]ಯಾದರೇ ಕಲಿಭೀಮನಿದಿರಿನಲಿ (ಕುವ್ಯಾಕ. ೧೩-೧೯). **ಜೀವಳಿ:** ೧. 'ಜೀವಳಿಗೆಯ್' ಪರಾ. [<ಪ್ರಾ. ಜೇಮಣ./ ಸಂ.ಜೇಮನ]

**ಜೀವಣಶಾಲೆ** (ನಾ). ಊಟದ ಮನೆ ; ಭೋಜನಗೃಹ : ಓಲಗಶಾಲೆ ಪೂಗಿಡುಗಳೋಳಿಗೆ ಜೀವಣಶಾಲೆ ಮತ್ತ ಭೃಂಗಾಳಿಗೆ . . . ಎನಲೊಪ್ಪುವು ವಲ್ಲಿಯ ಪುಷ್ಪವಾಟಿಗಳ್ (ಪುಷ್ಪಪು. ೨-೫೦) ; ಋತುಗಳ ಸೆಜ್ಜೆ ತುಂಬಿಗಳ ಜೀವಣಶಾಲೆ (ವಿರೂಪಾ. ೩೭); ಸಾರಮೇಯಗಳ ಜೀವಣಶಾಲೆಯೆಂದೆನಲಾ ರುದ್ರಭೂಮಿಯೊಪ್ಪಿದುದು (ಶ್ರೀಪಾಲ. ೮-೧೦) ; ಧರೆಯ ಮಹಾರಣ್ಯವೆಲ್ಲ ಜೀವಣಶಾಲೆ ಶರಧಿ ವಾಪಿಗಳೇ ಭೃಂಗಾರಂಗಳು (ಕೈಕವ. ೫-೭೩-೩).
[ ಜೀವಣ + ಶಾಲೆ$_1$ ]

**ಜೀವಣಸಾಲೆ** (ನಾ). = ಜೀವಣಶಾಲೆ : ನೆರೆದ ತುಂಬಿಯ ಜೀವಣಸಾಲೆ ಜಕ್ಕವಕ್ಕಿಯ ಸುರತಾಲಯಂ (ಲೀಲಾವ.೬-೯೩); ಇದು ಮನಸಿಜ ಮೋಹನ ಮಂತ್ರಾಲಯಮಿದು ಗಾಳಿಯ ಗುಣದಾಗರಮಿದು ತುಂಬಿಯ ಜೀವಣಸಾಲೆ (ಜಯುಕಾ. ೪-೩). [ ಜೀವಣ + ಸಾಲೆ$_3$ ]

**ಜೀವಣಿ$_1$** 'ಜೀವಣ' ನೋ.

**ಜೀವಣಿ$_2$, ಜವಣಿ** (ನಾ). ಸತ್ತವರನ್ನು ಬದುಕಿಸುವುದೆಂದು ಹೇಳಲಾಗುವ ಒಂದು ಬಗೆಯ ಸಸ್ಯ ; ಸಂಜೀವಿನಿ : (ಕ). **ಜವಣಿ :** ಆದರೊಳಂ ಕಲ್ಪಲತೆ ಸುರತರುವು ಸುರಧೇನು ಪುದಿದಿಹವು ಜವಣಿಗಿಡಗಳಮಳ ಚಿಂತಾಮಣಿಯ ಬಹುಗುಂಡುಗಳ್ (ನವಮೋ. ೨-೦೫). 'ಮಟುಜೀವಣಿ' ಪರಾ. [ ? ]

**ಜೀವಣಿಕೆ** 'ಜೀವಣಿಗೆ$_2$' ನೋ.

**ಜೀವಣಿಗೆ$_1$** (ನಾ). = ಜೀವಣ : ದಾವಣಿಗಟ್ಟಿದ ಕುದುರೆಗುತ್ತಮವುಪ್ಪ ಜೀವಣಿಗೆಯನಿಕ್ಕಿ (ಶ್ರೀಪಾಲ. ೧೩-೧೦೮) : ಭಿಕ್ಷಮಂ ಬೇಡಿ ಬರೆ ಜೀವಣಿಗೆ ಲಾಯದೊಳ್ ಕುದಿವುದಂ ತಂದಿಕ್ಕೆ (ಲಶಿಚಂ. ೩೨-೪೯).
[ ಜೀವಣಿ$_1$ (<ಜೀವಣ) + – ಗೆ ]

**ಜೀವಣಿಗೆ$_2$, ಜೀವಣಿಕೆ** (ನಾ). ಒಂದು ಬಗೆಯ ಮರ ; ಸಿಹಿಹಾಲೆ : "ಜೀವಣಿಗೆ[ಪಾಠಾಂ. ಕೆ]ಮಾಧುರ್ಯೆಯಕ್ಕು" (ಮಂಗರಾ. ೪೨-೩೭). ನೆಲ್ಲಿ ಶೇವಣಿಗೆ ಜೀವಣಿಗೆ . . . ಪೇರ್ಮರಳಿಗಳೊಳು ವಲ್ಲರಿಗಳುಂ ಪರ್ವಿ ಜಿರ್‌ರಂಬ ಕಾನನವ ಕಂಡು ವಿಸ್ಮಿತರಾದರು (ಪ್ರಭುಪು. ೩-೧೩೦). ೨. = ಜೀವಣ್ಣಿ$_2$: ಒಡಲಿನೊಳು ಮುಟಿದಿದ್ದ ಸಬಳವನುಡಿಯಲೀಯದೆ ಕೀಳ್ವ ಮದ್ದನು ಗಿಡವ ಜೀವಣಿಗೆಯೊಳು ಸಪ್ರಾಣಿಸುವ ದುರ್ವ್ರಣವ ತೊಡೆದು ಕಟ್ಟುವ ಹಸ್ತಿವೈದ್ಯರ ಗಡಣ (ಕುವ್ಯಾಭೀ. ೫-೪೦). **ಜೀವಣಿಕೆ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ.
[ <ಸಂ. ಜೀವನಿಕಾ ]

**ಜೀವಣಿಗೆಗೊಳ್** (ಕ್ರಿ). ಊಟಮಾಡು; ತುತ್ತುಗೊಳ್ಳು: ಗುಣಮಯದ ಗರುವಾಯಿಯಲಿ ಜೀ[ಪಾಠಾಂ. ರೆಘೀ]ವಣಿಗೆಗೊಂಬನು ಭೂತದಿಂದ್ರಿಯ ಗಣದೊಡನೆ (ಕುವ್ಯಾಸ. ೯-೦೫). [ ಜೀವಣಿಗೆ$_1$ + ಕೊಳ್$_1$ ]

**ಜೀವಳಿ** 'ಜೀವಣ' ನೋ.

**ಜೀವಳಿಗೆಯ್** (ಕ್ರಿ). ಉಣಬಡಿಸು; ಊಟಹಾಕು: ಮೊರೆವಳಿಕಳಭಗಳಿಗೆ ಜೀವಳಿಗೆಯ್ವ ಮರುತನ ಮೈಗೆ ಕಂಪಿಡುವ ಅರಲ ವಲ್ಲರಿ ಹಬ್ಬಿಬಿಡುವಾ ಇವೆಲ್ಲಾವನೊರೆವೆನೇನದಟಿ ವರ್ಣನವ (ನೇಮಿಸಂ. ೧-೭೦).
[ ಜೀವಳಿ (<ಜೀವಣ) + ಕೆಯ್$_1$ ]

**ಜೀವೊಡೆ$_1$, ಜಯುವೊಡೆ, ಜೀವಡೆ$_1$** (ಕ್ರಿ). ಬಿಲ್ಲಿನ ಹೆದೆಯೇರಿಸಿ ಠೇಂಕಾರ ಮಾಡು ; ಧನುಷ್ಟಂಕಾರ ಮಾಡು : ವಜ್ರಕಾಂಡಮೆಂಬ ನಿಜವಿಜಯ ಕಾರ್ಮುಕಕ್ಕೆ ಸುರಕರಿಕರಾನುಕಾರಿಯಪ್ಪ ನಿಜಭುಜಾದಂಡಮಂ . . . ನೀವಿ ಜೀವೊಡೆದಾಗಳ್ (ಆದಿಪು. ೧೨-೮೭ ವ) ; ಬಿಲ್ಲನಪ್ರತಿಮಲ್ಲಂ ಏಟಿಸಿ ನೀವಿ ಜೀವೊಡೆಯೆ (ಶಾಂತಿಪು. ೪-೪) ; ಘನಜ್ಯಾನಿನದಂ ಭಯಂಗೊಳಿಸೆ ಜೀವೊಡೆದಂ ನಿಜಚಾಪದಂಡಮಂ (ಪಂರಾಮಾ. ೩-೫೦) ; ಬಾಲನೆನ್ನದಿರೆನುತ ರಿಪುಭಟಭಾಳಲೋಚನನೆನಿಸುವರ್ಜುನ ಬಾಳುಗೆನುತುದ್ದಂಡ ಕೋದಂಡವನು ಜೀವೊಡೆಯೆ (ಕುವ್ಯಾದ್ರೋ. ೪-೫೭) ; ಕಬ್ಬಿನ ಬಿಲ್ಲು ಜೀವೊಡೆದಂತೆ ಪಾಡಿದರೊಬ್ಬರಿಬ್ಬರಿಂಪು ನುಂಪಿನೊಳು (ಭರತ. ೧೩-೨೯). **ಜಯುವೊಡೆ :** ಬೆಮರ್ವರ್ಂ ಜಯುವೊಡೆದ ರವಕ್ಕದ್ಭುತಂ ಕಂಸಚಾಪಂ (ಜಗವಿ. ೬-೩೦). ℙ ಇದು ಛಂದಸ್ಸಿಗಾಗಿ ಮಾಡಿಕೊಂಡ ವ್ಯತ್ಯಾಸ. **ಜೀವಡೆ$_1$ :** "ಜೀವಡೆ (ಜೀ+ವಡೆ) (ಜೀವೊಡೆ)-ಶಿಂಜಿನೀ ಪ್ರಹರಣೇ (ಬಿಲ್ಲಿನ ಹೆದೆಯನ್ನು ಶಬ್ದಮಾಡಿಸು)" (ಶಮುಧಾ); ವೀರಕೋದಂಡವನು ನೀಡಿದಡಾರಿತಿತ್ತಲು ಕಪಿ ಭಟಾವಳಿ ನಾರಿಯನು ಸರಳಿಂಗೆ ತೊಡಿಸಿದ ತೀವಿ ಜೀವಡೆದ (ಕಾಶಿರಾ. ೧೭-೩೦) : ಪಿಡಿದು ಚಾಪವನೇಟಿಸಿಯೆ ಜೀವಡೆಯೆ . . . ಗಿರಿ ಕೆಡೆದುರುಳಿದವು (ಸಾಳ್ವಭಾ. ೧೮-೬೯) ; ಬಿಲ್ಗಳ ಜೀವಡೆದು ತಿರುವಿನಲಿ ಶರಗಳನೋವಿ (ಕೋಗಯು. ೨೦-೬). [ ಜೀ$_2$ + ಪೊಡೆ$_1$ ]

**ಜೀವೊಡ್ಡೆ$_2$, ಜೀವಡ್ಡೆ$_2$** (ನಾ). ೧. ಬಿಲ್ಲಿಗೆ ಹೆದೆಯೇರಿಸಿ ಮಾಡುವ ಧ್ವನಿ; ಧನುಷ್ಟಂಕಾರ : "ಜೀವೊಡೆಯೆಂದು ಜ್ಯಾರವಂ" (ಕಶಸಾ. ೭-೧೨೦) ; "ಜೀವೊಡೆ ಬಿಲ್ಲುಲಿಯೆಂದೆನಲ್" (ಕವಿಕಂ. ೫೨) ; ಮದನನ ಬಿಲ್ಲ ಜೀವೊಡೆ ವಿಪಂಚಿಯ ಬಂಚದ ನುಣ್ಪು . . . ಎನೆ ನೇವುರದಿಂದುಡೆನೂಲ ತೊಂಗಲಿಂ ಮೃದುರವಮುಣ್ಮೆ (ಅನಂಪು. ೪-೫೦) ; ಜೀವೊಡೆಯ ರಥಾಡಿಯ ತೆಬ್ಬುಗಳ ತೆಗೆವೆರಳುಗೊಲಿನ ಕೊಬ್ಬಿನಾಳೆಟ್ಟಾಡಿತು (ಕುವ್ಯಾಭೀ. ೪-೧೨). **ಜೀವಡ್ಡೆ$_2$ :** ೧. ಆತನ ಕುಡುವಿಲ್ಲ ಜೀವಡೆಗೆ ಬಿಗುರ್ತಂತೆ ಕಣ್ಮುಕುಳಿಸಿದುವು (ಕಾದಂಉ. ೭೭೦) ; ಪಡೆ ಪೆಟಟಿ ಸರಿದುದಾ ಜೀವಡೆಯ ಪಟುಧ್ವನಿಗೆ (ಕುಸುಮಾ. ೧೧-೬೯); ಇದೆ ಕಿರೀಟಿಯ ಬಿಲ್ಲ ಜೀವಡೆಯಿದೆ ಸಿತಾಶ್ವನ ಸಿಂಹಗರ್ಜನೆಯಿದೆ ಮುರಾರಿಯ ಮನಕೆ ಮುಂಚುವ ಹಯದ ಖುರನಿನದ (ಕುವ್ಯಾದ್ರೋ. ೧೦-೯) ; ಬೊಬ್ಬೆಯಾರ್ಭಟೆ ಬಿಲ್ಲ ಜೀವಡೆ ಹಯಗಳ ಕೊಬ್ಬಿನ ಬಲು ಹೇಷಿತದಾ ಅಬ್ಬರ (ಕಂಠವಿ. ೦೭-೩೦). ೨. ಬಿಲ್ಲಿನ ಹೆದೆಯ ಹೊಡೆತ ; ಸಿಂಜಿನಿಯ ಪ್ರಹರಣ : ಜೀವಡೆಗಳ ಪುಣ್ಗಳಿಂ ತೊರೆವ ನೆತ್ತರ ಕೆಯ್ (ಕಾದಂಪೂ. ೧೮೩). [ <ಜೀವೊಡೆ$_1$ ]

**ಜೇವೊಡೆಗೆಯ್, ಜೇವಡೆಗೆಯ್, ಜೇವಡೆಗೈ** (ಕ್ರಿ). = ಜೇವೊಡೆ$_1$: ಕಡಿ ಖಂಡಂ ಮಾಡುವೆಂ ಚಕ್ರಮನೆಡೆಯೊಳಿನುತ್ತುಂ ಧನುರ್ದಂಡಮಂ ಜೇವೊಡೆಗೆಯ್ದು (ಪಂಪರಾಮಾ. ೧೪-೭೬); ಭೀಕರಮೂರ್ತಿ ಶಿಂಜಿನಿಗೊಳಿಸಿರ್ದ ಪಿನಾಕವ ಜೇವೊಡೆಗೆಯ್ಕೆ (ಮೋಹತ. ೩೯-೩೨); ನಳಿನಲೋಚನನಾರ್ದು ಶಾರ್ಙ್ಗವ ಬಲಿದು ಜೇವೊಡೆಗೆಯ್ಕೆ ಲೋಕವನಳಿರಿಸುವ ದನಿ ಮಾಯವಾದುದು (ಸಾಳ್ವಭಾ.೨೯-೭೫). **ಜೇವಡೆಗೆಯ್:** ಮದಗಜವಿಂಡು ಬಂದುದ ಕಂಡು ಸ್ಮರಸುತ ಹದವಿಲ್ಲ ಜೇವಡೆಗೆಯ್ದು (ಮೋಹತ. ೩೪-೭). **ಜೇವಡೆಗೈ:** ಆಚಾರವೆಂಬ ಬಿಲ್ಲಿಗೆ ವಿಚಾರವೆಂಬ ನಾರಿ ಸಮತೆಯೆಂಬ ತಿರುವ ಮೆಟ್ಟಿ ಜೇವಡೆಗೈದು (ಚನ್ನವ. ಕ. ೭೪೭-೧೪೫೦); ಒದಱಿ ಜೇವಡೆಗೈದು ಬಾಣವ ಕೆದಱಿದನು (ಕುವ್ಯಾಭೀ. ೦೦-೨). [ ಜೇವೊಡೆ$_2$ + ಕೆಯ್$_1$ ]

**ಜೇವೊಡೆವೊಯ್** (ಕ್ರಿ). = ಜೇವೊಡೆ$_1$: ದಿಶಾದಶ ಪ್ರಕರಣಂ ತಾನೆಂಬಿನಂ ನೀವಿ ಜೇವೊಡೆವೊಯ್ದಂ ವೈರಿಕುಲ ಚಿತ್ತಾಭಂಗಮಂ ಶಾರ್ಙ್ಗಮಂ (ಅನಂಪು. ೦೪-೧೭). [ ಜೇವೊಡೆ$_2$ + ಪೊಯ್$_1$ ]

**ಜೇಷ್ಟಮಧು** (ನಾ). ಒಂದು ಬಗೆಯ ಸಸ್ಯ; ಅತಿಮಧುರ; ಮಧುಕ: ಜೇಷ್ಟಮಧು ಅತಿವಂಧುರ (ಮೃಡಿಗಿ. ೩೯-೭೭೯).

[ <ಸಂ. ಯಷ್ಟಿಮಧು ]

**ಜೇಷ್ಟೆ** 'ಜೆಟ್ಟಿ' ನೋ.

**ಜೇಷ್ಠ** (ಗು). ೧.' ಹಿರಿಯ; ದೊಡ್ಡ: ಜೇಷ್ಠಪುತ್ರ (ರೂಢಿ). (ನಾ). ೨. ಚಾಂದ್ರಮಾನ ವರ್ಷದ ಮೂರನೆಯ ತಿಂಗಳು: ವೈಶಾಖದಲಿ ಲಾಭವು ಜೇಷ್ಠದಲ್ಲಿಯು ಲೇಸು (ಗಗತಾ. ೪-೭೫). [ <ಸಂ. ಜ್ಯೇಷ್ಠ ]

**ಜೇಷ್ಠಾಂಸ** (ನಾ). ಹಿರಿಯ ಮಗನಿಗೆ ಕೊಡುವ ಹೆಚ್ಚಿನ ಪಾಲು,-ದೊಡ್ಡಪಾಲು: ಮೂಡಲು ಪಳ್ಳವಾಯ್ಕಾಲು ತೆಂಕಲುದ್ದಿಯಕಾಲು ಪಡುವಲು ನಾರಾಯಣಯ್ಯನ ಜ್ಯೇಷ್ಠಾಂಶದ ಭೂಮಿ (ಕಇಅ.೭೯-೧೩-೨೯; 1088). [ <ಸಂ. ಜ್ಯೇಷ್ಠಾಂಶ ]

**ಜೇಷ್ಠೆ** 'ಜೆಟ್ಟಿ' ನೋ.

**ಜೇಹಣಿ** 'ಚಿಹಣಿ' ನೋ.

**ಜೈ, ಜೇ$_1$** (ನಾ). ಜಯಜಯಕಾರ; 'ಜಯವಾಗಲಿ' ಎಂಬ ಹಾರೈಕೆಯ ನುಡಿಯ ಸಂಕ್ಷಿಪ್ತರೂಪ. 'ಜೈಗುಡು' ಪರಾ. **ಜೇ$_1$:** ಹರುಷದಿಂ ಜೇಯೆಂದು ವಿದ್ವಾಂಸರುಗಳನುವತುದಿಂದೆ ಪೇಳ್ವೆನು ಪರಮ ನೇಮೀಶ್ವರನ ಚರಿತವನು (ಸಾಳ್ವಭಾ. ೦-೩೫). [ <ಸಂ. ಜಯ ]

**ಜೈಗುಡು** (ಕ್ರಿ). ೧. ಜಯಜಯಕಾರ ಮಾಡು: ಜನಮಂಡಳಿ ಜೈಗುಡುತ್ತಿತ್ತು (ರೂಢಿ). ೨. ಧ್ವನಿಮಾಡು: ಪಟಹ ಭೇರಿಗಳ್ ಜೈಗುಡಲ್ಕಾ ದನಿಗೆ ದನಿಗೊಟ್ಟು ದಿಕ್ಕರಿಗಳೋಂಕಾರಗೈದುವಾಗಳ್ (ಭರಥ. ೦-೧೭).

[ ಜೈ + ಕುಡು$_1$ (<ಕೊಡು$_1$) ]

**ಜೈತ್ರ** (ಗು). ಗೆಲವನ್ನು ಪಡೆದ; ಜಯಶಾಲಿಯಾದ; ಯಶಸ್ವಿಯಾದ: ರಾಜಪುತ್ರಿಸ್ಮಿತಮಧುಮಧುರಾಪಾಂಗಜೈತ್ರಾಂಗಜಾಸ್ತ್ರಂಗಳ ಕೋಳಂ ನೂತನ ಪ್ರೇಮದೆ ನಿಮಿರ್ವೆಡೆಯೊಳ್ ದೃಷ್ಟಿಯಂ ಕಾವನಾವಂ (ಆದಿಪು. ೪-೫೦). (ನಾ). ೨. ಗೆದ್ದವನು; ವಿಜಯಿಯಾದವನು. ೩. ಗೆಲವು; ಜಯ. 'ಜೈತ್ರಕಥೆ' ಪರಾ. [ ಸಂ. ]

**ಜೈತ್ರಕಥೆ** (ನಾ). ಗೆಲವಿನ ಕಥೆ: ತೀವಿದೊಲವಿನ ದಂಪತಿಗಳಾಗೆ ಮನಬುದ್ಧಿ ಜೀವಿತವು ಜೈತ್ರಕಥೆ (ಮಂಕುಕ. ೫೪೩). [ ಜೈತ್ರ + ಕಥೆ ]

**ಜೈತ್ರಧ್ವಜ** (ನಾ). ಜಯದ ಗುರುತಾದ ಧ್ವಜ,-ಬಾವುಟ: ನಿನ್ನ ವಿಜಯ ಪ್ರಾರಂಭದೊಳ್ ತೋರ್ಕೆಗೆತ್ತಿದ ಜೈತ್ರಧ್ವಜಮೆಂದು ತೋರ್ಪ ತೆಱದಿಂ (ಆದಿಪು. ೧೦-೧೭). [ ಜೈತ್ರ + ಧ್ವಜ ]

**ಜೈತ್ರಯಾತ್ರೆ** (ನಾ). ವಿಜಯಯಾತ್ರೆ: ಪುಷ್ಪಾಕರ ಬಲವಿಜಯೋದ್ದರ್ಪ ಕಂದರ್ಪ ಲೀಲಾಕರನಾದಂ ಜೈತ್ರಯಾತ್ರೋತ್ಸವದೊಳಖಿಲ ಷಟ್ಖಂಡ ಭೂಮಂಡಲೇಶಂ (ಆದಿಪು. ೧೩-೭); ಮುಂದೆ ಶಾಂತೀಶ್ವರನ ದಿಗ್ವಿಜಯ ವರ್ಣನೆಯಲ್ಲಿ ರಘುಮಹಾರಾಜನ ಜೈತ್ರಯಾತ್ರೆಯನ್ನು ಅನುಸರಿಸುತ್ತಾನೆ (ಕಸಾಚ. ೧೦೪); ಅಗಾಧ ಸಂದಣಿಯೊಂದಿಗೆ ರಾಯ ಜೈತ್ರಯಾತ್ರೆ ಹೊರಟವನು (ಆಳಾಕ. ೨೦). [ ಜೈತ್ರ + ಯಾತ್ರೆ ]

**ಜೈತ್ರರಥ** (ನಾ). ಜಯವನ್ನು ಸಾಧಿಸಿ ಕೊಡುವ ರಥ; ಗೆಲ್ಲುವ ರಥ: "ಗೆಲ್ವ ರಥಮಾಳೋಚಿಸಲು ಜೈತ್ರರಥಮಕ್ಕು" (ಮಂಗರಾ. ೮೪-೨೪).

[ ಜೈತ್ರ + ರಥ ]

**ಜೈತ್ರಲಕ್ಷ್ಮಿ** (ನಾ). ಜಯದ ದೇವತೆ; ಜಯಲಕ್ಷ್ಮಿ: ಮಹೀಚಕ್ರಸಂಸ್ತುತದೋರ್ಮ್ಮಂಡಳ . . . ದಿಗ್ವರ್ತಿತ ಜೈತ್ರಲಕ್ಷ್ಮಿ ಭರತಶ್ರೀಮುಚ್ಚಮೂವಲ್ಲಭಂ (ಎಕ. VI, ಚಿಕ್ಕಮ. ೧೬೦-೮೭; 1137).

[ ಜೈತ್ರ + ಲಕ್ಷ್ಮಿ ]

**ಜೈತ್ರಾಸ್ತ್ರ** (ನಾ). ಜಯವನ್ನು ಸಾಧಿಸಿ ಕೊಡುವ ಅಸ್ತ್ರ; ಗೆಲ್ಲುವ ಅಸ್ತ್ರ: ಜೈತ್ರಾಸ್ತ್ರನ್ನಿನಗೀ ಚಕ್ರರತ್ನದಿಂ ಪೆಱತುಂಟೇ (ಆದಿಪು. ೦೪-೦೨).

[ ಜೈತ್ರ + ಅಸ್ತ್ರ ]

**ಜೈತ್ರೋರ್ವರೆ** (ನಾ). ಜಯದ ಭೂಮಿ: ಮಳಯಾನಿಳಂ ಸುಳಿದು ಕಾಲಕ್ಷೇಪಮಂ ವಿಷ್ಣುಭೂಪನ ಜೈತ್ರೋರ್ವರೆಯಲ್ಲಿ ಮಾಡುವುದು ಕಾವೇರೀನದೀತೀರದೊಳ್ (ಎಕ. V, ಹಾಸನ. ೫೩-೯; 1170).

[ ಜೈತ್ರ + ಉರ್ವರೆ ]

**ಜೈದ** (ನಾ). ಒಂದು ವಂಶದ ಹೆಸರು (?): ದಕ್ಷಿಣಸ್ಯಾಂ ದಿಶಿ ಬೆಳ್ಗಲ್ಲಿಗೆಱಿಯಾ ಒಳಗೆಱಿಯಾ ಪಳ್ಳದಾ ಕೂಡಲ್ದಕ್ಷಿಣ ಪಶ್ಚಿಮಾಯಾನ್ದಿಶಿ ಜೈದರಾ ಕೆಯ್ಯಾ ಬೆಳ್ಗಲ್ಲೊಳಱಿದು (ಎಕ. IV, ನಾಗಮಂ. ೮೫-೬೨; 776).

[ ? ]

**ಜೈನ** (ಗು). ೧. ಜಿನನಿಗೆ ಸಂಬಂಧಿಸಿದ,-ಸೇರಿದ. (ನಾ). ೨. ಜಿನಮತದ ಅನುಯಾಯಿ; ಜೈನಮತಕ್ಕೆ ಸೇರಿದವನು: ಜೈನನನುಪೇಕ್ಷಿಪೊಡಂತವ ಜೈನನೆ (ಸಮುಪ. ೪-೭೩); ಪಿನಾಕಿಭವನವನೊಬ್ಬ ಜೈನನು ಕೆರಹುಗಾಲ್ವೆರಸಿ ನೀಕರಿಸಿ ಹುಗಲೊಳಗೆ (ಬಸವು. ೪೮-೮); ಹಿಂದು ಜೈನ ಮುಸ್ಲೀಮ ಕ್ರೈಸ್ತರಾವೊಂದೇ ಬಾಂಧವರು (ಗೀವಿಂ. ೪೭-೪). ೩. ಜೈನ ಗುರು: "ಜೈನರ್ ದಿಗಂಬರರ್ ಜೀವಕರ್ ಮಲಧರರ್ ತಾನಜೀವರ್ ಕ್ಷಪಣರೆನೆ ಗುರುಗಳಕ್ಕು" (ಮಂಗರಾ. ೭೬-೦). ೪. ಜಿನ; ಅರ್ಹಂತ. 'ಜೈನಗೃಹ', 'ಜೈನಬಿಂಬ' ಪರಾ. ೫. ಜೈನಮತ; ಜೈನಮತದ ಅಥವಾ ಜೈನ ಧರ್ಮದ ತತ್ವ: ಪುರುಳಿಲ್ಲದಂಗೆ ಜೈನಂ ದೊರೆಕೊಂಡುಂ ದುಶ್ಚರಿತ್ರಮಂ ಬಿಡದುದಱಿಂ ಚಿರಕಾಲಂ ನಿಲಲಱಿಯದು (ಸಮುಪ. ೪-೩೪); ಜೈನವೇ ಸಿದ್ಧ ಬದ್ಧ ನಾರಕಿಗಳು ಎಂಬ ಪುರುಷತ್ರಯಲಕ್ಷಣಂಗಳಂ . . . ಪ್ರತಿಪಾದಿಸುವುದು (ವಿವೇಕ. ೮). [ ಸಂ. ]

**ಜೈನಗೃಹ** (ನಾ). ಜಿನ ದೇವಾಲಯ; ಜಿನಾಲಯ; ಬಸದಿ: ದೆಸೆಗಳ್ ಪೆರ್ಚದೆ ಮೊಟ್ಟನಾದುವಗಲಕ್ಕೆಂಬನ್ನೆಗಂ . . . ವಸುಧೆಗಾ ಕಲ್ಪಾಂತ ಮೆಂಬಂತು ಮಾಡಿಸಿದಂ ಜೈನಗೃಹಂಗಳಂ (ಆದಿಪು. ೧೫-೪೭).

[ ಜೈನ + ಗೃಹ ]

**ಜೈನಗೇಹ**(ನಾ).=ಜೈನಗೃಹ: ಗಿರಿರಾಜಂಗೊಟ್ಟಜಂಗೊಟ್ಟಪೊಲೆಸೆದುದದೇಂ ದಿವ್ಯವೋ ಜೈನಗೇಹಂ (ಶಾಂತಿಪು. ೨-೧೧೭); ನವರತ್ನ ವಿನಿರ್ಮಿತನೂತ್ನ ಜೈನಗೇಹಮನತಿಭಕ್ತಿಯಿಂದೆ ಬಲವಂದು (ಪುಷ್ಪಪು. ೩-೭೫).

[ ಜೈನ + ಗೇಹ ]

**ಜೈನಜನ** (ನಾ). ಜೈನಮತದ ಜನ: ಜಯಶ್ರೀಗೊಲವನೀಯೆ ನೆಗಬ್ದಂ ಭೂಗಧಿಪತಿ ಜೈನಜನಮನೋಹರಚರಿತಂ (ಚಂದ್ರಪು. ೨-೦); ಕಾಣದೆ ಮುಂದಂ ದೆಸೆಗೆಟ್ಟ ಜೈನಜನಕೆಲ್ಲಂ ಲೋಚನಂ ತಾನೆನಲ್ಕುದಯಂಗೆಯ್ದನ್ (ಎಕ. VIII, ಸೊರಬ. ೨೮-೪೫; 1208). [ ಜೈನ + ಜನ ]

**ಜೈನತನ** (ನಾ). ಜೈನಪದ್ಧತಿಯನ್ನು ಅನುಸರಿಸುವಿಕೆ ; ಜೈನನಾಗಿರುವಿಕೆ : ಅವನ ಮಕ್ಕಳ್ಗಡ ಮಾರ್ತಾಂಡಂಗೆ ಭಕ್ತರೆನಿಪಾ ಭಂಡಂಗಂ ಜೈನತನದ ಪೆಸರೆಂತೆಸೆಗುಂ[ಪಾಠಾಂ· ಉತ್ತಮದ ಜೈನವೆಸರೆಂತೆಸೆಗುಂ] (ಸಮುಷ. ೪-೧೨೫). [ ಜೈನ + – ತನ ]

**ಜೈನದೀಕ್ಷಿತ** (ನಾ). ಜೈನದೀಕ್ಷೆಯನ್ನು ಹೊಂದಿದವನು,–ಪಡೆದವನು: ನಾನಾ ವಿಧದಿಂದಮೇಂ ನಮೆದು ನಾರುಗಿದಿರ್ಪರೋ ಜೈನದೀಕ್ಷಿತರ್ (ಶಾಂತಿಪು. ೮-೧೨೪). [ ಜೈನ + ದೀಕ್ಷಿತ ]

**ಜೈನದೀಕ್ಷೆ** (ನಾ). ೧. ಜೈನ ಸಂನ್ಯಾಸದ ದೀಕ್ಷೆ,–ವೈರಾಗ್ಯದ ದೀಕ್ಷೆ : ಜಗನ್ನುತ ಸ್ವಯಂಪ್ರಭಗುರುಪಾದಮೂಲದೊಳೆ ಕೊಂಡನಖಂಡಿತ ಜೈನದೀಕ್ಷೆಯಂ (ಆದಿಪು. ೨-೩೯). ೨. (ಅಲಂ). ಅಹಿಂಸಾವ್ರತ : ಜೈನದೀಕ್ಷೆಯ ಹಿಡಿದುದೆನ್ನ ಸಮಾನ ಸುಭಟರು ಜಯಸಿರಿಯ ಸಂಧಾನ ಮುಱಿದುದು (ಕುಮಾ.ಕ. ೫-೧೪). [ ಜೈನ + ದೀಕ್ಷೆ ]

**ಜೈನಧರ್ಮ** (ನಾ). ಜಿನನಿಂದ ಬೋಧಿಸಲ್ಪಟ್ಟ ಧರ್ಮ : ಎಲ್ಲ ಧರ್ಮಗಳಿಗಿಂತಲೂ ಜೈನಧರ್ಮವು ಅಹಿಂಸೆಗೆ ಹೆಚ್ಚು ಮಹತ್ವವನ್ನು ಕೊಡುತ್ತದೆ (ಜೈನಪ. ೬) : ಜೈನಧರ್ಮವು ವಿಶ್ವದ ಅತ್ಯಂತ ಪ್ರಾಚೀನ ಧರ್ಮಗಳಲ್ಲೊಂದಾಗಿದೆ (ಭಾರದ. ೧೬೪). [ ಜೈನ + ಧರ್ಮ ]

**ಜೈನಬಸ್ತಿ** (ನಾ). ಜೈನರ ಬಸದಿ,–ದೇವಾಲಯ ; ಜಿನಾಲಯ: ಹಲಸಿಯಲ್ಲಿರುವ ಜೈನಬಸ್ತಿಯು ಕದಂಬರ ಕಾಲದ ಅತ್ಯಂತ ಪುರಾತನ ಕಟ್ಟಡವೆಂದು ಹೇಳಬಹುದು (ಭಾರದ. ೫೦೦). [ ಜೈನ + ಬಸ್ತಿ (<ಬಸದಿ) ]

**ಜೈನಬಿಂಬ** (ನಾ).=ಜಿನಪ್ರತಿಮೆ : ಪೊಸಮುತ್ತಿನ ಮಂಡಪದೊಳಗೆಸೆವ ಕನತ್ಕನಕ ಪೀಠದೊಳ್ ವಿಧಿಸಹಿತಂ ಮಿಸಿಸಿ ಬಟಿಕ್ಕರ್ಚಿಸಿ ಪೂಜಿಸಿ ಮಣಿಮಯ ಜೈನಬಿಂಬಮಂ (ಶಾಂತಿಪು. ೬-೩೦). [ ಜೈನ + ಬಿಂಬ ]

**ಜೈನಮತ** (ನಾ). = ಜಿನಮತ : ಜಿನರು ಪ್ರತಿಪಾದಿಸಿದ ಮತವು ಜೈನಮತವು (ಜೈನಧ. ೧). [ ಜೈನ + ಮತ ]

**ಜೈನಮುನಿ** (ನಾ).=ಜಿನಮುನಿ : ಜೈನಮುನಿ ಸಂಕುಲವಿದೆವ್ಯೊಡನಬ್ಬಲೂರೊಳು ಮಲೆವುತಂ ಪ್ರತಿದೋಱಿಯಾಡಲು (ಬಸಪು. ೫೦-೩೦). [ ಜೈನ + ಮುನಿ₃ ]

**ಜೈನವೃತ್ತಿ** (ನಾ). ಜೈನಧರ್ಮದ ಆಚರಣೆ,–ವ್ಯವಹಾರ : ಮಹೇಂದ್ರಜಾಲಾಪರಿಮಿತಾದ್ವಯಶೂನ್ಯಮಾಯಾಕರಣವಿದ್ವಿಷ ಜೈನವೃತ್ತಿಯೊಳಿಂತು ತರ್ಕಿಸಲು (ಬಸಪು. ೫೦-೧೧). [ ಜೈನ + ವೃತ್ತಿ ]

**ಜೈನಶಾಸನ** (ನಾ).=ಜಿನಶಾಸನ : ತದನಂತರದೊಳ್ ಜೈನಶಾಸನ ಚೂಡಾಮಣಿ ಶ್ರೀದೇವಂ ಸೌಧರ್ಮೇಂದ್ರನಿಂದ್ರಾಣಿವೆರಸು ತನ್ನ ವಿಮಾನಕ್ಕೆ ಬರ್ಪುದನಱಿದು (ಶಾಂತಿಪು. ೬-೩೦). [ ಜೈನ + ಶಾಸನ ]

**ಜೈನಸಮಯ** (ನಾ).=ಜಿನಸಮಯ : ಶ್ರೀಮದಶೇಷ ಜೈನಸಮಯೈಕಶಿರೋಮಣಿ ಸರ್ವಜೀವರಕ್ಷಾಮಣಿಯೆಂದು ಭವ್ಯತತಿ ಬಿಚ್ಚಳಿಸುತ್ತಿರೆ (ಶಾಂತಿಪು. ೧-೧ ಪರಿ). [ ಜೈನ + ಸಮಯ ]

**ಜೈನಸ್ತವ** (ನಾ). ಅರ್ಹಂತನ ಸ್ತುತಿ; ಜಿನಸ್ತುತಿ: ದೇವತೂರ್ಯನಗದೇವೀಗೀತ ಜೈನಸ್ತವ ಸಮುಪಹಿತಾತ್ಮೀಯಚಿತ್ರಂ ವಿಲಾಸಂ ಮಿಗೆ . . . ಮಹೋತ್ಸಾಹದಿಂ ಬಂದನಾಗಳ್ (ಆದಿಪು. ೮-೪೩). [ ಜೈನ + ಸ್ತವ ]

**ಜೈನಾಗಮ** (ನಾ). ಜೈನಸಿದ್ಧಾಂತ : ಸೂಕ್ತಂ ಭವ್ಯಜನ ಪ್ರವ್ಯಕ್ತಂ ಜೈನಾಗಮೋಕ್ತಮಿಂ ನಿನಗೆ ಮದೀಯೋಕ್ತಮಿವೆರ್ದೆಯೋಳ್ ನೆಲಸುಗೆ (ಆದಿಪು. ೫-೬೦). [ ಜೈನ + ಆಗಮ ]

**ಜೈನಾಗಮವಿದ** (ನಾ). ಜೈನಸಿದ್ಧಾಂತವನ್ನು ಬಲ್ಲವನು,–ತಿಳಿದವನು: ಜೈನಾಗಮವಿದರಂ ಸಾರದೆ ಪೋಗಿ ಕುಲಿಂಗಿಗಳನೀ ಜನಂ ಸೇವಿಸುಗುಂ (ಆದಿಪು. ೧೫-೩೫). [ ಸಂ. ಜೈನಾಗಮವಿದ್ ]

**ಜೈನಾಗ್ರಹಾರ** (ನಾ). ಜೈನರ ಅಗ್ರಹಾರ ; ಜೈನರ ಉಪಾಧ್ಯಾಯರು ವಾಸಮಾಡುವ ಗ್ರಾಮ: ಪಲವು ಜೈನಾಗ್ರಹಾರಂಗಳನಾಗಳ್ ಕೊಟ್ಟನಲ್ಲಿ ರತ್ನತ್ರಯ ಮಂಜುಳ ಜೈನೋಪಾಧ್ಯಾಯರ ಬಳಗಕ್ಕೆ (ಬಾಧಪು.೧೬-೩೮೦). [ ಜೈನ + ಅಗ್ರಹಾರ ]

**ಜೈನಾಚಾರ್ಯ**(ನಾ). ಜೈನರ ಆಚಾರ್ಯ,–ಗುರು: ತಿರುವಾಕರೀಶನೆನಿಪ್ಪ ಜೈನಾಚಾರ್ಯನೊರ್ಬನು ಜಿನಸಮಯಮುಖ್ಯನು (ಬಸಪು. ೪೯-೨೬). [ ಜೈನ + ಆಚಾರ್ಯ ]

**ಜೈನಾಲಯ** (ನಾ). = ಜೈನಗೃಹ : ಮುನೀಂದ್ರರಿಲ್ಲದಗಮಿಲ್ಲಾತೋದ್ಯದುದ್ಯೋಗಮಿಲ್ಲದ ಜೈನಾಲಯಮಿಲ್ಲ ನೋಡದಱಿಕೋಳ್ (ಶಾಂತಿಪು. ೯-೧೩೩). [ ಜೈನ + ಆಲಯ ]

**ಜೈನುಂಡೆ** 'ಜೇನುಂಡೆ' ನೋ.

**ಜೈನೋಕ್ತಿ** (ನಾ). ಜಿನನ ಮಾತು; ಅರ್ಹಂತನ ವಚನ: ಸೌಧರ್ಮಕಲ್ಪಕ್ಕೆ ಭಾವನೆ ಜೈನೋಕ್ತಿಯೊಳಾಗೆ ದುರ್ಗತಿಗವಾ ಜೀವಕ್ಕಮೇಂ ಸಮ್ಮದಂ (ಶಾಂತಿಪು. ೬-೧೨). [ ಜೈನ + ಉಕ್ತಿ ]

**ಜೈಮಿನೀಯ** (ಗು). ೧. ಜೈಮಿನಿಮುನಿಗೆ ಸಂಬಂಧಿಸಿದ. (ನಾ). ೨. ಜೈಮಿನಿಮುನಿಯಿಂದ ರಚಿತವಾದ ಧರ್ಮಮೀಮಾಂಸೆ; ಆರು ಆಸ್ತಿಕ ದರ್ಶನಗಳಲ್ಲಿ ಒಂದು ; ಪೂರ್ವ ಮೀಮಾಂಸೆ: ಈ ಮೂಲ ತತ್ತ್ವಾನ್ವೇಷಣರೂಪದಲ್ಲಿ . . . ಯೋಗ, ಜೈಮಿನೀಯ, ಔಪನಿಷದಗಳೆಂಬ ಆರು ಆಸ್ತಿಕ ದರ್ಶನಗಳೂ ಆವಿರ್ಭವಿಸಿರುತ್ತವೆ (ಭಾರದ. ೨೨೯). ೩. ಜೈಮಿನಿ ಮುನಿಯ ಅನುಯಾಯಿ ; ಮೀಮಾಂಸಕ. [ ಸಂ. ]

**ಜೈಲು,** ಜೇಲು (ನಾ). ಸೆರೆಮನೆ ; ಬಂದಿಖಾನೆ ; ಕಾರಾಗೃಹ : ಹದಿಮೂರು ವರ್ಷದವನು ಕಳ್ಳನಾದರೆ ಅವನಿಗೆ ಜೈಲಾಗುವುದಿಲ್ಲ (ಜೀವಾತ್ಮ. ೨೬೫) : ಜೈಲಿನಲಿ, ಅಧಿಕಾರಿಗಳ ಕ್ರೂರದರ್ಪದಲಿ . . . ಮುಂದಿಟ್ಟ ಕಾಲ ಹಿಂದೆಗೆಯದಳಿವವನು ಸತ್ಯಾಗ್ರಹಿ (ಪಾಂಚಜ. ೨೦). **ಜೇಲು :** ಜೇಲಿನ ವಾತಾವರಣ ನಿಜವಾಗಿಯೂ ಉಸಿರುಕಟ್ಟುವ ವಾತಾವರಣ (ಆತ್ಮಾರ್ಪ. ೪). ಜೇಲಿನ ಗೋಡೆ ಹಾರಲಿಕ್ಕಾಗಲಿಲ್ಲ (ಭಾರತಿ. ೮೦). [ ←ಇಂ. Jail ]

**ಜೈವ** (ಗು). ಜೀವಕ್ಕೆ ಸಂಬಂಧಿಸಿದ. 'ಜೈವಕ್ರಿಯೆ' ಪರಾ. [ ಸಂ. ]

**ಜೈವಕ್ರಿಯೆ** (ನಾ).ಜೀವಕ್ಕೆ ಸಂಬಂಧಿಸಿದ ಕ್ರಿಯೆ: ಜೈವಕ್ರಿಯೆಯಿಂದಾಗುವ ಅಂಗವೃದ್ಧಿ, ಒಂದುಗೂಡಿಕೆ (Accretion. ಇಂಕನಿ.). [ ಜೈವ + ಕ್ರಿಯೆ ]

**ಜೈವಾತೃಕ** (ನಾ). ೧. ದೀರ್ಘಾಯುಸ್ಸನ್ನು ಉಳ್ಳವನು; ದೀರ್ಘಾಯು: "ಜೈವಾತೃಕನುಮಾಯುವಂತನೆನಿಸಿಕ್ಕು" (ಮಂಗರಾ. ೬೦-೧೪). ೨. ಚಂದ್ರ: "ಇಂದು ಜೈವಾತೃಕಂ . . . ದ್ವಿಜರಾಜನೆನೆ ಸುಧಾಂಶುವೆನಿಕ್ಕು" (ಮಂಗರಾ. ೧೧-೪) : ಶರಧಿಯೊಳು ಜೈವಾತೃಕಂ ಪುಟ್ಟಿ ಜಗಕೆ ಪ್ರಭೆ ಮೆಱೆವಂತೆ (ಪ್ರಾಢರಾ. ೧-೨೨). ೧, ೨ : ನಾಡಿಗರೊಳೆಲ್ಲರುಂ . . . ಜೈವಾತೃಕರ್ ದೋಷಾಕರರಲ್ತು (ರಾಮಾಶ್ವ. ೬-೨೪). [ ಸಂ. ]

**ಜೈಸು** 'ಜಯಿಸು' ನೋ.

**ಜೊ** 'ಜೋ' ನೋ.

**ಜೊಂಗುಳಿ** (ನಾ). ಬವಳಿ ; ಮೂರ್ಛೆ ; ಮೈಮರೆವು : "ಮುಚ್ಚಿ ಜೊಂಗುಳಿ[ಪಾಠಾಂ· ಜಂಗುಳಿ]ಹರವಸಂ ಮೂರ್ಛೆ ತಾನಕ್ಕು" (ಶಬ್ದಮಂ. ೫೬) ; ಝುಳಕಂ ಝುಳಿಪಿಸಿದಂ ಜೊಂಗುಳಿ ಬೊಂಬುಳಿಯಾಳಮಾಳಮಂತೆ . . . ಗೋಳಿ ಪೇಳಿ ಱಿಟಿ ಸಂದೇಹಂ (ಶಮದ. ೨೫) ; ನಡುಗುತಿಹುದೊಡಲು ತೆಪ್ಪತ್ತು ತಲೆಯೆತ್ತಿ ಹೊತ್ತಿಕ್ಕೆ ಜೊಂಗುಳಿಗೆ ಬೆಪ್ಪಳಿಸುವಾಸರಿಂ ಬೆಳ್ಳಿ ಬರುತಿಹಳು (ಕಾಲೂರ. ೧೩೬-೩೬೩). [ ? ]

**ಜೊಂಗೆ** 'ತೊಂಗೆ' ನೋ.

**ಜೊಂಜಾಟ** 'ಜಂಜಡ' ನೋ.

**ಜೊಂಡಗರ್ಬು** 'ಜೊಂಡೆಗರ್ಬು' ನೋ.

**ಜೊಂಡಿಂಗ** 'ತೊಂಡಂಗಿ' ನೋ.

**ಜೊಂಡಿಗ** 'ತೊಂಡಂಗಿ' ನೋ.

**ಜೊಂಡು₁** (ನಾ). ೧. ತಲೆಯ ಹಗುರು,–ಹೊಟ್ಟು: (ಶ).
[ ದೇ.॥ ತಮಿ. ಚುಣ್ಣು; ತೆಲು. ಚುಂಟು. ]

**ಜೊಂಡು₂,** ಜಂಡು (ನಾ). ೧. ನೀರಿನಲ್ಲಿ ಬೆಳೆಯುವ ಒಂದು ಬಗೆಯ ಹುಲ್ಲು; ಹೊಡಕೆ; ಆಪು: ಆಗ ಜೊಂಡುಗಳ ನಡುವೆ ಅವಿತುಕೊಂಡಿದ್ದ ದಕಾಯಿತರು ತಟ್ಟನೆ ಕಾಣಿಸಿಕೊಂಡು . . . ಬಂದರು (ಜಗಜ್ಯೋ. ೯): ಕೊಳದಲ್ಲಿ ಜೊಂಡು ಬೆಳೆದು ನೀರನ್ನು ಮುಚ್ಚಿರುವಂತೆ (ವಚಭಾ. ೧೫೭): ಆನೆಯಾಗಿ ಜೊಂಡು ತಿನ್ನುವುದಕ್ಕಿಂತ ಇರುವೆಯಾಗಿ ಸಕ್ಕರೆ ತಿನ್ನುವುದು ಮೇಲು (ಗಾದೆ). ೨. ನೀರಲ್ಲಿ ಕೊಳೆತು ನಾರುವ, ಕೆಸರುಗಟ್ಟಿದ ಕಸ; ನೀರಿನ ಮೇಲೆ ತೇಲುವ ಕೊಳೆತು ನೊರೆಗಟ್ಟಿದ ಸೊಪ್ಪುಸದೆ ಮೊದಲಾದವು: ಏಸೋ ಈಶರು ದಾಸರಾಗಿ ಕೈಂಕರ್ಯದಲಿ ಜನದ ಬದುಕನು ತಿದ್ದಿ ಹಸನುಗೊಳಿಸಿ . . . ಮಲಗಿಹರು ನಾವು ನೊರೆ ತೆರೆಗಳೋ ಜೊಂಡು ಪಾಚಿ (ಭಾವಜೀ. ೧೩-೨೫೨). **ಜಂಡು: ೨.** ಮನೆ ಎಂದರೆ ಜಂಡಿನ ಕೆರೆ. ಮಸಣಕ್ಕಿಂತಲೂ ಹೊಲಸಾಗಿದೆ (ಪದ್ಮಸ. ૩೬೪).

**ಜೊಂಡು₃** 'ದೊಂಡೆ₁' ನೋ.

**ಜೊಂಡುಮಿಾಸೆ**(ನಾ). ಜೊಂಡಿನಂತೆ ಬೆಳೆದ ಮಿಾಸೆ. [ಜೊಂಡು₂+ಮಿಾಸೆ]

**ಜೊಂಡೆ** 'ದೊಂಡೆ₁' ನೋ.

**ಜೊಂಡೆಗರ್ಬು,** ಜೊಂಡಗರ್ಬು (ನಾ). ಒಂದು ಬಗೆಯ ಕಬ್ಬು: ತೋರಣಸ್ತಂಭಂಗಳಾಗಿ ಪೊಡೆಗಟ್ಟಿ ನಿಱಿಸಿದ ಜೊಂಡೆಗರ್ಬಿನ ತೆನೆಗಳ್ (ಲೀಲಾವ. ೧೦-೫೫ ವ). **ಜೊಂಡಗರ್ಬು:** ಮಗಮಗಿಪ ಧೂಪದಿಂ ಜೊಂಡಗರ್ಬಿನಿಂ ಪಣ್ಪಲಂಗಳಿಂ . . . ಬಗೆಗೊಳಿಕುಂ ಚಿತ್ರಶಾಲೆ (ಮದತಿ. ೧೦-೨೭). [ ಜೊಂಡೆ? + ಕರ್ಬು (<ಕರ್ಪು₁) ]

**ಜೊಂಡೇಳ್** (ಕ್ರಿ). ಮುದ್ದೆ ಮುದ್ದೆಯಾಗು; ಗಿಜಿಗಿಜಿಯಾಗು: ತೋಳು ತೊಡೆ ಜೊಂಡೆದ್ದು ರಕುತದ ಸಾಲುಗೊಳಚೆಯ . . . ಮಂಚದ ಮೇಲೆ ರಣದಲಿ ಭೀಷ್ಮ ಪವಡಿಸಿದ (ಕುಮಾ.ಭೀ. ೧೧-೧೧): ಪಿಂಡುಗೊಂಡು ಜೊಂಡೇಳ್ದ ಕಾಳ್ಮದುಳ ಕೊಳ್ಕೆಸಱ್ (ರಾಜಶೇ. ೫-೧೨೦ ವ).
[ ಜೊಂಡು₃ (<ದೊಂಡೆ₁) + ಏಳ್₁ (<ಏೞ್₁) ]

**ಜೊಂಡೊಡೆ** (ಕ್ರಿ). = ಜೊಂಡೇಳ್: ಜೊಂಡೊಡೆದುದು ರಕ್ತಾಂಬು ರಾಸಿಯು ದಂಡೆಗಟ್ಟಾಯ್ತು (ಅಂಬಿಕಾ. ೧೭-೫೭).
[ ಜೊಂಡು₃ (<ದೊಂಡೆ₁) + ಒಡೆ₁ ]

**ಜೊಂಪ₁,ಜಂಪ₁,** ಜಂಪು₂, ಜೊಂಪು₂, ಜೊಂಪೆ, ಜೋಂಪ, ಜೋಂಪು₂ (ನಾ). ೧. ಗೊಂಚಲು; ಗುಚ್ಛ: "ಪದೆದು ತೊಂಗಲ್ . . . ಜೊಂಪಂ ತೊಂಗೆ ಗುಚ್ಛಮೆಂದಿರದೊಪ್ಪಿ ಪದೆದ ನಾಮಂ" (ಕಬ್ಬಿಕೈ. ೧೯). ೨. ಸಮೂಹ; ಮೊತ್ತ; ರಾಶಿ: ಉರಗನ ಜೊಂಪದಂತೆ ಸುರಿಯುತ್ತಿರೆ ಪೆರ್ಮುಱಿ (ಅನಂಪು. ४-೧೯): ಮೊಗಸಸಿಯಿಂ ಪಸರಿಪ ಜೊನ್ನದ ಜೊಂಪದಂತೆಯುಮೆಸೆವ . . . ಮಯ್ಸಿರಿವಡೆದಿರ್ಪಂ (ಚಿಕವಂ. ೦೯-೨೦). ೩. ಬಳ್ಳಿಮಂಟಪ: ಕಾವಣ; ಕುಂಜ: ಅಲ್ಲಿಯ ಸುರತರುಗಳ ತಣ್ಣೆಲಲ್ಗಳೊಳಂ ಕಲ್ಪಲತೆಯ ಜೊಂಪಂಗಳೊಳಂ (ಆದಿಪು. ೨-೦೪ ವ): ಚಂದನವೀಥಿ ಸಂಪಗೆಯ ಜೊಂಪಂ ಮಾಧವೀ ಮಂಡಪಂ (ಶಂರಾಮಾ. ೦-೦೦೦): ಎಳವಳ್ಳಿಯ ಬಳಸಿಂಗೊಳಗಾದಸುಗೆಯ ಜೊಂಪಂಗಳೊಳ್ ಕೋಗಿಲೆಯಂತೆ ಕೂಟಮನೊಡರ್ಚಿಯುಂ (ಕಬ್ಬಿಕಾ. ೧೨೫). ೪. ಪೊದೆ; ಹೊದರು: ಸುತ್ತುಂ ನೀಳ್ದ ಪೊಱದುಂಗೆಯ ಜೊಂಪಮುಂ ವಿರಾಜಿಸೆ (ರಾಮಾಶ್ವ. ೩೦-೨೦). **ಜಂಪ₁: ೨.** ಹೆಣನ ಜಂಪ [ಪಾಠಾಂ. ಜಂತ, ಜೊಂಪ]ದ ನಿಟ್ಟೆಲುವಿನುಬ್ಬಣದ ತೊಂಗಲುಗರುಳ . . . ಸಂದಣಿಯ (ತೊರರಾ. ೬-೩೬-೪೯). **ಜಂಪು₂: ೧.** ಉಳ್ಳಿಗಳ ಜಂಪಂ[ಪಾಠಾಂ. ಪ್ರ]ಶಿರೋಮಾಲೆಗಳನಿಕ್ಕಿ ಉಳ್ಳಿಗಳ ಬಾಹುಬಳೆ ಕಂಠಮಾಲೆಯನಿಕ್ಕಿ (ಬಸರ. ೧೧-೦೨೦). **ಜೊಂಪು₂: ೧.** ಅರಿಸಿನಮಂ ಪೇಸದೆ ಪೂಸಿ ಕಟ್ಟಿ ಬಾಸಿಗಮಂ ಜೊಂಪಂ [ಪಾಠಾಂ. ಕೋಲಂ] ಪಿಡಿದು ಕುಣಿವರ್ (ಸಮುಪ. ೯-೯೩). **ಜೊಂಪೆ: ೧.** "ತೊಂಗಲ್ . . . ಜೊಂಪೆ ನೀಡುಂ ತೊಡಂಬೆಯುದು ಗುಚ್ಛ ತಾನಕ್ಕುಂ" (ಶಬ್ದಮಂ. ೨೫): ಪ್ರಭುಗಳು ಮುತ್ತಿನ ಜೊಂಪೆಗಳಿಂದ ಕೂಡಿದ ನವರತ್ನ ಖಚಿತವಾದ . . . ತೋಡವನ್ನು ಕುವರನ ಬಲಗಾಲಿಗೆ ಬಹುಮಾನಿಸಿದರು (ಶಾಂತಲಾ. ೨೦೭): ಬೀಗದ ಕೈ ಜೊಂಪೆಯನ್ನು ತೆಗೆದುಕೊಂಡು ಹೊರಡಿ (ಮುಸುಗ. ೦೨೪): ಶಂಖವೋ ಪದ್ಮವೋ, ಹುಲ್ಲೆಯೋ, ಹೂವಿನ ಜೊಂಪೆಯೋ ಅವುಗಳ ಕೈಯಲ್ಲಿ ಮೈಯಲ್ಲಿ ಇರುತ್ತದೆ (ಸೌಂದಸ. ೦೩४). **ಜೋಂಪ: ೧.** ದಂಪತಿಯಪ್ಪ ಜೋಂ[ಪಾಠಾಂ. ಜೊಂ]ಪಮಂ ಜಳಲವದಿಂದೆ ಸಿಂಪಿಸುತುಮಿರ್ಪ ಸುಧಾಕರಕಾಂತ ನಿರ್ಝರಾವಳಿ ಬಗೆಗೊಪ್ಪೆ (ಜಗವಿ. ೯-೯೨). ೨. ಮರುಸ್ಥಳದ ಮಾಳದೊಳ್ ನಡುಪಗಲ್ಪರಂ ಗ್ರೀಷ್ಮದೊಳ್ . . . ಬೇವವರ್ಗೆ ಜೋಂಪಮಿಮ್ಮಾವು ನಿರ್ಝರಾಂಬು ದೊರೆಕೊಳ್ವವೊಲ್ (ಆದಿಪು. ೦೩-೮೭). **ಜೋಂಪು₂: ೧.** ಕುಡಿವಡೆದ ಮಾಮರಗಳೊಪ್ಪಿಹ ಜೋಂಪು ಕುಸುಮಗಳ (ಅಂಬಿಕಾ. ೩-೩). 'ತೊಂಬೆ₁' ಪರಾ.

**ಜೊಂಪ₂** 'ಜೊಂಪು₁' ನೋ.

**ಜೊಂಪಡಿ,** ಜೋಪಡಿ (ನಾ). ಗುಡಿಸಲು; ಕುಟೀರ: ಗಂತ್ರಿಗಾರ ಜೊಂಪಡಿಯಲ್ಲಿ ಕರಿಯನು . . . ದಿನಗಳೆಯುತ್ತಿದ್ದನು (ಮುಂಗಾಮು. ೧೨೫): ಮುದಿಕೂಲಿಯು ನಮ್ಮನ್ನು ತನ್ನ ಜೊಂಪಡಿಯಲ್ಲಿ . . . ಕೂತುಕೊಳ್ಳಿಸುತ್ತಿದ್ದನು (ಕಲಕ. ૩૩). **ಜೋಪಡಿ:** ಆಹ್ವಾನಿತರ ಆನೆ, ಕುದುರೆ, ಒಂಟೆ, ಎತ್ತು ಇವುಗಳಿಗೆ ಜೋಪಡಿಗಳೂ, ಮೇವು, ನೀರು . . . ಎಲ್ಲಾ ಏರ್ಪಾಡುಗಳೂ ಸಮರ್ಪಕವಾಗಿ ಆದವು (ಶಾಂತಲಾ. ೯೯): ತೆಂಗುಗರಿ ಜೋಪಡಿಯ ಜಾಡಮಾಲಿಯ ಬದುಕು ತಪ್ಪಲಿಲ್ಲ (ನಡದಾ. I. ೩೩೨): ಮುರುಕಲು ಹುಲ್ಲು ಜೋಪಡಿಗಳೂ, ಬಡಕಲು ಎತ್ತುಗಳೂ, ಈ ಜನರ ವಿಶಿಷ್ಟ ಆಸ್ತಿ (ಹಂಜಪಂ. ೦४೫).
[ <ಪ್ರಾ. ಝುಂಪಡಾ./ಹಿಂ. ಝೋಂಪಡೀ, ಝೋಪಡೀ; ಮರಾ. ಝೋಂಪಡೀ ]

**ಜೊಂಪಲು** (ನಾ). ಗುಂಪು; ಸಮೂಹ: ಪೂರ್ಣಚಂದ್ರನ ಕಿರಣದ ಜೊಂಪಲು ಬಿದ್ದು ಪೂರ್ಣಪೂರ್ಣಗೌರವದಿಂದ ಪ್ರಕಾಶಗೊಂಡಾ ಸುಂದರ ರಮಣಿಯ ವದನವು (ಕೋಹಿನೂ. ४೦).
[ ಜೊಂಪ₁ + – ಅಲು (< – ಅಲ್₂) ]

**ಜೊಂಪಿಸು₁,** ಜೋಂಪಿಸು₁, ಝುಂಪಿಸು₁, ಝೊಂಪಿಸು₁, ಝೋಂಪಿಸು₁ (ಕ್ರಿ). ೧. ಮತ್ತಿನಿಂದ ಎಚ್ಚರ ತಪ್ಪು; ಅಮಲೇರಿ ಮೈಮರೆ: ಕರ್ಣದಲ್ಲಿ ಕೇಳಿ ಜೊಂಪಿಸಿ ತಲೆದೂಗುವುದು ಅದೇನು ಹೇಳಾ (ಮಾಧೂಕ. ೬೫): ಬಳಲುತ ಜೊಂಪಿಸುತ್ತವೆ ಬಳಿಯಲ್ಲೆದುವ ಮರುಳುತಂಡವ ಜಱುವುತ (ಕಾಶಿರಾ. ૩૯-೧೮). ೨. ತೂಗಾಡು; ತೊನೆದಾಡು; ಹೊಯ್ದಾಡು; ಜೋಲು: ಕಂಠದ ಬಿಣ್ಪಂ ಜೊಂಪಿಸುತ್ತುಂ ನಡೆದು ದಡವಿಯೊಳ್ ದೀರ್ಘದೇಹಂ ವರಾಹಂ (ಸೂಕ್ತಿಸು. ೩-೩೯): ಕಂಪಂ ಕೆಯ್ಕೊಳುತಂ ಮೆಯ್ ಜೊಂಪಿಸಿ ಬೀಳ್ವಳಿನೀ ನಿಕಾಯ ಸಹಿತಂ . . . ಸಂಪಿಗೆಯಲರ್ದೊಂಗಲಂ ರತೀಶಂಗಿತ್ತಂ (ಗಿರಿಕ. ೭-४): ನಿರ್ಜರೇಂದ್ರನ ಸೂನು . . . ಜೊಂಪಿಸುತೆ ಮೈಮಱೆದು ಬಿದ್ದನಿಳೆಯೊಳು (ಜೈಮಿಭಾ. ೨೫-೩೫): ಮುಂಜಾನೆಯಿಂದ ಸಂಜೆಯ ತನಕವೂ ಕಳ್ಳಿನ ಅಮಲಿನಲ್ಲೇ ಜೊಂಪಿಸತೊಡಗಿದ (ಒಡ್ಡಿಉ. ೦೨೩). ೩. ಮರುಳಾಗು; ಮೋಹಗೊಳ್ಳು; ಬಯಸು: ವಸ್ತ್ರದ ಹುಯ್ಲಿಗೆ ಹೊಪತ್ರಿಗಳ ಜಂಜಡಕೆ ಜೊಂಪಿಸದೆ (ಪ್ರಭುಲೀ. ೦೬-೦೫). **ಜೋಂಪಿಸು₁: ೧.** ಎಸಳ ಡಿಗೆತ್ತ

ತಾವರೆಗಳೊವರಿಯೊಳ್ ಸುಖನಿದ್ರೆಯಿಂದೆ ಜೋಂಪಿಸುವಳಿಯಂ (ವರ್ಧಪು. ೮-೩೩) ; ಜೋಂಪಿಸುತುಂ ಬಿಟ್ಕೊಳಿಱುತ್ತೆ ಹುಲ್ಲೆ ಕಳಿದತ್ತಾ ಭಾವದಿಂ ಜೀವಮಂ (ಕುಸುಮಾ. ೧೪-೫೦) ; ಜೊಂಪಿಸುತೆ ನಿದ್ದೆಗದ್ದುದು ಚೇತನಂ (ಶ್ರೀರಾಮಾ. ೪೭೮-೪). ಝುಂಪಿಸು₁ : ೧. ತಲೆದೂಗಿ ಝುಂಪಿಸಿ ಅಂತಃಕರಣ ಕದಡಿ ಆನಂದಿಸುವದು ಭಾವಭಕ್ತಿ (ವೋಲಮಾ. ೧೭-೬೩). ಝೊಂಪಿಸು₁ : ೧. ಮೆಯ್ ಮರವಡೆ . . . ಝೊಂಪಿಸೆ ನಿಡುಸುಯ್ಯೆ ಹೆಯಂ ಕರಂ ಜ್ವರಾರ್ತನೆನಿಕ್ಕುಂ (ಲೋಕೋಪ. ೯-೨೩೪). ೨. ನಡೆ ತಡವಾಗೆ ನುಣ್ಣುಡಿ ತೊದಲ್ಗೊಳೆ ಝೊಂಪಿಸೆ ಕೆಂಪನಾಳ್ದು ಕಣ್ಗುಡಿ . . . ಪೊಳಪೇಱೆ ಕದಂಪು (ಸೂಕ್ತಿಸು. ೧೩-೫) ; ನೋಟದ ಮೊನೆ ಮುಱಿದು ಝೊಂಪಿಸುತ ಮುಂದಣೆಗೊನೆದು ಬಿದ್ದನು (ಕುಮ್ಯಾ. ೩-೨೬). ಝೋಂಪಿಸು₁ : ೧. "ಝೋಂ[ಪಾಠಾಂ. ಜೊಂ]ಪಿಸಿತೆಂದು ಮಱವೆ" (ಕಶಸಾ. ೨೦-೪೨೨) ; ಇರುಳೋರಂತಿರೆ . . . ಝೋಂಪಿಸೆ ನಿದ್ರಾತುರನಾಗಿ ಪಕ್ಕ ಸಾರ್ವಂತಿರೆ ಸಾರ್ದಂ (ಕಾದಂಬ. ೧೬೨) ; ಕೆಟ್ಟರೆ ನಿದ್ರೆ ಝೋಂಪಿಸುತ್ತೊಲೆವಡೆ ಸನ್ನಿಪಾತ ವಿದಿತ ಜ್ವರಂ (ಕಲ್ಯಾಕ. ೩-೧೩). ೩. ತರುಣಿಗೆ ಝೋಂಪಿಸಿದೊಡೆ ಬೊಮ್ಮರಕ್ಕಸಂ ದಾರುವರ್ಮನಂ ಮುಳಿಸಿಂ ಸಂಹರಿಸಿದನಂ (ದಶಕು. ೪-೦೦೫). [ ಜೊಂಪು₁ + – ಇಸು₂ ]

**ಜೊಂಪಿಸು₂**, ಜಂಪಿಸು, ಜೊಂಬಿಸು, ಜೋಂಪಿಸು₂, ಝುಂಪಿಸು₃, ಝೊಂಪಿಸು₂, ಝೊಂಬಿಸು, ಝೋಂಪಿಸು₂ (ಕ್ರಿ). ೧. ನಡುಗಿಸು; ಕಂಪನಗೊಳಿಸು ; ಅಲುಗಾಡಿಸು : (+). ೨. ಇಡುಂಗು ; ತುಂಬು ; ಆವರಿಸು ; ವ್ಯಾಪಿಸು : ಜಯಸಬುದ ಜೊಂಪಿಸಿ[ಪಾಠಾಂ. ಝೋಂಪಿಸಿ]ದು ದಂಬರವ (ಕುವ್ಯಾಸ. ೧೩-೦೦) : ತನ್ನೊಳು ಜೊಂಪಿಸುವ ಮನವೆಂಬ ತುಂಬಿಯ ಭಾವ ಮಿಗೆ ತುಂಬಿ (ಪ್ರಭುಲೀ. ೦೭-೩). ೩. ನಡುಗು ; ಕಂಪಿಸು: "ನಡುಕಮನೆ ಜೊಂ[ಪಾಠಾಂ. ಝೊಂ]ಪಿಸಿತ್ತು" (ಶಬ್ದಮಂ. ೭೭); ಸಂಪತ್ತು ತೋಱೆ ತೊಲಗಿತೆಂದು ನೃಪನೆದೆ ಜೊಂಪಿಸೆ ಹಳವಳಿಸಿದರು (ಭರತ. ೭೧-೮೫). ಜಂಪಿಸು : ೧. ಅಗಳು ಮದಿಲುದ್ದದಿಂದಂ ಜಗವಂ ಜಂಪಿಸೂದೀಗಳೀತನ ಕೋಟೆ (ಮ್ಯಾಆರಿ. ೦೯೪೦, ೩೧-೪; ?). ಜೊಂಬಿಸು : ೨. ಅಂಬುಜಾಕ್ಷನ ಮುಡಿಯ ಸರಿಸಕೆ ಜೊಂಬಿಸಲು[ಪಾಠಾಂ. ಬೊಂಬಿಸಲು, ಝೊಂಬಿಸಲು]ಝಡಿತೆಯಲಿ . . . ಹೊಱಕೈಯಿಂದ ಝಾಡಿಸಿದ (ತೊರರಾ. ೩-೪-೨೫). ಜೋಂಪಿಸು₂ : ೩. ಜೋಂಪಿಪಂಗಂ ವಿಲುಪ್ತಾಕ್ಷರ ವಾಕ್ಯಂ . . . ಕರವೊಪ್ಪಲ್ ಪಾಡುತ್ತಾಡುತ್ತೆಸೆದುದಸದಳಂ ಮದ್ಯಪಾನಾಂಗ ನೌಘಂ (ಉದ್ಭಟ. ೫-೮೫). ಝುಂಪಿಸು₃ : ೨. ಜಗವಂ ಝುಂಪಿಸುತಿರ್ಪ್ಪ ಕೀರ್ತಿ ಮುಗಿಲಂ ಮುಟ್ಟಿರ್ಪ ಪೆಂಪು (ಎಕ. XI, ದಾವಣ. ೨೫-೭೭; 1224). ಝೊಂಪಿಸು₂ : ೨. ವಿಕ್ರಮದ ಝಳ ಜಗವಳುಕೆ ಝೊಂಪಿಸಿತು (ಕುವ್ಯಾದ್ರೋ. ೦೮-೩೦). ೩. ಕಡುಶೋಕದಿಂದೆ ತನು ಝೊಂಪಿಸಲ್ (ಜೈಮಿಭಾ. ೦೯-೫೮). ಝೊಂಬಿಸು : ೨. ಶೋಕಾಡಂಬರದ ಡಾವರ ವಿವೇಕವ ಝೊಂಬಿಸಿತು (ಕುವ್ಯಾಗ. ೪-೦೬). ಝೋಂಪಿಸು₂ : ೧. ದಿನ ದಿನಕೆ ಹೆಚ್ಚುತಲಿ ಮಾಯಾವನಿತೆಗಂ ಜವ್ವನ ಜಗವ ಝೋಂಪಿಸುತ (ಪ್ರಭುಲೀ. ೩-೩೩); ವಿರಾಧನು . . . ಝುಂಕಿಸುತ ಝೋಂ[ಪಾಠಾಂ. ಝೊಂ]ಪಿಸಿದನು ವಿದೇಹಜೆಯ (ತೊರರಾ. ೩-೦-೯). ೪. ನಿವಾರಿಸು ; ಕಳೆ : ಝಳವ ಝೋಂಪಿಸಿ ಬೀಸಿದವು ತಂಬೆಲರ ಬೀಸಣಿಗೆಗಳು (ಕುವ್ಯಾಆ. ೧೨-೦೫). [ ? + – ಇಸು₂./ಪ್ರಾ. ಝಂಪ=ಆಕ್ರಮಿಸುವಂತೆ ಮಾಡು ]

**ಜೊಂಪು₁**, ಜಂಪು₁, ಜಮ್ಮು, ಜುಮ್ಮು₁, ಜೊಂಪ₂, ಜೊಮ್ಮು₁, ಜೋಂಪು₁, ಜೋಮ್ಮು₁, ಝುಂಪು, ಝೊಂಪು, ಝೊಮ್ಮು₁, ಝೋಂಪು (ನಾ). ೧. ಮತ್ತು; ಅಮಲು; ಮೈಮರೆವು: ಪಿತನ ಕಣ್ಗಳ ಸೊಂಪು ಆತುರದೆ ಪಾಡುತಲಿಹರ ಜೋಗುಳ ಜೊಂಪು (ಬಸರ. ೧-೦೪೦) ; ಚಿತ್ತದ ಬವಣೆ ಬೀತುದು ಮನದ ಜೊಂಪಿಳೆ[ಪಾಠಾಂ. ಜೊಮ್ಮಿಳೆ]ದುದು (ಕುವ್ಯಾಕ. ೨೦-೧). ೨. ತೂಕಡಿಕೆ ; ಮಂಪರು : ಕಣ್ಣಿಗೆ ನಿದ್ದೆಯ ಜೊಂಪು ಹಿಡಿದಂತಾಗಿ ಅವಳು ಗಂಭೀರ ಭಾವ ತಾಳಿದಳು (ಪುನರು. ೨೦೩) ; ನಿದ್ದೆಯ ಜೊಂಪು ಹತ್ತಿದ ಹೊತ್ತಿಗೆ ರೈಲು ಬಂದಿತು (ಮುನಿಮಾ. ೬). ಜಂಪು₁ : ೨. ಜಂಪು ಹತ್ತುವುದು ಬೆಳತನಕ (ಕನ್ನಜಾ. ೦೯೪) ; ಕಣ್ಣಿಗೆ ನಸು ಜಂಪು ಬಂದಂತಾಗಿತ್ತು (ಆಕೋಕ. ೩೭) ; ದಣಿದಿದ್ದರಿಂದ ಅವನಿಗೆ ಚೆನ್ನಾಗಿ ಜಂಪು ಹತ್ತಿತು (ಸಮಜೀ. ೦೯೪). ಜಮ್ಮು : ೧. ಮದನ ವಿಕಾರದ ಜಮ್ಮು ಜಕ್ಕುಲಿಸಿ ಹಮ್ಮುದಂಬೋಗಿ (೧೧ಕ. ೭-೦೦ ಪ). ಜುಮ್ಮು₁: ೧. ಸೌಂದರ ಸಂಕಿಲೆಯರು ನಿದ್ರೆಗೆಯ್ದುರಾನಂದರಸದ ಜುಮ್ಮು ತಲೆಗೇಱೆ (ತ್ರಿಭುತಿ. ೨೪-೯). ಜೊಂಪ₂ : ೧. ಇರದೆ ಮನಕ್ಕೆ ಸೊಕ್ಕಡರೆ ಪೊಂಪುಳಿ ವಕ್ತ್ರದೊಳುಣ್ಮೆ ಜೊಂಪಮಾವರಿಸೆ . . . ಎಸೆದರಂಗನೆಯರ್ ಮಧುಪಾನಕೇಳಿಯೊಳ್ (ಕುಸುಮಾ. ೦೦-೧೬೦). ಜೊಮ್ಮು₁ : ೧. ಸುಗ್ಗವ್ವೆ ಕಡುಸುಖದ ಸೊಗಸಿನ ಜೊಮ್ಮು ತಿಳಿದು ಮೈ ಮುರಿದೆದ್ದಳು (ಸಿದ್ಧರಾ. ೧-೬೦); ಸುರೆಗುಡಿದು ಜೊಮ್ಮುಹತ್ತಿ ಕಣ್ಣರೆಮುಚ್ಚುತಂ (ಪಾಸೋಪು. ೦೩-೫೦). ೨. ಕುಸಿದು ಜೊಮ್ಮಿನ ಜಾಡ್ಯದಲಿ ಝೊಂಪಿಸಿದ ರಿಬ್ಬರು (ಕುವ್ಯಾಗ. ೯-೪). ಜೋಂಪು₁ : ೨. ಅರೆಗಣ್ಣು ಮುಚ್ಚಿ ನಿದ್ದೆಯ ಜೋಂಪವನ್ನು ಅನುಭವಿಸುತ್ತಾ (ನಡದಾ. III, ೦೪೩೩) ; ಸೀತಕ್ಕ ಮಲಗಿದ ಕೊಂಚ ಹೊತ್ತಿಗೆಲ್ಲ ಅವರಿಗೆ ಜೋಂಪು ಹತ್ತಿಬಿಟ್ಟಿತು (ಬಾಡಿಬ. ೦೨೭). ಜೋಮ್ಮು₁: ೨. ಕಣ್ಣಿಗೆ ಜೋಮು ಬರುತ್ತಿದೆ (ಕೊತಕಾ. ೮). ಝುಂಪು: ೨. "ನಿದ್ದೆ, ಝುಂಪು (ಝೋಂಪು), ಮರವೆ, ಮರಸು" (ಕಂಸುಕು. ೮೭). ಝೊಂಪು : ೧. ವಿಶ್ರಾಂತಿಯ ಝೊಂಪಿನಲಿ ಹುದುಗಿದ ಮಹೀಶನ ಕಂಡನು (ಕುವ್ಯಾಕ. ೦೭-೫). ಝೊಮ್ಮು₁ : ೨. ನಿದ್ರಾಸಮುದ್ರದ ಮುಳುಗಿ ಝೊಮ್ಮಿನ ಝಡಿಯಲಿ ಝೊಂಪಿಸಿದುದರೆಜಾವ (ಕುವ್ಯಾದ್ರೋ. ೦೭-೦೨): ನುಡಿ ತಡಂಬಡುಗುಟ್ಟಿ ಮಯ್ಯಲ್ಲಿ ಬೆಮರಿಡಲ್ ತಸು ಝೊಮ್ಮಿನೊಳ್ಸೇರಲು (ಆರಾಧ. ೧೦-೦೭). ಝೋಂಪು : ೧. ತನು ಬಳಲಿಕೆಯ ಭಾರಣೆಯ ಕಡುಜೋಡಿಸಿದ ಝೋಂಪಿನಲಿ (ಕುವ್ಯಾಆ. ೯-೫). ೨. ನವಕುಮಾರನು ಚಿಂತಿಸುತ್ತಿದ್ದ ಹಾಗೇ ಕಣ್ಣಿಗೆ ಝೋಂಪು ಹತ್ತಿತು (ಕಪಾಕುಂ. ೧೨). [ ದೇ.೫ ತಮಿ. ಚೊಮ್ಮು : ತೆಲು. ಜೋಮು ]

**ಜೊಂಪು₂** 'ಜೊಂಪ₁' ನೋ.

**ಜೊಂಪೆ** 'ಜೊಂಪ₁' ನೋ.

**ಜೊಂಬಿಸು** 'ಜೊಂಪಿಸು₂' ನೋ.

**ಜೊಕ್ಕಿರ್** (ಕ್ರಿ). ಕುಗ್ಗಿರಂ ; ಕುಂದಿರು : ಮೊಗದ ಸಿರಿ ಜೊಕ್ಕಿರ್ದುದಂ ಕಂಡು (ತುರಂಗ. ೭೪-೮). [ ಜೊಕ್ಕು + ಇರ್₁ ]

**ಜೊಕ್ಕು**, ಜೊಗ್ಗು₁ (ಕ್ರಿ). ಕುಗ್ಗು ; ಕುಂದಿಹೋಗು : ಕೌರವನ ಬಲದೊಳಗೆ ಸಿಕ್ಕಿದೆನು ಜೊಕ್ಕಿದೆ ಪುರಾಣಪುರುಷೋತ್ತಮ ಜನಾರ್ದನನೆ ರಕ್ಷಿಸೈ (ತುರಂಗ. ೨೪-೨೯). ಜೊಗ್ಗು₁ : ಎಲೆ ಮರುಳೆ ಜೊಗ್ಗಿದನ ತಂದು ಸೇನಾಪಟ್ಟವಂ ಕಟ್ಟಿ ಹರಿಸಿಸುವೆ (ತುರಂಗ. ೪೩-೦೭). 'ಚೊಕ್ಕು₁' ಪರಾ. [ <ಜರ್ಗು ]

**ಜೊಕ್ಕೆ** (ನಾ). (?) : ಮಿಕ್ಕ ಅವಲಕ್ಕಿಯುನು ತನ್ನಯ ಜೊಕ್ಕೆಯಿಕ್ಕುಡಿತೆಯಲಿ ಪಿಡಿದುರೆಯಕ್ಕರೆಯಿಂದಲಿ ಒಕ್ಕುಡಿತೆಯಾ ಮುಖಕೆ ನೆಗಹಿ (ಕುಚೇಲೋ. ೦೦೮). [ ? ]

**ಜೊಕ್ಕೆದ** (ನಾ). ಚತುರ (?) : ಋತುಪರ್ಣರಾಯನಿದ ನೋಡಿಕೊಂಡನು ಸಚಿವರ ಜೊಕ್ಕೆದರ ಕರೆದನಾಲೋಚನೆಗೆ (ತುರಂಗ. ೩೨-೦೦). [ ? ]

**ಜೊಕ್ಕೆಯ** 'ಚೊಕ್ಕೆಯ' ನೋ.

**ಜೊಗಟೆ** (ನಾ). ಸಿಪ್ಪೆ ; ಹಿಪ್ಪೆ : ಕಬ್ಬಿನ ಜೊಗಟೆಯು ಸಾಮಾನ್ಯವಾಗಿ ತನ್ನ ತೂಕದಷ್ಟೇ ರಸವನ್ನು ಇರಿಸಿಕೊಳ್ಳುವುದು (ಬಾಲಪ್ರ. II, ೬೫೦). [ ? ]

**ಜೊಗ್ಗು₁** 'ಜೊಕ್ಕು' ನೋ.

**ಜೊಗ್ಗು₂** (ನಾ). ಕುಗ್ಗುವಿಕೆ; ಕ್ಷೀಣತೆ : (ಪಿತ್ತಪ್ರಕೃತಿ ತನು) ನರೆ ಜೊಗ್ಗು ಹಸುರಾದ ನರೆ ಉಳ್ಳವನಾಗಿ . . . ಪಾನ ದ್ರವ್ಯಾಸನಗಳಲ್ಲಿ ಇಚ್ಛೆಯುಳ್ಳವನಾಗಿಹನು (ವೈದ್ಯಸಾ. I, ೦೬). [ < ಜೊಗ್ಗು₁ ]

**ಜೊಟ, ಜೊಟ್ಟ** (ನಾ). ತುಂಬ ಹುಳಿ ; ಬಹಳ ಹುಳಿ : "ಹುಳಿ ಜೊಟ್ಟ; ಜೊಟಜೊಟ ಹುಳಿ" (ಕಂನುಹು. ೦೦೪). **ಜೊಟ್ಟ:** ಮೇಲಿನ ಪ್ರಯೋಗವನ್ನು ನೋಡಿ. [ ? ]

**ಜೊಟಜೊಟನೆ** (ಅ). ಜೊಟಜೊಟ ಎಂಬ ಶಬ್ದದೊಡನೆ: ಜೊಟಜೊಟನೆ ಮೈಯಲ್ಲಿ ಕ್ರಿಮಿ ಸುರಿದ ಕಾಲಕ್ಕು (ವೋಕ್ಷದೀ. ೪೯-೩).
[ ಜೊಟಜೊಟ₀ + – ಅನೆ₁ ]

**ಜೊಟ್ಟ** 'ಜೊಟ' ನೋ.

**ಜೊಟ್ಟೆ** (ನಾ). ಗಟ್ಟಿಯಲ್ಲದುದು ; ಜೊಳ್ಳು : ಜೊಳ್ಳೋ ಜೊಟ್ಟೆ, ಟೊಕ್ಕನೆ ಪೊಟ್ಟೆ ಹುರುಳಿಲ್ಲದ ಬರಿ ಶಬ್ದವು ಹುಟ್ಟೆ (ಹರಿದಸ. ೬೫-೭).
[ ದೇ.॥ ಮಲ. ಚೊತ್ತ ]

**ಜೊಣೆ** 'ದೊಣೆ₁' ನೋ.

**ಜೊತಕ** 'ಜೊತ್ತಗೆ' ನೋ.

**ಜೊತಗ** 'ಜೊತ್ತಗೆ' ನೋ.

**ಜೊತೆ₁, ಜತೆ** (ನಾ). ೧. ಕೂಡಿರುವಿಕೆ; ಕೂಟ ; ಸಹವಾಸ : "ಜೊತೆ (ಜತೆ)–ಯುತ" (ತದ್ಭಕೋ. ೦೫). ೨. ಜೋಡು ; ಜೊತೆಯಾಗಿರುವ ಮತ್ತೊಂದು ಜೀವ, ವಸ್ತು ಮೊದಲಾದುವು: ಗೂಡಿನೊಳಗಿಹ ಹಣ್ಣುಗಿಳಿಗೊಂದು ಜೊತೆಯಿಲ್ಲ (ಚಂದ್ರಸ. ೬೨). ೩. ಎರಡರ ಜೋಡಿ ; ಯುಗಲ ; ಯುಗ್ಮ : ಈ ಹೃದಯಂಗಮವಾದ ಜೊತೆಯನ್ನು ಸಣ್ಣದೊಂದು ದೂರದರ್ಶಕದಲ್ಲಿ ನೋಡಿದರೆ (ಜ್ಯೋತಿರ್ವಿ.೬೮). ೪. ಜೋಡಣೆ; ಸಿದ್ಧತೆ; ತಯಾರಿ : ಫೌಜು ಜೊತೆಯಾಯಿತೋ ಇಲ್ಲವೋ (ಮುದ್ರಾಮಂ. ೦೬೨). **ಜತೆ:** ೨. ಹೂವಿಗೆ ಸಹ ಜತೆ ಅದ (ಗಂಗಾಸಾ.೦೦೯). ೫. ಸಮಾನ; ಎಣೆ : ದ್ವಾದಶಗತಿಯಲಿರುತಿಹ ಭಾನುವಿಗೆ ಸರಿ ಜತೆಯದಾರೆಂದ (ಗಗಣಾ. ೫-೪೫). ೬. [ಸಂಗೀತ] ಸುಳಾದಿಯ ನುಡಿಗಳಾದ ಮೇಲೆ ಬರುವ ಕೊನೆಯ ಎರಡು ಸಾಲು : ಜತೆ ಕೊಡಬ್ಯಾಡ ಕೊಳಬ್ಯಾಡ ಸಿರಿ ವಿಜಯವಿಠಲನ್ನ ಅಡಿಗಳರ್ಥಾ ನಿಮಿಷಾ ನಂಬಲು ಕೈವಲ್ಯ (ವಿಸಾಸು.೬-೭).

**ಜೊತೆಕಟ್ಟು** = ಸಹವಾಸಮಾಡು ; ಗೆಳೆತನಮಾಡು : ನೀನು ನನ್ನ ಜೊತೆಕಟ್ಟುತ್ತೀಯೋ ಇಲ್ಲವೋ ? (ರೂಢಿ). **ಜೊತೆಮಾಡು, ಜತೆಮಾಡು**= ೧. ಜೋಡಿಸು ; ಕೂಡಿಡು ; ಸಂಗ್ರಹಿಸು : ಮೃತವಪ್ಪುದೆಂದು ಕರುವಿಗೆ ಗೋವು ಹುಲ್ಮೆದೆಯು ಜೊತೆಮಾಡುವುದೆ ? (ಕಅಪು. ೫೦). ೨. ಕೂಡಿಸು; ಹೊಂದಿಸು: ಪ್ರಯಾಣಿಕರು ನಾಲ್ಕೈದು ಹಡಗುಗಳನ್ನು ಜತೆ ಮಾಡಿಕೊಂಡು ಪ್ರಯಾಣ ಮಾಡುವುದು ಪದ್ಧತಿಯಾಗಿದ್ದಿತು (ಕಪಾಕುಂ.೦); ಮನದ ಹಂಬಲು – ಕಿಟ್ಟಿಗೆ ಸುಸ್ವರೂಪಿ ಹೆಂಡತಿಯನ್ನು ಜತೆಮಾಡಿಕೊಟ್ಟು ತಾನು ಕಣ್ಮುಚ್ಚುವುದು (ಗಂಮಾಯಿ. ೦). [ < ಸಂ. ಯುತ ]

**ಜೊತೆ₂** (ಅ). ಸಹಿತವಾಗಿ ; ಸಂಗಡ : ನಿಪುಣಿಕೆಯ ಜೊತೆ ನಾನು ಬಾಗಿಲ ಬಳಿಗೆ ಬಂದೆ (ಬಾಣಅ. ೬೦); ವೆಂಕಮ್ಮ ಅಡಿಗೆ ಮನೆಯಲ್ಲಿಯೇ ಜನ್ನಯ್ಯನ ಹೆಂಡತಿಯ ಜೊತೆ ಮಲಗಿದರು (ಪದ್ಮಸ. ೨೩೨). [ < ಜೊತೆ₁ ]

**ಜೊತೆಗಾರ, ಜತೆಗಾರ** (ನಾ). ಜೊತೆಯಲ್ಲಿರುವವನು ; ಸಂಗಡಿಗ ; ಒಡನಾಡಿ : ಗಾನದ ಉತ್ಸಾಹದಲ್ಲಿ ಅವನಿಗೆ ದೇವರು ಒಡೆಯನೇ ಅಲ್ಲದೆ ಜೊತೆಗಾರನೇ ಆಗುವವನು (ಧರ್ಮಸಾ. ೮೩) ; ತಮ್ಮ ತಮ್ಮ ಜೊತೆಗಾರರೊಡನೆ ಮುಂದಿನ ಪದ್ಯಗಳನ್ನು ಹೇಳಿಕೊಂಡು (ಹುಟ್ಟುಹ.೨೯). **ಜತೆಗಾರ:** ನೀನೂ ನಿನ್ನ ಜತೆಗಾರನೂ ಕೂಡಿಬಂದರೆ ಹಣ ದೊರೆಯುವುದು (ಮುಂಬಯಿ. ೪-೭). [ ಜೊತೆ₁ + – ಗಾರ (< – ಕಾಱ) ]

**ಜೊತೆಗಾತಿ** 'ಜೊತೆಗಾರ್ತಿ' ನೋ.

**ಜೊತೆಗಾರ್ತಿ, ಜತೆಗಾತಿ, ಜತೆಗಾರ್ತಿ, ಜೊತೆಗಾತಿ** (ನಾ). ಜೊತೆಯಲ್ಲಿರುವವಳು ; ಸಂಗಾತಿ : ಆಕೆಯು ಜೊತೆಗಾರ್ತಿಯರು ಅನ್ಯೋನ್ಯ ಸುಖದಲ್ಲಿ ಸಂಸಾರ ಸಾಗುಹಾಕುತ್ತಿರುವ ಕಾಲ (ಜೀವನ. ೦೩). **ಜತೆಗಾತಿ :** ಸ್ವಲ್ಪ ಹೊತ್ತಿನಲ್ಲಿಯೇ ನವಕುಮಾರನು ಜತೆಗಾತಿಯನ್ನು ಕರೆದುಕೊಂಡು ಬಂದು ಊರನ್ನು ಸೇರಿದನು (ಕಪಾಕುಂ. ೪೨). **ಜತೆಗಾರ್ತಿ :** (೬). **ಜೊತೆಗಾತಿ :** ತನ್ನ ಮಗಳ ಜೊತೆಗಾತಿಯಾಗಿರಲೆಂದು ಅವಳನ್ನು ಆ ವಿಪ್ರನು ಮಥುರೆಗೆ ಕರೆದೊಯ್ದಿರಬೇಕೆಂದು ತಿಳಿಯಿತು (ತವನಿ. ೫೦) ; ಜೊತೆಗಾತಿಯಿಲ್ಲದೆ ತಾನೊಂಟಿಯಾಗಿದ್ದಾಗ ಅದನ್ನು . . . ಕಣ್ಣಿನ ತಣಿಯುವ ತನಕ ನೋಡುತ್ತಿದ್ದಳು (ಪುನರು. ೩೨೩).
[ ಜೊತೆಗಾರ + – ತಿ₁ ( < – ಇತ್ತಿ) ]

**ಜೊತೆಗೂಡು, ಜತೆಗೂಡು** (ಕ್ರಿ). ೧. ಕೂಡು ; ಸೇರು ; ಹೊಂದಿಕೊಳ್ಳು : ಜೊತೆಗೂಡಿ ಬಾಳಲಾಗದಿದ್ದರೆ ಮದುವೆಯಿಂದ ಪ್ರಯೋಜನವೇನು ? (ಪುನರು. ೨೫೮). ೨. ಸಂಭೋಗಿಸು: ಅಪೂರ್ವವಾಗಿ ಉಭಯಲಿಂಗಿಗಳು ಜೊತೆಗೂಡಿದ (Mate) ಗಂಡಿನ ರೇತ್ರಾಣುಗಳಿಂದ ಗರ್ಭಾದಾನ ಪಡೆಯುತ್ತವೆ (ಕೀಟಬಿ. ೦೦೫). **ಜತೆಗೂಡು:** ೧. ಹಕ್ಕಿಯು ಜತೆಗೂಡಿ ಹಾಡನು ಹಾಡುತ ಮುದವೂಡು ಮನಕೆ (ಇಂಚಾಪ. ೨೦೨–೪೮).
[ ಜೊತೆ₁ + ಕೂಡು₁ ]

**ಜೊತೆಗೊಳಿಸು** (ಕ್ರಿ). ಸೇರಿಸು ; ಕೂಡಿಸು ; ಹೊಂದಿಸು : ಸೈನ್ಯವನ್ನು ಜೊತೆಗೊಳಿಸಿ . . . ಯುದ್ಧಸನ್ನಾಹ ಮಾಡತೊಡಗಿದರು (ಪ್ರಮುಹ. ೯೬).
[ ಜೊತೆ₁ + ಕೊಳ್₁ + – ಇಸು₃ ]

**ಜೊತೆಬಿಡು, ಜತೆಬಿಡು** (ಕ್ರಿ). ಸ್ನೇಹವನ್ನು ಬಿಡು ; ಗೆಳೆತನವನ್ನು ತೊರೆ : ಜೊತೆ ಬಿಟ್ಟರೂ ವ್ಯಥೆ ಬಿಡಲಿಲ್ಲ (ಗಾದೆ) ; ಅವರಿಬ್ಬರೂ ಜೊತೆ ಬಿಟ್ಟಿದ್ದಾರೆ, ಅದಕ್ಕೆ ಮಾತನಾಡುವುದಿಲ್ಲ(ರೂಢಿ). **ಜತೆಬಿಡು:** ಅವರಿಬ್ಬರೂ ಯಾವಾಗಲೂ ಜತೆಬಿಟ್ಟಿಲ್ಲ (ರೂಢಿ). [ ಜೊತೆ₁ + ಬಿಡು₁ ]

**ಜೊತೆವಾಡು** (ನಾ). ಮೇಳದ ಹಾಡು : ಅಂಬಿಕೆ ಜೊತೆವಾಡಂ ತಾಂ ಬೆಂಬಿಡದಡಿಗಡಿಗೆ ಪಾಡೆ (ಹಾಲಾಸ್ಯ. ೦-೭-೦೯). [ ಜೊತೆ₁ + ಪಾಡು₂ ]

**ಜೊತೆಹಾಕು** (ಕ್ರಿ). ೧. ಇನ್ನೊಬ್ಬರನ್ನು ಜೊತೆಗೆ ಹೊಂದಿಸು: ಅವನೊಡನೆ ಕುಸ್ತಿಗೆ ಜೊತೆಹಾಕಲು ಯಾರೂ ಸಿಗಲಿಲ್ಲ (ರೂಢಿ). ೨. ಮದುವೆಮಾಡು:ಅವನಿಗೆ ಜೊತೆಹಾಕದಿದ್ದರೆ ಬುದ್ಧಿ ಬರುವುದಿಲ್ಲ(ರೂಢಿ).
[ ಜೊತೆ₁ + ಹಾಕು ( < ಪಾಯ್ಕು₁) ]

**ಜೊತ್ತಗ** 'ಜೊತ್ತಗೆ' ನೋ.

**ಜೊತ್ತಗಲ್** (ಕ್ರಿ). ಸಹವಾಸದಿಂದ ದೂರವಾಗು ; ಜೊತೆಬಿಡು : ಸುಂದರನೊಲವಿಂ ಜೊತ್ತಗಲದೆ ವರಸಹಾಯಮಂ ನಿಮಗೀವಂ (ಹಾಲಾಸ್ಯ. ೨-೦೪-೨೬). [ ಜೊತ್ತು₁ + ಅಗಲ್₁ ]

**ಜೊತ್ತಗಾಱ** 'ಜೊತ್ತುಗಾಱ' ನೋ.

**ಜೊತ್ತಗೆ, ಚೊತ್ತಿಗೆ, ಜತಿಗೆ, ಜತ್ತಿಗೆ, ಜೊತಕ, ಜೊತಗ, ಜೊತ್ತಗ, ಜೊತ್ತಿಗೆ** (ನಾ). ನೊಗವನ್ನು ಎತ್ತಿನ ಕೊರಳಿಗೆ ಸೇರಿಸಿ ಕಟ್ಟುವ ಹಗ್ಗ : "ಆಬಂಧಃ, ಯೋತ್ರಂ, ಯೋಕ್ತ್ರಃ ಎಂದೊಡೆ ಮಿಳಿ; ಜೊತ್ತಗೆ ಎಂದೂ ಎಂಬರು" (ನಾಚಿರಾ. ೬) ; "ಜೊತ್ತಗೆ – ಯೋಕ್ತ್ರಕ = ಮಿಳಿ (ಜತ್ತಿಗೆ, ಚೊತ್ತಿಗೆ)" (ತದ್ಭಕೋ. ೦೫) ; ಕೊರಳ ಜೊತ್ತಗೆ ಸುರುಚಿರ ಬೆನ್ನ ಮಿಣಿ ಮತ್ತುರದೊಳು ಪೊನ್ನ ಘಂಟೆಗಳು (ಅಂಜಹ. ೬–೪೮) ; ಬಿಗಿದ ಬಲುಹೋರಿಯ ಕೊರಳ ಜೊತ್ತ[ಪಾಠಾಂ. ತ್ತಿ]ಗೆಗಳಂ ಪಱಿ ಪಱಿ ನಿಮಿಷದಲಿ ಬಗೆಯದಿನ್ನಿರದೆಯ್ದಿಸುತ್ತಂ ಮುತ್ತಿ ಕೈಕೊಳ್ಳೆ (ಬಸಪು. ೫೬–೨೮) : ರಥಹಯದ ವಾಘೆಯ ಜೀನಗೆಲಸದ ಹಕ್ಕರಿಕೆಗಳ ನೊಗನ ಜೊತ್ತಗೆಯ ಭಾನುಸುತ ಮುಱಿಯೆಚ್ಚು (ಕುವ್ಯಾಕ. ೨೪–೪) ; ಹರಿದ

ಕೂರಂಬುಗಳು ಸಿಂಹಗಳೆರಡು ಜೊತ್ರಗೆಗಡಿಯೆ ಹರಿಗಳು ಹರಿದವತ್ತಿತ್ತಲು (ಸಾಳ್ವಭಾ. ೧೯-೧೭). **ಚೊತ್ತಿಗೆ:** ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. **ಜತಿಗೆ:** ಎತ್ತಿನ ಕೊರಳಿಗೆ ಕಟ್ಟಿದ್ದ ಜತಿಗೆ ಹರಿಯಿತು (ಕಪಪು. ೪-೧೭): ಬಂಡಿ ಹೊಡೆಯುವ ಒಕ್ಕಲಿಗ ಎತ್ತಿನ ಕೊರಳಿನ ಜತಿಗೆಗಳನ್ನುಚ್ಚಿ ಮೆಲ್ಲನೆ 'ನಗ'ವನ್ನು ನೆಲಕ್ಕಿಟ್ಟ (ಅರಿಯಾ. ೮). **ಜತ್ತಿಗೆ:** ಎತ್ತಿನ ಜತ್ತಿಗೆಯ ಬಿಟ್ಟು ಚಕ್ಕಡಿಯ ಭಂಡಿಗಳ ಈಸಿನ ಮೇಕು ಹಿಡಿದು ಮೇಲಕ್ಕೆ ಎತ್ತಿ (ಕೃಷಿಪ್ರ. ೩೩). **ಜೊತಕ:** ಹೆಗಲೊಳು ನೇಗಿಲು ಜೊತಕವ ಹೊತ್ತು ಮುಂದೆ ನಡೆಯುತಿರೆ ಜೋಡಿಯ ಎತ್ತು ರೈತನು ಗದ್ದೆಯ ಸೇರುವನು (ಕದಳಿ. ೭-೩೦). **ಜೊತಗ:** ನಾನು ಜೊತಗ ಮಿಣಿ ತೆಗೆದುಕೊಂಡು ಗದ್ದೆಗೆ ಹೋಗುತ್ತೇನೆ (ಗಂಗಾಳಿ. ೮೮). **ಜೊತ್ರಗ:** ಮಹಾಗಜದಂಗೋಪಾಂಗಗಳೋಳ್ಪೊಡರ್ಚಿದ ಮಿಳಿ ಪೊರಜೆ ಜೊತ್ರಗಂಗಳುಮಂ ನಿಲುನಿಲುಕಿ ಪೊಯ್ಪೊಯ್ದು ಕತ್ತರಿಸಿ (ಕಳನ್ನ. ೨-೩೮). **ಜೊತ್ತಿಗೆ:** ಹೊನ್ನ ನೇಣಿನ ಜೊತ್ತಿಗೆಯ ಪಿಡಿದಂದದಿಂದಡರಿದರು ಮಾವುತರು (ಸಂಭಪ. ೩೦-೧೧); ಕೊರಳಿಗೆ ಬೀಱುವ ಜೊತ್ತಿಗೆ ಮೆಱೆದು ವರ್ತಿಯಲಿ (ಕಂಸವಿ. ೧೧-೧೩೫). [ <ಸಂ. ಯೋಕ್ತ್ರಕ, ಯೋತ್ರಕ ]

**ಜೊತ್ರಾಯ** (ನಾ). ರುಜುವಾತು; ಪ್ರಮಾಣ: ಶ್ರುತಿಯ ಮಾತಂ ಧರೆಗೆ ಜೊತ್ರಾಯಗೈದು ತೋರಿದ (ವೆಂಕಾರಾ. ೨-೩೩-೩೪). [ಜೊತ್ತು$_1$+ಆಯ ?]

**ಜೊತ್ತಿಗೆ** 'ಜೊತ್ರಗ' ನೋ.

**ಜೊತ್ತಿಸು** (ಕ್ರಿ). ೧. ವಂಚಿಸು ; ಮೋಸಗೊಳಿಸು : ಎತ್ತಿಪವೆಂದು ದೇಗುಲವ ಸುತ್ತಿನ ಮಾತನೆ ತೋಱಿ ಲೋಗರಂ ಜೊತ್ತಿಸಿ ದ್ರವ್ಯಮಂ ಕಳೆದುಕೊಂಬರೊಳೀಂ (ಎಕ. VI, ಕಡೂರು.೦೨೭-೨೮; 1202). ೨. ಮರುಳು ಮಾಡು; ಮೋಹಗೊಳಿಸು: ಮುತ್ತಿನ ಪೊಸದುಡಿಗೆ ತಳಿರ ಸೋರ್ಮುಡಿ ಮನಮಂ ಪತ್ತಿಸಿ ಜೊತ್ತಿಸೆ (ಪಂಪಭಾ. ೫-೫೯); ನಿತಂಬಿನಿ ನಾನಾಪ್ರಕಾರದ ತತ್ತುಪಣಂಗಳಿಂ ಜೊತ್ತಿಸಿ ವಶೀಕೃತಂ ಮಾಡಿ (ಸುಕುಮಾ. ೭-೧೩ ವ); ಕೂಸುಗಳಂ ಮುದ್ದಾಡಿಸಿ ದೇಸಿಯ ಮಾತುಗಳನಾಡಿ ಪೆರ್ಚಿಸಿ ಪೆಱರಂ ಲೇಸಾಗಿ ತನಗೆ ಜೊತ್ತಿಸುವಾಶಾಪರಂ (ಧರ್ಮಾಮ್ಮ. ೫-೯೦).

[ ಜೊತ್ತು$_3$ + – ಇಸು$_3$ ]

**ಜೊತ್ತು$_1$**, ಜತ್ತು (ನಾ). ಜೊತೆ; ಜೋಡಿ: ಜವ್ವನದ ಜೊತ್ತೊಸವಿವೆಡಂಗಿನ ಬಿತ್ತೊ ನವಪರಿಮಳದ ಮುತ್ತೋ (ಗುರುಭ. ೭-೧೭). **ಜತ್ತು:** ಜತ್ತು ಹೆಂಡತಿ ಮೇಲೆ ಮತ್ತೆ ಸೂಳೆಯು ಏಕೆ (ಸರ್ವಜ್ಞ. ೧೯೪೭).

**ಜೊತ್ತಾಗು, ಜತ್ತಾಗು** = ಜೊತೆಯಾಗು ; ಜೋಡಿಯಾಗು : ಕೂಗಿ ಬೊಬ್ಬಿಱಿದರುಬ್ಬರ ಸಿಡಿಲ್ಕೋಟಿ ಜೊತ್ತಾಗಿ ಗರ್ಜಿಸುವಂತೆ ಬಲರು (ಮೋಹತ. ೩೫-೧೯); ಒತ್ತಿ ಹಿಡಿದ ಕಂಭ ವ್ಯರ್ಥವಾದ ಮೇಲಿನ್ನೇನಿನ್ನೇನು ಜತ್ತಾದ ಜನರೆಲ್ಲ ಜರಿದು ಪೋದ ಮೇಲಿನ್ನೇನಿನ್ನೇನು (ಪುರಂದ. ೪-೦೨೪-೨); ಮುತ್ತು ಮಾಣಿಕದ ರಥದ ಮೇಲೆ ಮುರಹರನು ಬಾಲೆ ಜತ್ತಾಗಿ ಕುಳ್ಳಿರೆ (ಶ್ರೀಕೃಪಾ. ೯೯); ರಂಗೊಂದು ದಂಗೊಂದು ಗುಂಗೊಂದು ಒಂದಕ್ಕೊಂದು ಹತ್ತಾಗಿ ಜತ್ತಾಗಿ ಸುಳಿಧಾಂಗ (ಸಹೀಗೀ. ೫೨-೭).

[<ಪ್ರಾ. ಜುತ್ತ. / ಸಂ. ಯುಕ್ತ ]

**ಜೊತ್ತು$_2$** (ನಾ). ೧. ನೆಲೆ; ಆಶ್ರಯಸ್ಥಾನ; ಗೊತ್ತು: ಬಹುವಿಧ ಕರ್ಮನಿಕರದ ಜೊತ್ತು ತನುವಿದನಾರು ನಂಬುವರವ್ವ (ನಿಘಾಗ. ೩-೦೪-೩೫); ಶಿವನ ಬಯಕೆಯ ಗೊತ್ತು ಶಿವನ ತನುವಿನ ಜೊತ್ತು (ಚಬಪು. ೩೪-೯). ೨. ಸಾಲು; ಶ್ರೇಣಿ: ಹೊಳೆಹೊಳೆವ ಬೈತಲೆಯ ಮುತ್ತುಗಳ ಜೊತ್ತುಗಳ ಫಳಫಳನೆ ಮೊರೆವಂದುಗಾವಳಿಯ . . . ಗಿರಿಜಾತೆ ರಂಜಿಸಿದಳು (ಚಬಪು. ೩೭-೨೩); ಜೊತ್ತಿನ ಸೂಳುಪಾಳಿಯೊಳಂಗನೆಯರ್ಸೈದಿದರು ಗೋಪತಿಯ (ಅಕ್ರೂಚ. ೪-೦೫). [ ? ]

**ಜೊತ್ತು$_3$** (ನಾ). ೧. ವಂಚನೆ ; ಮೋಸ ; ಕುಯುಕ್ತಿ ; ತಂತ್ರ : ನಿಮ್ಮ ಜೊತ್ತನ್ನನೇನಂ ಮಾಡಲಾರ್ಪುದು (ನಂಬಿರ. ೭-೮೩). ೨. ಮರುಳುಗೊಳಿಸುವಿಕೆ ; ಮೋಹಗೊಳಿಸುವಿಕೆ (?) : ಹುರುಡು ಹೋರಟೆ ಹೊತ್ತು ಜೊತ್ತು ಗನ್ನಂ ಗತಕ ಪರಿರಂಭಣಂ . . . ರತಿಪ್ರಾರಂಭದೊಳು ಪಸರಿಸೆ (ಹಡಿಕಾ. ೪-೩೫) ; ಪುರುಡುಂ ಪೋರಟೆವೆತ್ತು ಜೊತ್ತು ಗತಕಂ ಗನ್ನಂ . . . ಪಿರಿದುಣ್ಮಲ್ ವಧು ನಲ್ಲನೊಳ್ ನೆರೆವುತಿರ್ದಳು (ತ್ರಿಪುವಿ. ೨೪-೧೮೦). [ ? ]

**ಜೊತ್ತುಗಾಱ, ಜೊತ್ತಗಾಱ** (ನಾ). ಜೂಜಾಡುವವನು ; ದ್ಯೂತಕಾರ: ಸದರದೆ ದಾಯಮಂ ಪಿಡಿವ ವಿತ್ತಮನೊಡ್ಡುವ ಜೊತ್ತುಗಾಱರಿಂ (ದಶಕು. ೮-೮೯). **ಜೊತ್ತಗಾಱ :** ಗುಪ್ಪದಿ ಮಂಚಿಗನ ಜೊತ್ತುಗಾಱರು ಗಳ್ಳೆದೆ ಬಂದು (ಸಿಂಗಿರಾ. ೧೯-೧೧). [ <ಸಂ. ದ್ಯೂತಕಾರ ]

**ಜೊನ್ನ** (ನಾ). ೧. ಚಂದ್ರನ ಬೆಳಕು ; ಬೆಳುದಿಂಗಳು : ಒಂದೆಡೆಯೊಳ್ ನೆಲಸಿರ್ದ ಕಾಳಮುಮಂ ಜೊನ್ನಮುಮಂ (ಆಜಿಪು. ೯-೩೦) : ಪುದಿಯೆ . . . ಜೊನ್ನದ ಸಿರಿ ಕಾರ ಕಾಱಿರುಳ ಮೆಯ್ಸುರಿ ತಪ್ಪದೆನಲ್ ದಿಗಂತಮಂ (ಪಂಪರಾಮಾ. ೪-೪೪) ; ಇಳೆಯೊಳ್ ಪಾರ್ವತಿ ಜನಿಯಿಸೆ ಕಳೆಯೇಱಿದನಿಂದು ಜೊನ್ನಮಲರ್ದುದು (ಗಿರಿಕ. ೩-೪೭) ; ಥಳಥಳಿಪ ನಗೆಮೊಗದ ಬೆಳಗಿನ ಬೆಳಪ ಜೊನ್ನವ ಹಸರಿಸುತ (ಸಾಳ್ವಭಾ. ೩೨-೧೭) ; ಪೆಱೆಮೊಗದ ನಗೆ ಜೊನ್ನಮುಂ ಕೂಡಿ ಸುಯ್ಯೆಲರ ನಱುಗಂಪನೂಡಿ (ರಾಮಾಶ್ವ. ೯-೧೭). ೨.ಪಾಡ್ಯದಿಂದ ಪೌರ್ಣಿಮಿವರೆಗಿನ ಕಾಲ; ಶುಕ್ಲಪಕ್ಷ: ಅಟವಿಶ್ರೀಯುಂ ಜೊನ್ನದ ಪಾಡಿವದೊಳಂ ಕಾಲದಷ್ಟಮಿಯೊಳಮೈದು ವರ್ಷಂಬರಂ ನೋಂಪ ಪ್ರವೃದ್ಧ ಕಲ್ಯಾಣಮನೆತ್ತಿಕೊಂಡಳ್ (ಚಾವುಂಪು. ೮೭-೩೦) : ಸೌಮ್ಯಗಣಂ ಜೊನ್ನದೊಳನ್ಯರುಂ ಬಹುಳದೊಳ್ ನಿವ್ವಾಜದಿಂ ಬಲ್ಲಿದರ್ (ಜಾತತಿ. ೨-೧೧) ; ಜೊನ್ನದಂದಿನ ಪೆಱಿಯಂದದೆ ನೊಕ್ಕಮತ್ತರೋತ್ತರಮಾದಂ (ಎಕ. VII, ಶಿವಮೊ. ೧೧-೪೪ ; 1085 ?) ; ಮುದದಿಂದಾಶ್ವಯುಜದ ಜೊನ್ನದ ದಸಮಿಯೊಳಿಂದ್ರಧನುವಿನೊಳ್ . . . ಮಱಿಕೊಳ್ಳಂ (ಅಟ್ಟಮು. ೮-೧೭೧). [ <ಪ್ರಾ. ಜೋಣ್ಹಾ. / ಸಂ. ಜ್ಯೋತ್ಸ್ನಾ ]

**ಜೊನ್ನಪಾಡಿವ** (ನಾ). ಶುಕ್ಲಪಕ್ಷದ ಪಾಡ್ಯ; ಪ್ರತಿಪದೆ: ಅಟವಿಶ್ರೀಯುಂ ತನ್ನ ನೋಂಪಿಯ ಜೊನ್ನಪಾಡಿವದೊಳುಪವಾಸಂಗೆಯ್ದು (ಚಾವುಂಪು. ೫೭).

[ ಜೊನ್ನ + ಪಾಡಿವ ]

**ಜೊನ್ನರಸ** (ನಾ). ಬೆಳುದಿಂಗಳ ಒಡೆಯ ; ಚಂದ್ರ : ಜ್ಯೋತಿಸ್ಸ್ವರೂಪ ಜೊನ್ನರಸನ ಪಗಲಾಣ್ಮನಾತತತೇಜೋಭಿರಾಮ (ಭರತ. ೯೫-೧).

[ ಜೊನ್ನ + ಅರಸ$_1$ ]

**ಜೊನ್ನವಕ್ಕಿ** (ನಾ). ಬೆಳುದಿಂಗಳನ್ನು ಸೇವಿಸಿ ಜೀವಿಸುವುದೆಂದು ಭಾವಿಸಲಾದ ಹಕ್ಕಿ ; ಚಕೋರ : "ಜೊನ್ನವಕ್ಕಿ = ಚಕೋರಂ" (ಶಮದ. ಪರಿ. ೨) :"ತಣ್ಣದಿರವಕ್ಕಿ ಜೊನ್ನವಕ್ಕಿಯುಂ ಚಕೋರಂ" (ಶಬ್ದಮಂ. ೨೯) ; ಜೊನ್ನವಕ್ಕಿಗೆ ಬೆಳ್ದಿಂಗಳ ಸಾರಮಂ ಕಱೆಯುತುಂ . . . ಮೆಯ್ವೋಱಿದಂ ಚಂದ್ರಮಂ (ದಶಕು. ೮-೨೫೫) ; ಮುತ್ತಿನ ಪಳುಕಿನ ಧವಳವರ್ಣಗಳ ಬೆಳುದಿಂಗಳೆಂದಾಗ ಜೊನ್ನವಕ್ಕಿಗಳೈದಿ ನೆಲಸಿದುವತಿಮುದದಿಂದ (ಕಂಸವಿ. ೭-೩) ; [ ಜೊನ್ನ + ಪಕ್ಕಿ$_1$ ]

**ಜೊನ್ನೊಡಲ** (ನಾ). ೧. ಬೆಳುದಿಂಗಳು ಹೊಮ್ಮುವ ಒಡಲುಳ್ಳವನು ; ಚಂದ್ರ : "ಚಳಿಗದಿರಂ . . . ಜೊನ್ನೊಡಲನೈಕಿಲ್ವೆಳಗಂ ತಣ್ಣದಿರ ಮಂಜುಗ್ಗೆಯಂ ಚಂದಂ" (ಕವಿಕಂ. ೪೩) ; ಜೊನ್ನೊಡಲನ ತಿರಸ್ಕರಿಸುವ ಕೊರ್ವಳು ಕರ್ನೆಯ್ದಿಲ ಕಣ್ಣ ಕಾಂತೆ (ಮೋಹತ. ೪-೧೪) ; ಜೊನ್ನೊಡಲಂ ನಿಮಿರ್ಚಿದಪನಗ್ನಿಯ ತಣ್ಣದಿರಿಂದಂ (ಶಾಕುಂತ. ೩೨-೭). ೨. (?) : ಮುಗಿಲಂ ಕಂಡ ಜೊನ್ನೊಡಲನಂತೆ ಪೊಂಗಿ ಪೊಱಿಯೇಱಿ (ಉದ್ಭಟ. ೧೧-೫೫ ವ).

**ಜೊನ್ನೊಡಲನಳಿಯ** = ಚಂದ್ರನ ಸೋದರಳಿಯ ; ಮನ್ಮಥ ; ಕಾಮ : "ಅಲರ್ಗಣೆಯ ಜೊನ್ನೊಡಲನಳಿಯಂ ದಪ್ಪಕಂ ಮಯಣನೆಂಬಿವಿಂತೊಡನೆ ಮನ್ಮಥ ನಾಮವು" (ಶಬ್ದಮಂ. ೮).
[ ಜೊನ್ನ + ಒಡಲ್ + – ಅ$_7$ ]

**ಜೊನ್ನೊಡಲವಚ್ಚ** (ನಾ). ಚಂದ್ರನನ್ನೇ ಆಭರಣವಾಗುಳ್ಳವನು; ಶಿವ: ಮುದ್ದಿಸುವ ಜೊನ್ನೊಡಲವಚ್ಚಂಗೆ ಬೆಚ್ಚುತ್ತೆ ಮಣಿದು (ಕೊಟ್ಟೂಬ. ೧-೮೦). [ ಜೊನ್ನೊಡಲ + ವಚ್ಚ$_2$ ]

**ಜೊಬ್ಬ** (ನಾ). (?) : ಹಬ್ಬದಲು ದೇವತೆಗಳುಂಬರು ಜೊಬ್ಬದಲು ದಾನವರುಂಬರು ಸಬ್ಬದಿನದಲು ಮನುಜರುಂಬರದೆಂದು ಋಷಿ ನುಡಿದ (ಸಂಭಪ. ೫-೩೨). [ ? ]

**ಜೊಮ್ಮನೆ, ಚೊಮ್ಮನೆ, ಝೊಮ್ಮನೆ** (ಅ). ಆಯಾಸದಿಂದ ಕೂಡಿ ; ಬಳಲಿ; ಸೋತು: ಜೊಮ್ಮನೆ ಜೋವೇಱಿದ ತೋಳ್ಗಳಂ ನಿಮಿರ್ವವೋಲ್ (ಲೀಲಾವ. ೪-೧೧೧). **ಚೊಮ್ಮನೆ:** ಅಟ್ಟಳಿಱಿಂ ಚೊಮ್ಮನೆ ಜೋಲ್ದಂ ತಪ್ಪಿಕೊಂಡು (ಧರ್ಮಾಮೃ. ೬-೧೬೫). **ಝೊಮ್ಮನೆ:** ಮೂಡಿ ಮನ್ಮಥವಾರಿ ಮಿಗೆ ತುಳ್ಕಾಡಿ ಝೊಮ್ಮನೆ ಬೆಮರಿ ನಾಣ್ಗೆಟ್ಟೋಡಿ (ಸಾಳ್ವಭಾ. ೨೭-೫೪).

**ಜೊಮ್ಮನೆವೋಗು, ಜೊಮ್ಮನೆವೋಗು**=ಚಲನೆಯಿಲ್ಲದಿರು; ಜಡವಾಗು: ಮೆಯ್ ಪಸಿದು ಜೊಮ್ಮನೆ [ಪಾಠಾಂ. ಜೋಂಪನೆ] ಪೋದವುದು (ಪಂಪಭಾ. ೫-೭೧); ಆ ದಂಪತಿಗಳ್ ಜೊಮ್ಮನೆವೋದಂತಿರ್ದವರ . . . ಬೆಡಂಗಂ ನೋಡಿದರ್ (ಆದಿಪು. ೫-೬೫); ಚಕಿತವ್ಯಗಾಕ್ಷಿ ನೀನೆಳಸಿ ಕೆಮ್ಮನೆ ಜೊಮ್ಮನೆವೋಗಿ ಭಾವದಿಂ ಪ್ರಕಟಿಸಲೇಕೆ ಪಾಱುತನಮಂ (ಪುಷ್ಪಪು.೫-೩೪).
[ ಜೊಮ್ಮು$_1$ (<ಜೊಂಪು$_1$) + – ಅನೆ$_1$ ]

**ಜೊಮ್ಮಿಡು** (ಕ್ರಿ). ಆಯಾಸಪಡು ; ಬಳಲು : ಜೊಮ್ಮಿಡುತ ಜೋಲುತ್ತ (ಅನಾರ. ದೇ. ೧೮೨-೨೦). [ ಜೊಮ್ಮು$_1$ (<ಜೊಂಪು$_1$) + ಇಡು$_1$ ]

**ಜೊಮ್ಮು$_1$** 'ಜೊಂಪು$_1$' ನೋ.

**ಜೊಮ್ಮು$_2$** 'ಜುಮ್ಮು$_3$' ನೋ.

**ಜೊಮ್ಮುತಟ್ಟು** (ಕ್ರಿ).=ಜೊಮ್ಮುವಿಡಿ : ರಕ್ತಸಂಚಾರವಿಲ್ಲದಾಗ ಕೈಕಾಲುಗಳಿಗೆ ಜೊಮ್ಮತಟ್ಟುವಂತೆ (ಬೆಳುಮ. ೨೫೭).
[ ಜೊಮ್ಮು$_1$ (<ಜೊಂಪು$_3$) + ತಟ್ಟು$_1$ ]

**ಜೊಮ್ಮುಮೈ** (ನಾ). ಮರಗಟ್ಟಿದ ದೇಹ: ಶಕ್ತಿಸಂಚಾರವಿಲ್ಲದೆ ಇವನಿಗೆ 'ಜೊಮ್ಮುಮೈ' ಬಂದಿದೆ (ಬೆಳುಮು. ೨೫೭).
[ ಜೊಮ್ಮು$_2$ (<ಜುಮ್ಮು$_3$) + ಮೈ (<ಮೆಯ್) ]

**ಜೊಮ್ಮುವಿಡಿ** (ಕ್ರಿ). ಮೈಮರೆವನ್ನು ಹೊಂದು: ಅತಿಚಿಂತೆಯೊಳು ಮುಱಿದ ತನು ಜೊಮ್ಮುವಿಡಿದ ಪುರ್ಬುತಿಭಾರವಾಗಿ (ಹದಿಕಾ. ೬-೫೯).
[ ಜೊಮ್ಮು$_1$ (<ಜೊಂಪು$_1$) + ಪಿಡಿ$_1$ ]

**ಜೊಮ್ಮೆನ್ನು** (ಕ್ರಿ). ಜೊಮ್ ಎಂದು ಶಬ್ದಮಾಡು ; ನೊಣ, ಜೇನೊಣ ಮೊದಲಾದುವು ಗುಂಪಾಗಿ ಆವರಿಸುವಾಗ ಅವುಗಳ ರೆಕ್ಕೆಗಳಿಂದ ಶಬ್ದವುಂಟಾಗು : ಜೊಮ್ಮೆಂದು ನೊಣ ಮುತ್ತಿದುವು (ರೂಢಿ).
[ ಜೊಮ್$_0$ + ಎನ್ನು (<ಎನ್$_1$) ]

**ಜೊಮ್ಮೇಱು, ಜುಮ್ಮೇರು** (ಕ್ರಿ). ಮಂಕಾಗು; ಮೈಮರೆ: ತಾಱವಱಾಗೆ ಜಯಮಂ ಜೊಮ್ಮೇಱುವ ಟಂಟಣಿಸುವರಸನರಸನೆ ವಿರಸಂ (ಶಾಂತಿಪು. ೨-೪೦). **ಜುಮ್ಮೇರು:** ಸಂತಾಪದುರಿ ಪೆರ್ಚಿ ಹೃದಯ ತಲ್ಲಣಿಸಿ ಜುಮ್ಮೇರಿ (ನವಮೋ. ೨೫-೮೦). [ಜೊಮ್ಮು$_1$ (<ಜೊಂಪು$_1$)+ಏಱು$_1$ (<ಏಱ್$_1$)]

**ಜೊಯ್ಗಱಿ** (ಕ್ರಿ). (?) : ಕರಿಕೋಡನಗುಳ್ದ ಬೇತಾಳರ ಬಳಗದಂತೆ ನೆರೆದು ಜೊಯ್ಗಱಿವ ದಾರಿದ್ರ್ಯದಾರವೆಯಂತೆ ತಲೆದಱಿಕೊಂಡು ಜೋನೆಗರ ಜಂಗುಳಿಯಂತೆ (ವಾಗೀರ. ದೇ. ೨೫೪-೧೪). [ ಜೊಯ್$_0$ + ಕಱಿ$_1$ ]

**ಜೊಲ್ಲಯ** 'ಚೊಲ್ಲೆಯ$_1$' ನೋ.

**ಜೊಲ್ಲಿಕೆ** (ನಾ). ಒಂದು ಬಗೆಯ ಭಕ್ಷ್ಯ: ಸೇವಗೆಯ ಕರಮೆಸೆವ ಸಜ್ಜಿಗೆಯ . . . ಹೂರಣದ ಜೊಲ್ಲಿಕೆಯ ಕರಿಪುಗಳ (ಲಿಂಗಪು. ೬-೪೭). [ ? ]

**ಜೊಲ್ಲು, ಜಲ್ಲು$_3$** (ನಾ). ಬಾಯಿಂದ ಊರುವ ನೀರು ; ಲಾಲಾರಸ : ಜೊಲ್ಲು ಸುರಿವ ಮುದ್ದುಮೊಗದಲ್ಲಿ ನಗೆಯಾಂತು ಸೊಲ್ಲಿಸುವನು ತೊದಳ್ನುಡಿಯ (ಮೋಹತ. ೧೭-೬೯) ; ಮೊಳೆವಲ್ಲು ಜೊಲ್ಲುಂ ಪೊಳೆಯೆ ನಸುನಗುತ್ತುಂ ಬಾಲಲೀಲೆಯಂ ತೋಱಿಸಿದನು (ಜಬಪು. ೫-೪೦): ಮುಂದಲೆಯ ಕಂಪನಾಘ್ರಾಣಿಸಿ ತೊರೆದ ಜೊಲ್ಲ ಚೆಂದುಟಿಯ ಬಾಯ್ದೆಱೆಯನ್ನೆದೆ ಚುಂಬಿಸಿ (ಜೈಮಿಭಾ. ೧೮-೨೦): ಮಾಸಿದ ಸೀರೆ ಮಸಿಯ ತಿಲಕದ ಹೊಱಸೂಸುವ ಬಾಯ ಜೊಲ್ಲಿಂದ . . . ಮುದಿವೇಶಿಯರೆಡೆಯಾಡುತಿಹರು (ಕಂಠವಿ. ೬-೧೯೦). **ಜಲ್ಲು$_3$:** ಕೆಲರ ಬಾಯೊಳು ಜಲ್ಲು ಜೋರಿಡುತಾ ಬಲಿತ ದೃಷ್ಟಿಯ ತೆಗೆವ ಚೇತನಗೊಳದೆ (ಜಿನಭಾ. ೧೯-೩೨) ; ನಗುತೋಲಾಡುವರ ನೋಡುತ ಮಾನವೇಶರು ನಾಂಚಿ ಜಲ್ಲೊರಸಿ (ಜಿನಮು. ೪-೪೦).
[ ದೇ.೫ ತಮಿ. ಚೊಳ್ಳು; ತುಳು. ಜೊಲ್ಲೆ, ದೊಲ್ಲೆ, ದೊಳ್ಳೆ ; ತೆಲು. ಜೊಲ್ಲು, ಚೊಲ್ಲು ]

**ಜೊಲ್ಲುತನ** (ನಾ). ೧. ಜೊಲ್ಲಂ ಸುರಿಸುವಿಕೆ. ೨. (ಆಲಂ) ಲಂಪಟತೆ: ಶೃಂಗಾರಪ್ರಧಾನವಿದ್ದರೆ ಅದರ ಬಲಿಗೆ ಬೀಳದೆ ಎಸರೊಸೆವ ಜೊಲ್ಲುತನಗೆದ್ದು ರಸಿಕರಾಗಿ ಹಾಡಿದ್ದಾರೆ (ಕನ್ನಡಾ. ೯೭).
[ ಜೊಲ್ಲು + – ತನ ]

**ಜೊಲ್ಲುವಾಯ್, ಜೊಲ್ಲುವಾಯಿ** (ನಾ). ಜೊಲ್ಲು ಸುರಿಯುತ್ತಿರುವ ಬಾಯಿ : ತೆರೆ ಮುಸುಂಕಿದ ಮುಖಂ ಮುಱಿದ ಬೆನ್ ಜೊಲ್ಲುವಾಯ್ [ಪಾಠಾಂ. ಬೆನ್ನೊಲ್ಪಾಯ] ಪಿರಿದು ಕಂಪಿಸುವ ಪಲ್ (ಸಮ್ಯಕೌ. ೧೦-೪೩). **ಜೊಲ್ಲುವಾಯಿ:** ಮುಕ್ಕುಳಿಸುವ ಜೊಲ್ಲುವಾಯಿಗೆ ಕಡು ನೇಹಸೊಕ್ಕಾಂತು ಮುತ್ತನಿಕ್ಕುವಳು (ಮೋಹತ. ೧೭-೬೭).
[ ಜೊಲ್ಲು + ಬಾಯ್ ]

**ಜೊಲ್ಲುವಾಯಿ** 'ಜೊಲ್ಲುವಾಯ್' ನೋ.

**ಜೊಲ್ಲುಸುರಿಸು** (ಕ್ರಿ). ಬಾಯಲ್ಲಿ ನೀರಂ ಸುರಿಸು : ಸ್ವಾಭಾವಿಕವಾಗಿ ಆಹಾರ ಕಂಡೊಡನೆ ನಾಯಿಯೊಂದು ಜೊಲ್ಲುಸುರಿಸುತ್ತದೆ (ಶಿಕ್ಷದ. ೪೨೮).
[ ಜೊಲ್ಲು + ಸುರಿಸು ]

**ಜೊಲ್ಲೆ** 'ಚೊಲ್ಲೆಯ$_1$' ನೋ.

**ಜೊಲ್ಲೆಯ$_1$** 'ಚೊಲ್ಲೆಯ$_1$' ನೋ.

**ಜೊಲ್ಲೆಯ$_2$** (ನಾ). ಒಂದು ಸ್ಥಳದ ಹೆಸರು (?): ಪಾವುಳ ಪರಿವಾರದ ಮನೆಯುಂ ದೇವರೊಡಮೆ ನಿವೇದ್ಯಕ್ಕೆ ಜೊಲ್ಲೆಯದಲು ಗದ್ದೆ ಕೋಲ ಮತ್ತರು ೧ (ಸಾಂದೇಇ. ೩-೨೨ ವ ; 1047). [ ? ]

**ಜೊಲ್ಲೆಹ** 'ಚೊಲ್ಲೆಯ$_1$' ನೋ.

**ಜೊಸೆ** 'ಜೋಸೆ' ನೋ.

**ಜೊಳಜೊಳ** (ನಾ). ಒಂದು ಅನುಕರಣ ಶಬ್ದ; ಜೋಳವೆಲ್ಲಾ ಚೀಲದಿಂದ ಜೊಳಜೊಳ ಎಂದು ಸುರಿದುಹೋಯಿತು (ರೂಢಿ).

**ಜೊಳಿಪಿಳಿ** (ನಾ). (ಉಕ) ಸಡಿಲವಾಗಿರುವುದು ; ದೊಗಲೆ ; ಅಳ್ಳಕವಾದುದು : ಆಕೆಯ ಹೊಸಬಗೆಯ ಉಡುಪು ಬಹಳ ಜೊಳಿಪಿಳಿಯಾಗಿದೆ (ರೂಢಿ). [ ? ]

**ಜೊಳ್ಳು** 'ಜಳ್ಳು' ನೋ.

**ಜೊಳ್ಳುಗಾಳು** 'ಜಳ್ಳುಕಾಳಂ' ನೋ.

**ಜೊಳ್ಳೆ** (ನಾ). ತಿರುಳಿಲ್ಲದುದು ; ನಿಸ್ಸಾರವಾದುದು; ಜೊಳ್ಳಾದುದು. 'ಅಳ್ಳೆಜೊಳ್ಳೆತನ', 'ಅಳ್ಳೆಜೊಳ್ಳೆಯ' ಪರಾ. [ <ಜೊಳ್ಳು ]

**ಜೊಜ್** (ನಾ). ಒಂದು ಅನುಕರಣ ಪದ : ಜೊಜ್ಜೆಂಬ ಘುಮ್ಮೆಂಬ . . . ಭೋರೆಂಬ ಕೂರಸಿಗಳುರವಣೆಯ ದನಿಯಡಸುತಂ ಪುಟ್ಟೆ (ಇಹರ.ದೀ. ೪೦-೨೪) ; ಧಳಧಳಂ ಜೊಜ್ಜೆಂ[ಪಾಠಾಂ. ಜೋಜೆಂ]ಬ . . . ಧ್ವನಿಗಳವನಿಗೆ ಭಯವನೀವುತಿರೆ (ಸಾನಂಜ. ೮-೧೩).

**ಜೋ, ಜೊ** (ನಾ). ಮಕ್ಕಳನ್ನು ತೊಟ್ಟಿಲಲ್ಲಿಟ್ಟು ತೂಗುವಾಗ ಹೇಳುವ ಮಾತು; ಜೋಗುಳದ ಧ್ವನಿ: ತೂಗಿದರಚ್ಯುತ ಜೋ ಮಹಾತ್ಮ ಜೋ ಸದಮಲಬೋಧ ಜೋ . . . ಎನುತಂ ಲತಾಂಗಿಯರ್ (ಜಗವಿ. ೩-೨೮); ಜೋ ಸಂಪದೆ ಜೋ ವಿಶಾಲೆ ಜೋ ಶಿವೆ (ಗಿರಿಕ. ೩-೬೮) ; ಸಸಿಯ ಕೊರಗಿಸಿ ರಸವ ಹಿಳಿದುಕೊಂಡಿಳಿಗೊಗುವ ಹಸುಳೆ ಜೋ ಒಡಹುಟ್ಟಿದರ ನಗಲ್ವ ನಿರ್ವೋಹಿ ಜೋ (ಸಿದ್ಧರಾ. ೧-೫೯). **ಜೊ :** ಕಂದ ಜೊ ಸೋಮವಂಶಾಂಬುಧಿ ಪರಿಪೂರ್ಣೇಂದು ಜೊ . . . ಎಂದು ಪಾಡಿದರು (ಕಂಪವಿ ೪-೬೪).

**ಜೋಜೋ** (ದ್ವಿರುಕ್ತಿ): ಜೋಜೋ ಶ್ರೀಕೃಷ್ಣ ಪರಮಾನಂದ ಜೋಜೋ (ಪುರಂದ. ೧-೧೨೮ ಪಲ್ಲವಿ) ; ನಳಿನಲೋಚನ ಕಂದ ಜೋಜೋ ಚೆಲುವ ಚೆನ್ನಿಗ ಕಣುವೆ ಜೋಜೋ (ಸಾಳ್ವಭಾ. ೦೦-೨೫) ; ಜೋಜೋ ಮಹಾವೀರ ಶೈವೋದ್ಧರಣ ಕೀರ್ತಿ ಜೋಜೋ (ಚಬವು.೫-೨೯); ಜೋಜೋ ಮೂಲೋಕದ ಶಿರೋಮಣಿಯೆ ಜೋಜೋ (ನವಮೋ. ೦೫-೪೦).

[ ದೇ.ಶ ತುಳು. ತೆಲು. / ಮರಾ. ಜೋ ]

**ಜೋಂಕೆ** (ನಾ).(?): ಎಡಗದರಾತಿರಾಯ × × × ಪರಜೋಂಕೆಯಪ್ಪನಂ ಕಿಱಿಪಿ ಭುಜಾಸಿಯಂ ಜಸಮನೆಣ್ದೆಸೆಯಾನೆಯ . . . ಸಮಗ್ರ ಸಾಹಸಮನೀ ಧರೆಯೊಳ್ಕೆಱೆಯುತ್ತುಂ (ಎಕ. XII, ತುಮಕೂ. ೩೮-೧೩ ; 1160). [ ? ]

**ಜೋಂಟಿಗ** 'ಜಟ್ಟಿಂಗ' ನೋ.

**ಜೋಂಪ** 'ಜೊಂಪ$_1$' ನೋ.

**ಜೋಂಪಿಸು$_1$** 'ಜೊಂಪಿಸು$_1$' ನೋ.

**ಜೋಂಪಿಸು$_2$** 'ಜೊಂಪಿಸು$_2$' ನೋ.

**ಜೋಂಪು$_1$** 'ಜೊಂಪು$_1$' ನೋ.

**ಜೋಂಪು$_2$** 'ಜೊಂಪ$_1$' ನೋ.

**ಜೋಕಣ್ಣ** (ನಾ). ಒಬ್ಬಾತನ ಹೆಸರು: ಜೋಕಣ್ಣಂ ಮೂಲಣ್ಣಂ × × × ನಂಬ್ಯಣ್ಣರ ಸಿದ್ಧಿ ಪಡೆದರ್ (ಎಕ. VIII, ಸೊರಬ. ೫೦೦-೮ ; 958).

[ ಜೋಕ$_0$ + ಅಣ್ಣ$_1$ ]

**ಜೋಕರಿಸು** (ಕ್ರಿ). ಜೋತುಬೀಳು ; ಅಂಟಿಕೊಳ್ಳು (?): ಗುರು ಕೊಟ್ಟುದಿಲ್ಲ ನೀವಾದರು ವ್ರತವೆಂದು ಸ್ಮರಿಸಿತಿಲ್ಲರ್ತಿಯೊಳಾದ ಪರಿಣತಿ ಗೇತಕೆ ವ್ರತವ್ರತವೆಂದು ಜೋಕರಿಸಿಕೊಂಬಿರಿ ಬನ್ನಿರೆಂದಾ (ಭರಚ. ೪-೬೨): ಕೋಡಿ ಬಾಡಿ ಜೋ[ಪಾಠಾಂ. ಬೋ]ಕರಿಪೆನಗೆತ್ತ ನಿರ್ಜರೆಯ ಮಾತು (ಅಪಶ. ೨೦); ರೆಕ್ಕೆಗಳ ಕೆಡಹಿಯಿಳೆಗಾಕರಿಸಿ ಜೋಕರಿಸಿ ಖಂಡತುಂಡುಗಳ ಗೈದೆ (ಜಿನಮು. ೨೮-೩೫). [ ? + – ಇಸು$_3$ ]

**ಜೋಕಾಲಿ, ಜೋಕಾಲೆ** (ನಾ). ಉಯ್ಯಾಲೆ : ಬಾಲೆಯರು ಜೋಕಾಲಿ ಯಾಡುವ ಕಾಲದಲಿ ತಮ್ಮನಿಯರನು ಕಣ್ಣಾಲಿಯಿಂ ನೆರೆ ನೋಡಿ (ರಘುವಂ. ೯-೪೬) ; ಎಡಗಣ್ಣೂ ಬಲಗಣ್ಣೂ ಹಾರಿ ಹಾರಿ ಆಶೆ ನಿರಾಶೆಗಳ ಜೋಕಾಲಿಯನ್ನು ಜೀಕುತ್ತಿದ್ದುವು (ಮಾವಿತೋ. ೬); ಜೋಕಾಲಿಯ ಮೇಲೆ ಕುಳಿತುಕೊಂಡು ಸಮುದ್ರವನ್ನು ಹಾರುವಾಗ ಜೋಕಾಲಿಯ ಹಗ್ಗ ಹರಿದು, 'ಜೋ' ಎಂದು ನಡುಸಮುದ್ರದಲ್ಲಿ ಧುಮುಕಿ ಬಿಟ್ಟ (ಮುಂಗಾವು. ೯೭) ; ಅವನ ಜೀವನವೇ ಜೋಕಾಲಿಯಾಗಿ ತೂಗಹತ್ತಿತು (ಬಂಗಾಹೆ. ೨೭). **ಜೋಕಾಲೆ:** ಮಕ್ಕಳು ಜೋಕಾಲೆಯ ಮೇಲೆ ಕುಳಿತು ಆಡುತ್ತಿದ್ದಾರೆ (ರೂಢಿ). [ ? ]

**ಜೋಕಾಲೆ** 'ಜೋಕಾಲಿ' ನೋ.

**ಜೋಕಾಱ** (ನಾ).=ಜೋಕುಮಾರ ೧: ಮನೆಯೊಳ್ ಕಾಲ್ ನೆಲೆಗೊಂಡು ನಿಂದಱಿಯನೀ ಜೋಕಾಱಿಯಂತಿರ್ಕೆ (ಸೂಕ್ತಸು. ೮-೪೫೭). [ ? ]

**ಜೋಕು$_1$, ಜೋಕೆ$_2$, ರ್‍ಜೋಕು$_1$** (ನಾ). ೧. ಗೀತವಾದ್ಯವನ್ನು ಬಾರಿಸುವುದರಲ್ಲಿ ಒಂದು ಕ್ರಮ : ಮದ್ದಳೆಯಂ . . . ಜಾತಿ ಜೋಕು ತುಡುಕು . . . ಕೌತುಕಳಿಕೋತ್ತರಂಗಳಿಂ ಕೌತುಕದ ಬಾಜನೆಯೊಳೆಸಗಿದುವೆನಿಸಿ ಬಾಜಿಸುತ್ತಿರೆಯುಂ (ಶಾಂತೀಶ್ವ. ೭-೯೩ ವ). ೨. ಠೀವಿ ; ಬೆಡಗು ; ಡೌಲು : ಮಾತಾಡಿದೊಡವನ ಧನಾಕರ್ಷಣವನು ಮಾಳ್ಪ ಜೋಕಿನ ನಾಯಕಿಯರಿರ್ದರು (ಕಂಪವಿ. ೬-೧೦೮) ; ಈ ಹಾಡಿನಲ್ಲಿರುವ ಕಥೆ ಹೇಳುವ ಜೋಕು (ಕರ್ನಾಸಂ. ೪೩). ೩. ಮಲ್ಲಯುದ್ಧದ ಒಂದು ಬಗೆಯ ವರಸೆ (?): ಪೇತು ಸಾಧನೆಗಳ ಜೋಕಿನ ಪಟವನ್ನು ರೀತಿ ತಿಳಿದು ವರಸೆಗಳ ನೂತನ ಕತ್ತಿ ಕಠಾರಿ ದೊಣ್ಣೆಯ ಸಾಧಕೋತ್ತಮ ರಾಜಕುವರರು (ಕಂಪವಿ. ೬-೦೮). ೪. ತಂತ್ರ ; ಕಪಟೋಪಾಯ : (ಕ). **ಜೋಕೆ$_2$ :** ೧. ಗೀತಿ ಜತಿ ಜೋಕೆ ನಯಂ . . . ಎಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸವಂ (ಜಗವಿ.೫-೩) ; ತುಡುಂಕೊತ್ತು ಜೋಕೆ [ಪಾಠಾಂ. ಜಂಕೆ]ಯಂತರಿ ಜತಿ ರಿಗವಣೆ ಪಹರಣೆಯೆನಿಪ್ಪೀ ಪ್ರಬಂಧಮಂ (?) ಶ್ರೋತ್ರಬಂಧುವೆನೆ ಬಾಜಿಸಿದರ್ (ಪಾರ್ಶ್ವಪು. ೦೨-೨೦) ; ಜತಿ ಜೋಕೆ ತುಡುಕು . . . ಸಂಗತಿವಡೆಯೆ ವಾದನಕಳಾವತಿ ಬಾಜಿಸುತಿರ್ದಳಿಂತು ಮುರಜಮಂ(ಶಾಂತೀಶ್ವ. ೦೩-೨೨೭); ಜಾಣುಣ್ಮೆ ಜೋಕೆಯಿಂ . . . ಕೇಳಿಸಿದರವರು (ಜೈಮಿಭಾ. ೨೦-೫೭). **ರ್‍ಜೋಕು$_1$ :** ೨. ಆ ಕುಲವತಿಯು ಕಿರಿಯ ತನುಜೆಯನು ರವಿಸಿ ಬಹ ರ್‍ಜೋಕು ನೋಡೆಲೆ (ಚಂದ್ರಾವ. ೫೦-೪೦೫) ; ಉದಯರಾಗಗಳನ್ನು ಹೇಳ ತೊಡಗಿದೆ. ಮನಸ್ಸು ಅಷ್ಟು ರ್‍ಜೋಕಾಗಿತ್ತು (ಸುಳಿವು. ೦೦೫) ; ಇಂತಹ ನಾಟಕ ಎಲ್ಲಿ ನಡೆದರೂ ಎಷ್ಟು ಸಲ ನಡೆದರೂ ಆಡುವವರಿಗೆ ಬೇಸರ ವಾಗುವುದೇನು ? ಎಂದಿಗೂ ಇಲ್ಲ. ಅದೇ ಅದರ ರ್‍ಜೋಕು (ಮಲ್ಲಿ. ೧೨).

[ ? / ಅರ. ರ್‍ಜೋಕ್ ]

**ಜೋಕು$_2$, ರ್‍ಜೋಕು$_2$**(ನಾ). ೧. (ಉಕ)ಪೆಟ್ಟು; ಹೊಡೆತ: ಅವರಲ್ಲಿ ಒಬ್ಬ ದೊಡ್ಡ ಹುಡುಗ ಬಂದು ನನ್ನನ್ನು ಕೆಳಕ್ಕೆ ನೂಕಿಬಿಟ್ಟು ಓಡಿಹೋದನು, ನಾನು ಜೋಕು ತಿಂದು ಮುಂದಕ್ಕೆ ಮುಗ್ಗರಿಸಿ ಬಿದ್ದೆ (ಸುಮಚ. ೬೭); ಜಿರಕ್ ಜಿರಕ್ ಎಂಬ ಸೊಕ್ಕಿನ ಮಾತುಗಳೊಡನೆ ಆ ಗಿರಿಯ ಮೇಲೆ ಜೋಕು ಹೊಡೆಯುತ್ತಿತ್ತು (ಕಗದ್ಯ. ೨-೩೫). **ರ್‍ಜೋಕು$_2$ :** ೨. ಪ್ರತಿಸ್ಪಂದನ; ಚಲನೆ ; ಓಲಾಟ : ಮೊಣಕಾಲು ಕುಟ್ಟಿದಾಗ ಸರಿಯಾಗಿ ರ್‍ಜೋಕು ಹೊಡೆಯಿತು (ಮನೋನಂ. ೦೦೫). [ ←ಮರಾ. ರ್‍ಜೋಕ್ ]

**ಜೋಕುಗಾರ** (ನಾ). ಬೆಡಗುಗಾರ : ಒನಪುಗಾರ; ಆಡಂಬರದ ನಡವಳಿಕೆಯನ್ನುಳ್ಳವನು : (ಕ).

[ ಜೋಕು$_1$ + – ಗಾರ (< – ಕಾಱ) ]

**ಜೋಕುಗಾರ್ತಿ** (ನಾ). ಒನಪುಗಾತಿ ; ಆಡಂಬರದ ನಡವಳಿಕೆಯನ್ನುಳ್ಳವಳು : (ಕ). [ ಜೋಕುಗಾರ + –ತಿ$_1$ (< –ಇತ್ತಿ) ]

**ಜೋಕುಮಾರ, ಜೋಕಂವರ, ಜೋಕೊವರ, ಜೋಕೋರ** (ನಾ). ೧. ಒಬ್ಬ ದೇವತೆಯ ಹೆಸರು. ಉತ್ತರಕರ್ಣಾಟಕದ ಜನಪದದಲ್ಲಿ ಜೋಕುಮಾರನ ಕಥೆ ಪ್ರಚಲಿತವಿದೆ. ಮಣ್ಣಿನ ಬೊಂಬೆಯನ್ನು ಮಾಡಿ ಬುಟ್ಟಿಯಲ್ಲಿರಿಸಿ ಬೇವಿನ ಎಲೆಗಳಿಂದ ಅಲಂಕರಿಸಿ ಅದನ್ನು ಹೊತ್ತು ಮನೆಮನೆಗೆ ಸುತ್ತುತ್ತಾರೆ. ಅದಕ್ಕೆ ಅಂಬಲಿ ನೈವೇದ್ಯ ಮಾಡುತ್ತಾರೆ : ಚಾಮುಂಡಿಣಿ ಹಲ್ಲಿನ ಜೋಕುಮಾರ . . . ಜೊಳ್ಳು ಮತಿಯ ಕೊಡುವ ಜಂಪೆ ಜಡದೈವ (ವಿಸಾಸು. ೫೮-೨); ಜೋಕುಮಾರನೆಂಬ ಅಭದ್ರವಾದ ಗೊಂಬೆಯನ್ನು ಬುಟ್ಟಿಯೊಳಗೆ ಇಟ್ಟು . . . ಭಿಕ್ಷೆ ಬೇಡುತ

ತಿರುಗುವರು (ಕಥಾಗ. ೧೮೩); ನಾಳೆ ಬರದಿದ್ದರೆ? ಜೋಕುಮಾರನ ಆಣೆ (ರಕ್ತಧ್ವ. ೩೦೦). ೨. (ಆಲಂ) ಚೆಲುವ; ಸುಂದರ: ಈಗ ಈ ಜೋಡು ರಿಪೇರಿಯ ಜೋಕುಮಾರ (ವೃದ್ಧವಿ. ೧೧೪). **ಜೋಕುವರ:** ೧. ನಿಟ್ಟಸಿರ ಲಾಗದ ಮಾನಿ(ನ)ಸವಾಟಿಗ್ಗೆ ನಾಡೆ ಜೋಕು[ಪಾಠಾಂ. ಕೊ]ವರನ ಬಾಟ್ಕೆ ಲೇಸು ಗಡಂ (ಜೀವಸಂ. ೮-೬). **ಜೋಕೊವರ:** ೧. ದೇವತೆ . . . ತನ್ನ ಪೆಮ್ಮಗಂ ಜೋಕೊವರಂ[ಪಾಠಾಂ. ಜೋಕಾರಂ]ಸಾವಾಗ ಕಾಯಲಾಱದ ಕೀವಿಲು ಪೇಳ್ವೆಱರ್ಗೆ ಮಾಡಲಾರ್ಪಳೆ ಸುಖಮಂ (ಸಮಪ. ೯-೧೦೦); ಜೋಕೊ[ಪಾಠಾಂ. ಕು]ವರಂ ನೆಗಟ್ದಂ ಸುರಲೋಕವಿರುದ್ಧಮನೆ (ಪಾರ್ಶ್ವಪು. ೬-೬೩). **ಜೋಕೋರ:** ೧. ನವಪಂಚಮದೊಳ್ ಪುಟ್ಟಿದ ಕುವರಂ ಜೋಕೋರನಂತೆ ಪಲದಿವಸಮಿರಂ (ಜಾತತಿ. ೬-೬); ಬಲೆ ಜೋಕೋ[ಪಾಠಾಂ. ಕಾ]ರನಂತಿರೇಟು ದಿವಸದರಸುತನಮಂ ಬೇಡಿ ಪಡೆದೆ (ಅರ್ಥನೀ. ೬-೧೯ ಪ).

[ಜೋ ? + ಕುಮಾರ]

**ಜೋಕುವರ** 'ಜೋಕುಮಾರ' ನೋ.

**ಜೋಕೆ$_1$** (ನಾ). ೧. ಜೋಪಾನ; ಲಕ್ಷ್ಯ; ಜಾಗರೂಕತೆ: ದುರ್ಜನಿಕೆಯಂ ಬಿಟ್ಟು ನೀಂ ಜೋಕೆಯಿಂ ಸಜ್ಜನನ ಮಾರ್ಗದಿಂ ನಡೆಯಲಿಹಲೋಕ ಪರಲೋಕಸುಖ (ವೀಶೈಪು. ೭-೧೬-೪೫); ಜೋಕೆ ತಪ್ಪಿದ ಬಳಿಕ ಅರ್ಥ ವ್ಯರ್ಥ (ಪುರಂದ. ೦-೦೩೨-೪). ೨. ಸೊಗಸು; ಚೆಲುವು: ಜಯಯೆಂದು ಪೊಗಳುತಿಹ ಜೋಕೆಯಿಂ ಮೆಱೆವ ಜಗದೀಶನಂ ನಿಟ್ಟಿಸಿದನು (ಹಚಕಾ. ೧೧-೪೦); ನಾಟಕದ ಪಾತ್ರದ ಪೇರಣೆಯ ಜೋಳಿಗಳ ಜೋಕೆಗಳ ಪ್ರಕಟ ವೆಸೆಯಲು (ಬಸವು. ೪-೭); ಸಾರತರ ಸತ್ಕದ ಜೋಕೆ . . . ಎನಿಸಿರ್ಪುದು ಕಾಶಿಯ ದೇಶಂ (ವೀರವಿ. ೦-೪೭); ತೊನೆವುತಿಹ ಚಿತ್ರದ ಪತಾಕೆಗಳ ಜೋಕೆಗಳ ಕೋಟಾವಳಿಯುಮೆಸೆದುದು (ಚಬಪು. ೧೨-೨೦). ೩. ರೀತಿ; ಕ್ರಮ: ಮುನ್ನ ಬೇಂಟೆಯ ಜೋಕೆಯಱಿದ ಬೇಡರು ಮಡಿದ ಚನ್ನ ನಚ್ಚಿನ ನಾಯ್ಗಳಳಿದಳಲು ಬೆರಸಿ . . . ತಮ್ಮೊಳಗೆ ಕೈವೊಯ್ದು (ಹಚಕಾ. ೬-೨೪); ಏಕಾತ್ಮಪಕ್ಷದೊಳನೇಕ ಭೋಗಂ ಘಟಿಪ ಜೋಕೆಯಿಲ್ಲ (ಅನುಸಾ. ೩-೨-೧೧); ಏಕೆ ನೂತನ ಪರಿಯಿದೇತಱ ಜೋಕೆ (ಕೋಗಯು. ೯-೫೯). ೪. ಸಾಲು; ಶ್ರೇಣಿ: ತೆಕ್ಕೆಯಿಂದೊತ್ತರಿಪ ಜೋದ ಜೋಕೆಗಳಲ್ಲಿ ಇಂತು ನೆರೆದುದು ಚಾತುರಂಗಬಲ (ಇಹರ. ದೇ. ೩೮-೪); ಆ ಮೋಹರದ ಜೋಕೆಯ ಹಿಂದೆ ಲಕ್ಷ ಕಳಿಂಗಘಟೆಗಳು ಸಂದಣಿಸಿದವು (ಕುವ್ಯಾದ್ರೋ. ೨-೨೨); ಮೈಮಱೆದಳೊಂದೆರಡೆಂಬವಸ್ಥೆಗಳ ಜೋಡಣೆಯ ಜೋಕೆಗಳ. ರಚಿಡಿತೆಯ ರಘಾಡಣೆಯ ರೈಘುವ್ಮಿನಲಿ ಬಳಿಕೀಡಾಡಿದಳು (ತೊರರಾ. ೩-೪-೪). ೫. ಹಿಡಿತ; ವಶ: ಶಿವನ ಜೋಕೆಯನಱಿಯದೆ ಮಾತನಾಡುವ ಮಾತೆಲ್ಲವೂ ಮಾತಿನ ಮಾಲೆ (ಪದಗೋ. ೨೨೯-೦೦೨); ಜೋಕೆಯಾಗಿಹ ರೆಲ್ಲರೆನಗೆ ನಿನಗೆ ಚಿಂತೆಯೇಕೆ (ಕುರಾಸಾಂ. ೨೬-೦೯೫). ೬. ಸಿದ್ಧತೆ; ತಯಾರಿ: ನಿನಗಿದಿರಾಗಬೇಕೆಂದನೇಕ ಬಲವನು ಜೋಕೆಯ ಮಾಡಿ ಕೊಂಡಿರ್ದಪನು (ಕುರಾಸಾಂ. ೩೦-೨೨). ೭. ಕಣ್ಣರಿಕೆ; ಎಚ್ಚರಿಕೆ: ಮಂಗಳಮಯ ಮುಹೂರ್ತದ ಜೋಯಿಸರ ಜೋಕೆಯಲಿ ನಿರ್ಗಮ ನಿರತನಾದನು ಕೃಷ್ಣನು (ಕುವ್ಯಾ. ಉ. ೭-೪); ರಥರಾಜಿ ಮುಂಗುಡಿ ವರಿದುದವನೀಪತಿಯ ಚೂಣಿಯ ನೃಪರ ಜೋಕೆಯಲಿ (ಕುವ್ಯಾದ್ರೋ. ೧-೪೬). ೮. ಚಾತುರ್ಯ; ಕೌಶಲ: ಜೋಕೆ ಜವಗೆಡೆ ಮುಱಿವಡೆದು ಬಲದಾಕೆವಾಳರು ಸರಿಯೆ (ಕುವ್ಯಾಕ. ೨-೯); ಈ ಕುಮಾರರೊಳಗೆ ನೀನೇ ಜೋಕೆಯುಳ್ಳವನಹೆ (ಕುವ್ಯಾಕ. ೦೯-೩೯). ೯. ಎಚ್ಚರಿಕೆಯನ್ನು ಸೂಚಿಸುವ ಒಂದು ಪದ: ತಿಳಿವನು ಕೊಡಲಾರದಾತನು ಜಗದೊಳು ಕೇಡಿಗನಾದಾನು ಜೋಕೆ (ಇಂಚಾಪ. ೦೯೨-೪೭); ಜೋಕೆ ಮೈಮೇಲೆ ಎಚ್ಚರವನ್ನಿಟ್ಟುಕೊಂಡು ಮಾತಾಡು (ಅಮಗಾಂ. ೧೪).

**ಜೋಕೆಮಾಡು** = ೧. ಜೋಪಾನ ಮಾಡು; ಕಾಪಾಡು; ರಕ್ಷಿಸು: ಜೋಕೆಮಾಡದೆ ಮೇಲ್ವಾಯಿದು . . . ಪಱಿದಿಡಲು (ಅಂಜಿಚ. ೬-೧೦೮); ನಿಮ್ಮತಾಯಿಯೇ ನನ್ನ ಮಕ್ಕಳನ್ನು ಜೋಕೆಮಾಡಿದಳು (ಮುಂಬಯಿ. ೪-೧೯೬). ೨. ಎಚ್ಚರಿಕೆಯನ್ನು ತೆಗೆದುಕೊಳ್ಳು: ಜೋಕೆಮಾಡಿ ಪೋದವು ಹಂಸೆಗಳು ನವುಗೇಕೆ ನಡೆಯ ಸೊಬಗೆಂದು (ಅಂಜಿಚ. ೯-೧೬೭). ೩. ಸಿದ್ಧ ಪಡಿಸು; ಏರ್ಪಾಟು ಮಾಡು: ಜಲಕೇಳಿಗೀಸರಸಿಗಳ ಜೋಕೆ ಮಾಡು ವುದು (ಪದ್ಮರಾ. ೮-೪೩); ತೊಳಗುವಾಭರಣವ ಜೋಕೆಮಾಡುವ ಜಾಣ (ಕಂನವಿ. ೨೫-೭೪). [ದೇ.II ತುಳು. ಕೊಡ. ಜೋಕೆ; ತೆಲು. ಜೋಕ]

**ಜೋಕೆ$_2$** 'ಜೋಕು$_1$' ನೋ.

**ಜೋಕೆ$_3$** (ನಾ). ನೆಯ್ಗೆಯ ಸರಕು: "ಜೋಕೆ-ನೇಕಾರರ ಮಗ್ಗದ ಮಾಲು" (ಜಾನಕೋ. ೬೦). [?]

**ಜೋಕೆಗಾಱ** (ನಾ). ಜೋಪಾನಮಾಡುವವನು; ರಕ್ಷಕ: ಬೋಧೆ ಗಾಱರ ಜೋಕೆಗಾಱನು ಜಾಣನಹನೆಂದ (ನಿಭಾಗ. ೩-೮-೩೬).

[ಜೋಕೆ$_1$ + -ಕಾಱ]

**ಜೋಕೆಗುಟ್ಟು** (ಕ್ರಿ). ಎಚ್ಚರಿಕೆಯನ್ನು ಕೊಡು; ಎಚ್ಚರಿಸು: ಅರಸನ ಸಮ್ಮುಖ ಬಂತು ಎಂದು ಅವರವರೆ ಪರಸ್ಪರ ಜೋಕೆಗುಟ್ಟಿದರು (ಮಾಮಲ್ಲ. ೧೧). [ಜೋಕೆ$_1$ + ಕುಟ್ಟು$_1$]

**ಜೋಕೆಗೊಳ್** (ಕ್ರಿ). ಸಾಲುಗೊಳ್ಳು; ಓರಣವಾಗಿರು: ಆ ಕೋಟೆಯಡಿ ಮುಟ್ಟಿ ಕೆಳಗಣ ರಜತಾದ್ರಿಗೇಕಹಸ್ತವ ಬಿಟ್ಟು ಮೇಲೆ ಜೋಕೆಗೊಂಡ್ಯೆದು ಸಾವಿರಮಾರಿನೆಡೆಯೊಳನೇಕ ಸೋಪಾನಗಳಿಹುವು (ಭರಚ. ೬೭-೯).

[ಜೋಕೆ$_1$ + ಕೊಳ್$_1$]

**ಜೋಕೆವಿಡಿ** (ಕ್ರಿ). ೧. ಎಚ್ಚರಿಕೆಯನ್ನು ತೆಗೆದುಕೊಳ್ಳು: ಬಹಳ ಜೋಕೆ ವಿಡಿದು ಕೈಯಲ್ಲಿ ಪಂಜು ಹಿಡಿದುಕೊಂಡು ಸಾಗುತ್ತ . . . ತಲುಪಿದನು (ಇಪ್ಪಕ. ೩೪೨). ೨. ಅಚ್ಚುಕಟ್ಟಾಗಿರು; ಸೊಗಸಾಗಿರು: ಜೋಕೆ ವಿಡಿದು ನೀಡುವೆಳೆಯ ಘಳಿಗೆಯ ಪರಾಕಿನೊಳಗೆ ಕೈಕೊಳುತ ಏಕೆ ನುಡಿ ಯನೋ ಇನ್ನೊಮ್ಮೆಯೆಂಬಂತೊಂದು ತೂಕದೊಳೆಸೆದನು (ಭರಚ. ೦-೩೮).

[ಜೋಕೆ$_1$ + ಪಿಡಿ$_1$]

**ಜೋಕೆವೆಱು** (ಕ್ರಿ). ಚಾತುರ್ಯದಿಂದ ಕೂಡಿರು; ಕೌಶಲ್ಯದಿಂದ ಕೂಡಿರು: ನಾಕನಾಯಕನ ನರ್ತನದ ನೀಱೆಯರ ನಿರಾಕರಿಸುವ ನೃತ್ಯ ದಿಂದ ಜೋಕೆವೆತ್ತೆಸೆವ ನಚ್ಚಣಿಯರು (ಕುರಾಸಾಂ. ೫-೨೪).

[ಜೋಕೆ$_1$ + ಪೆಱು$_1$]

**ಜೋಕೊವರ** 'ಜೋಕುಮಾರ' ನೋ.

**ಜೋಕೋರ** 'ಜೋಕುಮಾರ' ನೋ.

**ಜೋಗ$_1$, ಜೋಗು$_3$** (ನಾ). ೧. ತಪಸ್ಸು; ಧ್ಯಾನ: ದೇವರಂ ಬಂದಿಸಿ ನಿಯಮಂಗೆಯ್ದು ಜೋಗ ಭಕ್ತಿಯಿಂದಿರ್ದರ್ (ವಡ್ಡಾರಾ. ೦೫೬-೮); ನಿಜಾರಿ ತಳೆ[ಯ]ಲು ಹೃದ್ರೋಗವಂ ಜೋಗವಂ ತೆತು ಪುತ್ರಂ ನೆಗಳ್ದಂ (ಕಇಅ. ೭೪-೦೨-೮; 1170); ಜೋಗಗೆಳೆಯರಣ್ಣರೇಱಿವರ್ಪನ್ನಮಱಿವಗೆ ಗಳಿಱಿವೋದ ನಿಚ್ಚಣಿಗೆಯೆಂಬಂತಿರಿರ್ಬದಿಯೊಳಮೆಲ್ಲಗಳ ಸಾಲ್ಗಳ್ ತೋಱಿ (ರಾಮಾಶ್ವ. ೪೦-೨೬). ೨. ಸಂಪರ್ಕ; ಹೊಂದಿಕೆ; ಸೇರಿಕೆ. ೩. ಉಪಯೋಗ. 'ಜೋಗಯಿಸು' ಪರಾ. ೪. ದೋಣಿ; ನಾವೆ: "ಜೋಗಂ ಪರೀತಂ ನಿಮಂಜರಂ ದುಗ್ಗಿಯೋಡಂ ದೋಣಿಯೆಂದೆನಲ್ ನಾವೆಯಕ್ಕುಂ" (ಮಂಗರಾ. ೦೨೦-೪). **ಜೋಗು$_3$:** ೧. ಎನ್ನ ದ್ರೋಹ ಮರಸನ ಕಿವಿಯಂ ಮುಟ್ಟದಂತಾಗೆ ಮಾಟ್ಟಿನೆಂದುಪಾಯದಿಂ ಜೋಗಂ ಕೈಕೊಂಡು (ಧರ್ಮಾಮೃ. ೯-೦೫೪). 'ಜೋಗುಗೊಳ್' ಪರಾ. ೪. ಸಂಬುಕ ಪಡಗು ಜೋಗು[ಪಾಠಾಂ. ೧]ಗಳಿಗೆ ಸುಂಕವ ಕೊಂಬ ರಾಜೇಂದ್ರನ (ಕುರಾಸಾಂ. ೧೧-೨೦). [<ಸಂ. ಯೋಗ]

**ಜೋಗ$_2$** (ನಾ). ಒಂದಂ ಬಗೆಯ ವಸ್ತ್ರ: ಚೀನದ ಧವಳಪಟ್ಟದ ಜೋ[ಪಾಠಾಂ. ಜೊಂ]ಗದ ದೇವಾಂಗದ ಸಕಳಪಟ್ಟೆಗಳುಮಂ . . . ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪-೩೪ ವ). [?]

**ಜೋಗ$_3$** 'ಜೂಗ$_2$' ನೋ.

**ಜೋಗಂಬೋಗು, ಜೋಗವೋಗು** (ಕ್ರಿ). ಮೈಮರೆ ; ಪರವಶವಾಗು: ಪೊಸದಳಿರ ಪೊಸಸಿರಿಯ ಭಾರದಿಂ ಜೋಗಂಬೋದಂತೆ ಮಲಂಗಿದ ಜಾಗಂಗಳುಮಂ (ಲೀಲಾವ. ೧೧-೫೮ ವ): ತೂಗಾಡುತ ಮಡಕೆಗಳಂ ಬಾಱಿಸಿ ಜೋಗಂ[ಪಾಠಾಂ. ಜಾಗಂ]ಬೋಗುತ್ತುಂ (ಕುಂಬಜ.ಹ. ೨೫೫-೧೨): ಪಾರ್ವನೆರ್ದೆಯೊಳ್ ಕಿರ್ಚು ಬಿಟ್ಟಂತಾಗೆ ಜೋಗಂಬೋಗಿ (ಜೀವಸಂ. ೩೯-೨೪ ವ) ; ಆಗುಳಿಸುವ ತಳಮಳಿಸುವ ಜೋಗಂಬೋಪಲಸುವಗಿವ . . . ಕಂಟಳಿಸುವಖಿಳವಿಕೃತಿಗೆ ಸಲ್ಲಂ (ಪುಷ್ಪಪು. ೧೨-೮೪). **ಜೋಗವೋಗು:** ಸೂಗ್ರುರಿಸಿ ರ್ಘೂಮ್ಮಿನಲಿ ಮುಂದಕೆ ಜೋಗವೋದನು ಸಾರಥಿಯ ಕೈಲಾಗಿನಲಿ ತಿರುಗಿದನು (ಕುವ್ಯಾಕ. ೪-೦೫).

[ ಜೋಗು$_1$ (<ಜುಮ್ಮು$_3$) + ಪೋಗು$_1$ ]

**ಜೋಗಣೆ (?)** (ನಾ). (?): ಒಂದು ಫಲವೆನಿಸಿದಡಿನಿವಣ್ಣಿಂದ ಕುಂದಿಲ್ಲದಿನ ಜೋಗಣೆಯುಯೆಂದು ತಾಳಿದುದಿಲ್ಲವೆಂಬಂತೆ ಹೊಂಬಾಳೆ ಮರದ ಸಾಲಿನಿಂದೆಸೆಯೆ (ತರ್ಕಕಾ. ೧-೪೬). [ ? ]

**ಜೋಗತಿ** 'ಜೋಗಿತಿ' ನೋ.

**ಜೋಗಪ್ಪ** (ನಾ). ಜೋಗಿತಿಯರ ಸಂಗಾತಿಯಾದವನು : (+).

[ ಜೋಗ$_1$ + ಅಪ್ಪ$_1$ ]

**ಜೋಗಬ್ಬೆ**(ನಾ).ಒಬ್ಬಾಕೆಯ ಹೆಸರು: ಪೆರ್ಮ್ಮಾಡಿಯ ಸುಳಿ ಜೋಗಬ್ಬೆಯ ಮಗಳ್ . . . ಚಾವುಂಡಬ್ಬೆ (ಮೈಆರಿ. ೦೯೩೦, ೧೪-೬ : 882).

[ ಜೋಗ$_0$ + ಅಬ್ಬೆ$_1$ ]

**ಜೋಗಮರಸ** (ನಾ). ಒಬ್ಬಾತನ ಹೆಸರು: ಶ್ರೀಮನ್ಮಹಾಮಣ್ಡಳೇಶ್ವರಂ ಜೋಗಮರಸರ್ಮ್ಮಂಗಳವೇಡದೊಳು ರಾಜ್ಯಂಗೆಯ್ಯುತ್ತುಮಿರೆ (ಕಇ. II, ೧೧-೧೨ : 1092). [ ಜೋಗಮ$_0$ + ಅರಸ$_1$ ]

**ಜೋಗಮಾಯಿ** (ನಾ). ಒಬ್ಬ ದೇವತೆಯ ಹೆಸರು: ಎಕ್ಕಲದೇವಿ ! ಜೋಗಮಾಯಿ! ಉಧೋ! ಉಧೋ! (ಅರಳು. ೩೦೮-೧).

[ ಜೋಗ$_1$ + ಮಾಯಿ$_2$ ]

**ಜೋಗಮ್ಮ** (ನಾ). = ಜೋಗಿತಿ : (+). [ ಜೋಗ$_1$ + ಅಮ್ಮ$_1$ ]

**ಜೋಗಯಿಸು, ಜೋಗವಿಸಂ, ಜೋಗೈಸು$_1$** (ಕ್ರಿ). ೧. ಸೇರಿಸು ; ಹೊಂದಿಸಂ : ಹಱುಗೋಲನೆ ಜೋಗಯಿಸಿ [ಪಾಠಾಂ. ಜೋಗೈಸಿ] ಕೊಳುತಲೆ ತೊಱೆಯ ದಾಂಟುವರ್ (ಪ್ರಭುಲೀ. ೧೨-೧೪). **ಜೋಗವಿಸು:** ೧. ಮಾಯಾಂಗನೆಯ ಲಾಸ್ಯದ ಕೇಳಿಯೂಳಿಗವ ಜೋ[ಪಾಠಾಂ.ಭೋ]ಗವಿಸುತಿರುತಿರ್ದ ಭಕ್ತಿಯ ಭಾಗೆಯಲಿ (ಪ್ರಭುಲೀ. ೫-೬೨). **ಜೋಗೈಸು$_1$:** ೧. ಇಂತಿವರು ದಂಪತಿಸಹವಾಗಿ ಯುಗಜುಗಂಗಳ ಜೋಗೈಸುತ್ತಿದ್ದರು (ಮನುಗುಂ. ೨೬೬-೮೨); ಆದರಿಸಿಯಾ ತನುವ ಲಿಂಗೋಪಾಧಿಯಲಿ ಜೋಗೈಸಿಕೊಳುತಲಿ ಸಾಧಿಸುವುದು ಸಮಾಧಿಯನು (ಪ್ರಭುಲೀ. ೧೮-೧೩). ೨. ಬಳಸಂ ; ಉಪಯೋಗಿಸಂ : ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯಾ (ಬಸವ. ೩೬೦). [ ಜೋಗ$_1$ + – ಇಸು$_3$ ]

**ಜೋಗಯ್ಯ** (ನಾ). ೧.=ಜೋಗಿ ೧ : ಜೋಗಯ್ಯನೆನಬೇಡ ತ್ಯಾಗಿ ನಿಂದಿಸಬೇಡ ನಾಗಭೂಷಣನ ಹಳಿದ ದಕ್ಷನ ತಲೆಯು ಹೋಗಿಹುದು ನೋಡ (ಸರ್ವಜ್ಞ. ೫೨೫). ೨. ಶೈವಪಂಥದ ಜೋಗಿಗಳಲ್ಲಿ ಒಂದುಪಂಗಡ : (ಎಸಮ್ಮ. V, ೬). ೩. ಒಬ್ಬಾತನ ಹೆಸರು : ನಂಗಮ್ಮನ ಮಗ ಜೋಗಯ್ಯಂಗೆ ದಯೆಗೆಯ್ದು ಕೊಟ್ಟ ಸ್ಥಿತಿ (ಎಕ. VIII, ಸೊರಬ. ೪೬೬-೧೮ ; 901). [ ಜೋಗಿ$_1$ + ಅಯ್ಯ$_1$ ]

**ಜೋಗರ** (ನಾ). ಬಿಂಕ ; ಬಿಗುಮಾನ (?) : ಎಲಗೆ ಜೋಗರವಿಷ್ಟು ಸಲ್ಲದೆಮ್ಮರಸನೆಂಜಲು ಸೋಂಕಿದಾಗಳೆ ನಿನ್ನ ಕುಲಕೋಟಿ ಪಾವನವೆಂದಳು ಕುಸುಮಾಜಿ (ಭರಹ. ೯-೮೦). [ ? ]

**ಜೋಗರಿಸು** (ಕ್ರಿ). ಜೋಪಾನಮಾಡು; ಸಲಹು: ತಾಯಿ ಮಗುವನ್ನು ಜೋಗರಿಸುವಷ್ಟೇ, ಅಷ್ಟೇಕೆ ಅದರ ಹಿರಿಯಕ್ಕನಷ್ಟುಕೂಡಾ ತಂದೆ ಲಾಲಿಸಿ ಪಾಲಿಸುವುದು ಎಲ್ಲಿ ಕಂಡು ಬರುತ್ತದೆ ? (ಕಾಗಕ. ೬೬) ; ನಿನಗೆ ಒಬ್ಬಾಕಿಗೆ ಜೋಗರಿಸೋದು ಆಗೋದಿಲ್ಲಾ (ವ್ಯನಿ .೨೨೪).

[ ಜೋಗರ$_0$ (ℙ ←ಮರಾ. ಜೋಗಲಣೇ) + – ಇಸು$_3$ ]

**ಜೋಗವಟ್ಟಗೆ** (ನಾ). ಧ್ಯಾನಕಾಲದಲ್ಲಿ ಕುಳಿತಂಕೊಳ್ಳಲಂ ಅನಂಕೂಲವಾಗುವಂತೆ ಯೋಗಿಯು ಬೆನ್ನು ಮತ್ತು ಮೊಳಕಾಲುಗಳನ್ನು ಸೇರಿಸಿ ಸುತ್ತಿಕೊಳ್ಳುವ ಬಟ್ಟೆ : "ಜೋಗವಟ್ಟಗೆಯೆನ್ನಲೊಡನದು ಯೋಗವಟ್ಟಗೆ" (ಕವಿಕಂ. ೧೮೪) : "ಜೋಗವಟ್ಟಗೆ – ಯೋಗಪಟ್ಟಿಕಾ = ಯೋಗಿಗಳ ಹೊದಕೆ" (ತದ್ಭಕೋ. ೧೫) : ಅಲ್ಲಿ ನೇಲಿದುದದು ಜೋಗವಟ್ಟಗೆ ಕಮಂಡಲವಂತದು . . . ಎಂದು ನೋಡಿದನತಿವಿಸ್ಮಯಂ ಬೆರಸು ತದ್ಗುಹೆಯಂ (ಕಾದಂಪೂ. ೬೯೨) : ಮಧುಕೇಶ್ವರದೇವರಾಚಾರ್ಯ್ಯರಂ ಬರಿಸಿ ಪೂಜೆಯಂ ಕೊಟ್ಟು ಜೋಗವಟ್ಟಗೆಯನಿಕ್ಕಿಸಿ (ಎಕ. VIII, ಸೊರಬ. ೨೬೨-೪೫ ; 1077) ; ಪುಲಿದೊವಲ ಜೋಗವಟ್ಟಗೆ ತೊಳಗುವ ಸೆಳ್ಳುಗುರ ಮಿಂಚು . . . ರಂಜಿಸೆ ನಲವಿಂ ಮಾಯಾವಿಯೆಯ್ದಿದಂ ನೃಪಸಭೆಯಂ (ದಶಕು. ೬-೧೩೦) : ಜೋಗವಟ್ಟಗೆಯಾಣೆ ! ರಾಘವನಾಣೆ ! ಮಗಳೆಂದೆ ನಿನ್ನಂ ಸಲಪುವೆಂ (ರಾಮಾಶ್ವ. ೪೨-೭). [ <ಸಂ. ಯೋಗಪಟ್ಟಿಕಾ ]

**ಜೋಗವಟ್ಟೆ$_1$** (ನಾ). ಯೋಗಮಾರ್ಗ : ನೂಱುಂ ಜನ್ಮದೊಂದು ಬಲ್ಮೆಯಿಂ ಸಗ್ಗದೊಳ್ ಬಾೞ್ವಂದಿರನುಮಿಾಜೋಗವಟ್ಟೆಯಂ ಕಂಡಿರಂ (ರಾಮಾಶ್ವ. ೫೬-೩). [ ಜೋಗ$_1$ + ಬಟ್ಟೆ$_1$ ]

**ಜೋಗವಟ್ಟೆ$_2$** (ನಾ). = ಜೋಗವಟ್ಟಗೆ : "ಜೋಗವಟ್ಟೆಯೆಂದು ಯೋಗಪಟ್ಟಿಕೆ" (ಕಶಸಾ. ೨೨-೪೪೯) : ಇಂಬಾದ ನಗರಸಿದ್ಧನ ಜೋಗವಟ್ಟೆಯೆಂದೆಂಬಂತೆ (ಪ್ರಭಂಜ. ೦-೭೨). [ ಜೋಗ$_1$ + ಬಟ್ಟೆ$_2$ ]

**ಜೋಗವಡ್ಡಿಗೆ,ಜೋಗವದ್ದಿಗೆ** (ನಾ). (?): ಹೊಂಗನೂರ ಶಾನ್ತಿದೇವರ ಜೋಗವಡ್ಡಿಗೆಯ ಬಸದಿ (ಮೈಆರಿ. ೦೯೪೨ ; ೨೫-೪ ; 1300). **ಜೋಗವದ್ದಿಗೆ:** ಕ್ರಮದಿನಸಂಖ್ಯಾತ ನಾಲ್ಕು ಮಹಾಮನೆ ಸಹಿತ ಜೋಗವದ್ದಿಗೆಯ ಚಂದ್ರ ಮಹೀತಳ ಉಳ್ಳನೆಗವಮಳಗುಣರ್ಕ್ಕಮಳಸೇನ ದೇವಗ್ಗೊಂಡರು (ಸೌಇಇ. XX, ೨೦೨-೯೭ ; 1124). [ ? ]

**ಜೋಗವದ್ದಿಗೆ** 'ಜೋಗವಡ್ಡಿಗೆ' ನೋ.

**ಜೋಗವಾವುಗೆ** (ನಾ). ಜೋಗಿಯು ಹಾಕಿಕೊಳ್ಳುವ ಹಾವುಗೆ,– ಪಾದುಕೆ: "ಯೋಗಪಾದುಕಾ–ಜೋಗವಾವುಗೆ" (ಶಮದ. ೨೯೨ ಪ್ರಯೋ); ಜೋಗವಾವುಗೆಯ ಮೆಟ್ಟೆಯ್ದುತಿಹ ಮುನಿಯ ಕಂಡು (ಪಾಸೋಪು.೫-೬೯).

[ ಜೋಗ$_1$ + ಪಾವುಗೆ ]

**ಜೋಗವಿಸು** 'ಜೋಗಯಿಸು' ನೋ.

**ಜೋಗವೋಗು** 'ಜೋಗಂಬೋಗು' ನೋ.

**ಜೋಗಳ$_1$** 'ಜೋಗುಳ' ನೋ.

**ಜೋಗಳ$_2$** (ನಾ). (?) : ಆಗದೆನ್ನಲಿ ತನ್ನಲಾ ನಿರ್ಭಾಗಧೇಯರ ವಿಜಯವೇತಕೆ ಜೋಗಳನು ಮಾಡುವಿರಿ ತನ್ನನು (ನಿಭಾಗ. ೯-೬-೬). [ ? ]

**ಜೋಗಳಿವಾಡು** 'ಜೋಗುಳವಾಡು$_2$' ನೋ.

**ಜೋಗಳೆ** 'ಜೋಗುಳ' ನೋ.

**ಜೋಗಳೆವಾಡು** 'ಜೋಗುಳಂಬಾಡು' ನೋ.

**ಜೋಗಾಯಿ** (ನಾ). = ಜೋಗಮಾಯಿ : ಅಲ್ಲಾದ ಮಹದೇವಿ ತುಳಜಾ ಭವಾನಿ . . . ಹಳ್ಳದ ಜೋಗಾಯಿ (ವಿಶಾಸು. ೫೮-೨). [ಜೋಗ$_1$+ಆಯಿ$_2$]

**ಜೋಗಿ$_1$** (ನಾ). ೧. ಯೋಗಿ ; ತಪಸ್ವಿ ; ಋಷಿ : "ಕಿತ್ತಡಿ, ಜತಿ, ಜೋಗಿ, ತವಸಿ, ರಿಸಿ–ಶಿ ಋಷಿ" (ಕಶಸಾ. ೨೦–೪೪೫) : "ಜೋಗಿ ಕಿತ್ತಡಿ ಯೆನುತುಂ ತಾಂ ತವಸಿ ರಿಸಿಯುಮೆನೆ ಋಷಿಯಕ್ಕುಂ" (ಕವಿಕಂ. ೧೮೭) : ಜೋಗಿಗೆ ಜೋಗಿಣಿಯಾಗಿಹಳು ಮಾಯೆ (ಮಹಾದೇ. ಬ. ೯೮–೨೨೭) ; ಪುಲಿದೊವಲೆಸೆದುದು ಜೋಗಿಗೆ (ಲೀಲಾವ. ೪–೭೮) : ತರಳೆ ರನ್ನೆ ಕಪ್ಪುಮಯ್ಯುವ ಯಾತಟ ಚೆಲುವನೆ ಕರಿಯ ಜಡೆಯ ಜೋಗಿಗಿಂತ ಉತ್ತಮ ನೇನೇ (ಪುರಂದ. ೨–೭೩–೧) : ಬೆಸಗೊಂಬಳು ಜೋಯಿಸರ ಜೋಗಿ ಪುರುಷರ(ಹರಿಬ. ೭–೩೪); ಜೋಗಿ ಜೋಗಿಯನ್ನು ತಬ್ಬಿಕೊಂಡರೆ ಮೈಯೆಲ್ಲ ಬೂದಿ (ಗಾದ). ೨. ನಿಂತಲ್ಲಿ ನಿಲ್ಲದೆ ಅಲೆಯುವ ಭಿಕ್ಷು,–ಬೈರಾಗಿ ; ಗೋಸಾವಿ : ಆ ಕೋಡಗವನಾಡಿಸಿ ಕೊಂಡುಂಬ ಜೋಗಿಗಳ್ಗೇಕೆ ಆರೂಢನ ಸುದ್ದಿ (ಮೋಳಿಮಾ. ೨೦೦–೭೭೪) ; ಮಹಾದೇವನೆತ್ತಲೈ ಸುರೆಗುಡುಹಿ ಜೋಗಿಗಳು ನೀವೆತ್ತಲೆಂದು ನುಡಿವುತಿರ್ದನು (ವೀಶೈಪು. ೪–೧೧–೧೪); ಜೋಗಿ ಜಂಗಮ ದರವೇಸಿಗಳಿಗೆ . . . ಅನ್ನವನೀವ ರಾಗದ ಭವನವೊಪ್ಪಿದುವು (ಕಂಸವಿ. ೨೦–೪೭). [ <ಸಂ. ಯೋಗಿನ್ ]

**ಜೋಗಿ$_2$** (ನಾ). ಒಂದು ಬಗೆಯ ವಿಷಸರ್ಪ : ಬೇರೆ ವಿಷಯುಕ್ತ ಸರ್ಪಗಳು . . . ಸಂಕಪಾಳ, ಜೋಗಿ, ಸುರ್ಗಂಡ (ಕಭಾಗ. ೬೭). [ ←ಮರಾ. ಜೋಗೀ ]

**ಜೋಗಿಗ** (ನಾ). ಮಣಿಗಾರ ; ಮಣಿಯನ್ನು ಮಾರುವವನು (?) : ತಾಳಧಾರಿಗ ಮದ್ದಳಿಗ . . . ನಟುವಿಗರ ಹೇಳಲಳವೆ ಜೋಗಿಗ ಮುಚ್ಚಿಗರ ಗೃಹ ಸಾಲುವಿಡಿದು ರಾಜಿಪುವು (ಕಂಸವಿ. ೬–೫೭). [ ಜೋಗಿ ? + – ಇಗ ]

**ಜೋಗಿಜೆಡೆ ಜೋಳ** (ನಾ). ಒಂದು ಬಗೆಯ ಜೋಳ : ಪಟ್ಟಣಸಾಳಿ, ಗೌರೀ ಕುಲ . . . ಜೆಲ ಕೊಂಜೋಳ ಅಥವಾ ಜೋಗಿಜೆಡೀಜೋಳ . . . ಈ ಎಂಟು ಜಾತಿಗಳು (ಕಭಾಗ. ೨೭೦). [ ? + ಜೋಳ ]

**ಜೋಗಿಣಿ** (ನಾ). ತಪಸ್ವಿನಿ ; ಯೋಗಿನಿ : ತೆಗೆದುಟ್ಟ ಸೋಗೆ ಕರಮೊಪ್ಪಿರೆ ಜೋಗಿಣಿ ಬರ್ಪಳೊಪ್ಪಿದಳ್ (ಲೀಲಾವ. ೪–೮೫) : ಪಾವಿನ ಪಚ್ಚದಿನಚ್ಚರಿವಡೆದ ಜೋಗಿಣಿಯಂತಿರ್ಪಳ್ (ಕಬ್ಬಿಕಾ. ೩೦೫); ಜೋಗಿಗಂ ಜೋಗಿಣಿಯದಾಯ್ತು ನಿನ್ನಯ ಮಾಯೆ (ಮದೇರ. ೭–೯೫); ಬಿಂಗಿಯಂತಾಡುವ ಕಂಥೆಯ ಜೋಗಿಣಿಯಂಗದಾಟವೆ ನಮ್ಮ ನೃತ್ಯ (ಭರಚ. ೧೪–೫೨) : ಜೋಗಿಣಿಯಂತೆ ಮಧುದೂತಿಗೆಳಸಿದರ್ . . . ಬನದೊಳಾ ಪೆಣ್ಗಳ್ (ಚಬಪು. ೪೫–೪೦) ; ಉದಯದಿಗ್ವಧುವೆನಿಪ ಜೋಗಿಣಿಯ ಕೈಯಲೊಪ್ಪಿದ ಪದ್ಮರಾಗ (ನಂದಿಮಾ. ೧೯–೦೦). [ <ಪ್ರಾ. ಜೋಗಿಣೀ, ಜೋಯಿಣೀ./ಸಂ. ಯೋಗಿನೀ ]

**ಜೋಗಿಣಿತಿ** (ನಾ). = ಜೋಗಿಣಿ : ಇಂತೆಂದೊರೆದಳೆಲೆ ಜೋಗಿಣಿತಿ ಸುರುಚಿರಮೆನಿಪೆನ್ನ ಸುವ್ರತಕೆ ಭಂಗಮಿರದಾಯ್ತು (ಪ್ರಭಂಚ. ೩–೧೦೩). [ ಜೋಗಿಣಿ + – ಇತಿ$_1$ (<–ಇತ್ತಿ) ]

**ಜೋಗಿತಿ, ಜೋಗತಿ** (ನಾ). ೧. = ಜೋಗಿಣಿ : ಒಕ್ಕಲಿತಿ, ಸೆಟ್ಟಿತಿ, ಗಣತಿ, ಜೋಗಿತಿ (ಶಬ್ದಾನು. ೨೦೨ ಪ್ರಯೋ) ; ಈ ರಗಳೆಯ ಹರಿಹರ ಜೋಗಿಯಂತೆ ! ಆ ಹೆಣ್ಣುಗಳು ಜೋಗಿತಿಯರಂತೆ ! (ತುಂಗಭ. ೧೦೮). ೨. ಎಲ್ಲಮ್ಮ ದೇವತೆಯ ಭಕ್ತೆ ; ಜೋಗಮ್ಮ : ಜೋಗಿತಿಯ ದನಿ ಕೇಳಿದಾಗಲೇ ಅವರಿಗೆ ಈ ಲೋಕದ ಸ್ಮೃತಿ ಬಂದುದು (ಬನಸಿ. ೭೫); ಜೋಗಿತಿ ನಿನ್ನ ಮದುವೆ ಆಗಲೇ ಇಲ್ಲವೇ ? (ಸ್ವಪ್ನಹೊ. ೨೯೨). **ಜೋಗತಿ :** ೨. ಸಂತೆಯಂಗಡಿ ಸೂಳೆ ಮುಂತೊಲಿವ ಡೊಂಬತಿಯ ಎಂತು ಗಂಡಸಿಯ ಜೋಗತಿಯ ಹೋದವನ ಸಂತಾನ ಕೆಡುಗು (ಸರ್ವಜ್ಞ. ೧೯೪೭) : ಮುಪ್ಪಿನ ಕಾಲಕ್ಕಾದರೂ ಜೋಗತಿಯ ವೇಷ ಬೇಡವೇ (ಹಳ್ಳಿಹಾ. ೯೦) : ಜೋಗಯ್ಯನಾಗಲಿ, ಜೋಗತಿಯಾಗಲಿ ಹೆಜ್ಜೆಗಳನ್ನು ಹಾಕಿ ಕುಣಿಯುವ ದೃಶ್ಯವು . . . ಆಕರ್ಷಿಸದಿರದು (ಕನ್ನಜಾ. ೧೩) ; ಹಾದಿ ಮುಪ್ಪಾಗಿ ಹಳ್ಳವಾಯಿತು, ಸೂಳೆ ಮುಪ್ಪಾಗಿ ಜೋಗತಿಯಾದಳು (ಗಾದ). [ ಜೋಗಿ$_1$ + – ಇತಿ$_1$ (<–ಇತ್ತಿ) ]

**ಜೋಗಿಯರಳೆ** (ನಾ). ಒಂದು ಬಗೆಯ ಸಸ್ಯ : ಹೂವರಿಸಿ, ಜೋಗಿಯರಳೆ, ಬಾಗುರಿ (ವೃಜಿಗಿ. ೭೪–೧೫೨೧). [ ? ]

**ಜೋಗಿವರಾಳಿ** (ನಾ). [ಸಂಗೀತ] ಒಂದು ಮಿಶ್ರರಾಗದ ಹೆಸರು : ಶೋಕವರಾಳಿ ವಸಂತವರಾಳಿ ಜೋಗಿವರಾಳಿ . . . ನಾಗವರಾಳಿಯೆಂಬ ವರಾಳೀಸಪ್ತಕವೇ ಶುದ್ಧವರಾಳಿಗೆ ಮಿಶ್ರಂಗಳು (ವಿವೇಕ. ೨೩೫). [ ಜೋಗಿ? + ವರಾಳಿ ]

**ಜೋಗಿಸು** 'ಜೋಗೈಸು$_2$' ನೋ.

**ಜೋಗು$_1$** 'ಜುಂಮ್ಮು$_3$' ನೋ.

**ಜೋಗು$_2$** 'ಜವುಗು' ನೋ.

**ಜೋಗು$_3$** 'ಜೋಗ$_1$' ನೋ.

**ಜೋಗುಗೊಳ್** (ಕ್ರಿ). ಧ್ಯಾನಮಾಡು ; ತಪಸ್ಸನ್ನು ಕೈಗೊಳ್ಳು ; ತಪಸ್ಸುಮಾಡು : ಇರ್ವರುಮೊಂದೆ ಗುಹೆಯೊಳ್ ಜೋಗುಗೊಂಡು ನಾಲ್ಕು ತಿಂಗಳಿರ್ವರುಮುಪವಾಸಂಗೆಯ್ದು (ವಡ್ಡಾರಾ. ೪೮–೭) ; ವಿಷ್ಣುಗಳೆಂಬಾಚಾರ್ಯರ್ ಸಮುದಾಯಂಬೆರಸಲ್ಲಿ ಜೋಗುಗೊಂಡಿರ್ಪುದುಂ (ಧರ್ಮಾಮೃ. ೯–೧೭೫) ; ಕಾಂತಾರಮಧ್ಯದೊಳಾ ವರ್ಷಕಾಲಮಾಸನ್ನಮಾಗೆ ಜೋಗುಗೊಂಡಿರ್ಪುದುಂ (ಪುಣ್ಯಾಸ್ರ. ೧೨–೨ ವ). [ ಜೋಗು$_3$ (<ಜೋಗ$_1$) + ಕೊಳ್$_1$ ]

**ಜೋಗುಳ, ಜೋಗಳ$_1$, ಜೋಗಳೆ, ಜೋಗುಳಿ, ಜೋಗುಳೆ** (ನಾ). ಮಕ್ಕಳನ್ನು ಮಲಗಿಸುವಾಗ ಹೇಳುವ ಹಾಡು; ಜೋ ಎಂಬ ಪಲ್ಲವಿಯಿಂದ ಕೂಡಿರುವ ಹಾಡು; ಲಾಲಿಪದ : ಜಗದಾತ್ಮ ಜೋ ಜರಾಮರಣವಿದೂರ ಜೋ ಎನುತೆ ಜೋಗುಳವಂ ಶ್ರುತಿಗೂಡಿ ಪಾಡಿದರ್ (ಅನಂಪು. ೬–೩) : ಆತುರದೆ ಪಾಡುತ್ತಲಿಹರ ಜೋಗುಳ ಜೊಂಪು (ಬಸರ. ೧–೧೧೦); ಆದ್ಯರ ಗೀತದೊರೆಯನಾಲಿಸುವಂತೆ ಜೋಗುಳವನಾಲಿಸುವನು (ಪದ್ಮರಾ. ೨–೭೦) ; ನುಡಿಗಗೋಚರದಮಳ ಬೊಮ್ಮದ ಕಡುಹು ನಿಂದುದು ಜೋಗುಳದಲವಗಡೆಯ ದೇವತ್ವಕೆ ಶಿಶುತ್ವದೊಳಾಯ್ತು ನಿರ್ವಾಹ (ತೊರರಾ. ೧–೮–೭೩); ಅಂಗನೆಯರೊಲ್ದು ಪಾಡಿದರು ಜೋಗುಳ (ಮಹಾವಿ. ೩–೨೦) : ಬೆಟ್ಟ ಬೆಟ್ಟಕೆ ಕಟ್ಟಿ ಜೋಗುಳದ ತೊಟ್ಟಿಲನು ತೂಗಿದತ್ತು ! (ಅನಿಕೇ. ೫೩–೫). **ಜೋಗಳ$_1$ :** ಮನೆಯಲ್ಲಿ ತಾಯಿಯು ಜೋಗಳವೆತ್ತಿ ಲಾಲಿಗಳನ್ನು ಹಾಡಿ(ಕನ್ನಜಾ.೩೭); ಕೂಸು ಕಾಸ ಹಡೆಯದು, ಜೋಗಳ ಮುಗಿಲು ಮುಟ್ಟಿತು (ಗಾದ). **ಜೋಗಳೆ :** ಸೋಮುರ್ಡಿಯ ಸೊಬಗೆಯರು . . . ಜೋಗಳೆಯನು ಪಾಡಿದರು (ಅಂಜನ. ೪–೪೭) **ಜೋಗುಳಿ :** ತೊಟ್ಟಿಲ ಶಿಶುವಿಂಗೆ ಜೋಗಳೆಯಲ್ಲದೆ ಹೊಟ್ಟೆಯ ಶಿಶುವಿಂಗೆ ಜೋಗುಳಿಯುಂಟೇ (ಸರ್ವವ. ೨೭–೧೨೪) : ವಿಮಲಾಗಾರದ ಬಲಾಜನದ ಜೋಗುಳಿ[ಪಾಠಾಂ. ಳಿಗೆ]ಯರಸ ಜೋಯೆನುತ . . . ನಾರಿಯರು ಸ್ವರವೆತ್ತಿ ತೂಗಿದರು (ತೊರರಾ. ೭–೨೨–೧೨). **ಜೋಗುಳೆ:** ತೊಟ್ಟಿಲ ಶಿಶುವಿಂಗೆ ಜೋಗುಳೆಯಲ್ಲದೆ ಹೊಟ್ಟೆಯ ಶಿಶುವಿಂಗೆ ಜೋಗುಳೆಯುಂಟೇ (ಸರ್ವವ. ೨೭–೧೨೪); ತೊಟ್ಟಿಲ ಮಟಿಗೆ ಜೋಗುಳೆಯಂತೆ ಗಳಪಿದವಲ್ಲಿ ಚಕೋರಿ (ಶ್ರೀಪಾಲ ೨–೨೩); ತೊಟ್ಟಿಲೊಳಗಾಬಾಲ ನೊಱಗುವನಲ್ಲಿಯಿಂ ಜೋಗುಳೆಯನಾಲಿಸುತ (ಸಾಳ್ವಭಾ. ೪–೦); ಹಸುಳೆ ಜೋಗುಳೆಗೆ ಸರ್ಪ ಸುನಾಗಸರಕೆ . . . ಗುಂಡಾಕ್ರಿಗೆ ಶಿಲೆವೊಸರ್ವುದಿದು ಘನವೆ (ಭರಚ. ೧–೮೮).

[ ದೇ. ∥ ತುಳು. ಜೋಗುಳ; ತೆಲು. ಜೋಗಡ, ಜೋವಡ, ಜೋಲ ]

**ಜೋಗುಳಂಪಾಡಿಸು** (ಕ್ರಿ). ಲಾಲಿಯನ್ನು ಹಾಡಿಸು : ಬಾಯಿನವನೊಡನಿರ್ದ ರುದ್ರಕುಮಾರಿಯರ್ಗಿಕ್ಕಿ ತೊಟ್ಟಿಲೊಳು ಪಟ್ಟರಿಸಿ ಜೋಗುಳಂ ಪಾಡಿಸಿದಳು (ಸಿದ್ಧರಾ. ೧-೫೮).

[ ಜೋಗುಳಂಪಾಡು (<ಜೋಗುಳಂಬಾಡು) + – ಇಸು$_3$ ]

**ಜೋಗುಳಂಪಾಡು** 'ಜೋಗುಳಂಬಾಡು' ನೋ.

**ಜೋಗುಳಂಬಾಡು, ಜೋಗಳೆವಾಡು**, ಜೋಗುಳಂಪಾಡು, ಜೋಗುಳ ಪಾಡು, ಜೋಗುಳವಾಡು$_1$, ಜೋಗುಳೆವಾಡು (ಕ್ರಿ). ಜೋಗುಳವನ್ನು ಹಾಡು ; ಲಾಲಿಯನ್ನು ಹಾಡು : ಮಗನಂ ತೊಟ್ಟಿಲೊಳಿಟ್ಟು ತೂಗಿ ನಲವಿಂದಂ ಜೋಗುಳಂಬಾಡಿ (ಅನಂಪು. ೧೨-೫೦) : ಪುರಾತನರ ಗೀತದಿಂ ಜೋಗುಳಂಬಾಡಿ ಭಕ್ತಿಯ ಮಱಿಯಂ ಸಲಹುವಂತೆ . . . ಓವುತ್ತಿರಲು (ಬಸರ.೧೦-೧೧೨). **ಜೋಗಳೆವಾಡು :** ನಾಡೆ ನಲಿನಲಿದಾಡಿ . . . ಜೋಗಳೆವಾಡಿ ಕಂದನ ನೋಡಿ (ಸಾಳ್ವಭಾ. ೨೭-೬೨). **ಜೋಗುಳಂ ಪಾಡು :** ಅರವಿಂದಮುಖಿಯರೊಲ್ದು ಜೋಗುಳಂಪಾಡುತಿರ್ದರ್ (ಹಮ್ಮಿರ. ೨-೨೫ ವ). **ಜೋಗುಳಪಾಡು :** ಜೋಗುಳಪಾಡಿ ತಾಯಿ ಹೊತ್ತಳು ಲೋಕಹಿತಕೆ (ಸೌಂದಕಾ. ೭-೨). **ಜೋಗುಳವಾಡು$_1$:** ತೊಟ್ಟಿಲ ತೂಗುವೆ ಜೋಗುಳವಾಡುವೆ (ಭೂನ್ನಸಂ. ೮-೦೭) ; ಜೋಗುಳವಾಡಿ ಮಕ್ಕಳಂ ತೂಗುವೀ ನೆವದಿಂದೆ . . . ಪಾಡಿದರು (ಜಬಪು. ೯-೧೦) ; ತೊಟ್ಟಿಲೊಳಿಟ್ಟು ಸಾಲ್ದ ಸ್ನೆಹಂದೆ ಜೋಗುಳವಾಡಿ ತೂಗುವಳು (ಕೃಮಿಥಾ. ೦೮-೨೦). **ಜೋಗುಳೆವಾಡು:** ತೊಟ್ಟಿಲ ಕಟ್ಟಿ ಗವರೇಶ್ವರ ಲಿಂಗಕ್ಕೆ . . . ಜೋ ೯ ಗು ಳೆ ವಾ (ಯಾ) ಡಿ ದೆ (ಸರ್ವವ. ೪೦-೨೦೯).

[ ಜೋಗುಳ + ಪಾಡು$_1$ ]

**ಜೋಗುಳಗೀತ** (ನಾ). = ಜೋಗುಳ : ಆ ಜೋಗುಳಗೀತದಲ್ಲಿ ಬರುವ 'ಬರ್‌ತಾನ ನಿನ ಮಾವಾ' . . . ಎನ್ನುವುದೂ ಕಥೆಯ ಒಂದು ರೀತಿಯೇ (ಕಥಳ. ೧). [ ಜೋಗುಳ + ಗೀತ ]

**ಜೋಗುಳಗೀತೆ** (ನಾ). = ಜೋಗುಳ : ಅನುಪಮವಾದ ಅ ನೇ ಕ ಜೋಗುಳಗೀತೆಗಳು ಇವುಗಳ ಗುಂಪಿನಲ್ಲಿ ಸೇರುತ್ತವೆ (ಭಾವಗೀ. ೫೦).

[ ಜೋಗುಳ + ಗೀತೆ ]

**ಜೋಗುಳಪಾಡು** 'ಜೋಗುಳಂಬಾಡು' ನೋ.

**ಜೋಗುಳವಾಡು$_1$** 'ಜೋಗುಳಂಬಾಡು' ನೋ.

**ಜೋಗುಳವಾಡು$_2$, ಜೋಗಳೆವಾಡು** (ನಾ). = ಜೋಗುಳ : ತೂಂಕಡಿಪ ಜೋಗುಳವಾಡು (ಸಂಸಪ. ೩೧-೮). **ಜೋಗಳೆವಾಡು :** ಕಡುನೇಹದಿಂದ ಜೋಗಳೆವಾಡ ಪಾಡುತ ಸಡಗರಗೊಂಡರಾಳಿಯರು (ಜಂಪ್ರಸಾಂ. ೪-೬೦).

[ ಜೋಗುಳ + ಪಾಡು$_2$ ]

**ಜೋಗುಳಿ** 'ಜೋಗುಳ' ನೋ.

**ಜೋಗುಳೆ** 'ಜೋಗುಳ' ನೋ.

**ಜೋಗುಳೆವಾಡು** 'ಜೋಗುಳಂಬಾಡು' ನೋ.

**ಜೋಗೆತ್ತು$_1$** (ಕ್ರಿ). ಜವುಗು ಆಗು ; ಕೆಸರಾಗು : ಧರಿತ್ರಿ ವಾರಣ ಘಟಾತಟ ದಾನಜಲಂಗಳಿಂದೆ ಜೋಗೆತ್ತೆ (ಮಹಾನೇ. ೦೧-೯೦).

[ ಜೋಗು$_2$ (<ಜವುಗು) + ಎತ್ತು$_1$ ]

**ಜೋಗೆತ್ತು$_2$** (ಕ್ರಿ). ಧ್ಯಾನವನ್ನು ಬಿಟ್ಟು ಏಳು ; ತಪಸ್ಸಿನಿಂದ ಬಹಿರ್ಮುಖನಾಗು : ಜೋಗೆತ್ತಿ ಮುನಿಶಿಖಾಮಣಿ ಪೋಗುತ್ತಿರೆ (ಪುಣ್ಯಾಸ್ರ. ೩-೭೩). [ ಜೋಗು$_3$ (<ಜೋಗ$_1$) + ಎತ್ತು$_1$ ]

**ಜೋಗೇಱು** (ಕ್ರಿ). ಜೋಮಂ ಹಿಡಿ; ಜೋಮಂ ಹತ್ತು : ಪಾದಗಳು ಜೋಗೇಱಿಕೊಂಡು ಚುಮುಚುಮುಗುಟ್ಟುತ್ತಾ . . . ಇಹವು (ವೃದ್ಧಸಾ. I, ೪೦೯). [ ಜೋಗು$_1$ (<ಜುಮ್ಮು$_3$) + ಏಱು$_1$ (<ಏಱ್$_1$) ]

**ಜೋಗೈಸು$_1$** 'ಜೋಗಯಿಸಂ' ನೋ.

**ಜೋಗೈಸು$_2$, ಜೋಗಿಸು** (ಕ್ರಿ). ಕಾಪಾಡು ; ಸಲಹು ; ರಕ್ಷಿಸು : ರ ತಿ ದೇ ವಿ ತನ್ನಯಯಾತ್ಮತನಯನಂ ಪ್ರಾಣವಮದಾಗಿ ಜೋಗೈಸುತಿರೆ (ನವಮೋ. ೧೫-೪೮). **ಜೋಗಿಸು :** ಅನಿರುದ್ಧನಂ ಕೊಲದೆ ಜೋಗಿಸುವೆನು (ನವಮೋ. ೫೯-೨೨). 'ಜೋಗರಿಸು' ಪಠಾ.

[ <ಜೋಪಾನ + ಕೈಸು (<ಕೆಯ್ಸು) ]

**ಜೋಡ**(ನಾ). ಹಾದರಿಗ ; ಜಾರ: "ಸಿತಗಂ, ಜೋಡಂ, ಪರಳಿಗಂ, ಪಾಣ್ಬಂ –ಳಿ ಜಾರಂಗೆ ಪೆಸರ್" (ಕಶಸಾ. ೦೯-೩೮೭) : "ಜೋಡಂ = ಸಿತಗಂ ; ಪಾಣ್ಬಂ" (ಕಮದ. ಪರಿ. ೨) : "ಜೋಡಂ ಪರಳಿಗನು ಪಾಣ್ಬ ಸಿತಗಂ ಜಾರಂ" (ಕವಿಕಂ. ೧೬೦) ; ದನಿಗೆಟ್ಟುಲಿ ಹೊದ್ದಿಯು ಹೊದ್ದದ ಹೊಯಿಲೆಸೆದವು ಜೋಡರ ಸುಸಿಲೊಳ್ (ಉದ್ಧದೀ. ೪-೧೭). [ಜೋಡು + – ಅ$_7$]

**ಜೋಡಂಗಿ** (ನಾ). ಎರಡು ಅಂಗಿ ; ಒಂದು ಜೊತೆ ಅಂಗಿ : ಬಿದ್ದಾನೊ ಬಿದ್ದಾನೊ ಬಿಳಿಅಂಗಿ ಮೇಲಾಗೆ ರುದ್ರ ಜೋಡಂಗಿ ಕಳಚ್ಯಾವ (ಲೋಕಗೀ. ೨೦೭). [ಜೋಡು + ಅಂಗಿ$_2$ ]

**ಜೋಡಗಲ್, ಜೋಡಗಲು** (ಕ್ರಿ). ಜೊತೆಯನ್ನು ಬಿಡು ; ಸಹವಾಸದಿಂದ ದೂರವಾಗು : ಜೋಡಗಲ್ದುವು ಚಕ್ಕವಕ್ಕಿ (ಸಮ್ಯಕೌ. ೧೦-೨೪). **ಜೋಡಗಲು :** ರಾಮು ಜೋಡಗಲಿ ಸೀತೆಯಂ ಬನಕೆ ಗಮಿಸಿದನೆಂಬ ರೂಢಿ (ವಂಕಾರಾ. ೨-೧೦-೨೩). [ ಜೋಡು + ಅಗಲ್$_1$ ]

**ಜೋಡಗಲು** 'ಜೋಡಗಲ್' ನೋ.

**ಜೋಡಗಿರಿ** (ನಾ).ಮರದ ತುಂಡುಗಳನ್ನು ಜೋಡಿಸುವಿಕೆ,-ಹೊಂದಿಸುವಿಕೆ: ಜೋಡಗಿರಿಯ ಕೆಲಸದಲ್ಲಿಯೂ ಮಾಟಿನ ಕೆಲಸದಲ್ಲಿಯೂ ಕೊಂಕಣದ ಬಡಿಗಿಗಳು ಮೇಲಾದವರು (ಕಥಾಗ. ೩೦೮). [←ಮರಾ. ಜೋಡಗಿರೀ]

**ಜೋಡಣೆ, ಜೋಡವಣೆ** (ನಾ). ೧. ಸೇರುವೆ ; ಹೊಂದಾಣಿಕೆ ; ಸಾಂಗತ್ಯ : ಅಸುರರಲಿ ಮರ್ತ್ಯರಲಿ ಸುರರಲಿ ಯಸಕವುಳ್ಳವನೆನಿಸಿದನು ಸಾಹಸದ ಜೋಡಣೆ ಜಡಿದುದವನಿಯಲಿ (ಕುವ್ಯಾಸ. ೨-೪೯): ನೋಡಿದನು ಜಾ ೦ ಬ ವ ನು ಜಲಧಿಯ ರಘಾಡಣೆಯ ಜಂಘಾಯ್ಲ ರಭಸದ ಜೋಡಣೆಯ (ತೊರರಾ. ೪-೧೨-೩) ; ಜೀವತ್ವದಿಂ ನಾಡೆ ಪಲತೆಱನಾಗಿ ಸಕಲ ಸುಖದುಃಖಗಳ ಜೋಡಣೆಗೆ ಮೈಗೊಟ್ಟಿರುತ್ತೆ ಲೋಕಪ್ರಪಂಚನೊಳೆಸೆದು ತೋಱುತಿರ್ಪಂ (ಸಿದ್ಧೇಪು. ೨೨-೧೦): ಎರಡು ಜೀವಗಳ ಎರಡು ಭಾವಗಳ ಜೋಡಣೆಯನ್ನು ಸಾಧಿಸಿತು ಕ್ಷಣಕಾಲದ ಮೌನ (ಏಕಾಂಗಿ. ೩). ೨. ಮೇಳ; ಗುಂಪು; ಸಮಂದಾಯ: ಚೂತವೃಕ್ಷಂಗಳಾ ಜೋಡಣೆಯ ಸುಚ್ಛಾಯ ಶೈತ್ಯದಿಂದಿರ್ದೆಸೆಯ ವಾಧಯಿಸಿಕೊಂಡಿರಲು (ಪರಶು. ೪-೦೯). ೩. ಒಟ್ಟೈಸುವುದು ; ರಾಶಿಹಾಕುವುದು : (೩). ೪. ಸಿದ್ಧತೆ ; ಸಜ್ಜು ; ಸನ್ನಾಹ : ರಾಜೋಪಕರಣದ ಜೋಡಣೆಯ ಪಸರಿಕೆಯ ಪಾಳಯ ತೆರಳಿತಗಲದಲಿ (ತೊರರಾ. ೨-೩-೫೦). **ಜೋಡವಣೆ: ೪.** ಸಕಲ ಜೋಡವಣೆ ಸರಳ ಹೊದೆಗಳಲಿ ಸೈನ್ಯ ಕೂಡಿದುದು (ಪಾಂಡಚ. ೫೭-೫) ; ತದ್ವೀಪ್ಯ ಜೋಡವಣೆ ಯುಕ್ತದಿಂದಾ ನೃಪನ ಕಾಣಲ್ಕೆ (ಪರಶು. ೭-೩೨).

[ ಜೋಡಿಸು$_1$ + – ಅಣೆ$_4$ ]

**ಜೋಡಣೆಗೆಯ್** (ಕ್ರಿ). ಸಿದ್ಧಮಾಡು; ಸಜ್ಜುಗೊಳಿಸು: ಜೋಡಣೆಗೆಯ್ದ ಸುವರ್ಣಮಂಟಪ (ಮೋಹತ. ೦೪-೨೮). [ ಜೋಡಣೆ + ಕೆಯ್$_1$ ]

**ಜೋಡತನ** (ನಾ). ಹಾದರ; ಜಾರತನ: ಪಗಲ್ನಿದ್ದೆಗಂ ಜೂದಿಂಗಂ ಜೋಡತನಕ್ಕಂ . . . ಇಂಬುಗೊಡದೆ (ಚಕವಂ. ೬೨). [ ಜೋಡ + – ತನ ]

**ಜೋಡವಣೆ** 'ಜೋಡಣೆ' ನೋ.

**ಜೋಡಾಟ** (ನಾ). ಒಂದೇ ಸ್ಥಳದಲ್ಲಿ ಅಕ್ಕಪಕ್ಕದ ಎರಡು ರಂಗಸ್ಥಳಗಳಲ್ಲಿ ಒಂದೇ ಕಥಾಪ್ರಸಂಗವನ್ನು ಆಡಿ ತೋರಿಸುವ ಬಯಲಾಟ: ಒಂದು ರಾತ್ರಿ ನಾಲ್ಕುಮೈಲು ದೂರದಲ್ಲಿ ಒಂದು ಜೋಡಾಟ ನೋಡಲು . . . ನಿಶ್ಚಯಿಸಿದಾಗ (ವಾತ್ಸಲ್ಯ. ೮). [ ಜೋಡು + ಆಟ ]

**ಜೋಡಾಡು** (ಕ್ರಿ). ಹಾದರವನ್ನು ಮಾಡಂ : ತಾಂ ಜೋಡಾಡಲ್ ಬಗೆದು ಮನೆಯಾಣ್ಮಂ ಬಾರದನ್ನಂ . . . ತನ್ನಾತನಂ ಸಂಕೇತನಿಕೇತನಕ್ಕೊಡಗೊಂಡು ಬರ್ಪುದೆಂದು ಪೇಟ್ಟಟ್ಟೆ (ಪಂಚತಂ. ೭೪-೧). [ಜೋಡು + ಆಡು$_1$]

**ಜೋಡಾಣಿಕೆ** (ನಾ). = ಜೋಡಣೆ ೧ : ಪರದೆಯ ಜೋಡಾಣಿಕೆ, ಸನ್ನಿವೇಶಕ್ಕೆ ಹೊಂದಿಕೆಯಾಗುವ ವಸ್ತ್ರಾಭರಣಗಳನ್ನು ಆರಿಸುವುದು ಎಲ್ಲವೂ ಬಲದೇವನ ಕಾರ್ಯವೇ (ಕಲಾಸಾ. ೯೫). [ < ಜೋಡಣೆ + – ಇಕೆ ]

**ಜೋಡಿ$_1$** (ನಾ). ೧. ಜೊತೆ ; ಜೋಡಂ : ರೂಢಿಯಲಿ ಸಮತಳದಲಂಘ್ರಿಯಂ ಜೋಡಿಗಳ ಮೆಲುದಳವದೊಪ್ಪಿರೆ (ನಿಭಾಗ. ೪-೦೩-೪೦) ; ಕಿಂಖಾಪಿನ ಛತ್ರಿ ಚವರೀ ಜೋಡಿ (ಎಕ. XIV, ನಂಜನ. ೨೮೯-೭ನೇ ಕಲಂ ; 1847) ; ಆಕೆಯನ್ನು ತನ್ನ ತಂದೆಗೆ ಜೋಡಿಯಾಗಿ ಮಾಡಿದನು (ನೀಗಟ್ಟು. ೩೩). ೨. ಗುಂಪು ; ಸಮೂಹ : ಗಾಂಡೀವಿ ಚಾಪವ ಮಿಡಿದ ನಿಷ್ಠುರರಾವ ತಿವಿದುದು ಜರಿದವಡಕಿಲು ಜಗದ ಜೋಡಿಗಳ (ಕುವ್ಯಾದ್ರೋ. ೯-೩೭) ; ಸಾರಿದರೆ ಪೂಗೊಳನನಾ ಚಂಡಾಂಶುವಿನ ಮೈ ಝಳದ ಝಾಡಿಯ ಜೋಡಿಯಧ್ವಶ್ರಮದ ಭಾರದಲಿ (ತೊರರಾ. ೨-೭-೩) : ಜಗದ ಜೋಡಿಯನುರುಹುವುರಗಾಧಿಪಮುಖಾನಲನೆರಡು ರೂಪಾಗಿ ಧರೆಯಲವತರಿಸಿತ್ತೊ (ನಿಭಾಗ. ೩-೮-೮). ೩. ಸಂಘಟನೆ ; ಒಗ್ಗಟ್ಟು : ಕೂಡೆ ತಳಪಟವಾಯ್ತು ಸುಭಟರ ಜೋಡಿ ಜರಿದುದು (ಕುವ್ಯಾದ್ರೋ. ೨-೩೮). ೪. ಒಡನಾಟ ; ಸಹವಾಸ : ಹತ್ತಿರದೆ ಜೋಡಿಗೋರ್ವರು ಮಿಲ್ಲ (ಮಲ್ಲಿಜ. ೧೭-೯). ೫. ಕಾಗದದ ಹಾಳೆ : (ಕ). 'ಜೋಡು' ಪರಾ.

**ಜೋಡಿ$_2$**, ಜೂಡಿ (ನಾ). ೧. ಕೊಡುಗೆಯಾಗಿ ಕೊಟ್ಟ ಭೂಮಿಗೆ ಸರ್ಕಾರ ತೋರಿಸುವ ಕಂದಾಯದ ಸವಲತ್ತು. ೨. ಕೊಡುಗೆ: ಮಲ್ಲಿಗೆಹಳ್ಳಿ ೪೨ ಬ್ರಾಹ್ಮಣರಿಗೆ ಜೋಡಿಯಾಗಿದೆ (ಗರುಡಾ.೧೧೫) : ಬೈಲಹಳ್ಳಿಯನ್ನು ನಿಮಗೆ ಜೋಡಿ ಹಾಕಿಕೊಟ್ಟಿದ್ದೇನೆ (ಬೃಸರ್ವ. ೧೪). ೩. ಕಪ್ಪ ; ವಳಿತ: "ಜೋಡೀ-ಕಪ್ಪಂ" (ಶಾಶಕ್ಕ. ೨೬೬); ಒಸಗೆ ಜೋಡಿಯಿವೆಲ್ಲವನೂ ಆ ಮೂಲಿಗರೇ ನಡೆಸಿ (ಸೌಇಇ. IX-ii, ೪೦೭-೧೧ ; 1377) ; ಕಪ್ಪ ಜೋಡಿ ಬೇಡಿಗೆ ತಳವಾಟಿಕೆ . . . ಇವು ಮೊದಲು ಸರ್ವಮಾನ್ಯವಾಗಿ (ಎಕ. V, ಹಾಸನ. ೨-೧೭; 1563); ಕೊಡಗರು ನಮಗಳ್ಳಿ ಜೋಡಿಯ ತೆಱ ತಿಹರೀಗ( ಕಂಸವಿ. ೦೮-೨೫); ಚರಾದಾಯ ಜೋಡಿ ಬೇಡಿಕೆ ಹುಲ್ಲುಹಣ . . . ಮುಂತಾದ ಆ ಸಕಲ ಸ್ವಾಮ್ಯವು (ಬಿಟ್ಟಿಅ. ೨೪೦-೨೪). **ಜೂಡಿ** : ೩. ಊರೊಳಗಿನ ಇನಾಮುದಾರರು ಸರಕಾರಕ್ಕೆ ಜೂಡಿಯನ್ನೂ ಸಹ ಕೊಡುವುದಿಲ್ಲ (ಮೋಹಿನೀ. ೦೧): ಸರಕಾರದವರು 'ಜೂಡಿ' ಯೆಂದು ಕೆಲವು ಹಣವನ್ನು ಕಿತ್ತುಕೊಳ್ಳತೊಡಗಿದರೂ, ದೇಸಾಯಿಯುವರಿಗೆ ಅದೊಂದು ಭಾರವೆನಿಸಲಿಲ್ಲ (ಜನಜೀ. ೦೩೭). [ ?. / ಮರಾ. ಜುಡೀ ]

**ಜೋಡಿ$_3$** (ಅ). ಜೊತೆಯಲ್ಲಿ: ದನದ ಜೋಡಿ ಇದ್ಕೊಂಡು ನಿನ್ನ ಬುದ್ಧೀನೂ ದನದ ಬುದ್ಧಿ ಆಯ್ತೇನೊ (ಕಮ್ಮಟ. ೦೭). [ < ಜೋಡಿ$_1$ ]

**ಜೋಡಿಕೆ** (ನಾ). ಜೊತೆಯಾಗಿರುವಿಕೆ : ಆಡಲೇನದ ಜೀಯ ಲೋಕದ ಜೋಡಿಕೆಯ[ ಯ ][ಪಾಠಾಂ. ಜೋಡಣೆಯ, ಜೋಡೆಯೇ]ಜಾನಕಿ ಜಗತ್ರಯ ಗಾಥಪತಿಭಕ್ತಿಯರಿಗೀ ಸತಿ ಮಾತೃಭವನವಲ (ತೊರರಾ. ೫-೩-೪೨). [ ಜೋಡು + – ಇಕೆ ]

**ಜೋಡಿಗ** (ನಾ). ಜೊತೆಗಾರ; ಸಂಗಾತಿ: ಕೀಱ ವ್ಯೆಗರೆದು ಜೋಡಿಗನ ಬರವನೆ ಪಾರ್ವ ಪೆಣ್ಬಕ್ಕಿಗಳ ತಂಡದಿಂದೆಯುಂ (ರಾಮಾಶ್ವ. ೪-೨).

[ ಜೋಡು + – ಇಗ ]

**ಜೋಡಿಗಲಹ** (ನಾ). ಸಾಟಿಯಾದ ಕಾಳಗ ; ಸಮಾನವಾದ ಯುದ್ಧ : ಆಡಲೇನದನಿಂದ್ರ ಜಂಭರ ಜೋಡಿಗಲಹವಿದೆನಲು ಗಗನವ ಫಾಡಿಸಿತು ರಣರಭಸ (ತೊರರಾ. ೩-೦೦-೨೦). [ ಜೋಡಿ$_1$ + ಕಲಹ ]

**ಜೋಡಿಗೆ** (ನಾ). ಜೋಡಣೆ : ಸ್ವಲ್ಪ ಹಳೆಯ ಕುರ್ಚಿ ಸ್ವಾಮಿ ! ಒಂದು ಕಾಲು ಮುರಿದಿತ್ತು, ಅಲ್ಲಿಂದಿಲ್ಲಿಗೆ ಜೋಡಿಗೆ ಹಾಕಿ ಗಟ್ಟಿಮಾಡಿದ್ದೇನೆ (ದೇವಮ. ೪೦). [ < ಜೋಡಿಕೆ ]

**ಜೋಡಿಗೆಡೆ** (ಕ್ರಿ). ಗುಂಪಾಗಿ ಬೀಳು ; ಒಟ್ಟಾಗಿ ಉರುಳು : ನೂಱಾನೆ ಭೀಮನ ಗದೆಯ ಗಾಳಿಯಲಿ ಜೋಡಿಗೆಡೆದವು (ಕುವ್ಯಾಗ. ೦-೫೯).

[ ಜೋಡಿ$_1$ + ಕೆಡೆ$_1$ ]

**ಜೋಡಿಗೆದಱು** (ಕ್ರಿ). ಗುಂಪಾಗಿ ಚೆದರು,–ಬೇರೆಬೇರೆಯಾಗು : ಸುರವಂದಿಗಳು ಮಗಧರು ಜೋಡಿಗೆದಱಿತು ನಿಜ ನಿಜಾಂಗದ ವಿದ್ಯೆಯಲಿ ನಲಿದು ಪಾಡಿದರು ಹರಿಮಹಿಮೆಗಳನು (ನಿಭಾಗ. ೩-೯-೩೮).

[ ಜೋಡಿ$_1$ + ಕೆದಱು$_1$ ( < ಕೆದಱ್$_1$) ]

**ಜೋಡಿಗ್ರಾಮ** (ನಾ). ಕೊಡುಗೆಯ ಗ್ರಾಮ : ನಾಲ್ಕಾರು ವರ್ಷಗಳಲ್ಲೇ ಒಂದು ನಾಲ್ಕು ಜೊತೆ ಜೋಡೀಗ್ರಾಮ ತೆಗೆದು ಹಾಕಿಬಿಡಬೇಕು (ಮೂಂಗಲ್ಯ. ೫೨). [ ಜೋಡಿ$_2$ + ಗ್ರಾಮ ]

**ಜೋಡಿಗ್ರಾಸ** (ನಾ). ಒಂದು ಬಗೆಯ ತೆರಿಗೆ(?): ಕ್ರಯ ಕಡ್ಡಾಯ ಬಿಟ್ಟಿ ಬೀಡಾರ ಸೇಸೆ ಮರನ ಬಿಟ್ಟಿ ಜೋಡಿಗ್ರಾಸ ಆ ಗ್ರಾಮದ ತೋಟಗಾರುಕೆ . . . ಮುಂತಾಗಿ ಸರ್ವಬಾಧಾ ಪರಿಹೃತವಾಗಿ (ಮೈಆರಿ. ೧೯೪೦, ೩೭-೪೪ ; 1399). [ ? ]

**ಜೋಡಿತೆಂಗು** (ನಾ). ಒಂದು ಬಗೆಯ ಸಸ್ಯ: ಜೋಡಿತೆಂಗು, ಕಡಲ್ತೆಂಗು (ಮೈಜಿಗಿ. ೫೦-೦೦೦೭). [ ? ]

**ಜೋಡಿದಾರ$_1$** (ನಾ). ಜೊತೆಗಾರ ; ಜೋಡಿಯವನು: ಇವರ ಜೋಡಿದಾರನು 'ಕೋಟ್' ಎಂದು ಒದರಿದಾಗ ವಿರುದ್ಧಪಕ್ಷದವರ ದಿವಾಳಿಯಾಗಿ ಬಿಟ್ಟಿತ್ತು (ಮೂರುದಾ. ೮). [ ಜೋಡಿ$_1$ + – ದಾರ$_4$ ]

**ಜೋಡಿದಾರ$_2$**, ಜೂಡಿದಾರ (ನಾ). ಜಮೀನು ಅಥವಾ ಗ್ರಾಮಗಳನ್ನು ಜೋಡಿಯಾಗಿ ಪಡೆದಿರುವವನು : ನನ್ನ ಸ್ನೇಹಿತ ಒಬ್ಬ ಭಾರೀ ಜೋಡಿದಾರ (ನಾಡಿಗೇ. ೫೪). **ಜೂಡಿದಾರ** : ಖಾಲಸಾತ ಭೂಮಿ ಜೂಡಿದಾರರಿಂದಾ (ಬೊಂಕಶಾ. ೧೯೩೪, ರಾಣಿಬೆನ್ನೂರ್. ೮೨-೭ : ?).

[ ಜೋಡಿ$_2$ + – ದಾರ$_4$ ]

**ಜೋಡಿದಾರಿ** (ನಾ). ಕೊಡುಗೆಯಾಗಿ ಬಂದ ಗ್ರಾಮದ ಅಧಿಕಾರ : ಶಾನುಭೋಗರಿಗೆ ಆ ಹಳ್ಳಿಗಳ ಜೋಡಿದಾರಿ ಇದೆ (ರೂಢಿ).

[ < ಜೋಡಿದಾರ$_2$ ]

**ಜೋಡಿಸು$_1$** (ಕ್ರಿ). ೧. ಸೇರಿಸು ; ಕೂಡಿಸು ; ಹೊಂದಿಸು : ಅವನಿಪಾಲನ ಗವಿಯ ಫಾಡಿಕೆ ಜೋಡಿಸಿತು ಗೀರ್ವಾಣರಾಲಿಗಳ (ಕುವ್ಯಾಕ. ೦೫-೦೭) ; ನೋಡಿದೊಡೊಂದೇ ದಿವಸದೆ ದಿನ ನಾಲ್ಕು ಜೋಡಿಸಿ ವೈವಾಹವಿಧಿಯ ಮಾಡಿದರು (ಮೋಹತ. ೦೩-೭೩) ; ಜೋಡಾಗಿ ಪೂಡುವೊಡೆ ಸಾಲದೇಳೇ ಹಯಂ ಜೋಡಿಸುವೆನೀ ತುರಗವಂ ತನ್ನ ತೇರ್ಗೆಂದು (ಜೈಮಿಭಾ. ೪-೦೪) ; ಅವಳು ತನ್ನ ಪುಟ್ಟ ಕೈಗಳೆರಡನ್ನು ಎತ್ತಿ ಜೋಡಿಸಿ ಕರೆದಳು (ಹಂಗಾಳ್ಯ. ೩೩). ೨. ಸೇರು ; ಜೊತೆಯಾಗಂ : ಘಟೆಯೊಳ್ ಘಟೆ ಜೋಡಿಸಿ ದಂತಜಾಲದೊಳ್ ಭೋಂಕನೆ ಪೊಣ್ಮೆ ತೋರ ಕಿಡಿ ಸೂಸೆ (ಗಿರಿಕ. ೬-೭೨); ಪೆಣ್ಣವಿಲೆಂದು ಕೇಕಿ ಬಂದಾ ಲಲಿತೋಲ್ಲಸತ್ಕಬರಿಗೊಯ್ಯನೆ ಜೋಡಿಸೆ ಕಂಡು (ಉದ್ಭಟ. ೨-೯೮). ೩. ಜೊತೆಮಾಡು : ನೋಡುವುದಕ್ಕೆ ಹುಲ್ಲೆಯ ಹೆಣ್ಣುಮಱಿಗಳ ಜೋಡಿಸಿ ಕೊಟ್ಟರುತ್ಸವದಿ (ಮೋಹತ. ೦೯-೭೭) : ಎನ್ನೊಳಾಹವಕ್ಕನುಗುಣನಂ ಜೋಡಿಸು (ಶಬಶಂ. ೪-೨೮). ೪. ಅಣಿಮಾಡಂ ; ಸಜ್ಜುಗೊಳಿಸಂ : ಜೋಡು ಹಕ್ಕರಿಕೆ ಹಲ್ಲಣ. . . ಜೋಡಿಸಿ ತುರಗವನೇಱ ರಾವುತರೊಡಗೂಡಿ ಬಂದರು ಭೂಪರೆಡೆಗೆ (ಅಂಜಜ. ೬-೮೦) ; ಮಾಧವನ ಮರ್ದಿಸಿ ನಿನಗೆ ಜೋಡಿಸುವೆನು ಮಹಾನಳನ (ಕುವ್ಯಾಸ. ೦೦-೫೫) ; ಮುಱಿದು ಹಱಹಂಚಾದ ನಿಜಮೋಹರವ ನೆಱ

ಸಂತೈಸಿ ಜೋಡಿಸಿ . . . ವಿರೋಧಿವ್ರಜದ ಘಟ್ಟಣೆಯ ಮುಟಿದು(ಕುವ್ಯಾ.ಕ. ೧೬-೨೪); ಆಗ ಮದನನು ತನ್ನ ಬಲವನು ಬೇಗದಲಿ ಜೋಡಿಸಲು (ನಳಚ. ೧-೩೭); ಮನ್ನೆಯ ಮಂಡಲೇಶ್ವರರು ಜೋಡಿಸಿದ ಕರಿ ತುರಗ ರಥವೆಡೆಯಾಡಿದವು (ತೊರರಾ. ೨-೭-೯); ಪದಾತಿ ಮೂಱುರ್ಬುದಂ ಜೋಡಿಸಿದರಾಹವಪ್ರೌಢರ್ಸುಬುದ್ಧಿ ಮೊದಲಾದ ಭಟರು (ಜೈಮಿಥಾ. ೨೨-೨). ೫. ಸಿದ್ಧವಾಗಂ ; ಅಣಿಯಾಗು ; ಅನುವಾಗು : ಕಳವೆಯಕ್ಕಿಯ ಕೂಳರಾಶಿಯ ಬಂಡಿ ಜೋಡಿಸಿತು (ಕುವ್ಯಾ.ಆ. ೧೦-೨೫); ಆಡಿದೆ ಬೆಳಗಾಗದ ಮುನ್ನ ಬಹೆನೆಂದು . . . ಜೋಡಿಸಿ ನೀ ಬರ್ಪ ವೇಳೆಗೆ ಭಾಸ್ಕರ ಮೂಡಿದ ನೆಂದಳಾ ಕುವರಿ (ಮೋಹತ. ೨೯-೫೯). ೬. ಒದಗು ; ಉಂಟಾಗು ; ಲಭಿಸಂ : ಜಗದಳಿವು ಜೋಡಿಸಿತೆನುತ ನಡುಗಿದನಬುಜಭವನಂದು (ಕುವ್ಯಾ.ಭೀ. ೬-೩೦). ೭. ತಿಳಿಸು ; ಹೇಳಿಕೊಡಂ : ಬುದ್ಧಿಯಂ ಜೋಡಿಸಿದ ಕೊರ್ವಳಣುಗೆಗೆ (ಜೈಮಿಥಾ. ೬-೨೭); ನೀನೆ ಬುದ್ಧಿಯ ಜೋಡಿಸೆನಲು ಸುಬುದ್ಧಿ ಪೇಳ್ದನು ನೀತಿ ಸಭೆಯಲಿ (ಬಿಜ್ಜಪು. ೫೦ ಸೂಚನ).

[ ಜೋಡು + – ಇಸು₃ ]

**ಜೋಡಿಸು₂** (ಕ್ರಿ). ಹೊಡೆ ; ಜಡಿ : (೬).

[ ಜೋಡಣ್₀ (P ← ಮರಾ. ಝೋಡಣೇ) + –ಇಸು₃ ]

**ಜೋಡು** (ನಾ). ೧. ಜೊತೆ ; ಜೋಡಿ : "ಜೋಡೆನಲು ಜೋಳಿ" (ಕಶಠ. ೪೦) : ಪಕ್ಕಿ ಪಕ್ಕೆಗೆ ಸಾರೆ ಜಜ್ಜರಿಯ ಜಕ್ಕವಕ್ಕಿಯ ಜೋಡು (ಸಮ್ಮಕೌ. ೧-೩೭). ೨. ಸಮಾನ ; ಸಾಟಿ ; ಸರಿ : "ಜೋಡು, ಸರಿಸ, ತೋಡು . . . ಸಂಗಡಂ – ಈ ೧೮ ಸಮಾನಕ್ಕೆ ಪೆಸರ್" (ಕಶಸಾ. ೦೫-೨೯೦) ; ಶ್ರೀಪಾಣ್ಡ್ಯರಾಜನೂರ್ಜ್ಜಿತತೇಜಂ[ವಿದ್ವಿ]ಷ್ಪ್ರಾರಾತಿಗೆ ವಿಂಗೆ ಜೋ[ಡೆನಿಸಿ] (ಸೌಇಇ. IX-i, ೦೫೪-೧೬ ; 1085) ; ಹರನ ಜೋಡು ಮುರಾಂತಕನ ಸಮ (ಕುವ್ಯಾ.ಸ. ೧೬-೬೯). ೩. ಎತ್ತಿನ ಜೊತೆ: ಮೂಡು ಬೈಲನು ಮಾಡಿಕೊಂಡೆನು ; ಜೋಡು ಹತ್ತನು ಕಟ್ಟಿದೆ (ಕಎಪು. ೦೮-೦೨). ೪. ಸಹಚರ ; ಸಂಗಡಿಗ : ಕೆಳೆಯ ಬೇಡುವ ಎದೆಗೆ ಯಾರು ಜೋಡು (ಉಯ್ಯಾಲೆ. ೩೭-೪). ೫. ಹಾದರ; ವ್ಯಭಿಚಾರ. 'ಜೋಡಾಡು' ಪರಾ. ೬. ಕಟ್ಟು ; ಕಂತೆ : ಓಡುವಾಕಳಿಗೆಳೆಯ ಹುಲ್ಲಿನ ಜೋಡ ತೋರಿಸಿ ನಿಲಿಸಿ (ವಿವೇಥ. ೬-೨೯) : ಬಲವಂತ ಶೇಣ್ವೆಯು ಇಸ್ಪೇಟಿನ ಜೋಡನ್ನು ಹೊರಹೊರಡಿಸಿದ್ದನು (ಅಂಬಿಕ. ೫). ಜೊತೆಗಾರರು ಯಾರೂ ಇರಲಿಲ್ಲ. ಇಸ್ಪೇಟು ಜೋಡಂತೂ ಮೊದಲೇ ಇರಲಿಲ್ಲ (ಮುಂಗಾಳು. ೩೯). ೭. ಗುಂಪು ; ಸಮುದಾಯ : ನರಶರದ ಜೋಡಿನ ಜುಂಜುಪೊಳೆಯುಲಿ ಜಾಹ್ನವೀಧರ ಜಾಱುವನೆ (ಕುವ್ಯಾ.ಆ. ೬-೦೦) ; ಜೋಡು ಜೋಡಿಲಿ ನಿಂದು ನೋಡಿದರಾ ಪುರಪತಿಯ (ಸೌಂದಕಾ. ೩-೬). ೮. ಮೆಟ್ಟು ; ಪಾದರಕ್ಷೆ : ಜೋಡು ಕಿತ್ತುಹೋದರೆ ತಾನೇ ಅದನ್ನು ಸರಿಮಾಡಿಕೊಳ್ಳುತ್ತಿದ್ದನು (ಪೈಗಂಬ. ೦೦೦) ; ಆರೂ ಕಾಲಿಗೆ ಜೋಡನ್ನು ಮೆಟ್ಟಿರಲಿಲ್ಲ (ದೇವೀಚೌ. ೦೩೭) ; ಜೋಡು ಕಂಡ ಕಾಲುಗಳು ನಮ್ಮೂರಿನಲ್ಲಿ ಎಲ್ಲೋ ನೂರ ಕ್ಕೊಂದು (ಹುಟ್ಟುಹ. ೬). ೯. ನೆಲೆ; ಆಶ್ರಯ: ಪವಳದ ಬೀಡು ಕಂಬುಗಳ ನಾಡು ಜಲೇಶನ ಜೋಡು . . . ಮಣಿಗಳಾಗರಮಂದೆಸೆದತ್ತು ಸಾಗರಂ (ಸೂಕ್ತಿಸು. ೨-೩೭). ೧೦. ಕವಚ; ಅಂಗರಕ್ಷೆ; ಉಕ್ಕಿನ ಅಂಗಿ: "ಜೋಡೆನೆ ಸವಗಮುದಕ್ಕಂ" (ಭಾರನಿ. ೩೯) : ಘನತರವಾದ ಪಂಚಾಕ್ಷರಿಯ ಜೋಡಂ ತೊಟ್ಟು (ಚನ್ನವ. ೭೬-೦೫): ಕಿಱುವುಲಿಯ ಜೋಡಂ ತೊಟ್ಟಂತಿರಿಟ್ಟಳ ವಾಗೆಯುಂ (ಅನಂಪು. ೨-೨೯ ವ) ; ಬೋಳೆಯಂಬೈದಬಿಲೆ ರಾಯನ ತೋಳನೆಚ್ಚನು ಜಡಿವ ಜೋಡಿನ ಮೇಲೆ ಮುಱಿದವು ಬಾಣ (ಕುವ್ಯಾ.ಕ. ೦೦-೨೭). ೧೧. ಒಂದಂ ಅಳತೆ: ನೆಲ್ಲ ಕಾಳು ೬೪ ಯೆಂಬುದು ಕರ್ಣಾಟಕದ ಜೋಡುವೊಂದು ಎನಿಸುವುದು ಯಿಂಥಾ ಜೋಡು ೧೨॥ ಗೆ ನೆಲ್ಲಕಾಳು ೮೦೦ (ವ್ಯವಹಾ. ಅನುಬಂಧ. ೦-೭-೯).

**ಜೋಡಾಗು** = ಜೊತೆಯಾಗು ; ಒಂದಾಗು : ಅಂಬಿನ ಬಂಬಲೊಳಂ ಜೋಡಾಗಿ ಕೋಡನೂಱಿ ಕೆಡೆದ ಗಜವ್ರಜಂಗಳ ಡೊಣೆವುಗಳಿಂದೊಱಿತು ಪರಿವ ನೆತ್ತರ ಕಡಲ್ಗಳುಂ (ಪಂಪಭಾ. ೦೦-೦೦೬ ವ). **ಜೋಡುಮಾಡು** = ೧. ಜೊತೆಗೂಡಿಸು ; ಸೇರಿಸಂ ; ಹೊಂದಿಸಂ : ಸಂಧಿಮಾಡಿ ಕುರುಪುತ್ರ ರೊಳೆನ್ನನೆ ಜೋಡುಮಾಟ್ಪಿರೇ (ಪಂಪಭಾ. ೯-೨೪); ರಸಮಯಮಂ ಕೃತಿಯಂ ಸೇವಿಸಿ ವಿರಸಮನೆಯ್ದೆ ಜೋಡುಮಾಡುವ ವಿಬುಧಪ್ರಸರಂ (ಪುಷ್ಪಪು. ೧-೩೭). ೨. ಸೇರು ; ಕೂಡು; ಒಟ್ಟಾಗು : ಕೂಡೆ ಗಱಿ ಗಟ್ಟಿತು ಚತುರ್ಬಲ ಜೋಡುಮಾಡಿತು ರಾಯನಿದಿರಲಿ (ಕುವ್ಯಾ.ಕ. ೪-೨೭). ೩. ಸಮಮೆಂದಂ ಪರಿಗಣಿಸು ; ಹೋಲಿಸು.

[ ದೇ.೫ ತುಳು. ತೆಲು. ಜೋಡು ]

**ಜೋಡುಕಟ್ಟು₁** (ಕ್ರಿ). ಜೊತೆಮಾಡು ; ಜೊತೆಗೂಳಿಸು : ಅವರಿಬ್ಬರೂ ದಸರೀಹಬ್ಬದಲ್ಲಿ ಕಾಳಗಕ್ಕೆ ಜೋಡುಕಟ್ಟಲ್ಪಟ್ಟರು (ಕಥಾಮಂ. IV, ೧).

[ ಜೋಡು + ಕಟ್ಟು₁ ]

**ಜೋಡುಕಟ್ಟು₂** (ನಾ). ಹೊಂದಾಣಿಕೆ ; ಜೋಡಣೆ : ದಾಸಸಾಹಿತ್ಯದಲ್ಲಿ ಶಬ್ದಗಳ ಜೋಡುಕಟ್ಟು ಬಹು ಸುಂದರವಾಗಿದೆ (ಜಗದಾ. ೭೧).

[ ಜೋಡು + ಕಟ್ಟು₂ ]

**ಜೋಡುಕಾರ್ತಿ** (ನಾ). ಜೊತೆಗಾತಿ ; ಸಂಗಾತಿ ; ಗೆಳತಿ ; ಸಖಿ : ತನ್ನಣೆವರೆಯದ ಗೆಡೆಯ ಜೋಡುಕಾರ್ತಿಯರೊಡನಾಡುತಾಡುತೆ (ರಾಮಾಶ್ವ. ೬೫-೨೮). [ ಜೋಡು + – ಕಾಱ + – ತಿ₁ (<–ಇತ್ತಿ) ]

**ಜೋಡುಖಾತೆ** (ನಾ). ಜಂಟಿ ಖಾತೆ; ಇಬ್ಬರು ಅಥವಾ ಹೆಚ್ಚು ಜನರು ಒಟ್ಟಾಗಿ ಇಟ್ಟ ಖಾತೆ: ಜೋಡುಖಾತೆ (Joint account) ವ್ಯವಹಾರಕ್ಕೆ ಅನುಕೂಲವಾಗುವಂತೆ ಒಬ್ಬರಕ್ಕಿಂತ ಇಬ್ಬರಾಗಲೀ ಹೆಚ್ಚಾಗಲಿ ಜನರು ಕೂಡಿಕೊಂಡು . . . ಜೋಡುಖಾತೆಗಳನ್ನಿಡಬಹುದು (ಬ್ಯಾಂಕಕ್ಕ. ೪೮).

[ ಜೋಡು + ಖಾತೆ₂ ]

**ಜೋಡುಗವಣೆ** (ನಾ). ಜೋಡಿಸಿದ ಕವಣೆ ; ಜಂಟಿಯ ಕವಣೆ : ಜೋಡು[ಪಾಠಾಂ. ಕೋಡು, ತೋಡು]ಗವಣೆಯ ತೂಱುಗಲ್ಲಿನ ಝಾಡಿ ಝಮ್ಮಿಡಿಸಿದವು ಗಗನವನು (ತೊರರಾ. ೬-೦೦-೩).

[ ಜೋಡು + ಕವಣೆ₁ ]

**ಜೋಡುಗೂಡು** (ಕ್ರಿ). ಒಟ್ಟಿಗೆ ಸೇರು; ಜೊತೆಗೂಡು: ಗಾಡಿಕಾತಿಯರು ಗಣನೆಯಿಲ್ಲದೆ ಜೋಡುಗೂಡಿರುವರು ಕೂರ್ಮೆಯೊಳು (ಹದಿಬ. ೦-೦೭).

[ ಜೋಡು + ಕೂಡು₁ ]

**ಜೋಡುಗೊಡು** (ಕ್ರಿ). ಜೊತೆಕೊಡು ; ಜೋಡಿಯಾಗು : ಇಷ್ಟ ಮಿತ್ರರಿಲ್ಲದ, ಬಂಧು ಬಾಂಧವರಿಲ್ಲದ, ಪರದೇಶವಾಸದಲ್ಲಿ ಸದಾ ನಾನು ಅವಳಿಗೆ ಜೋಡುಗೊಡಬೇಕೇ? (ಇಷ್ಟಕ. ೨೯೪). [ಜೋಡು + ಕೊಡು₁]

**ಜೋಡುದಗಲೆ** (ನಾ). ಜೊತೆಯಾದ ಕವಚ : ಇಱಿದರು ತಱಿದರು ಕೊಱಿದರು ಮೂಗನು ಜರಿಟೋಪಿ ಜೋಡುದಗಲೆಯ ಪರಿವಟ್ಟ ಮಾಡಿ (ಕಂಸವಿ. ೩-೬೮). [ ಜೋಡು + ದಗಲೆ₁ ]

**ಜೋಡುದೀವಟಿಗೆ** (ನಾ). ಜೊತೆಯಾದ ದೀವಟಿಗೆ ; ಜೋಡಿಯಾದ ದೀವಟಿಗೆ : ನೋಡ ಬನ್ನಿರೋ ಜನರು ಶ್ರೀಕೃಷ್ಣನ ಜೋಡುದೀವಟಿಗೆ ಸೇವೆ (ಪುರಂದ. ೨-೪೨ ಪಲ್ಲವಿ). [ ಜೋಡು + ದೀವಟಿಗೆ ]

**ಜೋಡುಮೇಳ** (ನಾ). ಜೊತೆ ಮೇಳ; ಜಂಟಿಮೇಳ : ಜೋಡುಮೇಳದ ಓಲಗದವರನ್ನು ಕರೆಸಬೇಡವೇ? (ಬಿಳುಮ. ೩೭).

[ ಜೋಡು + ಮೇಳ ( = ಮೇಲ) ]

**ಜೋಡುವಕ್ಕಿ** (ನಾ). ಜೊತೆಯಾಗಿರುವ ಪಕ್ಷಿ ; ಎಣೆವಕ್ಕಿ ; ಚಕ್ರವಾಕ: "ಜಕ್ಕವಕ್ಕಿ . . . ಜೋಡುವಕ್ಕಿಯು ತಾನದಕ್ಕುಮಾ ಚಕ್ರವಾಕಂ" (ಶಬ್ದಮಂ. ೨೯) ; "ಪೊಣರ್ವಕ್ಕಿ . . . ಜೋಡುವಕ್ಕಿ, ಗೆಡೆವಕ್ಕಿ,

ಅಮಳ್ವಕ್ಕಿ — ಈ ೭ ಚಕ್ರವಾಕಂ" (ಶಶಸಾ. ೧೦-೨೦೦); ಕುಕಿಲ್ವ ಪಕ್ಕಿ ಗಾವರಿಪ ಮದಾಳಿಯುಂಕುರಿಪ ಮೆಲ್ಲೆಲರೊಂದುವ ಜೋಡುವಕ್ಕಿ(ವೃಷವಿ. ೯-೨೪); ಜೋಡುವಕ್ಕಿಗಳಿಲ್ಲೆಯುಗಲದೆ ಕೂಡಿಯೊಂದಕ್ಕೊಂದು ಪ್ರೇಮದೆ (ರಘುವಂ. ೧೩-೩೦). [ ಜೋಡು + ಪಕ್ಕಿ$_1$ ]

**ಜೋಡುವಲೆ** (ನಾ). ಜೋಡಿಯಾಗಿ ಹೆಣೆಯಲ್ಪಟ್ಟ ಒಂದು ಬಗೆಯ ಬಲೆ: ತಿಣ್ಣವಲೆ ಜೋಡುವಲೆ ಹೊಸೆದಿಕ್ಕಣ್ಣವಲೆ . . . ವಿಂಧ್ಯಕನ ಕೂಡೆ (ಸಾಳ್ವಭಾ. ೫-೧೮). [ ಜೋಡು + ಬಲೆ$_1$ ]

**ಜೋಡುಶಬ್ದ** (ನಾ). ಜೊತೆ ಜೊತೆಯಾಗಿ ಬಳಸುವ ಶಬ್ದ: ಅರಿವೆ ಅಂಚಡಿ, ಕುಂದುಕೊರತೆ ಮುಂತಾದುವು ಜೋಡುಶಬ್ದಗಳು (ರೂಢಿ). [ ಜೋಡು + ಶಬ್ದ ]

**ಜೋಡುಸನಾದಿ** (ನಾ). ಜೋಡಿ ಓಲಗ; ಜಂಟಿಯಾಗಿರುವ ನಾಗಸ್ವರ: ಹಳ್ಳಿಗಳ ವಾದ್ಯಗಳಾದ ಕರಡಿಮಜಲು, ಜೋಡು ಸನಾದಿ, ಕಾಳೆ ಮೊದಲಾದವುಗಳ ಘೋಷಣೆಗೂ ಅಲ್ಲಿ ಸ್ಥಾನವಿತ್ತು (ಮಣ್ಣುಮ. ೧೩). [ ಜೋಡು + ಸನಾದಿ ]

**ಜೋಡುಸವಗ** (ನಾ). ಎರಡು ಕವಚ; ಜೋಡಿಕವಚ: ತಂತಮ್ಮ ಕರಿತುರಗರಥಸಂತತಿಯನಿಳಿದು ಸೀಸಕ ಜೋಡುಸವಗಮಂ ತೊಟ್ಟುಕೊಂಡು (ಸಮ್ಯಕ್ತ್ವ. ೮-೩೧). [ ಜೋಡು + ಸವಗ ]

**ಜೋಡೆ**(ನಾ). ಹಾದರಗಿತ್ತಿ; ಜಾರೆ: "ಸಿತಗೆ, ಜೋಡೆ, ಪಾಣ್ಬೆ, ಬೆದೆಗಾರ್ತಿ- ಈ ೪ ಜಾರೆಗೆ ಪೆಸರ್" (ಕಶಸಾ. ೧೯-೩೮೬); "ಜೋಡೆಯೆನೆ ಜಾರೆ" (ಕಶರ. ೪೧); ಅಲರ್ಗಣೆಯ್ನೊಳ್ ಸ್ಮರನಿರ್ದನಕ್ಕುಮೆಡೆವೋಪಾ ಜೋಡೆ ಕಾಮುಂಗೆ ಕಾದಲೆಯಕ್ಕುಂ (ಪಂಪಭಾ. ೪-೮೪); ತನ್ನ ಪೆಂಡತಿ ಜೋಡೆಯೆಂದು ಸಂದೇಹಂಬಡುವಾತನವಳ . . . ಸಾಯೆ ಸದೆಬಡಿದು (ಪಂಚತಂ. ೭೪-೨೦); ಮಳಲೊಳಂ ನೀರ್ಮಾಡುವರ್ ಜೋಡೆಯರ್ (ಧರ್ಮಾಮೃ. ೩-೧೩೪); ಈ ಜೋಡೆ ಕನಲ್ದು ಬಂದು ತಪವಂ ತಳೆವಳ್ (ದಶಕು. ೮-೧೫) [ ಜೋಡ + - ಎ$_2$ ]

**ಜೋಡೆಗೆಯ್ತ** (ನಾ). ಜಾರೆಯ ನಡವಳಿಕೆ; ಹಾದರ; ವ್ಯಭಿಚಾರ: ನೋಡಿ ನಾಡಾಡಿಯಲ್ಲದಾಕೆಗಳ ಜೋಡೆಗೆಯ್ತಂಗಳಂ ಕಂಡು ಮುಗುಳ್ನಗೆ ನಗುತುಂ (ಪಂಪಭಾ. ೪-೮೧ ವ). [ ಜೋಡೆ + ಕೆಯ್ತ$_1$ ]

**ಜೋಡೆತ್ತು** (ನಾ). ಒಂದು ಜೊತೆ ಎತ್ತು: ಮರುದಿನ ಜೋಡೆತ್ತಿನ ಬಂಡಿಯು ಆನೆಕುಪ್ಪ ಕಾಡಿಗೆ ಹೊರಟಿತು (ಕಪಪು. ೪-೭೦). [ ಜೋಡು + ಎತ್ತು$_2$ (<ಎಟ್ಟು$_1$) ]

**ಜೋಡೆಲುಬು** (ನಾ). ೧. ಜೋಡಿ ಎಲುಬು; ಜೊತೆಯಾಗಿರುವ ಮೂಳೆ. ೨. ದಷ್ಟಪುಷ್ಟವಾದ ಮೈಕಟ್ಟು: ಹೊಸತಾಗಿ ಕಸುಬಿಗೆ ಇಳಿದುದು. ಜೋಡೆಲುಬಿನ ಹುಡುಗಿ (ಬೆಂಗಬ. ೧೭೯). 'ಒಂಟೆಲುಂವು' ಪರಾ. [ ಜೋಡು + ಎಲುಬು (<ಎಲ್ವು) ]

**ಜೋತ** (ನಾ). ಕೈಜೋಡಿಸುವಿಕೆ; ನಮಸ್ಕಾರ: ಮದನಾರಿಯಿಪ್ಪ ತಿರಿನಲವೂರ್ಗೆ ತಾಂ ಬಂದು ನಿಂದು ಕಿವಿವಿಡಿದು ಕೈಮುಗಿದು ಜೋತಂ [ಪಾಠಾಂ. ಜೊತ್ತಂ]ಪೊತ್ತು ತಂದೆ ನೀಂ ಹೆಚ್ಚು ಬಾಳೆಂದು ಹರಕೆಯನಿತ್ತು (ಅರಿರ. ದೇ. ೧೭೩-೧); ಮರಿ, ಸ್ವಾಮಿಗೆ ಜೋತ ಮಾಡಮ್ಮ (ರೂಢಿ). [ ←ತೆಲು. ಜೋತ ]

**ಜೋತಿ** (ನಾ). ೧. ದೀಪ; ಬೆಳಕು: ಯತ್ವಲೋಪಕ್ಕೆ . . . ಜ್ಯೋತಿ- ಜೋತಿ (ಶಮದ. ೨೮೧ ಪ್ರಯೋ); ಜೋತಿ ಇದ್ದಲ್ಲಿ ಭೀತಿಯಿಲ್ಲ (ಗಾದೆ). ೨. ಆರತಿ: ಪ್ರೀತಿಯಲಿ ಲಿಂಗಂಗಳಿಗೆ ಹೊಸ ಜೋತಿ[ಪಾಠಾಂ. ಜ್ಯೋತಿ]ಗಳನೆತ್ತುವ (ಬಸಪು. ೧೯-೭೦). ೩. [ಯೋಗ] ಯೋಗಿಗಳಿಂ ಕಾಣುವ ಅಂತರಂಗದ ಬೆಳಕು: ಜೋತಿಯ ಧ್ಯಾನಬಲದಿಂದ ಸಕಲ ಸಿದ್ಧಿಗಳ ಪಡೆವನು ಯೋಗಿಯಾದವನು (ಗಗತಾ. ೧೯-೫). [<ಸಂ. ಜ್ಯೋತಿಸ್]

**ಜೋತಿಕಾಷ್ಠ** (ನಾ). ಒಂದು ಬಗೆಯ ಮೂಲಿಕೆ: ಚಿತ್ರಮೂಲ ತಳಕ ಜೋತಿಕಾಷ್ಠ . . . ಯಿವ ಸಮಾನಂಗೊಂಡು ಲೇಪವಂ ಮಾಡಲ್ (ವಾಶಾಜಿ. ೧೩-೧). [ ಜೋತಿ$_0$ + ಕಾಷ್ಠ$_2$ ]

**ಜೋತಿಷ್ಕ** (ನಾ). [ಜೈನ] ಭವನವಾಸಿ, ವ್ಯಂತರ, ಜ್ಯೋತಿಷ್ಕ ಮತ್ತು ಕಲ್ಪವಾಸಿ ಎಂಬ ನಾಲ್ಕು ಬಗೆಯ ದೇವತೆಗಳಲ್ಲಿ ಒಂದು ಪಂಗಡ; ಸೂರ್ಯ, ಚಂದ್ರ ಗ್ರಹಗಳೇ ಮೊದಲಾದ ಜ್ಯೋತಿಷ್ಕಲೋಕದಲ್ಲಿರುವ ದೇವತೆಗಳು: ವಾನಬ್ಯಂತರರುಂ ಚಂದ್ರಾದಿತ್ಯರೆಂಬಿರ್ಬ ಜೋತಿಷ್ಕರುಂ . . . ಚತುರ್ನಿಕಾಯ ದೇವನಾಯಕರುಮೆಲ್ಲಮೊಂದಾಗಿ (ಸುಕುಮಾ. ೮-೭೬ ವ). [ <ಸಂ. ಜ್ಯೋತಿಷ್ಕ ]

**ಜೋತಿಷ್ಮತಿ** (ನಾ). ೧. ಬೆಳಕುಳ್ಳುದು. ೨. ಒಂದು ಬಗೆಯ ಸಸ್ಯ; ಕಂಗುಂಗೆ: ಬೆಕ್ಕಿನ ಬುಡ್ಡೆಗಿಡ . . . ಜೋತಿಷ್ಮತಿ, ಚಿಟಕಿಹಂಬು, ಮಿಂಚುಬಳ್ಳಿ, ಕನಕಾಯ (ಮೃಜಿಗಿ. ೧೭-೩೦೮). [ <ಸಂ. ಜ್ಯೋತಿಷ್ಮತೀ ]

**ಜೋತೀಸ್ವರ** (ನಾ). ಬೆಳಕಿನ ಒಡೆಯ; ಜ್ಞಾನದ ಅಧಿಪತಿ: ಯೋಗಿಗಳ ಮನದ ಕೊನೆಯ ಜೋತೀಸ್ವರನುಂ ವೃಷಭನ ರೂಪಾಗಿ ಯಜಮಾನನುಂ ಆಚಾರ್ಯನುಂ ತಾನೆಯಾಗಿ (ಎಕ. XXIII, ೩೦-೬; 1265). [ ಜೋತಿ + ಈಸ್ವರ (<ಈಸರ) ]

**ಜೋತು$_1$** 'ಜೋಲ್$_1$' ಪರಾ.

**ಜೋತು$_2$** (ನಾ). ನೇತಾಡುವಂತೆ ತೂಗುಬಿಟ್ಟಿರುವ ವಸ್ತು; ಲೋಲಕ: ಈ ರೀತಿಯ ಸಾಮಗ್ರಿಗೆ ಜೋತು (pendulum) ಎನ್ನುತ್ತಾರೆ (ಬಾಲಪ್ರ. I, ೫೨೦). [ <ಜೋಲ್$_1$ ]

**ಜೋದ$_1$**(ನಾ). ಹೋರಾಟ ಮಾಡುವವನು; ಸೈನಿಕ: ಜೋದರಿಸುವಂಬಿನ ಬಲ್ಸರಿ ತಿಣ್ಣಮಾಗಿ (ಪಂಪಭಾ. ೧೧-೯೨); ಜೋದರ ಬಾಣಮಗ್ನಿಬಾಣಂ ಕರಚಕ್ರ ತಮೋರಿಚಕ್ರಮೆನಿಸಿದುದು (ಗದಾಯು. ೪-೩೭); ಪೋರ್ವ ಪದದೊಳ್ ಜೋದರ್ಕಳಿಕ್ಕೆಯಿಂ ತೆಗೆದಾರ್ದೆಚ್ಚ ಬಹೂಗ್ರ ನಿಷ್ಠುರ ಮಹಾನಾರಾಚಮುರ್ಚುತ್ತಿರಲ್ (ನೇಮಿಪು. ೧೧-೦೭೪); ಜೋದರುಚಿ ಕೈಮುಟಿದು ಕದನದ ಗಾಯದಲಿ ನೊಂದೊಟಲಿ ಬಾಯಲಿ ಬೆರಳನಿಟ್ಟುದು ವೈರಿ ಪಾಯದಳ (ನಳಚ. ೯-೩೪); ಪಾಂಡವರ ಕಡೆಯ ಜೋದರು ಭೀಷ್ಮನ ಮೈಗಾವಲ ದಳವನ್ನು ಮುತ್ತಿ ಭಂಜಿಸಿದರು (ಭೀಷ್ಮಚ. ೧೮೧). [ <ಸಂ. ಯೋಧ ]

**ಜೋದ$_2$** (ನಾ). ಆನೆಯ ಸವಾರ; ಮಾವಟಿಗ: "ಜೋದನೆಂದು ಮಾವಂತಂ" (ಕಶಸಾ. ೧೭-೩೪೧); "ಜೋದರ್ಕಳೊಳ್ ಮಾವತರ್" (ಕರ್ಣಾನಿ. ೪೯); ಜೋದರ್ ಜೋದರೊಳಾನೆಯಾನೆಯೊಳಗುರ್ವಪ್ಪನ್ನೆಗಂ ಕಾದೆ (ಪಂಪಭಾ. ೧೦-೯೩); ಮುರರಿಪುರಾಮರ್ ಸುಟಿದರ್ ಕರಿಶಿಕ್ಷಕರಶ್ವಶಿಕ್ಷಕರ ಜೋದರ ಮಲ್ಲರ ಮಾವಂತರ . . . ಕೇರಿಗಳೊಳ್ (ಜಗವಿ. ೬-೨೬); ಏಟಿದ ಸಾರಥಿಯ ಮಿಾಟಿ ನಿಂದ ಜೋದರ ಭೀಕರರೂಪು ಲೋಕಕ್ಕೆ ಪೊಸತಾಗೆ (೧೧೦ಕ. ೬-೫೫ ವ); ಕರಿ ಕೆಡೆಯೆ ಕಾಲಿನಲಿ ಜೋದರು ತೆರಳದೆಚ್ಚಾಡಿದರು (ಕುಪ್ವಾಕ. ೧೫-೨೮); ದಂತಿಶಿರವ ವಿಭಾಗಿಸಿ ಕೂರ್ಗಣೆಯಿಂದೆ ತಾಗಿಸಿ ಜೋದರ ತಲೆಯನಾಗಸಕಾಗಿ ಸಾಗಿಸಿದನು (ಮೋಹತ. ೩೪-೭); ಜೋದರ ಗೋಟಾಯಿಲರ ರಥಿಕರ . . . ಗಡಣಂ ನೆರೆದಿರೆ (ರಾಮಾಶ್ವ. ೫೦-೯). [ <ಸಂ. ಜೋದ? ]

**ಜೋದಕ** (ನಾ). ಯುದ್ಧ ಮಾಡುವ ವೀರ: "ಜೋದಕ-ಯೋಧಕ = ಕಾದಾಡುವವ" (ತದ್ಭಕೋ. ೫೦). [ <ಸಂ. ಯೋಧಕ ]

**ಜೋದಗಾಳೆಗ** (ನಾ). ಆನೆಯ ಸವಾರರ ಕದನ; ಮಾವಟಿಗರ ಹೋರಾಟ: ಜೋದಗಾಳೆ[ಪಾಠಾಂ. ಳ]ಗದಿಂದೆ ಬಳಿಕೆರಡು ಸೀಳಾಗಿ ಮೇದಿನಿಗೆ ಬೀಳ್ವಂತಿಭವನೆಚ್ಚವನ ಧನುಶ್ಛೇದಮಂ ಮಾಡಲು (ಜೈಮಿಭಾ. ೨೦-೨೭). [ ಜೋದ$_2$ + ಕಾಳೆಗ ]

**ಜೋದಸಂತತಿ** (ನಾ). ಮಾವಟಿಗರ ಸಮೂಹ: ಕುದುರೆರಾವ್ತರು ಜೋದ ಸಂತತಿ ಮದಗಜವ್ರಜವತಿರಥಾವಳಿ ಪ ದ ಚ ರ ರು ಚತುರಂಗಬಲ ವೊಂದುಳಿಯದಿದಟಿರೊಳಗೆ (ಕುವ್ಯಾ.ಗ. ೨-೪೦). [ ಜೋದ$_2$ + ಸಂತತಿ ]

**ಜೋದಾವಳಿ** (ನಾ).=ಜೋದಸಂತತಿ: ಬಳಿಕ ನಂಬುಗೆಗೊಂಡು ಜೋದಾ ವಳಿ ಬೇಗ ತಳುವದೋಡಿತು ದೆಸೆದೆಸೆಗೆ (ಕಂನವಿ. ೧೫-೦೦೧).

[ ಜೋದ$_2$ + ಆವಳಿ$_1$ (= ಆವಲಿ) ]

**ಜೋದಾಳ್** (ನಾ). ಯುದ್ಧಮಾಡುವವನು: ಮೇಲೆ ಕವಿಕವಿದೆಸುವ ಜೋದಾಳಾಳಿವಿಲು ಕೆದಱಿದವು ಬೀಸರಿಗೋಲನದ್ಭುತ ಸಮರವಾಯಿತು ಮತ್ತೆ ಪಾರ್ಥಂಗೆ (ಕುವ್ಯಾದ್ರೋ. ೬೧೩. ೨೮೯ ಪಂ.). [ ಜೋದ$_1$ + ಆಳ್$_3$ ]

**ಜೋನಗ** 'ಜೋನೆಗ' ನೋ.

**ಜೋನಾಯ್** (ನಾ). ಒಂದು ಬಗೆಯ ನಾಯಿ ; ಜೂಲುನಾಯಿ (?): ಕೊರಳೊಳಗಿಕ್ಕಿದ ಮಾಲೆ ಚಂದನದಣ್ಪುವೆರಸಿ ರನ್ನದ ವಿಷ್ಟರದೊಳು ಸ್ಥಿರ ವಾಗಿ ಕುಳಿತುಸಿರುವ ಜೋನಾಯನು ಧ ರ ಣೀ ಶ ಕಂಡುದಱಿಂದ (ಗೋಮಟೇ. ೧೫-೫೮). [ ಜೋ? + ನಾಯ್ ]

**ಜೋನಿ** 'ಜೋನೆ' ನೋ.

**ಜೋನಿಗರೆ** (ಕ್ರಿ). ರಸವನ್ನು ಒಸರು: ಫೇನ ಪಿಂಡೆಡೆಗೊಂಡ ಜಾಹ್ನವಿಯೊ ತನಿಬಿಂಕ ಜೋನಿಗರೆದುಕ್ಕಿಳಿವ ಸುರತರುವೋ (ಪರಕು. ೩-೩೫).

[ ಜೋನಿ (<ಜೋನೆ) + ಕರೆ$_2$ (<ಕಱೆ$_1$) ]

**ಜೋನಿಬೆಲ್ಲ** 'ಜೋನೆಬೆಲ್ಲ' ನೋ.

**ಜೋನುಗ** 'ಜೋನೆಗ' ನೋ.

**ಜೋನೆ, ಜೋನಿ** (ನಾ). (ಬೆಲ್ಲ ಮುಂತಾದ ವಸ್ತುಗಳು) ಕರಗಿ ದ್ರವ ರೂಪಕ್ಕೆ ಬಂದಿರುವ ಸ್ಥಿತಿ ; ಜಿನುಗಿರುವ ಸ್ಥಿತಿ: ಬೆಲ್ಲ ಜೋನೆ ಯಾಗಿದೆ (ರೂಢಿ). **ಜೋನಿ :** ಆ ಬಿಸಿ ಜಾಗದಲ್ಲಿ ಬೆಲ್ಲದ ಜೋನಿಯನ್ನು ಇಟ್ಟು, ನಾಯಿಯನ್ನು ಕಂಬದಿಂದ ಬಿಚ್ಚಿ ಅದರ ಬಳಿ ಕಟ್ಟಿದನು (ಮಲೆಮ. ೧೫೦) : ಮೊಸರಿಗೆ ಸ್ವಲ್ಪ ಸಕ್ಕರೆ, ಜೇನು ಅಥವಾ ಬೆಲ್ಲದ ಜೋನಿಯನ್ನು ಸೇರಿಸಿ ಊಟವಾದ ಮೇಲೆ ಕುಡಿಯಲು ಚೆನ್ನಾಗಿರುತ್ತದೆ (ಆಡುಶಾ. ೮೨) : ಅದರಲ್ಲಿನ ಕಶ್ಮಲವನ್ನು ಆರಿಸಬೇಕು, ಅದನ್ನು ಜೋನಿಯಾಗಿ (Syrup) ಮಾಡಬೇಕು (ಬಾಲಪ್ರ. II, ೬೪೯).

[ ದೇ.॥ ತುಳು. ತೆಲು. ಜೋನೆ ]

**ಜೋನೆಗ, ಜೋನಗ, ಜೋನುಗ** (ನಾ). ೧. ಒಂದು ದೇಶದ ಹೆಸರು: ಜಿನ ಜೋನೆಗ ಅರಿಮಣ ಕೊಂಕಣ . . . ಘೋಡಾಮುಖವೆಂದು ಹೇಳಲು ಪಡುತ್ತಿಂವಿದ್ದಂಥಾ ರಾಷ್ಟ್ರಾಂತರಗಳಲ್ಲಿ (ಎಕ. V, ಬೇಲೂರು. ೩-೯೨ ; 1397) ; ಲಾಳ ಜೋನೆಗ ಜೀನ . . . ವರಾಳ ವರದೇಶಾಧಿಪತಿಗಳು ಬಂದರೊಗ್ಗಿನಲಿ (ಕುವ್ಯಾಸ. ೬-೨) ; ನಡೆದುದು ಭೂರಿಬಲ . . . ಜೋನೆ [ಪಾಠಾಂ. ನ]ಗ ವಿಂಧ್ಯ ಬೋಟಕ ಪಾರಶಿಕ ಸಾಂಬ್ರಾಣಿ ಹುರುಮುಂಜಿಗಳ ಬ ಳಿ ವಿ ಡಿ ದು (ತೊರರಾ. ೪-೯-೪) ; ಬಂಗಾಳ ಜೈನ ಜೋನೆಗ[ಪಾಠಾಂ. ಜೋಗಿ] ಸಗರ . . . ಕಾಂಬೋಜದೇಶದ ಸಕಲ ಶರಣರೈತರುತಿರ್ದರು (ಚಬಪು. ೬-೪೯). ೨. ಆ ದೇಶದ ನಿವಾಸಿ : ತಲೆದಱಿಕೊಂಡ ಜೋನೆಗರ ಜಂಗುಳಿಯಂತೆ ಎಲೆಗಳಿದು ಬತ್ತಲಿಸಿ ನಿಂದ ತ ರು ಕು ಲ ದ ಂ ತೆ (ವಾಗೀರ. ದೇ. ೨೫೪-೧೫). ೩. ತುರುಕ: "ಜೋನೆಗ–ಯವನಕ=ತುರುಕ" (ತದ್ಭಕೋ. ೧೫). **ಜೋನಗ :** ೨. ಲೋಹಿತನೆಂಬ ವೀರನಂ ಗೆದ್ದು ಜೋನಗ ಜೀನಬೋಂಟರಂ ಅಪ್ಪಳಿಸಿ (ತುರಂಗ. ೧೯-೩೦). **ಜೋನುಗ :** ೨. ಜಾಣಾನ ಕಿನ್ನಾರಿ ಜಾತ್ರೆಗೆ ನಿಲುಭಾರ ಜಾಣ ನನ್ನಯ್ಯ ಮರುವಿನ ಕಿನ್ನಾರಿ ಜೋನುಗರಂಗಡಿಗೆ ನಿಲುಬಾರ (ಹಳ್ಳಿಯ. ೯೦).

[ <ಪ್ರಾ. ಜೋಣಿಯ./ಸಂ. ಯವನಕ ]

**ಜೋನೆಗಪಳಿ** 'ಜೋನೆಗವಳಿ' ನೋ.

**ಜೋನೆಗವಳಿ, ಜೋನೆಗಪಳಿ** (ನಾ). ಯವನರಿಂದ ತಯಾರಿಸಲ್ಪಟ್ಟ ಬಟ್ಟೆ : ಪಳದಿಯ ಜೋನೆಗವಳಿಯ ಪಲ ಬಗೆಯ ಪಲ್ಲಣದ ಪಕ್ಕ ಜಲ್ಲಿಯ . . . ಪರುಂತವಣೆ ಪಸರಿಸೆ (ರಾಜಶೇ. ೬-೧೧ ವ). **ಜೋನೆಗಪಳಿ :** ಹಳದಿ ಪಾರಿಯ ಪಚ್ಚೆ ಜೋನೆಗಪಳಿ ಸುವರ್ಣಾವಳಿಯ ಸಂಧ್ಯಾವಳಿ ಯುದಯರಾಗದಲಿ ರಚಿಸಿದ ಹಕ್ಕರಿಕ್ಕೆಗಳ (ಕುವ್ಯಾಭೀ. ೪-೪೯).

[ ಜೋನೆಗ + ಪಳಿ$_5$ (<ಪಟ$_7$) ]

**ಜೋನೆಬೆಲ್ಲ, ಜೋನಿಬೆಲ್ಲ** (ನಾ). ನೀರೊಡೆದು ಜಿಗಿಯಾದ ಬೆಲ್ಲ ; ಜಿನುಗುಬೆಲ್ಲ; ದ್ರವರೂಪದಲ್ಲಿರುವ ಬೆಲ್ಲ: ಜೋನೆಬೆಲ್ಲದ ರುಚಿ ಸ್ವಲ್ಪ ಹುಳಿ (ರೂಢಿ). **ಜೋನಿಬೆಲ್ಲ :** (ಚ).

[ ಜೋನೆ + ಬೆಲ್ಲ ]

**ಜೋಪಕ** (ನಾ). ರಹಸ್ಯ; ಗುಟ್ಟು: ಆ ಪರಮಗುರುಲಿಂಗ ಜಂಗಮಾರ್ಚನೆ ಗೈವ ಜೋಪಕವದೆಂತೆನೆ ವಿಲಾಸವುನನಾಗುತಂ ವ್ಯಾಪಕ ವಿರುದ್ಧ ನಾಗಿರಬೇಕು ಭಕ್ತಕುಲವೀ ಪರಿ ವಿರಕ್ತಿವಡದು (ಲಿಂಗಪು. ೧೮-೯).

[ <ಸಂ. ಗೋಪಕ ]

**ಜೋಪಡಿ** 'ಜೊಂಪಡಿ' ನೋ.

**ಜೋಪನ** 'ಜೋಪಾನ' ನೋ.

**ಜೋಪಾನ, ಜೋಪನ** (ನಾ). ೧. ಆರೈಕೆ; ಸಲಹುವಿಕೆ; ಕಾಪಾಡುವಿಕೆ; ರಕ್ಷಣೆ: "ಜೋಪಾನ – ಗೋಪನ = ಕಾದಿದುವಿಕೆ" (ತದ್ಭಕೋ. ೧೫): ಅಟ್ಟ ವಾತದ ತೈಲವಂ ತಾಂ ಬೊಟ್ಟಿಡಿಸಿ ಲೇಪಿಸುತ ಪಥ್ಯಂಗೊಟ್ಟದಕೆ ತಕ್ಕನಿತು ಜೋಪಾನವನದಾಚರಿಸಿ [ಪಾಠಾಂ. ಜೋಪಾಸನವನಾಚರಿಸಿ] (ಬಸವು. ೧೫-೮) ; ಚಂದ್ರಣ್ಣ . . . ಕಕ್ಕನ ಜೋಪಾನದಲ್ಲಿ ಬೆಳೆದ (ಬಿನ್ನುಹಿಂ. ೨೨). ೨. ಎಚ್ಚರಿಕೆ ; ಅವಧಾನ ; ಜೋಕೆ ; ಜಾಗರೂಕತೆ : ಜೋಪಾನ ತಪ್ಪದೆ ರಾಜಮಂದಿರವ ಸರ್ಪ ನಿಧಾನವ ಕಾಯ್ವಂತೆ ಕಾದಿರೆಂದಪ್ಪಣೆ ಗೊಟ್ಟ ರಕ್ಕಸಗೆ (ಮೋಹತ. ೧೩-೧೧) : ಅಡವಿ ಗಿಡಗಳ ಕಡಿವ ಕೊಡಲಿಯ ಮಡಗಿ ಫಲವೇನೆಂದು ಅಲ್ಲಲ್ಲಿಡದೆ ಜೋಪಾನದಲಿ ಮಡಗುವುದಿನ್ನೂ ಧೇನುವನೂ (ಪಬುಧಾ. ೫-೪೭) : ದವಸ ಧಾನ್ಯ ಮುಂತಾದ ಸಾಮಾನ ವನ್ನು ಜೋಪಾನದಲ್ಲು ಇರಿಸತಕ್ಕ ಬಗ್ಗೆ (ರಾಜೇಂದ್ರ. ೩೯). ೩. ಎಚ್ಚರಿಕೆ ಯನ್ನು ಸೂಚಿಸುವ ಪದ : ಬಯಸಿ ನೆನೆದುದಿದಱೊಳಗಿರ್ಪುದು ಜೋಪಾನ ಜೋಪಾನ ಜೋಪಾನವಿನ್ನು ನಾಂ ಪೋಪೆನು (ಸಿದ್ಧೇಪು. ೧೪-೩೨): ಜೋಪಪನ ಜಾರಿ ಬಿದ್ದೀಯೆ (ರೂಢಿ).**ಜೋಪನ:** ೧. ದೇವಿಯನು ಜೋಪನವ ಗೈಯುತ ದೇವ ಬಿಲುದುಡುಕೇಳು (ರಾಮಾಸಂ. ೨-೪-೩೯).

**ಜೋಪಾನಮಾಡು** = ಸಲಹು ; ಪೋಷಿಸು ; ಸಾಕು : ನನ್ನನ್ನು ನಮ್ಮಪ್ಪನ ಸೋದರತ್ತೆಯೇ . . . ಜೋಪಾನಮಾಡಿದ್ದಳು (ಮೇದಿಮು. ೨).

[ <ಸಂ. ಗೋಪನ./ತುಳು. ಜೋಪಾನ, ಜೋಪನೆ ]

**ಜೋಪಾನಗೆಯ್** (ಕ್ರಿ). ಜೋಪಾನ ಮಾಡು ; ಎಚ್ಚರಿಕೆಯಿಂದ ನೋಡಿಕೊಳ್ಳು : ಈ ಪಾಟಿಯ ಚಕ್ರಶಕ್ತಿಯಿಂದಸುರಚಮೂಪರ ಶಿರವ ಸೆಂಡಾಡಿ ಜೋಪಾನಗೆಯ್ದು ಜಗವ ರಕ್ಷಿಸುವ ಮಹೀಪತಿ ಶರಣು (ಮೋಹತ. ೨೯-೩೦). [ ಜೋಪಾನ + ಕೆಯ್$_1$ ]

**ಜೋಪಾಪಿ** (ನಾ). ಕೈಲಾಗದವನು; ನಿಷ್ಪ್ರಯೋಜಕ: ಆ ಗೆಳೆಯನ ಹತ್ತಿರ ನಾಲ್ಕು ದುಡ್ಡು ಬಿಕ್ಕೆ ಬೇಡಿ ಈ ಗೆಳೆಯನ ಹತ್ತಿರ ಒಂದಿಷ್ಟು ಬೇಡಿ. ಈ ಜೋಪಾಪಿಗಾಗಿ ಬೇಕಾಗುವ ಜೀನಸು ತರಬೇಕಾಗಿದೆ (ಚೀನಭಾ. ೨೯೭): ನಮ್ಮ ಬಾಬೂ . . . ಜೋಪಾಪಿಯಾಗಿದ್ದಾನೆ (ರಕ್ತಧ್ವ. ೨೩೭).

[ ?./ ತೆಲು. ಜೋಪಾಪ ]

**ಜೋಪಾಯನ** (ನಾ).=ಜೋಪಾನ ೨ : ಕುಚಗಳ್ಗೆ ತಾಪಸರ ದಿಟ್ಟಿ ಬಳಿ ಕಾದಪುದೆನುತ್ತೊಡನೆ ಜೋಪಾಯನಂಗೊಳಿಸಿ ಬೈಚಿಟ್ಟಳು (ಪರಕು. ೮-೧೭).

[ <ಸಂ. ಗೋಪಾಯನ ]

**ಜೋಪಾಸನ, ಜೋಪಾಸನೆ** (ನಾ). ಜೋಪಾನ ; ಆರೈಕೆ ; ಪೋಷಣೆ : ಯಾವ ನಾರೀಮಣಿಯ ಜೋಪಾಸನದಿಂದಾಗಿ, ಅನುಗ್ರಹದಿಂದಾಗಿ ಈ ನಮ್ಮ ಕುಮಾರನು ಪುನರ್ಜನಿಸಿ ಬರಲಿರುವನೋ (ನಾಗಕಾ. ೭೮) ; ಮಕ್ಕಳನ್ನು ನನ್ನ ಪ್ರಾಣವಿರುವ ತನಕ ಜೋಪಾಸನ ಮಾಡುತ್ತೇನೆ (ಒಡ್ಡಿಉ. ೭೫). **ಜೋಪಾಸನೆ:** ಇದುವರೆಗೂ ಜನರು ಹುಟ್ಟಿದ ಮಕ್ಕಳ ಜೋಪಾಸನೆಯನ್ನು ಅಷ್ಟು ಲೆಕ್ಕಿಸಿರಲಿಲ್ಲ (ಸಾಹಿಸಂ. ೧೩೦); ಈ ರೀತಿಯಾಗಿ ಆಕೆಯ ಜೋಪಾಸನೆಯಲ್ಲಿ ನಮ್ಮ ದಿನಗಳು ಚೆನ್ನಾಗಿ ಕಳೆದುವು (ಶ್ರೀಕಾಂತ. ೬೦). [←ಮರಾ. ಜೋಪಾಸನಾ, ಜೋಪಾಸಣೇ./ತುಳು. ಜೋಪಾಸನ]

**ಜೋಪಾಸನೆ** 'ಜೋಪಾಸನ' ನೋ.

**ಜೋಬ** 'ಸೋಂಬ' ನೋ.

**ಜೋಬದ್ರ** (ನಾ). ಸೋಮಾರಿ ; ಆಲಸಿ : ಅವನೊಬ್ಬ ಜೋಬದ್ರ (ರೂಢಿ). 'ಜೋಬದ್ರತನ' ಪರಾ. [<ಜೋಬ]

**ಜೋಬದ್ರತನ** (ನಾ). ಸೋಮಾರಿತನ; ಆಲಸ್ಯ : ಅವನ ಬೋರ್ಡ್ ಸ್ಕೂಲು ವಿದ್ವತ್ತು ಎಂದರೆ, ಒಂದು ತರಹದ ಜೋಬದ್ರತನ (ಸ್ವಾಮಿಸ್ನೇ. ೧೨೮). [ಜೋಬದ್ರ + – ತನ]

**ಜೋಬದ್ರೆ** (ನಾ). ಆಲಸ್ಯದಿಂದ ಕೂಡಿರುವವಳು : ಜೋಬದ್ರೆ ಥರ ಕೂತಿರಬೇಡ (ರೂಢಿ). [ಜೋಬದ್ರ + – ಎ₂]

**ಜೋಬು** 'ಜೇಬು' ನೋ.

**ಜೋಮಾಲೆ** (ನಾ). ಕೊರಳಲ್ಲಿ ಧರಿಸುವ ಒಂದು ಬಗೆಯ ಉದ್ದವಾದ ಸರ : "ಲಂಬನಂ . . . ಲಲಂತಿಕಾ – ಕೊರಳಲ್ಲಿ ನೇತಾಡುವ ಒಡವೆ. ಜೋಮಾಲೇ ಸರ, ಕಂಠೀಸರ, ಮಣಿಗಳ ಹಾರ ಮುಂತಾದದ್ದು" (ಸಿದ್ಧಾಂತಿ. ೧೭೩); ಕನಕನಿವ್ಮ್ನಗೆಯುಂ ಮನೋಹರ ಕನಕಜೋಮಾಲೆಗಳ ರೂಪವನನುಕರಿಸಿ . . . ತೋರ್ಪಂತೊಪ್ಪಿತು (ಅರ್ಜಾವಿ. ೧೭–೨೧); ಸಣ್ಣ ಕಂದಮ್ಮಗಳ ಕಣ್ಣೀನ ಕವಡೀಯ ತಣ್ಣನ್ನ ಜೋಮಾಲೆ ಕೊರಳೊಳಗಿತ್ತೋ (ನಾದಲೀ. ೩೮–೯) ; ಬಹಳೆ ಭರ್ಜಯಿಂದ ಹೊಡೆದವರಿಗೆ ಕಾಲುಗಗ್ಗರ, ಜೋಮಾಲೆ, ಈ ಮೇರೆಗೆ ಇನಾಂ ಕೊಡುತ್ತೇವೆ (ಚಿತ್ರಪಾ. ೮೦).

[<ಜೋಲ್₁ + ಮಾಲೆ]

**ಜೋಮಾಲೆಸರ** (ನಾ). = ಜೋಮಾಲೆ : ಆಕೆಯ ಕೊರಳಿಗೆ ಕೊಕ್ಕೆತಾತಿ, ಸರಪಣಿ, ಕರಿಮಣಿಸರ ಮತ್ತು ಜೋಮಾಲೆಸರಗಳನ್ನು ಸೂಡಿದಳು (ಹುಲಿಹಾ. ೨೦೦). [ಜೋಮಾಲೆ + ಸರ₆]

**ಜೋಮು₁** 'ಜೊಂಪು₁' ನೋ.

**ಜೋಮು₂** 'ಜುಮ್ಮು₃' ನೋ.

**ಜೋಮುಹಿಡಿ** 'ಜುಮ್ಮುಹಿಡಿ' ನೋ.

**ಜೋಯಿಸ, ಜೋಇಸ** (ನಾ). ೧. ಗ್ರಹಗತಿಗಳನ್ನು ತಿಳಿಸುವ ಶಾಸ್ತ್ರ; ಜ್ಯೋತಿಶ್ಶಾಸ್ತ್ರ : ಗಣಿತಂ ಜೋಯಿಸಚ್ಛಂದ . . . ಬಲ್ಲ ಶಬ್ದ ಸಂಸ್ಕಾರವುಳ್ಳಾತ ನಾಗದೇಸಿಗರ್ಗ್ಗೆ . . . ಮತ್ತರಿರ್ಪ್ಪತ್ತೈದು (ಎಇ. XX, ೬–೨೫ ; 1012) ; ಶಕುನಂ ಜೋಯಿಸಮಾದಿಯಾಗಿ ಪೆಱವುಂ ವಿಜ್ಞಾನ ವಿದ್ಯಾವಿಶೇಷ ಕಳಾಕಳಾಪದೊಳಾಂ ಸಮಗ್ರನೆನೆ (ಸುಕುಮಾ. ೩–೨೦) ; ಜೋಯಿಸವಮನೋದುವಂ ಜೋಯಿಸಿಗಂ (ಶಬ್ದಾನು. ೫೯೨ ಪ್ರಯೋ) ; ಹರಿಶರ್ಮನ ಜೋಯಿಸವನ್ನು ಎಲ್ಲರೂ ಹೊಗಳಿದರು (ಕಸರಿ. ೪). ೨. ಜ್ಯೋತಿಷ್ಯವನ್ನು ಬಲ್ಲವನು; ಜ್ಯೋತಿಷಿ: "ಜೋಯಿಸ (ಜೋತಿಸ, ಜೊಯಿಸ) – ಜ್ಯೋತಿಷ" (ತದ್ಭಕೋ. ೧೭) ; ಮಱಿಗಾಲ ಮುಂಟೆಂದು ತಪ್ಪಿದ ಜೋಯಿಸಂ ಬಾವಿಯ ನೀರನಡಕಿ ನೀರ್ವೊಯ್ದನೆಂಬ ಕಥೆಯಂತೆ (ಪಂಚತಂ. ೧೨೭–೨) ; ಜೋಯಿಸನ ಮಗಳ್ [ಪಸೆಯ ಮೇಲೆ] ರಂಡೆಯಾದಳ್ (ಧರ್ಮಾಮೃ. ೧೨–೨೮) ; ನೆಲೆದಪ್ಪಿದುದು ಗ್ರಹಮಾಲೆ ತಾ ರಾ ರಾ ಸಿ ಜೋಯಿಸ[ಪಾ ಠಾ ಂ. ತಿಷ]ರೋದು ಹುಸಿಯಾಯ್ತು (ಕುಮಾ.ರಾಮ. ೧೯–೧೯) : ಬಿಸರುಹಗಂಧಗಂಧಿನಿ ಕರೆಸಿದಳು ಜೋಯಿಸರ (ಮೋಹತ. ೨೩–೫೭) ; ಬಳಿಕ ಜೋಯಿಸರಂದು ಸುಮುಹೂರ್ತದೊಳು ಲಗ್ನಗಳ ಪೇಳೆ (ಕಂನವಿ. ೨೦–೭). **ಜೋಇಸ :** ೨. ಜೋಇಸ ಗೋವಿಂದ ದೇವಂಗೆ ಆಲೂರಲ್ಲಿ ಕೊಂಡಿಱುವನ ಮತ್ತ ೪ (ಕೂಲ್ಹಾಶಾ. ೨೦b–೩೦ ; 1278). [<ಸಂ. ಜ್ಯೋತಿಷ]

**ಜೋಯಿಸಚಕ್ರಿ** (ನಾ). ಜ್ಯೋತಿಶ್ಶಾಸ್ತ್ರಜ್ಞರಲ್ಲಿ ಶ್ರೇಷ್ಠನಾದವನು,– ಅಗ್ರಗಣ್ಯ : ಎಸೆವ ಮಱಿಗಾಲವಮಂ ಜೋಯಿಸಚಕ್ರಿಯೊಳ್ . . . ಭಾವಿಸಿ ಪೇಳ್ದಂ (ಜಟ್ಟಮ. ೧–೩೫). [ಜೋಯಿಸ + ಚಕ್ರಿ]

**ಜೋಯಿಸಮಾತು** (ನಾ). ಜ್ಯೋತಿಶ್ಶಾಸ್ತ್ರಜ್ಞನ ನುಡಿ ; ಜೋಯಿಸನ ಮಾತು : ಜೋಯಿಸಮಾತ ಕೇಳ್ದನ್ನ ತಂದೆತಾಯ್ಗಳು . . . ಕರೆದರು (ಶ್ರೀಪಾಲ. ೫–೮೩). [ಜೋಯಿಸ + ಮಾತು₁]

**ಜೋಯಿಸಿಗ** (ನಾ). =ಜೋಯಿಸ ೨ : "ಸಾಂವತ್ಸರಃ, ಜ್ಯೋತಿಷಿಕಃ . . . ಈ ೮ ಜೋಯಿಸಿಗಂ" (ಹಲಾಯು. ೬೭–೨೪೯); ಆ ಪೊತ್ತುಂ ಜೋಯಿಸಿಗರ್ ಪಾಪಗ್ರಹಮೆಂದು ಪೆಸರನಿಡೆ (ಸಮಪ. ೮–೧೬೨); ಮಾಂದರಿಗಂ, ಜೋಯಿಸಿಗಂ, ಸಂದಱಿಕೆಯ ಕಬ್ಬಿಗಂ ಸಮಂಜಸನೊಳನೇ (ಶಮದ. ೧೯೭ ಪ್ರಯೋ) : ಜೋಯಸಮನೋದುವಂ ·ಜೋಯಿಸಿಗಂ (ಶಬ್ದಾನು. ೫೯೨ ಪ್ರಯೋ) ; ನವಲಕ್ಷ್ಮಿಯರ ವಿಲಸಿತೋತ್ಸವ ಪೂಜೆಗೆ ಶುಭಲಗ್ನವ ಸಲೆ ಜೋಯಿಸಿಗರುಸಿರಿದರು (ಕಂನವಿ. ೨೨–೧). [ಜೋಯಿಸ + – ಇಗ]

**ಜೋರ್** (ನಾ). ಒಂದು ಅನುಕರಣ ಶಬ್ದ. 'ಜೋರನೆ' ಪರಾ.

**ಜೋರನೆ** (ಅ). ಒಂದೇ ಸಮನೆ: ನೆತ್ತರು ಬಿಡದೆ ಜೋರನೆ ಸುರಿಯೆ (ಬಸಪು. ೩೮–೨೮) ; ಆ ಬೆಳಕಿನ ಝಳಕ್ಕೆ ತಮ್ಮನ ಮೈ ಜೋರನೆ ಬೆವತಿತ್ತು (ಹೊಸಕ್ಕೆ. ೨೦೦) ; ಜೋರನೆ ಬಿಟ್ಟ ಬೆವರಿನಿಂದ ಸೀರೆಯೆಲ್ಲ ತೊಯ್ದು ಹೋಗಿತ್ತು (ಗ್ರಾಮಾಯ. ೧೩೪). [ಜೋರ್ + – ಅನೆ₁]

**ಜೋರಾವರಿ** (ನಾ). ಒತ್ತಾಯ; ಬಲಾತ್ಕಾರ; ಜುಲುಮೆ; ಜಬರದಸ್ತಿ : ನೀವು ಫೌಜು ಸಮೇತ ಜೋರಾವರಿಯಿಂದ ಆ ಶೀಮೆ ವಳನುಗ್ಗಿದ್ದೇ ಆದರೆ (ರಾಜೇಂದ್ರ. ೯೦). [← ಪಾರ. ಹಿಂ. ಮರಾ. ಜೋರಾವರೀ]

**ಜೋರಿಡು** (ಕ್ರಿ). ಸ್ರವಿಸು ; ಹೊರಸೂಸು ; ಪ್ರವಹಿಸು : ಸೂಳು ಮಿಗೆ ಸಂಗರದ ರವದುಬ್ಬಾಳಿನಲಿ ತಿರುಹಿಟ್ಟನರುಣಜಲಾಳಿ ಜೋ [ಪಾಠಾಂ. ರೆಘೋ]ರಿಡೆ ಋಷ್ಯಮೂಕ ಮಹಾಮಹೀಧರಕೆ (ತೊರರಾ. ೪–೨–೩೭) ; ಧವಳ ವಸನದಿ ವೀಳ್ಯ ಜೋರಿಟ್ಟು ತನಿಯರುಣ ಕಾಣಿಪುದು (ಜಿನಭಾ. ೫೮–೫೭). [ಜೋರು₂ (<ಸೋರ್₂)+ ಇಡು₁]

**ಜೋರಿಸು** 'ಸೋರಿಸು' ನೋ.

**ಜೋರು₁** 'ಸೋರ್₁' ನೋ.

**ಜೋರು₂** 'ಸೋರ್₂' ನೋ.

**ಜೋರು₃, ಝೋರು** (ನಾ). ೧. ವೇಗ ; ರಭಸ : ಜೋರಿನಿಂದೋಡಿಸಲು ಪದನದೆ ಸೋರುತಿಹ ನೊರೆಯಾಂತ ಕುದುರೆ (ಶ್ರೀರಾಜ. ೬೨, ಪೀಠಿಕೆ); ಸ್ವಲ್ಪ ತಡೆದು ಸಿಟ್ಟಿನಿಂದ ಉರುವಲ ಕಟ್ಟಿಗೆಯನ್ನು ಒಲೆಯಲ್ಲಿ ಜೋರಿನಿಂದ ತಿವಿದಳು (ಅಶೋಕ. ೨); ಮೋಹದ್ದೀನ ಸಾಹೇಬನು . . . ಕೈಯಲ್ಲಿ ದೊಣ್ಣೆಯನ್ನು ಹಿಡಿದುಕೊಂಡು ಹೊರಡುವ ಜೋರಿನಲ್ಲಿದ್ದನು (ರಂಗರೋ. ೨೦). ೨. ಒತ್ತಾಯ ; ಬಲಾತ್ಕಾರ : ಜೋರು ಜುಲುಮೆ ಮಾಡದ ಹೊರತು ಜನರು ಕಷ್ಟ ಸಹಿಸುವುದಿಲ್ಲ (ಜನನಾ. ೧೨). ೩. ಪ್ರಾಬಲ್ಯ ; ಜರಬು ; ದರ್ಪ : ಆದರೆ ಈ ಮೂರು ತಂಡಗಳಿಗಿಂತ ಇನ್ನೊಂದು ಜಾತಿಯದೇ ಜೋರು ಹೆಚ್ಚು (ಆಲಹೂ. ೧೧); ಈ ದಾದಿಯ ಜೋರು ಜಾಸ್ತಿಯಾಗಿದೆಯಲ್ಲಾ (ಮೊಗ್ಗು. ೮೧). ೪. ಹೆಚ್ಚು ; ಅಧಿಕ: ಬಿಸಿಲು ಬಹಳ ಜೋರಾಗಿದೆಯಲ್ಲವೇ (ಅಳಿಸಿ. ೫೨) ; ಅವರ ಅಳಿಯನಿಗೆ ಜಡ್ಡು ಜೋರು (ಗಂಗಾಸಾ. ೨). ೫. ಬಲವಾದುದಂ; ತೀವ್ರವಾದುದಂ:

ನಿನಗೆ ಜೋರಾದ ಪೆಟ್ಟು ಬಿದ್ದಂತೆ ಇದೆ (ಝೂರಾಡಿ. ೧೪); ಜೋರಾಗಿ ಬರೆಯಲಿಕ್ಕೆ ಒಂದು ವಿಷಯ ಆಯ್ತು ಅವನಿಗೆ (ಅಶ್ವಮೇ. ೩೦). ಝೋರು: ೧. ಅದು ಬರುವ ಝೋರಿಗೆ ಗುಂಡಾದ ಕಲ್ಲುಗಳು ಕಟಕಟನೆ ಪುಟ ನೆಗೆಯುತ್ತಿದ್ದವು (ಹುಟ್ಟಿಹ. ೩೭); ಅದಕ್ಕೆ ಅಭ್ಯಾಸ ಒಳ್ಳೇ ಝೋರಿನಿಂದ ಮಾಡಬೇಕಾಗಿದೆ (ಶಿಥ್ರಮ. ೧೭). ೩. ನಿಂದೇನೋ ಝೋರ ಇದ್ಹಾಂಗ ಕಾಣತದ (ಚಂದುಟ. ೫೦).

**ಜೋರಾಗಿ** = ೧.ವೇಗವಾಗಿ; ತೀವ್ರವಾಗಿ: ಎದೆ ಜೋರಾಗಿ ಬಡಿದು ಕೊಳ್ಳುತ್ತಿತ್ತು (ಅಲಹೂ. ೩೪); ಹಳಿಯ ಮೇಲೋಡುತಿದೆ ರೈಲು ಜೋರಾಗಿ (ಚಂದ್ರವೀ. ೦೦೫-೦೮); ರಾಯರು ಜೋರಾಗಿ ತಲೆ ಅಲ್ಲಾಡಿಸಿದುದರಿಂದ . . . ತಿಳಿಯಿತು (ರಾಯಕ. ೪೭). ೨. ದರ್ಪದಿಂದೊಡಗೂಡಿ : ನೀನು ನಿಜವಾಗಿಯೂ ಈ ಕೊಡದಲ್ಲಿದ್ದ ಭೂತವಲ್ಲ . . . ಎಂದು ಕೊಂಚ ಜೋರಾಗಿ ಹೇಳಿದನು (ಪಂಚಾಮ್ಮ. ೦೦). **ಜೋರಾಗು** = ವೇಗವಾಗು ; ಬಲವಾಗು : ಮಳೆ ಜೋರಾಯಿತು (ರೂಢಿ). **ಜೋರುಮಾಡು** = ೧. ವೇಗಗೊಳಿಸು; ತೀವ್ರಗೊಳಿಸು: ಹೊತ್ತುಕೊಂಡು ಹತ್ತಬಲ್ಲ ತ್ರಾಣವಿದೆ ಬನ್ನಿ ಎಂದು ನನ್ನ ಕಾಲು ಜೋರುಮಾಡಿದೆ (ಚಂಗಾಳ್ನ. ೩೪೯). ೨.ಬಲಾತ್ಕಾರ ಮಾಡು: ನೀನು ಜೋರುಮಾಡಿ ಹಡಗಿನ ಮೇಲೆ ಹತ್ತುತ್ತಿ (ದೇವಿಚಾ.೦೪೫). ೩. ದರ್ಪತೋರು; ಜಬರುಮಾಡು: ಮೊದಲು ನನಗೆ ಕೊಟ್ಟಿದ್ದೀಯೋ ಎಂದು ನಾನು ಜೋರುಮಾಡಿದೆ (ಶಾಲಿಮ. ೪೦); ಅರಸರ ಬಳಿ ಹೆಚ್ಚು ಜೋರು ಮಾಡಬೇಕಾದರೆ ದೂರದೃಷ್ಟಿ ಇದ್ದು ಮಾಡಬೇಕು (ಬಿಚ್ಚಿರು. ೦).

[ ←ಪಾರ. ಹಿಂ. ಮರಾ. ಜೋರ್ ]

**ಜೋರುಗಟ್ಟು** 'ಸೋರುಗಟ್ಟು' ನೋ.

**ಜೋರುದಾರ** (ನಾ). ಶಕ್ತಿವಂತ ; ಬಲವುಳ್ಳವನು : ಇಬ್ಬರೂ ಕಸ್ತಿನಲ್ಲಿ ದ್ದಾರೆ, ಜೋರುದಾರರು (ಭೀಮಕಾ. ೪). [←ಪಾರ. ಹಿಂ. ಜೋರ್‌ದಾರ್]

**ಜೋರುದಾರಿ** (ನಾ). ದರ್ಪವುಳ್ಳ ಹೆಣ್ಣು; ಜರಬುಳ್ಳವಳು; ಜಬರ್ದಸ್ತಿನವಳು: ಅವನು ಶ್ರೀಮಂತ ಕುಟುಂಬದ ಜೋರುದಾರಿ ಹೆಣ್ಣೊಬ್ಬಳನ್ನು ಮದುವೆಯಾಗಿದ್ದನು (ಪುನರು. ೨೨೨). [ ಜೋರುದಾರ + – ಇ$_3$ ]

**ಜೋರುಮುಡಿ** (ನಾ). ದರ್ಪ ಠೀವಿಗಳನ್ನು ಎತ್ತಿ ತೋರಿಸುವಂತಹ ಒಂದು ಬಗೆಯ ಕೇಶಶೃಂಗಾರ: ಸೋರುಮುಡಿಗಳು, ಜೋರುಮುಡಿ, ಬಾದಾಮಿ ಬೊಂಬಾಯಿ ಮುಡಿಗಳು (ಗಣೇಶ. ೭೨-೦೦).

[ ಜೋರು$_3$ + ಮುಡಿ$_3$ ]

**ಜೋರುವರಾತ** (ನಾ). (ಸಾಲ ತೀರಿಸಬೇಕೆಂದು ಮಾಡುವ) ಒತ್ತಾಯದ ತಗಾದೆ : (೬). [ ಜೋರು$_3$ + ವರಾತ ]

**ಜೋರೆ** (ನಾ). ಕೆಸರು ; ರಾಡಿ ; ಜವುಗು : ತಲೆ ಮುಂಡ ಕರುಳು ನೆತ್ತರು ಜೋರೆಯೇಳ್ವಂತಲಸದೆ ಕಾದಿ ಮಡಿದರು (ನೇಮಿಸಂ. ೩೦-೦೨); ದಾರಿಯಲ್ಲಿ ಒಂದು ಕಳ್ಳಬದಿಯ ಜೋರೆ ಸಿಕ್ಕಿತು (ಸುಮಜ. ೨೩೦). [?]

**ಜೋಲ್$_1$**, ಜೋಲು$_1$ (ಕ್ರಿ). ಜೋತು, ಜೋಲ್ದು (ಭೂತನ್ಯೂ). ೧. ನೇತುಬೀಳು ; ಇಳಿಬೀಳು ; ಕೆಳಬಾಗು : "ಜೋಲ್ – ಆಲಂಬನೇ (ತೂಗಬಿಡು)" (ಶಮಧಾ) ; ಜೋಲ್ದ ಪುರ್ವನೆತ್ತಿ ಕಟ್ಟಿದ ಲಲಾಟಪಟ್ಟದೊಳ್ (ಪಂಪಭಾ. ೦೦-೫೨ ವ); ಕಯ್ಯ ಕೊಡೆಯಿಂ ಮಯ್ಯ ತೆರೆಯಿಂ ಜೋಲ್ವ ಪುರ್ವಿಂ (ನಂದಿರ. ೭-೨೩); ಅಸಿಯಳ್ ಕಾಣದೆ ನಿನ್ನನೆನ್ನ ಕೊರಲಂ ಜೋಲ್ದತ್ತಳುದ್ವೇಗದಿಂ (ಅನಂಪು. ೮-೪೦); ಅಳಕಂ ಜೋಲ್ದಿರೆ ಹಾರಮೊರ್ಗುಡಿಸೆ (ದಶಕು. ೦೨-೨೭); ಫಲವಿತತಿ ಜೋತೊಱಗಿದುದು ಬನಬನಂಗಳೊಳ್ (ಜಿಬಪು. ೪೫-೦೦). ೨. ತೂಗಾಡು ; ತೊನೆದಾಡು ; ಅಲ್ಲಾಡು ; ಹೊಯ್ದಾಡು : ಮುಯ್ಯಿಂದಾವಗಂ ಸಂಭ್ರಮದೆ ರುಚಿರ ವಲ್ಕೋತ್ತರೀಯಾಂಚಲಂ ಜೋಲ್ದಿರೆ (ಕಾದಂಉ.೭೪೭); ಆಕಂಪದಿಂ ಜೋಲೆ ಕರ್ಣೋತ್ಪಳಮಾಲಿಪ್ಪಾಂಗರಾಗಂ ಮಸುಳೆ ಪುಳಕದಿಂ . . . ಎಸೆದಳ (ವರ್ಧಪು. ೬-೦೯); ಮದಿರಾಪಾನಮಂ ಮಾಡಿ . . . ಕುಣಿಯುತುಂ ಮಣಿಯುತುಂ ಮಾಲುತುಂ ಜೋಲುತುಂ (ಉದ್ಭಟ. ೫-೯೦ ವ); ಹೆಚ್ಚಡದ ಸೆಱಗಂ ಪಿಡಿದು ಕೈಯಿಂದ ಸೆಳೆಸೆಳೆದು ಜೋಲುತ್ತ ತೆಗೆವಂ (ಬಸಪು. ೪೭-೪೭). ೩.ಸಡಿಲವಾಗು; ಅಳ್ಳಕವಾಗು: ಮಿಸುಗುವ ತೋರ ಮಲ್ಲಿಗೆಯ ಜೋಲ್ವ ಬಟಲ್ಮುಡಿ ತೊಟ್ಟ ಮೌಕ್ತಿಕಪ್ರಸರ ವಿಭೂಷಣಾಳಿ (ಸುಕುಮಾ. ೯-೧೦೪); ೪. ಕುಸಿಬೀಳಂ; ನಿಸ್ಸತ್ತ್ವವಾಗು : ಮಱಸೊಂದಿದಂದದೊಳೆ ಜೋಲ್ದ ನಿಜೇಶನನಾ ಲತಾಂಗಿ ತೊಟ್ಟಗೆ ಕೊಳೆ ನೋಡಿ (ಪಂಪಭಾ. ೨-೦೯); ಮೂರ್ಛಾವೇಗದಿಂದಿಕ್ಕುವಟ್ಟನವೋಲ್ ಝೊಂಪಿಸಿ ಜೋಲ್ದು ನೇಲ್ದು (ಕಾದಂಉ. ೪೪೪); ತಲೆ ಪಱಿದು ಜೋಲ್ದು ತೊಪ್ಪನೆ ನೆಲದೊಳ್ ತನು ಬೀೞೆ (ಧರ್ಮಾಮ್ಮ. ೦೩-೦೬೨); ತೆತ್ತಿಸಿದಂಬಿನ ಗಱಿ ಮಿಱುಗುತ್ತಿರೆ ಬಾಯ್ಬಿಟ್ಟ ಪುಣ್ಗಳಿಂ ಜೋಲ್ವ ಭಟಂ (ವರ್ಧಪು. ೮-೫೫); ಒಱಲ್ದು ಪಡೆ ಗೋಳಿಟ್ಟುದಾನೆ ಕುದುರೆಗಳೊರೆವ ಕಂಬನಿ ಬಳಲ್ಕೆವಿಗಳಿಂ ಜೋಲ್ದುವು (ಜ್ಞಮಿಭಾ. ೦೩-೬೦). ೫. ಮನಸೋಲು ; ಪರವಶವಾಗು : ಮನದೊಳೊಱಲ್ದು ಜೋಲ್ದಳಿಪಿ ನೋಡಲೊಡಂ (ಪಂಪಭಾ. ೨-೪೦).

**ಜೋಲು$_1$** : ೧. ಕುಣಿವ ಕುಂತಾಗ್ರದಲಿ ಜೋಲುವ ಹಿಣಿಲುಗರುಳೊಪ್ಪಿದುವು (ಕುಮಾವ್ಯಾಭೀ. ೪-೪೪); ಕಟಿಯೊಳು ಜೋಲುವ ಪೀತಾಂಬರದ ಮೇಲುದಟ್ಟಿಯೊಳೊಪ್ಪುವ ಸುರಗಿಯ ಬಿಲ್ಲ ಕಾಲಪಾಯಕರೊಪ್ಪುತಿಹರು (ಕಂನವಿ. ೦೮-೬೩); ತಾಳೆಗಳು ಬೆಳೆದು, ಖರ್ಜೂರದಲಿ ಹಣ್ಣು ಜೋಲುತಿಹ, ಬಿಸಿಲ ಸೀಮೆಯಲಿ ನೆಲಸಿಹುದೆ (ಕಎಪು. ೪೭-೩). ೨. ಲೋಹದಾ ಗುಂಡುಗಳು ತಲೆಯನೆದೆ ಬೆನ್ನ ಜೋಲುತ್ತ ಹೊಡೆವುತಿರೆ (ವೀಶೈಪು. ೪-೦೯-೩೦).

**ಜೋತಾಡು** = ೧. ಜೋಲಾಡು ; ತೂಗಾಡು : ಗಿಳಿಗಿಂತ ಚೆನ್ನಾಗಿ ಮಾತಾಡಬಲ್ಲ, ದೊಡ್ಡದರ ಬಾಲಕ್ಕೆ ಜೋತಾಡಬಲ್ಲ (ನೆಲಮು. ೨೮-೨೦); ನೀಳವಾದ ಹೆಳಲು ಆಕೆಯ ಹೆಗಲ ಮೇಲೆ ಜೋತಾಡುತ್ತಿದ್ದಿತು (ಪ್ರಣಿಸ. ೧). ೨. ತಂಳಂಕಾಡು : ಸ್ವಾತೀಯ ಮಳೆ ಹುಯ್ದು ಸೀತೆಯ ಕೆರೆ ತುಂಬಿ ಜೋತಾಡುತ್ತೈತೆ ಕುಣಿಗಲು (ಹಳ್ಳಿಬಾ. ೩೨). **ಜೋತುಗೊಳ್ಳು** = ಅಂಟಿಕೊಳ್ಳು ; ಜೋತುಬೀಳಂ : ಅವನು ಆದರ್ಶಕ್ಕೆ ಜೋತುಗೊಂಡಿದ್ದಾನೆ (ರೂಢಿ). **ಜೋತುಬೀಳು** = ಅಂಟಿಕೊಳ್ಳು ; ಅವಲಂಬಿಸು ; ಆಧರಿಸು : ಜೀವಕ್ಕೆ ಜೋತುಬಿದ್ದ ಈ ಜಂತುಗಳಿಗೆ ಈಗ ಅನುಭವ ಬರುತ್ತಲಿದೆ (ಅಶ್ವಮೇ. ೩೦); ಭಾವಜೀವಿಯಾದ ನೆಕ್ಲದೋವ . . . ಹೊಸ ಜೀವನವಿಧಾನಕ್ಕೆ ನಿಸ್ಸಂಕೋಚವಾಗಿ ಜೋತುಬಿದ್ದನು (ಪುನರು. ೬೧); ಆದರೆ ಜೀವ ಅಷ್ಟಕ್ಕೇ ಸೋಲಲೊಪ್ಪದೆ ಯಾವುದೋ ದೂರದ ಆಸೆಗೆ ಜೋತುಬಿದ್ದಿತ್ತು (ರೂಪಸ. ೬೮). **ಜೋತುಹಾಕು**=ನೇತುಹಾಕು; ತೂಗುಹಾಕು : ನಿನ್ನನ್ನು ಸೀಳಿ ನಾಲ್ಕು ಭಾಗಮಾಡಿ ನಾಲ್ಕು ಬಾಗಿಲುಗಳಿಗೆ ಜೋತುಹಾಕುತ್ತೇನೆ (ಹಳ್ಳಿಹಾ. ೦೦೪). **ಜೋಲವಿಡು**=ಜೋತಾಡುವಂತೆಮಾಡು ; ನೇತುಬಿಡು : ಕಯ್ಯೊಳ್ ಸೋರೆಯ ಕಾಯಂ ಕೊಟ್ಟು ಬಾವಿಯೊಳಗೆ ಜೋಲವಿಡೆ (ಪುಣ್ಯಾಸ್ರ. ೪-೨೫ ವ).

[ ದೇ.II ಮಲ. ಓಲ್ ; ಗೊಂಡಿ. ಹೋಲ್ ]

**ಜೋಲ್$_2$**, ಜೋಲು$_2$ (ನಾ). ೧. ಜೋತುಬೀಳಂವಿಕೆ ; ಇಳಿಬಿದ್ದಿರುವಿಕೆ : ಚೆಲ್ವ ಪಣೆ ಕುರುಳ ಜೋಲಂಬೆಗಾಲು . . . ಸೊಗಯಿಸುವ ವರ ಶಿಶು (ಜ್ಞಮಿಭಾ. ೨೮-೦೪). ೨. ಸಡಿಲ ; ಅಳ್ಳಕ : (೬). ೩. ಹೊಯ್ದಾಟ; ತೂರಾಟ (?) : ಜಗುಟ್ದು ನಿಱಿ ಕರಂ ಜೋಂಪಿಪಂಗಂ ವಿಲುಪ್ತಾಕ್ಷರ ವಾಕ್ಯಂ ರೋಮಹರ್ಷಂ ಬಿಡದೆಸೆವೆಳೆ ಜೋಲ್ ಹೂಂಕೃತಂ ತೋರ್ಪ ಚೆಲ್ಲಂ ಕರಮೊಪ್ಪಲ್ . . . ಎಸೆದುದಸದಳಂ ಮದ್ಯಪಾನಾಂಗನೌಘಂ (ಉದ್ಭಟ. ೫-೮೫). **ಜೋಲು$_2$** : ೪. ಜೋತುಬಿಟ್ಟುದು : ಬೆಂಡೆಯನಿಕ್ಕಿ ಪಾವಡೆಯ ಜೋಲಿನೊಳಗರದಿಕ್ಕಿ . . . ಗುಡಪಾಕವೆಂದು ಹೆಸರು ಕರೆವುದು (ಸೂಪಶಾ. ೨-೨೯). [ <ಜೋಲ್$_1$ ]

**ಜೋಲಕಾರುಣ್ಯ** (ನಾ). ಒಂದು ಬಗೆಯ ತೆರಿಗೆ : ಜೋಲಕಾರುಣ್ಯ ಜಿಡೆ ದೆರ್ೞ ಪ ೩॥ ಬಿಟ್ಟೆಯ ಭಂ ೧ಕ್ಕಂ ಗ ೨ (ಎಕ. XVI, ಚಿಕ್ಕನಾ. ೬೦-೨೦ ; ?). [ ? ]

**ಜೋಲಾಡು** (ಕ್ರಿ). ನೇತಾಡಂ; ತೂಗಾಡು: ಆಡುವರು ಲತೆಯುಯ್ಯ ಲವ ಜೋಲಾ[ಪಾಠಾಂ. ಳಾ]ಡುವರು ಲತೆಗಳನು (ನಿಘಾಗ. ೧೦-೧೮-೯) : ಶಕ್ತಿ ಹೆಚ್ಚಿ ಅವೆಲ್ಲವೂ ಅರ್ಧನಿಮಿಷದ ತನಕ ಜೋಲಾಡಲು ಶಕ್ತವಾದ ವಂತೆ (ಜೀವಾತ್ಮ. ೧೭೮). [ ಜೋಲ್$_1$ + ಆಡು1 ]

**ಜೋಲಿ$_1$, ಜೋಲೆ$_1$** (ನಾ). ೧. ಕೆಲಸ ; ಕಾರ್ಯ : ತೀರಿತೆಲ್ಲಾ ಜೋಲಿ ಯಂದಿನ ಮಱುದಿನ ವೀರಕಟಕದ ಲಗ್ಗೆಯೊಳು (ಭರತ. ೪೪-೩೪) : ಆನು ವೊಂದಿನಿಸು ಜೋಲಿಯಂ ತೀರಿಸಿ ಬೇಗದಿಂ ಬಂದಪೆಂ (ಮಿತ್ರಗೋ. ೫೯) : ಜೋಲಿಗಳು ಸಣ್ಣವಿರಲಿ ದೊಡ್ಡವಿರಲಿ ಅವುಗಳಿಗೆ ಕಾಲವು ಸಮಾನವೆ ಹತ್ತುತ್ತದೆ (ಮುಂಬಯಿ. ೫-೨೦೨). ೨. ಗೋಜು; ಗೊಡವೆ; ಸಂಬಂಧ: ನಿನಗೆಯಿನ್ನೇಕಿಳೆಯ ಜಾರರ ಜೋಲಿ [ಪಾಠಾಂ. ಕೆ] ಬಿಡು ಜಾನಕಿಯ (ತೊರರಾ. ೬-೨-೨೫) : ಸೌಜನ್ಯದೊಳು ಮುಂದೆ ಕಾರ್ಯವ ಕೊಂಚೆ ನಾನೀ ಜೋಲಿ ಬೇಡೆಂದಳಿಂದು (ಭರತ. ೪೨-೫೫) : ಈ ಜೋಲಿ ನಮಗೇಕೆಂದು ಸುಮ್ಮನಿರಬೇಕೆ ? (ಸಾಹಿಜೀ. ೪೨). **ಜೋಲೆ$_1$** : ೨. ಲೋಲುಪ ಭವದ ಲೀಲೆ ಹಗಲು ಇರಳು ಜೋಲೆಯೊಳಗೆ ಬಿದ್ದು ವ್ಯಾಳ್ಯೆ ತಿಳಿಯದೆ ಲೆ (ಮೋಕ್ಷದೀ. ೪೮-೨). [ ದೇ.॥ ತಮಿ. ಮಲ. ಚೋಲಿ ; ತೆಲು. ಜೋಲಿ ]

**ಜೋಲಿ$_2$** 'ಜೂಲು$_2$' ನೋ.

**ಜೋಲಿ$_3$, ಝೋಲಿ** (ನಾ). ೧. ತೂಗಾಟ ; ತೊನೆದಾಟ ; ಹೊಯ್ದಾಟ : ಮನದ ಆರಡಿ ಆದರ ಮಧುರಸ ಕುಡಿದು ಹೊಡೆಯಲಿ ಜೋಲಿಯ (ಮಾನಸ. ೩೫-೨೦) : ತೂಗುತಿದೆ ನಿಜ ಬೈಲಲಿ ಜೋಕಾಲಿ – ಜೋಲಿ – ಲಾಲಿ (ಶರೀಫ. ೩೧ ಪಲ್ಲವಿ). ೨. ತಡ ; ಸಾವಕಾಶ : ಓಲಗ ವಾಗದ ಮುನ್ನ ಬಂದ್ಯೆ ನಸು ಜೋಲಿಯಾಯ್ತುದಱಿಂದ ನಿನ್ನ ಆಲಸ್ಯ ಗಂಡರೆಂದೆನ್ನದಿರು (ಭರತ. ೪೭-೫೬) : ಕೈವಲ್ಯಚೋಳನಹಿತರ ಮೇಲೆ ಪೋಗಿ ಮೂಱಬ್ದಮಂ ಜೋಲಿಯಾಗಲ್ ತನ್ನ ರಾಜ್ಯಕೆ ಬರನೈದೆ ಸಿರಿವಂತ ಸೆಟ್ಟಿ (ಚಬಪು. ೫೫-೨೭); ವಿವಾಹಮನಂದು ತಾಂ ಜೋಲಿಯಾಗದೆ ಮಾಡಿ (ಜಾಲಾಸ್ಯ. ೨-೫-೪೧). ೩. ಸಮತೂಕ ; ಆಯ ; ಏಕೋ ಎಂತೋ ಅವರಿಗೆ ಸ್ವಲ್ಪ ಜೋಲಿ ಹೋಯಿತು (ಶರಚ. ೮೦೮). 'ಜೋಲಿತಪ್ಪು' ಪರಾ. ೪. ಥಟ್ಟನೆ ಚಲಿಸುವುದಂ. 'ಜೋಲಿಕೊಡಂ' ಪರಾ. **ಝೋಲಿ.** 'ಝೋಲಿತಪ್ಪು' ಪರಾ.

**ಜೋಲಿಮಾಡು** = ತಡಮಾಡಂ ; ಸಾವಕಾಶವಾಗು : ಜೋಲಿ ಮಾಡದೆ ಜೋಕೆವಿಡಿದುಱ ಪ್ರಾತಃಕಾಲದ ರಾಗವನಱಿದು ಆಳಾಪಿಸಿದರು (ಭರತ. ೦-೭೨) : ಕಾಲವ ಚುತಿಸಲು ಸಲ್ಲಾ ಜೋಲಿಮಾಡಲು ಕಾರ್ಯ ಕೆಡುವುದು (ಜಿನರಾ. ೩-೧೦). [ ←ಮರಾ. ಝೋಲ, ಝೋಲಾ ]

**ಜೋಲಿ$_4$, ಜೋಲೆ$_2$**(ನಾ). ಪೊಂಡುತನ; ಹಟ; ಚಂಡಿತನ. **ಜೋಲೆ$_2$**: ಕಾಂತೆಯು ಪುರುಷರೇಕಾಂತದೊಳಗಿರ್ದು ಇಂತು ಜೋಲೆ ಮಾಡಲೇನು ಕಾರಣವು (ಸಾರಂಗ. ೧೦).

**ಜೋಲಿ ಮಾಡು** = ಪೊಂಡುತನ ಮಾಡಂ ; ಹಟಹಿಡಿ : ಬೇಡ ವೆಂದರೆ ಕೇಳಿರಕಟ ನೀವೇ ಜೋಲಿಮಾಡಿದಿರಿ (ಭರತ. ೪-೪೮). [ ? ]

**ಜೋಲಿಕೊಡು** (ಕ್ರಿ). ಚಲಿಸುವಂತೆ ಮಾಡು ; ಜೀಕ ಕೊಡು : ನಿರ್ಮಲೆ ಏರಿ ಕೂತ ಜೋಕಾಲಿಗೆ ಜೋಲಿಕೊಟ್ಟಳು (ಮೂರುದಾ. ೨೩೯).
[ ಜೋಲಿ$_3$ + ಕೊಡು$_1$ ]

**ಜೋಲಿಗಾರ** (ನಾ). ಶಿರುಗಾಡುವವನು ; ಅಲೆಮಾರಿ : ಜೋಲಿಗಾರನ ಬೇಲಿ ಮುರಿದರೆ ಹೊಲವೆಲ್ಲಾ ಜಾಲಿ (ಗಾದೆ).
[ ಜೋಲಿ$_3$ + – ಗಾರ (< – ಕಾಱ) ]

**ಜೋಲಿಡು** (ಕ್ರಿ). ತೂಗಾಡು ; ಓಲಾಡಂ : ಝೂಮ್ಮಿಡುತ ಜೋಲಿಡುತ [ಪಾಠಾಂ. ಜೋಲುತ್ತ]ಒಂದನೊಂದಂ ನೆಮ್ಮಿ ಸುಮ್ಮಾನವೇಱ ಮೆಯ್ಮಿ ಮಿರಿಯೆ ಸುಖಂ ಹೊಮ್ಮಿ (ಅನಾರ. ದೇ. ೧೮೨-೨೩).
[ ಜೋಲ್$_1$ + ಇಡು$_1$ ]

**ಜೋಲಿತಪ್ಪು, ಝೋಲಿತಪ್ಪು** (ಕ್ರಿ). ಆಯ ತಪ್ಪು ; ತೂಕ ತಪ್ಪು : ಮಂಗವು ಜೋಲಿತಪ್ಪಿ ನೆಲದ ಮೇಲೆ ಅಂಗಾತವಾಗಿ ಬಿದ್ದುಕೊಂಡಿತು (ಹೇಮಂತ. ೩೦೦); ಜೋಲಿತಪ್ಪಿ ಬೀಳುತ್ತಿದ್ದೆಯಲ್ಲಾ (ಮೂರುದಾ. ೨೪೪). **ಝೋಲಿತಪ್ಪು**: ಒಳಗೆ ನಿಂತವರೆಲ್ಲ ಝೋಲಿತಪ್ಪಿ ಒಬ್ಬರ ಮೇಲೊಬ್ಬರು ಬಿದ್ದುಬಿಟ್ಟರು (ಹೊಸಕ್ಷಿ. ೧೮೧). [ ಜೋಲಿ$_3$ + ತಪ್ಪು$_1$ ]

**ಜೋಲಿತಿನ್ನು** (ಕ್ರಿ). = ಜೋಲಿತಪ್ಪು : ಜೋಲಿತಿನ್ನುತ್ತ ಯಾಮಿನಾನ ಒರೆ ಯಿಂದ ಖಡ್ಗ ಹಿರಿದ (ನೂರಜ. ೭೧). [ ಜೋಲಿ$_3$ + ತಿನ್ನು (< ತಿನ್) ]

**ಜೋಲಿಸು** (ಕ್ರಿ). ಜೋತಾಡಿಸು ; ನೇತುಬಿಡು : ಕಣ್ಗಳನರೆಮುಚ್ಚಿ ತೋದ ಗಱಿಯಂ ನಸು ಜೋಲಿಸಿ ಪಕ್ಕಿಗಳ್ . . . ದನಿಗೆಯ್ಯುತು ಮಿರ್ದುವು (ಜಗವಿ. ೧೪-೧೧) ; ತನುವನೊಲೆದವು ದಡದಡಸಿ ಕಿವಿಗೊನೆಯ ಜೋಲಿಸಲಲ್ಲಿ ಮಡಿಗಾಲಿನಲಿ ಕುಸಿದವು (ಕುಮ್ಯಾವಿ. ೮-೮೩); ರೆಕ್ಕೆಗಳನುಱ ಜೋಲಿಸುತ್ತೆ ಜೊಂಪಿಪುದೊಮ್ಮೆ (ಚಬಪು. ೪೬-೬). [ಜೋಲ್$_1$+ –ಇಸು$_3$]

**ಜೋಲಿಹಿಡಿ** (ಕ್ರಿ).=ಸಮತೂಕವನ್ನು ಕಾಯ್ದುಕೊಳ್ಳು ; ತೂಕಹಿಡಿ : ತಮಗೆ ಜೋಲಿಹಿಡಿಯಲು ಆಧಾರವೇನಾದರೂ ಬೇಕಾಗುವದು (ಹೇಮಂತ. ೩೫೨) ; ಕಾಮಿನಿ ರೇಲ್ವೆ ಹಳಿಯ ಮೇಲೆ ಜೋಲಿಹಿಡಿಯುತ್ತ ನಡೆಯತೊಡಗಿದಳು(ಮುಕ್ತಿ. ೦೨೫). [ ಜೋಲಿ$_3$ + ಹಿಡಿ$_1$ (< ಪಿಡಿ$_1$) ]

**ಜೋಲಿಹೊಡೆ, ಝೋಲಿಹೊಡೆ** (ಕ್ರಿ). ೧. = ಜೋಲಿತಪ್ಪು : ಎಂಥ ಭಾರಕು ಜೋಲಿಹೊಡೆಯದಿಹ ತೂಗುತೊಲೆ (ನಲಮಾ. ೫೦-೭). ೨. ತೂಗಾಡಂ ; ಹೊಯ್ದಾಡಂ ; ಒಲೆದಾಡು : ಶ್ರೀನಗರ ಸರಸಿಯಂಲಿ ನೌಕೆ ನೂರು ತೇಂಕಾಡಿ ಜೋಲಿಹೊಡೆಯೆ (ಕರುಶ್ರಾ. ೩೬-೧); ಆ ಬೀದಿಯ ಮೇಲೆ ಒಬ್ಬ ಯುವಕ ಜೋಲಿ ಹೊಡೆಯುತ್ತ ಹೊರಟಿದ್ದಾನೆ (ಜಾಡುಹು. ೬೫) : ಶಕ್ತಿ ಇಲ್ಲದ ಅವನ ಕಾಲುಗಳು ನಿಲ್ಲಲು ಬಾರದೆ ಜೋಲಿಹೊಡೆ ಯುತ್ತ . . . ಬೀಳುವಂತಾಯಿತು (ಬಂಗಾಹೆ. ೮). **ಝೋಲಿಹೊಡೆ** : ೨. ಸುರೇಶ . . . ಅತ್ತ ಇತ್ತ ಝೋಲಿಹೊಡೆಯುತ್ತ ಹೊರಗೆ ಬಂದ (ಜೀವರಂ. ೧೯). [ ಜೋಲಿ$_3$ + ಹೊಡೆ$_1$ (< ಪೊಡೆ$_1$) ]

**ಜೋಲಿಹೋಗು** (ಕ್ರಿ). = ಜೋಲಿತಪ್ಪು : ಪಾಪ ಮುದುಕರು ಜೋಲಿ ಹೋಗಿ ಬಿದ್ದಾರು (ಮೋಹಿನೀ. ೦೦೪) ; ಜೋಲಿಹೋಗಿ ಪಕ್ಕದಲ್ಲಿರುವ ಚಿಕ್ಕ ಸ್ಟೂಲಿನ ಮೇಲೆ ಬಿದ್ದೆ (ಮುಂಗಾಮು. ೧೦೩) ; ಆದರೆ ಎಚ್ಚರದಪ್ಪಿ ಜೋಲಿ ಹೋಗುವಾಗ ತಿಮ್ಮಯ್ಯನವರು ಕೂಡಲೇ ಸಾವರಿಸಿ ಹಿಡಿದರು (ಕಾಗೆಕ. ೨೮). [ ಜೋಲಿ$_3$ + ಹೋಗು$_1$ (< ಪೋಗು$_1$) ]

**ಜೋಲು$_1$** 'ಜೋಲ್$_1$' ನೋ.

**ಜೋಲು$_2$** 'ಜೋಲ್$_2$' ನೋ.

**ಜೋಲುಗಡ್ಡ** (ನಾ). ಇಳಿಬಿದ್ದ ಗಡ್ಡ; ಉದ್ದವಾದ ಗಡ್ಡ ; ಹಾಗಾದರೆ ಈತನು ಈ ಚಿತ್ರಪಟದಲ್ಲಿ ಜೋಲುಗಡ್ಡದ ಋಷಿಗಳ ಗುಂಪನ್ನು ಬರೆದು ಮುಗಿಸಬೇಕು (ಶಾಕುಂತ. ೯೦-೩). [ಜೋಲು$_1$ (< ಜೋಲ್$_1$)+ಗಡ್ಡ$_1$]

**ಜೋಲುಗರುಳು** (ನಾ). ನೇತಾಡುವ ಕರುಳು : ಅಳ್ಳೆಗಳ ಘಾಯದ ಜೋಲುಗರುಳಿನಲೊಱಗುವುವು ಕೆಲವು (ತೊರರಾ. ೩-೩-೧೬).
[ಜೋಲು$_1$ (< ಜೋಲ್$_1$) + ಕರುಳು (< ಕರುಳ್) ]

**ಜೋಲುಗಾಲು** (ನಾ). ಸ್ಥಿರವಾಗಿ ನಿಲ್ಲದ ಕಾಲು; ನಿಶ್ಯಕ್ತವಾದ ಕಾಲು: ಹೈಮಾವತಿ ಎದ್ದು ಜೋಲುಗಾಲುಗಳನ್ನು ಎಳೆದೆಳೆದು ಮುಂದಿಡುತ್ತ ನಡೆದು, ಕಿಡಕಿಯ ಮಾರ್ಗವಾಗಿ ಮನೆಯನ್ನು ಸೇರಿದಳು (ಎರಸೆ. ೮೭).
[ ಜೋಲು$_1$ (< ಜೋಲ್$_1$) + ಕಾಲು$_1$ (< ಕಾಲ್$_1$) ]

**ಜೋಲುಗಿವಿ** (ನಾ). ೧. ಜೋತುಬಿದ್ದ ಕಿವಿ: ಜೋಲುಗಿವಿಯ ಆ ನಾಯಿ ಬಹಳ ಚುರುಕಾಗಿದೆ (ರೂಢಿ). ೨. (ಆಲಂ) ಚಾಡಿಯನ್ನು ಕೇಳುವವನು: ಅವನೊಬ್ಬ ಜೋಲುಗಿವಿಯವನು (ರೂಢಿ). 'ಇಳಿಗಿವಿ' ಪರ್ಯಾ.
[ ಜೋಲು$_1$ (<ಜೋಲ್$_1$) + ಕಿವಿ$_3$ ]

**ಜೋಲುಗೊಂಬೆ** (ನಾ). ಕೆಳಕ್ಕೆ ಬಾಗಿರುವ ಕೊಂಬೆ,–ರೆಂಬೆ: ಮೇಲುದನು ಮಧ್ಯಕ್ಕೆ ಸುತ್ತಿ ಕಾಸಿಯ ಬಿಗಿದು ಜೋಲುಗೊಂಬೆಯನೆರಡು ಕರಗಳಲ್ಲಿ ಹಿಡಿದು (ನವಮೋ. ೩೮–೫೪).
[ ಜೋಲು$_1$ (<ಜೋಲ್$_1$) + ಕೊಂಬೆ$_1$ ]

**ಜೋಲುಜಡೆ** (ನಾ). ಜೋತಾಡುವ ಜಟೆ; ಇಳಿಬಿದ್ದಿರುವ ಜಡೆ: ಆಲದ ಬಿಳಲಂತೆ ಜೋಲುಜಡೆಗಳ ಬಿಟ್ಟು (ಸರ್ವಜ್ಞ. ೫೮೨).
[ ಜೋಲು$_1$ (<ಜೋಲ್$_1$) + ಜಡೆ$_1$ ]

**ಜೋಲುತೋಲು, ಜೋಲುದೊಗಲು** (ನಾ). ಸಡಿಲವಾಗಿ ಇಳಿಬೀಳುವ ಚರ್ಮ: ಗೋಳುಮೋರೆಯ, ಜೋಲುತೋಲಿನ, ಜೂಲುಅರಿವೆಯ ತಿರುಕ (ಕಗದ್ಯ. ೭೪). **ಜೋಲುದೊಗಲು**: (ಕ).
[ ಜೋಲು$_1$ (<ಜೋಲ್$_1$) + ತೋಲು$_1$ (<ತೋಲ್$_1$) ]

**ಜೋಲುದುರುಬು** 'ಜೋಲ್ದುಱುಬು' ನೋ.

**ಜೋಲುದೊಗಲು** 'ಜೋಲುತೋಲು' ನೋ.

**ಜೋಲುಬಾವಲಿ** (ನಾ). ಕಿವಿಯಲ್ಲಿ ಧರಿಸುವ ಜೋತಾಡುವ ಒಂದು ಬಗೆಯ ಆಭರಣ,–ಬಾವುಲಿ: (ಕ).
[ ಜೋಲು$_1$ (<ಜೋಲ್$_1$) + ಬಾವಲಿ$_2$ (<ಬಾವುಲಿ$_2$) ]

**ಜೋಲುಬಿಡು** (ಕ್ರಿ). ಇಳಿಬಿಡು; ನೇತುಬಿಡು: ಅಳಿಯ ಮುತ್ತಿಗೆಗಳನು ಬೀಸದೆ ನೆಲಕೆ ಕಿವಿಯನು ಜೋಲುಬಿಡುವುದು ಬಲುಕಣಿಯ ಹಿಡಿಹಿಂಗೆ ಲಾಗಿಸುತಿರ್ದುದಾ ದಂತಿ (ಕುವ್ಯಾದ್ರೋ. ೩–೩೭).
[ ಜೋಲು$_1$ (<ಜೋಲ್$_1$) + ಬಿಡು$_1$ ]

**ಜೋಲುಬೀಳು** 'ಜೋಲ್ಬೀಳು' ನೋ.

**ಜೋಲುಮನಸ್ಸು** (ನಾ). ಉತ್ಸಾಹವಿಲ್ಲದ ಮನಸ್ಸು; ಸ್ಥಿರವಾಗಿರದ ಮನಸ್ಸು: ಈ ಜೋಲುಮನಸ್ಸನ್ನು ತ್ಯಜಿಸು; ಇದು ನಿನಗೆ ತಕ್ಕದ್ದಲ್ಲ (ತಚಭಾ. ೨೪೨). [ ಜೋಲು$_1$ (<ಜೋಲ್$_1$) + ಮನಸ್ಸು ]

**ಜೋಲುಮುಖ** (ನಾ). ಇಳಿಬಿದ್ದ ಮುಖ; ಬಾಡಿದ ಮುಖ; ಮ್ಲಾನವಾದ ಮುಖ: ಸೆಟ್ರು ಜೋಲುಮುಖ ತೋರಿ, 'ಹೌದು' ಎಂಬ ಭಾವಕ್ಕೆ ಸರಿಯಾಗಿ ಕೈ ಹೊಸಕಿಕೊಂಡರು (ಒಡ್ಡಿಉ. ೧೧).

**ಜೋಲುಮುಖ ಹಾಕು**=ಮುಖ ಇಳಿಬಿಡು; ನಿರುತ್ಸಾಹ ಹೊಂದು: ಮನೆಯ ಮೂಲೆಯಲ್ಲಿ ಜೋಲುಮುಖ ಹಾಕಿಕೊಂಡು ಕುಳಿತಿರುವ ಸ್ಥಿತಿಗಿಂತ . . . ಓಡಾಡಿಕೊಂಡು ಬಂದ ನಂತರ ನಮ್ಮ ಸ್ಥಿತಿಯೇ ಬೇರೆ (ಜೀವಾತ್ಮ. ೮); ರಾಜಮಂಡಲವು ಜೋಲುಮುಖ ಹಾಕಿಕೊಂಡಿತು (ವಚಭಾ. ೫೨); ಆದ್ದರಿಂದ ಅದು ಜೋಲುಮುಖ ಹಾಕಿಕೊಂಡು ಬೀದಿಬೀದಿಗಳಲ್ಲೂ ಅಲೆಯುತ್ತಿತ್ತು (ಕಿಂಕಥ. ೧೩೦).
[ ಜೋಲು$_1$ (<ಜೋಲ್$_1$) + ಮುಖ ]

**ಜೋಲುಮೋರೆ** (ನಾ). =ಜೋಲುಮುಖ: ಈ ನಿನ್ನ ಮಾಧವನು ಜೋಲುಮೋರೆಯಿಂದ ಕುಳಿತಿದ್ದಾನೆ (ಉದಮ್ಮ. ೭೭).

**ಜೋಲುಮೋರೆ ಹಾಕು**=ಮುಖ ಇಳಿಬಿಡು; ನಿರುತ್ಸಾಹ ಹೊಂದು: ಆದರೆ ಜೋಲುಮೋರೆ ಹಾಕಿಕೊಂಡು ಅವರೆಲ್ಲ ಹಿಮ್ಮೆಟ್ಟಬೇಕಾಯಿತು (ತತ್ತ್ವಪ್ರ. ೫೭೪); ಇನ್ನಿಷ್ಟು ಜೋಲುಮೋರೆ ಹಾಕಲು ಕೊತವಾಲನು ಪ್ರಯತ್ನ ಮಾಡಿದ (ಕೊತಕಾ. ೩); ಮಾಧವ ಜೋಲುಮೋರೆ ಹಾಕಿಕೊಂಡೇ ಒಳಗೆ ಬಂದ (ವಾತ್ಸಲ್ಯ. ೭೭).
[ ಜೋಲು$_1$ (<ಜೋಲ್$_1$) + ಮೋರೆ (<ಮೋಱೆ) ]

**ಜೋಲೆ$_1$** 'ಜೋಲಿ$_1$' ನೋ.

**ಜೋಲೆ$_2$** 'ಜೋಲಿ$_4$' ನೋ.

**ಜೋಲೆಗ** (ನಾ). ಜೋತುಬೀಳುವವನು; ಮೋಡನಾದ ವಿಟ (?): ಬೆನ್ನನೆ ಬರ್ಪ ಜೋಲೆಗರ ಬರವಂ ನಿರುಕಿಸುತುಂ ನಿಲ್ವ ಪೋಪ ದೇವಾಂಗನೆಯರುಂ ಕಣ್ಗೆವರ್ಪರ್ (ರಾಮಾಶ್ವ. ೭೩–೧೯).
[ ಜೋಲೆ$_2$ (<ಜೋಲಿ$_4$) + –ಗ$_2$ ]

**ಜೋಲ್ಗೆಚ್ಚಲ್** (ನಾ). ನೇತಾಡುವ ಕೆಚ್ಚಲು; ದೊಡ್ಡ ಕೆಚ್ಚಲು: ಪಾಲ್ಗೋಡಿನ ಜೋಲ್ಗೆಚ್ಚಲ ತೋರಮೊಲೆಯು ಎಳಗಂದಿ (ರಾಮಾಶ್ವ. ೧೦೦–೩೦). [ ಜೋಲ್$_1$ + ಕೆಚ್ಚಲ್ ]

**ಜೋಲ್ಗೈಯ** (ನಾ). ನೃತ್ಯ ಭಂಗಿಯಲ್ಲಿ ಕೈಯನ್ನು ಜೋತು ಬಿಟ್ಟಿರುವವನು; ನಟರಾಜ; ಶಿವ: ಮಿಸುಪ ಸುಲಿಪಲ್ಗಳಿಂ ಜಸವೆತ್ತ ಜೋಲ್ಗೈಯ್ಯ ನೀವೆಮ್ಮ ಪಾಲ್ಗಕ್ಕಱಿಂ ಬಹುದು (ವೀಶೈಪು. ೩–೧–೧).
[ ಜೋಲ್$_1$ + ಕೈ$_2$ (<ಕೆಯ್$_2$) + –ಅ$_7$ ]

**ಜೋಲ್ದುಟಿ** (ನಾ). ಇಳಿಬಿದ್ದ ತುಟಿ; ಜೋತಾಡುವ ತುಟಿ: ನೊರೆವಾಯ್ಜೋಲ್ದುಟಿ ಪೆರ್ಮೂಗರಲ್ದ ಕೆಮ್ಮೀಸೆ ಕೆದರ್ದ ಪಱಿಗಡ್ಡಂ (ವೃಷವಿ. ೧೧–೬೧). [ ಜೋಲ್$_1$ + ತುಟಿ$_2$ ]

**ಜೋಲ್ದುಱುಬು, ಜೋಲುದುರುಬು** (ನಾ). ೧. ಸಡಿಲವಾದ ಕೂದಲ ಗಂಟು; ಅಳ್ಳಕವಾದ ತುರುಬು: ಜೋಲ್ದುಱುಬನೊಂದಿಸುವ ನೆವದಿಂದೆ ಕೈನೆಗಪಿ (ಜೈಮಿಭಾ. ೫–೬೦). **ಜೋಲುದುರುಬು**: ೨. ಒಂದು ಬಗೆಯ ಕೇಶಾಲಂಕಾರ: ಗ್ರೀಕ್ ಹೆಂಗಸರ ಒಂದು ತೆರದ ಜೋಲುದುರುಬು (Greek-Knot. ಇಂಕನ್ನ.). [ ಜೋಲ್$_1$ + ತುಱುಬು$_2$ (<ತುಱುಂಬು$_2$) ]

**ಜೋಲ್ನವಿರ್** (ನಾ). ಇಳಿಬಿದ್ದಿರುವ ಕೂದಲು: ಜೋಲ್ನವಿರ ಕಪ್ಪು ಬೆಳ್ಪುಗಳ ಪೊಂಬೊಗರ ನೇವರಿಸಿ (ಅಲೂರ. ೯೪–೧೮೭).
[ ಜೋಲ್$_1$ + ನವಿರ್ ]

**ಜೋಲ್ಬೀಳು, ಜೋಲುಬೀಳು** (ಕ್ರಿ). ಇಳಿಬೀಳು; ಕೆಳಗೆಬೀಳು: (ಕ). **ಜೋಲುಬೀಳು**: ನಿದ್ದೆಯ ಹೊತ್ತಾಯಿತೆಂದರೆ . . . ಎವೆಗಳ ಕಾರ್ಯವು ಮಂದವಾಗುತ್ತದೆ; ಗದ್ದವು ಜೋಲುಬೀಳುತ್ತದೆ (ಮುಂಬಯಿ. ೬–೧೩೦); ಗದ್ದ ಜೋಲುಬಿದ್ದಿರಲಿಲ್ಲ (ಮಹಾಕಾ. ೦೯).
[ ಜೋಲ್$_1$ + ಬೀಳು$_1$ (<ಬೀೞ್$_1$) ]

**ಜೋಲ್ಮುಡಿ** (ನಾ). ೧. =ಜೋಲ್ದುಱುಬು: ಬಳಲುಮುಡಿ ಬಲ್ಮುಡಿಯು ಸೋಲ್ಮುಡಿಯು ಜೋಲ್ಮುಡಿಯು (ನವಮೋ. ೩೫–೧೮); ಎನ್ನೀ ಜೋಲ್ಮುಡಿಯ ಪೂಸರದಾಣೆ (ರಾಮಾಶ್ವ. ೮೯–೩೦). ೨. ಕಟ್ಟದೇ ಇರುವ ಕೂದಲು; ಮುಕ್ತಕೇಶ; ಬಿಡುಮುಡಿ; ಕಪ್ಪಗೆ ಅಲೆಅಲೆಯಾಗಿದ್ದ ಅವಳ ಜೋಲ್ಮುಡಿಯನ್ನು ಹಿಡಿದುಕೊಂಡನು (ವಚಭಾ. ೯೮).
[ ಜೋಲ್$_1$ + ಮುಡಿ$_3$ ]

**ಜೋವ** (ನಾ). ಅಸಹಾಯಕತೆ (?): ಬೆಂಬಲವಿಲ್ಲದ ಕನ್ನಗಳ್ಳನಂತೆ ಜೋವಂಬೊತ್ತಿರ್ಪನಂ ಪರಪರಿವಾರ ಸ್ತಿಮಿತಂ ಸ್ತಿಮಿತಸಾಗರ ತನೂಜನಿಸೆ (ಶಾಂತಿಪು. ೪–೩೦ ವ); ಭಾವಿಸುತುಂ ತನಗೆ ಮಹಾದೇವಂ ತಾನಿಷ್ಟದೆಯ್ದು ಮೆಂಬರ್ ಮತ್ತಂ ಜೋವ[ಪಾಠಾಂ. ಬೋವ]ದೆ ದೇವತೆಗಳುಮಂ ಸೇವಿಪನೆಂದಂದು ನಗಿಸಿಕೊಳ್ಳನೆ ತನ್ನಂ (ಸಮುಪು. ೯–೯೭).
[ <ಜೋಮು ? ]

**ಜೋವಿಸ** 'ಜೋಯಿಸ' ನೋ.

**ಜೋವು** 'ಜಂಮ್ಮು$_3$' ನೋ.

**ಜೋವೆಳಗ** (ನಾ). (?): ಇಂತು ವಿನಯಮಂ ಮಾಡಿ ತಣ್ಗದಿರನಂ ಜೊನ್ನವೆಳಗಿಂ ಬನ್ನವಟ್ಟು ಜೋವೆಳಗನಂ ಕುರಿತು (ಕಮುಮಾ. ೨–೭೭ ವ).
[ ? ]

**ಜೋವೇಟು** (ಕ್ರಿ). ಮರಗಟ್ಟಿದಂತಾಗು; ಜೊಮ್ಮುಹಿಡಿ : ಮದನಶಿಖಿ ಪರ್ವಿದುದೆಂದಿರದೆ ಬಿದಿರ್ವಳ್ಕದಟಿನ ಭರದಿಂ ಜೋವೇಟಿದ್ದೊಂದು ಕರಕಿಸಲಯಮಂ (ಕಾ ದಂ ಉ. ೩೩೩); ಪಯಃಕುಂಭಂಗಳಂ ಪೊತ್ತು ಜೊಮ್ಮನೆ ಜೋವೇಟಿದ ತೋಳ್ಗಳಂ ನಿಮಿರ್ವವೋಲಿಂದ್ರಂ, ಸುರಾದ್ರೀಂದ್ರದೊಳ್ (ಲೀಲಾವ. ೪-೧೧೧); ಲಜ್ಜೆಯ ಬಿಡೆಯದಲಿ ಜೋವೇ[ಪಾಠಾಂ. ರೆಘಾವ್ಮೋ]ಟಿದಂತೆವೆ ಮಿಡುಕದಿರೆ (ಕುವ್ಯಾಆ. ೮-೫೦).
[ಜೋವು (<ಜುಮ್ಮು₃) + ಏಟು₁ (<ಏಟ್₁)]

**ಜೋಶಿ,** ಜೋಸಿ (ನಾ). =ಜೋಯಿಸ: ಜೋಶಿಯರ ಕೇಳ್ಕಾರ ಜೋತಿಷ್ಯ (ಸಿದ್ಧಪು. ೪-೬೪); ಲಗ್ನ ಮುಹೂರ್ತಗಳಿಗಾಗಿ ಜೋಶಿ ಜಾತಿಯವರನ್ನು ಕರೆಯುವರು (ಕಥಾಗ. ೧೩೬). **ಜೋಸಿ :** ಶ್ರೀಮದಾಪುರ ಜೋಸಿ ನೇಮೆಯ್ಯಂಣನ ರಾಗಲ ಹೊಲ (ಎಕ. IX (8), ಕಾನಕಾ. ೧೪೨-೪; 17ನೆಯ ಶತ). [<ಸಂ. ಜ್ಯೋತಿಷಿನ್]

**ಜೋಷ** (ನಾ). ತೃಪ್ತಿ ; ಸಂತೋಷ ; ಮೆಚ್ಚಿಗೆ. [ಸಂ.]

**ಜೋಷವಾಕ್ಯ** (ನಾ). ಸಂತೋಷದ ಮಾತು : ಜೋಷವಾಕ್ಯದೊಳಿದ್ದ ಮಕ್ಕಳ ನೋಡಿ ಸಂಭಾಷಣೆಗೈದನಾ ತಂದೆ (ಭರತ. ೫೮-೮೧).
[ಜೋಷ + ವಾಕ್ಯ]

**ಜೋಸ** (ನಾ). = ಜೋಷ : ಜೋಷಂ—ಜೋಸಂ (ಶಮದ. ಮ. ೨೬೬ ಪ್ರಯೋ). [<ಸಂ. ಜೋಷ]

**ಜೋಸಿ** 'ಜೋಶಿ' ನೋ.

**ಜೋಸೆ,** ಜೊಸೆ (ನಾ). ಹೆಂಗಸು ; ಹೆಣ್ಣು ; ಸ್ತ್ರೀ : "ಪೆಣ್ಗಳ್ ಜೋಸೆಯರಪ್ಪರ್" (ಕರ್ಣಾನಿ. ೯) ; "ಜೋಸೆ — ಯೋಷಾ = ಸ್ತ್ರೀ" (ತದ್ಭಕೋ. ೧೬): ಬಿಡುಜಡೆಯ ನಿಡುಬಾಸೆಯ ಜೋಸೆಯರ್ ನಳಿದೋಳ ಸುಟಿವೊರ್ಕುಟ ಚೆಲ್ವೆಯರ್ (ರಾಮಾಶ್ವ. ೧೨೨-೨೪); ನಾಡಿಗರ ಗೊಂದಣಂ ಜೋಸೆಯರ ನೆರವಿ . . . ಅಲ್ಲಲ್ಲಿ ನೆಲೆಗೊಂಡಿರ್ದುವು (ಶ್ರೀರಾಮಾ. ೯೩-೪೪). **ಜೊಸೆ:** "ಪೆಣ್ಗಳ್ ಜೊಸೆಯರ್" (ಕವಿಕಂ. ೨೫೭). [<ಸಂ. ಯೋಷಾ]

**ಜೋಹ,** ಚೋಹ (ನಾ). ೧. ತೋರಿಕೆಯ ರೂಪ ; ವೇಷ ; ಸೋಗು: "ಜೋಹ (ಚೋಹ)—ಯೋಗ" (ತದ್ಭಕೋ. ೧೬); ಆತಂ ಗಡ ಹರಿ ಪಲವುಂ ಜೋ[ಪಾಠಾಂ. ಚೋ]ಹಂಗಳನಿದು ಯುಕ್ತಮಾಗಲಱಿಗುಮೆ ಪೇಳಿಂ (ಸಮುಪ. ೧೧-೯೧) ; ರವಿಕುಲನನಾಮಿಕರ ಜೋ[ಪಾಠಾಂ. ಚೋ]ಹಮಂ ತಳೆದಂ (ಹರಿಕಾ. ೧೧-೪೦) ; ಹೊತ್ತ ಜೋಹಕೆ ಚಾಳಿ[ಪಾಠಾಂ. ಚೋಹಕೆ ಚಾಳಿ, ಜೋಹದ ಜಾಳಿ] ಲೇಸಾಯಿತ್ತು (ತೊರರಾ. ೪-೪-೪೦) ; ಪೋಗಸಣೆಯ ಗರುವಾಯ ಗೂಳಿಯದ ಜೋಹಮಂ ಬಿಡು(ರಾಮಾಶ್ವ.೯೨-೨೩). ೨. ನಟ ; ಪಾತ್ರಧಾರಿ : ನೋಡಿಮಿತ್ತೊಂದು ಪಗರಣದ ಜೋಹಂ ಬಂದಿರ್ದುದೆನೆ (ನೇಮಿಪು. ೩-೧೧೩ ವ); ಪೆಱರ ಬಳಿಸಂದು ತನ್ನಂ ಮೆಱೆವಂ ಕವಿಯಲ್ಲವಾಟಕಾಱಿರ ಜೋಹಂ (ಮಲ್ಲಿಪು. ೧-೩೨). ೩. ಆಕಾರ; ರೂಪ: ಪಾಳ್ಪಸದಿಯ ಪೆಣ್ಣ ಜೋಹದವೊಲೊಪ್ಪಿದಳೊರ್ವಳನಂಗರಾಗದಿಂ (ಶಾಂತಿಪು. ೮-೮೮) ; ವಿನಯಾನ್ವಿತೆ ತಪ್ಪದೆ ಮಣಿಕಿ ಲೆಪ್ಪದ ಪೆಣ್ಣಾ ಜೋಹ ಮೆಂಬಂತಿರ್ದಳ್ (ಸುಕುಮಾ. ೯-೭); ಪೊದಱೊಳಗಣ ಬೆನಕನ ಜೋಹದಂತೆ (ಚಂದ್ರಪು. ೯-೧೧೧ ವ) ; ಕುಕ್ಕುಱಿಸಿರ್ದುದು ಮದಕರಿ ಬೆನಕನ ಜೋಹದಂದದಿಂದಾಹವದೊಳ್(ಶಾಂತೀಶ್ವ.೮-೮೪); ಕಿಱುವಿದಿರಿನ ಬಲ್ಪೊದಱೊಳು ಕಣ್ಗಿಱಿ ಮೆಱೆವಂತೆ ಬೆನಕನ ಜೋಹ (ನಾಗಕು. ೭-೫೨) ; ಪಲವಣ್ಣ ಜೋಹಮಂ ಪಣ್ಣೆ ಪಳಂಚಿ ಸಂಚರಿಸಿ ನೋಡುತೆ . . . ತೀಡಿತೊಂದೆಳೆಯಲರ್ ನನೆಯಂಬನ ಚಾರನೆಂಬಿನಂ (ಚಿಕವಿ. ೬-೩೪). **ಚೋಹ :** ೧. "ಚೋಹಮೆಸನಲ್ ವೇಷ" (ಭಾರನಿ. ೫೩) ; ಹಗರಣದ ಚೋಹದಂತಾಯಿತ್ತೆನ್ನ ಭಕ್ತಿ (ಬಸವ. ೮೯೧) ; ಆಹ ಇಳಿಯಿಳಿ ಗೊರವ ನಿನಗೀ ಚೋಹ ವೇಕೆನ್ನನಗೆ ಸಿಕ್ಕಿದೆ (ಬಸವು. ೩೨-೧೫); ಸಾಹಸಿಕರ್ಕೆ ದ್ರುಪದರಿವದಿರ ಚೋಹದೋಲೆಯಕಾಱಿತನ ಮನಗಾಹಿನಲಿ ಹೆಮ್ಮಕ್ಕಳಿವದಿರು (ಕುವ್ಯಾಭೀ. ೮-೩೦); ಶ್ವಾನಗೇಕೆ ಆನೆಯ ಚೋಹವಯ್ಯ (ಸಿದ್ಧೇವ. ೧೩೬-೪೦೨) ; ಜಟ್ಟಿಗನ ಚೋಹದಿಂ . . . ಗೂಢವಾಗಿ ಪಯಣಂಬೋಗಿ (ಮರಾಜ. ೨-೩೦ ವ). ೩. ಹೊಗದ ಮನೆಯಂ ಹೊಕ್ಕು ಲಲನೆಯರ ನುಣ್ಣನೆಯ ಚೋಹಕ್ಕೆ ಮನವೊಕ್ಕು (ಹಿಂಡೂರ. ೧-೨೦). [?. / ಸಂ. ಯೋಗ]

**ಜೋಹಡಿಗ** (ನಾ). ನಟ ; ಪಾತ್ರಧಾರಿ : ನುಡಿಯಿಪಂ ಮಾರ್ದಂಗಿಕಂ ಬೊಲ್ಪಿಸುಳ್ಪಿಡುವಂ ಜೋಹಡಿಗಂಬೋಲೇಂ ಕುಶಲನೋ (ರತ್ನಾಶ. ೯).
[ಜೋಹ + – ಅಡಿಗ₂]

**ಜೋಹರ₁,** ಜೋಹಾರ₁, ಜೋಹಾರು (ನಾ). ೧. ನಮಸ್ಕಾರ ; ಪ್ರಣಾಮ : ಹಾರುವ ಹಕ್ಕಿಗೆ ಜೋಹರೆಂಬರ್ (ಸೂಕ್ತಿಸು. ೧೩-೩೦) ; ಕರಮೆತ್ತಿ ಜೋಹರೆನುತುಂ ವಂದಿಸಲ್ಕೋಡಿ ವರರಥಾರೂಢನಂ ನೃಪತಿಯಂ ಕಂಡು (ಅರಾಜ. ೯-೫) ; ಇಲ್ಲದಿದ್ದರೆ, ಬಗೆ ಮುಟ್ಟಿಯೇ ಈ ಜೋಹದ ಜೋಹರವೋ (ಮಂತ್ರಶ. ೬೩-೪). ೨. ವಿಜ್ಞಾಪನೆ ; ಬಿನ್ನಹ: ಜನಪನೆಂದನು ಕೇಳನೇಕೈಯನ್ನ ಜೋಹರವ (ಬಸವು. ೪೬-೭). **ಜೋಹಾರ₁ :** ೧. ಆತನು ಕಂಡು ಜೋಹಾರೆಂದು ಪೊಡಮಡಲ್ (ಬಸವು. ೪೬-೫) ; ನೆಟ್ಟನೆ ಶಿವಭಕ್ತ ಜೋಹಾರ ಎಂದಡೆ (ಗಣಭಾ. ೧೪೦-೬); ಕಾಮಿನಿ ಸಹಿತ ಬರುತೆ ಕಂಡು ಜೋಹಾರೆನುತೆ ಭೂಮಿಯೊಳ್ವಂದಿಸೆ (ಪಾಸೋಪು. ೭-೭೪) ; ಅಲ್ಲಿಯ ಭಿಲ್ಲ ಜನರು ಕಂದಮೂಲ ಫಲಾದಿಗಳನ್ನು ಕಾಣಿಕೆಯಾಗಿ ಇತ್ತು ಜೋಹಾರ ಮಾಡಿ . . . ಆ ಸುಂದರಮೂರ್ತಿಗಳನ್ನು ನೋಡುವರು (ತುಳಸಿ. ೧೫೦). **ಜೋಹಾರು:** 'ಜೋಹಾರುಗೈ' ಪರಾ. [← ತೆಲು. ಜೋಹಾರು. / ಪ್ರಾ. ಜೋಹಾರ]

**ಜೋಹರ₂,** ಜಹರ್, ಜೋಹಾರ₂(ನಾ). ರಜಪೂತ ಸ್ತ್ರೀಯರು ಯಂದ್ಧ ಕಾಲದಲ್ಲಿ ಶತ್ರುವಶವಾಗಬಾರದೆಂದು ಅಗ್ನಿಪ್ರವೇಶದ ಮೂಲಕ ಪ್ರಾಣತ್ಯಾಗ ಮಾಡುತ್ತಿದ್ದ ಪದ್ಧತಿ : ರಜಪೂತ ಸ್ತ್ರೀಯರು ಈ ರೀತಿಯಾಗಿ ಪ್ರಾಣಕೊಡುವ ಪದ್ಧತಿಗೆ 'ಜೋಹರ' ಅನ್ನುವರು (ಹಿಂಮುಸ. ೫೬). **ಜಹರ್:** ಬಹುಕಾಲ ಪ್ರಚಲಿತವಾಗಿದ್ದ 'ಜಹರ್' ವ್ರತವನ್ನು ಮಾಡತೊಡಗಿದರು (ಆರ್ಯಕೀ. ೩೩). **ಜೋಹಾರ₂ :** ರಾಜಪೂತ ರಮಣಿಯರು ಜೋಹಾರವನ್ನಾಚರಿಸಿದರು (ಅಲ್ಪವಿ. ೩).
[←ಹಿಂ. ಜೋಹರ್, ಜೋಹಾರ್, ಜೌಹರ್; ಮರಾ. ಜೋಹಾರ್, ಜೌಹರ್; ಪಾರ. ಜೌಹರ್]

**ಜೋಹರಿ** (ನಾ). [ಸಂಗೀತ] ರಾಗಗಳಲ್ಲಿ ಒಂದು ಬಗೆ: ನೀಲೋತ್ಪಲಿನಿ, ಏಕಚ್ಛವಿ ಜೋಹರಿ . . . ವಸಂತಬಂಗಾಳವೆಂಬಿಪ್ಪತ್ತೆರಡು ರಾಗಗಳುಂ ಕ್ರಿಯಾಂಗದಿಂದ ಪುಟ್ಟಿದವು (ವಿವೇಕ. ೨೩೪). [?]

**ಜೋಹರಿಸು** (ಕ್ರಿ). ನಮಸ್ಕರಿಸು ; ವಂದಿಸು : ಜನಸಮುದಾಯವು ಹೊಸನ್ನ! ಹೊಸನ್ನ ! (ಜಯಜಯಾ !) ಎಂದು ಜೋಹರಿಸುತ್ತಿರಲು (ಗೂರ್ಲೊಥಾ. V, ಮುನ್ನುಡಿ). [ಜೋಹರ₁ + – ಇಸು₃]

**ಜೋಹಾರ₁** 'ಜೋಹರ₁' ನೋ.

**ಜೋಹಾರ₂** 'ಜೋಹರ₂' ನೋ.

**ಜೋಹಾರು** 'ಜೋಹರ₁' ನೋ.

**ಜೋಹಾರುಗೈ**(ನಾ). ನಮಸ್ಕಾರಮಾಡು; ವಂದಿಸು: ಸಾರಿ ದಧಿಮುಖನ ನಿತಱೊಳು ಜೋಹಾರುಗೈದಮರೇಂದ್ರಪೌತ್ರ . . . ಅಚ್ಚರಿಯನುಸುರಿದನು (ಅನಂಲಾ. ೪-೭-೧೧).
[ಜೋಹಾರು (<ಜೋಹರ₁) + ಕೈ₁ (<ಕೆಯ್₁)]

**ಜೋಹು** (ನಾ). ಭಲೆ, ಭೇಷ್ ಎಂಬ ಹೊಗಳಿಕೆಯ ಮಾತು: ಜೋಹು ಬಿರುಬಿರು ಕಣ್ಣ ಕೆಂಪಿಗೆ ಜೋಹು ನಿನ್ನೀ ಬಾತ ಬಸುಱಿಗೆ ಜೋಹು ಜೋಹೀ ಬಡಿವ ಕೈಕಾಲುಬ್ಬಸಂಗಳಿಗೆ (ಕಾಶಿರಾ. ೩೪-೪೨). [?]

**ಜೋಳ** (ನಾ). ೧. ಒಂದು ಬಗೆಯ ಧಾನ್ಯ : "ಜೋಳಂ ಕಳಿಕಂ ಯವ ನಾಳಂ" (ವಸ್ತುಕೋ. ೯೪-೧೭) ; ಕಾಯ್ದೋಡಿನ ಜೋಳದಂತಲರ್ದೊಡಾ ಕಂಪುಂ ಮನಸ್ಸಾಪವಮುಂ ಪುದಿದೆತ್ತಂ ಬರೆ (ಕಾವ್ಯಸಾ. ೫೮೮ ಕೂದ್ರಕ); ಹುರಿಗಡಲೆಯಂತಾನುಂ ಕಾಯ್ದಾಬಿದೋಡಿನ ಜೋಳದೊಳ್ಪರಲ ಲರುಪಂತಾನುಂ (ಶಾಂತಿಪು. ೭-೯೨) ; ಕೆಸಱೊಳ್ ನೆಲ್ ಬೆಳೆಗುಮಲ್ಲದೆ ಜೋಳಂ ಬೆಳೆಯಲಱಿಯದು (ಧರ್ಮಾಮೃ. ೧೧-೧೯೦) ; ಮೆಣಸು ಹುಳಿ ತೊಡೆ ಜೋಳದಿಂ ಕುಂದೆ (ಹದಿಬೆ. ೧೧-೧೯) ; ಜೋಳದಾ ಬೋನಕ್ಕೆ ಬೇಳೆಯಾ ತೊಗೆಯಾಗಿ (ಸರ್ವಜ್ಞ. ೧೬೦೭); ಒಮ್ಮತ್ತರ್ಗೆ ಇರ್ಕ್ಕುಳಗ ಜೋಳಂ ಕುಡುವುದು (ಇಅ. X, ೧೬೭-೪; 7ನೆಯ ಶತ). ೨. ಅನ್ನದ ಹಂಗು; ಉಪ್ಪಿನ ಋಣ : ತಳ್ವಿಱಿಯದಿರ್ದೊಡೆ ಜೋಳವಂನೆಂತು ನೀಗುವೆಂ (ಪಂಪಭಾ. ೧೦-೪೨) ; ಜೋಳದೊಳಾದ ಪಾಟಿಗಂ ಪತಿಹಿತವೃತ್ತಿಗಂ ಜಸಕಮಿನ್ನೆನಗಾಸೆವಡಲ್ಕೆ ಬರ್ಕುಮೇ (ಶಾಂತಿಪು. ೩-೭೦); ಜೋಳದ ಲೆಕ್ಕಮಂ ಕಳೆದೆ ನಾಂ (ಬಂಜರಿ. ೧೨-೧೯). ೩. ವೇತನ; ಸಂಬಳ : ತೋಳೊಂದಕೆ ಹನ್ನೆರಡು ಸಾವಿರ ಹೊನ್ನ ಜೋಳವ ಕೊಂಬ ರಾವುತರ ಮೇಳದಿಂದವಳೊಡನೆಯ್ತಂದರು ಸುರುತಾಳನ ಮೆಯ್ಗಾವಲವರು (ಕುರಾಸಾಂ. ೪೨-೪೭).

**ಜೋಳಕ್ಕೆ ತಪ್ಪು**=ಋಣ ತೀರಿಸದಿರಂ ; ಕೃತಘ್ನನಾಗಂ: ಪಾಟಿಯ ನೊಕ್ಕಾಳ್ದನ ಗೆಯ್ದ ಸತ್ಕೃತಮುಮಂ ಪಿಂತಿಕ್ಕಿ ಜೋಳಕ್ಕೆ ತಪ್ಪಿಯುಮಿಂ ಬಾಟ್ದುದೆ (ಪಂಪಭಾ. ೯-೮೪). **ಜೋಳದ ಪಾಟಿ, ಜೋಳದ ಪಾಳಿ**=ಅನ್ನದ ಋಣ ; ಅದಕ್ಕಾಗಿ ಸಲ್ಲಿಸುವ ಸೇವೆ ; ಉಪ್ಪಿನ ಹಂಗು : ಜೋಳದ ಪಾಟಿ ನಿಜಾದಿನಾಥನಾಹವದೊಳರಾತಿನಾಯಕರ ಪಟ್ಟನೆ ಪಾಟಿಸೆ (ಪಂಪಭಾ. ೧೪-೫೦) ; ತಾವಿರ್ವರುಂ ಕಯ್ದುವಂ ಬಿಸುಟರ್ ಜೋಳದ ಪಾಟಿಯಂ ಬಗೆದುದಿಲ್ಲಾ ದ್ರೌಣಿಯುಂ ದ್ರೋಣನುಂ (ಗದಾಯುದ್ಧ ೨-೧೧); ನಿರುತಂ ಜೋಳದ ಪಾಟಿಗೆನ್ನಸುವನಿತ್ತಾ ಖ್ಯಾತಿಯಂ ತಾಳ್ದುವೆಂ (ನೇಮಿಪು. ೧೨-೧೪೫); ಜೋಳದ ಪಾಳಿಯ ಬಗೆದು . . . ಘೋಳಾಯಿಲರು ಪೋಯಂದೇಱಿದರಂದಾಳೆ ತುರಗ ವೋಹರದೊಳು (ಕುರಾಸಾಂ. ೧೨-೮೯); ರಾಜಭಕ್ತಿ, ಜೋಳದ ಪಾಳಿ, ಆತ್ಮಾಭಿಮಾನ ಇತ್ಯಾದಿಗಳೊಂದೂ ನಿಮಗೆ ಇಲ್ಲವೇ ಇಲ್ಲವೆ (ಮಂತ್ರಶ. ೧೩-೫). **ಜೋಳದ ಬರ**=ದೊಡ್ಡ ಬರ: ಮೂರು ವರ್ಷದ ಬರ ಅಥವಾ ದೊಡ್ಡ ಬರ, ಜೋಳದ ಬರಗಳನ್ನು ಕಂಡಿದ್ದರು (ನನ್ನೂರು. ೧೯೨). **ಜೋಳದ ಹಂಗು**=ಜೋಳದ ಪಾಳಿ : ವಿವೇಕಭ್ರಷ್ಟನಾದ ಪ್ರಭುವಿನ ಜೋಳದ ಹಂಗಿಗಾಗಿ ಅವನ ಮೇಲೆ ಕನಿಕರಿಸಿ (ನಂಜುಂಡ. ೮೫). [ ದೇ.॥ ತಮಿ. ಮಲ. ಚೋಳ್ ; ತುಳು. ಜೋಳ ; ತೆಲು. ಜೊನ್ನ ; ಕೊಡ. ಜೋಳ ; ಕೋಲಾ. ಸೊನ್ನ ; ಪರ್ಜಿ. ಜೆನ್ನ ; ಗಡಬ. ಜೋನೆಲ್. / ಸಂ. ಯವನಾಲ ]

**ಜೋಳಗಳ್ಳ** (ನಾ). ಅನ್ನದ ಋಣ ತೀರಿಸದವನು; ಕೃತಘ್ನನಾದವನು: ನಿಜಾಧಿಪಂ ಬೆಸಸಿದೇರ್ಭೆಸನಂ ಕುಸಿದಿರ್ಮ್ಮೆ ಕೇಳ್ದು ಬಾಟ್ದಿಬಿಪನವ್ಯ ಸ್ಥಿತನನೊರ್ಬ್ಬೆಸಕಳ್ಕುವ ಜೋಳಗಳ್ಳರಂ ಪಟಿಯೆಡೆಯಿಲ್ಲದೊಲ್ಪಲೆಯು ತಿಪ್ಪುರ್ದು ಮಾವನ ಗನ್ಧಹಸ್ತಿಯಂ (ಎಕ. II, ೧೩೪-೩೨ : 982).

[ ಜೋಳ + ಕಳ್ಳ$_1$ ]

**ಜೋಳಗೆ** 'ಜೋಳಿಗೆ' ನೋ.

**ಜೋಳಪರಿ** (ನಾ). ಒಂದು ಬಗೆಯ ಶಿಬಿರ,-ಗುಡಾರ (?) : ಆವ್ಪುದ ಕೊಂಚೆಯಂ ತವಾಳದ ಪರಿವೆತ್ತ ಜೋಳಪರಿ ತಳ್ತದಿರ್ಮುತ್ತೆಯ ಕುಪ್ಪ ವೊಪ್ಪಿ ತೋಱಿದವು ಮನೋಜರಾಜ ಶಿಬಿರಂಗಳೆಂಬಿನಂ (ಚಂದ್ರಪು. ೭-೬೨) ; "ಕೂಡಿಕೆಯ ಅಂದ, ರಚನಾರೀತಿ" (ಪ್ರಭಣ್ಣ). [ ? ]

**ಜೋಳವೈಲಿ** (ನಾ). ಜೋಳದ ಕಾಳಿನಂತೆ ಗುಳ್ಳೆಗಳೇಳುವ ಒಂದು ಬಗೆಯ ಸಿಡುಬು ರೋಗ; ಸೀತಾಳೆ ಸಿಡುಬು: (ಕ). [ಜೋಳ+ವೈಲಿ$_1$]

**ಜೋಳಯ** 'ಚೂಳಿಯಂ' ನೋ.

**ಜೋಳವಾಳಗೆ** (ನಾ). ಅನ್ನದ ಋಣಕ್ಕಾಗಿ ಸಲ್ಲಿಸುವ ಸೇವೆ: ರಾಮಯ ನಾಯಕನ ಜೋಳವಾಳಗೆಗೆ ಮೆಚ್ಚಿ (ಎಕ. VIII, ಸಾಗರ. ೨೭-೧೩; 1241 ?)

[ <ಜೋಳವಾಟಿ ]

**ಜೋಳವಾಳಿ** 'ಜೋಳವಾಟಿ' ನೋ.

**ಜೋಳವಾಳಿತನ** (ನಾ).=ಜೋಳವಾಳಗೆ: ನಿರುತದಿಂ ಜೋಳವಾಳಿತನಕ್ಕೆ ನಿನ್ನನಾಂ ಸೇವಿಸಿದೊಡೆ (ಅರಾಚ. ೯-೨೫).

[ ಜೋಳವಾಳಿ (<ಜೋಳವಾಟಿ) + -ತನ ]

**ಜೋಳವಾಟಿ, ಜೋಳವಾಳಿ, ಜೋಟವಾಳಿ** (ನಾ). ೧. ಒಡೆಯನ ಋಣ ; ಉಪ್ಪಿನ ಹಂಗು; ಅನ್ನದ ಋಣ : ಸೆರಗಂ ಬೆರಗಂ ಬಗೆಯದೆ ಪೊರೆದಾಳ್ದನ ಜೋಳವಾಟಿ ನಿಲೆ . . . ಪರಿದುವುಭಯ ಬಲದ ಹಯಂಗಳ್ (ಪಂಚತಮಾ. ೧೩-೫೭) ; ಜೋಳವಾಟಿಯು ನಿರ್ವಹಣದ ನಿಬ್ಬಣಕ್ಕೆ ಬೀರಸಿರಿ ಪೊತ್ತು ಪೊಂಗಳಸದಂತೆ (ಅನಂಪು. ೧೧-೭೪ ವ). **ಜೋಳವಾಳಿ:** ಕಾಲಾಳಿರ್ಪ್ಪರನಿಱಿದು ಜೋಳವಾಳಿಯನೆಱಿದ ಬಾಸಿ . . . ಜೀವಿತವಾಗಿ ನಿಲಿಸಿದ (ಮೈಅರಿ. ೧೯೩೪, ೧೨-೭ ; 1117) ; ಸಿರಿವಳಲ ಚಾಕಗಾಉಡ ಜೋಳವಾಳಿಗಂ ವಾ[ ವೇ ? ]ಳೆವಾಳಿಗಂ ಸುರಲೋಕ ಪ್ರಾಪ್ತನಾದ (ಮೈಅರಿ. ೧೯೩೭, ೨೨-೯; ಸು. 1550); ಕವಡೆಯ ಬಿಂವಂ ಜೋಳವಾಳಿ ವಳ ವಾಳಿಯಂ ಮೆಱಿದಿರಿರಾಂತು . . . ಸುರಲೋ[ಕ] ಪ್ರಾಪ್ತನಾದ (ಎಕ. VIII, ಸಾಗರ. ೧೨೫-೦೨ ; 1216) ; ಸಲಹಿದೊಡೆಯನ ಜೋಳವಾಳಿಗೆ ತಲೆಯ ಮಾಱುವುದೊಂದು ಪುಣ್ಯದ ಫಲವು (ಕುವ್ಯಾಕ. ೨೭-೯) ; ಜೋಳ ವಾಳಿಯು ಹೊಲ್ಲ ಕೀಳಿನೊಳು ಇರ ಹೊಲ್ಲ (ಸರ್ವಜ್ಞ. ೧೪೫೩) ; ಕರ್ಣನ ಜೋಳವಾಳಿಯೋ ನಿರತಿಶಯ ಜಾಗವೊ ಮನಂಬುಗೆ (ಗಿಲಿವಿಂ. ೯೯-೧೪). ೨. ಧಣಿಯ ಋಣವನ್ನು ತೀರಿಸುವವನು: ಜೋಳವಾಳಿಯಾನಲ್ಲ ವೇಳೆ ವಾಳಿಯವ ನಾನಯ್ಯ (ಬಸವ. ೬೯೮). △ **ಜೋಟವಾಳಿ :** ೧. ತಳಿತ್ತಿಱಿದು ದೊಡೆಯನ ಜೋಟವಾಳಿಯಂ ಬಾಂಗಿಸಿ (ಬೊಂಕಶಾ. ೧೯೪೦, ಸಿರಸಿ. ೫೭-೯ : ?). [ ಜೋಳ + ಪಾಟಿ ]

**ಜೋಳವಿಸು** 'ಜೋಳಿಸು' ನೋ.

**ಜೋಳಿ$_1$** (ನಾ). ೧. ಸಮಾನ ; ಸಾಟಿ : "ಸರಿ, ದೊರೆ, ಪಡಿ . . . ಜೋಳಿ, ಹೊಯ್ಕಯ್, ಹೋಟಿ, ಸಂಗಡಂ ಈ-೧೮ ಸಮಾನಕ್ಕೆ ಪೆಸರ್" (ಕಶಸಾ. ೧೫-೨೯೦) ; "ಜೋಳಿ ಬುಧರಿನಕ್ಕುಂ ಸಮನುಂ" (ಕವಿಕಂ. ೦೩೭). ೨. ಜೊತೆ ; ಜೋಡು ; ಯುಗಲ : "ಜೋಳಿಯೆನೆ ಯುಗ್ಮ" (ಕಶರ. ೧೪). ೩. ಗುಂಪು ; ಸಮೂಹ : ನಾಟಕದ ಪಾತ್ರದ ಪೇರಣೆಯ ಜೋಳಿಗಳ ಜೋಕೆಗಳ ಪ್ರಕಟವೆಸೆಯಲು (ಬಸಪು. ೪-೭); ಜೋಳಿ ಜೋಳಿಯೊಳು ಜ್ಯೋತಿಷ್ಕಕಾಂತೆಯರ್ . . . ಲೀಲೆಯೊಳೊಪ್ಪಿ ದರಲ್ಲಿ (ಶ್ರೀಪಾಲ. ೧೪-೭೬) ; ಜೋಳಿ ಜೋಳಿಯೊಳೆಸೆಗುವ ಸಕಲರ ಮಕುಟಾಳಿ ಮಾಣಿಕ್ಯ ದೀಪ್ತಿಗಳ (ಮೋಹತ. ೩೦-೭೦).

[ <ಜವಳಿ$_2$ ]

**ಜೋಳಿ$_2$** (ನಾ). ಬೈತಲೆಮಣಿ : ಪೂವಿನ ಜೋಳಿಯಂ ಪೊಳೆವ ಪೂವಿನ ಚೌಕಳಿಯಂ ವಧೂಜನಂ . . . ಅಂತುದರ್ಥಿಯಿಂ (ಬಾಹಪು. ೧೪-೧೦೨).

[ <ಚೂಳಿಯ ]

**ಜೋಳಿ$_3$, ಝೋಳಿ** (ನಾ). =ಜೋಳಿಗೆ : ಕಂಬಳಿಗೋಳ ಕಲ್ಲಿಯ ಜೋಳಿ ಗಳ ಗೋಪಾಳಕರು ಬಂದೆಱಗಿ ಬಿನ್ನೈಸಿದರು (ಜೀವಂಚ. ೭-೫). **ಝೋಳಿ:** ಆಗ ಚರರೂ ಝೋಳಿ ಕಿತ್ತುಕೊಂಡಾರು ಬಿಚ್ಚಿ ನೋಡಲು (ಕನಿಮಾ. ೨೫).

[ ←ಮರಾ. ಝೋಳೀ ; ಹಿಂ. ಝೋಲೀ./ತಮಿ. ಚೋಳಿ ; ತುಳು. ಜೋಲಿ, ಜೋಳಿ ]

**ಜೋಳಿ$_4$** 'ಜೂಳಿ' ನೋ.

**ಜೋಳಿ$_6$** (ನಾ). ರಾಯಸ ; ಸಂದೇಶ : ಜೋಳಿ ಹರಿದುದು ದೆಸೆದೆಸೆಗೆ ಭೂಪಾಲರಿಗೆ ರಾಯಸದ ಹದನನು ಕೇಳಿದಾಗಳೆ ಕವಿದು ಬಂದರು (ಕುವ್ಯಾಉ. ೧೧-೧೪) ; ಜೋಳಿ ಹರಿದವು ನಿಖಿಳರಾಯರಿಗೆ (ಕುವ್ಯಾವಿ. ೧೦-೪೫). [ ? ]

**ಜೋಳಿಕೆ** (ನಾ). ಜೋಡಿಕೆ ; ಜೋಡಣೆ : ದೇವಯುಪಿವಚನ ಸಿರಿಯ ಜೋಳಿಕೆಯಾಯ್ತು (ರಾಪುಚ. ೪-೬). [ ಜೋಳಿ$_1$ + – ಇಕೆ ]

**ಜೋಳಿಗಟ್ಟು** (ನಾ). ಜೊತೆಕಟ್ಟುಕಾಕೆ : ಅಂತು ರಾಜವಲ್ಲಭಾಕರಿಣಿಗಂ ಮನೋವಲ್ಲಭ ಕರೇಣುಗಂ ಜೋಳಿಗಟ್ಟನಾಲಾನಸ್ತಂಭಮಾದ . . . ಭೂರಿಭುಜಶಾಖೆಗಳಂ (ಅನಂಪು. ೬-೬೫ ವ). [ ಜೋಳಿ$_1$ + ಕಟ್ಟು$_2$ ]

**ಜೋಳಿಗೆ, ಜೋಳಗೆ** (ನಾ). ೧. ಚಚ್ಚೌಕವಾದ ವಸ್ತ್ರದ ನಾಲ್ಕು ಮೂಲೆಗಳನ್ನು ಸೇರಿಸಿ ಮಾಡಿದ ಚೀಲ: ಕಮಂಡಲ, ಗುಂಡಿಲಗಪ್ಪರ, ಜೋಳಿಗೆ, ಕಾವಮಾಕ್ಷಿ ಇವು ಪಂಚಮುದ್ರೆ (ಸಿದ್ಧೇವ. ೧೫೫-೪೬೪) ; ಜೋಳಿಗೆಗಳ ಕಟ್ಟಿಯಂಗೈಗೆ ಹಾಕಿಸಿ ಏಳಿ ನೀವೆಂದು ಶರಣರ (ಬಿಜ್ಜರಾ. ೧೧-೩೬) ; ಕರವೆಸೆವ ಮುಂಗೈಯ ಜೋಳಿಗೆಯ ಖರ್ಪರದ (ಗುರುಚಾ. ೩-೪೦) ; ಒಂದು ಜೋಳಿಗೆ ಹಿಡಿದುಕೊಂಡು ಭವತಿ ಭಿಕ್ಷಾಂದೇಹಿ ಅಂತ ಭಿಕ್ಷಾನ್ನಮಾಡು(ಧರ್ಮಶ್ರೀ. ೩೬) ; ಗುರು ಕೊಟ್ಟ ಜೋಳಿಗೆ ಅಂತ ಗೂಟಕ್ಕೆ ನೇತು ಹಾಕಿದರೆ ಹೊಟ್ಟೆ ತುಂಬೀತೇ (ಗಾದ). ೨. (ಮಕ್ಕಳನ್ನು ಮಲಗಿಸಲು) ಮೇಲಿನಿಂದ ತೂಗುಬಿಡುವ ಬಟ್ಟೆ ; ಬಟ್ಟೆಯಿಂದ ಮಾಡಿದ ತೊಟ್ಟಿಲು : ನಾನೊಂದು ಜೋಳಿಗೆಯಲ್ಲಿ ಮಲಗಿದ್ದೆ(ಮೋದಿಮು. ೬೦). **ಜೋಳಗೆ :** ೨. ಅಮ್ಮನ್ನ ದುಬಟಿಯಲ್ಲಿ ಕೂರಿಸಿ ಜೋಳಿಗೆಮಾಡಿ ಎತ್ತರೆಲಾ ಆ ಬಂಡಿ ದಂಡೆಗೆ (ಅರೂಟ. ೬೫).

[ <ಪ್ರಾ. ಝೋಲಿಅ, ಝೋಲಿಕ./ತಮಿ. ಚೋಳಿಕ್ಕೈ ; ತುಳು. ಜೋಳಿಗೆ ]

**ಜೋಳಿದೆಗೆ** (ಕ್ರಿ). ಜೊತೆಹಾಕಂ ; ಜೋಡಿಮಾಡು : ಜಟ್ಟಿಗಳಂತರ ಜಟ್ಟಿಗಳ ಗೋವಳರ ಗೊಂದಣಂ ಜೋಳಿದೆಗೆದು ಮೇಳೈಸುವಾಗಳ್ (ಅನಂಪು. ೨-೨೬ ವ) ; ಕುಲಗಿರಿ ಕುಲಗಿರಿಗೆ ದಿಕ್ಕರಿಗೆ ದಿಕ್ಕರಿ ಜೋಳಿದೆಗೆದಂತೆ (ಕುವ್ಯಾಕ. ೨೦-೨೨) ; ಉಪಚಾರದೆಡೆಯಲಂಪಿಗೆ ಸಾಲ್ತು ಜೋಳಿದೆಗೆಯಲ್ಪವಣೆ (ಸಂಕಪು. ೨೩-೧೦). [ ಜೋಳಿ$_1$ + ತೆಗೆ$_1$ ]

**ಜೋಳಿಸು, ಜೋಳವಿಸು** (ಕ್ರಿ). ೧. ಸೇರಿಸು ; ಹೂಡು ; ಹೊಂದಿಸಂ ; ಅಳವಡಿಸು ; ಕೂಡಿಸಂ : ಜೋಳಿಸಿ ಕರ ಪಲ್ಲವಂ . . . ಮಲ್ಲಿಗೆಯೊಳರ್ಚಿಸಿದಳ್ (ಅನಂಪು. ೭-೧೨) ; ದೇಸಿಯನು ಜೋಳಿಸಿ ನಚ್ಚಣಿ ನರ್ತಿಸಿದಳ್ (ಉದ್ಭದೇ. ೬-೧೧); ನಖ ದಂತ ಕಿವಿವಡೆದಾಟು ತಿಂಗಳವನೇಳೂ ತಿಂಗಳೊಳಖಿಳ ಗುಹ್ಯವಡೆದಿರ್ಪವಂ ಜೋಳಿಸಿದ ಪೂರ್ಣಾಂಗದೇಳ್ಸಾ ಸಗರ್ಭವಂ (ಸಾನಂಚ. ೪-೫೮ ರಗಳೆ). **ಜೋಳವಿಸು :** ೧. ಜೋಳವಿಸಿ ಹೊದೆಯಂಬನಹಿತನ ಕಾಳಿಸುವಡಂಬಿದೆಯೆನುತ ತೂಗಿದನು ಮಾರ್ಗಣೆಯ (ಕುವ್ಯಾಕ. ೨೪-೪೯). [ ಜೋಳಿ$_1$ + – ಇಸು$_3$ ]

**ಜೋಳೆಯ** 'ಜೂಳೆಯ' ನೋ.

**ಜೋಟು$_1$** (ಕ್ರಿ). (?): ವಿಚಿತ್ರವೀರ್ಯಂ ಪೋಗೆಯಾ ನೃಪಗೆ ಕುವರರಿಲ್ಲದೇ ಜೋಟ್ ಧಾರುಣಿಯಲಿ (ಲಕ್ಷ್ಮಭಾ. ೧೧-೩೫). [ ? ]

**ಜೋಟು$_2$** 'ಸೋರ್$_2$' ನೋ.

△ **ಜೋಟವಾಳಿ** 'ಜೋಳವಾಟ್' ನೋ.

**ಜೌಗಿಡು** 'ಜವುಗಿಡು' ನೋ.

**ಜೌಗು** 'ಜವುಗು' ನೋ.

**ಜೌಗುನೆಲ** (ನಾ). ಜೌಗಿನಿಂದ ಕೂಡಿದ ನೆಲ ; ನೀರು ಒಸರುವ ಪ್ರದೇಶ; ಜಿನುಗು ಭೂಮಿ: ಜೌಗುನೆಲದಲ್ಲಿಯೂ ಹರಿಯುವ ನದಿಗಳ ತಳದಲ್ಲಿಯೂ ಸುರಂಗವನ್ನು ತೋಡುವ ಕಷ್ಟದ ಕೆಲಸ (ಶಿಲ್ಪನಾ. ೨೦೦). [ ಜೌಗು (<ಜವುಗು) + ನೆಲ$_1$ ]

**ಜೌಗುಭೂಮಿ** (ನಾ.)=ಜೌಗುನೆಲ : ಕೆರೆಯ ಪಕ್ಕದಲ್ಲಿದ್ದುದರಿಂದ ಜೌಗು ಭೂಮಿಯಾಗಿದ್ದಿತು (ಭಾಗ್ಯಶಿ. ೧೮) ; ತೀರದ ಉದ್ದಕ್ಕೂ ಪ್ರಯೋಜನ ವಿಲ್ಲದ ಮರಳುಭೂಮಿ ಅಥವಾ ಮ್ಯಾನ್ಗ್ರೋವ್ ಜೌಗುಭೂಮಿ ಇದೆ (ಭೂವಿವ. ೩೫೮). [ ಜೌಗು (<ಜವುಗು) + ಭೂಮಿ ]

**ಜೌಗೇಳು** 'ಜವುಗೇಟ್' ನೋ.

**ಜೌಗೇಟ್** 'ಜವುಗೇಟ್' ನೋ.

**ಜೌಗೇಟಿಸು** 'ಜವುಗೇಟಿಸಂ' ನೋ.

**ಜೌವನ** 'ಜವ್ವನ' ನೋ.

**ಜೌವನಂನೆಟಿ** 'ಜವ್ವನಂನೆಟ್' ನೋ.

**ಜೌವನಗಳಿ** (ಕ್ರಿ). ಯೌವನ ಸಂದಂ ಹೋಗು,–ಕಳೆದಂಹೋಗಂ: ಕಳಿದ ಹಗಲ ತಾವರೆಯಂತೆ ಜೌವನಗಳಿದ ಹೆಣ್ಣಿನ ನೇಹದಂತೆ ಸುಳಿವಿಂದ್ರಚಾಪದ ಸಿರಿಯಂತೆ (ಕಂನವಿ. ೧೮-೧೨೦).

[ ಜೌವನ (<ಜವ್ವನ) + ಕಳಿ$_1$ (<ಕಟಿ$_1$) ]

**ಜೌವನೆ** 'ಜವ್ವನೆ' ನೋ.

**ಜೌಳಿ** 'ಜವಳಿ$_1$' ನೋ.

**ಜ್ಞ** (ನಾ). ೧. ತಿಳಿದವನಂ ; ಬುದ್ಧಿವಂತ; ಜಾಣ : "ಕೋವಿದಂ ವಿದಂ ಜ್ಞಂ ಜಾಣಂ" (ವಸ್ತುಕೋ. ೯೯-೫). ೨. ಮಂಗಳಗ್ರಹ. ೩. ಬುಧಗ್ರಹ: "ಬುಧಂ ಜ್ಞಂ ಪ್ರತೀತಿ ಮಿಗೆ ನೆಗಟ್ದ ರೌಹಿಣೇಯಂ ಸೌಮ್ಯಂ" (ವಸ್ತುಕೋ. ೦೩-೭೨). ದನುಜೇಜ್ಯ ಜ್ಞ ಕುಜಾಂಗಿರರ್ ಸಮವಿಲಗ್ನ ಕ್ಷೇತ್ರದೊಳ್ ಬಾಲ್ಯರಾಗಿ ನಿರಾಬಾಧೆಯಿನಿರ್ದೊಡೆ . . . ಖ್ಯಾತೆಯುಮಕ್ಕುಂ (ಜಾತತಿ. ೨೨-೨೩). [ ಸಂ. ]

**ಜ್ಞತ್ವ** (ನಾ). 'ಜ್ಞ' ಎಂಬ ವರ್ಣ; ಜ್ಞಕಾರ : ತಿಳಿ ಬಹುಳದ ಶಬ್ದಾಂತಂಗಳನತ್ವ ಜ್ಞತ್ವಕತ್ವದೆಡೆಗೆ ಣಕಾರಂ (ಶಮದ. ೨೬೮) ; ಜ್ಞತ್ವಕ್ಕೆ ಣತ್ವಂ – ಅಜ್ಞೆ – ಆಣೆ (ಶಮದ. ೨೬೮ ಪ್ರಯೋ). [ ಸಂ. ]

**ಜ್ಞಪಿತ** (ಗು). ತಿಳಿಯುವಂತೆ ಮಾಡಿದ ; ತಿಳಿಸಲ್ಪಟ್ಟ. [ ಸಂ. ]

**ಜ್ಞಪ್ತ** (ಗು). = ಜ್ಞಪಿತ : "ಜ್ಞಪ್ತಂ ತಾಂ ಜ್ಞಾಪಿತಂ" (ವಸ್ತುಕೋ. ೧೦೫-೪೦). [ ಸಂ. ]

**ಜ್ಞಪ್ತಿ** (ನಾ). ೧. ಬುದ್ಧಿ ; ಅರಿವು ; ಜ್ಞಾನ : ಕನ್ನಡಿಯ ನೋಡುವವನ ಜ್ಞಪ್ತಿಯು ತನ್ನ ಮುಖದಲ್ಲಿರುವದು (ಗಗತಾ. ೦೬-೪೨) ; ತನ್ನ ಜ್ಞಪ್ತಿಯಿಂದ ನಿಜವನ್ನೇ ಹೊಂದಬೇಕು (ತತ್ವಚಿಂ. ೫-೦೨). ೨. ನೆನಪು ; ಜ್ಞಾಪಕ ; ಸ್ಮರಣೆ : ವಿಸ್ಮೃತವಾದ ಮಂತ್ರರಹಸ್ಯಂಗಳು ಜ್ಞಪ್ತಿಗೆ ಬಂದು (ಸೌಗಂಧಿ. ೭೩೫-೨೨) ; ಅವರಿಗೆ ಜ್ಞಪ್ತಿ ಇಲ್ಲದೆ ಏನು (ಸಣ್ಣಕ. IX, ೩೭). [ ಸಂ. ]

**ಜ್ಞಾತ** (ಗು). ೧. ತಿಳಿಯುವ ; ಕಾಣುವ ; ಗ್ರಹಿಸುವ : ಈ "ನಾನು" ಎಂಬ ವಸ್ತುವನ್ನು ಎರಡಾಗಿ ವಿಂಗಡಿಸಬಹುದು. ಒಂದು ಜ್ಞೇಯವಸ್ತು, ಮತ್ತೊಂದು ಜ್ಞಾತವಸ್ತು (ಜೀವಾತ್ಮ. ೩೭). (ನಾ). ೨. ತಿಳಿದವನಂ ; ಅರಿತವನು : ಚೈತನ್ಯವೆಂಬ ಧರ್ಮಭೂತ ಜ್ಞಾನವಿರುವುದರಿಂದ ಜ್ಞಾತನು (ಹಿಂದಸಾ. ೨೪೭). [ ಸಂ. ಜ್ಞಾತೃ ]

**ಜ್ಞಾತವ್ಯ** (ಗು). ೧. ತಿಳಿಯಬೇಕಾದ ; ಅರಿಯಬೇಕಾದ. ೨. ತಿಳಿಯಲಾಗುವ ; ಗ್ರಹಿಸಲಾಗುವ. (ನಾ). ೩. ತಿಳಿಯಬೇಕಾದುದಂ ; ಗ್ರಾಹ್ಯವಾದುದು: ಜ್ಞಾತವ್ಯಂ ತನಗೆನಿಸಿದ . . . ಆಚಾರಮನಾಖ್ಯಾತ ಯತಿಗಳೊಳೆ ತಿಳಿದು (ವರ್ಧಪು. ೦೨-೭೦); ಈ ಜ್ಞಾತವ್ಯವಾದುವುಗಳಲ್ಲಿ ಅತಿಮುಖ್ಯ ಜ್ಞಾತವ್ಯವನ್ನು ಹೇಳುತ್ತೇನೆ (ಭಾತತ್ವ. ೦೩೩). [ ಸಂ. ]

**ಜ್ಞಾತಿ** (ನಾ). ೧. ತಂದೆಯಂ ಕಡೆಯ ಚಿಕ್ಕಪ್ಪ, ದೊಡ್ಡಪ್ಪ ಇವರ ಮಕ್ಕಳು ಮುಂತಾದವರು ; ದಾಯಾದಿ : "ಬಂಧು ಸನಾಭಿ ಸಗೋತ್ರಂ ಬಾಂಧವನಾತ್ಮೀಯನೆನಿಸುಗುಂ ಜ್ಞಾತಿಯವಂ" (ವಸ್ತುಕೋ. ೫೬-೨೮) ;

ಜ್ಞಾತಿಗಳ ಕರತಳಾಂಭೋಜಾತಂಗಳೆಯ್ದೆ ತೊಳಗಿ . . . ಬಳೆದಳ್ (ವರ್ಧಪು. ೯-೧೯); ಕಾಳೆಗದೊಳದ್ದಿದೆ ಸಹೋದರ ಬಾಲ ಪುತ್ರ ಜ್ಞಾತಿ ಬಂಧು ನೃಪಾಲರನು (ಕುವ್ಯಾಗ. ೫-೧೪); ನಮ್ಮ ಜ್ಞಾತಿಗಳಿಗೆ ಜಯವಾಗಲಿ (ಶಾಂತಲಾ. ೧೧೧); ಭಾಷಾ ಅವಸ್ಥೆಗಳು . . . ದೂರದ ಜ್ಞಾತಿಗಳು ಎಂಬಂತೆ ಕಾಣಬೇಕು (ನಮ್ಮನು. ೨೩); ಜ್ಞಾತಿ ರಾಜರುಗಳನ್ನು ರಕ್ಷಿಸುವ ಈ ಪ್ರಯತ್ನದಲ್ಲಿ ಅವನನ್ನು ನಾವು ಕೊಂದರೂ ಸರಿಯೆ (ವಚಭಾ. ೭೭). ೨. ಒಂದೇ ಮೂಲವುಳ್ಳ ಭಾಷಾವರ್ಗಕ್ಕೆ ಸೇರಿದುದು. 'ಜ್ಞಾತಿಕೋಶ' ಪರಾ. [ ಸಂ. ]

**ಜ್ಞಾತಿಕಲಹ** (ನಾ). ದಾಯಾದಿಗಳಲ್ಲಿಯ ಕಲಹ,-ಜಗಳ; ಒಳಜಗಳ : ಈ ಜ್ಞಾತಿಕಲಹ ನೀನು ಉಂಟುಮಾಡಿದ್ದೂ ಅಲ್ಲ . . . ಅದಕ್ಕೆಲ್ಲಾ ದೈವವೇ ಕಾರಣ (ವಚಭಾ. ೩೭೦). [ ಜ್ಞಾತಿ + ಕಲಹ ]

**ಜ್ಞಾತಿಕೋಶ** (ನಾ). ಸೋದರ ಭಾಷಾಪದಗಳ ಕೋಶ ; ಒಂದೇ ಮೂಲದಿಂದ ಹುಟ್ಟಿರುವ ಭಾಷೆಗಳ ನಿಘಂಟು : ದ್ರಾವಿಡ ಭಾಷಾ ಜ್ಞಾತಿಕೋಶ ಈ ಕ್ಷೇತ್ರದಲ್ಲಿ ಒಂದು ಮಹತ್ತರವಾದ ಮೈಲಿಗಲ್ಲು (ಜ್ಞಾವಿವಿ. ೨). [ ಜ್ಞಾತಿ + ಕೋಶ ]

**ಜ್ಞಾತಿತ್ವ** (ನಾ). ನಂಟತನ ; ಬಂಧುತ್ವ ; ರಕ್ತಸಂಬಂಧ : "ಜ್ಞಾತಿತ್ವಂ ತಾನಕ್ಕುಂ ಜ್ಞಾತೇಯಂ" (ವಸ್ತುಕೋ. ೧೧೬-೩೦). [ ಸಂ. ]

**ಜ್ಞಾತಿಬಹಿಷ್ಕೃತ** (ನಾ). ಸಂಬಂಧಿಕರಿಂದ ಬಹಿಷ್ಕರಿಸಲ್ಪಟ್ಟವನು : ಜ್ಞಾತಿಬಹಿಷ್ಕೃತಂ ವ್ಯಸನಿ ದೈವಪರಂ ದೀರ್ಘರೋಷಿ ಸತ್ಯೇತರನಸ್ಥಿರಂ (ಪಂಚತಂ. ೨೨೦-೭). [ ಜ್ಞಾತಿ + ಬಹಿಷ್ಕೃತ ]

**ಜ್ಞಾತಿವೈರ** (ನಾ). ದಾಯಾದಿಗಳ ನಡುವಣ ವೈರ,-ದ್ವೇಷ; ದಾಯಾದ ಮತ್ಸರ : ಹೃದಯವಿದಾರಕವಾದ ಈ ಜ್ಞಾತಿವೈರವನ್ನು ತಾನು ಹೇಗೆ ತಾನೆ ಸಹಿಸುವುದು (ಭೀಷ್ಮಜ. ೭೨). [ ಜ್ಞಾತಿ + ವೈರ ]

**ಜ್ಞಾತೃ** (ಗು). ೧. ಅರಿತುಕೊಳ್ಳುವ; ತಿಳಿದುಕೊಳ್ಳುವ; ತಿಳಿವಳಿಕೆಯುಳ್ಳ. (ನಾ). ೨. ಅರಿತುಕೊಳ್ಳುವವನು ; ತಿಳಿಯುವವನು : ಜ್ಞಾತೃ ಜ್ಞಾನ ಜ್ಞೇಯಂಕ್ಕೆ ಇನ್ನಾವ ಜ್ಞಾನವೊ (ಅವಚಂ. ೧೪೨-೬೫೨) ; ವೇದಶಾಸ್ತ್ರದವರ ನಿಧಾನ ಜ್ಞಾತೃವಲ್ಲಾ ಪಾರ್ಥ ನೀನೆಂದ (ಕುವ್ಯಾಕ. ೧೭-೨೦); ಮೂಲಾಹಂಕಾರದಲ್ಲಿ ಪ್ರತಿಫಲಿಸಿರ್ದ ಜೀವಚೈತನ್ಯವೇ ಜ್ಞಾತೃವೆನಿಸುವುದು (ವಿವೇಕ. ೩೩); ಜ್ಞಾನದೊಳಗಾ ಜ್ಞಾತೃವಾ ಜ್ಞಾನಮಂ ಜ್ಞೇಯಮಂ ಮಾಜ಼್ (ವೀಶೈಪು. ೬-೬-೧೫). [ ಸಂ. ]

**ಜ್ಞಾತೃತ್ವ** (ನಾ). ತಿಳಿದುಕೊಳ್ಳುವಿಕೆ ; ತಿಳಿದಿರುವಿಕೆ : ಆಯಜೀವ ಜ್ಞಾತೃತ್ವವೆನಿಸುವುದು (ಅಮೃತ. ೭-೦೪) ; ಆತ್ಮವಸ್ತುಗಳಿಗೆ ಚೇತನತ್ವ, ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವ ಮೊದಲಾದ ವ್ಯವಹಾರಗಳಿರುವುವು (ಹಿಂದಸಾ. ೨೩೯). [ ಸಂ. ]

**ಜ್ಞಾತೇಯ** (ನಾ). = ಜ್ಞಾತಿತ್ವ : "ಜ್ಞಾತಿತ್ವಂ ತಾನಕ್ಕುಂ ಜ್ಞಾತೇಯಂ" (ವಸ್ತುಕೋ. ೦೧೬-೩೦). [ ಸಂ. ]

**ಜ್ಞಾನ** (ನಾ). ೧. ತಿಳಿಯುವಿಕೆ ; ಅರಿವು : ಜ್ಞಾನದಿನಿರ್ದು ನಿಟ್ಟಿಪೊಡೆ (ಪಂಪಭಾ. ೧-೧೧೯); ಜ್ಞಾನಮೇ ತಿಳಿಸುಗುಮಘಸಂತಾನಮಂ (ಚಂದ್ರಪು. ೭-೨೬) ; ಈ ಬುದ್ಧಿಯ ಆಕಾರಕ್ಕೆ, ಪರಿಣಾಮಕ್ಕೆ ಜ್ಞಾನ ಎಂದು ಹೆಸರು (ಹಿಂದಸಾ. ೬೦) ; ಪೂಜ್ಯನನ್ನು ಪೂಜಾರ್ಹವೆಂದು ತಿಳಿಯುವುದರಲ್ಲಿ ಜ್ಞಾನವಡಗಿದೆ (ಶಕ್ತಿವಿ. ೬೯). ೨. [ತತ್ತ್ವಶಾ] ಚೈತನ್ಯ ; ಪರಬ್ರಹ್ಮ ; ಪರಮಾತ್ಮ : ಮನದಲ್ಲಿ ಪ್ರತಿಫಲಿಸಿರ್ದ ಜೀವಚೈತನ್ಯವೇ ಜ್ಞಾನವೆನಿಸುವುದು (ವಿವೇಕ. ೩೩) ; ಸೂರ್ಯನಂತೆ ಸ್ವಪ್ರಕಾಶಸ್ವರೂಪವಾದ ಪರಬ್ರಹ್ಮವೆಂಬ ಚೈತನ್ಯವೇ ಜ್ಞಾನ ಪದಕ್ಕೆಮುಖ್ಯವಾದ ಅರ್ಥ (ಹಿಂದಸಾ. ೨೦೦) ; ಜ್ಞಾನಶಬ್ದ ವಸ್ತುತಃ ವಾಸ್ತವಿಕವಾಗಿ ಬ್ರಹ್ಮಪದವಾಚ್ಯ; ಜ್ಞಾನವೆಂದರೆ ಈಶ್ವರನೆಂದೇ ಅರ್ಥ (ಭಾರದ. ೧೧೮). ೩. ಬ್ರಹ್ಮಜ್ಞಾನ ; ಆತ್ಮವಿದ್ಯೆ : ವಿಶ್ವರೂಪಗರ್ಭಿಣಿಯಪ್ಪ ದೇವಿ ನೀಂ ಬ್ರಹ್ಮಗರ್ಭಪ್ರಕೃತಿಯಂತೆಯುಂ . . . ಜ್ಞಾನಗರ್ಭ ಸನ್ಮತಿಯಂತೆಯುಂ . . . ಮಹತ್ತ್ವಮಂ ಪಡೆದೆ (ಜಗವಿ. ೨-೯೬); ಜ್ಞಾನವೆಂದರೆ ಇಂತಹ ಕರ್ಮಗಳನ್ನು ಮಾಡುತ್ತ ಆತ್ಮೋಪಾಸನೆ ಎಂಬ ಸ್ವಾತ್ಮಶರೀರಕ ಪರಮಾತ್ಮೋಪಾಸನಾರೂಪವಾದ ಪರಬ್ರಹ್ಮವಿದ್ಯೆ (ಹಿಂದಸಾ. ೧೭೪). ೪. ಎಚ್ಚರ; ತಿಳಿವು ಮೈಮೇಲೆ ಜ್ಞಾನ ಇದೆಯೆ? (ರೂಢಿ). 'ಜ್ಞಾನತಪ್ಪು' ಪರಾ. [ ಸಂ.

**ಜ್ಞಾನಕಾಂಡ** (ನಾ). ವೇದಗಳಲ್ಲಿ ಬ್ರಹ್ಮಸ್ವರೂಪವನ್ನು ತಿಳಿಸತಕ್ಕ ಭಾಗ: ವೇದ ಕರ್ಮಕಾಂಡ ಜ್ಞಾನಕಾಂಡವೆಂದು ಎರಡು ಭಾಗವುಳ್ಳದ್ದು (ಹಿಂದಸಾ. ೧೮೬) ; ಕಾಶ್ಯಪಮಹರ್ಷಿ ಪ್ರೋಕ್ತವಾದ ಸತ್ಯಕಾಂಡ, ಕರ್ಮಕಾಂಡ, ಜ್ಞಾನಕಾಂಡಗಳೆಂಬ ಆಗಮಭಾಗಗಳು ಮೂರಾಗಿದ್ದು 'ಕಾಂಡ'ಗಳೆಂದೂ ಪ್ರಖ್ಯಾತವಾಗಿವೆ (ಭಾರದ. ೭೫). 'ಕರ್ಮಕಾಂಡ' ಪರಾ.

[ ಜ್ಞಾನ + ಕಾಂಡ ]

**ಜ್ಞಾನಕಾಂಡಿ** (ನಾ). ಜ್ಞಾನಕಾಂಡವನ್ನು ತಿಳಿದವನು ; ಪರತತ್ತ್ವವನ್ನರಿತವನು : ಪರತತ್ತ್ವವನರಿದೆನೆಂಬನ್ನಕ್ಕ ಜ್ಞಾನಕಾಂಡಿಯಲ್ಲ (ಬಸವ. ೮೮೮) ; ಸರ್ವಕರ್ಮಸಾಕ್ಷಿಕನು ತಾನೆಂಬಾತನೇ ಜ್ಞಾನಕಾಂಡಿಯಪ್ಪಂ (ವಿವೇಕ. ೧೬). [ ಸಂ. ಜ್ಞಾನಕಾಂಡಿನ್ ]

**ಜ್ಞಾನಗುರು** (ನಾ). ಮೋಕ್ಷಕ್ಕೆ ಕಾರಣವಾಗುವ ಜ್ಞಾನವನ್ನು ಅನುಗ್ರಹಿಸುವ ಗುರು : ಜ್ಞಾನಗುರು ಉತ್ಪತ್ತಿಸ್ಥಿತಿಲಯ ಮೂಜನು ಕಳೆಯಬೇಕು (ಮೋಳಿಮಾ. ೧೫೪-೫೭೮) ; ಮೋಕ್ಷಾರ್ಥಿಗೆ ಮೋಕ್ಷಕ್ಕೋಸ್ಕರ ಯಾವನಿಂದ ಶಿವರೂಪಾನುಸಂದಾಯಿಯಾದ ಜ್ಞಾನವು ಉಪದಿಷ್ಟವಾಗುವುದೋ ಅವನು ಜ್ಞಾನಗುರು (ಭಾತತ್ತ್ವ. ೬೮೦).

[ ಜ್ಞಾನ + ಗುರು₂ ]

**ಜ್ಞಾನಚಕ್ಷು** (ನಾ). = ಜ್ಞಾನದೃಷ್ಟಿ. [ ಜ್ಞಾನ + ಚಕ್ಷು ]

**ಜ್ಞಾನಚೂರ್ಣ** (ನಾ). (ಆಲಂ) ನಶ್ಯ : ಮುದುಕ ಮಾವನವರು ಒಂದು ಚಿಟಿಕೆ 'ಜ್ಞಾನಚೂರ್ಣ' ವನ್ನು ಮೂಗಿಗೆ ಏರಿಸಿ ಅದರಿಂದ ಲಭಿಸಿದ ಉತ್ಸಾಹದಲ್ಲಿ ತಮ್ಮ ಅನುಭವವನ್ನು ಹೇಳತೊಡಗಿದರು (ಅನಾಮಿ. ೫೯).

[ ಜ್ಞಾನ + ಚೂರ್ಣ₂ ]

**ಜ್ಞಾನತಂತು** (ನಾ). ಮಿದುಳಿನಿಂದ ಶರೀರದ ಬೇರೆ ಬೇರೆ ಭಾಗಗಳಿಗೆ ಅಭಿಪ್ರಾಯಂಗಳನ್ನು ಒಯ್ಯುವ ಮತ್ತು ಶರೀರದ ಬೇರೆ ಬೇರೆ ಭಾಗಗಳಿಂದ ಮಿದುಳಿಗೆ ಸಂಪರ್ಕ ಕಲ್ಪಿಸುವ ನರ : ನಮ್ಮ ಶರೀರದಲ್ಲಿ ಪ್ರಾಣವಾಹಕ ನಾಡಿಗಳು . . . ಅಭಿಪ್ರಾಯಗಳನ್ನು ಒಯ್ಯುವ ಜ್ಞಾನತಂತುಗಳು ಇವೆ (ಭಾರದ. ೧೫೯) ; ಒಂದೊಂದು ಇಂದ್ರಿಯಕ್ಕೆ ಸಂಬಂಧಿಸಿದ ಜ್ಞಾನತಂತುಗಳಿಗೆ ಕಲ್ಪಿಸಲಾದ ಕ್ಷೇತ್ರ (ಕರ್ನಾಟ. ೧೨). 'ಜ್ಞಾನವಾಹಿ' ಪರಾ. [ ಜ್ಞಾನ + ತಂತು₂ ]

**ಜ್ಞಾನತಪ್ಪು** (ಕ್ರಿ). ಎಚ್ಚರದಪ್ಪು ; ಮೂರ್ಛೆಹೋಗು : ತಲೆಗೆ ಪೆಟ್ಟು ಬಿದ್ದು ಜ್ಞಾನತಪ್ಪಿ ಬಿದ್ದನು (ರೂಢಿ).

[ ಜ್ಞಾನ + ತಪ್ಪು₁ ]

**ಜ್ಞಾನದಾಹ** (ನಾ). ಜ್ಞಾನಕ್ಕಾಗಿ ಹಾತೊರೆಯುವಿಕೆ; ಜ್ಞಾನವೃದ್ಧಿಯಲ್ಲಿ ಅಪೇಕ್ಷೆ : ಅವನ ಬಹುಮುಖವಾದ ಜ್ಞಾನದಾಹವನ್ನೂ, ತೀಕ್ಷ್ಣವಾದ ಗ್ರಹಣಶಕ್ತಿಯನ್ನೂ ನೋಡಿ ದಿಗ್ಭ್ರಮೆಗೊಂಡಿದ್ದಳು (ಪುನರು. ೫೨೮) ; ಪ್ರಮಾತ್ಮ್ಯಾಸಿನ ಜ್ಞಾನದಾಹ ಅಗ್ನಿಯ ಕಳ್ಳತನದಿಂದ ಸ್ಪಷ್ಟವಾಗುತ್ತದೆ (ಬದ್ಧಪ್ರ. LXVIII, ಓ೬೬೩). [ ಜ್ಞಾನ + ದಾಹ₂ ]

**ಜ್ಞಾನದಿಗಂತ** (ನಾ). ಜ್ಞಾನದ ಕ್ಷಿತಿಜ,-ಮೇರೆ,-ಎಲ್ಲೆ : ಜ್ಞಾನದಿಗಂತದ ಗಡಿಗಳನ್ನು ವಿಸ್ತರಿಸುವುದರಲ್ಲಿ ಲೇಖಕರು, ವಿದ್ವಾಂಸರು . . . ಪರಸ್ಪರ ಸಹಕರಿಸುವುದರ ಅಗತ್ಯ ಎಂದಿಗಿಂತ ಇಂದು ಹೆಚ್ಚಾಗಿದೆ (ಸುವರ್ಣ. ೦೨).

[ ಜ್ಞಾನ + ದಿಗಂತ ]

**ಜ್ಞಾನದೃಷ್ಟಿ** (ನಾ). ೧. ಪಾಂಡಿತ್ಯ; ತಿಳಿವಳಿಕೆ. ೨. ಜ್ಞಾನಪೂರ್ಣವಾದ ದೃಷ್ಟಿ; ಒಳಗಣ್ಣು: ಸಂತವಿಸುತಂ ಜ್ಞಾನದೃಷ್ಟಿಯೊಳಂತು ನೋಡುತ ತತ್ ಪ್ರಕಾರವದೆಂತಹುದಿದೆಂದಱಿದು (ಬಸವು. ೩೪-೨೦). [ಜ್ಞಾನ+ದೃಷ್ಟಿ]

**ಜ್ಞಾನಧನ** (ನಾ). ಜ್ಞಾನವೇ ಧನವಾಗಿ ಉಳ್ಳವನು; ಜ್ಞಾನವೆಂಬ ಧನವನ್ನುಳ್ಳವನು; ಜ್ಞಾನಿ: ಇರ್ದನದೊರ್ವಂ ತಪೋಧನಂ ಜ್ಞಾನಧನಂ (ಚಂದ್ರಪ್ರ. ೯-೨೦). [ಜ್ಞಾನ + ಧನ]

**ಜ್ಞಾನಪಂಥ** (ನಾ). =ಜ್ಞಾನಮಾರ್ಗ: ಭಾರತದ ಮಧ್ಯಯುಗದ ಧಾರ್ಮಿಕ ಇತಿಹಾಸದಲ್ಲಿ ಕರ್ಮಪಂಥ, ಜ್ಞಾನಪಂಥ, ಶಕ್ತಿಪಂಥ, ಭಕ್ತಿಪಂಥ ಎಂಬ ನಾಲ್ಕು ಪಂಥಗಳ ವಿಕಾಸವನ್ನು ನಾವು ವಿಶೇಷವಾಗಿ ಕಾಣುತ್ತೇವೆ (ಭಾರದ. ೩೦೩). [ಜ್ಞಾನ + ಪಂಥ್ಯ (<ಪಂತ್ರ)]

**ಜ್ಞಾನಪಂಥಿ** (ನಾ). ಜ್ಞಾನಮಾರ್ಗದ ಅನುಯಾಯಿ: ಕಬೀರನ ನಂತರ ಜ್ಞಾನಪಂಥಿಗಳಾದ, ಸಂತಕವಿಗಳೆಂದು ಪರಿಗಣಿಸಬಹುದಾದವರಲ್ಲಿ ನಾನಕ್, ದಾದು ಮುಖ್ಯರು (ಭಾರದ. ೪೫೯). [<ಜ್ಞಾನಪಂಥ]

**ಜ್ಞಾನಪಾದ** (ನಾ). [ಶೈವ] ಆಗಮದ ಕ್ರಿಯಾಪಾದ, ಚರ್ಯಾಪಾದ ಯೋಗಪಾದ, ಜ್ಞಾನಪಾದಗಳೆಂಬ ನಾಲ್ಕು ಭಾಗಗಳಲ್ಲಿ ಒಂದು; ಪಶು, ಪತಿ, ಪಾಶವೆಂಬ ಜ್ಞಾನವನ್ನು ಕುರಿತು ಬೋಧಿಸುವ ಭಾಗ: ಸಕಲಾಗಮಂಗಳಲ್ಲಿಯೂ ಕ್ರಿಯಾಪಾದ ಚರ್ಯಾಪಾದ ಯೋಗಪಾದ ಜ್ಞಾನಪಾದವೆಂಬ ನಾಲ್ಕು ಪಾದಂಗಳುಂ (ವಿವೇಕ. ೭೨); ತ್ರಿಪದಾರ್ಥಗಳ (ತತ್ವತ್ರಯ) ವಿಚಾರಗಳನ್ನು ತಿಳಿಯ ಹೇಳುವುದೇ ಮೊದಲನೆಯ 'ಜ್ಞಾನಪಾದ'ವು (ಭಾರದ. ೭೩). [ಜ್ಞಾನ + ಪಾದ]

**ಜ್ಞಾನಪ್ರಸಾರ** (ನಾ). ಜ್ಞಾನವನ್ನು ಹರಡುವಿಕೆ: ಒಂದು ಜ್ಞಾನಪ್ರಸಾರಕ್ಕೂ ಇನ್ನೊಂದು ವ್ಯಾವಹಾರಿಕ ಪರಿಷ್ಕಾರಕ್ಕೂ ಸಾಧಕವಾಗಿದೆ (ಮುಕ್ತ್ಯಾರ. ೧೦೧. ಟೀಕೆ). [ಜ್ಞಾನ + ಪ್ರಸಾರ]

**ಜ್ಞಾನಬರು** (ಕ್ರಿ). ೧. ತಿಳಿವಳಿಕೆ ಬರು; ಬುದ್ಧಿ ಬರು: ಇಷ್ಟು ವಯಸ್ಸಾದರೂ ಅವನಿಗೆ ಜ್ಞಾನಬರಲಿಲ್ಲ (ರೂಢಿ). ೨. ಮೂರ್ಛೆ ತಿಳಿ; ಎಚ್ಚರವಾಗು: ಬೆಳಗ್ಗೆ ಮೂರ್ಛೆ ಬಿದ್ದವನಿಗೆ ಈಗ ಜ್ಞಾನಬಂತು (ರೂಢಿ).

[ಜ್ಞಾನ + ಬರು$_1$ (<ಬರ್$_1$)]

**ಜ್ಞಾನಭಿಕ್ಷು** (ನಾ). ಜ್ಞಾನವನ್ನು ಬೇಡುವವನು; ಜ್ಞಾನಾಭಿವೃದ್ಧಿಗಾಗಿ ಹಾತೊರೆಯುವವನು: ಜ್ಞಾನಭಿಕ್ಷುಗಳಾದ ವಾಚಕರು ತಮ್ಮ ಸಮಸ್ಯೆಗಳಿಗೆ ವಿಶೇಷ ಪರಿಜ್ಞಾನವುಳ್ಳ ಒಬ್ಬೊಬ್ಬ ಋಷಿಗಳನ್ನು ಮಾತಾಡಿಸಿ ಪರಿಹಾರ ದೊರಕಿಸಿಕೊಳ್ಳಬಹುದು (ಗ್ರಂಥಾಲ. ೬೮). [ಜ್ಞಾನ + ಭಿಕ್ಷು]

**ಜ್ಞಾನಭೂಮಿಕೆ** (ನಾ). ಮೋಕ್ಷಮಾರ್ಗದ ನಾಲ್ಕು ಭೂಮಿಕೆಗಳಲ್ಲಿ ಒಂದು: ಮುಂದೆ ಹೇಳುವ ವಾಗ್ಭೂಮಿಕೆ, ಮನೋಭೂಮಿಕೆ, ಜ್ಞಾನಭೂಮಿಕೆ ಮತ್ತು ಶಾಂತಾತ್ಮಭೂಮಿಕೆ ಎಂಬ ನಾಲ್ಕು ಸಾಧನಗಳು (ಅಮೃತ. ೬-೭೦ ಟೀಕು). [ಜ್ಞಾನ + ಭೂಮಿಕೆ]

**ಜ್ಞಾನಮದ** (ನಾ). ವಿದ್ಯಾಮದ; ತಾನೇ 'ಜ್ಞಾನಿ'ಯೆಂಬ ಗರ್ವ: ಸಮ್ಯಗ್ದೃಷ್ಟಿ ಪುರುಷರು ಜ್ಞಾನಮದದ ವಿಷಯದಲ್ಲಿ ತಮ್ಮ ಮನಸ್ಸಿನಲ್ಲಿ ಹೀಗೆ ವಿಚಾರಿಸುತ್ತಾರೆ (ಶ್ರಾವಕಾ. ೬೮). 'ಅಷ್ಟಮದ' ಪರಾ.

[ಜ್ಞಾನ + ಮದ$_1$]

**ಜ್ಞಾನಮಯ** (ನಾ). ೧. ಜ್ಞಾನದಿಂದ ಕೂಡಿದುದು; ಜ್ಞಾನವುಳ್ಳುದು: ಜೀವಾದಿ ಸಪ್ತತತ್ವದೊಳಾವಿಷ್ಕೃತನ[ವ]ಪದಾರ್ಥದೊಳ್ ಜ್ಞಾನಮಯಂ ಜೀವಂ ದರ್ಶನಮಯನದನೇವೇಳ್ದುದು (ಶಾಂತಿಪು. ೬-೪೮). ೨. ಪಂಚಕೋಶಗಳಲ್ಲಿ ಒಂದು. [ಸಂ.]

**ಜ್ಞಾನಮಯಕೋಶ** (ನಾ). [ತತ್ವಶಾ] ಪಂಚಕೋಶಗಳಲ್ಲಿ ಒಂದು: ಕೆಲವರಾದಿ ಜ್ಞಾನಮಯ ಕೋಶವನೆ ಆತ್ಮನೆನುತ್ತ ಬಗೆವರು (ಗಗತಾ. ೦೮-೦೯). 'ಪಂಚಕೋಶ' ಪರಾ. [ಜ್ಞಾನಮಯ + ಕೋಶ]

**ಜ್ಞಾನಮಾರ್ಗ** (ನಾ). ಮೋಕ್ಷಸಾಧನೆಯ ಮೂರು ಮುಖ್ಯ ಮಾರ್ಗಗಳಲ್ಲಿ ಒಂದು; ಅರಿವಿನಿಂದ ಮೋಕ್ಷವನ್ನು ಸಾಧಿಸುವ ಮಾರ್ಗ: ಭಗವದ್ಗೀತೆಯಲ್ಲಿ ಭಕ್ತಿಮಾರ್ಗ ಮತ್ತು ಜ್ಞಾನಮಾರ್ಗದಿಂದ ಮೋಕ್ಷಪ್ರಾಪ್ತಿಯಾಗುತ್ತದೆ ಎಂಬ ವಿಷಯ ಸ್ಪಷ್ಟಪಟ್ಟಿದೆ (ಭಾರದ. ೦೦೭). 'ಕರ್ಮಮಾರ್ಗ' ಪರಾ. [ಜ್ಞಾನ + ಮಾರ್ಗ]

**ಜ್ಞಾನಯಜ್ಞ** (ನಾ). ಜ್ಞಾನಾರ್ಜನೆಗಾಗಿ ಮಾಡುವ ಪವಿತ್ರವಾದ, ಅಭ್ಯಾಸ,-ಅಧ್ಯಯನ: ೨೫ ಸಂವತ್ಸರಗಳ ಜ್ಞಾನಯಜ್ಞ (ಕಚಸಾ. XVI, ೩೬೬೪): ಜ್ಞಾನಯಜ್ಞದ ಪ್ರಭಾವ ಶಿಥಿಲವಾಗಿ . . . ಸ್ವಾರ್ಥಪ್ರಯೋಜನವೆ ಮುಖ್ಯವೆಂದು ಪರಿಗಣಿತವಾದಾಗ ಬುದ್ಧನ ಅವತಾರವಾಗಿ (ಮುಕ್ತ್ಯಾರ. ೦೦೫. ಟೀಕೆ). [ಸಂ.]

**ಜ್ಞಾನಯೋಗ** (ನಾ). [ತತ್ವಶಾ] ಮೋಕ್ಷಸಾಧನೆಯ ಮುಖ್ಯವಾದ ಮೂರು ಮಾರ್ಗಗಳಲ್ಲಿ ಒಂದು; ಅರಿವಿನಿಂದ ಮೋಕ್ಷವನ್ನು ಪಡೆಯುವ ಯೋಗಾಭ್ಯಾಸ: ಜ್ಞಾನಯೋಗ ಕರ್ಮಯೋಗಕ್ಕಿಂತ ಮಹತ್ವವಾದುದು (ಧರ್ಮಸಾ. ೦೦೫); ಜೀವಾತ್ಮ ಚಿಂತನವೆಂಬ ಜ್ಞಾನಯೋಗಕ್ಕೆ ಯೋಗ್ಯನಾಗಿ ಧ್ಯಾನಯೋಗಕ್ಕೆ ಯೋಗ್ಯನಾಗುವನು (ಹಿಂದಸಾ. ೨೫೭). 'ಕರ್ಮಯೋಗ' ಪರಾ. [ಜ್ಞಾನ + ಯೋಗ]

**ಜ್ಞಾನಯೋಗಿ** (ನಾ). ಜ್ಞಾನಯೋಗವನ್ನು ಬಲ್ಲವನು,- ಆಚರಿಸುವವನು: ಇಲ್ಲಿರುವ ಯೋಗಿಗಳೆಂಬ ಮಾತಿಗೆ ರಾಜಯೋಗಿಗಳೆಂದೋ ಅಥವಾ ಜ್ಞಾನಯೋಗಿಗಳೆಂದೋ ಅರ್ಥವನ್ನು ಮಾಡಿಕೊಳ್ಳಬೇಕು (ಅಮೃತ. ೧-೨ ಟೀಕು); ಜ್ಞಾನಯೋಗಿಯಾದವನು ಕರ್ಮಯೋಗಿಯೂ ಆಗಬೇಕು (ಭಾರದ. ೦೦೫). [ಸಂ. ಜ್ಞಾನಯೋಗಿನ್]

**ಜ್ಞಾನರ್ಧಿ** (ನಾ). ಜ್ಞಾನದ ಅಭಿವೃದ್ಧಿ,-ಹೆಚ್ಚಳ. 'ಜ್ಞಾನರ್ಧಿಸಂಪನ್ನ' ಪರಾ. [ಜ್ಞಾನ + ಋದ್ಧಿ]

**ಜ್ಞಾನರ್ಧಿಸಂಪನ್ನ** (ನಾ). ಹೆಚ್ಚು ಜ್ಞಾನದಿಂದ ಕೂಡಿಕೊಂಡಿರುವವನು; ಜ್ಞಾನಿ: ವಿಶ್ರುತ ವೀರಸೇನ ಜಿನಸೇನಾಚಾರ್ಯ ಪರ್ಯಂತಮಾಗಿರೆ ಬಂದೀ ಕಥೆ ಗುಣ್ಪುವೆತ್ತುದವರಂ ಜ್ಞಾನರ್ಧಿಸಂಪನ್ನರೆಂದು (ಆದಿಪು. ೧-೩೫); ಆಚಾರಾಂಬುಧಿ ಪಾರಗರ್ ಜಿತಮದರ್ ಜ್ಞಾನರ್ಧಿ ಸಂಪನ್ನರ್ (ಸುಕುಮಾ. ೧-೦೭): ಜ್ಞಾನರ್ಧಿಸಂಪನ್ನರಪ್ಪ ಗಣಾಧೀಶ್ವರರುಂ ಕ್ರಮಂ ಬಿಡದೆ ಮುನ್ನಂ ಪೇಳ್ದುದಂ (ಪಂರಾಮಾ. ೧-೩೮).

[ಜ್ಞಾನರ್ಧಿ + ಸಂಪನ್ನ]

**ಜ್ಞಾನಲಕ್ಷಣೆ** (ನಾ). [ತರ್ಕಶಾ] ಮೂರುಬಗೆಯ ಅಲೌಕಿಕ ಪ್ರತ್ಯಕ್ಷಗಳಲ್ಲಿ ಒಂದು; ಇಂದ್ರಿಯಗಳ ಸಹಾಯವಿಲ್ಲದಿದ್ದರೂ ಸ್ಮರಣೆಯಿಂದ ಪಡೆಯುವ ಅನುಭವ. P ಸಂಪಗೆ ಹೂವನ್ನು ನೋಡಿದಾಗ ವಾಸನೆ ಕಣ್ಣಿಗೆ ಕಾಣದಿದ್ದರೂ ಅದು ಸುವಾಸನೆಯಾದ ಸಂಪಗೆ ಹೂವು ಎಂದು ತಿಳಿಯುವ ಜ್ಞಾನ,-ಅನುಭವ: ಅಲೌಕಿಕ ಪ್ರತ್ಯಕ್ಷದಲ್ಲಿ ಜ್ಞಾನಲಕ್ಷಣೆ, ಸಾಮಾನ್ಯ ಲಕ್ಷಣೆ, ಯೋಗಜಲಕ್ಷಣೆ ಎಂದು ಸಂಬಂಧವು ಮೂರು ವಿಧ . . . ಇಲ್ಲಿ ಹಿಂದಿನ ಗಂಧಸ್ಮರಣೆಯನ್ನು ಜ್ಞಾನಲಕ್ಷಣೆಯೆಂದು ಹೇಳುವರು ಹಾಗೆಂದರೆ ಜ್ಞಾನವೇ ಸಂಬಂಧವೆಂದರ್ಥ (ಹಿಂದಸಾ. ೦೩೯).

[ಸಂ. ಜ್ಞಾನಲಕ್ಷಣೆನ್]

**ಜ್ಞಾನಲಾಲಸೆ** (ನಾ). ಜ್ಞಾನಾಭಿವೃದ್ಧಿಯ ಬಯಕೆ; ಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕೆಂಬ ಬಯಕೆ; ಜ್ಞಾನದಾಹ: ಇಲ್ಲಿಯ ಪ್ರೊಫೆಸರರಲ್ಲಿ ಜ್ಞಾನಲಾಲಸೆ ಹಾಗೂ ಸಹಾಯಬುದ್ಧಿ ಶೋಭಿಸುತ್ತದೆ (ಸಮುಜೀ. ೦೫, ಟೀಕೆ). [ಜ್ಞಾನ + ಲಾಲಸೆ]

**ಜ್ಞಾನಲೇಪಿ** (ನಾ). ಅರಿತವನು; ಜ್ಞಾನಿ: ಕಾಯ ಜೀವದ ಸಂಚವನ ಱಿದಲ್ಲದೆ ಜ್ಞಾನಲೇಪಿಯಲ್ಲ (ಮೋಳಿಮಾ. ೦೭೯-೩೩೦).

[ಸಂ. ಜ್ಞಾನಲೇಪಿನ್]

**ಜ್ಞಾನವಂತ** (ನಾ). ತಿಳಿವಳಿಕೆಯುಳ್ಳವನು; ಬುದ್ಧಿವಂತ: ಜ್ಞಾನವಂತಗೆ ವಿಧಿ ಕಾಡುವುದು ಸತ್ಯ (ಪುರಂದ. ೪-೩೭ ಪಲ್ಲವಿ). [ ಜ್ಞಾನ + – ವಂತ ]

**ಜ್ಞಾನವಂತೆ** (ನಾ). ತಿಳಿವಳಿಕೆಯುಳ್ಳವಳು ; ಬುದ್ಧಿವಂತೆ : ಜೋ ಜೋ ಎಂದರೆ ಜ್ಞಾನವಂತೆಯೇ (ಗಾದೆ). [ ಜ್ಞಾನವಂತ + – ಎ ]

**ಜ್ಞಾನವರ್ಧನ** (ನಾ). ೧. ಜ್ಞಾನವನ್ನು ಹೆಚ್ಚಿಸಿಕೊಳ್ಳುವಿಕೆ; ಜ್ಞಾನಾಭಿವೃದ್ಧಿ ಮಾಡಿಕೊಳ್ಳುವಿಕೆ. ೨. ಜ್ಞಾನವನ್ನು ಹೆಚ್ಚಿಸಿಕೊಂಡವನು ; ಅರ್ಹಂತ ; ಜಿನ : "ಶೌದ್ಧಂ ತ್ರಿಕಾಲವಿದ್ವೀತರಾಗಂ ಜ್ಞಾನವರ್ಧನಂ ಸರ್ವಜ್ಞನೆನೆ ಜಿನೇಂದ್ರಂ" (ಮಂಗರಾ. ೬-೨೩). [ ಜ್ಞಾನ + ವರ್ಧನ ]

**ಜ್ಞಾನವಾಹಿ** (ನಾ).=ಜ್ಞಾನತಂತು : ಜ್ಞಾನವಾಹಿಗಳು ಬಾಹ್ಯಬೋಧೆಯನ್ನು ಮೆದುಳಿಗೆ ಒಯ್ಯುವುವು (ಪ್ರಾಣಿಶಾ. ೪). [ ಸಂ. ಜ್ಞಾನವಾಹಿನ್ ]

**ಜ್ಞಾನವೃಕ್ಷ** (ನಾ). ಬೈಬಲ್‌ನಲ್ಲಿ ಉಲ್ಲೇಖವಾಗಿರುವ ಜ್ಞಾನಫಲವನ್ನು ಕೊಡುವ ವೃಕ್ಷ; ಅರಿವನ್ನು ನೀಡುವುದೆಂದು ಹೇಳಲಾದ ಮರ : ಜ್ಞಾನವೃಕ್ಷದ ಬಳಿಯೇ ವೆಂಟಣಿಸಿ ಕುಳಿತದರ ಫಲವ ಮೆಲಲಾರದೆ (ಗೊಲ್ಗೊಥಾ. ೧-೨೦). [ ಜ್ಞಾನ + ವೃಕ್ಷ ]

**ಜ್ಞಾನವೃದ್ಧ** (ನಾ). ಅರಿವಿನಿಂದ ಹಿರಿಯನೆನಿಸುವವನು ; ಜ್ಞಾನದಿಂದ ಹಿರಿಯನಾದವನು : ಅಂತು ವಯೋಬಾಲಕನುಂ ಜ್ಞಾನವೃದ್ಧನುಮಪ್ಪ ಜಗದ್ಗುರುಗೆ ಸುರಸಮುದಯಂ ಪರ್ಯುಪಾಸ್ತಿಗೆಯ್ಯುತ್ತಿರೆ(ಶಾಂತಿಪು.೧೧-೮೭); ಜ್ಞಾನವೃದ್ಧರು ವಿಪ್ರರಲಿ ಸನ್ಮಾನನೀಯರು (ಕುಮಾ.ಸ. ೮-೫೦); ಜ್ಞಾನವೃದ್ಧಂ ತಪೋವೃದ್ಧಂ ವಯೋವೃದ್ಧನೀ ನರೇಶ್ವರಂ (ಜೈಮಿಭಾ. ೩೨-೧೧). [ ಜ್ಞಾನ + ವೃದ್ಧ ]

**ಜ್ಞಾನಶಕ್ತಿ** (ನಾ). [ತತ್ತ್ವಶಾ] ಜ್ಞಾನದ ಶಕ್ತಿ,–ಬಲ ; ಚಿತ್‌ಶಕ್ತಿಯ ಮೂರು ವಿಧಗಳಲ್ಲಿ ಒಂದು : ಘ್ರಾಣ ಜಿಹ್ವೆ ನೇತ್ರ ತ್ವಕ್ಕು ಶ್ರೋತ್ರ ಚೈತನ್ಯವೆಂಬಾರಕ್ಕೆ ವಿದ್ಯಾಂಗ ಸ್ವರೂಪವಾದ ಜ್ಞಾನಶಕ್ತಿಯೇ ಕಾರಣವು (ಉದ್ಯವಾ. ೧೩-೮) ; ಶಿವನಲ್ಲಿ ಸಹಜವಾಗಿ ನೆಲಸಿರುವ ಚಿತ್ ಶಕ್ತಿಯು ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಎಂದು ಮೂರು ವಿಧವಾಗಿರುವುದು (ಶಕ್ತಿವಿ. ೮೫). [ ಜ್ಞಾನ + ಶಕ್ತಿ ]

**ಜ್ಞಾನಶೂನ್ಯ** (ಗು). ೧. ಜ್ಞಾನವಿಲ್ಲದಿರುವ ; ಎಚ್ಚರವಿಲ್ಲದಿರುವ ಜ್ಞಾನರಹಿತ: ಅವಳಿನ್ನೂ ಜ್ಞಾನಶೂನ್ಯ ಸ್ಥಿತಿಯಲ್ಲಿಯೇ ಇರುವಳು (ರೂಢಿ). (ನಾ). ೨. ಜ್ಞಾನವಿಲ್ಲದವನು; ಎಚ್ಚರವಿಲ್ಲದವನು : ಆ ದುವಾರ್ತೆಯನ್ನು ಕೇಳಿದ ಕೂಡಲೆ ಅವನು ಜ್ಞಾನಶೂನ್ಯನಾದನು (ರೂಢಿ). [ ಜ್ಞಾನ + ಶೂನ್ಯ ]

**ಜ್ಞಾನಶೂನ್ಯತೆ** (ನಾ). ಜ್ಞಾನವಿಲ್ಲದಿರುವಿಕೆ ; ಅಜ್ಞಾನ : ತತ್ತ್ವಜ್ಞಾನದ ಚರಿತ್ರೆಯಲ್ಲಿ ಈ ಲೋಪಗಳಿಗೆ ಕಾರಣ ನಮ್ಮ ಜ್ಞಾನಶೂನ್ಯತೆ (ತತ್ತ್ವಪ್ರ. ೨). [ ಸಂ. ಜ್ಞಾನಶೂನ್ಯತಾ ]

**ಜ್ಞಾನಶೈವ** (ನಾ). ಶೈವದ ಏಳು ಭೇದಗಳಲ್ಲಿ ಒಂದು : ಆಚಾರಭೇದದಿಂದಲೂ ಅನುಭವಭೇದದಿಂದಲೂ ಶೈವದಲ್ಲಿ ಅನಾದಿಶೈವ . . . ಯೋಗಶೈವ, ಜ್ಞಾನಶೈವ, ವೀರಶೈವ ಎಂಬ ಏಳು ಭೇದಗಳು ಏರ್ಪಟ್ಟಿರುತ್ತವೆ (ಭಾರದ. ೨೪೦). 'ಅನಾದಿಶೈವ' ಪರಾ. [ ಜ್ಞಾನ + ಶೈವ ]

**ಜ್ಞಾನಸಂಭವ** (ನಾ). ಜ್ಞಾನದ ಉತ್ಪತ್ತಿ: ಇಂತೀ ಗುಣದಂತೆ ಹೊಱಗಣ ಕ್ರಿಯಾಪದ ಒಳಗಣ ಜ್ಞಾನಸಂಭವ ಉಭಯದ ತತ್ತಿಲ್ಲ (ಮದೇವ. ೨೨೭-೨೭). [ ಜ್ಞಾನ + ಸಂಭವ ]

**ಜ್ಞಾನಸತ್ರ** (ನಾ). ಜ್ಞಾನಬೋಧೆಯನ್ನು ನೀಡುವ ಕ್ಷೇತ್ರ,–ಆಶ್ರಮ : ತಮ್ಮ ಸುತ್ತಮುತ್ತಲಿನ ಹಳ್ಳಿಯವರಿಗಾಗಿ ಅಲ್ಲಿ ಒಂದು ಜ್ಞಾನಸತ್ರವನ್ನೇ ಪ್ರಾರಂಭಿಸಿದರು (ಪ್ರಬಂಧ. ೯೪) ; ಮಾನಸಗಂಗೋತ್ರಿ ಬೆಳೆದು ರಂಜಿಸತೊಡಗಿತು, ದಿನ ದಿನ ಕಳೆದಂತೆ ಜ್ಞಾನಸತ್ರದ ರೂಪು ತಳೆದು (ಇಂಜಾಪ. ೫೩-೫೨). 'ಅನ್ನಸತ್ರ' ಪರಾ. [ ಜ್ಞಾನ + ಸತ್ರ ]

**ಜ್ಞಾನಸಾಧನ** (ನಾ). ಜ್ಞಾನವನ್ನು ದೊರಕಿಸುವ ಮಾರ್ಗ : ಆ ಭೇದಗಳು ಸಾಮಾನ್ಯವಾಗಿ ಜ್ಞಾತಾ, ಜ್ಞಾನ, ಜ್ಞಾನಸಾಧನ, ಜ್ಞೇಯ ಎಂದು ನಾಲ್ಕು ಪ್ರಕಾರವಾಗಿರುವುವು (ಹಿಂದಸಾ. ೨೦೪). [ ಜ್ಞಾನ + ಸಾಧನ ]

**ಜ್ಞಾನಸಾರಾಯ** (ನಾ). ೧. ಜ್ಞಾನದ ಸಾರ. ೨. ಜ್ಞಾನವೇ ಸತ್ತ್ವವಾಗಿರುವವನು ; ನಿಜತತ್ತ್ವವನ್ನರಿತವನು ; ಜ್ಞಾನಿ : ತನುಸಾರಾಯರ ಮನಸಾರಾಯರ ಜ್ಞಾನಸಾರಾಯರ ತೋಱಿಯಾ (ಬಸವ. ೫೦೩). [ ಜ್ಞಾನ + ಸಾರಾಯ ]

**ಜ್ಞಾನಸೂತ್ರ** (ನಾ). ಜನಿವಾರ : ಜ್ಞಾನಸೂತ್ರವನುಳಿದು ಈಯಜ್ಞಾನಲಿಂಗವ ಧರಿಸಿ (ಬಿಜ್ಜಪು. ೫೭-೩೩). [ ಜ್ಞಾನ + ಸೂತ್ರ ]

**ಜ್ಞಾನಸ್ನಾನ** (ನಾ). (ಕ್ರೈಸ್ತರ) ಮತಕ್ಕೆ ಸೇರಿಕೊಂಡಾಗ ಮಾಡಿಸುವ ಸ್ನಾನ,–ಸಂಪ್ರೋಕ್ಷಣೆ; ದೀಕ್ಷಾಸ್ನಾನ: ನಿನಗೇನು ಜ್ಞಾನಸ್ನಾನವಾಗಿಲ್ಲವೆ (ಪುನರು. ೫೫೯). [ ಜ್ಞಾನ + ಸ್ನಾನ ]

**ಜ್ಞಾನಹೀನ** (ನಾ). ಜ್ಞಾನವಿಲ್ಲದವನು ; ಮೂರ್ಖ: ದಿವಸೇಂದ್ರಾಲಯದೊಳ್ ಬುಧಂ ನೆಲಸೆ . . . ಜ್ಞಾನಹೀನಂ (ಜಾತಕ. ೧೭-೨೪). [ ಜ್ಞಾನ + ಹೀನ ]

**ಜ್ಞಾನಾಚಾರ** (ನಾ). [ಜೈನ] ದರ್ಶನ, ಜ್ಞಾನ, ಚಾರಿತ್ರ, ತಪ, ವೀರ್ಯ ಎಂಬ ಐದು ಬಗೆಯ ಆಚಾರಗಳಲ್ಲಿ ಒಂದು : "ನಿರ್ಬಾಧವಾದ ಆಗಮವನ್ನೂ ಸ್ವಪರ ತತ್ತ್ವಗಳನ್ನೂ ಆತ್ಮಾನುಭವದಿಂದ ತಿಳಿಯುವುದು ಜ್ಞಾನಾಚಾರವು" (ಜೈನಧ. ೧೦೧). 'ಪಂಚಾಚಾರ' ಪರಾ. [ ಜ್ಞಾನ + ಆಚಾರ ]

**ಜ್ಞಾನಾತ್ಮಕ** (ಗು). ೧. ಜ್ಞಾನದಿಂದ ಕೂಡಿದ; ಜ್ಞಾನವೇ ಪ್ರಧಾನವಾದ: ಜ್ಞಾನಾತ್ಮಕ ಶಾಸ್ತ್ರಗಳ ಗುರಿ ಕೇವಲ ಜ್ಞಾನ ಮತ್ತು ಜ್ಞಾನದ ಧ್ಯಾನ (ಅರಿಕಾ. ೧೧). (ನಾ). ೨. ಜ್ಞಾನವನ್ನೊಳಗೊಂಡುದು; ಜ್ಞಾನರೂಪವಾದುದು : ಐಕ್ಯ ಶರಣ ಪ್ರಾಣಲಿಂಗಿ ಇವುಗಳು ಜ್ಞಾನಾತ್ಮಕವು (ಶಿವಾಸೂ. ४೧-४೨). [ ಸಂ. ]

**ಜ್ಞಾನಾಧ್ಯಾಸ** (ನಾ). ಒಂದು ವಸ್ತು ಮತ್ತೊಂದು ವಸ್ತುವಿನಂತೆ ಕಾಣುವಿಕೆ,–ತೋರುವಿಕೆ : ಹಗ್ಗವು ದೋಷಸಹಿತವಾದ ದೃಷ್ಟಿಯಿಂದ ಸರ್ಪವಾಗಿ ಆಗುವುದು, ಹಾಗೆ ಕಾಣುವುದು. ಆಗುವುದಕ್ಕೆ ಅರ್ಥಾಧ್ಯಾಸವೆಂದೂ ಕಾಣುವುದಕ್ಕೆ ಜ್ಞಾನಾಧ್ಯಾಸವೆಂದೂ ವ್ಯವಹಾರ (ಹಿಂದಸಾ. ೨೦೭). [ ಜ್ಞಾನ + ಅಧ್ಯಾಸ ]

**ಜ್ಞಾನಾನ್ವೇಷಣ** (ನಾ). ಜ್ಞಾನವನ್ನು ಹುಡುಕುವುದು: ಜ್ಞಾನಾನ್ವೇಷಣ ಸಾಹಸವಿಲ್ಲದ ಭಕ್ತಿಮಾರ್ಗ ಆಧ್ಯಾತ್ಮಿಕ ದೃಷ್ಟಿಯಿಂದ ಪ್ರಶಸ್ಯವಲ್ಲದಿದ್ದರೂ (ಮಕ್ಕಾ.ರ. ೧೧೧ ಪೀಠಿಕೆ). [ ಜ್ಞಾನ + ಅನ್ವೇಷಣ ]

**ಜ್ಞಾನಾರಾಧನೆ** (ನಾ). ಜ್ಞಾನದ ಉಪಾಸನೆ : ಅಜ್ಞಾನಮಂ ಗೆಂಟುಮಾಡಿ ಸುಜ್ಞಾನಮನಾತ್ಮನೊಳುಂಟು ಮಾಡುವುದು ಜ್ಞಾನಾರಾಧನೆ (ಜೀವಸಂ. ೩-೮ ವ). [ ಜ್ಞಾನ + ಆರಾಧನೆ ]

**ಜ್ಞಾನಾರೋಪ**(ನಾ). ಒಂದು ವಸ್ತುವನ್ನು ಮತ್ತೊಂದು ವಸ್ತುವನ್ನಾಗಿ ಗ್ರಹಿಸುವಿಕೆ : ಜ್ಞಾನಾರೋಪ ಎಂಬಲ್ಲಿ ಆರೋಪ ಎಂದರೆ ಸ್ಮೃತಿಗೆ ಸದೃಶವಾದ ಒಂದು ವಸ್ತುವನ್ನು ಮತ್ತೊಂದು ವಸ್ತುವಿನಂತೆ ಗ್ರಹಿಸುವ ಜ್ಞಾನ (ಭಾತತ್ತ್ವ. ೫೭೮). [ ಜ್ಞಾನ + ಆರೋಪ ]

**ಜ್ಞಾನಾರ್ಪಣ** (ನಾ). [ವೀಶೈ]ಇಂದ್ರಿಯಗೋಚರವಾದ ವಸ್ತುಗಳನ್ನು ಲಿಂಗಮುಖವಾಗಿ ಸ್ವೀಕರಿಸುವುದು : ಸರ್ವತ್ರ ಆಚಾರಾದಿ ಷಡ್ವಿಧ ಲಿಂಗಗಳಲ್ಲಿ ಆ ಲಿಂಗಮುಖಗಳಿಂದ ಗಂಧಾದಿ ಪದಾರ್ಥಗಳನ್ನು ಅನಿಚ್ಛಾಪೂರ್ವಕವಾಗಿ ಅರ್ಪಣ ಮಾಡುವುದೇ ಜ್ಞಾನಾರ್ಪಣವು (ಶಿವಾಸೂ. ೧೧೪-೪೫). [ ಜ್ಞಾನ + ಅರ್ಪಣ ]

**ಜ್ಞಾನಾವರಣ** (ನಾ). [ಜೈನ] ಜ್ಞಾನಕ್ಕೆ ಪ್ರತಿಬಂಧಕವಾದ ಕರ್ಮ: ಮಿಥ್ಯಾದರ್ಶನ ವಿರತಿ ಪ್ರಮಾದ ಕಷಾಯ ಯೋಗೋಪಾರ್ಜಿತ ಜ್ಞಾನಾವರಣಾದಿ ಕರ್ಮಂಗಳ್ ಸಂಸಾರ ಕಾರಣಂಗಳ್ (ಆದಿಪು. ೧೦-೬೦ ವ); ಚರಮದೊಳಯ್ದುಂ ಜ್ಞಾನಾವರಣಮುಮಂ ನಾಲ್ಕು ದರ್ಶನಾವರಣ ಮುಮಂ ಪರಮೇಶ್ವರನೊರ್ಮೊದಲೊಳೆ ಪರಿಹರಿಸಿದನಯ್ದು ಮಂತ ರಾಯಂಗಳುಮಂ (ಮಲ್ಲಿಪು. ೧೪-೯೦); ಜ್ಞಾನಾವರಣಮುಂ ದರ್ಶನಾ ವರಣಮುಂ ವೇದನೀಯಮುಂ . . . ಎಂದಿಂತು ಮೂಲಪ್ರಕೃತಿಗಳಂ (ಗೊಮ್ಮಸಾ. ೨-೧). [ಜ್ಞಾನ + ಆವರಣ]

**ಜ್ಞಾನಾವರಣಪಂಚಕ** (ನಾ). [ಜೈನ] ಮತಿಜ್ಞಾನಾವರಣ, ಶ್ರುತಜ್ಞಾನಾ ವರಣ, ಅವಧಿಜ್ಞಾನಾವರಣ, ಮನಃಪರ್ಯಾಯಜ್ಞಾನಾವರಣ ಮತ್ತು ಕೇವಲ ಜ್ಞಾನಾವರಣ ಎಂಬ ಐದು ಬಗೆಯ ಜ್ಞಾನಾವರಣ ಕರ್ಮಗಳು: ಜ್ಞಾನಾವರಣ ಪಂಚಕಮಂ ದರ್ಶನಾವರಣ ಚತುಷ್ಕಮಂ ಅಂತರಾಯ ಪಂಚಕಮಂ ಸಪ್ರಪಂಚಂ ಘಾತಿಸಿ (ಶಾಂತಿಪು. ೧೦-೧೧೧ ವ). [ಜ್ಞಾನಾವರಣ + ಪಂಚಕ]

**ಜ್ಞಾನಾವರಣೀಯ** (ನಾ). [ಜೈನ] ಎಂಟು ಬಗೆಯ ಘಾತಿಕರ್ಮಗಳಲ್ಲಿ ಒಂದು; ಜ್ಞಾನವನ್ನು ಮರೆಮಾಡುವ ಕರ್ಮ: ಕರ್ಮಭೇದಮುಂ . . . ಮೂಲಪ್ರಕೃತಿ ಭೇದದಿಂದೆಂಟು ತೆಱನಕ್ಕುಂ ಅವಾವುವೆನೆ ಜ್ಞಾನಾ ವರಣೀಯಂ . . . ನಾಮ ಗೋತ್ರಮಂತರಾಯಂ (ಶಾಂತಿಪು. ೧೨-೧೦ ವ); ಜೀವನ ಸ್ವಾಭಾವಿಕವಾದ ಜ್ಞಾನವನ್ನು ಆಚ್ಛಾದಿಸುವ ಕರ್ಮವು ಜ್ಞಾನಾ ವರಣೀಯವು (ಜಿನಧ. ೩). 'ಅಷ್ಟಕರ್ಮ' ಪರಾ. [ಸಂ.]

**ಜ್ಞಾನಿ** (ನಾ). ೧. ತಿಳಿದವನು; ಬುದ್ಧಿವಂತ: ಜ್ಞಾನಿಗಳೊಳ್ ಯೋಗಿಗಳ ಜ್ಞಾನಿಗಳೊಳ್ ಗೋಪರಧಿಕರ್ (ಜಗವಿ. ೧೭-೨೦). ೨. ಪರಮಾತ್ಮಜ್ಞಾನ ವುಳ್ಳವನು; ಮೋಕ್ಷಕ್ಕೆ ಕಾರಣವಾದ ಜ್ಞಾನವನ್ನು ಪಡೆದಿರುವವನು: ಸದ್ಗುರು ಮುಖದಿ ತತ್ತ್ವಮಸಿಯನೆ ತಿಳಿದು ಸತ್ಯವಿಂತೆಂದು ಅಱಿದಿಪ್ಪ ಜ್ಞಾನಿ ತಾ ಸತ್ತು ಹುಟ್ಟುವನೆ (ಸರ್ವಜ್ಞ. ೩೩೦); ಅಲ್ಲಮಪ್ರಭುವು ಪ್ರಭುವಿ ನಂತೆ, ಕೇವಲ ಜ್ಞಾನಿಯಂತೆ . . . ಕಾಣಿಸಿಕೊಳ್ಳುತ್ತಾನೆ (ಕೂನ್ನಕು. ೧೩೪). ಆದುದರಿಂದಲೇ ನಾನು ಭಕ್ತರಲ್ಲಿರುವೆನು, ಜ್ಞಾನಿಗಳಲ್ಲಿರುವೆನು ಎಂದು ಪರಮಾತ್ಮನ ವಚನಗಳಿರುವುವು (ವಚಿರ. ೦೩). ೩. ಜ್ಯೋತಿಷ್ಕ; ಜೋಯಿಸ: "ಕಾರ್ತಾಂತಿಕಂ ಜ್ಞಾನಿ . . . ಉತ್ತಮ ಜ್ಯೋತಿಷನೆನಿಕ್ಕು" (ಮಂಗರಾ. ೭೩-೬). [ಸಂ. ಜ್ಞಾನಿನ್]

**ಜ್ಞಾನೇಂದ್ರಿಯ** (ನಾ). ೧. ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳ ಜ್ಞಾನವನ್ನುಂಟುಮಾಡಿ ಕೊಡುವ ಇಂದ್ರಿಯ; ಗ್ರಹಣ ಶಕ್ತಿಯನ್ನುಳ್ಳ ಇಂದ್ರಿಯ (ಕಿವಿ, ಚರ್ಮ, ಕಣ್ಣು, ನಾಲಿಗೆ ಮತ್ತು ಮೂಗು): ಆ ಅಂಗಕ್ಕೆ ಜ್ಞಾನೇಂದ್ರಿಯಂಗಳು ಕರ್ಮೇಂದ್ರಿಯಂಗಳು ಪ್ರತ್ಯಂಗವೆನಿಸಿತ್ತು (ಮಹಾದೇ. ಕ. ೧೪೭-೩೯೦); ವಿಷಯಗಳನ್ನೆಲ್ಲ ಒಂದಲ್ಲೊಂದು ರೀತಿಯಿಂದ ಅರಿಯುವಂಥ . . . ಈ ಐದು ಜ್ಞಾನೇಂದ್ರಿಯ ಗಳನ್ನು ದೃಕ್ಕುಗಳೆಂದು ತಿಳಿಯಬೇಕು (ಅಮೃತ. ೩-೨೭ ಟೀಕು). ೨. ಮನಸ್ಸು; ಬುದ್ಧಿ: ಜ್ಞಾನವಿಕಾಸಕ್ಕೆ ಹೇತುವಾಗಿಯೂ ಇಂದ್ರಿಯ ವಾಗಿಯೂ ಇರುವುದು ಜ್ಞಾನೇಂದ್ರಿಯವೆನಿಸಿಕೊಳ್ಳುವುದು (ತತ್ತ್ವಪು. ೭). 'ಕರ್ಮೇಂದ್ರಿಯ' ಪರಾ. [ಜ್ಞಾನ + ಇಂದ್ರಿಯ]

**ಜ್ಞಾನೋದಯ** (ನಾ). ಜ್ಞಾನದ ಉದಯ; ಜ್ಞಾನವುಂಟಾಗುವಿಕೆ; ಅರಿವು ಮೂಡುವಿಕೆ: ಜ್ಞಾನೋದಯದಿಂದ . . . ಎಯ್ದಿದಳಾ ನಂದದೆ ವಿಷ್ಣುಲೋಕಮಂ (ದಿವ್ಯಚ. ೭-೬೨). [ಜ್ಞಾನ + ಉದಯ]

**ಜ್ಞಾನೋಪಯೋಗ** (ನಾ). [ಜೈನ] ಷೋಡಶ ಭಾವನೆಗಳಲ್ಲೊಂದಂ: ನಯ ಪ್ರಮಾಣ ನಿಕ್ಷೇಪ ಲಕ್ಷಿತ ಶಾಸ್ತ್ರಾಧ್ಯಯನ ಲಕ್ಷಣಮಪ್ಪ ಜ್ಞಾನೋ ಪಯೋಗಮುಮಂ (ಚಂದ್ರಪು. ೧೧-೩೨ ವ). [ಜ್ಞಾನ + ಉಪಯೋಗ]

**ಜ್ಞಾನೋಪಲಬ್ಧಿ** (ನಾ). ಜ್ಞಾನಪ್ರಾಪ್ತಿ: ಮಾನವೇತಿಹಾಸ ಎಂದರೆ, ಮಾನವ ಸಂಸ್ಕೃತಿಯ ಉದ್ಗಮ ಹಾಗೂ ವಿಕಾಸದ ಇತಿಹಾಸ: ಮಾನವನ ಜ್ಞಾನೋಪಲಬ್ಧಿಯ ಇತಿಹಾಸ (ಕರ್ನಾಟ. ೧೧). [ಜ್ಞಾನ + ಉಪಲಬ್ಧಿ]

**ಜ್ಞಾಪಕ** (ನಾ). ೧. ತಿಳಿಯುವಂತೆ ಮಾಡುವ ವಸ್ತು. ೨. ಬೋಧಿಸು ವವನು; ಗುರು; ಉಪಾಧ್ಯಾಯ. ೩. ನೆನಪು; ಸ್ಮರಣೆ: ಆ ಸಮಗ್ರತೆ ಯಲ್ಲಿ ರಸಜೀವನ, ಪ್ರೇರಕಶಕ್ತಿ, ಪ್ರತಿಭೆ . . . ಜ್ಞಾಪಕ ಇತ್ಯಾದಿಯೆಲ್ಲ ಸೇರಿವೆ (ಶಿಕ್ಷದ. ೩೮೦). ೪. [ಕಾವ್ಯಮೀ] ಒಂದು ಅಲಂಕಾರ; ಹೇತ್ವಲಂಕಾರದ ಭೇದಗಳಲ್ಲೊಂದು; ಯಾವುದಾದರೂ ಒಂದು ಕಾರ್ಯಕ್ಕೆ, ಪರಿಣಾಮಕ್ಕೆ ಅಥವಾ ಫಲಕ್ಕೆ ಜ್ಞಾಪಕವಾದ ಕಾರಣ ವನ್ನು ಕಲ್ಪಿಸಿ ಹೇಳುವ ಅಲಂಕಾರ: ಕಾರಣಮಾಗಿರ್ಪುದಳಂಕಾರಂ ಹೇತೂಕ್ತಿಯೆಂಬುದದು ತಾಂ ನಾನಾಕಾರಂ ಜ್ಞಾಪಕಸದಳಂಕಾರ ಸುಮಾರ್ಗ ಪ್ರಯೋಗಮಿಾ ತೆಱನದಱಾ. ಲಕ್ಷ್ಯಂಗಳ್: ಇಂದುಕಿರಣಂ ಗಳಿಂದಂ ಚಂದನರಸದಿಂದೆ ಮಾಗಿಯಾ ನೀರಿಂದಂ ನಂದದು ಪರಿತಾಪಾ ನಳನಿಂದಱಿದೆಂ ನಿನ್ನ ಮೆಯ್ಯ ಕಾಮಜ್ವರಮಂ (ಕವಿರಾ. ೩-೧೬೩).

**ಜ್ಞಾಪಕ ಕೊಡು=ಜ್ಞಾಪಿಸು**: ಸ್ವಲ್ಪಹೊತ್ತಿನ ಮೇಲೆ ನವ ಕುಮಾರನ ಬಳಿಗೆ ವಿದೇಶದ ಬೀಬಿಯು ಜ್ಞಾಪಕ ಕೊಟ್ಟಳೆಂದು ಸಮಾಚಾರವು ಬಂದಿತು (ಕಪಾಕುಂ. ೪೮). **ಜ್ಞಾಪಕ ಮಾಡು=ಜ್ಞಾಪಕ ಕೊಡು**: ನಾಳೆ ಬೆಳಗ್ಗೆ ನನಗೆ ಜ್ಞಾಪಕಮಾಡಿಬಿಡು (ರೂಢಿ). [ಸಂ.]

**ಜ್ಞಾಪಕಪತ್ರ** (ನಾ). "(ಜ್ಞಾಪಕಕ್ಕೆ ತರಲು ಸಹಾಯಕವಾದ) ನೆನಪಿನ ಟಿಪ್ಪಣಿ" (Memo. ಇಂಕನಿ.). [ಜ್ಞಾಪಕ + ಪತ್ರ]

**ಜ್ಞಾಪಕಶಕ್ತಿ** (ನಾ). ನೆನಪಿನ ಶಕ್ತಿ; ಸ್ಮರಣಶಕ್ತಿ: ಜ್ಞಾಪಕಶಕ್ತಿ ಮುಖ್ಯವಾದ ಮನೋವ್ಯಾಪಾರಗಳಲ್ಲೊಂದು (ಶಿಕ್ಷದ. ೩೨೦). [ಜ್ಞಾಪಕ + ಶಕ್ತಿ]

**ಜ್ಞಾಪಕಹೇತು** (ನಾ). [ತತ್ತ್ವಶಾ] ಜ್ಞಾನ ಹುಟ್ಟಲು ಅತ್ಯಾವಶ್ಯಕವಾದ ಎರಡು ಕಾರಣಗಳಲ್ಲಿ ಒಂದು: ಹೊಗೆ ಕಂಡರೆ ಮಾತ್ರ ಇಲ್ಲಿ ಬೆಂಕಿಯಿದೆ ಎಂದು ತಿಳಿಯುತ್ತದೆ. ವಾಸನೆ ಗೋಚರವಾದರೆ ಪೊದೆಯಲ್ಲಿ ಪುಷ್ಪವಿದೆ ಯೆಂದು ತಿಳಿಯುತ್ತದೆ. ಇವುಗಳಿಗೆ ಜ್ಞಾಪಕಹೇತುಗಳೆಂದು ಹೆಸರು (ಹಿಂದಸಾ. ೫೩). [ಜ್ಞಾಪಕ + ಹೇತು]

**ಜ್ಞಾಪಕಾರ್ಥ** (ಗು). ನೆನಪಿಗಾಗಿರುವ; ಸ್ಮರಣಾರ್ಥವಾದ. [ಸಂ.]

**ಜ್ಞಾಪನ** (ನಾ). ೧. ನೆನಪು ಮಾಡುವುದು. ೨. ಬೋಧನೆ. 'ಜ್ಞಾಪಿಸು' ಪರಾ. [ಸಂ.]

**ಜ್ಞಾಪಿತ** (ಗು). = ಜ್ಞಪಿತ: "ಜ್ಞಪ್ತಂ ತಾಂ ಜ್ಞಾಪಿತಂ" (ವಸ್ತುಕೋ. ೧೦೫-೪೦). [ಸಂ.]

**ಜ್ಞಾಪಿಸು** (ಕ್ರಿ). ಸ್ಮರಿಸು; ನೆನಪುಮಾಡು.

**ಜ್ಞಾಪಿಸಿಕೊಳ್ಳು = ನೆನಪುಮಾಡಿಕೊಳ್ಳು**: ಸೂರಪ್ಪನ ಈ ದಿನದ ವರ್ತನೆಯನ್ನು ಜ್ಞಾಪಿಸಿಕೊಳ್ಳುತ್ತಿದ್ದ (ಚೆಂಗಾಳ್ಳ. ೪೩). [ಜ್ಞಾಪನ + -ಇಸು₃]

**ಜ್ಞಾಯಕ** (ನಾ). ತಿಳಿದುಕೊಳ್ಳತಕ್ಕವನು; ಜ್ಞಾತೃ: ಜ್ಞಾಯಕ ನಾಗಖಿಳಾರ್ಥಂ ಜ್ಞೇಯಂ ಪರಕೀಯಮುಂ ಸ್ವಕೀಯಮುಮಿಲ್ಲೆಂ ಬೀಯಱಿವಿಂ (ಪಾರ್ಶ್ವಪು. ೧೫-೧೪೦). [ಸಂ.]

**ಜ್ಞಾಯಕಶರೀರ** (ನಾ). [ಜೈನ] ತ್ರಿಕಾಲಜ್ಞಾನಿಯ ಶರೀರ; ಸರ್ವಜ್ಞನ ದೇಹ: ಭಾವಿ ತದ್ವ್ಯತಿರಿಕ್ತ ಭೇದದಿಂ . . . ಸಕಲ ತ್ರಿಕಾಲ ಗೋಚರಮಪ್ಪ ಅಱಿವನ ದೇಹಂ ಜ್ಞಾಯಕಶರೀರಂ (ತತ್ತ್ವಪ್ರ. ೯). [ಜ್ಞಾಯಕ + ಶರೀರ]

**ಜ್ಞೇಯ** (ಗು). ೧. ತಿಳಿಯಬೇಕಾದ; ಅರಿಯಬೇಕಾದ (ನಾ). ೨. ತಿಳಿಯಬೇಕಾದ ವಿಷಯ, -ವಸ್ತು: ಜ್ಞಾನಂ

ಜ್ಞೇಯ ಪ್ರಮಾಣಂ ಪಸರಿಸೆ (ಪಂರಾಮಾ. ೧-೨); ಜ್ಞಾತೃ ಜ್ಞಾನ ಜ್ಞೇಯಕ್ಕೆ ಇನ್ನಾವ ಜ್ಞಾನವೋ (ಅವಪಂ. ೧೯೨-೬೫೨); ಜ್ಞಾತೃಜ್ಞಾನ ಜ್ಞೇಯಕತೀತನಂ . . . ಚಿಂತಿಸಿದಂ (ಶಬಶಂ. ೨-೯೭). ೩. ಚೈತನ್ಯ ಸ್ವರೂಪ; ಪರಬ್ರಹ್ಮ: ಜ್ಞಾತೃ ಜ್ಞಾನ ಜ್ಞೇಯಗಳೆಂಬ ಮೂರಕೀ ತ್ರಿಪುಟಿಯಾಗಿರ್ಪುದದಟಿೊಳು . . . ಭೂತಾದಿ ವಿಷಯಾವಚ್ಛಿನ್ನಚೈತನ್ಯವೇ ಜ್ಞೇಯವೆನಿಸುವವನು (ವಿವೇಕ. ೩೩); ಸೋಪಾಧಿಕ ಬ್ರಹ್ಮವು ಉಪಾಸ್ಯವು, ನಿರುಪಾಧಿಕ ಬ್ರಹ್ಮವು ಜ್ಞೇಯ (ಬ್ರಹ್ಮಭಾ. ೧೪೩ ಅಡಿಟಿ). [ಸಂ.]

**ಜ್ಞೇಯಾನಂದ** (ನಾ). ಅರಿವಿನಿಂದ ಉಂಟಾಗುವ ಆನಂದ; ಚೈತನ್ಯ ಸ್ವರೂಪದ ಸಾಕ್ಷಾತ್ಕಾರದಿಂದ ಉಂಟಾಗುವ ಆನಂದ: ಜ್ಞಾನದ ಸಾರವೋ ಹರಿರೂಪು ಜ್ಞೇಯಾನಂದ . . . ಹರಿರೂಪು (ಗಗತಾ. ೧೭-೨೩).)

[ಜ್ಞೇಯ + ಆನಂದ]

**ಜ್ಯಾ** (ನಾ). ೧. ಬಿಲ್ಲಿನ ಹೆದೆ; ನಾರಿ: "ಸಿಂಜನಿ ಜೀವೆ ವೌರ್ವಿ ಗುಣವೆಂಬಿನಿತುಂ ಜ್ಯಾ ನಾಮಮಂ" (ವಸ್ತುಕೋ. ೮೫-೧೭). 'ಜ್ಯಾರವ' ಪರಾ. ೨. ಧರೆ; ಭೂಮಿ: "ಜ್ಯಾ ಜಗತಿಯುರ್ವಿ . . . ಸರ್ವಂ ಸಹಾಖ್ಯೆಯೆನೆ ನೆಲಕೆ ನಾಮಮಂ" (ಮಂಗರಾ. ೨೮-೧); ವಹ್ನಿಗರ್ಭಾರಣಿ ಯಂತೆಯುಂ ಮಣಿಗರ್ಭಜ್ಯಾಯಂತೆಯುಂ . . . ಮಹತ್ವಮಂ ಪಡೆದೆಯೆಂದು ಸ್ತುತಿಗೈದು (ಜಗವಿ. ೨-೯೭ ವ). ೩. ಮಾತೆ; ತಾಯಿ: ಜ್ಯಾಗೆ, ಮಾಗೆ, ಜ್ಯಾದಿರ್, ಮಾದಿರ್ (ಶಬ್ದಾನು. ೫ ಪ್ರಯೋ). ೪. [ರೇಖಾಗ] "ವೃತ್ತ ರೇಖಾಭಾಗದ ಎರಡು ತುದಿಗಳನ್ನು ಸೇರಿಸುವ ಸರಳರೇಖೆ" (Chord. ಇಂಕನಿ.). ೫. "ಚಾಪದ ಒಂದು ಕೊನೆಯಿಂದ ಮತ್ತೊಂದು ಕೊನೆಯ ತ್ರಿಜ್ಯಕ್ಕೆ ಲಂಬವಾಗಿ ಎಳೆದ ರೇಖೆ" (Sine of arc. ಇಂಕನಿ.): "ಆ ಲಂಬರೇಖೆಗೂ ತ್ರಿಜ್ಯಕ್ಕೂ ಇರುವ ಪ್ರಮಾಣ" (Sine of angle. ಇಂಕನಿ.);ಯವನರು 'ಜ್ಯಾ' ವನ್ನು 'ವ್ಯಾಸ' ದಿಂದ ಭಾಗಿಸುತ್ತಿದ್ದರು (ಶಿಲ್ಪನಾ. ೯೮). 'ಜ್ಯಾಮಿತಿ' ಪರಾ. [ಸಂ.]

**ಜ್ಯಾಘಾತ** (ನಾ). ಬಿಲ್ಲಿನ ಹೆದೆಯಿಂದಾದ ಪೆಟ್ಟು; ಬಿಲ್ಲಿನ ಹುರಿಯ ಹೊಡೆತ: ಪೊಣ್ಮುತ್ತುಪೇಂದ್ರನ ದೈತ್ಯೇಂದ್ರನ ದಿವ್ಯಚಾಪ ವಿಪುಲ ಜ್ಯಾಘಾತ ಘೋರಸ್ವನಂ (ಪಂರಾಮಾ. ೧೪-೧೫೦); ಚಿನ್ನದ ಕಂಬಗಳಂತೆ ಸುಂದರಗಳೂ ಜ್ಯಾಘಾತದಿಂದ ಕಠಿಣಗಳೂ ಆದ ಅವನ ತೋಳುಗಳನ್ನು . . . ತಟ್ಟುತ್ತ (ವಚಭಾ. ೧೨೭). [ಜ್ಯಾ + ಘಾತ$_2$]

**ಜ್ಯಾಘಾತವಾರಣ** (ನಾ). ಬಿಲ್ಲಿನ ಹೆದೆಯಿಂದುಂಟಾಗುವ ಪೆಟ್ಟುಗಳಿಂದ ರಕ್ಷಿಸಿಕೊಳ್ಳಲು ಎಡದ ಮುಂಗೈಗೆ ಕಟ್ಟಿಕೊಳ್ಳುವ ಚರ್ಮಪಟ್ಟಿ. 'ಗೋಧಾ' ಪರಾ. [ಜ್ಯಾಘಾತ + ವಾರಣ]

**ಜ್ಯಾನಾದ** (ನಾ). ಬಿಲ್ಲಿನ ಹೆದೆಯಿಂದಾಗುವ ಧ್ವನಿ; ಠೇಂಕಾರ: ಆ ನರಂ ಕೋಪಮಂ ತಾಳ್ದು ನಿಜಚಾಪಮಂ ಜ್ಯಾನಾದಮಂ ಮಾಡೆ (ಜೈಮಿಭಾ. ೨೨-೪೭); ಜ್ಯಾನಾದಮಾತ್ರದಿಂದವನೇನೆಂಬೆಂ ವಿಘ್ನವೆಲ್ಲಮಂ ಪರಿಹರಿಕುಂ (ಶಾಕುಂತ. ೩೧-೫೪). [ಜ್ಯಾ + ನಾದ$_1$]

**ಜ್ಯಾನಿ** (ನಾ). ೧. ವಾಂಪ್ಪು; ವಾರ್ಧಕ್ಯ. ೨. ಕ್ಷೀಣತೆ; ಶೈಥಿಲ್ಯ; ದುರ್ಬಲತೆ; ಅಶಕ್ತಿ. [ಸಂ.]

**ಜ್ಯಾಪ್ರತಿಪಾಳನ** (ನಾ). ಭೂಮಿಯ ರಕ್ಷಣೆ: ಜ್ಯಾಪ್ರತಿಪಾಳನಮಂ ಧರ್ಮ ಪ್ರೀತಿಯನ್ನೆದೆಮಾಡಿದಂ ಸುಕರತೆಯಿಂದಾ ಪ್ರಭು (ಚಂದ್ರಪು. ೨-೭೩).

[ಜ್ಯಾ + ಪ್ರತಿಪಾಳನ (= ಪ್ರತಿಪಾಲನ)]

**ಜ್ಯಾಬೀತೆ** 'ಜಾಬಿತಾ' ನೋ.

**ಜ್ಯಾಬು** (ನಾ). = ಜೂಬು (?): ಭೂಪಾಳಕಜಾಳಕಪ್ರತತಿಗೆ ಪೆರ್ವ್ಯಾಡಿ ಜ್ಯಾಬಾದನೋ (ಇಎ. ೧೯೪೭, ಕೊಲ್ಲಾಪುರ. ೫೩೭-೦೨; ?). [?]

**ಜ್ಯಾಮಂಡಲ** (ನಾ). ಭೂಮಂಡಲ: ನಿನ್ನವೊಲೀ ಜ್ಯಾಮಂಡಲದೊಳಧಿಕ ಸಾಹಸಿಯಾವಂ (ವೃಷವಿ. ೧೦-೫೫). [ಜ್ಯಾ + ಮಂಡಲ]

**ಜ್ಯಾಮಿತಿ** (ನಾ). ರೇಖೆ, ಕ್ಷೇತ್ರ, ಘನಾಕೃತಿ ಇವುಗಳ ಲಕ್ಷಣಗಳ ಮತ್ತು ಪ್ರಮಾಣಸಂಬಂಧಗಳ ಪರಿಚಯವನ್ನುಂಟುಮಾಡಿಕೊಡುವ ಗಣಿತಶಾಸ್ತ್ರ; ರೇಖಾಗಣಿತ: ಅವುಗಳಲ್ಲಿ ಅಡಕವಾದ ಕೊಂಚ ಜ್ಯಾಮಿತಿ ಯನ್ನೂ ಅರಿತುಕೊಂಡುದಾಯಿತು (ಬಂಜನ್. ೨೭); ಜ್ಯಾಮಿತಿ ತಿಳಿಯದೆ ಇದ್ದವರಿಗೆ ಪ್ಲೇಟೋವಿನ ಆಶ್ರಮದೊಳಕ್ಕೆ ಕಾಲಿಡಲೂ ಸಹ ಅವಕಾಶ ವಿರಲಿಲ್ಲವಂತೆ (ಶಿಲ್ಪನಾ. ೯೫) ;ಜ್ಯಾಮಿತಿಯ ತಿಳುವಳಿಕೆಯಿಲ್ಲದವನು ನನ್ನ ಬಾಗಿಲಿನೊಳಗೆ ಪ್ರವೇಶಿಸಲಾಗದು (ಗಣಜ. ೨೭).

[ಜ್ಯಾ + ಮಿತಿ./ಇಂ. Geometry]

**ಜ್ಯಾಯ** (ನಾ). ೧. ಹಿರಿಯ; ಜ್ಯೇಷ್ಠ. ೨. ಅಣ್ಣ: "ಅಗ್ರಜಂ ಜ್ಯಾಯನಾ ಜ್ಯೇಷ್ಠನೆನಲಣ್ಣನೆನಿಕುಂ" (ಮಂಗರಾ. ೯೨-೧೧); ಜ್ಯಾಯನ ರಾಜ್ಯಮನಯ್ಯ ಕನೀಯನವೇಕ್ಷಿಸುವುದುಚಿತಮಲ್ತು (ಪಂರಾಮಾ. ೭-೧೨೬). ೩. ಶ್ರೇಷ್ಠ ನಾದವನು; ಉತ್ತಮನು: ಜ್ಯಾಯಂಗೆ ನೀನೆ ವಲಮಾದೇಯಂ ನೀನಲ್ಲದನ್ಯವಸ್ತುಗಳೆಲ್ಲಂ ಹೇಯಂ (ಮಲ್ಲಿಪು. ೧೦-೧೨೬); ಪೃಥುಕಾಯಂ ದುಷ್ಪ್ರಮೇಯಂ ಸಕಲಖಗಕುಲಜ್ಯಾಯನಾ ವೈನತೇಯಂ (ಜಗವಿ. ೧೦-೯೦). [ಸಂ. ಜ್ಯಾಯಸ್]

**ಜ್ಯಾಯಾಂಸ** (ನಾ). ಹಿರಿಯ; ಜ್ಯೇಷ್ಠ: ಜ್ಯಾಯಾಂಸ, ಕನೀಯಾಂಸ (ಶಮದ. ೮೭ ಪ್ರಯೋ); ಜ್ಯಾಯಂ, ಜಾಯಸ್ಸು, ಜ್ಯಾಯಾಂಸಂ (ಶಬ್ದಾನು. ೧೩೪ ಪ್ರಯೋ). [ಸಂ. ಜ್ಯಾಯಸ್]

**ಜ್ಯಾರವ** (ನಾ). ೧. = ಜ್ಯಾನಾದ: ಪೆಣ್ದುಂಬಿಯ ಗಾವರಂಬೊರೆದು ಪೊಣ್ಮುತಿರ್ದ ಪುಷ್ಪಾಸ್ತ್ರಚಾಪಲತಾ ಜ್ಯಾರವದಂತೆ (ಕಾದಂಪೂ. ೬೫೨). ೨. ಭೂಮಿಯ ಧ್ವನಿ. ೧, ೨: ಅಟ್ಟಳಿಟ್ ಭುಜಂಗರ್ ಬೆರ್ಚಿ ದೇವರ್ ಭಯಂಗೊಳೆ ಮರ್ತ್ಯರ್ ಪ್ರತಿಜಾತ ನಾಗಗೃಹ ನಾಕಜ್ಯಾರವಂ ಜ್ಯಾರವಂ (ಜಗವಿ. ೭-೭೭). [ಜ್ಯಾ + ರವ]

**ಜ್ಯಾರವಂಗೆಯ್** (ಕ್ರಿ). ಬಿಲ್ಲಿನ ಹೆದೆಯೇರಿಸಿ ಧ್ವನಿಮಾಡು: ಧನುಷ್ಟೇಂಕಾರಮಾಡಂ: ಪೆದೆಯನೆಳೆದು ಗಾಂಡೀವದೊಳ್ ತೊಟ್ಟು ರೌದ್ರೋತ್ಕರ ವೃತ್ತಂ ಜ್ಯಾರವಂಗೆಯ್ದಡಸಿ ಪಿಡಿದು . . . ಮಾಣದೆಚ್ಚಂ (ಶಬಶಂ. ೪-೩೯). [ಜ್ಯಾರವ + ಕೆಯ್$_1$]

**ಜ್ಯಾರಾವ** (ನಾ). = ಜ್ಯಾರವ: ತೀವಿದುದು ಗಗನಮಂ ವಜ್ರಾವರ್ತ ಧನುರ್ಲತಾ ಘನ ಜ್ಯಾರಾವಂ (ಪಂರಾಮಾ. ೧೪-೧೪೧). [ಜ್ಯಾ + ರಾವ]

**ಜ್ಯೂ** (ನಾ). ಇಸ್ರೇಲ್ ದೇಶದವನು; ಹೀಬ್ರೂ ಬುಡಕಟ್ಟಿಗೆ ಸೇರಿದವನು; ಯೆಹೂದ್ಯ; ಯೆಹೂದಿ. [←ಇಂ. Jew]

**ಜ್ಯೂರಿ** (ನಾ). ನ್ಯಾಯದರ್ಶಿ; ನ್ಯಾಯಸ್ಥಾನದಲ್ಲಿ ತೀರ್ಪುಕೊಡಲು ನಿಯುಕ್ತನಾದ ವ್ಯಕ್ತಿ; ಪಂಚಾಯತಿದಾರ: ಚಿಕ್ಕಿಯ ತಂದೆ ನನ್ನನ್ನು ಇಳಿಸಿ, ನಡೆಸಿಕೊಂಡು ಒಯ್ದು ಜ್ಯೂರಿಯ ಮುಂದೆ ನಿಲ್ಲಿಸಿದ (ಸ್ಮೃತಿಚಿ. ೪೭೩); ಈ ವಿಷಯವೂ ಜ್ಯೂರಿಗಳಿಗೆ ಮನವರಿಕೆಯಾಯಿತೆಂದು ಗೊತ್ತಾದಾಗ . . . ಪರಿಣಾಮವೇನಾಗಬಹುದೆಂಬುದನ್ನು ವಿವರಿಸಿದನು (ಪುನರು. ೯೭). [←ಇಂ. Jury]

**ಜ್ಯೇಷ್ಠ** (ಗು). ೧. ಹಿರಿಯ; ದೊಡ್ಡ: ಜ್ಯೇಷ್ಠ ಪುತ್ರನನ್ನೇ ಹೆಚ್ಚು ಪ್ರೀತಿಸುತ್ತಾರೆ (ಇಪ್ಪಕ. ೪೦೩). (ನಾ). ೨. ಅಣ್ಣ; ಅಗ್ರಜ: "ಅಗ್ರಜಂ ಜ್ಯೇಷ್ಠಂ ಜ್ಯಾಯನೆನಿಕ್ಕುಂ" (ವಸ್ತುಕೋ. ೫೫-೦೯). ೩. ಹಿರಿಯವನಂ: ದೊಡ್ಡ ಮಗ: ಕಳುಹು ರಕ್ಷಣೆಗೆನ್ನೊಡನೆ ನಿನ್ನಾ ಜ್ಯೇಷ್ಠನಂ (ಶ್ರೀರಾಮಾ. ೨೮-೦೪). ೪. ಚಾಂದ್ರಮಾನ ವರ್ಷದ ಮೂರನೆಯ ತಿಂಗಳ ಹೆಸರು: ಆ ಮಾಸವೇ ಚೈತ್ರ ವೈಶಾಖ, ಜ್ಯೇಷ್ಠ . . . ಫಾಲ್ಗುನ ಎಂದು ಹನ್ನೆರಡು ತೆಜನಾಗಿಹುದು (ವಿವೇಕ. ೩೨೦). ೫. ಉತ್ತಮವಾದುದು; ಉತ್ಕೃಷ್ಟ ವಾದುದು: ಭರತನ ಮತದಲ್ಲಿ ನಾಟ್ಯಮಂಟಪ ಅಥವಾ ಪ್ರೇಕ್ಷಾಗೃಹವು ಜ್ಯೇಷ್ಠ, ಮಧ್ಯಮ, ಕನಿಷ್ಠ ಎಂದು ಮೂರುವಿಧ (ಸಂನಾಟ. ೨೩). [ಸಂ.]

**ಜ್ಯೇಷ್ಠೆ** (ನಾ). ೧. ಹಿರಿಯವಳು ; ದೊಡ್ಡವಳು : ಲಕ್ಷ್ಮಿಗಿಂತ ನೀನೇ ಜ್ಯೇಷ್ಠೆ (ಶಾಂತಲಾ. ೯೩). ೨. ಶ್ರೇಷ್ಠಳು ; ಉತ್ತಮ ಗುಣಗಳನ್ನು ಉಳ್ಳವಳು: ಜ್ಯೇಷ್ಠೆ ಕನಿಷ್ಠೆಯರೆಂಬ ದ್ವಿವಿಧ ಗುಣ ವಿಶೇಷ ವನಿತೆಯರಿಂ (ವಿವೇಕ. ೩೨೮). ೩. ದುರದೃಷ್ಟದ ಅಧಿದೇವತೆ ; ದರಿದ್ರಲಕ್ಷ್ಮಿ : "ಅಲಕ್ಷ್ಮೀಃ, ನಿರ್ಋತಿಃ—ಈ ೨ ಜ್ಯೇಷ್ಠೆ" (ಹಲಾಯು. ೧೫-೮೭) ; ತಾನೆಯ್ದಿ ವಿಷ್ಣುವಂ ಜ್ಯೇಷ್ಠೆ ತನಗಿರಲೆಡೆಯನೆರೆಯೆ (ಪದ್ಮರಾ. ೧೦-೩೬). ೪. ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿನೆಂಟನೆಯದು : ಅನೂರಾಧೆ ಜ್ಯೇಷ್ಠೆ . . . ರೇವತಿಗಳೆಂಬಿಪ್ಪತ್ತೇಳು ತಾರೆಗಳಾದ ನಾಲ್ಕು ನಾಲ್ಕು ಪಾದಗಳಿಂದ ನೂಱೆಂಟಾಗಿ (ವಿವೇಕ. ೨೫೮). ೫. ಒಂದು ಬಗೆಯ ಚಿಕ್ಕ ಹಲ್ಲಿ. [ಸಂ. ಜ್ಯೇಷ್ಠಾ]

**ಜ್ಯೋತಿ** (ನಾ). ೧. ಬೆಳಕು ; ಕಾಂತಿ ; ತೇಜಸ್ಸು; ಪ್ರಕಾಶ: "ಅಗ್ನಿಯ ವಿಶಾಲ ಕಾಂತಿದ್ಯೋತಿ ಜ್ಯೋತಿಸ್ಸುಹೇತಿ ಶಿಖೆಯರ್ಚಿ ಪ್ರಭಾಖ್ಯಮಕ್ಕುಂ" (ಮಂಗರಾ. ೧೪-೮); ನೃಪತಿಯಾ ಭಾಮಮಹಿಮಾ ಜ್ಯೋತಿ ಸಂಚರಿಸಿದುದು ಮಿಂಚಿ ಪಟ್ಟಮಹಿಷಿಯರೆರ್ದೆಗಳೊಳ್ (ಶ್ರೀರಾಮಾ. ೧೨-೩೦೩). ೨. ದೀವಿಗೆ; ದೀಪ : "ದೀವಿಗೆ ಜ್ಯೋತಿ ದೀಪ್ತಿ ಗೃಹಭಾನುವಕ್ಕು" (ಮಂಗರಾ. ೩೧-೧೮) ; ಬೆಳಗುವ ಜ್ಯೋತಿಯ ತಿರುಳಿನಂತೆ ಹೊಳೆವ ಕಂಗಳ . . . ಶಿವಯೋಗಿಯ ಕಂಡೆ (ಅವಚಂ. ೨೩೨-೧೦೫೦) ; ತಮಂಧ ಘನ ಜ್ಯೋತಿ ಕಿಱಿದೆನ್ನ ಬಹುದೆ (ಬಸವ. ೭೫) ; ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ (ಸರ್ವಜ್ಞ. ೯೭೬). ೩. ಅಗ್ನಿ ; ಬೆಂಕಿ : "ಜ್ಯೋತಿ ವಾಯುಸಖಂ ಬೃಹದ್ಭಾನು . . . ವೈಶ್ವಾನರಂ" (ಮಂಗರಾ. ೧೪-೭). ೪. ಬೆಳಕಿನ ಅಂಶ ; ಕಿರಣ. ೫. ನಕ್ಷತ್ರ ; ಉಡು : "ಋಕ್ಷಮುಡು ತಾರೆ ತಾರಗೆ ನಕ್ಷತ್ರಂ ಜ್ಯೋತಿ ತಾರಕಂ" (ವಸ್ತುಕೋ. ೧೪-೭೮). ೬. ಕಣ್ಣು ; ನೇತ್ರ: "ನುತನೇತ್ರಮಂ ಜ್ಯೋತಿಯೆಂದೆಂಬುದು (ಮಂಗರಾ. ೧೪೧-೧೩). ೭. ಒಳ್ಳೆಯ ಸ್ವಭಾವ. ೮. ಸೂರ್ಯ, ಚಂದ್ರ, ಮೊದಲಾದ ಗ್ರಹ. ೯. [ತತ್ತ್ವಶಾ] ಚೈತನ್ಯ ಸ್ವರೂಪ ; ಪರಬ್ರಹ್ಮ : ವೇದಋಷಿಯ ದರ್ಶನಕ್ಕೆ ಜ್ಯೋತಿ ಮತ್ತು ಸತ್ಯ ಎರಡೂ ಸಮಾನಾರ್ಥಕ (ಸೌಂದಸ. ೯೯). "ಅನಲಂ ನಕ್ಷತ್ರ ನೇತ್ರಾಂಶುಸದ್ಭಾವಂ ಜ್ಯೋತಿಸಮಾಖ್ಯೆ" (ನಾನಾರ. ೬೯).
[ಸಂ. ಜ್ಯೋತಿಸ್]

**ಜ್ಯೋತಿಃಪಟಲ** (ನಾ). "ಸೌರವ್ಯೂಹದಿಂದಾಚೆಗಿರುವ ದೂರ ನಕ್ಷತ್ರ ಪುಂಜಗಳಿಂದಾಗಲೀ, ಅನಿಲದ್ರವ್ಯ ಅಥವಾ ನಕ್ಷತ್ರದ್ರವ್ಯದಿಂದಾಗಲೀ ಆದ ಆಕಾಶದ ಕಾಂತಿ ಪ್ರದೇಶ" (Nebula. ಇಂಕನಿ.).
[ಸಂ. (ಜ್ಯೋತಿಸ್ + ಪಟಲ)]

**ಜ್ಯೋತಿಃಪ್ರಭೆ** (ನಾ). ನಕ್ಷತ್ರಗಳ ಪ್ರಕಾಶ,—ಹೊಳಪು: ಆಭರಣ ಪ್ರಭಾ ಪರಿಭೂತ ಪ್ರಭೂತ ಜ್ಯೋತಿಃಪ್ರಭೆಯಂ (ಶಾಂತಿಪು. ೫-೧೦೫ ವ).
[ಸಂ. ಜ್ಯೋತಿಃಪ್ರಭಾ (ಜ್ಯೋತಿಸ್ + ಪ್ರಭಾ)]

**ಜ್ಯೋತಿಪುರುಷ** (ನಾ). ಜ್ಯೋತಿ ಸ್ವರೂಪನಾದ ಪುರುಷ ; ಪರಮಾತ್ಮ : ಜ್ಯೋತಿಪುರುಷನೊಬ್ಬ ಪುರುಷನು . . . ಬೆಳಗಿನೊಳಗಣ ಮಹಾಬೆಳಗಿನ ಬೆಳಗು (ಬಸವ. ೯೫೫). [ಜ್ಯೋತಿ + ಪುರುಷ]

**ಜ್ಯೋತಿರಂಗ** (ನಾ). [ಜೈನ] ದಶ ವಿಧ ಕಲ್ಪವೃಕ್ಷಗಳಲ್ಲಿ ಒಂದು ; ಬೆಳಕನ್ನು ನೀಡುವ ಕಲ್ಪವೃಕ್ಷ : ಸೊಗಯಿಸುವುವು ದೀಪಾಂಗ ಜ್ಯೋತಿ ರಂಗ ಕಲ್ಪಕುಜಂಗಳು (ಆದಿಪು. ೫-೪೦) ; ಜ್ಯೋತಿರಂಗಮೆಂಬುದು . . . ಚಂದ್ರಾದಿತ್ಯರ ಕಿರಣಪ್ರವೇಶಂಗಳ್ಗೆಡೆಗುಡದಿರ್ಪ ಜ್ಯೋತಿರ್ವಿಶೇಷಂಗಳು ಮನುಳ್ಳುದು (ಜಾವುಂಪು. ೮) ; ವಸನಾಂಗಾತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗಾನ್ನಾಂಗಸುರಾಂಗ ಭಾಜನಾಂಗಾವಸಥಾಂಗ ವಿಭೂಷಣಾಂಗ ದಶಕಲ್ಪಕುಜಂ (ಚಂದ್ರಪು. ೩-೩೪).
[ಸಂ. (ಜ್ಯೋತಿಸ್ + ಅಂಗ)]

**ಜ್ಯೋತಿರಥ** (ನಾ). ನಕ್ಷತ್ರಗಳ ಪುಂಜ; ಏಳು ನಕ್ಷತ್ರಗಳ ಗುಂಪು ; ಸಪ್ತರ್ಷಿ ಮಂಡಲ: "ಧ್ರುವನಕ್ಷತ್ರವಿರುವ ನಕ್ಷತ್ರಪುಂಜ: ಲಘುಸಪ್ತರ್ಷಿ (ನಕ್ಷತ್ರಪುಂಜ); ಜ್ಯೋತಿರಥ" (Cynosure. ಇಂಕನಿ.).
[ಜ್ಯೋತಿ + ರಥ]

**ಜ್ಯೋತಿರಿಂಗಣ** (ನಾ). ಮಿಣುಕುಹುಳು ; ಮಿಂಚುಹುಳು : "ಜ್ಯೋತಿ ರಿಂಗಣಂ ಖದ್ಯೋತಂ" (ವಸ್ತುಕೋ. ೪೪-೨೪) ; ದಿನಪತಿಯ ಬೆಳಪ ನಭೋಂಗಣಮಂ ಜ್ಯೋತಿರಿಂಗಣಂ ಬೆಳಗುಗುಮೇ (ಆದಿಪು. ೮-೧೦).
[ಸಂ.]

**ಜ್ಯೋತಿರ್ಗಣ** (ನಾ). ಗ್ರಹನಕ್ಷತ್ರಾದಿಗಳ ಸಮೂಹ : ಹೊಳೆವ ಜ್ಯೋತಿ ರ್ಗಣದವೊಲು ತೊಳತೊಳಗಿ ಬೆಳಗುವ ಗುಣರಹಿತನ ನಿಜಸ್ವರೂಪ ವಿದೆಂದನು (ಕುಮಾವ್ಯಾ. ೪-೧೭). [ಸಂ. (ಜ್ಯೋತಿಸ್ + ಗಣ)]

**ಜ್ಯೋತಿರ್ಜ್ಞಾನ** (ನಾ). ಜ್ಯೋತಿಷಜ್ಞಾನ ; ಜೋಯಿಸನ ವಿದ್ಯೆ : ಸಹದೇವಂ ಜ್ಯೋತಿರ್ಜ್ಞಾನದೊಳತಿ ಪರಿಣತನಾದಂ (ಪಂಪಭಾ. ೨-೩೬ ವ). ಈ ಜ್ಯೋತಿರ್ಜ್ಞಾನಮಪ್ಪೊಡೆಮ್ಮನ್ನರಪ್ಪ ಋಷಿರೂಪರ್ಗಲ್ಲದೆ ಕಲಲುಂ ಕಲಿಸಲುಂ ಬಾರದು (ಸುಕುಮಾ. ೩-೨೮ ವ).
[ಸಂ. (ಜ್ಯೋತಿಸ್ + ಜ್ಞಾನ)]

**ಜ್ಯೋತಿರ್ಧರ** (ನಾ). ಜ್ಯೋತಿಯನ್ನು ಹಿಡಿದವನು ; ಮಾರ್ಗದರ್ಶಕ: ಈ ಮೂವರು ಮಹಾನುಭಾವರು ಶರಣಮಾರ್ಗದ ಜ್ಯೋತಿರ್ಧರರಾಗಿ . . . ಮಾನವ್ಯದ ಮಹಾಸಿದ್ಧಿಯ ಪ್ರತೀಕರಾಗಿ ಬಾಳಿ ಬೆಳಗಿದರು (ಶರಣ. ೫೫೩). [ಸಂ.]

**ಜ್ಯೋತಿರ್ಮಂಡಲ** (ನಾ). ಸೂರ್ಯ, ಚಂದ್ರ, ನಕ್ಷತ್ರವೇ ಮೊದಲಾದ ಆಕಾಶಕಾಯಗಳ ಮಂಡಲ: ಶೀತೋಷ್ಣ ಭಾವರಹಿತ ಜ್ಯೋತಿರ್ಮಂಡಲವನಂತಕೋಟಿ ದಿನೇಶ ದ್ಯೋತಾಭಮಿರ್ದುದು (ಜಗವಿ.೧-೪೭).
[ಸಂ. (ಜ್ಯೋತಿಸ್ + ಮಂಡಲ)]

**ಜ್ಯೋತಿರ್ಮಣಿ** (ನಾ). ಒಂದು ಬಗೆಯ ಅಮೂಲ್ಯ ರತ್ನ : ತನ್ನಂ ಸ್ಪರ್ಶಗೊಂಡವರ್ಗೆ ನಕ್ಷತ್ರಗಳಂತೆ ಚಿರಕಾಲಂ ಬೆಳಗಲುಳ್ಳ ಕಾಂತಿಪ್ರದ ಮಾದ ಜ್ಯೋತಿರ್ಮಣಿ (ವಿವೇಕ ೨೧೦).
[ಸಂ. (ಜ್ಯೋತಿಸ್ + ಮಣಿ)]

**ಜ್ಯೋತಿರ್ಮಯ** (ನಾ). ಬೆಳಕಿನಿಂದ ಕೂಡಿದುದು; ಪ್ರಕಾಶಮಯ ವಾದುದು : ನಿಗಮಕ್ಕತೀತ . . . ಜ್ಯೋತಿರ್ಮಯ ತಾನೇ ಲೀಲೆಗೆ ಮೂಲವಾದ (ಅವಚಂ. ೦೯೭-೮೯೧) ; ಅದು ರಸಮಯ ಮತ್ತು ಜ್ಯೋತಿರ್ಮಯ. ಪರಮಸತ್ಯದ ಸ್ವರೂಪಲಕ್ಷಣವೇ ಇದು (ಸೌಂದಸ. ೧೦೦) ; ಮುಖಮಂಡಲವು . . . ಜೋತಿರ್ಮಯವಾಗಿ ಶೋಭಿಸು ತ್ತಿದ್ದಿತು (ಕಪಾಕುಂ. ೯೪). [ಸಂ.]

**ಜ್ಯೋತಿರ್ಮೂರ್ತಿ** (ನಾ). = ಜ್ಯೋತಿಪುರುಷ : ಆ ಪರಮವಾದ ಆತ್ಮ ಸೌಂದರ್ಯದ ಜ್ಯೋತಿರ್ಮೂರ್ತಿಯನ್ನೇ . . . ಅನುಭವಿಸಿ ಹಾಡಿದ್ದಾರೆ (ಸೌಂದಸ. ೪೦). [ಸಂ. (ಜ್ಯೋತಿಸ್ + ಮೂರ್ತಿ)]

**ಜ್ಯೋತಿರ್ಮೇಘ** (ನಾ). ಅನೇಕ ಚಿಕ್ಕ ಚಿಕ್ಕ ಜ್ಯೋತಿಗಳಿಂದಾದ ಮೋಡ; ನಕ್ಷತ್ರದ ಭ್ರೂಣಾವಸ್ಥೆ ; ನೀಹಾರಿಕೆ : ನಕ್ಷತ್ರದ ಭ್ರೂಣಾವಸ್ಥೆ ಪ್ರಾಯಶಃ ಮಹಾವ್ಯಾಪ್ತದ ಜ್ಯೋತಿರ್ಮೇಘದಂಥ ರೂಪದಿಂದ ಆರಂಭ ವಾಗಬಹುದು (ನಕ್ಷತ್ರ. ೧೩೩) ; ಆಕಾಶದಲ್ಲಿ ನಾನಾಭಾಗಗಳಲ್ಲಿ ಬಾನ್ನೀಲಿ (Celestial) ವರ್ಣದ ಉಣ್ಣೆಯ ಚೂರುಗಳಂತೆ ತೋರುವ ಮೋಡಗಳನ್ನು ಕಾಣಬಹುದು . . . ಅವುಗಳನ್ನೇ ನಾವು ಜ್ಯೋತಿರ್ಮೇಘ ಎಂದು ಕರೆಯುತ್ತೇವೆ (ಆಕಾಶ. ೬೨); ಸೂರ್ಯ ಮತ್ತು ಗ್ರಹಗಳು ಅಪಾರವಾದ ಜ್ಯೋತಿರ್ಮೇಘವೊಂದರಿಂದ ರೂಪ ತಾಳಿದವೆಂದು ಕಲ್ಪಿಸಿಕೊಂಡನು (ಭೂಹುಟ್ಟು. ೦೭). [ಸಂ. (ಜ್ಯೋತಿಸ್ + ಮೇಘ)]

**ಜ್ಯೋತಿರ್ಲತೆ** (ನಾ). ಬೆಳಕನ್ನು ಬೀರುವ ಒಂದು ಬಗೆಯ ಸಸ್ಯ : ಜ್ಯೋತಿರ್ಲತೆಗಳ ರುಚಿಸಂಜಾತಂ ಫಣಿಗಣಫಣಾಮಣಿಪ್ರಭೆ ಬಿಡದು ದ್ಯೋತಿಪುದು (ಶಬಶಂ. ೩-೩೫); ಅತ್ತಿಮಬ್ಬೆ ಮತ್ತು ಗುಂಡ ಮಬ್ಬೆಯರು ಚಿಗುರೊಡೆದ ಜ್ಯೋತಿರ್ಲತೆಗಳಂತೆ ನಿಗಿನಿಗಿಸಿದರು (ದಾನಚಿಂ. ೬೫).
[ ಸಂ. ಜ್ಯೋತಿರ್ಲತಾ (ಜ್ಯೋತಿಸ್ + ಲತಾ) ]

**ಜ್ಯೋತಿರ್ಲಿಂಗ** (ನಾ). ೧. ಜ್ಯೋತಿಸ್ವರೂಪವಾದ ಲಿಂಗ. ೨. ಭರತ ಖಂಡದಲ್ಲಿ ಪ್ರಸಿದ್ಧವಾದ ಸೋಮನಾಥ (ಸೌರಾಷ್ಟ್ರ), ಮಲ್ಲಿಕಾರ್ಜುನ (ಶ್ರೀಶೈಲ), ಮಹಾಕಾಲ (ಉಜ್ಜಯಿನಿ), ಓಂಕಾರ (ಅಮಲೇಶ್ವರ), ವೈದ್ಯನಾಥ (ಪರಲಿ), ಭೀಮಶಂಕರ (ಡಾಕಿನಿ), ರಾಮೇಶ್ವರ (ಸೇತುಬಂಧ), ನಾಗೇಶ (ದಾರುಕಾವನ) ವಿಶ್ವೇಶ (ವಾರಣಾಸಿ), ತ್ರ್ಯಂಬಕ(ಗೋಮತೀತಟ),ಕೇದಾರ(ಹಿಮಾಲಯ), ಘೃಷ್ಣೇಶ (ಇಲಾಪುರಿ ಅಥವಾ ಶಿವಾಲಯ) ಎಂಬ ಹನ್ನೆರಡು ಲಿಂಗಗಳು : ಹಿಂದಿನಿಂದಲೂ ಭರತಭೂಮಿಯಲ್ಲಿ ಶೈವಮತ ಸಂಬಂಧ ವಾದ ಹನ್ನೆರಡು ಜ್ಯೋತಿರ್ಲಿಂಗಗಳು ಪ್ರತಿಷ್ಠಿತವಾಗಿವೆ (ಭಾರದ. ೨೦೭). ೩. (ಅಲಂ) ಆತ್ಮನಂತೆ ವ್ಯಾಪಕವಾದುದು : ಮಾತೆಂಬುದು ಜ್ಯೋತಿರ್ಲಿಂಗ (ಅವಚಂ. ೨೦೦-೯೫೦). [ ಸಂ. (ಜ್ಯೋತಿಸ್ + ಲಿಂಗ) ]

**ಜ್ಯೋತಿರ್ಲೋಕ** (ನಾ). ೧. ಪ್ರಕಾಶಮಯವಾದ ಲೋಕ ; ನಕ್ಷತ್ರ ಲೋಕ : ಜ್ಯೋತಿರ್ಲೋಕಂ ನಲವಿಂ ಭೂತಳಕೇಳ್ತಂದ ತೆಱದಿ ಬೆಳಗುವ ದೀಪವ್ರಾತದಿನೊಪ್ಪುವ ಲಿಂಗನಿಕೇತನಮಂ (ತ್ರಿಪುವಿ. ೩೭-೯); ಸಾಲು ಸಾಲಿನಲಿ ಪ್ರಜ್ವಳಿಸಿ ಜ್ಯೋತಿರ್ಲೋಕದಂತೆಸೆದುದು (ನವಮೋ. ೨೨-೧೯). ೨. [ಜೈನ] ಜ್ಯೋತಿಷ್ಕದೇವತೆಗಳ ಲೋಕ : ಜ್ಯೋತಿಷ್ಕರ್ . . . ದೇವಚಾಪಂ ಜ್ಯೋತಿರ್ಲೋಕಾಧಿಪಾಲಾಭರಣ ಕಿರಣದಿಂದುರ್ವಿಯಂ ಪರ್ವೆ ಬಂದರ್ (ಶಾಂತಿಪು. ೮-೧೨೦) ; ಅಂತಾ ಜ್ಯೋತಿರ್ಲೋಕಜನಿತ ರೆಲ್ಲರುಂ . . . ಅಣಿಮಾದಿ ಗುಣಗಣಾನ್ವಿತರುಮಪ್ಪರ್ (ಸುಕುಮಾ.೧೧-೧೯).
[ ಸಂ. (ಜ್ಯೋತಿಸ್ + ಲೋಕ) ]

**ಜ್ಯೋತಿರ್ವರ್ಷ** (ನಾ). ಭೂಮಿಯಿಂದ ನಕ್ಷತ್ರ ಮತ್ತು ಗ್ರಹಗಳಿಗಿರುವ ಅಂತರವನ್ನು ಅಳೆಯುವ ಒಂದು ದೂರಮಾನ ; ಬೆಳಕು ಒಂದು ವರ್ಷದಲ್ಲಿ ಚಲಿಸುವಷ್ಟು ದೂರ : ನಕ್ಷತ್ರಗಳ ದೂರವನ್ನು ತಿಳಿಸಲು ಒಂದು ದೊಡ್ಡ ಮಾನವನ್ನು ಉಪಯೋಗಿಸುತ್ತಾರೆ. ಅದಕ್ಕೆ ಜ್ಯೋತಿರ್ವರ್ಷವೆಂದು ಹೆಸರು (ಜಗತ್ತು. ೩೨) ; ಬೆಳಕು ಒಂದು ವರ್ಷ ದಲ್ಲಿ ಓಡುವ ದೂರಕ್ಕೆ ಒಂದು ಜ್ಯೋತಿರ್ವರ್ಷವೆಂದು ಹೆಸರಿಟ್ಟಿದ್ದಾರೆ (ನಕ್ಷತ್ರ. ೧೧೫). [ ಸಂ. (ಜ್ಯೋತಿಸ್ + ವರ್ಷ) ]

**ಜ್ಯೋತಿರ್ವಿಜ್ಞಾನ** (ನಾ). ಗ್ರಹನಕ್ಷತ್ರಾದಿಗಳಿಗೆ ಸಂಬಂಧಿಸಿದ ವಿಜ್ಞಾನ ; ಖಗೋಳವಿಜ್ಞಾನ. 'ಜ್ಯೋತಿರ್ವಿಜ್ಞಾನಿ' ಪರಾ.
[ ಸಂ. (ಜ್ಯೋತಿಸ್ + ವಿಜ್ಞಾನ) ]

**ಜ್ಯೋತಿರ್ವಿಜ್ಞಾನಿ** (ನಾ). ಜ್ಯೋತಿರ್ವಿಜ್ಞಾನವನ್ನು ಬಲ್ಲವನು: ಚಂದ್ರ ಮಂಡಲದ ವಿಷಯದಲ್ಲಿ ವಿಶೇಷಜ್ಞಾನವುಳ್ಳ ಜ್ಯೋತಿರ್ವಿಜ್ಞಾನಿ ಅಥವಾ ನಾವಿಕ; ಚಾಂದ್ರಜ್ಞಾನಿ (Lunarian. ಇಂಕನಿ.).
[ ಸಂ. ಜ್ಯೋತಿರ್ವಿಜ್ಞಾನಿನ್ ]

**ಜ್ಯೋತಿರ್ವಿದ** (ನಾ).=ಜ್ಯೋತಿರ್ವಿಜ್ಞಾನಿ : ಅನೇಕ ಜ್ಯೋತಿರ್ವಿದರು ಅದನ್ನು ಪರೀಕ್ಷೆಮಾಡಿ ಅದರ ಛಾಯಾಪಟವನ್ನು ತೆಗೆದಿರುತ್ತಾರೆ (ಜ್ಯೋತಿರ್ವಿ. ೪೪). [ ಸಂ. ಜ್ಯೋತಿರ್ವಿದ್ ]

**ಜ್ಯೋತಿರ್ವಿಮಾನ** (ನಾ). [ಜೈನ] ಜ್ಯೋತಿಷ್ಕ ದೇವತೆಗಳ ವಿಮಾನ: ಬಳಸಿದುದು ಮೇರು ಶಂಕಾಕುಳಿತಂ ಜ್ಯೋತಿರ್ವಿಮಾನತತಿಯೆನೆ ಬಳಸಿತ್ತೆಳವಳಿಕಿನ ಮುಗಿಲಿಟ್ಟಳಿವಳಗಂ (ಚಂದ್ರಪು. ೧-೧೧೭).
[ ಸಂ. (ಜ್ಯೋತಿಸ್ + ವಿಮಾನ) ]

**ಜ್ಯೋತಿವತ್ಸರ** (ನಾ).=ಜ್ಯೋತಿರ್ವರ್ಷ: ರವಿಗಾತ್ರಮಂ ನಗುವ ತಾರಾ ದ್ವಯಂ, ಸಂಖ್ಯಾತೀತವಮಾ ಜ್ಯೋತಿವತ್ಸರದ ದೂರದೊಳ್ . . . ಪರಸ್ಪರಂ ಸಂಕರ್ಷಿಸಲ್ ತೊಡಗಿದಪುವಯ್ (ಶ್ರೀರಾಮಾ. ೪೧೩-೨೮೩).
[ <ಸಂ. ಜ್ಯೋತಿರ್ವತ್ಸರ ]

**ಜ್ಯೋತಿಶ್ಚಕ್ರ** (ನಾ). ಇಪ್ಪತ್ತೇಳುಂ ನಕ್ಷತ್ರಗಳಿಂದ ಕೂಡಿದ ರಾಶಿಚಕ್ರ: ಜ್ಯೋತಿಶ್ಚಕ್ರಂ ತುದಿಯೊಳ್ ಮಾತೇಂ ಜೂಟಳದ ತೆಱದೆ ತಿರುಗುತ್ತಿರ್ಕುಂ (ದಶಕು. ೭-೨೦) ; ಜ್ಯೋತಿಶ್ಚಕ್ರ ; ರಾಶಿಮಂಡಲ (Baldric. ಇಂಕನಿ.).
[ ಸಂ. (ಜ್ಯೋತಿಸ್ + ಚಕ್ರ) ]

**ಜ್ಯೋತಿಶ್ಶಾಸ್ತ್ರ** (ನಾ). = ಜ್ಯೋತಿಷ ೨ : ಸಮಗ್ರ ಜ್ಯೋತಿಶ್ಶಾಸ್ತ್ರವನ್ನು ಆದಿಪುರುಷನಾದ ಹಿರಣ್ಯಗರ್ಭನಿಂದ ಬ್ರಹ್ಮನು ಮೊದಲು ತಿಳಿದು . . . ಉಪದೇಶಿಸಿದನು (ಜಾತತಿ. ೧೩, ಉಪೋದ್ಘಾತ).
[ ಸಂ. (ಜ್ಯೋತಿಸ್ + ಶಾಸ್ತ್ರ) ]

**ಜ್ಯೋತಿಷ** (ನಾ). ೧. ಖಗೋಳವಿಜ್ಞಾನ ; ವೇದದ ಆರು ಅಂಗಗಳಲ್ಲಿ ಒಂದು; ಗ್ರಹನಕ್ಷತ್ರಾದಿಗಳಿಗೆ ಸಂಬಂಧಪಟ್ಟ ಶಾಸ್ತ್ರ. ೨. ಗ್ರಹ ನಕ್ಷತ್ರಗಳ ಚಲನೆ, ಸ್ಥಾನ, ಇವುಗಳಿಂದ ಫಲ, ಪ್ರಶ್ನೆ ಮೊದಲಾದುವನ್ನು ವಿವರಿಸುವ ಶಾಸ್ತ್ರ : ಜ್ಯೋತಿಷವೆ ಲಗ್ನ ತಿಥಿ ನಕ್ಷತ್ರ ಯೋಗ ಕರಣಾದಿಗಳಿಂ ವೈದಿಕ ಕರ್ಮಂಗಳಿಗೆ ಕಾಲಗಳಂ ತಿಳಿಪುವುದು (ವಿವೇಕ. ೩); ಸಾಮುದ್ರಿಕ ಜ್ಯೋತಿಷ ಶಿಲ್ಪ . . . ಮೊದಲಾದ ಅರವತ್ತುನಾಲ್ಕು ಕಲೆಗಳಿಗೂ ಆಗಮಶಾಸ್ತ್ರವು ಆಶ್ರಯವಾಗಿದೆ (ಭಾರದ. ೭೦). ೩. ಜ್ಯೋತಿಷವಿದ್ಯೆಯನ್ನು ಬಲ್ಲವನು ; ಜೋಯಿಸ : "ಕಾರ್ತಾಂತಿಕಂ . . . ಜ್ಯೋತಿಷನೆನಿಕ್ಕುಂ" (ಮಂಗರಾ. ೭೫-೬). [ ಸಂ. ]

**ಜ್ಯೋತಿಷಿ** (ನಾ). ೧. ಜ್ಯೋತಿಷವನ್ನು ಬಲ್ಲವನು ; ಜೋಯಿಸ : ತಾಂತ್ರಿಕರು, ಮಾಂತ್ರಿಕರು ಜ್ಯೋತಿಷಿಗಳನ್ನು ಮತ್ತೆ ಮತ್ತೆ ಬರಮಾಡಿಕೊಂಡು . . . ಅವರೊಡನೆ ಚರ್ಚಿಸುತ್ತಿದ್ದಳು (ಅಶ್ವಮು.೬೭). ೨. [ಜೈನ] ಒಂದು ದೇವತಾ ವರ್ಗ : ಮೂರ್ತಿಶಿಲ್ಪದ ದೃಷ್ಟಿಯಿಂದ ಜೈನದೇವತೆಗಳನ್ನು ನಾಲ್ಕು ವಿಧವಾಗಿ ವಿಂಗಡಿಸಬಹುದು:-(೧) ಜ್ಯೋತಿಷೀ, (೨) ವಿಮಾನವಾಸೀ, (೩) ಭವನಪತಿ ಮತ್ತು (೪) ವ್ಯಂತರ. ಇವುಗಳಲ್ಲಿ 'ಜ್ಯೋತಿಷೀ' ಪಂಗಡಕ್ಕೆ ಸೇರಿದವು ನವಗ್ರಹಗಳ ಮತ್ತು ಇತರ ನಕ್ಷತ್ರಗಳ ಪ್ರತಿಮೆಗಳು (ಭಾರದ. ೫೦೪). [ ಸಂ. ಜ್ಯೋತಿಷಿನ್ ]

**ಜ್ಯೋತಿಷಿಕ** (ನಾ). = ಜ್ಯೋತಿಷಿ ೧ : "ಸಾಂವತ್ಸರಃ, ಜ್ಯೋತಿಷಿಕಃ . . . ಗಣಕಃ—ಈ ೮ ಜೋಯಿಸಿಗಂ" (ಹಲಾಯು. ೬೭-೨೪೯). [ ಸಂ. ]

**ಜ್ಯೋತಿಷ್ಕ**[1] (ನಾ). = ಜ್ಯೋತಿಷಿ ೧: "ಸಾಂವತ್ಸರಃ, ಜ್ಯೌತಿಷಿಕಃ . . . ಕಾರ್ತಾಂತಿಕಃ – ೮ ಜ್ಯೋತಿಷ್ಕನ ಹೆಸರು, ಜೋಯಿಸನು" (ಸಿದ್ಧಾಂತಿ. ೨೦೫). [ <ಸಂ. ಜ್ಯೋತಿಷಿಕ ]

**ಜ್ಯೋತಿಷ್ಕ**[2] (ನಾ).=ಜ್ಯೋತಿಷಿ ೨ : ವಿಮಾನಾರೂಢಕಲ್ಪಜಜ್ಯೋತಿಷ್ಕ ವಾನ ವ್ಯಂತರಭವನಾಮರನಿಕಾಯ ಪರಿವೇಷ್ಟಿತ ಶೋಭಿತಮತಿರುಚಿರ ನಿಜಾಂಗರುಚಿಗಳೊಳಂ (ಆದಿಪು. ೧೧-೧೭ ವ); ಅತ್ಯುಗ್ರನವಗ್ರಹಾದಿ ವಿಷಮ ಜ್ಯೋತಿಷ್ಕರ್ (ಪಂರಾಮಾ. ೯-೦೪೨). [ ಸಂ. ]

**ಜ್ಯೋತಿಷ್ಕಾಮರ** (ನಾ). [ಜೈನ] ಜ್ಯೋತಿಷ್ಕ ವರ್ಗಕ್ಕೆ ಸೇರಿದ ದೇವತೆ: ಚಂದ್ರಾದಿತ್ಯ ಪ್ರಮುಖರಪ್ಪ ಜ್ಯೋತಿಷ್ಕಾಮರರುಮಂ (ಚಂದ್ರಪು. ೧೨-೧೧೩ ವ). [ ಜ್ಯೋತಿಷ್ಕ + ಅಮರ[3] ]

**ಜ್ಯೋತಿಷ್ಟೋಮ** (ನಾ). ಸ್ವರ್ಗಸಾಧನೆಗಾಗಿ ಆಚರಿಸುವ ಒಂದು ಯಾಗ; ಹದಿನಾರು ಜನ ಋತ್ವಿಕ್ಕುಗಳಿಂದ ನಡೆಸಲ್ಪಡುವ ಯಾಗ: ವೇದಪಾರಾಯಣದ ಫಲ ಕೃಚ್ಛ್ರಾದಿ ತಪಸಿನ ಫಲವು ಜ್ಯೋತಿಷ್ಟೋಮ ಯಾಗ ಫಲ (ಕುವ್ಯಾ ಅ. ೦-೨೦) ; ಸ್ವರ್ಗದಲ್ಲಿ ಅಪೇಕ್ಷೆಯುಳ್ಳವರು ಜ್ಯೋತಿಷ್ಟೋಮಯಾಗವನ್ನು ಮಾಡಬೇಕು (ಹಿಂದಸಾ. ೦೬೦). [ ಸಂ. ]

**ಜ್ಯೋತಿಷ್ಪ್ರಭ** (ಗುಂ). ನಕ್ಷತ್ರಗಳ ಬೆಳಕಂಳ್ಳ: ಕುಂಭಕರ್ಣಂ ಜ್ಯೋತಿಷ್ಪ್ರಭ ಮಣಿವಿಮಾನದೊಳ್ಪೊಱಮಟ್ಟಂ (ಪಂಪರಾಮಾ. ೧೩-೭೭).
[ ಸಂ. (ಜ್ಯೋತಿಸ್ + ಪ್ರಭಾ + – ) ]

**ಜ್ಯೋತಿಷ್ಮತಿ** (ನಾ). ೧. ಪ್ರಕಾಶವನ್ನು ಪಡೆದವಳು ; ಕಾಂತಿಮತಿ : ಎನಿತು ತಾರೆಗಳಿರಲಿ ಇರುಳೀ ಚಂದ್ರನಿಂ ಜ್ಯೋತಿಷ್ಮತಿ (ಅಮೃತಂ. ೫೩-೯). ೨. ಇರುಳು ; ರಾತ್ರಿ. ೩. ಒಂದು ಬಗೆಯ ಸಸ್ಯ ; ಕಂಗು ; ಕಂಗುಂಗೆ : "ಜ್ವಲಿನಿ ಜ್ಯೋತಿಷ್ಮತಿಯೆನಲ್ ಕಂಗೆನಿಕ್ಕು" (ಮಂಗರಾ. ೪೪-೪೪) ; "ವಿತಾನ ತೈಲಗರ್ಭಃ – ಜ್ಯೋತಿಷ್ಮತಿ, ಅಂಕೋಲೆ" (ಓಷಧಿ. ೧೫೪). ೪. [ತತ್ತ್ವಶಾ] ಸಮಾಧಿಸಿದ್ಧಿಯ ನಾಲ್ಕು ವಿಧಗಳಲ್ಲಿ ಒಂದು: ಈ ಮೂರು ವಿಧ ಭಾವನೆಗಳಿಗೆ ಫಲವಾಗಿ ಜ್ಯೋತಿಷ್ಮತೀ ಎಂಬುದು ನಾಲ್ಕನೆಯ ಸಿದ್ಧಿ (ಹಿಂದಸಾ. ೧೧೮). [ ಸಂ. ಜ್ಯೋತಿಷ್ಮತೀ ]

**ಜ್ಯೋತಿಷ್ಮತೀತೈಲ** (ನಾ). ಬುದ್ಧಿಯನ್ನು ಚುರುಕುಮಾಡುವದೆಂದು ನಂಬಲಾದ ಒಂದು ತೈಲ : ಮಕ್ಕಳ್ಗೆ ಮತಿಪ್ರಕಾಶಕ್ಕಂ ಜ್ಯೋತಿಷ್ಮತೀ ತೈಲಮಂ ಮಾಡಿ ಕುಡಿಕೆಯೊಳಿಟ್ಟು ಮಂದಮತಿಯಾಗಿರ್ದರ್ಗರೆಬಿಂದು ಮಾತ್ರಮಂ ಕುಡುತ್ತಮಿರ್ಪುದು (ಕವಿಜ. I, ೧೩೩) ; ಕಂತಿಗೆ ತಾನು ಜ್ಯೋತಿಷ್ಮತೀತೈಲವನ್ನು ಸೇವಿಸಿದ ನೆನಪಾಯಿತು (ಕರ್ನಾಟ. ೫೭).
[ ಸಂ. (ಜ್ಯೋತಿಷ್ಮತೀ + ತೈಲ) ]

**ಜ್ಯೋತಿಷ್ಯ** (ನಾ). = ಜ್ಯೋತಿಷ ೧ : ವೇದಾಂತ – ಜ್ಯೋತಿಷ್ಯ ಹೀಗೆ ಎಲ್ಲವುದರಲ್ಲಿಯೂ . . . ಗಣಪತಿಯಾಗ ಪರಿಣತನಾಗಿದ್ದ (ಹೊಸಕ್ಕ. ೩೭).
[ <ಸಂ. ಜ್ಯೋತಿಷ ]

**ಜ್ಯೋತಿಷ್ಯಶಾಸ್ತ್ರ** (ನಾ).=ಜ್ಯೋತಿಷ ೧ : ಭಟ್ಟರ ಜ್ಯೋತಿಷ್ಯಶಾಸ್ತ್ರದ ಜ್ಞಾನದ ಕೀರ್ತಿಯಿಂದ ಕೇಶವಪುರದ ಪ್ರಖ್ಯಾತಿಯೂ ಬಹಳವಾಗಿತ್ತು (ಹೇಮಂತ. ೧೪೦). [ ಜ್ಯೋತಿಷ್ಯ + ಶಾಸ್ತ್ರ ]

**ಜ್ಯೋತಿಸು** (ಕ್ರಿ). ಬೆಳಗುವಂತೆ ಮಾಡು ; ಬೆಳಗಿಸು ; ಉಪಾಧ್ಯಾಯರ್ ಜ್ಯೋತಿಸುಗೆಮ್ಮ ಚಿತ್ತಗೃಹದೊಳ್ ರತ್ನತ್ರಯಜ್ಯೋತಿಯಂ (ಆದಿಪು. ೧-೪). [ ಜ್ಯೋತಿ + – ಇಸು₃ ]

**ಜ್ಯೋತಿಸ್ತೃಣ** (ನಾ). ಬೆಳಕು ಸೂಸುವ ಹುಲ್ಲು : ಮಣಿಯಲ್ಲದ ಕಲ್ ಜ್ಯೋತಿಸ್ತೃಣಮಲ್ಲದ ಪುಲ್ . . . ಮುತ್ತಿನ ಮಣಲಲ್ಲದ ಪುಣಲು ಮಿಲ್ಲ ತತ್ಪರಿಸರದೊಳ್ (ಚಂದ್ರಪ್ರ. ೧೧-೪೦). [ಸಂ. (ಜ್ಯೋತಿಸ್+ತೃಣ)]

**ಜ್ಯೋತ್ಸ್ನ** (ನಾ).=ಜ್ಯೋತ್ಸ್ನೆ ೧: "ಜೊನ್ನಂ ಜ್ಯೋತ್ಸ್ನಂ" (ಕವಿಕಂ.೪೫).
[ ಸಂ. ಜ್ಯೋತ್ಸ್ನಾ ]

**ಜ್ಯೋತ್ಸ್ನಾಪ್ರಿಯ** (ನಾ). ಬೆಳುದಿಂಗಳನ್ನು ಬಯಸುವ ಪಕ್ಷಿ; ಚಕೋರ ಪಕ್ಷಿ. [ ಸಂ. (ಜ್ಯೋತ್ಸ್ನಾ + ಪ್ರಿಯ) ]

**ಜ್ಯೋತ್ಸ್ನಾವಿಲಾಸ** (ನಾ). ಬೆಳುದಿಂಗಳ ಕಾಂತಿ : ಮಲಯಜ ಚರ್ಚಿತೆಯಂ ಕೇವಲ ಧವಳಾಭರಣೆಯಂ ದುಕೂಲಾಂಬರೆಯಂ ಕೆಲ ದೊಳ್ನಿಲೆಯುಂ ಜ್ಯೋತ್ಸ್ನಾವಿಲಾಸದೊಳ್ಪಗೆದೆನಿಲ್ಲ ನಲ್ಲಳನಿನಿಸಂ (ಕವಿರಾ. ೩-೯೩). [ ಸಂ. (ಜ್ಯೋತ್ಸ್ನಾ + ವಿಲಾಸ) ]

**ಜ್ಯೋತ್ಸ್ನಿ** (ನಾ). ೧. ಬೆಳದಿಂಗಳ ರಾತ್ರಿ; ಹುಣ್ಣಿಮೆ. ೨. ಪಡವಲ ಬಳ್ಳಿ. [ಸಂ. ಜ್ಯೋತ್ಸ್ನೀ ]

**ಜ್ಯೋತ್ಸ್ನಿಕೆ** (ನಾ). ಪಡವಲಬಳ್ಳಿ; ಪಟೋಲ. [ ಸಂ. ಜ್ಯೋತ್ಸ್ನಿಕಾ ]

**ಜ್ಯೋತ್ಸ್ನೆ** (ನಾ). ೧. ಚಂದ್ರನ ಬೆಳಕು ; ಬೆಳುದಿಂಗಳು : "ಚಂದ್ರಿಕೆ ಜ್ಯೋತ್ಸ್ನೆ ಕೌಮುದಿಯು ಬೆಳ್ದಿಂಗಳ್" (ಮಂಗರಾ. ೧೧-೪) ; "ಜ್ಯೋತ್ಸ್ನೆಯೆ ಜೊನ್ನಂ" (ಚತುನಿ. ೧೫) ; ಆತ್ಮಜನ್ಮವದನೇಂದು ಜ್ಯೋತ್ಸ್ನೆಯಿಂ ಲೋಚ ನೋತ್ಸವಮಂ ತಾಳ್ದದೆ ಬಾಟ್ಟಿ ಬಾಟ್ ಪಡೆಗುಂ ನಿಸ್ಸೀಮ ನಿರ್ವೇಗಮಂ (ಮಲ್ಲಿಪು. ೩-೧೧೬) ; ಜ್ಯೋತ್ಸ್ನೆಯಿಂ ಪಾಲು ಪೊಯ್ದಂದದಲಿ ಚೆಲ್ಲಿ ರಾರಾಜಿಸಿರೆ(ಶ್ರೀರಾಮಾ.೧೨-೩೨೦). ೨. ಬೆಳುದಿಂಗಳ ರಾತ್ರಿ. ೩. ಚಂದ್ರನ ಷೋಡಶಕಲೆಗಳಲ್ಲಿ ಒಂದು : ಅಮೃತ . . . ಕಾಂತಿ ಜ್ಯೋತ್ಸ್ನೆ ಶ್ರೀ, ಅಂಗದೆ ಪೂರ್ಣೆ ಅಮೃತಕಾಮದಾಯಿನಿಯೆಂಬ ಷೋಡಶಕಲೆಗಳಿಂ ಭರಿತ ನಾಗಿ (ವಿವೇಕ. ೨೬೭). [ ಸಂ. ಜ್ಯೋತ್ಸ್ನಾ ]

**ಜ್ಯೌತಿಷಿಕ** (ನಾ). = ಜ್ಯೋತಿಷಿ ೧ : "ಸಾಂವತ್ಸರಃ, ಜ್ಯೌತಿಷಿಕಃ . . . ಕಾರ್ತಾಂತಿಕಃ – ೮ ಜ್ಯೋತಿಷ್ಯನ ಹೆಸರು" (ಸಿದ್ಧಾಂತಿ. ೨೦೫). [ ಸಂ. ]

**ಜ್ವರ** (ಗು). ೧. ಕಾಯಿಸಿದ ; ತಪ್ತವಾದ. (ನಾ). ೨. ಮೈಯಲ್ಲಿ ಶಾಖ ಏರುವುದು ; ಮೈ ಕಾಯುವುದು; ಒಂದು ಬಗೆಯ ರೋಗ : ಜ್ವರ ಕುಷ್ಠ . . . ಭೇದ ಭಿನ್ನಂ ರೋಗಂ (ವಸುಕೋ. ೭೨-೩೩) ; ನರರೊಳ್ ಪಿರಿದುಂ ವತ್ಸರ ಜ್ವರಮಿರೆ . . . ಪಾಲ್ಮರದಡಿಯೊಳ್ ಸ್ತ್ರೀರೂಪವು ನರ್ತಿಸಿ (ಕಲ್ಯಾಕಾ. ೩-೭) ; ಕುತ್ತಂಗಳಾ ಜ್ವರಂ ಗುಲ್ಮಶೂಲಾ ತ್ರಿದೋಷೋತ್ತರನವಗ್ರಹಂ . . . ಎಲ್ಲವುಂ ಶಾರೀರಮೆಂದೆಂಬರು (ವೀಶೈಪು. ೭-೩-೩೩) ; ಮುದುಮಗಳು ಕುದಿಯುತ್ತಿರುವ ಜ್ವರದಿಂದ . . . ನರಳುತ್ತಿದ್ದಳು (ಕಾಲೂರ. ೧೪, ಕಥಾಸಾರ) ; ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆಹಾಕಿದರು (ಗಾದೆ). ೩. ಮನೋವ್ಯಥೆ ; ಕ್ಲೇಶ. [ ಸಂ. ]

**ಜ್ವರನಾಡಿ** (ನಾ). ಜ್ವರದಿಂದ ಹೆಚ್ಚಾಗಿ ಬಡಿದುಕೊಳ್ಳುವ ನಾಡಿ : ಬಲದ ಕೈಯ ಹೆಬ್ಬೆರಳಿನ ಮೂಲದಲ್ಲಿರ್ದ ನಾಡಿಯನ್ನು ಪರೀಕ್ಷಿಸಲಾಗಿ (ಆ ನಾಡಿಯು) . . . ಕೈಗೆ ಅತಿವೆಗ್ಗಳವಾಗಿ ನಡೆಯುತ್ತಿದ್ದರೆ ಜ್ವರನಾಡಿ ಯೆಂದು ಹೇಳುವುದು (ಸಕಪ್ಪ. ೧೧). [ ಜ್ವರ + ನಾಡಿ ]

**ಜ್ವರಮಾಪಕ** (ನಾ). ಜ್ವರವನ್ನು ಅಳೆಯುವ ಸಾಧನ ; ಶಾಖಮಾಪಕ ; ಥರ್ಮಾಮಿಟರ್ : ರೋಗಿಯ ಜ್ವರಪರಿಮಾಣವನ್ನು ಅಳೆಯುವ ಶಾಖಮಾಪಕ: ಜ್ವರಮಾಪಕ (Clinical Thermometre. ಇಂಕನಿ.).
[ ಜ್ವರ + ಮಾಪಕ ]

**ಜ್ವರಯಿಸು** (ಕ್ರಿ). ಜ್ವರದ ಬಾಧೆಗೆ ಒಳಗಾಗು ; ಜ್ವರದಿಂದ ನರಳು : ಪಸು ಜ್ವ(ಜ)ರಯಿ(ಗಿ)ಸಿದೊಡೆ ಹೊಲೆಯರ ಮಸಣದ ಬೂದಿಯನೆ ಪೂಸುಗೆ (ಲೋಕೋಪ. ೯-೨೦೭). [ ಜ್ವರ + – ಇಸು₃ ]

**ಜ್ವರಾತಿಸಾರ** (ನಾ). ಜ್ವರದ ಒಡನೆ ಉಂಟಾಗುವ ಭೇದಿ,–ಅತಿಸಾರ : ಬಾಳೆಯ ಹೂವಿನ ರಸದಲ್ಲಿ ಸಣ್ಣನಾಗಿ ಜೀರಿಗೆಯನರೆದು . . . ಜೇನು ತುಪ್ಪದಿಂ ಕೊಡಲು ಜ್ವರಾತಿಸಾರ ಗ್ರಹಿಣೀರೋಗ ಸಹ ಮಾಣ್ಗುಂ (ಸಕಪ್ಪ. ೩೦೭). [ ಜ್ವರ + ಅತಿಸಾರ ]

**ಜ್ವರಿತ** (ಗು). ೧. ಜ್ವರ ಬಂದಿರುವ ; ಜ್ವರಪೀಡಿತವಾದ. (ನಾ). ೨. ಜ್ವರದಿಂದ ಪೀಡಿತವಾದುದು : ಜ್ವರಿತಂ ಗರ್ಭಿಣಿಗಂ ತಾಂ . . . ಕ್ಷೀರ ಪಾನಮೆಂಬುದು ಯುಕ್ತಂ (ಅಶ್ವಶಾ. ೭-೪). ೩. ಜ್ವರಪೀಡಿತನಾದವನು : ನಯನಜಲಂಗಳುಣ್ಮುವೊಡೆ ಬಿಕ್ಕುವೊಡಂ ತನು ಸೇದೆಗೆಟ್ಟು ಬೆಂಕೆಯ ನೊಳಗೊಳ್ವೊಡಂ ಜ್ವರಿತನೆಂದಱಿದು (ಲೋಕೋಪ. ೯-೨೦೫) ; ಜ್ವರಿತಂಗೆ ದುಗ್ಧಪಾನಂ ಪಿರಿದುಂ ಸೊಗಯಿಸದ ತೆಱದೆ (ಸಮಪ. ೩-೬೫). [ ಸಂ. ]

**ಜ್ವಲ** (ಗು). ೧. ಬೆಳಗುವ ; ಪ್ರಕಾಶಿಸುವ. ೨. ಉರಿಯುವ. (ನಾ). ೩. ಪ್ರಕಾಶಿಸುವಿಕೆ ; ಹೊಳೆಯುವಿಕೆ. ೪. ಉರಿಯುವಿಕೆ. ೫. ಬೆಳಕು ; ಪ್ರಕಾಶ. ೬. ಉರಿ ; ಜ್ವಾಲೆ. [ ಸಂ. ]

**ಜ್ವಲಂತ** (ಗು). ೧. ಅಧಿಕವಾಗಿ ಬೆಳಗುತ್ತಿರುವ,–ಪ್ರಕಾಶಿಸುತ್ತಿರುವ : ಇದೊಂದು ದಿವ್ಯಪ್ರತಿಭೆಯ ಶಕ್ತಿಪೂರ್ಣಸೃಷ್ಟಿ ಎನ್ನಲು ಸಭಾಪರ್ವದ ಈ ಒಂದು ಪ್ರಸಂಗ ಜ್ವಲಂತ ಸಾಕ್ಷಿಯಾಗಿದೆ (ಪರಿಶೀ. ೨೦೯) : ಇವೇ ನಮ್ಮ ಆತ್ಮನ ಜೀವನತತ್ವದ ಜ್ವಲಂತ ಪ್ರಮಾಣಗಳು (ಜೀವಾತ್ಮ.೩೯). ೨. ಉಗ್ರ ವಾದ ; ತೀಕ್ಷ್ಣವಾದ : ಇದೊಂದು ಜ್ವಲಂತ ಸಮಸ್ಯೆಯಾಗಿದೆ (ರೂಢಿ). (ನಾ). ೩. ತೇಜಸ್ಸಿನಿಂದ ಕೂಡಿದುದು; ಪ್ರಕಾಶಮಾನವಾದುದಂ : ಅವನ ಶರೀರದಲ್ಲಿ ಎರಡು ಕಣ್ಣುಗಳು ಜ್ವಲಂತವಾಗಿದ್ದವು (ಹೊಸಕ್ಕ. ೨೫೨) ; ವಾಣಿ ಅಗ್ನಿಯಂತೆ ಜ್ವಲಂತವಾಗಿದೆ (ಅಶ್ವಮ. ೮೭). [<ಸಂ. ಜ್ವಲತ್]

**ಜ್ವಲತ್ಕಂಠ** (ಗು). ಗಂಭೀರವಾದ ಧ್ವನಿಯುಳ್ಳ (?) : ಶ್ರೀಮಧುಗೆ ಸ್ವಾಮಿಗಳೈಯ್ಯನವರ ಸಾಂಪ್ರದಾಯಕರಾದ ಜ್ವಲತ್ಕಂಠದ ಮಹಂತಪ್ಪನವರ ಮಠ ಯೀ ಹುಳಿಯಾರಲ್ಲಿ ನಿರ್ಮಿತ್ತವಾಗಿ (ಎಕ. XVI, ಚಿಕ್ಕನಾ. ೯೦-ಙ : 1802). [ ಸಂ. (ಜ್ವಲತ್ + ಕಂಠ) ]

**ಜ್ವಲತ್ಪರ್ವತ** (ನಾ). ಉರಿಯನ್ನುಗುಳುವ ಪರ್ವತ ; ಅಗ್ನಿಪರ್ವತ ; ಜ್ವಾಲಾಮುಖಿ : ಸಿಸಿಲಿಯಲ್ಲಿರುವ ಮೌಂಟಎಟ್ನಾ ಎಂಬ ಪರ್ವತದಂಥ ಜ್ವಲತ್ಪರ್ವತಗಳು ಕೆಸರನ್ನು ಮಾತ್ರ ಹೊರಗೆ ಒಗೆಯುತ್ತವೆ (ಮುಂಬಯಿ. ೬-೨೩೦). [ ಸಂ. (ಜ್ವಲತ್ + ಪರ್ವತ) ]

**ಜ್ವಲನ, ಜ್ವಳನ** (ಗು). ೧. ಪ್ರಕಾಶಿಸುವ ; ಹೊಳೆಯುವ. ೨. ಉರಿಯುವ. (ನಾ). ೩. ಪ್ರಕಾಶಿಸುವಿಕೆ ; ಹೊಳೆಯುವಿಕೆ. ೪. ಉರಿಯುವಿಕೆ. ೫. ಬೆಳಕು ; ಪ್ರಕಾಶ : ಹೆಜ್ಜೆಗೆ ಹೆಜ್ಜೆಗೆ ಗೆಜ್ಜೆಯ ಧ್ವನಿನ ಚೈತನ್ಯದ ಚಲನ ಚಿಜ್ಜ್ಯೋತಿಯ ಜ್ವಲನ (ಕರುಹ್ಯಾ. ೯೬-೧೬). ೬. ಅಗ್ನಿ ; ಬೆಂಕಿ : "ಸಪ್ತಾರ್ಚಿಃ . . . ಜ್ವಲನಃ . . . ಹುತಾಶನಃ—ಈ ೪೦ ಕಿಚ್ಚಿನ ಪೆಸರ್" (ಹಲಾಯು. ೦೩-೬೩) ; ಜ್ವಲನಂ ಜ್ವರಂಗೊಂಡನೆಂದು ಮಂತ್ರಿಸುವಂತೆ (ರುದ್ರಭ. ಹ. ೨೩-೯). ೭. ಸೂರ್ಯ ; ಆದಿತ್ಯ : "ಜ್ವಲನಂ ತಾಂ ಚಿತ್ರಭಾನುವಿನನುಂ" (ವಸ್ತುಕೋ. ೦೦೯-೩). ೮. [ಛಂದ] ಮಧ್ಯೆ ಲಘುವಿರುವ ಒಂದು ಅಕ್ಷರಗಣ ; ರಗಣ (—U—) : ಶ್ವಸನೇಂದು ಜ್ವಲನಂ ದಿವಂ ಧರೆ ಜಲಂ (ಛಂದೋಂಬು. ೨-೦೬೫). ಜ್ವಳನ : 'ಜ್ವಳನಾಕ್ಷ' ಪರಾ. [ ಸಂ. ]

**ಜ್ವಲನದ** (ನಾ). ಬೆಂಕಿಯಿಡುವವನು : ಜ್ವಲನದನ ಶಿಶುಘಾತಕನ ಪರದಳಿತಧರ್ಮನ ಗತಿಗಳಲಿ ತಾನಿಳಿವೆನು (ಕುಮಾರ. ೦೮-೭). [ ಸಂ. ]

**ಜ್ವಲನನೇತ್ರ** (ನಾ). ಬೆಂಕಿಯಂ ಕಣ್ಣುಳ್ಳವನು ; ಉರಿಗಣ್ಣ ; ಶಿವ : ಜ್ವಲನನೇತ್ರನ ದೇಗುಲಂಗಳಿಗೆಯ್ದಿ ಬದುಕುವರು (ಬಸವು. ೫೬-೩೫).
[ ಜ್ವಲನ + ನೇತ್ರ ]

**ಜ್ವಲನಾಕ್ಷ, ಜ್ವಳನಾಕ್ಷ** (ನಾ). = ಜ್ವಲನನೇತ್ರ : ಜ್ವಲನಾಕ್ಷಂ . . . ನೆಲಸಿದರ್ಗಂ ಬಾಗಿಲೊಳ್ (ದಶಕು. ೦೪-೦೩) ; ಸಲ್ವುದೇ ಸಮರವಿಂತೆನಗೆ . . . ಜ್ವಲನಾಕ್ಷನೊಳಕ್ಷನೊಳಕ್ಷಯಾಂಗನೊಳ್ (ಶಬಶಂ. ೪-೦೨೩). ಜ್ವಳನಾಕ್ಷ : ಜ್ವಳ ನಾಕ್ಷ{ಕ್ಷ}ಗೆ ಮಣಿದೊಡೆ ಸಂಚಳ ಮಾರನ ಕಟ್ಟ ಬಾಣದಟ್ಟುಳಿ ಮಾಣ್ಗುಂ (ಹಮ್ಮಿರ. ೨-೬೯). [ ಸಂ. (ಜ್ವಲನ + ಅಕ್ಷಿ + —) ]

**ಜ್ವಲಿ** (ಗು). ೧. ಹೊಳೆಯುವ ; ಪ್ರಕಾಶಿಸುವ. ೨. ಉರಿಯುವ ; ಜ್ವಲಿಸುವ. [ ಸಂ. ಜ್ವಲಿನ್ ]

**ಜ್ವಲಿತ** (ಗು). ೧. ಪ್ರಕಾಶಗೊಳಿಸಲ್ಪಟ್ಟ. ೨. ಉರಿದ. ೩. ಸುಡಲ್ಪಟ್ಟ. (ನಾ). ೪. ಬೆಳಕು ; ಪ್ರಕಾಶ. ೫. ಉರಿ ; ಜ್ವಾಲೆ. [ ಸಂ. ]

**ಜ್ವಲಿನಿ** (ನಾ). ಜ್ಯೋತಿಷ್ಮತಿ ಎಂಬ ಸಸ್ಯ ; ಕಂಗುಂಗೆ : "ಜ್ವಲಿನಿ ಜ್ಯೋತಿಷ್ಮತಿಯೆವಲು ಕಂಗನಿಕ್ಕು" (ಮಂಗರಾ. ೪೪-೪೪). [ಸಂ. ಜ್ವಲಿನೀ]

**ಜ್ವಲಿಸು, ಜ್ವಳಿಸು** (ಕ್ರಿ). ೧. ಬೆಳಗು ; ಪ್ರಕಾಶಿಸು : ಹೊಸ ಪ್ರವೃತ್ತಿಗಳನ್ನು ಜೀರ್ಣಿಸಿ ಹೊಸರೂಪದಿಂದ ಅದು ಜ್ವಲಿಸುವುದೆಂಬ ಭರವಸೆ ಇದೆ (ಭಾರತದ. ೩೪೭). ೨. ಉರಿ : ಜ್ವಲಿಪ[ಪಾಠಾಂ. ತ] ಪಂಚಾಗ್ನಿಯ ನಡುವೆ ನಿಶ್ಚಲದಿ . . . ತಪವನಾಚರಿಸುವ ತಪಸ್ವಿಗಳು (ಬ ಸ ಪು. ೦೯-೬೦) ; ಜ್ವಲಿಸುತ್ತಿರ್ಪ ಮಹಾಗ್ನಿ ಶೈತ್ಯಮೆನಿಕುಂ (ಪಾವತ. ೪೪) ; ಸಲೆ ಕೆಟ್ಟುದಪಮೃತ್ಯು ಜ್ವಲಿಸಿದುದು ಭಯಬಿತ್ತು ನೆಲೆಗುಂದಿದಳ್ ಮಾರಿ (ಚಿಬಪು. ೪-೩೫). ಜ್ವಳಿಸು : ೧. ಜ್ವಳಿಸಿದವು ಕದಪು ಕಣ್ಗೊನೆ ಧವಳಕಾಂತಿಯಂ ಪಡೆದುದು (ಸೌಂದಪು. ೬-೩). [ ಜ್ವಲನ + — ಇಸು₁ ]

**ಜ್ವಳನ** 'ಜ್ವಲನ' ನೋ.

**ಜ್ವಳನಸಖ** (ನಾ). ಅಗ್ನಿಮಿತ್ರ ; ವಾಯು : ಜ್ವಳನಸಖಸುತನ ಮೂರ್ಛೆಯ ತಿಳಿದುದನಾಂ ನೋಡಿ ತಿಳಿದೆ (ಗದಾಯು. ೮-೩೪).
[ ಸಂ. ಜ್ವಲನಸಖ (ಜ್ವಲನ + ಸಖ + —) ]

**ಜ್ವಳನಾಕ್ಷ** 'ಜ್ವಲನಾಕ್ಷ' ನೋ.

**ಜ್ವಳಿಸು** 'ಜ್ವಲಿಸು' ನೋ.

**ಜ್ವಾಲಾಗ್ರಾಹಿ** (ನಾ). ಉರಿಯನ್ನು ಗ್ರಹಿಸುವ ವಸ್ತು ; ಉರಿಯಂ ಬಹುದಾದ ವಸ್ತು : ಅಲ್ಲಿ ಹಿಡಿದಂಥ ಜ್ವಾಲಾಗ್ರಾಹಿ ಪದಾರ್ಥವನ್ನು ಸುಡುತ್ತವೆಂತಲೂ ಕಂಡು ಬರುವುದು (ಮುಂಬಯಿ. ೬-೩).
[ ಸಂ. ಜ್ವಾಲಾಗ್ರಾಹಿನ್ ]

**ಜ್ವಾಲಾಮುಖಿ** (ನಾ). ಜ್ವಾಲೆಯನ್ನು ಉಗುಳುವ ಪರ್ವತ; ಅಗ್ನಿಪರ್ವತ : ಈ ಪರ್ವತಗಳಲ್ಲಿ ಅನೇಕ ಜ್ವಾಲಾಮುಖಿಗಳಿವೆ (ಭೂಗೋಲ. ೧೨೨) ; ಜ್ವಾಲಾಮುಖಿಯ ರುದ್ರಶಿಖಿಯು ಕೈಲಿ ಹಿಡಿದು ಬಿಸುವಳು (ಪಾಂಚಜ. ೧೦-೨೦) ; ಜತೀನನ ಮರಣ ಮತ್ತೊಮ್ಮೆ ಕ್ರಾಂತಿಯ ಜ್ವಾಲಾಮುಖಿಯು ಕಿಡಿ ಕಾರಲು ಎಡೆಮಾಡಿತು (ಅತ್ಮಾರ್ಪ. ೦೩೦).
[ ಸಂ. ಜ್ವಾಲಾಮುಖೀ ]

**ಜ್ವಾಲಾಮುಖಿಶಿಲೆ** (ನಾ). (ಜ್ವಾಲಾಮುಖಿಯ) ಲಾವಾರಸ ಹೆಪ್ಪುಗಟ್ಟಿ ಉಂಟಾದ ಶಿಲೆ ; ಅಗ್ನಿಶಿಲೆ : ಜ್ವಾಲಾಮುಖಿಶಿಲೆಯ (Trab) ವೃತ್ತಾಕಾರದ ಕಲ್ಲುಗಳು . . . ಬಹು ಹಿಂದಿನಿಂದ ಲೇಖನಕಾರ್ಯಕ್ಕೆ ಬಳಕೆಯಾಗಿವೆ (ಭಾರತ. ೦೭). [ ಜ್ವಾಲಾಮುಖಿ + ಶಿಲೆ ]

**ಜ್ವಾಲಿ, ಜ್ವಾಳಿ** (ಗು). ೧. ಉರಿಯುವ ; ಧಗಧಗಿಸುವ. (ನಾ). ೨. ಅಗ್ನಿ ; ಬೆಂಕಿ : "ವಸು ಸಿತೇತರಗತಿ ಸ್ವಾಹಾಪ್ರಿಯಂ . . . ವೀತಿಹೋತ್ರಂ ಪಾವಕಂ ಜ್ವಾಲಿ ವೈಶ್ವಾನರಂ . . . , ಅಗ್ನಿಯಕ್ಕುಂ" (ಮಂಗರಾ. ೩೪-೬). ಜ್ವಾಳಿ : ೨. ಆಳಂಬಿ ಮೂಡೆ ವಿಭವಂ ಜ್ವಾಳಿ ಭಯಂ ಪೊಸಗೆ (ಲೋಕೋಪ. ೧೩೪೪). [ ಸಂ. ಜ್ವಾಲಿನ್ ]

**ಜ್ವಾಲೆ, ಜ್ವಾಳೆ** (ನಾ). ೧. ಅಗ್ನಿಶಿಖೆ ; ಬೆಂಕಿಯ ನಾಲಗೆ. ೨. ಬೆಂಕಿ ; ಅಗ್ನಿ : ಜ್ವಾಲೆಯಲಿ ನಿಂದಿರ್ದಳವನೀತನುಜೆ ಸುಖದಿಂದ (ಕಾವೇರಿ. ೪೬-೩೪) ; ಉಟ್ಟ ಬಟ್ಟೆಯು ಬೆಡಗು ಜ್ವಾಲೆಯಲ್ಲಿ ಲೀನವಾಯಿತು (ಕಾಬೂರ. ೦೯, ಕಥಾಸಾರ). ೩. ಒಬ್ಬಾಕೆಯ ಹೆಸರು : ಜ್ವಾಲೆ ನಿಜಕಾಂತನಂ ಛಲದಿಂದ ಬಿಟ್ಟು ತನ್ನಾಲಯದೊಳಿರದೆ ಪೊಱಮಟ್ಟು ಬಂದರ್ಜುನನ ಮೇಲೆ ತಂತ್ರವನೆಸಗಿ ಶಾಪವಮಂ ಕುಡಿಸಿದಳ್ದೇವನದಿಯಂ ಕೆರಳ್ಚಿ (ಜೈಮಿಭಾ. ೯ ಸೂಚನೆ). ೪. [ಛಂದ] ಒಂದು ಅಕ್ಷರಗಣ ; ರಗಣ (—U—) : ಜ್ವಾಲೆ [ಪಾಠಾಂ. ಳೆ] ತೋಯಮೇಟ್ಯಂದೊಳಿವೆತ್ತೊಡಕ್ಕುಂ . . . ಶಾಲಿನೀ ವಿತಾನಂ (ಛಂದೋಂಬು. ೨-೭೪). ಜ್ವಾಳೆ : ೪. ಮೇಲಿನ 'ಛಂದೋಂಬು' ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ಜ್ವಾಲಾ ]

**ಜ್ವಾಲೆಗೊಳಿಸು** (ಕ್ರಿ). ಉರಿಯನ್ನು ಹುಟ್ಟಿಸು ; ಬೆಂಕಿ ಹೊತ್ತಿಸು : ಮೂಲೋಕಕಮೃತವ ಕಟೆವನ ಮನದಲ್ಲಿ ಜ್ವಾಲೆಗೊಳಿಸಿದೆನು ನಾನು (ಭರತೇ. ೪೬-೫೪). [ ಜ್ವಾಲೆ + ಕೊಳ್₁ + — ಇಸು₃ ]

**ಜ್ವಾಲೆವೆರಸು** (ಕ್ರಿ). ಜ್ವಾಲೆಯಿಂದ ಕೂಡು ; ಬೆಂಕಿಯಿಂದ ಕೂಡಿರು : ಪಗಲಾಣ್ಮರ ಕೋಟಿತೇಜೋಮಯ ಚಕ್ರ ಜಗಜಗಿಸುವ ಜ್ವಾಲೆವೆರಸಿ ನಗರಪ ರಕ್ಷಿಸುತಿರೆ (ಮೋಹತ. ೩೯-೨೮). [ ಜ್ವಾಲೆ + ಬೆರಸು₁ ]

**ಜ್ವಾಳಿ** 'ಜ್ವಾಲಿ' ನೋ.

**ಜ್ವಾಳೆ** 'ಜ್ವಾಲೆ' ನೋ.

**ಝು** (ನಾ). ೧. ಕನ್ನಡ ವರ್ಣಮಾಲೆಯ ಇಪ್ಪತ್ತೊಂಬತ್ತನೆಯ ಅಕ್ಷರ. ೨. ಒಂಬತ್ತು ಎಂಬ ಸಂಖ್ಯೆಯ ಸಂಕೇತ : "ಅಜ಼ ಝುಧಳವೊಂಭತ್ತು" (ಮಂಗರಾ. ೧೦೪-೧೦).

**ಝುಂಕಟ** (ನಾ). ಒಂದು ಬಗೆಯ ವಾದ್ಯ (?) : ಶಂಕರಿಯ ಸಿವಿಜ ಪೆಂಪಿನ ಝುಂಕಟ ಬೊಂಬುಟಿಯ ಪಟವದುಳಿಕೆಯ ಢಕ್ಕಾ ಸಂಕುಳದ ತಾಳದುಲಿ ನೆಗಟ್ದೆಂ ಕರ್ಣಾಮೃತಸಮುದ್ರಘೋಣಗಿನವಪಾಯ್ಯೊ (ಪುಷ್ಪ.ಪು. ೧೩-೨೭). 'ಜೇಗಂಟೆ' ಪರಾ. [ ? ]

**ಝುಂಕಣೆ** 'ಜಂಕಣೆ' ನೋ.

**ಝುಂಕಣೆ** 'ಜಂಕಣೆ' ನೋ.

**ಝುಂಕರಿಸು** (ಕ್ರಿ). ಆರ್ಭಟಿಸು ; ಗರ್ಜಿಸು : ಕನಲ್ದು, ಝುಂಕರಿಸುತ್ತಿರು ವರು (ಬಿಟ್ಮಿಅ. ೭೪-೩). [ ಝುಂಕರಣ$_0$ + – ಇಸು$_3$ ]

**ಝುಂಕಾರ** (ನಾ). ೧. ಝುಂ ಎಂಬ ಧ್ವನಿ : ಏಕ್ಕ ಮದ್ದಳೆಯ ಕೊಟಲ ಝುಂಕಾರದ ಪಣಿಗಳ್ ಮುಂದೆ ಬಾಜಿಸುತ್ತುಂ ಬಟಿಯಂ ಕಾಪಿನವರ್ ವರೆ (ಪದ್ಮಾರಾ. ೮೦-೧೩). ೨. ದುಂಬಿಗಳ ಮೊರೆತ,–ಧ್ವನಿ : ದರದಳಿತಾಂ ಭೋರುಹದಳಪರೀತ ಪಟ್ಟದ ನಿಬದ್ಧ ಝುಂಕಾರೈಕಾಕ್ಷರ ದಿವ್ಯಮಂತ್ರ ದಿಂದಂ (ಮಲ್ಲಿಪು. ೩-೩) ; ದುಂಬಿಗಳ ಝುಂಕಾರಕ್ಕೆ ಮುನಿಜನ ಡಿಳ್ಳಿಸಿತು (ಚೋಹತ. ೭-೧೦). 'ಝೇಂಕಾರ' ಪರಾ. [ ಸಂ. ]

**ಝುಂಕಾರಿತ** (ಗು). ಝುಂಕಾರವನ್ನು ಮಾಡುವ ; ಝೇಂಕರಿಸುವ : ನೂಪುರಾರವ ಝುಂಕಾರಿತ ಚಾರು ಪಾದಮಚರಣಾಘಾತಂ (ಆದಿಪು. ೧೩-೯೮).
[ ಸಂ. ]

**ಝುಂಕಿಸು** 'ಜಂಕಿಸು' ನೋ.

**ಝುಂಕೃತ** (ನಾ). ಝುಣಝುಣ ಶಬ್ದ : ತಾಳ ತತ್ಪರ ಶಿಶುನರ್ತನ ಪ್ರಹತ ಕಂಕಣ ಝುಂಕೃತ ಹಸ್ತತೂರ್ಯ ಸುಂದರರವದಿಂದದಂ ಮಟಿಸಿದಳ್ (ಶಾಂತಿಪು. ೮-೪೫) ; ಮರ್ಮರಂ ಪರ್ಣದೊಳು ಝುಂಕೃತಂ ಕಟಕದೊಳು ಹೇಷಾಕೃತಂ ವಾಜಿತತಿಯಲ್ಲಿ ವರ್ತಿಸಿರ್ದುಂ (ಮಂಗರಾ. ೨೭-೭).
[ ಸಂ. ]

**ಝುಂಕೃತಿ** (ನಾ). =ಝುಂಕಾರ ೨: ಶ್ವೇತಾತಪತ್ರಾಳಿ ಭೃಂಗವಧೂಝುಂಕೃತಿ . . . ಭೇರಿ ಘನಧ್ವಾನವಾಗೆ ವಸಂತಂ ಋತುಸಾರ್ವಭೌಮವಿಭವಂ ಮೆಯ್ವೆತ್ತದೇಂ ಬಂದುದೋ (ಚಂದ್ರಪು. ೭-೩೭): ಕುಸುಮಾಮೋದಕ್ಕೆಜಗಿದ ತುಂಬಿಯ ಧ್ವನಿಯಂತೆ ಕೇಳಲದೆ ಝುಂಕೃತಿಯೆನಿಪುದು (ಶಿವಪ್ರ. ೬೩-೧೧).
[ ಸಂ. ]

**ಝುಂಕೆ$_1$** 'ಜಂಕೆ' ನೋ.

**ಝುಂಕೆ$_2$** (ನಾ). [ನಾಟ್ಯ] ನೃತ್ಯದಲ್ಲಿ ಒಂದು ಗತಿ; ದೇಶೀಯ ಲಾಸ್ಯಾಂಗ ದಲ್ಲಿ ಒಂದು : ತೂಕವಣೆಯಂಕೆ ಝುಂಕೆ ತಾಳ ಡಿಳ್ಳಾಯಿ ಚಂಡಣೆ ಚಬಳಿಕೆ ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆ (ಶಾಂತೀಶ. ೧೭-೭೭ ವ); ವಿಭ್ರಮದ ನಿಶ್ಚಲನೋಟದ ದೃಢದ ಝುಂಕೆಯ ಬಿಂಕದಂಕಿತದ . . . ಲಲನೆಯಾ ಪರಿಯಿಂದ ನೃತ್ಯವ ಸಲಿಸೆ (ಬಸವಪು. ೧೩-೪೫). [ ? ]

**ಝುಂಝಾಟ** 'ಜಂಜಡ' ನೋ.

**ಝುಂಝಾನಿಲ** (ನಾ). ಮಳೆಯಿಂದ ಕೂಡಿದ ಗಾಳಿ,–ಬಿರುಗಾಳಿ : ಮಳೆಯ ಸಾರಿ ಬಹಗಾಳಿ ಝುಂ[ಪಾಠಾಂ. ಜಂ]ಝಾನಿಲಂ (ಮಂಗರಾ. ೧೫-೧೦). [ ಸಂ. (ಝುಂಝಾ + ಅನಿಲ) ]

**ಝುಂಝಾಮಾರುತ** (ನಾ). =ಝುಂಝಾನಿಲ : ಇವರು ಹೀಗೆ ಮಾತಾಡು ತ್ತಿದ್ದಾಗ ಝುಂಝಾಮಾರುತದಂತೆ . . . ರಭಸವಾಗಿದ್ದ ಒಂದು ಧ್ವನಿ ಕೇಳಿಸಿತು (ಶಾವಿಜ. ೧೫೩); ಉತ್ತರದ ಕಡೆಯಿಂದ ಝುಂಝಾಮಾರುತದಂತೆ ನುಗ್ಗಿಬರುತ್ತಿದ್ದ ವಿಧರ್ಮೀಯರನ್ನು ತಡೆದು ನಿಲ್ಲಿಸುವಷ್ಟು ಪ್ರಬಲ ರಾಜ್ಯ ಗಳೇ ಇರಲಿಲ್ಲ (ಶ್ರೀವಿದ್ಯಾ. ೬೪). [ ಸಂ. (ಝುಂಝಾ + ಮಾರುತ) ]

**ಝುಂಝಾವಾತ** (ನಾ). = ಝುಂಝಾನಿಲ : " ಮಟಿವೆರಸಿದ ಘಾಳಿಯಂ ಝುಂಝಾವಾತಮೆಂಬುದು" (ಹಲಾಯು. ೧೪-೭೭) ; ಎಲ್ಲಿ ಝುಂಝಾವಾತ ಘಾತಿಸಿ ಮುಳುಗಿ ತಳವನು ಕಾಣ್ಬೆನೊ (ಪಾಂನಸ. ೪೦-೯) ; ಅವರ ತರ್ಕ ಝುಂಝಾವಾತದ ಹೊಡೆತದಿಂದ ಉಪನಿಷತ್ತತ್ತ್ವಗಳು ಅಲ್ಲಾಡುವಂತಿ ದ್ದುವು (ಸೋಕ್ರಮ. ೧೧). [ ಸಂ. (ಝುಂಝಾ + ವಾತ) ]

**ಝುಂಝಾಸಮೀರ** (ನಾ). =ಝುಂಝಾನಿಲ: ರಿಪುಭೂಭೋದ್ದೀಪ ಪ್ರದೀಪ ಪ್ರಕರ ಪಟುತರಸ್ಫಾರ ಝುಂಝಾಸಮೀರಂ . . . ನೃಸಿಂಹಂ (ಎಕ. VI, ಕಡೂರು. ೦೩೯-೩೫ ; 1173). [ ಸಂ. (ಝುಂಝಾ + ಸಮೀರ) ]

**ಝುಂಝೆ** (ನಾ). ಗಾಳಿಯ ಮೊರೆತ; (ಮಳೆಯಿಂದ ಕೂಡಿದ) ಗಾಳಿಯ ಧ್ವನಿ. ೨. ಜಣತ್ಕಾರ. [ ಸಂ. ಝುಂಝಾ ]

**ಝುಂಡಾ** 'ಝಾಂಡ' ನೋ.

**ಝುಂಡಾವೂರು** 'ಝಾಂಡಾವೂರು' ನೋ.

**ಝುಂಪ** (ನಾ). ಹಾರುವುದು ; ನೆಗೆತ : ಝುಂಕಾರಕ್ಕೆ ಜಕಾರಂ . . . ಝುಂಪ–ಜಂಪ (ಶಮದ. ೨೫೫ ಪ್ರಯೋ). [ ಸಂ. ]

**ಝುಂಪರು** 'ಜಂಪರು' ನೋ.

**ಝುಂಪಳ** (ನಾ). ಹೊಳಪು; ಪ್ರಕಾಶ. 'ಝುಂಪಳಿಸಂ' ಪರಾ. [ ? ]

**ಝುಂಪಳಿಸು** (ಕ್ರಿ). ಹೊಳೆ ; ಪ್ರಕಾಶಿಸಂ: ವಿರೂಪಾಕ್ಷನತುಳರಥಪಂಪಾಂ ಬಿಕಾ ರಥವನು ಝುಂಪಳಿಪ ನಾನಾರಸದ ಗಣಾಧಿಪ ರಥವ ಗುಂಪಟಿವರಳ ವಲ್ಲವೆನೆ (ಲಕಿಜಂ. ೩೮-೨೫೪). [ ಝುಂಪಳ + – ಇಸು$_3$ ]

**ಝುಂಪಾಳ, ಜಂಪಳ** (ನಾ). ಗವಸಣಿಗೆ ; ಮೇಲ್ಮುಸುಕು ; ಆವರಣ : ಗಿಳಿ ಪಾಯದಂತು ದಾಡಿಮೀಫಲಂಗಳ ಮೇಲೆ ಮುತ್ತಿನ ಝುಂಪಾಳಂಗಳಂ ಕವಿಯಲುಂ (ಕಾದಂಪೂ. ೦೦೦೭) ; ದಾಳಿಂಬದ ಬಿಟ್ಟಂ ಕೊಳ್ವಾಳೋಚದೆ ನೋಟ್ಟ ಧವಳ ಲೋಚನೆಯ ಕಟಾಕ್ಷಾಳೋಕಂ ಮುತ್ತಿನ ಝುಂಪಾಳಂ ಕವಿದಂತೆ ಬಳಸಿದುದು ತತ್ಕುಜಮಂ (ಚಂದ್ರಪು. ೭-೧೦೩). **ಜಂಪಳೆ :** 'ಜಂಪಳವಿಡು' ಪರಾ. [ <ಪ್ರಾ. ಝುಂಪ./ಮರಾ. ಝಾಂಪಡೀ ]

**ಝುಂಪಾಳಿ** (ನಾ). ಒಂದು ಬಗೆಯ ಗುಡಾರ,–ಡೇರೆ (?) : ತಿವುರಿ ಗುಡಿ ಗೂಡಾರಂ ಝುಂಪಾಳಿ ಚೌಕಿಗೆ ಜಂಪೆ ಮಂಡವಿಗೆ ಬಳಜಂ ಬಾಗಿಲ್ವಾಡಂ ಬನಂ ಮೊಗಸಾಲೆಯೆಂಬಿವಱ ಪಸುರಿಂ ಕರ್ಪಿಂ ಕೆಂಪಿಂ ಬಸಂತನ ಬೀದಿ ನಿಂತವಱ ಪೊಱವೀಡೆತ್ತಂ ಮಾಡಿತ್ತು ಕಣ್ಗೆ ಸುರಾಗಮಂ (ಅನಂಪು. ೧೫-೭೩).
[ ? ]

**ಝುಂಪಿ** (ನಾ). ಲಾಸ್ಯ; ನಾಟ್ಯ (?): ಕೆಂಪುಮೂಗಿನ ಪಕ್ಷಿ . . . ಹಂಪೆಯ ವಿರೂಪಾಕ್ಷಲಿಂಗನಲ್ಲಿ ಝುಂಪಿಯನಾಡುತಿದೆ (ಕನಳ. ೨೨೮ ಪಲ್ಲವಿ). [ ? ]

**ಝುಂಪಿಸು$_1$** 'ಜೊಂಪಿಸು$_1$' ನೋ.

**ಝುಂಪಿಸು$_2$** (ಕ್ರಿ). ಹೊಳೆ ; ಶೋಭಿಸು : ಸೊಂಪಿನ ನುಂಪಿನ ಝುಂಪಿಪ ಗಂಪಿನ ಸಂಪಿಗೆಯ ವನದ (ಸುಸಾರ. ೧೩೮-೬). 'ಝುಂಪಳಿಸಂ' ಪರಾ.
[ ಝುಂಪನ$_0$ + – ಇಸು$_3$ ]

**ಝುಂಪಿಸು₃** 'ಜೊಂಪಿಸು₂' ನೋ.

**ಝುಂಪು** 'ಜೊಂಪು₁' ನೋ.

**ಝುಂಪೆ** (ನಾ). [ಸಂಗೀತ] ಒಂದು ತಾಳದ ಹೆಸರು: ತ್ರಿವಿಡಿ ಚಚ್ಚರಿ ಝುಂಪೆಯಟಿಯೇಕತಾಳವಂ ವಿವರವಱಿತುಂ ತಾಳಧಾರಿಗಳು ನುಡಿಸೆ (ಪ್ರಭುಪು. ೨-೬೭) ; ಆದಿತಾಳದಿಂದ . . . ಝುಂಪೆ, ತ್ರಿವುಡೆ, ಅಷ್ಟ, ಏಕ ತಾಳಗಳು ಹುಟ್ಟಿದವು (ಹುಕ್ಕಗಾ. ೨೩). [ಸಂ. ಝಂಪಾ]

**ಝುಂಪೆಯ** (ನಾ). = ಝುಂಪೆ ೧ : ರಚ್ಚೆಯ ಮಟ್ಟೆಯ ಪಡಿಮಟ್ಟೆಯ ಝುಂಪೆಯಮಡ್ಡ ತ್ರಾಳರೂಪಕಮೆಕ್ಕತಾಳಂಗಳೆಂಬ ಸಪ್ತ ತಾಳಂಗಳಂ ನಿವರ್ತನಗೆಯ್ದು (ಬಾಧವು. ೯-೦ ವ). [<ಝುಂಪೆ]

**ಝುಕಾರ** (ನಾ). = ಝು ೧ : ಝುಕಾರಕ್ಕೆ ಜಕಾರಂ—ಝುಗಟಾ – ಜಗಳಿ (ಶಮದ. ೨೫೫ ಪ್ರಯೋ). [ಸಂ.]

**ಝುಕಾಸ** (ಗು). (ಉಕ) ೧. ಚೆನ್ನಾಗಿರುವ ; ಸುಂದರವಾದ : ಆಕೆಗೆ ಝುಕಾಸ ಸೀರಿ ತಂದಿನ (ಸುವರ್ಣ. ೩೨೭). ೨. ಉತ್ತಮ ; ಪ್ರಶಸ್ತ : ಮಾವನ ಆಯಾರಕೀತ ಝುಕಾಸ ಏತಿ ಏಳ (ವಿಸರ್ಗ. ೨೭೦).

[←ಮರಾ. ಝುಕಾಸ್]

**ಝುಕ್ಕಿಸು** (ಕ್ರಿ). ಸೋಲೊಪ್ಪು ; ಕೀಳಾಗು : ಇವರ ಅಗ್ನಿಸೇವೆಗೆ ಯಾವ 'ಪುರೋಹಿತ'ನೂ ಝುಕ್ಕಿಸಿದನೆಂದುಕೊಂಡ (ಸಮುಜೀ. ೨೯೮); ಬಣ್ಣ ಒಂದು ಇದ್ದಿದ್ರ, ನಿಮ್ಮ ತರಹದ ಹುಡುಗಿಯರು ಅವಳ ಮುಂದೆ ಝುಕ್ಕಿಸಿದರು (ತೀರು. ೫೮).

**ಝುಕ್ಕಿಸಿ ಹೋಗು** = ಸೋತುಹೋಗು ; ಪರಾಜಯ ಹೊಂದು : ಈ ಟ್ರಾಜಿಡಿ ಮುಂದೆ ಷೇಕ್ಸ್‌ಪಿಯರಿನ ಟ್ರಾಜಿಡಿ ಕೂಡ ಝುಕ್ಕಿಸಿ ಹೋಯಿತು (ಹುಚ್ಚಾಟ. ೫೦).

[ಝುಕ್ಕ₀ (P ←ಮರಾ. ಜಕ್ಕತ್) + – ಇಸು₃]

**ಝುಕ್ಕುಳಿಸು** 'ಜಕ್ಕುಲಿಸು' ನೋ.

**ಝುಗ** 'ಝುಗೆ₂' ನೋ.

**ಝುಗಝುಗಿಸು,ಝುಂಗಿಝುಗಿಸು** (ಕ್ರಿ). ಹೊಳೆ ; ಪ್ರಕಾಶಿಸು : ಝುಗ ಝುಗಿಸಿ ಹೊಳೆಹೊಳೆವ ಬಾಯ್ದಾರೆಗಳ ಬೆಳಗಿನ ಧಾಳಿ ಧೀಂಕಿಡೆ (ಕುವ್ಯಾಛೀ. ೮-೫೦); ಯೋಗಿಗಳ ಹೃದಯದೊಳು ಝುಗಝುಗಿಪ ದೇವಿ ಯರು (ವೀಶೈಪು. ೨-೭-೫೭); ಬಗಿದ ಪವಮಾಣದಲೊಂಟೆಗಳಗಣಿತ ಝುಗ ಝುಗಿಸುವ ಕಾಂತಿಯಿಂದ (ಕಂನವಿ. ೦೦-೩೭). **ಝುಗಿಝುಗಿಸು** : ರುದ್ರ ವಿಷ್ಣು ಬ್ರಹ್ಮಾದಿಗಳ ಪತ್ತನಂಗಳನಾಂತ ಪೆರ್ಮೆಯಿಂ ಝುಗಿಝುಗಿಸುವಾ ಮಹಾಕನಕಗಿರಿಯ (ಜಬಪು. ೨-೯); ಝುಗಿಝುಗಿಪ ಮಕುಟಧರ (ವಿದಾಕ್ಶ. ೩೦-೨). [<ಝುಗ + – ಇಸು₃]

**ಝುಗನೆ** (ಅ). ಹೊಳಪಿನಿಂದ ಕೂಡಿ; ಕಾಂತಿಯಂಕ್ತವಾಗಿ : ಝುಗನೆ ಬೆಳಗುವ ತನ್ನ ವಜ್ರಾಯುಧವನಬ್ಬರದೆ (ರಘುವಂ. ೨-೩೦).

[ಝುಗ (<ಝುಗೆ₁) + – ಅನೆ₁]

**ಝುಗಳೆ** 'ಜಗಳೆ' ನೋ.

**ಝುಗಾ, ಝುಂಗೆ₁** (ನಾ). ೧. ಸ್ತ್ರೀಯರ ಒಂದು ಬಗೆಯ ಉಡುಪು ; ಕೊರಳಿನಿಂದ ಕಾಲಿನವರೆಗೂ ಬರುವ ಲಂಗ: ನೀ ಮುಂದಿನ ಜಲ್ಮಕ್ಕ ಬರೋದರೊಳಗ, ಪೋಲಕಾ, ಝುಗಾ ಬಂದಿರತಾವೇಳು (ಹೊಸಂಸಾ.೭೦). **ಝುಗೆ₁** : ೧. ಆಕೆ ಹೊಸ 'ಝುಗೆ' ಉಟ್ಟುಕೊಂಡರೆ . . . ಬಯಕೆ ಕೆರಳುತ್ತದೆ (ಬನಸಿ. ೦೪). ೨. ಹೊದಿಕೆ; ಆವರಣ: ಹರಿಗೆ ಕೆಂಪಿನ ಝುಗೆ ಸುರಾಂಗನೆಯರಿಗೆ ಸುಭಟವ್ರಜಕೆ ಕುಂಟಣಿ ವರದಿಗಂಗನೆಯರಿಗೆ ಬೈತಲೆಗೆ ಸೆವಸಿಂದೂರ (ಕುವ್ಯಾಛೀ. ೪-೭); ಲೋಹಸೀಸಕವಡಸಿ ಬಲ್ಲೆಹ ಬಗಿದು ನಟ್ಟುದು ಸರಪಣಿಯ ಝುಗೆಯ (ಕುವ್ಯಾಛೀ. ೪-೫೯).

[←ಮರಾ. ಝುಗಾ]

**ಝುಗಿಝುಗಿಸು** 'ಝುಗಝುಗಿಸು' ನೋ.

**ಝುಗಿಸು** (ಕ್ರಿ). = ಝುಗಝುಗಿಸು : ರದನಗಳು ಝುಗಿಪ ರನ್ನಗಳಾಳಿ ಯಂದದಿ ಸೊಗಯಿಸಲು (ಕವಿಚ. III, '೨೦೪, ಹರಿಲೀಲಾಮೃತ ಸಾರ) ; ಮುಗಿಲೆ ಮುಗಿಲೇ . . . ಝುಗಿಸಿ, ಗದರಿಸಿ ಜಗವ ಬೆದರಿಸಿ, ಮುಗಿಲೆ! ನೀನೇಂ ಮಾಡುವೆ ? (ಕಎಪು. ೨೯-೦).

[ಝುಗ (<ಝುಗೆ₂) + – ಇಸು₃]

**ಝುಗೆ₁** 'ಝುಗಾ' ನೋ.

**ಝುಗೆ₂, ಝುಗ** (ನಾ). ಹೊಳಪು ; ಪ್ರಕಾಶ : ಅಂಬಿನ ಝುಗೆಯ ಝುಳ ದಲ್ಲಿ ಮುಳುಗಿ ಪೋನದೊಳಿರ್ದನಾ ಕರ್ಣ (ಕುವ್ಯಾಕ. ೪-೦೩) ; ಬಂಧು ಗಳಗೊಲಿದಿತ್ತನ್ . . . ಸಿಂದುರ ಹಳದಿ ಬೂದಿ ಪಚ್ಚೆಯ ಝುಗೆಗಳಂಬರವ (ಅಕ್ರೂಚ. ೮-೪೨). **ಝುಗ** : 'ಝುಗಿಸಂ' ಪರಾ.

**ಝುಗಝುಗ** (ದ್ವಿರುಕ್ತಿ): 'ಝುಗಝುಗಿಸು' ಪರಾ. [ ? ]

**ಝುಗ್ಗನೆ** (ಅ). ರಭಸವಾಗಿ ; ತಟ್ಟನೆ ; ಕೂಡಲೆ : ರಾಜರುಗಳೆಲ್ಲ ಭಯ ಭಕ್ತಿಗಳಿಂದ ಝುಗ್ಗನೆ ಎದ್ದು (ಸೌಗಂಧಿ. ೨೩೪-೭). [ಝುಗ್₀ + – ಅನೆ₁]

**ಝುಗ್ಗೆನ್ನು** (ಕ್ರಿ). ೧. ಝುಗ್ ಎಂದು ಶಬ್ದಮಾಡು. ೨. (ಆಲಂ) ಒಮ್ಮೆಲೆ ಅಂಜು ; ತಟ್ಟನೆ ಬೆಚ್ಚು ; ಗಾಬರಿಗೊಳ್ಳು : ಗೌಡರನ್ನು ಕಂಡತಕ್ಷಣವೇ ಮಲ್ಲಮ್ಮನ ಮನಸ್ಸು ಝುಗ್ಗೆಂದಿತು (ಗೋಪುರ. ೦೫೫).

[ಝುಗ್₀ + ಎನ್ನು (<ಎನ್₁)]

**ಝುಜ್ಜರ** 'ಜಜ್ಜರ' ನೋ.

**ಝುಜ್ಜರಂಪೋಗು** (ಕ್ರಿ). ಶಿಥಿಲವಾಗು; ಜರ್ಜರಿತವಾಗು: ಎಲುವಡದು ಮನವು ಝುಜ ರಂಬೋಗಿ ಲಿಂಗದಲ್ಲಿ ನೀರು ನೀರಾಗಿ ಬೆರಸಬೇಕು (ಪದಗೋ. ೦೭೭-೦೪). [ಝುಜ್ಜರ (<ಜಜ್ಜರ) +ಪೋಗು₁]

**ಝುಟತಿ** 'ಝುಡಿತಿ₁' ನೋ.

**ಝುಟಪಟ, ಜಟಪಟ** (ಅ). ಬೇಗನೆ; ತಟಕ್ಕನೆ; ಚಟ್ಟನೆ : ಜೀವನದೀ. ಚಿತ್ರಪಟ ತೆರೆಮರೆಗಳ ಆಟದಲ್ಲಿ ಉರುಳುತಿಹುದು ಝುಟಪಟ (ಅರಳು. ೩೫-೨೦). **ಜಟಪಟ**: "ತಟಕ್ಕನೆ, ಚಟ್ಟನೆ" (ಜಾನಕೋ. ೫೮).

[←ಹಿಂ. ಮರಾ. ಝುಟ್‌ಪಟ್. / ಪ್ರಾ. ಝುಡಪ್ಪಡ]

**ಝುಟಿ** (ನಾ). ಗಿಡ ; ಪೊದರು. [ಸಂ.]

**ಝುಟಿತೆ** 'ಝುಂಡಿತಿ₁' ನೋ.

**ಝುಟಿಲ್** (ನಾ). ಒಂದಂ ಅನುಕರಣ ಶಬ್ದ : ಕಟಗಣ್ಣು ಝುಟಿಲೆಂದು ಪಾವುಗೆಗಳ ದನಿ ನಟಿಸಿ ಮೆಲ್ಲನೆ ಪೆಜ್ಜೆಯಿಡುವ (ಭರಚ. ೪-೪).

**ಝುಟಿ** (ನಾ). ಕಿರುನೆಲ್ಲಿಗಿಡ : "ಝುಟಾ, ಅಮಲಾ . . . ತಾಮಲಕೀ– ೭ ಕಿರುನೆಲ್ಲಿಗಿಡದ ಹೆಸರು" (ಸಿದ್ಧಾಂತಿ. ೧೨೪). [ಸಂ. ಝುಟಾ]

**ಝುಟ್ಟನೆ** (ಅ). ಕೂಡಲೆ ; ತಕ್ಷಣ : ಝುಟ್ಟನೆ ತೀರಿಸಿ ಬಂದು ಬಿಡು (ದೀಪಹ. II, ೭). 'ಜಟ್ಟನೆ' ಪರಾ. [ಝುಟ್₀ + – ಅನೆ₁]

**ಝುಟ್ಟಿ** 'ಜಟ್ಟಿ₁' ನೋ.

**ಝುಟ್ಟಿಂಗ** 'ಜಟ್ಟಿಂಗ' ನೋ.

**ಝುಡತಿ, ಜಡತಿ, ಜಡ್ತಿ, ಝುಡಿತಿ₂, ಝುಡ್ತಿ** (ನಾ). ಹುಡುಕುವುದು ; ತಪಾಸಣೆ ; ಶೋಧನೆ ; ತನಿಖೆ : ಮತ್ತೆ ಮನೆಯ ಝುಡತಿಗೆ ಸುರುವಾಯಿತು (ಸಂಚಗ. ೨); ಬೇಕಾದರೆ ನಮ್ಮ ಚೀಲಗಳನ್ನೆಲ್ಲ 'ಝುಡತಿ' ಮಾಡಿ ನೋಡಿರಿ (ರಂಗರೋ.೫); ಅವಳೇ ಜೇಬನ್ನು ಝುಡತಿ ಮಾಡುತ್ತಾಳೆ (ಸಮಾಲೋ. ೫೭). **ಜಡತಿ** : ಹಾಗೆ ಮಾಡುವ ಮುಂಚೆ ನಮ್ಮ ಸಾಮಾನು ಗಳನ್ನೆಲ್ಲ ಜಡತಿಮಾಡಲಾರಂಭಿಸಿದರು (ಪ್ರವಾಇ. II, ೭೩); ಇನ್ಸಪೆಕ್ಟರನು ಮನೋಹರನನ್ನು ಜಡತಿ ಮಾಡಿದ (ಕೊತಕಾ. ೫೯). **ಜಡ್ತಿ** : ಸೊಗಸಾಗಿ ಬರೆದಿರ್ದ ಲೆಕ್ಕದಾ ಜಡ್ತಿ[ಪಾಠಾಂ. ಜಡತಿ]ಗತಿಮಿಗಿಲಾಗಿ ತೋರಿಸಲು (ಪ್ರಾಥರಾ. ೧೭-೭) ; ಲೆಕ್ಕಪತ್ರ ಮುಂತಾದನ್ನು ಜಡ್ತಿ ತೆಗೆದುಕೊಳ್ಳುತ್ತ

(ಎಕ. I, ೧೭-೨೭; 1820); ಮನೆಗೆ ಹೋಗಿ . . . ಜಡ್ತಿಮಾಡಹತ್ತಿದರು (ಕೊತಕಾ. ೫೯). ಝುಡಿತ್ತಿ₂ : ಕಾಳುಕಡಿ ಕಿರಾಣಿ ಅರಳಿ ಮುಂತಾದ ಮಾರಾಟಕ್ಕೆ ಬಂದ ಜೀನಸುಗಳ ಮತ್ತು ಬಾರದಾನೆಯು ಝುಡಿತಿ ಇಡುವುದು (ಮುಂಬವ್ಯಾ. ೨೭೯). ಝುಡ್ತಿ: ಲಿಂಗನ ಮನೆಯನ್ನು ಝುಡ್ತಿ ಮಾಡಲಾಗಿ ಅದರಲ್ಲಿ ಅಡಿಗೆ ಉಗ್ರಾಣದ ಸಾಮಾನುಗಳ ಹೊರತು ಮತ್ತೇನೂ ಇರಲಿಲ್ಲ (ಕಲಿಸ. ೦೦೭); ಅಡ್ಡಬಂದು ಜೇಬನ್ನೇ ಝುಡ್ತಿ ಮಾಡುತ್ತವೆ (ದಿಲ್ಲಿಪ. ೬೨). [ ←ಹಿಂ. ಮರಾ. ಝುಡತೀ ]

**ಝುಡಪ, ಜಡಪ** (ನಾ). ೧. ಹೆಚ್ಚಾದ ವೇಗ ; ಶೀಘ್ರತೆ : ಪಡಿಮುಖ ದಲೊದಱುವ ಕಿಡಿಯ ಘಂಟಾರವದ ರಭಸದ ಝುಡಪದಲಿ ಜೋಡಿಸಿದ ಶಕ್ತಿಯಲಿಟ್ಟನವನೀಶ (ಕುವ್ಯಾ.ಶ. ೩-೬೬). ೨. ಗದಾಯುದ್ಧದಲ್ಲಿ ಒಂದು ಪಟ್ಟು,-ವರಸೆ : ಬಿಡುವ ಬಿಡಿಸುವ ಪರರ ಘಾಯವ ತಡೆವ ಗೋಮೂತ್ರಕದ ಚಿತ್ರದ ಝುಡಪದವಧಾನದ . . . ಕುಶಲದಲಿ ಕಾದಿದರು ಸಮರದಲಿ (ಕುವ್ಯಾ.ಗ. ೬-೨೪). ಜಡಪ : ೩. ಚಳಕವುಳ್ಳವನು; ವೇಗಶಾಲಿ : ಕಡುಗಲಿಗಳೇಱಾಟದಲಿ ಮಿಗೆ ಜಡಪರಾದರು ಖಡ್ಗ ಹಸ್ತದಿ ಬಿಡುವವರ ರೇವಂತರಗ್ಗಳರಾದರೈಯವರು (ಸಂಭಪ. ೦೮-೨). [ <ಪ್ರಾ. ಝುಡಪ್ಪ ]

**ಝುಡಪಿಸು** 'ಝುಳಂಪಿಸು' ನೋ.

**ಝುಡಪು** 'ಝುಳಪು' ನೋ.

**ಝುಡಾವು** (ನಾ). ರತ್ನದ ಹರಳಂಗಳನ್ನು ಕೂಡಿಸಿದುದು ; ರತ್ನ ಖಚಿತವಾದುದು : ಮಾತೃಶ್ರೀಗಳು ಬಹಳ ಹರುಷಿತರಾಗಿ ಆಶೀರ್ವಾದ ವನ್ನು ಮಾಡಿ ಝುಡಿತ ಝುಡಾವು ನವರತ್ನ ಸುವರ್ಣಪುಷ್ಪ ಮೊದಲಾದು ವನ್ನು ನಿವಾಳಿಸಿ (ಬಖ್ಯರು. ೦೦). [ ←ಮರಾ. ಜಡಾವ್ ]

**ಝುಡಿ₁** 'ಜಡಿ₁' ನೋ.

**ಝುಡಿ₂** 'ಜಡಿ₂' ನೋ.

**ಝುಡಿ₃** 'ಜಡಿ₄' ನೋ.

**ಝುಡಿತ** 'ಜಡಿತ' ನೋ.

**ಝುಡಿತಿ₁, ಜಡಿತಿ, ಜಡಿತೆ, ಝುಟತಿ, ಝುಂಟಿತೆ, ಝುಂಡಿತೆ** (ನಾ). ಬೇಗ ; ತ್ವರೆ : ಕೆಳದಿಯರು ಝುಡಿತಿಯಾಗಿ ಮಂದಿರದ ಬಾಗಿಲೊಳ್ ಬಂದು ಕಾದಿರ್ದು (ಸಾಗಂಧಿ. ೩೪೦-೦೦); ಝುಡಿತಿಯೊಳಗೆ ಯನ್ನವಡನೆಯೆಲೆ ಬಾಲ ನೀನು ನುಡಿಯಾದಿಹುದು ಧರ್ಮವೇನೊ (ಹಮುಜ. ೦೭೩); ಝುಡಿತಿಯಿಂ ಪಿಂತಗಸ್ತ್ಯನೀತಂಗಿತ್ತ ಸಾಯಕವೊಂದಂ ತೂಣೀರದಿಂ ತೆಗೆದು (ಅದ್ಭುತ. ೫೦-೦೦). ಜಡಿತಿ: "ಝಕಾರಕ್ಕೆ ಜಕಾರಂ . . . ಝುಡಿತಿ–ಜಡಿತಿ" (ಶಮದ. ೨೫೫ ಪ್ರಯೋ). ಜಡಿತೆ: ಕೌರವ ರಾಜಕಾರ್ಯದ ಘನವನಱುಹಿ ದನವರೊಡನೆ ಸಾಧನವ ಸೂಚಿಸಿ ಜಡಿತೆಯಲ್ಲಿ[ಪಾಠಾಂ. ಜೋಡಿಸಿಕೊಟ್ಟು] ಕಳುಹಿದನು ಗುಪ್ತದಲಿ (ಕುವ್ಯಾ.ಆ. ಓ೧೩. ೨೦-೬೮). ಝುಟತಿ : ಚದರಿ ಹೋದ ಚಮೂಪತಿಗಳು ಮತ್ತೆ ಏರಿ ಬಂದು, ಪೂತ್ಕರಿಸಿ ಮೈಗೆ ಮೈಗೊಟ್ಟು ಚಿಮ್ಮಿ ಝುಟತಿಯಿಂದ ಕಾದಿದರು (ಕವೀರ. ೫೮). ಝುಟಿತೆ: ಕಟುವರ ಪಿಪ್ಪಲಿಯಂ ಮೇಣ್ ಝುಟಿತೆಯೊಳಿಕ್ಕಲ್ಕದಱಿಯದೇ ತದ್ವಿಷಮಂ (ಹಮದ. ೨-೪೪). ಝುಡಿತೆ: ಕಳಿಂಗ ಕರೂಷ ಕೌರವರರಸ ಮೊದಲಾದಖಿಳಬಲ ಜೋಡಿಸಿತು ಝುಡಿತೆಯಲಿ (ಕುವ್ಯಾ.ಕ. ೦೩-೦೨) : ಅಮರರೆದೆ ಜಜ್ಝರಿತವಾಗಲು ಝುಡಿತೆಯಲಿ ಹೊಕ್ಕನು ದಶಗ್ರೀವ (ತೊರರಾ. ೬-೨೦-೨೩); ಝುಡಿತೆಯಿಂದುರುಬಿದರ್ ಬಿಡದೆ ಮಾಯಾಶಬರರು (ಜೆಬಪು., ೫೩-೨೭). [ <ಸಂ. ಝುಟಿತಿ = ಜಾಗ್ರತೆಯಾಗಿ ]

**ಝುಡಿತಿ₂** 'ಝುಡತಿ' ನೋ.

**ಝುಡಿತಿ₃** (ನಾ). ಲಾವಣಿಗಳಲ್ಲಿ ಒಂದು ಭೇದ: ಇದರಲ್ಲಿ ಝುಡಿತಿಯೆಂಬ ಇನ್ನೊಂದು ಉಪಜಾತಿಯುಂಟು (ಕರ್ಣಾಸಂ. ೩೨). [ ? ]

**ಝುಡಿತೆ** 'ಝುಡಿತಿ₁' ನೋ.

**ಝುಡಿಸು** 'ಜಡಿಸು' ನೋ.

**ಝುಡುಪು** 'ಝುಡುಪು' ನೋ.

**ಝುಡ್ತಿ** 'ಝುಡತಿ' ನೋ.

**ಝುಣ್**(ನಾ). ಒಂದು ಅನುಕರಣ ಶಬ್ದ.

ಝುಣ್‌ಝುಣ್ (ದ್ವಿರುಕ್ತಿ) : ಪರಿಪರಿಯಿಂದ ಬಾರಿಸಿದಲ್ಲಿ ಝುಣ್ ಝುಣ್ ಎಂಬ ಧ್ವನಿಯು ಶಿವಪ್ರಸಾದಿಗೆ ಕೊಡುತಿರ್ಪುದೆಂಬುದೀಗ ಘಂಟಾ ನಾದವೆಂಬ ಶಬ್ದಕ್ಕರ್ಥ (ವಚಶಾ. II, ೨೦೭).

**ಝುಣ** (ನಾ). ಒಂದು ಅನುಕರಣ ಶಬ್ದ :

ಝುಣಝುಣ (ದ್ವಿರುಕ್ತಿ): ತೊಡರ ಝುಣಝುಣ ರವದ ಸುರರುಗ್ಗಡದ ಬಿರುದಿನ ಬಾವುಲಿಯ . . . ರಾಯರಕ್ಕಸನೈದಿದನು (ತೊರರಾ. ೧-೦೫-೦೧).

**ಝುಣಂಬ** 'ಜಳಂಬ' ನೋ.

**ಝುಣಕ** (ನಾ). ೧. ಚುರುಕು ; ಚಾತುರ್ಯ ; ಚಳಕ : ಝುಣಕವ ತೋರುತ ಕಣೆಗಳ ಬೀರುತ . . . ಕಣೆವೆಯ ದಾಟುತಲಿ (ಹಮುಜ. ೧೭). ೨. ಬೇಗ ; ಜಾಗ್ರತೆ : ಕ್ಷಣವು ನಿಲ್ಲದೆ ನೀವು ಹಣವ ಕೊಟ್ಟರೆ ಯೆನಗೆ ಝುಣಕದೊಳು ನಾ ಪೋಪೆ (ಹಮುಜ. ೦೨೦). [ ? ]

**ಝುಣಝುಣತ್ಕಾರ** (ನಾ). ಝುಣಝುಣ ಎಂಬ ಧ್ವನಿ. 'ಝುಣಝುಣ ತ್ಕಾರಿಸು' ಪರಾ. [ ಸಂ. ]

**ಝುಣಝುಣತ್ಕಾರಿಸು** (ಕ್ರಿ). ಝುಣಝುಣ ಎಂದು ಶಬ್ದಮಾಡು,- ಉಲಿ : ಝುಣಝುಣತ್ಕಾರಿಸುವ ಕಂಕಣದ ಹುಲಿಯುಗುರ . . . ಬಾಲ ದೊಡಿಗೆಯ ಮಾಯೆಗಿಕ್ಕಿದರು (ಪ್ರಭುಲೀ. ೩-೨೫). [ ಝುಣಝುಣತ್ಕಾರ + – ಇಸು₃ ]

**ಝುಣಝುಣಾಟ** (ನಾ). ಝುಣಝುಣ ಎಂಬ ಶಬ್ದ: ರೊಕ್ಕದ ಝುಣ ಝುಣಾಟವು ಕೇಳಬರುತ್ತಿದೆ (ತಿರುಗು. ೧೯೩). [ <ಝುಣ + ಆಟ ]

**ಝುಣಝುಣಿತ** (ನಾ). = ಝುಣಝುಣತ್ಕಾರ : ಯುವತಿ ಕಂಕಣ ಕಿಂಕಿಣೀ ಝುಣಝುಣಿತ ಘೋಷಣವು (ಬಸಪು. ೫-೨೯). [ ಸಂ. ]

**ಝುಣಝುಣಿಸು** (ಕ್ರಿ). ಝುಣಝುಣ ಎಂಬ ಧ್ವನಿಯಂನ್ನುಂಟುಮಾಡಂ: ಝುಣಝುಣಿಸುವಂದುಗೆಗಳಂ ಘಣಘಣಯೆನಿಪ ಘಂಟೆಗಳಂ (ಬಸಪು. ೫೭-೫) ; ತಳುಕು ಕಡಗ ಕಂಕಣ ಝುಣಝುಣಿಸಲು (ಮೋಹತ. ೧೪-೫೦) : ಕರಕಟಕ ಝುಣಝುಣಿಸಲು (ಅನಂರಾ. ೧-೩-೪೦). [<ಝುಣ + – ಇಸು₃]

**ಝುಣತುಕೃತಿ** (ನಾ). = ಝುಣತ್ಕಾರ : ಭೂರಿಭೂಷಣ ಝುಣತುಕೃತಿ ಘಂಟಾರವದ ರಭಸದಲಿ (ನಿಭಾಗ. ೪-೨-೭). [<ಸಂ. ಝುಣತ್ಕೃತಿ]

**ಝುಣತ್ಕಾರ** (ನಾ). ಝುಣ ಝುಣ ಎಂಬ ಶಬ್ದ : ದಕ್ಷಿಣಕರಕಲಿತ ಕನಕ ಕಂಕಣ ಝುಣತ್ಕಾರನುಂ (ಚಂದ್ರಪು. ೮-೮೨ ವ); ಹಾರ ನೂಪುರ ಕಂಕಣಾದಿ ಭೂಷಣ ಝುಣತ್ಕಾರ ಧ್ವನಿಗಳು (ಜೈಮಿಭಾ. ೬-೪೭). [ ಸಂ. ]

**ಝುಣತ್ಕೃತಿ** (ನಾ). = ಝುಣತ್ಕಾರ : ಕನಕಮಯ ದಿವ್ಯಸಿಂಹಾಸನದಿಕ್ಕೆಲ ದೊಳ್ ಬಿಂಕದಿಂ ಕೊಂಕಿ ನಿಂದು ಕಂಕಣ ಝುಣತ್ಕೃತಿ ಪೊಣ್ಮೆ (ರಾಜಶೇ. ೫-೦೯ ರಗಳೆ). [ ಸಂ. ]

**ಝುಣನ್ನೂಪುರ** (ನಾ). ಉಲಿಯಂತ್ತಿರುವ ಕಾಲ್ಗಡಗ ; ಝುಣಝುಣ ಎಂದು ಧ್ವನಿಮಾಡಂತ್ತಿರುವ ಅಂದುಗೆ : ಕ್ವಣತ್ಕಂಕಣ ; ಝುಣನ್ನೂಪುರ (ಶಮದ. ೮೧ ಪ್ರಯೋ). [ ಸಂ. (ಝುಣತ್ + ನೂಪುರ) ]

**ಝುಣಮಣ** (ನಾ). ಒಂದು ಅನುಕರಣ ಶಬ್ದ. 'ಝುಣಮಣಿಸು' ಪರಾ.

**ಝುಣಮಣಿಸು** (ಕ್ರಿ). ಝುಣಮಣ ಎಂದು ಸದ್ದುಮಾಡಂ ; ಗದ್ದಲ ಮಾಡಂ : ಝುಣಮಣಿಸದೆ ಶಂಬರಾಸುರವರ ಸಮಾರಣನಾಗಿ ಪೊಕ್ಕ ದ್ವಾರಕೆಯ (ಮೋಹತ. ೧೧-೨೨). [ಝುಣಮಣ + – ಇಸು₃ ]

**ಝುಣರು** (ನಾ). ಒಂದು ಅನುಕರಣ ಶಬ್ದ : ಕಿಣಕಿಣಕಿಣರೆಂಬ ಕರದ ಕಂಕಣ ಬಳೆ ಝುಣಝುಣರೆಂಬ ನಡುವಿನ ಗಂಟೆ (ಪುರಂದ. ೨-೬೨-೨) ; ಕಡಗ ಕಂಕಣ ಬಳೆಗ್ಳೆ ಝುಣರೆನೆ (ಕಂನವಿ. ೦೦-೪೫).

**ಝುಣು** (ನಾ). ಭಲೆ, ಭೇಷ್ ಎಂಬಂತೆ ಒಂದು ಕೊಂಡಾಟದ ನುಡಿ : ಝುಣು ವಿರೋಧಿವಿಭಾಡ ಝುಣು ಝುಣು ಝುಣು (ಕುವ್ಯಾಸ. ೨-೦೦೬).

**ಝುಣುಝುಣು** (ದ್ವಿರುಕ್ತಿ) : ಜಗತ್ರಯ ಜಟ್ಟಿ ಝುಣುಝುಣು . . . ಎಂಬಬ್ಬರಣೆ ಮಸಗಿದುದೆರಡು ಬಾಹೆಯಲಿ (ಕುವ್ಯಾಸ ೨-೦೦೬). 'ಧಣು$_2$' ಪರಾ.

**ಝುನಾನಾ** 'ಜನಾನಾ' ನೋ.

**ಝುನಾನಾಖಾನೆ** 'ಜನಾನಖಾನೆ' ನೋ.

**ಝುಪಝುಪ** (ಅ). (ಉಕ) ಬೇಗನೆ ; ಜಾಗ್ರತೆಯಾಗಿ ; ಚುರುಕಾಗಿ : ಗುರಿಯ ಕಡೆಗೆ ಝುಪಝುಪ ಕಾಲುಹಾಕಲು ಅಡ್ಡಿ ಇಲ್ಲವೆಂದಾಯಿತು (ದೀಪಹ. II, ೨೨೬). [ ←ಮರಾ. ಝುಪ್‍ಝುಪ್ ]

**ಝುಪಾಟಿ, ಜಪಾಟಿ** (ನಾ). ೧. ಆವೇಗ ; ಭರ ; ರಭಸ : ತನ್ನದು ನಡದರ ಸಾಕು ಅಂತ ಕೆಲಸದ ಝುಪಾಟಿಯೊಳಗ ಇದ್ದಾಳ (ಹೊಸಂಸಾ. ೧೫೬). ೨. ಸರದಿ ; ಸಲ : ಇರ್ಲಿ ಹೊಡೀರಿ ಕುಲಕರ್ಣೀರೆ ಒಂದು ಝುಪಾಟಿ (ಹನ್ನೊಂದ. ೯). ಜಪಾಟಿ : ೨. "ಸಾರೆ" (ಜಾನಕೋ. ೫೯).
[ ←ಹಿಂ. ಮರಾ. ಝುಪಾಟಾ ]

**ಝುಬರಿ** (ನಾ).ತೆಳುವಾದ ಕೋಲು ; ಸೆಳೆ : ಆತ ಮತ್ತೊಮ್ಮೆ ಅದರ ಮೇಲೆ 'ಝುಬರಿ' ಬೀಸಿದ (ಬನಸಿ. ೬೪). [ ←ತೆಲು. ಜಬರ ]

**ಝುಮ್** (ನಾ). ಒಂದು ಅನುಕರಣ ಶಬ್ದ : ಝುಮ್ಮೆಂದು ಸಮಿಧಾವಳಿ ಗಳಬ್ಬರಿಸಿದವು ಛಟ ಛಟ ಛಟ ನಿನಾದದಲಿ (ಕೊರಗಾ. ೧-೬-೪೯).

**ಝುಮಕು** (ನಾ). ಶೋಭೆ; ಸೊಗಸು: ತಿಲಕವ ತಿದ್ದುತ ಕಪ್ಪಿನಲಿ ವೀಳ್ಯದ ಝುಮಕಿನಲಿ ಸುಲಲಿತಾಂಗ ಶೃಂಗಾರದ ಸೊಬಗಿನಲಿ . . . ಬರುತಿರೆ ಬೆಡಗಿಲಿ (ಜಂದ್ರಾವ. ೨೨) : ರುಮ್ಮಾಲ ಸುತ್ತ್ಯಾನೆ ಹದಿನಾರು ಮಡಿಕೇಲಿ ಚುಂಗ ಬಿಟ್ಟ್ಯಾನೆ ಝುಮಕೀಲಿ (ಹಳ್ಳಿಪ. ೧೨೦). [ ←ಹಿಂ. ಝುಮಕ್ ]

**ಝುಮ್ಮಗೆ** (ಅ). = ಝುಮ್ಮನೆ : ಅಟ್ಟಿಯಲ್ಕೆವಂದುದು . . . ಚಂದ್ರ ಕಾಂತಪುತ್ರಿಕೆಯೊಸರ್ವಂತೆ ಝುಮ್ಮಗೆ ಬೆಮರ್ತೆರವಿಂ ತರಳಾಯತಾಕ್ಷಿಯಾ (ಶಾಂತಿಪು. ೮-೯೬). [ ಝುಮ್ + – ಅಗೆ$_3$ ]

**ಝುಮ್ಮನೆ** (ಅ). ಒಂದು ಅನುಕರಣಾವ್ಯಯಂ : ಝು[ಪಾಠಾಂ. ಝು]ಮ್ಮನೆ ಬೆಮರ್ತು ಭೀತಿಯ ಪರಮಕಾಷ್ಠೆಯಿಂ ಝೊಮ್ಮಿಡುತ ಕರೆದನೀಶನನೇಕ ನಿಷ್ಠೆಯಿಂ (ಪುಣ್ಯರ. ದೇ. ೬೪-೦೯) ; ತನು ಶೋಫಮೇಱೆ ಮೆಯ್ ಝುಮ್ಮನೆ ಬೆಮರುತ್ತಿರ್ಕುಮಪ್ಪೊಡಂ . . . ಹಯಕ್ಕೆ ತಪ್ಪದು ಮರಣಂ (ಅಶ್ವಶಾ. ೬-೫೩). [ ಝುಮ್ + – ಅನೆ$_1$ ]

**ಝುರ** (ನಾ). ಬೆಟ್ಟದಲ್ಲಿ ಹರಿದು ಬರುವ ಪ್ರವಾಹ; ಝರಿ ; ಗಿರಿನದಿ.
[ ಸಂ. ]

**ಝುರಣಿ** (ನಾ). = ಝುರ : ಅಲ್ಲಿಯ ನರಸಿಂಹ ಝುರಣಿಯಲ್ಲಿ ಸ್ನಾನಮಾಡಿ ವಿಭೂತಿ ಧರಿಸಿ (ಕಗದ್ಯ. ೦೨೨). [ ←ಹಿಂ. ಝುರನೀ ]

**ಝುರತಿ** (ನಾ). = ಝುರ : ಝುರತಿಯ ಮೃಗಗಳ ಪರಿಕಿಸಿ ನೋಡುತ (ಹಮಜ. ೧೬) ; ಸರಿಯ ರಾತ್ರಿಯೊಳಗೆ ಕರದಿ ಹಿರಿವ ಪಂಜ ಪಿಡಿದು ಬೇಗ ಝುರತಿ ಹಳ್ಳ ಕೊಳ್ಳ ಕೂಪ ಕೆರೆಯ ಹುಡುಕುತ (ಹಮಜ. ೧೮೪). [ ? ]

**ಝುರಿ$_1$** 'ಜರಿ$_4$' ನೋ.

**ಝುರಿ$_2$** (ನಾ). = ಝುರ : ಸುಶಾಂತಿಯ ಸುಂದರ ಬೆಟ್ಟದಿಂದ ನಿರಂತರವಾಗಿ ಸುರಿಯುತ್ತಿರುವ ಅಮೃತ ಝುರಿಯಿದು (ಧರ್ಮಸಾ. ೧) ; ಉಗಮಸ್ಥಾನ ದಿಂದ ದೂರಾಗುವ ಝುರಿಯಂತೆ (ಹೇಮಂತ. ೨೯೦). [ ಸಂ. ]

**ಝುರಿ$_3$** 'ಜರಿ$_6$' ನೋ.

**ಝುರಿಪಟ್ಟೆ** (ನಾ). ಜರಿಯಿಂದ ಕೂಡಿದ ರೇಷ್ಮೆಬಟ್ಟೆ (?) : ಅಡಕೆ ಮೆಣಸು ಝುರಿಪಟ್ಟೆ ಕವಾಡ ಮುಂತಾದ ಘಡಿಸಿನ ಸರಕು ಹೊರತ್ತಾಗಿ (ಮೈಆರಿ. ೦೯೩೬; ೨೬-೩೪ ; 1703). [ ಝುರಿ$_3$ (<ಜರಿ$_6$) + ಪಟ್ಟೆ$_3$ ]

**ಝುರಿಸೀರೆ** 'ಜರಿಸೀರೆ' ನೋ.

**ಝುರಿಸು** (ಕ್ರಿ). ಹರಿ ; ಪ್ರವಹಿಸು : ಮಣ್ಣಿದೆಯಲಿ ಝುರಿಸುವ ನೀರ ಸೆಲೆಯಂತೆ (ಸಹೀಗೀ. ೦೯-೩೦೦). [ಝುರಿ$_2$ + – ಇಸು$_3$ ]

**ಝುರ್ಝುರ$_1$** 'ಜುಜ್ಝಾರ' ನೋ.

**ಝುರ್ಝುರ$_2$** (ನಾ). ಒಂದು ಬಗೆಯ ವಾದ್ಯ : ಝುರ್ಝುರವೆಂಬ ಝಾಯಿ . . . ಇತ್ತೆಱದ ದಶವಾದ್ಯಂಗಳಂ ಬಾರಿಸಲುಳ್ಳ ವಿಚಕ್ಷಣರಿಂ ವಿನುತರಾಗಿ (ವಿವೇಕ. ೨೩೬). [ ಸಂ. ]

**ಝುರ್‍ರನೆ** (ಅ). ಕೂಡ್ಲೆ ; ತಟ್ಟನೆ : ಆಕೆಯ ಉತ್ಸಾಹ ಝುರ್‍ರನೆ ಇಳಿದು ಹೋಯಿತು (ಬರಹಾ. ೦೬); ರಮಾಬಾಯಿಯರ ಮುಖವು 'ಝುರ್‍ರನೇ' ಇಳಿಯಿತು (ಬೀಳತ ೪). [ ಝುರ್$_0$ + – ಅನೆ$_1$ ]

**ಝುಲ್, ಝುಲ್ಲು$_1$** (ನಾ). ೧. ಒಂದು ಅನುಕರಣ ಶಬ್ದ: ಮಿಕ್ಕು ತನ್ನಯ ಮೇಲೆ ನೂಂಕುವ ಗಜಂಗಳಂ ಬಗಿದು '. . . ಮುತ್ತು ಝುಲ್ಲೆನಲು ಸೂಸುತ್ತೆ (ಇಹರ. ದೇ. ೪೨-೯). ಝುಲ್ಲು$_1$ : ೧. ಗದೆಗುದುಗೆಯ ಝುಲ್ಲು ಝುಲ್ಲೆಂದು ತಳವಾರರಿದೆ ಬಂದರೆಂದು ಕಾತರಿಸಿ (ಮೋಹತ. ೦೮-೨೫). ೨. "ಧಕ್ಕೆ, ಆಘಾತ" (ಬಾಸಿಗ. ಕೋಶ) : ತರವೇನೆ ಕ್ಷಣದೊಂದು ಝುಲ್ಲಿನಲಿ ಜೀವಹಿಂಸೆ (ಬಾಸಿಗ. ೩೬-೨೦). 'ಜಲ್' ಪರಾ.

**ಝುಲಕು** 'ಝುಳಕ್ಕ$_2$' ನೋ.

**ಝುಲಿರು** (ನಾ). ಒಂದು ಅನುಕರಣ ಶಬ್ದ :

**ಝುಲಿಝುಲಿರು** (ದ್ವಿರುಕ್ತಿ): ಅಂದುಗೆಗಳ ಗೆಜ್ಜೆಗಳ ದನಿ ಝುಲಿಝುಲಿ ರೆಂದೆನೆ ಪಂತಿ ಪಂತಿಯೊಳು (ಭರಜ. ೪-೬೯).

**ಝುಲಿ** (ನಾ). ಶೋಭೆ ; ತೇಜಸ್ಸು ; ಪ್ರಕಾಶ. [ ಸಂ. ಝುಲಾ ]

**ಝುಲ್ಲ$_1$** (ನಾ). ೧. ಹಂಚ್ಚು; ಭ್ರಮೆ ; ಮನೋದೌರ್ಬಲ್ಯ: ರಾಜನ ಝುಲ್ಲ ಬಿಟ್ಟಿತು (ದೀಪನಿ. ೪೪). ೨. ಚಿಂತೆ; ಭಯ. 'ಜಲ್ಲು$_4$' ಪರಾ.
[ ←ಹಿಂ. ಝುಲ್ಲ ]

**ಝುಲ್ಲ$_2$** (ನಾ). ಒಂದು ಬಗೆಯ ಸಕ್ಕರೆ : " ಝುಲ್ಲ – ಖಂಡಸಕ್ಕರೆ " (ಅಕಾನಿ. ೦೧-೨) [ ? ]

**ಝುಲ್ಲಡಿ** 'ಜಲ್ಲಡೆ' ನೋ.

**ಝುಲ್ಲನೆ** (ಅ). ಒಂದು ಅನುಕರಣಾವ್ಯಯ : ಅನುಕರಣಕ್ಕೆ. . .ಝುಲ್ಲನೆ, ಧುಧುಮ್ಮನೆ, ಧಟಮ್ಮನೆ (ಶಮದ. ೧೪ ಪ್ರಯೋ). [ಝುಲ್ + – ಅನೆ$_1$]

**ಝುಲ್ಲರಿ** (ನಾ). ೧. ಡಮರುಗದಂತಹ ಒಂದು ಬಗೆಯ ಚರ್ಮವಾದ್ಯ: ಲೋಕತ್ರಯಮದನುಕ್ರಮದೊಳ್ ವೇತ್ರಾಸನ ಝುಲ್ಲರೀ ಮೃದಂಗ ಸಮಾನಂ (ಆದಿಪು.೧-೪೬); ನುತವೇತ್ರಾಸನ ಝುಲ್ಲರೀ ಮೃದುಮೃದಂಗಾಭಂ (ಸುಕುಮಾ. ೦೧-೪೧) ; ಪಟುಪಟಹ ರಣಂ ಝುಲ್ಲರೀ ಶಬ್ದರಮ್ಯಂ (ಎಕ. VIII, ನಗರ. ೫೬-೭೦ ; ಸು. 1077) ; ವೇತ್ರಾಸನ ಝುಲ್ಲರೀ ಮೃದಂಗ ಸಮಾನ ಅಧೋ ಮಧ್ಯೋರ್ಧ್ವ ಭೇದ ಭಿನ್ನಮುಂ (ತತ್ತ್ವಪ್ರ. ೨೬೫). ೨. ಕಂಚಿನ ಅಥವಾ ಹಿತ್ತಾಳೆಯ ದೊಡ್ಡ ತಾಳ : ಪಟುಪಟಹ ತುಣವ ಭಂಭಾ ಮರ್ದಳೆ ಝುಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶ ವೀಣಾಸ್ವರಂಗಳೆಸೆಯೆ (ವಡ್ಡಾರಾ. ೬೬-೨೯); ತಳಿತ ಝುಲ್ಲರಿಯ ಬಹಳ ವಾದ್ಯದ ನಡುವೆ ನಡೆದು (ಸಿದ್ಧರಾ. ೪-೧೮) ; ಮೃದಂಗ ಝುಲ್ಲರಿ ತಾಳ ಪಳಂಚಿ (ಗಣೇಶ. ೧೮-೪೬೨). ೩. ಛತ್ರಿ ಮೊದಲಾದವುಗಳ ಅಂಚಿನಲ್ಲಿ ಜೋಲಾಡುತ್ತಿರುವ ಜಾಲರಿ,–ಕುಚ್ಚು ; ಉತ್ಸವಗಳಲ್ಲಿ ಎತ್ತಿಹಿಡಿಯುವ ಮಕರತೋರಣ : ಬಿರುದಿನ ಕತ್ತರಿಯ ಹಿಲೀಗಳ ಝುಲ್ಲರಿ ಮುಸುಕಿದವು ಗಜವ (ಕುವ್ಯಾದ್ರೋ. ೩-೬) ; ತಳಿತ ಪಲ್ಲವ

ಸತ್ತಿಗೆಯ ಹೊದರೆದ್ದ ಝುಲ್ಲರಿಗಳ ವಿಚಿತ್ರಾಂಬರದ ಮುತ್ತಿನ ಮೇಲುಗಟ್ಟುಗಳ (ತೊರರಾ. ೧-೭-೧೪) ; ಕುಸುಮಗಳ ಝುಲ್ಲರಿಯ ಮುಸುಕಿನಿಂದ ಹಸನಾಗಿ ಯಿರುವ ಹೊಸ ಹಂಸತೂಲಿಕಾತಲ್ಪದೊಳ್ ಪವಳಿಸಿ (ಸೌಗಂಧಿ. ೧೯೭-೨೦). ೪. ಛತ್ರಿ ; ಕೊಡೆ : ರಾಯನಾಯಕರ ಸಂದಣಿಯೊಳ್ ಎತ್ತಿದ ಝುಲ್ಲರಿಗಳ ಮುತ್ತುವ ಕೈವಾರಿಗಳ ಕೋಳಾಹಳದಿಂ (ನಂಜಿರ. ೨-೪೫) ; ತುಂಬಿಗಳುಂ ನಭದಲ್ಲಿ ಮಂಡಳೀಕರಿಸಿ ನಿಳಿಂಪಕಾಂತೆಯರಿಗೆತ್ತಿದ ಹೀಲಿಯ ಚೆಲ್ವುವೆತ್ತ ಝುಲ್ಲರಿಗಳ ವೆಂಬಿನಂ ಬಿಡದೆ ಬಂದುವು ಲೀಲೆಯನಂದು ಮಾಡುತುಂ (ಬಾಧಪು. ೬-೨೩) ; ಕರಿಘಟೆಯ ಕುಜುವದಲಿ ಹಯ ಮೋಹರದ ತೆರೆವಾಲೆಯಲಿ ಬಲು ಝುಲ್ಲರಿಯ ಬುದ್ಬುದತತಿ ಯಲಸ್ತದ ಕಿಡಿಯ ವಡಬನಲಿ (ಕುವ್ಯಾ.ಭೀ. ೩-೨೩).

[ ಸಂ. ಝುಲ್ಲರೀ ]

**ಝುಲ್ಲಳಿ** 'ಜಲ್ಲರಿ$_1$' ನೋ.

△**ಝುಲ್ಲಟಿ** 'ಜಲ್ಲರಿ$_1$' ನೋ.

**ಝುಲ್ಲಿ$_1$** 'ಜಲ್ಲಿ$_2$' ನೋ.

**ಝುಲ್ಲಿ$_2$** (ನಾ). ದಾಲ್ಚಿನ್ನಿ (?) : ಲವಂಗದ ಝುಲ್ಲಿಯಂ ಕಬ್ಬಿಣಮಂ . . . ಪುಡಿಮಾಡಿ ಸಮಾನಭಾಗಂಗೊಂಡು ಮಾಡಿದ ಅಂಜನಂ (ವಿವ್ಯವಿ. ೦೬೦).

[ <ಪ್ರಾ. ಛಲ್ಲೀ = ತೊಗಟೆ ]

**ಝುಲ್ಲಿಡಿ** (ಕ್ರಿ). ಗೊಂಚಲುಗಳಿಂದ ತುಂಬಿಕೊಂಡಿರು ; ಗರಿಗಳಿಂದ ತುಂಬಿರು(?): ಬಾಳೆಗಳ್ಬೆಳೆಯಲಾವು ಮದಾಳಿಗಳ ಮಣಿಗೊಂಡುದರ್ದೆ ನಿರಾಳವಾದುದು ಝುಲ್ಲಿಡಿದು ತೆಂಗಿನಲಿಳಿಯ ಬಗಿದು ಕೀಳಿಗಿಳಿದವು (ಮದೇಪು. ೨-೩೦). [ ಝುಲ್ಲಿ$_1$ (<ಜಲ್ಲಿ$_2$) + ಇಡಿ$_2$ ]

**ಝುಲ್ಲಿಪಟೆ** (ನಾ). ಒಂದು ಸಂಬಾರ ಪದಾರ್ಥ ; ದಾಲ್ಚಿನ್ನಿ (?) : ಎತ್ತಿನಲ್ಲಿ ಅಡಕೆ ಮೆಣಸು ಝುಲ್ಲಿಪಟೆ ಕೊಬರಿ ಕವಾಡ ಹೊರತಾಗಿ ಹೆರಿಕೊಂಬ ಜ್ಞನಿಸೂ (ಮ್ಯಆರಿ. ೧೯೪೩, ೩೭-೨೦; 1643).

[ ಝುಲ್ಲಿ$_2$ + ಪಟೆ? ]

**ಝುಲ್ಲಿಪಟ್ಟ** (ನಾ).=ಝುಲ್ಲಿಪಟೆ : ಅಡಕೆ, ಮೆಣಸು, ಝುಲ್ಲಿಪಟ್ಟ ಕೊಬರಿ ಕವಾಡ ಮಿಡಿಸಿನ ಸರಕು ಹೊರತಾಗಿ (ಎಕ. VIII, ಸಾಗರ. ೫೩-೩೦; 1674).

[ ಝುಲ್ಲಿ + ಪಟ್ಟ? ]

**ಝುಲ್ಲಿಪಟ್ಟೆ** 'ಜಲ್ಲಿಪಟ್ಟೆ' ನೋ.

**ಝುಲ್ಲಿಮಿಗ** 'ಜಲ್ಲಿಮಿಗ' ನೋ.

**ಝುಲ್ಲಿಮೃಗ** 'ಜಲ್ಲಿಮೃಗ' ನೋ.

**ಝುಲ್ಲಿಸು$_1$** (ಕ್ರಿ). ಬೆದರಿಸು; ಜಂಕಿಸು: ಝುಲ್ಲಿಸಲು ಬಲನಹುದುಯೆಂಬಿನ್ನಿಲ್ಲಿ ಸತ್ವಾಮರ್ಯುಖವನದರಿಂ ಬಲ್ಲಿದೆನಿಸು ಪ್ರಹಸ್ತನೆನುತಾ ನೀಲ ಸರಳೆಳೆದಾ (ಜಿರಾಮಾ. ೬೧-೩೦) ; ನೀ ಪೆಣವ ಕೊಂಡು ಪೋಪುದುಯೆನುತಂ ಝುಲ್ಲಿಸಿ ನುಡಿಯಲು (ಹಮಜ. ೧೩೬).

[ ಝುಲ್ಲು$_2$(<ಜಲ್ಲು$_4$) +/– ಇಸು$_3$ ]

**ಝುಲ್ಲಿಸು$_2$** (ಕ್ರಿ). ದ್ರವಿಸು; ಸ್ರವಿಸು: ಕಲ್ಲಲ್ತೇ ಶಶಿಕಾಂತಂ ಝುಲ್ಲಿಸುವುದು ಚಂದ್ರಕಿರಣಮಂ ತಾಗಲೊಡಂ (ಅನುಮು. ೮೯): ಝುಲ್ಲಿಸುತ್ತಿಹುದ್ಯೆ ಮುಖದಿ ಬರುವಲ್ಲಣವ ಹೊತ್ತಂತೆ (ಸ್ವರೂಪಾ. ೦-೨೨) ; ಶಶಿಕಾಂತದ ಜಜ್ಜರಿಯೊಳು ಝುಲ್ಲಿಸಿ ಪರಿವ ತಣ್ಣೀರಗಾಲುವೆಗಂಡು ನಿಲ್ಲದೆಯ್ದಿದನಾ ಭೂಪ (ಶ್ರೀಪಾಲ ೪-೬೨). [ ? + – ಇಸು$_3$ ]

**ಝುಲ್ಲಿಜು** (ಕ್ರಿ). ಝುಲ್ಲೆನ್ನುವಂತೆ ಹೊರಹೊಮ್ಮು : ಎಲ್ಲಾ ಮೈ ತುಂಬಿ ತೋಜುವನೊಮ್ಮೆಯೆದೆವೊಗದಲ್ಲಿ ಗರ್ಭದೊಳೊಮ್ಮೆ ಬೆಳಗು ಝುಲ್ಲಿಜುವುದು (ಭರಜ. ೬೦-೨೫). [ ಝುಲ್ + ಇಜು$_1$ ]

**ಝುಲ್ಲು$_1$** 'ಝುಲ್' ನೋ.

**ಝುಲ್ಲು$_2$** 'ಜಲ್ಲು$_4$' ನೋ.

**ಝುಲ್ಲುಗೊಳ್** (ಕ್ರಿ). ತಳಮಳಗೊಳ್ಳು ; ಗಾಬರಿಯಾಗು ; ಹೆದರು : ಮಲ್ಲನಾರ್ಭಟದಿ ಮುನಿವಲ್ಲಭರು ಭಯಗೊಂಡು . . . ಝುಲ್ಲುಗೊಂಡುರೆ ವನದಿ ಕಲ್ಲುತರುಗಳ ಕಂಡು ಮಲ್ಲನೆಂದೇ ಬಗೆವರು (ಮಲ್ಲಾರಿ. ೧-೨೩).

[ ಝುಲ್ಲು$_2$ (<ಜಲ್ಲು$_4$) + ಕೊಳ್$_1$ ]

**ಝುಲ್ಲೆನ್** (ಕ್ರಿ). ಭಯಗೊಳ್ಳು ; ಹೌಹಾರು : ಹಗೆಯೆದೆ ಝುಲ್ಲೆನಲು ಕಾಳೆಗಕೆ ಕವಿದವು ಕಟಕವೆರಡರಲಿ (ಕುವ್ಯಾದ್ರೋ. ೧೮-೩); ಎದೆ ಝುಲ್ಲೆನಲು ಜವಗುಂದಿ ಲಕ್ಷ್ಮಣನೊಲಿದನವಯವವ (ತೊರರಾ. ೩-೩-೨೨).

[ ಝುಲ್ + ಎನ್$_1$ ]

**ಝುಷ** (ನಾ). ೧. ಮೀನು ; ಮತ್ಸ್ಯ : "ಮೀನಂ ಶಫರಂ ತಿಮಿ ಪಾಠೀನಂ ಝುಷಮನಿಮಿಷಂ ವಿಶಾರಂ ಮತ್ಸ್ಯಂ ಮೀನವೆಸರ್" (ವಸ್ತುಕೋ. ೨೨-೫); ನಡು ಮಡು ಲೋಕಲೋಚನರ್‌ಝುಷಕ್ಕೆ (ಪುಷ್ಪಪು. ೯-೪೨); ತರಂಗಸಂಘ ಸಂಭವ ರವ ವಾದ್ಯಕಾಡಿದುದು ಕೂಡೆ ಝುಷಂ ಪೊಸಡೊಂಬವೆಂಬಿನಂ (ರಾಜಶೇ. ೨-೬೨). ೨. [ಜ್ಯೋತಿ] ಮೀನರಾಶಿ: ರವಿ . . . ಝುಷದೊಳಿರೆ ವಧೂಪ್ರೀತನಬ್ದ್ರವ್ಯಪಣ್ಯಂ (ಜಾತತಿ. ೧೭-೧೭). [ ಸಂ. ]

**ಝುಷಕೇತನ** (ನಾ). ೧. ಮೀನಿನ ಗುರುತುಳ್ಳ ಧ್ವಜ; ಮನ್ಮಥನ ಧ್ವಜ: ಪೂವಿನ ಬಿಲ್ಗೆ ಪುರ್ವು ಕುಸುಮೇಷುಗೆ ಕಣ್ ಝುಷಕೇತನಕ್ಕೆ ಚೆಲ್ವಾವಗ ಮಾದ ಸೋರ್ಮುಡಿ ರತಿಪ್ರಿಯಗಾಗೆ (ಶಾಂತಿಪು. ೮-೮೩); ನನೆಗಣೆಯಿಲ್ಲದ ಝುಷಕೇತನಮಿಲ್ಲದ ಕುಸುಮಚಾಪಮಿಲ್ಲದ . . . ಮನಸಿಜನೆನೆ ಸಂದನಾ ಖಗೇಂದ್ರಕುಮಾರಂ (ವರ್ಧಮಾ. ೬-೬೭). ೨. ಮೀನನ್ನು ಧ್ವಜದಲ್ಲಿ ಗುರುತಾಗುಳ್ಳವನು ; ಮನ್ಮಥ : ಶಶಧರಬಿಂಬಾನನೆಯಂ ಝುಷಕೇತನ ಕೇತನಾಭತನುತನುವಂ . . . ಕಂಡೊಸೆದಂ ಬನದೊಳಗೆ ಜನಕತನಯಳ ನಣುವಂ (ಕವಿರಾ. ೨-೩೮) ; ಝುಷಕೇತನಂ ವಸಂತಾಗಮಮಿಲ್ಲದೇನೊ ಲಿಸಲಾರ್ತಪನೇ ವಧುವಂ (ಮದತಿ. ೧೦-೩೩). [ ಝುಷ + ಕೇತನ ]

**ಝುಷಕೇತು** (ನಾ). ೧.=ಝುಷಕೇತನ ೧ : ಮೇಲುದು ಝುಷಕೇತುವಂ ಮಿಗೆ ಮನೋಜಮನೋಹರಿಯೋಜು ಬರ್ಪವೊಲ್ (ಚಂದ್ರಪು. ೧೦-೬). ೨.=ಝುಷಕೇತನ ೨ : ಜಿತಝುಷಕೇತುರೂಪನೆನಿಸಿದ ಮಲ್ಲಣಂಗೆ ಲೋಕಾಪ್ತ ಭಾರವಿಗೆಣಿಗುವೆಂ (ಪದ್ಮರಾ. ೦-೧೪) ; ಸಿಡಿಲ್ದ ಸೀರ್ವನಿ ಗಳೊಪ್ಪಿರೆ . . . ತುಪಾಕದಿಂ ನೆಗೆವ ಗುಂಡಿನವೋಲ್ ಝುಷಕೇತು ವೀರನಾ (ರಾಜಶೇ. ೫-೬೯). [ ಝುಷ + ಕೇತು ]

**ಝುಷಧ್ವಜ** (ನಾ).=ಝುಷಕೇತನ. [ ಝುಷ + ಧ್ವಜ ]

**ಝುಷನೇತ್ರ** (ನಾ). ಮೀನಿನಂತಹ ಕಣ್ಣು : ಎಳಸಿರಿಸಿತ್ತವಳ್ದಿರ ಲಸಜ್ಝುಷ ನೇತ್ರಮನೇಣನೇತ್ರಮಂ (ಪುಷ್ಪಪು. ೫-೨೫). [ ಝುಷ + ನೇತ್ರ ]

**ಝುಷಪತಾಕೆ** (ನಾ).=ಝುಷಕೇತನ ೧ : ಮೀನಕೇತುವೆತ್ತಿಸಿದ ಸಮುಲ್ಲ ಸಜ್ಝುಷಪತಾಕೆಯೆನಿಪ್ಪವೊಲಾಂತಳಾಕೆಯಾ ಘಸದನದೊಳ್ (ಚಂದ್ರಪು. ೬-೬೬). [ ಝುಷ + ಪತಾಕೆ ]

**ಝುಷೆ** (ನಾ). ಹೀರೆಗಿಡ : "ಗಾಂಗೇರುಕಿ, ನಾಗಬಲಾ, ಝುಷಾ, ಹ್ರಸ್ವಗ ವೇಧುಕಾ ಳ ಹೀರೆಗಿಡದ ಹೆಸರು. ಇವು ಹೀರೆ, ತುಪ್ಪಹೀರೆ, ಕಾಡುಹೀರೆ ಇವುಗಳೆಲ್ಲಕ್ಕೂ ಹೆಸರು" (ಸಿದ್ಧಾಂತಿ. ೧೨೦). [ ಸಂ. ಝುಷಾ ]

**ಝುಸ$_1$** 'ಜಸ$_1$' ನೋ.

**ಝುಸ$_2$** 'ಜಸ$_2$' ನೋ.

**ಝುಸ$_3$** (ನಾ). ಬೇಗ ; ತ್ವರೆ : ಮಸಣದೊಳು ಸಂಸ್ಕಾರಮಾಡಬೇಕೆಂದು ಝುಸದಿಂದ ನಾ ಬಂದೆ ಪ್ರೇತನೆಲಕಾಗ (ಹಮಜ. ೦೯೯). [ ? ]

**ಝುಸಂಬಡೆ** 'ಜಸಂಬಡೆ' ನೋ.

**ಝುಸಕೇತು** (ನಾ). = ಝುಷಕೇತನ ೨ : ಪಂಕೇಜಚರಣ ಝುಸಕೇತುದೇಹ ಕ್ಷಮಾಭೃದ್ವಜ ವಿರೂಪಾಕ್ಷ ಪಾಲಿಪುದು (ರಾಘಜ. ೨-೦೬).

[ <ಸಂ. ಝುಷಕೇತು ]

**ಝುಳ** 'ಜಲ್ಲ$_1$' ನೋ.

**ಝುಳಂಪಿ** (ನಾ). ಕಂದುರೆಯು ಆರುಂ ಲಕ್ಷಣಗಳಲ್ಲಿ ಒಂದುಂ (?): ಭಂಜಳಿ ಮುರಳಿ ಝುಳಂಪಿ ವಾಹಿಣಿ ರೀಪು ರಂಜಿಪ ರೇಖೆಯೆಂದೆಂಬ ಮಂಜುಳ ಮಾದ ಷಡಂಗದೊಳಾ ಹಯ ರಂಜನೆವಡೆದುದು (ಶ್ರೀಪಾಲ. ೪-೧೧).
[ ? ]

**ಝುಳಂಪಿಸು, ಜಳಪಿಸು, ಜಳಿಪಿಸು, ಜಳುಂಪಿಸು, ಝುಡಪಿಸು, ಝುಳಪಿಸು, ಝುಳುಂಪಿಸು, ಝುಳುಂಪಿಸು**(ಕ್ರಿ). ೧.ನಡುಗಿಸು; ಅಲ್ಲಾಡಿಸು; ಬೀಸು : ಝೋಂಪಿಸಿ ಮುಂಬರಿದಾರ್ದು ಝುಳಂಪಿಸಿದೊಳ್ವಾಳ್ಗಳೊಡನೆ ಕಂಪಿಸೆಯೆರ್ದೆಯುಂ (ಚಿಕವಿ. ೨-೯೯). ೨. ಹೆದರಿಸು ; ಭಯಪಡಿಸು : ಜಸಮೆಳೆಯೆಲ್ಲಮುಂ ಬಳಸೆ ಬಲ್ಬು ನೆಗಟ್ತಿಯ ಬೀರರುಂ ಝುಳಂಪಿಸೆ (ಕಬ್ಬಿಗಕಾ. ೪೭). **ಜಳಪಿಸು :** ೧. ಕೆಯ್ಯ ಖಡ್ಗವ ಜಳಪಿಸಿ ದೈತ್ಯ ನುಡಿದ ಕಠೋರವಾಕ್ಯಗಳ (ಮೋಹತ. ೧೨-೦೦) ; ಬೆತ್ತವನ್ನು ಜಳಪಿಸುತ್ತಾ ಕೇಳಿದ (ಕೊತಕಾ. ೨೮). **ಜಳಿಪಿಸು :** ೧. ಹಿರಿಯುಬ್ಬಣವ ಜಳಿಪಿಸಿ ವಿನಾಸೆಯ ಮೇಲೆ ಬೆರಳಿಡುತ (ಕಂನವಿ. ೦೩-೩೮). **ಜಳುಂಪಿಸು :** ೧. ಬೇಡಿದೊಡೆ ಬೀಳುವುದು ದಾಯವು ನಾಡೆ ಜಳುಂಪಿಸೆ ಹೊಳೆವ ದಾಳದ ರೂಢಿಗಚ್ಚರಿಯಾಗೆ (ನಳಚ. ೯-೪೪). **ಝುಡಪಿಸು :** ೧. ಖಡುಗ ಬರಲು ಕೈಕೊಂಡು ಝುಡಪಿಸಿ ನೋಡಿ ಪೊಡೆದನಾ ಶಂಭುಕನಡಗಿರ್ದ ಬಿದಿರ ಪಿಂಡಿಲನು (ಅಂಜಚ. ೦೩-೩೩). **ಝುಳಪಿಸು :** ೧. ಆಯುಧವ ಹಿಡಿದೊಜೆಯ ನುಗಿದನಡಾಯುಧವ ಝುಳಪಿಸುತ (ಕುವ್ಯಾಶ. ೦೭-೨): ಕರವಾಳ ರೋಷಾವೇಶನಿಳಿದನು ಸಿಂಹವಿಷ್ಟರವ ಬಾಳ ಝುಳಪಿಸಿ ಕೆಂಪೊಗುವ ಕಣ್ಣಾಲಿಗಳಲಿ (ತೊರರಾ. ೩-೩-೯). **ಝುಳುಂಪಿಸು:** ೧. ಜಡಿದಸಿಯುಂ ಝುಳುಂಪಿಸಿ ಕರಾಗ್ರದೊಳೆತ್ತಿ ಕಡಂಗಿ ಸಾರ್ದು (ರಾಜಶೇ. ೩-೦೨೩). **ಝುಳುಂಪಿಸು :** ೧. ಕೈದುಗಳ ಝುಳುಂಪಿಸಿ ವಾಹನಂಗಳನೇರಿ ನಡೆತರಲೂ (ದೇವೀಮ. ೩-೩೨) . ೩. ಥಳಥಳಗುಂಟ್ಟು ; ಮಿರುಗು : ಆ ಸುವರ್ಣದ ಮಧ್ಯದಿಂದ ವಜ್ರ ಮುಂತಾದ ರತ್ನಗಳು ಝುಳುಂಪಿಸುತ್ತಿದ್ದವು (ಕಪಾಕುಂ. ೪೯). [ ಝುಳಂಪು$_0$ (<ಝುಳಪು) + – ಇಸು$_3$ ]

**ಝುಳಂಬ** 'ಜಳಂಬ' ನೋ.

**ಝುಳಂಬಾಯುತ** 'ಜಳಂಬಾಯ್ತು' ನೋ.

**ಝುಳಂಬಾಯ್ತು** 'ಜಳಂಬಾಯ್ತು' ನೋ.

**ಝುಳಕ$_1$** 'ಜಳಕ' ನೋ.

**ಝುಳಕ$_2$, ಝುಲಕು, ಝುಳಿಕು, ಝುಳುಕು** (ನಾ). ಹೊಳಪು; ಪ್ರಕಾಶ; ಕಾಂತಿ : ಉಳಿಯ ಮಿಂಚಿನ ಮುಂದೆ ಸುಗತಿಯ ಝುಳಕದನಿಲನ ಥಟ್ಟು . . . ಬಳಸಿದೆ (ಕುವ್ಯಾಭೀ. ೩-೦೭). **ಝುಲಕು :** ತಾಯಿತನದ ಹೊಸ ಝುಲಕು ಅವಳ ಮೊಗದಲ್ಲಿ ಕೂಡಿಕೊಂಡಿತ್ತು (ಸಿವಭಾ. ೧೦೯). **ಝುಳಿಕು :** ಪಳುಕಿನೋಲ್ ಬಳುಕಿನೋಲ್ ನಳುಕಿನೋಲ್ ಝುಳಿಕಿನೋಲ್ ಶೋಭಿಸುವಳಾ ಸೌಂದರಿ (ಜನಮು. ೪೨-೪೨). **ಝುಳುಕು :** ಇಂತಹದಕ್ಕೆ ಮರ್ಯಾದೆ ಅಥವಾ ಸುಧಾರಣೆಯ ಝುಳುಕು ತಾಗಬೇಡವೆ ? (ಗೋಯಾತ್ರ. ೩೨). [ ←ಮರಾ. ಝುಳಕ್; ಹಿಂ. ಝಲಕ್ ]

**ಝುಳಕಂಬೊಗು** 'ಜಳಕಂಬೊಗು' ನೋ.

**ಝುಳಕು** (ಕ್ರಿ). ೧. ಆತುರಪಡು ; ದಂಡುಕು. ೨. ತಳಮಳಗೊಳ್ಳು ; ಆವೇಗಗೊಳ್ಳು : ಝುಳಕದಿರು ಜಾಣೆ ಸುಭದ್ರೆಯನು ಕೊಡಿಸುವೆ (ಕನಾಕ. ೩೦೫). [ ←ಮರಾ. ಝುಳಕಣೇ ]

**ಝುಳಪ** (ನಾ). ಹೊಳಪು ; ಕಾಂತಿ : ಮಿಗೆ ನೋಯಿಪಾಸೆಯೆಂಬಲಗಿನ ಝುಳಪದಿಂ ಮೆಟ್ಟಿವ ಮನಮೆಂದೆಂಬ ಮಾಸಾಳ (ಮೊನೆರ. ೧೪೦-೦೯) ; ಝುಳಪದಲಿ ಬೊಬ್ಬಿಡುವಡಾಯುಧ ಹೊಳಪುಗಳ (ಕುವ್ಯಾಭೀ. ೨-೭).
[ <ಝುಳಪು ]

**ಝುಳಪಿಸು** 'ಝುಳಂಪಿಸು' ನೋ.

**ಝುಳಪು, ಝುಡಪು** (ನಾ). ಕಾಂತಿ ; ಪ್ರಕಾಶ. 'ಝುಳಪುಗೊಳ್ಳು' ಪರಾ. **ಝುಡಪು :** ಝುಡಪುಗಳ ಗಿರಿಶಿರದ ನೆಗಹಿನ ಕಿಡಿಯುಲಂಬರ ತುಂಬಿದುದು ಬೇರುಡಿಯ ಮರದಾಗುಗಳಲುದಿಸಿದ ಧೂತ ಧೂಮ ಶಿಖಿ (ತೊರರಾ. ೪-೭-೧೦).

**ಝುಂಝುಡಪು** (ದ್ವಿರುಕ್ತಿ) : ಗದಬದರೆನ್ನುತ ರಥ ಝುಂಝುಡಪುಗಳ್ ಪೂದುತಿರುವ ಶಂಖ ತಮ್ಮಟೆ ಭೇರಿಗಳ್ (ಬಾಹಾಕ. ೦೯).
[ ಝುಳ (<ಜಲ$_1$) + – ಪು$_2$ ]

**ಝುಳಪುಗೊಳ್ಳು** (ಕ್ರಿ). ಹೊಳೆ ; ಪ್ರಕಾಶಿಸು : ಬಳ್ಳಿ ಮಿಂಚಿನಂತೆ ಝುಳಪುಗೊಂಡು (ವಿಗದ. ೪೭-೧).
[ ಝುಳಪು + ಕೊಳ್ಳು (<ಕೊಳ್$_1$) ]

**ಝುಳಪ್ಪ, ಜಳಪ್ಪ** (ನಾ). ೧. ಮೇಲೆರಗಿ ಹೊಡೆಯುವವನು ; ಶೂರ . ೨. ಹೆದರಿಸುವವನು ; ಸೋಲಿಸುವವನು ; ಒಂದು ಬಿರುದು . 'ರಾಯಝುಳಪ್ಪ' ಪರಾ. **ಜಳಪ್ಪ :** 'ರಾಯಜಳಪ್ಪ' ಪರಾ.
[ <ಪ್ರಾ. ಝುಡಪ್ಪ ]

**ಝುಳವಟಿಗೆ** 'ಜಳವಟ್ಟಿಗೆ' ನೋ.

**ಝುಳವಟ್ಟಿಗೆ** 'ಜಳವಟ್ಟಿಗೆ' ನೋ.

**ಝುಳವೂಡು** (ಕ್ರಿ). ಕಾಂತಿಯನ್ನು ಹೊಂದು : ಬಾಡಿದವು ತಾವರೆಗಳುಜೆ ಝುಳವೂಡಿದವು ನೈದಿಲುಗಳು . . . ಸಾಂದ್ರಚಂದ್ರಿಕೆಯಲಿ (ಕುವ್ಯಾಭೀ. ೦೭-೦೪). [ ಝುಳ (<ಜಲ$_1$) +ಊಡು ]

**ಝುಳಿಕು** 'ಝುಳಕ$_2$' ನೋ.

**ಝುಳಿಸು** (ಕ್ರಿ). ಹೊಳೆ; ಪ್ರಕಾಶಿಸು : ತಗ್ಗಿನಲ್ಲಿ ನೀರು ಧುಮುಕಿ ತರಂಗವು ಒಡೆದುಹೋದ ಕಡೆಯಲ್ಲಿ ಝುಲತ್ಕಾರವಾಗಿ ಝುಳಿಸುವುದು (ದೇವೀಚ. ೭೬). [ ಝುಳ (<ಜಲ$_1$) + – ಇಸು$_3$ ]

**ಝುಳುಂಪಿಸು** 'ಝುಳಂಪಿಸು' ನೋ.

**ಝುಳುಂಬಕ** (ನಾ). ಕುಚ್ಚು ; ಗೊಂಚಲು : ಪುನ್ನಾಗದ ಸೂಸಕಂಗಳೊಳಂ ನಾಗದ ಝುಳುಂಬಕಂಗಳೊಳಂ . . . ಕಾಮದೇವನನತಿಪ್ರೀತಿಯಿಂ ದರ್ಚಿಸಿ (ಕಾದಂಬ. ೭೮೩). [ ?. /ಮರಾ. ಝುಳ್ಗುಂಬುಕಾ ]

**ಝುಳುಕು** 'ಝುಳಕ$_2$' ನೋ.

**ಝುಳುಪಿಸು** 'ಝುಳಂಪಿಸು' ನೋ.

**ಝುಳ್ಳಿಸು** 'ಜಳ್ಳಿಸು' ನೋ.

**ಝುಟಿಸು** (ಕ್ರಿ). (?) : ವರ್ಗ ಚತುರ್ಥಾಕ್ಷರಂಗಳ್ಗೆ . . . ಝುಟಿಸಿತು, ಝುಟಾಳಿಸಿತು (ಶಮದ. ೧೫ ಪ್ರಯೋ). [ ? ]

**ಝಾಂಕೃತ** (ನಾ). ೧. ಝಣ ಝಣ ಎಂದು ದನಿಗೆಯ್ಯುವ ಕಾಲಿಗೆ ಹಾಕಿಕೊಳ್ಳುವ ಆಭರಣ ; ಕಾಲುಂಗುರ ಅಥವಾ ಕಾಲ್ಗಡಗ: ೨. = ಝುಂಝು " ಝಾಂ[ಪಾಠಾಂ. ಝಂ,ಯೊಂ]ಕೃತಂ ವಾತನೊಳು" (ಮುಂಗರಾ. ೨೭-೬). 'ಝುಂಕೃತ' ಪರಾ. [ ಸಂ. ]

**ಝಾಂಗಟೆ** 'ಜೇಗಂಟೆ' ನೋ.

**ಝಾಂಡ, ಜಂಡೆ$_1$, ಜಾಂಡೆ, ಜಾಂಡೇಯು, ಝುಂಡಾ, ಝಾಂಡಾ**(ನಾ). ೧. ಬಾವುಟ ; ಧ್ವಜ. ೨. (ಆಲಂ) ತಂಗುವಿಕೆ ; ಮೊಕ್ಕಾಂ : ನಾರಾಯಣನ ಝಾಂಡ ಈವತ್ತು ಕೋಡೀಬಾಗದಲ್ಲೇ ಎಂದು ತೋರುತ್ತದೆ (ಮೂರುದಾ. ೩೦೪) ; ಎಲ್ಲಾ ಕಡೆಯೂ ಮಕ್ಕಳ ಝಾಂಡ (ಸುಪಸಂ. ೪೮). **ಜಂಡೆ$_1$:** (ಅ). **ಜಾಂಡೆ:** ೧.ಅಂಬಾರ ತಾಗುವಂದದಲಿ ಡೊಂಬನಾಟದ ಗಳೆಯಂತೆ ಜಾಂಡೆಗಳಲ್ಲಿ ರಂಬಾಣದೋರಿ ಮೆರೆದರು (ಸೌಂದಕಾ. ೩-೨೯) : ಕೋಟೆ ಮೇಲೆ ಇಂಗ್ರೇಜ ಬಹಾದ್ದರರ ಜಾಂಡೆ ಹಾಕಿಸಿಕೊಳ್ಳುತ್ತೇನೆ (ರಾಜೇಂದ್ರ. ೨೯). **ಜಾಂಡೇಯು :** ೧. ಮೆಟ್ಟಿದಿರಲ್ಕಿಂತುಮಾ ಗುರುವರಂ

. . . ಜಾಂಡೇಯವಮಂ ನಿಲಿಸಿದಂ ವೈಭವವಿಂದೆಂಬ ತೆರದಿ (ಮಹಾವಿ. ೨೯-೧೧). **ಝಂಡಾ:** 'ಝೆಂಡಾಊರು' ಪರಾ. **ಝಾಂಡಾ: ೨.** ಮೂರು ಮಂದಿ ಪಾದುಷಹರು ತಮ್ಮ ತಮ್ಮ ಪೇಷಖಾನೆ ಸಂಗಡ ರಝಾಂಡಾವನ್ನು ಹೊರಗೆಹಾಕಿಸಿದರು (ಬಖ್ಯರು. ೬).

[ ←ಹಿಂ. ರಝಂಡಾ, ಝೆಂಡಾ ; ಮರಾ. ಝೆಂಡಾ ]

**ಝಾಂಡಹೂಡು,** (ಕ್ರಿ). ೧. ಬಾವುಟವನ್ನು ನೆಡಂ. ೨. (ಆಲಂ) ತಳ ವೂರು; ನೆಲಸಂ; ವಾಸಿಸು: ಯಾವುದೋ ಬೂಷ್ಟು ಒಂದು ತಟ್ಟೆಯಲ್ಲಿ ರಝಾಂಡಹೂಡಿತು (ಮನೋನಂ. ೨೬೧).

[ ರಝಾಂಡ + ಹೂಡು (<ಪೂಡು) ]

**ಝಾಂಡಾ** 'ಝಾಂಡ' ನೋ.

**ಝಾಂಡಾಊರು,** ರಝಂಡಾಊರು (ಕ್ರಿ). = ಝಾಂಡಹೂಡು ೨: ಎಲ್ಲರೂ ಎಲ್ಲಿ ಬಂದು ಝಾಂಡಾ ಊರಿಬಿಡುವರೋ ಎಂಬ ದಿಗಿಲು (ನಾಡಿಗೇ. ೧೬೬). **ಝಂಡಾಊರು:** ಹಳ್ಳಿಗಾಡುಗಳಿಗೆ ಸರ್ಕೀಟಿಗೆ ಬಂದುಬಿಟ್ಟರೆ ಅಧೀಸರರು ಝಂಡಾಊರುವುದು ಇಲ್ಲೇನೆ (ರೂಪಸಂ. ೬೦).

[ ರಝಾಂಡಾ (<ರಝಾಂಡ) + ಊರು$_1$ (<ಊಱು$_1$) ]

**ಝಾಂಡಾಹಾಕು** (ಕ್ರಿ). = ಝಾಂಡಹೂಡು ೨: ಮಾವನಮನೆಯಲ್ಲಿ ಹೋಗಿ ರಝಾಂಡಾ ಹಾಕಿದ್ದಾನೆ (ರೂಢಿ).

[ ರಝಾಂಡಾ (<ರಝಾಂಡ) + ಹಾಕು (<ಪಾಯ್ಕು$_1$) ]

**ಝಾಕಣೆ,ಜಾಕಣೆ**(ನಾ).(ಉಕ)ಪಾತ್ರೆಗಳ ಮೇಲೆ ಮುಚ್ಚುವ ಮುಚ್ಚಳ: ಅನ್ನದ ತಪ್ಪೇಲಿ ವ್ಯಾಲಿನ ಝಾಕಣಿ ಸುದ್ಧಾ ತಗದಿಲ್ಲಾ (ವ್ಯನಿ. ೨೨೧). **ಜಾಕಣೆ:** ಹಿಂದೂಸ್ಥಾನೀ ದಾಸಿ ಜಾಕಣಿಯಲ್ಲಿ ಕೆಂಡ ತೆಗೆದುಕೊಂಡು ಬಂದಳು (ಅರಗಿ. ೨೨೩). [ ←ಮರಾ. ಝಾಕಣೇ ]

**ಝಾಗಟೆ** 'ಜೇಗಂಟೆ' ನೋ.

**ಝಾಟ** (ನಾ). ೧. ಪೊದರಂ ; ಹೊದೆ. ೨. ಲತಾಗೃಹ ; ನಿಕುಂಜ.

[ ಸಂ. ]

**ಝಾಟಣೆ** 'ಝಾಡಣೆ' ನೋ.

**ಝಾಟಲ** (ನಾ). ಮೊಕ್ಕೆಮರ : "ಗೋಲೀಢಃ, ಗೋಲೀಹಃ, ಝಾಟಲಃ . . . ಮೊಕ್ಕೆಮರದ ಪೆಸರು" (ಸಿದ್ಧಾಂತಿ. ೦೦೬). [ ಸಂ. ]

**ಝಾಡಣೆ,** ಜಾಡಣೆ, ಜಾಡಣೆ, ಝಾಟಣೆ (ನಾ). ೧. ಅಳ್ಳಾಡಿಸು ವುದು ; ಕೊಡಹಂವುದಂ ; ಜಳಪಿಸಂವುದಂ : ಕೊನರ್ವ ಕೋಪದ ಖಂಡೆಯದ ರಝಡವುಗಳ ಝಾಡಣೆಯ (ತೊರರಾ. ೬-೯-೩). **ಜಾಡಣೆ:** ೧. 'ಜಾಡಣೆ ಹೊಡೆ' ಪರಾ. **ಜಾಡಣೆ:** ೧. ರಝಡವುಗಳ ಜಾ[ಪಾಠಾಂ. ಝಾ]ಡಣೆಯ ಮಿಂಚಿನ ಖಡುಗಗಳ (ತೊರರಾ. ೯-೬-೪). ೨. ಎಸೆಯಂವುದಂ ; ತೆಗೆದಂ ಹಾಕುವುದಂ. ೩. ಭೇದಿಯಾಗುವುದಂ ; ಅತಿಸಾರ : ನಿನ್ನೆ ದಿನವೆಲ್ಲಾ ಜಾಡಣೆ, ಈಗ ಬಹಳ ಸುಸ್ತು (ರೂಢಿ). **ಝಾಟಣೆ:** ೧. ಒಂದು ಝಾಟಣೆಯಿಂದ ಕಾಲ ಆಧಾರವನ್ನು ಪಡೆಯ ಲೆತ್ನಿಸಿದಳು (ರಕ್ತಧ್ವ. ೩೧೩). [←ಮರಾ. ಝಾಡಣೇ; ಹಿಂ. ಝಾಡನಾ]

**ಝಾಡಮಾಲಿ,** ಜಾಡಮಾಲಿ, ಝಾಡಂಮಾಲಿ (ನಾ). ಕಸಗುಡಿಸುವ ಕೆಲಸವಮಾಡಿ ಜೀವಿಸಂವವನಂ; ಬೀದಿಗುಡಿಸುವವನು ; ಜಲಗಾರ : ಊರಿನ ಝಾಡಮಾಲಿಗಳ ಮಧ್ಯೆ . . . ವಾಸ (ದಿಲ್ಲಿಪ. ೨೩) ; ನಂಜುಂಡ ಝಾಡಮಾಲಿಯಾದ ನಂತರ (ಬಿಸ್ತಕ. ೦೩೦) ; ಝಾಡಮಾಲಿಗಳ ಗುಡಿಸಲುಗಳ ಮುಂದೆ ಹುಡುಗ ಹುಡುಗಿಯರು ಆಟವಾಡುತ್ತಿದ್ದಾರೆ (ಸಾಹೇಬ್. ೬೩). **ಜಾಡಮಾಲಿ:** ಜಾಡಮಾಲಿಗಳ ಕೆಲಸದಲ್ಲಿ ತೊಡಗಿದ್ದ ವೈದಿಗಳು (ಪುನರು. ೨೦೭). **ಝಾಡುಮಾಲಿ:** ಸಾಹೇಬರ ಝಾಡು ಮಾಲಿಯು ಕೂಡ ಧರಿಸದಂಥ ಹೊಲಸು ಬಟ್ಟೆಗಳು ಅವರ ಮೈಮೇಲಿದ್ದವು (ನಾಕಥ. ೩೨). [ ?./ಹಿಂ. ಮರಾ. ಝಾಡೂ = ಕಸಪರಕೆ ]

**ಝಾಡಿ$_1$,** ಜಾಡಿ$_1$ (ನಾ). ೧. ಸಂದಣೆ ; ದಟ್ಟಣೆ ; ಸಮೂಹ : ಪಲ್ಲವ ಸತ್ತಿಯ ಝಾಡಿಗಳೊಳಗೆ ಕೈಗಾಯ್ದು ನಿಂದನು ಕರ್ಣ (ಕುಮ್ಯಾ.ದ್ರೋ. ೭೦೩. ೩೦. ೨೬೩). ೨. ಹೆಚ್ಚಳ ; ಆಧಿಕ್ಯ : ಝಳದ ಝಾಡಿಗೆ ಬೆವರಿ ವಸನಾಂ ಚಲದ ಗಾಳಿಗೆ ಮೊಗವನೆತ್ತಿದರು (ಕುಮ್ಯಾ.ದ್ರೋ. ೧೯-೧೮) ; ಅಕ್ಷಿಗಳಲು ಬ್ಬುವ ತೋರಗಿಡಿಗಳ ದಾಡೆಗಳ ವಿಷದುರಿಯ ಝಾಡಿಗಳ (ತೊರರಾ. ೬-೧೩-೩೩). **ಜಾಡಿ$_1$:** ೧. ಹೂಡಿದಂಬಿನ ಹೊದೆಯ ಬಂಡಿಯ ತೋಹ ಕಡಿದನು ಛತ್ರಚಮರದ ಜಾ[ಪಾಠಾಂ. ಝಾ]ಡಿಗಳ ಶಱೊಟ್ಟಿದನು ಕಲಿಪಾರ್ಥ (ಕುಮ್ಯಾಕ. ೨೬-೯). ೨. ಪವನತನಯನ ಖತಿಯ ಜಾ[ಪಾಠಾಂ. ಝಾ]ಡಿಯ ಹವಣ ಕಂಡರು (ಕುಮ್ಯಾಸ. ೦೦-೨೩); ಕಣ್ಣಳ ಕಿಡಿಯ ಝಳದ ಜಾಡಿಯ ಭೀಷಣಧ್ವನಿಗಳ ಘೋರ ರಾಕ್ಷಸರು (ಹಬಪು. ೯೨-೯೩) ; ಜಳದ ಜಾಡಿಯ ಬಿಂಕದಿಂದೆ ಸಲೆ ಗಮನಿಸುತಂತಾ ಬಾಣವೂ (ಘೋರಾಕು. ೯೨).

[ ←ಹಿಂ. ಮರಾ. ಝಾಡೀ = ಪೊದೆ, ಪೊದರು ]

**ಝಾಡಿ$_2$** 'ಜಾಡಿ$_2$' ನೋ.

**ಝಾಡಿ$_3$** 'ಝಡೆ' ನೋ.

**ಝಾಡಿ$_4$** 'ಜಾಡಿ$_4$' ನೋ.

**ಝಾಡಿ$_5$** (ನಾ). ಗದಾಯುದ್ಧದಲ್ಲಿ ಒಂದು ವರಸೆ : ಝಾಡಿ ಝಂಕಣೆ ರಝಡವು ಖಾಡಾಖಾಡಿ . . . ಘಲ್ಲಣೆಗಳಲಿ ಗದೆ ಕುಣಿದಾಡಿದವು (ತೊರರಾ. ೬-೦೯-೦೬). [ ? ]

**ಝಾಡಿಕೆ** (ನಾ). = ಝಾಡಿ$_1$ ೨ : ವಿಲಯಾಗ್ನಿ ಜಿಹ್ವೆಯ ಝಾಡಿಕೆಯ ಕುಡಿ ಯಂತೆ ಕಿಡಿಗೆದಱಿದವು ಕೈದುಗಳು (ತೊರರಾ. ೬-೨೦-೨೪).

[ ಝಾಡಿ$_1$ + -ಇಕೆ ]

**ಝಾಡಿಗಿಡಿ** (ನಾ). ಗುಂಪುಗೊಂಡ ಕಿಡಿ : ವೈಷ್ಣವ ಬಾಣವನು ಬೆಸಸೆ ಝಾಡಿಗಿಡಿಗಳ ಝಳದ ದಳ್ಳುರಿ . . . ಅಡಗಿಸಿತಾ ಶಿರತ್ರಯವ (ತೊರರಾ. ೩-೬-೨೩). [ ಝಾಡಿ$_1$ + ಕಿಡಿ$_1$ ]

**ಝಾಡಿಗೆದಱು$_1$,** ಜಾಡಿಗೆದಱು (ಕ್ರಿ). ೧. ಅಧಿಕವಾಗಿ ಹರಡು,-ವಿಸ್ತಾರ ಗೊಳ್ಳು : ಝಾಡಿಗೆದಱುವ ಗೌರುಗಹಳೆಗಳ ತೂಳುವಱೆಗಳ . . . ಘೋಷವವನಿಯ ಸೀಳೆ (ಕುಮ್ಯಾಕ. ೨-೨). **ಜಾಡಿಗೆದಱು: ೨.** ದಟ್ಟವಾಗಿ ನಿಮಿರು ; ಗುಂಪುಗುಂಪಾಗಿ ಕೆದರು : ಮೈಯಲಿ ಜಾ[ಪಾಠಾಂ. ಝಾ] ಡಿಗೆದಱಿತು ರೋಮ ಝಳಪಿಸಿತರುಣಮಯ ನಯನ (ಕುಮ್ಯಾಸ. ೦೩-೦೩).

[ ಝಾಡಿ$_1$ + ಕೆದಱು$_1$ (<ಕೆದಱ್$_1$) ]

**ಝಾಡಿಗೆದಱು$_2$** (ನಾ). ಅಧಿಕವಾಗಿ ಹರಡುವಿಕೆ; ವಿಸ್ತಾರಗೊಳ್ಳುವಿಕೆ: ತುಡುಕು ಚಮರಿಯ ಝಾಡಿಗೆದಱಿನ ಗಡಣಿಸುವ ಝಲ್ಲರಿಯ ದಳ ಬಱಸಿಡಿಲ ಮೇಳವದಂತೆ ನೆರೆದುದು (ಕುಮ್ಯಾಕ. ೦೮-೦೦).

[ ಝಾಡಿ$_1$ + ಕೆದಱು$_2$ (<ಕೆದಱ್$_2$) ]

**ಝಾಡಿಮಸಗು** (ಕ್ರಿ). ಅಧಿಕವಾಗಿ ಹರಡಂ; ಅತಿಶಯಂವಾಗು: ಆಹವದ ಖಯಖೋಡಿಯಿಲ್ಲದೆ ಸುಭಟರಬ್ಬರ ಝಾಡಿಮಸಗಿತು ಕದನದಲಿ (ಕುಮ್ಯಾಕ. ೮-೦೩). [ ಝಾಡಿ$_1$ + ಮಸಗು$_1$ ]

**ಝಾಡಿಯೆಸುಗೆ** (ನಾ). ವೇಗದಿಂದ ಬಿಡುವುದು; ರಭಸದಿಂದ ಪ್ರಯೋ ಗಿಸುವುದಂ : ಶರಜಾಳ ಕವಿದುದು ಗಜದ ಜೋಧರ ಝಾಡಿಯೆಸುಗೆಯಲಿ (ಕುಮ್ಯಾಕ. ೦೦-೦೬). [ ಝಾಡಿ$_1$ + ಎಸುಗೆ ]

**ಝಾಡಿವೆಳಗು** (ನಾ). ಅಧಿಕವಾದ ಬೆಳಕಂ ; ಪ್ರಸರಿಸುವ ಕಾಂತಿ : ಈಡಿಱಿದ ಮಣಿಮಯದ ಕಳಶದ ಝಾಡಿವೆಳಗಿನ ಹೇಮರಸದಲಿ . . . ನಿಕೇತನವೆಸೆದವಲ್ಲಲ್ಲಿ (ತೊರರಾ. ೩-೨-೨೩) ; ಮಣಿಗಣದ ಜೋಡಿನ ಝಾಡಿವೆಳಗಿನಲಿ ಥಾಳಿಸಿತು ಥಳಥಳನೆ (ತೊರರಾ. ೬-೦೮-೬).

[ ಝಾಡಿ$_1$ + ಬೆಳಗು$_2$ ]

**ಝಾಡಿಸು** 'ಜಾಡಿಸಂ' ನೋ.

**ಝಾಡು** (ನಾ). ಪೊದರಂ; ಪೊದೆ; ಪೆಳೆಗಳ ಗುಂಪು : ಅದರ ಸುತ್ತ ಗಿಡದ ಝಾಡಿದೆ (ಕನಕ. ೩೦); ಎದುರಿಗಿರುವ ಝಾಡಿನಲ್ಲಿ ಒಂದು ಭಯಂಕರವಾದ ಹುಲಿಯು ಮಲಗಿ ನಿದ್ದೆಮಾಡುತ್ತಿರುವದು (ಶೀರಕ. ೦೦).
[ ← ಹಿಂ. ಮರಾ. ಝಾಡ್./ಸಂ. ಝಾಟ ]

**ಝಾಡುಮಾಲಿ** 'ಝಾಡವಮಾಲಿ' ನೋ.

**ಝಾಡೆ, ಜಾಡ$_3$, ಜಾಡಿ$_3$, ಜಾಡೆ$_4$, ಝಾಡಿ$_3$** (ನಾ). ೧. ಲೆಕ್ಕಾಚಾರವನ್ನು ತೀರಿಸುವುದು; ಫೈಸಲ್ ಮಾಡುವುದು : ಝಾಡೆಯಾಗಿ ವಸೂಲು ಮಾಡಬೇಕು (ಮಹಾಪಂ. II, ೬೫). **ಜಾಡ$_3$:** ೧. ಆವನು ತನಗೆ ಮೊದಲು ದೊರೆತ ಹಣವನ್ನು ಸಾಲವನ್ನು ಜಾಡಮಾಡುವುದಕ್ಕೆ . . . ವಚನ ಕೊಟ್ಟು (ಪೆಂಜನ್. ೫೬). **ಜಾಡಿ$_3$:** ೨. ಪಂಗಿದು ಹೋಗುವಿಕೆ; ನಿಶ್ಶೇಷವಾಗುವುದು: ಕಾಳುಕಡಿ, ತುಪ್ಪ, ಎಣ್ಣೆ ಎಲ್ಲಾ ಜಾಡಿ; ಏನೇನೂ ಉಳಿಯಲಿಲ್ಲ(ಕೂಡಿ). **ಜಾಡೆ$_4$:** ೩. ಒಂದು ಗ್ರಾಮದಲ್ಲಿರುವ ಮನೆಗಳ, ದನಕರಂಗಳ ಅಂಗಡಿ ಮುಂಗಟ್ಟುಗಳ ಹಾಗೂ ರಾಟೆ, ನೇಗಿಲು ಮೊದಲಾದುವುಗಳ ಸಂಖ್ಯೆಯನ್ನೂ ಜನಸಂಖ್ಯೆಯನ್ನೂ ಬರೆದಿಡುವ ದಾಖಲೆ ಪುಸ್ತಕ : (ಮೈಗೆಜ. IV, ೭೭೩). **ಝಾಡಿ$_3$ :** ೨. ಬಿಸ್ಕಿಟಿನ ಪೊಟ್ಟಣ . . . ಎಲ್ಲರಿಗೂ ಕೊಡಬೇಕು. ಒಂದು ದಿವಸದಾಗ ಎಲ್ಲ ಝಾಡಿ (ಕೈಲಾಜಿ. ೨೫).

**ಜಾಡಾ ರಶೀದಿ** = ಲೆಕ್ಕಾಚಾರವು ಫೈಸಲಾಯಿತೆಂದು ಬರೆದು ಕೊಡುವ ರಶೀದಿ,–ದಾಖಲೆಪತ್ರ: ಹಿರಣ್ಯನ ಹೆಸರಿನಲ್ಲಿ ಒಂದು ಜಾಡಾ ರಶೀದಿ ಮಾಡು (ಕರುಕ. ೯೫). [ ←ಮರಾ. ಝಾಡಾ ]

**ಝಾಣಾಸು** (ಕ್ರಿ). ಖಚಿತವಾಗಿ ಹೇಳು; ಖಡಾಖಡಿಯಾಗಿ ತಿಳಿಸು : "ನಾಳೆ ನಾ ಕಾವಲಕ್ಕ ಇದ್ರ ಒಂದ ಕಾಯಿ ಬಿಡಾಕಿಲ್ಲಾ ಹೊರಗ!" ಯಾಯಾ ಝಾಣಾಸಿ ಹೇಳಿದಳು (ಬಾಬಲಿ. ೨೬). [ಝಾಣ$_0$ + – ಇಸು$_3$]

**ಝಾಪು** 'ಚಾಪು$_1$' ನೋ.

**ಝಾಪುಗಾಲು** 'ಚಾಪುಗಾಲು' ನೋ.

**ಝಾಬುಕ** (ನಾ). ಒಂದು ಬಗೆಯ ಮರ; ದೂದೀಮರ; "ಕಕ್ಕೆಗಿಡ" : (ಅಮರ. ಟೀಕ) [ ಸಂ. ]

**ಝಾಮು** 'ಜಾಮ$_1$' ನೋ.

**ಝಾಯಿ** 'ಜಾಯಿ$_2$' ನೋ.

**ಝಾರಿ, ಜಾರೆ$_4$, ಝಾರೆ** (ನಾ). ತೂತುಗಳುಳ್ಳ ಸೌಟು; ಜಾಲರಿ : ಚಂದ್ರವ್ವ ಕಾಳು ಕರಿಯುತ್ತಿದ್ದಳು. ಝಾರಿಯಿಂದ ತೆಗೆಯುತ್ತಿದ್ದಳು (ಅಶೋಕ. ೨೯). **ಜಾರೆ$_4$ :** ಕುದಿದ ಅರಿಷಿಣವನ್ನು . . . ಜಾರೆಯ ಸವುಟಿನಿಂದ ತೆಗೆಯಬೇಕು (ಕೃಷಿಪ್ರ. ೦೮೯). **ಝಾರೆ :** ಮುಂಬಾಯಿ ಶಹರದಲ್ಲಿ ಆಗುವ ಜೀನಸಗಳ ವಿವರವು . . . ೩೭ ಝಾರೆಗಳು (ಝಾರಿಸವುಟು) (ಮುಂಬವ್ಯಾ. ೦೦೨). [ ←ಮರಾ. ಝಾರೀ, ಝಾರಾ ]

**ಝಾರೆ** 'ಝಾರಿ' ನೋ.

**ಝಾರೇ** (ಅ). ಒಂದು ಕೊಂಡಾಟದ ಮಾತು; ಹೊಗಳಿಕೆಯ ನುಡಿ : ಝಾರೇ ಜರಝಾರೇ . . . ಎಂಬುಲಿ ನೆಗೆವಿನೆಗಂ ಬಿಟ್ಟು ಮಾಜಾಂತ ಮೇಲಾಳ್ಗಳನಾಗಳ್ ತಳ್ತು ಪೊಯ್ದು (ಕಬ್ಬಿಗಾ. ೨೭೯).

**ಝಾಲರ** 'ಝಾಲರಿ' ನೋ.

**ಝಾಲರಿ, ಜಲರಿ, ಜಾಲರಿ, ಜಾಳರ, ಝಾಲರ** (ನಾ). ೧. ಮೇಲ್ಕಟ್ಟು; ತೂಗಾಡುವ, ಬಲೆಯಂತಹ ಸಿಂಗಾರ ವಸ್ತ್ರ : ಬಳಸಿ ಕಟ್ಟುತ ಸುತ್ತ ಪವಳ ಝಾಲರಿಯಾ ಥಳಕುಗೊಡುತಿಹ ಕನಕಕಲಶಗಳನಿಟ್ಟು (ಯಕೋರ. ೯೮); ಸುತ್ತಲೂ ಮುತ್ತಿನ ಝಾಲರಿಗಳು ಕಂಗೊಳಿಸುತ್ತಿದ್ದುವು (ಶ್ರೀರಾಯ. ೦೨೮). **ಜಲರಿ :** ೨. ತಂತಿಯ ಬಲೆ; ತೂತುಗಳಿರುವ ರಚನೆ : ಒಂದೇ ಸೆಳೆತದ ನೋಟದಲ್ಲಿ ತನ್ನ ಜಲರಿಯ ಬಲೆಯಲ್ಲಿ ಕೆಡವಿಕೊಂಡಳು (ಕಾವೇರಿ. ೬). **ಜಾಲರಿ :** ೩. ತೂತುಗಳಿರುವ ಸೌಟು. 'ಜಾಲರಿಸೌಟು' ಪರಾ. ೪. ಅಗಲವಾದ ಕಂಚಿನ ತಾಳ. 'ಜಾಲರಿತಾಳ' ಪರಾ. **ಜಾಳರ :** ೨. 'ಜಾಳರಂಬೋಗು' ಪರಾ. **ಝಾಲರ :** ೧. ಮುತ್ತು ರತ್ನಗಳ ಝಾಲರಗಳಿಂದ ಅದು ಅಲಂಕೃತ (ನಿಬಂಧ. I, ೨೩೭). 'ಜಲ್ಲರಿ$_1$' ಪರಾ. [ ←ಹಿಂ. ಮರಾ. ಝಾಲರ್ ]

**ಝಾವ** 'ಜಾವ$_1$' ನೋ.

**ಝಾವುಕ** (ನಾ). ಒಂದು ಬಗೆಯ ಮರ; ದೂದೀಮರ; ಬೂರುಗ; ಕಕ್ಕೆಗಿಡ. [ ಸಂ. ]

**ಝಾಳಿಸು** (ಕ್ರಿ). (?) : ವರ್ಗಚತುರ್ಥಾಕ್ಷರಂಗಳ್ಗೆ . . . ಝಟಿಸಿತು, ಝಾಳಿಸಿತು (ಶಮದ. ೧೫ ಪ್ರಯೋ). [ ? ]

**ಝಾಳಿಯ** (ನಾ). ೧. ಸ್ವೀಕಾರ; ತೆಗೆದುಕೊಳ್ಳುವುದು (?). ೨. ಅಪಹಾರ; ಕಿತ್ತುಕೊಳ್ಳುವುದು. 'ಝಾಳಿಯಂಗೊಳ್' ಪರಾ. [ ? ]

**ಝಾಳಿಯಂಗೊಳ್** (ಕ್ರಿ). ೧. ಸ್ವೀಕರಿಸು; ತೆಗೆದುಕೊಳ್ಳು (?) : ಪೆಱರ ಪಲವುಂ ಜೀವಧನಂಗಳನರಸರ ಕಾಪಿನ ಪೊಲನಂ ಪೊಕ್ಕುವೆಂದುಂಡಿಗೆ ಯೊತ್ತಿಕೊಳುತ್ತು ಪೂಟಿಗವಾದೆಡೆಗಳೊಳ್ ಝಾಳಿಯಂಗೊಳುತ್ತುಮನಿತ ಱಿಂ ತಣಿಯದೆ (ಸುಕುಮಾ. ೬–೩೫ ವ). ೨. ಅಪಹರಿಸು; ಕಿತ್ತು ಕೊಳ್ಳು (?) : ತಣಿಯದೆ ಮತ್ತಮಯತಿಕಾಂಕ್ಷೆಯಿಂ ಲೋಗರೊಡವೆಯಂ ಝಾಳಿಯಂಗೊಂಡು (ಸುಕುಮಾ. ೬–೩೭ ವ). [ ಝಾಳಿಯ + ಕೊಳ್$_1$ ]

**ಝಿಂಟಿ** (ನಾ). ಒಂದು ಬಗೆಯ ಗಿಡ; ಕರಿಯ ಗೋರಂಟಿ : "ನೀಲಿ, ಝಿಂಟೀ, ಬಾಣಃ–ಈ ೩ ಕರಿಯ ಗೋರಂಟಿ" (ಹಲಾಯು. ೩೪–೫೨).
[ ಸಂ. ಝಿಂಟೀ ]

**ಝಿರಿಝಿರಿ** (ನಾ). ಒಂದು ಅನುಕರಣ ಶಬ್ದ; ಮಳೆಯನ್ನು ಅನುಕರಿಸುವ ಶಬ್ದ.

**ಝಿರಿಝಿರಿ ಹತ್ತು** = ಒಂದೇ ಸಮನೆ ಸುರಿ; ಧಾರಾಕಾರವಾಗಿ ಸುರಿ : ಮಳೆ ಝಿರಿಝಿರಿ ಹತ್ತಿದರೆ . . . ಚೇಲ ಕಡಿಮೆ (ಮುಂಬವ್ಯಾ. ೨೭೬).

**ಝಿಲ್ಲಿ** (ನಾ). = ಝಿಲ್ಲಿಕೆ : ಸೀದು ಸೀಕರಿಹೋಗಿ ತಾರದೊಳಳುಪೊಲು ಕೂಗುತ್ತಲಿಹವು ಝಿಲ್ಲಿಗಳು (ಗಾಥಾಸ. ೫–೯೪); ಮರಗಳಲ್ಲಿ ಝಿಲ್ಲಿಗಳು ರೀ ರೀ ರೀ ಎಂದು ಕೂಗುತ್ತಿದ್ದುವು (ಈಶಕ. ೦೦೨). [ ಸಂ. ಝಿಲ್ಲೀ ]

**ಝಿಲ್ಲಿಕಾನಾದ** (ನಾ). ಜೀರುಂಡೆಹುಳುಗಳ ಶಬ್ದ,–ಧ್ವನಿ: ಝಿಲ್ಲಿಕಾನಾದ ಘರ್ಘರ ಘೋರಕರ್ಕಶಂ (ಶ್ರೀರಾಮಾ. ೦೮೦–೦೦೯).
[ ಸಂ. (ಝಿಲ್ಲಿಕಾ + ನಾದ) ]

**ಝಿಲ್ಲಿಕೆ** (ನಾ). ಜೀರುಂಡೆಹುಳು : "ಝಿಲ್ಲಿಕೆಯೆನಲ್ ಜಿಮ್ಮಂಡೆಗಕ್ಕು ನಾಮಂ" (ಮಂಗರಾ. ೫೨–೦೦); ಕಟುವಾದುದ್ಯ ಝಿಲ್ಲಿಕಾಕಂಠಕೃತಿ ಕರ್ಕಶಂ (ಶ್ರೀರಾಮಾ. ೨೭೩–೭). [ ಸಂ. ಝಿಲ್ಲಿಕಾ ]

**ಝಿಲ್ಲೀಕೆ** (ನಾ).=ಝಿಲ್ಲಿಕೆ. [ ಸಂ. ಝಿಲ್ಲೀಕ ]

**ಝೀರುಕೆ** (ನಾ).=ಝಿಲ್ಲಿಕೆ. [ ಸಂ. ಝೀರುಕಾ ]

**ಝುಡುಪು, ಜುಡುಪು, ಝುಡುಪು** (ನಾ). ೧. ಪೊದೆ; ಪೊದರು : ಎಲ್ಲಾದರೂ ಗಿಡದ ಝುಡುಪಿನಲ್ಲಿ ಅಡಗಿಕೊಂಡಿರಬಹುದು (ಶ್ರೀಕಾಂತ. ೬೩). **ಜುಡುಪು :** ೨. ಕುಚ್ಚು; ಗುಂಚ್ಛ : ಅವುಗಳಿಗೆ ಕಟ್ಟಿದ್ದ ಹಗ್ಗಗಳ ಜುಡುಪುಗಳೂ ಪಟಗಳೂ ವಿಚಿತ್ರವಾದ ಎಲೆಯ ಜಾಡಿನಂತೆ ಒಪ್ಪುತ್ತಿದ್ದವು (ಚೀನಬಾ. ೨೦೦). **ಝುಡುಪು :** ೧. ಸುತ್ತಲೂ ಗಿಡಗಳ ಝುಡುಪು, ಮನಸ್ಸಿನಲ್ಲಿ ಹಿಂಸ್ರಪಶುಗಳ ಭಯ(ಸ್ಮೃತಿಚಿ. ೪೦); ಪಕ್ಕದಲ್ಲಿಯೇ ಗಿಡಗಳ ಝುಡುಪಿನಲ್ಲಿ ಒಂಟಿಯಾಗಿ ನಡೆಯುತ್ತಿದ್ದ (ನೀರಸ. ೩೮).
[ ←ಮರಾ. ಝುಡಪ್, ಝುಡೂಪ್ ]

**ಝುಣಕ** 'ಜುಣಕ' ನೋ.

**ಝುಮಕಿ** 'ಜುಮಕಿ' ನೋ.

**ಝುಮರು** 'ಜುಮುರು' ನೋ.

**ಝುಮ್ಮಿಡು** (ಕ್ರಿ). ೧. ನಡುಗು; ಕಂಪಿಸು : ವರ ರಾಜೀವಸಂಭವ ಶರವ ಹೊಡಿದನಾ ವಿಬುಧರಸು ಝಡಿಯೆ ಝುಮ್ಮಿಡೆ ತನು ತ್ರಿಯಂಬಕನ (ತೊರರಾ. ೫-೬-೨೪). ೨. ಝುಂಮ್ಮೆಂದು ಮಿಡಿ : ದೈತ್ಯನೆದೆ ಜರ್ಜರಿತವಾಯಿತು ನೆತ್ತಿ ಝುಮ್ಮಿಡೆ ತಿರುಗಿ ಬಿದ್ದನು (ಕೌಶಿರಾ. ೩೨-೪೦); ಅದ್ರಿಗಳು ಮಾರ್ದನಿಗೊಡಲ್ದಿಗ್ಗಜಂಗಳ ಕರ್ನದಲ್ಲಿ ಝು[ಪಾಠಾಂ. ಝು] ಮ್ಮಿಡೆ ಕರ್ನನೆಂಬಾ ಮಾತನು ಕೆಳೆವುತ (ವೀಶೈಪು. ೨-೭-೪೩).

[ ಝುಂ$_0$ (<ಜುಂ) + ಇಡು$_1$ ]

**ಝುರಮತ್ತು** 'ಜೂರತ್ತು' ನೋ.

**ಝುರಕಿ** 'ಜುರಿಕೆ' ನೋ.

**ಝುರಿಕಿ** 'ಜುರಿಕೆ' ನೋ.

**ಝುರುಕಿ** 'ಜುರಿಕೆ' ನೋ.

**ಝುರುಕೆ** 'ಜುರಿಕೆ' ನೋ.

**ಝುಲುಮ್ಮನೆ**(ಅ). ತಟ್ಟನೆ; ಒಡನೆ; ಕೂಡಲೆ : ಅನುಕರಣಕ್ಕೆ . . . ಝುಲುಮ್ಮ[ಪಾಠಾಂ ಮ್ಮೆ]ನೆ ಪರಿಲ್ಲನೆ (ಶಮದ. ೧೪ ಪ್ರಯೋ).

[ ಝುಲುಮ್$_0$ + – ಅನೆ$_1$ ]

**ಝುಳಕು** 'ಝುಳಂಕು' ನೋ.

**ಝುಳುಕು, ಜುಳುಕಂ$_1$, ಝುಳಕಂ** (ನಾ). ೧. ಅಸ್ಪಷ್ಟವಾಗಿ ಕಾಣುವಿಕೆ; ಸ್ವಲ್ಪ ತೋರುವುದು; ಛಾಯೆ : ತಿಪ್ಪನ ಪ್ರಣಯದಲ್ಲಿ . . . ಗಾಂಧರ್ವಪದ್ಧತಿಯ ಝುಳುಕಿದೆ (ಸಮಜೀ. ೪೧, ಪೀಠಿಕೆ). ೨. ಕಾಂತಿ; ಹೊಳಪು : ಸಾಲಿನಲ್ಲಿ ನಿಂತ ಜನರ ಮುಖದ ಮೇಲೆ ಗೆಲುವಿನ ಝುಳುಕೊಂದು ಹಾಯ್ದುಹೋಯಿತು (ಪ್ರಣಸ. ೩೫). ಜುಳುಕು$_1$ : ೧. ಹಾವಭಾವಗಳ ಜುಳುಕಿನಲ್ಲಿ ತಾಳಲಯಗಳ ಸಮ್ಮೇಳನವಾಗಿ ಮನಸ್ಸಿಗೆ ಶ್ರಮವೆನಿಸದ (ಕನ್ನಹಾ. ೩೫). ಝುಳಕು : ೧. ಹೆದರಿಕೆಯ ಒಂದು ಝುಳಕು ಮೈಯನ್ನು ನಡುಗಿಸಿತು (ಮೇದಿಮ. ೦೬)

[ ←ಮರಾ. ಝುಳೂಕ್, ಝುಳಕ್ ]

**ಝೂರಿ** 'ಜುರಿ$_2$' ನೋ.

**ಝೂಲ** 'ಜೂಲು$_2$' ನೋ.

**ಝೂಲಹಾಕು** (ಕ್ರಿ). ಮೇಲು ಹೊದಿಕೆಯನ್ನು ಹೊದಿಸು; ಅಲಂಕಾರದ ಗೌಸುಹಾಕು; ಗೌಸನ್ನು ಹೊದಿಸು : ಅವಳು ಝೂಲಹಾಕಿದ ಗೋವಿನಂತೆ, ಬಂಗಾಲೀ ಸ್ತ್ರೀಯರಂತೆಯೇ ಸೀರೆಕುಪ್ಪಸಗಳನ್ನು . . . ಧರಿಸಿಕೊಂಡಿರುತ್ತಿದ್ದು (ಹೇಮಂತ. ೪೨೩).

[ ಝೂಲ (<ಜೂಲು$_2$) + ಹಾಕು (<ಪಾಯ್ಕು$_1$) ]

**ಝೂಲು** 'ಜೂಲ್ಕು$_2$' ನೋ.

**ಝೆಂಡ** (ನಾ). ಆರ್ಯಭಾಷಾವರ್ಗಕ್ಕೆ ಸೇರಿದ ಒಂದು ಪುರಾತನ ಭಾಷೆ : ಏಸಿಯದ ಭಾಗದಲ್ಲಿ ಸಂಸ್ಕೃತ, ಝೆಂಡ, ಇವರಡು ಪುರಾತನದ ಭಾಷೆಗಳುಂಟು (ಮುಂಬಯಿ. ೫-೨೩೪). [ ? ]

**ಝೇಂಕರಿಸು** (ಕ್ರಿ). ೧. ಮೊರೆ; ಝೇಂಕಾರವನ್ನು ಮಾಡು: ಕುಸುಮಕುಲಮಂ ಮುತ್ತಿ ಝೇಂಕರಿಪ ತುಂಬಿಯಿಂ . . . ಮೆಟಿವುದು (ತಿರುರ.ದೇ. ೨-೦೩); ತನುಗಂಧಕೆಬಿಗಿ ತುಂಬಿಗಳು ಝೇಂಕರಿಸಲು (ಭರಹ. ೯-೩೦): ಷಟ್ಪದಿಗಳಿಡೆವಿಡದೆ ಝೇಂಕರಿಸದಿರ್ಪುವೆ ಬಂದು ನೆರೆದ ವಿದ್ವತ್ಸಭಾ ನೀರೇರುಹಾಕರದೊಳು (ಜೈಮಿಭಾ. ೧-೧೨). ೨. ಬಿರುನಂಡಿಗಳನ್ನಾಡು; ಆರ್ಭಟಿಸು : ಗೆಡೆವರ್ಚರ್ವರ್ ಮನಗೊಂಡೊಡನೊಡನೋರಂತು ತಗುಳ್ದು ಝೇಂಕರಿಸಿದೊಡೆ(ಪಂಪಭಾ.೨-೭೩); ಪ್ರತಿಪಕ್ಷದವರು:– (ಕುಪಿತರಾಗಿ ಝೇಂಕರಿಸುವರು) (ಬಿರುಗಂ. ೦೫-೦೪). [ ಝೇಂಕರಣ$_0$+–ಇಸು$_3$ ]

**ಝೇಂಕಾರ** (ನಾ). ದುಂಬಿ ಮೊದಲಾದುವುಗಳ ಧ್ವನಿ,–ಮೊರೆತ : ಇಂಬಿನಿಂ ಕುಳ್ಳಿರ್ದ ಮಱಿದುಂಬಿಗಳ ಝೇಂಕಾರದಿಂ (ಪಾಥಪು ೧-೧೦೯).

[ ಸಂ. ]

**ಝೇಂಕೃತ** (ನಾ).=ಝೇಂಕಾರ : ಝೇಂಕೃತಂ ತುಂಬಿಯೊಳು (ಮುಂಗಶಾ. ೨೭-೬). [ ಸಂ. ]

**ಝೇಗೈ** (ಕ್ರಿ). (ವೀಣೆ ಮೊದಲಾದುವನ್ನು) ನುಡಿಸು; ಬಾರಿಸು : ಕೋಣನಿದಿರಲಿ ಪಾಡಿ ತುಂಬುರವೀಣೆಯಂ ಝೇಗೈದ ಪರಿ (ಗಗಹಾ. ೦೨-೪). [ ಝೇ$_0$ + ಕೈ (<ಕೆಯ್$_1$) ]

**ಝೊಂಪಿಸು$_1$** 'ಜೊಂಪಿಸು$_1$' ನೋ.

**ಝೊಂಪಿಸು$_2$** 'ಜೊಂಪಿಸು$_2$' ನೋ.

**ಝೊಂಪು** 'ಜೊಂಪು$_1$' ನೋ.

**ಝೊಂಬಿಸು** 'ಜೊಂಪಿಸು$_2$' ನೋ.

**ಝೊಟ್ಟಂಗ** 'ಜಟ್ಟಂಗ' ನೋ.

**ಝೊಮ್ಮಿಡು** 'ಜುಮ್ಮಿಡು' ನೋ.

**ಝೊಮ್ಮಿಸು** (ಕ್ರಿ). = ಜುಮ್ಮಿಡು : ಸವಿಯೇಱಿ ಸರ್ವಾಂಗವುಣ್ಣೆ ಝೊಮ್ಮಿಸುತ [ಪಾಠಾಂ. ಝುಮ್ಮಿಡುತ್ತ, ಝೊಂಪಿಸುತ]ಮಿರೆ (ಇಹರ.ದೇ. ೩೦-೧೭). [ ಝೊಮ್ಮು$_2$ (<ಜುಂ)+ – ಇಸು$_3$ ]

**ಝೊಮ್ಮು$_1$** 'ಜೊಂಪು$_1$' ನೋ.

**ಝೊಮ್ಮು$_2$** 'ಜುಂ' ನೋ.

**ಝೊಮ್ಮನೆ** 'ಜೊಮ್ಮನೆ' ನೋ.

**ಝೋಂಟಿಗ** 'ಜಟ್ಟಂಗ' ನೋ.

**ಝೋಂಪಿಸು$_1$** 'ಜೊಂಪಿಸು$_1$' ನೋ.

**ಝೋಂಪಿಸು$_2$** 'ಜೊಂಪಿಸು$_2$' ನೋ.

**ಝೋಂಪು** 'ಜೊಂಪು$_1$' ನೋ.

**ಝೋಕು$_1$** 'ಜೋಕು$_1$' ನೋ.

**ಝೋಕು$_2$** 'ಜೋಕು$_2$' ನೋ.

**ಝೋಮು** 'ಜಂಮು$_3$' ನೋ.

**ಝೋಮ್ಮಿಡು** 'ಜುಮ್ಮಿಡು' ನೋ.

**ಝೋರ್** (ನಾ). ಒಂದು ಅನುಕರಣ ಶಬ್ದ : ಎಡೆಗಿಡಿದು ಚೆಂದಂಗಿನೆಳಗಾಯೊಡೆದು ಝೋರೆನೆ ಪೊಸರ್ವ ಪೊನಲಿಂ (ಶಾಳ್ಮಭಾ. ೧-೩೦).

**ಝೋರು** 'ಜೋರು$_3$' ನೋ.

**ಝೋಲಿ** 'ಜೋಲಿ$_3$' ನೋ.

**ಝೋಲಿತಪ್ಪು** 'ಜೋಲಿತಪ್ಪು' ನೋ.

**ಝೋಲಿಹೊಡೆ** 'ಜೋಲಿಹೊಡೆ' ನೋ.

**ಝೋಳಿ** 'ಜೋಳಿ$_3$' ನೋ.

**ಝೌಲಿಕ** (ನಾ). ವೀಳೆಯದೆಲೆ ಮತ್ತು ಅಡಿಕೆಯ ಚೀಲ; ಸಂಚಿ.

[ ಸಂ. ]

**ಞ** (ನಾ). ಕನ್ನಡ ವರ್ಣಮಾಲೆಯ ಮೂವತ್ತನೆಯ ಅಕ್ಷರ.

**ಞಕಾರ** (ನಾ).=ಞ. [ ಸಂ. ]

# ಟ



**ಟ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತೊಂದನೆಯ ಅಕ್ಷರ. ೨. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: "ನಿರುತದಿಂ ಕಟಪ[ಯ]ಮೆನಲ್ಕೊಂದು" (ಮಂಗರಾ. ೧೧೪-೧೧).

**ಟಂಕ**(ನಾ).೧.ಕಲ್ಲುಕುಟಿಗನ ಒಂದು ಉಪಕರಣ: ಕಲ್ಲುಳಿ; ಚಾಣ: "ಟಂಕ ಮೆನಲುಳಿಯಕ್ಕುಂ" (ಮಂಗರಾ. ೧೧೩-೮) ; ತುರಂಗಮ ವೇಗಬಲಪತಿತ ಖರಖುರಟಂಕ ಪರಿಸ್ಖಲನ ಕಳಿತವಿಷಮಸಮರಭೇರೀನಿಸ್ವನಮುಂ (ಪಂಪಭಾ. ೧೩-೫೦ ವ) ; ಕಟ್ಟೆಂಬ·ನುಡಿ ಮಾಲೆಗಾರ್ತಿಯರೊಳುನೆಟ್ಟಿ ಪೆಟ್ಟೆಂಬ ನುಡಿ ಟಂಕದೊಳಗೆ (ಕಂನವಿ. ೨-೧೫). ೨. ನಾಣ್ಯವನ್ನು ಅಚ್ಚುಮಾಡುವ ಸಾಧನ ; ಅಚ್ಚು. ೩. ತಾಳೆಯೋಲೆಯಲ್ಲಿ ತೂತು ಕೊರೆಯುವ ಒಂದು ಬಗೆಯ ವೃತ್ತಾಕಾರದ ಮೊಳೆ : "ಟಂಕಃ=ಕಲ್ಲುಳಿಯು, ಹೊನ್ನ ಅಚ್ಚಿನ ಮೊಳೆಯುಂ, ಓಲೆಯಂ ತೂತಂ ಕೊರೆವ ಉಂಗುರದ ಮೊಳೆಯುಂ" (ಕಾಶಕ್ಕ. ೨೬೫). ೪.=ಟಂಕನ. 'ಟಂಕಸಾಲೆ' ಪರಾ.೫. ಮುದ್ರೆಯೊತ್ತಿದ ನಾಣ್ಯ ; ಚಲಾವಣೆಯ ನಾಣ್ಯ: "ಉಳಿಯಭಿಮಾನ ನಾಣೆಯಗಳೆಂಬಿವು ಟಂಕಮೆನಿಕ್ಕು" (ನಾನಾರ. ೧೩೦). ೬.=ಟಂಕಸಾಲೆ : ಅಣೆಗಪಜಯವಿಲ್ಲಲೇ ಕೀಳಾಣಿ ಟಂಕದೊಳಿಲ್ಲಲೇ (ಕುವ್ಯಾ.ಸ. ೧-೪೪). ೭. ಒಂದು ಬಗೆಯ ತೆರಿಗೆ ; ನಾಣ್ಯ ಮುದ್ರಿಸುವವರ ಮೇಲೆ ಹಾಕುವ ತೆರಿಗೆ : ಚತುಸ್ಸೀಮಾಭ್ಯಂತರ ಕವಿಳಾಸಪುರದಲ್ಲಿ ಸುಂಕಸಾದ ತಳಸಾರಿಗೆ . . . ಅಂಕೆ ಟಂಕ ಅಣೆ ಗೋಸನೆ ಮುದ್ರೆ ನಾಗೇಶ್ವರಕ್ಕೆ ಮಲ್ಲೇಶ್ವರಕೆ (ಎಇ. XXI, ೨-೭೩ ; 1260). ೮.=ಟಂಕಣ ೯. ಪಾತ್ರೆ ಮೊದಲಾದುವು ಗಳ ಸಂದನ್ನು ಸಂತ್ತಿಗೆಯಿಂದ ಬಡಿದು ಕೂಡಿಸುವಿಕೆ: ಬಿಂದಿಗೆ ಬಿರುಕು ಬಿಟ್ಟದೆ. ಸ್ವಲ್ಪ ಟಂಕ ಹಾಕಿಸಿಕೊಂಡು ಬಾ (ರೂಢಿ). ೧೦. ಬೆಟ್ಟದ ಇಳಿಜಾರು ಪ್ರದೇಶ;ತಪ್ಪಲು ಪ್ರದೇಶ: ಮಾದ್ಯದ್ಗಜಗಂಡಭಿತ್ತಿ ಕಷಣಪ್ರೋದ್ಭೇದದಿಂ ಸಾರ್ದು ಬಂದಿದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂಬೊನ್ನ ಟಂಕಂಗಳೊಳ್ (ಪಂಪಭಾ. ೪-೨೨). ೧೧. ಅಭಿಮಾನ; ಹೆಮ್ಮೆ ; ಗರ್ವ : "ಅಭಿಮಾನ, ಉಳಿ–ಈ ೨ ಟಂಕಮೆಂಬುದು" (ಹಲಾಯು. ೧೩೭-೩೫) : ಮಸಕಂ ಟಂಕಂ ಕಣೆ ಪುಸಿ ನಸೆ ಬಂಚನೆ ಕುಸುರಿಯೆ ಚಿತ್ರಂ ದ್ರಿಡವಂ ವಸುಧೆಯೊಳ್ ಪಸುಗೆಗೊಳ್ಗಂಡಂ ಕಡುಜಾಣಂ (ಎಕ. VI, ಚಿಕ್ಕಮ. ೫೪-೧೮ ; ಸು. 1060 ?). 'ಕಂಟ' ಪರಾ. [ಸಂ.]

**ಟಂಕಕ್ಷತ** (ಗು). ೧. ಕಲ್ಲುಳಿಯಿಂದ ಕೊರೆದ. (ನಾ). ೨. ಕಲ್ಲುಳಿಯ ಪೆಟ್ಟು,–ಹೊಡೆತ : ಗಿರಿಯ ಟಂಕಕ್ಷತವು ಘೋರ ಭಿದುರ ಹತಿಗೆ ಸರಿ ಬರ್ಪುದೇ (ವಿವೇಧ. ೧೧-೭೦). [ಟಂಕ + ಕ್ಷತ]

**ಟಂಕಣ** (ನಾ). ಲೋಹವನ್ನು ಶುದ್ಧಿಗೊಳಿಸಲು ಉಪಯೋಗಿಸುವ ಒಂದು ಬಗೆಯ ಖನಿಜ ಲವಣ; ಬೆಳುಗಾರ; ಬಿಳಿಗಾರ: "ಟಂಕಣಂ ಬಿಳುಗಾರವೆಂದು" (ಮಂಗರಾ. ೩೧-೭) ; ವಿಸರಿಪ ಟಂಕಣವೋಲೆಯ ಮಸಿಯೆಂಬಿವನೊರಸಿ ಮಾತುಲುಂಗದ ಪಣ್ಣಿಂ ಬಿಸಿಲೊಳ್ ಪಸರಿಸೆ ತದ್ದ್ರವಮೊಸರ್ಗುಮಶೇಷಂ (ಲೋಕೋಪ. ೮-೩೪); ಟಂಕಣಂ ರಜನಿ ನವ ಕುಂಕುಮಮಗಿಲು ನೆಲ್ಲಿಯಂಕೋಲೆಯೊಳ್ಬಿತ್ತಿನಿಂ ಮರ್ದಿಸಿ (ಜನವ. ೧೩-೭೦); ಕೃಷ್ಣಾಭ್ರಕವನ್ನು ಧಾನ್ಯಾಭ್ರಕವ ಮಾಡಿ ಎಕ್ಕೆಹಾಲಿನಲ್ಲಿ ಚತುಷ್ಪಶಃ ಟಂಕಣವನ್ನಾಗಲೀ ಪುಟಕಿಯನ್ನಾಗಲಿ ಹಾಕಿ ಮರ್ದಿಸಿ ಗಜಪುಟವನ್ನು ೨೦ ಕೊಟ್ಟರೆ ಭಸ್ಮವಹುದು (ವಿವೈವಿ. ೨೨) ; ತಾಪವಿಲ್ಲದ ಚಿನ್ನ ಟಂಕಣ ರೂಪದಿಂ ಬೆಚ್ಚುವದೆ (ವಿವೇಧ. ೧೧-೬೪). [ಸಂ.]

**ಟಂಕಣಕಾರ, ಟಂಕಣಖಾರ** (ನಾ).=ಟಂಕಣ : ಕಾಸಂಟ ಕೊಡಿಗೆಗೆ ವಿ ೫ ತವರದಡೆಗೆ ವಿ ೨॥ ಟಂಕಣಕಾರ ಬಿಸಿಗೆಗೆ ವಿ ೭॥ (ಕಇಆ. ೧೦೪-೮-೩೦ : 1076) ; ಬೋರಾನೆಂಬ ದುರ್ಮಿಲವಾದ ಅಧಾತುರೂಪಮೂಲತತ್ವದಿಂದ ಟಂಕಣಕಾರ (ಬಿಳಿಗಾರ) ಹುಟ್ಟುತ್ತದೆ (ಮುಂಬಯಿ. ೪-೧೫) ; ಟಂಕಣ ಕಾರವನ್ನು ತಂದು ಒಂದು ಚೂರನ್ನು ಚಮಚೆಯಲ್ಲಿಟ್ಟು ಕಾಯಿಸಿದರೆ ಅದು ಕರಗಿ ಆರಿ ಅರಳಾಗುವುದು (ಮನಮ. ೧೯). **ಟಂಕಣಖಾರ:** ಟಂಕಣಖಾರಂ ಓಲೆಯ ಮಸಿಯುಮಂ ಕೂಡಿಕೊಂಡು ತೊಡೆದು ಬಿಸಿಲಲ್ಲಿ ಇಡಲ್ . . . ರಸಮಾಗಿರ್ಪುದು (ಲೋಕೋಪ. ೮-೩೪ ಟೀಕು).

[ಟಂಕಣ + ಕಾರ$_2$]

**ಟಂಕಣಖಾರ** 'ಟಂಕಣಕಾರ' ನೋ.

**ಟಂಕನ** (ನಾ). ನಾಣ್ಯಗಳನ್ನು ಮಾಡುವುದು ; ನಾಣ್ಯಮುದ್ರಣ : ಚಲಾವಣೆ, ಟಂಕನ ಮತ್ತು ವಿಧಿಮಾನ್ಯ (ಭಾಧಾನ. ೨೮೧). [ಸಂ.]

**ಟಂಕಮುದ್ರೆ** (ನಾ). = ಟಂಕನ : ಟಂಕಿಸುವ ಕಾರ್ಯ . . . ಟಂಕಮುದ್ರೆ (Mintage. ಇಂಕನಿ.). [ಟಂಕ + ಮುದ್ರೆ]

**ಟಂಕರಿಸು** (ಕ್ರಿ). ೧. ಬಿಲ್ಲಿನ ಹೆದೆಯನ್ನು ಮಿಡಿದು ಧ್ವನಿಮಾಡು. 'ಟಂಕಾರ' ಪರಾ. ೨. (ವೀಣೆ ಮೊದಲಾದ ವಾದ್ಯಗಳ ತಂತಿಗಳು) ಟಂ ಟಂ ಎಂಬ ಶಬ್ದವನ್ನು ಮಾಡು : 'ಅಮರ್ದಿನ ಮಳೆ' ನಿಂತು ಮರದ ಹನಿಗಳಂತೆ ತಂತಿಯ ಮಿಡಿದನಿಗಳು ಟಂಕರಿಸುತ್ತಿದ್ದವು (ಕಗದ್ಯ. ೧೬೦). [<ಟಂಕಾರ + – ಇಸು$_3$]

**ಟಂಕಶಾಲೆ** (ನಾ).=ಟಂಕಸಾಲೆ ೧ : ಸುಮಬಾಣನ ಬಾಣದ ಶಾಲೆ ಮಂಜರೀಯುದರದ ಟಂಕಶಾಲೆ . . . ಮಾಮರಂ (ಹಾಲಾಸ್ಯ. ೧-೪-೮೭).

[ಟಂಕ + ಶಾಲೆ$_3$]

**ಟಂಕಸಾಲೆ** (ನಾ). ೧. ನಾಣ್ಯವನ್ನು ಮುದ್ರಿಸುವ ಕಾರ್ಖಾನೆ,–ಸ್ಥಳ : ತುಂಬಳಬೀಡಿನ ಶ್ರೀ ಪಂಚಲಿಂಗದೇವರಂಗಭೋಗಕ್ಕಂ ನಿವೇ × × × ಗಾಣ ೨ ಅಚ್ಚಿನ ಟಂಕಸಾಲೆಯಲು ದಳಕ್ಕೆ ವೀಸ ೨ (ಸೌಇಇ. IX-I, ೨೨೮-೧೧ ; 1133) ; ರೂಪ್ಯಾಧ್ಯಕ್ಷಃ, ನೈಷ್ಕಿಕಃ – ಈ ೨ ಟಂಕಸಾಲೆಯ ಅಧಿಕಾರಿಯ ಹೆಸರು (ನಾಚಿರಾ. ೧೩೧) ; ಪದಗಳು ಜನಮನದ ಟಂಕಸಾಲೆ ಯಲ್ಲಿ ಭಾವದ ಮುದ್ರೆಯನ್ನು ತಳೆದು ಚಲಾವಣೆಗೆ ಬರುವ ನಾಣ್ಯ ಗಳಿದ್ದಂತೆ (ಸೌಂದಸ. ೬೨). ೨. ಒಂದು ಬಗೆಯ ತೆರಿಗೆ ; ಟಂಕಸಾಲೆಯ ಮೇಲಿನ ತೆರಿಗೆ: ಅಂಕ ಸುಂಕ ಟಂಕಸಾಲೆ ತಳವಾಟಿಕೆ . . . ಎಂಬಷ್ಟ ಭೋಗ ಸರ್ವಸ್ವಾಮ್ಯ ಸರ್ವಾದಾಯಪ್ರಾಪ್ತಿ ಸಹಿತವಾಗಿ (ಎಕ. VIII, ಸಾಗರ. ೦೬೩-೨೩ ; 1488). [ಟಂಕ + ಸಾಲೆ$_3$]

**ಟಂಕಾರ** (ನಾ). ಬಿಲ್ಲಿನ ಹೆದೆಯನ್ನು ಮಿಡಿದರೆ ಹುಟ್ಟುವ ಶಬ್ದ ; ಧನುಸ್ಸಿನ ಶಬ್ದ ; ಸಿಂಜಿನಿ ಧ್ವನಿ: ಬಿಲ್ಲನೇಱಿಸಿ ಟಂಕಾರವಗುರ್ವಿಪಡೆಯೆ ಜೇವೊಡೆದು . . . ನಡೆದಂ (ಶಂರಾಮಾ. ೯-೫೭) ; ಚಾಪಟಂಕಾರಂ ಜಗತ್ತ್ರಯದೊಳೆಲ್ಲಿಯುಂ ವ್ಯಾಪಿಸಲ್ಕೆ (ಜೈಮಿಭಾ. ೭೦-೧೨): ಪೂವಿಲ್ಲನೇರಿಸಿ ಕಾವನು ಕಣೆಗೊಂಡು ಟಂಕಾರ ಮಾಡಿದನಲ್ಲ (ಇಂಚಾಪ. ೧೪೪-೯). [ಸಂ.]

**ಟಂಕಾರಿಸು** (ಕ್ರಿ). ಟಂಕದಿಂದ ಕೆತ್ತು ; ಉಳಿಯಿಂದ ಸೀಳು : ಮೇರುವಿನ ಹೆಳಗಳೇಂ ಭಂಡಾರಕೆನ್ನಾಣೆ ವಜ್ರಧಾರೆಗಳಿಂ ಟಂಕಾರಿಸಿ ಸಲಿಸದೊಡೆಂ [ಸಲಿಸೊಡನೆಂ]ದು ಬಲಾರಿಗೆ ದಿವಿಜಾರಿ ರಾಯಸಂ ಬರೆಯಿಸುವಂ (ಅನಂಪು. ೧೩-೮). [<ಟಂಕ + – ಇಸು$_3$]

**ಟಂಕಾಹತಿ** (ನಾ). ಉಳಿಯ ಏಟು : ಕರಿಸೇನಾಕರಲೂನವೈರಿವನದುರ್ಗವ್ರಾತನಶ್ವಾವಳೀಖುರ ಟಂಕಾಹತಿ ಪಾತಿತಾರಿಗಿರಿದುರ್ಗವ್ರಾತಂ . . . ದಿಗ್ವಿಜಯಯಾತ್ರಾಕ್ರೀಡೆಯಂ ಮಾಡುವಂ (ಚಂದ್ರಪು. ೪-೨೭). [ಟಂಕ + ಆಹತಿ]

**ಟಂಕಿ₁** (ನಾ). (ಪ್ರಯಾಣದ ಮಧ್ಯದಲ್ಲಿ ಒಂದು ಕಡೆ) ತಂಗುವುದು; ನಿಲ್ಲುವುದು : ಬರುತ್ತಿರುವಾಗ ಅಡವಿಯಲ್ಲಿ ಛತ್ರದಲ್ಲಿ ಒಂದು ರಾತ್ರಿ ಟಂಕಿ ಮಾಡಬೇಕಾಯಿತು (ಕಥಾಮಂ. IV, ೬೪). [←ತೆಲು. ಟಂಕಿ=ಮನೆ]

**ಟಂಕಿ₂** ಟೆಂಕಿ, ಟೆಂಕೆ (ನಾ). ೧. ಮುದ್ರೆಯೊತ್ತಿದ ನಾಣ್ಯ. 'ರಾಮಟಂಕಿ' ಪರಾ. **ಟೆಂಕಿ :** ೨. ರೂಪಾಯಿಯಲ್ಲಿ ಮೂರನೆಯ ಒಂದರಷ್ಟು ($\frac{1}{3}$) ಬೆಲೆಬಾಳುವ ಒಂದು ನಾಣ್ಯ ; ಹದಿನಾರು ಗಟ್ಟಿ ದುಡ್ಡು ಬೆಲೆಯ ಒಂದು ನಾಣ್ಯ: ರೂಪಾಯಿಗೆ ಗಟ್ಟಿದುಡ್ಡು ೪೮ ಅಥವಾ ಮೂರು"ಟಂಕಿ" (ಕಥಾಗ. ೨೮೦) ; ಟಂಕಿ ಗಿಂಕಿ ವ್ಯವಹಾರ ನನಗೆ ಬೇಡ (ಗಾಳಿಪ. ೦೮೫). **ಟೆಂಕೆ:** ೨. ಒತ್ತಿಗೆ ಸೇರಿ ಮೈದಡವಿದ ಸಹಣೆಗೆ ಹತ್ತು ಸಾವಿರ ಟೆಂಕೆಯನ್ನು ಇತ್ತಪೆವು (ಕುರಾಸಾಂ. ೯-೬೦): ಟಂಕೆ ೧೬ಕ್ಕೆ ದುಡ್ಡು ೧೬ (ಭಾಸ್ಕರ. ೭೭-೦).
**ಟೆಂಕೆಯ ಪೆಟ್ಟಿಗೆ** = ನಾಣ್ಯಗಳನ್ನು ತುಂಬಿದ ಪೆಟ್ಟಿಗೆ : ಕೊಟ್ಟಗೆ ಕೊಲ್ಲಾರದ ಬಂಡಿ ಟೆಂಕೆಯ ಪೆಟ್ಟಿಗೆ ಗುಡಿಗಳ ಹೊಱುವ ಒಂಟೆವೆರಸು ತೆರಳಿದನು (ಕುರಾಸಾಂ.೦೯-೯). **ಟೆಂಕೆಯ ಬಂದಿಗೆ**=ನಾಣ್ಯಗಳನ್ನು ತುಂಬಿದ ಬಿಂದಿಗೆ,-ಕೊಡ : ತರುಣಿಯರನು ಟೆಂಕೆಯ ಬಿಂದಿಗೆಗಳನ್ನು ತೆರಳಿಸಿ ಮುಂದೆ ಬೇಗದೊಳು . . . ತುರಗವೆರಸು ತೆರಳಿದನು (ಕುರಾಸಾಂ. ೦೮-೦೨೪). [ <ಸಂ. ಟಂಕ ]

**ಟಂಕಿ₃** (ನಾ). [ದ್ವೈತ] ಜೀವಿಗಳ ಬಲದ ತೊಡೆಯ ಸಂದಿಯಲ್ಲಿ ಅಭಿಮಾನದೇವತೆಯಾಗಿ ನೆಲಸಿರುವ ಭಗವಂತನಾದ ಶ್ರೀಹರಿಯ ರೂಪ: ಟಂಕಿ ತರ ಮೊದಲಾದ ನಾಮದಿ ಸಂಧಿಗಳಲೀರೈದು ರೂಪದಲಿದ್ದು ಸಂತತ ನಡದು ನಡಿಸುತಲಿ (ಹಸಾರ. ೮-೦) ; ಬಲದ ತೊಡೆಯ ಸಂಧಿ, ಮೊಣಕಾಲು ಸಂಧಿ, ಪಾದಗತ ಸಂಧಿ, ಬೆರಳುಗಳ ಸಂಧಿ, ಬೆರಳುಗಳ ಕೊನೆಯ ಭಾಗ ಈ ೫ ಸ್ಥಳಗಳಲ್ಲಿ ಟಂಕಿ ಮೊದಲಾದ ೫ ಅಂದರೆ ಮಾತೃಕಾನ್ಯಾಸ ಕ್ರಮದಲ್ಲಿ ಹೇಳಿದಂತೆ ಟಂಕಿ, ಠಕಲ, ಡರಕ, ಢರೀ, ಣಾತ್ಮ ಎಂಬ ೫ ರೂಪಗಳಿಂದಲೂ . . . ಆ ದೇಹಗತನಾಗಿ (ಹಸಾರ. ೮-೦ ತಾತ್ಪರ್ಯ). [ ಸಂ. ]

**ಟಂಕಿಸು** (ಕ್ರಿ). ಗರ್ವಿಸಂ (?) : ಟೋಕಿಸಿ ಟೌಂಕಿಸಿ ಟಂಕಿಪ ಟಕ್ಕರದೇಕೆ ಪುಟ್ಟಿದರೊ ಶ್ರೀಹರಿಯೆ (ಶತಸಾಂ. ೭೫-೮೫): "ಡಂಗಂಮಾಡು" (ಶತಸಾಂ. ಕೋಶ). [ ? + – ಇಸು₃ ]

**ಟಂಕೃತ** (ನಾ). ಬಿಲ್ಲಿನ ಹೆದೆಯ ಶಬ್ದ ; ಟಂಕಾರ: ಟಂ[ಪಾಠಾಂ. ಠಂ]ಕೃತಂ ಬಿಲ್ಲಿನೊಳು (ಮಂಗರಾ. ೨೭-೬). [ ಸಂ. ]

**ಟಂಕೃತಿ** (ನಾ).=ಟಂಕೃತ : ಟಂಕೃತಿ ಮಿಗೆ ಜೀವೊಡೆಯುತ್ತುಂ (ಜಗವಿ. ೯-೦೦೩); ಅತಿಮೃದುಪುಷ್ಪಚಾಪದಳಿನೀಗುಣಟಂಕೃತಿರಾವಮಾಗಮಾಮೃತಪರಿಪೂರ್ಣಕರ್ಣಯುಗನಂ ಸಲೆ ಕೇಳಿಸದು (ಚಂದ್ರಪು. ೦-೨೬) ; ಟಂಕೃತಿ ಶ್ರವಣದಿಂದಖಿಳಮರ್ತ್ಯಾಮರ್ತ್ಯಹಂಕೃತಿಯ ನೀಗಿ ಮದ್ವಶವರ್ತಿಗೈದ ಬಿಲ್ (ವಂಕಾರಾ. ೦-೨೨-೫೨). [ ಸಂ. ]

**ಟಂಕೆ₁**, ಟೆಂಕ₂, ಠಂಕೆ (ನಾ). (ಕಬ್ಬಿಣದಿಂದ ಅಥವಾ ಮರದಿಂದ ಮಾಡಿದ) ಗುಂದಿಗೆ ; ದೊಣ್ಣೆ ; ಬಡಿಗೋಲು : "ಬಡಿಕೋಲು ಡಂಕೆ ಟಂಕೆ" (ಶಬ್ದಮಂ. ೩೩) : "ಬಡಿಗೋಲಿನೊಳ್ ಟಂಕೆ" (ಕಶರ. ೪೨). **ಟೆಂಕ₂ :** ಕಂಗಳು ಮೂರು ಕರಗಳು ನಾಲ್ಕು ಆಯುಧ ಹಿಂಗದೆ ಗದೆ ಶೂಲ ಡಮರುಗ ಕಂಗೊಳಿಸುವ ಟೆಂಕ ಖಟ್ವಾಂಗ (ಶರಲೀ. ೨೮-೦೭). **ಠಂಕೆ :** "ಬಡಿಗೋಲಿನೊಳ್ ಟಂಕೆ ಠಂಕೆಯೆಂಬೀ ಎರಡು ನುಡಿಯು" (ಕಶರ. ೪೨). 'ಡಂಗೆ₁' ಪರಾ. [ ದೇ.? ಮಲ. ಟಜ್ಞ ]

**ಟಂಕೆ₂** (ನಾ). ಕಲ್ಲುಳಿ ; ಟಂಕ : "ಟಂಕೆ-ಟಂಕ=ಕಲ್ಲುಳಿ" (ತದ್ಭಕೋ. ೦೬). [ ಸಂ. ಟಂಕ ]

**ಟಂಕೆ₃** (ನಾ). ಮೊಳಕಾಲು. [ ಸಂ. ಟಂಕಾ ]

**ಟಂಕೋತ್ಕೀರ್ಣ** (ನಾ). ಉಳಿಯಿಂದ ಕೊರೆದುದು,-ಕಂಡರಿಸಿದುದು,-ಕೆತ್ತಿದಂದು : ವೃಷಭಾಚಲನಿಕಟಂಗಳೊಳಂ ಅಪ್ರತಿಹತದಿಗ್ವಿಜಯ ಪ್ರಶಸ್ತಿಯಂ ಟಂಕೋತ್ಕೀರ್ಣಂ ಮಾಡಿ (ಆದಿಪು. ೦೪-೫೯ ವ). [ ಟಂಕ + ಉತ್ಕೀರ್ಣ ]

**ಟಂಗು** 'ತಂಗು₃' ನೋ.

**ಟಂಟಣಿಸು₁** (ಕ್ರಿ). ಟಣ್‌ಟಣ್ ಎಂಬ ಶಬ್ದಮಾಡಂ. [ <ಟಣ್ + – ಇಸು₃ ]

**ಟಂಟಣಿಸು₂** 'ಟೆಂಟಣಿಸಂ' ನೋ.

**ಟಂಠಣಿಸು** 'ಟೆಂಟಣಿಸು' ನೋ.

**ಟಂಬ್ಲರು** (ನಾ). ಲೋಟ ; ಬಟ್ಟಲು : ಶರಬತ್ತು ತುಂಬಿಸಿದ ಎರಡು ಟಂಬ್ಲರುಗಳನ್ನು ಒಂದು ತಟ್ಟೆಯಲ್ಲಿ ತಂದಿಟ್ಟರು (ನಿಷ್ಕಾಮ. ೦). [ ←ಇಂ. Tumbler ]

**ಟಕ್** (ನಾ). ಒಂದು ಅನುಕರಣ ಶಬ್ದ : 'ಟಕ್' ಎಂದು ಶಬ್ದವಾಯಿತು (ರೂಢಿ) ; 'ಟಕ್' ಎಂದು ಕಡ್ಡಿ ಮುರಿಯಿತು (ರೂಢಿ).
**ಟಕ್‌ಟಕ್** (ದ್ವಿರುಕ್ತಿ): ಟಕ್‌ಟಕ್ ಎಂದು ಶಬ್ದ ಕೇಳಿಸುತ್ತದೆ (ರೂಢಿ).

**ಟಕಟಕನೆ** (ಅ). ಟಕ್‌ಟಕ್ ಎಂಬ ಶಬ್ದ ಉಂಟಾಗುವಂತೆ : ಟಕಟಕನೆ ಸದ್ದುಮಾಡಿಕೊಂಡು ಹಾಸುಗಲ್ಲುಗಳ ಮೇಲೆ ನಡೆಯುತ್ತ ರಂಗಪ್ಪ ಅಲ್ಲಿಗೆ ಬಂದರು (ರಂಗವ. ೩೦). [ <ಟಕ್ + – ಅನೆ₁ ]

**ಟಕಮಕ₁** (ನಾ). ಆಶ್ಚರ್ಯ ; ಕಕವಂಕ : ಅವಳು ನನ್ನ ಕೈಹಿಡಿದಂತೆಯೇ ಟಕಮಕವಾಗಿ ನಾವು ಒಬ್ಬರೊಬ್ಬರ ಮುಖದೃಷ್ಟಿಗಳನ್ನು ಅವಲೋಕಿಸುತ್ತಿದ್ದೆವು (ಹೇಮಂತ. ೦೯೭): ಕೂಡಲೆ ಅವನು ಟಕಮಕವಾಗಿ ನೋಡಿದನು (ಇಂದುಮು. ೬೫). [ ←ಮರಾ. ಟಕ್‌ಮಕ್ ]

**ಟಕಮಕ₂** (ಅ). ಎವೆ ಬಡಿಯದೆ ; ಅನಿಮೇಷವಾಗಿ ; ನಿಶ್ಚಲದೃಷ್ಟಿಯೊಡನೆ: ಸೂಪರಿಂಟೆಂಡೆಂಟನು ಕುರ್ಚಿಯೊಂದರ ಮೇಲೆ ಇಬ್ಬರನ್ನೂ ಟಕಮಕ ನೋಡುತ್ತ ಕುಳಿತುಕೊಂಡಿದ್ದನು (ಹುಬ್ಬ. ೩೦) ; ಒಬ್ಬರನ್ನೊಬ್ಬರು ಟಕಮಕ ನೋಡುವದೆಷ್ಟು ಹೊತ್ತು (ಹುಜ್ಞಾಟ. ೪೦); ಚಿಕ್ಕಿಗಳು ಟಕಮಕ ಹಣಿಕಿಹಾಕಿ ನನ್ನನ್ನು ಅಣಕಿಸಿದವು (ಮೇಧಿಮು. ೩೦). [ <ಟಕಮಕ₁ ]

**ಟಕಳಿ** 'ತಕಲಿ' ನೋ.

**ಟಕಾಯಿಸು**, ಠಕಾಯಿಸು (ಕ್ರಿ). ಮೋಸಮಾಡು ; ವಂಚಿಸು ; ದಗಾ ಕೊಡು : (ಕ). **ಠಕಾಯಿಸು :** ಕಿನ್ನರರನ್ನು ಠಕಾಯಿಸಿ ಬಲೆಯನ್ನು ಕಿತ್ತುಕೊಂಡ (ಬಾಲಪ್ರ. I, ೫೦೨) ; ಯಾರು ನಂಬಲು, ಆನಂದಪಡಲು ಬಂದಿದ್ದರೋ ಅವರನ್ನು ಇಷ್ಟು ಠಕಾಯಿಸುವ ಆಲೋಚನೆ ಏಕೆ (ನಿಬಂಧ. II, ४೦२): ಏ ಘಟಿಂಗ! ನನ್ನನ್ನು ಠಕಾಯಿಸಿದೆಯಲ್ಲ! (ದೇವಮು. ೭೬). [ ಟಕಾ₀ (P ←ಮರಾ. ಠಕವಿಣೇ) + – ಇಸು₃ ]

**ಟಕಾರ** (ನಾ). 'ಟ' ಎಂಬ ವರ್ಣ,-ಅಕ್ಷರ : ಕೃತಿಮಾರ್ಗದೊಳುಂಟು ಟಕಾರ ತಕಾರ ಠಕಾರ ರೇಫದೆಡೆಗಂ . . . ಜಟದಾದೇಶಂ (ಶಮದ. ೨೦) [ ಸಂ. ]

**ಟಕಾರಿ** (ನಾ). ತೋರಣದಂತಹ ಒಂದು ರಚನೆ (?) : ಅಳ್ಳಿವಾಟಿ ಬಂದೆಡೆಗುವುವಲ್ಲಿ ಚಂಚುಗಳ ಲೋವೆಗಳೊಳ್ ಕಡೆಯಿಕ್ಕಿಸಾ[ದಾ]ರವಂ ಕಿಱುಮಿಡಿಗೆತ್ತು ಸಾರಿಕೆ ಟಕಾರಿಯ ಮಾಣಿಕವಟ್ಟೆಯಂ ಪಿಕಂ ನಿಱಿದಳಿಗೆತ್ತು ಲಂಬಣದ ಮುತ್ತುಗಳಂ ಮಟಿಗೆತ್ತು ಚಾತಕಂ (ಅನಂಪು. ೬-೪೩). [ ? ]

**ಟಕ್ಕ, ಠಕ, ಠಕ್ಕ** (ನಾ). ೧. ವಂಚಕ; ಮೋಸಗಾರ; ಧೂರ್ತ: ನೀನಿಂದೆನ್ನ ಮನೆಗೆ ಬಾರದಂದು ನಿನ್ನ ಕೆಳೆ ಟಕ್ಕರ ಕೆಳೆಯಂತಕ್ಕುಮಲ್ಲದೆ ತಕ್ಕರ ಕೆಳೆಯಂತೊಪ್ಪಲಱಿಯದು (ಪಂಚತಂ. ೦೨೫-೦೮); ತಕ್ಕನಿವನಲ್ಲ ನೆಳಪಂ ಟಕ್ಕಂ ಖಳನೆಂದು ಪೊರ್ದರ್ (ಧರ್ಮಾಮೃ. ೬-೩೬). **ಠಕ:** ೧. ಠಕ ನೆಳಪನೇಳಿದಂ ವಂಚಕನುದ್ಧತನನೃತವಾದಿ ಪಂಚಮಹಾಪಾತಕನೆನಿಸುವಂ (ಜಿನಾಲ. ೦೩). **ಠಕ್ಕ:** ೧. ಕೆಮ್ಮಗೆ ಕೊಳಲಾಟಪಂ ದೊರೆಯೊ ಠಕ್ಕನೊ ಕಳ್ಳನೊ ಬಂದಿಕಾಱನೋ (ಗದಾಯು. ೧-೩೬); ಮಾಯಾವಿಯಂ ಪಡು ವೆಡೆಯೊಳ್ಕಾಣದೆ ಠಕ್ಕನೆಂದಱಿದು (ಧರ್ಮಾಮೃ. ೬-೮೮); ಅಂತಕನೆಂಬ ಠಕ್ಕನತಿಭೀಕರಸಂಸ್ಮೃತಿಯೆಂಬ ಕಾನನಾಭ್ಯಂತರದಲ್ಲಿಗೊಯ್ದಿರಿಸಿ (ಜೀವಸಂ. ೩೦-೪); ಠಕ್ಕರಿವರು ಸ್ವಾಮಿ ಮೇಘರಾಜಗೆ ಮಾಲೆಯಿಕ್ಕಿದಳಾಕೆ ಚೊಕ್ಕ ವೆಣ್ಣೆಂದಾಣ್ಮಗಿರಲೆಂದು ನೆನೆದರೆಂದುಕ್ಕಿ ಸನ್ಮತಿ ಮಂತ್ರಿ ನುಡಿದಾ (ಭರತ. ೫೬-೫೦). ೨. ಕಳ್ಳ: ಠಕ್ಕ ಬಿಟ್ಟರೆ ಸಿಕ್ಕ (ರೂಢಿ). (ಗು). ೩. ಮೋಸ್ತದ; ವಂಚನೆಯಂ; ಧೂರ್ತತನವುಳ್ಳ: ಒಂದು ಊರಲ್ಲಿ ಠಕ್ಕ ವೇದಾಂತಿಯು ಇದ್ದನು (ಕಗದ್ಯ. II, ೩೬). [ ಟಕ್ಕು₁ + – ಅ₇ ]

**ಟಕ್ಕಿ** (ನಾ). ಮೆಲ್ಲಗೆ ತಟ್ಟುವುದಂ,–ಬಡಿಯುವುದು: ಒಬ್ಬರ ಕೈಯಲ್ಲಿರುವ ಕೋಲಿಗೆ ಇನ್ನೊಬ್ಬರು ಟಕ್ಕಿ ಹೊಡೆಯುತ್ತಾ ಹಾಡುವರು (ಹುಟ್ಟಹ. ೩೦).

[ ←ಮರಾ. ಟಾಕೀ ]

**ಟಕ್ಕಿಗ** (ನಾ).=ಟಕ್ಕ ೧: ತಾಣ್ಪಕ್ಕಿಗರ್, ತಾಂ ಟಕ್ಕಿಗರ್ (ಶಬ್ದಾನು. ೮೦ ಪ್ರಯೋ). [ ಟಕ್ಕು₁ + – ಇಗ ]

**ಟಕ್ಕಿಸು, ಠಕ್ಕಿಸು** (ಕ್ರಿ). ಮೋಸಗೊಳಿಸಂ; ವಂಚಿಸಂ: ಟಕ್ಕಿಪನಂ ತುಱಿ ಮೇಕುದೊರ್ವನಂ ಮಾಳಬೆಗಿಕ್ಕು ಪೂಟ್ ಪುಸಿವನಂ (ಲೀಲಾವ. ೨-೦೧೬); ಟ[ಪಾಠಾಂ. ಠ]ಕ್ಕಿಪ ನಲ್ಲನ ಟ[ಪಾಠಾಂ. ಠ]ಕ್ಕಿಪ ತೆಱನನು ಚದುರೆ ಚದುರಿಸದೆ ನೀನುಸುರಾ (ಉಶಿವ. ೨೯-೦೦); ಹದಿರಿನೊಳು ಟಕ್ಕಿಸುವ ಬಯಲ ಮಾತಿನ ಮಾಲೆಯಿಂ ಅನುಮಾನಗಳ ಬಿಟ್ಟು . . . ಎನ್ನ ಮನಸಿಜನ ಬಾಣಕ್ಕೆ ಬಲಿಯನಿಕ್ಕನುತೆ ಕೈ ಮುಗಿಯೆ (ಪ್ರಭುಪು. ೮-೬೨). **ಠಕ್ಕಿಸು:** ವರ್ಗ ದ್ವಿತೀಯಾಕ್ಷರಂಗಳ್ಗೆ – ಠಾವು, ಠಾಣಂ, ಠಕ್ಕಿಸಿದಂ (ಠಕ್ಕಿಸಿದಂ) (ಶಮದ. ೦೫ ಪ್ರಯೋ); ಠಕ್ಕಿಸುವ ತನ್ನ ನಿಜಗುಣವನೇಕೆ ಮಾಣ್ಬಂ (ಪದ್ಮರಾ. ೦೩-೭); ಅಂಧಕಾದ್ಯರ ಠಕ್ಕಿಸಿಯೆ ಇಂದ್ರಾದಿದೇವರಿಗಿತ್ತನಾ ಸುಧೆಯ (ಸಂಧಹ ೬-೫೩); ಮಗನ ಠಕ್ಕಿಸಿ ತಾಯಿ ಮಲಗಿರಲಾ ಶಿಶುವು ಮಗುಳೆ ಕ್ರಮಗೆಟ್ಟು ಕಂಡಲ್ಲಿ ಅರಸಿ ಕಣ್ಣಿಗೆ ಬೀಳದಿರೆ (ವಿಪ್ರಸು. ೦೮-೪). [ ಟಕ್ಕು₁ + – ಇಸು₃ ]

**ಟಕ್ಕು₁, ಠಕ್ಕು₃, ಡಕ್ಕು, ತಕ್ಕು₃** (ನಾ). ೧. ಮೋಸ; ವಂಚನೆ; ಕಪಟ; ತಂತ್ರ: ಮಾಯದ ಟಕ್ಕಿನ ಕಪಟದ ವಾಯದ ಕೃತ್ರಿಮದ ಮಱುಕದೆಱಕದ ಕಪಟೋಪಾಯದ ಕಣೆಗಳ್ ಸಂದ ಸ್ತ್ರೀಯರ್ಕೇವಲಮೆ ಸರ್ವಜನವಂಚಕಿಯರ್ (ಧರ್ಮಾಮೃ. ೭-೦೫೬); ಪೋ ಟರ್ಕದಂತುಂ ಹರಿಬವನಿನಿತುಂ ಟಕ್ಕನಾಂತಲ್ಲಿ ನೋಟ್ಟುಂ (ಚಂದ್ರಪು. ೬-೨೫ ವ); ದೂರ್ವಾಸ ಬರಲು ವಂದಿಸುತ ಟಕ್ಕಿನಿಂದೊರ್ವ ವನಿತೆಯು ಪೊಡೆಯೊಳೊಂದೊನಕೆಯಂ ಕಟ್ಟಿ ಗರ್ಭದೊಳಗಿರ್ಪುದೇನೆಂದು ಬೆಸಗೊಳಲ್ (ಸೌಂದಪು. ೪-೫೪); ಟಕ್ಕಂ ಟಾಳಿಸಿ ಕನ್ನಂಗೊಱಿದು (ಪ್ರಭುಪು. ೪-೦೪೭); ನಿನ್ನ ಮಗ ಭೀಷ್ಮನನ್ನು ಅರ್ಜುನ ಟಕ್ಕಿನಿಂದ ಕೊಂದ (ಬಿದುರಿ. ೪೨). ೨. ತೋರಿಕೆ; ಬೂಟಾಟಿಕೆ: ಧನಮಿತ್ರನೊಳ್ ಟಕ್ಕಿನ ಜಗಳವನಂದಂದಿಂಗೆಸಗೆಂದು ಪೇಟ್ದು (ದಶಕು. ೮-೦೫೨ ವ). **ಠಕ್ಕು:** ೧. ಉತ್ತಮರ ಮುಂದಾವ ಠಕ್ಕಿರಲಾಪುದು (ಹಡಕಾ. ೦೦-೨೬); ಅನಿಲಸುತ ಘಡ ಮರಳು ಠಕ್ಕಿನ ವಿನಯಮೇ ನಮ್ಮೊಡನೆ (ಕುಮಾವ್ಯಾದ್ರೋ. ೦೩-೮); ಠಕ್ಕು ವಿನೋದ . . . ವಂಚನೆ ನೇಹವೆಂಬೀ ಪರಿಯ ಮಾಯಾಮಯದ ಮಹಿಳಾಜನ ವಿರಾಜಿಸಿತು (ತೊರರಾ. ೦-೫-೩೨); ಠಕ್ಕು ಪಳಿವು ಬೆಳುಗವತೆ . . . ಗಳಹತನಮವಿವೇಕಮುಸಿರ ಲೇನಾ ಚೆನ್ನಬಸವನಿಹ ರಾಜ್ಯದೊಳ್ ವಿಸುಕವು (ಚಬಪು. ೬-೪೦); ಠಕ್ಕಿನ ಪಟ್ಕಿ ಕಾಳಿಯ ತವರ್ ಕವಡಿಂಗೆಡೆ (ಚಕವಿ. ೬-೭೪). ೩. ಮಾಯೆ; ಮಾಟ: ಸಭೆ ಠಕ್ಕುಕವಿದಂತೆ ನೋಡುತಿರೆ (ತಿರ್ಥರ. ದೇ. ೧೬-೧೩). ೪. ಮಂರುಳು; ಮೋಹ. 'ಠಕ್ಕುಗೊಳ್' ಪರಾ. **ಡಕ್ಕು:** ೫. ಮರುಳುಗೊಳಿಸುವ ಮದ್ದು; ಎಚ್ಚರ ತಪ್ಪಿಸುವ ಮದ್ದು. 'ಡಕ್ಕುಗೊಳ್' ಪರಾ. **ತಕ್ಕು₃:** ೧. ಕುನಿಕುನಿದು ವನದ ಗಿಡುಗಿಡುವಿನ ಮಱಿಮಱಿಯಲ್ಲಿ ಸುಳಿದು ಸುಳಿದೋಡುವ ತ[ಪಾಠಾಂ. ಟ]ಕ್ಕಿನ ಹರಿಣನನತಿಭರದಿಂ ತ ನ ತ ನ ಗೆ ಪುಳಿಂದರಟ್ಟಿ ಮುಟ್ಟುತ್ತೆಚ್ಚರ್ (ಗಿರಿಕ. ೦-೯೨). 'ತಕ್ಕುಗೊಡು' ಪರಾ.

**ಟಕ್ಕನಿಕ್ಕು, ಠಕ್ಕನಿಕ್ಕು**=ಮಂರುಳುಗೊಳಿಸುವ ಮದ್ದಿಡು; ಎಚ್ಚರ ತಪ್ಪಿಸುವ ಮದ್ದನ್ನಿಣ್ಣಿಸು: ಶ್ರೀಧರಮುನಿನಾಥನವರ ಕಪಟವೃತ್ತಿಯನಱಿಯದುಂಡು ಸೊಕ್ಕಿ ಮೆಯ್ಯಱಿಯದೆ ಟಕ್ಕನಿಕ್ಕಿದಂತು ಕೆಡೆದು ನಿದ್ರೆಗೆಯ್ವುದುಂ[ಪಾಠಾಂ. ಟಕ್ಕುಗೊಂಡಂತೆ ತೂಂಕಡಿಸಿ ಕೆಡೆದರ್] (ಧರ್ಮಾಮೃ. ೦೦-೦೨೭); ಮನಸಿಜರಾಜಂ ನೋಟಕಜನಕ್ಕೆ ಲೇಸಾಗಿ ಠಕ್ಕನಿಕ್ಕಿದನೆಂಬಂತನವರತಂ ರಂಜಿಸಿದುವು ಜನಪತಿಯೋಲಗದೊಳಾದ ಪಲವುಂ ನೃತ್ಯಂ (ಧರ್ಮಾಮೃ. ೪-೦೫೦); ಕಡು ಮುಳಿದೆಯ್ದಿ ಪಿಡಿದು ಮೊಗಮಿಕ್ಕಿದೊಡೆ ಪೊಳೆದು ಪೋಗಿ ಠಕ್ಕನಿಕ್ಕಿದಡೆ ನಿರ್ವರ್ತಿಸಿ ಕಳೆದು (ಬಂಹರಿ. ೨-೫೦ ವ). **ಟಕ್ಕು ತಿನಿಸು** = ವಂಚಿಸಂ; ಮೋಸಗೊಳಿಸು: ಮುದ್ದಾಂ–ನನಗೆ ಟಕ್ಕು ತಿನಿಸಲಿಕ್ಕೆ ಅಂತ ಅವ ಮಾಡೋ ಅವನ (ಗಂಮಾಯಿ. ೦೦೭). **ಠಕ್ಕಿನ ಬೂದಿ** = ಮಂಕಂಬೂದಿ: ಮದನಾಂಜನ ಚೋರ ಮೋಹಿಜನದ ಮೇಲೆ ಕೆದರ್ದ ಠಕ್ಕಿನ ಬೂದಿಯಂತೆ (ಶ್ರಿಪಾಲ. ೪-೦೧೯). **ಠಕ್ಕು ಸುಂಡೆ** = ಮಂಕುಗೊಳಿಸುವ ತಿಂಡಿ; ಮದ್ದು ಹಾಕಿರುವ ಉಂಡೆ: ಸ್ಪಂದನಮಿಲ್ಲದಕ್ಷಿಗಳಿನೀಕ್ಷಿಸುತಿರ್ದುದು ಠ[ಪಾಠಾಂ. ಟ]ಕ್ಕಿ ಸು ಂ ಡೆ ಯ ಂ ತಿಂದವೊಲಾಗಳೊಂದಿನಿತು ಪೊಟ್ಟಿನೊಳಾ ಸಭೆ (ವರ್ಧಪು. ೩-೫೪). **ಠಕ್ಕು ಬಿಕ್ಕು**=ಮೋಸ; ವಂಚನೆ: ಠಕ್ಕುಬಿಕ್ಕಿನ ಮಾತುಗಳಾಡಲು ಯುಕುತಿಯ ನಾ ಕೇಳೆನೆಲವೊ (ವಿದಾಕ್ಕ. ೩೫ ಅನುಪಲ್ಲವಿ). **ಠಕ್ಕುಮಾಡು**=ಮೋಸಮಾಡು; ವಂಚಿಸು: ಆಚಾರ್ಯರೆ ನಿಜವಾಗಿ ನಿಮಗೆ ಮರವೆ ಹೆಚ್ಚಾಗಿದೆ. ಇಲ್ಲವೆ ಇನ್ನೂ ಠಕ್ಕು ಮಾಡುತ್ತೀರಿ (ವಾಗ್ದೇವಿ. ೩೭).

[ ದೇ.; ತಮಿ. ತುಳು. ತೆಲು. ಟಕ್ಕು ]

**ಟಕ್ಕು₂** (ನಾ). ಆತಂಕದಿಂದ ಕೂಡಿದ ಚಿಂತೆ,–ವ್ಯಥೆ: ವೇಣೂಬಾಯಿ ತನ್ನ ಚಿಕ್ಕಮಗ ಶ್ರೀಪಾದನನ್ನು ಎದೆಗೆ ಅವಚಿಕೊಂಡು ಒಂದೇ ಟಕ್ಕಿನಲ್ಲಿ ಮಲಗಿದ್ದಳು (ಗಂಮಾಯಿ. ೭೦); ಟಕ್ಕು ಹಿಡಿದ ಠಕ್ಕಿ . . . ಕಿಟಕಿಯ ಬಳಿ ಸಾರಿದಳು (ದೀಪಹ. II, ೨೪೩). [ ←ಮರಾ. ಠಕ್ ]

**ಟಕ್ಕು₃** (ನಾ). ವಂಡಿಕೆ ಹಾಕಿ ಹೊಲಿದ ಹೊಲಿಗೆ; ಟಾಕಿ: ಲಂಗ ಬಹಳ ಉದ್ದವಾಗಿದೆ; ಟಕ್ಕು ಹಿಡಿಸಬೇಕು (ರೂಢಿ). 'ಟಾಕು₁' ಪರಾ.

[ ←ಇಂ. Tuck ]

**ಟಕ್ಕುಟವಳಿ, ಟಕ್ಕುಟೌಳಿ, ಠಕ್ಕುಠವಣೆ, ಠಕ್ಕುಠವಳಿ, ಠಕ್ಕುಠವುಳಿ** (ನಾ). ಮೋಸ; ವಂಚನೆ; ಕಪಟ: ಟಕ್ಕುಟವಳಿ ತಟವಟವಟ ಮಟವ ಬಿಟ್ಟಕ್ಕಱಿಂ ದಿಟಪುಟವತ್ತು ಜಪಿಸಲೆಂಟಕ್ಷರಕಾಗಿ ಮೆಯ್ದೋರ್ಪೆ (ಶತಸಾಂ. ೭೦-೫೩). **ಟಕ್ಕುಟೌಳಿ:** ಟಕ್ಕುಟೌಳಿಯೆಸಗುವ ಕೋಟಲೆ ಸಾಕು (ಗೀತಗೋ. ೨೭-೪೬). **ಠಕ್ಕುಠವಣೆ:** ಸಾಹಸದಿಕ್ಕೆ ಸಕಲ ಠಕ್ಕುಠವಣೆಯ ಬೇಹ ಪತ್ತನ ಬಹು ಕಲೆಯ ಗೇಹವೆನಿಪ ಬೆಲೆವೆಣ್ಗಳ ಕೇರಿಗಳೂಹಾತೀತ ವಾಗಿಹವು (ಅಂಜಜ. ೩-೯೫). **ಠಕ್ಕುಠವಳಿ:** ಪುಸಿ ಠಕ್ಕುಠವಳಿಗಳಲ್ಲಿ ಕಟ್ಟಿ ಎಸೆದು ಕೊಲ್ಲುವರೋ ನಿನ್ನವರು ಕೇಳಲ್ಲಿ (ಪುರಂದ. ೨-೩೯-೪). **ಠಕ್ಕುಠವುಳಿ:** ವಿಂಗೆ ಠಕ್ಕುಠವುಳಿ ವಂಚನೆ ದುರ್ಜನತ್ವ ಸಂಯುಗ ವಿಕೃತಿ ರೋಗ ಸಂತಾಪ ಬಲ್ಮುನಿಸು ಹಾನಿಗಳುದಿಸಿದುವು (ಚಬಪು. ೦೪-೨೪). **P** ಒಂದೇ ಅರ್ಥದ ಈ ಜೋಡಿಶಬ್ದಗಳಂ ಪ್ರತ್ಯೇಕವಾಗಿಯೂ ಬಳಕೆಯಾಗುತ್ತವೆ. [ ಟಕ್ಕು₁ + ಟವಳಿ ]

**ಟಕ್ಕುಟೌಳಿ** 'ಟಕ್ಕುಟವಳಿ' ನೋ.

**ಟಕ್ಕುತನ,** ಠಕ್ಕುತನ (ನಾ). ವಂಚಕತನ ; ಮೋಸಗಾರಿಕೆ : (ಕ). **ಠಕ್ಕುತನ :** ಬೊಕ್ಕನಾದರೂ ಠಕ್ಕುತನ ಬಿಡಲಿಲ್ಲ (ಗಾದೆ). [ ಟಕ್ಕು$_1$ + – ತನ ]

**ಟಕ್ಕುದೋಱು** (ಕ್ರಿ). ವಂಚಿಸು ; ಮೋಸಮಾಡು : ಬಿಲಿವೆಣ್ಗೆ ನಿಚ್ಚಮುಮೆಯ್ವೆಲೆಯಿಾಯದೆ ಟಕ್ಕುದೋಱಿ (ವ್ಯಪವಿ. ೨೯-೦೩).
[ ಟಕ್ಕು$_1$ + ತೋಱು ]

**ಟಕ್ಕುರ** (ನಾ). ಒಡೆಯ ; ದೇವತೆ : ಟ[ಪಾಠಾಂ. ಠ]ಕ್ಕುರಂಗೇ ವಾಚಕ ಭೂಪತಿಗೆ ದೆಸೆ ಅಜಾತಂಗೆ ನಿಶ್ಚಯ್ಯ ನೇಮಂಗೆ ಖಂಡಿತಭಾವ ನಿರ್ಧರವಾಗಬೇಕು ಏಘಟದೂರ ರಾಮೇಶ್ವರಲಿಂಗವನಱುವುದಕ್ಕೆ (ಮಹಿಮಂ. ೪೯-೦೭). [ <ಸಂ. ಠಕ್ಕುರ ]

**ಟಕ್ಕುವಗೆ** (ನಾ). ಮೋಸದ ಕ್ರಮ ; ವಂಚನೆಯ ಮಾರ್ಗ : ಆ ಲಾಕ್ಷಾಗೃಹದಾಹವೊಂದೆ . . . ಟಕ್ಕುವಗೆಯಿಂ ಗೆಲ್ದಿರ್ದ ಜೂದೊಂದೆ (ಪಂಪಭಾ. ೯-೨೨). [ ಟಕ್ಕು$_1$ + ಬಗೆ$_3$ ]

**ಟಕ್ಕುಹಿಡಿ** (ಕ್ರಿ). ಆತಂಕದಿಂದ ಪ್ರತೀಕ್ಷಿಸು; ಏಕಾಗ್ರತೆಯಿಂದ ನಿರೀಕ್ಷಿಸು: ಬಾವಿಯ ಮುಂದೆ ಯಾವಾಗ ತಮ್ಮ ಪಾಳಿಯು ಬಂದೀತೆಂದು ಟಕ್ಕು ಹಿಡಿದು ಕುಳಿತಿರುವ ಹೆಂಗಸರು (ಆನಕ. ೯). [ಟಕ್ಕು$_2$ + ಹಿಡಿ$_1$ (<ಪಿಡಿ$_1$)]

**ಟಕ್ಕೆ$_1$** 'ತಕ್ಕೆ$_4$' ನೋ.

**ಟಕ್ಕೆ$_2$** (ನಾ). (?) : ಕೊಠಾರದೊಳಂ ಪುರೊಳಗಂ ಆಳದ ಟಕ್ಕೆ ಸಲಗೆಗೊಮನ ಮತ್ತಯುಗುರ ಮೂನೂರ್ವ್ವರು ದೇವರ ಅಷ್ಟವಿಧಾರ್ಚ್ಚನೆಗೆ [ಯೇಣಿಗೆ] ಹಾರವಂ ಬಿಟ್ಟರು (ಕಇ. V, ೪೬-೮ ; 1288). [ ? ]

**ಟಕ್ಕೆಯ, ಟಕ್ಕೆ$_1$, ಟೆಕ್ಕೆಯ, ಟೆಕ್ಕೆಹ, ಠಕ್ಕೆಯ, ಠೆಕ್ಕೆಯ** (ನಾ). ಬಾವುಟ; ಧ್ವಜ : ಅಲಗಿಂ ಸಿಂಗಮನಿಱಿದನ ಕಲಿತನವಂ ನಗುವ ತೆಱದ್ಧಿ ಮೆಱೆವುದು ಸೆಳೆಯಿಂ ಪುಲಿಪೊಯ್ದು ಕುಱುವು ಪೊಯ್ಸಳ ಕುಲತಿಲಕನ ಮತ್ತಗಜದ [ಟ]ಕ್ಕೆಯದೊಳೀಗಳ್ (ಎಕ. VI, ತರೀಕೆ. ೪೨-೨; 1206) ; ಒತ್ತರಿಪ ಸಿತಕೀರ್ತಿಯೊಳು ಪ್ರಭೆವೆತ್ತು ಪರದರುಶನದ ಮೂಗಿನ ಕತ್ತಿಯೆಂಬಾ ಟ[ಪಾಠಾಂ. ಠೆ]ಕ್ಕೆಯವನಾ ಪುರದೊಳೆತ್ತಿಸಿದ (ಬಸಪು. ೩೩-೫೭); ಹೂವಿನ ತೇರೇನಾದುದು ನಚ್ಚಿನ ತಾವರೆಗೋಲೆತ್ತ ಪೋಯ್ತು ಕೋವಿದನೆ ಗಳ ಟಕ್ಕೆಯವಡಗಿದುದೆಲ್ಲಿ (ವರ್ಧಪ. ೧೨-೨೮). **ಟಕ್ಕೆ$_1$ :** ಬಸವನ ಟೆಕ್ಕೆ ಗಗನದೊಳೆ ಸೊಗಸೆ (ಹಾಲಾಸ್ಯ. ೩-೯-೨೦ ರಗಳೆ) ; ನೆಲಕುದ್ದಿದರು ವಾಜಿಗಳ ಪರಿದರು ಬಿರುದು ಟೆಕ್ಕೆಗಳ (ಅನಂತಾ. ೬-೦೬-೦೫) ; ಕುಗ್ಗದಂತೆ ಹಿಗ್ಗಿಪಂತೆ ನಿನ್ನ ಹೆಸರ ಟೆಕ್ಕೆಯಂ (ಗಿಳಿವಿಂ. ೮೨-೫೭). **ಟೆಕ್ಕೆಯ :** ಹೊಯ್ಸಳ ಕುಳತಿಳಕನ ಮತ್ತಗಜದ ಟೆಕ್ಕೆಯದೊಳ್ (ಮ್ಯಆರಿ. ೧೯೩೭, ೨೩-೫ ; 1196) : ಭೀಮ ನಗುತ ಧನಂಜಯನ ಟೆಕ್ಕೆಯಕೆ ಬಿಜಯಂಗೈಯಬೇಕೆಂದ (ಕುಮಾವ್ಯಾ. ೧೦-೪೦); ಪರುಠವಿಸಿರ್ದ ನಾನಾವಿಧ ಟೆಕ್ಕೆಯ ತೆರಳಿಕು ನಭವನಳ್ಕಿಱಿದು (ಪ್ರೋಹತ. ೧೫-೩೦). **ಟೆಕ್ಕೆಹ :** ಟೆಕ್ಕೆಹವನೆತ್ತಿ ಸಾಱಿಸಿದನೀ ಭೂತಳದೊಳು (ವೀಕ್ಷ್ಮಪು. ೪-೩-೦೭). **ಠಕ್ಕೆಯ :** ಸೌರಾಷ್ಟ್ರನಾಥಂ ನಿಸದದಿಂ ನಾಳೆ ಬರ್ಪಂ ಠಕ್ಕೆಯವನು ಕಳುಹಿಸಿದಂ (ಪಾಸೋಪು. ೪-೦೦೯) ; ನಸುಗಾಳಿ ಗೊಲಿದಾಡುವೆಳಗೊಂಬೆ ಸೊಂಡಿಲಾಗಸಕೆದ್ದ ನಟ್ಟಗೊಂಬೆಸೆವ ಠಕ್ಕೆಯ ಮಾಗಲಸಮುಶರನೆಡಬಲದೊಳಿಟ್ಟಣಿಸಿ ನಡೆವ ಮಾಮರದಾನೆಗಳ್ ಮೆಱೆದುವು (ಜಬಪು. ೩೫-೮) ; ನೆನೆದಾಗ ಬರುವೆನು ರಥದ ಠಕ್ಕೆಯುಕ್ಕಿನುತೆ ಕಳುಪಿಸಿಕೊಂಡ ಬಳಿಕ (ತುರಂಗ. ೧೫-೩೭). **ಠೆಕ್ಕೆಯ :** ಬಿಗಿದ ಗುಳದಲಿ ಹೊಳೆಯೆ ಹೊಂಗೆಲಸದ ಸುರೇಖೆಗಳು ಗಗನ ಗಂಗಾನದಿಯ ಕಾಲುವೆ ತೆಗೆದರೆನೆ ಠೆಕ್ಕೆಯುದ ಪಲ್ಲವವಗಿಯೆ ಮೆಱೆದುದು (ಕುಮಾವ್ಯಾದ್ರೋ. ೩-೪) ; ಶಲ್ಯ ಕಡಿದನು ಭಟನ ಠೆಕ್ಕೆಯವ (ಕುಮಾವ್ಯಾದ್ರೋ. ೬-೩೫).
[ ದೇ.॥ ತಮಿ. ಟಕ್ಕಯ, ಟಕ್ಕಿಯ ; ತೆಲು. ಟೆಕ್ಕೆ, ಟೆಕ್ಕಿಯ ]

**ಟಗರು** 'ತಗರ್$_2$' ನೋ.

**ಟಗರುದಲೆಯ** (ನಾ). ಟಗರಿನ ತಲೆಯನ್ನು ಉಳ್ಳವನು ; ದಕ್ಷಪ್ರಜಾಪತಿ ; ದಕ್ಷಬ್ರಹ್ಮ : (ಕ). [ ಟಗರು (<ತಗರ್$_2$) + ತಲೆ$_1$ + – ಅ$_7$ ]

**ಟಣ್** (ನಾ). ಒಂದು ಅನುಕರಣ ಧ್ವನಿ : (ಕ).
**ಟಣ್‌ಟಣ್** (ದ್ವಿರುಕ್ತಿ) : ಸೈಕಲ್ ಬೆಲ್ಲು ಟಣ್‌ಟಣ್ ಎಂದು ಸದ್ದು ಮಾಡುತ್ತ ಹೋಯಿತು (ರೂಢಿ). 'ಟಂಟಣಿಸು$_1$' ಪರಾ.

**ಟಣಕಲಿ** 'ತನಕಲಿ' ನೋ.

**ಟಣ್ಣನೆ** (ಅ). ಚಂಗನೆ : ಒಬ್ಬೊಬ್ಬರೆ ಟಣ್ಣನೆ ಜಿಗಿದುಬಿಟ್ಟರು (ಮುಂಗಾಪು. ೬೮). [ ಟಣ್ + – ಅನೆ$_1$ ]

**ಟತ್ವ** (ನಾ). 'ಟ' ಎಂಬ ಅಕ್ಷರ ; ಟಕಾರ : ಕಡಿದು ನಿಡಿದೆಂಬ ನಡುವೆಂಬ ಡಕಾರಂ ಟತ್ವಮಾಯ್ತು (ಶಮದ. ೧೮೦). [ ಸಂ. ]

**ಟನ್** 'ಟನ್ನು' ನೋ.

**ಟನ್ನು, ಟನ್** (ನಾ). ಸುಮಾರು ತೊಂಬತ್ತು ಮಣಗಳಷ್ಟು ತೂಕ : " ೨,೨೪೦ ಪೌಂಡಿನ ತೂಕ : ಟನ್ನು " (Ton. ಇಂಕನಿ.); ಸದ್ಯವೇ ಸಿಗಲಿದೆ ಸಾಲವು ಕಂಡಾ ಸತ್ಯ ಅಹಿಂಸೆಯ ನೂರ್ ಟನ್ನು (ಅರರೋ. ೩೪-೦೫). **ಟನ್:** ೨೦ ಟನ್‌ಗಳ ಭರಾವಣೀ ಬಾಬತು ಜಹಜನ್ನು ಯಾ ಅಂತಸ್ತಿನ ಜಹಜನ್ನು ನಾಶಪಡಿಸುವ . . . ಇರಾದೆಯಿಂದ ಕೆಡಕು ಮಾಡೋಣ (ಗ್ರಾಮಾಕ. ೦೯೮). [ ←ಇಂ. Ton ]

**ಟಪಾರಿಕೆ, ಟೆಪಾರಿಕೆ** (ನಾ). ೧. ಮುಚ್ಚಳ ; ಹೊದಿಕೆ : ಮರುದಿವಸ ಬೆಳಗಾಥ ಮೇಲೆ ತಲೆ ಬಿಚ್ಚಿ ನೋಡಲು, ತಲೆಯ ಟಪಾರಿಕೆಯೇ ಕಡೆಗಾಯಿತು. ಆದರೆ ತಲೆಯು ಅಚ್ಚಳಿದಿದ್ದಿಲ್ಲ (ಕಲಕು. ೧೪). **ಟೆಪಾರಿಕೆ : ೨.** ಘನ ಅಳತೆಯ ಮಾನದಲ್ಲಿ ಅಳತೆಗಿಂತ ಹೆಚ್ಚಾಗಿರುವ ಧಾನ್ಯವನ್ನು ತೊಡೆದುಹಾಕುವಿಕೆ ; ಅಳತೆ ಮಾಡಿಕೊಡುವಾಗ ತಲೆಸವರುವಿಕೆ : (ಕ). [ ←ಹಿಂ. ಟಪರಾ; ಮರಾ. ಟಪ್ಪರ ]

**ಟಪಾಲ್** 'ಟಪಾಲು' ನೋ.

**ಟಪಾಲು, ಟಪಾಲ್, ಟಪ್ಪಾಲು** (ನಾ). ೧. ಅಂಚೆ; ಅಂಚೆಯ ಮೂಲಕ ಬಂದಿರುವ ಅಥವಾ ಕಳುಹಿಸಲಿರುವ ಪತ್ರ ಮೊದಲಾದುವು ; ಈ ಮಾತುಗಳು ಮುಗಿಯುವ ಹೊತ್ತಿಗೆ ಟಪಾಲು ಬಂತು (ರಂಗಳ. ೩೦) ; ವಾರಕ್ಕೊಮ್ಮೆ ಪೋಸ್ಟುಮನ್ ಚಾವಡಿಗೆ ಬಂದು ಟಪಾಲನ್ನಿತ್ತು ರಾತ್ರಿ ಅಲ್ಲಿಯೇ ತಂಗುತ್ತಾನೆ (ಗಾಳಿಗು. ೩). **೨.** ಅಂಚೆಯ ರವಾನೆ. **ಟಪಾಲ್ :** ೧. ಹಾಗೆ ರಿಜಿಸ್ಟರ್ ಪೋಸ್ಟಿನಲ್ಲಿ ರವಾನಿಸಬೇಕಾದರೆ ಟಪಾಲ್ ಛಾರ್ಜನ್ನು ಡಿಪಾಜಿಟ್ಟಾಗಿ ಇಡಬೇಕು (ಗ್ರಾಮಾಕ. ೬೬). **ಟಪ್ಪಾಲು :** 'ಟಪ್ಪಾಲು ಕಟ್ಟೆ' ಪರಾ. [ ←ಮರಾ. ಟಪಾಲ್, ಟಪ್ಪಾಲ್ ]

**ಟಪಾಲುಗಾಡಿ** (ನಾ). ಅಂಚೆಯನ್ನು ಸ್ಥಳದಿಂದ ಸ್ಥಳಕ್ಕೆ ಒಯ್ಯುವ ಗಾಡಿ: ರಸ್ತೆಯ ಮೂಲಕ ಟಪಾಲು ಸಾಗಿಸುವ ಬಂಡಿ; ಟಪಾಲುಬಂಡಿ (Mail-Cart. ಇಂಕನಿ.). [ ಟಪಾಲು + ಗಾಡಿ$_3$ ]

**ಟಪಾಲುಸಿಪಾಯಿ** (ನಾ). ಅಂಚೆಯನ್ನು ತರುವ ಆಳು ; ಅಂಚೆಪೇದೆ : ತುಬಾಕಿಯ ಗುರಿತಪ್ಪಿ . . . ಮನೆಗೆ ಪತ್ರ ಕೊಡಲಿಕ್ಕೆ ಬರುತ್ತಿದ್ದ ಒಬ್ಬ ಟಪಾಲುಸಿಪಾಯಿಗೆ ತಾಕಿತು (ಮೋಹಿನೀ. ೦೦೨). [ ಟಪಾಲು + ಸಿಪಾಯಿ ]

**ಟಪ್ಪಾ** 'ಟಪ್ಪೆ' ನೋ.

**ಟಪ್ಪಾಲು** 'ಟಪಾಲು' ನೋ.

**ಟಪ್ಪಾಲುಕಚೇರಿ** (ನಾ). = ಟಪ್ಪಾಲುಕಟ್ಟೆ: ನಮ್ಮ ಹಳ್ಳಿಗೆ ಒಂದು ಟಪ್ಪಾಲುಕಚೇರಿ ಮಂಜೂರಾಗಿದೆ (ರೂಢಿ).
[ ಟಪ್ಪಾಲು (<ಟಪಾಲು) + ಕಚೇರಿ ]

**ಟಪ್ಪಾಲುಕಟ್ಟೆ** (ನಾ). ಅಂಚೆಕಚೇರಿ : (ಕ).
[ ಟಪ್ಪಾಲು (<ಟಪಾಲು) + ಕಟ್ಟೆ$_1$ ]

**ಟಪ್ಪೆ, ಟಪ್ಪಾ** (ನಾ). ೧. ಪ್ರಯಾಣದ ದಾರಿಯ ಮಧ್ಯದಲ್ಲಿ ಏರ್ಪಡಿಸಿರುವ ನಿಲುಗಡೆಯ ಸ್ಥಳ; ಮಜಲು; ವಾಹನವನ್ನು ಬದಲಾಯಿಸಿಕೊಳ್ಳುವ ಅಥವಾ ಹೊರೆಯನ್ನು ಒಂದು ತಲೆಯಿಂದ ಮತ್ತೊಂದು ತಲೆಗೆ ಬದಲಾಯಿಸಿಕೊಳ್ಳುವ ಎಲ್ಲೆ: ತಲೆಯಿಂದ ತಲೆಗೆ ಪೀಳಿಗೆಯಿಂದ ಪೀಳಿಗೆಗೆ ಅಲೆಯಿಂದಲೆಗೆ ಟಪ್ಪೆಯ ಚಾರನಂತೆ ಇಳಿಯುತಿದೆ ಯುಗದಿಂದ ಯುಗಕೆ ಮಾನವಧರ್ಮ (ಮಂಕುಕ. ೯೦೮). ೨. ಟಪ್ಪಾಲು ; ಅಂಚೆ : ಒಂದು ಪತ್ರವನ್ನು ಬರೆದು ಕುದುರೆ ಟಪ್ಪೆಯಿಂದ ಕಳುಹಿಸಿಕೊಟ್ಟನು (ಚಿಳಚಾ. ೩೭೩). **ಟಪ್ಪಾ** : ೧. ದಾರಿಯಲ್ಲಿ ನಿಲ್ಲಡೆ ; ನಿಲ್ದಾಣ; ಮಜಲು; ಟಪ್ಪಾ (Stage. ಇಂಕನಿ.).

**ಟಪ್ಪಾ ಬಂಡಿ** = "ಮಜಲಿನಿಂದ ಮಜಲಿಗೆ, ಬಾಡಿಗೆ ಗೊತ್ತುಮಾಡಿದ ಅಥವಾ ಬಾಡಿಗೆಯ ಟಪ್ಪಾಕುದುರೆಯಿಂದ ನಡೆಸುವ, ಟಪ್ಪಾ ಬಂಡಿ"(Post-Chaise.ಇಂಕನಿ.);"ಮಜಲುಗಾಡಿ, ಟಪ್ಪಾಬಂಡಿ" (Stage-Coach. ಇಂಕನಿ.). **ಟಪ್ಪೆಓಟ**=ಒಂದು ಬಗೆಯ ಓಟದ ಪಂದ್ಯದಲ್ಲಿ ಒಂದು ಮಜಲಿನಿಂದ ಮತ್ತೊಂದು ಮಜಲಿಗೆ ಓಡುವ ಓಟ : ಆಯಾ ತಂಡದಲ್ಲಿ ಒಬ್ಬನು ಒಂದು ಮಜಲಿಂದ ಮುಂದಿನ ಮಜಲಿಗೆ ಓಡಿ ನಿಲ್ಲುವ, ಅಲ್ಲಿನವನು ಅಲ್ಲಿಂದ ಮುಂದಿನ ಮಜಲಿಗೆ ಓಡುವ, ಹೀಗೆ ಆಯಾ ತಂಡದಲ್ಲಿ ಪ್ರತಿಯೊಬ್ಬನೂ ಮುಂದಿನ ಮಜಲಿಗೆ ಓಡಿ, ಕೊನೆಗಿರುವವನು ಗುರಿಯನ್ನು ಮುಟ್ಟುವ ಓಟದ ಪಂದ್ಯ; ಟಪ್ಪೆ ಓಟದ ಪಂದ್ಯ; ಮಜಲು ಓಟದ ಪಂದ್ಯ (Relay race. ಇಂಕನಿ). **ಟಪ್ಪೆಕುದುರೆ, ಟಪ್ಪಾಕುದುರೆ** = ಒಂದೊಂದು ಮಜಲಿನಲ್ಲಿ ಬದಲಾಯಿಸಿಕೊಳ್ಳುವ ವಾಹನದ ಕುದುರೆ; ದೀರ್ಘಪ್ರಯಾಣದಿಂದ ಒಂದೇ ಕುದುರೆಗೆ ಆಯಾಸವಾಗದಂತೆ ಅಶ್ವಾರೋಹಿಗೆ ವಾಹನವನ್ನು ಬದಲಾಯಿಸಿಕೊಳ್ಳುವುದಕ್ಕಾಗಿ ಒಂದು ನಿರ್ದಿಷ್ಟ ಸ್ಥಳದಲ್ಲಿ ಸಿದ್ಧವಿರುವ ಕುದುರೆ; ಮಜಲಿನ ಅಶ್ವ: (+); "ಟಪ್ಪಾಕುದುರೆ" (Post-horse.ಇಂಕನಿ.); ದಣಿದ ಕುದುರೆಗಳಿಗೆ ಬದಲಾಗಿ ಹೂಡುವ ಹೊಸ ಕುದುರೆಗಳ ತಂಡ; ಟಪ್ಪಾ ಕುದುರೆಗಳ ತಂಡ (Relay. ಇಂಕನಿ.). **ಟಪ್ಪೆಯ ಸವಾರ** = "(ಚರಿತ್ರೆ) ಕಾಗದ ಪತ್ರಗಳನ್ನು ಮುಂದಿನ ಮಜಲಿಗೆ ಒಯ್ಯುವುದಕ್ಕಾಗಿ ದಾರಿಯುದ್ದಕ್ಕೂ (ಹಲವು) ಮಜಲುಗಳಲ್ಲಿ ಕುದುರೆಯ ಸಮೇತ ನಿಲ್ಲಿಸಿರುವ ಸವಾರರಲ್ಲೊಬ್ಬನು" (Post. ಇಂಕನಿ.).

[ ←ಹಿಂ. ಮರಾ. ಟಪ್ಪಾ ]

**ಟಪ್ಪೆನಿಲ್ಲು** (ಕ್ರಿ). ಬೇರೊಬ್ಬರ ತಲೆಯ ಮೇಲಿನ ಹೊರೆಯನ್ನು ಇಳಿಸಿಕೊಂಡು ತಾನು ವಹಿಸಿಕೊಳ್ಳುವುದಕ್ಕಾಗಿ ಗೊತ್ತಾದ ಮಜಲಿನಲ್ಲಿ ಸಿದ್ಧವಾಗಿ ನಿಲ್ಲು : (+). [ ಟಪ್ಪೆ + ನಿಲ್ಲು (<ನಿಲ್) ]

**ಟಪ್ಪೆಯಿಡು** (ಕ್ರಿ). (ಎತ್ತು, ಕುದುರೆ ಮೊದಲಾದ) ವಾಹನಗಳ ಬದಲಾವಣೆಗಾಗಿ ಅಲ್ಲಲ್ಲಿ ಗೊತ್ತಾದ ಮಜಲುಗಳಲ್ಲಿ ಬೇರೆಯ ವಾಹನಗಳನ್ನು ಸಿದ್ಧಪಡಿಸು : (+).

[ ಟಪ್ಪೆ + ಇಡು$_1$ ]

**ಟಬರು** (ನಾ). (ಉಕ) ಅಧಿಕಾರ ದರ್ಪ ; ಜಬರ್ು; ಗರ್ವದ ವರ್ತನೆ : ಎಲ್ಲೀತನಕಪಾ ಇನ್ನೂ ಅಳಿಯಂದಿರು ಅಂಬೋ ಟಬರು (ವೃನಿ. ೩೨೮); ಏಟ ಅವನ ಟಬರು (ಗ್ರಾಮಾಯ. ೧೫೩).

**ಟಬರು ನಡೆಸು** = ದರ್ಪವನ್ನು ತೋರು : ಸುಭದ್ರೆಯು ವಿದ್ಯಾಭೂಷಿತೆಯು, ಸುಧಾರಕಳು, ಈವರೆಗೂ ಗಂಡನ ಮೇಲೆ ಟಬರು ನಡೆಸುತ್ತ ಬಂದವಳು (ಭಾಮಿನಿ. ೯೨). **ಟಬರು ಮಾಡು** = ಅಧಿಕಾರ ಚಲಾಯಿಸು : "ಯಾಕರೀ ಸಾಹೇಬರ ಮತ್ತ ನೀವೂ ಬಾಡಿಗೀ ಕೊಟ್ಟಿಲ್ಲಂತ? " ಎಂದು ಹುಣಸೀಕೊಪ್ಪ 'ಟಬರು' ಮಾಡಿದನು (ರಾಯಜಾ. ೧೨೦).

[ <ಜಬರು ? ]

**ಟಬ್ಬು** (ನಾ). ನೀರು ತುಂಬಲು ಮರ ಅಥವಾ ಲೋಹದಿಂದ ಮಾಡಿದ ಅಗಲವಾದ ಬಾಯುಳ್ಳ ಪಾತ್ರೆ: ಜನಗಳಿಗಾಗಿ ಬಟ್ಟೆಬರೆ ಒಗೆಯುವುದಕ್ಕೋಸ್ಕರ ತುಂಬಿಟ್ಟ ದೊಡ್ಡದೊಂದು ಟಬ್ಬು (ಹೂದಿಸಿ. ೧೭).

[ ←ಇಂ. Tub ]

**ಟಮಕಿ** 'ಟುಮುಂಕು' ನೋ.

**ಟಮಾಳ, ಟವಾಳ, ಠಮಳ, ಠಮಾಳ, ಠವಳ, ಠವಾಳ** (ನಾ). ೧. ಮೋಸ; ಕಪಟ; ವಂಚನೆ; ಧೂರ್ತವಿದ್ಯೆ: ದುರಾಗ್ರಹಂ ಚಿತ್ತದೊಳಾಗೆ ನಿನ್ನ ಬಟಿಯಂ ಬರಲೀ ಮುಳಿಸೇಂ ಟ[ಪಾಠಾಂ. ಸಿಂತ]ಮಾಳದಿಂ ಸುತ್ತುವರ್ಗಲ್ಲದೊಲ್ಲೆ (ಕಾವ್ಯಾವ. ೯೫೦). ೨. ವಂಚನೆಯ ಮಾತು: ದುರ್ವಿಮಂತ್ರಮುಂ ಪರೆಪ ಟ[ಪಾಠಾಂ. ಠ]ಮಾಳಮಂ ಪಿರಿದನೋದಿದೊಡಪ್ಪ ಪದಾರ್ಥಮಾವುದೋ (ಪಂಪಭಾ. ೧೩-೬೬). **ಟವಾಳ** : ೩. ಮರುಳು ; ಮೋಹ ; ಮಾಯೆ. 'ಟವಾಳಿಸು' ಪರಾ. **ಠಮಳ** : ೧. ತೊಟ್ಟ ಠಕ್ಕು ಠಮಳವ ಬಿಟ್ಟು ಸರ್ವರಾಗವಿರಾಗನಾಗಿ (ಶೂನ್ಯಸಂ.೨೪೧). **ಠಮಾಳ**: ೧. ದ್ರೋಹ ಠಮಾಳಂ ಮಾಡುವೆನಾಹವಮಂ ಕಂಡು ಮಾಣೆಂ (ಬಂಹರಿ. ೧೨-೮) ; ಬೊಂಬುಳಿಯಾಳಮಾಳಮುಂತೆ ಠಮಾಳಂ . . . ಬಟು ಸಂದೇಹಂ (ಶಮದ. ೨೫). 'ಠಮಾಳತನ' ಪರಾ. **ಠವಳ** : ೧. ಭಕ್ತರ ಗುಣವ ನೋಡಿಹೆನೆಂದು ತೊಟ್ಟ ಠಕ್ಕು ಠವಳವ ಬಿಡು (ಮದೀವ. ೨೬೨-೧೨). **ಠವಾಳ**: ೧. ಎಳತಟ ಠಕ್ಕು ಠವಾಳ ತಿರಸ್ಕಾರ ಕಳವಳ ವಂಚನೆ(ಚೋಗಾಂವಿ. ೩-೨೩) ; ಕಳವಳದಾಳವಮಾಳದ ವಿಟಾಳಿ ಠವಾಳದ ಸೂಳೆವೆಂಗಳಾಕುಳ ರತಿಕಾಮಕೇಳಿಯ ವಿಕಾರದ ಭೋಗದೊಳಿರ್ದರಾಗಳುಂ (ಹಮ್ಮಿರ. ೨-೮೯).

[ ? ]

**ಟಯರು** 'ಟೈರು' ನೋ.

**ಟರಟರ** 'ಟಟಟಟ' ನೋ.

**ಟರ್ಕಿಕೋಳಿ** (ನಾ). ದೊಡ್ಡ ಆಕಾರದ (ಮಾಂಸಾಹಾರಿಗಳು ರುಚಿಕರವಾದುದೆಂದು ತಿಳಿದಿರುವ, ತುರ್ಕಿದೇಶದ್ದೆಂದು ಭ್ರಮಿಸಲಾಗಿದ್ದ) ಅಮೇರಿಕದ ಒಂದು ಬಗೆಯ ಕೋಳಿ : ಸಾಮಾನ್ಯ ಕೋಳಿಸಾಕಣೆಯನ್ನರಿತ ರೈತನು ಟರ್ಕಿಕೋಳಿ, ಗಿನಿಕೋಳಿ, ಬಾತುಕೋಳಿಗಳನ್ನು ಸುಲಭವಾಗಿ ಸಾಕಬಹುದು (ಬಾಲಪ್ರ. III, ೧೭೬೯).

[ ಟರ್ಕಿ$_0$ + ಕೋಳಿ$_1$ (<ಕೋಟಿ$_1$) ]

**ಟರ್ಕಿಟವಲು** (ನಾ).ಗುಂಜುಗುಂಜಾದ ಹೆಣಿಗೆಯುಳ್ಳ ವಸ್ತ್ರ.-ಟವಲು: ಟರ್ಕಿಟವಲಿನಲ್ಲಿ ನೀರು ಚೆನ್ನಾಗಿ ಹೋಗುತ್ತದೆ (ರೂಢಿ).

[ ಟರ್ಕಿ$_0$ + ಟವಲು./ ಇಂ. Turkish Towel ]

**ಟರ್ನಿಪ್** (ನಾ). ಸಾಸಿವೆ ಜಾತಿಯ ಒಂದು ದ್ವಿವಾರ್ಷಿಕ ಸಸ್ಯ : (ಮೃಜಿಗಿ. ೧೯-೨೫೩); ಟರ್ನಿಪ್ ತರಕಾರಿಯನ್ನು . . . ಹಗುರವಾದ ನೆಲದಲ್ಲಿ ಚೆನ್ನಾಗಿ ಬೆಳೆಯಬಹುದು (ತರಬೆ. ೫೨). [ ←ಇಂ. Turnip ]

**ಟರ್ಪೆಂಟೈನ್** (ನಾ). ೧.ಕರ್ಪೂರ ತೈಲದ ಮರ: ಸೀಮೆ ಕರ್ಪೂರ ತೈಲದ ಮರ, ಟರ್ಪೆಂಟೈನ್ (ಮೃಜಿಗಿ. ೬೨-೧೨೪೮). ೨. ಬಣ್ಣ, ವಾರ್ನಿಶ್ ಮತ್ತು ಔಷಧಗಳಿಗೆ ಬಳಸುವ ಒಂದು ಬಗೆಯ ಮರದ ಮಂದದ್ರವ, ಕರಾಳ; ಕರ್ಪೂರ ತೈಲ: ನೆಲದ ಮೇಲೆ ಪೇಂಟ್ ಕರೆಗಳಿದ್ದರೆ ಟರ್ಪೆಂಟೈನ್ ಒಂದನ್ನೇ ಉಪಯೋಗಿಸಿ ತೆಗೆಯಬಹುದು (ಗೃಹವಿ. ೧೬೨).

[ ←ಇಂ. Turpentine ]

**ಟಲಾಯಿಸು, ಟಳಾಯಿಸು, ತಲಾಯಿಸು, ತಳಾಯಿಸು** (ಕ್ರಿ). ೧. ಕುದುರೆಯನ್ನು ಅತ್ತಿತ್ತ ನಡೆಸು : (+). ೨. ಅತ್ತಿಂದಿತ್ತ ಇತ್ತಿಂದತ್ತ ತಿರುಗಾಡು,-ಅಡ್ಡಾಡು,-ಸುತ್ತಾಡು; ಶತಪಥ ತಿರುಗು: ಹಾಡುತ್ತ ಟಲಾಯಿಸುತ್ತಿದ್ದ (ಉದುಗೊ. ೮೦); ಬೀದಿಯಲ್ಲಿ ಅವನೋ ಒಬ್ಬನು ಬಲುಹೊತ್ತಿನಿಂದಲೂ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಟಲಾಯಿಸುತ್ತಿರುವವನು

(ಪಿಶಾಪ. ೦೪). **ಟಳಾಯಿಸು :** ೨. ಮನೆ ರೂಮ್ನಲ್ಲಿ ಟಳಾಯಿಸ್ತಾರೆ (ಕಳಾರ. ೦೪೩). **ಠಲಾಯಿಸು :** ೨. ಒಂದು ದಿನ ರಾಜ ತನ್ನ ಬಿಡದಿಯ ಆವರಣದ ತೋಟದಲ್ಲಿ ಠಲಾಯಿಸುತ್ತಿದ್ದಾಗ . . . ಗುರುನಾಥ ಭೆಟ್ಟಿಯಾದ (ನಟಸಾ. ೪೯೭): ಒಂದೆರಡು ಗಂಟೆ ಹೊತ್ತು ಹಾಗೇ ಠಲಾಯಿಸಿ . . . ಮನೆಗೆ ಹೋದೆ (ಅನ್ನಾವ. ೭೯). **ಠಳಾಯಿಸು :** ೨. ಆ ರೂಮಿನಲ್ಲಿ ಠಳಾಯಿಸುತ್ತ ಹೆಂಡತಿಯನ್ನು ಕೂಗಿದೆ (ನಡದಾ. II, ೦೩೦೯).

[ ಟಲಾ$_0$ (P ← ಹಿಂ. ಟಲನಾ) + – ಇಸು$_3$ ]

**ಟವಟವ** (ನಾ). ಪ್ರಫುಲ್ಲತೆ ; ಕಳೆ. 'ಟವಟವಿಸು' ಪರಾ.

[ ←ಮರಾ. ಟವಟವ ]

**ಟವಟವಿಸು** (ಕ್ರಿ). ಕಳೆ ತುಂಬಿರು ; ಪ್ರಸನ್ನವಾಗಿರು : ನವಭಕುತಿಯ ರಸನವಕದ ಚೆಲುವೆಯರು ಟವಟವಿಪರು ಮುಖದಿಂದ (ಪ್ರಸಭಾ. ೨೭-೦೩): ಟವಟವಿಸುವ ತುಂಗಮಂಟಪ (ಪ್ರಸಭಾ. ೬೩-೭).

[ ಟವಟವ + – ಇಸು$_3$ ]

**ಟವಣೆ** 'ಅಟ್ಟವಣೆ' ನೋ.

**ಟವಣೆಕೋಲ್** 'ಅಟ್ಟವಣೆಕೋಲ್' ನೋ.

**ಟವಣೆಹಾಕು** (ಕ್ರಿ). [ಗಣಿತ] ಮೊತ್ತವನ್ನು ಕೂಡು,–ಕೂಡಿಸು : ಬಾಲಕರಿಗೆ ಓನಾಮದಿಂದ ಮೊದಲುಮಾಡಿ ಕೊಟ್ಟ ಕಾಗದ ಓದುವುದು, ಹೇಳಿದ್ದನ್ನು ಬರೆಯುವುದು, ಟವಣೆಹಾಕುವುದು, ಕಳೆಯುವುದು ಇಷ್ಟರ ಮಟ್ಟಿಗೆ ಕನ್ನಡದಲ್ಲಿ ಹೇಳಿಕೊಡುವ ಮಠವನ್ನು ಇರಿಸಿದ್ದರು (ಕಂಠಾಜ. ೨೭).

[ ಟವಣೆ(<ಅಟ್ಟವಣೆ) + ಹಾಕು (<ಪಾಯ್ಕು$_1$) ]

**ಟವರ್ಗ** (ನಾ). [ವ್ಯಾಕ] ಟ ಠ ಡ ಢ ಣ ಎಂಬ ಅಕ್ಷರಗಳ ಗುಂಪು: ಇರೆ ವರ್ಗಪ್ರಥಮಂಗಳ್ ಪರದೊಳ್ ಚಟವರ್ಗಮುಟಿಯೆ ತಮ್ಮ ತೃತೀಯಾಕ್ಷರಮಕ್ಕುಂ (ಶಮದ. ೬೩): ಈ ವರ್ಗಗಳಿಗೆ ಕ್ರಮವಾಗಿ ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ ಎಂದು . . . ಹೆಸರನ್ನು ಇಟ್ಟಿದ್ದಾರೆ (ಮಧ್ಯಮು. ೦೩). [ ಟ + ವರ್ಗ ]

**ಟವಲ್** 'ಟವಲು' ನೋ.

**ಟವಲು, ಟವಲ್, ಟಾವೆಲು, ಟಾವೆಲ್ಲು** (ನಾ). ಮೈಒರಸುವ ಬಟ್ಟೆ ; ಚೌಕ : (ಮೈ ಒರಸುವ) ಚೌಕ, ಟವಲು (Towel. ಇಂಕನಿ.). **ಟವಲ್:** ಅಡಿಗೆಯವನು ಅಳಿಯನಿಗೆ ಕೈಕಾಲಿಗೆ ನೀರು ಕೊಟ್ಟು, ಒರಸಿಕೊಳ್ಳುವುದಕ್ಕೆ ಟವಲ್ ಕೊಟ್ಟು ಉಪಚರಿಸಿದನು (ಮುಹಾಗ. ೦೪). **ಟಾವೆಲು :** ವಾಡಿಕೆಗೆ ವಿರೋಧವಾಗಿಯೇ ಒಂದು ಟಾವೆಲನ್ನು ಜನಿವಾರದ ಹಾಗೆ ಎದೆಯ ಮೇಲೆ ಹಾಕಿಕೊಂಡಿದ್ದರು (ಪಕಿ. ೨೭). **ಟಾವೆಲ್ಲು :** ನಾನು ಟಾವೆಲ್ಲು ತೆಗೆದುಕೊಂಡು ಸ್ನಾನದ ಮನೆಗೆ ಹೋಗಿ ಸ್ನಾನ ತೀರಿಸಿಕೊಂಡು . . . ಬಂದೆನು (ಹೇಮಂತ. ೫೫೮). [ ←ಇಂ. Towel ]

**ಟವಳಿ, ಟವುಳಿ$_1$, ಟಾಳಿ, ಟೌಳಿ$_1$, ಠವಣೆ$_1$, ಠವಳಿ, ಠವುಳಿ$_1$, ಠಾಳಿ, ಠೌಳಿ$_1$, ಡೌಳಿ, ತವುಳಿ** (ನಾ). ೧. ಠಕ್ಕು ; ಮೋಸ; ವಂಚನೆ ; ಅಪ್ರಾಮಾಣಿಕತೆ. 'ಟಕ್ಕುಟವಳಿ' ಪರಾ. **ಟವುಳಿ$_1$ :** ೧. ಕಳವು ವಂಚನೆ ಟವುಳಿಯೊಳು ಸಂಚಲ ಕಟಾಕ್ಷದಿ ಕೊಂಕು . . . ಕನಿಷ್ಠವಂಗುಲಿಗಳೊಳಗಲ್ಲದೆ ಕುಂತಳದ ಭೂಮಿಯೊಳು ಕಾಣಿಸವು (ಶಂಕದಾ. ೦-೪೨). **ಟಾಳಿ :** ೧. 'ಟಾಳಿಕಾಟಿ', 'ಟಾಳಿಸು' ಪರಾ. **ಟೌಳಿ$_1$ :** ೧. ನಟನೆಗಳ ನಾಡು ನಾಟಕ ನರ್ತನದ ಬೀಡು ಕುಟಲಂಗಳೀಡು ಟೌಳಿಯ ಜೋಡು ನಿತ್ಯಲಟಮಟಗಳ ನಿವಾಸ (ರುಕ್ಮಾಂಗ. ೩-೩೯). ೨. ಸುಳ್ಳು ; ಹುಸಿ : ಅಕ್ಕ ನೀನಾಡಿದ ನುಡಿಯೆಲ್ಲ ನೃಪತಿಗೆ ತಕ್ಕವಲ್ಲದೆ ಟೌಳಿಯುಂಟೆ (ಭರಜ. ೭-೩). **ಠವಣೆ$_1$ :** ೧. 'ಠಕ್ಕುಠವಣೆ' ಪರಾ. **ಠವಳಿ :** ೨. ಚೆನ್ನಾಗಿ ಕಂಡಲ್ಲಿ ಬಾಯಿ ಸವಿಯವುಂಡು ಟೊಣ್ಣನಾಗಿಪ್ಪನು ಠವಳಿ ಪೇಳಿ (ಮೋಹದೀ. ೬೫-೩). **ಠವುಳಿ$_1$:** ೧. ಯಾಕವ್ವ ಈ ಠವುಳಿ ನಿಮಗೆ (ಕುಮಾಸಾಂ. ೦೪೬). **ಠಾಳಿ :** ೩. ಹೀಯಾಳಿಕೆ ; ತಿರಸ್ಕಾರ. 'ಠಾಳಿಸು' ಪರಾ. **ಠೌಳಿ$_1$ :** ೧. ಆರರೆ ಠೌಳಿಯ ವಿದ್ಯೆಯೂ ಮಹೇಂದ್ರಜಾಲವಿದೊ (ಸಾನಂಚ. ೮-೯೦); ಖೂಳ ತೆಗೆ ಪೆಟಸಾರು ಠಕ್ಕಿನ ಠೌಳಿಯೂಟವೆ ಕದನ (ಕುವ್ಯಾಕ. ೦೪-೦೭) ; ಪುಸಿ ನುಸುಳನ್ಯಾಯ ಠೌಳಿವಂಚನೆಗಳು ವಸುಧೇಶನಾಳ್ವ ರಾಜ್ಯದಲಿ ಮಿಸುಕಲಮ್ಮವು (ಕಂಶವಿ. ೭-೬೩) ; ಅನ್ಯಾಯದಾಗರ . . . ಠೌಳಿಯ ಬೀಡು (ಜನರಾ. ೪-೦೩೫). ೨. ನಿಮ್ಮ ಮನುಷ್ಯರಂ ಕಳುಪಲೀವೆಂ ದ್ರುವ್ಯಮಂ ಠೌಳಿಯಲ್ಲು (ದಿವ್ಯಚ. ೯-೩೮). **ಡೌಳಿ :** ೪. ಮೋಸಗಾರ ; ವಂಚಕ: ಡಂಬಕನು ಡೌಳಿಯು ವೃಥಾ ದುಬುದುಂಬಿಗಂ(ಮದೇಶು. ೩-೨೬). **ತವುಳಿ:** ೨. ಕವಡು ಕುಟಿಲಗಳಿಲ್ಲ ಮನದೊಳು ಅರಸಿ ನೋಡಿದಡೆ ತವುಳಿ ಪೇಳುವನಲ್ಲ (ಹಮಚ. ೧೦೭). [ ದೇ:೩ ತಮಿ. ಟವಳಿ; ತೆಲು. ಠವಳಿ ]

**ಟವಳಿಗಾರ** 'ಟವಳಿಗಾಟಿ' ನೋ.

**ಟವಳಿಗಾಟಿ, ಟವಳಿಗಾರ, ಟವುಳಿಕಾಟಿ, ಟಾಳಿಕಾಟಿ, ಟೌಳಿಕಾಟಿ, ಠವುಳಿಕಾಟಿ, ಠೌಳಿಕಾಟಿ, ಠೌಳಿಗಾರ** (ನಾ). ಮೋಸಗಾರ ; ಕಪಟಿ ; ವಂಚಕ : ಎಂಥಾ ಟವಳಿಗಾಟಿನಮ್ಮ ಗೋಪ್ಯಮ್ಮ ಕೇಳೆ ಎಂಥಾ ಟವಳಿಗಾಟಿನಮ್ಮ (ಕನಕ. ೦೦೦ ಪಲ್ಲವಿ). **ಟವಳಿಗಾರ:** ಟವಳಿಗಾರನ ಮೈಮೇಲೆ ಗವುಳಿ ಬಿತ್ತು (ಗಾದೆ). **ಟವುಳಿಕಾಟಿ :** ಚೆಂಡ ಕಳುಹುವೊಲು ಬಲು ಟವುಳಿಕಾಟಿನ ಚೆಂಡನೆಲ್ಲರು ನೋಡುತಿರಲು ಕೊಂಡೊಯ್ದು ಕುಟಿಲದೇವತೆಗಳವಳ ಪದಪುಂಡರೀಕಕೆ ಸೇರಿಸಿದವು (ಕುರಾಸಾಂ. ೩೦-೦೦೯). **ಟಾಳಿಕಾಟಿ:** ಟಾಳಿಸುವ ಟಾಳಿಕಾಟಿನ ಮನದ ಚಮತ್ಕಾರವಿರಬೇಕು (ಪ್ರಭುಪು. ೫-೭೩). **ಟೌಳಿಕಾಟಿ:** ಅಟಿಯೆಯಾ ನೀನಿದ ನಗೆಕಾಟಿ ಬಗೆಕಾಟಿ ಮುಟಿಕಾಟಿ ಬಲು ಟೌಳಿಕಾಟಿ (ಭರಜ. ೮-೨೫). **ಠವುಳಿಕಾಟಿ :** ಕರಸ್ಥಲದಲ್ಲಿ ಲಿಂಗವ ಹಿಡಿದುಕೊಂಡು ಠವುಳಿಕಾಟಿನಂತೆ ಮನವ ಕದ್ದು ಮಾತನಾಡುತ್ತ ಮನೆಮನೆಗೆ ಹೋಗಿ ಹೊಟ್ಟೆಯ ಕಿಚ್ಚಿಗೆ ಸಟೆಯ ಶಾಸ್ತ್ರವ ಹೇಳುವ ಡೊಂಬರಂತೆ (ಘವವ. ೩೪-೨೭). **ಠೌಳಿಕಾಟಿ :** ಡೊಂಕಣಿಯ ಠಕ್ಕಿನ ಠೌಳಿಕಾಟಿಮ ನಿನ್ನ ಮಾಯೆಯ ಹೇಳಲಮ್ಮೆನು (ಕುವ್ಯಾಕ. ೨೭-೨೬) ; ಕಡುಗನ್ನಗತಕದ ಠೌಳಿಕಾಟಿನೆಳೆಯಳೆ ಕೇಳ ನಿನ್ನಡಿಗೆ ನಿನ್ನಕ್ಕನಂ ಮಣಿಯಿಸುವೆನೆಂದೊಡಂ ಬಡಿಸಿದನು (ಸಾಳ್ವಭಾ. ೬೬-೨). **ಠೌಳಿಗಾರ :** ಠೌಳಿಗಾರನ ಹತ್ತಿರ ಧರ್ಮ ಉಂಟೇ ? (ಗಾದೆ). [ ಟವಳಿ + – ಕಾಟಿ ]

**ಟವಾಳ** 'ಟವಮಾಳ' ನೋ.

**ಟವಾಳಿಸು, ಠವಮಾಳಿಸು, ಠವಾಳಿಸು** (ಕ್ರಿ). ೧. ಮೋಸಗೊಳಿಸು ; ವಂಚಿಸು. ೨. ಮರುಳುಗೊಳಿಸು ; ಮೋಹಕ್ಕೆ ಒಳಪಡಿಸು : ರಸ ಮಡವು ಮುಂಕೊಂಡುಯಿದಿರೇಳ್ವಂತೆ ಚಿತ್ರ ಮುಂಬರಿವುದೀತನ ಟವಾಳಿಪ ಪ್ರೌಢಿಯಿಂ (ಪ್ರಭುಪು. ೮-೬೩). **ಠವಮಾಳಿಸು:** ೧. ತಿರುನೀಲಕಂಠರಂ ಮಾಜಿ ಸೂರುಳ್ಗೊಂಡ ವಿರತಂಗಮರನೀತಿಯಂ ಠವಮಾಳಿಸಿ ಮುಟ್ಟಿಮಿರದೊಕ್ಕಲಂ ಮಾಡುಗೊಂಡಂಗೆ ನಂಬಿಯನಳಿಪಿ ತೊಳ್ತಿಗೊಂಡವಂಗೆ (ಪದ್ಮರಾ. ೦೩-೮). **ಠವಾಳಿಸು :** ೧. ಕನಸು ಕಂಡು ಎಳ್ವತ್ತೆನೆನುತಂ ಠವಾಳಿಸಿ ಸವತಿಯಂ (ಪ್ರಭುಪು. ೭-೦೬೯) : ಶಿವದೀಕ್ಷೆಯಂ ಪಡೆದೆನೆಂದಾ ಠೈಕೆಯಿಲ್ಲದೆಮ್ಮಂ ಠವಾಳಿಸಿ ನಿಮ್ಮ ಕಾರುಣ್ಯಕತಿದೂರನಾಗಿ (ಬಿಕೋಶು. ೯-೪೪). ೨. ಕ್ರೂರರೂಪನು ಧರಿಸಿ ನುಂಗುವ ಮಾರಿಯಾ ಠವಾಳಿಸುವ ಸಂಹಾರರೂಪಿಂದಿಹುದು (ಸ್ವರೂಪಾ. ೦-೨೦).

[ ಟವಾಳ (<ಟವಮಾಳ) + – ಇಸು$_3$ ]

**ಟವುಳಿ$_1$** 'ಟವಳಿ' ನೋ.

**ಟವುಳಿ$_2$, ಟೌಳಿ$_2$, ಠವುಳಿ$_2$, ಠೌಳಿ$_2$** (ನಾ). ೧. ಯೋಧರು ತಲೆಗೆ ಧರಿಸುವ ಲೋಹದ ಟೊಪ್ಪಿಗೆ ; ಸೀಸಕ ; ಶಿರಸ್ತ್ರಾಣ : ಅಂದಿನ ಆ ನೆತ್ತರಲ್ಲಿ ತೋದ ಕವಚ ಟವುಳಿ ಬಿಲ್ಲು ಬತ್ತಳಿಕೆ ಆ ಕೃಪಾಣ ಎಲ್ಲವನ್ನೂ ನಾಶಮಾಡಿದೆನು (ಸುಗುಗಂ. ೯೦-೨). ೨. ಉಕ್ಕಿನ ಕವಚ; ಯಂದ್ಧ ಕವಚ;

ತನಂತ್ರಾಣ: (೬). **ಟೌಳ್ಗಿ₂:** ೧. "ಟೌಳಿ ಸೀಸಕಮೆನಿಕುಂ" (ಶಬ್ದಮಂ. ೪೩); "ಸೀಸಕಮೆನ್ನಲ್ ತಲೆಟೌಳಿಯುಂ" (ಕವಿಕಂ. ೦೩೧); ವಿಕಟಾಂಗದ ಕುದುರೆ . . . ಅದಱ ಮೇಲಿದ್ದ ಬಲ್ಲಹಂಗೆ ಬಲ್ಲೆಹ ಟೌಳಿ ಸುಲಲಿತ ತರಕಸ ಸಿಂಗಾಡಿಗತ್ತಿ (ಸುಂಕಬಂ. ೬೪). **ತವುಳ್ಗಿ₂:** ೧. ವಿಸುನಿಯ ಪಕ್ಕರೆ ಜೋಡು ಸವಗ ತವುಳಿ[ಪಾಠಾಂ. ಟೌಳಿ]ಮಿಸುಪ ಖಂಡೆಯ ಹೇಡೆಯುಗಳ ಪೊಸೆದಿತ್ತು (ಕುರಾಸಾಂ. ೩೯-೬೩); ತಲೆತವುಳಿ ಜೋಡುದಗಲೆ ಬೆನ್ನೊಳಳ ವಟ್ಟ ಬಿಲ್ಲು ಬಾಣಗಳ ಬತ್ತಳಿಕೆಯ . . . ಕುದುರೆಯ್ಯಿತಂದುವು ವಂುಲುಕರ ಹಿವನೆಂಬುವನ (ಕಂನವಿ. ೧೮-೮೩). **ಟೌಳ್ಗಿ₂:** ೧. "ಕಂಕಟಕ ಮೆನೆ ಟೌಳಿ" (ಮಂಗರಾ. ೮೬-೩೧); "ಸೀಸಕಮೆನೆ ತಲೆಯ ಟೌಳಿ" (ಭಾರನಿ. ೧೨); ಪರಿಪರಿಯಾದ ಮೈಜೋಡು ಟೌಳಿಯನಾಂತುರವಣಿಸಿತು ರಾವುತರು (ಅಂಜಪ. ೬-೭೦); ತೊಟ್ಟ ವಜ್ರಾಂಗಿಯ ಜೋಡು ಸವಗ ಪೊಂಬಟ್ಟಲ ಚೀನಿಯ ಟೌಳಿ ಕಟ್ಟಿದ ಬಿರಿದು ಮೆಱೆಯೆ (ಕುರಾಸಾಂ. ೧೨-೮೭); ಮುಱಿದ ಕೂರಸಿಯ ನೆಗ್ಗಿದ ಹರಿಗೆಯ ಹಂಚುಹಱಿಯಾದ ತಲೆಯ ಟೌಳಿಗಳ . . . ಕಾಲಾಳ್ಗಳು ಕುಱಿದಱಿಯಾದರು (ವರ್ಧಪ. ೬-೯೩). [ ? ]

**ಟವುಳಿಕಾಱ** 'ಟವಳಿಗಾಱ' ನೋ.

**ಟವುಳಿನುಡಿ** (ನಾ). ವಂಚನೆಯ ಮಾತು; ಮೋಸದ ಮಾತು: ಮಿಗೆ ಟಕ್ಕುನುಡಿ ಟವುಳಿನುಡಿಗಳಿಂ ಪುರುಷರನು ಬೆಗಡುಗೊಳಿಸುವ ಬಣ್ಣಣೆಯ ನುಡಿಯ ಭಾವೆಯರು (ನವಮೋ. ೨೪-೧೫). [ಟವುಳಿ₁ (<ಟವಳಿ)+ನುಡಿ₂]

**ಟಸ್ಸೆ** 'ಠಸ್ಸೆ' ನೋ.

**ಟಳಾಯಿಸು** 'ಟಲಾಯಿಸು' ನೋ.

**ಟಱಟಱ**, ಟರಟರ (ನಾ). ಒಂದು ಅನುಕರಣ ಶಬ್ದ: ಹುಯ್ಯಲನಿಕ್ಕು ವಂದದಿಂ ಟಱಟಱ ಱೇಕುಱೇಕು ಬೆಬೆ . . . ಎಂದುಮೆತ್ತಲುಂ . . . ದರ್ದುರವ್ರಜಂ (ಅನಂಪು. ೯-೧೩). **ಟರಟರ:** ಅಂತೊಪ್ಪುವ ಕೆಱೆಯೊಳ್ ಪಲವುಂ ಕಪ್ಪೆಗಳ್ ಟರಟರೆಂಬ ಶಬ್ದದೊಳ್ ಕರೆಯುತ್ತಮಿರ್ಪುದುಂ (ಪಂಚತಂ. ೩೦೪-೧೮).

**ಟಾಂಕಿ, ಟಾಕಿ₃** (ನಾ). ನೀರು ತುಂಬುವ ತೊಟ್ಟಿ,-ಪಾತ್ರೆ: ನಮ್ಮ ಮನೆಯ ಟಾಂಕಿ ಸುಮಾರು ಇಪ್ಪತ್ತೈದು ಕೊಡ ನೀರು ಹಿಡಿಯುತ್ತದೆ (ರೂಢಿ). **ಟಾಕಿ₃:** ಪೇಟೆಯ ಮನೆಯಲ್ಲಿ ಒಂದು ಟಾಕಿ ಇಲ್ಲದಿದ್ದರೆ ಹೇಗೆ? (ರೂಢಿ). [ ←ಮರಾ. ಟಾಂಕೀ, ಟಾಕೀ ]

**ಟಾಂಗ₁** 'ಟಾಂಗಾ' ನೋ.

**ಟಾಂಗ₂, ಟಾಂಗು** (ನಾ). ಕಾಲು; ಮೊಳಕಾಲು. **ಟಾಂಗು:** ಮುಗ್ಗರಿಸಿ ಬಿದ್ದಿರುವ ಆತನ ಬೆನ್ನನ್ನು ಇವನು ಟಾಂಗಿನಿಂದ ತಿವಿದನು (ರೂಢಿ).

**ಟಾಂಗನಿಕ್ಕು** = (ಮೊಳ) ಕಾಲನ್ನೂರು: ದೇವತೆಗಳು ಆ ರಕ್ಕಸನೆಡೆಗೆ ಬಂದು ತಮ್ಮ ಕಿವಿಯ ಹಿಡಿದುಕೊಂಡು ಟಾಂಗನಿಕ್ಕಿ ನಮಸ್ಕರಿಸಿ (ಭೈರಸೂ. ೪೦). **ಟಾಂಗುಕೊಡು** = (ಎದುರಾಳಿಯನ್ನು ಕೆಳಗೆ ಬೀಳಿಸಲು) ಎದುರಾಳಿಯ ಕಾಲಿಗೆ ಅಡ್ಡಗಾಲು ಇಡು: ಟಾಂಗುಕೊಟ್ಟು ನನ್ನನ್ನು ಅವನು ಬೀಳಿಸಿದ (ರೂಢಿ). [ ←ಹಿಂ. ಮರಾ. ಟಾಂಗ. / ಸಂ. ಟಂಗ ]

**ಟಾಂಗಾ, ಟಾಂಗ₁** (ನಾ). ಸಾಮಾನ್ಯವಾಗಿ ಹಿಂಭಾಗದಲ್ಲಿ ಇಬ್ಬರು ಕುಳಿತುಕೊಳ್ಳಬಹುದಾದ ಎರಡು ಚಕ್ರದ ಒಂಟಿ ಕುದುರೆಯ ಗಾಡಿ: ಅಷ್ಟರಲ್ಲಿ ಹೊರಗೆ ಒಂದು ಟಾಂಗಾ ಬಂದು ನಿಂತಿತು (ಅಪನಾ. ೧೮೩); ಮನೆಯ ಮುಂದೆ ಟಾಂಗಾ ಬಂದು ನಿಲ್ಲುತ್ತಲೇ ಪದ್ಮಾವತಿ ಧಾವಿಸಿ ಹೊರಗೆ ಬಂದಳು (ಅಶೋಕ. ೦೫೩). **ಟಾಂಗ₁:** ಟಾಂಗ ರಿಕ್ಷಾಗಳ ಸೆಳೆಗೊಳ ಗಾಗದೆ ನಿಂತೆ (ಇಂಚಾಪ. ೦೦೩-೫); ಉಳಿದ ಪಯಣಿಗರಿಗೆ ಮೋಟರು ಟಾಂಗ ಮೊದಲಾದ ವಾಹನಸೌಕರ್ಯಗಳು ಸಿಗುತ್ತವೆ (ಆಳನಿ. ೨). 'ಜಟಕಾ₂' ಪರಾ. [ ←ಹಿಂ. ಟಾಂಗಾ ]

**ಟಾಂಗಾವಾಲ** (ನಾ). ಟಾಂಗಾ ಹೊಡೆಯುವವನು: ನಗರಗಳಲ್ಲಿ ಇನ್ನೂ ಟಾಂಗಾವಾಲಗಳ ಸೊಕ್ಕು ಇಳಿದಿಲ್ಲ (ಸಮಜೀ. ೮, ಪೀ೦೩).
[ ←ಹಿಂ. ಟಾಂಗಾವಾಲಾ ]

**ಟಾಂಗು** 'ಟಾಂಗ₂' ನೋ.

**ಟಾಂಟಾಂ** (ನಾ). ತಮಟೆಯನ್ನು ಬಾರಿಸುತ್ತ ಬೀದಿಬೀದಿಗಳಲ್ಲಿ ಪ್ರಚಾರಮಾಡುವ ಕ್ರಮ; ಟಮಕಿ ಬಡಿಯುತ್ತ ಡಂಗುರ ಸಾರಿಕೆ: ಹರಾಜು ಯಾವ ತಾರೀಖಿನಲ್ಲಿ, ಯಾವ ಸ್ಥಳದಲ್ಲಿ ಆಗುತ್ತದೋ ಅದನ್ನು ಕುರಿತು ಟಾಂಟಾಂ ಮೂಲಕ ಪ್ರಸಿದ್ಧಪಡಿಸಬೇಕು (ಗ್ರಾಮಾಕ. ೬೬).

**ಟಾಂಟಾಂಮಾಡು**=ಎಲ್ಲರಿಗೂ ತಿಳಿಯಪಡಿಸು; ಬಹಿರಂಗಪಡಿಸು: ಅಷ್ಟರೊಳಗೆ ಅವನು ಆ ಗುಟ್ಟನ್ನು ಟಾಂಟಾಂಮಾಡಿಬಿಟ್ಟನು (ರೂಢಿ).

**ಟಾಂತ** (ನಾ). ಟಕಾರದಲ್ಲಿ ಕೊನೆಗೊಳ್ಳುವ ಶಬ್ದ: ಟಾಂತಕ್ಕೆ ಅಟ್ಟು-ಅನುಧಾವನೇ (ಶಮಧಾ). [ ಟ + ಅಂತ₂ ]

**ಟಾಂತಾಕ್ಷರ** (ನಾ). ೧. 'ಟ' ಎಂಬ ಅಕ್ಷರವು ಕೊನೆಯ ಅಕ್ಷರವಾಗಿರುವಂಥದು. ೨. [ಜೈನ] 'ಟ' ಎಂಬ ಅಕ್ಷರವನ್ನು ಕೊನೆಯಾಗುಳ್ಳ ಒಂದು ಮಂತ್ರ: ಟಾಂತಾಕ್ಷರಮನನುಷ್ಠಿಸೆ ಚಿಂತಿತ ಫಲಸಿದ್ಧಿಯಕ್ಕುಮೆಂಬರ್ (ಜಿನಾಶ. ೧೨). [ ಟಾಂತ + ಅಕ್ಷರ ]

**ಟಾಕ** 'ಟಾಕಂ₂' ನೋ.

**ಟಾಕಣ, ಠಾಕಣ** (ನಾ). ಒಂದು ಬಗೆಯ ಗಿಡ್ಡ ಕುದುರೆ: ಬೆಟ್ಟಸೀಮೆಗಳಲ್ಲಿ ಕುದುರೆ, ಟಾಕಣ, ಹೇಸರಗತ್ತೆ, ಕತ್ತೆ ಹೆಚ್ಚು ಉಪಯೋಗಕರ (ಭೂವಿವ. ೨೬೧); ಮಡಿಕೇರಿಯ ಮಲೆಯಲ್ಲಿ ತಟ್ಟು, ಟಾಕಣ ಏರಲು ಕಲಿತ ಅವರು, ಅಶ್ವಾರೋಹಿಗಳಾಗಿ, ಬೆಟ್ಟದ ದೊರೆಯಂತೆ ಬಂದರು (ಕುಡಕೂ. ೩೪): ಮಾತಂಗಿ ಬಿಳಿಯ ಅರಬ್ಬೀ ಟಾಕಣದ ಮೇಲೆ ಕುಳಿತು . . . ಶತ್ರುಸೈನ್ಯವನ್ನಿದಿರಿಸಿದಳು (ನಡದಾ. II, ೯೯೩). **ಠಾಕಣ:** ಶೀನಪ್ಪನ ಹತ್ತಿರ ಮಾತನಾಡುತ್ತಿರುವಾಗ ಮನಸ್ಸು ಅರಬ್ಬಿ ಠಾಕಣದಂತೆ ನರ್ತಿಸುತ್ತದೆ (ಅನಾಥ. ೨೨೬); ರಾಯ ಹುಲಿಯಂತೆ ಒಂದೇ ಹಾರಿಗೆ ಠಾಕಣದ ಮೇಲೆ ಕುಪ್ಪಳಿಸಿ ಕುಳಿತನು (ಆಳಾಳ. ೬೪); ಯುದ್ಧದಲ್ಲಿ ಜಯಿಸಿದಾಗ ತನ್ನ ಪಾಲಿಗೆ ಬಂದಿದ್ದ ಒಂದು ಅರಬ್ಬಿ ಠಾಕಣವನ್ನು ಹತ್ತಿದನು (ಭಾರವೀ. ೫).
[ ←ಮರಾ. ಟಾಕಣ; ಹಿಂ. ಟಾಂಗನ್. / ಸಂ. ಟಂಕಣ, ಟಂಕನ ]

**ಟಾಕಾಪೂರ್ತಿ** (ಅ). ತಾತ್ಪೂರ್ತಿಕವಾಗಿ; ಸದ್ಯಕ್ಕೆ: ಕನ್ನಡವಾಙ್ಮಯವನ್ನೇ ಪರೀಕ್ಷೆಗೆ ತೆಗೆದುಕೊಂಡು ಅಭ್ಯಾಸಿಸಿದವರು ಕೂಡ, 'ಟಾಕಾಪೂರ್ತಿ' ಎಂಬಂತೆ ಪರೀಕ್ಷೆಗಷ್ಟಷ್ಟೇ ಓದಿ ಅದಾದ ಮೇಲೆ . . . ಓದಿದುದನ್ನೂ ಮರೆತುಬಿಡುವ ಪರಿಸ್ಥಿತಿ ಕಂಡುಬರುತ್ತಿದೆ (ಬಿದುರಿ. ೯೩ಪ್ರಸ್ತಾವನೆ).
[ ←ಮರಾ. ತಾಕಾಪೂರ್ತೇ ]

**ಟಾಕಿ₁, ಟಾಕು₁** (ನಾ). ಒಂದು ಬಗೆಯ ಹೊಲಿಗೆ;-ಜೋಡಣೆ: ಅಂಗಿ ಹರಿದಿದೆ. ಎರಡು ಟಾಕಿ ಹಾಕಿಕೊಡಿ (ರೂಢಿ). **ಟಾಕು₁:** "ಹೊಲಿಗೆ, ಟಾಕು" (Stitch. ಇಂಕನಿ.).

**ಟಾಕಿ ಹರಿ** = (ಉಕ) ಧೈರ್ಯ ಕುಗ್ಗು: ರಾಹು ಪೋಲೀಸರನ್ನು ಕರೆಯ ಕಳುಹಿಸಿದ. ಅದನ್ನು ಕಂಡಕೂಡಲೇ ಮಾರವಾಡಿಯ ಟಾಕಿ ಹರಿಯಿತು (ಮೋಜೀವ. ೧೨). **ಟಾಕಿ ಹಾಕು, ಟಾಕು ಹಾಕು** = ಜೋಡಿಸಿ ಹೊಲಿ: ಬಟ್ಟೆ ಹರಿದುಹೋಗಿದೆ, ಟಾಕಿ ಹಾಕಬೇಕು (ರೂಢಿ); ದಾಟು ಹೊಲಿಗೆ ಹಾಕು; ಟಾಕು ಹಾಕು (Baste. ಇಂಕನಿ.).
[ ←ಹಿಂ. ಮರಾ. ಟಾಕಾ, ಟಾಂಕಾ ]

**ಟಾಕಿ₂** (ನಾ). (ಲೋಹ, ಕಲ್ಲು ಇವನ್ನು ಕೆತ್ತಿ ಆಕಾರಕ್ಕೆ ತರುವ ಒಂದು ಬಗೆಯ ಉಕ್ಕಿನ ಬಾಯಿಯ) ಉಳಿ ಮತ್ತು ಅದರ ಪೆಟ್ಟು: ಅವನ ಮನೆಯಲ್ಲಿ ಮಾತ್ರ ಪಾತ್ರೆಗಳಿಗೆ ಟಾಕಿ ಹಾಕುವ ಕೆಲಸ ನಡೆದೇ ಇತ್ತು (ಮೂರುದಾ. ೯೯). [ ←ಮರಾ. ಟಾಕೀ. / ಸಂ. ಟಂಕ ]

**ಟಾಕಿ$_3$** 'ಟಾಂಕಿ' ನೋ.

**ಟಾಕಿ$_4$** (ನಾ). ಮಾತಾಡುವ ಚಲನಚಿತ್ರ: ಭಾರತದಲ್ಲಿದ್ದ ಮೂಕಿ ನಿರ್ಮಾಣ ಸಂಸ್ಥೆಗಳು ಒಂದೊಂದಾಗಿ ಟಾಕೀನಿರ್ಮಾಣಸಂಸ್ಥೆಗಳಾದುವು (ನಟಸಾ. ೬೩೭); ಈಗೇನು ಸಿನಿಮಾ, ಟಾಕಿ, ನಾಚು ಮುಂತಾದುವುಗಳಿಗೇ ಹೆಚ್ಚು ಪ್ರೋತ್ಸಾಹನ (ರಾಯಕ. ೬೫). [ ←ಇಂ. Talkie ]

**ಟಾಕು$_1$** 'ಟಾಕಿ$_1$' ನೋ.

**ಟಾಕು$_2$**, ಟಾಕ (ನಾ). ೧. ಲೇಖನಿ: ಟಾಕು, ಗಲಗು ಅಲ್ಲದೆ ಬೆಂಕಿಪೆಟ್ಟಿಗೆಯ ಒಂದು ಕಡ್ಡಿಯೂ ಸಹ ನನಗೆ ನಡೆಯುತ್ತಿತ್ತು (ಸ್ಮೃತಿಚಿ. ೧೫೭); ಹಳ್ಳಿಯ ಆ ದೊಡ್ಡ ಅಧಿಕಾರಿ ಟಾಕನ್ನು ಯತ್ನಪೂರ್ವಕವಾಗಿ ಹಿಡಿಯುತ್ತ . . . ನೋಡಿದ (ಜಮೀನ್ದಾ. ೫); ಸಣ್ಣ ಸ್ವದೇಶಿ ಅಂಗಡಿಯನ್ನು ತೆರೆದು ಪೆನ್ಸಿಲ್ ಹಾಳೆ ಟಾಕು ಮೊದಲಾದುವನ್ನು ಮಾರಲು ಇಡುತ್ತಿದ್ದ (ಸೇನಾಪ. ೧೨). ೨. (ಘನವಸ್ತುಗಳ) ಭಾರದ ಒಂದು ಅಳತೆ,–ತೂಕ: ಇಪ್ಪತ್ತುನಾಲ್ಕು ಟಾಕಿನ ಘನಮಾನ ಶಾರ್ಙ್ಗವ ತರಿಸಿದನು (ಕುರಾಸಾಂ. ೧೮-೧೦). **ಟಾಕ:** ೨. ೨೪ ರತಿ ಅಂದರೆ ೧ ಟಾಕ (ಮುಂಬವ್ಯಾ. ೧೩೭).
[ ←ಮರಾ. ಟಾಂಕ್ ]

**ಟಾಕೋಟಾಕು**, ಠಾಕೋಠಾಕು, ಠಾಕೋಠೀಕು (ಅ). ಕಾಲಕ್ಕೆ ಸರಿಯಾಗಿ; ತಕ್ಷಣ; ತಡಮಾಡದೆ: ಟಾಕೋಟಾಕು ತಲುಪಿಸಬೇಕೆಂದು ವಿಳಾಸ ಬರೆದು ಟಪಾಲು ಮೇಲೆ ಹಾಕಿಬಿಟ್ಟರು (ಕಥಾಮಂ. IV, ೮೩). **ಠಾಕೋಠಾಕು:** ಠಾಕೋಠಾಕು ಎಂಟುಗಂಟೆಗೆ ಬಂದೇಬಿಟ್ಟ ಆಸಾಮಿ (ರೂಢಿ). **ಠಾಕೋಠೀಕು:** ಎರಡು ಗಂಟೆಗೆ ಠಾಕೋಠೀಕಾಗಿ ಗೌಡ ಹಾಜರಾದ (ಚಂದಕೋ. ೫೧). [ ←ಮರಾ. ಟಾಕೋಟಾಕ್ ]

**ಟಾಚಣಿ** (ನಾ). (ಉಕ) ಗುಂಡುಸೂಜಿ: ಅದು ಬಹಳ ಚಿಕ್ಕದಾಗಿ ಅಂದರೆ ಟಾಚಣಿಯ ಮೊನೆಯಷ್ಟು ಸೂಕ್ಷ್ಮವಾಗಿ ಕಾಣುತ್ತಿತ್ತು (ಮಹಾಶ್ವಾ. ೦೨೨); ಕೆಲವು ಮಾತುಗಾರರು ತಮ್ಮ ಮುಂದಿದ್ದ . . . ಪಿನ್ ಕುಶನ್ನಿನ ಟಾಚಣಿಯೊಡನೆ ನಿರರ್ಥಕವಾಗಿ ಹೋರಾಡುವರು (ಗೋಯಾತ್ರಿ. ೬೦).
[ ←ಮರಾ. ಟಾಚಣೀ ]

**ಟಾಠಡಾಥಣ** (ನಾ). ನಿಶ್ಚಿತವಾದುದು; ನಿಸ್ಸಂದೇಹವಾದುದು; ನಿರ್ದಾಕ್ಷಿಣ್ಯವಾದುದು; ಅಚಲವಾದುದು (?): ಎನ್ನ ನುಡಿ ಟಾಠಡಾಥಣ [ಪಾಠಾಂ. ಯೆರಡಾದೊಡ]ಮೆನ್ನಂ ಬೆಸಸುವುದು ರಾಜಸೂಯಂ ಬೇಳಲ್ (ಪಂಪಭಾ. ೬-೨೬): "ಟವರ್ಗಾಕ್ಷರಗಳಂತೆ ನಿಯತ, ಶಾಶ್ವತ" (ಪಂಪದೀ. ೨೨೦). [ ? ]

**ಟಾಣ** 'ತಾಣ' ನೋ.

**ಟಾಣಕೋಲು** (ನಾ). ಬಟ್ಟೆ ನೇಯುವ ಮಗ್ಗದಲ್ಲಿ ನೂಲುಗಳನ್ನು ಹೆಣೆಯಲು ಹಾಸಿನ ಮೇಲ್ಗಡೆಗೆ ಹಾಗು ಕೆಳಗಡೆಗೆ ಜೋಡಿಸಿರುವ ಕೋಲು; ನೇಯ್ಗೆಕೋಲು: ಟಾಣಕೋಲುಗಳೆರಡು ಕಾಣಿಮಗ್ಗದೊಳೇನೊ (ಕನ್ನಜಾ. ೨೯೯). [ ←ಮರಾ. ಟಾಣಕೋಲ್ ]

**ಟಾಣಗುಂದೂರ್** (ನಾ). ಒಂದು ಊರಿನ ಹೆಸರು: ಅದರ ಸೀಮೆ ಬಡಗ ಟಾಣಗುನ್ದೂರ ಸೀಮೆಯ ಪಳ್ಳಂ (ಎಕ. VII, ಶಿಕಾರಿ. ೧೨೦-೧೭; 1048). 'ತಾಣಗುಂದೂರ್' ಪರಾ. [ ? + ಊರ್ ]

**ಟಾಣದೀವಿಗೆ** 'ತಾಣದೀವಿಗೆ' ನೋ.

**ಟಾಣಯ**, ಟಾಣೆಯ, ಠಾಣೆಯ, ಠಾಣ್ಯ, ತಾಣ್ಯ (ನಾ). ೧. ನೆಲೆ; ಬೀಡು; ಆಶ್ರಯ: ಗರುಡ ಗಾಂಧರ್ವಗಳೆಕ್ಷಾದ್ಯರಿಗೆ ಕೊಟ್ಟಹ ದೇಶಗಳು ತನ್ನವರಿಗೆ ಟಾಣಯವಾದವೆಲೆ ಭೂಪಾಲ (ದೇವೀಮ. ೫-೧೯). **ಟಾಣೆಯ:** ೨. (ಕೋಟೆ, ಕಿಲ್ಲೆ, ಪಟ್ಟಣ ಮೊದಲಾದುವುಗಳ) ರಕ್ಷಣೆಗಾಗಿ ಇಟ್ಟಿರುವ ಸೈನ್ಯ; ರಕ್ಷಕ ಸೈನ್ಯ; ಕಾವಲುದಂಡು: ದ್ವಿಸಪ್ತಲೋಕಂಗಳ್ಗೆ ಟಾ[ಪಾಠಾಂ. ಠಾ]ಣೆಯುವನಿಟ್ಟು ವಿಧಿ ಸಪ್ತತ್ರಯಾವತಾರಾಧಿಪರನೆಬ್ಬಟ್ಟದಂ ಖಳಂ ಸಾಮಾನ್ಯನೇ (ಚಬಪು. ೪೭-೧೦). **ಠಾಣೆಯ:** ೧. "ತಾಣಾಂತರಮೆಂದೆನಲು ಠಾಣೆಯ" (ಚತುನಿ. ೧೦೯); ಕುಪ್ಪಟೂರ ಠಾಣೆಯದೊಳ ಠಾಣೌಘ ಸಹಿತಂ ಪಿರಿಯಕೆ[ರೆ?]ಗೆ ೨ ಲಕ್ಕವಡಕೆಯ ಸುಂಕಮಂ ಬಿಟ್ಟರ್ (ಕಇ. II, ೮-೨೦; 1072); ಗಣೇಶನೊಡನೆ ತಾನಿಂತೆಂದಂ ನಾಕಂ ನೋಳ್ಪೊಡೆ ನನ್ನದು ವೈಕುಂಠಂ ನನ್ನ ಠಾಣೆಯಂ (ವೀರವಿ. ೫-೧೨). ೩. ಸೇನಾ ಶಿಬಿರ; ಪಾಳೆಯ: ಇಂದು ನಾಳಿನೊಳೆಮ್ಮ ರಾಯ ಕೋಪದೊಳೆತ್ತಿ ಬಂದು ನಿಮ್ಮಯ ಠಾಣೆಯ[ಪಾಠಾಂ. ಣಯ, ಣ್ಯ]ಗಳ ಮುಂದುಗೆಡಿಸದಿರನು (ಕುರಾಸಾಂ. ೧೮-೦೨); ಸೆಳೆದರಿನೃಪರ ದುರ್ಗಗಳ ಠಾಣೆಯವನು ಬಲಿದು ಬಹಳ ದನಗಳನು ತಳುವದೆ ತಂದೀವೆನು (ಕಂನವಿ. ೮-೩೮). **ಠಾಣ್ಯ:** ೧. ಊರಿಗೆ ಭೇಟಿ ಕೊಡುವ ಭಿಕ್ಷುಕರಿಗೆಲ್ಲ ರಾತ್ರಿ ಠಾಣ್ಯ ಇದೇ (ರೂಪಸಂ. ೬೦). ೩. "ಪ್ರಚಕಂ, ಚಲಿತಾರ್ಥಕಂ ದಂಡು ಠಾಣ್ಯದ ಸ್ಥಲ ಬಿಟ್ಟು ಹೊರಟದಕ್ಕೆ ಹೆಸರುಗಳು" (ಸಿದ್ಧಾಂತಿ. ೨೨೯). **ತಾಣ್ಯ:** ೧. ಶತಬಾಹುವಂ ಸುರನಗರದೊಳ್ ತಾಣ್ಯಮಂ ಬಲಿದನುಳಿದಖಿಳದನುಜಮಾಗ್ನೆಯರೊಳಮಮಾ (ಘೋರಾಸು. ೬೭).

ಠಾಣ್ಯ ಹಾಕು = ಶಿಬಿರವನ್ನು ಸ್ಥಾಪಿಸು; ಪಾಳಯಮನ್ನಿಡು: ದಂಡಿನೊಡನೆ ಠಾಣ್ಯ ಹಾಕಿ ಸಮಯ ಹೊಂಚುವಿಕೆ (ಸಿದ್ಧಾಂತಿ. ೨೦೭); ಐಮಂಗಲ, ಪಾಳತಿ ಈ ಕೋಟೆಗಳನ್ನು ಮುತ್ತಿ ಠಾಣ್ಯ ಹಾಕಿದರು (ಚಿತ್ರಪಾ. ೨೪). [ <ಪ್ರಾ. ಥಾಣಯ ]

**ಟಾಣಾಂತರ** 'ತಾಣಾಂತರ' ನೋ.

**ಟಾಣಾದೀವಿಗೆ** 'ತಾಣದೀವಿಗೆ' ನೋ.

**ಟಾಣೆಯ** 'ಟಾಣಯ' ನೋ.

**ಟಾಣೋಘ**, ಠಾಣೋಗ (ನಾ). ಒಂದು ಬಗೆಯ ತೆರಿಗೆ; ಸರಕಿನ ರೂಪದಲ್ಲಿ ಪಡೆಯುವ ಸುಂಕ (?): ಸೋಮೇಶ್ವರದೇವರ್ಗ್ಗೆ ನಿವೇದ್ಯಕ್ಕಂ ಸೊಡರೆಣ್ಣೆಗಂ ಖಣ್ಡಸ್ಫುಟಿತಕ್ಕೆನ್ದು ವಡ್ಡರಾವುಳಂ ಟಾಣೋಘ ಸಹಿತಂ . . . ಮೂಱುಂ ಸುಂಕದೊಳಮಾಗಿ ಬಿಟ್ಟ ಉಪ್ಪಿನ ಹೇಱು ಅಯ್ವತ್ತು (ಸಾಇಇ. XX, ೩೪-೦೯; 1053). **ಠಾಣೋಗ:** ದೇವಧರ ದಣ್ಡನಾಯಕನ ಬೆಸದಿಂ ಬಳ್ಳಿಗಾವೆಯ ಸ್ಥಳದ ಠಾಣೋಗದ ಸುಂಕವೊಗ್ಗಡೆ ಕೊಮ್ಮರಾಜಂ (ಎಕ. VII (s), ಶಿಕಾರಿ. ೩೩೪-೦೯; 1100). [ ? ]

**ಟಾನಿಕ್ಕು** (ನಾ). ಶಕ್ತಿವರ್ಧಕ ಔಷಧ: ಬಡರೋಗಿಗಳಿಗಾಗಿ ಸರಕಾರ ಒದಗಿಸುತ್ತಿರುವ ಮದ್ದುಗಳು, 'ಟಾನಿಕ್ಕು'ಗಳು ಅವರಿಗೆ ದೊರೆಯುತ್ತಿಲ್ಲ (ದೀಪದ. ೦೭೫). [ ←ಇಂ. Tonic ]

**ಟಾಪರಿಸು** (ಕ್ರಿ). ತಿನ್ನು; ಭಕ್ಷಿಸು: ಇದು ಜಂಬುನೇರಳೆ ಕಾಳಿದಾಸರೇ, ನೀವಿದನ್ನು ಟಾಪರಿಸಬೇಕು (ಗಂಗಾವ. ೪೦).
[ ಟಾಪರ$_0$ (? ←ಮರಾ. ಟಾಪರ) + – ಇಸು$_3$ ]

**ಟಾಪು** (ನಾ). ೧. ದ್ವೀಪ; ನಡುಗಡ್ಡೆ: ದಂಡು ಸೇರಿಸಿ ಆ ದಳವನ್ನು ಸ್ಥಲದುರ್ಗಗಳು ಅಂದರೆ ಸಮುದ್ರದ ಟಾಪುಗಳು . . . ಬೆಟ್ಟದ ಕೋಟೆಗಳು . . . ನೆಲೆಯಾಗಿರುವ ಹಾಗೆ ವಿಂಗಡಿಸಿದನು (ಕಥಾಮಂ. IV, ೭೯): ಒಂದು ಹಡಗಿನ ಮೇಲೆ ಇವರಿಬ್ಬರನ್ನು ಕೂರಿಸಿ ಸಮುದ್ರದ ಮೇಲೆ ಕರೆದುಕೊಂಡು ಹೋಗಬೇಕು . . . ದೂರವಾಗಿರತಕ್ಕ ಅಂಥಾ ಒಂದು ಟಾಪಿನ ಮೇಲೆ ಆ ಮೋದರವನನ್ನೂ ಅರಸನನ್ನೂ ಬಿಟ್ಟು ಬರಬೇಕು (ಸುಮಚ.೩೭). ೨. (ಕರಾ)=ಟಾಪುಶಿಕ್ಷೆ: ಆದುದರಿಂದ ಈ ಮರಣಾಂತರದ ಟಾಪನ್ನು ಸ್ವೀಕರಿಸಬೇಕು (ಸರಸ. ೧೧೧). [←ಹಿಂ. ಟಾಪೂ./ಪ್ರಾ. ಟಪ್ಪ]

**ಟಾಪುಟೀಪು** (ನಾ). ಶಿಸ್ತು; ಅಚ್ಚುಕಟ್ಟು: ಹೊಸ ಪದ್ಧತಿಯ ಟಾಪುಟೀಪಿನ ಮನೆಯಲ್ಲಿದ್ದ ಸುಶೀಲೆಗೆ ಈ ಹಳೇ ಪದ್ಧತಿಯ ಮನೆಯಲ್ಲಿ ಸ್ವಲ್ಪ ಎಡಚೆಡಚು ಎನಿಸಹತ್ತಿತು (ಅನಂತ. ೩).
[ ←ಮರಾ. ಟಾಪ್‌ಟೀಪ್. / ಇಂ. Tip-Top ]

**ಟಾಪುಶಿಕ್ಷೆ,** ಟಾಪೂಶಿಕ್ಷೆ (ನಾ). ದ್ವೀಪಾಂತರ ವಾಸದ ಶಿಕ್ಷೆ ; ಕರಿನೀರಿನ ಶಿಕ್ಷೆ ; ಗಡೀಪಾರಿನ ಶಿಕ್ಷೆ : ನಿನ್ನ ಒಂದು ಸಾಕ್ಷಿಯಿಂದಲೇ ನಿನ್ನ ಧನಿಯ ಮಗನಿಗೆ ಜನ್ಮ ಟಾಪುಶಿಕ್ಷೆಯನ್ನು ಅಮಲ್ದಾರರು ವಿಧಿಸಿದರು (ವಿಧಿವ್ಯ. ೨೨). **ಟಾಪೂಶಿಕ್ಷೆ :** ಅದರಲ್ಲಿ ಇಬ್ಬರಿಗೂ ಇಪ್ಪಿಪ್ಪತ್ತು ವರ್ಷದ ಟಾಪೂಶಿಕ್ಷೆ ಯಾಯಿತು (ಗುರುಪ್ರ. ೬೮). [ ಟಾಪು + ಶಿಕ್ಷೆ ]

**ಟಾಪೂಶಿಕ್ಷೆ** 'ಟಾಪುಶಿಕ್ಷೆ' ನೋ.

**ಟಾರ್** 'ಟಾರು' ನೋ.

**ಟಾರು,** ಟಾರ್, ತಾರ್ರು$_6$ (ನಾ). ೧. "ಮರ, ಕಲ್ಲಿದ್ದಲು, ಮೊ. ನ್ನು ಒಣಬಟ್ಟಿ ಇಳಿಸುವುದರಿಂದ ದೊರೆಯುವ, ಮರ, ಕಬ್ಬಿಣ, ಮೊ. ನ್ನು ಕೆಡದಂತೆ ಇಡಲು ಉಪಯೋಗಿಸುವ, ಕಪ್ಪುಬಣ್ಣದ ಅಂಟು ದ್ರವ : ಡಾಂಬರೆಣ್ಣೆ, ಕೀಲೆಣ್ಣೆ" (Tar. ಇಂಕನಿ.). ೨. (ಅಲಂ) ಬಹಳ ಕಪ್ಪು : ದೇವರು ತನ್ನ ಭಕ್ತರನ್ನು ತನ್ನ ಬಣ್ಣದಲ್ಲಿ ಸೃಷ್ಟಿಸಿದ್ದಾನೆ ಎಂಬುದರಲ್ಲಿ ನನಗೇನೂ ಸಂದೇಹವಿಲ್ಲ, ನಮ್ಮೂರ ನರಸಿಂಹಸ್ವಾಮಿಯ ಮೂಲವಿಗ್ರಹ ನೋಡಿ, ಟಾರು (ಬಿಸ್ತಕ. ೫). **ಟಾರ್ :** ೧. ರಕ್ತ ಸುರಿಯುವುದು ನಿಂತ ಕೂಡಲೆ ಒಡೆದ ಕೊಂಬಿನ ಮೇಲೆ ಟಾರ್ ಹಚ್ಚಿದ ಬಟ್ಟೆಯನ್ನು ಗಾಳಿಗೆ ಒಡದಂತೆ ಸಿಂಬಿಯಾಗಿ ಸುತ್ತುವುದು (ಗ್ರಾಮಾಕ. ೦೪೭). **ತಾರ್ರು$_6$ :** ೧. ಉತ್ತಮವಾಗಿ ತಾರು (Tarred) ಮಾಡಿದ ರಸ್ತೆಗಳಿಂದ ಧೂಳು ಏಳುವುದಿಲ್ಲ (ಬಾಲಪ್ರ. I, ೨೯೮). [ ←ಇಂ. Tar ]

**ಟಾರೆಣ್ಣೆ,** ತಾರೆಣ್ಣೆ (ನಾ).=ಟಾರು ೧: "ಡಾಂಬರೆಣ್ಣೆ; ಕೀಲೆಣ್ಣೆ, ಟಾರೆಣ್ಣೆ" (Tar. ಇಂಕನಿ.). **ತಾರೆಣ್ಣೆ :** ಮನೆಗೆ ಉಪಯೋಗಿಸಿದ್ದ ಮರಮುಟ್ಟುಗಳಲ್ಲಿ ಅನೇಕ ವರ್ಷಗಳಿಂದ ಹೊಗೆ ಹಿಡಿದು ತಾರೆಣ್ಣೆ ಬಳಿದಂತೆ ಕಪ್ಪಗಾಗಿದ್ದುವು (ಕಾನೂರು. ೩೬). [ ಟಾರು + ಎಣ್ಣೆ ]

**ಟಾಪು** 'ತಾವ್ಕು' ನೋ.

**ಟಾವೆಲು** 'ಟವಲು' ನೋ.

**ಟಾವೆಲ್ಲು** 'ಟವಲು' ನೋ.

**ಟಾಳಿ** 'ಟವಳಿ' ನೋ.

**ಟಾಳಿಕಾಟ** 'ಟವಳಿಗಾಟ' ನೋ.

**ಟಾಳಿಸು,** ಠಾಳಿಸು (ಕ್ರಿ). ೧. ವಂಚಿಸು ; ಮೋಸಗೊಳಿಸು : ಟಕ್ಕಂ ಟಾಳಿಸಿ ಕನ್ನಂಗೊಟಿದತಿ ಟಕ್ಕೆಯ ಮಣಿಗಳ ಕದ್ದು (ಪ್ರಭುಪು. ೪-೦೪೭). ೨. ಹೀಯಾಳಿಸು ; ತಿರಸ್ಕರಿಸು : ಅಮರ್ದುಗಯ್ಯುನಂ ಪೊಂದಾವರೆಯ ನಮಳಮಣಿಮುಕುರಮಂ ಪದಪಿನಿಂದೇಳಿಪ್ಪ ಟಾಳಿಪ್ಪ ಜಾಳಿಪೊಂದದಟ ನಿಂದೇಳಿಸಿತು ಸುದತಿಯಾ ಮಿಱುಮಿನುಪ ವದನ (ಉದ್ಭದೇ. ೨-೫೫). **ಠಾಳಿಸು :** ೨. ಕನಕಹರ್ಮ್ಯದ ವಸತಿಯಿಲ್ಲದೇ ಕಟಕದೊಳು ಬಿನದಿಸುವ ತರು ಗುಲ್ಮ ಲತೆ ಬಿದಿರ್ ಬೆತ್ತಗಳ ವನಿತೆಯರು ನೀವು ಕಂಡಱಿಯರಿವ ನೋಡಿಯೆಂದಲ್ಲಮಂ ಠಾಳಿಸಿದನು (ಪ್ರಭುಪು. ೫-೦೪೫).
[ ಟಾಳಿ (<ಟವಳಿ) + – ಇಸು$_3$ ]

**ಟಿಂಕ್ಚರ್,** ಟಿಂಚರು (ನಾ). ಒಂದು ಬಗೆಯ ಕ್ರಿಮಿನಾಶಕ ದ್ರವ ; ಮದ್ದಾರ್ಕ : ಅದರ ಹೊಕ್ಕುಳಿಗೆ ಟಿಂಕ್ಚರ್ ಐಡಿನ್ ಮೊದಲಾದ ಕ್ರಿಮಿನಾಶಕವನ್ನು ಸವರಬೇಕು (ಬಾಲಪ್ರ. II, ೭೭೫). **ಟಿಂಚರು :** ಗಾಯಕ್ಕೆ ಟಿಂಚರು ಹಚ್ಚಿದರು (ರೂಢಿ). [ ←ಇಂ. Tincture ]

**ಟಿಂಗ್** (ನಾ). ಒಂದು ಅನುಕರಣ ಶಬ್ದ ; ಕಿಂದರಿ, ತಂಬೂರಿ, ವೀಣೆ ಮೊದಲಾದ ತಂತಿವಾದ್ಯಗಳನ್ನು ಬೆರಳುಗಳಿಂದ ಮಿಡಿಯುವಾಗ ಹುಟ್ಟುವ ಧ್ವನಿ.
**ಟಿಂಗ್‌ಟಿಂಗ್** (ದ್ವಿರುಕ್ತಿ) : ಕಿಂದರಿಜೋಗಿ ಟಿಂಗ್‌ಟಿಂಗ್ ಎಂದು ಕಿನ್ನರಿಯನ್ನು ಬಾರಿಸಿದನು (ರೂಢಿ).

**ಟಿಂಚರು** 'ಟಿಂಕ್ಚರ್' ನೋ.

**ಟಿಂಟಿಣಿ** (ನಾ). ಒಂದು ಅನುಕರಣ ಶಬ್ದ : ಸಂಜೆಯಾಗಲು ಎಲ್ಲರೊಡನೆ ಕರುಗಳ ಟಿಂಟಿಣಿಯಲ್ಲಿ ಯಾವುದೋ ಅವ್ಯಕ್ತ ಮಧುರ ಸಂದೇಶವನ್ನು ಕೇಳುತ್ತ ಮನೆಗೆ ಬರುತಿದ್ದ (ಶರಜ. ೨೦೫).

**ಟಿಂವ್‌ಗುಡು** (ಕ್ರಿ). ಟಿಂವ್ ಎಂದು ಕೂಗು : ಕೊಳದ ಬ್ಯಾಂಡುಗಳಲ್ಲಿ ಟಿಂವ್‌ಗುಡುವ ಟೀಂವಕ್ಕಿ ನೀನಾರೆ ಬಲ್ಲೆಯಾ ನಲ್ಲನೆಲ್ಲಿ (ನನಲ್ಲ. ೧೧-೬).
[ ಟಿಂವ್$_0$ + ಕುಡು$_1$ (<ಕೊಡು$_1$) ]

**ಟಿಂಹಕ್ಕಿ** 'ಟೀಂವಕ್ಕಿ' ನೋ.

**ಟಿಕ್** (ನಾ). ಒಂದು ಅನುಕರಣ ಧ್ವನಿ; ಗಡಿಯಾರದ ಚಲನದ ಶಬ್ದ.
**ಟಿಕ್‌ಟಿಕ್** (ದ್ವಿರುಕ್ತಿ) : ಗಂಟೆಯ ನಂತನೆ ಓ ಗಡಿಯಾರ . . . ಟಿಕ್‌ಟಿಕ್ ಗೆಳೆಯಾ, ಟಿಕ್‌ಟಿಕ್‌ಟಿಕ್ (ಕಪವು. ೩-೩೮); (ತಂತೀವರ್ತಮಾನವನ್ನು ತಾನೇ ಬರೆದಿಡುವ ಸಲಕರಣೆಯ ವಿಷಯದಲ್ಲಿ) ಟಿಕ್‌ಟಿಕ್ ಎಂದು ಸುದ್ದಿ ಗುರುತಿಸು (Tick-out. ಇಂಕನಿ.). **ಟಿಕ್‌ಟಿಕ್ ಎನ್ನು** = (ಗಡಿಯಾರ ಮೊದಲಾದುವುಗಳ ವಿಷಯದಲ್ಲಿ) ಟಿಕ್‌ಟಿಕ್ ಎಂದು ಹೊಡೆ: ಗಡಿಯಾರ ಟಿಕ್‌ಟಿಕ್ ಎನ್ನುವ ಶಬ್ದ ಮಾತ್ರ ಕೇಳಿಸುತಿತ್ತು (ರೂಢಿ).
**ಟಿಕ್ ಮಾಡು** = ಸರಿಯೆಂದು ಗುರುತುಮಾಡು : ಪತ್ರಿಕೆಗಳನ್ನು ಬೆಲೆಕಟ್ಟುವಾಗ ಎಲ್ಲಕ್ಕೂ ಟಿಕ್ ಮಾಡುವವರೇ ಹೆಚ್ಚುಮಂದಿ (ರೂಢಿ).

**ಟಿಕಳಿ,** ಟಿಕಳೆ (ನಾ). (ಉಕ) ೧. ಚುಕ್ಕೆ ; ಬೊಟ್ಟು : ಬೆಂಡೋಲೆ . . . ಹರಿದ್ವರ್ಣದ ಟಿಕಳಿಯೊಡನೆ ಸ್ಪರ್ಧಿಸುತ್ತಿದ್ದವು (ದೀಪಹ. II, ೩೮೯). ೨. ಸಣ್ಣ ಬಿಲ್ಲೆ ; ನಕ್ಕಿ : ಟೊಪ್ಪಿಗೆಯ ನೆತ್ತಿಯ ಮೇಲಿನ ದೊಡ್ಡ ಹೂ ಹರವಾಗಿತ್ತು, ದೊಡ್ಡ ದೊಡ್ಡ ಜರದ ಟಿಕಳಿಗಳಿಂದ (ವ್ಯನಿ. ೯). **ಟಿಕಳೆ :** ೧. ಹಣೆಯ ಮೇಲೆ ಒಂದು ತೀರ ಚಿಕ್ಕದಾದರೂ ಕುಂಕುಮದ ಟಿಕಳೆ ಇತ್ತು (ಮಧ್ಯಮ. ೦೭೮). [ ←ಮರಾ. ಟಿಕಲಾ, ಟಿಕಲೀ ; ಹಿಂ. ಟಿಕಿಯಾ./ಪ್ರಾ. ಟಿಕ್ಕ./ಸಂ. ತಿಲಕ ]

**ಟಿಕಳೆ** 'ಟಿಕಳಿ' ನೋ.

**ಟಿಕಾಯಿಸು,** ಟಿಕಾಸು (ಕ್ರಿ). (ಉಕ) (ಹೆಚ್ಚುದಿನ) ತಾಳು,–ಉಳಿ : ಈ ಗ್ರಾಮದಲ್ಲಿ ಈ ಪುಡಾರಿಯ ದರ್ಬಾರು ಟಿಕಾಯಿಸುವ ಹಾಗಿಲ್ಲ (ರೂಢಿ). **ಟಿಕಾಸು :** ಮಾಮಲೇದಾರನ ಹುಕುಮು ಹೌದಲ್ಲೋ ? ಅಪೀಲ ಮಾಡಿದರೆ ಟಿಕಾಸತದ ಏನೋ ಶೇಷಪ್ಪಾ (ಗ್ರಾಮಾಯ. ೨೨೬).
[ ಟಿಕಾವ್$_0$ (P←ಹಿಂ. ಟಿಕನಾ ; ಮರಾ. ಟಿಕಣೇ) + – ಇಸು$_3$ ]

**ಟಿಕಾಸು** 'ಟಿಕಾಯಿಸು' ನೋ.

**ಟಿಕೀಟು,** ಟಿಕೆಟ್ಟು, ಟಿಕೇಟು, ತಿಕೀಟು (ನಾ). ೧. ಪ್ರಯಾಣಕ್ಕೆ ಅಥವಾ ಪ್ರವೇಶಕ್ಕೆ ಅಧಿಕಾರ ಕೊಡುವ ಗುರುತಿನ ಚೀಟಿ : ಟಿಕೀಟು ತೆಕ್ಕೊಡುವ ಮಾತು ಹಾಗಿರಲಿ (ಹುಟ್ಟಿಹ. ೦೫೭); ಟಿಕೀಟಿಲ್ಲದೆ ರೈಲಿನಲ್ಲಿ ಪ್ರಯಾಣ ಮಾಡುವವರಿಗೆ ಶಿಕ್ಷೆಯಾಗುತ್ತದೆ (ಮಧ್ಯಮ. ೦೬೫). ೨. ಪಕ್ಷದ ಉಮೇದುವಾರಿಕೆಗೆ ಕೊಡುವ ಅನುಮಂತಿ ಪತ್ರ : ಅವರಿಗೆ ಈ ಸಲ ಚುನಾವಣೆಗೆ ಕಾಂಗ್ರೆಸ್ ಟಿಕೀಟು ಸಿಕ್ಕಲಿಲ್ಲ (ರೂಢಿ). **ಟಿಕೆಟ್ಟು :** ೧. ಅಂದಿನ ನಾಟಕದ ಉತ್ಪತ್ತಿಯನ್ನು ಅವರವರು ಮಾರಿದ ಟಿಕೆಟ್ಟುಗಳ ಪ್ರಮಾಣಾನುಸಾರವಾಗಿ ನಟರು ಹಂಚಿಕೊಳ್ಳುವ ಸಹಾಯಾರ್ಥ ನಾಟಕ (Ticket-night. ಇಂಕನಿ.). **ಟಿಕೇಟು :** ೧. ಟಿಕೇಟಿನ ಬೆಲೆ ಒಂದು ಡಾಲರು (ಮಹಾತ್ಮಾ. ೦೦೩); ಟಿಕೇಟಿನ ಮೂಲಕ ಆಟ ಆಡುವ ರೂಢಿಯು ಬಂದಿದೆ (ಯಕ್ಷಬ. ೩೦). **ತಿಕೀಟು :** ೧. ವಿಷ್ಣು ಎರಡು ಪೆನಿಯ ತಿಕೀಟನ್ನೇ ತೆಗೆದುಕೊಂಡಿದ್ದ (ಸಮಜೀ. ೭೦೮). ೩. ಸ್ಟ್ಯಾಂಪು: ಒಂದು ರೂಪಾಯಿ ತಿಕೀಟು ಕಳಿಸಿ ಪತ್ರ ವ್ಯವಹಾರ ಮಾಡಬೇಕು (ನಿರಾಥ. ೦೭೭). [ ←ಇಂ. Ticket ]

**ಟಿಕೆಟ್ಟು** 'ಟಿಕೀಟು' ನೋ.

**ಟಿಕೇಟು** 'ಟಿಕೀಟು' ನೋ.

**ಟಿಕ್ಕರಿ** 'ಠಿಕ್ಕರಿ' ನೋ.

**ಟಿಕ್ಕರಿಗಳೆ** 'ಠಿಕ್ಕರಿಗಳೆ' ನೋ.

**ಟಿಕ್ಕೆ₁, ಟಿಕ್ಕೆ₂, ಟೀಕೆ** (ನಾ). (ವಜ್ರದ ಅಥವಾ ಮಾಣಿಕ್ಯದ ಹರಳಿನಂತೆ ಕಾಣುವ) ಗಾಜಿನ ಮಣಿ; ಖೋಟಾರತ್ನ; ಕೃತಕಮಣಿ: ತಕ್ಕಿನ ಪವಳದ ಸಂಕೆಯ ಟಿಕ್ಕೆಯ ಮಣಿಗಳನನೇಕಮಂ ಕೊಂಡವನುಂ ಡೊಕ್ಕರಿಸದೆ (ಧರ್ಮಾಮೃ. ೬-೩೭); ಟಿಕ್ಕೆಯೊಳಗೆ ಮಾಣಿಕ್ಯ ಉಂಟೇ ಅಯ್ಯ (ಅದವ. ೧೩-೨೮); ಕನಕಶೈಲಕೆ ಮೇಣ್ಪರಮಾಣು ಟ[ಪಾಠಾಂ. ಟಿ]ಕ್ಕೆ ನಿರ್ಜರ ಮಣಿಗೆಯ್ದೆ ಕೋಪಿಸುವವೊಲ್ಮುಳಿದಂ (ವೀರವಿ. ೭-೫೭); ಇರುಳೆರಡೇಳು ಲೋಕವ ಸುತ್ತಿ ಟಿಕ್ಕೆಯ ಹರಳ ತಂದೆನಗೆ ತೋಱಿಸಿದೆ (ಮೋಹತ. ೩೦-೨೨). **ಟಿಕ್ಕೆ₂:** ಟಿಕ್ಕೆಯ ಕಲ್ಗಳಿಮಾ ಕವಿಲೆ ಕರ್ಬುನಕಂ ಮನಸಂದು ಬಂದನೇ (ಶಮದ. ನ. ೧೭೮ ಪ್ರಯೋ); ಚಿಂತಾಮಣಿಗೆ ಕೈದುಡುಕಿ ಹರಳು ಟಿಕ್ಕೆಯಿದೆಂಬ ಪಾಪಿಗೆ ಪರಮಗುರು ನಾನಾದೆನ್ಯೆ (ಕುಮಾವ್ಯಾ.ಭೀ.ಓರಿಇ.೩-೬೯); ಟಿಕ್ಕೆಯ ಹರಳು ಗಡ ಕೌಸ್ತುಭಕೆ ಸರಿಯೆಂದನು (ಕುಮಾವ್ಯಾ.ದ್ರೋ. ೦೫-೮); ಒಲವಿಂ ಟಿಕ್ಕೆಯ ಕಲ್ಗಳಾಭರಣದಿಂ (ಪಾವಶ. ೭); ಧರಿಸಿ ಚಿಂತಾಮಣಿಯ ಟಿಕ್ಕೆಯ ಹರಳಿಗಳಲುಪರುಂಟೆ (ಉತ್ತರಾ. ೩೦-೯೯). **ಟೀಕೆ:** ರತ್ನವ ಬಿಟ್ಟು ಟೀಕೆಯ ಹಿಡಿವರೆ (ಬಿಜ್ಜರಾ. ೧೩-೧೦೮).

**ಟಿಕ್ಕೆ₂** 'ಟೀಕೆ₂' ನೋ.

**ಟಿಟ್ಟಿಬ, ಟಿಟ್ಟಿವ** (ನಾ). = ಟಿಟ್ಟಿಭ: ತಾಪಸರು ಕೆಟ್ಟರು ಕೆಟ್ಟುದು ಸತ್ಯವೆಂದಲಸದೆ ಟಿಟ್ಟಿಬ ನುಡಿದುದಾ ಬನದಿ (ಮೋಹತ. ೭-೦೮). **ಟಿಟ್ಟಿವ:** ಹೋಱಿಸು ಟಿಟ್ಟಿವನು ಮಣಿಗನು ಗರುಡ ಕೊಣಕನು ಮೇಣು ಟೀವನು (ಸಾಳ್ವಭಾ. ೩-೨೩). [ <ಸಂ. ಟಿಟ್ಟಿಭ ]

**ಟಿಟ್ಟಿಭ** (ನಾ). ಒಂದು ಬಗೆಯ ಹಕ್ಕಿ; ಬಾನಾಡಿ ಹಕ್ಕಿ; ಲಕುಮುಕಿ ಹಕ್ಕಿ: "ಟಿಟ್ಟಿಭಾಃ, ಕ್ಷುದ್ರಪಕ್ಷಿಕಾಃ—ಈ ೨ ಚಿಟ್ಟೆ" (ಹಲಾಯು. ೯೨-೯೯); "ಬಾನಡಿ ಟಿಟ್ಟಿಭ" (ಕವಿಕಂ. ೬೨); ಹರಡೆ ಗೌಜು ಟಿಟ್ಟಿಭ . . . ತುಱುಗಿ ನಭದೊಳು ಖಗಾನೀಕ ಮಂಡಳಿಸಲು (ಹಚಕಾ. ೩-೪೨); ವೈನತೇಯ ನಿರ್ದಾಡಿದ ಗಾಳಿವಟ್ಟೆಗೆ ಮನಂ ಬಿಡೆ ಧೀಂಕಿಡುವಂತೆ ಟಿಟ್ಟಿಭಂ (ಪುಷ್ಪಪು.೦-೬೨); ಟಿಟ್ಟಿಭ ಪಕ್ಷಿಗಳ ಕಣ್ಣುಗಳಂತೆಯೂ (ಸೌಗಂಧಿ. ೩೦೦-೨೦); ಟಿಟ್ಟುಟಿಟ್ಟೆಂದೊಂದು ನಿಟ್ಟಿಗೆ ಟಿಟ್ಟಿಭವು ತಾನಡಗಿದೆ (ಚಿಂತನ. ೦೮-೦೨). [ ಸಂ. ]

**ಟಿಟ್ಟಿಭಕ** (ನಾ). = ಟಿಟ್ಟಿಭ: "ಕೋಯಷ್ಟಿಕಃ—ಕೀಚುಬಾಲದ ಹಕ್ಕಿ, ಟಿಟ್ಟಿಭಕಃ, ಲಕುಮುಕೀಹಕ್ಕಿ" (ಸಿದ್ಧಾಂತಿ. ೦೯೩); ಕಾಗೆಗೂಗೆಗಳ ಟಿಟ್ಟಿಭಕ ಗರುಡಗಳ (ಸಿದ್ಧಕಾ. ೬-೩೩). [ ಸಂ. ]

**ಟಿಟ್ಟಿವ** 'ಟಿಟ್ಟಿಬ' ನೋ.

**ಟಿನ್ನು** (ನಾ). ೧. ತಗಡು: ಕೈಯಲ್ಲಿ ಒಂದು ಹಳೆಯ ಬಟ್ಟಲು ಒಂದು ಟಿನ್ನಿನ ಡಬ್ಬ (ದೀಪದ. ೨೨). ೨. ತಗಡಿನ ಡಬ್ಬ,-ಡಬ್ಬಿ: ಎತ್ತರದ ರೆಂಬೆ ಕೆದರಿದ ಮರಗಳಿಗೆ ಕಟ್ಟಿದ ಟಿನ್ನಿನ ಬಾಯಿಗಳು ಬಂಡೆಯ ಮೇಲಿನ ಜೀವಕ್ಕೆ ಅಭಯ ಕೂಗಿದವು (ಎಮುಳ. ೫೩). [ ←ಇಂ. Tin ]

**ಟಿಪಾಯಿಸು, ಟಿಪಾಸು** (ಕ್ರಿ). ಇಸ್ಪೀಟಿನ ಎಲೆಗಳನ್ನು ಕಲಸು,–ಬೆರಸು: ಛಲೋ ಟಿಪಾಯಿಸರಿ ಪಾಟೀಲ್ರ (ಹುಚ್ಚಾಟ. ೦೦೮). **ಟಿಪಾಸು:** ಭುಜಂಗ ಎಲೆಯನ್ನು ಟಿಪಾಸಿ ಮೂರೆಲೆ ಅಟಕ್ಕೆ ಹಂಚಿದ (ದಿವಾಬ. ೪೫).

[ ಟಿಪಾಯ್ಮಿ₀ (P ← ಹಿಂ. ಟೀಪ್) + – ಇಸು₃ ]

**ಟಿಪಾಸು** 'ಟಿಪಾಯಿಸು' ನೋ.

**ಟಿಪಿ** 'ಟೀಪಿ' ನೋ.

**ಟಿಪ್ಪಣ** (ನಾ). ೧. ವಿವರಣೆ; ವ್ಯಾಖ್ಯಾನ: ಆ ಕೃತಿಗೆ ಪಂಚಿಕೆ ವೇಟ್ಟುದಿದರ್ಕೆ ಟಿಪ್ಪಣಂಬೇಟ್ಟುದು ಟೀಕುವೇಟ್ಟುದೆನೆ ಪೇಟ್ದವನುಂ ಕವಿಯೆಂಬ ಲೆಕ್ಕಮೇ (ಕಾವ್ಯಾವ. ೨೯೯); ಮನಸಿಜಾಗಮದ ಟಿಣವಪ್ಪ ಲೇಖಿಸುವಂತೆ ವನಿತೆ ಕಪೋಲಫಲಕದಿ ಕೊನೆಯುಗುರಲಿ ಬರೆದುದನೋದಿ ಮೆಚ್ಚಿವೊಲು ಮಿನುಗಿತು ಗಳರವವವಳ (ವರ್ಧಚ. ೩-೮೮). ೨. (ಭಾಷಣ, ಲೇಖನ, ವ್ಯಾಸಂಗ ಮೊದಲಾದುವುಗಳ ಅಥವಾ ಅವುಗಳಿಗಾಗಿ) ಮುಖ್ಯ ವಿಷಯಗಳನ್ನು ಮಾತ್ರ ನೆನಪಿಗಾಗಿ ಗುರುತುಮಾಡಿಕೊಂಡ ಬರೆವಣಿಗೆ. [ ಸಂ. ]

**ಟಿಪ್ಪಣಿ** (ನಾ). ೧. = ಟಿಪ್ಪಣ ೧: ಫ್ರಿಟ್ಸನ ಒಲವು ಮತ್ತು ಮೇಧಾಶಕ್ತಿಯು, ಹೆಚ್ಚಾಗಿ ಪ್ರಾಚೀನಗ್ರಂಥಗಳಿಗೆ ಟೀಕೆ ಟಿಪ್ಪಣಿಗಳನ್ನು ಬರೆದು, ಅವುಗಳಿಂದ ಸೂಕ್ತ ಅಂತಿಮನಿರ್ಧಾರಗಳಿಗೆ ಬರುವ ಭಾಷಾಶಾಸ್ತ್ರಜ್ಞನಂತೆ ಇತ್ತು (ಸಸ್ಮಳ. ೮೩). ೨.=ಟಿಪ್ಪಣ ೨: "(ಭಾಷಣಕ್ಕಾಗಲಿ ಲೇಖನಕ್ಕಾಗಲಿ ಮಾಡಿಕೊಂಡ) ವಿಷಯಗಳ, ಅಭಿಪ್ರಾಯಗಳ, ಟಿಪ್ಪಣಿ; ಮುಖ್ಯಾಂಶಗಳ ಪಟ್ಟಿ" (Note. ಇಂಕನಿ.); ಟಿಪ್ಪಣಿ ಉಪಾಧ್ಯಾಯರ ಪೂರ್ವಸಿದ್ಧತೆಯ ಒಂದು ಅಂಗ (ಶಿಕ್ಷದ. ೨೫೭). [ ಸಂ. ಟಿಪ್ಪಣೀ ]

**ಟಿಪ್ಪಣಿಗಾರ** (ನಾ). ಟಿಪ್ಪಣಿ ಬರೆಯುವವನು; ಟೀಕಾಕಾರ: (*).

[ ಟಿಪ್ಪಣಿ + – ಗಾರ (< – ಕಾಱ) ]

**ಟಿಪ್ಪಣಿಸು** (ಕ್ರಿ). ಟಿಪ್ಪಣಿ ಬರೆ: ಸಂಗ್ರಹಿಸಿ ಬರೆದಂ, ಟಿಪ್ಪಣಿಸಿ ಬರೆದಂ (ಶಬ್ದಾನು. ೫೮೦ ಪ್ರಯೋ). [ ಟಿಪ್ಪಣಿ + – ಇಸು₃ ]

**ಟಿಫನ್ನು** 'ಟಿಫಿನ್ನು' ನೋ.

**ಟಿಫಿನ್ನು, ಟಿಫನ್ನು, ಟಿಫೀನಿ** (ನಾ). ಉಪಾಹಾರ; ಫಲಾಹಾರ: ಟಿಫಿನ್ನು ಸಿದ್ಧವಾಗಿದೆ, ಬನ್ನಿ (ರೂಢಿ). **ಟಿಫನ್ನು:** ಈ ದಿನ ಬೆಳಗಿನ ಟಿಫನ್ನಿಗೆ ಇಡ್ಲಿ ಮಾಡಿದ್ದರು (ರೂಢಿ). **ಟಿಫೀನಿ:** ಕಾಫಿ ಮಾಡಿಸಿದ್ದಾರೆ ಸಂಜೆಗೆ ಟಿಫೀನಿಯೂ ಇದೆ (ಸ್ವಪ್ನಹೊ. ೮೭).

[ ←ಇಂ. Tiffin. / ಅರ. ಹಿಂ. ಟಿಫನ್ ]

**ಟಿಫೀನಿ** 'ಟಿಫಿನ್ನು' ನೋ.

**ಟಿಬಕಿ** (ನಾ). ಒಂದು ಬಗೆಯ ಹೊಲಿಗೆ; ಟಿಬ್ಬಿ: ಅರಿವೆಗೆ ಟಿಬಕಿ ಹಾಕಿಧಾಂಗ ಆಗಿರಬೇಕು (ದೀಪಹ. II, ೩). [ ? ]

**ಟಿಬ್ಬರಿಸು** 'ಟೆಬ್ಬರಿಸು' ನೋ.

**ಟಿಬ್ಬಿ₁** (ನಾ). ೧. ಒಂದು ಬಗೆಯ ಹೊಲಿಗೆ; ಟಾಕಿ ಹೊಲಿಗೆ: ಬ್ರಹ್ಮ ಗಂಟುದಾರ ವಿಷ್ಣುವಿಂಗೆ ಉಭಯದ ಹೊಲಿಗೆ ರುದ್ರಂಗೆ ಟಿಬ್ಬಿ ಮಿಕ್ಕಾದ ದೇವಕುಲವೆಲ್ಲಕ್ಕೂ ಅಲ್ಲಲ್ಲಿಗೆ ಕಲ್ಲಿಯ ಹೊಲಿಗೆ (ಸರ್ವವ. ೦೨೩-೬೨೭). ೨. "(ಬಟ್ಟೆ, ಮೊ. ಗಳ) ಅಂಚು (ಮು. ಅಂಚು ಮಡಿಸಿ ಹೊಲಿದದ್ದು)" (Hem. ಇಂಕನಿ.). ೩. ಸ್ತ್ರೀಯರ ಕುಪ್ಪಸ ಮೊದಲಾದುವುಗಳಿಗೆ ಅಲಂಕಾರಕ್ಕಾಗಿ ಹಾಕುವ ಕುಸುರಿಕೆಲಸವುಳ್ಳ ಹೊಲಿಗೆ: ಗುಬ್ಬಿಕಣ್ಣಿನ ಸೀರೆ ಟಿಬ್ಬಿಯ ಕುಬ್ಬಸ ಹಬ್ಬಿಕುಡುವ ಸೀರೆಯನ್ನುಟ್ಟು ಹೊರಟಾರ (ಸಿದ್ಧಪು. ೦೭-೬೨).

[ ←ಹಿಂ. ಮರಾ. ಟೀಪ್ ]

**ಟಿಬ್ಬಿ₂** (ನಾ). ಕುಸ್ತಿಯಲ್ಲಿ ಒಂದು ವರಸೆ: ಟಿಬ್ಬಿಹಾರಿಸುವುದು, ಸವಾರಿ ಹಾಕುವುದು . . . ಇತ್ಯಾದಿ ಪಟ್ಟುಗಳನ್ನೆಲ್ಲಾ ಸುಬ್ಬು ಚಟುಕಾಗಿ, ಸರಾಗವಾಗಿ ಉಪಯೋಗಿಸುವಂತೆ ಕಲಿತ (ಭೀಮುಕಾ. ೪೩). [ ? ]

**ಟಿಮ್ಮು** (ನಾ). ಬಿಂದು; ಚುಕ್ಕೆ: ಎರಡು ಟಿಮ್ಮುಗಳು (ಭಾಷಾಶಾ. ೧೦೭).

[ ←ಮರಾ. ಟಿಂಬ್ ]

**ಟಿಸಲು** 'ಟಿಸಿಲು' ನೋ.

**ಟಿಸಲೊಡೆ** 'ಟಿಸಿಲೊಡೆ' ನೋ.

**ಟಿಸಳು** 'ಟಿಸಿಲು' ನೋ.

**ಟಿಸಿಲು, ಟಿಸಲು, ಟಿಸಳು** (ನಾ). ೧. ಕವಲೊಡೆದ ಕೊಂಬೆ; ಪಕ್ಕದಲ್ಲಿ ಮೂಡಿದ ಟೊಂಗೆ; ಚಿಕ್ಕ ಕೊಂಬೆ: ದೂರ ದೂರ ಬೇರು ಚಾಚಿ ಟೊಂಗೆ, ಟಿಸಿಲು ಮನುಕುಲ (ನಲಮು. ೨೫-೦೦); ಅವರ ಬಳ್ಳಿ ಮರವಾಗಿ

ಹಬ್ಬಿದೆ. ಆದರೆ ಅದಕ್ಕೆ ಒಡೆದ ಟಿಸಿಲು ಅನಂತವಾಗಿಬಿಟ್ಟಿದೆ (ಹಳ್ಳಿಬ. ೦೦೩); ಕೊಂಚ ವಿಚಾರ ಮಾಡಿದರೆ, ಈ ಮೂರೂ ಒಂದೇ ರೆಂಬೆಯ ಟಿಸಿಲುಗಳೆಂದು . . . ಕಂಡು ಬರುವುದು (ಪ್ರೇಮಾಪ್ಯ. ೧೯೩). ೨. ಕವಲು; ವಿಭಾಗ; ಸೀಳು: ಚಿಗರೆಗಳು . . . ಕೋಡಿಗೆ ಹೊಂಬತ್ತರವರೆಗೆ ಟಿಸಿಲುಗಳಿರುತ್ತವೆ (ಕಥಾಗಿ. ೬೪); ಇವೆರಡೂ ಟಿಸಿಲುಗಳ ನಡುವಿರುವ ಪ್ರದೇಶವು ಬಲು ಗುಡ್ಡಗಾಡು (ವಿಜಾಭೂ. ೮)

**ಟಿಸಲು:** ೧. ಟೊಂಗೆಗಳಿಗೆ ಬೇರೆ ಸಣ್ಣಸಣ್ಣ ಟಿಸಲುಗಳು ಒಡೆದಿರುತ್ತವೆ (ಕಸಾಪ. I, ೦೩೦). ೨. ನಾಗವರ್ಮನ ಛಂದೋಂಬುಧಿಯನ್ನು ಏತದ್ವಿಷಯಕ ಸಂಶೋಧಕ ದೃಷ್ಟಿಯಿಂದ ನೋಡಿದೆ ಅಲ್ಲಿ ಕೊಟ್ಟ ಸೂತ್ರಾರ್ಥಕ ಟಿಸಲುಗಳನ್ನು ಇನ್ನಷ್ಟು ಗುರುತು ಹಚ್ಚಿದೆ (ಸಂಶೋಧ. ೯೩).

**ಟಿಸಳು:** ೧. ಗಲ್ಲು ಗಲ್ಲು ಎಲೆಎಲೆಯೂ ಚಂದ, ಟಿಸಳು ಎಸಳು ಕುಡಿ ಮಿಡಿ ಬಿಸವಂದ (ನಡಬಂ. ೯೩-೬). ೨. ಮನುಷ್ಯನು ವೈರಾಗ್ಯಬುದ್ಧಿಯನ್ನು ತಾಳಿ, ಕಾಮಮಾರ್ಗದಿಂದ ತಪ್ಪಿಸಿಕೊಂಡು, ಧರ್ಮಮಾರ್ಗಕ್ಕೆ ಹತ್ತಿದ ಬಳಿಕ, ಮುಂದೆ ಎರಡು ಟಿಸಳುಗಳೊಡೆದಿರುತ್ತವೆ (ಗೀತಾಸಂ. ೫೦). [ ? ]

**ಟಿಸಿಲುದಾರಿ** (ನಾ). ಕವಲುದಾರಿ; ಸೀಳಂದಾರಿ: ಆದರೆ ಇದರಷ್ಟೆ ಅರ್ಥಪೂರ್ಣವಾದ ಟಿಸಿಲುದಾರಿಯೊಂದಿದೆ (ಜೀಪಾಠ. ೩೩).
[ಟಿಸಿಲು + ದಾರಿ]

**ಟಿಸಿಲೊಡೆ, ಟಿಸಲೊಡೆ** (ನಾ). ಕೊಂಬೆ ಹುಟ್ಟು; ರೆಂಬೆ ಕವಲಾಗು: ಟಿಸಿಲೊಡೆದ ಹಲವು ಟೊಂಗೆಗಳಲ್ಲಿ ಕುಳಿತು (ತಿಂಮುತ. ೦೩೯). ೨. ವಿಭಕ್ತವಾಗು; ಬೇರೆ ಬೇರೆ ಆಗು: ಮೋಡಕರ 'ಮರಾಠಿಗನ್ನಡ', ಸುಬ್ಬಣ್ಣಾಚಾರ್ಯರ 'ಶಿಷ್ಟಗನ್ನಡ' ಹೀಗೆ ಬಳಕೆಮಾತು ಟಿಸಿಲೊಡೆದಿದೆ (ಸಮಜೀ. ೦, ೩ೀ೬೪). **ಟಿಸಲೊಡೆ:** ೧. ಅಳ್ಳೆಗೊಂಬು = ಬಗಲೊಡೆದ ಟೊಂಗೆ; ಟಿಸಲೊಡೆದ ಟೊಂಗೆ (ಗಂಗಾಮ. ೨೦). [ ಟಿಸಿಲು + ಒಡೆ$_1$ ]

**ಟೀ, ತೇ$_2$** (ನಾ). ಒಂದು ಬಗೆಯ ಸೊಪ್ಪು ಹಾಗು ಅದರಿಂದ ತಯಾರಿಸುವ ಪಾನೀಯ; ಚಹಾ: ನಮ್ಮ ಹಳ್ಳಿಗೆ ಪದೇ ಪದೇ ಕಾಫಿ, ಟೀ ವ್ಯಾಪಾರಸ್ಥರು ಕ್ರಿಸ್ತಮತ – ಬೋಧಕರು ಮುಂತಾದವರು ತಮ್ಮ ತಮ್ಮ ಮೋಟಾರುಗಳಲ್ಲಿ ಬಂದು (ಹುಟ್ಟಿಹ. ೧೮೮); ಒಂದು ಕಪ್ಪು ಟೀ ಕೊಡು (ರೂಢಿ). **ತೇ$_2$:** ಟೀ, ತೇ, ಚಾ, ಚಹ,–ಗಿಡ (Tea. ಇಂಕನಿ.).
[ ←ಇಂ. Tea ; ಡಚ್. Thee ; ಚೀನಿ. ತೇ ]

**ಟೀಂ** (ನಾ). ಒಂದು ಅನುಕರಣ ಶಬ್ದ. 'ಟೀಂವಕ್ಕಿ' ಪರಾ.

**ಟೀಂವಕ್ಕಿ, ಟಿಂಹಕ್ಕಿ** (ನಾ). ಟೀಂವ್ ಟೀಂವ್ ಎಂದು ಕೂಗುವ ಒಂದು ಬಗೆಯ ಹಕ್ಕಿ; ಟೀವನ ಹಕ್ಕಿ: ಕೊಳದ ಬಾಂದಳದಲ್ಲಿ ಟಂವ್‌ಗುಡುವ ಟೀಂವಕ್ಕಿ ನೀನಾರ ಬಲ್ಲೆಯಾ ನಲ್ಲನೆಲ್ಲಿ (ನನಲ್ಲ. ೦೦-೯); ಅದೇ ವೇಳೆಯಲ್ಲಿ ಟೀಂವಕ್ಕಿಯೊಂದು, ಶಾಂತಿಕುಟೀರದ ಮೇಲಿಂದಲೆ 'ಟಂವ್', 'ಟಂವ್' ಎಂದು ಧ್ವನಿಮಾಡುತ್ತ ಸಿಡಿಸಿಡಿದು ಹಾರಿಹೋಯಿತು (ಅಶಾಂತಿ. ೧೪೬). **ಟಿಂಹಕ್ಕಿ:** ಕಾಡುಬೆಕ್ಕಿನಿಂದ ತಪ್ಪಿಸಿಕೊಂಡ ಟಿಂಹಕ್ಕಿಯೊಂದು ಗಿಡ ಬಿಟ್ಟು ಹಾರಿ, ಮಂದ ತಲೆಗೇರಿ ಸುತ್ತಿ ಚಿಮ್ಮಿ ಚೀರಿತು (ಪ್ರಶ್ನೆ. ೮೪). 'ಟೀವ' ಪರಾ. [ ಟೀಂ + ಹಕ್ಕಿ$_1$ (<ಪಕ್ಕಿ$_1$) ]

**ಟೀಕಾಕಾರ** (ನಾ). ವ್ಯಾಖ್ಯಾನ ಬರೆಯುವವನು; ವ್ಯಾಖ್ಯಾನಕಾರ: ಸಾರತರೋಕ್ತಿಗೆ ನೆಲ್ಲುಂಮೋರುಂಗೋದಂತೆ ನೇಚಿಲ್ ಕಲ್ಪಾರ್ಪರವರ್ಗೋರೀರೆ ನಿಬಂಧನ ಟೀಕಾಕಾರಂಗಲ್ಲದೆ ಪೆಚಂಗೆ ಕೋಟಿಖ್ಯೋದಪುದೇ (ಶಾಂತಿಪು. ೦೦-೦೮೨). [ ಸಂ. ]

**ಟೀಕಾಚಿತ್ರ** (ನಾ). ವಿಡಂಬನ ಚಿತ್ರ; ವ್ಯಂಗ್ಯಚಿತ್ರ: (ಹಾಸ್ಯಪತ್ರಿಕೆಯಲ್ಲಿ, ಮು. ರಾಜಕೀಯ ವಿಚಾರಗಳನ್ನು ಟೀಕಿಸಿ ರಚಿಸಿದ ಪತ್ರಿಕೆಗಳಲ್ಲಿ) ಪೂರ್ಣಪುಟ ಚಿತ್ರ, ದೊಡ್ಡಚಿತ್ರ: ಟೀಕಾಚಿತ್ರ; ಹಾಸ್ಯಚಿತ್ರ; ನಗೆಚಿತ್ರ (Cartoon. ಇಂಕನಿ.). [ಸಂ. (ಟೀಕಾ + ಚಿತ್ರ)]

**ಟೀಕಾರಾಗ** (ನಾ). [ಸಂಗೀತ] ರಾಗಗಳಲ್ಲೊಂದು: ಷಡಾರ ಟೀಕಾರಾಗ ಮಾಳವಿ . . . ಹಿಂದೋಳಮೆಂಬೆಂಟು ರಾಗಂಗಳುಂ ಅಷ್ಟಸಾಧಾರಣ ಜಾತೀಯಂಗಳು (ವಿವೇಕ. ೨೩೩). [ ಸಂ. ]

**ಟೀಕಿಸು** (ಕ್ರಿ). ೧. ವ್ಯಾಖ್ಯಾನ ಮಾಡು; ವಿವರಿಸು; ಅರ್ಥವನ್ನು ಸ್ಪಷ್ಟಪಡಿಸು. ೨. ಗುಣದೋಷ ವಿಮರ್ಶೆಮಾಡು: "ಟೀಕಿಸು, ಖಂಡಿಸು" (Judge. ಪತ್ರಿನಿ. ೪೮). ೩. ಆಕ್ಷೇಪಿಸು; ದೋಷಗಳನ್ನು ಎತ್ತಿ ತೋರಿಸು: ನೂತನ ಶಿಕ್ಷಣಕ್ರಮಗಳಲ್ಲಿ ಅನುಭವಸಾಧನೆಗೇ ಹೆಚ್ಚಿನ ಅವಕಾಶವುಂಟೆಂದೂ ಟೀಕಿಸುವುದುಂಟು (ಶಿಕ್ಷದ. ೬೯೬); ದಾಸರು ರಾಜಕೀಯವನ್ನು ಸಮಯೋಚಿತವಾಗಿ ಟೀಕಿಸುತ್ತಲೂ ಪ್ರಶಂಸಿಸುತ್ತಲೂ ಇದ್ದರು (ಬದುಬೆ. ೩). [ ಟೀಕೆ$_1$ + – ಇಸು$_3$ ]

**ಟೀಕು** (ನಾ). ವ್ಯಾಖ್ಯಾನ; ಅರ್ಥವಿವರಣೆ: "ಟೀಕಾ, ಟೀಕು, ಈ ೨ ವಿವರಂ" (ಕಾಶಕ್ಕ. ೯೦); ಲೋಕಕ್ಕಿದರ್ಥಶಾಸ್ತ್ರದ ಟೀಕೆನಿಸಿದ ತನ್ನ ನುಡಿ ಮನಂಗೊಳಿಸೆ (ಪಂಪಭಾ. ೯-೦೪); ಟೀಕುವೇಟ್ಯುದೆನೆ ಪೇಟ್ದುವನುಂ ಕವಿಯೆಂಬ ಲೆಕ್ಕಮೇ (ಕಾವ್ಯಾವ. ೨೯೯). [ <ಸಂ. ಟೀಕಾ ]

**ಟೀಕುವರೆ**(ಕ್ರಿ). ಟೀಕೆಯನ್ನು ಬರೆ; ವ್ಯಾಖ್ಯಾನವನ್ನು ಬರೆ: ಅನಿತೊಂದು ಸಿರಿಯ ಮೈಮೆಯೊಳನಿತೌದ್ಧತ್ಯಕ್ಕೆ ಸಲ್ಲದಾ ನೃಪತನಯಂ ವಿನಯೇನ ವಿನಾ ಕಾ ಶ್ರೀ ಎನಿಪುಕ್ತಿಗೆ ಟೀಕುವರೆದ ತೆಱದಿಂ ನಡೆದಂ (ಚಂದ್ರಪು. ೪-೦೦).
[ ಟೀಕು + ಬರೆ$_1$ ]

**ಟೀಕೆ$_1$** (ನಾ). ೧. ವ್ಯಾಖ್ಯಾನ; ಟೀಕು: "ಭಾಷ್ಯ; ವ್ಯಾಖ್ಯಾನ; ಟೀಕೆ" (Commentary. ಇಂಕನಿ.). ೨. ಗುಣದೋಷ ವಿಮರ್ಶೆ: "ವಿಮರ್ಶೆ, ಟೀಕೆ; ಗುಣದೋಷ ವಿವೇಚನೆ" (Criticism. ಇಂಕನಿ.); ಈ ವಿಚಾರದಲ್ಲಿ ಒಟ್ಟಿನ ಮೇಲೆ ಒಂದು ಟೀಕೆಯ ಮಾತನ್ನು ಹೇಳುವುದು ಅವಶ್ಯವಾಗಿದೆ (ಸಾಹಿಶ. ೬೩). ೩. ಆಕ್ಷೇಪಣೆ; ತಪ್ಪನ್ನು ಎತ್ತಿತೋರಿಸುವಿಕೆ; ನಿಂದಿಸುವಿಕೆ: ಪಾದಚಾರಿಯ ಕಂಡು ಕಾರೊಳು ಬಾ ಎಂದು ಹತ್ತಿಸಿಕೊಳ್ಳುವುದು ಬೇಡ ನಿನ್ನ ಕಾರಿನ ಟೀಕೆ ಮುಗಿಸಿಯೆ ಕಾರಿನಿಂದಿಳಿವನು ನೋಡ (ಇಂಚಾಪ. ೨೩೦-೩೭); ಎಂದಿನಂತೆಯೆ ಶ್ಯಾಮ್ ಅವರಿವರನ್ನು ಟೀಕೆ ಮಾಡುತ್ತ ಕೆಲವರನ್ನು ಹೊಗಳುತ್ತ ಇದ್ದ (ಅಂಹೂ. ೯೨). ೪. [ಸಂಗೀತ] ಒಂದು ಬಗೆಯ ರಾಗ: ಟೀಕೆ, ಸೈಂಧವಿ, ಪಂಚಮ . . . ಉಪಾಂಗವೆಂಬೆಂಟು ರಾಗಂಗಳುಂ (ವಿವೇಕ. ೨೩೩).
[ ಸಂ. ಟೀಕಾ ]

**ಟೀಕೆ$_2$, ಟಿಕ್ಕೆ$_2$** (ನಾ). ಕೊರಳಲ್ಲಿ ಧರಿಸುವ ಒಂದು ಬಗೆಯ ಚಿನ್ನದ ಆಭರಣ; ಅಡ್ಡಿಕೆ: ಮನೆಯಲ್ಲಿ ಅತಿಥಿಗಳು ಬಂದಿದ್ದಾರೆ, ನನ್ನ ಕರಿಮಣಿ ಟೀಕೆಯನ್ನು ಕಟ್ಟಿಕೋ (ಪವಶೀ. ೮೦). **ಟಿಕ್ಕೆ$_2$:** ಕೊರಳಲ್ಲಿ ಭಾರವಾದ ಗೆಜ್ಜೆಯ ಟಿಕ್ಕೆ (ಹಳ್ಳಿಬ. ೬); ಅವಳುಟ್ಟ ಮಡಿಯ ಸೆರಗು ಎದೆಯ ಮೇಲಿಂದ ಸರಿದು ಕೊರಳೊಳಗಿನ ದೊಡ್ಡ ಗೆಜ್ಜೆಯ ಟಿಕ್ಕೆ ಹೊರಗೆ ತೋರುತ್ತಿದ್ದಿತು (ಆಹೋಳ. ೮). [←ಹಿಂ. ಮರಾ. ಟೀಕ್ ]

**ಟೀಕೆಟಿಪ್ಪಣಿ** (ನಾ). ೧. ಶಬ್ದಾರ್ಥವಿವರಣೆ: ∙ ಟೀಕೆಟಿಪ್ಪಣಿಗಳೂ ಗ್ರಂಥದ ವಿಷಯವನ್ನು ಹುಡುಕಲು ಅನುಕೂಲಿಸುವಂತೆ ಮುಖ್ಯಾಂಶಗಳ ಅಕಾರದಿ ಪಟ್ಟಿಯೂ ಪುಟಸಂಖ್ಯೆಯೂ ಕೊನೆಯಲ್ಲಿರಬೇಕು (ಶಿಕ್ಷದ. ೨೬೦). ೨. ದೋಷವನ್ನು ಎತ್ತಿ ಹೇಳುವುದು: ಸಮಾಜಸೇವೆಯ ವ್ಯಕ್ತಿ ಎಷ್ಟೇ ಪ್ರಾಮಾಣಿಕತೆಯಿಂದ ನಡೆದುಕೊಂಡರೂ ಟೀಕೆಟಿಪ್ಪಣಿ ಅವನಿಗೆ ಕಟ್ಟಿಟ್ಟ ಗಂಟು (ರೂಢಿ). P ಈ ಜೋಡಿ ಶಬ್ದಗಳು ಬೇರೆಬೇರೆಯಾಗಿಯೂ ಬಳಕೆಯಾಗುತ್ತವೆ. [ ಟೀಕೆ$_1$ + ಟಿಪ್ಪಣಿ ]

**ಟೀಕೆಬರೆ** (ಕ್ರಿ). = ಟೀಕುವರೆ: ಸಂಸ್ಕೃತ ಮಹಾಕಾವ್ಯಗಳಿಗೆ ಟೀಕೆ ಬರೆಯುವುದರಲ್ಲಿ ಮಲ್ಲಿನಾಥ ನಿಸ್ಸೀಮ (ರೂಢಿ). [ಟೀಕೆ$_1$ + ಬರೆ$_1$]

**ಟೀಪಾಯಿ** 'ಟೀಪಾಯಿ' ನೋ.

**ಟೀಪಾಯಿ,** ಟೀಪಾಯ್ (ನಾ). ೧. ಮೂರುಕಾಲಿನ ಮಣೆ; ಮುಕ್ಕಾಲು ಮಣೆ. ೨. ಒಂದು ಬಗೆಯ ಕಾಲುಮಣೆ; ಪುಟ್ಟ ಮೇಜು:ಟೀಪಾಯಿಯ ಮೇಲೆ ಫಲಾಹಾರವನ್ನಿಡು (ರೂಢಿ). **ಟೀಪಾಯ್:** ೨. ಚಹದ ಟ್ರೇಯನ್ನು ಹತ್ತಿರದ ಟೀಪಾಯ ಮೇಲಿಟ್ಟು (ಹೊಸಕ್ಷಿ. ೧೭೦); ಹತ್ತಿರದ 'ಟೀಪಾಯ್'ದ ಮೇಲೆ ಅದನ್ನಿಟ್ಟು ಗಂಡನಿಗೆ ಹೇಳಿದಳು (ಮುತ್ತ್ಯದ. ೮೦). [ ← ಹಿಂ. ತಿಪಾಈ./ಸಂ. ತ್ರಿಪಾದಿ ]

**ಟೀಪು** (ನಾ). ಅಡಿ ಟಿಪ್ಪಣಿ : ಈ ಮಾತಿಗೆ ಒಂದು ಟೀಪು ಕೊಡಬೇಕು (ರೂಢಿ). [ ←ಮರಾ. ಟೀಪ್]

**ಟೀಮು** (ನಾ). ಒಟ್ಟಿಗೆ ಕೆಲಸಮಾಡುವವರ ಅಥವಾ ಆಟಗಾರರ ತಂಡ,–ಗುಂಪು : ಮ್ಯಾಚಿನಲ್ಲಿ ಏನಾಯಿತು? ನಿಮ್ಮ ಟೀಮು ಗೆದ್ದಿತೋ ಹೇಗೆ (ಮಹಾಗ. ೧೭). [← ಇಂ. Team ]

**ಟೀಯ** 'ಟೀವ' ನೋ.

**ಟೀಲ** (ನಾ). ಒಂದು ಬಗೆಯ ಹಕ್ಕಿ : (ಕ). [ ? ]

**ಟೀವ,** ಟೀಯ (ನಾ) ಉದ್ದವಾದ ಬಾಲವುಳ್ಳ ಒಂದು ಬಗೆಯ ಪಕ್ಷಿ ; ಬಾನಾಡಿ: "ಟೀವಂ ಚಲಾಂಡಮೆನಿಸಿಕ್ಕು" (ಮಂಗರಾ. ೫೨-೧೧); "ಬಾನಡಿ ಟಿಟ್ಟಿಭ ಟೀವಂ ತಾನಾಗಸವಕ್ಕಿ ಖಂಜರೀಟಮೆನಿಕ್ಕುಂ" (ಕವಿಕಂ. ೬೨); ಟೀ[ಪಾಠಾಂ. ಪೀ]ವ ಕಕ್ಕಟಿ ಸೋಟಿ ಮೆಳೆಗಿಳಿ ಕಾಡ್ಕೋಳಿ ಪೂವೆಟಿಗಳ ಮಾಱುವರ ಕಂಡೆ (ಸೊಬಸೋ. ೧೮-೩೪); ಅರೆ ಹೊಱಸು ಟಿಟ್ಟಿವನು ಮಣಿಗನು ಗರುಡ ಕೊಣಕನು ಮೇಣು ಟೀವನು (ಸಾಳ್ವಭಾ. ೫-೨೩); ಪಾರಾವತಂ ಹೆಂಗುರು ಟೀ[ಪಾಠಾಂ. ಲಾ]ವಂ ಟಿಟ್ಟಿಭಂ . . . ಶಿಖಿ ಶುಕಂ ತದ್ವನಾಂತಸ್ಥಮಿರ್ಕುಂ (ಶಬಶಂ. ೩-೩೩). **ಟೀಯ :** ಶಕುನಿ ಶುನಿಗಿಲು ಟಿಟ್ಟಿಭಂ ಕೌಶಿಕಂ ಟೀಯ ನಿಕರಪಿಗ್ಗಂ . . . ಪಕ್ಷಿಮುಖ್ಯಗಳ್ನೆಱಿಪ್ಪವಾವನದೊಳು (ಏಕೋಪು. ೧೦-೩೦).

**ಟವೇನ ಹಕ್ಕಿ, ಟೀಯನ ಹಕ್ಕಿ**=ಟಿಟ್ಟಿಭ: "ಟೀವನಹಕ್ಕಿ"(ಬಾಹಟೀ. ೨-೬); "ತೈತ್ತಿರಿಃ–ಟೀವನ ಹಕ್ಕಿ" (ಓಷಧಿ. ೬೨): "ಕೋಯಷ್ಟಿಕಃ–ಟೀಯೇನ ಹಕ್ಕಿ" (ಓಷಧಿ. ೪೧). [ ? ]

**ಟೀವಕ** (ನಾ). (ನೃತ್ಯಕ್ಕೆ ಸರಿಯಾಗಿ ತಂತಿಯನ್ನು ಮೀಟಿದಾಗ) ತಂಬೂರಿಯಿಂದ ಹೊರಡುವ ಧ್ವನಿ. 'ಟೀವಕಟಂಬಕ' ಪರಾ. [ ? ]

**ಟೀವಕಟಂಬಕ,** ಟೀವಕಟೆಂಬಕ (ನಾ). "ತಂಬೂರಿಯ ತಂತಿಯನ್ನು ಮೀಟಿದಾಗ ಹೊರಡುವ ಧ್ವನಿಗಳು; ಇವುಗಳಿಗೆ ಸರಿಯಾಗಿ ನೃತ್ಯಕಾರನು ಹೆಜ್ಜೆಯನ್ನು ಹಾಕಬೇಕಾಗುವುದು" (ಬಸವ. ಕೋಶ): ದಿಟಪುಟ ಭಕುತಿ ಸಂಪುಟ ನೆಲೆಗೊಳ್ಳದಾಗಿ . . . ಟೀ[ಪಾಠಾಂ. ಟೇ]ವಕ ಟಂಬಕನಾ[ಪಾಠಾಂ. ಟಂಬನನಾ, ಟೆಂಬಕವನಾ]ಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ (ಬಸವ. ೧೮). **ಟೀವಕಟೆಂಬಕ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಟೀವಕ + ಟಂಬಕ ]

**ಟೀವಕಟೆಂಬಕ** 'ಟೀವಕಟಂಬಕ' ನೋ.

**ಟೀವಿ** 'ಠೀವಿ' ನೋ.

**ಟೀಸೊಪ್ಪು** (ನಾ). ಟೀ ಗಿಡದ ಸೊಪ್ಪು : (ಮೃಜಿಗಿ. ೧೬-೨೯೩). [ ಟೀ + ಸೊಪ್ಪು$_3$ ]

**ಟು** (ಪ್ರ). ಅಂತು, ಇಂತು, ಉಂತು ಮೊದಲಾದ ಶಬ್ದಗಳ ಮೇಲೆ ಪ್ರಕಾರಾರ್ಥದಲ್ಲಿ ಸೇರುವ ಒಂದು ಪ್ರತ್ಯಯ. 'ಅಂತುಟು', 'ಇಂತುಟು', 'ಉಂತುಟು' ಪರಾ.

**ಟುಂಟುಕ** (ಗು). ೧. ಕೆಳಮಟ್ಟದ ; ಅಲ್ಪ ; ಕ್ಷುದ್ರ ; ತುಚ್ಛ : ಆದಿತ್ಯನ ಕೆಲದೊಳ್ ಚಂದ್ರೋದಯಮೆಸೆಯದಪೊಲೀ ಧರಾಮಂಡಲದೊಳ್ ವಾದಿಗಳೆಂಬೀ ಟುಂಟುಕ ವಾದಿಗಳೆಸೆದಪರೆ ವಾದಿರಾಜನ ಕೆಲದೊಳ್ (ಎಕ. VIII, ನಗರ. ೩೫-೬೫; 1077); ಆಚರಸನಲೆಸ್ಸು ಪೋಲಿಸುವೆ ಟುಂಟುಕ ಮಂಡಳಿಕವ್ರಜಂಗಳಂ (ಮುಂಬರಾ. XI, ೨೬೦-೨೪ ; 1162). (ನಾ). ೨. ಕ್ರೂರ ; ದಂಷ್ಟ್ರ : ಕಂಟದ ಬಂಟರಾಗಿ ಬುಧಸಂತತಿಗಂ ಪತಿಗಂ ಕುಬುದ್ಧಿಯಿಂ ಕಂಟಕರಪ್ಪ ಟುಂಟುಕರದಿಕ್ಕೆಮ (ಎಕ. V, ಬೇಲೂರು. ೧೦೪-೪೦ ; 1173). ೩. ಒಂದು ಬಗೆಯ ಮರ ; ಹೆಮ್ಮರ ; ತಿಗಡು ಮರ : "ಟುಂಟುಕ=ದಿಂಡಲಮರ" (ಗಂಗಾಮ. ೧೪೪). [ ಸಂ. ]

**ಟುಣುಪುಣು** (ನಾ). ಒಂದು ಅನುಕರಣ ಶಬ್ದ : ಹುರುಪಿನ ಹುರಿದ ಬೀಜದಂತೆ ಟುಣುಪುಣು ಹಾರಾಡುತ್ತಿದ್ದ ತನ್ನ ಗೆಳೆಯನು ಈಗ . . . ಕಂಡವರ ಕೈಗೆ ಅತ್ತರು ಸವರುತ್ತಿರುವ ದೃಶ್ಯ ಮನೋವೇಧಕವಾಗಿ ಅವನಿಗೆ ಕಾಣತೊಡಗಿತು (ರಂಗರೋ. ೧೯೩).

**ಟುಪುಟುಪು** (ನಾ). ಒಂದು ಅನುಕರಣ ಶಬ್ದ : ಎಲ್ಲರೂ ಇಲ್ಲೊಂದು ಅಲ್ಲೊಂದು ಟುಪುಟುಪು ಬಿದ್ದ ಆಲಿಕಲ್ಲುಗಳನ್ನು ಆರಿಸಿಕೊಂಡು ಬಂದು ಸೂರಿನ ಕೆಳಗಡೆ ನಿಂತು ಬಾಯಿಗೆ ಹಾಕಿಕೊಳ್ಳುತ್ತಿದ್ದವು (ಪಕಾಕ್ಷಿ. ೩೮).

**ಟುಪ್ಟೀಕೆ** (ನಾ). ಬಹು ಸಂಕ್ಷೇಪವಾದ ವ್ಯಾಖ್ಯಾನ : ಶಾಬರ ಭಾಷ್ಯದ ಮೇಲೆ ವ್ಯಾಖ್ಯಾನವನ್ನು ಆರಂಭಿಸಿದ ಕುಮಾರಿಲಭಟ್ಟನು (ಕ್ರಿ. ಶ. ಶತ. ೭೦೦) ೧–೧ರ ಮೇಲೆ ಶ್ಲೋಕವಾರ್ತಿಕವನ್ನು . . . ೪ ರಿಂದ ೧೨ರವರೆಗೆ ಟುಪ್ಟೀಕೆಯನ್ನೂ ರಚಿಸಿದ್ದಾನೆ (ತತ್ತ್ವಪ್ರಾ. ೨೬೧). [ ಸಂ. ಟುಪ್ಟೀಕಾ ]

**ಟುಮಕ** 'ಟುಮುಕ' ನೋ.

**ಟುಮಕಿ$_1$** 'ಟುಮುಕು' ನೋ.

**ಟುಮುಕಿ$_2$** (ನಾ). ನೀರಿನಲ್ಲಿ ಎರಡೂ ಕೈಗಳಿಂದ ಸದ್ದಾಗುವಂತೆ ಹೊಡೆಯುವಿಕೆ : ಒಂದೀಟು ಟುಮಕೀ ಹೊಡೀರೀ ಮಾರಗ್ಗೆ ಹಾಕ್ರಿ (ಧರ್ಮಸ. ೮೩). [ ? ]

**ಟುಮುಕ,** ಟುಮಕ (ನಾ). ದಪ್ಪನಾಗಿರುವವನು: ಗಜ್ಜರೆಯ ತುಂಬಿನಂತೆ ಅವನು ಕೆಂಪಾಗಿಯೂ ಟುಮುಕನಾಗಿಯೂ ಇರುವನೆಂದು ಕಂಡು ನೀನು ಮನಸೋತಿರುವಿ (ಪವಹೀ. ೬೩). **ಟುಮಕ :** ಇವ ಗಿಡ್ಡ, ಟುಮಕ : ಗುಳ್ಳೆಗಣ್ಣಿನವ; ಮುಖ ಬಲು ರಾವು (ಮೀದಿಮ. ೪). [ ? ]

**ಟುಮುಕು,** ಟವಕಿ, ಟುಮಕಿ$_1$, ತುಮುಕು$_2$ (ನಾ). ಒಂದು ಬಗೆಯ ಚರ್ಮವಾದ್ಯ ; ಸಣ್ಣತಮಟೆ : ಕಂಸಾಳ ಡೊಳ್ಳಾರಿ ಟುಮುಕು ತಂಬಟು . . . ಮದ್ದಳೆಗಳೆಂಬ ಬಹುವಾದ್ಯದುಬ್ಬಟೆಯುಱಿಳದೆಸೆಯೊಳಾವರಿಸಲು (ಚಬಪು. ೫-೭) ; ಡೋಳಿನ ಕುದುರೆ ಡವಾನದ ಮದಕರಿ ಸೂಳೈಪ ಟುಮುಕುಗಳೊಂಟೆ . . . ಮೇಳದೊಳಗೆ ತಿರುಗುವುವು (ಕಂಸವಿ. ೧೯-೨೩). **ಟಮಕಿ :** ಕೋರ್ಟಿನವರು ಟಮಕಿ ಹೊಡೆಯುಸುವುದರ ಮೂಲಕ ಯುಕ್ತವಾದ ನೋಟೀಸನ್ನು ಕೊಟ್ಟ ನಂತರ (ಗ್ರಾಮಾಕ. ೩೮). **ಟುಮಕಿ$_1$:** ಎಲೇ, ಇದು ಮೂರನೆ ಡಂಗುರದ ಠಾವುಂಟು, ಟುಮಕೀ ಹೊಡಿಯಲೇ (ಮುಂಬಯಿ. ೬-೨೦೮). **ತುಮುಕು$_2$ :** ರಸಪೂರಮತಿಗಭೀರಂ ಕಾವ್ಯಂ ನೀರಸರಱಿವಂತೇನಿದು ತಾರೆಲೆಯೆ ಬೀದಿವಾಡೆ ನೆರವಿಯ ತು[ಪಾಠಾಂ.ದು] ಮುಕೇ (ಗಿರಿಕ. ೦-೩೦).

**ಟಮಕಿ ಬಾರಿಸು** = ೧. ತಮಟೆ ಬಾರಿಸು ; ಡಂಗುರ ಹೊಡೆ. ೨. (ಆಲಂ) ಎಲ್ಲರಿಗೂ ತಿಳಿಯಪಡಿಸು ; ಪ್ರಸಿದ್ಧಪಡಿಸು; ಬಹಿರಂಗಪಡಿಸು ; **ಸಾರು :** ಸ್ವಾಮಿಯವರು ತಾವು ಎಲ್ಲಿಗೆ ಹೋಗುವುದಾದರೂ ಹೇಳದೆ ಹೋಗುತ್ತಾರೆ ; ಹಾಗೆ ಟಮಕಿ ಬಾರಿಸಿ ಹೋಗುವುದಕ್ಕೆ (ನಂಬಿನಾ. ೩೨೯). **ಟಮಕಿ ಸಾರು**=ಟಮಕಿ ಬಾರಿಸು ೨: 'ಸಣ್ಣಪ್ಪನನ್ನು ಶಾಲೆಗೆ ಸೇರಿಸಿ ಬಂದೆ' ಎಂದು ಟಮಕಿ ಸಾರುವುದಕ್ಕೆ ಅವರು ಬಂದಿದ್ದರು (ಸ್ವಪ್ನಹೊ. ೯೧). [ ←ಮರಾ. ಟಮಕೀ, ಟಿಮಕೀ ; ಹಿಂ. [ ಟಮುಕೀ./ತುಳು. ಟಮಕಿ ; ತೆಲು. ಟಮಟಮ ]

**ಟುರು** (ನಾ). ಒಂದು ಅನುಕರಣ ಶಬ್ದ. 'ಟುರಂಗುಂಟ್ಟು' ಪರಾ.

**ಟುರುಗುಟ್ಟು, ಟುರ್ಗುಟ್ಟು** (ಕ್ರಿ). ಟುರಂಟುರು ಎಂದು ಶಬ್ದಮಾಡು. **ಟುರ್ಗುಟ್ಟು :** ಬಾಟಿದೋಂಟಮಂ ಪುಗುವಂತೆ ಪೊಕ್ಕು ಬೊಬ್ಬಿಱಿವರೆಡೆಯೊಳ್ ಟುರ್ಗುಟ್ಟುತೆ (ಅದ್ಭುತ. ೪೭-೭). [ ಟುರು + ಕುಟ್ಟು$_1$ ]

**ಟುರ್ಗುಟ್ಟು** 'ಟುರುಗುಂಟ್ಟು' ನೋ.

**ಟುವ್ವಿಡು** (ಕ್ರಿ). ಟುವ್ ಟುವ್ ಎಂದು ಶಬ್ದಮಾಡು : ಟುವ್ವಿಡುವ ಕುಕಿಲಿಡುವ ಗಾನದೊನಪು (ನೆಲಮು. ೩-೨೩). [ ಟುವ್$_0$ + ಇಡು$_1$ ]

**ಟುಸ್** (ನಾ). ಒಂದು ಅನುಕರಣ ಶಬ್ದ : ಪಟಾಕಿ ಟುಸ್ ಎಂದುಬಿಟ್ಟಿತು (ರೂಢಿ).

**ಟೂನಮರ** (ನಾ). ಒಂದು ಬಗೆಯ ಮರ : ಕೆಂಪುಗಂಧಗಿರಿ, ನಂದಿವೃಕ್ಷ, ಟೂನಮರ . . . ಗಂಧಗರಿಗೆ (ಮೃಜಿಗಿ. ೦೯-೩೪೮). [ ಟೂನ$_0$ + ಮರ$_1$ ]

**ಟೆಂಕ$_1$** 'ತೆಂಕು' ನೋ.

**ಟೆಂಕ$_2$** 'ಟಂಕೆ$_1$' ನೋ.

**ಟೆಂಕದೆಸೆ** 'ತೆಂಕದೆಸೆ' ನೋ.

**ಟೆಂಕಿ** 'ಟಂಕಿ$_2$' ನೋ.

**ಟೆಂಕೆ** 'ಟಂಕಿ$_2$' ನೋ.

**ಟೆಂಗು** 'ತೆಂಗು$_3$' ನೋ.

**ಟೆಂಟಣಿಸು, ಟಂಟಣಿಸು$_2$, ಟಂಠಣಿಸಂ, ಟೆಂಟೆಣಿಸಂ, ಟೆಂಠಣಿಸಂ, ಟೆಂಠೆಣಿಸಂ, ಡಂಢಣಿಸು, ಡೆಂಡಣಿಸು, ಡೆಂಡೆಣಿಸಂ, ಡೆಂಢಣಿಸಂ, ಡೆಂಢಳಿಸಂ, ಡೆಂಢೆಣಿಸಂ, ಢೆಂಢೆಣಿಸಂ** (ಕ್ರಿ). ೧. ವಿರೋಧಿಸು ; ದ್ವೇಷಿಸು ; ವೈರತಾಳು ; ಸ್ಪರ್ಧಿಸಂ : ಮೊಂಟಾಗಿ ಕೈಗಳೆರಡುಂ ಗೆಂಟಾಗಿರೆ ತನಗೆ ಸಿರಿಯುಂ ಕೂಟುಂ ಕಾಲುಂ ಕುಂಟಾಗಿ ನಮೆಯುತಿರ್ಪ ಟೆಂಟಣಿಸಿ ಮಹಾತಪಂಗಳಂ ಕಿಡಿಸಿದವರ್ (ಧರ್ಮಾಮೃ. ೬-೦೮೦); ತಳ್ತು ಗಂಟಿಕ್ಕಿ ಟೆಂಟಣಿಸುವಂಕವಂಂ ಸೆಳೆದು ಕೆಡೆವುವ . . . ಮಾಸಾಳ್ಗಳ ಮಂತಣದೊಳಂ (ಗಿರಿಕ. ೨-೦೦೫ ವ) : ಟೆಂಟಣಿಪ ವೈರಿಗಳ ಗಳಹುವ ಗಂಟಲನು ಮುಱಿಯೊದೆವ ಹರೆಯಕೆ ಕಂಟಕವಲಾ ಮುಪ್ಪು ಬಂದುದು ಮಗನೆ ತನಗೆಂದ (ನಿಘಾಗ. ೩-೮-೨೫). ೨. ಉತ್ಸಾಹಪಡು ; ಸಂಭ್ರಮಿಸಂ ; ಹಿಗ್ಗು : ಹಿಡಿ ಹಿಡಿ ಹೊಡೆ ಹೊಡೆಯೆಂದು ಟೆಂಟಣಿಸಿ ಬೆಂಕೊಂಡಾರ್ಭಟಿಸಿ (ಭರತ. ೫೭-೯೩) ; ಲಕ್ಷ್ಮಿಯ ಗೆಂಟನೊಳು ಶ್ರೀರಾಮ ಕುಳಿತಿರೆ ಟೆಂಟಣಿಸಲೋಲಗರು ನಾಟ್ಯದ ಜನರು ಸಹವಾಗಿ (ಪಟುಭಾ. ೦೪-೨೦). ೩. ಅಂಜು ; ಭಯಂಪಡು ; ಹಿಂದೆಗೆ : ತಾಱಿವಱಾಗೆ ಜಯಂ ಜೊಮ್ಮೇಱುವ ಟೆಂಟಣಿಸುವರಸನರಸನೆ ವಿರಸಂ (ಶಾಂತಿಪು. ೨-೪೦) ; ತಾಂ ಟೆಂಟಣಿಸದೆ ಬಲ್ಪಿಡಿದಂ ಮಿಾಂಟುಂಜವ್ವನಿಗನಾ ನುಡಿಗಳಂ ಮನದೊಳ್ (ಉದ್ಭಟ. ೧೧-೪೪) ; ಟೆಂಟಣಿಸದಿದಿರಾಗು (ಕುಮಾ.ವಿ. ೮-೦೮) ; ಟೆಂಟಣಿಸದಿರು ದಕ್ಷ (ವೀಶೈಪು. ೩-೪-೦೮) ; ಕೃಷ್ಣನ ಮುಂದೆ ಭಾಷೆಯಂ ಪೂರೈಸಿ ಟೆಂಟಣಿಸದೊಡಲಂ ತೊಱೆದು (ಜೈಮಿಭಾ. ೦೩-೬೨). ೪. ಆಧಾರವಾಗು ; ಊರೆಯಾಗು : ಎಂಟು ಕಾಲ ಮಂಟಪದ ಟೆಂಟ[ಪಾಠಾಂ. ಟೆ]ಣಿಸಿ ನಿಂದವೈದು ಕಂಭ (ಮೋಳಿಮಾ. ೨೩೪-೮೦೫) ; ಅಂತಪ್ಪ ದೇಹಕ್ಕೆ ಪಂಚಕರಣಂಗಳೇ ಆಧಾರವಾಗಿಹುದೆಂಬುದೀಗ ಟೆಂಟಣಿಸಿ ನಿಂದವೈದು ಕಂಭ ಎಂಬ ಶಬ್ದಕ್ಕರ್ಥ (ಮೋಳಿಮಾ. ೮೦೫ ಟೀಕೆ). ೫. ಒಟ್ಟಿಗೆ ಸೇರು ; ಒತ್ತೊತ್ತಾಗಿರು ; ಗುಂಪು ಸೇರು ; ನಿಬಿಡವಾಗಿರು : ಆ ಕುಸುಮ ಗುಚ್ಛಗುಂಜಾಗೃಹದೊಳ್ ಟೆಂಟಣಿಸದೆ ಗಳಪುವ ಪೋಲ್ ನೀಂಟಾದಿಂಚರ ಮನೆಸಗುತೊಪ್ಪಿದುವಳಿಗಳ್ (ಉದ್ಭಟ. ೯-೨೯) ; ಕಱಿಕಂಠಗಲ್ಗಳೆಂದು ತೋಂಟಗಳೊಱಗಿಕ್ಕಿದಂತೆ ಟೆಂಟಣಿಸಿಯೆ ಬೆಳೆದಿಹವು ಕೇತಕಿಗಳು (ಅಂಜನ. ೨-೮೭); ಕಂಟಕಿಯು ಸಹಕಾರ ರಂಭ ದಾಡಿಮಫಲಂ ಟೆಂಟಣಿಸಿ ತಳ್ತೊಡೆದು ರಸಪ್ರವಾಹಗಳಾಗೆ (ಪ್ರಭುಪು. ೩-೨೦). ೬. ಉಂಟುಂಮಾಡಂ; ಜನಿಯಿಸು: ತುಂಟತನದಿ ಹುಸಿದಾ ಹುಸಿ ತನಗೇಳೆಂಟು ದಿವಸದೊಳಗೆ ಕಂಟಕಮಂ ಮಾಳ್ಪುದು ಮಱುಭವದೊಳ್ ಟೆಂಟಣಿಪುದು ದುಃಖಮಂ(ಜಯುಕಾ.೦೦-೦೦). ೭. ಶೋಭಿಸಂ : ಅಣಿಮಾದ್ಯಷ್ಟಗುಣಂಗಳಿಂ ನೆಲೆಗಳಿಂ ಮೇಗಾರ್ಯರಿಂದೆಂದು ಟೆಂಟಣಿಸುತ್ತಿರ್ಪುದು (ಶಾಂತಿಪು. ೬-೦೨೨); ಬೇರೊಂದು ವರ್ಣವೆಳ್ದು ಟೆಂಟಣಿಪ ನುಣ್ಮೊಗಂ ಪೊಳೆವ ಕಂಪನವಿನಿತು ಪೆಂಟಣಿಸೆ (ಸೌಂದಪು. ೯-೦೦). **ಟಂಟಣಿಸು$_2$:** ೧. ಸದ್ಬುಧರ್ಗಿಂದ್ರಭೂಜದೊಳ್ ಟಂಟಣಿಸುತ್ತಮಿರ್ಪ ನಿಜಬುದ್ಧಿಯಿನಾತ್ಮನೃಪಂಗೆ ಕೂಡೆ ನಿಷ್ಕಂಟಕವಾಗೆ ಮಾಡಿದ ನಿಳಾತಳಮನೆಲ್ಲಮನೊಲ್ದು ಮಲ್ಲಪಂ (ಎಕ. V, ಬೇಲೂರು. ೧೦೪-೪೦; 1178) ; ಮಲೆವವರಿಲ್ಲ ಗಂಡೆಸೆವರಿಲ್ಲಿದಿರಪ್ಪವರಿಲ್ಲ ತೇಜವೆಂದುಲಿವವರಿಲ್ಲ ಟಂಟಣಿಪರಿಲ್ಲ . . . ಕೃಷ್ಣವಿಭುಕೇಶವದೇವಚಮೂಪ ರಾಜ್ಯದೊಳ್ (ಎಕ. VII, ಶಿಕಾರಿ. ೦೧೯-೩೪; 1181) ; ಟಂಟಣಿಸುತ್ತವಿರ್ಪರಿನ್ನಪಾಳರ ಹಿಣ್ಣ ನಿಜಾಸಿದಣ್ಣದಿಂ ಕಣ್ಬೆಯ ಬಾರದೊಳ್ ಸುಳಿಸಿ (ಇಹ. XII, ೯೭-೦೯ ; 1187). **ಟಂಠಣಿಸು:** ೮. ನಡುಗು; ಅಲುಗಾಡು; ಕಂಪಿಸು; ಅದಂರು : ಧರಣಿ ಟಂಠಣಿಸೆ ಪದಹತಿ ಧೂಳಿಯಾವರಿಸೆ ತರಣಿ ತೇಜಂ ಗುಂದೆ (ಸೌಂದಪು. ೦೩-೦೨). **ಟೆಂಟೆಣಿಸು : ೫.** ಉಂಟು ಒಬ್ಬೊಬ್ಬರಿಗೆ ಬೆನ್ನಲಿ ಎಂಟುಕೋಟಿ ಪ್ರಮಥರು ಟೆಂಟೆಣಿಸಿ ನಿಂದಿಹರು (ಶರಲೀ. ೪೦-೨); ತಾಳೆ ಕಂಸಾಳ ಭೂರಗ ಭೇರಿ ಟೆಂಟೆಣಿಸಿ ಭೋರ್ಗರೆಯಲು (ನವಮೋ. ೦೦-೩೦). **ಟೆಂಠಣಿಸು:** ೧. ಸೆಣಸಲ್ ಮಾರ್ಮಲೆಯಲ್ ಬೆಸಕ್ಕೆ ಬೆಸೆಯಲ್ ದಂಡೋಪನತ್ಯಕ್ಕೆ ಟೆಂಠಣಿಸಲ್ ಪೇಟ್ದುದನಿರ್ಪ ಕೇಳಲರಿಯಲ್ಲೆಂಬನ್ನೆಗಂ ಗೆಲ್ದು (ಶಾಂತಿಪು. ೦೦-೦೮೫); ಭೀಮನ ಗದೆಯ ಘಾತಿಯ ಘಲ್ಲಣೆಗೆ ಕಂಠಣಿಸಿದವು ಟೆಂಠಣಸುವಾನೆಗಳು (ಕುಮಾ.ಗ. ೧-೫೪); ಗುರುಹಿರಿಯರೊಳು ಟೆಂಠಣಿಪ ಕಡುಪಾತಕಂಗಿದನಂಟಿಸದಿರಲಿ ಮಗನೆ ಮಱೆದೀ ಗುರುರಹಸ್ಯವನು (ಸದ್ಗುರು. ೦-೩೦) ; ಹಿರಿಯರೊಳು ಟೆಂಠಣಿಸಿ ಕಡುಮೂರ್ಖರಾಗಿಹ ಗಂಟುಗಳ್ಳರು (ಅನುಸಾ. ೭-೨). ೩. ಮಣಿದಿರೆ ಮಱವೆಯೊಳಿಂದ್ರಿಯ ಭಟರು ಟೆಂ[ಪಾಠಾಂ. ಪೆಂ]ಠಣಿಸದೆ ಗನ್ನವನಿಕ್ಕಿ ನೋಣೆದಾಯುದೀವಿಗೆಯನು ಜೀವಚಿಂತಾಮಣಿಯ ಕೊಂಡೊಯ್ದನು ಜವನು (ವರ್ಧಜ. ೮-೦೫). ೫. ಪಲವು ಸ್ತ್ರೀರತ್ನಗಳಿಂದೆಂದು ಟೆಂಠಣಿಸಿಯೆ ಸೊಬಗಿಂದ (ತರ್ಕಕಾ. ೦-೦೦೩). ೯. ವ್ಯಾಕುಲಗೊಳ್ಳು ; ದುಃಖಿಸು ; ಕಂಗ್ಗು ; ಕೊರಗು: ವರಪಾಂಡವರು ಕಣನೊಳು ಪೆಂಠಣಿಸಿದರು ಕಮಠ ಟೆಂಠಣಿಸೆ (ಕುಮಾ.ಉ. ೦೦ ಸೂಚನೆ) : ಕಣಾಂಗಳಿರ್ದಂಧಕರವೊಲು ಟೆಂಠಣಿಸುವವರಿಬ್ಬರು ಕಣಾ (ಅಂಬಿಕಾ. ೪೭-೫೨). **ಟೆಂಠೆಣಿಸು :** ೧. ಎಱಿ ಹಿಡಿಗುದುರೆಗಳನು ಎಣಿಕೆ ಮಾಡದೆ ಹಿಡಿವ ರಾಯರಾವುತರು ಟೆಂಠೆಣಿಸಿ ಮಾರ್ಮಲೆತು ಕಾದುವ ಮಾವತಿಗರು (ಸಮ್ಯಕಾ. ೮-೪೯). ೯. ಶುಂಠಮನುಷ್ಯರಾ ಧರಣಿಪರ್ . . . ಸಚರಾಚರವಾ ವಿಧಿಯ ಪ್ರತಾಪದಿಂ ಟೆಂಠೆಣಿಸುತ್ತಪೋದರ್ (ಪಂಚಕ. ೭೭-೬.). **ಡಂಢಣಿಸು :** ೩. ಸಾಯದ ರೀತಿಯಲಿ ಮುರಿಯೆಚ್ಚಡವ ಡಂಢಣಿಸಿ ತಿರುಗಿದನು (ತಿಮ್ಮಅ. ೫-೩೯). **ಡೆಂಡಣಿಸು :** ೨. ಹಗ್ಗರಿಯೊಂದ ಕಿತ್ತೆತ್ತಿ ಡೆಂಡಣಿಸಿ ಬಲುಹಿಂದ ಕಪಿಭಟ ಮಂಡೆಯಲೆ ಹೊತ್ತೆತ್ತಿ ತಂದನು (ಕೌಶಿರಾ. ೦೭-೭). ೮. ಬಲವಳಿದುಡೆಂಡ[ಪಾಠಾಂ. ಡೆ]ಣಿಸಿ ಹಜ್ಜೆ ಹುಣ್ಣಾಂತಾಗೆ ಅಂಗಾಲೊಳುರಿಗೆಳ್ದ ಬೊಕ್ಕೆ ನೆತ್ತರನುಗುಳೆ (ಬಿಹಿರ. ಹ. ೨೦೪-೨೨); ಹೊಯ್ವಳ್ಳೆ ಡೆಂಡಣಿಸುವಡಿಹನಿವ ಬೆಮರು (ಹಡಕಾ. ೩-೭೭); ಕೋದಂಡವ ಪಿಡಿದೇಱಿಸಿಯೆಮಂಡಿಸಿ ತೆಗೆದಿಸೆ ಪುಂಡರೀಕನ ರಥ ಡೆಂಡಣಿಸಿತು (ಅಂಜನ. ೬-೦೭೯) ; ಬಾಡಿದೆಳೆವಳ್ಳಿಯೊಲು ಡೆಂಡಣಿಪ ನಂಬಿಯಣ್ಣ (ಸೌಂದಪು. ೦೭-೨೯); ಬಿಟ್ಟ ಮಂಡೆಯ ಬೆನ್ನ ಮಲಗಿದ ಹೊಟ್ಟೆಗಳ ಡೆಂಡಣಿಪ ಕೈಕಾಲಿಟ್ಟ ಗೋಳಿನಖಿಳಜನ ನಡೆತಂದುದು (ನಿಘಾಗ. ೪-೦೨-೫). ೯. ಕೌಸಲೆಯ ಮನೆಗಾ ಭರತ ಡೆಂಡಣಿಸುತ್ತ ಬಂದನು . . .

ಕೆಡೆದನು ಕರುಣಿಸೆಂದೆನುತ (ಕಾಶಿರಾ. ೪-೧೫); ಆದಿಶಕ್ತಿಯ ಕಾಣುತಸುರಗೆ ಮನದಿ ನೆವ ಪೂಬಾಣ ಮಸೆದೋಟಿದುದು ವಿರಹಾಗ್ನಿಯಲಿ ಡೆಂಡಣಿಸಿ (ಅಂಬಿಕಾ. ೧೯-೪೭). **ಡೆಂಡೆಣಿಸು :** ೮. ಸೈಗೆಡೆಯುತ್ತಂ ಬಿಡದೇಳ್ವು ಡೆಂಡಣಿಸುತಂ ಬಾಯಾಱುತಂ ಬಳ್ಕುತಂ (ವೃಷವಿ. ೯-೮೦); ಕರಗತಿಯಲಿ ಡೆಂಡೆಣಿಸುತಾಗ ಧರೆಗುರುಳಿ (ಅಭಿಕಾ. ೦೬). **ಡೆಂಢಣಿಸು:** ೧. ಬಲನ ಘಾತಕೆ ಸ್ವೈರಿಸದೆ ಕಳವಳಿಸಿ ಗಿರ್ರನೆ ತಿರುಗಿ ಛೀಳಿಡುತಳಲು ಮಿಗೆ ಡೆಂಢಣಿಸಿ ಮೇಲ್ವಾಯ್ದೊದೆದು ಸೊಂಡಿಲಲಿ ಸೆಳೆದು ನಭಕೀಡಾಡುತಿರೆ (ಅಕ್ರೂಚ. ೬-೫೯). ೩. ಅಡರಿದರಾ ಗಿರಿಯನು ಮಡದಿಯರೆಂದು ನಡುಗಿ ಡೆಂಢಣಿಸಿ ಬೀಟುತ (ಅಂಜಚ. ೯-೧೭೬); ಭಲ್ಲೆಯದ ಬಲುಗಾಯದಲಿ ತನು ತಲ್ಲಣಿಸಿ ಡೆಂಢಣಿಸಿ ರಥದಲಿ ಬಿಲ್ಲ-ಬಿಸುಟನು (ನಿಭಾಗ. ೧೦-೫೭-೪೦). ೮. ಬಿಗುಹುಗೆಟ್ಟಳ್ಳಿ ಡೆಂಢಣಿಸುವಡಿಯಾಲಿಸುತೆಲ್ಲ ಕಿವಿ (ಹರಿಕಾ. ೫-೨೭); ಕಂಗಳ ದಾಯ ತಪ್ಪಿತು ಡೆಂಢಣಿಸಿ ಕಲಿ ವಾಯುಸುತನಪ್ಪಳಿಸಿ ಬಿದ್ದನು ಕಯ್ಯ ಗದೆ ಕಳಚಿ (ಕುಪ್ಪಾಗ. ೭-೦೦); ಡೆಂಢಣಿಸಲು ತನು ಕೂಗಿದಳಾಗ ಭೂಮಂಡಲ ವೊದರುವಂದದಲಿ (ಕೃಷ್ಣಗೋ. ೧-೭೨). ೧೦. ನೂಕು ; ತಳ್ಳು ; ಬೀಳಿಸು: ವಾರುತಿಯು . . . ವಾಮಕರ ತಳದೆರಡು ಬೆರಳಿಂದ ಡೊಕ್ಕರಿಸುತಸುರೆಯಂ ನೆಲಕೆ ಡೆಂಢಣಿಸಿ ಕೆಡಹಳು ನಿಮಿಷಮಾತ್ರದಿಂದ (ವಂಕಾರಾ. ೫-೭-೦೭). **ಡೆಂಢಳಿಸು :** ೮. ಕಳವಳಿಸಿ ಚಸವಳಿದು ಮಿಗೆ ಡೆಂಢಳಿಸಿ ಯಮನಂದನನನು ಬಿದ್ದನು (ತಿಮ್ಮುಅ. ೧-೨). **ಡೆಂಢೇಣಿಸು :** ೩. ಮಾಗಧನು ಹೊಡೆಗೆಡೆದನವನಿಯಲಿ ಧೋಟ ಡೆಂಢೆಣಿಸಿದನು (ಜೀವಂಚ. ೧೫-೨೪). ೮. ಮಡಲ್ವ ಮಬ್ಬಿನಿಂ ಹರವಸಗೊಂಡು ಡೆಂಢೆಣಿಸಿ ಪಿಂದೆಗೆದಾಬಿದೆನೆಮ್ಮಿ ಗೋಡೆಯುಂ . . . ಎಱಗಿದರ್ ಪದಪದ್ಮಕೆ (ಚಿಕವಿ. ೪-೦೪೩). **ಢೆಂಢೇಣಿಸು :** ೮. ಮೂಗಿನ ನೆರೆಯೊಡೆದು ಪೊಸನೆತ್ತರ್ ಪೊನಲಿಡೆ ಢೆಂಢೆಣಿಸಿಪಿಂತಣ್ಗೆ ಸರಿದು (ಚಿಕವಂ. ೦೬೪-೦೭). [ ? + – ಇಸು₃ ]

**ಟೆಂಟು** (ನಾ). ಗುಡಾರ ; ಡೇರೆ : ಅನಂತ ತನ್ನ ಟೆಂಟಗೆ ಬಂದ (ಜೀದಾನ. ೬೨). [ ←ಇಂ. Tent ]

**ಟೆಂಟೇಣಿಸು** 'ಟೆಂಟಣಿಸು' ನೋ.

**ಟೆಂಠಣಿಸು** 'ಟೆಂಟಣಿಸು' ನೋ.

**ಟೆಂಠಿಣಿಸು** 'ಟೆಂಟಣಿಸು' ನೋ.

**ಟೆಂಠೇಣಿಸು** 'ಟೆಂಟಣಿಸು' ನೋ.

**ಟೆಕ್ಕರಿ** 'ಠಿಕ್ಕರಿ' ನೋ.

**ಟೆಕ್ಕರಿಗಳೆ** 'ಠಿಕ್ಕರಿಗಳೆ' ನೋ.

**ಟೆಕ್ಕೆ₁** 'ಟಕ್ಕೆಯ' ನೋ.

**ಟೆಕ್ಕೆ₂** 'ಟಕ್ಕೆ₁' ನೋ.

**ಟೆಕ್ಕೆಯ** 'ಟಕ್ಕೆಯ' ನೋ.

**ಟೆಕ್ಕೆಹ** 'ಟಕ್ಕೆಯ' ನೋ.

**ಟೆನಿಸ್** 'ಟೆನ್ನಿಸ್' ನೋ.

**ಟೆನ್ನಿಸ್, ಟೆನಿಸ್** (ನಾ). ಒಂದು ಬಗೆಯ ಚೆಂಡಾಟ : ಟೆನ್ನಿಸ್ ಆಟ ಮುಗಿಸಿಕೊಂಡು ಅವನೊಂದಿಗೆ . . . ಮನೆಗೆ ಹೋಗುತ್ತಿದ್ದೆ (ಅಲಹೂ. ೯೨). **ಟೆನಿಸ್ :** ಸುತ್ತಲೂ ಆವರಣ ಹಾಕಿ ಗಟ್ಟಿಸಿದ ನೆಲದ ಮೇಲೆ ಮಧ್ಯೆ ಅಡ್ಡಲಾಗಿ ಎಳೆದು ಕಟ್ಟಿದ ಬಲೆಯು ಮೇಲ್ಗಡೆ ಹಾಯ್ದುಹೋಗುವಂತೆ ದಾಂಡಿನಿಂದ ಚೆಂಡನ್ನು ಹೊಡೆಯುವ, ಇಬ್ಬರು, ಮೂವರು ಅಥವಾ ನಾಲ್ವರು ಆಡುವ ಒಂದು ಆಟ: ಟೆನಿಸ್ (Tennis, ಇಂಕನಿ.).

[ ←ಇಂ. Tennis ]

**ಟೆಪರಿ** (ನಾ). ಗೆಜ್ಜೆಗಳನ್ನು ಕಟ್ಟಿರುವ ಚಿಟಿಕೆ,-ತಾಳ: ಎಂದಿನಂತೆ ಇಂದು ಅವರ ಕಾಲಲ್ಲಿ ಗೆಜ್ಜೆ ಇರಲಿಲ್ಲ; ಕೈಯಲ್ಲಿ ಟೆಪರಿಯೂ ಇರಲಿಲ್ಲ (ಅಬಲಾ. ೨೫).

[ ←ಮರಾ. ಟಿಪರೀ ]

**ಟೆಪಾರಿಕೆ** 'ಟಪಾರಿಕೆ' ನೋ.

**ಟೆಪ್ಪರ₁** (ನಾ). ೧. (ಕುದುರೆ ಮೊದಲಾದುವುಗಳ) ನಾಗಾಲೋಟ ; ಪುಟನೆಗೆತ ; ನೆಗೆಯುತ್ತ ಮುಂಬರಿಯುವಿಕೆ : ನಿಯತದ್ವಿತ್ವಕ್ಕೆ: ವಪ್ಪುಕಂ, ಕಪ್ಪಡಿ . . . ತೆಪ್ಪಂ, ಟೆಪ್ಪರಂ, ದುಪ್ಪಡಿ (ಶಮದ. ೩೭ ಪ್ರಯೋ). ೨. ಒಂದು ಬಗೆಯ ಕುಸ್ತಿವರಸೆ ; "ಜಟ್ಟಿಗಳ ಸಾಧನೆ" (ಶಮದ. ನ. ೦೭೦ ಅಡಿಟಿ) ; ದ್ವಿತ್ವಕ್ಕಿಲ್ಲದುದರ್ಕೆ: ತಪ್ಪು, ಹೆಪ್ಪು, ಟಪ್ಪಣಂ, ಟೆಪ್ಪರಂ (ಶಮದ. ವ. ೦೭೦ ಪ್ರಯೋ). [ ? ]

**ಟೆಪ್ಪರ₂** 'ಟೆಬ್ಬರ' ನೋ.

**ಟೆಪ್ಪರಿಸು** (ಕ್ರಿ). ನಾಗಾಲೋಟ ಓಡು; ನೆಗೆಯುತ್ತ ಓಡು; ಪುಟನೆಗೆ. 'ಟೆಪ್ಪರಿಸುಹ' ಪರಾ. [ ಟೆಪ್ಪರ₁ + – ಇಸು₃ ]

**ಟೆಪ್ಪರಿಸುಹ** (ನಾ). ನಾಗಾಲೋಟ ಓಡುವಿಕೆ ; ನೆಗೆಯುತ್ತ ಓಡುವಿಕೆ; ಪುಟನೆಗೆಯುವಿಕೆ ; "ಟೆಪ್ಪರಿಸುಹ – ವಲ್ಗಿತ" (ನಾಚಿರಾ. ೬).

[ ಟೆಪ್ಪರಿಸು + – ಹ₂ ]

**ಟೆಪ್ಪು** (ನಾ). (?): ದ್ವಿತ್ವಕ್ಕಿಲ್ಲದುದರ್ಕೆ–ತಪ್ಪು, ಹೆಪ್ಪು, ಟೆಪ್ಪು, ಉಪ್ಪರಂ (ಶಮದ. ೬. ೦೫೯ ಪ್ರಯೋ). [ ? ]

**ಟೆಬ್ಬರ, ಟೆಪ್ಪರ₂** (ನಾ). ಹಿಂಸೆ ; ಕಾಟ ; ಪೀಡೆ : ಭುಂಜ, ರಾಜ . . . ಟೆಬ್ಬರ, ಗಬ್ಬರ, ಅಬ್ಬರ (ಶಬ್ದಾನು. ೫೪೯ ಪ್ರಯೋ); ಅತನಿಗೆ ಬಿರುನೋಟವನ್ನೊಡ್ಡಿ ಅನಿಮೇಷನಾಗಿ, ತೇಜಗೆಟ್ಟು, ಟೆಬ್ಬರಕ್ಕಾಗಿ, ಬರತ ತುಟಿಗಳನ್ನರತ ನಾಲಗೆಯಿಂದಾರಯ್ದುಕೊಂಡು (ಮಂತ್ರಶ. ೬೫-೦೫). **ಟೆಪ್ಪರ₂ :** ಬಿಸುಪಳಿದರ್ಕನುರ್ಕುಡಿಗಿಱಿಯಿಂದುವ ಕಾಂತಿ ಕಳಲ್ದುವು . . . ಇಲ್ಲಿ ಲಕ್ಷ್ಮಣಂ ಪುಸಿದೊಡವಾರ್ಗ್ಗೆ ಟೆಪ್ಪರಮನೊಡ್ಡಿದೊಡಂ ಮನಮೊಲ್ದು ಕೂಡಿ ಛಿದ್ರಿಸಿದೊಡವನ್ಮನಾರಿಗೆ ಮರುಳ್ದೊಡಮಾಹವದೊಳ್ ಮರಲ್ದಡಂ (ಎಕ. VII, ಶಿಕಾರಿ. ೦೫೭-೩೦ ; 1068). [ ? ]

**ಟೆಬ್ಬರಿಸು, ಟೆಬ್ಬರಿಸು** (ಕ್ರಿ). ೧. ಸತ್ವಹೀನವನ್ನಾಗಿ ಮಾಡು ; ಶಕ್ತಿಗುಂದಿಸು; ಕುಗ್ಗಿಸು; ಕುಂಠಿತಗೊಳಿಸು: "ಟೆಬ್ಬರಿಸು–ಕುಂಠೀಕರಣೇ" (ಶಮಧಾ) ; ಪಗೆಗಳ ಪಗೆಯುಂ ಕಟ್ಟುಚ್ಚರಿಯಿಂ ಟೆಬ್ಬರಿಸಿದ ಮನದಿಂ ವಾಜಿ ನೀರೊಳಾಯ್ತು (ರಾಮಾಶ್ವ. ೦೨೦-೪). ೨. ಗಾಯಪಡಿಸು: ಹೆಬ್ಬುಲಿಯು ನೋಡಿಲ್ಲಿ . . . ಟೆಬ್ಬರಿಸಲೊಬ್ಬನೇ ಸಾಕಲ್ತೆ ಮಲೆಯ (ಕಾಲೂರ. ೮೭-೦೭೮). ೩. ನಡುಗು ; ಶಕ್ತಿಗುಂದು : ಟೆಬ್ಬರಿಸುವನೆ ಕಲಿಭೀಮನು ಬ್ಬಟೆಯುರಿಗಳಾಹವಧೀರರಾದರೆ ಧಾತುಗೆಡುವವನೆ (ಕುಪ್ಪಾಕ. ೦೨-೨೭). ೪. ಹೇವರಿಸು ; ಅಸಹ್ಯಪಡು ; ಜಂಗುಪ್ಸೆತಾಳು ; ವಿಮುಖವಾಗು : ಪಾಡುವಿಂಚರಕೆ ಕಡುಕನಲಿ ಬಿತ್ತರಿಪ ಸಬ್ಬವಕೆ ಟೆಬ್ಬರಿಸಿ ಕೇಳುವ ಕಥೆಯ ಕಿವುಡುಗೇಳಿ (ಸೌಂದಪು. ೦೭-೫೨). **ಟೆಬ್ಬರಿಸು :** ೫. ಮೊಂಡಾಟಮಾಡು; ಪಟ್ಟುಹಿಡಿ; ಹಟಮಾಡು: ಟೆಬ್ಬರಿಸದಿರಾತ್ಮಜ ಭವಿಯಂತೆ ಚಿದಭ್ಯಾಸವ ಬಿಡದಿರು (ಯೋಗಾಂವಿ. ೩-೩೩).

[ ಟೆಬ್ಬರ + – ಇಸು₃ ]

**ಟೆಲಿಗ್ರಾಂ** (ನಾ). ತಾರು ; ತಂತಿವರ್ತಮಾನ : ದೂರಲೇಖಕದ ಮೂಲಕ ಬಂದ, ಕಳಿಸಿದ, ಸುದ್ದಿ: ತಂತಿ, ತಂತಿವರ್ತಮಾನ, ತಾರು, ದೂರಲೇಖನ, ಟೆಲಿಗ್ರಾಂ (Telegram. ಇಂಕನಿ.) ; ನನಗೆ ಮೈಸೂರಿನಿಂದ ಟೆಲಿಗ್ರಾಂ ಬಂತು (ಹೊಸಕ್ಷ. ೦೨೪) ; ನಾಗರಾಜನಿಗೆ . . . ಟೆಲಿಗ್ರಾಂ ಊಟದ ಹೊತ್ತಿಗೆ ಬಂತು (ಮಹಾಗ. ೯೨).

[ ←ಇಂ. Telegram ]

**ಟೆಲಿಗ್ರಾಫ್** 'ಟೆಲಿಗ್ರಾಫು' ನೋ.

**ಟೆಲಿಗ್ರಾಫ್‌ಗಿಡ** (ನಾ). ಒಂದು ಬಗೆಯ ಗಿಡ: ಕಾಡುಹುರುಳಿ, ನಾಗತಗರೆ, ಟೆಲಿಗ್ರಾಫ್‌ಗಿಡ (ವ್ಯಾಜಿಗಿ. ೩೦-೫೭೨).

[ ಟೆಲಿಗ್ರಾಫ್ ? + ಗಿಡ (<ಗಿಡು) ]

**ಟೆಲಿಗ್ರಾಫು,** ಟೆಲಿಗ್ರಾಫ್ (ನಾ). ವಿದ್ಯುತ್ ತಂತಿಗಳ ಮೂಲಕ ಸುದ್ದಿಯನ್ನು ದೂರಕ್ಕೆ ಮುಟ್ಟಿಸುವ ಒಂದು ಸಾಧನ; ತಂತಿವರ್ತಮಾನದ ಉಪಕರಣ; ದೂರಲೇಖನ ಸಲಕರಣೆ: ದೂರಲೇಖಕ . . . ತಾರುಯಂತ್ರ: ಟೆಲಿಗ್ರಾಫು (Telegraph. ಪತ್ರಿನಿ. ೮೩). **ಟೆಲಿಗ್ರಾಫ್:** ಟೆಲಿಗ್ರಾಫ್ . . . ವಿದ್ಯುಚ್ಛಕ್ತಿಯ ಮೂಲಕ ವರ್ತಮಾನಗಳನ್ನಾಗಲಿ ಸಂಕೇತಗಳನ್ನಾಗಲಿ ದೂರಕ್ಕೆ ತಿಳಿಸುವ ಸಲಕರಣೆ: ದೂರಲೇಖಕ, ತಂತಿ ಸುದ್ದಿಯ ಸಲಕರಣೆ (Telegraph. ಇಂಕನಿ.).
[ ←ಇಂ. Telegraph ]

**ಟೆಲಿಫೋನು** (ನಾ). "ವಿದ್ಯುಚ್ಛಕ್ತಿಯ ಮೂಲಕ ಧ್ವನಿಯನ್ನು, ಮು., ಮಾತುಗಳನ್ನು ತಂತಿಯ ಅಥವಾ ಹುರಿಯ ಮೂಲಕ ಸಾಗಿಸುವ ಸಲಕರಣೆ: ದೂರವಾಣಿ (ಯಂತ್ರ)" (Telephone. ಇಂಕನಿ.): ಟೆಲಿಫೋನು ಬದಿಯಲ್ಲಿಯ ಮೇಜಿನ ಮೇಲಿಂದ 'ಟ್ರಿಂಗ್', 'ಟ್ರಿಂಗ್' ಎಂದು ಕರೆಯುತ್ತಿದ್ದರೂ ಅದರ ಹತ್ತಿರಕ್ಕೆ ಹೋಗಿ ಯಾರು, ಏನು ಎಂದು ವಿಚಾರಿಸಲಿಕ್ಕೂ ಬೇಸರವಾಗಿತ್ತು (ಮರಾಬ. ೦). [ ←ಇಂ. Telephone ]

**ಟೆಲಿವಿಷನ್** 'ಟೆಲಿವಿಷನ್ನು' ನೋ.

**ಟೆಲಿವಿಷನ್ನು,** ಟೆಲಿವಿಷನ್ (ನಾ). ದೂರದಲ್ಲಿರುವ ವಸ್ತುಗಳನ್ನು ವಿದ್ಯುತ್ ತರಂಗಗಳ ಮೂಲಕ ಪರದೆಯ ಮೇಲೆ ತೋರಿಸುವ ಸಲಕರಣೆ; ಪರೋಕ್ಷವೀಕ್ಷಣ: ಕ್ರಿಕೆಟ್ ಟೆಸ್ಟ್ ಮ್ಯಾಚನ್ನು ಅನೇಕರು ಟೆಲಿವಿಷನ್ನಿನಲ್ಲಿ ನೋಡಿದರು (ರೂಢಿ). **ಟೆಲಿವಿಷನ್:** ಈಚೆಗೆ ರೇಡಿಯೋವಿನಂತೆ ಟೆಲಿವಿಷನ್ ಕಾರ್ಯಕ್ರಮವೂ ಪ್ರಚಾರಕ್ಕೆ ಬರುತ್ತಿದೆ (ಶಿಕ್ಷದ. ೫೯).
[ ←ಇಂ. Television ]

**ಟೆಲಿಸಂಪರ್ಕ** (ನಾ). ಗೊತ್ತಾದ ವೈಜ್ಞಾನಿಕ ಸಲಕರಣೆಗಳ ಮೂಲಕ ದೂರದ ಶಬ್ದ, ವಸ್ತು ಮೊದಲಾದುವುಗಳೊಡನೆ ಆಗುವ ಸಂಸರ್ಗ; ವಾರ್ತಾತಂತಿ, ದೂರವಸ್ತುದರ್ಶನ ಮೊದಲಾದ ಸಂಬಂಧ: ಟೆಲಿಸಂಪರ್ಕ (Telecommunications) ವಿಸ್ತರಣೆಗೋಸ್ಕರ ೪೨೦ ಲಕ್ಷ ಡಾಲರುಗಳು . . . ಸಹಾಯ ದೊರೆತಿದೆ (ಅಂತಸಂ. ೧೩೩).
[ ಟೆಲಿ₀ (P ←ಇಂ. Tele) + ಸಂಪರ್ಕ ]

**ಟೆಲಿಸ್ಕೋಪು** (ನಾ). "ದೂರದ ವಸ್ತುಗಳು ಹತ್ತಿರದಲ್ಲೂ ಹೆಚ್ಚು ಗಾತ್ರದಲ್ಲೂ ಕಾಣುವಂತೆ ಮಾಡುವ ಸಲಕರಣೆ: ದೂರದರ್ಶಕ; ದುರ್ಬೀನು" (Telescope. ಇಂಕನಿ.): ಲೋಕಭಾವ ಪ್ರದರ್ಶನಕ್ಕೆ ಕಲೆಯನ್ನು ಮಾಧ್ಯಮವಾಗಿ ಬಳಸುವುದು ವೃತ್ತಪತ್ರಿಕೆಯನ್ನೋದಲು ಟೆಲಿಸ್ಕೋಪನ್ನು ಬಳಸಿದಂತೆ (ಸೌಂದಸ. ೭೭); ಓಡಿ ಹೋಗಿ ಒಂದು ಬಂಡೆಯ ಮೇಲೆ ನಿಂತು ಟೆಲಿಸ್ಕೋಪನ್ನು ಕಣ್ಣಿಗೆ ಏರಿಸಿದ (ಪ್ರಜಸ. ೭೩).
[ ←ಇಂ. Telescope ]

**ಟೇಂಕಾರ** (ನಾ). ಜಂಭ; ಅಹಂಕಾರದಿಂದ ಕೂಡಿದ ಠೀವಿ; ದುರಭಿಮಾನ: ಕನ್ನಡಿಗರಲ್ಲಿ ಈಗಲೂ ದುರಭಿಮಾನ ಎಂಬರ್ಥದಲ್ಲಿ 'ಟೇಂಕಾರ' (ಠೇಂಕಾರ) ಶಬ್ದವು ಸಾಮಾನ್ಯ ಪ್ರಚಾರದಲ್ಲಿರುವುದು (ಸಾಹಿಜೀ. ೧೧೮).
[ <ಸಂ. ಠೇಂಕಾರ ]

**ಟೇಕ** 'ಠೇಕಾ' ನೋ.

**ಟೇಕಾ** 'ಠೇಕಾ' ನೋ.

**ಟೇಕೆ** 'ಟಿಕ್ಕೆ₁' ನೋ.

**ಟೇಪ್** 'ಟೇಪು' ನೋ.

**ಟೇಪ್‌ರಿಕಾರ್ಡು** (ನಾ). ಧ್ವನಿತರಂಗವನ್ನು ಆಕರ್ಷಿಸಿಕೊಳ್ಳುವ ಟೇಪನ್ನುಳ್ಳ, ಒಂದು ಬಗೆಯ ಯಂತ್ರಸಲಕರಣೆಯ ಮೂಲಕ ಮಾಡಿಕೊಳ್ಳುವ ದಾಖಲೆ: ಸರ್. ರಾಧಾಕೃಷ್ಣನ್ ಅವರ ಆ ದಿನದ ಭಾಷಣವೆಲ್ಲ ಟೇಪ್ ರಿಕಾರ್ಡು ಮಾಡಲಾಯಿತು (ರೂಢಿ). [ ←ಇಂ. Tape-record ]

**ಟೇಪಿ,** ಟಿಪಿ (ನಾ). [ಸಂಗೀತ] ಧ್ವನಿ: ಗುರು ಕೊಡಲು ಮೇಳಿಸಿದ ವೀಣೆಯನರಸಿ . . . ಮಿಡಿದೊಡನೆ ಟೇಪಿಯನೆತ್ತಿ ಸರಗಂಡು . . . ನುಣ್ಗೊರಲು ಬೆರಲೊಂದಾದುದೆನೆ ಬಾಜಿಸಿದಳು (ಸಾಳ್ವಭಾ. ೧೮-೭). **ಟಿಪಿ:** ಕಹಳೆಯ ಜೋಡಮಣಿಯಂ ತೆಗೆದು . . . ಬಾಯ್ದೆರೆಗೆ ಸಾರ್ಚಿ ಸಾರ್ಚಿ ಬಾಜಿಸಿ ನೋಡಿ ಟಿಪಿಯನೆತ್ತಿ ಶ್ರುತಿಯಂ ಕೂಡಿ . . . ಬಾಜಿಸುತಿರ್ದಂ (ವಿರೂಪಾ. ೮೪ ಪ). [ ←ಹಿಂ. ಟೇಪ್ ]

**ಟೇಪು,** ಟೇಪ್ (ನಾ). ೧. "(ಉಡುಪು ತಯಾರಿಕೆ, ಕಟ್ಟುಗಳನ್ನು ಕಟ್ಟುವುದು, ಮೊ.ಗಳಲ್ಲಿ ಉಪಯೋಗಿಸುವ, ಹತ್ತಿ, ನಾರು, ರೇಷ್ಮೆ, ಮೊ. ಗಳಿಂದ ಮಾಡಿದ ಕಿರಿಯಗಲದ) ಪಟ್ಟಿ, ಲಾಡಿ" (Tape. ಇಂಕನಿ.): ಪಕ್ಕದ ಮನೆ ಚೆನ್ನಮ್ಮ ಬಂದು . . . ಜಡೆಹಾಕಿ ಟೇಪುಕಟ್ಟಿದಳು (ಜಿಂದಜೀ. ೧೩). ೨. ಕಟ್ಟಡ ಮೊದಲಾದುವುಗಳ ಉದ್ದ, ಅಗಲ, ಎತ್ತರಗಳನ್ನು ಅಳೆಯಲು ಉಪಯೋಗಿಸುವ ಪಟ್ಟಿಯ ರೂಪದ ಒಂದು ಸಲಕರಣೆ; ಅಳತೆಯ ಪಟ್ಟಿ: ಅಳತೆಗಳನ್ನು ಗುರುತು ಮಾಡಿರುವ, ಸಾ., ಸುರುಳಿ ಸುತ್ತಿ ಉರುಳೆಕೋಶದಲ್ಲಿ ಅಡಗಿಸಿರುವ, ಬಟ್ಟೆ, ಲೋಹ, ಮೊ.ಗಳಿಂದ ಮಾಡಿದ ಪಟ್ಟಿ: ಅಳತೆ ಪಟ್ಟಿ; ಟೇಪು (Tape. ಇಂಕನಿ.); ಮಾರುತಿರಾಯ ಲಾಂಗೂಲ ವಿಸ್ತಾರ ಮಾಡಿದಂತೆ ಟೇಪು ಹಿಡಿದ (ದೀಪಹ. I, ೧೯); ಆತ ಟೇಪು, ಮುಕ್ಕಾಲು ಮುಂತಾದ್ದೇನನ್ನೂ ತಂದಿರಲಿಲ್ಲ (ಯೋಧಪು. ೨೬). ೩. ಧ್ವನಿಯನ್ನು ಸಂಗ್ರಹಿಸುವ ಯಂತ್ರಸಲಕರಣೆಗಳಲ್ಲಿ ಉಪಯೋಗಿಸುವ ಒಂದು ಬಗೆಯ ಸುರುಳಿಪಟ್ಟಿ: (ತಂತೀವರ್ತಮಾನಗಳನ್ನು ಬರೆದಿಡುವ ಗ್ರಾಹಕ ಸಲಕರಣೆಗಳಲ್ಲಿಯ, ಎಳೆದಂತೆ ಉದ್ದಕ್ಕೂ ಬರುವ) ಸುದ್ದಿ-ಪಟ್ಟಿ, ಪಟ್ಟಿ (Tape. ಇಂಕನಿ.). **ಟೇಪ್:** ೧. ಜಡೆಯ ತುದಿಗೆ ಕೆಲವರು ಟೇಪ್ ಕಟ್ಟಿದರು (ಮೂಲಾನ. ೧೨೩). ೩. 'ಟೇಪ್‌ರಿಕಾರ್ಡು' ಪರಾ.
[ ←ಇಂ. Tape ]

**ಟೈಪ್** 'ಟೈಪು' ನೋ.

**ಟೈಪ್‌ರೈರ್** 'ಟೈಪ್‌ರೈಟರು' ನೋ.

**ಟೈಪ್‌ರೈಟರು,** ಟೈಪ್‌ರೈಟರ್ (ನಾ). (ಕೈಬರವಣಿಗೆಗೆ ಬದಲು) ಅಚ್ಚಕ್ಷರ ಒತ್ತುವ ಯಂತ್ರ; ಬೆರಳಚ್ಚುಯಂತ್ರ: ನಮ್ಮ ಕಚೇರಿಯಲ್ಲಿ ಮೂರು ಟೈಪ್‌ರೈಟರುಗಳಿವೆ (ರೂಢಿ). **ಟೈಪ್‌ರೈಟರ್:** ಟೈಪ್‌ರೈಟರ್ ಮಾದರಿಯ ಕೈಮಣೆ (ಮುದ್ರಕ. ೫೦). [ ←ಇಂ. Typewriter ]

**ಟೈಪಿಸ್ಟ್** (ನಾ). ಬೆರಳಚ್ಚುಯಂತ್ರದಿಂದ ಟೈಪುಮಾಡುವ ವ್ಯಕ್ತಿ: ನಮ್ಮ ಕಛೇರಿಯಲ್ಲಿ ಒಬ್ಬರು ಟೈಪಿಸ್ಟ್ ಇದ್ದಾರೆ (ರೂಢಿ).
[ ←ಇಂ. Typist ]

**ಟೈಪು,** ಟೈಪ್ (ನಾ). ಅಚ್ಚಿನ ಮೊಳೆ; ಬೆರಳಚ್ಚು; ಬೆರಳಚ್ಚಿನ ಅಕ್ಷರ: ಈ ಕೌಶಲ್ಯ ಮೂರು ರೀತಿಯಲ್ಲಿದೆ; ಬರವಣಿಗೆ, ಟೈಪುಮಾಡುವುದು, ಅಂಗಸಾಧನೆ (ಶಿಕ್ಷದ. ೨೪೪). **ಟೈಪ್:** ನಾಳೆ ಐದುಗಂಟೆ ಗಾಡಿಯಲ್ಲಿ ಕಲ್ಕತ್ತೆಗೆ ಹೋಗಿ ಟೈಪ್‌ಮಾಡಿಸಿಕೊಂಡು ಬಾ (ಬಾಡಿಳ. ೪).
[ ←ಇಂ. Type ]

**ಟೈರು,** ಟಯರು (ನಾ). ಗಾಲಿಯ ಹೊರಸುತ್ತಿನಲ್ಲಿ ಜೋಡಿಸಿರುವ ರಬ್ಬರು ಮೊದಲಾದವುಗಳ ಪಟ್ಟಿ; ಗಾಡಿ ಚಕ್ರದ ಪಟ್ಟಿ: ಟೈರಿನ ಬೆಲೆ ವಿಪರೀತ ಏರಿದೆ (ರೂಢಿ). **ಟಯರು:** ಆ ಟಯರು ತೂತಾದುದರಿಂದ ಕಾರು ಜಗ್ಗಿ ಹೋಯಿತು (ಕಾಬಝೂ. ೭೯). [ ←ಇಂ. Tyre ]

**ಟೊಂಕ** (ನಾ). ಸೊಂಟ; ನಡು; ಕಟಿಪ್ರದೇಶ: ಕೊಂಕಿ ನಡೆದು ಕೆಯ್ಯಂ ಮುಚುಕಿಸುತಂ ಟೊಂಕಮನುಜುಗಿಸಿ ನಿಂದೆಡಿಸುತಂ (ಭೃಂಗೀರ. ಹ. ೪೭೨-೨೮): ಕುಜುಗಣ್ಣು ಕೂನಬೆನ್ ಕಾಲ್ ಮಜೆಯಿಸುವುದು ಟೊಂಕ ಮುಜಿದ ಕತ್ತೆಯ ಕಾಲಂ (ಯಶೋಚ. ೨-೩೯); ಟೊಂಕದಲ್ಲಿ ಕಠಾರಿ

ಯೊಂದಿರೆ ಬಿಂಕದಲಿ ಮಾರ್ಮಲೆತು ನಡೆವಂ (ಬಸಪು. ೨೧-೧೫); ಉಱುಗು ಟೊಂಕದ ಕುಂಟಗಾಲಿನ ಬೆಱೆತ ಬಿಂಕದ ವೈಯ ಬಿಗುಹಿನ . . . ಹಸ್ತದ ನಿಱಿಗೆಯಲಿ ನೆಱೆ ಸುಳಿದನಾ ಪ್ರಭುಲಿಂಗ ಲೀಲೆಯಲಿ (ಪ್ರಭುಲೀ. ೨೨-೩೪); ಸುಂಕಕ್ಕೆ ಸಟೆಯ ನೆಱೆಯಾಡಿ ಕಡೆಯಲ್ಲಿ ಟೊಂಕ ಮುಱಿದಿಹುದು (ಸರ್ವಜ್ಞ. ೧೪೯೮); ಟೊಂಕ ಮುರಿದರೂ ಬಿಂಕ ಮುರಿಯಲಿಲ್ಲ (ಗಾದೆ). [ದೇ.॥ ತುಳು. ಟೊಂಕ]

**ಟೊಂಕಕಟ್ಟು** (ಕ್ರಿ). (ಆಲಂ) ಅಣಿಯಾಗಂ ; ಸಿದ್ಧವಾಗು : ಅವರು ಇದಕ್ಕೂ ಹೆಚ್ಚಿನ ಸಾಧನಕ್ಕಾಗಿ ಟೊಂಕಕಟ್ಟಿದ್ದರು (ಮಹಾಯೋ. ೨೨೦); ಸಹಾಯ ಮಾಡಬೇಕೆಂದು ಟೊಂಕಕಟ್ಟಿನಿಂತಿರುವ ನಮಗಾದರೂ ಸಂಬಳ ಕೊಡಬಾರದೇ ಸರ್ಕಾರದವರು (ರಾಯಕ. ೮). [ಟೊಂಕ + ಕಟ್ಟು$_1$]

**ಟೊಂಕಹಾಕು** (ಕ್ರಿ). ೧. ಸೊಂಟದ ಮೇಲೆ ಕೈಯನ್ನು ಇಟ್ಟುಕೊಂಡು ಕುಳಿತು ಏಳು ; ಬೈಸಿಗೆಹಾಕು : ಒಂಟಿಕಾಲಲ್ಲಿ ನಿಂತುಕೊಳ್ಳುವುದು, ಟೊಂಕಹಾಕುವುದು . . . ಮುಂತಾದುವುಗಳ ಒಂದೊಂದು ಭಯಂಕರ ಶಿಕ್ಷೆಯನ್ನನುಭವಿಸಿದವರು ಮತ್ತೊಮ್ಮೆ ಓದಿಗೆ ಕಳ್ಳಮನಸ್ಸು ಮಾಡು ತ್ತಿರಲಿಲ್ಲ (ಕುರುಕಾ. ೬೮). ೨. (ಕರಾ) ಒಂಟಿಕಾಲಲ್ಲಿ ನಡೆ.
[ಟೊಂಕ + ಹಾಕು (<ಪಾಯ್ಕು$_1$)./ತುಳು. ಟೊಂಕಪಾಡ್]

**ಟೊಂಕಾಯಿಸು** (ಕ್ರಿ). ೧. ತಟ್ಟು ; ಮೆಲ್ಲಗೆ ಕುಟ್ಟು ; ಮೆಲ್ಲನೆ ಪೆಟ್ಟು ಹಾಕು : (೩). ೨. ಕುಂಟುನೆಗೆ ; ಕುಪ್ಪಳಿಸು : (೩). 'ಟೊಕ್ಕ' ಪರಾ.
[ಟೊಂಕಾ$_0$ (P ←ಮರಾ. ಠೋಕಣೇ) + – ಇಸು$_3$]

**ಟೊಂಗಿಕ್ಕು** (ಕ್ರಿ). ಟೊಂಗಿನ ಕಾಯಕ ಮಾಡು; ನೀರು ತಂದುಕೊಡುವ ಕೆಲಸ ಮಾಡು (?): ಲಿಂಗವಂತರ ನಿಲಯಕ್ಕೈದಿ ಟೊಂಗಿಕ್ಕಿ ಚರಲಿಂಗದ ಪ್ರಿಯನೇಜಿಸುವನ್ನೆಗಂ (ಮುದೇಪು. ೨೯-೪೩); ಅತ್ಯುತ್ತಮಶರಣೆ ಟೊಂಗು ಗಾಯಕದುಮಾದೇವಿ ಮತ್ತಭವಿಯಾಲಯದೊಳಱಿಯದುಱೆ ಟೊಂಗಿಕ್ಕಿ ಹರಣಮಂ ಬಿಟ್ಟಾಗಳು (ಪಾಸೋಪು. ೧೧-೪೮). [ಟೊಂಗು$_2$ + ಇಕ್ಕು]

**ಟೊಂಗು$_1$** (ನಾ). ಒಂದು ಅನುಕರಣ ಶಬ್ದ : ಒಂದೆರಳ್ಮೂಱಾಟು ಸೂಳು ನೆತ್ತಿಯನು ನೀರ್ವಿಂದಿಗೆಯೊಳು ಟೊಂಗು ಟೊಂಗೆನಲ್ಪೆಟ್ಟಕ್ಕಿ ಬಿಂದಿಗೆಯ ನಿತ್ತುದಕಮಂ ತರಿಸಿ (ಮುದೇಪು. ೨೫-೩೦).

**ಟೊಂಗು$_2$** (ನಾ). ನೀರು ತಂದುಕೊಡುವ ಒಂದು ಬಗೆಯ ಕಾಯಕ (?). 'ಟೊಂಗಿಕ್ಕು'. ಪರಾ. [?]

**ಟೊಂಗುಗಾಯಕ** (ನಾ). = ಟೊಂಗು$_2$ : ಅತ್ಯುತ್ತಮ ಶರಣೆ ಟೊಂಗು ಗಾಯಕದುಮಾದೇವಿ (ಪಾಸೋಪು. ೧೧-೪೮). [ಟೊಂಗು$_2$ + ಕಾಯಕ]

**ಟೊಂಗೆ** (ನಾ). ಕೊಂಬೆ ; ರೆಂಬೆ ; ಗೆಲ್ಲು : ಟೊಂಗೆಯನ್ನು ಕಡಿಯುವಾಗ ತಪ್ಪಿ ನನ್ನ ಕಾಲಿಗೆ ಕುಡುಗೋಲು ತಾಕಿತು (ಮುಂಬಯಿ. ೧-೧೮); ಟೊಂಗೆ ಯನ್ನೇರಿ ಜೋಕಾಲಿ ಜೀಕುವಳು (ಬಿನ್ನುಹಿಂ. ೨೯).

**ಟೊಂಬರ** (ನಾ). ಹಸನು ಮಾಡದ ಧಾನ್ಯ ; ಶುದ್ಧಪಡಿಸದ ಧಾನ್ಯ : ಕುಂಭಿನೀಶಂ ಕಂಡು ತುರಗಂಗಳಿಗೆ ಕುದಿಪ ಟೊಂಬರದ ಮಡ್ಡಿಯಂ ನೀಡೆಂದು ಬೆಸಸೆ ಚರರುಂ ಬಿಸಿಯ ಮಡ್ಡಿಯಂ ಸಟ್ಟುಕದಿ ನೀಡೆ (ರಾಘಚ. ೧೨-೨೪). [← ಮರಾ. ಠೋಂಬರಾ, ಠೋಮರಾ]

**ಟೊಕಳಿ** (ನಾ). ೧. ಗೊಳಲೆ; ಪೊಳ್ಳಾದ ಹೊರ ಮೈ: ತಿಳಲೆಲ್ಲ ಹೊರಟು ಹೋಗಿ ಬರಿಯ ಸಿಪ್ಪೆಯ ಟೊಕಳಿ ಉಳಿದ ಹಾಗಾಗಿರುತ್ತದೆ (ಮಾಧವ. II, ೩೨೦). ೨. (ಆಲಂ) ಕೈಲಾಗದವನು : ಮೃಡನು ಕೈಕೊಂಡ ಪ್ರಸಾದವ ಕಡುವಿಷವನಿಂತುಂಡ ಠಾವುಳ್ಳಡೆ ಬಿಡದೆ ನಾವೀಸಿಕೊಂಬೆವಿ ವೇಕೆ ಟೊಕಳಿಗಳು (ಬಸಪು. ೫೮-೪೫). [?]

**ಟೊಕ್ಕ** (ನಾ). ಕುಂಟುನೆಗೆ ; ಕುಂಟು : ಬಲಹಿಮ್ಮಡಿಯನ್ನು ಊರಲಾರದೆ ಕಾಡು ಕುಂಟ ಟೊಕ್ಕ ಹಾಕುತ್ತಲೆ ಹೊಸಲು ದಾಟಿದನು (ಮಲೆಮ. ೩೩೦). 'ಟೊಂಕಾಯಿಸು' ಪರಾ. [?]

**ಟೋಣಪ, ಠೋಣಪ** (ನಾ). ೧. ಸ್ಥೂಲಕಾಯನಾದ ಮನುಷ್ಯ ; ದಪ್ಪ ವಾದ ದೇಹವುಳ್ಳವನು : ಈ ದೇಹ ನಾನು ಹೇಳಿದಂತೆ ಕೇಳಿದ್ದರೆ, ನಾನೀಗ ಟೋಣಪನಾಗುತ್ತಿದ್ದೆ (ಗಾಳಿಪ. ೧೧೬). ೨. ಉಂಡಾಡಿ; ಧಾಂಡಿಗ; ಧಡಿಯ : ಈ ಟೋಣಪರ ತಂಡದ ಬೇಡಿಕೆಗಳನ್ನು ಪೂರೈಸಿ ಪೂರೈಸಿ ನೆರೆಹೊರೆಯವರು ಹೆಚ್ಚಾಗಿ ತ್ರಸ್ತರಾಗಿದ್ದರು (ಮೋಜೀವ. ೫). ೩. ದಡ್ಡ ; ಮೂರ್ಖ ; ಮಂದಮತಿ : ನನಗೆ ಮಾತ್ರ ಏನೇನು ಕಲಿಸದೆ, ನನ್ನನ್ನು ಶುದ್ಧ ಟೋಣಪನ್ನ ಮಾಡಿದ್ದಾರೆ (ಮುಂಬಯಿ. ೪-೧೦೪). ೪. (ಗು). ದಪ್ಪವಾದ ; ಪುಷ್ಟವಾದ ; ಕೊಬ್ಬಿದ : ಬದಿರುಗೂಟಕ್ಕೆ ಬಳ್ಳಿಯ ನುಲಿಯಿಂದ ಕಟ್ಟು ಗೊಂಡು ಟೋಣಪ ಗಾತ್ರದ ಕರಿಯ ನಾಯಿಯೊಂದು . . . ನಿದ್ರಿಸುವಂತಿತ್ತು (ಮಲೆಮ. ೬೭೫). **ಠೋಣಪ:** ೧. ಅವನು ಒಬ್ಬ ಠೋಣಪ (ರೂಢಿ).
[<ಟೋಣ್ಣ + ಅಪ (<ಅಪ್ಪ$_1$)]

**ಟೋಣಪೆ** (ನಾ). ೧. ಮರದ ದಪ್ಪವಾದ ತುಂಡು ; ದಪ್ಪ ದೊಣ್ಣೆ : "ಟೋಣಪೆ–ದೊಡ್ಡ ಬಡಗಿ ; ಟೋಣ್ಣೆ" (ಜಾನಕೋ. ೬೨). ೨. ದೊಣ್ಣೆಯ ಏಟು,–ಪೆಟ್ಟು : ಹಸಿವಿಲ್ಲದ ನೆಂಟರಿಗೆ ಕೊಟ್ಟರು ಮೂಱು ಟೋಣಪೆಗಳ ಎರಡು ಸೋಕವು ಒಂದು ತಾಕಲೆ ಇಲ್ಲ (ಪುರಂದ. ೩-೨೭-೧೧). ೩. (?) : ಟೋಣಪೇ ಶಾಸ್ತ್ರಕ್ಕೆ ಹೆಣಗೋದೇ ಅರ್ಥ (ಗಾದೆ). [<ಟೋಣಪ]

**ಟೋಣೆ, ಡೋಣೆ$_1$** (ಕ್ರಿ). ೧. ಭೇದಿಸು ; ಇರಿ ; ಚುಚ್ಚು ; ತಿವಿ : ಅಸಿಯನಣೆದಂಬುಗಳ ಟೋಣೆದುಲಿದು . . . ಬೊಬ್ಬಿಟ್ಟುಲಿವ ಲುಬ್ಧಕರ ಎಡೆಗೆವುರವಣಿಸಿ ಹರಿದು (ಹಡಕಾ. ೬-೧೪); ತೊಂಡಕುವಬ್ಬರಿಸಿ ಪತ್ತುವ ಸುತ್ತುವ ಘೂರ್ಮಿಸುತ್ತೆ ಸಂಚಲಿಪ ಧರಿತ್ರಿಯಂ ಟೋಣೆವ ಸೂಕರ ನಾಟಮದೇನಳುಂಬಮೋ (ಶಬಶಂ. ೪-೧೨); ಚಂಚುವಿಂ ಭೀಕರವಾಗೆ ತಾಂ ಟೋಣೆಯುತಿರ್ಪುದನು (ಹಾಲಾಸ್ಯ. ೩-೧೫-೨೫): ಹಳೆಯ ದೈವವದುವೆ ಬಂದು ಮಾದ್ರಿಯೆದೆಯ ಟೋಣೆಯಿತು (ನಳ್ಕ. ೬೨-೧೯). ೨. ತೊರೆ ; ತಿರಸ್ಕರಿಸು ; ನಿರಾಕರಿಸು : ಸೊಣಗನಂದಣವೇಱೆ ಕುಣಿದು ಪೋಪುದು ಮಲಕೆ ಸೊಣಗನ ಗುಣವು ಎನ್ನಲ್ಲಿ ಗುರುರಾಯ ಟೋಣೆದು ಬಿಡಬೇಡ (ಸರ್ವಜ್ಞ. ೧೧೮). ೩. ಸೋಲಿಸು ; ಗರ್ವಭಂಗಮಾಡು : ತೃಣಪುರುಷ ನಿಂದಶೇಷಾಗಮಮನೋದಿಸುತೆ ಗೊಣಗುತಿರ್ಪಳಿಯ ಗುಂಡಿಗೆಯ ಚಂಡಾಲರಂ ಟೋಣೆದು ವಿಭ್ರಾಜಮಾನೋದತ್ತ ಶ್ವೇತತೇಜವ ಮೂಜಗ ದೊಳೋಜೆಯಿಂ ಆಣಿಯರಂ ಪ್ರಕಟಮೆನಿಸಿದ ಪೊಂಗಿನಿಂ (ಕೊಟ್ಟೂಬ. ೯-೩೯). ೪. ವಂಚಿಸು ; ಮೋಸಗೊಳಿಸು ; ಕಣ್ತಪ್ಪಿಸು : " ಟೋಣೆ –ಶಠಾರ್ಥೇ " (ಶಮಧಾ); ನೆರೆಹೊರೆಯಱಿಯದಂತೆ ಪತಿಯಂ ಮಱಸಿ ಮನೆಯವರೆಲ್ಲರಂ ಟೋಣೆದು ಮದನಕೇಳಿಗೆ ಸಂದು (ಜೈಮಿಭಾ. ೫-೫೯); ಅಸ್ತ್ರ ಮಂತ್ರವಂ ನೆನೆದರದು ಗೋಚರಿಸದೇ ಟೋಣೆದುದು (ತುರಂಗ. ೯೦-೫೭); ೫. ಕದಿ; ಅಪಹರಿಸು: ಹಣವಿಗೊಂದೀಸ ವಿಪ್ಪಣ ಕೊಂದು ಬೇಳಿಯನು ತ್ರಿಣಯನ ಮಕುಟವಾದರೂ ಅಕಸಾಲೆ ಟೋಣೆ ಯದೆ ಬಿಡನು (ಸರ್ವಜ್ಞ. ೧೪೧೧); ಅಕ್ಕನ ಚಿನ್ನವಾದರೂ ಅಕ್ಕಸಾಲೆ ಟೋಣೆಯದೆ ಬಿಡ (ಗಾದೆ). **ಡೋಣೆ$_1$ :** ೩. ಅದಱ ಮೂಲ ಲಿಪಿಭಾಷೆ ತಿಳಿಯದೆ ಬಳಲಿ ಬಲ್ಲವರ್ಗಳೆಲ್ಲರಂ ಕರೆಸಿ ತೋಱೆ ಗಣಕರಂ ಹಳಿದು ಲಿಖಿತರ ಮಾಱೆ ಮುಹೂರ್ತಕರ ಡೋಣೆದು . . . ಎಲ್ಲರು ಅಲ್ಲೆನಿಸಿ ಓಡಾಡಿತೇಂ ಪೊಗಳ್ವೆನು (ಸಿಂಗಿರಾ. ೭-೬). ೪. ಹಿರಿಯರೆಲ್ಲರ ಡೋಣೆದು ಗಮಿಸಿಯೆ ಸರಸ ಸಲ್ಲಾಪಾದಿಯಿಂದ ತರುಣಿಯರ ರಮಿಸುತ್ತ ಕಾಲವ ಹರಣಮಾಡಿಯೆ ದುರಿತ ಗಳಿಸಿದೆ (ಕಜಾಗೀ. ೨೦೪). [?]

**ಟೋಣೆಯ, ಠೋಣೆಯ** (ನಾ). ೧. ದಪ್ಪವಾದ ಮನುಷ್ಯ ; ಧಾಂಡಿಗ ; ಟೋಣಪ : ಕುಳ್ಳನೆಯ ಮುದಿ ಟೋಣೆಯನೊಬ್ಬ ಆ ವ್ಯಾಖ್ಯಾನವನ್ನು ಸ್ಪಷ್ಟವಾಗಿ ಗ್ರಹಿಸುತ್ತಿದ್ದನು (ಪುನರು. ೩೦೦); ನಿನ್ನನ್ನು ಆ ಕರಿಯ

ಟೊಣೆಯನಿಗೆ ಕೊಟ್ಟು ಮದುವೆ ಮಾಡಬೇಕಂತೆ (ರಾವಿಜ. ೧೦೧).

**ತೊಣೆಯ :** (ಗು). ೨. ದಪ್ಪದೇಹದ ; ದಡೂತಿ ಶರೀರವುಳ್ಳ : ಇವರ ಜೊತೆಯಲ್ಲಿ ಗುಜ್ಜುವೈಯು ತೊಣೆಯ ಒಕ್ಕಲಗಿತ್ತಿಯೊಬ್ಬಳು ನಿಂತಿದ್ದಳು (ಪುನರು. ೧೪೩). [ <ಟೊಣ್ಣ + – ಅ$_7$ ]

**ಟೊಣ್ಣ** (ನಾ). ೧. ದಪ್ಪವಾದ ವ್ಯಕ್ತಿ. 'ಟೊಣಪ' ಪರಾ. ೨. ದಪ್ಪವಾದುದಂ ; ಗಡವ (?) : ಕೋಣ ನೀರಿಗೆ ಹೋಗಿ ಕ್ಷೋಣಿಕಪಿಯ ಕೊಂದು ದೊಡ್ಡ ಟೊಣ್ಣನ[ಪಾ ಠಾಂ. ದ]ಮನೆಯೊಳಗೌತಣವಯ್ಯ (ಪುರಂದ. ೩-೧೩೪-೨).

**ಟೊಣ್ಣೆ** (ನಾ). ದಡೂತಿ ಹೆಂಗಸಂ : ಟೊಣ್ಣೆಯಾದರೆ ಮಣ್ಣುಕೆಲಸ ಮಾಡ್ತಾಳು (ಗಾದ). [ ಟೊಣ್ಣ + – ಎ$_2$ ]

**ಟೊಪರ** 'ಟೊಪ್ಪರ' ನೋ.

**ಟೊಪಲೆ** 'ಟೋಪಲಿ' ನೋ.

**ಟೊಪ್ಪರ, ಟೊಪರ, ತೊಪ್ಪರ$_1$, ತೋಪರ** (ನಾ). ಟೋಪಿ ; ಟೊಪ್ಪಿಗೆ: ಸಮತೆಯೆಂಬ ಕಂಥೆಯ ತೊಟ್ಟು ಸುಬುದ್ಧಿಯೆಂಬ ಟೊಪ್ಪರವನಿಕ್ಕಿ ವಿಷಯವೆಂಬ ಹಾವುಗೆಯ ಮೆಟ್ಟಿ (ಅವಚಂ. ೨೪೬-೧೧೨೨) ; ಸ್ಥೂಲ ಕಂಥೆ ಸೂಕ್ಷ್ಮ ಟೊಪ್ಪರ ಸತ್ಯ ದಂಡ (ಮಡಿಮಾ. ೧೫-೧೯) ; ತಳ್ವೊಯ್ದು ಸಂಜೆ ಗೆಂಪಿನ ತೆಳ್ಪ ಮರ್ದಿರೆ ಪೊಟಿಯನೆತ್ತಿ ಪೊಲಿಸಿದ ತೆಬಿದಿಂದೊಳ್ಬ ಪೊಸ ಟೊಪ್ಪ[ಪಾಠಾಂ. ವುಪ್ಪ]ರಮಿನಕಳ್ಪಂಗಾ ಜೋಗಿಗೆಸೆದುದಸದಳಮಾಗಲ್ (ಲೀಲಾವ. ೪-೮೧) ; ಸಿರ ಹೊಯ್ದು ಟೊಪ್ಪರವ ಕೊಡುವಂತೆ ಕರವರಿದು ಕಂಕಣಗೊಡುವ ತೆಱದಂತೆ (ಷಡಿಲ. ೧೩-೬೦). **ಟೊಪರ :** ಯಜ್ಞೋಪವೀತ ಟೊಪರಧಾರಣ ವಿಧಿಯ ವಿಜ್ಞಾಪನಂಗಳಿಂ ನೂರ್ಮಡಿ ಮಹಾದಾನ (ಲಿಂಗಪು. ೧೦-೩೪). **ತೊಪ್ಪರ$_1$ :** ಗಗನಸ್ಥಾನವೇ ಕಂಥೆ ಆಕಾಶವೇ ತೊಪ್ಪರ[ಪಾಠಾಂ. ತೋಪರ] ಅಜಾಂಡ ಬ್ರಹ್ಮಾಂಡವೇ ಕರ್ಣಕುಂಡಲ (ಅವಚಂ. ೮೩-೩೭೪). **ತೋಪರ :** ಮೇಲಿನ ' ಅವಚಂ ' ಪ್ರಯೋಗದ ಪಾಠಾಂತರವನ್ನು ನೋಡಿ. [<ಪ್ರಾ. ಟೋಪ್ಪರ. / ಹಿಂ. ಟೋಪರಿ ತಮಿ. ತೊಪ್ಪಾರ ; ತೆಲು. ದೊಪಾರ ]

**ಟೊಪ್ಪಿ** 'ಟೋಪಿ' ನೋ.

**ಟೊಪ್ಪಿಗೆ** 'ಟೋಪಿ' ನೋ.

**ಟೊಪ್ಪಿಗೆಗಳೆ** (ಕ್ರಿ). ಬೇಟೆಯಂ ಸಮಯದಲ್ಲಿ ಟಗರು, ಸಾಳುವ ಮುಂತಾದುವುಗಳ ಮೇಲಂಮುಸುಕನ್ನು ತೆಗೆ,–ಆವರಣವನ್ನು ಕಳಚು : ಅಳಲಿದುರಗನ ನೆರವಿ ಟೊಪ್ಪಿಗೆಗಳೆದ ಸಾಳ್ವನ ಹಿಂಡು (ಕುಮಾವ್ಯಾ.ಭೀ. ೩-೧೬). [ ಟೊಪ್ಪಿಗೆ (<ಟೋಪಿ) + ಕಳೆ$_1$ ]

**ಟೊಪ್ಪು** (ನಾ). ಒಂದು ಬಗೆಯ ಕೀಟ : ಪತಂಗ, ಮಿಡಿತೆ, ಟೊಪ್ಪು (ನಮ್ಮನು. ೨೪೦). [ ? ]

**ಟೊಮಾಟೊ, ಟೊಮೆಟೊ, ಟೊಮೇಟೊ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹಣ್ಣು ; ಚಪ್ಪರಬದನೆ ; ತಕ್ಕಾಳಿ : ಗೂದೆ ಹಣ್ಣು, ಚಪ್ಪರಬದನೆ, ಟೊಮಾಟೋ, ತಕ್ಕಾಳಿ (ವೃಜಿಗಿ. ೫೦-೦೦೫೦); ಕಿತ್ತಲೇಹಣ್ಣಿನ ರಸ, ಟೊಮಾಟೋ ರಸ, ಸೊಪ್ಪು ತರಕಾರಿಗಳ ರಸವನ್ನು ದಿನಂಪ್ರತಿ ಎಳೆಮಕ್ಕಳಿಗೆ ಒಂದು ಚಮಚ ಕೊಡುವುದರಿಂದ, ಅವಕ್ಕೆ ಕಬ್ಬಿಣದ ಅಭಾವವನ್ನು ತಪ್ಪಿಸಬಹುದು (ಗೃಹವಿ. ೨೩). **ಟೊಮೆಟೊ :** ಟೊಮೆಟೊ . . . ಲಿಂಬೆ ಮತ್ತು ಮೊಳಕೆ ಬರಿಸಿದ ಧಾನ್ಯಗಳಲ್ಲಿ 'ಸಿ' ಜೀವಾತು ಇದೆ (ಅಡುಶಾ. ೬೪). **ಟೊಮೇಟೊ:** ಟೊಮೇಟೊ . . . ಈ ಹಣ್ಣನ್ನು ಎಲ್ಲಾ ಜನರೂ ಅಪೇಕ್ಷಿಸುತ್ತಾರೆ (ತರಬಿ. ४०). [ ←ಇಂ. Tomato ]

**ಟೊಮೆಟೊ** 'ಟೊಮಾಟೊ' ನೋ.

**ಟೊಮೇಟೊ** 'ಟೊಮಾಟೊ' ನೋ.

**ಟೊಮ್ಮೆ** 'ತೊಂಬೈ' ನೋ.

**ಟೊಳಕಿ** (ನಾ). ಎಲೆಗಳಿಂದ ಹೆಣೆದ ದೊನ್ನೆ ಅಥವಾ ಬುಟ್ಟಿ : ದೇವರ ಪೂಜೆಗೆ ಎತ್ತಿದ ಹೂಗಳನ್ನು ಒಂದು ಟೊಳಕಿಯೊಳಗೆ ಹಾಕಿ (ಮುಂಬಯಿ. ೫-೩೧೦). [ ←ಮರಾ. ಟೋಳಕಾ ]

**ಟೊಳ್ಳು, ಟೊಳ್ಳೆ, ಡೊಳ್ಳು$_1$, ಡೊಳ್ಳೆ, ತೊಲಿ, ದೊಳ್ಳು, ದೊಳ್ಳೆ** (ನಾ). ೧. ಒಳಗೆ ತಿರುಳಿಲ್ಲದಿರುವುದು ; ಪೊಳ್ಳು : ಹುಲ್ಲು ಸುಟ್ಟರೆ ಸುಡಲಿ! ಲೇಸಾಯ್ತು ಟೊಳ್ಳಳಿಯಿತುಳಿಯ ಗಟ್ಟಿ! (ಪಾಂಚಜ. ४೯-೬) ; " ಬಂದೆ ಶಾಮು, ಬಾಳ ಟೊಳ್ಳು ತುಂಬಿತೆ ನುವನು (ರಾಮಾನ. ೭೯) ; ಸಾಬೂನಿನ ಪೆಟ್ಟಿಗೆಯಂತಹ ಪಿಟೀಲೊಂದನ್ನು ತೆಗೆದುಕೊಟ್ಟಿದ್ದರು. ಅದರ ಒಳಗೆಲ್ಲಾ ಟೊಳ್ಳು (ನಾಡಿಗೇ. ೧೫); ಪೋಕನ ಮಾತು ಠಾಕು, ಸುಳ್ಳನ ಮಾತು ಟೊಳ್ಳು (ಗಾದ). ೨. ಪೊಟರೆ ; ತೂತು : ಆ ಮರದ ಟೊಳ್ಳಿನಲ್ಲಿ ಒಂದು ಸರ್ಪ ವಾಸವಾಗಿದೆ (ರೂಢಿ). ೩. ಗುಡ್ಡೆ ಇಲ್ಲದ ಕಣ್ಣಿನ ಕಂಳಿ. 'ಟೊಳ್ಳುಗಣ್ಣು' ಪರಾ. (ಗು). ४. ಒಳಗೆ ಬರಿದಾದ ; ತಿರುಳಿಲ್ಲದ ; ಪೊಳ್ಳಾದ : ಟೊಳ್ಳು ಮಾತು ಸುಳ್ಳಿಗಿಂತ ಕಡೆ (ಗಾದ). ಆ ಟೊಳ್ಳು ಬಿದಿರಿನಲ್ಲಿ ಗಾಳಿ ಹೊಕ್ಕು ಶಬ್ದಮಾಡುತ್ತಿದೆ (ರೂಢಿ). **ಟೊಳ್ಳೆ :** ೧. ಒಳ್ಳೆಗಳುಂ ಗರಳದ ಕರಿಗೊಳ್ಳಿಗಳುಂ ಕೈಪೆಸೊರೆಯ ಬಳ್ಳಿಗಳುಂ ಚಃ ಟೊಳ್ಳೆಗಳುಂ ದೈವಾಖ್ಯಕೆ ಕಳ್ಳರ್ ಗುರುರೂಪ ವಿಶ್ವನಾಥಂಗೆಣೆಯೇ (ಕವಿಜ. I, ೨೮೨). ೨. ಮೀನಿಗೆ ಶ್ವಾಸಕೋಶವಿಲ್ಲ. ಅದರ ಮೂತಿಗೆ ತಾಗಿ, ಎಡ ಬಲ ಮಗ್ಗುಲುಗಳಲ್ಲಿ ಎರಡು ಟೊಳ್ಳೆಗಳಿವೆ. ಈ ಟೊಳ್ಳೆಗಳ ಅಂಚನ್ನು ಅದು ಆಗಾಗ ತೆರೆದು ಮುಚ್ಚುವುದು (ಬಾಲಪ್ರ. II, ೬೭೦). ೩. ಆಲಿ ನೊಂದುದೊ ಕಣ್ಣು ಬೇನೆಯೊ . . . ಅಳಿಗಣ್ಣೊ ತಿಮಿರವೊ ಟೊಳ್ಳೆ ಪೋದವುದೋ (ಬಸವು. ೧೮-೬೬). ४. 'ಟೊಳ್ಳೆಗವಡೆ' ಪರಾ. **ಡೊಳ್ಳು$_1$ :** ೫. ಉಬ್ಬಿರುವ ಹೊಟ್ಟೆ ; ಬೊಜ್ಜು ಬೆಳೆದ ಹೊಟ್ಟೆ : ತೀವಿದ ನರೆಯುಂ ಡೊಳ್ಳುಂ ದೇವವ್ರತನೆನಿಸಿ ನೆಗಟ್ದ ಯಶಮುಮಂ ಬೆರಸಿ (ಪಂಪಭಾ. ೬-४೩) ; ಮರುಳ ಮಂನ್ನಣೆಯಂತೆ ಬಾಹಿನ ಡೊಳ್ಳಿನಂತೆ ಸೂಳೆಯ ಕರೆಹದಂತೆ . . . ಕಡೆಯೊಳ್ ಪೇಸುವಥಮುಮ ಶೋಭೆಯುಮಾಗದೆ ಪೋಗದು (ಧರ್ಮಾಮೃ. ೭-೧೨೨) ; ಬೆಳ್ಳಿಯ ಗಿರಿಯ ನೆತ್ತಿದೆನೆಂಬ ಗರ್ವದ ಡೊಳ್ಳನಿಂದಿನ ದಿನದೊಳಗೆ ಹೊಳ್ಳುಮಾಡದೆ ಬಿಡೆನು (ಅಂಜಜ. ೬-೧೯೩) ; ವೈಶ್ಯನೊರ್ವ ಸ್ವರ್ಣವ್ಯವಹಾರಿ ವರದತ್ತ ನೆಂಬಂಗೆ ಡೊಳ್ಳು ಬೆಳೆದಿರ (ಪುಣ್ಯಾಸ್ರ. ೩-೬೮ ವ) ; ಡೊಳ್ಳುಗಳ ಹೇರೊಡಲ ವಂಚಕರು (ಬಸವು. ೫೦-೫೪) ; ಬಿಲ್ಲು ಬಿಡದವನಿಯಲಿ ಬಿದ್ದನ ಡೊಳ್ಳು ಮೇಲಾಗಿತ್ತು (ಕುಮಾವ್ಯಾ.ಆ. ೧೪-೨೦) ; ಕುಕ್ಷಿಯುಕ್ಕಳಿಸೆ ಬೆಂಗಡರ್ಪುದು ಸಹಜದೊಳೀಕ್ಷಿಸೆ ಪುಟ್ಟಿ ಡೊಳ್ಳಿಹುದು (ಛಠಜ. ೬-೧೬). P ಇದನ್ನು 'ಒಡಲ್' ನಿಂದ ನಿಷ್ಪನ್ನಮಾಡುವ ಸಾಧ್ಯತೆಯೂ ಇದೆ. **ಡೊಳ್ಳೆ :** ४. ಹದಿನೆಂಟು ಡೊಳ್ಳೆ ಪರಿವಾರವಾರ್ಘಟಿಸಿ ಕೂಡಿದುದಲ್ಲಿ (ವೀಶೈವು.೩-೨೩-೩೫). **ತೊಲಿ :** ೨. ವೇಧಿತಃ, ಛಿದ್ರಿತಃ, ವಿದ್ಧಃ–೩ ತೊಲಿಯಿಡಲ್ಪಟ್ಟದ್ದು, ತೂತು ಕೊರೆಯಲ್ಪಟ್ಟದ್ದು (ಸಿದ್ಧಾಂತಿ. ೩೦೦). **ದೊಳ್ಳು :** ೫. ಮಂತ್ರಿ ಕಾಡೊಳಗೆ . . . ದೊರೇಕಿವಿ ಕತ್ತೇಕಿವಿ ಅಂದ್ಬಿಟ್ಟ. ಮಂತ್ರೀ ದೊಳ್ಳು ಕರಗಿತು (ಹುಟ್ಟಿಹ. ೧೬೦). 'ದೊಳ್ಳನೂಕು' ಪರಾ. **ದೊಳ್ಳೆ :** ೩. 'ದೊಳ್ಳೆಗಣ್ಣು' ಪರಾ.

**ಡೊಳ್ಳಾಗು, ದೊಳ್ಳಾಗು** = ೧. ಕಣ್ಣಿನ ಗುಡ್ಡೆ ಇಲ್ಲದಾಗು ; ಗುಳಿಬೀಳಂ ; ಪೋಟುಬೀಳಂ : ಒಂದಾಖು ಮೇಗಣ್ಣೆಳೆಯಲುರಿವ ಪರ್ಬತ್ತಿಯಂ ಕಚ್ಚಿ ಬೇವುತ್ತಿರೆ ಬಾಯ್ ಬಿಟ್ಟೊಡೆ ಬಿರ್ದತ್ತದು ನಯನದೊಳಾಂ ನಂದಿಸಲ್ಕೆಯ್ಯನೆತ್ತಲ್ಪಿರಿದುಂ ನಿದ್ರಾಭಿಭಂಗಂ ದೊರೆಕುಮುವರ್ಗೆಂದಿರ್ದು ಡೊಳ್ಳಾಯ್ತು ನೇತ್ರಂ (ಧರ್ಮಪ. ೯-೧೬) ; ಆ ಉರಿವ ಬತ್ತಿ ನನ್ನ ಕಣ್ಣ ಮೇಲೆ ಸರಿಯಾಗಿ ಗುರಿಕಟ್ಟಿ ಹಾಕಿದಂತೆ ಬಿದ್ದಿತು . . . ಅದರಿಂದ ಕಣ್ಣು

ದೊಳ್ಳಾಯಿತು (ನಗಿಸ. ೨). ೨. ಉಬ್ಬು; ದೊಡ್ಡದಾಗು : ಹೊಟ್ಟೆ ಡೊಳ್ಳಾಗಿತ್ತು (ದೀಪದ. ೧೬೦). **ಡೊಳ್ಳು ಬೀಳು** = ಜೋಲುಬೀಳು ; ಸಡಿಲವಾಗಿ ನೇತಾಡು ; ಅಳ್ಳಕವಾಗು : ಡೊಳ್ಳು ಬಿದ್ದ ತಂತಿಯಿಂದ ಜೊಳ್ಳುನಾದವೆದ್ದಿತೋ (ನಾದಲೀ. ೬-೧೨). **ಡೊಳ್ಳು ಹೊಡೆ** = ಡೊಳ್ಳು ಬೀಳು: ದಾರ ಡೊಳ್ಳು ಹೊಡೆವುದನ್ನು ಹೇಗೆ ತಪ್ಪಿಸಬೇಕು? (ಗಾಳಿಪ. ೫). **ಡೊಳ್ಳೇರು** = ಹೊಟ್ಟೆ ದೊಡ್ಡದಾಗು ; ಹೊಟ್ಟೆಯುಬ್ಬು : ಕುಣಿ ಕುಣಿದು ತೇಲಿ ಸಾಗಿತು, ಪಟಂ ಸಂತಸಕೆ ಡೊಳ್ಳೇರಿತನೆ ವಾಯುಹತಿಗುರ್ಬಿ (ಶ್ರೀರಾಮಾ. ೯೮-೫೫೭).

[ ದೇ.೫ ತಮಿ. ತೊಳ್ಳಲ್, ತೊಳ್ಳೈ ; ಮಲ. ತುಳ, ತೊಳ್ಳ ; ತುಳು. ಟೊಳ್ಳು, ಡೊಳ್ಳು, ದೊಲ್ಲು; ತೆಲು. ತೊಲಿ, ತೊಲಿಕ, ದೊಲ್ಲೆ ]

**ಟೊಳ್ಳುಗಣ್ಣು** (ನಾ). ಗಂಡ್ಡೆ ಇಲ್ಲದೆ ಗುಳಿಬಿದ್ದ ಕಣ್ಣು : ಟೊಳ್ಳು ಗಣ್ಣವರೆಲ್ಲ ಮೆಳ್ಳೆಗಣ್ಣಾದವರು ಹಲ್ಲುಮುರುಕ ಹೀನರುಗಳು . . . ಎಲ್ಲರ ಕರೆಸಿದ (ಮಡಿಸಾಂ. ೧-೩೫). [ ಟೊಳ್ಳು + ಕಣ್ಣು (<ಕಣ್) ]

**ಟೊಳ್ಳುಹಂಚೀಹುಲ್ಲು** (ನಾ). ಒಂದು ಬಗೆಯ ಹುಲ್ಲು : ತೆಂಗಿನ ನಾರು ಹುಲ್ಲು, ಟೊಳ್ಳುಹಂಚೀಹುಲ್ಲು (ಮೃಔಗಿ. ೪೭-೯೨೨).

[ ಟೊಳ್ಳು + ಹಂಚಿ$_1$ + ಹುಲ್ಲು (<ಪುಲ್) ]

**ಟೊಳ್ಳೆ** 'ಟೊಳ್ಳು' ನೋ.

**ಟೊಳ್ಳೆಗವಡೆ** (ನಾ). ಒಡೆದ ಕವಡೆ ; ತೂತು ಕವಡೆ : ಜಾಣಜಾಣೆಯ ರಾಟವೆಂಬುದು ಚದುರಂಗದಾಟದಂತಿಹುದು ಬದಗರ ಲೀಲೆಯಹುದು ಟೊಳ್ಳೆಗವಡೆಯಗೆದರ್ವ ಸೋಗೆಳೆಯಾಟದಂತೆ (ಭರಚ. ೧೧-೧೯).

[ಟೊಳ್ಳೆ (<ಟೊಳ್ಳು) + ಕವಡೆ$_2$ ]

**ಟೋಕರ** 'ಠೋಕರ್' ನೋ.

**ಟೋಕರು** 'ಠೋಕರ್' ನೋ.

**ಟೋಕರೆ** (ನಾ). ಬುಟ್ಟಿ ; ಮಂಕರಿ : ಹೊಳೇ ಬಳಿಯಿದ್ದ ಹರಗೋಲು ಗಳೆಲ್ಲಾ . . . ಕೋಟೆವಳಿಕ್ಕೆ ಹಾಕಿಸಿಯಿದ್ದನಾಗಿ ವಂಥ ಭಾರಿ ಬಿದಿರ ಟೋಕರೆ ಮಾತ್ರ ಬಿದ್ದುಯಿದ್ದುದನ್ನು ತರಿಸಿ (ಹೈದರ. ೧೦೪).

[ ←ಹಿಂ. ಟೋಕರೀ ]

**ಟೋಕಿಸು** (ಕ್ರಿ). ೧. "ವ್ಯಾಖ್ಯಾನವಮಾಡು" (ಶತಸಾಂ. ಕೋಶ) : ಟೋಕಿಸಿ ಟೌಂಕಿಸಿ ಟಂಕಿಪ ಟಕ್ಕರದೇಕೆ ಪುಟ್ಟಿದರೊ ಶ್ರೀಹರಿಯೆ (ಶತಸಾಂ. ೭೫-೮೫). ೨. ಶಬ್ದವಮಾಡು (?) : ಚತುರಂಗಬಲಂ ಬರೆ ನಾಡೆ ಕೂಡಿಯಾ ಚಾಗಿಗಳೆಂದು ಸಂಧಿಸಿದರದ್ಭುತಭೇರಿಗಳಂತೆ ಟೋಕಿಸಲ್ (ಹಾಲಾಸ್ಯ. ೩-೩-೧೧). ೩. ಗುಣಿಸು (?) : ತೂಕದಲೆನಿತಿರಲದಕಂ ಜೋಕೆ ಯೊಳುಂ ನಾಲ್ಕರಲಿವಂದಂ ಕೂಡಿಯೆ ಟೋಕಿಸಿ ವರ್ಗಂಗೊಂಡುರೆ ನೋಕದ ರೊಳ್ಪಾಗಪಾಲಮಣಿಯೊಳ್ಪರಿಸಾ (ಭಾಸ್ಕರ. ೭೮-೯). [ ? + – ಇಸು$_3$ ]

**ಟೋಕು** 'ಠೋಕು' ನೋ.

**ಟೋಕುತಾಳೆ** 'ಠೋಕತಾಳೆ' ನೋ.

**ಟೋಕುಮಾರಾಟ** 'ಠೋಕಮಾರಾಟ' ನೋ.

**ಟೋಪನ್ನು, ಟೋಫನ್, ಟೋಫನು** (ನಾ). ನಾಟಕದಲ್ಲಿ ಪಾತ್ರ ಧಾರಿಗಳು ಧರಿಸುವ ಕೃತಕವಾದ ತಲೆಗೂದಲು–ಕೃತಕ ಕೇಶರಾಶಿ: ಯಶೋದಾ ಪಾತ್ರಧಾರಿಯು ಇನ್ನೂ ತಲೆಗೆ ಟೋಪನ್ನನ್ನು ಹಾಕಿ ಕೊಂಡಿರಲಿಲ್ಲ (ರಾಯಕ. ೭೦). **ಟೋಫನ್:** ಕೋಣೆಯಲ್ಲಿ ಹರಕುಮುರಕು ಟೋಫನ್‌ಗಳು, ಒಂದು ರುದ್ರಾಕ್ಷಿ ಸರ . . . ಇಂಥವೇ ಕೆಲವು ಸಾಮಾನುಗಳಿದ್ದವು (ನಾಡಿಗೇ. ೩೦೩). **ಟೋಫನು :** ಸೊಗಸಾಗಿ (ಟೋಫನಿನಲ್ಲಿ) ಹೆರಳುಹಾಕಿಕೊಂಡು ಮಗಮಗಿಸುವ ಮಲ್ಲಿಗೆಯ ಹೂವನ್ನು ಮುಡಿದುಕೊಂಡು ಬಂದಾಗ ನಿಜವಾಗಿ ಯಾವಳೋ ಸುಂದರ ಯುವತಿಯೇ ನಿಂತಂತಾಗಿತ್ತು (ಅಲಹೂ. ೯). [ ←ಮರಾ. ಟೋಪ್ ]

**ಟೋಪಲಿ, ಟೊಪಲೆ** (ನಾ). ಬುಟ್ಟಿ; ಮಂಕರಿ : ತತಾ ಒಂದು ಟೋಪಲಿ ಮತ್ತ ಒಂದು ನೋಟು. ಈಗ ಘಸಾನ ಓಡಿಕೋತ ತರತೀನಿ (ರಕ್ತಧ. ೧೦೮). **ಟೊಪಲೆ :** ಟವಕಿಗಳು . . . ಟೊಪಲೆಗಳು (ಸಣ್ಣಬುಟ್ಟಿ) (ಮುಂಬವ್ಯಾ. ೧೦೨). [ ←ಹಿಂ. ಟೋಪರೀ ]

**ಟೋಪಿ, ಟೊಪ್ಪಿ, ಟೊಪ್ಪಿಗೆ, ತೊಪ್ಪಿಗೆ, ತೋಪಿ** (ನಾ). ೧. ಹೆಣೆದು ಅಥವಾ ಹೊಲಿದು ತಯಾರಿಸಿದ ತಲೆಯ ತೊಡುಗೆ: "ಕುಲಾಯಃ–ಗೂಡುಂ, ಟೋಪಿಯುಂ" (ಶಾಶಕ್ಕ. ೧೬೭) ; ತಲೆಗೆ ಬಂದಿಸಿದವುಳ ಪಟ್ಟೆಯ ಟೋಪಿಯ ಬ್ರಹ್ಮರೊಂದಿತು ಕುಳಿತು ಹಂತಿಯಲಿ (ಮೋಹತ. ೩-೪೯) ; ರುದ್ರಾಕ್ಷಿಯಲ್ಲಿ ರಚಿಸಿದ ಟೋಪಿ (ಜೋರಬ. ೪-೧೭) ; ಕಬ್ಬಿಣದ ಕವಚಗಳನ್ನೂ ಟೋಪಿಗಳನ್ನೂ ಧರಿಸಿಕೊಂಡು (ಕೈವಾಲು. ೨೪೩). **ಟೊಪ್ಪಿ:** ೧. ಸಾಯಂಕಾಲ ಧರಿಸುವ ಟೊಪ್ಪಿಯು ಕುರ್ಚಿಯ ಕೆಳಗಿಡಲ್ಪಟ್ಟಿದೆ (ಪ್ರಕಾಶ. ೨) ; ನೀಲಿಬಣ್ಣದ ಹೊದಿಕೆ–ಅಗಲವಾದ ಟೊಪ್ಪಿ–ಕೈಯಲ್ಲಿ ಚಿಕ್ಕ ಕೊಡಲಿ (ಅರ್ಯಾಕ. ೧೧) ; ಟೊಪ್ಪಿಯೊಳಗಿಂದ ಎಂಥೆಂಥ ಹಕ್ಕಿ ಹಾರಿಸಿದ್ದಾರೆ (ಗಾಳಿಪ. X, ಮಚ್ಚಿಗೆಯ ಮಾತು). **ಟೊಪ್ಪಿಗೆ:** ೧. ಕುಪ್ಪಸದ ಬೀರಣೆಯ ಬಿನ್ನಣದ ಹೆಸರಿಗಂ ಟೊಪ್ಪಿಗೆಯ ಹೊಜೆವೇಷದಿಹಪರದ ಲೆಕ್ಕಿಗಂ (ಬಸರ. ೫-೬೦) ; ಕಡುಟಕ್ಕು ; ಮಾಣಿಕಟಕ್ಕೆ ; ಹೊಸ ಟೊಪ್ಪಿಗೆ (ಕಮದ. ೬೫ ಪ್ರಯೋ) ; ಅವರ ಖಾಕೀಕೋಟು, ಎತ್ತರವಾದ ಟೊಪ್ಪಿಗೆ . . . ಚಪ್ಪಲಿಗಳು ಅವರಲ್ಲಿರುವ ದರ್ಪಬುದ್ಧಿಗೆ ಸಾಕ್ಷಿ ನುಡಿಯುತ್ತಿದ್ದವು (ರಂಗರೋ. ೧). ೨. ಟಗರು, ಸಾಳುವ, ಗಿಡುಗ ಮೊದಲಾದುವನ್ನು ಕಾಳಗಕ್ಕಾಗಿ ಮತ್ತು ಬೇಟೆಗಾಗಿ ಬಿಡುವುದಕ್ಕೆ ಮುಂಚೆ ಅವುಗಳ ಮುಖಕ್ಕೆ ಹಾಕುವ ಮತ್ತು ಬಿಡುವ ಸಮಯದಲ್ಲಿ ತೆಗೆಯುವ ಮೊಗ ವಾಡ,–ಮುಖಾವರಣ : ಬಿಡು ಬಿಡು ಬೇಗಲೆನುತ ಸಾಳುವನನಂತವ ಬಿಡಲು ಟೊಪ್ಪಿಗೆಗಳಂ ಕಳೆದರು (ಹಚಕಾ ೫-೨೯) ; ಕಳೆದು ಟೊಪ್ಪಿಗೆಯ ಮೈದಡವಿ ಮೆಲ್ಲನೆ ಕೈದಳದಿಂದ ಬಿಡಲು (ಕುರಾಸಾಂ. ೦೫-೨೯). ೩. ಸೀಸಕ ; ಶಿರಸ್ತ್ರಾಣ : ಕರದಂಬುವಿಲ್ಲು ಕಟಿಯ ಕಠಾರದ ಚಿಲ್ಲು ಸಿರದ ಟೊಪ್ಪಿಗೆ (ಅನಂಚ. ೦೭-೫). **ತೊಪ್ಪಿಗೆ:** ೧. ಪಸುರ ಕುಪ್ಪಸಮುಂ ತೊಪ್ಪಿಗೆಯುಂ ಕೈಗಂಬರಿಯುಂ ಸೊಗಯಿಸೆ ನಗಧರನ ಸಭೆಗೆ ಪರಿತರಲು ಚರಂ (ಮಹಾನೇ. ೧೧-೧೫೩) ; ತೊಪ್ಪಿಗೆಗಿದ್ದ ಬೆಲೆ ತಲೆಗಿಲ್ಲದಾಗ, ಬಾಲವೇ ನಾಯಿಯನ್ನು ಆಡಿಸುತ್ತದೆ (ತಿಂಮಹ. ೭). **ತೋಪಿ:** ೧. ಪಾಪ ಹೋಗಬೇಕೆಂದು ತೋಪಿ ಇಟ್ಟುಕೊಂಡ (ಗಾದೆ).

**ಟೊಪ್ಪಿಗೆ ಹಾರಿಸು**= ೧. ಟೋಪಿಯನ್ನು ತಲೆಯಿಂದ ಕೆಳಗೆ ಬೀಳಿಸು. ೨. (ಆಲಂ) ಅವಮರ್ಯಾದೆ ಮಾಡು ; ಅವಮಾನಗೊಳಿಸು : ಟೊಪ್ಪಿಗೆ ಹಾರಿಸು ಎಂಬುದು ಅವಮಾನಾರ್ಥದಲ್ಲಿದೆ (ಗೋಯಾತ್ರ. ೩೫). **ಟೋಪಿ ಬೀಳು, ಟೊಪ್ಪಿಗೆ ಬೀಳು** = ೧. (ಆಲಂ) ಮೋಸಹೋಗು ; ವಂಚನೆಗೆ ಒಳಗಾಗು : ಹಾಗೂ ಹೀಗೂ ನೀನು ಟೋಪಿಬೀಳುತ್ತೀಯೆ, ಜೋಕೆ (ರೂಢಿ) ; ಟೊಪ್ಪಿಗೆ ಬೀಳು ಅಂದರೆ ಮೋಸಹೋಗು ಎಂದು (ಗೋಯಾತ್ರ. ೩೫) ; ಅದರಿಂದಲೇ ನಾನು ಮತ್ತೆ ಟೊಪ್ಪಿಗೆಬೀಳುತ್ತೇನೆ (ಗಾಳಿಪ. ೧೪೭). ೨. (ಆಲಂ) ಮೋಸವಾಗು ; ವಂಚನೆಯಾಗು : ಅಂತೂ ಅವನಿಗೆ ಟೋಪಿಬಿತ್ತು (ರೂಢಿ). **ಟೋಪಿ ಹಾಕು ಟೊಪ್ಪಿಗೆಹಾಕು**= ೧. (ಆಲಂ) ಮೋಸಮಾಡು ; ವಂಚಿಸು : ಸರಿ ಹಾಗಾದ ಮೇಲೆ ಒಳ್ಳೆ ಮಾತಿನಲ್ಲಿ ಟೋಪಿ ಹಾಕಿದ (ಸಾವಿಸ. ೦೭). 'ಟೊಪ್ಪಿಗೆ ಹಾಕು' ಎಂದರೆ ಠಕ್ಕಿಸು ಎಂದರ್ಥ (ಗೋಯಾತ್ರ. ೩೫). ೨. ಟೋಪಿಯನ್ನು ಧರಿಸು: ತಮ್ಮ ತಲೆಗೇ ಟೊಪ್ಪಿಗೆ ಹಾಕುವವರು ಇತರರನ್ನು ಏಕೆ ಬಿಟ್ಟಾರು ? (ಗಾಳಿಪ. ೧೨೮). ಐರೋಪಿನ ಕೆಲವು ಭಾಷೆಗಳಲ್ಲಿ ಈ ಶಬ್ದ ಕಂಡುಬರುತ್ತದೆ. [ ←ಮರಾ. ಹಿಂ. ಟೋಪೀ./ತಮಿ. ಮಲ. ತೊಪ್ಪಿ; ತುಳು. ಟೊಪ್ಪಿ; ತೆಲು. ತೊಪ್ಪಿ, ತೋಪಿ./ಪ್ರಾ. ಟೋಪಿಆ. ]

ಟೋಪಿಕಾರ(ನಾ). ಟೋಪಿಯನ್ನು ಧರಿಸುವವನು; ಯೂರೋಪೀಯ; ಪಾಶ್ಚಾತ್ಯ : ಬೇರೆ ಟೋಪಿಕಾರ ಜಾತಿಗೆ ಯಾರಿಗೂ ವ್ಯಾಪಾರ ಮಾಡುವುದಕ್ಕೆ ವಹಿಗೆ ಇಲ್ಲ (ರಾಜೇಂದ್ರ. ೩೦). [ ←ಮರಾ. ಟೋಪಕರ್ ]

**ಟೋಪು**₁ 'ತೋಪು₃' ನೋ.

**ಟೋಪು**₂ (ನಾ). (ಸೀರೆಯ ಸೆರಗಿನಲ್ಲಿರುವ) ಸಂಪೂರ್ಣ ರೇಷ್ಮೆಯ ನೇಯ್ಗೆ. 'ಟೋಪುಸೆರಗು' ಪರಾ. [ ←ಮರಾ. ಟೋಪಪದರ್ ]

**ಟೋಪುಸೆರಗು** (ನಾ). ರೇಷ್ಮೆಯ ನೇಯ್ಗೆಯುಳ್ಳ ಸೆರಗು : ಅವಳಿಗೆ ಟೋಪುಸೆರಗಿನ ಶೀರೆ, ರೇಶಿಮೆಯ ಖಣದ ಆಹೇರಿ ಸಂದಾಯವಾಗುತ್ತಿತ್ತು (ದೀಪದ. II, ೯೧). [ ಟೋಪು₂ + ಸೆರಗು₁ (<ಸೆಱಂಗು) ]

**ಟೋಫನ್** 'ಟೋಪನ್ನು' ನೋ.

**ಟೋಫನು** 'ಟೋಪನ್ನು' ನೋ.

**ಟೋಲ್** (ನಾ). ಪಾಠಶಾಲೆ : ಟೋಲ್ – ಬಂಗಾಳದಲ್ಲಿ ಶಾಸ್ತ್ರಗಳ ಅನುಶೀಲನೆ ನಡೆಯುತ್ತ, ಧರ್ಮಶಾಸ್ತ್ರವನ್ನು ಕುರಿತ ಸಂದೇಹಗಳನ್ನು ಇತ್ಯರ್ಥ ಮಾಡುತ್ತಿದ್ದ ವಿದ್ಯಾಲಯಗಳು (ನಿಬಂಧ. I, ೩೦೭ ಅಡಿಟಿ) : ಯೂರೋಪಿನ ಮಧ್ಯಯುಗದಂತೆಯೇ ನಮ್ಮ ದೇಶದಲ್ಲಿಯೂ ಶಾಸ್ತ್ರಾಭ್ಯಾಸವೇ ಮುಖ್ಯವಾದ್ದಾಗಿತ್ತು. ಈ ಶಿಕ್ಷಣದ ವಿಶೇಷ ಅನುಶೀಲನೆ 'ಟೋಲ್'ಗಳಲ್ಲಿಯೂ ಚತುಷ್ಪಾಠಿಗಳಲ್ಲಿಯೂ ನಡೆಯುತ್ತಿತ್ತು (ನಿಬಂಧ. I, ೩೦೭). [ ←ಹಿಂ. ಬಂಗಾಳಿ. ಒರಿಯ. ಟೋಲ್ ]

**ಟೋಲನಾಕೆ** (ನಾ). ಉಕ್ಕಡದ ಠಾಣ್ಯ ; ಸುಂಕದ ಕಟ್ಟೆ : ಲೋಕಲ್ ಫಂಡಿನ ಉತ್ಪನ್ನದಲ್ಲಿ ಇದೂ, ಟೋಲನಾಕೆಯ ಉತ್ಪನ್ನವೂ, ಶಾಲೆಯ ಫೀಯೂ ಬರುತ್ತವೆ (ಕಾರವ. ೬೭). [ <ಟೋಲು + ನಾಕೆ ]

**ಟೋಲು** (ನಾ). ವಾಹನಗಳು ಹಾದುಹೋಗುವಾಗ ಉಕ್ಕಡದಲ್ಲಿ ವಸೂಲ್ಮಾಡುವ ಸುಂಕ,–ತೆರಿಗೆ : "(ಪೇಟೆ, ರಸ್ತೆ, ಮೊ.ಗಳನ್ನು ಉಪಯೋಗಿಸಿಕೊಳ್ಳುವುದಕ್ಕಾಗಿ, ಸಲ್ಲಿಸಿದ ಸೇವೆಗಾಗಿ, ಕೊಡುವ) ಸುಂಕ, ಜಕಾತಿ, ಟೋಲು" (Toll. ಇಂಕನಿ.). [ ←ಇಂ. Toll ]

**ಟೋಲುಗೇಟು** (ನಾ). = ಟೋಲನಾಕೆ: ಆ ಪಟ್ಟಣದ ಟೋಲಗೇಟಿನ ಬಳಿಯಿಂದ ಮೆರವಣಿಗೆ ಹೊರಟಿತು (ರೂಢಿ). [ ←ಇಂ. Toll-gate ]

**ಟೋಳಿ, ಠೋಲಿ** (ನಾ). ೧. ಗುಂಪು ; ಸಂದಣಿ ; ಸಮೂಹ : ಮಧ್ಯರಾತ್ರಿಯ ಸುಮಾರಿಗೆ ಚಾಂಡಾಲಸ್ವರೂಪದ ಕಾಮುಕರ ಟೋಳಿಯೊಂದು ಬಂದು ಮಲಗಿದವರ ಮೇಲೆ ದಾಳಿಮಾಡಿತು (ಹೇಮಂತ. ೨೧೬) ; ಗಂಡು ಹುಡುಗರ ಟೋಳಿಯಲ್ಲಿ ನಿಶ್ಚಿಂತಳಾಗಿ ತಿರುಗಾಡಲು ಅವಳು ಎಂದೂ ಹೆದರಲಿಲ್ಲ (ಫಲಸಂ. ೨೬). ೨. ಸೈನ್ಯದ ಒಂದು ಭಾಗ ; ತುಕಡಿ : ರೋಹಿಲ್‌ನಗರದಿಂದ ಕಳುಹಿಸಿದ ಟೋಳಿಯಲ್ಲಿ ಅಳಿದುಳಿದವರು ಅಷ್ಟೇ ಮಂದಿ (ಯೋಧಪು. ೧೧೩) : ಬಾದಶಹನ ಛಾವಣಿಗೆ ಬರುತ್ತಿದ್ದ ಧಾನ್ಯ ಮುಂತಾದುವುಗಳನ್ನು ಮರಾಟರ ಟೋಳಿಗಳು ನಡುವೆ ಎತ್ತಿಹಾಕಿಬಿಡುತ್ತಿದ್ದವು (ಹಂಸಾ. ೨೫). **ಠೋಲಿ : ೨.** ಈ ಠೋಲಿಯು ಠಂಕಸಾಲೆಯ ಪಶ್ಚಿಮಕ್ಕಿದ್ದ ಮಾರ್ಗವಾಗಿ ಭಾಂಡೇರಿ ಹೆಬ್ಬಾಗಿಲಿನ ಕಡೆಗೆ ಸರಿಯಿತು (ಝಾರಾಣಿ. ४०೭).

[ <ಪ್ರಾ. ಟೋಲ./ಹಿಂ. ಟೋಲೀ ; ಮರಾ. ಟೋಳೀ ]

**ಟೋಳಿಕಟ್ಟು** (ಕ್ರಿ). ಗುಂಪುಕಟ್ಟು; ತಂಡವಾಗು: ಒಂದೊಂದು ಪ್ರಾಂತಕ್ಕೆ ನಾಲ್ಕೈದು ಜನ ಟೋಳಿಕಟ್ಟಿ ಹೋಗುವುದು ರೂಢಿಯಾಗಿತ್ತು (ಕಂಬಹು. ೨೫). [ ಟೋಳಿ + ಕಟ್ಟು₁ ]

**ಟೌಂಕಿಸು** (ಕ್ರಿ). (?) : ಟೋಕಿಸಿ ಟೌಂಕಿಸಿ ಟಂಕಿಪ ಟಕ್ಕರದೇಕೆ ಪುಟ್ಟಿದರೊ ಶ್ರೀಹರಿಯೆ (ಶತಸಾಂ. ೭೫-೮೫). [ ? + – ಇಸು₃ ]

**ಟೌಳಿ**₁ 'ಟವಳಿ' ನೋ.

**ಟೌಳಿ**₂ 'ಟವುಳಿ₂' ನೋ.

**ಟೌಳಿಕಾಟಿ** 'ಟವಳಿಗಾಟಿ' ನೋ.

**ಟೌಳಿಗ, ಠೌಳಿಗ** (ನಾ). ೧. ಮೋಸಗಾರ ; ವಂಚಕ : ತಾಮಸಾನ್ವಿತನು ಟೌಳಿಗನು ಕೌಟಿಲ್ಯನುದ್ದಾಮ ಕೊಲ್ಲಾಪುರದೊಳಿಹನು ಪೈಶಾಚಿಕಾಹ್ವಯ ನೆನಿಪ ಗೋರಕ್ಷನು (ಪ್ರಭುಲಿ. ೮-೦೩೩). **ಠೌಳಿಗ : ೨.** ಐಂದ್ರಜಾಲಿಕ ; ಮಾಯಾವಿ : ಕಾಲನೆಂದೆಂಬ ಠೌಳಿಗನೊಸೆದು ದೇವೇಂದ್ರನೋಲಗದೊಳಾಡುವಲ್ಲಿಟ್ಟ ರನ್ನದ ಚೆಂಡು (ಚಬಸು. ೯-೦೮).

[ ಟೌಳಿ₁ + (<ಟವಳಿ) + – ಇಗ ]

**ಟೌಳಿತನ** (ನಾ). ಕಪಟ ; ವಂಚನೆ ; ಮೋಸ : ಅಲ್ಲಮನ ಟೌಳಿತನಗಳ ತಿಳಿಯದವಳು . . . ಮಾಯೆ ನಿನ್ನನಗಲಿರಬಲ್ಲಳೇಯೆಂದು ಬೋಸರಿಸುತಂ (ಪ್ರಭುಪು. ೫-೯೪). [ ಟೌಳಿ₁ (<ಟವಳಿ) + – ತನ ]

**ಟ್ಯಾಂಕು** (ನಾ). ೧. ನೀರು,ಎಣ್ಣೆ, ಪೆಟ್ರೋಲು ಮೊದಲಾದ ದ್ರವ ವಸ್ತುಗಳನ್ನು ತುಂಬಲು ಉಪಯೋಗಿಸುವ ತೊಟ್ಟಿ : ಟ್ಯಾಂಕಿನಲ್ಲಿ ಪೆಟ್ರೋಲು ಹೌದಿನಲಿ ತಣ್ಣೀರು ತುಂಬಿಕೊಳ್ಳುತ ಬಂದೆಬಿಟ್ಟಿತಲ್ಲ ಅಗ್ನಿಶಾಮಕವಂತು ಮುಟ್ಟಿತಲ್ಲ (ಅರರೋ. ೨೭). ೨. ಯುದ್ಧಕಾಲದಲ್ಲಿ ಉಪಯೋಗಿಸುವ, ಫಿರಂಗಿಯುಳ್ಳ ಒಂದು ಬಗೆಯ ವಾಹನ : ಸಿಪಾಯಿಗಳನ್ನೂ ಫಿರಂಗಿಗಳನ್ನೂ ಒಳಕೊಂಡು ಯುದ್ಧದಲ್ಲಿ ನಡೆಕೋಟೆಯಂತೆ ಉಪಯೋಗಿಸಲಾಗುವ, ಮೋಟಾರುಶಕ್ತಿಯಿಂದ ನಡೆಯುವ, ಒಂದು ಉಕ್ಕಿನ ರಥ: ಫಿರಂಗಿರಥ; ಟ್ಯಾಂಕು (Tank. ಇಂಕನಿ.) ; ಅವರ ಇದಿರಿನಲ್ಲಿಯೇ ನದಿಯನ್ನು ದಾಟಿ, ಟ್ಯಾಂಕನ್ನು ಅವರ ವ್ಯೂಹದೊಳಕ್ಕೆ ನುಗ್ಗಿಸಿದವರಲ್ಲಿ ತಾನೇ ಮೊದಲಿಗ (ಯೋಧಪು. ೨). [ ←ಇಂ. Tank ]

**ಟ್ಯಾಕ್ಸಿ** (ನಾ). ಬಾಡಿಗೆಯ ಮೋಟಾರುಗಾಡಿ ; ಬಾಡಿಗೆ ಕಾರು : ಜಾದವನಿಗೆ ಬಹಳ ಕೆಲಸಗಳಿದ್ದುದರಿಂದ ಒಂದು ಟ್ಯಾಕ್ಸಿಯ ಅಗತ್ಯವಿತ್ತು (ರತ್ನಗೋ. ೬೭). [ ←ಇಂ. Taxi ]

**ಟ್ಯೂಬು** (ನಾ). ಕೊಳವೆ ; ನಾಳ ; ನಳಿಕೆ : ನಲ್ಲಿಯಿಂದ ತೊಟ್ಟಿಗೆ ನೀರನ್ನು ಹಾಯಿಸಲು ರಬ್ಬರಿನ ಟ್ಯೂಬು ಬೇಕು (ರೂಢಿ). 'ಟ್ಯೂಬುಲೈಟು' ಪರಾ. [ ←ಇಂ. Tube ]

**ಟ್ಯೂಬುಲೈಟು** (ನಾ). ಕೊಳವೆಯ ಆಕಾರದಲ್ಲಿರುವ ವಿದ್ಯುದ್ದೀಪ ; ಕೋಲಿನಾಕಾರದ ದೀಪ : ರಾತ್ರಿಯ ಹೊತ್ತು ಗುಡಿಯ ಮೇಲುಗಡೆ ಟ್ಯೂಬುಲೈಟನ್ನು ಹತ್ತಿಸಿದ್ದರು (ಗೋಪುರ. ೩). [ ←ಇಂ. Tubelight ]

**ಟ್ರಂಕು** (ನಾ). "(ಲೋಹ, ಚರ್ಮ, ಬೆತ್ತ, ಮೊ. ಗಳಿಂದ ಮಾಡಿದ ಕೀಲು ಮುಚ್ಚಳವುಳ್ಳ) ಪೆಟ್ಟಿಗೆ, ಸಂದೂಕ" (Trunk. ಇಂಕನಿ.): ಜಟಕಾಗಾಡಿಯವನು ಅವನ ಟ್ರಂಕನ್ನೂ ಹಾಸಿಗೆಯನ್ನೂ ಹೊತ್ತು ತಂದು ಹಾಲಿನಲ್ಲಿಟ್ಟು ಬಾಡಿಗೆಗಾಗಿ ಕೈಯೊಡ್ಡಿದನು (ಮ.ಪಾ.ಗ. ೧) : ಅವಳ ಲಕ್ಷ್ಯ ಅಲ್ಲಿಯೇ ಇದ್ದ ಅತ್ತೆಯ ಟ್ರಂಕಿನ ಕಡೆಗೆ ಹೋಯಿತು (ತೇಮೋಡ. ೨೦). ☞ ಸಾಮಾನ್ಯವಾಗಿ ಕಬ್ಬಿಣದ ತಗಡಿನ ಪೆಟ್ಟಿಗೆಗೆ ಈ ಪದ ಉಪಯೋಗವಾಗುತ್ತದೆ. [ ←ಇಂ. Trunk ]

**ಟ್ರಕ್ಕು** (ನಾ). ಸರಕುಗಳನ್ನು ಸಾಗಿಸಲು ಬಳಸುವ ಮೋಟಾರು ವಾಹನ : ಭಾರವಾದ ಸಾಮಾನನ್ನು ಸಾಗಿಸುವ, ಸಾ. ನಾಲ್ಕು ಅಥವಾ ಆರು ತಗ್ಗುಚಕ್ರದ, ಬೋಳುಬಂಡಿ . . . ಟ್ರಕ್ಕು (Truck. ಇಂಕನಿ.).

[ ←ಇಂ. Truck ]

**ಟ್ರಸ್ಟು** (ನಾ). ೧. "ನಂಬಿಕೆ" (Trust. ಪತ್ರಿನಿ. ೮೫). ೨. ಒಬ್ಬನ ವಶಕ್ಕೆ ಒಪ್ಪಿಸಿದ ವಸ್ತು ಅಥವಾ ವ್ಯಕ್ತಿ ; ಕೈಯೆಡೆ : "ನ್ಯಾಸ, ಟ್ರಸ್ಟು" (Trust. ಪತ್ರಿನಿ. ೮೫). ೩. ಒಂದು ಆಸ್ತಿಯ ಮೇಲ್ವಿಚಾರಣೆಗಾಗಿ ಗೊತ್ತುಮಾಡಿದ ಸದಸ್ಯರ ಮಂಡಳಿ ; ವಿಶ್ವಸ್ತಮಂಡಳಿ : ಆ ದೇವಸ್ಥಾನದ ವ್ಯವಸ್ಥೆಗಾಗಿ ಒಂದು ಟ್ರಸ್ಟು ರಚನೆಯಾಗಿದೆ (ರೂಢಿ).

[ ←ಇಂ. Trust ]

**ಟ್ರಾನ್ಸಿಸ್ಟರು** (ನಾ). ಬೇಕಾದ ಕಡೆಗೆ ಒಯ್ಯಲು ಅನುಕೂಲವಾದ ಒಂದು ಬಗೆಯ ದೂರವಾಣಿ ಸಲಕರಣೆ; ರೇಡಿಯೋ: ಟ್ರಾನ್ಸಿಸ್ಟರನು ತಂದು ತಿರುಗಿಸುತಿರುವರು ಇಂದಿನ ಈ ಯುವಜನರು (ಚಂದ್ರವೀ. ೩೭-೪೭). [ ←ಇಂ. Transister ]

**ಟ್ರಾಮು** (ನಾ). ಪಟ್ಟಣದೊಳಗೆ ಕಂಬಿದಾರಿಯ ಮೇಲೆ ಓಡಾಡುವ ಪ್ರಯಾಣಿಕರ ಗಾಡಿ : ಯಾವ ಟ್ರಾಮನ್ನು ಹತ್ತಬೇಕೆಂಬುದೊಂದು ಕೆಲವು ನಿಮಿಷ ಸಮಸ್ಯೆಯೇ ಆಯಿತು (ಮೂರಾಬ. ೯೩). [←ಇಂ. Tram]

**ಟ್ರೇ** (ನಾ). (ಲೋಹದಿಂದ ಅಥವಾ ಮರದಿಂದ ಮಾಡಿದ) ತಟ್ಟೆ; ಪರಾತ ; ಹರಿವಾಣ : ಇಷ್ಟರಲ್ಲಿ ಅಡಿಗೆಯವ ಚಹದ ಟ್ರೇ ತಂದಿರಿಸಿದ್ದ (ಮೂರಾಬ. ೪೨). [ ←ಇಂ. Tray ]

**ಟ್ರೈನು** (ನಾ). ಹೊಗೆಬಂಡಿ; ಉಗಿಬಂಡಿ; ರೈಲು: ಟ್ರೈನಿನ ಸೌಕರ್ಯ ಅಂಥವರಿಗಾಗಿ ಮಾಡಿದ್ದಲ್ಲ (ಅಳನಿ. ೩) ; ಟ್ರೈನು ಹೊರಡಲು ಇನ್ನೂ ಸಾಕಷ್ಟು ವೇಳೆ ಇದೆ (ರೂಢಿ). [ ←ಇಂ. Train ]

*

# ಠ

**ಠ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತೆರಡನೆಯ ಅಕ್ಷರ ; ಠಕಾರ. ೨. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : "ಖಠಘರವಮದೆರಡಕ್ಕು" (ಮಂಗರಾ. ೦೦೪-೦೦).

**ಠಂ** (ನಾ). ಒಂದು ಅನುಕರಣ ಶಬ್ದ. 'ಠಮ್ಮನೆ' ಪರಾ.

**ಠಂಕ** (ನಾ). ನಾಣ್ಯಮಾಡುವುದು ; ಟಂಕ. 'ಠಂಕಸಾಲೆ' ಪರಾ. [ <ಸಂ. ಟಂಕ ]

**ಠಂಕರಿಸು** (ಕ್ರಿ). ಬಿಲ್ಲಿನ ಹೆದೆಯನ್ನು ಮಿಡಿದು ಧ್ವನಿಮಾಡು ; ಜೇವೊಡೆ : ತುಡುಕಿ ಚಾಪವ ನೆಗಪಿ ಬಾಗಿಸಿ ತೊಡಿಸಿ ನಾರಿಯ ಠಂಕರಿಸಿ ಮುರಿದಿಡಲು ಬಿದ್ದುದಜಾಂಡಘಟ (ಅನಂರಾ. ೧-೨೩-೩೨). [ <ಟಂಕಾರ + – ಇಸು$_3$ ]

**ಠಂಕಸಾಲೆ** (ನಾ). = ಟಂಕಸಾಲೆ ೧ : ಬೆಂದುವರಮನೆ ಶಾಲೆಯಂಗಡಿ ಠಂಕಸಾಲೆಗಳು (ಕಾಶಿರಾ. ೩೨-೯) ; ಸರಕಾರಗಳು ತಮ್ಮದೇ ಠಂಕಸಾಲೆ (Mint) ಇರಿಸತೊಡಗಿದರು (ಬಾಲಪ್ರ. III, ೦೫೫೩). [ ಠಂಕ + ಸಾಲೆ$_3$ ]

**ಠಂಕೃತಿ** (ನಾ). ಬಿಲ್ಲಿನ ಹೆದೆಯ ಶಬ್ದ ; ಠೇಂಕಾರ : ಠಂಕೃತಿಯನುರೆ ಬೀರೆ ಕೇಳುತ್ತೆ ಬಿಲ್ಲಿನೊಳ್ಮಾರ್ಗಣವ ಪೂಡಿದನವಂ (ದುರಪು. ೧೧-೨೬). [ <ಸಂ. ಟಂಕೃತಿ ]

**ಠಂಕೆ** 'ಟಂಕೆ$_1$' ನೋ.

**ಠಕ** 'ಟಕ್ಕ' ನೋ.

**ಠಕಾಯಿಸು** 'ಟಕಾಯಿಸು' ನೋ.

**ಠಕಾರ$_1$** (ನಾ). ಠ ಎಂಬ ಅಕ್ಷರ : ಕೃತಿಮಾರ್ಗದೊಳುಂಟು ಟಕಾರ ಠಕಾರ ಠಕಾರ ರೇಫದೆಡೆಗಂ . . . ಜುಟದಾದೇಶಂ (ಶಮದ. ೨೦). [ ಸಂ. ]

**ಠಕಾರ$_2$** (ನಾ). ಮೋಸ ; ವಂಚನೆ. 'ಠಕಾರಿ' ಪರಾ. [ ←ಮರಾ. ಠಕಾರ್ = ಕಪಟಿ, ಠಕ್ಕ ]

**ಠಕಾರ$_3$** (ನಾ). (?) : ನಲಿನಲಿದು ಪುರವೀಧಿವೀಧಿಗಳೊಳಗೆ ಜತಿಗಳ ತಾಳಗತಿಗಳಿಗೆಳಸಿ ಕುಣಿದಾಡುತ ಠ[ಪಾಠಾಂ. ಠಾ]ಕಾರದ ಮೇಲೆ ನಿಲುವುತ್ತ ಭಲರೆ ಭಲರೇಯೆನುತ (ಬಸಪು. ೫೩-೪೨). [ ? ]

**ಠಕಾರಿ** (ನಾ). ೧. ಮೋಸವುಳ್ಳುದು ; ಕೃತ್ರಿಮವಂತೆಯುಳ್ಳುದು : ಈಗ ಬರುವ ಮದ್ದುಗಳಲ್ಲಿ ಠಕಾರಿ ಎಷ್ಟು, ನಿಜ ಎಷ್ಟು ಎಂದು ಹೇಳುವುದು ಕಷ್ಟ (ಜಾರುದಾ. ೨೦೯). (ಗುಂ). ೨. ಮೋಸದ; ವಂಚನೆಯ; ಕಪಟದ: ಎಲ್ಲಾ ಠಕಾರಿ ರಿಪೋರ್ಟು ಎಂತ ಸುದ್ದಿ (ದೇಶಭು. ೩೮). 'ಠಕಾರಿಮಾಲು' ಪರಾ. [ ಠಕಾರ$_2$ + – ಇ$_3$ ]

**ಠಕಾರಿಕೆ** (ನಾ). ಮೋಸ ; ಠಕ್ಕು ; ವಂಚನೆ : ಅದೆಲ್ಲಾ ಬರೀ ಠಕಾರಿಕೆ ಮಾತು ರಾಮಣ್ಣಾ (ಚಂದಕೋ. ೦೫). [ ಠಕಾರ$_2$ + – ಇಕೆ ]

**ಠಕಾರಿಮಾಲು** (ನಾ). ಮೋಸದ ವಸ್ತು ; ಕಳ್ಳಮಾಲು : ಅವನ ಅಂಗಡಿಯಲ್ಲಿರುವುದೆಲ್ಲ ಠಕಾರಿಮಾಲು (ರೂಢಿ). [ ಠಕಾರಿ + ಮಾಲು$_4$ ]

**ಠಕ್ಕ** 'ಟಕ್ಕ' ನೋ.

**ಠಕ್ಕತನ** (ನಾ). ಮೋಸಗಾರಿಕೆ ; ವಂಚಕತನ : ನಾನು ಆಮೇಲೆ ಕಂಡುಕೊಂಡಂತೆ ಅವನಲ್ಲಿ ಸಾಕಷ್ಟು ಠಕ್ಕತನ ಸೇರಿಕೊಂಡಿತ್ತು (ಬೆಂಜನ್. ೪೫). [ ಠಕ್ಕ (<ಟಕ್ಕ) + – ತನ ]

**ಠಕ್ಕವಿದ್ಯೆ** (ನಾ) ವಂಚನೆಯ ವಿದ್ಯೆ ; ಮೋಸಗಾರಿಕೆಯ ಕಲೆ : ಠಕ್ಕವಿದ್ಯೆಯೊಳ್ತೊಡರದು ಕೂಡೆ ಪುಂಜಿಸಿದ ವಾಙ್ಮಯರತ್ನಚಯಂ ಜಿನೇಶನಾ (ಸಮುಪ. ೨-೨೦). [ ಠಕ್ಕ (<ಟಕ್ಕ) + ವಿದ್ಯೆ ]

**ಠಕ್ಕಿಕ್ಕು** (ಕ್ರಿ). ೧. ಮರುಳುಗೊಳಿಸು ; ಮೋಹಗೊಳಿಸು : ಮಾಯಮನೆ ಬೀಸಿ ಪೆಱರನುಪಾಯದೆ ಠಕ್ಕಿಕ್ಕಿ . . . ಸುಖಿಯಪ ಸವಣರುಪಾಯಮನಿಂನಿನ್ನೊಳಣ್ಣ ಭಾವಿಸಿ ನೋಡಾ (ಧರ್ಮಾಮೃ. ೧-೧೦೨) ; ಠಕ್ಕಿಕ್ಕದೇ ಇವರ ನುಡಿ ಸತ್ಯದಂದದಿಂ (ತಿರುರ. ದೇ. ೨೩-೦). ೨. ಮರುಳುಗೊಳಿಸುವ ಮದ್ದನ್ನು ಹಾಕು: ಓರ್ವಂ ದೇವಠಕ್ಕಿಕ್ಕಿ ಸಾಧನಸಂಮೋಹನದಿಂದಮೆನ್ನ ಮಗಳಂ ಬಲ್ಲಾಳ್ತನಂಗೈದು . . . ಕೈಕೊಂಡು ನಿಂದಂ (ಸುಕುಮಾ. ೭-೪೨) ; ಮನದ ಬಲ್ಮೆಯ ಕಳಲೆಂದು ಠಕ್ಕಿಕ್ಕಿದನೆನೆ ಮೂರ್ಛೆಯಾದುದಾ ಸತಿಗೆ (ಶ್ರೀಪಾಲ. ೭-೧೨೦). [ ಠಕ್ಕು(<ಟಕ್ಕು$_1$) + ಇಕ್ಕು ]

**ಠಕ್ಕಿತಿ** (ನಾ). = ಠಕ್ಕುಕಾತಿ : ಠಕ್ಕಿತಿ[ತಿ]ಯರಧಮೆಯರು ಕತ್ತಿಗೆ ಮಿಕ್ಕಗೋಟುಗಳಣಕಿಗಳು ಶಠದಿಕ್ಕೆಯರು ಭಂಡಿತಿಯರು (ಬಸಪು. ೪೦-೫೨). [ ಠಕ್ಕು (<ಟಕ್ಕು$_1$) + – ಇತಿ$_1$ (<– ಇತ್ತಿ) ]

**ಠಕ್ಕಿಸು** 'ಟಕ್ಕಿಸು' ನೋ.

**ಠಕ್ಕು** 'ಟಕ್ಕು' ನೋ.

**ಠಕ್ಕುಕಾತಿ** (ನಾ). ಮೋಸ ಮಾಡುವವಳು : ಠಕ್ಕುಕಾತಿಯೆ ನಿನ್ನ ಮನೆಗೆಂದೆಯ್ದಿಸೆ ನಿನ್ನಕ್ಕನ ಹೆಸರ ಹೇಳಿದೆಯ (ಭರಚ. ೯-೨೩). [ ಠಕ್ಕು (<ಟಕ್ಕು$_1$) + – ಕಾತಿ$_5$ ]

**ಠಕ್ಕುಗಾರ** 'ಠಕ್ಕುಗಾಱ' ನೋ.

**ಠಕ್ಕುಗಾರ್ತಿ** (ನಾ). = ಠಕ್ಕುಕಾತಿ : ಮತ್ತಮೊರ್ವನಿದಿರೊಳ್ಪೆತರ್ಪ ಠಕ್ಕುಗಾರ್ತಿಯಂ ಕರಸಂಜ್ಞೆಯಿಂ ಕೆಳೆಯಂಗೆ ತೋಱೆ (ರಾಜಶೇ. ೧೧-೧೫೪ ವ). [ ಠಕ್ಕುಗಾಱ + – ತಿ$_1$ (< – ಇತ್ತಿ) ]

**ತಕ್ಕುಗಾಱ, ತಕ್ಕುಗಾರ** (ನಾ). ಮೋಸಗಾರ ; ಕಪಟಿ ; ವಂಚಕ. 'ತಕ್ಕುಗಾರ್ತಿ' ಪರಾ. **ತಕ್ಕುಗಾರ:** ಆ ತಕ್ಕುಗಾರನೇ ಆನೆಗೊಂದಿಗೆ ಉಪಾಯವಾಗಿ ಬೆಂಕಿ ಹೊತ್ತಿಸಿ ಪ್ರಹರೇಶ್ವರನನ್ನು ತಪ್ಪಿಸಿ ಕರೆದುಕೊಂಡು ಹೋಗಿರುವನು (ರಾವಿಜ. ೩೦). [ ತಕ್ಕು (<ಟಕ್ಕು₁) + – ಕಾಱ ]

**ತಕ್ಕುಗೊಳ್** (ಕ್ರಿ). ೧. ವಂಚನೆಗೆ ಒಳಗಾಗು ; ಮೋಸಹೋಗು. 'ತಕ್ಕುಗೊಳಿಸು' ಪರಾ. ೨. ಮರುಳಾಗು ; ಮೋಹಗೊಳ್ಳು : ಮಾರಿದತ್ತಂ ಲಲಿತಾಕಾರರ ಧೀರರ ಬಂದ ಕುಮಾರರ ರೂಪಿಂಗೆ ತಕ್ಕುಗೊಂಡಂತಿರ್ದಂ (ಯಶೋಚ. ೧–೫೮). [ ತಕ್ಕು (<ಟಕ್ಕು₁) + ಕೊಳ್₁ ]

**ತಕ್ಕುಗೊಳಿಸು** (ಕ್ರಿ). ಮೋಸಗೊಳಿಸು ; ವಂಚಿಸು : ನಾನು ಹಲವು ವೇಷಗಳಿಂದ ಶತ್ರುಗಳನ್ನು ತಕ್ಕುಗೊಳಿಸಿ ಕಾರ್ಯಗಳನ್ನು ನಿರ್ವಹಿಸುತ್ತಿದ್ದರೂ . . . ನನ್ನ ಪ್ರಯತ್ನಗಳೆಲ್ಲಾ ವ್ಯರ್ಥವಾಗುತ್ತಿವೆ (ರಾವಿಜ. ೧೩). [ ತಕ್ಕುಗೊಳ್ + – ಇಸು₃ ]

**ತಕ್ಕುತವಣೆ** 'ಟಕ್ಕುಟವಳಿ' ನೋ.

**ತಕ್ಕುತವಳಿ** 'ಟಕ್ಕುಟವಳಿ' ನೋ.

**ತಕ್ಕುತವುಳಿ** 'ಟಕ್ಕುಟವಳಿ' ನೋ.

**ತಕ್ಕುತನ** 'ಟಕ್ಕುತನ' ನೋ.

**ತಕ್ಕುಮತ** (ನಾ). ಮೋಸದ ಮತ ; ಜನರನ್ನು ವಂಚಿಸುವ ಮತ : ಕುಲಹೀನಂಗೊಂದು ತೆಱಂ ಕುಲಜಂಗೊಂದು ತೆಱನಕ್ಕುಮಾಚಾರ ಮೆನುತ್ತೊಲವರಮಂ ಪೇೞ್ವುದು ನಿರ್ಮಳಧರ್ಮಮದಲ್ತು ತಕ್ಕು [ಪಾಠಾಂ. ಕ್ಕ]ಮತಂ (ಸಮಪ. ೩–೮). [ ತಕ್ಕು(<ಟಕ್ಕು₁) + ಮತ ]

**ತಕ್ಕುವೀೞ್** (ಕ್ರಿ). ಮರುಳಾಗು ; ಮಾಯೆಗೆ ಒಳಗಾಗು : ಪಾಡಳಾನಂದದಿನಾಡಲೊಡಲೊಡನಾಡಿಗಳೊಳ್ ನುಡಿಯಲ್ಕಮೊಲ್ಲಳಾ ಸೌಂದರಿ ತಕ್ಕುವಿಟ್ಟ ತೆಱನಿರ್ದಪಳ್ (ಚಂದ್ರಪ್ರ. ೫–೧೨೩). [ ತಕ್ಕು (<ಟಕ್ಕು₁) + ಬೀೞ್₁ ]

**ತಕ್ಕುಳಿ** (ನಾ). ಮೋಸಗಾರ; ವಂಚಕ: ನೀನು ಮೈಗಳ್ಳನು; ತಕ್ಕುಳಿಯು (ಬಾಲಪ್ರ. II, ೮೬೦). [ ತಕ್ಕು (<ಟಕ್ಕು₁) + – ಉಳಿ₂ ]

**ತಕ್ಕೆಯ** 'ಟಕ್ಕೆಯ' ನೋ.

**ತಣ್** (ನಾ). ಒಂದು ಅನುಕರಣ ಶಬ್ದ ; ಗಂಟೆ ಮೊದಲಾದುವುಗಳ ಶಬ್ದ.

**ತಣ್‌ತಣ್** (ದ್ವಿರುಕ್ತಿ) : ಗಂಟೆಯು ತಣ್‌ತಣ್ ಶಬ್ದ ಕೇಳಿಸುತ್ತಿದೆ (ರೂಢಿ).

**ತಣಂಕರಿಸು** 'ತಣಕರಿಸು' ನೋ.

**ತಣಕರಿಸು, ತಣಂಕರಿಸು** (ಕ್ರಿ). ತಣ್‌ತಣ್ ಎಂದು ಶಬ್ದಮಾಡು : ಶಾಕ್ವರನಾಥಂ ತಣಕರಿಸಲ್ಕೆಲಿದಡರ್ವ ಶ್ರೀಕಂಠ ಸಲಹು ಸತತಂ (ಉದ್ಭಟ. ೩–೧). **ತಣಂಕರಿಸು:** ತಣಂಕರಿಸುತ್ತ ಬಂದುದೀಶನ ವೃಷಭೇಂದ್ರದಂತೆ ಮಲೆಯುತ್ತ ಮಹಾಬಳನೊಂದು ಶಾಕ್ವರಂ (ಕವಿಜ. I, ೪೬೬ ಪುಣ್ಯಾಸ್ರವ). [ ತಣಕರಣ₀ + – ಇಸು₃ ]

**ತಣತ್ಕಾರ** (ನಾ). ತಣ್‌ತಣ್ ಎಂಬ ಶಬ್ದ; ಗಂಟೆಯ ಶಬ್ದ : ಕಿವಿ ಶಬ್ದಂಗಿಡೆ ಘಂಟಿಕಾಘನತಣತ್ಕಾರಂಗಳಿಂದೆ (ಚಂದ್ರಪ್ರ. ೬–೧೪). [ ಸಂ. ]

**ತಪ್ಪ** (ನಾ). ಒಂದು ಬಗೆಯ ಹಾಡು: ಠುಮ್ರಿ, ತಪ್ಪ . . . ಮುಂತಾದ ಪ್ರೇಮಗೀತೆಗಳನ್ನು ಹಾಡಿ, ಅವಕ್ಕೆ ಅನುಗುಣವಾಗಿ ಅಭಿನಯ ಪ್ರದರ್ಶನ ಕೊಡುತ್ತಾನೆ (ಅಭಾನ್ನ. ೯೦). [ ←ಹಿಂ. ಮರಾ. ಟಪ್ಪಾ ]

**ತಪ್ಪರ** (ನಾ). ಒಂದು ಮನೆತನದ ಹೆಸರು (?) : ಸಮಸ್ತ ವಸ್ತುನಾಯಕಶಿಖಾ[ಮ]ಣಿಗಂಭೀರಮೇರುಗಂಡಭೈರವಂ ತಪ್ಪರದ ಬಮ್ಮೆಯ ನಾಯಕಂ ದೇಶಕಾರ್ಯಮಂ [ಬೆ]ಸಂಗೆಯ್ಯೆ (ಸೌಇಇ. XX, ೧೬೮–೩೯ ; 1192). [ ? ]

**ತಮ** (ನಾ). ಒಂದು ಅನುಕರಣ ಪದ.

**ತಮತಮ** (ದ್ವಿರುಕ್ತಿ) : ತಮತಮಯೆಂದು ವಾದ್ಯವ ಕುಟ್ಟಲ್ (ಭರತೇ. ೪೯–೧೦೬).

**ತಮಳ** 'ಟಮಾಳ' ನೋ.

**ತಮಾಳ** 'ಟಮಾಳ' ನೋ.

**ತಮಾಳತನ, ತವಾಳತನ** (ನಾ). ಮೋಸಗಾರಿಕೆ ; ವಂಚನೆ : ತೊಂಡನಿಕ್ಕಿ ತಮಾಳ[ಪಾಠಾಂ. ತವಾಳ]ತನದಲಿ ಬಂದು ಗೆಡವುತ ಮಲುಹಣಿಯ ತಾಯ್ಮೊಂಡನಂ ಹೊಱವಡಿಸುತಂ ತನ್ನಾತ್ಮಜೆಯನೊರ್ಬ ಮಂಡಳೇಶನ ಪೊರೆಗೆ ಕಳುಹಲು (ಬಸವು. ೪೨–೧೯). **ತವಾಳತನ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತಮಾಳ (<ಟಮಾಳ) + – ತನ ]

**ತಮಾಳಿಸು** 'ಟವಾಳಿಸು' ನೋ.

**ತಮ್ಮನೆ** (ಅ). ಕೂಡಲೆ ; ಸರ್ರನೆ : ಮುದ್ದು ಕೊಟ್ಟರೆ ತಮ್ಮನೆ ನಿಂತು ಹೋಗುತ್ತದೆ (ಜಾರುದಾ. ೧೬೫).

**ತಂತಮ್ಮನೆ** (ದ್ವಿರುಕ್ತಿ) : ಒಂಟೆ ಮೇಲ್ಮೊಳಗಿತು ನಗಾರಿಗಳ್ ವಾದ್ಯಗಳ್ ತಂತಮ್ಮನೆ (ತುರಂಗ. ೮೧–೨೭). [ ತಂ + – ಅನೆ₁ ]

**ತರಾಯಿಸು** (ಕ್ರಿ). ನಿಶ್ಚಯಿಸು; ತೀರ್ಮಾನಿಸು: ನಾಲ್ಕುದಿನ ಹೋಗಿಬರಲಿ ಎಂದು ತಿಮ್ಮಪ್ಪಯ್ಯ ತರಾಯಿಸಿದರು (ಸರಸ. ೯೩) ; ನನ್ನ ಅಣ್ಣನ ಮೇಲೆ ಸುಳ್ಳು ಮೊಕದ್ದಮೆಯನ್ನು ತರಾಯಿಸಿ ಜೈಲಿಗೆ ಅಟ್ಟಿದ (ವಿಧಿವೈ. ೦೬೬). [ <ತರಾವು + – ಇಸು₃ ]

**ತರಾವು** (ನಾ). ತೀರ್ಪು ; ತೀರ್ಮಾನ ; ಗೊತ್ತುವಳಿ ; ನಿರ್ಣಯ : ಆ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಹಲವಾರು ದೇಶದೇಶಿಗೆಗೆ ಸಾಧಕವಾದ ತರಾವುಗಳು ಪಾಸಾಗಿದ್ದುವು (ಕುರುಕಾ. ೦೫೦) ; ಪ್ರತಿಬಾರಿಯೂ ಪ್ರಸಂಗ ಸಾಹಿತ್ಯವನ್ನು ಅಚ್ಚುಹಾಕಿಸಬೇಕೆಂಬ ತರಾವುಗಳೂ ಆಗಿವೆ (ಯಕ್ಷಬ. ೦೫೦).

**ತರಾವುಮಾಡು** = ನಿರ್ಣಯಮಾಡು ; ನಿಶ್ಚಯಿಸು : ವೀರಶೈವ ಸಮಾಜದ ಸುಧಾರಣೆಯ ಬಗ್ಗೆ ಉತ್ತಮವಾದ ವಿಷಯಗಳನ್ನು ತರಾವು ಮಾಡಿದರು (ಗುರುದ. ೭). [ ←ಮರಾ. ತರಾವ್ ; ಹಿಂ. ತಹರಾವ್ ]

**ತರ್ರ್** (ನಾ). ಒಂದು ಅನುಕರಣ ಶಬ್ದ : ಕೋಪದಿಂ ಬಾಲಕನ ತರ್ರೆನುತ ನಿಲ್ಲು ನಿಲ್ಲೆಂದೆನುತ್ತಡಹಾಯ್ದು ನಿಂದನು (ತುರಂಗ. ೫೦–೩೦).

**ತಲಾಯಿಸು** 'ಟಲಾಯಿಸು' ನೋ.

**ತವಣೆಗಾಣ್** (ಕ್ರಿ). ಕೂಡಿಸು ; ಒಟ್ಟುಗೂಡಿಸು : ಮುಪ್ಪಾಗಕೆ ಕಾಣಿ ಗಿದ್ದ ಗಾಣೆಯು ಮೇರೆಗೆಯೆಷ್ಟುಬೇಕಾದರೂ ನೋಡಿಕೊಂಬುದು ಕಡೆಯಲಿ ನಿಂತ ವಿಷಮವನ್ನು ಮೂಲದಿಂದ ತವಣೆಗಂಡು ಮೂಲದಿಂದ ಗುಣಿಸುವದು (ಭಾಸ್ಕರ. ೭೯–೭). [ <ತವಣೆ₂ + ಕಾಣ್ ]

**ತವಣಿಸು** (ಕ್ರಿ). ೧. ಕೂಡಿಸು; ಸೇರಿಸು ; ಒಟ್ಟುಮಾಡು; ಶೇಖರಿಸು: ಕವಿಮಾರ್ಗದೊಳೊಪ್ಪುವಿಪ ತವಣಿಪ ಕಮ್ಮೈಸುವೆಡೆಯೊಳೊಪ್ಪುವಿಸಲುಂ ತವಣಿಸಲುಂ ಕಮ್ಮೈಸಲುಮಿವನಂತಾರ್ ಬಲ್ಲರೆನಿಸಿದಂ ಕವಿರತ್ನಂ (ಅಜಿಪು. ೧–೮೨). ೨. [ಗಣಿತ] ಅನೇಕ ಸಂಖ್ಯೆಗಳ ಮೊತ್ತವನ್ನು ಕಂಡುಹಿಡಿ; ಅನೇಕ ಸಂಖ್ಯೆಗಳನ್ನು ಪರಿವಿಡಿಯಿಂದ ಬರೆದು ಕೂಡಿಸು : ಅರ್ಧಲೆಕ್ಕ ಪ್ರಮಾಣವಾಗಿ ರಾಶಿಯನ್ನು ಪೊಂದರಕೆಟಿಗೆ ಪೊಂದನಿಟ್ಟು ಸೋಪಾನಕ್ರಮದಿಂದ ತವಣಿಸಿ ಕೂಡುವುದು – ೨೪, ೧೨, ೮, ೬, ಯಿವನ್ನು ತವಣಿಸಲು ೫೦ (ವ್ಯವಹಾ. ತೂಬಿನ ಸೂತ್ರ) ; ತವಣಿಸುಪೋಜಿ ಲೆಕ್ಕಿಪ ಬೆಡಂಗವಧಾನಿಸುವುನ್ನತಿಕ್ಕೆ . . . ಮೆಱೆಯ ವೇಟ್ಟುದು ಶ್ರೀಕರಣಕ್ಕಧೀಶ್ವರಂ (ಸೂಕ್ತಿಸು. ೦೬–೩೮). [ ತವಣೆ₂ (<ಅಟ್ಟವಣೆ) + – ಇಸು₃ ]

**ತವಣೆ₁** 'ಟವಳಿ' ನೋ.

**ತವಣೆ₂** 'ಅಟ್ಟವಣೆ' ನೋ.

**ಠವಣೆ₃** (ನಾ). ೧. ಗತಿ ; ಸ್ಥಿತಿ : ಈ ಬಡವನಲಿ ಬಲುವೊಱೆಯ ಭಾವಿಸುವುದಾಧಾರ್ಬಲವುಂಟೋವೂ ಮಱೆದೆನಱಿಯದೆ ಠಾವುಠವಣೆಯ ಗುರುಲಘುತ್ವವನೆಂದನವನೀಶ (ನಿ ಭಾ ಗ. ೫-೨-೧೫). ೨. [ಸಂಗೀತ] ನಾಲ್ಕು ಬಗೆಯ ಮದ್ದಳೆಯ ವಾದನಕ್ರಮಗಳಲ್ಲೊಂದು : ಬಳಿಕ ಶುದ್ಧ ಸಾಳಗ ಸಂಕೀರ್ಣ ಠವಣೆಗಳೆಂಬ ಚತುರ್ವಿಧ ಮೃದಂಗಮಂ ಮೇಳೈಸಿ (ವಿವೇಕ. ೨೩೭). ೩. ಒಂದು ಬಗೆಯ ವೀಣಾವಾದನ ಕ್ರಮ: ಅಂತು ಸುಘೋಷೆಯೆಂಬ ವೀಣೆಯಂ ಕೊಂಡು ಕಳಿಯ ನಳವಡಿಸಿ ತಂತ್ರಿಯಂ ಸುತಂತ್ರಂಮಾಡಿ ಠವಣೆ ಎಂಬ ಪವಣಱಿದು ಪೊಯ್ದುಂ (ಮಹಾನೇ. ೫-೧೪೮). [ < ಸಂ. ಸ್ಥಾಪನ ]

**ಠವಣೆಕೋಲ್** 'ಅಟ್ಟವಣೆಕೋಲ್' ನೋ.

**ಠವಣೆಗೆಯ್** (ಕ್ರಿ). ಹೊಂದಿಸು; ಕೂಡಿಸು; ಗುರಿಯಿಡು: ಠವರನೆನಿಪ ದಶಕಂಠಾಸುರನ ಕಂಠರವ ದಿಕ್ತತಿಯ ಕಂಠಣಿಸೆ ಠವಣೆಗೆಯ್ದವನ ಕಂಠವ ಲುಂಟಿಸಿದ ಕಂಠೀರವಮೂರ್ತಿಗಾನೆಱಗುವೆನು (ಶತಸಾಂ. ೭೦-೫೪).
[ ಠವಣೆ₃ + ಕೆಯ್₁ ]

**ಠವಣೆಯಿಕ್ಕು** (ಕ್ರಿ). [ಗಣಿತ] (ಅನೇಕ ಸಂಖ್ಯೆಗಳನ್ನು) ಒಟ್ಟುಗೂಡಿಸು; ಮೊತ್ತವನ್ನು ಕಂಡುಹಿಡಿ : ಇಮ್ಮಡಿಸಿ ಠವಣೆಯಿಕ್ಕಲು ಘಮ್ಮನೆ ತಾಂ . . . ಇಮ್ಮಡಿ ಠವಣೆಯಿಕ್ಕಿದ ವಿವರ:– ೧, ೨, ೪, ೮, ೧೬, ೩೨, ೬೪,೧೨೮ – ಈ ಮರ್ಯಾದೆಯಲ್ಲಿ ತನ್ನ ಮನಸಿಗೆ ಬಂದಷ್ಟು ಲೆಖ್ಖವಂ ಬರೆದೆ (ವ್ಯವಹಾ. ಹೇಱ್‌ನ ಲೆಕ್ಕ). [ ಠವಣೆ₂ (<ಅಟ್ಟವಣೆ) + ಇಕ್ಕು ]

**ಠವರ** (ನಾ). ನೆಲೆಯಿರುವವನು ; ಬಲವುಳ್ಳವನು (?) : ಠವರನೆನಿಪ ದಶಕಂಠಾಸುರನ . . . ಕಂಠವ ಲುಂಟಿಸಿದ ಕಂಠೀರವಮೂರ್ತಿ ಗಾನೆಱಗುವೆನು (ಶತಸಾಂ. ೭೦-೫೪); "ದುಷ್ಟ; ನೀಚ" (ಶತಸಾಂ. ಕೋಶ); ಠಿಕಾಣೆ ಇದ್ದವನು ಠವರನು (ರೂಢಿ). [ <ಪ್ರಾ. ಠಾವರ./ಸಂ. ಸ್ಥಾವರ ]

**ಠವಳ** 'ಟವಮಾಳ' ನೋ.

**ಠವಳಿ** 'ಟವಳಿ' ನೋ.

**ಠವಾಳ** 'ಟವಮಾಳ' ನೋ.

**ಠವಾಳತನ** 'ಠವಮಾಳತನ' ನೋ.

**ಠವಾಳಿಸು** 'ಟವಾಳಿಸು' ನೋ.

**ಠವುಳಿ₁** 'ಟವಳಿ' ನೋ.

**ಠವುಳಿ₂** 'ಟವುಳಿ₂' ನೋ.

**ಠವುಳಿಕಾಱ** 'ಟವಳಿಗಾಱ' ನೋ.

**ಠಸಿಕೆ** (ನಾ). ಉಬ್ಬಸ ; ಕಾಸ : ಶೀನಪ್ಪನಿಗೆ ಆಯಾಸವಾಯಿತು. ಕೆಮ್ಮಿನ ಠಸಿಕೆಯೂ ಬಂದಿತು (ಊಪಸೊ. ೧೦೭). [ ←ಮರಾ. ಠಸಕಣೇ ]

**ಠಸೆ** 'ಠಸ್ಸೆ' ನೋ.

**ಠಸ್ಸೆ, ಟಸ್ಸೆ, ಠಸೆ** (ನಾ). ೧. (ಕಾಗದ, ಲೋಹ ಮೊದಲಾದುವುಗಳ ಮೇಲೆ ಒತ್ತುವ) ಮುದ್ರೆ; ಗುರುತು: ಸರಕಿನ ಖಾತರಿ ಬಗ್ಗೆ ಒತ್ತುವ ಗುರುತು, ಹಚ್ಚುವ ಚೀಟಿ : ಮುದ್ರೆ, ಠಸ್ಸೆ, ಛಾಪೆ (Stamp. ಇಂಕನಿ.); ಅಚ್ಚಾಗಬೇಕಾದ ಫಾರಂನ ಭಾಗಗಳು ಮೇಣದ ಮೇಲೆ ಠಸ್ಸೆಯಂತೆ ಬೀಳುವುವು(ಮುದ್ರಕ. ೫೯).**ಟಸ್ಸೆ:** ೧.ಈ ಅಂಚೆಕಾಗದದ ಮೇಲೆ ಬಿದ್ದಿರುವ ಟಸ್ಸೆಯಲ್ಲಿ ತಾರೀಖು ಸರಿಯಾಗಿ ಕಾಣಿಸುವುದಿಲ್ಲ (ರೂಢಿ). **ಠಸೆ: ೨.** ದಸ್ತೈವಜು ಮೊದಲಾದುವನ್ನು ಬರೆಯಲು ಗೊತ್ತಾದ, ಒಂದು ಬೆಲೆಯ ಮುಂದ್ರೆಯನ್ನೊತ್ತಿರುವ ಮತ್ತು ಸರ್ಕಾರವೇ ಸಿದ್ಧಪಡಿಸಿದ ಪತ್ರ; ಸ್ಟಾಂಪುಪೇಪರು: ಶಂಕರನಾರಾಯಣ ಅಡಿಗರಿಗೆ ಬರಕೊಟ್ಟ ಠಸೆ ಗೋಣಿಚೀಟಿಗೂ . . . ಸಾಕ್ಷಿ (ಪಾರ್ತಿಸು. ೪) ; ರಾಜಶಾಸನ ಹೊರಡಿಸಿ ಈ ಹೊಸ ಸುಧಾರಣೆಯ ಜ್ಞಾಪಕಕ್ಕಾಗಿ ಠಸೆಯ ತೆರಿಗೆಯೊಂದನ್ನು ರದ್ದು ಮಾಡಿದನು (ಕ್ಷಾತ್ರತೇ. ೭೯).

**ಠಸ್ಸೆ ಹಾಕು** = ಮುದ್ರೆಯೊತ್ತು : ಮುದ್ರೆಯೊತ್ತು, ಠಸ್ಸೆ ಹಾಕು, ಅಚ್ಚೊತ್ತು, ಛಾಪಿಸು; (ಲಕೋಟೆಗೆ, ದಸ್ತೈವಜಿಗೆ)ಅಂಚೆಚೀಟಿ, ತಲೆಚೀಟಿ ಸ್ಟಾಂಪು – ಹಚ್ಚು ಅಂಟಿಸು (Stamp. ಇಂಕನಿ.).
[ ←ಹಿಂ. ಠಸ್ಸಾ ; ಮರಾ. ಠಸಾ ]

**ಠಳಠಳತ್ಕಾರ** (ನಾ). ಒಂದು ಅನುಕರಣ ಶಬ್ದ : ಹಿಳಿದುರಿವ ಹೆಬ್ಬಿದಿರ ಗಂಟಿನ ಠಳಠಳತ್ಕಾರದಿ ದಿಶಾಮಂಡಳದ ಮೂಲೆಗಳೊಡೆದುದದ್ಭುತ ವಾಯ್ತು ವನದಹನ (ಕುವ್ಯಾಆ. ೨೦-೫೭).

**ಠಳಾಯಿಸು** 'ಟಲಾಯಿಸು' ನೋ.

**ಠಾಉ** 'ತಾವು₂' ನೋ.

**ಠಾಕ್‌ಠೀಕ್** 'ಠಾಕಂಠೀಕು' ನೋ.

**ಠಾಕಣ** 'ಟಾಕಣ' ನೋ.

**ಠಾಕು** (ನಾ). ಬೆಡಗು; ಒಯ್ಯಾರ : ಈ ದಿನ ಬೆಳಗಿನಿಂದ ಈ ಬನಾರಸಿ ಸೀರೆಯ ಠಾಕು ಏಕೆ ಹೇಳು ನೋಡೋಣ ? (ಶ್ರೀಕಾಂತ. ೧೭೫).
[ ←ಮರಾ. ಠಾಕಣೇ ]

**ಠಾಕುಟೀಕು** 'ಠಾಕುಠೀಕು' ನೋ.

**ಠಾಕುಠೀಕು, ಠಾಕ್‌ಠೀಕ್, ಠಾಕಂಟೀಕು** (ನಾ). ೧. ವ್ಯವಸ್ಥೆ. ೨. ಆಡಂಬರ; ಡೌಲು: ಒಳಗೊಂದು, ಏನೋ ಶೂನ್ಯ . . . ಹೊರಗೊಂದು ಅಂದರಿನ್ನೊಂದು, ಠಾಕುಠೀಕಿನ ಠೀವಿ (ಅರಳು. ೩೪೭-೨) : ಆತನ ಠಾಕು ಠೀಕಿನ ಉಡುಗೆ . . . ಚಪ್ಪ ಯಾರ ಗಮನವನ್ನೂ ಸೆಳೆಯುವಂತಿತ್ತು (ಅಳಿನಿ. ೬೭). **ಠಾಕ್‌ಠೀಕ್ : ೨.** ಈ ಹೆಣ್ಣುಮಗಳ ಹತ್ತಿರ ಹ್ಯಾಂಗೊ ಗಳಿಸಿದ್ದು . . . ದುಡ್ಡದ ; ಠಾಕ್‌ಠೀಕ್ ಮಾಡಿಕೊಂಡು ಇತರ್ರಾರ (ಪರಿಲ. ೪೭). **ಠಾಕುಟೀಕು : ೨.** ಠಾಕುಟೀಕಿನ ಕಟ್ಟು ಅದಕೆ ಚಿನ್ನದ ಕಟ್ಟು (ಹಳ್ಳಿಯು. ೧೨೦). [ ←ಮರಾ. ಠಾಕ್‌ಠೀಕ್ ]

**ಠಾಕೂರ** (ನಾ). ೧. ಗೌರವಾರ್ಹನಾದ ವ್ಯಕ್ತಿ; ಪೂಜಿಸಲ್ಪಡುವವನು: ಠಾಕೂರ ನೀನಂತೂ ನಮ್ಮನ್ನು ಒಳ್ಳೇ ಪೇಚಿಗೆ ಹಾಕಿದೆ (ಇಪ್ಪತ. ೧೦೭). ೨. ಒಂದು ವಂಶದ ಹೆಸರು,–ಬಿರುದು.
[ <ಪ್ರಾ. ಠಕ್ಕುರ./ಹಿಂ. ಠಾಕುರ್; ಮರಾ. ಠಾಕೂರ್; ಬಂಗಾಳಿ. ಟಾಗೋರ್ ]

**ಠಾಕೋಠಾಕು** 'ಟಾಕೋಟಾಕು' ನೋ.

**ಠಾಕೋಠೀಕು** 'ಟಾಕೋಟಾಕು' ನೋ.

**ಠಾಣ** 'ತಾಣ' ನೋ.

**ಠಾಣಗಾಱ, ಠಾಣೆಗಾರ** (ನಾ). ೧. ಆಶ್ರಯಂಬಾದವನು: ಠಕ್ಕುಠವಣೆಯ ಠಾಣಗಾಱನನಿಕ್ಕುವರೆ ಗೋ ದ್ವಿಜರ ವಧೆಯೇ ತಕ್ಕುದೆನೆ(ನಿಭಾಗ. ೭-೨-೮). **ಠಾಣೆಗಾರ : ೨.** = ಠಾಣದಾರ ೨ : ಠಾಣೆಗಾರನಿಗೆ ನಾಣ್ಯ ಕೊಟ್ಟವನೇ ಜಾಣ (ಗಾದೆ). [ ಠಾಣ (<ತಾಣ) + – ಕಾಱ ]

**ಠಾಣದಾರ, ಠಾಣೆದಾರ, ಠಾನೇದಾರ** (ನಾ). ೧. ಸೇನಾಶಿಬಿರದ ಮುಖ್ಯಸ್ಥ: ಪರಮಕುಹಕಿ ಲಕ್ಷ್ಮೀಪತಿಯುಂ ಸೇವಕ ನಿಕರಾಧಮ ಗರ್ವಾ ವಿಷ್ಕೃತ ಠಾಣದಾರ ತಿಮ್ಮಣನಿನಿಬರ್ ನೆನೆದುರು ಕುಮಂತ್ರಮಂ (ಕಳನ್ನ. ೬-೧೮). ೨. ಜಿಲ್ಲೆ, ಚಾವಡಿ ಮೊದಲಾದ ಸ್ಥಳಗಳ ಮುಖ್ಯಸ್ಥ,– ಮೇಲಧಿಕಾರಿ : ಮೊದಲಿರ್ದ ದಿಲಾವರನೆಂಬ ಠಾಣದಾರನೂ ಆಗೆ ನೋಯಿಕ್ಕಿ ಚಿಕ್ಕಗಂಗೂರಗವುಡಯ್ಯಗೆ (ಎಕ. VII, ಚನ್ನಗಿ. ೬೯-೧೪; 1562). **ಠಾಣೆದಾರ: ೨.** ಬೇರೆ ಹದ್ದಿನ ಠಾಣೇದಾರನು ನನ್ನ ಹದ್ದಿನಲ್ಲಿ ಬಂದು 'ಹೆದ್ದದ ಅಡ್ಡೆ' ಹಿಡಿದನೆಂದರೆ ಅಪಮಾನವಾಗುವುದಿಲ್ಲವೆ? (ಕೂತಕಾ. ೪೨). **ಠಾನೆದಾರ: ೨.** ಕೆಲವು ಪೋಲೀಸರು ಠಾನೇದಾರನ ಕೂಡ ರಾತ್ರಿ ಬಂದಿದ್ದರು (ಜಮೀನ್ದಾ. ೪೧). [ ಠಾಣ (<ತಾಣ) + – ದಾರ್₄ ]

**ಠಾಣದೀವಿಗೆ** 'ತಾಣದೀವಿಗೆ' ನೋ.

**ಠಾಣವಿಕ್ಕು** (ಕ್ರಿ). ಸೈನ್ಯವನ್ನು ಕಾವಲಿಡು ; ಸೈನ್ಯದ ರಕ್ಷಣೆಯನ್ನು ಏರ್ಪಡಿಸು ; ಸೇನಾಶಿಬಿರವನ್ನು ಹಾಕು : ಆ ಪಟ್ಟಣವನು ಜೈಸಾರಾಯನ ಸೆಱೆಗೈದಾ ಪುರಕಾ ಠಾಣವಿಕ್ಕಿ[ಠಾಣಿಟ್ಟು ತನ್ನಯ ಸೇನೆಯೊಳ್ ಕೆಲವ ಪ್ರತಾಪದೆ ಮುಂದಡಿಯಿಟ್ಟ] (ಕಂನವಿ. ೧೬-೩೮).

[ಠಾಣ (<ತಾಣ) + ಇಕ್ಕು]

**ಠಾಣಾ** 'ತಾಣ' ನೋ.

**ಠಾಣಾಂತರ** 'ತಾಣಾಂತರ' ನೋ.

**ಠಾಣಾಂದರ** 'ತಾಣಾಂತರ' ನೋ.

**ಠಾಣಾದೀಪ** (ನಾ). = ತಾಣದೀವಿಗೆ : ಕಾವಲ್ಪಟರಿಗಂ ದೀರ್ಘನಿದ್ರೆಗೈಸಿ ಮುಂದಕಂ ಪರಿದು ದೃಷ್ಟದ್ಯುಮ್ನನಿರ್ದ ನಿಜಮಂದಿರವ ಪೊಕ್ಕು ನೋಡಲ್ಕೆ ಠಾಣಾದೀಪ ನಿಂದುರಿವುತಿರೆ (ತುರಂಗ. ೭೬-೪೪).

[ಠಾಣಾ (<ತಾಣ) + ದೀಪ$_2$]

**ಠಾಣಿಸು** (ಕ್ರಿ). ಸೈನ್ಯದ ಶಿಬಿರವನ್ನು ಏರ್ಪಡಿಸು,–ಬೀಡುಬಿಡು : ಠಾವು, ಠಾಣಂ, ಠಕ್ಕಿಸಿದಂ (ಠೆಕ್ಕಿಸಿದಂ), ಠಾಣಿಸಿತು (ಶಮದ. ೧೫ ಪ್ರಯೋ.).

[ಠಾಣ (<ತಾಣ) + – ಇಸು$_3$]

**ಠಾಣೆ** 'ತಾಣ' ನೋ.

**ಠಾಣೆಗಾರ** 'ಠಾಣಗಾಱ' ನೋ.

**ಠಾಣೆಗೋಲು** (ನಾ). ಬೆತ್ತ ; ಚಾವಟಿಯ ಕೋಲು : ಕಳಿಗೆ ಕಿಱುಗೆಜ್ಜೆ ತೊಂಗಿಲು ಪೊಸಬಣ್ಣದ ಠಾಣೆಗೋಲು ಮುಪ್ಪುರಿದಾರಂ ವಶವಲ್ಲದಿರ್ಪ ಕುವರರ ಹೊಸಹೋರಿಯ ತದೆವ ತೆಱದೆ ತದೆವಂ ಬೆನ್ನಂ (ಕವಿಜ. III. ೩೨೦ ಮಟದ ಕಂದ). [ಠಾಣೆ$_0$(<ಥಾಣೆ$_1$)+ಕೋಲು$_1$ (<ಕೋಲ್$_1$)]

**ಠಾಣೆದಾರ** 'ಠಾಣದಾರ' ನೋ.

**ಠಾಣೆಯ** 'ಟಾಣಯ' ನೋ.

**ಠಾಣೆಯುಗೊಳಿಸು** (ಕ್ರಿ). ಇಡು ; ಇರಿಸು ; ಸ್ಥಾಪಿಸು : ಕಾಣುತ ಕೈಯತ್ತಿ ಮುಗಿದು ಮಂಡೆಯ ಮೇಲೆ ಠಾಣೆಯುಗೊಳಿಸಿ ಭಕ್ತಿಯೊಳು ಮಾಣಿಕ್ಯ ತೀರ್ಥನಾಯಕ ಜಯಜಯಯೆಂದು ಗೋಣೆತ್ತಿ ನೋಡುತೆಯ್ದಿದಳು (ಭರಜ. ೭೭-೩). [ಠಾಣೆಯ (<ಟಾಣಯ) + ಕೊಳ್$_1$ + – ಇಸು$_3$]

**ಠಾಣೆಯುದೆಗೆ** (ಕ್ರಿ). ಸೇನಾಶಿಬಿರವನ್ನು ತೆಗೆ,–ಎತ್ತು ; ಕಿಲ್ಲೆ, ದುರ್ಗ ಮೊದಲಾದುವುಗಳಲ್ಲಿ ಪಾಳೆಯವಿರುವ ಸೈನ್ಯವನ್ನು ಯುದ್ಧಕ್ಕೆ ಹೊರಡಿಸು ; ಕಾವಲು ದಂಡನ್ನು ಯುದ್ಧಕ್ಕೆ ಹೊರಡಿಸು : ಒಡನೆ ಠಾಣೆಯುದೆಗೆದೂರೂರುಗಳ ಹೊಕ್ಕು ತುಡುಗುಣಿ ತುರುಕ ಮಾರ್ಬಲವ ಕಡುತವಕದೆ ಮುತ್ತಿಕೊಂಡು ಪೂಗಿರಿದಾಗ ಬಿಡದೆ ಭಂಗಕೆ ಬರಿಸು (ಕಂನವಿ. ೧೩-೫೨). [ಠಾಣೆಯ (<ಟಾಣಯ) + ತೆಗೆ$_1$]

**ಠಾಣೆಯುಮಿಡು** (ಕ್ರಿ). ಶಿಬಿರವನ್ನು ಸ್ಥಾಪಿಸು ; ಪಾಳೆಯವನ್ನಿರಿಸು : ಕಂಗೊಳಿಪ ನಿರ್ಮಲವಿಯತ್ಸಿಂಧುವಂ ದಾಂಟಿ ನಾಕಲೋಕಂಬೊಕ್ಕು ಕುತ್ಸಿತದೊಳಖಿಲದಿಕ್ಪಾಲರಂ ಸದೆದು ತತ್ಪುರಕೆ ಠಾಣೆಯುಮಿಟ್ಟರು (ಹಬಪು. ೪೧-೨೮). [ಠಾಣೆಯ (<ಟಾಣಯ) + ಇಡು$_1$]

**ಠಾಣೆಯವಿಕ್ಕು** (ಕ್ರಿ). ಸೈನ್ಯವನ್ನು ಕಾವಲಿಡು; ರಕ್ಷಕಸೈನ್ಯವನ್ನಿರಿಸು : ಅರಮನೆಯೊಳಗಹ ಸಕಲವಸ್ತುವ ಕೊಂಡು ಹರುಷದೆ ರಣಧೂಳಖಾನ ಪುರಕೆ ಠಾಣೆಯವಿಕ್ಕಿ ಪಾತ್ಶಾ ಎಸೆಡೆಗೈದಿ ಭರದೆ ಕಾಣಿಕೆಯ ಮಾಡಿದನು (ಕಂನವಿ. ೧೧-೭). [ಠಾಣೆಯ (<ಟಾಣಯ) + ಇಕ್ಕು]

**ಠಾಣೇದಾರಿ** (ನಾ). ಕೊತ್ವಾಲನ ಹುದ್ದೆ,–ಅಧಿಕಾರ: ಈ ಮುಜಂದಾರನಿಗೆ ಆ ದಾಮಾಜಿಯ ಠಾಣೇದಾರಿಯ ಅಧಿಕಾರವನ್ನು ಕೊಡಬೇಕೆಂದು ನಿರೂಪವನ್ನು ಬರೆಯುವಂತೆ ಹೇಳಿದನು (ಕಲಾಧ. ೮೪).

[←ಮರಾ. ಠಾಣೇದಾರೀ]

**ಠಾಣೋಗ** 'ಟಾಣೋಘ' ನೋ.

**ಠಾಣ್ಯ** 'ಟಾಣಯ' ನೋ.

**ಠಾನೆ** 'ತಾಣ' ನೋ.

**ಠಾನೆದಾರ** 'ಠಾಣದಾರ' ನೋ.

**ಠಾಮು** (ಗು). ದೃಢವಾದ ; ನಿಶ್ಚಿತವಾದ : ಅವರು ವಿಷ ಹಾಕಿಸ್ಯಾರ ಅಂತ ಫೌಜದಾರಸಾಹೇಬರ ಠಾಮು ಮತ ಆಗಿಬಿಟ್ಟೈತಿ (ಗ್ರಾಮಾಯ. ೧೨೯).

[←ಮರಾ. ಠಾಮ]

**ಠಾಯ, ಠಾಯಿ, ಠಾಯೆ** (ನಾ). ೧. [ಸಂಗೀತ] ರಾಗಾಲಾಪನದಲ್ಲಿ ಒಂದು ಲಯ; ಮಧ್ಯಲಯ: ಕಳಕಿಕಪಂಚಮಾಂಚಿತ ಮೃದುಧ್ವನಿಯಂಗೆಲೆವಂದು ಸುಸ್ವರಂ ಲಳಿ ಲುಳಿ ಧಾತು ರೀತಿ ಗತಿಯೋಜೆ ಬಜಾವಣೆ ಠಾಯ ಸುಟ್ಟ . . . ಸಂಗಳಿಸೆ ಸುಕಂಠೆ ಪಾಡಿ ಪುದಿದಳ್ ಮುದಮಂ ನರನಾಥ ಚಿತ್ರದೊಳ್ (ಕುಸುಮಾ. ೧-೩೭): ಗಾನಾಮೃತ ಮಂಗಲಗೇಯವನು ಗಾಣರಿಗರಿದೆನಿಸುವ ಠಾಯವನು ಆಲಿಸಿ ಕೇಳೇಳಲೆ ಸುಕುಮಾರ (ಹರಿಕಾ. ೦೨-೩೦ ರಗಳೆ); ಬಿಂಕಂಬೆತ್ತಿರ್ದ ವೀಣೆಯಂ ಬೆರಳ್ಗಳಿಂ ಟಂಕರಿಸುಯಿತ್ತ್ರವಕ್ಷದೊಳೊತ್ತಿ ಪರಿಪರಿಯ ಠಾಯಂಗಳಂ ಬಾಜಿಸುವೋಜೆಯೊಳ್ (ಪುಣ್ಯಾಸ್ರ. ೭-೫೨ ವ); ಠಾಯ ಶುದ್ಧದ ಸಾಳಗದ ಸಂಕೀರ್ಣ ದೇಸಿಯ ವಿವಿಧರಚನೆಗಳ . . . ಆಱಿದವನೆ ಗಾಯಕನು (ಕುಮ್ಮಾರ. ೩-೯೬); ಶ್ರುತಿ ಜತಿ ವಹಣಿ ಠಾಯಗಳು . . . ಸಾಳಗದ ಗತಿಯೊಳು ಪಾಡಿ ಮೆಚ್ಚಿಸಿದರಾ ದೇವೇಂದ್ರಸತಿಯರು (ವರ್ಧಜ. ೧೦-೩೬): ವಾದಿ ಸ್ವರವಾಗಿದ್ದ ದೃಢಸ್ವರಕ್ಕೆ ಬಂದು ಸೇರುವ ಕ್ರಮಕ್ಕೆ ಠಾಯ ಎಂದು ಹೆಸರು. ಇದಕ್ಕೆ ಗ್ರಹಭೇದ ಅಥವಾ ಶ್ರುತಿಭೇದ ಎಂದೂ ಹೆಸರು (ಸಂಗೀಜಂ. ೩೦). ೨. ಸಂಗೀತ ಲಕ್ಷಣಗ್ರಂಥದ ಒಂದು ಪ್ರಕಾರ ; ಸಂಗೀತಕ್ಕೆ ಸಂಬಂಧಿಸಿದ ನಾಲ್ಕು ವಿಧವಾದ ರಚನೆಗಳಲ್ಲೊಂದು: ಗೀತ,ಆಲಾಪ, ಠಾಯ ಮತ್ತು ಪ್ರಬಂಧ ಎಂದು ನಾಲ್ಕು ವಿಧ ರಚನೆಗಳನ್ನು ತಿಳಿಸಿ, ಇವನ್ನು ಚತುರ್ದಂಡಿ ಎಂದು ವೆಂಕಟಮಖಿ ಕರೆದಿದ್ದಾನೆ (ಸಂಗೀಜಂ. ೭೦); ವೆಂಕಟಮಖಿಯವರು ಚತುರ್ದಂಡಿ ಎನ್ನಿಸಿಕೊಂಡ ಗೀತ, ಪ್ರಬಂಧ, ಠಾಯ ಮತ್ತು ಆಲಾಪನೆಗಳನ್ನೊಳಗೊಂಡ ಲಕ್ಷಣಗ್ರಂಥ ಚತುರ್ದಂಡಿಪ್ರಕಾಶಿಕೆಯಲ್ಲಿ ಇಂದಿನ ೭೨ ಮೇಳರಾಗಪದ್ಧತಿಯ ನಿರೂಪಣೆ ಮಾಡಿದ್ದಾರೆ (ಭಾರದ. ೫೪೯). ಠಾಯಿ : ೧. "ಠಾಯಿ(ಯೆ)–ಸ್ಥಾಯಿ(ನ್)=ಸಂಗೀತದ ಸ್ಥಾಯಿ" (ತದ್ಭಕೋ. ೧೩); ಏಕ್ಕಸಮದ ಠಾಯಿಯಲ್ಲಿ ಬಹುವಧು ಉದ್ದೀಪ್ತ (ಅರಳು. ೪೦೬-೩೦); ಈ ಅನಿಬದ್ಧ ರಾಗಾಲಾಪನಕ್ಕೆ ಠಾಯಿ ಎಂದು ಹೆಸರು. ಇದೇ ಸಂಸ್ಕೃತದ ಸ್ಥಾಯಿ (ಜಗದಾ. ೩೯೯). ೨. 'ಠಾಯಿ' ಎಂಬ ರಾಗಾಲಾಪನ ಪದ್ಧತಿಯನ್ನು ತಿಳಿಸುವ ಸಾಹಿತ್ಯವಿಶೇಷ,–ಸಂಗೀತಪ್ರಬಂಧ: ಗೀತ ಠಾಯ ಸುಳಾದ್ಯುಗಾಭೋಗ ಪದ್ಯಪದವ್ರಾತ ಪ್ರಬಂಧ ರಚಿಸಿ ವಿಠ್ಠಲನ ಪ್ರೀತಿಬಡಿಸಿ (ಪ್ರಸಕೀ. ೨-೫). ಠಾಯೆ : ೧. ಠಾಯೆಯಿಂದಾಳತಿ ಮಾಡಿ ಸಾಳಗದ ದೇಸಿಯ ಗೀತಮುನಂದು ಪಾಡುವ . . . ಎಕ್ಕಲಗಾಣನ ನೊರ್ವನಂ ಕೇಳುತ್ತುಮಿರ್ದಂ (ಚಂದ್ರಪು. ೭-೯೩); ಪದದೊಳ್ ಠಾಯೆಗಳೋರಣಂಬಡೆಯೆ ವಾಕ್ಯಾರ್ಥಕ್ಕೆ ಪಕ್ಕಾಗೆ ರಾಗದ ಮಾಧುರ್ಯಂ . . . ಬರ್ಪಲೋದಿದಳಾಂದೋಲದೆ ಪಲ್ಲವಾಧರೆ ವಸಂತೋತ್ಸವಮಂ ಗದ್ಯಮಂ (ಅನಂಪು. ೬-೭೧); ಮಂದ್ರ ಮಧ್ಯತಾರಮೊಸೆಯೆ ಓಜೆ ರಾಜಿಸೆ ಠಾಯೆ ಠವಣೆವಣೆಯೆ . . . ಪಾಡುತ್ತಿರೆಯುಂ (ಶಾಂತೀಶ್ವ. ೭-೯೩ ವ); ಸಂಚಾರಿ ಬಜಾವಣೆ ಠಾಯೆ ಲವಣಿ ವಹಳಿಕೆ ಡಾಳಂಗಳಕಾರರಂಪವೆಯ್ದು . . . ಪಾಡಿದಳತಿ ಚದುರಿಂದೆ (ಜಯುಕಾ. ೧೪-೪೩); ಆಳಾಪ ಠಾಯೆ ನೇಮಗಳಿಂದೆ ನೂಱೆಂಟು ತಾಳಗೀತಗಳ ಪಾಡಿದರು (ಭೋಹತ. ೨೨-೩೦): ಗಾಯಕಿಯರು ನೋಟವಱಿದು ಠಾಯೆ ಬಜಾವಣೆ ಗಮಕವೆಸೆಯೆ ಪಾಡಲಾಯುತವಾದರು ಕೂಡೆ (ಭರಜ. ೫-೫೬); ಗಮಕಂ ತಳ್ತಿರೆ ಠಾಯೆ ಮಿಂಚಿರೆ ಚಮತ್ಕಾರಂ ಕರಂ ಪೊಣ್ಮೆ . . . ಸಂಭ್ರಮದಿಂ ಬಾಜಿಸಿದಳ್

ಬಜಾವಣಿಯಿನಂದಂಬೆತ್ತವಳ್ವೀಣೆಯಂ (ರಾಜಶೇ. ೧೦-೩೨).
೪. ಮಲ್ಲಯುದ್ಧದ ಒಂದು ವರಸೆ : ಕಡುಮುಳಿಸೇಱಿ ಮಲ್ಲವೆಸರಿಂ ಗಜವಾಂತೊಡವುರ್ಬಿ ಠಾ[ಪಾಠಾಂ. ಥಾ]ಯೆಯೊಳ್ ಕೆಡಪದೊಡೇಕೆ ಮಲ್ಲತನ (ಅನಂಪು. ೨-೨೬); (ಶಬ್ದಸಾ. II, ೧೫೦ ನೋ); ಮೊನ್ನೆ ಠಾಯೆಯಲ್ಲಿ ಕತ್ತರಗೊಟ್ಟುರುಳಿಸಿದುದನ್ನು ಮರೆತುಬಿಟ್ಟೆಯೋ? (ವಿಗಡ. ೨೬-೫).
[ <ಸಂ. ಸ್ಥಾಯಿನ್, / ಮರಾ. ಠಾಯಿ ]

**ಠಾಯಂಗೆಯ್** (ಕ್ರಿ). [ಸಂಗೀತ] ಠಾಯಪದ್ಧತಿಯೊಡನೆ ಹಾಡಂ,– ವಾದ್ಯವನ್ನು ನುಡಿಸು : ಅನುನಯದೆ ದಂಡಿಗೆಯ ಪಿಡಿದು ವಾಗ್ದೇವಿ ಮೋಹನದೆ ಠಾಯಂಗೆಯ್ಯೆ . . . ನೀಲಗಳನಾನಂದತಾಂಡವಾಡಂಬರ ವನಭಿನಯಿಸಿದ (ಸೌಂದಪು. ೧೬-೧೨). [ ಠಾಯ + ಕೆಯ್$_1$ ]

**ಠಾಯಿ** 'ಠಾಯ' ನೋ.

**ಠಾಯೆ** 'ಠಾಯಂ' ನೋ.

**ಠಾವಣೆಕೋಲು** (ನಾ). ಓದುವಾಗ ಪುಸ್ತಕವನ್ನು ಇಟ್ಟುಕೊಳ್ಳುವುದಕ್ಕೆ ಉಪಯೋಗಿಸುವ ಪೀಠ; ವ್ಯಾಸಪೀಠ: ತಳಿವೊತ್ತಗೆ ಕವಲ್ಗೊಂಬು ಠಾವಣೆಕೋಲಳಿಶುಕ ಮಟುತಶಿಯಾಗೆ ಬಳಸಿರಲೊಂದು ಬಲ್ಮುಸು ನರೆಗಡ್ಡವ ತಳೆದ ದೀಕ್ಷಿತನಂತಾಯ್ತು (ಶ್ರೀಪಾಲ. ೬-೨೩).
[<ಅಟ್ಟವಣೆಕೋಲ್ ]

**ಠಾವಱ್** (ಕ್ರಿ). ಇರುವ ಜಾಗವನ್ನು ತಿಳಿ : ಇಳೆಯೊಳ್ ಕುಸುಮಾವಳಿ ಯೆಂಬಳ ಠಾವಱಿದಿರದೆ ಬಂದವರ್ಗೆ ಪಸಾಯಂಗಳನೀವೆಂ (ಕುಸುಮಾ. ೯-೦೦೦). [ ಠಾವು (<ತಾವು$_2$) + ಅಱ್ ]

**ಠಾವಿಕೆ** (ನಾ). (ಉಕ) ತಿಳಿದಿರುವಿಕೆ ; ಪರಿಚಯ ; ತಿಳಿವಳಿಕೆ : ದೃಷ್ಟಿ ದಿನದಿನಕೆ ಕುದುರುವದೆನೆಗೆ ಠಾವಿಕೆ ಬಟ್ಟೂರ್ದ ತೆರದಿ ಲಕ್ಷಿಹುದೆನಗೆ ಠಾವಿಕೆ (ಚಿದಾಕೋ. ೦೦೦-೬) ; ಚಂಡ ಚಾಮುಂಡ ದೇವರಿವು ಕಲಿ ಸ್ಯೆರಿಭಾಸುರರಾವ ಪರಿಯಿಂದಳಿದರೆಂಬುದು ಠಾವಿಕಿಲ್ಲಲೆಯೆಂದು ಸುರಪತಿ ಮತ್ತೆ ಕಣೆಗರೆದ (ಅಂಬಿಕಾ. ೩೦-೧೮) ; ನೆನಗೇನ ಠಾವಿಕೆ ಇಲ್ಲ (ಕಾದವ. ೦೦) ; ನೀವು ಬಂದ ಹೇಳಿದ ಮ್ಯಾಗ ಠಾವಿಕೆ ಆತು (ಗ್ರಾಮಾಯ. ೬೨).
[← ಮರಾ. ಠಾವಕಾ, ಠಾಊಕ ]

**ಠಾವು** 'ತಾವು$_2$' ನೋ.

**ಠಾವುಗಾಣ್** 'ತಾವುಗಾಣ್' ನೋ.

**ಠಾವುಗೈಸು** (ಕ್ರಿ). ನೆಲೆಗೊಳಿಸಂ ; ಆಶ್ರಯವನ್ನು ನೀಡಂ : ಸೇವೆಯ ಕಂಡು ನಿನ್ನಯ್ಯನಿಂದಧಿಕದ ಠೀವಿಯ ಮಾಳ್ಪೆನೈ ನಾನು ಈ ವೇಳೆಗಿರು ನಿನ್ನ ಪಿತನ ಭಾಗ್ಯದೊಳೆಂದು ಠಾವುಗೈಸಿದನು (ಭರಚ. ೬೩-೫).
[ ಠಾವು (<ತಾವು$_2$) + ಕೈಸು (<ಕೆಯ್ಸು) ]

**ಠಾವುಗೊಳ್** (ಕ್ರಿ). ನೆಲಸು ; ಇರು. 'ಠಾವುಗೊಳಿಸಂ' ಪರಾ.
[ ಠಾವು (<ತಾವು$_2$) + ಕೊಳ್$_1$ ]

**ಠಾವುಗೊಳಿಸು** (ಕ್ರಿ). ಇಡಂ; ಸ್ಥಾಪಿಸಂ; ಇರಿಸು: ಮಸ್ತದೊಳವಧರಿಸಿದ ಬಾಣಲಿಂಗವ ಮಸ್ತಕದಲ್ಲಿ ಠಾವುಗೊಳಿಸಿ (ಮೋಹತ. ೨೨-೩).
[ ಠಾವುಗೊಳ್ + – ಇಸು$_3$ ]

**ಠಾಳಿ** 'ಟವಳಿ' ನೋ.

**ಠಾಳಿಸು** 'ಟಾಳಿಸು' ನೋ.

**ಠಿಕಾಣ** 'ಠಿಕಾಣೆ' ನೋ.

**ಠಿಕಾಣೆ, ಠಿಕಾಣ, ಠಿಕಾಣೆ** (ನಾ). ಸ್ಥಳ ; ಜಾಗ : ಗದ್ದೆಯ ನೆಲ್ಲಿಗೆ ಶ್ರಮವು ಬಹಳ ಮತ್ತು ಎಲ್ಲ ಠಿಕಾಣೆಯಲ್ಲಿ ಬೆಳೆಯಾಗುವ ಹಾಗಿಲ್ಲ (ಕೃಷಿಪ್ರ. ೫೯) : ಹೀಗೆ ಹೊತ್ತು ಠಿಕಾಣೆ ಇಲ್ಲದೆ ಓಡಿಕೊಂಡು ಬಂದರೆ ಯಾರು ಸತ್ತಿದ್ದಾರೆಂದು ತಿಳಿಯಬೇಕೋ (ಮುಂಗಾಮು. ೪೮). **ಠಿಕಾಣ :** ಮುಂಬಾಯಿ ಅಂಗಡಿಯ ಹೊರ್ತು ಇತರ ಠಿಕಾಣದ ಅಂಗಡಿಗಳ ಅಡತಿ ಮುಂತಾದವುಗಳ ಬಗ್ಗೆ ಮಾಹಿತಿಯು (ಮುಂಬವ್ಯಾ. ೨೬). **ಠಿಕಾಣೆ :** ಯಕ್ಷ ತನ್ನ ಪ್ರಿಯತಮೆಯಿರುವ ಠಿಕಾಣೆ, ಅಲ್ಲಿರುವ ವಸ್ತುಗಳು ಹೋಗುವ ರಸ್ತೆ ಎಲ್ಲಾ ವಿವರಿಸಿ (ಬದುಕು. ೧೨೩).

**ಠಿಕಾಣೆ ಊರು** = ತಂಗು ; ಉಳಿ : ಅವರ ಕೋಣೆಯಲ್ಲೇ ಠಿಕಾಣಿ ಊರಿದೆ (ದಿಲ್ಲಿಪ. ೩). [ ←ಮರಾ. ಠಿಕಾಣ, ಠಿಕಾಣಾ ; ಹಿಂ. ಠಿಕಾನಾ ]

**ಠಿಕಾಣೆ** 'ಠಿಕಾಣೆ' ನೋ.

**ಠಿಕ್ಕರಿ, ಟಿಕ್ಕರಿ, ಟಿಕ್ಕಿರಿ, ಟೆಕ್ಕರಿ** (ನಾ). ತುಚ್ಛವಾದ ವಸ್ತು ; ಅಲ್ಪವಸ್ತು. 'ಠಿಕ್ಕರಿಗಳೆ' ಪರಾ. **ಟಿಕ್ಕರಿ :** 'ಟಿಕ್ಕರಿಗಳೆ' ಪರಾ. **ಟಿಕ್ಕಿರಿ :** 'ಟಿಕ್ಕಿರಿಗಳೆ' ಪರಾ. **ಟೆಕ್ಕರಿ :** 'ಟೆಕ್ಕರಿಗಳೆ' ಪರಾ.
[ ←ಮರಾ. ಠಿಕರೀ ; ಹಿಂ. ಠೀಕರೀ = ಮಡಕೆಯ ಚೂರು, ತುಚ್ಛವಾದುದು. / ಪ್ರಾ. ಠಿಕ್ಕರಿಆ = ಬೋಕಿ ]

**ಠಿಕ್ಕರಿಗಳೆ, ಟಿಕ್ಕರಿಗಳೆ, ಟಿಕ್ಕಿರಿಗಳೆ, ಟೆಕ್ಕರಿಗಳೆ** (ಕ್ರಿ). ತುಚ್ಛವೆಂದಂ ಕಾಣು ; ಕಡೆಗಣಿಸು ; ಹೀಯಾಳಿಸು ; ನಿಂದಿಸಂ ; ಧಿಕ್ಕರಿಸು : ಹರಿಯ ಗತಿಯನು ಹಳಿವ ಮದದಿಕ್ಕರಿಯ ಠಿಕ್ಕರಿಗಳೆವ . . . ಗುರುತನಕೆ (ಕಾಶಿರಾ. ೩೬-೯). **ಟಿಕ್ಕರಿಗಳೆ :** ಕುಳಕೆ ಕೀಳಿವನೆಂದು ಟಿಕ್ಕರಿಗಳೆದಡಾ ಬಹುಬಂಧುವರ್ಗವನುಳಿದು ಸಿಂಹಾಸನದಲೆನಗಭಿಷೇಕವನು ಮಾಡಿ (ಕುವ್ಯಾಕ. ೨೬-೬) ; ಹುಡುಗಿಯ ಕೇಳಮೋಳದೊಳಿರುತಿರ್ಪ ಸಂಗಡಿಗರ ಟಿಕ್ಕರಿಗಳೆವ (ಮೋಹತ. ೧೬-೬೬) ; ಸಲೆ ಚಿತ್ರಗುಪ್ತರ ಲೆಕ್ಕವ ಟಿಕ್ಕರಿಗಳೆದು ಲೆಕ್ಕದೆ ಶೂರರೆನಿಪ. . . ಕರಣಿಕಕುಲತಿಲಕರ ಗೃಹವಿರುತಿಹುವು (ಕಂಸವಿ. ೬-೪೪). **ಟಿಕ್ಕಿರಿಗಳೆ :** ಹರುಷದಿಂದಾ ಚಿತ್ರಲೇಖೆ ಪಟವಂ ತೆಗೆದು ತರುಣಿ ನೀ ನೋಡೆಂದು ತೋಱಿಸಲು ನಾಗನರಸುರರನಲ್ಲೆಂದು ಟಿಕ್ಕಿರಿಗಳೆದು (ಸೌಂದಪು. ೮-೩೩). **ಟೆಕ್ಕರಿಗಳೆ :** ಗೆಲವಹುದು ಮೇಣ್ ಸೋಲವಪ್ಪುದು ತಿಳಿಯೆ ಸಂಗ್ರಾಮದಲಿ ಟೆಕ್ಕರಿಗಳೆಯಲಹುದೇ ಸುಭಟರನು ಜಯಮತ್ತ ನಾದವನು (ಉತ್ತರಾ. ೧೦೬). [ ಠಿಕ್ಕರಿ + ಕಳೆ$_1$ ]

**ಠೀಕ್** 'ಠೀಕು' ನೋ.

**ಠೀಕು, ಠೀಕ್** (ನಾ). ೧. ಸರಿಯಾದುದಂ ; ನ್ಯಾಯವಾದಂದು ; ಯೋಗ್ಯವಾದುದು : ಕಡೆಕಾಲಕೆ ಮುಖವ್ಯಾಕೆ ಇನ್ನಡಗಿರ್ದರೆ ಬಲು ಠೀಕೆ (ಇಂದ್ರಜಿ. ೦೦). ೨. ಸಮರ್ಪಕವಾದಂದು; ಅಚ್ಚುಕಟ್ಟು: ಗಂಗಾ ತರಂಗಿಣಿಯು ಠೀಕಿನಿಂ ಪೊಂಗಿದಾಮೋದದಿಂದಾಶ್ರಮದ ಬಾಹೆಯಲ್ಲಿ ಸರಿಯಲ್ಕೆ ಜಮದಗ್ನಿ (ಪರಶು. ೨೨-೦೯). **ಠೀಕ್ :** ೧. ಮೋತೀಚಂದ :– ಠೀಕ್, ಠೀಕ್ (ಮೋಹಿನೀ. ೪೨). ೨. ನಿಮ್ಮ ಆರೋಗ್ಯ ಠೀಕಾಗಿರುವುದು (ನಾಡಿಗೇ. ೨೦೬). [ ←ಹಿಂ. ಮರಾ. ಠೀಕ್ ]

**ಠೀಕುಗಾರ** (ನಾ). ಅಣೆಗಾರ; ಅಚ್ಚುಕಟ್ಟಾಗಿರುವವನಂ; ನೀಟುಗಾರ: ಈ ಮದ್ರಾಸ್ ಹುಡುಗ ತನಗಿಂತ ಜಂಬಗಾರನಾಗಿ ಠೀಕುಗಾರನಾಗಿ ಕಾಣುತ್ತಾನಲ್ಲ ಎಂದು ನೋಟ ಅವನ ಮೇಲೆ ಹೋಯಿತು (ಮಹಾಗ. ೦೦೬). [ ಠೀಕು + – ಗಾರ (< – ಕಾಱ) ]

**ಠೀವಿ, ಟೀವಿ** (ನಾ). ಬೆಡಗಂ ; ಬಿನ್ನಾಣ ; ಗತ್ತು : " ನವಾಯಿಯೆನಲ್ ಠೀವಿ " (ಭಾರನಿ. ೬) ; ಹಾವದ ಭಾವದ ಮುಱುಕದ ಠೀವಿಯ ಗರಗರಿಕೆ ವಡೆದ ಚೆನ್ನೆಯರಂ ತಂದಾ ವಿಭುಗೆ ತೋಱಿ (ಪುಣ್ಯಾಸ್ರ. ४-४೮) ; ಬಿಂಕ ದಂಕಿತದ ಲಳಿತ ಠೀವಿಯ ನಿಜಸುರೇಖೆಯ ಲಲನೆಯಾ ಪರಿಯಿಂದ ನೃತ್ಯವ ಸಲಿಸೆ (ಬಸಪು. ೧೨-೪೫) ; ಠೀವಿ ಮಿಗಲ್ ಸಮಂತೊಱಗಿ ಮಾವು ವಿಭಾಗದಿ ನಲ್ಲಳಂ . . . ಮಚ್ಚಿಸಿ ಮಾಳ್ಕೆ ವಿನೋದಗೋಷ್ಠಿಯಂ (ಮನ್ಮವಿ. ೧೦-೯) ; ಅಖಿಲಭುವನೇಂದ್ರ ಭದ್ರಾಸನವ ಬಿಟ್ಟು ಬಿಜಯಂ ಗೈವನತಿ ಠೀವಿಯಿಂದ (ಅರ್ಜಾವಿ. ೨೪-೬೨) ; ರಾಜರ ಠೀವಿ ತಿರುಕರ ಲಕ್ಷಣ (ಗಾದೆ). **ಟೀವಿ :** ಉಪಾಂಗದ ಟೀವಿ ಟೀವಣಿಸಲ್ (ರೇವಣ. ೩೦-೪೫) : ಹೆಂಗಳ ಸಾಲು ಟೀವಿಯ ತೋಱುತೊಪ್ಪಿದುದು (ಕಂಸವಿ. ೬-೦೦೨).

**ಠುಮರಿ,** ಠುಮ್ರಿ, ತುಮ್ರಿ (ನಾ). ಒಂದು ಬಗೆಯ ಹಾಡು ; ಒಂದು ಬಗೆಯ ಚಿಕ್ಕದಾದ ಪ್ರೇಮಗೀತೆ : ಕಸಬಿಣಗಳಲ್ಲಿ ಕೆಲವರು ಲಾವಣಿ, ಖ್ಯಾಲ, ಠುಮರಿ ಮುಂತಾದ ಹಾಡುಗಳನ್ನು ಕಲಿತಿರುತ್ತಾರೆ(ಕಭಾಗ. ೧೯೭); ಮೆಹಬೂಬಜಾನಳು ರಾಘಪ್ಪನ ಸೂಚನೆಯಂತೆ'ನಾ ಮಾರೊ ಪಿಚಕಾರಿ'ಯ ಸಾಭಿನಯ ಠುಮರಿಯೊಂದಿಗೆ ಮುಗಿಸಿದಳು (ಗಂಮಾಯಿ. ೪೨). **ಠುಮ್ರಿ :** ಕೊನೆಗೆ ನೃತ್ಯಗಾರನು ಕುಳಿತುಕೊಂಡು . . . ಠುಮ್ರಿ, ಠಪ್ಪ, ದಾದ್ರ, ಗಜಲ್ ಮುಂತಾದ ಪ್ರೇಮಗೀತಗಳನ್ನು ಹಾಡಿ, ಅದಕ್ಕೆ ಅನುಗುಣವಾಗಿ ಅಭಿನಯ ಪ್ರದರ್ಶನ ಕೊಡುತ್ತಾನೆ (ಆಭಾನೃ. ೯೧). **ತುಮ್ರಿ :** ಮಾರವ ದಲ್ಲಿ ಒಂದು ತುಮ್ರಿ ಹಾಡಿದಳು (ರತಿಪಸ. ೪೯).

[ ←ಹಿಂ. ಮರಾ. ಠುಮರೀ ]

**ಠುಮ್ರಿ** 'ಠುಮರಿ' ನೋ.

**ಠೂಬಿಡು** (ಕ್ರಿ). ಜೊತೆಬಿಡು ; ಸಂಗಬಿಡು : ಎರಡು ಮಕ್ಕಳೂ ಠೂ ಬಿಟ್ಟು ಮುಖತಿರುಗಿಸಿ ನಿಂತಿದ್ದರು (ರೂಢಿ). [ ಠೂ$_0$ + ಬಿಡು$_1$ ]

**ಠೆಕ್ಕಿಸು** 'ತಟ್ಕಿಸು' ನೋ.

**ಠೆಕ್ಕೆಯ** 'ಟಕ್ಕೆಯ' ನೋ.

**ಠೇಂಕರಿಸು** (ಕ್ರಿ). ೧. ಠೇಂಕಾರ ಶಬ್ದವನ್ನು ಮಾಡು ; ಘೋಷ ಮಾಡು : ಬಿಲು ಠೇಂಕರಿಸಿ ಶರವ ತೊಟ್ಟು ಅರಿಭುಜ ಬಲಕಟ್ಟು ಕೆಡಹಿ ದನವನ (ಸೌಂದಕಾ. ೭-೬೩). ೨. (ಅಲಂ) ಘೋಷಿಸು ; ಹೇಳು ; ನುಡಿ : ತೆರೆದ ಹೊತ್ತಿಗೆಯ ಮರೆಗೆ ಏನು ಠೇಂಕರಿಸುತಿಹುದು ನಿತ್ಯ ? (ಸೂರ್ಯಪಾ. ೫೭-೧೨). [ <ಠೇಂಕಾರ + – ಇಸು$_3$ ]

**ಠೇಂಕಾರ** (ನಾ). ೧. ಬಿಲ್ಲಿನ ಹೆದೆಯ ಮಿಡಿತದ ಶಬ್ದ ; ಜ್ಯಾಘೋಷ ; ಧನುಷ್ಟಂಕಾರ. 'ಠೇಂಕರಿಸು' ಪರಾ. ೨. (ಅಲಂ) ಹೆಮ್ಮೆಯ ಠೀವಿ; ಒಣಜಂಬ ; ದುರಭಿಮಾನ : ಹೊಂಡದ ಕೊಳಚೆಯ ನೀರನು ಕುಡಿದರು ಕಪ್ಪೆಗದೆಷ್ಟು ಠೇಂಕಾರ (ಇಂಜಾಪ. ೨೦೨-೧೧); ಠೇವಣಿ ಹೋದರೂ ಠೇಂಕಾರ ಹೋಗದು (ಗಾದೆ). [ ಸಂ. ]

**ಠೇಕಾ, ಟೇಕ, ಟೇಕಾ** (ನಾ). ತಬಲ ಅಥವಾ ಮದ್ದಳೆಗೆ ಬೆರಳಿನಿಂದ ಹಾಕುವ ಪೆಟ್ಟು ; ತಾಳ: ತಬ್ಲಾ ಬಾರಿಸುವಾತ ಬರಿದೆ ಠೇಕಾ ಹಿಡಿದು, ತನ್ನ ಸ್ಥಾನ ತಿಳಿದವನಂತೆ ವರ್ತಿಸುತ್ತಾನೆ (ಯಕ್ಷಬ. ೯೨). **ಟೇಕ :** ತಬಲಾ ಟೇಕ ಹಿಡಿಯುವುದು (ಕಲ್ಯಾತಿ. ೧೯೮). **ಟೇಕಾ :** ಅಲ್ಲೇ ಇದ್ದ ವಿದ್ಯಾರ್ಥಿ ಯೊಬ್ಬ ತಬಲ ಟೇಕಾ ಹಾಕುತ್ತಿದ್ದನಂತೆ (ನಾಕಲಾ. ೨೫).

[ ←ಹಿಂ. ಮರಾ. ಠೇಕಾ ]

**ಠೇವಣಾತಿ** (ನಾ). (ಬ್ಯಾಂಕು ಮೊದಲಾದಂವುಗಳಲ್ಲಿ) ಇರಿಸಿದ ಹಣ ; ಇಡುಗಂಟು : ಅವರು ಗೋಪ್ಯವಾಗಿ ವಕೀಲರನ್ನು ಕರೆಯಿಸಿ ತನ್ನ ೫೦ ಸಾವಿರ ರೂಪಾಯಿ ಠೇವಣಾತಿಗಳನ್ನು ಮಾಲಿನಿಯ ಹೆಸರಿನಲ್ಲಿ ವಿಲು ಬರೆದಿಟ್ಟರು (ವಿಧಿವ್ಯ. ೧೮೦); ಬ್ಯಾಂಕಿನ ಹಣವೆಂಬುದು ಕೆಲವೊಂದು ಬಗೆಯಿಂದ ಕೂಡುತ್ತದೆ . . . ಜನರೇ ಸುಮ್ಮನೆ ಅಲ್ಲಿ ಠೇವಣಾತಿ (Deposit) ಇಡುವುದುಂಟು (ಬಾಲಪ್ರ. III, ೦೫೭).

[ ← ಮರಾ. ಠೇವಣಾಈತ್ ]

**ಠೇವಣಿ** (ನಾ). ೧.=ಠೇವಣಾತಿ : ಠೇವಣಿ ಇಟ್ಟ ಮೊಬಲಗನ್ನು ಕೇಳಿದಾಗ ಕೊಡತಕ್ಕದ್ದೆಂಬ ಕರಾರಿನ ಮೇಲೆ . . . ಗಿರಾಕಿಯ ಬಾಬತು ಬ್ಯಾಂಕರ ವಶದಲ್ಲಿರುವ ಹಣವೂ ಇದರಲ್ಲಿ ಸೇರಿರುತ್ತದೆ (ಗ್ರಾಮಾಕ. ೧೬೫); ಚಾಲ್ತಿ ಡಿಪಾಸಿಟ್‌ದಾರರು ತಮ್ಮ ಠೇವಣಿಗಿಂತ ಹೆಚ್ಚು ಹಣವನ್ನು ಬಯಸುವಾಗ ಬ್ಯಾಂಕಿನವರು ಕುಳದ ನಂಬಿಕೆಯ ಮೇಲೆ ಓವರ್ ಡ್ರಾಫ್ಟ್ ಸಾಲವನ್ನು ಕೊಡುವರು (ಹಣಪ್ರ. ೬೨). ೨. ಪಂಥಕ್ಕೋಸ್ಕರ ಕಟ್ಟುವ ಹಣ ; ಬಾಜಿಕಟ್ಟುವ ಮೊತ್ತ : ನ್ಯಾಯಾಧೀಶನ ಬಗ್ಗೆ ಕಕ್ಷಿದಾರನು ಸಂದೇಹ ಪಟ್ಟಲ್ಲಿ ಆತ ಅದನ್ನು ರುಜುವಾತು ಪಡಿಸುವ ಮುನ್ನ ೪ ಕ್ರುಸೇಡೋ ಹಣವನ್ನು ಠೇವಣಿ ಇಡಬೇಕು (ಪ್ರವಾಇ. II, ೪೮೩). ೩. (ಚುನಾವಣೆ ಮೊದಲಾದ ಸಂದರ್ಭದಲ್ಲಿ) ಭರವಸೆಗಾಗಿ ಇರಿಸುವ ಹಣ ಅಥವಾ ಒಡವೆ; ಹೊಣೆಯಾಗಿ ಇಡುವ ವಸ್ತು; ಈಡು; ಆಧಾರ : ಮೇಲಿನ ಎರಡು ಷರತ್ತುಗಳು ಸಂಪೂರ್ಣವಾಗಿ ನೆರವೇರುವವರೆಗೂ ಅದಕ್ಕೆ ಠೇವಣಿ ಯಾಗಿ ಸುಲ್ತಾನರ ಇಬ್ಬರ ಮಕ್ಕಳನ್ನು . . . ಠೇವಣಿ ಬಂದಿಗಳಾಗಿ ಅವರಿಗೆ ಒಪ್ಪಿಸಬೇಕು (ಅನ್ನಾವ. ೨೬) ; ಠೇವಣಿ ಹೋದರೂ ಅವನ ಠೇಂಕಾರ ಹೋಗಲಿಲ್ಲವಲ್ಲ (ಕಸಬು. ೭೩). ೪. ಹೂಳಿಟ್ಟ ಹಣ ; ನಿಧಿ; ನಿಕ್ಷೇಪ : (ಶ). [ ←ಮರಾ. ಠೇವಣೀ, ಠೇವಣೇ ]

**ಠೇವಣಿಸು** (ಕ್ರಿ). ಕೂಡು; ಜತೆಯಾಗು (?): ಪಟಾವುಜಡಾವುಜವೆಂದೀ ವಂದೆಸೆಯೊಳ್ವಲಿಯೆ ಕಿನ್ನರಿಯ ಗೊಂದಣದಿಂಚರಂದೋಟುತಿರಲು ಪಾಂಗದ ಟೀವಿ ಠೇವಣಿಸಲುರುಮೆ ನುಣ್ದನಿಗಾಣಿಸೆ (ರೇವಣ. ೩೦-೪೫).

[ ಠೇವಣಿ + – ಇಸು$_3$ ]

**ಠೇವು** (ನಾ). = ಠೇವಣಾತಿ : ಈ ಕಂಪೆನಿಯು ಊರ್ಜಿತಸ್ಥಿತಿಯನ್ನು ಹೊಂದಿದ್ದರಿಂದ ಕಂಪೆನಿಯ ಠೇವು ಬಹು ಬೆಲೆಯುಳ್ಳದ್ದಾಗಿ ಎಣಿಸಲ್ಪಡು ತ್ತಿತ್ತು (ಇಂಗ್ಲಇ. ೯). [ ←ಮರಾ. ಠೇವ್ ]

**ಠೊಣಪ** 'ಟೊಣಪ' ನೋ.

**ಠೊಣೆಯ** 'ಟೊಣೆಯ' ನೋ.

**ಠೊಪ್ಪರ$_1$** 'ಟೊಪ್ಪರ' ನೋ.

**ಠೊಪ್ಪರ$_2$** (ನಾ). (?) : ತುರಗಾಕಾರದೆ ಕಾಳರಕ್ಕಸನೆ ಮೂಜಿಂ ಲೋಕವಂ ನುಂಗಲೇಟ್ಟುರುತಿರ್ಪಂತಿಳಿಯಿಂ ಮುರಾಗ್ರ ಹತಿಯಿಂ ನುಗ್ಗೊರ್ತುವಾಶಾಗಜೋತ್ಕರಮಂ ಪೋಗೊದೆವಬ್ಧಿಯಂ ಸರಳ ಪರ್ಶಾಶ್ವಂಗಳಂ ನೀಳ್ಕಿ ಠೊಪ್ಪರದಿಂ ಪಾಯ್ವಳವಿಂದೆ ಕೇಶಿ ಪರಿತಂದು ಕಂಸನಾದೇಶದಿಂ (ಜಗವಿ. ೫-೪೪); "ವೇಗಾತಿಶಯ" (ಆಯ್ಕಾಶಾ.) [ ? ]

**ಠೊಪ್ಪು** (ನಾ). ಒಂದು ಅನುಕರಣ ಪದ : ಛಟಪಟ ಸುರುಬುರು ಬುಸ್ಸುಬುಸ್ಸೆಂದು ಚೀರ್ಚಟ ಠೊಪ್ಪುಠೊಪ್ಪು ಢಪ್ಪೆಂದು ಪಟಾಕಿ ಕೋಟಾಕೋಟಿ ಸುಟ್ಟವು (ಭರತ. ೨೨-೬೭).

**ಠೋಕ** 'ಠೋಕು' ನೋ.

**ಠೋಕತಾಳೆ, ಟೋಕುತಾಳೆ** (ನಾ). ಅಂದಾಜು ; ಸರಿಸುಮಾರು : ಠೋಕತಾಳೆಯ ಜಾತಿಗೆ ಸೇರಿದ ಒಂದು ಪದ್ಧತಿಯಿಂದ . . . ಸಂಖ್ಯೆಗಳನ್ನು ಹೊಂದಿಸಿಡುತ್ತಾರೆ (ಗಾಣಿಪ. ೧೯೨). **ಟೋಕುತಾಳೆ :** (ಶ).

[ ←ಮರಾ. ಠೋಕತಾಳಾ ]

**ಠೋಕಮಾರಾಟ, ಟೋಕುಮಾರಾಟ** (ನಾ). ಒಟ್ಟುಗಟ್ಟಲೆ ವ್ಯಾಪಾರ; ಸಗಟುವ್ಯಾಪಾರ : ಈ ಆಯ್ದು ಗ್ರಾಮಗಳಲ್ಲಿ ಠೋಕಮಾರಾಟ ಕಿರುಕುಳ ಮಾರಾಟ ಈ ಯೆರಡು ಪ್ರಕಾರ ವ್ಯಾಪಾರ ನಡೆಯುತ್ತಿದೆ (ಕಭಾಗ. ೩೦೪). **ಟೋಕುಮಾರಾಟ :** ಅದು ಟೋಕುಮಾರಾಟದ ಅಂಗಡಿ ; ಅಲ್ಲಿ ಚಿಲ್ಲರೆ ಸರಕು ಸಿಗುವುದಿಲ್ಲ (ರೂಢಿ).

[ ಠೋಕ (<ಠೋಕು) + ಮಾರಾಟ (<ಮಾಱಾಟ) ]

**ಠೋಕರ್, ಟೋಕರ, ಟೋಕರು, ಠೋಕರ** (ನಾ). ೧. ಪೆಟ್ಟು ; ಹೊಡೆತ : ಹೆಚ್ಚಾಗಿ ಪ್ರಣಯ ಪ್ರಕರಣಗಳಲ್ಲಿ "ಠೋಕರ್" ತಿಂದವರೇ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ (ನಾಡಿಗೇ. ೧೯೫). **ಟೋಕರ :** ೨. ಮೋಸ ; ವಂಚನೆ : "ಡಾಕ್ಟರರೇ ನಿಮಗೆ ಟೋಕರ ಕೊಟ್ಟ, ನಿಮಗೆ ಟೊಪ್ಪಿಗೆ ಹಾಕಿದ" ಎಂದು ನುಡಿದರು (ಕೃಹಿಕಾ. ೧೩೧). **ಟೋಕರು :** ೩. (ಕೂಲಿ, ಸಂಬಳ ಮೊದಲಾದುವುಗಳಲ್ಲಿ) ಕಡಿತ ; ಖೋತ ; ಲೋಪ : ಅಂಗಿಂಗಾಡಿ ಎಳ್ಳು ತಿಂಗಳ ಸಂಬಳಕ್ಕೆ ಟೋಕರು (ಮಾಂಗೆಲ್ಯ. ೬೦). **ಠೋಕರ :** ೨. ನಾಗರಾಜ ಕೊಡುವ ಹಣಕ್ಕೆ ಠೋಕರ ಕೊಟ್ಟಾ ಯಿತು (ಮುಗಿಯಿ. ೨೫೭). [ ←ಹಿಂ. ಮರಾ. ಠೋಕರ್ ]

**ಠೋಕರ** 'ಠೋಕರ್' ನೋ.

**ಠೋಕವ್ಯಾಪಾರಿ** (ನಾ). ಒಟ್ಟು ಸರಕನ್ನು ಮಾರಾಟಮಾಡುವವನು ; ಸಗಟುವ್ಯಾಪಾರಿ : ಠೋಕವ್ಯಾಪಾರಿಗಳಿಗೆ . . . ಒಂದು ಕೇಂದ್ರವಿತ್ತು (ಇಪ್ಪಳ. ೩೧೬). [ ಠೋಕ (<ಠೋಕು) + ವ್ಯಾಪಾರಿ ]

**ಠೋಕು, ಟೋಕಂ, ಠೋಕ** (ನಾ). ೧. ಪೂರ್ಣಸಂಖ್ಯೆಯ ವಸ್ತು ; ಒಟ್ಟುಗಟ್ಟಳೆ ; ಸಗಟು : ಉತ್ಪಾದಕ ಮತ್ತು ಠೋಕು ಕೊಳ್ಳುವವ, ಇಲ್ಲವೆ ಠೋಕು ಮಾರುವವ ಮತ್ತು ಚಿಲ್ಲರೆವ್ಯಾಪಾರಿ ಇವರ ನಡುವಿನ ಸರವಳಿಯೆಂದರೆ ಪ್ರಚಾರಕ (ತಕ್ಕ ಡಿ. ೧೦೩). **ಟೋಕು** : ೧. 'ಟೋಕು ಮಾರಾಟ' ಪರಾ. (ಗು). ೨. ಹೆಚ್ಚುಕಡಮೆಯ ; ಸರಿಸುಮಾರಿನ. 'ಟೋಕುತಾಳೆ' ಪರಾ. **ಠೋಕ** : ೧. ಒಂದೇ ಜಾತಿಯ ಕಿರಾಣಿ ಜೀನಸು ಠೋಕ ಅಂದರೆ ಒಂದು ಭಂಡಿಗೆ ಭರ್ತಿ ಆಗುವಷ್ಟು . . . ತರಿಸಿಕೊಂಡರೆ, ದಾಗಿನೆ ಒಂದಕ್ಕೆ ಒಂದೂಮುಕ್ಕಾಲು ಆಣೆ (ಮುಂಬವ್ಯಾ. ೮). 'ಠೋಕ ಮಾರಾಟ' ಪರಾ. ೩. ಒಟ್ಟುಗಟ್ಟಳೆಯ ; ರಕಮಿನ : ಕೆಲವರು ಠೋಕಜೀನಸಿನ ಸಂಬಂಧದ ಶರ್ತುಗಳ ವಿಷಯವಾಗಿಯೂ . . . ಸೂಚನೆಗಳನ್ನು ಮಾಡುವವರಾದರು (ಮುಂಬವ್ಯಾ. ೧). [ ←ಮರಾ. ಠೋಕ್ ]

**ಠೋಪರ** 'ಟೊಪ್ಪರ' ನೋ.

**ಠೋಲಿ** 'ಟೋಳಿ' ನೋ.

**ಠೌಳಿ**$_1$ 'ಟವಳಿ' ನೋ.

**ಠೌಳಿ**$_2$ 'ಟವುಳಿ$_2$' ನೋ.

**ಠೌಳಿಕಾಱ** 'ಟವಳಿಗಾಱ' ನೋ.

**ಠೌಳಿಗ** 'ಟೌಳಿಗ' ನೋ.

**ಠೌಳಿಗಾರ** 'ಟವಳಿಗಾಱ' ನೋ.

*

# ಡ

**ಡ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತುಮೂರನೆಯ ಅಕ್ಷರ; ಡಕಾರ. ೨. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ: "ಗಡಬಲಂ ಮೂಱಕ್ಕು" (ಮಂಗರಾ. ೧೦೪-೧೦).

**ಡಂಕ** 'ಡಕ್ಕೆ' ನೋ.

**ಡಂಕಣ** (ನಾ). ಒಂದು ಬಗೆಯ ಚರ್ಮವಾದ್ಯ ; "ಬಾಂಡ್ಲಿಯ ಅಗಲಕ್ಕಿರುವ ತಬಲಗಳನ್ನು ಜೋಡಿಸಿದ ವಾದ್ಯವಿಶೇಷ" (ಪನ್ನೂರು. ಕೋಶ) ; ಅವರಾದ ಮೇಲೆ ನನ್ನೂರಿನ ಕುರುಡು ರಂಗಣ್ಣನ ವಾದ್ಯ : ಒಂದು ಶ್ರುತಿ, ಒಂದು ಮೋಹರಿ ಮತ್ತು ಒಂದು ಡಂಕಣ (ನಮ್ಮೂರು. ೮೨).
[ <ಡಕ್ಕೆ ]

**ಡಂಕಿಡು** (ಕ್ರಿ). ದ್ವೇಷಸಾಧನೆಗಾಗಿ ಸೇಡಿಟ್ಟುಕೊಳ್ಳು,-ಮಾತ್ಸರ್ಯವಿಡು : ಬ್ಯಾಡೋ ತಮ್ಮಾ, ಅದು ತರಾ ಅಲ್ಲ; ಡಂಕಿಟ್ಟು ಒಮ್ಮೆ ಹಿಡಿದೀತು (ಧರ್ಮಾರಿ. ೮೪) ; ನೋಡಿರಲ್ಲಾ ಮಗಾ, ಫೇಂಕೂ ಪಾಂಡೇನ ಮ್ಯಾಳೆ ಡಂಕಿಟ್ಟಿದ್ದಾನೆ (ಕುರಿಹಿಂ. ೦೯). [ ಡಂಕು + ಇಡು$_1$ ]

**ಡಂಕಿಸು** (ಕ್ರಿ). (?): ಕಟ್ಟಿದುವೆತ್ತಿ ಸೋರ್ವ ಮದಮಂ ಕಿಡೆ ಡೆಂ [ ಡಂ ] ಕಿಪ ಹಸ್ತಿ ಕಣ್ಣನೀರಿಟ್ಟುವು ದಂಡೆಯಿಂ ಕಿದಱಿ ಕೆಂಡಮುದಗ್ರ ಹಯಾಳಿ ನುರ್ಗಿ ಮೇಗೊಟ್ಟಿದ ಕೈದುಗಳ್ಮಱಿದು ನಿಂದುವು ತೇರ್ಗಳರೆ ನುಂಗಿದಂತೆ ಸಾಲಿಟ್ಟುವು ಮುಂದೆ ಕಟ್ಟಿದೊಱೆಯಂ ನೆಱೆದುರ್ಚಿ ಪದಾತಿಹೇತಿಗಳ್ (ಅಮಂಪು. ೦೩-೮೬). [ ? + – ಇಸು$_3$ ]

**ಡಂಕು** (ನಾ). ಸೇಡು ; ಹಗೆ ; ಮತ್ಸರ : ಪರಕೀಯಜನರು ಆಗಿನ ಕಾಲದ ತಮ್ಮ ಹಗೆಗಳ ಮೇಲಿನ ಡಂಕಿನಿಂದ ಅವರ ವೈಭವಚಿಹ್ನಗಳನ್ನು ತುಂಡರಿಸಿದ್ದಾರೆ (ಕಗವ್ಯ.೩೩).
[<ಹಿಂ. ಮರಾ. ಡಂಕ, ಡಂಖ / ಪ್ರಾ. ಡಂಕ = ಚೇಳಿನ ಕೊಂಡಿ. ]

**ಡಂಕುತಪ್ಪಿಸು** (ಕ್ರಿ). ದ್ವೇಷವನ್ನು ಹೋಗಲಾಡಿಸು ; ಮತ್ಸರವನ್ನು ಬಿಡಿಸು ; ಸೇಡು ಇಟ್ಟುಕೊಳ್ಳದಂತೆ ಮಾಡು : ಇವರಿಗೆ ಕೇಡು ಬಗೆದವನು ಇವರ ಡಂಕು ತಪ್ಪಿಸಲಾರನು (ಕರ್ನಾಇ. ೨೯).
[ ಡಂಕು + ತಪ್ಪಿಸು ]

**ಡಂಕುಹಿಡಿ** (ಕ್ರಿ). ಸೇಡನ್ನು ಹೊಂದಿರು ; ಮತ್ಸರಿಸು : ಮನಸ್ಸಿನಲ್ಲಿ ಡಂಕುಹಿಡಿದಿದ್ದ ಕೆಲವು ಡಾಕಜನರು ರಾತ್ರಿ ಈಸಿ ನದಿಯನ್ನು ದಾಟಿ ಬಂದು ಕಾವಲುಗಾರರನ್ನು ಕೊಂದು, ಘೋರಿಯ ಪ್ರಾಣವನ್ನು ತೆಗೆದರು (ಹಿಂಮುಸ. ೪೩). [ ಡಂಕು + ಹಿಡಿ$_1$ (<ಪಿಡಿ$_1$) ]

**ಡಂಕೆ**$_1$ 'ಡಂಗೆ$_1$' ನೋ.

**ಡಂಕೆ**$_2$ (ನಾ). (?) : ಆನೆಗಂಬಾರಿ ಮನಿಯು ಒಂಟಿಗೆ ಡಂಕೆಯು ಮನಿಯು ಪೌಜು ದಂಡಿಗೆ ಪೌಳಿಯು (ಕನ್ನಜಾ. ೩೬೫). [ ? ]

**ಡಂಗ**$_1$ 'ಡಂಗೆ$_1$' ನೋ.

**ಡಂಗ**$_2$**,** ಡಂಗೆ$_2$ (ನಾ). ೧. ಬೆಟ್ಟಗಳ ಘಾಟಿಮಾರ್ಗಗಳ ಬುಡದಲ್ಲಿ ಸುಂಕದ ವಸೂಲಿಗಾಗಿಯೂ ಫಲವತ್ತಾದ ಪ್ರದೇಶಗಳ ರಕ್ಷಣೆಗಾಗಿಯೂ ನಿಯಮಿತವಾದ ಠಾಣ್ಯ ; ಕಾವಲು ಕಟ್ಟೆ : ಪೊಂಗುವ ಮಲೆಪರ ಮಲೆಗಳ ಡಂಗಂಗಳ್ ಮಲೆವ ಮಂಡಲಂಗಳ್ ಪ್ರತ್ಯಂತಂಗಳೆನಲೊಳವೆ (ಶಂಪಭಾ. ೯-೩೯) ; ಅದಟರೆಮೆಂದು ಬೀಗಿ ಬೆಸೆದಿರ್ಪ್ಪನಿತಲ್ಲದೆ ಪೂಣ್ದು ಪೋಗಿ ಡಂಗದ ಸವಲಕ್ಕವಿಂಜದ ಮರಾಳದ ಲಂಜಿಯ ಚಕ್ರಗೊಟ್ಟದಗ್ಗದ ನೃಪರಂ ಪಳಂಚಲೆದು ವೀರಶಿಖಾಮಣಿ ನಾಗವರ್ಮ್ಮನಂದದೆ ನೆಲನಂ ನಿಮಿರ್ಚ್ಚಿದವರಾರ್ಗ್ಗಳ ಚಕ್ರಿಯ ದಂಡನಾಯಕರ್ (ಸಾಂದೇಶ್. ೩-೦೫ ; 1047). ೨. ಕೋಟೆ ; ದುರ್ಗ. 'ಡಂಗಾಯ್ತ' ಪರಾ. ೩. ಹಟ; ಪಟ್ಟು. 'ಡಂಗಕೂರು' ಪರಾ. **ಡಂಗೆ**$_2$ : ೩. 'ಡಂಗೆಗೊಳ್$_2$' ಪರಾ. [ <ಸಂ. ದ್ರಂಗ ]

**ಡಂಗಕೂರು** (ಕ್ರಿ). ಪಟ್ಟುಹಿಡಿ ; ಹಟಹಿಡಿ : ಕಡೆಗೊಂದು ದಿನ ಈರಯ್ಯನ ಚಿಕ್ಕ ಹೆಂಡತಿ . . . ನನ್ನನ್ನು ತೌರುಮನೆಗೆ ಕಳಿಸಿಬಿಡಿ ಎಂದು ಡಂಗಕೂತಳು (ಜಂದಕೋ. ೦೩೬). [ ಡಂಗ$_2$ + ಕೂರು$_2$ (<ಕೂರ್$_2$)]

**ಡಂಗಪಾಲಕ** (ನಾ). ಘಾಟಿಮಾರ್ಗದಲ್ಲಿರುವ ಸುಂಕದ ಕಟ್ಟೆಯ ಕಾವಲುಗಾರ ; ಡಂಗಾಯ್ತ : ಡಂಗಪಾಲಕರೆಲ್ಲ ಮರೆಯಾಗಿ ಬಂದು ಅರ್ಜುನನ ವಶವಾದರು (ಶಬ್ದವಿ. ೬೪).
[ ಡಂಗ$_2$ + ಪಾಲಕ ]

**ಡಂಗರಿಸೌತೆ** (ನಾ). ಒಂದು ಬಗೆಯ ಸೌತೆ : "ಡಾಗರೀ–ಡಂಗರಿ ಸೌತೆ" (ಒಷಧಿ. ೬೪). [ ಡಂಗರಿ₀ (P←ಹಿಂ. ಡಂಗರೀ) + ಸೌತೆ (<ಸವುಂತೆ) ]

**ಡಂಗಹಾಕು** (ಕ್ರಿ). ೧. ಘಾಟಿಮಾರ್ಗದಲ್ಲಿ ಸುಂಕದ ಕಟ್ಟೆಯನ್ನು ಸ್ಥಾಪಿಸು,–ಕಾವಲು ಕಟ್ಟೆಯನ್ನೇರ್ಪಡಿಸು. ೨. (ಅಲಂ) ಕಾದು ಕುಳಿತಿರು: ಆ ಶಬ್ದಕ್ಕಿದ್ದ ಠಾಣ್ಯ, ಸುಂಕದ ಕಟ್ಟೆ ಎಂಬ ಮೂಲಾರ್ಥ ಕಾಲಕ್ರಮದಲ್ಲಿ ಮಾಯವಾಗಿ 'ಕಾದು ಕುಳಿತಿರುವುದು' ಎಂಬಷ್ಟು ಮಾತ್ರ ಇಂದಿನ 'ಡಂಗುಹಾಕು' ಎಂಬ ಪಡೆನುಡಿಯಲ್ಲಿ ಇನ್ನೂ ಉಳಿದುಕೊಂಡು ನಿಂತಿದೆ (ಶಬ್ದವಿ. ೭೩). [ ಡಂಗ₂ + ಹಾಕು (<ಪಾಯ್ಕು₁) ]

**ಡಂಗಹೊಡೆ** (ಕ್ರಿ). = ಡಂಗಕೊರು : ಊರಿಗೆ ಸೇರಿದ ಆನಂದ ಸುಬ್ಬಯ್ಯ ನವರಿಗೆ ಡಂಗಹೊಡೆದು ಪ್ರೀಮಿಯಮ್ ಹಣವನ್ನು ಮರುದಿನವೇ ಕಾಸರಗೋಡಿಗೆ ಕಳುಹಿಸಿಕೊಟ್ಟನು (ಜಗುಬ. ೭೩).
[ ಡಂಗ₂ + ಹೊಡೆ₁ (<ಪೊಡೆ₁) ]

**ಡಂಗಾಗು** 'ದಂಗಾಗು' ನೋ.

**ಡಂಗಾಯಿತ** 'ಡಂಗಾಯ್ತ' ನೋ.

**ಡಂಗಾಯ್ತ**, ಡಂಗಾಯಿಂತ (ನಾ). ಕೋಟೆಯ ರಕ್ಷಣೆ ಮಾಡುವವನು; ದುರ್ಗರಕ್ಷಕ. 'ಅಡಂಗಾಯ್ತ'ಪರಾ. **ಡಂಗಾಯಿತ**:'ಅಡಂಗಾಯಿಂತ₁' ಪರಾ. [ ಡಂಗ₂ + – ಆಯ್ತ ]

**ಡಂಗಾಳಿ** (ನಾ). (ಅಕ್ಕಿ ಮೊದಲಾದುವುಗಳನ್ನು ಅಳೆಯಲು ಉಪಯೋಗಿಸುವ) ಒಂದು ಅಳತೆ; ಒಂದು ಪರಿಮಾಣ : ಲಷ್ಕರಿನ ಖರ್ಚಿನ ಬಗ್ಗೆ ತಮ್ಮ ಕಡೆಯಿಂದ ಐದು ಲಕ್ಷ ಡಂಗಾಳಿ ಅಕ್ಕಿ ಕೊಡಿಸಬೇಕು (ರಾಜೇಂದ್ರ. ೪೦). [ ? ]

**ಡಂಗು** 'ದಂಗು' ನೋ.

**ಡಂಗುರ**, ಡಂಗೂರ, ಡಂಗೋರೆ (ನಾ). ೧. ತಮಟೆ ಮುಂತಾದ ವಾದ್ಯಗಳನ್ನು ಬಾರಿಸಿ ಅಥವಾ ಜಾಗಟೆಯನ್ನು ಹೊಡೆದು ಯಾವುದಾದರೊಂದು ವಿಷಯವನ್ನು ಬಹಿರಂಗಪಡಿಸುವುದು,–ಸಾರುವುದು,–ಪ್ರಸಿದ್ಧಪಡಿಸುವುದು : ಮಾಡಿದನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ (ಬಸವ. ೨೩೪); ನೃಪಾಲಕಂ ಸ್ವಯಂವರ ಶುಭವಾರ್ತೆಯುತ್ಸವದ ಡಂಗುರವಂ ಪುರದೊಳ್ ನಿವಿರ್ಚಿದು (ನಳಚಂ. ೨೩೩); ಬಾದಶಹನು . . . ಈ ಹೊತ್ತು ಕೊತವಾಲನ ತಲೆ ಹೊಡೆಸುತ್ತೇವೆಂದು ಡಂಗುರವ ಸಾರಿಸಿದನು (ಮುಂಬಯಿ. ೪–೨೦) ೨. ಡಂಗುರ ಸಾರಲು ಹೊಡೆಯುವ ತಮಟೆ ಮೊದಲಾದ ವಾದ್ಯ: ನರಕದ ದುಃಖಮನೆಯ್ದಲ್ ಪರಿಯುತ್ತುಂ ಬನ್ನಿಮಾಗಳೆಂದೋವದೆ ಡಂಗುರವಂ ಪೊಯ್ಯುವ ತೆಱದಿಂ (ಸಮಪ. ೦೨–೬೬); ಪದ್ಮಕಾರಾಧ್ಯನಿಳೆಗೆ ಪರಮಗುರುವವನಡಿವಿಡಿದು ಬರ್ದುಕಿ ಮೆಂದೊಲ್ದು ವರುಣನೆಲ್ಲರ್ ನೋಡಲೆಂದು ಪಶ್ಚಿಮಗಿರಿಶಿಖರವೇಱಿ ಪೊಯ್ದು ಮಾಣಿಕದ ಡಂಗುರ ಪೊಯೆನೆ ಸಂಧ್ಯಾರ್ಕಬಿಂಬಮೆಸೆಗುಂ (ಪದ್ಮರಾ. ೮–೬೩); ಏಳಿ ಭುಜಬಲವುಳ್ಳವರು . . . ಬಿಲುವಿಡಿದು ಯಂತ್ರದ ಕೋಲುಗಳ ಕೇವಣವುದೆಂದರು ಹೊಯ್ದು ಡಂಗುರವ (ಕುವ್ಯಾಅ. ೦೫–೦); ತಳತಳನೆ ತೊಳಪ ನವರತ್ನ ರಾಶಿಗಳು ಜನಗಳಿಗಿರಲೆಂದು ಡಂಗುರವ ಪೊಯ್ಸಿದ (ಜ್ಞಾನಚಂ. ೦–೨೦); ಹೊಯ್ಯೋ ಡಂಗುರವ ಜಗದಯ್ಯನಯ್ಯ ಶ್ರೀ ಹರಿಯಲ್ಲದಿಲ್ಲವೆಂದು (ಪುರಂದ. ೨–೨ ಪಲ್ಲವಿ). **ಡಂಗೂರ**: ೧. ರಾಜಾಜ್ಞೆಯ ಮೇರೆಗೆ ಉತ್ಸವವು ನಡೆಯುವಂತೆ ರಾಜವೀಧಿಗಳಲ್ಲಿ ಡಂಗೂರವಂ ಹಾಕಿ ಸಾರುತ್ತ ಬರುತ್ತಿರಲು (ಕಗದ್ಯ. I, ೮); ಶ್ರೀದೇವಿಯನ್ನು ಹುಡುಕಿಕೊಟ್ಟವರಿಗೆ ಸಹಸ್ರ ಚಿನ್ನದ ಮೊಹರಗಳನ್ನು ಕೊಡುವುದಾಗಿ ಡಂಗೂರ ಹೊಡೆಸಿದನು (ಶ್ರೀರಾಯ. ೦೩೨). **ಡಂಗೋರೆ**: ೧. ಒಂದು ಪ್ರಕಟಣೆಯನ್ನು ಹೊರಡಿಸಿ ಅದರ ಕನ್ನಡ ಅರ್ಥವನ್ನು ಡಂಗೋರೆಯಿಂದ ಸಾರಿ ತಿಳಿಸಲು ಏರ್ಪಡಿಸಿದನು (ಚಿಕರಾ. ೩೦೬). **ಡಂಗಾರಭೇರಿನಿರ್ಘೋಷಣ**, **ಡಂಗಾಣಭೇರಿನಿರ್ಘೋಷಣ** = ಒಂದು ಬಿರುದು : ಡಂಗಾರಭೇರೀನಿರ್ಘೋಷಣ ಸಮರಯಿಕಭೀಷಣ . . . ಶ್ರೀಮನುಮಹಾಮಂಡಲೇಶ್ವರ ಸಿಂಗರಸರು (ಸೌಇಇ. XX, ೮೩–೯; 1125); ಶ್ರೀಶಿಲಾಹಾರವಂಶೋದ್ಭವಂ ವಿಭವಾಮರೇಂದ್ರಂ ಡಂಗಾಣಭೇರೀನಿರ್ಘೋಷಣಂ (ಸೌಇಇ. XX, ೦೨೭–೦೪ ; 1180). **ಡಂಗುರವಂ ಬಡಿ** = ಡಂಗುರಂಬೊಯ್: ನಂಬಿ ಶಂಭು ಸಮಸ್ತ ಭಕ್ತಾಡಂಬರಕೆ ಹೊಣೆಗೊಡು ಡಂಗುರವಂ ಬಡಿದ ಮೆಱೆಮಿಂಡನಾರಂ ಮೆಱೆದನಾ ಶಿವನು (ಬಸವ. ೨೬ ಸೂಚನೆ). **ಡಂಗುರವ ಸಾಱು**=**ಡಂಗುರಂಬೊಯ್**: ಭರತೇಶನಾದಿರಾಗ ಬೇಡವೆಂದಿಳೆಗೆ ಡಂಗುರವ ಸಾಱುತ ಸಾಗುವಂತೆ (ಭರತ. ೩೪–೦೧೩).
[ ದೇ.೩ ತುಳು. ಡಂಗುರೊ, ಡಂಗರ, ಡಂಗ್ರ ; ತೆಲು. ಡಂಗುರ ]

**ಡಂಗುರಂಪೊಯ್** 'ಡಂಗುರಂಬೊಯ್' ನೋ.

**ಡಂಗುರಂಪೊಯಿಸು** 'ಡಂಗುರಂಬೊಯ್ಯು' ನೋ.

**ಡಂಗುರಂಬೊಯ್**, ಡಂಗುರಂಪೊಯ್, ಡಂಗುರಪೊಯ್, ಡಂಗುರ ಹುಯ್ಯು, ಡಂಗುರಹೊಯ್ (ಕ್ರಿ). ಡಂಗುರವನ್ನು ಹೊಡೆ; ತಮಟೆ, ಡೋಲು ಅಥವಾ ಜಾಗಟೆಯ ಶಬ್ದದೊಡನೆ ಸಾರು,–ಪ್ರಸಿದ್ಧಪಡಿಸು : ಗುರುಲಿಂಗಜಂಗಮದೆ ಪರವಿಲ್ಲವಿಲ್ಲೆಂದು ಧರಣಿಯೊಳು ಡಂಗುರಂಬೊಯ್ವುದಿಂದೆ (ಜಾಸಂಕ. ೦–೨೪); ಸರಭಸದಿಂ ಡಂಗುರಂಪೊಯ್ವೇಟ್ಟಿಂ (ಮಹಾಸೀ. ೬–೪೬). **ಡಂಗುರಂಪೊಯ್** : ಈ ಮಾತು ದೇಶದೊಳು ಡಂಗುರಂ ಪೊ[ಪಾಠಾಂ. ಬೊ]ಯ್ವಂತೆ (ಕೆಂಚ. ದೀ. ೩೦೨–೦೭). **ಡಂಗುರಪೊಯ್** : ತನ್ನ ದಶಶತ ಕರದಿ ಗಗನವೆಂದೆಂಬ ಜೇಗಟೆಯಿಂದ ಧರೆಗೆ ಡಂಗುರಪೊಯ್ಯಲೆಂದಂದು ನಿಂದಿರ್ದನೋ (ಶಿದ್ಧರಾ. ೨–೮). **ಡಂಗುರಹುಯ್ಯು** : "ಸಾರು, ಬೀರು, ಡಂಗುರಹುಯ್ಯು" (ಕಂನುಹು. ೯೦). **ಡಂಗುರಹೊಯ್** : (೬). [ ಡಂಗುರ + ಪೊಯ್₁ ]

**ಡಂಗುರಂಬೊಯ್ಯು**, ಡಂಗುರಂಪೊಯಿಸು, ಡಂಗುರಪೊಯಿಸು, ಡಂಗುರಹೊಯಿಸು, ಡಂಗುರಹೊಯ್ಯು (ಕ್ರಿ). ತಮಟೆ, ಡೋಲು ಅಥವಾ ಜಾಗಟೆಯ ಧ್ವನಿಯೊಡನೆ ಸಾರುವಂತೆ ಮಾಡು,–ಘೋಷಣೆ ಮಾಡಿಸು : ಈ ಕುಮಾರನನೆತ್ತಿದಂಗೆ ಬೇಡಿತ್ತುಂ ಕುಡುವೆನೆಂದು ಡಂಗುರಬೊಯ್ಸಲೊಡಂ (ಪಂಚತಂ. ೦೦೩–೦೫); ಠಾವೆಲ್ಲರುಂ ಮಾಱ್ಪುದಂ ಪುರದುತ್ಸಾಹಮನೆಂದು ಕೂಡೆ ಪಡೆವಳ್ಳಂ ಡಂಗುರಬೊಯ್ಸಿದಂ (ಅನಂತ. ೯–೫೯); ತುಂಬಿಯುಲಿಯಿಂದಂ ಡಂಗುರಂಬೊಯ್ಸುತುಂ (ಶಬ್ದಮಣಿ. ೯೮); ಸ್ಮರಕಾಲಮಾಯಾದಿಗಳ್ಗಿಡದ ಪದದೊಳ್ ತೊಡರನಿಕ್ಕಿ ಡಂಗುರಂಬೊಯ್ಸಿ ವರ್ತಿಸುವವರಂ (ಪದ್ಮರಾ. ೩–೭); ಸಾಱಿಸಿ ಡಂಗುರಂಬೊಯ್ಸಿ ಪೊಱ ಮಡುತಿರೆ (ಜೈಮಿಭಾ. ೦೦–೪೭). **ಡಂಗುರಂಪೊಯಿಸು** : ಪುರದೊಳಗೆ ಡಂಗುರಂಪೊಯಿಸಿ[ಪಾಠಾಂ.ಬೊಯ್ಸಿ]ದಂ (ಜೈಮಿಭಾ. ೦೭–೩೦). **ಡಂಗುರಪೊಯಿಸು** : ಧರಣೀಶರೆಲ್ಲರೆನ್ನಯ ಪಳಸುತೆ ಲಕ್ಷ್ಮಿಯ ವರ ಸ್ವಯಂವರ ಮಂಟಪಕೆ ಭರದಿಂ ರಾಜಧಾನಿಗೆ ಬಹುದೆಂದು ಡಂಗುರಪೊಯಿಸಿದನು ಲೋಕದಲಿ (ಜೀವಂಸಾಂ. ೦೨–೧೨); ಅಂಬರಚರ ಜನಪದದೊಳ್ ಡಂಗುರಪೊಯಿಸಿದಳು (ಜಯಕಾ. ೦೩–೦೫). **ಡಂಗುರಹೊಯಿಸು** : ಮಾರನೆ ತಿಂಗಳೆ ಭಾಯ್ಯಭಾಗೆಯಂ ಡಂಗುರ ಹೊಯಿಸುತಂ (ಕೊಲ್ಲಾಪ. ೦೮–೨೩; 1235); ರಾಜಶಾಸನಗಳನ್ನು ಎಂದರೆ ರಾಜಾಜ್ಞೆಗಳನ್ನು ಪ್ರಜೆಗಳಿಗೆ ಡಂಗುರ ಹೊಯಿಸಿ ತಿಳಿಸಬೇಕೆಂದೂ . . . ಶುಕ್ರನೀತಿಯು ತಿಳಿಸುತ್ತದೆ (ಕಪಾಅ. ೦೪). **ಡಂಗುರಹೊಯ್ಯು**: ಊರಲ್ಲೆಲ್ಲಾ ಡಂಗುರಹೊಯ್ಸಿದರು (ರೂಢಿ). [ ಡಂಗುರ + ಪೊಯ್ಯು ]

**ಡಂಗುರಗೇಳ್** (ಕ್ರಿ). ಡಂಗುರದ ಘೋಷಣೆಯನ್ನು ಕೇಳು : ಆಗಳಾ ಡಂಗುರಗೇಳ್ದು ಜನರೆಲ್ಲ ಬೇಗದಿಂ ಸಡಗರಗೂಡಿ (ಅನಂಚ. ೦೩–೬೬).
[ ಡಂಗುರ + ಕೇಳ್ ]

**ಡಂಗುರನಾದ** (ನಾ). ಡಂಗುರದ ಶಬ್ದ: ಬೀದಿಬೀದಿಗಳೊಳಗೆ ಡಂಗುರ ನಾದವೆಸೆದವು (ಶಬ್ದಾ.ಶ. ೧-೧೧). [ ಡಂಗುರ + ನಾದ$_1$ ]

**ಡಂಗುರವಾರ್ತೆ** (ನಾ). ಢೋಲು, ತಮಟೆ ಅಥವಾ ಜಾಗಟೆಯ ಧ್ವನಿಯೊಡನೆ ಸಾರಿ ಪ್ರಸಿದ್ಧಿಪಡಿಸಿದ ವಾರ್ತೆ,- ಸುದ್ದಿ: ಆ ಪಟ್ಟಣದ ಜನರು ಡಂಗುರವಾರ್ತೆಯಂ ಕೇಳಿ (ಯನಳ. ೩೭). [ ಡಂಗುರ + ವಾರ್ತೆ ]

**ಡಂಗುರವೊಯ್** 'ಡಂಗುರಂಬೊಯ್' ನೋ.

**ಡಂಗುರವೊಯಿಸು** 'ಡಂಗುರಂಬೊಯ್ಸು' ನೋ.

**ಡಂಗುರಸಾರಿಸು** 'ಡಂಗುರಸಾಱಿಸು' ನೋ.

**ಡಂಗುರಸಾರು** 'ಡಂಗುರಸಾಱು' ನೋ.

**ಡಂಗುರಸಾಱಿಸು,** ಡಂಗುರಸಾರಿಸು (ಕ್ರಿ). = ಡಂಗುರಂಬೊಯ್ಸು: ಊರೂರ್ಗೆ ಸಲೆ ಪೆಂಪೊಗೆದ ಡಂಗುರಸಾಱಿಸಲು ತುಱುಪಟ್ಟಿಯಲಿ ಕೇಳಿ (ಸಾಳ್ವಭಾ. ೨೨-೨೫). **ಡಂಗುರಸಾರಿಸು:** ಊರಿಗೆಲ್ಲಾ ಡಂಗುರಸಾರಿಸ ಬೇಕು (ಮುಖ್ಯ. ೧೨೯). [ ಡಂಗುರಸಾಱು + – ಇಸು$_3$ ]

**ಡಂಗುರಸಾಱು,** ಡಂಗುರಸಾರು (ಕ್ರಿ). ೧. = ಡಂಗುರಂಬೊಯ್. 'ಡಂಗುರಸಾಱಿಸು' ಪರಾ. **ಡಂಗುರಸಾರು:** ೧. ರಾಜದ್ರೋಹಿಗಳು ಡಂಗುರಸಾರಿ ತಮ್ಮ ಕೆಲಸಮಾಡುವುದಿಲ್ಲ (ಭಾರತಿ. ೨೭). ೨. ಎಲ್ಲರಿಗೂ ತಿಳಿಯಂಪಡಿಸು,- ಬಹಿರಂಗಪಡಿಸು: ನಾನು ಬಂದ ಸುದ್ದಿಯನ್ನು ಒಳಗೆ ಡಂಗುರಸಾರಿದರು (ಚಂದ್ರಶಾ. ೦೯). [ ಡಂಗುರ + ಸಾಱು$_1$ ]

**ಡಂಗುರಹುಯ್ಯು** 'ಡಂಗುರಂಬೊಯ್' ನೋ.

**ಡಂಗುರಹೊಡೆ** (ಕ್ರಿ). ೧. = ಡಂಗುರಂಬೊಯ್. ೨. ಎಲ್ಲರಿಗೂ ಸಾರಿ ಹೇಳು; ಪ್ರಚಾರಮಾಡು: ಡಂಗುರ ಹೊಡೆದರೆ ಹೊಂಗರಕನ ಮರ ಕೇಳೀತೋ (ಗಾದೆ). [ ಡಂಗುರ + ಹೊಡೆ$_1$(<ಪೊಡೆ$_1$) ]

**ಡಂಗುರಹೊಯ್** 'ಡಂಗುರಂಬೊಯ್' ನೋ.

**ಡಂಗುರಹೊಯಿಸು** 'ಡಂಗುರಂಬೊಯ್ಸು' ನೋ.

**ಡಂಗುರಹೊಯ್ಸು** 'ಡಂಗುರಂಬೊಯ್ಸು' ನೋ.

**ಡಂಗುರಿಗ** (ನಾ). ಡಂಗುರ ಹೊಡೆಯುವವನು: ಅರಮನೆಯ ಡಂಗುರಿಗರು ಸಾರಿ ಹೇಳಿದ ಆ ಸುದ್ದಿಯೇ ಅಷ್ಟು ವಿಲಕ್ಷಣವಾಗಿತ್ತು (ಕುಗಜ. ೦). [ ಡಂಗುರ + – ಇಗ ]

**ಡಂಗುರಿಸು** (ಕ್ರಿ). ೧. = ಡಂಗುರಂಬೊಯ್: ಶರಣಾಳಿ ಕೂಡೆ ಡಂಗುರಿಸುತೆ ಸತ್ಕಮಂ ನುಡಿಯೆ (ಪಂಪಾಶ. ೯೫): ಮೇಱೆಮಿಂಡ ದೇವಯ್ಯನುಱೆ ನಂಬಿಯೊಳಗು ಮೇಲೆ ಪೊಱಗೆಂದು ಒಲಿದು ಡಂಗುರಿಸೆ (ಭೈರವೇ. ೯-೬೨): ಈಶ್ವರರೂಪನೀತನೀತನ ಪದವನೆಮ್ಮಂತೆ ಸಕಲಜನರು ಒಸೆದಪ್ಪಿ ಕಿಲ್ -ಮುಕ್ತಿಯಪ್ಪುದೆಂಬೀ ಮಾತು ಪುಸಿಯಲ್ಲವೆಂದು ಡಂಗುರಿಸುತೆ ಚರಣದೊಳ್ ಮಿಸುನಿಯಂದುಗೆ ಝಣಝಣೆಂದುಮಡಿಗಡಿಗುಲಿಯೆ (ಚಬಪು. ೫-೪೦); ಧರಣಿಯೊಳಗೆ ಸಾಱೆ ಡಂಗುರಿಪಂದದೆ ಚರಣಾಯುಧಗಳುಲಿದುವು (ಕಂಸವಿ. ೨೩-೬೨). ೨. ಎಲ್ಲರೂ ತಿಳಿಯುವಂತೆ ಮಾಡು; ಪ್ರಕಟಪಡಿಸು; ಸ್ಪಷ್ಟವಾಗಿ ತಿಳಿಸು; ಬಹಿರಂಗಪಡಿಸು: ವಿನುತವೇದಾದ್ಯಖಿಲಶಾಸ್ತ್ರಂಗಳಱೆಕೆಯೊಳ್ ತನಗೆ ಸರಿಯಾರು ಮಿಲ್ಲೆಂಮು ಡಂಗುರಿಸಿ ಭೂಜನವಂದ್ಯನಾಗಿ(ಶದ್ಮರಾ. ೯-೭): ಅಂಗೈಯನ್ನೆತ್ತಿ ಹೋಯೆಂದು ಡಂಗುರಿಸಿದರೆವ್ವಾ ಸ್ವಾಮಿಯಂಬಿಕೆ ಬಿಜಯಂಗೈದಳೆಂದು ಬಾಯ್ದುಳಿಕೆ (ಭರಜ. ೪೭-೦೯); ಪಿರಿಯನೆ ಕವಿ ಕವಿತೆಯನೊಲ್ದರಸುವ ಬಗೆಯಟ್ಟಿ ಪುಲಕಿಸುತೆ ವಿವರಿಸಿ ಡಂಗುರಿಪಂ (ಸಂಕಪ. ೪೭-೯೦):

ಡಂಗುರಿಸಿಕೊಳ್ಳು = ಪ್ರಕಟಪಡಿಸಿಕೊಳ್ಳು; ಹೇಳಿಕೊಳ್ಳು: ತನ್ನ ಕಾಲುರಿಚನ ಹೊಸಬತನವನ್ನಿಲ್ಲಿ ಡಂಗುರಿಸಿಕೊಳ್ಳುತ್ತಿರುವ ಈತನಿಗೆ ಮೊತ್ತಮೊದಲು ಒಲಗದ ಉಚಿತಾಚರಣಪದ್ಧತಿಗಳ ಬಾಲಬೋಧೆಯಾಗಲಿ (ಬಿಟ್ಟಿಅ. ೪೩-೦೨). [ ಡಂಗುರ + – ಇಸು$_3$ ]

**ಡಂಗುಱುಚಾಟ** 'ಅಡಂಗುಱುಚಾಟ' ನೋ.

**ಡಂಗೂರ** 'ಡಂಗುರ' ನೋ.

**ಡಂಗೆ$_1$,** ಡಂಕೆ$_1$, ಡಂಗ$_1$ (ನಾ). (ಕಬ್ಬಿಣ ಅಥವಾ ಮರದಿಂದ ಮಾಡಿದ) ಗುದಿಗೆ; ದೊಣ್ಣೆ; ಬಡಿಕೋಲು: "ಮುದ್ಗರಃ, ದ್ರುಘಣಃ–ಈ ೨ ಡಂಗೆ" (ಹಲಾಯು. ೭೮-೩೨೧); "ದ್ರುಘಣಮೆನೆ ಡಂಗೆ" (ಮಂಗರಾ. ೮೮-೩೭); "ಡಂಗೆಯೆಂದು ಬಡಿಗೋಲ್" (ಕಶಸಾ. ೭-೧೨೧); ಡಂಗೆಯಿಂದೆ ಪೊಡೆ ಪೇರುಡುವಂ (ಮುಹಾಸೀ. ೨-೧೪); ಸುವರ್ಣಚೈತ್ಯಾಲಯಮುಂಟದಱ ಮುಂದೆಯೋರ್ವಂ ಕಬ್ಬುನದ ಡಂಗೆಯಂ ಪಿಡಿದುಕೊಂಡು (ಪುಣ್ಯಾಸ್ರ. ೭-೭೭ ವ). **ಡಂಕೆ$_1$:** "ಬಡಿಗೋಲು ಡಂಕೆ[ಪಾಠಾಂ. ೧]ಟಂಕೆ" (ಶಬ್ದಮಂ. ೩೩); ಬೇಗಂ ಮಂಡೆಯನಿರ್ಪೋಳಾಗಿರೆ ಕರ್ಬುನದ ಡಂಕೆಯಂ ಪೊಯ್ವುದುಂ (ಧರ್ಮಾಮೃ. ೭-೧೦೮). 'ಟಂಕೆ$_1$' ಪರಾ. **ಡಂಗ$_1$:** ಗುಂಡು ತೀವಿದ ಡಂಗದವೋಲ್ ನೇರಿತಲ್ಲದ ಹುಂಡ ಶರೀರಸಂಸ್ಥಾನಮುಮಂ ಯಥಾಕ್ರಮದಿಂ ಮಾಟ್ಕುಂ (ತತ್ತ್ವಸ್ತ್ರ. ೨೯೭). [ <ಪ್ರಾ. ಡಂಗಾ ]

**ಡಂಗೆ$_2$** 'ಡಂಗ$_2$' ನೋ.

**ಡಂಗೆಗೊಳ್$_1$** (ಕ್ರಿ). ದೊಣ್ಣೆಯನ್ನು ತೆಗೆದುಕೊಳ್ಳು; ಕೋಲನ್ನು ಎತ್ತಿಕೊಳ್ಳು; ದಂಡವನ್ನು ಹಿಡಿ: ಮತ್ತರು ಡಂಗೆಗೊಂಡು ಬಡಿಯಲ್ ಚಲದಿಂದೆನಸುಂ ದುರಾಗ್ರಹಂ ಚಿತ್ತದೊಳಾಗೆ (ಕಾವ್ಯಾವ. ೪೫೦).

[ ಡಂಗೆ$_1$ + ಕೊಳ್$_1$ ]

**ಡಂಗೆಗೊಳ್$_2$** (ಕ್ರಿ). ಹಠ ಹಿಡಿ; ಪಟ್ಟುಹಿಡಿ: ಪರಮಾರ್ಥಮಪ್ಪುದಂ ಮಚ್ಚರಿಸದೆ ಕೋಪಿಸದೆ ಡಂಗೆಗೊಳ್ಳದೆ ಪಕ್ಷಕ್ಕುರಿದೇಳದೊಂದೆ ಮನದಿಂ ನಿರುತಂ ಕೇಳ್ವವನೆ ಧರ್ಮದೊಳಗಂ ತಿಳಿಗುಂ (ಧರ್ಮಾಮೃ. ೧-೧೮೧).

[ ಡಂಗೆ$_2$ (< ಡಂಗ$_2$) + ಕೊಳ್$_1$ ]

**ಡಂಗೆಯಂಗೊಳ್** (ಕ್ರಿ). = ಡಂಗೆಗೊಳ್$_1$: ಡಂಗೆಯಂಗೊಂಡು ಕೆಂಗಲ್ಮಸಗಿ ಪರಿವ ಮರುಳ್ಗಲಿಗಳುಂ (ಲೀಲಾವ. ೫-೧೩೩ ವ). [ <ಡಂಗೆಗೊಳ್$_1$ ]

**ಡಂಗೋರೆ** 'ಡಂಗುರ' ನೋ.

**ಡಂಢಣಿಸು** 'ಟೆಂಟಣಿಸು' ನೋ.

**ಡಂಬ$_1$** 'ದಂಬ' ನೋ.

**ಡಂಬ$_2$** (ನಾ). ಸುಮಾರು ಐದುನೂರು ಗ್ರಾಮಗಳ ಮುಖ್ಯಸ್ಥಳ; ಮಡಂಬ (?): ಎಂತುಟಾ ಗ್ರಾಮಗಳು ಡಂಬಗಳಂತೆ ತದು ಡಂಬಗಳು ಪತ್ತನದಂತೆ ಪತ್ತನಗಳು ನಗರದೊಲ್ ನಗರ ಗೀರ್ವಾಣಕಾಂತ ನಮರಾವತಿಗೆ ಪಡಿಯೆಂಬಂತೆ ಮೆಱೆದುದು (ಶಂಕದಾ. ೦-೩೮); "ಊರು" (ಶಂಕದಾ. ೪೦೫). [ <ಮಡಂಬ ? ]

**ಡಂಬಕ, ಡಂಭಕ** (ನಾ). ೧. ಮೋಸಗಾರ; ವಂಚಕ: ಆ ಡಂಬಕನೊಂದು ದಿವಸಂ ರಸಮಂ ತರ್ಪಂ ಬಾಯೆಂದುಸಿರ್ದು (ನೇಮಿಪು. ೪-೮೫ ವ): ಡಂಬೂ ಡಳುಹೂ ಎನ್ನದಯ್ಯಾ ಡಂಬಕನೆಂಬವ ನಾನಯ್ಯಾ (ಬಸವ. ೩೩೭): ಕೆಲಬರ್ ಡಂಬ[ಪಾಠಾಂ. ವಂಚ]ಕರ್ ಬಂದು (ಬಸರ. ೯-೪೦); ಡಂಬಕರು[ಪಾಠಾಂ. ಶಂಬರರು]ನೃಪ ಕರ್ಣಶಕುನಿಗಳೆಂಬವರು (ಕುವ್ಯಾಸ. ೦೨-೮೭); ನಂಬದೇ ನಂಬಿದವನೆಂಬ ಡಂಬಕಗೆನಗೆ ನಂಬುಗೆಯನಿತ್ತು ನಿನ್ನಾಳೆ ನಿಪುದು (ಗೀತಗೋ. ೬೩-೫). ೨. ನಟನೆಯುಳ್ಳವನು; ತೋರಿಕೆಯ ನಡೆನುಡಿಯುಳ್ಳವನು; ಬೂಟಾಟಿಕೆಗಾರ; ಸೋಗಿನವನು: ಎಲ್ಲರ್ಗೆ ಬಸವನಗ್ಗಣಿಗಳಂ ತಾನೀವ ಸಮಯದೊಳಗಲ್ಲಿ ಕೆಲಬರ್ ಡಂಬ[ಪಾಠಾಂ. ವಂಚ]ಕರ್ ಬಂದು (ಬಸರ. ೯-೪೦); ಆಳು ಡಂಬಕನಾಗಿ ತೋಳು ಹಸ್ತವ ತಿರುಹಿ ಕೇಳಿಕೆಯನು ಹೇಳಿ ಸಾಲುದಿನವ ಕಳೆದೆ (ವಿಸಾಸು. ೬೬-೨). ೩. ಮೋಸ; ವಂಚನೆ; ಕಪಟ; ಅಱಿವಿನ ಬಲದಿಂದ ಕೆಲಬರು ಅಱಿಯದವರ ಗೆಲಬೇಕೆಂದು . . . ಡಂಬಕವ ನುಡಿದಹೆವೆಂಬ ಉದ್ದಂಡರ ಗುಹೇಶ್ವರ ಕಂಡಡೆ ಕನಲುವ (ಅವಚಂ. ೦೦೭-೪೮೮); ಬಱಿಯ ವೈಶಿಕದ

ಡೊಂಬಿನ ಡಂಬಕಂಗಳ ವಾರವನಿತೆಯರ (ಬಸಪು. ೧೦-೩೦) ; ಅನಿತಱಂ ದಿವರ ಡಂಬಕದ ಭಕುತಿಗೆ ನಾನು ಮನಗೊಡದೆ (ಸಮ್ಯಕ್ತ್ವ. ೦೨-೨೬). ೪. ಆಡಂಬರ ; ಬೂಟಾಟಿಕೆ : ಈ ಡಂಬಕದ ವೇಷವನು ಹೊತ್ತು ಪಸರಿಸಿಯುಂಬ ಕಾಯಕವೃತ್ತಿಯಲ್ಲದೆ ಸಹಜವಲ್ಲವು (ಬಸಪು. ೬೦-೨೦) ; ಭೂಪಾಲರಾಡಂಬರದ ಛತ್ರಚಮರಂಗಳದೇತಕೆ ಬಯಲ ಡಂಬಕದ ಕೈದು ಗಳಿವೇಕೆ ಸುಡು ಜೀವದಾಶೆಯಂ (ಜೈಮಿಭಾ. ೧೭-೫೮) ; ಭಸುಮುವ ಋಷಿಗಳು ರಚಿಸೀದರೆಂದಿಯಾ . . . ಪುಸಿಯ ತೋರಿದರು ಡಂಬಕವನ್ನು ಮಾಡಿ (ವಿಸಾಸು. ೧೦-೩). **ಡಂಭಕ:** ೧. ಒಂದನಾಡಹೋಗಿ ಒಂಬತ್ತನಾಡುವ ಡಂಭಕರ ಮೆಚ್ಚ ಕೂಡಲಸಂಗಮದೇವ (ಬಸವ. ೦೧೪) ; ಇನ್ನು ದುರ್ಯೋಧನ, ಕರ್ಣ, ಶಕುನಿ ಮೊದಲಾದವರು ಡಂಭಕರು (ರಾಜಸೂ. ೮೨). ೩. ಅಂಬುಜಾಕ್ಷಿಯರೊಲುಮೆ ಡಂಭ[ಪಾಠಾಂ. ಬ]ಕವೆಂದು ತಿಳಿಯಿರೋ (ಪುರಂದ. ೨-೦೬ ಅನುಪಲ್ಲವಿ); ಅಂತಪ್ಪ ಖ್ಯಾತಿ ಭಕ್ತನ ಡಂಭಕದ ಭಕ್ತಿಯೆಂತಾಯಿತ್ತೆಂದರೆ (ಅಱಂಡೀ. ೬೮-೩೩) ; ಹುಸಿ ಕಳವು ಡಂಭಕವು ನುಸುಳು ಆರಡಿ ತಳ್ಳಿ ಹಿಸುಣ ಹೀನದಯದ ಶಬ್ದಗಾರ (ಸುಸಾರ. ೦೨-೦).

[ <ಸಂ ದಂಭಕ ]

**ಡಂಬಕತನ** (ನಾ). ಮೋಸಗಾರಿಕೆ : (ದಾಸಪ. ೬. ೩೭-೦).

[ ಡಂಬಕ + – ತನ ]

**ಡಂಬಕವಿದ್ಯೆ** (ನಾ). ಮೋಸಗಾರಿಕೆಯ ವಿದ್ಯೆ ; ಮಾಯಾವಿದ್ಯೆ : ನೀಚ ದೈವಂಗಳ ಮೇಲೆಸಗುವ ಡಂಬಕವಿದ್ಯೆಯ ರಸವಲ್ಲಿದು (ಹಮ್ಮೀ.ಕ. ೦-೨೪).

[ ಡಂಬಕ + ವಿದ್ಯೆ ]

**ಡಂಬಕಿ** (ನಾ). ಮೋಸಗಾತಿ ; ಮಂಚಕಿ : ಕಲ್ಲುಡಿವ ಡಂಬಕಿ ತೊತ್ತಿರ ನಾರೊ ಬಾರಿಪರ್ (ಶಾಸ್ತ್ರಟೀ. ೪೭-೦೦). [ ಡಂಬಕ + – ಇ₂ ]

**ಡಂಬಗಾರ,** ಜಂಬಗಾರ, ಡಬ್ಬುಗಾರ (ನಾ). ೧. ತೋರಿಕೆಯ ವೇಷದವನು ; ಬೂಟಾಟಿಕೆಯವನು ; ಆಡಂಬರದವನು ; ಡಾಂಭಿಕ : ಕಲಿಯುಂಗಭೀಮ ಎಂಬ ಈ ಬರುಬಿರುದುಗಳ ಕಡ್ಡಕರಡಗಳ ಡಂಬಗಾರನೆಂದರೆ, ಹೊರಗಣವರಿಗೂ ಆ ಪೊಬ್ಬ ದಳವಾಯಿಯಲ್ಲಿದ್ದ ಭಯಗೌರವಗಳೂ ಇಲ್ಲ (ಮಂತ್ರ.ಕ. ೬೭-೦೩). **ಜಂಬಗಾರ:** ೨. ಬಡಾಯಿ ಕೊಚ್ಚಿಕೊಳ್ಳುವವನು ; ಆತ್ಮಸ್ತುತಿ ಮಾಡಿಕೊಳ್ಳುವವನು ; ಹೆಮ್ಮೆಪಡುವವನು : ಅವನು ಬಹಳ ಜಂಬಗಾರ (ರೂಢಿ). **ಡಬ್ಬುಗಾರ:** (೬).

[ ಡಂಬ₁ (<ದಂಬ) + – ಗಾರ (<–ಕಾಱ) ]

**ಡಂಬರ** (ನಾ). ೧. ಗುಂಪು ; ಸಮೂಹ : ತಂಬುಗೆಯನ್ನು ಮುಗ್ಗೆ ಬಿಸುಡೆ ಕಾಣುತಲಾಗ ಡಂಬರದವರು ನಕ್ಕಾಡೆ (ಅಮುಸಾಂ. ೩-೯೭). 'ಮೇಘಡಂಬರ' ಪರಾ. ೨. ಆಟೋಪ ; ಅಟ್ಟಹಾಸ : ಹೊರಳ ನಗುವ ನಿತಂಬಿನಿಯರನು ಭೀಮಪಾರ್ಥರ ಡಂಬರವ ಕಂಡಸುವ ಹಿಡಿದೆನು (ಉತ್ತ್ಯಾಕ ೦೨-೧೦). ೩. ಚೆಲುವು ; ಸೌಂದರ್ಯ ; ಬೆಡಗು ; ಶೋಭೆ : ಚಿತ್ರಜನ ಡಂಬರಮಂ ತಳೆದಾ ಕುಮಾರಕಂಗಳಿಕುಳಕುಂತಳಂ ಪೊಳೆಯೆ ವಕ್ತ್ರಸರೋಜದೊಳಿಕ್ಕಿದಳ್ . . . ಮಾಲೆಯಂ (ನೇಮಿಪು. ೩-೦೮೦) ; ರತಿಯೆಂಬ ಡಂಬರಂ ಬಳಿವಿನಮೊಪ್ಪಿದಳ್ ನೃಪನ ಪಕ್ಕದೊಳಾ ಜಳಕೇಳಿಲೀಳೆಯೊಳ್ (ಚಂದ್ರಪು.೭-೦೩೮) ; ಕಲಿಸುವರಾರೊ . . . ರಮ್ಯನಾದಮಂ ಕೋಗಿಲೆಗೆ ತಾಂಡವಡಂಬರಮಂ ನವಿಲ್ಗೆ (ಬಾಧಪು. ೯-೮೨). ೪. ತೋರಿಕೆಯ ನಡೆನುಡಿ ; ಬಿಂಕ ; ಆಡಂಬರ ; ಹೆಮ್ಮೆ : ಇಂಬುಳ್ಳ ಸುಲಭವೆಂದೊಲಿದೆ ಮಗಳೆ ಕೇಳು ಡಂಬರದವನತಿಪ್ರೌಢ (ಅಮುಸಾಂ. ೩-೯೯). [ ಸಂ. ]

**ಡಂಬವೆಣ್ಣು** (ನಾ). ಬಿಂಕದ ಹೆಣ್ಣು : ತುಂಬಿ ಸ್ವಯಂವರವಾದರೆ . . . ಡೊಂಬಿಯೆಂದದಕೆ ಕೊಕ್ಕರಿಸಿದಳೆಂಬಾಗ ಡಂಬವೆಣ್ಣುಗಳಾಕೆಗೆಣೆಯೆ (ಭರತ. ೨೩-೦೦೦). [ ಡಂಬ₁(<ದಂಬ) + ಪೆಣ್ಣು (<ಪೆಣ್) ]

**ಡಂಬಾಚಾರ,** ಡಂಭಾಚಾರ (ನಾ). ತೋರಿಕೆಯ ನಡತೆ ; ಆಡಂಬರ ; ಬೂಟಾಟಿಕೆ : (೬). **ಡಂಭಾಚಾರ:** ಡಂಭಾಚಾರದಿಂದ ಮನಶ್ಶಾಂತಿ ದೊರಕುವುದಿಲ್ಲ (ರೂಢಿ). 'ಡಂಭಾಚಾರಿ' ಪರಾ.

[ ಡಂಬ₁ (<ದಂಬ) + ಆಚಾರ ]

**ಡಂಬಾಟ** (ನಾ). = ಡಂಬಾಚಾರ. 'ಡಂಬಾಟಿಕೆ' ಪರಾ.

[ ಡಂಬ₁(<ದಂಬ) + ಆಟ ]

**ಡಂಬಾಟಿಕೆ** (ನಾ). = ಡಂಬಾಚಾರ : ಇಲ್ಲಿ ಇರುವುದೇ ದ್ವೇಷ, ಅಸೂಯೆ, ಜಂಬ, ಡಂಬಾಟಿಕೆ ಹೊರತು ಮತ್ತೇನಿಲ್ಲ (ಹಳ್ಳಿಹಾ. ೫೨).

[ ಡಂಬಾಟ + – ಇಕೆ ]

**ಡಂಬಿಕ್ಕು** (ಕ್ರಿ). ಒಣಪ್ರತಿಷ್ಠೆಯನ್ನು ಪ್ರದರ್ಶಿಸು ; ಡಂಬಾಚಾರ ಮಾಡು : ಲಿಂಗೈಕ್ಯನು . . . ಹಿಡಿಯನು ಕೃತಕವ ತನ್ನನುವನು ತೋಱಿ ಡಂಬಿಕ್ಕುವನಲ್ಲ (ಶಿವಗೀ. ೬೩೨). [ ಡಂಬ₁ (<ದಂಬ) + ಇಕ್ಕು ]

**ಡಂಬಿಗ** (ನಾ).=ಡಂಬಗಾರ ೧ : ಪಿಸುಣನನಾಳಿಕಾಱನನಳುಂಬದ ಡಂಬಿಗನಂ ಬಿಕಾರಿಯಂ . . . ಕಸಗಳೆದಿತ್ತು ಮನ್ನಿಪರ ಮಕ್ಕಳ ಪಟ್ಟಿಗೆ ತಂದು ಸೊರ್ಕಿಸಾ (ಚಕವಿ. ೬-೦೧೪). [ ಡಂಬ₁ (<ದಂಬ) + – ಇಗ ]

**ಡಂಬಿಸು** 'ದಂಬಿಸು' ನೋ.

**ಡಂಬು** 'ದಂಬ' ನೋ.

**ಡಂಬುಕ** 'ದಬ್ಬುಕ' ನೋ.

**ಡಂಭ** 'ದಂಬ' ನೋ.

**ಡಂಭಕ** 'ಡಂಬಕ' ನೋ.

**ಡಂಭಕಭಕ್ತಿ** (ನಾ). ಬೂಟಾಟಿಕೆಯ ಭಕ್ತಿ ; ತೋರಿಕೆಯ ಭಕ್ತಿ; ಕಪಟ ಭಕ್ತಿ : ಡಂಭಕಭಕ್ತಿಗೆ ಮೆಚ್ಚಿಕೊಡನು ಕೃಷ್ಣ (ಪುರಂದ. ೫-೦೩೮ ಪಲ್ಲವಿ).

[ ಡಂಭಕ (<ಡಂಬಕ) + ಭಕ್ತಿ ]

**ಡಂಭತನ** (ನಾ). ೧. ಮೋಸ; ವಂಚನೆ: ಆ ಜೋಡಿ . . . ಸುರತಕ್ರೀಡೆಯಾಡುವುದಂ ನಾರಾಯಣಭಟ್ಟಂ ಕಂಡಾ ಪಾಣ್ಬೆಯ ಡಂಭತನಕ್ಕೆ ಬೆಱಗಾಗಿ (ಪಂಚತಂ. ೨೨೯-೦೨). ೨. ಸೋಗಿನ ನಡೆನುಡಿ; ಬೂಟಾಟಿಕೆ; ತೋರಿಕೆ; ಇತರರನ್ನು ಮೆಚ್ಚಿಸುವ ಕರ್ಮಾಚರಣೆ. ೩. ಗರ್ವ ; ಅಹಂಕಾರ.

[ ಡಂಭ (<ದಂಬ) + – ತನ ]

**ಡಂಭತ್ವ** (ನಾ). = ಡಂಭತನ ೩ : ಶಂಭುಭಟ್ಟಾ ನೀನು ಶಿವನಿಲ್ಲವಿಲ್ಲೆಂದು ಡಂಭತ್ವದಿಂದ ಹಣೆಗಣ್ಣು ತೋಱಿದೆಯಲಾ (ವೀಕ್ಷ್ಮಪು. ೯-೦೨-೩೭).

[ <ಸಂ. ದಂಭತ್ವ ]

**ಡಂಭಾಚಾರ** 'ಡಂಬಾಚಾರ' ನೋ.

**ಡಂಭಾಚಾರಿ** (ನಾ). = ಡಂಬಗಾರ ೧: ತನ್ನ ನಿಜವಾದ ಅಥವಾ ಕಲ್ಪನೆಯ ಪ್ರಶಸ್ತಿಯನ್ನು ಅತಿವಸ್ತ್ರಾಲಂಕಾರ ವೊ.ಗಳಿಂದ ಮೆರೆಯುವವನು ; ಡಂಭಾಚಾರಿ (Heavy-Swell. ಇಂಕನಿ.). [ <ಸಂ. ದಂಭಾಚಾರಿನ್ ]

**ಢಕಾಯತಿ** 'ಢಕಾಯಿತಿ' ನೋ.

**ಢಕಾಯಿತ, ಢಕಾಯಿತ, ಢಕಾಯಿತಿ** (ನಾ). ರಾತ್ರಿವೇಳೆಯಲ್ಲಿ ಪಂಜು, ದೀವಟಿಗೆ ಮೊದಲಾದಂವುಗಳನ್ನು ಹಿಡಿದುಕೊಂಡು, ಮನೆಗಳಿಗೆ ನುಗ್ಗಿ ಜನರ ಮೇಲೆ ಬಿದ್ದು ಲೂಟಿಮಾಡುವವನು ; ಕೊಳ್ಳೆ ಹೊಡೆಯುವವನು; ದರೋಡೆಗಾರ: "ದರೋಡೆಕೋರ; ಡಕಾಯಿತ" (Brigand. ಇಂಕನಿ.); ಫರೀದ್‌ಪುರದ ಸುತ್ತಮುತ್ತಲೂ ಡಕಾಯಿತರ ಹಾವಳಿ ಬಹಳವಾಗಿದ್ದಿತು (ಜಗಜಂ. ೬). **ಢಕಾಯಿತ:** ಢಕಾಯಿತರೂ ಹೊಸ ಹೊಸ ದಿರಸುಗಳನ್ನು ಧರಿಸಿ (ದಾಲತ್. ೨೮). **ಢಕಾಯಿತಿ:** "ಅವನೊಬ್ಬ ಭಾರಿ ಢಕಾಯಿತಿ" ಎಂದು ಪಾರುಪತ್ಯಗಾರ ಜರ್ಮನ್ ಭಾಷೆಯಲ್ಲಿ ಉತ್ತರನೀಡಿದನು (ಪುನರು. ೨೭೦).

[ ←ಹಿಂ. ಡಕಇತ್, ಡಕೈತ್; ಮರಾ. ಡಕಾಈತ್, ಡಾಕಾಈತ್ ]

**ಡಕಾಯಿತಿ**, ಡಕಾಯಂತಿ, ಡಕಾಯ್ತಿ (ನಾ). ಡಕಾಯಿತರ ವೃತ್ತಿ; ಲೂಟಿ; ದರೋಡೆ ; ಕೊಳ್ಳೆ : ಡಕಾಯಿತಿಯನ್ನು ಮಾಡುವುದಕ್ಕೆ ಯತ್ನಿಸೋಣ (ಗ್ರಾಮೂಕ. ೪೯); ದೇವಿಯು ಡಕಾಯಿತಿ ಮಾಡುತ್ತಾಳೆಯೇ ? (ದೇವೀಚಾ. ೧೦೫) ; ತಾನು ನೋಡಿದ್ದ ಹಳ್ಳಿಯ ಕ್ಷುದ್ರಜೀವನ, ನಗರದ ನಾಗರಿಕ ಜೀವನ, ಡಕಾಯಿತಿ, ಕಳ್ಳತನ, ಸಜ್ಜನ ದುರ್ಜನ ಇವರನ್ನು ಸೇರಿಸಿ ಅವನು ಒಂದು ಕುತೂಹಲ ಕೆರಳಿಸುವ ಸ್ವಾರಸ್ಯ ಕಥೆಯನ್ನು ಬರೆದನು (ಬಂಕಿಮ. ೩೯). **ಡಕಾಯಂತಿ**: ದಂಗೆ ಡಕಾಯಂತಿಗಳಿಲ್ಲ (ಜೀನಾಬ್. ೫೯). **ಡಕಾಯ್ತಿ**: "ಪಂಜುಕಳವು; ದೀವಟಿಗೆಯ ದರೋಡೆ" (ಕ್ರಿಸ್ಗೆ. ೫೪೭).

[ ←ಹಿಂ. ಡಕೈತೀ ]

**ಡಕಾಯಿತಿಕಳ್ಳ** (ನಾ). ಡಕಾಯಿತಿ ಮಾಡುವ ಕಳ್ಳ; ಡಕಾಯಿತ: ಕಳ್ಳರಿಗೆ ಮತ್ತು ಡಕಾಯಿತಿಕಳ್ಳರಿಗೆ ಆಸರೆಕೊಟ್ಟರೆ ೭ ವರ್ಷಗಳ ಪರ್ಯಂತರ ಕೈದು ಮತ್ತು ಜುಲ್ಮಾನೆ (ಗ್ರಾಮೂಕ. ೧೮೪). [ ಡಕಾಯಿತಿ + ಕಳ್ಳ$_1$ ]

**ಡಕಾಯ್ತಿ** 'ಡಕಾಯಿತಿ' ನೋ.

**ಡಕಾರ** (ನಾ). 'ಡ' ಎಂಬ ಅಕ್ಷರ : ಡಕಾರಂ ಪುಟ್ಟುವ ತಾಣವಂ ಬೆಟ್ಟಿತ್ತಾಗುಚ್ಚರಿಸೆ ಟಟಂ ಪುಟ್ಟುಗುಂ (ಶಮದ. ೧೮ ವೃತ್ತಿ). [ ಸಂ. ]

**ಡಕ್ಕಾಡಿಕ್ಕಿ** (ನಾ). ಡಿಕ್ಕಿ ಹೊಡೆಯುವುದು ; ಘರ್ಷಣೆ : ಈ ಡಕ್ಕಾಡಿಕ್ಕಿಯನ್ನು ಬೇರೆ ಯಾರೂ ಕಂಡಿರಲೂ ಇಲ್ಲ (ಜೀಸಪಾ. ೨೦).

[ ಡಕ್ಕಾ$_0$ + ಡಿಕ್ಕಿ ]

**ಡಕ್ಕು** 'ಟಕ್ಕು$_1$' ನೋ.

**ಡಕ್ಕುಗೊಳ್** (ಕ್ರಿ). ಎಚ್ಚರ ತಪ್ಪಿಸುವ ಮದ್ದನ್ನುಣ್ಣು; ಇಕ್ಕುಮದ್ದನ್ನು ತಿನ್ನು: ಶ್ರೀಧರವಮುನಿನಾಥನವರ ಕಪಟವೃತ್ತಿಯನರಿಯದುಂಡು ಸೊಕ್ಕಿ ಮೆಯ್ಯರಿಯದೆ ಡಕ್ಕುಗೊಂಡಂತೆ ತೂಂಕಡಿಸಿ[ಪಾಠಾಂ. ಟಕ್ಕನಿಕ್ಕಿದಂತು] ಕೆಡೆದು ನಿದ್ರೆಗೆಯ್ವುದುಂ (ಧರ್ಮಾಮೃ. ೧೧-೨೨೭).

[ ಡಕ್ಕು (<ಟಕ್ಕು$_1$) + ಕೊಳ್$_1$ ]

**ಡಕ್ಕುಲಿ** (ನಾ). ಒಂದು ಬಗೆಯ ಚರ್ಮವಾದ್ಯ : ಕರಡೆ ಡಕ್ಕುಲಿ ಮಂಡಿಡಕ್ಕೆ . . . ತಾಳಂ ಸುಕಾಂಸ್ಯತಾಳಂ (ಪದ್ಮರಾ. ೩-೫೩).

[ <ಸಂ. ಢಕುಲೀ ]

**ಡಕ್ಕೆ**, ಡಂಕ, ಡಗ್ಗ, ಡೆಂಕ, ಡೆಂಕೆ$_1$, ಢೆಂಕೆ, ದಕ್ಕೆ$_1$, ಧಕ್ಕೆ$_1$ (ನಾ). ೧. ಎರಡಂ ಮುಖವುಳ್ಳ ಒಂದು ಬಗೆಯ ದೊಡ್ಡ ಚರ್ಮವಾದ್ಯ ; ಇತ್ತಲೆಯ ಶವಟಿ; ಡಮರು; ಢಕ್ಕೆ: "ಡಕ್ಕೆ(ದಕ್ಕೆ)ಢಕ್ಕಾ=ಇಬ್ಬಾಯಿಯ ಚರ್ಮವಾದ್ಯ" (ಶಬ್ದಕೋ. ೦೬) ; ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದ ಪದ ಡಕ್ಕೆ ಪಾಳಿಧ್ವಜ ಸಾಮ್ರಾ[ಹ]ಮಹಾಮಹಾ ಸಾಮನ್ತಾಧಿಪತಿ ಶ್ರೀಬಲ್ಲಭ (ಎಕ. II, ೩೫-೦; ಶು. ೬೦೦); ಡಕ್ಕೆಯೊಳಟ್ಟಜವಾಗೆಯಾಡಿದಳ್ (ಪಂಪಭಾ. ೪-೯೯) ; ಕರಡೆಯ ಡಕ್ಕೆಯ ಪವಳದ ಪರಿಡಕ್ಕೆಯಮರ್ದ ದನಿಗಳುಂ ಭೋರ್ಗರೆಯಲ್ (ಧರ್ಮಾಮೃ. ೦೩-೦೯) : ಅತಿ ತೆಂಬಲ ಗೊರ್ಯ್ಯನೆ ನರ್ತಿಪಂದದಿಂ ಸೊಗಯಿಸೆ ಗೋಪಿ ಡಕ್ಕೆಯ ಲಯಕ್ಕೆ ಪದಂಗಳ್ ಚತಿಮೆಟ್ಟುತಾಡಿದಳ್ (ಜಗವಿ. ೫-೦೫) ; ಬನ್ನಿಯ ತರು ಡಕ್ಕೆಗೆ ಸುರಹೊನ್ನೆಯ ತರು ಡಮರುಗಕ್ಕೆ (ಶಮದ. ೬೨ ಪ್ರಯೋ). ೨. ಬುಡ ಬುಡುಕೆ. **ಡಂಕ**: ೧. ಭೇರಿ ಡಂಕ ನಗಾರಿಗಳು ಮಿಗೆ ಭೋರಿಡುತ ಸಾಲ್ದೆಸೆಯು ಕಂಪಿಸೆ (ಅಭಿಕಾ. ೧೦): ವಿಶೇಷ ಬಿರುದುಗಳು, ಬರ್ಜರಿ ಛತ್ರಿ, ಆನೆಯ ಮೇಲೆ ನಗಾರಿ, ಕುದುರೆಯ ಮೇಲೆ ಡಂಕ (ಗುರುದ. ೧೦) ; ಆ ಗುಂಪಿನಲ್ಲಿ ಎರಡು ಕುದುರೆಗಳಿದ್ದವು. ಅವುಗಳಲ್ಲಿ ಒಂದರ ಮೇಲೆ ಒಂದು 'ಡಂಕ'ವನ್ನಿಟ್ಟಿದ್ದರು (ಭಾರವೀ. ೭). **ಡಗ್ಗ**: ೩. ಎಡಗೈಯಲ್ಲಿ ಬಾರಿಸುವ ತಬಲದ ವಾದ್ಯ: ಎಡಗೈಯಲ್ಲಿ ಉಪಯೋಗಿಸುವ ಭಾಗಕ್ಕೆ ಡಗ್ಗ ಎಂದೂ ಬಲಗೈಯಲ್ಲಿ ಉಪಯೋಗಿಸುವ ಭಾಗಕ್ಕೆ ತಬಲಾ ಎಂದೂ ಹೆಸರು (ಸಂಗೀಚಂ. ೧೨೦). **ಡೆಂಕ**: ತಾಳ ಮದ್ದಳೆ ಭೇರಿ ಡೆಂಕ ನಿನಾದ ರಂಜಿಸಿತು (ರಾಮಚ. ೩೩-೬೨). **ಡೆಂಕೆ$_1$**: (?). **ಢೆಂಕೆ**: ವರ್ಗ ಚತುರ್ಥಾಕ್ಷರಂಗಳ್ಗೆ . . . ವೇಢೆಯಂ, ಢೆಂಕೆ, ಢೊಕ್ಕರಂ (ಶಮದ. ೧೫ ಪ್ರಯೋ). **ದಕ್ಕೆ$_1$**: ಆತ ಹಾಡುತ್ತಾ, ದಕ್ಕೆಯನ್ನು ನುಡಿಸುತ್ತ ಪೂಜೆಯನ್ನು ಸಲ್ಲಿಸುತ್ತಾನೆ (ಯಕ್ಷಬ. ೨೦೦). **ಧಕ್ಕೆ$_1$**: 'ಧಕ್ಕೆಬಲಿ' ಪರಾ.

[ <ಪ್ರಾ. ಡಕ್ಕ. / ಸಂ. ಢಕ್ಕಾ ]

**ಡಕ್ಕೆಬಲಿ**, ದಕ್ಕೆಬಲಿ, ಧಕ್ಕೆಬಲಿ (ನಾ). (ಕರಾ) ಡಕ್ಕೆಯನ್ನು ಬಾರಿಸುತ್ತಾ ಮಾಡುವ ಪ್ರದಕ್ಷಿಣೆ: ಉಡುಪಿಯಲ್ಲಿ ಎರಡು ವರ್ಷಗಳಿಗೊಮ್ಮೆ ನಡೆವ ಪರ್ಯಾಯ, ಪಡುಬಿದ್ರೆಯಲ್ಲಿ ಜರಗುವ ಡಕ್ಕೆಬಲಿ . . . ಇವುಗಳು ಪ್ರಾಮುಖ್ಯವಾದುವುಗಳಾಗಿವೆ (ತುಳುನಾ. ೨೫೩). **ದಕ್ಕೆಬಲಿ**: ಕುಣಿಯುವವರು ಡಮರನ್ನು ಹಿಡಿದುಕೊಂಡು ಅದರ ನುಡಿತಕ್ಕೆ, ಕುಣಿಯುವುದರಿಂದ (ಡಮರು = ದಕ್ಕೆ) ದಕ್ಕೆಬಲಿ ಎಂಬ ಹೆಸರು ಅದಕ್ಕೆ ಬಂದಿದೆ (ಯಕ್ಷಬ. ೧೦೦) ; ನಾಗನ ಪೂಜೆಯ ಕಾಲದಲ್ಲಿದ್ದು, ಮರುದಿನ ದಕ್ಕೆಬಲಿಯನ್ನು ನೋಡಿಯೇ ಮರಳುವುದು (ಸ್ವಪ್ನಹೊ. ೫೭). **ಧಕ್ಕೆಬಲಿ**: ನಾಗಮಂಡಲ ಧಕ್ಕೆಬಲಿಗಳನ್ನು, ಹಿಂಬಾಲಿಸಿ, ಚಿತ್ರತೆಗೆದು, ಕೆಡಿಸಿಕೊಂಡು, ಹೊಂಚುಹಾಕಿ, ನಿರಾಶೆಗೊಂಡು, ಮರಳಿಬಂದ ಪ್ರಸಂಗಗಳೆಷ್ಟೋ (ಯಕ್ಷಬ. IV, ಮುನ್ನುಡಿ). [ ಡಕ್ಕೆ + ಬಲಿ$_3$ ]

**ಡಕ್ಕೆವಾಜಿಸು** (ಕ್ರಿ). ೧. ಡಕ್ಕೆಯನ್ನು ಬಾರಿಸು,-ಹೊಡೆ: ಆಡುವ ಡಕ್ಕೆವಾಜಿಸುವ ನೋಡುವ ಸಂಗಡವೊಪ್ಪೆ ರಾಗಮಂ ಪಾಡುವ (ಸೂಕ್ತಿಸು. ೪-೧೪೯). ೨. (ಅಲಂ) ಡಬಡಬ ಎಂದಂ ಸದ್ದು ಮಾಡು ; ಡಬಡಬ ಎಂದಂ ಬಡಿದುಕೊಳ್ಳು: ಎದೆ ಡಕ್ಕೆವಾಜಿಸುತ್ತಿರ್ಪಿನೆಗಂ(ವರ್ಧಪು. ೨-೨೨).

[ ಡಕ್ಕೆ + ಬಾಜಿಸು ]

**ಡಕ್ಕೆವಾಯ್** (ಕ್ರಿ). ಡಕ್ಕೆಯಂತೆ ಹಾರು ; ಡಕ್ಕೆಯಂತೆ ಡಬಡಬ ಶಬ್ದ ಮಾಡು,-ಮಿಡಿ : ಕಂಠದೊಳ್ ಪುದಿಯೆ ಗದ್ಗದನಾದಮಳ್ಕಿರ್ದೆ ಡಕ್ಕೆವಾಯೆ ನಿಜೇಶಶಂಕದಿನೀಶನ ಕಾಂತೆ ಬೆಚ್ಚರಮೆರ್ದು ಬಿಚ್ಚತ ಮಚ್ಚಿದಳ್ (ಅನಂಪು. ೨-೪೮) ; ಕಣ್ಗೆಟ್ಟು ಕೋಟಲೆಗೊಂಡಳ್ಕಿರ್ದೆ ಡಕ್ಕೆವಾಯ್ದು ಸತಿ ನಿಂದೌತ್ಸುಕ್ಯಮಂ ತಾಳ್ದಿದಳ್ (ಅನಂಪು. ೧೧-೫೭).

[ ಡಕ್ಕೆ + ವಾಯ್$_1$ ]

**ಡಗಲಿ** 'ದಗಲೆ$_2$' ನೋ.

**ಡಗಲೆ** 'ದಗಲೆ$_2$' ನೋ.

**ಡಗುಂತಿ** 'ದಗುಂತಿ' ನೋ.

**ಡಗೆ$_1$** 'ದಗೆ$_1$' ನೋ.

**ಡಗೆ$_2$** 'ದಗಾ' ನೋ.

**ಡಗೆವೊಯ್**, ಡಗೆಹೊಯ್ (ಕ್ರಿ). ೧. ಸೆಕೆ ತಾಗು; ಉಷ್ಣದಿಂದ ಏದು; ಸಂತಪಿಸು; ಮಿಡುಕು: ಡಗೆವೊಯ್ದಿರಲೆಯ ಪಟ್ಟಿಗೆಗೆಟ್ಟ ನರಿಯ . . . ಗಜಬಜದ ಸಂಚಾರಂ ಬಲ್ಪಿರಿದಾಯ್ತು (ರಾಮಾಶ್ವ. ೪೧-೭) ; "ಅಪಾಯದಿಂದ ಭಯಗೊಳ್ಳು"(ರಾಮಾಶ್ವ. ಕೋಶ). ೨. ಭಯದಿಂದ ತತ್ತರಿಸು; ಅಳ್ಳೆ ಬಡಿದುಕೊಳ್ಳು; ತಬ್ಬಿಬ್ಬಾಗು: ಡಗೆವೊಯ್ಯುತ್ತ ಪರಿದಾಡುತ್ತಿರುವರು (ಮಂತ್ರಕ. ೬೩-೨೭). **ಡಗೆಹೊಯ್**: ೧. ಬೇಸಗೆಯ ಬಿಸಿಲೊಳು ಬೆಂದು ಡಗೆಹೊಯ್ವಳ್ಳೆಯಲಿ ಕರಿಗಂದಿ ತಾಳಿಗೆಯೊಣಗಿ ಕುಸಿದಿರ್ದನು (ಜೀವಂಜ. ೩-೪). [ ಡಗೆ$_1$ (<ದಗೆ$_1$) + ಪೊಯ್$_1$ ]

**ಡಗೆಹೊಯ್** 'ಡಗೆವೊಯ್' ನೋ.

**ಡಗ್ಗ** 'ಡಕ್ಕೆ' ನೋ.

**ಡಗ್ಗು$_1$** (ನಾ). ಉಸಿರಾಟಕ್ಕೆ ಕಷ್ಟವಾಗುವಿಕೆ ; ದಮ್ಮು ; ಉಬ್ಬಸ : ಅವನಿಗೆ ಡಗ್ಗು ಹತ್ತಿದೆ (ರೂಢಿ). 'ಡಗ್ಗುತ್ತಿಗೆ' ಪರಾ.

[ ದೇ.ಶ ತೆಲು. ಡಗ್ಗು, ದಗ್ಗು; ಕೊಲಾ. ಡಗ್ಗ್, ದಗ್; ನಾಯ್ಕಿ. ಢಗ್ ]

**ಡಗ್ಗು$_2$** (ನಾ). ಹಳೆಯದು; "ಹಳೇದು" (ಜಾನಕೋ. ೬೨). [ ? ]

**ಡಗ್ಗುತ್ತಿಗೆ** (ನಾ). ಗದ್ಗದ ಕಂಠ: ಕಣ್ಣಿನಲ್ಲಿ ನೀರು ಸುರಿಸುತ್ತ ಡಗ್ಗುತ್ತಿಗೆಯಿಂದ ದಪ್ಪವಾದ ಗಂಟಲಿನಲ್ಲಿ ವಾಯುವಾದಿತನವನ್ನು ತೋರಿಸಿ (ಕಥಾಮಂ. IV, ೧೦೦). [←ತೆಲು. ಡಗ್ಗುತ್ತಿಕ]

**ಡಗ್ಗೆ** 'ಡೆಗ್ಗೆ' ನೋ.

**ಡಜನ್** 'ಡಜನ್ನು' ನೋ.

**ಡಜನ್ನು, ಡಜನ್** (ನಾ). ಹನ್ನೆರಡರ ಲೆಕ್ಕ; "ಹನ್ನೆರಡು" (Dozen. ಇಂಕನಿ.). **ಡಜನ್:** ಈ ಪಂಚಾಯಿತಿಯಲ್ಲಿ ಇರೋ ಇಪ್ಪತ್ತು ಜನ ನಂಬರುಗಳ ಪೈಕಿ ಒಂದು ಡಜನ್ ನಂಬರುಗಳು ಚಿಗಳಿ ಸಿದ್ಧಪ್ಪನಂಗೆ ಯೆಬ್ಬೆಟ್ಟಿನ ವಸ್ತ್ರಾದಿಗಳು (ನಮ್ಮಳ್ಳಿ. ೩೦).

[ ← ಇಂ. Dozen ]

**ಡಡುಲ** (ನಾ). (?) : ಬಾಡಬಭೋಗದಿಂದಮೃತಪೂರ್ಣ ರಸಾಶ್ರಯ ದಿಂದಮಚ್ಯುತ ಶ್ರೀಡಡುಲ ಸ್ಫುರನ್ಮಹಿಮೆಯಿಂ . . . ಎಸೆವ ಪತ್ತನ ಮೆನ್ನವೊಲೆಂದು ಸಾಗರಂ (ಚಂದ್ರಭ್ಯು. ೨-೭೮). [ ? ]

**ಡಡ್ಸಾಲ** (ನಾ). ಒಂದು ಬಗೆಯ ಸಸ್ಯ: ಡಡ್ಸಾಲ, ಧೂಢಸೆಲ, ಬೆಟ್ಟತೆಂಗು, ಕಾಡುತೆಂಗು (ವ್ಯಜಿಗಿ. ೮-೧೪೦). [ ? ]

**ಡಣ್** (ನಾ). ಒಂದು ಅನುಕರಣ ಶಬ್ದ.

**ಡಣ್‌ಡಣ್** (ದ್ವಿರುಕ್ತಿ) : ಡಣ್ ಡಣ್‌ಎಂದು ಗಂಟೆ ಬಾರಿಸಿತು (ರೂಢಿ).

**ಡಣಡಣ** (ನಾ). ಒಂದು ಅನುಕರಣ ಶಬ್ದ : ಸ್ಕೂಲಿನಲ್ಲಿ ಗಂಟೆಯ ಡಣಡಣ ಸದ್ದು ಕೇಳಿದ ತಕ್ಷಣವೇ ಮಕ್ಕಳೆಲ್ಲಾ ಹೊರಗೋಡಿದರು (ರೂಢಿ).

**ಡಣಡಣಿಸು** (ಕ್ರಿ). ಡಣಡಣ ಎಂಬ ಶಬ್ದಮಾಡು : ಹುಣ್ಣಿಮೆ ಇನ್ನೂ ಎಂಟುದಿನವಿರುವಾಗಲೇ ಓಣಿ ಓಣಿಗಳಲ್ಲಿ ಚಿಕ್ಕಚಿಕ್ಕ ಹಲಗೆಗಳು ಡಣಡಣಿಸ ತೊಡಗಿದವು (ರಂಗರೋ. ೪೩). [ ಡಣಡಣ + – ಇಸು$_3$ ]

**ಡಣತುಕಾರ** 'ಡಣತ್ಕಾರ' ನೋ.

**ಡಣತ್ಕಾರ, ಡಣತುಕಾರ** (ನಾ). ಡಣಡಣ ಎಂಬ ಶಬ್ದ ; ಘಂಟೆಯ ಶಬ್ದ : ದೇವಾಲಯದಿಂದ ಘಂಟೆಯ ಡಣತ್ಕಾರ ಕೇಳಿಸುತ್ತಿದೆ (ರೂಢಿ). **ಡಣತುಕಾರ:** ಅದೇ ಸನ್ನಾಹದ ತೋರ ಘಂಟೆಯ ಡಣತುಕಾರ ಕಾರಂ ಕಳಲಾದುದು (ಸೌಇಇ. XV, ೩೯-೨೦ ; 1184).

**ಡಣಾಕೃತಿ** (ನಾ). ಡಣಡಣ ಎಂಬ ಶಬ್ದ: ಹೊದಱ ಡೊಂಕಣಿಗಳ ಡಣಾಕೃತಿ[ಪಾಠಾಂ. ಝುಣತ್ಕೃತಿ]ಯು . . . ಮಹಾಧ್ವನಿ ಬಗಿದುದ್ಯೆ ತಾವರೆಯ ತನಯುನ ಕರ್ಣಕೋಟರವ (ಕುವ್ಯಾಭೀ. ೨-೪).

**ಡಣಾಡಂಗುರ** 'ಢಣಾಡಂಗುರ' ನೋ.

**ಡಣಾಯಕ** 'ದಣ್ಣಾಯಕ' ನೋ.

**ಡಣಾಯಕತನ** (ನಾ). ದಂಡನಾಯಕನ ವೃತ್ತಿ ; ಸೇನಾಪತಿಯ ಉದ್ಯೋಗ: ಹೀಗೆ ತುಡುಗು, ವ್ಯಾಪಾರ, ಉದ್ಯೋಗ, ಒಕ್ಕಲತನ, ಡಣಾಯಕತನ ಎಲ್ಲವೂ ಹೊಟ್ಟೆಗಾಗಿಯೇ. ಆದರೂ ದಾಸನಾಗಿರುವುದು ಮಾತ್ರ ಇದಕ್ಕಲ್ಲ (ಜಗದಾ. ೧೦೯).

[ ಡಣಾಯಕ (<ದಣ್ಣಾಯಕ) + – ತನ ]

**ಡಣಾಯಕಪದವಿ** (ನಾ). ಡಣಾಯಕನ ಅಧಿಕಾರ: ತಂದೆ ವಿಜಯನಗರದ ರಾಜರಿಗೆ ಗುತ್ತಿಗೆದಾರನಾಗಿ ಡಣಾಯಕ ಪದವಿಯಲ್ಲಿದ್ದವನು (ಜಗದಾ. ೧೧೭). [ ಡಣಾಯಕ (<ದಣ್ಣಾಯಕ) + ಪದವಿ ]

**ಡಣಾಯಕಿತಿ** (ನಾ). ಡಣಾಯಕನ ಹೆಂಡತಿ; ಸೇನಾಪತಿಯ ಮಡದಿ : ಡಣಾಯಕ ಶ್ರೀಮಾರಸಿಂಗಯ್ಯನವರಿಗೆ ಡಣಾಯಕಿತಿ ಶ್ರೀಮಾಚಿಕಬ್ಬೆ ಯವರಿಗೆ (ಶಾಂತಲಾ. ೧).

[ ಡಣಾಯಕ (<ದಣ್ಣಾಯಕ) + – ಇತಿ$_1$ (< – ಇತ್ತಿ) ]

**ಡಣ್ಣಾಯಕ** 'ದಣ್ಣಾಯಕ' ನೋ.

**ಡಪಳೆ, ಢಪ್ಪಳ** (ನಾ). ಒಂದು ಬಗೆಯ ಬಟ್ಟೆ: ಡಪಳೆ, ಪತ್ತರೆ . . . ಅವಂಚೆ . . . ಮೊದಲಾದ ನಾನಾ ವಸ್ತ್ರಂಗಳಂ ಕುಡುವ ಪದ್ಮನಿಧಿಯುಂ (ಶಾಸ್ತ್ರಟೀ. ೧೯-೯). **ಢಪ್ಪಳ:** 'ಢಪ್ಪಳಸೀರೆ' ಪರಾ.

[←ಮರಾ. ಡಫಳಾ = ೧. ನೆಯ್ಗೆಯಲ್ಲಿ ಒಂದು ಪ್ರಕಾರ.
೨. ಒಂದು ಬಗೆಯ ಬಣ್ಣ ]

**ಡಪ್ಪ** 'ಡಪ್ಪು' ನೋ.

**ಡಪ್ಪು, ಡಪ್ಪ, ಡಫು, ಡಬ್ಬು$_5$, ದಪ್ಪು** (ನಾ). (ಮುಖ್ಯವಾಗಿ ಭಜನೆ ಹಾಡುವವರು ಮತ್ತು ಡೊಂಬರಾಟದವರು ಕೈ ಬೆರಳುಗಳಿಂದ ಬಾರಿಸುವ) ಒಂದೇ ಮುಖವುಳ್ಳ ಒಂದು ಬಗೆಯ ಚರ್ಮವಾದ್ಯ ; ಹಲಗೆಯಂಥ ಒಂದು ವಾದ್ಯ ; ಕಂಜರಿ : ಜ್ಯೋತ್ಸ್ನಾ ಡಪ್ಪಿನ ಮೇಲೆ ಮೃದುವಾಗಿ ಮಾಧ್ಯಮಿಕಾಂಗುಲಿ ನಡೆಸಿದ (ದೀಪಹ. II, ೩೮೯) ; ಅವಳಿಗೆ ನಿಜವಾಗಿಯೂ ಈ ಡಪ್ಪು ಶಬ್ದದ ಹಿಂದೆ ಅನೇಕ ಕಥೆ, ಸಂದರ್ಭ ಸನ್ನಿವೇಶಗಳು ದಾಳಿಮಾಡಿದವು (ಅಪನಾ. ೩೨). **ಡಪ್ಪ:** ಹುಡುಗರು ಡಪ್ಪ ಬಾರಿಸತೊಡಗಿದರು (ನೀನಮು. ೭೮). **ಡಫು:** ಒಂದು ಡಫು, ಒಂದು ದಮ್ಮಡಿ ಮನೀತುಂಬ ಬ್ಯಾಂಡ ಬಾರಿಸಿದಾಂಗ ಬಾಯಿ ನಡದಿರ್‍ತದ (ಬಾಂಡಾಯ. ೩೩). **ಡಬ್ಬು$_5$:** (ಕ). **ದಪ್ಪು:** ಹಾಡುಗರು ಬಲಬಗಲಲ್ಲಿ 'ದಪ್ಪು' ಎಂಬ ಚರ್ಮವಾದ್ಯ ಹಿಡಿದು ಅದೇ ಕೈಯಿಂದ ಬಾರಿಸುವರು (ಸುವರ್ಣ. ೪೦) ; ಈಗಿನ ಲಾವಣಿಕಾರರು 'ದಪ್ಪು' ಹಾಗು 'ತುಣ್‌ತಿಣಿ' ಗಳನ್ನು ಜೋಡಣಿ ಮಾಡಿ ಹಾಡುತ್ತಾರೆ (ಕನ್ನಜಾ. ೯೩).

[←ಹಿಂ. ಮರಾ. ಡಫ್; ಅರ. ಪಾರ. ದಫ್ ]

**ಡಪ್ಪುಗಾರ** (ನಾ). ಡಪ್ಪುಬಾರಿಸುವವನು; ಕಂಜರಿ ಹೊಡೆಯುವವನು: ಸಾರಂಗೀವಾದಕ ಡಪ್ಪುಗಾರರಿಗೆ ಎಲ್ಲಿಯ ಹುರುಪು ಬಂದಿದ್ದಿತೋ ಏನೋ (ಜನಜೀ. ೧೪೮). [ ಡಪ್ಪು + – ಕಾರ$_1$ (< – ಕಾಱ) ]

**ಡಪ್ಪುಬಡಿ** (ಕ್ರಿ). ಡಪ್ಪುವಾದ್ಯವನ್ನು ಬಾರಿಸು : ಆ ಹಾಡು ಆ ಡಪ್ಪು ಬಡಿಯೋದು, ನಡನಡಕ ಆ ಕ್ಯಾಕಿ ಹಾಕೋದು ನೋಡಿದರ ಈಚಲಮರ ದಮ್ಮನ ಪರಸಾದ ಗಡದ್ದ ತಗೊಂಡ ಬಂದಹಂಗ ಕಾಣತೈತಿ (ಹೊಸಂಸಾ. ೩೯). [ ಡಪ್ಪು + ಬಡಿ$_1$ ]

**ಡಫಾಲಿ** (ನಾ). ಡಪ್ಪುವನ್ನು ಬಾರಿಸುವವನು ; ಡಪ್ಪುಗಾರ : ನನ್ನ ತಮ್ಮನನ್ನು ಒಬ್ಬ ಡಫಾಲಿಯು ಬಾರಿಸುವ ಮುಸ್ಲಿಮರ ಜಾತಿಯ ಹುಡುಗನು ಕರೆದುಕೊಂಡು ಹೋದನು (ನಾಕಥ. ೬).

[←ಹಿಂ. ಡಫಾಲೀ; ಪಾರ. ದಫಾಲೀ ]

**ಡಫು** 'ಡಪ್ಪು' ನೋ.

**ಡಬ್** (ನಾ). ಒಂದು ಅನುಕರಣ ಶಬ್ದ : ಕಿಡಿಗಳು ಸಿಡಿದುವು ಡವುಳು ಡಬ್ಬೆಂದು (ನಾಗಕು. ೧೭-೬೭).

**ಡಬ** (ನಾ). ಒಂದು ಅನುಕರಣ ಶಬ್ದ.

**ಡಬಡಬ** (ದ್ವಿರುಕ್ತಿ) : ನಗಾರಿಯನ್ನು ಡಬಬಡ ಎಂದು ಬಡಿದದ್ದೊ ಬಡಿದದ್ದೇ (ರೂಢಿ). ಅವನ ಎದೆಯಲ್ಲಿ ಡಬಡಬ ಅನ್ನುತ್ತಿದೆ (ರೂಢಿ). 'ಡವ' ಪರಾ.

**ಡಬಗಳ್ಳಿ** 'ಡಬ್ಬುಗಳ್ಳಿ' ನೋ.

**ಡಬಡಬಿಸು** (ಕ್ರಿ). ೧. ಗಳಗಳನೆ ಸುರಿ ; ತುಂಬಿತುಳುಕು : ಉಡಿತುಂಬಿಸಿ ಕೊಂಡು ಬಂದು, ಡಬಡಬಿಸುವ ಕಣ್ಣಿನಿಂದ, ಕಾಕಾ ಅವರಿಗೆ ರಾಚಪ್ಪನ ಹೆಂಡತಿ, ಕಾಲುಮುಟ್ಟಿ ಆಶೀರ್ವಾದ ಬೇಡಿದಾಗ (ದೀಪಹ. II, ೯೦). 'ಡಮಡಮಿಸು' ಪರಾ. ೨. ಪಾತ್ರೆ, ಕೆರೆ ಮೊದಲಾದುವು ಪೂರ್ತಿ ತುಂಬು. [ ಡಬಡಬ$_0$ (P ←ಮರಾ. ಡಬಡಬಣೇ) + – ಇಸು$_3$ ]

**ಡಬಡ್ಡಾಳಿಕೆ, ಡಬಡ್ಡಾಳಿಕೆ, ದಬಡ್ಢಾಳಿಕೆ** (ನಾ). ಬೂಟಾಟಿಕೆ ; ಇಲ್ಲದ್ದನ್ನು ತೋರಿಸಿಕೊಳ್ಳುವುದು ; ಬಡಾಯಿ : ಸತ್ಯಕ್ಕೆ ಶರಣು

ಹೊಡೆದು ಬಾಹ್ಯಾಡಂಬರಗಳ ಡಬಡ್ಡಾಳಿಕೆಗಳಿಂದ ಜನತೆಯನ್ನು ಮರುಳು ಗೊಳಿಸಿ ಮನ್ನಣೆಯನ್ನು ದೊರಕಿಸಿಕೊಳ್ಳಬೇಕೆಂಬುದೇ ಅದರ ಇಂದಿನ ಮೂಲ ಆಕಾಂಕ್ಷೆ (ಹೊಸಹು. ೧೪) : ಈಗ ನೀನು ಮಾಡ್ತಾ ಇರೋ ಡಬಡ್ಡಾಳಿಕೆ ? (ಬೆಳುಮು. ೧೫೩). **ಡಬಡ್ಡಾಳಿಕೆ :** ಒಬ್ಬ ಸಂಗೀತಗಾರನು . . . ಬಹಳ ಡಬಡ್ಡಾಳಿಕೆಯಿಂದ ಹಾಡುತ್ತಿರಲು (ಕಥಾಮಂ. IV, ೧೧). **ದಬಡ್ಡಾಳಿಕೆ :** ಆಡಂಬರದ ಆರಾಸು, ದಬಡ್ಡಾಳಿಕೆಯ ಪ್ರದರ್ಶನ ಬಂಡ್ವಾಳವಿಲ್ಲದ ಬಡಾಯಿ (ಜೂಜು. ೬೬). [<ಡಬ್ಬು₃ + ಡಾಳ₁ + – ಇಕೆ]

**ಡಬಡ್ಡಾಳಿಕೆ** 'ಡಬಡ್ಡಾಳಿಕೆ' ನೋ.

**ಡಬರಿ, ಡಬರೆ, ದಬರಿ, ದಬ್ಬರಿ, ದಬ್ಬರೆ₁** (ನಾ). ಲೋಹದಿಂದ ಮಾಡಿದ ಬಾಯಿ ಅಗಲವಿರುವ ಪಾತ್ರೆ;ಬೋಗುಣಿ;ಪಾತೇಲಿ(ಉಕ): ಒಂದು ಡಬರಿಯಲ್ಲಿ ಬಿಸಿನೀರು ತಗೊಂಡು ಬಾ ನೀನು (ಸಾಹೇಬ್. ೨೨೭) ; ಮಾಂಸವನ್ನು ಡಬರಿಯಲ್ಲಿ ಬೇಯಿಸುತ್ತಿದ್ದಿಲ್ಲ (ನಾಕಥೆ. ೪೦) ; ಒಬ್ಬ ಮನುಷ್ಯನು ಈ ಹುಲ್ಲಿನ ಮೇಲೆ ಸುಖವಾಗಿ ಬಿದ್ದುಕೊಂಡು ಡಬರಿ ಯಂತಿದ್ದ ಮೇಲಿನ ಆಕಾಶವನ್ನು ನೋಡಬಹುದು (ಮಹಾತ್ಮಾ. ೧೫). **ಡಬರೆ :** ನಮ್ಮ ಅನ್ನದ ತಪ್ಪೇಲಿ, ಸಾರಿನ ಡಬರೆ ಇತ್ಯಾದಿ (ಹನ್ನೊಂದ. ೬೦). **ದಬರಿ:** 'ದಬರಿಟೊಪ್ಪಿಗೆ' ಪರಾ. **ದಬ್ಬರಿ:** ನೀನು ಮತ್ತೆ ತಪ್ಪು ಮಾಡಿದರೆ ನಿನಗೆ ಒಂದು ದಬ್ಬರಿ ಚಿಕಿರ್ ಮದ್ಯ ಜುಲ್ಮಾನೆ ಹಾಕುತ್ತೇನೆ (ಮಳಿನಾ. ೯೮). **ದಬ್ಬರೆ₁:** "ಕೊಪ್ಪರಿಗೆ; ದೊಡ್ಡ ಪಾತ್ರೆ" (ಜಾನಕೋ. ೩); ಅದರ ಮೇಲೆ ಸುಗಂಧ ಪೂರಿತವಾದ ಬಿಸಿನೀರಿನ ಲೋಟಗಳಿದ್ದ ದಬ್ಬರೆ ಗಳಿದ್ದುವು (ಪುನರು. ೧೨೦); ಕೆಲವರು ತುಂಬಿದ ಕೋಲ್ಲೊಟ್ಟ ದಬ್ಬರೆ ಗಳನ್ನು ಮೇಲೊಯ್ಯುತ್ತಿದ್ದರು (ಪುನರು. ೩೦೬). [ ←ಹಿಂ. ಡಬರೀ ]

**ಡಬರಿಟೊಪ್ಪಿಗೆ, ದಬರಿಟೊಪ್ಪಿಗೆ** (ನಾ). ಡಬರಿಯಂ ಆಕಾರದ ಟೊಪ್ಪಿಗೆ,–ಟೋಪಿ : ಊರತುಂಬ ಡಬರಿಟೊಪ್ಪಿಗೆ ಮೋಟಾರಕಾರಿನ ಡಾಕ್ಟರುಗಳು ಇದ್ರೂನೂ . . . ಎಲ್ಲಾರೂ ನನ್ನೇ ಎಬ್ಬಿಸ್ತಾರೆ (ಹನ್ನೊಂದ. ೩೦). **ದಬರಿಟೊಪ್ಪಿಗೆ:** ದಬರಿಟೊಪ್ಪಿಗೆಯನ್ನು ಕೈಲಿ ಮುಟ್ಟದೆ ಗೂಟದಿಂದ ಚಾಚಿ ಹಿಡಿದಿದೆ ಗೋಡೆ (ದಾಕೂಟ. ೨). [ ಡಬರಿ + ಟೊಪ್ಪಿಗೆ ]

**ಡಬರೆ** 'ಡಬರಿ' ನೋ.

**ಡಬಾಣ** 'ಡವಾನ' ನೋ.

**ಡಬಾಸು** (ನಾ). ಮುಂಚ್ಚೆಳ : ರೊಕ್ಕದ ಗಮಜತ್ತು, ಹರೆಯದ ಹೆಣ್ಣನ್ನು ಚಾಂದೀ ಡಬಾಸಿನಿಂದ ಮಡಿಸುವಷ್ಟು ವೈಭವವಿತ್ತು (ದೀಪಹ. II, ೧೯೩); ಜೇರಗಿಂಡಿಗೆ ಡಬಾಸ ಹೊಚ್ಚಿ ಸಂಗೀತ ಸಾಗಬೇಕು (ಬಾಬಲ. ೫೦). [ ←ಮರಾ. ಧಾಪಣ ]

**ಡಬೀರ, ಡಬೀರಿ, ದಬೀರ** (ನಾ). ರಾಜನ ಖಾಸಗೀ ಗುಮಾಸ್ತ ; ರಾಜನ ಆಪ್ತಕಾರ್ಯದರ್ಶಿ : ಭಾಗಾನಗರದಲ್ಲಿಯ ಡಬೀರನು ಕೇವಲ ವಾಗಿ ನನ್ನ ವಿಶ್ವಾಸಪಾತ್ರನು, ನನ್ನ ಸಮೀಪದ ಆಪ್ತನು (ಜಿರಂಗ. ೧೧೫); "ಪರರಾಜರ ನಿಯೋಗಿಗಳಿಗೆ ಸ್ವಾಗತವನ್ನು ನೀಡಿ ಅವರಿಗೆ ರಾಜ ದರ್ಶನವನ್ನು ಮಾಡಿಸುವ ಅಧಿಕಾರದಲ್ಲಿ ನಿಯಂತ್ರ" (ಜಿರಂಗ. ಅಡಿಟ). **ಡಬೀರಿ :** ೨. ಗುಮಾಸ್ತ ; ಮುಂಶಿ ; ಕಾರಕೂನ : (+). **ದಬೀರ:** ೧. ಪರರಾಷ್ಟ್ರಕ್ಕೆ ಸಂಬಂಧಪಟ್ಟ ದೌತ್ಯಾದಿ ಸಕಲಕಾರ್ಯಗಳನ್ನೂ ದಬೀರ ಅಥವಾ ಸುಮಂತನೂ . . . ನಿರ್ವಹಿಸುತ್ತಿದ್ದರು (ಛತ್ರಶಿ. ೧೪೦). [ ←ಮರಾ. ಡಬೀರ್; ಪಾರ. ಹಿಂ. ದಬೀರ್ ]

**ಡಬೀರಿ** 'ಡಬೀರ' ನೋ.

**ಡಬ್ಬ, ಡಬ್ಬಿ, ಡಬ್ಬೆ₂** (ನಾ). ೧. ಲೋಹದ ತಗಡಿನಿಂದ ಮಾಡಿದ ಮುಚ್ಚಳವಿರುವ ಚಿಕ್ಕ ಅಥವಾ ದೊಡ್ಡ ಕರಡಿಗೆ,–ಸಂಪುಟ,– ಕರಂಡ: ಬೆಲ್ಲದ ಡಬ್ಬವನಿವರು ಆರು ಮೈಲಿಯ ದೂರವಿದ್ದರು ನಮ್ಮೂರು ನನಗಾಗಿ ಹೊತ್ತು ತಂದಿಹರು (ಚಂದ್ರವೀ. ೧೫೩–೨೯); ಗೋಪುರಕ್ಕೆ ಕೆಂಪುಬಣ್ಣ ಬಳಿಯುತ್ತಿದ್ದವರ ಕೈಯಿಂದ ಬಣ್ಣದ ಡಬ್ಬ ಜಾರಿತು(ಗೋಪುರ.೧); ಮಗ್ಗುಲಲ್ಲಿ ಸೀಮೆಯೆಣ್ಣೆಯ ಡಬ್ಬ (ರಾಮಾನ.೧೦೦). **ಡಬ್ಬಿ :** ೧. ಕಸ್ತೂರಿಯ ಡಬ್ಬಿ (ಸೌಗಂಧಿ. ೦೯೦) ; ಅವುಗಳ ಮೇಲೆ ಚಿತ್ರಫಲಕ, ತೂಲಿಕೆ ಮತ್ತು ಬಣ್ಣದ ಡಬ್ಬಿಗಳು . . . ಇದ್ದವು (ಬಾಡಳ. ೪೦) : ಡಬ್ಬಿಗಳೆಲ್ಲಾ ಬರಿದೋ ಬರಿದು ಮನೆಯಲ್ಲಿ ಏನೂ ಇಲ್ಲ (ಅಗಸ್. ೧೨). ೨. ರೈಲುಬಂಡಿಯ ಬಿಡಿ ಗಾಡಿ; ಬೋಗಿ: ಟಿಕೇಟ್ ಕಲೆಕ್ಟರನು ಬರಿಯ ಎರಡನೆಯ ವರ್ಗದ ಡಬ್ಬಿಗಳಲ್ಲಿಯೇ ಸುಳಿದಾಡದೆ . . . ಮೂರನೆಯ ವರ್ಗದಲ್ಲಿ ಹೋಗಿ ಟಿಕೇಟು ಇಲ್ಲದವರನ್ನು ಹಿಡಿಯ ಹತ್ತಿದನು (ಪ್ರೇಮುಕ. ೬೬) ; ಮುಂದಿನ ಡಬ್ಬಿಗೆ ದಬ್ಬಬಹುದಾಗಿತ್ತು (ದೀಪಹ. II, ೨೨೯). **ಡಬ್ಬೆ₂ :** ೧. ಈ ದಾರು 'ಬಾಯಿ ಮುಚ್ಚಿದ ನಸ್ಯದ ಡಬ್ಬೆ' ಅನಿಸುತ್ತಿತ್ತು (ಸ್ವಪ್ನಹೊ. ೧೧) ; ಇನ್ನು ಅರ್ಧ ತಾಸು ; ಅಷ್ಟರಲ್ಲಿ ಊಟದ ಡಬ್ಬೆ ಬರುವುದು (ಪ್ರೇಮುಕ. ೧). ೨. ನಾನೋ ನಮ್ಮ ದೇಸಿಯ ಉಡುಪಿನಲ್ಲಿ ಹೋದೆ ; ನನ್ನ ಡಬ್ಬೆಯಲ್ಲಿ ಮಾರ್ಗದ ವೇಷ ಧರಿಸಿದ್ದ ಅರ್ಥಾತ್ 'ಸೂಟಭಾಯಿ' ಯೊಬ್ಬ ಕುಳಿತಿದ್ದ (ಮುಂಗಾಪು. ೨೦). [ ←ಹಿಂ. ಡಬ್ಬಾ ; ಮರಾ. ಡಬ್ಬೀ, ಡಬಾ, ಡಬೀ ]

**ಡಬ್ಬಗಳ್ಳಿ** 'ಡಬ್ಬುಗಳ್ಳಿ' ನೋ.

**ಡಬ್ಬಣ** 'ದಬ್ಬಳ' ನೋ.

**ಡಬ್ಬಣಕಾಟಿ** 'ದಬ್ಬಣಕಾಟಿ' ನೋ.

**ಡಬ್ಬಣಸಾಲೆ** 'ದಬ್ಬಣಸಾಲಿ' ನೋ.

**ಡಬ್ಬನೆ** (ಅ). ಡಬ್ ಎಂದು ಸದ್ದು ಹುಟ್ಟುವ ಹಾಗೆ.

**ಡಬ್ಬನೆಬೀಳು** = ಡಬ್ ಎಂದು ಶಬ್ದವಾಗುವಂತೆ ಬೀಳು : ಕೊಳಗದಪ್ಪಲೆ ಅಟ್ಟದಿಂದ ಡಬ್ಬನೆ ಬಿತ್ತು (ರೂಢಿ). [ಡಬ್ + – ಅನೆ₁]

**ಡಬ್ಬಳ** 'ದಬ್ಬಳ' ನೋ.

**ಡಬ್ಬಿ** 'ಡಬ್ಬ' ನೋ.

**ಡಬ್ಬಿಗಡಿಗೆ** (ನಾ). ದೇವಾಲಯಗಳಲ್ಲಿ ಕಾಣಿಕೆಯನ್ನು ಹಾಕಲು ಇಟ್ಟಿರುವ ಗಡಿಗೆ,–ಹುಂಡಿ,–ಗೋಲಕ. [ಡಬ್ಬಿ (<ಡಬ್ಬ)+ಗಡಿಗೆ]

**ಡಬ್ಬು₁** 'ದಬ್ಬು₁' ನೋ.

**ಡಬ್ಬು₂** 'ದಬ್ಬು₂' ನೋ.

**ಡಬ್ಬು₃** (ನಾ). ಟೊಳ್ಳಾದ ಡಬ್ಬ ಮೊದಲಾದುವನ್ನು ಬಡಿದಾಗ ಹುಟ್ಟುವ ಶಬ್ದ : (+).

**ಡಬ್ಬು₄** 'ದಂಬ' ನೋ.

**ಡಬ್ಬು₅** 'ದಪ್ಪು' ನೋ.

**ಡಬ್ಬುಕ** 'ದಬ್ಬುಕ' ನೋ.

**ಡಬ್ಬುಕೊಡ** 'ಡಬ್ಬುಗೊಡ' ನೋ.

**ಡಬ್ಬುಗಳ್ಳಿ, ಡಬಗಳ್ಳಿ, ಡಬ್ಬಗಳ್ಳಿ** (ನಾ). ಕಳ್ಳಿಜಾತಿಯ ಗಿಡಗಳಲ್ಲಿ ಒಂದು ಬಗೆ ; ಪಾಪಾಸುಕಳ್ಳಿ ; ಮುಳ್ಳುಗಳ್ಳಿ : (+). **ಡಬಗಳ್ಳಿ :** ಎಲ್ಲೆಲ್ಲೂ ಬೆಳೆದ 'ಡಬಗಳ್ಳಿ' ಯ ಆ ಕಾಡು, ಆ ಬೆಟ್ಟ, ತನ್ನೊಳಗೆ ಬರುವವರನ್ನು ದೆವ್ವಿನ ಹಾಗೆತಲೆಯೆತ್ತಿ ಹೆದರಿಸುತ್ತದೆ (ಬನಸಿ. ೯೪). **ಡಬ್ಬಗಳ್ಳಿ:** ನಡೂರೊಳಗೆ ಡಬ್ಬಗಳ್ಳಿ ಬೆಳಿಸಿಕೊಟ್ಟಾಂಗ ಆಗೇದ (ಹುಚ್ಚಾಟ. ೧೦೪). [ ಡಬ್ಬು₅ + ಕಳ್ಳಿ₂ ]

**ಡಬ್ಬುಗಾಣ್** (ಕ್ರಿ). ಆಡಂಬರವನ್ನು ಕಾಣು : ಡೊಂಕೆಂಬ ಡೌಕೆಯ ಡಂಬರ ಡಬ್ಬುಗಂಡೇಕೆ ಭಜಿಸರೊ ಶ್ರೀ ಹರಿಯ (ಶತಸಾಂ. ೭೬–೮೬). [ ಡಬ್ಬು₄ (<ದಂಬ) + ಕಾಣ್ ]

**ಡಬ್ಬುಗಾತಿ** (ನಾ). ಬೂಟಾಟಿಕೆ ಸ್ವಭಾವದವಳು ; ಸೋಗುಗಾತಿ : ಡಬ್ಬುಗಾತಿಯುಬ್ಬರ ಬಗೆಯ ನಾವು ಬಲ್ಲೆವು (ಕೋಹಿನೂ. ೦೦೨). [ ಡಬ್ಬು₄ (<ದಂಬ) + – ಗಾತಿ₅ ]

**ಡಬ್ಬುಗಾರ** 'ಡಂಬಗಾರ' ನೋ.

**ಡಬ್ಬುಗೈ** (ನಾ). ಬೋರಲಾದ ಕೈ : 'ಕೈತೋರಿಸು' ಎಂದರೆ ಅವರು ಅವನ ಮುಂದೆ ಡಬ್ಬುಗೈ ಮಾಡಿದರು (ಸ್ಮ್ರತಿಜ. ೮೮).
[ ಡಬ್ಬು$_2$ (<ದಬ್ಬು$_2$) + ಕೈ$_2$ (<ಕೆಯ್$_2$) ]

**ಡಬ್ಬುಗೊಡ,** ಡಬ್ಬುಕೊಡ (ನಾ). ತಲೆಕೆಳಗಾಗಿ ಇರಿಸಿದ ಕೊಡ ; ಬೋರಲುಹಾಕಿದ ಬಿಂದಿಗೆ : ನನ್ನ ಉಪದೇಶವು ಡಬ್ಬುಗೊಡದ ಮೇಲೆ ನೀರು ಸುರುವಿದಂತೆ ಆಗುತ್ತದೆ (ಮೋಹಿನೀ. ೨೯). **ಡಬ್ಬುಕೊಡ :** ಡಬ್ಬು ಕೊಡದ ಮೇಲೆ ಸುರಿದ ನೀರಿನಂತೆ ವ್ಯರ್ಥವೇ ಆಗಿ ಆತ ಅವರ ಮೇಲೆಯೇ ಸಿಟ್ಟಾಗಿರಬೇಕು (ಕೃತಕ್ಕ. ೩೬). [ ಡಬ್ಬು$_2$ (<ದಬ್ಬು$_2$) + ಕೊಡ$_2$ ]

**ಡಬ್ಬುಮಲಗು** (ಕ್ರಿ). ಹೊಟ್ಟೆ ಕೆಳಗಾಗಿ ಮಲಗು : ಮಂದಾಕಿನಿಯು ಲಜ್ಜೆಯಿಂದ . . . ಭೂಮಿಯ ಮೇಲೆ ಡಬ್ಬು ಮಲಗಿದ್ದಳು (ಮಂದಾಕಿ. ೪).
[ ಡಬ್ಬು$_2$ (<ದಬ್ಬು$_2$) + ಮಲಗು$_1$ (<ಮಲಂಗು$_1$) ]

**ಡಬ್ಬುಹಂಚು** 'ದಬ್ಬುಹಂಚು' ನೋ.

**ಡಬ್ಬುಹಾಕು** 'ದಬ್ಬುಹಾಕು' ನೋ.

**ಡಬ್ಬೆ$_1$** 'ದಬ್ಬೆ$_1$' ನೋ.

**ಡಬ್ಬೆ$_2$** 'ಡಬ್ಬ' ನೋ.

**ಡಮಡಮ** (ನಾ). ಒಂದು ಅನುಕರಣ ಶಬ್ದ : ಡಮಡಮ[ಪಾಠಾಂ. ಧಮಾಧಮ]ಮೆಂಬ ಡಿಂಡಿಮದ ಭೋರೆಂಬ ಕಹಳೆಯ (ರಾಜಶೇ. ೬-೧೦ ವ).

**ಡಮಡಮಿಸು** (ಕ್ರಿ). ಡಬಡಬಿಸು ; ತುಂಬಿ ತುಳುಕು : ಮಾತು ಕಿವಿಯಲ್ಲಿ ಡಮಡಮಿಸಹತ್ತಿತು (ರೂಢಿ). [ ಡಮಡಮ + - ಇಸು$_3$ ]

**ಡಮಡಮಾಯಿಸು** (ಕ್ರಿ). ೧. ಡಮಡಮ ಎಂಬ ಸದ್ದಾಗುವಂತೆ ಮಾಡು ; ಡಬಡಬಿಸು : ನಾಲ್ಕು ಗಾಡಿಗಳಲ್ಲಿ ದೊಡ್ಡ ಹಂಡೆಗಳನ್ನೂ ಹೌದುಗಳನ್ನೂ ಇಡಿಸಿಕೊಂಡು . . . ನೀರುತುಂಬಿ ಡಮಡಮಾಯಿಸುತ್ತ ಊರಿಗೆ ಬರುತ್ತಿದ್ದನು (ಕನಕ. ೨೬). [ <ಡಮಡಮ + - ಇಸು$_3$ ]

**ಡಮಣಿ** 'ದಮಣಿ' ನೋ.

**ಡಮರ,** ಡಮರಿ$_1$, ಡಮುರು, ಡವರ$_1$ (ನಾ). ಒಂದು ಬಗೆಯ ಚರ್ಮವಾದ್ಯ : ಡಮರ[ಪಾಠಾಂ. ರು]ವೆಂಬ ಡೋಲು . . . ಘಂಟಿಕೆಯೆಂಬ ಘಟ ಈ ತೆಱದ ದಶವಾದ್ಯಂಗಳಂ (ವಿವೇಕ. ೨೩೬). **ಡಮರಿ$_1$ :** ನುಡಿಸಿದನು ಡಮರಿಯನು . . . ಶೊಳ್ಳಿಡಿದು ಬಿಡದೆತ್ತಿ ಶಂಖ ಊದಿದನು (ಕನ್ನಜಾ. ೧೮೨) ; ಅನೇಕ ಹರಕೆಯ ಪದ್ಯಗಳನ್ನು 'ಡಮರಿ'ಯ ತಾಳದಲ್ಲಿ ನುಡಿಸಿ ಹೆಣ್ಣುಮಕ್ಕಳ ಮನಸ್ಸನ್ನೇ ಗೆಲ್ಲುವನು (ಕನ್ನಜಾ. ೧೯). **ಡಮುರು.** 'ಡಮುರುರೇಖೆ' ಪರಾ. **ಡವರ$_1$.** 'ಡವರಿಗ' ಪರಾ.
[ <ಸಂ. ಡಮರು ]

**ಡಮರಿ$_1$** 'ಡಮರ' ನೋ.

**ಡಮರಿ$_2$** (ನಾ). [ನಾಟ್ಯ] ಅಭಿನಯದಲ್ಲೊಂದು ಬಗೆ ; ಹತ್ತೊಂಬತ್ತು ವಿಧವಾದ ದೇಶೀಯ ಆಕಾಶಚಾರಿಗಳಲ್ಲೊಂದು ; ಒಂದು ಕಾಲನ್ನು ಕುಂಚಿತಮಾಡಿ, ಅದನ್ನು ಎಡಕ್ಕೂ ಬಲಕ್ಕೂ ಸುತ್ತಿಸುವುದು: ಒಂದು ಪದಂ ಕುಂಚಿತದಿಂ ನಿಂದೆಡಬಲನಾಗಿ ತಿರುಗೆ ಡಮರಿಯೆನಿಕ್ಕುಂ (ಲಾಸ್ಯರಂ. ೬-೯೨). [ ಸಂ. ಡಮರೀ ]

**ಡಮರು** (ನಾ). ಒಂದು ಬಗೆಯ ಚರ್ಮವಾದ್ಯ ; ಬುಡುಬುಡಿಕೆ ಯಾಕಾರದ ಚರ್ಮವಾದ್ಯ : ಡಮರು[ಪಾಠಾಂ. ರ]ವೆಂಬ ಡೋಲು, ಝುರ್ಝುರವೆಂಬ ಝಾಯಿ . . . ಘಂಟಿಕೆಯೆಂಬ ಘಟ ಈ ತೆಱದ ದಶವಾದ್ಯಂಗಳಂ ಬಾರಿಸಲ್ (ವಿವೇಕ. ೨೩೬) : ಮುರಜೆ ಢಕ್ಕಂ ವೀಣೆ ಡಮರು ತಾಳಂ ಮೇಳ (ಸಿದ್ಧಶಾ. ೮-೬); ನೃತ್ಯಕಾಲದಲ್ಲಿ ಒಂದಲ್ಲ ಒಂದು ಬಗೆಯ ಡೋಲು, ಡೋಲಕ, ಡಮರು, ತಮಟೆ ಮೊದಲಾದುವನ್ನು ಬಳಸುತ್ತಾರೆ (ಯಕ್ಷಬ. ೯). [ ಸಂ. ]

**ಡಮರುಕ** (ನಾ). = ಡಮರು: ಮಕಾರಕ್ಕೆ ವಕಾರಂ—ಅಮರೀ - ಅವರಿ . . . ಡಮರುಕ, ಡಮರುಗ–ಡವರುಗ (ಶಮದ. ೨೬೩ ಪ್ರಯೋ) ; ದೊರೆವೆತ್ತ ತದನ್ವಯವೀಶ್ವರಾಂಶವೆಂಬುದು ಸುವರ್ಣವೃಷಭಧ್ವಜದಿಂ ವರ ಡಮರುಕ ತೂರ್ಯದಿನೊಪ್ಪಿರೆ (ಶಾಸಪ. ೬೮-೫ ; 1170). [ ಸಂ. ]

**ಡಮರುಗ,** ಡವರುಗ (ನಾ). ಒಂದು ಬಗೆಯ ಚರ್ಮವಾದ್ಯ : ಹಸ್ತಂಗಳು ಕಪಾಲ ಖಟ್ವಾಂಗ ತ್ರಿಶೂಲ ಡಮರುಗಸ್ಥಾನ (ಬಸವ. ೮೪೪); ಡಮರುಗ ಪಿನಾಕ ತ್ರಿಶೂಲಂಗಳಿಂದೊಪ್ಪೆ (ಇಹರ. ದೇ. ೪೪-೭); ಮನದಿಷ್ಟ ವಾರದ ಡಮರುಗಕರಧರ . . . ಸಂಗಮೇಶ್ವರ ರಕ್ಷಿಸೆನ್ನ ಸತತಂ (ಪ್ರಾಥರಾ. ೭-೦); ಪಾಣಿನಿಯು ಶೈವನು ಶಿವನ ಡಮರುಗದಿಂದ ಉತ್ಪನ್ನ ವಾದ ಅಸ್ಪಷ್ಟವಾದ ಅಕ್ಷರಗಳನ್ನು . . . ವಿಸ್ತರಿಸಿದನು (ಭಾಕದ. ೨೦೦). **ಡವರುಗ :** ಮಕಾರಕ್ಕೆ ವಕಾರಂ—ಅಮರೀ–ಅವರಿ . . . ಡಮರುಕ, ಡಮರುಗ–ಡವರುಗ (ಶಮದ. ೨೬೩ ಪ್ರಯೋ); ಡವರುಗದ ಮುಖವೆರಡ ನಳೆದುಂ ಕ್ರಮದಿಂ ಮೈನೀಳವನಳೆದು ಬಗೆಗಳನಳೆದುಂ ಕೊಮ್ಮಿದ ರೆರಡಂ ಕೂಡರ್ಧಿಸುತಂ ಅಮಿತಗುಣಾ ಗುಣಿಸೆ ಕಂಭ ತಪ್ಪದೆ ಬರ್ಕುಂ (ಕ್ಷೇತ್ರಗ. ೧೭-೩).

**ಡಮರುಗ ಪಟುಘೋಷಣ**= ಒಂದು ಬಿರುದು: ಭಳಾರಿಯ ಮಕ್ಕಳು ಡಮರುಗಪಟುಘೋಷಣರುಂ ಶ್ರೀಮದಯ್ಯಾವೊಳೆಯ ಪುರವರಾ ಧೀಶ್ವರರುಂ (ಸೌಇಇ. XX, ೧೦೨-೪೦ ; 1144 ?). [ <ಸಂ. ಡಮರುಕ ]

**ಡಮರುಗಧರ** (ನಾ). ಡಮರುವನ್ನು ಕೈಯಲ್ಲಿ ಧರಿಸಿರುವವನು; ಶಿವ: ಕೈಲಾಸೇಂದ್ರ ಡ[ಪಾಠಾಂ. ಢ]ಮರುಗಧರ ತ್ರಿಶೂಲಿಯು ದಿಕ್ಪಾಲಕ ನೆನಲು ಈಶಾನಧರನು (ಬಿಜ್ಜಪು. ೭೩-೪೬). [ <ಸಂ. ಡಮರುಕಧರ ]

**ಡಮರುಧ್ವಾನ** (ನಾ). ಡಮರುವಾದ್ಯದ ಶಬ್ದ : ಆಲೋಕಮಾತ್ರದಿಂದ ಖಿಳಮಂ ಸುಟ್ಟುರುಹಿ ಮೇಲೆ ಡಮರುಧ್ವಾನದಿಂದೊಡೆದಜಾಂಡಮಂ . . . ಎಸೆವ ನಾಟ್ಯಾಡಂಬರದ ಶಿವನ ಲೀಲೆಯಂ ಕೇಳು (ಭಾವಚಿಂ. ೩-೫); ಸ್ಫೂರ್ಜದ್ಘರ್ಜದ್ಘನಾಡಂಬರ ರವ ಡ[ಪಾಠಾಂ. ದ]ಮರುಧ್ವಾನವಿಂಬಾಗೆ (ರಾಜಶೇ. ೩-೮೯) [ ಡಮರು + ಧ್ವಾನ ]

**ಡಮರುಬಡಿ** (ಕ್ರಿ). ೧. ಡಮರುವಾದ್ಯವನ್ನು ಬಾರಿಸು. ೨. (ಅಲಂ) ತಿರುಗಿ ತಿರುಗಿ ಮನಸ್ಸಿನಲ್ಲಿ ಡಮಡಮಿಸು; ಎಡೆಬಿಡದೆ ನೆನಪಿನಲ್ಲಿ ಮೂಡಿ ತೊಂದರೆಕೊಡುತ್ತಿರು : ಈ ಹುಡುಗಿ ಬೇರೆ ನನ್ನ ತಲೆಯಲ್ಲಿ ಡಮರುಬಡಿಯಲು ಪ್ರಾರಂಭಿಸಿದ್ದಾಳೆ (ಕ್ಷಿತಿಜ. ೮೩).
[ ಡಮರು + ಬಡಿ$_1$ ]

**ಡಮರುಯತಿ** (ನಾ). [ಸಂಗೀತ] ಆರು ವಿಧವಾದ ಯತಿಗಳಲ್ಲೊಂದು: ಡಮರುಯತಿ ಗೋಪುಚ್ಛಯತಿ ಬಂದು,ನಂತರ ಶ್ರೋತೋವಾಹಯತಿಯ ಅನುಕ್ರಮಣ (ಸಂಗೀತಂ. ೫೦). [ ಡಮರು + ಯತಿ ]

**ಡಮಾಣ** 'ಡಮಾನ' ನೋ.

**ಡಮಾನ,** ಡಬಾಣ, ಡಮಾಣ, ಡಮಾರ, ದಬಾಣ, ದಮಾಣ, ದಮಾನ (ನಾ). ಮೆರೆವಣಿಗೆ ಮೊದಲಾದ ಸಂದರ್ಭಗಳಲ್ಲಿ ಎತ್ತು, ಕುದುರೆ, ಒಂಟೆ ಮೊದಲಾದವುಗಳ ಬೆನ್ನಿನ ಎರಡು ಪಕ್ಕಗಳ ಮೇಲೆಯೂ ಒಂದೊಂದು ಬರುವಂತೆ ಅಳವಡಿಸಿದ ಜೋಡು ನಗಾರಿ : ಎಸೆವ ವೀರಣ ಡಮಾನ ಚಂಬಕ ಮದ್ದಳೆಗಳೆಂಬ ಬಹುವಾದ್ಯ ದುಬ್ಬಟೆಯುಖಿಳದೆಸೆಯೊಳಾವರಿಸಲು (ಚಬಪು. ೫-೭) ; ಎತ್ತಿನ ಮೇಲೆ ಬಾಜಿಸುವ ಡಮಾನದ ಮೊತ್ತದಿ (ಕಂಣವಿ. ೨೩-೪೧). **ಡಬಾಣ :** (ಕ). **ಡಮಾಣ :** ಬಿಗಿದ ಡಮಾಣದಲೊಂಟೆಗಳಗಣಿತ ಝುಗರಝುಗಿಸುವ ಕಾಂತಿ ಯಿಂದ ಸೊಗಸುವ ಕೊಲ್ಲಾರ ಬಂಡಿಯು (ಕಂಣವಿ. ೧೧-೩೩). **ಡಮಾರ :** ಡಮಾರದ ಶಬ್ದಕ್ಕೆ ಕೈಕಾಲು ಬಿಟ್ಟ (ಗಾದೆ). **ದಬಾಣ :** "ನಗಾರಿ" (ಜಾನಕೋ. ೩). **ದಮಾಣ :** "ಡಿಂಡಿಮಃ – ದಮಾಣಂ" (ಶಾಕಕ್ಕ. ೨೬) ;

ಪೂರ್ವದಲ್ಲಿ ಎರಡುವೇಳೆ ನಡೆಯುತ್ತಿದ್ದ ದಾಳ ದಮಾಣ ಭೇರಿ ಮುಂತಾದ ಓಲಗಗಳಿಗೆ ಈಗ ದಿಳ್ಳಿಯಿಂದ ಬಂದ ನೌಬತ್ತನ್ನು ಪ್ರತಿನಿತ್ಯದಲ್ಲಿಯೂ ನಾಲ್ಕು ವೇಳೆ ನಡೆಸುವಂತೆ ಕಟ್ಟಳೆ ಮಾಡಿದರು (ಮಹಾವಂ. I, ೧೪೭); ವೆಂಕಟಾದ್ರಿನಾಯಕನನ್ನು ಯುದ್ಧದಲ್ಲಿ ಜಯಿಸಿ, ಅವನಲ್ಲಿದ್ದ ದಾಳ ದಮಾಣ ಅಂದಳ ಮುಂತಾದವನ್ನು ಕಿತ್ತುಕೊಂಡು (ಚಾಮವಂ. ೩೦); ದಂಡಿಗೆ ಹೆದರಿಲ್ಲ ದಮಾಣಕ್ಕೆ ಹೆದರಿಲ್ಲ, ದಾಸಯ್ಯನ ಕಣಮಣಿಗೆ ಹೆದರಿಯೇನೆ ? (ಗಾದೆ). **ದಮಾನ:** ವಿಲಸಿತ ಭ್ರಮರ ಝೇಂಕರದ ಬಲುದಮಾನಗಳಬ್ಬರದಿಂದ ಮಧುನೃಪ ಸಲೆ ವನರಾಷ್ಟ್ರಕೈತಂದ (ಕಂಸವಿ. ೯-೫); ಕರಿಗಳ ಮೇಲೊಪ್ಪುವ ದಮಾನಗಳಬ್ಬರವೆಸೆದುದು ಪುರದೊಳಗೆ (ಕಂಸವಿ. ೯-೬೦).

[ ದೇ.॥ ತಮಿ. ಟವ್ಮಾನ; ಮಲ. ಥಮಾನ; ತೆಲು. ಡಮಾರ, ಡಮ್ಮಾರ ]

**ಡಮಾಮಿ,** ಢಮಾಮಿ, ದಮಾಮಿ (ನಾ). ೧. ಒಂದು ಬಗೆಯ ರಣವಾದ್ಯ ; ಯುದ್ಧದಲ್ಲಿ ಬಾರಿಸುವ ಒಂದು ವಿಧದ ದೊಡ್ಡ ನಗಾರಿ : ಸಮರದ ಭೇರಿಯಿಂ ಸಂಗ್ರಾಮದ ಡಮಾಮಿಯಿಂ . . . ಹೆಗ್ಗಾಳೆಯಬ್ಬರದುಬ್ಬಟೆಯಿಂದುರ್ಬಿ (ಹಮ್ಮೀರ. ೩-೩೫ ವ); ಬಡಿದರು ಸನ್ನೆಯ ಭೇರಿ ಡಮಾಮಿಯ ಕತುರಭಸಕೆ ಬ್ರಹ್ಮಾಂಡ ಒಡೆಯಲು (ಕಂಸವಿ. ೧೪-೧); ಕಡುಬೆಡಗಿನ ಡಮಾಮಿ ಜರ್ಝರಗಳು ಬಿಡದೆ ಮೆಱೆವ ಸಮ್ಮೇಳ (ಜ್ಞಾನಚ. ೪೦-೩೬); ಅವನ ಡಾಲು ಡಮಾಮಿ ಸತ್ತಿಗೆ ಕೆಂಪಿನ ನಿಶಾನಿಯುಮಂ (ಕೆಳನೃ. ೨-೪೯). **ಢಮಾಮಿ:** ೧. ಪೊಡೆವ ಢಮಾಮಿ ಭೇರಿ ಪಟಹಂ (ಹಾಲಾಸ್ಯ. ೦-೫-೬೨). ೨. ಪ್ರಕಟಣೆ; ಪ್ರಸಿದ್ಧಿ ; ಜಾಹೀರಾತು: ನಿಮಗೆ ಕೆಲಸವಿಲ್ಲ. ಕೊಲಂಬೋದಲ್ಲಿ ಹೆಂಡತಿ ಮನೆ ಅಂಗಡಿ ಭೂಮಿ ಇರುತ್ತಿದ್ದರೆ ಹೋಗುತ್ತಿರಲಿಲ್ಲವೇ ? ಅವೆಲ್ಲ ಸೋದರ ಮಾವ ವಿಹಾರ ಸಾಹೇಬರು ಹಾಕಿದ ಢಮಾಮಿ (ಜಾರುದಾ. ೦೩೨); ಇದು ಶಿರಸಿ ಎಲಕ್ಕಿಯಲ್ಲ, ಸಕಲೇಶಪುರದ್ದು ಎಂದು ಢಮಾಮಿ ಹೊಡೆದ (ರೂಢಿ). **ದಮಾಮಿ:** ೧. ಜಡಿವ ಕಹಳೆ . . . ತನಬಟ ದಮಾಮಿಗಳು (ದೇವಾಂಪು. ೩-೨೦೮); ಭೇರಿ ತಂಬಟ ದಮಾಮಿಗಳಾದಿಯಲಿ (ಮೋಹತ. ೩೭-೯); ಕರಿಭಯದಾಳು ದಮಾಮಿ ಸಿಂಹಾಸನ ಮೆಱೆವ ಕಿರೀಟ ಮುಂತಾದ ಬಿರುದುಗಳನು ತಂದೊಡೆಯನಿಗೊಪ್ಪಿಸಿ (ಜ್ಞಾನಚ. ೦೩-೫೪).

[ ←ಮರಾ. ಡಮಾಮಾ, ದಮಾಮಾ ; ಪಾರ. ದಮಾಮಾ ]

**ಡಮಾರ** 'ಡಮಾನ' ನೋ.

**ಡಮಾಲು** (ನಾ). = ಡಮಾಮಿ ೧ : ಡಾಲು, ಡಮಾಲು, ರಾಯಭಟ ಮುಂತಾದ ರಣವಾದ್ಯಗಳು ತಟ್ಟನೆ ನಿಂತವು (ರೂಲೀಜಾ. ೫). [ ? ]

**ಡಮುರು** 'ಡಮರ' ನೋ.

**ಡಮುರುರೇಖೆ** (ನಾ). ಡಮರುವನ್ನು ಹೋಲುವ ಒಂದು ಬಗೆಯ ಸಾಮುದ್ರಿಕ ರೇಖೆ : ಕಲಶರೇಖೆಯು ಡಮುರುರೇಖೆಯು ಮಕರಧ್ವಜ ರೇಖೆಯು ಇವು ಯಾವಾತನಿಗೆ ಉಂಟೋ ಆತನು ಅತ್ಯಂತ ಬುದ್ಧಿಶಾಲಿಯಾಗಿ ಕೀರ್ತಿವಂತನಾಗಿ ಅರ್ಥವನ್ನೂ ಸುಖವನ್ನೂ ಸ್ತ್ರೀಯರನ್ನೂ ಪಡೆಯುವನು (ಸಾಮುಲ. ೫೬-೫). [ ಡಮುರು (<ಡಮರ) + ರೇಖೆ]

**ಡಮ್ಮು** (ನಾ). (ಕರಾ) ದಿಮ್ಮಿ ; (ಗರಗಸದಲ್ಲಿ ಕೊಯ್ದು ಹಲಗೆ ಮಾಡಲು ಬರುವ) ದೊಡ್ಡ ಮರದ ಕಾಂಡ: ಸರಕಾರದವರಿಗೆ ಒಂದು ಡಮ್ಮು ಮರ ಬೇಕಂತೆ (ಜಾರುದಾ. ೦೫). [ <ದಿಮ್ಮಿ ]

**ಡಯನ** (ನಾ). ೧. (ಆಕಾಶದಲ್ಲಿ) ಹಾರುವುದು: "ಡಯ್ಯಂ, ಡಾಯ್ಯಂ, ಡಯನಂ, ಡಯನೀಯಂ—ಈ ೪ ಆಕಾಶಗಮನಂ" (ಕಾಶಿಕ್ಕೆ. ೦೩೯). ೨. ಹಕ್ಕಿಗಳ ಹಾರಾಟ : "ಹಕ್ಕಿಗಳ ನೆಗೆತ" (ಸಿರಿಕೋ. ೨೦೦). ೩. (ಕುಲೀನ ಸ್ತ್ರೀಯರ ಪ್ರಯಾಣಕ್ಕೆ ಬಳಸುವ, ವಸ್ತ್ರಾಚ್ಛಾದಿತವಾದ) ಮನುಷ್ಯರು ಹೆಗಲಿನಲ್ಲಿ ಹೊತ್ತುಕೊಂಡು ಹೋಗುವ ಒಂದು ಬಗೆಯ ವಾಹನ ; ಪಲ್ಲಕ್ಕಿ ; ಮೇನೆ ; ಡೋಲಿ : "ಕರ್ಣೀರಥಃ, ಪ್ರವಹಣಂ, ಡಯನಂ – ೩ ಮನುಷ್ಯರು ಹೊರುವ ವಿಮಾನದ ಹೆಸರು, ಡೋಲಿಗೂ ಹೆಸರು" (ಸಿದ್ಧಾಂತಿ. ೨೦೭); ಡಯನದಲಿ ಕುಳಿತು ಬರುವಾಗ (ಶ್ರೀರಾಜ. ೫-೦೩). ೪. ರಥದ ಓಟ,-ಗತಿ : "ಪ್ರವಹಣಂ, ಡಯನಂ – ಈ ೨ ರಥದ ಹರಿ" (ಹಲಾಯು. ೭೩-೨೯೦); "ಸ್ಯಂದನಂ ಶಕಟಂ . . . ಚಕ್ರಿಯೆಂದೆನಲ್ ಬಂಡಿಯಕ್ಕವಱ ಹರಿಹು ಪ್ರವಹಣಂ ಡಯನಮೆಂದೆನಿಕ್ಕುಂ" (ಶುಂಗರಾ. ೮೪-೩೬). [ ಸಂ. ]

**ಡರಕಿ,** ಥರಕಿ, ಥರಕೆ (ನಾ). ತೇಗುವಾಗ ಉಂಟಾಗುವ ಶಬ್ದ : (ಕ). **ಥರಕಿ:** ನಾಕು ದಶಮಿ, ಕಾರೆಳ್ಳಿನ ಹಿಂಡಿ . . . ಅವಳ ಅಪರೋಕ್ಷದಲ್ಲಿ ಹೊಡೆದು ಥರಕಿ ಬಿಟ್ಟ ವಿಷಯ ಗೋವಿಂದಭಟ್ಟನಿಗೆ ಗೊತ್ತಿರಲಿಲ್ಲ (ದೀಪಹ. II, ೭). **ಥರಕೆ:** ತಿಂದು ತೇಗಿ, ಒಂದು ಅಖಂಡ ತಂಬಿಗೆ ನೀರು ಸೆಡ್ಡಿ ಥರಕೆಯ ಡೋಲು ಬಡಿಯುತ್ತಿದ್ದೆವು (ದೀಪಹ. II, ೦).

[ ←ಮರಾ. ಡರಕೀ = ಗರ್ಜನೆ ]

**ಡರಕೆ** 'ಡಂಬುಕಂ' ನೋ.

**ಡರಿಕೆ** 'ಡಂಬುಕಂ' ನೋ.

**ಡರಿಕೆಹಾಕು** 'ಡುರುಕುಹಾಕಂ' ನೋ.

**ಡರ್ರನೆ** (ಅ). ಡರ್ ಎಂಬ ಶಬ್ದದೊಡನೆ: ತನಿಯಡಗನಡಸಿ ತಿಂದು ಬಸುಱು ಬೀಗೆ ಡರ್ರನೆ ತೇಗಿ . . . ರಣಭೂಮಿಯೊಳು ಕುಣಿದಾಡು ತಿರ್ದುವಾ ಮರುಳ ಪಡೆ (ಸಾಳ್ವಭಾ. ೨೫-೨೩); ತಿಂದು ಡರ್ರನೆ ತೇಗಿದನು (ರೂಢಿ). [ ಡರ್$_0$ + – ಅನೆ$_1$ ]

**ಡಲಾಯತ** 'ಡಲಾಯಿತ' ನೋ.

**ಡಲಾಯಿತ,** ಡಲಾಯತ, ಡಳಾಯಿಂತ, ಡಳಾಯ್ತು, ಥಲಾಯಿತ, ಥಳಾಯಂತ, ಥಳಾಯಿತ(ನಾ). ರಾಜನ ದರ್ಬಾರಿನಲ್ಲಿ ಕೆಲಸಮಾಡುವ ಸಮವಸ್ತ್ರದ ಆಳು ; ಕೋರ್ಟು ಕಚೇರಿಗಳಲ್ಲಿರುವ ಸಿಪಾಯಿ ; ಪೇದೆ; ಚೋಪುದಾರ; ಜಿಲ್ಲಾ ಕಚೇರಿಯ ಜವಾನ: ಸಿದ್ಧಯ್ಯನನ್ನು ನನ್ನ ಡಲಾಯಿತನನ್ನಾಗಿ ನೇಮಿಸಿಕೊಂಡೆ (ಹಂಗಾಳ್ಕ. ೬೩೭); ಮಾಮಲೆದಾರರು ಡಲಾಯಿತನನ್ನು ಕಳಿಸಿ (ದಾಲತ್. ೨೫೯); ಸುಲ್ತಾನರು . . . ಡಲಾಯಿತರನ್ನು ಕರೆದು, ಮಂತ್ರಿ ಪೂರ್ಣಯ್ಯನವರನ್ನು ಕರೆತರುವಂತೆ ಅಪ್ಪಣೆ ಮಾಡಿದರು (ದಾಲತ್. ೫೨೮). **ಡಲಾಯತ:** ಆ ಖಾದರಖಾನನ ಕಡೆ ಬಲೆ ಆದ್ಮಿ ಹರಿಕಾರ ಡಲಾಯತ ಸಹ ಇದು ಜನರ ಸಂಗಡ (ರಾಜೇಂದ್ರ. ೪೦). **ಡಳಾಯಿತ:** ಅಲ್ಲಿ ಡಳಾಯಿತರು ಎಲ್ಲರನ್ನೂ ಆದರಿಸಿ ಕುಳ್ಳಿರಿಸಿದರು (ದಾಲತ್ ೫೨೮). **ಡಳಾಯ್ತು:** ಅಡುವಳ ಡಳಾಯ್ತು ಸೂಟಾಯ್ಯರುಮೇಂ ಗಡ ಬೆಜ್ಜಬೀರಣೆಗರುಂ . . . ಏನಂ ಮಾಟ್ಪರ್ (ಮ್ಯಸೂಮ. ೪-೪೭). **ಥಲಾಯಿತ:** 'ಡವಾಲಿಥಲಾಯಿತ' ಪರಾ. **ಥಳಾಯತ:** ಹರಿಕಾರನಾಯಕರದೊಂದೆಶೆ ಥಳಾಯತರ್ವ ವಠಸೆಯಿಂ (ಕೃಷ್ಣವಿ. ೫-೧೧); **ಥಳಾಯಿತ:** ಅಲ್ಲಿಗಲ್ಲಿಗೆ ಥಳಾಯಿತರು ಕಟ್ಟೆಗೆಯವರು . . . ಸಂಚರಿಸುತ್ತ (ಕೃಷ್ಣವಿ. ೩-೫೭).

[ ←ಹಿಂ. ಥಲೈತ್ ; ಮರಾ. ಥಾಲಾಈತ್ ]

**ಡವ** (ನಾ). ಒಂದು ಅನುಕರಣ ಶಬ್ದ : 'ಡವಗುಟ್ಟು' ಪರಾ.

**ಡವಡವ** (ದ್ವಿರುಕ್ತಿ): ಬಿಚ್ಚಲಾರೆ ಹಿಗ್ಗಲಾರೆ ಎದೆಯೊಳಿಹುದು ಡವಡವ (ಅರಳು. ೪೫೩-೨); ಅವನಿಗೆ ಎದೆ 'ಡವಡವ' ಎಂದು ಬಡಿದುಕೊಳ್ಳುತ್ತಿದೆ (ರೂಢಿ).

**ಡವಕೆ**$_1$ (ನಾ). ಉಗುಳುವ ಪಾತ್ರೆ ; ಪೀಕದಾನಿ : "ಡವಕೆ – ಕಾಳಾಂಜಿ" (ಶಮದ. ಪರಿ. ೨): "ಡವಕೆ ಕಾಳಾಂಜಿ" (ಕಬ್ಬಿಕ್ಕೆ. ೫೩); ಭರತಾಗಮದೊಳ್ ಮೂವತ್ತೆರಡೆನೆ ನೆಗಟ್ದಂಗಹಾರಮುಂ ನೂಱೆಂಟುಂ ಕರಣಮುಮನವಳ ಡವಕೆಯ ಪರಿಚಾರಿಕೆಯಱಿಗುಂ (ಆದಿಪು. ೯-೨೩೯); ಅಡಪದ ಡವಕೆಯ

ಮಜ್ಜನದ ವಿಳಾಸವತಿಯರಂ(ವರ್ಧಮಾ. ೩-೯೮); ಕುಂಚದಡವದ ಡವಕೆಯ ಕನ್ನಡಿಯ ಕನ್ನೆಯರ್ಕಣ್ಗೆಸೆದರ್ (ಶಂರಾಮಾ. ೩-೪೦); ಸುರನಾರಿಯೊರ್ವಳಾ ಭೂವರನಾರಿಗೆ ಹೊನ್ನ ಡವಕೆಯುಂ ಪಿಡಿದಿರ್ದಳ್ (ಬಾಧಪು. ೭-೫೪) : ವರುಣಂ ಪೊಂಗಿಂಡಿಯುಂ ವಾಸವನೆ ಡವಕೆಯುಂ . . . ಪಿಡಿದೋಲೈಸಿ ನಿಂದಿರ್ದರ್ (ರಾಜಶೇ. ೦೪-೧೫೮).

**ಡವಕೆಯವಳ್**=ಡವಕೆಯನ್ನು ಎತ್ತಿಹಿಡಿಯುಂವ ಪರಿಚಾರಿಕೆ. ಡವಕೆಯವರ್ (ಬಹುವ):ಡವಕೆಯುವರ್ ಶ್ರಮಂಗೊಂಡ ಪಾತ್ರದಂತುಮ್ಮಳಿಸೆ (ಧರ್ಮಾಮೃ. ೪-೧೫೯). [ <ಸಂ. ಷ್ಠೀವಕ ]

**ಡವಕೆ₂** (ನಾ). ಒಂದು ಬಗೆಯ ವಾದ್ಯ. 'ಡವಕೆವಾಜಿಸು' ಪರಾ. [?]

**ಡವಕೆವಾಜಿಸು** (ಕ್ರಿ). ಡವಕೆವಾದ್ಯದಂತೆ ಬಡಿದುಕೊಳ್ಳು ; ಡವಡವ ಅನ್ನು : ಪಿರಿದುಮೆರ್ದೆ ಡವಕೆವಾಜಿಸುತಿರೆ . . . ನರೇಂದ್ರನಂದನನನೊಲ್ದು ನೋಡಿದಳೊರ್ವಳ್ (ಕಾದಂಪೂ. ೪೬೦). [ ಡವಕೆ₂ + ಬಾಜಿಸು ]

**ಡವಕೆವಿಡಿ** (ಕ್ರಿ). ಪೀಕದಾನಿಯನ್ನು ಒಡ್ಡು ; ಕಾಳಂಜಿಯನ್ನು ಹಿಡಿ : ಲೋಕಂ ಪೊಗಟ್ಟುದು ಕನಕಾಬ್ಜಾಕಾರದ ಡವಕೆವಿಡಿದ ಸುರಸೌಂದರಿಯಂ (ಆದಿಪು. ೭-೭) ; ಡವಕೆವಿಡಿವ ವೀಳೆಯವುಮಂ ತಂದೆಡೆಮಡಗುವ ದಿವಿಜರ ಬೆಡಂಗಿಯರ್ ಬೀಱಿ ಬಲಿದ ವಿಭ್ರಮಮಮಂ (ಮಹಾನೇ. ೮-೪೭).

[ ಡವಕೆ₁ + ಪಿಡಿ₁ ]

**ಡವಗುಟ್ಟು** (ಕ್ರಿ). (ಎದೆ) ಡವಡವ ಎನ್ನು,-ಹೊಡೆದುಕೊಳ್ಳು,-ಬಡಿದುಕೊಳ್ಳು,-ಹಾರು: ಅವನ ಎದೆ ಡವಗುಟ್ಟುತ್ತಿತ್ತು (ಚಿಕರಾ. ೦೦೯): ಆ ಸೇನೆಯೇನಾದರೂ ತಮ್ಮ ಮೇಲೆ ಬಂದ ಪಕ್ಷದಲ್ಲಿ ತಮ್ಮ ಗತಿ ಪೂರೈಸಿತೆಂದು ಎದೆಯಲ್ಲಿ ಡವಗುಟ್ಟುತ್ತಿತ್ತು (ಚಿದೇವ. ೩೫೦).

**ಡವಡವಗುಟ್ಟು** (ದ್ವಿರುಕ್ತಿ) : ಎದೆ ಮಾತ್ರ ಇನ್ನೂ ಡವಡವಗುಟ್ಟುತ್ತ ಇತ್ತು (ಘಾಟೀಮು. ೦೦೨). [ ಡವ + ಕುಟ್ಟು₁ ]

**ಡವಡವನೆ** (ಅ). ಡವಡವ ಎಂದು ಸದ್ದಾಗುವಂತೆ : ಅವಳ ಎದೆ ಡವಡವನೆ ಹೊಡೆದುಕೊಳ್ಳುತ್ತಿದ್ದುದು ಅವಳಿಗೆ ಕೇಳಿಸುತ್ತಿತ್ತು (ರಂಗನಾ. ೦೬೩). [ <ಡವ + – ಅನೆ₁ ]

**ಡವಡವಿಕೆ** (ನಾ). ೧. ಡವಡವ ಎಂದು ಎದೆ ಬಡಿದುಕೊಳ್ಳುವುದು ; ಗುಂಡಿಗೆ ಹೊಡೆದುಕೊಳ್ಳುವುದು : ಎದೆಯ ಡವಡವಿಕೆಯಲ್ಲಿ ಇದೆ ಇದೆಯೆಂಬ ಧ್ವನಿ ಸ್ಫುರಿಸಿದಾಗ ಬಂದ ಲಹರಿ (ಹೃದಹ. ೮೪-೨). ೨. ಲವಲವಿಕೆ ; ಚಟುವಟಿಕೆ : (ಕಿ). ೩. (ಆಲಂ) ಹೆದರಿಕೆ ; ಭಯ : ಅವಳಿಗೆ ಒಳಗೊಳಗೆ ಒಂದು ಡವಡವಿಕೆ (ನಡದಾ. II, ೮೯೫).

[ < ತವ + – ಇಕೆ ]

**ಡವಡವಿಸು** (ಕ್ರಿ). = ಡವಗುಟ್ಟು : ನನ್ನ ಎದೆ ಡವಡವಿಸಹತ್ತಿತು (ಪ್ರನಿ. ೩೦೨). [ <ಡವ + – ಇಸು₃ ]

**ಡವಡೆ₁** 'ಡವುಡೆ₁' ನೋ.

**ಡವಡೆ₂** 'ದವಡೆ' ನೋ.

**ಡವಣೆ, ಢವಣೆ** (ನಾ). ಒಂದು ಬಗೆಯ ದೊಡ್ಡ ಚರ್ಮವಾದ್ಯ ; ಢಕ್ಕೆ ; ನಗಾರಿ : ವರ ಶಂಖ ಡವಣೆ ಜಾಗಟೆ ವಾದ್ಯ ಭೋರಿಡೆ (ಗೊಮ್ಮಜಿ. ೨-೫೭) ; (ಸಾಧಾರಣ ಬಿರುದುಗಳು) . . . ಮಾಯಾ ಮರತಾಪು, ಪಂಚ ನಿಶಾನಿ, ಡವಣೆ, ಅರಲಿವಸ್ತ್ರ, ಚಲವಾದಿ ಘಂಟೆ (ಗುರುದ. ೦೧). **ಢವಣೆ** : "ಯಶಃಪಟಃ, ಢಕ್ಕಾ ೨ ಢವಣೆ ಹೆಸರು, ಅಂದರೆ ಡೋಲು"(ಸಿದ್ಧಾಂತಿ.೫೪).

[ ದೇ.ಜ ತೆಲು. ಠವಣೆ, ಠವಿಣ, ಡವಿಣೆ ]

**ಡವಣೆವಱಿ** (ನಾ).=ಡವಣೆ (?) : ಮಾಯದ ವೀರನಂ ನೋಯಲಿಱಿದು ಕೆಡವುವ ಪರಾಕ್ರಮಕ್ಕೆ ಪಕ್ಕಾದ ಡ[ಪಾಠಾಂ. ಕುಡ]ವಣೆವಱಿಯ ಕಾಲ ಸರಪಳಿಯ ಬಾವುಲಿಯ (ರಾಜಶೇ. ೬-೧೧ ವ). [ ಡವಣೆ + ಪಱಿ₁ ]

**ಡವರ₁** 'ಡಮರ' ನೋ.

**ಡವರ₂** (ನಾ). ಅವರಿಸುವಿಕೆ ; ಆಕ್ರಮಿಸುವಿಕೆ. 'ಡವರಿಸು' ಪರಾ.

[ <ಸಂ. ಡಮರ ]

**ಡವರಿಗ** (ನಾ). ಡಮರುವನ್ನು ಬಾರಿಸುವವನು : ಡವರಿಗರು ಇಬ್ಬರು . . . ಮಾಲೆಗಾಱನೊಬ್ಬ ಬಾಹ್ಯನೊಬ್ಬ ಅಂತು ನಿಯೋಗವೈದು (ಎಕ. XII, ಚಿಕ್ಕನಾ. ೨-೨೮ ; 1261). [ ಡವರ₁ (<ಡಮರ) + – ಇಗ ]

**ಡವರಿಸು** (ಕ್ರಿ). ೧. ತಿವಿ ; ಹಿಂಸಿಸು ; ಬಾಧಿಸು : ಕೋಡೆತ್ತಿ ಕೋಡಿನ ಕೊನೆಯಲ್ಲಿ ಡವರಿ[ಪಾಠಾಂ. ಳಿ]ಸಿತು ಕುಸುಬಿತ್ತು ಕೆಡಹಿತ್ತು (ಸೋಮಚಿ. ೫-೩೭). ೨. ಅವರಿಸು ; ಆಕ್ರಮಿಸು ; ವ್ಯಾಪಿಸು : ಡವರಿಸಿದ ಡೊಳ್ಳಾಸ ರಣಬೇಳುವೆಯ ಬಿಗುಹಡಗಿದವೊಲನಿಬರು ತವತವಗೆ ನಾಚಿದರು ಕೋಳಾಹಳಕೆ ಪವನಜನ (ಕುಮ್ವ್ಯಾ.ಕ. ೨೦-೧). 'ಡಾವರಿಸು' ಪರಾ.

[ ಡವರ₂ + – ಇಸು₃ ]

**ಡವರುಗ** 'ಡಮರುಗ' ನೋ.

**ಡವಲು** 'ಡೌಲು' ನೋ.

**ಡವಲುಕಟ್ಟು** (ಕ್ರಿ). ಅಂದಾಜುಮಾಡು ; ಊಹಿಸು : ಭೂಮಿಗೆ ಯಿಷ್ಟು ಖಂಡಗ ದವಸಾ ಯೆಂಬದಾಗಿ ಡವಲುಕಟ್ಟಿ . . . ಕಂದಾಯಕ್ಕೆ ದಾಖಲು ಮಾಡಬೇಕು (ಮಹಾವಂ. II, ೭೦).

[ ಡವಲು (<ಡೌಲು) + ಕಟ್ಟು₁ ]

**ಡವಳ₁** 'ಡಾಳ₁' ನೋ.

**ಡವಳ₂** (ನಾ). ಮಂಗಳದ ಹಾಡು ; ಒಂದು ಬಗೆಯ ಶೋಭನದ ಹಾಡು ; ಸೋಬಾನೆ : ವಿಪ್ರನಾರಿಯರು ಜಂಗುಳಿ ಡವಳ ಶೋಭಾನವ ಪಾಡುತ ರಂಗನುತ್ಸವದೊಳೈದಿದರು (ಕಂನವಿ. ೯-೭೩) ; ಶೋಭನ ಡವಳವ ಪೇಳ್ವ (ಕಂನವಿ. ೨೫-೦೫) ; ಚಿನ್ನದ ಪೀಠವನಿರಿಸಿ ಕೋಮಲೆಯರು ಚೆನ್ನಾಗಿ ಡವಳವ ಪಾಡಿ (ಜಿನರಾ. ೯-೬೧). 'ಧವಳ' ಪರಾ.

[←ಮರಾ. ಧವಳಾ, ಧವಲಾ, ಧವಳಾ./ಸಂ. ಧವಲ]

**ಡವಳು** (ನಾ). ಒಂದು ಅನುಕರಣ ಶಬ್ದ : ಹಿಡಿದುದು ದಳ್ಳುರಿ ನಭವ ತುಡುಕಿತು ಧಗಧಗಧಗಿಲೆಂದು ಕಿಡಿಗಳು ಸಿಡಿದುವು ಡವಳು ಡಬ್ಬೆಂದು (ನಾಗಳು. ೦೭-೭೭).

**ಡವಾಲಿ, ದಬಾಲಿ₁, ದವಾಲಿ** (ನಾ). ಸೇವಕರು ಎದೆಯ ಮೇಲೆ ಅಡ್ಡಲಾಗಿ ಧರಿಸುವ ಬಿಲ್ಲೆಯನ್ನುಳ್ಳ ಪಟ್ಟಿ : ತನ್ನ ಚಿನ್ನದ ಡವಾಲಿಯನ್ನು ಅವನಿಗೆ ತೊಡಿಸುವುದೇ? (ನಿಬಂಧ. I, ೨೨೫) : ಒಳಗೆ ಹೋದ ಮೇಲೆ ಡವಾಲಿ ಹಾಕಿದ್ದ ಸೇವಕರು ಬಂದರು (ಮುನಿಮಾ. ೬೬) ; **ದಬಾಲಿ₁** : ಅವಳು ಚಿನ್ನದ ಹುರಿಯಿಂದ ಸಿಂಗರಗೊಂಡಿದ್ದ ನೀಲಿಯಂಚಿನ ಸಮವಸ್ತ್ರವನ್ನೂ, ನೀಲಿಯ ದಬಾಲಿಯನ್ನೂ ಧರಿಸಿದ್ದಳು (ಪುನರು. ೧೮೮). **ದವಾಲಿ** : (ಚರ್ಮ, ಮೊ.ಗಳಿಂದ ಮಾಡಿದ) ಪಟ್ಟಿ . . . ಎದೆಪಟ್ಟಿ; ದವಾಲಿ (Belt. ಇಂಕನಿ.) ; ಬಾಗಿಲಲ್ಲಿ ದವಾಲಿ ಧರಿಸಿದ ಚಪ್ರಾಸಿಯೊಬ್ಬ ನಿಂತು ನನ್ನನ್ನು ತಡೆಯುತ್ತಾನೆಂದಲ್ಲ (ಅಲಿಮ. ೩೨). [ ? ]

**ಡವಾಲಿಜವಾನ** (ನಾ). ಡವಾಲಿಯನ್ನು ಧರಿಸಿರುವ ಜವಾನ,-ಪೇದೆ,-ಸೇವಕ : ಅಷ್ಟರಲ್ಲಿಯೆ ಡವಾಲಿಜವಾನನು ಬಂದು . . . ಕೂಗಿದನು (ದಿನಾರಿ. ೮೩). [ ಡವಾಲಿ + ಜವಾನ ]

**ಡವಾಲಿಢಲಾಯಿತ** (ನಾ). ಡವಾಲಿಯನ್ನು ಧರಿಸಿದ ಢಲಾಯತ ; ಜಿಲ್ಲಾ ಕಚೇರಿಯ ಸಿಪಾಯಿ : ಡವಾಲಿಢಲಾಯಿತನಿಗೆ ಸಿಟ್ಟುಬಂದು ರಾಟೆಯ ನಡುಗಂಬವನ್ನಲ್ಲಾಡಿಸಿದನು (ದಿನಾರಿ. ೮೩).

[ ಡವಾಲಿ + ಢಲಾಯಿತ (<ದಲಾಯಿತ) ]

**ಡವಾಲಿಯಾಳು** (ನಾ). = ಡವಾಲಿಜವಾನ : ಆ ಕೋರ್ಟು, ಆ ಜಡ್ಜಿ, ಆ ಡವಾಲಿಯಾಳುಗಳು . . . ಅವರೆಲ್ಲ ಧೀರನಿಗೆ ನೂತನ ಅನುಭವ (ಇಡನೋ. ೧). [ ಡವಾಲಿ + ಆಳು₃ (<ಆಳ್₃) ]

**ಡವಿಗೆ** 'ಡೋವಿ' ನೋ.

**ಡವುಗೆ** 'ಡೋವಿ' ನೋ.

**ಡವುಡು** 'ದೌಡು' ನೋ.

**ಡವುಡೆ**$_1$, ಡವಡೆ$_1$, ಡೌಡೆ (ನಾ). ಒಂದುಂ ಬಗೆಯಂ ಚರ್ಮವಾದ್ಯ ; ಡಿಂಡಿಮ: ಮೃದಂಗ ಡಮರುಗ ಢಕ್ಕೆ ಡವುಡೆಗಳ . . . ನಿರ್ಘೋಷದಬ್ಬರ (ಕುಮಾ.ಕ. ೨-೩) ; ಪೊಡೆವ ಬಿರುದಿನ ಡವುಡೆ (ರೇವಣ. ೩೦-೩೯) ; ಆ ಸಮಯದೆ ಮುರಜ ಡವುಡೆ ಡಮರುಗ ವಾಸ ಮೃದಂಗ ಶಂಖಾನೀಕ ಆಶಾಂಬರನ ಗೇಹದೊಳೆಸೆದವು (ತ್ರಿ ಛ ಶಿ. ೩-೨೩) ; ಡವುಡೆ ಜೇಗಟೆ ಮಲಹರಿಯ ಜಾಡಿಸಿಕೊಂಬ ಪ್ರವುಡೆಯರಿರ್ದರಿಕ್ಕೆಲದಿ(ಮೋಹತ. ೨೦-೩೯); ಪಟಹ ತಮ್ಮಟ ಢಕ್ಕೆ ಡವುಡೆ ಕಹಳಾಸಮುತ್ಕಟ ನಾದಮಳ್ಳಿಱಿಯೆ (ಚಿಬಪು. ೦೬-೦೩) ; ಮರುಳ್ಗಳ ಪಡೆ ಹರೆ ಡವುಡೆಗಳೆತ್ತಿ ಮುಂದೆ ಬಹವು ಶಿವಶಿವೆಯರ ಸುತ್ತಿ (ಗಣೇಶ. ೨೦-೩೨೩). **ಡವಡೆ$_1$ :** (ಕ). **ಡೌಡೆ :** "ಡಿಂಡಿಮ ವೆನಲು ಮೊರೆವ ಡೌಡೆ[ಪಾಠಾಂ. ಡವುಡೆ]ಯೆನಿಕ್ಕುಂ" (ಮಂಗರಾ. ೨೯-೭) ; ಘುಡುಘುಡಿಸುವ ಡೌಡೆ[ಪಾಠಾಂ. ದೌಡೆ]ಯ ಕೋಳಾಹಳದಬ್ಬರವಾಗೆ (ಗಿರಿಕ. ೬-೩೩ ಪ) ; ಬಿರಯಿ ನೀಂ ಪೋಪೋಗು ಪೋಗೆಂದು ಮುಂಗಡೆಯೊಳ್ ಸಾಱುವ ಡೌಡೆಯೆಂಬ ತೆಱದಿಂದಂ ಬಗ್ಗಿಸುತ್ತಿರ್ದುವು ಗ್ಗಡದಿಂ ಕೋಗಿಲೆ (ಕಬ್ಬಿಕಾ. ೩೩).

**ಡವುಡೆ**$_2$ 'ದವಡೆ' ನೋ.

**ಡವುಲಂದಾಜು** (ನಾ). ಸುಮಾರಾದ ಬೆಲೆಯ ನಿಗದಿ ; ಅಂದಾಜು ಬೆಲೆ.

[ಡವುಲು (<ಡೌಲು) + ಅಂದಾಜು ]

**ಡವುಲು** 'ಡೌಲು' ನೋ.

**ಡವುಲುಕೊಚ್ಚು** (ಕ್ರಿ). ಜಂಬಕೊಚ್ಚು ; ಬುರುಡೆಹೊಡೆ ; ಆತ್ಮಪ್ರಶಂಸೆ ಮಾಡಿಕೊಳ್ಳು : (ಕ). [ ಡವುಲು (<ಡೌಲು) + ಕೊಚ್ಚು$_1$ ]

**ಡವುಲುಜಮಾಬಂದಿ** (ನಾ). ಒಂದು ಗ್ರಾಮದಿಂದ ನಿರೀಕ್ಷಿಸಬಹುದಾದ ಒಟ್ಟು ಅಂದಾಜಿನ ಭೂಕಂದಾಯ ; ಭೂಮಿ ತೆರಿಗೆಯ ಅಂದಾಜು ಮೊತ್ತ : (ಕ). [ ಡವಲು (<ಡೌಲು) + ಜಮಾಬಂದಿ ]

**ಡವುಲುದಾರ** (ನಾ). ೧. ಆಗಬಹುದಾದ ಧಾನ್ಯದ ಬೆಳೆಯ ಅಂದಾಜು ಅಳತೆಯ ಮೇಲೆ ತೆರಿಗೆಯನ್ನು ನಿಗದಿಮಾಡುವವನು : (ಕ). ೨. ಜಂಬಗಾರ ; ಬಡಾಯಿಗಾರ : (ಕ).

[ ಡವುಲು (<ಡೌಲು) + – ದಾರ$_4$ ]

**ಡವುಲುದಾರಿ** (ಗು). ಉತ್ತಮವಾದ ; ಚೆನ್ನಾದ : ಅವನು ಮಗಳ ಮದುವೆಗೆ ಡವುಲುದಾರಿ ಚಪ್ಪರವನ್ನು ಹಾಕಿಸಿದ್ದನು (ರೂಢಿ).

[ ←ಮರಾ. ಡೌಲ್‌ದಾರ್ ]

**ಡಸಿಕು** (ನಾ). ವಕ್ರನಾದವನು ; ಕುಟಿಲನಾದವನು ; ಮೋಸಗಾರ : ಸರ್ವಸ್ವಾಪಹರಣಂ ಮಾಡಿ ತನ್ನೊಡನಿರ್ದ ಕಸವಿಂಗಂ ಕಳುಚಿಂಗಂ ಡಸಿಕಿಂಗಂ . . . ಸಿತಗರ್ಗಂ ವಸುಧೇಶ್ವರ ಕೇಳ ಕುಡುವನುರ್ಕಿ ಕುಮಾರಂ (ಧರ್ಮಾಮೃ. ೨-೭೦). [ ? ]

**ಡಹಳಾಮಂಡಳ** (ನಾ). ಒಂದು ದೇಶದ ಹೆಸರು ; ಡಹಾಳ : ಡಹಳಾಮಂಡಳಮನುಡಿಗೆ ಸಾಧ್ಯಂ ಮಾಡಿ (ಎಕ. XI. ದಾವಣ. ೪೨-೦೦ ; 1162). [ ಡಹಳ$_0$ + ಮಂಡಳ (= ಮಂಡಲ) ]

**ಡಹಾಳ** (ನಾ). ಒಂದುಂ ಸೀಮೆಯ ಹೆಸರು; ಬುಂದೇಲ್ ಖಂಡದ ಒಂದು ಪ್ರದೇಶ ; ಚೇದಿ ಅರಸರ ದೇಶ: ಸಮುಪಗಮ್ಯ ಡಹಾಳ ದೇಶೇ ಶ್ರೀಬದ್ದೆಗವ್ ತದನು ತಸ್ಯ ಸುತಾವ್ (ಮೈಅರಿ.೧೯೩೦. ೦೦-೮೪; 967). [ ? ]

**ಡಹು** (ನಾ). ಒಂದು ಬಗೆಯ ನಿಂಬೆ ; ಗಜನಿಂಬೆ : "ಲಕುಚಃ, ಲಿಕುಚಃ, ಹುಃ – ೩ ಗಜನಿಂಬೇ ಹೆಸರುಗಳು " (ಸಿದ್ಧಾಂತಿ. ೦೦೦). [ ಸಂ. ]

**ಡಳಮಳ** (ನಾ). ತಳಮಳ ; ಸ್ಥಿಮಿತತೆ ಇಲ್ಲದಿರುವಿಕೆ. 'ಡಳಮಳಿಸು' ಪರಾ. [ ←ಮರಾ. ಡಳಮಳ ]

**ಡಳಮಳಿಸು** (ಕ್ರಿ). ನಡುಗು ; ಅಲ್ಲಾಡು ; ಕಂಪಿಸು ; ಹೊಯ್ದಾಡು : ಆತನ ಮನಸ್ಸು ಅರಳಿಯ ಎಲೆಯಂತೆ ಡಳಮಳಿಸಹತ್ತಿತು (ತುಳಸಿ. ೦೨೦) ; ಅವಳಿಗೆ ಅವನ ಡಳಮಳಿಸುವ ಮನಸ್ಸಿನ ಸ್ಥಿತಿ ನಿಶ್ಚಿತವಾಯಿತು (ಅಪನಾ. ೦೨೦). [ ಡಳಮಳ + – ಇಸು$_3$ ]

**ಡಳಾಯಿತ** 'ದಲಾಯಿತ' ನೋ.

**ಡಳಾಯ್ತ** 'ದಲಾಯಿತ' ನೋ.

**ಡಳುಹು** (ನಾ). ಪೊಳ್ಳು ಆಡಂಬರ : ಡಂಬೂ ಡಳುಹೂ[ಪಾಠಾಂ. ಡಳ್ಳ] ಎನ್ನದಯ್ಯಾ ಡಂಬಕನೆಂಬವನಾನಯ್ಯಾ (ಬಸವ. ೩೭೬) ; "ಹೆಮ್ಮೆ" (ಬಸವ. ಕೋಶ) ; ಡಂಬು ಡಳ[ಳು]ಹು ಎನ್ನದು ಡಂಬಕ ಮನದವ ನಂಬಿ ನಂಬದ ಡಂಬಕ ನಾನು (ಸಿದ್ಧಪು. ೩೦-೬). [ ? ]

**ಡಾಂಬರ** 'ಡಾಮರ$_2$' ನೋ.

**ಡಾಂಬರರಸ್ತೆ** 'ಡಾಮರರಸ್ತೆ' ನೋ.

**ಡಾಂಬರು** 'ಡಾಮರ$_2$' ನೋ.

**ಡಾಂಬರೆಣ್ಣೆ** (ನಾ). ಡಾಮರದ ಎಣ್ಣೆ ; ಟಾರೆಣ್ಣೆ ; ತಾರೆಣ್ಣೆ : ಮರ, ಕಲ್ಲಿದ್ದಲು ಮೊ.ನ್ನು ಒಣಬಟ್ಟಿ ಇಳಿಸುವುದರಿಂದ ದೊರೆಯುವ, ಮರ, ಕಬ್ಬಿಣ ಮೊ.ನ್ನು ಕೆಡದಂತೆ ಇಡಲು ಉಪಯೋಗಿಸುವ, ಕಪ್ಪು ಬಣ್ಣದ ಅಂಟುದ್ರವ; ಡಾಂಬರೆಣ್ಣೆ (Tar. ಇಂಕನಿ.).

[ ಡಾಂಬರ (<ಡಾಮರ$_2$) + ಎಣ್ಣೆ ]

**ಡಾಂಬಿಕ, ಡಾಂಭಿಕ** (ನಾ). ೧. ತೋರಿಕೆಯ ನಡೆನುಡಿಯುಳ್ಳವನು ; ಆಡಂಬರವನ್ನು ಪ್ರದರ್ಶಿಸುವವನು : "ಡಾಂಬಿಕ (ಡಂಬಿಕ) – ದಾಂಭಿಕ " (ತದ್ಭಕೋ. ೦೬) ; ರೋಕಡಾಂಬಿಕನಾಗಿ ಇಲ್ಲದ ಹೋಕೆಗಳನೇ ಕಲಿತು (ಗಗತಾ. ೦೮-೩೪). ೨. ತೋರಿಕೆಯ ನಡೆನುಡಿ : ಆಡಂಬರ : ಡಾಂಬಿಕವನುಳಿದು ತನುಮಾತ್ರಮಂ ಸಲಹಲು (ವಂಕಾರಾ. ೬-೩೩-೪೪). **ಡಾಂಭಿಕ :** ೧. ನುಡಿವಲ್ಲಿ ಗದ್ಗದಂಗಳು ಹೊಱಹೊಮ್ಮದಿದ್ದರೆ ಕೂಡಲ ಸಂಗಮ ದೇವರ ಭಕ್ತಿಗಿದು ಚಿಹ್ನ ಎನ್ನಲ್ಲಿವಿಲ್ಲವಾಗಿ ಆನು ಡಾಂಭಿ[ಪಾಠಾಂ. ಡಂಭ]ಕ ಕಾಣಿರೇ (ಬಸವ. ೩೭೮) ; ಡಾಂಭಿಕರಾದವರನ್ನು ಶಿಕ್ಷಿಸುತ್ತೇವೆ (ಕೃಷ್ಣಭೂ. ೩೩) ; ಆದರೆ ನನಗಂತೂ ಯಾವ ತಾಯಿಯೂ ಇರಲಿಲ್ಲವಲ್ಲ ಡಾಂಭಿಕರ ಬಲೆಗೆ ಬೀಳುವುದಕ್ಕೆ (ಪಾಪಿಳ. ೯೩). [ <ಸಂ. ದಾಂಭಿಕ ]

**ಡಾಂಬಿಕಜನ** (ನಾ). ಡಾಂಭಿಕ ಮಂದಿ; ಆಡಂಬರ ತೋರಿಸುವ ಜನ: ಇದು ಕಣಾ ಪುರುಷಾರ್ಥವೆಂಬುದು ಇದುವೆ ಪರಮಂ ಸೂರೆಗೊಂಬುದು ಇದುವೆ ಡಾಂಬಿಕಜನರ ನಂಬದ (ಗಗತಾ. ೦೭-೪೮). [ ಡಾಂಬಿಕ + ಜನ ]

**ಡಾಂಭಿಕ** 'ಡಾಂಬಿಕ' ನೋ.

**ಡಾಂಭಿಕತನ** (ನಾ). ಇಲ್ಲದೆ ಇರುವುದನ್ನು ಪ್ರದರ್ಶಿಸುವುದು ; ತೋರಿಕೆಯ ನಡೆನುಡಿ ; ಸೋಗು ; ನಟನೆ: ವಿದ್ಯಾರ್ಥಿಗಳ ಆಯುಷ್ಯವನ್ನೂ . . . ಹಾಳುಮಾಡಿ, ಮೇಲೆ ಡಾಂಭಿಕತನದ ವ್ಯಥೆಯನ್ನು ತೋರಿಸುವೆಯಾ (ಸ್ಕೂಲಮಿ. ೬೨). [ ಡಾಂಭಿಕ (<ಡಾಂಬಿಕ) + – ತನ ]

**ಡಾಕಿಣಿ, ಡಾಹಿಣಿ, ಢಾಕಿನಿ** (ನಾ). ೧. = ಡಾಕಿನಿ ೧. ೨. ರಕ್ಕಸಿಯಂ ಕತ್ತಿ,–ಖಡ್ಗ : " ರಕ್ಕಸಿಯ ಕತ್ತಿಯುಂ ಡಾಕಿಣಿ[ಪಾಠಾಂ. ನಿ]ಯೆನಿಕ್ಕುಂ " (ಕಬ್ಬಿಕ್ಕೆ. ೮೦) ; " ಡಾಕಿಣಿ – ಡಾಕಿನೀ " (ತದ್ಭಕೋ. ೦೬) **ಡಾಹಿಣಿ :** ೨. " ಡಾಹಿಣಿ – ರಕ್ಕಸಿಯ ಕತ್ತಿಗೆ " (ಕಮುದ. ಪರಿ. ೨). ೩. ಬೇಟೆ : "ಡಾಹಿಣಿ[ಪಾಠಾಂ. ನಿ]ಯೆಂಬ ಶಬ್ದಂ ರಕ್ಕಸಿಯ(ಗೆ) ಕತ್ತಿಗೆಯೆಂಬಲ್ಲಿಯುಂ, ಬೇಂಟೆಯಲ್ಲಿಯುಂ" (ಕಮುದ. ಮ. ೩೦೯-೮೭). **ಢಾಕಿನಿ :** ೧. ರಣಭೂಮಿಯಲ್ಲಿ ಶಾಕಿನಿ ಢಾಕಿನಿಗಳ ನರ್ತನ (ಶಾಂತಲಾ. ೦೪೦).

[ <ಸಂ. ಡಾಕಿನೀ ]

**ಡಾಕಿನಿ** (ನಾ). ೧. ಹೆಣ್ಣು ದೆವ್ವಗಳಲ್ಲಿ ಒಂದು ಬಗೆ ; ಒಂದು ಬಗೆಯ ಹೆಣ್ಣು ಪಿಶಾಚಿ : ಡಾಕಿನಿ ಪಿಶಾಚ ವೇತಾಳ ಭೂತಂಗಳಿಂ ಭೀಕರದೊಳಂ ಜಿಸಿದವಾರ್ದು ರಿಂಗಣಗುಣಿವ ಕಲಿಗಳ ಕಪಾಲಂಗಳು (ಜೈಮಿಭಾ. ೦೨-೪೫); ಸೀತಾರಾಮನು ಒಬ್ಬ ಡಾಕಿನಿಯ ವಶವಾಗಿಬಿಟ್ಟಿದ್ದ (ಬಂಕಿಮ. ೩೦೫). ೨. ಕಾಳಿಕಾದೇವಿಯ ಪರಿಚಾರಿಕೆಯರ ಒಂದು ವರ್ಗಕ್ಕೆ ಸೇರಿದವಳು. ೩. ರಕ್ಕಸಿಯಂ ಕತ್ತಿ,–ಖಡ್ಗ : “ಡಾಕಿನಿಯೆನಲು ರಕ್ಕಸಿಯ ಕತ್ತಿಗಿರದಪ್ಪ ನಾಮಂ ” (ಶಬ್ದಮಂ. ೪೪). ೪. (ಅಲಂ) ಕಠೋರಹೃದಯದವಳು; ಕೆಟ್ಟ ಹೆಂಗಸು : ತನ್ನ ಮರ್ಯಾದೆ ತೆಗೆದ ಡಾಕಿನಿ ಎಂದೊಮ್ಮೆ ಅವಳು ಗಟ್ಟಿಸಿದನು (ಗ್ರಾಮಾಯ. ೪೬೨). [ಸಂ. ಡಾಕಿನೀ.]

**ಡಾಕಿನಿದೋಷ** (ನಾ). ಡಾಕಿನಿಯಿಂ ಆವೇಶದಿಂದುಂಟಾಗುವ ಬಾಧೆ ; ಭೂತೋಪದ್ರವ : ಇಪ್ಪೆಯ ಬೇರ ಆಡಿನ ಮೂತ್ರದಿಂದ ಏಳುಬಾರಿ ಭಾವನೆಯ ಕೊಟ್ಟು ಅರಿಸಿ ಸೈಂಧವ, ಬಜೆ, ತ್ರಿಕಟುಕ, ಇದರಿಂದ ನಸ್ಯ ಮಾಡೆ, ಭೂತ, ಶಾಕಿನಿ, ಡಾಕಿನಿದೋಷ, ಸನ್ನಿಪಾತ ಜ್ವರಂಗಳು ಬಿಟ್ಟು ಹೋಗುವುವು (ವಿಷ್ನವಿ. ೦೬೯). [ಡಾಕಿನಿ + ದೋಷ]

**ಡಾಕಿನೀತಂತ್ರ** (ನಾ). [ತಂತ್ರಶಾ] ಒಂದು ಬಗೆಯ ತಾಂತ್ರಿಕ ಸಿದ್ಧಿ ಮಂತ್ರ : ಡಾಕಿನೀತಂತ್ರ ಕೂಚಿಮಾರತಂತ್ರ ಶಲ್ಯತಂತ್ರ . . . ವಚನ ತಂತ್ರಾದಿ ತಾಂತ್ರಿಕಸಿದ್ಧಿಮಂತ್ರಂಗಳಂ (ವಿವೇಕ. ೮೦). [ಸಂ.]

**ಡಾಕು$_1$, ಧಾಕು** (ನಾ). ೧. ಮುಂತ್ತಿಗೆ ; ಮೇಲೆಬೀಳುವಿಕೆ ; ಆಕ್ರಮಣ ; ಆಘಾತ : ನೂಕಿದೊಡೆ ಕರ್ಣಾದಿ ದೊರೆಗಳ ಡಾ[ಪಾಠಾಂ. ಧಾ]ಕನಾನು ವನಾರು ದಿವಿಜಾನೀಕದಲಿ (ಕುಮ್ಯಾಅ. ೦೯-೦೩). ೨. ಸತ್ತ್ವ ; ಬಲ ; ಪರಾಕ್ರಮ : ಭೀಷ್ಮದ್ರೋಣರಿಂಗೆ ಸರಿಮಿಗಿಲೆನಿಸಿ ತೋರುವನು ಕೈಗುಣವನು ಡಾಕನರಿಯದೆ ತನ್ನ ವಿಕ್ರಮದ ಸಿರಿಯನವಿವೇಕಿಗಳು (ಕುರಂಗ. ೭೨-೨೩); ಭೀಕರಬಲ ಶಿವಭೂಷನ ಡಾಕಿಂಗಗಿದಖಿಲ ರಾಜರಗಣಿತ ಧನಮಂ ಬೇಕಾದ ವಸ್ತುಚಯವನನೇಕವನಿತ್ತರಗಿ ತದನುಚರರಾಗಿರ್ದರ್ (ಶಿಳನ್ನ. ೭-೦೭). ೩. ಪ್ರಭೆ; ತೇಜಸ್ಸು ; ಕಾಂತಿ: ತರುಣಿಯರುಗಳಿಟ್ಟಣಿಸಿ ಮೈಮೈಸೋಂಕಲುರು ಹೇಮದೊಡವುಗಳ್ಳಸೆದು ಪರರಜವಿಳೆ ಯೊಳೊಪ್ಪಿತು ಬಾಲಸೂರ್ಯನ ಕಿರಣದ ಡಾ[ಪಾಠಾಂ.ಧಾ]ಕ ತೋಱೆಸುತ (ಕೆಂನವಿ. ೨೪-೪೮) ; ರಥವೇರಿಸಿ ಡಾಕಿನಿಂ ಥಳಕಿಡುವ ಸಿಂಧ ಸೀಗುರಿ ಛತ್ರಚಾಮರ ಚಮೂಪಂಗಳ (ಪರಶು. ೬-೨೦). ೪. ಜವ; ವೇಗ; ತ್ವರೆ: ಈ ಕಥೆಯ ಧರ್ಮಜಂಗೊರೆದು ಮತ್ತಲ್ಲಿಂದ ಡಾಕಿಲಿ ಪ್ರಭಾಸಕಂ ಬರಲು (ಕುರಂಗ. ೩೦-೦೪). ೫. ಲೂಟಿ ; ಕೊಳ್ಳೆ ; ದರೋಡೆ. **ಧಾಕು** : ೩. ‘ಧಾಕುಗೆಡಿಸು’ ಪರಾ.

**ಡಾಕಳಿ**=ಸತ್ತ್ವಗುಂದು; ತೇಜಸ್ಸು ನಾಶವಾಗು; ಪ್ರಭಾವ ಕುಗ್ಗು : ಸುರಬಲಡಾಕಿವಾಳ ಮೃಗೇಂದ್ರನ . . . ಡಾಕಳಿದುದಾ ಸತ್ತ್ವದಲ್ಲಿರ್ದಾ ಕುಠಾರ ಕೃತಾಂತನವ (ಅಂಬಿಕಾ. ೩೬-೨೨). [←ತೆಲು. ಧಾಕ]

**ಡಾಕು$_2$** ‘ಡಾಗು$_1$’ ನೋ.

**ಡಾಕ್ಟರಿಕೆ** (ನಾ). ಡಾಕ್ಟರನ ಉದ್ಯೋಗ ; ವೈದ್ಯವೃತ್ತಿ : ಅತ್ತ ಡಾಕ್ಟರಿಕೆ ಕೆಲಸಕ್ಕೆ ಪುರುಸೊತ್ತಿದೆಯೇ ಅಂದರೆ, ಬೆಳಗ್ಗೆದ್ದು ಹೋದರೆ ಹೊತ್ತು ಮೀರಿದ ಮೇಲೆಯೇ ಬಂದು ಊಟಮಾಡುವುದು (ಜಾರುದಾ. ೩೩೫) ; ಆವನು ಉಡುಪಿಯಲ್ಲಿ ಡಾಕ್ಟರಿಕೆ ಮಾಡಲಾರಂಭಿಸಿದ ಮೇಲೆ ಮತ್ತೆ ಮತ್ತೆ ಅದರ ಪ್ರಸ್ತಾಪ ಬರುತ್ತಿತ್ತು (ಕೈಹಿಕಾ. ೩೭) ; ಡಂಬನಿಗೂ ಈಗ ತನ್ನ ಮಗನ ‘ಡಾಕ್ಟರಿಕೆಯ’ ಬಗ್ಗೆ ಸಾಕಷ್ಟು ಹೆಮ್ಮೆಯೆನಿಸಿತು (ದಂಬನಾ. ೭೦). [ಡಾಕ್ಟರು + – ಇಕೆ]

**ಡಾಕ್ಟರು**, ಡಾಗದೊರೆ, ದಾಕಂದಾರ, ದಾಕ್ತಾರ, ದಾಗ್ದಾರು (ನಾ). ೧. ರೋಗಿಗಳಿಗೆ ಮದ್ದುಕೊಡುವವನು ; ವೈದ್ಯ ; ಚಿಕಿತ್ಸಕ : ನನ್ನ ತಮ್ಮನಿಗೆ ನೂರೆರಡು ಡಿಗ್ರಿ ಜ್ವರವಿದೆಯೆಂದು ಡಾಕ್ಟರು ಹೇಳಿದರು (ಮದ್ಯಮು. ೦೬೫) : ಆ ಆಫೀಸರವರು ಕೂಡಲೇ ಆ ವಿಷಯವನ್ನು . . . ದನಕರುಗಳ ಡಾಕ್ಟರಿಗೆ ತಿಳಿಯಪಡಿಸುವರು (ಗ್ರಾಮಾಕ. ೦೦೭). ೨. ಗೌರವಾನ್ವಿತವಾದ ಉನ್ನತಪದವಿಯನ್ನು ಪಡೆದವನು ; ವಿಶ್ವವಿದ್ಯಾನಿಲಯಗಳು ಕೊಡುವ ಗೌರವಪ್ರಶಸ್ತಿ ಪಡೆದವನು; ವಿದ್ವಾಂಸ. **ಡಾಗದೊರೆ** : ೧. ಡಾಗದೊರೆ ಕೇಮಲ್ ಸಾಹೇಬರ ಬಂಗಲೆ ಎಲ್ಲಿದೆ ಬಲ್ಲೆಯ (ಮುಸುಗ. ೦೩೦). **ದಾಕುದಾರ**: ೧. ಕೊನೆಗೆ ‘ದಾಕುದಾರ’ ರನ್ನು ಬರಮಾಡಬಹುದಿತ್ತು (ಮುಂಗಾಮು. ೦೩೦). **ದಾಕ್ತಾರ** : ೧. ಅಲ್ಲಿ ಈಗಿರುವ ದಾಕ್ತಾರರು ಮನುಷ್ಯರನ್ನು ತಿನ್ನುವುದಿಲ್ಲ ಎಂದೆ ನಾನು (ಮೈಲಿಮಾ. ೨೫). **ದಾಗ್ದಾರು** : ೧. ಅವರನ್ನು ಗಾಂಧೀಜನ, ಓದಿಸೋ ಅಯ್ನೋರು, ದಾಗ್ದಾರು, ಗೋಸಾಯಿಗಳು ಏನೆಂದಾದರೂ ಕರೆದುಕೊಳ್ಳಿ (ಸುವಸಂ. ೦). [←ಇಂ. Doctor]

**ಡಾಗ** ‘ಡಾಗು$_2$’ ನೋ

**ಡಾಗದೊರೆ** ‘ಡಾಕ್ಟರು’ ನೋ.

**ಡಾಗಾನ್** (ಕ್ರಿ). ಮುದ್ರೆಯನ್ನು ಪಡೆ ; (ಕಾದ ಕಬ್ಬಿಣದ ಗುಳದ) ಬರೆಯನ್ನು ಹೊಂದು: ತತ್ಪಶುವು ಮೇಣವನಲ್ಲದುದರೆ ಭಿಕ್ಷುಕನ ಡಾಗಾಂತ ಮನೆಯಾಕಳೆ (ಪರಶು. ೨೨-೨೫). [ಡಾಗು$_1$ + ಆನ್$^{'}_1$]

**ಡಾಗೀನು** ‘ದಾಗೀನು’ ನೋ.

**ಡಾಗು$_1$**, ಡಾಕು$_2$, ದಾಕ, ದಾಕು$_1$ (ನಾ). ೧. ಕಾದ ಕಬ್ಬಿಣ ಮೊದಲಾದ ಲೋಹಗಳ ಸಾಧನದಿಂದ ಒತ್ತುವ ಮುದ್ರೆ,–ಗುರುತು : ಬ್ರಹ್ಮನ ಡಾಗು ಬೆನ್ನಮೇಲೆ ವಿಷ್ಣುವಿನ ಡಾಗು ಕೈಯ್ಯ ಮೇಲೆ (ಬೋಳಿಮಾ. ೦೦೨-೪೦೭) : ಬುಂದಿಯ ಅರಸರ ಕುದುರೆಗಳಿಗೆ ಮೊಗಲರ ಡಾಗನ್ನು ಎಂದಿಗೂ ಹಾಕಕೂಡದು (ಅಕ್ಕರ. ೯೦). ೨. ಕಪ್ಪುಕಲೆ,–ಗುರುತು ; ಕರೆ : ರಿಪೋರ್ಟ್ ಸಾಹೇಬರ ಮಸಿಯ ಕಲೆಯ ಡಾಗು ಇಲ್ಲದೆ ಮೇಲೆ ಹೋಗುವಂತೆ ದಕ್ಷತೆ ವಹಿಸುತ್ತಿದ್ದರು (ದೀಪಹ. II, ೨೩೨). ೩. ಮೈಲಿರೋಗ ; ಸಿಡುಬು : ಸಂಸಾರವೆಂಬ ಡಾಗು ಎನ್ನ ಮತ್ತತನದಲ್ಲಿ ಕೊಂದಿತ್ತು (ಬೋಳಿಮಾ. ೪೭-೦೯೩). **ಡಾಕು** : ೨. “ಕಲೆ” (ಜಾನಕೋ. ೬೩). ೪. ದೇವಿಹಾಕಲು ಬಳಸುವ ಒಂದು ಬಗೆಯ ರಸಿಕೆ ; ಮುಂದೆ ಸಿಡುಬುರೋಗ ತಗುಲದಂತೆ ದೇಹದೊಳಕ್ಕೆ ಹೊಗಿಸಿದ ಸಿಡುಬಿನ ರಸಿಕೆ : (ಕ). ೫. ದೇವಿಹಾಕಿದ ಗುರುತು ; ಮೈಲಿ ಕಲೆ : ಈ ಹುಡು ಗನ ಕೈಯಲ್ಲಿ ಡಾಕು ಬಹಳ ಚೆನ್ನಾಗಿ ಕಾಣಿಸುತ್ತಿದೆ (ರೂಢಿ). **ದಾಕ** : ೬. ‘ಕಾಲರಾ’ ಮುಂತಾದ ಕೆಲವು ರೋಗಗಳು ತಗುಲದಂತೆ, ಅವು ಗಳನ್ನು ಪ್ರತಿಭಟಿಸುವ ಶಕ್ತಿಯುಳ್ಳ ಸೂಕ್ಷ್ಮರೋಗಾಣುಗಳನ್ನೊಳ ಗೊಂಡ ರಸಿಕೆ ; ರೋಗವಿಷ: ಇತ್ತೀಚೆಗೆ ಹೊಸ ದಾಕಗಳ ಶೋಧನೆ ಯಾಗಿದೆ (ದೇವದೂ. ೨೫೨). **ದಾಕು** : ೬. ಮಗುವು ಹುಟ್ಟಿದ ನಾಲ್ಕು ತಿಂಗಳಿನಿಂದ ಹಿಡಿದು ಒಂದು ವರುಷದೊಳಗೆ ಕಡ್ಡಾಯವಾಗಿ, ಮೈಲಿಗೆ, ಕಾಲರಾ, ಟೈಫಾಯ್ಡ್ ಇತ್ಯಾದಿ ೧೮ ಬೇನೆಗಳಿಗಾಗಿ ದಾಕು ಹಾಕುವ ಯೋಜನೆಯು ನಡೆದಿದೆ (ದೇವದೂ. ೨೫೨).

**ಡಾಗನೊತ್ತು** = ಮುದ್ರೆಯೊತ್ತು ; ಗುರುತುಮಾಡು ; ತನ್ನದೆನಿಸಿಕೊಳ್ಳು: ಹರಿಯೆದೆಯೊಳು ಬೊಮ್ಮನ ಬಾಯೊಳು ಪುರಹರನ ಪಾಪಾಂಗದೊಳು ಅರಲಸರಲ ಡಾಗನೊ[ಪಾಠಾಂ. ತಾಗಲೊ]ತ್ತಿದಂಗಜ ವೀರ ಬರಲಂಜಿದನು ರಾಮನೆಡೆಗೆ (ಕುರಾಸಾಂ. ೩೩-೧೦) ; ನಾಗಭೂಷಣ ನಂತಿರಲಿ ನಿರ್ಜರರೊಳು ಭೋಗದೇವೇಂದ್ರನ ಮೇಲೆ ಡಾಗನೊತ್ತಿದೆ ನೋಡು (ಮೋಹತ. ೩೮-೦೧); ಸುರಪನಂಗದಲಿ ತಮ್ಮಯ ಡಾಗನೊತ್ತಿದೆವು ಧರೆಯೊಳಿನ್ನುಳಿದ ಮಾನವರೆಮ್ಮ ಪೆಣ್ಣನಕೆ ಸರಿಯೆಯೆಂದೆಂಬ ಬಿರುದಿನ ಪಾರನಾರಿಯರು ಪುರದಲ್ಲಿ ಕಣ್ಗೆಸೆದರು (ಭೀಷ್ಮಾಚ. ೨-೦೨) ; ಧಾತನ ಜಿಹ್ವೆಪೀಠದೊಳು ನಿಂದೆಯಾಖಂಡಲಗೆ ಡಾಗನೊತ್ತಿದೆ (ಪ್ರಭುಪು. ೫-೦೫೦).

**ಡಾಗಿನ ಪಶು** = ಮುದ್ರೆಯೊತ್ತಿದ ಪಶು : ಡಾಗಿನ ಪಶುಗಳೆಲ್ಲರೂ ಭೇದವನಱಿಯಬಲ್ಲರೇ (ಅಂಬಿವ. ೩೯೯-೮೭) : ಡಾಗಿನ ಪಶುಗಳಿಗೆ ಅನಾಗತನ ಸುದ್ದಿ ಏಕೋ (ಮೋಳಿಮಾ. ೧೦೩-೪೦೭); ಇಂತಿವರೆಲ್ಲರು ಡಾಗಿನ ಪಶುಗಳು ವೇಷಧಾರಿಗಳು (ಮೋಳಿಮಾ. ೧೮೩-೬೯೨).
[ ←ಮರಾ. ಡಾಗ್, ದಾಗ್ ; ಪಾರ. ಹಿಂ. ದಾಗ್./ತಮಿ. ಡಾಕು ; ತೆಲು. ಡಾಗು ]

**ಡಾಗು$_2$**, ಡಾಗ (ನಾ). ೧. ಸಾಮಾನು ; ಗಂಟು; ಮೂಟೆ ; ಭಾಂಗಿ : ಮಜೂರಿಯು ಡಾಗಿನ ಆಕಾರದಂತೆ ಮತ್ತು ಬದುಕಿನ ಮಹತ್ತ್ವ ಇದ್ದಂತೆ (ಮುಂಬವ್ಯಾ. ೧೯, ಪ್ರಸ್ತಾವನೆ); ರಾಶಿರಾಶಿಯಾಗಿ ಪಾರ್ಸಲ್ಲ "ಡಾಗು" ಗಳು ಬಿದ್ದಿದ್ದವು (ನಡದಾ. II, ೧೨೬೭). ೨. (ಒಬ್ಬ ಮಾಲೀಕನ) ಅಂಶ ; ಪಾಲು ; ಭಾಗ ; ಹಿಸ್ಸೆ : ನಾಲ್ವತ್ತು ಎಕರೆಯ ಏಕ ಡಾಗನ್ನು ಮಾಡಿಕೊಂಡು (ದೀಪಹ. II, ೨೮೮). **ಡಾಗ** : ೧. ಕಿರಾಣಿಯ ಬದುಕು ಒಂದು ಡಾಗದ ಒಳಗೆ ಒಂದೇ ತರದ್ದು ತರಿಸಿಕೊಳ್ಳುವವರಿಗೆ ಮಜೂರಿಯ ದರ (ಮುಂಬವ್ಯಾ. ೧೬, ಪ್ರಸ್ತಾವನೆ).
[ ←ಮರಾ. ಡಾಗ್ ]

**ಡಾಗೋಬ** (ನಾ). (ಬೌದ್ಧರ) ಸ್ತೂಪ ; ಪಗೋಡ ; ಸ್ತೂಪದ ಆಕಾರದಲ್ಲಿರುವ ಬಹಳ ಎತ್ತರವಾದ ಕಟ್ಟಡ ; ಸಮಾಧಿ : ಅನಂತರ ಬುದ್ಧನ ಅಸ್ಥಿ ಮೊದಲಾದ ಅವಶೇಷಗಳನ್ನು 'ಡಾಗೋಬ' ಗಳಲ್ಲಿ ಇರಿಸುತ್ತಿದ್ದರು (ಬಾಲಪ್ರ. II, ೮೫೭) ; ಗುಹೆಯೊಳಗೆ ಸೂರ್ಯನ ಕಿರಣವು ಪ್ರಾತಃಕಾಲದಲ್ಲಿ ನೇರಾಗಿ ಡಾಗೋಬದ ಮೇಲೆ ಬೀಳುವಂತೆ, ಕಮಾನುಳ್ಳ ಕಿಟಕಿಗಳನ್ನು ಕೊರೆದಿರುತ್ತಾರೆ (ಬಾಲಪ್ರ. III, ೧೬೭೦). 'ಪಗೋಡ' ಪರಾ. [←ಪಾಲಿ. ಡಾಬೆಗ; ಮರಾ. ಡಾಗೊಬಾ./ಸಂ. ಧಾತುಗರ್ಭ ]

**ಡಾಡಿಮ** 'ದಾಳಿಂಬ' ನೋ.

**ಡಾಣ** 'ದಾಣ$_2$' ನೋ.

**ಡಾಣಾಡಂಗರ** 'ಢಣಾಡಂಗುರ' ನೋ.

**ಡಾಣಾಡಂಗುರ** 'ಢಣಾಡಂಗುರ' ನೋ.

**ಡಾಣಾಡಾಣೆ** (ನಾ). ದೊಣ್ಣೆಯಿಂದ ಪರಸ್ಪರ ಹೊಡೆದಾಡಿ ಮಾಡುವ ಜಗಳ,-ಯುದ್ಧ : ಡಾಣಾಡಾಣೆ, ಖಾಡಾಖಾಡಿ (ಶಬ್ದಾಸು. ೩೩೦ ಪ್ರಯೋ). [ <ಡಾಣೆ$_2$ + ಡಾಣೆ$_2$ + - ಇ$_3$ ]

**ಡಾಣೆ$_1$** 'ದಾವಣಿ$_1$' ನೋ.

**ಡಾಣೆ$_2$** 'ಧಾಣೆ$_1$' ನೋ.

**ಡಾಣೆ$_3$** 'ದಾಣ$_2$' ನೋ.

**ಡಾಣೆಗ** (ನಾ). ದಪ್ಪನಾಗಿರುವವನು ; ದಡಿಯ ; ಧಾಂಡಿಗ : ದುರಹಂಕಾರಿ ಹಮ್ಮಿನ ಹಗರಣಿಗನು ಡಂಬದ ಡಾಣೆಗರೆರೆಯ (ಹೋರಬ. ೯-೬೪). [ ಡಾಣೆ$_2$ (<ಧಾಣೆ$_1$) + - ಇಗ ]

**ಡಾಣೆ$_1$** 'ದಾಣ$_2$' ನೋ.

**ಡಾಣೆ$_2$** 'ಧಾಣೆ$_1$' ನೋ.

**ಡಾಬು**, ದಾಬು (ನಾ). ಸ್ತ್ರೀಯರು ನಡುವಿನಲ್ಲಿ ಧರಿಸುವ, ಚಿನ್ನದ ಅಥವಾ ಬೆಳ್ಳಿಯಿಂದ ಮಾಡಿದ ನಡುಪಟ್ಟಿ ; ಒಡ್ಯಾಣ : ಮಣಿಯಡ್ಡುಗೆಯ ಡಾಬಿನ ಮೇಖಲಾಂಚಿತ (ಅನಂರಾ. ೦-೩-೩೫); ಕಿರೀಟವನ್ನು ಡಾಬಿನ ಉಡುದಾರವನ್ನು . . . ಬ್ರಾಹ್ಮಣನಿಗೆ ಕೊಟ್ಟು (ಕೃವಾಳ. ೨೦೦); ಕಡಗ ಪಟ್ಟೆಯು ಡಾಬು, ಬುಗುಡಿ ಗೀರ್ಬಳೆ ಸರಿಗೆ (ಸಿದ್ಧಕಾ. ೮-೦೨) ; ಸಂಕ್ಷುಭಿತಪಕ್ಷಿಶ್ರೇಣಿಯೇ ಡಾಬು (ಧ್ವನ್ಯಾಲೋ. ೩೭) ; ಕಟಿಪ್ರದೇಶದಲ್ಲಿ ವಜ್ರದ ಡಾಬು ವಿರಾಜಿಸುತ್ತಿತ್ತು (ದೌಲತ್. ೩೬೮). **ದಾಬು** : "ಡಾಬು (ದಾಬು)-ದಾಮನ್ = ಒಡ್ಯಾಣ" (ತದ್ಭಕೋ. ೧೬).
[ ದೇ.॥ ತಮಿ. ತೆಲು. ಡಾಪ್ಪು./ಸಂ. ದಾಮನ್ ]

**ಡಾಮರ$_1$** (ಗು). ೧. ಭಯಂಕರವಾದ ; ಆಶ್ಚರ್ಯಕರವಾದ. (ನಾ). ೨. ದಂಗೆ; ಮುತ್ತಿಗೆ; ಲಗ್ಗೆ ; ಆಕ್ರಮಣ; ಸೂರೆ: ಆ ಮಾಧವೀಲತಾಮಂಟಪಮಂ ಕಾಮನ ಡಾಮರಕ್ಕಳ್ಕಿ ವನದುರ್ಗಂಬುಗುವಂತೆ ಪೊಕ್ಕು (ಪಂಪಭಾ. ೫-೬ ವ) ; ಕೋಮರಂ ಜವನ ಡಾಮರವಾದುವು (ಪಂಪರಾಮಾ. ೧೩-೬೧) : ಕಾಮನ ಡಾಮರಮಲ್ಲಿ . . . ಪಲ್ಮೊರೆವ ಮದಾಳಿಯಲ್ಲಿ ಸಖಿ ಸಾರದಿರಾ ಮರನಂ ವಸಂತದೊಳ್ (ಕಾವ್ಯಾವ. ೩೬೭) ; ತನಗುಣಲಿಲ್ಲದುದಂ ಪಸವೆನ್ನದೊಡಂ ತನ್ನಂ ಕೋಟ್ಟಿಟ್ಟುದಂ ಡಾಮರಮೆನ್ನದೊಡಂ . . .ಬಂಧಹೇತುಗಳಂ ಪೆರ್ಚಿಸುವ ಮೈಯ್ಯಂ ಪಾಪದ ರೂಪೆನ್ನದೊಡಂ ನೀಮಱಿವಿರ್ (ಜೀವಸಂ. ೭೩-೫). ೩. ರೋಗರುಜಿನಗಳ ಬಾಧೆ ; ವ್ಯಾಧಿ ; ಪೀಡೆ : ಪಾಂಡ್ಯರಾಜ್ಯದಲ್ಲಿ ಎರಡು ವರ್ಷಗಳಿಂದಲೂ ವೀರಕ್ಷಾಮವು ಆವರಿಸಿದ್ದಿತು. ಈ ಯುದ್ಧವು ಸಂಭವಿಸಿದ ಮೇಲೆ ಡಾಮರಕ್ಕೂ ಆರಂಭವಾಯಿತು (ಶ್ರೀರಾಯು. ೩೫೯). ೪. ತೊಂದರೆ ; ಕೋಟಲೆ ; ಉಪದ್ರವ : "ಉಪಸರ್ಗಮರಿಷ್ಟಂದುಷ್ಟಪೀಡೆ ಡಾಮರಮಜನ್ಯಮಿತಿ ಪ್ರಕರಂ" (ಪಸ್ತುಕೋ. ೯೭-೧) ; ಅರಿಷ್ಟಮುಪಸರ್ಗಮುತ್ಪಾತಮುಪಲಿಂಗಮಜನಂ ಡಾಮರಂ ವಿಡಂಬರಿ ವಿಷ್ಟವವೆನಲ್ಕುಪದ್ರವಮಕ್ಕು (ಮಂಗರಾ. ೮-೨೭) ; ಮನೋಜಂ ಮುಯ್ವಂ ನೋಡಿ ವಿಯೋಗಿಗೆ ಕಯ್ಯೊವಿಸಿದನಾಯ್ತು ಡಾಮರಂ ಮಾಮರದಿಂ (ಮಲ್ಲಿಪು.೫-೦೦). ೫. ಬರಗಾಲ ; ಕ್ಷಾಮ ; ದುರ್ಭಿಕ್ಷ : ಡಾಮರ ಆಗಿದ್ದರೂ ಮಿಗತಾಗಿ ತ್ರಿವಾಚ್ಯವಾಗಿ ಸರ್ವವೃತ್ತಿಯ ನಡೆಸಬೇಕೆಂದು ಶಿವಾರ್ಪಿತವೆಂದು ಕೊಟ್ಟೆವಾಗಿ (ಮ್ಯಆರಿ ೧೯೨೮ ; ೬೫-೩೨ ; 1509). ಕ್ಷಾಮ ಡಾಮರಂಗಳುಂ ಬೇರುಡಿದು ಪಾಟಿಸ್ಪೋಕುಂ ಪೊಟಲೊಳ್ (ರಾಮಾಶ್ವ. ೦೪-೨೯). ೬. ಗಲಿಬಿಲಿ ; ಗದ್ದಲ ; ಗೊಂದಲ. ೭. ಯಾವುದಾದರೂ ಆಶ್ಚರ್ಯಕರವಾದ ವಸ್ತು, ನೋಟ ಅಥವಾ ಘಟನೆ.

**ಡಾಮರಮಲ್ಲ** = ಆಕ್ರಮಣವನ್ನು ಎದುರಿಸಬಲ್ಲ ಶೂರ ; ಶತ್ರುಗಳನ್ನುಆಕ್ರಮಿಸುವುದರಲ್ಲಿ ದಿಟ್ಟನಾದವನು ; ಒಂದು ಬಿರುದು : ಸಿನ್ದನಾರಾಯಣ ನಲ್ಲಗ್ಗ್ಗಿ ನಲ್ಲ ಡಾಮರಮಲ್ಲ ಏಕಾಂಗಶೂದ್ರಕ ಶ್ರೀಪುಲಿಕಾಲ (ಎಇ. III, ೨೩೨-೯ ; 1070). [ ಸಂ. ]

**ಡಾಮರ$_2$**, ಡಾಂಬರ, ಡಾಂಬರು, ಡಾಮರು, ದಾಂಬರು (ನಾ). = ಡಾಂಬರೆಣ್ಣೆ : ಪಟಗರದ ಪೀಪಗಳೂ, ಡಾಮರದ ಪೀಪಗಳೂ, ರಾಂಜಾ ಪೀಪಗಳೂ (ಮುಂಬವ್ಯಾ. ೯) ; ಆ ಗಳಿಗೆಯಲ್ಲಿ ಆರಂಭವಾಗಿತ್ತು . . . ರಸ್ತೆಯ ಹೊದಿಕೆ ಡಾಮರ ಕಳಚಿ ಚೂಪುಕಲ್ಲು ಕಾಲಿಗೆ ಮುಳ್ಳಾಗುವುದಕ್ಕೆ (ಬಳಜೀ. ೧೩೫). **ಡಾಂಬರ** : ನೀರು ಬಿಟ್ಟ ಮೇಲೆ ತೆರೆದಿರುವ ಕಟ್ಟಿಗೆಗಳು ಹುಳಹತ್ತಿ ಕೆಡದ ಹಾಗೆ ಅವುಗಳಿಗೆ ಎಣ್ಣೆರಾಳ . . . ಹಚ್ಚಬೇಕು. ಡಾಂಬರವನ್ನಾಗಲಿ ರೋಗಂಧವನ್ನಾಗಲಿ ಹಚ್ಚಿದರೂ ಬರುತ್ತದೆ (ಕೃಷಿಪ್ರ. ೧೦೨) ; ಡಾಂಬರದಲಿ ಮೈಮೆತ್ತಿದೆ (ನವ್ಯಧ್ವ. ೦೫-೦೦) ; ಸುತ್ತೂತ್ತ ಕಡೆಗೆ ಡಾಂಬರ ಸುಟ್ಟ ವಾಸನೆ ಬರಹತ್ತಿತು (ಸ್ವಾತಿಚಿ. ೪೩೭) ; ಇದರ ಜೊತೆಗೆ ಒಬ್ಬರ ಮುಖಕ್ಕೊಬ್ಬರು ಡಾಂಬರವನ್ನು ಬಳಿಯುತ್ತಿದ್ದರು (ರಂಗರೋ. ೪೮). **ಡಾಂಬರು** : ಡಾಂಬರಿನೊಳಗೆ ಇದ್ದಲೀ ತೆಯ್ದು ಬಯಕೀ ತೀರಿಸಿಕೊಳ್ಳಲಿಕ್ಕೆ ಕುಡಧಾಂಗ ಕಾಣ್ತದ (ತಿರುಗು. ೦೫). **ಡಾಮರು** : ಮಾರ್ಗವೇನೋ ಡಾಮರು ಹಾಕಿದ ಮಾರ್ಗ ಆದರೆ ಅಲ್ಲಲ್ಲಿ ಡಾಮರು ಎದ್ದು ಹೋಗಿ ದೊಡ್ಡ ದೊಡ್ಡ ಹೊಂಡಗಳು ಹುಟ್ಟಿದ್ದವು (ಸೀತಾರ. ೯೪) ; ದಾರಿ ಡಾಮರು ಹಾಕಿದ ಒಳ್ಳೆಯ ರಸ್ತೆ (ಅಬೂಬ. ೭). **ದಾಂಬರು** : ವಾಹನದ ಗಾಲಿ ಅದರುಸಿರು ಕಪ್ಪು ದಾಂಬರಿನ ಬೀದಿ ಕಪ್ಪು ಈ ಕಪ್ಪು ಪ್ರಿಯವು, ಅಪ್ರಿಯವದೇಕೆ ಹೇಳೆನ್ನ ಮೈಯ ಕಪ್ಪು? (ಕರುಶ್ರೀ. ೭೩-೦೫).
[ ←ಹಿಂ. ಮರಾ. ಡಾಮರ್ ]

**ಡಾಮರರಸ್ತೆ**, ಡಾಂಬರರಸ್ತೆ (ನಾ). ಡಾಮರ ಹಾಕಿದ ರಸ್ತೆ : ಈ ಮಧ್ಯಾಹ್ನದ ಉರಿಬಿಸಿಲಿಗೆ ಎಕ್ಕಡವಿಲ್ಲದೆ ಡಾಮರರಸ್ತೆಯಲ್ಲಿ ನಡೆಯುವಂತಿಲ್ಲ (ರೂಢಿ). **ಡಾಂಬರರಸ್ತೆ** : ಅವನು ಡಾಂಬರರಸ್ತೆಗುಂಟ ಒಂದೇ ಸವನೇ ಸಾಗತೊಡಗಿದ (ಮುಕ್ತ್ಯದ. ೩೭) ; ಆ ಕಪ್ಪು ಡಾಂಬರರಸ್ತೆಯನ್ನು ನೋಡುತ್ತಿದ್ದಂತೆ ಏಕೋ ಅರ್ಥವಾಗದ ಸಮಾಧಾನ ಶಾಂತಿಗಳು ಸುರೇಶನ ಮನಸ್ಸಿನಲ್ಲಿ ನೆಲಸಹತ್ತಿದವು (ಅಬೋಲೀ. ೧೦೭). [ ಡಾಮರ$_2$ + ರಸ್ತೆ ]

**ಡಾಮರು** 'ಡಾಮರ$_2$' ನೋ.

**ಡಾಮರ್ಬಂಕಿ** (ನಾ). ಒಂದು ಬಗೆಯ ಸಸ್ಯ : ಬಿಳೀಭೋಗಿ, ಆಸಿನ ಮರ, ಅಶ್ವಕರ್ಣ, ಡಾಮರ್‌ಬಂಕಿ (ಮ್ಯಾಜಿಗಿ. ೭೦- ೧೪೨೫). [ ? ]

**ಡಾಯಿಮ** (ನಾ). ಒಬ್ಬಾತನ ಹೆಸರು : ರಟ್ಟರ ಮೇರು ಡಾಯಿಮ ಮಹೀಪಾಳಂ ನೃಪಾಳೋತ್ತಮಂ (ಸೌಇಇ. XX, ೨೪೭-೯ ; 1087). [?]

**ಡಾಲರು** (ನಾ). ಅಮೇರಿಕಾದಲ್ಲಿ ಬಳಕೆಯಲ್ಲಿರುವ ಒಂದು ನಾಣ್ಯ : ಈ ಮನೆಯ ಮುಂಗಡ ಬಾಡಿಗೆ ೨೫ ಡಾಲರು (ಸಮುಶಾ. ೧೨೪); ಟಿಕೇಟಿನ ಬೆಲೆ ಒಂದು ಡಾಲರು (ಜಿಹಾತ್ಮಾ. ೧೦೩) : ಹೂವಿಲ್ಲ ಹಣ್ಣಿಲ್ಲ ಡಾಲರನು ಪಡೆಯುವ ಭಾಗ್ಯವಿಲ್ಲ (ಅರರೋ. ೧೦). [ ←ಇಂ. Dollar ]

**ಡಾಲಿಬಾರು** (ನಾ). ಚರ್ಮದ ಪಟ್ಟಿ (?) : ತುರುಕರ ಡಾಲಿಬಾರಿನ ಪಟ್ಟಿ ತಿಂಬರು ಹೇರಿ ಪೈಜರವ (ಕಾಲಸಂ. ೨೩-೧೦). [ ? ]

**ಡಾಲಿಮ** 'ದಾಳಿಂಬ' ನೋ.

**ಡಾಲಿಯಾ** 'ಡೇಲಿಯಾ' ನೋ.

**ಡಾಲು$_1$** 'ಡಾಳ$_1$' ನೋ.

**ಡಾಲು$_2$**, ಡಾಳ$_2$, ಡಾಳು, ಢಾಲು$_2$, ಧಾಳ (ನಾ). ೧. ಗುರಾಣಿ : "ಡಾಲು—ಢಾಲ=ಅಡ್ಡಣ" (ತದ್ಭಕೋ. ೦೭); ಬಿರುದಿನ ಡಾಲ ರಾವುತರೆಂಟು ಸಾವಿರ ತುರಗವನೇಱಿಯೈತರಲು (ಕಂನವಿ. ೧೧-೮೭) ; ಗರುಡಹನುಮ ಮಕರದ ಟೆಕ್ಕೆಯ ಡಾಲಬಿರುದಿನ ದೊರೆರಾಯನಾರೊ (ಕಂನವಿ. ೦೩-೩೭); ಅವನ ಡಾಲು ಡಮಾಮಿ ಸತ್ತಿಗೆ ಕೆಂಪಿನ ನಿಶಾನಿಯುಮಂ . . . ಕೈಸೆಱೆ ತಂದು ರಾಯರಿಂಗೊಪ್ಪಿಸಲ್ (ಕಳನ್ನ. ೨-೪೯) ; ಆದರಿಂದ (ಗಂಡಕದ ತೊಗಲಿನಿಂದ) ಬಹಳ ಬೆಲೆಯುಳ್ಳ ಡಾಲುಗಳು ಆಗುತ್ತವೆ (ಮುಂಬಯಿ. ೪-೪೮) ; ಕಾಲ್ದಳದವರು ಎಡಗೈಯಲ್ಲಿ ಹದಮಾಡಿದ ಎತ್ತಿನ ಚರ್ಮದ ಡಾಲುಗಳನ್ನು ಹಿಡಿದಿರುತ್ತಾರೆ (ಪ್ರವಾಇ. I, ೪೦ ಅಡಿಟಿ). **ಡಾಳ$_2$** : "ತೊಪ್ಪರ ದಂಡೆ ಡಾಳ ಕಳಾಸ[ಪಾಠಾಂ. ಡೋಳಕ್ಕು ಕಳಾಸ]ಚಾಳೆಯ ಮಂಡಿ ಸೀರಣಂ ಹೆಚ್ಚೆಯಕ್ಕುಂ(ಮುಂಗರಾ.೮೮-೩೮); ಬಿರುದಿನ ಡಾಳ ಹಯದ ಮೊತ್ತದಲಿ ತಮಾಸುರನಂತೆ ಮೆಱೆವವನಾರು (ಕಂನವಿ. ೦೨-೪೩) ; ಬಿರುದಿನ ಡಾಳ ದರ್ಪದೆ ಸೆಳೆತಂದು ಭೂಪಾಲನಿದಿರಿನಲಿ ತಪ್ಪದೆ ಮೆದೆಯ ನೊಟ್ಟಿದರು (ಕಂನವಿ. ೦೫-೧೧೭). **ಡಾಳು** : ೧. ಬಿರುದಿನ ಡಾಳು ಡಮಾಮಿ ಮಕರಟೆಕ್ಕೆಯುರುತರ ರಾಜಚಿಹ್ನೆಗಳ ಪರಿಯ ತೋಱುತ(ಕಂನವಿ.೩-೩೭); ಅಂಕೆಯಿಲ್ಲದೆ ನಾನಾ ಬಗೆ ಚಿತ್ರಗಳಂಕಿತವಹ ಡಾಳುಗಳ ಅಂಕುಶಖಾನನ ತೇಜಿ ಸಾವಿರವಾಗ ಮುಂಕೊಂಡು ಬಂದುವು (ಕಂನವಿ. ೦೮-೮೪). **ಢಾಲು$_2$** : ೧.ಬೆಳ್ಳಿ ಢಾಲು ಚಿನ್ನದ ಮುಲಾಮಿನ ಗುಬ್ಬಿ (ಎಕ. XIV, ನಂಜನ. ೨೯೨-೯ ; 1847) ; ಕೈಯೊಳಗಿನ ಕತ್ತಿ ಢಾಲುಗಳನ್ನು ನೋಡಿರಿ (ಮೋಹಿನೀ. ೩೭) ; ನಾಯಕನು ಚಾತುರ್ಯದಿಂದ ಖಡ್ಗಕ್ಕೆ ತನ್ನ ಢಾಲನ್ನೊಡ್ಡಿ ಹೊಡತವನ್ನು ತಪ್ಪಿಸಿಕೊಂಡನು (ಕುಮುದ. ೦೭) : ಒಂದು ಕೈಯಲ್ಲಿ ಎತ್ತಿನ ತೊಗಲಿನ ಢಾಲನ್ನು ಜೋತುಬಿಟ್ಟು . . . ಇಪ್ಪತ್ತೈದು ಹುಡುಗರು ಬಂದರು (ಮೇದಿಮ. ೧೦೦). ೨. ಪಂದ್ಯಗಳಲ್ಲಿ ಗೆದ್ದಿರುವ ತಂಡಕ್ಕೆ ಕೊಡುವ ಗುರಾಣಿಯಾಕಾರದ(ಬೆಳ್ಳಿಯ)ಪಾರಿತೋಷಕ,–ಬಹುಮಾನ : ಗೆದ್ದವರಿಗಿದ್ದೆಯಿದೆ ಬೆಳ್ಳಿಯ ಢಾಲು (ನೆಲಮು. ೩೩-೨೪). **ಧಾಳ** : (೬). [ <ಸಂ. ಢಾಲ ]

**ಡಾಲು$_3$** (ನಾ). ಒಂದು ಬಗೆಯ ರಣವಾದ್ಯ : ಕೊಂಬುಕಹಳೆ ತಮ್ಮಟೆ ಡಾಲು ಡಮಾಲು ರಾಯಭಟಿ ಮುಂತಾದ ರಣವಾದ್ಯಗಳು ತಟ್ಟನೆ ನಿಂತವು (ರೂಲೇಪಾ. ೫). [ ? ]

**ಡಾಲುಹೊಡೆ** (ಕ್ರಿ). ಪ್ರಕಾಶವನ್ನು ಬೀರು ; ಥಳಥಳಿಸು : ಅವಳು ಕಿವಿಯಲ್ಲಿ ಹಾಕಿಕೊಂಡಿದ್ದ ಕೆಂಪಿನೋಲೆಗಳು ನಾಲ್ಕು ಕಡೆಗೂ ತಳತಳನೆ ಡಾಲುಹೊಡೆಯುತ್ತಿದ್ದುವು (ಭಾರವಿ. ೧೧೦).
[ ಡಾಲು$_1$ (<ಡಾಳ$_1$) + ಹೊಡೆ$_1$ (<ಪೊಡೆ$_1$) ]

**ಡಾಲ್ಮರ** (ನಾ). ಒಂದು ಬಗೆಯ ಮರ : ಕಲ್‌ಗರಿಕೆ, ಡಾಲ್‌ಮರ, ಗವುಡ, ಮದಗಿರಿಬೇವು (ಮ್ಯಾಜಿಗಿ. ೨೦-೩೮೦). [ ? + ಮರ$_1$ ]

**ಡಾವ್** 'ಡಾವು' ನೋ.

**ಡಾವಣ** 'ದಾವಣಿ$_1$' ನೋ.

**ಡಾವಣಿ** 'ದಾವಣಿ$_1$' ನೋ.

**ಡಾವಣಿಕಟ್ಟು** 'ದಾವಣಿಗಟ್ಟು$_1$' ನೋ

**ಡಾವಣೆ** 'ದಾವಣಿ$_1$' ನೋ.

**ಡಾವಣೆನೇಣ್** (ನಾ). ದನ ಮೊದಲಾದುವನ್ನು ಸಾಲಾಗಿ ಕಟ್ಟುವ ಉದ್ದವಾದ ಹಗ್ಗ : ವಾರುವಗಳ ಡಾವಣೆನೇಣ್ಗಳ ಬಲು ಜೇರುಗುಣಿಕೆಗಳ ಪರಿದು ಕೇರಿಕೇರಿಯೊಳು ತಮ್ಮಿಚ್ಛೆಯೊಳಗೆ ಸಲೆ ತಾಱುಮಾಱಾಗಿ ಯೋಡಿದವು (ಕಂನವಿ. ೦೫-೯೦). [ ಡಾವಣೆ (<ದಾವಣಿ$_1$) +ನೇಣ್$_1$ ]

**ಡಾವಪೇಚು**, ಡಾವುಪೇಚು (ನಾ). ೧. ಉಪಾಯ ; ತಂತ್ರ : ಗೊತ್ತದ ನನಗ, ನಿಮಗೇನು ಖಾಸಗೀ ಮಾತಾಡೋದದ ಎಂಬೋದು.ಮುತ್ಸದ್ದಿಗಿರೀ ಡಾವಪೇಚು ನಡಸೋದದ (ಜೂಜು. ೦೭). **ಡಾವುಪೇಚು** ೨. ಪಟ್ಟು : ನೋಡಿದ ಹಿಡಿತಗಳನ್ನೂ ಡಾವುಪೇಚುಗಳನ್ನೂ ಬಣ್ಣಿಸುವ ರಭಸದಲ್ಲಿ . . . ಅವನನ್ನು ನೆಲಕ್ಕೆ ಅಪ್ಪಳಿಸುವರು (ಗಾಳಿಪ. ೬೫).
[ ←ಮರಾ. ಡಾವಪೇಚ್ ]

**ಡಾವರ**, ಡಾವರಿ, ಡಾವುರ, ಡಾಹರ, ದಾವರ (ನಾ). ೧. ಬರಗಾಲ ; ಕ್ಷಾಮ ; ದುರ್ಭಿಕ್ಷ : "ಡಾವರಮಾ ಕ್ಷಾಮಮದಕ್ಕುಂ" (ಕವಿಕಂ.೨೭೯); ಇಂಚೆಯ ಪಸವಿನ ಬಱಿದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಬಿಡಿವೊಲಾದುವಾ ನಾಡರ್ಗಳ್ (ಪಂಪಭಾ. ೮-೫೦) ; ಗೋಪ್ರವೇಶಲಕ್ಷಣ (ನಿಮಿತ್ತ) ಏಡಂ ಪೊಕ್ಕೊಡೆ ಚಿತ್ರವೃಷ್ಟಿ . . . ಸೇಡಂ ಪೊಕ್ಕೊಡೆ ಡಾವರಂ (ಅಟ್ಟಮ. ೪-೭). ೨. ಕೊಳ್ಳೆ ; ಸೂರೆ ; ಲೂಟಿ : ದಳವುಳ ಬೆಳುಗವತೆಯನ್ಯಾಯ ಡಾವರ [ಪಾಠಾಂ. ಪರಿಭವ] ಠಕ್ಕು ಡೊಳ್ಳಾಸ . . . ನಿನ್ನೊಳಿಲ್ಲಲೆ ರಾಯ ಕೇಳೆಂದ (ಕುವ್ಯಾಸ. ೦-೪೫) ; ಕರುಬುತನ ದುರ್ಭಿಕ್ಷ ಡಾವರ ಪೊರಿಗೆ ಲಂಚ . . . ಸ್ವಪ್ನದೊಳಗಿಲ್ಲಾಳ್ಕೆಯೊಳು ಸಳನ (ಅಂಬಿಕಾ. ೪೮-೯೦). ೩. ಬಾಧೆ ; ಹಿಂಸೆ ; ಕೋಟಲೆ ; ಉಪದ್ರವ : ಪುಂಡರೀಕ ಭೋಂಕನೆ ನಿನಗೀಗಳಿಂದ್ರಿಯದ ಡಾವರವೆತ್ತಣಿನೆತ್ತ ಬಂದುದೋ (ಕಾದಂಪೂ. ೭೭೪) ; ದಕ್ಕೆಯ ಡಾವರಕ್ಕೆ ಸಿಕ್ಕಿ ನೊಂದೆನು (ದಬೊಮ್ಮ. ೨೨೦-೭) ; ಕಾಮನ ಡಾಪರಂ ಕೊಳ್ಳದುಳಿದ ಪೊಯೆಯ ಮಾತು ಬೇಡ (ಹಜಳಾ. ೮-೫೯); ಸಾವು ತಪ್ಪದು ತನಗೆ ಕಾಮನ ಡಾವರವು ಘನ (ಕುವ್ಯಾವಿ. ೨-೨೭) ; ರಕ್ತಬೀಜಜನ ಡಾವರಕೆ ಬೆಚ್ಚದಿರಿ (ಅಂಬಿಕಾ. ೩೮-೯). ೪. ತೀವ್ರತೆ ; ರಭಸ ; ಅತಿಶಯ : ಬತ್ತಿದ ಬಿತ್ತು ಪೃಥ್ವಿಯ ಕೊಟ ಅವ್ವುದಿನ ದ್ರವದಿಂದ ಮಸ್ತಕ ಒಡೆದುದಲ್ಲದೆ ಉಷ್ಣದ ಡಾವರಕ್ಕೆ ಬೆಂಕಿಯ ಬೇಗೆಗೆ ಮಸ್ತಕ ಒಡೆದುದುಂಟೇ (ವೋಳಿಮಾ. ೨೮೦-೪೭); ಉಗಿದು ಹಾಯ್ಕುವ ಖಳನ ನಿಡುದೋಳುಗಳು ಬಳಲಿದವಳ್ಳಿ ಹೊಯ್ದವು ಥಗೆಯ ಡಾವರವಾಯ್ತು ಬಹಳ ಸ್ವೇದಜಲ ಜಡಿಯೆ (ಕುವ್ಯಾಸ. ೦೫-೨). ೫. ಕಾವು; ದಗೆ; ತಾಪ : ಉರಿಯ ಡಾವರವೆಳೆಯ ಬಾಳೆಯ ಬೆರಸುವಂತಿರೆ

ಡಾಯಕಿವರನ ಮರಣವಾರ್ತೆಯನಾ ಸುಭದ್ರಾದೇವಿ ಕೇಳಿದಳು (ಕುವ್ಯಾ,ದ್ರೋ. ೭-೧೦) ; ಬಿಸಿಲಿನ ಡಾವರವು ಅತಿಯಾಗಿದ್ದರೂ ಆತನು ತಲೆಗೆ ಟೋಪಿಯನ್ನೂ ಹಾಕಿರಲಿಲ್ಲ (ಕಾನೂರು. ೧). ೬. ಪ್ರತಾಪ ; ಶಕ್ತಿ ; ಸಾಮರ್ಥ್ಯ : ಆ ವಿವಿಧ ಮಂತ್ರಾಸ್ತ್ರವನು ಶತಸಾವಿರವನಾ ಬ್ರಹ್ಮದಂಡದ ಡಾ[ಪಾಠಾಂ. ಢಾ]ವರದಲೇ ಗೆಲಿದನೊಬ್ಬ ವಸಿಷ್ಠ ಮುನಿಯೆಂದ (ಕುವ್ಯಾ,ಆ. ೧೧-೪೩) ; ಅವುದಂತರ ವನಕಳಭಕ್ಕೆರಾವತಕೆ ಮರಿಯು ಭಾವು ದ್ರೋಣನ ಡಾವರಕೆ ಪಾಂಚಾಲನೈಸಬಿವನು (ಕುವ್ಯಾ,ಭೀ. ೮-೩೨). ೭. ಗದ್ದಲ ; ಗಲಿಬಿಲಿ ; ಸಡಗರ : ಧೂರ್ಜಟಿಯ ಡಾವರದ ಡಮರುಧ್ವನಿಯೊ ವಿಲಯದ ಬಳಸಿಡಿಲ ಬೊಬ್ಬಾಟವೋ (ಕುವ್ಯಾ,ಕ. ೨೧-೧೬). ೮. ಬಯಕೆ ; ಉತ್ಕಟವಾದ ಇಚ್ಛೆ : ಮಹಾವಾರ್ಧಿಜಲವನೊಂದೇ ಸಾರಿ ಸುಟಿಗೊಂಬ ಡಾವರದೊಳಿದ್ದ ವಡಬಾಗ್ನಿಯೋ . . . ಎಂದೇಬೊಲಾದುದು ಧನಂಜಯನ ಪಾವಕಾಸ್ತ್ರಂ (ಜೈಮಿಭಾ. ೧೩-೧೧) : ಆಳ್ದನೂಟಿಗಮನಿತುಮಂ ತಾನೊರ್ವನೆ ಗೆಯ್ವ ಡಾವರದಿಂ (ಚಕವಂ: ೮೫-೨೧). ೯. ಭಯಂಕರವಾದುದು ; ಭೀಷಣತೆ ; ಕರಾಳತೆ : ಆವ ಕೌಶಿಕಮಂತ್ರತಂತ್ರದ ಡಾವರದ ಡೊಳ್ಳಾಸವಿಕ್ಕಿದ ದೀವಸದ ಬೇಳುವೆಯ ಸೇನೆಂಬೆನು (ಕುವ್ಯಾ,ಸ. ೧೩-೬೦) ; ಜಲಧಿ ಜಲಧಿಯ ಹಳಚಲಗಿದವ್ವಳಿಪ ವಾದ್ಯಧ್ವನಿಯ ಡಾವರ ಸೆಳೆದುದಸುರರ ಧುರದ ಧೈರ್ಯವನು (ಕುವ್ಯಾ,ಆ. ೧೫-೦೨). ೧೧. ಆವರಿಸುವಿಕೆ; ಸುತ್ತಲೂ ವ್ಯಾಪಿಸುವಿಕೆ. 'ಡಾವರಿಸು' ಪರಾ. ಡಾವರಿ : ೪. ಅತ್ತಲರ್ಜುನನುರಿಯ ಡಾವರಿಯನು[ಪಾಠಾಂ. ಡಾವರವನು]ಭಂಗಿಸಿದನೆಚ್ಚು ನಾರಾಯಣಾಸ್ತ್ರದೊಳು (ಜೈಮಿಭಾ. ೮-೪೫). ಡಾವುಳ: ೮. "ಡಾವುಳಮನಲಾಪೇಕ್ಷೆಯು" (ಭಾರನಿ. ೩೨). ಡಾಹರ: ೬. ಡಾಹರದೊಳೆಜಗಿದೆಕ್ಕಲನದಟುಮಂ ಮುಟಿಯೆ ನೇಹದಿಂ ಹರಿ ತನ್ನ ಕುವರಿಯಂ ಕೊಡೆ (ಅಂಗಕು. ೧-೦೬).ದಾವರ : ೧೧. ಬಾಯಾರಿಕೆ ; ದಾಹ; ನೀರಡಿಕೆ; ಸೇದೆ : ಬಳಸಿ ಬಂದಿಹ ನವಗೆ ಇಷ್ಟು ದಾವರವಾಗೆ ಏರಿಬಳುವವನಿಗೆಷ್ಟು ದಾವರವೊ (ಅರುಣ. ೪೯-೨೧); ಉಪ್ಪು ತಿಂದಷ್ಟೂ ದಾವರವಾಗಿ ಒಣಗಿ ಹೋದೀಯೇ, ಬೆಲ್ಲವೇ ತಿನ್ನು (ಕಥಾಮಂ. IV,೯೨). 'ಡಪರ' ಪರಾ. [ <ಸಂ. ಡಾಮರ ]

**ಡಾವರಿ** 'ಡಾವರ' ನೋ.

**ಡಾವರಿಗ** (ನಾ). ೧. ಕೊಳ್ಳೆಹೊಡೆಯುವವನು ; ದಂಗೆಮಾಡುವವನು; ಸೂರೆಕಾರ ; ದರೋಡೆಗಾರ : ಅಟಿವಿನ ಗರ್ವದಿಂದಿಳಿಸದೀ ತ್ರಿಜಗಂಗಳನೊತ್ತಿ ಮೋಹವೆಂಬಜಿಕೆಯ ಸಂದ ಡಾವರಿಗನುಂ ಪಗೆ ತನ್ನೊಳಗಿರ್ದೊಡೆಂತುಮೇತೆಬಿದೊಳವೊಳ್ಳಿಕೆಯ್ಗುಮೆ (ಜೀವಸಂ. ೦೫೮-೦೬); ಡೊಂಬಿಗರ ಡಾವರಿಗರಿವದಿರ ತಿಂಬೆನೀಗಳೆ (ಕುವ್ಯಾ,ಸ. ೧೫-೩೫). ೨. ಶೂರ; ಸಮರ್ಥ; ವೀರ : ಕಂಸನಾನೆಯನಸುಬಡಿದ ಗಡ ಮಲ್ಲರನು ಮರ್ದಿಸಿದನೇ ಡೊಳ್ಳಾಸದಲಿ ಡಾವರಿಗನಹನೆಂದ (ಕುವ್ಯಾ,ಸ. ೧೧-೧೬). ೩. ಗದ್ದಲವಮಾಡುವವನು ; ಕೋಲಾಹಲವನ್ನುಂಟುಮಾಡುವವನು ; ಆರ್ಭಟಿಸುವವನು : (೬). [ ಡಾವರ + -ಇಗ ]

**ಡಾವರಿಗತನ** (ನಾ). ಸಾಮರ್ಥ್ಯ ; ಶೌರ್ಯ ; ಪರಾಕ್ರಮ : ಕರ್ಣ ಗಳಹದಿರು ಡಾವರಿಗತನವಾರ ಕೂಡೆ ವೃಥಾ ವಿಲಾಸಿಗಳೆಲವೊ ಸುಭಟರೆ ನೀವು (ಕುವ್ಯಾ,ದ್ರೋ. ೧೩-೨೩). [ ಡಾವರಿಗ + -ತನ ]

**ಡಾವರಿಗವಿದ್ಯೆ** (ನಾ). ಕೊಳ್ಳೆಹೊಡೆಯುವುದು ; ಲೂಟಿ ; ಸೂರೆ : ಆವ ಸೇರಿಕೆ ಜಪಕೆ ಚಾಪಶರಾವಳಿಗೆ ಶಮೆ ದಮೆಗೆ ಖಡ್ಗಕೆ . . . ಅವುದಿದರಭಿಧಾನ ತಪವೋ ಡಾವರಿಗವಿದ್ಯಾಸಮಾಧಿಯೊ ನೀವಿದೆಂತಹ ಋಷಿಗಳು (ಕುವ್ಯಾ,ಆ. ೪-೯೫). [ ಡಾವರಿಗ + ವಿದ್ಯೆ ]

**ಢಾವರಿಸು, ಧಾವರಿಸು, ದಾವರಿಸು** (ಕ್ರಿ). ೧. ಸುತ್ತು ; ತಿರುಗಾಡು ; ತ್ವರೆಯಿಂದ ಆಚೀಚೆಗೆ ಚಲಿಸು ; ರಭಸದಿಂದ ಮುನ್ನುಗ್ಗು : ರಥಿಕರ್ ಕಡುಪಿಂ ರಥಂಗಳಿಂ ಡಾವರಿಸುತ್ತೆ (ದಕಕು. ೭-೭೩) ; ಧುರಧೀರಂ ಗುಂಡದಂಡಾಧಿಪನ ನಿಜಯಶಃಕಾಂತೆ . . . ದಿಶಾಚಕ್ರದೊಳ್ ಡಾವರಿಸಲ್ (ಎಕ. V, ಬೇಲೂರು. ೩-೭೯; 1397) ; ತೀವಿ ತೆಗೆದನು ವಜ್ರಶರದಲಿ ಡಾವರಿಸಿದನು ಕಳನೊಳು (ಕುವ್ಯಾ,ದ್ರೋ. ೧೦-೨೮) ; ನೂಟಾನೆಯಲಿ ಡಾವರಿಸಿದನು ಧರ್ಮಜನ ದಳದಲಿ ಧೀರ ಕುರುರಾಯ (ಕುವ್ಯಾ,ಗ. ೨-೩೫): ನೆಲ ಹಜಿಯೆ ಹರಿದವು ತೇರುಗಳು ತೇರವದ ತೋಳುಗಳ ಉರುಕೃಪಾಣದ ದಂತಿಗಳು ಡಾವರಿಸಿದವು (ತೊರರಾ. ೫-೫-೧೬). ೨. ಬಾಯಾರಿಕೆಯಾಗು: ನರನ ತೇರಿನ ಕುದುರೆಗಳು ಡಾವರಿಸಿದುವು ಡಗೆಹೊಯ್ದು ಮಿಗೆ ದಳ್ಳುರಿಯ ಸಸಿಯಂತಾದನರ್ಜುನದೇವ ನಿಮಿಷದಲಿ (ಕುವ್ಯಾ,ಭೀ. ೬-೩೪) : ತೀವಿದ ಪಾಲ್ಗೊಲೆಯಂ ತಳರ್ವಾಯಿಂ ಡಾವರಿಸುತ ಕರ್ಚುವ ಕಂದನ ಸದ್ಭಾವವನೀಕ್ಷಿಸದಾಕೆಯು ಕಣ್ಗಳ್ ಪೀಲಿಯ ಕಣ್ಣೆಸೆ (ಜಯುಕಾ. ೨-೩೭). ೩. ಹಬ್ಬು; ಆವರಿಸಂ ; ವ್ಯಾಪಿಸು : ಅವಿರಳಾಸ್ತ್ರಾನೀಕ ಡಾವರಿಸಿದವು ದಿಗುತಟವ (ಕುವ್ಯಾ,ಭೀ. ೮-೩೭); ಉರಿಯ ಕರಡಿಗೆಯಂತೆ ಶಿಖಿ ಡಾ[ಪಾಠಾಂ. ಸಿಡಿದಾ]ವರಿಸಿತಬುಜಭವಾಂಡಭವನವನು (ತೊರರಾ. ೬-೯-೩೨); ವಿಷಜ್ವಾಲೆ ಮಿಗೆ ಡಾವರಿಸಿತು . . . ಪರಬಲದೊಳು (ಜೈಮಿಭಾ. ೨೯-೩೦) ; ಆತನ ಕೀರ್ತಿಯು ದಶದಿಕ್ಕುಗಳಲ್ಲಿ ಡಾವರಿಸುತ್ತಿತ್ತು (ಕವೀರ. ೦೨೦). ೪. ಚುಚ್ಚು ; ತಿವಿ; ಹೊಡೆ; ಹಿಂಸಿಸು; ನೋಯಿಸಂ: ನೀವು ಕಂಡಿರೆ ನಾಭಿ ಜಂಘೆಗೆ ಡಾವರಿಸಿದನು ಹಲವು ಬಾರಿ ಜಯಾವಲಂಬನವೆಂತು ಕೃಪೆವಮಾಡೆಂದನಾ ಪಾರ್ಥ (ಕುವ್ಯಾ,ಗ. ೭-೪೩). ೫. ಉರಿ ; ಪ್ರಜ್ವಲಿಸು : ರಘುಳದ ಡಗೆ ಡಾವರಿಸೆ ಹೊಕ್ಕರು ಕೊಳನ (ತೊರರಾ. ೨-೪-೨೨) : ಭುಗಿಲ್ಭುಗಿಲ್ಭುಗಿಲೆಂದು ಡಾವರಿಸೆ . . . ಎಲ್ಲರಂ ದಹಿಸತೊಡಗಿದುದು ದಳ್ಳುರಿ (ಜೈಮಿಭಾ. ೮-೫೯): ಕಂಬನಿಯ ಕಡಲೊಳಗೆ ಡಾವರಿಪ ವಡಬಶಿಖಿ (ಜೈಮಿಭಾ. ೧೩-೫೯). ೬. ಅತಿಯಾಗಿ ಬಯಸು ; ಉತ್ಕಟವಾಗಿ ಆಸೆಪಡು ; ಆಸೆಯಿಂದ ಹಾತೊರೆ : ವಿಷಯವ ಡಾವರಿಸುವವ ಸ್ತುತಿನಿಂದೆಯ ಬಲ್ಲನೆ (ಸರ್ವವ. ೩೫-೦೮೮) ; ಆವರಿಸುವ ಮನ ಭಕ್ತಿಗೆ ಡಾವರಿಸುವ ಮನ ಶಿವಾರ್ಚನೆಗೆ . . . ದೊರಕಿದೊಡಾವುದಸಾಧ್ಯಂ (ಶಂಕಕಂ. ೨೦). ೭. ಆರ್ಭಟಿಸು ; ಅಬ್ಬರಿಸಂ : ಕಡುಲುಳಿ ಮಸಗಿ ಡಾವರಿಸಿ . . . ತಾಗಿದರು (ಕುವ್ಯಾ,ಸ. ೨-೦೦೩) ; ಪಾವಿನಂತಾವಿನಂತಡಿಗಡಿಗೆ ಮೊರೆದೆದ್ದು ಡಾವರಿಸಿ ಸೀವರಿಸಿ ಮನೆಗೆಲಸವಂ ಗೆಯ್ಯದಾ ವನಿತೆ ಸಾವನಿತೆ ಲೇಸು (ಜೈಮಿಭಾ. ೫-೩೪): "ಹಟವಮಾರಿತನ ಮಾಡು; ಮೊಂಡಾಟವಮಾಡು"(ಪ್ರಶಬ್ದ). ಧಾವರಿಸು: ೬. ಅವುದಟ ದೆಸೆಯಿಂದ ಮನವಿದು ಧಾವರಿಸುತಿಹುದದು ಕಡಾ ಭವಧಾವತಿಗೆ ಕಾರಣವು (ಸ್ವರೂಪಾ. ೧-೪). ದಾವರಿಸು : ೪. ಆನೊಲಿದು ಬಂದರೆ ನಿಮ್ಮ ಬಿಟುನುಡಿಯಲಗಿನಲಿ ದಾ[ಪಾಠಾಂ. ಡಾ]ವರಿಸಿದಿರಿ ಡೊಳ್ಳಾಸವಿದ್ಯೆಯಲಿ (ತೊರರಾ. ೩-೪-೨೧). ೮. ನೋಯು; ಹಿಂಸೆಗೊಳ್ಳು; ಯಾತನೆಯನ್ನನುಭವಿಸು : ಆತುರದಲ್ಲಿ ಕಳವಳಿಸಿ ವ್ಯಾಕುಲದಲ್ಲಿ ದಾವರಿಸು ತಿಪ್ಪುದೀ ಮನವು (ವಚಶಾ. II, ೪೪೯) ; ಮಗ್ಗಲದ ಮರಿಯಳೀ ಯೇಸುವಿಗೆ ಮನಸೋತು . . . ಬೆಂದು ಮನನೊಂದು ಭುಗಿಭುಗಿಲ್ಲ ಕಾವರಕೆ ದಾವರಿಸಿ (ಗೊಲ್ಗೊಥಾ. ೩-೬೧). 'ಡವರಿಸು' ಪರಾ.

[ ಡಾವರ + -ಇಸು₃ ]

**ಡಾವಳಿ** 'ಧಾವಳಿ' ನೋ.

**ಡಾವು, ಡಾವ್, ಡಾವೆ** (ನಾ). ೧. ಹೊಟ್ಟೆಕಿಚ್ಚು ; ಡಂಕಂ ; ದ್ವೇಷ ; ವೈರ : ಆ ಹಾವು ಡಾವು ಇಟ್ಟುಕೊಂಡು ಒಂದು ವರ್ಷದ ನಂತರ ಅವನನ್ನು ಕಚ್ಚಿದೆ (ರೂಢಿ). ೨. ಕಂಸ್ತಿಯಲ್ಲಿ ಒಂದಂ ಬಗೆಯ ಹಿಡಿತ : ಇಂತಹ ಹಿಡಿತಗಳಿಗೆ ಭಾರತ ಪ್ರತಿ ಡಾವು ಮಾಡುವಷ್ಟು ಸಾಧನೆ ಪಡೆದಿದೆ (ಎಚ್ಚಸಾ. ೦೪೮). ೩. ಆಟ ; ಕುಸ್ತಿಯಾಟ : 'ಡಾವುಪೇಚು' ಪರಾ. ೪. ಹಂಚಿಕೆ ; ಉಪಾಯ ; ಯುಕ್ತಿ : ಮುದ್ದಾಂ ಮಳ್ಳತನವನು

ಪ್ರದರ್ಶಿಸುವ ಡಾವಿನಿಂದ ನಾನೂ . . . ಅವನ ತಲೆ ಚಿಟ್ಟುಹಿಡಿಸುವಂತೆ ಬಾತಮಿಯಾ ಒಪ್ಪಿಸಿದ್ದೆ (ದೀಪಹ. II, ೧೪). ಡಾವ್ : ೧. ಸಾಹೇಬರ ಡಾವ್ ಶ್ಯಾಮರಾಯರಿಗೆ ಹೊಳೆದಿತ್ತು (ದೀಪಹ. II ೩೦). ಡಾವೆ : ೧. ಕಾಳಗಂ ಮರೆಗೊಂಡು ತಸ್ಕರರ್ ಬಳಿಕಿಂದು ಡಾವೆಯಿಂ ಪರಶುಧೀರಧರನಿಲ್ಲದಿಹ ಸಮಯದೊಳ್ ಪೋವಿತಿನ್ನಾರ್ ಕಾವರೆಮ್ಮನೆಂದೊಳಗೊಳಗೆ (ಪರಶು. ೩೭-೧೪). [ ←ಹಿಂ. ಮರಾ. ಡಾವ್ ]

**ಡಾವುತೀರಿಸು** (ಕ್ರಿ). ಹಗೆತನವನ್ನು ಸಾಧಿಸಿಕೊಳ್ಳು ; ಪ್ರುಯ್ಯಿಕ್ಕೆ ತೀರಿಸಿ ಕೊಳ್ಳು : (೩). [ ಡಾವು + ತೀರಿಸು ]

**ಡಾವುಪೇಚು** 'ಡಾವಪೇಚು' ನೋ.

**ಡಾವುರ** 'ಡಾವರ' ನೋ.

**ಡಾವೆ** 'ಡಾವು' ನೋ.

**ಡಾಶೇರು** (ನಾ). ಒಂದಂ ತೂಕದ ಅಳತೆ ; ಎರಡೂವರೆ ಸೇರು ; ಅಡೀಸೇರು : ವಂದು ಮಣುವಿಂಗೆ ದಡಯ ನಾಲ್ಕುಂ ಪಂಚೇರು ಥಂದ ದೊಳೆಂಟು ಡಾಶೇರು ಷೋಡಶಮಕ್ಕುಂ (ಭಾಸ್ಕರ. ೭೫-೭).

[ ಡಾ$_0$ (P ←ಹಿಂ. ಢಾಈ) + ಶೇರು$_1$ (<ಸೇರು$_3$) ]

**ಡಾಹ, ದಾವು$_1$** (ನಾ). ೧. ಸುಡುವಿಕೆ; ದಹಿಸುವಿಕೆ : ತೋಟಿ ಯಂತೆ ಮಳಮಂ ತೋಟಿ ಬೆರ್ಚಿಸದೆ ಕಿರ್ಚಿನಂತೆ ಅಡಕಮಂ ತೋಟಿ ನಂಬಿಸದೆ ದಾಟಿಯಂತೆ ಡಾಹಮಂ ಮಾಡಿ ಕಿಡಿಸದೆ (ಧರ್ಮಾಮೃ. ೫-೯೯). ೨. ಸೆಕೆ ; ದಗೆ; ತಾಪ : ಮನುಷ್ಯ ಲೋಕದೊಳಾದ ಸುಖಮಲ್ಲಂ ಡಾ[ಪಾಠಾಂ. ದಾ]ಹಕ್ಕೆ ಶೀತಲಕ್ರಿಯೆಗೆಯ್ವಂತೆ ನೋವನಾಱಿಸುವ ಸುಖಂ ಅದು ಸುಖಮೆ (ಜೀವಸಂ. ೫೦-೨೪ ವ). ೩. ನೀರಡಿಕೆ ; ಬಾಯಾರಿಕೆ. ದಾವು$_1$ : ೨. ಬಿಸಿಲಿನ ದಾವು ತಗ್ಗಿತ್ತು (ಪಳಮ. ೨೦).

[ <ಪ್ರಾ. ಡಾಹ./ಸಂ. ದಾಹ ]

**ಡಾಹರ** 'ಡಾವರ' ನೋ.

**ಡಾಹಿಣಿ** 'ಡಾಕಿಣಿ' ನೋ.

**ಡಾಹಿಸು** (ಕ್ರಿ). ದಾಹಗೊಳ್ಳು ; ಅತಿಯಾದ ತಾಪದಿಂದ ಕೊಡಿರು ; ಉತ್ಕಟವಾಗಿ ಕುದಿ : ಮೋಹ ಮದ ಸಮೂಹದಿಂದ ಡಾ [ಪಾಠಾಂ. ದಾ]ಹಿಸುತ್ತ ಮಿರ್ದನಯ್ಯ ದೇಹದಿಚ್ಚೆ ಹೆಚ್ಚಿ ಮಚ್ಚರಕ್ಕೆ ವೇಳೆ ಯಾದನಯ್ಯ (ಹಂಪರ. ಹ. ೫೦೦-೨೦). [ ಡಾಹ + - ಇಸು$_3$ ]

**ಡಾಳ್$_1$, ಡವಳ$_1$, ಡಾಲ್ಯು$_1$, ಢವಳ, ಢಾಲು, ಢಾಳ್$_1$, ಢಾಳು** (ನಾ). ೧. ಹೊಳಪು ; ಪ್ರಭೆ ; ಕಾಂತಿ : "ತೊಳಗು, ಬೆಳಗು . . . ಡಾಳಂ, ಪೊಗರ್, ತೊಳಪಂ, ಮಸೆ– ಈ ೧೪ ಕಾಂತಿ " (ಕಶಸಾ. ೦೧-೨೦೨) : "ಡಾಳ ಹಬೆ ಪೊಗರೆಂದೆನೆ ಕಳೆ ಪೊಳಪು . . . ಕಾಂತಿಯೆನಿಕ್ಕುಂ" (ಕವಿಕಂ. ೦೦೦) ; ವಮರ್ಪೊಳೆದುವಾಕೆಯ ಡಾಳಮನಾಂತ ದಿಟ್ಟಿಗಳ್ (ಕಬ್ಬಿಗಕಾ. ೩೩೦); ಕನಸಿನ ಸಿರಿ ಕಾಮುರ್ಗಿಲೊಡ್ಡಿನ ಚಿತ್ರಂ ಸತಿಯರೊಲ್ಮೆ ಮಿಂಚಿನ ಡಾಳಂ ಜನ ಪತಿಯ ಕೂರ್ಮೆ ಯೆನಲಾತನೊಳಾಯ್ತಾ ಜನ ಸೌಖ್ಯಂ (ದಶಕು. ೫-೫೪) ; ಮಿಸುನಿಯೋಲೆಯ ಡಾ[ಪಾಠಾಂ. ಢಾ]ಳ ಕದಪಿನೊಳೆಸೆಯೆ (ನಳಚ. ೩-೭); ವ್ಯಾಲೋಲ ಖಡ್ಗಗಳ ಡಾಳದಿಂ ಮೇಳದಿಂ . . . ಪಡೆ ಪಡೆಭಿನಿಂ ನಡೆದುದು (ಚಬಪು. ೪೭-೦೦). ೨. ಅಂದ ; ಚಂದ ; ಸೊಬಗು : "ಡಾಳಮೆನೆ ಲಾವಣ್ಯಂ" (ಭಾರನಿ. ೩೫) ; ಡಾಳದ ಕಣ್ಣ ನೀರ್ವನಿಗಳುಂ ಪೊಸಮುತ್ತು ಗಳುಂ ನಭೋಂತದೊಳ್ ಸಾಲಿಡಲ್ (ದಶಕು. ೧೨-೦೮೩) ; ತೋರಮೊಲೆ ಗಳ ಡಾಳದಲಿ ಮಣಿಹಾರ ಮೆಱೆಯಲು (ಜೀವಂಚ. ೮-೯); ಥಳಥಳಿಸುವೆಳ ವಿಮಾನ ಡಾಳವ ಗೆಲುವ ಕಂಗಳ (ಅಕ್ರೂಚ. ೮-೨೪). ೩. ರೀತಿ ; ಕ್ರಮ ; ಪದ್ಧತಿ ; ತರಹ : ಕಾಲದೇಶಾಗಮದ ನಿಗಮದ ಡಾಳವಱಿದೈಹಿಕಪರತ್ರ ವಿಚಾರಿಸದೆ ನಡೆ ಕಂದ (ಕುವ್ಯಾಸ. ೦೫-೬೨). ೪. ಕುಂದು ; ಹಾನಿ ; ಭಂಗ : ಅಜ್ಜಮುತ್ತರ ತೆಐದಿ ನಡತೆಗಳೆಜ್ಜವಿರದೊಪ್ಪುದೊಲು ನಡೆತರು ತೆಜ್ಜ ಸಾಸಿರ ಬಿದ್ದು ಡಾಳಗಳಾದವವಕೀಗ (ಬಿಜಾಪು. ೭೭-೦೭). ೫. ಉಜ್ಜಿ ಹೊಳಪುಗೊಳಿಸುವುದು. 'ಡಾಳವಿಡಿ' ಪರಾ. ೬. ತೋರಿಕೆ ; ಥಳುಕು ; ಠಕ್ಕು. 'ಡಾಳೆ' ಪರಾ. ೭. ಥಳುಕಿನವನು ; ಡಾಂಭಿಕ ; ಮೋಸಗಾರ; ವಂಚಕ: ಕುಡದೆ ಕಾಡುವವಂ ರಸಬೋನವೆತ್ತು ಮಾಕಾಳಿಗೆ ಡಾ[ಪಾಠಾಂ. ಕಾ, ಗಾ]ಳನಂ ನೆಗವು ಟಕ್ಕಿಪನಂ ತುಬ್ (ಲೀಲಾವ. ೨-೦೦೭) ; ಡಾಳಂಗವ್ವಯಿಸಿದುದು ಬಿಡಾಳಕ್ಕಂ ಪಾಲ ಕಾಪನಿತ್ತವೋಲಾಯ್ತೆಂದೀ ಲೊ ೯ ಕ ಮು ಲಿ ಯೆ ನೀತಿನುತಾಲೋಕನರಹಿತನಹಿತಚರಿತದೆ ನೆಗಳ್ದಂ (ಪಾರ್ಶ್ವಪು. ೩-೧೦೨). ಡವಳ$_1$ : ೭. ಢಾಳರನು ಡ[ಪಾಠಾಂ. ಢ]ವಳರನು ಠಕ್ಕಿನ ಠೌಳಿಕಾಱರನು (ಕುವ್ಯಾಗ. ೫-೦೦). ಡಾಲ್ಯು$_1$: ೧ 'ಡಾಲುಹೊಡೆ' ಪರಾ. ಢವಳ: ಮೇಲಿನ 'ಕುವ್ಯಾಗ. ೫-೧೧'ರ ಪ್ರಯೋಗದ ಪಾಠಾಂತರವನ್ನು ನೋಡಿ. ಢಾಲ್ಯು$_1$: ೮. [ಸಂಗೀತ] ದಾಟುಸ್ವರಗಳ ಪ್ರಯೋಗ : ಢಾಲು – ಸಪಾ, ಸಮಾ, ಸಗಾ, ಸರೀ ಎಂದು ಅನು ಕ್ರಮಿಸುವ ದಾಟುಸ್ವರಗಳ ಪ್ರಯೋಗ (ಸಂಗೀಹಂ. ೨೮). ಢಾಳ್$_1$: ೧. ಸರ್ವಾಂಗದೊಳ್ ಢಾಳಂ ನೆಟ್ಟನೆ ಪುಟ್ಟೆ ನಾಟ್ಯರಸದೊಳ್ ತೇಂಕಾಡು ವಂತಾಡಿದರ್ (ಪಾರ್ಶ್ವಪು. ೧೪-೦೫೯) ; ಎಳೆಯ ಮುತ್ತಿನ ಢಾಳವನು ಮುಕ್ಕುಳಿಸಿದಂಗಚ್ಚವಿಯ (ಕುವ್ಯಾಅ. ೭-೭೩) ; ಭ್ರೂಲತೆಯ ಲಾವಣ್ಯ ನಿಧಿಯ ವಿಶಾಲ ಭಾಳದ ಢಾಳದಲಿ (ನಿಭಾಗ. ೨-೦-೨೭); ಸುಲಿಪಲ್ಲ ಢಾಳದಿ ಕರ್ಣಕುಂಡಲದಿ (ಶಂಕರದಾ. ೫-೭೭); ಚೆಲ್ವೆ ಕಂಗಳ ಢಾಳ (ಅಂಬಿಕಾ. ೩೪-೭೦). ೭. ಢಾಳರನು ಡ[ಪಾಠಾಂ. ಢ]ವಳರನು ಠಕ್ಕಿನ ಠೌಳಿಕಾಱರನು (ಕುವ್ಯಾಗ. ೫-೦೦). ೯. ಅಶುಚಿವಂತ ; ಶೀಲಗೇಡಿ (?) : ಖೂಳರಿಲ್ಲ ಜಾಣರುಂಟು ಗೆಲ್ವರಿಲ್ಲ ಒಲ್ವರುಂಟು ಢಾಳರಿಲ್ಲ ಶುಚಿಗಳುಂಟು ಹುಸಿವರಿಲ್ಲ ಸತ್ಯರುಂಟು (ಮಾಕರ. ಹ. ೨೨೦-೨೩). ೧೦. [ನಾಟ್ಯ] ಒಂದು ಬಗೆಯ ನೃತ್ಯ: ರೂಪು ರೇಖೆ ಧಾವಣೆ ತೂಕವಣೆಯಂಕೆ ಝುಂಕೆ ಢಾಳ ಡಿಳ್ಳಾಯ ಚಂಡಣೆ ಚಳಬಳಿಕೆ ಉಲ್ಲಾಸದಚ್ಚರಿವಡೆಯ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೧೬-೭೭ ವ). ಢಾಳು : ೧. ನೂರು ಬಣ್ಣದ ಹೊಳವನೊಳಗಾಂತು ಇದರ ತೆರವಿಂಥದೆನೆ ಮತ್ತೊಂದು ಢಾಳಿನಿಂದ ಕಂಗಳನು ಕೋರೈಸು ವಚ್ಚರಿಯ ಹೀರದಂತಿವನ ಬಗೆಗೆನ್ನ ಬಗೆಯಚ್ಚರಿಪುದು (ಗೋಕುನ್ಯಿ. ೨೦-೨) : ಚಂದಕೆ ಮರುಳಾಗೆ ಕಣ್ಣುಮುಚ್ಚಿಸಿತವ್ವ ನಿನ್ನ ಪರಿವಾರದ ಸುರರ ಢಾಳು (ಹಂಸದ. ೦೭೫-೦೭).

ಡಾಳಾಗು, ಢಾಳವಾಗು, ಢಾಳಾಗು = ೧. ಉಜ್ವಲವಾಗು ; ಪ್ರಕಾಶ ಮಾನವಾಗು; ಚೆನ್ನಾಗಿ ಪ್ರಕಾಶಿಸು; ಪ್ರಜ್ವಲಿಸು: ದೀವಿಗೆಯು ಡಾಳಾಗಿ ಉರಿಯುತ್ತಿರಲಿಕ್ಕೆ ಬೇಕು (ಮುಂಬಯಿ. ೫-೦೭೨) ; ಬರಬರುತ್ತ ಆ ಬೆಳಕು ಢಾಳವಾಗಿ ಖಿಂಡಿಯಿಂದ ಹೊರಚೆಲ್ಲಿ (ಗೀಜುಗ. ೦೦) ; ಅವನ ಕಣ್ಣಲ್ಲಿ ಸತ್ಯದ, ಬಂಧುತ್ವದ ದಿವ್ಯಜ್ಯೋತಿಯೊಂದು 'ಢಾಳಾಗಿ' ಉರಿಯುತ್ತಿತ್ತು (ಬರಹಾ. ೯೪); ವಿಶ್ವವಿದ್ಯಾನಿಲಯದ ಕೋಣೆಯಲ್ಲಿ ಇನ್ನೂ ದೀಪ ಢಾಳಾಗಿ ಉರಿಯುತ್ತಿದ್ದುದು . . . ಕಾಣುತ್ತಿತ್ತು (ದೀಪಹ. II, ೦೦೬). ೨. ಎದ್ದು ಕಾಣು; ಸುಸ್ಪಷ್ಟವಾಗು : ಭವ್ಯಮಂದಿರಗಳು ಮದರಾಸಿನಲ್ಲಿ ಬೀಚಿನ ಹತ್ತಿರವೇ ಢಾಳವಾಗಿ ಕಾಣುತ್ತಿವೆ (ಹೊಅರ. ೦೬) ; ಕೊರಿಗೆಗೆ ವಿಭೂತಿ ಯನ್ನು ಬಳಿದು ಢಾಳವಾಗಿ ಕುಂಕುಮ ಲೇಪಿಸಿದರು (ಮತ್ಮಮು. ೩೫೭).

[ ದೇ.೫ ತೆಲು. ಡಾಲ./ಮರಾ. ಢಾಳ ]

**ಡಾಳ್$_2$** 'ಡಾಲ್ಯು$_2$' ನೋ.

**ಡಾಳ್$_3$** (ನಾ). (ಚಾಮರ ಮೊದಲಾದವನ್ನು) ಬೀಸುವಿಕೆ ; ಗಾಳಿ ಹಾಕುವಿಕೆ.

ಡಾಳಹಾಕು = ಬೀಸು ; ಇಕ್ಕು : ಡಾಳಹಾಕುವ ಚಾಮರದ ಪೊಡೆವ ಡೌಡೆಯ (ಹಮ್ಮಿರ. ೩-೩೩ ವ).

[ <ಪ್ರಾ. ಢಾಲ ]

**ಡಾಳಕ, ಧಾಳಕ** (ನಾ). ೧. ತೋರಿಕೆಯ ನಡೆನುಡಿಯುಳ್ಳವನು ; ಡಾಂಭಿಕ ; ಮೋಸಗಾರ : ಬೋಳೆಯನೆಂದು ನಂಬಬೇಡ ಡಾ[ಪಾಠಾಂ. ಧಾ]ಳಕನವನು ಜಗದ ಬಿನ್ನಾಣಿ (ಮಹಾದೇ. ಬ. ೧೦೯-೨೪೭) : ನೆಟ್ಟನೆ ಡಾಳಕನಂ ತಗುಳ್ದು ಕೂರ್ತಂಗಜಕೇಳಿಯೊಳ್ ತೊಡರ್ದು (ಪುನ್ನವಿ. ೭-೫) ; ಮಾಲೆಯನೊಬ್ಬಗಿಕ್ಕಿದಳೆಂದರಾ ಹೆಣ್ಣ ಮೇಲಾಸೆ ನೃಪಗಾಗದೆಂದು ಡಾಳಕನಾ ಮಂತ್ರಿ ಮತ್ತೊಂದು ತಂತ್ರದಿ ಚಾಳಿಸಿ ಮಡಿದನೇನೆಂಬೆ (ಭರತ. ೫೭-೫). ೨. ಕಪಟ ; ವಂಚನೆ ; ಮೋಸ. 'ಡಾಳಕವಂತ' ಪರಾ. **ಧಾಳಕ :** ೧. ಧಾಳಕರಿಗರ್ಥಾರ್ಥಿಗಳಿಗೆ ಪೇಳದಿರನುಭವಾಮೃತವ (ಅಮೃತ. ೧೧-೨). ೨. ನಿರುದಯವು ನಿಷ್ಠುರವು ದುರುಳತ್ವ ಧಾಳಕವು (ಸುಸಾರ. ೧೨-೨). [ ಡಾಳ್$_1$ + – ಕ$_2$ ]

**ಡಾಳಕತನ, ಧಾಳಕತನ** (ನಾ). ಥಳುಕು ; ವಂಚನೆ ; ಮೋಸ : ಕಾಳಗ ಕಿದಿರಾಗಿ ನಿಲ್ಲಲಾಱದೆ ಚಿಣ್ಣ ಡಾಳಕತನದೊಳೋಡುವನು (ಮೋಹತ. ೧೨-೫೧). **ಧಾಳಕತನ :** ನಾವು ನಮ್ಮಯ ಸೇವಕಾಂಗದ ಭಾವದಿಂದಿರ ಬೇಕೆನುತ ನಾನಾ ವಿಧದ ಧಾಳಕತನಂಗಳ ನುಡಿದನಲ್ಲಮನು (ಪ್ರಭುಲಿ. ೫-೩೭) ; ಕರ್ಕಶದಿಂ ಕಠಿಣನೆ ಯಮರಾಟ್ ಜನನಾದಿಯ ಧಾಳಕತನದಿಂ ಧಾಳಕಿಯ ದಿಟ ಮಾಯೆ (ಯೋಗಾಂವಿ. ೨-೩೩) : ಠಕ್ಕು ಧಾಳಕತನ ಬಱುಬೋಸರಣೆ ಬೇಳಕ್ಕೆ ವೈಶಿಕಗಳೆಂಬಿವಕೆ ಸಿಕ್ಕುವರೇ ಕೋವಿದರು (ಕುರಾಸಾಂ. ೨೮-೭೦). [ಡಾಳಕ + – ತನ ]

**ಡಾಳಕವಂತ** (ನಾ). ತೋರಿಕೆಯ ನಡೆನುಡಿಯುಳ್ಳವನು ; ಮೋಸಗಾರ ; ವಂಚಕ : ನೇಣು ಕೊಂದಿತ್ತೆಂದಾ ದಾಯಗಾರಿಕೆಯಲ್ಲಿ ಹೋಹ ದರ್ಶನ ಡಾಳಕವಂತಂಗೆ (ಸರ್ವಪ. ೧೩೧-೭೭೦). [ ಡಾಳಕ + – ವಂತ ]

**ಡಾಳಕಿ, ಧಾಳಕಿ** (ನಾ). ಗಯ್ಯಾಳಿ ; ಮೋಸಗಾತಿ : ಸಗ್ಗಂಬಡೆದು ಬಂದ ಪ್ರತ್ಯಕ್ಷವಿಲ್ಲೆನಬಹುದೆ ಈ ಡಾಳಕಿ (ಸಮ್ಮಕಾ. ೪-೬೫). **ಧಾಳಕಿ :** ಕರ್ಕಶದಿಂ ಕಠಿಣನೆ ಯಮರಾಟ್ ಜನನಾದಿಯ ಧಾಳಕತನದಿಂಧಾಳಕಿಯ ದಿಟ ಮಾಯೆ (ಯೋಗಾಂವಿ. ೨-೩೩). [ ಡಾಳಕ + – ಇ$_2$ ]

**ಡಾಳಯಿಸು$_1$,** ಡಾಳಯ್ಸು, ಡಾಳವಿಸು, ಡಾಳಿಸು$_1$, ಡಾಳ್ಯಸು$_1$, ಧಾಳವಿಸು, ಧಾಳಿಸು$_1$, ಧಾಳ್ಯಸು (ಕ್ರಿ). ೧. ಮಿಂಚು ; ಹೊಳೆ ; ಮಿನುಗು ; ಥಳಥಳಿಸು. **ಡಾಳಯ್ಸು :** ೧. ಕದಪುಗಳು ನಿರ್ಮಳವೊದಗಿ ಡಾಳಯ್ಸು[ಪಾಠಾಂ. ಧಾಳ್ಯಸು]ತಿಪ್ಪವು ಲೋಲಲೋಚನೆಯ (ಬಸಪು. ೪-೨೩). **ಡಾಳವಿಸು :** ೧. ಡಾ[ಪಾಠಾಂ. ಧಾ]ಳವಿಪ ಸುಲಿಪಲ್ ಮುಗುಳ್ನಗೆ ಮೋಳವಿಸುವ ಮುಖಪ್ರಸನ್ನತೆ (ಬಸಪು. ೩-೨೭). **ಡಾಳಿಸು$_1$ :** ೧. ನೀಲದ ಸರ ಮಾಣಿಕದ ಕುಚ್ಚು ವಜ್ರದ ಮೇಲುಗೊಂಚಲು ವೈಡೂರ್ಯ ಡಾಳಿಸುತಿಹ ಬಲು ಪಸರದಂಗಡಿಗಳು ಸಾಲುಗೊಂಡೆಸೆದುವು (ಕಂನವಿ. ೬-೬೮) ; ಲೀಲೆಯಿಂ ನರಸಿಂಹನಂತ್ಯೆದಿದ ರತ್ನ ಡಾಳಿಪೋಲಗದ ಚಾವಡಿಗೆ (ಕಂನವಿ. ೩೧-೧೨೫) ; ಭಾಸುರ ವೇದಮಾತೆ ಗಾಯತ್ರಿ ಡಾಳಿಸೆ ಶಾಳ್ದ (ಕುಮಾಪು. ೧-೭೦). **ಡಾಳ್ಯಸು$_1$ :** ೧. ಕದಪುಗಳು . . . ಡಾಳ್ಯಸು[ಪಾಠಾಂ. ಡಾಳಯ್ಸು, ಧಾಳ್ಯಸು]ತಿಪ್ಪವು ಲೋಲಲೋಚನೆಯ (ಬಸಪು. ೪-೨೩); ಎಳಲಿಟ್ಟು ಡಾಳ್ಯಸುತಿಹ ಹಾರವೆಲ್ಲವುಂ ಸಂತೋಷದಿಂ ಪರಿದು ಪಸರಿಸಲು (ವೀಕ್ಕಪು. ೩-೧೫-೭). **ಧಾಳವಿಸು:** ೧. ಧಾ[ಪಾಠಾಂ. ಡಾ]ಳವಿಪ ಸುಲಿಪಲ್ ಮುಗುಳ್ನಗೆ ಮೋಳವಿಸುವ ಮುಖ ಪ್ರಸನ್ನತೆ (ಬಸಪು. ೩-೨೭). **ಡಾಳಿಸು$_1$:** ೧. ಶಾಲಿಯ ತೆರೆಯ ತಟ್ಟುಚ್ಚಿ ದೀಪದ ಕಾಂತಿ ಧಾಳಿಸುವಂತೆ ಲೋಕದೊಳು ಆ ಲಲಿತಾಂಗನ ತನುಕಾಂತಿ ಪೊದೆದದುಕೂಲದ ಹೊಱಗೆ ರಂಜಿಸಿತು (ಭರತ. ೧-೪೫) ; ಮೇಲಿಪ್ಪ ಚಿನ್ನದ ಕಳಶದಿಂ ಗೋಪುರ ಧಾಳಿಸಿ ತುಡು ಕಿತಂಬರವ (ಕಂನವಿ. ೭-೮೪). ೨. ಪ್ರಕಾಶಗೊಳಿಸು; ಹೊಳಪುಮಾಡು; ಬೆಳಗಿಸು : ಬಾಲಶಶಾಂಕನಂದದ ಪುಲಿಯುಗುರನು ಧಾಳಿಪ ಬಂದಿ ರಂಜಿಸಿತು (ಅಂಜನ. ೪-೪೪). ೩. ಉಜ್ಜಿ ಹರಿತವಾಗಿಸು ; ಮಸೆ ; ಸಾಣೆಹಿಡಿ : ಕುಂತದ ಧಾರೆಗಳ ಧಾಳಿಸುವ ನೆಟ್ಟ ಸೊಪ್ಪಾದ ಹಿಳುಕಿನ ಗಱಿಯ ಕೀಲಿಸುವ . . . ವೀರಭಟರೊಪ್ಪಿದರು (ಕುಮಾ.ಭೀ. ೫-೩೮).
**ಧಾ ಳ್ಯ ಸು :** ೧. ನೀಲಗಿರಿಯೊಳಗಾಡುವ ಶಿಶುಗಳೆರಡಾಲಿಂಗಿಸಲು ಭೂಮಿಯ ಧಾಳ್ಯಸುತಡರ್ದುರಿಗಳಿಂ ನಕ್ಷತ್ರಮಾಲೆ ಪಗಲೊಳೆ ತೋರ್ಪುದು (ಕೃಕವ. ೮೯-೩). [ ಡಾಳ್$_1$ + – ಇಸು$_3$ ]

**ಡಾಳಯಿಸು$_2$** 'ಡಾಳಿಸು$_2$' ನೋ.

**ಡಾಳಯ್ಸು** 'ಡಾಳಯಿಸು$_1$' ನೋ.

**ಡಾಳವಿಡಿ** (ಕ್ರಿ). ಉಜ್ಜಿ ಬೆಳಗಿಸು ; ಮೆರುಗುಕೊಡು : ಬಗೆಗೊಳಿಪ ಡಾಳವಿಡಿದಿರ್ದ ಕಟ್ಟಾಣಿಮುತ್ತಿನ ಕಂಠಮಾಲೆ (ಸೌಂದಪು. ೪-೨೨).
[ ಡಾಳ$_1$ + ಪಿಡಿ$_1$ ]

**ಡಾಳವಿಸು** 'ಡಾಳಯಿಸು$_1$' ನೋ.

**ಡಾಳಾಹಿ** (ಕ್ರಿ). ಹೊಳೆಯುವ ಮೈಯನ್ನುಳ್ಳ ಹಾವು; ಕೃಷ್ಣಸರ್ಪ (?) : ಮೊಲೆಪುತ್ತುಗಳ ಬಳಿಯೊಳು ಡಾಳಾಹಿ ಕಣ್ಗೊಳಿಸದೆಯವು ನಿಕ್ಷೇಪ ನೆಲೆಯೆಂದು ವಿಟರು ಸೆಳ್ಳುಗುರ್ಗಳಿಂ ತೊ[ತೋ]ಡುವರೆಳಸಿ ಗಣಿಕೆಯರ ಕುಚವ (ಗೊಮ್ಮಚ. ೨-೯೩).
[ P ಇದು 'ಕಾಳಾಹಿ'ಯ ಅಪಲಿಖಿತವಿರಬಹುದು ]

**ಡಾಳಿ$_1$** (ನಾ). = ಡಾಳೆ : ಪ್ರಾಣೇಶನಂ ನೆರೆದಂತೆ ಕಳುಪಿ ತತ್ ಕಾಲರತಿ ಚಿಹ್ನಮಂ ಮತ್ತೊರ್ವನೊಳ್ ಪುಸಿದು ಡಾಳಿಯೊಲಿದಿಂತಿರ್ದಳು (ಜಬಪು. ೧೧-೭೪). [ ಡಾಳ್$_1$ + – ಇ$_2$ ]

**ಡಾಳಿ$_2$** 'ದಾಟಿ' ನೋ.

**ಡಾಳಿಂಬ** 'ದಾಳಿಂಬ' ನೋ.

**ಡಾಳಿಂಬೆ** 'ದಾಳಿಂಬ' ನೋ.

**ಡಾಳಿಂಬ್ರ** 'ದಾಳಿಂಬ' ನೋ.

**ಡಾಳಿಮ** 'ದಾಳಿಂಬ' ನೋ.

**ಡಾಳಿಸು$_1$** 'ಡಾಳಯಿಸು$_1$' ನೋ.

**ಡಾಳಿಸು$_2$,** ಡಾಳಯಿಸು$_2$, ಡಾಳ್ಯಸು$_2$, ಧಾಳಯಿಸು, ಧಾಳಿಸು$_2$ (ಕ್ರಿ). ೧. (ಚಾಮರ, ಬೀಸಣಿಗೆ ಮುಂತಾದುವನ್ನು) ಬೀಸು ; ಗಾಳಿ ಹಾಕು : ಅಂಗಜನೃಪಂಗೆ ಬನವೆಂಬಂಗನೆ ಡಾಳಿಸುವ ಚಾರುಚಾಮರಮ ದೆನಲ್ . . . ಎಸೆದುದಲ್ಲಿ ಪೂಗಮಹೀಜಂ (ಉದ್ಭಟ. ೯-೧೬) ; ಚಕಚಕಿತಮಾಗಿ ಡಾಳಿಪ ಚಾಮರಂಗಳಿಂ (ಪದ್ಮಕಾ. ೩-೫೧) ; ಗಾಯತ್ರಿ ಸಾವಿತ್ರಿಯರು ರಂಜಿಸಿದರಾ ಮಹಾದೇವನೆಡಬಲದಲ್ಲಿ ಡಾಳಿಸುತೆ ಚಾಮರವನೆಸಕದಿಂದ (ಸೌಂದಪು. ೧-೩೫) : ನೀಲಗಿರಿಯ ಮೇಲೆ ಮುಸುಕಿದೆ ಸಿತಮೇಘಜಾಲವೆಂದೆನೆ ಡಾಳಿಸುವ ಮೇಲುಚವರಗಳು ಮೆಱೆದುವು (ಕುರಾಸಾಂ. ೪೨-೪೪) ; ಬೆರಳ ಮುದ್ರಿಕೆಯ ಹೊಳಹು ದೋಱುತ ಶುಭ್ರಚಮರವ ಡಾಳಿಸುತೆಳೆವೆಂಗಳೆಸೆದರರ್ತಿಯಲಿ (ಕಂನವಿ. ೮-೨೪). ೨. ಸುತ್ತಲೂ ಬೀರು ; ಹರಡು ; ವ್ಯಾಪಿಸು : ಗಾಳಿಯಲಿ ಬೆಳಕು ಬಣ್ಣಗಳಲೆಯನೊಡಸಿ ಕಣ್ಕಟ್ಟು ಮೋಹನವ ಡಾಳಿಸುವ ನಾಡು (ದ್ರಾಕ್ಷಿದಾ. ೫-೫). ೩. (ಪಗಡೆಯ ದಾಳವನ್ನು) ಬೀಸಿ ಹಾಕು ; ಎಸೆ ; ಉರುಳಿಸು : ಕಾಲೋಚಿತ ಕಿತವರನನ್ಯತಾಲಯರಂ ಪೊರೆಗೆ ಕರೆದು ಪಣಬಂಧವನೊಲ್ದಾಳೋಚಿಸಿ ಡಾಳಿಸಿದಂ ಸೋಲಕ್ಕಿರ್ದಕ್ಷಯುಗಳವಂ ನಳಭೂಪಂ (ನಳಚಂ. ೫೦೫): **ಡಾಳಯಿಸು$_2$ :** ೧. ಇಕ್ಕೆಲದಾಲವಟ್ಟಂ ಚವರ ಕುಂಚಂ ಡಾ[ಪಾಠಾಂ. ಧಾ]ಳಯಿಸೆ ಗದ್ದುಗೆಯ ಮೇಲಿಹ ಬಿಜ್ಜಳನ ಕಂಡು (ಬಸಪು. ೬೧-೩೧) : ಡಾಳಯಿಸುತಿಹ ಕನಕ ಚಾಮರದೋಳಿ (ಕಂಳದಾ. ೯-೨೨). **ಡಾಳ್ಯಸು$_2$ :** ೧. ಬಾಲೆಯರು ಬಣ್ಣಿಸಿ ಚಮರವ ಡಾಳ್ಯಸುತ ಬಂದರು (ಶ್ರೀಪಾಲ. ೧೩-೧೮೭). **ಧಾಳಯಿಸು :** ೧. ಚವರ ಕುಂಚಂ ಧಾ[ಪಾಠಾಂ. ಡಾ]ಳಯಿಸೆ (ಬಸಪು. ೩೧-೩೧). **ಧಾಳಿಸು$_2$ :** ೧. ಧಾಳಿ

ಸುವ ಚವುರಿ ಸೀಗುರಿಗಳೊಗ್ಗಿನ ಕುಱುಹುವಿಡಿದು ನಡೆದು (ಚಂದ್ರಕಾ. ೮-೭೦) ; ಲೋಚನಪುತ್ರಿಕೆಗಳು ಢಾಳಿಸುತಿರ್ಪಾ ಚಮರಗಳೆಂಬಂತೆ ಖೇಚರ ಭೂಚರಸತಿಯರ ಕಣ್ಣ ಮರೀಚಿಯೊಪ್ಪಿದುವೀಶ್ವರಗೆ (ಶ್ರೀಪಾಲ. ೧೪-೯೦) : ನಳಿನಮುಖಿಯರು ಚವರಗಳನೆಡಬಲದೊಳಗೆ ಢಾಳಿಸುತಿಯ್ಯರಲು (ಕುರಾಸಾಂ. ೧೧-೭೦) ; ಎತ್ತುವಾರತಿ ಸೇಸೆ ಇಡುವ ನಿವಾಳಿ ಢಾಳಿಸುವ ಚಾಮರಂಗಳಿಂ (ಭರತೇ. ೩-೮೦) ; ಚಂದ್ರಾದಿತ್ಯರುಭಯಚಾಮರಗಳಂ ಪಿಡಿದು ಢಾಳಿಸೆ (ಚಂಪೂ. ೨-೩೦). ೪. ಅಲುಬು ; ತೊಳೆ ; ಜಾಲಾಡಿ ಹೊಳೆಯುವಂತೆ ಮಾಡು : ಅಱಿಪೆಂಬ ಮೂಸೆಯೊಳಗಿಟ್ಟು ಪರಮ ಜ್ಞಾನದಿಂ ಕರಗಿಸಿ ಸುಮನವೆಂಬ ನಿರ್ಮಲೋದಕದಲ್ಲಿ ಢಾಳಿಸಿದ ಶುದ್ಧ ಸುವರ್ಣ (ಅವವ. ೦೩೮). [ ಡಾಳ್$_2$ + – ಇಸು$_2$ ]

**ಢಾಳು** 'ಡಾಲ್ಯು$_2$' ನೋ.

**ಢಾಳೆ, ಢಾಳೆ** (ನಾ). ಮೋಸಗಾರ್ತಿ ; ವಂಚಕಿ ; ಥಳುಕುಗಾತಿ ; ಗಯ್ಯಾಳಿ : ಮೆಯ್ಯನೆ ಮಾಱುವಾಕೆ ಭವವಂ ಪೇಟ್ ಮಾಱಳೇ ಸಂತೆಯೊಳ್ ಧನಕಾನಾಱಿನಿವಳ್ಗೆ ದೈವವಱಿಗಿನ್ನೀ ಸೂಳೆಯಂ ಡಾಳೆಯಂ (ಲೀಲಾವ. ೨-೦೦೩) ; ಚಂಡಪ್ರದ್ಯೋತನೆಂಬರಸಂ ಆಕೆಯನೆಱಿದುಕೊಳ್ವೆನೆಂದು . . . ತನ್ನ ಪೆರ್ಗಡೆಗಳಂ ಡಾ[ಪಾಠಾಂ. ತಾ] ಳೆಯರಪ್ಪ ಸಬ್ಬವದ ಪೆಂಡಿರುಮಂ ಪ್ರಭಾವತಿಯಲ್ಲಿಗಟ್ಟಿ (ಜೀವಸಂ. ೨೨೭-೩೩ ವ) ; ಆಟ ನೇಹವಂ ಮೆಱೆದು ಹೊಳ್ಳಿಸಿ ಬಿಟ್ಟಪೆನೆಂಬ ಡಾಳೆಯಂ ಸುಡುವುದು ಸುಟ್ಟು ತೂಱುವುದು ತೂಱಿದ ಬೂದಿಯ ಹಿಟ್ಟುಗುಟ್ಟಿ ಬೊಟ್ಟಿಡುವುದು (ಅನಂಪು. ೮-೫೬) ; ಕೂರಾನೆ . . . ದಾಂಟುವುದಿಡುಗುಡ್ಡಗಳ ಗಿರಿಗಳವಿಕ್ಕಿ ದಾಂಟುವ ಡಾಳೆಯಂದದೊಳು (ಭರತೇ. ೩೭-೭೩). ಢಾಳೆ: ಇಳಿಕೆಯ್ದುದು ಹೊಳ್ಳಿಸಿ ತಿಂಬ ಢಾಳೆಯಂ (ಬಾಧಪು. ೧೫-೦೦೭) ; ಪುಸಿಯಲಿಪಂ ನಿವಿರ್ಚಿ ತಮಗಿಲ್ಲದ ಬೇಂಟಮನುಂಟುಮಾಡಿ . . . ಮುಟ್ಟದ ಮುನ್ನಮೆನ್ನರಂ ದಸೆವಲಿಗೆಯ್ದಾರೇನೋ ಕಡು ಢಾಳೆಯರೊಂದಿರುಳಲ್ಲಿ ಸೂಳೆಯರ್ (ಧರ್ಮಾಮ. ೨-೦೦೩) ; ಮುತ್ತಿನ ಹಾರವ ಕಲ್ಲರೆಂದೆಮಗಾವತ್ತನೆನಿಸಿದ ಢಾಳೆಯನು ಅತ್ತಿತ್ತ ಹೋಗದಂದದಿ ಕಾದುಕೊಂಡಿರಿ (ಪ್ರಭುಲಿ. ೧-೦೭೮). [ ಡಾಳ್$_1$ + – ಎ$_2$ ]

**ಡಾಳೆವೆಂಡತಿ** (ನಾ). ಧೂರ್ತಳಾದ ಹೆಣ್ಣು ; ಹಾದರಗಿತ್ತಿ : ತೊಡಿಗೆ ಸುಸರ ಹಾರದ ಮುತ್ತಿನಂತೆ ಸರದೊಳಳವಡುವ ಡಾಳೆವೆಂಡತಿಯಂತೆ ಕೈಸನ್ನೆಯಱಿವ ಜಾತಿ ಜಾಯಿಲಂಗಳಂ (ಅನಂಪು. ೨-೩೦ ವ). [ ಡಾಳೆ + ವೆಂಡತಿ (<ಪೆಂಡತಿ) ]

**ಡಾಳೈಸು$_1$** 'ಡಾಳಯಿಸು$_1$' ನೋ.

**ಡಾಳೈಸು$_2$** 'ಡಾಳಿಸು$_2$' ನೋ.

**ಡಿಂಕಿಸು** (ಕ್ರಿ). (?) : ಉತ್ತರಗುಣಂಗಳಿವನಲ್ಪಮನಾಂ ಡಿಂಕಿಸದೆ ನೆನವವೊಲ್ ನನಾಚಾರಂಗಳಂ (ರತ್ನಕ. ೨-೦೩) . [ ? ]

**ಡಿಂಗರ** (ನಾ). ೧. ಸೇವಕ ; ಅಡಿಯಾಳು ; ಕಿಂಕರ ; ಭಕ್ತ : ಪಾಪರ್ವರೆಂದೊಡೆ ಪಾಪಂ ಬಿಡೆ ಪೋಪಂತದು ಪೇಟಾ ತುಡುಗುಣಿಯೋ ಶಿವನ ಗೊರವನೋ ಡಿಂಗರನೋ [ಪಾಠಾಂ. ಪೇಟಿವಿಂದಂ] (ಸಮುಪ. ೧೧-೮೫) ; ಹರಶರಣೆಂಬಂ ಭಕ್ತರ ಕರುಣವೆ ಶರಣೆಂಬ ಶಿವನ ಡಿಂಗರನೆಂಬಂ ಹಿರಿಯಣ್ಣ ಸಾವಿದೇವನ ಪರಮಾನುಜ್ಞೆಯನೆ ಶಾಲ್ದಿದಂ ಮುದ್ದರಸಂ (ಸೌಇಶಾ. IX-1, ೨೯೭-೩೦ ; 1177) ; ಕುಲವುಳ್ಳ ನರಂ ಪೆಱರೆಂಜಲನುಂಡಂದೆಲ್ಲಮವನ ಡಿಂಗರನೆಂಬರು ಸಲೆಯಡಗಂ ನಾಯೆಂಜಲ ನಲಿದಲಸದೆ ತಿಂದಂದು ನಾಯ ಡಿಂಗರನಲ್ತೆ (ಪಶಾರ. ೫೯೮-೦೪). ೨. ವಂಚಕ ; ಮೋಸಗಾರ ; ಠಕ್ಕ. ೩. ನೀಚ ; ಅಲ್ಪಮನುಷ್ಯ ; ಕ್ಷುದ್ರ. ೪. ಬೊಜ್ಜು ದೇಹವುಳ್ಳವನಂ ; ದಪ್ಪವಾದ ಶರೀರವುಳ್ಳವನು ; ಸ್ಥೂಲಕಾಯ ; ತೊಣಪ. [ ಸಂ. ]

**ಡಿಂಗರಿಗ** (ನಾ). = ಡಿಂಗರ ೧ : ನಿಮ್ಮ ನಂಬಿದ ಶರಣರ ಡಿಂಗರಿಗ ನಾನಯ್ಯ (ಬಸವ. ೪೬೪) ; ಶಿವನ ಡಿಂಗರಿಗನಡಗಿರ್ದ ಗುಹೆಯಿದು ನೋಡ (ಜಡರ. ೦೩೩-೨೨) ; ಸಕಲಕ್ಕೆ ರಾಜಾಧಿರಾಜನಾ ತ್ರ್ಯಂಬಕಂ ತ್ರಿಪುರಾರಿಯಾತಂಗೆ ಡಿಂಗರಿಗರಂಬುಜಭವಾಚ್ಯುತ-ದ್ಯಖಿಲರು (ಪದ್ಮರಾ. ೦೦-೪೦) ; ಕೊಲುವ ಮನವೇ ಬಿಸುಡು ಚಕ್ರವನೆನ್ನ ಕಾಯದಲಿ ಅಳುಕ ಕೂದಲು ಹಱಿದುದಾದರೆ ಬಳಿಕ ನಾ ಡಿಂಗರಿಗನಲ್ಲ (ಕುವ್ಯಾಭೀ. ೬-೪೩) ; ಡಂಗುರವ ಸಾಱಿ ಹರಿಯ ಡಿಂಗರಿಗರೆಲ್ಲರು ಭೂಮಂಡಲಕೆ ಪಾಂಡುರಂಗವಿಟ್ಠಲ ಪರದೈವವೆಂದು (ಪುರಂದ. ೦-೫೩-೦) ; ಸಂಗೀತಲೋಲ ಶಿರಿ ವಿಜಯವಿಠಲರೇಯನ ಡಿಂಗರಿಗನಾಗದೆ ಸಕಲ ಸೌಖ್ಯ ಬಾರದು (ವಿದಾಸು. ೮೭-೦) ; ಇಲ್ಲದ್ದರಲ್ಲಿ ಬಾಯಿಹಾಕುವ ಊರ ಡಿಂಗರಿಗ ಅವ (ಸಂಕೀಸ. ೪೩) ; 'ಶನಿಯ' ಎಂಬ ಅರ್ಥವಾನುಷ ಕಿಂಕರನೂ ಕಿನ್ನರವರ್ಗಕ್ಕೆ ಸೇರಿದ ಛಟ್ಟ ಅತಿಮಾನುಷ ಡಿಂಗರಿಗನೂ ಇದ್ದರು (ಬಿಗಾಳಿ. ೭). [ ಡಿಂಗರ + – ಇಗ ]

**ಡಿಂಗಿ** (ನಾ). ದೋಣಿ ನಡೆಯಲು ಹಾಯಿಬಟ್ಟೆಯನ್ನು ಹಗ್ಗಗಳಿಂದ ಬಿಗಿಯಲು ಉಪಯೋಗಿಸುವ ಕೂವೆಮರ ; ಕೂಪಕ. 'ಡಿಂಗಿ ದೋಣಿ' ಪರಾ. [ ←ಪಾರ. ಡಿಂಗೀ ]

**ಡಿಂಗಿದೋಣಿ** (ನಾ). ಹಾಯಿ ಕಟ್ಟಿದ ದೋಣಿ; ಕೂವೆಮರವುಳ್ಳ ದೋಣಿ : ನದಿಯ ಮಧ್ಯ ಸರಿಯಾಗಿ ಒಂದು ಡಿಂಗಿದೋಣಿ ವೇಗ ಪ್ರವಾಹದಲ್ಲಿ ಓಡುತ್ತಿದೆ (ನಿಬಂಧ. II, ೨೦೭). [ ಡಿಂಗಿ + ದೋಣಿ$_2$ ]

**ಡಿಂಗು$_1$** (ನಾ). ಒಂದು ಕ್ಷುದ್ರ ದೇವತೆ: ಗಾಡಿಗ ಡಿಂಗು [ಪಾಠಾಂ. ಬು] ಗಂಗೆ ಚಿಕ್ಕ ಮುಟ್ಟಗೆ ಹಸುರಂಬಲಿ ಮುಟ್ಟಗೆ ಹುರಿಬುತ್ತಿಯ ಬೇಡಿ ಮನುಷ್ಯರ ಪಿಡಿದು ಪೀಡಿಸಿ ತಮ್ಮ ಬಸುರ್ಗೆ ಕಾಣದೆ ಕಾಡಾಡಿದ ಕೂಳಂಬಲಿಯನಾಯ್ದು ಕುಱುಕುವ ಹೇಸಿದೈವಂಗಳ ಬೇಡಿ ಬೇಡಿ ನಿರರ್ಥಕ ಕೆಡದೇಡ (ಬಸವ. ೫೫೩). [ ? ]

**ಡಿಂಗು$_2$** 'ಧಿಂಗು' ನೋ.

**ಡಿಂಡ** 'ದಿಂಡ$_4$' ನೋ.

**ಡಿಂಡಲ** 'ದಿಂಡ$_1$' ನೋ.

**ಡಿಂಡಿಗ** 'ದಿಂಡ$_1$' ನೋ.

**ಡಿಂಡಿಮ** (ನಾ). ೧. (ಡಿಮ್, ಡಿಮ್ ಎಂಬ ಶಬ್ದಮಾಡುವ) ಒಂದು ಬಗೆಯ ಚರ್ಮವಾದ್ಯ ; ಡವುಡೆ : "ಡಿಂಡಿಮವೆನಲು ಮೊರೆವ ಢೌಡೆಯನಿಕ್ಕು" (ಮಂಗರಾ. ೨೪-೭): ಡಿಂಡಿಮರವದೊಳ್ ವನವೇತಂಡಮನೆಚ್ಚರಿಸುತಿರ್ಪವೊಲ್ (ಕಾದಂಪೂ. ೦೪೭): ಎಱೆಗನ ಗಂಡ ಡಿಂಡಿಮದ ಡಂಬರವೊಪ್ಪುವುದೀ ಧರಿತ್ರಿಯೊಳ್ (ಎಕ. V, ಅರಸೀ. ೦೩೮-೩೦: 1174); ಕೋಟಿ ಡಿಂಡಿಮಗಳನು ಬಾರಿಸೆ ಗೋಟು ತುಂಬಿತು ಜಗದ ಕಿವಿಗಳ ಪಾಟಿ ಹೊಟ್ಟಿತು (ಕೌಶಿಕಾ. ೨೪-೪). ೨. [ಛಂದ] ಒಂದು ವೃತ್ತದ ಹೆಸರು : (?). [ ಸಂ. ]

**ಡಿಂಡೀರ** (ನಾ). ಕಡಲನಾಲಗೆ ; ನೊರೆ ; ಫೇನ ; ಬುರುಗು: "ಘನತರ ಫೇನಂ ಡಿಂಡೀರ ನಾಮಂ" (ವಸ್ತುಕೋ. ೨೨-೪). "ಡಿಂಡೀರಮೆನೆ ಫೇನಮೆನೆ ನೊರೆಯಕ್ಕು" (ಮಂಗರಾ. ೦೨೩-೦೨): "ಡಿಂಡೀರಃ, ಅಬ್ಧಿಕಫಃ, ಫೇನಃ – ಸಮುದ್ರದ ನೊರೆ" (ಸಿದ್ಧಾಂಕಿ. ೨೬.೨) ; ಡಿಂಡೀರಾವಳಿ ಶಂಖವಲ್ಲರಿಯಿಂ . . . ವಿದ್ರುಮಂ ಚಂಡಾರ್ವಾನಲದೀಪ್ತಿಯಿಂ ದ್ವಿಗುಣಿಸುತ್ತಿರ್ಪಾ ಮಹಾಂಭೋಧಿಯಂ ಕಂಡು (ಜಗವಿ. ೭-೦೬) ; ಸಚರಾಚರವ್ರಾತ ತೋಱಿ ತೋಱಿಯಡಂಗುವವೋ ಡಿಂಡೀರನಿಕರದ ಪೋಲು (ನಿಘಗ. ೦೦-೦೪-೨೫); ಡಿಂಡೀರ ಪಿಂಡೌಘ ಮಂಜುಳಿಯಂ ಪೆಂಪಿನ ಲಂಪನಾಳ್ದ ಪೊಳೆಯಂ ಪೇಳ್ವನ್ನ ಸಲ್ಬರ್ಕರ್ಮಮೋ (ರಾಜಶೇ. ೨-೯). [ ಸಂ. ]

**ಡಿಂಡೀರಪಾಂಡುರ** (ಗು). ನೊರೆಯಂತೆ ಬೆಳ್ಳಗಿರುವ,–ಬಿಳುಪಾದ : ನಿರವದ್ಯಾನ್ವಯನುದ್ಧಮುದ್ಧತ ಮಹಾಕ್ಷೀರಾಬ್ಧಿ ಡಿಂಡೀರಪಾಂಡುರಂ . . . ನೆಲೆಗೊಳ್ಗಾ ಚಂದ್ರತಾರಂಬರಂ (ಕವಿರಾ. ೩-೨೩೭).
[ ಡಿಂಡೀರ + ಪಾಂಡುರ ]

**ಡಿಂಡೀರಪಿಂಡ** (ನಾ). ನೊರೆಯ ಮುದ್ದೆ,–ಉಂಡೆ ; ಫೇನರಾಶಿ : ಏಕಾವಳೀವಿಳಾಸಾವಹಸಿತಾವ್ಯೃತ ಡಿಂಡೀರಪಿಂಡಪಾಂಡುರಂ (ಶಾಂತಿಪು. ೭-೧೩ ವ): ಕಂಡರಿಸಿ ವಳುಕಿನಿಂದಮಖಂಡಿತಶೌಚಗುಣ ಸುರನದೀಸಮುಪಚಿತಂ ಡಿಂಡೀರಪಿಂಡಮೆನಿಸಿ ಕಮಂಡಲು ಸೊಗಯಿಪುದು ಬಾಳಚಂದ್ರವೃತಿಯಾ (ಮಲ್ಲಿಪು. ೧೦-೧೩೭). [ ಡಿಂಡೀರ + ಪಿಂಡ ]

**ಡಿಂಬ** (ಗು). ೧. ಅಲ್ಪವಾದ ; ಸಣ್ಣದಾದ. 'ಡಿಂಬಾಹವ' ಪರಾ. (ನಾ). ೨. ಮೈ ; ದೇಹ; ಶರೀರ: ಸಂಸಾರ ಮಾಯಾಪಾಶವ ಬಿಡಲೊಲ್ಲದೆ ಡಿಂಬವ ನೆಚ್ಚಿ ಕೆಟ್ಟೆಯಲ್ಲಾ ಹಂಸಾ (ಬಸಹ. ೧೦-೨೫) ; ಕುಂತೀ ಮಕ್ಕಳೆಂದೊಡೆ ಹರಿಹಿಕೊಂಬಿರಿ ಡಿಂಬವೆಮ್ಮಲಿ ಜೀವವದಿರಲಿ (ಕುಮ್ಯಾಉ. ೫-೧೮) ; ಎವೆ ಮಿಡುಕದವನಿವರು ಪೀಠಾವಳಿಯೊಳಿರ್ದರು ಬಱಿಯ ಡಿಂಬದೊಳು (ಜೈಮಿಅ. ೮-೭೦) ; ಕಂಬ ಮುಱಿದು ಡಿಂಬ ಬಿದ್ದು ಅಂಬರಕೆ ಹಾಱಿಹೋಯಿತು (ಪುರಂದ. ೧-೧೧೨-೬) ; ಈಸು ಪೊತ್ತೀಕೆ ಪವಡಿಸಿದನೆಂದೆಬ್ಬಿಸಲ್ ಶ್ವಾಸವಿಲ್ಲದೆ ಡಿಂಬವಿರೆ ಕಂಡು (ಚಬಸು. ೬-೨೩) ; ವಿಷಯಂಗಳಿಗೆ ಕಿವಿ ಜೋತುಬಿದ್ದು ಈ ಡಿಂಬವನ್ನು ಮೋಹಿಸದಿರಲವೊ ಪ್ರಾಣಿ (ವಿದಾಳ. ೯೮-೭). ೩. ಎಳೆವಯಸ್ಸಿನ ಮಗು ಅಥವಾ ಪ್ರಾಣಿ ; ಶಿಶು. ೪. ವಿಪ್ಲವ ; ದಂಗೆ ; ಲೂಟಿ. 'ಡಿಂಬಯುದ್ಧ' ಪರಾ. ೫. ಅತಿವೃಷ್ಟಿ, ಅನಾವೃಷ್ಟಿ, ಇಲಿಹೆಗ್ಗಣಗಳ ಕಾಟ, ಮಿಡಿತೆ, ಹಕ್ಕಿ ಮೊದಲಾದುವುಗಳ ಹಾವಳಿ ಮತ್ತು ಪರರಾಜರ ಮುತ್ತಿಗೆಗಳಿಂದಾಗುವ ತೊಂದರೆ ; ಈತಿಬಾಧೆ ; ಡಾಮರ: (ಕ). ೬. ಗೋಲಾಕಾರದ ವಸ್ತು ; ಉರುಳಿ ; ಚೆಂಡು. ೭. ಮೊಟ್ಟೆ ; ತತ್ತಿ. ೮. ದಿಬ್ಬ ; ತಿಟ್ಟು (?) : ತಲೆ ಕಾಮನಗುಡ್ಡದ ಬೊಂಬೆಗಲ್ಲ ಮೆಂತ್ಯ ಡಿಂಬದ ಮೇಲೆ ಬಗುತನ ಕಟ್ಟೆಗೆ ಬ (ಎಕ. III, ತಿರುಮು. ೬೩-೪೫; 1748).
[ ಸಂ. ]

**ಡಿಂಬಯುದ್ಧ** (ನಾ). ೧. ಸಣ್ಣ ಕದನ ; ಕ್ಷುಲ್ಲಕ ಕಲಹ : "ಸಣ್ಣ ಸಣ್ಣ ಅಥವಾ ಹೊರವಲಯದಲ್ಲಿರುವ ಸೈನಿಕ ಪಂಗಡಗಳಿಗೆ ಅನಿಯತವಾಗಿ, ಮುನ್ನಿರೀಕ್ಷೆಯಿಲ್ಲದೆ, ನಡೆಯುವ ಹೋರಾಟ; ಡಿಂಬಯುದ್ಧ; ಸಣ್ಣಕಾದಾಟ, ಅಲ್ಪ ಕದನ, ಹೊಡೆದಾಟ; (ಬುದ್ಧಿವಂತಿಕೆ, ತರ್ಕ, ಮೊ. ಗಳ) ವಾಗ್ಯುದ್ಧ" (Skirmish. ಇಂಕನಿ.). ೨. ದಂಗೆ ; ಲೂಟಿ ; ಕೊಳ್ಳೆ. 'ಡಿಂಬಾಹವ' ಪರಾ. [ ಡಿಂಬ + ಯುದ್ಧ ]

**ಡಿಂಬಾಹವ** (ನಾ). = ಡಿಂಬಯುದ್ಧ ೨ : (ಶಿಲ್ಪ). [ ಡಿಂಬ + ಆಹವ ]

**ಡಿಂಬು** (ನಾ). ೧. ಮೈ ; ದೇಹ ; ಶರೀರ : ಕುಂಭಿನಿಪತಿ ನಮ್ಮ ವಿಜಯವಿಠಲರೇಯ ಡಿಂಬಿನೊಳಗೆ ನಿಂದು ಪಾಲಿಸುವನು ನಿತ್ಯ (ವಿದಾಸು. ೩೦-೪). ೨. ಸ್ವಲ್ಪ ಎತ್ತರವಾದ ಸ್ಥಳ ; ದಿಬ್ಬ ; ತಿಟ್ಟು : ಆ ಮಹಾ ರಭಸಕ್ಕೆ . . . ಪರ್ವತದಾ ಮಹಾಡಿಂಬಿನಲ್ಲಿ ಪಾಂಡುವಿನರಸಿ ನಡುಗಿದಳು (ಸಂಭಹ. ೧೫-೭೩). ೩. ದೀಪದ ಆಧಾರ ; ದೀಪವನ್ನಿಡುವ ಸಣ್ಣ ಪೀಠ : (ಕ). [ <ಸಂ. ಡಿಂಬ ]

**ಡಿಂಬೆ** (ನಾ). ಮೂಗಿನ ಹೊರಳೆಗಳ ನಡುವಿನ ಸಿಂಬೆ (?) : ತುಂಬಿದ ತಾನಗಳಿರ ಬನ್ನಿ ರಾಯನ ತುಂಬಿದ ಬವರಿಗಳಂತೆ ಕೆಂಬಲ್ಲ ಥಾಳದಂತರಸನ ಮೂಗಿನ ಡಿಂಬೆಯಂತೆಂದು ಪಾಡಿದಳು (ಭರಹ. ೧೧-೭೦). [ ? ]

**ಡಿಂಭ** (ನಾ). ೧. ಆಗ ತಾನೆ ಹುಟ್ಟಿದ ಕೂಸು ಅಥವಾ ಪ್ರಾಣಿಗಳ ಮರಿ: ಒಗರು ಚಿಗುರುಗಳುಂಡ ಪಿಕ ಡಿಂಭಗಳು ಚದುರುತ ನುಡಿವವೋಲ್ (ಅನಂರಾ. ೨-೧-೩೮). ೨. ಮೈ ; ದೇಹ ; ಶರೀರ : ಅಕ್ಕ ಮರುಳೌ ಚಿತ್ತವವಳಲಿ ಸಿಕ್ಕಿ ಬೇರ್ವರಿಯಿತ್ತು ಬರಿದೇ ಮಿಕ್ಕ ಡಿಂಭ[ಪಾಠಾಂ. ಬ]ಕೆ ಮದುವೆಯಂಟೇ ಮನವ ಬೇಱಿರಿಸಿ (ಕುಮ್ಯಾವಿ. ೨-೯೬) : ಡಿಂಭದೊಳು ಶಬ್ದ ವಾಗಾದಿ ಶ್ರೋತ್ರಗಳಲ್ಲಿ ಇಂಬಾಗಿ ತತ್ವೇಶರೆಲ್ಲ ತುಂಬಿಹರೊ (ಪುರಂದ. ೧-೨೦೫-೪) : ಡಿಂಭದೊಳು ಕಾಂಬುದೆಂದಸಮಗ್ರವಲ್ಲವಿದು ಕುಂಭದೊಳ ಗಡಗಿದ್ದರೂ ಅಲ್ಪವಲ್ಲ (ಮಠದೇ. ೩೭-೭೦). ೩. ತಿಳಿಗೇಡಿ ; ದಡ್ಡ ; ಮೂರ್ಖ. ೪. ಗರ್ಭಾಶಯ ; ಗರ್ಭಕೋಶ : ಡಿಂಭಗಳನೊಡೆದು ಬನ್ನಿ ಕಂಭಗಳನೊಡೆದುಬನ್ನಿ (ಗರು. ೫೩-೧೧). [ ಸಂ. ]

**ಡಿಂಭಕ** (ನಾ). = ಡಿಂಭ. [ ಸಂ. ]

**ಡಿಂಭೆ** (ನಾ). ಮಗು ; ಶಿಶು. [ ಸಂ. ಡಿಂಭಾ ]

**ಡಿಕಮಲಿ, ಡಿಕ್ಕಿಮಾಲೆ, ದಿಕಾಮಲಿ, ದಿಕ್ಕಾಮಲ್ಲಿ** (ನಾ). ಒಂದು ಬಗೆಯ ಮರ ಮತ್ತು ಆ ಮರದಿಂದ ತೆಗೆದ ಒಂದು ಗಂದಿಗದ್ರವ್ಯ: ಸೂರ್ತಿ ಚವಾಳಾ ಮಣದ ಮೇಲೆ ಕಿಮ್ಮತ್ತು ಇರತಕ್ಕ ಜಿನಸಗಳು ೧ ಅಕ್ಕಲಖಾರ . . . ಡಿಕಮಲಿ (ಕಾರಿಂಗ) (ಮುಂಬವ್ಯಾ. ೦೨೫). **ಡಿಕ್ಕಿಮಾಲೆ:** ಕಡಲೆಕಾಳಿನಷ್ಟು ಡಿಕ್ಕಿಮಾಲೆಯನ್ನು ಹಾಲಲ್ಲಿ ತೇದು ಕುಡಿಸುವುದು (ಕುನಮು. ೮). **ದಿಕಾಮಲಿ :** ಬಿಕ್ಕೆಗಿಡ, ದಿಕಾಮಲಿ, ಕಂಬಿಮೇಣ (ಮೃಜಿಗಿ. ೪೮-೭೭೦). **ದಿಕ್ಕಾಮಲ್ಲಿ :** (ಕ).
[ ←ಹಿಂ. ಡಿಕಾಮಾಲೀ; ಮರಾ.ಡಿಕಾಮಾಲೀ, ಡಿಕೇಮಾಲೀ, ಡಿಂಕೇಮಾಲೀ ]

**ಡಿಕರಿ** 'ಡಿಕ್ರಿ' ನೋ.

**ಡಿಕಾವು** 'ದಿಖಾವು' ನೋ.

**ಡಿಕ್ಕಿ, ಢಿಕ್ಕಿ** (ನಾ). ೧. ತಲೆಯಿಂದ ತಲೆಯನ್ನು ತಾಟಿಸುವಿಕೆ. 'ಡಿಕ್ಕಿಹೊಡೆ' ಪರಾ. ೨. ಒಂದು ವಸ್ತುವು ಇನ್ನೊಂದು ವಸ್ತುವನ್ನು ಜೋರಾಗಿ ತಾಗುವುದು, – ಅಪ್ಪಳಿಸುವುದು, – ಘಟ್ಟಿಸುವುದು : ಮುಂಬಯಿಯಲ್ಲಿ ಇಂತಹ "ಡಿಕ್ಕಿ"ಗಳು ದಿನಾಲೂ ನೂರಾರು ಆಗುತ್ತವೆ (ಎಡಹ. ೧). ೩. (ಅಲಂ) ಮಾತಿನಲ್ಲಿ ಹೊಂದಾಣಿಕೆಯಿಲ್ಲದಿರುವುದು; ವಿರೋಧದ ಮಾತು : ಬೆಳಗಿನ ಹೇಳಿಕೆಯು ಸಂಜೆಯ ಹೇಳಿಕೆಗೆ ಡಿಕ್ಕಿಯಾಗಲೇಬೇಕು (ಹನ್ನೊಂದ. ೭೭). **ಢಿಕ್ಕಿ :** 'ಢಿಕ್ಕಿಹೊಡೆ' ಪರಾ.
[ < ಡೀ ]

**ಡಿಕ್ಕಿಕೊಡು** (ಕ್ರಿ). ೧. ಜೋರಾಗಿ ತಲೆಯಿಂದ (ಇನ್ನೊಬ್ಬನ) ತಲೆಯನ್ನು ಹಾಯು,–ತಾಗು,–ತಾಟಿಸು: ಅವನು ಓಡಿಬಂದು ನನ್ನ ತಲೆಗೆ ಡಿಕ್ಕಿಕೊಟ್ಟನು (ರೂಢಿ). ೨. ಇನ್ನೊಂದು ವಸ್ತುವನ್ನು ಜೋರಾಗಿ ತಾಗು,–ಅಪ್ಪಳಿಸು,–ಘಟ್ಟಿಸು : ನೋಡ ನೋಡುತ್ತಿದ್ದಂತೆ ವಾಹನಗಳೆರಡು ಡಿಕ್ಕಿಕೊಟ್ಟು ಕೆಳಕ್ಕೆ ಉರುಳಿದವು (ರೂಢಿ).
ಡಿಕ್ಕಾಡಿಕ್ಕಿಕೊಡು (ದ್ವಿರುಕ್ತಿ) : (ಕ). [ ಡಿಕ್ಕಿ + ಕೊಡು$_1$ ]

**ಡಿಕ್ಕಿಮಾಲೆ** 'ಡಿಕಮಲಿ' ನೋ.

**ಡಿಕ್ಕಿಹೊಡಿಸು** (ಕ್ರಿ). ತಲೆಯನ್ನು ಜೋರಾಗಿ ತಾಗುವಂತೆ ಮಾಡು ; ಘಟ್ಟಿಸುವಂತೆ ಮಾಡು: ಅವರು ಸಂತೋಷದಿಂದ ಆಡುತ್ತಿದ್ದಾಗ . . . ಜುಟ್ಟುಹಿಡಿದು ತಂದು ತಲೆತಲೆಗೆ ಡಿಕ್ಕಿಹೊಡಿಸುವನು (ವಚಥಾ. ೧೭).
[ ಡಿಕ್ಕಿ + ಹೊಡಿಸು (<ಪೊಡೆಯಿಸು) ]

**ಡಿಕ್ಕಿಹೊಡೆ, ಢಿಕ್ಕಿಹೊಡೆ** (ಕ್ರಿ). ೧. = ಡಿಕ್ಕಿಕೊಡು ೧. 'ಡಿಕ್ಕಿಹೊಡಿಸು' ಪರಾ. ೨. = ಡಿಕ್ಕಿಕೊಡು ೨: ಒಂದು ದಿನ ಓದುತ್ತ ಹೋಗುತ್ತಿರುವಾಗ ದಾರಿಯಲ್ಲಿನ ಲೈಟು ಕಂಬಕ್ಕೆ ಡಿಕ್ಕಿ ಹೊಡೆದು ಹಣೆಯಲ್ಲಿ ಬೋರೆ ಬರಿಸಿಕೊಂಡ (ಶಾಲಿಮ. ೨೧೮) ; ನನ್ನ ಮುಖ ನೋಡ್ರಾ ಬಂದರೆ ಯಾರಿಗಾದರೂ ಡಿಕ್ಕಿಹೊಡೆಯುತ್ತೀರ (ದೂಬಿಟ್ಟ. ೪೯). **ಢಿಕ್ಕಿಹೊಡೆ :** ೧. ಢಿಕ್ಕಿಹೊಡೆದೆನು ಪಂಜರದ ಕಂಭ ಮಾಡಕ್ಕೆ (ನವ್ಯಧ್ವ. ೮೫). ೨. ಮೇಲ್ವಾಯ್ದುದಟ್ಲಾಂಟಿಕಾಂಭೋಧಿ ಪೆಸಿಫಿಕಂಬುಧಿಯೊಡನೆ ಢಿಕ್ಕಿಹೊಡೆದುಕ್ಕಿ (ಶ್ರೀರಾಮಾ. ೧೬೫-೩೩೭). [ ಡಿಕ್ಕಿ + ಹೊಡೆ$_1$ (<ಪೊಡೆ$_1$) ]

**ಡಿಕ್ರಿ, ಡಿಕರಿ** (ನಾ). (ನ್ಯಾಯಾಲಯದ) ತೀರ್ಪು,– ತೀರ್ಮಾನ : ಆದರೆ ಡಿಕ್ರಿಯು ಬೆಂಚಿನ ೩ ಜನ ಮೆಂಬರ ಹೆಸರಿನಲ್ಲಿಯೂ ಕೊಡಲ್ಪಡ ತಕ್ಕದ್ದು (ಗ್ರಾಮಾಕ. ೧೮), ಅಂತೂ ಕೋರ್ಟಿನಲ್ಲಿ ನಾಡಿದ್ದು ಅದು ಡಿಕ್ರೀ ಆಗಿಬಿಟ್ಟರೆ, ನನ್ನ ಹಣ ಪುನಃ ಸೆಟ್ಟಿ ಪೆಟ್ಟಿಗೇಲಿ ಸುರಕ್ಷಿತವಾಗಿರುತ್ತೆ (ಮಾಂಗಲ್ಯ. ೪೪); ಕೋರ್ಟಿನಲ್ಲಿ ವ್ಯಾಜ್ಯಮಾಡಿ ಡಿಕ್ರಿಮಾಡಿ ಸಾಲಿಗನ ಸರ್ವಸ್ವವನ್ನು ಸುಲಿದುಬಿಡುತ್ತಾರೆ (ಕು ರು ಕಾ. ೩೪); ಕೋರ್ಟಿನಲ್ಲಿ ವಿವಾಹವಿಚ್ಛೇದನವಾಗುವಂತೆ ಅರ್ಜಿದಾರಳ ಪರ ಡಿಕ್ರಿ ಬಗ್ಗೆ ಪ್ರಾರ್ಥನೆ– ಅಂತ ಅರ್ಜಿಯಲ್ಲಿದೆ. (ಏಕಾಂಗಿ. ೨೦೪). **ಡಿಕರಿ :** ಮೋಸದಿಂದ ತನಗೆ ಬರಬೇಕಾಗಿಲ್ಲದ ಹಣಕ್ಕೆ ಡಿಕರಿ ಆಗುವಂತೆ ಮಾಡಿದರೂ (ಗ್ರಾಮಾಕ. ೬೪).

[ ←ಇಂ. Decree ]

**ಡಿಕ್ರಿದಾರ** (ನಾ). (ನ್ಯಾಯಾಸ್ಥಾನದಲ್ಲಿ) ತನ್ನ ಕಡೆಗೆ ತೀರ್ಪನ್ನು ಪಡೆದಿರುವ ವ್ಯಕ್ತಿ : ಸದರೀ ಸ್ವತ್ತನ್ನು ಹಿಡಿದು ಡಿಕ್ರೀದಾರನಿಗೆ ಒಪ್ಪಿಸು ವುದರ ಮೂಲಕ ಡಿಕ್ರಿಯನ್ನು ಜಾರಿಮಾಡಬಹುದು (ಗ್ರಾಮಾಕ. ೩೩).

[ ಡಿಕ್ರಿ + – ದಾರ$_4$ ]

**ಡಿಗರು** 'ದಿಗರು' ನೋ.

**ಡಿಗುರು** (ನಾ). ಸ್ತ್ರೀಯ ಜನನೇಂದ್ರಿಯ ; ಯೋನಿ : (*).

[ <ಡೊಗರು ]

**ಡಿಗ್ರಿ** (ನಾ). ೧. (ಉಷ್ಣಮಾಪಕಯಂತ್ರದಲ್ಲಿ ಅಳೆಯುವ) ಉಷ್ಣದ ಅಳತೆ,–ಮಾನ : ನನ್ನ ತಮ್ಮನಿಗೆ ನೂರೆರಡು ಡಿಗ್ರಿ ಜ್ವರವಿದೆಯೆಂದು ಡಾಕ್ಟರು ಹೇಳಿದರು (ಮಧ್ಯಮ. ೧೬೩); ಜ್ವರ ಅಪರೂಪವಾಗಿ ೧೦೩ ಡಿಗ್ರಿಗಳಿಗಿಂತ ಹೆಚ್ಚಾಗಿ ಹೋಗುತ್ತದೆ (ಕಲರೋ. ೪೨). ೨. [ಗಣಿತ] ಕೋನಮಾನ ; ಅಳತೆ ; ವೃತ್ತಪರಿಧಿಯ $\frac{೧}{೩೬೦}$ ನೆಯ ಭಾಗ : ಅವುಗಳ ಮೇಲೆ ಅಕ್ಷಾಂಶಗಳಂತೆ ಗುರುತು ಮಾಡಿರುವ ರೇಖೆಗಳು ಆಯಾ ಭಾವಗಳ 'ಡಿಗ್ರಿ'ಯನ್ನು ಸೂಚಿಸುತ್ತವೆ (ಶಾಂಂದಸ. ೦೯). ೩. ವಿಶ್ವವಿದ್ಯಾ ನಿಲಯಂಗಳು ಕೊಡುವ ಪಾಂಡಿತ್ಯಪದವಿ; ವಿದ್ಯಾಪ್ರಶಸ್ತಿ: ನಮ್ಮ ಹುಡುಗ ಕಾಲೇಜಿನಲ್ಲಿ ಓದಿ ಡಿಗ್ರಿ ಪಡೆದಿದ್ದಾನೆ (ರೂಢಿ). [ ←ಇಂ. Degree ]

**ಡಿಟ್ಟಂ ಜಮಾಬಂದಿ, ದಿಟ್ಟಂಜಮಾಬಂದಿ** (ನಾ). " ಹುಜೂರು ಜಮಾ ಬಂದಿಗೆ ಮುನ್ನ ತಾಲ್ಲೋಕು ಅಮಲ್ದಾರರು (ತಹಸೀಲ್ದಾರರು) ಪೂರ್ವಭಾವಿಯಾದ ಲೆಕ್ಕಗಳ ತನಿಖೆಮಾಡಿ ಹುಜೂರು ಜಮಾಬಂದಿ ಲೆಕ್ಕಗಳನ್ನು ತಯಾರಿಸುವುದು " (ನನ್ನೂರು. ಕೋಶ) : ಡಿಟ್ಟಂ ಜಮಾ ಬಂದಿಯಲ್ಲಿ ಮತ್ತು ಹುಜೂರು ಜಮಾಬಂದಿಯಲ್ಲಿ ಎಲ್ಲಾ ಶಾನು ಭೋಗರ ಲೆಕ್ಕ ಚೆಕ್ಕಾದರೂ ನನ್ನೂರಿನ ಲೆಕ್ಕ ಇನ್ನೂ ಬಾಕಿ (ನನ್ನೂರು. ೧೩೨). **ದಿಟ್ಟಂಜಮಾಬಂದಿ:** ಚುಂಚನಕಟ್ಟೆ ಜಾತ್ರೆ, ಸ್ಟಾರ್ಕ್ಸ್ ಸಾಹೇಬರ ಆಗಮನ, ಕಸಬ ಹೋಬಳಿ ದಿಟ್ಟಂಜಮಾಬಂದಿ, ಇವುಗಳೆಲ್ಲಾ ಮುಗಿದ ಮೇಲೆ ನಾನು ಸಾಲಿಗ್ರಾಮಕ್ಕೆ ಹೋದೆ (ಕಲನ. ೦೫೧)

[ ಡಿಟ್ಟಂ$_0$ + ಜಮಾಬಂದಿ ]

**ಡಿತ್ಥ** (ನಾ). ೧. ಮರದಿಂದ ಮಾಡಿದ ಆನೆ ; ಮರದಾನೆ. ೨. ಒಂದು ಸಂಜ್ಞಾಶಬ್ದ; ಒಬ್ಬ ವ್ಯಕ್ತಿಯನ್ನು ಕುರಿತು ಹೇಳುವ, ಅವ್ಯುತ್ಪನ್ನ ವಾದ ಸಂಕೇತ ಶಬ್ದ : ಇವನು ಹೋಗುವವನು ಇವನು ಡಿತ್ಥನು ಎಂಬ ಅನುಭವಗಳಿಗೆ ಅನುಸಾರವಾಗಿ ಕ್ರಮವಾಗಿ ಜಾತಿವಿಕಲ್ಪ, ದ್ರವ್ಯವಿಕಲ್ಪ, ಗುಣವಿಕಲ್ಪ, ಕ್ರಿಯಾವಿಕಲ್ಪ ಮತ್ತು ನಾಮವಿಕಲ್ಪ ಎಂದು ಐದು ವಿಧ (ಭಾತತ್ತ್ವ. ೩೮೬). [ ಸಂ. ]

**ಡಿಪೊ** (ನಾ). (ಮಾರಲಿರುವ) ವಸ್ತುಗಳನ್ನು ಸಂಗ್ರಹಿಸಿರುವ ಮಳಿಗೆ,– ಉಗ್ರಾಣ : ರೇಷನ್ ಡಿಪೋಗಳಲ್ಲಿನ ಜನಸಂದಣಿಯಂತೆ ಜನಗಳ ನೂಕು ನುಗ್ಗಲು ನೋಡಿದರೆ ನಮ್ಮ ಎದೆ ಒಡೆದು ಚೂರುಚೂರಾಗುತ್ತದೆ (ನಾಡಿಗೇ. ೩೦). [ ←ಇಂ. Depot ]

**ಡಿಫ್ತೀರಿಯ** (ನಾ). (ಸಾಮಾನ್ಯವಾಗಿ ಮಕ್ಕಳಿಗೆ ಬರುವ) ಒಂದು ಬಗೆಯ ರೋಗ; ಗಳಚರ್ಮರೋಗ; ಲೋಳೆ ಸಂಕೋಲೆ. ಗಂಟಲಿನಲ್ಲಿಯ ಶ್ಲೇಷ್ಮ ಚರ್ಮವು ಉದ್ದೀಪನಗೊಂಡು ಅದರಿಂದ ಹೊರಟ ಸ್ರಾವವು ಕೃತಕ ಚರ್ಮದಂತೆ ಪರಿವರ್ತನೆ ಹೊಂದುವ ಒಂದು ಭಯಂಕರ ವ್ಯಾಧಿ : ಡಿಫ್ತೀರಿಯದಿಂದ ನರಳುವ ಮಕ್ಕಳಿಗೆ ಧ್ವನಿ ಬದಲಾಯಿಸಿ, ಅವು ಏನೋ ವಿಚಿತ್ರವಾಗಿ ಅಳುತ್ತವೆ (ಗೃಹವಿ. ೦೪೫) : ಡಿಫ್ತೀರಿಯ ಮತ್ತು ಟೈಫಾಯ್ಡ್‌ಗಳಂತಹ ರೋಗಗಳು ಮೊಟ್ಟಮೊದಲನೆಯ ಬಾರಿ ಕಂಡ ರೋಗಿಗಳ ಮನೆಯ ವಾತಾವರಣವನ್ನು ಪರೀಕ್ಷಿಸಬೇಕು (ಕಲರೋ. ೪). [ ←ಇಂ. Diphtheria ]

**ಡಿಮ** (ನಾ). [ಕಾವ್ಯಮೀ] ಹತ್ತು ವಿಧವಾದ ರೂಪಕಗಳಲ್ಲೊಂದು : ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ – ಎಂದು ರೂಪಕಗಳು ಹತ್ತುವಿಧ (ಸಂನಾಟ. ೨೯) : ಡಿಮ – ಇದರ ವಸ್ತು ಪ್ರಖ್ಯಾತ : ಮಾಯ, ಇಂದ್ರಜಾಲ, ಗ್ರಹಣ, ಯುದ್ಧಾದಿಗಳಿಂದ ತುಂಬಿರುತ್ತದೆ. (ಭಾರಪ. ೫೬೨). [ ಸಂ. ]

**ಡಿಮುಕಿ** 'ಡುಮುಕಿ$_1$' ನೋ.

**ಡಿಯ್ಯನಹಕ್ಕಿ** (ನಾ). ಒಂದು ಬಗೆಯ ಪಕ್ಷಿ ; ಟಿಟ್ಟಿಭ : " ಕೋಯಷ್ಟಿಕಃ, ಟಿಟ್ಟಿಭಕಃ – ಈ ೨ ಡಿಯ್ಯನಹಕ್ಕಿ " (ನಾಚಿರಾ. ೧೧೫).

[ ? + ಹಕ್ಕಿ$_1$ (<ಪಕ್ಕಿ$_1$) ]

**ಡಿಲ್ಲ** 'ಢಿಳ್ಳ' ನೋ.

**ಡಿಲ್ಲಿ** (ನಾ). ದಿಬ್ಬ : ಹತ್ತಿನೋಡ್ಯಾಳೇ ಡಿಲ್ಲೀಯಾ (ಹುಟ್ಟಿಹ. ೫೭). [ ? ]

**ಡಿವಿಡಿವಿ** (ನಾ). ೧. ಒಂದು ಬಗೆಯ ಮರ ; ಸುವಾಸನೆಯ ಹೂವನ್ನು ಬಿಡುವ ಒಂದು ವೃಕ್ಷ : (*). ೨. ಒಂದು ಬಗೆಯ ಸಸ್ಯ : ಸೀಮೆ ಅಲ್ಲೆಕಾಯಿ, ಡಿವಿಡಿವಿ (ಮೃಜಿಗಿ. ೧೫–೨೬೮). [ ? ]

**ಡಿಳ್ಳ** 'ಢಿಳ್ಳ' ನೋ.

**ಡಿಳ್ಳಯಿಸು** 'ಡಿಳ್ಳಿಸು' ನೋ.

**ಡಿಳ್ಳವಾಜು** (ಕ್ರಿ). ತಳಮಳದಿಂದ (ಎದೆ)ಹಾರು,–ಡವಡವ ಬಡಿದು ಕೊಳ್ಳು ; ಎದೆಗುಂದು : ಕಟಿಗಂದಿದಾನನಂ ರಸಮಚಿತಧರಂ ಡಿಳ್ಳ [ಪಾಠಾಂ. ಳ್ಳಿ]ವಾಜಿಬೆದೆ ಬಿಸುಟಿಂದಂ ಪೊಱಪಾಯ್ವು ಸುಯ್ಯುಗಳ್ (ವ್ಯಶವಿ. ೨೯–೨೬). [ ಡಿಳ್ಳ (<ಢಿಳ್ಳ) + ಪಾಜು$_1$ ]

**ಡಿಳ್ಳವೋಗು, ಡಿಳ್ಳುಹೋಗು** (ಕ್ರಿ). ಗಾಬರಿಗೊಳ್ಳು ; ಬೆದರು ; ಗಾಸಿ ಪಡು ; ಹೆದರಿಕೆಯಿಂದ ಎದೆ ಡವಡವನೆ ಬಡಿದುಕೊಳ್ಳು : ತಲ್ಲಣಿಸಿ ಹೋಗುತ ಬರುತ್ತದೆ ಡಿಳ್ಳವೋ[ಪಾಠಾಂ. ವಾ]ಗುತ್ತಿರನೆ ಲಕ್ಷ್ಮೀವಲ್ಲಭಂ ನಂದೀಶ್ವರನ ಪೇರುಸುರೊಳಗೆ ತೊಡಕಿ (ಬಸವು. ೫೪–೪೦) ; ತಳ್ವವಾಱಿಸಿ ರಾಮನ ತಂದುಕೊಡುವೆನು ಡಿಳ್ಳವೋ[ಪಾಠಾಂ. ಡಿಳ್ಳಿಯೋ]ಗದಿರೆಡೆ ಯೊಳಗೆ (ಬರಾಸಾಂ.೩೫–೩೩). **ಡಿಳ್ಳುಹೋಗು:** ಅಳ್ಳೆದೆಯವಳು ರೂಪಾಣೆ ಯೊಬ್ಬಳು ಲಜ್ಜೆಯಿಲ್ಲದೆ ನಿನಗೆ ಎರಗಿದಳೆಂದರೆ ಈ ಪದ್ಮಿನಿ ಡಿಳ್ಳುಹೋಗು ವಳೇ (ಮೂಮಲ್ಲಿ. ೦೦೭). [ ಡಿಳ್ಳ (<ಢಿಳ್ಳ) + ಪೋಗು$_1$ ]

**ಡಿಳ್ಳಸ** (ನಾ). ದುರ್ಬಲತೆ ; ದೀನತೆ : ಕಳವಳವೊಳಗೆ ಹೊಱಗೆ ನವಾಯಿ ಡಿಳ್ಳಸವೊಳಗೆ ಹೊಱಗೆ ಸಘಾಡಮದ . . . ಮಹೀಶ ಹದನಿದು ನಿನ್ನ ನಂದನನ (ಕುವ್ಯಾ.ಶ. ೨–೧). 'ಡೊಳ್ಳಾಸ' ಪರಾ. [ <ಢಿಳ್ಳ ]

**ಡಿಳ್ಳಾಯು$_1$, ಢಿಳ್ಳಾಯು** (ನಾ). [ನಾಟ್ಯ] ಒಂದು ಬಗೆಯ ನೃತ್ಯ : ತಾಳವಟ್ಟನಂ ನುಡಿವ ಮೆಲ್ಲಡಿಗಳೊಡನೊಡನೆ ಡಿಳ್ಳಾಯದಿಂ ಡೆಂಡಣಿಸ ತೊಡಗಿತು (ಸೌಂದಪು. ೮–೧೫) ; ಡಿಳ್ಳಾಯದುರುಕಾಲರವೆಯ[ ರವದ ] ಚೆಲ್ವುಡರೆ (ಕೇವಣ. ೩೨–೪೯). **ಢಿಳ್ಳಾಯು:** ಝುಂಕೆ ಧಾಳ ಢಿಳ್ಳಾಯು[ಪಾಠಾಂ. ಡಿಳ್ಳಾಯು]ಚಂಡಣ . . . ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೧೭–೬೭ ವ). [ <ಸಂ. ಡಿಲ್ಲಾಯಾ ]

**ಡಿಳ್ಳಾಯು₂** (ನಾ). ಮೋಸಗಾರಿಕೆ ; ವಂಚಕತನ ; ಠಕ್ಕು : ನುಸುಳು ನೆಲೆ ಡಿಳ್ಳಾಯು [ಪಾಠಾಂ. ಡಿಳ್ಳಾಯ್ತು, ಡಿಳ್ಳಾಸ]ವೈಸರ ಬೆಸುಗೆ ಬಿಗುಹುಳು ಕೊತ್ತು ಕಲೆಗಳ ರಸದ ಪಸರವನಱಿಯಬಾರದು ವಿಗಡ ವಿಟರುಗಳ (ಶಬ್ದಾಲ. ೧೫-೨೫). [ ? ]

**ಡಿಳ್ಳಾಯಿ** (ನಾ). = ಡಿಳ್ಳಾಯು₁ : ನುಣ್ಚೋಳ ಡಿಳ್ಳಾಯಿಯಿಂ ಮೃದು ಹಸ್ತಾಯತದಿಂ . . . ಸಲೆ ರಾಗಮಂಜರಿ ಕರಂ ಮೇಳೈಸಿದಳ್ ಲಾಸ್ಯಮಂ (ದಕಳು. ೮-೧೬೪) ; ಪಯಪಾಡು ನಿಜ್ಜವಣೆ ಚಾಳಿಯ ಮು ಲ್ಲಾ ಸ ಂ ತಿರುಂಪು ತಡವಿತ್ರಡ ಮುನ್ನಯನವಿಶೇಷಂ ಡಿಳ್ಳಾ[ಪಾಠಾಂ. ಲ್ಲಾ]ಯಿಯ ಲುಳಿಪುರಿ ದುಸುರಮೆಸವಿನಂ ನರ್ತಿಸಿದಳ್ (ಧರ್ಮಾಶ ೨-೨೬).

[ ಸಂ. ಡಿಲ್ಲಾಯಿ ]

**ಡಿಳ್ಳಿತ** (ನಾ). ಭಯಂಗೊಳಿಸಿದುದು ; ಬೆದರಿಸಿದುದು ; ಕುಗ್ಗಿಸಿದುದು: ಡಮರುಗಧ್ವತ ಡಾಮರನರ್ದೆಡಿಳ್ಳಿತ ಶ್ರೈವಲಡಿಂಣಾಂಧಕ (ಪ್ರಭುಪು. ೫-೧೬೪). [ <ಢಿಳ್ಳ ? ]

**ಡಿಳ್ಳಿಸು, ಡಿಳ್ಳಯಿಸು, ಡಿಳ್ಳೈಸು, ದಿಳ್ಳಿಸು** (ಕ್ರಿ). ೧. ನಡುಗು; ಕಂಪಿಸು; ಹೆದರು; ಭಯಪಡು: ನುಣ್ಗುರಳಂ ಕಂಡು ವಿಳಾಸದಿಂದೆ ಸರಿಯಾಯ್ತು ಲ್ಲೆಂಬ ಲಜ್ಜಾಭರಾತುರದಿಂದಂದೊಳಗೆಯ್ದಿ ಡಿಳ್ಳಿಸಿ ಜಲಂ ಪೊಕ್ಕಿರ್ದುದು . . . ಆ ಕಂಬು (ಚಾಧಪು. ೯-೭೦) ; ಡಿಳ್ಳಿಸಿದವಂ ಸ್ಖಲಿತನಾ ಪ್ರಸ್ಯಂದನಕ್ಕು (ಮಂಗರಾ. ೪೮-೩೪) ; ಕಳ್ಳನೊಳಗು ಡಿಳ್ಳಿಸಿ ಸರಿಯಲಾವ ಕಡೆಯೊಳು ಪೋಪ್ಪ ಪಾಯವಟ್ಟೆಗಳಱಿಯದೆ (ಸಿಂಗಿರಾ. ೧೧-೧೨) ; ಜಲ್ಲಿದುಂಬಿಗಳ ಝಂಕಾರಕ್ಕೆ ಮುನಿಜನ ಡಿಳ್ಳಿಸಿತೇನ ಹೇಳುವೆನು (ಮೋಹತ. ೭-೧೧) ; ಹುಸಿಯಲ್ಲ ನನ್ನನಾಗಿನಿಸಪ್ಪುವಾಗ ಡಿಳ್ಳಿಸಿತೆದೆ ಜುಮ್ಮನೊಸರಿಸಿ (ಭರತ. ೯-೧೦೦). ೨. ಭಯದಿಂದ ನಡುಗಿಸು ; ಗಾಬರಿಗೊಳಿಸು ; ಎದೆಗುಂದಿಸು ; ಗಾಸಿ ಪಡಿಸು : ದಿಗಿಲು ಡಿಳ್ಳಿಸಿಯೆನ್ನ ಚಿಕ್ಕದೇವನೃಪನ ಬಗೆಯಲಿ ತಾಳ್ದ ಶ್ರೀರಂಗ ಬಲ್ಲಹನನಗಲದೆ ನೆರೆದಿರೆಂದವ್ವದೀ ಹದನ (ಮಡಿಕ್ಕಾ. VI, ೧೬೫ ಶೃಂಗಾರ ಸೂಕ್ತ್ಯುದಾಹರಣ). ೩. ದುರ್ಬಲಗೊಳಿಸು;ಶಕ್ತಿಹೀನವಾಗಿಸು; ಕುಗ್ಗಿಸು. **ಡಿಳ್ಳಯಿಸು :** ೧. ರಾಜೇಂದ್ರ ಶಿಖಾಮಣಿ ತನ್ನಯ ಭೂರಿ ಬಳಂದೆರಸು . . . ಧಾರಿಣಿ ಡಿಳ್ಳಯಿಸುವವೊಲ್ ಬಡಗಣ ದಾರಿವಿಡಿದು ನಡೆತಂದು (ಜಯುಕಾ. ೯-೬). **ಡಿಳ್ಳೈಸು :** ೧. ಅವಯವಂಬಡದೆನೆಂದತಿ ನಯಂಗುಂದಿ ಕಂದಿತ್ತಲೆರ್ದೆ ಡಿಳ್ಳೈಸಿ ಗುರುಪದೋಚಿತ ಸಲಿಲವಂ ಅತಿಶಯದೊಳಾಂತು (ಕೂಟ್ಯೂಬ. ೦೫-೬೨). **ದಿಳ್ಳಿಸು :** ೧. ಮೇಲಣ ಲೋಕ ದಿಳ್ಳಿಸುತಿಹುದಾ ಮಹಾವ್ಯಾಳ ತುಡುಕೆ ಬಿಲ್ಲ ಕೋಲ (ನಾಗಕು. ೧೧-೬). [ ಡಿಳ್ಳ (<ಢಿಳ್ಳ) + -ಇಸು₂ ]

**ಡಿಳ್ಳು** 'ಢಿಳ್ಳ' ನೋ.

**ಡಿಳ್ಳುಹೋಗು** 'ಡಿಳ್ಳವೋಗು' ನೋ.

**ಡಿಳ್ಳೈಸು** 'ಡಿಳ್ಳಿಸು' ನೋ.

**ಡೀ** (ನಾ). ಒಂದು ಅನುಕರಣ ಶಬ್ದ ; ಡಿಕ್ಕಿ. 'ಡೀಕೊಡು' ಪರಾ.

**ಡೀಕಾಡು** (ನಾ). ಸೆಡನ್ನಿಟ್ಟುಕೊಳ್ಳುವುದು ; ಜಿದ್ದು ; ಮಾತ್ಸರ್ಯ; "ಜಿದ್ದಾಟ" (ಜಾನಕೋ. ೬೩). [ ಡೀಕು₁ + ಆಡು₂ ]

**ಡೀಕು** 'ದೇಕು₁' ನೋ.

**ಡೀಕೊಡು** (ಕ್ರಿ).=ಡಿಕ್ಕಿಕೊಡು ೧ : ತಗರುಗಳು ಮಹಾರಭಸದಿಂದ ತಲೆ ತಲೆಗೆ ಡೀಕೊಟ್ಟು ಕಾದಿದುವು (ಭಾರವೀ. ೧೦೮). [ ಡೀ + ಕೊಡು₁ ]

**ಡೀಕೊಳ್ಳು** (ಕ್ರಿ). ಡಿಕ್ಕಿಹೊಡೆಸಿಕೊಳ್ಳು ; ತಿವಿಸಿಕೊಳ್ಳು: (ಕ).

[ ಡೀ + ಕೊಳ್ಳು₁ (<ಕೊಳ್₁) ]

**ಡೀಗು** 'ಢೀಗು' ನೋ.

**ಡೀನ** (ಗು). ೧. ಆಕಾಶದಲ್ಲಿ ಹಾರಾಡಿದ,-ಸಂಚರಿಸಿದ. (ನಾ). ೨. ಹಾರುವಿಕೆ ; ಹಾರಾಟ. [ ಸಂ. ]

**ಡೀಲ** 'ಢಿಳ್ಳ' ನೋ.

**ಡೀಲಿ** 'ಡೇಲಿಯಾ' ನೋ.

**ಡೀಲು** 'ಢಿಳ್ಳ' ನೋ.

**ಡೀಹೊಡೆ** (ಕ್ರಿ).=ಡಿಕ್ಕಿಕೊಡು : (ಕ).

[ ಡೀ + ಹೊಡೆ₁ (<ಪೊಡೆ₁) ]

**ಡುಂಡುಕ** (ನಾ). ೧. ಎರಡು ತಲೆಯ ಹಾವು ; ಡುಂಡುಭ. ೨. ವಿಷ ವಿಲ್ಲದ ನೀರುಹಾವು; ಒಳ್ಳೆ: ಭಾನುತೇಜವ ರಾಹು ಕೊಂಡಲ್ಲಿ ಸೋನೆಯ ಡುಂಡುಕ ತನ್ನಯ ಕೇಣವನೆತ್ತಿದಂತೆ (ಸುಂಕಬಂ. ೫೪). ೩. "ಹೆಮ್ಮರ ; ತಿಗಡುಮರ" (ಆಯುರ. ೮೪೫). ೪. ದುರ್ಗಸಿಂಹನ ಪಂಚತಂತ್ರದಲ್ಲಿ ಬರುವ ಒಂದು ತಿಗಣೆಯ ಹೆಸರು : ಡುಂಡುಕನೆಂಬ ತಿಗುಣೆ ಮಾಡಿದ ದೋಷದಿಂ ಮಂದವಿಸರ್ಪಿಣಿಯೆಂಬ ವಸ್ತ್ರಮೃಗಂ ಕೆಟ್ಟುದು (ಪಂಚತಂ. ೦೨೨-೦೬). [ ಸಂ. ]

**ಡುಂಡುಕೆ** (ನಾ). = ಡುಂಡುಕ : "ಡುಂಡುಭಃ - ಡುಂಡುಕೆ" (ಓಷಧಿ. ೬೪).

[ ಸಂ. ಡುಂಡುಕ ]

**ಡುಂಡುಚಿ** (ನಾ). ಒಂದು ಬಗೆಯ ಚರ್ಮವಾದ್ಯ ; ಗೊರವರು ಬಾರಿ ಸುವ ವಾದ್ಯ; ಡಮರು: ಪಂಡಿತರುಂ ವಿವಿಧ ಕಳಾಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ಕಂಡರೆ ಕೇಳ್ವೊಡೆ ಗೊರವರ ಡುಂಡುಚಿ[ಪಾಠಾಂ. ಡುಂಡುಂಚಿ]ಯೇ ಬೀದಿವಱಿಯ ಬೀರನ ಕತೆಯೇ (ಧರ್ಮನಾ. ೦-೫೬) ; 'ಗೊರವರ ಡುಂಡುಚಿ' ಯು ಪುರಾತನ ಕಾಲದಿಂದ ಹೆ ಸ ರಾ ಗಿ ದೆ (ಶರ್ಮಾಪು. ೨೬).

[ ? ]

**ಡುಂಡುಬ** (ನಾ). ಒಂದು ಬಗೆಯ ನೀರು ಹಾವು ; ಒಳ್ಳೆ : "ಡುಂಡುಬ - ವಳ್ಳೆಹಾವು" (ಅಕಾನಿ. ೧೧-೧೦). 'ಡುಂಡುಕ' ಪರಾ.

[ <ಸಂ. ಡುಂಡುಭ ]

**ಡುಂಡುಭ** (ನಾ). ೧. ಎರಡು ತಲೆಯ ಹಾವು ; ಇರ್ತಲೆಗುಯ್ಯ ; ಉರಿ ಶಿಂಗಿ : "ರಾಜಿಲಃ, ಡುಂ[ಪಾಠಾಂ. ದುಂ]ಡುಭಃ-೨ ಎರಡು ತಲೆಗಳುಳ್ಳ ಶಿಖಂಡಿಯೆಂಬ ಸರ್ಪಭೇದದ ಹೆಸರುಗಳು. ಎರಡುತಲೆ ಉರಿಶಿಂಗಿ" (ಸಿದ್ಧಾಂತಿ. ೬೫). ೨. ನೀರುಹಾವು ; ಒಳ್ಳೆ: "ರಾಜಿಳಃ, ಡುಂಡುಭಃ - ಈ ೨ ಒಳ್ಳೆ" (ಹಲಾಯು. ೦೦೩-೨೧) ; ಒಂದು ಕೃಷ್ಣತರುಣೋರಗಂ ಬಂದು ಕೊರ್ಬಿಯಾಡುವ ಡುಂಡುಭಂಗಳಂ ಕಂಡು (ಪಂಚತಂ. ೦೨೩-೨೦). 'ದುಂಡುಭ' ಪರಾ. [ ಸಂ. ]

**ಡುಗಡುಗಿ, ಡುಗುಡುಗಿ** (ನಾ). (ಉಕ) ಆತಂಕ ; ಹೆದರಿಕೆ ; ಭೀತಿ : ನನ್ನ ಮ್ಯಾಗ ಯಾವ ಏನು ಹೇಳತಾನೋ ಸರಕಾರಕ್ಕ ಅಂತ ಮೊದಲು ಡುಗಡುಗಿ ಇರ್ತಿತ್ತು (ಕ್ರಾಮೂಶ್ರ. ೨೬೬). **ಡುಗುಡುಗಿ :** ನೀ ಕಬೂಲಾ ಗತ್ಯೋ ಇಲ್ಲೋ ಅಂತ ನನಗ ಡುಗುಡುಗಿ ಇತ್ತು (ದೀಪಹ. II, ೦೪).

[ ←ಮರಾ. ಡುಗಡುಗೀ, ಡುಗಡುಗ ]

**ಡುಗುಡುಗಿ** 'ಡುಗಡುಗಿ' ನೋ.

**ಡುಣ್ಣ** (ನಾ). ಒಂದು ಬಗೆಯ ನೆಲ್ಲು,-ಬತ್ತ : ಕೊಡಗು ವಾಳಲಕಂತೆ ಹರಹಿನ ಡುಣ್ಣಗಳೊಡನೊಪ್ಪುತಿಹ ಬೈರಾವಳಿಯ ಕಡು ಸೊಬಗಾಂತಿಹ ಚಂದ್ರೋದಯ ಶಾಲಿಯೆಡೆವಿಡದೆಸೆದುಪರ್ತಿಯಲಿ (ಕಂನವಿ. ೫-೭೦).

[ ? ]

**ಡುಬರಿ** (ನಾ). ೧. ಮೇಲಕ್ಕೆ ದುಂಡಾಗಿ ಉಬ್ಬಿರುವ ಸ್ಥಿತಿ: (ಕ). ೨. ಒಂಟೆಯ ಬೆನ್ನಿನಲ್ಲಿರುವ ಉಬ್ಬು,-ಮೇಲಕ್ಕೆ ಎದ್ದಿರುವ ದುಂಡಗಿರುವ ಭಾಗ : ಅರಬೀ ದೇಶದ ಒಂಟೆಗಳ ಬೆನ್ನಮೇಲೆ ಒಂದೇ ಡುಬರಿ ಇರುವುದು (ಮುಂಬಯಿ. ೩-೬೪). 'ದಂಮ್ಮು₁' ಪರಾ.

[ ←ಮರಾ. ಡುಬರ, ಡುಬರಾ ]

**ಡುಬಲಿ** (ಗು). ಬೊಜ್ಜು ಬೆಳೆದ; ದಪ್ಪನಾದ ಶರೀರವುಳ್ಳ; ಸ್ಥೂಲ ದೇಹವುಳ್ಳ: ಸುಟ್ಟ ಮೋರೆಯ ಜನರು ನನಗೆ ಡುಬಲಿ ಅಜ್ಜ ಎಂದು ಕರೆಯುತ್ತಾರೆ (ಜಮಿನ್ನಾ. ೩೦).

[ ←ಮರಾ. ಢಬುಲಾ ]

**ಡುಬಾಯಿಸು** (ಕ್ರಿ). ೧. ನೀರಿನಲ್ಲಿ ಮುಳುಗು. ೨. ನೀರಿನಲ್ಲಿ ಮುಳುಗಿಸು. ೩. ಹಾಳುಮಾಡು; ನಾಶಮಾಡು: (ಕ).

[ ಡುಬಾ$_6$ (ಿP ←ಹಿಂ. ಡುಬಾನಾ) + – ಇಸು$_3$ ]

**ಡುಬುಕಿ**, ಡುಮಕಿ, ಡುಮುಕಿ$_2$ (ನಾ). ೧. ಮುಳುಗುವಿಕೆ. ೨. (ಅಲಂ) ಸೋಲು; ತೇರ್ಗಡೆಯಾಗದಿರುವುದು; ಅಪಜಯ. **ಡುಮಕಿ**: ೨. ಈ ಪಂದ್ಯದಲ್ಲಿಯೂ ಶಾಲೆಗೆ ಡುಮುಕಿ (ಕೂಪ). **ಡುಮುಕಿ$_2$**: ೨. ಪರೀಕ್ಷೆಯಲ್ಲಿ ಈ ಸಲವೂ ಡುಮುಕಿಯೇ (ಕೂಪ).

**ಡುಬುಕಿಹೊಡೆ** = (ಪರೀಕ್ಷೆ ಮುಂತಾದುವುಗಳಲ್ಲಿ) ತೇರ್ಗಡೆಯಾಗದಿರು; ಸೋಲು; ಫೇಲಾಗು: ರಾಮುವಿಗೆ ತೇರ್ಗಡೆಯಾಯಿತು, ವೆಂಕಟೇಶ ಡುಬುಕಿಹೊಡೆದ (ಸಂಧ್ಯಾರಾ. ೫೩).

[ ←ಹಿಂ. ಮರಾ. ಡುಬಕೀ ]

**ಡುಬ್ಬ** ‘ದುಮ್ಮು$_1$’ ನೋ.

**ಡುಬ್ಬಕಿತ್ತು** (ಕ್ರಿ). ೧. ಬೆನ್ನಮೇಲಿನ ಚರ್ಮವನ್ನು ಸುಲಿ. ೨. (ಅಲಂ) ಸ್ವಲ್ಪವೂ ಬಿಡುವು ಕೊಡದೆ ದಂಡಿಸಿಕೊಳ್ಳು; ಬೊಜ್ಜನ್ನಿಳಿಸು: ಬಡ್ಡಿಯೊಳಗೆ ಡುಬ್ಬಾ ಕಿತ್ತುವ ಸಾವಕಾರ ಏನಿರಬಹುದು (ಮನಜ. ೫).

[ ಡುಬ್ಬ (<ದುಮ್ಮು$_1$) + ಕಿತ್ತು$_3$ ]

**ಡುಬ್ಬು** ‘ದುಮ್ಮು$_1$’ ನೋ.

**ಡುಬ್ಬುಕ** ‘ದಬ್ಬುಕ’ ನೋ.

**ಡುಮಕಿ** ‘ಡುಬುಕಿ’ ನೋ.

**ಡುಮುಕಿ$_1$**, ಡಿಮಕಿ (ನಾ). ಒಂದು ಬಗೆಯ ಚರ್ಮವಾದ್ಯ: ಎಲ್ಲಿಯೋ ಒಬ್ಬ ಹಳ್ಳಿಯ ಹುಡುಗನು ಡುಮುಕಿ ಬಾರಿಸುತ್ತ ಹಾಡುತ್ತಾನೆ (ಅಕ್ಕತಂ. ೭). ‘ಟುಮಕಿ’ ಪರಾ. **ಡಿಮಕಿ**: ಬುಡಬುಡಿಕೆ, ಡಕ್ಕೆ, ಡಿಮಕಿ, ಝಾಲ್ರಿ, ಮದ್ದಳೆ, ಗೋಮುಖಾದಿ ವಾದ್ಯಗಳೂ ಉಂಟು (ಸಿದ್ಧಾಂತಿ. ೫೫).

[ ←ಮರಾ. ಢುಮಕೀ ]

**ಡುಮುಕಿ$_2$** ‘ಡುಬುಕಿ’ ನೋ.

**ಡುಮುಕು** (ನಾ). ದಪ್ಪ; ಡೊಳ್ಳು: ಡುಮುಕಾದ ಗಿಡ್ಡದೇಹ; ತೆಂಗಿನ ಕಾಯಿಗೆ ಎರಡೂ ಮಗ್ಗಲು ಮೀಸೆ ಹೊರಟಿದ್ದರೆ ಹೇಗೆ ಕಾಣಬಹುದೋ ಅಂತಹ ಮೋರೆ (ಕಾರಿಹಿಂ. ೭೨). ‘ಟುಮಕ’ ಪರಾ.

[ ←ಮರಾ. ಢುಮಕೀ ]

**ಡುಮ್ಮ** (ನಾ). ಹೊಟ್ಟೆ ಉಬ್ಬಿದವ. ‘ಡುಮ್ಮಣ್ಣ’ ಪರಾ.

[ಡುಮ್ಮು (<ದುಮ್ಮು$_1$) + – ಅ$_7$ ]

**ಡುಮ್ಮಣ್ಣ** (ನಾ). ಹೊಟ್ಟೆ ದಪ್ಪಾಗಿರುವವನು: ಕೈಕಾಲು ಸಣ್ಣ ಹೊಟ್ಟೆ ಡುಮ್ಮಣ್ಣ (ಗಾದೆ). [ ಡುಮ್ಮ + ಅಣ್ಣ$_1$ ]

**ಡುಮ್ಮಣ್ಣಿ** (ನಾ). ದಪ್ಪನಾಗಿರುವ ಹುಡುಗಿ; “ಲಠ್ಠವಂಠ್ಠ ಹುಡಿಗಿ” (ರಸಾತಾಂ. ೨೬೩). [ ಡುಮ್ಮಣ್ಣ + – ಇ$_3$ ]

**ಡುಮ್ಮಿ** ‘ದುಮ್ಮು$_1$’ ನೋ.

**ಡುಮ್ಮು** ‘ದುಮ್ಮು$_1$’ ನೋ.

**ಡುರಕಿ** ‘ಡುಙುಕು’ ನೋ.

**ಡುರಕಿಹಾಕು** ‘ಡುರುಕುಹಾಕು’ ನೋ.

**ಡುರಕಿಹೊಡೆ** (ಕ್ರಿ). = ಡುರುಕುಹಾಕು: (ಕ).

[ ಡುರಕಿ (<ಡುಙುಕು) + ಹೊಡೆ$_1$ (<ಪೊಡೆ$_1$) ]

**ಡುರಿಕೆ** ‘ಡುಙುಕು’ ನೋ.

**ಡುರುಕಿಡು**, ಡುರ್ಕಿಡು (ಕ್ರಿ). = ಡುರುಕುಹಾಕು: ಉಭಯಕರ್ಣಂಗಳಂ ನಿಮಿರ್ಚಿ ನೆಲನ ವಡನೆ ಘ್ರಾಣಿಸುತ ಡುರುಕಿಡಲಜಾಂಡದ ಘಟಂ ನಡುಗಿತ್ತು (ನವಮೋ. ೬-೪೫). **ಡುರ್ಕಿಡು**: ಇರ್ಕೆಲದ ದಾನವರನಿಱಿವುತುಂ ಮುಱಿವುತುಂ ಡುರ್ಕಿಡುತ್ತಸುರರಂ ಕೆಡವುತುಂ . . . ವೃಷಭಂ ಪ್ರಹಾರಿಸಿದನು (ಚಬಪು. ೪೪-೧೮). [ ಡುರುಕು (<ಡುಙುಕು) + ಇಡು$_1$ ]

**ಡುರುಕು** ‘ಡುಙುಕು’ ನೋ.

**ಡುರುಕುಹಾಕು**, ಡರಿಕೆಹಾಕಂ, ಡುರುಂಕಿಹಾಕು, ಡುರುಕೆಹಾಕು (ಕ್ರಿ). (ಎಮ್ಮೆ, ಗೂಳಿ, ಹಂದಿ, ಗೊಂಕರುಕಪ್ಪೆ ಮೊದಲಾದ ಪ್ರಾಣಿಗಳು) ಕರ್ಕಶ ಧ್ವನಿಮಾಡು; ಗುಟುರುಹಾಕಂ: ಹಂದಿ ಡುರುಕುಹಾಕಿದ ಶಬ್ದ ಕೇಳಿಸಿತು (ನಡಮಾ. II, ೧೧೩೯). **ಡರಿಕೆಹಾಕು**: ಕಪ್ಪೆಗಳು ಎತ್ತುಗಳಿಗಿಂತ ಎತ್ತರವಾಗಿ ಡರಿಕೆಹಾಕಬಹುದು (ಪ್ರವಾಕೋ. ೬೩). **ಡುರಕಿಹಾಕು**: ಎಮ್ಮೆಯೊಂದು ಮೈಯಲ್ಲಿ ತುಂಬಿದ್ದ ಸೊಳ್ಳೆಗಳೊಂದಿಗೆ, ಡುರಕಿಹಾಕುತ್ತ ಒಳಗೆ ನುಗ್ಗಿಬಿಟ್ಟಿತು (ಮಲಿನಾ. ೨೬); ಎತ್ತುಗಳು ಡುರಕಿಹಾಕುತ್ತವೆ (ಮುಂಬಯಿ. ೩-೧೮). **ಡುರುಕೆಹಾಕು**: ಎರಡು ಗೂಳಿಗಳು ಸೊಕ್ಕಿಗೆ ಬಂದು ಎರಡನೇ ದನಗಳನ್ನು ಇರಿಯುತ್ತ ಡುರುಕೇಹಾಕುತ್ತ (ಮುಂಬಯಿ. ೫-೯೦). [ ಡುರುಕು (<ಡುಙುಕು) + ಹಾಕು (<ಪಾಯ್ಕು$_1$) ]

**ಡುರುಕೆ** ‘ಡುಙುಕು’ ನೋ.

**ಡುರುಕೆಹಾಕು** ‘ಡುರುಕುಹಾಕು’ ನೋ.

**ಡುರ್ಕಿಡು** ‘ಡರುಂಕಿಡು’ ನೋ.

**ಡುರ್ಕೆ** ‘ಡುಙುಕು’ ನೋ.

**ಡುಲಿ**, ಡುಳಿ (ನಾ). ಹೆಣ್ಣಾಮೆ: “ಡುಲಿ[ಪಾಠಾಂ. ಢುಳಿ]ಯೆನಲು ಹೆಣ್ಣಾಮೆಯಕ್ಕುಂ” (ಮಂಗರಾ. ೧೨೦-೮). **ಡುಳಿ**: ‘ಡುಳಿರಾಜ’ ಪರಾ.

[ ಸಂ. ]

**ಡುಳಿ** ‘ಡುಲಿ’ ನೋ.

**ಡುಳಿರಾಜ** (ನಾ). ೧. ಆಮೆಗಳ ಒಡೆಯ; ಕೂರ್ಮಪತಿ; ದೊಡ್ಡ ಆಮೆ. ೨. ವಿಷ್ಣುವಿನ ಅವತಾರಗಳಲ್ಲೊಂದಾದ ಮಹಾಕೂರ್ಮ; ಕವಂತ: ಡುಳಿರಾಜನಿಲ್ಲದೆಡೆ ಧರಣಿ ನಿಲ್ಲುವದುಂಟೆ ನಳಿನಾಪ್ತನಿಲ್ಲದಡೆ ನಡೆವುದೇ ಜಗವು (ದೇವೀಪ್ರ. ೩೬). [ ಡುಳಿ (= ಡುಲಿ) + ರಾಜ ]

**ಡುಳ್ಳಿ** (ನಾ). ವಂಚನೆ; ಸುಳ್ಳು: ತಲ್ಲಣಿಸಿ ನಿಲಲಾರದಾ ಖಳಂ ಕೈಯೊಡನೆ ಡುಳ್ಳಿಯಿಂದಾ ಮುನಿಪನುರುಶಿರೋಲಕ್ಷ್ಮಿಯಂ ಕೊಳ್ಳೆಗೊಂಡೆಡಹುತಂ (ಶರಶು. ೩೫-೨೫); ಡುಳ್ಳಿಯೋ ಸತ್ಯಮೋ ಎಂಬೆನೆ (ಹಾಉಸ್ಕ. ೩-೧೧-೦೩).

[ ? ]

**ಡುಳ್ಳಿಮನ** (ನಾ). ಸುಳ್ಳುಮನಸ್ಸು; ಕ್ಷುದ್ರಮನ (?): ಕಳ್ಳಕನ್ನಡಿ ಸಾಯಿ. ಡೊಳ್ಳು ಕೋಮಟಿಗನಾ ಹುಳ್ಳಿ ನಯಶೂಲಯೇರಿಮಾಯಂಬಗಾದೆ ಡುಳ್ಳಿಮನವು ಯಿದು ಪಾಪವ ಮಾಡ್ದರೆ ಸುಳ್ಳಿಗೆ ಆತ್ಮಗೆಯೆಂದು ವೂಹಿಸುವರು (ಚಿದಾಪ. ೧೦-೮). [ ಡುಳ್ಳಿ + ಮನ ]

**ಡುಱುಕೆ** ‘ಡುಙುಕು’ ನೋ.

**ಡುಙುಕಾರವ** (ನಾ). ಡುರುಕಿನ ಗಟ್ಟಿಯಾದ ಶಬ್ದ; ಗುಟುರು: ತೋರ ಹೋರಿಗಳ ಡುಙುಕಾರವಂ ಗಳದ ಘಂಟಾರವಂ ಪಶುಗಳಂಬಾರವಂ (ಚಬಪು. ೧೧-೧೭). [ ಡುಙುಕು + ಆರವ ]

**ಡುಙುಕು**, ಡರಕೆ, ಡರಿಕೆ, ಡುರಕಿ, ಡುರಿಕೆ, ಡುರುಂಕು, ಡುರುಕೆ ಡುರ್ಕೆ, ಡುಱುಕೆ (ನಾ). ೧. (ಎಮ್ಮೆ, ಗೂಳಿ, ಹಂದಿ, ಗೊಂಕರಂ ಕಪ್ಪೆ ಮೊದಲಾದ ಪ್ರಾಣಿಗಳು ಮಾಡುವ) ಒಂದು ಬಗೆಯ ಕರ್ಕಶ ಶಬ್ದ; ಗುಟರು. ‘ಡುಙುಕನ್’ ಪರಾ. **ಡರಕೆ**: ೧. ಗೂಳಿಯ ಡರಕೆ (ಗುಟರು) ಇವು ಶಬ್ದಾನುಕೃತಿಯೇ (ಕರ್ಣಾಟ. ೩೩೯). **ಡರಿಕೆ**: ೧. ‘ಡರಿಕೆಹಾಕು’ ಪರಾ. **ಡುರಕಿ**: ‘ಡುರಕಿಹಾಕು’ ಪರಾ. **ಡುರಿಕೆ**: ೧.

ದೂರದಿಂದ ಡುರಿಕೆ ಕೇಳಿಸಿತು ಅದು ಕಾಡುಹೋರಿಯ ಡುರಿಕೆಯಾಗಿತ್ತು (ಬಂಗಾಹ. ೧೮). ೨. ನಿದ್ದೆಯಲ್ಲಿ ಮೂಗಿನಿಂದ ಹೊರಡುವ ಶಬ್ದ ; **ಗೊರಕೆ** : ಇಬ್ಬರೂ ಮಹಾ ಕುಡುಕರು . . . ವಿದ್ಯಾಬುದ್ಧಿಗಳ ಪರಿಚಯವಾದದ್ದು ಇಲ್ಲಿಯವರೆಗೆ ಇವರ ಡುರಿಕೆ ಮಾತ್ರ (ಕುರಿಹಿಂ. ೧೧೭) **ಡುರುಕು** : ೧. 'ಡುರುಂಕಿಡು', 'ಡುರುಕುಹಾಕು' ಪರ್ಯಾ. **ಡುರುಕೆ** : ೧. 'ಡುರುಂಕೆಹಾಕು' ಪರ್ಯಾ. **ಡುರ್ಕು** : ೧. 'ಡುರ್ಕಿಡು' ಪರ್ಯಾ. **ಡುಟಿಕೆ** : ೧. ಬಸವನಾಗವಗಡಿಸುತೆದ್ದು ಪುಟನೆಗೆದು ಡುಟಿಕೆಯನಿಕ್ಕುತವರ ಬಲವರುತ (ಗುರುಚಾ. ೧೦-೮೮).

**ಡುಜುಕೆನ್** (ನಾ). = ಡುರುಕುಹಾಕು : ಪಂದಿ ಡುಜುಕೆಂದೊಡೆ ತಾಂ ಡುಜುಕೆಂಬುದೆ ಮಹಾವನಕರಿಯಂ ವಿದಾರಿಸುವ ಸಿಂಹಂ (೧ರಿಳ. ೧-೨೯) ; ಪರಪ್ರತಿಭೆಯ ಗುಣ್ಪಱಿಯದೆ ತಾಮುಂ ಕೆಮ್ಮಗೆ ಡುಜುಕೆಂಬುವು ಕುಕವಿಕೂಪಮಂಡೂಕಂಗಳ್ (ಅನಂಪು. ೧-೪೨) ; ಪಂದಿಯೊಂದು ಡುಜುಕೆಂದೊಡೆ ಸಿಂಗಮಂಡಲೆವುದೆ (ರಾಮಾಶ್ವ. ೨೫-೨೩).

[ ಡುಜುಕು + ಎನ್$_1$ ]

**ಡೂಗ** (ನಾ). ೧. ಗೂನುಬೆನ್ನಿನವನು; ಗೂನ ; ಬೆನ್ನುಬಾಗಿದವನು: ೧ನೇ ವಿಷ್ಣುವರ್ಧನನು ಇವನಿಗೆ ಕುಬ್ಜ ವಿಷ್ಣುವರ್ಧನನೆಂಬ ಹೆಸರಿದ್ದ ಕಾರಣ ಇವನು ಡೂಗನಿದ್ದಂತೆ ತೋರುತ್ತದೆ (ಕಭಾಗೆ. ೩೨೪) ; ಏನಿಲ್ಲ, ಹಲ್ಲು ಬಿದ್ದಾವೆ, ಮೇಲಾಗಿ ಡೂಗನಿದ್ದಾನೆ (ದೇಯೂನಿ. ೦೫೨). (ಗು). ೨. ಬೆನ್ನು ಬಗ್ಗಿದ ; ಗೂನುಬೆನ್ನಿನ : ಆ ಡೂಗ ಹೆಂಗಸು ಅಂದಿನಿಂದಲೂ ಇಲ್ಲಿಯೇ ಇದ್ದಾಳೆ (ಹೊಸಕ್ಷಿ. ೧೮೯). [ ಡೂಗು$_2$ + – ಅ$_7$ ]

**ಡೂಗು$_1$** (ಕ್ರಿ). ಬಾಗು ; ವಕ್ರವಾಗು ; ಗೂನಾಗು.

**ಡೂಗಿಕೊಳ್** = ಬಗ್ಗಿಕೊಳ್ಳು ; ಬೆನ್ನನ್ನು ಬಗ್ಗಿಸು : ಅವರ ತಾಯಿ ವೆಂಕಮ್ಮ ಡೂಗಿಕೊಂಡೇ ಅಲ್ಪ ಸ್ವಲ್ಪ ಕೆಲಸಮಾಡುತ್ತ ಹೊರಗೇ ಇದ್ದಳು (ದಂಬನಾ. ೨). [ ? ]

**ಡೂಗು$_2$** (ನಾ). ಬೆನ್ನು ಬಗ್ಗಿರುವಿಕೆ ; ಗೂನು ; ಕುಬ್ಜತೆ.

**ಡೂಗಾಗು** = ಗೂನುಬೆನ್ನಿನಿಂದ ಕೂಡಿರು ; ಗೂನಾಗು : ಅದೇ ಹೆಂಗಸು ಇನ್ನೂ ಅಷ್ಟೇ ಡೂಗಾಗಿ ಬಿಲ್ಲಿನಂತೆ ಬಾಗಿ ನಡೆಯುತ್ತಿದ್ದಾಳೆ (ಹೊಸಕ್ಷಿ. ೧೮೮) ; ಯಾವಾಗಲೂ ಡೂಗಾಗಿ ಕೈಯೂರಿ ಇಲ್ಲವೇ ಗಾದಿ, ಗೋಡೆ ಕಂಬಳಿಗಾತು ಕುಳಿತದ್ದೇ ಕಂಡುಬರುವದು (ಬ್ರಹ್ಮಜೀ. ೨೪).

[ < ಡೂಗು$_1$ ]

**ಡೆಂಕ** 'ಡಕ್ಕೆ' ನೋ.

**ಡೆಂಕಣ** 'ಡೆಂಕಣಿ' ನೋ.

**ಡೆಂಕಣಿ, ಡೆಂಕಣ, ಡೆಂಕಣೆ, ಡೆಂಕಳಿ, ಡೇಂಕಣೆ, ಢೆಂಕಣ, ಢೆಂಕಣಿ, ಢೇಂಕಣಿ, ಢೇಂಕಣೆ** (ನಾ). ೧. ಕೋಟೆಗಾಳಗದಲ್ಲಿ ಉಪಯೋಗಿಸುತ್ತಿದ್ದ ಒಂದು ಯಂತ್ರ; ಕಲ್ಲುಗುಂಡುಗಳನ್ನು ತೂರುವ ಯಂತ್ರ: ಪುದಿದಿರ್ದಟ್ಟಳೆ ಪೆಟ್ಟದಾಳ್ವೆಱಿಯಗುರ್ವಾಗಿರ್ದ ಮೇಲ್ಗೊತ್ತಳಂ ಕದನಕ್ಕದ್ಭುತಮಪ್ಪ ಡೆಂಕಣಿ (ಎಕ. V, ಅರಸೀ. ೫-೦೨ ; 1194) ; ಎತ್ತಿಡುತಿರ್ಪ ಡೆಂಕಣಿಗಳಾರ್ದುಱಿ ಪಾಯಿಪ ಗೆಗ್ಗ . . . ಪೊಯ್ವ ಲಗ್ಗೆವಱಿ ಬೊಬ್ಬೆಱಿವಬ್ಬರಮಾಗಳದ್ಭುತಂಬೆತ್ತುದು (ಕುಸುಮಾ. ೧೧-೪೦) ; ಗೆಗ್ಗ ಡೆಂಕಣಿ ಗುಮ್ಮಂ ಪಡಿಗೋಂಟೆಯೆಂಬ ಬಹು ಕೋಟಾಯಂತ್ರ ಸಾಮಗ್ರಿ ತಿಂತಿಣಿಗೊಂಡಾಂತಿರೆ (ಅನಂಪು. ೧೦-೮೩); ತೂಳ್ದಿಡುವ ಡೆಂಕಣಿ ಪೊಯ್ಯುವರಿಯೆಣ್ಣೆ ಕಾಸಿ ಸೂಸುವ ಮಳಲೆಂಬಿವೆತ್ತಲುಮಗುರ್ವಿಸೆ (ಪುಷ್ಪಪು. ೬-೭೪); ಸಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ತೋಱಿದೆಡೆಗೆ ಸಿಡಿವಡೆಂಕಣಿ ರಾಯಡೆಂಕಣಿಗಳ ಸಾಲು ಬಿಡದೊಪ್ಪಿದುವು (ಕುರಾಸಾಂ. ೪೨-೩೯) ; ತರತರದೊಳಿರಿಸಿರ್ದ ಬಲ್ದೊಲೆಯ ಡೆಂಕಣಿಯ . . . ಮೊತ್ತಂಗಳಾಳ್ವೇರಿಯೊಳ್ ಪಸರಿಸಿದುವು (ಜಬಪು. ೪೨-೧೦). ೨. ಕೊತ್ತಳಗಳ ಮೇಲೆ ಪೊದರಿನಂತೆ ಒತ್ತೊತ್ತಾಗಿ ಅಳವಡಿಸಿ ನಿಲ್ಲಿಸುವ ಉದ್ದವಾದ ಸಬಳದಂತಹ ಒಂದು ಆಯುಧ ವಿಶೇಷ : ನಟ್ಟ ಡೆಂಕಣಿಗಳೋಹಗೆಗಳನು ದುರ್ಗವಱಿಯಟ್ಟಲೆತ್ತಿದ ಹಲವು ಕೈಯೊ (ಹಚಕಾ. ೧-೩೭) ; ಅಟ್ಟಳೆಯಾಳ್ವೇರಿ ಕೊತ್ತಲಂಗೊಳಳಪಟ್ಟಡೆಂಕಣಿ ಸಬಳಗಳು ನಟ್ಟರಂತೆಯದ ಕಂಭಗಳಿಂದಾ ದುರ್ಗ ಸೃಷ್ಟಿಗೆ ಪೊಸತಾಗಿಹುದು (ಜೀವಂಸಾಂ. ೮-೦೦); ದೇವತೆಗಳ ಮುಟ್ಟಿ ತಿವಿದ ಸಬಳಗಳೊಯೆಂದೆನಲಲ್ಲಿ ನೆಟ್ಟ ಡೆಂಕಣಿಗಳೆಸೆದವು (ಕುರಾಸಾಂ.೦೭-೦೪); ಕನ್ನಡದಲ್ಲಿಯ ಕೋಶಕಾರರೆಲ್ಲರೂ ಧ್ವಜಸ್ತಂಭ ಎಂಬ ಅರ್ಥ ಹೇಳಿರುವರು. ಆದರೆ ಕೋಟೆಗಾಳಗದಲ್ಲಿ " ಮಾರಿಮೊಗದಡೆಂಕಣಿ " ಮಾಡುವ ಹಿಂಸಾಕಾರ್ಯವನ್ನು ನೋಡಿದರೆ, ಅದೊಂದು ಭವ್ಯವಾದ ಆಯುಧ ವಿಶೇಷ (ಕರ್ನಾಟ. ೫೭). 'ಡೊಂಕಣಿ' ಪರ್ಯಾ. ೩. ಕೋಟೆಯ ಮೇಲಿನಸಬುರುಜು; ಬತ್ತೇರಿ: ಬಳಸಿದ ಕೊತ್ತಳಂ ಸೊಗಯಿಪಾಳ್ವರಿ ಡೆಂಕಣಿ ಸಾರವಾಗಿಯಗ್ಗಳಿಸುವ ಗೋಪುರಂ (೧ರಿಳ. ೨-೭೯); ಅಗಟುಂ ಪ್ರಾಕಾರದಿಂ ಡೆಂಕಣಿಯಿನನುಪಮದ್ವಾರದಿಂ ಸತ್ಪತಾಕಾವಳಿಯಿಂದಾಳ್ವೇರಿಯಿಂ . . . ಬಗೆಗೊಳ್ಪಂ ಬೀಱಿ (ದಶಕು. ೬-೯) ; ಇತ್ತರದೊಳುದ್ದಕ್ಕೆ ಕೋಂಟೆಯಕೊತ್ತಳಂಗಳ ಸಂದಿಸಂದಿಯೊಳೆತ್ತಿಸಿದನಟ್ಟಣೆಗಳಂ ಡೆಂಕಣಿಗಳಂ (ಬಸಪು. ೦೭-೯); ಸಿದ್ಧ ಕಂಡನು ಮುಂದೆ ಮಾರ್ಗವ ಹೊದ್ದಿತೆನೆ ಕೊತ್ತಳವ ಡೆಂಕಣಿ ಚಿತ್ರಕೆಲಸದಿ ಪಚ್ಚೆಲೋಹದಯೆಸೆವ ಕದಗಳನು (ರೇವಳ. ೨-೫); ಬಗೆವೆತ್ತ ಪವಳ ಡೆಂಕಣಿಗಳಿಂದಂ ಮುತ್ತು ಬಿಗಿದಟ್ಟಣಗಳಿಂದೆ . . . ಝಗಝಗಿಸುತೊರ್ಪುದುದು (ಹೀರವು. ೦-೩೨) ; ಗಗನಲಂಬಿತ ನೀಲದಟ್ಟಳೆಯ ಕಟ್ಟಳೆಯ ಮಣಿಮಯದ ಡೆಂಕಣಿಗಳ (ರುಕ್ಮಾಂಗ. ೩-೪) ; ಕ್ರಮದ ಡೆಂಕಣಿ ಕೋಟೆ ಗೋಪುರಗಳಿಂದ ಆಶ್ಚರ್ಯವಾದಂಥ ಅರಮನೆಗಳಿಂದ (ಯನಳ. ೯). ೪. ಕೋಟೆಯಂ ಮೇಲಿನ ಬುರುಜುಗಳ ಮೇಲೆ (ಸಾಮಾನ್ಯವಾಗಿ ಎಂಟು ಕಡೆಗಳಲ್ಲೂ) ನೆಟ್ಟಿರುವ ನಿಶಾನಿಯೊಡನಿರುವ ಅಥವಾ ನಿಶಾನಿಯಿಲ್ಲದ ಧ್ವಜಸ್ತಂಭ : ಕಂಣಿವ ಪಲ್ಲವ ಝಲ್ಲರಿಯ ಡೆಂಕಣಿಯ ತಲೆ ಚಮರಿಗಳ ಗಗನಾಂಗಣವನಣೆವ ಪತಾಕೆಗಳ . . . ಲಗ್ಗೆವಱಿಗಳಲೆಸೆದುದಾ ದುರ್ಗ (ತೊರರಾ. ೬-೭-೦೭) ; ಎತ್ತಿದ ಛತ್ರ ಚಾಮರ ಚೌಕ ಡೆಂಕಣಿ ಮತ್ತು ಕಾಲಾಳ ಘರ್ಜನೆಯು (ದೇವಾಂಪು. ೩-೧೯೩) ; ಹಮ್ಮಿನಲಿ ಸಗ್ಗಿಗರ ಕರೆವಂತೆ ಕೈಯೆತ್ತಿ ಗಮ್ಮನೆಯ ಡೆಂಕಣಿಗಳೆಸೆಯೆ (ಪ್ರಾಭರಾ. ೦-೩೭) ; ನೋಟಕರ ಕಣ್ಗೆ ಕಾಣಿಸಿದುವೆಣ್ದೆಸೆಯ ಡೆಂಕಣಿಯ ಪಳವಿಗೆಗಯ್ಗಳು (ಜೈಮಿಭಾ. ೦೭-೯); ಕುಂಭಿನಿ ಕೈನೀಡಿ ಕರವೋಲು ಡೆಂಕಣಿ ಮುಂಬರಿದೆಸೆದುವರ್ತಿಯಲಿ (ಕಂನವಿ. ೬-೮) ; ಅಗಣಿತೋನ್ನತ ಹರಿಮಯುದ ಡೆಂಕಣಿಗಳೊಪ್ಪಿದುವು (ಕೋಗಯು. ೩-೮) ; ಜೀವಮಾನದ ಕಟ್ಟಡದಲ್ಲಿ ಆ ಒಂದು ಕ್ಷಣದ ಬಾಳು ಗೋಪುರದ ತುದಿಯ ಕಳಶದ ಚಿನ್ನದ ಡೆಂಕಣಿಯಾಗಿ ಸ್ವರ್ಗದೊಡನೆ ಸರಸವಾಡಿತು (ಮಶಿಮ. ೫೨). **ಡೆಂಕಣ** : ೧. ಇಡಿಸುವ ಡೆಂಕಣಕ್ಕೆ ನೆಲವಾಳಿಗೆ ಕೊತ್ತಳದಂಬುಗುಂಡಿಯಿಂದುಡುಗದೆ . . . ಗಡಣಿಸೆ ಕಾದುತಿರ್ದುದು ಮಹೇಂದ್ರ ಪದಾತಿನಿ ಮುತ್ತಿ ಸುತ್ತಲುಂ (ಚಂದ್ರಪು. ೫-೧೦೭). ೩. ಇರಲಿಯಿತ್ತೊಳಗೇಳುಕೋಟೆಯ ತೆರನು ಮರಕತ ಸುತ್ತು ಮೇಲುರುತರದ ಕೆಂಪಿನ ಸುತ್ತು ತೆನೆಗಳು ಡೆಂಕಣಟ್ಟಣೆಯೂ (ಜಿರಾಮಾ. ೨೪-೨೭). **ಡೆಂಕಣೆ** : ೧. ನಿಱಿಸಿದ ಬಸಿಯೊಳಂ ಪೂಸಿದ ಡೆಂಕಣೆಯೊಳಂ . . . ಮೊನೆಯಂ ಪೂಣಿಸಿದ ಕೊಂತದೊಳಂ ಕೈಗೆಯ್ದು ಕಟ್ಟಾಸುರಮಾಗೆ (ಅನಂಪು. ೧೧-೮೨ ವ) ; ಡೆಂಕಣೆ[ಪಾಠಾಂ. ಣಿ]ಯ ಗವಣೆಗಳ ಕೋಟೆಯ ಕೊಂಕುಗಳ ಕೊತ್ತಳದ ತೆನೆಗಳ . . . ದುರ್ಗವನೀಕ್ಷಿಸುತ (ನಿಭಾಗ. ೧೦-೩೭-೩೫); **ಡೆಂಕಣೆ ಕವಣೆ** ಧ್ರುವಲೋಕವ ಹಾಯಲಿಡುವ ಮಕರಡಿಬ್ಬೆ ಕವಿದ ದುರ್ಗದೊಳಿಹವು (ಸೌಂದಕಾ. ೫-೩೪). **ಡೆಂಕಳಿ** : ೪. ಪಳಹರದ ಪಲ್ಲವದ ಸತ್ತಿಗೆಯಗಳ ವಿಡಾಯಿಯಲರಿಬಿರುದ ಡೆಂಕಳಿಯ ಸೀಗುರಿ ಪೊದರುಗಳ ತೋಮರದ

ಸಂದಣಿಯು (ಕುಮಾ.ರ್ಯೂ. ೦೧೩. ಪರಿ. ೨೮೭). **ಡೇಂಕಣೆ:** ೩. ಮೂರು ಸುತ್ತಿನ ಪರಿಧಿ ತಾಂಬ್ರದಿ ತೋರೆ ತೆನೆ ಡೇಂಕಣೆಗಳಟ್ಟಣೆ (ಬಿಜ್ಜ.ಪು. ೨೦–೨೦).
**ಥೆಂಕಣ:** ೧. ವರ್ಗಚತುರ್ಥಾಕ್ಷರಂಗಳ್ಗೆ . . . ಥೊಂಕಣಿ, ಥೆಂಕಣ [ಪಾಠಾಂ. ಣಿ]ಅಥಾಳಂ (ಥಾಳಂ) (ಶಮದ. ೦೫ ಪ್ರಯೋ). **ಥೆಂಕಣಿ:** ೧. ಇಟ್ಟಿಡುವ ಥೆಂಕಣಿ ಶಿಲೋಚ್ಚರಮನಿಕ್ಕು (ಮಂಗರಾ. ೩೭–೫). **ಥೇಂಕಣಿ:** ೧. ಆತುರದಿಂ ಥೆಗ್ಗೆ ಥೇಂಕಣಿ ನೆಲಗುಮ್ಮ ಮಾತೇನು ಗಗನದಟ್ಟಳೆಯು (ಅನಂತ. ೧೮–೫೨). **ಥೇಂಕಣೆ:** ೧. ಕಲ್ಲೆ ಹೆಗ್ಗೊಬಿದುಱಿಯೆಣ್ಕೆ ಕಾಯ್ದ ಮಣಲಗ್ಗದ ಥೇಂಕಣೆ (ಸೌಇಇ. XX, ೦೨೭–೪ ; 1186).
**ಡೆಂಕಣಿಯ ಗುಂಡು** = ಡೆಂಕಣಿಯಂ ಯಂತ್ರದಿಂದ ಚಿಮ್ಮಿಸುವ ಇಡುಗುಂಡು: ಉಟ್ಟ ವಸ್ತ್ರವು ಬಳಸಿದ ಕೋಂಟೆಯಗಟ್ಟೆ. ಕಟ್ಟಿದ ಕಟಿಸೂತ್ರವೆಸೆಯೆ ಬಟ್ಟಮೊಲೆಯು ಡೆಂಕಣಿಯ ಗುಂಡಿಂದಳವಟ್ಟ ಜಂಗಮ ದುರ್ಗದಂತೆ (ಅಂಜಜ. ೮–೮೪).

**ಡೆಂಕಣಿಕಾಱ** (ನಾ). ಡೆಂಕಣಿಯನ್ನು ಬಳಸುವುದರಲ್ಲಿ ನಿಯುಕ್ತನಾದವನು: ಕಾಳಗದಲಿ ಡೆಂಕಣಿಕಾಱ ಡಾವುದ (ಬೊಂಕಶಾ. ೦೧೪೦, ಸಿರಸಿ. ೪೨–೮ ; ?). [ಡೆಂಕಣಿ + – ಕಾಱ]

**ಡೆಂಕಣಿಕುಲ** (ನಾ). ಡೆಂಕಣಿಗಳ ಸಮೂಹ,–ಗುಂಪು; ಇಡುಗುಂಡು ಮೊದಲಾದುವನ್ನು ಚಿಮ್ಮುವ ಯಂತ್ರಗಳ ಸಮೂಹ: ಬಲೆಗೆಯ್ಯಲನೆಯುನೆಂಬುದು ವೇಶ್ಯಾವಲಿಯೊಳ್ ಕೂಲೆಗ್ಯೆಯೆಂಬುದು ಡೆಂಕಣಿ ಕುಲದೊಳ್ (ಉದ್ಭದೀ. ೨–೦೩). [ಡೆಂಕಣಿ + ಕುಲ]

**ಡೆಂಕಣಿಕ್ಕೆ** 'ಡೆಂಕಣಿಗ್ಗೆ' ನೋ.

**ಡೆಂಕಣಿಗ್ಗೆ, ಡೆಂಕಣಿಕ್ಕೆ, ಡೆಂಕಣೆಗ್ಗೆ** (ನಾ). ಗುಂಡನ್ನು ಚಿಮ್ಮಿಸಲು ಡೆಂಕಣಿಯಂತ್ರಕ್ಕೆ ತುದಿಯಲ್ಲಿ ಜೋಡಿಸಿರುವ ಮಾರಿಮೊಗದ ಅಥವಾ ಹಂದಿ ಮೊದಲಾದ ಪ್ರಾಣಿಗಳ ತಲೆಯ ರಚನೆ ಇರುವ ತೋಳಿನ ಆಕಾರದ ಕೈ; ಡೆಂಕಣಿಯಲ್ಲಿ ಅಳವಡಿಸಿರುವ ಚಿಮ್ಮುಗೋಲು: ಬಲಿವ ಪೆಟಲ ಬೆಣೆ ಡೆಂಕಣಿ[ಪಾಠಾಂ. ಣೆ]ಗ್ಗೆ ಪಂದಿದಲೆ ತಿರುಗುಣಿ ಭೀಮಗದೆಯು ಬಲಿದು ಕೆತ್ತುವ ಬಡಗಿ (ಕುರಾಸಾಂ. ೩೭–೫೮). **ಡೆಂಕಣಿಕ್ಕೆ:** ಒಡಿಗುಂಡಿಟ್ಟು ಕವಣೆಯಾಂತ ಸತಿಯರ ನಿಡುದೋಳ್ಗಳೆಸೆದುವಾ ಕಂತು ಕಡುಮುಳಿಸಿಂ ಪಾಂಥರೆರ್ದೆಗೋಂಟೆಯ ಮುತ್ತಿಯಿಡುವ ಡೆಂಕಣಿಕ್ಕೆಗಳಂತೆ (ಶ್ರೀಪಾಲ. ೧–೫೨); ಡೆಂಕಣಿಕ್ಕೆ ಡೆಗ್ಗೆವರೆ ಪಾರೆ . . . ಶರಗಳ ಸಂಕುಳವೃದಿತು (ಕುರಾಸಾಂ. ೪೦–೫೦). **ಡೆಂಕಣೆಗ್ಗೆ:** ಮೇಲಿನ 'ಕುರಾಸಾಂ. ೩೭–೫೮'ರ ಪ್ರಯೋಗದ ಪಾಠಾಂತರವನ್ನು ನೋಡಿ.
[ಡೆಂಕಣಿ + ಕೈ$_2$ (<ಕೆಯ್$_2$)]

**ಡೆಂಕಣಿಜಂತ್ರ** (ನಾ). ಇಡುಗುಂಡುಗಳನ್ನು ಚಿಮ್ಮಿಸುವ ಯಂತ್ರ: ಗಿರಿಯ ಡೆಂಕಣಿಜಂತ್ರವನು ತರಹರಿಸುವವರಾರರಸ (ಕುಮಾ.ಕ. ೨೩–೩೭).
[ಡೆಂಕಣಿ + ಜಂತ್ರ]

**ಡೆಂಕಣೆ** 'ಡೆಂಕಣಿ' ನೋ.

**ಡೆಂಕಣೆಗ್ಗೆ** 'ಡೆಂಕಣಿಗ್ಗೆ' ನೋ.

**ಡೆಂಕಳಿ** 'ಡೆಂಕಣಿ' ನೋ.

**ಡೆಂಕೆ$_1$** 'ಡಕ್ಕೆ' ನೋ.

**ಡೆಂಕೆ$_2$** (ನಾ). ಗೋಡೆಗಳ ಮೇಲೆ ಅಥವಾ ಕಂಬಗಳ ಮೇಲೆ ಮನೆಯ ಮಾಡನ್ನು ಹೊರಲು ಹಾಕಿದ ಮರದ ಅಡ್ಡೆ; ಜಂತೆ: ಮೃಗಲಕ್ಷ್ಮನುದಯದೊಳ್ ನಿಲಿಸುಗೆ ಕಂಬಮನಿಂದುಸುತನ ಲಗ್ನಂಬರೆ ಬೆಟ್ಟುಗೆ ಡೆಂಕೆ[ಪಾಠಾಂ. ಜಂತೆ]ಗಳಂ (ಲೋಕೋಪ. ೩–೨೬); ಥಕಾರಕ್ಕೆ ಡಕಾರಂ—ಗಾಢ—ಗಾಡ; ಥಕ್ಕಾ—ಡಕ್ಕೆ; ಥೆಂಕಾ—ಡೆಂಕೆ (ಶಮದ. ೨೫೫ ಪ್ರಯೋ).
[<ಪ್ರಾ. ಥೇಂಕಾ = ಬಾವಿಯ ಮೇಲಿನ ಅಡ್ಡತೊಲೆ]

**ಡೆಂಕೆಬರ** (ನಾ). ಭಯಂಕರವಾದ ಕ್ಷಾಮ; ಬರಗಾಲ: ಭರಮಪ್ಪ ನಾಯಕನ ಆಳಿಕೆಯಲ್ಲಿ ವೀರಕ್ಷಾಮ ಪ್ರಾಪ್ತವಾಯಿತು. ಇದಕ್ಕೆ 'ಡೆಂಕೆಬರ' ವೆನ್ನುತ್ತಾರೆ (ಚಿತ್ರಪಾ. ೮, ಉಪೋದ್ಘಾತ). 'ಡೋಗಿಬರ' ಪರಾ.
[ಡೆಂಕೆ$_0$ + ಬರ$_1$ (<ಬಱ)]

**ಡೆಂಗಿಜ್ವರ** (ನಾ). "ಮೈ ಮೇಲೆ ಗುಳ್ಳೆಗಳೆದ್ದು ಜ್ವರಬಂದು ಕೀಲುಗಳಲ್ಲಿ (ಸಂಧಿಗಳಲ್ಲಿ) ತೀವ್ರಯಾತನೆಯಾಗುವ ಸೋಂಕುರೋಗ: 'ಡೆಂಗಿ ಜ್ವರ" (Dengue. ಇಂಕನಿ.). [ಡೆಂಗಿ$_0$ + ಜ್ವರ]

**ಡೆಂಚಾ** (ನಾ). ಒಂದು ಬಗೆಯ ಗಿಡ: ಸಣಬು (Sunhemp), ಕಳಂಜಿ, ಡೆಂಚಾ ಮೊದಲಾದ ಗಿಡಗಳನ್ನು ಬೆಳೆಯಿಸಿ ಅವುಗಳನ್ನು ನೆಲದೊಳಕ್ಕೆ ಉತ್ತುಬಿಟ್ಟರೂ ಆಯಿತು (ಬಾಲಪ್ರ. I, ೨೯೦). [?]

**ಡೆಂಚೆಯ** (ನಾ). ಆನೆಯ ಬೆನ್ನ ಮೇಲೆ ಕುಳಿತುಕೊಳ್ಳಲು ಹಾಕುವ ಮಂಟಪ; ಅಂಬಾರಿ; ಹೌದ: ವಿಕ್ರಮಪಾಳಪಾವುಸ ಶಿರಃಕಂಜಂಗಳಲ್ಲಾಡುತಿರ್ದುವು ತನ್ನಾನೆಯ ಹೊನ್ನ ಡೆಂಚೆಯದ ಚಂಚತ್ಕೇತುದಂಡಂಗಳೊಳ್ (ಎಕ. XI, ದಾವಣ. ೨೫–೩೯; 1224); ಡೆಂಚೆಯನವಱಿದೇಣಿಯೊಳ ಮೆಟ್ಟಗಡಿಯಿಟ್ಟನು . . . ಕರಿಯಿಂದ ಧರೆಗೆ (ಸಿಂಗಿರಾ. ೩೭–೮).
[P ಇದು 'ಜೆಂಚೆಯ' ಎಂಬುದರ ಅಪಲಿಖಿತವಿರಬಹುದು]

**ಡೆಂಡಣಿಸು** 'ಟೆಂಟಣಿಸು' ನೋ.

**ಡೆಂಡೆಣಿಸು** 'ಟೆಂಟಣಿಸು' ನೋ.

**ಡೆಂಡೆಲಿ** (ನಾ). ೧. ಆನೆಯ ಮೇಲೆ ಹಾಕುವ ಪಕ್ಷರಕ್ಷೆ; ಹಕ್ಕರಿಕೆ; ಜೂಲು. ೨. ಮದಿಸಿದ ಆನೆ: ಡೆಂಡೆಲಿಯೆಂಬ ಶಬ್ದಂ – ಗುಬಿದಲ್ಲಿಯುಂ, ಮತ್ತವಾರಣದಲ್ಲಿಯುಂ (ಶಮದ. ಪು. ೩೦೭). [?]

**ಡೆಂಥಣಿಸು** 'ಟೆಂಟಣಿಸು' ನೋ.

**ಡೆಂಥಳಿಸು** 'ಟೆಂಟಣಿಸು' ನೋ.

**ಡೆಂಥೇಣಿಸು** 'ಟೆಂಟಣಿಸು' ನೋ.

**ಡೆಂಬಕ** (ನಾ). (?): ಡಿಟವುಟಭಕುತಿಸಂಪುಟ ನೆಲೆಗೊಳ್ಳದಾಗಿ ಡೆಂಬಕ [ಪಾಠಾಂ. ಟಿಂಬಕ, ಟಿಂಬನ, ಟೆಂಬಕ]ನನಾಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ (ಬಸವ. ೧೮). [?]

**ಡೆಕ್ಕು** (ನಾ). ಹಡಗಿನ ಹೊರಮೈಯಲ್ಲಿರುವ ವೇದಿಕೆ,–ಅಂತಸ್ತು: ಡೆಕ್ಕಿನ ಮೇಲೆ ಒಬ್ಬಳೇ ನಿಂತು ಮಂದಾಕಿನಿ ಸಮುದ್ರದ ತೆರೆಗಳನ್ನು . . . ನೋಡುತ್ತ ನಿಂತಿದ್ದಾಳೆ (ಹೊಸಕ್ಷಿ. ೦೩೩). [←ಇಂ. Deck]

**ಡೆಕ್ಕೊರಿಕ್ಕೆ** (ನಾ). ಒಂದು ಬಗೆಯ ಜಟ್ಟಿವರಸೆ; ಮಲ್ಲಯುದ್ಧದಲ್ಲಿ ಒಂದು ಪಟ್ಟು: ಮೈಲಾಗಿನಲಿ ತೆಕ್ಕೆಯಲಿ ಸವಡಿಯ ಡೆಕ್ಕೊರಿಕ್ಕೆಯಲಿ . . . ಭೀಮಜೀಮೂತಗಳು ಹಳಚಿದರು (ಕುಮಾ.ವಿ. ೦೧೩. ೪–೭೭). 'ಡೊಕ್ಕರ$_2$' ಪರಾ. [?]

**ಡೆಗ್ಗೆ, ಡಗ್ಗೆ** (ನಾ). ಕಾಳಗದಲ್ಲಿ ಕೋಟೆಯ ತೆನೆಗಳನ್ನು ದೂಡಿ ಉರುಳಿಸಲು ಬಳಸುತ್ತಿದ್ದ ಉದ್ದವಾದ ಮರದ ದಿಮ್ಮಿ: ನಡೆಸಾರಂ ನೆಲವಾಳಿಗೆ ಪಡಕೆಡವುವ ಡೆಗ್ಗೆ ಬದ್ದಿರಂಗಳ್ (ತ್ರಿಪುವಿ. ೫–೦೦); ನಡೆ ಚಪ್ಪರದ ಮರ ಬದ್ದರ ಡೆಂಕಣಿ ಸುಡುವ ಪೆಟಲು ಕೋಟೆಯನು ಕೆಡಪುವ ಡೆಗ್ಗೆ[ಪಾಠಾಂ. ಗೆ] (ಕುರಾಸಾಂ. ೩೭–೬೭); ಕೋಟೆಯ ತೆನೆಗಳನು ಕೆಡವಲು ನಿಡುವ ಡೆಗ್ಗೆಗಳಿಂದ (ಜಂಪ್ರಸಾಂ. ೮–೪); ಡೆಗ್ಗೆಯಿಂದುದಿರ್ದವು ಕಲ್ಲ ಕೋಟೆಯ ಗುಂಡು ವೆಗ್ಗಳ ಬಿದ್ದುದು ಪೆಟಲ (ಅನಂತ. ೦೮–೭೦). 'ಡೆಗ್ಗೆವರ' ಪರಾ. **ಡಗ್ಗೆ:** ತಳಿ ನಡೆ ಚಪ್ಪರ ಡಗ್ಗೆ ಬದ್ದರಗಳ ಬಳಿಸಂದು ಭಟರು ಸಂದಣಿಸಿ ಬಳಿಸಿ ಕೋಟೆಯ ಲಗ್ಗೆಯೊಳು (ಕುರಾಸಾಂ. ೪೫–೨); ಡಗ್ಗೆ ನೆಲಗುಮ್ಮಗಳ ತರಹೇಳಿ (ಪ್ರಹ್ಲಾದ. ೫–೪೦). [?]

**ಡೆಗ್ಗೆವರ** (ನಾ).=ಡೆಗ್ಗೆ: ನಡೆಚಪ್ಪರವನು ನಡೆಯಿಸಿ ಡೆಗ್ಗೆವರಗಳಂ ಜಡಿದು ಹೊಯಿಸುವ ಭರವಸಕ್ಕೆ ಬದ್ದರಗಳೊಳಗಡಗಿ ಗುದ್ದಲಿಹಾರೆಯಿಂದಗೆವ

ರಭಸಕ್ಕೆ (ಸಮ್ಮ.ಕಾ. ೮-೩೭); ತುಡುಕಲೆಂದೆನುತ ಮೂಮುಸಕದಿಂ ಬಹುರೂಪುವಡೆದು ತಾಗುವ ರಾಹುಕೇತುವೋ ಯೆಂಬಂತೆ ಗಡಿಯಿಲ್ಲದಲ್ಲಿ ಹಾಯಿಸುವ ಡೆಗ್ಗೆವರನತಿಭೀಕರಂಬಡೆದವು (ಸಮ್ಮ.ಕಾ. ೮-೪೦).

[ ಡೆಗ್ಗೆ + ವರ₁ ]

**ಡೆಬ್ಬೆ₁** 'ದಬ್ಬೆ₁' ನೋ.

**ಡೆಬ್ಬೆ₂** 'ದೆಬ್ಬೆ₂' ನೋ.

**ಡೆಮ್ಮಿ** (ನಾ). ಬರೆಯುವ ಮತ್ತು ಗ್ರಂಥಗಳ ಮುದ್ರಣಕ್ಕೆ ಉಪಯೋಗಿಸುವ ಕಾಗದದ ಅಳತೆಯ ಒಂದು ಪ್ರಮಾಣ ; (ಬರೆಯುವ ಕಾಗದ, ೧೫½" × ೨೦" ; ಮುದ್ರಣಕಾಗದ, ೧೭½" × ೨೨½") : ಡೆಮ್ಮಿ ೧೮ ಪೌಂಡು ಎಂದರೆ, ಡೆಮ್ಮಿ ಅಳತೆಯ ಐನೂರು ಹಾಳೆಗಳುಳ್ಳ ಒಂದು ರೀಮಿನ ತೂಕ (ಮುದ್ರಕ. ೮೩). [ ←ಇಂ. Demy ]

**ಡೆಳ್ಳೆ** (ನಾ). ಬಿದಿರಿನ ಬುಟ್ಟಿ : ಕಳಶಂ ಶುಕ್ತಿಕೆ ವರ್ತುಲಂ ಪಟಲಕಂ ವೈಸ್ತಾಳಿ ನೀರಾಜನಂ ವಿಳಸತ್ ಕುಂಡಿಕೆ ಡೆಳ್ಳೆಯೆಂಬೆಡೆಗಳೊಳ್ ಸಂಪೂರ್ಣ ತೋಯಾದಿ ಮಂಗಳವಸ್ತುಪ್ರಕರಕ್ಕದೇಂ ಶಚಿಯು ಕೆಯ್ಯುಂ ಕಣ್ಣುಮೋರಂದನಗ್ಗಲಿಸುತ್ತಿರ್ದುದು ಪೂಜೆಗುಜ್ಜುಗಿಸಿ ತನ್ನಂ ನೋಡೆ ಸಕ್ರಂದನಂ (ಆಪಂಪು. ೧೦-೯೭); ನಾನಾ ನವೀನ ಕೋಮಳ ಪಕ್ವಫಳಂಗಳಿಂ ತುಂಬಿದ ಡೆಳ್ಳೆಗಳ ಬಳಗಂಗಳಂ ತಂದಮಟಯಿಸಿ ನೀಡುವುದುಂ (ಚಾಳಪು. ೦೭-೨೩೯ ವ). [ <ಪ್ರಾ. ಡಲ್ಲ, ಡಲ್ಲಗ ]

**ಡೇಂಕಣೆ** 'ಡೆಂಕಣೆ' ನೋ.

**ಡೇಕು** 'ದೇಕು₁' ನೋ.

**ಡೇಗು₁** 'ತೇಗು₂' ನೋ.

**ಡೇಗು₂** 'ತೇಗು₃' ನೋ.

**ಡೇಗೆ** (ನಾ). ೧. ಹದ್ದಿನ ಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ; ಗಿಡುಗ: ಒಂದು ದಿನ ಡೇಗೆಯುಂ ಪಾರಿಸುತ್ತಿರೆ ಪಾರಿ ಬಂದು ಕಿರಿಯಮ್ಮನರ ಮನೆಯುಂ ಪೊಗಲ್ಕೆ (ಗುರುಚಾ. ೧೩-೪೦); ಈಟಿ ಭಲ್ಲೆಯ ಸರಳು ಕವಲಂಬುಗಳು ಬಡಿಗೋಲುರುವ ಸಾಳುವ ಡೇಗೆ ಸಿವ್ವಂಗಿಗಳು (ಅನಂರಾ. ೩-೩-೭): ಡೇಗೆಯುದುರೊಳು ಕಂಡ ಲಾವುಗೆ ಬಾಗುವೋಲ್ (ಜಿನಭಾ. ೭೨-೯) ; ಮರಗಳ ಮೇಲೆ . . . ಗಿಳಿ, ಕೋಗಿಲೆ, ಡೇಗೆ ಮತ್ತೊಂದು ಎಂದು ಸಾವಿರ ಜಾತಿಗಳಿವೆ (ಕೃಷ್ಣಹೊ. ೦೨). [ ದೇ.ಶ ತೆಲು. ಡೇಗ ]

**ಡೇಗೆಕಣ್ಣು** (ನಾ). ೧. ಗಿಡುಗನ ಕಣ್ಣು. ೨. (ಅಲಂ) ಸೂಕ್ಷ್ಮದೃಷ್ಟಿ; ತೀಕ್ಷ್ಣದೃಷ್ಟಿ : ಅದರ ಡೇಗೆಕಣ್ಣಿಗೆ ಮೀನು ಕಾಣಿಸಿದೊಡನೆಯೇ ಬಾಣದಂತೆ ನೀರೊಳಗೆ ನುಸುಳಿ ಕೊಕ್ಕಿನಲ್ಲಿ ಅದುಮಿ ಬಂಡೆಗಳ್ಲಿನ ಮೇಲೆ ಕುಳಿತು ನುಂಗುತ್ತದೆ (ಪಾಳಿಗಿ. ೮೫) ; ಆದಕ್ಕಾಗಿ ಬೇರನೊಡನೆ ಸುಬ್ಬನೂ ಒಂದು ಡೇಗೆಕಣ್ಣು ಮಾಡಿ ಕುಳಿತುಕೊಳ್ಳುವನು. (ಮುಂಗಾಮು. ೫೮).

[ಡೇಗೆ + ಕಣ್ಣು (<ಕಣ್) ]

**ಡೇಗೆಬೇಗ** (ನಾ). ಗಿಡುಗನ ರಭಸ; ಬಹಳ ವೇಗ; ಅತಿರಭಸ: ಹೊಲದ ಹೊದರೊಳು ಹುದುಗಿ ಹೊಂಚುತಿಹ ಹೊರಸಿಗೆರಗುವ ಡೇಗೆಬೇಗದಲಿ (ಶ್ರೀರಾಮಾ. ೫೯೫-೩೦೦). [ ಡೇಗೆ + ಬೇಗ ]

**ಡೇರ** 'ಡೇರೆ₁' ನೋ.

**ಡೇರಾ₁** 'ಡೇರೆ₁' ನೋ.

**ಡೇರಾ₂** 'ಡೇಲಿಯಾ' ನೋ.

**ಡೇರಿ** 'ಡೈರಿ₂' ನೋ.

**ಡೇರೆ₁**, ಡೇರ, ಡೇರಾ₁ (ನಾ). ಬಟ್ಟೆಗಳನ್ನು ಹೊದಿಸಿ ತಯಾರಿಸಿದ ತಾತ್ಕಾಲಿಕ ವಸತಿಗೃಹ ; ಗುಡಾರ ; ಬಿಡದಿ : ಜಗವು ಸರ್ಕಸ್ಸಿನ ಡೇರೆ (ಚಂದ್ರವೀ. ೦೪-೫೪): ಈ ರಾತ್ರಿ ಕಳೆಯಲು ಒಂದು ಡೇರೆ ಸಿಕ್ಕಿದ್ದರೆ ಚೆನ್ನಾಗಿತ್ತು (ಮತಪ. ೨೯) ; ಈ ಬಯಲಾಟದವರು, ಡೇರೆ ಹಾಕಿಕೊಂಡು ಟಿಕೇಟಿನ ಮೂಲಕ ಆಟವಾಡುವ ರೂಢಿಯೂ ಬಂದಿದೆ (ಯಕ್ಷಬ. ೨೦). **ಡೇರ** : ಮುಂದೆ ನೋಡು ದಾರಿ ಸಾವಿರಾರು ಮೈಲಿದೂರ, ಸಾಲುಸಾಲು ಡೇರ (ನಡಬಂ. ೨-೨). **ಡೇರಾ** : ದೂಳುತುಂಬಿದ ಡೇರಾ ಬಟ್ಟೆಯ ಮೇಲ್ಭಾವಣಿ ಕಟ್ಟಿದಂತೆ . . . ಆಕಾಶದಲ್ಲಿ ಮೋಡಕಟ್ಟುವುದು (ಬಾಂಪ್ರ. II, ೧೧೭೦). [ ←ಹಿಂ. ಡೇರಾ ]

**ಡೇರೆ₂** 'ಡೇಲಿಯಾ' ನೋ.

**ಡೇಲಿಯಾ**, ಡಾಲಿಯಾ, ಡೀಲಿ, ಡೇರಾ₂, ಡೇರೆ₂, ಡ್ಯಾಲಿಯಾ (ನಾ). ಒತ್ತೊತ್ತಾಗಿ ಎಸಳುಗಳುಳ್ಳ, ಬಣ್ಣಬಣ್ಣದ ದುಂಡಗಿನ ಹೂವುಗಳನ್ನು ಬಿಡುವ ಒಂದು ವಿಧದ ಗಿಡ ಮತ್ತು ಅದರ ಹೂವು: (ಪ್ರಾಣಿಗಿ. ೨೮-೫೪೪). **ಡಾಲಿಯಾ**: ಮೂಡಿದೀ ಡಾಲಿಯಾ ಗಿಡದ ಹಸುರು ಕೈಯಲ್ಲಿ ಜಗದ ಅಮ್ಮ ಬಿಸಿಲು ಗಾಳಿಯನಿಡಲು ಮೆಲ್ಲನೆಯೆ (ಅನಿಕೇ. ೩೯-೦). **ಡೀಲಿ** : "ಬಣ್ಣಬಣ್ಣದ ಸುತ್ತು ಹೂವುಗಳು ಬಿಡುವ ಮೆಕ್ಸಿಕೊ ತವರಿನ ಒಂದು ಜಾತಿಯ ಗೆಡ್ಡೆಯ ಗಿಡ: ಡೀಲಿ" (Dahlia.ಇಂಕನ್ನ.). **ಡೇರಾ₂**: ಮನೆಯ ಮುಂದೆ ಚಮನ್, ರೋಜಾ, ಡೇರಾ ನಂದಿಬಟ್ಟಲು ಗಿಡಗಳ ಮಧ್ಯೆ ಪನ್ನೇರಳೆ ಹಣ್ಣಿನ ಮರ (ಹೊಸಕ್ಷಿ. ೦೨೩). **ಡೇರೆ₂** : ಡೇರೆಯ ಗಿಡದಿಂದ ಹೂದೋಟಕ್ಕೆ ಕಳೆ ಹೆಚ್ಚುತ್ತದೆ (ರೂಢಿ). **ಡ್ಯಾಲಿಯಾ** : ತೂಗುತ್ತಿವೆ ತೋಟದಲಿ ತೆರತೆರ ಗುಲಾಬಿಹೂ ಡ್ಯಾಲಿಯಾ ಬೋಗೇನವೆಲಿಯ (ಸುನೀತ. ೬-೬). [ ←ಇಂ. Dahlia ]

**ಡೈನಮೊ**, ಡೈನಾಮೊ (ನಾ). "ತಾಮ್ರದ ತಂತಿಯ ಸುರುಳಿಗಳನ್ನು ಕಾಂತ ಕ್ಷೇತ್ರದಲ್ಲಿ ವೇಗವಾಗಿ ತಿರುಗಿಸುವುದರಿಂದ ಯಾಂತ್ರಿಕಶಕ್ತಿಯನ್ನು ವಿದ್ಯುಚ್ಛಕ್ತಿಯನ್ನಾಗಿ ಮಾರ್ಪಡಿಸುವ ಯಂತ್ರ" (Dynamo. ಇಂಕನ್ನ.) : ಆ ತಂತಿಯ ಮತ್ತೊಂದು ಅಂಚನ್ನು ಒಂದು ಡೈನಮೋವಿನ ಋಣಧ್ರುವಕ್ಕೆ ಲಗತ್ತಿಸಬೇಕು (ಮುದ್ರಕ. ೫೯). **ಡೈನಾಮೊ** : ತಿರುಗುವ ಚಕ್ರಗಳಿಗೆ ವಿದ್ಯುತ್ತನ್ನು ಹೊರಡಿಸುವ ಡೈನಾಮೋವನ್ನು ಜೋಡಿಸುವರು (ಬಾಂಪ್ರ. I, ४೦). [ ←ಇಂ. Dynamo ]

**ಡೈನಾಮೊ** 'ಡೈನಮೊ' ನೋ.

**ಡೈನಾಮೈಟ್** (ನಾ). ಪ್ರಬಲವಾದ ಸಿಡಿಮದ್ದು ; ತೀವ್ರ ಸ್ಫೋಟಕ : ಬಾವಿ ತೋಡುವಾಗ ಸಿಕ್ಕ ಬಂಡೆಯನ್ನು ಡೈನಾಮೈಟ್ ಉಪಯೋಗಿಸಿ ಒಡೆಸಿದರು (ರೂಢಿ). [ ←ಇಂ. Dynamite ]

**ಡೈರಿ₁** (ನಾ). ದಿನಚರಿ ಬರೆಯುವ ಪುಸ್ತಕ : ಕುಳಿತ ಕುರ್ಚಿಯ ಮೇಲೆ ತೆರೆದು ಹಳೆ ಡೈರಿಯನ್ನು ಮುಗುಚುತ್ತ ನಡೆದ ಒಂದೊಂದೆ ಪುಟವ (ಮೋಹಬ. ೮೩) ; ಓ, ಅದೇ ಡೈರಿ ಬರೆದಿದ್ದೇನಮ್ಮ (ಚಂಡಮು. ೨೩-೨೦).

[ ←ಇಂ. Diary ]

**ಡೈರಿ₂**, ಡೇರಿ (ನಾ). ಹಾಲು, ಮೊಸರು, ಬೆಣ್ಣೆಗಳನ್ನು ತಯಾರಿಸುವ ಸ್ಥಳ ; ಹೈನುಶಾಲೆ: ಬೆಂಗಳೂರು ಡೈರಿಯ ಹಾಲನ್ನು ಕೊಳ್ಳುತ್ತಿದ್ದೇವೆ (ರೂಢಿ). **ಡೇರಿ** : ಸಹಕಾರಿಸಂಘಗಳು ಡೇರಿಗಳನ್ನು ನಡೆಸುತ್ತಿವೆ (ರೂಢಿ).

[ ←ಇಂ. Dairy ]

**ಡೊಂಕ₁** (ನಾ). ೧. ವಕ್ರವಾದುದು ; ಕೊಂಕಿದುದು : ಕರ್ಕಂಡುಮುರುಕ್ಕೆ ನಿತು ಮುಳ್ಳೆಂಬುದು ಡೊಂಕನೊ ಸಸಿನವೋಯೆಂಬುದಂ (ಪುಣ್ಯಾಸ್ರ. ೩-೦೫ ವ). ೨. ಬಾಗಿಸುವವನು (?) : ತೊಡರ್ದರ ಡೊಂಕ . . . ಸೆಟ್ಟುಕಗಂ (ಎಕ. IX (8), ಕಾನಕಾ. ೭೮-೮; 1319). (ಗು). ೩. ಕೊಂಕಿದ; ಬಾಗಿದ; ವಕ್ರವಾದ. [ ಡೊಂಕು₂ + – ಅ₇ ]

**ಡೊಂಕ₂** (ನಾ). ಒಂದು ಕುಲದ ಹೆಸರು (?): ಶರಣಾಗತಜನಮಂ ನಿತ್ರರಿ ಪೆಡೆಯೊಳ್ ವಜ್ರಪಂಜರಂ ತಾನೆನೆ ಡೊಂಕರ ಮಾದಿರಾಜವಿಭು ತೊಡರ್ದರ ಡೊಂಕಿಯೆನಿಪ್ಪ ಬಿರುದನಿರದೆತ್ತಿಸಿದಂ (ಮುಂಬರಾ. X, ೨೬೪-೨೭ ; 1229).

[ ? ]

**ಡೊಂಕಣ** 'ಡೊಂಕಣಿ' ನೋ.

**ಡೊಂಕಣಿ**, ಡೊಂಕಣ, ಡೊಂಕಳಿ, ಧೊಂಕಣಿ (ನಾ). ಒಂದು ಬಗೆಯ ಆಯುಧ ; ಸಬಳ : "ಕೊಂತಂ, ಡೊಂಕಣಿ–ಈ ೨ ಸಬಳಂ" (ಕಶಸಾ. ೧೪-೨೬೬) ; "ಡೊಂಕಣಿಯುಂ ಕೊಂತ ಸಬಳಮೆನಿಕ್ಕುಂ" (ಕವಿಕಾ. ೧೨೮) ; ಕರ್ಣನ ಡೊಂಕಣಿಯಲ್ಲಿ ಜುಂಜನಂತಿರೆ ಮಿಳಿರ್ದಾಡುತಿರ್ಪ ಪೊಸಚೌರಿಯ ದಿಟ್ಟಿಗಳುಕ್ಕೆ (ಕಬ್ಬಿಗ. ೨೬೩) ; ಹೆಣನ ಹೋಳಿನ ಸಿಡಿದಡಗು ಡೊಂಕಣಿಯೊಳಿಸೆದುವು ಕಾಲನಾರೋಗಣೆಗೆ ಮಿಗೆ ಪಡಿಸಣದ ನೋಡದೆ ಮಾಣ ವೆಂಬಂತೆ (ಕುವ್ಯಾಭೀ. ೪-೪೪) : ಪರಶು ಗದೆ ಚಕ್ರ ಡೊಂಕಣಿ . . . ಮೊದಲಾಗಿರ್ದ ಕೈದುಗಳ ಪಂಮಿಡಿಯೊಳುರವಣಿಸಿ ಪೊಯ್ದಂ (ಜೈಮಿಭಾ. ೧೨-೨೪). **ಡೊಂಕಣ :** ಡೆಂಕಣಿಕ್ಕೆ ಡೆಗ್ಗವರ ಪಾರೆ ಗುದ್ದಲಿ ಡೊಂಕಣ ಸಬಳ ಶರಗಳ ಸಂಕುಳವೆಯ್ದಿತು (ಕುರಾಸಾಂ. ೪೧-೫೦). **ಡೊಂಕಳಿ:** "ಡೊಂಕಳಿ = ೧. ಬತ್ತಳಿಕೆ. ೨. ಈಟಿಯ ಗಣೆ" (ಗಂಗಾಮು. ೧೪೫). **ಧೊಂಕಣಿ :** "ವರ್ಗಚತುರ್ಥಾಕ್ಷರಂಗಳ್ಗೆ . . . ಧೊಂಕಣಿ, ಧೆಂಕಣ ಅಥಾಳಂ (ಧಾಳಂ) (ಶಮದ. ೦೫ ಪ್ರಯೋ). 'ಡೆಂಕಣಿ' ಪರಾ.

[ ←ತೆಲು. ಡೊಂಕನಿ ]

**ಡೊಂಕಣಿಕಾರ** 'ಡೊಂಕಣಿಕಾಱ' ನೋ.

**ಡೊಂಕಣಿಕಾಱ**, ಡೊಂಕಣಿಕಾರ (ನಾ). ಸಬಳವನ್ನು ಹಿಡಿದು ಯುದ್ಧ ಮಾಡುವವನು ; ಭರ್ಜಿಯವನು : ಕಡುನಿಮಿರ್ದು ಪೊಳೆವ ಪೊಸ ಪೂಗುಡಿಯೆಂಬಗ್ಗಳಿಕೆವಡೆದ ಸಬಳಮನೊಲವಿಂ ಪಿಡಿದು ಬರುತಿರ್ದುದೆತ್ತಂ ಕಡು ಸೊರ್ಕಿದ ತುಂಬಿಯೆಂಬ ಡೊಂಕಣಿಕಾಱರ್ (ಕಬ್ಬಿಗ. ೨೧೫); ಧುರ ದೊಳಗೆ ಬಿಲುಗಾಱರೊಗ್ಗಿನ ಹಲಗೆಕಾಱರು ಹಲಗೆಯವರುಬ್ಬರದ ಡೊಂಕಣಿಕಾಱರಾಂತು ಕೃತಾಂತನಾಲಯವ ಥರಥರದಿ ತೀವಿದರು (ಕುವ್ಯಾಭೀ. ೪-೪೬). **ಡೊಂಕಣಿಕಾರ:** ಧುರದೊಳಗೆ ನಿಂದರ್ಕೈ ಹರಿಗೆಕಾರರು ಹಲಗೆಯವರು ಡೊಂಕಣಿಕಾರರು (ತುರಂಗ. ೫೨-೩). 'ಡೆಂಕಣಿಕಾಱ' ಪರಾ. [ ಡೊಂಕಣಿ + – ಕಾಱ ]

**ಡೊಂಕತನ** 'ಡೊಂಕುತನ' ನೋ.

**ಡೊಂಕಬಂಕ** (ನಾ). ೧. ಬಹಳ ಕುಟಿಲಸ್ವಭಾವದವನು; ಅತಿವಕ್ರ. (ಗು). ೨. ಅಂಕುಡೊಂಕಾದ : ಕೃತ್ರಿಮವಾದ ಅವಯವಗಳಿಂದ ಸ್ತ್ರೀಪಾತ್ರವನ್ನು ಡೊಂಕಬಂಕನಾಗಿ ಅಭಿನಯಿಸುವವನನ್ನು ನೋಡಿ (ಸಾಹಿಜೀ. ೨೦). [ ಡೊಂಕ$_1$ + ಬಂಕ$_3$ ]

**ಡೊಂಕಳಿ** 'ಡೊಂಕಣಿ' ನೋ.

**ಡೊಂಕಿ$_1$**(ನಾ). ೧. ಬಾಗಿಸುವವನು: ಕಾವೇರೀವಲ್ಲಭ ಕರದೀವ ದಾನಿ ಮಱೆ ಹೊಕ್ಕರೆ ಕಾವ ತೊಡೆದರ ಡೊಂಕಿ ಬಿರಿವರ ಬಾಯ ಬೊಂದಿಗೆ . . . ಮಾದಿಗದೇವನೊಡನೆ (ಎಕ. IX, ಕಾನಕಾ. ೦೦೬-೫ ; 1298). ೨. ಗಾಳದ ಮೀನಿನ ತುದಿಯ ಕೊಕ್ಕೆ; ಗಾಳದ ತುದಿಯಲ್ಲಿ ಅಳವಡಿಸಿದ ಕೊಕ್ಕೆ,–ಮುಳ್ಳು (?): ಗಾಳದ ಡೊಂಕಿಯುಗ್ರಮನೆ ಬಾಳರನಂ ಪಿಡಿದಿರ್ದ . . . ಶಬರರ್ಕಳಿನೊಪ್ಪಿದುದೊಂದು ಪಕ್ಕಣಂ (ಕುಸುಮಾ. ೦೦-೧೪೮).

[ ಡೊಂಕು$_2$ + – ಇ$_3$ ]

**ಡೊಂಕಿ$_2$** (ನಾ). ಒಂದು ಬಗೆಯ ತೆರಿಗೆ : ದೇವರಗಾಣಕ್ಕೆ[ತೆ]ಱಬಣ್ಣಿಗೆ ಡೊಂಕಿ ಬೀರವಣ ಸರ್ವ್ವಬಾಧಪರಿಹಾರಮಾಗಿ ಬಿಟ್ಟರು (ಸೌಇಇ. XI-ii, ೦೫೮-೨೬ ; 1109). [ ? ]

**ಡೊಂಕಿವಣ**, ಡೊಂಕೆವಣ (ನಾ). ಡೊಂಕಿಯ ತೆರಿಗೆಯ ಹಣ : ನನ್ನಾದೀವಿಗೆಗೆ ಡೊಂಕಿವಣ ಮಾನೆಣ್ಣೆಸಹಿತಂ ಬಿಟ್ಟ ಗಾಣವೊಂದು (ಕಇ. II, ೧೦-೩೬ ; 1181). **ಡೊಂಕೆವಣ :** ವರ್ಷಸಂಪ್ರತಿಯಾಗಿ ನಡಸುವ ಗದ್ಯಾಣವೆರಡು ಒಂದು ಗಾಣದ ಡೊಂಕೆವಣ ಕಾರುಕದೆಱ . . . ಕೊಟ್ಟರು (ಕಇ. IV, ೧೩-೬೫ ; 1165). [ ಡೊಂಕಿ$_2$ + ವಣ$_3$ ]

**ಡೊಂಕಿಸು** (ಕ್ರಿ). ಓರೆಯಾಗು; ವಕ್ರವಾಗು : ಬಡಗಣ ಹಿಮಗಿರಿಯೊಳು ಹುಟ್ಟಿ ತೆಂಕ ಬಂದೊಡನೆ ಡೊಂಕಿಸಿ ಮೂಡ ಹರಿದು ಕಡಲ ಕೂಡಿದ್ದುದಾ ಗಂಗೆ (ಭರಚ. ೨೩-೫೯). [ ಡೊಂಕು$_1$ + – ಇಸು$_3$ ]

**ಡೊಂಕು$_1$** (ಕ್ರಿ). ಓರೆಯಾಗು ; ವಕ್ರವಾಗು ; ಬಾಗು : ಡೊಂ[ಪಾಠಾಂ. ಕೊಂ]ಕಿದ ದೇಹವನುರುಗಿಸಿ ನಡೆವುತೆ (ಶೃಂಗೀರ. ಹ.೪೬೩-೨೪); ಆಗುಳಿಸುತೆದ್ದೊಂದು ಕಾಲಲಿ ಡೊಂಕಿ ನಡೆವುತ್ತೆ (ಬಸವು. ೫೯-೨೨); ನಗುವರಾರಾನೊಂದು ಬಿನದವ ಮಾಡಲ್ಕೆ ಮೊಗಗಳು ಡೊಂಕುವವು (ಭರಚ. ೪೬-೧೪೦) : ಮಧುವಾಣಿಯ ಮೋಱೆ ಚಚ್ಚರದಿ ಡೊಂಕಿತು (ಭರಚ. ೪೬-೧೪೨). [ ದೇ.॥ ತೆಲು. ಡೊಂಕು, ಟೊಂಕು ]

**ಡೊಂಕು$_2$** (ನಾ). ೧. ಬಾಗಿರುವಿಕೆ; ನೆಟ್ಟಗಿಲ್ಲದಿರುವಿಕೆ; ಸೊಟ್ಟಾಗಿರುವಿಕೆ ; ಓರೆಯಾಗಿರುವಿಕೆ ; ವಕ್ರತೆ : ತೆಂಗಿನ ಪೊಸನೇಣಿಂದಱು ದಿಂಗಳ್ವರಮುಡಿಸಿ ಕಂಬಿಯಿಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ಧರ್ಮಾಮೃ. ೨-೯೨) ; ಹಾವಿನ ಡೊಂಕು ಹುತ್ತಕ್ಕೆ ಸಸಿನ (ಬಸವ. ೦೪೪): ಕಬ್ಬಿಗೆ ಡೊಂಕಲ್ಲದೆ ಮಧುರಕುಂಟೆ ಡೊಂಕು (ನಗಮೂ. ೬೦) ; ನರಪತಿಗಿದಿರಾಗಿ ನಲಿದು ತಿರುಗಿದರಾಗಲೆ ಡೊಂಕನಳಿದು ಗಂಗೆ ಹರಿವಂತೆ ನೇರದೊಳಿತ್ತು (ಭರಚ. ೦೩-೯೬); ಡೊಂಕು ಹಣ್ಣುಗಳಲ್ಲಿ ಡೊಂಕು ಬಾಳೆಯ ಹಣ್ಣು ಡೊಂಕುಂಟು ಒಳಗೆ ರುಚಿಯುಂಟು ಸಜ್ಜನರ ಡೊಂಕು ಲೇಸು (ಸರ್ವಜ್ಞ. ೮೦೨). ೨. ಓರೆಯಾದುದು ; ಸೊಟ್ಟಾಗಿರುವುದು ; ವಕ್ರತೆಯುಳ್ಳುದು : ನೋಡುವ ಡೆಂಟೆಡೆ ಡೊಂಕು (ಪುಣ್ಯಸ್ರ. ೩-೨೦) ; ಕತ್ತಿಯ ಬಾಯಿ ತಾ ಡೊಂಕಾದ ಮಾತ್ರಕ್ಕೆ ಕತ್ತರಿಸಿದ ಕಬ್ಬು ಡೊಂಕೆ (ಇಂಜಾಪ. ೬೧-೪೬) ; ಬಿಂಬಾಧರವು ಡೊಂಕು ಚುಂಬನವದು ಡೊಂಕೆ ರಸಿಕಾ ಪೇಳೊ (ಗಿರಿ. ೩೨-೦೦) ; ಒಂದು ಎಲೆಯಂತೆ ಇನ್ನೊಂದಿಲ್ಲ . . . ಕೆಲವು ಸೊಟ್ಟು, ಡೊಂಕು (ಕಾಮೂನ. ೧೦೫) ; ಕಬ್ಬು ಡೊಂಕಾದರೆ ಸವಿ ಡೊಂಕೇ ? (ಗಾದೆ). ೩. ಬಾಗಿರುವ ಸ್ಥಳ ; ಸೊಟ್ಟಾಗಿರುವ ಪ್ರದೇಶ : ಡೊಂಕಿಸಿ ಮೂಡ ಹರಿದು ಕಡಲ ಕೂಡಿದ್ದುದಾ ಗಂಗೆಯುದಱ ಡೊಂಕಿನೆಡೆಯೊಳು ಬಿಟ್ಟನಾ ಚಕ್ರಿ (ಭರಚ. ೨೩-೫೯). ೪. ಅಡ್ಡಿ ; ಅಡಚಣೆ ; ತೊಂದರೆ : ಬೆಂಕಿಯನುರುಹು ಕಟ್ಟಿಗೆಯ ಹಾಕಿವರವರಂ ಕರೆಯಾಗಾಗಲೆಂಬ ಡೊಂಕಿಲ್ಲ (ಭರಚ ೨೩-೮೮). ೫. (ಅಲಂ) ನೇರವಲ್ಲದ ಮಾತು ; ಕೊಂಕುಮಾತು : ಸಜ್ಜನರ ಡೊಂಕು ಲೇಸೆಂದ (ಸರ್ವಜ್ಞ. ೮೦೨). ೬. (ಅಲಂ) ಕೊಂಕು ನಡತೆ ; ಅವಗುಣ ; ವಕ್ರಸ್ವಭಾವ ; ದೋಷ : ಲೋಕದ ಡೊಂಕ ನೀವೇಕೆ ತಿದ್ದುವಿರಿ . . . ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ (ಬಸವ. ೦೨೪) : ಎನ್ನ ಮನದ ಡೊಂಕ ತಿದ್ದಿಸೊ (ಪುರಂದ. ೦-೦೦೫ ಪಲ್ಲವಿ) : ಬಿಂಕದ ಕಡಲೊಳಿಪ್ಪವರೊಳು ಪೊಡವಿಯ ಡೊಂಕನಿಂತುಸುರ್ವುದು ಸೊಕ್ಕೆ (ಭರಚ. ೨೪-೪೬); ತನ್ನ ಡೊಂಕನು ತನಗೆ ತಿಳಿಯದೆ ಅನ್ಯರಿಗೆ ಆಡಿಕೊಳುವಗೆ ಶುನಕ ಬುದ್ಧಿಯೊಳು ಬೆರೆದಗೆ ಭಕ್ತಿಯೋಗ್ಯವಲ್ಲೆಂದ (ಕಾರನಿ. ೨-೩) : ಅವನ ನುಡಿಯಲ್ಲಿ ಎರಡಿರಲಿಲ್ಲ ನಡೆಯಲ್ಲಿ ಡೊಂಕಿರಲಿಲ್ಲ (ಮಹಸ. ೬೨). ೭. ವಕ್ರಸ್ವಭಾವವುಳ್ಳುದು ; ಕೀಳುವರ್ತನೆಯುಳ್ಳುದು : ಮನೆ ಡೊಂಕು ಮನಸು ಡೊಂಕಾದರು ನಿಮ್ಮ ಶಿಷ್ಯನ ಮೇಲಣ ಪ್ರೀತಿಯಿಂದ ಜನಕಲ್ಪರಿರ ಬಿಡಯಂಗೈದಿರಿ (ಭರಚ. ೩-೬೦). (ಗು). ೮. ಕೊಂಕಾದ; ವಕ್ರವಾದ ; ನೇರವಲ್ಲದ; ಕುಟಿಲವಾದ: ಡೊಂಕುಬಾಲದ ನಾಯಕರೆ ನೀವೇನೂಟವ ಮಾಡಿದಿರಿ (ಪುರಂದ. ೨-೯೦ ಪಲ್ಲವಿ) : ಯೋಗಿ ಹಳದಿಯ ಚಿಂದಿಬಟ್ಟೆಯನ್ನು ಧರಿಸಿದ್ದ ಕೈಯಲ್ಲಿ ಒಂದು ಡೊಂಕುಕೋಲಿತ್ತು (ಚಾಇಅ. ೩೮೬). 'ಡೊಂಕುಗೋಣು' ಪರಾ.

**ಡೊಂಕುಡೊಸುಕು** = ಓರೆಕೋರೆ : (ಕ). **ಡೊಂಕುಪಂಕು** = ಡೊಂಕುಡೊಸುಕು : (ಕ). [ <ಡೊಂಕು$_1$ ]

**ಡೊಂಕುಗ** (ನಾ). ವಕ್ರಸ್ವಭಾವದವನು; ವಂಚಕ: "ಕುಟಿಲಂ=ಡೊಂಕುಂ; ಡೊಂಕುಗನುಂ" (ಕಾಶಕ್. ೨೨೭) [ ಡೊಂಕು$_2$ + – ಗ$_2$ ]

**ಡೊಂಕುಗಾಲು** (ನಾ). ಡೊಂಕಾದ ಕಾಲು ; ಸೊಟ್ಟಗಾಲು : ಕುಸಿದ ನಡುವಿನ ಹೊರಟ ಬೆನ್ನಿನ ಬೀಸುಗೈಗಳ ಡೊಂಕುಗಾಲುಗಳ . . . ತೋಳ ಕಾರೊಡಲ ಕುಬುಬನು (ಬಸಪು. ೨೦-೧೦).

[ ಡೊಂಕು$_2$ + ಕಾಲು$_1$ (<ಕಾಲ್$_1$) ]

**ಡೊಂಕುಗೋಣು** (ನಾ). ಓರೆಯಾದ ಕುತ್ತಿಗೆ ; ಸೊಟ್ಟ ಕತ್ತು ; ವಕ್ರವಾದ ಕಂಠ : (*). [ ಡೊಂಕು$_2$ + ಗೋಣು (<ಗೋಣ್) ]

**ಡೊಂಕುತನ, ಡೊಂಕತನ** (ನಾ). ೧. ಬಾಗಿರುವಿಕೆ; ಓರೆಯಾಗಿರುವಿಕೆ; ವಕ್ರತೆ : (*). ೨. ವಕ್ರಸ್ವಭಾವ. **ಡೊಂಕತನ :** ೧. "ನವ್ರುತೆ" (ಗುವಿವೂ). [ ಡೊಂಕು$_2$ + – ತನ ]

**ಡೊಂಕುನಡೆ** (ನಾ). ಓರೆಯಾಗಿ ನಡೆಯುವಿಕೆ ; ವಕ್ರಗಮನ ; ಸೊಟ್ಟ ನಡಿಗೆ : "ಸರ್ಪಣಂ=ಡೊಂಕುನಡೆ" (ಕಾಶಕ್. ೭೭) : "ಕುಟಿಲಾಯಾಂ ಗತೌ, ಡೊಂಕುನಡೆಯೊಳ್" (ಕಾಶಕ್. ೦೩೯). [ ಡೊಂಕು$_2$ + ನಡೆ$_2$ ]

**ಡೊಂಕುವೆಱು** (ಕ್ರಿ). ಓರೆಯಾಗು ; ವಕ್ರತ್ವವನ್ನು ಪಡೆ : ಬರಿದಡಿ ಡೊಂಕುವೆತ್ತ ಬೆರಲೋರೆಯು ಪೇರ್ದೊಡೆ ವಕ್ರಮಧ್ಯಮುಬ್ಬರಿಸಿದ ಪೇರ್ಬಸಿಱ್ (ವೃಷವಿ. ೦೦-೬೦). [ ಡೊಂಕು$_2$ + ಪೆಱು$_1$ ]

**ಡೊಂಕುಹೋಗು** (ಕ್ರಿ). ಬಾಗು ; ಸೊಟ್ಟಾಗು ; ವಕ್ರವಾಗು : ಈ ಯೊಡಲು ಕೈಕಾಲು ಶಿರವಯ್ಯೋಯಿವೀಗಳೆ ಡೊಂಕುಹೋಹವು (ಬಸಪು. ೧೭-೪). [ ಡೊಂಕು$_2$ + ಹೋಗು$_1$ (<ಪೋಗು$_1$) ]

**ಡೊಂಕಿವಣ** 'ಡೊಂಕಿವಣ' ನೋ.

**ಡೊಂಗಱ, ಡೊಂಗುಱ, ಡೊಕ್ಕರ$_1$, ಡೊಗರು, ಡೊಗಱು, ಡೋಱ್, ಡೋಱು, ದೊಂಗರ, ದೊಗರು, ದೋಱು** (ನಾ). ೧. (ಗುಹೆ, ಮರ ಮೊದಲಾದುವುಗಳ ಒಳಗಿನ) ರಂಧ್ರ; ಬಿಲ; ಪೊಟರೆ: ಪರಿವಿಡಿಯಿಂದೆಯ್ದೆ ಗುಹೆಯು ಸಾರ್ದದಱ ಡೊಂಗಱದಲ್ಲಿ ಸೊಸೆಯರ ಳುಕುತ ಬರಲೇಕೆ (ಭರಚ. ೪೪-೪೫). ೨. ಹಳ್ಳ ; ಕುಳಿ ; ತಗ್ಗು : ಕುಳಿಯೊಳೊರ್ಗುಡಿಸಿ ಡೊಂಗಱನನೇಱ್ ಸರವುಗಳೊಳಿಳಿದದಟುಗೆಟ್ಟು ಬೆಂಡಾದಸುಖಿಗಳನು (ಹಚಕಾ. ೯-೩೩); ಇಡುಕುಱು ಡೊಂಗಱ ಘಟ್ಟ ಬೆಟ್ಟದ ಸಿಕ್ಕು ತಡೆಕಟ್ಟು ಸಮತಳವಾಗೆ (ಭರಚ. ೨೮-೫೮). **ಡೊಂಗುಱ :** ೨. ಬಳ್ಳಿಗುರುವಿನ ಕೈ ಬಳ್ಳಿಗುರುಡ ಪಿಡಿದು ಕಾಣದೆ ಡೊಂಗುಱವ ಬಿದ್ದಂತೆ ಗುರುಶಿಷ್ಯರೆಂಬುಭಯರು ಯಮಗೊಂಡದಲ್ಲಿ ಬೀಳುವರು (ವಚಸಂ. ೦೨೭-೧೦೭). **ಡೊಕ್ಕರ$_1$ :** (*). **ಡೊಗರು :** ೧. ಡೊಗರಿನಿಂದ ಆಹಾರಾನ್ವೇಷಣೆಗಾಗಿ ಆಗ ತಾನೆ ಹೊರಗೆ ಬಂದಿದ್ದ ಕಾರೇಡಿಯೊಂದು ತನ್ನ ಬಳಿಗೆ ಕರಿಯ ಕೋಲು ಬರುತ್ತಿದ್ದುದನ್ನು ಕಂಡು ಬೆದರಿ . . . ಡೊಗರಿನ ಕಡೆಗೆ ಓಡತೊಡಗಿತು (ಕಾನೂರು. ೨೦) ; ಬಹಳ ಹೊತ್ತು ಹುಡುಕಿದ ಮೇಲೆ ಒಂದು ಡೊಗರು ಸಿಕ್ಕಿತು (ಹಂಜಾಮ್ಮ. ೦೦೦); ಇಕ್ಕಟ್ಟಾದ ಬಂಡೆಯ ಡೊಗರಿನಲ್ಲಿ ಒಬ್ಬರ ಹಿಂದೆ ಒಬ್ಬರು ಮೇಲೆ ಹತ್ತಲಾರಂಭಿಸಿದರು (ಭಾರವೀ. ೦೦೩). ೨ : ಮುದುಕಿ ಬಿದ್ದವಳೆ ಡೊಗರಲ್ಲಿ (ಹಳ್ಳಿಯ. ೧೭೭). **ಡೊಗಱು :** ೧. ಒಂದು ದಿವಸದೊಳು ತಾನಿರ್ಪ ನೆಲದ ಡೊಗಱೊಳಗೆ ಹೊಕ್ಕಗೆಯುತ್ತುಮಿರೆ (ಸಮ್ಯಕ್‌ಕೌ. ೨-೪೩). **ಡೋಱ್ :** ೨. ಸುಳಿದಲೆಯ ಕೆಮ್ಮಾಸೆಗಳಮಿಗೆ ಬೆಳದ ಮುಡುಗುಗಳೊಡ್ಡಿದುರದುಚ್ಚಳಿತ ರೋಮದ ನೊಸಲ ಡೋಱಿಯ. . .ಕದನ ಪ್ರಚಂಡರ ಕಂಡು ಬೆಱಗಾದ (ಕುವ್ಯಾಉ. ೨-೩೧) ; ಮುಱಿದ ಮೂಗುಗಳ ನೊಸಲ ಡೋಱಿಯ. . . ಯಮದೂತರಂದಾಗಸಕೆ ನೆಗಹಿದ ಪಾಶಹಸ್ತರು ಬಂದರಾಕ್ಷಣಕೆ (ನಿಭಾಗ. ೬-೧-೧೯). **ಡೋಱು :** ೧. ಮದಹಸ್ತಿಯಿಱಿದ ಘಾಯಂಗಳ ವರಾಹನೆತ್ತಿದ ಡೋಱು[ಪಾಠಾಂ. ಣಿ]ಗಳ . . . ಕಡವೆ ತುಳಿದ ಹೆಜ್ಜೆಗಳ ಚಿಹ್ನದ ಬೇಡನಾಯಕರು ನೆರೆದರು (ಹಚಕಾ. ೫-೫); ಮಾದ್ರಪತಿಯೆದೆಡೋಱಿನಲಿ ಡಾವರಿಸಿದವು ರಕ್ತಾಂಬುಧಾರೆಗಳು (ಕುವ್ಯಾಶ. ೩-೭೮) ; ಆರ್ದಾರ್ ಶರಂಗಳಿಂದೆಚ್ಚವರ ತನುಗಳಂ ಡೋಱಿನಿಸಿ (ಚಬಪು. ೪೯-೨೨). 'ಡೋಱುಗಳೆ', 'ಡೋಱುವೋಗು' ಪರಾ. **ದೊಂಗರ :** ೨. ಸಿದ್ಧನ ಹಳ್ಳಿಯ ಬಳಿ ಒಂದು ದೊಡ್ಡ ದೊಂಗರವಿತ್ತು. ಅದನ್ನು ಹಾದರೆ ಮುನೇಶ್ವರನ ಗುಡಿಯವರೆಗೂ ನಿರ್ಜನವಾದ ದಿನ್ನೆ, ಕೊರಕಲು ಪ್ರದೇಶ (ಊರುಕ. ೦೩೦). **ದೊಗರು :** ೧. ಅಷ್ಟರಲ್ಲಿ ನಾಯಿ ದೊಗರಿನ ಬಾಯಿಗೆ ಮೂತಿಯನ್ನು ತುರುಕಿ ಉಸಿರು ಎಳೆಯುತ್ತಾ ತನ್ನ ಮುಂಗಾಲುಗಳಿಂದ ಬಿಲದ ಬಾಯಿಯನ್ನು ಪರಪರನೆ ಕೆರೆಯತೊಡಗಿತು (ಮಗಮಾಂ. ೩೭). **ದೋಱು :** ೧. 'ದೋಱುವೋಗು' ಪರಾ.

[ ದೇ.॥ ತಮಿ. ಟೊಱ್ಱು ; ತೆಲು. ಡೊಂಗು, ದೊಂಗು ]

**ಡೊಂಗು** (ಕ್ರಿ). "ಕಂಪಿಸು ; ನಡುಗು" (ಬಾಧಪು. ಕೋಶ) : ರವಿಬಿಂಬಂ ಪ್ರತಿಬಿಂಬಿಸಿರ್ದದೞೊಳಂ ತೋಱುತ್ತಿರಲ್ ಕಂಡು ಮದ್ಯಮುಷ್ಕಾಸ್ವಾದಿಸುತಿರ್ದವಳ್ . . . ಪೋಗುಪೋಗೆಂದು ಡೊಂಗುವ ಕೈಯಂ ಮಿಗೆ ನೀಡಿ ಮತ್ತೆ ಬಲಿದೌಡಂ ಕಚ್ಚುತಂ ನೂಂಕಿದಳ್ (ಬಾಧಪು. ೧೦-೧೩೫).

[ <ಡೊಂಕು$_1$ ? ]

**ಡೊಂಗುಱ** 'ಡೊಂಗಱ' ನೋ.

**ಡೊಂಡೊಂಡೆ** (ನಾ). ದಿಂಡುರುಳಿಕೆ (?) : ಡಂಭಕ ಭಕ್ತಿಗೆ ಮೆಚ್ಚಿ ಕೊಡನು ಕೃಷ್ಣ ಡೊಂಬಲಾಗವು ಹಾಕಿ ಡೊಂಡೊಂಡೆ ಹೊರಳಿದರಿಲ್ಲ (ಪುರಂದ. ೫-೦೩೮ ಅನುಪಲ್ಲವಿ). [ ? ]

**ಡೊಂಬ$_1$** 'ದೊಂಬ' ನೋ.

**ಡೊಂಬ$_2$** 'ದಂಬ' ನೋ.

**ಡೊಂಬಕಾಗೆ** (ನಾ). ಒಂದು ಬಗೆಯ ಕಾಗೆ; "(ಕಪ್ಪು ಗರಿಗಳೂ ಒರಟು ಧ್ವನಿಯೂ ಉಳ್ಳ, ಮುಖ್ಯವಾಗಿ ಮಾಂಸವನ್ನು ತಿಂದು ಜೀವಿಸುವ, ಅನೇಕ ವೇಳೆ ಸಾಕಿ ಪಳಗಿಸಿದ ಮತ್ತು ಜನಬಳಕೆಯಲ್ಲಿ ದುಶ್ಶಕುನ ಸೂಚಕವೆಂಬ ಭಾವನೆಯುಳ್ಳ) ಕಾಗೆಜಾತಿಯ ಒಂದು ದೊಡ್ಡ ಹಕ್ಕಿ" (Raven. ಇಂಕನಿ.) : ಮೊಲ ಮತ್ತು ನರಿಗಳನ್ನು ನಾಯಿಗಳಿಂದ ಬೇಟೆಯಾಡದೆ, ಡೊಂಬಕಾಗೆ, ಡೇಗೆ, ಕಾಗೆ ಮತ್ತು ರಣಹದ್ದುಗಳಿಂದ ಬೇಟೆಯಾಡುತ್ತಾರೆ (ಪ್ರವಾಇ. I, ೦೩).

[ ಡೊಂಬ$_1$ (<ದೊಂಬ) + ಕಾಗೆ ]

**ಡೊಂಬಕಾಣಿಕೆ** (ನಾ). ಒಂದು ಬಗೆಯ ತೆರಿಗೆ (?) : ಯಿವರ್‍ಗೆ ಚಪ್ಪರ ಕಾಣಿಕೆಯಿಲ್ಲ ಮರ್‍ರಿಕಾಣಿಕೆಯಿಲ್ಲ ಡೊಮ್ಬಕಾಣಿಕೆಯಿಲ ಲಿಂಗಕಾಣಿಕೆಯಿಲ (ಎಕ. XVI, ಗುಬ್ಬಿ. ೬೯-೩೩ ; ?).

[ ಡೊಂಬ$_1$ (<ದೊಂಬ) + ಕಾಣಿಕೆ (<ಕಾಣ್ಕೆ) ]

**ಡೊಂಬತಿ** 'ದೊಂಬಿತಿ' ನೋ.

**ಡೊಂಬರಗೆ** (ನಾ). (ಉಕ) ಎತ್ತಿನ ಗಾಡಿಯ ತೋಳು ; ಗುಜ್ಜುಗಳ ಮೇಲ್ಭಾಗದಲ್ಲಿ ಕೂಡಿಸಿದ ಬಿದಿರಬೊಂಬು. [ ? ]

**ಡೊಂಬವಱಿ$^3$** (ನಾ). ಡೊಂಬರು ತಮ್ಮ ಆಟದಲ್ಲಿ ಬಾಜಿಸಲು ಬಳಸುವ ಒಂದು ಬಗೆಯ ಚರ್ಮವಾದ್ಯ ; ದಡ್ಡಸ : "ದಡ್ಡಸ–ಡೊಂಬವಱಿ" (ಶಮದ. ಪರಿ. ೨): "ದಡ್ಡಸವೆಂದು ಡೊಂಬವಱಿ" (ಕರ್ಣಾನಿ. ೦೮).

[ ಡೊಂಬ$_1$ (<ದೊಂಬ) + ಪಱಿ$^3$$_1$ ]

**ಡೊಂಬವಿದ್ದೆ** (ನಾ). ಯಕ್ಷಿಣೀ ವಿದ್ಯೆ ; ಬೇರೆಬೇರೆ ವೇಷವನ್ನು ಧರಿಸುವ ಮಾಯಾ ವಿದ್ಯೆ ; ಮೋಸಗಾರಿಕೆ ; ವಂಚಕತನ : ಏನಾನುಮೆ ಪಂದಿಯೆಂದನಿತಾನುಂ ತೆಱನಾಗಿ ಡೊ[ಪಾಠಾಂ. ದೊ]ಂಬವಿದ್ದೆಯನಾಡಲ್ ನೀನಱಿವೆಯುಱದಿದಿರ್ಚಿದೊಡಾನಱಿವೆಂ ನಿನ್ನನಿಲ್ಲಿ ದೆಸೆವಲಿಗೆಯ್ಕಲ್ (ಪಂಪಭಾ. ೭-೫೭). [ ಡೊಂಬ$_2$ (<ದಂಬ) + ವಿದ್ದೆ ]

**ಡೊಂಬಿ$_1$** 'ದೊಂಬಿ' ನೋ.
**ಡೊಂಬಿ$_2$** 'ದಂಬ' ನೋ.
**ಡೊಂಬಿಗ$_1$** 'ದೊಂಬಿಗ' ನೋ.
**ಡೊಂಬಿಗ$_2$** (ನಾ). ಒಣಹೆಮ್ಮೆಯುನ್ನು ತಾಳಿದವನು ; ಆಡಂಬರಕಾರ ; ಡಾಂಭಿಕ : 'ರಣಡೊಂಬಿಗ' ಪರಾ.
[ ಡೊಂಬು$_2$ (<ದಂಬ) + – ಇಗ ]
**ಡೊಂಬಿಗಾರ** 'ದೊಂಬಿಗಾರ' ನೋ.
**ಡೊಂಬಿಗೈ** (ಕ್ರಿ). ಗುಂಪುಸೇರು ; ಒಟ್ಟಾಗು : ಡೊಂಬಿಗೈದಲ್ಲಲ್ಲಿ ದನಿಗೈವ ಕಾರಂಡಚಕ್ರದಿಂ (ವಂಕಾರಾ. ೨-೧೪-೨೩).
[ ಡೊಂಬಿ$_1$ (<ದೊಂಬಿ) + ಗೈ (<ಕೆಯ್$_1$) ]
**ಡೊಂಬಿತಿ$_1$** 'ದೊಂಬಿತಿ' ನೋ.
**ಡೊಂಬಿತಿ$_2$** (ನಾ). ಮಾಯಾವಿನಿ ; ಕೆಟ್ಟವಳು ; ಧೂರ್ತೆ : ಪೆಂಪಿನಾಲಡ್ಡುಗೆಯಂ . . . ಡೊಂಬಿತಿ ಜೋಡೆ ಸೋಲದಿಂ ಬಡ್ಡಿಸಿದಪ್ಪಳೆಂದು ನೆಟ್ಟ ದೂಱುವರೆನ್ನನವಜ್ಞೆಯಿಂ ಪೆಱರ್ (ಧರ್ಮಾಮೃ. ೧೧-೨೦೨).
[ ಡೊಂಬು$_2$ (<ದಂಬ) + – ಇತಿ$_1$ (<– ಇತ್ತಿ) ]
**ಡೊಂಬಿದೈವ** (ನಾ). ವಂಚನೆಯ ದೈವ ; ಮೋಸಗಾರ ದೇವರು : ಕೊಂಬು ಹೋತ ಕುಱಿ ಕೋಣನ ಬಲಿಗೊಂಬ ಡೊಂಬಿದೈವಗಳ ಭಜಿಸದಿರು ಮನವೆ (ಕನಕ. ೧೭೩-೨).   [ ಡೊಂಬು$_2$ (<ದಂಬ) + ದೈವ ]
**ಡೊಂಬಿಬೀಸು** (ನಾ). ಕತ್ತಿವರಸೆಗಳಲ್ಲೊಂದು ; ಖಡ್ಗ ಬೀಸುವಿಕೆಗಳಲ್ಲಿ ಒಂದು ವಿಧಾನ (?) : ಆ ಸ್ಥಾನದಲ್ಲಿ ದೇಹಭ್ರಮಣಉ ಅಲ್ಪವಾಗಿ ಯಿದ್ದಂಥಾ ಪಾದಗಳ ಗಮನಉ ಬಂಡಿಕೋಲಿನ ಭ್ರಮಣವು ಆವದು ಅದು ಡೊಂಬಿಬೀಸುಯೆಂದು ತಿಳಿವರು (ಖಡ್ಗಟೀ. ೫-೨೯).
[ ಡೊಂಬಿ$_2$ + ಬೀಸು$_2$ ]
**ಡೊಂಬಿಮಾಡು** 'ದೊಂಬಿಮಾಡು' ನೋ.
**ಡೊಂಬಿವರಿ** (ಕ್ರಿ). ಗುಂಪಾಗಿ ನುಗ್ಗು ; ಒಟ್ಟಗೆ ಧಾವಿಸು ; ಮೊತ್ತವಾಗಿ ಮುಂದೆ ಸಾಗು: ಡೊಂಬಿವರಿದಿಱಿದಾಡಿ ಸೂತ್ರದ ಬೊಂಬೆಯಂದದಿ ಕೆಡೆದರಧಟರು (ಸಾಳ್ವಭಾ. ೨೩-೨೪).
[ ಡೊಂಬಿ$_1$ (<ದೊಂಬಿ) + ಪರಿ$_2$ ]
**ಡೊಂಬಿಸು** (ಕ್ರಿ). ಮೋಸಮಾಡು ; ವಂಚಿಸು : ಜನಮುಳ್ಳನಂ ಕರಂ ಡೊಂಬಿಸಿ ತಿಂಬರ್ (ಜೀವಸಂ. ೬೯-೧೪).
[ ಡೊಂಬು$_2$ (<ದಂಬ) + – ಇಸು$_3$ ]
**ಡೊಂಬು$_1$** 'ದೊಂಬಿ' ನೋ.
**ಡೊಂಬು$_2$** 'ದಂಬ' ನೋ.
**ಡೊಂಬುಮಾಡು** 'ದೊಂಬಿಮಾಡು' ನೋ.
**ಡೊಂಬೆ$_1$** 'ದೊಂಬಿ' ನೋ.
**ಡೊಂಬೆ$_2$** (ನಾ). ಮೋಸಗಾತಿ ; ವಂಚಕಿ : ಒಡೆದನೊಳ್ ಪರಾಂಗನೆಯೊಳೋತೊಡಗೂಡಿದನೊಳ್ ಸರಾಗದಿಂ ಕೂಡುವಳೆಂಟ ಡೊಂಬೆ ಸಿರಿ ಪಾತಕಿ ನಾಣಿಲಿ ಕೆಟ್ಟ ಬೂತು ನಾಟ್ಕ್ಯೋಡೆಯವಳ್ಗದಕ್ಕುಮುಂಟಿದಾವೆಳು ಮೊಲ್ವಳೆ ಕೀರ್ತಿಯೆಂಬವಳ್ನೋಡಳು ನಿಂದು ಬೀರಸಿರಿ ಕೇಳಳವಂದಿರ ಮಾತನಪ್ಪಡಂ (ಬಂಹರಿ. ೧೧-೧೦೪).
[ ಡೊಂಬು$_2$ (<ದಂಬ) + – ಎ$_2$ ]
**ಡೊಕ್** (ನಾ). (ಆಯುಧದಿಂದ ತಿವಿಯುವುದು ಮೊದಲಾದ ಸಂದರ್ಭದಲ್ಲಿ ಬಳಸುವ ಒಂದು ಅನುಕರಣ ಶಬ್ದ : 'ಡೊಕ್ಕನೆ' ಪರಾ.
**ಡೊಕ್ಕನೆ** (ಅ). ಡೊಕ್ ಎಂಬುದಾಗಿ : ಡೊಕ್ಕನೆ ಸುರಿಗೆಯೊಳುರವಂ ಬಿಕ್ಕನೆ ಬಿರಿಯಿಱಿದು (ಪಂಪಭಾ. ೧೨-೦೫೩).   [ ಡೊಕ್ + – ಅನೆ$_1$ ]
**ಡೊಕ್ಕರ$_1$** 'ಡೊಂಗಟ' ನೋ.
**ಡೊಕ್ಕರ$_2$**, ಡೂಕ್ಕರೆ, ಢಕ್ಕರ, ಢೊಕ್ಕರ, ದೊಕ್ಕರಿ (ನಾ). ೧. ಬಲವಾದ ಹೊಡೆತ; ಒದೆತ; ಮುಷ್ಟಿಯ ಪೆಟ್ಟು; ಗುದ್ದು : "ಡೊಕ್ಕರ[ಪಾಠಾಂ. ಳ] ಗುದ್ದುಂ" (ಭಾರನಿ. ೫೬). ೨. ಮಲ್ಲಯುದ್ಧದ ಒಂದು ಪಟ್ಟು. P ಪ್ರತಿಮಲ್ಲನ ಕೊರಳ ಹಿಂಭಾಗವನ್ನು ಒಂದು ಕಂಕುಳಲ್ಲಿ ಇರಿಸಿಕೊಂಡು, ಕುತ್ತಿಗೆಯನ್ನು ಮುಂಗೈಯಿಂದ ಅದುಮುತ್ತ ಇನ್ನೊಂದು ಕೈಯಿಂದ ಮೊಣಕಾಲ ಸಂಧಿಗಳನ್ನು ಗಟ್ಟಿಯಾಗಿ ಹಿಡಿದೆಳೆದು ದೇಹವನ್ನು ಹುದುಗಿಸಿ ಕಾಲುಗಳೆಡೆಗೆ ಹೊಟ್ಟೆಯನ್ನು ಎರಡು ತೊಡೆಗಳಿಂದ ಪೀಡಿಸುತ್ತ ಅವನಿಗೆ ಪ್ರಾಣಾಂತಕವಾದ ನೋವನ್ನೊದಗಿಸುವ ಜಟ್ಟಿಕಾಳಗದ ಒಂದು ಪಟ್ಟು: ಸ್ಫುರಿತ ಕೃಪಾಣ ಪಾಣಿಗಿದಿರಂ ನಡೆದಟ್ಟುಳಿ ತೊಟ್ಟುವಾಯ್ದು ಡೊಕ್ಕರದೊಳೆ ವಿಕ್ಕ ದಿಕ್ಕರಿಯನಿಕ್ಕುವವೋಲ್ ನೆಲಕಿಕ್ಕಿ (ಪಂಪಭಾ. ೧೧-೧೧೪); ತಗುಳ್ದು ಪತ್ತಿಸುವ ಮಾನಸಗೋಳವೆನಿಪ್ಪ ಡೊ[ಪಾಠಾಂ. ಥ]ಕ್ಕರಕಿಕ್ಕಿದ ವಜ್ರ ಲೇಪಮೆನೆ (ಚಂದ್ರಪು. ೫-೮೦); ಆಂ ಪಿಡಿದುದೆ ಕತ್ತರಂ ಕರವಳಂ ಸೆರವಟ್ಟಣೆ ಹತ್ತೆ ಡೊಕ್ಕರಂ . . . ಮುಹಡಂ ದಣುವಟ್ಟ ಪಟ್ಟಿಸಂ ಎಂದು ಮಲ್ಲಮಾತಂ ಮಾಡಿ (ಅನಂಪು. ೨-೨೭); ಸಿಕ್ಕಿದವು ಹೆದ್ದೊಡೆಗಳುರಗನ ತೆಕ್ಕೆಯಲಿ ಡೆಂಡಣಿಸಿ ಫಣಪತಿ ಡೊಕ್ಕರಕೆ ಹಬ್ಬಿದನು ಬಿಗಿದನು ಭಟನ ಪೇರುರವ (ಕುಮ್ವಾ.ಆ. ೧೬-೩೩); ಅಧಟಿಂದಂ ಮೂಱುಂ ಲಗ್ಗದ ನಾಲ್ಕು ಸ್ಥಾನಮಯ್ದು ಡೊಕ್ಕರದ ಮಹೋಗ್ರದ ಮೂವತ್ತೆರಡು ಬಿನ್ನಣದೊದವಂ ಪಲತೆಱದ ಪಾತವಂ ನೆಟ್ಟಿ ಮೆಱೆದರ್ (ತ್ರಿಪುವಿ. ೨೬-೧೭); ಆಯತಿಕೆ ಬಂಧಂ ಡೊಕ್ಕರಂ (ಶಬಶಂ. ೪-೭೭); ಜಟ್ಟಿಗರ ಡೊಕ್ಕರಂ ಗಳಹತ್ತಂ ಮೊದಲೆನಿಸಿದ ಪಲವುಂ ಪಟ್ಟುಗಳ್ (ಮರಾಜ. ೨೦೭-೪೯). **ಡೊಕ್ಕರೆ : ೨.** ವೀರ ಚಿಕದೇವಂ ನೋಟಕರ್ ಮೆಚ್ಚೆ ಮಲ್ಲಗೆಯೊಳ್ಡೊಕ್ಕರೆಯೊಂಟಿಮಂಡಿ ಕರಲಂ . . . ಮಗುಟ್ಟಿಂತೀ ಗತಿಭೇದದಿಂ ತೊಡಕಿ ತೋರ್ಕುಂ ಸಾಧಕಪ್ರೌಢಿಯಂ (ಚಿಕವಿ. ೪-೧೪೬). **ಢಕ್ಕರ: ೨.** ನಾಲ್ಕುಂ ಸ್ಥಾನದೊಳಂ ಮೂಱುಂ ಲಗ್ಗದೊಳಂ ಐದುಂ ಢ[ಪಾಠಾಂ. ಡೊ]ಕ್ಕರದೊಳಂ . . . ಪಲತೆಱದ ಪಾತಂಗಳೊಳಂ ನೆಱೆದು (ಚಂದ್ರಪು. ೫-೭೭ ವ). **ಢೊಕ್ಕರ : ೨.** ವರ್ಗ ಚತುರ್ಥಾಕ್ಷರಂಗಳ್ಗೆ . . .ಢೆಂಕೆ, ಢೊಕ್ಕರಂ (ಶಮದ.೧೫ ಪ್ರಯೋ). ಕತ್ತರಂ ಕರವಡು ಸೀವಟ್ಟಣಂ ಢೊಕ್ಕರಂ ವಸರಂ ಸಂದಣುವಟ್ಟಿ . . . ಎಂದು ಮಲ್ಲವಾತುಮಂ ನುಡಿದು (ಬಾಧಪು. ೧೬-೧೯). **ದೊಕ್ಕರಿ :** 'ದೊಕ್ಕರಿಗೊಳ್' ಪರಾ.   [ ?. / ತೆಲು. ಡೊಕ್ಕರ ]
**ಡೊಕ್ಕರ$_3$**, ಡೊಕ್ಕಾರ (ನಾ). ಒಂದು ದೇಶದ ಹೆಸರು : ಕ್ಷಾರಕರ ಹೂಣಕರ ಡೊಕ್ಕರಪಾರಕರ ಬುರಸಹಣ ಭೂಪರೊಳಾರುಭಟೆಯಲಿ ಕಾದಿ (ಕುಮ್ವಾ.ಸ. ೩-೨೪). **ಡೊಕ್ಕಾರ :** ಅಂಗ ವಂಗ ಕಳಿಂಗ . . . ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗಟುತ್ತುಮಿರೆಯಿರೆ (ಜಗವಿ. ೨-೩೯ ವ).   [ ? ]
**ಡೊಕ್ಕರಂಗೊಳ್**, ದೊಕ್ಕರಿಗೊಳ್ (ಕ್ರಿ). ೧. ಒದೆತದಿಂದ ಅಥವಾ ಮುಷ್ಟಿಯ ಪೆಟ್ಟಿನಿಂದ ನಜ್ಜುಗುಜ್ಜಾಗು : ಅಂತಿಕ್ಕಿ ಡೊಕ್ಕರಂ ಗೊಂಡುರಸ್ಥಳ ಪರಿಪಿಷ್ಟರನಾಗಿರ್ದ ಕೃಷ್ಣನಂ ದಕ್ಷಿಣದಿಕ್ಪಾಲಕಂ ನಿರೀಕ್ಷಿಸಿ (ಜಗವಿ. ೭-೨೯ ವ). ೨. ಡೊಕ್ಕರವೆಂಬ ಮಲ್ಲಯುದ್ಧದ ಪಟ್ಟನ್ನು ಹಾಕು ; ಡೊಕ್ಕರಪಟ್ಟಿನಿಂದ ಆಕ್ರಮಿಸಿ ಹಿಡಿ : ಕೋಡ ಕಯ್ಯು ಕಾಲೆಡೆಗಳೊಳ್ ಬಿಣ್ಪುಮಂ ಪೆಣೆವಂದದಿಂದೇರ್ದು ಡೊಕ್ಕರಂಗೊಂಡು ಕುರುಕ್ಷೇತ್ರದಿಂದತ್ತ ಪನ್ನೆರಡುಯೋಜನಬರಮೊತ್ತುವುದುಂ (ಪಂಪಭಾ. ೧೧-೬೪ ವ). **ದೊಕ್ಕರಿಗೊಳ್: ೨.** ಭುವನೈಕಮಲ್ಲಂ ಮೋಹಮಲ್ಲನೆಕ್ಕತುಳದಿಂದಕ್ಕುಳಿಸದೆ ದೊ[ಪಾಠಾಂ. ಡೊ]ಕ್ಕರಿಗೊಂಡು ನೆಟ್ಟನೆ ಮುಱಿದಿಕ್ಕಿ ಗೆಲ್ದ ವಿದ್ಯಾಧರಕಳನಿದು (ಪಾರ್ಶ್ವಪು. ೧೬-೧೦ ವ).
[ ಡೊಕ್ಕರ$_2$ + ಕೊಳ್$_1$ ]

**ಡೊಕ್ಕರಣೆ** (ನಾ). = ಡೊಕ್ಕರ್ಱ ೨ : ಲಗಡಿಯಲಿ ಲಟಕಟಸುವಂತರ ಲಗಡಿಯಲಿ ಲಾಲಿಸುವ ಡೊಕ್ಕರಣೆಗಳ ಬಿಗುಹಿನ ಬಿಡೆಯ ಬಿನ್ನಾಣದಲಿ ಹಣಗಿದರು (ಕುವ್ಯಾ.ಕ. ೧೯-೪೩). [ ಡೊಕ್ಕರ್ಱ + – ಅಣೆ ]

**ಡೊಕ್ಕರಪಟ್ಟು** (ನಾ). = ಡೊಕ್ಕರ್ಱ ೨ : ಒಂದೇ ಸಮನಾಗಿ ಭೀಮ ಜರಾಸಂಧರು ಡೊಕ್ಕರಪಟ್ಟು, ಲಗಡಿ, ಕತ್ತರಿಪಟ್ಟು, ನಾಗಬಂಧ ಮುಂತಾದ ಹಲವು ಪಟ್ಟುಗಳನ್ನೊಡ್ಡಿ ಕಾಳಗ ನಡೆಸಿದರು (ರಾಜಸೂ. ೨೩).
[ ಡೊಕ್ಕರ್ಱ + ಪಟ್ಟು$_1$ ]

**ಡೊಕ್ಕರವಾಯ್** (ಕ್ರಿ). ೧. (ಕುತ್ತಿಗೆಯನ್ನು) ತೋಳುಗಳಿಂದ ಬಳಸಿ ಬಿಗಿಯಾಗಿ ಹಿಡಿದುಕೊಳ್ಳು : ಕೊರಳ ಡೊಕ್ಕರವಾಯ್ದು ಹಣೆಯಿಂದೊರಸಿ ಹಣೆಯನು . . . ಮೋಹದಲೊಸೆದು ಮುಂಡಾಡಿ (ತೊರರಾ. ೨-೩-೪೦). ೨. = ಡೊಕ್ಕರಂಗೊಳ್ ೨ : ಹಾವು ಹದ್ದಿನ ಪದಹತಿಗೆ ನೆಱೆ ನೋವವೊಲು ನೆಲಕೊಱಗಿ ರಕ್ಕಸನಾ ವಿಘಾತಿಯೊಳೆದ್ದು ಡೊಕ್ಕರ ವಾಯ್ದು ನಗ್ನಿಜನ (ತೊರರಾ. ೭-೧೯-೭೦). [ ಡೊಕ್ಕರ್ಱ + ಪಾಯ್$_1$ ]

**ಡೊಕ್ಕರವಿಕ್ಕು** (ಕ್ರಿ). = ಡೊಕ್ಕರಂಗೊಳ್ ೨ : ಹೊಯ್ದು ತುಱುಬನು ಹಿಡಿದು ತಡೆಗಾಲ್ವೊಯ್ದು ಕೆಡಹಿದನಸಬಡಿದು ಹೊಯ್ ಹೊಯ್ದು ಬಿಡೆ ಬೊಪ್ಪರಿಸಿ ಡೊಕ್ಕರವಿಕ್ಕಿ ರಾಘೆಯಲಿ (ಕುವ್ಯಾ.ಕ. ೧೯-೪೮).
[ ಡೊಕ್ಕರ್ಱ + ಇಕ್ಕು ]

**ಡೊಕ್ಕರಿ** (ನಾ). ಜಲಕ್ರೀಡೆಯಲ್ಲಿ ವಿನೋದಕ್ಕಾಗಿ ಒಬ್ಬರ ಮೇಲೊಬ್ಬರು ನೀರನ್ನೆರಚಲು ಬಳಸುವ (ವಿವಿಧಾಕಾರದ) ಜಲಯಂತ್ರ ; ಜೀರುಕೊಳವೆ ; ಪಿಚಕಾರಿ : ಡೊಕ್ಕರಿಗಳಿಂ ಪೊಗೆದೊರ್ಬರೊರ್ಬರಾಗಳ್ . . . ಪೊಯ್ದರೊಲವಿಂ ವಿಜಯಾವತಿಯುಂ ನರೇಂದ್ರನುಂ (ಕು ಸು ಮಾ. ೫-೦೩೫) ; ಸುಧಾಂಶುಕಳೆಗಳೆವೆನೆ ಕಣ್ಗೊಳಿಪಿಂದುಶಿಲೆಯ ಡೊಕ್ಕರಿಗಳನಾಗಳೆ ಕೊಂಡು (ಶಾಂತೀಶ್ವ. ೦೦-೦೭೦). [ ? ]

**ಡೊಕ್ಕರಿಸು, ದೊಕ್ಕರಿಸು** (ಕ್ರಿ). ೧. ಹೊಡೆ; ಒದೆದು ಕೆಳಕ್ಕೆ ಅಪ್ಪಳಿಸು; ಗುದ್ದು : ಪಚ್ಚರಂ ಬೇಡಱಿಗಿಂ ನೀಪೆಂಬವೊಲ್ ಡೊಕ್ಕರಿಸಿ ದಿಗಿಭಹಸ್ತಂಗಳಂ (ಅರ್ಧನೇ. ೮-೯೦) ; ಧಿಕ್ಕರಿಸಿ ಡೊಕ್ಕರಿಸಿ ಝುಂಕಿಸಿ ಸ್ವರವನಗ್ಗಿ . . . ಘನದನೀಶಾನ್ಯರೆಂಬವರ (ಹಹಳಾ. ೦-೪೩) ; ಹರಿ ಮದೋಕ್ಕಟದಂತಿಯನು ಡೊಕ್ಕರಿಸಿ ದಾವರಿಸುವವೊಲು (ಕುವ್ಯಾ.ಕ. ೧೯-೪೯) ; ವಾಮಕರತಳದರಡು ಬೆರಳಿಂದ ಡೊಕ್ಕರಿಸುತಸುರೆಯಂ (ವಂಕಾಶಾ. ೫-೩-೦೬). ೨. ಹಿಸುಕು ; ನಜ್ಜುಗುಜ್ಜು ಮಾಡು ; ಸದೆಬಡಿ ; ಸಾಯುವಂತೆ ಬಡಿ : ಕುರುಸೂನುವನಿರದಿಕ್ಕಿ ಮೆಟ್ಟಿ ಡೊಕ್ಕರಿಸಿದಪೆಂ (ಗದಾಯು. ೬-೨೫) ; ಪೊಡೆವಂ ಕಾಲನನಿಕ್ಕಿ ಡೊಕ್ಕರಿಸುವಂ ದೈತೇಯನಂ (ಜಗವಿ. ೩-೨೦) ; ಇಕ್ಕಿ ಕೆರಳ್ದು ಡೊಕ್ಕರಿಸಿ (ವಿಷ್ಣುಪು. ೫-೫-೬೪). ೩. ಡೊಕ್ಕರಪಟ್ಟನಿಂದ ಬಿಗಿಹಿಡಿ : ಓರೊರ್ವರನುರವಣೆಯಿಂದಿಕ್ಕುವೋರೊರ್ವರಂ ಡೊಕ್ಕರಿಸುತ್ತೋರೊರ್ವರಂ ಚಾಳಿಸುವ ಪದದೊಳ್ (ಜಗವಿ. ೬-೬೪) ; ಬೊಕ್ಕೆಯದನುಪಮಾನದೊಳು ಡೊಕ್ಕರಿಸಿ ಬಿಡಿವಂಬಿರುದಿನ ಕಲ್ಲಮಾನಿಸರಂತಿರ್ಪ ಮಲ್ಲರ ನೆರವಿಗಳೊಳಂ (೧೧೦ಕ. ೨-೦೦೫ ಪ) ; ತಡೆದರೆ ತಡೆದೊದ್ದ ಬೊದ್ದೆಱೆಯೊಳಿಟ್ಟು ಹೊಡೆದರೆ ಹೊಡೆದು ಡೊಕ್ಕರಿಸಿ ಕೆಡೆದರೆ ಕೆಡೆದು ಗುರ್ಗಳೊಳುತ್ತಿ ಭೀಕರವಡೆದು ಹೊಯ್ದಾಡಿದುವೆರಡು (ಮೋಹತ. ೩೮-೨೮). ೪. (ಆಲಂ) ಕೊರಳನ್ನು ಬಿಗಿ ಹಿಡಿ; ಉಸಿರಾಟವನ್ನು ತಡೆ: ಬಿಕ್ಕುಳಿಯು ತಾಳಿಗೆಯ ಮೂಗಿನೊಳೊಕ್ಕು ರುಧಿರದ ಧಾರೆ ಬಿಗಿದುಱೆ ಡೊಕ್ಕರಿಸಲಸು ನೀಗಿತಸುರನ ತನುವ ನಿಮಿಷದಲಿ (ಕುವ್ಯಾ.ಆ. ೧೦-೩೮). **ದೊಕ್ಕರಿಸು** : ೧. ಮರಳಿ ಸುಗ್ರೀವನು ರಿಪುವ ದೊಕ್ಕರಿಸಿ ತಿವಿದನು (ಅರಾಮಾ. ೪-೨-೩). ೩. ತುಡುಕಿ ಪಿಡಿದು ತೊಡೆಗಳಿಂ ನಡುವಂ ದೊಕ್ಕರಿಸಿ ಬಾಹುಗತ್ತರಿಯಿಂ ಗಳಮನೊತ್ತುವುದುಂ(ಮಹಾನೇ. ೬-೭೫ ಪ).
[ ಡೊಕ್ಕರ್ಱ + – ಇಸು ]

**ಡೊಕ್ಕರೆ** 'ಡೊಕ್ಕರ್ಱ' ನೋ.

**ಡೊಕ್ಕಾರ** 'ಡೊಕ್ಕರ್ಱ' ನೋ.

**ಡೊಕ್ಕು$_1$** ( ? ) (ಕ್ರಿ). (?) : ವರವೇದಮದು ಕರ್ತೃವಲ್ಲದೊಡೆ ಡೊಕ್ಕದುರುಕರ್ಮದಿಂದೊಗೆದ ಸತ್ಫಲ್ಗುನಿಕರಮಂ ಸರವರ ಸ್ವರ್ಗಾಪವರ್ಗಮುಂ (ಅರಾಹ. ೩-೨). [ ←ತೆಲು. ಡೊಕ್ಕು = ನಾಶವಾಗು ]

**ಡೊಕ್ಕು$_2$** (ನಾ). ಒಂದು ಅನುಕರಣ ಶಬ್ದ : ಘವುದ ಹೊಯ್ಲಿಗೆ ಹೊದಕೆಗೊಂಬನೆ ತಮವಿರೋಧಿ ವಿಲೋಕನದಲುಭ್ರಮಿಸೆ ಹಳಚಿತು ಡೊ[ಪಾಠಾಂ. ಹೊ]ಕ್ಕು ದಡದುಡ ದೊಪ್ಪು ದಿಪ್ಪೆನಲು (ತೊರರಾ. ೬-೪೫-೫೦).

**ಡೊಕ್ಕೆ, ದೊಕ್ಕೆ** (ನಾ). ೧. ಮೈ ; ದೇಹ ; ಶರೀರ : "ಒಡಲು ಮೈ ಡೊಕ್ಕೆ" (ಕಬ್ಬಮಂ. ೬೨); ಡೊ[ಪಾಠಾಂ. ದೊ]ಕ್ಕೆ ಬೇಱಾತ್ಮ ಬೇಱೆಂದೆಡೆವಿಡದ ಕಣ್ಣಿಕ್ಕಿ ಜಾನಿಸುವ ತಾಪಸಗೆ (ಭರಪ.೩-೪೨); ನಿನ್ನಯ ಡೊಕ್ಕೆಯಂ ಸಿಗಿದು ರಣಬಲಿಯನೀಯದೊಡಾನು ಶಕ್ಕಸದ ಬಲುಗೆಯ್ಯ ವೀರವೆ (ಭೋಲರಾಸು. ೦೩) : ಈ ಡೊಕ್ಕೆ ಬೀಳಲು ಸುರರ ಸೇರಿಸಲು ನೀವೆ ಗತಿಮತಿ (ತುರಂಗ. ೨೫-೨೩) ; ಶರಹತಿಯಿನನಿಬರ ಡೊಕ್ಕೆಗಳಂ ದೋಱುಗಳೆದನಾ ನೃಪತಿಲಕಂ (ಕಳಶ. ೨-೦೪). ೨. ಹೊಟ್ಟೆ; ಉದರ: "ಡೊಕ್ಕೆಯೆನಲುದರ" (ಕಶರ. ೦೨೪) ; ಮನದೊಳಗೆ ಕೌರವನ ತಿಕ್ಕಿ ತನಿಗರುಳ ರಕ್ತಂಗಳಂ ಶಾಕಿನಿಗೆ ಡೊಕ್ಕೆಯಂ ತುಂಬಿಸುವೆವೆಂದು ಭೀಮಾರ್ಜುನರು ನಿಂದಿರಲು (ತುರಂಗ. ೨೪-೨೦) ; ಭೂತಗಣಕೆ ಡೊಕ್ಕೆ ತುಂಬಿತು (ತುರಂಗ. ೪೫-೯). ೩. (ಆಲಂ) ಮನಸ್ಸು ; ಅಂತರಂಗ : ಎನಗೆ ಈತ ಮಿತ್ರನು ಯಾತ ಸೇವಕನುಯಾತ ಗುಣಸಾಧುವೆಂದು ಡೊಕ್ಕೆಯೊಳಗಿರಿಸದಿರು ಬೆಳಸದಿರು ಮುಂದೆ ವಿಷವಕ್ಕು . . . ಪಾಂಡವರ ನೆಳಲಿವರು (ತುರಂಗ. ೨೫-೨೯). ೪. ಒಂದು ಬಗೆಯ ಪಾತ್ರೆ (?) : ಡೊಕ್ಕೆಯೊಳಗಣ ಕಸುರ ಪರುವೆನಗೆ ನೀಡೆ (ಕರಿಕ. ೭೯-೯). **ದೊಕ್ಕೆ** : ೧. ಇಕ್ಕಿದಲು ಬಲೆಯ ಕೃಶ ತರಗಾತ್ರನಾದ ಬರಿ ದೊಕ್ಕೆಯನ್ನುಡಿ[ಳಿ]ಸಿ ಫಲವೇನು(ತುರಂಗ. ೨-೨೩).
[ ದೇ.; ತೆಲು. ಡೊಕ್ಕ; ತುಳು. ಡಕ್ಕೆ = ಎದೆ, ಎದೆಮೂಳೆ; ಕುವಿ. ಡೋಕು = ಅಸ್ಥಿಪಂಜರ ]

**ಡೊಗರು** 'ಡೊಂಗಱು' ನೋ.

**ಡೊಗರುಬೀಳು, ದೋಱುವೀೞ್** (ಕ್ರಿ). ೧. ತೂತುಬೀಳು ; ರಂಧ್ರವುಂಟಾಗು ; ಛಿದ್ರವುಂಟಾಗು. ೨. (ಆಲಂ) ಅವಿಶ್ವಾಸವುಂಟಾಗು ; ನಂಬಿಕೆಕೆಡು: ಅಂತಃಪುರದಲ್ಲಿಯೂ ಎಲ್ಲಿಯಾದರೂ ಡೊಗರುಬಿದ್ದಿದೆಯೋ . . . ಎಂಬ ಬಗ್ಗೆ ಒಮ್ಮೆಯಾದರೂ ಪರೀಕ್ಷಿಸಿ ನೋಡಬೇಕೆಂದು ಭೂಪತಿಯ ಮನಸ್ಸಿಗೆ ಹೊಳೆದಿರಲೇ ಇಲ್ಲ (ಇಪ್ಪ.ಕ. ೨೭೬). **ದೋಱುವೀೞ್** : ೧. ಪೆರ್ಬುಲಿ ಪಾಯ್ದುಗಿಯಲ್ಕೆ ದೋಱುವಿರ್ದುರದ ಸಿಪ್ಪಟ್ಟ [ಪಾಠಾಂ. ದೋಣಿವಿರ್ದುರದ ಪಿಸುಟ್ಟ] ಪೆರ್ದೊಡೆಯ ನುರ್ಗಿದ ದುಂಡೆಯ ಭಂಗಿ ರೌದ್ರಮಾಗಿರೆ (ಜಗವಿ. ೧೬-೨೦).
[ ಡೊಗರು (<ಡೊಂಗಱು) + ಬೀಳು$_1$ (<ಬೀೞ್$_1$) ]

**ಡೊಗರುಹಾಯು** (ಕ್ರಿ). = ಡೊಗರುಬೀಳು ೧: ದಕ್ಷಿಣದ ಗೋಡೆಯ ಒಂದು ಮೂಲೆಯು ಡೊಗರುಹಾಯ್ದಿತ್ತು (ಬಾಬಲ. ೦).
[ ಡೊಗರು (<ಡೊಂಗಱು) + ಹಾಯು (<ಪಾಯ್$_1$) ]

**ಡೊಗಱು** 'ಡೊಂಗಱು' ನೋ.

**ಡೊಗೆ** 'ಡೋವಿ' ನೋ.

**ಡೊಗ್ಗಾಲಿಕ್ಕು** (ಕ್ರಿ). ೧. ಮೊಣಕಾಲನ್ನು ನೆಲಕ್ಕೆ ಊರು ; ಮಂಡಿಯೂರು: ಕ್ರೈಸ್ತರು ದೇವಮಂದಿರದಲ್ಲಿ ಡೊಗ್ಗಾಲಿಕ್ಕಿ ಪ್ರಾರ್ಥನೆ ಮಾಡುತ್ತಾರೆ (ಕೂಶ). ೨. (ಆಲಂ) ರಭಸದಿಂದ ಬರು (?): ಕರದಿ ಖಂಡೆಯವನ್ನು ಜಡಿವುತ ಭರದಿ ಡೊಗ್ಗಾಲಿಕ್ಕಿ ಪ್ರಳಯದ ಶರಧಿಯೋಲ್ ದಂಡೆತ್ತಿ ಬರುವರ್ (ದೇವೀಪ್ರ. ೬೦). [ ಡೊಗ್ಗಾಲು + ಇಕ್ಕು ]

**ಡೊಗ್ಗಾಲು, ದೊಗ್ಗಾಲು** (ನಾ). ಊರಿದ ಮೊಣಕಾಲು. 'ಡೊಗ್ಗಾಲು ಸಲಾಂ' ನೋ. ದೊಗ್ಗಾಲು: ದೊಗ್ಗಾಲಿಟ್ಟು ಸಸಿನದಿ ಹಾರಿ ಅಂತರ ಬಟ್ಟೆಯೊಳಗಬ್ಧಿಯನು ಮುಟ್ಟಲುಯಿಳಿದು (ಜೈಮಾ. ೨೬೧-೭೦).

**ಡೊಗ್ಗಾಲು ಕೃಷ್ಣ**=ಮಂಡಿಯೂರಿದ ಕೃಷ್ಣ ; ಅಂಬೆಗಾಲಿನ ಕೃಷ್ಣ. **ಡೊಗ್ಗಾಲುಹಾಕು**=(ಆಲಂ)ಬಹಳ ಶ್ರಮಪಡು: ಹಪ್ಪಳಾ ಮುರಿಯೋಕೆ ಡೊಗ್ಗಾಲು ಹಾಕಬೇಕೇ? (ಗಾದೆ). [ ಡೊಗ್ಗು + ಕಾಲು$_1$(<ಕಾಲ್$_1$) ]

**ಡೊಗ್ಗಾಲುಸಲಾಂ** (ನಾ). ೧. ಮೊಣಕಾಲನ್ನು ಊರಿಕೊಂಡು, ಬಲಗೈಯಿಂದ ಮೂರುಸಲ ಹಣೆಯನ್ನು ಮುಟ್ಟುತ್ತ ಮಾಡುವ ವಂದನೆ. ೨. ಬೀಳ್ಕೊಡುಗೆ: ಸುಬ್ರಹ್ಮಣ್ಯದ ಸೀಮೆಗೆ 'ಡೊಗ್ಗಾಲುಸಲಾಂ' ಹೊಡೆಯುತ್ತಿದ್ದೆ (ಬಟ್ಟಜೀ. ೫೮). [ ಡೊಗ್ಗಾಲು + ಸಲಾಂ ]

**ಡೊಗ್ಗಾಲೂರು, ದೊಗ್ಗಾಲೂರು** (ಕ್ರಿ). ೧. ಮೊಣಕಾಲನ್ನು ನೆಲದ ಮೇಲೆ ಊರು ; ಮೊಣಕಾಲನ್ನೂರು. ೨. (ಆಲಂ) ಸೋಲು ; ಪರಾಜಯಹೊಂದು: ಈ ಸಲ ಪರೀಕ್ಷೆಯಲ್ಲಿ ಡೊಗ್ಗಾಲೂರುವ ಪ್ರಸಂಗ ಎಲ್ಲಿ ಬರುತ್ತದೋ ಎಂದು . . . ಚಿಂತಿಸುತ್ತಿದ್ದ(ಸಮಜೀ. ೩೪೦) ; ಅವನು ಡೊಗ್ಗಾಲೂರಿ ಅಸಹಾಯನಾಗಿದ್ದ (ಸಮಜೀ. ೧೨೦೫). **ದೊಗ್ಗಾಲೂರು** : ೧. ತಿಟ್ಟನಲ್ಲಿ ಬಂಡಿಯನ್ನೆಳೆಯಲಾರದೆ ಎತ್ತುಗಳು ದೊಗ್ಗಾಲೂರಿದವು (ರೂಢಿ). [ ಡೊಗ್ಗಾಲು + ಊರು$_1$ (<ಊಱು$_1$) ]

**ಡೊಗ್ಗಿಸು** (ಕ್ರಿ). ಬಾಗುವಂತೆ ಮಾಡು ; ಬಗ್ಗಿಸು : ನೀವು ಎಲ್ಲಾರಂಗ ಸಂಸಾರ ಮಾಡಿಕೊಂಡು ಇದ್ದು ತೋರಿಸಿದರ ಸಮಾಜ ನಿಮಗ ತಲೀ ಡೊಗ್ಗಿಸಿ ಸಲಾಮು ಹೊಡಿತದ (ಅಪನಾ. ೧೯೦).

[ ಡೊಗ್ಗು + – ಇಸು$_3$ ]

**ಡೊಗ್ಗಿೞ್** (ಕ್ರಿ). ಬಾಗಿ (ಬೋರಲಾಗಿ) ಬೀಳು : ಸುಖ ಬೇಸಱಂ ನುಡಿವೂಡೊಬ್ಬರ ಕಾಣೆನೊಂದು ಹೊರಸಿನೊಳೊಬ್ಬಳೇ ಡೊಗ್ಗಿೞ್ದು ಕೆಡೆವಂ (ಸಮ್ಯಕೌ. ೫-೨೨). [ ಡೊಗ್ಗು + ಇೞ್$_1$ ]

**ಡೊಗ್ಗು** (ಕ್ರಿ). ೧. ಬಾಗು ; ಬಗ್ಗು : ಆಗ ನೀವು ಡೊಗ್ಗಿ ಮುಜರೆ ಮಾಡುತ್ತಿದ್ದಿರಿ (ಹಬ್ಬಬ. ೨೦೦). ೨. ವಂದಿಸು ; ನಮಸ್ಕರಿಸು : ಕ್ಷೀರಾಬ್ಧಿಗಂ ಪೋಗಿ ಡೊಗ್ಗಿದರು ಮುರವೈರಿಗಂ ಸುರರು ಪುಯ್ಯಲಿಡುತ (ತುರಂಗ. ೮-೨೬). ೩. ಜಗ್ಗು ; ಕುಗ್ಗು ; ಸೋಲು : ಡೊಗ್ಗುವನೆ ಕಲಿಪಾರ್ಥ ಸರಳುಗಳ್ಸಂಹರಿಸಿ ನುಗ್ಗಿದನು (ತುರಂಗ. ೪೬-೪೬): ಡೊಗ್ಗುವನೆ ಪಡ್ರುಥರಿಗಂ ಬಾಲಂ (ತುರಂಗ. ೫೨-೦೨).

**ಡೊಗ್ಗಿ ನಡೆ** = ವಿಧೇಯವಾಗು ; ಆಜ್ಞಾವರ್ತಿಯಾಗು : ಹಿಂಗ ಡೊಗ್ಗಿನಡೆದರೆ. ನನ್ನ ಗುಮಾಸ್ತಿಕೆ ನಡದ್ಹಾಂಗಾತು (ಶ್ರೀಮೂಕೃ. ೧೨) : ಗುರುಗಳಿಗೆ ಡೊಗ್ಗಿ ನಡೆಯಬೇಕು (ರೂಢಿ).

[ ದೇ.॥ ತುಳು. ಡೊಗ್ಗು, ದೊಗ್ಗು ; ತೆಲು. ಡೋಗು, ದೋಗು ]

**ಡೊಣಗ** 'ದೊಣ್ಣೆಗ' ನೋ.

**ಡೊಣೆ$_1$** 'ಟೊಣೆ' ನೋ.

**ಡೊಣೆ$_2$** 'ದೊಣೆ$_1$' ನೋ.

**ಡೊಣೆ$_3$** 'ತೊಣೆ$_2$' ನೋ.

**ಡೊಣೆಗಣ್ಣು** (ನಾ). (ಉಕ) ಕುಳಿಬಿದ್ದ ಕಣ್ಣು ; ಗುಳಿಗಣ್ಣು: (ಕ).

[ ಡೊಣೆ$_2$ (<ದೊಣೆ$_1$) + ಕಣ್ಣು (<ಕಣ್) ]

**ಡೊಣೆಗತ್ತಿ** (ನಾ). ಒಂದು ಬಗೆಯ ಕತ್ತಿ : ಡೊಣೆಗತ್ತಿ ಕೊಂಗತ್ತಿ ಧರಿಸಿ ವಾಲಗದಿ ನಿಂದಿಹರು (ಸೌಂದಕಾ. ೩-೧೧೧).

[ ಡೊಣೆ$_1$ (<ಟೊಣೆ) + ಕತ್ತಿ ]

**ಡೊಣೆಗೆ** (ನಾ). (?) : ಪಗೆಗಳ ಶೃಂಗಲಮಂ ಡೊಣೆಗೆಗೆತ್ತಿ ತತ್ಪುರವರೇಶ ನಾನಂದಲತಾಳಿಗೆಗಳ ಪರ್ಚಿಪುದೆಂತುಂ ಬಗೆಗೆನಿತುಂ ಬಿಂಕದಿಂದೆ ನಿಡು ಡೆಂಕಣಿಗಳ್ (ದಶಕು. ೧-೩೫). [ ? ]

**ಡೊಣೆನಾಯಕ** 'ದೊಣೆನಾಯಕ' ನೋ.

**ಡೊಣೆಯುಪ್ಪು**(ನಾ). ಒಂದು ಬಗೆಯ ಉರುಟಾದ ಉಪ್ಪು : "ಊಷರಕಂ– ಅಟ್ಟುಪ್ಪು, ಡೊಣೆಯುಪ್ಪು " (ಒಷಧಿ. ೦೭) ; "ಪಾಕ್ಯಂ, ಬಿಡಂ – ಈ ೨ ಕೃತಕ ಅಟ್ಟುಪ್ಪಿನ ಹೆಸರು. ತೊಳೆದು ಕಾಯಿಸಿ ತೆಗೆದ ಉಪ್ಪು, ಡೊಣೆಯುಪ್ಪು ಮತ್ತು ಪೆಟ್ಲುಪ್ಪು ಮುಂತಾದ ಅಡಿಗೆಯೊಳಿಸಿದ ಕೃತ್ರಿಮ ಲವಣಕ್ಕೂ ಬಿಡಾಲವಣಕ್ಕೂ ಪೆಸರುಗಳು " (ಸಿದ್ಧಾಂತಿ. ೦೪೫).

[ ಡೊಣೆ? + ಉಪ್ಪು$_1$ ]

**ಡೊಣೆವು** (ನಾ). (ಗಾಯದ) ಬಿರುಕು ; ಡೊಗರು ; ತೋಡು (?) : ಅಂಬಿನ ಬಂಬಲೊಳಂ ಜೋಡಾಗಿ ಕೋಡನೂೞ್ ಕೆಡೆದ ಗಜವ್ರಜಂಗಳ ಡೊಣೆವು[ಪಾಠಾಂ. ಣವು, ಣವು]ಗಳಿಂದೊೞ್ತು ಪರಿವ ನೆತ್ತರ ಕಡಲ್ಗಳುಂ (ಶಂಶಭಾ. ೧೦-೧೧೭ ವ). [ ? ]

**ಡೊಣೆವೋಗು** 'ದೊಣೆವೋಗು' ನೋ.

**ಡೊಣ್ಣಪ್ಪ** (ನಾ). ೧. ದಪ್ಪವಾಗಿರುವವನು; ಸ್ಥೂಲದೇಹದ ವ್ಯಕ್ತಿ : ಅವನೊಬ್ಬ ಡೊಣ್ಣಪ್ಪ (ರೂಢಿ). ೨. ಸೋಮಾರಿ ; ಆಲಸಿ : ಉಂಡೋಕೆ ಉಣ್ಣೋಕೆ ಅಣ್ಣಪ್ಪ, ಕೆಲಸಕ್ಕೆ ಮಾತ್ರ ಡೊಣ್ಣಪ್ಪ (ಗಾದೆ).

[ ಡೊಣ್ಣೆ$_1$ (<ದೊಣ್ಣೆ) + ಅಪ್ಪ$_1$ ]

**ಡೊಣ್ಣೆ$_1$** 'ದೊಣ್ಣೆ' ನೋ.

**ಡೊಣ್ಣೆ$_2$** 'ದೊನ್ನೆ' ನೋ.

**ಡೊಣ್ಣೆ$_3$** 'ತೊಂಡೆ$_2$' ನೋ.

**ಡೊಣ್ಣೆಕಾಟ** 'ತೊಂಡೆಕೇತ' ನೋ.

**ಡೊಣ್ಣೆಕೇತ** 'ತೊಂಡೆಕೇತ' ನೋ.

**ಡೊಣ್ಣೆಗ** 'ದೊಣ್ಣೆಗ' ನೋ.

**ಡೊಣ್ಣೆಮುಳ್ಳು** 'ದೊಣ್ಣೆಮುಳ್ಳು' ನೋ.

**ಡೊಣ್ಣೆಮೂಗು** 'ದೊಣ್ಣೆಮೂಗು' ನೋ.

**ಡೊಣ್ಣೆಸಣ್ಣಕ್ಕಿ** (ನಾ). ಮಧ್ಯಮಗಾತ್ರದ ಒಂದು ಬಗೆಯ ಅಕ್ಕಿ : (ಕ).

[ ಡೊಣ್ಣೆ$_1$ (<ದೊಣ್ಣೆ) + ಸಣ್ಣ + ಅಕ್ಕಿ$_1$ ].

**ಡೊಣ್ಣೆಹುಳು** (ನಾ). ಸಗಣಿಯಲ್ಲಿ ಹುಟ್ಟಿ ಬೆಳೆಯುವ ಒಂದು ಬಗೆಯ ದಪ್ಪ ಹುಳು ; ಗೊಣ್ಣೆಹುಳು: (ಕ).

[ ಡೊಣ್ಣೆ$_1$ (<ದೊಣ್ಣೆ) + ಹುಳು$_3$ (<ಪುೞು$_1$) ]

**ಡೊಪ್ಪೆ, ದೊಪ್ಪೆ** (ನಾ). ದಪ್ಪ ದೊನ್ನೆ : (ಕ). ದೊಪ್ಪೆ : (ಕ).

[ ದೇ.॥ ತೆಲು. ಡೊಪ್ಪ, ದೊಪ್ಪ ; ಕೊಲಾ. ಡೊಂಪಾ, ಡೊಂಪ ; ನಾಯ್ಕಿ. ಡೊಪ್ಪ ; ಪರ್ಜಿ. ಗೊಂಡಿ. ಡೊಪ್ಪೋ ]

**ಡೊವಿಗೆ** 'ಡೋವಿ' ನೋ.

**ಡೊಳುಹೊಟ್ಟೆ** 'ಡೊಳ್ಳುಹೊಟ್ಟೆ' ನೋ.

**ಡೊಳ್ಳ** (ನಾ). ೧. ದೊಡ್ಡ ಹೊಟ್ಟೆಯವನು ; ಬೊಜ್ಜು ಬೆಳೆದ ಹೊಟ್ಟೆಯುಳ್ಳವನು. ೨. (ಆಲಂ) ಸೋಮಾರಿ ; ಆಲಸಿ : ಕಳ್ಳರಿಗೆ ಸುಳ್ಳರಿಗೆ ಡೊಳ್ಳರಿಗೆ ಡೊಂಬರಿಗೆ ಸುಳ್ಳುಗೊರವರಿಗೆ ಕೊಡುವವರು ಧರ್ಮಕ್ಕೆ ಎಳ್ಳಷ್ಟು ಕೊಡರು (ಸರ್ವಜ್ಞ. ೭೭೩).

[ ಡೊಳ್ಳು$_1$ (<ಟೊಳ್ಳು) + – ಅ$_7$ ]

**ಡೊಳ್ಳಾಸ, ದೊಳ್ಳಾಸ** (ನಾ). ೧. ಮೋಸ ; ವಂಚನೆ ; ಕಪಟ : "ಡೊಳ್ಳಾಸಮೆ ವೈಸಿಕಮೆನಿಪ್ಪುದು" (ಚತುನಿ. ೨೦); "ಡೊ[ಪಾಠಾಂ. ದೊ]ಳ್ಳಾಸಮೆನಲ್ ಕಪಟ" (ಭಾರನಿ. ೩೫); ಬಹಳಾಭ್ಯಾಸಿಗಳು ಡಾವರಿಸಿದರು ಡೊಳ್ಳಾಸವೋ ರಿಪುಸೇನೆ ಕಾಣದು ಚಿತ್ರಪಯಗತಿಯ (ಕುವ್ಯಾಗ. ೭-೮) ; ಹುಸಿ ನುಸಿಳು ಡೊಳ್ಳಾಸ ಹಿಂಸಾವ್ಯಸನವು . . . ಎಂಬಿವರೆಸಕ ಹೊದ್ದದಯೋಧಿಪನ ಧರಣೀತಳಾಗ್ರದಲಿ (ತೊರರಾ. ೧-೩-೨೬) ; ವಂಚನೆ ಚಾಟು ಚೆಲ್ಲ ಡೊಳ್ಳಾಸ ಬೆಡಂಗು (ಯಾದವ. ೩-೯೩). ೨. ಬೆಡಗು ; ಒಯ್ಯಾರ ;

ಬಿನ್ನಾಣ; ವಿಲಾಸ. 'ಡೊಳ್ಳಾಸಕಾತಿ' ಪರಾ. ೩. ವಿಸ್ತಾರ; ವ್ಯಾಪಕತೆ; **ಅತಿಶಯ**: ಡೊ[ಪಾಠಾಂ. ದೊ]ಳ್ಳಾಸದಲಿ ಡಾವರಿಸಿದವು ಕಿಡಿ ಧೂತ ಧೂಮದಲಿ (ಕುವ್ಯಾ.ಆ. ೩೦-೬೦); ಇಕ್ಕಡಿಯ ಬಸುಜುಚ್ಚುಗಳ ನರಸೊಕ್ಕು ಡೊ[ಪಾಠಾಂ. ದೊ]ಳ್ಳಾಸದ ಮಹಾಭಯವೆಕ್ಕಸರದಲಿ ಕಾಣಲಾದುದು ವೈರಿಬಲದೊಳಗೆ (ಕುವ್ಯಾದ್ರೋ. ೧೭-೩೬). **ದೊಳ್ಳಾಸ**: ೧. ತವಕದ ತವರ್ಮನೆ ವಿಲಾಸದ ನಿವಾಸವು . . . ವೈಸಿಕದ ನಿವಹ ದೊಳ್ಳಾಸದಾಗರ ಜೊತ್ತಿನಿಕ್ಕೆ ಕೈತವ ಕಟಕಿಗಳ ಮಂದಿರ (ಸೌಂದಪು. ೭-೫೦); ತೊದಳ್ ದೊಳ್ಳಾಸಂ ಸುರೆಯುದ್ಭವಿಸಿದ ದೇಶವಿದೆನೆ ಸೂಳೆಗೇರಿ ಕಣ್ಗೆಸದಿರ್ಕುಂ (ವೀರವಿ. ೬-೯೬). ೩. ದೊ[ಪಾಠಾಂ. ಡೊ]ಳ್ಳಾಸದಲಿ ಡಾವರಿಸಿದವು ಕಿಡಿ ಧೂತ ಧೂಮದಲಿ (ಕುವ್ಯಾ.ಆ. ೩೦-೬೦).

**ಡೊಳ್ಳಾಸಕಾತಿ** (ನಾ). ಬಿನ್ನಾಣಗಾತಿ; ಬೆಡಗಿ; ಒಯ್ಯಾರ ಮಾಡುವವಳು: ಡೊಳ್ಳಾಸಕಾತಿಯರಾ ವಿಬುಧಪತಿಯೋಲಗವ ಹೊಕ್ಕರು ಸವಾಯಿಯಲಿ (ಕುವ್ಯಾ.ಆ. ೬-೯೦). [ ಡೊಳ್ಳಾಸ + – ಕಾತಿ₄ ]

**ಡೊಳ್ಳಾಸವಿದ್ಯೆ** (ನಾ). ಮೋಸದ ವಿದ್ಯೆ; ಕಪಟವಿದ್ಯೆ: ನಿಮ್ಮ ಬಿಜುನುಡಿಯಲಗಿನಲಿ ಡಾವರಿಸಿದಿರಿ ಡೊಳ್ಳಾಸವಿದ್ಯೆಯಲಿ (ತೊರೆರಾ. ೩-೪-೨೦). [ ಡೊಳ್ಳಾಸ + ವಿದ್ಯೆ ]

**ಡೊಳ್ಳಿಗ** (ನಾ). ಡೊಳ್ಳು ಹೊಟ್ಟೆಯುವನು; ಉಬ್ಬಿದ ಹೊಟ್ಟೆಯುಳ್ಳವನು: ಮುಂದೆ ಕುಳ್ಳಿರ್ದ ಸೆಟ್ಟಿ ಡೊಳ್ಳಿಗನಪ್ಪುದಱಂ ಪರೀಕ್ಷಿಸದೆ ಪೋದರ್ (ಧರ್ಮಾಮೃ. ೦೨-೭೫). [ಡೊಳ್ಳು₁ (<ಟೊಳ್ಳು) + – ಇಗ]

**ಡೊಳ್ಳು₁** 'ಟೊಳ್ಳು' ನೋ.

**ಡೊಳ್ಳು₂** 'ಡೋಲು' ನೋ.

**ಡೊಳ್ಳುಗ** (ನಾ). ೧. = ಡೊಳ್ಳಿಗ. ೨. (ಆಲಂ) ಪರಾಕ್ರಮವಿಲ್ಲದವನು: ಅಳ್ಳೆದೆಯ ಮನ್ನೆಯರನೊಗ್ಗಿನ ಡೊಳ್ಳುಗರ ಕಟವಾಯ ಕೊಯ್ (ಕುವ್ಯಾದ್ರೋ. ೩-೨೦). [ ಡೊಳ್ಳು₁ (<ಟೊಳ್ಳು) + – ಗ₂ ]

**ಡೊಳ್ಳುಹೊಟ್ಟೆ**, ಡೊಳುಹೊಟ್ಟೆ (ನಾ). ದೊಡ್ಡದಾಗಿ ಮುಂದಕ್ಕೆ ಚಾಚಿಕೊಂಡಿರುವ ಹೊಟ್ಟೆ; ಬೊಜ್ಜು ಬೆಳೆದಿರುವ ಹೊಟ್ಟೆ: ಡೊಳ್ಳು ಹೊಟ್ಟೆಗೆ ಸಾಲದಿನ್ನುಂ ಕೊಂಡು ಬಾ (ಬಸಪು. ೫೯-೦೦); ಕುಕ್ಕುಱಸಲೊಡನಾ ಡೊಳ್ಳುಹೊಟ್ಟೆಯಿಬ್ಬಗಿಯಾಗಿ (ವೀರಪು. ೩-೪-೨೬); ಡೊಳ್ಳುಹೊಟ್ಟೆಯನೆತ್ತಿಕೊಂಡೋಡಲಾಱದೆ ಹಳ್ಳಕೊಳ್ಳದಲಿ ಮುಗ್ಗರಿದು (ಕಂಸವಿ. ೦೭-೩೫). **ಡೊಳುಹೊಟ್ಟೆ**: ಒಣಕಲು ಗೌರಿಯನಿಣಿಕಿಣಿಕಿ ನೋಡಿದ ನೆಮ್ಮೂರ ಡೊಳುಹೊಟ್ಟೆ ಮಾದ (ಇಂಜಾಜ. ೧೧೪-೫೯); ಡೊಳುಹೊಟ್ಟೆಗೆ ನಾಗರ ಬಿಗಿದವನೇ (ಗಣೇಶ. ೦-೦೨).

[ ಡೊಳ್ಳು₁ (<ಟೊಳ್ಳು) + ಹೊಟ್ಟೆ₁ (<ಪೊಟ್ಟೆ₁) ]

**ಡೊಳ್ಳುಹೊಟ್ಟೆಗ** (ನಾ). ೧. ಹೊಟ್ಟೆ ದೊಡ್ಡದಾಗಿ ಮುಂದಕ್ಕೆ ಚಾಚಿಕೊಂಡಿರುವವನು. ೨. ಲಂಬೋದರ; ಗಣಪತಿ: ನುಡಿದಂತೆ ಕೂರ್ಗೋಲ ಕೊರತೆಕ್ಕೊ ಎಂದೆನುತಿಡಿದನು ಡೊಳ್ಳುಹೊಟ್ಟೆಗನು (ಮೋಹತ. ೩೮-೫೦). [ ಡೊಳ್ಳುಹೊಟ್ಟೆ + – ಗ₂ ]

**ಡೊಳ್ಳೆ** 'ಟೊಳ್ಳು' ನೋ.

**ಡೊಳ್ಳೊಡಲು** (ನಾ). ದೊಡ್ಡದಾಗಿ ಮುಂದಕ್ಕೆ ಚಾಚಿದ ಹೊಟ್ಟೆ: ರಾಹುಮುಖನು ದೊಡ್ಡಕಂಗಳವನು ದೀರ್ಘದೇಹಿ ಡೊಳ್ಳೊಡಲ ಕರಿಕನು (ಭರತ. ೩೫-೫೬). [ ಡೊಳ್ಳು₁ (<ಟೊಳ್ಳು) + ಒಡಲು (<ಒಡಲ್) ]

**ಡೋಂಗಾ** (ನಾ). "ತಾಳೆಮರದ ತುಂಡಿನಲ್ಲಿ ತೋಡಿ ತಯಾರಿಸಿರುವ ಒಬ್ಬರು ಅಥವಾ ಇಬ್ಬರು ಹೋಗಲು ಅನುಕೂಲಿಸುವ ಸಣ್ಣ ದೋಣಿ" (ನಿಬಂಧ. I, ೩೨೩ ಅಡಿಟಿ): ಆಚೆಯ ತೀರದಲ್ಲಿರುವ ಡೋಂಗಾ ಒಂದನ್ನು ತೋರಿಸಿಕೊಡುವುದಾಗುತ್ತದೆ (ನಿಬಂಧ. I, ೩೨೩).

[ ←ಹಿಂ. ಮರಾ. ಡೋಂಗಾ ]

**ಡೋಂಗಿ** 'ಧೋಂಗಿ' ನೋ.

**ಡೋಂಗು** 'ಧೋಂಗಿ' ನೋ.

**ಡೋಕಾ** 'ಧೋಕಾ' ನೋ.

**ಡೋಕಾರಿ** (ನಾ). (ಉಕ) ೧. ಕಪಟ; ಮೋಸ; ವಂಚನೆ: ಅನ್ನವಿಲ್ಲದೆ ಸಾಯುತ್ತಾಳಂತೆ. ಪ್ರಭೂ, ಇದೆಲ್ಲವೂ ಧೋಂಗಿ ಧೋಂಗಿ, ಡೋಕಾರಿ (ಹನ್ನೊಂದ. ೬೫). ೨. ಅಪಾಯಕ್ಕೆ ಒಳಗಾದಂತೆ ಸೋಗುಹಾಕಿ ಅಳುವ ವ್ಯಕ್ತಿ; ನೋಯಿಸದಿದ್ದರೂ ನೋವಾದಂತೆ ನಟಿಸುತ್ತ ಕೂಗಾಡುವ ವ್ಯಕ್ತಿ: ಮಾತುಮಾತಿಗೆ ಅಳುತ್ತೀಯಲ್ಲೇ ಡೋಕಾರಿ (ಅರಗಿ. ೮೫). [ ? ]

**ಡೋಕಾರಿಗ** (ನಾ). ಮೋಸಗಾರ: ಗೊಲ್ಲರ ಕೂಡಲಿ ಬೆಳದು ಆಕಳನು ಕಾಯ್ದು ಕಾಕುಲಾತಿಯಿಂದ ಡೋಕಾರಿಗನಾಗಿ ನೂಕಲು ಭಯ ಬಡದೆ (ಮೋಕ್ಷದೀ. ೨೦-೨). [ ಡೋಕಾರಿ + – ಗ₂ ]

**ಡೋಕಾರಿತನ** (ನಾ). ನೋವಾದಂತೆ ನಟನೆಮಾಡಿ ಅಳುವಿಕೆ; ಅಪಾಯವಿಲ್ಲದೆಯೇ ಗದ್ದಲವೆಬ್ಬಿಸುವ ಸ್ವಭಾವ; ಇಲ್ಲದ ಗಾಬರಿಯನ್ನು ತೋರಿಸುವುದು: ಡೋಕಾರಿತನವಮಾಡಿ, ನಿನ್ನ ಕೆಲಸ ಮಂದೀ ಮೈ ಮೇಲೆ ಹಾಕುವ ಹಂಚಿಕೆ ಮಾಡುತ್ತೀ (ಮುಂಬಯಿ. ೪-೦೩೪); ಉರವಲದ ಹೊಗೆಯ ಬಾಣತಿ ಬಿಳುಪಿನಾ ಬೇನೆ; ಡೊಂಕುತನ, ಡೋಕಾರಿತನದ ತಂಬಾಕುಹೊಗೆ (ದ್ಯಾವಾಪೃ. ೬-೯); ಡೋಕಾರಿತನಕ್ಕೆ ಡಾಕ್ಟರೇನು ಔಷಧಿ ಕೊಡುತ್ತಾರೆ, ಮಣ್ಣು (ಹುಜ್ಜಾಟ. ೨೬). [ ಡೋಕಾರಿ + – ತನ ]

**ಡೋಗಿ** 'ಡೋವಿ' ನೋ.

**ಡೋಗಿಬರ**, ಡೌಗಿಬರ (ನಾ). ಆಹಾರವಿಲ್ಲದೆ ಸತ್ತ ಪ್ರಾಣಿಗಳ ಮತ್ತು ಮನುಷ್ಯರ ತಲೆಬುರುಡೆಗಳು ದಿಕ್ಕುದಿಕ್ಕುಗಳಲ್ಲಿ ಉರುಳಾಡುತ್ತಿದ್ದ ಭಯಂಕರವಾದ ಬರಗಾಲ: ಸನ್ ೧೭೯೧ನೇ ವರ್ಷದ ಬರಕ್ಕೆ "ಡೋಗೀಬರ" ವೆಂಬ ಹೆಸರು ಬಿದ್ದದೆ; ಮನುಷ್ಯರ ತಲೆ ಡೋಗಿಗಳು ದಿಕ್ಕಿಲ್ಲದೆ ಉರುಳಾಡುತ್ತಿದ್ದದರಿಂದ ಅದರ ಸ್ಮರಣೆ ಜನರೊಳಗೆ ಇನ್ನೂ ಪೂಳೆತಾಗಿ ಇರುತ್ತದೆ (ಕಥಾಗಿ. ೨೬೭). **ಡೌಗಿಬರ**: ಹಲವು ವರ್ಷಗಳ ಹಿಂದೆ 'ಡೌಗೀಬರ'ದಲ್ಲಿ ಆವನ ಸವಿವಾಪದ ಸಂಬಂಧಿಕರೆಲ್ಲರೂ ತೀರಿ ಹೋಗಿದ್ದರು (ಪಾತರ ೧೮); ಹಿರಿಯರು ಡೌಗಿಬರದಲ್ಲಿ ದಿನನಿತ್ಯ ಬಡವರಿಗೆಲ್ಲ ಕಾಳು ಹಂಚಿದ ಮೇಲೆ ತಾವು ಊಟ ಮಾಡುತ್ತಿದ್ದರಂತೆ (ಗ್ರಾವಾಯ. ೦೭೫). [ ಡೋಗಿ (<ಡೋವಿ) + ಬರ₁ (<ಬಱ) ]

**ಡೋಣಿ₁** 'ದೋಣಿ₁' ನೋ.

**ಡೋಣಿ₂** 'ದೋಣಿ₃' ನೋ.

**ಡೋಣೆಡು** (ಕ್ರಿ). ನೀರು ತುಂಬುವ ದೋಣಿಯನ್ನು ಮುಂದೆ ಇಡು,– ಇರಿಸು: ಡೋಣಿಟ್ಟು ದನಕ್ಕೆ ನೀರೆಱೆವ ಸಂಭ್ರಮಮುಣ್ಮಿದುದೂರ ಪಕ್ಕದೊಳ್ (ಸೂಕ್ತಿಸು. ೦೦-೯೩).

[ ಡೋಣಿ₂ (<ದೋಣಿ₃) + ಇಡು₁ ]

**ಡೋಣಿವಟ್ಟೆ** (ನಾ). (ನಡೆದಾಟದಿಂದ ಸವೆದು) ತಗ್ಗುಬಿದ್ದ ದಾರಿ: ನಡೆನಡೆದು ಏಗೆ ಡೋಣಿವಟ್ಟೆ ಬಿದ್ದಿರ್ದಪ್ಪುದು (ಸೌಂದಪು. ೦೫-೬೫).

[ ಡೋಣಿ₁ (<ದೋಣಿ₁) + ಬಟ್ಟೆ₁ ]

**ಡೋಣಿವೀೞ್** (ಕ್ರಿ). ಡೊಗರು ಬೀಳು; ಹಳ್ಳವುಂಟಾಗು; ಕುಳಿಯಾಗು: ಕರಿ ಪೂಣರ್ದೆಕ್ಕಲಂ ಮಲೆತು ಪೆರ್ಬುಲಿ ಪಾಯ್ದುಗಿಯಲ್ಕೆ ಡೋಣಿವಿಟ್ಟುರದ[ಪಾಠಾಂ. ದೋಣಿವಿರ್ದುರದ]ಪಿಸುಟ್ಟಿ ಪೆರ್ದೊಡೆಯ ನುರ್ಗಿದ ದಂಡೆಯ ಭಂಗಿ ರೌದ್ರಮಾಗಿರೆ (ಜಗವಿ. ೦೭-೨೦).

[ ಡೋಣಿ₁ (<ದೋಣಿ₁) + ಬೀೞ್₁ ]

**ಡೋಣಿವೋಗು** 'ದೋಣಿವೋಗು' ನೋ.

**ಡೋಬಿ** 'ಧೋಬಿ' ನೋ.

**ಡೋಬಿಕಜ್ಜಿ** (ನಾ). ಒಂದು ಬಗೆಯ ಚರ್ಮರೋಗ,-ಕಜ್ಜಿ ; ಈ ಅಗಸನು ಚರ್ಮರೋಗಿಯ ಬಟ್ಟೆಯೊಡನೆ ಸೇರಿಸಿ ಒಗೆದಿರುವ ಬಟ್ಟೆಯನ್ನು ಉಪಯೋಗಿಸುವುದರಿಂದ ಅಂಟುವ ಒಂದು ಬಗೆಯ ಕಜ್ಜಿ: ಎಲ್ಲರ ಮನೆಯ ಬಟ್ಟೆಗಳನ್ನು ಒಟ್ಟಿಗೆ ಸೇರಿಸಿ ಒಗೆಯುವ ಕಾರಣ, ಕಜ್ಜಿ, ಕುರು, ಡೋಬಿಕಜ್ಜಿ (Doby's itch) ಮುಂತಾದ ಚರ್ಮರೋಗಗಳು . . . ಅಗಸರ ಮನೆಯಿಂದ ಬಂದ ಮಡಿಬಟ್ಟೆಗಳಿಂದ ಒಬ್ಬರಿಂದ ಒಬ್ಬರಿಗೆ ಹರಡಬಹುದು (ಗೃಹವಿ. ೮೩). [ ಡೋಬಿ (<ಧೋಬಿ) + ಕಜ್ಜಿ ]

**ಡೋಮೆ** (ನಾ). ಒಂದು ಬಗೆಯ ದೊಡ್ಡ ಡೋಲು : "ಯಶಃಪಟಃ, ಢಕ್ಕಾ – ೨ ಢವಣೆ ಹೆಸರು, ಅಂದರೆ ಡೋಮೆ" (ಸಿದ್ಧಾಂತಿ. ೫೪). 'ಡವಣೆ' ಪರಾ.. [ ? ]

**ಡೋಯಿಗೆ** 'ಡೋವಿ' ನೋ.

**ಡೋರಿಗೊರೆ** 'ಡೋಜುಗೊಜು$_3$' ನೋ.

**ಡೋರೆ** 'ದೋರೆ$_1$' ನೋ.

**ಡೋಲ** (ಗು). ೧. ಚಂಚಲವಾದ ; ಓಲಾಡುವ. (ನಾ). ೨. [ನಾಟ್ಯ] ಹದಿಮೂರು ಸಂಯುತ ಹಸ್ತಗಳಲ್ಲೊಂದು ; ಎರಡು ಕೈಗಳನ್ನೂ ಸೇರಿಸಿ ಅಭಿನಯುವನ್ನು ಮಾಡುವಾಗ ಉಪಯೋಗಿಸುವ ಒಂದು ವಿಧದ ಹಸ್ತಮುದ್ರೆ ; ದೋಲ : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತ ಹಸ್ತಗಳು ಯಾವುವೆಂದರೆ – ೧. ಅಂಜಲಿ . . . ೮. ಡೋಲ . . . ೧೩. ವರ್ಧಮಾನ (ಅಭಾಸ್ತ. ೪೮). [ ಸಂ. ]

**ಡೋಲಕ** (ನಾ). ಒಂದು ಬಗೆಯ ಚರ್ಮವಾದ್ಯ : ನೃತ್ಯಕಾಲದಲ್ಲಿ ಒಂದಲ್ಲ ಒಂದು ಬಗೆಯ ಡೋಲು, ಡೋಲಕ, ಡಮರು, ತಮಟೆ ಮೊದಲಾದುವನ್ನು ಬಳಸುತ್ತಾರೆ (ಯಕ್ಷಬ. ೯೧). [←ಹಿಂ. ಢೋಲಕ್./ಸಂ. ಢೋಲಕ]

**ಡೋಲಪಾದ** (ನಾ). ೧. [ನಾಟ್ಯ] ಮಾರ್ಗ ಆಕಾಶಚಾರಿಗಳ ಅತಿಕ್ರಾಂತವೇ ಮೊದಲಾದ ೧೬ ಭೇದಗಳಲ್ಲೊಂದು ; ಒಂದು ಕಾಲನ್ನು ಕುಂಚಿತಮಾಡಿ, ಎತ್ತಿ, ಎರಡು ಪಾರ್ಶ್ವಗಳಲ್ಲೂ ತೂಗಿಸಿ ಹಿಮ್ಮಡಿಯನ್ನು ತನ್ನ ಪಾರ್ಶ್ವದಲ್ಲಿ ನೆಲದ ಮೇಲಿಡುವುದು : ಎತ್ತಿರೆ ಕುಂಚಿತ ಪದಮಂ ಬಿತ್ತರದಿಂದೆರಡು ಕೆಲಕೆ ಡೋಲದ ಪಾಂಗಿಂ ಮತ್ತೆ ಹಿಮ್ಮಡದೆ ಕಡೆ[ಪಾಠಾಂ. ತೊಡೆ]ಯಂ ತೆತ್ತಿಸಿದೊಡೆ ಡೋಲಪಾದಚಾರಿಯೆನಿಕ್ಕುಂ (ಲಾಸ್ಯರಂ. ೬-೪೮). ೨. [ನಾಟ್ಯ] ನೂರೆಂಟು ಕರಣಗಳಲ್ಲೊಂದು ; ಊರ್ಧ್ವಜಾನು ಮತ್ತು ಡೋಲಪಾದಚಾರಿಗಳನ್ನು ಮಾಡಿ ದೋಲ ಹಸ್ತವನ್ನೂ ಮಾಡುತ್ತ ಅಭಿನಯಿಸುವುದು : ಸಮದೂರ್ಧ್ವಜಾನು ಪದದಿಂದಮ ನಿಂದುಂ ಡೋಲಪಾದಚಾರಿಯನೆಸಗಲ್ ಕ್ರಮದಿಂದೆ ಡೋಲ ಕರಮಂ ಸಮನಿಸಲದು ಡೋಲಪಾದಕರಣಮೆನಿಕ್ಕುಂ (ಲಾಸ್ಯರಂ. ೪-೧೦೬). [ ಡೋಲ + ಪಾದ ]

**ಡೋಲಫಲ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು : ಕೋಲ ಚಂಪಕ ತಿಲಕ ಮುನಿ ತಕ್ಕೋಲ ಲುಂಗ ಲವಂಗ ಧಾತ್ರೀಡೋಲಫಲ ಭಲ್ಲಾತಕೀಕುಜಗಳು ವಿರಾಜಿಪವು (ಅನಂರಾ. ೪-೪-೨೭). [ಡೋಲ$_1$+ಫಲ]

**ಡೋಲಾಗೃಹ** (ನಾ). ಉಯ್ಯಾಲೆಯ ಮನೆ : ಇದೇ ಪದ್ಮಸರೋವರವು ಇದೇ ಡೋಲಾಗೃಹವು ಇದೇ ಕೃತಕಾದ್ರಿಯು (ಪುರುಚ. ೬-೩೬). [ ಸಂ. (ಡೋಲಾ + ಗೃಹ) ]

**ಡೋಲಿ** (ನಾ). ಮನುಷ್ಯರು ಹೊರುವ, ತೊಟ್ಟಿಲಿನಂತಹ ಒಂದು ವಿಧವಾದ ವಾಹನ: ಇವರಲ್ಲಿ ಕೆಲವರು . . . ಡೋಲಿ ಮತ್ತು ಮೇನಾಗಳನ್ನು ಸಾಗಿಸುವುದಕ್ಕೂ ನೇಮಕವಾಗಿದ್ದರು (ಮಹಾಪಂ.II, ೨೦): ಕೊನೆಗೆ ಬೀಳಲುಗಳಿಂದ ಒಂದು ಡೋಲಿಯನ್ನು ಮಾಡಿ, ದೊಡ್ಡನನ್ನು ಮಲಗಿಸಿ ಕೆಲವರು ತಲೆಗೊಟ್ಟು ಹೊತ್ತು ಮುಂದೆ ನಡೆದರು (ಕಾಲೂರ.೭, ಕಥಾಸಾರ). [ ←ಮರಾ. ಡೋಲೀ ; ಹಿಂ. ಡೋಲೀ, ಡೋಲಾ./ಸಂ. ದೋಲೀ ]

**ಡೋಲು, ಡೊಳ್ಳು$_2$, ಡೋಳು, ಢೋಲು, ಢೋಳು, ದೋಲು, ದೋಳು$_1$** (ನಾ). ಎರಡು ಮಗ್ಗುಲಲ್ಲೂ ಬಾರಿಸುವ ಒಂದು ಬಗೆಯ ದೊಡ್ಡ ಚರ್ಮವಾದ್ಯ : "ಡೋಲು (ದೋಲು)–ಢೋಲ= ಒಂದು ಮಹಾವಾದ್ಯ" (ಕದ್ಯಕೋ. ೧೬) ; ಆಗ ಬಡಿಯಿತು ಡೋಲು ಬಡಬಡ (ಕವಿಪು. ೩೮-೬) ; ಡೋಲು, ಶಹನಾಯ್, ಕಾಳೆಗಳು ಸೂಕ್ತ ಹಿಮ್ಮೇಳ ಒದಗಿಸುತ್ತವೆ (ಭಾರಜಾ. ೧೦೯) ; ನೃತ್ಯಕಾಲದಲ್ಲಿ ಒಂದಲ್ಲ ಒಂದು ಬಗೆಯ ಡೋಲು, ಡೋಲಕ, ಡಮರು, ತಮಟೆ ಮೊದಲಾದುವನ್ನು ಬಳಸುತ್ತಾರೆ (ಯಕ್ಷಬ. ೯೧). **ಡೊಳ್ಳು$_2$:** ಧಡಲ್ಬಾಜಿ ಸಪ್ಪಳವ ಬೇಡುವದು ಡೊಳ್ಳು ಡೊಂಬರಾಟ (ಅರಳು. ೩೪೩-೯); ಲಗ್ನದ ದಿವಸ ಗಂಡಸರೂ ಹೆಂಗಸರೂ ಸಿಂದಿಯ ಕುಡಿದು ಕೊಳಲು ಡೊಳ್ಳುಗಳೊಂದಿಗೆ ಕುಣಿದ ಬಳಿಕ ಮದಿಮಕ್ಕಳ ಮೇಲೆ ಅಕ್ಕೀಕಾಳು ಹಾಕುವರು (ಕಭಾಗ. ೨೨೪) ; ಆ ಸೋಮವಾರ ಬೆಳಗಿನ ಝಾವದಲ್ಲಿ ಝುಗಂಝುಳ್ಳು ಝುಗಂಝುಳ್ಳು ಎಂಬ ಡೊಳ್ಳುಗಳ ನಿನಾದವು ಗಂಗನಹಳ್ಳಿಯನ್ನು ಜಾಗ್ರತಗೊಳಿಸಿತು (ಹಬ್ಬಬ. ೭೨). **ಡೋಳು :** ಕಹಳೆಗಳುನ್ನತ ಢಾಣೆ ನಿಸ್ಸಾಳ ಸನ್ನೆ ಡೋಳು . . . ಒದಚಿದವು (ಅಂಜಿಚ. ೬-೭೫) ; ಭೇರಿ ತಂಬಟ ಡೋಳು ಮುಂತಾದ ಬಹು ವಾದ್ಯ ಭೂರಿ ಬೊಂಬಾಳ ದೀವಿಗೆಯ ಪಾಠಿಯ ಪಟುಭಟರುಗಳು (ಮೋಹತ. ೧೧-೨೦) ; ಡೋಳಿನ ಕುದುರೆ ಡಮಾನದ ಮದಕರಿ (ಕಂಸವಿ. ೧೯-೨೩) ; ಡೋಳು ಮೊದಲಾದಖಿಳವಾದ್ಯವ ಸೂಳವಿಸುತ (ಪ್ರಹ್ಲಾದ. ೯-೧೧) ; ಸಿಡಿಲನೊಂದು ಕೈಲಿ ಹಿಡಿದು ಬಾಸ ಡೋಳ ಬಡಿಯುತ (ಪಾಂಡಜ. ೯-೨೦). **ಢೋಲು :** ಕಷ್ಟತರವಾದ ಹೆಜ್ಜೆಗಳನ್ನು ಹಾಕಿ ಢೋಲಿಗೆ ತಕ್ಕುದಾಗಿ ಕುಣಿಯುವುದುಂಟು (ಅಭಾವ. ೧೧೩). **ಢೋಳು :** ಬೊಂಬುಳಿ ಢೋ[ಪಾಠಾಂ. ಡೋ]ಳು ನಿಸ್ಸಾಳ ಬೊಬ್ಬೆಯ ದನಿ ತುಂಬಿ ದುದೆಣ್ದೆಸೆಯನು (ಸೂಚಸೋ. ೫-೪೨). **ದೋಲು :** ಉಳಿದವರು ದೋಲು ಇತ್ಯಾದಿಗಳನ್ನು ಹಿಡಿದುಕೊಂಡಿದ್ದರು (ಶಕರೂ. ೦೨) : ತಾಳಬದ್ಧವಾಗಿ ಒಂದು ಕಡೆಯಿಂದ ದೋಲನ್ನೂ ಘಂಟಿಣಿಯನ್ನೂ ಬಾರಿಸತೊಡಗಿದರೆ (ದಾಂಪ. II, ೯೧೭). **ದೋಳು$_1$ :** ದೋಳು ಬಡಿದು ಗೆರಸಿ ಮುಚ್ಚಿದ ಹಾಗೆ (ಗಾದೆ). [ <ಸಂ. ಢೋಲ ]

**ಡೋಲೆ** (ನಾ). ಉಯ್ಯಾಲೆ : ಝುಗಝುಗಿಪ ಡೋಳೆಯೊಳ್ ಕಾಮಿನಿಯ ರಾಗ ಲೀಲಾವಿನೋದದಿಂ ತೂಗಲು (ಸಾನಂಚ. ೩೫). [ ಸಂ. ಡೋಲಾ ]

**ಡೋಲೋತ್ಸವ, ಡೋಳೋತ್ಸವ** (ನಾ). ದೇವರನ್ನು ಉಯ್ಯಾಲೆ ಮೇಲೆ ಕೂಡಿಸಿ ಮಾಡುವ ಉತ್ಸವ : ಇವೊತ್ತು ಊರದೇವರ ಡೋಲೋತ್ಸವ ಇದೆ (ರೂಢಿ). **ಡೋಳೋತ್ಸವ :** ಶ್ರೀಹಯಗ್ರೀವ ಲಕ್ಷ್ಮೀನಾರಾಯಣ ದೇವರವರ ಡೋಳೋತ್ಸವದ ಬಗ್ಗೆ (ಮೈಆರ್. ೧೯೩೮, ೨೭-೨ ; 1816). [ ಸಂ. (ಡೋಲಾ + ಉತ್ಸವ) ]

**ಡೋವಿ, ಡವಿಗೆ, ಡವುಗೆ, ಡೊಗೆ, ಡೊವಿಗೆ, ಡೋಗಿ, ಡೋಯಿಗೆ, ಡೋವಿಗೆ, ಡೋವೆ, ಡೌಗಿ, ಡೌಗೆ** (ನಾ). ೧. ತಲೆಯ ಚಿಪ್ಪು ; ತಲೆಬುರುಡೆ ; ಕರೋಟಿ : ವೇದಂಗಳಂ ಕೇಳು ನೆಂಟುದೊಡೆ ಬಟುನುಡಿಯೊಳಾದ ಫಲವೇನು ನಾಲಗೆಯ ಸಡಗರ ಡೋವಿಗಾದುಪಪ್ಪೆತ್ತು (ಲಶಿಚಂ. ೮-೬). **ಡವಿಗೆ :** ೧. ಪಾಕ ಮಾಡುವ ಭಾಂಡ ಸೊಣಗನ ಡ[ಪಾಠಾಂ. ಡೊ]ವಿಗೆಯಯ್ಯಾ (ಬಸವ. ೬೦೪): ಹೋಡುಗೈಯೊಳಗೆ ಡವಿಗೆಯನು ಹಿಡಿಯುತಲಿ ಬೇಡಿ ಉಂಡವನೆ (ಕನ್ನಜಾ. ೩೦೮) ; ಅಲ್ಲೊಂದು ಮನುಷ್ಯ ಡವಿಗೆ ಕಂಡಿತು (ಮೂಪಾಸಾ. ೨೦). ೨. ಟೊಳ್ಳಾದ ದಪ್ಪ ಬಿದಿರು : "ಡವಿಗೆ – ದೊಡ್ಡ ತೊಳ್ಳು ಬಿದಿರು" (ಜಾನಕೋ. ೬೨). **ಡವುಗೆ :** ೧. ಯೇಸುವಿನ ಚಿತ್ರದಲ್ಲಿ ಯೇಸುವಿನ ಕಾಲ ಬುಡದಲ್ಲಿ ಒಂದು ತಲೆಯ ಡವುಗೆ ಇದೆ (ಗೊಲ್ಗೊಥಾ. ೧೮, ಟಿಪ್ಪಣಿ) ; ಅದು ಪ್ರಾಚೀನಕಾಲದ ಒಬ್ಬ ಮನುಷ್ಯನ ಡವುಗೆಯಾಗಿರಬಹುದೆಂಬ ತಿಳಿವಳಿಕೆ ಇದೆ (ಮತಂಬ. ೨೨).

**ಡೊಗೆ:** ೧. ಒಟ್ಟೆಯೆಲುಗಳ ಕುಂಡಲಗಳಿಂದೆ ಕರಿಶಿರದ ಡೊಗೆಯ ಸಲಿಲದ ಕಮಂಡಲದಿಂದೆ (ಜೈಮಿಭಾ. ೧೬-೩೪); ಆನೆಯ ತಲೆಯ ಡೊಗೆಯೇ ಅವನ ಕಮಂಡಲು (ಬಿದುರಿ. ೬೬). **ಡೊವಿಗೆ:** ೧. ಡೊವಿಗೆ ವ್ಯುತ್ಕ್ರಮವಿನ ಸುಡಿಗೊಳಗಾಯಿತ್ತು (ಬಸವ. ೫೬೯). **ಡೋಗಿ:** ೧. ಕೊರಳಿಗೊಂದಿದ ಗಂಡಮಾಲೆ ಡೋಗಿಯು ಹುಣ್ಣು ಶಿರಕೆ ಬೆನ್ನಿಗೆ ಜರಡಿಹುಣ್ಣು (ಮಲ್ಲಜ. ೧೦-೨೪). **ಡೋಯಿಗೆ:** ೧. ಆಯುಧಧ ಹರಹುಗಳ ತಲೆಗಳ ಡೋ[ಪಾಠಾಂ. ದೋ]ಯಿಗೆಯ ಕಡಿಖಂಡಮಯದ ಮಹಾಯತದ ರಣದೊಳಗೆ ಬಂದನು ಭೀಷ್ಮನಿದ್ದೆಡೆಗೆ (ಕುಮಾ.ದ್ರೋ. ೧-೨೦). **ಡೋವಿಗೆ:** ೧. ನೆಲಕ್ಕೊಲೆವ ಡೋವಿಗೆ . . . ದರ್ಪವಳಿದವಯವಂ ಮೆಱೆವ ಘೋರತಪದಚಲಿತರನೀಕ್ಷಿಸಿದನವನೀಶನು (ಹಚಕಾ. ೬-೩೫). **ಡೋವೆ:** ೧. ಹೊರ ಕುಲದವನಂತೆ ಶಿರದ ಡೋವೆಯೊಳು ತಾ ತಿರಿದು ತಿಂಬುವನೆಂದು ಹರನ ಜರಿದು (ಮೈಲಾರ. ೧೦೬-೩೩). **ಡೌಗಿ:** ೧. ಪ್ರತಿಯೊಂದು ನಾಟಕದಲ್ಲಿ ಕೆಲವು ದಿಂಡಗಳೂ ಹಲವು ಡೌಗಿಗಳೂ ಬರುತ್ತಿದ್ದವು (ಜನನಾ. VII, ಪ್ರಸ್ತಾವನೆ). ‘ಡೌಗಿಬರ’ ಪರಾ. ೨. ‘ಡೌಗಿಕೊಳವಿ’ ಪರಾ. **ಡೌಗೆ:** ೧. “ಒಡು = ೧. ಒಡಕ ಗಡಿಗೆ. ೨. ತಲೆಯ ಡೌಗೆ” (ಗಂಗಾಮ. ೫೯).

**ಡೋಗಿಯ ಬರ = ಡೋಗಿಬರ:** ತುಸು ದಿವಸಗಳಲ್ಲಿ ದೇಶದಲ್ಲಿ ಡೋಗಿಯ ಬರವು ಪ್ರಾಪ್ತವಾಯಿತು (ಗುರುಪ್ರ. ೬).

[ ←ಮರಾ. ಡೋಈ ]

**ಡೋವೆ** ‘ಡೋವಿ’ ನೋ.

**ಡೋಹ** ‘ಡೋಹರ’ ನೋ.

**ಡೋಹರ,** ಡೋಹ, ಡೋಹಾರ, ಢೋರ (ನಾ). ಚಂಡಾಲ ಜಾತಿಯವನು : ಅಪ್ಪನು ನಮ್ಮ ಮಾದರ ಚೆನ್ನಯ್ಯ ಬೊಪ್ಪನು ನಮ್ಮ ಡೋಹರ ಕಕ್ಕಯ್ಯ (ಬಸವ. ೩೪೮) ; ಬೇಡಂಗೆ ಡೋಹ[ಪಾಠಾಂ. ಹಾ]ರಂಗೆ ಹೊಲೆಯಂಗೆ ರಾಮೇಶ್ವರನೊಲಿದ ಪರಿಯ ನೋಡ (ಅಂಬಿವ. ೪೦೨-೧೦೦); ವರ ಡೋಹರ ಕಕ್ಕಯ್ಯಂ ಚರಗುರು ಶಿವಲಿಂಗಭಕ್ತನೀ ವಸುಮತಿಯೊಳ್ (ವೃಷವಿ. ೩೮-೧೦೪). **ಡೋಹ:** ಪೇಸಿಕೆಯಿಲ್ಲದಾ ಪೊಲೆಯ ಮಾದೆಗ ಕೀಲಿಗ ಡೊಂಬ ಡೋಹನತ್ಯಾಸುರಕರ್ಮಿ ಕಳ್ಳ ಗಡುಹಿ ತೊನ್ನರೊಳಾಧೊಡುರುಳ್ವ . . . ಸೂಳೆ (ಕಾವ್ಯಸಾ. ೧೦೦೨) ; ಮಾದಾರ ಕೇರೆಲ್ಲ ಮೊದಲಿಗೆ ಹೊರಟೀತು ಅದು ನೋಡಿ ಡೋಹರೆಲ್ಲರು ಮಗ್ಗಿದರು (ಸಿದ್ಧಪು. ೪-೬೪). **ಡೋಹಾರ:** ಸೆಟ್ಟಿಯೆಂದೆಂಬೆನೆ ಸಿರಿಯಾಳನ ಮಡಿವಾಳನೆಂದೆಂಬೆನೆ ಮಾಚಯ್ಯನ ಡೋಹಾರನೆಂದೆಂಬೆನೆ ಕಕ್ಕಯ್ಯನ(ಬಸವ.೩೪೪); ಈತನೆ ಮೇದಾರ ಕೇತಯ್ಯನೆಂಬಾತನೀತನೇ ಡೋಹಾರ ಕಕ್ಕಯ್ಯನೆಂಬಾತನು (ಚಬಪು. ೫೬-೫೬). **ಢೋರ:** ಪೂರ್ವದ ಋಷಿಗಳೆಲ್ಲರು ಕಮ್ಮಾರ, ಮಚ್ಚಿಗಾರ, ಢೋರ, ಕಬ್ಬಲಿಗ, ನಾಯಿದ ಮೊದಲಾದ ಕುಲದಲ್ಲಿ ಹುಟ್ಟಿದವರಾದಾಗ್ಯೂ (ಕೈಷಿಪ್ರ. ೨೯೬); ಚರ್ಮಕ್ಕೆ ಕರೆ ಹಾಸುವುದೇ ಢೋರರ ಮುಖ್ಯ ಹೋರೆಯು (ಕಭಾಗಿ. ೩೦೯).

[ ←ಮರಾ. ಡೋಹರ್, ಡೋಹಾರ್, ಢೋರ್ ]

**ಡೋಹಾರ** ‘ಡೋಹರ’ ನೋ.

**ಡೋಳಾಕೇಳಿ** (ನಾ). ಉಯ್ಯಾಲೆಯ ಆಟ : ಡೋಳಾಕೇಳಿಯ ಕಂದುಕ ಕೇಳಿಯ . . . ಚಿನದದೊಳೆ ಸತಿಯನವರೊಸೆಯಿಸಿದರ್ (ಪುಷ್ಪಪು. ೯-೮೨).

[ ಸಂ. ಡೋಲಾಕೇಲಿ (ಡೋಲಾ + ಕೇಲಿ) ]

**ಡೋಳು** ‘ಡೋಲು’ ನೋ.

**ಡೋಳೋತ್ಸವ** ‘ಡೋಲೋತ್ಸವ’ ನೋ.

**ಡೋಱ** ‘ಡೊಂಗಱ’ ನೋ.

**ಡೋಱಗಳೆ** ‘ಡೋಱುಗಳೆ’ ನೋ.

**ಡೋಱಗೊಱೆ** ‘ಡೋಱುಗೊಱೆ’ ನೋ.

**ಡೋಱದಲೆ** (ನಾ). ಡೊಗರು ಬಿದ್ದ ತಲೆ; ಕುಳಿಬಿದ್ದ ತಲೆ : ಶರಧಿಯಲಿ ಹುಟ್ಟಿರ್ದ ವಿಷದಲಿ ಕರಿಕುದಲೆಯಾದವರು ಅಂಧಾಸುರನ ಬಿಡಿಸಲು ಹರನು ಹೊಡೆದಾ ಡೋಱದಲೆಯವರು (ಕೌಶಿರಾ. ೨೧-೧೬).

[ ಡೋಱ (<ಡೊಂಗಱ) + ತಲೆ$_1$ ]

**ಡೋಱವೋಗು** ‘ಡೋಱುವೋಗು’ ನೋ.

**ಡೋಱು** ‘ಡೊಂಗಱ’ ನೋ.

**ಡೋಱುಗಲೆ** (ನಾ). ಸೀಳಿದ ಗುರುತು ; ಗಾಯದ ಚಿಹ್ನೆ : ಸುರಪತಿಯ ಮೇಱೆಯಲೀತನೆಱಗಿದ ಡೋಱುಗಲೆ[ಪಾಠಾಂ. ಳೆ]ಯದೆ ಭೂತಳಾಧಿಪ ನೋಡು ದೇವಾಂತಕ ನಿಶಾಚರನ (ತೊರರಾ. ೬-೨೦-೩೮).

[ ಡೋಱು (<ಡೊಂಗಱ) + ಕಲೆ$_2$ ]

**ಡೋಱುಗಳೆ,** ಡೋಱಗಳೆ (ಕ್ರಿ). ೧. ಸೀಳು ; ತೂತುಮಾಡು ; ಕೊರೆ ; ಕತ್ತರಿಸು : ಐದಾಱು ಶರದಲಿ ಕರ್ಣನೆದೆಯನು ಡೋಱುಗಳೆಯಲು ಬಳಲಿದನು ಪೂರಾಯ ಘಾಯದಲಿ (ಕುಮಾ.ದ್ರೋ. ೫-೨೮) ; ತೊಡೆಯನು ಡೋಱುಗಳೆವ ಪುಳುವಿಗಿನಸುತನು ಬಳಲಿ ಮೈಮಱೆದೊಱಗಿದ ರಾಮಗೆ ನಿದ್ದೆಯಳಿವುದೆಂದು ಚಿಂತಿಸಿದ (ಕರ್ಣಮ. ೪-೮) ; ಪಾರ್ಥಿಯ ಶಿಲೀಮುಖಾಳಿ . . . ಸ್ಯಂದನವಿತಾನವಂ ಡೋಱುಗಳೆದುದು (ಜೈಮಿಭಾ. ೨೨-೪೨). ೨. ಸೀಳಿ ಹೋಗು ; ಬಿರಿ ; ಭಂಗಹೊಂದು ; ಡೊಗರುಬೀಳು : ಎದೆ ಡೋಱುಗಳೆವಂತೆ ತಿವಿದುರುಳಿಸಿದ (ಭೈರವೇ. ೩-೧೩). **ಡೋಱಗಳೆ:** ೨. ಡೋಱ[ಪಾಠಾಂ. ಱು]ಗಳೆದುದು ಗರ್ವಪರ್ವತಂ (ಲಶಿಚಂ. ೩೩-೨೬).

[ ಡೋಱು (<ಡೊಂಗಱ) + ಕಳೆ$_1$ ]

**ಡೋಱುಗೊಱೆ,** ಡೋಱಿಗೊರೆ, ಡೋಱಗೊಱೆ (ಕ್ರಿ). ತೂತುಕೊರೆ; ರಂಧ್ರಮಾಡು ; ಸೀಳು ; ಛಿದ್ರಿಸು : ರಕ್ತಮಾಂಸಾಹಾರಿಯಾದ ದುಷ್ಕೀಟಕಮೊಂದೈತಂದು ಕರ್ಣನ ತೊಡೆಯಂ ಡೋಱುಗೊಱೆದು ರಕ್ತಮನೀಂಟಿ ಮಾಂಸಮಂ ಭಕ್ಷಿಸುತ್ತಿರಲಾಗಿ(ಭಾರಶಾಂ.೩). **ಡೋಱಿಗೊರೆ:** ಕಿನಿಸಾಂತು ಶರವರ್ಷಮಂ ಕರೆಯಲಸುರರಂ ತನುಗಳಂ ಡೋಱಿಗೊರೆಯಲ್ಕಮಮ ದೈತ್ಯರನುಪಮಿತ ಖಡ್ಗ ತೋಮರ ಗದೆಗಳಿಂದಂತವಂ ಖಂಡಿಸುತಾಗಳು (ಛೋರಾಸು. ೬). **ಡೋಱಗೊಱೆ:** ಕುಂತಮೆರ್ದೆಯನು ಡೋಱಗೊಱೆದಂತೆ (ಚಕಸ. ೨೬).

[ ಡೋಱು (<ಡೊಂಗಱ) + ಕೊಱೆ$_1$ ]

**ಡೋಱುನೊಸಲು** (ನಾ). ಕುಳಿಯಾದ ಹಣೆ ; ಹಳ್ಳವಿರುವ ಹಣೆ ; ತಗ್ಗಿರುವ ಲಲಾಟ : ಏಳನೆಯ ಬಾಗಿಲಲಿ ಡೋಱುನೊಸಲಿನ ಕಿಱುಬೆಮರ ಕಾಹೇಱಿದಕ್ಷಿಯ ಸರಭಸದ ಪಡಿಹಾಱರಿಬ್ಬರು ನಿಂದಿರಲು (ನಿಭಾಗ. ೩-೬-೮).

[ ಡೋಱು (<ಡೊಂಗಱ) + ನೊಸಲು (<ನೊಸಲ್) ]

**ಡೋಱುಮೈ** (ನಾ). ಗೂಡುಬಿದ್ದ ಮೈ ; ಜೀರ್ಣವಾದ ದೇಹ: ಡೋಱುಮೈಯಾದ ಮುದುಕಿಹೋಹುದಱಿಂದ ಕಾಱಿಕೊಂಡುಣ್ಣೊ (ಸರ್ವಜ್ಞ. ೦೬೯೬). [ ಡೋಱು (<ಡೊಂಗಱ) + ಮೈ (<ಮೆಯ್) ]

**ಡೋಱುವೋಗು,** ಡೋಱವೋಗು, ದೋಱುವೋಗು (ಕ್ರಿ). ಡೊಗರು ಬೀಳು ; ಹಳ್ಳವಾಗು ; ಕುಳಿಬೀಳು ; ಸೀಳಿಹೋಗು ; ಬಿರಿ : ಕೀಱ ಕಾಲಿಡೆ ದಿಕ್ಕರಿಗಳೆದೆ ಡೋಱುವೋಗಲು ಸರ್ವ ಲಗ್ಗೆಯಲೇಱಿತೀ ದಳ (ಕುಮಾ.ಕ. ೧೫-೨೦); ಬಿದ್ದನು ಘಾತಿಯಲಿ ಧರೆ ಶೈಲ ವನ ಸಹಿತ ಡೋಱು ವೋಗಲು (ನಿಭಾಗ. ೧೦-೩೨-೧೪), **ಡೋಱವೋಗು:** ಡೋಱವೋದುವು ತೋಳು ನೆತ್ತರ ಕಱಿ ರಾವಣ ಗಂಡುಗೆಟ್ಟನು (ಕೌಶಿರಾ. ೨-೩೧) ; ಬೀಸಿ ಬಾಲದಿ ಗೋಣ ಬಿಗಿದನು ಸಾಸಿಗನ ಶಿರ ಡೋಱವೋದುವು (ಕೌಶಿರಾ. ೨೨-೧೧). **ದೋಱುವೋಗು:** ಮಿಱಿ ಪೊಗುವ ಅಂಗಜನ ಶರದಲಿ ದೋಱು ವೋಯಿತು ಹೃದಯ (ಕುಮಾ.ವಿ. ೨-೧೦).

[ ಡೋಱು (<ಡೊಂಗಱ) + ಪೋಗು$_1$ ]

**ಡೋಟುಹೃದಯ** (ನಾ). ಸೀಳಿದ ಎದೆ; ಡೊಗರುಬಿದ್ದ ಎದೆ : ಹೋರುಗಳೆದಕ್ಷಿಯಿಂ ಡೋಟುಹೃದಯಂಗಳಿಂ (ಲಶಿಚಂ. ೩೭-೨೬).
[ ಡೋಟು (<ಡೊಂಗಟು) + ಹೃದಯ ]

**ಡೋಟ$^{3}$ನಿಸು** (ಕ್ರಿ). ಹೋಳಾಗಿಸು ; ಸೀಳಿಹೋಗುವಂತೆ ಮಾಡು ; ಡೊಗರು ಬೀಳಿಸು : ಶರಗಳಿಂದೆಚ್ಚವರ ತನುಗಳಂ ಡೋಟ$^{3}$ನಿಸಿಯುತ್ತ ಸಾರಥಿ ತೇರ್ಗಳಂ ತಿರುವನೇಟ$^{3}$ಸಿದ ಬಿಲ್ಗಳಂ ಕಡಿಕಡಿದು (ಜಬಪು. ೪೯-೨೨).
[ ಡೋಟು (<ಡೊಂಗಟು) + ಎನಿಸು$_1$ ]

**ಡೌಗಿ** 'ಡೋವಿ' ನೋ.

**ಡೌಗಿಕೊಳವಿ** (ನಾ). ಟೊಳ್ಳಾದ ದಪ್ಪ ಬಿದಿರಿನಿಂದ ಮಾಡಿದ ಕೊಳವೆ; ದಪ್ಪಬಿದಿರಿನ ಅಂಡೆ : ಹಪ್ಪುಹಾಕಿ ಬೆಣ್ಣೆತೆಗೆಯಲು ಚರ್ಮದ ಚೀಲ, ಡೌಗಿಕೊಳವಿಯನ್ನೂ, ಚಹಾ ತಯಾರಿಸಲು ದನ, ಕುರಿ, ಮನುಷ್ಯರುಗಳ ಹಿಕ್ಕೆಗಳನ್ನೂ ಉರಿಹಚ್ಚುತ್ತಾರೆ (ಕೈಲಾಸ. ೩೩).
[ ಡೌಗಿ (<ಡೋವಿ) + ಕೊಳವಿ (<ಕೊಟವಿ) ]

**ಡೌಗಿಬರ** 'ಡೋಗಿಬರ' ನೋ.

**ಡೌಗೆ** 'ಡೋವಿ' ನೋ.

**ಡೌಡೆ** 'ಡವುಡೆ$_1$' ನೋ.

**ಡೌಡೆವಟ$^{3}$** (ನಾ). ೧. ಡವುಡೆಯೆಂಬ ಚರ್ಮವಾದ್ಯ. ೨. ಡವುಡೆ ವಾದ್ಯದ ಶಬ್ದ : ನೆರೆದು ಪಳಂಚುವ ಕಾಲುಂಗುರದ ರವಂ ಮುಂದೆ ಡೌಡೆವಟ$^{3}$ಯಂ ಪೋಲುತ್ತಿರೆ (ಗಿರಿಕ. ೭-೫೦).
[ ಡೌಡೆ (<ಡವುಡೆ$_1$) + ಪಟ$^{3}_{1}$ ]

**ಡೌಲು, ಡವಲು, ಡವುಲು** (ನಾ). ೧. ರೀತಿ; ಪ್ರಕಾರ. ೨. ಒಣಹೆಮ್ಮೆ; ಬರಿಯ ಬಡಾಯಿ ; ಆಡಂಬರ : ಅಲ್ಲೊಂದು ಇಲ್ಲೊಂದು ಬಣ್ಣದ ನೂಲು ಬೆತ್ತಲೆ ಬದುಕ ಸುತ್ತಿ ತೋರಿಸುತ್ತಿದೆ ಡೌಲು (ನೆಲಮು. ೩೦-೧) ; ಇದರೊಳಗೆ ನಾನು ಮನಸ್ಸಿಗೆ ಹಚ್ಚಿಕೊಳ್ಳತಕ್ಕದ್ದೇನೂ ಇಲ್ಲ ಎಂದು ಡೌಲಿನ ಮಾತು ಹೇಳಿ (ಮುಂಬಯಿ. ೩-೯೩). ೩. ದೊಡ್ಡಸ್ತಿಕೆ ; ಘನತೆ ; ವೈಭವ : ಬೆಳಗಿನ ಸ್ವಚ್ಛಂದ ಗಾಳಿಯಲ್ಲಿ ಡೌಲಿನಿಂದ-ಹಾರತೊಡಗಿದ ಆ ತ್ರಿವರ್ಣಧ್ವಜವನ್ನೆ ಅರೆಕ್ಷಣ ಪ್ರೀತಿ ಅಭಿಮಾನಗಳಿಂದ ನಿಟ್ಟಿಸುತ್ತಿದ್ದ (ಆಗಸ್ಟ್. ೧೮); ದೊಡ್ಡ ಸಂಬಳ ತೆಗೆದುಕೊಂಡು, ಮೂರಂಗುಲ ಜರತಾರಿ ರುಮಾಲು ಹಾಕಿಕೊಂಡು, ಡೌಲಿನಲ್ಲಿ ಅಮಲ್ದಾರರುಗಳು ಕಾಲಹಾಕುತ್ತಿದ್ದರು (ನಟಸಾ. ೨). ೪. ದರ್ಪ ; ಠೀವಿ : ಪಂಡಿತರ ಸಭೆಗೆ ಓರ್ವನು ಬಹಳ ಡೌಲಿನಿಂದ ವಸ್ತ್ರಾಲಂಕಾರಭೂಷಿತನಾಗಿ ಬಂದನಂತೆ (ಹಾಲಂಸಾ. ೬೮). **ಡವಲು :** ೫. ಅಂದಾಜು ; ಊಹೆಮಾಡುವಿಕೆ. 'ಡವಲುಕಟ್ಟು' ಪರಾ. **ಡವುಲು:** ೨. 'ಡವುಲುಕೊಚ್ಚು', 'ಡವುಲುದಾರ' ಪರಾ. ೫. 'ಡವುಲಂದಾಜು', 'ಡವುಲುಜಮಾಬಂದಿ' ಪರಾ. **ಡೌಲು :** ೨. ಈಗ ನನ್ನ ಮ್ಯಾಗೆ ಡೌಲ ಬಡೀತಾನ (ಪುರುಷ. ೦೦೯).
[ ←ಅರ. ಹಿಂ. ಮರಾ. ಡೌಲ್ ]

**ಡೌಳಿ** 'ಟವಳಿ' ನೋ.

**ಡ್ಯಾಲಿಯಾ** 'ಡೇಲಿಯಾ' ನೋ.

**ಡ್ರಮ್ಮು** (ನಾ). ಪೀಪಾಯಿ: ಈ ಕೆಳಗಿನ ಇನ್ನೂ ಹತ್ತಾರು ತದ್ಭವಗಳನ್ನು ಈ ವರ್ಗಕ್ಕೆ ಸೇರಿಸಬಹುದು. ಉದಾ . . . ಬಾಟ್ಲಿ; ಆಸ್ಪತ್ರೆ; ಡ್ರಮ್ಮು (ಭಾಷಾಶಾ. ೦೭೬). [ ←ಇಂ. Drum ]

**ಡ್ರಾಮು** (ನಾ). ಮದ್ಯ ಮೊದಲಾದ ದ್ರವಗಳ ಒಂದು ಸಣ್ಣ ಅಳತೆ : ನಾಲ್ಕು ಡ್ರಾಮು ಸೆರೆ ಎಂಟು ಡ್ರಾಮು ಕೋಪ (ಬೆಂಗಬ. ೧೧).
[ ←ಇಂ. Dram ]

**ಡ್ರಿಲ್ಲು** (ನಾ). ಕವಾಯಿತು ; ವ್ಯಾಯಾಮ ಶಿಕ್ಷಣ : ಕರಡಿ ಕಟಿಗಳಿಗಲ್ಲಿ ನಡೆಯುತಿದೆ ಡ್ರಿಲ್ಲು (ಕೋಗಿಲೆ. ೩-೪೬).
[ ←ಇಂ. Drill ]

**ಡ್ರೈವರು** (ನಾ). ಮೋಟಾರುಬಂಡಿ ಮೊದಲಾದುವನ್ನು ನಡಸುವವನು; ಸಾರಥಿ; ಚಾಲಕ: ನಮ್ಮ ಕಾರಿಗೆ ಒಬ್ಬ ಡ್ರೈವರು ಬೇಕಾಗಿದ್ದಾನೆ (ರೂಢಿ). [ ←ಇಂ. Driver ]

❋

# ಢ

**ಢ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ನಾಲ್ಕನೆಯ ಅಕ್ಷರ. ೨. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : "ಘಢಭವಂ ನೆಟ$^{3}$ ನಾಲ್ಕು" (ಮಂಗರಾ. ೧೧೪-೧೧).

**ಢಂ** (ನಾ). ಒಂದು ಅನುಕರಣ ಶಬ್ದ ; ಪಟಾಕಿ ಮೊದಲಾದ ಸಿಡಿಮದ್ದುಗಳು ಸಿಡಿಯುವಾಗ ಅಥವಾ ಕೋವಿ, ಫಿರಂಗಿ, ಪಿಸ್ತೂಲು ಮೊದಲಾದುವುಗಳಿಂದ ಗುಂಡು ಹಾರಿಸುವಾಗ ಉಂಟಾಗುವ ಶಬ್ದ.

**ಢಂಕೃತಿ** (ನಾ). ಢಂ ಎಂಬ ಧ್ವನಿ: ಹೈದರನಿಗೆ ಈ ಫಿರಂಗಿಗಳ ಢಂಕೃತಿಯು ಆಶ್ಚರ್ಯವನ್ನು ಮಾಡಿತು (ಒಡಕ. ೮೫). [ ಸಂ. ]

**ಢಕಲಪಟ್ಟಿ**, ದಕಲುಪಟ್ಟಿ, ಧಕಲ್ಪಟ್ಟಿ (ನಾ). (ಉಕ) ೧. ಕೆಲಸವನ್ನು ಮುಂದೂಡುವುದು. **ದಕಲುಪಟ್ಟಿ :** ೨. ಚಕ್ಕರು ; ತಪ್ಪಿಸುವಿಕೆ: ಬರುತ್ತೇನೆ ಎಂದು ಹೇಳಿ ದಕಲುಪಟ್ಟಿ ಕೊಟ್ಟ (ರೂಢಿ). ೩. ನೂಕುವಿಕೆ ; ದಬ್ಬಿ ಹೊರಗೆ ಹಾಕುವಿಕೆ ; (ಕೆಲಸದಿಂದ) ವಜಾ ಮಾಡುವಿಕೆ ; ಅವನಿಗೆ ದಕಲುಪಟ್ಟಿಯನ್ನು ಕೊಟ್ಟುಬಿಡುತ್ತಿದ್ದರು. (ಬಂಗಾರ್ತಿ. ೬೧). **ಧಕಲ್ಪಟ್ಟಿ :** ೩. ರಂಗಣ್ಣನಿಗೆ ಹೊಸಹಳ್ಳಿಯಲ್ಲಿ 'ಧಕಲ್ಪಟ್ಟಿ,' ಹೊನ್ನಹಳ್ಳಿಯಲ್ಲಿ ಅರ್ಧಚಂದ್ರಪ್ರಯೋಗ (ದುಂಬಿಕ ೦೭೦).
[ ←ಮರಾ. ಢಕಲ್‌ಪಟ್ಟೀ ]

**ಢಕಲಾಯಿಸು** (ಕ್ರಿ). ಮುಂದಕ್ಕೆ ತಳ್ಳು; ನೂಕು; ದೂಡು: ಪೆಟ್ರೋಲು ಮುಗಿದು ಕಾರನ್ನು ಢಕಲಾಯಿಸಬೇಕಾಯಿತು (ರೂಢಿ).
[ ಢಕಲಾ$_{0}$ (P ←ಮರಾ. ಢಕಲಣೇ) + - ಇಸು$_3$ ]

**ಢಕಾಯಿತ** 'ಡಕಾಯಿತ' ನೋ.

**ಢಕಾಯಿತಿ** 'ಡಕಾಯಿತ' ನೋ.

**ಢಕಾರ** (ನಾ). ಢ ಎಂಬ ಅಕ್ಷರ. [ ಸಂ. ]

**ಢಕ್ಕ** (ನಾ). = ಡಕ್ಕೆ೧ : ಮುರಜೆ ಢಕ್ಕಂ ವೀಣೆ ಡಮರು ಕಾಳಂ ಮೇಳಂ (ಸಿದ್ಧಕಾ. ೮-೯). [ ಸಂ. ಢಕ್ಕಾ ]

**ಥಕ್ಕರ** 'ಢೊಕ್ಕರ$_1$' ನೋ.

**ಥಕ್ಕಾಮುಕ್ಕಿ** 'ಧಕ್ಕಾಮುಕ್ಕಿ' ನೋ.

**ಥಕ್ಕಾರವ** (ನಾ). ಥಕ್ಕೆಯ ಶಬ್ದ : ದಳದ ಬಂಭಾರವಂ ರಣ ಕಿಲಕಿಲಾರವಂ ಪಟಹ ಥಕ್ಕಾರವಂ ಪುದಿದ ನಾನಾರವಂ (ಕೃಮಿಭಾ. ೨೨-೪). [ ಸಂ. (ಥಕ್ಕಾ + ರವ)]

**ಥಕ್ಕಳಿ** (ನಾ). ಇಂದು ಮಾಡಬೇಕಾದ ಕೆಲಸವನ್ನು ನಾಳೆಗೆ ತೂಕುವುದು ಅಥವಾ ತಾನು ಮಾಡಬೇಕಾಗಿ ಬಂದ ಕೆಲಸವನ್ನು ಉಪಾಯದಿಂದ ಇನ್ನೊಬ್ಬನ ಮೇಲೆ ಹೇರುವುದು: ಕಾಲಯವನನು ಪಾಯದಿಂದವೆ ಬೀಳಿಸಿದೆ ಮಾಗಧನನಾ ಪರಿ ಸೀಳಿಸಿದೆ ಭೀಷ್ಮಾದಿಗಳ ಸೋಲಿಸಿದೆ ಸಾಮದಲಿ ಡಾಳನತಿ ಥಕ್ಕಳಿಯ[ಪಾಠಾಂ. ಡೊಂಕಣೆಯ] ಠಕ್ಕಿನ ಠೌಳಿಕಾಟನು ನಿನ್ನ ಮಾಯೆಯ ಹೇಳಲಮ್ಮೆನು ಕೃಷ್ಣ ಕರುಣಿಸು ಕರ್ಣನಾರೆಂದ (ಕುವ್ಯಾ. ೫. ೨೭-೨೭). [ ← ಮರಾ. ಥಕಲ್ ]

**ಥಕ್ಕೆ** (ನಾ). = ಡಕ್ಕೆ ೧ : ಥಕ್ಕೆ ಡಮರುಗ ಮೊಳಗಿದವು (ತೊರರಾ. ೬-೩೦-೪೩); ಇಂತಷ್ಟವರಣದೊಳಗೊಂದೊಂದನೇ ನಂಬಿ ಕಂತುಹರನೊಲವ ಪಡೆದವರು ಪಲಕಲರುಂಟು ಸಂತಸದಿ ತಿಳಿದು ನಂಬುವುದೆಂದು ಸಾಱುತ್ತ ಥಕ್ಕೆಯಂ ಬಾಜಿಸುತ್ತ (ಪ್ರಾಥರಾ. ೬-೪೦) ; ಪಟಹ ತಮ್ಮಟ ಥಕ್ಕೆ ಡವುಡೆ ಕಹಳಾಸಮುತ್ಕಟ ನಾದಮಳ್ಳಿಱಿಯೆ (ಜಬಪು. ೦೬-೦೩). [ ಸಂ. ಥಕ್ಕಾ ]

**ಥಕ್ಕೆವಾಜಿಸು** (ಕ್ರಿ). ೧. ಡಕ್ಕೆಯನ್ನು ಬಾರಿಸು. ೨. (ಆಲಂ) ಭಯದಿಂದ ಎದೆಯಲ್ಲಿ ಡಬಡಬ ಎಂಬ ಶಬ್ದ ಉಂಟಾಗು; ಎದೆಗುಂಡಿಗೆ ಡವಡವನೆ ಬಡಿದುಕೊಳ್ಳು : ದಸೆಯೊಳ್ ನಿಶ್ಚಳಮಿರ್ಪ ದೇವರೆರ್ದೆ ಥಕ್ಕಾಧ್ಯಾನದಿಂ ಥಕ್ಕೆವಾಜಿಸೆ . . . ವೀರಾರಿನೃಪಾಳರಂ ಬರಿಸಿದಂ ಮೂವಿಟ್ಟಿಗಂ ಬಿಟ್ಟಿಗಂ (ಎಕ. XI, ದಾ ವ ಣ. ೨೫-೨೩; 1224). 'ಡಕ್ಕೆವಾಜಿಸು' ಪರಾ. [ ಥಕ್ಕೆ + ಬಾಜಿಸು ]

**ಥಗೆ** 'ದಗೆ$_1$' ನೋ.

**ಥಗೆವಡೆ** (ಕ್ರಿ). ಸೆಕೆಯನ್ನು ಹೊಂದು; ಉಷ್ಣತೆಯನ್ನು ಪಡೆ; ಕಾವೇರು: ಥಗೆವಡೆದೊಡಲೊಳು ಸ್ಫೋಟಕವೆದ್ದು ನಾಲಗೆ ನುಡಿಗೆಟ್ಟುವೆ (ಮೋಹತ. ೯-೦೪). [ ಥಗೆ (<ದಗೆ$_1$) + ಪಡೆ$_1$ ]

**ಥಣ** (ನಾ). ಒಂದು ಅನುಕರಣ ಶಬ್ದ ; ಘಂಟೆ, ಜಾಗಟೆ ಮೊದಲಾದುವುಗಳನ್ನು ಬಡಿದಾಗ ಹುಟ್ಟುವ ಧ್ವನಿ.

ಥಣಥಣ (ದ್ವಿರುಕ್ತಿ) : ವೀರಫಳಕದ ಘಂಟೆ ಥಣಥಣಂ ಥಣಮೆನಲು (ಬಣಾರ. ದೇ. ೦೦೬-೨೦).

**ಥಣಥಣಿಸು** (ಕ್ರಿ). ಥಣಥಣ ಎಂದು ಶಬ್ದಮಾಡು : ಜಾಗಟೆ-ಗಂಟೆಗಳು ಥಣಥಣಿಸುವುವು (ಕನ್ನಜಾ. ೦೩). [ <ಥಣ + – ಇಸು$_3$ ]

**ಥಣತ್ಕೃತ** (ನಾ). ಥಣಥಣ ಎಂಬ ಶಬ್ದ ; ಘಂಟೆ ಮೊದಲಾದುವುಗಳ ಶಬ್ದ : ಉಲಿವ ಘಂಟೆಯ ಥಣತ್ಕೃತವೊಗೆಯೆ (ಜಬಪು. ೪೭-೫೩). [ ಸಂ. ]

**ಥಣಾಡಂಗುರ**, ಡಣಾಡಂಗುರ, ಡಾಣಾಡಂಗರ, ಡಾಣಾಡಂಗುರ, ಢಾಣಾಡಂಗುರ (ನಾ). ಘಂಟಾಘೋಷವಾಗಿ ಸಾರಿದುದು; ಎಲ್ಲರಿಗೂ ತಿಳಿದ ವಿಷಯ; ಬಹಿರಂಗವಾದುದು; ಪ್ರಚಾರವಾದುದು: ಇವಳ ಪವಿತ್ರ ಕತೆ ಇಡೀ ಗುಜ್ಜರಬೆಟ್ಟಿನಲ್ಲೆ ಥಣಾಡಂಗುರವಾಗಲಿಲ್ಲವೇ? (ಹೊಸಕ್ಷಿ. ೫೭). **ಡಣಾಡಂಗುರ** : ಇದು ಡಣಾಡಂಗುರವಾಗಿ ಸಾರುವ ವಿಷಯವಲ್ಲ (ರೂಢಿ). **ಡಾಣಾಡಂಗರ** : ರಾಯರಿದ್ದರ ನಾ ಹ್ಯಾಂಗ ಬರತಿದ್ದೆ ಆಚಾರ ಡಾಣಾಡಂಗರಾಗಿ ? (ದೀಷಿ. ೪೭). **ಡಾಣಾಡಂಗುರ** : ಬ್ರಿಟಿಶ್‌ಕೋರ್ಟನ್ನು ನಾವು ಮನ್ನಿಸುವುದಿಲ್ಲವೆಂದು ಡಾಣಾಡಂಗುರವಾಗಿ ಸಾರಿ (ಮಹಾಯೋ. ೦೪೯) ; ಬಸವಂತಿ ಡಾಣಾಡಂಗುರ ಮೋಟರಿನಲ್ಲಿ ಬಂದು ವಾಡೆಯಲ್ಲಿ ನಿಂತು ಬಿಡಲಿ (ದೀಹಹ. II, ೧೩೦) ; ಹೆಸರಿಗೆ ಮಾತ್ರ ಮುತ್ತೈದೆಯಾಗಿರುವುದಕ್ಕಿಂತ ಡಾಣಾಡಂಗುರವಾದ ವೈಧವ್ಯವೇ ಲೇಸು (ಸ್ಕ್ರತಿಜ. ೬). **ಢಾಣಾಡಂಗುರ** : ಅವನ ಕಿಡಿಗೇಡಿತನ ಹಳ್ಳಿಹಳ್ಳಿಯಲ್ಲೂ ಢಾಣಾಡಂಗುರವಾಗಿದೆ (ರೂಢಿ). [ <ಥಣ + ಡಂಗುರ ]

**ಥಣರು** (ನಾ). ಒಂದು ಅನುಕರಣ ಧ್ವನಿ; ಘಂಟೆ ಮೊದಲಾದುವುಗಳ ಶಬ್ದ : ಬಿರುದಿನ ಬಿಲ್ಗಂಟೆ ಥಣರೆನೆ ಕೊಂಡ ಕಾರ್ಮುಕವ (ಪೂಹತ. ೩೪-೨೯).

**ಥಣಲನೆ** (ಅ). ಥಣಲ್ ಎಂದು ಶಬ್ದವಾಗುವಂತೆ ; ಬೇಗನೆ ; ಪಕ್ಕನೆ : ಗಣಮಧ್ಯದೊಳು ತ್ರಿಣೆಯ ಹೃದಯಕವಾಟವ ಥಣಲನೆ ತೆಗೆದು ತೋರಲ್ಕೆ (ಕೋಡಚ. ೧-೧೦೮). [ ಥಣಲ್$_0$ + – ಅನೆ$_1$ ]

**ಥಪ್ಪಳಿ** 'ಡವಳೆ' ನೋ.

**ಥಪ್ಪಳಸೀರೆ** (ನಾ). ಒಂದು ವಿಶಿಷ್ಟ ತರದ ನೆಯ್ಗೆಯುಳ್ಳ ಸೀರೆ : ಯಾಕೇನು. ತಾ ಯಾವಾಗರ ಉಡೋ ಥಪ್ಪಳಸೀರೆ ತಂಗಿ ಉಟ್ಟಳೂ ಅಂತ (ವ್ಯನಿ. ೨೭೦). [ ಥಪ್ಪಳ (<ಡವಳೆ) + ಸೀರೆ$_2$ ]

**ಥಬ್** (ನಾ). ಒಂದು ಅನುಕರಣ ಶಬ್ದ : ಕಟಕದವರನೆಲ್ಲ ಕಟಕಿಯ ನುಡಿವಂತೆ ಛಿಟಲು ಛಿಟಿಲು ಥಬ್ಬೆಂದು (ಹಂಪ್ರಸಾಂ. ೮-೪೫).

**ಥಬಕು** (ನಾ). ನಟನೆ; ಕಪಟ; ವಂಚನೆ; ಮೋಸ: ಶಾಂತಿಸಮ್ಮೇಳನದಲ್ಲಿ ಭಾರತ ಭಾಗ ವಹಿಸಿತು ಎನ್ನುವುದು ಸತ್ಯದ ಅಪಭ್ರಂಶ ; ಬರೀ ಥಬಕು (ಎಶ್ವಸಾ. ೮೦). [ ←ಹಿಂ. ಥಬಕ್ = ಉಪಾಯ, ಯುಕ್ತಿ ]

**ಥಮಥಮ** (ನಾ). ಒಂದು ಅನುಕರಣ ಶಬ್ದ ; ಡಕ್ಕೆ ಮೊದಲಾದ ಚರ್ಮವಾದ್ಯಗಳನ್ನು ಬಾರಿಸುವಾಗ ಹುಟ್ಟುವ ಧ್ವನಿ. 'ಥಮಥಮತ್ಕಾರ', 'ಥಮಥಮಿಸು' ಪರಾ.

**ಥಮಥಮತ್ಕಾರ** (ನಾ). = ಥಮಥಮ : ತೇರುಗಳ ಚೀತ್ಕಾರ ಪಟು ರಣಭೇರಿಗಳ ಭಾಂಕಾರ ಭಟರ ಕಠೋರತರ ಹೂಂಕಾರ ಥಕ್ಕಾ ಥಮಥಮತ್ಕಾರ (ಅನಂರಾ. ೬-೧೦-೪೫). [ ಸಂ. ]

**ಥಮಥಮಿಸು** (ಕ್ರಿ). ಥಮಥಮ ಎಂದು ಶಬ್ದಮಾಡು : ಡೋಲಾಯಮಾನವಾಗಿ ಡೋಲಿನವನು ಥಮಥಮಿಸಿದ (ಮಾಪುನ. ೨೦೯). [ ಥಮಥಮ + – ಇಸು$_3$ ]

**ಥಮಣೆ** 'ದಮಣೆ' ನೋ.

**ಥಮಾಮಿ** 'ಡಮಾಮಿ' ನೋ.

**ಥಮಾರ್** (ನಾ). ಒಂದು ಅನುಕರಣ ಪದ: ಸಿಡಿಮದ್ದು ಸಿಡಿದು ಥಮಾರ್ ಎಂದಿತು (ರೂಢಿ).

**ಥಮಾರ** (ನಾ). [ಸಂಗೀತ] ಒಂದು ಬಗೆಯ ತಾಳ : ನಮ್ಮ ದೇಶದ ಸಂಗೀತದಲ್ಲಿ ರೂಪಕ (ದಾದರಾ), ಆದಿ (ತ್ರಿವಟ), ಝಂಪೆ, ಧ್ರುಪದ, ತ್ರಿವುಡೆ (ಥಮಾರ), ಧೂಮಾಳಿ, ಏಕ್ಕಾ ಎಂಬ ಹಲವು ತಾಳಪದ್ಧತಿಗಳಿರುವುವು (ಬಾಲಪ್ರ. II, ೧೦೪೦). [ ←ಹಿಂ. ಮರಾ. ಧಮಾರ್ ]

**ಥಮಾರನೆ** (ಅ). ಥಟ್ಟನೆ ; ಸ್ವಲ್ಪವೂ ವಿಳಂಬವಿಲ್ಲದೆ ; ಕೂಡಲೆ : ನಾನು ಕೇಳಿದರೆ ಥಮಾರನೆ ಉತ್ತರ ಕೊಟ್ಟಳು (ನಾಡಿಗೇ. ೫೩). [ ಥಮಾರ್ + – ಅನೆ$_1$ ]

**ಥಮ್ಮನೆ** (ಅ). ಥಮ್ ಎಂಬ ಶಬ್ದವಾಗುವಂತೆ: ಅನುಕರಣಕ್ಕೆ – ಖಣಿಲ್ಲನೆ . . . ಥಮ್ಮನೆ, ಧೊಪ್ಪನೆ (ಶಮುದ. ೦೪ ಪ್ರಯೋ). [ ಥಂ + – ಅನೆ$_1$ ]

**ಥರಕೆ** 'ಡರಕೆ' ನೋ.

**ಥರಕೆಹಾಕು** (ಕ್ರಿ). ಥರ್ ಎಂದು ತೇಗು : ಭೋಜನಮಾಡಿ ಬಂದದ್ದರಿಂದ ಅವನು ಐದು ನಿಮಿಷಗಳಲ್ಲಿ ಹತ್ತುಸಾರೆ ಥರಕೆಹಾಕಿದನು (ಮುತ್ತುಮ. ೦೩೭). [ ಥರಕೆ (<ಡರಕೆ) + ಹಾಕು (<ಪಾಯ್ಸು$_1$) ]

**ಥರಕೆ** 'ಡರಕೆ' ನೋ.

**ಥಲಾಯಿತ** 'ಡಲಾಯಿತ' ನೋ.

**ಥವಣೆ** 'ಡವಣೆ' ನೋ.

**ಥವರಿ** (ನಾ). (?) : ಬವರಿದಿರುಗುವ ತಿರುಗಿ ನಡೆವ ನಡೆದೊಡಲುಬ್ಬಿ ಥವರಿಸುವ ಥವರಿಸಿ ಕುಸಿವ ಕುಸಿದು ಥವರಿ[ಪಾಠಾಂ. ಥವರಿ, ದಡಸಿ] ಬೀಸುವ ಬೀಸಿ ಕೈವಿಡಿವ . . . ಕರಿನಿವಹವತ್ಕಾಡಂಬರಂ ಮಿಕ್ಕು ಹಣ್ಣಿ ನಿಂದವು ಬಲದ ನಟ್ಟನಡುವೆ (ಸೋಮಕು. ೫-೨೯). [ ? ]

**ಥವರಿಸು** (ಕ್ರಿ). (?) : ಬವರಿದಿರುಗುವ ತಿರುಗಿ ನಡೆವ ನಡೆದೊಡಲುಬ್ಬಿ ಥವರಿಸುವ ಥವರಿಸಿ ಕುಸಿವ ಕುಸಿದು ಥವರಿ ಬೀಸುವ ಬೀಸಿ ಕೈವಿಡಿವ . . . ಕರಿನಿವಹವತ್ಕಾಡಂಬರಂ ಮಿಕ್ಕು ಹಣ್ಣಿ ನಿಂದವು ಬಲದ ನಟ್ಟನಡುವೆ (ಸೋಮಕು. ೫-೨೯). [ ಥವರಿ + – ಇಸು$_3$ ]

**ಥವಳ** 'ಡಾಳ$_1$' ನೋ.

**ಥವಳಾರ** 'ಧವಳಾರ$_2$' ನೋ.

**ಥವಳಿಸು** (ಕ್ರಿ). ಅಲುಗಾಡಿಸು : ಅರೆಗಣ್ಣು ಮುಚ್ಚಿ ನಸುನಗುತ ಸಣ್ಣ ಬೆರಳು ಬಾಯೊಳು ಥವಳಿಸುತ ಪನ್ನಗಶಯನ ನಾಟಕದಿ ನಿನ್ನ ಮಗನ ಮುದ್ದು ನೋಡೆನುತ ಗೋಪಿ ತನ್ನ ಪತಿಗೆ ತೋಱಿದಳು (ಪುರಂದ. ೫-೦೫೫-೨). [ ಥವಳ$_0$ (P ←ಮರಾ. ಥವಳಣೇ) + – ಇಸು$_3$ ]

**ಥಳಾಯತ** 'ಡಲಾಯಿತ' ನೋ.

**ಥಳಾಯಿತ** 'ಡಲಾಯಿತ' ನೋ.

**ಥಳ್ಳಿಸು** (ಕ್ರಿ). ಪ್ರಕಾಶಮಯವಾಗು ; ಕಾಂತಿಯಿಂದ ಮೆರೆ (?) : ಭದ್ರ ಲಕ್ಷಣದಿ ಶೋಭಿಸುವ ಗಾತ್ರಕನು ಪವ ರತ್ನಮಾಲೆಯಾಭರಣ ಜಗನ್ನೇತ್ರಾಂಗನಾಮಣಿಯುರಂತೆ ಪಲ್ಲಕ್ಕಿಯೊಳ್ ಬರಲು ಸಭೆ ಥಳ್ಳಿಸುವೊಲು (ಜಿನಮು. ೪-೩೧). [ <ಥಾಳಿಸು$_1$ ? ]

**ಥಱ್ಱನೆ** (ಅ). ಥರ್ ಎಂಬ ಶಬ್ದದೊಡನೆ: ಬಿಡದೆ ಥಱ್ಱನೆ ತೇಗಿ ನೆರವಿಯಂ ಬಯ್ದು ಬಿಱುನುಡಿಯ ಕಲಿವೀರಬಾಹುಕ (ಹಚಕಾ. ೧೧-೧೮).

[ ಥಱ್$_0$ + – ಅನೆ$_1$ ]

**ಥಾಕಿನಿ** 'ಡಾಕಿಣಿ' ನೋ.

**ಥಾಕು** 'ಡಾಕು$_1$' ನೋ.

**ಥಾಕುಗೆಡಿಸು** (ಕ್ರಿ). ಕೆಚ್ಚನ್ನು ಕಳೆ ; ಎದೆಗುಂದಿಸು ; ಧೈರ್ಯಗೆಡುವಂತೆ ಮಾಡು : ಪಾಕಶಾಸನನೈದಿ ವೃತ್ರನ ಥಾಕುಗೆಡಿಸಿ ದಧೀಚಿಯಸ್ಥಿಯಲೌಕಿ ಹೊಯ್ಕಲು (ಕುವ್ಯಾಉ. ೪-೦೦೭). [ ಥಾಕು (<ಡಾಕು$_1$) + ಕೆಡಿಸು$_1$ ]

**ಥಾಣ** (ನಾ). ಹಾಳು ; ವ್ಯರ್ಥವಾದುದು.

**ಥಾಣಾಗು**=ಹಾಳಾಗು ; ವ್ಯರ್ಥವಾಗು ; ನಿರುಪಯುಕ್ತವಾಗು : ನೀ ಬರೋಬರಿ ಮಾಡ್ಲಿಲ್ಲಾ ಅಂದ್ರು ಎಲ್ಲಾ ಕೆಲಸ ಕೆಟ್ಟು ಥಾಣಾಗಿ ಹೋಗ್ತಾವ (ಸಕೋರ. ೨). [ ←ಮರಾ. ಥಾಣ=ತೇವವುಳ್ಳ, ಕೆಸರಾದ ]

**ಥಾಣಾಡಂಗುರ** 'ಢಣಾಡಂಗುರ' ನೋ.

**ಥಾಣೆ$_1$**, ಡಾಣೆ, ಡಾಣ್ಣೆ$_2$, ದಾಣಾ, ದಾಣ್ಣೆ$_2$, ದಾಣ್ಣೆ$_3$ (ನಾ). ೧. ಒಂದು ಬಗೆಯ ಆಯುಧ; ಗದೆ: ನೆರೆದುದಭವನ ಕಿಲಬಲದಲುಬ್ಬರದ ಬೊಬ್ಬಿಯ ಜಡಿವ ಖಡ್ಗದ ಬೆರಳ ಚಕ್ರದ ಭವಣೆಗಳ ಥವಣಿಸುವ ಥಾಣೆಗಳ . . . ವರ ಮಹಾಗಣನಿಕರ ಪೊದಗಿತು(ಕುವ್ಯಾಕ. ೭-೧೩). 'ನೆಗೆಹುಥಾಣೆ' ಪರಾ. ಡಾಣೆ : ೨. ದಪ್ಪಕೋಲು ; ಬಡಿಗೆ ; ದೊಣ್ಣೆ ; "ಲಗುಡ; ದಂಡ" (ನಾಚರಾ. ೬). ಡಾಣ್ಣೆ$_2$ : ೧. ಬೀಸುವ ಡಾಣೆಗೆ ತಲೆಯೊಡ್ಡುವಂತಿ ರೊಡ್ಡಿ ದನಲ್ತೆ (ಪಾರ್ಶ್ವಪು. ೩-೧೧೩); ಕಡುಪಿಂ ಪಿಡಿದಿರ್ಪ ಡಾಣೆಯಂ ಜಡಿ (ದಶಕು. ೫-೪೨). ೨. ಸತ್ತಿರ್ದನಡ್ಡಾಹನಂ ಕಂಡದಟ ಪೊಡೆಯಂ ಡಾಣೆಯಿಂ ಪೊಯ್ಕಲ್ಕೆ (ಪಂಚತಂ. ೧೯-೧೩) ; ದುಷ್ಕೃತ ತಸ್ಕರನ ಪಿಡಿದಿರ್ಪ ಡಾಣೆ [ಪಾಠಾಂ. ದಾಣೆ]ಗಳರವಿಂದಾಕ್ಷಿಯರ್ (ಧರ್ಮಾಮೃ. ೭-೧೫೭) ; ಬನ್ನಿಯ ತರು ಡಕ್ಕೆಗೆ . . . ಚಿನ್ನಂಗಿಯ ತರು ಡಾಣೆಗೆ (ಕಮುದ. ೬ ಪ್ರಯೋ) ; ಕೊಡಲಿ ಕತ್ತಿ ಈಳಿಗೆ ಕುಡುಗೋಲು ಸುರಿಗೆಯಡ್ಡಾಯುಧ ಕುಠಾರ ಕೊಂತ ಡಾಣೆ ಮೊದಲಾದಾಯುಧಂಗಳ್ (ಹಸಾರ. ೬೩೭-೧೦) ; ಡಾಣೆ ಯಿಂದ ಕಂಡಕಂಡವರಿಡಲಿದಲ್ಲಿಂ ಕಾಲುಗೊಂಡೋಡೆ (ತೀಮಿ.ಶಿಂ. ೭-೧೧೦); ನೀವೆಮ್ಮ ಮನೆಯ ಹೊಗಬೇಡ ಹೊಕ್ಕೊಡೆ ಹಿಡಿದ ಡಾಣೆಯಿಂ ನಿಮ್ಮೆಲ್ಲರಂ ಬಡಿವೆನು (ಸಮ್ಯಕೌ. ೪-೪೭) ; ಗದೆ ದಂಡ ಡಾಣೆ ಕಬ್ಬಿನ ಕೋಲು . . . ಜವನ ದಾಡೆಗಳಿಂ (ಅನಂಚ. ೨೪-೨೭). **ದಾಣಾ** : (ಗು). ೩. ದಪ್ಪನೆಯ; ಸ್ಥೂಲ. 'ದಾಣಾದಡಿ' ಪರಾ. ದಾಣ್ಣೆ$_2$: ೧. "ಸರ್ವಲಾ, ತೋಮರಃ – ೨ ಮರದ ಸಿಳ್ಳೆ, ದಾಣಿ ಮುಂತಾದ ಆಯುಧಕ್ಕೆ ಹೆಸರು" (ಸಿದ್ಧಾಂತಿ. ೨೨೮). ದಾಣ್ಣೆ$_3$ : ೨. ಕತ್ತೆಯನು ದಾಣೆಯನು ಇಕ್ಕಿಯೆ ಉತ್ತಮಾಶ್ವವ ಮಾಡ್ವೆನೆಂದರೆ ಆಗುವುದೆ (ಜ್ಞಾಸಿಂ. ೧-೪೫). ೩. 'ದಾಣೆದಡಿ' ಪರಾ. [ ←ಮರಾ. ಥಾಣಾ ]

**ಥಾಣೆ$_2$** 'ದಾಣ$_2$' ನೋ.

**ಥಾನ** (ನಾ). (?) : ಮುತ್ತಿನ ಥಾನವ ಮೂಗು ನುಂಗಿತ್ತ ಕಂಡೆ ಕಂಗಳು ಹಸಿದು ವಜ್ರವ ನುಂಗಿತ್ತ ಕಂಡೆ (ಶರಗೊ. ೦೦೦-೦೪). [ ? ]

**ಥಾಲ** (ನಾ). = ಡಾಲು$_2$ ೧ : "ಡಾಲು–ಥಾಲ=ಅಡ್ಡಣ" (ಶದ್ಧಕೋ. ೦೬).

[ ಸಂ. ]

**ಥಾಲು$_1$** 'ಡಾಳ$_1$' ನೋ.

**ಥಾಲು$_2$** 'ಡಾಲು$_2$' ನೋ.

**ಥಾವಣ** 'ದಾವಣ$_2$' ನೋ.

**ಥಾವಣಗಿರಿ** (ನಾ). ಸಾಲಾದ ಬೆಟ್ಟ ; ಪರ್ವತಗಳ ಪಂಕ್ತಿ ; ಪರ್ವತ ಶ್ರೇಣಿ : ಗಿರಿಯ ಡೆಂಕಣಜಂತ್ರವನು ತರಹರಿಸುವವರಾಶರಸ ಥಾವಣ [ಪಾಠಾಂ. ಥಾರುಣ]ಗಿರಿಯ ಥಾಳಿಗೆ ಥಾತುಗೆಟ್ಟುದು ಪಾಂಡುಸುತ ಸೇನೆ (ಕುವ್ಯಾಕ. ೨೩-೩೭). [ ಥಾವಣ (<ದಾವಣ$_2$) + ಗಿರಿ$_1$ ]

**ಥಾವರಿಸು** 'ಡಾವರಿಸು' ನೋ.

**ಥಾಳ$_1$** 'ಡಾಳ$_1$' ನೋ.

**ಥಾಳ$_2$** 'ದವಳ$_1$' ನೋ.

**ಥಾಳ$_3$** 'ದಾಳ$_1$' ನೋ.

**ಥಾಳ$_4$** 'ದಾಳ$_2$' ನೋ.

**ಥಾಳಂಬಡೆ** (ಕ್ರಿ). ಪ್ರಕಾಶವನ್ನು ಪಡೆ ; ಬೆಳಗು ; ಉಜ್ವಲವಾಗು : ಜಲಜಲಿಸಿ ಥಾಳಂಬಡೆದುದಡವಿಗಿಚ್ಚು (ಸಮ್ಯಕೌ. ೦೦-೨೪).

[ ಥಾಳ$_1$ (<ಡಾಳ$_1$) + ಪಡೆ$_1$ ]

**ಥಾಳಕ** 'ಡಾಳಕ' ನೋ.

**ಥಾಳಕತನ** 'ಡಾಳಕತನ' ನೋ.

**ಥಾಳಕಿ** 'ಡಾಳಕಿ' ನೋ.

**ಥಾಳಯಿಸು** 'ಡಾಳಿಸು$_2$' ನೋ.

**ಥಾಳವಿಸು** 'ಡಾಳಯಿಸು$_1$' ನೋ.

**ಥಾಳಿಸು$_1$** 'ಡಾಳಯಿಸು$_1$' ನೋ.

**ಥಾಳಿಸು$_2$** 'ಡಾಳಿಸು$_2$' ನೋ.

**ಥಾಳು** 'ಡಾಳ$_1$' ನೋ.

**ಥಾಳೆ** 'ಡಾಳೆ' ನೋ.

**ಥಾಳೆಗೊಂಟಣೆ** (ನಾ). ವಂಚಕಿಯಾದ ಕುಂಟಣೆ : ಮತ್ತಮಾ ಭೋಗಿನಿ ಗೃಹಮಾಲೆಯೊಳಾಳಾಪಿಸುವ ಥಾಳೆಗೊಂಟಣೆಯರಾಳಾಪವಂ (ಮಹಾನೀ. ೦೪-೮೫ ವ). [ ಥಾಳೆ (<ಡಾಳೆ) + ಕೊಂಟಣೆ (<ಕುಂಟಣೆ) ]

**ಥಾಳೈಸು** 'ಡಾಳಯಿಸು$_1$' ನೋ.

**ಥಿಕ್ಕಿ** 'ಡಿಕ್ಕಿ' ನೋ.

**ಢಿಕ್ಕಿಯಾಡು** (ಕ್ರಿ): ಡಿಕ್ಕಿಹೊಡೆಯುವ ಆಟವನ್ನು ಆಡು; ಡಿಕ್ಕಿ ಹೊಡೆ: ನೂರು ಮದ್ದಾನೆಗಳು ಇರುಳ ಬಾನಿಗೆ ನುಗ್ಗಿ ಢಿಕ್ಕಿಯಾಡಿವೆ (ನೆಲಮು. ೫೯-೫). [ಢಿಕ್ಕಿ (<ಡಿಕ್ಕಿ) + ಆಡು$_1$ ]

**ಢಿಕ್ಕಿಹೊಡೆ** 'ಡಿಕ್ಕಿಹೊಡೆ' ನೋ.

**ಢಿಳ್ಳ, ಡಿಲ್ಲ, ಡಿಳ್ಳ, ಡಿಳ್ಳು, ಡೀಲ, ಡೀಲು, ದಿಳ್ಳ** (ನಾ). ೧. ಶಿಥಿಲತೆ; ಸಡಿಲು: ಬಲ್ಲಾಳ್ಗಳ್ ಬೀಟ್ವುದುಂ ಕೋಂಟೆ ಢಿ[ಪಾಠಾಂ. ಡಿ]ಳ್ಳ ಮಾದೊಡಳ್ಳಿರ್ದ್‌ಗಳ್ ಕೆಲಬರ್ ಬಾಳಂ ಬಿಟ್ಟು ಬಾಟನಾಸೆಗೆಯ್ಕೆಯುಂ (ಶಾಶ್ವ ೯ಪು. ೬-೦೫೩ ಪ). **ಡಿಲ್ಲ:** ೨. ಸುಲಭವಾಗಿ ತಿಳಿಯಲು ಶಕ್ಯವಿಲ್ಲದುದು; ಕ್ಲಿಷ್ಟವಾದುದು: ಡಿಲ್ಲವಹ ವೇದಾಂತದರ್ಥವ ಸೊಲ್ಲಿಸಲುಂ ಸೂರಿಗಳ ವಾರ್ತೆಯನೆಲ್ಲ ಮನುಜರು ದಾಂಟದಂದದವಿರ್ದು ದುಶ್ತರವು (ನಿಘಾಗ. ೧೧-೩೮-೩೮). **ಡಿಳ್ಳ:** ೧. ಜಲಪಕ್ಷಿಯುಂ ಜಟಿದು ನಾಣ್ನೆಟಿ ಡಿಳ್ಳಮನ್ನೈದೆ ನಲ್ಮೆಯಿಂ ಮಿಸುಪಧರಾಗ್ರಮಂ ಸವಿದಳಂಗನೆ (ದಶಕು. ೬-೦೫೭). ೩. ದಿಗಿಲು; ಭಯ; ಹೆದರಿಕೆ; ತಳ್ಳಂಕ; ಅಧೈರ್ಯ: "ಡಿಳ್ಳ[ಪಾಠಾಂ. ದಿಳ್ಳ]ಮೆನಲ್ ತಲ್ಲಣಮದು" (ಭಾರವಿ. ೫೭). ೪. "ಬರಡು; ವ್ಯರ್ಥ" (ಸಿರಿಕೋ. ೩೦೧). ೫. ಅಧೈರ್ಯವುಳ್ಳುದು; ಕೈಲಾಗದುದು; ಭಯಗೊಂಡುದು: ನೀ ನಗುವವೋಲ್ನವ್ಮೊಳಗು ಡಿಳ್ಳವೆ ರಪಣವಿದೆಲಾ ಬಹಳ ಭಂಡಾರ (ಕುವ್ಯಾಸ. ೧೪-೩). **ಡಿಳ್ಳು:** ೩. 'ಡಿಳ್ಳುಹೋಗು' ಪರಾ. **ಡೀಲ:** ೧. ಸಡಿಲವಾದ; ಡೀಲಬಿಟ್ಟ (Slack. ಇಂಕನಿ.). **ಡೀಲು:** ೧. "ಡೀಲು – ಸಡಿಲು" (ಜಾನಕೋ. ೬೩). **ದಿಳ್ಳ:** ೩. "ದಿ[ಪಾಠಾಂ. ಡಿ]ಳ್ಳಮೆನಲ್ ತಲ್ಲಣಮದು" (ಭಾರವಿ. ೫೭).

**ಡಿಳ್ಳಮಾಗು, ಡಿಳ್ಳವಾಗು** = ೧. ದುರ್ಬಲವಾಗು; ಶಕ್ತಿಗುಂದು: ನಡೆ ತಡವಾಗೆ ನುಣ್ನುಡಿ ತೊದಳ್ವೊಳ್ಗೆ ಝೊಂಪಿಸೆ ಕೆಂಪನಾಳ್ದು ಕಣ್ನುಡಿ ತನು ಡಿಳ್ಳಮಾಗೆ ಮಧುಪಾನ ವಿನೋದದಿನಾದ ಸೋಂಕು ಚೆಲ್ವಿಡಿದಿರೆ ಬರ್ಪ ಗೋಷ್ಠಿ (ಸೂಕ್ತಿಸು. ೮೩-೫). ೨. ಅಧೈರ್ಯಗೊಳ್ಳು; ಬೆದರು; ಗಾಬರಿಯಾಗು: ನೋಡು ಲಕ್ಷ್ಮಣ ದುರ್ನಿಮಿತ್ತಂಗಳಂ ಪಥದೊಳು ಡಿಳ್ಳಮಾದಪುದೀಗಳೆನ್ನ ಮನಂ (ಜೈಮಿಭಾ. ೦೯-೩); ಪೂಗೊಳಲೆಂದು ಬಂದ ವಿಟಸಂತತಿಯುಳ್ಳಿರ್ದ ಡಿಳ್ಳವಪ್ಪಿನಂ ಪೂಗಣೆಯುರ್ಚೆ ಮೂರ್ಛೆಗೊಳಗಾಗಲೊಡಂ(ದಶಕು. ೧-೪೦). ೩. ಅಸಮರ್ಥವಾಗು; ವ್ಯರ್ಥವಾಗು: ಡಿಳ್ಳಮಾದುದೆ ಯೌವನಾಶ್ವ ಭೂಪತಿಯ ಬಲಂ (ಜೈಮಿಭಾ. ೪-೩೦); ಝಲ್ಲೆಂದ ಹೃದಯದ ಜೊಳ್ಳುನಾದವ ಕೇಳಿ ಡಿಳ್ಳವಾಯಿತು ಬಾಳು ನಾನೆಂದೆನೇ (ಸಣೀಗೀ. ೪೦-೮೧೪). ೪. ಸಡಿಲವಾಗು: ಅಮರ್ದ ಕಂಚುಳಿಕೆ ಪೆರ್ಮೊಲೆಯಾಕೆಗೆ ಡಿಳ್ಳವಾಗಲ್ವೊಡವುಗಳಟ್ಕಟಿಂದುಲಿಯಲ್ (ನಳಚಂ. ೪೭೭). [ <ಪ್ರಾ. ಢಿಲ್ಲ. / ಮರಾ. ಢಿಲ್, ಢಿಲಾ, ಢೀಲ್ ]

**ಢಿಳ್ಳಾಯ** 'ಡಿಳ್ಳಾಯ್$_1$' ನೋ.

**ಢೀಗು, ಡೀಗು** (ನಾ). ಹೊರೆ; ರಾಶಿ; ಸಮೂಹ: ಕೆಳಗೆ ಮೇಲೆ ಸಾಮಾನಿನ ಢೀಗು (ಅನ್ನ. ೧೦೩); ಫೈಲುಗಳ 'ಢೀಗಿ'ನ ಕೆಳಗೆ ಸಿಕ್ಕುಬಿದ್ದ (ಜೀಪಾಠ. ೪೯). **ಡೀಗು:** ಕುಳ್ಳಿನ ಡೀಗ ತಂದು ಅಗಸಿ ಮುಂದಿನ ಬಯಲೆಲ್ಲ ತುಂಬಿ ಬಿಡತೇವು (ಗ್ರಾಮಾಯ. ೩೨೯). [ ←ಮರಾ. ಢೀಗ್ ]

**ಢುಲಿ** (ನಾ) =ಡುಲಿ: "ಕಮಠೀ, ಢುಲೀ – ೨ ಹೆಣ್ಣು ಆಮೆ ಪೆಸರುಗಳು, ಅಂದರೆ ಸ್ತ್ರೀಕೂರ್ಮ" (ಸಿದ್ಧಾಂತಿ. ೭೫). [ ಸಂ. ಢುಲೀ ]

**ಢೆಂಕಣ** 'ಡೆಂಕಣಿ' ನೋ.

**ಢೆಂಕಣಿ** 'ಡೆಂಕಣಿ' ನೋ.

**ಢೆಂಕೆ** 'ಡಕ್ಕೆ' ನೋ.

**ಢೆಂಢೆಣಿಸು** 'ಟೆಂಟಣಿಸು' ನೋ.

**ಢೇಂಕಣಿ** 'ಡೆಂಕಣಿ' ನೋ.

**ಢೇಂಕಣೆ** 'ಡೆಂಕಣಿ' ನೋ.

**ಢೊಂಕಣಿ** 'ಡೊಂಕಣಿ' ನೋ.

**ಢೊಕ್ಕರ** 'ಡೊಕ್ಕರ$_2$' ನೋ.

**ಢೊಣೆ** 'ದೊಣೆ$_1$' ನೋ.

**ಢೋಂಗಿ, ಡೋಂಗಿ, ಡೋಂಗು, ಢೋಂಗು** (ನಾ). ಮೋಸ; ಸುಳ್ಳು; ವಂಚನೆ: ಅನೇಕರ ಹಾಗೆ "ಢೋಂಗೀ ಬ್ರಹ್ಮಚಾರಿ" ಯಾಗಿರಲಿಲ್ಲ (ನಾಪೋಲೀ. ೩೫೭); ಅನ್ನವಿಲ್ಲದೆ ಸಾಯುತ್ತಾಳಂತೆ. ಪ್ರಭೂ, ಇದೆಲ್ಲವೂ ಢೋಂಗಿ ಢೋಂಗಿ ಡೋಕಾರಿ (ಹನ್ನೊಂದ. ೬೫). **ಡೋಂಗಿ:** ನಮ್ಮ ಹತ್ತಿರ ನಿಮ್ಮ ಡೋಂಗಿ ತೆಗೀತೀರಾ (ಜಂಗೂಲಿ. ೯). **ಡೋಂಗು:** ಪಕ್ಕಾಸುಳ್ಳು, ಢೋಂಗು, ವಿಪರೀತ ಸುಳ್ಳು (Rouser. ಇಂಕನಿ.). **ಢೋಂಗು:** ಈ ಢೋಂಗು ನಮ್ಮ ಮುಂದೆ ನಡೆಯುವಂತಿಲ್ಲ (ಹುಚ್ಚಾಟ. ೪೦); ನಾನು ನಿಮ್ಮಂತೆ ಈ ಢೋಂಗಿಗೆ ಮೋಸ ಹೋಗುವವಳಲ್ಲ (ಸ್ವಚ್ಛಚಿ. ೩೨೯); ಆದರ ಬರೇ ಢೋಂಗ ಮಾಡತೀದಿ ಆತು (ಮಿಂಚಿಹು. ೮೫); ನಿನ್ನ ಮನಸಿನಾಗೂ ಎಲ್ಲಾ ಅದೇ ಮದವೀ ಮಾಡಿಕೊಬೇಕು ಅಂತ. ಆದರ ಬರೇ ಢೋಂಗ ಮಾಡತೀದಿ (ತಿರುಗು. ೩೯); ತೀರ ಮರಥಾವ್ರಂಗ ಢೋಂಗ ಮಾಡತೀ (ದೀಪಹ. II, ೧೭೦).

**ಡೋಂಗಿ ಹೊಡೆ** = ಸುಳ್ಳುಹೇಳು: ನನ್ನ ಮುಂದೆ ಡೋಂಗಿ ಹೊಡೆಯ ಬೇಡ (ರೂಢಿ). **ಢೋಂಗಿ ಬಿಡು, ಡೋಂಗಿ ಬಿಡು** = ಡೋಂಗಿಹೊಡೆ: ಬಹಳ ದೊಡ್ಡ ವಿದ್ವಾಂಸರು ಎಂದು ಯಜಮಾನರು ಒಂದು ಢೋಂಗಿ ಬಿಟ್ಟರು (ನವನೀ. ೬೧); ಹುಡುಗರು ಡೋಂಗಿ ಬಿಡುತ್ತಿದ್ದಾರೆಯೋ ಏನೋ ನೋಡಬೇಕೆಂದು ದೇವಯ್ಯ ಅವರೆಲ್ಲರ ಕೈಗಳನ್ನೂ ಮೂಸಿ ಮೂಸಿ ಹುಬ್ಬೇರಿಸಿ ಕಣ್ಣರಳಿಸಿ ಬೆರಗಾದನು (ಮಲೆಮ. ೫೧೬).
[ ←ಹಿಂ. ಮರಾ. ಢೋಂಗೀ, ಢೋಂಗ್ = ಕಪಟಿ, ಮೋಸಗಾರ ]

**ಢೋಂಗು** 'ಢೋಂಗಿ' ನೋ.

**ಢೋಕಾ** 'ಧೋಕಾ' ನೋ.

**ಢೋರ** 'ಡೋಹರ' ನೋ.

**ಢೋಲಕೆ** (ನಾ) =ಡೋಲಕ: ತಾಳ, ಢೋಲಕಗಳ ಗಡಚಿಕ್ಕುವ ಅವಾಜಿನಲ್ಲಿ ಮಾಸ್ತರರ ದನಿ ಅವರಿಗೆ ಕೇಳಿಸಲಿಲ್ಲ (ಮೂರುದಾ. ೭೩).
[ ಸಂ. ಢೋಲಕ ]

**ಢೋಲು** 'ಡೋಲು' ನೋ.

**ಢೋಳು** 'ಡೋಲು' ನೋ.

*

**ಣ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತೈದನೆಯ ಅಕ್ಷರ. ೨. [ಗಣಿತ]ಐದು ಎಂಬ ಸಂಖ್ಯೆಯ ಸಂಕೇತ : "ಜಣಮಶಮದ್ಯೈದು" (ಮಂಗರಾ. ೧೧೪-೧೧).

**ಣಕಾರ** (ನಾ). ಣ ಎಂಬ ಅಕ್ಷರ : ಭಿನ್ನಪದದೊಳಂ ಸಮಾಸ ಪದದೊಳಂ ಣಕಾರಕ್ಕೆ ಪರಮಾದ ನಕಾರಂ ಣಕಾರಮನೆಯ್ದುಗುಂ (ಶಮದ. ೧೫೮ ವೃತ್ತಿ). [ ಸಂ. ]

**ಣತ್ವ** (ನಾ). = ಣಕಾರ : ಸಂಧಿಸಿದ ನಕಾರಂ ಣತ್ವಂ ಪ್ರಸಿದ್ಧಂ (ಶಮದ. ೧೫೮). [ ಸಂ. ]

**ಣಮೋ** (ನಾ). ನಮಸ್ಕಾರ; ವಂದನೆ : ಣಮೋ ಸಿದ್ಧಾಣಂ ಣಮೋ ಅರಿಹಂತಾಣಂ (ಜೀವಲ. ೫೯-೫).

**ಣಮೋಣಮೊ** (ದ್ವಿರುಕ್ತಿ) : ಣಮ್ಮಣ ಣಮ್ಮಣ ಶಬ್ದದಿಂ ಕೂಡಿದ ವೀರಣಮ ನುಡಿಸುತೆ ಸಭೆಯೊಳಗೆ ಣಮೋಣಮೊಯೆಂಬ ಪ್ರಾಕೃತರ ನೀಕ್ಷಿಸುವ ಪ್ರಣಮರೂಪ ನಿನಗೆಣಗುವೆನು (ಶತಸಾಂ. ೭೦-೫೭). [ <ಪ್ರಾ. ಣಮೋ ]

**ಣಮೋಕಾರ** (ನಾ). ನಮಸ್ಕಾರ : ಕೇಳಿದಿರೊ ದಿವ್ಯಧ್ವನಿ ಜೀವದ ಣಮೋಕಾರ ಕನ್ನಡದ ಟಂಕಾರ : ಧರ್ಮಸಾರ (ಜೀವಲ. ೫೯-೮). [ <ಪ್ರಾ. ಣಮೋಕ್ಕಾರ ]

**ಣಾಂತ** (ನಾ). ಣಕಾರವು ಕೊನೆಯಲ್ಲಿರುವ ಶಬ್ದ : ನೆಗಟ್ದಿರ್ದ ರೇಫಷಟನಾಂತಗಾಂತಸಾಂತೋತ್ವದಿದಿರ ವತ್ವಂ ಪತ್ವಂ ಪುಗುಗುಂ . . . ನಾಂತ ಣಾಂತಂ ಬತ್ವಂ (ಶಮದ. ೨೬೨). [ ಣ + ಅಂತ$_2$ ]

*

# ತ

**ತ$_1$** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತಾರನೆಯ ವರ್ಣ; ತಕಾರ. ೨. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ : " ಚತಷ ಮಾಜು" (ಮಂಗರಾ. ೧೧೪-೧೧). ೩. [ಛಂದ] ಅಕ್ಷರಗಣಗಳಲ್ಲಿ ಒಂದು; ಎರಡು ಗುರು ಮತ್ತು ಒಂದು ಲಘುವುಳ್ಳ ಗಣ; ತಗಣ: (– – ∪) ; ಮಯರಸತಜಭನೆಲಗವಿನಿಚಯಮೆಂಬಿವು ನಿಯಮದಿಂ ಗಣಾಕ್ಷರಮಕ್ಕುಂ (ಛಂದೋಂಬು. ೧-೩೭).

**ತ$_2$** (ಪ್ರ). ಒಂದು ಕೃದಂತ ಭಾವನಾಮ ಪ್ರತ್ಯಯ : ತಕಾರಕ್ಕೆ- ಅಟಿತಂ, ಕಡಿತಂ, ಉಟಿತಂ (ಶಮದ. ೨೦೦ ಪ್ರಯೋ).

**ತಉಡಿಮಾನ್ಯ** (ನಾ). ಒಂದು ಬಗೆಯ ಮಾನ್ಯ : ವೀರ ಪಞ್ಚಾಳ ವಿತ್ತಿಯೊಳ ಆರು ಸತ್ತಡು ತಉಡಿಮಾನ್ಯ ಆ ನಾ × × ಳುವ ದೇವರ ಮಕ್ಕಳಿಗೆ ಸಲುವಉದು ಮಕ್ಕಳಿಲ್ಲದಿದ್ದಡೆ ಅಣ್ಣ ತಮ್ಮಂಗೆ (ಎಕ. IX, ಕಾನಕಾ. ೮೦-೧೧ ; 1306). [ <ತವುಡಿ$_1$ + ಮಾನ್ಯ ]

**ತಂ$_1$** 'ತಣ್$_2$' ನೋ.

**ತಂ$_2$** (ನಾ). [ಸಂಗೀತ] ಒಂದು ಗೀತಾಕ್ಷರ : ತಂ ಹ ಯ ಎ ಆ ದ ತಿನ ನಿತ ನಿತ ಗೀತಾಕ್ಷರೋಪಲಕ್ಷಿತಮುಂ ಗಮಕರಮಣೀಯಮುಮಂ ನಿಖಿಳಗೀತ ವಸ್ತ್ವಾದಿರೂಪಮುಮಪ್ಪಾಲಾಪಿಯೊಳಂ (ಚಂದ್ರಪ್ರ. ೧೫-೭೨ ವ). [?]

**ತಂಗಡಲೆ** (ನಾ). ಹಸಿ ಕಡಲೆ; ನೆನೆದ ಕಡಲೆ : ತಂಗಡಲೆಯ ಮೆಯ್ಸಿ ನೀರನೂಡಿಸುತೆ ವಿಹಂಗ ಸಂತೋಷದಿ ತಮ್ಮ ಪುಂಗಟ್ಟದ ಮುದ್ದು ಮಱಿಗಳ್ಗೆ ಗುಟುಕೀಯೆ (ಮೋಹತ. ೪-೧೯). [ತಂ$_1$ (<ತಣ್$_2$)+ಕಡಲೆ]

**ತಂಗಡಿ, ತಗಟೆ** (ನಾ). ಗೊಂಚಲು ಗೊಂಚಲಾಗಿ ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಕುರುಚಲು ಗಿಡ ; ಆವರಿಕೆ ಗಿಡ ; ಹೊನ್ನಾವರಿಕೆ : ಪಳಸಂತತಿಯಿಂದೊಲೆದುಯ್ಯಲಾಡಿ ತೂಗಾಡುವ ತೆಂಗು ತಂಗಡಿಗಳಂ ಬೆಳದಿದ್ದ ಸುಗಂಧ ಸಾಳಿ ನಾಡಾಡಿಯರೂಡಿಯರ್ಗ್ಗಳೆವಲ್ಲದು ಮೊಪ್ಪುವ ಹೊನ್ನವಳ್ಳಿ ತಾಂ (ಎಕ. XII, ತಿಪಟೂ. ೧೨೮-೫೮ ; 1202) ; ತಂಗಡಿಹೂವ ಸುಟ್ಟು ಕರಕು ಮಾಡಿ ಹುಣ್ಣಿಗೆ ಮೇಲೆ ಹಾಕುವುದು (ವಿವೈವಿ. ೧೭೫) ; ಗದ್ದೆ ಅಡಕೆತೋಟ ತೆಂಗು ತಂಗಡಿಯ ಭೂಮಿ ಪುಷ್ಪದ ತೋಟದ ಭೂಮಿ . . . ನಾಲು ಮಹತ್ತಿನ ಮಟಕ್ಕೆ ಸಿಪಾರ್ಪಿತವಾಗಿ ಕ್ರೊಟ್ಟೆಉ (ಎಕ. XIV, ಎಳಂದೂ. ೭೩-೩ ; ?). **ತಗಟೆ** : ಪಲ್ಲವ ಸತ್ತಿಗೆಯವನಲ್ಲ ತಗಟೆ[ಪಾಠಾಂ. ಟೆ]ಯ ಬಲ್ಲೆಯದವನಲ್ಲ . . . ನೃಪನು (ಮದೇಪು. ೨೦-೫೯); ಒಂದು ತಗಟೇಗಿಡವ ಊರಲು ಒಂದು ಜತೆ ಘನ ಅಮೃತ ಹಸ್ತವ ಕಳುಹೊ ದೇವಾ (ಅರರೋ. ೨). [ ದೇ.; ತೆಲು. ತಂಗೆಡು, ತಂಗೇಡು ]

**ತಂಗಣೆ** (ನಾ). ತಂಗುವಿಕೆ; ಉಳಿದುಕೊಳ್ಳುವುದು: ಮೊದಲ ತಂಗಣೆಯ ಅವಧಿಯಲ್ಲಿ ನೆಕ್ಲದೋಪ್ ಮತ್ತು ಕಾತ್ಯೂಷಾರ ಬಾಂಧವ್ಯ ಹೀಗೆಯೇ ಬೆಳೆಯಿತು (ಪುನರು. ೫೮) ; ಪೀಟರ್ಸ್‌ಬರ್ಗ್ ನಗರದಲ್ಲಿ ಅವನ ತಂಗಣೆಗೆ ಆ ದಿನ ಕೊನೆಯ ಗಡುವಾಗಿತ್ತು (ಪುನರು. ೩೮೪). [ ತಂಗು$_1$ + – ಅಣೆ$_4$ ]

**ತಂಗದಿರ್** 'ತಣ್ಗದಿರ್' ನೋ.

**ತಂಗದಿರ** 'ತಣ್ಗದಿರ' ನೋ.

**ತಂಗದಿರದಲೆಯ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಚಂದ್ರಶೇಖರ; ಶಿವ: ಗೋತ್ರಸುತೆ ದಯಾಪಾಂಗದಿಂ ನೋಡಿ ತಕ್ಕೈಸುತ್ತ ತಂಗದಿರದಲೆಯನಿಂಗಿತವನಱಿದು (ಪ್ರಾಭರಾ. ೬-೭೨). [ ತಂಗದಿರ (<ತಣ್ಗದಿರ) + ತಲೆ$_1$ + – ಅ$_7$ ]

**ತಂಗದಿರ್ಗಲ್** 'ತಣ್ಗದಿರ್ಗಲ್' ನೋ.

**ತಂಗದಿರ್ವಕ್ಕಿ** 'ತಣ್ಗದಿರ್ವಕ್ಕಿ' ನೋ.

**ತಂಗದಿರ್ವಟ್ಟ** (ನಾ). ತಂಪಾದ ಕಿರಣಗಳ ಮಂಡಲವುಳ್ಳವನು; ಚಂದ್ರ: ಅದಟಿಂದಡಸಿ ಪಿಡಿದು ತಂಗದಿರ್ವಟ್ಟನ ಲೇಖೆಗರ್ಚಿ ಧರೆಗಿಟಿವ ವಿಧುಂತುದನೆನೆ ಘೀಟಿಡುತುಂ ಬಿರ್ದುದು ನಿಡುಗೋಡೂಜಿ ಮತ್ತ ಕುಂಜರನಾಗಳ್ (ಉದ್ಭಟ. ೨-೫೮) ; ತಂಗದಿರ್ವಟ್ಟನಿಂಗದಿರ್ದೊಂಗಲಂ ಪಿಂಗದೆ ಕಡಿದು ಕಂಡರಸಿ ಕರುವಿಟ್ಟು ಪೊಂಗಿ ತೂಳ್ವ ಬೆಳ್ವೆಳಗನುಗುಟ್ವೆಳೆ ಮುತ್ತಿನ ಮಾಡುವೆಟ್ಟುಗಳಿಂ ವಿರಾಜಿಪುದ್ಯಾನಮಂ (ಉದ್ಭಟ. ೯-೩೦ ವ). [ ತಂಗದಿರ್ (<ತಣ್ಗದಿರ್) + ಬಟ್ಟು$_1$ (<ಬಟ್ಟ$_1$) + – ಅ$_7$ ]

**ತಂಗರಗ** 'ತಣ್ಗರಗ' ನೋ.

**ತಂಗಲ್** 'ತಣ್ಗಲ್' ನೋ.

**ತಂಗಲು** (ನಾ). ಹಸಿ ; ಒದ್ದೆಯಾಗಿರುವಿಕೆ ; ತೇವ.

**ತಂಗಲ ಭೂಮಿ**=ನೀರುಂಡ ಭೂಮಿ ; ತೇವವುಳ್ಳ ನೆಲ : ಅಂಡಜವೆಂದು ತತ್ತಿಯಲ್ಲಿ ಹುಟ್ಟುವ ಪ್ರಾಣಿಗಳು . . . ಉದ್ಭಿಜವೆಂದು ತಂಗಲ ಭೂಮಿಯಲ್ಲಿ ಹುಟ್ಟುವ ಪ್ರಾಣಿಗಳು ಜರಾಯುಜವೆಂದು ಮಾಸಿನಲ್ಲಿ ಹುಟ್ಟುವ ಪ್ರಾಣಿಗಳು ಈ ನಾಲ್ಕು ಪ್ರಕಾರದಲ್ಲಿ ಹುಟ್ಟುವ ಎಂಭತ್ನಾಲ್ಕು ಲಕ್ಷ ಜೀವರಾಶಿಗಳು (ಗಣಿಭಾ. ೪೮-೧).

[ ತಂ$_1$ (<ತಣ್$_2$) + – ಕಲು$_2$ (< – ಕಲ್$_4$) ]

**ತಂಗಲ್ಲು** 'ತಣ್ಗಲ್' ನೋ.

**ತಂಗಳನ್ನ** (ನಾ). ೧. ಆರಿದ ಅನ್ನ; ತಣ್ಣಗಾದ ಅನ್ನ. ೨. ಹಿಂದಿನ ದಿವಸ ಮಾಡಿದ ಅನ್ನ : ರಾತ್ರಿ ಊಟಮಾಡಿ ಉಳಿದ ತಂಗಳನ್ನವನ್ನು ಬೆಳಗ್ಗೆ ತಿಂದು ಎಲ್ಲರೂ ಹೊರಟರು (ರಕ್ತರೂ. ೬೦).

[ ತಂಗಳು (<ತಣ್ಗೂಟ್) + ಅನ್ನ$_3$ ]

**ತಂಗಳು** 'ತಣ್ಗೂಟ್' ನೋ.

**ತಂಗಳುತತ್ತ್ವ** (ನಾ). (ಅಲಂ)ಕೇಳಿ ಕೇಳಿ ಹಳೆಯದಾದ ನಿಷ್ಪ್ರಯೋಜಕ ತತ್ತ್ವ; ಗೊಡ್ಡುತತ್ತ್ವ : ನಾವು ತಿಳಿಯುವುದೊಂದು ದೈವ ಬಗೆಯುವುದೊಂದು ಎಂದು ಅವಳಿಗೆ ಮುದುಕಿ ತಂಗಳುತತ್ತ್ವವನ್ನು ಉಪದೇಶಿಸಿದ್ದಳು (ಹಳ್ಳಿಹಾ. ೯೯). [ ತಂಗಳು (<ತಣ್ಗೂಟ್) + ತತ್ತ್ವ$_1$ ]

**ತಂಗಳುತತ್ತ್ವಜ್ಞಾನ** (ನಾ).=ತಂಗಳುತತ್ತ್ವ : ಊರವರು 'ಒಳ್ಳೆಯವರಿಗೆ ದೇವರು ಕಷ್ಟ ಕೊಡುವುದು ಹೆಚ್ಚು' ಎಂದು ತಂಗಳುತತ್ತ್ವಜ್ಞಾನ ಹೇಳುವಂತಾಯಿತು (ಕಂಬಹು. ೧೧೯). [ತಂಗಳು (<ತಣ್ಗೂಟ್)+ತತ್ತ್ವಜ್ಞಾನ]

**ತಂಗಳುಹಿಟ್ಟು** (ನಾ). ಹಿಂದಿನ ದಿವಸ ಮಾಡಿದ ರಾಗಿಮುದ್ದೆ; ಆರಿದ ಹಿಟ್ಟು : ತಂಗಿ ಬಡವಳಾದರೆ ತಂಗಳುಹಿಟ್ಟಿಗೂ ಗತಿಯಿಲ್ಲವೇ ? (ಗಾದ).

[ ತಂಗಳು (<ತಣ್ಗೂಟ್) + ಹಿಟ್ಟು$_1$ (<ಪಿಟ್ಟು) ]

**ತಂಗಳೂಟ** (ನಾ). ಹಿಂದಿನ ದಿವಸ ಮಿಕ್ಕ ಅನ್ನದ ಊಟ; ತಂಗಳನ್ನದ ಊಟ : ಸೂರ್ಯನು ನಾಲ್ಕಾಳುದ್ದ ಮೇಲಕ್ಕೇರಿದನು. ತಂಗಳೂಟದ ಹೊತ್ತಾಯಿತು (ಜಂಗಾಳ್ಮ. ೨೪); ದ್ಯಾವಮ್ಮಂದು ಇನ್ನೂ ತಂಗಳೂಟ ಆಗಲಿಲ್ಲವ ? (ಹೊಸಕ್ಷ. ೪೮). [ ತಂಗಳು (<ತಣ್ಗೂಟ್) + ಊಟ ]

**ತಂಗಟ್** 'ತಣ್ಗೂಟ್' ನೋ.

**ತಂಗಾನ** (ನಾ). ತಂಪಾದ ಕಾಡು : ಅಂದಿನ ಹೂಗಳಿಲ್ಲ ನಲಿವಕ್ಕಿಗಳಿಲ್ಲ, ಕೊಳಂಗಳಿಲ್ಲ ತಂಗಾನಗಳಿಲ್ಲ (೧೪ವಿಂ. ೦೦೮-೧).

[ ತಂ$_1$ (<ತಣ್$_2$) + ಕಾನ$_1$ (<ಕಾನ್) ]

**ತಂಗಾರ** (ನಾ). ಹಿತಕರವಾದ ಕಾರ : ವೀಳೆಯದೆಲೆ ಗಿಂಡಿ ತಂಗಾರದಡಕೆಲೆ [ಪಾಠಾಂ. ಮಡುಪನು ಕೊಡುತಿಹ ಕೆಲ]ಯೂಳಿಗ ಪದ್ಮಿನಿಯರಿಗೆ ಕಾಳಂಜಿ ಕೈದುವ ಹಸ್ತಿನಿಯರು ಪಿಡಿದೋಲೈಸಲೆಸೆದನಾ ಮದನ (ಭರಚ. ೪೬-೬೦). 'ತಣ್ಗಾಚು' ಪರಾ. [ ತಂ$_1$ (<ತಣ್$_2$) + ಕಾರ$_2$ ]

**ತಂಗಾಲ** (ನಾ). ತಂಪಿನ ಕಾಲ; ಚಳಿಗಾಲ; ಮಾಗಿಯ ಕಾಲ : ಮಾಟ ಕೂಟವೆಂಬ ಹೊಲದಲ್ಲಿ ಪಾಪಪುಣ್ಯವೆಂಬ ಬೀಜದ ಬಿತ್ತಿಕೆಲ್ಲ ತಂಗಾಲಕ್ಕೆ ಬೆಳೆದು ಮಳೆಗಾಲಕ್ಕೆ ತಗ್ಗಿ ಹೊಲದ ಒಳಹರಿಯಲ್ಲಿ ಜಲ ನಿಂದು ಹೋಯಿತ್ತು (ವೋಳಿವಾ. ೧೦೪-೪೦೩). [ ತಂ$_1$ (<ತಣ್$_2$) + ಕಾಲ ]

**ತಂಗಾಳಿ** 'ತಣ್ಗಾಳಿ' ನೋ.

**ತಂಗಿ$_1$** 'ತಂಗೆ' ನೋ.

**ತಂಗಿ$_2$** 'ತಗ್ಗಿ' ನೋ.

**ತಂಗಿಲ್ವಾಸು** (ನಾ). ಉಪಯೋಗಿಸಿದ ಹಾಸುಗೆ ; ಹಾದರದ ಶಯ್ಯೆ : ನೋಟದೊಳೊಬ್ಬನ ನೆಟಿ ಚೇಟಿಯಿಂದೊಬ್ಬನ ಬರಿಸಿ ನೀಟನ ಮನ ತಂಗಿಲ್ವಾಸೊಳು ವಂಚನೆ ಕೂಟದ ಹೆಂಗಳೊಪ್ಪಿದರು (ಕಂನವಿ. ೬-೧೨೪).

[ ? + ಪಾಸು$_2$ ]

**ತಂಗಿಸು** (ಕ್ರಿ). ತಂಗುವಂತೆಮಾಡು ; ವಿಶ್ರಮಿಸುವಂತೆ ಮಾಡು ; ನೆಲಸುವಂತೆ ಮಾಡು ; ನಿಲ್ಲಿಸು : ಬೆಂಗದಿರ ರಕ್ತಿಯನು ತಂಗದಿರ ಸಕ್ತಿಯನು ತಂಗಿಸಿತೊ ಮಳೆ ಮಂಜಿನೊಲವ ಮಧುರಾಮ್ಲದೊಳು (ಸೌಂದಸ. ೩೩); ತಂಗಿಯ ಮನೆಗೆ ಹೋಗಿ, ತಂಗದೆ ಹೋಗುತಿದ್ದಾನೆ. ಆದುದರಿಂದ ತಂಗಿಸಿಕೊಡು (ಹಳ್ಳಿಬಾ. ೩೨); ಎರಡು ದೊಡ್ಡ ನಿಲುವುಗನ್ನಡಿಗಳನ್ನು ಅಲ್ಲಿ ಗೋಡೆಗೆ ತಂಗಿಸಲಾಗಿತ್ತು (ಹೇಮಂತ. ४०೬).

[ ತಂಗು$_1$ + – ಇಸು$_3$ ]

**ತಂಗು$_1$** (ಕ್ರಿ). ಇಳಿದುಕೊಳ್ಳು ; ಉಳಿ ; ಇರು ; ನಿಲ್ಲು ; ವಸತಿ ಮಾಡು: ಬಿಡದಿಯ ಮನೆಯಲ್ಲಿ ಬೀಗರು ತಂಗಲು ಏರ್ಪಾಡುಗಳಾಗಿದ್ದುವು (ಭೂಕಾಂತ. ೬೪); ಸಂಜೆಗೆಂಪಿನ ಹೂವು, ಕಂಗಳು ತಂಗುವ ಸೊಗಸಿನ ರೇವು (ಮೋಂದಳಿ. ೧೨-೫); ಒಳ್ಳೆಯ ಹವೆಗಾಗಿ ಕಾಯುತ್ತಾ ಇಲ್ಲಿ ಆರು ತಿಂಗಳು ತಂಗಬೇಕಾಯಿತು (ಪ್ರವಾಇ. II, ೧೯೧).

[ ದೇ.೫ ತಮಿ. ತಙ್ಕು; ಮಲ. ತಙ್ಙು; ತೆಲು. ತಕ್ಕು; ಕೊಲಾ. ನಾಯ್ಕಿ. ತಕ್ ]

**ತಂಗು$_2$** (ನಾ). ೧. ಉಳಿಯುವುದು ; ಬಿಡಾರ ಮಾಡುವುದು ; ವಸತಿ ; ಬಿಡಾರ: "ಅಧಿವಾಸಃ = ತಂಗು" (ಕಾಶಕ್ಕ. ೧೬೦). "ವಸ್ತಿಃ = ತಂಗು" (ಕಾಶಕ್ಕ. ೧೭೦). ೨. ಆಧಾರ ; ಆಶ್ರಯ. 'ತಂಗೊಡೆ' ಪರಾ.

[ <ತಂಗು$_1$ ]

**ತಂಗು$_3$**, ಟಂಗು (ನಾ). ೧. ಕುದುರೆ ಮೊದಲಾದ ಪ್ರಾಣಿಗಳ ಜೀನನ್ನು ಬಿಗಿಗೊಳಿಸುವುದಕ್ಕಾಗಿ ಅವುಗಳ ಒಡಲಿಗೆ ಬಿಗಿದಿರುವ ಚರ್ಮದ ಪಟ್ಟಿ;-ಸುತ್ತುಪಟ್ಟಿ : ಹೊನ್ನ ಹಲ್ಲಣ . . . ಉನ್ನಂತ ರತ್ನ ಭಂಧಗಳ ತಂಗಿನವಟ್ಟೆ ಚಿನ್ನ ಪಂಜಿನ ಕಂಠವಾಮಾ ಇಂದ್ರನೀಲದ ಹೇಮದ ಹರಕಸ ಸಿಂಗಾಡಿ (ದೇವಾಂಪು. ೩-೧೪೮); ಕುದುರೆ ಮಾತಂತು ಆಯಿತು. ಇದರ ಕೋಗೀರು, ತಂಗು ಮುಂತಾದ ಸಾಮಾನುಗಳನ್ನು ನೀವು ಹೊರಬೇಕೋ (ಕಥಾಮಂ. IV, ೯೫); ಬೇಟೆಗೆ ಹೋಗಿ . . . ತಂಗನ್ನೂ ಕುದುರೆಯ ಮುಂಗಾಲು ಹಿಂಗಾಲುಗಳಿಗೆ ಕಟ್ಟುವ ಅಗಾಡಿ ಪಿಚಾಡಿ ಹಗ್ಗಗಳನ್ನೂ ತೆಗೆದುಕೊಂಡು ಬಂದರು (ನಗೆಗ. ೫೦); ಕುದುರೆಯು ಕಟ್ಟಿದುದೂ, ಅದರ ತಂಗು ಥಡಿಗಳು ಬಳಿಯಲ್ಲಿ ಬಿದ್ದಿರುವುದೂ ಗೊತ್ತಾಯಿತು (ವಿಂಧ್ಯಾಲ. ೨). ೨. ಕುದುರೆಯನ್ನು ಹತ್ತುವುದಕ್ಕಾಗಿ ಅದರ ಮಗ್ಗುಲಲ್ಲಿ ನೇತು ಬಿಟ್ಟಿರುವ ಬಳೆ ; ರಿಕಾಪು ; ಅಂಕವಣೆ. **ಟಂಗು** : (೬).

**ಟಂಗು ಹರಿ** = ೧. ಕುದುರೆ ಮೊದಲಾದುವುಗಳ ನಡುಕಟ್ಟು ಕಿತ್ತು ಹೋಗು: ಟಂಗು ಹರಿಯಿತು, ಕಾಲು (ಕೋಲು) ಮುರಿಯಿತು(ಗಾದ). ೨. (ಅಲಂ) ಬಡತನವುಂಟಾಗು; ದಾರಿದ್ರ್ಯವನ್ನು ಹೊಂದು: (೬). **ತಂಗು ತಡಂಗು**="ಏರುವ ಕುದುರೆಗೆ ಇರಬೇಕಾದ ಪರಿಕರ; ಸಾಮಾನ್ಯವಾಗಿ ಎಲ್ಲ ಪರಿಕರ" (ನಮ್ಮನು. ೧೨೦).

[ ←ಪಾರ. ಹಿಂ. ಮರಾ. ತಂಗ್ ]

**ತಂಗುದಾಣ** (ನಾ). ತಂಗುವ ಸ್ಥಳ; ಬಿಡಾರ: ಆಗಾಗ ತನ್ನ ರಾಜಧಾನಿಗೆ ಹೋಗಿ ಬರುತ್ತಿದ್ದರೂ ಹೆಚ್ಚಾಗಿ ಆತನ ತಂಗುದಾಣವೆಂದರೆ ಮಾನ್ಯಖೇಟವೇ ಆಗಿತ್ತು (ವೀರಬಂ. ४); ರಾಯಭಾರದ ಈ ಪರಿವಾರಕ್ಕೆ ತಂಗುದಾಣಗಳಲ್ಲಿ ತಕ್ಕ ವ್ಯವಸ್ಥೆಗಳನ್ನು ಮಾಡಲು . . . ಇಬ್ಬರು ವೇಗಾಯಿಲರು ಅಂದು ದೋರಸಮುದ್ರವನ್ನು ಬಿಟ್ಟರು (ಸವತಿ. ೫೦).

[ ತಂಗು$_1$ + ತಾಣ ]

**ತಂಗುದೊಡ್ಡಿ** (ನಾ). "ವ್ಯಾಪಾರಕ್ಕಾಗಿ ಹೊಡೆದುಕೊಂಡು ಹೋಗುವ ದನಗಳು ತಂಗಲು ದಾರಿಯಲ್ಲಿ ಮಾಡಿರುವ ಕೊಟ್ಟಿಗೆ, ಆವರಣ ತಂಗು ದೊಡ್ಡಿ, ಕೊಟ್ಟಿಗೆ" (Lair. ಇಂಕನಿ).

[ ತಂಗು$_1$ + ದೊಡ್ಡಿ$_1$ (<ತೊಟ್ಟಿ$_1$) ]

**ತಂಗುಪಟ್ಟಿ** (ನಾ). = ತಂಗು$_3$ ೧ : ಬೆಳ್ಳಿಬಸವನ ಭರಣದ ಲೆಖ್ಖಾ . . . ೧ ಗಂಗದೊಗಲಿಗೆ ಬೆಲು ೧ ತಂಗುಪಟ್ಟಿ ೧ ಚಿತ್ರಿಕಲಶ (ಎಕ. XIV, ನಂಜನ. ೨೮೯–೨ನೇ ಕಲಂ : 1847) ; "ಕುದುರೆ ತನ್ನ ಹಿಂಗಾಲುಗಳ ಮೇಲೆ ನಿಲ್ಲುವುದು, ಮೊ. ತುಂಟತನವನ್ನು ಮಾಡದಂತೆ ತಡೆಯುವುದಕ್ಕಾಗಿ ಒಂದು ತುದಿಯನ್ನು ಅದರ ಕಡಿವಾಣಕ್ಕೂ ಮತ್ತೊಂದು ತುದಿಯನ್ನು ಅದರ ಸೂಂಟಪಟ್ಟಿಗೂ ತಳದಲ್ಲಿ ಸೇರಿಸಿ ಬಂಧಿಸಿರುವ ತೊಗಲಪಟ್ಟಿ (ಗಳು) ; ತಂಗುಪಟ್ಟಿ" (Martingale. ಇಂಕನಿ.). [ ತಂಗು$_3$ + ಪಟ್ಟಿ$_2$ ]

**ತಂಗುಬೆಳಕು** (ನಾ). ಸೂರ್ಯಾಸ್ತವಾದ ಮೇಲೂ ಸ್ವಲ್ಪಹೊತ್ತು ನಿಂತಿರುವ ಬೆಳಕು : ಬೇಸಗೆಯ ಸಂಧ್ಯಾಕಾಲದ ತಂಗುಬೆಳಕು ಕೂಡ ಅಳಿದುಹೋಗಿ ಕತ್ತಲೆ ಕವಿದಿತ್ತು (ನಂಟರು. ೯೬). [ ತಂಗು$_1$ + ಬೆಳಕು$_2$ (<ಬೆಳಗು$_2$) ]

**ತಂಗುಮನೆ** (ನಾ). ೧. ಬಿಡದಿ ಮನೆ: (ಕ). ೨. ಪ್ರಯಾಣಿಕರು ತಾತ್ಕಾಲಿಕವಾಗಿ ತಂಗುವುದಕ್ಕಾಗಿ ನಿರ್ಮಿಸಿದ ಮನೆ,–ವಿಶ್ರಾಂತಿಗೃಹ ; ಪ್ರವಾಸಿ ಮಂದಿರ : ಒಂದು ಸಂಜೆ ಆಫೀಸು ಮುಗಿಸಿ ಯಶೋದೆ ವಿ. ಟಿ. ಯ ತಂಗುಮನೆಗೆ ಬಂದಿದ್ದಳು(ವಾತ್ಸಲ್ಯ. ೨೫೮). [ತಂಗು$_1$+ಮನೆ]

**ತಂಗುಳು** 'ತಣ್ಗೂಳ್' ನೋ.

**ತಂಗುಟ್** 'ತಣ್ಗೂಳ್' ನೋ.

**ತಂಗುಟ್ತಿರಿಕ** (ನಾ). ತಂಗುಳನ್ನವನ್ನು ತಿರಿದು ಉಣ್ಣುವವನು ; ತಿರುಕ; ಭಿಕ್ಷುಕ : ತಮ್ಮಯ್ಯನಪ್ಪ ತಂಗುಟ್ತಿರಿಕನ ಮಾತಂ ಕೇಳ್ದು (ಧರ್ಮಾಮೃ. ೯–೧೭೬). [ ತಂಗುಟ್ (<ತಣ್ಗೂಳ್) + ತಿರಿಕ$_1$ ]

**ತಂಗೂಳು** 'ತಣ್ಗೂಳ್' ನೋ.

**ತಂಗೂಟ್** 'ತಣ್ಗೂಳ್' ನೋ.

**ತಂಗೆ,** ತಂಗಿ$_1$ (ನಾ). ೧. ಕಿರಿಯ ಸಹೋದರಿ; ಒಡಹುಟ್ಟಿದ ಕಿರಿಯಳು: ಇದನಟಿವಾತ ಕೆಟ್ಟಿಯುಂ ಕೋಡಿಯುಮನಟಿದು ಪಸುವುಮಾರ್ವ್ವರು × × × [ಕೊನ್ದೋನವ]ನ್ನಮ್ಮಬ್ಬೆಯನ್ನಂಗೆಯುಮ × × × ಮಾಡಿ ಕೊಣ್ಡೋ[೦] (ಸೌಇಇ. XI-1, ೬–೨೮ : 837) ; ಭಟಾರರ ತಂಗೆಯಪ್ಪ ವೀರಶ್ರೀಯುಂ . . . ಪ್ರಳಾಪಿಸಿ ದುಃಖಂಗೆಯ್ಯೆ (ವಡ್ಡಾರಾ. ೧೦೮–೯) ; ಹಿಡಿಂಬನೆಂಬನವರ ಬರವನಱಿದು ತನ್ನ ತಂಗೆ ಹಿಡಿಂಬೆಯೆಂಬಳಂ ಕರೆದು (ಪಂಪಭಾ. ೩–೧೧ ವ) ; ಪತಿಯೊಡನೆನ್ನ ತಂಗೆ ದಹನಾರ್ಚಿಯೊಳೊಂದೆ ಮುಹೂರ್ತದೊಳ್ ನಿವೇದಿತತನುವಾದಳ್ (ಅಜಿಪು. ೧–೪೯). ೨. ಕಿರಿಯ ಹೆಂಗಸರನ್ನು ಸಂಬೋಧಿಸುವಾಗ ಹೇಳುವ ಮಾತು : ತಂಗೆ ತಲೆವೀದಿಯಂ ತೊಡೆಯದಿರು ಕೂಡೆ ಚಳೆಯಂಗೆಯ್ದಲಂಕರಿಸು (ಹಚಳಾ. ೪–೨೪). **ತಂಗಿ$_1$ :** ೧. ನೀನಿದೇಂ ನಿಂದಿಲ್ಲಿ ಱೋದಗತನಂಗೆಯ್ದಾದುತ್ತಿರ್ಪೆ ಅತ್ತ ನಿನ್ನ ತಂಗಿಗವಸ್ಥೆ ಪಿರಿದು (ಪಂಚತಂ. ೨೮೧–೦೨) ; ಮೊಱೆಯಿಲ್ಲಪ್ಪೊಡೆ ಸತಿ ಗಾದೆಜಕಂ ಮೇಣ್ ಕೂರ್ಪ ತಂಗಿಗೇಕಾಗದು (ಧರ್ಮಾಮೃ. ೯–೫೦) ; ಹರಿಯಂ ತಂಗಿಯ ಬಾಲನೆಂದು ಬಗೆದೇಂ ಕಂಸಾಸುರಂ ಕೊಡನೇ (ಸೋಮೇಶ. ೫೪) ; ಹಿಂದಣ ರಾವಣನೊಳವಗಡಿಸಿಯಾತನ ಮಾವನನು ಮುಱಿದವನ ತಂಗಿಯ ಮೂಗ ಭಂಗಿಸಿದ (ಕುವ್ಯಾಸ. ೯–೫೦). ೨. ತಂಗಿ ನೀನಟಲಂ ತಳೆಯದಿರಾವಿರ್ವರುಂ ಸಮಸುಖದುಃಖ[ವೃತ್ತಿ]ಗಳಾದೆವು (ಕಾದಂಬ. ೬೨೯) ; ಬಾಲಕಿಯೆ ಬಾ ತಂಗಿ ಬಾ ನೀಲಾಳಕಿಯೆ ಬಾಯೆನುತ ಮಿಗೆ ಪಾಂಚಾಲೆಯನು ಕರೆದಸುರರಿಪು ಸೂಚಿಸಿದನಂಗನೆಗೆ (ಕುವ್ಯಾಸ. ೧೧–೧೬). [ ದೇ.೫ ತಮಿ. ತಙ್ಕೈ ; ಮಲ. ತಙ್ಙ ; ತುಳು. ತಂಗಿ ; ಕೊಡ. ತಂಗೆ ; ಗೊಂಡಿ. ತಂಗೇ ; ಕೂಇ. ಕುವಿ. ತಂಗಿ ]

**ತಂಗೆಡೆ** (ನಾ). ತಂಗುವ ಎಡೆ ; ಬಿಡಾರ : ಎಲ್ಲಾ ವೀರರುಗಳೂ ಫಲ್ಗುಣನನ್ನು ಹೊಗಳಿಕೊಂಡು ಉತ್ಸಾಹವಾಗಿ ತಮ್ಮ ತಂಗೆಡೆಗಳಿಗೆ ಹೋದರು (ವ್ಯಾಸಜಿ. ೩೮೭). [ ತಂಗು$_1$ + ಎಡೆ$_3$ ]

**ತಂಗೆಳು** 'ತಂಗೇಳು' ನೋ.

**ತಂಗೆಱೆ** (ನಾ). ಒಂದು ಊರಿನ ಹೆಸರು : ಬಲಿವಂಶತಿಲಕ ಆಸನ್ದಿನಾಡ ನಾಳುತ್ತಿರೆ ತ್ರಿಜಗ್ಗಿಱೆಯಾ ದಣ್ಡರೆ ನೊಳಂಬಂ ತಾಂ ಸಲೆ . . . ಕಾದಿ ಸತ್ತಂ (ಎಕ. V, ಅರಸೀ. ೨೧೫–೬ : ಸು. 890). [ ? ]

**ತಂಗೇಳು,** ತಂಗೆಳು (ನಾ). (?) : ಯಿದಕೆ ಅನ್ಯಯವು ಅನೊರ್ಬ ಮಾಡಿದವನು ಗಂಗೆಯ ತಡಿಯಲ್ಲಿ ತಂಗೇಳು ಕವಿಲೆಯಕೊಂದ ದೋಷಕೆ ಹೋಹರು (ಎಕ. IX, ಬೆಂಗಳೂ. ೦೩೪–೦೦ : 1308) ; ಯಿದಕೆ ಆರು ಅಳಿಹಿ ತಪಿದವರು ಗಂಗೆಯ ತಡಿಯಲು ತಂಗೆಳು ಕವಿಲೆಯ ಕೊಂದ ಪಾಪದಲಿ ಹೋಹರು (ಎಕ. IX, ಬೆಂಗಳೂ. ೯೭–೧೭ : 1347) ; ಆವನೊಬ್ಬ ಅಳಿದವ ಗಂಗೆಯ ತಡಿಯಲಿ ತಂಗೇಳು ಕಪಿಲೆಯನು ಬ್ರಾಹ್ಮರನು ಕೊಂದ ಪಾಪಕೆ ಹೋಹನು (ಎಕ. IX (8), ಕನಕ. ೬೫–೨೦ : ಸು. 1830). **ತಂಗೆಳು :** ಯಿದಕೆ ಆವನಾನೊಬನು ಅಳಿಪಿದವರು ಗಂಗೆಯ ತಡಿಯಲಿ ತಂಗೆಳು ಕಪಿಲೆಯ ಕೊಂದ ಪಾಪದಲಿ ಹೋಹರು (ಎಕ. IX (8), ಬೆಂಗಳೂ. ೦೭೩–೦೦: ಸು. 1700). [ ? ]

**ತಂಗೇಟುಪೊಣುಸೆ** (ನಾ). ಒಂದು ಪ್ರದೇಶದ ಹೆಸರು (?) : ಮಹಾನದಿಎ ವಾಯವ್ಯಾದಿಶಿಯಿಮ್ ಪೊರಮಂಟ್ಟು ತಂಗೇಟುಪೊಣುಸೆಎ ಆ ಪೇರೊರ್ಪ್ಪೆಎ (ಮೈಆರಿ. ೧೯೨೦, ೯–೨೪ ; ಕೃಷಾ). [ ತಂಗೇಟು$_0$ + ಪೊಣುಸೆ (<ಪೊಳಿಸೆ) ]

**ತಂಗೈ** (ನಾ). ತಣ್ಣಗಿರುವ ಕೈ : ಹಣದ ತಂಗೈ ನನ್ನ ಮುಂಗೈಯ್ಯ ಹಿಡಿದಂತೆ ನಿನ್ನ ಮಾತಿನ ಪಟ್ಟು ಮನಕೆನಿಸಿತು (ಸಖೀಗೀ. ೩೭–೬೫). [ ತಂ$_1$ (<ತಣ್$_2$) + ಕೈ$_2$ (<ಕೆಯ್$_2$) ]

**ತಂಗೊಡಗೆ** (ನಾ). ಒಂದು ಊರಿನ ಹೆಸರು. p ಈಗಿನ ಬಿಜಾಪುರ ಜಿಲ್ಲೆಯ ತಂಗಡಗಿ : ಪೆದ್ದೊರ್ಱೆಯ ಬಡಗದೆಸೆಯ ತಂಗೊಡಗೆಯ ಬೀಡಿನೊಳ್ (ಸೌಇಇ. XI-1, ೦೦೬–೧೪ ; 1075). [ ? ]

**ತಂಗೊಡೆ** (ಕ್ರಿ). ಆಧಾರ ತಪ್ಪು ; ಆಶ್ರಯವಿಲ್ಲವಾಗು : ದಿಕ್ಕರಿಸ ಫಣಿಯು ಕೂರ್ಮಾದಿಗಳ್ತಂಗೊಡದು ಕುಕ್ಕುರಿಸೆ ಧರಣೀತಳಮ್ಮದಿರೆ ಕಡಲು ಕುದಿದುಕ್ಕಿದುದು ಅತಿರಥಮಹಾರಥವ ಯುದ್ಧದೊಳ್ಕಡಿದನು ವಿರಾಟಸೂನು (ತುರಂಗ. ೯೫ ಸೂಚನೆ). [ ತಂಗು$_2$ + ಒಡೆ$_1$ ]

**ತಂಗೊಳ** 'ತಣ್ಗೊಳ' ನೋ.

**ತಂಚಾಪಂಚ** 'ತೊಂಚಪಂಚ' ನೋ.

**ತಂಜಾಪುರಿ** (ನಾ). ಒಂದು ಊರಿನ ಹೆಸರು. p ಈಗಿನ ತಂಜಾವೂರು: ತಞ್ಜಾಪುರಿ ನಾಕ್ಕೇಲೋ ಪ್ರಮುಖಾದಿ ದುರ್ಗ್ಗನಿವಹಾನ್‌ದಗ್ಧ (ಮೈಆರಿ. ೧೯೨೦, ೦೦–೮೯ ; 963) ; ಮಧುರೆ ತಂಜಾವುರಿ ತೆಂಜರಾಯರ ಸಮ್ಮುಖದ ಮಂತ್ರಿನಿಕರವೈತಂದು (ಕಂಠವಿ. ೨೦–೫೩). [ ತಂಜಾ$_0$ + ಪುರಿ$_5$ ]

**ತಂಟಲಮಾರಿ** 'ತಂಟಲುಮಾರಿ' ನೋ.

**ತಂಟಲು** (ನಾ). ತಂಟೆ ; ತಕರಾರು. 'ತಂಟಲುಮಾರಿ', 'ತಾರಾತಂಟಲು' ಪರಾ. [ ತಂಟೆ+ –ಅಲು$_2$ (< – ಅಲ್$_2$) ]

**ತಂಟಲುಮಾರಿ,** ತಂಟಲಮಾರಿ (ನಾ). ೧. ತಂಟೆ ತೆಗೆಯುವ ಸ್ವಭಾವದ ವ್ಯಕ್ತಿ : ಪೇಟೆ ಶಾಲೆಯೆಂದರೆ, ತಂಟಲುಮಾರಿ ಹುಡುಗರೂ, ಅವರ ದಾಂಧಲೆಯೂ . . . ಬಡಪಾಯಿ ಮೇಷ್ಟುಗಳು ಇವಿಷ್ಟರಲ್ಲಿಯೇ ಮುಗಿದು ಬಿಡುತ್ತದೆ (ರೂಪಸಂ. ೫೩); ಸೀನಭಟ್ರು ಮಗ– ಮಹಾ ತಂಟಲುಮಾರಿಯುವ (ಕೋದಂಡ.೪೯). **ತಂಟಲಮಾರಿ :** ೨. ಗ್ರಾಮದೇವತೆ: ಕೊಡಗಿನ ಮಾರಿ ತಂಟಲಮಾರಿ ಗೌಡಗೆ ಬುದ್ಧಿ ಕಲಿಸ್ತಾಲೆಂತ . . . ಗೌಡ್ನ ಹಟ್ಟಿ ಬಾಗ್ಲಿಗೆ ಬಂದ್ಲು (ಜಗೀತ. ೩೭). ೩. ಕಂಲಟೆ ; ಜಾರೆ : ನೀನಾದರೆ . . . ವಶ್ಯಕರಮಾದ ಮದ್ದುಗಳನ್ನಿಟ್ಟು ವಶ್ಯರಂ ಮಾಡಿ ತಗಿಲಿಸಿಕೊಂಬ ತಂಟಲಮಾರಿಯೆ ಸರಿ (ಸೌಗಂಧಿ. ೫೦೯–೮).

[ ತಂಟಲು + ಮಾರಿ$_2$./ತಮಿ. ತಣ್ಟುಮಾರಿ; ತುಳು. ತಂಟೆಲ್ಮಾರಿ ; ತೆಲು. ತಂಟಲಮಾರಿ, ತಂಟಾಲಮಾರಿ ]

**ತಂಟಲುಮಾರಿತನ** (ನಾ). ತಂಟೆ ತೆಗೆಯುವ ಸ್ವಭಾವ ; ಜಗಳಗಂಟತನ: ದಯಮಾಡಿ ತಂಟಲುಮಾರಿತನಕ್ಕೆ ಮನಸ್ಸು ಕೊಡಬೇಡ (ಮಹಾತ್ಮಾ. ೧೦೩). [ ತಂಟಲುಮಾರಿ + – ತನ ]

**ತಂಟು** 'ತಂಟೆ' ನೋ.

**ತಂಟೆ,** ತಂಟು (ನಾ). ೧. ಜಗಳ ; ತರಲೆ ; ತಕರಾರು : ಟೀಪುಸುಲ್ತಾನರ ಕೆಲಸದ ಮೇಲೆ ಮೂರು ಸರಕಾರದ ಕಡೆಯಿಂದಾ ಈ ತಂಟೆ ತಪ್ಪಿಸಿದರೆ (ರಾಜೇಂದ್ರ. ೭೫) ; ಇಬ್ಬರ ತಂಟೆಯಲ್ಲಿ ತೊಡಕಿದ ಹೊಲದ ಸೀಮೆಭಾಗ ದಂತೆ (ಅಶ್ವಮೇ. ೨) ; ನಾದವಿದ್ದರೆ ಘಂಟೆ, ವಾದವಿದ್ದರೆ ತಂಟೆ (ಗಾದೆ). ೨. ಕಷ್ಟ; ತೊಂದರೆ ; ಉಪದ್ರವ : ಪರಿಪರಿಯ ಸಾಲ ಜೂಜು ವೊದ ಲಾಧ ತಂಟೆಗಳನ್ನುಂಟುಮಾಡಿ (ಸೌಗಂಧಿ. ೧೩೯–೨) ; ಬಹಳ ತಂಟೆಗೆ ಬಂತು! (ದೇವೀಕಾ. ೨೦) ; ಅಣ್ಣನ ತಂಟೆ ತಡೆಯಲಾರದ ಸದಾಶಿವನೆನ್ನುವುದನ್ನು ಕೇಳಿ . . . ನೊಂದುಕೊಳ್ಳುತ್ತಿದ್ದಳು (ತ್ಯಾಗಮು. ೧೯೦). ೩. ಸಂಬಂಧ ; ಗೊಡವೆ ; ಗೋಜು : ಇನ್ನೆನಗಿದು ಬರುವುದುಂಟೆ ? ಬರಿದೇಕಿನ್ನಿದರ ತಂಟೆ (ಗೀವಿಂ. ೬೮–೬೨); ಸಂಸಾರಿಕರ ತಂಟೆಗೆ ಬರಲು ಏನಧಿಕಾರ ಈ ಸಂನ್ಯಾಸಿಗಳಿಗೆ (ಅಶ್ವಮು. ೦೦೨) ; ಅಜ್ಜಿ ಯಾವ ತಂಟೆಗೂ ಹೋಗುತ್ತಿರಲಿಲ್ಲ (ಧರ್ಮಶ್ರೀ. ೬). **ತಂಟು :** ೧. ಆಱು ಮಂದಿ ಮಕ್ಕಳುಂಟು (ವಕ್ಕಲುಂಟು) ಮತ್ತಾಱು ಮಂದಿ ಪ್ರೇರಕರುಂಟು ಪ್ರೇರಕರಿಗೆ ಕರ್ತರುಂಟು ವಿಚಾರ ಮಾಡಲಿಕ್ಕೆ ನಿಮ್ಮದೇನು ತಂಟು (ಪುರಂದ. ೪–೧೬–೨).

**ತಂಟೆ ತಕರಾರು** = ಜಗಳ ; ವಿವಾದ : ನಮ್ಮ ಮಕ್ಕಳ ಕಾಲಕ್ಕೆ ತಂಟೆ ತಕರಾರು ಇರಕೂಡದು (ಅನಾಮಿ. ೬). **ತಂಟೆ ತಾಪತ್ರಯ** = ತಂಟೆ ತಕರಾರು: ನಾಲ್ಕಾರು ಪಾರಿವಾಳಗಳು ಯಾರ ತಂಟೆ ತಾಪತ್ರಯವೂ ಇಲ್ಲದೆ ಬಿಂಕದಿಂದ ಓಡಾಡುತ್ತಿದ್ದುವು (ಪುನರು. ೬). **ತಂಟೆ ತೀರಿಸು** = ಜಗಳ ಬಗೆಹರಿಸು: ಕುಂಟಿಕೊಳ್ಳುತ್ತಾ ತಂಟೆ ತೀರಿಸ್ಯಾನು (ಗಾದೆ). **ತಂಟೆ ಬಂಟೆ** = ತಂಟೆ ತಕರಾರು : ಆಯಾ ಸ್ಥಳದ ಮಟ್ಟದ ವಡೆಗಳು ಯಿ ವಿಷಯವಾಗಿ ತಂಟೆ ಬಂಟೆಗಳ ಮಾಡಿದಲ್ಲಿ (ಪ್ಯಾಲಿ. ೧೯೩೦, ೪೩–೩೦ : 1812). **ತಂಟೆ ಮಾಡು** = ತಕರಾರು ಮಾಡು : ಪಕ್ಕದ ಹೊಲದವರು ತಂಟೆ ಮಾಡಿದ್ದರಿಂದ ಜಗಳ ಆರಂಭವಾಯಿತು (ರೂಢಿ). **ತಂಟೆಯವ** = ತಂಟೆಕೋರ ; ಉಪದ್ರವಕಾರಿಯಾದ ಮನುಷ್ಯ : ತಂಟೆಯವನ ನಂಟಿಕೆ ಸಲ್ಲ, ಒಂಟಿಯಾಗಿ ಹೋಗ ಸಲ್ಲ (ಗಾದೆ).

[ ←ಮರಾ. ತಂಟಾ ; ಹಿಂ. ತಂಟಾ, ಟಂಟಾ ; ಗುಜ. ತಂಟೋ, ಟಂಟೋ ; ಸಿಂಧಿ. ಟಂಟ. / ತಮಿ. ತಣ್ಟೈ ; ತೆಲು. ತಂಟಾ]

**ತಂಟೆಕೋರ** (ನಾ). ತಂಟೆ ಮಾಡುವ ಸ್ವಭಾವದವನು ; ಜಗಳಗಂಟ : ಕೆಲಮಂದಿ ತಂಟೆಕೋರರಾದ ರೈತಜನರು ನಂಬರಿನ ಹದ್ದುಬಸ್ತಾದ ಬಾಂದುಕಲ್ಲುಗಳನ್ನು ಮನಃಪೂರ್ವಕವಾಗಿ ಕಿತ್ತೆಸೆಯುವುದೂ ವುಂಟು (ಭೂಮಿಅ. ೩೮). [ ತಂಟೆ + – ಕೋರ$_3$ ]

**ತಂಟೆಗಾರ** (ನಾ). = ತಂಟೆಕೋರ : ಈ ರಂಗಪ್ಪನ ದಾಳಿ ಹೊರಟುದೆಂದರೆ ಕನ್ನಡದೊಳಗಿನ ತಂಟೆಗಾರರೆಲ್ಲ ದಾಳಾದೂಳಿಯಾಗುವರು (ನಡೆದಾ. I, ೪೩೬). [ ತಂಟೆ + – ಕಾರ$_1$ (< – ಕಾಱ) ]

**ತಂಡ,** ತಂಡು$_1$ (ನಾ). ೧. ಗುಂಪು ; ಹಿಂಡು ; ಸಮೂಹ : "ಬಂಬಲ್, ತುಱುಗಲ್ . . . ಸೇಣಿ, ತಂಡಂ, ಗುಂಡಿ . . . ಗುಪ್ಪಿ, ಗೊಂದಣ– ಈ ೪೦ ಸಮೂಹಂ" (ಕಶಸ್ತಾ. ೧೧–೨೨೨) ; "ತಂಡಮೆನಲೋಳಿ" (ಭಾರನಿ. ೩೬) ; "ತಂಡಂ ತೆರಳ್ಕೆ ಮೊಕ್ಕಳೆ . . . ತೋಮಮಿವು ತಾವೆತ್ತಂ ಸ್ತೋಮಾಭಿಧಾನಮಕ್ಕುಂ" (ಕವಿಕಂ. ೧೦೬); ಕಣ್ಗಳಿಂ ಕೆಂಡದ ತಂಡಂಗಳು ಮುರಿಯ ತಂಡಂಗಳುಂ ಸೂಸೆ (ಪಂಪಭಾ. ೩–೧೬ ವ); ರಸಮನೀವುತ್ತಿರ್ದು ದಿಕ್ಷುಪ್ರಕಾಂಡದ ತಂಡಂ (ಬಾಧಪು. ೧–೮೮) ; ಕಂಡು ಬೆಱಗಾದುದು ಕುಮಾರರ ತಂಡ (ಕುಮಾ.ಅ. ೬–೩೯). ೨. ಪಕ್ಷ ; ಪಂಗಡ : ನೆಲೆವೆರ್ಚುಗೆ ನಿಮ್ಮೆರಡು ತಂಡಮೊದವಿದ ನಣ್ಪಂ (ಪಂಪಭಾ. ೧೩–೬೭) ; ಇಂತೀ ಎರಡು ತಂಡದೊಳಾರು[ಪಾಠಾಂ. ಎರಡರಸುಗಳೊಳಾರು] ಸೋತರು ಸೋತ ಭೂಪತಿಗೆ ಪರುಷ ಹನ್ನೆರಡಱಲಿ ವನದೊಳಗಿರವು (ಕುಮಾ.ವ್ಯಾ.ಸ. ೧೬–೪೯) ; ತಮ್ಮ ಕೂಟನೀತಿಯಿಂದ ಎರಡು ತಂಡಗಳಾಗುವಂತೆ ಮಾಡಿದರು (ಜಗಸಂ. ೪೬). **ತಂಡು$_1$:** ೧. ಅನೇಕ ಮುಸಲ್ಮಾನರ ತಂಡುಗಳು ನಿರ್ಭಯವಾಗಿ . . . ಹಿಂದುಸ್ಥಾನದಲ್ಲಿಯೇ ನೆಲೆಗೊಂಡು ಇರಲಾರಂಭಿಸಿದರು (ಹಿಂಮುಸ. ೪೬).

**ತಂಡತಂಡ** (ದ್ವಿರುಕ್ತಿ) = ೧. ಅನೇಕ ಗುಂಪು; ಹಲವಾರು ಗುಂಪು: ಮನೋಭವನೊಡ್ಡಣದಂತೆ ತಂಡತಂಡದೆ ಪರಿತಂದು ಸೂಸಿದುದು ಸೇಸೆಯುನಂದು ಪುರಾಂಗನಾಜನಂ (ಪಂಪಭಾ. ೪–೩೫) ; ತಂಡತಂಡದ ಗಣಕತತಿ ತಪ್ಪದೆನುತಮಿರೆ (ಬಸರ. ೫–೮೨) ; ಮೃಡಭಕ್ತಗಣತತಿ ತಂಡತಂಡದಲಿ ಸಡಗರದೊಳೆಯ್ತರೆ (ಬಸಪು. ೬–೨೦). ೨. ಬಗೆಬಗೆ ; ಹಲವು ಪ್ರಕಾರ; ನಾನಾ ವಿಧ: ಪುಂಡರೀಕಾಕ್ಷ ಸಿರಿ ಪುರಂದರವಿಠಲನ್ನ ತಂಡತಂಡದಿ ನೆನೆದು ಸುಖಿಯಾಗು ಮನವೆ (ಪುರಂದ. ೧–೧೫೫–೪) ; ತಂಡತಂಡದ ವಿಹಗಾಲಾಪ ತುಂಬಿಯಾಖಂಡವಾಗಿರ್ದುದೇನೆಂಬೆ (ಮೋಹತ. ೫–೨೨) ; ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ . . . ತಂಡತಂಡದ ವಾರ್ತೆ ಪಾರಿಜಾತ್ಯಕ್ಷನ ಕೀರ್ತಿ (ವಿದಾಕೃ. ೨೫–೦). **ತಂಡೋಪತಂಡ** = ತಂಡತಂಡ ೧: ಪಾಂಡವರ ಬಲದ ಮೇಲೆ ಬಿದ್ದು ತಂಡೋಪತಂಡವಾಗಿ ಚಂಡಕಾಂಡಗಳನ್ನು ಪ್ರಯೋಗಿಸಿ (ಕೃವಾಭೀ. ೧೧೦) ; ವಿಚಾರಪರರಾದ ಸಂಶೋಧಕರೂ ತಂಡೋಪತಂಡವಾಗಿ ಸಿದ್ಧಮಾದರು (ಕ್ರಿಯಾಶಿ. ೧೦೨). [ದೇ.॥ ಮಲ. ತಣ್ಟು; ತುಳು. ತಂಡ, ತಂಡ್; ತೆಲು. ತಂಡ./ಸಂ. ದಂಡ]

**ತಂಡಂಗೊಳ್** (ಕ್ರಿ). ಗುಂಪುಗೂಡು; ನೆರೆ; ಸಂದಣಿಸು: ಜಿನಭವನದಿಂದಾ ಖಂಡಲನಿಭವಿಭವನಿರದೆ ಪೊಱಮಟ್ಟದಿರೊಳ್ ಕಂಡಂ ನೆರೆದು ನಿಗುಂಬಿಸಿ ತಂಡಂಗೊಂಡಿರ್ದ ನರರ ಖಚರರ ಗುಂಡಂ (ಆದಿಪು. ೪–೩).

[ ತಂಡ + ಕೊಳ್$_1$ ]

**ತಂಡಂಬೆಱು** (ಕ್ರಿ). = ತಂಡಂಗೊಳ್ : ಭಕ್ತರುತ್ಸಾಹದಿಂ ತಂಡಂಬೆತ್ತರರೇವುಘೇಯೆನುತುಮಿರ್ದರ್ (ವೃಷವಿ. ೩೬–೬೫). [ ತಂಡ + ಪೆಱು$_1$ ]

**ತಂಡಕ** (ನಾ). ೧. ಸರಿಯಾದ ಸಿದ್ಧತೆ; ಕಾರ್ಯದ ಸಂಪೂರ್ಣ ನಿರ್ವಹಣೆ. ೨. ಹೆಚ್ಚಾದ ಸಮಾಸಪದಗಳಿಂದ ಕೂಡಿದ ರಚನೆ. 'ದಂಡಕ್ಕ' ಪರಾ. ೩. ಮರ ಅಥವಾ ಗಿಡದ ಕಾಂಡ. ೪. ಐಂದ್ರಜಾಲಿಕ. ೫. ಮೋಸಗಾರ: ತಂಡಕನು ಅವ ನಿನ್ನ ಹೆಂಡತಿಯ ಕೂಡಿರಲು ಭಂಡ ಒಡಲನು ಪೊರೆದುಕೊಂಡಿರ್ಪೆ ಯಾಕೆ (ಕರಿಕ. ೬೨–೧). ೬. ತುಂಟ ; ಅಧಿಕ ಪ್ರಸಂಗಿ : ಎಲಾ ತಂಡಕ ಹುಡುಗನೇ ಇದು ಉಪ್ಪಲ್ಲ, ಬೆಲ್ಲ (ಕಥಾಮಂ. IV, ೬೮). ೭. ಅಲಂಕರಿಸುವಿಕೆ ; ಅಲಂಕರಣ. [ಸಂ.]

**ತಂಡಜ** (ನಾ). (?) : ಆದಿಯಲ್ಲಿ ಲಿಂಗಾರ್ಚನೆಯ ಮಾಡಿದ ತಾರಜ ತಂಡಜ ರೋಮಜರಿಗೆ ಪ್ರಳಯವಾಯಿತ್ತು (ಅಖಂಡೇ. ೭೧–೪೨). [ ? ]

**ತಂಡನಾಮೆ** (ನಾ). ವಿಚಾರಣೆ; ಪಂಚನಾಮೆ; ಮಹಜರು: ಪೋಲೀಸು ತಂಡನಾಮೆಯಾಗಿ ಶವಸಂಸ್ಕಾರವೂ ಮುಗಿಯಿತು (ತಳರು. ೫೪). 'ಪಂಚನಾಮೆ' ಪರಾ. [ ತಂಡ+ನಾಮ್ಮೆ ]

**ತಂಡರಸಿ** 'ತಂದ್ರಾಸಿ' ನೋ.

**ತಂಡವಾಳ,** ತಾಂಡವಾಳ (ನಾ). ಎರಕ ಹೊಯ್ದ ಕಬ್ಬಿಣ ; ಬೀಡು ಕಬ್ಬಿಣ : ಅಗ್ನಿಸಂಯೋಗದಿಂದ ನೈಮಿತ್ತಿಕ ದ್ರವ್ಯತ್ವವಂ ಪಡದು ನಾಶ ಮಾಗದೇ ಮರಳಿ ಕಠಿನವಾಗುವ ಚಿನ್ನ, ಬೆಳ್ಳಿ . . . ಕಂಚು ತಂ[ಪಾಠಾಂ. ತಾಂ]ಡವಾಳ ಮುಂತಾದಕ್ಕೆ ಲೋಹವೆಂದು ಹೆಸರು (ಸಿದ್ಧಾಂತಿ. ೨೬೦). **ತಾಂಡವಾಳ:** "ಎರಕ ಹೊಯ್ದ ಕಬ್ಬಿಣ ; ತಾಂಡವಾಳ" (Cast-iron. ಇಂಕನಿ.). [ ದೇ.॥ ತಮಿ. ತಣ್ಣವಾಳ ]

**ತಂಡಸ$_1$** 'ತಂಡಸು' ನೋ.

**ತಂಡಸ$_2$**, ತಾಂಡಸ (ನಾ). ಇಕ್ಕುಳ ; ಚಿಮುಟ ; ಪಟಕಾರ : "ಇಕ್ಕುಟಿಂಲಾಳಿ ತಂಡಸಂ ಗಾರಿಕಾಖ್ಯಂ" (ಮಂಗರಾ. ೧೦೩-೮) ; ತಂಡಸದಿನೊಯ್ಯನೆ ಕೀಳುವೆಂ ನೀ ನೆಮ್ಮಿಕೋ ಬಂದೀ ಮರನನೆನುತ (ಬಸವು. ೪೪-೧೪) ; ತಂಡಸದಿನಾ ದಸಿಯನಲುಗಿ ಕೀಳಲ್ಕೆ (ಅರಾಜ. ೮-೬೭); ಬಂಗರವು ತಂಡಸದಿ ಹುಡುಕಿಯೆ ಹಿಡಿದ ತೆರನಂತೆ (ಜ್ಞಾನಸಿಂ. ೧೮-೫೭); ಇರ್ಕುಟಿಯ ತಂಡಸದ ಕರ್ತರಿಯ . . . ಬಡಿವ ಸೊನ್ನೆಗಾಱರ ಸಾಲೆಯಿಂ (ರಾಮಾಶ್ವ. ೧೦೩-೧೯).
**ತಾಂಡಸ :** "ಇಕ್ಕುಟಿ–ವ್ಯಾಧಿವಿಕಾರಂ ; ಸಂದಂಶಂ ; ತಾಂಡಸಂ" (ಶಮುದ. ಪರಿ. ೭). [<ಪ್ರಾ. ಸಂಡಾಸ./ಸಂ. ಸಂದಂಶ ]

**ತಂಡಸಸರ** (ನಾ). ಒಂದು ಸರೋವರದ ಹೆಸರು: ತತೋ ನೈರ್ಋತ್ಯಾಂ ದಿಶಿ ತಂಡ [ಸಸರ]ಃ (ಸೌಇಇ. XX, ೬-೨೨ ; 730). [ ತಂಡಸ? + ಸರ$_5$ ]

**ತಂಡಸಿ** 'ತಂಡಸಂ' ನೋ.

**ತಂಡಸು**, ತಂಡಸ$_1$, ತಂಡಸಿ, ತಂಡಸೆ, ತಂದಸಿ (ನಾ). ಒಂದು ಬಗೆಯ ಮುಳ್ಳುಮರ : "ಕಂಟಕಿಯೆನಲ್ ತಂಡಸು[ಪಾಠಾಂ. ಮಂಡನೆಂಗು, ಕಂಡನೆಂಗು]" (ಮಂಗರಾ. ೩೭-೧೯) ; ಕರಿಬೇವಿನಂಬಟೆಯ ತಾಱಿಯ ತಂಡಸಿನಾಸಿನಾನೆ ಬೊಬ್ಬುಲಿಯ (ಲೀಲಾವ. ೬-೨೭) ; ತಂಡಸು ತಪಸು . . . ಮಂದಾರಂಗಳಡಸಿ ತುಂಬಿದ ಚೆಲುವ ಭೂಜಂಗಳಿಂದ ಮಿಗೆ ಕಾನನಂ ಕಣ್ಗೆಸೆದುದು (ಹಜಕಾ. ೫-೧೭) ; ಕೊಡಸಿಗೆ ಬಾಗೆ ಬೇಲರಳಿ ತಂಡಸು ಕೊಂಡಸು ಜಾಲವಾಲದಿಂದಿಡಿಕಿಱಿದಿರ್ದ ಪೇರಡವಿಯೊಳ್ (ಧರ್ಮಪ. ೩-೪೭). **ತಂಡಸ$_1$:** ತೇಗರುತಾಳ ತಂಡಸ ತಡಸ ತುಗ್ಗಿಲು . . . ಮೊದಲಾದ ವನಭೂಜಾಳಿಯಲಿ ಹೂಳಿದರಕಂಪನನಸಮ ರಣರಥವ (ತೊ ರ ರಾ. ೬-೧೮-೧೮) ; ತಂಡಸ ದಿಂಡ ಪೆರ್ಬೂರ . . . ತೇಗುಗಳ ವಿಸರ ನಾನಾವೃಕ್ಷ ಜಾತಿಯಿಂದೆಸೆವ ಘೋರಾರಣ್ಯ (ಸಿಂಗಿರಾ. ೩೦-೯) ; ಆಲ ತಂಡಸ ತಪಸಿ ಸಹಕಾರ ಕಿಂಶುಕ . . . ಸಿರಿಸಂಗಳಿಂದೆಸೆದುದಾ ಕಾಂತಾರವು (ಸಿದ್ಧೇಶು. ೮-೩). **ತಂಡಸಿ :** ಕಕ್ಕೆ ಬಿಕ್ಕೆ ತಂಡ[ಪಾಠಾಂ. ಡಿ]ಸಿ ತಾಱಿ . . . ಚಂಪಕಗಳಿಂದ ನಿಲ್ಲದೆ ಮೆಱೆವುದಾ ವಿಪಿನ (ಕುರಾಸಾಂ. ೪-೫) ; ಹೇರಿಜೆಯೆಲಚಿ ತಂಡಸಿ ಮುಳ್ಳುಬೇಲಿಗಳ್ ಸೇರಿ ಮುಟ್ಟಿಹುವಾಗಸವನು (ಕಂಸವಿ. ೦೮-೩೫).
**ತಂಡಸೆ :** ತಂಡಸೆ[ಪಾಠಾಂ. ಗೆಂಡಗೆ, ಗೆಂಡಸೆ]ಕಾಗೆದೊಂಡೆ ಪೆರ್ಗುರುಡಿಗೆ . . . ಕೊಂಡರೆದು ಲೇಪಿಸೆ (ಖಮುದ. ೧೦-೫೦) ; ಅಂಬಟೆಯು ಬಾರೆ ನೆಲ್ಲಿ ತಂಡಸೆ ಕರಗ ಸಂತಾಲ (ಮಹಾವಿ. ೭-೧೮). **ತಂದಸಿ :** ತಂದಸಿ, ಕಂಕಡ (ಮೃಜಿಗಿ. ೪೧-೫೧೮).

**ತಂಡಸೆ** 'ತಂಡಸು' ನೋ.

**ತಂಡಾಮುಂಡಾ** 'ತಂಡುಂಮುಂಡು' ನೋ.

**ತಂಡಾಯ** (ನಾ). ಪರಿಚಾರಕ; ಸೇವಕ (?) : ಕಂದರ್ಪೇಸ್ವರದೇವರ ತ್ರಂಣ್ಡಾಯ ಕೊಳೆಯಂಗೆ ತಂಣ್ಡೇಸ್ವರ ಮತ್ತರು ಅಱು (ಕಇ. II, ೧೭-೫೭ ; 1122). 'ತಂಡಾಲಯ' ಪರಾ. [ ?./ತಮಿ. ತೊಣ್ಡ ]

**ತಂಡಾಲಯ** (ನಾ). = ತಂಡಾಯ : ಜ್ಞಾನಾರೂಢ ಪ್ರಾಣೇಶ್ವರ ನೆಂಬಾತನಲ್ಲಿಯ ದೇವರು ಒಂಬತ್ತು ಮಾನಿಸರು ತಂ[ಪಾಠಾಂ. ತಾಂ] ಡಾಲಯರು[ಪಾಠಾಂ. ತಂಡದಲ್ಲು] (ಚನ್ನವ. ಕ. ೪೯೮-೧೦೭೮); "ವ್ಯವಸ್ಥಾಪಕ" (ಚನ್ನವ. ಕ. ಕೋಶ). [ ? ]

**ತಂಡಿ**, ಚಂಡಿ$_4$, ತಂಡು$_6$, ಥಂಡಿ (ನಾ). ೧. ಚಳಿ ; ತಂಪು : ನೀರಿನ ಪಸೆಯಿಲ್ಲದಿದ್ದರೂ ವಾಯುವು ತೀರ ತಂಡಿಯಾಗುವುದು (ಬಾಲಪ್ರ. II, 667) ; ತಂಡಿಯಿಂದ ಹಿಮ್ಮಡಿ ಮುದುರಿ ಸೆಳೆಯುತ್ತದೆ (ಕುಡಿಕೊ. ೪೯). ೨. ತೇವ ; ಒದ್ದೆ : (ಓ). **ಚಂಡಿ$_4$ :** ೧. ವರರತ್ನಾಳಿರುಚಿಯಲಿ ಚಂಡಿಯಾಯಿತು ದಿವಸವಂದಿನಲಿ (ಕುವ್ಯಾಸ. ಒರಿಇ. ೫-೫೦) . ೨. ಒಣಗಿದಷ್ಟು ಒಣಗಲಿ. ತರಗೆಲೆಯು ಹಾಗೆ ಚಂಡಿಯಾಗಿ, ಬೆಂಕಿ ಊದಿದಷ್ಟು ನಂದುತ್ತದೆ (ಮರಮ. ೨೨): ಮೈಯೆಲ್ಲ ಚಂಡಿ. ನನ್ನ ಬಟ್ಟೆಯಿಂದ್ಲೆ ವರ್ಷಿದೆ ದೇವರೆ (ಕದಂಬ. ೧೦೫). **ತಂಡು$_6$ :** ೨. ಹದಿನೈದು ದಿನದ ಮಳೆಯ ತಂಡಿನಿಂದ, ಹಪ್ಪಳಕ್ಕೆಲ್ಲಾ ಗಡ್ಡಮೀಸೆ ಬಂದಿತ್ತು (ಮರಮ. ೨೩). **ಥಂಡಿ :** ೧. ಅಲ್ಲಿ ಬಂದು ಮುಟ್ಟಿದಾಗ ಥಂಡಿ ಸುರುವಾಗಿತ್ತು (ಸಮುಜೀ. ೬೦೮) ; ಭಾಳ ಥಂಡಿ ಹತ್ತಿದ್ದಿತಲಾ ಹಂಗಾರ (ಮುಗಿಮ. ೨೬). ೨. ಮನೆ, ನೆಲ, ಗೋಡೆ ಎಲ್ಲಾ ಥಂಡಿ ಹತ್ತಿ ಜಿನುಗ್ತಿರೋವು (ಎಮುಳ. ೪೭).
**ಚಂಡಿಪುಂಡೆಯಾಗು** = ನೆನೆದು ಸೊಪ್ಪಾಗು : ನನ್ನ ತೊಡುಗೆಗಳೆಲ್ಲ ನೀರಲ್ಲಿ ನೆನೆದು ಚಂಡಿಪುಂಡೆಯಾಗಿ ಹೋದುವು (ನಡೆದಾ. II, ೧೦೯೩).
[ ← ಮರಾ. ಥಂಡೀ, ಥಂಡಾಈ ; ಹಿಂ. ಠಂಡೀ ]

**ತಂಡಿಲ** (ನಾ). ಹೋಮ ಹವನಗಳಿಗಾಗಿ ಶುಚಿಗೊಳಿಸಿ ಸಿದ್ಧಪಡಿಸಿದ ಚಚ್ಚೌಕವಾದ ಭೂಮಿ ; ಯಜ್ಞವೇದಿಕೆ : ಸ್ಥಂಡಿಲ; ತಂಡಿಲ (ಶಬ್ದಾನು. ೧೪೯ ಪ್ರಯೋ).
[<ಪ್ರಾ. ಥಂಡಿಲ. / ಸಂ. ಸ್ಥಂಡಿಲ ]

**ತಂಡಿಲು** (ನಾ). ಅಕ್ಕಿ ; ತಂಡುಲ : ಬೇಕಾದ ಬೇಳೆ ಬೆಲ್ಲವು ತುಪ್ಪ ತಂಡಿಲು ಜೋಕೆಯಾಗಿರ್ದ ಭಾಂಡವನು ನೀ ಕಟ್ಟಿ ಗೊಡೆಯೊಳಗೆ ತುಂಬು (ಅಮುಸಾಂ. ೫-೯): ಆ ಸತ್ತೆಂಬ ತಂಡಿಲು ಚಿದ್ರೂಪನಾದ ಶರಣನ ಮಹಾನುಭಾವಾಂತರಂಗ ಮೂರ್ತಿಗೊಂಡಿತ್ತೆಂಬುದೀಗ ಆ ಭತ್ತ ಸಿಕ್ಕಿತ್ತು ಅರಮನೆಯಲ್ಲಿ ಎಂಬ ಶಬ್ದಕ್ಕರ್ಥ (ಮೋಳಿಮಾ. ೨೪೧-೭೯೧ ಟೀಕೆ).
[ <ಸಂ. ತಂಡುಲ ]

**ತಂಡು$_1$** 'ತಂಡ' ನೋ.

**ತಂಡು$_2$** (ನಾ). ೧. ಕೋಲು ; ದೊಣ್ಣೆ ; ದಂಡ : (ಓ). ೨. ಭಾರವಾದ ಕಬ್ಬಿಣದ ಕೋಲು,–ಗದೆ: (ಓ). [ ←ತಮಿ. ತಣ್ಟು. / ಸಂ. ದಂಡ ]

**ತಂಡು$_3$** 'ತೊಂಡ$_1$' ನೋ.

**ತಂಡು$_4$** (ನಾ). ಮರದ ಸೌಟು : "ತಂಡೂಃ, ದಾರುಹಸ್ತಕಃ– ೨ ಕೈಬಟ್ಟು ಪೆಸರುಗಳು, ಮರದ ಸೊಟಕ, ಮರದ ಸೌಟು" (ಸಿದ್ಧಾಂತಿ. ೨೪೩).
[ ಸಂ. ತಂಡೂ ]

**ತಂಡು$_5$** (ನಾ). ಶಿವನ ದ್ವಾರಪಾಲಕರಲ್ಲಿ ಒಬ್ಬ ನಂದೀಶ್ವರ. P ಅಣಕ ಮತ್ತು ನೃತ್ಯಕಲೆಗಳಿಗೆ ಈತನೇ ಆಚಾರ್ಯಪುರುಷ: ಶಿವನಾ ಪ್ರಯೋಗದೊದವಂ ತವಕಂ ಮಿಗೆ ನೆನೆದು ತಂಡುವಿಂಗುದ್ಧತ ನೃತ್ಯವ ನೊರೆಯಲಾತನೊಲವಿಂ ತವೆ ಭರತಂಗಿತ್ತೊಡಾಯ್ತು ತಾಂಡವದ ಪೆಸರ್ (ಲ್ಯಾಸರಂ.೦-೧೨); ತುಂಬುರು ತಂಡುವು ಡಿಂಡಿಮ ಬಾರಿಸೆ (ಗಹೇಶ. ೦೦-೨೭೪). 'ತಾಂಡವ' ಪರಾ. [ ಸಂ. ]

**ತಂಡು$_6$** 'ತಂಡಿ' ನೋ.

**ತಂಡುಂಮುಂಡು**, ತಂಡಾಮುಂಡಾ, ತಂಡುಮುಂಡು, ತಂಡೋಮುಂಡೊ (ನಾ). ೧. ಚಲ್ಲಾಪಿಲ್ಲಿ ; ಅವ್ಯವಸ್ಥೆ ; ಅಸ್ತವ್ಯಸ್ತತೆ : ಖಂಡದ ದೊಂಟಿಯ ಸುತ್ತುಂ ತಂಡುಂಮುಂಡಾಗಿ ಬಿರ್ದ ಪೆಣಗಳ ಪುಂಜಂ ಬೆಂಡೆರ್ದುವು ಧುರದೊಳ್ ನೊರೆವಿಂಡೆದ್ದರ್ವಿಸುವ ಬಿಸಿಯ ನೆತ್ತರ ಕಡಲೊಳ್ (ಮಹಾನೇ. ೧೨-೨೭). **ತಂಡಾಮುಂಡಾ :** ೨. ಗೃಹಕೃತ್ಯದ ಹೊಣೆಗಾರಿಕೆಗಳಿಲ್ಲದವನು; ಆಶ್ರಯರಹಿತನಾದ ವ್ಯಕ್ತಿ : ತಂಡಾಮುಂಡಾ ವಾಸುದೇವ (ರೂಢಿ). **ತಂಡುಮುಂಡು :** ೧. ಖಳ ಶಿರೋಮಣಿ ರಕ್ತಬೀಜಾಸುರನ ಸಂತತಿಯು ಗಲಭೆ ಕೈಮೈಸೋಂಕಿಗ ನಿಮಿಷಲಲನೆಯರು ಮೋಣ್ಮೇರಿ ಬಾಳ್ವರೆ ಸಿಲುಕಿ ಕೆಡೆದರು ತಂಡುಮುಂಡಿಗೆ ಬೀದಿ ಬೀದಿಯಲಿ (ಅಂಬಿಕಾ. ೪೨-೪೮): "ಧಾಂಧಳೆ, ಕೋಟಲೆ" (ಪ್ರಭಣ). **ತಂಡೋಮುಂಡೊ :** (ಓ).
[ ?. / ತಮಿ. ತಣ್ಟಾಮುಣ್ಟಾ, ತಣ್ಟುಮಿಣ್ಟು = ಮೊಂಡುತನ ]

**ತಂಡುಮುಂಡು** 'ತಂಡುಂಮುಂಡಂ' ನೋ.

**ತಂಡುಲ,** ತಂಡುಳ (ನಾ). ೧. ಅಕ್ಕಿ: ನೆಟ್ಟನೆ ಪುಷ್ಪವಾಸನೆಯ ಕಪ್ಪುರ ಶಾಲಿಯ ತಂಡುಲಂಗಳಂ ನಿಟ್ಟಿಸರಿಟ್ಟು ಬಾಗಿ (ಸುಕುಮಾ. ೧೦-೧೦೮); ಪ್ರಜೆಯೆಲ್ಲಂ ಜಲಗಂಧಸ್ರಜ ತಂಡುಲ ಧೂಪದೀಪ ಚರು ತಾಂಬೂಲ ವ್ರಜದಿಂ ಪೂಜಿಸುವುದು (ಯಶೋಚ. ೪-೭೩); ಮೋಡಗಳ ಮೊರದಲ್ಲಿ ತಾರೆಗಳ ತಂಡುಲವ ಒನೆವ ವನಿತೆಯ ಹಾಗೆ ತೊನೆಯೆ ಗಾಳಿ (ಕರುಣಾ. ೧೬-೭). ೨. (ಕಮಲದ) ಬೀಜ: ತಿಳಿದ ತಿಳಿಗೊಳದ ತಳಿತ ತಾವರೆಯರಳ ತಂಡುಲದ ರುಚಿಯ ಕಳಹಂಸೆ ಬಯಸುವಂತೆ (ಆದಪ. ೧೬-೩೩); ತಾಮರಸತಂಡುಲಂಗಳ ಜಕ್ಕುಲಿಸಿ ಕೊಕ್ಕಿನಿಂ ನಲಿದು ವಧುಗೂಡಿ ಸೇವಿಪ ಬಿಸಿಲ್ವಕ್ಕಿಗಳಿಂ (ಪದ್ಮರಾ. ೮-೩೯). ೩. ಒಂದು ಅಕ್ಕಿಯ ಕಾಳಿನಷ್ಟು ತೂಕ; ಮುತ್ತು, ರತ್ನ ಮೊದಲಾದುವುಗಳನ್ನು ತೂಕಮಾಡುವ ಒಂದು ಪ್ರಮಾಣ: ೧೬ ತಂಡುಳ ಅಂದರೆ ೧ ರತಿ (ಮುಂಬಪ್ರಾ. ೧೩೭). ೪. ಕೋಶ, ರವಿ, ತಂಡುಲ, ಅಗ್ನಿ, ತಪ್ತಮಾಷ, ಜಲ, ವಿಷ ಎಂಬ ಏಳು ಬಗೆಯ ದಿವ್ಯಗಳಲ್ಲಿ ಒಂದು. 'ದಿವ್ಯ' ಪರಾ. ೫. ಒಂದು ಬಗೆಯ ಔಷಧಿ ಸಸ್ಯ; ವಾಯುವಿಳಂಗ. **ತಂಡುಳ:** ೧. ಮಧುರಮೆಂಬ ಕಳಮತಂಡುಳಮಂ ಕಯ್ಪೆಯೆಂಬುದು ದುಷ್ಪ್ರತೀತಿ (ಪಸಾರ. ೯೦೪-೧೦). [ಸಂ.]

**ತಂಡುಲೀಯ** (ನಾ). ಒಂದು ಬಗೆಯ ಸೊಪ್ಪು; ಕಿರುಕಂಸಾಲೆ; ಕೀರೆ ಸೊಪ್ಪು; ಚಿಲುಕೀರೆ: "ತಂಡುಲೀಯಃ, ಅಲ್ಪಮಾರಿಷಃ – ೨ ಕೀರೇ ಸೊಪ್ಪು" (ಸಿದ್ಧಾಂತಿ. ೧೨೭). [ಸಂ.]

**ತಂಡುಲೀಯಕ,** ತಂಡುಳೀಯಕ (ನಾ). = ತಂಡುಲೀಯ: "ನೀರದರವಂ ತಂಡುಲೀಯಕಂ ಮುದಿಪ್ಪಮೆನೆ ಕಿಱುಕುಸಾಲೆಯಕ್ಕುಂ" (ಮಂಗರಾ. ೪೨-೪೦). **ತಂಡುಳೀಯಕ:** "ತಂಡುಳೀಯಕಂ ಜಳಧರನಾಮಂ" (ವಸ್ತುಕೋ. ೩೭-೨೮). [ಸಂ.]

**ತಂಡುವಾದಿಸು** (ಕ್ರಿ). ಮೊಂಡುತನದಿಂದ ವಾದಿಸು; ವಿತಂಡವಾದ ಮಾಡು: ಇದು ರಾಗ ತೋರೆಯದವಗೆ ಮನಸಿಗೆ ಹತ್ತದು ಹೀಗೆ ಹಾಗ್ಯಾಕೆಂದು ತಂಡುವಾದಿಸಿದರೆ ಆಗುವುದೇನಯ್ಯಾ ಅದರಿಂದ ಫಲಿತಾರ್ಥ (ವಿಶ್ರುಸು. ೨೨-೫).

[ತೊಂಡು$_1$? + ವಾದಿಸು]

**ತಂಡುಳ** 'ತಂಡುಲ' ನೋ.

**ತಂಡುಳಜಳ** (ನಾ). ಅಕ್ಕಿಯನ್ನು ತೊಳೆದ ನೀರು; ಅಕ್ಕಿಯ ಕಚ್ಚು; ಅಕ್ಕಚ್ಚು: ಸಿರಿಕಂಡಂ ಬ್ರಾಹ್ಮಿಯೆನಿಪ್ಪೆರಡಂ ಮೇಣಲ್ಲದಂದು ತಂಡುಳ ಜಳದಿಂದರಸಿನಮಂ ಪುಣಿಸೆಯ ಬೇರ ರಸಮುಮಂ ಕುಡಿಯೆ ಕಿಡಿಸುಗುಂ ಸ್ಫೋಟಕಮಂ (ಲೋಕೋಪ. ೯-೨೫).

[ತಂಡುಳ (= ತಂಡುಲ) + ಜಳ$_2$ (= ಜಲ$_2$)]

**ತಂಡುಳೀಯಕ** 'ತಂಡುಲೀಯಕ' ನೋ.

**ತಂಡೆ** (ನಾ). ೧. ಒಂದು ಬಗೆಯ ಕಾಲಿನ ಆಭರಣ; ರುಳಿ: ಅಡಿಯು ತಾವರೆ ತಂಡೆಯಂಚೆಯು ತೊಡೆಯು ಬಾಳೆಯು ಬಳುಕುತಿಹ ಬಡನಡುವು ಬಳ್ಳಿಯು (ಅರ್ಜಾವಿ. ೨೦-೩೪). ೨. ಎತ್ತಿನ ಕೊರಳಲ್ಲಿ ಕಟ್ಟುವ ಬಣ್ಣ ಬಣ್ಣದ ದಾರಗಳನ್ನು ಹೆಣೆದು ಮಾಡಿದ ಪಟ್ಟಿ; ಕೊರಳಪಟ್ಟಿ: ಎತ್ತಿನ ಕೊರಳಲ್ಲಿ ತಂಡೆ ಹಾಕಿದ್ದೇನೆ (ರೂಢಿ).

[ದೇ.॥ ತಮಿ. ತಣ್ಟೈ; ಮಲ. ತಣ್ಡ; ತುಳು. ತಂಡೆ]

**ತಂಡೆಯ** (ನಾ). ಒಂದು ಊರಿನ ಹೆಸರು. P ಈಗಿನ ನಂಜನಗೂಡು ತಾಲ್ಲೂಕಿನ ತಾಂಡ್ಯ: ಮಯ್ಸೂರ್ ನಾಡ ತಣ್ಡೆಯದ ಎಳ್ಳಿಯಮ್ಮನ ಮಗಂ ಮಾದಯ್ಯ (ಮೈಆರಿ. ೧೯೩೭, ೫೫-೩; 1054); ಕಡೆಕೊಳಂ ಖಾರವುರಂ ತಣ್ಡೆಯದ ಮುಕ್ಕೂಡು ಮೂಡ ವೊಗದೆ ಪೋಗಿ (ಮೈಆರಿ. ೧೯೩೪, ೩೮-೭; 11ನೆಯ ಶತ). [?]

**ತಂಡೇಲ** (ನಾ). ದೋಣಿಯ ಅಥವಾ ಹಡಗಿನ ಯಜಮಾನ,– ಮುಖ್ಯಸ್ಥ: ಅಲ್ಲಿಲ್ಲದ ದೋಣಿಯ ತಂಡೇಲನನ್ನು ಕುರಿತು ಆರ್ಭಟಿಸಿದೆ (ಮೈಲಿಮಾ. ೫೦); ಬಂದರಿಗೆ ಹೋಗಿ ಅಲ್ಲಿನ ತಂಡೇಲರನ್ನು ಕರೆದು . . . ತನಿಖೆಮಾಡುತ್ತಾರೆ (ಜಾರುದಾ. ೬೩).

[ದೇ.॥ ತಮಿ. ತಣ್ಟಲ್, ತಣ್ಡೇಲ್; ಮಲ. ತಣ್ಡಲ್; ತುಳು. ತಂಡೆಲ್, ತಂಡೆಲೆ; ತೆಲು. ತಂಡೇಲು, ತಂಡಲು. / ಹಿಂ. ಮರಾ. ತಾಂಡೇಲ್]

**ತಂಡೋಮುಂಡೊ** 'ತಂಡುಂಮುಂಡು' ನೋ.

**ತಂತಿ** (ನಾ). ೧. ತಾಮ್ರ ಮುಂತಾದ ಲೋಹಗಳ ತೆಳುವಾದ ಎಳೆ; ತೆಳಂಕಂಬಿ; ಸರಿಗೆ: ಬೆರಲೊಳ್ ಬೀಣೆಯ ತಂತಿಗಳೊರಸಿದ ಕೆಂಗಲೆಗಳ್ (ಪಂಪಭಾ. ೬-೧೦); ಅರಿಭೂಪಾಳ ಸಿರಂಗಳಿಂದೆ ಸೊಡೆಯಂ ತದ್ಬಾಹು ಸಂದೋಹದಿಂ ಕರೆಯಂ ದಂಡಿಗೆ ಮಾಡಿ ಬೆಂನೆಸೆವ ಬೀವಿಂ ತಂತಿಯಂ ಕಟ್ಟಿ (ಎಕ. VI, ಕಡೂರು. ೧೫೬-೩೭; ಸು. 1190); ಪದಿನಾಲ್ಕು ತಂತಿಯಿಂ ಮೆಟಿಪ ವೀಣೆಯನಲ್ಲಿ ಪದಪಿನಿಂ ಪ್ರೇಳಯ್ಯ (ತಿರುನೀ. ೮೫-೨೩); ನೋಟ ರಾಯನ ಮೇಲೆ ನೆನಹು ರಾಗದ ಮೇಲೆ ನೀಟ ತಂತಿಯ ಮೇಲೆ ಬೆರಳು (ಭರಚ. ೫-೫೮); ಧಾತುಗಳಿಂದ ಬೇಕಾದಷ್ಟು ಉದ್ದ ತಂತಿಯನ್ನು ಎಳೆಯಬಹುದು (ಮುಂಬಯು. ೪-೯೩). ೨. ವೀಣೆ ಮೊದಲಾದ ತಂತಿವಾದ್ಯ: ತಾಳ್ಯಾಕ ತಂತ್ಯಾಕ ರಾಗದ ಚಿಂತ್ಯಾಕ (ಗರ. ೧೨೨-೭); ಜೀವದ ರಸ ಹಿಂಡಿ ತುಂತುರು ಮಳೆಯಾಗಿ ತಂತಿಯ ತುಂಬೆಲ್ಲ ಸಿಡಿಧಾಂಗ (ಸಖೀಗೀ. ೫೨-೦೪). ೩. ತಂತಿಯ ಮೂಲಕ ಕಳಿಸುವ ಸುದ್ದಿ; ತಾರು; ಟೆಲಿಗ್ರಾಂ: 'ಜಾಗ್ರತೆಯಾಗಿ ಹೊರಟು ಬಾ' ಎಂದು ತಂತಿ ಕೊಟ್ಟಿದ್ದನು (ಚಂದುಚಿ. ೭೭). **ತಂತಿಯ ದೀಪ** = ವಿದ್ಯುದ್ದೀಪ: ವಿದ್ಯುಚ್ಛಕ್ತಿ ಎಂದು ಹೇಳುವ ಬೆಳಕಿಗೆ ತಂತಿಯ ದೀಪ ಎಂತಲೂ ಹೇಳುವುದನ್ನು ಕೇಳಿದ್ದೇನೆ (ಕಓಸಾ. ೬೩).

[<ಪ್ರಾ. ತಂತೀ./ಸಂ. ತಂತ್ರಿ, ತಂತ್ರೀ]

**ತಂತಿಕಂಬ** (ನಾ). ವರ್ತಮಾನವನ್ನು ದೂರಕ್ಕೆ ಸಾಗಿಸುವ ತಂತಿಗಳನ್ನು ಬಿಗಿದ ಕಂಬ; ತಂತಿ ವರ್ತಮಾನದ ಕಂಬ: "ತಂತಿಕಂಬ; ತಾರುಕಂಬ" (Telegraph-post. ಪತ್ರಿನಿ. ೮೨). [ತಂತಿ + ಕಂಬ$_1$ (<ಕಂಭ)]

**ತಂತಿಕಚೇರಿ** (ನಾ). ತಂತಿ ವರ್ತಮಾನವನ್ನು ಕಳಿಸುವ ಕಚೇರಿ: (Telegraph-office. ಪತ್ರಿನಿ. ೮೨). [ತಂತಿ + ಕಚೇರಿ]

**ತಂತಿಕಟ್ಟು** (ಕ್ರಿ). ೧. ತಂತಿಯನ್ನು ಅಳವಡಿಸು: ವೀಣೆ . . . ಮೊದಲಾದ ತಂತಿಕಟ್ಟಿ ನುಡಿವ ವಾದ್ಯಮನಱುವುದು (ಆದಪ. ೬-೧೨). ೨. (ಆಲಂ) ನಿರ್ದಿಷ್ಟಪಡಿಸು; ಗೆರೆ ಎಳೆ: ಊರಗಾರಿಕೆ ವ್ಯವಹಾರದೊಳಗ ಹಾಂಗೆಲ್ಲಾ ತಂತೀಕಟ್ಟಿ ಕೆಲಸ ಸಾಗೂದುಲ್ಲ (ಗ್ರಾಮಾಯ. ೪೦).

[ತಂತಿ + ಕಟ್ಟು$_1$]

**ತಂತಿಕೊಡು** (ಕ್ರಿ). ತಂತಿಯ ಮೂಲಕ ಸಮಾಚಾರವನ್ನು ಕಳಿಸು: ಕಲಕತ್ತೆಗೆ ಹೊರಟ ಬಗ್ಗೆ ಬಾಬುಗಳಿಗೆ ತಂತಿಕೊಟ್ಟು ಹೊರಟುಬಿಟ್ಟೆನು (ಹೇಮಂತ. ೩೦೯). [ತಂತಿ + ಕೊಡು$_1$]

**ತಂತಿಜಾಲರಿ** (ನಾ). ತಂತಿಯಿಂದ ಮಾಡಿದ ಜಾಲರಿ: ಕಿಟಕಿ ಬಾಗಿಲುಗಳಿಗೆ ತಂತಿಜಾಲರಿ (wire-mesh) ಹಾಕಿಸುವುದರಿಂದ ಇವುಗಳ ಕಾಟ ಕಡಿಮೆಯಾಗುವುದು (ಗೃಹವಿ. ೧೮೭). [ತಂತಿ + ಜಾಲರಿ]

**ತಂತಿಟಪ್ಪಾಲು** (ನಾ). ತಂತಿಯ ಮೂಲಕ ಕಳಿಸುವ ವರ್ತಮಾನ,– ಸುದ್ದಿ; ಟೆಲಿಗ್ರಾಂ: (+). [ತಂತಿ + ಟಪ್ಪಾಲು (<ಟಪಾಲು)]

**ತಂತಿಬಲೆ** (ನಾ). = ತಂತಿಜಾಲರಿ: ಈ ಕೋಣೆಯೂ ಎರಡು ತಂತಿಬಲೆಗಳಿಂದ ಇಬ್ಭಾಗವಾಗಿತ್ತು (ಪುನರು. ೧೮೮). [ತಂತಿ + ಬಲೆ$_1$]

**ತಂತಿಬಿಡು** (ಕ್ರಿ). ತಂತಿ ಸಮಾಚಾರವನ್ನು ಕಳಿಸು; ತಾರು ಕೊಡು: ಅದನ್ನು ಕೇಳಿ ಅವರು ನನಗೆ ತಂತೀ ಬಿಟ್ಟಿದ್ದರು (ಸ್ಮೃತಿಚಿ. ೫೦೩).

[ತಂತಿ + ಬಿಡು$_1$]

**ತಂತಿಮೆತ್ತೆ** (ನಾ). ಒಳಗೆ ಸ್ಥಿತಿಸ್ಥಾಪಕತ್ವವುಳ್ಳ ತಂತಿಯನ್ನು ಅಳವಡಿಸಿ ಮಾಡಿದ ಮೆತ್ತೆ,– ಆಸನ : ತಂತಿಮೆತ್ತೆಯ ಮೇಲೊಂದು ಶುಭ್ರವಾದ ಹಾಸುಗೆಯಿತ್ತು (ಪುನರು. ೨೬೫). [ ತಂತಿ + ಮೆತ್ತೆ ]

**ತಂತಿಮೇಹ** (ನಾ). = ತಂತುಮೇಹ : (೬). [ <ಸಂ. ತಂತುಮೇಹ ]

**ತಂತಿವರ್ತಮಾನ** (ನಾ). ದೂರಲೇಖಕದ ಮೂಲಕ ಕಳಿಸಿದ ಸುದ್ದಿ,– ಸಮಾಚಾರ: ೨೨೦೦೦ ಮೈಲು ದೂರ ತಂತಿವರ್ತಮಾನವು ನಡೆಯುತ್ತದೆ (ಭೂಗೋಳ. ೪೦). [ ತಂತಿ + ವರ್ತಮಾನ ]

**ತಂತಿವಾದ್ಯ** (ನಾ). ತಂತಿಗಳಿಂದ ಕೂಡಿರುವ ವೀಣೆ, ತಂಬೂರಿ ಮೊದಲಾದ ವಾದ್ಯ : " ತತಂ–ತಂತಿವಾದ್ಯಂ " (ಕಾಶಕ್ಕ. ೨೩೪) ; ತಂತೀವಾದ್ಯ ಯಾವುದೇ ಆದರೂ ಕಾಲಕ್ರಮೇಣ ವೀಣಾ ಎಂಬ ರೂಢನಾಮದಿಂದ . . . ಕಂಡುಬರುತ್ತದೆ (ಸಂಗೀಜಂ. ೧೦೪). [ ತಂತಿ + ವಾದ್ಯ ]

**ತಂತಿವಾರ್ತೆ** (ನಾ). = ತಂತಿವರ್ತಮಾನ: ತಂತಿವಾರ್ತೆ ಕೇಳಿ ತಕ್ಷಣ ಹೊರಟರು (ರೂಢಿ). [ ತಂತಿ + ವಾರ್ತೆ ]

**ತಂತಿಸಮಾಚಾರ** (ನಾ).=ತಂತಿವರ್ತಮಾನ : ತಂತೀಸಮಾಚಾರ, ವಾಯುಸಮಾಚಾರ, ವೀಣಾವಾದನ ಇತ್ಯಾದಿ ಸೂಕ್ಷ್ಮಸ್ವರೂಪವನ್ನು ಪಡೆಯುತ್ತದೆ (ಜೀವಾತ್ಮ. ೧೭೪). [ ತಂತಿ + ಸಮಾಚಾರ ]

**ತಂತಿಹಟುಕ** (ನಾ). ಸಂಬಂಧವನ್ನು ಕಡಿಯುವವನು : ಸಂತೈಸಿಕೊಂಡು ಹೋದನೊ ದಾರಿಯಲಿ ಸಿಕ್ಕಿ ಭ್ರಾಂತುಗೊಂಡನೊ ಬೇಡ ಹೇಳವ್ವ ತಾಯಿಯೆನೆ ತಂತಿಹಟುಕನನಾರು ಸೀಯದಿರ್ದರೆ ಹೋದನೆಂದಳಾ ಪದ್ಮಾವತಿ (ಗುಭಜ. ೨–೭೯): "ಅಂಕೆಯಿಲ್ಲದವನು, ಲಂಗು ಲಗಾಮಿಲ್ಲದವನು" (ಗುಭಜ. ಕೋಶ). [<ತಂತು₂ + ಹಟುಕ (<ಪಟುಕ) ]

**ತಂತು₁** (ನಾ). ೧. ಎಳೆ ; ದಾರ ; ನೂಲು ; ಸೂತ್ರ : "ತಂತು ಗುಣಂ ಸೂತ್ರಂ " (ವಸ್ತುಕೋ. ೬೬–೮೭) ; "ನೂತ ನೂಲೆಟೆಯಲ್ಲಿ . . . ತಂತುವದು " (ಮಂಗರಾ. ೧೫೪–೬೬) ; ಪಟವ ಹಱಿದು ತಂತುವ ನೋಡಲದೇಕೆ ಆ ಪಟವೇ ತಂತುವೆಂದಱಿದೊಡೆ ಸಾಲದೇ (ದೇದಾವ. ೬೦–೧೨೫) ; ಸ್ನಾಯುಗಳ ಬಣ್ಣ ನಸುಗೆಂಪು; ಅವು ಹಲವು ತಂತುಗಳಿಂದುಂಟಾಗಿರುತ್ತವೆ (ಮುಂಬಯಿ. ೬–೩೦೪) ; ನಿರಾಕಾರ ಏಕಾಂತ ತಂತು ಸುತ್ತುತ್ತಲಿತ್ತು ನನ್ನ (ಅರಳು. ೧೯೪–೫). ೨. ಸಂಬಂಧ. 'ತಂತಿಹಟುಕ' ಪರಾ.

**ತಂತುಮಾತ್ರಬ್ರಾಹ್ಮಣ**=ತಂತಂಹಾರುವ: ಇವುಗಳಲ್ಲಿ ೧೧೫ ಕುಲಗಳು ತ್ರಿಕರ್ಮಿಗಳು ; ತಂತುಮಾತ್ರ ಬ್ರಾಹ್ಮಣರು (ತುಳುನಾ. ೧೫೦). **ತಂತುಮಾತ್ರಬ್ರಾಹ್ಮಣ್ಯ** = ಜನಿವಾರದಿಂದ ಮಾತ್ರ ಬ್ರಾಹ್ಮಣನಾಗಿರುವಿಕೆ ; ಆಚಾರವಿಲ್ಲದೆ ಜಾತಿಯಿಂದ ಬ್ರಾಹ್ಮಣನಾಗಿರುವುದು : (೬). [ಸಂ.]

**ತಂತು₂** (ನಾ). ೧. ಉಪಾಯ ; ತಂತ್ರ : ಆಚಾರಮಾರ್ಗ ತಂತುವನಱಿವನಾವನೊರ್ವಂ ಬ್ರಹ್ಮವರ್ಚಸನಕ್ಕುಂ (ಮಂಗರಾ. ೭೪–೧) ; ಪಂಥದಲ್ಲಿ ಏಕಾಂತದಲ್ಲಿ ಕಾಂತೆಯ ಸಂಗಡದಲ್ಲಿ ಸಂತರ ಬಳಿಯಲ್ಲಿ ತಂತಿನಲ್ಲಿ ವನಾಂತರದಲ್ಲಿ . . . ಎಂತಾದರೂ ಮನದಂತಿರಲಿ ಸಂತತ ಹರಿಪಾದಕ್ರಾಂತನಾಗಿ (ವಿಹಾಸು. ೬೯–೫) : ಎಲ್ಲಾ ಕೊಡಗ ಮಾಡಿದ ತೂತು (ಹಂಗಾಳ್ಮ. ೪೦೪). 'ತಂತುಗಾರ' ಪರಾ. ೨. ಮುಖ್ಯವಾದುದು ; ಪ್ರಧಾನವಾದ ವಿಷಯ: " ಮುಖ್ಯದಲ್ಲಿ . . . ತಂತುವದು " (ಮಂಗರಾ. ೧೫೪–೬೬). 'ತಂತ್ರ' ಪರಾ. [ ? ]

**ತಂತುಕ** (ನಾ). ೧. (ರೇಷ್ಮೆಹುಳು, ಜೇಡರ ಹುಳು ಮೊದಲಾದುವುಗಳಲ್ಲಿ) ನೂಲನ್ನು ಹೊರಡಿಸುವ ಅಂಗ : ರೇಷ್ಮೆಕೋಶಗಳನ್ನು (Cocoons) ಮಾಡಲು ತಂತುಕ (Spinneret)ದ ಮೂಲಕ ಹೊರಬರುತ್ತದೆ (ಕೀಟಬಿ. ೯೨). ೨. ದಾರವನ್ನು ತೆಗೆಯುವ ಸಾಧನ : ಸಂಶ್ಲೇಷಿತ ದಾರಗಳನ್ನು (Synthetic fibre) ತೆಗೆಯುವ ತಂತುಕಗಳನ್ನು (Spinneret) . . . ಬಳಸುತ್ತಾರೆ (ಶಿಲ್ಪನಾ. ೩೯೯). [ ಸಂ. ]

**ತಂತುಕಾರ**(ನಾ).ಜೇಡರ ಹುಳು: ನಿಚ್ಚಂ ತೊಯ್ದ ಮೃತಶಿಲೆಯ ಗೋಶಾಲೆ, ತಂತುಕಾರ ಸಹಸ್ರ ಜಾಲ ವೈರೂಪ್ಯದಿಂ, ಖಿನ್ನಮಿದೆ ಪಾಳೂರ ತುರುಪಟ್ಟಿಯೊಲ್ (ಶ್ರೀರಾಮಾ. ೮೫೦–೧೦). [ ಸಂ. ]

**ತಂತುಕುಳ** (ನಾ). "ಬ್ರಹ್ಮವರ್ಚಸ್ಸುಳ್ಳವರ ಸಮೂಹ (ಯಜ್ಞವನ್ನು ಮಾಡುವವರ ಗುಂಪು) " (ಲಶಿಜಂ. ಕೋಶ) : ದಧೀಚಿಮುನಿ ಯಜ್ಞ ಮಂಟಪಕೆ ಬಂದು ತಂತುಕುಳ ನೆರೆದುದಿನ್ನೆಲ್ಲರಳಿವುದು ದಿಟಂ . . . ಎಂದು ಮುಂತಿರ್ದು ನುಡಿದಂ (ಲಶಿಜಂ. ೧೮–೬). [ ತಂತು₂ + ಕುಳ₅ (= ಕುಲ)]

**ತಂತುಕ್ರಿಯೆ** (ನಾ). ನೂಲಿನಲ್ಲಿ ಕೆಲಸ ಮಾಡುವುದು ; ಬಟ್ಟೆಯನ್ನು ನೇಯುವುದು: " ಕಿಸುವಣ್ಣ ಕೊರ್ಬುಗಳೊಳಂ . . . ತಂತುಕ್ರಿಯೆಯೊಳು ಕೆಚ್ಚೆಂದಕ್ಕು " (ಶಬ್ದಮಂ. ೮೪) ; " ಘೃತದೊಳು ಪೇಟಲೇಂ ತಂತುಕ್ರಿಯೆಯೊಳು ನೆಯ್" (ಶಬ್ದಮಂ. ೧೦೩) [ ತಂತು₁ + ಕ್ರಿಯೆ ]

**ತಂತುಗಟ್ಟು₁** (ಕ್ರಿ). (ಪಾಕ ಮೊದಲಾದುವು) ದಾರದಂತೆ ಎಳೆ ಬರುವ ಹಾಗೆ ಜಿಗುಟಾಗು ; ಎಳೆಪಾಕವಾಗು : ಅದು ಸುಮಾರು ಮೂರು ತಾಸು ಕುದಿದು ಕಷಾಯವು ತಂತುಗಟ್ಟುವ ಹಾಗೆ ಜಿಗುಟಾದ ಮೇಲೆ . . . ಕುದಿಸುವರು (ಮುಂಬಯಿ. ೫–೨೦೦). [ ತಂತು₁ + ಕಟ್ಟು₁ ]

**ತಂತುಗಟ್ಟು₂** (ನಾ). ದೇಹದಲ್ಲಿಯ ಮೂಳೆಗಳನ್ನು ಒಂದಕ್ಕೊಂದು ಸೇರಿಸಿ ಬಿಗಿಯುವ ಮೆತುವಾದ ಎಳೆಗಳಂತಹ ರಚನೆ; ಅಸ್ಥಿರಜ್ಜು : ಮೆಲ್ಲೆಲುಬುಗಳು (ಕಾರ್ಟಿಲೇಜಸ್), ತಂತುಗಟ್ಟುಗಳು (ಲಿಗಮೆಂಟ್ಸ್), ಸ್ನಾಯುಗಳು ತಗುಲಿಕೊಳ್ಳುವ ಕಂಡರಗಳಲ್ಲೂ (ಟೆಂಡನ್ಸ್) ಸೇರಿಕೊಳ್ಳುತ್ತದೆ (ಕವಿಕೋ. I, ೧೫). [ ತಂತು₂ + ಕಟ್ಟು₂ ]

**ತಂತುಗಾರ** (ನಾ). ಉಪಾಯಗಾರ ; ತಂತ್ರಗಾರ ; ಮೋಸಗಾರ : ತಂತುಗಾರನೊ ಶೃಂಗಾರವರನೊ ಪಂಥದ ದೈವವೆ ವಿಜಯವಿಠ್ಠಲರೇಯಾ (ತೀರ್ಥಮ. ೧೩೩) ; ತಂತುಗಾರನೆ ನಮ್ಮ ವಿಜಯ ವಿಠ್ಠಲ ಸ್ವಾತಂತ್ರ ಸರ್ವೋತ್ತಮ (ವಿಕೀರ್ತಿಸು. ೩–೪). [ತಂತು₁ + –ಕಾರ₁ (<–ಕಾಱ)]

**ತಂತುಚಿತ** (ನಾ). ನೂಲಿನಿಂದ ಕೂಡಿದುದು; ನೂಲಿನಿಂದ ನೆಯ್ದುದು; ಬಟ್ಟೆ : " ತಂತುಚಿತಂ ಕಾರ್ಪಾಸಕಂ " (ವಸ್ತುಕೋ. ೭೮–೧೯). [ ಸಂ. ]

**ತಂತುನಾಗ** (ನಾ). ಒಂದು ಬಗೆಯ ಮೀನು; ಶಾರ್ಕ್‌ಮೀನು. [ ಸಂ. ]

**ತಂತುನಾಭ** (ನಾ). ಜೇಡರ ಹುಳು. [ ಸಂ. (ತಂತು + ನಾಭಿ + –) ]

**ತಂತುಪಟ** (ನಾ). ನೂಲಿನ ಬಟ್ಟೆ : ತಂತುಪಟ ಸಾಕಿನ್ನು ಬೆಳವಿಗೆಗಂತವಾದುದು ಸುಲಿಯದಿರಿ ಹೋ (ತೊರರಾ. ೫–೮–೨೬). [ ತಂತು₁ + ಪಟ₃ ]

**ತಂತುಪಾಕ** (ನಾ). ಎಳೆ ಬರುವಂತೆ ಜಿಗುಟಾದ ಪಾಕ ; ಎಳೆಪಾಕ ; ಹದವಾದ ಪಾಕ : ನಾಲ್ಕುವರಹ ತೂಕ ಪಚ್ಚಗರ್ಪೂರವಂ ಪುಡಿ ಮಾಡಿ ಪಾಕದಲ್ಲಿ ಹಾಕಿ ತಂತುಪಾಕದಲ್ಲಿಳುಹಿ (ಸಕಪ್ಪ. ೧೩೬). [ತಂತು₁+ಪಾಕ₂]

**ತಂತುಮೇಹ** (ನಾ). ಮೇಹರೋಗದ ಒಂದು ಅವಸ್ಥೆ : (೬). [ತಂತು₂ + ಮೇಹ ]

**ತಂತುಯಂತ್ರ** (ನಾ). ನೂಲುವ ಯಂತ್ರ ; ರಾಟೆ : " ರಾಟಾ — ತಂತುಯಂತ್ರಂ " (ಕಾಶಕ್ಕ. ೧೬). [ ತಂತು₁ + ಯಂತ್ರ ]

**ತಂತುರ** (ನಾ). ಉಪಾಯ ; ತಂತ್ರ : ಉಕಾರಕ್ಕೆ–ಅಲ್ಪ–ಅಲುಪ . . . ತಂತ್ರ–ತಂತುರ (ಶಮದ. ೨೫೪ ಪ್ರಯೋ). [ <ಸಂ. ತಂತ್ರ ]

**ತಂತುವಾಯು** (ನಾ). ೧. ಬಟ್ಟೆನೇಯುವವನು; ನೇಕಾರ: "ಕುವಿಂದಾಖ್ಯೆ ತಂತುವಾಯಂಗೆ" (ವಸ್ತುಕೋ. ೬೬–೮೭). ೨. ಜೇಡರಹುಳು : " ತಂತುವಾಯಃ–ಜೇಡನ ಪುಳುವುಂ, ಜೇಡನುಂ " (ಕಾಶಕ್ಕ. ೨೩೪) ; ತಂತುವಾಯುದಿಂದೆಮ್ಮ ಲೋಕದೊಳಗಿನ್ನದೇನು ಬಂತು? ಅಲ್ಲಿ, ಇಲ್ಲಿ, ಎಲ್ಲೆಲ್ಲಿ ತೂಗಾಡಿ, ತಂತು, ತಂತು, ತಂತು! (ಚಿಂತನ. ೫೪–೧೦). ೩. ನೇಯುವುದು ; ನೆಯ್ಗೆ. ೪. ಮಗ್ಗ : " ಮಗ್ಗಂ ತಂತುವಾಯುಮುಕ್ಕುಂ" : (ಮಂಗರಾ. ೧೧೩–೮). [ ಸಂ. ]

**ತಂತುಸ್ನಾಯು** (ನಾ). ಸೂಕ್ಷ್ಮವಾದ ಎಳೆಗಳನ್ನುಳ್ಳ ಸ್ನಾಯು : ತಂತುಸ್ನಾಯುವಿನ (Fibre Mascular) ಬೆನ್ನ ಬಳಿಯ ವಪೆ (ಕೀಟಬಿ. ೩೨). [ ತಂತು$_1$ + ಸ್ನಾಯು ]

**ತಂತುಹಾರುವ** (ನಾ). ಜನಿವಾರವನ್ನು ಧರಿಸುವುದರಿಂದ ಮಾತ್ರ ಬ್ರಾಹ್ಮಣ ಎನಿಸಿಕೊಂಡವನು; ಹುಟ್ಟಿನಿಂದ ಮಾತ್ರ ಬ್ರಾಹ್ಮಣ ನಾಗಿದ್ದು ಯೋಗ್ಯ ಆಚರಣೆಯಿಲ್ಲದವನು : ತಂತುಹಾರುವನಲ್ಲ ಸಾಕ್ಷಾತ್ ಬೊಮ್ಮನಪ್ಪನು (ಬಸವು. ೫೫–೩೩). [ ತಂತು$_1$ + ಹಾರುವ (<ಪಾರ್ವ) ]

**ತಂತೋತಂತು** (ಅ). ಎಳೆಎಳೆಯಾಗಿ; ಸಂಪೂರ್ಣವಾಗಿ; ಚಾಚೂ ತಪ್ಪದೆ ; ಅಕ್ಷರಶಃ : ನಿನ್ನ ತರ್ಕ ತಂತೋತಂತು ಸರಿಯಾದದ್ದೆ ನೋಡು (ಅಶ್ವಮೇ. ೫) ; ನನ್ನ ಅನುಭವಕ್ಕೆ ಮಾತ್ರ ಈ ಮಾತು ತಂತೋತಂತು ಅನ್ವಯಿಸಿತು (ಕುಮಾಕಾ. ೫೩). [← ಮರಾ. ತಂತೋತಂತ ]

**ತಂತ್ರ** (ನಾ). ೧. ದಾರ ; ನೂಲು : ತಂತು : ನೆಯ್ದಾಳುತಿದೆ ಜಗವ ನೊಂದತಿ ವಿರಾಡ್ಮನಂ, ಸೂಕ್ಷ್ಮಾತಿಸೂಕ್ಷ್ಮ ತಂತ್ರದಿ ಬಿಗಿದು ಕಟ್ಟಿಯುಂ ಜೀವಿಗಳ್ಗಿಟ್ಟೆಯಾ ಸ್ವಾತಂತ್ರ್ಯಭಾವಮಂ ನೀಡಿ (ಶ್ರೀರಾಮಾ. ೫೮–೧೩೨). ೨. ನೇಯುವಿಕೆ ; ನೆಯ್ಗೆ. ೩. ಮಗ್ಗ. ೪. ಹೊದಿಕೆ ; ಪರಿಧಾನ. ೫. ಧಾರ್ಮಿಕ ಉತ್ಸವ, ಸಮಾರಂಭ ಮೊದಲಾದವುಗಳ ಪ್ರಧಾನ ವಾದ ವಿಧಿ, ಕ್ರಮ ಮತ್ತು ಅನುಷ್ಠಾನ: ಓಂ ನಮ ಶಿವಾಯ ಎಂಬ ಮಂತ್ರವ ಮೀಟಲಮ್ಮದೆ ನಿಂದುದು ತರ್ಕ ಭಯಂಕರ ಭ್ರಮೆಗೊಂಡಿತ್ತು ಮಂತ್ರ ತಂತ್ರ (ಬಸವ. ೮೧) : ಧರ್ಮವೇ ಜಯವೆಂಬ ದಿವ್ಯಮಂತ್ರ ಮರ್ಮವನ್ನರಿತು ಮಾಡಲು ಬೇಕು ತಂತ್ರ (ಪುರಂದ. ೨–೬೫ ಪಲ್ಲವಿ). ೬. ಸಿದ್ಧಾಂತ ; ತತ್ತ್ವ. ೭. ಶಾಸ್ತ್ರ : ನಿಜಸ್ವರೂಪ ನಿರೂಪಣ ಚಕಿತ ಸಕಲಸಮಾಮ್ನಾಯತಂತ್ರ ಲಕ್ಷ್ಮೀಕಾಂತ (ಜಗವಿ. ೧–೮೦ ವ) : ವಿದಿತವೆನೆ ವೇದಘೋಷದ ಪುರಾಣಪ್ರಸಂಗದ ತರ್ಕ ತಂ[ಪಾಠಾಂ. ಮಂ]ತ್ರ ಸಂವಾದದ . . . ಸಂಭ್ರಮಕೆ ಬೆರಗಾದನು ಹರಿಶ್ಚಂದ್ರನು (ಹರಿಕಾ. ೬–೩೯) ; ತಂತ್ರ ಗಳಲ್ಲಿ ಅನೇಕ ತಂತ್ರಗಳು ಶಾಕ್ತಮತವನ್ನು ನಿರೂಪಿಸುತ್ತವೆ . . . ವೇದ ಗಳು, ಆಗಮಗಳು, ತಂತ್ರಗಳು, ಪುರಾಣಗಳು – ಈ ನಾಲ್ಕು ವಿಭಾಗ ಗಳಲ್ಲಿಯೂ ಈ ಸಂಪ್ರದಾಯವನ್ನು ಕಾಣಬಹುದು (ಭಾರದ. ೨೫೧). ೮. ಇಂದ್ರಜಾಲ ; ಯಕ್ಷಿಣೀವಿದ್ಯೆ. ೯. ಔಷಧಿದ್ರವ್ಯ ; ಮೂಲಿಕೆ. ೧೦. ಉಪಾಯ ; ಹಂಚಿಕೆ ; ಯುಕ್ತಿ : ಆಗಳ್ ಮಂತ್ರಮಂ ತಂತ್ರದಿಂ ತಱಿದು ಪೊಸಮಸೆಯ ವಿಶಿಖಂಗಳಿಂ ಪಗೆಯ ಬಿಲ್ಲಂ . . . ಮುಕ್ಕಡಿಗೆಯ್ದು (ರಾಮಾಶ್ವ. ೧೪೫–೨೪) ; ಉರಗನ ವಿಷಕಿದೆ ಔಷಧಿ ಮಣಿಮಂತ್ರ ಖಳನ ವಿಷಕಿಲ್ಲವೋ ತಂತ್ರ (ಇಂಚಾಪ. ೧೪೩–೪) ; ಮಂತ್ರ ತಿಳಿಯದಿದ್ದರೂ ತಂತ್ರಕ್ಕೆ ಕಡಿಮೆ ಇಲ್ಲ (ಗಾದೆ). ೧೧. ಕಪಟೋಪಾಯ ; ಸಂಚು : ಜ್ವಾಲೆ . . . ಅರ್ಜುನನ ಮೇಲೆ ತಂತ್ರವನೆಸಗಿ ಶಾಪಮಂ ಕುಡಿಸಿದಳ್ (ಜೈಮಿಭಾ. ೯ ಸೂಚನೆ) : ಸುಟ್ಟು ಕುಹಕೋಪಾಯ ಕೆಟ್ಟ ತಂತ್ರಗಳನ್ನು . . . ಬಟ್ಟೆ ತುದಿಯನು ಹೇಗೆ ಮುಟ್ಟಲಾಪುದೆ ನೋಡು (ಕಎಪು. ೨–೩); ಮುಕ್ತಾಂಬೆಯ ತಂತ್ರಗಳು ನಮಗೆ ಗೊತ್ತಾಗಿವೆ (ರಾವಿಜ. ೧೫). ೧೨. ಪ್ರತಿಜ್ಞೆ ; ಶಪಥ. ೧೩. ಗ್ರಂಥದ ಒಂದು ಭಾಗ, ಅಧ್ಯಾಯ : 'ಪಂಚತಂತ್ರ' ಪರಾ. ೧೪. ರಾಜನ ಪರಿವಾರ: ಅರಸನಡಿವಜ್ಜೆಯಂ ನೋಡುತ್ತಂ ಪೆಱಗಣಿಂದಂ ತಂತ್ರಮೆಲ್ಲಂ ಬಂದು . . . ಊರೊಳಗೆಲ್ಲಮಱಿಸಿ (ವಡ್ಡಾರಾ. ೧೧೧-೧೦). ೧೫. ಕೂಟ ; ಸಭೆ. ೧೬. ಸೈನ್ಯ ; ಪಡೆ : ತಮ್ಮ ಬೆಸದಿಂ ತಂತಮ್ಮ ಠಾಣಾಂತರಂಗಳೊಳಿರ್ದಂಗಜತಂತ್ರದಂತೆಸೆವಿನಿಂ ಚೆಲ್ವಾದುವಿವಮ್ಮಾವುಗಳ್ (ಆದಿಪು. ೧೧–೯೬). 'ತಂತ್ರಪಾಲ', 'ತಳತಂತ್ರ$_1$' ಪರಾ. ೧೭. ಕುಲ; ವಂಶ. ೧೮. ಅಲಂಕಾರ ; ಸಿಂಗಾರ. ೧೯. ಪ್ರಧಾನವಾದ ವಿಷಯ ; ಮುಖ್ಯವಾದುದು. ೨೦. ಪರಮಾರ್ಥ ; ಆತ್ಯಂತಿಕ ಸತ್ಯ. ೨೧. ಪ್ರಕ್ರಿಯೆ ; ಪ್ರಯೋಗ ವಿಧಾನ : ಪಾತ್ರಗಳ ಅಂತರಂಗವನ್ನು ಅವುಗಳ ನಡೆವಳಿಕೆಯಲ್ಲಿಯ ವಿರೋಧಗಳ ಮೂಲಕ ಚಿತ್ರಿಸುವದು ಇಲ್ಲಿಯ ತಂತ್ರಗಳಲ್ಲೊಂದಾಗಿದೆ (ಹೊಸಕ್ಕ. ೨೮೪) ; ಅವರ ರಚನೆಗಳಲ್ಲಿ, ಗಾಯನದಲ್ಲಿ ಅಥವಾ ವಾದನದಲ್ಲಿ ಬಳಸಿದ ಹೊಸ ತಂತ್ರ . . . ಇಲ್ಲಿ ಕಾಣಬಹುದು (ಸಂಗೀತ. VI, ೩೬೩೫) ; "ಉಪಾಯ ಪರಿಧಾನ ವಿಧಾನ ಪ್ರಧಾನ ಸೇನೆ ಸಿಂಗರ ಪರಮಾರ್ಥ ತಂತು ಕುಲಭೇದಗಳಿಂತಿವು ತಂತ್ರವಾಚಕಂ" (ನಾನಾರ. ೭೬). ೨೨. ವಶ; ಅಧೀನ: ತಂತ್ರವೆಂದರೆ ಅಧೀನವೆಂದರ್ಥ (ಹಿಂದಸಾ. ೨೩೬). ೨೩. ಆಡಳಿತ ; ರಾಜ್ಯಭಾರ : 'ಗಣತಂತ್ರ' ಪರಾ.

**ತಂತ್ರಮಾಡು** = ಉಪಾಯಮಾಡು : ಏನೋ ತಂತ್ರಮಾಡಿ ಕೆಲಸ ಗಿಟ್ಟಿಸಿಬಿಟ್ಟ (ರೂಢಿ). [ ಸಂ. ]

**ತಂತ್ರಂಬೆರಸು** (ಕ್ರಿ). ಪರಿವಾರದಿಂದ ಕೂಡಿಕೊಂಡಿರು; ಗುಂಪಿನೊಡನೆ ಇರು : ಭೋಗಿಕಟಕನ ಗಾಣಪತ್ಯಕೆ ಹೋಗನೇ ತಂತ್ರಂಬೆರಸಿ ಶಿವಯೋಗ ದಿಂದ ಕುಮಾರಪಾಲಕ ಗುರ್ಜರನು ಮುನ್ನ (ಬಸವು. ೫೪–೭೫). [ ತಂತ್ರ + ಬೆರಸು$_1$ ]

**ತಂತ್ರಕ** (ನಾ). ಹೊಸಬಟ್ಟೆ ; ನೀರಿಗೆ ಹಾಕದೆ ಇರುವ ಬಟ್ಟೆ. [ ಸಂ. ]

**ತಂತ್ರಗಾರ** (ನಾ). ಉಪಾಯಗಾರ ; ಚತುರ : ಆ ಉಮೇದುವಾರರು ಬಹಳ ತಂತ್ರಗಾರರು (ಮಲೆನಾ. ೧೨೬) ; ತಂತ್ರಗಾರನನ್ನು ಕುತಂತ್ರಗಾರ ಜಯಿಸಿದ (ಗಾದೆ). [ ತಂತ್ರ + – ಗಾರ (< – ಕಾಱ) ]

**ತಂತ್ರಗಾರಿಕೆ** (ನಾ). ಉಪಾಯಕುಶಲತೆ; ಚಾತುರ್ಯ: ಬಂದ ಗಂಡಾಂತರ ಗಳನ್ನು ಬುದ್ಧಿಪೂರ್ವಕವಾದ ಉಪಾಯಾಂತರಗಳಿಂದ ಪರಿಹರಿಸುವ ಜಾಣ ತನಕ್ಕೆ ತಂತ್ರಗಾರಿಕೆ ಎಂದು ಹೆಸರು (ವಾರಾಕ್ಯ. ೬೦). [ತಂತ್ರಗಾರ + – ಇಕೆ]

**ತಂತ್ರಗೈ** (ಕ್ರಿ). ಉಪಾಯಮಾಡು ; ಯುಕ್ತಿಯನ್ನು ಹೂಡು : ಶಕ್ತಿ ಯಿಂದಾಗದುದಾಗದೆ ತಂತ್ರಕೆ ತಂತ್ರಗೈವುದು ನೀನು ಹಾಗೆ (ಇಂಚಾಪ. ೯೦–೩೭). [ ತಂತ್ರ + ಗೈ (<ಕೆಯ್$_1$) ]

**ತಂತ್ರಜ್ಞಾನ** (ನಾ). ಪ್ರಯೋಗ ಪರಿಜ್ಞಾನ ; ಶಾಸ್ತ್ರೀಯ ಜ್ಞಾನ : ವಿದೇಶಿ ವಿಮರ್ಶಕರು . . . ಭಾರತೀಯ ಕಲಾವಿದರಿಗೆ ತಂತ್ರಜ್ಞಾನವೇ ಇಲ್ಲವೆಂದು ತೆಗಳಿದ್ದಾರೆ (ಭಾರದ. ೫೮೦). [ ತಂತ್ರ + ಜ್ಞಾನ ]

**ತಂತ್ರನಿಯಂತ್ರಣ** (ನಾ). ಸೈನ್ಯವನ್ನು ನಿಯಂತ್ರಿಸುವುದು ; ಸೈನ್ಯಕ್ಕೆ ಮಾರ್ಗದರ್ಶನ ಮಾಡುವುದು : ತಂತ್ರನಿಯಂತ್ರಣಂ ಬಿನದವೋಲಗ ಮಕ್ಕರಗೊಟ್ಟಿ ಕಾರ್ಯ ಸನ್ಮಂತ್ರಂ ... ತ್ರಿಜಗದ್ಗುರು ಪ್ರಣತಿಯೆಂಬಿವನಾ ಗಳುಮೊಂದೆ ಕೀಲೆ ದಲ್ ಜಂತ್ರದ ಪಾವೆಯಂತೊಡಮೊಡರ್ಚುವನಿಂದ್ರ ನುಮಾ ಪ್ರತೀಂದ್ರನುಂ (ಶಾಂತಿಪು. ೭–೧೧೦). [ ತಂತ್ರ + ನಿಯಂತ್ರಣ ]

**ತಂತ್ರಪಾಲ, ತಂತ್ರಪಾಳ** (ನಾ). ೧. ಸೈನ್ಯಾಧಿಕಾರಿ ; ಸೇನಾಪತಿ : ಪಡವಳ್ಳಿಚಣ ಅಡಪದ ರಾಯಣ ತಂತ್ರಪಾಲ ಕೇಸಿಯಣನಿಂತಿವರೊಳಗಾಗಿ ಸಾಸಿರ ಪರಿಗ್ರಹ ಸಹಿತಮಿಂದ್ರಕೇಸಿದೇವರಸರ್ಗ್ಗೆ ದ್ರವ್ಯನಿವೇದನಂ ಮಾಡಿ (ಸೌಇಇ. XX, ೧೪೪–೫೫ ; 1166). **ತಂತ್ರಪಾಳ** : ೧. ತಂತ್ರಪಾಳ ಮಿಳ್ಳಯ್ಯ (ಏಇ. XV, ೭೫–೧೦ ; 1050) ; ಶ್ರೀಮತ್ತಂತ್ರಪಾಳ ಚಾವುಣ್ಡ ಮಯ್ಯಂ ಪ್ರಮುಖ ಪ್ರಧಾನರುಂ (ಸೌಇಇ. XX, ೩೮–೨೪ : 1058); ಶ್ರೀಮತ್ ಹೆನ್ನಿವರ್ಮ್ಮರ ಗುಂಡ ದಾಸರಸನ ತಂತ್ರಪಾಳ ಹೆನ್ನಿವರ್ಮ್ಮರು ಮುಂನ್ನೆಯರ ತಂತ್ರಪಾಳರ ಗಂಡ ಮಸಣಯ್ಯನ ತಮ್ಮ ಬೊಪ್ಪಣ (ಎಕ. VII, ಹೊನ್ನಾಳಿ. ೪೭–೫ ; 1130) ; ಜಯಕೇಸಿ ದೇವರುಂ ತಂತ್ರ ಪಾಳ ಚಟ್ಟಿಮಯ್ಯನಾಯಕನುಂ (ಸೌಇಇ. XX, ೧೦೭–೪೨ ; 1138). ೨. ರಹಸ್ಯಗಳ ಪಾಲಕ : ತಂತ್ರಪಾಳ ಎಂಬ ಪದವನ್ನು ಸಂಪಾದಕರು "Secretary or gaurdian of secrets" ಎಂದು ಅನುವಾದಿಸುತ್ತಾರೆ. ಎಂದರೆ, ರಹಸ್ಯಗಳ ಪಾಲಕ ಎಂದು ಅವರ ಅಭಿಪ್ರಾಯವಾಗಿರುವಂತೆ ಕಾಣುತ್ತದೆ (ಕಶಾಅ. ೨೫೪). [ ಸಂ. ]

**ತಂತ್ರಪಾಳ** 'ತಂತ್ರಪಾಲ' ನೋ.

**ತಂತ್ರಪ್ರಯೋಗ** (ನಾ). ಇಂದ್ರಜಾಲದ ಪ್ರದರ್ಶನ; ಯಂಕ್ಷಿಣೀವಿದ್ಯೆಯ ಪ್ರಯೋಗ: ಇಂದ್ರಜಾಲವ ನೋಳ್ಪರನಿಬರಿಗಂ ದೃಢಾಚರಿದೋರ್ವ್ವಡದು ರೊಳಸಂದ ತಂತ್ರಪ್ರಯೋಗವೇತ್ತರಿಗಭ್ಯರೊಡದಿಹುದೇ (ಗಗತಾ. ೧೭-೩೦). [ತಂತ್ರ + ಪ್ರಯೋಗ]

**ತಂತ್ರಲಿಪಿ** (ನಾ). ಸಾಂಕೇತಿಕ ಲಿಪಿ: ಸ್ವಾಮಿ ಶಂಕರಾನಂದ ಎಂಬುವರು ಇಲ್ಲಿನ ಲಿಪಿ ತಂತ್ರಲಿಪಿಯೆಂದೂ, ಅದು ಏಕಾಕ್ಷರಗಳಿಂದ ರಚಿತವಾಗಿದ್ದು ಗುಪ್ತಭಾಷೆಯಲ್ಲಿ ಬರೆದ ವೇದಗಳೆಂದೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು (ದ್ರಾವಿಪಿ. ೨೪). [ತಂತ್ರ + ಲಿಪಿ]

**ತಂತ್ರವೇದಿ** (ನಾ). ತಂತ್ರಗಳನ್ನು ತಿಳಿದವನು; ವೈದ್ಯ: "ದೋಷಜ್ಞಂ ತಂತ್ರವೇದಿ" (ವಸ್ತುಕೋ. ೭೪-೪೨). [ಸಂ. ತಂತ್ರವೇದಿನ್]

**ತಂತ್ರಶಾಸ್ತ್ರ** (ನಾ). ೧. ಆಗಮಶಾಸ್ತ್ರ: ಆಗಮಶಾಸ್ತ್ರವನ್ನು (ತಂತ್ರ ಪ್ರಧಾನವಾದುದರಿಂದ) "ತಂತ್ರಶಾಸ್ತ್ರ"ವೆಂದೂ ಪರ್ಯಾಯನಾಮದಿಂದ ಕರೆಯುತ್ತಾರೆ (ಭಾರದ. ೬೯). ೨. ಯಂತ್ರಕಲಾಶಾಸ್ತ್ರ: ತೀವ್ರಗತಿಯಲ್ಲಿ ಬೆಳೆಯತೊಡಗಿದ ತಂತ್ರಶಾಸ್ತ್ರ (Technology) ಜನರ ಜೀವನ ವಿಧಾನವನ್ನೇ ಕ್ರಾಂತಿಕಾರಿಯಾಗಿ ಬದಲಾಯಿಸಿದುದಲ್ಲದೆ ಅವರ ಮನೋಧರ್ಮವನ್ನೇ ಬದಲಾಯಿಸಿತು (ಹುಕ್ಕಾರ. ೩೩, ೬೮೦೪). [ತಂತ್ರ + ಶಾಸ್ತ್ರ]

**ತಂತ್ರಶುದ್ಧಿ** (ನಾ). ಪ್ರಯೋಗದಲ್ಲಿರುವ ಶುದ್ಧತೆ; ವಿಧಾನದಲ್ಲಿ ದೋಷವಿಲ್ಲದಿರುವಿಕೆ: ಆ ಆಕ್ಷೇಪವು...(೪)ಸ್ವವಿರುದ್ಧವೆಂದೋ ಅಥವಾ (೫) ತಂತ್ರಶುದ್ಧಿ(Technical correctness)ಗೆ ವ್ಯತಿರಿಕ್ತವಾಗಿದೆಯೆಂದೋ ಇರುತ್ತದೆ (ಅರಿಕಾ. ೧೪೭). [ತಂತ್ರ + ಶುದ್ಧಿ]

**ತಂತ್ರಸಿದ್ಧಾಂತ** (ನಾ). ಪಾಂಚರಾತ್ರಾಗಮದಲ್ಲಿ ಪ್ರತಿಪಾದಿತವಾಗಿರುವ ನಾಲ್ಕು ವಿಧವಾದ ಸಿದ್ಧಾಂತಗಳಲ್ಲಿ ಒಂದು: ಪಾಂಚರಾತ್ರಾಗಮದಲ್ಲಿ –'ದಿವ್ಯಮಂತ್ರಸಿದ್ಧಾಂತ', 'ಆಗಮಸಿದ್ಧಾಂತ', 'ತಂತ್ರಸಿದ್ಧಾಂತ' . . . ಎಂದು ನಾಲ್ಕು ವಿಧ (ಭಾರದ. ೭೭). [ತಂತ್ರ + ಸಿದ್ಧಾಂತ]

**ತಂತ್ರಪಾಳ, ತಂತ್ರಾಳ** (ನಾ).=ತಂತ್ರಪಾಲ ೧: ಹೆರ್ಮ್ಮನೃಪನ ನಚ್ಚಿನ ಜಯಸಂಸ್ಥಾನಕರ ಕಟ್ಟಿದಲಗದನಟಿಯಿರೆ ತಂತ್ರಹಾಳನಂ ತೊಂಡಮನ . . . ಅನ್ನೆನಿಸಿ ನೆಗಳ್ದ ತಂತ್ರಹಾಳ [ತೊಂ]ಡಮರಸಂಗನುಜಾತನಾಗಿಯುಂ (ಸೌಇಇ. XV, ೪೩-೧೮: 12ನೆಯ ಶತ). **ತಂತ್ರಾಳ**: ತುಳುವದ ಶಾಸನಗಳಲ್ಲಿ ಬರುವ ಅಧಿಕಾರಿಗಳು . . . ಮಹಾಪ್ರಭು, ಸೇನಾಪತಿ, ತಂತ್ರಾಳ, ತಂತ್ರಿನಾಯಕ (ತುಳುನಾ. ೨೭೦). [<ಸಂ. ತಂತ್ರಪಾಲ]

**ತಂತ್ರಹಾಳಿಕೆ** (ನಾ). ತಂತ್ರಪಾಲನ ಅಧಿಕಾರ,-ಹುದ್ದೆ: ಅನ್ನಟ್ಟರ ದಧ್ಯಕ್ಷಂ ಕುನ್ತಳಪತಿಯಿತ್ತ ಸುರಿಗೆವಿಡಿವಧಿಕಾರಂ ಸನ್ತತದ ತನ್ತ್ರಹಾಳಿಕೆ ಯಿನ್ತು ಮಹಾಮಾತ್ಯಪದವಿಗಿವು ಸಂಚಕರ (ಸೌಇಇ. XI-II, ೧೭೪-೧೨; 1124). [ತಂತ್ರಹಾಳ + -ಇಕೆ]

**ತಂತ್ರಹೂಡು** (ಕ್ರಿ). ಸಂಚುಮಾಡು; ಉಪಾಯಮಾಡು: ಮುದುಕಿಯ ಆಸ್ತಿಪಾಸ್ತಿಯೆಲ್ಲ ಪರಭಾರೆಯಾಗುವಂತೆ ತಂತ್ರ ಹೂಡಿದ್ದ ವಕೀಲ (ಪುನರು. ೨೯). [ತಂತ್ರ + ಹೂಡು₁ (<ಪೂಡು)]

**ತಂತ್ರಾಧ್ಯಕ್ಷ** (ನಾ). ದಳಪತಿ; ದಂಡನಾಯಕ: ತಂತ್ರಾಧ್ಯಕ್ಷನಂ ಬರಿಸಿ ಬೆಸಸುವುದುಮಾತಂ ವಿಜಯಪ್ರಯಾಣಭೇರಿಯಂ ಪೊಯ್ಸಿದಾಗಳ್ (ಚಂದ್ರಪು. ೧೧-೧ ವ); ಸಮರಪ್ರಸ್ಥಾನಭೇರಿಯಂ ಪೊಡೆಯಿಸೆಂಬುದುಮವಂ ತಂತ್ರಾಧ್ಯಕ್ಷನಪ್ಪ ಮೇಘನಾದನಂ ಬರಿಸಿ ಬೆಸಸುವುದುಂ (ರಾಜಶೇ.೬-೧೧ ವ). [ತಂತ್ರ + ಅಧ್ಯಕ್ಷ]

**ತಂತ್ರಾಲಯ** (ನಾ). ತಂತ್ರದ ನೆಲೆ; ಉಪಾಯದ ನೆಲೆ: ವಿಷಯ ಲಗ್ನಾನಂದವಂ ಬೇರ್ಪಡಿಸಲಾದ ತಂತ್ರಾಲಯ ತೀರ್ಣಭಯ ಯತಿ ಸಿದ್ಧ ಸಂಸೃಷ್ಟ ದೇವಾಲಯ (ಮಲೆದೇ. ೨೭-೯). [ತಂತ್ರ + ಆಲಯ]

**ತಂತ್ರಾವಾಪ** (ನಾ). ೧. ತಂತ್ರಗಳನ್ನು ಹೂಡುವಿಕೆ, – ಪ್ರಯೋಗಿಸುವಿಕೆ. ೨. [ರಾಜನೀ] ರಾಜ್ಯಪಾಲನೆಯ ಮತ್ತು ರಾಷ್ಟ್ರರಕ್ಷಣೆಯ ಚಿಂತೆ; ಸ್ವರಾಷ್ಟ್ರ ಮತ್ತು ಪರರಾಷ್ಟ್ರ ವಿಚಾರ: ಮುಕ್ತಿಸಾಮ್ರಾಜ್ಯ ದೊಳತಿಪ್ರಾಜ್ಯ ಸಂಜನಿತ ನಿಸ್ಪೃಹನನವರತಕಲ್ಯಾಣ ಪರಿಮಿತದೊಳ್ ನಿರಂತರಂ ತಂತ್ರಾವಾಪ ಚಿಂತಾಂತರಾಯಪ್ರಾಯ ಸುಖಲವದೊಳೀ ಮಹೀತಳರಾಜ್ಯದೊಳ್ ನಿಱಿಸುವುದುಂ ಮದುವೆ ನಿಱಿಸುವುದು ಮೆನಗಶಕ್ಯಾನುಷ್ಠಾನಂ (ಆದಿಪು. ೮-೮ ವ). [ತಂತ್ರ + ಆವಾಪ]

**ತಂತ್ರಾಳ** 'ತಂತ್ರಹಾಳ' ನೋ.

**ತಂತ್ರಿ**₁ (ನಾ). ೧. ತಂತ್ರಶಾಸ್ತ್ರವನ್ನು ಬಲ್ಲವನು; ಆಗಮೋಕ್ತರೀತಿಯಲ್ಲಿ ಪೂಜಾವಿಧಿಯನ್ನು ನಡೆಸುವವನು: ಅವರು ಹಾಡುವ ಭೂತದ ಪಾಡ್ದನಗಳಲ್ಲಿ . . . ತಂತ್ರಿ, ಬ್ರಾಹ್ಮಣ, ಪುರೋಹಿತ, ಮೊದಲಾದವರು ಬರುತ್ತಾರೆ (ಜಾನಗೀ. ೩೪); ತಂತ್ರಿಯವರು ಕೂಡಾ ಹೇಳುತ್ತಾರೆ . . . ಆ ಕೊಳದ ಸುತ್ತಲೂ ಹದಿನಾರು ದೆವ್ವಗಳಿವೆ . . . ಎಂದು (ಪದ್ಮಸ. ೨೭). ೨. ಯುಕ್ತಿಯನ್ನು ಬಲ್ಲವನು; ಉಪಾಯಗಾರ: ಮಂತ್ರಿ ಬಸವನೆ ಕೇಳು ತಂತ್ರಿಗಳ ಮಂತ್ರಗಳು ಜಂತ್ರದಲಿ ತಲೆಯ ಕೊಟ್ಟಂತೆ (ಕನ್ನಜಾ. ೨೫೦); ಅವನ ಮುಖಭಾವದಲ್ಲಿಯಾಗಲಿ ಅಥವಾ ಮಾತಿನಲ್ಲಿಯಾಗಲಿ ಅವನು ತಂತ್ರಿ ಎಂದು ಕಾಣುತ್ತಿರಲಿಲ್ಲ (ಮುಲೆನಾ. ೧೫೯). [ಸಂ. ತಂತ್ರಿನ್]

**ತಂತ್ರಿ**₂ (ನಾ). ೧. ದಾರ; ಎಳೆ; ಸೂತ್ರ. ೨. ತಂತಿ; ವೀಣೆ ಮೊದಲಾದ ವಾದ್ಯಗಳ ತಂತಿ: ನಯಮುಳವಟ್ಟ ಜೀವೆಯುಳವಟ್ಟ ಧರೋತ್ತರ ತಂತ್ರಮುಷ್ಪ ತಂತ್ರಿಯೊಳನುವಾದಿಯಾಗೆ ಪೊಸ ಮೂರ್ಛನೆ ರಂಜಿಸೆ ಮಂದ್ರ ತಾರ ಗೀತಿಯ ಬವಣೊಪ್ಪೆ . . . ವೀಣೆಯಂ ಮಿಡಿದಳೆಳ್ದೆರ್ದೆಯಂ ಮಿಡಿದಳ್ ಪ್ರಗೀತರಾ (ಶಾಂತಿಪು. ೯-೧೧೭); ಸೇರಿಸಿ ತಂತ್ರಿಯಂ ಸಂಚಿನಿಂ ಮೇಚನು ಬಾಜಿಸುತೆಸೆಯೆ ಭಾವೆಯರು (ಜೀವಂಸಾಂ. ೨೦-೧೩); ಗಗನ ವೀಣಾತಂತ್ರಿಯಂ ಮಿಡಿದ ತೆರನಾಗಲ್ (ಶ್ರೀರಾಮಾ. ೧-೧೭); ಸಹಸ್ರತಂತ್ರೀನಿಃಸ್ವನದಂತೆ . . . ಗುನುಗಾಡುತ್ತಿದೆ ಗಗನದ ತುಂಬ ಪ್ರಣವಪ್ರವೀಣನ ನಾದಸ್ತಂಭ (ಅರಳು. ೭೭-೧). ೩. ಒಂದು ತಂತೀವಾದ್ಯ; ವೀಣೆ: ವಾಣಿ, ಓ ಪ್ರಾಣವೀಣಾಪಾಣಿ, ಕವಿಯೆರ್ದೆಯ ರಸರಾಣಿ, ಮಿಡಿಯೆನ್ನಾತ್ಮತಂತ್ರಿಯಂ (ಶ್ರೀರಾಮಾ. ೦೪೨-೨). [ಸಂ. ತಂತ್ರೀ]

**ತಂತ್ರಿಕೆ** (ನಾ). ಒಂದು ಬಗೆಯ ಸಸ್ಯ; ಅಮೃತಬಳ್ಳಿ: "ವತ್ಸಾದನೀ, ಛಿನ್ನರುಹಾ, ಗುಡೂಚೀ, ತಂತ್ರಿಕಾ . . . ಮಧುಪರ್ಣೀ – ೯ ಅಮೃತ ಬಳ್ಳೀ ಹೆಸರು." (ಸಿದ್ಧಾಂತಿ. ೦೦೩). [ಸಂ. ತಂತ್ರಿಕಾ]

**ತಂತ್ರಿಗ** (ನಾ). ೧. ಪಿತೂರಿ ಮಾಡುವವನು. ೨. ರಾಜತಂತ್ರವನ್ನು ಬಲ್ಲವನು: ನಾನು ಪಾಲಗಕೆ ತಪ್ಪಿದದರಿಂದಿನ್ನು ತಂತ್ರಿಗನಪ್ಪುದದರಿಂ ರಾಜಗಪ್ರತಿಯುಪ್ಪರಾರೇಗೈದರಾಗದು ಎನಲು (ಬಿಜ್ಜಪು. ೭೭-೪). [ತಂತ್ರ + -ಇಗ]

**ತಂತ್ರೋದಿತ** (ಗು). ತಂತ್ರದಲ್ಲಿ ಹೇಳಿರುವ; ನೀತಿಶಾಸ್ತ್ರೋಕ್ತವಾದ: ಸಪ್ತಪ್ರಜಾಪಾಲನೆಯ ನೆಗಳ್ವುಪಾಯಂಗಳಂ ಸಾರ್ದು ಶಕ್ತಿಸ್ಫುರಣಂ ಕೈಗಣ್ಮೆ ತಂತ್ರೋದಿತ ಗುಣಗಣಮಂ ತಾಳ್ದ ಮೋಘಂ ಪ್ರಭುತ್ವಂ ದೊರೆಕೊಂಡಿಮ್ಮಾಳ್ದನಾದಲ್ಲಮವಿಭು ವಿರತಿಶ್ರೀಯಮಂ ಮಾಳ್ಪುದು (ರಾಜಶೇ. ೧-೦೩). [ತಂತ್ರ + ಉದಿತ್ತ]

**ತಂಥಳಿಸು** 'ತಟತಟಿಸು' ನೋ.

**ತಂದನತಾನ** 'ತಂದಾನತಾನ' ನೋ.

**ತಂದನಾನ** 'ತಂದಾನತಾನ' ನೋ.

**ತಂದನೋತಾನಾನಿ** 'ತಂದಾನತಾನ' ನೋ.

**ತಂದನ್ನತಾ** 'ತಂದಾನತಾನ' ನೋ.

**ತಂದರಿ**, ತಂದಿರಿ, ತಂದುರಿ (ನಾ). ೧. ತೂಕಡಿಕೆ; ಜೊಂಪು. ೨. ದಣಿವು; ಬಳಲಿಕೆ ; ಆಯಾಸ : ತಂದ್ರಿ–ತಂದರಿ, ತಂದಿರಿ, ತಂದುರಿ (ಶಬ್ದಾನು. ೧೯೭ ವ್ಯಾಖ್ಯಾ). **ತಂದರಿ :** ಮೇಲಿನ ಪ್ರಯೋಗವನ್ನು ನೋಡಿ. **ತಂದುರಿ :** ಮೇಲಿನ ಪ್ರಯೋಗವನ್ನು ನೋಡಿ.

[ <ಸಂ. ತಂದ್ರಿ, ತಂದ್ರೀ ]

**ತಂದಲ್**, ತಂದಲು₁ (ನಾ). ೧. (ನೀರಿನ) ಹನಿ; ತುಂತುರು : "ಸೀವರ ಮೆಂದುಂ ತಂದಲೆಂದುಂ ಶೀಕರಂ" (ಕಶಸಾ. ೮–೧೪೫) : "ಸೀವರಂ ತಂದಲೆನೆ ಜಲಕಣಂ" (ಕಬ್ಬಿಕ್ಕೆ. ೧೨) ; ಗಲ್ಗಲನೊಕ್ಕ ಪಾಲ ತಂದಲ್ಗಳಿನಾವಗಂ ಮಡಿಯ ನೀರ್ ಕಡುವೆಳ್ಪಿನೊಳೊಂದೆ (ಲೀಲಾವ. ೫–೫೭) : ಪಱಿದಾಗಳ್ ಪನಿವುಲ್ಲ ಬಿಂದುಗಳ ತಂದಲ್ . . . ನೆಱೆ ಸಾರುತ್ತಿರೆ (ಕುಸುಮಾ. ೭–೦೩) ; ಚಂದ್ರಮರೀಚಿಯಂತೆ ತನಿವಾವಿನ ಪಣ್ಗಳ ತಂದಲಂತೆ . . . ಸೋಮರಾಜೇಂದ್ರನ ಕಬ್ಬಧಿಂಪು (ಉದ್ಭಟ. ೧–೩೨); ತನ್ನ ಕಂಬನಿಯ ತಂದಲಿಂದತಿಸ್ನೇಹಲತೆಯಂ ಬೆಳೆಯಿಸಿದಳ್ (ಅನಂಪು. ೮–೨೭ ವ) ; ಮುಗಿಲ ಪೊಱೆಯಿಂ ಸುರಿವ ಮುತ್ತುಗಳಂ ಕಾರ ಮುಂಬನಿಯ ತಂದಲೆಂದು ಬಂದು ನುಂಗಲಂಗೈಸುವ ಚಾದಗೆಯ ಮಱಿಗಳುಮಂ (ಕಬ್ಬಿಕಾ. ೨೩೪) ; ತನಿರಸದ ತಂದಲ್ ಸುರಿವರನೇಱಿಲ ಗೊಂಚಲಂ ಕಟ್ಟಿದಿರೊಳ್ ಕಂಡು (ರಾಮಾಶ್ವ. ೫೪–೭). ೨. ಬಿಟ್ಟೂಬಿಡದೆ ಸುರಿಯುವ ಮಳೆ ; ಜಡಿಮಳೆ : "ಸೋನೆಯೊಳ್ ತಂದಲಕ್ಕುಂ" (ಕರ್ಣಾನಿ. ೫೦) ; ಸೋನೆಯಿಂ ಸರಿಗಳಿಂ ತಂದಲ್ಗಳಿಂದಂದು ಭೂತಳಮೇಕಾರ್ಣವಮಾಗೆ (ಆದಿಪು. ೧೩–೫೮) ; ಎಳೆನೀರ ತಂದಲಂ ಕಱೆವೆಳೆದೆಂಗು (ಎಕ. XI, ದಾವಣ. ೩೫–೩೭; ಹು. 1160) ; ತಂದಲ್ ಸೋನೆ ನಟ್ಟ ಬಡಪಮನಲ್ಸುರಿದುವು ಬಿಡದೆ ಮುಗಿಳಿಗಳಿರುಳುಂ ಪಗಲುಂ (ಜಗವಿ. ೪–೩೨) ; ಉತ್ತಮವನಂ ರಾಮಣೀಯಕ ತರುಗಳಿಂ . . . ಜೇನ್ನೆಯ್ಯ ತಂದಲ್ಗಳಿಂ (ವೀಶ್ವಪು. ೩–೯–೭). 'ಸೋನೆದಂದಲ್' ಪರಾ. **ತಂದಲು₁:** ೧. ತಂಬೆಲರ ಮೊಗಸಿರಿಯ ತಂದಲಿನ ಮೈದೊಡವು . . . ಕಂಗೊಳಿಪಂತೆ ಮಲ್ಲಿಗೆಗಳು (ವೆಂಕಾರಾ. ೧–೪–೧೪). ೨. "ಮಳೆ, ಸರಿ, ಸರವು . . . ಒದ್ದೆ, ತಂದಲು, ತುಂತುರು" (ಕಂನುಹು. ೮೯).

**ತಂದಲು₁** 'ತಂದಲ್' ನೋ.

**ತಂದಲು₂** (ನಾ). ಸೇವಕ ; ದಾಸ (?) : ಮಾರಹರ ನಿಮ್ಮ ಪರಿಚಾರಕರ ದಾಸಿಯರ ತಂದಲೆನಗಿನಿತುಚಿತವೇ (ಕೊಟ್ಟೂಬ. ೦–೭೦). 'ತಂಡಾಲಯು' ಪರಾ. [ ? ]

**ತಂದವೂರ್** (ನಾ). ಒಂದು ಊರಿನ ಹೆಸರು ; ಬೆಳ್ಗುಹೆಯೆಟ್ಟತ್ತೆಡೆ ನಾಡೆಟ್ಟತ್ತು ತಂದವೂರ ಪನ್ನೆರಡು ಗೆದೆಯ ಪನ್ನೆರಡು(ಎಕ. VIII, ಸೊರಬ. ೪೭೭–೦೩ ; 991). [ ತಂದ ? + ಊರ್ ]

**ತಂದಸಿ** 'ತಂಡಸು' ನೋ.

**ತಂದಾನತಾನ**, ತಂದನತಾನ, ತಂದನಾನ, ತಂದನೋತಾನಾನಿ, ತಂದನ್ನತಾ, ತಂದಾನತಾನಾನ, ತಾಂದನಿತಾನೊ (ನಾ). ಜಾನಪದ ಹಾಡಂಗಳಲ್ಲಿ ಬರುವ ಒಂದು ಪಲ್ಲವಿ; "ದಂರುಗವೊಂರಗಿಯರ ಸೊಲ್ಲು" (ಜಾನಕೋ. ೬೪). **ತಂದನತಾನ :** (೩). **ತಂದನಾನ :** (೩). **ತಂದನೋತಾನಾನಿ :** ತಂದನೋತಾನಾನಿ ತಂದನೋತಾನಾನಿ ತಾನು ತಂದನು ತಂದೆ, ನಾನಿ ತಂದನುತಾನಿ ತಾನುತಂದನು ತಂದೆ ಶಿವ್ನೀಗೆ ಶರಣೊ (ಹುಟ್ಟಹ. ೩೦). **ತಂದನ್ನತಾ :** ತಂದನ್ನತಾಯೆಂದು ಕೈಲಿ ಕಿನ್ನರಿ ಧರಿಸಿ ಅಂದವಾಗಿ ಶ್ರೀಹರಿಯ ಮುಂದೆ ಕುಣಿವ ಚರಣ (ವಿದಾಕೃ. ೨೭–೧). **ತಂದಾನತಾನಾನ :** (೩). **ತಾಂದನಿತಾನೊ :** ಕಿನ್ನೂಡಿ ಮೇಲೆ ಕಿರುಗೆಜ್ಜೆ–ತಾಂದನಿತಾನೋ (ನಾಪದ. ೨೦).

[ ದೇ.॥ ತುಳು. ತಂದನ; ತೆಲು. ತಂದನತಾನ, ತಂದಾನತಾನ ]

**ತಂದಾನತಾನಾನ** 'ತಂದಾನತಾನ' ನೋ.

**ತಂದಿರಿ** 'ತಂದರಿ' ನೋ.

**ತಂದುರಿ** 'ತಂದರಿ' ನೋ.

**ತಂದೆ** (ನಾ). ೧. ಅಪ್ಪ ; ಜನಕ : ತನ್ದೆಯ ತಾಯ್ವಿರಾ ಸನ್ನಾನಮ(೦) ನುಳಿದು ಬಿಸುಟೋಂ (ಸೌಇಇ. XI-1, ೦೦–೫ ; 866) ; ತಾಯ್ಗಂ ತಂದೆಗ ಮೆಲ್ಲಾ ನಂಟರ್ಗೆಯುತ್ಸಾಹಮುಂ ಸುಖಮುಂ ವಿಭವಮುಮಂ ಪಡೆವುದ ಱಿಂದಮಾ ಕೂಸಿಂಗೆ . . . ಭದ್ರಬಾಹುವೆಂಬ ಪೆಸರನೆಲ್ಲರುಂ ನೆರೆದಿಟ್ಟೊಡೆ (ವಡ್ಡಾರಾ. ೭೩–೦೭) ; ತಂದೆಯ ರೂಪೆ ತಂದೆಯ ವಿಳಾಸಮೆ ತಂದೆಯ ಚೆಲ್ವೆ . . . ತನ್ನೊಳಮರ್ಕೆವೆತ್ತುದು (ಆದಿಪು. ೮–೪೩) ; ಹಿತವಂ ತೋಱುವನಾತ್ಮಬಂಧು ಪೊರೆವಾತಂ ತಂದೆ (ಸೋಮೇಶ. ೮). ೨. ಹಿರಿಯರನ್ನು ಕುರಿತು ಭಕ್ತಿ ಗೌರವಗಳಿಂದ ಹೇಳುವ ಮಾತು: ತಂದೆ ಚಿತ್ತೈಸುವುದು ಕಿಂಕರನ ಬಿನ್ನಪಂ (ನಂಬಿರ. ೦–೭೩) ; ಎಮ್ಮಂತಪ್ಪ ಪಾಪಿಗಳಿಗೊಗೆವನೇ ತಂದೆಯೆನಲ್ (ಸಿದ್ಧರಾ. ೦–೨೯) ; ಗಂಗಾವರಕುಮಾರ ದ್ರೋಣ ಕೃಪರೀ ಸೆಱಗ ಬಿಡಿಸಿರೆ ತಂದೆಗಳಿರೆಂದೊಱಲಿದಳು ತರಳೆ (ಕುಮಾವ್ಯಾಸ. ೦೪–೦೦೪). ೩. ಕಿರಿಯರನ್ನು ಕುರಿತು ವಾತ್ಸಲ್ಯದಿಂದ ಹೇಳುವ ಮಾತು : ಬಾರೆಲೆ ತಂದೆ ಬಾರರಸ ಬಾ ಪೊರೆವಾಳ್ದನೆ (ಕಾದಂಪೂ. ೩೭೦); ಬಾಲಲಿಂಗವೆ ಬಾರ ತಂದೆ (ಬಸಪು. ೪೭–೨೯) ; ತಂದೆ ನಿನಗೆನ್ನಲ್ಲಿ ಋಣಸಂಬಂಧ ಸವೆದುದೆ ಶಿವಶಿವಾ ತಾ ಮಂದಭಾಗ್ಯಂಗಣುಗ ದಕ್ಕುವನಲ್ಲ ಎನಗೆಂದ (ಕುಮಾದ್ರೋ. ೮–೩೦). ೪. ಹೆಸರಿನ ಮುಂದೆ ಗೌರವಸೂಚಕವಾಗಿ ಬಳಸುವ ಶಬ್ದ. ಉದಾ : ಅಱುವಿನ ಮಾರಿತಂದೆ.

**ತಂದೆವಿರ್** (ಬಹುವ) : ವಿರ್ಗ–ತಂದೆವಿರ್, ತಾಯ್ವಿರ್, ಸೊಸೆವಿರ್ (ಶಮದ. ೯೭ ಪ್ರಯೋ). **ತಂದೆಯ ತಂದೆ**=೧. ಅಜ್ಜ ; ತಾತ ; ಪಿತಾಮಹ : "ತಾತ – ತಂದೆಯ ತಂದೆಗೂ . . . ಪಿತಾಮಹ ಎಂಬ ಹೆಸರು" (ನಾನಾರ. ೨೩ ಟೀಕೆ). ೨. ಬ್ರಹ್ಮ : "ಅಂಚೆದೇರಂ . . . ತಂದೆಯ ತಂದೆ, ಅರಲಿಚಂ, ನಾಲ್ಮೊಗಂ, ತಾವರೆವಸೆಯಂ – ಈ ೮ ಬ್ರಹ್ಮಂಗೆ ಪೆಸರ್" (ಕಶಸಾ. ೪೮–೦೫) ; "ಪೊಂಬೊಡೆಯಂ . . . ಬೊಮ್ಮ ತಂದೆಯ ತಂದೆ ಮಿಸುಪ ತಾವರೆಗಂದನು ತಾಂ ಬ್ರಹ್ಮಗೆಸೆವ ನಾಮಂ" (ಕಬ್ಬಿಕ್ಕೆ. ೯). **ತಂದೆಯ ತಂದೆಯಿಲ್ಲದಂ**=ತಾತನಿಲ್ಲದವನಂ ; ವಿನಾಯಕ : "ಕರಿಮೊಗಂ, ಇಲಿದೇರಂ. . . ತಂದೆಯ ತಂದೆಯಿಲ್ಲದವಂ–ಈ ೭ ವಿನಾಯಕಂಗೆ ಪೆಸರ್" (ಕಶಸಾ. ೦–೪) ; "ಬಿಜ್ಜೆವಳನೆಡರ್ಗೇಡಿ ಮೋಕೆಲರುಣಿವಸಿಱನು ತಂದೆಯ ತಂದೆಯಿಲ್ಲದಂ[ಪಾಠಾಂ. ತಂದೆಯಯ್ಯನಿಲ್ಲದವಂ] . . . ಎನೆ ವಿನಾಯಕನ ನಾಮಂ", (ಕಬ್ಬಿಕ್ಕೆ. ೫).

[ ದೇ.॥ ತಮಿ. ತನ್ತೈ; ಮಲ. ತನ್ತ; ತೆಲು. ತಂಡ್ರಿ, ತಂಡಿರಿ; ಪರ್ಜಿ. ತೆಂದ್; ಕೂ. ಕುವಿ. ತಂಜಿ ]

**ತಂದ್ರ** (ಗು). ೧. ದಣಿದ ; ಬಳಲಿದ. ೨. ಸೋಮಾರಿಯಾದ ; ಮೈಗಳ್ಳತನದಿಂದ ಕೂಡಿದ. (ನಾ). ೩. ಮೈಗಳ್ಳತನ ; ಸೋಮಾರಿತನ; ಜಡತೆ : ಮಹೇಂದ್ರಂ ದಧೀಚಿಯೆಡೆಗಂ ತಂದ್ರವುಮನುಳಿದೆಯ್ದಿ ವಂದಿಸುತ್ತೆ ಬಳಿಕಂ (ಹಾಲಾಸ್ಯ. ೦–೨–೪೨). [ ಸಂ. ]

**ತಂದ್ರತೆ** (ನಾ). ೧. ಬಳಲಿಕೆ; ದಣಿವು. ೨. ಆಲಸ್ಯ ; ಜಡತೆ ; ಮಾಂದ್ಯ : ತಳೆದ ಸುಮನೋದಾಮಂ ನೀರೋಡಿ ಬಾಡಿದುದಾಗಳಾಗುಳಿಯನೊಳಕೆಯ್ದತ್ತಾಸ್ಯಾಂಭೋರುಹಂ ನಿಜದೇಹದುಜ್ಜ್ವಳಿಕೆ ಮಸುಳ್ದಿತ್ತಂದಂ ದೊಂದು ತಂದ್ರತೆ ಚಿತ್ತಮಂ ಬಳಸಿದುದು (ಚಂದ್ರಪು. ೪–೭೭).

[ ಸಂ. ತಂದ್ರತಾ ]

**ತಂದ್ರಾವಸ್ಥೆ** (ನಾ). ಸೋಮಾರಿತನ ; ಜಡತೆ : ಅತ್ತ ದೇಶವೂ ಮೂಕ–ಮೂಢ – ತಂದ್ರಾವಸ್ಥೆಯಿಂದ ಎಚ್ಚೆತ್ತು . . . ತನ್ನ ಭಾವನೆಗಳನ್ನು ವ್ಯಕ್ತಗೊಳಿಸಲು ತೊಡಗಿತು (ಮಹಾಯೋ. ೯೭). [ ತಂದ್ರ + ಅವಸ್ಥೆ ]

**ತಂದ್ರಾಸಿ,** ತಂಡರಸಿ (ನಾ). ಒಂದು ಬಗೆಯ ಗಿಡ: ತಂದ್ರಾಸಿ, ತಂಡರಸಿ, ತನಸಿಮೆಳೆ (ಪ್ರುಶಿಗಿ. ೪೦-೮೦೭); ಸಂಕೀರ್ಣ: . . . ಹುರಗಲು, ಕಂಗೊಂದಿ, ತಂದ್ರಾಸಿ, ಮುಕ್ಕರಿವೆ (ನಮ್ಮನು. ೨೩೪). **ತಂಡರಸಿ :** ಮೇಲಿನ 'ವೈಟಿಗಿ' ಪ್ರಯೋಗವನ್ನು ನೋಡಿ. [ ? ]

**ತಂದ್ರಿ** (ನಾ). ೧. ಆಲಸ್ಯ; ನಿರುತ್ಸಾಹ; ಜಡತೆ: ಸಂಪ್ರತ್ಯಾತ್ಮವಾತ್ಮಕೆ ಬೇರೆ ಕರಣದಿಂ ತಂದ್ರಿ ಬಿಡೆ ದೊರೆವುದದು (ಮುಂಕುಳ. ೬೯೩). ೨. ನಿದ್ದೆಯ ಮಂಪರು; ಜೊಂಪು: ಲಕ್ಷ್ಮಣನನೆಳ್ಚಿಸಿದನಾತನುಂ ತಂದ್ರಿಯುಂ ಬಿಟ್ಟೀಳಲನಿಬರುಂ ತೊರೆಯ ಶಿವಸಲಿಲದೊಳ್ ಮೊಗಂ ದೊಳೆದು ಮುಂಬರಿದರ್ (ಶ್ರೀರಾಮಾ. ೦೪೯-೪೦೦); ಓದು ಓದುತ್ತಿರುವಾಗಲೇ ನಿದ್ರೆಯ ತಂದ್ರಿ ಕಣ್ಣಿಗೆ ಸೋಂಕಿಹೋಗುತ್ತಿತ್ತು (ಕಮನ. ೦೦೦). ೩. ಗುಂಗು; ತಲ್ಲೀನತೆ: ಬಾಬು ವಿಚಾರತಂದ್ರಿಯೊಳಗಿಂದ ಹೊರಬಿದ್ದು . . . ನೋಡಿದನು (ರಕ್ತಕ್ಷ. ೦೩೦); ಮಧುಕರನು ತಂದ್ರಿಯಲ್ಲಿಯೇ ಕುಳಿತಿದ್ದನು (ಕೃತಕ್ಷ. ೦೦೦). [ ಸಂ. ]

**ತಂದ್ರಿತ** (ನಾ). ಮಗ್ನನಾದವನು; ತಲ್ಲೀನನಾದವನು: ನೀವೂ ವಿಚಾರದಲ್ಲಿ ತಂದ್ರಿತರಾಗದೆ ಇರಲಾರಿರಿ (ನೀರಸ. ೮). [ ಸಂ. ]

**ತಂದ್ರೀಭೂತ** (ಗು). ಜಡವಾದ; ಮಂದವಾದ; ಚಟುವಟಿಕೆಯಿಲ್ಲದ: ಭರತಂ ವಿಷಾದಭರ ತಂದ್ರೀಭೂತಚೇತಸನಾಗಿರ್ಪುದುಂ (ಪಂರಾಮಾ. ೭-೦೦೨ ವ). [ ಸಂ. ]

**ತಂದ್ರೆ** (ನಾ). ೧. ಆಲಸ್ಯ; ಜಡತೆ: ಸನ್ನಿಪಾತಜ್ವರಲಕ್ಷಣಂ ತಂದ್ರೆ, ನಿದ್ರಾಭಂಗ . . . ಗಂಟಲನೋವು (ಸಕವ್ಯ. ೯೭). ೨. ಮಗ್ನತೆ; ಗುಂಗು: ಈ ತಂದ್ರೆಯು ಅವರನ್ನು ಮರುಳುಗೊಳಿಸಿತು (ಮೂವಿಕೋ. ೯೩). [ ಸಂ. ತಂದ್ರಾ ]

**ತಂಪಗಿ** (ಕ್ರಿ). ತಂಪು ಆವರಿಸು,-ವ್ಯಾಪಿಸು: ತಿಳಿಗೊಳನ ತಂಪಗಿವ ತೆಕ್ಕೆ . . . ತೊಳಲಿಕೆಯ ತಾವರೆಯ ತನಿಪರಿಮಳದ ವಿಸರದ ಹಸರದಲಿ ತೀಡಿ . . . ದು ತಂಗಾಳಿ (ಕೂರರಾ. ೨-೭-೩). [ತಂಪು₂(<ತಣ್ಪು₂)+ಅಗಿ₁]

**ತಂಪಿಗ** (ನಾ). ತಂಪನ್ನು ಉಂಟುಮಾಡುವವನು; ಹಿತವನ್ನುಂಟುಮಾಡುವವನು: ನೆಲಮೊಲೆಗಳಂ ತಡವುತೊತ್ತೊ ತಳಿರ್ಗೆಯ್ಯ ತಂಪಿಗ ವಿರಹಮಂ ತವಿಸಿ ನೆರೆಯೊ ಹದಗಾಜಿ (ಚಬಿಪು. ೦೯-೩೭). [ ತಂಪು₂ (<ತಣ್ಪು₂) + -ಇಗ ]

**ತಂಪಿಡಿ** 'ತಣ್ಪಿಡಿ' ನೋ.

**ತಂಪಿಸು** 'ತಣ್ಪಿಸು' ನೋ.

**ತಂಪು₁** (ಕ್ರಿ). ೧. ಶಾಖವನ್ನು ಕಳೆದುಕೊಳ್ಳು; ತಣ್ಣಗಾಗು: ಬಿಸಿಲು ತಂಪುವವರೆಗೆ ಹೊರಗೆ ಹೋಗಬೇಡ (ರೂಢಿ). ೨. (ದುಃಖ ಮೊದಲಾದ ಭಾವನೆಗಳ) ಆವೇಗ ಕಡಿಮೆಯಾಗು: ಮಂದಿ ಸುಳಿಯದೊಂದೆ ಗುಡಿಲು; ತೋವು, ನೆರೆಯೊಳು; ನೆರಳು ಸಾವತನಕ ನನ್ನ ನೋವು ತಂಪಲು (ಇಂಗೀತ. ೯೫-೦೪). [ <ತಂಪು₂ ]

**ತಂಪು₂** 'ತಣ್ಪು₂' ನೋ.

**ತಂಪುಕನ್ನಡಕ** (ನಾ). ಬಿಸಿಲಿನ ಚುರುಕು ಕಣ್ಣುಗಳಿಗೆ ತಗಲದಂತೆ ತಂಪಾಗಿಡುವ ಕನ್ನಡಕ: ಕಣ್ಣಿಗೆ ಬಿಸಿಲಿನ ತಂಪುಕನ್ನಡಕವನ್ನು ಹಾಕಿದ್ದರಿಂದಂತೂ ಯಾರಿಗೂ ನನ್ನ ಗುರುತು ಹತ್ತಲಿಲ್ಲ (ಪೋದಿಮ. ೨೦೭). [ ತಂಪು₂ (<ತಣ್ಪು₂) + ಕನ್ನಡಕ₂ ]

**ತಂಪುಗ್ಗೆ** 'ತಣ್ಪುಗೆಯ್' ನೋ.

**ತಂಪುಗೊಳ್** (ಕ್ರಿ). ತಾಪವನ್ನು ಆರಿಸಿಕೊಳ್ಳು; ತಣ್ಣಗೆ ಮಾಡಿಕೊಳ್ಳು: ಹರನುರಿಗಣ್ಣಿನಿಂ ಬೆಂದ ಸಂತಾಪ ಪೀವರಕುಚಾನ್ವಿತೆಯರ ತಾಪ ಸ್ಮರ ನಿನ್ನ ಮೆಯ್ಯೊಳಗಿದೆ ತಂಪುಗೊಳ್ಳೆಂದು ಶರಳೆ ನೊಂಕಿದಳು ತಣ್ಣೊಳದೆ (ಮೋಹತ. ೦೪-೭೮). [ ತಂಪು₂ (<ತಣ್ಪು₂) + ಕೊಳ್₁ ]

**ತಂಪುತೀಡು** (ಕ್ರಿ). ತಣ್ಣಗೆ ಬೀಸು; ತಂಪಾಗಿ ಸುಳಿ: ಇಂದಿರನ ದೆಸೆಗೆಂಪು ಮೂಡೆ ಕತ್ತಲೆಯೋಡೆ ಮಂದಾನಿಲಂ ತಂಪುತೀಡೆ (ಚಬಿಪು. ೪-೭). [ ತಂಪು₂ (<ತಣ್ಪು₂) + ತೀಡು₁ ]

**ತಂಪುವಡೆ** 'ತಣ್ಪುವಡೆ' ನೋ.

**ತಂಪುವೆಟ್ಟ** (ನಾ). ಹಿಮವತ್ಪರ್ವತ; ಹಿಮಾಲಯ: ತಂಪುವೆಟ್ಟದ ಬಡಗಭಾಗದೊಳಗೊಪ್ಪುವುದು ಕಿಂಪುರುಷವರ್ಷಂ (ಚಬಿಪು. ೦೫-೦೭). [ತಂಪು₂ (<ತಣ್ಪು₂) + ಬೆಟ್ಟ (<ಬೆಟ್ಟು₂) ]

**ತಂಪುವೇಱು** 'ತಣ್ಪುವೇಱು' ನೋ.

**ತಂಪುಹೊತ್ತು** (ನಾ). = ತಂಪೊಟ್ಟು: ಎಂಥ ಪುಣ್ಯಾತ್ಮ! ಆತನನ್ನು ತಂಪುಹೊತ್ತಿನಲ್ಲಿ ನೆನೆಯಬೇಕು (ರೂಢಿ). [ ತಂಪು₂ (<ತಣ್ಪು₂) + ಹೊತ್ತು₂ (<ಪೊಟ್ಟು) ]

**ತಂಪುಳಿ** (ನಾ). "ಕಾಯಿಸದ ಕಬ್ಬಿಣಕ್ಕೆ ಆಕಾರ ಕೊಡಲು ಉಪಯೋಗಿಸುವ ಉಕ್ಕಿನ ಅಥವಾ ಕಬ್ಬಿಣದ ಚಾಣ: ತಂಪುಳಿ" (Cold-chisel. ಇಂಕನಿ.). [ ತಂಪು₂ (<ತಣ್ಪು₂) + ಉಳಿ₂ ]

**ತಂಪೆರೆ** 'ತಣ್ಪೆಱೆ' ನೋ.

**ತಂಪೆಸೆ** (ಕ್ರಿ). ತಂಪಾಗಿ ಶೋಭಿಸು,-ಕಂಗೊಳಿಸು: ತಂಪೆಸೆವ ತಣ್ಣೆಳಲ ತಾಣಂ (ನವಮೋ. ೪-೩೨). [ ತಂಪು₂ (<ತಣ್ಪು₂) + ಎಸೆ₂ ]

**ತಂಪೇರು** 'ತಣ್ಪೇಱು' ನೋ.

**ತಂಪೇಱು** 'ತಣ್ಪೇಱು' ನೋ.

**ತಂಪೊಟ್ಟು** (ನಾ). ತಂಪಾದ ಹೊತ್ತು; ಸಂಜೆಯ ಹೊತ್ತು; ಸಾಯಂಕಾಲ: ಈ ಪೊಟ್ಟು ತಂಪೊಟ್ಟು ಪೂವಿನ ಪೊಟ್ಟೆಂಬಿನಮಾಯ್ತು ಧಾರಿಣಿಗೆ ಭಾಸ್ವನ್ಮಂಡಲಂ ಕುಂಡಲಂ (ಸೂಕ್ತಿಸು. ೮-೭). [ ತಂ₁ (<ತಣ್₂) + ಪೊಟ್ಟು ]

**ತಂಬಟ,** ತಂಬಟೆ, ತಂಬಟ್ಟು, ತಪಟೆ, ತಪ್ಪಟಿ, ತಪ್ಪಟೆ, ತಬಟೆ, ತಮಟೆ, ತಮ್ಮಟ₁, ತಮ್ಮಟೆ, ತಮ್ಮಟ್ಟೆ (ನಾ). ಒಂದು ಬಗೆಯ ಚಪ್ಪಟೆಯಾದ ಚರ್ಮವಾದ್ಯ; ಹಲಗೆ: ವಿಳ್ಳಿಪ ಪಟಯಿಗೆ ಸೂಳೈಪ ತಂಬ[ಟಂ . . . ಮ್ಮ]ಟಂ (ವರ್ಧಪು. ೮-೫೦); ಬೀಸುವ ಚಾಮರದ ಪೊಯ್ಯು ತಂಬಟದ . . . ಸರ್ವಸಂಭ್ರಮದ ನಡುವೆ ಸಕಲ ಜನದಾನಂದರಸಂ ಮಡುಗಟ್ಟೆ (ನಂಬಿರ. ೮-೫೫); ಶಾಟಿಸುವ ತಂಬಟದ . . . ಕಾಳೆಯ ಬಲ್ಲುಲಿಯ ಸಡಗರಮೆಲ್ಲಾ ದೆಸೆಗಳಂ ಕಿವುಂಡುಮಾಡಿಸೆ (ಕಬ್ಬಿಕಾ. ೨೫೦); ತುಡುಕಿದವು ತಂಬಟದ ದನಿ ಜಗದಡಕಿಲನು (ಕುಮಾವ್ಯ. ೦-೪೭); ಭೇರಿ ತಂಬಟ ಬೊಂಬುಳಿ ಬುರುಗು ಡಿಂಡಿಮುದ ಮುಂಬರಿದೆಸೆವ ರವಗಳಾಕಾಶವ ತುಂಬಿದುವು (ಕಂಸವಿ. ೮-೦೯). **ತಂಬಟೆ :** ಭೇರಿ ತಂಬಟೆ ನಿಸ್ಸಾಳ ಕಹಳೆಗಳ ಭೂರಿ ನಿನದ (ಅಂಜಜ. ೫-೪೯); ತಂಬಟೆ ಡೋಳು ಚಂಬಕವಟೆ . . . ಕಹಳೆಗಳ ದನಿಯ ಬೆಂಬಳಿ (ಕುರಾಸಾಂ. ೦೦-೩೬); ಪಟಹಿಯ ಪೆರ್ಗಾಳೆಯ ಪಳಹದ ಕೊಟಲ ತಂಬಟೆಯ . . . ಭೇರಿಯ ಭೂರಿ ನಿನಾದಂ ದೆಸೆಮುಟ್ಟೆ ಪಳಂಚಲೆಯೆ (ರಾಮಾಶ್ವ. ೫೦-೦); ತಂಬಟೆಯು ಹೊಯ್ದು ಮೈಮರೆತವರು ಹಲರು (ವಿಸೀಗೀ. ೨೫-೪). **ತಂಬಟ್ಟು :** "ಆನಕ" (ನಾಚಿರಾ. ೬). **ತಪಟೆ :** ಕಠಿನ ದುಂದುಭಿ ತಪಟೆ ತಾಳ ಮದ್ದಲೆಗಳುಂ . . . ದಿಕ್ತಟಗಳೊಳ್ಮೊಳಗುತಿವೆ (ಅರ್ಜಾವಿ. ೭೪-೩೦). **ತಪ್ಪಟಿ :** ಕೊಂಬು ಕೊಳಲು ತಾಳ ತಪ್ಪಟಿ ಭೇರಿ ಸಂಭ್ರಮದಿಂದ ವೃಂದಾವನ ಸೇರಿ (ಪ್ರಸಧಾ. ೨೩-೪). **ತಪ್ಪಟೆ :** ಕೊಂಬು ಕೊಳಲು ತಪ್ಪಟೆ ಮೃದಂಗದ ರವ ತುಂಬಿತು ಲೋಕವನಿರದೆ (ರಾಮವಿ. ೭-೧೨); ಚಪ್ಪಾಳೆಗಳ ರವ ಕೊಂಬು ಕೊಳಲು ಹೊನ್ನ ತಪ್ಪಟೆಗಳ ದನಿಯಿಂದ ಸರ್ಪಶಯನ ರಂಗಧಾಮನ ತೇರು ಬಂದೊಪ್ಪಿತು ಮುನ್ನಿನ ಸ್ಥಳದೆ (ಕಂಸವಿ. ೨೫-೦೦೦). **ತಬಟೆ :** ತಬಟೆ ಕಾಸಿ ಸಿದ್ಧ ಮಾಡಿಕೊಂಡರು (ರೂಢಿ). **ತಮಟೆ :** ತಮಟೆಯನ್ನು

ಕಾಯಿಸಿ ಹೆಗಲಿಗೆ ಹಾಕಿಕೊಂಡು (ಹುಟ್ಟುಹ. ೧೯) : ಎದೆ ತಮಟೆಯಂತೆ ಬಡಿಯತೊಡಗಿತು (ಸಿಡಿಲು. ೮೭). **ತಮ್ಮಟ್ಟ₁:** ಪೊಯ್ವ ನಿಸ್ಸಾಳ ತಮ್ಮಟದ ಭೇರಿಗಳಲ್ಲಿ ನೆರೆದುದು ಚಾತುರಂಗ ಬಲ (ಇಹರ. ದೇ. ೩೭–೩೦) ; ಸೂಳೈಪ ತಮ್ಮಟಂಗಳ . . . ಸಂಭ್ರಮದ ಸೌರಂಭದಿಂ ವಿಜಾಟಿ ನಡೆದನು (ಸಿದ್ಧರಾ. ೬–೩೦) ; ತಮ್ಮಟವೆಂಬ ಹಲಿಗೆ ಶಂಖವೆಂಬ ಧವಳ . . . ಜಯಘಂಟೆಯೆಂಬ ಜಾಗಟೆ ಇತ್ಯಾದಿ ಪಂಚಮಹಾವಾದ್ಯಂಗಳಂ (ವಿವೇಕ. ೨೩೬); ಪಟಹ ತಮ್ಮಟ ಢಕ್ಕೆ ಡವುಡೆ ಕಹಳಾ ಸಮುತ್ಕಟನಾದವಮ್ಮಳಿಯ (ಜೆಬಪು. ೧೬–೧೩). **ತಮ್ಮಟೆ:** "ಆನಕಃ, ಪಟಹಃ–೨ ತಮ್ಮಟೆ ಹೆಸರುಗಳು" (ಸಿದ್ಧಾಂತಿ. ೩೪) ; ಮನಸ್ಸಿನಲ್ಲಿ ಬಂದರೆ . . . ಹದಿನೇಳುನೂರು ಡೊಳ್ಳು, ನಗಾರಿ, ಹಲಿಗೆ, ತಮ್ಮಟೆ, ಶಂಖ, ತುತ್ತೂರಿಗಳನ್ನು ಬಾರಿಸಬಹುದು (ಕುರಿಹಿಂ. ೧೪೩). **ತಮ್ಮಟ್ಟೆ:** ಚೀಟಿದವು ಕಹಳೆಗಳುಂ ತಮ್ಮಟ್ಟೆ ಭೇರಿ ನಿನಾದ (ರಾಮಜ. ೨೩–೧).

[ದೇ.॥ ತಮಿ. ತಪ್ಪುಟ್ಟ, ತಪ್ಪಟ್ಟ, ತಪ್ಪಟ್ಟೈ; ಮಲ. ತಮ್ಮಿಟ್ಟ, ತಪ್ಪಿಟ್ಟ; ತುಳು. ತಂಬಟ, ತಂಬಟೆ, ತಂಬಡ, ತಬಟೆ, ತಮಟೆ, ತಮ್ಮಟೆ ; ತೆಲು. ತಮ್ಮಟ, ತಪ್ಪೆಟ ; ನಾಯ್ಕಿ. ತಪ್ಪಟೆ, ತಪ್ಪ ]

**ತಂಬಟಜಾಲಿ** 'ತಂಬತ್ತಿಜಾಲಿ' ನೋ.

**ತಂಬಟಿಕಿ** (ನಾ). (?) : ಹರಿಸು ಭೀಯೆಂದು ತುಚ್ಛಿತ ಬುದ್ಧಿಗಂಡರೆನು ತೊರಿಸುವರ್ ಸಲಿಗೆಯಿತ್ತನ್ನೊಲ್ಮನ್ನದಿಂ ಮೆಲ್ಲನೆ ತರಿಸುವರ್ ಅರಿಯ ದೋಲ್ ಮನೆಯ ತಂಬಟಿಕಿಯರ ಮೂಲದಿಂ ಲೂಟಿಯಂತೆ (ಜಿನಮು. ೪೯–೪೦) [ ? ]

**ತಂಬಟಿಗ** (ನಾ). ತಾಮ್ರದ ಕೆಲಸ ಮಾಡುವವನು : ಸ್ವರಮನಜೀಗೆ ತಾಂ ಭರತಜ್ಞನಂದದಿಂ . . . ಎಡಕಮನಜೀಗೆ ತಂಬಟಿಗನಂತೆ (ಮದಕ. ೧೦–೬೬). [ ತಂಬು₀ (<ತಾಂಬ್ರ) + – ಅಟಿಗ ]

**ತಂಬಟೆ** 'ತಂಬಟ' ನೋ.

**ತಂಬಟೆಗ** (ನಾ). ತಮಟೆ ಬಾರಿಸುವವನು : ಡೊಂಬಿಯ ತಂಬಟೆಗರು ಪಾಡುವ ತಿವದಿಗಳು (ಸಾಹಿವಿ. ೮೩). [ತಂಬಟೆ (<ತಂಬಟ) + – ಗ₂]

**ತಂಬಟೆಹೊಯಿಲು** (ನಾ). ತಮ್ಮಟೆಯ ಬಡಿತ : ತಂಬಟೆಹೊಯಿಲಿಲ್ಲ ವಾದ್ಯದ ಹಲುಬಿಲ್ಲ. ಹೆಣದ ಕೋಟೆಗೆ ನಾವು ತ್ವರೆಯಲೊಯ್ಯಾಗ (ಇಂಗೀತ. ೧೯–೧). [ತಂಬಟೆ (<ತಂಬಟ) + ಹೊಯಿಲು (<ಪೊಯ್ಲು)]

**ತಂಬಟ್ಟ** 'ತಂಬಟ' ನೋ.

**ತಂಬತ್ತಿ** (ನಾ) = ತಂಬತ್ತಿಜಾಲಿ : (೬). [ ? ]

**ತಂಬತ್ತಿಜಾಲಿ,** ತಂಬಟಜಾಲಿ (ನಾ). ಬಿಳಿಯ ಉದ್ದನೆಯ ಮುಳ್ಳು ಗಳಿರುವ, ಸುವಾಸನೆಯ ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಜಾಲಿ ; ಸುಗಂಧಜಾಲಿ: (೬). **ತಂಬಟಜಾಲಿ :** ಪೀಕಜಾಲಿ, ತಂಬಟಜಾಲಿ (ವೃಕ್ಷಗಿ. ೧–೧೨). [ ತಂಬತ್ತಿ + ಜಾಲಿ₁ ]

**ತಂಬನಿ** 'ತಣ್ಬನಿ' ನೋ.

**ತಂಬಲ** (ನಾ). ೧. ಒದ್ದೆ; ತಂಪು; ತೇವ. 'ತಂಬಲಗಟಿ' ಪರಾ. (ಗು). ೨. ಆರ್ದ್ರ, ತೊಯ್ದ" (ಜಾನಕೋ. ೬೩).

**ತಂಬಲದ ಹುಳು** = ಬಚ್ಚಲುಂ, ಮೋರಿ ಮೊದಲಾದ ತೇವವಾದ ಜಾಗಗಳಲ್ಲಿ ಇರುವ ಒಂದು ಬಗೆಯ ಹುಳು ; ಬಾಲದ ಹುಳು.

[ <ತಣ್ಪು₂ ]

**ತಂಬಲಗಟಿ³** (ಕ್ರಿ). ತೇವವನ್ನುಂಟುಮಾಡು ; ತಂಪುಗೊಳಿಸು : ಶ್ರೀಕೃಷ್ಣನಂಭೋಧಿಮಾರ್ಗಣದಿಂದೆ ಮುಂಬರಿದ್ಯದುವ ಕಾಲಾಗ್ನಿಯ ಮೆಟ್ಟಿ ತಂಬಲಗಟಿದನಾ ಬಲಕೆ (ಮೋಹತ. ೩೭–೫೮).

[ ತಂಬಲ + ಕಟಿ³₁ ]

**ತಂಬಹಾಲು** 'ತಣ್ಪಾಲ್' ನೋ.

**ತಂಬಳಕೋಲ್** (ನಾ). ಭೂಮಿಯನ್ನು ಅಳೆಯುವ ಒಂದು ಅಳತೆ ಗೋಲು,–ಪ್ರಮಾಣ (?) : ಪವಿತಗೆಯ ಸಾಲೆಯ ತ್ರಾಯಿಪುರುಷ ದೇವರ್ಗ್ಗೆಯಲ್ಲಿಯ ತಂಬಳಕೋಲಲಿನ್ನೂಱು ಮತ್ತರು ಕೆಯ್ಯು (ಎಇ. IV, ೬೫–೦೭ ; ಸು. 11ನೆಯ ಶತ). [ ತಂಬಳ₀ + ಕೋಲ್₁ ]

**ತಂಬಳಿ** 'ತಂಬುಳಿ' ನೋ.

**ತಂಬಾಕ** 'ತಂಬಾಕು' ನೋ.

**ತಂಬಾಕು,** ತಂಬಾಕ (ನಾ). ಒಂದು ಬಗೆಯ ಗಿಡ ಮತ್ತು ಅದರ ಸೊಪ್ಪು ; ಹೊಗೆಸೊಪ್ಪು : ತಂಬಾಕು, ಕಾಡುಸಣ್ಣ ಹೊಗೆಸೊಪ್ಪು (ವೃಕ್ಷಗಿ. ೭೦–೧೪೩) ; ಅದೇ ಗುಡಿಸಲಿನಲ್ಲಿ ದೇವದಾಸ ತಂಬಾಕು ಸೇದುತ್ತಾನೆಂಬುದು ಪಾರ್ವತಿಗೆ ಗೊತ್ತಿದ್ದಿತು (ದೇವದಾ. ೮) ; ತಂಬಾಕು ಮಿಶ್ರಿತ ಕವಳವು ಅವರ ಗಲ್ಲವನ್ನು ಯಾವಾಗಲೂ ಉಬ್ಬಿಸುತ್ತಿತ್ತು (ರಂಗರೋ. ೧). **ತಂಬಾಕ :** ಹಾಳುಭೂಮಿಗಳಲ್ಲಿ ಸಜ್ಜೆ ಮತ್ತು ಜೋಳವು ಗೊಬ್ಬರ ವಿಶೇಷವಾದರೆ ತಂಬಾಕವು ಬೆಳೆಯುತ್ತವೆ (ಕೃಷಿಪ್ರ. ೬೬) ; ಸಿಂಹಲದ್ವೀಪದಲ್ಲಿ . . . ಕಬ್ಬು, ತಂಬಾಕ, ಬುಂದು ಮುಂತಾದವುಗಳು ಬೆಳೆಯುತ್ತವೆ (ಮುಂಬಯಿ. ೮–೨೦೧) ; ತಂಬಾಕವನ್ನು ನಿರಿದಿಸುತ್ತಲೇ ಅದನ್ನು ಅಗಿಯಲು ಸುರುವು ಮಾಡುತ್ತಾರೆ (ಗಾಳಿಗು. ೨೮).

[ ←ಹಿಂ. ತಂಬಾಕೂ, ತಮಾಕೂ ; ಮರಾ. ತಂಬಾಕೂ, ತಂಬಾಖು, ತಮಾಕೂ, ತಮಾಖು. / ಇಂ. Tobacco. / ಪೋರ್ಚ್. ಸ್ಪ್ಯಾನಿಷ್. ಟಬಾಕೋ ; ಜಪಾನೀ: ತಾಬಾಕೋ ]

**ತಂಬಾಲ್** 'ತಣ್ಪಾಲ್' ನೋ.

**ತಂಬಾಲ** (ನಾ). ಒಂದು ಊರಿನ ಹೆಸರು (?) : ಪಾರಾಶರಗೋತ್ರದ ಆಪಸ್ತಂಬ ಸೂತ್ರದ ತಂಬಾಲದ ಕೃಷ್ಣಭಟರ ಮಕ್ಕಳು ದೇವಣಭಟರು (ಎಕ. XII, ತಿಪಟೂ. ೧೩೯–೧೨೫ ; ?). [ ? ]

**ತಂಬಾಲು** 'ತಣ್ಪಾಲ್' ನೋ.

**ತಂಬಾಣ** 'ತಾಂಬಾಣ' ನೋ.

**ತಂಬಾಳೆ** 'ತಾಂಬಾಣ' ನೋ.

**ತಂಬಿ₁** 'ತಮ್ಮ' ನೋ.

**ತಂಬಿ₂** (ನಾ). ದಂಡಿಸುವಿಕೆ ; ದಂಡನೆ ; ಶಿಕ್ಷೆ.

**ತಂಬಿ ಪಹುಂಚಾಯಿಸು** = ದಂಡಿಸು ; ಶಿಕ್ಷಿಸು : ತಮ್ಮ ರಾಜ್ಯದಲ್ಲಿ ಟೀಪುಸುಲ್ತಾನರ ಕಡೆಯಿಂದ ಉಂಬಳಿ ಪಡಕೊಂಡು ಇದ್ದಂತಾ . . . ಮುಸಲ್ಮಾನರಿಗೆ ತಂಬಿ ಪಹುಂಚಾಯಿಸಿ ಅವರನ್ನು ಪಲಾಯನಮಾಡಿ (ರಾಜೇಂದ್ರ. ೨೦). [ ←ಅರ. ತಂಬೀಹ್ ; ಮರಾ. ತಬೀ ]

**ತಂಬಿಗೆ** 'ತಂಬುಗೆ' ನೋ.

**ತಂಬಿಟ್ಟು₁,** ತಣ್ಪಿಟ್ಟು (ನಾ). ಹುರಿಕಡಲೆ, ಅಕ್ಕಿ ಮೊದಲಾದುವು ಗಳ ಹಿಟ್ಟಿನಿಂದ ಮಾಡುವ ಒಂದು ಬಗೆಯ ಸಿಹಿ ತಿಂಡಿ: ಕಬ್ಬಿನ ರಸ ಜೇನುತುಪ್ಪ ನವಣೆಯ ಹಿಟ್ಟಿನ ತಂಬಿಟ್ಟು ಹೂರಿಗೆ ಕಡುಬು . . . ಮಂತ್ರಸಮನ್ವಿತವಾಗಿ ಮೂಜಿದಿನ ಬಲಿಯಂ ಕೊಡಲು (ಬಾಲಚ. ೧೩೨–೨) ; ತಂಬಿಟ್ಟು ಕೊಡುವೆನು ದಾಸಯ್ಯ (ಪುರಂದ. ೨–೬–೫); ನಾಳೆಗೆ ಬೆಣ್ಣೆ ನೈವೇದ್ಯ, ತಂಬಿಟ್ಟು ನೈವೇದ್ಯ, ಕಡುಬು ನೈವೇದ್ಯ, ಅನ್ನೋದಕ ನೈವೇದ್ಯವೆಂದು ಪಲತೆರದ ಹರಕೆಯಂ ಪೊತ್ತರ್ (ಶರಲೀ. ೪೦೬) ; ನೆನಗಡಲೆ ಚಿಗುಳಿ ತಂಬಿಟ್ಟು ಉಂಡಲಿಗೆ ನಾನಾ ಫಲಂಗಳು (ಸೌಗಂಧಿ. ೪೩–೧೭) ; ತಂಬಿಟ್ಟು ತಣ್ಣುಹಿಟ್ಟು. ದೇವರನ್ನು ತಣಿಸುವ, ಅಥವಾ ದೇವರ ಕೋಪ ವನ್ನು ತಂಪು ಮಾಡುವ ಹಿಟ್ಟು (ನಮ್ಮನು. ೮೮) ; ತಂಬಿಟ್ಟಿಗೆ ಉಪ್ಪುಂಟೆ ತವರಿಗೆ ಮುಪ್ಪುಂಟೆ ? (ಹೇಳಿಜಾ. ೮೬). **ತಣ್ಪಿಟ್ಟು :** ರೊಟ್ಟಿ ಸಕ್ಕರೆ ತುಪ್ಪ ಬೆಲ್ಲ ಗೋಧುವೆ ತಣ್ಪಿಟ್ಟು ರಾಯಬೆಳ್ಳಿಯಪಿನಿಯ ಒಟ್ಟಿಲು . . . ಅಂಗಡಿಯೊಳು (ಕುರಾಸಾಂ. ೪೨–೭೦). [ತಣ್₂+ಪಿಟ್ಟು./ಕೊಡ. ತಂಬುಟ್ಟೀ]

**ತಂಬಿಟ್ಟು₂** (ನಾ). ಒಂದು ಬಗೆಯ ಗಿಡ: ತಂಬಿಟ್ಟು, ಕುಕ್ಕುಟು, ಉತ್ಪಲ (ಪ್ರುಶಿಗಿ. ೫೨-೧೦೩೮). [ ? ]

**ತಂಬಿಲ** (ನಾ). (ಕರಾ) ಭೂತಗಳಿಗೆ ಮಾಡುವ ನೈವೇದ್ಯ: ಬನದ ಪಂಜುರ್ಲಿ ಇವನಲ್ಲಿ ಕೇಳಿ 'ತಂಬಿಲ' ವನ್ನು ಸ್ವೀಕರಿಸುತ್ತಾನೆ (ದೇವಮ. ೪).

[ ←ತುಳು. ತಂಬಿಲ, ತಂಬಿಲೊ ]

**ತಂಬಿಸು₁** 'ತಣ್ಪಿಸು' ನೋ.

**ತಂಬಿಸು₂** (ಕ್ರಿ). ೧. ಸ್ತಂಭೀಭೂತವಾಗು; ನಿಶ್ಚಲವಾಗು; ನಿಂತುಬಿಡು: ಸೂತ್ರ ಹಱಿದ ಕಾವನ ಕೈಯ ಜಂತ್ರದ ಪುತ್ರಿಕೆ ನಿಂದ ಮಾಳ್ಕೆಯೊಳು ಧಾತ್ರೀಪತಿಯ ಮೊಗವ ಕಾಣುತಾ ಮೃಗನೇತ್ರೆ ತಂಬಿಸಿ ನಿಂದಳಾಗ (ಶ್ರೀಪಾಲ. ೪-೧೦೯). ೨. ತಡೆ; ನಿಲ್ಲಿಸು: ಲಂಕಾಪುರದ ಲಗ್ಗೆಗೆ ಬೇಗ ಬೆಸಸಂ ಕೊಡುವುದೆಂದೆನಲು ಧರಣಿಪತಿಗಳ ನೀತಿ ಸಂಧಿಯ ಪರುಠವಿಪುದದ ಮೀರಿದಡೆ ಸಂಗರಕೆ ಸೇಮವನೀವೆನೆಂಡವರುಗಳ ತಂಬಿಸಿದ (ಅನಂರಾ. ೫ ೮-೧೦); ಕುಸುಮಮಂಜರಿಯಲ್ಲಿಯಧ್ವಗರ ತಂಬಿಸುವ ಸುಸ್ವರದ ಶುಕಪಿಕಂ ಕಾಣದಿಲೆಯಿಲ್ಲ (ಜಿನಮು. ೨-೧೮). ೩. ತೊಲಗಿಸು; ನಿವಾರಿಸು: ತುಂಬಿಗಳನೋಡಿಸದ ಚಂಪಕಂ ಸೊಕ್ಕಾನೆಯಂ ಬೆದಱಿಸದ ಸಿಂಗಮಿಡಿ ದಂಧಕಾರಮಂ ತಂಬಿಸದ ಚಂದ್ರಮಂಡಲಮಿರಲ್ (ಜೈಮಿಭಾ. ೮-೩೦).

[ <ಸ್ತಂಭಿಸು ]

**ತಂಬು, ತಂಬೂ** (ನಾ). ತಾತ್ಪೂರ್ತಿಕ ವಾಸಕ್ಕಾಗಿ ಹಾಕಿರುವ ಬಟ್ಟೆಯ ಬಿಡಾರ; ಗುಡಾರ; ಡೇರೆ: ಹೊದಿಸಿದ ತಂಬು ಅಂಬರ ತಾಗುವಂದದಿ ವ್ಯೆಸರಿಸಿ ನಿಲ್ಲಿಸಿದ ಬಲವಾ (ಸಾಂದಕಾ. ೬-೨೨): ಮಹಾರಾಜರವರ ತಂಬಿಗೆ ಬಂದು (ರಾಜೇಂದ್ರ. ೯೩); ಈಗ ತಂಬು ಡೇರೆ ಮುಂತಾದ ದಂಡಿನ ಸಾಮಾನುಗಳನ್ನು ಮಾತ್ರ ಅವುಗಳ (ಆನೆಗಳ) ಮೇಲೆ ಹೇರುತ್ತಾರೆ (ಮುಂಬಯಿ. ೪-೨೩). **ತಂಬೂ**: ಅರಸುಮಗನ ಸ್ವಂತ ತಂಬೂದಲ್ಲಿ ಬಹಳ ಹೊತ್ತಿನಿಂದ ಸಂಗೀತ ಕಚೇರಿಯು ನಡೆದುದನ್ನು ಹೋದ ಕೂಡಲೆ ಕಂಡೆ (ಶ್ರೀಕಾಂತ. ೨); ಸರ್ಕಸ್ಸಿನ ತಂಬೂದಲ್ಲಿ ಬಂದು ತಂತಿಯನ್ನು . . . ಸೂಕ್ಷ್ಮವಾಗಿ ನೋಡುತ್ತ ನಿಂತಾಗ (ಮುದಿಮು. ೪೯).

[ ←ಪಾರ. ಹಿಂ. ಮರಾ. ತಂಬೂ ]

**ತಂಬುಗೆ, ತಂಬಿಗೆ** (ನಾ). ತಾಮ್ರ, ಹಿತ್ತಾಳೆ ಮೊದಲಾದ ಲೋಹಗಳಿಂದ ಮಾಡಿದ ನೀರಿನ ಸಣ್ಣ ಪಾತ್ರೆ; ಚೆಂಬು; ಚರಿಗೆ: "ಜಲಪಾತ್ರೆಯ ಕಮಂಡಲಂ ಗಿಂಡಿ ತಂಬುಗೆ" (ಮಂಗರಾ. ೬೩-೨೫); ಮಡದಿಯರಾವಗರ [ಕೆ]ರಸಿ ಕಾವಲಿ ತಂಬುಗೆ ಹುಟ್ಟು ಸಟ್ಟುಗಂ ಕೊಡನೊರಲಕ್ಕಿಯೆಂಬಿವನೆ ಚಿಂತಿಸಿ ಕೋಟಲೆಗೊಂಬರ್ (ಕಇ. IV, ೧-೫೭: 1204); ನೀರ್ಗೊಟ್ಟಿಳೊಂದು ಪೊಸ ತಂಬುಗೆಯಿಂ (ದಶಕು.೦೨-೧೨೯); ಪೊನ್ನ ತಂಬುಗೆಗಳೊಳು ಮೊಗೆ ಮೊಗೆದು (ಬಸಪು. ೫೮-೬೮); ತಳಿಗೆ ತಂಬುಗೆ ಗಿಂಡಿ ಹರಿವಾಣ ಪಡಿಗ ಬಟ್ಟಲು ಮೊದಲಾಗಿ ಭೋಜನಕೆ . . . ಅನುಗೊಳಿಸಿದರು (ಭರಜ. ೪-೫೮). **ತಂಬಿಗೆ**: ಮಿಗೆ ರಮ್ಯವಡೆದ ಹೊಂಬರಿಯಣ ತಳಿಗೆ ತಂಬಿಗೆ ಗಿಂಡಿ ಗಿಣ್ಣಿಲುಗಳನು ನಗೆಮೊಗ ದರ್ಪಣ ಹಂಸೆಪುತ್ಥಳಿಯ ದೀವಿಗೆಗಂಬಗಳನಿತ್ತನೊಲಿದು (ಮೋಹತ. ೦೫-೦೮); ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣ ಜಲವ ಕೊಂಡು (ಕಂನವಿ. ೫-೫೫); ಕರತಳದಲ್ಲಿ ತಾಳ್ದ ಶಶಿಕಾಂತದ ತಂಬಿಗೆಯಂ (ಕಂದ್ರಭು. ೨-೩೦); ಅಲ್ಲಿ ತಂಬಿಗೆಯಲ್ಲಿ ನೀರಿದೆ ಕೈಕಾಲು ತೊಳೆದುಕೊ (ನಿಪ್ಪಾಮು. ೩೭); ಗಂಗೆಗೆ ಹೋದರೂ ತಂಬಿಗೆ ಮೇಲೆ ಜ್ಞಾನ (ಗಾದೆ); ಮನೆ ನಿಮ್ಮದು ತಂಬಿಗೆ ಮುಟ್ಟಬೇಡ (ಗಾದೆ). 'ಚೆಂಬು₁' ಪರ್ಯಾ.

**ತಂಬಿಗೆ ತೆಗೆದುಕೊಂಡು ಹೋಗು** = ಶೌಚಕ್ಕೆ ಹೋಗು; ಮಲ ವಿಸರ್ಜನೆಗೆ ಹೋಗು: ಅವನೀಗ ಇಲ್ಲ. ಮುಂಜಾನೆಯೇ ತಂಬಿಗೆ ತೆಗೆದುಕೊಂಡು ಹೋಗಿದ್ದಾನೆ (ರೂಢಿ). **ತಂಬಿಗೆ ಕೈಗೆ ಬರು** = ಬೇಡುವಂತಾಗು; ಭಿಕ್ಷೆಗೆ ಹೋಗುವಂತಾಗು: ಸಿರಿ ಇದ್ದಾಗ ಮೆರೆದಿದ್ದನು. ಈಗ ತಂಬಿಗೆ ಕೈಗೆ ಬರುವಂತಾಯಿತು (ರೂಢಿ).

[ ದೇ.೫ ತಮಿ. ತಮ್ಪಿಕೈ; ತುಳು. ತಂಬಿಗೆ; ತೆಲು. ತಂಬಿಗಿ, ತಂಬುಗ ]

**ತಂಬುರಿ** 'ತಂಬೂರಿ' ನೋ.

**ತಂಬುಲ, ತಾಂಬುಲ, ತಾಂಬುಳ, ತಾಂಬೂಟಿ, ತೊಂಬಲ₁, ತೊಂಬಲು** (ನಾ). ೧. ಅಡಕೆ; ಕ್ರಮುಕ: "ತಂಬುಲಂ, ಕ್ರಮುಕಂ–ಈ ೨ ತಂಬುಲಂ" (ಹಲಾಯು. ೯೦-೩೯೦); ಕ[ಯ್ಯೊ]ಳೆ ಕಯ್ಯೊಳೆ ಬಾಯ ತಂಬುಲಂ ಬಾಯೊಳೆ ತೋಱಿ ಮೆಯ್ಯುಱಿದು ನೋಡಿದಳಾ ಸಮರೈಕಮೇರುವಂ (ಪಂಪಭಾ. ೪-೩೭). ೨. ವೀಳೆಯ; ಅಡಕೆ ಮತ್ತು ಎಲೆ: "ತಂಬೂಲಮೆಂದು ವೀಳೆಯಮೆಂದುಂ ವೀಟಿಕೆ" (ಶಶಸಾ. ೨೫-೫೩೬); ಪೂವುಂ ತಂಬುಲಮುಂ ತಿಂಬಡಂಗಳುಂ ಬಂದುವು (ವಡ್ಡಾರಾ. ೦೦೬-೨೦); ತಂಬುಲಮಿಲ್ಲದ ವದನಂ . . . ಶೀತಲಜಲಮಿಲ್ಲದ ಪೂಗೊಳಂ ಮನಂಗೊಳಿಸುಗುಮೇ (ಅಜಪು. ೬-೯೫); ಒಂದನಲ್ಲದೆ ನಿನ್ನ ತಲೆಗೆರಡಂಬ ತೊಡಚಿದರೆ ಇಂದು ನಿನ್ನಯ ಬಾಯ ತಂಬುಲ ತಿಂದವನು ನೋಡು (ಕುಮಾವ್ಯಾ. ೦೭-೩೮). ೩. ಅಗಿದು ಉಗುಳುವ ಕವಳ; ಚರ್ವಿತ ತಾಂಬೂಲ: ಕುರ್ಚಿಯ ಹಿಮ್ಮಗ್ಗಲು ಇರುವ ಕಿಟಕಿಯಲ್ಲಿ ತಂಬುಲದ ಪಿಚಕಾರಿಯನ್ನು ಬಿಡುತ್ತಿದ್ದರು (ರಂಗರೊ. ೧). ೪. ಒಂದು ಬಗೆಯ ತೆರಿಗೆ; ತಂಬುಲಿಗರು ಕೊಡಬೇಕಾದ ತೆರಿಗೆ: ಮನ್ನೆಯರುದೆಱ ಆಳವಸತಾಯ ಪೊ[ಗೆ]ವೊಗೆ ತಳಾಱಗೂಳಿ ಇ×ದಿ ತಂಬುಲಂ ಮೊದಲಾಗಿ ಆತನ ಮಕ್ಕಳ್ಳ[ರುಳ್ಳ]ರ ಸರ್ವ್ವಬಾಧಾಪರಿಹಾರಂ ಕಾದು ನಡೆಯಿಸುವರ್ (ಸೌಇಇ. XI-1, ೬೫-೨೨: 1042); ಚೈತ್ರಪೈತ್ರಕೆ ಬಿಟ್ಟ ಪಣ ೪ ದಿವಸವಳ ದೇವ[ರ] × × × ಕೆಯರಂ × ಗಡಿಯ ತಂಬುಲಮಂ ಬಿಟ್ಟರು (ಸೌಇಇ. XX, ೦೩೭-೯; 1180). **ತಾಂಬುಲ**: ೨. ನಿಟಿಲಕ್ಕೆ ತಿಲಕಮದು ಕುಂತಳಕೆ ಕುಸುಮಗಳ್ ತುಟಿಗೆ ತಾಂಬುಲರಸಂ (ಪರಶು. ೦೫ ೩೫). **ತಾಂಬುಳ**: ೨. ಶ್ರೀ ಕೇದಾರೇಶ್ವರ ದೇವರಂಗಭೋಗಕ್ಕಂ ಧೂಪಾರತಿ ನಿವೇದ್ಯ ತಾಂಬುಳ ನಂದಾದೀವಿಗೆ ಪಾತ್ರ ಪಾವುಳಕ್ಕಂ (ಕಇಇ. ೦೬-೫-೨೭; 1186). △**ತಾಂಬೂಟಿ**: ೨. ಬ್ರಹ್ಮೇಶ್ವರ ದೇವರಂಗಭೋಗ ಜಳ ಗಂಧಾಕ್ಷತೆ . . . ತಾಂಬೂಟಿಮೆಂಬ ಅಷ್ಟವಿಧಾರ್ಚನೆಗಂ (ಸೌಇಇ. XX, ೮೪-೪೬; 1123). **ತೊಂಬಲ₁**: ೨. "ನಾನು ತೊಂಬಲ ತಂದುಕೊಡುತ್ತೇನೆ" ಎಂದವಳೇ . . . ವೀಳ್ಯ ಸಜ್ಜುಗೊಳಿಸುವ ನೆವದಿಂದ ಹೊರಟುಹೋದಳು (ಇಷ್ಟಳ. ೨೫೦). ೩. "ತೊಂಬಲ–ಎಂಜಲು" (ಜಾನಕೋ. ೬೮). **ತೊಂಬಲು**: ೩. ಚಿತ್ತ ನಿನ್ನಲ್ಲಿಡಿಸಿ ಕಾಯೊ ತೊತ್ತಿನ ತೊಂಬಲು ತಿಂಬೆ (ಮೋಕ್ಷದೀ. ೩೦-೭); ಜಗದೀಶಾ ನಿನ್ನಯ ಉಗುರು ಕಾಣದವರು ಉಗುಳಿವಾ ತೊಂಬಲು ನಾನು (ಮೋಕ್ಷದೀ. ೮೯-೩).

**ತಂಬುಲ ತಿನ್ನು** = ಎಂಜಲನ್ನು ತಿನ್ನು: ಅವಳ ತಂಬುಲ ತಿನ್ನೋದಕ್ಕೆ ಅಲ್ಲಿಗೆ ಏಕೆ ಹೋದೆ? (ರೂಢಿ). **ತಂಬುಲದೆಲೆ** = ವೀಳ್ಯದೆಲೆ: ಏರ್ಕೆಯಲೆ ಸಾಸಿವೆ ತಂಬುಲದೆಲೆಯಿವನಿಕ್ಕುಗೆ ಗೋಕುಲಕ್ಕೆ ರುಜೆ ತೀರ್ಗುಂ (ಲೋಕೋಪ. ೯-೨೦೮); ಒಂಭತ್ತೆಕ್ಕೆಯ ಪೂವಂ ತಂಬುಲದೆಲೆ ಮಾಱಿದರಲ್ಲಿ ಮಿದಿದಿಕ್ಕುಗೆ ಶೀತಂ ಬಪ್ಪಾಗಳು (ಕಲ್ಯಾಕಾ. ೩-೪೫). [ <ಸಂ. ತಾಂಬೂಲ ]

**ತಂಬುಲಂಗುಡು** 'ತಂಬುಲಂಗೊಡು' ನೋ.

**ತಂಬುಲಂಗೊಡು, ತಂಬುಲಂಗುಡು** (ಕ್ರಿ). ವೀಳೆಯವನ್ನು ಕೊಡು; ತಾಂಬೂಲವನ್ನು ಕೊಡು: ಸಾಹಸಾಭರಣನ ಸಾಹಸಮನಳವಲ್ಲದೆ ಪೊಗಟ್ದು ತೊಡೆಯನೇಱಿಸಿಕೊಂಡು ಬಾಯೊಳ್[ಪಾಠಾಂ. ಬಾಯ್ವಾಯೊಳ್]ತಂಬುಲಂಗೊಟ್ಟಂ (ಪಂಪಭಾ. ೭-೩೮ ವ); ಎನಗೆ ತಂಬುಲಂಗೊಡಲುಜ್ಜುಗಂಗೆಯ್ವಲ್ಲಿ ನಡುಗುವ ಕೆಂದಳಮಂ ಚೆನ್ನೆ ದಿಲಗೆತ್ತು (ಕಾದಂಬ. ೯೦). **ತಂಬುಲಂಗುಡು**: ಅವಂದಿರ್ಗಳ್ಪ್ರಜಾತ ಪರಿಚಯದಿಂ ತಂಬುಲಂಗುಡಲ್ವೇಟ್ಟು (ಕಾದಂಬ. ೨೬೨). [ ತಂಬುಲ + ಕೊಡು₁ ]

**ತಂಬುಲಂಗೊಳ್** (ಕ್ರಿ). ತಾಂಬೂಲವನ್ನು ತೆಗೆದುಕೊಳ್ಳು; ವೀಳೆಯವನ್ನು ಸೇವಿಸು : ದಿವ್ಯಾಹಾರಂಗಳನಾರೋಗಿಸಿ ಕೆಯ್ಗುಟ್ಟಿಗೊಂಡು ತಂಬುಲಂಗೊಂಡು (ಪಂಪಭಾ. ೫-೭೭ ವ).

[ ತಂಬುಲ + ಕೊಳ್$_1$ ]

**ತಂಬುಲಂದೀವು** (ಕ್ರಿ). ತಾಂಬೂಲವನ್ನು ತುಂಬು; ವೀಳೆಯವನ್ನು ಜೋಡಿಸು : ತಂಬುಲಂದೀವಿದ ಪೊಂಗವಳಿಗೆಯುಂ ಪಿಡಿದಂಬಿಕೆಗವಟಯ್ಯು ದಳಿೂರ್ವಳಿಂದ್ರವಧು ತಂಬುಲವಂ (ಶಾಂತಿಪು. ೯-೧೫೦).

[ ತಂಬುಲ + ತೀವು ]

**ತಂಬುಲಂಬಿಡಿ** (ಕ್ರಿ). = ತಂಬುಲಂಗೊಳ್ : ಮಾಸಿದೆಯಾದ ವೋಣುಡಲ. ತರಿಪೆನೆ ತಂಬುಲಂಬಿಡಿ (ಪಂಪಭಾ. ೮-೬೪). [ ತಂಬುಲ + ಪಿಡಿ$_1$ ]

**ತಂಬುಲಗುಟುಕು** (ನಾ). ಬಾಯಿಗೆ ಬಾಯಿಟ್ಟು ಕೊಡುವ ತಾಂಬೂಲ; ಕುಟುಕುದಂಬುಲ : ದೇವಿಯು ಪಾಣಿಪದ್ಮದಿಂ ತೊಲಗದೆ ಪದ್ಮರಾಗನಿಭ ಚಂಚುವನೊಯ್ಯನೆ ನೀಡಿ ನೀಡಿ ತಂಬುಲಗುಟುಕಂ ಕೊಡುತ್ತೆ (ಕುಸುಮಾ. ೧೩-೨೦). [ ತಂಬುಲ + ಕುಟುಕು$_2$ ]

**ತಂಬುಲಪೆಚ್ಚ** (ನಾ). ತಾಂಬೂಲದ ಹುಚ್ಚು ಹಿಡಿದವನು ; ಅತಿಯಾಗಿ ತಾಂಬೂಲವನ್ನು ಸೇವಿಸುವವನು : ಪಿಚ್ಚಿ ಪಿಚ್ಚಿ ಎಲೆಗಳನ್ನು ನಿರ್ವಿಚಾರ್ಥದಲ್ಲಿ ಅರೆದು ಅಗಿದು, ಪಿಚಿ ಪಿಚಿ ಉಗುಳುವ ತಂಬುಲಪೆಚ್ಚರಾದ ಆ ಸದಾನಂದಿಗಳ ಬಗ್ಗೆ ನಾನಿಲ್ಲಿ ಬರೆಯಲು ಬಯಸುವದಿಲ್ಲ (ನಿರಾಭ. ೧೫೭).

[ ತಂಬುಲ + ಪೆಚ್ಚ (<ಪಿಚ್ಚ) ]

**ತಂಬುಲಮಿಡು** (ಕ್ರಿ). ೧. ತಾಂಬೂಲವನ್ನು ಕೊಡು; ವೀಳೆಯ ನೀಡು. ೨. ಆಹ್ವಾನಿಸು : ಕರೆ : ಜಗಳಕೆ ತಂಬುಲಮಿಟ್ಟು ವುಗ್ಗಡಿಸುವ ಬಗೆಯಾದುದಾ ಭದ್ರಹಸ್ತಿ (ಶ್ರೀಪಾಲ. ೭-೫೦). [ ತಂಬುಲ + ಇಡು$_1$ ]

**ತಂಬುಲಿ** (ನಾ). ೧. ವೀಳೆಯದೆಲೆಯನ್ನು ಮಾರುವವನು; ತಂಬುಲಿಗ: ಹರದರ ಸುವೈಶ್ಯರ ಕಾರುಕರ ಚಿತ್ರಕರ ತಂಬುಲಿಗಳ ವಿನೋದಿಗಳ . . . ಸೇರುವೆಯು ಕಂಡು (ಅಕ್ರೂರ. ೭-೪೮). ೨. ವೀಳೆಯದೆಲೆಯನ್ನು ಮಡಿಚಿಕೊಡುವವನು ; ಹಡಪದವನು ; "ಹಡಪಾಳಿ" (ಕಕುನಿ. ೬. I, ೨೫). [ ತಂಬುಲ + – ಇ$_3$ ]

**ತಂಬುಲಿಗ** (ನಾ). ೧. = ತಂಬುಲಿ ೧ : ಗೊಜ್ಜಿಗಂ ತಂಬುಲಿಗರಟ್ಟಿಂ ಕಳ್ಳಕ್ಕೊರ್ಗಳೆ ಕಾದಿ . . . ದೇವಲೋಕಕ್ಕೆಸೆದನ್ (ಎಕ. XVI. ೭೫-೦೦; 1007) ; ತಂಬುಲಿಗರ್ ನಂಬುಗೆಗೆಟ್ಟವರಂತೆ ಪೆಸಾರೆ (ಧರ್ಮಾಮೃ. ೨-೬೯); ದೂಸಿಗರ ಕಂಚುಗಾಟಿರ ಬಳೆಗಾಟಿರ ತಂಬುಲಿಗರ ಮಣಿಗಾಟಿರ ಗಂದಿಗ ರಾವಣಂಗಳೊಳ್ ನಡೆತಂದರ್ (ಜಗವಿ. ೭-೧೦೮) ; ಮಾಟುವಂಗೆ—ಗಂದಿಗಂ, ದೂಸಿಗಂ, ತಂಬುಲಿಗಂ (ಶಮುದ. ೧೯೭ ಪ್ರಯೋ) ; ತಂಬುಲಿಗ ಜಂಗವ ಜೋಗಿಗಳ ಜಂಗುಳಿಗಗೇರಿಗಳೊಳಗೆ ರಥಾಡಿಸಿದನು ಶಿಖಾಳಿಗಳ (ತೊರರಾ. ೫-೮-೫೩). 'ತಂಬುಲಿಗವಸರ' ಪರಾ. ೨. = ತಂಬುಲಿ ೨ : ಅಯ್ಯಗೆಲೆಯ ಕೊಡುತಿರ್ದ ತಂಬುಲಿಗನ ಕೈಯು ತಬಕನರ್ಕಕೀರ್ತಿ ಒಯ್ಯನೆ ಸೆಳೆಕೊಂಡು ತಂದೆಗೆಲೆಯ ತನ್ನ ಕೈಯಾರೆ ಕೊಡತೊಡಗಿದನು (ಭರತೇ. ೨೭-೭೭).

ತಂಬುಲಿಗ ಸಾಸಿರ್ವರ್ = ವೀಳೆಯದೆಲೆಯ ವರ್ತಕ ಸಂಘದ ಸಾವಿರ ಸದಸ್ಯರು: ಸುಂಕದನ್ಯಾಯ ಪೆಚ್ಚಿದಡೆ ಬಾಳ್ಗಳಿಯಯ್ಯ ದಿಂಬರುಂ . . . ತಂಬುಲಿಗಸಾಸಿರ್ವರುಂ ಅಯ್ನೂರ್ವರುಂ ಪೋಗಿ . . . ಬಿನ್ನಪಂಗೆಯ್ದಡೆ (ಸೌಇಇ. IX-I, ೭೭-೦೦; 991) ; ಅಲ್ಲಿಯ ತಂಬುಲಿಗ ಸಾಸಿರ್ವರುಮಿಟ್ಟು ಹೇಱಿಗೆ × [ವೀ]ಸವಂ ಬಿಟ್ಟರು (ಸೌಇಇ. XV, ೨೭-೩೦: 1144); ದೇವರಂಗಭೋಗಕ್ಕೆ ತಂಬುಲಿಗಸಾಸಿರ್ವರಶೇಷವಿರ್ದು . . . ಕೊಟ್ಟರ್ (ಮುಂಬಕಾ. XI, ೨೫೪-೨೫ ; 1144).

[ ತಂಬುಲ + – ಇಗ ]

**ತಂಬುಲಿಗವಸರ** (ನಾ). ವೀಳೆಯದೆಲೆಯನ್ನು ಮಾರುವ ಅಂಗಡಿ ; ತಂಬುಲಿಗರ ಅಂಗಡಿ : ವಾಳೆಗಾರ್ತಿಯರಲರ್ಗಣ್ಣಾಲರ್ವೆಳಗು ನಟ್ಟವೊಲ್ ಬಿಳಿಯೆಲೆಗಳ್ ತಂಬುಲಿಗವಸರದೊಳ್ ಕರಮೆಸೆಗುಂ (ಲೀಲಾವ. ೭-೦೫). [ ತಂಬುಲಿಗ + ಪಸರ ]

**ತಂಬುಲಿಗಸೆಟ್ಟಿ** (ನಾ). ತಾಂಬೂಲದ ವ್ಯಾಪಾರಿ ; ವೀಳೆಯದೆಲೆಯ ವರ್ತಕ : ತಂಬುಲಿಗಸೆಟ್ಟಿಗಳು ಬಿಟ್ಟ ಧರ್ಮ್ಮವಾವುದೆಂದಡೆ ಹೇಱಿಂಗೆ ವೀಸ (ಸೌಇಇ. XI-II, ೦೫೫-೨೫ ; 1109). [ ತಂಬುಲಿಗ + ಸೆಟ್ಟಿ ]

**ತಂಬುಳಿ, ತಂಬಳಿ** (ನಾ). (ಕರಾ) ತೆಂಗಿನಕಾಯಿ, ಜೀರಿಗೆ ಮುಂತಾದುವನ್ನು ರುಬ್ಬಿ, ಅದಕ್ಕೆ ಮಜ್ಜಿಗೆ ಬೆಂದ ತರಕಾರಿಗಳನ್ನು ಹಾಕಿ ಕುದಿಸದೆ ಮಾಡುವ ಒಂದು ಬಗೆಯ ಮೇಲೋಗರ : ಪುಡಿಚಟ್ನಿ ಇದೆ. ತಂಬುಳಿ ಮಾಡಿದರಾಯ್ತು (ಬೆಂದಕೀ. ೭೦). **ತಂಬಳಿ :** ಬಟ್ಟಲಲ್ಲಿ ಅನ್ನ, ತಾಳದ, ತಂಬಳಿ, ಸಾರು . . . ಕಂಡವು (ಹುಳಿಥ. ೦೨೪); ಬೇಸಿಗೆ ಬಂದರೆ ಕೊಳದ ನೀರು ಹಸುರು ತಂಬಳಿಯಾಗುತ್ತದೆ (ಜಾರುದಾ. ೩೮).

[ ತಂ$_1$ (<ತಣ್$_2$) + ಪುಳಿ$_2$. / ತುಳು. ತಂಬುಳಿ ]

**ತಂಬೂ** 'ತಂಬು' ನೋ.

**ತಂಬೂರ** 'ತಂಬೂರಿ' ನೋ.

**ತಂಬೂರಿ, ತಂಬುರಿ, ತಂಬೂರ** (ನಾ). ಆಧಾರಶ್ರುತಿಗಾಗಿ ನುಡಿಸುವ, ನಾಲ್ಕು ತಂತಿಗಳುಳ್ಳ ಒಂದು ಬಗೆಯ ವಾದ್ಯ : ತಂಬೂರಿ ಮೊದಲಾದ ಅಖಿಲ ವಾದ್ಯಗಳಿದ್ದು . . . ಹರಿ ನಂಬಲಾಟ ಈ ಡಂಭಕದ ಕೂಗಾಟ (ಪುರಂದ. ೪-೭೭-೧) ; ತಾಳ ಶಂಖ ಭೇರಿಯು ತಂಬೂರಿಯು ಮೊದಲಾದ ಮೇಲು ಪಂಚಕಂಗಳೆಲ್ಲ ಹೊಗಳು ಹೊಗಳಲೂ (ವಾದಿಪೀ. ೫೦-೨) ; ನಿಸ್ಸಾಳ ಪಟಹ ತಂಬೂರಿ ಪಣವ ಕಂಸಾಳೆ ಕಂಬು ಡಿಕ್ಕಿ ವಾದ್ಯ ಸೂಳೈಸುತಲಿರೆ (ವಿಜಾಕ್ಕ. ೭೭-೩) ; ಪಟುವಾದ ಬಾರ ತಂಬೂರಿ ತುತ್ತೂರಿಗಳ್ (ಅರ್ಜಾವಿ. ೨೪-೩೦) ; ತಂಬೂರಿ ತುಂಬೆಲ್ಲ ಕೀಸರ ಬಾಸರ ಬೇಸರ ಬಂದೈತಿ (ಸಬೀಗೀ. ೪೮-೪). **ತಂಬುರಿ :** ಒಂದೆಡೆಗೆ ವೀಣೆ ಸಾರಂಗಿ ತಂಬುರಿಯಂತು ಸಂದಣಿಸಿ ಪೂರೈಸೆ (ಶ್ರೀರಾಪು. ೪-೫೫). **ತಂಬೂರ :** ಮಾಧುರ್ಯತರದ ಸುವ್ಯಾನದಿಂ ಪರವಶತೆಯಾಂತರೋಯೆನಲಂಬುಜಾನನೆಯರತಿಶಯದ ತಂಬೂರಗಳ ಪಿಡಿದು ವಾಲಗಿಪರಂ ಕಂಡನು (ವೆಂಕಾರಾ. ೫-೪-೦೨)

[ ←ಅರ. ತಂಬೂರಾ; ಹಿಂ. ತಂಬೂರಾ, ತಾನ್‌ಪೂರಾ ; ಮರಾ. ತಂಬೂರಾ, ತಂಬೋರಾ. / ಸಂ. ತುಂಬುರಿ = ಒಂದು ಬಗೆಯ ವೀಣೆ ]

**ತಂಬೆಧಡೆ** (ನಾ). ಒಂದು ಊರಿನ ಹೆಸರು. P ಈಗಿನ ವಿಜಾಪುರ ಜಿಲ್ಲೆಯತಮ್ಮಧಡ್ಡಿ : ಶ್ರೀಮತು ತಂಬೆಧಡೆ ಬಲೇಶ್ವರ ದೇವರ್ಗ್ಗೆ ಬಿಟ್ಟ . . . ಮತರು ೩೦ (ಸೌಇಇ. XI-I, ೬೮-೦೦ ; 1033). [ ? ]

**ತಂಬೆರಲ್** 'ತಂಬೆಲರ್' ನೋ.

**ತಂಬೆಲರ್, ತಂಬೆರಲ್, ತಂಬೆಲರು** (ನಾ). ತಂಪಾದ ಗಾಳಿ: ಕಮ್ಮಿತಪ್ಪ ತಂಬೆಲರ್ ವೀಸಿ (ವಡ್ಡಾರಾ. ೦೦೭-೨೦) ; ಮನವಾಱಿ ತೀಡಿದುದು ತೆಂಕಣ ತಂಬೆಲರಪ್ಪಿಕೊಳ್ವವೋಲ್ (ಪಂಪಭಾ. ೦೪-೦೨) ; ಕಾವಂಗೆ ವಸಂತ ಸಮಯಮುಂ ವಸಂತಸಮಯಕ್ಕೆ ತಂಬೆಲರುಮೆಂಬಂತೆ (ಕಾದಂಪೂ. ೩೦೪). **ತಂಬೆರಲ್ :** ತೀಡುವ ತಂ[ಪಾಠಾಂ ತೆಂ]ಬೆರಲ್ (ಪಂಪಭಾ. ೩-೩೭) ; ತಂಬೆರಲ್ಸಂಚರಿಸಿದುದಾ ಪುರದ ಪೊಱಿಗೆ ಸುರಭಿಸಮೇತಂ (ಉದ್ಭಟ. ೭-೫). **ತಂಬೆಲರು:** ಸುಳಿವೆಲರು ತಂಬೆಲರು . . . ಹಂಸೆ ರಾಜಹಂಸೆಗಳೆಸೆದುವಾ ವನದೊಳು (ಹಕಕಾ. ೩-೩೭) ; ಪಸರಿಸಿತು ತಂಬೆಲರು ಬೀತುದು ಬಿಸಿಲ ಬಿಂಕ (ಕುಮ್ಮಾಅ. ೦೭-೩೮) ; ಅಳಿವಿಂಡುಗಳ ಗಾನಕೆ ತಂಬೆಲರಿಗೆ . . . ತಲೆದೂಗುವಂದದೆ ಕಳವೆಯ ತೆನೆಗಳಂದೊಲೆದಾಡುತಿರ್ದುವು (ಕೆಂಪವಿ. ೫-೭೨). [ ತಂಪು$_2$ (<ತಣ್ಪು$_2$) + ಎಲರ್ ]

**ತಂಬೆಲರು** 'ತಂಬೆಲರ್' ನೋ.

**ತಂಬೆಳಕು** 'ತಣ್ಬೆಳಗು' ನೋ.

**ತಂಬೆಳಗ** (ನಾ). ತಂಪಾದ ಬೆಳಕನ್ನು ಬೀರುವವನು ; ಚಂದ್ರ : "ತಂಬೆಳಗಂ[ಪಾಠಾಂ ತೆಳ್ಬೆಳಗಂ] . . . ಚಂದ ಚಳಿಗದಿರ ಕತ್ತಲೆವಣಿಯ ಶಶಿಯ ನಾಮಂ" (ಕಬ್ಬಿಕ್ಕೆ. ೪೩). [ತಂಬೆಳಗು (<ತಣ್ಬೆಳಗು) + – ಅ₇]

**ತಂಬೆಳಗು** 'ತಣ್ಬೆಳಗು' ನೋ.

**ತಂಬೇಲು** (ಗು). ಹೆಚ್ಚಾದ ; ಅತಿಶಯವಾದ ; ತುಂಬಿದ : ದುಶ್ಶಾಸನೆ ಕೇಳು ತಂಬೇಲು ಗರ್ವದಿಂದ ದ್ರುಪದಾತ್ಮಜೆಯೆಮಗೆ ಈ ಕುಂಭಿಣಿಯೊಳು ಅಚೋದ್ಯವೆನಿಪ ಸುಖದ್ಯೂತದೊಳ್ ಸೋಲ್ಗೊಳಿಸಿದ ಪ್ರಯುಕ್ತ ಬಾಯೆಂದು ಕರೆದರೆ . . . ಬಾಹೋಣಯಿಲ್ಲವೆಂದು ಪ್ರಾತಿಕಾಮಿಕನಿಗೆ ನಿರೂಪಿಸಿದಳಂತೆ (ದುಶ್ಶಾ.ಕ. ೧೮).
[?. / ತುಳು. ತವೆಲ್ = ತುಂಬಿ ತುಳುಕು]

**ತಂಬೈಸು** 'ತಣ್ಬೈಸು' ನೋ.

**ತಂಭಾಲು** 'ತಣ್ಬಾಲ್' ನೋ.

**ತಃಖ್ತಿ** 'ತಖ್ತೆ' ನೋ.

**ತಃಪ್ತೆ** 'ತಖ್ತೆ' ನೋ.

**ತಕ** (?). (?) : ಕಗ್ಗಲಿಪುರಕ್ಕೆ ಪಡವಲು ತಕದ ಕರಿಮುರುಟಿಗೆ ಬಡಗಣ ವೊತ್ತಿನಲ್ಲೂ ನೆಟ್ಟಕಲ್ಲು ೧ (ಎಕ. XIV, ಮೈಸೂರು. ೦೦೩-೪೯೦ ; 1674).
[?]

**ತಕಣೆಜಿಯ** (ನಾ). ಒಬ್ಬಾತನ ಹೆಸರು (?) : ಮನೆವಗತಿ ತಕಣೆಜಿಯ ಕೊನವಾಮಾ ಎಜಿಅಂಗ ಪೊಲುಕೇಸಿಯ ಬೂದಿಗನ ಕಾಳಗದೊಳ್ . . . ಸತ್ತ (ಎಕ. III, ಮೈಸೂರು. ೪೪-೩ ; ಸು. ೬೬೦). [?]

**ತಕತಕ** (ನಾ). ಕುಣಿಯುವುದನ್ನು ಸೂಚಿಸುವ ಒಂದು ಅನುಕರಣ ಪದ: ದೀಪಾವಳಿ ಬಂದರೆ ಹುಡುಗರು ತಕತಕ ಎಂದು ಕುಣಿಯುತ್ತಾರೆ (ರೂಢಿ).

**ತಕತ್ತು**, ತಕಥು, ತಗತ್ತು₂ (ನಾ). ೧. ರಾಜ್ಯ : ಪಟ್ಟದ ಕೊರಸಿಯುನವನ ಕೈಗಿತ್ತಿದೆಂತಿರ್ಪುದೆನಲವನಳ್ಕಿ ಹೊಣಿಸಿ ನಿಲಲಾರದೆ ಕಂಪಿಸುತ್ತಿರಲವನಂ ಕಂಡಿವಂ ತಕತ್ತನಾಳ್ವುದರ್ಕಯೋಗ್ಯನೆಂದು ಬಗೆದು(ಕಳನ್ನ.೯-೩೬). **ತಕಥು:** ೧. ಶಾಹಮುರ್ತಜಾ ಅಲ್ಲಿಯಾದಿಯಾಗಿ . . . ವಿಜಾಪುರದ ತಕಥನಾಳ್ದ ಪಾತುಶಾಹರ್ (ಕಳನ್ನ. ೯-೩೯). **ತಗತ್ತು₂:** ೨. ಸಿಂಹಾಸನ ; ಪಟ್ಟ : ಜಗದ ರಾಯರು ನಿನಗೆ ಸಾಟಿಯೆ ತಗತನಿಳಿಯ್ಕೆ ಪಾವಕನಿಳಯದಿ ಮಗ ಸಹಿತ ಮಂಡಿಸುವದೂಚಿಸ್ಥಾನ ಹೋಗೆಂದ (ಅಂಬಿಕಾ. ೪೮-೭೩).
[←ಪಾರ. ಹಿಂ. ತಖ್ತ್ ; ಮರಾ. ತಕ್ತ್, ತಖತ್, ತಖ್ತ್]

**ತಕಥು** 'ತಕತ್ತು' ನೋ.

**ತಕಪಕ** (ನಾ). ಒಂದು ಅನುಕರಣ ಶಬ್ದ : ಅನ್ನ ತಕಪಕ ಎಂದು ಕುದಿದು, ಉಕ್ಕಿ ಹೊರಗೆ ಬರುತ್ತಿದ್ದಿತು (ರೂಢಿ). 'ತಕಪಕನೆ' ಪರಾ.

**ತಕಪಕನೆ** (ಅ). ತಕಪಕ ಎಂದು ; ತೀವ್ರವಾಗಿ : ಒಳಗೆ ತಕಪಕನೆ ಕುದಿವ ವಡಬಾಗ್ನಿಯ ಕಳಾಪದಿಂದಾ ಕಡಲ್ ಕಣ್ಗೆಸೆದುದು (ಚಲಭ. ೨-೩); ಕಡಲು ತಕಪಕನುಕ್ಕಲಮರರ ಗಡಣ ಕಂಗೆಟ್ಟೋಡಲು (ಪ್ರಹ್ಲಾ.ಚ. ೩-೪೩).
[ತಕಪಕ + – ಅನೆ₁]

**ತಕಯೂದ** (ನಾ). ಕಟ್ಟು ; ನಿರ್ಬಂಧ : ಜುಲುಮು, ಜಬರದಸ್ತಿ, ಪೆಟ್ಟು, ಕೊಲೆ ಮಾಡಿದವರಿಗೆ ಚನ್ನಾಗಿ ಶಿಕ್ಷೆಮಾಡಿ ಮುಂದೆ ಈ ಪ್ರಕಾರ ಅನ್ಯಾಯ ವಾಗದ ಹಾಗೆ ತಕಯೂದ ಇಡಬೇಕು (ಮಹಾವಂ. II, ೬೩).
[←ಪಾರ. ತಕಯಾದ್]

**ತಕರಾರ್** 'ತಕರಾರು' ನೋ.

**ತಕರಾರು,** ತಕರಾರ್, ತಕರಾಲು, ತಕ್ರಾರ, ತಕ್ರಾರು(ನಾ).೧. ವಿವಾದ; ದೂರು: ಜೌಗ್ರಾಮದವರ ಕರಸಿಕೊಂಡು ಗಡಿ ತಕರಾರು ಬಾರದಂತೆ . . . ಭೂಮಿಗೆ ಶಿಲಾಸ್ಥಾಪಿತವ ಮಾಡಿಸಿಕೊಟ್ಟು (ಎಕ. VIII, ಸೊರಬ. ೩೩೪-೩೦; 1743). ೨.ಅಡ್ಡಿ;ಆಕ್ಷೇಪಣೆ;ವಿರೋಧ:ಯಾರಾದರೂ ಕೊಡದೆ ತಕರಾರು ಮಾಡಿದರೆ (ಮೈಆರಿ. ೧೯೩೦, ೨೦-೨೦ ; 1712) ; ನನ್ನದೇನು ತಕರಾರು ಇಲ್ಲ (ಬದುಜ.೫೬); ತಂಟೆ ತೀರಿದರೂ ತಕರಾರು ಹೋಗಲಿಲ್ಲ (ಗಾದೆ). **ತಕರಾರ್:** ೧. ಕಂದಾಯ ಬಾಕಿ ಇರುವ ಜಮೀನಿನ ಸ್ವಾನ್‌ದಾರಿಕೆಯು ತಕರಾರ್ ಬದ್ದಿದ್ದಲ್ಲಿ . . . ಹರಾಜು ಮಾಡುವುದು ನ್ಯಾಯವಲ್ಲವು (ಗ್ರಾಮಾಕ. ೭೮).
**ತಕರಾಲು :** ೨. ಕಂಚಿ ತನ್ನ ಮಕ್ಕಳ ಹೆಸರಿನಲ್ಲಿ . . . ನೀರಗಂಟಿತನ ನೋಡಿಕೊಳ್ಳಲು ಬಂದಾಗ ಮಾರಪ್ಪನ ಮಕ್ಕಳು ತಕರಾಲು ಎತ್ತಿದರು (ಊರುಕ. ೭೮). **ತಕ್ರಾರ :** ೧. ಗಡಿ ತಕ್ರಾರ ಬಾರದ ರೀತಿಯಲ್ಲಿ . . . ಶಿಲಾಸ್ಥಾಪಿತವ ಮಾಡಿಕೊಟ್ಟು (ಮೈಆರಿ. ೧೯೩೪, ೯-೦೪ : 1690). ೨. ಪ್ರತಿಯೊಬ್ಬ ಭಕ್ತರೂ ಹೀಗೆ ಒಂದಿಲ್ಲೊಂದು ಬಗೆಯಿಂದ ತಕ್ರಾರ ಹೂಡಿದರು (ಗಾರ್ಹಂಗ. ೦೭೬). **ತಕ್ರಾರು :** ೧. ಗಡಿ ತಕ್ರಾರು ಬಾರದ ರೀತಿಯವರ ಮುಂದಿಟ್ಟು ರೇಖೆ ಪ್ರಮಾಣು ಭೂಮಿಗೆ ಗಡಿಕಲ್ಲು ಹೊಳಿಸಿ ಕೊಟ್ಟು (ಮೈಆರಿ. ೧೯೩೫, ೭೦-೦೩ ; 1817).
**ತಕರಾರು ತೆಗೆ** = ಆಕ್ಷೇಪಿಸು ; ತಕರಾರು ಮಾಡು : ರೂಲ್ಸ ಪ್ರಕಾರ ನಾವು ನಡೆದುಕೊಂಡಿಲ್ಲ ಅಂತ ತಕರಾರು ತೆಗೆದು ನಮ್ಮ ಈ ದೀಪ ಬಂದ ಮಾಡಬಹುದು (ಮನಜಿ.೧೬೩). **ತಕರಾರು ಮಾಡು** = ೧. ದೂರು; ವಾಣ ಬೋಣಿಯಾಗಲಿಲ್ಲವೆಂದು ತಕರಾರು ಮಾಡಿದ್ದರಿಂದ ಹೋಟಲಲ್ಲಿ ಜಗಳ ಕಾಯಬೇಕಾಯಿತು (ಹೊಸಕ್ಕ. ೫೮). ೨. ಅಡ್ಡಿಮಾಡು ; ವಿರೋಧಿಸು : ಈಗ ಅವರ ಮಗ ಟೀಪುಸುಲ್ತಾನರು ತಕರಾರುಮಾಡಿ . . . ಕರಾರತು ಮಾಡುತ್ತಾರೆ (ರಾಜೇಂದ್ರ.೫೦). **ತಕರಾರು ಹೂಡು**=ತಕರಾರುಮಾಡು ೧: ಸಂಬಳ ಸಾಲದು . . . ಎಂದೆಲ್ಲರೂ ಅವರಿವರ ಮಾತು ಕೇಳಿ ತಕರಾರು ಹೂಡಿದೆವು (ಹುಚ್ಚುಹು. ೭೦) ; ನಾನು ಹಡಗಿನಿಂದ ಸಾಮಾನುಗಳನ್ನು ಇಳಿಸಿದೆನೊ ಇಲ್ಲವೊ ಇಲ್ಲಿಯ ರಾಜ ತಕರಾರು ಹೂಡಿದ (ಪ್ರವಾಇ. II, ೧೯೦).
[←ಅರ. ಹಿಂ. ಮರಾ. ತಕರಾರ್, ತಕ್ರಾರ್]

**ತಕರಾರು ಅರ್ಜಿ** (ನಾ). ೧. ಕೆಳಗಿನ ಕೋರ್ಟಿನ ತೀರ್ಪನ್ನು ಪ್ರತಿಭಟಿಸಿ ಸಲ್ಲಿಸಿದ ಅರ್ಜಿ : (ಕ). ೨. (ನ್ಯಾಯಾಲಯಕ್ಕೆ) ಒಬ್ಬನು ಸಲ್ಲಿಸಿದ ಅರ್ಜಿಗೆ ಪ್ರತಿಯಾಗಿ ಸಲ್ಲಿಸಿದ ಅರ್ಜಿ : (ಕ). [ತಕರಾರು + ಅರ್ಜಿ₂]

**ತಕರಾರುಇಸಮು** (ನಾ). ಅಡ್ಡಿ ಮಾಡುವ ಸ್ವಭಾವದವನು : ಬಲು ತಕರಾರು ಇಸಮು (ಕಮಳ. ೦೬೮). [ತಕರಾರು + ಇಸಮು (<ಇಸಂ)]

**ತಕರಾರುತಃಖ್ತೆ** (ನಾ). ೧. ಹಳ್ಳಿಯ ಶ್ಯಾನುಭೋಗರು ಸರ್ಕಾರಿ ಜಮೀನುಗಳ ಒತ್ತುಗಡೆ ಮುಂತಾದ ವಿಚಾರಗಳನ್ನು ಗುರುತು ಮಾಡಿ ಇಟ್ಟಿರುವ ದಾಖಲೆ ಪುಸ್ತಕ. ೨. ತಕರಾರು ಅರ್ಜಿಗಳನ್ನು ನಮೂದು ಮಾಡುವ ಪುಸ್ತಕ : ಗ್ರಾಮ ಪಂಚಾಯಿತಿಯವರು ಯಾವಾಗಲೂ ಒಂದು ತಕರಾರು ತಃಖ್ತೆಯನ್ನು ಇಟ್ಟಿರಬೇಕು (ರೂಢಿ).
[ತಕರಾರು + ತಃಖ್ತೆ (<ತಖ್ತೆ)]

**ತಕರಾಲು** 'ತಕರಾರು' ನೋ.

**ತಕಲಿ, ಟಕಳಿ** (ನಾ). ನೂಲನ್ನು ತೆಗೆಯುವ ಒಂದು ಉಪಕರಣ ; ಕದಿರು : ರಂಗಣ್ಣ ಕಾಕಾ ಪಡಸಾಲೆಯಲ್ಲಿ ಕುಳಿತುಕೊಂಡು ತಕಲಿಯಿಂದ ನೂಲು ತೆಗೆಯುತ್ತಿರುವರು (ಚಂದಯ. ೧೨) ; ಹಿಂದಿನ ಕಾಲದಲ್ಲಿ ಕೈಗಳಿಂದ ಅಥವಾ ತಕಲಿ, ಚರಕಗಳಂಥ ಸಣ್ಣ ಉಪಕರಣಗಳಿಂದ ಎಳೆಗಳನ್ನು ತೆಗೆಯುತ್ತಿದ್ದರು(ಗೃಹವಿ.೭೨). **ಟಕಳಿ:** ನಿತ್ಯ ನೂಲಬೇಕೆಂದು ನಿಯಮ ಮಾಡಿದವರಿಗೆ ನೂಲಲು ಟಕಳಿಯನ್ನು ಕೊಡಲಿಲ್ಲ (ಭಾರಸಂ. ೪೭) ; ಟಕಳಿಯಲ್ಲಿ . . . ನೂಲು ತೆಗೆಯುತ್ತಿದ್ದ (ದೀಪಹ. I, ೯೮). [←ಹಿಂ. ತಕಲೀ]

**ತಕಲೀಫು** (ನಾ). ತೊಂದರೆ ; ಕಷ್ಟ : ಇದು ತುಂಬಾ ತಕಲೀಫು ಕೊಡುವ ಕೆಲಸ (ರೂಢಿ). [←ಅರ. ಹಿಂ. ಮರಾ. ತಕಲೀಫ್]

**ತಕಲು** 'ತಕ್ಕಿಲ್$_2$' ನೋ.

**ತಕಶೀರು** 'ತಕ್ಸೀರು' ನೋ.

**ತಕಶೀರುದಾರ** 'ತಕ್ಸೀರುದಾರ' ನೋ.

**ತಕಾರ** (ನಾ). 'ತ' ಎಂಬ ಅಕ್ಷರ : ಕಿಱಿದರ್ಕೆ ಕುಱಿಂಬೆಡೆಯಲ್ಲಿ ತಕಾರಂ ಸ್ವರಮುಡಸೆ ಪರಕ್ಕುತ್ವಮುಸ್ವರಂ ನಿಲೆ ಪರದೊಳ್ (ಶಮದ. ೧೮೧).

[ ಸಂ. ]

**ತಕಾವಿ,** ತಗಾಯಿ, ತಗಾವಿ (ನಾ). ವ್ಯವಸಾಯದ ಸೌಕರ್ಯಗಳಿಗಾಗಿ ರೈತರಿಗೆ ಸರಕಾರದವರು ಕೊಡುವ ಸಾಲ,–ಮುಂಗಡ ಹಣ: ರೈತರಿಗೆ ಬೇಕಾದರೆ ಮುನಾಸಬು ತಕಾವಿ ಕೊಡುವುದಕ್ಕೂ . . . ಏರ್ಪಾಡಾಗಿತ್ತು (ಮುಹಾವಂ. II, ೩೧). **ತಗಾಯಿ:** ತಗಾಯಿ ವಸೂಲಿಯ ಕೆಲಸವನ್ನು . . . ಆ ಕಾಲದಲ್ಲಿ ಅವರು ಮಾಡುತ್ತಿದ್ದರು (ಬ್ಯಾಂಕಳ್ಳ. ೧೨೭) ; ಇನ್ನೊಬ್ಬರಿಗೆ ತಗಾಯಿಯ ಹಣವನ್ನು ಕೊಡಿಸುವದಾಗಿಯೂ . . . ಹೇಳುವರು (ಗಂಗಾಸಾ. ೪೮). 'ತಗಾಯಿಸಾಲ' ಪರಾ. **ತಗಾವಿ:** ತಗಾವಿಯಲ್ಲಿ ನೋಡಲಿಲ್ಲವೇ, ತಹಸೀಲದಾರ ಸಾಹೇಬರು ಸಾವಿರಗಟ್ಟಲೆ ಹೊಡ ಕೊಂಡರು (ಪ್ರೇಮಾಶ್ರ. ೨).

[ ←ಅರ. ಹಿಂ. ತಕಾವೀ ; ಮರಾ. ತಕಾವೀ, ತಗಾಈ ]

**ತಕಾವಿರಕಮು** (ನಾ). ತಕಾವಿ ಸಾಲದ ಮೊತ್ತ : ಭೂಕಂದಾಯವನ್ನೂ ತಕಾವಿ ರಕಮನ್ನೂ ಸರಕಾರಕ್ಕೆ ತುಂಬಿ ಅಧಿಕಾರದಿಂದ ನಿವೃತ್ತರಾದರು (ದಾಕೊಟಿ. ೯).

[ ತಕಾವಿ + ರಕಮು (<ರಕಂ) ]

**ತಕಾವಿಸಾಲ,** ತಗಾಯಿಸಾಲ (ನಾ). = ತಕಾವಿ : ಸರ್ಕಾರದಿಂದ ರೈತರಿಗೆ ತಕಾವಿ ಸಾಲ (ಗ್ರಾಮಾಕ.೧೫೯). **ತಗಾಯಿಸಾಲ:** ತಗಾಯಿಸಾಲ ಮಂಜೂರ ಮಾಡುವ ಬಗ್ಗೆ ರೈತರು ಅಧಿಕಾರಿಗೆ ಅರ್ಜಿಮಾಡಿಕೊಂಡರು (ಕರವೀ. ೭೫).

[ ತಕಾವಿ + ಸಾಲ$_1$ ]

**ತಕ್ಕ$_1$** (ನಾ). ೧. ಯೋಗ್ಯನಾದವನು ; ಅರ್ಹನಾದವನು ; ಸಮರ್ಥನಾದವನು: ಮಂದರಾಚಲಮಂ ತಂದವನಾವನಾತನೆ ವಲಂ ತಕ್ಕಂ ಪೆಱರ್ ತಕ್ಕರೇ (ಪಂಪಭಾ. ೭-೪೧) ; ಸೇನೆಯ ಬಹುಳತೆಯ ಲೆಕ್ಕಿಸಲ್ ತಕ್ಕನಾವಂ (ಕುಸುಮಾ. ೩-೧೪) ; ತಕ್ಕರಿಲ್ಲದ ಸಭೆ ಮದಾಂಬುವನುಕ್ಕದಿಭ (ಸಾಳ್ವಭಾ. ೩-೧೧) ; ತಕ್ಕನ್ ತಕ್ಕವೊಲ್ ಬಾಟ್ಟಪನ್ (ಅಕ್ಕತ್ಯಾ. ೧೯-೪೦೩). ೨. ಒಳ್ಳೆಯವನು ; ಸಜ್ಜನ : "ಕುಳಜಾತಂ ತಕ್ಕನಾರ್ಯಂ ಸುಜನನಭಿಜನಂ ಸಾಧು ಸದ್ವೃತ್ತನಪ್ಪಂ" (ವಸ್ತುಕೋ. ೧೧೦-೧೧) ; ತಕ್ಕನಂ ಪೊಲೆಯನೆ ಮಾಳ್ಪ ಮುಂ ಪೊಲೆಯನಂ ತಕ್ಕನೆ ಮಾಳ್ಪ . . . ನೃಪಚಿತ್ತವೃತ್ತಿ ಸಂಚಲಂ (ಪಂಪಭಾ. ೧೨-೯೨) ; ಪಾಪಕ್ಕಂಜುಗುಂ ತಕ್ಕಂ (ಭಾಷಾಭೂ. ೮೧ ಉದಾ) ; ಮಕ್ಕಳಾಟಿಕೆಯಾದಡಾಗಲಿ ತಕ್ಕರಲ್ಲೆಂದೆನಲಿ ಸಲಹುವಡಕ್ಕ ಸೈರಂಧ್ರಿಯನು ಸೇರಿಸಬೇಕು ತನಗೆಂದ (ಕುಮಾವ್ಯಾ. ೨-೧೭) ; ತಕ್ಕರ ಗೋಷ್ಠಿ ತನೂದರಿಯರ ಪೊಸ ತಕ್ಕೆ . . . ಹೃದಯಕ್ಕೆ ವಿಲಾಸಮನೀವುದು (ಜಯುಕಾ. ೧-೨೪). ೩. ಹಿತವನ್ನು ಬಯಸುವವನು ; ಗೆಳೆಯ : "ತಕ್ಕನೆಂದು ಹಿತವಂ" (ಕಕಶಾ. ೧೮-೩೭೧) ; "ಹಿತವಂ ತಕ್ಕನೆನಿಸಿರ್ಕುಂ" (ಕಬ್ಬಿಗ. ೩೭) ; ನಿನ್ನ ಕೆಳೆ ಟಕ್ಕರ ಕೆಳೆಯಂತಕ್ಕುಮಲ್ಲದೆ ತಕ್ಕರ ಕೆಳೆಯಂತೊಪ್ಪಲಱಿಯದು (ಪಂಚತಂ. ೧೨೫-೧೯) ; ನೆಯ್ದಿಲ ತಕ್ಕನುದಯಗಿರಿಶಿಖರಮನೇಱಲ್ (ಜಯುಕಾ. ೧೧-೫೯). ೪. ಊರಿನ ಮುಖ್ಯಸ್ಥ : "ಲಾ ಅಪ್ಪಯ್ಯ, ತಕ್ಕರಿದಾರೇನೊ?" ಎಂದನು (ಚಿಕಶಾ. ೨೪) ; ನೀನು ಇಲ್ಲದುದು ಒಂದು ದೊಡ್ಡ ಕೊರತೆಯಾಯಿತೆಂದು ಊರ ತಕ್ಕ ಮತ್ತು ಅರುವರು ಹೇಳಿಕೊಂಡರು (ನಡದಾ. III, ೧೧೩೯). 'ಗ್ರಾಮತಕ್ಕ' ಪರಾ.

[ ತಕ್ಕು$_2$ + – ಅ$_7$. / ಕೊಡ. ತಕ್ಕ ]

**ತಕ್ಕ$_2$** 'ತಗು' ಪರಾ.

**ತಕ್ಕಡಿ$_1$** (ನಾ). ವಸ್ತುಗಳನ್ನು ತೂಕಮಾಡುವ ಸಾಧನ; ತ್ರಾಸು: ರತ್ನ ಪರೀಕ್ಷಕರು ಯಣಿಸಲಶಕ್ತರಾಗಿ ತಕ್ಕಡಿಗಳಿಂದಾ ಮಣಿ ಯಿಷ್ಟೆಂದು ತಿಳಿದವರಲ್ಲಾ (ಸೌಗಂಧಿ. ೭೩೩-೧೯) ; ಗೀತೆಯು ಪ್ರತಿಯೊಂದು ವಿಷಯದಲ್ಲಿ ತಕ್ಕಡಿಯನ್ನು ಸಮತೂಕವನ್ನಾಗಿ ಹಿಡಿಯಲು ಪ್ರಯತ್ನಿಸುತ್ತದೆ (ಗೀತಾಸಂ. ೧೨೫) ; ತಕ್ಕಡಿಗೋ ಬೇಡ ಕಾಣಿ ತೂಗುತಿರಲಿ ಸತ್ಯವಾಣಿ (ಅರಳು.೪೦೦-೫).

**ತಕ್ಕಡಿ ಹಿಡಿ**=೧. ತೂಗು ; ತೂಕಮಾಡು. ೨. ವ್ಯಾಪಾರವಾಡು. ೩. ಪರೀಕ್ಷಿಸು; ಬೆಲೆಕಟ್ಟು: ಪರಿಶೀಲಿಸಲಿ, ತಕ್ಕಡಿ ಹಿಡಿಯಲಿ, ಕೇರಲಿ, ತೂರಲಿ (ಕಬಸಾ. iv ೬೮೬). [ ದೇ.॥ ತಮಿ. ತಕ್ಕಟಿ, ತಕ್ಕಟ್ಟೈ ; ಮಲ. ತಕ್ಕಿಡ ; ತುಳು. ತಕ್ಕಡಿ ; ತೆಲು. ತಕ್ಕಡ ]

**ತಕ್ಕಡಿ$_2$** (ನಾ). ಮೋಸ : ಎಱಕಮಲ್ಲದೆ ಪೊಲ್ಲದಾಗೆಱಗಿ ದೊರೆಕೊಂಡ್ಕೆ ಕೊಳ್ವ ತೆಱನಲ್ಲದೆ ನೆಱೆಯೆ ಬರಲೆ ತಕ್ಕಡಿಯಲ್ಲಿ ಬೀಸುವಲ್ಲಿಯೆ ಬೀಸಲಱಿದೆಯಿಲ್ಲ . . . ಆಸುವನುಂ ಕೂಕುವನುಂ ಬೀಸುವನುಂ ಗಡಯೆ ನೆಗಟ್ಟ ತಕ್ಕಡಿಯೊಳೆನುತ್ತಾಸದೆಯು ಕುಂಕದೆಯುಂ ಬೀಸದೆಯು ಬಿದ್ದ ಮೆಟಿಗುಮೆಟಿವ ಬೆಡಂಗಂ (ಎಕ. II, ೧೩೩-೧೨೪ ; 982).

[ ದೇ.॥ ತಮಿ. ತಕ್ಕಟ ; ತೆಲು. ತಕ್ಕಿಡಿ ]

**ತಕ್ಕಡಿಗ** (ನಾ). ತಕ್ಕಡಿ ಹಿಡಿಯುವವನು ; ವ್ಯಾಪಾರಿ.

[ ತಕ್ಕಡಿ$_1$ + – ಗ$_2$ ]

**ತಕ್ಕಡುಗುದುರೆ** (ನಾ). ಯೋಗ್ಯವಾದ ಅಶ್ವ ; ಚುರುಕಾದ ಕುದುರೆ : ಲಂಡಿ ಸವೆದು ಹೋದರೆ ಬಿಚ್ಚುವುದ ತಾ ಕಂಡು ತಕ್ಕಡುಗುದುರೆಯನು ಕೊಂಡು ಬಂದೀ ಹುಯ್ಯಲೊಳಗೆಱಗುವೆನೆಂದು ಬಂಡಾದ ಬೆನಕರಾವುತನು (ಮೋಹತ. ೩೮-೪೨). [ ತಕ್ಕಡು$_0$ (P←ಮರಾ. ತಾಖಡಾ) + ಕುದುರೆ ]

**ತಕ್ಕನೆ** (ಅ). ಒಮ್ಮೆಲೆ ; ಫಕ್ಕನೆ : ಎನೆ ನಕ್ಕನ್ ತಕ್ಕನ್ ತಕ್ಕನತಿ ಕ್ರಮಣೀಯಮಿಮಾ ಜಯೋತ್ಸವದೊಳ್ (ವಿಷ್ಣುಪು. ೧೫-೧೧೩).

[ ತಕ್$_0$ + – ಅನೆ$_1$ ]

**ತಕ್ಕಯಿಸು** 'ತಟ್ಟೈಸು' ನೋ.

**ತಕ್ಕಲಿ** (ನಾ). ಒಂದು ಬಗೆಯ ಔಷಧಿ ಮೂಲಿಕೆ : ಕರ್ಕಾಟಕಶೃಂಗಿ, ಮರದರಿಸಿನ . . . ತಾರೆಬೇರು, ತಕ್ಕಲಿ ಇವಂ ಕಷಾಯವಿಟ್ಟು ಕೊಡಲು ವಾತಜ್ವರ ನಿಲ್ಲುವುದು (ಸಕವೈ. ೬೯). 'ತಕ್ಕಿಲ್$_1$' ಪರಾ. [ ? ]

**ತಕ್ಕಲು** 'ತಕ್ಕಿಲ್$_2$' ನೋ.

**ತಕ್ಕವಲ** (ನಾ). = ತಕ್ಕೋಲ$_2$ ೧ : ಉಪಯುಕ್ತಮಪ್ಪ ತಕ್ಕವಲ ಪುಟ್ಟಯೇಲಕ್ಕಿ[ಪಾಕಾಂ. ತಕ್ಕಪ್ಪವಲಘಟ್ಟ] ತಗರಮಲಯಜವಿನಿತುಂ . . . ಉಪಸೇವಿಸೆ ಪೊಗೆಯಿನೊಗೆದ ಬಟಲಿಕೆಯುಱುಗುಂ (ಖಮದ. ೨-೧೮೪).

[ <ಸಂ. ತಕ್ಕೋಲ ]

**ತಕ್ಕವಿಸು** 'ತಟ್ಟೈಸು' ನೋ.

**ತಕ್ಕಸೈಲ** (ನಾ). ಮೈಲುತುತ್ತ ; ರಸಾಂಜನ : "ತಾರ್ಕ್ಷ್ಯಃ-ತಕ್ಕಸೈಲ" (ಓಷಧಿ. ೬೭). [ <ಸಂ. ತಾರ್ಕ್ಷ್ಯಶೈಲ ]

**ತಕ್ಕಳಿ** 'ತಕ್ಕಟಿ' ನೋ.

**ತಕ್ಕಳಿಸು**(ಕ್ರಿ). (ನೀರು ಮೊದಲಾದುವನ್ನು) ಚಿಮುಕಿಸು; ಸಿಂಪಡಿಸು: ತುಂಬಾ ಧೂಳಿದ್ದಿದೆ, ನೀರು ತಕ್ಕಳಿಸಬೇಕು (ರೂಢಿ). [ ? + – ಇಸು$_3$ ]

**ತಕ್ಕಟಿ, ತಕ್ಕಳಿ**(ಕ್ರಿ).೧. ಘನತೆಯನ್ನು ಕಳೆದುಕೊಳ್ಳು; ಹಿರಿಮೆಗುಂದು; ಘನತೆಗೆಡು : ತಕ್ಕಟಿದೆನಗೆ ಸಪತ್ನಿಯರಿಕ್ಕುಂಗೂಟಿಂಗೆ ಬಯಸಿ ಪಾರ್ದಿರ್ಪ ವಿಷಾದಕ್ಕೆ ಗುರಿಯಪ್ಪ ದುರ್ಯಶಮುಕ್ಕುಂ ತನಯಂ ತಪಕ್ಕೆ ಪಕ್ಕಾಗಲೊಡಂ (ಪಂರಾಮಾ. ೬-೯೧). ೨. ಎದೆಗುಂದು ; ಶಕ್ತಿಗುಂದು ; ಧೈರ್ಯವುಡುಗು : ಇಭರಿಪುವಂ ತಕ್ಕಟಿವಿನೆಗಂ ನೊಂದು ನಿಂದು ಕೊಂದುದಿಭೇಂದ್ರಂ (ಶಾಂತಿಪು. ೨-೧೧೭) ; ಮಱುವಕ್ಕದ ನಾಯಕರನಾಜಯೊಳ್ಕಂಡಿನಿಸುಂ ತಕ್ಕಟಿದನೆ ಬಗೆಯೊಳ್ ಬೆಳ್ವಕ್ಕಿಯ ಪಿಂಡಿಂಗವಂದಿರಂ

ಸರಿಗಂಡಂ (ಪಂರಾಮಾ. ೯–೫೮) ; ತಕ್ಕಟಿಯದೆಕ್ಕತುಳಂ ಪೊಣರ್ದು . . . ಒಂದನೊಂದಿಟಿಯಲಿರ್ದುವು ತಟತ್ತಿರಡುಗ್ರು ದಂತಿಗಳ್ (ಪುಷ್ಪಪು. ೫–೮೦); ಪಜ್ಜೆ ಪಜ್ಜೆಗೆ ತಕ್ಕಟಿದು ಬಗೆಗುಂದಿ ಕಂಡರಂ ಬೆಸಗೊಳುತುಂ (ರಾಮಾಶ್ವ. ೧೧೦–೬). **೩.** ಔಚಿತ್ಯವನ್ನು ಮೀರು ; ಮರ್ಯಾದೆಯನ್ನು ತಪ್ಪು : ನೆರೆಯೊಳಘಮರ್ಷಣಧ್ಯೊಳಿರ್ಪ ಮುನಿಗಳಂ ಲೆಕ್ಕಿಸದೆ ತಕ್ಕಟಿದು ಮುಕ್ಕುಳಿಸಿ ಜಕ್ಕುಳಿಸಿದಂ (ರಾಮಾಶ್ವ. ೧೩೭–೨೦). **ತಕ್ಕಳಿ : ೨.** ಬಿಕ್ಕುತುಂ ಬೀಗುತುಂ ಬಲ್ಪಳಿದು ಬಾಡುತುಂ ತಕ್ಕಳಿದು ತಡವಾಗಿ ಹೊರೆಯೇಟಿ ನೋಡುತುಂ (ನಂಬಿರ. ೭–೧೩೦); ಕೆಲ ಪೌಜು . . . ತಲ್ಲಣಂಗೊಂಡು ತಕ್ಕಳಿದು ನಿಂದೆಡೆಯಲ್ಲಿ ನಿಲ್ಲದಾಯಿತು (ಸಮ್ಯಕ್ತ್ವ. ೮–೫೦) ; ಪೆಂಪಳಿದರ್ ಜಗುಳ್ದರ್ ತಿಣಿದರ್ ತಕ್ಕಳಿದರ್ ಪರಪೃಥಿವೀಪಾಲಕ ಬಲದವರು (ಜಯುಕಾ. ೭–೧).
[ ತಕ್ಕು₂ + ಅಟಿ₁ ]

**ತಕ್ಕಾಬಿಕ್ಕಿ**, ತಕ್ಕಿಬಿಕ್ಕಿ (ನಾ). ಮೋಸ ; ವಂಚನೆ ; ಅಪ್ರಾಮಾಣಿಕ ವ್ಯವಹಾರ: "ತಕ್ಕಾಬಿಕ್ಕಿ–ಮೋಸತನ" (ಜಾನಕೋ. ೬೩). **ತಕ್ಕಿಬಿಕ್ಕಿ:** (+).
[ <ತಕ್ಕು₃ ]

**ತಕ್ಕಾಮೆ** (ನಾ). ೧. ಘನತೆ ; ಗೌರವ : ಜೊತೆ ತಕ್ಕರನ್ನತಾರೆ ; ಕೊಡಗ ಅದನ್ನ ತಡೆಯಬಹುದೆ ? ತಡದೆ, ತಕ್ಕಾಮೆ ಉಳಿಯತ್ತೇನು ? (ಚಿಕರಾ. ೧೦೯). **೨.** ಒಡೆತನ ; ಪದವಿ ; ಸ್ಥಾನಮಾನ : ಇವರು ಬೇಸರಗೊಂಡ ವರಲ್ಲಿ ಮುಖ್ಯರಾದ ಜನ ಇಂಥವರು ನಾಡಿನ ಎಲ್ಲ ಸೀಮೆ ಎಲ್ಲ ತಕ್ಕಾಮೆ ಯಲ್ಲಿಯೂ ಇರುವರು (ಚಿಕರಾ. ೫೩). 'ತಕ್ಕುಮೆ' ಪರಾ.
[ ←ಕೊಡ. ತಕ್ಕಾಮೆ ]

**ತಕ್ಕಾರಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೀಜ : ತಕ್ಕಾರಿ ಯೆಂಬ ಬೀಜವಂ ಚೂರ್ಣವಂ ಮಾಡಿ ನೀರಿನಲ್ಲಿ ಕದರಿ ಗಿಡಗಳ ಬೇರಿಗೆ ಹಾಕಿದರೂ . . . ಆ ಗಿಡಗಳು ಚನ್ನಾಗಿ ವೃದ್ಧಿಯಂ ಹೊಂದುವದಿಲ್ಲ (ಸೌಗಂಧಿ. ೪೩೭–೭೦). 'ತಕ್ಕಿಲ್₁' ಪರಾ. [ <ಸಂ. ತರ್ಕಾರೀ ]

**ತಕ್ಕಾಳಿ** (ನಾ). ಟೊಮ್ಯಾಟೊ; ಚಪ್ಪರಬದನೆ: ತಕ್ಕಾಳಿ (ಟೊಮ್ಯಾಟೋ) ಬೇರನ್ನು ಕಷಾಯಮಾಡಿ ಕಲ್ಲಾರು ಗ ೧ ತೂಕವನ್ನು ಅರೆದು ಕಲಸಿ ತೆಗೆದುಕೊಳ್ಳಲು ಬಹುಮೂತ್ರ ನಿಲ್ಲುವುದು (ಸಕವ್ಯ. ೫೦೦ ಪರಿ) : ಗೂದೆ ಹಣ್ಣು, ಚಪ್ಪರಬದನೆ, ಟೊಮಾಟೋ, ತಕ್ಕಾಳಿ (ವ್ಯಾಪಿಗಿ. ೫೦–೧೦೩೦) ; ವಿಟಮಿನ್ ಸತ್ವ ಅಧಿಕವಾಗಿರುವುದು ತಕ್ಕಾಳಿ ಹಣ್ಣುಗಳಲ್ಲಿ (ತರಬಿ. ೪೦).
[ ದೇ.॥ ತಮಿ. ಮಲ. ತಕ್ಕಾಳಿ; ತೆಲು. ತಕ್ಕಲಿ ]

**ತಕ್ಕಿಬಿಕ್ಕಿ** 'ತಕ್ಕಾಬಿಕ್ಕಿ' ನೋ.

**ತಕ್ಕಿಲ್₁**, ತಕ್ಕಿಲೆ (ನಾ). ಒಂದು ಬಗೆಯ ಮರ ; ತಗ್ಗಿಮರ : ಎಲವಂ ಪಾದರಿ ಹಾಲೆ ನುಗ್ಗೆ . . . ಬೊಬ್ಬುಲಿ ತಕ್ಕಿ[ಪಾಠಾಂ. ತೊಕ್ಕ, ತೊಲ್ಕಿ] ಲ್ತರುಕಾಸು ನೆಲ್ಲಿ (ಸೂಕ್ತಿಸು. ೩–೩೩). **ತಕ್ಕಿಲೆ:** "ಜಯಾ, ಜಯಂತೀ, ತರ್ಕಾರೀ, ನಾದೇಯೀ, ವೈಜಯಂತಿಕಾ–೫ ತಕ್ಕಿಲೇಗಿಡ, ತಗ್ಗೀಸೊಪ್ಪಿನ ಗಿಡ" (ಸಿದ್ಧಾಂತಿ. ೧೧೧); ಈಜಿಗಿಡ, ಅಗ್ನಿಮಂದ, ತಕ್ಕಿಲೆ, ಛಾಚಣಿಗೆ ಮರ (ವ್ಯಾಪಿಗಿ. ೬೪–೧೩೦೦).

**ತಕ್ಕಿಲ್₂**, ತಕಲು, ತಕ್ಕಲು, ತಕ್ಕಿಲು, ತರ್ಕಿಲ್ (ನಾ). ವ್ಯವಸಾಯಕ್ಕೆ ಯೋಗ್ಯವಾದ ಭೂಮಿ : ತಕ್ಕಿಲ ೩ ಮತ್ತರ್ಕೆಯುಮಂ . . . ಬಿಟ್ಟರು (ಕಇ. II, ೧೧–೩೦ ; 1080) ; ನೆಸಱುವಾಡವಾ ಗಡಿಂಬದಿಂ ತಕ್ಕಿಲ ನೆಲ ಮತ್ತ ೨ (ಸೌಇಇ. IX-1, ೨೫೩–೭೯ ; 1149) ; ಹಳ್ಳದಿಂ ಪಡುವಲ್ ತಕ್ಕಿಲ ಮತ್ತರು ೩ (ಎಇ. XIV, ೨೭೩–೪೦ ; 1173) ; ಖಂಡಸ್ಫುಟಿತ ಜೀರ್ಣೋದ್ಧಾರವಿನ್ನಿನಿತಕ್ಕಂ ಬಿಟ್ಟ ತಕ್ಕಿಲ ಮತ್ತರ್ ೨ (ಸೌಇಇ. IX-1, ೨೯೭–೬೩ ; 1176). **ತಕಲು:** ಯೆರಡನೆಯ ವರಿಸಕೆ ಪ ೨ ಮೂಱನೆಯ ವರಿಸಕೆ ಪ ೩ ಯರಿ ಹೊಲ ತಕಲು ನೂಱಕೆ ಪ ೧ (ಎಕ. XIV, ತಿರುಮ. ೭೩–೨೩ ; 1309). **ತಕ್ಕಲು:** ಮಣ್ಣ ಮೊರಟಿ ಕೆಳಗಿರುವ ಕುರುಬರ ತಕ್ಕಲ ಮೂಡಣ ತೆವಿರೊತ್ತಿನಲ್ಲಿ ನೆಟ್ಟ ಕಲ್ಲು (ಎಕ. XIV, ನಂಜನ. ೨೯೫–೨೦೬ ; 1716). **ತಕ್ಕಿಲು :** ತೆವರಕೇರಿಯಡ್ಡವಸುಗೆಯ ತಕ್ಕಿಲು ಮತ್ತರು (ಎಇ. XIII, ೪೯–೮೦ ; 1112) ; ಹಟ್ಟಣದ ದಾರಿಯಿಂ ತೆಂಕಲು ತಕ್ಕಿಲು ಒಡ್ಡಿ ಹಟ್ಟಿಯ ಗಡಿಂಬದ ಘಳೆಯಲು ಮತ್ತರು (ಸೌಇಇ. IX-1, ೨೯೭–೪೩ ; 1177) ; ಸೋಭನೇಶ್ವರದ ಹೊಲಸ ಮೇರೆ ಮಸ್ತಂ(ತ್ತಂ) ತೋಂಟ್ಟ[ತ]ಕ್ಕಿಲು ಅರವನ್ನ(ತ್ತ)ರು (ಸೌಇಇ. XV, ೧೩೦–೭ ; 1178) ; ಹಲವು ತಕ್ಕಿಲ ನಡುವೆ ಸವೆದ ಬೆಳೆಕೈಯಂತೆ ಹಲವು ಬಸದಿಯ ನಡುವೆ ಸುರಹೊನ್ನೆ ಬಸದಿ ಯಗ್ಗಲಿಸಿ ಮೆಱೆಯಲು (ಸೋಮಪ. ೪–೦೫). △ **ತರ್ಕಿಲ್ :** ನಾಗಯ್ಯ ಗೇರಿಯ ಶತದ ತರ್ಕಿಲ್ಲೆಯ್ಯ ಮತ್ತರು ೩ (ಕಇ. II, ೯–೦೯ ; 1075).

**ತಕ್ಕಲು ಕೀಳು** = ವ್ಯವಸಾಯದ ಭೂಮಿಯಲ್ಲಿರುವ ಕಳೆಯನ್ನು ಕೀಳು,–ಕಿತ್ತುಹಾಕು : ಆ ಸಾಲಿನಲ್ಲಿ ಸ್ವಲ್ಪ ತಕ್ಕಲುಕಿತ್ತು ಹೊಗೆಹಾಕ ಬೇಕೆಂದೂ ಅವರ ವಾದ (ಖಂಗಾಳ್ಯ. ೩೦೩) : ಮೂರು ಕೊಳಗದಷ್ಟು ತಕ್ಕಲು ಕಿತ್ತು ಹೊಗೆ ಹಾಕಿದ್ದರಿಂದ ಸುಂಕಗಿಂಕ ಕಳೆದು ಅರುವತ್ತು ವರಹ ಬಂತು (ಖಂಗಾಳ್ಯ. ೩೦೩).

**ತಕ್ಕಿಲು** 'ತಕ್ಕಿಲ್₂' ನೋ.

**ತಕ್ಕಿಲೆ** 'ತಕ್ಕಿಲ್₁' ನೋ.

**ತಕ್ಕಿಸು₁** (ಕ್ರಿ). ಅಪೇಕ್ಷಿಸು ; ಬಯಸು : ತಕ್ಕಿಸಲೆ ತಕ್ಕ ಶೋಭೆಗೆ ಪಕ್ಕಾದೊಡಮರಸನಲ್ಲಿ ಪುಗಲೊಲ್ಲದೊಡಂ ಪಕ್ಕಣಮಂ ಬಲ್ಪಿಂದಂ ಪೊಕ್ಕುವು ನಿಯಮಿಸುವರಾರೊ ಕಣ್ಣಂ ಮನಮಂ (ಲೀಲಾವ. ೮–೪೦) ; ಅಸಮಶರನ ತನುವಾಂತನೊಳಸೆಯದು ತನಗಿನಿತು ಶೋಭೆಯೆಂದೊಲವಿಂ ತಕ್ಕಿಸಿದುದು ಕಡುಗಾಡಿಯೆನಲ್ ವಸುದೇವನ ಗಂಡಗಾಡಿ ಗಣನೆಗಳುಂಬಂ (ಮಹಾನೇ. ೪–೨). [ ತಕ್ಕು₂ + – ಇಸು₃ ]

**ತಕ್ಕಿಸು₂** 'ತಟ್ಕಿಸು' ನೋ.

**ತಕ್ಕಿಟಿ** (ಕ್ರಿ). ಸಾಮರ್ಥ್ಯ ತಗ್ಗು ; ಶಕ್ತಿಗುಂದು : ಏಳಯಜಳಧರದ ವೊಲ್ ಕಡುಮುಳಿಸಿಂ ಖಚರೇಂದ್ರಸೇನೆ ಕವಿದೆನಸುಂ ತಕ್ಕಿಟಿಯೆ ರಿಪು ಬಲದ ಮೇಲಾಗಳ್ ಸುರಿದುದು ತರನೆ ಸರಲ ಬಲುಸರಿವಟಿಯುಂ (ಶಾಂತೀಶ್ವ. ೩–೯೩). [ ತಕ್ಕು₂ + ಇಟಿ ]

**ತಕ್ಕು₁** (ಕ್ರಿ). ೧. ಪಡೆ ; ತೆಗೆದುಕೊಳ್ಳು : ಎಮ್ಮಣ್ಣ ಖಾತಿಯಿಂ ರಣವ ಜಯಿಸಲು ದಿವ್ಯವಸ್ತುಗಳ ನೀ ತಕ್ಕಿಕೊಂಡು ಬಹುದಯ್ಯಾ ಸೈರಂಧ್ರಿ ಯೆಂದುರೆ ಹರಸಿ ಬೀಳ್ಕೊಟ್ಟಳು (ಲಕ್ಷ್ಮಭಾ. ೪–೪–೬). 'ತೆಗೆ₁' ಪರಾ. **೨.** (?) : ಮೆರೆವ ಮಧುಮಾಸಮಿದು ವರ್ಷರ್ತುವಲ್ಲಲೇ ಬೆರಗಿದೇನುಕ್ಕಿ ದಂತೈತಂದು ಪೆರ್ಜಲಂ ಪರಿದುಕ್ಕಿ ತಕ್ಕುತಿದೆ ಮಚ್ಚವಾರಾಧನೆಯು ಮೊಂದಲ್ಲದೆರಡು ವೇಳೆ (ಪರಸು. ೧೩–೨೯). [ ? ]

**ತಕ್ಕು₂**, ತರ್ಕು (ನಾ). ೧. ಶ್ರೇಷ್ಠತೆ ; ಘನತೆ ; ದೊಡ್ಡಸ್ತಿಕೆ ; ಹಿರಿಮೆ; ಯೋಗ್ಯತೆ : ಅಂತದಟರನೊಂದೆವೊಯ್ದು ಮೆರದುಂ ಬಲವೆನ್ನನೆ ನೋಡೆ ತಕ್ಕೆನೆನ್ನದಟುಮನೆನ್ನ ವೀರಮುಮನಾಜಿಯೊಳೆನ್ನರಸಂಗೆ ತೋಱುವೆಂ (ಪಂಪಭಾ. ೧೧–೪೧) ; ಪುಸಿವುದೆ ತಕ್ಕು ಕೊಟ್ಟಟಿಪಿಕೊಳ್ವುದೆ ಮನ್ನಣಂ (ಎಕ. II, ೧೩೩–೪೫ ; 982) ; ತಕ್ಕಿನ ಪವಳದ ಸಂಕೆಯ ಟಿಕ್ಕೆಯ ಮಣಿ ಗಳನೇಕವಂ . . . ಸೂಱೆಗೊಳ್ವನವನುತ್ಸವದಿಂ (ಧರ್ಮಾಮೃ. ೨–೩೭) ; ಒಕ್ಕಲ್ತನವಮುಮನಱವಿನ ತಕ್ಕುಮನಟಿವವಗುಣಂಗಳಿಮಗೇವುವು(ಬಂಡಿರ. ೧–೨೦) ; ಸದ್ವಿದ್ಯರ್ ಸಭಾಮಧ್ಯದೊಳ್ ಪಲಬರ್ ಸತ್ಯವಿಗಿತ್ತ ತಕ್ಕಿನ ಪೆಸರ್ ಸಲ್ವಂತೆ ನೀಚಂಗೆ . . . ಗಾವಿಲನೊರ್ವಂ ಕುಡೆ ಕೊಂಡ ತೊಂಡು ಪೆಸರಿಂದೇಂ ಸಲ್ವುದೇ ನಿಲ್ವುದೇ (ಧರ್ಮನಾ. ೧–೪೯). **೨.** ತಕ್ಕುದು; ಯೋಗ್ಯವಾದುದು ; ಉಚಿತವಾದುದು : ರಕ್ಕಸನ ಮಾಡದೊಳಗಂ ಪೊಕ್ಕಾವಂ ಸುಖದಿನಿರ್ದನಾತಂಗೆ ಕರಂ ತಕ್ಕಪ್ಪೆ[ಪಾಠಾಂ. ತಕ್ಕಿಪ]ನ್ನಾತ್ಮ ಜೆಯುಂ ಮಿಕ್ಕಿರ್ದಾ ನಾಡುಮಂ ನಿತಾಂತಂ ಕುಡುವೆಂ (ಜೀವಸಂ. ೨೦೫–೪೯);

ಮಾರ್ಗಮಂ ತಕ್ಕೆನಿಸಿ ಪನ್ನೆರಡು ಸಾವಿರದ ಗಾವುದಮ್ಮಕ್ಕುದನುದಿನಕೆ ಪೋಪವನಾರುಯೆನುತಲಾ ಮಂತ್ರಿ ಸಹ ಯೋಚಿಸುತಿರೆ (ತುರಂಗ. ೩೨-೧೦). ೩. ಯೋಗ್ಯವಾದ ಮಾತು; ನಾಣ್ನುಡಿ; ಗಾದೆ: ಕಾಲಕ್ ಬುದ್ಧವಂಡ ಎದೆ ಚವುಟತ್ತ, ಎಂಬ ಕೊಡವ ತಕ್ಕನ್ನು ಅರಿತು ನಡೆಯುವ ವರು ದೊರೆಗಳು (ಹುಲಿಹಾ. ೮೫); ಕೈಲಾಗದವನಿಗೆ ಮೂಗಿನ ತುದಿಯಲ್ಲಿ ಚೊಡಿ ಎಂಬ ತಕ್ಕನ್ನು ನೀನು ಕೇಳಿಲ್ಲವೆ? (ಹುಲಿಹಾ. ೧೩೦). ೪. ಶೌರ್ಯ; ಸಾಮರ್ಥ್ಯ; ಪರಾಕ್ರಮ: "ಪನ್ನತಿಕೆ, ಪೆಟ್ಟುವೆರ್ಚು, ತಕ್ಕು . . . ಆರ್ಪು, ಅಣ್ಮು–ಈ ೮ ಪರಾಕ್ರಮಂ" (ಕಶಸಾ. ೧೩-೨೬೩); ನಲ್ಲಂಬಿಂದಿಸೆ ಪುಷ್ಪಬಾಣನೆರ್ದೆಯಂ ಬೆಂಬಿಟ್ಟು ಬೆಳ್ಳಾಗಿ ತಕ್ಕೆಲ್ಲಂ ಕೆಟ್ಟೆರ್ದೆಗೆಟ್ಟು ಜಂಗಮಲತಾ ಸಲ್ಲೀಲೆಯರ್ ಬಾಲೆಯರ್ ಚೆಲ್ಲಂ ಬೇಂಟದ ತೋಟಿಯೊಳ್ ತೊಡರೆ (ಕಾವ್ಯಸಾ. ೫೫೦ ಕೂದ್ರುಳ); ಕಡುಗೆಯ್ಯನಾಗಿ ಶೀಘ್ರಸಂಧಾನವಿಸು ಮಶ್ವಗ್ರೀವನ ತಕ್ಕುಂ ಬೇಗಯ್ಯುಮುಂ ಕಿಡೆ (ಶಾಂತಿಪು. ೫-೬೦ ವ); ತಕ್ಕಿನಿನೀ ಶನೆಚ್ಚ ತಿಮಿರೇಷುಗಿನೇಷುಮನಗ್ನಿಮಿತ್ರ ಬಾಣಕ್ಕಹಿಬಾಣಮಂ . . . ಅಧೋಕ್ಷಜನೆಚ್ಚು ಪೊಡರ್ಪುದೋಱಿದಂ (ಜಗವಿ. ೧೮-೨೯); ಧುರದೊಳಿ ದಿರ್ಚಿದ ಪಗೆವರನುರವಣೆಯಿಂ ಗೆಲ್ದ ತಕ್ಕು . . . ಅಂಗರಕ್ಕೆಗೆ ನಿಜಂ (ಎಕ. V, ಅರಸೀ. ೩೯-೩೦; 1186); ವಿಕ್ಕರಸನುಂ ತಕ್ಕಂ ಬಿಸುಟ್ಟೋಡಿದಂ (ದ್ಸ್ಯಅರಿ. ೧೯೪೦, ೦-೩೨; 1800); ಎಕ್ಕಲಗಳು ತಮ್ಮ ತೆಗೆದ ಜಾಯಿಲಗಳ ನಿಕ್ಕಡಿಮಾಡಿ ಹಾಯ್ದುದನು ತ[ಪಾಠಾಂ. ಟ]ಕ್ಕಿನ ಬೇಡರ ಕೆಡಹಿದುದನು ಕಂಡಿಕ್ಕಿದನಾ ವನಚರನು (ನೇಮಿಸಂ. ೨-೫೬); ಎಕ್ಕೆಯೊಳೊಕ್ಕು ಪಳಂಚುವ ಪಾಂಗಿಂ ತಕ್ಕು ಮಿಗಿಲ್ಕೆಕ್ಕತುಳಂ ಪೊರ್ಕುಳಿಪೊಕ್ಕು ಕರಂ ಜಾಡಾಜಾಡಿ ಯೊಳುಱಿದಿಱಿದರ್ ತಮ್ಮೊಳಗೆ (ಜಯುಕಾ. ೬-೩೦). ೫. ಬೆಡಗು; ಠೀವಿ: ಅವಿರಳವಾದ ತುಂಗಕುಚಭಾರದೆ ತೋಳ್ಸೆಱೆದಿಟ್ಟ ತಕ್ಕಿ ನೊಳ್ ಕವಣೆಯ ಗುಂಡು ಪಾಯುವು ಮೃಗಾವಳಿ ಪಾಯುವು . . . ಪಾಂಥರೆರ್ದೆ ಪವ್ವನೆ ಪಾಱುವುವಾ ಪ್ರದೇಶದೊಳ್ (ಅನಂಪು. ೧-೮೨). ೬. ಸ್ನೇಹ; ಪ್ರೀತಿ: "ತಕ್ಕು, ಅಟ್ಟಱು, ಒಱಲ್ . . . ಎಱ್ಮ, ಓಪು–ಈ ೮ ಸ್ನೇಹಕ್ಕೆ ಪೆಸರ್" (ಕಶಸಾ. ೧೯-೩೯೦); "ತಕ್ಕೆಂಬುದು ನೇಹ ಮಪ್ಪುದು" (ಚತುನಿ. ೩೬); "ಎಱಕಂ ತಕ್ಕಟ್ಟೞು ಕೂರ್ಪೊಱಲುಂ ಕಾದಲ್ಮೆಯೆನ್ನಲಿವು ಸುಸ್ನೇಹಂ" (ಕವಿಕಂ. ೦೭೩). ೭. ಆಸೆ; ಇಚ್ಛೆ; ಉತ್ಸಾಹ: ಕ್ಷಿತಿತಲಮಂ ಗೆಲ್ದಿರ್ದಪ್ರತಿಮಲ್ಲನನಿಕ್ಕಿ ಮುಯ್ಯನಣ ಮಾನದೆ ದಪಿಣತ ದುರಿತಮಲ್ಲನುಮನುಡಿವ ತಕ್ಕಿನಿಂ ಸಭೆಗೆ ನಡೆದ ನಿಂದಾಪ್ರಾರ್ಥಿತನಾ (ಆದಿಪು. ೦೯-೦೩೪); ನಡೆತಂದರಾಜಗಿರ್ಮಲದಲರಾತಿ ನಾಯಕರುಮೊರ್ಬರನೊರ್ಬರೆ ಗೆಲ್ವ ತಕ್ಕಿನೊಳ್ (ಪಂಪಭಾ. ೦೦-೫೨); ಮುಕ್ಕುಪೋಗದಳುರ್ಕುಮಂ ನೋಟಕರಪ್ಪಿನಮಪ್ಪವರಿಂ ಪೊಗಱಿಸು ವೆನೆಂದು ತಱಿಸಂದು ತಮ್ಮುತಿರ್ಪರುಮನಿಕ್ಕುವ ತಕ್ಕು ಕೈಮಿಕ್ಕು ನಿಲೆ (ಶಾಂತಿಪು. ೪-೩೬ ವ); ಮಹೇಂದ್ರಂ ಪುರಮಂ ಪೊಱಮಟ್ಟು ಮಱುಮಕ್ಕಮ ನಿಕ್ಕುವ ತಕ್ಕು ಮಿಕ್ಕು ಬರೆ ಕಡಂಗಿ ಕಾದುವಲ್ಲಿ (ಪಂರಾಮಾ. ೦೦-೫೦ ವ); ಪ್ರತಿರೋಧಕನಾರಟಗೊಳ್ವ ತಕ್ಕಿನವಂ (ವಸುಕೋ. ೬೫-೮೨); ಈ ಗೋಪಾಲಬಾಲಕರಂ ಮುಟ್ಟಿಸುವೆನೆಂಬ ತಕ್ಕು ಮಿಕ್ಕು ಬರೆ (ಜಗವಿ. ೬-೯ ವ); ಬೆಳ್ಳಿಯ ಬಳ್ಳಿಮಾಡಮಂ ತಕ್ಕಿನೊಳೇಱಿ ನೋಡಿದಳ ದೊರ್ಮಳಗುರ್ವಿಪ ಕರ್ಪುವಿಲ್ಲನಂ (ಕಬ್ಬಿಕಾ. ೩೪೦). ೮. ನೆರವು; ಬೆಂಬಲ; ಆಶ್ರಯ: 'ತಕ್ಕುಗುಡು' ಪರಾ. ೯. ಕಾವ್ಯದಲ್ಲಿರುವ ಔಚಿತ್ಯ: ಕವಿತೆಯು ಬರ್ದು ಮೆಯ್ಸಿರಿ ಬೆಡಂಗು ರಸಂ ಚದುರೊಳ್ಪು . . . ಸವಿ ತಕ್ಕು ಪೊದಳ್ಕೆ ಬಿನ್ನಣಂ . . . ಪೊಡರ್ಪುವರಿನಿತಿಂತುಟೆಂದಳೆದರಂ ಧರೆ, ಪೇಳ್ವೆಯ ತಾಳ್ದಿಯೆಂದದಂ? (ಸಂಕಪ. ೬-೦೦). △ ತರ್ಕು: ೪. ನಾಳೆ ನೋಡುವೆನಾತನ ಚಕ್ರದುರ್ಕುಮಂ ಮೊನೆಗನುಕೂಲರಾಗಿ ನೆಱಮಂದ ನೃಪಾಳರ ತೋಳ ತರ್ಕುಮಂ (ಮಹಾನೇ. ೦೦-೯೯). [ <ತಗು ]

ತಕ್ಕು$_{3}$ 'ಟಕ್ಕು$_{1}$' ನೋ.

ತಕ್ಕು$_{4}$ 'ತಟ್ಟು' ನೋ.

ತಕ್ಕು$_{5}$ (ನಾ). ಒಂದು ಬಗೆಯ ಔಷಧಿ ಸಸ್ಯ: "ಪಟ್ಟರಣ – ತಕ್ಕು, ಗರುಗ" (ಓಷಧಿ. ೦೭೩).

ತಕ್ಕುಂಗೆಡು, ತಕ್ಕುಗಿಡು, ತಕ್ಕುಗೆಡು (ಕ್ರಿ). ೧. ಘನತೆಯನ್ನು ಕಳೆದು ಕೊಳ್ಳು; ಹೀನಸ್ಥಿತಿಗೆ ಬರು; ದೈನ್ಯಾವಸ್ಥೆಯನ್ನು ಹೊಂದು: ತಾಮಸವಿಲ್ಲದೆ ತಕ್ಕುಂಗೆಡದಭಿರಾಮಂ ರಿಪುನಿರ್ಧೂಮಂ ಶರಣಲಲಾಮಂ ಕೇಡೋಧಾಮಂ . . . ಕುಳ್ಳಿದು ಸೋಮೇಶನನೀಕ್ಷಿಸಿ (ಉದ್ಭದೇ. ೩-೬೦). ತಕ್ಕುಗಿಡು: ೧. ಬಾಹುಬಲಮಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು (ಶಾಂತಿಪು. ೪-೩೦ ವ). ೨. ಶಕ್ತಿಗುಂದು; ನಿರ್ಬಲನಾಗು: ತೇರಚ್ಚಂ ಮುಱಿಯೆಚ್ಚಂ . . . ಸಾರಥಿಯಂ ಕೆಡೆಯೆಚ್ಚಂ ಮಾರುತಿಯ ರಣಕ್ಕೆ ತಕ್ಕುಗಿಡದವನಾವಂ (ಪಂರಾಮಾ. ೦೦-೫೨). ತಕ್ಕುಗೆಡು: ೧. ತಕ್ಕುಗೆಟ್ಟೆಲ್ಲ ಶಿವಶಿವಯೆನುತ್ತಂ ಜನಂ (ಮುಱರ. ದೇ. ೭೫-೦೬); ಚಿತ್ರಜಚಾಪಂ ಮನಮಂ ಸುತ್ತಿರೆ ಮಿಗೆ ತಕ್ಕುಗೆಟ್ಟು ಪೌರೋಹಿತನುದ್ವೃತ್ತತೆಯನೊಕ್ಕು ಧೈರ್ಯಗೆಡುತ್ತಂ ದತ್ತೂರಮಂ ಸವಿದ ಮಾಟ್ಕೆಯೊಳಿರ್ದಂ (ಪುಣ್ಯಾಸ್ರ. ೦-೯೨). [ ತಕ್ಕು$_{2}$ + ಕೆಡು$_{1}$ ]

ತಕ್ಕುಗಿಡು 'ತಕ್ಕುಂಗೆಡು' ನೋ.

ತಕ್ಕುಗುಡು (ಕ್ರಿ). ನೆರವನ್ನು ನೀಡು; ಒತ್ತಾಸೆಯಾಗು; ಬೆಂಬಲ ವಾಗು: ಬೆರಲೆಡೆಯೊಳಡಸಿದ ಕಪ್ಪುರವಳುಕಿನೊಳೆ ನಗಿಸುವ ಱೋಡಗರ ನಿಡುವ ನೆವದಿಂ ಪರಿವ ಮುಗುಳ್ನಗೆಯ ಮುಗುಳ್ಗಳಗಿಂಗೆ ತಕ್ಕುಗುಡು ವಂತೆಯುಂ ಕೋಮಳಾಂಗುಳಿಜಾಳಕಂ ಮೆಱೆಯೆ (ಅನಂಪು. ೮-೭ ವ).

[ ತಕ್ಕು$_{2}$ + ಕುಡು$_{1}$ (<ಕೊಡು$_{1}$) ]

ತಕ್ಕುಗೆಡಿಸು (ಕ್ರಿ). ಘನತೆಯನ್ನು ತಗ್ಗಿಸು; ಹಿರಿಮೆಯನ್ನು ಕುಂದಿಸು: ಕರೆಸೊಮ್ಮು ಬಾರದಿರ್ದರೆ ತಕ್ಕುಗೆಡಿಪೆನೆಂದೊರೆದ ಚೋಳನ ಬಱುನುಡಿಯ ಶಿರಸ[ ಸಾ ] ವಹಿಸಿಕೊಂಡು (ಭ್ರರವೇ. ೦-೦೪೩); ತೆಕ್ಕದಿರ್ಪ ಮುನಿಸಾಪತ್ನ ಸಂತಾನಮಂ ತಕ್ಕುಗೆಡಿಸಿ ರಾಜ್ಯಂಗೆಯ್ವನಾ ಪಣ್ಯವಧುವಾಟಿಯೊ ಳಗನಂಗಂ (ಉದ್ಭದೇ. ೪-೦೭). [ ತಕ್ಕು$_{2}$ + ಕೆಡಿಸು$_{1}$ ]

ತಕ್ಕುಗೆಡು 'ತಕ್ಕುಂಗೆಡು' ನೋ.

ತಕ್ಕುಗೊಡು (ಕ್ರಿ). ವಂಚಿಸು; ಟಕ್ಕಿಸು: ಚಿಂತಾಗತಿಯುಂ ತನ್ನ ಪೆಸರಂ ನನ್ನಿಮಾಡಿ ತರುಣಿಗೆ ತಕ್ಕುಗೊಟ್ಟು ಪೆಱಗೆ ಪಾಱಿ ಪೋಗಿ (ಅರ್ಧನೇ. ೩-೦೮ ವ). [ ತಕ್ಕು$_{3}$ (<ಟಕ್ಕು$_{1}$) + ಕೊಡು$_{1}$ ]

ತಕ್ಕುದಕ್ಕು (ನಾ). ಖಡ್ಗಯುದ್ಧದ ಒಂದು ವರಸೆ (?): ಪುಸಿ ನಸು ವಂಚನೆ ನೋರ್ಪನುಮಸಿದಗಲಿತು ತಕ್ಕುದಕ್ಕು ಪಗೆ ಕೆಯ್ಪುಗೆ ಕೆಯ್ಕುಸುರಿ ನುಸುಳೆಂಬ ಕೇಣದ ಕುಸುರಿಯುನಱಿದಿಱಿದು ಮೆಱೆದು ನೆಱೆದುಱಿದರೆಬರ್ (ಪಂಪಭಾ. ೦೦-೮೦).

[ ☞ಇಲ್ಲಿ ತಕ್ಕು ಮತ್ತು ದಕ್ಕು ಎಂಬವು ಭಿನ್ನ ಶಬ್ದಗಳಿರಬಹುದು ]

ತಕ್ಕುಚೊಕ್ಕು (ನಾ). ಒಂದು ಅನುಕರಣ ಶಬ್ದ: ತೆಱಪಂ ನಿಟ್ಟಿಸಿ ಕುಕಿಱಿದಿಱಿಕಡಂ ಮೆಟ್ಟಿ ತಕ್ಕುಚೊಕ್ಕೆನೆಯೆನೆ ಶತ್ರುಱದಱಿದ ಕಡಿತಲೆ ಯೊಳ್ಪಱಸಿಡಿಲರಹಲ್ಲವೀರನುಂ ಮದ್ದನುಂ (ಎಕ. XV, ಬೇಲೂರು ೩೬೦-೯; ಸು. 1200).

ತಕ್ಕುಮೆ (ನಾ). ೧. ತಕ್ಕುದಾಗಿರುವಿಕೆ; ಔಚಿತ್ಯ: ಉಮೆಗೆ – ತಕ್ಕುಮೆ (ಶಮದ. ೨೦೦ ಪ್ರಯೋ). 'ತಕ್ಕುಮೆಗಿಡು', 'ತಕ್ಕುಮೆವಡೆ' ಪರಾ. ೨. ಯೋಗ್ಯತೆ; ಅರ್ಹತೆ: ಗಂಡಿಲ್ಲದ ಭಟನ ಯುದ್ಧಮುಂ . . . ಮಿಂಡನ ತಕ್ಕುಮೆಯುಮೊಪ್ಪಲಾಱವು ಜಗದೊಳ್ (ಧರ್ಮಾಮೃ. ೬-೪೯); ಅಧಿಕಾರಿಗಳ್ಗಂ ಬಲ್ಲಿತ್ತಾದ ತಕ್ಕುಮೆಯಂ ಬಿತ್ತರಿಪ ಬಗೆಬಗೆಯ ಮಹಾ ಬಿರುದುಗಳಂ ದಯೆಗೆಯ್ಯಲ್ಕೊದಲ್ಕಾಡಿಯುಂ (ಮರಾಜ. ೬-೩೬); ತನ್ನ

ದಂಡಿನವರಿಗೆ ಅವರವರ ತಕ್ಕುಮೆಯಂತೆ ಹಣವನ್ನು ಕೊಟ್ಟು, ಉಳಿದು ದನ್ನು ಕಾಬೂಲಿನಲ್ಲಿದ್ದ ತನ್ನ ಪ್ರಜೆಗಳಿಗೆ ಹಂಚಿದನು (ಮೋಹಾದ. ೨೩). ೩. ಶೌರ್ಯ ; ಪರಾಕ್ರಮ : " ಪನ್ನತಿಕೆ ಪೆಟ್ಟು ತಕ್ಕುಮೆಯಿನ್ನುಂ ಕಾಂ ಸಾಸ ದಪ್ಪಮದಟಾರ್ಪಣ್ಮೆಂದೆನ್ನಲ್ ಪರಾಕ್ರಮಾಖ್ಯಂ" (ಕವಿಕಂ. ೦೨೩). 'ತಕ್ಕೂರ್ಮೆ₁' ಪರಾ. [ ತಕ್ಕು₂ + – ಉಮೆ₁ ]

**ತಕ್ಕುಮೆಗಿಡು** (ಕ್ರಿ). ಔಚಿತ್ಯವಿಹಾರು : ನಿಮ್ಮ ಬಗೆಯ ದ್ರೋಹಿ ದುರಾತ್ಮ ರಿಗೆ ತಕ್ಕುಮೆಗಿಡದ ಒಂದೇ ದಂಡನೆ ಎಂದು ತರಿಸಂದು ತೀರುಕಣಗೊಟ್ಟರು ವರು (ಬಟ್ಟಅ. ೨೦೯–೨೨). [ ತಕ್ಕುಮೆ + ಕಿಡು (<ಕೆಡು₁) ]

**ತಕ್ಕುಮೆವಡೆ** (ಕ್ರಿ). ೧. ಔಚಿತ್ಯವನ್ನು ಪಡೆ ; ತಕ್ಕುದಾಗಿರು : ಮಹಾ ರಾಜ ಸನ್ನಿಧಿಯ ಭೋಗೋಪಭೋಗಗಳಿಗೆ ತಕ್ಕುಮೆವಡೆದ, ಉಪ ಸ್ಕರಾಲಂಕಾರಾದಿ ವಸ್ತು ಪ್ರಪಂಚವು . . . ರಂಜಿಸುತ್ತಿರುವುದು (ಬಟ್ಟಅ. ೦೩೮–೭) ; ಮಹಾರಾಣಿಗೆ ತಕ್ಕುಮೆವಡೆದ ಬೀಡಾರವನ್ನು ನಿಮಗೆಂದೇ ಅಣಿಮಾಡಲಾಗಿದೆ (ಸವತಿ. ೨೬೯). ೨. ಘನತೆಯನ್ನು ಪಡೆ : ದುಃಖದಿಂ ಪರಿಪಕ್ವವಾದೆ ; ತಕ್ಕುಮೆವಡೆದೆ (ಸಂಸಪ. ೨೩–೦೭).

[ ತಕ್ಕುಮೆ + ಪಡೆ₁ ]

**ತಕ್ಕೂರ್ಮೆ₁** (ನಾ). ಹಿರಿತನ ; ದೊಡ್ಡಸ್ತಿಕೆ ; ಘನತೆ : ತನ್ನದೊಂದು ಸವಿಗಂ ಸೋಲಕ್ಕಮಿತ್ತ್ರಂ ನಿಜಕ್ರಮಮಂ ತನ್ನಯ ಬೇಟದಾಕೆಯ ಮಂಗಂಗೆಂಬೊಂದಪಖ್ಯಾತಿ ಲೋಕಮನಾವರ್ತಿಸೆ ಬಟ್ಟೊಡೆನ್ನ ಕುಲಮುಂ ತಕ್ಕೂ[ಪಾಠಾಂ. ತ್ಕೂ]ರ್ಮೆಯುಂ ಮಾ ಸ ದೆ (ಪಂಪಭಾ. ೦–೭೦) ; ಪೇಸುಗೆಗೆಟ್ಟೇ ನಾಣಪುತ್ರಪ್ಪಬೀಜಗಟದೊಳೇನಮ್ಮ ತಕ್ಕೂರ್ಮೆಯುಂಟೇ (ಶಾಂತಿಪು. ೬–೮೭) ; ಸರ್ವ್ವ ಜನೋಪಕಾರಿ ತಕ್ಕೂರ್ಮ್ಮೆಯ ಜನ್ಮಭೂಮಿ (ಸೌಇಇ. XI-II, ೦೩೩–೨೪ ; 1087) ; ಕಲಿಯುಂ ಛಾಗಿಯುಮಿನ್ನರಾರ್ ಮ ನು ಕು ಲ ರ್ ಮುನ್ನಾದರೆಂಬನ್ನೆಗಂ ನೆಲನಂ ನೇಸಱುಮುಳ್ಳಿನಂ ನಿಲಿಸಿದಂ ತಕ್ಕೂ[ಪಾಠಾಂ. ತ್ಕೂ]ರ್ಮೆಯುಂ ಪೆರ್ಮೆಯುಂ (ಪಂರಾಮಾ. ೬–೦೭೦). [ ತಕ್ಕು₂ + ಊರ್ಮೆ. /ತಮಿ. ತಕ್ಕೊರ್ವ್ವ ]

**ತಕ್ಕೂರ್ಮೆ₂** (ನಾ). ಪ್ರೀತಿ ; ಸ್ನೇಹ : ಬರ್ಮ್ಮೆಯನೀಗಳೆಯ್ದೆ ಪರಿಭಾವಿಸಿ ನೋಳ್ಪಡೆ ಮೇಲೆನಿಪ್ಪನಾ ಧರ್ಮ್ಮತನೂಭವಂಗೆನುತೆ ಬಣ್ಣಿಪುದೀ ಜಗಮೆಲ್ಲ ಮೊಲ್ದು ತಕ್ಕೂರ್ಮೆಯಿನೆನ್ನೊಡೇವೊಗಳ್ವನಿಂ ಪೊಗಳ್ವಂ ಬುಧಕಲ್ಪ ವೃಕ್ಷನಂ (ಕೊಲ್ಹಾಶಾ. ೮–೦೭ ; 1147). [ ತಕ್ಕು₂ + ಕೂರ್ಮೆ ]

**ತಕ್ಕೂರ್ಮೆಗೆಡು** (ಕ್ರಿ). ಘನತೆಯಿಲ್ಲವಾಗು ; ಯೋಗ್ಯವಾದುದನ್ನು ಕಡೆಗಣಿಸು : ವಿಟನಕ್ಕಿ ತೆರಳ್ವನ್ನವಮಾಂ ಪೊಱಮಟ್ಟೆನೆಂದು ಕೇಳ್ದು ಮಗಳ್ದಿರಲಾಱದೊಂದು ಮೋಹದಿಂ ಬೆಂಬತ್ತಿದ ನಿನ್ನಂ ತಕ್ಕೂರ್ಮೆ ಗೆಟ್ಟುಂ ಪೇಟದೆಯುಮಾನೆ ಪಱುವಿಂಗಟ್ಟಿದೆನೇ (ರಾಮಾಶ್ವ. ೪೩–೨೨).

[ ತಕ್ಕೂರ್ಮೆ₁ + ಕೆಡು₁ ]

**ತಕ್ಕೆ₁** 'ತಟ್ಕೆ' ನೋ.

**ತಕ್ಕೆ₂** (ನಾ). ಯೋಗ್ಯಳಾದವಳು ; ತಕ್ಕವಳು : ನಿಮ್ಮಡಿಗಾಹಾರದಾನಂ ಕುಡಲ್ ತಕ್ಕೆನಲ್ಲೆನಾಂ ಸೂಳೆಯಂ (ಜಾವುಂಪು. ೩೮–೩೦).

[ ತಕ್ಕ₁ + – ಎ₂ ]

**ತಕ್ಕೆ₃, ಟಕ್ಕೆ₁, ತೆಕ್ಕೆ₂** (ನಾ). ದಿಂಬು ; ಒರಗುದಿಂಬು ; ಲೋಡು : ಕಚೇರಿಯ ತುಂಬ ಹಾಸಿದೆ ; ನಟ್ಟನಡುವೆ ಎದುರಿನ ಗೋಡೆಗೆ ಒಂದು ತಕ್ಕೆ (ವ್ಯದ್ಧರಾ. ೯) ; ಹಾಸಿದ್ದ ಹೊಸ ಜಮಖಾನೆಯ ಮೇಲೆ ತಕ್ಕೆಗೆ ಒರಗಿ ಚೆನ್ನಪ್ಪ ಕುಳಿತುಕೊಂಡಿದ್ದ (ಜನಜೀ. ೩೪). **ಟಕ್ಕೆ₁**: ಮೂರೆಲೆ ಆಟ ಆಡಲು ಕುಳಿತಿದ್ದಾರೆ. ಹತ್ತಿರ ಒಂದೆರಡು ಟಕ್ಕೆಗಳು (ತಿಱುಗು. ೪೭). **ತೆಕ್ಕೆ₂** : ಗಾದಿ ಗಳನ್ನು ಜೋಡಿಸಿ, ಅವರ ತೆಕ್ಕೆಯನ್ನೇ ತಲೆಗಿಂಬುಮಾಡಿ ನಾನು ನನ್ನ ಸಜ್ಜಿಕೆಯನ್ನು ಸಜ್ಜುಗೊಳಿಸಿದೆ (ದೀಪಹ. II, ೦೮೦).

[ ←ಅರ. ಪಾರ. ಹಿಂ. ತಕಿಯಾ ; ಮರಾ. ತಕಿಯಾ, ತಕ್ಯಾ ]

**ತಕ್ಕೆಗಟ್ಟು₁** 'ತೆಕ್ಕೆಗಟ್ಟು' ನೋ.

**ತಕ್ಕೆಗಟ್ಟು₂** (ನಾ). ಅಪ್ಪುಗೆಯ ಹಿಡಿತ; ಆಲಿಂಗನದ ಬಂಧನ: ಬಟ್ಟೆಗರ ಬಗಸೆಗಣ್ಣಂ ಕ ರೆ ದು ಸವಿದಕ್ಕೆಗಟ್ಟಿನೊಳ್ಸಾಸಿಕೆಯೊಳಿಟ್ಟಧರಪಾನವುಂ ಕೊಟ್ಟು (ಪದ್ಮರಾ. ೮–೧೧) ; ಪಟುಭಟರು . . . ಸುರಾಂಗನೆಯರ ತೋಳ ತಕ್ಕೆಗಟ್ಟಿನೊಳೊಱಗಿದರು (ಕುಠಾಸಾಂ. ೦೨–೬೭).

[ ತಕ್ಕೆ₁ (<ತಟ್ಕೆ) + ಕಟ್ಟು₂ ]

**ತಕ್ಕೆಗೊಳ್** 'ತಟ್ಕೆಗೊಳ್' ನೋ.

**ತಕ್ಕೆಗೊಳಿಸು** (ಕ್ರಿ). ಅಪ್ಪುಗೆಗೆ ಒಳಪಡಿಸು; ತಬ್ಬಿಕೊಳ್ಳು: ಹೊಸಹೊನ್ನ ಬಿಂದಿಗೆದುಂಬಿಯೋಕುಳಿಯ ಇಂದಿಗೆ ಸುಖ ಸಿದ್ಧಿಸಿತೆಂದು ಚೆಲ್ಲಿದರಂದು ಕೃಷ್ಣನ ತಕ್ಕೆಗೊಳಿಸಿ (ಮೋಹತ. ೦೪–೬೯).

[ ತಕ್ಕೆಗೊಳ್ (<ತಟ್ಕೆಗೊಳ್) + – ಇಸು₃ ]

**ತಕ್ಕೆಬೀಳು, ತಳಿಕೆಬೀಳು, ತೆಕ್ಕೆಬೀಳು** (ಕ್ರಿ). ತೋಳುಗಳಿಂದ ಗಟ್ಟಿಯಾಗಿ ಅವುಚಿಕೊಳ್ಳು ; ತಬ್ಬು : ನಾನೂ ಅಳುತ್ತ ಅಮ್ಮನನ್ನು ತಕ್ಕೆಬಿದ್ದೆ (ಚಂದುಬ. ೨೦) ; ನನಗೆ ಚೆಲೋ ಚೆಲೋ ಗೊಂಬೆ ತಂದಿದ್ದೀಯಾ . . . ಕೊರಳಿಗೆ ತಕ್ಕೆಬಿದ್ದು ಮಗು ಕೇಳಿತು (ಎರಡ. ೫). **ತಳಿಕೆಬೀಳು** : ಅವಳು ಕಣ್ದೆರೆದುದನ್ನು ಕಂಡು ಎದೆ ಹಾರಿಹೋಗಿ ಅವಳ ಕೊರಳಿಗೆ ತಳಿಕೆಬಿದ್ದಳು (ಪ್ರೇಮಾಶ್ರ. ೬೧). **ತೆಕ್ಕೆಬೀಳು** : " ಅಪ್ಪಯ್ಯ " ಎಂದು ಶಾಸ್ತ್ರಿಗಳಿಗೆ ತೆಕ್ಕೆ ಬಿದ್ದು ತಡೆದಷ್ಟೂ ಅವಳಿಗೆ ಅಳು ಉಕ್ಕಿ ಬರುತ್ತಿತ್ತು (ಹೊಸಕ್ಷ. ೨೨) ; ಭಯ್ಯಾ ಮಲ್ಲನನ್ನು ತೆಕ್ಕೆಬಿದ್ದು ಅಳಹತ್ತಿದ (ಜೀವಾಸ. ೦೨೭).

[ ತಕ್ಕೆ₁ (<ತಟ್ಕೆ) + ಬೀಳು₁ (<ಬೀೞ್₁) ]

**ತಕ್ಕೆಮುಕ್ಕಿ, ತೆಕಿಮಂಕ್ಕಿ, ತೆಕ್ಕಾಮಂಕ್ಕಿ, ತೆಕ್ಕಿಮಂಕ್ಕಿ** (ನಾ). ಬಿಗಿಯಾಗಿ ಹಿಡಿದುಕೊಳ್ಳುವಿಕೆ ; ಗಟ್ಟಿಯಾಗಿ ತಬ್ಬಿಕೊಳ್ಳುವುದು : ಒಬ್ಬ ರ ನೊಬ್ಬರು ತಕ್ಕೆಮುಕ್ಕಿಯಲ್ಲಿ ಹಿಚುಕಿ ಅಸುವನ್ನು ಹಿಂಡಲಣಿಯಾದ ವೀರ ರಿಬ್ಬರು ಒಬ್ಬರನ್ನೊಬ್ಬರು ಬಿಗಿದಪ್ಪಿಕೊಂಡು ಒಬ್ಬರೊಬ್ಬರ ಹೃದಯ ವನ್ನು ಸೂರೆಗೊಂಡರು (ಕವೀರ. ೬೫). **ತೆಕಿಮುಕ್ಕಿ** : 'ತೆಕಿಮುಕ್ಕಿಬೀಳು' ಪರಾ. **ತೆಕ್ಕಾಮುಕ್ಕಿ**: 'ತೆಕ್ಕಾಮುಕ್ಕಿಬೀಳು' ಪರಾ. **ತೆಕ್ಕಿಮುಕ್ಕಿ** : 'ತೆಕ್ಕಿಮುಕ್ಕಿಬೀಳು' ಪರಾ. [ <ತಕ್ಕೆ₁ ]

**ತಕ್ಕೆಯಿಸು** 'ತಟ್ಕೈಸು' ನೋ.

**ತಕ್ಕೆವರ್** (ಕ್ರಿ). ಗಂಟುಗೊಳ್ಳು : ವಾಸವವೈರಿ ಮತ್ತೆ ಮಗುಟಿದ್ದೊಳೆ ಕೀಳ್ವನದಟ್ಟಿ ಪುಟ್ಟಿಯಭ್ಯಾಸನಿಮಿತ್ತದಿಂದಿರದೆ ಬರ್ಕುಮೆನುತ್ತಮೆ ತಕ್ಕೆವಂದು ಕೈಲಾಸಮನಂತಮಾಯ್ತೆನೆ ವಿಯತ್ತಳಮಂ ತುಡುಕುತ್ತು ಮಿರ್ಪವೋಲ್ ಭಾಸುರಮಾಗೆ ಸಾಂದ್ರ ಶಶಿಕಾಂತದ ದೇವನಿವಾಸ ಕೋಟಿಗಳ್ (ಕುಸುಮಾ. ೦೦–೦೩೯). [ ತಕ್ಕೆ₁ (<ತಟ್ಕೆ) + ಬರ್₁ ]

**ತಕ್ಕೈಸು** 'ತಟ್ಕೈಸು' ನೋ.

**ತಕ್ಕೋಲ₁** (ನಾ). ಒಂದು ಊರಿನ ಹೆಸರು. ಈ ತಮಿಳುನಾಡಿನ ಅರಕೋಣದ ಬಳಿಯ ಈಗಿನ ತಕ್ಕೋಲ : ಶ್ರೀಮತ್ ಕನ್ನರದೇವ ಅಟ್ಕೋವದೆ ಚೋಳರಾಜಾದಿತ್ಯನ ಮೇಲೆ ಬನ್ದು ತಕ್ಕೋಲದೊಳ್ಕಾದಿ ಕೊನ್ದು ಬಿಜಯಂಗೆಯ್ಯುತ್ತಿಱ್ದು (ಎಕ. III, ಮಂಡ್ಯ. ೪೧–೪ ; 950).

**ತಕ್ಕೋಲ₂** (ನಾ). ೧. ಒಂದು ಬಗೆಯ ಸುಗಂಧದ ವೃಕ್ಷ ಮತ್ತು ಅದರ ಕಾಯಿ : " ಪಂಚಸುಗಂಧಃ– ಶ್ರೀಗಂಧ, ತಕ್ಕೋಲ, ಜಾಯಿ ಫಲ, ಪದ್ಮಕೇಸರ, ತಾವರೆಯ ಕೇಸರ" (ಒಷಧಿ. ೯೨); ತಾಜೀಕಾಯಿ, ಲವಂಗ, ಚವ್ಯ, ತಕ್ಕೋಲ . . . ಇವಿಷ್ಟನ್ನೂ ಪ್ರತ್ಯೇಕ ಒಂದು ವರಹ ತೂಕವ ಸಣ್ಣನಾಗಿ ಕತ್ತರಿಸಿ ಚೂರ್ಣಿಸಿ (ವೃದ್ಧಸಾ. II, ೫೫) ; ಬದರಿ ತಕ್ಕೋಲ ನಾರಿಕೇಳಾಶ್ವತ್ಥ . . . ಭೂರುಹವೃಂದದಿಂ ಪೂಜ್ಯಮಾಗಿರ್ಪ ಆರಾಮಗಳು ಎಸೆವುತಿರ್ದವು (ಕುಚೇಲೋ. ೪೪) ; ಜಂಬೀರ ಮಾಧವೀ ಮಂಧೂಕ ತಾಲ ತಕ್ಕೋಲ ತಮಾಲ ಹಿಂತಾಳ . . . ಸುಮನಸಭರಿತವಾಗಿ

ಶೋಭಿಸುತಲಿತ್ತು (ಪುರಾವಿ. ೯೬). ೨. ತಕ್ಕೋಲವೃಕ್ಷದಿಂದಾದ ಒಂದು ಬಗೆಯ ಸುಗಂಧದ್ರವ್ಯ,–ಸುಗಂಧದ ಔಷಧದ್ರವ್ಯ : ಕುಂಕುಮ ಕಸ್ತೂರೀ ಲವಂಗ ತಕ್ಕೋಲಮನಂಕ ವ್ಯಗಾಂಕವಕ್ಕ್ಷು ಚಂದ್ರಮ ಹಿಮ ಕೃತ್ಸ್ನರವಿಂತದೊಳರೆಗೆ ಗಂಧೋದಕದಿಂ (ಲೋಕೋಪ. ೬–೭). 'ಕಕ್ಕೋಲ' ಪರಾ. [ ಸಂ. ]

**ತಕ್ಕೋಲಕ** (ನಾ). = ತಕ್ಕೋಲ₂ ೨ : "ತಕ್ಕೋಲ ವೃಕ್ಷದ ಪರಿಮಳದ್ರವ್ಯ" (ಅಮರ. ಟೀಕ). [ ಸಂ. ]

**ತಕ್ಕೋಲಪುಟ್ಟಿ** (ನಾ). = ತಕ್ಕೋಲ₂ ೨ : "ತಕ್ಕೋಲಂ–ತಕ್ಕೋಲಪುಟ್ಟಿ" (ಓಷಧಿ. ೬೫) ; "ನಿಷ್ಕುಟಂ – ತಕ್ಕೋಲಪುಟ್ಟಿ" (ಓಷಧಿ. ೯೭).

[ ತಕ್ಕೋಲ₂ + ಪುಟ್ಟಿ ? ]

**ತಕ್ತರೋಹಿತ** (ನಾ). ಒಂದು ಬಗೆಯ ಗಿಡ : ನೀರು ಕಣಿಗಲು, ತಕ್ತ ರೋಹಿತ, ನೀರುಸಣ್ಣೆಸೊಪ್ಪು (ವ್ಮೂಜಿಗಿ. ೬೩–೧೨೧೧). [ ᴾಇದು 'ತಿಕ್ತ ರೋಹಿತ' ಎಂಬುದರ ಅಪಲಿಖಿತವಿರಬಹುದು]

**ತಕ್ತರೋಹಿತಕ** (ನಾ). ಒಂದು ಬಗೆಯ ಗಿಡ : ಮುಳ್ಳುಮುತ್ತಲ, ತಕ್ತ ರೋಹಿತಕ, ರೋಹಿತಕ (ವ್ಮೂಜಿಗಿ. ೮–೧೩೦). 'ತಕ್ತರೋಹಿತ' ಪರಾ.

[ ? ]

**ತಕ್ರ** (ನಾ). (ನಾಲ್ಕನೆಯ ಒಂದು ಭಾಗದಷ್ಟು) ನೀರು ಬೆರಸಿ ಕಡೆದ ಮೊಸರು; ಮಜ್ಜಿಗೆ: "ಗೋರಸ ದಂಡಾಹತ ಮಥಿತಾರಿಷ್ಟೋದಶ್ವಿದಾಹ್ವ ಮಂತದು ತಕ್ರಂ" (ವಸ್ತುಕೋ. ೯೨–೧); ಆಲದ ಬೀಬಲನರೆದು ತಕ್ರದೊಳ್ ಕುಡಿಯಲೊಡನೆಯತಿಸಾರರೋಗಮಾಗಳೆ ಕಿಡುಗುಂ(ಲೋಕೋಪ. ೯–೧೧೯); ಕಪಿಯಂ ಗಾಣಿಗ ಪಾವು ಕಾಷ್ಠಜನ ತಕ್ರಂ . . . ಧೂಮಮಂ ನಿಪುಣರ್ ಕಂಡರೆ ಪೋಗರ್ಕ್ಕೆ (ಸೋಮೇಶ. ೬೮) ; ಹಾಲೊಡೆಯೆ ಕಡೆದದನು ತಕ್ರವಾಗಿ ಪುದು . . . ಹಳದ ಹೊಸತಾಗಿಪುದು ಬಾಳಿಗಿದೆ ಚಿರಧರ್ಮ (ಮಂಕುಕ. ೨೩೨). [ ಸಂ. ]

**ತಕ್ರತೈಲ** (ನಾ). ಮಜ್ಜಿಗೆಯಲ್ಲಿ ಎಣ್ಣೆ ಮಂತ್ರಿತರ ಔಷಧಿವಸ್ತುಗಳನ್ನು ಹಾಕಿ ಸಿದ್ಧಪಡಿಸಿದ ಒಂದು ಬಗೆಯ ಔಷಧಿ : ತಕ್ರತೈಲ – ಒಂದು ಕೊಳಗ ಮಜ್ಜಿಗೆಯಲ್ಲಿ ಒಂದು ಬಳ್ಳ ಎಣ್ಣೆಯಂ ಹನಿಸಿ ಪಾನಾಭ್ಯಂಗನ ನಸ್ಯಂಗಳಂ ಮಾಡಲು . . . ವಾತರೋಗ ಸಹ ಗುಣಮಕ್ಕುಂ (ಸಕವ್ಯ.೦೦೫).

[ ತಕ್ರ + ತೈಲ ]

**ತಕ್ರಬಲಿ** (ನಾ). ಮೂಲಂಗಿ, ಈರುಳ್ಳಿ ಹಾಗೂ ಹಸಿಶುಂಠಿಗಳಿಗೆ ಮಜ್ಜಿಗೆ ಅಥವಾ ಹುಳಿ ಹಾಕಿ ಮಾಡುವ ಒಂದು ಬಗೆಯ ವ್ಯಂಜನ ಪದಾರ್ಥ : "ಮುಲ್ಲಂಗಿ ಮೊದಲಾದವುಳ್ಳಿಯಲ್ಲಂಗಳೊಳ್ ಪುಳಿವೆರಸಲವು ತಕ್ರಬಲಿ [ಪಾಠಾಂ. ತಕ್ರಕಂಬಲಿ, ಸಸ್ಯಬಲಿ]ಗಳಕ್ಕುಂ" (ಮಂಗರಾ. ೬೫–೬).

[ ತಕ್ರ + ? ]

**ತಕ್ರಾರ** 'ತಕರಾರು' ನೋ.

**ತಕ್ರಾರು** 'ತಕರಾರು' ನೋ.

**ತಕ್ರಿ** (ನಾ). ಒಂದು ಬಗೆಯ ಪೊದರು,–ಕಂಟಿ : "ಪಂಚಾಂಗುಲಿ – ಅವ್ವರಣೆ, ತಕ್ರಿ" (ಓಷಧಿ. ೯೩). [ ? ]

**ತಕ್ಕೀರು** 'ತಕ್ಸೀರು' ನೋ.

**ತಕ್ಷ** (ನಾ). ೧. ಮರಗೆಲಸ ಮಾಡುವವನು ; ಬಡಗಿ. ೨. ಸ್ಥಪತಿ ; ಶಿಲ್ಪಿ : ಪವನಂಜಯನೆಂಬ ತುರಂಗರತ್ನದಿಂದಂ ಭದ್ರಮುಖನೆಂಬ ತಕ್ಷನಿಂದಂ . . . ಪದಿನೆಣ್ಛಾಸಿರ್ವರ್ ಮ್ಲೇಚ್ಛರಾಜರಿಂದಂ ನೆಱೆದೈಶ್ವರ್ಯಂ (ಶಾಂತಿಪು. ೧೧–೮೧ ವ). [ ಸಂ. ತಕ್ಷನ್ ]

**ತಕ್ಷಕ** (ನಾ). ೧. ಬಡಗಿ ; ಮರಗೆಲಸ ಮಾಡುವವನು : "ವರ್ಧಕಿ ದಲ್ ರಥಕಾರಂ ತ್ವಷ್ಟೃ ಕಾಷ್ಠತಟ್ ತಕ್ಷಕಾಭಿಧಾನಮೆನಿಕ್ಕುಂ" (ವಸ್ತುಕೋ. ೬೮–೭೩) ; ತಕ್ಷಕರು, ಚಿತ್ರಕಾರರು, ವೈದ್ಯರು, ಗಾಯಕರು, ಕವಿಗಳು ಎಲ್ಲರೂ ಸೇರಿ, ಆ ಚರಿತ್ರೆಯನ್ನು . . . ಒಂದು ಉಜ್ವಲ ಪ್ರಕರಣವೆನಿಸಿದ್ದಾರೆ (ಜೀವಸಾ. ೧೧). 'ತಕ್ಷಪತಿ' ಪರಾ. ೨. ಅಷ್ಟಫಣಿಗಳಲ್ಲಿ ಒಂದು; ವಾಸುಕಿಯ ಸಹೋದರ: ಇಂದ್ರಾಗ್ನಿ ಮೊದಲಾದೆಂಟು ದಿಕ್ಕಿನ ಭೂಮಿಯಂ ಕ್ರಮದಿಂ ಪೊತ್ತು ಅನಂತ ತಕ್ಷಕ . . . ಕಾಲವೆಂಬಷ್ಟಕುಲಫಣಿಗಳಿರ್ಕುಂ (ವಿವೇಕ. ೧೭೭) ; ಅಗ್ನಿಗೆ ತೃಪ್ತಿಯಾಯಿತು; ಆದರೆ ತಕ್ಷಕನು ತಪ್ಪಿಸಿಕೊಂಡು ಕುರುಕ್ಷೇತ್ರಕ್ಕೆ ಹೊರಟುಹೋದನು (ವಚಭಾ. ೬೪). ೩. ಒಂದು ಬಗೆಯ ಹಾವು,–ಸರ್ಪ : ತಕ್ಷಕಭೂಷಣ ಪಕ್ಷಿವಾಹನವಿನುತ ದಕ್ಷಶಿಕ್ಷಣನಿಪುಣಜಗದೇಕಶರಣ (ಯುಗಿಕ. ೨೦) ; ಬೆನ್ನಿನಲ್ಲಿ ಸ್ವಸ್ತಿಕ ಲಾಂಛನ ಉಳ್ಳುದು ತಕ್ಷಕನೆನಿಸಿಕೊಂಬುದು (ವಿಷಚಿ. ೨–೧). [ ಸಂ. ]

**ತಕ್ಷಕಪತಿ** (ನಾ). ಶ್ರೇಷ್ಠನಾದ ಶಿಲ್ಪಿ : ಕಾಮವೃಷ್ಟಿಯೆಂಬ ಭಂಡಾರಿಗನುಂ ಭದ್ರಮುಖನೆಂಬ ತಕ್ಷಕಪತಿಯುಂ . . . ಆತ್ಮೀಯ ಸಾಮ್ರಾಜ್ಯಪರಿಚ್ಛೇದಮಾಗೆ (ಆದಿಪು. ೧೫–೩ ವ). [ ತಕ್ಷಕ + ಪತಿ ]

**ತಕ್ಷಕರತ್ನ** (ನಾ). [ಜೈನ] ಏಳು ಜೀವರತ್ನಗಳಲ್ಲಿ ಒಂದು; ವಾಸ್ತುಶಿಲ್ಪಿ ; ಸ್ಥಪತಿ : ಅನುಸ್ಮರಣ ಮಾತ್ರ ನಿಷ್ಪಾದಿತ ಸಪ್ತತಳಾತಿಪ್ರಾಸಾದಪ್ರಕರನುಮಪ್ಪ ಭದ್ರಮುಖನೆಂಬ ತಕ್ಷಕರತ್ನಮುಂ (ಆದಿಪು. ೧೧–೩ ವ).

[ ತಕ್ಷಕ + ರತ್ನ ]

**ತಕ್ಷಣ₁** 'ತತುಕ್ಷಣ₁' ನೋ.

**ತಕ್ಷಣ₂** 'ತತುಕ್ಷಣ₂' ನೋ.

**ತಕ್ಷಣಿ** (ನಾ). ಮರವನ್ನು ಕೆತ್ತುವ ಒಂದು ಸಾಧನ ; ಬಾಚಿ : "ವಾಸಿ ತಕ್ಷಣೀನಾಮಂ" (ವಸ್ತುಕೋ. ೫೦–೩೭).

[ ಸಂ. ತಕ್ಷಣೀ ]

**ತಕ್ಷೀರು** 'ತಕ್ಸೀರು' ನೋ.

**ತಕ್ಷೀರುವಂತ** (ನಾ). ತಪ್ಪಿತಸ್ಥ ; ಅಪರಾಧಿ : ಈ ಇಬ್ಬರು ಚೇಲೇರು ಬಹಳ ತಕ್ಷೀರುವಂತರಿದ್ದಾರೆ (ರಾಜೇಂದ್ರ. ೫೭).

[ ತಕ್ಷೀರು (<ತಕ್ಸೀರು) + –ವಂತ ]

**ತಕ್ಷೋಪಜೀವ್ಯ** (ನಾ). ಮರಗೆಲಸದಿಂದ ಉಪಜೀವನ ಮಾಡುವವನು: ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ ಸತ್ಪೂಜಿತಂ . . . ತಕ್ಷೋ[ಪಾಠಾಂ. ಕಷ್ಟೋ]ಪಜೀವ್ಯಂ (ಜಾತತಿ. ೧೭–೧೭).

[ ಸಂ. (ತಕ್ಷ + ಉಪಜೀವ್ಯ) ]

**ತಕ್ಸೀರ್** 'ತಕ್ಸೀರು' ನೋ.

**ತಕ್ಸೀರು, ತಕಶೀರು, ತಕ್ಕೀರು, ತಕ್ಷೀರು, ತಕ್ಸೀರ್** (ನಾ). ಅಪರಾಧ; ತಪ್ಪು ; ದೋಷ : ಯಾವುದಾದರೂ ಒಂದು ತಕ್ಸೀರಿನಲ್ಲಿ ಶಿಕ್ಷೆಯನ್ನು ಪಡೆದು (ಗ್ರಾಮಾಕ. ೧೧) ; ಕೋರ್ಟಿನಲ್ಲಿ ಕ್ರಮವಾದ ವಿಚಾರಣೆಯಾಗಿ ತಕ್ಸೀರು ರುಜುವಾತ್ತಾದ ಮೇಲೆ ಶಿಕ್ಷೆವಿಧಿಸಬೇಕು (ಸಕತ. ೮೭). **ತಕಶೀರು:** 'ತಕಶೀರುದಾರ' ಪರಾ. **ತಕ್ಕೀರು :** ಮರಣದಂಡನೆ ತಕ್ಕೀರನ್ನು ಮರೆಪಡಿಸುವದಕ್ಕೆ ಇನಾಂ ಕೊಡುವದಾಗಿ ಹೇಳಿದರೆ . . . ಖೈದು ಅಥವಾ ಜುರ್ಮಾನೆ (ಗ್ರಾಮಾಕ. ೧೮೪). **ತಕ್ಷೀರು :** ಇದು ಹೊರ್ತು ನಮ್ಮಿಂದಾ ಯೇನಾದರೂ ತಕ್ಷೀರು ಆಗಲಿಲ್ಲಾ (ರಾಜೇಂದ್ರ. ೧೧೮) ; ವಲ್ಲಭಭಾಯಿಯವರು ನ್ಯಾಯಾಧೀಶರ ಮುಂದೆ ಯಾವುದೋ ಒಂದು ತಕ್ಸೀರಿನ ಕುರಿತು ಜೋರಿನಿಂದ ವ್ಯವಹರಿಸುತ್ತಿದ್ದರು (ರಾಜವ. ೨೮) ; ಮುಂದೆ ಅವನು ತಕ್ಸೀರು ನಿರಾಕರಿಸಿದರೆ ಅವನ ಮೇಲೆ ನಿರಾನುಮಾನವಾದ ಪ್ರಮಾಣ ರೂಪವಾಗಿ ಅಂಗೀಕರಿಸಲ್ಪಡುವದಕ್ಕೋಸ್ಕರ ಅವನ ಕೈ ಉಂಗುರಗಳನ್ನು ಸೆಳೆಕೊಂಡು ಹಾಜರುಪಡಿಸಿದ್ದಾನೆ (ವಾಗ್ಗೇವಿ. ೧೯೫). **ತಕ್ಸೀರ್ :** ಅವರಿಗೆ ತಕ್ಸೀರ್ ವಿಚಾರಣೆ ಮಾಡುವ ಅಧಿಕಾರವನ್ನು (Magisterial power) ಕೊಟ್ಟಿತ್ತು (ಮಹಾವಂ. II, ೨೭).

[ ←ಅರ. ಹಿಂ. ತಕ್‌ಸೀರ್; ಮರಾ. ತಕ್‌ಶೀರ್, ತಕ್‌ಸೀರ್ ]

**ತಕ್ಸೀರುದಾರ,ತಕಶೀರಂದಾರ** (ನಾ). ಅಪರಾಧಿ; ತಪ್ಪಿತಸ್ಥ: "ಅಪರಾಧಿ, ಪಾತಕಿ; ತಕ್ಸೀರುದಾರ" (Criminal. ಪಕ್ರಿನಿ. ೨೭). **ತಕಶೀರುದಾರ:** ಕೈದಿನಿಂದ ತಪ್ಪಿಸಿಕೊಂಡು ಹೋದ ತಕಶೀರುದಾರನಿಗೆ ಆಸರೆಕೊಟ್ಟರೆ (ಗ್ರಾಮಾಳ. ೧೮೪). [ ತಕ್ಸೀರು + – ದಾರ್₄ ]

**ತಕ್ಸೀರುನಾಮೆ** (ನಾ). ಅಪಾದನೆಯ ವಿವರಣೆಗಳನ್ನು ತಿಳಿಸುವ ಪಟ್ಟಿ. [ ←ಹಿಂ. ತಕ್ಸೀರ್‌ನಾಮಾ ]

**ತಖ್ತೆ,** ತಃಖ್ತ, ತಃಖ್ತೆ (ನಾ). ಆಯವ್ಯಯ ವಮುಂತಾದ ವಿಷಯಗಳ ವಿವರಣೆಯ ಪಟ್ಟಿ,–ವಿವರಗಳನ್ನು ಸೂಚಿಸುವ ಪಟ್ಟಿ: ಕುಲ್ಲು ಜಮಾಬಂದೀ ಗೋಷ್ವಾರೆ ತಖ್ಸೀಲುವಾರು ಗ್ರಾಮವಾರು ತಖ್ತೆ ಸಹ ತಯಾರು ಮಾಡಿಸಿ (ಮಹಾಪಂ. II, ೭೩): ಲಾಭ ನಷ್ಟಗಳ ತಖ್ತೆಯನ್ನು ಪರಿಷ್ಕಾರವಾಗಿ ತಯಾರಿಸಿ ವಾರ್ಷಿಕ ಆದಾಯವನ್ನು ಕಂಡುಹಿಡಿಯುವ ವಿಧಾನ (ಭಾಗ್ಯಶಿ. ೮೩). **ತಃಖ್ತ:** (ಮೈಗೆಜ಼. IV, ೭೮೭). **ತಃಖ್ತೆ:** ಪ್ರತಿ ತಿಂಗಳು ಪಾಠಶಾಲೆಯಾಗತಕ್ಕ ತಲಬುಗಳ ಒಂದು ತಃಖ್ತೆಯನ್ನು ತಯಾರ್ಮಾಡಿ ರವಾನಿಸಬೇಕು (ಗ್ರಾಮಾಳ. ೫); ಮಕ್ಕಳ ಅಭಿವೃದ್ಧಿಯ ತಃಖ್ತೆಯನ್ನು ತಪ್ಪದೆ ಇಡಬೇಕು (ರಂಗಕ. ೮೧).

[ ←ಪಾರ. ತಖ್ತಃಹ್ ; ಹಿಂ. ತಖ್ತಾ ; ಮರಾ. ತಕ್ತಾ, ತಖ್ತಾ ]

**ತಗ** 'ದಗ' ನೋ.

**ತಗಚಿ** 'ತಗಚೆ' ನೋ.

**ತಗಚೆ,** ತಗಚಿ, ತಗಸಿ, ತಗ್ಗಚ್ಚಿ (ನಾ). ೧. ಅಗಸೆ; ಚೊಗಚೆ; ಚಕ್ರಮರ್ದ: "ಏಡಗಜಃ, ಪ್ರಪುನ್ನಾಟಃ, ದದ್ರುಘ್ನಃ, ಚಕ್ರಮರ್ದನಃ– ಈ ೪ ತಗ(ಚೆ)ಟೆ" (ಹಲಾಯು. ೧೦೦–೪೬೫); ನೆಗ್ಗಿಲ್ ತಗಚೆ ನಿದಿಗ್ಧಿಕೆ ತಗ್ಗಿಯಪಾಮಾರ್ಗದೊಡನೆ ಬೆರಸಿದುದಂ . . . ಕುಡಿಸೊಗ್ಗಿಸಿದಂಬಿಲದೆ ಬೇದುಗಟ್ಟು ವಿಷಘ್ನಂ (ಖಮುದ. ೧೬–೭೪); ತಗಚೆ, ತಾಕೋಟೆ (ಮೈಜ಼ಿಗ. ೫೪–೧೯೯೫). ೨. ಹಿಪ್ಪನೇರಳೆ ಅಥವಾ ಉಪ್ಪುನೇರಳೆ ಗಿಡ: (*). **ತಗಚಿ:** ೧. "ಪ್ರಪುನ್ನಾಟಃ, ಏಡಗಜಃ ದದ್ರುಘ್ನಃ, ಚಕ್ರಮರ್ದಕಃ, ಪದ್ಮಾಟಃ, ಉರಣಾಕ್ಷಃ, ಈ ೬ ತಗಚಿ[ಪಾಠಾಂ. ಚೆ]" (ನಾಚಿರಾ. ೧೧೨); ಮುತ್ತುಗ ತಗಚಿ ಯಂಗಚಿ . . . ಮೊದಲಾದ ಗಗನವಂ ತುಡುಕುವ ವೃಕ್ಷಂಗಳ್ (ಸಾಗಂಧಿ. ೫೪–೬). **ತಗಸಿ:** ೧. "ಪ್ರಪುನ್ನಾಟವಮದೇಡಗಜಂ ಕಪಿತ್ಥಪರ್ಣಾಖ್ಯೆ ತಗಸಿ (ವಸ್ತುಕೋ.೩೬–೨೦). 'ಕೋಲ್ತಗಸಿ' ಪರಾ. **ತಗ್ಗಚ್ಚಿ:** ೧. "ಪ್ರಪುನ್ನಾಟಃ, ಏಡಗಜಃ, ದದ್ರುಘ್ನಃ, ಚಕ್ರಮರ್ದಕಃ, ಪದ್ಮಾಟಃ, ಉರಣಾಕ್ಷಃ–೬ ತಗಚೇ ಗಿಡದ ಹೆಸರುಗಳು, ತಗಚಿ, ತಗ್ಗಚ್ಚಿ" (ಸಿದ್ಧಾಂತಿ. ೧೨೮).

[ ದೇ.॥ ತಮಿ. ತಕರೆ ; ಮಲ. ತಕರ ; ತೆಲು. ತಗರ್ಚೆ, ತಗಿರ್ಸ, ತಗಿರಿಸ ]

**ತಗಟ** (ನಾ). ಜರತಾರಿ ರೇಷ್ಮೆ: ಪಟ್ಟಸಾಲೆಯೊಳು ಮೇಲ್ಕಟ್ಟು ಲಕ್ಷಾವೆ ಬಾಳ್ವದು ಪಟ್ಟೆಮಂಚಕೆ ವಜ್ರದಾ ದಟ್ಟತವಾದ ಕಾಲ್ಗಳೂ ವಟ್ಟಿದ್ದಾ ಸೂವರಳೆ ಸುಪ್ಪತ್ತಿಗೆ ತಗಟ ತಲೆದಿಂಬು ಕಟ್ಟಿದಾ ಮುತ್ತಿನಾ ಗೊಂಚಲು (ಶ್ರೀಕೃಪಾ. ೨೫). [ ದೇ.॥ ತಮಿ. ತಕಟ; ತೆಲು. ತಗಟ ]

**ತಗಟೆ** 'ತಂಗಡಿ' ನೋ.

**ತಗಡತಿ** (ನಾ). ಒಂದು ಬಗೆಯ ಗಿಡ: ತಗಡತಿ, ಹರಿಯಾಗೆ, ಮೈಸಾಲೆ (ಮೈಜ಼ಿಗ. ೫೦–೧೦೦೦). [ ? ]

**ತಗಡು** (ನಾ). ೧. ತೆಳುವಾಗಿ ಬಡಿದ ಲೋಹದ ಹಾಳೆ,–ಹಲಗೆ,– ಫಲಕ: ಬಿಳಿಯ ಕಬ್ಬಿನ ಜಂತೆಯೊತ್ತಿನೊಳು ಕೇತಕೀದಳದ ತಗಡವಕೆ ಮುಡಿವಾಳದ ಹೊದಕೆ (ಸೋಮಚ. ೧–೧೦೦); ಕಪ್ಪುರವಳಿಕಿನ ತಗಡಿಂದೆ ಮಾಡಿದಂತಿರೆ ಕಂಪಂ ತಳೆದ ಬಿಳಿಯೆಲೆಯನಂಬುಜದಳದಿಂ ಪುದಿವಂತೆ ಒಡಿದು ಸುರಸತಿಯಿತ್ತಳ್ (ಪಾರ್ಶ್ವಪು. ೦೩–೦೨೭); ರವಿಯ ತಗಡೆನೆ ತೆಳಿತವಾಯುಧನಿವಹ (ಕುಮಾವ್ಯಾಉ. ೯–೭೦); ತಿಂಗಳ ತಂಗದಿರನು ತಗಡನು ತಳೆದಂಗಜನೆಂಬ ಸೊನ್ನಾರಿ ಹಿಂಗದೆ ಮಾಡುವನೆನೆ ಪಚ್ಚೆಗರ್ವುರದಂಗಡಿಯುದದಿರೊಳೊಪ್ಪಿದವು (ರಾಮವಿ. ೩–೬೫): ತಪ್ತಕಾಂಚನದ ತಗಡಿನಲ್ಲಿ ಬರೆದಂಥ ಜಂತ್ರದಂತೆ (ಅರಳು. ೪೯–೧೧). ೨. ಕುಂದಣದ ಹರಳುಗಳ ಕೆಳಗೆ ಜೋಡಿಸಿದ ಹೊಳಪಿನ ವರ್ತಿ,–ರೇಕು: ಹೊನ್ನ ತಗಡ ಮೇಲೆ ಹೊಳೆವ ಮಾಣಿಕವು ತಬ್ಬೊನ್ನೊಳಗತಿ ರಂಜಿಪುದೆ (ನೇಮಿಸಂ. ೧೧–೧೪೫): ಕುಂದಣದ ತಗಡಿಗಕ್ಕರ ತಾಗಿ ರಕ್ಷೆಯಾದಂತೆ (ಭರತ. ೭೨–೯). ೩. ಕನ್ನಡಿಯ ಹಲಗೆ; ಕನ್ನಡಿಯಂತಿರುವ ಲೋಹದ ಫಲಕ: ತಗಡಿನೊಳಗೆ ತೋರ್ಪ ಛಾಯಾಪ್ರತಿಮೆಯೊ ಹಗಲಲ್ಲಿ ಬೆಳುದಿಂಗಳ್ಗಳಲ್ಲಿ ಸೊಗಸುವ ಛಾಯಾಪುರುಷನೊಯೆಂಬಂತೆ ಬಗೆಗೊಳಿಸುವುದಾತ್ಮರೂಪು (ಭರತ. ೦–೧೧೧). ೪. ಜರಿ; ಜರತಾರಿ; ಕಲಾಬತ್ತು: ಹೇಮವರ್ಣದ ತಗಡಿನುಡಿಗೆಯ ಹೇಮಕೊರಳಿನ ಸೊಗಸು ಮಿಗಲು (ಸಂಭಪ. ೮–೪೮); ಹಳದಿ ಪೊಪ್ಪಳಿ ಚಂದ್ರಗಾವಿ ಬೊಂಬೆಯ ಬಣ್ಣ . . . ಹೊನ್ನ ತಗಡಿನ ಬಿಳುವಟ್ಟೆ ನಾನಾವರ್ಣದ ಜವಳಿಯ ಮಳಿಗೆಗಳೆಸೆದುವು (ಕಂನವಿ. ೬–೭೧). ೫. ದಟ್ಟಣೆ; ಸಾಂದ್ರತೆ; ಸಂದಣಿ: ಒಗುಮಿಗೆಯ ಪರಿಮಳದ ಕಂಪಿನ ತಗಡ ತೆಕ್ಕೆಯ ಬೀದಿವರಿಗಳ . . . ಸೊಗಸ ಸೇರಿಸಿ ಮಂದಮಾರುತನಪ್ಪಿದನು ಮಗನ (ಕುಮಾವ್ಯಾಆ. ೧೦–೪೩). 'ತಗಡುಗತ್ತಲೆ' ಪರಾ.

[ ದೇ.॥ ತಮಿ. ತಕಟು ; ಮಲ. ತಕಡು, ತಕಿಡು ; ತುಳು. ತಗಡ್ ; ತೆಲು. ತಗಡು. / ಮರಾ. ತಗಡ್, ತಕಟ್ ]

**ತಗಡುಗತ್ತಲೆ** (ನಾ). ದಟ್ಟವಾದ ಕತ್ತಲೆ: ಅಂಡಲೆಯ ಬಲುನಿದ್ರೆ ನಳಿನಭವಾಂಡಭವನದ ತಿಮಿರರಕ್ಕಸಿ ಚಂಡಕರದೀಪವನು ಮಲಗಿಸಿ ಮಹಿಯ ಮಂಚದಲಿ ಮಂಡಿಸಿದಳೆನೆ ತ[ಪಾಠಾಂ. ನಲ]ಗಡುಗತ್ತಲೆ ಚಂಡಿಸಿತು ತತ್ಸಮಯದಲಿ (ತೊರರಾ. ೫–೨–೨).

[ ತಗಡು + ಕತ್ತಲೆ₁ (<ಕಟ್ತಲೆ) ]

**ತಗಡುನ್ನಾಡು** (ನಾ). ಒಂದು ನಾಡಿನ ಹೆಸರು: ಮಣಿಯಾಚಾರಿಯ ಅಟಿಯ ಪಾಲ್ಪಡುವಿನ ಚೋಳಾಚಾರಿ ತಗಡುನ್ನಾಡ ಪೊಲ್ಲೆಯೂರ ತುಱುವಿ ಕಳ್ಳಕ್ಕೊಣ್ಣುವೋಗೆ . . . ಇಱಿದು ಸಗ್ಗಸ್ತನಾದಂ (ಎಕ. X, ಕೋಲಾರ. ೧೪–೫ ; 1035). [ ತಗಡು₀ + ನಾಡು ]

**ತಗಡುರಿ** (ನಾ). ದಟ್ಟವಾದ ಉರಿ: ಕನಲಿ ಫಲುಗುಣನಾದಡಿದ ಕೊಳ್ಳೆನುತ ಕೊಳ್ಳಿಯೊಳಿಟ್ಟನಗ್ನಿಯ ನೆನೆದು ಮಂತ್ರಿಸಲುರಿಮುಖದ ಕಾರ್ಬೊಗೆಯ ಮೊಬ್ಬಿನಲಿ ಹೊನಲುಗಿಡಿಗಳ ತಗಡುರಿಯ ಕೊಂಡಿ[ ಡ ]ನಲಿ ಮುತ್ತಿತು ರಥವನಾತನ ಧನುವನಾತನ ತನುವನು (ಕುಮಾವ್ಯಾಆ. ೧೧–೩೩).

[ ತಗಡು + ಉರಿ₂ ]

**ತಗಡೂರ್,** ತಗಡೂರು (ನಾ). ಒಂದು ಊರಿನ ಹೆಸರು: ಪೊಂಕುನ್ನದ ಬಾರಾನ್ಡರವಯ್ಯ ತಗಡೂರ ಕೆಳೆಯ ಕಾಳೆಗದೊಳ್ ಬಸವಯ್ಯನ ಮುನ್ದೆ ಕಾದಿ ಸತ್ತು (ಎಕ. X, ಬಾರಿಂಗ್. ೪೪–೩ ; ಸು. 950). **ತಗಡೂರು:** ತಗಡೂರು ಸ್ಥಳದ ಬದಣೆವಾಳ ಕಾಲುವಳ್ಳಿ (ಮೈಆರಿ. ೦೯೪೭, ೧೮–೬ ; 1488). [ ತಗಡು₀ + ಊರ್₃ ]

**ತಗಡೂರು** 'ತಗಡೂರ್' ನೋ.

**ತಗಣ** (ನಾ). [ಛಂದ] ಅಕ್ಷರಗಣಗಳಲ್ಲಿ ಒಂದು; ಎರಡು ಗುರು ಮತ್ತು ಕೊನೆಯಲ್ಲಿ ಒಂದು ಲಘುವಿರುವ ಗಣ (– – ᴗ): ತಗಣಾಂಬರ ಜಗಣಾರ್ಕಂ (ಛಂದೋಂಬು. ೬. ೧–೩೫). [ ತ₁ + ಗಣ ]

**ತಗಣೆ** 'ತಗುಣೆ' ನೋ.

**ತಗಣೆ** 'ತಗುಣೆ' ನೋ.

**ತಗತು₁** (ನಾ). ಕಲಾಬತ್ತು; ಜರತಾರಿ: ಚಿನ್ನದೆಳೆ ಮುಂದಾಸನವು ಸಿರದಿಯಾಂತು ಧವಲಾಂಬರದ ತಗತಿನಂಗಿಯ ತೊಟ್ಟು ಸಂತಸದಿ ವಸುಮಯದ ಪಚ್ಚಡಂಗಳ ಪೊದೆದು (ನವಮೋ. ೨–೪೪). [ <ತಗಡು ]

**ತಗತ್ತು₂** 'ತಕತ್ತು' ನೋ.

**ತಗಪಡು** (ಕ್ರಿ). ಅಡ್ಡಿಮಾಡಲ್ಪಡು ; ನಿರ್ಬಂಧಕ್ಕೊಳಗಾಗು : ಭೋಗ ತೃಷ್ಣೆಯನುಟಿದ ಕಿಱುಗೂಸುಗಳುಂ ಕೌಮಾರ ಬ್ರಹ್ಮಚಾರಿಗಳುಂ ಕಟ್ಟುಂ ಪಟ್ಟುಂ ತಗಪಟ್ಟುಂ ನೆಱೆಯೊಳಿರ್ದುಂ ಅಳಲದೆ ಬೇಸಱದೆ ಮುನಿಯದೆ ಕಾಯಕ್ಕೆ ಶಮಂ ಪರವಶತೆ ಮಾಳ್ಪವರುಂ ನೀಚದೇವರಾಗಿ ಪುಟ್ಟುವರು (ಜ್ಞಾವಶಾ. ೪೮-೧೪). 'ಅಗಪಡು' ಪಠಾ. [ <ತಗೆ + ಪಡು₁ ]

**ತಗಪ್ಪು** 'ತಗೆಪು' ನೋ.

**ತಗಬೊಗರಿ**(ನಾ). ಚಿನ್ನದ ಬುಗುರಿ; ಪೊಂಬುಗುರಿ: ಅಂಗಜನಮಳ್ಳುಡಿಗಳ ಬೆಳಗಾಯ್ಗಳ ತೇಂಗಾಯ್ಗಳ ತ[ತ]ಗಬೊಗರಿಗಳವಱಂ ಪಿಂಗಡೆಗೆಲ್ವ ಕುಚದ ಕೋಮಲೆಯರ್ ತೊಳಗಿದರಂತಲ್ಲಿ (ಜಯುಕಾ. ೧೪-೨೬).
[ ತಗ₀ (P ←ತಮಿ. ತಙ್ಕ=ಚಿನ್ನ, ಅಪರಂಜಿ) + ಬೊಗರಿ ]

**ತಗರ್₁**, ತಗುರು (ಕ್ರಿ). ೧. ತಡೆ; ಅಡ್ಡಗಟ್ಟು ; ಅಡ್ಡಿಪಡಿಸು ; ನಿರೋಧಿಸು: "ತಗರ್–ಗತಿಬಂಧನೇ (ನಿಲ್ಲಿಸು) ಅಜಭೇದೇ ಚ (ಟಗರು)" (ಶಮಧಾ) ; ಪೋ ಪೋಗಲೆಂದೊಡಱುತ್ತುಂ ಪರಿತಂದು ತಾಗಿ ತಗರ್ದಂ [ಪಾಠಾಂ. ತಗೆದಂ, ತೆಗೆದಂ]ಗಂಗಾಸುತಂ ಭೀಮನಂ (ಪಂಪಭಾ. ೧೦-೧೦) ; ತಂತಮ್ಮ ವಿಷಯಂಗಳಿಗೆ ಪರಿಯಲೀಯದೆ ತಗರ್ದು . . . ಚತುರ್ವಿಧಾ ಹಾರಮಂ ಅಷ್ಟಮಿ ಪರ್ವದಿನಂಗಳೊಳು ತೊಱೆವುದು (ಪಸಾರ. ೬೩೨-೧೦); ವ್ರತಸಮಿತಿ ಗುಪ್ತ್ಯಾದಿಗಳಿಂ ಕರ್ಮಗಳುಂ ತಗರ್ವುದು ಸಂವರತತ್ತ್ವಂ (ಜಾಸ್ಕಟೀ. ೧೦೩-೦). ೨. ನಿಲ್ಲು; ಅಡ್ಡಿಗೊಳಗಾಗು; ನಿರ್ಬಂಧಿತವಾಗು: ಸುದತೀವಕ್ತ್ರಸುಧಾಂಶುದರ್ಶನದೊಳಾತಂಗಂದು ಕಾಮಾಂಧಕಾರದ ಪೆರ್ಚಾಯ್ತು ಮನಶ್ಚಕೋರಿಯು ರತಂ[ತರಂ]ಗಾಂಭೋಧಿಯಾಗಳ್ತಗರ್ದು ಬಳ್ಸೇದೆ ಪೊದಳ್ದು ಪೊಣ್ಮಿತು (ವೀರವಿ. ೬-೪೮). **ತಗುರು**: ೧. ಆತು ತಗುರೊಮ್ಮೊಮ್ಮೆಗಂ ಪವನಸೂನು ಸಂಘಾತ ತಪ್ಪಿಸಿ ಪೊಯ್ದು ಕುರುನೃಪಂ ಮತ್ಸರದೊಳೀತ ಪೊಯ್ವನು ಬೀಳು ಬೀಳೆನುತಲದ ಬೀಯಮುಮ್ಮಾಳ್ದನಾ ಕುರುಪತಿ (ತುರಂಗ. ೬೫-೪೧). [ ? ]

**ತಗರ್₂**, ಟಗರು, ತಗರು (ನಾ). ಗಂಡು ಕುರಿ ; ಮೇಷ : "ತಗರ್ – ಗತಿಬಂಧನೇ (ನಿಲ್ಲಿಸು) ಅಜಭೇದೇ ಚ (ಟಗರು)" (ಶಮಧಾ); ಮೂಗುರ್ಚಿದಮ್ಮೆಪೋರಿಯುಂ ಪೆಱಮೆಟ್ಟದ ತಗರುಂ ತಾಗುವಂತೆ . . . ಪೆಣೆದಿಱಿವ ಪದದೊಳ್ (ಶಾಂತಿಪು. ೬-೭೨ ವ) ; ಕೊಣಕಿಟ್ಟು ತಗರೆರಡುಂ ತಮ್ಮೊಳ್ ತಾಗಿ ಕಿಡಿಗುಟ್ಟಿದಂತಾಗೆ ಪೋರುತ್ತಿರೆ (ಪಂಚತಂ. ೬೨-೦೩): ತಗರ್ ತಗರೊಳ್ ಮಲ್ಲರ್ ಮಲ್ಲರೊಳ್ ತಾಗುವಂತೆ ಕಿಚ್ಚುಂ ಕಿಡಿಯುಮಾಗಿ ತಂತಮ್ಮೊಳ್ ತಾಗಿ (ಧರ್ಮಾಮೃ. ೩-೮೬) ; ಇಂಗುಳದ ಪಣ್ . . . ಲೊಕ್ಕಿಯ ಪರ್ಣಂಗಳ ರಸದಿಂ ನಸ್ಯಂ ಕಂಗಳೊಳಿಟ್ಟಲ್ಕೆ ತಗರ ವಿಷಮಂ ಕಳೆಗುಂ (ಖಮದ. ೦೩-೭೭). **ಟಗರು**: ಪುರಾಣವೆಂಬುದು ಪುಂಡರ ಗೋಷ್ಠಿ ತರ್ಕವೆಂಬುದು ಟ[ಪಾಠಾಂ. ತ]ಗರ ಹೋರಟೆ (ಅವಚಂ. ೦೦೩-೪೬೫); ಟಗರಿನ ಹೋರಾಟದಂತೆ . . . ತಾನು ಹಿಡಿದುದ ಬಿಡದೆ ಹೋರಾಡುವುದೇ ತರ್ಕಮರ್ಕಟ ವಿಧಿ (ಸಿದ್ಧೇವ. ೧೮-೪೫ ಟಿಪ್ಪಣಿ) : ಎಳ್ಳೊ ಹೊಲ್ದಾಗೆ ಎಳೆ ಟಗರಾ ಸಾಕಿ (ಹುಬ್ಬಿಹ. ೩೨). **ತಗರು**: ತಗರಿನ ಬಲಿದ ಕೊಂಬಂ ತನ್ನೆಡದ ಕೈಯಲಿ ಪಿಡಿದುಕೊಂಡು (ಬಸವಪು. ೨೯-೪) ; ತಗರು ಮುಳಿದಾರಿದರೆ ತೋಳನು ತೆಗೆದು ಜೀವಿಸಲಱಿವುದೇ (ಕುಮ್ಮಾರ. ೧೦-೪೫) ; ತಗರು ಸಿಬಿಲೆ ಕೋಳಿ ಕಾಳಗಗಳು (ಕಂಸವಿ. ೬-೧೯೭) ; ತೊಗರೆಯ ತೊಗೆ ಲೇಸು ತಿಗುರಿಗೆ ಪೊಳೆ ಲೇಸು ತಗರ ಹಿಂಗಾಲ ಸತು ಲೇಸು (ಸರ್ವಜ್ಞ. ೬೨೨).
ತಗರ ಕಾಳಗ = ಟಗರುಗಳನ್ನು ಹಂದಿದುಂಬಿಸಿ ಹೋರಾಟ ಮಾಡಿಸುವ ಒಂದು ಪಂದ್ಯ,–ಜೂಜು : ತಗರ ಕಾಳಗ ಮದಕರಿಗಳ ಹೋರಾಟ . . . ಸೊಗಸ ಬೀಱಿದುದೋಲಗದೆ (ಕಂಸವಿ. ೨೦-೪೪).
[ ದೇ.೫ ತಮಿ. ತಕರ್ ; ತುಳು. ತಗರು, ಟಗರ್ ; ತೆಲು. ತಗರು ]

**ತಗರ₁** 'ತವರ' ನೋ.

**ತಗರ₂**(ನಾ). ಸುವಾಸನೆಯಾದ ಬಿಳಿಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ; ನಂದಿಬಟ್ಟಲು ; ನಂದಿವರ್ಧನ : "ನಂದಿವಟ್ಟಮದು ತಗರ ಸಂಜ್ಞಿಕಂ ತಾನಕ್ಕುಂ" (ವಸ್ತುಕೋ. ೩೮-೩೫) ; "ನಮ್ರಂ – ತಗರೆ, ನೀರುಮಂಜಿ" (ಒಷಧಿ. ೮೩) ; ತಗರಂ ಕೊಳ್ಳುಳಿ ನುಗ್ಗಿ ಕಗ್ಗೊಱಲೆ ತೊಟ್ಟಲ್ . . . ಪುತ್ತಿನ ಮಣ್ಣುಮಂ ಕದಡಿ ಕಾಸಿಟ್ಟೆಯ್ದೆ ಪೊಯ್ಯುವ ಬಾವುಗಳುಂ ತೀರ್ದುಗುಂ (ಲೋಕೋಪ. ೯-೨೧೦) : ತಕ್ಕೋಲ, ಶ್ರೀಗಂಧ, ತಗರ, ಲಾವಂಚ, ಸಿವನ್ನಿಯ ಬೇರು . . . ಚೂರ್ಣಿಸಿ ಹಾಕಿ (ವೈದ್ಯಸಾ. I, ೪೦೫) ; ಸಿಂಧುವಾರ ತಗರ ಮೊದಲಾದ ಲತಾವಿಶೇಷಂಗಳು ಕೊಂಬೆಗಳಂ ನೆಡಲು ಹುಟ್ಟುವವು (ಸೌಗಂಧಿ. ೪೨೫-೧೦). [ ಸಂ. ]

**ತಗರಪುರ** (ನಾ). ಒಂದು ಪಟ್ಟಣದ ಹೆಸರು. P ಈಗಿನ ಆಂಧ್ರ ಪ್ರದೇಶದ ಬಳಿ ಉಸ್ಮಾನಾಬಾದ್ ಸಮೀಪದಲ್ಲಿರುವ ತೇರ : ಮಹಾಸಾಮನ್ತಾಧಿಪತಿ ತಗರಪುರ ಪರಮೇಶ್ವರ ಸಿಲಾಹಾರ ನರೇಂದ್ರ (ಇಇ. V, ೨೭೮-೨ : 1026). [ ತಗರ? + ಪುರ₃ ]

**ತಗರಬುಗರಿ** 'ತಗರುಬೊಗರು' ನೋ.

**ತಗರಸನ್ನೆ** (ನಾ). ಹತ್ತು ಬಗೆಯ ಲೆತ್ತದ ಆಟಗಳಲ್ಲಿ ಒಂದು (?) : ಆರಿದಿರಾದೊಡಾಡಿದಪೆನೆಕ್ಕಡಿಯ ಪಡೆ ಪಂಚಬಾಯುಮಂ ವೀರವಿಳಾಸಮಂ ತಗರಸನ್ನೆಯನ್ನೆದೆರಡಂ ನೆಗಟ್ಟ ಚೌಸಾರಿಯುನಾಱು ಪನ್ನೆರಡನೊಪ್ಪುವ ರಾಜಕುಮಾರನಂ ಮಹೋದಾರವನೊಡ್ಡಿ ದೊಡ್ಡನೆನುತೆನ್ನನವಂ ಕಡುಪಿಂ ಕೆರಳ್ಚಿದಂ ಇವು ಮೊದಲಾಗಿ ಪತ್ತು ವಿಧದ ನೆತ್ತವನಾಡುವೆನೆಂದೆನ್ನಂ ಕೆರಳ್ಚಲ್ (ದಶಕು. ೮-೯೨). [ ? ]

**ತಗರಿ** (ನಾ). ಕುದುರೆಯಂ ಬಾಲದ ಕೆಳಗಿನ ಭಾಗ : "ಬಾಲದ ಕೆಱಗು ತಗರಿಯೆಂಬ ಪೆಸರಕ್ಕುಂ" (ಅಶ್ವಶಾ. ೮೯-೧೦). [ ? ]

**ತಗರು** 'ತಗರ್₂' ನೋ.

**ತಗರುಬಿಗುರು** 'ತಗರುಬೊಗರು' ನೋ.

**ತಗರುಬೊಗರು**, ತಗರಬುಗರಿ, ತಗರುಬಿಗುರು (ನಾ). ೧. ಕಪಟ; ಮೋಸ ; ಬೂಟಾಟಿಕೆ : ಬೇಟಪೂರ್ವಕಳಲ್ಲಿ ಪುರ್ಬಿನಾಟಪೂರ್ವಕಳಲ್ಲಿ . . . ತಾಟೊಟು ತಗರುಬೊಗರು ಟಕ್ಕುಟೌಳಿಯೆಸಗುವ ಕೋಟಲೆ ಸಾಕು ದಮ್ಮಯ್ಯ (ಗೀತಗೋ. ೨೬). **ತಗರಬುಗರಿ**: ೧. ತಗೀರಿ, ತಗೀರಿ, ನೋಟಿನ ಕಟ್ ತಗೀರಿ . . . ಸುಂಕೆ ತಗರಬುಗರಿ ಒಡಿಬ್ಯಾಡಿ ಬುದ್ದಿ (ಕಕಾರ. ೧೫೦). **ತಗರುಬಿಗುರು**: ೨. ತಬ್ಬಿಬ್ಬು ; ಗೊಂದಲ : ಸೇರೆಗಾರ ಕೇಳಿದ ಪ್ರಶ್ನೆಗಳಿಗೆ ಸಾಬ್ರು ಎಂಥೆಂಥ ಜಟಿಲ ಉತ್ತರ ಕೊಡುತ್ತಿದ್ದರು ಎಂದರೆ ಅವುಗಳ ವಿದ್ವತ್ತಿಗೇ ಚೀಂಕ್ರ ತಗರುಬಿಗುರಾಗಿ ಮಾರುಹೋಗಿ . . . ಒಪ್ಪಿಗೆ ಕೊಟ್ಟಿದ್ದನು (ಮಲೆಮ. ೭೪೨). [ ? ]

**ತಗರೆ** (ನಾ).=ತಗರ₂ : ಗಂಧ ತಗರೆಯ ಮೂಲ . . . ತಂದು ಶಂಖಿನಿ ಜಾತಿ ಪೆಣ್ಣಿಗೆ ಕೊಡಲು ತಾ ವಶ್ಯಾ (ಕಕ್ಕೋಳ. ೫-೩೩) [ <ತಗರ₂ ]

**ತಗರೆನಾಡು** 'ತಗಂರೆನಾಡು' ನೋ.

**ತಗರೇಱು** (ನಾ). ಮಲ್ಲಯುದ್ಧದ ಒಂದು ಪಟ್ಟು ; ತಗರಿನ ರೀತಿ ಮೇಲೇರುವುದು (?) : ಲಾಗಿನಲಿ ಬವರಿಯಲಿ ಒಡಮುಱಿದಾಗಿನಲಿ ತಗರೇಱಿನಲಿ ಮೈಲಾಗಿನಲಿ ತೆಕ್ಕೆಯಲಿ . . . ಗೆಲುಸೋಲುಗಳ ಬಗೆ ಸಂದೇಹವಾಗಿರೆ ಭೀಮ ಜೀಮೂತಗಳು ಹಳಚಿದರು (ಕುಮ್ಮಾವಿ. ೬೦೪. ೪-೭೭). [ ತಗರು(<ತಗರ್₂) + ಏಱು₆ (<ಏಱ್₆) ]

**ತಗರ್ತಲೆಯ** (ನಾ). ಒಂದು ಬಗೆಯ ಬಾಣ : ನೆಱೆದು ನಿರ್ವಾಯಂ ನರುವಾಯಂ ಮುಮ್ಮೊನೆ ನೆರಕೆ ನಾರಾಚಂ ಕೆಗರ್ತಲೆಯಂ ನೆಱನಿರಿ[ಪ]ಕಣೆ ಗೆಲೆಯಂಬು ಕಕ್ಕಂಬು ಕೆಲ್ಲಂಬು ಮೊನೆಯಂಬು . . . ಸಾರ್ದು ಸಾರ್ದೆ ಚ್ಚೆಚ್ಚು ಕಾದಿದರತಿರಥರೊಂದು ಜಾವಂ (ಪಂಪಭಾ. ೦೪-೩೯). [ ? ]

**ತಗರ್ತಿ** (ನಾ). ಒಂದು ಸ್ಥಳದ ಹೆಸರು. P ಈಗಿನ ಸಾಗರ ತಾಲೂಕಿನ ತಗರ್ತಿ: ಮುದನು ತಗರ್ತ್ತಿ ಕೊಠೆಯ ಹತ್ತಿ (ಪ್ರ್ಯಆರಿ. ೧೯೩೯, ೧೫-೪; 12ನೆಯ ಶತ). 'ತಾಗರತಿ' ಪರಾ. [ ? ]

**ತಗರ್ದಲೆಯ** (ನಾ). ಟಗರಿನ ತಲೆಯುಳ್ಳವನಂ; "ದಕ್ಷಬ್ರಹ್ಮ" (ಶ್ರಬ್ಬ). [ ತಗರ್$_2$ + ತಲೆ$_1$ + – ಅ$_7$ ]

**ತಗರ್ದೇರ** (ನಾ). ಟಗರನ್ನು ವಾಹನವಾಗಿ ಉಳ್ಳವನು; ಅಗ್ನಿ: "ಅಗಿನಿ ಮರಗೂಟಂ . . . ತಗರ್ದೇರ ಪೊಗೆವಟಯಿಗೆಯನು ಕಾರ್ವಟ್ಟಿಗನಿವೆಯ್ದೆ ಯನಲನ ನಾಮವು" (ಶಬ್ದಮಂ. ೧೩) ; ತಗರ್ದೇರಂ ನೇರ್ಣ್ಗೆಯ್ಯಂ ಮುಂತಪ್ಪರ್ ದೆಸೆವಳರಾದರ್ (ರಾಮಾಶ್ವ. ೧೪೦-೩). [ ತಗರ್$_2$ + ತೇರ್$_2$ + – ಅ$_7$ ]

**ತಗರ್ವೆಣಗಿಸು** (ಕ್ರಿ). ಟಗರುಗಳನ್ನು ಕಾದಾಡಿಸಂ; ಟಗರಿನ ಕಾಳಗವನ್ನು ಏರ್ಪಡಿಸು: ತಗರ್ವೆಣಗಿಸುವ ಸಿಪಿಲೆಗಚ್ಚಿಸುವ ಕೋಳಿಗಾಳೆಗವ ಕಾದಿಸುವ . . . ರಾಜಪುತ್ರರ (ಕೃಮಿಭಾ. ೭-೩೯). [ ತಗರ್$_2$ + ಪೆಣಗಿಸು ]

**ತಗಲ್$_1$** 'ತಗುಳ್$_1$' ನೋ.

**ತಗಲ್$_2$** 'ದಗಲು' ನೋ.

**ತಗಲ** (ನಾ). ಮೋಸಗಾರ; ವಂಚಕ; ದ್ರೋಹಿ: ಜಸವಂತಸಿಂಗನು ತಗಲನಿದ್ದರಂತೂ ನೆಟ್ಟಗೆ ಆಯಿತು (ಕಮಲ. ೩೦); ಈಕೆಯು ನಖಶಿಖಾಂತ ತಗಲಳಿರುವಳೆಂದು ತಿಳಿದು ಆಕೆಯು ಹೆರಳು ಹಿಡಿದು ದರದರ ಎಳೆಯ ಹತ್ತಿದನು (ತುಳಸಿ. ೧೫೯). [ ತಗಲು$_3$ (<ದಗಲು) + – ಅ$_7$ ]

**ತಗಲಿಸು** 'ತಗುಳಿಸು' ನೋ.

**ತಗಲು$_1$** 'ತಗುಳ್$_1$' ನೋ.

**ತಗಲು$_2$** 'ತಗುಳ್$_2$' ನೋ.

**ತಗಲು$_3$** 'ದಗಲು' ನೋ.

**ತಗಲುಗಾರ** (ನಾ). ವಂಚಕ; ಠಕ್ಕ: ತಗಲುಗಾರನಿಗೆ ಬಗಲ ಮೇಲೆ ಜ್ಞಾನ (ಗಾದೆ). [ ತಗಲು$_3$ (<ದಗಲು) + – ಗಾರ (<–ಕಾಱ) ]

**ತಗಲುತನ** (ನಾ). ಅಪ್ರಾಮಾಣಿಕತೆ; ಮೋಸಗಾರಿಕೆ: ಅವನ ತಗಲುತನವನ್ನು ಬೈಲಿಗೆಳೆಯುವುದು ಬಿಗಿಯಲ್ಲ (ಕಮಲ. ೩೦). [ ತಗಲು$_3$ (<ದಗಲು) + – ತನ ]

**ತಗಲುಬೇರೀಜು** (ನಾ). ಲೆಕ್ಕಮಾಡುವಾಗ ತಪ್ಪಾಗಿ ಕೂಡಿಸುವುದಂ; ತಪ್ಪು ಸಂಕಲನ: ಕುಳಗಳು ಆಗಾಗ್ಗೆ ಒಯ್ದು ರಕಮುಗಳನ್ನು ಒಟ್ಟು ಗೂಡಿಸುವಾಗ "ನಾಲ್ಕೂ ಎರಡೂ (ಕೂಡಿ) ಎಂಟು" "ಎಪ್ಪತ್ತೇಳೂ ಆರು ಕೂಡಿ ಎಂಬತ್ತಾರು" ಹೀಗೆ ತಗಲುಬೇರೀಜು ಮಾಡುವರು (ಗುರುಪಕ. ೪). [ ತಗಲು$_3$ (<ದಗಲು) + ಬೇರೀಜು ]

**ತಗಲುಮೊಳೆ** (ನಾ). ಉಡುಪು ಮೊದಲಾದಂವುಗಳನ್ನು ತಗಲು ಹಾಕು ವುದಕ್ಕಾಗಿ ಅಳವಡಿಸಿದ ಮೊಳೆ: ಅವರು ರುಮಾಲನ್ನೆತ್ತಿ ಸಪ್ಪೆಂಡಿನ ತಗಲುಮೊಳೆಯ ಮೇಲೇರಿಸಿದಾಗ (ವಿಮೋಚ. ೧೮೦). [ ತಗಲು$_1$ (<ತಗುಳ್$_1$) + ಮೊಳೆ$_2$ ]

**ತಗಲುಸಾಕ್ಷಿ** (ನಾ). ಸುಳ್ಳು ಸಾಕ್ಷಿ: ನಾಯಕರು ತಗಲುಸಾಕ್ಷಿ ನುಡಿಯಲಿಲ್ಲ ಕೋರ್ಟಿನ ಮೆಟ್ಟಲು ಹತ್ತಲಿಲ್ಲ (ಗುರುಪ್ರ. ೩). [ ತಗಲು$_3$ (<ದಗಲು) + ಸಾಕ್ಷಿ ]

**ತಗಲೂಪಿ** 'ತಗಲೂಫಿ' ನೋ.

**ತಗಲೂಫಿ**, ತಗಲೂಪಿ (ನಾ). ಅಪ್ರಾಮಾಣಿಕತೆ; ಮೋಸ; ಠಕ್ಕು: ನಿಮ್ಮಪ್ಪಯ್ಯನಿಂದ ಜಮಿನಾನು ತಗೊಂಡೋರು ಯಾರೂ ತಗಲೂಫಿ ಮಾಡಿಲ್ಲ; ಸಾಚಾ ವ್ಯಾಪಾರಮಾಡಿ, ರೊಕ್ಕಕೊಟ್ಟು ಜಮಿನಾನು ತಗಂಡವರೆ (ಚಂದಕೋ. ೧೯೫). **ತಗಲೂಪಿ:** ಅವನೊಬ್ಬ ತಗಲೂಪಿ ಮನುಷ್ಯ (ರೂಢಿ). [ ←ಅರ. ಪಾರ. ಹಿಂ. ತಕಲ್ಲುಫ್; ಮರಾ. ತಕಲುಪೀ, ತಕಲುಬೀ ]

**ತಗಲೆ** 'ದಗಲೆ$_1$' ನೋ.

**ತಗವು$_1$** 'ತಗಹು$_1$' ನೋ.

**ತಗವು$_2$** 'ತಗೆಪು' ನೋ.

**ತಗವೆ** (ನಾ). ತಡೆ; ಅಡ್ಡಿ; ಪ್ರತಿಬಂಧ: ಕನ್ನಡದೊಳ್ ಯತ್ವ ವತ್ವಂಗಳ್ಗೆ ಬಹುಳತೆಯಿಂ ಲೋಪಮುಂಟು – ಒತ್ತೆ + ಇಟ್ಟಂ = ಒತ್ತಿಟ್ಟಂ . . . ತಗವೆ ಯಪ್ಪೊಡೆ, ತಗವಪ್ಪೊಡೆ (ಶಮದ. ೫೫ ಪ್ರಯೋ). 'ತಗವು$_2$' ಪರಾ. [ <ತಗ$_1$ + – ವೆ ]

**ತಗಸಿ** 'ತಗಚೆ' ನೋ.

**ತಗಸು** (ಕ್ರಿ). ಅಡ್ಡಿಪಡಿಸಂ; ನಿರ್ಬಂಧಪಡಿಸು; ಬಂಧನದಲ್ಲಿರಿಸು: ಹರನ ಭಕ್ತರ ಮಹಾತ್ಮೆಯನಱಿಯದೀ ಲಾವಕರ ಮಾತಗೇಳಿ ತಗಸಿದ ಭೂರಿ ದುರ್ಭಾವದುರವಣೆಯ ನೋಡಲೆಂದಾ ಶೀತಕರ ನಿಂದನ್ನೆಸೆ (ಸಿಂಗಿರಾ. ೨೨-೩೪); ಕ್ರೀರೂಪು ನೃಪ ಧನದ ಕಾರ್ಪಣ್ಯದಿಂದಲತ್ಯಾ ರೋಷದಿಂದ ಲಿಂಗಾಂಗಿಗಳ ತಗಸೆ (ಸಿಂಗಿರಾ. ೨೨-೩೭). [ ತಗ$_1$ + – ಸು$_1$ ]

**ತಗಹಿಕ್ಕು** (ಕ್ರಿ). ತಡೆಯನ್ನು ಒಡ್ಡು; ಅಡ್ಡಿಪಡಿಸು; ನಿರ್ಬಂಧ ವನ್ನುಂಟುಮಾಡು: ಹಗಲಿರುಳೆಡೆವಿಡದೀ ಮಳೆ ಕಱೆದುದು ತೆಗಹಿಲ್ಲ ಮುಂದೆ ಹೆಚ್ಚುತಿದೆ ತಗಹಿಕ್ಕಿದಂತಾಯ್ತು ಪಾಯ್ದಳಕೆಂದು ಚಕ್ರಿಗೆ ಮತ್ತೆ ಯೋಚನೆಯಾಯ್ತು (ಭರಜ. ೩೪-೭೨). [ತಗಹು$_1$ (<ತಗೆಪು) + ಇಕ್ಕು]

**ತಗಹಿಡು** (ಕ್ರಿ). = ತಗಹಿಕ್ಕು: ಕೊಡುವೊಡವೆ ಬರಲಿ ಬಾರದೆ ಕೆಡಲಿ ಕಾನನದ ನಡುವೆ ತಗಹಿಟ್ಟುರಿಸಿ[ಪಾಠಾಂ. ತಗಹಿನಲಿರಿಸಿ]ಕೆಲವುದಿನ ವುಪವಾಸ ಬಡಿಸಿರ್ದು . . . ನುಡಿದವಧಿಯಾಯ್ತೆಂದು ಧರೆಯಱಿಯೆ ನೃಪನಂ ಹುಸಿಕನೆನಿಸು (ಹರಿಕಾ. ೯-೧೭). [ ತಗಹು$_2$ (<ತಗೆಪು) + ಇಡು$_1$ ]

**ತಗಹು$_1$**, ತಗವು$_1$ (ಕ್ರಿ). ತಡೆ; ನಿಲ್ಲಿಸು; ನಿರೋಧಿಸು: ನೆಗೆವ ಕಂಬನಿಯ ನಿಲ್ಲಿಸುತೇಳ್ವ ಶೋಕವ ತಗಹುತ ನೃಪ ಧೈರ್ಯದಿಂದ ಮೊಗವಿಡಿದೆತ್ತಿ ತಂಗಿಯರ ಕಂಬನಿಯ ಕೈಮಿಗೆ ತೊಡೆದಳಲನಾಱಿಸಿದ (ಭರಜ. ೭೯-೭೩). **ತಗವು$_1$:** "ವಿಷ್ಟಂಭಃ, ಪ್ರತಿಬಂಧಃ–ಈ, ಎರಡೂ ತಗವುದು" (ಹಲಾಯು. ೦೨೭-೪೪). [ <ತಗ$_1$ + –ಹು$_1$ ].

**ತಗಹು$_2$** 'ತಗೆಪು' ನೋ.

**ತಗಹು$_3$** (ನಾ). ಸಂಬಂಧ; ಸಂಪರ್ಕ; ಹೊಂದಿಕೆ: ಜಗದೊಳುಳ್ಳ ಚರಾಚರ ಪ್ರಾಣಿಗಳೆಲ್ಲಿರ್ದೆಡೆಯೊಳಸುಗಳ ತಗಹು ಬಿಟ್ಟವು . . . ಲೋಕ ವಳುಕಿದವು (ಬಸಪು. ೨೮-೫೫); ಹಗಲ ಕೊಯ್ಲಿನ ತಗ್ಗಿನಲಿ ಸೈನೆಗೆದ ರೋಮದ ವಿಕ್ರಮಾಗ್ನಿಯ ತಗಹು ಬಿಡದಭಿಮನ್ಯು ಮೆಱೆದನು ಶಸ್ತ್ರ ಶಯನದಲಿ (ಕುಮಾವ್ಯದ್ರೋ. ೭-೭೨); ಹೊಗರುಗೆಟ್ಟುದು ಕುಮುದ ಕಮಳದ ಬಿಗುಹು ಬಿಟ್ಟುದು ಚಕ್ರವಾಕದ ತಗಹು ಕೆಟ್ಟುದು (ಕುಮಾವ್ಯದ್ರೋ. ೧೫-೩೪). [ <ತಗು + – ಹು$_2$ ]

**ತಗಳೂರ್** (ನಾ). ಒಂದು ಊರಿನ ಹೆಸರು: ದೇವೆಯನೆಪ್ಪೋನ್ ನೊಟವ್ಪನ್ನಗಳೂರ ಕೋಟ್ಟೆ ಕೊಣ್ಣನ್ನು ಶೆಟ್ಟಾನ್ (ಎಕ. XII, ಮಧ್ಯಗಿ. ೩೮-೫; ಸು 950). [ ತಗಳ್$_0$ + ಊರ್ ]

**ತಗಾದಿ** 'ತಗಾದೆ' ನೋ.

**ತಗಾದೆ**, ತಗಾದಿ (ನಾ). ೧. ಆಗ್ರಹ; ಒತ್ತಾಯಂ; ಬಲವಂತ: ಚಿಕ್ಕಮ್ಮಯ್ಯ ಊರಿಗೆ ಹೋಗಬೇಕಂ ಎಂದು ತಗಾದೆ (ಚಂಗಾಳ್ಕೆ. ೨೨೬): ಸರ್ಕಾರಿ ಅಧಿಕಾರಿಗಳಿಂದ, "ಮನೆಗಳನ್ನು ಬಿಟ್ಟು ಗುಡಿಸಲುಗಳಲ್ಲಿ ವಾಸಿಸಬೇಕೆಂದು" ತಗಾದೆ ಬಂದಿತು (ಗುರುಬಾ. ೧೮). ೨. ಕೊಡಬೇಕಾದ ಹಣಕ್ಕಾಗಿ ಒತ್ತಾಯಂ ಮಾಡುವಿಕೆ: ಲೆಕ್ಕಾಚಾರ ಬಾಕಿಯಿಂದ ಅಥವಾ ಇತರ ವಿಧದಿಂದ ಸಾಲ ಯಾ ತಗಾದೆಯು ೨೦ ರೂಪಾಯಿ ಮೊಬಲಗು

ಯಾ ಮೌಲ್ಯಕ್ಕೆ ಮೀರದೆ ಇದ್ದ ಪಕ್ಷದಲ್ಲಿ (ಗ್ರಾಮೂಕ. ೨೦) ; ಸಾಲಗಾರರ ತಗಾದೆಯನ್ನು ಮೈಮೇಲೆ ಅವನ ಸಾಲದ ತಗಾದೆ ತಾನೇ? (ಅನಾಮಿ. ೩); ಇಟ್ಟುಕೊಂಡು ದಾನಧರ್ಮ ಮಾಡುವುದು ವಿವೇಕವಲ್ಲ (ಮೋಹಿನೀ. ೩೨). ೩. ವ್ಯಾಜ್ಯ; ವಿವಾದ; ಮೊಕದ್ದಮೆ: (?). **ತಗಾದಿ :** ೩. ಫವುಜಿನವರು ಅರಸಿನವರ ಮೇಲೆ ತಗಾದಿ ಕುಳಿತರು (ಹೈದರ. ೭೦) ; ನಮ್ಮ ಹಿರಿಯರು ಗಳಿಸಿದ ಮಠ ಮಾನ್ಯವೆಂದು ಹೋರಾಡಿ, ತಳ್ಳಿ ತಗಾದಿ ಮಾಡಿ ಸರಕಾರಕ್ಕೆ ಹೊನ್ನ ಕೊಟ್ಟವರು ಮಹೇಶ್ವರರಲ್ಲ (ವಚಶಾ. I, ೩೩೦). ೪. ಒಂದು ಬಗೆಯ ಸುಂಕ (?) : ತಪ್ಪು ತಗಾದಿ ದಂಡ ಉಡಿಗೆ ಎಂದು ನಾಡವಳಿಕಾಱ ಪ್ರಭುಗಳು ಕೊಳಸಲ್ಲ (ಸೌಇಇ. IX-ii, ೪೩೩-೩೪ ; 1408).

**ತಗಾದಿ ಹಚ್ಚು** = ಒತ್ತಾಯ ಮಾಡು ; ಮೇಲಿಂದ ಮೇಲೆ ಕೇಳು : ಅರಮನೆಗೆ ಬಿಟ್ಟ ಮಡಕೆಗಳು ಬೇಕೆಂದು ತಗಾದಿ ಹಚ್ಚಿ ಬಹಳ . . . ತೊಂದರೆ ಪಡಿಸಿ (ಕಥಾಮಂ. IV, ೩೦). **ತಗಾದೆ ಪತ್ರ** = ಒತ್ತಾಯಮಾಡಿ ಬರೆಯುವ ಪತ್ರ : ಅವರಿಗೆ ಹಣ ಹಿಂತಿರುಗಿಸಿಯೆಂದು ತಗಾದೆ ಪತ್ರ ಬಂದಿತ್ತು (ರೂಢಿ). **ತಗಾದೆ ಮಾಡು** = ಒತ್ತಾಯ ಮಾಡು : ಸಿನಿಮಾ ನೋಡದಿದ್ದ ಅತ್ತೆಯನ್ನು ತಗಾದೆ ಮಾಡಿ ಅವಳು ಕೆಲವು ವೇಳೆ ಕರೆದು ಕೊಂಡು ಹೋಗುವುದೂ ಉಂಟು (ಮೂಲಾನ. ೧೪೨) ; ಸಾಲಗಾರರು ಬಹಳ ತಗಾದೆ ಮಾಡುತ್ತಿದ್ದಾರೆ (ರೂಢಿ).

[ ← ಹಿಂ. ತಗಾದಾ, ತಕಾಜಾ; ಮರಾ. ತಗಾದಾ ; ಅರ. ತಕಾಜಾ ]

**ತಗಾದೆಗಾರ** (ನಾ). ಒತ್ತಾಯ ಮಾಡುವವನು : ನಮ್ಮಂತಹ ಬಡಜನರ ಬಾಗಿಲುಗಳನ್ನು ಸದಾ ತಟ್ಟುತ್ತಿರುವ ಈ ಸುಖೀ ತಗಾದೆಗಾರರು ನಮ್ಮನ್ನು ಶಾಂತಿಯಿಂದುಳಿಸಿದರೆ ಸಾಕು (ಸಾಹಿಪ್ರ. ೨೩೦).

[ ತಗಾದೆ + – ಗಾರ (< –ಕಾಱ) ]

**ತಗಾಯಿ** 'ತಕಾವಿ' ನೋ.

**ತಗಾಯಿಸಾಲ** 'ತಕಾವಿಸಾಲ' ನೋ.

**ತಗಾಯಿಸೂಟು** (ನಾ). ತಕಾವಿಸಾಲದ ಮರುಪಾವತಿಯ ಸಂಬಂಧದಲ್ಲಿ ತೋರುವ ವಿನಾಯತಿ, –ರಿಯಾಯತಿ : "ತಗಾಯಿ ಸೂಟ" ಬಿಡಿಸತಿ ಏನಪ? (ಕುಮೂಕಾ. ೧೮೯). [ ತಗಾಯಿ (<ತಕಾವಿ) + ಸೂಟು$_1$ ]

**ತಗಾವಿ** 'ತಕಾವಿ' ನೋ.

**ತಗಿಬಿಗಿ** 'ತಗೆಬಗೆ' ನೋ.

**ತಗಿಬಿಗಿಗೊಳಿಸು** (ಕ್ರಿ). ತಬ್ಬಿಬ್ಬುಗೊಳಿಸು ; ಕಕ್ಕಾಬಿಕ್ಕಿಯಾಗುವಂತೆ ಮಾಡು : ನಗೆಗಳಿಂ ಕೆಲಕೆಲರ ಪುರ್ಬಿನ ಬಿಗುಹಿನಿಂ ಕೆಲಕೆಲರ . . . ತಗಿಬಿಗಿಗೊಳಿಸಿ ಮಂಗ್ಗರನು ಮಾಡಿ (ಅನಂರಾ. ೦–೨೨–೨೦).

[ ತಗಿಬಿಗಿ (<ತಗೆಬಗೆ) + ಕೊಳ್$_1$ + – ಇಸು$_2$ ]

**ತಗಿರಿಟ್** (ನಾ). ಒಂದು ಊರಿನ ಹೆಸರು : ಶ್ರೀಮಜ್ಜಯಸಿಂಹದೇವರ್ ನಿಜವಿಜಯಕಟಕ ಸಮನ್ವಿತಂ ಲೀಳಾವಿಳಾಸದಿಂದೆ ತಗಿರಿಟ ನೆಲೆವೀಡಿನೊಳ್ . . . ಅಭಿನವ ತೇಜಮುಮಂ ಪಡೆದು (ಎಕ. VII, ಶಿಕಾರಿ. ೨೦–೯; 1032).

[ ? ]

**ತಗಿಲ್** (ನಾ). ಸಂಬಂಧಪಟ್ಟುದು : "ದೇವಿಕಾ, ದೈವಿಕಂ– ಈ ೨ ದೇವರ ತಗಿಲ್" (ಕಾಶಕ್ಕ. ೦೮೦). [ ತಗು + – ಇಲ್$_3$ ]

**ತಗಿಸು** 'ತಟ್ಟಿಸು' ನೋ.

**ತಗು** (ಕ್ರಿ). ತಕ್ಕ$_2$ (ಭೂತಕೃ). ೧. ಸರಿಯಾಗು : ಹೊಂದು ; ಉಚಿತ ವಾಗು ; ಯೋಗ್ಯವಾಗು ; ಅನುರೂಪವಾಗು : ದೇವಿಯರ್ಕಳ ಕೈಯೊಳ್ ಋಷಿಯರ್ಕಳ್ಗಣಲುಂ ಕುಡಿಯಲುಂ ತಗದು (ವಡ್ಡಾರಾ. ೦೦೪–೯) ; ಕ್ಷೀರಾಬ್ಧಿಯ ನೀರಲ್ಲದೆ ಧೀರನ ಮಜ್ಜನಕೆ ಪೆಱವು ನೀರ್ ತಗವು (ಆದಿಪು. ೭–೮೦); ಅಲ್ಲಿಗಲ್ಲಿಗೆ ತಕ್ಕತಕ್ಕ ಬಗೆಬಗೆಗಳೊಳವೆಲ್ಲರ್ಕೆ ಕಟ್ಟುಮೊಟ್ಟಂ ಮಾಡಿ (ಪದ್ಮರಾ. ೪–೨೫) ; ತೊಟ್ಟ ಜೋಹಕ್ಕೆ ತಕ್ಕ ನುಡಿಗಳ ಬಿಟ್ಟೆವಲ್ಲದೆ ನಿಮ್ಮ ರಾಯನ ಕಟ್ಟಲಾಪೆವೆ (ಕುಮ್ಮಾದ್ರ್ಯ. ೨–೫೨) ; ಅಂಗವಂಗಕ್ಕೆ ತಕ್ಕ ಲಾವಣ್ಯ (ಭರತ. ೧–೫೨); ಬೆಕ್ಕು ನೀಂ ರಾವಣನೆ ರಾಮನು ಸೊಕ್ಕಿದಾನೆಯು ಪೇಳ್ ಜಗದಲಿ ತಕ್ಕುಮೇ ತತ್ಸಾಮ್ಯ ನಿನಗದು ಹಾಸ್ಯಕೆಡೆಯಲ್ತೆ (ಸೀತಾಚ. ೫–೧೭) ; ತಗುವ ನೆರವಿತ್ತ ಕಾಲಂ ನಿಲದೆ ನಡೆದು (ಕಾಕಿಶರ. ೧೪೧–೩೦೫). ೨. ಸಾಕಾಗು ; ಸಾಲು : ನಿನಗಮೆನಗಂ ಬೀಯಕ್ಕೆ ತಕ್ಕನಿತು ಪೊನ್ನಂ ಕೊಂಡು (ಪಂಚತಂ. ೦೭೦–೦೦).

**ತಕ್ಕಂದ** = ಯೋಗ್ಯವಾದ ರೀತಿ : ಇನ್ನಿದಕ್ಕೆ ತಕ್ಕುದಂ ತಕ್ಕಂದದೊಳ್ ಪೇೞ್ಪೆಂ (ಶಾಂತಿಪು. ೩–೬೬ ವ); ನೆಗಟ್ದ ಶೌರ್ಯಕ್ಕೆ ತಕ್ಕಂದದಿಂ ಪಾಂಡವರುಂ ಕೌರವರುಂ ಕೈಮುಗಿಯೆ ನೆಗಟ್ದ ಪೆಂಪಿಂಗೆ ತಕ್ಕಂದದಿಂ ಬಿಲ್ಲೊಳವಂ ಗಾಂಡೀವಿಯೊಳ್ಕಾದಿದಂ (ಗದಾಯು. ೨–೩೦). **ತಕ್ಕ ಮಟ್ಟಿಗೆ** = ೧. ಸಾಕಾಗುವಷ್ಟು ; ಸಾಕಷ್ಟು : ಇದರಿಂದ ಪ್ರಚಾರವೇನೋ ತಕ್ಕಮಟ್ಟಿಗೆ ನಡೆದರೂ ಉತ್ಪತ್ತಿಯು ಎಣಿಸಿದಷ್ಟು ಬರಲಿಲ್ಲ (ಜತಸ. ೧೨೪). ೨. ಸ್ವಲ್ಪ ಮಟ್ಟಿಗೆ ; ಕೆಲಮಟ್ಟಿಗೆ : ನಿಮಗೆ ಚಿತ್ರಕಲೆಯಲ್ಲಿ ಚೆನ್ನಾಗಿ ಪರಿಶ್ರಮ ಏದೆಯೆಂದು ಕೇಳಿದ್ದೆ ನಿಜವೆ? ತಕ್ಕಮಟ್ಟಿಗೆ ಉಂಟು (ಚಿಕ್ಕದೇ. ೦೪೭). **ತಕ್ಕಷ್ಟು** = ಸಾಲುವಷ್ಟು : ಉಚಿತಕೆ ತಕ್ಕಷ್ಟು ಪೇಳ್ವೆನಧ್ಯಾತ್ಮವೆ ನಿಚಿತ ಪ್ರಯೋಜನವೆನಗೆ (ಭರತ. ೧–೧೫) ; ತಕ್ಕವನಲ್ಲಿ ಹೊಕ್ಕಿದ್ದರೆ ತಕ್ಕಷ್ಟು ಆದರೂ ಸಿಕ್ಕುವುದು (ಗಾದೆ). **ತಕ್ಕುದು, ತಕ್ಕದ್ದು** = ೧. ಸರಿಯಾದುದು; ಉಚಿತವಾದುದು : "ತಕ್ಕುದೆನೆ ಸಹಜಮಕ್ಕು" (ಕಶರ. ೧೨೪) ; ಇಲ್ಲಿಗಿದು ತಕ್ಕುದಿಲ್ಲಿಗೆ ಪೊಲ್ಲದಿದೆಂದಱಿದು . . . ಇಡು ಮೃದುಪದಮಂ (ಕವಿರಾ. ೨–೪) ; ಇಱಿಯದೆ ಕೆಮ್ಮನುಂತೆ ಭುವನಂಗಳಸುಂಗೊಳೆ ತಕ್ಕುದೆಂದೊಡೇ ಮಱುಕಮನೆಂಬುದೇವಿರಿದಿದೆನ್ನ ಭುಜಾಸಿಗೆ ತೀದು ಪೂಸಲುಂ ನೆಱಿಯದು (ಕಾವ್ಯಸಾ. ೪೦೦ ಶೂದ್ರಕ) ; ನುಡಿಯದೆ ಪೆಱತಂ ದ್ರೌಪದಿ ನುಡಿದಳ್ ತಕ್ಕುದನೆ (ಪಂಪಭಾ. ೭–೫೩) ; ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲ ಮುಮಂ (ಧರ್ಮಾಮೃ. ೧–೪೨) ; ನಂಬಿಕೆ ನೆಚ್ಚಿಕೆಯಿಲ್ಲದ ದೇಶವು ಪ್ರಜಾ ಪ್ರಭುತ್ವಕ್ಕೆ ಎಂದೂ ತಕ್ಕುದಾಗಲಾರದು (ಯಕ್ಷಪ್ರ. ೬೫) ; ಕುಜನರ ಸಂಗ ಅಜಗೂ ತಕ್ಕದ್ದಲ್ಲ (ಗಾದೆ). ೨. ಅಗತ್ಯವಾದುದು, ಬೇಕಾದುದು ಎಂಬ ಅರ್ಥದಲ್ಲಿ ಸೇರುವ ಪದ : ನೀನು ಈ ಕೆಲಸ ಮಾಡತಕ್ಕದ್ದು (ರೂಢಿ). **ತಕ್ಕುವು** (ಬಹುವ) : ಇವು ಚಮರೀ ಜಾತಂ ದುಗ್ಧವಾರ್ಧಿಫೇ ನೋಪಮಾನಮಿವು ನಿನಗೆಯೆ ತಕ್ಕುವು (ಆದಿಪು. ೧೩–೦೮). **ತಕ್ಕೆಡೆ** = ಉಚಿತ ವಾದ ಸ್ಥಳ, –ಅವಕಾಶ, –ಸನ್ನಿವೇಶ : ಮುಂದೆ ನಿಂದರಂ ಕಾಣದೆ ತಕ್ಕೆಡೆಯೊಳ್ ಕಡೆಗಣಿಸುವ ನೃಪವಿಡಂಬಮಿವು ಲಕ್ಷ್ಮಿ ನಿನ್ನ ದೂಸಱಿನಲ್ತೆಂ (ಗದಾಯು. ೯–೮) ; ತಕ್ಕೆಡೆಗೆ ತಕ್ಕುದಂ ಕುಡುವಂ (ಸಮಪ. ೭–೭೮) ; ಅಱಿವಿಲ್ಲದೆ ತಕ್ಕೆಡೆಯೊಳ್ ತಱಿಸಲ್ಲದೆ ತೊಡರ್ದು ನಮೆವ ಜೀವಕ್ಕೆಲ್ಲಂ ನೆಱಿಯೆ ಹಿತಮೆಂದು ಬಗೆದಿದನಱಿಪುವೆಂ (ಜೀವಸಂ. ೨–೭).

[ ದೇ.೫ ತಮಿ. ಮಲ. ತಕು; ತೆಲು. ತಗು ]

**ತಗುಣಬಿಗುಣಂಬರಿ** (ಕ್ರಿ). ಸ್ವೇಚ್ಛೆಯಾಗಿ ಓಡಾಡು : ಅಂತು ಕೊಂಡು ಪೋಪುದುಮೊಂದು ಪಡೆಯದಡಹಡಿಸಿ ನೋಡಿ ಕಾಣದೆ ಮಾಣದೆ ಮಗುಟ್ದ ವಱ ಬೆಂಬತ್ತಿ ಸುತ್ತಿ ವಿಯತ್ತಳದೊಳ್ ತಗುಣಬಿಗುಣಂಬರಿದು ಬಂದು ಚಾರುದತ್ತನಿರ್ದ ತಿದಿಯನೊಯ್ದೀಕ್ಷಾಕ್ಷನಪ್ಪ ಪಕ್ಷಿಯು ಸಮಕ್ಷಮಂ ಸಾರ್ದು (ನೇಮಿಪು. ೪–೦೦೭ ವ). [ ತಗುಣಬಿಗುಣ$_0$ + ಪರಿ$_2$ ]

**ತಗುಣಿ** 'ತಗುಣೆ' ನೋ.

**ತಗುಣೆ**, ತಗಣಿ, ತಗಣೆ, ತಗಣಿ, ತಿಗಣಿ, ತಿಗಣೆ, ತಿಗುಣೆ (ನಾ). ಗೋಡೆಯ ಬಿರುಕು, ಹಾಸಿಗೆ ಮುಂತಾದ ಕಡೆ ಇದ್ದು ಮನುಷ್ಯನ ರಕ್ತಹೀರುವ ಒಂದು ಬಗೆಯ ಹುಳು ; ಮತ್ಕುಣ : ಗುಡಮಾಕ್ಷಿಕ ಮಳಯಜ ಎಂಬಿವನಿಂಬಾಗೊಡಗೂಡಿ ಧೂಪಿಸುಗೆ ಚಿಕ್ಕಡು ನೊಱಜುಂ ತಗುಣೆ ಬಾವಲೆಂಬವು ಕಿಡುಗುಂ (ಲೋಕೋಪ. ೯–೫೯) ; ತಗುಣೆಗಳಂ

ಪೆಱತೇನೊರಸುತ್ತುಂ ಮೆಯ್ಯುಱಿಯದೆ ಕೊಲುತುಂ ನೊಣಂಗಳಂ ನಿರ್ದಯೆಯಿಂ ಇರ್ಪುದುಂ (ಧರ್ಮಾಮೃ. ೫-೧೭೪) ; ಮಾನವನ ಕ್ಷುದ್ರಶತ್ರುಗಳ ಶ್ರೇಣಿಯಲ್ಲಿ ತಗುಣೆಗೇ ಅಗ್ರತಾಂಬೂಲ (ನಂಟರು. ೪೬). **ತಗಣಿ:** ಮಲಗಿ ಶಿಶುವು ಇರುತಿರಲು ತಗಣಿ ಗುಂಗಾಡಿ ಕಚ್ಚಿ (ಚಿದಾವ. ೧೦೭-೭). **ತಗಣೆ:** ತಗಣಿ, ತಗಣೆ, ತಿಗಣೆ–ಈ ರೂಪಗಳನ್ನೂ ಕಿಟೆಲ್ ಉಲ್ಲೇಖಿಸುತ್ತಾನೆ (ನಂಟರು. ೫೮) ; ತಗಣೆ ಉಪದ್ರ ಮಗಳಿಗೂ ಬಿಡಲಿಲ್ಲ (ಗಾದ). **ತಗುಣಿ:** ತಗುಣಿ ಹೆಬ್ಬುಲಿಯ ಹಿಡಿದಂದು ಹೆಣ್ಣಿನ ಬಗೆಯ ನಂಬುವದು (ಸರ್ವಜ್ಞ. ೧೭೬೯) : ಚಿಕ್ಕಾಡಿ ತಗುಣಿಯೂ ರಕ್ಕಸರು ಜಾರೆಯರು ಒಕ್ಕಲಿಕ್ಕುವರು ಇರುಳಿಲ್ಲ ಬೆಳಗಾಗಿ ಸುಕ್ಕಿದಂತಿಹರು (ಸರ್ವಜ ೧೮೫೫). **ತಿಗಣೆ:** ಶೂಲಿಯು ಕೊಂಡು ವಿಷವನು ಕೊರಳ ಪೂಸಲು ಖಂಡಿಯಲಿ ಸಿಡಿಯಲಿಕೆ ತಿಗಣೆಗಳಾದವಾಕ್ಷಣಕೆ (ಸಂಭಪ. ೬-೩೬ ಅ೩ಟ). **ತಿಗಣೆ:** "ಮತ್ಕುಣ – ತಿಗಣೆ" (ಓಷಧಿ. ೧೦೬) ; ಗಗನಯಾತ್ರಿಗಳಾದರಾ ಸೂರ್ಯಚಂದ್ರರು ಎಲ್ಲರು ತಿಗಣೆಗಂಜಿದರು (ಇಂಚಾಪ. ೧೦೮-೭೮). **ತಿಗುಣೆ:** ಡುಂಡುಕನೆಂಬ ತಿಗುಣೆ ಬಂದು ಆನುಂ ನಿನ್ನ ಸಮಿಪದೊಳಿರ್ಪೆನೆನೆ (ಪಂಚತಂ. ೧೩೩-೧೧) ; ದೇಶಾಂತ್ರಿಯಾದವ ತಿಗುಣೆ ಚಿಕ್ಕುಟ ಪಸಿವು ಬಾಯಾಱಿಕೆಗಂಜಿದರೆಂತಹುದು (ರೀವರ. ಹ. ೩೬೭-೧೨); ಚಿಕ್ಕಟು ತಿಗುಣೆಯ ತಿಕ್ಕುವಂದದಿ ನೆಲಕಿಕ್ಕಿದನರೆಗಳಿಗೆಯೊಳು (ನೇಮಿಸಂ. ೨೯-೩೦).

[ದೇ.॥ ತುಳು. ತಗುಳೆ, ತಗುಲೆ, ಚಗುಳೆ, ಸಗುಳೆ ]

**ತಗುಣೆಗಾಟ** (ನಾ). ತಗುಣೆಗಳ ಕಾಟ ; ತಗುಣೆಗಳಿಂದಾಗುವ ಹಿಂಸೆ : 'ತಗುಣೆಗಾಟಂಗಾಡು' ಪರಾ. [ ತಗುಣೆ + ಕಾಟ$_1$ ]

**ತಗುಣೆಗಾಟಂಗಾಡು** (ಕ್ರಿ). ತಗುಣೆಯಂತೆ ಬಹಳವಾಗಿ ಹಿಂಸಿಸು,– ಮತ್ತೆ ಮತ್ತೆ ಕಾಡು: ಈ ರಾಜಹಂಸನಂ ಸರಸೀರತಲಂಪಟನನಸುರನೊರ್ವಂ ಗಡ ಕೊಲ್ಗಾರವೊಲುದ್ಯತನಾದನಪಾರಬಲಂ ತಗುಳೆ ತಗುಣೆಗಾಟಂಗಾಡಲ್ (ಶಾಂತಿಪು. ೮-೭೮). [ ತಗುಣೆಗಾಟ + ಕಾಡು$_1$ ]

**ತಗುತ್ತೆಂಗು** (ನಾ). ಒಂದು ಬಗೆಯ ಮೂಲಿಕೆ (?) : ತಗುತ್ತೆಂಗು ಕೋಳಿಜುಟ್ಟಿನ ರಕ್ತದಿಂ ಅರೆದು ಗುಳಿಗೆಯಂ ಮಾಡಿ ಚೆಂದೆಂಗಾಯಿ ಎಲೆ ರಸದಲ್ಲೂ, ಆ ಬೀಜದಲ್ಲೂ ತೇದು ಹಚ್ಚಲು ಇರುಳುಗಣ್ಣು ಮಾಣ್ಗುಂ (ವಿವ್ಯವಿ. ೬೩). [ ? ]

**ತಗುಬಗೆ** 'ತಗೆಬಗೆ' ನೋ.

**ತಗುರು** 'ತಗರ್$_1$' ನೋ.

**ತಗುರೆನಾಡು**, ತಗರೆನಾಡು (ನಾ). ಒಂದು ಪ್ರದೇಶದ ಹೆಸರು : ತಗುರೆನಾಡ ಮಹಾಜನಂ ಪೋಗಿ ಕಣ್ಡರೂ (ಎಕ. VI, ಕಡೂರು. ೧೪೭-೩ ; 972). **ತಗರೆನಾಡು:** ಕೋಗೋಡಿನೊಕ್ಕಲ್ತಗರೆನಾಡ ಕೂಡಿಟ್ಟಲ್ಲಿ (ಮ್ಯಆರಿ. ೧೯೩೯, ೩೬-೧ ; 1034). [ ತಗುರೆ$_0$ + ನಾಡು ]

**ತಗುರ್ಚು** 'ತಗಳ್ಚು' ನೋ.

**ತಗುಲಿಸು** 'ತಗುಳಿಸು' ನೋ.

**ತಗುಲು$_1$** 'ತಗುಳ್$_1$' ನೋ.

**ತಗುಲು$_2$** 'ತಗುಳ್$_2$' ನೋ.

**ತಗುಲುಬೀಳ್**, ತಗುಲುಬೀಳು (ಕ್ರಿ). ೧. ನೇತುಬೀಳು; ಜೋತು ಬೀಳು; ಕೈಗೆ ಸಿಕ್ಕು : ತಗುಲುಬಿಳ್ದಪುದೆಂತು ಪಕ್ಷವಿರಹಿತ ಪಕ್ಷಿಗೊಗು ಮಿಗೆಯ ಶಾಖಾಗ್ರಫಲ (ಪರಶು. ೭-೨೬). **ತಗುಲುಬೀಳು:** ೧. ಸಲುಗೆಯಲಿ . . . ಮೈದುನನೆಂಬ ಮತ್ತೊಮ್ಮೆ ಬಗೆವ ಸಾಕ್ಷಾದ್ವಿಷ್ಣುವೆಂದೇ ತಗುಲುಬೀಳುವನೊಮ್ಮೆ ಕುತ್ತಿಗೆಗಡುತನ ನರ ಮಾಡೆ ಹರಿ ಸಂತೋಷಿಸುವನೆಂದ (ಜ್ಞಾನಸಿಂ. ೧೪-೯೫). ೨. ಗಂಟುಬೀಳು; ಅಂಟು : ದೊಡ್ಡ ಕೆಲಸವೇ ನನಗೆ ತಗುಲು ಬಿತ್ತು (ರೂಢಿ).

[ ತಗುಲು$_1$ (<ತಗುಳ್$_1$) + ಬೀಳ್$_1$ (<ಬೀೞ್$_1$) ]

**ತಗುಲುಬೀಳು** 'ತಗುಲುಬೀಳ್' ನೋ.

**ತಗುಸಿ** (ನಾ). ಕುಂದು ; ದೋಷ : "ತಗುಸಿಯೆಂದೊಡೆ ಕುಂದುಂ" (ಭಾರನಿ. ೬೦). [ ? ]

**ತಗುಳ್$_1$, ತಗಲ್$_1$, ತಗಲು$_1$, ತಗುಲು$_1$, ತಗುಳು$_1$, ತಗುೞ್** (ಕ್ರಿ). ೧. ಸೇರು ; ಕೂಡಿಕೊಳ್ಳು ; ಹೊಂದಿಕೊಳ್ಳು : . ಪೆಱಗಸಿದಾಗಿ ಮುಂತಗಲಿತಪ್ಪುದಱಿಂದೆ ಧರಾತಳಂ ತಗುಳ್ದಿಱಿಪುದಱಿಂದೆ ಕೊಂಕಿ ಪರಿಯುತ್ತಿರವಿಂದೆ . . . ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೭೪೭ ಕ್ಷುದ್ರಕ) : ಕಾರಕವಿಭಕ್ತಿಯೊಳೊಂದೆ ಸಮಾಸಯುಕ್ತಿ ಲೇಸಕ್ಕುಮಭೇದರೂಪಗುಣಮಾಗೆ ತಗುಳ್ದಿರೆ ಮೇಣ್ ಕ್ರಿಯಾಪದಂ (ಕವಿರಾ. ೧-೧೧೭) ; ತಳಿರೋಳಿ ತಗುಳ್ದು ತಳ್ತ ಕೇತನತತಿ ಚಾಮರೋತ್ಕರದೆಲರ್ ಮಲಯಾನಿಲನಾಗೆ (ಆದಿಪು. ೧೩-೬) : ತಗುಳ್ದು ವಿಹತಾಂಬುವ ಬಲ್ಸೊನಲಿಂದಿರ್ಪಾಱದ ಬಟ್ಟೆಯೊಳೊಕ್ಕ ಪಲ್ಲವನಿಕಾಯದಿನಂದಱಿದಂ ಕಾಡಾನೆಗಳಾಗಡೆ ಪೋದುದಂ (ಕಾವ್ಯಾವ. ೬೩೬); ಆಗಮದ ಬಗೆಯ ಹೊಗನಗಣಿತಸೂಕ್ಷ್ಮನು . . . ತಗುಳನಲುಗ ತಿಳಿಯಲು ಹರಿಯಲು ಬಾರದಾರಿಗಗೋಚರನುಭಯಭ್ರಷ್ಟ (ಶಿವಗೀ. ೧೩೩-೩೦೧). ೨. ಅಂಟು ; ಹತ್ತು : ಮನೋಹರಮಾದುದಮರಕಾಂತೆಯರುರದೊಳ್ ಕುರುಳೊಳ್ತಗುಳ್ದ ದುಗ್ಧಲವಂಗಳ್ (ಆದಿಪು. ೭-೯೩) : ಮಹಾದೋಷಂ ತಗುಳ್ಗುಮೆಂದವಧರಿಸಿ (ವೃಷವಿ. ೩೩-೩೨). ೩. ಮೆಚ್ಚು ; ಇಷ್ಟಪಡು ; ಆಸಕ್ತಿವಹಿಸು : ಯಾಚಕಭೃಂಗಕೋಟಿ ಕೈಕೊಂಡು ನಿರಂತರಂ ತಗುಳ್ದು ಕೀರ್ತಿಸೆ (ಪಂಪಭಾ. ೧-೩); ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇೞ್ವೊಡೆ ಪಂಪನೆ ಪೇೞ್ಗುಮೆಂದು ಪಂಡಿತರೆ ತಗುಳ್ದು ಬಿಚ್ಚಱಿಸೆ ಪೇೞಲೊಡರ್ಚಿದೆನೀ ಪ್ರಬಂಧಮಂ (ಪಂಪಭಾ. ೧-೧೧) ; ವೀರಲಕ್ಷ್ಮಿಗಧಿನಾಯಕನೆನ್ದು ಧರಾತಳಂ ಮಹೋತ್ಸವದೆ ತಗುಳ್ದು ಬಣ್ಣಿಸುತಮಿಪ್ಪುದು (ಸೌಇಇ. XX, ೩೦-೨೩ ; 1044). ೪. ಮೋಹಿಸು ; ಪ್ರೀತಿ ಮಾಡು : ಆತನ ಸುತರ್ ತಾಮಾಗಳೇ ಯೋಗ್ಯರಾಗರೆ ಪಟ್ಟಕ್ಕೆ ತಗುಳ್ದು ಪಾಲನೆಱಿವಿರ್ ಪಾವಿಂಗೆ (ಪಂಪಭಾ. ೨-೮೯). ೫. ಸಮಿಪಿಸು ; ಹಿಂಬಾಲಿಸು ; ಬೆನ್ನಟ್ಟು : "ತಗುಳ್ – ಅನುಧಾವನೇ (ಹಿಂದೋಡು)" (ಶಮುಧಾ) ; "ಬೆನ್ನಟ್ಟೆನಲು ತಗುಳ್ವುದಕ್ಕುಂ" (ಕವಿಕಂ. ೨೩೦) ; ಕರಿಣಿಯ ಸೀಯನಪ್ಪ ಮೊಲೆವಾಲ್ಗೆ ತಗುಳ್ದುದು ತತ್ಕಿಶೋರಕೇಸರಿ . . . ಇಂದ್ರತನೂಜತಪಃಪ್ರಭಾವದಿಂ (ಪಂಪಭಾ. ೭-೮೦) : ಜಾಯಿಲಂಗಳ್ ಕಂಡು ತಗುಳ್ದು ಬಂದೆಮ್ಮ ಕಡಿದುವಾದೊಡೆ (ಪಂಚತಂ. ೨೦-೨) ; ಗಱಿವಱಿಯ ಪಾವಿನಂತೆ ಬೆಂಬಱಿಯಂ ತಗುಳ್ದು ಪರಿತರೆ (ಸುಕುಮಾ. ೬-೫೩); ಗರ್ಭಿಣಿಯನೆಮ್ಮ ತಗುಳ್ದಂತೆ (ಧರ್ಮಾಮೃ. ೨-೭೦) ; ಒತ್ತರಿಪ ಸಂಸಾರಮಂ ಬೆಂಬತ್ತಿ ಪಾಱಿ ತಗುಳ್ದು ನಲಿದಾಡುತ್ತಲಿಪ್ಪವೊಲೆರಡು ಕಯ್ಯಂ ಬಿಚ್ಚಿಯಾಡುವನು (ಬಸಪು. ೫-೩೬). ೬. ಆವರಿಸು; ಆಕ್ರಮಿಸು; ಮೇಲೆ ಬೀಳು: ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ (ಧರ್ಮಾಮೃ. ೩-೭೩) : ವಾರಣವಾಗಿ ಪೋರ್ವ ಪುಲಿಯಾಗಿ ತಗುಳ್ವ . . . ಮಹಾಸ್ತ್ರದಿನೆಚ್ಚು ಕಿರೀಟಿ ಕಾದಿದಂ (ಜಗವಿ. ೦೫-೨೧) ; ತಗುಳ್ದು ಪೊಯ್ವ ಗದೆಗೆ (ಚಂದ್ರಪು. ೧೦-೮೦) ; ಕಾಳ್ಗಿರ್ಚು ತಗುಳ್ದ ತೆಱದಿಂ ನಿಳ್ಕುಸದೆ ನೊಂದು ಬೆಂದು ಬಳಲುತ್ತೆಂದಂ (ಗಿರಿಕ. ೧-೧೦೬) ; ಖಳನುರವಣಿಸಿದನು ರಾಹು ತಾರಾಧಿಪನ ತಗುಳ್ವಂತೆ (ಕುಮ್ಮಾಸ. ೧೪-೬೨); ಕಯ್ಗೊಳ್ಳಂ ರಾಷ್ಟ್ರದಿಂದೆಂದುಂ ತೆರೆಯಿಂ ಪೆರತೇನನುಂ ತಗುಳ್ವ ಸೊರ್ಕಂ ಪಗೆಯೊಳ್ ಆಳ್ಗಳಿಂದವನಳ್ಗಿಪಂ (ಸೌನಂದ. ೨-೩೩). ೭. ಓಡಿಸು ; ತೊಲಗಿಸು ; ನೀಗು ; ನಿವಾರಿಸು : ಕುಳಿಶಾಸ್ತ್ರಂ ಕುಧರಾಸ್ತ್ರಮಂ . . . ಜ್ವಳನಾಸ್ತ್ರಂ ಗಗನಾಸ್ತ್ರಮಂ ತಗುಳೆ (ವರ್ಧಪು. ೮-೬೩) ; ಆನೆಂತುಮ್ ಹೋಗೆನೆಂದೆನಲುಪಾಯದಲು ನಿನ್ನಂ ತಗುಳಲೆಂದಾಡಿದೆನೆ ಧರೆಯ ಹಿತವನಾಚರಿಸಲಾಡಿದೆನಲ್ಲದೆ (ಸಿದ್ಧರಾ. ೩-೧೭)

ತಾನೊಗೆದತ್ತು ಕಾರ್ಮುಗಿಲ್ ಗಡಣಮೆನಿಪ್ಪ ದಂತಿಕತಿಯಗ್ರದ ಡಿಂಡಿಮ ನಾದದಂತೆ ಪೆರ್ಗುಡುಗು ನಿದಾಘನಂ ತಗುಳಲ್ಕೆಧಿದ ನೀರದ ಕಾಲರಾಜನಾ (ರಾಜಶೇ. ೮-೧೦೩). **೮.** ವಿವೇಚನೆಯಿಲ್ಲದೆ ದುಡುಕು : ಏಂ ತಗುಳ್ದಿ ಯಿನ್ನು ಶಿರದಿರೀವ ಮಾತನಿವನುಣ್ಬುದು ಖಾಂಡವಮಾತನಗ್ನಿ (ಪಂಪಭಾ. ೩-೭೨). **೯. ತೊಡಗು; ಮೊದಲುಮಾಡು; ಪ್ರಾರಂಭಿಸು;** ತಪಂಬಟ್ಟ ದಿವಸದಿಂ ತಗುಳ್ದಿಂದಿಂಗಯ್ದು ದಿವಸಮುಣ್ಬುದಿಲ್ಲ (ವಡ್ಡಾರಾ. ೮೨-೫) ; ಭದ್ರಶಾಲದಿಂ ತಗುಳ್ದು ಪಾಂಡುಕವನಂಬರಂ (ಆದಿಪು. ೭-೩೨೮) ; ಜಯಂ ಬೆಸಗೊಳೆ ಗಂಗಾದೇವಿ ಪೇಟಲ್ತಗುಳ್ದಳ್ (ಚಾವುಂಪು. ೮೩-೫) : ಸವಿಸ್ತರಂ ಪೇಟಲ್ ತಗುಳ್ದು (ಪಂಚತಂ. ೬೦-೭). **೧೦. ಅನುಸರಿಸು ; ಆಚರಿಸು ; ಪಾಲಿಸು:** ಭೋಗಿಪೆನೆನ್ನ ಜವ್ವನಮುಮಾಧನಮುಂ ಕವುವನ್ನೆಗಂ . . . ಅನ್ನೆಗಮತ್ತಬಿನಂ ತಗುಳ್ವೆನೆಂತಾಗಿಯುಮೆಂಬ ನಿನ್ನ ಮೊಲಗಟ್ಟಲೆಗಾಂ ಬೆಱಗಾದೆಂ (ಆದಿಪು. ೩-೬೩). **೧೧. ಉಂಟಾಗು; ಸಂಭವಿಸು; ಒದಗು; ಬರು:** ಗುರುಸಮಕ್ಷಪರೋಕ್ಷವಿನೇಯವೃತ್ತಿಯಿಂದಮ್ಮನದುಕ್ಕೆವಂ ತಗುಳೆ ನಿರ್ವಹಣಸ್ಥಿತಿಗುಯ್ದರೀ ಪುರಾಣಂ ಮಹಿರತ್ನಮಿಂತಿದೆಯಳಂಕೃತಿ (ಶಾಂತಿಪು. ೧೩-೬೧) ; ಅರೋಚಕಂ ತಗುಳ್ವಡೆ ಬಱಿಬೇನೆ ಎತ್ತುವಡೆ . . . ತಗುಳ್ಗುಂ ಪುಟ್ಟುಗುದಾತ್ತ ಬಲಕ್ಷಯಂ (ಕಲ್ಯಾಕಾ. ೬-೧); ದೀರ್ಘಕ್ಕೆ ದೀರ್ಘ ಮೊದವೆ ಸಮಸಂದಾ ಯುಗಳಂಗಳೊಳಮಳಿನಮಾಗೆಲ್ಲಿಯುಂ ಸವರ್ಣ ವಿಧಾನಂ (ಶಮದ. ೭) ; ತನಗೆ ಕಂತುಹರಕರುಣದಿಂ ತಗುಳ್ದ ರೂಪದೊಳು ಹಿಮವಂತಸುತೆಯಾಸ್ವಾಂತಮತ್ಯಂತಚಂಚಲಮಾದ ಬಳಿಕ ತಾನೆಂತು ನಿಶ್ಚಿಂತೆಯಿಂದಿರ್ಪೆಂ (ನಂದಿಮಾ. ೯-೫೨). **೧೨. ಬಯ್ಯು; ತೆಗಳು; ಮಂದಲಿಸು:** ಒರ್ವರೊರ್ವರಿಱಿಯುತ್ತಂ ಮುನಿದು ತಗುಳುತ್ತಂ . . . ಬಿಡದೆ ನರಳುತ್ತಂ ಪುಡಿಯೊಳು ಪೊರಳುತ್ತಮಿಪ್ಪರ್ (ಪ್ರಾವಕಾ. ೨೨-೧೫). **'ತೆಗಟ್$_1$'** ಪರಾ. **ತಗಲ್$_1$ : ೧೩. ತಾಕು; ಸೋಂಕು; ಸ್ಪರ್ಶಿಸು:** ಕಣೆ ಅವಂಗೆ ತಗಲ್ದು ಮೂರ್ಛೆವೋದಂ (ಅಚ್ಯುತ. ೩೩-೧೯). **ತಗಲು$_1$ : ೧.** ಪೊಗಳಿದ ಭಕುತರ ತಗಲಿ ತೊಲಗನೆಂದು ಮಿಗೆ ಕೂಗುತ್ತಿರಲು (ವಿದಾಕ್ಷ. ೬೫-೨) ; ತನುಲತೆಗಳನ್ಯೋನ್ಯಮಾಗಿ ತಗಲಿರೆ . . . ತನುಭಾವವಳಿದು ನಿದ್ರಿಪ ಮಾನಿನೀಗಣವ ಕಂಡನಾ ವಾಯುಸುತನು (ವೆಂಕಾರಾ. ೫-೪-೧೮); **೧೩.** ತೆನೆಗಳಿನಶಶಿಯಾ ತಗಲಿ ಪೆರ್ಬಾಗಿಲೊಳು ಚಂದ್ರನನುಗಿವವು (ಜಿನಭಾ. ೨-೨೨) ; ಈ ಬಾಣವು ಈ ನೀಚನ ಮಗನಿಗೆ ತಗಲಲಿ (ನೀತಿಚಿಂ. XI, ೧೪) ; ಆಕಾಶಬಾಣವನ್ನು (rocket) ಚಂದ್ರಗ್ರಹಕ್ಕೆ ತಗಲುವಂತೆ ಎಸೆದಿದ್ದಾನೆ (ಶಿಲ್ಪನಾ. ೧೮೩). **೧೪. ಸಂಭೋಗಮಾಡು:** ತಗಲಿದವನಿಗೆ ಹಗಲೇನು ಇರುಳೇನು (ಗಾದೆ). **ತಗುಲು$_1$ : ೧.** ಸೊಗಸಿಂದಮಾನಂದಗೊಳುವ ಸುಕುಮಾರಾಂಗಿ ಮಿಗೆ ರಕ್ಕಸೀಗಣದಿ ತಗುಲಿ ಸಂಕಟಗೊಂಬ ಬಗೆಯ ನೋಡಲು ವಿಧಿಯ ಬಲಮೆಂತೊ (ವೆಂಕಾರಾ. ೫-೮-೧); ಕೇಶಿಧ್ವಜನು ಆ ರಾಜ್ಯಭೋಗಗಳಲ್ಲಿ ತಗುಲಿಕೊಳ್ಳದೆ ಯೋಗನಿಷ್ಠನಾಗಿದ್ದು . . . ಯಜ್ಞವನ್ನು ಮಾಡತೊಡಗಿದನು (ಸಾಹಿಜೀ ೯೭). **೨.** ರಾವಣನ ತೇಜಸ್ಸಿಗೆ ಸ್ತ್ರೀವ್ಯಾಮೋಹದ ಕಳಂಕವೊಂದು ತಗುಲದಿದ್ದರೆ ಅವನ ಸಮಾನರು ಯಾರು (ಕಾವ್ಯಸ. ೩); ಒಂದು ಹುಲ್ಲುಕಡ್ಡಿ ನನ್ನ ಬಟ್ಟೆಗೆ ತಗುಲಿಕೊಂಡಿದೆ (ನೀತಿಚಿಂ. IV, ೨೮) ; ಅರಸರ ತೈಲಚಿತ್ರಕ್ಕೆ ನಂದಾದೀವಿಗೆ ತಗುಲಿ, ಅದು ಉರಿದುಹೋಗುತ್ತದೆ (ಸಂಸಕ. ೯೯). **೧೫. ಬೆಲೆಯಾಗು ; ವೆಚ್ಚವಾಗು ; ಖರ್ಚಾಗು :** ಅಷ್ಟೇ ಕೆಲಸಕ್ಕೆ ಕನಿಷ್ಠಪಕ್ಷ ಹತ್ತು ರೂಬಲ್ ತಗುಲುತ್ತಿತ್ತು (ಪುನರು. ೨೬೪). **ತಗುಳು$_1$: ೬.** ಮಗನ ಕರೆದರೆ ಯಮನ ದೂತರ ತಗುಳುವಂದು ಸಮೀಪವರ್ತಿಯೆ ನಗಧರ ಶ್ರೀಕಾಂತ ಸಲಹೆನೆ ಮುನಿಕುಮಾರಕನ ಉಗುಳಿಚಿದೆಲಾ (ಕುವ್ಯಾಅ. ೨-೨೯); ಹಾಳಾಹಳಂ ತಗುಳಿ ನಾಲ್ದಿಕ್ಕನಾಂತು ನೆಱೆ ಪರಿಪರಿದು ಸುಡುತ ಬರಲು (ಲಶಿಚಿಂ. ೧೨-೮) ; ಭುಗುಭುಗಿಲು ಭುಗಿಲೆಂದು ಕೇಸುರಿ ತಗುಳಿದುದು (ನಿಭಾಗ. ೧೦-೧೭-೨೦). **೧೨.** ಪಾಪಿ ಪೋಗೆಂದಂದು ನಿನ್ನಂ ಕೋಪದಿಂ ನಾಂ ನುಡಿದು ತಗುಳಿದ ಪಾಪವಂ ಸೈರಿಸುವುದು (ಬಸವು. ೦೩-೨೩) ; ಜಿನ ದತ್ತೆಯಾಲಯಕೆ ಪುಗಲವಳ್ಕಂಡೆಲೇ ಕಡುಪಾಪಿ ಪೋಗೆಂದು ತಗುಳಿದಳ್ (ಸಮ್ಯಕೌ. ೧೦-೧೮) : ವಿಭಾಡಿಸಿ ತಗುಳಲ್ ದೂತಂ ಬಂದಾಕ್ಷಣದೊಳ್ ವಿಕ್ರಮ ಕೌರವನೆಂದಂದಮನೊರೆಯಲ್ (ಜಯಕಾ. ೬-೧೦).

△ **ತಗುಟ್: ೬.** ಅಸಹಾಯಸಿಂಹಂ ತಗುಟ್ದಿಳ್ದ ಬಡಿವಂ ದುಷ್ಟಮನ್ನೆಯಂ ಪ್ರಳಯಕಾಳಂ (ಸೌಇಇ. XX, ೨೪-೬ ; 1034).

**ತಗಲು ಹಾಕು, ತಗಲ್ಹಾಕು=ತಗುಲಿಸು; ತೂಗುಹಾಕು; ಅಳವಡಿಸು:** ಗುರು ಕೊಟ್ಟ ಚೀಲವೆಂದು ಗೂಟಕ್ಕೆ ತಗಲು ಹಾಕಿದರೆ ಹೊಟ್ಟೆ ತುಂಬೀತೆ (ನೀತಿಚಿಂ. VII, ೩೨) ; ಯಮನ ದೂತರು ಬಂದು ಪಾಶವನು ತಗಲ್ಹಾಕಿ ಮಮತೆಯಿಲ್ಲದೆ ಪ್ರಾಣ ಎಳೆಯುತಿರಲು (ಪುರಂದ. ೧-೫೨-೫). **ತಗುಳೆ ಗಟಿಪು= ಮನಸ್ಸಿಗೆ ತಾಕುವಂತೆ ಹರಟು ; ಮರ್ಮೋದ್ಘಾಟನೆ ಮಾಡು :** ಪದುಳಂ ಕುಳ್ಳಿರ್ದೆಮಗಾಯದ ಮಾತಂ ತಗುಳೆ ಗಟಿಪಿ ಪೋದಂ (ಗದಾಯು. ೨-೧೩). **ತಗುಳೆ ಪಾಡು = ಮನಸ್ಸಿಗೆ ಹಿಡಿಸುವಂತೆ ಹಾಡು; ಮನೋಹರವಾಗಿ ಹಾಡು:** ಪದ್ಮಜಂ ತಗುಳೆ ಪಾಡಿ ಸಾಮಂಗಳಂ (ಕಾವ್ಯಾವ. ೦೩೫). **ತಗುಳೆ ಪೀರು = ಎಡೆಬಿಡದೆ ಕುಡಿ :** ಬಡಬಾನಳಂ ಬಿಡದಾಗಳುಂ ತಗುಳೆ ಪೀರ್ದೆಯುಮಂತದೆಳ್ಪನಿತಪ್ಪೊಡಂ ತವದಂತೆವೊಲ್ (ಕಾವ್ಯಾವ. ೬೨೩). **ತಗುಳೆ ಬಾಜಿಸು=ಹೊಂದಿಕೆಯಾಗಿ ಬಾರಿಸು; ಕೂಡಿಕೊಂಡು ಬಾಜಿಸು:** ವಿತತ ಘನಾವನದ್ಧ ಸುಷಿರಂಗಳನೊರ್ಮೆಯೆ ಕೂಡೆ ಕೂಡಿಕೊಂಡತಿದ್ರುತ ವಾದಕರ್ತಗುಳೆ ಬಾಜಿಸೆ (ಮಲ್ಲಿಪು. ೮-೨೭). **ತಗುಳೆವರ್ = ಅನುರೂಪವಾಗು; ಹೊಂದಿಕೊಳ್ಳು; ಸಮನಾಗು:** ಈತನುದಾತ್ತ ಪೂರ್ವಭೂಮಿಪರುಮನೊಳ್ಪಿನೊಳ್ ತಗುಳೆವಂದೊಡೆಯಾ ಕಥೆಯೊಳ್ ತಗುಳ್ಚಿ ಪೋಲಿಪೊಡೆನಗಟ್ತಿಯಾದುದು ಗುಣಾರ್ಣವ ಭೂಭುಜನಂ ಕಿರೀಟಿಯೊಳ್ (ಪಂಪಭಾ. ೧-೧೪).

[ ದೇ.॥ ತುಳು. ತಗರು, ತಗರ್ ; ತೆಲು. ತಗುಲು, ತವುಲು ]

**ತಗುಳ್$_2$ ತಗಲು$_2$, ತಗುಲು$_2$, ತಗುಳು$_2$** (ನಾ). **೧. ಸೇರಿಕೆ; ಹೊಂದಿಕೆ; ಜೋಡಣೆ :** "ತಗುಳೆಂದು ಸಂಧಾನಂ" (ಕಶಸಾ. ೨೮-೫೮೬). **ತಗಲು$_2$ : ೨. ಸಂಬಂಧ ; ಸಂಪರ್ಕ :** ಎಲ್ಲಿಯ ಗುಡಿಯ ಕಟ್ಟಿದ ಸಿದ್ಧರಾಮಯ್ಯ ಎಲ್ಲಿಯ ಬಿಟ್ಟ ಬಂತೆನಗೆ ಎಲ್ಲಿಯ ತಗ[ಗ]ಲು ತಾಪತ್ರಯವೆಂದಾಗ ಮಲ್ಲಿಕಾರ್ಜುನ ಚಿಂತಿಸಿದನು (ಅಮುಸಾಂ. ೫-೬೧) ; ತನಗೀ ವೃತ್ತಿಗಸಂಗತ್ವವ ತಿಳಿದನಿಗಘಪುಣ್ಯದ ತಗಲುಂಟೆ (ಕೃಕವ. ೫-೪೮-೪) ; ಹರಿಯ ನೆನೆಸಿದ ಹಗಲು ಮುಕ್ತಿಗೆ ಬಲು ಮಿಗಿಲು ಹರಿಯ ನೆನೆಸದ ಹಗಲು ನರಕಕ್ಕೆ ತಗಲು (ವಿದಾಕ್ಷ. ೨೨-೨). **ತಗುಲು$_2$: ೨.** ಕೊಂಕು ಕೊಸರುಗಳ ಕಿನಿಸೆಂಬ ತಗುಲುಗಳ ಸೋಂಕದಿಹ . . . ನೆಲದೊಳು (ವೆಂಕಾರಾ. ೬-೬೨-೩೫). **ತಗುಳು$_2$ : ೩. ಹತ್ತಿರ ಬರುವುದು ; ಸಮೀಪಿಸುವುದು.**

**ತಗುಲಾಗು=ಸೇರುವೆಯಾಗು:** ರಾಮಚಂದ್ರನ ಸೇವೆಗೆ ಕಲಿ ಹನುಮಂತ ನೇಮದೆ ತಗುಲಾದಂತೆ ಭೂಮಿಪ ಕಂಠೀರವೇಂದ್ರಗೆ ನಂಜೇಂದ್ರ ತಾ ಮನೋಹರದೊಳೊಪ್ಪಿದನು (ಕಂನವಿ. ೪-೧೦೪); ನಿಂಮ ಚರಣಾರವಿಂದದ ಸೇವೆಗೆ ತಗುಲಾಗಿಯಿಧೇವೆ (ಮ್ಯಆರಿ. ೦೯೪೩, ೫೦-೪೦ ; ಸು. 1709). **ತಗುಳುಮಗುಳು, ತಗಳುಮಗುಳು = (ಶತ್ರುವನ್ನು) ತಾಗುವುದು ಮತ್ತು ಹಿಂದಿರುಗುವುದು ; ಆಕ್ರಮಣ ಮಾಡಿ ಶತ್ರುವಿನ ಕೈಗೆ ಸಿಕ್ಕದಂತೆ ತಪ್ಪಿಸಿಕೊಳ್ಳುವುದು :** ಎದ್ದು ನಭದೊಳ್ಪಳಂಚುವರೊಮ್ಮೆ ಭೂತಳದೊಳಿದ್ದು ಹೆಣಗುವರೊಮ್ಮೆ ಬಳಸಿ ಮಂಡಲದಿಂದೆ ಹೊದ್ದಿ ಹೋರುವರೊಮ್ಮೆ ತಗುಳುಮಗುಳಾಗಿ ತಾಗುವರೊಮ್ಮೆ ಸರಿಬರಿಯೊಳು (ಜೈಮಿಭಾ. ೨೨-೨೯) ; ತಗಳುಮಗುಳಾಗಸಮಸಮರದಲಗಣಿತದ ಭಟನಿವಹ ವಡಗೆಡೆದುಗುಳಿಚಿದರಸುಗಳನು (ಕೋಗಯು. ೨೦-೨೪). [<ತಗುಳ್1]

**ತಗುಳ** (ನಾ). ಒಟ್ಟಾಗಿರುವುದು; ಗೊಂಚಲು ; ಮಂಜರಿ: ನಗೆಯಿಂದ ಬಿರಿವಂತೆ ಬಿರಿವ ಬಿರಿಮುಗುಳ ತಗುಳದಿಂ ಸೊಗಯಿಸುವ ಮಲ್ಲಿಕಾಲತೆಯ ಜೊಂಪಂಗಳುಂ (ಪುಷ್ಪಪು. ೨-೩೯ ವ) ; ಚೆಲ್ವಿಂ ಬಳ್ವಲಾದ ಮಲ್ಲಿಗೆಯ ಮುಗುಳ ತಗುಳದಿಂದೆಸೆವ ಬಾಸಿಗಂಗಳೊಳಮಳಂಕರಿಸೆ (ಪುಷ್ಪಪು. ೪-೮೧ವ).

[<ತಗುಳ್$_1$ ? ]

**ತಗುಳಿಸು,** ತಗಲಿಸು, ತಗುಲಿಸು (ಕ್ರಿ). ೧. ಸೇರಿಸು ; ಹೊಂದಿಸು : ಮೊಗಮೆಂಬಲರ್ಗೊಳದ ತಡಿಯೊಳಿರಿಸಿದಳಿವಳಂಚೆಗಳನೆನೆ ಸತಿಯ ಕಿವಿಯೊಳ್ ತಗುಳಿಸಿದಳ್ ಹಂಸರಚನೆಯೋಲೆಯನೊರ್ವಳ್ (ಪುಷ್ಪಪು. ೯-೭೭). ೨. ತಳ್ಳಿಸು ; ಓಡಿಸು ; ಹೊರದೂಡಿಸು : ಹರಹರಾಯಿಂದೀ ವ್ರತಭ್ರಷ್ಟರ ದೆಸೆಯನೀಕ್ಷಿಪೊಡೆ ನುಡಿವೊಡೆ ಪರಮಪಾತಕವೆನುತ ಹುಗಲೀಯದೆ ತಗುಳಿಸಿದೊಡೆ (ಬಸವು. ೬೦-೨೭). **ತಗಲಿಸು :** ೧. ದಿಟ್ಟನೋಲೆ ಮೊಣಕಾಲಿಗೆ ತಗಲಿಸಿ ಗಟ್ಟಿಕಂಕಣ ಕಿವಿಗಿಟ್ಟು (ಪುರಂದ. ೧-೦೦೦-೪). ೩. ಮುಟ್ಟಿಸು; ತಾಗಿಸು: ಮತ್ತೆ ಪ್ರಾಗ್ವ್ಯಾಸನೆಯ ಪೆಸರಿನ ಸುತ್ತುವಳ್ಳಿಯ ಮೆಟ್ಟಿರದ ಮೈ ಪತ್ತುತಿಹ ಸಂಕಲ್ಪ ಚಿಗುರಿಗೆ ಜುಟ್ಟ ತಗಲಿಸದೆ (ಗಗತಾ. ೧೬-೦೮) : ನಾನು ಸ್ವಲ್ಪ ರೋಗದ ಸೋಂಕನ್ನು ತಗಲಿಸಿದರೆ ಅವು ಸತ್ತ ಪ್ರಾಣಿಯ ಅಂಗಾಂಗಗಳನ್ನೆಲ್ಲ ವ್ಯಾಪಿಸಿರುತ್ತವೆ (ವಿಕಾಸ.೬೩). **ತಗುಲಿಸು:** ೧. ಉಪ್ಪು ಮೆಣಸು ಜೀರಿಗೆ ಸರಿಯಾಗಿ ಹಾಕಿ ಸ್ವಲ್ಪ ಹಿಂಗು ತಗುಲಿಸಿ ಆಯಕಟ್ಟು ಮಾಡಿ (ಕಥಾಮಂ. IV, ೧೪). ೪. ನಿಂದಿಸು; ದಬಾಯಿಸು: ಆ ಚಿಕ್ಕಮಗು ಆ ಭಾರತದ ದೇವರಾಜೈಯ್ಯ ಎಷ್ಟು ಧೈರ್ಯವಾಗಿ ಪಂಡಿತನಿಗೆ ಜವಾಬು ಕೊಟ್ಟ ನೀವೂ ಹಾಗೆಯೇ ಪಂಡಿತನಿಗೆ ತಗುಲಿಸಬೇಕಾಗಿತ್ತು (ಚಂಗಾಳ್ಕ. ೫೭೮). 'ತಗುಳ್ಚು' ಪರಾ. [ ತಗುಳ್$_1$ + – ಇಸು$_3$ ]

**ತಗುಳು$_1$** 'ತಗುಳ್$_1$' ನೋ.

**ತಗುಳು$_2$** 'ತಗುಳ್$_2$' ನೋ.

**ತಗುಳ್ಚಿಸು** (ಕ್ರಿ). ನೂಕು ; ತೊಲಗಿಸು ; ನಿವಾರಿಸು ; ದೂರಮಾಡು: ಕರಕಪಾಲಮಂ ಕಂಡೊರ್ವ ಶಶಿಮುಖಿಯರಾದೊಡಂ ಭಯ ಬಿಭತ್ಸುಗೆ ಸಂದುದಿಲ್ಲವೆನೆ ಶಿವಮುಖದೊಳು ಬೆಸುಗೆಗಣ್ಗಳ್ ಪೆಱತು ಕಾಣ್ಬುವೇ ಮೇಣ್ ಮಿಕ್ಕ ರಸಮೆನಿತ್ತಾದೊಡಂ ಮೋಹರಸಮಂ ತಗುಳ್ಚಿಸಬಲ್ಲುದೇ (ಚಿಬಪು. ೨೦-೨) [ ತಗುಳ್ಚು + – ಇಸು$_3$ ]

**ತಗುಳ್ಚು,** ತಗುರ್ಚು (ಕ್ರಿ). ೧. ಸೇರಿಸು ; ಕೂಡಿಸು ; ಬೆರಸು : ಅರಸನೞಿದೇಂ ಮಹಾಪುರುಷರತ್ನದೊಳ್ ರತ್ನಮಂ ತಗುಳ್ಚಿದನೊ (ಶಾಂತಿಪು. ೨-೭೫); ಪಟಗನ್ನಡಂ ಪುದುಂಗೊಳೆ ಕೊಟ್ ಸಕ್ಕದಮಂ ತಗುಳ್ಚಿ ಜಾಣ್ ಕಿಡೆ ಮುತ್ತುಂ ಮೆಟಸಂ ಕೋದಂತಿರೆ ಪೇಟ್ವಟಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ (ಕಾವ್ಯಾವ. ೫೫); ತದೀಯ ದುಸ್ತರ ಸ್ಮರದಶಾವ್ಯತಿಕರಕ್ಕೆ ತಲ್ಲಟಿಸಿ . . . ನಲ್ಲಳಸುವನಾಂ ಸಾಹಸದೊಳ್ ತಗುಳ್ಚಿ ನಿಲೆ ಪಿಡಿವ ನಯಮಂ ಬಗೆದು (ವರ್ಧಪು. ೪-೮೨ವ). ೨. ಅಳವಡಿಸು ; ಸಿಕ್ಕಿಸು : ಮಘವಂ ಶಚಿ ಪೂತ ಚೂತಮಂ ನೆರ್ಮಿದಶೋಕವಲ್ಲರಿಯ ಪಲ್ಲವಮೊಂದನೆ ಕೊಯ್ದು ರಾಗದಿಂ ಸೋರ್ಮುಡಿಯೊಳ್ ತಗುಳ್ಚಿದೊಡೆ ಸೂಟನೆ ಬಾರಿಸಿದಂ (ಪಂಪಭಾ. ೫-೮೨); ಕೋಡ ಮೊನೆಯೊಳ್ ತಗುಳ್ಚಿದ ಸೂನಗಿಗತ್ತಿಯ (ರಾಜಶೇ. ೬-೧೧ವ). ೩. ತೊಡು ; ಧರಿಸು : ಸೌಭಾಗ್ಯನಿಧಿಯ ವಿಯೋಗದಿಂ ಜೀವವಿಯೋಗಮಾಗದಿರ್ಕೆಂದು ತಗುಳ್ಚಿದ ರಕ್ಷಾವಳಿಯಂತೆ ಕೊರಲೊಳಿಕ್ಕಿರ್ದಕ್ಷಾವಳಿಯುಂ (ಕಾದಂಪೂ. ೭೯೧); ಗಳದೊಳ್ ತುಲಸೀಸ್ರಜಮಂ ತಗುಳ್ಚಿ (ದಿವ್ಯಜ. ೯-೧೯). ೪. ಹೊಂದಿಸು ; ಅನ್ವಯಿಸು : ಸಂಖ್ಯೆಗಳೊಳೇಕಬಹುತ್ವವಿಪರ್ಯಯಕ್ಕಸಂಖ್ಯಾತಗುಣಂ ವಿಕಲ್ಪಮದು ಕನ್ನಡದೊಳ್ ಗುಣಮಂ ತಗುಳ್ಚುಗುಂ (ಕವಿರಾ. ೧-೧೧೯) ; ಈ ಕಥೆಯೊಳ್ ತಗುಳ್ಚಿ ಪೋಲಿಪೊಡೆನಗಟ್ಟಿಯಾದುದು ಗುಣಾರ್ಣವಭೂಭುಜನಂ ಕಿರೀಟಿಯೊಳ್ (ಪಂಪಭಾ. ೧-೧೪); ಓಹಿಲಯ್ಯಂಗೆ ಪೆರ್ಮೆಯಂ ತಗುಳ್ಚಿ ನೀಂ ಮಿಗೆ ಪೊಗಳ್ವುದನುಚಿತಮಕ್ಕುಂ (ವೃಷವಿ. ೨೯-೧೬೬ವ) : ಬೆಳಕಿನ ಅನುಭವವನ್ನು ಪರಿಭಾವಿಸಿ ಆ ಬೆಳಕನ್ನು ಗಾಂಧೀಜಿಯ ವ್ಯಕ್ತಿತ್ವದ ಚಿತ್ರಣಕ್ಕೆ ತಟಕ್ಕನೆ ತಗುಳ್ಚಿರುವುದು ತುಂಬ ಹಿತವಾಗಿದೆ (ಸೌಂದಶ. ೩೪೬). ೫. ತಗುಲಿಸು ; ಗಂಟುಹಾಕು : ಗಾಳುಗೊರವಂ ತಗುಳ್ಚಿ ಪಳಾಳಮನೇನೊಂದನಪ್ಪೊಡಂ ಗಟಪಿದೊಡಂ ಬೇಳುನ್ನಡಿಗೇಳ್ದು ಕೆಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ (ಪಂಪಭಾ. ೬-೨೪). ೬. (ಉರಿ) ಹತ್ತಿಸು; ಅಂಟಿಸು: "ತಗುಳ್ಚು–ಉದ್ಯೋಗೇ, ಅಗ್ನಿಬಾಧನೇ ಚ" (ಶಮುಧಾ) ; ಬಳೆದ ತಮಮೆಂಬ ಕರಡಮನೆಳವಲ್ಲದೆ ಸುಟ್ಟು ಕಿಡಿಸಲೆಂದಜನುದಯಾಚಳದೊಳ್ ತಗುಳ್ಚಿ ತಳ್ಪೊಡನಳುರ್ವ ದವಾಗ್ನಿಯ ಪೊಲರ್ಕನುದಯಂಗೆಯ್ದಂ (ಕಾವ್ಯಸಾ. ೮೭೧ ಶೂದ್ರಕ) : ಎನ್ನ ಬಸಿಱೊಳ್ ಕಿಚ್ಚಂ ತಗುಳ್ಚಿದಂ (ಅರ್ಧನೇ. ೬-೬೯ವ). ೭. ಮಾಡು ; ನಿರ್ಮಿಸು : "ತತುಳ್ಚು–ಉದ್ಯೋಗೇ,ಅಗ್ನಿಬಾಧನೇ ಚ"(ಶಮುಧಾ);ಸುರಪತಿಯಿಲ್ಲಿಯುಲ್ಲದೆ ಜಿನಾಭಿಷವೋತ್ಸವಮಂ ತಗುಳ್ಚನಾ ಸುರತರುಯಿಲ್ಲಿಯುಲ್ಲದುದಿತೋದಿತಮಾಗದು (ಮಹಾನೇ. ೧-೫೫) ; ಅಲ್ಪಾರ್ಥವನಾಳ್ದರೆ ವಸ್ತುವಿನರ್ಥವನು ಸಿರುತ್ತಿರೆ ತಗುಳ್ಚುವುದು ಸಂಹಿತೆಯಂ (ಶಮುದ. ೬೪). ೮. ಆರಂಭಿಸು ; ತೊಡಗು; ಉಪಕ್ರಮಿಸು: ಪಂಕಜೋತ್ಕರಮುಮನಿಂದುಮಂಡಲಮುಮಂ ಮೊದಲೊಳ್ಸಮೆದಬ್ಜಜಂ ಮನೋಹರಮನೆ ಮಾಡಿದೀ ಪೊಗದ ಪೋಲ್ವೆಗೆ ಮುನ್ನೆಗಳಲ್ತಗುಳ್ಚಿ ಬಿತ್ತರಿಸಿದನಲ್ಲದಿಂತು ಸಮವಸ್ತುಗಳಂ ಪಡೆವಂತು ಗಾಂಪನೇ (ಕಾದಂಪೂ. ೭೪೩). ೯. ಆಗಿಸು; ಉಂಟುಮಾಡು: ನುಡಿಯಂ ತಗುಳ್ಚಿ ನೋಟಂ ನುಡಿ ಪರಿಚಯಮಂ ತಗುಳ್ಚಿ ಪರಿಚಯಮಳಿಪಂ ತಡೆಯದೆ ತಗುಳ್ಚಿ ಮನದಳಿಪೊಡಗೂ[ಡಿದು]ದಂ ತಗುಳ್ಚುಗುಂ ಕಾಮಿಗಳಾ (ಕವಿರಾ. ೩-೨೦೨) ; ಉತ್ತರಗೋಗ್ರಹಂ ಪಿರಿದುಮಾಗ್ರಹಮಂ ಮನದೊಳ್ ತಗುಳ್ಚೆ (ಪಂಪಭಾ. ೮-೯೨) : ಮಾಡಿದಂ ಸಲೆ ಸಂದೆಯಮಂ ತಗುಳ್ಚದಂತೆ(ವಿಷ್ಣುಪು.೦೦-೦೫೩). ೧೦. ತಲುಪಿಸು;ಮುಟ್ಟಿಸು:ಮಾರಿಯ ಮಸಣಿಯ ಚೂಳಿಯಂ ಪಿಡಿದು ಜಡಿವ ಜವಹುರಮಂ ತಗುಳ್ಚಿ ತಾಮೊಕ್ಕಲಿಕ್ಕುವ . . . ಬಲ್ಗೈ ಬಂಟರ (ರಾಮಾಶ್ವ. ೯೦-೨೫). ೧೧. ತೊಲಗಿಸು; ನಿವಾರಿಸು ; ದೂರಮಾಡು : ಸುನಯಾಂಶುಗಳಿಂ ಕುನಯಾಂಧಕಾರದೊಂದುನ್ನತಿಯಂ ತಗುಳ್ಚಿ ಖರಭಾನುವಿನಂತೆಸೆದಂ ನರೇಶ್ವರಂ (ಚಾಧಪು. ೪-೩೫). **ತಗುರ್ಚು :** ೧. × × × ಪತಿ ಕೊಯ್ದೊಡೆ ನಡು ಕೋಯಿಲೆ ಪೋದುದು ತಗುರ್ಚಿ ಪೊಡೆಯೆ ಘರಿಯಲ್ಲೆನಲ್ಕೆ ತೋಳುಡಿದು ಸೆಲಕ್ಕೆ ವಿಟ್ಟು(ಳ)ದು (ಸೌಇಇ. IX-i, ೦೬೩-೧೪ : 1098).

[ ತಗುಳ್$_1$ + – ಚು$_1$ ]

**ತಗುಳ್ಪು** (ನಾ). ೧. ಕೂಡಿಕೊಂಡಿರುವುದು ; ಬೆಸುಗೆ ; ಜೋಡಣೆ ; ಕೂಟ : ನಿಗಳಂಬೊಲ್ ತೊಡರ್ದೊಂದು ಮೋಹನಿಗಳಂ ತಜ್ಜನ್ಮದೊಳ್ ನೋಡೆ ತೊಟ್ಟಗೆ ಮತ್ತಂ ಪೊಸತಾಗೆ ತಮ್ಮ ಮನದೊಳ್ ತಳ್ಪೊಯ್ದು ತಳ್ತ ತಗುಳ್ಪುಗಳೊಳ್ ಪೊಕ್ಕುವು ವಜ್ರಲೇಪದ ತಗುಳ್ಪಂ ಪೋಲ್ವಿನಂ ವಜ್ರನಾಭಿಗತಿಪ್ರೀತಿಯನುಂಟುಮಾಡಿದರವರ್ ಜನ್ಮಾಂತರಸ್ನೇಹದಿಂ (ಆದಿಪು. ೬-೨೨); ತೊಡೆಯ ತೋಳ ತಗುಳ್ಪಮದೊರ್ವ್ಪೆ (ಚಂದ್ರಪು. ೮-೯೫). ೨. ಸಂಬಂಧ ; ಸಂಪರ್ಕ : ತ್ರಿದಶಾನಕಲಯದಿಂ ನೀರದಪಥದೊಳ್ ನಾರದಂಗೆ ತಾಂಡವದ ತಗುಳ್ಪೊದವಿದುದು (ಶಾಂತಿಪು. ೪-೫೭) : ಪತ್ತಿದ ಸೈಪುವೆಯ್ದಿದತಿದುಃಖಮುಮೆನ್ನ ಪುರಾಕೃತಾರ್ಥ ಸದ್ವೃತ್ತಿಯ ದುಶ್ಚರಿತ್ರದ ತಗುಳ್ಪಿನೊಳಾದ ಶುಭಾಶುಭಂಗಳಿಂದೆತ್ತವಿವಾದುವೆಂದೊಸಗೆಯಂ ಕರಮುಬ್ಬೆಗವಂ ವಿಮೋಹದಿಂ ಚಿತ್ತದೊಳಾಗಲೀಯದೆ (ಜೀವಸಂ. ೭೩-೨೬). ೩. ಆಧಾರ ; ಆಶ್ರಯ ; ಅವಲಂಬನ : ನೆಲನಂ ಪರ್ವುವ ಬಳ್ಳಿಗಂ ಚದುರನೊಳ್ ಮೈಮೈಯೊಡಂಬಟ್ಟು ತಳ್ತಲರ್ವಾ ಕೋಮಳೆಗಂ ತಗುಳ್ಪು ಪೆಱದೊಂದೆಂತಕ್ಕುಂ (ಆದಿಪು.೧೨-೧೯); ನಿನ್ನ ಹೇಮಲತಾವಿತಾನೋಪಮಾನ

ತನುಲತಾಪ್ರತಾನದ ತಗುಳ್ಪಿಂಗೀತನನಲ್ಪಕಲ್ಪಪಾದಪೋಪಮಾನಾನೂನಾಂಗಯಷ್ಟಿಯೆ ದೊರೆ (ಶಾಂತಿಪು. ೫-೧೩೬ ವ). ೪. ಆವರಣ; ಆಚ್ಛಾದನ: ನಗರನಾರೀಕದಂಬದ ಸೋರ್ಮುಡಿಯ ಸೊಂಪು ಕಾರ್ಮುಗಿಲ ತಗುಳ್ಪುಮಂ ನೆಗಳ್ಚಿಯುಂ (ಪುಷ್ಪಪು. ೫-೩೪ವ). ೫. ಪ್ರದರ್ಶನ (?) : ಅಘುರೇಂದ್ರನಘವಿಘಾತಾರ್ಥವೌದ್ಧತ್ಯಾವಗತವಮುವಾರಭಟ್ಯಾಯತ್ತಮುಮೆನಿಸಿದ ತಾಂಡವಢ ತಗುಳ್ಪಂ ತೋಱಲುದ್ಯೋಗಂಗೆಯ್ದು (ಪಂಚಾನೇ. ೯-೬ವ). [ ತಗುಳ್$_1$ + – ಪು$_2$ ]

△ತಗುಳ್ಚು 'ತಗುಳ್$_1$' ನೋ.

**ತಗೆ$_1$** (ಕ್ರಿ). ೧. ತಡೆ; ನಿಲ್ಲಿಸು; ಅಡ್ಡಿಪಡಿಸು; ನಿರೋಧಿಸು: "ತಗೆ–ಸ್ತಂಭನೇ (ನಿಲ್ಲಿಸು)" (ಶಮಧಾ); ಅಗಲಲಸಹ್ಯಮೆಂದು ಪೆಱಗೀ ಬಟ್ಟಸಲ್ವಳೆ ಮುಂದೆ ಬಂದಳೀ ತಗೆವೊಡೆ ಚಿತ್ರದುತ್ಕಲಿಕೆಯಿಂ ನಭಕೀ ನೆಗೆತಂದಳ್ (ಕಾದಂಉ. ೧೮೦) ; ಕರ್ಮಾಸ್ರವಮಂ ಜನಿಯಿಸಲೀಸದೆ ಸದ್ಗುಣದಿನಂತವಂ ತಗೆವುದದುವೆ ಸಂವರಮಕ್ಕುಂ (ಸುಕುಮಾ. ೮-೩೩); ಆಳವಿಯೊಳ್ ಬಳವದ ಹಂಕಾರದೆ ಬರೆ ತಗೆವಂ[ಪಾಠಾಂ. ತೆಗೆದಂ]ಸ್ತಂಬೇರಮಕಳಭವುಂ (ಕಾವ್ಯಾವ. ೪೬೩) ; ಸೊಂಕಿ ತಂದುಪ್ಪರದ ಬಱವಿಸಿಲ ಬೀದಿಯೊಳು ತಗೆದನವನನಿಬರಂ ನಿಷ್ಕರುಣನು (ಹಚಕಾ. ೦೦-೪೬) ; ನೈಪಂ ಪಾವಕನೊಲುರಿದವರ ತಗದು [ಪಾಠಾಂ. ತೆಗೆದ]ದಯದಿಂ ಮುನ್ನ ಧನಗೊಳ್ಳೆನುತ್ತ ಪೇಳೆ (ಸಿಂಗಿರಾ. ೨೨-೧೧) ; ಬಿಗಿವ ಬಿಡಿಸಿಕೊಳ್ವ ತಗೆವ ತವಕಿಸುವ . . . ಹೋರಾಟದ ವಿಗಡ ಮಲ್ಲರುಗಳೊಪ್ಪಿದರು (ಕಂನವಿ. ೨೧-೯೩). ೨. ತಡೆಯಾಗು; ಅಡ್ಡಿಯಾಗು: ಎನಗೆ ನೀವು ಮಾಡುವ ರಾಜಕಾರ್ಯದ ಮಣೆಹ ನಿಮಗೆ ತಗೆಯಿತು (ಛನಪ. ೧೧). ೩. ಸೆಳೆ; ಆಕರ್ಷಿಸು: ನೋಳ್ಪರ ಕಣ್ಣ ತ[ಪಾಠಾಂ. ತೆ]ಗೆವ ಮೊಲೆಯ (ಕುರಾಸಾಂ. ೨೧-೪೬); ಕಣ್ಬುಗುವ ಸೆಣಸುವ ಮುಳಿವ ಚಿತ್ತವ ತಗೆವ ತಾಗಿಸುವೆಳಸಿ ಕೂಡುವ . . . ವೇಶ್ಯಾವೀಧಿಗಳೊಳಸುರಾರಿ ನಡೆತಂದ (ಅಕ್ರೂಚ. ೬-೬೦). ೪. ಸ್ತಂಭೀಭೂತನಾಗು; ದಿಗ್ಭ್ರಮೆಗೊಳ್ಳು: ಸಾಗರದತ್ತನೆಂಬನೊಳ್ ಜೂದಾಡಿ ತನ್ನುಳ್ಳುದೆಲ್ಲಮಂ ಸೋಲ್ತು ಕುಡಲಿಲ್ಲದೆ ಸಮುದ್ರದತ್ತಂ ಸಾರಮೇಯಶಕ್ಯದ್ಧಾಮಾಂತರ್ಗತನಾಗಿ ಬಿಸಿಲೊಳ್ ತಗೆದಿರ್ದುದುಮಂ (ಚಾವುಂಪು. ೯೬-೯) ; ತಗೆಯಲ್ ಜೈಮಿನಿ ತಿಪ್ಪಿಕೊಂಡು ಪರಿಯಲ್ ವೈಶೇಷಿಕಂ . . . ಅಮ್ಮಮ್ಮ ಷಟ್ತರ್ಕವೀಧಿಗಳೊಳ್ ತೂಳ್ದಿಶು ಗೋಪನಂದಿ ದಿಗಿಭಪ್ರೋದ್ಭಾಸಿ ಗಂಧದ್ವಿಪಂ (ಎಕ. V, ಚನ್ನರಾ. ೧೪೮-೩೮ ; 1094).

**ತಗೆತಗೆ** (ದ್ವಿರುಕ್ತಿ) : ತಗೆತಗೆದು ತಗುಳ್ದಲ್ಲರಂ ದಹಿಸತೊಡಗಿತು ದಳ್ಳುರಿ (ಜೈಮಿಭಾ. ೮-೩೯). [ ದೇ.॥ ತಮಿ. ತಕ್ಕೈ ]

**ತಗೆ$_2$** (ನಾ). ೧. ತಡೆ; ಅಡ್ಡಿ; ಪ್ರತಿಬಂಧಕ: ಆ ಚಂಡಾಲಕನ್ನಿಕೆ ರೋಮಂಬೊರೆದ ಪಂದೊವಲ ಪಂಜರದೊಳಿಕ್ಕಿ ಮಹಾಶ್ವೇತಾವಲೋಕನ[ಕೆ] ತಗೆಯಂ ಮಾಟ್ಪಂತೆ ಪಡಿಯಂ ಕೆತ್ತಗುಟಿಯನಿಕ್ಕಿ (ಕಾದಂಉ. ೭೫೩). ೨. ತಂಗುವಿಕೆ; ನಿಲ್ಲುವಿಕೆ: ಬರ್ಪ ಪಟಿಯೊಳ್ ಮನದ ಚಿಂತೆಯಿನ್ ಪಲರ್ಕ್ಕಿನ್‌ದಿರುಗಿದಪೆನೆಂದು ಪಿನ್‌ಮುನ್ ಅಲೆದು, ಪಲ ತಗೆಗಳ್ ಆದುವಯ್ (ಅಂತಿಗೊ. ೧೧-೨೦೭). [<ತಗೆ$_1$]

**ತಗೆಪ** (ನಾ). ಅಡ್ಡಿ; ನಿರ್ಬಂಧ; ಸ್ತಂಭನ: ತೆಗಪಂ, ತಗೆಪಂ, ತೊಡೆಪಂ, ನಡೆಪಂ, ಮೊಗೆಪಂ (ಶಬ್ದಾನು. ೫೬೧ ಪ್ರಯೋ). [ ತಗೆ$_1$ + – ಪ$_2$ ]

**ತಗೆಪು**, ತಗಪ್ಪು, ತಗವು$_2$, ತಗಹು$_2$ (ನಾ). ೧. ಅಡ್ಡಿ; ನಿರ್ಬಂಧ: ಪೆಱರಱಿದು ತನ್ನ ಸಾಲಂಗೊಟ್ಟೊಡಂ ತಾನಱಿದು ಸಂಸಾರಮೋಹಂಗೆಟ್ಟೊಡಂ ಆತನ ತಗೆಪುಮಾತನ ಕರ್ಮದ ಬಿಗಿ(ಗು)ಪುಂ ಪತ್ತುವಿಡುಗುಂ (ಜೀವಸಂ. ೧೬೩-೨೧ವ). **ತಗಪ್ಪು**: ೨. ಒತ್ತಾಯ; ತಗಾದೆ: ಒಮ್ಮಿಗೆತ್ತರ್ಗೆ ಇರ್ಕುಳ ಜೋಳಮ್ ಕುಡುವುದು ತಗಪ್ಪಿಲ್ಲ ಗೋಸನೆ ಇಲ್ಲ ರಾಜಪುರುಷರ್ಗೆ ಪುಗಿಲಿಲ್ಲ (ಇಇ. X, ೧೬೭-೪ ; 7ನೆಯ ಶತ). **ತಗವು$_2$** : ೧. ಇತ್ತನಂದೇ ಕೃಷ್ಣ ನಿನಗಾ ಪುತ್ರನನು ನೀ ಬೇಡಿಕೊಳಲೇಕುತ್ತಮನೆ ತಗ[ಪಾಠಾಂ. ಡ]ವೇಕೆ ತನ್ನನು ನಾಚಿಸಲದೇಕೆ (ನಿಭಾಗ. ೧೦-೬೩-೨೦) ; ತಗವಹುದು ತನಗೆನುತ ಶೈಲನಿತಂಬಕೈತಂದು ವಿಗಡ ರಕ್ಕಸನಾ ಹರಾದ್ರಿಯ ಬಿಗಿದನೈ (ಉತ್ತರಾ. ೫-೫೧). **ತಗಹು$_2$** : ೧. ತಪವೆರಿಬುದು ತಗಹು ನೇಮವೆಂಬುದು ಬಂಧನ (ಅವಚಂ. ೧೫೮-೭೨೩) ; ಧ್ಯಾನದ ಧ್ಯೇಯವಳವಟ್ಟು ಆನಂದಿಪಂಗೆ ತಪದ ತಗಹೆ[ಪಾಠಾಂ. ಫಲವೆ]ಲ್ಲಿಯದೊ (ಚನ್ನವ. ಕ. ೩೨೪-೭೮೩) ; ಓಲಗದಿಂ ಪಡೆದಂ ತಗಹಿಂ ಸಿಲ್ಕಿದಂ (ಶಮದ. ೧೨೮ ಪ್ರಯೋ); ಹಗಲು ಹರಿಚಿಂತೆಯನು ಮಾಳ್ಪರೆ ತಗಹಲಾ ಬಹುವಿಧ ಗೃಹವ್ಯಾಪ್ತಿಗಳ ಬಯಲಾಯಾಸ ಕೃತ್ಯದ ಕಾಲುಕಣ್ಣಿಗಳ (ನಿಭಾಗ. ೨-೧-೯) ; ಗಗನವನೊಳಕೊಂಬ ತಿಳಿವಿದೆ ಇದಕಿಲ್ಲಿ ತಗಹೇತಕಾಯ್ತೆಂಬನಾಗ (ಭರಚ. ೬೦-೩೭). ೩. ಕವಿದಿರುವಿಕೆ; ಆವರಣ; ಮುಸುಕು; ಹೊದಿಕೆ: ಮಱವೆಯ ತ[ಪಾಠಾಂ.ತೆ]ಗಹು ತೆಗೆದೆಚ್ಚಱಕೆ ತೋಱಿತು (ಪ್ರಭುಲೀ. ೯-೧೫) ; ಉಗಿದವಂಬರವನು ಮಯೂಖಾಳಿಗಳು ಭುವನದ ಜನದ ಕಂಗಳ ತಗಹು ತೆಗೆದುದು ಸೆಱೆಯ ಬಿಟ್ಟರು ಜಕ್ಕವಕ್ಕಿಗಳ (ಕುಮ್ಯಾದ್ರೋ. ೧-೪೩) ; ಕಳಿದರೀ ಚಂಡಾಂಶುವಂಶೋಜ್ವಲರು ಬಳಿಕಾ ಹಿಮಸಮಯವನು ಪುಲಿದೊಗಲ ಹರಿಣಾಜಿನದ ಹಾಸಿಕೆಯ ಹೊದಿಕೆಯಲಿ ತಳಿರ ತಗಹಿ[ಪಾಠಾಂ. ಡಿ]ನ ಮನೆಗಳಲಿ (ತೊರರಾ. ೩-೨-೫).

[ ತಗೆ$_1$ + – ಪು$_2$./ತಮಿ. ತಕೈಪ್ಪು ]

**ತಗೆಬಗೆ**, ತಗಿಬಿಗಿ, ತಗುಬಗೆ (ನಾ). ೧. ಅರೆಮನಸ್ಸು; ಅನಿಶ್ಚಿತವಾದ ಮನಸ್ಸು: ಅಕ್ಕುಮಾನುಂ ತಗೆಬಗೆಯೊಳೊಪ್ಪುವೆಂ (ರಾಮಾಶ್ವ. ೦೫-೩); "ಪ್ರತಿಹತವಾದ – ತಡೆದ – ಮನಸ್ಸು" (ರಾಮಾಶ್ವ. ಕೋಶ). ೨. ಅಸ್ತವ್ಯಸ್ತತೆ: ತಗೆಬಗೆಯ ನಡೆನುಡಿಯ ಮಗಳ ನಡೆವಳಿಯಂ (ಕಾಲೂರ. ೪೬-೭೫) : "ಕ್ರಮತಪ್ಪುವಿಕೆ" (ಕಾಲೂರ. ಟಿಪ್ಪಣಿ). ೩. ತೊಂದರೆ; ಹಿಂಸೆ: ಹಾವಿಂಗೆ ಹಾಲನೆಱೆದೊಡೆ ತೀವಿದ ವಿಷವಪ್ಪುದಲ್ಲದಂಗಜನಂ ಸಂಭಾವಿಸಿದೊಡೆ ಕೋಮಳೆಯರ ಜೀವಕೆ ತಗೆಬಗೆಯನೀವನೆಂಬುದು ಪುಸಿಯೇ (ನಳಚಂ. ೨೧೧). ೪. ಸಂಕಟ; ತಳಮಳ: ಉಸುರ ತಗೆಬಗೆಯೊಳ ಸುರೇಂದ್ರ ಬಸವಳಿದು (ಷರಶು. ೧೩-೩೮). ೫. ಲಗುಬಗೆ; ಅವಸರ: ತಗೆಬಗೆಯೊಳೋಡಾಡಿ ಕೆರವೊಂದು ಸವೆಯದಿರೆ (ಕಾಲೂರ. ೭೩-೧೩೩). **ತಗಿಬಿಗಿ**: ೪. ತನ್ನ ರೆಕ್ಕೆಯಂ ನೆಗಪಲೆನುತೆಂದು ಬಿಚ್ಚಿದ ದೆಸೆಗಳೆಂಟು ಮುಚ್ಚಲು ತರಣಿಗುಸುರು ತಗಿಬಿಗಿಯಾಗಲು (ತುರಂಗ. ೪-೩೯). ೫. ಬಗೆಬಗೆಯಾಟದಿ ಜಗವ ನಗಿಸುತ ತಗಿಬಿಗಿ ಓಡುತ್ತ ನೆಗೆದು ಕುಪ್ಪಳಿಸಿ (ಶರಲೀ. ೩೪೩-೮). ೬. ತಬ್ಬಿಬ್ಬು; ದಿಗ್ಭ್ರಮೆ: ಮಗುವಾಗಿ ಪೂತನಿಯ ಮೊಲೆಯನುಂಡೆ ಇಂಥ ತಗಿಬಿಗಿಯಾಟಗಳೆಲ್ಲಿ ಕಲಿತ್ಯೋ ರಂಗ (ಪುರಂದ. ೪-೧೫೬-೩). 'ತಗಿಬಿಗಿಗೊಳಿಸು' ಪರಾ. **ತಗುಬಗೆ**: ೩. ಬಿಸಿಗೆ ಬೆಚ್ಚಿದ ಎದೆಯು ಮರುಚಲ ಬಸಿರಿಯ ಬಯಕೆಗೆ ತಗುಬಗೆಯಾಗುತಿರೆ (ಸಹೀಗೀ. ೪-೯೩) ; ಅಗ್ನೀವಹನ ಅವಸ್ಥೆ ತಗುಬಗೆಯಾಯಿತು ಇವನ ಗಂಟಲೂ ಕಟ್ಟಿಕೊಂಡಿತು (ನೀರಸ. ೩೩). 'ತೆಗೆಬಗೆ' ಪರಾ.

[ ತಗೆ$_1$ + ಬಗೆ$_3$ ]

**ತಗೆವುಗಿಲ್** (ನಾ). (?) : ಸ್ವಾಂತಂ ಪಂಚೇಷುವಿಂದಂ ತಗೆವುಗಿಲ[ಪಾಠಾಂ. ತಗೆವುಲ, ಜಂತಗೆವುಗಿಲ]ವೊಲಪ್ಪಂತು ಕಂದರ್ಪನೆಚ್ಚೆಚ್ಚಂತುಂ ಕೈವಾರದಟ್ಟಾಸುರವೆನೆ ಮುಳಿದೆಟ್ಟಿಟ್ಟ ಕೋದಂಡದಿಂ ಪೊಯ್ದಂತಾನುಂ ನಿನ್ನ ಸೌಂದರ್ಯದಿನೆನಗೊಳಗಾದಂ ದಶಗ್ರೀವನೆಂದಾ ಕಾಂತಾರತ್ನಕ್ಕೆ ವೈದೇಹಿಗೆ ಮಕುಟ ಹಟದ್ರುತ್ನದಿಂದರ್ಘ್ಯಮಿತ್ತಂ (ಪಂರಾಮಾ. ೯-೮೪). [ ? ]

**ತಗ್ಗೈರ್** 'ತಗ್ಗೈರು' ನೋ.

**ತಗ್ಗೈರು**, ತಗ್ಗೈರ್ (ನಾ). (ಕೆಲಸದಿಂದ) ತೆಗೆದು ಹಾಕುವುದು; ಉಚ್ಚಾಟನೆ: (ಕ). **ತಗ್ಗೈರ್** : (ರೈಸ್‌ಗೆ. II. ೫೬೩).

[ ← ಹಿಂ. ತಗೀರ್, ತಗೀರೀ ; ಮರಾ. ತಗಿರೀ ; ಅರ. ತಗಯ್ಯುರ್ ]

**ತಗೊಣೆ** (?). (?) : ಶ್ರೀ ಪರದರ ಪನ್ದೆ ಮಿರಿಯನ್ದಗೊಣೆ ರಣದೊಳಾ ಮಣವೊಡ್ಡುವೊನ್ ವೂಳೆಯೆನೆಯ್ಕುಳ[ವೋ]ನ್ ಪೆಣದ ಸಜ್ಗಡಿ ಕಟ್ಟು ವೊನ್ (ಕಇ. I, ೫-೨ ; 8ನೆಯ ಶತ).

[ ? ]

**ತಗ್ಗಜ್ಜಿ** 'ತಗಚೆ' ನೋ.

**ತಗ್ಗಾಳು** (ನಾ). ಗಿಡ್ಡ ; ಕುಳ್ಳ : (ಕ). [ ತಗ್ಗು₂ + ಆಳು₃ (<ಆಳ್₃) ]

**ತಗ್ಗಿ**, ತಂಗಿ₂, ತರ್ಗಿ (ನಾ). ಒಂದು ಬಗೆಯ ಗಿಡ; ತಕ್ಕಿಲೆ; ಅಗ್ನಿಮಂಥ; ನರುವಲು: "ಜಯಾ, ಜಯಂತೀ, ತರ್ಕಾರೀ, ನಾದೇಯೀ, ವೈಜಯಂತಿಕಾ– ಈ ೫ ತಗ್ಗಿ " (ನಾಚಿರಾ. ೧೦೮) ; " ವಹ್ನಿಮಂಥಃ–ನರುವಲು, ತಗ್ಗಿ " (ಒಷಧಿ. ೧೪೭) ; ಬಿಲ್ವಂ ತಗ್ಗಿ ಸೀವನ್ನಿ ಪಾದರಿಯಾವುಂಡಗೆಯೆಂಬಿವಂ ತೆಗಪಿ ಸೇಕಂಗೆಯ್ಕೆ ಮಾಣ್ಗುಂ ಕಫಂ (ಲೋಕೋಪ. ೯-೨೨೫) ; ಚಿಲ್ಲವೇ ಹೇಳಕಟ ಎನ್ನೀ ಚಿಲ್ಲತನವೆಂದಿಂಗೆ ಮಾಣ್ಬುದು ಸೊಲ್ಲು ತಗ್ಗಿಯೆ ಎನ್ನಳಲು ತಗ್ಗುವುದರೇತಱಿಲಿ (ಬಸಪು. ೪೫-೪೦) ; ತುಲಸಿಯ ನುಗ್ಗಿಯ ತಗ್ಗಿಯ . . . ಪತ್ರಂಗಳನೊಡನೆ ತೆಗಪಿಕೊಂಡದಱಿಂ ಸೇಕಂಗೆಯ್ಕೆ (ಅಶ್ವಶಾ. ೧೦-೨೦). **ತಂಗಿ₂** : ಸಣ್ಣನಾದ ಎಲುಗಳ ಹಾಕಿ ಮಣ್ಣು ಮೆತ್ತಿ ಆಮೇಲೆ ಒಳಗಿನ ಮಣ್ಣ ತಂದು ತಂಗಿಯ ರಸ ಹೊಯ್ದು ಅರೆದು (ಅಶ್ವಟೀ. ೭೯-೫). △ **ತರ್ಗಿ** : ಉಪಶಮಿಸುಗುಮಾತಪದೊಳ್ ಕಟ್ಟಿ ಪೂಸೆ ತರ್ಗಿಯ ರಸಮಂ (ಅಶ್ವಶಾ. ೧೧-೬೯).

**ತಗ್ಗಿಯ ಮಾನ್ಯ**, **ತಗ್ಗೆಯ ಮಾನ್ಯ** = ಒಂದು ಬಗೆಯ ಮಾನ್ಯ,– ಉಂಬಳಿ : ದೇವರ ನಿವೇದಕ್ಕೆ ತಗ್ಗಿಯ ಮಾನ್ಯದೊಳಗೆ ಕೊಟ್ಟ ಮತ್ತರು ೧೬ ತೋಟ ಮತ್ತರು ೧ (ಕೊಲ್ಲಾಶಾ. ೬-೧೨; 1127); ಸಂಕ್ರಾಂತಿಪರ್ವ್ವ ನಿಮಿತ್ತಂ ಅಗ್ರಹಾರದ ತಗ್ಗೆಯಮಾನ್ಯದೊಳು ಶಾವಸೆಟ್ಟಿಯಕೆಱೆಯಿರಿಯ ಕೇಶವೇಶ್ವರದೇವರ ಭೂಮಿಯಿಂಬಡಗಲು (ಕಇ. V, ೨೫-೨೪; 1139). [?]

**ತಗ್ಗಿಲು** 'ತುಗ್ಗಿಲ್' ನೋ.

**ತಗ್ಗಿಸು** 'ತಟ್ಗಿಸು' ನೋ.

**ತಗ್ಗು₁** 'ತಟ್ಗು' ನೋ.

**ತಗ್ಗು₂**, ತರ್ಗು₂, ತೆಗ್ಗು₂ (ನಾ). ೧. ಕುಣಿ; ಹಳ್ಳ; ಕೆಳಕ್ಕೆ ಕುಸಿದುದಂ; ಗುಂಡಿ : ನೆಲನ ತಗ್ಗಿನ ಲುಪ್ಪರದ ಮಯ್ಯೊಲವಿನಲಿ ಪಾರಗದ ಬವರಿಯ ಸುಳುಹಿನಲಿ . . . ಖಂಡೆಯದ ಖಣಿಕಟಿಲೆಸೆಯೆ ಕಾದಿದರು (ಕುಮ್ವಾದ್ರೋ. ೦೪-೬) : ಹಿಡಿಸದೆ ತುಂಬಿದೆ ತಗ್ಗಿಲ್ಲ ತೆವರಿಲ್ಲ (ಸಹೀಗೀ. ೨೪-೪೧೯) ; ನದಿ ಎತ್ತರವಾದ ಕಡೆಯಿಂದ ತಗ್ಗಾಗಿರುವ ಕಡೆಯನ್ನು ಹುಡುಕಿ ಹರಿಯುತ್ತದೆಯಲ್ಲವೆ? (ವ್ಯಾಸಜಿ. ೦೦೭) : ಆಳವಾದ ತಗ್ಗನ್ನು ತೋಡಿ ಅದರಲ್ಲಿ ಹುಗಿದು ಬಿಡುತ್ತಿದ್ದೇನೆ (ಶ್ಯಾಮತಾ. ೫). ೨. ಸಣ್ಣದು; ಕುಳ್ಳದುದು ; ಎತ್ತರವಲ್ಲದುದಂ : ಗುಡ್ಡದ ಮೇಲೆ ಅವನ ತಗ್ಗಾದ ಮನೆ ಕಾಣಿಸುತ್ತಿತ್ತು (ಮಹಾತ್ಮ. ೦೫). ೩. ಕುಗ್ಗಿರುವ ಸ್ಥಿತಿ; ಕಡಿಮೆಯಾಗಿರುವಿಕೆ ; ಕುಸಿತ : ಕುರುಳು ಜುಂಜುಱುದಲೆಯ ತಗ್ಗಿನ[ಪಾಠಾಂ. ದ]ಕೊರಳ ಕೆಂಗಱಿಗಣ್ಣ ಮೋಱೆಯ ಹಱುಕುಗಡ್ಡದ (ನಳಜ. ೪-೪). ೪. ಬೆಲೆ ಹೆಚ್ಚಾಗಿರುವಿಕೆ ; ತುಟ್ಟಿಯಾಗಿರುವಿಕೆ : (ಮೃಗಜಿ. IV, ೭೮೬). 'ತಗ್ಗುಕಾಲ' ಪರಾ. ೫. ವ್ಯಾಪಾರದ ವಸ್ತುಗಳ ಪೂರೈಕೆ ಕಡಿಮೆಯಾಗಿರುವುದು. ೬. ಪಾತ್ರೆ ಮೊದಲಾದವು ನೆಗ್ಗಾಗಿರುವಿಕೆ: 'ತಗ್ಗೆತ್ತು' ಪರಾ. ೭. (ಅಲಂ) ಕಷ್ಟಕಾಲ : ತೆರೆಯಲಾರೆನು ಮರೆಯಲಾರೆನು ದೈವವಿತ್ತೀ ಕಷ್ಟವ ತಗ್ಗು ಸಾರುತಲಿರಲಿ ಸ್ಮಾರಕವಾಗಿ ಹಿಗ್ಗಿನ ನಷ್ಟವ (ಹಾಡುಪಾ. ೩೯-೨). **ತರ್ಗು₂** : ೪. ಧಾರಣೆಯ ತರ್ಗಂ ಹೋರುವವನು ನಿಂದಿತನು (ವೀಶೈಪು. ೪-೧೭-೨೯). **ತೆಗ್ಗು₂**: ೧. ನಿಬ್ಬಣದ ಈ ಎತ್ತು ಹುಗ್ಗಿಯ ಮೇದಾವ ತೆಗ್ಗಿನ ನೀರ ಕುಡಿದಾವ (ಲೋಕಗೀ. ೨೭) ; ನೆಲವು ಸಮತಲವಾಗಿರಲಿಲ್ಲ, ಅಲ್ಲಲ್ಲಿ ತೆಗ್ಗುಗಳು (ಕುರಿಹಿಂ. ೬೪).

**ತಗ್ಗುತಿಟ್ಟು** = ೧. ಏರು ಇಳಿ ; ಹಳ್ಳ ದಿಣ್ಣೆ ; ಕಂಳಿ ತೆವರು. ೨. ಹೆಚ್ಚುಕಡಿಮೆ; ನ್ಯೂನಾಧಿಕತೆ : ಅಲ್ಲಿ ರೂಪಗುಣಗಳಿಲ್ಲ. ಸ್ವಲ್ಪ ತಗ್ಗುತಿಟ್ಟುಗಳಿರಬಹುದು, ಆದರೆ ಸತ್ವವೊಂದೇ (ರಾಮಾನಿ. ೧೧೪). **ತಗ್ಗುದಿಂಟೆ** = ತಗ್ಗುತಿಟ್ಟು ೧ : ತಗ್ಗುದಿಂಟೆ ಕಲ್ಲುಮುಳ್ಳು ಕೆಸರುನೆಲ ತಾಗುತಳ್ಳು (ಬಿಟ್ಟಆ. ೧೯೩-೧೧). **ತಗ್ಗುದಿನ್ನೆ** = ತಗ್ಗುತಿಟ್ಟು ೧ : ಕಿತ್ತಳೀಹಣ್ಣು . . . ಚೆನ್ನಾಗಿ ದಿಟ್ಟಿಸಿ ನೋಡಿದರೆ ಅದರ ಮೇಲೆ ಹಲವು ಸಣ್ಣ ಸಣ್ಣ ತಗ್ಗುದಿನ್ನೆಗಳು ಕಾಣಿಸುವವು (ಮುಂಬಯಿ. ೪-೬೬) ; ತಗ್ಗುದಿನ್ನೆಗಳು . . . ಸಾಲು ಸಾಲಾಗಿ ನಿಂತಿವೆ (ಅಶ್ವಮೀ. ೨). **ತಗ್ಗುಬ್ಬು** = ತಗ್ಗುತಿಟ್ಟು ೧ : (ಕ). **ತೆಗ್ಗುತೆವರು** = ತಗ್ಗುತಿಟ್ಟು ೨ : ಲೇಖಕರ ಸೌಮನಸ್ಯ . . . ಕತೆಯ ಹೇರುಪೇರುಗಳಲ್ಲಿ ತೆಗ್ಗುತೆವರುಗಳಲ್ಲಿ ತನ್ನ ಸಮತೂಕವನ್ನು ರಕ್ಷಿಸಿಕೊಳ್ಳುತ್ತಿದೆ (ಆಜೋಲೀ. i, ಸಂಪಾದಕರ ಮಾತು). [ <ತಟ್ಗು ]

**ತಗ್ಗುಕಾಲ** (ನಾ). ವಸ್ತುಗಳ ಪೂರೈಕೆ ಕಡಿಮೆಯಾಗಿರುವ ಕಾಲ : ಈ ತಗ್ಗುಕಾಲದಲ್ಲಿಯೂ ಸೀರೆಯ ಬೆಲೆ ನೂರ ಅರವತ್ತೇ ರೂಪಾಯಿ (ಶಿವರಾ. ೨೫). [ ತಗ್ಗು₂ + ಕಾಲ ]

**ತಗ್ಗುಗನ್ನಡಿ** (ನಾ). ಒಳಮುಖವಾಗಿ ಬಾಗಿರುವ ಕನ್ನಡಿ; ಅಂತರ್ಗೋಲ ಕನ್ನಡಿ : ತಗ್ಗುಗನ್ನಡಿಯನ್ನು ನಮ್ಮ ಮುಖದ ಹತ್ತಿರ ಹಿಡಿದುಕೊಂಡರೆ ಮುಖದ ದೊಡ್ಡ ಪ್ರತಿಬಿಂಬವು ಕಾಣುವುದಲ್ಲದೆ ಈ ಪ್ರತಿಬಿಂಬವು ತಲೆಕೆಳಗಾಗಿರದೆ ನೆಟ್ಟಗಿರುವುದು (ಭೌತವಿ. ೧೭೨). 'ಉಬ್ಬುಗನ್ನಡಿ' ಪರಾ.

[ ತಗ್ಗು₂ + ಕನ್ನಡಿ₁ ]

**ತಗ್ಗುಗುಟ್ಟು** (ಕ್ರಿ). ತಗ್ಗುವಂತೆ ಕುಟ್ಟು; ಕುಸಿದು ಬೀಳುವಂತೆ ಹೊಡೆ,– ಮೆಟ್ಟು : ಬೆದಱಿದ ಬಾಳವ್ಯದ್ಧರನೆ ಬಾಯ್ವಿಡೆ ಬಾಯ್ವಿಡೆ ಸೀಳ್ದು ಪೋಲ್ದು ಬಂದದಿರದೆ ನಿಂದ ಬೀರರನೆ ಬೊಬ್ಬಿಡೆ ಬೊಬ್ಬಿಡೆ ತಗ್ಗು[ಪಾಠಾಂ. ಗ್ಗೆ]ಗುಟ್ಟಿ ಲಾಯದ ತುರಗಂಗಳಂ ತರದೆ ಗೋಟಿಡೆ ಗೋಟಿಡೆ ಕೋಡೊಳೆತ್ತಿ . . . ಕೊಂದುದಾ ಗಜಂ (ಪಾರ್ಶ್ವಪು. ೪-೧೩೬).

[ ತಗ್ಗು₁ (<ತಟ್ಗು) + ಕುಟ್ಟು₁ ]

**ತಗ್ಗುದನಿ** (ನಾ). ತಗ್ಗಿಸಿದ ದನಿ ; ಕೆಳದನಿ : ಹೆಂಗಸರು ಗಂಡಸರೆಲ್ಲ . . . ತಗ್ಗುದನಿಯಲ್ಲಿ ಮಾತನಾಡುತ್ತ ಕುಳಿತಿದ್ದರು (ಪುನರು. ೨೩೭).

[ ತಗ್ಗು₁ (<ತಟ್ಗು) + ದನಿ₂ ]

**ತಗ್ಗುನೆಲ** (ನಾ). ಎತ್ತರವಲ್ಲದ ಭೂಮಿ ; ತಗ್ಗಾದ ಭೂಮಿ : ಸಮುದ್ರವು ತಗ್ಗುನೆಲದ ಮೇಲೆ ಹೆಸರೂ ಬಣ್ಣವೂ ಬೇರೆ ಬೇರೆಯಾಗಿ ಮೆರೆಯುತ್ತದೆ (ಅನಂಶ. ೪೦ ಟೀಕೆ). [ ತಗ್ಗು₂ + ನೆಲ₁ ]

**ತಗ್ಗುಬೀಳು**, ತೆಗ್ಗುಬೀಳು (ಕ್ರಿ). ಹಳ್ಳಬೀಳು ; ನೆಗ್ಗಾಗು : ಮನೆಯ ಪಾತ್ರೆಗಳೆಲ್ಲ ತಗ್ಗುಬಿದ್ದಿವೆ (ರೂಢಿ). **ತೆಗ್ಗುಬೀಳು** : " ಗುಣಿಗಲ್ಲ = ತೆಗ್ಗು ಬಿದ್ದಗಲ್ಲ " (ಗಂಗಾಮ. ೦೦೭). [ ತಗ್ಗು₂ + ಬೀಳು₁ (<ಬೀೞ್₁) ]

**ತಗ್ಗುಮುಗ್ಗು** (ನಾ). ೧. ಹೆಚ್ಚು ಕಡಮೆ ; ಏರುಪೇರು : " ವಿಷಮ– ಸಮವಲ್ಲದ್ದು, ತಗ್ಗು ಮುಗ್ಗು " (ಗಂಗಾಮ. ೨೯೩). ೨. (ಅಲಂ) " ಸುಖ ದುಃಖ" (ಜಾನಕೋ. ೬೩). [ತಗ್ಗು₂ + ಮುಗ್ಗು₃/ತೆಲು. ತಗ್ಗುಮೊಗ್ಗು]

**ತಗ್ಗುಶ್ರುತಿ** (ನಾ). ತಗ್ಗಿದ ಶ್ರುತಿ; ಮಂದವಾದ ಶ್ರುತಿ : ಅವಳು ಹಾಡುವುದು ಯಾವಾಗಲೂ ತಗ್ಗುಶ್ರುತಿಯಲ್ಲಿಯೇ (ರೂಢಿ). [ತಗ್ಗು₂ + ಶ್ರುತಿ]

**ತಗ್ಗುಸಿರು** (ನಾ). ತಗ್ಗಿದ ದನಿ ; ಕೆಳದನಿ : " ಈಗ ತಾನೆ ಬಂದೆ " ಎಂದು ತಗ್ಗುಸಿರಿನಿಂದ ಹೇಳಿದೆ (ಚಿಂಗಾಳ್ಕ. ೦೦೭).

[ ತಗ್ಗು₂ + ಉಸಿರು₂ (<ಉಸಿರ್₂) ]

**ತಗ್ಗುಸೋಪಾನ** (ನಾ). ಇಳಿಯುವ ಸೋಪಾನ; ಇಳಿ ಮೆಟ್ಟಿಲು: ತಗ್ಗುಸೋಪಾನದೊಳಿಳಿವಾಗ ಮುನಿಗಳ್ಗೆ ಬೊಗ್ಗನೆ ಕೈಲಾಗುಗೊಡುವಾ, ಉಗ್ಗಡದೇಱುಸೋಪಾನದೊಳವರ ಕೈಯೊಗ್ಗಿ ಹಿಡಿದು ಮೇಲೆ ನೆಗೆವಾ (ಭರಚ. ೩-೬೪). 'ಏಱುಸೋಪಾನ' ಪರಾ. [ ತಗ್ಗು₂ + ಸೋಪಾನ ]

**ತಗ್ಗೆತ್ತು** (ಕ್ರಿ). ಪಾತ್ರೆಗಳ ತಗ್ಗುಗಳನ್ನು ಸರಿಪಡಿಸು : ನುಗ್ಗಾದ ಪಾತ್ರೆಗಳನ್ನು ತಗ್ಗೆತ್ತದಿದ್ದರೆ ಚೆನ್ನಾಗಿ ಕಾಣುವುದಿಲ್ಲ (ರೂಢಿ).

[ ತಗ್ಗು₂ + ಎತ್ತು₁ ]

**ತಗ್ಗೊತ್ತು,** ತರ್ಗೊತ್ತು (ಕ್ರಿ). ೧. ತಗ್ಗುವಂತೆ ಒತ್ತು ; ಅದುಮು ; ಹತ್ತಿಕ್ಕು ; ನಿಗ್ರಹಿಸು : ಆದರಿಸುತಮರೇಂದ್ರನೆದ್ದನು ಹೋದ ವಜ್ರವ ಕೊಂಡು ನಗುತ ವಿಷಾದವನು ತಗ್ಗೊತ್ತಿ ನುಡಿದನು ದೈತ್ಯಪತಿಯೊಡನೆ (ನಿಭಾಗ. ೬-೧೧-೧೧). **ತರ್ಗೊತ್ತು :** ೨. (ಅಲಂ) ತಗ್ಗಿಸು ; ಕಡಮೆ ಮಾಡು : ಈ ಮತ್ಸರಮಂ ತರ್ಗೊತ್ತಿ . . . ರಕ್ಷಿಪ್ಪುದೆನ್ನಂ (ರಕ್ಷಾಶ. ೧೧).

[ ತಗ್ಗು₁ (<ತಟ್ಗು) + ಒತ್ತು₁ ]

**ತಚ್ಚಣ** 'ತತಂಕ್ಷಣ₂' ನೋ.

**ತಜವಿಜಿ** 'ತಜವೀಜಂ' ನೋ.

**ತಜವೀಜಿ** 'ತಜವೀಜು' ನೋ.

**ತಜವೀಜು,** ತಜವಿಜಿ, ತಜವೀಜಿ, ತಜುಬಿಜಿ (ನಾ). ೧. ಏರ್ಪಾಟು ; ವ್ಯವಸ್ಥೆ ; ಸಿದ್ಧತೆ : ನಾ ಬಂದು ಎಷ್ಟೊತ್ತಾತು . . . ಚಹಾದ್ದೇನಾದರೂ ತಜವೀಜು ಮಾಡ್ತೀಯೋ (ದೀಪಹ. I. ೦೯). 'ತಜವೀಜಂದಾರಿ' ಪರಾ. ೨. ಪ್ರಯತ್ನ ; ಉದ್ಯೋಗ : (ಮೃಗಜಿ. IV, ೭೮೭). **ತಜವಿಜಿ :** ೨. ತಾಯಿ ತನಗೆ ಬೇರೆ ಮದುವೆ ಮಾಡಿಸುವ ತಜವಿಜಿಯಲ್ಲಿದ್ದಾಳೆಂದು . . . ಅತ್ತೆಯನ್ನು ಇನ್ನಷ್ಟು ಅಂಜಿಸಿದ್ದ (ಹೊಸಕ್ಷಿ. ೨೬). ೩. ವಿಚಾರಣೆ ; ಶೋಧನೆ ; ಚೌಕಸಿ (ಉಕ) : " ತಜವಿಜಿ–ಹುಡುಕುವುದು; ಶೋಧ " (ಜಾವಕೋ. ೬೩). **ತಜವೀಜಿ :** ೨. ಆಸ್ತಿ ವಿಲೇವಾರಿಮಾಡುವ ತಜವೀಜಿಯಲ್ಲಿದ್ದಾರೆ (ರೂಢಿ). **ತಜುಬಿಜಿ :** ೧. ಅಮುದಾ ನಗರಕ್ಕೆ ಬರುವ ಮಧ್ಯಮಾರ್ಗದಲ್ಲಿ ಪಾದಶಹಾರು ತಜುಬಿಜಿಮಾಡಿ (ಕೆಳದಿಪ. ೫೮-೦೯).

[ ←ಅರ. ಹಿಂ. ತಜವೀಜ್ ]

**ತಜವೀಜುದಾರಿ** (ನಾ). ವಿಚಾರಣೆ ; ಶೋಧನೆ : ಪಟೇಲರ ಬಹಿರಂಗ ಹಾಜರುಬಾಪಿ ಮತ್ತು ತಜವೀಜುದಾರಿ ಹೆಚ್ಚಾದವು (ಕಲಿನ. ೩೧೫).

[ <ತಜವೀಜು ]

**ತಜಿನೆವಟಯಿಗೆ** (ನಾ). ಒಂದು ಬಗೆಯ ಧ್ವಜ (?) : ಬೆಳ್ಗೊಡೆಗಳುಂ ಪಾಳಿಧ್ವಜಂಗಳುಂ ತಜಿನೆವಟಯಿಗೆಗಳುಂ ಚಂದ್ರಾದಿತ್ಯರ್ಕಳುಂ ಸಿಂಹ ವ್ಯಾಘ್ರ ಮಕರ ಮತ್ಸ್ಯಗಳೆಂದಿವು ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ (ವಡ್ಡಾರಾ. ೧೩೩-೦೯). [ ತಜನೆ₂+ ಪಟಯಿಗೆ ]

**ತಜಿವಿಜಿ** (ನಾ). ಪಿಸುದನಿ(?): ಗಜಬಜಿಸಿ ಕೆಲಕೆಲರು ಹಾಸ್ಯದ ತಜಿವಿಜಿಗಳಿಂ ಕೆಲರು ಮುಸುಕಿನ ಗುಜುಗುಜುಗಳಿಂ ಕೆಲರು ಸಂಜ್ಞೆಗಳಿಂದ ಕೆಲರಿರ್ದಲು (ಅಸಂರಾ. ೩-೪-೨೩). 'ಗಜಿಬಿಜಿ' ಪರಾ. [ ? ]

**ತಜುಬಿಜಿ** 'ತಜವೀಜಂ' ನೋ.

**ತಜ್ಞ₁** (ನಾ). ವಿಷಯವನ್ನು ಬಲ್ಲವನು ; ತಿಳಿದವನು ; ನುರಿತವನು ; ಬುದ್ಧಿವಂತ : ಮೋಹರಾಜನ ಸಂದಾಜ್ಞೆಯನಾವ ತಜ್ಞನುಮಣಂ ವಿಜಾಬಲ್ಯೆ ಮೇಣ್ ಬರ್ಪನೇ (ನೇಮಿಪು. ೦-೮೯) ; ತಜ್ಞರ್ ತಲೆದೂಗೆ ದೇವಸಭೆ ಸಂತೋಷಕ್ಕೆ ಪಕ್ಕಾಗೆ (ಪುಷ್ಪಪು. ೦೨-೫೦). [ ಸಂ. ]

**ತಜ್ಞ₂** (ನಾ). = ತಜ್ಞ₁ : ಕಲಿಸಿದ ಭಾರ್ಗವಾತ್ಮಜರ ನೋಡಿದ ತಜ್ಞರ ಮುಯ್ಯುನೆತ್ತಿಯಂ ಗೆಲೆ ಸಲೆ ರಾಮಲಕ್ಷ್ಮಣರದೇಂ ನೆಟ್ ಕಲ್ತರೊ ಕೈದುವೆಲ್ಲಮಂ (ಪಂರಾಮಾ. ೩-೦೫೦) ; ತಡೆಯದೆ ವಿಚಾರಿಸೆಂಬಜ್ಞತಜ್ಞರ ಬಗೆಗೆ ಸಂಶಯಂ ಸರಿಯಾದುದು (ಹರಿಶ್ಚಾ. ೦೦-೨೭). [ ಸಂ. ತಜ್ಞ₂ ]

**ತಜ್ಞತೆ** (ನಾ). ನಿಪುಣತೆ ; ಪಾಂಡಿತ್ಯ : ಉದಾತ್ತಾಲಾಪ ಪ್ರಯೋಗಂಗಳಿಂ ತಜ್ಞತೆಯನಾ ಮಾನಧರರ ಮುಂದಿಡಿಯುಂ (ಶಾಂತಿಪು. ೪-೮೨೪).

[ ಸಂ. ತಜ್ಞತಾ ]

**ತಟ₁** (ನಾ). ಒಂದು ಅನುಕರಣ ಶಬ್ದ. 'ತಟಗುಟ್ಟು' ಪರಾ.

**ತಟತಟ₁** (ದ್ವಿರುಕ್ತಿ) : ಜನಕೆಲ್ಲ ತಟತಟ ಬೆವರು ಸುರಿವುದು (ಸಿದ್ಧಪು. ೫-೪೭) ; ವರುಷವರುಷವೂ ನಾವಿದ್ದಲ್ಲಿಯೆ ಹೊಸ ವಿದ್ಯಾರ್ಥಿಗಳಾಗುವೆವು ಪುಟಗಳ ತೆರೆಯದೆ ತಟತಟ ಓದದೆ ಬಿಸಿಲಿಗೆ ಗಾಳಿಗೆ ಮಾಗುವೆವು (ಶಿಲಾಂ. ೧೬-೧೧).

**–ತಟ₂** (ಪ್ರ). ಒಂದು ಭಾವನಾಮ ಪ್ರತ್ಯಯ : 'ಎಳೆತಟ' ಪರಾ.

**ತಟ₃** (ನಾ). ೧. ಬೆಟ್ಟದ ತಪ್ಪಲು,–ಇಳುಕಲು : " ಆ ನಗಕಟಕಂ ಪ್ರಸ್ಥಂ ಸಾನು ತಟಂ ಭೃಗು ನಿತಂಬಮಂತದು ತಟ್ಟಿಲ್ ತಾನೆನಿಸುಗುಂ " (ವಸ್ತುಕೋ. ೨೮-೨೭) ; " ಸಾನುಕಟಕಂ ಭೃಗು ಪ್ರಸ್ಥಂ ತಟಂ ನಿತಂಬಂ ಗಿರಿಯ ಹೊರೆಯುಕ್ಕು " (ಮಂಗರಾ. ೩೦-೨). ೨. ದಡ ; ಅಂಚು; ತೀರ : "ತೀರಂ ರೋಧಂ ತಟಂ ಪ್ರಪಾತಂ ಕೂಲಂ " (ವಸ್ತುಕೋ. ೨೪-೧೩); "ತಟಂ ದಡಂ " (ಚತುನಿ. ೯೩) ; ಕಾಸಾರದಾ ತಟದಿ . . . ತಪದಿ ಮುನಿಗಳ ಶ್ರೇಷ್ಠ ಮಾರ್ಕಂಡ್ಯನಿರೆ (ಪ್ರಾಥರಾ. ೧೦-೦೮) ; ಬಾಲಲೀಲೆಗಳಾಡಿದ್ದು ಯಮುನಾ ತಟದಲ್ಲಿಯೋ (ನನದಿ. ೦೩). ೩. ಸ್ಥಳ; ಪ್ರದೇಶ: ವೃಂದಾವನ ತಟದೊಳ್ ಗೋವೃಂದಾವನ ವಾಂಛೆಯಿಂದೆ ಮನೆಗಟ್ಟಿದನಾ ನಂದ (ಜಗವಿ. ೩-೬೭). ೪. ಹೊಲ; ಕ್ಷೇತ್ರ. ೫. ಆಕಾಶ. ೬. ದಿಗಂತ ; ಕ್ಷಿತಿಜ.

**ತಟತಟ₂** (ದ್ವಿರುಕ್ತಿ) : ತಟತಟವಾಗಿದ ಪರಮಾನಂದದಿ ಪುಟವೇಱಿದ ತನುಕಾಂತಿಯ ಲಿಂಗದಿ (ಯೋಗಾಂವಿ. ೬-೦೩) ; ಅಟಮಟ ಕುಟಿಲೇಂದ್ರಿಯಗಳ ತಟತಟಗಳ ಜಯಿಸಿದವನೆ ಪಟುಭಟನಣುಗ (ಷಡಿಲ. ೨-೩೮). **ತಟತಟವಾಗಿ**=ಸಂಪೂರ್ಣವಾಗಿ : ನೀವು ತಟತಟವಾಗಿ ಲೋಗರ ಸೇವೆಯಲಿ ಬೆಂದೊಡಲ ಹೊರುವಿರಿ (ಕುಮಾವ್ಯಾ. ೩-೭೪). [ ಸಂ. ]

**ತಟಂಕ,** ತಡಂಗ (ನಾ). ಕೆರೆ ; ತಟಾಕ : ಗೊಪ್ಪಯ ಸುತನ್ ಪರಮೇಶ್ವರ ದೇವಶಕ್ತ್ಯಾಯಾಕ್ಷತೃಣಯಾ ತಟಂಕಮಿದು (ಎಕ. XVI, ಧಾವುಗ. ೧೨-೩ ; ೬೯4). **ತಡಂಗ :** ಅವೇಂ ನೆಟ್ ಪೋಲ್ತುದೋ ಚಂಡಹುಂಡ ಸಂಸ್ಥಾನದೆ ಗುಂಡುದೀವಿದ ತಡಂಗಮನಂಗದ ಪಾಂಗವಂದಿರಾ (ಆದಿಪು. ೫-೯೦) : ಕೊಲ್ವೆಸಕದಿಂ ಬಿಸಿನೀರ ತಡಂಗದಂದದಿಂದಿರೆ . . . ಪಾಂಥಜನಂ ನಡೆಯಿತ್ತು ಮಾರ್ಗದೊಳ್ (ಜಗವಿ. ೦೭-೭).

[ <ಸಂ. ತಟಾಕ ]

**ತಟಂಕಷ** (ಗು). ೧. ದಡವನ್ನು ಕೊರೆಯುವ. ೨. ಸಮಗ್ರವಾದ ; ಸಂಪೂರ್ಣವಾದ : ಜಿನೇಂದ್ರರುಂದ್ರ ಕಥೆಯೊಳ್ ನವಭಾವರಸಂಗಳಂ ತಟಂಕಷಮೆನೆ ತೋಱ್ (ಪುಷ್ಪಪು. ೦-೩೪). 'ಕೂಲಂಕಷ' ಪರಾ. [ಸಂ.]

**ತಟಂಬಿಡಿ** (ಕ್ರಿ). ದಂಡೆಗುಂಟ ಸಾಗು; ತೀರವನ್ನು ಅನುಸರಿಸು: ಓರಂತು ಪೋಪ ದಿವಿಜರ ಹಾರಿ ತಟಂಬಿಡಿದು ಪೊಕ್ಕು ಪೊಜಿಮಡುವೊಂದಾಕಾರಂ (ಶಾಂತಿಪು. ೧೦-೨೭). [ ತಟ₃ + ಪಿಡಿ₁ ]

**ತಟಕನೆ** ' ತಟಕ್ಕನೆ ' ನೋ.

**ತಟಕಾವು** (ನಾ). ಅಡ್ಡಿ; ತಡೆ; ವಿಘ್ನ: ಹೆಂಡ ಮಾರುವುದಕ್ಕೆ 'ತಟಕಾವು' ಮಾಡುವರಂತೆ (ಬೆಳಮು. ೦೩೯). 'ಅಟಕಾವು' ಪರಾ.

[ ?. / ಮರಾ. ತಟಕಾ = ತಂಟೆ, ವಿವಾದ ]

**ತಟಕಿ** (ನಾ). ತಡಿಕೆ ; ತಟ್ಟಿ : ಮರುಗ ಪಚ್ಚೆಯು ದವನದಿಂದೆ ತಟಕಿಯ ಬಿಗಿದು ಸುರುಚಿರ ಸುಲಾಮಂಚದಿಂದ ಪಂದರ ರಚಿಸಿ (ನವಮೋ. ೧೦-೬೭).

[ <ತಡಿಕೆ ]

**ತಟಕು₁,** ತುಟುಕು₁, ತೊಟಕು₁ (ಕ್ರಿ). ಹನಿ ; ತೊಟ್ಟಿಕ್ಕು : ಒಂಟಿ ಕುಕಿಲಿದು ಕೂಗದೇಕೆ ? ಬಿರಿನನೆ ನಾರು ಬೀರದೇಂ ? ತಟಕದೀ ಎಲೆವನಿ ಇದೇನು ? (ಗಿಳಿವಿಂ. ೨೮-೪೦). **ತುಟುಕು₁ :** ಹನಿಗಳು ಬೀಳುತ್ತಲೇ ಇದ್ದುವು. ಮುಖಕ್ಕೊಂದೆರಡು ಬಾರಿ ತುಟುಕಿದಾಗ ಮಾತ್ರ ನನ್ನ ಮೂಗು ಮುರಿದಿರಬೇಕು (ಮ್ಯಾಲಿಮಾ. ೨೨). **ತೊಟಕು₁ :** ಮೈಯಿಂದ ಬೆವರು ತೊಟಕುತ್ತಿತ್ತು (ಬಂಗಾಹ. ೨೨). ' ತೊಟ್ಟಿಕ್ಕು ' ಪರಾ.

**ತಟಕು$_2$**, ತಟಂಕು, ತಟುಗಂ, ತುಟುಂಕು$_2$, ತೊಟಕಂ$_2$ (ನಾ). ೧. ಹನಿ; ತೊಟ್ಟು; ಬಿಂದು : ಗುಟುಗುಟುಗುಟುಗುಟು ಎನುತಾ ತೆರಳುವ ಕಾಲಕ್ಕು ಗುಟುಕು ತಟಕಿನ ಚಿಂತೆ ತೊಲಗದಯ್ಯ (ಮೋಕ್ಷದೀ. ೦೩೪-೩); ಬಾಯೊಳಗಿನ ಎಂಜಲ ತಟಕು ಆ ಹೂಜೆಯ ಮೇಲೆ ಬೀಳುವವು (ಮುಂಬಯಿ. ೩-೯೨) ; ಉಪ್ಪಿನ ರಾಶಿಯ ಮೇಲೆ ಮಜ್ಜಿಗೆ ತಟಕು (ಗಾದೆ). ೨. ಕೊಂಚ ; ತುಸು ; ಸ್ವಲ್ಪ : ತಟಕೂ ಅವರಿಗೆ ಚಿಂತೆಯಿರಲಿಲ್ಲ (ಪದ್ಮಸ. ೨೪೧). **ತಟುಕು :** ೧. ಎಣ್ಣೆಯ ತಟುಕನ್ನು ಕೆಲಕಾಲದಿಂದಲೂ ನೋಡದಿದ್ದು ಅವನ ಮುಂಗುರುಳು . . . ಜಡೆಕಟ್ಟಿ ಇತ್ತು (ವಿಧಿವ್ಯ. ೬೬). ೨. ಮೊಲೆಯುಣ್ಣನವ್ವ ತಟುಕು ಮುಖ ಮೇಲಕ್ಕೆತ್ತನವ್ವ (ಪುರಂದ. ೧-೭೪-೧) ; ತನ್ನಿಂದ ಉಪಕಾರ ತಟುಕಾದರೂ ಇಲ್ಲ ಬಿನ್ನಾಣ ಮಾತಿಗೆ ಕೊನೆಯಿಲ್ಲವು (ಪುರಂದ. ೧-೦೦೬-೩). **ತಟುಗು :** ೨. ಮೊದಲೇ ತಟುಗು ಸೂಕ್ಷ್ಮ ಹೇಳಿದ್ರೆ ನಾನು ಕೂಗಾಡುತಿದ್ನಾ (ಮರಳಿ. ೪೦). **ತುಟುಕು$_2$ :** ೧. ಅಲ್ಲಿ ಇದ್ದವರೆಲ್ಲರು ಅವಳ ಬಾಯಿಗೆ ಒಂದೊಂದು ತುಟುಕು ಹಾಲು ಎರೆದರು (ಕಗದ್ಯ. ೪೦). **ತೊಟಕು$_2$ :** ೧. ಗುಟುಕು ಕೊಡು ತೊಟಕು ಕೊಡು (ಸಿಪೀಗೀ. ೧೯-೦೭). ೨. ತುಣುಕು ರೊಟ್ಟಿಗೂ ತೊಟಕು ಮಾನಕ್ಕೂ ಪಶುಗಳಂತೆ ಸಂಕಟಪಡಬೇಕಾದ ಈ ಕಾಲದಲ್ಲಿ (ವಿಜಾಮಂ. ೬೪).

**ತೊಟಕು ತೊಟಕು** (ದ್ವಿರುಕ್ತಿ) : ಕಿಂಡಿಗಿಂಡಿಯಿಂದ ಬೆಳಕು ಜಿನುಗು ತಿತ್ತು, ತೊಟಕು ತೊಟಕು (ನಡಬಂ. ೬೭-೩). [ <ತಟಕು$_1$ ]

**ತಟಕುವನಿ**, ತುಟುಂಕುಹನಿ, ತೊಟಕಂಹನಿ (ನಾ). ೧. ತೊಟ್ಟಿಕ್ಕುವ ಹನಿ ; ಉದುರುವ ಹನಿ : ತಟಕು[ಪಾಠಾಂ. ಟುಕು]ವನಿ ನೆತ್ತರಿನ ಲಯ ಸಂಘಟದ ಚಂಚಲ ಜೀವದಿಂದವಘಟೆಯ ಖಳ ನೆಮ್ಮಿದನು ಬಳಲಿಕೆಯಿಂದ ಹಳವಿಗೆಯ (ತೊರವೆ. ೬-೪೦-೪೫). **ತುಟುಂಕುಹನಿ :** ೨. (ಆಲಂ) ಅಲ್ಪ ಸ್ವಲ್ಪ ; ತೀರ ಸ್ವಲ್ಪ : ಏನಾದರೂ ಬಂದರೆ ತುಟುಂಕುಹನಿ ಮಾತ್ರ (ಸನ್ಯಾಸಿ. ೦೨೩). **ತೊಟಕುಹನಿ :** ೧. ಒಂದು ತೊಟಕುಹನಿ ಆಗಸದಿಂದ ಸಿಡಿದು ಬೀಳಲಿಲ್ಲ (ಬರಹಾ. ೫೮). [ ತಟಕು$_1$ + ಪನಿ$_2$ ]

**ತಟಕ್ಕನೆ**, ತಟಕನೆ (ಅ). ಬೇಗನೆ ; ಕೂಡಲೆ ; ಒಮ್ಮೆಲೆ ; ಇದ್ದಕ್ಕಿದ್ದಂತೆ : ಕಳಂಕಗಳು ಇದ್ದುದಿದ್ದ ಹಾಗೆ ತಟಕ್ಕನೆ ಹುಟ್ಟುವುದಿಲ್ಲ (ಜ್ಯೋತಿರ್ವಿ. ೮೯) ; ಇಂದಿರೆಗೆ ತಟಕ್ಕನೆ ಕೋಪ ಬಂತು (ನಿರಾಶೆ. ೧೨೮). **ತಟಕನೆ :** ಕೋಟೆಗಂ ತಟಕನೆ ಬಿಟ್ಟರೆನ್ನ ವ್ರತವೆಲ್ಲವ ತೀರಿಸಿಕೊಂಡು ನಿಲ್ಲದೆ (ಯಶೋರ. ೩೭). [ ತಟಕ್$^0$ + – ಅನೆ$_1$ ]

**ತಟಗಿ** (ನಾ). (?) : ಮೆಣಸು ಸಂಬಾರ ತಟಗಿಯೆಲ್ಲವಕ್ಕೆ ಸಹಿತ (ಸಾಇಇ. ೧೯೨೯, ಮಂಗಳೂರು. ೪೬೫-೩೪ : 1312). [ ? ]

**ತಟಗುಟ್ಟು** (ಕ್ರಿ). ೧. ಸುತ್ತಾಡು; ಅಲೆದಾಡು; ತೊಳಲು; ತಾಟಾಡು: ನಾನಾ ಯೋನಿಯಲಿ ತಟಗುಟ್ಟಿ[ಪಾಠಾಂ. ಭವಪಟ್ಟು]ಬಳಲುವುದುಚಿತವೇ (ಕುವ್ಯಾಖ. ೪-೦೨). ೨. ತಡವರಿಸಂ (?) : ಗಾಢಾಂಧಕಾರದಲಿ ತಟಗುಟ್ಟಿ ನಿದ್ರೆಯಲ್ಲಿರುತಿರ್ಪ ನೀರೆಯುಂ ಸಾರ್ದೊಡುರಿವಾರಿಯುಂತೊಪ್ಪಿರ್ದಳು (ಪರಶು. ೨೪-೧೨). ೩. ಹನಿಹನಿಯಾಗಿ ಸುರಿ ; ತಟತಟನೆ ಸುರಿ ; ತೊಟ್ಟಿಕ್ಕು : ಥಗೆಹೊಡೆದಳ್ಳೆ ಹೊಯ್ಯುತ ಬಿಸಿಲಿಂಗೆ ನಾಲಗೆ ನೀರು ತಟಗುಟ್ಟ ಸುರಿಯೆ (ಮೋಹತ. ೧೯-೦೪) ; ಅವನ ಕಣ್ಣೊಳಗಿಂದ ನಡು ನಡುವೆ ನೀರು ತಟಗುಟ್ಟುತ್ತಿತ್ತು (ನಿರಾಥ. ೯೩). ೪. ಗೊಣಗು : ಅವಳು ಬೆಳಗಿನಿಂದ ತಟಗುಟ್ಟುತ್ತಲೇ ಇದ್ದಾಳೆ (ರೂಢಿ).

[ ತಟ$_1$ + ಕುಟ್ಟು$_1$ ]

**ತಟಗುಡು** (ಕ್ರಿ). ತೊಟ್ಟಿಕ್ಕು ; ಹನಿಹನಿಯಾಗಿ ಬೀಳು ; ಸ್ರವಿಸು : ಗೌಳಿಗಳ ಹಿಂದೆ ಧಾವಿಸಿ ಹೋಗಿ ಬಿದ್ದುಬಿದ್ದು ಆ ತಟಗುಡುತ್ತಿರುವ ಹನಿಗಳನ್ನು . . . ನೆಕ್ಕತೊಡಗಿದರು (ಅನ್ನ. ೩೩೭).

[ ತಟ$_1$ + ಕುಡು$_1$ (<ಕೊಡು$_1$) ]

**ತಟಜ** (ಗುಂ). ೧. ತೀರದಲ್ಲಿ ಹುಟ್ಟಿದ,–ಬೆಳೆದ : ತೊಳಲಗದ ಗಂಧಶಾಲಿ ವನಮುಂ ತಟಜೋತ್ಪಳ ಗಂಧದೊಳ್ ತಡಂಗಲಸಿದ ಕಂಪಿನಾಸೆಗೆ ಮುಸುಂಕಿದ ಭೃಂಗಕದಂಬಕಂ (ಚಂದ್ರಪು. ೧-೯೪). (ನಾ). ೨. ತೀರದಲ್ಲಿ ಹುಟ್ಟಿದ ಮರ ಮೊದಲಾದುವು : ಕಿಡಪಲ್ಕೇಕೆಳಸುವ ಕೂಲಂಕಷ ಶೈವಲಿನಿಯ ಪೋಲ್ ತಿಳಿದ ಜಲಮುಂಮಂ ತಟಜಮುಮಂ (ಶಾಕುಂತ. ೬೯-೨). [ಸಂ.]

**ತಟತಟ$_1$** 'ತಟ$_1$' ಪರಾ.

**ತಟತಟ$_2$** 'ತಟ$_3$' ಪರಾ.

**ತಟತಟನೆ** (ಅ). ೧. ಪಟಪಟನೆ ; ದಡದಡಿಸುತ್ತ : ಹಸಿದು ಬಳುಕುಗು ತಟತಟನೆ ತಾಟಸ್ಯುಗಡಿಗಳಂ ಪೊಡವಿಯೊಳು ಹೊಸೆಹೊಸೆದುಕೊಳುಗಂತ ಸಿಯ ಬಸುಟಿಂ (ಬಸಪು. ೧೪-೧೭); ವಾತಪಿತ್ತವೆರಡಱ ದ್ವಂದ್ವಜರೋಗದಲ್ಲಿ ಅಡಿಗಡಿಗೆ ಹಾವಿನ ಹಾಗೆ ನಡೆಯುತ್ತಾ ತಟತಟನೆ ಹಾರಿಯಾಡುತ್ತಾ ಇಹುದು (ವೈದ್ಯಸಾ. I, ೪). ೨. ಬೇಗಬೇಗನೆ ; ಶೀಘ್ರವಾಗಿ : ಸಂಹಾರ ನಿಟಿಲರುದ್ರನವೋಲು ಬಗೆಯದತಿ ಪಟುಬಲರ ತಟತಟನೆ ಮಾರ್ಗವಂ ನಡಸಿದಂ ಯಮುನಗರಿಗಂ ಭೀಮ ಕಲಿತನದೊಳು (ತುರಂಗ. ೫೫-೩೦).

[ <ತಟ$_1$ + – ಅನೆ$_1$ ]

**ತಟತಟಿಸು** (ಕ್ರಿ). ತಳಮಳಿಸು ; ಸಂಕಟಪಡು : ನಿಂದು ಡಿಳ್ಳಿಸಿ ತಟತಟಿಸಿ ಮನನೊಂದು ಸುಯ್ಯುತೆ . . . ಚಿಂತಿಸುತಿರ್ದನಾ ಕಂಸ (ಅಕ್ರೂಚ. ೬-೦೪).

[ <ತಟ$_1$ + – ಇಸು$_3$ ]

**ತಟಪಟ$_1$** (ನಾ). ಪ್ರಾಣಾಪಾಯ ; ಪ್ರಾಣಬಾಧೆ : " ತಟಪಟ[ಪಾಠಾಂ. ಕಟ, ತಟ, ಮಟ]ಮೆನೆ ತಾಂ ಪ್ರಾಣಬಾಧೆ" (ಭಾರನಿ. ೩೦); ತಟಕಿನಿಂದ ತಟಪಟವಾಯಿತು (ಗಾದೆ). [ ? ]

**ತಟಪಟ$_2$** (ಅ). ೧.=ತಟತಟನೆ : ದಿಟಭಕ್ತನಂತೆ ಭಸಿತೋದ್ಧೂಳನಂ ಮಾಡಿ ತಟಪಟನುತಂಗಂ ಕರನ್ಯಾಸಮಂ ಮಾಡಿ (ಸೌದಿರ. ದೇ. ೬೩-೨). ೨. ಜೋರಾಗಿ ಮಿಡಿಯುತ್ತ ; ವೇಗವಾಗಿ ಹೊಡೆದುಕೊಳ್ಳುತ್ತ : (+).

**ತಟಪುಟನೆ**, ತಟಪೊಟನೆ, ತಟಹೊಟನೆ (ಅ). ದಡದಡನೆ ; ಪಟಪಟನೆ; ಬೇಗಬೇಗ : ತಳರ್ವಜ್ಜೆ ತಟಪುಟನಿಡುವಾಗ ವಿಟರೆದೆ ತಳಹೊಳಗೊಳು ತಿಹುದೊಡನೆ (ಭರಚಿ. ೧೨-೬೮) ; ಅಂಬರ ತುಡುಕೆ ಗಳೆಯನೇೞ್ ನೃಪನ ಮುಖಾಂಬುಜವನೆ ನೋಡುತಿರ್ದು ಕಂಬೆಳಗೊಲೆಯಲೊಡನೆ ತಟಪುಟ ನುಬ್ಬಿ ಡೊಂಬರು ಲಾಗುದೋಱುವರು (ಭರಚಿ. ೨೦-೩೯). **ತಟಪೊಟನೆ :** ಅಟಮುಟಲಿಪಿಗಾಗಿ ಕಟಕವಱಿಯೆ ಬಾಯ ತಟಪೊ[ಪಾಠಾಂ. ಮು] ಟನುಟ್ ಹೊಯ್ಸಿಕೊಂಡು ತುಟಿಯ ಚುಂಬಿಸುವ ಹಲ್ಲುಗಳ ನೀಗಿದರೆಂದು ವಿಟ ನಕ್ಕು ನುಡಿದನೆಲ್ಲರೊಳು (ಭರಚಿ. ೩೬-೯೨). **ತಟಹೊಟನೆ :** ವೈಶ್ಯನಿಕು ರುಂಬಮೆಲ್ಲಂ ತತ್ಪಲಂಗಳಂ ತಿಂದೊಡಲು ತುಂಬುವನಿತಱೊಳಾತಳಕೆ ತಟಹೊಟನೆ ಬಿಳ್ದುರುಳ್ದುದಂ ಕಂಡು (ಸಮ್ಯಕ್ತ್ವ. ೧೦-೫೦).

[ ತಟಪುಟ$_0$ + – ಅನೆ$_1$ ]

**ತಟಪೊಟನೆ** 'ತಟಪುಟನೆ' ನೋ.

**ತಟಬಂದಿ** (ನಾ). ರಕ್ಷಣೆಗಾಗಿ ಕಟ್ಟಿದ ಗೋಡೆ ; ಪ್ರಾಕಾರ ; ಕೋಟೆ ; ಕಿಲ್ಲೆ : ಕೈಲಾಸಪರ್ವತದ ಸುತ್ತಲಿನ ತಟಬಂದಿಯು ಸಿಡಿಯಹತ್ತಿ, ಪರ್ವತವೆಲ್ಲ ಲಿಕಿಲಿಕಿಯಾಗಿ ಮೇಲಿನವರು ಒಬ್ಬೊಬ್ಬರೆ ಕೆಳಗುರುಳ ಹತ್ತಿದರು (ಶೈವಸು. ೩೨೭) ; ಬಂಡುಗಾರರು ವಿಹನೆಗಾರ್ ಹಿಲ್ಲದ ಮೇಲೆ ತಟಬಂದಿಯನ್ನು ಕಟ್ಟಿಕೊಂಡು ಕೆಲವು ದಿವಸಗಳವರೆಗೆ ಇದ್ದರು (ಇಂಗ್ಲಇ. ೫೦). [ ←ಮರಾ. ತಟಬಂದೀ ]

**ತಟಮಟ** (ನಾ). ಕೊರತೆ ; ಅಭಾವ ; ತೊಂದರೆ : (+). [ ? ]

**ತಟವಟ** 'ತಾಟುಪೋಟು' ನೋ.

**ತಟವಟಗಾರ** (ನಾ). ಮೋಸಗಾರ ; ಕಪಟಿ ; ವಂಚಕ : (+).

[ ತಟವಟ (<ತಾಟುಪೋಟು) + – ಗಾರ (< – ಕಾಱ) ]

**ತಟವಾಣಿ$_1$** 'ತಟ್ಟುವಾಣಿ' ನೋ.

**ತಟವಾಣಿ$_2$** (ನಾ). ಗಟ್ಟಿಗಿತ್ತಿ ; ದಿಟ್ಟೆ ; ತಾಟಗಿತ್ತಿ : ಯಾರಿಗೂ ಅರೆ ಹೊಟ್ಟೆಯೂ ಇಲ್ಲದ ಹಾಗೆ ಮಾಡಿದೆಯಲ್ಲೇ, ತಟವಾಣಿ, ನಿನ್ನ ಹಾಳವಿದ್ಯಕ್ಕೆ ಬೆಂಕೀ ಹಾಕ (ಪಾಪಮರಾ. ೯೭) ; ಇವಳು ಸಾಧಾರಣ ಹೆಂಗಸಾಗಿ ತೋರುವುದಿಲ್ಲ; ಬಹು ತಟವಾಣಿಯಾಗಿ ತೋರುತಾಳೆ (ಪೀಟಮಾ. ೨೭). 'ಗಟ್ಟಿವಾಳಿ' ಪರಾ. [ ? ]

**ತಟವುಚ್ಚು** 'ತಟ್ಟುಚ್ಚು' ನೋ.

**ತಟಸ್ತ** (ನಾ). = ತಟಸ್ಥ ೩ : ತಟಸ್ತರಾಗಿಯಿದ್ದವರು ಅವ್ಮಾ ಯೇಸು ದುಃಖವ ಪಡುತ್ತಿದ್ದೀರಿಯೆಂದು ಕೇಳಿದರೆ (ಈಕ್ರಸ್ತ. ೭-೧೩).

[ <ಸಂ. ತಟಸ್ಥ ]

**ತಟಸ್ಥ** (ಗು). ೧. ದಡದಲ್ಲಿರುವ ; ಹತ್ತಿರ ನಿಂತಿರುವ. ೨. ಯಾವ ಪಕ್ಷವನ್ನೂ ವಹಿಸದ : ನಮ್ಮದು ತಟಸ್ಥ ರಾಷ್ಟ್ರ (ರೂಢಿ). (ನಾ). ೩. ಯಾವ ಪಕ್ಷಕ್ಕೂ ಸೇರದವನು : ತಟಸ್ಥನಾದವನಿಗೆ ತಂಟೆಯೇನು (ಗಾದೆ). ೪. ಔದಾಸೀನ್ಯವನ್ನು ತಾಳಿದವನು ; ಆಸಕ್ತಿಯಿಲ್ಲದವನು: ಅವಳು ಸರ್ವಾಂಗಸುಂದರಿಯಾಗಿರಲಿಲ್ಲವಾಗಿ ನಾವು ತಟಸ್ಥರಾದೆವು (ಭಿಪಾಕುಂ. ೪೩). ೫. ಚಲನೆಯಿಲ್ಲದಿರುವಿಕೆ ; ನಿಷ್ಕ್ರಿಯತೆ: ಸಮಯವು ಸ್ತಬ್ಧವಾಯಿತು. ಜಗತ್ತು ತಟಸ್ಥವಾಯಿತು (ಸೀತಾರ. ೧) ; ಪ್ರಗತಿ ಮಾರ್ಗದಲ್ಲಿಯೇ ಅಥವಾ ತಟಸ್ಥವಾಗಿದೆಯೇ (ಭಾರದ. ೫೪೫). [ ಸಂ. ]

**ತಟಸ್ಥತೆ** (ನಾ). ಯಾವ ಪಕ್ಷವನ್ನೂ ವಹಿಸದಿರುವುದು : ಅಮೇರಿಕಾ ದೇಶವು ಸಜ್ಜನರಂತೆ ತಟಸ್ಥತೆಯಿಂದ ಸತ್ಯಾಸತ್ಯ ಪರೀಕ್ಷೆಯನ್ನು ನಡೆಸಿರುವಹು (ವಿಜಾಮಂ. ೮).

[ ಸಂ. ತಟಸ್ಥತಾ ]

**ತಟಹಾಯ್**, ತಟಹಾಯು, ತಟಾಯು (ಕ್ರಿ). ೧. ಸೀಳಿಕೊಂಡು ಹೋಗು ; ಭೇದಿಸಿಕೊಂಡು ಹೋಗು : ಸುರುತಾಳ ಖಾನರ ಗಂಡ ನೆನಿಸಿಕೊಂಬ ಬಿರಿದಿನ ಭಟನಾರಿವನು ಇರದೇಳು ಕೊಪ್ಪರಿಗೆಯ ತಟಹಾಯ್ದುಚ್ಚ ಧುರಧೀರ ಬಾದುರಖಾನ (ಕುರಾಸಾಂ. ೨೦-೮೫). **ತಟಹಾಯು** : ೧. ಕಟಕಿಯ ಮಾತುಗಳೇಕೆ ಕನ್ಯಾಚೋರ ದಿಟ ನೋಡು ನೋಡು ನಿನ್ನೆದೆಯ ತಟಹಾಯಬೇಕೆಂದು ಮಸೆದ ಕೂರ್ಗಣೆಯನಾರ್ಭಟದಿಂದಲಿಕ್ಕಿದರ್ ಖಳರು (ಪೋಹಕ. ೩೪-೨೭) ; ಆ ಬಾಣ ಸುಬಾಹುವಿನ ಎದೆಯೊಡೆದು ತಟಹಾಯಲು ಅವನು ಗತಪ್ರಾಣನಾಗಿ . . . ಒರಗಿದನು (ಕಕುಮಾ. ೧೪೯-೪). **ತಟಾಯು** : ೧. ಅದು . . . ಸುಯೋಧನನ ದೇಹದಲ್ಲಿ ನೆಟ್ಟು . . . ಆಚೆಗೆ ತಟಾದು ಭೂಮಿಯಲ್ಲಿ ಪ್ರವೇಶಿಸಿತು (ಕ್ಮಪಾಕ. ೨೭). ೨. ದಾಟು ; ಹಾಯ್ದುಹೋಗು : ಅವನ ಅಂಗಡಿ ತಟಾದು ನೇರವಾಗಿ ಪೂರ್ವದಿಕ್ಕಿನ ಕಡೆ ಹೋಯಿತೆಂದರೆ ಸ್ವಲ್ಪ ದೂರದಲ್ಲೇ ಓಣಿ ಬಾಗುತ್ತದೆ (ಸಾಹೇಬ್. ೨). [ ತಟ್ಟ$_3$ + ಹಾಯ್$_1$ (<ಪಾಯ್) ]

**ತಟಹಾಯಿಸು**, ತಟಾಯಿಸು (ಕ್ರಿ). ೧. ದಾಟಿಸು ; ದಡವನ್ನು ಮುಟ್ಟಿಸು : ಆ ಕುರಿಗಳ ದೊಡ್ಡೆಯನ್ನು ಅಟ್ಟಿಕೊಂಡು ಹೋಗಿ, ಈ ನಾಡಿನ ಎಲ್ಲೆಯಿಂದಾಚೆಗೆ ತಟಹಾಯಿಸಿಬಿಡಬೇಕೆಂದು (ಮಂತ್ರಶ. ೯೭-೨೪). ೨. ದಾಟು ; ಹಾಯ್ದು ಹೋಗು : ಅಪ್ರಮೇಯನನ್ನು ಕರೆದುಕೊಂಡು ಹೋಗುತ್ತಾ ಒಂದು ಕೊಟ್ಟಡಿಯಿಂದ ಇನ್ನೊಂದು ಕೊಟ್ಟಡಿ ಹೀಗೆ ಎಂಟು ಹತ್ತು ಬಾಗಿಲನ್ನು ತಟಹಾಯಿಸಿ ಹೋದರು (ಮುಸುಗ. ೧೧೦). **ತಟಾಯಿಸು** : ೧. ತಟ್ಟು ಇದ್ದರೆ ತಟಾಯಸಿ ನಡೆದಾನು (ಗಾದೆ). ೨. ಮೂರು ಪಹರೆಗಳನ್ನು ತಟಾಯಿಸಿ ಹೋಗಿ (ದಾಲತ್. ೨೨೪) ; ಇಷ್ಟು ಏರುಪೇರುಗಳನ್ನು ತಟಾಯಿಸಿ ಇಂಥ ಸತ್ವವನ್ನುಳಿಸಿಕೊಂಡು ಬಂದಿರುವುದು ಜಗತ್ತಿನ ಇತಿಹಾಸದಲ್ಲೇ ಹೊಸದು (ಭಾರದ. ೪೧೭).

[ ತಟಹಾಯ್ + - ಇಸು$_3$ ]

**ತಟಹಾಯು** 'ತಟಹಾಯ್' ನೋ.

**ತಟಹೊಟ** (ನಾ). ೧. ಆತುರ ; ಉದ್ವೇಗ (?) : ಪಟುವಾಗಿ ಕರ್ಮಭಟನಂ ಜಯಿಸು ಬಯಲ ತಟಹೊಟದ ಕಾಂಕ್ಷೆಯನೆ ಪರಿಹರಿಸು (ಸಮ್ಯಕ್ತಾ. ೧-೫) ; " ಟಕ್ಕು, ಮೋಸ " (ಸಮ್ಯಕ್ತಾ. ಟಿಪ್ಪಣಿ). ೨. ತೊಂದರೆ ; ಜಂಜಡ : ಆವ ಸಂಕಟದ ತಟಹೊಟಂ ಸಮನಿಸಿಲ್ಲ (ಪರಶು. ೪೦-೫೦). ೩. ಗದ್ದಲ ; ಗಲಾಟೆ (?) : ಕಟಕಣಿಲ ಧನಿಯವುತ್ಕಟೆಯ ಮಾಗಧರ ಉಬ್ಬಟೆಯ ಕಾವಮಾಟದರ ತಟಹೊಟ ಮಹೋನ್ನತೆಯಕಟಕಟಾ ಬ್ರಹ್ಮಾಂಡಘಟ ಪೊಡೆಯದಿರದೆನಲ್ ಪಟುತರದೊಳೊಪ್ಪಿರ್ದುದು (ಲಕ್ಷ್ಮಭಾ. ೬-೧-೩೦).

[ ? ]

**ತಟಹೊಟನೆ** 'ತಟಪುಟನೆ' ನೋ.

**ತಟಾಕ** (ನಾ). ಕೆರೆ ; ಕೊಳ ; ಕಾಸಾರ ; ಪುಷ್ಕರಿಣಿ : " ಸರಸಿ ಸರಂ ಕಾಸಾರಂ ಸರೋಜಷಂಡಂ ತಟಾಕಮಾಧಾರಂ ಪುಷ್ಕರಿಣಿಯದು " (ವಸ್ತುಕೋ. ೨೪-೧೫) ; " ತಟಾಕಂ ಜಲಾಧಾರಮೆನೆ ಕೆಟಿ " (ಮಂಗರಾ. ೧೨೩-೧೪) ; ಗಗನತಳಮೆ ಪಜಿದು ಬಿಬ್ದುದೆನಿಪ ಬಹು ತಟಾಕದಿಂ (ಪಂಪಭಾ. ೧-೫೭ ರಗಳೆ) ; ಕುಟಿಗಳ್ ಬಹು ತಟಾಕಮಾದುವು (ಲೋಕೋಪ. ೧-೮ ಟೀಕೆ) ; ಉದಕವಟಿತ ಘನತಟಾಕಕ್ಕೆ ಫಲವಿಳುಹಿದ ಮರಕ್ಕೆ ನೆಟ್ಟನೆ ಜೋಡಿಯಾದುದಾ ಪುರಜನಂ (ಹಡಕಾ. ೯-೨೪). [ ಸಂ. ]

**ತಟಾಯಿಸು** 'ತಟಹಾಯಿಸು' ನೋ.

**ತಟಾಯು** 'ತಟಹಾಯ್' ನೋ.

**ತಟಾರನೆ** (ಅ). ಕೂಡಲೇ ; ಇದ್ದಕ್ಕಿದ್ದಂತೆ ; ತಟ್ಟನೆ : " ತಟಾರನೆ– ತಟಕ್ಕನೆ " (ಜಾನಕೋ. ೬೪). [ತಟಾರ್$_0$ + – ಅನೆ$_1$. / ತೆಲು. ತಟಾಲುನ]

**ತಟಿ** (ನಾ). ದಡ ; ತೀರ : ಸಕಲವೆಂದಡೆ ಇಷ್ಟ ನಿಷ್ಕಲವೆಂದಡೆ ಅದೞ ಅಭೀಷ್ಟ ಈ ಉಭಯದ ತಟಗಾಜದೆ ಹೊತ್ತು ಹೋರುವ ಮಾತಿನ ಕತ್ತಿಯ ಬಾಯಿಧಾರೆಯ ಘಾಯಕ್ಕೆ ಇನ್ನೇತಜ ಮದ್ದು (ಪೋಳಮಾ. ೪೪-೧೪೧).

[ ಸಂ. ತಟೀ ]

**ತಟಿಚ್ಚಂಚಳೆ** (ನಾ). ಮಿಂಚಿನಂತೆ ಚಂಚಲಳಾದವಳು,–ಅಸ್ಥಿರಳು : ತಟಿಚ್ಚಂಚಳೆ ಲಕ್ಷ್ಮೀಕಾಂತೆ ಪೂರ್ವಸ್ಥಿತಿಯನುಟಿದತಿಸ್ಥೈರ್ಯಮಂ ತಾಳ್ದಿದಳ್ (ಮಲ್ಲಿಪು. ೩-೧೯). [ಸಂ. ತಟಿಚ್ಚಂಚಲಾ (ತಟಿತ್ + ಚಂಚಲಾ)]

**ತಟಿಚ್ಛೃಂಗಾಟ** (ನಾ). ೧. ಮಿಂಚಿನಂತೆ ತಳತಳಿಸುವ ಚೌಕ,–ಚತುಷ್ಪಥ. ೨. ಮಿಂಚಿನ ಧಾರೆಯ ಸಂಚಾರ,–ಚಲನೆ ; ಮಿಂಚುಗಳಿಂದಾದ ಚತುಷ್ಪಥ. ೧, ೨ : ನಾಟಕ ಪ್ರಕರದಂತೆ ವಿಪುಳ ವೀಥಿ ವಿಭಾಸಿಯುಂ ಮೇಘಪಟಳದಂತೆ ತಟಿಚ್ಛೃಂಗಾಟನಿರತಮುಂ (ಪುಷ್ಪಪು. ೯-೩೦ ವ). [ ಸಂ. (ತಟಿತ್ + ಶೃಂಗಾಟ ; ತಟಿತ್ + ಶೃಂಗ + ಅಟ) ]

**ತಟಿತ್ಕಣ** (ನಾ). ಮಿಂಚಿನ ಕಣ ; ವಿದ್ಯುತ್ತಿನ ಕಿಡಿ : ಕುರುಕ್ಷೇತ್ರದೆರಡು ಬಣ ವಿಜ್ಞಾನದ ತಟಿತ್ಕಣ (ಸೂರ್ಯಪಾ. ४०-೮). [ಸಂ. ತಟಿತ್ + ಕಣ]

**ತಟಿತ್ತು** (ನಾ). ಮಿಂಚು : ಉಚ್ಚ ತಟಿತ್ಕರವಾಳನಾಂತು ತಜ್ಜಲದ ಭಟಂಗದಂ ಕುಡದೆ ತನ್ನಯ ಜೀವನಮಿತ್ತುದಬ್ಧಿ (ರಾಜಶೇ. ೧-೯೯) ; ತಟಿತ್ಕೋಟಿನಿಭಕಾಯ ಜಗನ್ನಾಥವಿಠಲಯ್ಯಾ ವಿಠಲಯ್ಯ (ಜಗದಾ. ೧೫೮) ; ತಟಿತ್ತು ಮೇಘಂಬೊಕ್ಕು ಮರೆಯಪ್ಪವೋಲ್ (ಶ್ರೀರಾಮಾ. ೫೯೩-೨೯೩).

[ ಸಂ. ತಟಿತ್]

**ತಟಿತ್ಪ್ರಭೆ** (ನಾ). ಮಿಂಚಿನ ಹೊಳಪು,–ಪ್ರಕಾಶ : ತಟಿತ್ಪ್ರಭಾಪರಿವ್ಯತಮಾದ ವಾಜಿಗಳ ವಂಗಡದಿಂದಮುಮಂ (ಶಾಕುಂತ. ೧೧೦-೧೭೦).

[ ಸಂ. ತಟಿತ್ಪ್ರಭಾ (ತಟಿತ್ + ಪ್ರಭಾ) ]

**ತಟಿದ್ವಲ್ಲರಿ**(ನಾ). ಬಳ್ಳಿಮಿಂಚು: ತಟಿದ್ವಲ್ಲರಿ ಬಳಸಿದ ಶರಲ್ಲಕ್ಷ್ಮಿಯಂತೆಯುಂ ತಾರಾವಳಿ ಬಳಸಿದಿಂದುಕಳೆಯಂತೆಯುಂ . . . ಕನ್ಯಕಾಕದಂಬವ ಬಳಸಿಂ ಬಗೆಗೊಳಿಸಿ (ಪಂರಾಪಾ. ೫-೫೭ ವ). [ ಸಂ. (ತಟಿತ್ + ವಲ್ಲರಿ) ]

**ತಟಿದ್ವಳಯ** (ನಾ). ಮಿಂಚಿನ ಆವರಣ,–ವರ್ತುಲ : ತಟಿದ್ವಳಯವಿಳಸಿತಂಗಳಾಗಿ ನಿಜಪ್ರಕೋಷ್ಠನಿಷ್ಠಿತಂಗಳಪ್ಪ ವೀರಾಂಗದಂಗಳೆಂಬ ಕಟಕಂಗಳುಂ (ಆದಿಪು. ೧೫-೩೭).

[ ಸಂ. ತಟಿದ್ವಲಯ (ತಟಿತ್ + ವಲಯ) ]

**ತಟಿದ್ವಿಲಾಸ, ತಟಿದ್ವಿಳಾಸ** (ನಾ). ಮಿಂಚಿನ ಲೀಲೆ,–ಹೊಳಪು : ಈ ಕೇವಲ ಸೌಂದರ್ಯದ ಅದ್ಭುತವಾದ ತಟಿದ್ವಿಲಾಸವನ್ನು ನಾವು ಲಲಿತಾಸಹಸ್ರನಾಮದಲ್ಲಿ ಗುರುತಿಸಬಹುದು (ಸೌಂದಸ.೧೦೩). **ತಟಿದ್ವಿಳಾಸಃ** ದಶನಾಂಶು ಪೊದಟ್ಟ ತಟಿದ್ವಿಳಾಸಮಂ ಗೆಲೆ ನುಡಿದಂ. . . ಖೇಚರಾಧಿಪಂ (ಪಂಪರಾಮಾ. ೫-೧೭). [ ಸಂ. (ತಟಿತ್ + ವಿಲಾಸ) ]

**ತಟಿದ್ವಿಳಾಸ** 'ತಟಿದ್ವಿಲಾಸ' ನೋ.

**ತಟಿನಿ** (ನಾ). ಹೊಳೆ; ತೊರೆ; ನದಿ: ಉರ್ವೀಧರ ಚಕ್ರಪ್ರಾಂತದೊಳ್ನಿಜ್ಝರತತಿ ತಟಿನೀವ್ಯೂಹದೊಳ್ಪೂರವಾರಂ . . . ಪರ್ವಿಸುತ್ತಿರ್ದುವೆತ್ತಂ (ಕಾದಂಉ. ೫೩೨); ಇವರಲ್ಲಿ ಗುಪಿತಚರಿತೆಯ ಕಂಡು ದೇವಮುನಿ ತಟಿ[ಪಾಠಾಂ. ಟ]ನಿಗಳು ತಪಸು ಫಲವಾಯಿತೆಂದು (ವಿದಾಳ. ೧೯೦).

[ ಸಂ. ತಟಿನೀ ]

**ತಟಿನೀತನೂಜ** (ನಾ). ನದೀಸುತ ; ಗಂಗೆಯ ಮಗ ; ಭೀಷ್ಮ : ವಿವರಿಸಿ ತಿಳುಹಿದನು ತಟಿನೀತನೂಜನಜಾತಶತ್ರುವಿಗೆ (ತಿಮ್ಮಉ. ೬ ಸೂಚನೆ).

[ ಸಂ. (ತಟಿನೀ + ತನೂಜ) ]

**ತಟಿನ್ನಾದ** (ನಾ). ಗುಡುಗು; ಮೇಘನಾದ: ಚತುರ್ದಶ ಭುವನಾವಧಿಯೆನೆ ದುರ್ಯಶಸ್ತಟಿನ್ನಾದ[ ಪಾಠಾಂ. ಪಟಹನಾದ ]ಮಾದಮೇನೊದವಿದುದೋ (ಪಂಪರಾಮಾ. ೭-೯೭).

[ ಸಂ. (ತಟಿತ್ + ನಾದ) ]

**ತಟಿನ್ಮಾಲಿಕೆ, ತಟಿನ್ಮಾಳಿಕೆ** (ನಾ). ಮಿಂಚಿನ ಮಾಲೆ : ಜಲಮಯಮಿಳೆಯೆಲ್ಲಂ ಪ್ರಜ್ವಲಿತ ತಟಿನ್ಮಾಲಿಕಾಮಯಂ ದೆಸೆಯೆಲ್ಲಂ (ವೃಷವಿ. ೧೪-೨೭). **ತಟಿನ್ಮಾಳಿಕೆ:** ಜಳದೌಘಶ್ಯಾಮಧೂಮಪ್ರತತಿ ಚಳತಟಿನ್ಮಾಳಿಕಾಲೋಲಕೀಲಾವಳಿಸಂಜಾತೇಂದ್ರಗೋಪಪ್ರಸರವಿಸರದರ್ಚಿಃಕಣಂ . . . ಬಂದುದು . . . ಅಬ್ದಕಾಲಂ (ಚಂದ್ರಪು. ೪-೩೯).

[ ಸಂ. ತಟನ್ಮಾಲಿಕಾ (ತಟತ್ + ಮಾಲಿಕಾ) ]

**ತಟಿನ್ಮಾಳಿಕೆ** 'ತಟಿನ್ಮಾಲಿಕೆ' ನೋ.

**ತಟಿಲ್** (ನಾ). ಒಂದು ಅನುಕರಣ ಶಬ್ದ : ತಟಿಲ್ಚಟಿಲ್ಪಟಿಲ್ ಗರಿಗರಿಲೆಂಬ ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳ್ (ಗಿರಿಕ. ೬-೩೮).

**ತಟಿಲ್ಲತೆ** (ನಾ). ಬಳ್ಳಿಮಿಂಚು : ತಟಿಲ್ಲತೆವೊಲಾಕಾಶಕ್ಕೆ ನೆಗೆದು ಪಾಱಿದಳಾಗಳ್ (ಪಂಪರಾಮಾ. ೯-೪೧); ಇನಿಸಿನಿಸು ಮುಗಿಲ ತುಂತುರ್ವನಿಯ ತಟಿಲ್ಲತೆಯ ವಿಮಳ ಶಶಿರವಿಗಳ್ (ಜಿಟ್ಮಮ. ೮-೧೩೪); ನಯನಾಂಶು ಗಗನಕೆ ತಟಿಲ್ಲತೆಯ ಪರ್ಬಂ ಪಡೆಯಲು (ಚಿಬಪು. ೫-೧೨).

[ ಸಂ. ತಟಿಲ್ಲತಾ (ತಟಿತ್ + ಲತಾ) ]

**ತಟಿಸು$_1$** 'ತಟ್ಟಿಸು' ನೋ.

**ತಟಿಸು$_2$** (ಕ್ರಿ). ಆವರಿಸು ; ಮುಸುಕು (?) : ಛಿಟಿಲು ಛಿಟಿಛಿಟಿಲೆಂದು ಸಿಡಿಯುತ ಖಿಟಿಖಿಟಿನೆ ಖಿಟಿಲೆಂದು ಕಣಗಳು ತಟಪಟನೆ ಹಾರು ತಲಿ ಕಾರ್ಬೊಗೆ ತಟಿಸುತಾಕ್ಷಣದಿ (ಹಮಚ. ೬೬). [ ? ]

**ತಟುಕು** 'ತಟುಕ್ಕು$_2$' ನೋ.

**ತಟುಗು** 'ತಟುಕ್ಕು$_2$' ನೋ.

**ತಟುವಳ್ಳುವೆರೆ** (ನಾ). ಒಂದು ಗದ್ದೆಯ ಹೆಸರು (?): ಕೊಡುಗೂನ್ನಾಡಾ ಕೆಲ್ಲಿಪುಸೂರಾ ಚೆಡಿ ಅಕ್ಕೆ ಕರ್ಗುಲಪ್ಪೊಲತ್ತುಟುವಳ್ಳುವೆರೆಉಂ ವಸವಿಗಾಲುಂ ಎರಡು ಕಳಿನಿಲುಂ ತೋಟ್ಟಮುಂ (ಮೈಆರಿ. ೧೯೩೫, ೧೦೭-೧೮ ; 9ನೆಯ ಶತ).

[ ? ]

**ತಟೆ$_1$** (ಕ್ರಿ). ತಟ್ಟು ; ಬಡಿ : ಹತವಿಧಿಯೆ ! ಕದ ತೆರೆಯಲಿಲ್ಲ ಕದ ತಟೆದಾಗ. ಕದ ತೆರೆಯೆ, ಆ ಪುರುಷ ಬರಲೊಲ್ಲ (ಉದ್ಯಾಲ. ೧೦-೧೩) ; ತಾಗು, ತಗಲು; ಪಳಂಚಲೆ, . . . ತಟೆ, ಬಡಿ, ಸೋಂಕು (ಕಂನುಹು. ೮೪). 'ತಟ್ಟು$_1$' ಪರಾ. [ <ತಟ್ಟು$_1$ ]

**ತಟೆ$_2$** (ನಾ). ತಡಿ ; ದಡ : ತುಂಗಭದ್ರೆಯ ತಟೆಯ ಕನ್ನನ (ಕಇಆ. ೧೧೯-೨೪-೧೦ : ?). [ ಸಂ. ತಟಾ ]

**ತಟೆತಟೆ** (ನಾ). ವ್ಯರ್ಥ (?) : ತಟೆತಟೆಯುಹ ಲಾಲಸೆಯನು ಸೂಡಿ ಪಟಪಟನೈದಿ ಪರರ ತಾ ಬೇಡಿ ದಿಟಹುಸಿಗಳ ಮನದೊಳಗೆಡೆ ಮಾಡಿ ತಟಮನುಜರು ಬಳಲ್ವರು ಸುಖಕಾಡಿ (ಅವಧೂ. ೨೯). [ ? ]

**ತಟ್ಟ$_1$** (ನಾ). ತಟ್ಟನ್ನು ಧರಿಸಿದವನು ; ಜೈನಯತಿ : ತಟಟುದಲೆಗಳ ತಟ್ಟರೋ ನೊರೆ ಸುರಿವ ಬಾಯ್ಮನಿಕೆ ಹಡಿಕೆಗಳೊ . . . ತಟ್ಟುಗಳ ಹಗರಣಿಗರೊ ಎನಲು ಮಲಧಾರಿಗಳು ಗಜಬಜಿಸಿ ನೆರೆವುತ್ತ (ಬಸವು. ೫೦-೫೩).

[ ತಟ್ಟು$_7$ + – ಅ$_7$ ]

**ತಟ್ಟ$_2$** 'ಥಟ್ಟು' ನೋ.

**ತಟ್ಟಗ್ಗೆಱೆ** (ನಾ). ಒಂದು ಊರಿನ ಹೆಸರು : ಪೊಲಮೇರೆ ತಟ್ಟಗ್ಗೆಱೆಯ ಕಿಟ್ಕೆಱೆ ಪೋಗಿ ಅಕ್ಷರಕಲ್ಲ ಮೇಗೆ (ಎಕ. II, ೩೫-೫ ; ಸು. 800).

[ ? + ಕೆಱೆ ]

**ತಟ್ಟಡಿ** 'ದಟ್ಟಡಿ' ನೋ.

**ತಟ್ಟನೆ** (ಅ). ಕೂಡಲೆ; ಬೇಗನೆ: ಪೂಸರಳಿಂದೆ ಶಿವನ ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯ ಕೊಟ್ಟ ಮನ್ಮಥ (ಮೋಹತ. ೫-೬೦) ; ನಿನ್ನಯ ಕರುಣಾದೃಷ್ಟಿಯೊಳೆನ್ನನುದ್ಧರಿಸಿ ತಟ್ಟನೆ ಸಲಹು (ಕಂಸವಿ. ೪-೩೮) ; ನೈಜವಾದ ಉಪಮಾನಗಳು ; ಮನಸ್ಸಿಗೆ ತಟ್ಟನೆ ಹೊಳೆಯುವಂತೆ ಜನಜೀವನದಿಂದಲೇ ಆರಿಸಿದ ಆಣಿಮುತ್ತುಗಳು (ಜಗದಾ. ೭೨).

[ <ತಟಕ್ಕನೆ ]

**ತಟ್ಟಮ್ಮ** (ನಾ). ಮೈಮೇಲೆ ಸಣ್ಣಗುಳ್ಳೆಗಳೇಳುವ ಒಂದು ಬಗೆಯ ರೋಗ; ಗೋಣಿತಟ್ಟು; ದಡಾರ:"ಗೊಬ್ಬರರೋಗ" (ಜಾನಕೋ. ೬೪).

[ ತಟ್ಟು$_2$ + ಅಮ್ಮ$_2$ ]

**ತಟ್ಟಲ್** (ನಾ). ಒಂದು ಊರಿನ ಹೆಸರು (?) : ತಟ್ಟಲ ಏಚಗಾವುಣ್ಣನ ಮಾವ ಸಾನ್ಸಯ್ಯ ಕೊಟಗಮ್ಮನ್ನು ತುಱುವ ಕೊಣ್ನು ಪೋಪಾಗ (ಮೈಆರಿ. ೧೯೪೧, ೨೫-೧೨ ; 1030). [ ? ]

**ತಟ್ಟಲಿ, ತಟ್ಟಲೆ** (ನಾ). (ಉಕ) "ಹೆಣ್ಣುಮಕ್ಕಳ ಚಪ್ಪಲಿ; ಕೆರವು" (ಜಾನಕೋ. ೬೪). **ತಟ್ಟಲೆ :** ಮಗಳಿಗೆ ಒಂದು ಜೊತೆ ಹೊಸ ತಟ್ಟಲೆ ಕೊಡಿಸಿದರು (ರೂಢಿ). [ ? ]

**ತಟ್ಟಲೆ** 'ತಟ್ಟಲಿ' ನೋ.

**ತಟ್ಟಾಡು** (ಕ್ರಿ). ೧. ಒಂದಕ್ಕೊಂದು ತಗಲು ; ಘರ್ಷಣೆಯಾಗು : ಜೋಗಿ ಜೋಗಿ ತಟ್ಟಾಡಿದರೆ ಮೈಯೆಲ್ಲಾ ಬೂದಿ (ಗಾದೆ). ೨. ಅತ್ತಿತ್ತ ಓಲಾಡು ; ತೂರಾಡು ; ತೂಗಾಡು : ಶಕ್ತಿಯು ಬತ್ತಿ ಕರಗಳು ಜಾರಿ ತಟ್ಟಾಡುತ್ತ ಪಿಂಗಡೆಗೊಲೆದು ನಿಂದನು (ಜಿನಭಾ. ೨೦-೧೨) ; ನೀತಿಯ ಮೆಟ್ಟಲ ಮೇಲೆಯೇ ನಿಲ್ಲಲಾರದೆ ತಟ್ಟಾಡುವವನು ನಿಯಮಗಳನ್ನು ಹೇಗೆ ಹಿಡಿದಾನು (ನೀಗಟ್ಟು. ೭). 'ತಾಟಾಡು' ಪರಾ.

[ ತಟ್ಟು$_1$ + ಆಡು$_1$. / ತೆಲು. ತಟ್ಟಾಡು ]

**ತಟ್ಟಾಮಾಲೆ** (ನಾ). ಅಪ್ಪಾಲೆ ತಿಪ್ಪಾಲೆ; ಕಳ್ಳೆಮಳ್ಳೆ (ಉಕ).

[ ←ತಮಿ. ತಟ್ಟಾಮಾಲೈ ]

**ತಟ್ಟಾರ** (ನಾ). ಅಕ್ಕಸಾಲಿಗ: ಚೋಮತ್ತಟ್ಟಾರ ನಾಮಧೇಯೇನ ಲಿಖಿತಂ ತಾಮ್ರಸಾಧನಂ (ಮೈಆರಿ. ೧೯೪೫, ೩೧-೫೨ ; ಸು. 610).

[ <ಸಂ. ತ್ವಷ್ಟೃ ]

**ತಟ್ಟಾಱಿಸು** (ಕ್ರಿ). ಸಂಪೂರ್ಣವಾಗಿ ಒಣಗಿಸು ; ನಿರ್ದ್ರವಗೊಳಿಸು ; ಬಳಲಿಸು : ತುಟಗಂಟಲಿರ್ಪೊಡಿ ನೆಱಿ ಪೊತ್ತಿ ಕರಮೆ ನೀರಡಿಕೆ ಮಿಗೆ ತಟ್ಟಾಱಿಸುತ್ತ ಬರೆ ಮರಗಿಚ್ಚಿನಂತೆ ಪಸಿವೊಳಗೊಳಗೆ ಸುಡುತ್ತ ಬರೆ (ಸಾನಂಚ. ೪-೧೭೧). [ ತಟ್ಟಾಱು + -ಇಸು$_3$ ]

**ತಟ್ಟಾಱು** (ಕ್ರಿ). ೧. ಒಣಗಿ ತಾರಲಾಗು ; ಸಂಪೂರ್ಣವಾಗಿ ನೀರು ಇಂಗಿಹೋಗು : ನಿರ್ದ್ರವಮಪ್ಪುದೇ ಕಾರಣಮಾಗಿ ಕಡುಪಿಸಿಲಿಂಗೆ ತಟ್ಟಾಱಿದ ಚರ್ಮದಿಂ ಪೃಷ್ಠದ್ವಾರಂ ಮುಚ್ಚಲ್ (ಪಂಚತಂ. ೦೯-೯) ; ಮರ ತಟ್ಟಾಱಬೇಡೆಂದು ಇರಿಸಿ ಬಂದೆ (ಸರ್ವವ. ೧೦೫-೫೭೭). ೨. (ಅಲಂ) ಇಲ್ಲವಾಗು; ಅದೃಶ್ಯವಾಗು: ಮೆಯ್ಯುಗ್ಗಷ್ಣ ಏಱಿತು ಬೇಟ ಬೇರೂಱಿತು ಲಜ್ಜೆ ತಟ್ಟಾಱಿತವಳಿಗೆರ್ದೆಯೊಳಗೆ (ಕುರಾಸಾಂ. ೨೨-೯). 'ತಾಱು$_1$' ಪರಾ. [ ತಟ್ಟು$_0$ + ಆಱು$_1$ ]

**ತಟ್ಟಿ$_1$, ಚಟ್ಟಿ$_3$, ಚಟ್ಟೆ$_3$** (ನಾ). ೧. ಬಿದಿರಿನ ತಡಿಕೆ ; ಬಿದಿರನ್ನು ಹೆಣೆದು ಮಾಡಿದ ಗೋಡೆ : ರಾಜಪುವು ಬಳ್ಳಿಗವುಂಗಿನ ತಟ್ಟಿ ಬಳ್ಳಿಮಾವಿನ ಮನೆ ಬಳ್ಳಿಮಲ್ಲಿಗೆಯ ಮಂಡಪವೆಂಬಿನಿತುಂ ಬಸಂತದೊಳ್ (ಶಾಂತಿಪು. ೭-೧೩೦); ವರವೇಲಿ ತಟ್ಟಿ ತಳೆ ಗೋಪುರವಾಳ್ವೆಱಿ ಪಡಿ ತವಂಗ ವಂಕದ ಕಳನೋವರಿ ಸೀಯಬಾರವಂತಃಪುರಮುಯ್ಯಲ್ ಕೃತಕ ಶಿಖರಿಯುದ್ಯಾನವನಂ (ಪುಷ್ಪಪು. ೬-೨೩) ; ನಮ್ಮನೆಯ ಮುಂಭಾಗಕ್ಕೆ ಕಾಂಪೋಂಡು ಹಾಕಿಸಬೇಕೆಂತ ತಟ್ಟಿಗಳನ್ನು ಕೊಂಡಿಟ್ಟಿದ್ದೆ (ಮುಳ್ಳಿಹಾ. ೧೭) : ಗಳಗಳು ನಿಂತವು; ತಟ್ಟಿಯೂ ತಯಾರಾಯಿತು; ಕೆವ್ಮಣ್ಣು ಸೆಗಣಿಗಳನ್ನು ಕಲೆಯಿಸಿ ದಂಟಿನ ತಟ್ಟಿಗಳಿಗೆ . . . ತುಂಬ ಮೆತ್ತಿಸಿ ಭದ್ರಮಾಡಿಸಿದರು (ಗಂಗಾಸಾ. ೦೫೨). ೨. ಬಿದಿರಿನ ಚೌಕಟ್ಟು ; ಚಪ್ಪರ : ಮಿಂಚಿನ ತಟ್ಟಿಯಂ ಬಳಸಿದಂತಿರೆ ಕಣ್ಗಳ ಮಿಂಚು ಮೇಗೆ ಪೂಗೊಂಚಲ ಪಂದರಂ ಪಡೆಯೆ (ಅರ್ಧನೇ. ೨-೯೫); ನಡು ಜಗುಪ್ಸಾರಸದ ನಟ್ಟನಡುವೆಂದಿರದೆ ಎಡಬಲದ ಪ[ಪಾಠಾಂ.ಬ] ರಿಗಳಿಲ್ಲಿನ ತಟ್ಟಿಯೆಂ[ಪಾಠಾಂ. ಕಟ್ಟಡೆ]ದಿರದೆ (ಹಿಂಡೋರ. ಹ. ೫೦೩-೧೦). ೩. ಚಾಪೆ ; ಬಿದಿರಿನ ಚಾಪೆ : ಗಣನಾತೀತ ವಿಮುಕ್ತ ಮಾರ್ಗಣಗಣಂ ಗೀರ್ವಾಣಮಾರ್ಗಾಂತದೊಳ್ ಪೆಣೆದರ್ ತಟ್ಟಿಯನೆಂಬಿನಂ ದಲೆನೆ ಪರ್ವಿಪರ್ವನ್ನಮೆಚ್ಚೆಚ್ಚು . . . ಕಾದುತ್ತಿರಲ್ಕೆ (ನೇಮಿಪು. ೦೨-೩೩೪) ; ಮುಱಿದ ಗುಡಿಲೊಳಗೆ ಹಱಿದ ತಟ್ಟಿಯ ಮೇಲೆ ಹಱಿದ ಬೊಂತೆಯ ಹಾಸಿಕೊಂಡು ಕೆಡೆದಿಹಂಗೆ (ಸರ್ವವ. ೦೬೩-೭೭೭); ಹಿರಿಯ ಗಗನವ ಪಿಡಿದು ತೆರೆ ತಟ್ಟಿಯಂತೆ ಸುತ್ತಿರಿಸಲಳವಡೆ ಮುಕ್ತಿ ನರರ್ಗಪ್ಪುದು (ಸಾನಂಚ. ೨-೨೦೫) ; ಏನಗೊಂದು ಪಱಿದ ತಟ್ಟಿಯಂ ಮಠದ ಗೊಂಟಿನೊಳ್ ಪಾಸಿ ಕೊಟ್ಟೊಡೆ (ದಶಕು. ೦೦-೩೩ವ) ; ಒದೆದು ಸತ್ವದೊಳೌಂಕೆ ತಟ್ಟಿಯ ಮುದುಡುವಂದದಿ ಸುತ್ತಿ ಧರಣಿಯ (ಪ್ರಹ್ಲಾಚ. ೩-೦೦). ೪. ತಡಿಕೆಯ ಬಾಗಿಲು,–ಕದ : ಸದನ ತಾನಿರಲಡವಿ ಯಾತಕೆ ಕದವಿರಲು ತಟ್ಟಿಗಳ ದ್ವಾತಕೆ (ಕನಕಾಂ. ೨೩) ; ತಟ್ಟಿ ಮುಂಚ್ಚು (ರೂಢಿ). ೫. ಬಿದಿರಿನಿಂದ ಮಾಡಿದ ಬುಟ್ಟಿ ; ವಂಕರಿ. ೬. ಜೇನುಗೂಡು : ನಾಲ್ಕೆಂಟು ತಟ್ಟಿಗಳು, ಆನೆಯ ಕಿವಿಗಳಂತೆ ಬಂಡೆಯ ಸೆರಗಿಗೆ ಅಲಂಕಾರವಾಗಿ ತೂಗಿ ಕೊಂಡಿದ್ದುವು (ಕುಡಿಕೂ. ೨೯). ೭. ಗುರಾಣಿ; ಢಾಲು : ಕರಮೆಸೆದತ್ತು ಕಲಾಭೃದ್ಬಿಂಬಂ ಬಿರಿಮುಗುಳ್ಗಣೆಯನ ಬಿಂಗದ ಬಿಜ್ಜಣದರಲಂಬನ ಮೂಲದ ತಟ್ಟಿಯ ಕಾವನ ಕೈಗನ್ನಡಿಯ . . . ವಿಲಾಸಮನನುಕರಿಸಿ (ಜಯಿಕಾ. ೦೪-೭). **ಚಟ್ಟಿ$_3$** : ೮. ಯಾತ್ರಿಕರಿಗಾಗಿ ನಿರ್ಮಿಸಿದ ಹುಲ್ಲಿನ ಚಪ್ಪರ : ಒಂದು ರಾತ್ರಿ ಅತ ಒಂಟಿಯಾಗಿ ಚಟ್ಟಿಯೊಂದರಲ್ಲಿ ಮಲಗಿದ್ದ (ಸನ್ಯಾಸಿ. ೪೪). **ಚಟ್ಟೆ$_3$** : ೫. ಚಟ್ಟೆಯಾದರೂ ಬುಟ್ಟಿಯಷ್ಟು ದೊಡ್ಡದಿದೆಯಲ್ಲ (ರೂಢಿ).

**ತಟ್ಟಿಯ ಬಿಲ್ಲು** = ಒಂದು ವಿಧವಾದ ಬಿಲ್ಲು : ಅಲ್ಲಿಯಾತನ ಕೂಡೆ ತಟ್ಟಿಯ ಬಿಲ್ಲುಗಳನಾ ಪೊಂಗುವಿಲುಗಳ ಬಲ್ಲಿತೆನಿಪಾ ನಾಳಿವಿಲ್ಲುಗಳ . . . ಪಿಡಿದಾ ನಿಶಾಟರು ನೆರೆದುದವನೊಡನೆ (ಸಾಳ್ವಭಾ. ೫-೧೩). **ತಟ್ಟಿ ಹಾರಿಸು** = ಲಘುವಾಗಿ ಎಣಿಸು : ಸಲಹೆ ಕೊಟ್ಟ ಹಿತೈಷಿಗಳ ಮಾತನ್ನು ಅವನು ಮುಗುಳುನಕ್ಕು ತಟ್ಟಿ ಹಾರಿಸಿದ್ದನು (ಮಲಿಮ. ೧೧೦). [ ದೇ.೫ ತಮಿ. ತಟ್ಟಿ, ತಟ್ಟಿಯ; ಮಲ. ತುಳು. ತಟ್ಟಿ; ಕುಇ. ತಟ. /ಪ್ರಾ. ತಟ್ಟೀ. / ಹಿಂ. ಮರಾ. ಚಟ್ಟೀ ]

**ತಟ್ಟಿ$_2$** (ನಾ). ಒಂದು ಬಗೆಯ ಸಸ್ಯ (?) : “ ಕಾಷ್ಠವಲ್ಲಿಕಾ – ತಟ್ಟಿ ” (೭ಪಧಿ. ೩೨). [ ? ]

**ತಟ್ಟಿಕೆ** (ನಾ). ತಾಗುವಿಕೆ ; ಸೋಂಕುವಿಕೆ ; ಸ್ಪರ್ಶ : ಪುಟ್ಟುಗೆ ಸದ್ವಂಶದ ಸವಿದಟ್ಟಿಕೆ ಸಲೆ ಸರಸಮೆನಿಸೆ . . . ಊದುವಿರಿನ್ನಂ (ಚಿಕವಿ. ೬-೦೨೪). [ ತಟ್ಟು$_1$ + -ಇಕೆ ]

**ತಟ್ಟಿಗಟ್ಟು** (ಕ್ರಿ). ತಡಿಕೆ ಕಟ್ಟು (?) : ನೆರೆದು ಪೊತ್ತ ನೃಪಾಳಜಾಳ ಕಿರೀಟಕೋಟಿ ಮಣಿಪ್ರಭಾ ಪರಿಕರಂ ಧೃತವೌಕ್ತಿಕಾತಪವಾರಣಕ್ಕೆ ಕದಂಬ ರ್ಝಲ್ಲರಿಗಳಪ್ಪಿನವುಂದುಸಾರದದಂತೆ ತಾಳ್ದಿದುದಿತ್ತಲುಂ ಸುರಶರಾಸನ ದಿಂದಮೆಣ್ದೆಸೆ ತಟ್ಟಿಗಟ್ಟಿದ ಭಂಗಿಯಂ (ಅನಂಪು. ೯-೬೨) ; ಶರದೊಳಿ ತಟ್ಟಿಗಟ್ಟಿದುದು ದಿಕ್ತಟವಂಬಿನ ಹಂದರಿಕ್ಕಿದಂಬರತಳವೆಂಬಿನಂ (ಅನಂಪು. ೧೪-೬). [ ತಟ್ಟಿ$_1$ + ಕಟ್ಟು$_1$ ]

**ತಟ್ಟಿಗೆ** (ನಾ). ತಡಿಕೆ (?) : ಚೌರಾಸಿ ಲಕ್ಷ ಜೀವಿಗಳೆಲ್ಲ ತಿರುಗುವ ರಾಟಲಗಂಟೆಂಬ ಕರರಾಟಳವ ಮಾಡಿ ಭಕ್ತೆಂಬ ಕದರಿಗೆ ಸರವಮುಕ್ತಿ ಬಿಲ್ಲ ಪೂಡಿದನು ಅಷ್ಟತನುಗಳ ಸೆಡೆಯ ತಟ್ಟಿಗೆಯ ಮಾಡಿ ಅಷ್ಟಂತರಂಗಪ್ಪ ಮದವಾ ಜೇಷ್ಠ ಕುಂಟಿಯ ಮೊಳಗೆಗಳ ಮಾಡಿ ದಾರವ ಘಟ್ಟೊಸ್ತ ಕಟ್ಟಿಗೆಸಿದದ (ದೇವಾಂಪು. ೫-೬೮). [ ? ]

**ತಟ್ಟಿಗೋಡೆ** (ನಾ). ಬಿದಿರುಂ ಮೊದಲಾದುವನ್ನು ಹೆಣೆದು ಮಾಡಿದ ಗೋಡೆ; ತಡಿಕೆಗೋಡೆ: ಅಡಕೆದಬ್ಬೆಯ ತಟ್ಟಿಗೋಡೆಗಳನ್ನು ಹಾಕಿದ್ದರು (ಮಲಿಮ. ೧೧) ; ತಿಮ್ಮಪ್ಪಹೆಗ್ಗಡೆ ತಟ್ಟಿಗೋಡೆಯ ಒಳಗೆ ಹೋಗಿ (ಮಲಿಮ. ೭೦೪). [ ತಟ್ಟಿ$_1$ + ಗೋಡೆ ]

**ತಟ್ಟಿಡು** (ಕ್ರಿ). “ಪರಿತ್ಯಾಗಮಾಡು” (ಸಾನಂಚ. ಕೋಶ) : ಓಡಾಂತು ಕಯ್ಯಲ್ಲಿ ಮೋಚಾಂತು ತಲೆಯಲ್ಲಿ ಮಾನವುಂ ತಟ್ಟಿಟ್ಟು ಕೀರ್ದ ತಟ್ಟುಟ್ಟಂಗೆ (ಸಾನಂಚ. ೭-೪೮). [ ತಟ್ಟು$_0$ + ಇಡು$_1$ ]

**ತಟ್ಟಿಬಲೆ** ‘ತಟ್ಟಿವಲೆ’ ನೋ.

**ತಟ್ಟಿಮೆಡಱು** (ಕ್ರಿ). ತಟ್ಟಿಯನ್ನು ಹೆಣೆ; ತಡಿಕೆ ಕಟ್ಟು: “ತಟ್ಟಿಮೆಡಱಿದಂ –ತಟ್ಟಿವೆಣೆದಂ ” (ಶಮದ. ಪರಿ. ೨) ; ಮಿಂಚಂ ತ[ಪಾಠಾ. ಕ]ಟ್ಟಿ ಮೆಡಱಿ ದಂತೆ ಸುತ್ತಿಱಿದ ಕಾಲ್ಗಾಪಿನ ಕಡಿತಲೆಯ ಬಳಸಿದಗಣ್ಯ ಪಣ್ಯಾಂಗನಾ ಜನದ ನಡುವೆ ಮಣಿಮಯ ಪೀಠಂಗಳನೇಱಿ (ಪಂಪಭಾ. ೩-೫೫ ವ) ; ನೂಱುಯೋಜನದಳವಿಯ ಖಾಂಡವವನಮೆಲ್ಲಮಂ ತಟ್ಟಿ ಮೆಡಱಿ ಮಶಕಮಾತ್ರಮಪ್ಪೊಡಂ ಮಿಸುಕಲ್ ಛಿದ್ರಮಿಲ್ಲದಂತಾಗೆ ಶರಪಂಜರ ದೊಳ್ ಮುಚ್ಚಿ ಮುಸುಕಿದಾಗಳ್ (ಪಂಪಭಾ. ೫-೯೬ ವ). [ ತಟ್ಟಿ$_1$ + ಮೆಡಱು ]

**ತಟ್ಟೆಯು, ತಟ್ಟೆಯ** (ನಾ). ತಡ ; ಸಾವಕಾಶ ; ನಿಧಾನ : ತಡೆಯದೀ ಕಾರ್ಯವನು ನೀ ಕೈಯೊಡನೆ ಮಾಡುವುದುಚಿತವಿದನೀನೊಡಬಡದೆ ತಟ್ಟೆಯವ ಮಾಡಲುಯೆಮ್ಮ ವಂಶಾಳಿ ಕೆಡುವುದು (ಜೀವಂಚ. ೪-೬೯) ; ಗಾಳಿಯಳ್ಳೆಯನಿಱಿಯಲಗ್ನಿಜ್ವಾಲೆಯಲಿ ತಟ್ಟೆಯವೆ (ಕುವ್ಯಾಸ. ೧೪-೬೦). **ತಟ್ಟೆಯು** : ಹೋಗು ಫಲುಗುಣ ಕಂಸಮಥನನ ಬೇಗ ಬಿಜಯಂಗೈಸಿ ತಾ . . . ತಟ್ಟೆಯವಾಗದೀಕ್ಷಣವೆನಲು (ಕುವ್ಯಾಸ. ೬-೦೪) ; ಗಮನ ತಟ್ಟೆಯವಾಯ್ತು ವೇಗಭ್ರಮಣ ಜಡವಾಯ್ತು (ಕುವ್ಯಾದ್ರೋ. ೧೦-೨೫). [ ?. / ತಮಿ. ತಟ್ಟೆಯ = ಗುರಾಣಿ, ಢಾಲು ]

**ತಟ್ಟಿರಾಯ** (ನಾ). (ಕರಾ) ಬಿದಿರು, ಹುಲ್ಲು ಮೊದಲಾದುವುಗಳಿಂದ ಮಾಡಿದ ಬೆದರುಬೊಂಬೆ; ಬೆಚ್ಚು : ಅವುಗಳನ್ನು ಹೆದರಿಸಲು ಬೈಹುಲ್ಲಿನ ತಟ್ಟೀರಾಯನನ್ನು ತಯಾರಿಸಿದರು. ಮನುಷ್ಯಾಕೃತಿಯ ಈ ತಟ್ಟೀರಾಯನಿಗೆ ಹರಕು ಅಂಗಿ ತೊಡಿಸಿ . . . ಮಡಕೆಯ ಕುಲಾವಿಯನ್ನಿಟ್ಟರು ತಲೆಗೆ (ಬಾಳಿಗಿ. ೧೦೭). [ ತಟ್ಟಿ₁ + ರಾಯ ]

**ತಟ್ಟಿವಲೆ, ತಟ್ಟಿಬಲೆ** (ನಾ). ಒಂದು ಬಗೆಯ ಬಲೆ : ತಡಿಕೆವಲೆ ತಟ್ಟಿವಲೆ ಹಾಸುವಲೆ ಬೀಸುವಲೆ ಕೊಡತಿವಲೆ ಕೋಲುವಲೆ (ಹಡಕಾ. ೫-೮) ; ಕಟ್ಟಿದನು ಕಣಿಗಳಲಿ ಸುತ್ತಲು ತಟ್ಟಿವಲೆಗಳ ಸೋಹಿನಲಿ (ಕುಮಾವ್ಯಾ. ೫-೬೪) : ಹಾಸುವಲೆ ಬೀಸುವಲೆಯು ತಟ್ಟಿವಲೆ ತಿಣ್ಣವಲೆ . . . ಪೇರ್ವಲೆಯ ಪೊಟಿಗಳು ವಿಂಧ್ಯಕನ ಕೂಡೆ (ಸಾಳ್ವಭಾ. ೫-೧೮) ; ತಡಿಕೆವಲೆ ತಟ್ಟಿವಲೆ ಸಾಲುವಲೆ ಕೋಲುವಲೆ . . . ಮಲೆವಲೆಗಳಿರ್ದುವಾ ಶಬರರಲ್ಲಿ (ಸಿದ್ಧೇಶು. ೮-೬). **ತಟ್ಟಿಬಲೆ :** ಪಾರವಲೆ ಗುಂಡಿವಲೆ ಮತ್ತಾನೆಯ ಬಲೆ ತಟ್ಟಿಬಲೆಗಳೆಂಬಿವನು (ಪುಣ್ಯಾಸ್ರ. ೯-೩೭). [ ತಟ್ಟಿ₁ + ಬಲೆ₁ ]

**ತಟ್ಟಿವೇಣೆ** (ಕ್ರಿ).=ತಟ್ಟಿಮೆಡಱು : " ತಟ್ಟಿಮೆಡಱಿದಂ – ತಟ್ಟಿವೇಣೆದಂ " (ಶಮದ. ಪರಿ. ೨). [ ತಟ್ಟಿ₁ + ಪೆಣೆ₁ ]

**ತಟ್ಟಿಸು, ತಟಿಸು₁** (ಕ್ರಿ). ೧. ತಗುಲಿಸು ; ತಾಕಿಸು ; ಸೋಕಿಸು ; ಅನುಭವಕ್ಕೆ ತರು : ಕಟ್ಟಿದಾಗಳೆ ಕರ್ಮಗಳು ಫಲಗೊಡವವು ಕಟ್ಟಿರ್ದು ಕಾಲದ ಮೇಲೆ ಬಿಟ್ಟು ಪೋಪಾಗ ಜೀವಗೆ ಸುಖದುಃಖವ ತಟ್ಟಿಸಿ ತಾವು ಜಾಱುವುವು (ಭರತೇ. ೬೮-೫೫). **ತಟಿಸು₁ :** ೧. ತೋಟದಲಿಹ ಹೂವಿಗೆಲ್ಲ ತಟಿಸೆ ನಾವು ನಿನ್ನ ಗಲ್ಲ . . . ನಕ್ಕೆ ನೀನು (ಚಿಂತನ. ೨೪-೧೦). ೨. ಅಡ್ಡಿಪಡಿಸು; ತಡೆದು ನಿಲ್ಲಿಸು ; ತಡೆಹಿಡಿ : ಅಲ್ಲಿಯ ಸರ್ಪ ಫೂತ್ಕಾರಗಳಿಂದೆದ್ದ ವಿಷಧೂಮವು ಜಗತ್ತಿನ ಮೂಗನ್ನೇ ಮುಸುಕುತ್ತಿದೆ. ಯಾವ ಶಿವನು ಇದನ್ನು ತಟಿಸುವನೊ ಯಾರು ಬಲ್ಲರು (ಸಾಹಿಸಂ. ೨೦೦).

ತಟ್ಟಿಸಿ ಮಾತಾಡು=೧. ತಡವರಿಸಿ ಮಾತನ್ನಾಡು. ೨. (ಮಾತನಾಡುವಾಗ; ಓದುವಾಗ) ತಡವರಿಸು ; ಉಗ್ಗು ; ಗುಂಕ್ಕು (ಉಕ) : " ಉಗ್ಗು–ತಟ್ಟಿಸಿ ಮಾತಾಡು " (ಗಂಗಾಮ. ೩೪).

[ ತಟ್ಟು₁ + – ಇಸು₃ ]

**ತಟ್ಟಿಹುಚ್ಚ** (ನಾ). ವಿವೇಚನೆ ಇಲ್ಲದವನು ; ಮೂರ್ಖ : ಅವನೇನು ತಟ್ಟಿಹುಚ್ಚನಲ್ಲ (ಆಷಾಭೂ. ೫೯).

[ ತಟ್ಟಿ₀ (P ←ತಮಿ. ತಟ್ಟೈ₇) + ಹುಚ್ಚ (<ಪಿಚ್ಚ₁) ]

**ತಟ್ಟಿಱಿ** (ಕ್ರಿ). ಅಪ್ಪಳಿಸಿ ಹೊಡೆ : ಅಂತೆರಡುಂ ಬಲದ ಕರಿಘಟೆಗಳೊಂದೊಂದಱೊಳ್ ತಾಗಿ ತಟ್ಟಿಱಿಯೆ ಬಿಸುನೆತ್ತ [ರ] ಬಿಗಳುರ್ವಿ ಪಾಯೆ (ಪಂಪಭಾ. ೧೧–೬೭ವ). [ ತಟ್ಟು₁ + ಇಱಿ₁ ]

**ತಟ್ಟು₁** (ಕ್ರಿ). ೧. ಬಡಿ ; ಕುಟ್ಟು ; ಹೊಡೆ ; ಬಾರಿಸು ; ಅಪ್ಪಳಿಸು : "ತಟ್ಟು–ತಾಡನೇ" (ಶಮಧಾ): ಮೆಯ್ಯಂ ವನಜವದನೆ ಕೇಳ್ ಗ್ರೀಷ್ಮದೊಳ್ ನಿಚ್ಚಮೆತ್ತಂ ಸತಿ ತಟ್ಟುತಿರ್ಪ[ರ್ಪ] [ಪಾಠಾಂ. ತಟ್ಟಾಂತಿರ್ಪ] ಕಾಯ್ಯಿಂದುರಿವ ಬಿಸಿಲೊಳ್ (ಕಾವ್ಯಾವ. ೮೦೮); ಪೊಯ್ಯ ರಣತೂರ್ಯರವಂ ತಱಿಸಂದು ತಾಗಿ ತಟ್ಟುತ್ತಿಱಿದವು (ಮಹಾನೇ. ೦೩-೨೩೦) : ಮೆಟ್ಟುವ ತಟ್ಟುವ ಮೇಲೆವಾಯ್ವ . . . ದುಷ್ಟಮಪ್ಪ ಹಯಮಂ (ಧರ್ಮಾಪ. ೮-೧೩) ; ಕೈವಾರಿಸಿ ತೊಡೆದಟ್ಟಲೊಡನೆ (ಮೋಹತ. ೧೮-೧೦೦). ೨. ಮುಟ್ಟು ; ತಾಗು ; ಸೋಕು : ತನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೊಲ್ ಸೋಲ್ತು (ಪಂಪಭಾ. ೧-೭೦) ; ಪೊಡರ್ದುದ್ಯದ್ದ್ಯೋತಿ ತಟ್ಟುತ್ತಡಿದರ್ಗಳ ವಿನ್ನೂಡಿದಂತಪ್ಪುವೀಗಳ್ (ಕಾವ್ಯಾವ. ೦೩೭) ; ಕನಕದಾಸನ ಕಾವ್ಯದೊಳ್ ದೋಷ ತಟ್ಟದು (ಮೋಹತ. ೧-೨೪) ; ಕಲಿದೋಷಂ ತಟ್ಟದವೋಲ್ ಕುಲಜರನುದ್ಧರಿಸೆ (ಅಪ್ರತಿ. ೫೨-೨) ; ಲೋಕದ ಚೆಲುವಿನ ವಸ್ತುಗಳು ಕವಿಯ ಮನವನ್ನು ಮುಟ್ಟುವ ಮತ್ತು ತಟ್ಟುವ ಪರಿಗಳನ್ನು ಹೀಗೆ ಗುರುತಿಸುತ್ತಾನೆ (ಸೌಂದಸ. ೨೪). 'ಮನದಟ್ಟು' ಪರಾ. ೩. ಬೆನ್ನು ಚಪ್ಪರಿಸು ; ಉತ್ಸಾಹಗೊಳಿಸು ; ಉಬ್ಬಿಸು : ಈಗಳೆ ನಿಮ್ಮಾಳ್ದನಂ ತಟ್ಟಿ ರಣಕಟ್ಟಂ (ರಾಮಾಶ್ವ. ೦೦೦-೦೪). ೪. ರೊಟ್ಟಿ, ವಡೆ, ಒಬ್ಬಟ್ಟು, ಮುಂತಾದ ಭಕ್ಷ್ಯಗಳನ್ನು ಕೈಯಿಂದ ಬಡಿದು ಮಾಡು : ಮೃದುಪಾಕಮಾಡಿ . . . ಹೆಱಿದುಪ್ಪದಿಂದವೆ ಬೆರಸಿ ವಡೆಯಂತೆ ತಟ್ಟಿಕೊಂಡು (ಸೂಪಶಾ. ೧-೭೮) ; ನಾಳೀನೇ ಒಬ್ಬಟ್ಟು ತಟ್ಟಟ್ಟುಕೊಂಡರೆ ನಾಡಿದ್ದು ಗೌರೀ ಬಾಗಿನ ಕೊಡೋದಕ್ಕೆ ಅನುಕೂಲವಾಗುತ್ತೆ (ಮಾಂಗಲ್ಯ. ೬೭) ; ರೊಟ್ಟಿ ತಟ್ಟು (ರೂಢಿ). ೫. ಲೇಪಿಸು ; ಬಳಿ ; ಸವರು: 'ತಟ್ಟುಕ' ಪರಾ. ೬. ಅಟ್ಟು ; ಓಡಿಸು : (ಶಿ). ೭. ಮೆಲ್ಲನೆ ಬಡಿ : ಮಗುವನ್ನು ತಟ್ಟಿ ಮಲಗಿಸಿದಳು (ರೂಢಿ). ೮. ಅನ್ವಯಿಸು ; ಹೊಂದು : ಶಾಕುಂತಲ ನಾಟಕಕ್ಕಾದರೆ ಈ ಮಾತು ತಟ್ಟುವುದಿಲ್ಲ (ಕಾವ್ಯಸ. ೩೩). ೯. ಹಿಡಿಸು ; ಇಷ್ಟವಾಗು : ಜನವಚನಮೆಂತುಟಂತುಟುಮನನುನಯದಿಂ ಪೇಟದಂತೆ ತನ್ನಿಚ್ಚೆಗೆ ಕೆಮ್ಮನೆ ತ[ಪಾಠಾಂ. ಕ]ಟ್ಟೆ ಗಟಪಿ ಪೆಱರಂ ತನಗೆ ವಶಂ ಮಾಳ್ಪನೆಯ್ದುಗುಂ ದುರ್ಗತಿಯಂ (ಧರ್ಮಾಮೃ. ೫-೧೦೦). ೧೦. ಉಂಟುಮಾಡು; ತಗುಲಿಸು : ಕೊಟ್ಟು ಕುಡುಕುಡುದಂಬುಲಮಂ ಸವಿಯಂ ತಟ್ಟುವ ತನಿಗಲೆಯುಪಚರದಿಂ ಮನಮುಟ್ಟಿ ಕರಂ ಕೂಡಿದರ್ (ಜಯಕಾ. ೨-೫೩). ೧೧. ಬಯಸು ; ಇಚ್ಛಿಸು (?) : ಖ್ಯಾತಿ ಲಾಭ ಪೂಜೆಯಂ ತಟ್ಟದೆ ಇಹಪರಂಗಳಂ ಸಾರದೆ ಭವಬಂಧಕ್ಕೆ ಬಾರದೆ ಗೆಲ್ಲ ಸೋಲಕ್ಕೆ ಹಾರದೆ (ಅದವ. ೩೦-೮೭) . ೧೨. (?) : ತನ್ನನೆ ತಾನೊಲವಿಂದೆ ಜಾನಿಸುತ್ತಗಲದೆ ನಿಂದನೊರ್ವ ಸವಣಂ ಬಗೆಗೊಳ್ವೆಱಿ ತಟ್ಟಿತೆಂಬಿನಂ (ಕಬ್ಬಿಗಕಾ. ೨೨೭).

ತಟ್ಟಿ ನೋಡು = ಪರೀಕ್ಷಿಸು : ಶಿವಮಂತ್ರ ಶಿವಲಿಂಗ ಭಸಿತ ರುದ್ರಾಕ್ಷಿಯೆಂಬಿವು ನೆಲಸಿ ನಿಂದೆಡೆಯೊಳವು ನಿಲ್ಲವೆಂಬುದಿದು ಶಿವವಾಕ್ಯವಿನ್ನೆನ್ನ ಮನವನಿನ್ನೇಂ ತಟ್ಟಿ[ಪಾಠಾಂ. ಥಟ್ಟಿಸಿ]ನೋಡುವೆ ಯತೀಶಯೆನಲು (ಸೋಮಚ. ೩-೪೪).

[ ದೇ.॥ ತಮಿ. ಮಲ. ತಟ್ಟು ; ಕೊಡ. ತಟ್; ತುಳು. ತೆಲು. ತಟ್ಟು ]

**ತಟ್ಟು₂** (ನಾ). ೧. ಅಪ್ಪಳಿಕೆ ; ಅಂಗೈ ಹೊಡೆತ. ೨. ಒಂದು ಬಗೆಯ ರೋಗ ; ಗೋಣಿತಟ್ಟು ; ದಡಾರ. ೩. ಸ್ಪರ್ಶ ; ಸೋಕುವುದು; 'ತಾಗುದಟ್ಟು', 'ಮುಟ್ಟುದಟ್ಟು' ಪರಾ. ೪. ಇಚ್ಛೆ ; ಬಯಕೆ : ಸ್ತ್ರೀ ಸಂನ್ಯಾಸಿಯಾದಡೇನಯ್ಯಾ ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿ ತಟ್ಟಿ [ಪಾಠಾಂ. ಪ್ಪಿ]ಲ್ಲದಿರಬೇಕು (ಮಹಾದೇ.ಬ. ೦೦೫-೫೩೭). ೫. ಲೇಪಿಸುವುದು; ಲೇಪನ : ತಟ್ಟು ಚಟ್ಟು ಶಬ್ದೌ ಶ್ರೀಖಣ್ಡಕುಂಕುಮಾದಿ ಗಂಧದ್ರವ್ಯ ಕರ್ದಮಕೃತ ಸ್ಥಾಸಕವಚನೌ (ಶಬ್ದಾನು. ೪೪೦ ವ್ಯಾಖ್ಯಾ). ೬. [ನಾಟ್ಯ] ಭರತನಾಟ್ಯದ ಹತ್ತು ವಿಧವಾದ ಅಡವುಗಳಲ್ಲಿ ಒಂದು : ಪ್ರಸಿದ್ಧ ನಾಟ್ಯಾಚಾರ್ಯರು ಈ ಅಡವುಗಳನ್ನು ಹತ್ತು ವಿಧವಾಗಿ ವಿಂಗಡಿಸಿದ್ದಾರೆ (೧) ತಟ್ಟು. (೨) ಮೆಟ್ಟು. (೩) ನಾಟು . . . (೧೦) ನಡೈ (ಅಭಾನ್ನ. ೩೩) . [ <ತಟ್ಟು₁ ]

**ತಟ್ಟು₃** 'ತಟ್ಟೆ' ನೋ.

**ತಟ್ಟು₄, ಥಟ್ಟು₁** (ನಾ). ಪಕ್ಕ ; ಕಡೆ : ಆಗ್ನೇಯ ಮೊದಲಾಗಿ ನೈಋತ್ಯಪರಿಯಂತರ ತೆಂಕಣ ತಟ್ಟು . . . ಪಡುವಣ ತಟ್ಟು (ಪ್ರ್ಯಾಆರಿ. ೧೪೮೭. ೦೮-೦೩; 1488); ಗೃಹಸ್ಥಾಶ್ರಮಮೇ ಒಂದು ತಟ್ಟುಂ ಮಿಕ್ಕಾದ ಮೂಱು ಮಾಶ್ರಮಂಗಳುಮೊಂದು ತಟ್ಟು (ಭಾರಶಾಂ. ೧೩-೫೮); ಬೀಳ್ವರು ಸಾವಿರದ ಸಂಖ್ಯಾತ ಬಲವು ಅತಿರಾವದಲಿ ಬಳಿಕೆರಡು ತಟ್ಟಿನ ಬಿಲ್ಲನತಿಬಲರು (ಕೋಗಯು. ೨೦-೬); ತಂಗಾಳಿ ಮೊದಲಾದ ವಿರಹೋದ್ದೀಪನಕಾರಿಗಳೆಲ್ಲವು ಒಂದು ತಟ್ಟು ಈ ಪಾಪಿಯಾದ ಚಂದ್ರನೆ ಒಂದು ತಟ್ಟು (ವಡಕಾ. ೩೩). **ಥಟ್ಟು₁ :** ಕಟ್ಟಿವಕಟಕಟೆನುತ ನಾಲ್ವರೊಂದಾಗಿ ಬಾಯ್ಬಿಟ್ಟರೈ ಭಟಭಟಧ್ವನಿಗಂಜಿ ಶಿಖಿ ಯಾವ ಥಟ್ಟನೋಳ್ಪಂತೆನುತ (ತುರಂಗ. ೮೪-೪೦).

ತಟ್ಟಾಗು = ಪಕ್ಕಕ್ಕೆ ಸರಿ ; ಕೆಲಸಾರು ; ಹಿಂದೆಗೆ : "ಕೆಲಸಾರು = ಬದಿಗಾಗು, ತಟ್ಟಾಗು, ಸರಿ" (ಗಂಗಾಮ. ೯೭) ; ತುರಗದ ತಟ್ಟು ತಟ್ಟಾದು ದಾತನ ಭಟರೊಳಸರಿದು (ಜಂಪ್ರಸಾಂ.೮-೮೭); ಆರ್ಭಟಿಸುತ್ತ ಬರ್ಪಾಯುಧಕೆ ತನ್ನಯ ಮೆಯ್ಯಗೊಡದೆ ತಟ್ಟಾಗಲು (ನವಮೋ. ೧೨-೮೩).

[ದೇ.॥ ತಮಿ. ತೆಲು. ತಟ್ಟು]

**ತಟ್ಟು5** 'ಥಟ್ಟು2' ನೋ.

**ತಟ್ಟು6** (ನಾ). ಕುದುರೆಗಳಲ್ಲಿ ಒಂದು ಬಗೆ; ಗಿಡ್ಡ ಕುದುರೆ: ಹೆಣ್ಣು ಕುದುರೆಗಳನ್ನು ಟಾಕಣಾಗಳನ್ನು ತಟ್ಟುಗಳನ್ನು (ಗ್ರಾಮಾಕ. ೧೦೪) ; ಅವರ ಕುದುರೆಗಳು ತಟ್ಟುಗಳಾಗಿದ್ದವು (ತೋಳಮು. ೭೭).

ತಟ್ಟಿನ ಬೆಂಬಳಿ = ತಟ್ಟುಕುದುರೆಗಳ ಮೇಲೆ ಹಾಕುವ ತೆರಿಗೆ (?) : ಅನುಪು ಕೊಡವೀಸ ಹಂದರ ಹಣ ಹರವಿಗೂಳು ಮೇಟುಕೊಳಗ ಕಪಿಲೆಯು ಪಾವಂತಿಗೆ ತಟ್ಟಿನ ಬೆಂಬಳಿಯ ಆರು ಹನ್ನೆರಡರ ದಂಡ (ಮೈಆರಿ. ೧೯೩೪, ೨೭-೨೦ : 1430). [ ←ಮರಾ. ತಟ್ಟೂ; ತಟೂ; ಹಿಂ. ತಟ್ಟೂ ]

**ತಟ್ಟು7**, ತಾಟು6 (ನಾ). ೧. ಗೋಣಿಯ ಪಟ್ಟೆ: ಕುನ್ನಿ . . . ಕಾಲೊರಸುವ ತಟ್ಟಿನ ಮೇಲೆ ನಿಂತು ಬಾಲವನ್ನು ಅಲುಗಾಡಿಸಿತು (ಪ್ರೇಮುತ. ೧೮) ; ಹರಿದ 'ತಟ್ಟು'ಗಳ ಮೇಲೆ ಒರಗಿಕೊಂಡು ಉರುಳಾಡು ತ್ತಿದ್ದ (ಜನಸಿ. ೮೫). ೨. ಜೈನ ಅಥವಾ ಬೌದ್ಧ ಸಂನ್ಯಾಸಿಗಳ ವಸ್ತ್ರ,-ಹೊದಿಕೆ : "ತಟ್ಟು ತಾಡನೇ, ಕ್ಷಪಣಕಾಚ್ಛಾದನೇ ಚ (ಜೈನ ಸಂನ್ಯಾಸಿಯ ಹೊದಿಕೆ)" (ಶಮುಧಾ) : "ಸವಣರ ಉಳ್ಳುಡೆ" (ಚತುನಿ. ೬. I, ೭೪) ; ತಟ್ಟು ದೋಷಮೆಂಬೊಡೆ ತಟ್ಟೆಂಬುದು ಪಸೆ (ಧರ್ಮಾಮೃ. ೯-೮೯) ; ತಟ್ಟು ಕುಂಚ ಕಮಂಡಲುಗಳೆಂ . . . ಬೌದ್ಧಕಾರಿಗಳು ಕೇಳಿರೊ (ಮನುಗುಂ. ೨೪೭-೪) ; ಜಡೆಯೆಂಬುದು ಗೊರವಂಗೆ ತಟ್ಟೆಂಬುದು ಸವಣಂಗೆ (ಅನಂಪು. ೨-೨೮ ವ) ; ಋಷಿಯರ್ಗೆ ತಟ್ಟು ಕುಂಚ ಪುಸ್ತಕಂಗಳುಮಂ ಅಜ್ಜಿಯರ್ಗೆ ವಸ್ತ್ರಂಗಳುಮಂ ಕುಡುವುದು (ಪುಣ್ಯಾಸ್ರ. ೧-೧೦೭ ವ) ; ತಟ್ಟುಗಳ ಹಗರಣಿಗರೊ ಎನಲು ಮಲಧಾರಿಗಳು ಗಜಬಜಿಸಿ ನೆರೆವುತ್ತ (ಬಸವು.೫೦-೫೩). **ತಾಟು** : ೧. ಚಾಪೆತಾಟುಗಳನ್ನು ಕಂಕುಳಲ್ಲಿರಿಸಿ . . . ಕೊನೆಯ ಬಾರಿ ಕಲಾವಿದರನ್ನು ಕಂಡು (ಬಣ್ಣಮಾ. ೩೨).

ತಟ್ಟು ಸೀಳು = ಚರ್ಮವನ್ನು ಸುಲಿ : ಕಟ್ಟಧಿಕ ಜಿನನನಾ ಪರಿಕರವ ನೆಯ್ದೆ ಹುಡಿಗುಟ್ಟುವನೆಯಿವನನಿನ್ನಾವುಪಾಯದಿ ಪಿಡಿದು ತಟ್ಟ[ಪಾಠಾಂ. ಕಟ್ಟ, ದಟ]ಸೀಳುವವೆಂದು ನೆರೆದ ಶ್ರವಣನಿಕಾಯ ಕೆರಳಿ ಕಿಡಿಕಿಡಿ ಯೋದುದು (ಸೋಮುಚ. ೪-೮೭). [ ?. / ಮರಾ. ತಾಟ್ ]

**ತಟ್ಟುಂಗೆಡೆ** (ಕ್ರಿ). ಶಕ್ತಿಗುಂದಿ ಬೀಳು; ದುರ್ಬಲವಾಗಿ ಕುಸಿ: ಒಡೆದೆಡದ ಬರಿಯ ಪಲಗೆಯನುಡಿಯೆಲ್ಲಗ್ಗಳ್ ನೆಲ್ಕು ನೆಳಿಲೆನಲ್ ಕರಿ ತಟ್ಟುಂಗೆಡೆಯೆ ಭಗದತ್ತನಿಟ್ಟಂ ಕಡುಪಿಂ ಪಿಡಿದಿರ್ದ ನಿಶಿತ ವಜ್ರಾಂಕುಶದಿಂ (ಮಹಾನೀ. ೧೨-೧೪೩). [ತಟ್ಟು3 (<ತಟ್ಟೆ) + ಕೆಡೆ1 ]

**ತಟ್ಟುಂತಾಱುಂ, ಥಟ್ಟುತಾಱು** (ಅ). ಭಿನ್ನಭಿನ್ನವಾಗಿ ; ಚೆಲ್ಲಾಪಿಲ್ಲಿ ಯಾಗಿ ; ಅಸ್ತವ್ಯಸ್ತವಾಗಿ : ನಾಲ್ಕುಂ ತೆಱದ ಶಸ್ತ್ರಾಸ್ತ್ರಮುಖಂಗ ಳೊಳ್ ತಟ್ಟುಂತಾಱುಂ ಬೀೞ್ವ ಚತುರಂಗ ಪೃತನಾಪ್ರತಾನದ ತುಮುಲ ಸಮರಸಂಘಟ್ಟನಾಕಾಂಡ ಪ್ರಚಂಡ ಪ್ರಳಯಪ್ರಕ್ಷೋಭದೊಳಗೆ (ಅನಂಪು. ೧೪-೧ ವ). **ಥಟ್ಟುತಾಱು** : ಪರರ್ತ್ಥಟ್ಟುತಾಱಾದರ್ (ಶಬ್ದಾನು. ೭೫ ಪ್ರಯೋ). 'ತಾಳುತಟ್ಟುಂ', 'ತಾಱುಂತಟ್ಟುಂ' ಪರಾ. [ ? ]

**ತಟ್ಟುಕ** (ನಾ). ೧. ತಟ್ಟುವವನು ; ಹೊಡೆಯುವವನು : ಕಟ್ಟುಕಂ, ತಟ್ಟುಕಂ (ಶಮದ. ೨೦೩ ಪ್ರಯೋ). ೨. ಸುಗಂಧದ್ರವ್ಯವನ್ನು ಮೈಗೆ ಲೇಪಿಸುವವನು : "ತಟ್ಟುಕಂ, ಚಟ್ಟುಕಂ, ತಟ್ಟು ಚಟ್ಟು ಶಬ್ದೌ ಶ್ರೀಖಂಡ ಕುಂಕುಮಾದಿ ಗಂಧದ್ರವ್ಯಕರ್ದಮಕೃತ ಸ್ಥಾಸಕವಚನೌ ತತ್ಕುರ್ವನ್" (ಶಬ್ದಾನು. ೪೪೦ ವ್ಯಾಖ್ಯಾ). [ ತಟ್ಟು1 + -ಕ3 ]

**ತಟ್ಟುಗಿ, ಥಟ್ಟುಗಿ** (ಕ್ರಿ). ಜೋರಾಗಿ ಭೇದಿಸುವಂತೆ ಇರಿ ; ಬಲವಾಗಿ ನಾಟು ; ನಟ್ಟು ಹೊರಬೀಳು : ಕಾದಿ ತಟ್ಟುಗಿದು (ರಣದೆ) ತೆಗೆದ ನಕ್ಕುಂ ನಷ್ಟಂ (ವಸುಕೋ. ೮೫-೫); ಮದನಂ ವಿಯೋಗಿಗಳನಿಸಲೆರ್ದೆಯಂ ತಟ್ಟುಗಿದು ಲೋಹಿತಂಬೊರೆದಿರದುಣ್ಮಿದ ಶರವೆನೆ (ಉದ್ಭಟ. ೫-೪೮) : ಅಳಿಯ ಮಾವನುಂ × × ಕಕಡೆ ಕಠಾರದೇಱು ತಟ್ಟುಗಿದು ಮುತ್ತ ಹೊತಂ (ಎಕ. VIII, ತೀರ್ಥಹ. ೨೫-೧೭; 1250); ನುಡಿದ ನುಡಿ ಕ್ರೂರಂಬಿನಂದದಿಂ ಹೃದಯಮಂ ತಟ್ಟುಗಿಯಲ್ (ಭಾವಚಂ. ೮-೩೩). **ಥಟ್ಟುಗಿ** : "ಥಟ್ಟುಗಿ [ಪಾಠಾಂ. ರಿ]ದುದೆನಲ್ಕೆ ಬೆಂಗೆ ಮೂಡಿದುದಕ್ಕುಂ" (ಭಾರನಿ. ೪೫) : ಅಂಗಜಾಸ್ತ್ರತತಿ ಮೆಲ್ಲೆರ್ದೆಯಂ ಸಂಧಿಸಿ ಥಟ್ಟುಗಿಯಲ್ ಧೃತಿಗುಂದದೆ (ಉದ್ಭಟ. ೬-೧೩೦); ಶಕಟವ್ಯೂಹವನು ಮಧ್ಯದೊಳು ಥಟ್ಟುಗಿದುರವಣಿಸಿ ಪವಮಾನಸುತ ನಡೆದ (ಕುಮಾವ್ಯಾ. ೧೨-೧೮); ಮದನ ವಿಯೋಗಿಗಳೆದೆಯ ಥಟ್ಟುಗಿದೆಚ್ಚ ಪದುಮಾಸ್ತ್ರದಲಗಿನಗ್ರದಲಿ (ಕಂನವಿ. ೯-೧೮). 'ತಟ್ಟುಬೆರ್ಚು' ಪರಾ. [ ತಟ್ಟು1 + ಉಗಿ3 ]

**ತಟ್ಟುಗುಟ್ಟು** (ಕ್ರಿ). ತಾಗಿ ಹೊಡೆ ; ಅಪ್ಪಳಿಸಿ ಹೊಡೆ : ಮುರಹರಂ . . . ಕೋಪದಿಂ ಧುರಧರೆಗೆಯ್ದೆ ವಂದು ರಿಪುಸೇನೆಯನೋವದೆ ತಟ್ಟುಗುಟ್ಟೆ ಕಿಂಕರ ರಥವಾಜಿ ವಾರಣದಳಂ ಪಡಲಿಟ್ಟುದು ಯುದ್ಧಮಧ್ಯದೊಳ್ (ಮಹಾನೀ. ೬-೯೯). [ ತಟ್ಟು1 + ಕುಟ್ಟು1 ]

**ತಟ್ಟುಗೆಡಹು** 'ಥಟ್ಟುಗೆಡಹು' ನೋ.

**ತಟ್ಟುಗೆಡೆ** 'ಥಟ್ಟುಗೆಡೆ' ನೋ.

**ತಟ್ಟುಚ್ಚು** 'ತಟ್ಟುಬೆರ್ಚು' ನೋ.

**ತಟ್ಟುಡು** (ಕ್ರಿ). ಕಾವಿಯ ಬಟ್ಟೆಯನ್ನು ಧರಿಸು : ಮಾನವಂ ತಟ್ಟುಟ್ಟು ಕೀರ್ದ ತಟ್ಟುಟ್ಟಂಗದಾರ್ಗುಂಟು ರಾಗಂ (ಸಾನಂದ. ೭-೪೮); ಪೊರಮಟ್ಟನುಂ ಪೊರಮಡದ ಕಾಮನಾರವಂ ತಟ್ಟುಟ್ಟನುಂ ಬಟ್ಟು ಕಳೆಯದೆ ಕಷಾಯನುಂ (ಸಾನಂದ. ೭-೪೯). [ ತಟ್ಟು7 + ಉಡು1 ]

**ತಟ್ಟುಪಳಗು** (ನಾ). ಒಂದು ಲೇಪನ ದ್ರವ್ಯ (?) : ಕರ್ಪೂರದ ಕಳಂಜು ೧ ಕಸ್ತೂರಿ ಕಳಂಜು॥ ಕುಂಕುಮ[ದ ಹೂ]ಕಳಂಜು ೧ ತಟ್ಟು ಪಳಗು ಕಳಂಜು॥ (ಸಾಇಇ. IX-ii, ೫೫೦-೪ ; 1532). [ ತಟ್ಟು2 + ಪಳಗು? ]

**ತಟ್ಟುಪೊಟ್ಟು** (ನಾ). ಒಂದು ಅನುಕರಣ ಶಬ್ದ : ತಮ್ಮ ಬಲಮಂ ಮಾರ್ವಲವಂ[ನ]ಱಿಯದೆಯುಂ ಚಾತುರ್ವಲಂಗಳ್ಗೊದಲ ಸಮಕಟ್ಟು ಗೆಟ್ಟು ತಡವರಿಸಿ ತಟ್ಟುಪೊಟ್ಟೆಂದೆಚ್ಚುಮಿಟ್ಟುಮಿಱಿದುಗ್ಗಡಿಸೆ (ಪಂಪಭಾ. ೧೧-೭೦ವ) ; ಎರಡು ಬಲದ ದಟಂಗಳ್ಕೋಲಾಟಮಾಡುವಂತೆ ಕಿಱಿದಾನುಂ ಬೇಗಂ ತಟ್ಟುಪೊಟ್ಟೆಂದು ಕೋಟ್ಯುಟ್ಟೆ (ಪಂಪಭಾ. ೧೦-೭೦ವ).

**ತಟ್ಟುಬಳೆ** (ನಾ). ಚಪ್ಪಟೆಯಾಗಿ ಅಗಲವಾಗಿರುವ ಸಾದಾ ಬಳೆ : (೬).

[ ತಟ್ಟು3 (<ತಟ್ಟೆ) + ಬಳೆ3 ]

**ತಟ್ಟುಬೀಳು** 'ತಟ್ಟುವೀೞ್' ನೋ.

**ತಟ್ಟುಮಟ್ಟಿ** (ನಾ). ಲೇಪನದ ಮಣ್ಣು ; ಮತೀಯ ಲಾಂಛನವನ್ನು ಧರಿಸುವುದಕ್ಕಾಗಿ ಬಳಸುವ ಮಣ್ಣು : ತಟ್ಟುಮಟ್ಟಿ[ಪಾಠಾಂ. ತಟವಟ, ತಟ್ಟುಮುಟ್ಟಿ]ಯನಿಟ್ಟ ಭ್ರಷ್ಟಂಗೆ ಶಿಷ್ಯನಾದ ಕಷ್ಟನ ಮುಟ್ಟಲಾಗದಯ್ಯಾ (ಚನ್ನವ. ೫. ೦೬೭-೩೬೬). [ ತಟ್ಟು2 + ಮಟ್ಟಿ ]

**ತಟ್ಟುಮಣೆ** (ನಾ). ನೆಲ, ಮೊದಲಾದುವುಗಳನ್ನು ತಟ್ಟಿ ಸಮಮಾಡಲು ಉಪಯೋಗಿಸುವ ಸಾಧನ,-ಮಣೆ; ಥಮ್ಮಸ್ಸು: ತಟ್ಟುಮಣೆ ಹೊಡೆದು ಸಮ ಮಾಡಬೇಕು (ರೂಢಿ). [ ತಟ್ಟು1 + ಮಣೆ ]

**ತಟ್ಟುಮುಟ್ಟು** (ನಾ). ೧. ಮೈಲಿಗೆ ; ಸೂತಕ ; ಹೊಲೆ : ವ್ರತಕ್ಕೆ ಮುನ್ನವೆ ತಟ್ಟುಮುಟ್ಟು ತಾಗು ಸೋಂಕು ಬಪ್ಪುದನಱಿಯಬೇಕು (ಏಲೇಶ್ವ. ೪೩೫-೪೦) ; ತಟ್ಟುಮುಟ್ಟು ತಾಗು ನಿರೋಧವಿಲ್ಲದಿಹುದೆ ಪೂಜೆ (ಚನ್ನವ. ೦೦೨-೫) ; ಮಂಗಳವಾರದ ದಿನ ಮನೆಯ ಸಾರಿಸೆಯುಮ್ಮ

ತಟ್ಟುಮುಟ್ಟು ಹೊಱಯಿಕೆ ಬಿಸಾಡೆಯುಮ್ಮ (ಶಿವಗೀ. ೭೯೯ ವ); ಅಶುದ್ಧ ಸಲೇಪಭಾವವಾ ಶ್ವಪಚನ ತಟ್ಟುಮುಟ್ಟಿನೆಡೆಯಲ್ಲಿಯೆ ಬರ್ಪುದಱಿಂ ಶಿವಾಥವಾ (ಶತಕ. ೩೬). ೨. ದುರದೃಷ್ಟಕರವಾದ ಪೆಟ್ಟು; ಆಘಾತ; ಅಪಾಯ; ಸಂದಿಗ್ಧ ಪರಿಸ್ಥಿತಿ; "ಸಮಸ್ಯೆ" (ಜಾ ನ ಕೊ ೬. ೬೪). ೩. (?): ಇಷ್ಟಲಿಂಗದಲ್ಲಿ ತಟ್ಟುಮುಟ್ಟು ಬಲ್ಲವಂಗೆ ಇಷ್ಟವ ಮುಟ್ಟುವ ಭೇದವು ತಟ್ಟದಿಹ ಪರಿ ಇನ್ನೆಂತೋ (ಮೋಳಿಮಾ. ೧೯-೭೦); "ಲಿಂಗ ಭೋಗೋಪಭೋಗ" (ಮೋಳಿಮಾ. ಕೋಶ); ಸಕ್ಕರೆಯ ರಾಶಿಗೆ ಕೇಸಿಯ ಕೆಲಸುಂಟೇ ನಿಶ್ಚಯದ ಲಿಂಗಾಂಗಿಗೆ ಉಭಯದ ತಟ್ಟುಮುಟ್ಟೆಂಬೀ ಗುಟ್ಟಿನ ಕುಲವಿಲ್ಲ (ಮುದೇವ. ೩೬೬-೩೭); ಪ್ರಾಣಲಿಂಗಿ ಎಂದಡೂ ತಾನಾಗಿ ಶರಣನೆಂದಡೂ ತಾನಾಗಿ. . .ಸತ್ತು ಚಿತ್ತಾನಂದವೆಂಬ ಗೊತ್ತ ಹರಿದವಂಗೆ ತಟ್ಟು ಮುಟ್ಟು ಹತ್ತುವ ಭಾವ ಒಂದೂ ಇಲ್ಲ (ವಚಶಾ. I. ೧೩೦); ಇಷ್ಟ ಲಿಂಗಂ ಸುತ್ತಿ ಸಜ್ಜೆಯೊಳಗಿರುತಿಹುದು ತಟ್ಟುಮುಟ್ಟಿನ ಸುಖವನೆಹಗೆ ಯರ್ಪಿಸಬಹುದು (ದೀಕ್ಷಾಬೋ. ೩-೭೪). [ತಟ್ಟು$_1$ + ಮುಟ್ಟು$_2$]

**ತಟ್ಟುಮೆಟ್ಟು** (ನಾ). [ನಾಟ್ಯ] ಭರತನಾಟ್ಯದ ಹತ್ತು ಬಗೆಯ ಅಡವು ಗಳಲ್ಲಿ ಒಂದು: ಪ್ರಸಿದ್ಧ ನಾಟ್ಯಾಚಾರ್ಯರು ಈ ಅಡವುಗಳನ್ನು ಹತ್ತು ವಿಧವಾಗಿ ವಿಂಗಡಿಸಿದ್ದಾರೆ: (೧) ತಟ್ಟು, (೨) ಮೆಟ್ಟು, (೩) ನಾಟು, (೪) ತಟ್ಟುಮೆಟ್ಟು (ಅಭಾನ್ಯ. ೩೩). [ತಟ್ಟು$_2$ + ಮೆಟ್ಟು$_2$]

**ತಟ್ಟುರ್ಚು**, ತಟವುಚ್ಚು, ತಟ್ಟುಚ್ಚು, ತಟ್ಟುಟ್ಟು, ಥಟ್ಟುಚ್ಚು (ಕ್ರಿ). ಸೀಳಿಕೊಂಡು ಹೊರಬರು; ಭೇದಿಸಿಕೊಂಡು ಹೊರಗೆ ಕಾಣಿಸು; ನಟ್ಟು ಪಾರಾಗು: ರೋಮಾಂಚಸಂಚಯಂ ತೊಟ್ಟಂಗಿಗಳ ತಟ್ಟುರ್ಚಿ ಪೆರ್ಚಿದ ಮುಯ್ಯಿನೆಡೆ ಪೊಟ್ಟೆನೊಡೆಯೆ ಪರಸ್ಪರಾಲಿಂಗನಂಗೆಯ್ದು (ಅನಂಪು. ೧೧-೩೪ ವ); ಇಟ್ಟೆಡೆ ಸೆಲ್ಲೆಹ ಕಂಗಲ ಜೋಡನು ತಟ್ಟುರ್ಚಿ ಮೆಯ್ಯನುಚ್ಚಳಿಸಿ (ಕುರಾಸಾಂ. ೧೩-೧೧೭); ನೆಱೆ ತಾಗಿ ತಟ್ಟುರ್ಚಿತೆಂಬ ಶಕ್ತಿಯ ಕೈಮುಱಿಯದೆ ಕೃಷ್ಣ ಖಂಡಿಸಿದ (ಮೋಹಕ. ೪೦-೭೭); ಪೆರ್ವೆಟ್ಟಿನ ತಟ್ಟಿನೊಳ್ ನಟ್ಟು ತಟ್ಟುರ್ಚಲೆಱಗುವ ಬಱಸಿಡಿಲಂತೆಯುಂ (ಚಿಕವಂ. ೦೪-೫). **ತಟವುಚ್ಚು**: ಕರಿಯುರವಣೆಸಿ ಬಂದು ದೀರ್ಘಕರಾಗ್ರದಿಂ ಪಿಡಿದು ಭರದೊಳುದ್ದಕೆ ಹಾಯ್ಕಿ ಕೊಂಬುಗಳೆರಡ ನೆಗ್ಗಲು ದೇಹವದು ನೆತ್ತರು ಸುರಿಯೆ ತಟ[ಪಾಠಾಂ. ಟು]ವುಚ್ಚಿ ಜೀವವಿಯೋಗತಾಪದಲಿ (ಬಸಪು. ೫೩-೧೦); ಉರಗವಿದು ಕರ್ಕೋಟಕನ ಬಗೆಯಿದಱ ಹಲ್ಲುಗಳು ಎರಡೆರಡು ತಟವುಚ್ಚಿದವು (ಬಸಪು. ೪೬-೩೩). **ತಟ್ಟುಚ್ಚು**: ಗಿರಿಘಟವಮಂ ತಟ್ಟುಚ್ಚ ಲಿಸುವವು (ಕುಮಠಾ. ೮-೬೨); ಗಾಜಿನ ಕುಪ್ಪಿಗೆಯೊಳಗಿನ ದೀಪವನ್ನಿಟ್ಟರಾ ಜ್ಯೋತಿ ಹೊಱಗೆಸೆವಂತೆ ಶ್ರೀಜಿನನುಜ್ವಲ ದೇಹವ ತಟ್ಟುಚ್ಚಿ ರಾಜಿಸುತಿ ಹುದಾತ್ಮಕಾಂತಿ (ಭರತ. ೬೬-೯೦): ತಟ್ಟುಚ್ಚಿದ ಸರಂಗಳಂ ಕೀಳ್ವ (ಚಬಪು. ೫೬-೦೬). △**ತಟ್ಟುಟ್ಟು**: ನಿಶ್ಶಂಕಮಾ ಯುದ್ಧದುಳ್ ಉಱಕೀಲಿಚ್ಚಿದ ವಂಬುವಾಳ್ಪಲಗೆಯುಳ್ಳಟ್ಟುಟ್ಟು ವಲ್ಪನ್ನಿ ಪಿನ್ ಮಱುಮೋಗೀಶ್ವರನುಳ್ಳಿ ಕದಿ ತಣದ ನಾಗಮ್ಮನೀ ಶೂದ್ರಕನ್ (ಸೌಇಇ. IX-i, ೩೯೩-೩; ೮ನೆಯ ಶತ); ☞ ಇದು 'ತಟ್ಟುಚ್ಚು' ಎಂಬುದರ ಅಪಲಿಖಿತವಿರಬಹುದು. **ಥಟ್ಟುಚ್ಚು**: ತೊಡು ನಿನ್ನ ಶರವ ನೀಂ ಗಿಡುಮರದ ಹೊದಱೊಳೆಡೆ ಯಾಡುತಿಹ ಹಕ್ಕಿಗಳ ಗಡಣವನು ಥಟ್ಟುಚ್ಚ[ಪಾಠಾಂ. ತಟ್ಟುರ್ಚ]ಲೆಸುವ ಬಲು ಬಿಲುಗಾಱ (ಸಾಳ್ಯಭಾ. ೨೫-೨೭); ಚುಚ್ಚಿದವು ಕೂಡೆ ಥ[ಪಾಠಾಂ. ತ] ಟ್ಟುಚ್ಚಿದವು ಸೀಳಾಗಿ ಪಚ್ಚಿದವು ಮೈಯೊಳಗೆ ಹೊಚ್ಚಿದವು ಹೊಗರಲಗು (ಜೈಮಿಭಾ. ೧೩-೧೪); [ತಟ್ಟು$_1$ + ಉರ್ಚು]

**ತಟ್ಟುವರಿಯಿಸು** 'ಥಟ್ಟುವರಿಯಿಸು' ನೋ.

**ತಟ್ಟುವಾಣಿ**, ತಟವಾಣಿ$_1$ (ನಾ). 'ತಟ್ಟು' ಜಾತಿಯ ಹೆಣ್ಣು ಕುದುರೆ: ಕಡಿವಾಣಂಗಳಂ ಕಟ್ಟಿರುವ ತಟ್ಟುವಾಣಿಗಳ ಮೇಲ್ಪುಳಿತು (ಸೌಗಂಧಿ. ೧೮೩-೬). **ತಟವಾಣಿ$_1$**: (೬). [← ಹಿಂ. ಟಟವಾನೀ]

**ತಟ್ಟುವೀೞ್**, ತಟ್ಟುಬೀಳು (ಕ್ರಿ). ಕುಗ್ಗು; ದುರ್ಬಲವಾಗಿ ಕುಸಿದು ಬೀಳು: ಅಹಿರಾಜಂ ಪೆಡೆ ತಟ್ಟುವೀೞ ದಿಗಿಭವ್ರಾತಂ ಕೊರಲ್ಕುಗ್ಗೆ (ಲೀಲಾವ. ೧-೮೭). **ತಟ್ಟುಬೀಳು**: ಸೂರ್ಯಾಸ್ತಮಯಕ್ಕೆ ಪಾಂಡವರ ಪಡೆಯು ಮುರಿದು ತಟ್ಟುಬಿದ್ದಿತು (ಭೀಷ್ಮಪ. ೦೬೭).

[ತಟ್ಟು$_3$ (< ತಟ್ಟೆ) + ಬೀೞ್$_1$]

**ತಟ್ಟುಸೆಱಗು** (ನಾ). ಜರತಾರಿ ಮುಂತಾದ ರೇಷ್ಮೆಯ ಕುಸುರಿಗೆಲಸ ಮಾಡಿದ ಸೆರಗು (?): ಪೀತಾಂಬ್ರ ೧ಕ್ಕೆ ತಟ್ಟುಸೆಱಗು ಲತೆ ಹೊಗಳು ಸಹಾ ತೂಂಕ ೧೧೯ಕ್ಕೆ ವಿವರ ಸುತ್ತಣ ಲತೆ ಹೊಗಳು ೫೪ ಕೆಂಪು ೧೦೫೫ (ಸೌಇಇ. IX-ii, ೫೪೭-೩; 1532).

[ತಟ್ಟು$_0$ (< ತಗಡು) + ಸೆಱಗು (< ಸೆಱಂಗು)]

△ **ತಟ್ಟುಟ್ಟು** 'ತಟ್ಟುರ್ಚು' ನೋ.

**ತಟ್ಟೆ**, ತಟ್ಟ$_1$, ತಟ್ಟು$_3$ (ನಾ). ೧. ಚಪ್ಪಟೆ; ಸಮತಲ: ಭೂಮಿ ತಟ್ಟೆಯಾಗಿಲ್ಲ, ಗುಂಡಾಗಿದೆ (ರೂಢಿ). ೨. ಹಣ್ಣು-ಹಂಪಲು ಮೊದ ಲಾದುವುಗಳನ್ನು ಹರಡಿ ಇಡಲು ಉಪಯೋಗಿಸುವ ಬಿದಿರು ಅಥವಾ ಬೆತ್ತದ ಹೆಣಿಕೆಯಿಂದ ಮಾಡಿದ ಚಪ್ಪಟೆಯಾದ್ದ ಮುಚ್ಚಳ ದಂತಹ ಬುಟ್ಟಿ: ಸತ್ಯವೆಂಬ ತಟ್ಟೆಯಲ್ಲಿ ಚಿತ್ತಶುದ್ಧವೆಂಬ ವಿಭೂತಿಯ ಬೈಚಿಟ್ಟು (ಶೂನ್ಯಸಂ. ೩೬೦-೧). ೩. ಬೆತ್ತ, ಲೋಹ ಮೊದಲಾದುವು ಗಳಿಂದ ಮಾಡಿದ ಅಂಚುಳ್ಳ ಮುಚ್ಚಳದಂತಹ ಪಾತ್ರೆ: ಆಧಾರದಲಿಪ್ಪ ಮೂಲಿಕೆಯ ಬೇರನಗಿ(ರೆ)ದು ಆ ಇಂದ್ರಿಯವ ಕೂಡಿಕೊಂಡು ಮಲ ಮೂಱು ಮುಟ್ಟದ ತಟ್ಟೆಯಲ್ಲಿ ಬೇಗ ತೆಗೆದುಕೊಳ್ಳಿ (ಸರ್ವವ. ೦೯-೯೦). ೪. ತಳಿಗೆ; ಹರಿವಾಣ; ಗಂಗಾಳ: ತಟ್ಟೆ ಬಟ್ಟಲಲ್ಲಿ ಎಡೆಮಾಡಬೇಕಾದರೆ (ಮಹಾದೇ. ಬ. ೧೩೪-೩೮೪); ಮಿಸುನಿದಟ್ಟೆಯೊಳೊಪ್ಪುವುಜ್ವಲ ಸೀಧುವಂ ನಡೆ ನೋಡಿ . . . ಮುಗುಟ್ಟು ವಂದಿಸಿಯಾಂಟಿದಳ್ (ಉದ್ಭಟ. ೫-೮೩); ತಿಗುರನಿಕ್ಕುವ ಲೇಪಿಸುವ ತಟ್ಟೆಗಳ ತಿಲಕಾಂಜನಕರಂಡದ (ಬ ಸ ಪು. ೧೩-೧೧). ನವರತ್ನದಡ್ಡಣಿಗೆಯೊಳ್ ತಟ್ಟೆಬಟ್ಟಲನಿಟ್ಟು ಹೊನ್ನ ಹರಿಯಣ ಮುಂದೆ ಧಗಧಗಿಸುತಿರಲಲ್ಲಿ (ಸಮ್ಯಕ್ತ್ವ. ೪-೯). ೫. (ತಕ್ಕಡಿಯ) ಬಟ್ಟಲು; ಪರಡಿ: ತಕ್ಕಡಿಯ ತಟ್ಟೆಗಳನ್ನು ನಿರ್ದೇಶಿಸುವ ಎರಡನೆಯ ವರ್ಗಕ್ಕೆ ಸೇರಿದ ಎರಡು ನಕ್ಷತ್ರಗಳು (ಜೋತಿರ್ವಿ. ೪೦). ೬. (ಅವರೆಕಾಯಿ, ಕಡಲೆಕಾಯಿ ಮೊದಲಾದುವುಗಳಲ್ಲಿ) ಬೀಜ ಬಲಿಯದಿರುವ ಕಾಯಿ; ಚಟ್ಟು: ತಟ್ಟೆ ಬೈಸಿ ಕೊಂಡರೂ ತಟ್ಟೆ ಹುಳಿ ಚೆನ್ನಾಗಿದೆ (ಗಾದೆ). ೭. ಸೀಳಿದ ಬಿದಿರು; ದಬ್ಬೆ: (೬). **ತಟ್ಟ$_1$**: 'ತಟ್ಟೆತಳ್ಳ' ಪರಾ. **ತಟ್ಟು$_3$**: ೧. ಬೆಟ್ಟುಮಂ ತಟ್ಟುಮಂ ತಟ್ಟು ಗೆಯ್ದಂತಪ್ಪತಿ ವಿಶಾಲವೆನಿಪ್ಪ ಪಾಸಱೆಯುಂ . . . ಗಳಿಲನಿಱಿಪಿದಾಗಳ್ (ಶಾಂತೀಶ್ವ. ೧೧-೧೮೬ ವ); ಹೋಗುತ್ತ ಹೋಗುತ್ತ, ಬಂಡೆಯು ವ್ಯೆ ತಟ್ಟಾಗಿ ಇರುವ ಬದಲು, ಕೆಳಕ್ಕೆ ಇಳಿಯತೊಡಗಿತು (ಕುಡಿಕೂ. ೨೫). ೫. ಕೋಪವನ್ನು ತೆಗೆದು ಒಂದು ತಟ್ಟಿನಲ್ಲಿ ಇರಿಸಲು ಅಮರನೀತಿಯ ನೂತನ ವಾದ ಒಂದು ವಸ್ತ್ರವನ್ನು ತಂದು ಎರಡನೆ ತಟ್ಟಿನಲ್ಲಿ ಇರಿಸಲು (ಶಿವದ. ೮೫-೬); ತ್ರಾಸಿನ ಒಂದು ತಟ್ಟಿನಲ್ಲಿ ಜಂಗಮರ ಕೌಪೀನವನ್ನು, ಮತ್ತೊಂದು ತಟ್ಟಿನಲ್ಲಿ ಬೇರೊಂದು ಕೌಪೀನವನ್ನಿಟ್ಟು ಮೇಲಕ್ಕೆತ್ತಿದರು (ಪುರಾವಿ. ೬೫). ೮. ಕತ್ತಿಯ ಅಲಗು, -ಧಾರೆ: "ಖಡ್ಗಫಲ, ಪುಷ್ಕರ – ಅಡ್ಡಾಯುಧದ ತಟ್ಟು" (ಹಲಾಯು. ೬); ಕತ್ತಿಕೊಂತದ ತಟ್ಟಿನ ಮೇಗೆ ಏನಾದರುವೆ ಚುಕ್ಕೆ ಕಂಡರೋ ತೀರಿ ಹೋಯಿತು ಅವನ ಬಾಳು (ಮಂತ್ರಶ. ೮೦-೧). ೯. ನಿತ್ರಾಣ; ದುರ್ಬಲತೆ; ಅಶಕ್ತಿ: ಕಂಬನಿಗಳಂದುಂಬಿ ಗಳಗಳನೆ ಅಳುತ ನಿಟ್ಟುಸುರುಗಳಂ ಬಿಟ್ಟು ತಟ್ಟುತಟ್ಟಾಗಿ (ಸೌಗಂಧಿ. ೪೭೫-೩); ದನ ಹುಲ್ಲು ಇಲ್ಲದೆ ತಟ್ಟಾಗಿವೆ (ರೂಢಿ). ೧೦. ಕಿವಿಯ ಒಂದು ಆಭರಣ: ಮಗುವಿನ ಕಿವಿಗೆ ತಟ್ಟು ತೊಡಿಸಬೇಕು (ರೂಢಿ).

**ತಟ್ಟಾಗು** = ಸೋತುಹೋಗು; ನಿತ್ರಾಣವಾಗು: ಮುಟ್ಟಲಱಿಯವು ಯೋಗಿಗಳ ನಿರ್ಮಲ ಚಿತ್ತ ತಟ್ಟಾದುವಱಿಸಿ ವೇದಗಳು(**ಕೃಷ್ಣಗೋ. ೧–೦೦೩**). **ತಟ್ಟು ಮಾಡು** = ನಿತ್ರಾಣಗೊಳಿಸು ; ದುರ್ಬಲಗೊಳಿಸು; ಒಣಗಿಸು : ಕಾಲು ಕೈಯನಗಚಿ ತೋರಣದೊಳು ಕಟ್ಟಿ ಸೀಳಿ ನರರನಾಱಿಸುವರು ತಟ್ಟು ಮಾಡಿ ಪೋಳ್ದು ನೂಱುವರುಷವಿಟ್ಟು ವಕ್ತ್ರ ಭಾಳ ಚರಣ ಕರ ದೋಳಿಡಿಯೆ ಮೋಳೆಯನಿಕ್ಕಿ ಹೆಟ್ಟಿ (**ಸಾನಂಜ. ೬–೦೪೯ ರಗಳೆ**). **ತಟ್ಟೆ ಹಾಕು** = ಊಟಕ್ಕೆ ಬಡಿಸು : ಅಡಿಗೆ ಮನೆಯಲ್ಲಿ ತಟ್ಟೆಹಾಕಿಕೊಂಡು (**ದೂಜಿಟ್ಟ. ೧**).

[ **ದೇ.॥** ತಮಿ. ತಟ್ಟು, ತಟ್ಟ, ತಟ್ಟು, ತಟ್ಟ್ಯೆ; **ಮಲ.** ತಟ್ಟ, ತಟ್ಟು; **ತುಳು.** ತಟ್ಟು; **ಕೊಡ.** ತಟ್ಟೆ; **ತೆಲು.** ತಟ್ಟ ]

**ತಟ್ಟೆಕಾಲು** (ನಿ). ಮಗ್ಗದ ಹಾಸಿಗೆ ಆಧಾರವಾಗಿ ನಿಲ್ಲಿಸುವ ಕತ್ತರಿ ಕಾಲು ; ತಿಕ್ಕಡಿ: (**ರೀವ್**).

[ ತಟ್ಟೆ + ಕಾಲು$_1$ (<ಕಾಲ್$_1$) ]

**ತಟ್ಟೆಕೆಱೆ** (ನಾ) ಒಂದು ಊರಿನ ಹೆಸರು (?) : ದತ್ತಿ ತಟ್ಟೆಕೆಱೆ ಸರ್ವ ಬಾಧ್ಯಾ ಪರಿಹಾರಾ (**ಮೈಆರಿ. ೧೯೩೩, ೦೦೩–೩೪ ; 10ನೆಯ ಶತ**) ; ಪಟ್ಟದ ಬಸದಿಯ ಪ್ರತಿಬದ್ಧವಾಗಿ ಸಮಾದೇಯವರ್ಮುಖ್ಯವಾಗಿ ಬಿಟ್ಟ ದತ್ತಿ ತಟ್ಟೆಕೆಱೆ ಸರ್ವ್ವಬಾಧಾ ಪರಿಹಾರ (**ಎಕ. VII, ಶಿವಮೊ. ೪–೭೦ ; 1122**).

[ ? ]

**ತಟ್ಟೆಗಲ್ಲು** (ನಾ). ಚಪ್ಪಟೆಯಾದ ಕಲ್ಲು : ಅಲ್ಲಿಂದಂ ಪಡುವ ನಡದು ವಟ್ಟ ಹಲಗೆಗಲ್ಲು ಅಲ್ಲಿಂ ಪಡುವ ನಡದು ನಟ ತಟ್ಟೆಗಲ್ಲು (**ಎಕ. XII, ತಿಪಟೂ. ೦೩೯–೭೬ ; ?**). [ ತಟ್ಟೆ + ಕಲ್ಲು (<ಕಲ್$_3$) ]

**ತಟ್ಟೆಗೋಡು** (ನಾ). ಚಪ್ಪಟೆಯಾದ ಕೋಡು$_1$–ಕೊಂಬು : ನಮ್ಮ ಮನೆ ಎಮ್ಮೆಗೆ ತಟ್ಟೆಗೋಡು (**ರೂಢಿ**). [ ತಟ್ಟೆ + ಕೋಡು$_5$ ]

**ತಟ್ಟೆಯು** 'ತಟ್ಟೆಯು' ನೋ.

**ತಟ್ಟೆವಟ್ಟಲು** (ನಾ). ೧. ತಟ್ಟೆ ಮತ್ತು ಬಟ್ಟಲು. ೨. ತಟ್ಟೆಯ ಸುತ್ತಲು ಇಡುವ ಬಟ್ಟಲು ; ಎಡೆಬಟ್ಟಲು : ಪೊನ್ನ ಪರಿವಾಣದೊಳು ದಿವ್ಯಾನ್ನಮುಮನು ತೀವಿ ತಾ ಪೊಳೆವ ಚಿನ್ನದುರೆ ತಟ್ಟೆವಟ್ಟಲಲಿ ತಿಳಿದುಪ್ಪಮಂ ಪೂರೈಸಿ (**ನವಮೋ. ೯–೩೭**). 'ಎಡೆವಟ್ಟಲ್' ಪರಾ.

[ ತಟ್ಟೆ + ಬಟ್ಟಲು (<ಬಟ್ಟಲ್) ]

**ತಟ್ಟೆವಳ್ಳ** (ನಾ). ಒಂದು ಪ್ರದೇಶದ ಹೆಸರು (?) : ಪಡೆದ ತಟ್ಟೆವಳ್ಳವ ಕಲ್ಲ ನಟು (**ಮೈಆರಿ. ೧೯೩೪, ೦೦೭–೦೦ ; ೩ನೆಯ ಶತ**). [ ? ]

**ತಟ್ಟೈಸು** 'ಥಟ್ಟೈಸು' ನೋ.

**ತಟ್ಟೆಯು** (ನಾ). ಎದುರಿಸುವವನು; ಪ್ರತಿಭಟಿಸುವವನು : ಆತನೀ ಪರಿಕಣೆಗಳಲಿ ಸತ್ವಾತಿಶಯವನು ತೋಱಿದಡೆ ಮಾಂಧಾತನಲಿ ತಟ್ಟೆಯರ ತಱಿದೊಟ್ಟಿದನು ಬೇಗದಲಿ (**ಉತ್ತ.ರಾ. ೧೬–೩೭**). [ ? ]

**ತಡ$_1$** (ನಾ). ೧. ಅಡ್ಡಿ ; ತಡೆ; ವಿಘ್ನ : ತಂದೆ ಪೇೞ್ದಟ್ಟಿದ ರಾಜ ಸೂಯಮುಖಮಂ ತಡವಿಲ್ಲದೆ ಬೇೞ್ದ ಬೀರಮಂ ನೆಟ್ಟನೆ ನೀನೆ ಕಂಡಿಱಿಸಲಕ್ಕುಮೆ ಗಾಂಡಿವಿಯಂ ಸುಯೋಧನಾ (**ಗದಾಯು. ೨–೩೭**). ೨. ಹೊತ್ತು ಮೀರುವುದು ; ಸಾವಕಾಶ ; ವಿಳಂಬ : ತಡವಾದರೆ ಬಡವಾದೆ ತಾಯೆ (**ಮಹಾದೇ. ಬ. ೦೪೩–೩೨೩**) ; ತಡವಾದುದುಂಟು ನಲ್ಲನೆ (**ಯಶೋಚ. ೨–೫೦**) ; ಅರಗಿನರಸನ ಬಾಗಿಲಲಿ ದಳ್ಳುರಿಗೆ ತಡವೇ ಹೊಕ್ಕು ನಿಮಿಷದೊಳೊರಸಿದನು ಚತುರಂಗ ಬಲವನು (**ಕುಮಾ.ದ್ರೋ. ೫–೪೦**). ೩. ಗಜಾರೋಹಣದ ರೀತಿಗಳಲ್ಲೊಂದು (?) : ಅಗ್ಗಳವಾಗಿ ಕಾಲ್ಗಿಡಿಸಲುಂ ಮುರಿದು ಕಿಟ್ಟಿಡಂ ತಡವೆಂಬಿವಱಿಂದಂ ಬಾಹು ಕೈಕೊಳ್ಳೆಂಬಿವು ಮೊದಲಾಗಿ ಗೋಮೂತ್ರ ಮಂಡಲಮುಮಾಕಾಶಂ ಪೇಜವಿತಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲೆನೆನ್ನ ಕೆಯ್ಯೊಳ್ (**ಶಾಂತಿಪು. ೩–೨೩ ವ**).

**ತಡವಾಗು$_1$, ತಡವಾಗು$_1$** = ೧. ವಿಳಂಬವಾಗು ; ನಿಧಾನವಾಗು : ಮರಣಕ್ಕೆನ್ನಿಂದೆ ನೀಂ ಮುಂಚಿದಯ್ ಮೊನೆಯೊಳ್ಪೊಟ್ಟಿಡವಾಯ್ತು ದೊಂದೆಡೆಯೊಳಂ ಹಾ ವತ್ಸ ದುಶ್ಶಾಸನಾ (**ಗದಾಯು. ೫–೭**) ; ತಡವಾದ ಪುದುಟಿದರನೀ ಯೆಡೆಗೆ ನಿಯೋಜಿಸಲಿಕೆಂಬವೊಲ್ ನೃಪವರನಿರ್ದೆಡೆಗೆ ಬಿಡದೆಡೆಯಾಡುವ ಬೆಸಕೆ ಕನ್ನೆ ತನ್ನಯ ಮನಮಂ (**ಕಾದಂಬ. ೮೭**) ; ಅಲ್ಪ ಶ್ರೀಮಂತನಂತೆ ನಡೆ ತಡವಾಗಲುಂ (**ಧರ್ಮಾಮೃ. ೬–೩೮**). ೨. ತಡವರಿಸು ; ತೊದಲು : ನುಡಿ ತಡವಪ್ಪುದೊಂದು ಮೊಗದೊಳ್ ಮಱುಕಂ ದೊರೆಕೊಳ್ವುದೊಂದು . . . ಕಳ್ಗುಡಿದವರಂದಮಿಂತು ಸಿರಿ ಸಾರ್ತರೆ ಸಾರ್ವುದು (**ಪಂಪಭಾ. ೨–೪೯**). **ತಡ ಮಾಡು$_1$** = ಕಾಲಹರಣ ಮಾಡು ; ವಿಳಂಬ ಮಾಡು : ಮಾಡಿಸಿ ಲಾಕ್ಷಾಮಯವಂ ಮಾಡಮನತಿಗೋಪ್ಯದಿಂದಂ . . . ತಡ ಮಾಡದೆ ನಡೆತಂದು ತಮ್ಮ ಜನಕಂಗಾಗಳ್ (**ಮಹಾನೀ. ೯–೪೯**); ನಾನೇನು ಬೇಕೆಂದು ತಡಮಾಡಲಿಲ್ಲ (**ತೀವೋಃಡ. ೦೦೯**).

[ **ದೇ.॥** ಮಲ. ತಡ = ಅಡ್ಡಿಪಡಿಸುವಂತಹುದು ; **ಕೊಡ.** ತಡು ; **ತುಳು.** **ತೆಲು.** ತಡ ]

**ತಡ$_2$, ದಡ$_3$, ಧಡ$_1$** (ನಾ). ೧. ತಡಿ ; ದಂಡೆ; ಅಂಚು ; ತೀರ : ತಟ – ತಡ, ತಟ – ತಡಿ (**ಶಮದ. ೨೫೫ ಪ್ರಯೋ**) ; ತನ್ನಲ್ಲಿ ಸ್ನಾನವನ್ನು ಮಾಡಿದ ಮನುಷ್ಯರ ಸಕಲ ಪಾಪಗಳನ್ನು ಪರಿಹರಿಸುವಂತಾಗಿ ತನ್ನ ತಡದಲ್ಲಿ ಹುಟ್ಟಿದ ಹುಲ್ಲುಬಳ್ಳಿಗಳು (**ಶಿವದ. ೨೮–೩**). ೨. ಹೊಂದಾಣಿಕೆ ; ಬೆರೆಯುವಿಕೆ: 'ತಡಂಗಲಸು' ಪರಾ. ೩. ಸಮವಾದುದು ; ಸಾಟಿ ; ಸಮಾನ: 'ತಡಂಬರ್ಕೆ' ಪರಾ. **ದಡ$_3$** : ೧. ಇಂದು ನೀರದಡದಲ್ಲಿರುವನೆ ಏನೆಂದರು ಮುಖವೆತ್ತಿ ನೋಡನೆ (**ಪುರಂದ. ೧–೫೪–೧**) : ಕಲಿ ವಸುದೇವ ವಿಂದೀಸಾಡಿ ದಡದಲಿ ದೇವರನು ವಂದಿಸಿ (**ಸಾಳ್ವಭಾ. ೧೬–೦೦**) ; ತಟ, ದಡ (**ಶಬ್ದಾನು. ೦೪೩ ಪ್ರಯೋ**) ; ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ (**ಕನ್ನಬಾ. ೦೦೦–೬**). **ಧಡ$_1$** : ೧. ಹೊಳೆಗಳ ಧಡದಲ್ಲಿದ್ದ ಭೂಮಿಯಂತು ಕೇವಲ ಚಿನ್ನವೆಂದೆನ್ನಿಸಿಕೊಳ್ಳುತ್ತದೆ (**ಮುಂಬಯಿ. ೫–೦೯೫**) ; ವಿಶಾಲವಾದ ಅನಂತ ನೀಲ ಸಮುದ್ರದಲ್ಲಿ ಧಡ ಕಾಣದೇ ಅಲೆಯುತ್ತಿರುವ ಹಡಗ ದಂತಾಗಿರುವೆನು (**ನಿರ್ದೋಟ. ೦೫೭**) ; ಸಮುದ್ರ ಧಡಕ್ಕೆ ಬಂದು ಕುಳಿತೆವು (**ಮೇದಿವಂ. ೫೩**).

**ತಡತಡವಾಗು** = ತಡವಾಗು$_2$ : ಅಡರಿ ಕಟಾಕ್ಷಚಂದ್ರಿಕೆ ಪಳಂಚಿಗವಾಕ್ಷದ ಚಂದ್ರಕಾಂತದಿಂದುಡುಗದೆ ಸೋರ್ವ ನೀರ್ವನಿಗಳುಣ್ಮಿದ ನರ್ತನ ಘರ್ಮವಾರಿಯೊಳ್ ತಡತಡವಾಗೆ ಮಾಧವಿ ಮುಗುಳ್ವೊಲಿರ್ದಳ ವಿಂಡಿರಿಂದಂ (**ಮಲ್ಲಿಪು. ೨–೭೦**). **ತಡವಾಗು$_2$, ತಡವಾಗು$_2$** = ೧. ಸಾಟಿಯಾಗು ; ಸಮಾನವಾಗು : ಅಕ್ಷಿಗಳ ಚಂದ್ರಿಕೆ ಚಂದ್ರಿಕೆಯಂ ಪಳಂಚಿಗೇಯದ ರುತಿ ಕಂತುಚಾಪರುತಿಯೊಳ್ ತಡವಾಗೆ . . . ಕಾಂತೆ ಮಿಂಚು ಪೊಳೆದಾಡುವವೊಲ್ 'ಪೊಳೆದುಯ್ಯಲಾಡಿದಳ್ (**ಜಗವಿ. ೦೬–೦೦೩**) ; ಆಮೋದಿತಮುದಿತ ಮಧುಕರ ದಾಮಕದೊಳ್ ನೀಲರತ್ನದಾಮಂ ಮಲ್ಲಿಕಾಮಕದೊಳ್ ಮುಕ್ತಾಫಲದಾಮಂ ತಡವಾದುವೊಡನೆ ಮಣಿಮಂಡಪದೊಳ್ (**ಪಂರಾಮಾ. ೫–೦೦೫**). ೨. ಹೊಂದಿಕೊಳ್ಳು ; ಜೊತೆಯಾಗು ; ಮೊಱೆ ತಡವಾಗೆ ನಾಣಗಲೆ ತೆಳ್ವದನೊಳ್ವದನಾಗಿ ಪಾಯೆ (**ಸೂಕ್ತಿಸು. ೦೪–೩೩**) ; ಸುರಸುಂದರಿಯರ್ ನಡೆತಂದರಂದು ಸುಯ್ಯೊಗೆ ವಳಿಮಾಲೆ ತಮ್ಮ ಲುಲಿತಾಲಕದೊಳ್ ತಡವಾದುದೆಂಬಿನಂ (**ಪಂರಾಮಾ. ೦೬–೯೩**). [ <ಪ್ರಾ. ತಡ. / ಸಂ. ತಟ ]

**ತಡ$_3$** (ನಾ). ಆಧಾರ ; ನೆಲೆ ; ತಳ : ತಡದಿಂ ಕಿತ್ತಡಿಯೆಂಬುದಗಡಿಗಡೆ ಪೊಕ್ಕು . . . ಪೊಯ್ದರ್ (**ಗದಾಯು. ೮–೦೬**). 'ತಡಂಗಿಡಿಸು' ಪರಾ.

[< ತಳ ]

**ತಡ$_4$** (ನಾ). ಗಾಬರಿ ; ಗೊಂದಲ ; ತಬ್ಬಿಬ್ಬು ; ದಿಗ್ಭ್ರಾಂತಿ : (**ಕ**).

**ತಡತಡ,** ತಡದಡ (ದ್ವಿರುಕ್ತಿ) : 'ತಡತಡವರ್', 'ತಡತಡಿಸು', 'ತಡ ದಡವರ್' ಪರಾ.

**ತಡತಡಂದೊಡರ್** = ಅಸ್ಥಿರತೆಯುಂಟಾಗು ; ತೂಕತಪ್ಪು : ಇರದೆ ಮನಕ್ಕೆ ಸೊಕ್ಕಿದರೆ **ಪೊಂಪುಟಿ** ವಕ್ತ್ರದೊಳುಣ್ಕೆ . . . ಕಣ್ಮಲರೊಳ್ ನಸುಗಂಪು **ಪೊಣ್ಮೆ** ತಚ್ಚರಣಸರೋಜದೊಳ್ ತಡತಡಂದೊಡರ್ದಾ ರಸನಾಗ್ರದೊಳ್ ತೊದಟ್ಟೆರಸಿದ ಮಾತಿನಿಂದೆಸೆದರಂಗನೆಯರ್ ಮಧುಪಾನಕೇಳಿಯೊಳ್ (ಕುಸುಮಾ. ೧೧-೭೧). **ತಡತಡಾಗು, ತಡತಡವಾಗು**=ಅಸ್ಥಿರವಾಗು ; ತತ್ತರಿಸು : ಅದು ತಡತಡಾದೊಡರ್ಹತ್‌ಪದ ಮನೆ ನಾಲಗೆಗೆ ತರ್ಪುದದು ಬಾರದೊಡಿರ್ಪುದಕಾರವೊಂದಱೊಳ್ (ಆದಿಪು. ೨-೫೬) ; ಬಾಡಿದ ಪೂಮಾಲೆಯೊಡನೆ ಬಟಲ್ದ ಸೋರ್ಮುಡಿಗಳು ಮಡಿಗಡಿಗೆ ತಡದಡವಪ್ಪ ನಡೆಗಳುಂಬೆರಸು (ಆದಿಪು.೧೧-೬೮ವ). **ತಡವಾಗು₃, ತಡವಾಗು₂**=೧. ತಬ್ಬಿಬ್ಬಾಗು; ಕಕ್ಕಾಬಿಕ್ಕಿಯಾಗು; ದಿಗ್ಭ್ರಾಂತವಾಗು: (+). ೨. ತೊಡಕಾಗು; ತಪ್ಪಾಗು: ಪದದಪ್ಪದೆಯುಂ ಬಗೆ ಬೆದಱದೆಯುಂ ಕತೆ ಕೆಡದೆಯುಂ ಭವಾವಳಿ ತಡಮಾಗದೆಯುಂ (ಶಾಂತಿಪು. ೫-೧೦); ಸುಖದ ಸೊರ್ಕೆಯೆನಲ್ಕೆ ಪಾಡಿ ಮೆಚ್ಚಿಸುವನಿಮೇಷಗಾಯಕಿಯರಾಲಯದೊಳ್ ತಡಮಾಗದೋದಿ ಬಾಜಿಸುವ ಮರುದ್ಧರಾ ವಿವಿಧವಾದ್ಯವಿಶಾರದ ವಾದಕರ್ಕಳುಂ (ಮಹಾನೀ. ೨-೪೭) ; ತಕ್ಕಳಿದು ತಡವಾಗಿ[ಪಾಠಾಂ. ಉಕ್ಕಿ ತಡಬಡವೋಗಿ, ತಳಿರ್ದುತಡಬಡವಾಗಿ]ಹೊರೆಯೇಱೆ ನೋಡುತುಂ (ನಂಬಿರ. ೭-೦೫೦). **ತಡಮಾಡು₂** = ತಳ್ಳಂಕಗೊಳ್ಳು ; ಆಕುಲಗೊಳ್ಳು ; ಕಳವಳಗೊಳ್ಳು : ರೋಮೋದ್ಗಮಂ ಪೊಣ್ಮೆ . . . ಮತ್ತಂತೆ ನಡೆನೋಡಿ **ಚಿತ್ರದೊಳ್ ತಡಮಾಡಿ** (ಜಗವಿ. ೦೭-೦೦೮ ರಗಳೆ) ; ನಿಂದ ಭರಕ್ಕೆ ಧಾತ್ರಿ ನಡುಗುತ್ತಿರೆ ಮೆಟ್ಟಲಯಕ್ಕೆ ದಿಗ್ಗಜಂ ಪಿಂದಡಿಯಿಟ್ಟು ಬೆರ್ಚುತಿರೆ ಪಿಂದೆಸೆಗಳ್ ತಡಮಾಡೆ[ಪಾಠಾಂ. ವಾಗೆ]ತಾಂಡವಾನಂದದಿನಾಡುವಲ್ಲಿ ಹರಿ (ಅನಂಪು. ೫-೯೮). [ ? ]

**ತಡಂ** (ಅ). ೧. ಬೇಗನೆ ; ಕೂಡಲೆ : ಓಲೆಯುಂ ಬಾಚಿಸುವುದು ತಡಮೇಟ್ರಂದು ತಾಂ ಕಾಣ್ಬುದೆಮ್ಮಂ (ಕಾದಂಬ. ೩೫೯). ೨. ಮೆಲ್ಲನೆ ; ನಿಧಾನವಾಗಿ : ಸೊಗಯಿಸೆ ತೊಟ್ಟ ಪೂದುಡುಗೆ ಮೆಲ್ಲೆರ್ದೆಯೊಳ್ ತಡಮಾಡೆ ಗಾಡಿ (ಪಂಪಭಾ. ೨-೧೮) ; ಆನೆಯನೇಱೆ ಸೌಷ್ಠವದೆ ಬರ್ಪರಿಕೇಸರಿಯೊಂದು ಗಾಡಿಯುದ್ವಾನಿ ತಗುಳ್ದು ಕಣ್ಣೊಳೆ ತೊಟಲ್ದೆರ್ದೆಯೊಳ್ ತಡಮಾಡೆ (ಪಂಪಭಾ. ೪-೫೮) ; ಮಲಿನಂಗಳಂ ತೊಳೆಯೆಯೊ ತಡಂಬಡಿಸಿದೆಯೊ ಬಂದಿಗೆಯ (ಬಸಪು. ೪೭-೧೩). [<ತಡ₁ ]

**ತಡಂಗ** 'ತ್ರಟಂಕ' ನೋ.

**ತಡಂಗಡಿ,** ತಡಗಡಿ (ಕ್ರಿ). ೧. ಸಂಪೂರ್ಣ ಕತ್ತರಿಸು ; ಪೂರ್ತಿ ಕಡಿ : ಸಂಧಿ ಸಂಧಿಗಳಂ ಗಂಟುಗಡಿವುದುಂ ತಡಂಗಡಿವುದುಂ (ಸುಕುಮಾ. ೧೦-೪೭ ವ) : ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ (ಧರ್ಮಾಮೃ. ೩-೭೩) ; ಮಾಳವನಂ ತಡಂಗಡಿದು (ಎಇ. XV, ೩೨೦-೨೧ ; 1172) ; ಕೊಯ್ಯೆ ಪೊರಳ್ಚಿ ಕುತ್ತೆ ಕೊಱೆದಿಕ್ಕೆ ತಡಂಗಡಿದೊಟ್ಟೆ ನೆತ್ತಿಯಂ ಪೊಯ್ಯೆ (ಅನಂಪು. ೯-೩೨). ೨. ದಡವನ್ನು ಕೊಚ್ಚು ; ತಟವನ್ನು ಮೀರು : ಅದಱ ಬಿದುಮುಟ್ಟ ದಿವಮಂ ಮದಧಾರಾಸಾರದಿಂ ತಡಂಗಡಿದ ವಿಯನ್ನದಿಯಸಿತಮಾಗೆ ಮೃಗವುದನದಿಯೆಂದೇವೈಪರಮರರಘಮರ್ಷಣದೊಳ್ (ಅನಂಪು. ೦೩-೨೧). **ತಡಗಡಿ :** ೧. ಕತ್ತಲೆಯ ಮೊತ್ತಮಂ ತಡಗಡಿದು ಬೆಳಗುತ್ತ ಪತ್ರಮಿತ್ರನುಪುದಿಸಿದ (ನವಮೋ. ೦೦-೪೩). [ತಡ₂ + ಕಡಿ₁]

**ತಡಂಗಲಸು,** ತಡಂಗಲಿಸು (ಕ್ರಿ). ೧. ಕೂಡಿಕೊಳ್ಳು ; ಒಂದಂಗೂಡು ; ಸೇರಿಕೊಳ್ಳು; ಬೆರೆ : ಆ ದೇವಗಣಿಕೆಯರ್ ಪೆಂಡವಾಸದೆಳವೆಂಡಿರೊಳ್ ತಡಂಗಲಸಿ ನಿಲೆ (ಜಗವಿ. ೦೪-೯೨ ವ). ೨. ವ್ಯಾಪಿಸು: ಲವಲಿಕೆಯೆಂಬಳೆಂಪ್ರು ನಮಿರುಚಿ ತಡಂಗಲಸೆ ಪೂವಲಿಗೆದಱಿಯುಂ (ಚಂದ್ರಪು. ೧೧-೧೪೫ ವ) ; ಯುವತಿಯರ ನುಡಿಯೊಳ್ ತಡಂಗಲಸಿದ ಪುಣ್ಯಾಹಕಜನಂಗಳಾಶೀರ್ವಾದನಾದಮುಮಂ (ಚಂದ್ರಪು. ೬-೯೭ವ). **ತಡಂಗಲಿಸು :** ೧. ನೇಱಿದ ನೇಱಿಲ ಪಣ್ಗೊನೆಯ ಸೀಗುರಿಗಳಮದಱೊಳ್ ತಡಂಗಲಿಸಿ ತೂಗುವ ಪೊಂಬಾಟೆಯ ಪೊಸ ಚಾಮರಂಗಳಂ (ಲೀಲಾವ. ೧೦-೫೫ವ) ; ನಳನಳಿಪ ಕೇಸರದ ಸಸಿಯೊಳ್ ತಡಂಗಲಿ[ಪಾಠಾಂ. ಲ]ಸಿ ಬೆಳೆದ ದವನದ (ಚಂದ್ರಪು. ೬-೯೫ವ);ಸಂಚರಿಸುವ ಚಂಚರೀಕಚಯದಿಂಪಿನ ಸೊಂಪಿನ ಗಾವರಂ ವಿಯಚ್ಚರಿಯರ ನೂಪುರಧ್ವನಿ ತಡಂಗಲಿಸಿತ್ತು ವಿವಾಹಗೇಹದೊಳ್ (ಶಾಂತೀಶ್ವ. ೪-೦೯೯). ೩. ಒಂದುಗೂಡಿಸು ; ಸೇರಿಸು : ಇಳೆಯಂ ವ್ಯೋಮಮುಮಂ ತಡಂಗಲಿಸಿ ದಿಕ್ಚಕ್ರಕ್ಕೆ ನಿಂದಿಕ್ಕೆ ಮಂಗಳ ತೂರ್ಯಧ್ವನಿ (ಅನಂಪು. ೦೪-೬೮). ೪. ಸಮಾನವಾಗು : ಎಲೆಪಚ್ಚೆಯ ಪಲ್ಲಣಮುಳ್ಳಲರ್ದಜ್ಜಂ ಛತ್ರಮಡರ್ದ ನೊರೆ ಜಲ್ಲಿ ತಡಂಗಲಿಸೆಸೆಯೆ ರಾಜಹಂಸಂ ನಲವಿಂ ತೆರೆಗುದುರೆಯೇಱೆ ಕುಣಿಯಿಪನದಱೊಳ್ (ವೃಷವಿ. ೪-೦೩).

[ ತಡ₂ + ಕಲಸು₁ ]

**ತಡಂಗಲಿಸು** 'ತಡಂಗಲಸು' ನೋ.

**ತಡಂಗಲು** (ನಾ). ಅಡ್ಡಿ ; ತೊಂದರೆ : ರಾಜಕೀಯ ಕಾರಣಗಳಿಂದಲೋ ಏನೋ ಈ ಮುನ್ನಡೆಗೆ ತುಸು ತಡಂಗಲಾಗಿ (ನಂಜುಂಡ. ೩೯).

[←ತಮಿ. ತಟಙ್ಕಲ್ ]

**ತಡಂಗಾ** (ಕ್ರಿ). ನಿಲ್ಲುವಂತೆ ರಕ್ಷಿಸು ; ತಡೆದಿಟ್ಟುಕೊಳ್ಳು : ಕಣ್ಣೊಳೋಪರಂ ಕಾವುದು ಸುತ್ತಿ ಪತ್ತಿ ಸವಿಯೊಳ್ ಸೆಱೆಗೆಯ್ವುದು ಜೀವಮಂ ತಡಂಗಾವುದು (ಲೀಲಾವ. ೦೪-೪೩). [ ತಡ₁ + ಕಾ₁ ]

**ತಡಂಗಾಲ್,** ತಡಂಗಾಲು, ತಡಗಾಲ್ (ನಾ) ೧. ನಡೆಗೆ ಅಡ್ಡಿಪಡಿಸುವ ಕಾಲು; ಅಡ್ಡಗಾಲಂ; ತೊಡರುಗಾಲು: ಕೆಲವು ಪದಂಗಳ್ ಸ್ವಭಾವದಿಂ ನಿತ್ಯಬಿಂದುಗಳಪ್ಪುವು ಅವರ್ಕೆ ಪ್ರಯೋಗಂ–ಬೆಡಂಗು . . . ತೊಡಂಕು, ತಡಂಗಾಲ್ (ಶಮದ. ಮ. ೪೬ ಪ್ರಯೋ). ೨. ಅಡ್ಡಿ; ತಡೆ; ನಿರೋಧ; 'ತಡಂಗಾಲ್ವೊಯ್' ಪರಾ. **ತಡಂಗಾಲು :** ೨. 'ತಡಂಗಾಲುವೊಯ್' ಪರಾ. **ತಡಗಾಲ್ :** ೧. ಅರೆಬರ್ ತಡಗಾಲೆಂಬಂತಬಿಂದುವು ಮನಾಚರಿಪರ್ (ಶಮದ. ೦೭೩).

**ತಡಗಾಲ್ಮಾಧವ, ತಡಂಗಾಲಮಾಧವ** = ಶತ್ರುರಾಜರಿಗೆ ತೊಡರುಗಾಲಿನಂತಿರುವ ಮಾಧವ; ಒಂದು ಬಿರುದು: ಗಂಗನಿಂ ಭಯಮಿಲ್ಲದ ಹರಿವರ್ಮ್ಮ ವಿಷ್ಣುನೃಪನಿಂ ನಿಜದಿಂ ಬಲ್ಲೆ ತಡಂಗಾಲ್‌ಮಾಧವನಲ್ಲಿಂ ಬಳಿಚುಚ್ಚುರ್ವಾಯ್ದು ಗಂಗನೃಪಾಳಂ (ಎಕ. VII, ಶಿವಮೊ. ೫೭-೮ ; 1115) : ಬಿರುದರಂ ತಡಂಗಾಲುವೊಯ್ದುಡಿಗಿಡಿಸುವ ತಡಂಗಾಲಮಾಧವನ್ (ಎಕ. VII, ಶಿವಮೊ. ೪-೪೦ ; 1122). [ ತಡ₁ + ಕಾಲ್₁ ]

**ತಡಂಗಾಲು** 'ತಡಂಗಾಲ್' ನೋ.

**ತಡಂಗಾಲುವೊಯ್** 'ತಡಂಗಾಲ್ವೊಯ್' ನೋ.

**ತಡಂಗಾಲ್ಗೊಳ್** (ಕ್ರಿ). ಅಡ್ಡಗಾಲಾಗು ; ಕಾಲಿಗೆ ಅಡ್ಡಲಾಗಿ ಬರು : ಪೊಸವಾಣಿತಿವುಲ್ಲೆ . . . ತವಕದಿಂ ಬರುತ್ತುಂ ಕೂಡೆವರಲುಮಿರಲು ಮಱಿಯದೆ ತಡಂಗಾಲ್ಗೊಂಡು ತಡೆದು ತಡದಡವರ್ಪ ತರುಣ ಹರಿಣಂ (ಪುಷ್ಪಪು. ೩-೭೬ ವ). [ ತಡಂಗಾಲ್ + ಕೊಳ್₁ ]

**ತಡಂಗಾಲ್ವೊಯ್** 'ತಡಂಗಾಲ್ವೊಯ್' ನೋ.

**ತಡಂಗಾಲ್ವೊಯ್,** ತಡಂಗಾಲುವೊಯ್, ತಡಂಗಾಲ್ವೊಯ್ (ಕ್ರಿ). ಅಡ್ಡಗಾಲು ಹಾಕು; ಅಡ್ಡಿಯನ್ನು ಉಂಟುಮಾಡು; ಅಡ್ಡಡ್ಡ ಬರು: ಮೊಗೆದು ಮೊಗೆದು ನೀರ ಮೊಗಕೆ ಚೆಲ್ಲುವ ಪುಟನೆಗೆವ ತಡಂಗಾಲ್ವೊಯ್ವ (ಕುರಾಸಾಂ. ೨೭-೧೧೧). **ತಡಂಗಾಲುವೊಯ್ :** ಬಿರುದರಂ ತಡಂಗಾಲುವೊಯ್ದುಡಿಗಿಡಿಸುವ ತಡಂಗಾಲಮಾಧವಂ (ಎಕ. VII, ಶಿವಮೊ. ೪-೪೦ ; 1122). **ತಡಂಗಾಲ್ವೊಯ್ :** ತೊಡರೆ ತಡಂಗಾಲ್ವೊಯ್ದೊಡೆ ಕೆಡದುಂ

. . . **ಪೋದಿದೊಡಿರದೆಲ್ವಡಗಾಗಿ** ಮಡಿದು ಬಿಬ್ದುವು ಗಡಣದೆ ಕರಿಘಟೆಗಳೇಂ ಬಲಸ್ಥನೋ ಭೀಮಂ (ಪಂಪಭಾ. ೧೧-೭೮) ; ಎನಿತಾನುಂ ಕುತ್ಸಿತಮಪ್ಪುದಾಹರಣೆಗಳಂ ತೋಱಿ ಶೂನ್ಯವಾದಮಂ ಮಾಡಿ ತಡಂಗಾಲ್ವೊಯ್ದುದುಂ ಸಂಘಶ್ರೀಯ ವೃಥಾಲಾಪಕ್ಕೊಳಗಾಗಿ (ಧರ್ಮಾಮೃ. ೧೧-೧೫೭); ನೂಪುರದುಲಿಯ ಸನ್ನೆಗೆ ಬಿನ್ನನೆ ಬಂದು ಮೆಲ್ಲಡಿಗಳಂ ತಡಂಗಾಲ್ವೊಯ್ವರ ಸಂಚೆಗಂಜಿಸೆ . . . ಮಣಿಗಂಭಮನಿಂಬುಗೊಳ್ವ ಮಂದಗಮನೆಯರಿಂ (ಧರ್ಮನಾ. ೨-೧೩೨ ವ). [ ತಡಂಗಾಲ್ + ಪೊಯ್$_1$ ]

**ತಡಂಗಿಡಿಸು,** ತಡಗೆಡಿಸು (ಕ್ರಿ). ನೆಲೆಗೆಡಿಸು; ಆಧಾರವಿಲ್ಲದಂತೆ ಮಾಡು; ನಿರಾಧಾರಗೊಳಿಸು : ಸಿಂಧುತೋಯದಂತೆಱಗದರಂ ತಡಂಗಿಡಿಪ ನಮ್ಮರನುರ್ವಿಪ ರಾಜಲೀಲೆ ಕಣ್ದೆಱೆದುದು ಪುಷ್ಪದಂತ ಮಹಿಪಾಳನೊಳತ್ಯಮಳಾದ್ರ್ರಶೀಲನೊಳ್ (ಪುಷ್ಪಪು. ೧೩-೭). **ತಡಗೆಡಿಸು** : ಗಿಡುವುಗಿಸಿತ್ತು ಪಾಂಡುಸುತರಂ ಯದುವಂಶವನೊರ್ವರೊರ್ವರಿಂ ತಡಗೆಡಿಸಿತ್ತು . . . ಮಿಕ್ಕರಂ ಬಿಡುವುದೆ ಬಾತೆಗೆಟ್ಟ ವಿಧಿ (ನಳಚಂ. ೭೪೩).

[ ತಡ$_3$ + ಕಿಡಿಸು (<ಕೆಡಿಸು$_1$) ]

**ತಡಂಗು** (ನಾ). ಕುದುರೆ ಸವಾರ ಕಾಲಿರಿಸಿಕೊಳ್ಳಲು ಇರುವ ಸಾಧನ ; ರಿಕಾಪು (?).

**ತಡಂಗಿನವ** = ರಿಕಾಪು ಹಿಡಿಯುವವನು ; ಕುದುರೆ ಚಾಕರ (?) : ಇಬ್ಬರೂ ಕುದುರೆಗಳನ್ನೇರಿ ಎದುರಲ್ಲಿ ನಾಲ್ಕು ಜನ ಹರಿಕಾರರನ್ನು ಬಿಟ್ಟುಕೊಂಡು ಜೊತೆಗೆ ನಾಲ್ಕು ಜನ ತಡಂಗಿನವರೊಂದಿಗೆ ಅಪ್ಪಂಗೊಳಕ್ಕೆ ಹೊರಟರು (ಚಿಕರಾ. ೩೪೨) ; ಅರಸ . . . ತಡಂಗಿನವನ ಸಹಾಯದಿಂದ ಕುದುರೆಯಿಂದಿಳಿದನು (ಚಿಕರಾ. ೩೪೫). [ ? ]

**ತಡಂಗುಂಡಿ** (ನಾ). ಸುತ್ತಲೂ ಕಟ್ಟೆಯಿರುವ ನೀರಿನ ಗುಂಡಿ ; ಕೊಳ ; ಸರೋವರ : ಸರಸಿಜದ ಸಿರಿಯ ನಾನಪಹರಿಸೆಂ ಮನ್ಮುಖದಿನದುವೆ ನಿಜಮೆಂದು ತನೂದರಿ ತಂಡ[ ತಡಂ ]ಗುಂಡಿವುಗುವವೊಲರಸನ ಕೆಲದಲ್ಲಿ ಮುಳುಗಿದಳ್ ನಲಿದೊರ್ವಳ್ (ಚಂದ್ರಪು. ೭-೧೩೭); ಕರ್ಮಡುವಿನ ತಡಂಗುಂಡಿಯೊಳಡಂಗುವುವು (ರಾಮಾಶ್ವ. ३-೧೯) ; ತಡಂಗುಂಡಿಯೊಳೊತ್ತಿ ಬಾಳ್ಗಿಡಿಪ ಸಂಧಾನಕ್ಕೆ (ಸಂಸಪ. ೧೯-೧೦). [ ತಡ$_2$ + ಗುಂಡಿ$_2$ ]

**ತಡಂಗೂಡು** (ಕ್ರಿ). ಬೆರಸಿಕೊಳ್ಳು ; ಕೂಡಿಕೊಳ್ಳು : ತಳಿರಂ ತೂಗಿ ಪರಾಗಮಂ[ ಪೊರೆ ]ದು ಪೂನೀರಂ ತಡಂಗೂಡಿ ಗುಗ್ಗುಳ ನಿರ್ಯಾಸಮನಾಂತು . . . ಗಂಧಂಗಳಂ ತಳೆದೇಂ ಗಂದಿಗರಂತೆ ಬಂದೊಲೆದುದೋ ಮತ್ತೊಂದು ಮಂದಾನಿಳಂ (ಅರ್ಧನೇ. ೫-೯೭). [ ತಡ$_2$ + ಕೂಡು$_1$ ]

**ತಡಂಗೆಡೆ** (ಕ್ರಿ). ಕಂಸಿದು ಬೀಳು; ತತ್ತರಿಸಿ ಬೀಳು; ನೆಲೆಗೆಡು : ಪಿರಿಯ ಗುಹೆಯೊಳಡಂಗಿ ಬೆಡಂಗಳಿದು ತಡಂಗೆಡೆದಿರ್ಪ ಮಾತಂಗದಂಪತಿಗಳಿಂ (ಗಿರಿಕ. ೧-೧೨೮ವ); ಬೆದಱಿದುದಭ್ರಮೂರಮಣನೊಟ್ಟಜೆಗೆಟ್ಟುದು ಪುಂಡರೀಕಮುಬ್ದುದು ಕುಮುದಂ ತಡಂಗೆಡೆದುದಂಜನಂ (ಪುಷ್ಪಪು. ೫-೮).

[ ತಡ$_3$ + ಕೆಡೆ$_1$ ]

**ತಡಂತಡಿಸು** ‘ತಡತಡಿಸು’ ನೋ.

**ತಡಂತೊಡರ್** (ಕ್ರಿ). ಸಮನಾಗಿ ತೊಡಕಿಕೊಳ್ಳು; ಚೆನ್ನಾಗಿ ಸೇರಿಕೊಳ್ಳು: ಸಂಚಳ ಮಿನಸಂಚಯಂ ಪೂದುಱುಗಲ್ ತಡಂತೊಡರ್ದು ತೋರ್ಪವೊಲೊಪ್ಪಿರೆ ಕೊಂಕುವೆತ್ತ ಸೀತೋದೆ ಸಡಿಲ್ದು ನೀಳ್ದ ಶರದಿಂ ನಿಱಿಗೊಂಡು ಬಟಲ್ದ ಭಂಗಿಯಿಂ (ಅರ್ಧನೇ. ೦-೭೧). [ ತಡ$_2$ + ತೊಡರ್$_1$ ]

**ತಡಂನುಡಿ** (ನಾ). ನಿಧಾನವಾಗಿ ಆಡುವ ಮಾತು ; ತಡೆದು ತಡೆದು ಆಡುವ ಮಾತು : ನಡೆತಂದರ್ ಚೆಲ್ವಿಂದೊಳ್ನುಡಿಯ ತಡಂನುಡಿಯ ತೊದಳ ನುಡಿಯೊಳ್ವೆಂಡಿರ್ (ಜಗವಿ. ೪-೧೨೭). [ ತಡ$_1$ + ನುಡಿ$_2$ ]

**ತಡಂಬಡ** ‘ತಡಬಡ’ ನೋ.

**ತಡಂಬಡಿಸು** ‘ತಡಬಡಿಸು’ ನೋ.

**ತಡಂಬಡು$_1$** (ಕ್ರಿ). ತಡಮಾಡು ; ವಿಳಂಬಮಾಡು : ಈಗಳೆನಸುಂ ತಡಂಬಡದೆ ಬಣ್ಣಿಸಿ ನಿನತೊಂದೊಲ್ಮೆವಡೆದಪೆಂ (ರಾಮಾಶ್ವ. ೮೮-೧೫) ; ತಡಂಬಡದಯ್ಯನ ನೇಹದಿಂ ತಾಂ ಮಱುಗದೆ ಬಗೆಗುಂದದೆ ಕಾಂತನಂ ರಣಕೆ ಬೀಱಿಸ್ಕೊಟ್ಟಳ್ (ರಾಮಾಶ್ವ. ೧೩೦-೫).

[ ತಡ$_1$ + ಪಡು$_1$ ]

**ತಡಂಬಡು$_2$** ‘ತಡಬಡು’ ನೋ.

**ತಡಂಬಡು$_3$** (ಕ್ರಿ). = ತಡಂಬಡೆ : ಸೂಸುವ ಶೀಕರಾಳಿ ತಾರಕಗಣದೊಳ್ ಸಮಂಬಡೆಯೆ ತೇಂಕುವ ಮೌಕ್ತಿಕ ರತ್ನಗರ್ಭಶುಕ್ತಿಕೆ ಪೆಱಿಯೊಳ್ ತಡಂಬಡೆ ಸುಧಾರ್ಣವವೊಪ್ಪಿದುದುದ್ಗತಾರ್ಣವಂ (ಜಗವಿ. ೦-೪೪).

[ ತಡ$_2$ + ಪಡು$_1$ ]

**ತಡಂಬಡೆ** (ಕ್ರಿ). ಸಮಂಕ್ಕೆ ಬರು; ಸಮಾನತೆಯನ್ನು ಪಡೆ; ಸರಿಯಾಗು: ಹೀರಮನೊಂದಿಸಿದ ಹಾರಮನುರಸಿಜಕೆಳಲಿಟ್ಟು ಸುಧಾಗಾರಮನೇಱಿ ತಡಂ[ಪಾಠಾಂ. ಱುತೆಡ್ಡಂ]ಬಡೆದಳ್ ನೀಹಾರಮಹೀಧರಮಂ ಪರ್ವಿದ ಶೃಂಗಾರಮರುಲ್ಲತೆಗೆ (ಉದ್ಯದೇ. ೪-೪೪).

**ತಡತಡಂಬಡೆ** (ದ್ವಿರುಕ್ತಿ) : ತುಂಬಿಗುರುಳೊಳ್ ತಡತಡಂಬಡೆದು ತುಂಬಿಗಳ ಬಿಂಬವೆಳಸುತಿರೆ (ಸೂಕ್ತಿಸು. ೦೩-೧೦). [ ತಡ$_4$ + ಪಡೆ$_1$ ]

**ತಡಂಬರ್,** ತಡವರ್ (ಕ್ರಿ). ೧. ತಡವಾಗಿ ಬರು; ನಿಧಾನವಾಗಿ ಬರು (?) : ಮತ್ತೊಂದು ದಿವಸಂ ಪ್ರಭಂಕರಿಯೆಂಬ ಕೊಳದೊಳ್ ಸ್ವೇಚ್ಛೆಯಿಂ ನೀಡುಂ ಕ್ರೀಡಿಸುತ್ತಂ ತಡಂಬಂದು ಮನಃಪೂರ್ವಕಮಲ್ಲದೆ ಪೊಱಮಡುವಾಗಳ್ (ವಡ್ಡಾರಾ. ೩೭-೩೦). **ತಡವರ್** : ೨. ಅಡ್ಡಿ ಬರು: ತಲೆಗರೆಯ ದಣ್ಮ ಸತ್ತರ ತಲೆಗಳನಟ್ಟೆಯೊಳಮರ್ಚಿಕೊಂಡೊಯ್ವೆಡೆಯೊಳ್ ತಲೆ ತಡವರಲಮರಿಯರೇಂ ತಲೆಯಂ ತಲೆವಿಡಿದು ಬಿಡದೆ ತಲೆವತ್ತಿದರೋ (ಪಂರಾಮಾ. ೧೩-೫೭) ; ನಟ್ಟಿರೆ ಕಿವಿಯುಂ ಕಣ್ಗಳ್ ಬಿಟ್ಟಿರೆ ಮೆಯ್ಮಱಿಯದೆಱಗಿ ತಡವಂದು ತಡಂಮೆಟ್ಟಿ . . . ಕರಂ ವಿಕಲನಾದ ತುರಗಂ ಸಾಯ್ಗುಂ (ಅಶ್ವಶಾ. ೧೧-೪೭). [ ತಡ$_1$ + ಬರ್$_1$ ]

**ತಡಂಬರ** (ನಾ). ಕಳವಳ; ಗಾಬರಿ; ಸಂಕಟ: ತಲ್ಲಳ (ತಲ್ಲಣ), ತಳಮಳ, ತಡಂಬರ, ಕಳವಳ, ಸಿಡಿಮಿಡಿ, ಕಸಿವಿಸಿ, ಬೇಗುದಿ, ಅಳಲು, ತೊಳಲು (ಕಂನುಹು. ೮೪). [ ? ]

**ತಡಂಬರಿ** (ಕ್ರಿ). ೧. ಮುಂನುಗ್ಗು (?) : ತಳರೆ ತಳಚ್ಚರ್ವಂಗೆ ಕನಕಾಚಳ ಮೊತ್ತುವವಂಗೆಲೇ ವಿಯುತ್ತಳಮಲರ್ವ್ವಂಗೆ ತೀವಿ ತೆಗೆದಂಬು ತಡಂಬರಿವಂಗೆ ಕಂಟಕಪ್ರಳಯಂ . . . ಚಟ್ಟಮನೆಂಬ ಜೆಟ್ಟಿಗಂ. (ಎಕ. XI. ದಾವಣ. ೪೩-೪೮ ; 1164). ೨. ಹೊರಹೊಮ್ಮು,—ಸೂಸು : ಮುಸುಂಕುವ ಕುಂಕುಮಾಂಬು ಸಂಕುಲದೊಳದೊಂದು ಕೆಮ್ಮುಗಿಲ ಕಾವಣದೊಳ್ ಕುಡಿಮಿಂಚುಗಳ್ ತಡಂಬರಿವವೊಲೇಂ ಬೆಡಂಗಡರ್ದರೋ ರುಚಿಮದ್ವಿಚಳಲ್ಲತಾಂಗಿಯರ್ (ಅನಂಪು. ೭-೨೮).

**ತಡಂತಡಂಬರಿ** (ದ್ವಿರುಕ್ತಿ) : ಪಿಡಿದರಂಗನೆಯಂ ಪಿಡಿದೊಯ್ವರೆಂದು ತಲ್ಲಱಿಸಿ ತಡಂತಡಂಬರಿಯೆ ಪುಯ್ಯಲ ಗಾವಳಿ ಕಯ್ಯನಿಟ್ಟುದೀ ತೊಱಸಿದ ಪಾಂಗೆ ಕಿಟ್ಟಲೆ ಕಿಱಂದಲೆಯಾದುದು ಕೂಡೆ ಪಟ್ಟಣಂ (ಅನಂಪು. ೧೧-೭೩).

[ ತಡ$_2$ + ಪರಿ$_2$ ]

**ತಡಂಬರೆ$_1$** (ನಾ). ಅಡ್ಡಿಪಡಿಸುವಿಕೆ ; ಪ್ರತಿಭಟನೆ : ತಳ್ವೊಯ್, ತಡಂಬರೆ ಪೋರ್ಕುಳಿ . . . ಮಿಗು, ತಡಂಬೊಯ್ . . . — ಈ ೨೫ ಪ್ರತಿಹತಕ್ಕೆ ಪೆಸರ್ ” (ಕಶಸಾ. ೧೫-೨೯೭) : “ ತಡಂಬರೆಯು ಪ್ರತಿಹತಾಖ್ಯಂ ”(ಕವಿಕಂ. ೦೩೯). [ ತಡ$_1$ + ಬರ್$_1$ + ? ]

**ತಡಂಬರೆ$_2$** (ನಾ). ಸಮನಾದುದು: “ ತಡಂಬರೆಯುಮೆಂದು ಸಮನೆನಿಪುದಕ್ಕೆ ನಾಮಂ ” (ಅಬ್ಧಿಕ್ಕೆ. ೭೯).

[ ತಡ$_3$ + ಬರ್$_1$ + ? ]

**ತಡಂಬಾಯ್**, ತಡವಾಯ್, ತಡವಾಯಂ, ತಡಹಾಯು (ಕ್ರಿ). ೧. ಅಧಿಕವಾಗು; ಅತಿಶಯಂವಾಗು; ಮೇರೆಮೀರು: ಬಲ್ಲಂ ನಿಷಾದಿಗಳಂ ದೊಲ್ಲದೆ ಕಿಟ್ಟಿ ಗೇಣೊಳೆ ತಡಂಬಾಯ್ದುಯ್ದ ತದ್ವೈರಿಯೋಧಿಗಳಂ ತಾನನೆ ತಕ್ಕಿನೆಕ್ಕತುಳದಿಂ ಕೈಯಾರ್ವಿನಂ ಕಾದಿದರ್ (ಚಂದ್ರಪ್ರ. ೧೦-೮೩). **ತಡವಾಯ್** : ೧. ಪೊತ್ತುವೆದೆಗಳ ಪೊಗೆವ ಮೋಟೆಯ ಕಿತ್ತಡದ ಕಡುಗೋಪ ಸುಪತೆ[ಪಾಠಾಂ. ಸಮತೆ]ಗಳಿತ್ತಡಿಯ ತಡವಾಯ್ದು ನೃಪ ರೈತಂದರೊಗ್ಗಿನಲಿ (ಕುಮ್ಮಾಸ. ೧೬-೬೭). ೨. ಸಮನಾಗು; ಸಾಟಿಯಾಗು: ಪರವರಧವಳಾಂಗದ್ಯುತಿ ಚರಚರದೂರ್ವ ಸ್ಫುಟತ್ತಟೋಜ್ಜ್ವಲ ಫೇನೋತ್ಕರಕರದೊಳ್ ತಡವಾಯ್ದಿರೆ ಪರಿಪರಿ ರಂಜಿಸುವುದೊಂದು ಕೊಳನಂ ಕಂಡಂ (ಜಗವಿ. ೧೦-೫೮); ಅಳಿಗೆ ಕುರುಳ್ ತಳಿರ್ಗೆ ತಳಂ ಕಳಿಕೆಗೆ ಬೆರಲಲರ್ಗೆ ಕಣ್ಮಲರ್ ದೊರೆಯೆನೆ ಕೋಮಳಲತೆಗಳೊಳಂ ಸಲೆ ಕೋಮಳೆಯರ್ ತಡವಾಯ್ದರೆಯ್ದೆ ಪೂಗೊಯ್ವೆಡೆಯೊಳ್ (ಚಂದ್ರಪ್ರ. ೭-೯೯). **ತಡವಾಯು** : ೧. ರಾಯರೆಲ್ಲರ ಗೆಲಿದು ತಂದೆನು ನಾಯಕವನನುಪಮಿತ ಮೌಲ್ಯವನಮಲ ಮೌಕ್ತಿಕವ ತಾಯೆ ಚಿತ್ತೈಸಿದಿರೆಯೆನೆ ತಡ[ಪಾಠಾಂ. ಕಡೆ] ವಾಯಿದಳು ತನಿಹರುಷದಲಿ ಲೇಸಾಯಿತ್ಯವರು ಕೂಡಿ ಭೋಗಿಪುದೆಂದಳಾ ಕುಂತಿ (ಕುಮ್ಮಾಆ. ೧೬-೬). **ತಡಹಾಯು** : ೩. ಎಲ್ಲೆಯನ್ನು ದಾಟಿ ಹೋಗು ; ನುಗ್ಗಿಹೋಗು : ಕೊಪ್ಪರಿಗಗೆಳೇಳನು ತಡ[ಪಾಠಾಂ. ಟ] ಹಾಯಲೆಸುವೆನು (ಕುರಾಸಾಂ. ೧೮-೮೦) ; ಹೆಣ್ಣಾನೆಯು ಅದನ್ನು ತಡಹಾಯ್ದು ಬೇರುಸಹಿತವಾಗಿ ಕೆಡವಿದಂತೆ ಆಯಿತು (ತುಳಸಿ. ೦೦೪).

[ ತಡ್$_3$ + ಪಾಯ್$_1$ ]

**ತಡಂಬುಗಿಸು** (ಕ್ರಿ). ಕೂಡಿಸಂ ; ಸೇರಿಕೊಳ್ಳುವಂತೆ ಮಾಡು; ಬೆರಸು: ಆ ನರ್ತಕಿಯರ ಬಳ್ಳಿಗುರುಳ ಬಂಬಲೊಳ್ ತುಂಬಿಯ ಬಂಬಲಂ ತಡಂಬುಗಿಸೆ (ಅನಂಪು. ೧೦-೩೩ವ). [ತಡಂಬುಗು (<ತಡಂಬೊಗು)+–ಇಸು$_3$]

**ತಡಂಬುಗು** 'ತಡಂಬೊಗು' ನೋ.

**ತಡಂಬೂರು** (ನಾ). ಒಂದು ಊರಿನ ಹೆಸರು: ಪರಮೇಶ್ವರ ದತ್ತಿಯಾಗಿ . . . ಗುಡಿಯೂರು ತಡಂಬೂರು . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರ್ (ಕಇಅ. ೦೧೯-೦೫-೩೫ ; 1050). [ ? + ಊರು$_3$ (<ಊರ್) ]

**ತಡಂಬೊಗು**, ತಡಂಬುಗು (ಕ್ರಿ). ಒಂದರೊಡನೊಂದು ಸೇರಿಕೊಳ್ಳು; ಸಮನಾಗಿ ಬೆರೆ ; ಮಿಶ್ರವಾಗು : ದೆಸೆಯುಂ ತಳ್ವೊಯ್ಯೆ ಕೀರ್ತಿಪ್ರಸರದೊಡನೆ ಕಾಲ್ಗೂಡಿ ತೀಬ್ರಪ್ರತಾಪಂ . . . ಧರ್ಮಾವಸಥಂ ತಾನಾಗೆ ದಾನೋನ್ನತಿಯೊಡನೆ ತಡಂಬೊಕ್ಕು ಸತ್ಯಬ್ರತಂ (ಎಕ. V. ಚನ್ನರಾ. ೨೦೩-೯; 1223). **ತಡಂಬುಗು** : 'ತಡಂಬುಗಿಸು' ಪರಾ. [ ತಡ್$_2$ + ಪೊಗು ]

**ತಡಂಬೊಯ್$_1$**(ಕ್ರಿ). ೧. ವಿರೋಧಿಸು; ಪ್ರತಿಭಟಿಸು. ೨. ಜೋರಾಗಿ ಹೊಡೆ (?) : ಪಿಡಿದೊಂದೊಂದಱ ಗಾತ್ರಮಂ ತಿರಿಪಿಕೊಡೊಂದೊಂದಱೊಳ್ ಪೊಯ್ದುಮೆಲ್ವಡಗಪ್ಪನ್ನೆಗಮೆತ್ತಿಕೊಂಡಸಗವೊಯ್ಲ್ವೊಳ್ ತಡಂಬೊಯ್ದುಂ[ಪಾಠಾಂ. ಪೊಯ್ಲುತುಂ, ಪೊಯ್ದುಂ, ಪೊಯ್ದೊಯ್ದು] . . . ಕೊಂದಂ ಮದೇಭಂಗಳಂ (ಪಂಪಭಾ. ೧೦-೧೦೪) : "ಬಿರುಸಾಗಿ, ಜೋರಾಗಿ ಹೊಡೆದಂ" (ಪಂಪದೀ. ೩೭೪). [ ತಡ$_1$ + ಪೊಯ್$_1$ ]

**ತಡಂಬೊಯ್$_2$** (ನಾ). ಅಡ್ಡಿಪಡಿಸುವಿಕೆ; ಪ್ರತಿಭಟನೆ : "ತಳ್ವೊಯ್, ತಡಂಬರೆ . . . ತೊಡರ್, ಉರ್ಕೇರ್ಕೆ, ಮಿಗು, ತಡಂಬೊಯ್–ಈ ೨೫ ಪ್ರತಿಹತಕ್ಕೆ ಪೆಸರ್" (ಕಶಸಾ. ೧೫-೨೯೭). [ ತಡ$_1$ + ಪೊಯ್$_2$ ]

**ತಡಂಮಾಡು**, ತಡಮಾಡು$_1$ (ಕ್ರಿ). ತಬ್ಬಿಬ್ಬುಗೊಳಿಸಂ; ದಾರಿತಪ್ಪಿಸು ; ತಳ್ಳಂಕಗೊಳಿಸು : "ತಡಮಾಡು, ತಡಂಮಾಡು – ವಿಪರ್ಯಾಸೇ (ದಾರಿ ತಪ್ಪಿಸು)" (ಶಮಧಾ). **ತಡಮಾಡು** : ೧. "ತಡಮಾಡಿದಂ=ತಳ್ಳಂಕಗೊಳಿಸಿದಂ" (ಶಮದ. ಪರಿ. ೨); "ತಡಮಾಡಿದನೆನಲ್ಕೆ ತಳ್ಳಂಕಗೊಳಿಸಿದಂ" (ಕಬ್ಬಿಕೈ. ೯೧). [ ತಡ$_4$ + ಮಾಡು$_1$ ]

**ತಡಂಮೆಟ್ಟು**, ತಡಮೆಟ್ಟು (ಕ್ರಿ). ೧. ಸಾವಕಾಶವಾಗಿ ನಡೆ; ನಿಧಾನಿಸು: ಚತುರಂಗಂ ಚತುರಂಗಸೈನ್ಯದೊಳಡು[ರ್ತ್ತಂ]ತಿಜ್ಜಿನೆಯ್ತಂದು ತಾಗಿ ತಡಂಮೆಟ್ಟದೆ ಕಾದೆ (ಪಂಪಭಾ. ೧೧-೭) ; ಗುರುಜಘನಭರಂಗಳಿಂ ತಡಂಮೆಟ್ಟುತುಂ . . . ಸೀತೆ ಸೆಡೆದು ಮೆಲ್ಲನೆ ನಡೆದಳ್ (ಪಂರಾಮಾ. ೭-೨೭) ; ಮೆಯ್ಯುಱಿಯದೆಱಗಿ ತಡವಂದು ತಡುಮೆಟ್ಟಿ ತಿದಿಯಂತೆ ಬಾತಿರೆ ಪೊಟ್ಟೆ ಕರಂ ವಿಕಲನಾದ ತುರಗಂ ಸಾಯ್ಗುಂ (ಅಶ್ವಶಾ. ೧೦-೪೭). ೨. (ಭಯದಿಂದ) ಮುಗ್ಗರಿಸಂ : ಬೆರ್ಚಿ ಪೊಳೆದು ಪರಿವ ಪೊಳೆವುಲ್ಲೆಗಳುಮಂ . . . ಸೋಂಕಿ ಪರಿವೆಯ್ಗಳುಮಂ ತಡಂಮೆಟ್ಟಿ ಪರಿವ ಕಡವಿನ ಕಾಡೆಮ್ಮೆಯ ಮರೆಯ ಪಿಂಡುಗಳುಮಂ (ಪಂಪಭಾ. ೫-೪೮ವ). **ತಡಮೆಟ್ಟು**: ಹರಳೊತ್ತಿ ಸೆಡೆವುತಂ . . . ಗುರು ಜಘನ ಭಾರದಿಂ ತಡಮೆಟ್ಟುತಂ(ಕುಮುರಾ. ೬-೩).

**ತಡತಡಮೆಟ್ಟು** (ದ್ವಿರುಕ್ತಿ) : ಜೋಲ್ವ ರ್ಘೋಂಪಿಸುವ ಭಂಗಿ ಮನಂಗೊಳೆ ತಕ್ಕಿನೆಕ್ಕೆಯೊಳ್ ತಡತಡಮೆಟ್ಟಿ ಪಾಡಿ ಪೊಸಕಳ್ಗಳನೀಂಟಿದುದಂಗನಾಜನಂ (ಸೂಕ್ತಿಸು. ೧೩-೭) ; ಕಡಲಿಟ್ಟಳಿವ ಕಂಬನಿಯ ತಡತಡಮೆಟ್ಟಿ ಬಳಲುತ ಬಳುಕುತೇಳುತ . . . ಗೋಳಿನಲಖಿಳಜನ ನಡೆತಂದುದರಮನೆಗೆ (ನಿಘಾಗ. ೪-೧೨-೫). [ ತಡ$_1$ + ಮೆಟ್ಟು$_1$ ]

**ತಡಕಯ್** 'ತಡಕೆಯ್' ನೋ.

**ತಡಕಲ್** (ನಾ). ಒಂದು ಊರಿನ ಹೆಸರು. ಈಗಿನ ಮಹಾರಾಷ್ಟ್ರದ ತಡಿಖೇಲ್ : ದೆಯಿಗಾವೆಯ ತಡಕಲ್ಲೆಡೆವೊಲದಲೆರಡೂರ ಪ್ರಜೆಗಳ ಸನ್ಮತದಿಂ ಬಿಟ್ಟ ಕರಿಯ ನೆಲಂ (ನಾಂದೇಡ್. ೮-೩೪ ; 1070) ; ತಡಕಲ್ಲ ಪ್ರಭು ದಣ್ಣನಾಯಕಂ ನಾಗವರ್ಮ್ಮಯ್ಯನುಂ (ನಾಂದೇಡ್. ೮-೪೧; 1070).

[ ? ]

**ತಡಕಸ** 'ತಡಗಸ' ನೋ.

**ತಡಕಾಟ** (ನಾ). ಹುಡುಕಾಟ ; ಅರಸುವಿಕೆ: ಒಡಕುಬಾಯಿಯ ಸಿಡುಕು ಕೆಡಕುನುಡಿ ಮಾರ್ನುಡಿಯ ತಡಕಾಟ ಪರಿದಾಟವೆನಿತುವರೆಗೆ (ಭಾವಜೀ. ೨-೩೪). [ <ತಡಕಾಡು ]

**ತಡಕಾಡು** (ಕ್ರಿ). ೧. = ತಡಕು ೧: ಕತ್ತಲಲ್ಲಿ ತಡಕಾಡುವವನಿಗೆ ಬೆಳಕು ಸಿಕ್ಕಂತಾಯಿತು (ಹಂಗೀತ. ೮೭); ಬೆಂಕಿ ಪೊಟ್ಟಣಕ್ಕಾಗಿ ಅಂಗಿಯ ಕಿಸೆಗಳನ್ನು ತಡಕಾಡಿದ (ಹುಣ್ಣುಹ. ೨); ಒಂದೊಂದು ದಿನ ನನಗೆ ಪಾಠ ಹೇಳಿ ಕೊಡುವಾಗ ಮಾತಿಗೆ ತಡಕಾಡಿ, ಜ್ಞಾಪಕಕ್ಕೆ ಬರದೆ, ಆತನಿಗೆ ನಾಚಿಕೆಯಾಗುತ್ತಿತ್ತು (ನಿಬಂಧ. II, ೭೮). ೨. = ತಡಕು ೨ : ಅವನ ಮಾತುಗಳು ನೇರವಾಗಿ ಹೃದಯವನ್ನು ತಡಕಾಡಿದವು (ಮಹಾತ್ಮಾ. ೭೫). [ ತಡಕು + ಆಡು$_1$ ]

**ತಡಕಿಲು** (ನಾ). ಒಂದು ಬಗೆಯ ಔಷಧಿ ಸಸ್ಯ: ತಡಕಿಲು ಬೇರನ್ನು ಗೋಮೂತ್ರದಲ್ಲರೆದು ಕುಡಿಯಲು ರಕ್ತಕಾಸ ನಿಲ್ಲುವುದು(ಸಕವ್ಯ.ಪರಿ.೪೩೩). [?]

**ತಡಕಿಸು** (ಕ್ರಿ). ತಡಕುವಂತೆ ಮಾಡು ; ಹುಡುಕಿಸು : (ಕ).

[ ತಡಕು + – ಇಸು$_3$ ]

**ತಡಕು** (ಕ್ರಿ). ೧. (ಕತ್ತಲಲ್ಲಿ) ಕೈಯಾಡಿಸಿ ನೋಡು ; ತಡವರಿಸಂ ; ಹುಡುಕು ; ಅರಸಂ : ಬೆಟ್ಟಂಗಾಡನಡರ್ದು ಪೊಕ್ಕು ತಡಕುತ್ತಾ ದಿಟ್ಟಿಮುಂಗೆಟ್ಟು(ಹಮ್ಮೀರ. ೮-೩೩); ಒಂದು ಗೊಂಟನೊಳಾನಿರಲ್ಕೆ ಕರತಳದಿಂದೆ ತಡಕಿ ಕಂಡೆನ್ನ ತಲೆಯಂ ಸೋಣೆದು (ಪಾಸೋಪು. ೧೧-೨೯); ಬರೆಬರೆದಂತದಂ ತೊಡೆದು . . . ಒಂದುಮಂ ಸರಸ ಪದಾರ್ಥಮಂ ತ[ಪಾಠಾಂ. ತು]ಡಕಿ ಕಾಣದೆ. ಕಳ್ದ ಪರೋಕ್ತಿಯುಕ್ತಿಯಂ (ರಾಜಶೇ. ೦-೨೩) : ಪುಣ್ಯಭೂಮಿಗಳಲ್ಲೆಲ್ಲಾ ವ್ಯಾಪಿಸಿ ತಡಕಿ ನೋಡಿದಾಗ್ಯೂ . . . ಕಾಣದೆ (ಅರ್ಜಾವಿ. ೨೯ ಸೂಚನೆ) : ಎರಡೂ ಜಗಲಿಗಳನ್ನು ತಡಕಿ ನೋಡಿದ (ಅನಾಥ ೧೪೨). ೨. ತಗುಲು ; ತಾಕು ; ಮುಟ್ಟು : ಕಣಜದಲ್ಲಿನ ಅಕ್ಕಿ ತೆಗೆಯುವುದಕ್ಕೆ ಕೈಹಾಕಿದ ತುಳಸಾಬಾಯಿಗೆ ಕೈಗೆ ಏನೋ ತಡಕಿದ ಹಾಗಾಯಿತು (ನಡೆದಾ. II, ೮೫೪). 'ತಡವು$_1$' ಪರಾ.

**ತಡತಡಕು** (ದ್ವಿರುಕ್ತಿ) : ಆ ನೆನಹಿನೊಸಗೆಗಳ ನಿಧಿಗೊಳುತ, ಗುಡಿಯೆ, ನಿಂತೆ ನನ್ನ ಮಾನಸ ನಿನ್ನ ಶ್ಯಾಮಸುಂದರಗರ್ಭದೊಳಗವನು ತಡತಡಕಿ ತೀರದಂತೆ (ಮಲದೇ. ೨-೧೧). [ <ತಡವು$_2$ + – ಕು ]

**ತಡಕಿ** 'ತಡಿಕೆ' ನೋ.

**ತಡಕಿಪಂದ್ಯ** 'ತಡಿಕೆಪಂದ್ಯ' ನೋ.

**ತಡಕೆಯ್**, ತಡಕಯ್, ತಡಕ್ಕೈ, ತಡೆಕ್ಕೈ (ನಾ). ಅಪ್ಪುಗೆ ; ತೆಕ್ಕೆ ; ಆಲಿಂಗನ: "ಪಟ್ಕಿತಟ್ಕ್ಯಸಿದಂ[ಪಾಠಾಂ. ಬಳ್ಕಿ ತಟ್ಕ್ಯಸಿದಂ, ಪಟ್ಕ್ಯಸಿದಂ]= ತಡಕೆಯ್ಯಂ[ಪಾಠಾಂ. ಕಯ್ಯಂ, ಕೈಯಂ, ಕೈಸಂದು]ಮಾಡಿದಂ" (ಕಮಡ. ಪರಿ. ೧). **ತಡಕಯ್** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ತಡಕ್ಕೈ**: "ಪಟ್ಕಿ ತಟ್ಕ್ಯಸಿದನೆಂಬಲ್ಲಿ ತಡಕ್ಕೈಯ್ಯಂ ಮಾಡಿದನೆಂಬರ್ಥಂ" (ಕಮಡ. ೧೯ ಪ್ರಯೋ). **ತಡೆಕ್ಕೈ**: ಮೃಡನತಿ ಸಂತಸದಿಂದರಿ ತಡೆಕ್ಕೈಯಂ ಮಾಡಿ ಮುದ್ದಿಸುತ್ತಿನಿವಾತಂ ನುಡಿವುತೆ (ವೀರವಿ. ೮-೫೧). [ <ತಟ್ಕ್ಕ ]

**ತಡಕ್ಕೈ** 'ತಡಕೆಯ್' ನೋ.

**ತಡಗ** (ನಾ). ಗಂಟು ; ಮೂಟೆ : ದೇವಾಂಗವಸ್ತ್ರಂಗಳು ಮುಂತಾದ ಸೆಲೆ ತಡಗ ಗಂಧ ಕಸ್ತೂರಿ ಕರ್ಪೂರ ಬಾಳು ಜವಾದಿ . . . ಮುಂತಾದ ಸಮಸ್ತ ಬೆವಹಾರಕೆಲು (ಎಕ. XII, ಸಿರಾ.೭೭-೧೪; 1870); ಪತ್ಸಾವಳಿ ಮಂಚಿಷ್ಟಿಯ ಕಾಂಚಿನಾಲದ ಜವಳಿಯ ತಡಗದ[ವ]ಬೀಜುದರು (ಜ್ಞಾನಜಂ. ೬-೭೩) : ಗುಡಿ ಗೂಡಾರ ಸರಾತಿಪೆಟ್ಟಿಗೆ ಬೋನ ಗುಡಿಕೆ ನೂತನ ವಸ್ತ್ರಗಳ ತಡಗಗಳಾದಿ ನಾನಾ ಹೊಚಿಕಾಬರ ಗಡಣವೆಸೆದುದಲ್ಲಲ್ಲಿ (ರಾಮವಿ. ೬-೧೩) : ಉರಿಯ ಮಳೆ ಸಂಗಡಿಸಿದೆಡೆಯೊಳು ಸಸಿದ ಹತ್ತಿಯ ತಡಗಮುಳಿವುದೆ (ಅಂಬಿಕಾ. ೩೧-೨೧). [ ? ]

**ತಡಗಡಿ** 'ತಡಂಗಡಿ' ನೋ.

**ತಡಗಣಿ** 'ತಡಗುಣಿ' ನೋ.

**ತಡಗಸ**, ತಡಕಸ (ನಾ). ಕ್ಷೋಭೆ ; ತೊಂದರೆ ; ಅಪಾಯ ; ಕೇಡು : "ತಡಗಸಮೆನಲುಪಹತಿಯಕ್ಕು" (ಚತುನಿ. ೨೦೨) ; ತಾಯ ತಡಗಸವ ಪರಿಹರಿಸು ಎಂದಾಣತಿಯನಿತ್ತು (ಕಗದ್ಯ. ೬೯). **ತಡಕಸ** : "ತಡಕಸ [ಪಾಠಾಂ. ತಡಗಸ, ಗಡಗಸೆ]ಮೆನಲುಪಹತಿಯಕ್ಕು" (ಭಾರನಿ. ೬೦). [?]

**ತಡಗಾಲ್** 'ತಡಂಗಾಲ್' ನೋ.

**ತಡಗು** (ಕ್ರಿ). ತಡೆ; ಅಡ್ಡಿಪಡಿಸು : ಇಂತಪ್ಪವಂ ತಡಗ[ಪಾಠಾಂ. ಸ]ಲಾಗದೆಂಬುದುತ್ತರ ವಾಕ್ಯಂ (ನೀತಿವಾ. ೨೪-೧೧).
[ ದೇ.॥ ತಮಿ. ಮಲ. ತಟುಕ್ಕು ]

**ತಡಗುಂಡಿಗೆ** (ನಾ). ಜಲಪಾತ್ರೆ : "ತಡಗುಂಡಿಗೆಯೆನಲ್ಕೆ ತಾಂ ಜಲಪಾತ್ರ [ಪಾಠಾಂ. ಜಲಪುತ್ರ್ಯಮಾಖ್ಯಂ]" (ಅಭಿಕ್ಕ. ೭೫). [ ತಡ$_1$ + ಗುಂಡಿಗೆ ]

**ತಡಗುಣಿ**, ತಡಗಣಿ, ತಡುಗಣಿ, ತಡುಗುಣಿ (ನಾ). ಒಂದು ಬಗೆಯ ದ್ವಿದಳಧಾನ್ಯ; ಅಲಸಂದೆ; ಕಾರಾಮಣಿ: ಹೆಸರು ತಡಗು[ಪಾಠಾಂ. ಗ]ಣಿ ಕಡಲೆತೊಗರಿಗಳ ಬೇಳೆಯಂ ಹೊಸಬೆಲ್ಲವಿಕ್ಕಿ ಬೇಯಿಸಿ (ಸೂಪಶಾ. ೧-೬೦). **ತಡಗಣಿ**: ಅಲಸಂದಿ, ತಡಗಣಿ (ಮೃಚಿಗಿ. ೭೭-೧೫೯೦). **ತಡುಗಣಿ**: ಬದನೆ ಹೆಗ್ಗುಳ್ಳ ಪಡವಲ ಪಲಸು ತಡುಗಣಿ ಬಾಳೆ ಚಪ್ಪರದವರೆ (ಅನಂರಾ. ೬-೨೫-೫೯). **ತಡುಗುಣಿ** : ಎಳದಾದ ಕಡಲೆ ತಡುಗುಣಿ ಹೆಸರು ಕುಸುಬೆ ಮೊದಲಾದ ಹುರುಕಲಂ ರುಚಿನೋಡುತ್ತ (ಸೌಗಂಧಿ. ೩೭-೧೧).

**ತಡಗೆಡಿಸು** 'ತಡಂಗಿಡಿಸು' ನೋ.

**ತಡಗೆಯ್** (ಕ್ರಿ). ತಡೆ; ನಿಲ್ಲಿಸು; ಕಾಯಿಸು: ನಾಳಿನುದಯಕ್ಕೆ ಕೋಂಟೆಯ ನಿಕ್ಕಿಸಿದ ಬಳಿಕ ಪಾಳೆಯಂ ಸಹಿತ ಬಿಜಯಂಗೆಯ್ವರೆಂಬ ನುಡಿಗೇಳಿಯಂತೆಯೆ ಗೆಯ್ವೆನೆಂದು ತಡೆಗೆಯ್ದು (ಸಮ್ಯಕೌ. ೨-೫೨).
[ ತಡ$_1$ + ಕೆಯ್$_1$ ]

**ತಡಗೊಳ್** (ಕ್ರಿ). ತಡವಮಾಡು; ವಿಳಂಬವಮಾಡು: ತಡಗೊಂಡೆ[ಪಾಠಾಂ. ಡ] ನಲ್ಲದೆ ಹಿಡಿಯೆ ನಾ ಕದ್ದನೆ (ಸರ್ವಜ್ಞ. ೧೪೦೦). [ ತಡ$_1$ + ಕೊಳ್$_1$ ]

**ತಡತ** 'ತಡೆತ' ನೋ.

**ತಡತಡವರ್**, ತಡದಡವರ್ (ಕ್ರಿ). ೧. ತೊಡರಂ ; ತಪ್ಪುತಪ್ಪಾಗು : ಕುಡುವುಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪುರ್ವಿಂ ಜತಿಯಂ ತೊಡರದೆ ನಡೆಯಿಸಿ . . . ನರ್ತಕಿಯೆ ಸಭೆಗೆ ವಾದಕಿಯಾದಳ್ (ಆದಿಪು. ೯-೩೨). ೨. ತೊದಲು ; ತಡವರಿಸು : ವಂಗನನಷ್ಟಿಕೊಂಡಶ್ರುಜಲಂ ಗುಡುಗುಡನೆ ಸುರಿಯೆ ನಾಲಗೆ ತಡತಡವರೆ ನುಡಿದನಂಧನೃಪನಾ ನೃಪನಂ (ಗದಾಯು. ೪-೧೩). **ತಡದಡವರ್** : ೧. ತಡದಡವಾರದೆ ಗತಿಯೊಳ್ ತೊಡರದೆ ರಂಜಿಸಿದರವುರಲಂಜಿಕೆಯರ್ ... ಕಡೆಯ ತಾಳದ ಯತಿಯೊಳ್ (ಅಜಿಪು. ೫-೪೦). [ <ತಡ$_4$ + ಬರ್$_1$ ]

**ತಡತಡಿಸು**, ತಡಂತಡಿಸು, ತಡದಡಿಸು (ಕ್ರಿ). ೧. (ಗಾಬರಿಯಿಂದ) ಮುಗ್ಗರಿಸು ; ತತ್ತರಿಸು ; ನಡಂಗು ; ತಡೆದು ತಡೆದು ನಡೆ : ತಡತ[ಪಾಠಾಂ. ವ]ಡಿಸಿ ಯತಿಯನಿಂತಿರೆ ತೊಡರ್ಚೆ ಕೆಡೆ ಪೇಟ್ದೊಡಕ್ಕುಮದು ಯತಿಭಂಗಂ (ಕವಿರಾ. ೧-೭೩) ; ನಡೆದೊಡೆ ತಡತಡಿಸುವ ಕುಳ್ಳಿರ್ದೊ ರೋರ್ವರಂ ಮಲಂಗುವ ಕಟ್ಟಲಸರಪ್ಪರಸುಗಳ್ಗೆ ರಾಜ್ಯಶ್ರೀ ಕೈಗಣ್ಣೆ ಪೊಣ್ಮುವುದು (ಧರ್ಮಾಮೃ. ೬-೧೩೩). **ತಡಂತಡಿಸು**: ೧. ಪದಂ ತಡಂತಡಿಸೆ ಹರ್ಮ್ಯಾಗ್ರಂಗಳಂ ಬಂದು ಸಂಗಡದಿಂದೇಱೆ ಲತಾಂಗಿಯರ್ತವಕದಿಂ ಶಾಂತೀಶನಂ ನೋಡಿದರ್ (ಶಾಂತೀಶ. ೧೫-೩೮). **ತಡದಡಿಸು** : ೧. ತಡದಡಿಸದೆ ನಡದು ದಹನನ[೦] . . . ಪಾಯ್ದು ಸಮ್ಮುವೆ ಬೀರಂ (ಇಅ. XX, ೬೯-೩ ; ೯ನೆಯ ಶತ) ; ತೂಂಕಡಿಂ ತಡದಡಿಸುತ್ತಿರ್ದು ತಡವರಿಸಿ (ಲೀಲಾವ. ೫-೧೩೪). ೨. ರಭಸದಿಂದ ಮುನ್ನುಗ್ಗು : ದಶನನಿಪೀಡಿತ ದಶನವಸನನಸಿಧೇನುವಂ ಕಿಟ್ಟು ನಡನಡನಡುಗಿ ತಡದಡಿಸುತ್ತು ಮಿಱೆಯಲ್ ಪರಿವಾತಂ (ಆದಿಪು. ೨-೧೪ ವ). [ <ತಡ$_4$ + – ಇಸು$_3$ ]

**ತಡದಡ** 'ತಡತಡ' ನೋ.

**ತಡದಡವರ್** 'ತಡತಡವರ್' ನೋ.

**ತಡದಡಿಸು** 'ತಡತಡಿಸು' ನೋ.

**ತಡಪಡಿಸು** 'ಧಡಪಡಿಸು' ನೋ.

△ **ತಡಪು$_1$** 'ತಡವು$_2$' ನೋ.

△ **ತಡಪು$_2$** 'ತಡವು$_3$' ನೋ.

**ತಡಪು$_3$** 'ತೊಡಪು$_1$' ನೋ.

**ತಡಫಡಿಸು** 'ಧಡಪಡಿಸು' ನೋ.

**ತಡಬಡ**, ತಡಂಬಡ (ನಾ). ೧.ತಬ್ಬಿಬ್ಬು; ಗೊಂದಲ; ಆತಂಕ; ಭಯ: ಸಡಗರಂಗಳು ಗುಜುಂಗುಜುಗಳಾಬಿಡಿಗಳನುಚಿತ ಕಾರಣಂಗಳು ತ[ಪಾಠಾಂ. ಚ]ಡಬಡಂಗಳು ತಪ್ಪುಗಳು ಮುಂಡುಗಳು ಮುಜುಹುಗಳು (ಬಸಪು. ೪೦-೬೨). ೨. ನಡೆನುಡಿಗಳಲ್ಲಿ ಉಂಟಾಗುವ ವ್ಯತ್ಯಾಸ, – ಅಸ್ಥಿರತೆ; ಅಸ್ತವ್ಯಸ್ತತೆ ; ತೊಡರು ; ತೊದಲು : ನುಡಿದ ಮಾತಿಂಗೆ ತಡಬಡ ಬಂದಲ್ಲಿ ನುಡಿದ ಭಾಷೆಗೆ ಭಂಗ ನೋಡಯ್ಯ (ಶೂನ್ಯಸಂ. ೨೫೪-೧೭); ನಡೆಗೆ ತಡಬಡಮಾಯ್ತು ವಾಣಿ ತಬ್ಬಿಬ್ಬಾಯ್ತು (ಜಬಪು. ೨೦-೧೯); ತಡಬಡ – ವಾಕ್ಯುಂಠನಾರ್ಥಃ (ಶಬ್ದಾನು. ೨೦ ವ್ಯಾಖ್ಯಾ). ೩. ಅಡ್ಡಿ ; ತಡೆ : ಪರಿಪರಿ ಗೃಹವಸ್ತುಗಳನು ನೆರೆವುದವನೊಂದು ವಿಭವವ ಮಾಳ್ಪನೆಂದರೆ ತಡಬಡ ವುಂಟೆ ಬಲುಹೆ (ಭರತೇ. ೧೭-೧೦೩). **ತಡಂಬಡ** : ೧. "ತಡಂಬಡಮೆನೆ ತಳ್ಳಂಕಮದು" (ಚತುನಿ. ೨೧). ೨. ಮೊಗಮಲದೊರ್ಪ್ಪಿ ಬಾಸೆ ಕಡು ನೇಱೆದವಾಗಿರೆ . . . ಕೈಮಿಗೆ ನಡೆದಳ್ ತಡಂಬಡವೊಡಂಬಡೆ ಗರ್ಭದಗುರ್ವಿಂ (ಪುಣ್ಯಾಸ್ರ. ೩-೨೩).
[ ←ತಮಿ. ತಟಪಟ = ಆತುರಪಡು, ತತ್ತರಿಸು ]

**ತಡಬಡಂಗೊಳ್**, ತಡಬಡಗೊಳ್ (ಕ್ರಿ). ೧. ತಬ್ಬಿಬ್ಬಾಗು; ಗೊಂದಲದಲ್ಲಿ ಬೀಳು : ಅನುಮಿಸುವ ಭಕ್ತನುರವಣೆಗೆ ಸಿಡಿಮಿಡಿಗೊಂಡು ಮನದೊಳಂಜುತ್ತೆ ನಡನಡುಗಿ ತಡಬಡಂಗೊಂಡು [ಪಾಠಾಂ. ಗೊಂಬುತ, ಬೋಗುತ] (ತಿರುರ. ದೇ. ೧೨-೧೨). ೨. ತೊದಲು ; ತಡವರಿಸು : ಮೃಡನರ್ಚನೋತ್ಸವದೊಳಿರದೆಯುಂಗದೊಳು ಬೆಮರಿಡೆ . . . ಸೆರೆ ಬಿಗಿದು ನುತಿ ತಡಬಡಂಗೊಳುತೆ ಕೊಂಡಾಡಿ ನೋಡಿ (ಪಾಸೋಪು. ೬-೨೨). **ತಡಬಡಗೊಳ್** : ೩. ಚಿಂತೆಗೊಳಗಾಗು ; ಆತಂಕಪಡು : ಊರ ಸೀರೆಗೆ ಅಗಸ ತಡಬಡಗೊಂಬಂತೆ [ಪಾಠಾಂ. ತಡಬಡಿಹಡೆದಂತೆ, ಬಡಿಹಡೆದಂತೆ] ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದೆಂದು ಮರುಳಾದೆ(ಬಸವ.೩೦೯).
[ ತಡಬಡ + ಕೊಳ್$_1$ ]

**ತಡಬಡಂಬೋಗು** (ಕ್ರಿ). ತಬ್ಬಿಬ್ಬಾಗು ; ತಳ್ಳಂಕಗೊಳ್ಳು : ಬೇಡಲ್ಕೆ ಬೇಡದಿರಲ್ಕೆಯಂಜುತ್ತೆ ಬಂದು ಭಯದಿಂ ಕುಗ್ಗಿ ತಡಬಡಂಬೋಗುತ್ತೆ (ಮಾನರ. ದೇ. ೧೬೨-೧೨). [ ತಡಬಡ + ಪೋಗು$_1$ ]

**ತಡಬಡಗುಟ್ಟು** (ಕ್ರಿ). ತಡವರಿಸು ; ತೊದಲು : ಪ್ರೀತಿಯಿಂ ನೋಡುವಾ ವೈಶ್ಯನಂದನನ ಕಾತರಿಪ ಚಿತ್ತ ಕರಗುವ ಲಜ್ಜೆಯೋಸರಿಸುವಟುವು ತಡಬಡಗುಟ್ಟುವಾ ಮಾತು (ಸಮ್ಯಕ್. ೯-೧೨). [ ತಡಬಡ + ಕುಟ್ಟು$_1$ ]

**ತಡಬಡಗೊಳ್** 'ತಡಬಡಂಗೊಳ್' ನೋ.

**ತಡಬಡಗೊಳಿಸು** (ಕ್ರಿ). ತಬ್ಬಿಬ್ಬುಗೊಳಿಸು; ತಡವರಿಸುವಂತೆ ಮಾಡು: ನುಡಿಗೆಡಿಸುವ ಕೂಡೆ ನುಡಿಸುವ ನುಡಿಗಳ ತಡಬಡಗೊಳಿಸಿ ನಗುವನು (ಭರತ. ೬-೮೬). [ ತಡಬಡಗೊಳ್ (<ತಡಬಡಂಗೊಳ್) + - ಇಸು$_3$ ]

**ತಡಬಡನೆ** (ಅ). ಗೊಂದಲವಾಗಿ : ಕಡುಜಾಣೆವೆಣ್ಣುಗಳು ಕೂಡಿ ಆಗ ತಡಬಡನೆ ಹಿಡಿದು ಬಡಿದಾಡಿ . . . ಪೆಸರ ಬೆಡಗ ಪೇಳೆಂದು ಹೊಡೆದಾಡಿ (ಶರಲೀ. ೧೪೩-೧); ನಡುಗುತಲಿ ಬೆಮರಿಟ್ಟು ತಡಬಡನೆ ಕೆಡಹುತಲಿ ಅಡವಿಯೊಳಗವರು (ಹಮಚ. ೬೦). [ ತಡಬಡ + - ಅನೆ$_1$ ]

**ತಡಬಡಾಯಿಸು** (ಕ್ರಿ). ತಬ್ಬಿಬ್ಬಾಗು ; ಕಕ್ಕಾವಿಕ್ಕಿಯಾಗು : ಅಗಾಧವಾದ ಅಂತರಾಳದ ಮುಂದೆ ನಮ್ಮ ಮನಸ್ಸು ತಡಬಡಾಯಿಸಿ ಬೆರಗಾಗದೆ (ಜ್ಯೋತಿರ್ವಿ. ೨೬೨) ; ಉತ್ತರಕೊಡಲು ಸ್ವಲ್ಪ ತಡಬಡಾಯಿಸಿದುದು ನಿಜ (ಅವತಂ. ೧೭೬). [ < ತಡಬಡಿಸು ]

**ತಡಬಡಿಸು**, ತಡಂಬಡಿಸು, ತಡಮಡಿಸು, ತಡವಡಿಸು (ಕ್ರಿ). ೧. (ಭಾವಾತಿರೇಕದಿಂದ) ತಬ್ಬಿಬ್ಬಾಗು ; ಕಕ್ಕಾವಿಕ್ಕಿಯಾಗು : ಮಜ್ಜನ ಕೆಟ್ಟುದು ತಳ್ಕಿಟ್ಟುದು ತಪ್ಪಿ ತಡಬಡಿಸುತಂ ಪೊಸಪೂಜೆಯಂ ಮೆಟ್ಟಿದು(ಹಲಾರ. ಹ. ೧೯೩-೧೬) ; ಗಿರಿಜೆಯೊಡನುಸಿರ್ದುಂ ತಡಬಡಿಸುತ್ತೆ ಮಿಸುಪ ಪೊಸಪೂಸಿವಾತಂ (ಗಿರಿಕ. ೯-೯೯). ೨. ತಡವರಿಸು; ತತ್ತರಿಸು; ಮಗ್ಗರಿಸು; ಎಡವು ; ನಡಗೆ ಅಸ್ಥಿರವಾಗು : ಹೋಗಲ್ಕಂಜಿ ಹೋ ಎನುತ ಕಾಲ ತಡಬಡಿಸುತ್ತ ನಿಲುತಂ (ಬಸಪು.೨೬-೨೪); ನಡೆ[ಪಾಠಾಂ. ನುಡಿ] ತಡಬಡಿಸುತ ಗೊಲ್ಲವೆಣ್ಣುಗಳು ಕಡುಗಾಡಿಯಿಂ ಬಂದು ಸೋಹುತಿಹರು ನೆಲ್ಲಮಡಗಳಗಿಳಿವ ಗಿಳಿಗಳ (ಕುರಾಸಾಂ. ೨-೩೬) ; ಇದಿರ್ವರ್ಪನಂ ಪದೆದು ನಿಟ್ಟಿಸಿ ಮೆಯ್ಮುರವಟ್ಟಳಟ್ಟಿಯಿಂ ತಡಬಡಿಸುತ್ತೆ ನಿಂದು ಪಳಗಾಜಿನ ಪುತ್ರಳಿಯಂತಿರೊಪ್ಪಿದಳ್ (ರಸರ. ೧೧೯-೨) ; ಅಧರಂ ಬೆಳರ್ತುದು ನಡಗೆ ತಡಬಡಿಸಿದುದು (ಚಬಪು. ೩೭-೭೭) ; ಬಳಲುತ್ತಡವಿಯಲಿ ತಡಬಡಿಸಿ ಬೆಂಡಾಗುತ್ತೆ ಬೇಸರಿಸಿ (ರಾಮಾಸಂ. ೫-೩-೩). ೩. ತಬ್ಬಿಬ್ಬಾಗಿ, ತಡೆತಡೆದು ಮಾತನಾಡು ; ತಡವರಿಸುತ್ತ ನುಡಿ ; ತೊದಲು : ಅಂದದಿಂ ಶರಣಾರ್ಥಿಯೆಂದಹೆನೆಂದು ಬಾಯ್ತುಡಬಡಿಸಿ (ಬಸಪು. ೩೭-೧೯) ; ಬಂಬಲುಬಾಡುವಂಗ ತಡಬಡಿಪ ನುಡಿ (ಸಮ್ಯಕ್. ೧೦-೪೯); ರಾಜವಾರ್ತೆಯನು ತಡಬಡಿಸದೆ ಪೇಳ್ದ ರಾಯಭಾರಿಗಳಿಂ (ಕುರಾಸಾಂ. ೨೯-೬೮) : ತಡಬಡಿಸದೆ ಹಿಂದು ಮೆಟ್ಟದ ವಾಚಕವಡಗದೆ ವಕ್ಕಣೆ ಕೆಡದೆ . . . ರಾಯಸವಿಡಿದವನೋದಿದನಿಂತು (ರಾಮವಿ. ೧೫-೩೨) ; ತೇಲಿ ಮುಗಿವ ಕಣ್ . . . ನಾಲಿಗೆಯೊಳ್ತಡಬಡಿಪಿನಿನುಡಿಗಳ್ (ಉದ್ಭದೇ. ೨-೬೫). ೪. ವ್ಯತ್ಯಸ್ತವಾಗು : ಬೀಯಲ್ ನುಣ್ಣೊರಲುಲಿ ಬಳಲಲ್ ಸುಯ್ ತಡಬಡಿಸಲ್ ಬಾಯ್ನುಡಿಸುಟಂ ದಣಿಯುತ್ತಿರಲು(ಜಯಕಾ. ೮-೬೪). ೫. ಶಬ್ದಮಾಡು ; ಕೋಲಾಹಲವುಂಟುಮಾಡು : ಸಡಗರಂಗಳು ಬರಿಯ ಠಕ್ಕಿನ ಗಡಬಡಂಗಳು ಚಾಂಗು ಭಲಗಳು ಕೊಡೆಗಳುಂ ಹಳವಿಗೆಗಳುಂ ತಡಬಡಿಪ ವಾದ್ಯಗಳು (ಬಸಪು. ೫೬-೧೭). ೬. ಚಡಪಡಿಸು ; ಕಳವಳಿಸು : ದ್ರಾಕ್ಷಾರಸ ತಪ್ಪಿಹೋದಾಗ ಅವಳ ಮನಸ್ಸಿಗೆ ತುಂಬ ಸಂಕಟವಾಗಿ ತಡಬಡಿಸುತ್ತಿದ್ದಳು (ಪುನರು. ೧೧) **ತಡಂಬಡಿಸು** : ೩. ಚರಣಂಗಳುಂ ನುಡಿಗಳುಂ ತಡಂಬಡಿಸಲತಿ ಭರವಸದೊಳಯ್ತಂದು ನೋಳ್ಪ ತರುಣೀಜನಂ (ಚಬಪು. ೫-೧೩) ; ದಡದಡಿಪಡಿ . . . ತಡಂಬಡಿಪ ತಳರ್ನುಡಿ (ರಾಜಶೇ. ೬-೩೩). **ತಡಮಡಿಸು** : ೧. ನುಡಿಯೊಳ್ಪುಸಿಮಾತಂ ಮೆಟ್ಟಡಿಕುಂ ತಡಮಡಿಸಿವೊಂದನೊಂದಂ ನೆಗಟ್ಟುಗುಂ (ಮದತಿ. ೧೧-೩೪). **ತಡವಡಿಸು** : ೧. ಅಚ್ಚಿಗಂಗೊಳಿಸಿ ತಡವಡಿ [ಪಾಠಾಂ. ಕಳವಳಿ]ಸಿತೆನ್ನಯ ಭಕ್ತಿ (ತಿರುರ. ದೇ. ೨೦-೨೦); ಶೆಟ್ಟಿಯೆಂದುದ ಕೇಳಿ ತಡವಡಿಸುತಲವನಿಂತೆಂದ (ತ್ರಿಭುತಿ. ೨೦-೧೨) ; ಕಡೆಗಂಗಳ ಸರಳಿಯೊಳು ತೊಡಕಿ ಹಮ್ಮಯಿಸುವರು ತಡವಡಿಸುವರು ಮತ್ತಲ್ಲಿ (ಕೊಲ್ಹಾಪ. ೨೯). ೭. ತಡಕಾಡು : ತಡವರಿಸಂ : ಬಟ್ಟೆಯೊಳ್ ಬಟ್ಟ ನೇಱಲ ಚೆಂಗಾರೆಯ ಮೆಲ್ದುಗುಟ್ಟಿ ಸಹಕಾರೋಚ್ಚಿಷ್ಟ ಪಕ್ಷಂಗಳಂ ತಡವಡಿಸಿ ಪುಡುಕಿ ಪಂಜಿನ ನಡುಬೀದಿಯೊಳಿರ್ದು ಮಱುಗುತಿರೆ ಕಂಡು (ಸುಕುಮಾ. ೪-೫೪). [ ತಡಬಡ + - ಇಸು$_3$ ]

**ತಡಬಡು**, ತಡಂಬಡು$_2$ (ಕ್ರಿ). ೧. ತತ್ತರಿಸು ; ದಡದಡಿಸು : ತಡಬಡುತ ಖಳನೆದ್ದು ಕಂಗಳ ಕಿಡಿಯುದುರೆ ಹೂಂಕರಿಸಿ (ಅನಂರಾ. ೬-೧೭-೨೯) ; ನಿನ್ನ ಸೈನ್ಯಗಳಲ್ಲಿ ಕೆಲವರು ಕಾಲುಗಳು ತಡಬಡಲು, ಶರೀರಗಳು ಬೆವರಲು . . . ಕೆಳಕ್ಕೆ ಬಿದ್ದು ಮುದುರಿಕೊಂಡಿದ್ದರು (ಕ್ರಿವಾಭೀ. ೧೪೦). ೨. ದುಡುಕು ; ಆತುರಪಡು : ಗಡಿಗೆ ಮಡಿಕೆಯ ಕೊಂಡು ಅಡಿಗೆಯ ವೇಳೆಯೊಳು ಬಿಡದೆ ಮಳೆವೋಡ ಪೊಡೆಯಲ್ಕೆ ಈರ್ವರಿಗೆ ತಡಬಡಲಾಯ್ತು (ಸರ್ವಜ್ಞ. ೮). **ತಡಂಬಡು** : ೧. ಅನಂಗಾವೇಶದಿಂ ಕಾಲ್ತಡಂಬಡೆ ಬಂದಾಟಿಸಿ ನೋಡಿದಳ್ ಪದಪಿನಿಂ ಶ್ರೀವಿಪ್ರುಮಾರ್ತಂಡನಂ (ಕಾವ್ಯಾವ. ೮೦೩). [ ತಡ$_4$ + ಪಡು$_1$. / ತೆಲು. ತಡಬಡು ]

**ತಡಬೆ** 'ತಡಮೆ' ನೋ.

**ತಡಮಡಿಸು** 'ತಡಬಡಿಸು' ನೋ.

**ತಡಮಾಗು$_1$** 'ತಡ$_1$' ಪರಾ.

**ತಡಮಾಗು$_2$** 'ತಡ$_2$' ಪರಾ.

**ತಡಮಾಡು$_1$** 'ತಡೆಂಮಾಡು' ನೋ.

**ತಡಮಾಡು$_2$** 'ತಡ$_1$' ಪರಾ.

**ತಡಮಾಡು$_3$** 'ತಡ$_4$' ಪರಾ.

**ತಡಮಾರಿ** (ನಾ). ತಡಮಾಡುವ ಸ್ವಭಾವದವನು : ಯಾವಾಗಲೂ ತಡಮಾರಿಯಾದ ಮ್ಯಾಥ್ಯೂ ನಿಕಿತಿಷ್ ಕೊಟ್ಟಕೊನೆಗೆ ಬಂದನು (ಪುನರು.೩೨) 'ಹಠಮಾರಿ' ಪರಾ.
[ ತಡ$_1$ + - ಮಾರಿ$_1$ ]

**ತಡಮಿಕ್ಕು**, ತಡವಿಕ್ಕು$_1$ (ಕ್ರಿ). ತಡೆದಿಡು ; ತಡೆದು ನಿಲ್ಲಿಸು ; ಕಟಿಹಾಕು : ಮನೋಜ ಜೈತ್ರಪತಾಕಾಪ್ರತಿಮಭ್ರೂವಿಭ್ರಮೆಯರಾ ಸ್ಮರಶರಾಸನ ಭ್ರೂವಿಭ್ರಮಮನಂ ತಮ್ಮ ಭ್ರೂವಲ್ಲಿಗಳೊಳ್ ತಡಮಿಕ್ಕಿಯುಂ (ಸುಕುಮಾ. ೧೧-೧೧೦ ವ). **ತಡವಿಕ್ಕು$_1$**: ಹಸ್ತಿಯ ಬೆಂಗೆವಂದು ಸುತ್ತಿಱಿದು ಪಗಲಂ ತಡವಿಕ್ಕಿದಂತೆ ಬೆಳಗುವ ಕೆಯ್ದಾವಿಗೆಗಳ ಬೆಳಗೆ ಬೆಳಗಾಗೆ (ಶಂಪಭಾ. ೦೨-೫೨ ವ). [ ತಡ$_1$ + ಇಕ್ಕು ]

**ತಡಮೆ,** ತಡಬೆ, ತೊಡಮೆ (ನಾ). ೧. ದನಕರಂಗಳು ಒಳಗೆ ಬರದಂತೆ ಬೇಲಿಗೆ ಅಳವಡಿಸಿರುವ ಬಿದಿರು ಅಥವಾ ಬೊಂಬಿನ ಚೌಕಟ್ಟು; **ತಡೆಬಾಗಿಲು:** ಮನೆಯ ಮುಂದಿನ ಅಡ್ಡಗಟ್ಟಿದ ಗುಜ್ಜು ತಡಮೆ ದಾಟಿ, ಬೇಲಿಯೊಳಕ್ಕೆ ಹೋಗಿ ನಿಂತು . . . ಕರೆದರು (ಕೋಟಿಚ. ೨೩): ಸಿದ್ದಣ್ಣ ಕೂಕ್ರನ ಮನೆಯ 'ತಡಮೆ' ದಾಟುವಾಗ (ಒಡ್ಡಿಉ. ೪೯); ಹೆಗ್ಗಡೆಯವರು . . . ತಡಮೆಯತನಕ ಹೋದರು (ನಂಬಿನಾ. ೨೫೪). **ತಡಬೆ:** ೧. ತಡಬೆಯ ತೆಗೆಯುವ ಸದ್ದಾಯಿತೆನುವಳು ಅಡಿಗೆಯ ಮನೆಯಿಂದ ಬಂದು (ಚಂದ್ರವೀ.೨೨-೮೬); ಗುತ್ತಿ...ಹೆದ್ದಾರಿಯ ಅಂಚಿಗೆ ಹಾಕಿದ್ದ ಬಿದಿರಡ್ಡೆಯ ಬೇಲಿಯನ್ನು ಉಣುಗೋಲಿನ ಬದಿಯ ಇದ್ದ ತಡಬೆಯ ಮೇಲೆ ಹತ್ತಿ ದಾಟಿ ಮುಂಚೆಕಡೆಯ ಅಂಗಳಕ್ಕೆ ಹೋದನು (ಮಲೆಮ. ೫೪). ೨. ಅಡ್ಡಿ; ತಡೆ; ಪ್ರತಿಬಂಧ: ಧರೆಯ ನಿಮ್ನೋನ್ನತಂಗಳ ತಡಬೆಯೇನೊಳದೆ ಪ್ರತಿಭೆಯ ವಿಮಾನಯಾನಕ್ಕೆ? (ಶ್ರೀರಾಮಾ. ೦೨೫-೨೨). **ತೊಡಮೆ:** ೧. ಅವರು ಜಗಲಿ ಇಳಿದು, ತೊಡಮೆ ದಾಟಿ, ಮನೆ ಹಾದಿಯಲ್ಲಿ ಅರ್ಧ ಸಾಗಿಯಾಯಿತು (ಹಹಸ. ೪೨); ಆ ತಂಡ ರಸ್ತೆಯ ಹತ್ತಿರದ ಬಯಲಂಚಿಗೆ ಬಂದು . . . ಮತ್ತೆ ಎತ್ತರದ ತೊಡಮೆ ಹತ್ತಿ ಹಾರಿ . . . ಹೊರಟು ಹೋದರು (ಪದ್ಮಸ. ೬೫); ಅಷ್ಟರಲ್ಲೆ ಐತಾಳರ ಬಾಯಿಂದ, ಪದ್ಧತಿಯಂತೆ, ತೊಡಮೆ ದಾಟುವಾಗ 'ಸಾಂಬಶಿವ' ಎಂದು ಕೇಳಿಬಂತು (ಮರಮ. ೬೨). [ <ತಡೆ₁./ತುಳು. ತಡಮೆ./ಪ್ರಾ. ತಡಿಮ ]

**ತಡಮೆಟ್ಟು** 'ತಡಂಮೆಟ್ಟು' ನೋ.

**ತಡಲು** (ಕ್ರಿ). ಹೂತಂಹೋಗು: ಸಿಕ್ಕಿಕೊಳ್ಳು (?): ಗಾಲಿಗಳ್ಕಣೆನೊಗನ ಕೀಲಚ್ಚುಗಳ್ತಡಲಿ ಮೇಲೇಳದಿರೆ ಕುದುರೆಗಳ್ಬಳಲಿ ನಿಂದಿರಲ್ (ತುರಂಗ. ೭೦-೨೦). [ ? ]

**ತಡವಡಿಸು** 'ತಡಬಡಿಸು' ನೋ.

**ತಡವರ್** 'ತಡಂಬರ್' ನೋ.

**ತಡವರಿಸು₁** (ಕ್ರಿ). ೧. ಕೈಯಾಡಿಸಿ ಹುಡುಕು; ತಡಕಾಡು; ಅರಸು; ಬೆದಕು: "ತಡವರಿಸು – ಅನ್ವೇಷಣೇ" (ಶಮಧಾ); ನೇಱಿಲಮರದ ಕೆಟಗೆ ತಡವರಿಸಿ ನೇಱಿಲಪಣ್ಗಳಂ ತಿಂಬ ಜಾತ್ಯಂಧೆಯಪ್ಪ ಪೊಲೆಯರ ಕೂಸಂ ಕಂಡು (ವಡ್ಡಾರಾ. ೯-೨೪); ಬಿಲ್‌ಕೆಟ್ಟವರ್ ಕೀಲಂ ತಡವರಿಸಿದರೆಂಬಂತೆ (ಧರ್ಮಾಮೃ. ೦೨-೬೫); ನಿಂದಿರದೆ ಹರಿದು ತಡವರಿಸಿ ಕಾಣದೆ ಮನಂ ನೊಂದು (ಸಿದ್ಧರಾ. ೭-೪೬); ಬಾಗಿಲನೊಂದು ಠಾವಿನೊಳಱಿಸಿ ತಡವರಿಸಿದೆನು ಭಿತ್ತಿಗಳ (ಕುಮಾ.ಸ. ೦೨-೪೦). ೨. ಕೈಯಿಂದ ನೇವರಿಸಂ; ಸವರಂ; ಮುಟ್ಟು: ಇರ್ವರುಂ ಪರಸಿ ತಡವರಿಸಿಯುಂ ತೆಬ್ಬರಿಸಿಯು ಮಟ್ಟೈಱಿಳಪ್ಪಿಕೊಂಡು (ಪಂಪಭಾ.೦೩-೮ ವ); ಶಿರವ ತಡವರಿಸುತ ಮಹಾದೇವರಿಯು ಬವರದ ಬೋಳಕೊಮ್ಮಿಗೆ ಹರಣವುಳಿದುವೆಯೆನುತ ರವಿಸುತ ನೀಱಿದನು ಗಿರಿಯ (ಕೊರರಾ. ೪-೩-೧೭); ಅವರಿಬ್ಬರೂ ಕೆಳಗೆ ಬಿದ್ದಿದ್ದ ವಸ್ತುವ ತಡವರಿಸಿ ನೋಡಿ (ಕಂಗಾಳ್ಯ. ೪೩೪). ೩. ನಡೆಗೆಡು; ತೆತ್ತರಿಸಂ; ದಡದಡಿಸು: ತಡವರಿಸುತ್ತಿರಲ್ಕೆ ತೊಡೆ ಜೋಲೆ ಸಡಿಲ್ದುಡೆ . . . ಸಂಭ್ರಮದಿಂ ಮಱಿಗೊಂಡು ನೋಡಿದಲ್ (ಕಾದಂಉ. ೦೩೬); ತಡವರಿಸಿ ಬೀಟ್ವ ಮುನಿನಾಥನಂ ಬೀಟಲೀಯದೆ ತರ್ಕೈಸಿಕೊಂಡು (ಧರ್ಮಾಮೃ. ೪-೦೬೯). ೪. ತಡೆತಡೆದು ಮಾತನಾಡು: ಭಾಸ್ಕರ ಅವಾಕ್ಕಾದ, ನಾಲಗೆ ತಡವರಿಸತೊಡಗಿತು (ಕಮನ. ೨೨೩); ಇಂಗ್ಲಿಷ್ ನೆಲ್ಲಾದರೆ, ಒಂದೊಂದು ವೇಳೆ ತಡವರಿಸಬಹುದು (ಬಂಕಿಮ.೩೪); ಒಂದು ಸಲವಾದರೂ ತಪ್ಪಿದನೆ? ತಡವರಿಸಿದನೆ? (ನನ್ನಜೊ. ೩). [ <ತಡವು₂ ]

**ತಡವರಿಸು₂** (ಕ್ರಿ). ತಬ್ಬಿಬ್ಬಾಗು; ಕಕ್ಕಾಬಿಕ್ಕಿಯಾಗು; ಕಂಗೆಡು: ತಮ್ಮ ಬಲಹುಂ ಮಾರ್ಪಲವಮನಱಿಯದೆಯುಂ ಚಾತುರ್ವಲಂಗಳ್ ಮೊದಲ ಸಮಕಟ್ಟುಗೆಟ್ಟು ತಡವರಿಸಿ ತಟ್ಟು ಪೊಟ್ಟೆಂದೆಚ್ಚು ಮಿಟ್ಟು ಮಿಱಿದು (ಪಂಪಭಾ. ೧೦-೭೦ ವ); ನಡುಗಿ ತಡವರಿಸಿ[ಪಾಠಾಂ. ದಡಿಸಿ]ಬೆಂಕೆಯ ಕಡುಗಾಯ್ಪಿಂಗಗಿದು ಜಡೆಗಳಿಡುವಿನೊಳಹಿಗಳ್ ತೊಡರ್ದು ನುಸುಳ್ದೋಡಿ ಗಂಗೆಯ ಮಡುಗಳನಡಹಡಿಸಿ ಪುಗ್ಗುವಿನಂ ಭಯವಶದಿಂ (ಕಾವ್ಯಾವ. ೪೧೦).
[ <ತಡ₄ + – ಇಸು₃ ]

**ತಡವಳಿ** (ನಾ). ತಡ; ಸಾವಕಾಶ; ವಿಳಂಬ: ಒಂದೇ ಒಂದು ನಿಮಿಷದ ತಡವಳಿ ಇಲ್ಲದೆ ನಮ್ಮ ಚಕ್ರವರ್ತಿಗಳ ಭೇಟಿ ಸಾಗುತ್ತಿದೆ (ವೀರಬಂ. ೩೭).
[ ತಡ₁ + – ವಳಿ₁ ]

**ತಡವಾಗು₁** 'ತಡ₁' ಪರಾ.

**ತಡವಾಗು₂** 'ತಡ₂' ಪರಾ.

**ತಡವಾಯ್** 'ತಡಂಬಾಯ್' ನೋ.

**ತಡವಾಯು** 'ತಡಂಬಾಯ್' ನೋ.

**ತಡವಿಕ್ಕು₁** 'ತಡವಿಕ್ಕು' ನೋ.

**ತಡವಿಕ್ಕು₂** (ಕ್ರಿ). ೧. ಹಿಂದೆಹಾಕು; ಸೋಲಿಸಂ: ಇನಿಯವೆನಿಪ್ಪ ಮೆಲ್ನುಡಿಗಳುಂ ಕಳಕೋಕಿಳನಾದಮುಂ . . . ನಡೆಯುಂ ಕಳಹಂಸಯಾನಮುಂ ತವತನಗೊಂದನೊಂದು ತಡವಿಕ್ಕು [ಪಾಠಾಂ. ಕು] ಗುಮಕ್ಕೆಯಿನಾ ಬನಂಗಳೊಳ್ (ಮಲ್ಲಿಪು.-೧೪-೧೧೧). ೨. ನಿಧಾನಮಾಡು; ಸಾವಕಾಶಮಾಡು: ಕಣ್ಗೊಳಿಸುವ ಮೌಕ್ತಿಕಧ್ವಜಮರೀಚಿಗಳಿಂದೆ ಸಹಸ್ರ ಕಾಂಚನನೋಜ್ಜ್ವಳ ಕಳಶಂಗಳಿಂದಮಿರುಳುಂ ಪಗಲುಂ ತಡವಿಕ್ಕೆ ಕೈರವಂಗಳ್ ಕಮಲಂಗಳುಳ್ಳಲರ್ವುದಂ ತಡವಿಕ್ಕುವುದಾ ಜಿನಾಲಯಂ(ಲೀಲಾವ. ೮-೭೦).
[ ತಡವು₁ + ಇಕ್ಕು ]

**ತಡವಿಡು₁** (ಕ್ರಿ). ತಬ್ಬಿಬ್ಬಾಗು; ಗಾಬರಿಯಾಗು: ಕೊಡಹಿ ಕುಂಭಸ್ಥಳವ ತಡವಿಡಲುಡುಗಿದವು ದಿಗುದಂತಿ (ನಿಭಾಗ. ೮-೧೫-೩೭).
[ ತಡ₄ + ಇಡು₁ ]

**ತಡವಿಡು₂** (ಕ್ರಿ). ೧. ತಡವರಿಸು; ತಡಕಾಡಂ; ಹುಡುಂಕು: ಒಡನೆ ಮಾನಿಸರಿಲ್ಲ ಕರೆದೊಡೆ ನುಡಿವರಿಲ್ಲ ಕರದ್ವಯದಿ ತಡವಿಡುತ ಪೈಸರದೊಳಗೆ ಸೂಸಿತು ಮೈ ಮಹಾಸತಿಯ (ಕುಮಾ.ಅ. ೯-೨೬). [ ತಡವು₂ + ಇಡು₁ ]

**ತಡವಿಡು₃,** ತಡಹಿಡಂ (ಕ್ರಿ). ೧. ತಡಮಾಡು: ಕೋಪದಿಂ ಹೊಡಕರಿಸಿ ತಡವಿಡದೆ ಕುಡುದಾಡೆಯಿಂ ಬೇಡವಡೆಯೊಡಲನೀಡಿಱಿವುತ (ಹಜಾ.೬-೮). **ತಡಹಿಡು:** ೨. ತಡೆದಿಡು; ನಿರೋಧಿಸು: ಕಡೆಗಾಣದ ದುಃಖವೆಂಬ ಕಡಲೊಳಾ ಮಡದಿಯಾಳುತಲೇಳುತಿಹಳು ನುಡಿಯಲಮ್ಮದೆ ಮೌನವಿಡಿದು ಸಖೀಜನ ತಡಹಿಟ್ಟರೆನೆ ಸುಮ್ಮನಿಹರು (ಅಂಜಚ. ೬-೨೫).
[ ತಡವು₂ + ಇಡು₁ ]

**ತಡವಿರ್**(ಕ್ರಿ). ತಡೆ; ನಿಲ್ಲು: ಹರಿದಾಡುತಿಹ ರಥಗಾಲಿಗಳ್ಪೂಳ್ ಕೆಲಕಡಗಲಾ ರಥಂ ತಡವಿರ್ದುದು (ತುರಂಗ. ೭೦-೨೦).
[ ತಡವು₁ + ಇರ್₁ ]

**ತಡವು₁,** ತಡಹು₁ (ಕ್ರಿ). ೧. ತಡೆ; ನಿಲ್ಲು; ವಿಳಂಬವಾಗು; ಸ್ತಿಮಿತವಾಗು: "ತಡವು–ಹಸ್ತಾನ್ವೇಷಣೇ, ಸ್ತಿಮಿತಭಾವೇ ಚ" (ಶಮಧಾ); "ಕರದೆ ನೇವರಿಸುವಲ್ಲಿ ಸ್ತಿಮಿತದೊಳ್ ತಡವೆಂಬ ಶಬ್ದಮದು" (ಶಬ್ದಮಂ. ೧೦೯): ತಡವಲುಱಿ ಬೈದು ತೆಗೆದಾನು ಸಾಲಿಗನು ನಡುವೆ ಜಗಳವನು (ಸರ್ವಜ್ಞ. ೦೪೦೦). **ತಡಹು₁:** ೨. ತಡಮಾಡು; ಸಾವಕಾಶಮಾಡು: ಒಡೆಯಗೆ ಚಿಂತೆಯಾದಾಗಲೂಟವಿವಾಹದ ಸಡಗರವೆ ನನಗಿಲ್ಲ ಸುಡುಸುಡಾ ಸುಖವ ಸಾಕಾ ಮಾತ ಮಱಿಯನ್ನು ತಡಹಲಾಗದು ಸ್ವಾಮಿಯೊಂದಾ (ಭರಚ. ೫೭-೬೧); ತಡಹದೆ ಮಾಡಿದ ನಿರ್ಜರೆ ಭವವೆಂಬ ಕಡಲೊಳು ತೊಳಲಿಸುತಿಹುದು (ಭರಚ. ೬೮-೭೭).
[ ದೇ.೫ ತಮಿ. ತಟುಕ್ಕು; ಮಲ. ತಡಯು, ತಡುಕ್ಕು; ತುಳು. ತಡೆಯು, ತಡೆವು; ತೆಲು. ತಡಯು ]

**ತಡವು₂**, ತಡಪು₁, ತಡಹು₂ (ಕ್ರಿ). ೧. ತಡವರಿಸು ; ತಡಕಾಡು ; ಹುಡುಕು : "ತಡವು – ಹಸ್ತಾನ್ವೇಷಣೇ ಸ್ತಿಮಿತಭಾವೇ ಚ" (ಶಮುಧಾ); ಕತ್ತಲೆಯ ಕಾಹೊನಲನೀಸಾಡುವಂತೆ ತಡವುತ್ತ ನೋಡುತ್ತ . . . ತಮತಮಗೆ ಕರೆದರು (ಸಿದ್ಧರಾ. ೨-೪೭) : ಪೊಂಗಳಶಂಗಳೊ ತನ್ನುರೋರು ಹಂಗಳೊ ದಿಟಮೆಂದು ಕೈ ತಡವೆ ಕಣ್ ನಡೆಯಾಡೆ ಲತಾಂಗಿ ಕಂಡಳುಜ್ಜ್ವಳ ಕಳಶಂಗಳಂ (ಅನಂಪು. ೪-೧೧೮) ; ರೂಪಕಂದರ್ಪನೆಂದೆನಿಸುವ ತನ್ನ ಪ್ರಾಣೋಪನ ತಡವಿ ನೋಡಿದಳು (ಮೋಹತ. ೨೭-೪೫); ಕಗ್ಗತ್ತಲೆಯಲ್ಲಿ ತಡವುತ್ತಾ ನಡೆದನು (ಮಲಿಮ. ೪). ೨. ನೇವರಿಸಂ: ಸವರು; ಮಂಟ್ಟು: "ಕರದೆ ನೇವರಿಸುವಲ್ಲಿ ಸ್ತಿಮಿತದೊಳ್ ತಡವೆಂಬ ಶಬ್ದಮದು" (ಶಬ್ದಮಂ. ೧೦೯) ; ಚಿತ್ತಭ್ರಾಂತಿಶ್ರಾಂತಂ ಪೊತ್ತುದುಮಂ ತಡವಿ ನೋಡುತುಂ ಭಾಗಲವಮಂ (ಪಂಚತಂ. ೧೪೭-೧೩) : ಕಯ್ಯಿಂದಲವಯವಂಗಳನೋವಿ ತಡವುತುಂ (ರುದ್ರರ. ದೇ. ೨೧೩-೪); ಸಂದಿಯಿಂ ಪೊಱಮಟ್ಟು ತನ್ನ ತಲೆಯಂ ತಡವಿ ನೋಡುತ್ತಿಪ್ಪನ್ನೆಗಂ (ಪುಣ್ಯಾಸ್ರ. ೫-೫೫ ಪ); ನಡೆ ವಿಜಯನಾಗೆಂದು ತನುವನು ತಡವಿದರು (ಕುಮಾರವ್ಯಾ. ೪-೫೩). ೩. ಕೆಣಕು ; ಕೆರಳಿಸು : ವಿರಾಧನೆಂಬಾಸುರಂ ತಡವಲಿಕೆ ಕೊಬ್ಬ ಮುರಿದಾತನಂ ಸೀಳ್ದೊಗೆದು (ಪರಶು.೨-೭); ತಡವದೆ ಬಹುತರವಾಗಿ ಹಾವುಗಳು ಕಚ್ಚುವದಿಲ್ಲ (ಮುಂಬಯಿ. ೨-೩೪) ; ಅವಳನ್ನು ತಡವುವದೂ ಸರ್ಪವನ್ನು ಕೆಣಕುವದೂ ಒಂದೇ (ರಂಗರೋ. ೧೮೩). △**ತಡಪು₁** : ೨. ಆ ಕುವರನ ನಚ್ಚಿನ ಬಿನದಕ್ಕೆ ಬಗೆವೆತ್ತು ನೋಡಿ ಮುದ್ದುಗೆಯ್ದು ಮುಂಡಾಡಿ ಮೆಯ್ಯಂ ತಡಪಿ ಮನ್ನಿಸಿ (ವೃಷವಿ. ೩೩-೮ ವ). **ತಡಹು₂** : ೧. ಕುರುಡನೆಡಹುತ್ತ ತಡಹಿ ಹಿಡಿದು ಕಂಡಂತಾಯಿತ್ತು (ಅವಜಂ. ೨೦೯-೯೧೦) : ಸಡಿಲುವ ಮುಡಿಯ ಸಾಗಿಸದೆ ಸೇವಕಿಯರ ತಡಹದೆ ಪತಿಗೆ ಶಂಕಿಸದೆ ನಡೆತರುತಿರ್ದರು (ಭರತ. ೪೬-೭೫). ೨. ಕೌರವ ಬಲದ ನಾಯಕರು ಶಿರವ ತಡಹುತ ತಮ್ಮ ಶಿಬಿರಕೆ ತಿರುಗಿದರು (ಕುಮಾರವ್ಯಾ. ೭-೭೭); ಪಣ್ಗಳ ರಸಾಯನಮನೀಂಟ . . . ನೀರ್ಗುಡಿದು ಹೊಟ್ಟೆಯ ತಡಹು ತೆಳ್ದು ಕೈದೊಳೆದರಾಗ (ಸಮ್ಯಕ್ತ್ವ. ೭-೨೮) ; ಮೈಯ ಗಾಯಂಗಳಂ ತಡಹಿ ತೆಕ್ಕೈಸಿ (ಜೈಮಿಭಾ. ೩೦-೫೯) : ಎಣ್ಣೆ ಗಂಟುಗಳ ತಡಹುತ ಬಣ್ಣದುಟಿಯ ಭಾವವ ಬೀಱುತ ಮುದ್ದುವೆಣ್ಣುಗಳ್ಳೆ ತಂದರಾಗ (ಕಂಸವಿ. ೨೦-೭೪). ೩. ಚಿಱೊಪ್ಪವಿಡಿದ ಹಂದಿಗೆ ತಡಹಿ [ಪಾಠಾಂ. ವಿ]ಬಿಡು ನಾಯನೆಚ್ಚಿರಳಿಯಂ. . . . ಎಂಬ ಬೇಡರ ಬೊಬ್ಬೆ ಯಿಂದಡವಿ ಘೀಳಿಟ್ಟುದು (ಹಡಕಾ. ೫-೨೩) ; ಈಗವಳ ಸುದ್ದಿಯನು ತಡಹಬೇಡಮ್ಮಾಜಿ ರಾಯನ ವನಕೇಳಿಗೆಡಱಾಗದಿರದು ನಿನ್ನಾಣೆ (ನಾಗಕು. ೪-೩೨) ; ಯಕ್ಷ ರಾಕ್ಷಸ ಗಂಧರ್ವರಿಗೆ ಸಹ ನನ್ನ ತಮ್ಮಂದಿರನ್ನು ತಡಹುವ ಶಕ್ತಿಯಿಲ್ಲ (ಕಪಪು. ೬-೪೪). ೪. ಬಳಿ; ತೊಡೆ; ಸವರು ; ಲೇಪಿಸು : ಪರಿಯಣಕೆ ತುಪ್ಪಮಂ ತಡಹಿ (ಸೂಪಶಾ. ೧-೨೦); ಹೂರಿಗೆಗೆ ಸಮದುಂಡೆ ಯೊಂದನೆ ತೆಗೆದು . . . ಪದಪಿನಿಂ ಹಂಚಿನೊಳು ತುಪ್ಪವ ತಡಹಿ ಅಡಲು ಮಂಡಗೆಯೆನಿಸಿಕೊಂಬುದು (ಸೂಪಶಾ. ೧-೨೯). ೫. ತಟ್ಟು ; ಬಡಿ : ನಿಶೆಯೊಳ್ಳೆತಂದು ಬಾಗಿಲ ತಡಹಲು (ನವಮೋ. ೧೫-೨) ; ಬಂದೊರ್ವ ಜಾರ ಬಾಗಿಲ ತಡಹಲು (ನವಮೋ. ೧೭-೨೫). [ ದೇ.॥ ತಮಿ. ತಟವು ; ಮಲ. ತಡವು ; ಕೊಡ. ತವ್ಡ್ ; ತೆಲು. ತಡವು, ತಡಮು ]

**ತಡವು₃**, ತಡಪು₂, ತಡಹು₃ (ನಾ). ೧. ಅಡ್ಡಿ ; ತಡೆ ; ವಿಘ್ನ : ಈ ನಿವನೆನಗೆ ಕೊಡಬೇಕೆಬೇಕೆಂದು ಕೊಂಡೊಯ್ವರೆನಗಿಲ್ಲಿ ತಡವುಂಟೆ ತಾತ ನರ್ಥಾಂಗಿ (ಕುರಾಸಾಂ. ೩೨-೯೭). ೨. ಸಾವಕಾಶ ; ವಿಳಂಬ : ಚಿರರಂ ತಡವಿಲ್ಲದೆ ಬೇಗಮಟ್ಟಿ ಪಂಕೇರುಹನಾಭನಂ ಬರಿಸಿ (ಪಂಪಭಾ. ೬-೨೦) ; ಮಗಂ ಪುಟ್ಟಿದಾಗಡೆ ಮಾಡಲ್ಬಗೆದಂದೆನಿಲ್ಲಿನಿಸುಮಾಯುಷ್ಕಾಮಮಂ ಯಜ್ಞಮಂ ತಡವಂ ಮಾಡಿದೆನೀಗಳಿಂದೆ ಬಗೆ ನೀಂ ತತ್ಕಾರ್ಯಸಂಸಿದ್ಧಿಯಂ (ಕಾದಂಬ. ೭೨೪) : ತಡವು ಬೇಡೆನೆ ಕೌರವೇಂದ್ರನ ನುಡಿಗೆ ಮುನ್ನನಂ ವಾಯ್ದು (ಕುಮಾರವ್ಯಾ. ೧-೩೭). ೩. ಅವಕಾಶ ; ತೆರವು ; ಬಿಡುವು: 'ತಡವುಗೊಡು' ಪರಾ. △**ತಡಪು₂** ೧: (ಕ). ೪. ತಿರುಪಿನ ಮೊಳೆಯು ಸಡಿಲವಾಗದಂತೆ ಅದರ ಕೊನೆಯಲ್ಲಿಡುವ ತಡೆಬಿಲ್ಲೆ : (ಕ). **ತಡಹು₃** : ೧. ಶರಣರ್ಗೆ ತಡಹಿಲ್ಲವೆಂಬುದಂ ತನ್ನ ಮನಜ್ಞಾನ ದಿಂದವೇ ಅಱಿದು (ಭಸವ. ೫೧) ; ಬಿರಿದು ಕಟ್ಟಿದ ಬಂಟಂಗೆ ತಡಹಿಲ್ಲದೆ ಬಱುಬಂಗುಂಟೆ ಮನೆದಗಹು (ಕೋಲಶಾಂ. ೧೨-೫೭). ೫. ವಿರಿ: ಕಟ್ಟೆ (?): ಕಡುಗಲಿ ವರುಣನಾತ್ಮಜರು ತಡಹನೊಡವ ಸಿಡಿಲಂತು ಗರ್ಜಿಸುತವೆ ನಡೆದು ಬಂದರದೇನೆನಲಿ (ಅಂಜಜ. ೬-೧೭೭) ; ಶೋಕಿಪ ಮಡದಿಯರ ಕಂಗಳ ಜಲ ತಡಹನೊಡೆದ ಮಳೆಯಾಯಿತು (ಅಂಜಜ. ೭-೯೯).

[ <ತಡವು₁ ]

**ತಡವು₄** (ನಾ). ಸೋಂಕು ; ಸ್ಪರ್ಶ : ಹೊಣಕೆಗಳ ತಡಹುಗಳ ಕಲಿತನದ ಕಡುಹುಗಳ ರಣದವಕದಿಂ ಕುದಿಯುತಿಹುದು ಹಂಸಧ್ವಜನ ಪರಿವಾರಂ (ಜೈಮಿಭಾ. ೧೧-೪೧) ; ಸೆವಿ ಬೆಳಗು ತಡವು ದನಿ ನಾತಮೆಂಬೈದಱ ಬಗೆ ತಿಳಿವನೆಡೆಯದೇ ಲೋಕಂ (ಕುಚಿಳ್. ೧-೩-೭). 'ಕೈತಡವು' ಪರಾ.

[ <ತಡವು₂ ]

**ತಡವುಗೊಡು** (ಕ್ರಿ). ಅವಕಾಶಕೊಡು ; ತೆರವುಗೊಡು : ಇವು ಪಟ್ಟಣಂ ಗಳು ಇವು ಅರಣ್ಯಗಳು ಎಂದು ಪೆರ್ಬಡಿಸಿ [ಬೇರ್ಪಡಿಸಿ] ನೋಡುವುದಕ್ಕೆ ತಡವುಗೊಡದೆ (ಸೌಗಂಧಿ. ೦೭೮-೨೦). [ ತಡವು₃ + ಕೊಡು₁ ]

**ತಡವೆ** (ನಾ). ಸಲ ; ಸರತಿ : ಬಾರಿ : ವೆಂಕಟಾಪ್ರಮ ಶಾಸ್ತ್ರಿಗಳಿಗೆ . . . ನಾಲ್ಕು ತಡವೆ ಪ್ರವರ್ತಿ ಆಗಿ ತೀರಿ ಹೋದದ್ದರಿಂದ (ಮೈಆರಿ. ೧೯೩೮, ೫೩-೫ : 1805) ; ಎರಡು ದಿನ ಮೂರುದಿನಕೆ ಒಂದೊಂದು ತಡವೆ ಬೆಂಗಳೂರು ಪ್ಯಾಟೆ ಹೊಕ್ಕು (ಹೈದರ. ೭೭) ; ಬಡಿಸುವಾಗ ಒಂದೆರಡು ತಡವೆ ಅಳಿಯನಾಗುವವನನ್ನು ನೋಡಿದಳು (ಸಾವಿತ್ರಿ. ೧೧).

[ ದೇ.॥ ತಮಿ. ತಟವೈ ; ತೆಲು. ತಡವ ]

**ತಡಸ** 'ತಡಸು₃' ನೋ.

**ತಡಸಲ₁** 'ತಡಸಲು₁' ನೋ.

**ತಡಸಲ₂** 'ತಡಸಲು₂' ನೋ.

**ತಡಸಲು₁**, ತಡಸಲ₁ (ನಾ). (ಉಕ) ೧. = ತಡಸು₁ : (ಕ). ೨. ಎತ್ತರ ದಿಂದ ಆಳಕ್ಕೆ ಧುಮುಕುವ ನೀರಂ; ಅಬ್ಬಿ ; ಜಲಪಾತ ; ಧಬಧಬೆ (ಉಕ) : ತಡಸಲು ತಡಸಲು ಅಗೊ ಅಲ್ಲಿ, ದಡದಡ ಎನ್ನುವುದು ಎದೆ ಇಲ್ಲಿ (ಉಯ್ಯಾಲೆ. ೭೬-೦) ; ವಚನಗಳ ಪ್ರವಾಹ ಹತ್ತುಕಡೆಗೆ ಹರಿದು ತಡಸಲಾಗಿ ಬೀಳತೊಡಗಿತು (ಕಸಾಚ. ೩೧೫). **ತಡಸಲ₁** : ಸೆಳವಿನೊಳ್ಸಿಕ್ಕೊದರಿ ತಡಸಲಕೆ ಬಿದ್ದಸುವನಳಿವಲ್ಲಿ (ದುರಪು. ೨೦-೧೧); ಗೋಕಾವಿಯ ಪಶ್ಚಿಮಕ್ಕೆ ಸುಮಾರು ಮೂರೂವರೆ ಮೈಲುಗಳ ಮೇಲೆ ಘಟಪ್ರಭೆಯ ತಡಸಲವುಂಟು (ಮುಂಬಯಿ. ೫-೭೭) ; ಕನ್ನಡದ ಈ ತುದಿಯು ತಡಸಲದಂದ ಜೋಗದ ಮಿಂಚಿಗೂ . . . ಇದುವು ನಡುಗಿಸಲರಿಯದೋ (ಅರಳು. ೩೦೨-೩). [?]

**ತಡಸಲು₂**, ತಡಸಲ₂ (ನಾ). ಒಂದು ಬಗೆಯ ಮರ : ತಡಸಲು ತಡ್ಸಾಲ್ (ಮೈಜಿಗ. ೪೧-೮೧೯) ; ಮರಗಳು: ಹೆಸವ . . . ಬೀಟೆ, ಪಚರಿ, ಬಿರಿಡಿ, ಕೂಲಿ, ತಡಸಲು, ತಪಸಿ, ನಂದಿ, ಕುಂಕುಮ (ನಮ್ಮನು. ೨೩೭). **ತಡಸಲ₂**: ತಡಸಲ (ಧಾಮಣ),–ತಕ್ಕಮಟ್ಟಿಗೆ ದೊಡ್ಡದು, ಕಟ್ಟಿಗೆ ನಸುಗೆಂಪು . . . ಗಾಡಿಗಳಿಗೆ ಮೇಲಾದದ್ದು (ಕಥಾಗ. ೪೦). [ ? ]

**ತಡಸಲುದೀಪ** (ನಾ). ನಿರ್ದಿಷ್ಟವಾದ ಕಡೆಗೆ ಅತಿಶಯವಾದ ಬೆಳಕನ್ನು ಹರಿಸುವ ವಿದ್ಯುದ್ದೀಪ : ರಂಗದ ಮೇಲೆ ವಿಶೇಷ ರೀತಿಯ ಕತ್ತಲೆ – ಬೆಳಕು ನಿಯೋಜನೆಗಾಗಿ ಹೊಸದಾಗಿ ನಾಲ್ಕು 'ತಡಸಲುದೀಪ' (Flood-light) ಕೊಂಡದ್ದಾಯಿತು (ನಟಸಾ. ೭೨೨).

[ P ಇದು ಇಂಗ್ಲಿಷಿನ 'Flood-light' ಎಂಬ ಪದದ ಅನುವಾದ ]

**ತಡಸು₁**(ನಾ).(ಗದ್ದೆಯಲ್ಲಿ ಒತ್ತಾಗಿ ಬೆಳೆದ ಸಸಿಗಳಂತೆ) ಒಂದಕ್ಕೊಂದು ತಡೆಯಾಗಿರುವಿಕೆ ; ಪರಸ್ಪರ ಪ್ರತಿಬಂಧಕವಾಗಿರುವುದು : (೪).
[ದೇ.॥ ಮಲ. ತಡಸ್ಸು ]

**ತಡಸು₂**, ತಡಸ (ನಾ). ಒಂದು ಬಗೆಯ ಮರ ; ತಡಸಲು ಮರ : "ತಡಸು[ಪಾಠಾಂ. ತಟಸು] ನಿಟಿಳಂ" (ಮಂಗರಾ. ೩೬-೧೮) ; ಹಲಸಾಲಂ ತಡಸಾಸು ತೇಗು ತದಿಕು . . . ಎಂಬೀ ಮರದುಱುಗಲಿಱುಂಬಿನಿಂದತಿ ಗಹನಮೆನಿಪ ಗಹನಾಂತರದೊಳಗೆ (ಪಾರ್ಶ್ವಪು. ೧೨-೫೮) ; ಅಂಬಟೆ ತಡಸೀಳೆ ಬಾಳೆ ಸಿರಿಸಂ . . . ಇಡಿಕಿಱಿದಿರ್ದ ಪೇರಡವಿ (ಧರ್ಮಪ. ೩-೪೬) : ಪಾಲಾಶಮರಟಾಳಮಾ ತಡಸು ಕಕ್ಕೆಯಂಕೊಲೆ . . . ಮೊದಲಾದ ವೃಕ್ಷಂಗಳಿಂ ವನಮೆಸೆದುದು (ಜಿಬಪು. ೫೩-೧೮). **ತಡಸ** : ತಂಡಸ ತಡಸ[ಪಾಠಾಂ. ಲು]ತುಗ್ಗಿಲು ತದಿಕು ತವಸಿಗಳ . . . ತಮಾಲತರು ಮೊದಲಾದ ವನ ಭೂಜಾಳಿಯಲಿ ಹೊಳಿದರು (ತೊರರಾ. ೭-೧೮-೧೬) ; ತಡಸ ತಾಱ ನೆಲ್ಲಿ ಹುಣಿಸೆ ಬಸುರಿ ಬೇವು ಮೊದಲಾದ ತರುಗಳು ಎಣಿಕೆಗೆ ಇಲ್ಲದಲ್ಲಿಹವು (ರಾಮವಿ. ೦೫-೫೮) ; ತಾಳ ತಡಸದ ಬೇವಿನ ಬೇಲದ . . . ಮರದೋಳಿಯಿಂದೆಸೆದುದಾ ವಿಪಿನ (ಕುರಾಸಾಂ. ೨೭-೫೬).

**ತಡಹ** (ನಾ). ಗೊಡವೆ ; ಗೋಜು; ಪ್ರಸಕ್ತಿ : ಕಾನನದೆಡೆಯ ಮೃಗಪಕ್ಷಿಗಳ ವಾರ್ತೆಯು ತಡಹವೇತಕ್ಕಕಟ (ಸದ್ಗುರು. ೭-೦೬). [<ತಡವು₂ ]

**ತಡಹರ** (ನಾ). "ಬೊಕ್ಕೆ; ಗುಳ್ಳೆ; ಹೊಪ್ಪಳೆ" (ಪ್ರಭಣ್ಣ) : ಮೆಯ್ಯೊಳಿಟ್ಟ ಕೈ ಸಿಡಿವಿನಮಪ್ಪಿಕೊಳ್ವ ವಿರಹಜ್ವರದುಗ್ರತರಾತಿರೇಕದಿಂ ತಡಹರಮೆರ್ದು ವೆಂಬಿನೆಗಮೆರ್ದುವು ಮೆಯ್ಯುವಿರಾ ಮೃಗಾಕ್ಷಿಯಾ (ಲೀಲಾವ. ೧೨-೩೭). 'ದಡಾರ' ಪರಾ. [ ? ]

**ತಡಹಾಯು** 'ತಡಂಬಾಯ್' ನೋ.

**ತಡಹಿಡು** 'ತಡವಿಡು₃' ನೋ.

**ತಡಹು₁** 'ತಡವು₁' ನೋ.

**ತಡಹು₂** 'ತಡವು₂' ನೋ.

**ತಡಹು₃** 'ತಡವು₃' ನೋ.

**ತಡಹು₄** (ನಾ). ೧. ಧೈರ್ಯ. ೨. ಸಮಾಧಾನ : ನಿನ್ನನು ಭಂಜಿಸಲು ಬಂದವನನಟ್ಟುವೆ ನಿನ್ನ ರಕ್ಷಿಸುವೆ ಕಂಜನಾಭ ಕಪರ್ದಿಗಳ ಪದಕಂಜಗಳ ಮೇಲಾಣೆ ದಿಟವಿದುವಂಜ ಬಿಡು ತಡಹಿರಲಿ ಮನದೊಳಗೆ (ಕೌ ೯ ಗ ಯು. ೧೦-೪೬). [ ? ]

**ತಡಾಕ** (ನಾ). ಕೆರೆ ; ತಟಾಕ. [ ಸಂ. ]

**ತಡಾಗ** (ನಾ). = ತಟಾಕ : ತಡಾಗತತಿ ಕಣ್ಗಳಿನುನ್ನತ ಪಾದಪೋತ್ಕರಂ ಸೀಗುರಿಯಿಂ ಕರಂ ಕಿಱಿಯವಾದವು ಕಣ್ಗೆ (ಅರ್ಧನೇ. ೬-೪); ಮಹಾಮಾಯೆ ತಡಾಗದಂಬಿಕೆ ವಸಂತಾದೇವಿ . . . ಶ್ರೀ ಗುಪ್ತಚಾಮುಂಡಿಯೆಂಬ ಮಹಾದೇವಿಯರಿರ್ಪ ಸ್ಥಿತಿನೊದವಿಂದಂ ಕುಕ್ಕನೂರ್ಪಾವನಂ (ಶಾಸಪ. ೮೬; 1179); ಕದಂಬವಂಶದ ಮಯೂರಶರ್ಮನು ತಡಾಗವನ್ನು ಕಟ್ಟಿಸಿದನೆಂದು ಬರೆದಿದೆ (ಕರ್ಣಾಅ. ೧೬). [ ಸಂ. ]

**ತಡಾಯಿಸು** (ಕ್ರಿ). ದಾಟಿಸು; ದಂಡೆಗೆ ಮುಟ್ಟಿಸು : ದೊಡ್ಡ ಕಾರ್ಯ. ದೊಡ್ಡಮನಸ್ಸುಮಾಡಿ ನದಿ ತಡಾಯಿಸಬೇಕು (ಮಾಮನಿ. ೧೯೬). 'ತಟಾಯಿಸು' ಪರಾ. [ ತಡ್ಸ + ಹಾಯಿಸು (<ಪಾಯಿಸು) ]

**ತಡಿ₁** (ನಾ). ತೇವ; ಒದ್ದೆ : ಅಳ್ಳೆಗಳನು ಹೊಯ್ಯುತ್ತೆ ಉಬ್ಬಸದಿ ತಡಿಯಿನಿತು ಬಾಯೊಳಗಿಲ್ಲದಾರಿ ಒಣಗಿದ ನಾಲಿಗೆಯುಲಿ ತೊದಲ್ನುಡಿಯಿಂದಯಿಂತೆಂದನು (ಶಪಮೋ. ೨೮-೫೬). 'ತಡಿಯಾರಂ' ಪರಾ.
[ ←ತೆಲು. ತಡಿ ]

**ತಡಿ₂**, ದಡಿ₁, ಥಡಿ₁ (ನಾ). ೧. ದಡ ; ದಂಡೆ; ಶೀರೆ : ತುಂಗಭದ್ರೆಯಾ ತಡಿಯೊಳ್ ತಾಣ ಬೀಡುಗಳ್ ಇಟ್ಟು (ಇಅ. XI. ೦೨೬-೮ ; 804) : ವಿಶಾಳೆಯೆಂಬ ತೊಱೆಯ ತಡಿಯೊಳನಿಬರುಮೇಕಪಾರ್ಶ್ವದೊಳ್ ಪಟ್ಟಿರ್ದು (ವರ್ಧ್ಮಾ. ೧೦೦೦-೧೧); ಪೂಗೊಳದ ತಡಿಯ ಮಾಮರದಡಿಯೊಳ್ . . . ನಿತ್ಯನಿಯಮಂಗಳಂ ತೀರ್ಚಿ (ಪಂಚತಂ. ೦೨೦-೮) ; ಸಮುದ್ರದ ತಡಿಯಲೊಂದು ಮನೆಯ ಮಾಡಿ ನೊರೆತೆರೆಗಳಿಗಂಜಿದೊಡೆಂತಯ್ಯ (ಮಹಾದೇ.ಬ.೪೫-೧೦೬); ಕಂದನ . . . ಜಾಹ್ನವಿ ತರಂಗದಿ ನೋಯಲೀಯದೆ ಮುಳುಗಲೀಯದೆ ಚಾಚಿದಳು ತಡಿಗೆ (ಕುವ್ಯಾಆ. ೩-೨೨). ೨. ಎಲ್ಲೆ; ಮೇರೆ ; ವಿಂತಿ : ಲೋಗರ ಲೋಕದ ತೃಷ್ಣೆಗೆ ತಡಿಯುಂಟೆ (ರಾಮಾಕ್ಕ. ೭೫-೪). ೩. ಸಮೀಪ ; ಹತ್ತಿರ : ನೀ ನಡೆವ್ವ ಸಂಪತ್ತಿನ ತಡಿಗೆ (ಕಎಪು. ೭-೨೦). **ದಡಿ₂** : ೨. ಘುಡುಘುಡಿಸಿದನು ರೋಷವಹ್ನಿಯ ದ[ಪಾಠಾಂ. ತ]ಡಿಯ ಹೊಕ್ಕನು (ಕುವ್ಯಾಸ. ೦೫-೫೬). ೪. ವಸ್ತ್ರ ಮೊದಲಾದವುಗಳ ಅಂಚು : ನನನಲ್ಲ ಮಲ್ಲಗ ದಡಿಯುಳ್ಳ ದೋತರ ಮಾನವಿಲ್ಕಿಕೊಂಡು ತರುವೇನ ಮಾರಾಯ್ನ ಮೈಗೆ ಮುಡುಪಾಗಿ (ಜಾಸಿಗ.೯೩-೧೧). ೫. ದಿಂಡು; ಕಟ್ಟೆ : ಇದಿರಿನ ಕಿಡಕಿಯ ದಡಿಯಮೇಲೆ ಕೂತು . . . ಗೆಳೆಯನ ಮಾತನ್ನು ಆಲಿಸಹತ್ತಿದ (ಮೂರುದಾ. ೨೦೦). **ಥಡಿ₁** : ೧. ಸಂಸಾರವೆಂದೆಂಬೊ ಉಬ್ಬಲದೊಳು ಬಿದ್ದು ಬಳಲಿ ತೊಳಲಿ ಒಬ್ಬರಾದರು ಥಡಿಗೆ ನಿಲಿಪಾರಿಲ್ಲ (ಮೋಕ್ಷದೀ. ೦೯೯). ೪. ಕಲ್ಲಪ್ಪ . . . ಥಡಿಯ ದೋತರವನ್ನು ಹೆಗಲಮೇಲೆ ಸರಿಯಾಗಿ ಒಗೆದುಕೊಂಡು . . . ನುಡಿದ (ಆಶೋಕ. ೪).

**ತಡಿದಡಿ, ತಡಿತಡಿ** (ದ್ವಿರುಕ್ತಿ) : ತಡಿತಡಿಯು ತೆಂಗಿನೆಳ ನೀರ್ ಕೂಡೆ ಕರೆಗಣ್ಣುಮ ಕೊಳಂಗಳೊಳಪೊಕ್ಕು . . . ಎಳವಿದಿರ ಬಣ್ಣಮಂ ತಳೆದ ನೀರ್ವಣ್ಣಂತಿರ್ಪಳ್ (ಕಬ್ಬಿಕಾ. ೩೦೫) ; ಜಿನಮತಾಂಭೋಧಿಯುಮಂ ಪುಗದಾಗಮಮಱಿವರ ಬಗೆವುಗದೆ ಕಲರ್ ಕವಿಗಳಾಡಿದರ್ ತಡಿದ[ಪಾಠಾಂ. ತ]ಡಿಯೊಳ್ (ಅಜಿಪು. ೦-೯೫) ; ಕಡಲ ತಡಿದಡಿಯೊಳಾತಂ ನಡಿಸಿದ ಕಾಂಚನ ಜಗಜ್ಜಯಸ್ತಂಭಂಗಳ್ (ಚಂದ್ರಪು. ೭-೩೦). **ತಡಿಗಾಗು**=ದಡವನ್ನು ಸೇರು: ತೆಪ್ಪವನು ನಂಬಿದಡೆ ತಪ್ಪದಲೆ ತಡಿಗಹುದು (ಸರ್ವಜ್ಞ. ೨೭೮).
[ <ಪ್ರಾ. ತಡಿ./ಸಂ. ತಟೀ ]

**ತಡಿ₃**, ಥಡಿ, ದಡಿ₃ (ನಾ). ೧. ಕುದುರೆಯ ಬೆನ್ನ ಮೇಲೆ ಹಾಕುವ ಹಲ್ಲಣ ; ಜೀನು : ತ[ಪಾಠಾಂ. ದ]ಡಿಯ ಬಲಿಸುವ ಗುಳವ ಱಂಚೆಯ ಗಡಣಿಸುವ . . . ಉತ್ಸಹವಾಯ್ತಾವರ ಪಾಂಡವರ ಬೀಡಿನಲಿ (ಕುವ್ಯಾಉ. ೧೧-೦೨) ; ಅರೆಗಡಿದ ಪಕ್ಕರೆಯ ಖಂಡಿಸಿದ ತಡಿಯ . . . ಹೇರಾಳದಿಂ ಬಿಡದೆಸೆದುದು ರಣಭೂಮಿ (ಕುರಾಸಾಂ. ೨೦-೪೪) ; ಕುದುರೆಗೆ ತಡಿಯನ್ನು ಕೂಡ ಹಾಕದೆ ಅದನ್ನು ಹತ್ತಿಕೊಂಡು ಹೊರಟನು (ಪ್ರಮಹ. ೭೦). **ಥಡಿ** : ೧. ಕುದುರೆಯ ಥಡಿಯಂಥ ಮೆತ್ತನ್ನ ಹಾಸಿಗೆ ನನಗೆ ಒಳ್ಳೆಯದೆನಿಸಿತು (ಸ್ವೃತಿಚಿ. ೨೫೫) ; ಥಡಿ ಹಾಕೊ ರಾಯ ಕುದುರೇಗೆ (ಹಳ್ಳಿಯು. ೯೨). ೨. ಹಾಸಂ ; ಹಾಸಿಗೆ : ನಡುಮನೆಯಲ್ಲಿ ಶೀನಪ್ಪಯ್ಯನಿಗೊಂದು ಥಡಿ ಹಾಕಿದರು (ಪ್ರಕ್ಕ. ೦೪೨). **ದಡಿ₃** : ೧. ತೆಗೆ ದಡಿಯ ಹಾಯಿಕು ಗುಳವ ತಾ ಮೊಗವಡವ (ಕುವ್ಯಾಕ. ೮-೧೧) ; ಕಡಿದ ಹಕ್ಕರಿಕೆಗಳ ಸೀಳಿದ ದಡಿಯ ನೆಗ್ಗಿದ ಗುಳದ ಱಂಚೆಯ . . . ಕುಸುರಿಗಳೆಸೆದುದು ರಣಭೂಮಿ (ಕುವ್ಯಾಕ. ೦೫-೩೦). ೩. (?) : ಜೋಡಿ ಹಱಿದುದು ಸೀಸಕದ ದಡಿ ಬೀಡು ಬಿರಿದುದು ತಲೆಯ ಚಿಪ್ಪಿನ ಜೋಡು ಜಱಿದುದು ಮನಕೆ ಸುಱಿದುದು ಸೊಗಡು ರಣರಭಸ (ಕುವ್ಯಾಅ. ೦೯-೩೬).
[ ←ಹಿಂ. ಮರಾ. ಥಡಾ ]

**ತಡಿಕೆ**, ತಡಕೆ (ನಾ). ೧. ಬಿದಿರು, ಗರಿ ಮೊದಲಾದುವುಗಳನ್ನು ಹೆಣೆದು ಮಾಡಿದ ತಟ್ಟಿ : ಎಲುವಿನ ತಡಿಕೆ ಕೀವಿನ ಹಡಿಕೆ ಸುಡಲೀ ದೇಹವ (ಮಹಾದೇ. ಬ. ೪೬-೧೦೮) ; ಹಡಹಿನಾಸೆಯೊಳೊರ್ವ ಬಡ ಸೂಳೆ ತನ್ನಯ ತಡಿಕೆಯಂತೆಸೆವ ಗಲ್ಲವನು ಪಿಡಿದಬ್ಬೆಯಿಂದ ಮಿಡಿಸಿ . . . ನಿಂದಿಹಳು (ಅಂಜನ. ೩-೦೫೦) ; ತಡಿಕೆ ಮಕ್ಕರಿ ಸಹ ಬಹ ಕಾವಾಟದ ಬಿಡುಮಂದಿಗೆ

ಲೆಕ್ಕವಿಲ್ಲ (ಕಂಸವಿ. ೧೧-೪೦); ಮುಡಿವಾಳ ಚಾವೆಗಳಿಂ ತಡಿಕೆಗಳಂ ರಚಿಸಿ (ಸೌಗಂಧಿ. ೧೩೬-೧೭); ಒಳಗೋಡೆಗಳೆಲ್ಲಾ ತಡಿಕೆ (ಅಲಿಮು. ೧೮೨). **೨.** ಒಂದು ಬಗೆಯ ಬಲೆ; ತಡಿಕೆವಲೆ: ತಡಿಕೆ ದೀವದ ಖಗಮೃಗ ಸಂತತಿ ಗೂಡಿ ನಡೆತಂದನಾ ವನಚರನು (ನೇಮಿಸಂ. ೨-೩೮); ಬಾಣನಂದನೆಯೆಂಬ ತಡಿಕೆಯ ಮಱೆಯ ಸುಜಾಣ ಮನ್ಮಥನುರುಳ್ಗಣೆಯ ಕೇಣವಿಲ್ಲದೆ ನೀಡಿ ಸುರರೆರ್ದೆಯೊಳಗಿರ್ದ ಪ್ರಾಣಹಂಸಗಳ ಬಂಧಿಸಿದ (ಮೋಹತ. ೨೩-೦೬); ತಡಿಕೆಯುಂ ಪಿಡಿದೊರ್ವ ಮಾಯಾ ಪುಳಿಂದನಡಿಯಿಡುವುದುಂ ಕಂಡೊಂದು ಪುಲ್ಲೆ ತನ್ನೆರ್ದೆಯೊಳಂ ನಡುಗಿ (ಜಿಬಪು. ೫೩-೨೯); ಪಾಸುವಲೆ ಬೀಸುವಲೆ ತಡಿಕೆ ಕಾಲ್ಗಣ್ಣಂಟುಗಟ್ಟಿಗೆಯು (ರಾಘಶ. ೧೭-೬೭). **೩.** ತೆರೆ; ಮರೆ: ಇವರನಂಗಡಿಯ ತಡಿಕೆಯು ಕೀಳಿಲ ಕಳಗಿಱ ದೊಡೆ ದಣ್ಡಮುಂ ದೋಷಮುಮಿಲ್ಲ (ಎಇ. XV, ೭೯-೨೬: 1050); ಲೋಹದ ತಡಿಕೆಗಳ ನಳವಡಿಸಿ ಬೀಡಿನ ನಡುವೆ ರಚಿಸಿದರವನಿಪಾಲನ ರಾಜವಂದಿರವ (ಕುವ್ಯಾಭೀ-೧-೫೧): ಈ ಪೀಠಗಳ ಸುತ್ತ ಬೆಳಕು ತೂರದ ಗಾಜಿನಿಂದ ಮಾಡಿದ ತಡಿಕೆಗಳಿವೆ (ಪ್ರವಾಇ. I, ೩೯೬). **೪.** ಚೌಕಟ್ಟು; ಚಪ್ಪರ; ಹಂದರ; ಹೆಣಿಗೆ: ಕತೆಯ ತಡಿಕೆಯನ್ನು ಎಲ್ಲಿಂದಲೋ ಎತ್ತಿಕೊಂಡಿದ್ದರೂ . . . ಮುನ್ನೂರು ಬರವಣಿಗೆಯ ಪುಟಗಳಷ್ಟು ವೃದ್ಧಿಯಾಗಿತ್ತು (ದಯ್ಯಮ. ೪); ಕಲೆಗಾರನೊಬ್ಬನು ಒಂದು ವಿಚಿತ್ರ ಸನ್ನಿವೇಶಕ್ಕೆ ಒಳಗಾಗಿ ಅವಸಾನ ಹೊಂದುವುದು ಇವುಗಳೆರಡರಲ್ಲಿಯೂ ಇರುವ ತಡಿಕೆ (ಅನುಕ. ೧೧೭) **ತಡಕೆ: ೪.** ಬಳ್ಳಿಯನ್ನು ತಡಕೆಗಳ ಅಥವಾ ಕಂಬಗಳ ಮೇಲೆ ಹಬ್ಬಲು ಬಿಡಬಹುದು (ಅದುಸಾ. ೧೨೯). [ **ದೇ.೩ ತಮಿ.** ತಟುಕ್ಕು; **ಮಲ.** ತಡುಕ್ಕು; **ತೆಲು.** ತಡಕ, ತಡಿಕ; **ಕೊಲಾ.** ತಡ್ಕಾ ]

**ತಡಿಕೆಗಟ್ಟು** (ಕ್ರಿ). ತಡಿಕೆಬಲೆಯನ್ನು ಕಟ್ಟು: ಎರೆಯ ಚೆಲ್ಲು . . . ತೋಹುಗೊಡು ತಡಿಕೆಗಟ್ಟಂಟುದೊಡೆ (ಹರಿಕಾ. ೫-೨೫). [ತಡಿಕೆ + ಕಟ್ಟು$_1$]

**ತಡಿಕೆಗೋಡೆ** (ನಾ). ಬಿದಿರು ಅಥವಾ ಅಡಕೆ ದಬ್ಬೆಗಳನ್ನು ಹೆಣೆದು ತಡಿಕೆಗೆ ಮಣ್ಣು ಮೆತ್ತಿ ಮಾಡಿದ ಗೋಡೆ: ಪ್ರವೇಶಿಸಿತು ಪ್ರಥಮ ಕಿರಣಂ . . . ಪರ್ಣಕುಟಿಯಂ, ತರಗೆಲೆಯ ತಡಿಕೆಗೋಡೆಯ ಬಿರುಕಿನಿಂದ (ಶ್ರೀರಾಮ. ೪೮೬-೨). [ ತಡಿಕೆ + ಗೋಡೆ ]

**ತಡಿಕೆಪಡಿ** (ನಾ). ಬಿದಿರಿನಿಂದ ಹೆಣೆದುಮಾಡಿದ ಬಾಗಿಲು; ತಟ್ಟಿಯ ಬಾಗಿಲು: ಪನ್ನಗುಡಿ ತಡಿಕೆಪಡಿಯಂ ಕೆಲಕ್ಕೋಸರಿಸಿ ಬಂದಳು ಬಯಲ್ಗೆ (ಶ್ರೀರಾಮ. ೪೮೬-೪೦).

[ ತಡಿಕೆ + ಪಡಿ$_2$ ]

**ತಡಿಕೆಬಲೆ** 'ತಡಿಕೆವಲೆ' ನೋ.

**ತಡಿಕೆವಲೆ, ತಡಿಕೆಬಲೆ** (ನಾ). ತಡಿಕೆಗಳಿಂದ ಮಾಡಿದ ಒಂದು ಬಗೆಯ ಬಲೆ: ತಡಿಕೆವಲೆ ಕಣ್ಣವಲೆ ನಿಟ್ಟಡಕಿಲ್ವಲೆ ಗೂಂಟವಲೆ . . . ಸಿಡುವಲೆಗಳೊಪ್ಪಿದವು (ಗಿರಿಕ. ೧-೮೦); ತೊಡಕಿದನು ಗಡ ಗರುಡ ಹಾವಿನ ತಡಿಕೆವಲೆಯುಲಿ (ಕುವ್ಯಾಕ. ೧೬-೩೦); ಮಡದಿ ಮನೆ ಮನೆವಾರ್ತೆ ಮಕ್ಕಳಗಡಣವೆನ್ನದೆನುತ್ತ ಮಮತೆಯ ತಡಿಕೆವಲೆ[ಪಾಠಾಂ. ತಡಕಿವೊಲೆ] ಯಲಿ ತನು ಸಿಲುಕಿ (ನಿಭಾಗ. ೬-೧೪-೧೧); ಅಂಟುವಲೆಯ ತಡಿಕೆವಲೆಯ ಬೀಸುಬಲೆಯ (ರಾಮಾಶ್ವ. ೮೩-೨೨). **ತಡಿಕೆಬಲೆ:** ಮಡದಿಯನೋಟವೆಂಬೀ ತಡಿಕೆಬಲೆಯಲಿ ಸಿಕ್ಕಿ (ಅಮೃತ. ೨-೬೨). [ ತಡಿಕೆ + ಬಲೆ$_1$ ]

**ತಡಿಗಾಣ್** (ಕ್ರಿ). ದಡವನ್ನು ಕಾಣು; ತೀರವನ್ನು ಸೇರು: ಈ ಸಂಸಾರಾಂಭೋಧಿಯನೀಸುವ ನಿನಗಿದುವೆ ನಾವೆ ತಡಿಗಾಣ್ಬೆಯನಾಯಾಸದೊಳೆ (ಆದಿಪು. ೫-೭೦). [ ತಡಿ$_2$ + ಕಾಣ್ ]

**ತಡಿಗೂಡು** (ಕ್ರಿ). ದಡವನ್ನು ಸೇರು: ಹುಟಗೋಲನೇಱಿದಡೆ ಅದ ಹಿಡಿವ ಕೆಱನಱಿದಿರಬೇಕು ತಡಿ ಮುಡು ಅದಱಿಯನಱಿದು ತಡಿಗೂಡಬೇಕು (ಮೋಕ್ಷಮಾ. ೫೭-೨೩೫). [ ತಡಿ$_2$ + ಕೂಡು$_1$ ]

**ತಡಿಗೆಹಣ** (ನಾ). ಕೊಡದೆ ಉಳಿದ ಹಣ; ಬಾಕಿ ನಿಲ್ಲಿಸಿದ ಹಣ: ಮಿಟ್ಲಕೊಪ್ಪದ ಚೆಂನವೀರ ಗೌಂಡನು ತಡಿಗೆ ಹಣ ಅದೆ ಅಂತ ಹೇಳಿದ್ರಿಂದ (ಎಕ. VIII, ಸಾಗರ. ೪೭-೦೭: ?). [ <ತಡೆ$_1$ + – ಗೆ + ಹಣ ]

**ತಡಿಗೊಳ್** (ಕ್ರಿ). ದಡವನ್ನು ಅನುಸರಿಸು; ದಂಡೆಗುಂಟ ಇರು: ಆ ತರಂಗಿಣಿಯ ತಡಿಗೊಂಡು ಬೆಳೆದರವಿರಿದ ಸರಸಿಜದರಲ್ (ರಾಜಶೇ. ೨-೮ ವ).

ತಡಿತಡಿಗೊಳ್ (ದ್ವಿರುಕ್ತಿ): ತಡಿತಡಿಗೊಂಡಿಂಬಾಗೆ ಪೊಳೆವ ಪಚ್ಚೆಯ ಕೊಂಬುಗಳಂ ಪಿಡಿದು ನಿಳಿಕಿ ನೆಯ್ದಿಲನಾಯ್ದರ್ (ಲೀಲಾವ. ೫-೩೩).

[ ತಡಿ$_2$ + ಕೊಳ್$_1$ ]

**ತಡಿದೆರೆ** (ನಾ). ದಡಕ್ಕೆ ಅಪ್ಪಳಿಸುವ ತೆರೆ: ತ್ರಿದಶೋರ್ವೀಜಂ ಪಯೋವಾರ್ಧಿಯ ತಡಿದೆರೆಗಳ್ ಪೊಯ್ದುವೊಲ್ ನೀಡುಮಳ್ಳಾಡಿದುವು (ವರ್ಧಪು. ೧೦-೫೭). [ತಡಿ$_2$ + ತೆರೆ$_4$ ]

**ತಡಿಮಿಾಱು** (ಕ್ರಿ). ದಡವನ್ನು ಮಿಾರು; ಮೇರೆ ಮಿಾರು: ತಡಿಮಿಾಱಿ ಬಂದ ತೆಂಕಣ ಬಡಗಣ ಕಡಲೊಂದನೊಂದು ತಾಗುವ ತೆಱದಿಂ (ಕಬ್ಬಿಕಾ. ೨೬೫). [ ತಡಿ$_2$ + ಮಿಾಱು ]

**ತಡಿಮುಟ್ಟು** (ನಾ). ದಡವನ್ನು ತುಳಿ; ತೀರವನ್ನು ಸೇರು: ಒಡನಾಗ ಜಲಕೇಳಿಯೊಳಗೆ ಮೈ ತಣ್ಣಸವಿಡಿಯಲು ಭರದೊಳಗ್ಯೆದಿ ತಡಿಮುಟ್ಟಿ ಶಶಿಕಾಂತಕೂಲದೊಳಗೆ ಸಾಲುವಿಡಿದೊಪ್ಪಿದರು (ಕಂಸವಿ. ೨೫-೧೩೦).

[ ತಡಿ$_2$ + ಮುಟ್ಟು$_1$ ]

**ತಡಿಯಾರು** (ಕ್ರಿ). ತೇವ ಒಣಗು; ದ್ರವ ಬತ್ತು: ಒಡನೆ ದುಃಖಾನಲನು ಒಡಲನಾವರಿಸೆ . . . ಚೇತನದಿ ಸೊರಗಿ ಬಾಯ್ತುಡಿಯಾರಿ ಹವ್ವೈಸಿ (ನವವೋ ೬-೬). [ ತಡಿ$_1$ + ಆರು$_4$ (<ಆಱು$_1$) ]

**ತಡಿವಲೆ** (ನಾ).=ತಡಿಕೆವಲೆ: ತಡಿವಲೆಯ ಬಗರಗೆಯ ಪಾಱಿಯ ಸಿಡಿವಲೆಯ ಕಾಲ್ಗಣ್ಣಿಗಂಪಿಲ ಬಡಿವಲೆಯ ಬೆಳ್ವಾರವಲೆ ಪೇರ್ಬೀಸುವ ವಲೆಗಳನು (ಅನಂರಾ. ೩-೩-೫). [ <ತಡಿಕೆವಲೆ ]

**ತಡಿವಿಡಿ** (ಕ್ರಿ). = ತಡಿಗೊಳ್: ಏಂ ನಡೆದುದೋ ಪೆರ್ಬಡೆ ಗಂಗೆಯ ತಡಿವಿಡಿದೆರಡನೆಯ ಗಂಗೆ ನಡೆವಂತಾಗಳ್ (ಆದಿಪು.೧೨-೬೩); ತಡಿವಿಡಿದೊಪ್ಪಿ ತೋಱುವ ತಮಾಲವನಂಗಳ ಮರ್ವು ಪರ್ವಿ (ಕಾದಂಪೂ. ೬೫೯); ತತ್ಕೂಪ ಸಮಿಾಪದೊಳ್ ನಿಂದು ಪೋಗಲಿಂಬಿಲ್ಲದೆ ತಡಿವಿಡಿದೆಟಲುತ್ತಿರ್ದ ಸರ್ಪನ ಬಾಲಮಂ ಬಳ್ಳಿಯೆಂದು ಬಗೆದು (ಪಂಚತಂ. ೦೦೮-೦೮); ತಡೆದ ರಕ್ಕಸ ತಳವರ ಜವನೆಡೆಗೆ ಜಾಳಿಸುತಾಳುವೇರಿಯ ತಡಿವಿಡಿದು ಶೋಧಿಸಿದನಲ್ಲಿ ಸದನಸಂಕುಲವ (ತೊರರಾ. ೫-೨-೦೭). [ ತಡಿ$_2$ + ಪಿಡಿ$_1$ ]

**ತಡಿಸರಿ** (ಕ್ರಿ). ಹತ್ತಿರಬರು (?): ಇರಿವುರಿಪಳ್ಳಂ ತಡಿಸರ[ರಿ]ದೆರದಪ್ಪಿದ ಹಾವು ಪಸಿದ ಪೆಬ್ಬುಲಿಯಿಂದಾ ಕರಡಿ ಕಡುಮುಳಿದ ಸಿಂಹಂ ಸ್ಫುರದನಲನ ಜ್ವಾಲೆ ಬಾಲೆಯೆಂಬನೆ ಸುಜನಂ (ಉಸಾರ. ೨೦೨). [ ತಡಿ$_2$ + ಸರಿ$_1$ ]

**ತಡಿಸಾರ್** (ಕ್ರಿ). ಕೊನೆಯನ್ನು ಮುಟ್ಟು; ಮುಗಿ; ತೀರು: ಪೊಣ್ಮಿರ್ದ ಮೋಹೋದಯಂ ತಡಿಸಾರ್ದಿರ್ದಪುದು (ಅಜಿಪು. ೧೦-೫೪).

[ ತಡಿ$_2$ + ಸಾರ್$_1$ ]

**ತಡಿಹುಡಿ** (ನಾ). "ಪುಡಿಪುಡಿ" (ಪ್ರಭಂ): ಹೆಜ್ಜೆಹೆಜ್ಜೆಗೆ ವಸುಧೆ ತಡಿಹುಡಿಯಾಗುತಿರ್ದುದು (ಅಂಬಿಕಾ. ೪೨-೨೦). [ ? ]

**ತಡುಂಬು** (ಕ್ರಿ). ತಡೆ; ನಿಧಾನಿಸು (?): ಕುಡಿದು ಚಿಳಲ್ಬುಳಲ್ಗರೆಯ ನಾಲಗೆಯಂ ಮಿಗೆ ನೀಡಿ ನೀರನೋಗಡಿಸಿ ಮರಲ್ದು ನಕ್ಕಿ ತುಟಿಯಂ ಕಡೆವಾಯ್ಗಳನಗ್ರುಪಾದದಿಂ ತೊಡೆದು ತಡುಂಬಿ ತಾಂ ತೊಡಬಗೆತ್ತುವ [ಪಾಠಾಂ. ದೊಡಲನೆತ್ತುತ]ಮಾಗುಳಿಸುತ್ತೆ ಬಿಟ್ಟು ಕಣ್ಬೊಡರ್ಗಳನಿಕ್ಕೆಲಕ್ಕೆಲಸಿ ಪೋಪ ತರಕ್ಷುವನುದ್ಭುಭುಕ್ಷುವಂ (ಲೀಲಾವ. ೬-೫೯). [ ? ]

**ತಡುಗಣೆ** 'ತಡಗುಣೆ' ನೋ.

**ತಡುಗುಣಿ** 'ತಡಗುಣಿ' ನೋ.

**ತಡುಪು** 'ತೊಡಪ್ಪು' ನೋ.

**ತಡುಮಾಡು** (ಕ್ರಿ). ನೆಲೆಯಾಗಿ ನಿಲ್ಲು ; ಆಸಕ್ತವಾಗು ; ತೊಡಗು : ಬಾಡದ ಬಾಸಿಗಮುಡೆ ಚೆಲ್ವೋಡದ ದಿವ್ಯಾಂಬರಂ ಮನಂಗೊಳಿ ಸುಖದೊಳ್ ಮೂಡುವ ಮುಟ್ಟಾಡುವ ತಡುಮಾಡುವ ಬಗೆಯಿಲ್ಲದಲ್ಲಿ ಬಗೆ ಪೆಱತುಂಟೇ (ಆದಿಪು. ೬-೪೦). [ P 'ತಡಮಾಡು' ಎಂಬುದರ ಅಪಲಿಖಿತ ]

**ತಡೆ₁** (ಕ್ರಿ). ೧. ತಡಮಾಡು ; ಹೊತ್ತುಗಳೆ ; ನಿಧಾನಿಸು : "ತಡ–ಕಾಲಕ್ಷೇಪೇ" (ಶಮಧಾ) ; ನಿಡಿಯಲರ್ಗಣ್ಣಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯುವಪ್ಪುವಾ ಪುರವರದೊಳ್ (ಕಾವ್ಯಸಾ. ೧೭೮ ಕೊದ್ರಳ); ಜಡಜನಮುಮೆಲ್ಲವೋದಂ ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ (ಕವಿರಾ. ೧-೧೧) ; ನೀರಂ ಕೊಂಡು ತಡೆಯದೆ ಬಾಯೆಂಬುದುಂ (ಪಂಪಭಾ. ೮-೪೦ ವ) ; ತಡೆದೈ ವಂಚಕ ಕೂರ್ತವೊಲ್ ಕುಱುವುವೇಟ್ಟೆಲ್ಲಿರ್ದ (ಕಾದಂಪೂ. ೩೨೩); ಅನಲಜೆಯನಂದು ಪರಿಭವಿಸಿಯೆ ದಳ್ಳಿಂದುರಿದು ಸೊರ್ಕಿದವನಂ ಕೊಂದೆಂ ಕುರುಪತಿಯನಿಂ ಕೊಲಲ್ತಡೆದ ಪೆನೇ (ಗದಾಯು. ೬-೨೭); ಮಹಾಮಹಿಮ ರಾಜಸುತ ಪ್ರತಿಪತ್ತಿಯೆಂಬಿವಂ ತಡೆಯದೆ ವೀರಸಾನ್ತರ ಮಹೀಪತಿ ತಾ ದಯೆಗೆಯ್ದು ಕೊಳ್ವೊಡಂ. . . ನೆಗಟ್ತೆಯನೆಯ್ದೆ ಕೊಟ್ಟನ್ (ಮೈಆರಿ. ೧೯೩೦, ೭೪-೫೬ : 1053); ಮಗನೆ ನಿಜಾಯುಧವ ಹಿಡಿ ಶಲ್ಯ ತಡೆಯದಿರೇಳು ಕೃತವರ್ಮ (ಕುಮ್ಯಾದ್ರೋ. ೫-೨೨) ; ಪೆಣ್ಗಳ್ ತನ್ನ ಮನದನ್ನ ಮಧುಮಿತ್ರನೆಂಬರಸಗಿಳಿಯಿರುಳ್ ತಡೆಯೆ ಶೋಕಿಸುತಿರ್ದುದು (ಚಿಬಪು. ೪೬-೪) . ೨. ತಡವಾಗು ; ವಿಳಂಬವಾಗು : ಗಾಂಧಾರಿ . . . ತನ್ನ ಗರ್ಭಂ ತಡೆದುದರ್ಕೆ ಕಿನಿಸಿ ಕಿಂಕಿರಿವೋಗಿ (ಪಂಪಭಾ. ೧-೧೨ ವ). ೩. ಉಳಿ ; ನಿಲ್ಲು : ಆತನ ಕೆಲದೊಳ್ಪೇರ್ ತಡೆದ ಬೇಗವೆನಿತು (ಕಾದಂಪೂ. ೮೧೭) ; ನಡೆದೊಡೆ ಕಾಲ್ನೊಂದಪುದೆಂದಡಿಗಡಿ ಗಾರಯ್ದು ತಡೆಯಿಮೆಂದಾಳಿಯರಂ ಜಡಿವಾ ಜನನಿಯುಂ (ಧರ್ಮಾಮೃ. ೩-೫೫) ; ತಡೆಯದು ಜವ್ವನಂ ಪದವಿ ನಿಲ್ಲದು (ಅನಂಪು. ೯-೪೫); ಅರಮನೆಯೊಳಗೆ ಮತ್ತಾ ದಿನ ತಡೆದು ಶ್ರೀ ಗುರುಹಂಸನಾಥನ ಭಜಿಸಿ (ಭರತೇ. ೩೬-೫೪). ೪. ಅಡ್ಡಗಟ್ಟು ; ಎದುರಿಸು ; ನಿರೋಧಿಸು ; ನಿಲ್ಲಿಸು : ಅಡರ್ವುದೆ ವಿಜಯಾರ್ಧ ಗಿರಿಯನಿಂತೀಗಳೆ ಪೂಣ್ದಡೆಗಿಡುವುದೆ ಸಿಂಧುವನಿಂ ತಡೆವಂದುಮಿದಾವುದೆಮ್ಮನೆಮ್ಮನೆ ಬೆಸಸಾ (ಆದಿಪು. ೧೩-೨೦) : ಆರ್ ಕೊಳ್ವೊಡಂ ತಡೆಯದ ಕನಕರಾಶಿಯುಮಂ (ಅಜಿಪು. ೧೦-೧ ವ); ಖತಿಯಲಿ ಮಿಹಿರಸುತನಡಹಾಯ್ದು ತಡೆದನು ಮತ್ತೆ ಬಾಲಕನ (ಕುಮ್ಯಾದ್ರೋ. ೫-೫೦) ; ಮೇದಿನಿಯೊಳಾರಾದೊಡಂ ಮಿಡುಕುಳ್ಳೊಡುನ್ನತ ಪರಾಕ್ರಮಿ ತಡೆಯಲಿ ವಾಜಿಯನು (ಜೈಮಿಭಾ. ೨-೨೮) ; ತಡೆದೊಡೆ ತಡೆವೆಮೆಂದು ಕಟ್ಟಿ ನುಡಿವುದುಂ (ರಾಮಾಶ್ವ. ೧೫೯-೧೧). ೫. ತಾಳಿಕೊಳ್ಳು ; ಸೈರಿಸು ; ಸಹಿಸು : ಪೆರ್ಬೆಟ್ಟೊತ್ತಿ ನೂಕುವ ಮಹಾವಾತಘಾತಮಂ ತಡೆದೊಲಿಯದಿಪ್ಪಂತಿರೆ (ಜೈಮಿಭಾ. ೪-೨೯). ೬. ಸರಿಹೋಗು; ಸಹನೀಯವಾಗು; ಒಗ್ಗು : ಮುಪ್ಪಿನವರಿಗೆ ರಾತ್ರೀಊಟ ತಡೆಯುವದಿಲ್ಲ (ಮುಂಬಯಿ. ೫-೧೫೨). ೭. ಹೆಚ್ಚು ಕಾಲ ಬಾಳು; ತಾಳಿಕೆ ಬರು; ಬಾಳಿಕೆ ಬರು : ಹೋದವರ್ಷ ಕೊಂಡ ಸೀರೆ ನಾಲ್ಕು ತಿಂಗಳು ತಡೆಯಲಿಲ್ಲ (ರೂಢಿ). 'ತಡೆತ' ಪರಾ. ೮.ನಿಂತುಹೋಗು ; ಸ್ಥಗಿತವಾಗು : ಬಾಳಂ ಕಿತ್ತೆತ್ತಿ ಪೊಯ್ಯಲದು ನಾಗವೇದಿಕೆಯಂ ತಾಗಿ ತಡೆಯೆ[ಪಾಠಾಂ.ದೊಡೆ](ಪಂಚತಂ. ೧೯೭-೯); ಬೆರ್ಚಿ ಭಯವಶದಿಂ ಮೈನಡುಗೆ ಮತಿಗೆಟ್ಟು ಕಾಲ್ಗಳ್ ತಡೆದೊಡೆ (ಧರ್ಮಾಮೃ. ೭-೮೪); ಉಸಿರಿಕ್ಕುತಿರ್ಪುಸಿರ್ ತಡೆದೊಡಮಿಲ್ಲ (ಪಂಪಾಶ. ೮೩); ತಡೆಯದೆಲ್ಲೆಡೆಯೊಳ್ ತಾನು ಬೀಸುವನೇಯಡರನೇಳಿಪನೆಂದೆಲರು ಸಡಗರದಿಂದ . . . ಮುಡಿಯೊಳಾನುವುದು (ಹರಿಬ. ೨-೭). 'ತಡೆ₁' ಪರಾ.

**ತಡಕೊಳ್ಳು**=ತಾಳಿಕೊಳ್ಳು; ಸಹಿಸು; ಸೈರಿಸು: ಹವಣಿಸಿ ಹಲವು ಕಬ್ಬುನವ ಕಾಡಿಪ ತನ್ನ ತವರವ ತಡಕೊಂಬುದರಿದೆ (ಪ್ರೋಹತ. ४೧-४೯) ; ಕಡು ಕೋಪ ಬಂದಾಗ ತಡಕೊಂಡವನೇ ಜಾಣ (ಗಾದೆ).

[ ದೇ.॥ ತಮಿ. ತಟು, ತಟ್ಟೈ ; ಮಲ. ತಟು, ತಟೆ ; ತುಳು. ತಡೆ ; ಕೊಡ. ತಡೆ ]

**ತಡೆ₂** (ನಾ). ೧. ತಡ ; ಸಾವಕಾಶ ; ವಿಳಂಬ : 'ತಡೆವಡು' ಪರಾ. ೨. ಅಡ್ಡಿ ; ನಿರ್ಬಂಧ ; ವಿಘ್ನ : ಬಯಲಿಂಗೆ ಕಡೆಯಿಲ್ಲ ಮರುತಂಗೆ ತಡೆಯಿಲ್ಲ (ಅವಚಂ. ೨೫೭-೧೧೬೯) ; ತಪನರಥಮದಾ ಪುರದೆ ಮಿಗೆ ಪುಗಲ್ ತಡೆಯಿಲ್ಲದಬ್ಬಜಂ ಮಾಡಿದ ರಂಧ್ರಪಥಂಗಳೆಂಬಿನಂ ರಾಜಿಪುವಾ ತೆನೆತೆನೆಗಳಂಬುಗಂಡಿಗಳೆನಸುಂ (ಕುಸುಮಾ. ೨-೭೮) ; ತೊಡೆಗಳೊ . . . ರಂಭಾವಿಭವದ ತಡೆಗಳೊ ಸಿಂಗರದ ಕಡೆಗಳೋ ಶಶಿಧರನಾ (ಗಿರಿಕ. ೧೦-೫೯); ನಿರಾಯುಧರನಿಱಿವಲ್ಲಿ ತಡೆಗಿಡೆಗಳುಂಟೇ (ಚಿಬಪು. ೨೦-೧೯) : ಈ ಕಲ್ಲುಮಣ್ಣಿನ ರಾಶಿ, ನದಿಯ ಓಟಕ್ಕೆ ತಡೆಯಾಗುತ್ತದೆ (ನನದಿ. ೨೩). ೩. ಅಡ್ಡವಾಗಿ ಬರುವಿಕೆ : ಬಳಿಕ ಕಲಿ ರಾಧೇಯ ಬರುತಿರೆ . . . ವಾಯುಸದ ತಡೆ ಭೂಮಿಕಂಪ ನಿಜಾಯುಧಂಗಳ ಕಿಡಿ ಗಜಾಶ್ವನಿಕಾಯ ರಥವಾಜಿಗಳ ಕಂಬನಿ ಕಾಣಲಾಯ್ತೆಂದ (ಕುಮ್ಯಾಕ. ೮-೨೭). ४. ಸಂಕೋಚ: ನುಡಿ ನೋಟ ಸರಸಗಳಿಂದ ಅಡಿಗಡಿಗುಬಲಿಯರಂತರಂಗದ ತಡೆಯೊಡೆಯಿಸುತಿಹನೇನನೆಂಬೆ (ಭರತೇ. ೬-೭೯). ೫. ರಕ್ಷೆ ; ತಾಯಿತಿ: 'ತಡೆಗಟ್ಟು₁' ಪರಾ. ೬. (ನಿಂತಲ್ಲಿಯೇ ನಿಲ್ಲುವಂತೆ) ಹಾವುಗಳಿಗೆ ಹಾಕುವ ಮಂತ್ರ; ಸ್ತಂಭನಮಂತ್ರ : ತಡೆಯೆಂಬ ನುಡಿ ಪಾವಡಿಗರೊಳಲ್ಲದಾ ಪೊಡವಿಯೊಳಿಲ್ಲ ಭಾವಿಸಲು (ಕುರಾಸಾಂ. ೨-೬೯) ; ಕೊಡೆಯೆಂಬರಾತಪತ್ರವನು ತಡೆಯೆಂಬುದಹಿಮಂತ್ರದೊಳಗಲ್ಲದಾ ದೇಶದೆಡೆಯೊಳೀ ಶಬ್ದಂಗಳಿಲ್ಲ (ಪ್ರೋಹತ. ೨-೨೦). ೭. ತಿರುಪು ಅಥವಾ ತಿರುಗಣಿ ಸಡಿಲವಾಗದಂತೆ ಅದರ ಕೊನೆಯಲ್ಲಿ ಅಳವಡಿಸುವ ಚಿಕ್ಕ ಬಿಲ್ಲೆ : (ಕ). ೮. ಕಿವಿಯ ಹಾಲೆಯು ವಜ್ಜ ಮಂಚ್ಚಿಹೋಗದಂತೆ ಇರಿಸುವ ಕಡ್ಡಿ,–ಬೆಂಡು : (ಕ). ೯. ಮಿಾಸಲು ಪಡೆ ; ಕೈಗಾವಲಿನ ಸೈನ್ಯ (?) : ಶ್ರೀಮನ್ಮಹಾಪ್ರಧಾನಂ ತಡೆಯ ದಣ್ಣನಾಯಕಂ ಲಕ್ಷ್ಮಣಯ್ಯಂಗಳ್ (ಎಇ. XII. ೩೩४-೫; 1125). ೧೦. ಆಜ್ಞೆ ಅಥವಾ ಕಾರ್ಯ ಜಾರಿಯಾಗದಿರುವಿಕೆ,–ಸ್ಥಗಿತಗೊಳಿಸುವಿಕೆ : ತಡೆಯು ಆಜ್ಞೆ ಹಠಾತ್ತನೆ ಆಗಮಿಸಿತು (ನಿಶಉ. ೨४). ೧೧. ವೇಗವನ್ನು ತಡೆಯುವ ಸಾಧನ ; ಬಿರಿ : ಗಾಳಿಯ ತಡೆ (ರೂಢಿ).

**ತಡೆಹಾಕು**=೧. ನಿಲ್ಲಿಸು ; ತಡೆಗಟ್ಟು ; ತಡೆಯುಂಟುಮಾಡು : ನೀಲ, ಅರ್ಜನ ಹೂಂಕಾರಕ್ಕೆ ತಡೆಹಾಕಿ ಹೇಳಿದನು (ಬಂಗಾಹ. ೭೩). ೨. ಆಕ್ಷೇಪಿಸು ; ಆಕ್ಷೇಪಣೆಮಾಡು : (ಕ). [ <ತಡೆ₁ ]

**ತಡೆ₃** (ನಾ). ದಡ ; ತೀರ : "ತೀರಂ ತಟಂ ಕೂಲಮೆನೆ ತೊಱೆಯ ತಡೆ [ಪಾಠಾಂ. ಡಿ]ಗೆ ನಾಮಂ" (ಮಂಗರಾ. ೧೨೨-೧೦) ; "ತಡೆ–ತಟಾ=ದಂಡೆ" (ಶದ್ಧಕೋ. ೧೭); ದೇವರೊಲವುಳ್ಳವರ ಕಂಡು ತಾನಾದೆನೆಂದೊಡೆ ಚಲಿಸದು ಕಂಡಯ್ಯ ನೇಮವೆಂದಡೆ ತಡೆಮುಟ್ಟಸಲೀಯ್ಯೆ (ಸಮಾವ. ೧೧-४೦).

[ <ಸಂ. ತಟಾ ]

**ತಡೆಅರ್ಜಿ** (ನಾ). "ಪ್ರತಿಪಕ್ಷದ ಹೇಳಿಕೆಯನ್ನು ಕೇಳಿದ ಹೊರತು ಮುಂದಿನ ಕ್ರಮ ಜರುಗಿಸಕೂಡದೆಂದು ಹಾಕುವ ಅರ್ಜಿ; ತಡೆ ಅರ್ಜಿ : ಎಚ್ಚರಿಕೆಯ ಅರ್ಜಿ" (Caveat. ಇಂಕನಿ.).

[ ತಡೆ₂ + ಅರ್ಜಿ₂ ]

**ತಡೆಕಟ್ಟು** 'ತಡೆಗಟ್ಟು₁' ನೋ.

**ತಡೆಕವಾಟ** (ನಾ). ತಡೆಯುವ ಬಾಗಿಲು,–ಕದ : ನೀರು ನಿರ್ಗಮನಾಳವನ್ನು ಹಾಯ್ದು ತಡೆಕವಾಟದ (ಚೆಕ್‌ವಾಲ್) ಮೂಲಕ ಉಗಿಯ ಗುಡಾಣವನ್ನು ಸೇರುತ್ತದೆ (ಕವಿಕೋ. I, ೭४). [ ತಡೆ₁ + ಕವಾಟ ]

**ತಡೆಕಾವಲುಗಾರ** (ನಾ). (ಮುಂಷ್ಕರ ಮೊದಲಾದಂವುಗಳಲ್ಲಿ ತಮ್ಮವರು ಕೆಲಸಕ್ಕೆ ಹೋಗದಂತೆ) ತಡೆಯುಂವ ಕಾವಲುಗಾರ : "ಕಾವಲುಪಡೆ, ಗಸ್ತುಪಡೆ; ತಡೆಕಾವಲುಗಾರರು ; ಪಿಕೆಟ್" (Picket. ಪ್ರತಿನಿ. ೬೨).
[ ತಡೆ₂ + ಕಾವಲುಗಾರ (<ಕಾವಲುಗಾಱ) ]

**ತಡೆಕ್ಕೆ** 'ತಡಕೆಯ್' ನೋ.

**ತಡೆಗ** (ನಾ). ತಡೆಯುವವನು ; ಅಡ್ಡಿಪಡಿಸುವವನು : "ರುಂಧನ್ ರೋಧಕ: – ಈ ೨ ತಡೆಗಂ" (ಶಾಶಕ್ಕ. ೨೩೩). [ ತಡೆ₂ + – ಗ₂ ]

**ತಡೆಗಂಬಿ** (ನಾ). ತಡೆಯುಂವ ಕಂಬಿ,–ತಂತಿ : (ಇಳಿಜಾರಿನಲ್ಲಿ ಹೋಗು ತ್ತಿರುವಾಗ) ಗಾಲಿ ತಿರುಗದಂತೆ ತಡೆಯುವ ಕಂಬಿ; ತಡೆಗಂಬಿ (Spoke. ಇಂಕನಿ.). [ ತಡೆ₂ + ಕಂಬಿ₁ ]

**ತಡೆಗಟ್ಟು₁**, ತಡೆಕಟ್ಟು (ಕ್ರಿ). ೧. ಅಡ್ಡಿಪಡಿಸು ; ಅಡ್ಡಗಟ್ಟು ; ತಡೆದುಂ ನಿಲ್ಲಿಸುಂ; ಪ್ರತಿಬಂಧಿಸುಂ; ಸ್ತಬ್ಧಗೊಳಿಸು ; ಕಂಪೆನಿಯು ಸೈನ್ಯವು ಅವರನ್ನು ತಡೆಗಟ್ಟುತ್ತಿದೆ (ಝಾರಾಣಿ. ೪೩೭) ; ರಾಜಭಟರು ರಾಜಒಡೆಯ ನನ್ನು ತಡೆಗಟ್ಟಲಿಲ್ಲ (ಶ್ರೀರಾಯ. ೩೦೦) ; ಅದನ್ನು ತಡೆಗಟ್ಟುವುದು ಅಪ್ಪಾಜಿಯವರಿಂದಲೂ ಸಾಧ್ಯವಲ್ಲ (ಚದೇವ. ೨೦೦) ; ವೃದ್ಧಾಪ್ಯ ಮತ್ತು ಮೃತ್ಯುಗಳನ್ನು ತಡೆಗಟ್ಟುವ ಉಪಾಯವನ್ನು ಈತ ಕಂಡುಹಿಡಿದಿದ್ದಾನು (ಅಶ್ವಮ. ೭೮) ; ನಿಯಂತ್ರಣ ಕ್ರಮಗಳಿಂದ ನೊಣಗಳನ್ನು ತಡೆಗಟ್ಟ ಬಹುದು (ಆರುಸಾ. ೫೦). **ತಡೆಕಟ್ಟು : ೨.** ಮಳೆ, ಬೆಂಕಿ, ಹಾವು, ಹುಲಿ ಮುಂತಾದುವನ್ನು ಮಂತ್ರಬಲದಿಂದ ಸ್ತಂಭನಗೊಳಿಸು : ಭವಭೂತಿಯು ತನ್ನ ವಿದ್ಯದ ಶಕ್ತಿಯನ್ನು ತೋರಿಸಬೇಕೆಂದು ತಡೆಕಟ್ಟಿದನು; ಬರುತ್ತಿದ್ದ ಮಳೆಯು ನಿಂತು ಹೋಯಿತು (ನೀತಿಚಿಂ. V. ೨೪) ; ಬೇಟೆ ಯಾಗದಿದ್ದರೆ ಯಾರೋ ತಡೆಕಟ್ಟಿರುವರು; ಅದನ್ನು ಬಿಡಿಸಬೇಕೆಂದು ಮಂತ್ರವಾದಿಯ ಬಳಿಗೆ ಹೋಗಿ ಆ ಶಾಸ್ತ್ರವನ್ನು ನೆರವೇರಿಸುತ್ತಿದ್ದರು (ಹುಟ್ಟಿಹ. ೨೭). [ ತಡೆ₂ + ಕಟ್ಟು₁ ]

**ತಡೆಗಟ್ಟು₂** (ನಾ). ೧. ಅಣೆಕಟ್ಟು : (ಕ). ೨. ಪೀಡಾಪರಿಹಾರಕ್ಕಾಗಿ ಕಟ್ಟುವ ರಕ್ಷೆ,–ತಾಯಿತ. ೩. ಅಡ್ಡಿ ; ತಡೆ; ಪ್ರತಿಬಂಧಕ : ಯಕ್ಷಿಣಿ ಯಾಟದಂತೆ ಥಕ್ಕನೆ ತೆರೆವ–ಕಣ್ಮಾಯವಾಗುವ – ಎದ್ದರೆಯ ತಡೆಗಟ್ಟಾಗಿ ನಿಲ್ಲುವ–ಕದಬಾಗಿಲ್ಗಳೂ (ಬಿಟ್ಟಿಆ. ೪೯–೮). [ ತಡೆ₂ + ಕಟ್ಟು₂ ]

**ತಡೆಗಟ್ಟೆ** (ನಾ). ಅಡ್ಡಗಟ್ಟೆ ; ಅಣೆಕಟ್ಟು : (ಕ).
[ ತಡೆ₁ + ಕಟ್ಟೆ ]

**ತಡೆಗಡಿ** (ಕ್ರಿ). ೧.=ತಡಂಗಡಿ ೧ : ವೀರರಂ ತಡೆಗಡಿದ ನೆತ್ತರ ಕಡಲ್ಕಟ್ಟೆ (ಇಹರ. ದೇ. ೪೩–೪) ; ಮಾಱಿದಡೆ ಕೆಡಹಿ ತಡೆಗಡಿವೆನು (ಹಹಳಾ. ೧೧–೩೮); ತಡೆಗಡಿ ಸುಯೋಧನನೂರುಗಳನು (ಕುವ್ಯಾಸ. ೦೫–೩೮) ; ತಾನೀ ಬಲವ ನೆಱಿ ತಡೆಗಡಿದು ಗೋಸಂಕುಲವ ತಿರುಹುವೆನೆಂದು ಮುಳಿದೀಕ್ಷಿಸಿ ಕುಮಾರಕರ (ಜೀವಂಡ. ೧೦–೩೪) ; ಎಚ್ಚೊಡಚ್ಯುತನ ಬಾಣಂಗಳ ತಡೆಗಡಿದು (ಮೋಹಕ. ೧೦–೩೪) ; ಬಂದ ವಾಜಿಗಳ ನಾನಳವಿಯೊಳ್ಕಾಣನೆಂಬಂದ ವಾಗಳ್ಕೆ ತಡೆಗಡಿದು ಮೆದೆಗೆಡಹಿದಂ (ಜೈಮಿಭಾ. ೦೨–೪೩). ೨. ಅಡೆತಡೆ ಗಳನ್ನು ಗೆಲ್ಲುಂ ; ವಿಘ್ನವನ್ನು ದಾಟು : (ಕ). ೩. ನಡುಂನಡುವೆ ಭಂಗವಾಗು : ಆಗಾಗ್ಗೆ ನರಳುದನಿಯಿಂದ ತಡೆಗಡಿಯುತ್ತಿದ್ದ ಅವಳ ಮೇಲುಗೊರಕೆಯನ್ನೂ . . . ಕೇಳಿಸಿಕೊಳ್ಳುತ್ತಿದ್ದಾಗ (ಪುನರು. ೫೪೪). ೪. ನಡುನಡುವೆ ನಿಲ್ಲಿಸು,–ಭಂಗಪಡಿಸು : ಇತರರು ತನ್ನ ಮಾತನ್ನು ತಡೆಗಡಿಯಲವಕಾಶಕೊಡಲಿಲ್ಲ (ಪುನರು. ೦೦೫). 'ತಡಂಗಡಿ' ಪರಾ.
[ ತಡೆ₂ + ಕಡಿ₂ ]

**ತಡೆಗಡಿಸು** (ಕ್ರಿ). ಸಂಪೂರ್ಣವಾಗಿ ಕತ್ತರಿಸಿ ಹಾಕಿಸು : ಕ್ಷಾತ್ರವ ತಡೆಗಡಿಸಿ ಚತುರಂಗ ಬಲವನು ಹುಡಿಹುಡಿಯ ಮಾಡುವರು (ಕುವ್ಯಾಉ. ೪–೭೭).
[ ತಡೆಗಡಿ + – ಇಸು₃ ]

**ತಡೆಗರ್ಚು** (ಕ್ರಿ). ದಂಡೆಯನ್ನು ಹಿಡಿ ; ದಡಕ್ಕೆ ಬರು (?) : ಎಡೆವಿಡದಾವಾವ ಕೆಱೆ ತೊಱೆ ಬಾವಿಯೊಳ್ತಡೆಗರ್ಚಿದುವು ನೀರ್ವಕ್ಕಿ ತಡೆಯದೆ ಬಹುಮೃಗ ಪೊಸ ತುಪ್ಪುಳಾಂತು ಮೆಯ್ವಡೆಯಲ್ಕೆನರರಳಲಿದರು (ಮೋಹಕ. ೪–೪೪). [ ತಡೆ₃ + ಕರ್ಚು₁ ]

**ತಡೆಗಾಲ್, ತಡೆಗಾಲು** (ನಾ). ೧. ಮುಂದೆ ಹೆಜ್ಜೆ ಇಡದಂತೆ ಅಡ್ಡಿ ಪಡಿಸುವ ಕಾಲು ; ಅಡ್ಡಗಾಲು : ಪೌಜು ಬಂದೊಡನೊದಗಲಿಟ್ಟಣಪ ಜನದ ತಡೆಗಾಲ್ಗಳಿಂದಾ ಸುತಂ ಪೊಡೆಗೆಡೆಯುಲು (ಭಾವಚಿಂ. ೮–೧೮) ; ಸಂದಣಿಪ ಮಂದಿಯೊಳಪೊಕ್ಕು ನಿಂದು ನಿರೀಕ್ಷಿಪಾಗಳ್ಕವಿವ ಪಡೆಯ ತಡೆಗಾಲ್ವೊಡೆಯ ಪೊಡವಿಯೊಳ್ಕೆಡೆದು ಕಣ್ಗೆಟ್ಟಳಲ್ದು (ರಾಜಶೇ. ೦೩–೯೫ವ). 'ತಡೆಗಾಲ್ವೊಯ್' ಪರಾ. ೨. ತಡೆತಡೆದು ನಡೆಯುಂವ ಕಾಲು ; ತಡವರಿಸುವ ಕಾಲು : ಸಡೆವ ನಡೆ ತೊಡೆಯ ತಡೆಗಾಲ್ ನಡುವಿಂಗತಿ ಗಾಢದುಡಿಗೆ ಬ ಡ ತ ನು . . . ಸೊಗಯಿಸಿತ್ತು ಪಂಕಜಮುಖಿಯೊಳ್ (೧೧ಕ. ೩–೨೨). **ತಡೆಗಾಲು : ೧.** ತಿವಿದು ಹಿಂಗುವ ಭಟನ ಪವನಜನವಚಿ ತಡೆಗಾಲಿಂದ ಕೆಡಹಲು (ತೊರರಾ. ೫–೫–೩೩) ; ಓಡೆ ಬೆಂಬತ್ತುತಂ ತಡೆಗಾಲ ಹೊಡೆದಲ್ಲಿ ಕೂಡೆ ಬೊಬ್ಬಿಱಿದು (ವೀಶೈವ. ೨–೦೨–೨೩); ತಡೆಗಾಲೊಳಾತನಂ ಕೆಡಹಿ ಭುಜಯುಗ್ಮಮಂ ತೊಡರಿಕೊಂಡುಪ್ಪರಿಸಿ (ಜೈಮಿಭಾ. ೨೪–೫೪)
[ ತಡೆ₁ + ಕಾಲ್₁ ]

**ತಡೆಗಾಲು** 'ತಡೆಗಾಲ್' ನೋ.

**ತಡೆಗಾಲ್ವೊಡೆ** (ಕ್ರಿ). ತೊಡರಂಗಾಲುಂ ಹಾಕು ; ಕಾಲಿಗೆ ಅಡ್ಡ ಬರುಂ : ಮೊಗಮಂ ಮುರಿದು ಮೊಲೆಯೂಡಲಡ್ಡಸಾರ್ಚಿದ ಪುಲ್ಲೆಯಿರ್ದಂತೆ ಪರಿಚಯಕ್ಕೆ ಪ ರಿ ತ ಂ ದು ಡೆಕಹಾಯಪಾಲಂ ತೊಡೆಯೊಳ್ ತಡ ಗಾಲ್ವೊಡೆದು ಕೊಣಕಿಡುವ ಕೊಣಸುಗಳಂ ಪಿಡಿದು ಮುದ್ದಾಡಿಸುತ್ತುಂ (ಅರ್ಧನೇ. ೦–೯೨ ವ). [ ತಡೆಗಾಲ್ + ಪೊಡೆ₁ ]

**ತಡೆಗಾಲ್ವೊಯ್** (ಕ್ರಿ). ಅಡ್ಡಗಾಲುಂಹಾಕು,–ಹೊಡೆ: ಹೊಯ್ದು ತುಱ; ಬನು ಹಿಡಿದು ತಡೆಗಾಲ್ವೊಯ್ದು ಕೆಡಹಿದನು (ಕುವ್ಯಾಕ. ೦೯–೪೮); ಬಾಸುಳೇ ಳ್ವಂತೆ ಬಡಿವ ತಡೆಗಾಲ್ವೊಯ್ದು ಓಸರಿಸದೆ ಕೆಡಹುವನು ಗಾಸಿಮಾಡು ವನು ಮಕ್ಕಳನು (ನೇಮಿಸಂ. ೦೫–೦೦೦).
[ ತಡೆಗಾಲ್ + ಪೊಯ್₁ ]

**ತಡೆಗಾಱ** (ನಾ). ಹಾವಿಗೆ ತಡೆಮಂತ್ರವನ್ನು ಹಾಕಂವವನು; ಗಾರುಡಿಗ: ಹಾವನು ನಾ ಪಿಡಿವರೆ ತರಳ ನಾ ತಡೆಗಾಱನೆ (ಶನಕ. ೫೦–೬).
[ ತಡೆ₂ + – ಕಾಱ ]

**ತಡೆಗಿಡು** 'ತಡೆಗೆಡಂ' ನೋ.

**ತಡೆಗೆಡವು** 'ತಡೆಗೆಡಹು' ನೋ.

**ತಡೆಗೆಡಹು**, ತಡೆಗೆಡವು (ಕ್ರಿ). ಅಡ್ಡಗಟ್ಟಿ ಕೆಡಹು,–ಉರುಳಿಸುಂ : ನುಡಿಯವೆ ನೀನಿಂತಿರ್ದೊಡೆ ಕೆಡೆನೂಂಕಿ ಪೊರಳ್ಚಿ ಗಂಟಲಂ ಮೆಟ್ಟಿ ಕರಂ ತಡೆಗೆಡಹಿ ತನುವ ಜಡಿದೆನ್ನೊಡಮೆಯುಸುಗುಱಿಸದೆ ಮಾಣೆಂ (ಧರ್ಮಾಮೃ. ೦೨–೨೦೯) ; ತಡೆಗೆಡಹಿ ಮುೂಗಂ ಕೊಯ್ಯದೆ ಮಾಣ್ಬನೆ (ಬಸವ. ೪೦೩). **ತಡೆಗೆಡವು :** ವಾನರ ವರಧ್ವಜಂ ಮುಳಿದು ನೀಲಧ್ವಜನ ಸೇನೆಯಂ ತಡೆಗೆಡವು[ಪಾಠಾಂ. ಗಡಿಯು]ತಾತನಂ ಮುಸುಕಿದನನೂನ ಶರಜಾಲದಿಂ (ಜೈಮಿಭಾ. ೮–೩೭). [ ತಡೆ₂ + ಕೆಡಹು (<ಕೆಡಪು) ]

**ತಡೆಗೆಡು**, ತಡೆಗಿಡಂ (ಕ್ರಿ). ತಡೆಯಿಲ್ಲದಂತಾಗು ; ಅನಿರ್ಬಂಧವಾಗು ; ಅಡ್ಡಿಯಿಲ್ಲದಿರುಂ : ನಡೆಗೆಡೆ ಚಿತ್ತಂ ಧೃತಿಲತೆ ಕುಡಿಗೆಡೆ ಮನಸಿಜ ವಿಕಾರತತಿ ಮಾನಸದೊಳ್ತಡೆಗೆ[ಪಾಠಾಂ. ಗಿ]ಡೆ ಕೈಯಂಕುಶಮದಂ ಪಡಲಿಡೆ ಧರಣಿಯೊಳೆ ವಿರಹವಿಹ್ವಳನಾದಂ (ವೃಷವಿ. ೨೮–೨೦). **ತಡೆಗಿಡು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ ತಡೆ₂ + ಕೆಡು₁ ]

**ತಡೆಗೆಡೆ** (ಕ್ರಿ). ನಡೆಗೆಟ್ಟು ಬೀಳು ; ಎಡವಿ ಬೀಳು : ಉಡಿದುಡಿದು ಸೂಸಿದ ಮೃದುಮೃಣಾಳನಾಳ ತಂತುಜಾಲಕದೊಳೊಯ್ಯನೊಯ್ಯನೆ ರಯ್ಯಮನೆ ನಡೆವೆಡೆಯೊಳಡಿ ತೊಡಂಕಿ ತಡೆಗೆಡೆವ ತರುಣ ಮರಾಳಂಗಳಂ ಕಂಡು (ರಾಜಶೇ. ೬-೨೪ ವ). [ ತಡೆ$_2$ + ಕೆಡೆ$_1$ ]

**ತಡೆಗೆಯ್** (ಕ್ರಿ). ಸ್ತಂಭನಗೊಳಿಸಂ ; ಚಲಿಸದಂತೆ ಮಾಡಂ : ಚ್ಯವನಂ ತನ್ನೊಂದು ಬಲ್ಮೆಯಿಂ ಸುರಪನುಮಂ ಕೈದುವುಮಂ ತಡೆಗೆಯ್ದಂ (ರಾಮಾಶ್ವ. ೭೦-೧೯). [ತಡೆ$_2$ + ಕೆಯ್$_1$ ]

**ತಡೆಗೊಳ್** (ಕ್ರಿ). ಅಡ್ಡ ಬರಂ; ಅಡ್ಡಿಯಾಗು; ಅಡ್ಡಗಟ್ಟು; ತರುಬು: ಕೂರ್ಪುಡುಗದೆ ಬಂದು ತಾಗೆ ಯಮಳರ್ ತಡೆಗೊಂಡೊಡೆ[ಪಾಠಾಂ. ರರಾರ್ತಡೆಗೋದಡೆ] . . . ರಥಂಗಳನಚ್ಚುಡಿಯೆಚ್ಚು (ಪಂಪಭಾ. ೧೨-೧೬೨). [ ತಡೆ$_2$ + ಕೊಳ್$_1$ ]

**ತಡೆಗೊಳಿಸು** (ಕ್ರಿ). ೧. ಅಡ್ಡಿಪಡಿಸಂ; ನಿಲ್ಲಿಸು : (ಈ). ೨. ಕಟ್ಟು ; ಬಂಧಿಸಂ: ಉದ್ದಾನಂ, ಬಂಧನಂ – ೨ ಕಟ್ಟಿಹಾಕುವುದಕ್ಕೆ ಹೆಸರುಗಳು, ಕಟ್ಟು; ತಡೆಗೊಳಿಸುವಿಕೆ (ಸಿದ್ಧಾಂತಿ. ೨೦೯). [ ತಡೆಗೊಳ್ + – ಇಸು$_3$ ]

**ತಡೆತ,** ತಡತ (ನಾ). ಹೆಚ್ಚು ಕಾಲ ಉಳಿಯುವಿಕೆ ; ಬಾಳಿಕೆ ; ತಾಳಿಕೆ : ಈ ರೀತಿ ತಡೆತ ಬಾರದ ಬಟ್ಟೆಗಳನ್ನು ಇಂಥಾ ಉಪಯೋಗಕ್ಕೆ ಕೊಳ್ಳುವುದು ಅನುಚಿತ (ಗೃಹವಿ. ೮೧) ; ಹೊರಗಡೆ ತಡೆತ ಬರುವ, ಮೆದುವಾದ ಅಸ್ಥಿ ಪಂಜರ–ಬಾಹ್ಯ ಚರ್ಮವಿದೆ (ಕೀಟಬ. ೫). **ತಡತ:** ಯಾಕೋ ಈ ಸೀರೆ ತಡತ ಬರಲೇ ಇಲ್ಲ (ರೂಢಿ). [ ತಡೆ$_2$ + – ತ$_2$ ]

**ತಡೆನಡೆ** (ನಾ). ನಿಧಾನವಾದ ನಡಿಗೆ : ನಿಧಾನಚಲನ; ಮಂದಗತಿ; ತಡೆನಡೆ (Drag. ಇಂಕನಿ). [ ತಡೆ$_2$ + ನಡೆ$_2$ ]

**ತಡೆಪ** (ನಾ). ತಡ ; ಸಾವಕಾಶ ; ನಿಧಾನ : ತೊಡೆಪಂ, ನಡೆಪಂ, ಮೊಗೆಪಂ, ತಡೆಪಂ, ಅಣೆಪಂ (ಶಬ್ದಾನು. ೫೬೦ ಪ್ರಯೋ). 'ತಡೆಪಂಬೆಱು' ಪರಾ. [ ತಡೆ$_2$ + – ಪ$_2$ ]

**ತಡೆಪಂಬೆಱು** (ಕ್ರಿ). ಸಾವಕಾಶವಾಗು ; ನಿಧಾನವಾಗಂ : ಬೆಳರ್ಗಂಪಿಡಿದಧರವಿಂಪನಪ್ಪಿದ ನುಡಿ ತಡೆಪಂಬೆತ್ತ ನಡೆ ನಿಜಂ ಕೋವಳೆಯಾ (ಚಂದ್ರಪು. ೬-೬೮). [ ತಡೆಪ + ಪೆಱು$_1$ ]

**ತಡೆಬಂಡೆ** (ನಾ). ತಡೆಯುವ ಬಂಡೆ : ಓಡಿ ಹೋಗುವ ಬಾಣಭಟ್ಟ ಅಂದು ಪ್ರಳಯಪೂರದ ತಡೆಬಂಡೆಯಾಗುತ್ತಾನೆ (ಬಾಣಭ. ೧೪೨). [ ತಡೆ$_1$ + ಬಂಡೆ$_1$ ]

**ತಡೆಬಡೆ** (ನಾ). ೧. ಅಡ್ಡಿ ; ಆತಂಕ ; ಅಡೆತಡೆ : ಜನಗಳ ತಡೆಬಡೆ ಇಲ್ಲದ ಮಾತಿನ ಪ್ರವಾಹವನ್ನು ಕೇಳಿ ಕೇಳಿ ಮಾಲತಿಗೂ ಚಟ್ಟುಹಿಡಿದಿತ್ತು (ಪಶಂಗ. ೨೯) ; ಅವರ ನಿವೃತ್ತಿಯ ಕುರಿತ ಇತ್ಯರ್ಥವು . . . ತಡವಾಗುತ್ತಿರುವಾಗ ಬಂದಿತು ಮೃತ್ಯುವು ಅದಕ್ಕೆ ತಡೆಬಡೆಯಿಲ್ಲವಾಗಿ (ಇಂಚಾಪ. ೨೦-೯೩). ೨. ನಿಲುಗಡೆ ; ವಿರಾಮ : ನಾಲ್ಕೈದು ದಿನ ತಡೆಬಡೆಯಿಲ್ಲದೆ ಅಗೆದರು (ಹುಟ್ಟಿಹ. ೭೨) : ಊರನ್ನು ತಲುಪುತ್ತಲೇ ತಡೆಬಡೆಯಿಲ್ಲದೆ ಅಂಗಡಿಯನ್ನು ತೆರೆಯುವ ಯೋಚನೆಯಲ್ಲಿ ಬಂದ (ಗಂಗಾಳಿ. ೧೩). 'ಅಡೆತಡೆ' ಪರಾ. [ ತಡೆ$_2$ + – ಪಡೆ$_4$ ]

**ತಡೆಬಿಡು** 'ತಡೆವಿಡು' ನೋ.

**ತಡೆಮಂತ್ರ** (ನಾ). ಸ್ತಂಭನಗೊಳಿಸುವ ಮಂತ್ರ : ಕಡಿಕಡಿದು ಕೆಡಹಿದರ್ ಕುರಿಕೋಳಿ ಲಕ್ಕಮಂ . . . ಕೂಗಿದರ್ ತಡೆಮಂತ್ರಮಂ (ಶ್ರೀರಾಮಾ. ೬೭೦-೨೪೦). [ ತಡೆ$_1$ + ಮಂತ್ರ ]

**ತಡೆಯಿಡು** (ಕ್ರಿ). ಅಡ್ಡಿಯುಂಟುಮಾಡಂ ; ತಡೆಯೊಡ್ಡು : ಬಲ್ಲಿದನಂಕಮಾಲೆಗೆ ತಡೆಯಿಡಲೇಕೆ ಹಲ್ಲ ಹೋಗಾಡಲದೇಕೆ (ಭರತ. ೩೯-೨೩). [ ತಡೆ$_2$ + ಇಡು$_1$ ]

**ತಡೆಯಿಸು,** ತಡೆಸಂ (ಕ್ರಿ). ಅಡ್ಡಿಪಡಿಸಂ ; ವಿಘ್ನಬರುವಂತೆ ಮಾಡಂ ; ನಿರ್ಬಂಧಿಸು : ನಿನ್ನನೆ ಪೂಜಿಸಿ ಪಡೆದರ್ಕನ್ನೆಯರಭಿಮತಮನಾದಪಾರಾಧಿಸಲಾನಿನ್ನವರಂ ರತಿಪತಿ ನೀನೆನ್ನ ಮನೋರಥಮನೇಕೆ ಪೇೞ್ ತಡೆಯಿಸಿದ್ದೆ (ಕಾದಂಉ. ೭೮೪). **ತಡೆಸು :** ನುಡಿಸು ಕೈಲಾಸಪಂ ಕೆಡಿಸು ಹರಸಾಸಮಂ ತಡೆ[ಪಾಠಾಂ. ಡ]ಸದೆನ್ನಿಂ ದಾಳಿಯಿಡಿಸು ಬೇಗದೊಳೆನುತೊ್ಡನೊಡನೆ ನೇಮಿಸಿದನು (ಚಬಪು. ೧೭-೨೩) ; ಅರೆನ್ನನಿಂತು ತಡೆ[ಪಾಠಾಂ. ಡ]ಸಿದರಾಯ್ತು ದುರ್ಭಿಕ್ಷಮುಱೊರೊಳ್ಪಳಿಯದೆ ಧಾನ್ಯಂ (ಜೈಮಿಭಾ. ೬-೫೦). [ ತಡೆ$_2$ + – ಇಸು$_3$ ]

**ತಡೆಯುಸಿರ್** (ನಾ). ತಡೆತಡೆದು ಆಡುವ ಉಸಿರಂ : ಕಿರುಬೆಮರ ತಡೆಯುಸಿರ ಕರುಣಾಸ್ಪದೆಯಾಗಿ (ಮಂತ್ರಶ. ೫೮-೧೫). [ ತಡೆ$_1$ + ಉಸಿರ್$_2$ ]

**ತಡೆಯೋಟ** (ನಾ). "ಸ್ವಾಭಾವಿಕವಾಗಿರುವ ಅಥವಾ ಕೃತಕವಾದ ತಡೆಗಳನ್ನು ದಾಟಿಕೊಂಡು ಓಡಬೇಕಾದ ಜೂಜೋಟ : ತಡೆಯೋಟ" (Obstacle-race. ಇಂಕನಿ.) [ ತಡೆ$_2$ + ಓಟ ]

**ತಡೆರಾಜ್ಯ** (ನಾ). "ಎರಡು ಪ್ರಬಲರಾಜ್ಯಗಳ ಮಧ್ಯೆ ಇದ್ದು ಒಬ್ಬೊಬ್ಬರಿಗೆ ಕಾದಾಟದ ಸಂಬಂಧವನ್ನು ಕಡಮೆ ಮಾಡುವ ಸಣ್ಣ ರಾಜ್ಯ : ತಡೆರಾಜ್ಯ" (Buffer-state. ಇಂಕನಿ.). [ ತಡೆ$_2$ + ರಾಜ್ಯ ]

**ತಡೆವಡು** (ಕ್ರಿ). ತಡವಾಗು ; ನಿಧಾನವಾಗು : ಬಿನದಿಪ ಕಾಮಿನಿಯರ್ಗೆ . . . ನೊಸಲೊಳ್ ಬೆಮರ್ ಪನಿಯೆ ತೆಳ್ಗದಂಪು ಕೆಂಪಡರೆ ಎರ್ದೆ ದಡದಡಿಸೆ ಸುಯ್ ಪೆರ್ಚೆ ನಡೆ ತಡೆವಡೆ (ರಾಮಾಶ್ವ. ೧೨೩-೭). [ ತಡೆ$_2$ + ಪಡು$_1$ ]

**ತಡೆವಡೆ,** ತಡೆಹಡೆ (ಕ್ರಿ). ಅಡ್ಡಿಗೊಳಗಾಗು ; ತಡೆಯಲ್ಪಡಂ ; ನಿಂತುಹೋಗು : ಸಡಗರಗಳಲ್ಲಲ್ಲಿ ತಡೆವಡೆದು ಸುಗಿದು ನುಡಿಯರಾರುಂ (ಕಾಲೂರ. ೧೫೮-೩೪೮). **ತಡೆಹಡೆ :** ಅಲ್ಲಿ ತಡೆಹಡೆದು ತಾಂ ತಳುಹಿಲ್ಲದೆ ನಿಜದೇಶಕೆಯ್ದೆ ವಂದು (ಧರ್ಮಪ. ೨-೩೯). [ ತಡೆ$_2$ + ಪಡೆ$_1$ ]

**ತಡೆವರ್** (ಕ್ರಿ). ಅಡ್ಡಿಯಾಗಿ ಬರಂ : ತಡೆಯುಂಟುಮಾಡು : ಕಱುಂಬಿನಿರ್ನೆರಮಿಾವುಜಲ್ಲಿಗಕ್ಕೆ ತಡೆವರ್ಪರ್ (ರಾಮಾಶ್ವ. ೫೬-೨). [ ತಡೆ$_2$ + ಬರ್$_1$ ]

**ತಡೆವಲೆ** (ನಾ). ಒಂದು ಬಗೆಯ ಬಲೆ : ನಡುವಲೆ ತಡವಲೆ ಸಿಡಿವಲೆ ನಿಡುವಲೆಗಳೊಪ್ಪಿದವು ಲುಬ್ಧಕರೊಳ್ (ಗಿರಿಜಾ. ೧-೮೦). [ ತಡೆ$_1$ + ಬಲೆ$_1$ ]

**ತಡೆವಿಡು,** ತಡೆಬಿಡು (ಕ್ರಿ). ೧. ತಡೆಯನ್ನು ತೆಗೆದುಹಾಕು ; ಬಂಧನದಿಂದ ಬಿಡುಗಡೆ ಮಾಡಂ : ಪಟುಭಟರ್ತಾಗಿದರ್ಕಲ್ಪಮೇಘಂಗಳಂ ತಡೆವಿಟ್ಟ ಮಳೆಯೆನಲ್ಕಣೆಗಱೆಯುತೆ (ಜೈಮಿಭಾ. ೮-೨೯). ೨. ಮಂತ್ರಪ್ರಭಾವದಿಂದ ಮುಕ್ತವಾಗು. ೩. ಬಿಡುಗಡೆ ಹೊಂದು; ಸ್ವತಂತ್ರವಾಗು : ತಾಂ ತನಗೆ ಹಯಂ ತಡೆವಿಟ್ಟ ಪಾವೆಂತಂತು ನಡೆವಟ್ಟು ತನ್ನಿಚ್ಚೆಯಿಂ ಪೋಗೆ (ರಾಮಾಶ್ವ. ೧೩೪-೧೨). **ತಡೆಬಿಡು :** ೧. ತಡೆಬಿಟ್ಟ ಕಂಬನಿಯ ಕೈಯಿಂದ ಮುಂಗಾಣದೆಡಹುತ್ತ ತಾಗುತ್ತ ಒಡವರ್ಪ ಪರಿವಾರವಂ ಕಂಡು (ಹಚಕಾ. ೯-೨೦). [ ತಡೆ$_2$ + ಬಿಡು$_1$ ]

**ತಡೆವೇಂಟೆ,** ತಡೆವೇಟೆ (ನಾ). ಒಂದು ಬಗೆಯ ಬೇಟೆ ; ಮೃಗಗಳನ್ನು ತಡೆದು ಆಡುವ ಬೇಟೆ : ಭಾಸುರ ವರೂಥವನೇಱಿ ಭೂಪಾಲಮಕರಧ್ವಜಂ ನಡೆಯೆ ತಡೆವೇಂಟೆಗೆ (ಹಚಕಾ. ೬-೧); ಮೇಲ್ವಾಸು ಮಂಚಗಳಗಡಣವೆಯ್ದಿತು ರಾಯನ ನಿಯಮದೊಳಂದು ತಡೆವೇಂಟೆಯ ಸಮಕಟ್ಟು (ಕುರಾಸಾಂ. ೨೭-೪೭). **ತಡೆವೇಟೆ :** 'ತಡೆವೇಟೆಕಾತಿ' ಪರಾ. [ ತಡೆ$_2$ + ಬೇಂಟೆ ]

**ತಡೆವೇಂಟೆಕಾತಿ,** ತಡೆವೇಟೆಕಾತಿ (ನಾ). ತಡೆವೇಟೆಯನ್ನು ಆಡುವವಳು: ಜನಮನದ ಸಂಕಲೆವನೆಯೊ ಲೋಚನಮೃಗದ ತಡೆವೇಂ[ಪಾಠಾಂ. ವೇ]ಟೆಕಾತಿಯೊ ಮನುಮಥನ ಸಂಜೀವನೌಷಧಿಯೋ . . . ಎನಿಸಿದೂರ್ವಸಿ ಬಂದಳು (ಕುಮಾ.ಅ. ೮-೧೦). **ತಡೆವೇಟೆಕಾತಿ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತಡೆವೇಂಟೆ + – ಕಾತಿ$_5$ ]

**ತಡೆವೇಟೆ** 'ತಡೆವೇಂಟೆ' ನೋ.

**ತಡೆವೇಟೆಕಾತಿ** 'ತಡೆವೇಂಟೆಕಾತಿ' ನೋ.

**ತಡೆಸು** 'ತಡೆಯಿಸು' ನೋ.

**ತಡೆಹಡೆ** 'ತಡೆವಡೆ' ನೋ.

**ತಡೆಹಿಡಿ** (ಕ್ರಿ). ೧. ತಡೆದು ಹಿಡಿ ; ಅಡ್ಡಿಪಡಿಸು ; ನಿಗ್ರಹಿಸು: ಅವರಿವರು ಓಡಿ ಬಂದು ಜಗಳವನ್ನು ಬಿಡಿಸಿ ತಿಮ್ಮನನ್ನು ತಡೆಹಿಡಿದರು (ತಿಂಮನ. ೩೫). ೨. (ದುಃಖ ಮೊದಲಾದ ಭಾವಗಳನ್ನು) ಒತ್ತಿರಿಸು; ಅದುಮಿಡು; ಹತ್ತಿಕ್ಕು: ಉಮ್ಮಳಿಸಿ ಬರುತ್ತಿರುವ ಎದೆಯ ದುಃಖವನ್ನು ಪ್ರಯತ್ನಪೂರ್ವಕವಾಗಿ ತಡೆಹಿಡಿಯುವಂತೆ . . . ತೋರುತ್ತಲಿತ್ತು (ಚತಸ. ೧೦೪): ಉಕ್ಕುತ್ತಿದ್ದ ಕಣ್ಣೀರನ್ನು ಬಿಗಿಯಾಗಿ ತಡೆಹಿಡಿದನು (ಪುನರು ೧೯೦). ೩. ಪ್ರಕಟ ಪಡಿಸದೆ ಇರು ; ಜಾರಿಗೆ ತರದೆ ನಿಲ್ಲಿಸು: ಪರೀಕ್ಷೆಯ ಫಲಿತಾಂಶವನ್ನು ತಡೆಹಿಡಿದಿದ್ದಾರೆ (ರೂಢಿ). [ ತಡೆ$_2$ + ಹಿಡಿ$_1$(<ಪಿಡಿ$_1$) ]

**ತಣ್$_1$,** ತಣಿ$_2$ (ಕ್ರಿ). ತಣ್ಣಗಾಗು ; ಉಷ್ಣವಳಿ ; ಆರು : ಲಂಕೆ ಮಿಳ್ಳಿಳನೆ ಬೆಬ್ಬಳಿಸೆ, ಭಯಕೆ ನೆತ್ತರ್ ತಣ್ಣಪೋಲ್ (ಶ್ರೀರಾಮಾ. ೭೩೩-೭೭೦). **ತಣಿ$_2$ :** ಬಿಸಿಲ್ ತಣಿಯೆ ತಂಗಾಳಿ ಪ್ಯೆದೋಱೆ . . . ಸೀತಾಲಕ್ಷ್ಮಣ ರುತ್ತರಾಭಿಮುಖರಾಗಿ ಪೊಱಮಟ್ಟರ್ (ರಾಮಾಶ್ವ. ೩೨-೩); ತಣಿದನ್ನ ತಂಗುಳೆನಿಕ್ಕುಂ (ಕಶರ. ೧೨೪); ಚಹಾ ಆಗಲಿ. ಬಿಸಿ ಇರುವಾಗಲೇ ಅದನ್ನು ತಣಿಯುವ ಮೊದಲೇ ತೆಗೆದುಕೊಳ್ಳಿ (ಒಂಟದ. ೧೭೦).

[ ದೇ.೫ ತಮಿ. ತುಳು. ತಣಿ ]

**ತಣ್$_2$,** ತಂ$_1$, ತಣು$_1$ (ನಾ). ೧. ತಂಪು ; ಶೈತ್ಯ : (ಸ). (ಗುಂ). ೨. ತಂಪಾದ ; ಶೀತವಾದ ; ತಣ್ಣಗಿರುವ : 'ತಣ್ಣದಿರ್', 'ತಣ್ಣೆಳಸ', 'ತಣ್ಣೊಡರ್', 'ತಣ್ಬಿಸಿಲ್' ಪರಾ. **ತಂ$_1$ :** ೨. 'ತಂಗಡಲೆ', 'ತಂಗಾಲ' ಪರಾ. **ತಣು$_1$ :** ೧. ತಣುವಿರಬಲ್ಲುದೇ ಅತಿಶುಷ್ಕವಾದ ಪರ್ಣತರುವಿಡಿದ ಅನಲನ ನಡುವೆ (ಮೋಳಿಮಾ. ೧೬೦-೬೦೦) ; ಸಕಲ ಗಣಸಂಕುಳಂ ತಣು[ಪಾಠಾಂ. ನು]ವಿನೋಕುಳಿಯಾಡಿ (ಬಸರ. ೭-೧೮೪) ; ಭಾನು ತಣುವಾದಾನು ಸೋಮ ಸುಟ್ಟಾನು . . . ಜಗ ಶೂನ್ಯವಾದೀತು ಮೌನದಲಿ ಸಿದ್ಧನಿರಂ (ಮಂಕುಕ. ೭೮೪).

[ <ತಣ್$_1$. / ತಮಿ. ಮಲ. ತಣ್ ; ತುಳು. ತಣು ; ಕೊಡ. ತಣಿ. / ಪ್ರಾ. ತಣ್ಣಾಯ = ಒದ್ದೆಯಾದ, ತೇವವಾದ ]

**ತಣವು** 'ತಣಿವು' ನೋ.

**ತಣಾಪತ್ತಿ** (ನಾ). ದೇವಾಲಯದ ವ್ಯವಸ್ಥಾಪಕ: ಸ್ಥಾನಪತಿ: ತಣಾಪತ್ತಿ ಬೆಯಳ ಜೀಯನುಂ ಊರಪುರವನ್ನು × × ಸಕ್ಷಿ (ಎಕ. III. ನಂಜನ. ೧೯೯-೨೦; ೪). 'ತಾನಪತಿ' ಪರಾ. [ <ಸಂ. ಸ್ಥಾನಪತಿ ]

**ತಣಿ$_1$,** ದಣಿ$_1$ (ಕ್ರಿ). ೧. ತೃಪ್ತಿಹೊಂದು; ಸಮಾಧಾನಗೊಳ್ಳು : "ತಣಿ ತೃಪ್ತೌ" (ಶಮುಧಾ) ; ನೆಲನನುಂ ಪೆಳೆಗಾ ಪಾರ್ವ್ವರು[೦] ಪ್ರಜೆಯುಂ ತಣಿಗೆ (ಎಕ. VII, ಶಿಕಾರಿ. ೧೫೪-೧೮ ; 685) ; ಕರುಣಿಸಿ ಪರ್ವಮೆಂದು ತಣಿಯೆ ಯುಣಲಿಕ್ಕಿದೆನೆಂದೊಡೆ (ವಡ್ಡಾರಾ. ೭೭-೧೫); ಆತಂ ಬೆರಸದೆಲ್ಲಮಂ ತಿಂದು ತಣಿಯದೆ ಪಲ್ಲಂ ತಿಂಬಂ (ಶಂಪಭಾ. ೩-೨೫) ; ಜಗಮೆಲ್ಲಂ ತಣಿಗುಪೊಂದು ಬಳ್ಳಿಯ ಕಾಯೊಳ್ (ಲೋಕೋಪ. ೬-೫೮) ; ಮಾಣುದರವಿದೆ ಬೀಗಿಹುದು ಕಲ್ಯಾಣಿದೇವಾ ತಣಿಯಿರೇ (ಬಸಪು. ೫೯-೩) ; ಕಮ್ಮನೆ ತುಪ್ಪ ಕಜ್ಜಾಯ ಪಾಯಸದಿಂದೆ ದಮ್ಮನೆ ತಣಿದೆವೆಂದೆನುತ (ಮೋಹತ. ೩.೫೯) ; ಅದಕ್ಕೆ ತಂದೆನು ನಿನ್ನೆಡೆಗಿಂದು ಕಡುಬಂ ತಣಿವಂದಂ ನೀಡೆಂದು (ಗಡೀಕ. ೨-೩೦). ೨. ಆಯಾಸಗೊಳ್ಳು ; ಸೋತುಹೋಗು : "ದಟ್ಟಂದಱಿದು[ಪಾಠಾಂ. ಗೆಂಟೆಂದಱಿದು] ದೆನಲ್ ತಣಿದುದು" (ಜಶುನಿ. ೩೪) ; ಧೈರ್ಯಗೆಟ್ಟಿದು ಕೂಡೆ ಕುರುಸೇನೆ . . . ತಣಿದುದ್ದೈ ಪರಿಭವದ ಸೂಱೆಯಲಿ (ಕುಮಾ.ದ್ರೋ. ೧೬-೧೨). **ದಣಿ$_1$ :** ೧. ಇತ್ತುದನೆ ಕೊಂಡು ದ[ಪಾಠಾಂ. ತ]ಣಿಯದೆ ಮತ್ತಿನ್ನುಂ ಬೇಕುಮೆಂದು ಪಾಯ್ವಮೂರ್ಧರ್ (ಸಮುಪ. ೩೯೦-೨೭ ಅನು. I) ; ಆಡಿ ಕಾಲು ದಣಿಯವು ನೋಡಿ ಕಣ್ಣುದಣಿಯುವು ಹಾಡಿ ನಾಲಗೆ ದಣಿಯುದು (ಬಸವ. ೪೮೭); ನೋಡಿ ದಣಿಯನು ಬಿರುದ ಹೊಗಳಿಸಿ ಹಾಡಿ ದಣಿಯನು ನಿಚ್ಚಲುಚಿತವ ಮಾಡಿ ದ[ಪಾಠಾಂ. ತ]ಣಿಯನು (ಕುಮಾ.ಉ. ೧೧-೦೮); ಹಂಸ ನೀಕ್ಷಣದಿಂದುಮ್ಮಿದಮೃತವ ಹಂಸನಂತೀಂಟಿ ದಣಿವನು (ಭರಜ. -೨೯) ; ಕಂಡು ದಣಿದೆಯೋ ಉಂಡು ದಣಿದೆಯೋ (ಗಾದೆ). ೨. ಅರಿಗದಾಘಾತದಲಿ ಕೈಮೈದಣಿದು ಮನದಣಿದು ತೆರಳಿದರು (ಕುಮಾ.ದ್ರೋ. ೩-೭೯) ; ಶ್ರುತಿ ಶಾಸ್ತ್ರ ಪುರಾಣಗಳನೋದಿ ಬೆಂಡಾದೆ ಅತಿಶೀಲಗಳನೆಲ್ಲ ಮಾಡಿ ದಣಿದೆ (ಪುರಂದ. ೨-೧೮-೨). ೧, ೨ : ಚಣಚಣಕು ಪರಿಪೂರ್ಣ ನೀನು ತಣಿದೇ ದಣಿವೆ; ನನಗೆ ಪೂರ್ಣತೆಯೆಂದೊ, ನಾನು ದಣಿದೇ ತಣಿವೆ (ಉಯ್ಯಾಲೆ. ೧೮-೧೩).

**ತಣಿತಣಿ** (ದ್ವಿರುಕ್ತಿ) : ತಣಿತಣಿದು ತಕ್ಕೈಸಿ ಬಿಕ್ಕು ಮಲೆಮಲೆದಾಡಿ (ಬಸರ. ೩-೧೦೪).

[ ದೇ.೫ ತಮಿ. ಮಲ. ತುಳು. ಕೊಡ. ತೆಲು. ತಣಿ ]

**ತಣಿ$_2$** 'ತಣ್$_1$' ನೋ.

**ತಣಿ$_3$,** ತನಿ$_3$ (ನಾ). ತೃಪ್ತಿಪಡಿಸುವಿಕೆ ; ತರ್ಪಣ : ತೊಡು ಜವದಿ ಬಿಡು ಬೇಗದಿಂದವನ ತಲೆಗಡಿದು ತಮ್ಮಂಗೆ ನೆತ್ತರ್ ತಣಿಯುನೆರೆವೆ (ಶ್ರೀರಾಮಾ. ೮೦೨-೪೯). 'ತಣಿಯೆಱೆ' ಪರಾ. **ತನಿ$_3$ :** ಗರುಡನೂರವರೆಱೆವರೇ ನಾಗರಿಗೆ ತನಿಯನು (ಕುಮಾ.ಕ. ೨-೧೫). 'ತನಿಯೆರೆ' ಪರಾ.

[ <ತಣಿ$_1$ ]

**ತಣಿಗೆ** 'ತಳಿಗೆ' ನೋ.

**ತಣಿಪು$_1$,** ತಣುಪು, ತಣ್ಪು$_1$ (ಕ್ರಿ). ತಣಿಸು; ತೃಪ್ತಿಯನ್ನುಂಟುಮಾಡು; ಸಂತೋಷಪಡಿಸು : "ತಣಿಪು – ತೃಪ್ತೌ" (ಶಮುಧಾ) ; ದಿವ್ಯಾಹಾರವ ನೂಡಿ . . . ತಾಂಬೂಲಾದಿಗಳಿಂ ತಣಿಪಿದಾಗಳ್ (ವಡ್ಡಾರಾ. ೫೫-೨೦) ; ಬೇಪ್ರ್ವರನುತ್ಸಾಹದಿನಾವಗಂ ತಣಿಪಿ (ಎಇ. XIII, ೩೨೯-೫ ; 929) ; ನಿಜ ಸಂತತಿಯಂ ತಣಿಪಿ ಸುಹೃತ್ಸಂತತಿಯಂ ಪೆರ್ಚಿಪ್ಪುದು (ಆದಿಪು. ೮-೭೫) ; ವನಬರ್ಹಿಗಳಂ ಮೇಘಧ್ವನಿ ತಣಿಪುವ ತೆಱದೆ ದೇವ ನಿನ್ನಯ ದಿವ್ಯಧ್ವನಿ ತಣಿಪಿದಪುದು ವಿಪ್ಪಪಜನಮಂ (ಅಜಿಪು. ೮-೧೦) ; ತನ್ನಿಂದೆ ತಿಳಿದು ತನ್ನಂ ತನ್ನೊಳಿ ತಾಂ ನಿಂದು ತನ್ನೊಳುದಯಿಸಿದ ಸುಖಂ ತನ್ನನೆ ತಣಿಪುತ್ತಿರೆ (ಚಂದ್ರಪು. ೯-೨೨) ; ಜಾಗದೊಂದೆಸಕವಲಂಪಿನಿಂ ಬಡವರಂ ತಣಿಪುತ್ತಿರೆ (ಅಭಿಕಾ. ೪೭) ; ಒಂದೆ ಶಶಿಬಿಂಬವೀ ಜಗದಿಂದೀವರತತಿಯನೆಯ್ದೆ ತಣಿಪುವ ತೆಱದಿಂ (ಕಾವ್ಯಸಾ. ೫೫೪). **ತಣುಪು :** ಪೆಂಪಿನಿಂದೀವ × × ಮಂ ತಣುಪಿ ಕಲ್ಪಕುಜಕ್ಕೆಣೆ × × × ಸುದ್ದ ಮತಿವರದಾನ ಗುಣಭೂಷಣೆ (ಎಕ. VII. ಶಿವಮೊ. ೯೭-೨೦ ; 1118) ; ಬಸವಾದಿ ಶರಣರಾರೋಗಣಂ ಬರಲವರ ತಣುಪಲಂದಾಯ್ದಕ್ಕಿಮಾರಣ್ಣನೊಪ್ಪಿದನು (ವೀಶ್ವಪು. ೬-೧೧-೦೨). **ತಣ್ಪು$_1$:** ಅನ್ನಯದೊದವು ತಾಯುಮಂ ತಂದೆಯುಮಂ ತಣ್ಪಿದುದಪಾರ ರಾಗಾಮೃತದಿಂ (ಶಾಂತಿಪು. ೧-೭೮). [ ತಣಿ$_1$ + – ಪು$_1$ ]

**ತಣಿಪ್ಪು$_2$** (ನಾ). ತೃಪ್ತಿ ; ಸಮಾಧಾನ ; ಸಂತುಷ್ಟಿ : ಪಾಲ್ ಕೆಚ್ಚಲೊಳ್ ತಣಿವು ಊಟದೊಳ್ ಸೀರೆ ನೂಲೊಳ್ . . . ಪುಟ್ಟುವಂತೆ (ಧರ್ಮಾಮೃ. ೮-೮೩) ; ಲೋಕ ತಾಪದಿ ಬೆಂದು ತಣಿವನೆಳಸಿದವಂ ಈ ಕಂತೆಯಲ್ಲಿ ತನ್ನ ನಂಬಿಕೆಯ ನೆಯ್ದಿಹನು (ಮಂಕುಕ. ೯೪೦). [ ತಣಿ$_1$ + – ಪು$_2$ ]

**ತಣಿಯಿಸು,** ತಣಿಸು$_2$, ದಣಿಯಿಸು, ದಣಿಸು (ಕ್ರಿ). ೧. ತೃಪ್ತಿಪಡಿಸು; ಸಂತೋಷಪಡಿಸು: ಎಳಮಾವಿನ ಚೆಲ್ವಿಂ . . . ತೆಂಕಣೆಲರಿನೆಳನೀರ್ಗಳಿನಿಂದೊಳದಿಂ ತಣಿಯಿಪುದು ಜನಂಗಳ ಪಂಚೇಂದ್ರಿಯಮನಂದು ಬಂದು ವಸಂತಂ (ಕಾದಂಬ. ೭೭೯); ತಮ್ಮೆಲ್ಲ ಹಸಿವುಗಳ ತಣಿಯಿಪನಿತನ್ಯೋನ್ಯ ಹೊಮ್ಮುಗೌದಾರ್ಯ ಜನಜನಪದಂಗಳಲಿ (ಮಂಕುತ. ೯೪೪). **ತಣಿಸು$_2$:** ೧. ಗುಣಮೇಱಿದ ಧರ್ಮಂ . . . ನೃಪಾಗ್ರಣಿಯನಿಹಸೌಖ್ಯದಿಂದಮೆ ತಣಿಪುದದೆ ಪರಮಸುಖೈಕಕಾರಣಮಲ್ತೇ (ಪುಷ್ಪಪು. ೩-೧೧); ಮಾಹೇಶ್ವರರಿಗಿಷ್ಟಾರ್ಥಂಗಳಿಂದಾದರಿಸಿ ಪರಿಚಯಂಗಳಿಂ ತಣಿಸುತ್ತ (ಬಸವು. ೪-೪೭); ರಣದೊಳಾಡುವ ಮರುಳ ಬಳಗವ ತಣಿಸಿದನು (ಕುಮಾರವ್ಯಾ. ೫-೭೭); ಎಣಿಸುವುದವನೊಲಿದೆಸಗುವ ನಲ್ಮೆಯ ತಣಿಸುವುದಿಂತು ಚಿತ್ತವನು (ಹರಿಬ. ೩-೪೩); ಕಣ್ಣುಗಳ ಹೊಳವು ಮೊದಲೆ ಅವನ ನೀರಡಿಕೆಯನ್ನು ತಣಿಸಿತ್ತು (ಹಾಹುತ್ತ. ೮೯). **ದಣಿಯಿಸು:** ೧. ಧರಣಿಯ ಮರರ ದಣಿಯಿಸಿದಳು ಹಿರಣ್ಯದಾನದಲಿ (ಸಂಭವ. ೨೦-೨೨). **ದಣಿಸು:** ೧. ಪರಿವಾರವನು ನಿರ್ದಾಯದಲಿ ದಣಿಸುವೆನು ರಿಪುಗಳ ಸಿರಿಯ ಸೂಱೆಯಲಿ (ಕುಮಾರವ್ಯಾ. ೧-೧೭); ನಾನಾ ವರ್ಣಮಂ ಮಹಾಭೂರಿ ದಕ್ಷಿಣೆಗಳಿಂ ದಣಿಸುತಂ . . . ಬರುತಿರ್ದನು (ಜೈಮಿನಿ. ೫-೦೭); ವಿಪ್ರವೃಂದಮಂ ದ[ಪಾಠಾಂ. ತ]ಣಿಸು ಬಹುವಿಧದಿಂದೆ (ಕೃಮಿಧಾ. ೩೦-೭೦). ೨. ಆಯಾಸಗೊಳಿಸಂ; ಶ್ರಮಪಡಿಸು; ದಣಿವುಂಟುಮಾಡು: ಗಂಡನ ದಣಿಸುವುದಿಲ್ಲಿಯಮಕುಂಡದೊಳಗೆ ಹಾಕಿ ಕುದಿಸುವರಲ್ಲಿ (ಪುರಂದ. ೨-೩೯-೨).

**ತಣಿತಣಿಸು, ತಣಿಸುತಣಿಸು** (ದ್ವಿರುಕ್ತಿ): ಚೆನ್ನೆಯರು ಕುಣಿಯುತಿಹರು ದಣಿವಿಲ್ಲ ಮೈಗೆ ತಂತಾನೆ ಒಳಗೆ ತಣಿತಣಿಸಿ ತಣಿಯುತಿಹರು (ಸೂರ್ಯಪಾ. ೫೭-೭); ದಾನಾರ್ಥಿಗಳನಂಬರ ಹೇಮಮಣಿಗಣ ಭೂಷಣಾವಳಿಯಿಂ ತಣಿಸಿ ತಣಿಸಿ (ಬಸವು. ೬-೨೯). [ ತಣಿ$_1$ + -ಇಸು$_3$ ]

**ತಣಿಯುಣ್,** ದಣಿಯುಣ್ (ಕ್ರಿ). ತೃಪ್ತಿಯಾಗುವಂತೆ ಊಟಮಾಡಂ: ದಿವ್ಯಾಹಾರಮನಾಕಂಠಪ್ರಮಾಣಂಬರೆಗಂ ತಣಿಯುಂಡು (ವಡ್ಡಾರಾ. ೭೮-೨೨); ತಣಿಯುಂಡಮರ್ದಂ ಗೋಮೂತ್ರದಿಂದೆ ಬಾಯುಮ್ಮಿಸಿದವೋಲ್ (ಪಂಪಭಾ. ೭-೪೮); ತಣಿಯುಂಡನಂತೆ ಸಾಲ್ಗುಮೆನ್ನದೆ (ಧರ್ಮಾಮೃ. ೧-೧೩೫): ಭೂತಪಿಶಾಚಕೋಟಿಯುಂ ನೆಱೆ ತಣಿಯುಣ್ದು ಚಣ್ದು ಮರಲ್ದಿಂನ್ನುಮದಕ್ಕಿಸಲಾಱವೆನ್ದೊಡೆ (ಎಕ. XVI, ಚಿಕ್ಕನಾ. ೯೮-೨೫: 1170); ಪಸಿವಿಂದೆ ನಿನ್ನ ಮೇಲೆ ಕಟ್ಟೆಱಗಿ ದಿನಮೆಲ್ಲ ತಣಿಯುಣುತೆ (ಬದ್ಧಶೃ. ೫೪-೧೧೫೫). **ದಣಿಯುಣ್:** ಗಗನದ ಮೇಘಂಗಳೆಲ್ಲಾ ಸುರಿದವು ಭೂಮಿಯ ಮೇಲೆ ಭೂಮಿ ದಣಿಯುಂಡು ಸಸಿಗಳೆಲ್ಲಾ ಬೆಳೆದವು (ಅವಿಶಂ. ೧೦೭-೪೮೭); ಅನಿತೋಗರವನೊಡನೆ ಕಱುಗಾವ ಮಕ್ಕಳುಗಳನಿಬರ್ಗೆ ದಣಿಯುಣಲಿಕ್ಕಿ ತಣಿದು (ಸಿದ್ಧರಾ. ೨-೦೭). [ ತಣಿ$_1$ + ಉಣ್ ]

**ತಣಿಯುಣಿಸು** (ಕ್ರಿ). ತೃಪ್ತಿಯಾಗುವಂತೆ ಉಣಿಸು: ಸುಪ್ರೀತನಾಗುವೊಲು ತಣಿಯುಣಿಸಿ (ಪಾರಸಿ. ೨೭-೮೮೩). [ ತಣಿ$_1$ + ಉಣಿಸು$_1$ ]

**ತಣಿಯೂಡು** (ಕ್ರಿ). ತೃಪ್ತಿಯಾಗುವಂತೆ ಊಟಮಾಡಿಸಂ; ತಣಿಯಂವಂತೆ ತಿನ್ನಿಸು: ತೊಱೆದ ಮೊಲೆಯಂ ಸಾರ್ಚಿ ತಣಿಯೂಡದೆ ನಡೆಗೊಳಿಸಿ ತವಕದಿಂ ಬರುತ್ತುಂ (ಪುಷ್ಪಪು. ೩-೭೭ ವ); ದಾನಜಳಮಂ ತಣಿಯೂಡಿದಡೆ (ಬೊಂಕಶಾ. ೧೯೩೭. ಹಾನಗಲ್. ೭೭-೪೭; ?). [ ತಣಿ$_1$ + ಊಡು$_1$ ]

**ತಣಿಯೆಱೆ,** ತನಿಯೆರೆ (ಕ್ರಿ). ೧. ತರ್ಪಣ ಕೊಡು; (ಹಾಲು ಮಂಂತಾದುವನ್ನು ಅರ್ಪಿಸಿ) ತೃಪ್ತಿಯನ್ನುಂಟುಮಾಡು: ಪೆಣಮಾರೊ ಇದು ತಾನೆ, ಮಣ್‌ಮಾಡಿ ಪೋದರ್; ಬಱುಮಣ್ಣನೆಱೆ, ತಾಮ್ ಶ್ರದ್ಧೆಯನ್ ತಕ್ಕಂತೆ ತಣಿಯೆಱೆದುಮಿರ್ಪರ್ (ಅಂತಿಗೊ. ೧೨-೨೨೮). **ತನಿಯೆರೆ:** ಇದೊ ತಂದೆ ತನಿಗಳನು, ನನ್ನ ಮಗನಯ್ಯಂಗೆ, ಪಿತೃಗಳಿಗೆ ತನಿಯೆರೆಯೆ (ಪಾರಸಿ. ೨೩-೫೧೮); ನಾಗರಿಗೆ ತನಿಯೆರೆಯುತ್ತಾರೆ (ರೂಢಿ). [ ತಣಿ$_1$ + ಎಱೆ$_1$ ]

**ತಣಿರು** 'ತಳಿರ್$_2$' ನೋ.

**ತಣಿವೀ** (ಕ್ರಿ). ತೃಪ್ತಿಯನ್ನು ನೀಡಂ; ತಣಿವನ್ನುಂಟುಮಾಡಂ: ಅಱಿಯದೆಳಸಿದೆನೆಂದು ನಮಿಸಿದಸುರೆಯ ಬಸುರ ಬಱಿಸಳಿಯೆ ತಣಿವಿತ್ತು (ಸಿದ್ಧರಾ. ೬-೯); ಅಂತದು ತಣಿವೀವುದು ಬಾನುದ್ದಮಪ್ಪ ಪೇರೊಡಲವರ್ಗಂ (ಶಬ್ದಾನು. ೫೪೨ ಪ್ರಯೋ). [ ತಣಿವು + ಈ$_2$ ]

**ತಣಿವು,** ತಣವು, ತನಿವು, ದಣಿವು, ದಣುವು (ನಾ). ೧. ತೃಪ್ತಿ; ಸಮಾಧಾನ: "ಪರ್ಯಾಪ್ತಂ, ಉಪಸಂಪನ್ನಂ, ತೃಪ್ತಿಃ, ಸೌಹಿತ್ಯಂ-ಈ ೪ತ (ಣಿ) ಣುವು" (ಹಲಾಯು. ೫೪-೧೬೧); ತಣಿವಂ ಕೈಕೊಂಡಮೂರ್ತರ್ಚರಮತನು ಸಮಾಕಾರರ್ (ಆದಿಪು. ೧-೨); ಕನಸಿನ ತೊಱೆಯೊಳ್ ನೀರ್ಗುಡಿದು ತಣಿವನಱಿಸಿದರೊಳರೇ (ಶಾಂತಿಪು. ೪-೯೮); ತಣಿವಿಲ್ಲದರಂ ಪೂಜಿಸೆ ತಣಿವಕ್ಕುಮೆ (ಮಲ್ಲಿಪು. ೧೨-೧೭೧); ಪರಮಶಿವಸುಖಿ ಸಂಗಸುಧೆಯಂ ಸವಿಸವಿದು ತಣಿವಿಲ್ಲದೀಂಟುತ್ತ (ಬಸವು. ೩೫-೨); ಕಿಚ್ಚಿಂಗೆ ತಣಿವಿಲ್ಲ ಮೊಚ್ಚೆಗೆ ಹೊಲೆಯಿಲ್ಲ (ಸರ್ವಜ್ಞ. ೪೮೪). **ತಣವು:** ೧. "ಸೌಹಿತ್ಯಂ, ತರ್ಪಣಂ, ತೃಪ್ತಿಃ - ೩ ತಣವು[ಪಾಠಾಂ. ತಣುವು]" (ಸಿದ್ಧಾಂತಿ. ೨೧೯); ಆರಾ ಅಮರ್ದನ ತೀರಾ ತಣವಿನ್ (ಹೊಂಗಳು. ೪೪-೫). **ತನಿವು:** ೧. ತಂಬೆಲರು ಜೀವಕ್ಕೆ ತನಿವು ನೀಡಿತ್ತು (ಜೀವನ. ೭). **ದಣಿವು:** ೧. ಭೋಜನದ ದ[ಪಾಠಾಂ. ತ]ಣಿವು ಪರ್ಯಾಪ್ತಮುಪಪನ್ನಮಾತ್ಮತೃಪ್ತಿ ಸೌಹಿತ್ಯಮಕ್ಕುಂ (ಮಂಗರಾ. ೬೫-೭). ೨. ಆಯಾಸ; ಬಳಲಿಕೆ; ಶ್ರಮ: ನಿಪುಣಿಕೆ ಕ್ರಮಕ್ರಮೇಣ ದಣಿವಿನಿಂದ ಹಣ್ಣುಗುತ್ತಲೆ ಇದ್ದಳು (ಬಾಡಿಳ. ೩೦೦); ಶ್ರೀನಿವಾಸ ಮಾತ್ರ ದಿನದ ದಣಿವಿನಿಂದ ಕೂಡಲೆ ನಿದ್ದೆಹೋದ(ತೀರ್ಪೋಡ. ೪೫). **ದಣುವು:** ೨. ದಣುವಿಲ್ಲದೊಲ್ದು ಕುಣಿವಚ್ಚ ಕೇಳಿಕೆಗಳಿಂ (ಉದ್ಭಟ. ೩-೯೮); ದಾರಿಗರಿಗೆ ದಣುವು ತೋರುತ್ತಿರಲಿಲ್ಲ (ಶ್ರೀರಾಪ. ೧೩). ೩. ಆಸೆ; ತೃಷೆ: ಪಾಂಡುಕುಮಾರರ ಚರಿತ್ರವು ಎಷ್ಟು ಕೇಳಿದರೂ ದಣುವು ತೀರದು (ಕೃಷ್ಣಾಳೀ. ೮೮).

**ತಣವು ಮುದ್ದೆ** = ತಂಬಿಟ್ಟು: ಅವರೂ ತಮ್ಮ ಕಾಹಿಲೆ ವಾಸಿಮಾಡಲು ಮಾರಮ್ಮನಿಗೆ ಕುರಿ, ಕೋಳಿ, ತೆಂಗಿನಕಾಯಿ, ತಣವು ಮುದ್ದೆಗಳನ್ನು ಅರ್ಪಿಸಲು ಮುಂದೆ ಬಂದಿದ್ದರು (ಊರುಕ. ೫).
[ ತಣಿ$_1$ + - ವು. / ತಮಿ. ತಣಿವು; ತೆಲು. ತನಿವು, ತನಿವಿ, ತನ್ವಿ, ತನ್ವು ]

**ತಣಿವೇಱು** (ಕ್ರಿ). ತೃಪ್ತಿಯನ್ನು ಹೊಂದು: ಪೊಗೆಸುತ್ತದಂತೆ ಕೈಕೊಂಬುದು ಹವ್ಯಮಂ ಬಯಸಿಯುಣ್ಬಮರರ್ ತಣಿವೇಱುವಂತೆವೋಲ್ (ಚಿಕವಿ. ೪-೭೭).
[ ತಣಿವು + ಏಱು$_1$ (<ಏಱ್$_1$) ]

**ತಣಿಸು$_1$,** ತಣ್ಣಿಸು, ತಣ್ಣೈಸು (ಕ್ರಿ). ೧. ತಣ್ಣಗೆ ಮಾಡು; ತಂಪುಗೊಳಿಸಂ; ಆರಿಸು: ತಣ್ಣೀರಾದಡಂ ತಣಿಸಿ ಕುಡಿ (ಪಾರ್ತಿಸು. ೭೭); ಕುಡಿಯುವ ನೀರನ್ನು . . . ಕುದಿಸಿ ಆದಮೇಲೆ ಮಣ್ಣಿನ ಪಾತ್ರೆಗಳಲ್ಲಿ ಹಾಕಿ ತಣಿಸಬೇಕು (ಆರುಶಾ. ೮೪). **ತಣ್ಣಿಸು:** ೧. ಕಳ್ತಲೆಗಣಂ ಮಾರಾಂಪ ಶೂರಂ ಲಸಲ್ಲಲಿತಂ ತಣ್ಣಿಪ ಚನ್ದ್ರನಂ ನುಡಿವರ್ (ಸಂಸಪ. ೧೪-೪); ಅಣ್ಣಾ ದತ್ತನ ಬಗೆಯ ಬೇಗೆಯನು ತಣ್ಣಿಸೈ (ನನಲ್ಲ. ೮೭-೧). ೨. ಅಡಗು; ಇಲ್ಲದಂತಾಗು: ಬಯಲಾತು ಮಾತಿನ ಭ್ರಾಂತಿ ತಣ್ಣಿಸಿತು. ಶಾಂತಿ (ಸೂರ್ಯಪಾ. ೧೮-೪). **ತಣ್ಣೈಸು:** ೧. ಸಣ್ಣಕ್ಕಿಯುಶನ ಸದ್ವೃತದೊಲೆ . . . ಕೈದಣ್ಣಲರ್ ದಧಿಪತ್ರಮಾಲೆ ತಣ್ಣೈಸದೆ ಪದಾರ್ಥಂಗಳ ರುಚಿಯ ಮುಕ್ಕಣ್ಣಗರ್ಪಿತವ ಮಾಡಿದರು (ಪೋಹಶ. ೨೭-೯). [ ತಣ್$_2$ + - ಇಸು$_3$ ]

**ತಣಿಸು$_2$** 'ತಣಿಯಿಸು' ನೋ.

**ತಣಿಸು$_3$** (ನಾ). ೧. ತಂಪು; ಶೈತ್ಯ: "ಸ್ವಿದಿ - ಶೈತ್ಯೇ, ತಣಿಸಿನೊಳ್" (ಕಾಶಕ್ಕ. ೮೨). ೨. ತೇವ; ಒದ್ದೆ: (+). ೩. ತೃಪ್ತಿ; ತುಷ್ಟಿ: ಗುಲಾಬಿ ನಗುವುದೊಂದರೆನಿಮಿಷ; ನಗಲು ಬಾಳ್ಮುಗಿಯುವುದು ಮುಗುಳು ದುಡಿತಕೆ ತಣಿಸು (ಮಂಕುತ. ೪೭೮). 'ತಣ್ಣಸ' ಪರಾ. [ ತಣಿ$_1$ + - ಸು$_2$ ]

**ತಣು**$_1$ 'ತಣ್$_2$' ನೋ.

**ತಣು**$_2$ (ನಾ). (?) : ಕೆಲವೞೊಳ್ ವ್ಯಂಜನಮಿಲ್ಲ. . . ಕರು, ತಣು, ಅನು, ಕಟು (ಶಮದ. ೪೮ ಪ್ರಯೋ). [ ? ]

**ತಣುಕು** (ನಾ). ಒಂದು ಬಗೆಯ ಗಿಡ : ತಣುಕು, ಕಾಡುಬೆಂಡೆ (ವ್ಯಾಜಿಗಿ. ೪೦-೮೨೨). [ ? ]

**ತಣುನೆಳಲು** 'ತಣ್ಣೆಟಿಲ್' ನೋ.

**ತಣುಪು** 'ತಣಿಪು$_1$' ನೋ.

**ತಣೆಸೆ** (ನಾ). (?): ತಾವರೆಯ ತಣೆಸೆಯೊಳು (ಇ೩. ೧೯೪೬, ಮುಂಡರಗಿಪೇಟಾ. ೩೩೫-೯ ; ?). [ P ಇದು 'ತಣ್ಣೆಸೆ' ಯ ಅಪಲಿಖಿತವಿರಬಹುದು ]

**ತಣ್ಗಂಪು** (ನಾ). ಆಹ್ಲಾದಕರವಾದ ಸುವಾಸನೆ : ಅಧರದ ಪೊದಟ್ದ ತಣ್ಗಂಪಿಂಗಂ ಮೃಗನಯನೆಯರನೆ ಬಿಡದೋಲಗಿಸಿದುದಳಿನಿಕರಂ (ಆದಿಪು. ೧೧-೧೧೨) ; ವನಲತಾಳಿ ಪ್ರಸೂನಾವಳೀ ಗಂಧವಹಂ . . . ತಣ್ಗಂಪನೀ ಬೀಱದಪುದು (ಕಾದಂಉ. ೭೦೭) ; ಕಂಪಿನೊಳ್ ಪೊಂಪುೞಿವೋಗುತಿರ್ದ ಮಳ ವಕ್ತ್ರಸರೋಜಮೆ ಸಾಲ್ಗುಮೆಂದು ತಣ್ಗಂಪನುಣಲ್ಕೆ ಬಂದೆಱಗಿ (ಧರ್ಮಾಮೃ. ೭-೩೦೦); ಮುಡಿಯಿಂದಂ ಬೀೞ್ವ ಪೂಮಾಲೆಯಿಂ ತ[ಪಾಠಾಂ. ಮ]ಣ್ಗಂಪಂ ಸವಿದಲ್ಲಿ ವಂಗಡದೆ ಪಾಡುತಿರ್ಪ ಪೆಣ್ದುಂಬಿಯಿಂ (ಕಬ್ಬಿಗಕಾ. ೩೫) ; ನಸುಬಿರಿದ ಜಾಜಿಯ ನನೆಯ ತಣ್ಗಂಪನುಂಡು . . . ಸುಳಿವ ಮಱಿದುಂಬಿಯ ವಿಳಾಸದಂತೆ (ಸೌಂದಪು. ೧-೧೭).
[ ತಣ್$_2$ + ಕಂಪು ]

**ತಣ್ಗದಿರ್**, ತಂಗದಿರ್ (ನಾ). ತಂಪಾದ ಕಿರಣ : ಸ್ಮರಶರಮೇವುವೆಂಬ ಶಿಶಿರಾಂಶುವ ತಣ್ಗದಿರೇವುವೆಂಬ ಬದ್ದರನೞಿಯಟ್ಟ (ಅಜಿಪು. ೬-೨೭) ; ನೆಱದಿಂಗಳ ತಣ್ಗದಿರಂತೆ. . . ಲೋಲಲೋಚನರುಚಿ ಸುತ್ತಿಮುತ್ತಿದುದು (ಪಂಪಾಮಾ. ೫-೭೦) ; ಭುವನಮನಾವಗಂ ಪುದಿದು ತೀವಿದ ತಣ್ಗದಿರ್ಗಳ್ ಪೊದಟ್ದ ಕೈರವವನಮಾದುವು (ಲೀಲಾವ. ೩-೭) ; ವರ ಹಿಮಕರಬಿಂಬದ ಬೆಂಬಳಿಯೊಳಿಳಿವ ತಣ್ಗದಿರ್ಗಳೆನಲ್ (ಗಿರಿಕ. ೭-೯) ; ಸೊಗಯಿಪ ಬೆಳ್ಪಸದ ನಮಂ . . . ಕೈಕೊಂಡಾಗಳ್ ಮಿಗೆ ತಣ್ಗದಿರಾವರಿಸಿದ ಮೃಗಧರ ಮಂಡಲಿಯವೋಲ್ ವಿರಾಜಿಸುತಿರ್ದಳ್ (ಬಾಧಪು. ೬-೧೦೦೦). **ತಂಗದಿರ್**: ತಂಗದಿರ್ಗಳು ಸರ್ವಾಂಗದಿ ನೆಲಸಿರೆ (ಶಿವಗೀ. ೦೭೦-೮೩೧) ; ತಳಿತ ತಂಪಿನ ತಂಗದಿರ ತೊಱಿಯೊಳಗೆ ತೇಂಕಾಡಿದುದು ಬಲ (ಕುಮಾವ್ಯಾದ್ರೋ. ೧೭-೧೮).
[ ತಣ್$_2$ + ಕದಿರ್$_2$ ]

**ತಣ್ಗದಿರ**, ತಂಗದಿರ (ನಾ). ತಂಪಾದ ಕಿರಣಗಳಂಳ್ಳವನು ; ಚಂದ್ರ : "ಜೊನ್ನೊಡಲಂ . . . ತಣ್ಗದಿರಂ, ಅಲಿವೆಳಗಂ, ಮಂಜುಗೈಯ್ಯಂ . . . ತಿಂಗಳ್ – ಈ ೨೦ ಚಂದ್ರನ ಪೆಸರ್" (ಕಶಸಾ. ೩-೨೩) ; "ತಣ್ಗದಿರನೆನಲ್ಕೆ ಚಂದಿರಂ ಸೊದೆಗದಿರಂ" (ಕರ್ಣಾನಿ. ೯) ; ಆನನಾಂಬುಜಂ ತಣ್ಗದಿರಂಗೆ ಸೋಲವುನೊಡರ್ಚೆ (ರಾಜಶೇ. ೧೩-೬೦); ಬೆಂಗದಿರನ ಕಾಯ್ಪು ತಣ್ಗದಿರನ ತಣ್ಪು . . . ಪಡಿಗೊಳೆ (ರಾಮಾಶ್ವ. ೭-೧೭) ; ಬೆಂಗದಿರನ ಬಿಸಿ ನಾನು, ತಣ್ಗದಿರನ ತಂಪಾನು ! (ಪಾಂಚಜ. ೧೬-೨೧). **ತಂಗದಿರ** : "ತಂಗದಿರನೆಂದೊಡಂಬುಜಬಾಂಧವಂ" (ಕಶರ. ೧೩೦); ತಂಗದಿರನಿಂದಿಂಗಡಲ್ ಪೆರ್ಚದಿರಲ್ (ನಂದಿಮಾ. ೯-೬೫) ; ಸರಸದಿಂ ತಂಗದಿರನುದಯದಿ ಶರಧಿ ಪೆರ್ಚುವ ತೆರದೊಳ್ (ಕೃಕರ್ಣಾ. ೩-೬೮) ; ತಂಗದಿರ ನೇಸರರ್ ತಾವು ಕಡುಹರುಸ ದಿಂದೆಸಗುತಿರಲು (ಕವಿಕಾ. ೨-೧); ತಂಗದಿರನೆಸಕ ಕಣ್ಗಮೃತ, ಕಣಜಕದೇಂ ? (ಮಂಕುಂಕ. ೪೯೮). 'ಬೆಂಗದಿರ' ಪರಾ.

**ತಣ್ಗದಿರನನ್ವಯ** = ಚಂದ್ರವಂಶ : ತಣ್ಗದಿರನನ್ವಯದ ಪಾರ್ಥನ ತುರಂಗಮದು ಪೆಣ್ಗುದುರೆಯಾಗಿ . . . ಸ್ತ್ರೀ ರಾಜ್ಯಮಂ ಪೊಕ್ಕುದು (ಜೈಮಿಭಾ. ೧೫ ಸೂಚನೆ). [ ತಣ್ಗದಿರ್ + – ಅ$_7$ ]

**ತಣ್ಗದಿರವಕ್ಕಿ** 'ತಣ್ಗದಿರ್ವಕ್ಕಿ' ನೋ.

**ತಣ್ಗದಿರಱೆ** (ನಾ). ಚಂದ್ರಕಾಂತ ಶಿಲೆ ; ಅಮೃತಶಿಲೆ : ಪಾಸಿದ ತಣ್ಗದಿರಱೆಯ ಪಾದವಟ್ಟಗೆಗೊಳಗೇರಿಯು ನಿಡುಮುರಂಗಳಿಱುಂಬಿನ ಕಟ್ಟಿಲೆಯನೊಳಕೊಂಡು (ರಾಮಾಶ್ವ. ೫೨-೧೯). [ ತಣ್ಗದಿರ + ಅಱೆ$_4$ ]

**ತಣ್ಗದಿರಾಡಿ** (ನಾ). ಚಕೋರ ಪಕ್ಷಿ ; "ಜೊನ್ನವಕ್ಕಿ" (ಚತುನಿ. ಕಿ. I, ೩೮).
[ ತಣ್ಗದಿರ್ + – ಆಡಿ$_1$ ]

**ತಣ್ಗದಿರ್ಗಲ್**, ತಂಗದಿರ್ಗಲ್ (ನಾ).=ತಣ್ಗದಿರಱೆ: ಪೊಳೆವ ತಣ್ಗದಿರ್ಗಲ್ಲ ಪಸೆಯೊಳೇಳಿಲೆವಾಳೆಯೆಳೆಯೆಲೆಯ ಪಚ್ಚಡಿಸಿ . . . ಕಾಂತೆಯ ಮಲಂಗಿಸಿ (ಪದ್ಮರಾ. ೮-೯೨) ; ತಲೆವೆಱ ಸಜ್ಜೆವನೆಯ ತಣ್ಗದಿರ್ಗಲ್ಲ ಮೆಲ್ವಾಳುಗೆಯಂ ಸೋಂಕೆ ಕರಗಿ ಸೂಸೆ (ಸೌಂದಪು. ೭-೧) ; ತಳಿರೆಲೆ ಬಿಜ್ಜಳ ತಣ್ಗದಿರ್ಗಲ್ . . . ಬೆಳವನ್ನದಿನಾಳಿಯರೆಳಸಿ ಕರಂ ಸತ್ಕರಿಸಲು (ಜಯನೃ. ೪-೪೦) ; ಮೆಱವ ತಣ್ಗದಿರ್ಗಲ್ಲ ಮಂಟಪದೊಳ್ . . . ಸಂಭ್ರಮದೆ ಕುಳಿರ್ವಟ್ಟಣಾಗಿಯೊಡನೆ ಪಸೆನಿಂದು (ಭಾವಚಂ. ೯-೫೭). **ತಂಗದಿರ್ಗಲ್** : ಕಂಗೊಳಿಪ ಸೋಪಾನದಂತರಂಗಳೊಳೆಸೆವ ತಂಗದಿರ್ಗಲ್ಲ ಪುತ್ಥಳಿಗಳೋ (ಚಬಪು. ೪೫-೬೫); ತಂಗದಿರ್ಗಲ್ಲ ಗಹ್ವರದ ಚಂದಳಿವಾಸಿನೊಳತ್ತ ಮಿತ್ತ ಚೆಲ್ವಿಂಗೆಡೆಯಾಗಿ ಸೂಸಿದರಲಂ (ಶಬಶಂ. ೧-೫೦). [ ತಣ್ಗದಿರ್ + ಕಲ್$_3$ ]

**ತಣ್ಗದಿರ್ವಕ್ಕಿ**, ತಂಗದಿರ್ವಕ್ಕಿ, ತಣ್ಗದಿರವಕ್ಕಿ (ನಾ). ಬೆಳುದಿಂಗಳ ಹಕ್ಕಿ; ಚಕೋರ ಪಕ್ಷಿ ; ಜೊನ್ನವಕ್ಕಿ : "ಜೊನ್ನವಕ್ಕಿ, ತಣ್ಗದಿರ್ವಕ್ಕಿ – ಈ ೨ ಚಕೋರಂ" (ಕಶಸಾ ೧೧-೨೦೨) ; ತಣ್ಗದಿರ್ವಕ್ಕಿ ಮೊಗವಿಟ್ಟು ನಭವ ನೋಡೆ (ರೇವಣ. ೬೪-೧೭). **ತಂಗದಿರ್ವಕ್ಕಿ** : "ತಂಗದಿರ್ವಕ್ಕಿ ಜೊನ್ನದ ಪಕ್ಕಿಯೆನೆ ಚಕೋರಂಗಳ ಪೆಸರ್" (ಕಬ್ಬಿಗಕೈ. ೨೦) ; "ಜೀವಂಜೀವ – ತಂಗದಿರ್ವಕ್ಕಿ" (ಬಾಹಟೀ. ೨-೬-೩೫ ವ). **ತಣ್ಗದಿರವಕ್ಕಿ** : "ತಣ್ಗದಿರವಕ್ಕಿಯೊಡನದು ಚಕೋರಾಖ್ಯೆಯಕ್ಕು" (ಕಶರ. ೪೨).
[ ತಣ್ಗದಿರ್ + ಪಕ್ಕಿ$_1$ ]

**ತಣ್ಗದಿರ್ಪೊದಱ್** (ನಾ). ತಂಪಾದ ಕಿರಣಗಳ ಸಮೂಹ : ತಿಂಗಳ ತಣ್ಗದಿರ್ಪೊದಱೊಳ[ಪಾಠಾಂ. ಬಸ]ಪಾಂಗಚ್ಛವಿ ಸೆಣಸೆ ತಂದು ತಲೆವಾಗಿಪ ಪೊಲ್ . . . ಅಮರಾಂಗನೆ ಚಾಮರಮನಿಕ್ಕಿದಳ್ (ಅನಂಪು. ೪-೮೩).
[ ತಣ್ಗದಿರ್ + ಪೊದಱ್ ]

**ತಣ್ಗರಗ**, ತಂಗರಗ (ನಾ). ತಂಪಾದ ಕೊಡ ; ಶೀತಲ ಕಲಶ: ತಣ್ಗರಗದ ನೀರ್ವೆರಸು ಕೆಲದೊಳಿರ್ದ ಕೆಳದಿಯರನಟ್ಟುವುದುಂ (ಪಂಪಾಮಾ. ೭-೧೦೭ ವ); ಅಱವಟ್ಟಗೆಯೊಳ್ ಕಡುಗೋಡುವೆತ್ತ ತಣ್ಗರಗವನೆತ್ತಿ ನೀರೆಱೆಯೆ (ಜಗವಿ. ೦೭-೭೯) ; ಹಗಲಿನೊಳು ತಂದ ಪೊಸನೀರನಾಕ್ಷಣದೊಳಗೆ ಮಿಗೆ ಸೋದನೆಯ ಮಾಡಿ ತಣ್ಗರಗ[ಪಾಠಾಂ. ತಂಗರಗ]ದೊಳು ತುಂಬಿ (ಸೂಪಶಾ. ೨-೪೩) ; ತಣ್ಗರಗದ ನೀರಿಂದ ತೊಳೆದಾನನ ಕರಚರಣಂಗಳನು (ಕುರಾಸಾಂ. ೩೬-೫) ; ಕುಳಿರ್ವಾಲಿನೀರನಬಳಾವಳಿ ತಣ್ಗರಗದೊಳೆ ತೀವಿ ಪಥಿಕರ್ಗೆಱಗುಂ (ವೃಷವಿ. ೪-೨೫). **ತಂಗರಗ** : ತಂಗರಗದಿಂ ಶೈತ್ಯೋದಕಮಂ ಕುಡಿಯಲೆಱವುತ್ತ (ಪುಣ್ಯಾಸ್ರ. ೨-೨೦ ವ) ; ತಂಗರಗದ ತಿಳಿನೀರನಂಗದ ಮೇಲೆ ತಳಿವುತಿರಲು (ಪ್ರಭುಂಚ. ೪-೧೩) ; ತನಿವಣ್ಣ ಹೊಱಗಳಿಂ ತಿಳಿದ ಜಲಪೂರ್ಣ ವಹ ತಂಗರಗದಿಂದಲಾಭರಿತ ಚಂದ್ರಾನನೆಯರಿಂ . . . ನಿರ್ಮಳ ವಸಂತಂ ಸಹಿತ ನಡೆದು ಪೊಬಿವೊಳಲ ಬನವೊಕ್ಕು ಬರೆ (ಚೀರಮ. ೫-೨೨).
[ ತಣ್$_2$ + ಕರಗ ]

**ತಣ್ಗಲ್**, ತಂಗಲ್, ತಂಗಲ್ಲು (ನಾ). ಚಂದ್ರಕಾಂತ ಶಿಲೆ : "ಸಸಿಗಲ್, ತಣ್ಗಲ್–ಈ ೨ ಚಂದ್ರಕಾಂತಂ" (ಕಶಸಾ. ೪-೫೩). **ತಂಗಲ್** : ಮಿಸುಪ ಪೇಡಾಕುಳಿಯ ಕುಂಕುಮರಸದ ಕತ್ತುರಿಗೆಸರ ತಂಗಲ್ಕೊಸರ್ವ ಪನ್ನೀರುಗಳ . . . ಓಕುಳಿಯಾಡಿದರು (ಅನಂರಾ. ೧-೨೩-೩೦). **ತಂಗಲ್ಲು** : ಒಸರಲಾ ತಂಗಲ್ಲು ಕರಗಾದ ಜಲ ತಣ್ಣಸದೋಱ ಶ್ರಮವಡಗಿಪುದು (ಕಂಪವಿ. ೬-೭೬). [ ತಣ್$_2$ + ಕಲ್$_3$ ]

**ತಣ್ಣಲಸುಗೂಟಿ್** (ನಾ). ತಣ್ಣನೆಯ ಕಲಸನ್ನ,–ಕಲಸಿದ ಅನ್ನ: ಕೆನೆಗೊಂಡ ಗೆಡ್ಡೆಮೊಸರಂ ಸುರಿದೇಲೆಯ ಚೂರ್ಣವಿಕ್ಕಿ . . . ಪವಣ್ಬುಗೆ ಕಲಸಿರ್ದ ತಣ್ಣಲಸುಗೂಟನಿಳಾಪತಿಗಿತ್ತನಟ್ಟಿಯಿಂ (ಲೀಲಾವ. ೫–೭೦). [ ತಣ್$_2$ + ಕಲಸುಗೂಟಿ್ ]

**ತಣ್ಣಳಸ** (ನಾ). = ತಣ್ಣರಗ: ತಾವರೆಯ ಕೊಡೆಯೆಲೆಗಳಿಂ ಮುಚ್ಚಿದ ಪಚ್ಚೆಯ ಪವಳದ ಪದ್ಮರಾಗದ ಪಳುಕಿನ ತಣ್ಣಳಸಂಗಳುಮಂ (ಕಾದಂಬ. ೨೦೬); ಪಱಿಪಡೆ ಸೇದೆ ಪಿಂಗೆ ತೃಷೆ ತಣ್ಣಳಸಂಗಳನೆತ್ತಿ ನಿಂದು ನೀರೆಱೆವ ಚಳಲ್ಲತಾಂಗಿಯರ್ (ಅನಂಪು. ೧–೯೩). [ ತಣ್$_2$ + ಕಳಸ$_1$ ( = ಕಲಸ) ]

**ತಣ್ಗಾಚು** (ನಾ). ಹಿತಕರವಾದ ರಂಚಿಯುಳ್ಳ ಕಾಚು: ಬೆಳ್ಳೆಲೆ ಕ್ರಮುಕ ತಣ್ಗಾಜ[ಚ]ನಂ[ಪಾಠಾಂ. ಮೊದಲಾದಂ]ಗಡಿಯರೆ (ಅಬ್ಬಲೂ. ೩–೭೫). 'ತಂಗಾರ' ಪರಾ. [ ತಣ್$_2$ + ಕಾಚು$_1$ ]

**ತಣ್ಗಾಲ್** (ನಾ). = ತಣ್ಗಾಲುವೆ: ಸೊಕ್ಕೆಱೆದರ್ ಬೀಟ್ಗಿ ಕಾಮನ ಕೂರಂಬಿನ ಕೋಳ್ಗೆ ಸುಗ್ಗಿ ಪೊಸವೆಳ್ದಿಂಗಳ್ ಬನಂ ಬಂದ ಮಾವಿನಿತುಂ ತಣ್ಣದುವಕ್ಕೆ ತಂಬೆಲರ್ಗಳಿಂ ತಣ್ಗಾಲೊಳೆಂದೊರ್ವಳೆಚ್ಚನೆಯಾಟಂ ಸತಿ ಬೇಟದೇವತೆಗೆ ಪಾನೋನ್ಮತ್ತೆ ನಿಂದಾಡಿದಳ್ (ಅನಂಪು. ೮–೩೦). [ ತಣ್$_2$ + ಕಾಲ್$_2$ ]

**ತಣ್ಗಾಲುವೆ** (ನಾ). ತಂಪಾದ (ನೀರಿನ) ಕಾಲುವೆ: ನೀಲದ ನೆಲಗಟ್ಟು ಪರಿವೇಷ್ಟಿಸಿರ್ದ ತಣ್ಗಾಲುವೆ ತಳಿರ್ವಾಸಿನಲಿ ಮೂಲೋಕಮೋಹನರನ್ನೆಯ ಸೈಪಿಡೆ (ಮೋಹತ. ೨೮–೧೩). [ ತಣ್$_2$ + ಕಾಲುವೆ (<ಕಾಲ್ವಾಯ್) ]

**ತಣ್ಗಾಳಿ,** ತಂಗಾಳಿ (ನಾ). ತಂಪಾದ ಗಾಳಿ: ಗಂಧೋದಕಮಂ ಮೇಲೆ ತಳಿದು ತಣ್ಗಾಳಿಯಂ ವಿಗುರ್ವಿಸಿ ದೇಹಕ್ಕಾಪ್ಯಾಯನಂ ಮಾಡೆ (ಪದ್ಮಾರಾ. ೫೬–೧೩); ಎಲೆ ತಣ್ಗಾಳಿಯೆ ನೀನೇಕಲೆದಪೆ (ಕಬ್ಬಿಗಕಾ. ೬೫): ಆಳಿಯರ್ ಬೀಸುವ ಚಮರಾಲವಟ್ಟ ತಣ್ಗಾಳಿಯಿಂದವಳೊಡಲ್ಗಿಚ್ಚು . . . ಭಡಾಳಿಸಿತು (ಮೋಹತ. ೨೭–೬೨). **ತಂಗಾಳಿ:** ತಂಗಾಳಿಯುಂ ತಿಂಗಳುಂ ಬನಮುಂ ಬೆಂಬಲಮಾಗಿ ತೀರ್ಚವೆ ಗಡಂ ಕೊಂಡುಗ್ಗಿಯಂ ಸುಗ್ಗಿಯೊಳ್ (ಅಜಿಪು. ೬–೨೮); ಬಡತನದೊಳ್ ಸಿರಿ ಮೆಯ್ ಬೆಮರ್ವೆಡೆಯೊಳ್ ತಂಗಾಳಿ ಮರ್ವು ಪರ್ವಿದ ಸಮಯಕ್ಕುಡುಪೋದಯವೆಂಬಂದದ ಗಡಣಿಸಿದುದು ಸುತನ ಬರವು ಬಯಸುವ ಪದದೊಳ್ (ಚಂದ್ರಪು. ೬–೯೨); ಪುಳಿನಕ್ಕೆ ತಂಗಾಳಿಗೆಸೆವ ದೀಹದ ಮೃಗಾವಳಿಗೆ ಬೆಱಗಾಗುತ್ತ ನಡೆತರುತ್ತ (ಹಡಕಾ. ೫–೫೬): ಆಗ ದಟ್ಟವಾಗಿ ಮೋಡಗಳು ಕವಿದುಕೊಂಡು ತಂಗಾಳಿ ಬೀಸಲಾರಂಭವಾಗಿತ್ತು (ರಾವಿಜ. ೨೩). [ ತಣ್$_2$ + ಗಾಳಿ$_1$ ]

**ತಣ್ಣೂಳ್** 'ತಣ್ಣೂಟಿ್' ನೋ.

**ತಣ್ಣೂಟಿ್,** ತಂಗಳು, ತಂಗಟಿ್, ತಂಗುಳು, ತಂಗುಂಟಿ್, ತಂಗೂಳು, ತಂಗೂಟಿ್, ತಣ್ಣೂಳ್ (ನಾ). ೧. ತಣ್ಣಗಾದ ಅನ್ನ; ಆರಿದ ಅನ್ನ: ತಣ್ಣೂಟಿಂ ಪಡವಿನೊಳಿಲೆಗಟ್ಟಿ ಮುಟ್ಟುಪಡೆದಱುಸುವುದೇ (ಲೀಲಾವ. ೨–೧೧೫). **ತಂಗಳು:** ೧. ಇದ್ದ ತಂಗಳು ನನಗಿಕ್ಕಿ ನಿನಗೆಂದೆಂದಿಗೂ ಹಸಿವಿಲ್ಲದ ಹಾಗೆ ಮಾಡುತ್ತೇನೆ (ಗಾದೆ). ೨. (ಆಹಾರ ಪದಾರ್ಥಗಳ ವಿಷಯದಲ್ಲಿ) ಆರಿದುದು; ಮಾಡಿ ಬಹಳ ಹೊತ್ತಾದುದು: ತಂಗಳು ಎರಡು ಮುದ್ದೆಗಳಿವೆ (ಡಂಗುಳ್ಳ. ೧೭) ೩. ತಂಗಳೂಟ: ಬೆಳಗ್ಗೆ ಎದ್ದು ಸ್ನಾನ, ಶಿವಪೂಜೆ, ತಂಗಳು ತೀರಿಸಿಕೊಂಡು (ನಾಲ್ಕುಮು. ೩೪). ೪. ಹಳೆಯದು; ಹಳಸಲಾದುದು; ಹೊಸತನವಿಲ್ಲದುದು: ಹೋಗಲಿ ಆ ಹಳಬರ ತಂಗಳು – ಈ ನಿನ್ನ ಹಿರಿಯರೊಳಗೆ ಈಗ ಯಾರಿದ್ದಾರೆ? (ನಡದಾ. I, ೪೪೫). 'ತಂಗಳುತತ್ತ್ವಜ್ಞಾನ' ಪರಾ. **ತಂಗಟಿ್:** ೧. ತಂಗಟಲ್ಲು, ಕದನ್ನಮಲ್ಲು, ಪೂರಣಗಡುಬುಂಟು (ರಾಮಾಶ್ವ. ೨೩–೨೨). **ತಂಗುಳು:** ೧. ಭಂಗಬಟ್ಟುಂಬ ಬಿಸಿಯನ್ನಕ್ಕಿಂತಲೂ ತಂಗುಳವೇ ಲೇಸು (ಸರ್ವಜ್ಞ. ೧೫೩೪). ೨. ಶೈತ್ಯವಾದ ಜಲಪಾನದಿಂದಲೂ, ತಂಗುಳು ಅನ್ನವನ್ನುಂಬುವುದರಿಂದಲೂ . . . ಬಿಕ್ಕುಳನ್ನುಂಟುಮಾಡುವುದು (ಸಕವೈ. ೨೧೦); ಮುಂದುಕಿ ಬಲು ಬುದ್ಧಿವಂತೆ . . . ಅವನಿಗೆ ಬೆಚ್ಚಾಗಿ ತಂಗುಳು ಹಾಕಿದಳು (ಪಂಚಾಮ್ಮ. ೫೬). **ತಂಗುಟಿ್:** 'ತಂಗುಟ್ಟಿಂಡಿರಿಕ' ಪರಾ. **ತಂಗೂಳು:** ೧. ಬಿಸಿಗೂಡಿ ತಂಗೂಳುಣಬೇಡ (ಸರ್ವಜ್ಞ. ೨೦೦೦). ೨. ಮುಂಜಾವದಡಿಗೆ ಸಂಜೆಗಾಗಲೇ ತಂಗೂಳು (ನೆಲಮು. ೩೨–೧೪). **ತಂಗೂಟಿ್:** ೧. ಉಣಲಱಿಯಂ ತಂಗೂಟಂ ಗುಣಮುಳ್ಳ ಗೃಹಸ್ಥನೆಂದೊಡಿಂ ತಪಸಿಗೆ ಪೇಟುಣಲಕ್ಕುಮೆ ತಂಗೂಟಂ (ಸಮಪು. ೧೪–೬೪). **ತಣ್ಣೂಳ್:** ೧. ಇಪ್ಪ ಭೋಜನವಮನುಂಡ ವ್ಯೈಸಿರಿಯೆತ್ತ ಖಳವ ಸೆಱೆವನೆಯ ತಣ್ಣೂಳೆತ್ತ (ಶ್ರೀರಾಮ. ೫–೮೫). [ ತಣ್$_2$ + ಕೂಟ$_1$ ]

**ತಣ್ಗೆಸಱ್** (ನಾ). ತಣ್ಣನೆಯ ಕೆಸರು,–ಪಂಕ: ಚಿಗಿದು ಹಾಱಿದ ವಿಹಗೇಶನುಬ್ಬಟೆಗೆ . . . ಕೂರ್ಮನ ದೇಹ ಹುಗಿದುದು ತಣ್ಗೆಸಱೊಳಗೆ (ಮೋಹತ. ೩೬–೪೭). [ ತಣ್$_2$ + ಕೆಸಱ್ ]

**ತಣ್ಗೊಳ,** ತಂಗೊಳ (ನಾ). ತಂಪಾದ (ನೀರಿನ) ಕೊಳ: ತಣ್ಗೊಳದೊಳ್ವಿಜೃಂಭಿಪರಸಂಚೆ (ಉದ್ಭಟ. ೬–೪೩); ಬಿಸಿಲೊಳ್ ಬೇಗುದಿಗೊಂಡವಂ ತಣ್ಗೊಳನಂ ಪೊಕ್ಕಂತೆಯುಂ (ಕಬ್ಬಿಗಕಾ. ೩೨೦); ಚಂದ್ರಕಾಂತ ಕಲ್ಗಟ್ಟಿ ಸೋಪಾನ ತಣ್ಗೊಳದ ಮಧ್ಯದಲಿ . . . ವಿಮಾನಾಂಕನಿರ್ದನೋಲಗದಿ (ಮೋಹತ. ೫–೩೨); ತಣ್ಗೊಳಂ ಕೆಱೆಕಾಲ್ವೆಳಗಳಿಲ್ಲದಿಳೆಯಿಲ್ಲ (ಜೈಮಿಭಾ. ೧೮–೧೩). **ತಂಗೊಳ:** ತಂಗೊಳದೊಳಾಡಿ ತೊಯ್ದು ಮನಂಗೊಳಿಪರ ಸಂಚಿಯಂತೆ (ಉದ್ಭಟ. ೪–೨೯); ಉದಿಸಿತು ಘುಳುಘುಳು ಘುಳುಘುಳು ಧ್ವನಿ ತಂಗೊಳದೊಳು ತನುತಾಪದಿಂದೆ (ಮೋಹತ. ೯–೪೨); ಎಳನನೆತೀವಿ ತೋರ್ಪ ಮೊನೆಮಲ್ಲಿಗೆ ತಾವರೆ ತೀವಿ ತೋರ್ಪ ತಂಗೊಳಂ (ರಾಜಶೇ. ೨–೩೭). [ ತಣ್$_2$ + ಕೊಳ$_2$ ]

**ತಣ್ಗೊಳ್ಳು** (ಕ್ರಿ). ತಂಪಾಗು; ಶೀತಲವಾಗು: ದಕ್ಷಿಣದಿಕ್ಕಿನಿಂದ ಮೃದು ಮಧುರವಾಗಿ ಬೀಸುತ್ತಿದ್ದ ತಣ್ಗೊಂಡ ಮಂದಮಾರುತದಿಂದ (ದೇವಿಚಾ. ೫೦). [ ತಣ್$_2$ + ಕೊಳ್ಳು$_1$ (<ಕೊಳ್$_1$) ]

**ತಣ್ಗೋಡು** (ಕ್ರಿ). ತಂಬ ತಂಪಾಗು: ತಣ್ಣರಗದ ತಣ್ಗೋಡುವಾಲಿನೀರಂ ಆರ್ಪನಿತಂ ಕುಡಿದು (ಧರ್ಮಾಮೃ. ೧–೧೫೨). [ ತಣ್$_2$ + ಕೋಡು$_1$ ]

**ತಣ್ಗೊಡರ್** (ನಾ). ತಂಪಾದ ಬೆಳಕನ್ನು ಬೀರುವ ದೀಪ; ಹಿತಕರವಾದ ದೀಪ: ಬೇಱದೊಂದು ಬಗೆಗಿಕ್ಕಿದ ಟಕ್ಕೆನೆ ವಕ್ಕೆದೊಂದು ತಣ್ಗೊಡರೆ[ಪಾಠಾಂ. ಕಣ್ಗೊಡವೆ]ನೆ ನೋಟ್ಟಿ ನೋಟಕರ ಕಣ್ಗೊಳಗಾದುದು (ಪಂಪರಾಮಾ. ೩–೩೯); ರನ್ನದ ತಣ್ಗೊಡರ್ ಮಳಯಜಂ ಕಸ್ತೂರಿ ಕಾಶ್ಮೀರಮೆಂಬಿವಱಿಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುದು (ಜಗವಿ. ೧೦–೪೮); ಎಳವೆಱೆಯಂತೆ ಮಾಣಿಕದ ತಣ್ಗೊಡರಂತೆ . . . ತಳತ್ತಳಿಪಂಗಕಾಂತಿಯುಂ ತಳೆದೆಸೆದಿರ್ಪ ಬಾಲಕನ ಮುಗ್ಧಮುಖೇಂದು ವನಂದು ನೋಡಿ (ಪುಷ್ಪಪು. ೪–೩೮); ಮುಂಜೆರಂಗು; ತಣ್ಗೊಡರ್ (ಶಮದ. ೭೫ ಪ್ರಯೋ). [ ತಣ್$_2$ + ಸೊಡರ್ ]

**ತಣ್ಣಗಮ್ಮ** (ನಾ). ಶೀತಕರ; ತಂಪನ್ನುಂಟು ಮಾಡುವವನು; ಚಂದ್ರ: 'ತಣ್ಣಗಮ್ಮಂದಲೆಯ' ಪರಾ. [ ತಣ್$_2$ + ಕಮ್ಮ$_3$ ]

**ತಣ್ಣಗಮ್ಮಂದಲೆಯ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿರುವವನು; ಶಿವ: ತಣ್ಣಗಮ್ಮಂದಲೆಯ ನಿನ್ನನಿತ್ತುಂ ನಮಗೆ ಕೆನ್ನವಿತ್ತುಂ (ಪ್ರಭುಪು. ೩–೧೧೨). [ ತಣ್ಣಗಮ್ಮ + ತಲೆ$_1$ + – ಅ$_7$ ]

**ತಣ್ಣಗೆ$_1$** (ನಾ). ತಂಪನ್ನು ಬೀರುವ ನಗೆ; ಉಲ್ಲಾಸಕರವಾದ ನಗೆ; ಸುಖ ತರಂವ ನಗೆ: ಬಿಸಿನಗೆ ಯಾವುದು ತಣ್ಣಗೆ ಯಾವುದು ಹುಸಿನಗೆ ಮುಗುಳು ನಗೆಗಳು . . . ಎಂತಿಹುವೆಂದು ನಸುನಗುತವಳಂ ಪಾಡಿದಳು (ಭರತ. ೧೧–೩೦). [ ತಣ್$_2$ + ನಗೆ ]

**ತಣ್ಣಗೆ₁, ಥಣ್ಣಗೆ** (ಅ). ೧. ತಂಪಾಗಿ ; ಶೀತಲವಾಗಿ : ತಣ್ಣನೆ, ತಣ್ಣಗೆ, ನುಣ್ಣನೆ, ನುಣ್ಣಗೆ (ಶಬ್ದಾನು. ೯೯ ಪ್ರಯೋ) ; ತಣ್ಣಗೆ ಮೊಸರಲ್ಲಿ ಬೆಣ್ಣೆ ಮುದ್ದೆಯಹಾಗೆ ಕಣ್ಣಿಗೆ ಕಾಣುವ ಹುಣ್ಣಿಮೆಚಂದ್ರನ (ಕಎಪು. ೮-೪). ೨. ಸುಖವಾಗಿ ; ಹಾಯಾಗಿ ; ಸಂತುಷ್ಟವಾಗಿ ; ಕ್ಷೇಮವಾಗಿ : ಹೋದವರು ಹೋಗಲಾಗಿ ಇರುವವರನ್ನು ತಣ್ಣಗೆ ಕಾಪಾಡಿಕೊಂಡು ಬಾ ಸ್ವಾಮಿಾ (ಎಸಮ್ಮ. XII, ೧೧ ಅಡಿಟಿ) ; ಆ ಮಹಾತಾಯಿ ನಮ್ಮ ಮಹಾರಾಜರ ಮನೆತನವನ್ನು ತಣ್ಣಗೆ ಇಟ್ಟಿರಲಿ (ಕಳಹು. ೯೮). ೩. ಶಾಂತವಾಗಿ : ಹೆಣ್ಣಿನ ಪುಣ್ಯದೇವತೆ ಪಂಪಾದೇವಿ ತಣ್ಣಗಿರ್ದಡೆ ಸಾಕವಳು ಕಣ್ಣ ಬೇಡಿದರಿತ್ತಪಳು (ಕುರಾಸಾಂ. ೨೩-೪೮) ; ತಾಯಿಹೊಟ್ಟೆ ತಣ್ಣಗೆ ಮಾಡುವ ಸೀರೆಗಳನ್ನಷ್ಟು ಉಡಿಸಿ ಕಳಿಸಿದರೆ ಪಾರಾದನೆಂದು ಕಲ್ಲಪ್ಪ . . . ಓಡಾಡುತ್ತಿದ್ದಾನೆ (ಅಶೋಕ. ೧೪). ೪. ತೆಪ್ಪಗೆ ; ಕೆಲಸಮಾಡದೆ ; ನಿಶ್ಚಿಂತೆಯಾಗಿ ; ನಿಷ್ಕ್ರಿಯವಾಗಿ : ತಣ್ಣಗಿದ್ದರೆ ಮಣ್ಣಾದರೂ ಅಸಾಧ್ಯ (ಗಾದೆ); ಏನಾದರೂ ಕೆಲಸ ಮಾಡು ಯಾಕೆ ತಣ್ಣಗೆ ಕುಳಿತಿರುವೆ? (ರೂಢಿ). **ಥಣ್ಣಗೆ :** ೨. ನಂಮ್ಮಾಲೆ ವಿಶ್ವಾಸಿಟ್ಟು ಥಣ್ಣಗೆ ಕೂಡು ಅಂತ (ಅಶ್ವಮೀ. ೧೦೦) ; ಊರ ಥಣ್ಣಗ ಇರಲಿ ಅಂತ (ನಿಸರ್ಗ. ೧೫೪) ; ಊರ ಥಣ್ಣಗ ಇರತದ (ಗ್ರಾಮಾಯ. ೯೪).

**ತಣ್ಣಗಾಗು**=೧. ಕಾವು ಕಳೆದುಕೊಳ್ಳು ; ತಂಪಾಗು ; ಉಷ್ಣವಳಿ : ಪ್ರತಾಪದೊಳಗೆ ನಂದಿ ಮಿಗೆ ಕುಂದಿ ರವಿ ತಣ್ಣಗಾದನೆನೆ (ಜೈಮಿಭಾ. ೨೮-೫); ಮುಟ್ಟಿದರೆ ಮೈ ತಣ್ಣಗಾಗತೊಡಗಿತ್ತು (ಕಾಲಿಂ.ರ. ೧೭, ಕಥಾಸಾರ). ೨. (ಬೆಂಕಿ, ದೀಪ ಮೊದಲಾದುವು) ನಂದಿ ಹೋಗು; ಆರಿ ಹೋಗು : ಆ ಜ್ವಾಲೆಯು . . . ಜಾಜ್ವಲ್ಯಮಾನವಾಗಿ ನಿಲ್ಲದೆ ಉರಿದು ತಣ್ಣಗಾಯಿತು (ವಾರಾಕ್ಕ. ೨೭). ೩. ಅಡಗು ; ಇಲ್ಲದಂತಾಗು : ಅದನ್ನು ನೋಡಿದ ಮೇಲೆ ಉತ್ಸಾಹವೆಲ್ಲ ತಣ್ಣಗಾಯಿತು (ದ್ರಾವಿವಿ. ೧೪೩) ; ಮಹಡಿಯ ಮೇಲೆ ಗದ್ದಲ ಮತ್ತೆ ತಣ್ಣಗಾಯಿತು (ಪುನರು. ೨೦೯). ೪. ನಿಷ್ಕ್ರಿಯವಾಗು; ಸುಮ್ಮನಾಗು : ಅಲ್ಲಿನ ಸುತ್ತಮುತ್ತಣ ಗಿರಿಚರರು, ವನಚರರು ತಣ್ಣಗಾದರು (ರಾಜಸೂ. ೩೭) ; ಗುಣಗಳನು ತಾವೆಣಿಸಲಾರದೆ ದಣಿದು ಶ್ರುತಿಗಳು ತಣ್ಣಗಾದವು (ರಘುವಂ. ೧೦-೩೩). ೫. ಸಮಾಧಾನಗೊಳ್ಳು ; ನೆಮ್ಮದಿಗೊಳ್ಳು ; ಶಾಂತವಾಗು : ನಾಲ್ಕು ಸೂತ್ರ ಓದಿ ಅರ್ಥಮಾಡಿಕೊಳ್ಳುವುದರೊಳಗೆ ಮನಸ್ಸು ತಣ್ಣಗಾಗುತ್ತೆ (ಹೊಸಕ್ಷ. ೧೭೪). ೬. ಸಾಯು ; ಮರಣಹೊಂದು : ರೋಗಿಗಳೂ ನಿರೋಗಿಗಳೂ ತಣ್ಣಗಾಗುವ ಹೊತ್ತು ಬಂದಂತೆಯೇ (ಸ್ವಾತಿಚಿ. ೩೦೦). **ತಣ್ಣಗಿರು** = ೧. ತಂಪಾಗಿರು : ಬೇಸಿಗೆಯಲ್ಲಿ ಮರದ ನೆರಳು ತಣ್ಣಗಿರುತ್ತದೆ (ರೂಢಿ). ೨. ಹಾಯಾಗಿರು ; ಸುಖವಾಗಿರು : ದುಡಿವ ಬಡವನ ಹೊಟ್ಟೆ ತಣ್ಣಗಿರಲಿ (ನೆಲಮು. ೨೦-೨೨). ೩. ತೆಪ್ಪಗೆ ಇರು ; ಸುಮ್ಮನಿರು : ಯಾವುದಕ್ಕೂ ಉತ್ತರ ಕೊಡದೆ ತಣ್ಣಗೆ ಇದ್ದರೆ ಆಯಿತೆ ? (ರೂಢಿ). **ತಣ್ಣಗೆ ತಣಿ** = ಚೆನ್ನಾಗಿ ತೃಪ್ತಿಯನ್ನು ಹೊಂದು ; ಸಂಪೂರ್ಣವಾಗಿ ತಣಿ : ಧೂಪದ ಕವಲ್ಗೊಗೆಯೊಳ್ ತನಿಗಂಪನುಂಡು ತಣ್ಣಗೆ [ಪಾಠಾಂ. ನ್]ತಣಿದೊಯ್ಯನೊಯ್ಯನಿದಿರುಂ ಬಟಿಯುಂ ನೆಗೆಯುತ್ತಮಿರ್ಪ ತುಂಬಿಗಳ್ (ಪಂರಾಮಾ. ೩-೭೭). 'ತಣ್ಣನೆ' ಪರಾ. [ ತಣ್$_2$ + – ಅಗೆ$_3$ ]

**ತಣ್ಣನೆ, ಥಣ್ಣನೆ** (ಅ). ೧. ತಂಪಾಗಿ ; ಶೀತಲವಾಗಿ ; ತಣ್ಣಗೆ : ತಿಂಗಳ ತಣ್ಣನಪ್ಪ ಕದಿರ್ದೊಂಗಲೊಳಭ್ಯಸಿಸಿತ್ತೊ ಕಾಮಬಾಣಂಗಳೊಳಾದ ಮೋದಿದುದೊ . . . ಮೋಹನಮನಗ್ಗಳ ನಿನ್ನಯ ವಾಕ್ಪ್ರಗುಂಭನಂ (ಚಂದ್ರಪ್ರ. ೧-೫೯) ; ತಣ್ಣನೆ ತೀಡಿತ್ತನಸುಂ ಪ್ರಭಾತಸಮಯಪ್ರೋದ್ಭೂತ ಶೀತಾನಿಲಂ (ಕುಸುಮಾ. ೧-೫೨) ; ಸುಣ್ಣವೆಲ್ಲಂ ತಣ್ಣನಾಗೆ (ವಾಗೀರ. ದೀ. ೩೬೭-೧೪) ; ತಣ್ಣನೆ, ತಣ್ಣಗೆ, ನುಣ್ಣನೆ, ನುಣ್ಣಗೆ (ಶಬ್ದಾನು. ೯೯ ಪ್ರಯೋ). ೨. ಸುಖವಾಗಿ ; ಹಾಯಾಗಿ : ತಣ್ಣನೆ ಲೇಸಾಗಿ ಮುದದಿನುಣ್ಬರ ಬಾಯೊಳ್ ತಿಣ್ಣನೆ ಕಿರ್ಚುಂ ಪುಡಿಯುಂ ಮಣ್ಣುಂ ಪೊಯ್ದಂತು ಮಾಡಿದೈ ದೂರ್ತಿಂದಂ (ಧರ್ಮಾಮೃ. ೯-೧೩೭) ; ಎನ್ನಯ ಪಳ್ಳಿಗೆಯಿತಂದು ತಣ್ಣನಿರು (ಬಸವು. ೧೮-೧೭) ; ಭಕ್ತಿಯ ತಿಣ್ಣದಿಂ ತಲೆವಾಗಿ ಪರಕೆಯ ತಣ್ಣನಾಂತು ಮಗುಳ್ದು ಪುರದೊಳು ಸುಖದೊಳಿರುತಿರ್ದ (ಸಾಳ್ವಭಾ. ೪-೨೪). ೩. ಶಾಂತವಾಗಿ : ಅನುದ್ವಿಗ್ನವಾಗಿ : ಸಾವಿರ ಚೇಳ್ಗಳೊಮ್ಮಿಗಕಟಾ ಕಡಿವ ಯಾತನೆಯ ಸಿಲುಬೆಯಳಲುರಿಯ ತಣ್ಣನೆ ತಳೆದು (ಗೊಲ್ಗೊಥಾ. ೧೨-೨೯೭). **ಥಣ್ಣನೆ :** ೧. ಮುಳುಗಿ ಥಣ್ಣನೆ ತಣಿದು ನಿಂದನು (ಘಟಚ. ೪-೪೧). ೨. ನೀವು ಥಣ್ಣನೆ ಸಿರಿ ಸಹಿತ ಮೃದು ಹಾವಿನಂಕದಲೊಜಗುತ [ಗಲ] ವರನು ದೇವಕಾರ್ಯಕೆ ತಂದೆವಾತ್ಮಜನೆಂಬ ಸಲುಗೆಯಲಿ (ನಿಭಾಗ. ೧೧-೧೧-೩೭).

**ತಣ್ಣತಣ್ಣನೆ, ತಣ್ಣನೆತಣ್ಣನೆ** (ದ್ವಿರುಕ್ತಿ): ಅವ್ಯಯ ಪದಾಂತ ಲೋಪಕ್ಕೆ– ಕಮ್ಮಕಮ್ಮನೆ, ತಣ್ಣತಣ್ಣನೆ (ಶಮದ. ೧೯೩ ಪ್ರಯೋ) : ಕೋಪದಿ ದಿರೊಳೂರ್ವಾನಳಂ ತಣ್ಣತಣ್ಣನೆ (ಜಿನ್ನಕಾ. ೧-೪೧) ; ಮಾವಿನ ಸೊನೆದಂದಲೊಳ್ ನೆನೆದು ತಣ್ಣನೆ ತಣ್ಣನೆ ಬಂದುದುಂದು . . . ಮಾರುತಂ (ಶಬ್ದಾನು. ೯೪ ಪ್ರಯೋ). **ತಣ್ಣನೆ ತಣಿ, ದಣ್ಣನೆ ದಣಿ**=ಸಂಪೂರ್ಣವಾಗಿ ತೃಪ್ತಿಯನ್ನು ಹೊಂದು : ನಾಳಿಕೇರೀಫಳಾಮೃತಾಸ್ವಾದದೆ ತಣ್ಣನೆ ತಣಿದು (ಆದಿಪು. ೧೧-೬೧) ; ಕಣ್ ತಣ್ಣನೆ ತಣಿವಿನವೊಲ್ದು ನೋಡಿ (ಸಮುಪ. ೧-೧೦೪) ; ತಣ್ಣನೆ ತಣಿದಿರೆ ಬನದೊಳ್ ಪಣ್ಣನೆ ತಿನುತಿರ್ಪುವೆಳಸಿ ತರುಚರಕುಳಮುಂ (ಕಾವ್ಯಾವ. ೨೨೨) ; ನಡುಹರೆಯದಿಂದೆಸೆವ ಸಿರಿಯು ನಡೆನೋಡಿ ದಣ್ಣನೆ ದಣಿವ ಕಾಲದೊಳು (ಭಾವಜಿಂ. ೯-೧೫). **ತಣ್ಣನೆಯವನು** = ತಂಪಾಗಿರುವವನು ; ಚಂದ್ರ : ಬಂದನು ಸೋಮನು ಸೊದೆವನಿ ಸೋನೆಯ ಸಿಂಪಿಸಿ ತಣ್ಣನೆಯವನು (ಇಂಚಾಪ. ೧೧೦-೩೪). [ ತಣ್$_2$ + – ಅನೆ$_1$ ]

**ತಣ್ಣನೆಯ, ತಣ್ಣನ್ನ** (ಗು). ೧. ತಂಪಾದ; ತಣ್ಣಗೆ ಇರುವ : ತಣ್ಣನೆಯ ಗಾಳಿ ಬೀಸುತ್ತಿದೆ (ರೂಢಿ). ೨. ಪ್ರಶಾಂತವಾದ : ಗಿಡಮರಗಳು, ಹುಲ್ಲು, ತೊಳೆದ ಹಸಿರುಬಣ್ಣವಾಗಿ ತಣ್ಣನೆಯ ನಗು ನಗುತ್ತಿವೆ (ಬೆತಂಬಾ. ೧). **ತಣ್ಣನ್ನ :** ೧. "ತಣ್ಣಾಳಿಲು – ತಣ್ಣನ್ನ ಉಸುಬು" (ಗಂಗಾಮ. ೧೪೭). [ ತಣ್$_2$ + – ಅನೆಯ$_2$ ]

**ತಣ್ಣನ್ನ** 'ತಣ್ಣನೆಯ' ನೋ.

**ತಣ್ಣಲೆ** (ಕ್ರಿ). ತಂಪನ್ನುಂಟುಮಾಡು ; ತಂಪನ್ನು ಹರಡು : ತಣ್ಣ[ಪಾಠಾಂ. ಣ್ಣ]ಲೆವ ಕೊಳ್ಕೆವಂದವಮಳಿನಂ ಪುಳಿನಂ ನಳಿನಂ ನಿಜಾತಿಯಂ ನೆಲೆವಿಡಿ [ಪಾಠಾಂ. ಗೆಲೆಪಡೆ]ಯಲ್ ಬಳಿಕ್ಕವಳಟಲ್ದು ಬಟಲ್ದು ತೊಟಲ್ದು ಜಾನಿಪಳ್ (ಜಗವಿ. ೧೧-೨೩) ; ಅವಳ ಬಿಸುಸುಯ್ಯ ಬೆಂಕೆಯೊಳ್ ಬೆರಸಿದನಿತಟಿಗೂಳಿ ತಣ್ಣ[ಪಾಠಾಂ. ಣ್ಣ]ಲೆವ ತೆಂಗಾಳಿಯುಂ ನಂಜಿನ ಧಾಳಿಯೆನಿಸಿ (ವರ್ಧಪು. ೪-೫೮ ವ); ಅಲರ್ವಂಡಂ ಮೊಗೆದು ತಳಿಯುತಿರೆ ತಣ್ಣಲರಿರ್ಕಲದ ಪರಿಕಾಲ್ಗಳಿಂ ತಣ್ಣ[ಪಾಠಾಂ. ಣ್ಣೆ]ಲೆವೆಳವಸಲೆಗಳನೆಳಸಿ ಸುಟಿವೆಳೆಯುವಳಂ (ವರ್ಧಪು. ೪-೭೫). 'ತಣ್ಮಲೆ' ಪರಾ. [ ತಣ್$_2$ + ಅಲೆ$_1$ ]

**ತಣ್ಣಲೆಯಿಸು** (ಕ್ರಿ). ತಣಿಸು ; ತಂಪನ್ನುಂಟುಮಾಡು : ನಿಜಕೀರ್ತಿ ಬಂಧುರ ಸುಧಾವರ್ಷದಿಂ ಧರೆಯ ತಣ್ಣಲ[ಲೆ]ಯಿಸಿದನಾ ದಿಳೀಪಂ (ಕುಮುರಾ. ೧-೭೪). [ ತಣ್ಣಲೆ + – ಇಸು$_3$ ]

**ತಣ್ಣಸ, ತಣ್ಣಸು** (ನಾ). ೧. ತಂಪು ; ಶೈತ್ಯ : "ತಣ್ಣಸಮೆನೆ ಶೈತ್ಯಂ" (ಚತುನಿ. ೨೮) ; ಅರಲ್ದನೇಕ ಕೋಕನದವನಂಗಳೊಳ್ ಸುಟಿದು ತಣ್ಣ[ಪಾಠಾಂ. ನ್ನೆ]ಸಮಾಗದೆ ಕೂಡೆ ಬಂದ ಮಾವಿನಪೂಸಪೂವಿನೊಳ್ ಪೊರೆದು ಪೊಣ್ಮಿದ[ಕ]ಂಪು ಮೊಗಂಗಳಂ ಚಳಿಲ್ಲೆನೆ ಕೊಳೆ ಪೊಯ್ಯೆ ತೀಡಿದುದು ತೆಂಕಣಗಾಳಿ ವಸಂತಮಾಸದೊಳ್ (ಪಂಪಭಾ. ೫-೩೪) ; ಪೊದಟ್ದ ಕಣ್ಬನಿಯ ಬಾನಲ ತಣ್ಣಸದೊಳ್ ಪಗಿಲ್ದು ಪಾವಸೆಗೊಳೆ ಕಾರ ತಂದಲೊಳಗುಂದಲೆಯಾಗಿರೆ ನಟ್ಟು ಸೋರ್ವ ಪಾಳ್ಪಸದಿಯ ಪೆಣ್ಣ ಜೋಹದವೊಲೊಪ್ಪಿದಳ್

(ಶಾಂತಿಪು. ೮-೮೮) ; ಸೊಗಯಿಸುವ ಸಕ್ಕರೆಗಳೆಳನೀರ ಕುಯಿದಿಳುಪಿ ತಣ್ಣಸವಾದ ತಾಣದೊಳಗಿರಿಸಿ (ಸೂಪಶಾ. ೨-೩೦) ; ಬೆಂಗೆ ತಣ್ಣಸಮೇಱಲೆಚ್ಚತ್ತು (ಜಿಬಪು. ೧೬-೨೨) ; ರೋಪಾಗ್ನಿ ಕರ್ಣನ ಸಿರಿಮೊಗಮಂ ನೋಡಿದ ಮಾತ್ರದೊಳೆ ತಣ್ಣಸಮನೊಂದಿ ನಲ್ಮೆಯುಂಟಾಗುವುದು (ಭಾರಶಾಂ. ೧-೬). ೨. ಒದ್ದೆ; ಆರ್ದ್ರವಾದುದು : 'ತಣ್ಣಸಗೊಳ್', 'ತಣ್ಣಸವಸ್ತ್ರ' ಪರಾ. ೩. ತೃಪ್ತಿ ; ಸಮಾಧಾನ; ಸಂತುಷ್ಟಿ : ಪುಣ್ಣಮೆಯಾದುದು ಮುಖಚಂದ್ರಮಂಡಲ ತಣ್ಣಸವೆದೆಯೊಳಾದರಿಸೆ ಕಣ್ಣಱಿಯದೊಡೇನು ಕರುಳ್ಪಲ್ಲುದೆಂಬಂತೆ ಚಿಣ್ಣನ ತಾಯಿ ನೋಡಿದಳು (ಮೋಹತ. ೧೩-೨೫) : ಹಣ್ಣೆದುತ್ಸಾಹವಂ ಕೇಳ್ದು ತನ್ನೊಡಲೊಳಗೆ ತಣ್ಣಸಂ ತಳ್ತು ಬಹ ನಿನ್ನ ನಿಜಮಾತೆಯಂ ಕಣ್ಣಾರೆ ಕಾಣ್ಬೆನೆಂತು (ಜೈಮಿಭಾ. ೧೩-೫೬). **ತಣ್ಣಸು :** ೧. 'ತಣ್ಣಸುವುಟ್ಟು' ಪರಾ. ೨. ಚಮರೀಮೃಗಂಗಳ ಸಾರಣೆಯೊತ್ತುಗೊಂಡು ನೆಲನ ತಣ್ಣಸಾಱೆ ತಮ್ಮ ಮೊಗದ ನರೆನವಿರಿನಂದ್ರ್ಪತೆ ಪೋಪ ಗಂಡುಗರಡಿಗಳಿಂ (ರಾಮಾಶ್ವ. ೧೩-೨೬). [<ತಣ್$_2$./ತುಳು.ತಣಸ್, ತನಸ್]

**ತಣ್ಣಸಂದೋರು** 'ತಣ್ಣಸಂದೋಱು' ನೋ.

**ತಣ್ಣಸಂದೋಱು,** ತಣ್ಣಸಂದೋರು, ತಣ್ಣಸದೋಱು (ಕ್ರಿ). ತಂಪುಂಟಾಗು ; ಶೀತವಾಗು : ಮೈಗಳ್ಗೆ ತಣ್ಣಸಂದೋ[ಪಾಠಾಂ. ತೋ] ಱಲಾ ಕೊಳದಿಂದೆ ಪೊಱಮಟ್ಟರು (ಜೈಮಿಭಾ. ೩೦-೧೨). **ತಣ್ಣಸಂದೋರು:** ಮೈಯೆಲ್ಲ ತಣ್ಣಸಂದೋರಿ ಮತಿಗೆಟ್ಟು ಕಾರುವುದುಂ (ಸಕವೈ. ೧೪೯). **ತಣ್ಣಸದೋಱು:** ಒಸರಲಾ ತಂಗಲ್ಲು ಕರಗದ ಜಲ ತಣ್ಣಸದೋಱೆ ಶ್ರಮವಡಗಿಪುದು (ಕಂನವಿ. ೬-೭೭). [ತಣ್ಣಸ + ತೋಱು]

**ತಣ್ಣಸಂಬಡೆ** (ಕ್ರಿ). ತಂಪಾಗು ; ಶೈತ್ಯವನ್ನು ಹೊಂದು : ಹಿಮದಿಂದೆ ತಣ್ಣಸಂಬಡೆದಿರ್ದ ಮಾಗಿಯುಂ ಕ್ರಮದಿಂದೆ ಜಾಱಿಸಿ (ಜೈಮಿಭಾ. ೩೦-೧೭).
[ತಣ್ಣಸ + ಪಡೆ$_1$]

**ತಣ್ಣಸಗಯ್** 'ತಣ್ಣಸಗೆಯ್' ನೋ.

**ತಣ್ಣಸಗಯ್ಯ** 'ತಣ್ಣಸಗೆಯ್ಯ' ನೋ.

**ತಣ್ಣಸಗೆಯ್,** ತಣ್ಣಸಗಯ್ (ನಾ). ತಂಪಾದ ಕಿರಣ ; ಶೀತಲವಾದ ಕಿರಣ : 'ತಣ್ಣಸಗೆಯ್ಯ' ಪರಾ. **ತಣ್ಣಸಗಯ್ :** 'ತಣ್ಣಸಗಯ್ಯ' ಪರಾ. [ತಣ್ಣಸ + ಕೆಯ್$_2$]

**ತಣ್ಣಸಗೆಯ್ಯ,** ತಣ್ಣಸಗಯ್ಯ (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : 'ತಣ್ಣಸಗೆಯ್ಯವಟ್ಟು' ಪರಾ. **ತಣ್ಣಸಗಯ್ಯ :** ಬಿಸುಗಯ್ಯಂ [ಪಾಠಾಂ. ಮ್ಮಂ]ತಣ್ಣಸಗಯ್ಯಂ[ಪಾಠಾಂ. ಮ್ಮಂ]ಪೊಸ ಕಿಸುಬಿಸುಮಯ್ಯಂ ಕಣ್ಣಾದಂ (ಉದ್ಭದೇ. ೧-೨). [ತಣ್ಣಸಗೆಯ್ + – ಅ$_7$]

**ತಣ್ಣಸಗೆಯ್ಯವಟ್ಟು** (ನಾ). ಚಂದ್ರಬಿಂಬ; ಚಂದ್ರಮಂಡಲ: ತಣ್ಣಸಗೆಯ್ಯವಟ್ಟನಮರ್ದಾನನವೇಳಿಸೆ . . . ನಡೆದರ್ಪಳಿಂದಿಯರ್ (ಉದ್ಭಟ. ೨-೬೩).
[ತಣ್ಣಸಗೆಯ್ಯ + ಬಟ್ಟು$_1$ (<ಬಟ್ಟ$_1$)]

**ತಣ್ಣಸಗೊಳ್,** ತಣ್ಣಸುಗೊಳ್ (ಕ್ರಿ). ೧. ತಣ್ಣಗಾಗು : ತಂಪಾಗು. ೨. ಒದ್ದೆಯಾಗು ; ತೇವವಾಗು : ಒಸರ್ವ ಬೆರಲ ಬೆವರ್ವನಿಯಿಂ ತಣ್ಣಸಗೊಂಡ ತಂತಿಗಳನಾಱಿಸುವರ್ ಬಿಸುಸುಯ್ಯಿಂದ ಕಿನ್ನರರ್ ಬೀಣೆಗಳಂ (ಲೀಲಾವ. ೯-೩೦). **ತಣ್ಣಸುಗೊಳ್ :** ೧. ಇನಶಶಿಗಳ್ ಬೆಳಗದಿರೆ ಕಿಚ್ಚು ತಣ್ಣಸುಗೊಳೆ (ಪುಣ್ಯಾಸ್ರ. ೮-೩೯). [ತಣ್ಣಸ + ಕೊಳ್$_1$]

**ತಣ್ಣಸದಳೆ** (ಕ್ರಿ). = ತಣ್ಣಸಂಬಡೆ : ಪುಳಕಾಂಬುವಿನಿಂದ ತನುಲತೆ ತಣ್ಣಸದಳೆಯೆ ನಿದ್ರಾಂಗನೆ ಸರಿಯೆ (ಕಂನವಿ. ೯-೧೯೬). [ತಣ್ಣಸ + ತಳೆ$_1$]

**ತಣ್ಣಸದೋಱು** 'ತಣ್ಣಸಂದೋಱು' ನೋ.

**ತಣ್ಣಸವಸ್ತ್ರ** (ನಾ). ಒದ್ದೆಬಟ್ಟೆ ; ನೆನೆದ ವಸ್ತ್ರ : ಕಳೆದು ತಣ್ಣಸವಸ್ತ್ರಗಳ ಚೀನಾಂಬರಗಳನುಟ್ಟು ಸತಿಯರೊಪ್ಪಿದರು (ಕಂನವಿ. ೨೫-೧೩೪).
[ತಣ್ಣಸ + ವಸ್ತ್ರ]

**ತಣ್ಣಸವಿಡಿ** (ಕ್ರಿ). ತಂಪು ಹಿಡಿ; ತಣ್ಣಗಾಗು : ಒಡನಾಗ ಜಲಕೇಳಿಯೊಳಗೆ ಮೈ ತಣ್ಣಸವಿಡಿಯಲು ಭರದೊಳಗೈದಿ ತಡಿವೆಟ್ಟಿ . . . ಒಪ್ಪಿದರು ಚಲುವೆಯರು (ಕಂನವಿ. ೨೫-೧೩೦). [ತಣ್ಣಸ + ಪಿಡಿ$_1$]

**ತಣ್ಣಸವೆಱು** (ಕ್ರಿ). = ತಣ್ಣಸಂಬಡೆ : ಉಡುವಸನಂಗಳು ತೋಯ್ದು . . . ಕುಡಿತೆಗಣ್ಣಬಲೆಯರುಗಳು ತಣ್ಣಸವೆತ್ತು ನಡುಗಿದರ್ (ಮೋಹತ. ೧೪-೯೧). [ತಣ್ಣಸ + ಪೆಱು$_1$]

**ತಣ್ಣಸಿಗ** (ನಾ). ೧. ತಂಪಾದವನು. ೨. ಜಡಸ್ವಭಾವದವನು; ಆಲಸ್ಯಸ್ವಭಾವದವನು; ಅಲಸಿಗ: ನ ಶೀತಲಃ–ತಣ್ಣಸಿಗನಲ್ಲದೊಂ (ಆಲಸ್ಯನು) (ನೀತಿವಾ. ೧೦-೩೩). [ತಣ್ಣಸ + – ಇಗ]

**ತಣ್ಣಸು** 'ತಣ್ಣಸ' ನೋ.

**ತಣ್ಣಸುಗೊಳ್** 'ತಣ್ಣಸಗೊಳ್' ನೋ.

**ತಣ್ಣಸುವುಟ್ಟು** (ಕ್ರಿ). ತಂಪುಂಟಾಗು ; ಶೈತ್ಯ ಒದಗು : ತಣ್ಣಸುವುಟ್ಟಿ ಬೆಟ್ಟವೇಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ (ಶಂರಾಮಾ. ೭-೧೫೯). [ತಣ್ಣಸು (<ತಣ್ಣಸ) + ಪುಟ್ಟು$_1$]

**ತಣ್ಣೆ,** ಥಣ್ಣೆ (ನಾ). ನೀರು ; ಜಲ : ನೊಂದು ಬಾಯಾಱೆ ತಣ್ಣೀರ್ ತಣ್ಣೆ[ಪಾಠಾಂ. ನ್ನಿಯ]ಎನುತಮಿರೆ (ಶಂಹರ. ದೇ. ೨೫೦-೧೬). **ಥಣ್ಣೆ :** ಥಣ್ಣೆಯೊಳಗೆ ಮುಳುಗಿದರೇನು (ಚಿದಾವ. ೦೩೯-೧).
[ದೇ.॥ ತಮಿ. ಮಲ. ತಣ್ಣ]

**ತಣ್ಣೆತು** 'ತಣ್ಣೆತ್ತು' ನೋ.

**ತಣ್ಣೆತ್ತು,** ತಣ್ಣೆತು (ನಾ). ೧. ತಂಪಾದುದು; ತಂಪು; ಶೈತ್ಯ : "ತಣ್ಣೆತ್ತು ಶೈತ್ಯಮಕ್ಕುಂ" (ಕಶರ. ೧೩). (ಗು). ೨. ತಂಪಾದ ; ತಣ್ಣನೆಯ ; ಶೀತಲವಾದ : ಕೂರಿತ್ತು; ಉದ್ದಿತ್ತು; ನುಣ್ಣೆತ್ತು; ತಣ್ಣೆತ್ತು; ಬಿಣ್ಣೆತ್ತು (ಶಮದ. ೭೭ ಪ್ರಯೋ). **ತಣ್ಣೆತು :** ೧. " ಕೋಡುಂ ಕೊಟ್ಟಮುಂ ತಣ್ಣೆತೆಂದುಂ ಶೈತ್ಯಕ್ಕೆ ನಾಮಂ " (ಕಬ್ಬಿಕ್ಕ. ೨೨) : " ಕುಳಿರು ತಣ್ಣೆತು ಕೋಡು ಕೊಟ್ಟವಿಂತಿವು ಶೈತ್ಯಕಳವಟ್ಟ ನಾಮವಕ್ಕುಂ " (ಕಬ್ಬಮಂ. ೩೭) ; ವಡಬಶಿಖಿ ತಣ್ಣೆತನೆ ಕೋಪಮಂ ತಾಳುವರು (ಸಿದ್ಧರಾ. ೧-೨೦); ಉರಿವ ಬೆಂಕಿಯು ತಣ್ಣೆತಾಗಲಿ (ರಾಮಾಸಂ. ೫-೪-೨೬).

**ತಣ್ಣೆದುವು** (ಬಹುವ) : ಚಂದ್ರಕರಂಗಳಿಂದು ತಣ್ಣೆದುವೆರ್ದೆಗಕ್ಕೆ (ಪಂಪಭಾ. ೫-೧೮). **ತಣ್ಣೆದಂ, ತಣ್ಣೆದೊಂ** = ತಣ್ಣಗೆ ಇರುವವನು ; ತಂಪಾದವನು : ಖರಕರನುಷ್ಣಮಂ ತೊಱೆದು ತಣ್ಣೆದನಪ್ಪೊಡಮಿಂದು ತಣ್ಣನಚ್ಚರಿಯೆನೆ ಬಿಟ್ಟು ತೀವ್ರಕರನಪ್ಪೊಡಂ (ಧರ್ಮಾಮೃ. ೫-೧೯೮) : ಅತಿದೀಪ್ತಿಬೋಧಮಯನಾಗಿ ತಣ್ಣೆದೊಂ ಜನನಿಯುದರದೊಳ್ ರತ್ನಸ್ಮೀಪ್ರತಿಕೃತಿಯೊಳರ್ಕಬಿಂಬ ಪ್ರತಿಬಿಂಬಂ ನೆಲಸಿ ಪೀಡೆಯಂ ಮಾಡುಗುಮೇ (ಶಾಂತಿಪು.೯-೨೦೪). **ತಣ್ಣೆದೆಯಾಗು**=ತಂಪಾದವನಾಗು: ಮೆಚ್ಚಿ ಬರವನಗ್ನಿದೇವಂ ಬೇಡಿಕೊಳ್ಳೆಮೆಂದೊಡೆಮ್ಮನ್ವಯಕ್ಕೆ ನೀನ್ ತಣ್ಣೆದೆಯಾಗೆಂದು ಬೇಡುವುದುಂ (ಪಂಪಭಾ. ೫-೧೦೦ ವ).
[<ತಣ್$_2$]

**ತಣ್ಣೆರ್ಪದಲೆ** (ನಾ). ಒಂದು ಪ್ರದೇಶದ ಹೆಸರು : ಅನ್ತ ಬಂದು ತಣ್ಣೆರ್ಪದಲೆಯ ಪುಣುಸೆಯ ವಾಯವ್ಯನಾ ದೆಸೆಗೆ ಸೀಮೆನೊಕ್ಕಿಯೊಟ್ಟೆಯ (ಎಕ. IX (8), ಬೆಂಗಳೂ. ೧೫೦-೪೨ ; 823). [?]

**ತಣ್ಣೆಸು** 'ತಣಸು$_1$' ನೋ.

**ತಣ್ಣಱಿ** (ಕ್ರಿ). (ತೆಳ್ಳಗಾಗುವಂತೆ) ಒತ್ತು (?) : ನುಣ್ಣನೆಯ ಹಿಟ್ಟನಂಗಯ್ಯ ಸರಿದಟ್ಟದೊಳು ತಣ್ಣಱಿದು[ಪಾಠಾಂ. ತಣಿದು]ಮಡಗಿಯೆಮ್ಮೆಯ ಬೆಣ್ಣೆಯಂ ಕಾಸಿ ಬೇಯಿಸೆ ಸಮುದ್ರಫೇನ (ಸೂಪಶಾ. ೧-೨೩). "ತಟ್ಟು" (ಸೂಪಶಾ. ಟೀಕ). 'ಲತೆಯಿಱು' ಪರಾ. [☞ ಇದು 'ಸಣ್ಣಱಿ' ಎಂಬುದರ ಅಪಲಿಖಿತವಿರಬಹುದು]

**ತಣ್ಣೀರ್**, ತಣ್ಣೀರು (ನಾ). (ತಂಪಾದ) ನೀರು : ಮುನ್ನೀರ್ ಬೆನ್ನೀರೆನೆ ಬೆರಸಲಣ್ಣ ತಣ್ಣೀರೊಳವೇ (ಪಂರಾಮಾ. ೯-೯೨) ; ತಣ್ಣೆಲ್, ತಣ್ಣೀರ್ (ಭಾಷಾಭೂ. ೧೧೪ ಉದಾ) ; ತಣ್ಣೀರ ಕಣಿಕೆಯ ಹೊತ್ತು (ಗುಪ್ತಮಂ. ೧೫-೧೮೭). **ತಣ್ಣೀರು :** ತನಿವಾಲೊಳುಕ್ಕರಿಸಿದಕ್ಕಿ ತಣ್ಣೀರೊಳಗೆ ನೆನೆದಕ್ಕಿ ಯಿವನು ಸರಿಗೂಡಿ ಹಾಲೊಳಗೆರೆದು (ಸೂ ಪ ಶಾ. ೧-೬೦) ; ತಣ್ಣೀರು ಬೇಸಿಗ್ಗೆ ಗುಣ ತೋಱಿತಲ್ಲ (ಪುರಂದ. ೨-೫೭-೫) ; ಸರೋಜಪತ್ರಿಕೆಯ ಪೊಟ್ಟಣದಿ ರಾಜಾಮೃತವೆನೆ ತಣ್ಣೀರ ತಂದಿತ್ತರು (ಮೋಹತ. ೧೯-೫೩) ; ತಣ್ಣೀರು ಆದರೂ ಪುಣ್ಯದಿಂದ ದೊರಕಬೇಕು (ಗಾದೆ).

ತಣ್ಣೀರವನು=(ದೇವಸ್ಥಾನಕ್ಕೆ) ನೀರನ್ನು ತರುವ ಕಾಯಕದವನು (?) : ಕೋವಿಲ್ ತಿರುಮಲೆ ಪೆರುಮಾಳ್ ಕೋವಿಲ್ ತಿರುನಾರಾಯಣ ಪುರ ಮುಖ್ಯವಾದ ಸಕಳಾಚಾರ್ಯರೂ ಸಕಳ ಸಮಯಿಗಳೂ . . . ತಿರುಪಣಿ ತಿರುವಡಿ ತಂಣ್ಣೀರವರು ನಾಲ್ವತ್ತೆಂಟು ಜನಂಗಳು (ಎಕ. II, ೩೪೪-೧೨ ; 1368). [ ತಣ್$_2$ + ನೀರ್$_1$ ]

**ತಣ್ಣೀರು** 'ತಣ್ಣೀರ್' ನೋ.

**ತಣ್ಣೀರೆರಚು** (ಕ್ರಿ). ೧.=ತಣ್ಣೀರೆರೆ. ೨. (ಆಲಂ) ನಿರುತ್ಸಾಹಗೊಳಿಸು: ಲಲಿತ ಬರುವುದಿಲ್ಲವೆಂದಾಗ ಅವರ ಉತ್ಸಾಹದ ಮೇಲೆ ತಣ್ಣೀರೆರಚಿದ ಹಾಗಾಯಿತು (ರೂಪಸ. ೩೩) ; ನೆಕ್ಲದೋವನ ಉತ್ಸಾಹಕ್ಕೆ ತಣ್ಣೀರೆರಚಲು ಪ್ರಯತ್ನಿಸುತ್ತಿರುವಂತೆ ಅವನು ಮೌನವಾಗಿ ಹೊಗೆಯೆಳೆಯುತ್ತ ಕುಳಿತಿದ್ದನು (ಪುನರು. ೫೬೭). ☞ ಇದು ಇಂಗ್ಲಿಷಿನ 'To throw cold water on' ಎಂಬ ಪದಪುಂಜದ ಅನುವಾದವಿರಬಹುದು.

[ ತಣ್ಣೀರು (<ತಣ್ಣೀರ್) + ಎರಚು (<ಎಱಚು) ]

**ತಣ್ಣೀರೆರೆ** (ಕ್ರಿ). ೧. ತಣ್ಣೀರು ಸುರಿ. ೨. (ಆಲಂ) ಸಮಾಧಾನಮಾಡು: ಯುವರಾಜರೆದೆಯ ಸುಡುನೀರಿಗೆ ಒಂದಿಷ್ಟು ತಣ್ಣೀರೆರೆದಿರುವಂತೆ ತೋರಿಸಿ ಕೊಂಡಿದ್ದಾರೆ (ವೀರಬಂ. ೭೫).

[ ತಣ್ಣೀರು (<ತಣ್ಣೀರ್) + ಎರೆ$_1$ (<ಎಱೆ$_1$) ]

**ತಣ್ಣೀರ್ದಳಿ** (ಕ್ರಿ). ತಣ್ಣೀರನ್ನು ಚಿಮುಕಿಸು,-ಸಿಂಪಡಿಸು : ಬಳಿಕ ಸೌಮಿತ್ರಿ ಮಱುಗಿ ತಣ್ಣೀರ್ದಳಿದು ಪತ್ರದೊಳ್ಕೊಡೆವಿಡಿದು . . . ರೋದಿಸಿದನು (ಜೈಮಿಭಾ. ೧೯-೧೭). [ ತಣ್ಣೀರ್ + ತಳಿ$_1$ ]

**ತಣ್ಣುಣುಕ** (ನಾ). ಒಂದು ಬಗೆಯ ಗಿಡ : ತಣ್ಣುಣುಕ, ಅಂಡಿಲು (ಮೃಶಿಗಿ. ೪೯-೯೮೭). [ ? ]

**ತಣ್ಣುಸಿರು** (ನಾ). ತಣ್ಣನೆಯ ನಿಶ್ವಾಸ; ಉತ್ಸಾಹ ಅಥವಾ ಕಾವು ಇಲ್ಲದ ಉಸಿರು : ಅವಳು ತಿರಸ್ಕಾರದ ತಣ್ಣುಸಿರಿನೊಡನೆಂದಳು (ನಿರಾಭ. ೩೦); ನಿನ ಮುಸುಕ ಕತ್ತಲೀಯೊಳಗ ಹೊರಳಿ ಬೆಳ್ಳಿಳಗ ಬಿಡತ ತಣ್ಣುಸಿರು (ನಾದಲೀ. ೫೫-೯). [ ತಣ್$_2$ + ಉಸಿರು$_2$ (<ಉಸಿರ್$_2$) ]

**ತಣ್ಣೆ** (ನಾ). (ಕರಾ) ತಂಗಳನ್ನ ; ನೀರುಹಾಕಿ ಇರಿಸಿದ ತಂಗಳನ್ನ : 'ತಣ್ಣೆಮಡೆ' ಪರಾ. [ ←ತುಳು. ತಣ್ಣನ, ತಣ್ಣನ ]

**ತಣ್ಣೆಮಡೆ** (ನಾ). (ಕರಾ) ತಂಗಳು ; ತಂಗಳನ್ನ : ಅದಕೂ ಇದಕೂ ಬೀಗ, ತಣ್ಣೆಮಡೆಗೂ ಬೀಗ (ರೂಢಿ). [ ತಣ್ಣೆ + ಮಡೆ$_1$ ]

**ತಣ್ಣೆರಲ್** 'ತಣ್ಣೆಲರ್' ನೋ.

**ತಣ್ಣೆಲರ್**, ತಣ್ಣೆರಲ್ (ನಾ). ತಂಪಾದ ಗಾಳಿ ; ತಂಗಾಳಿ : ಅಲರಿಂ ತುಂಬಿಗಳಿಂ ತಣ್ಣೆಲರಿಂ ತುಂಬಿದ ತಿಳಿಗೊಳದಿನೆಸೆವ ಬನಮಂ ಪೊಕ್ಕಳ್ (ಪಂಪಭಾ. ೫-೨); ತಣ್ಣೆಲರೂದುತ್ತಿರಲಾನದರ್ಕೆಳಸಿ ಪಟ್ಟಿರ್ದೆಂ ಶಿಲಾಪಟ್ಟ ದೊಳ್ (ಕಾದಂಉ. ೫೬೨) ; ಮೆಲ್ಲನೆ ತೊನೆಯುತ್ತುಮಿರ್ಪಲೆಯ ತಣ್ಣೆಲರಿಂ ಬೆಮರಾಱಿ . . . ಸುಖಮಂ ಪಥಿಕರ್ ಪಡೆವರ್ (ಚಂದ್ರಪು. ೩-೧೫); ಬಣ್ಣವಳಿಯದ ಪೂಗಳಂ ಕೊಯ್ದು ಬೆಂಡಾಗಿ ತಣ್ಣೆಲರ್ಗೊಡ್ಡಿ ಮೈ ಬೆಮರನಾಱಿಸಿಕೊಂಡು (ಜೈಮಿಭಾ. ೮-೧೪). **ತಣ್ಣೆರಲ್:** ತಣ್ಣೆರಲೆಸಗೆ ಕುಸುಮವರ್ಷಂ ದೊರೆಕೊಳೆ ಸಾಶ್ಚರ್ಯವಾಯ್ತು ಪಂಚಾಶ್ಚರ್ಯಂ (ಅಜಿಪು. ೭-೩) ; ಪತ್ರಿದೆಸೆಟಿ್ಕನೆ ಬಿರ್ಚಿ ತಣ್ಣೆರಲ್ಗೆಡೆದೆಱವಾಗೆ ಪೊಕ್ಕು ಸುಱಿಯುತ್ತಿರೆ (ಚಂದ್ರಪು. ೮-೧೦೩); ಪೊಸ ಬೆಳೆಯಿಂ ಭೂಮಿ ಭೂಮಿಜದಿಂ ತಣ್ಣೆರಲಿಂ ಮಾರ್ಗಂ . . . ಎಸೆಗುಂ ದೇಶದೊಳ್ (ರಾಜಶೇ. ೨-೨೭).

[ ತಣ್$_2$ + ಎಲರ್ ]

**ತಣ್ಣೆಲೆ** (ನಾ). ೧. ತಣ್ಣನೆಯ ಎಲೆ ; ಹಸಿರೆಲೆ : ತಿಕ್ಕಿ ತಣ್ಣೆಲೆಗಳಿಂ ಕಣ್ಗಳನದೊಬ್ಬನಾ ಕಕ್ಕುಗುರಿನೇರ್ಗಳಂ ಸುಯ್ಯಿಟ್ಟು ಸುಗಿದಂ (ಕಾಲೂರ. ೯೮-೧೯೬). ೨. ತಣ್ಣನೆಯ(ಹೂವಿನ) ಎಸಳು,-ದಳ: ಅರಲ್ದ ತಾವರೆಯ ತಣ್ಣೆಲೆಯ ಪಲಗೆಗಟ್ಟ[ಟ್ಟ]ನೋವರಿಗಳೊಳಗಣ ಕಪ್ಪುರ ವಳಿಕಿನಳವಟ್ಟ ಜಗಲಿಗಳ ಮೇಲೆ ಪಸರಿಸಿದ ಕುಸುಮದೆಸಟ ಪಸೆಗಳೊಳಂ (ಚಂದ್ರಪು. ೭-೯೫ ವ). [ ತಣ್$_2$ + ಎಲೆ$_1$ ]

**ತಣ್ಣೆಳಲ್** 'ತಣ್ಣೆಟಲ್' ನೋ.

**ತಣ್ಣೆಟಲ್**, ತಣುನೆಳಲು, ತಣ್ಣೆಳಲ್(ನಾ). ತಂಪಾದ ನೆಳಲು,-ಛಾಯೆ: ಪಿಂಛಾತಪತ್ರಂ ಪುದಿದೆತ್ತಂ ತಣ್ಣೆಟಲ್ಮಾಡುವುದು ಗಡಂ (ಪಂಪಭಾ. ೧೩-೯೮); ರಕ್ತಾಶೋಕ ತರುವಿನ ತಣ್ಣೆಟಲೊಳ್ (ಕಾದಂಪೂ. ೨೩೦); ನಿನ್ನ ಬೆಳ್ಗೊಡೆಯು ತಣ್ಣೆಟಲೊಳ್ ನಿಲಲಾರೊ ಯೋಗ್ಯರ್ (ಪಂರಾಮಾ. ೧೪-೧೯೪) ; ಕಲ್ಪ ಪಾದಪದ ತಣ್ಣೆಟಲಲ್ಲಿ ವಸಂತಲಕ್ಷ್ಮಿವೋಲ್ ನೆಲಸಿದ ಯಕ್ಷಿ (ಅರ್ಧನೇ. ೧-೯) ; ತಣ್ + ನೆಟಲ್ = ತಣ್ಣೆಟಲ್ (ಶಮದ. ೧೫೮ ಪ್ರಯೋ). **ತಣುನೆಳಲು :** ತೊಳಪ ಪಲ್ಲವ ಸತ್ತಿಗೆಯ ತಣುನೆಳಲೊಳ್ (ಸಾಳ್ವಭಾ. ೧೪-೭೫). **ತಣ್ಣೆಳಲ್ :** ಎತ್ತಿ ಸತ್ತಿಗೆಯ ತಣ್ಣೆಳಲೊಳ್ ಬಳೆವಂತು ಮಾಡಿ (ಗಿರಿಕ. ೧-೧೦೭) ; ಮಲ್ಲಿಕಾಮಂಟಪದ ತಳಿರ ತಣ್ಣೆಳಲ ತಿಳಿಗೊಳನ ಪುಳಿನ ಸ್ಥಳದಿ ದಿವ್ಯಲಿಂಗಂ ಮೆಱೆದುದು (ಸಿದ್ಧರಾ. ೨-೧೫) ; ಮುತ್ತಿನ ಸತ್ತಿಗೆಯ ತಣ್ಣೆಳಲೊಳಿತ್ತರದಾಲವಟ್ಟದ ಸೊಗಸಿನೊಳಮುರ್ದು (ಬಸವು. ೫-೪೫) ; ತಳಿತ ತಣ್ಣೆಳಲೊಳಗೆ ಹಾಸಿದ ತಳಿರ ಸಿಂಹಾಸನದ ಸುತ್ತಲು (ಕುವ್ಯಾಅ. ೭೦೩. ೪-೩೦). [ ತ$_2$ಣ್ + ನೆಟಲ್$_1$ ]

**ತಣ್ಣೆಟಿ** (ನಾ). ತಂಪಾದ ಎಳೆ ; ತಣ್ಣನೆಯ ನೂಲು : ಎಳೆದೆನಿಸಿರ್ದ ಪಾವಸೆಯ ತಣ್ಣೆಟಿಯಿಂದಮೆ ನೆಯ್ದ ಸೀರೆ . . . ಕಣ್ಗೊಳಿ ನೆಲಸಿರ್ದ ರಲ್ಲಿ ಜಲದೇವಿಯರಂತೆ ವಿಳಾಸಿನೀಜನಂ (ಕಾದಂಉ. ೪೫೮).

[ ತಣ್$_2$ + ಎಟಿ$_2$ ]

**ತಣ್ಣೈಸು** 'ತಣಿಸು$_1$' ನೋ.

**ತಣ್ತೊಡಲ್** (ನಾ). ತಂಪಾದ ಒಡಲು,-ಬಸಿರು; ಪ್ರಸನ್ನವಾದ ಶರೀರ: ತಿಂಗಳ ಬಾಲಸಂ ಪಡೆದ ತಣ್ತೊಡಲಿಂದಿರೆಯಿರ್ಪ ತೌರು . . . ಎಂದೆನಿಸಿರ್ದುದಾ ಕಡಲ್ (ಕವಿಜ. III, ೫೨ ಹಾಲಾಸ್ಯಮಾಹಾತ್ಮ್ಯ).

[ ತಣ್$_2$ + ಒಡಲ್ ]

**ತಣ್ತೊಱೆಗಲ್ಲು** (ನಾ). ತಂಪಾದ ನೀರನ್ನು ಒಸರುವ ಕಲ್ಲು,-ಚಂದ್ರ ಕಾಂತಶಿಲೆ : ತಿಣ್ಣಾವಾದರೆ ತನ್ನ ತಲೆದೊಱೆಯುನು ಮುಕ್ಕಣ್ಣನೀ ಬನ ದೊಳಿಟ್ಟಂತೆ ತಣ್ತೊಱೆಗಲ್ಲ ಸೋಪಾನದ ಕೊಳ (ಮೋಹತ. ೨೪-೫೫).

[ ತಣ್$_2$ + ಒಱೆಗಲ್ಲು ]

**ತಣ್ಣೋಟ** (ನಾ). ತಂಪಾದ ನೋಟ ; ಪ್ರಸನ್ನತೆಯಿಂದ ಕೂಡಿದ ದೃಷ್ಟಿ: ನಿಮ್ಮೂರ ಹೆಣ್ಣುಗಳ ಕಣ್ಣೋಟ, ತಣ್ಣೋಟ ಕರ್ಪು, ಬಲು ಕರ್ಪು (ಹೊಂಗಳು. ೦೫-೦೭).

[ ತಣ್$_2$ + ನೋಟ ]

**ತಣ್ತೊಡವು** (ನಾ). ತಂಪನ್ನುಂಟುಮಾಡುವ ಆಭರಣ; ಮೈಗೆ ತಣ್ಣಗೆ, ಹಿತವಾಗಿರುವ ಒಡವೆ : ಕಂಪಿನೊಳ್ ಪೊರೆದ ವಸಂತದೊಳ್ಮುಗುಳ ತಣ್ತೊಡವಂ ತುಡಿಸಲ್ಕೊಡರ್ಚಿದಳ್ (ಕಾದಂಉ. ೭೮೫).

[ ತಣ್$_2$ + ತೊಡವು ]

**ತಣ್ಣಳಿರ್** (ನಾ). ತಣ್ಣನೆಯ ಚಿಗುರು,–ತಳಿರು: ಎಯ್ದೆ ಮುಸುಂಕಿ ನಿಂದ ತಣ್ಣಳಿರ್ಗಳಿನೊಪ್ಪಿ ತೋರ್ಪ ಜಲವುಂಟಪದಲ್ಲಿಗೆ ಬಂದನಾ ನೃಪಂ (ಕಾದಂಉ. ೪೫೮). [ ತಣ್$_2$ + ತಳಿರ್$_2$ ]

**ತಣ್ಪಟಿ** (ಕ್ರಿ). ತಂಪು ನಾಶವಾಗು ; ಶೈತ್ಯವಿಲ್ಲದಂತಾಗು : ಅತುಳತುಷಾರಜಸ್ರಗೃಹವಿಂತಿದಂ ತಾನೆನಿಪಿಂದುಕಾಂತನಿರ್ಮಿತದೆಸೆದಿರ್ಪ ಸೆಜ್ಜೆವನೆ ತಣ್ಪಟಿದುಂ ನೃಪಕಂತುಕಾಯದುದ್ದತ ವಿರಹಾನಲ ಪ್ರಬಲ ತಾಪಕಳಾಪದೆ ಕಾಯ್ದು ಸಂತತಂ ಹುತವಹನಿರ್ಪ ಸೆಜ್ಜೆವನೆಯಂತೆ ಪೊಲಿರ್ದುದು (ಕುಸುಮಾ. ೧೦–೨೦). [ ತಣ್ಪು$_2$ + ಅಟಿ$_1$ ]

**ತಣ್ಪಟ್ಟು** 'ತಂಬಿಟ್ಟು$_1$' ನೋ.

**ತಣ್ಪಿಡಿ,** ತಂಪಿಡಿ (ಕ್ರಿ). ತಂಪಿನಿಂದ ಕೂಡಿರು ; ಶೀತಲದಾಗಿರು : ಪೊಸ ಮಲ್ಲಿಗೆ ಮೆಲ್ಲಗೆ ಕಂಪು ನಾಟಿ ತಣ್ಪಿಡಿದೆಲರೂದೆ . . . , ಗುಣಾರ್ಣವಂ ನೆಟಿಯೆ ನಿಟ್ಟಿಸಿದಂ ಬೆಳಗಪ್ಪ ಜಾವಮಂ (ಪಂಪಭಾ. ೪–೧೧೧). **ತಂಪಿಡಿ :** ಬಿಸಿವಾಣ್ದ ರವಿಯೊ ತಂಪಿಡಿದಿರದ ಚಂದ್ರಮನೊ . . . ಪೇಳೆಂಬ ಸೌಭರಿಮುನಿಪನು (ಜೈಮಿಭಾ. ೧೦–೧೬). [ ತಣ್ಪು$_1$ + ಇಡಿ$_1$ ]

**ತಣ್ಪಿಡು** (ಕ್ರಿ). ತಂಪುಂಟುಮಾಡು : ಕಾಳಿಂದೀಜಲದಿಂದಮೇಂ ತೊಳೆದನೋ ತಣ್ಪಿಟ್ಟನೋ ಕಾರಗಿಲ್ಪೊಳಿಂ ಕತ್ತುರಿಯಿಂದಮಣ್ಪಿಡಿದನೋ . . . ಎಂಬಾಳಾಪಕ್ಕೆಡೆಯಾಗಿ ಮೂಜಗಮದೇನೊಪ್ಪಿತ್ತೊ ಪೆರ್ಮಾರ್ಬಿನಿಂ (ಚಳವಿ. ೬–೧೨). [ ತಣ್ಪು$_2$ + – ಇಡು$_1$ ]

**ತಣ್ಪಿಸು,** ತಂಪಿಸು, ತಂಬಿಸು$_1$, ತಂಬೈಸು, ತವಿಸು, ತವ್ಮಿಸು (ಕ್ರಿ). ೧. ತಂಪುಗೊಳಿಸು ; ತಣ್ಣಗೆಮಾಡು : ತಿಳಿಪೊಸರ ಚೆಲ್ಲುವರ ಸವಿನುಡಿಯ ಹರಕೆಯಿದು ಬೇಗೆಗಳ ತಣ್ಪಿಸುವ ಮಾತು (ನಳ್ಕ. ೩೭–೬). **ತಂಪಿಸು :** ೧. ಬಿಸಿಲಿನ ಬೇಗೆಗೆ ತಲೆಯಾನಿಸಿ ತರುವುಂ ಶ್ರಿತರ ತಂಪಿಸು ವುದೆಲೆ ನೆಳಲಿಂ (ಶಾಕುಂತ. ೬೩–೧೧೭). ೨. ಆರಿಸು ; ನಂದಿಸು: ಪಾವಕ ಮಹಾಬಾಣಮಂ . . . ತೆಗೆದೆಚ್ಚೊಡವನಂದು ಕೈಗೆಡದೆ ಕರ್ಣಾತ್ಮಜಂ ವಾರುಣಾಸ್ತ್ರ ಪ್ರಯೋಗದೊಳದಂ ತಂಪಿಸಿದನು (ಜೈಮಿಭಾ. ೪–೩೭). ತನುವ ನಂಡಲೆವ ತಾಪಾಗ್ನಿಯ ರಘಳವ ಪುಳಕಾಂಬುವಿನಿಂದ ತಂಪಿಸು (ಕಂಸವಿ. ೯–೧೮೫). **ತಂಬಿಸು$_1$ :** ೩. ಆರು ; ತಣ್ಣಗಾಗು : ಬಾಣದ ಮದ್ದನರೆವ ಸಮಯಕೆ ಕಿಚ್ಚು ಮಾಣದೆ ಮನೆಗಳ ಸುಡಲು ಕ್ಷೋಣೀಶ ಸಿದ್ಧರಾಮನ ಪಾದದಲಾಣೆಯಿಡಲು ತಂಬಿಸಿತು (ಅಮುಸಾಂ. ೪–೪೩). ೪. ಕೋಪ, ದುಃಖ ಮೊದಲಾದುವನ್ನು ತಗ್ಗಿಸು ; ಸಮಾಧಾನ ಮಾಡು ; ಶಮನಗೊಳಿಸು ; ಶಾಂತಗೊಳಿಸು : ಬೆಂದೊಡಲ ಬೇಗೆಯವನೇತರದಿ ತಂಬಿಸುವೆಂ (ಸಮ್ಯಕ್ಳ. ೫–೨೨) ; ಆ ಖಗನ ಅತಿಕೋಪವನು ತಂಬಿಸಿ (ನೇಮಿಸಂ. ೧೧–೫೧); ಬಳಲಿದ ಶ್ರಮವನು ತಂಬಿಸುವೆನೆಂದು ಅಳಿದು ರಕ್ಷಕರ ಕಾವಲಿಟ್ಟು (ಚಂದ್ರಹಾ. ೨–೬೪). ೫. ಇಂಗಿಸು; ನಿವಾರಿಸು: ಲಲಿತ ಕರ್ಪೂರ ತಾಂಬೂಲವಂ ತವ್ಮಣಲೊಳಳವಡಿಸಿ ಪುದಿದ ಬೆಮರ್ವನಿಗಳಂ ತತ್‌ಕ್ಷಣಂ ಕಳನ ದೂಳಿಯೊಳೆ ತಂಬಿಸಿ ಮುಷ್ಟಿಯಂ ಬಲಿದು (ಜೆಬಪು. ೧೬–೩೬). **ತಂಬೈಸು :** ೨. ತುರಗಗಳನೋಡಿಸುತ ನಿಲ್ಲಿಸುತ್ತ ನಿಲ್ಲಿಸುವ ತುರುಬಿ ತಂಬೈಸುವರುವಾಳಿಸಿ ಮುರಿವ ಹೋರುವ ಮೆರೆವ ಕುಣಿಸುವ ಚಪಳಗತಿಗಳಲಿ (ಮೂಲರಾ. ೪–೯). **ತವಿಸು :** ೨. ಅಸ್ತ್ರಗಳು ದೇವಲೋಕ ಮನ್ನಿಂದು ಸುಡುತ್ತಿದೆ ಬೇಗೆ ಪರಿಹರಿಸುಯೆನಲಿಂದ್ರನಂದನಂ ತವಿಸಿದನು (ತುರಂಗ. ೩೦–೨೯). ೪. ಹೊಂದಿರುವ ದುಃಖವಂ ತವಿಸಿ (ತುರಂಗ. ೩೪–೬); ಬಳಲಿಕೆಯ ತವಿಸಿ ಮುಂದುರವಣಿಸಿ (ತುರಂಗ. ೭೩–೧೬). **ತವ್ಮಿಸು :** ೪. ಸೊಗಸಿನಿಂ ಬಸವ ನೀಲಾಂಬಿಕೆಯು ಗುರುವರನ ಹಸುವ ತವ್ಮಿಸುವೆವೆನುತ (ಚೋರಬ. ೯–೪೨); ನೀವೀಗ ಕೋಪವ ತವ್ಮಿಪುದು ತವ್ಮಿಪುದು ಗಾಂಗೇಯಯೆಂದನು ನೋಡಿ ಧರ್ಮಜನು (ಜಿನಭಾ. ೩೯–೫೯).

[ ತಣ್ಪು$_2$ + – ಇಸು$_3$ ]

**ತಣ್ಪು$_1$** 'ತಣಿವು$_1$' ನೋ.

**ತಣ್ಪು$_2$,** ತಂಪು$_2$ (ನಾ). ೧. ತಣಿವು ; ಶೈತ್ಯ : "ತಣ್ಪೆಂದು ಶೈತ್ಯಂ" (ಶಶಸಾ. ೨೭–೫೭೮) ; ಕುಡಿಯಲ್ ನೀರುಂಟು ಪದ್ಮಾಕರಾಳಿಗಳೊಳ್ ತಣ್ಪುಗಳುಂಟು ಹೇಮಲತಿಕಾ ಕುಂಜಂಗಳೊಳ್ (ಪಂಪಭಾ. ೭–೩೦) ; ಸಿಂಪಿಣಿಯ ತಣ್ಪಿನಿಂ ಪೂವಲಿಯ ತಿಣ್ಪಿನಿಂ ಮನಂಗೊಳಿಸುವ ಭವನಾಂಗಣದೊಳವತರಿಸಿ (ಕಾದಂಉ. ೪೬೨); ತಣ್ಪಂ ಬಿಟ್ಟು ಬಿಸಿಲಂ ಕಾಯ್ವ ಪಿತ್ತಾಧಿಕನುಮಂ ಪೋಲ್ವೆಂ (ಧರ್ಮಾಮೃ. ೮–೫೦) ; ಕಾಲ ತಳಂ ನೆರೆ ತಣ್ಪಾಗಿರೆ ಸರುಜಂ (ಕಲ್ಯಾಕಾ. ೨–೫೨) ; ಅಪ್ಪಿನಿಂ ತಣ್ಪು ಮಲಯಾದ್ರಿಯಿಂ ಮಲಯಜಂ . . . ಪುಟ್ಟುವಂತಿರೆ ಪುಟ್ಟಿದಂ (ಬಸರ. ೧–೧೨೬) ; ಕಂಪಿಸುವ ನುಣ್ಪಿನ ತಣ್ಪ [ಪಾಠಾಂ. ತಂಪ]ನಾಮೋದಿಸುವ ಸೊಂಪಿನ ಬಿಲ್ವಪತ್ರೆಯ ನಾಗಕೊಯ್ಯುಂದು (ಬಸಪು. ೧೮–೩೦); ರವಿರುಚಿ ತಣ್ಪನೇಟಿ [ಪಾಠಾಂ. ತಣ್ಣಸೆರೆ] ಕೇತಕಿವನಂ ಸುಳಿಯೇಟಿ (ಸಾಳ್ವಭಾ. ೨೭–೧೮) ; ನಿನ್ನ ತಣ್ಪು ಶಾಂತಿ ಸವಿದು ಶಾಂತಿಗೊಳುವೆನು (ವಿಸೀಗೀ. ೬೫–೧೭). ೨. ತೃಪ್ತಿ; ಸಂತುಷ್ಟಿ; ಸುಖ : ವಜ್ರಮಂ ಮುಸೆದಂತೆ ತಣ್ಪು ಮನದೊಳ್ ಪೊಂಪುಳಿಪೋಗೆ (ಶಾಂತಿಪು. ೨–೨೭ ವ). **ತಂಪು$_2$ :** ೧. ಪೂಗೊಳಂಗಳೊಳ್ ತೇಂಕಿ ಪಾಱುವ ಪಕ್ಕಿಗಳೆಱಂಕೆ [ವಿಡಿದುದಿರ್ವ] ತಂಪನೀವ ತುಂತುರ್ವನಿಯ ತುಱುಗಲಮುಂ (ಕಾದಂಉ. ೫೨೬) ; ಬೇವಿನ ಗೊಟ್ಟೆಯೊಳಿನಿದನರ್ಕನೊಳ್ ತಂಪಂ . . . ಘನಮಾಗಿರಲಱಿಸಿ ತೊಱಲುವಾತನೆ ಗಾಂಪಂ (ಧರ್ಮಾಮೃ. ೫–೧೭೦) ; ಮನದ ಕೋಪವ ಹೃದಯದಲ್ಲಿಟ್ಟುಕೊಂಡಿಪ್ಪವನ ಅವನ ಪಾದಕ್ಕೆ ಎನ್ನ ನೊಸಲ ತಂಪ ತಂದು ತಳಿವೆ (ಸಿದ್ಧವ. ಕ. ೧೦೨–೩೪೪) ; ತೆಗೆದುದಗ್ಗದ ತಂಪು ನದಿ ಸರಸಿಗಳ ತಡಿಯಲಿ (ಕುಮ್ಮಾಅ. ೫–೫) ; ದೆಸೆದೆಸೆಗೆ ಬೀರ್ವ ತನಿಗಂಪಿನಿಂ ತಂಪಿನಿಂ . . . ಆ ಕೊಳಂ ಕಣ್ಗೆಸೆದುದು (ಜೈಮಿಭಾ. ೧೫–೯). ೨. ಹೆತ್ತ ನಿನ್ನೊಡಲಿಂಗೆ ತಂಪಿನ ತೆತ್ತಿಗನೊ ಮೇಣ್ ಬಹಳ ತಾಪದ ಮುತ್ತಯನೊ ಕುರುರಾಯನೆಲೆ ಧೃತರಾಷ್ಟ್ರ ಕೇಳೆಂದ (ಕುಮ್ಮಾದ್ರೋ. ೪–೨) ; ಅಕ್ಕತಮ್ಮದಿರೊಬ್ಬರೊಬ್ಬರನೋರಂತೆ ನೆನೆಯದಿದ್ದರೆ ತಂಪೆ ಮನಕೆ (ಇಂಚಾಪ. ೩೨–೪೯). ೩. ನೆಳಲಿನ ತಂಪಾದ ಪ್ರದೇಶ: ದಕ್ಷಿಣದ್ವಾರದ ವೃಕ್ಷದ ತಂಪಿನಲ್ಲಿ ಸ್ವಯಂಜ್ಯೋತಿಯ ಕಂಡೆನಯ್ಯಾ (ಆದವ. ೨೪–೬೯) ; ತಳಿತ ಮರನಡಿಗಳೊಳಗೆಳಲತೆಯ ತಂಪಿನೊಳು . . . ಅಱಸಿದಂ ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿಕಾರ್ಜುನನನು (ಸಿದ್ಧರಾ. ೨–೩೭). ೪. ಹಿಮ ; ಮಂಜು. 'ತಂಪುಬೆಟ್ಟ' ಪರಾ.

**ತಣ್ಪಾಗು, ತಂಪಾಗು**=೧. ತಣ್ಣಗಾಗು: ಪೂಱಗಣ್ಗೆ ಪೋಗಿ ತಣ್ಪಪ್ಪೆಡೆಯೊಳ್ ಪಡುಗುಂ (ಧರ್ಮಾಮೃ. ೧–೧೫೭). ೨. ದುಃಖ ಮೊದಲಾದ ಭಾವನೆಗಳ ಆವೇಗ ಕಡಮೆಯಾಗು : ಶಶಿವದನೆಯ ಮನಸ್ತಾಪ ತಂಪಾದುದು (ಮೋಹತ. ೪–೯೩). **ತಂಪಿನ ಗಿರಿ** = ಹಿಮವತ್ಪರ್ವತ ; ಹಿಮಾಲಯ: ಭಾರತವರುಷವನು ದಾಂಟಿದನು ತಂಪಿನಗಿರಿಯ ತಪ್ಪಲನಿಳಿದನು (ಕುಮ್ಮಾಅ. ೪–೩೫). **ತಂಪಿನ ಬೆಟ್ಟ**=ತಂಪಿನ ಗಿರಿ : ತರಳಾಕ್ಷಿ ತಂಪಿನ ಬೆಟ್ಟದಬಲೆಗೆ ವಿಧಿ ಸದಸ್ಯವ ಕೊಟ್ಟವೊಲು ತನುವೆಳದಳಾ ಮೇನಕಿಯ ಜಠರದಲಿ (ನಿಭಾಗ. ೪–೫–೨).

[ ತಣ್$_2$ + – ಪು$_2$. / ತಮಿ. ತಣ್ಪು ; ಮಲ. ತಣುಪ್ಪು ]

**ತಣ್ಪುಗಂಪು** (ನಾ). ತಂಪಾದ ಸುಗಂಧ ; ಹಿತಕರವಾದ ಪರಿಮಳ : ಪಾದರಿಗಳ ತಣ್ಪುಗಂಪು ಸರಸೀರುಹದೊಳ್ ತನಿಗಂಪು . . . ಬಗೆಗೊಂಡುದು ತದ್ವನದೊಳ್ (ರಾಜಶೇ. ೧೧–೧೯). [ ತಣ್ಪು$_2$ + ಕಂಪು ]

**ತಣ್ಪುಗೂಡು** (ಕ್ರಿ). ಶೈತ್ಯದಿಂದ ಕೂಡಿಕೊಂಡಿರು ; ತಂಪಿನಿಂದ ಬೆರೆತಿರು : ವದನಶಶಿಯ ತಣ್ಪುಗೂಡಿ ಸೌರಭ್ಯದೆ ಪುದುಗಿದ ಮಂದಮಾರುತನ . . . ಸೂಸುವೋಲೊರ್ವ ಚದುರೆ ಬೀಸಿದಳಾಲವಟವ (ಕಂಸವಿ. ೨೪–೮೦). [ ತಣ್ಪು$_2$ + ಕೂಡು$_1$ ]

**ತಣ್ಪುಗೆಯ್,** ತಂಪುಗೈ (ಕ್ರಿ). ೧. ತಂಪನ್ನುಂಟುಮಾಡು : ಕರಿಯ ಕರ್ಬಿನ ಕಾವಿ[ನೆ]ಳ ಮೈಂದವಾಱೆಯೆಲೆಯ ಬಿಜ್ಜಣಿಗೆಗಳಿಂ ಬೀಸಲ್ವೇೞ್ದು ತಣ್ಪುಗೆಯ್ಯೆ (ಪಂಪಭಾ. ೫-೬ ವ). **ತಂಪುಗೈ :** ೨. ಪ್ರಸನ್ನತೆಯುಂಟು ಮಾಡು ; ಸಂತೋಷಪಡಿಸು : ಆದಿದೇವರೆ ಮುನ್ನ ತಂಪುಗೈದನು ದೇವರಾದರಿಸಿದಿರೆಮ್ಮನಿಂದು (ಭರಜ. ೫೮-೮). [ ತಣ್ಪು$_{2}$ + ಕೆಯ್$_{1}$ ]

**ತಣ್ಪುಗೊಳಿಸು** (ಕ್ರಿ). ೧. ತಣ್ಣಗೆಮಾಡು. ೨. ಸಮಾಧಾನಗೊಳಿಸು : ಮನದೊಳುರ್ಕುವ ಮುಳಿಸನೀಜಾತಿಗಿದುಚಿತವೆಂದು ತಿಳಿದು ಮನದೊಳೆ ತಣ್ಪುಗೊಳಿಸಿ (ಚಿಕವಿ. ೬-೨೩೬ ವ). [ ತಣ್ಪು$_{2}$+ ಕೊಳ್$_{1}$ + – ಇಸು$_{3}$ ]

**ತಣ್ಪುದರ್** (ಕ್ರಿ). ತಂಪನ್ನು ತರು ; ತಂಪನ್ನುಂಟುಮಾಡು : ಸತಿಯರ್ ಕರ್ಪೂರ ಪಾಳೀಕೃತ ಸತಿಯರೆನಲ್ ನಲ್ಲರೊಳ್ ತಣ್ಪುದಂದರ್ (ಜಗವಿ. ೧೭-೮೧). [ ತಣ್ಪು$_{2}$ + ತರ್ ]

**ತಣ್ಪುವಡೆ, ತಂಪುವಡೆ** (ಕ್ರಿ). ತಂಪನ್ನು ಹೊಂದು ; ತಣ್ಣಗಾಗು : ತುಹಿನಕರನ ತಣ್ಗದಿರ್ಗಳ ತನಿಸೋಂಕಿನಿಂ ತಣ್ಪುವಡೆದ ತಾರಹಾರಂಗಳೊಳಂ (ಕಾದಂಬ. ೫೭೮) ; ವನದೇವತೆಯುರಮ್ಮತಸಾರವಾರಿಯಂ ಪಚ್ಚೆವರಲ ಕರಗಂಗಳೊಳ್ ತೀವಿ ತೆಂಬೆಲರ ಪೊಯ್ಲಿನಿಂ ತಣ್ಪುವಡೆಯಲೆಂದು ನೆಱೆಪಿದಂತಿರ್ದ ನೀಗಾರ್ಯ ತುಱುಗಲಿಂದೆಱಗಿದ ನಾಳಿಕೇರ ಭೂರುಹಂಗಳುಂ (ಚಂದ್ರಪು. ೧-೧೦೫ ವ). **ತಂಪುವಡೆ :** ಹಂಸಧ್ವಜಂ ನಂದನನನೆಣ್ಣಿಗಾದಿರ್ದ ಕೊಪ್ಪರಿಗೆಯೊಳ್ತಂದು ಕೆಡಹಿಸಲಚ್ಯುತಧ್ಯಾನದಿಂ ತಂಪುವಡೆದನವನಚ್ಚರಿಯೆನೆ (ಜೈಮಿಭಾ. ೧೧ ಸೂಚನೆ). [ ತಣ್ಪು$_{2}$+ಪಡೆ$_{1}$ ]

**ತಣ್ಪುವೀಱು** (ಕ್ರಿ). ೧. ತಂಪನ್ನುಂಟುಮಾಡು. ೨. ನೆಮ್ಮದಿಯುಂಟು ಮಾಡು; ಸುಖ ತರು : ಚಿಂತಿಸುತೆ ಪಲವಂದದೆ ಬಗೆ ನೊಂದು ಹಮ್ಮದಂ ಬೋಗಿರೆ ಪಾರ್ಥಂ ದಯೆಯಿಂದವನಿರ್ದೆಡೆಗಿಂದುಧರಂ ತಳೆದು ತಣ್ಪುವೀಱಿದನಾಗಳ್ (ಶಬಶಂ. ೪-೧೩೬). [ ತಣ್ಪು$_{2}$ + ಬೀಱು$_{1}$ ]

**ತಣ್ಪುವೆಸ** (ನಾ). ತಂಪನ್ನುಂಟುಮಾಡುವ ಕೆಲಸ ; ಶೈತ್ಯೋಪಚಾರ : 'ತಣ್ಪುವೆಸಕೆಯ್' ಪರಾ. [ ತಣ್ಪು$_{2}$ + ಬೆಸ$_{1}$ ]

**ತಣ್ಪುವೆಸಕೆಯ್** (ಕ್ರಿ). ತಂಪನ್ನುಂಟುಮಾಡುವ ಕೆಲಸವನ್ನು ಮಾಡು; ಶೈತ್ಯೋಪಚಾರ ಮಾಡು : ಮಲಯುಸವಿಾರಣೇರಣ ಚಲತ್ತರುಶಾಖೆಗಳೊಮ್ಮೆಗೊಮ್ಮೆ ನೀರೊಳಗೆ ಬಟಲ್ದು...ನಭಂಬರಂ ಮಿಳಿರ್ದಲಂಪಿನ ದಂಪತಿಯಿರ್ಪ್ಪ ಜೊಂಪಮಂ ತಳಿತಳಿದಲ್ಲಿ ತಣ್ಪು[ಪಾಠಾಂ. ಸಾಂಕು, ಗೂಂಕು]ವೆಸಕೆಯ್ವುವು ತೀರವನಾಂತರಾಳದೊಳ್ (ಆದಿಪು. ೧೧-೬೬). [ ತಣ್ಪುವೆಸ + ಕೆಯ್$_{1}$ ]

**ತಣ್ಪುವೆಱು, ತಂಪುವೆಱು** (ಕ್ರಿ). ತಂಪನ್ನು ಹೊಂದು ; ತಂಪಾಗಿರು : ಮರಂಗಳ ಚಿಗುರ್ಗಳಿಂದೊಗೆದೆಲರಿಂ ತಣ್ಪುವೆತ್ತಿರ್ಪ ತೀರಜಲಂಗಳೊಳಂ (ಕಾದಂಪೂ. ೧೧೭) ; ಕಮಲಭವಂ ಲಸತ್ಪರಿಮಳೋತ್ಕರದಿಂ ಕರುವಿಟ್ಟು ಮಾಡಿದಂಗವಿದೆನೆ ತಣ್ಪುವೆತ್ತ ವಿಜಯಾವತಿದೇವಿಯ ಮೆಯ್ (ಕುಸುಮಾ. ೫-೦೨೭). **ತಂಪುವೆಱು :** ಓಪರೊಳ್ನೆರೆದು ವಿರಹಿಗಳ್ಮಲಯಜದ ಘನಸಾರದೊಳ್ತಂಪುವೆತ್ತು (ಜೈಮಿಭಾ. ೮-೫). [ ತಣ್ಪು$_{2}$ + ಪೆಱು$_{1}$ ]

**ತಣ್ಪುವೇಱು** (ಕ್ರಿ). ತಂಪನ್ನು ಹೊಂದಿರು ; ಶೈತ್ಯವನ್ನು ತುಂಬಿಕೊಂಡಿರು: ಕುಕಿಲ್ವ ಪಿಕಾಳಿ ತಣ್ಪುವೇಱಿದ ಸುೞಿಗಾಳಿ (ಪುಷ್ಪಪು. ೨-೨೦). [ ತಣ್ಪು$_{2}$ + ಪೇಱು$_{1}$ ]

**ತಣ್ಪುಳಿಲ್** 'ತಣ್ಬುೞಿಲ್' ನೋ.

**ತಣ್ಪೂಳಿಗ** (ನಾ). ತಂಪನ್ನುಂಟುಮಾಡುವ ಸೇವೆ ; ಶೈತ್ಯೋಪಚಾರ : ವ್ಯೆಮರೆತೊರಗಲಾಕೆ, ಪಿಡಿದೆತ್ತಿ ಕುಳ್ಳಿರಿಸಿ ತಣ್ಪೂಳಿಗವನೆಸಗಿ . . . ಕರ್ಚಿದನ್ ಕಣ್ಬನಿಪೊನಲ್ಗಳಿಂ ಭರತನಾ ರಘುರಾಮನಂಬಿಕೆಯ ಪುಣ್ಯಮಯ ಪದ್ಮಪಾದಂಗಳಂ (ಶ್ರೀರಾಮಾ. ೧೧೬-೧೧೯). [ ತಣ್ಪು$_{2}$ + ಊಳಿಗ (<ಊೞಿಗ) ]

**ತಣ್ಪೆಱೆ,** ತಂಪೆರೆ (ಕ್ರಿ). ತಂಪನ್ನು ಸೂಸು,–ಬೀರು : ಓಡಿದೆನ್ . . . ತಣ್ಪೆಱೆವ ಪೊನಲೆಡೆಗೆ (ಬದ್ಧಶ್ರ. ೩೬-೭೭೩). **ತಂಪೆರೆ :** ತಂಪೆರೆಯಬೇಕಾದ ಎಲೆ, ಹುಲ್ಲಿನ ಹಸಿರು, ಬಿಸಿಯನ್ನೇ ಕಕ್ಕುತ್ತಿವೆ (ಬಿಕಂಬಾ. ೧೧). [ ತಣ್ಪು$_{2}$ + ಎಱೆ$_{1}$ ]

**ತಣ್ಪೇರಿಸು** (ಕ್ರಿ). ೧. ತಂಪನ್ನುಂಟುಮಾಡು. ೨. ತೃಪ್ತಿಗೊಳಿಸು : ಧಾರುಣಿಯಂ ಶಕ್ರಂ ತಣ್ಪೇರಿಪನೊಳ್ಸರಿಯ ಸೂಸಿ ಕೃಷ್ಣಮಹೀಶಂ ಸಾರತರೋತ್ಸರ್ಗಪಯಃಪೂರದೆ ತಣ್ಪೇರಿಪಂ (ನರಜ. ೪೧-೯೦). [ ತಣ್ಪೇರು (<ತಣ್ಪೇಱು) +– ಇಸು$_{3}$ ]

**ತಣ್ಪೇರು** 'ತಣ್ಪೇಱು' ನೋ.

**ತಣ್ಪೇಱು,** ತಂಪೇರು, ತಂಪೇಱು, ತಣ್ಪೇರು (ಕ್ರಿ). ತಣ್ಣಗಾಗು ; ಉಷ್ಣತೆಯನ್ನು ಕಳೆದುಕೊಳ್ಳು : ಸರಳಾಂಗಂ ಮಿಗೆ ಕಂದಿ **ತೋಱೆ** ಕಿವಿಗಳ್ ತಣ್ಪೇಱೆ[ಪಾಠಾಂ. ಗಂಪೇಱೆ] (ಲೋಕೋಪ. ೯-೨೧೨) ; ತಣ್ಪೇಱಿದ ಪಱೆಯಂತೆ ದನಿ ಪೊಱಮಡದೆ (ಧರ್ಮಾಮೃ. ೦-೧೬೮) ; ಸರಸೀಜಾತ ಪಯಃಕಣಪ್ರತತಿಯಿಂ ತಣ್ಪೇಱಿ . . . ತೀಡಿದುದಿಂತು ಜಾಂಬುಕವನೋದ್ಭ್ಯಂಗೀರುತಂ ಮಾರುತಂ (ಕುಸುಮಾ. ೭-೪೫). **ತಂಪೇರು :** ನಿರುತಮೈಶ್ವರ್ಯ ಕೈಸಾರಿದೊಡೆ ಸಂತಸದಿ ಪರಮಶಾಂತಿಯಲಿ ಪೆರ್ಚುವ ಮಾಳ್ಕೆಯಿಂದೆ ಮೈ ತಂಪೇರಿ (ನಪಮೋ. ೧೫-೮). **ತಂಪೇಱು :** ಬೆದಱ ಬಂದಿಗೆ ಸಿಲುಕಿತವನಿಪನದಟು ವಿಕ್ರಮವಹ್ನಿ ತಂಪೇಱಿದುದು (ಕುವ್ಯಾಭೀ. ೧೦-೧೭). **ತಣ್ಪೇರು.** 'ತಣ್ಪೇರಿಸು' ಪರಾ. [ ತಣ್ಪು$_{2}$ + ಏಱು$_{1}$ (<ಏಱು$_{1}$) ]

**ತಣ್ಪೊದವು** (ಕ್ರಿ).=ತಣ್ಪೇಱು: ತಣ್ಪೊದವಿದ ನಿರ್ಝರಾಂಬುಗಳನೊಯ್ಯನೆ ಪೀರ್ದು (ಕಾವ್ಯಾವ. ೭೨೨). [ ತಣ್ಪು$_{2}$ + ಒದವು$_{1}$ ]

**ತಣ್ಬಗೆ** (ನಾ). ಆರ್ದ್ರ ಹೃದಯ ; ಕರುಣೆಯಿಂದ ಕೂಡಿದ ಮನಸ್ಸು : ಕಣ್ಬಡಿಯೆನಲ್ ಗುಣಂಗಳ್ ಪೆಣ್ಬರಿಜಂ ತಳೆದು ತೊಳಪ್ಪುವೆಂಬಂತೆವೊಲೀ ತಣ್ಬಗೆಯ ರಾಣಿಯೊಲವಿಂ ಪಣ್ಬಡೆಗುಂ ಕಲ್ಪಕಲ್ಪ ಸಂಕಲ್ಪಂಗಳ್ (ಚಿಕವಿ. ೩-೭೩). [ ತಣ್$_{2}$ + ಬಗೆ$_{3}$ ]

**ತಣ್ಬನಿ, ತಂಬನಿ** (ನಾ). ತಂಪಾದ ಹನಿ ; ತಣ್ಣನೆಯ ಬಿಂದು; ಮನವೊಲ್ದಾತನ ಗಾಡಿಯಂ ದರವುರಂಗಂಡಾಕೆಗಳ್ . . . ಚಂದನಕಂ ಪಸುರ್ಪೆಸೆವ ಬಾಳ್ದೊಂಪಕ್ಕವೊಂದೊಂದೆ ತಣ್ಬನಿಯೊಳ್ತೋಡಿಸುತಿರ್ಪ [ಪಾಠಾಂ. ಯೊಳ್ಕೂಡಿರಿಸಿರ್ಪ]ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ (ಆದಿಪು. ೧-೭೫) ; ತಣ್ಬನಿಯಂ ಚಂದನಗಂಧಮಂ ಮಲೆಯೆರಲ್ತಂದೀಯೆ ಬಂದತ್ತು ಫಾಲ್ಗುನಂ (ಅರ್ಧನೇ. ೨-೫೬) ; ತದ್ವನದ ಕೊಳಂಗಳೊಳ್ದೆರೆಯಿನುಣ್ಮುವ ತಣ್ಬನಿಯಿಂದೆ ಪಾದ್ಯಮಿತ್ತು (ಚಂದ್ರಪು. ೭-೮೩) ; ಚಂದನದ ಪೊಟ್ಟಣಂಗಳಿಂ ಪಟ್ಟನೆ ಪನಿವ ತಣ್ಬನಿಯ ತಂದಲುಂ (ವರ್ಧಪು. ೫-೬೧ ವ). **ತಂಬನಿ :** ಬೇಗ ಮುಸಗಲಿಂತು ಶಾನೆ ದೂರವೆ ವೃಷ್ಟಿ ತಂಬನಿಗಿಂಬಾಗೆ ತಾನೆ ಮೊಳೆಯದೆ ಸೃಷ್ಟಿ ? (೧೪ವಿಂ. ೧೦೭-೩೧) ; ತೊಳೆವ ಮಳೆಯೆನಿತರಿಂ ಚೆಲ್ವಡೆದುದೀ ಸುಗ್ಗಿ ಕುಳಿರ ತಂಬನಿಯನಿತರಿಂ ಮಿಂದಿರುವುದು (ಕಾಲೂರ. ೧೧೮-೨೪೬). [ ತಣ್$_{2}$ + ಪನಿ$_{2}$ ]

**ತಣ್ಬಸಲೆ** (ನಾ). ತಂಪಾದ ಹುಲ್ಲುನೆಲ,–ಹುಲ್ಲುಗಾವಲು : ಸ್ಮರನೊತ್ತಿದನುಂಡಿಗೆಯಂ ಬಿರುದಿಂಗೀ ಧರೆಯ ಬೆನ್ನೊಳೆನಿಸಿರ್ಪುವು ತದ್ವಿರಹಾರ್ತೆ ಮೆಯ್ಯನಿಕ್ಕಿರೆ ಕರಿಂಕುವೋದೆಡೆಯ ಪಚ್ಚೆ ತಣ್ಬಸಲೆಗಳೊಳ್ (ವರ್ಧಪು. ೪-೫೯). [ ತಣ್$_{2}$ + ಪಸಲೆ ]

**ತಣ್ಬಾಲ್,** ತಂಬಹಾಲು, ತಂಬಾಲ್, ತಂಬಾಲು, ತಂಭಾಲು (ನಾ). ತಣ್ಣನೆಯ ಹಾಲು : ಚಾರಿವರಿದು ಚಂದ್ರಸುರಧೇನು ಕೊರ್ತು ಚಕೋರವತ್ಸಗೆ ಮೊಲೆಗುಡಲು ಪೂರಿಸಿ ಕಡೆವಾಯೊಳಿಳಿವ ತಣ್ಬಾಲೆನೆ ಸೋರಿತು ಬೆಳ್ದಿಂಗಳಿಳೆಗೆ (ಮೋಹತ. ೧೬-೫೫). **ತಂಬಹಾಲು:** ಉದಯಂದಲಿ

ವಂದು ಸಿದೆ. ತಂಬಹಾಲು ಅಸ್ತಮಯದಲಿ ವಂದು ಸಿದೆ ತಂಬಹಾಲ ಲೆಕ್ಕದಲಿ ಶ್ರೀ ಪಾರಿಸ್ವನಾಥ ದೇವರಲಿ . . . ಬಿಟ್ಟ ಧರ್ಮಸಾಧನ (ಕಇ. III-1, ೧೧-೪೫ ; 1542). **ತಂಬಾಲ್ :** ಎಳಗಂದಿ ಕರ್ದುಱುವಿನ ತೊಱಿದ ತಂಬಾಲಂ ಬೆರೆದು ಹನಿಸಿ (ರಾಮಾಶ್ವ. ೧೧೦-೧). **ತಂಬಾಲು :** ಚಿಱುಪಾಲು ತಂಬಾಲು ಕೆನೆವೆರೆಸಿದ ಪಾಲು ಸುಲಲಿತ ಬಟ್ಟವಾಲುಗಳ . . . ಲಲನೆಯರುಣಬಡಿಸಿದರು (ಕಂನವಿ. ೮-೯೧) ; ಶಾಂತಲಾದೇವಿ . . . ತಂಬಾಲಿನ ಗಿಂಡಿಯನ್ನು ತನಿವಣ್ಣುಗಳ ಹರಿವಾಣಗಳನ್ನು ನೋಡಿದಳು (ಸವಶಿ. ೮೫). **ತಂಭಾಲು :** ಯಿಪ್ಪತ್ತನಾಲ್ಕು ಮುಡಿ ಭತ್ತಕೆ ತಂಭಾಲು ಯೆರಡು ಸಿದ್ದೆ ಹಾಲನೂ ಯೆರಡು ಹೊತ್ತು ನಡಿಸಿ ಬಹರು . . . ಹನೆರೆಡು ಮುಡಿ ಭತ್ತಕ್ಕೆವೊಂದು ಸಿದ್ದೆ ತಂಭಾಲನುವೊಂದು ಹೊತ್ತು ನಡಸುಉವದು (ಕಇ. III-1, ೧೧-೮ ; 1542).

[ ತಣ್$_2$ + ಪಾಲ್$_1$ ]

**ತಣ್ಬಿಸಿಲ್, ತಣ್ಬಿಸಿಲು** (ನಾ). ೧. ತಂಪಾದ ಬಿಸಿಲು; ತೀಕ್ಷ್ಣವಲ್ಲದ ಬಿಸಿಲು ; ಎಳೆಬಿಸಿಲು ; ಹಿತವಾದ ಬಿಸಿಲು : ಅನುಕ್ರಮದಿಂ ತಣ್ಬಿಸಿಲಾಯ್ತನಂತರಂ ಪೊಂಬಿಸಿಲಾದುದು (ಪಂರಾಮಾ. ೧೧-೧೭೭) ; ರವಿಕಿರಣಂ ನೀರೋಡುತ್ತಿವೆ ತಣ್ಪಂ ಬೀಱುತಿವೆ ರಥಾಂಗಕುಲಂಗಳ್ ತವೆ ತಣ್ಬಿಸಿಲೊಳ್ ನಿಂದಿರ್ದಿವೆ ಮೇಘಂ ಹಿಂಡಿ ಹರಹಿದಂತಿವೆ ನಭದೊಳ್ (ಗಿರಿಕ. ೯-೬೩) ; ಏಸೆದನಚ್ಚರಿ ನಡುವಗಲಿವನೊಬ್ಬ ತಣ್ಬಿಸಿಲ ಭಾಸ್ಕರ ನೋಯೆಂದೆನಿಸಿ (ಭರಜ. ೩-೨೪) ; ತರಣಿ ನಿಶಿಸಂಗಮಂ ಬಯಸಿ ವಿಧುವೇಷಮಂ ಧರಿಸಿ ಬರಲೊಗೆದ ತಣ್ಬಿಸಿಲೊ ಪೇಳೆಂಬಿನಂ ಕರಮೆ ಸೆದುದ್ಯೆದೆ ಚಂದ್ರಾತಪಂ (ಜಬಪು. ೯-೨೦); ನೇಸರಿದೊ ತಣ್ಬಿಸಿಲ ಬೆಳ್ಮಳೆಯ ಕರೆಯುತಿದೆ (ಹಪ್ಪರ. ೫-೭೬). ೨. ತಂಪಾದ ಕಾಂತಿ,–ಪ್ರಕಾಶ: ಉತ್ತಂಸ ಮಣಿಮರೀಚಿಗಳಿಂ ಭೂಪಾಲನ ಚರಣಸರೋಜಕ್ಕೋಲಗಿಸಿದನುದಯ ಸುಂದರಂ ತಣ್ಬಿಸಿಲಂ (ಪಂರಾಮಾ. ೨-೫). ೩. ಬೆಳುದಿಂಗಳು; ಚಂದ್ರಿಕೆ : ನೆಱದಿಂಗಳ ತಣ್ಬಿಸಿಲ್ಕುಗುಳ್ಲಿಗೆ ಬಂದ ಮಾವು . . . ತುಂಬಿಯ ಗೇಯ ಮೆಂಬಿನಂ ಬಲ್ಲವರಂ ಮನಂಗೊಳಿಸುಗುಂ ಕೃತಿ (ಮಲ್ಲಿಪು. ೧-೪೪). **ತಣ್ಬಿಸಿಲು :** ೨. ಎಱಗುವ ದಿವಿಜರ ಮಕುಟದ ತುಱುಗಿದ ಮಾಣಿಕದ ತಣ್ಬಿಸಿಲುಗಳ ಪೊಳಪಿಂ (ಎಕ. VI, ಚಿಕ್ಕಮ. ೧೬೦-೪೪ ; 1103).

[ ತಣ್$_2$ + ಬಿಸಿಲ್ ]

**ತಣ್ಬಿಸಿಲು** ‘ತಣ್ಬಿಸಿಲ್’ ನೋ.

**ತಣ್ಪುಳಿಲ್** ‘ತಣ್ಪುಟಿಲ್$_1$’ ನೋ.

**ತಣ್ಪುಟಿಲ್$_1$**, ತಣ್ಪುಳಿಲ್, ತಣ್ಪುಳಿಲ್ (ನಾ). ತಂಪಾದ ಮಳಲು,–ಮರಳ ದಂಡೆ : ತರುಣಿಯರಾ ವಿಲಾಸ ಕುಸುಮಾಸ್ತ್ರನಿರೀಕ್ಷಿಸೆ ಕಾಮ ತಾಪದಿಂ . . . ಕೊರಗಿ ಮೃಣಾಳನಾಳಿಕೆಗೆ ಚಂದನದಣ್ಕೆಗೆ ತಣ್ಪುಟಿಲ್ಗೆ ತಣ್ಗರಗದ ಸೂಸುನೀರ್ಗೆ ಕೊಳವೇರ್ಗೊಡಲಂ ಗುಱಿಯಾಗೆ ಮಾಡುವರ್ (ಮಲ್ಲಿಪು. ೩-೨೪); ಪಾಸಿದ ಪಸೆಯ ಪಸರದಂತಸದಳಮೆಸೆವ ನುಣ್ಪೆಳಂತಿಗೆ ಮೞಲ ತಣ್ಪುಟಿಲೊಳ್ ವಿಲಾಸಂಬಡೆದ ಬಾಲಸಹಕಾರನಂದನಂ (ಅನಂಪು. ೭-೭ ವ). **ತಣ್ಪುಳಿಲ್ :** “ತಣ್ಪುಳಿಲೆನೆ ಸೈಕತಂ” (ಚತುನಿ. ೧೦). **ತಣ್ಪುಳಿಲ್ :** ಸುಖದ ತನಿರಸದ ಪೆರ್ಮಡು ಸುಖದೊತ್ತಿನ ಸುತ್ತಸುಖದ ತಣ್ಪುಳಿಲನಿಕುಂ (ಶ್ರೀಪದಾ. ೬೭) ; ತಳಿರ್ಜೊಂಪದೋಪರಿಯ ತಣ್ಪುಳಿಲೆಡೆ ಯೊಳ್ಕಿಸುಪ ಚಂದ್ರಕಾಂತದ ಘಟ್ಟದೊಳ್ . . . ತೀವಿ ಪಥಿಕರ್ಗೆಱಿಗುಂ (ವೃಷವಿ. ೪-೨೬) ; ತಣ್ಪುಳಿಲಿರ್ಪೆಡೆಯೊಳುಮಾರವೆಗಳ ತಣ್ಣೆಳಲೊಳು (ಗೊಮ್ಮಚ. ೩-೧೨೦). [ ತಣ್$_2$ + ಪುಟಿಲ್$_1$ ]

**ತಣ್ಪುಟಿಲ್$_2$** (ನಾ). “ತಂಪಾದ ತೋಪು” (ಪಂಪದೀ. ೧೧೧) : ಎಲ್ಲಿ ಕೊಳನೆಲ್ಲಿ ತಣ್ಪುಟಿಲೆಲ್ಲಿ ಲತಾಭವನಮೆಲ್ಲಿ ಧಾರಾಗೃಹಂ (ಪಂಪಭಾ. ೩-೧೯).

[ ತಣ್$_2$ + ಪುಟಿಲ್$_2$ ]

**ತಣ್ಬೆಮರ್** (ನಾ). ತಣ್ಣಗಿರುವ ಬೆವರು : ಆತನ ರೂಪಮೆಂಬುರು ಸುಧಾರಸಮಂ ನಯನಂಗಳೆಂಬ ಸತ್ಪಾತ್ರೆಗಳಲ್ಲಿ ಕಾಮಿನಿಯರಾತುರದಿಂ ಕುಡಿದಂತರಂಗದೊಳ್ಪೂತನಮಾಗಿ ತೀವಿದೊಡಮುಣ್ಮುವ ತಣ್ಬೆಮರೊಂದು ದಂಭದಿಂದಾತತಮಾಗಿ ತಾಂ ಪೊಱಗೆ ಪೊಣ್ಮಿದುದೆಂಬಿನಮೊಪ್ಪಿ ತೋಱುಗುಂ (ಬಾಧಪು. ೨-೩). [ ತಣ್$_2$ + ಬೆಮರ್$_2$ ]

**ತಣ್ಬೆಳಗು,** ತಂಬೆಳಕು, ತಂಬೆಳಗು (ನಾ). ೧. ತಂಪಾದ ಬೆಳಕು ; ಶೀತಲವಾದ ಕಾಂತಿ : ನುಣ್ಪುಟಿಲೊಳಗದಿರ್ಮುತ್ತೆ ಪವಣ್ಪಡೆ ಕಟ್ಟಲಿಸಿ ಬೆಳೆದು ಬಳಸಿರ್ದೊಡದಂ ತಣ್ಬೆಳಗನೀಯೆ ಬೆಳತಿಗೆಗಣ್ಬೆಳಗೊಳಪೊಕ್ಕು ಚಪಳೆ ಕಳಿಕೆಯನಾಯ್ದಳ್ (ಚಂದ್ರಪು. ೭-೧೦೫) ; ರತ್ನಕಲಶಂಗಳ ತಣ್ಬೆಳ ಗುಣ್ಮಿ ಪೊಣ್ಮಿ (ಕುಸುಮಾ. ೧೧-೧೪೦). ೨. ಬೆಳುದಿಂಗಳು ; ಚಂದ್ರಿಕೆ : ಅಭಿಷವವಿಧಿಯಂ ಮಾಡುವೆಂ ಚಂದ್ರಿಕಾವಾರಿಯಿನೆಂಬಂತೆತ್ತಲುಂ ತಣ್ಬೆಳಗಿನ ಬಳಗಂ ಸಿಂಪಿಸಲ್ . . . ಬಂದುದಯಿಸಿತುದಯಾದ್ರೀಂದ್ರ ದೊಳ್ಚಂದ್ರಬಿಂಬಂ (ಕಾದಂಉ. ೩೭೬) ; ಬಂದೆಳಮಾವೆಂದೊಡೆ ನೆಱದಿಂಗಳ ತಣ್ಬೆಳಗೆಂದೊಡುನ್ನವುರಿವಂ ಗೊರವಂ (ಕಬ್ಬಿಕಾ. ೧೪೭). **ತಂಬೆಳಕು :** ೨. ತಂಬೆಳಕಾಗಲಿ ನಂಬೆಳಕೆನುವೊಲು ಹೊಂಬೆಳಕೇ ಹೊರಸೂಸಲಿ (ಅರಳು. ೩೦೦-೭) ; ಹೊತ್ತು ಮೇಲೇರಿದರು, ಬಿತ್ತದಲೆ ಸುಡುಬಿಸಿಲ ಸುತ್ತ ಹೂಬಿಸಿಲು ದೀಪಾಗಿ ಬೆಳಗುವದು ಎತ್ತ ನೋಡಿದರು ತಂಬೆಳಕು (ಕನ್ನಜಾ. ೨೦೫). **ತಂಬೆಳಗು :** ೧. ಎಳೆಯ ಬೆಳದಿಂಗಳವೊಲೀಕೆಯ ತಳತಳಿಪ ಮುಖ ಚಂದ್ರಮನ ತಂಬೆಳಕು ಸುಳಿದುದು (ಕುವ್ಯಾಅ. ೮-೧೭). ೨. ಅಟ್ಟುದು ಪಶ್ಚಿಮಾಬ್ಧಿಯೊಳ್ ತಂಬೆಳಗೊಂದೆ ಜೋಡೆ ನಲಿದಾಡೆ ಸಮುಜ್ಜ್ವಲ ಚಂದ್ರಮಂಡಲಂ (ಉದ್ಭಟ. ೧೧-೧೦೪). [ ತಣ್$_2$ + ಬೆಳಗು$_2$ ]

**ತಣ್ಬೆಳಗುವಣಿ** (ನಾ). ತಂಪಾದ ಬೆಳಕನ್ನು ಸೂಸುವ ಮಣಿ,–ರತ್ನ : ಅರಗಿಳಿಯೆಸಗುಂ ತಣ್ಬೆಳಗುವಣಿಯ ಪೇಟೆಯೊಳಿಂಬಾಗಿ ಮನಂಗೊಳಿಪ್ಪ ಮರಕತಮಣಿವೊಲ್ (ಉದ್ಭಟ. ೩-೨೫). [ ತಣ್ಬೆಳಗು + ಮಣಿ$_3$ ]

**ತಣ್ಪೊಲ** (ನಾ). ತಂಪಾದ ಹೊಲ : ತಣ್ಪೊಲಂ ಕಲ್ಮರಂ ಪೊರೆವ ನಾಡೆಲ್ಲಿ (ಕಾಲಂಉ. ೩-೨೫). [ ತಣ್$_2$ + ಪೊಲ ]

**ತಣ್ಪೊಳೆ** (ನಾ). ತಂಪಾದ ಹೊಳೆ : ತಣ್ಣನೆಯ ನದಿ : ಅಸಿಯಳು ಯೌವನವನವುಂಟು ಲಾವಣ್ಯರಸದ ತಣ್ಪೊಳೆಯುಂಟು ಭಾವಾ (ಭರಜ. ೯-೪೭) ; ಬೀಯೋಷಿಯದ ಬಯಲ ತಣ್ಪೊಳೆ ಆಸೋಪಸಿನ ದಡದಲ್ಲಿ ಚಳಿಗಾಲವನ್ ನೂಂಕೆ ಬಿಡಿಸುವನು (ಪಾರಸಿ. ೩೦-೬೯೩). 

[ ತಣ್$_2$ + ಪೊಳೆ$_4$ (< ಪೊೞ$_1$) ]

**ತಣ್ಪೊಟ್ಟು** (ನಾ). ತಂಪು ಹೊತ್ತು : ತಣ್ಪೊಟ್ಟಾದುದು ತಳರ್ದುದು ನುಣ್ಪುಸಲೆಗೆ ಹಂಸಮಿಥುನಂ (ಲೀಲಾವ. ೫-೭೫). [ ತಣ್$_2$ + ಪೊಟ್ಟು ]

**ತಣ್ಮಡು** (ನಾ). ತಂಪಾದ ನೀರಿನ ಮಡು; ತಣ್ಣೀರ ಕೊಳ: ಓಮವುಂಡು ಬಾಟ್ಟಿ ತಣ್ಮಡುವಿನ ಪೂವೆ ಸುಟ್ಟಪುದು (ಅರ್ಧನೇ. ೪-೮೨) ; ಕಪ್ಪುರದ ಪುಳಿಲ್ ಪಗಲ್ಪಲರ ಬಂಡಿನ ಸಣ್ಣ ಮಣಲ್ ಮನಕ್ಕೆ ಬಂದಿರೆ ಕೃತಕ ಪ್ರವಾಹಿನಿಯ ತಣ್ಮಡುವಂ[ಪಾಠಾಂ. ಳಲಂ] ಬಿಡದಿರ್ಪ ನಲ್ಲಳಂ (ವರ್ಧಪು. ೪-೭೩). [ ತಣ್$_2$ + ಮಡು$_2$ ]

**ತಣ್ಮಲೆ** (ಕ್ರಿ). ೧. (ಅಲಂ) ಹಿತವಾಗಿ ಪಸರಿಸು,–ಹರಡು,–ಆವರಿಸು,–ವ್ಯಾಪಿಸಂ : ಅರ್ಹತ್ಪದವಂ ನೆನೆಯುತ್ತುಮನುಪ್ರೇಕ್ಷೆಯೆ ಮನದೊಳ್ ತಣ್ಮಲೆಯೆ ಸೇಸೆಗೊಳ್ ಖಚರಪತೀ (ಆದಿಪು. ೨-೫೭); ಕಂಪು ತ[ಪಾಠಾಂ.ಕ] ಣ್ಮಲೆಯೆ ಪೂತ ಸುರಯಿಯಿಂ (ಪಂಪಭಾ. ೩-೨೩) ; ಅರ್ಕನೆ ಸಸಿ ದಿವ್ವಸಮೆ ರಾತ್ರಿಯಾದುದೆನೆ ಕಲ್ಲೆಲೆಯೊಳ್ ಮಿಸುಕದೆ ಶಾಂತರಸಂ ಮಾನಸದೊಳ್ ತಣ್ಮಲೆಯೆ ನೆಲಸಿದಂ ಯೋಗೀಂದ್ರಂ (ಚಂದ್ರಪು. ೧೧-೧೩) ; ಓರೊರ್ಮೆ ತಣ್ಮಲೆವ ಕಪ್ಪುರದ ಜಗಲಿಯೊಳ್ ಕರಮೆ ಕೊರಗಿದ ಶರೀರವಲ್ಲರಿಯ ನೀಡಾಡಿ (ವರ್ಧಪು. ೪-೫೪ ವ) ; ಸುತ್ತಿ ನಡೆ ನೋಟ್ಟಿ ದೇವರ ಮೊತ್ತಂ

ತಣ್ಮಲೆಯ ಘುಸೃಣಮಲಯಜರಸಮಂ ಬಿತ್ತರದಿಂ ಕಟಿದವುವಿದ ಮುತ್ತಿನ ಮಾಣಿಕದ ಲಂಬಣಂ ನುಣ್ಬೆಳಗಂ (ಅನಂಪು. ೫-೫೨); ಸೇದೆಯಂ ನೂಂಕಿ ದೊಂದುಳಿಯಾಣ್ಮ ತಣ್ಮಲೆಯ (ಕಾಲೂರ. ೧೫೩-೩೨೫). **೨.** (ಆಲಂ) ಹಿತವನ್ನು ಹೊಂದು ; ಸುಖಿಪಡು : ನೆಗಟ್ದೀ ಪಟ್ಟಂಡಮಂ ಸಾಧಿಸಿದೊಡೆ ಫಲವೇಂ ಭೋಗದಿಂ ಸಾಧ್ಯಮೇಂ . . . ಪಡೆವೆಂ ಶಾಶ್ವತ ಶ್ರೀಯನೆಂಬುಜ್ಜುಗದೊಳ್ ಚಿತ್ತಂ ಕರಂ ತಣ್ಮಲೆಯ ನೆಟಿಯೆ ನಿಶ್ಚೈಸಿದಂ ಸಾರ್ವಭೌಮಂ (ಆದಿಪು. ೬-೩೬); ಎರೆ ಪರಪುಷ್ಪ ಕೇಳಿಲೆ ಮಧುವ್ರತ ಕೇಳ್ . . . ನೆನೆಯುತಿರ್ಪುದು ಕೂರ್ಪುದು ಸ್ವೈರಿಸಿರ್ಪುದಗ್ಗಲಿಸಿದ ನಲ್ಮೆ ತಣ್ಮಲೆಯ ಬೆನ್ನನೆ ಪೋದಪೆವೆಮ್ಮ ಸ್ವಾಮಿಯಾ (ಅಜಿಪು. ೬-೧೧೨); ಅಂತು ತಣ್ಮ[ಪಾಠಾಂ. ಣ್ಣೆ]ಲೆದು ನಲಿವ ಮನದೊಳ್ ತದೀಯ ವಿರಹೋಪಚಾರಿತ ಚೇಷ್ಟೆಗಳೆ ಮತ್ತಮವಿಚಳಂಗಳಾಗೆ (ವರ್ಧಪು. ೪-೭೨ ವ).

[ ತಣ್$_2$ + ಮಲೆ ? ]

**ತಣ್ಮಲೆಯೆಲರ್** (ನಾ). ಬೆಟ್ಟದ ತಂಗಾಳಿ: ತಣ್ಮಲೆಯೆಲರೊಳಲೆದುದಯ್ ಸಿಪಿಲೆವಕ್ಕಿಯ ಸಿಳ್ಪಿನಿಂಚರಂ (ಶ್ರೀರಾಮಾ. ೩೦೦-೮).

[ ತಣ್$_2$ + ಮಲೆ$_4$ + ಎಲರ್ ]

**ತಣ್ಮಳಲ್** (ನಾ). = ತಣ್ಬುಟಿಲ್$_1$ : ಭಾಸುರದ ಪೌಳಿಯಂಗಣದಲ್ಲಿ ತಣ್ಮಳಲ ಪೊನ್ನ ಜಗುಲಿಯನಾಗಿಸಿ (ನವಮೋ. ೨೨-೧೬).

[ ತಣ್$_2$ + ಮಳಲ್ (<ಮಣಲ್) ]

**ತ್ಮಣೆಯ್** (ನಾ). ತಂಪಾದ ದೇಹ ; ತಣ್ಣನೆಯ ಒಡಲು.

**ತಣ್ಮೆಯ್ಯವೆಟ್ಟ**=ಹಿಮಾಲಯ ಪರ್ವತ; ಹಿಮವಂತ: ತ್ಮಣೆಯ್ಯವೆಟ್ಟ ಮಗಳಾಣ್ಮ (ನಂದಿಮಾ. ೧೮-೧೫). [ ತಣ್$_2$ + ಮೆಯ್ ]

**ತಣ್ವಣ** (ನಾ). ವೀಣೆಯ ಧ್ವನಿ : "ತಣ್ವಣ [ಪಾಠಾಂ. ತಿತ್ತಣಂ, ತಿಣ್ಣಣಂ] ವೀಣೆಯ ಧ್ವನಿಯಕ್ಕು" (ಮಂಗರಾ. ೨೪-೮).

**ತಣ್ವಳ್ಳಿ** (ನಾ). ಒಂದು ಊರಿನ ಹೆಸರು : ವಡಗಣ್ಣಾ ಸೀಮೆ ಪೆರವಾಟಿ ಪಡುವಣ್ಣಾ ಸೀಮೆ ತಣ್ವಳ್ಳಿ ಗಾರಪಾಟಿ(ಎಇ. XXI, ೨೯-೧೬೮; 8 ನೆಯಶತ). [P ಇದು ಹೊನ್ನಾವರದ ಸಮೀಪದಲ್ಲಿರುವ 'ತುಂದೊಳ್ಳಿ' ಇರಬಹುದು.] [ ? + ಪಳ್ಳಿ$_1$ ]

**ತಣ್ಸಾಲಿಗಾಲ್** (ನಾ). ಒಂದು ಕಾಲುವೆಯ ಹೆಸರು : ಅನ್ನೆ ಬನ್ದು ತಾಯೂರ ಇಗ್ಗಲಿಯ ಅರಿಪುರ ಮೂಡೂರ ಸನ್ದಿನಲ್ಲಿ ತಣ್ಸಾಲಿಗಾಲ ಮೂಡಣ ಪೇರೊಟ್ಟೆಯಿಂ (ಎಕ. III, ನಂಜನ. ೧೩೯-೧೯ ; 915).

[ ತಣ್ಸಾಲಿ$_0$ + ಕಾಲ್$_2$ ]

**ತಣ್ಹೆ** (ನಾ). ತೃಷ್ಣೆ ; ವಿಷಯಲಾಲಸೆ : ತಣ್ಹೆಯರಣ್ಯಮಂ ತರಿದು ತೋರ್ದನರಿಯಟ್ಟಂಗಿಕದ ಧಮ್ಮಮಗ್ಗಂ (ಗಿಳಿವಿಂ. ೪೫-೬).

[ <ಪ್ರಾ. ತಣ್ಹಾ. / ಸಂ. ತೃಷ್ಣಾ ]

**ತತ** (ಗು). **೧.** ವಿಸ್ತರಿಸಿದ ; ಬಿಚ್ಚಿದ ; ಹರಡಿದ ; ವ್ಯಾಪ್ತವಾದ : ವಿಳಸದ್ವಂದನಮಾಳೆಯಿಂ ತತಪತಾಕಾನೀಕದಿಂ ಕೀರ್ಣಪುಷ್ಪಳಸತ್ಸಂಗದಿ ನಂಗನಾಲಟಹ ವಾದ್ಯವ್ರಾತದಿಂ ಗೀತದಿಂ (ಪುಷ್ಪಪು. ೧೩-೧೧೮). (ನಾ). **೨.** ವೀಣೆ ಮೊದಲಾದ ತಂತೀವಾದ್ಯ : "ತತವೆಂಬುದು ತಂತ್ರಿಯೊಳನ್ವಿತಂ" (ವಸ್ತುಕೋ. ೭೯-೨೫); ಅತಿಮೃದುರವದಾಯಿಗಳಂ ತತ ಘನ ಸುಷಿರಾವನದ್ಧ ವಾದ್ಯಂಗಳಂ (ಆದಿಪು. ೫-೩೫); ದಿವಿಜವಾದಕ ಕರಹತ ತತವಿತತಘನ ಸುಷಿರಾವನದ್ಧವಾದಿತ್ರಂ ಸಂಗೀತ ತೂರ್ಯಮಾಗೆ(ಶಾಂತಿಪು. ೧೧-೭೦ ವ) ; ತತವಿತತಾದಿ ವಾದ್ಯಪ್ರಸರಮೇಳನದಲಿ ಸೊಗಸಲಾಡುತ್ತ ಕೇಳಿಸಲು (ಬಸಪು. ೩೭-೨) ; ತಂತಿಯಂ ಕಟ್ಟಿ ನುಡಿಸುವ ವೀಣಾದಿಕವೇ ತತವೆನಿಸುವುದು (ವಿವೇಕ. ೨೩೭). **೩.** ಗಾಳಿ ; ವಾಯು. **೪.** ಭೇರಿ ಮೊದಲಾದ ಚರ್ಮವಾದ್ಯ : ಚರ್ಮತತ ನಿಮಿತ್ತ ಪುಷ್ಕರ ಭೇರೀ ಮೃದಂಗಾದಿ ಪ್ರಭವಂ ತತವೆಂಬುದು. (ತತ್ತ್ವಪ್ರ. ೨೪೩). [ ಸಂ. ]

**ತತಲೋಚನ** (ನಾ). ವಿಶಾಲವಾದ ಕಣ್ಣು : ವಿರಹಶಿಖಿ ಪ್ರತಪ್ತ ತರುಣೀ ತತಲೋಚನರೋಚಿಯಿಂ (ರಾಜಶೇ. ೭-೯೨). [ ತತ + ಲೋಚನ ]

**ತತಾತಪ**(ನಾ). ಹರಡಿದ ಬಿಸಿಲು: ಸುಳಿಗೊಳುತೆತ್ತೆ ಸುಟ್ಟುರೆ ಧರಾರಜವಮಂ ಕೆಳಗೊಂದೆ ದಂಡದಂತುಳಿದ ತತಾತಪಂ ಬಳಸಿ ಪಲ್ಲವದಂತಿರೆ . . . ಬಟ್ಟ ಬಲ್ಮುಗಿಲ್ಪಳಿದುದು ಕಾಲಭೂಪತಿಯ ಪೀಲಿಯ ಸತ್ತಿಗೆಯೊಂದು ಲೀಲೆಯಿಂ (ರಾಜಶೇ. ೮-೯೫). [ತತ + ಆತಪ ]

**ತತಿ$_1$**, ತತು, ತತುವು (ನಾ). ೧. (ಮುಖ್ಯವಾಗಿ ಕೃಷಿಗೆ ಸಂಬಂಧಿಸಿದಂತೆ) ಸರಿಯಾದ ಸಮಯ ; ಹದವಾದ ಕಾಲ: ತತಿ ಮೀರದ ಹಾಗೆ ರಾಗೀ ಅಗೆ ಹೊಯ್ಯು (ಸ್ಟಾಂಡರ್. ೨೮) ; ಗಂಗಿ ಹತ್ತಿ ಕೆಂಪುಹತ್ತಿಯನ್ನು ಮೃಗಶಿರ ಆರದ್ರಿ ಪುಷ್ಯ ಮಳೆಗಳಲ್ಲಿ . . . ಬಿತ್ತಬೇಕು. ಈ ಹತ್ತಿಗೆ ಇದೇ ತತಿಯು (ಕೃಷಿಪ್ರ. ೬೬) ; ತತಿಗೆ ಸರಿಯಾಗಿ ಒಂದು ಮಳೆ ಹೊಡೀತು ಅಂದರ ಹದಿನೈದು ಚೀಲ ಕಾಳ ಬರತೈತಿ (ಬಾಬಲ. ೧೦). **ತತು : ೨.** ಸುಗ್ಗಿಯ ಕಾಲ; ಸುಗ್ಗಿ : ಈಗ ಮಾವಿನ ಹಣ್ಣಿನ ತತು (ರೂಢಿ). **ತತುವು:** ೧. (ಹ). [ ದೇ.॥ ತಮಿ. ತೆಲು. ತತಿ ]

**ತತಿ$_2$** (ನಾ). ಗುಂಪು ; ಸಮೂಹ ; ಶ್ರೇಣಿ : ಸಕಲಂ ತತಿ ವ್ರಾತಂ . . . ರಾಶಿ ಚಯ ಕುಳಮೆನಲ್ ಮತ್ತೆ ಸ್ತೋಮಕ್ಕೆ ನಾಮಮಕ್ಕುಂ" (ಮಂಗರಾ. ೧೨೬-೧) ; ಕಳಹಂಸ ಕೋಮಲ ಸ್ವರತತಿಯಿಂ ಕಳಾಪಿಗಳ ಚಾಪಳ ನಿಸ್ವನದಿಂ ಬಹುಸಾರಸ ಪ್ರಭಾಸುರ ರುತಿರಾಜಿಯಿಂದೆ ವಿಪುಳಾನದಿ ನಾದಮಯಂ ನಿರಂತರಂ (ಕುಸುಮಾ. ೧-೮೨) ; ಸುಧೆಯು ಜನಿಸಲು , ಯಾ ವಿಬುಧರ ತತಿಗೆಟಿದಮರರ ಮಾಡಿದೈ ನೀನು (ಸಂಭಪ. ೮-೯೦). [ ಸಂ. ]

**ತತು** 'ತತಿ$_1$' ನೋ.

**ತತುಕ್ಷಣ$_1$**, ತಕ್ಷಣ$_1$ (ನಾ). ಆ ಕ್ಷಣ ; ಅದೇ ಸಮಯ : ಮುತ್ತದ ಬೂದಿಯೂಟಿಲೆ ತಚ್ಚತುರ್ಗುಣಮೆನೆ ಕೊಂಡದನಟ್ಟು ಪೂಸಿದೊಡಂ ತತುಕ್ಷಣದೊಳೆ ಮಾಣಿಸುಗುಂ ಗುದಾಂಕುರದೇಟ್ಗೆಯಂ (ಲೋಕೋಪ. ೯-೧೯೨); ಸದುಗುರುವಿನಂಘ್ರಿಸ್ಮರಣೆ ಜನಿಸಲು ಹಿಂಗುವುದು ಗರವದು ತತುಕ್ಷಣಕೆ (ನಿಘಾಗ. ೪-೧೫-೧೫). **ತಕ್ಷಣ$_1$ :** ತಕ್ಷಣದೊಳರಸನ ತಾಗಿ ದ್ರೋಣನ ಕೆಣಕಿ . . . ಸೆಣಸಿ ನಿಂದನು (ಕುವ್ಯಾದ್ರೋ. ೧೬-೪೮).

[ <ಸಂ. ತತ್‌ಕ್ಷಣ ]

**ತತುಕ್ಷಣ$_2$**, ತಕ್ಷಣ$_2$, ತಚ್ಚಣ (ಅ). ಆ ಕ್ಷಣದಲ್ಲಿ; ಆಗಲೇ; ಕೂಡಲೇ: ಆ ತತುಕ್ಷಣವೊಯ್ದುದಂ ಸಂಪ್ರೀತಿಯೊಳೆ ಮಾಡಿದಳು ಪಾಕವಂ (ಬಸಪು. ೨೪-೩೬) ; ಆ ತತುಕ್ಷಣ ಧನುವ ಬಿಸುಟು ವಿಧೂತರಿಪುಬಲ ಪಾರ್ಥನಿದ್ದನು ಹೊತ್ತ ದುಗುಡದಲಿ (ಕುವ್ಯಾದ್ರೋ. ೩-೬೨) ; ಪೂತುರೆನುತಂಗದನು ಪುಟನೆಗೆದಾ ತತೂ[ತು]ಕ್ಷಣ ಖಳನ ಮುಂದಲೆಯಾತು ಹಿಡಿದರೆ ಕೊರಳು ಸಿಕ್ಕಿತು ಕೈಗೆ ಹಾರದಲಿ (ಕಾಶಿರಾ. ೨೮-೫೪). **ತಕ್ಷಣ$_2$ :** ಅವನು ತಕ್ಷಣವೆ ಪ್ರಶ್ನಿಸಿದನು (ಪುನರು. ೩೦೦). **ತಚ್ಚಣ :** "ತಚ್ಚಣ – ತತ್ಕ್ಷಣ = ಆಗಲೇ" (ತದ್ಭಕೋ. ೦೬).

[ <ತತುಕ್ಷಣ$_1$ ]

**ತತುವ**, ತತ್ತುವ (ನಾ). = ತತ್ತ್ವ : ಕಾಯಸೌಖ್ಯಕೆ ಕಾಮಸುಖದ ವಿಡಾಯ ತತುವಕೆ ವೇಡೆಗೊಂಡು ನವಾಯಿಯುಲಿ ದರ್ಗುತಿಗೆ ದುವ್ವಾಳಿಸುವನಲ್ಲೆಂದ (ಕುವ್ಯಾಆ. ೮-೩೧). 'ತತುವಮಾರ್ಗ' ಪರ್ಯಾ. **ತತ್ತುವ :** (ಹ). [ <ಸಂ. ತತ್ತ್ವ ]

**ತತುವಮಾರ್ಗ** (ನಾ). ತತ್ತ್ವದ ಹಾದಿ ; ತತ್ತ್ವಮಾರ್ಗ : ಶ್ರುತಿಕಥಾಭಾಗ ಪದ್ಯ . . . ತತುವಮಾರ್ಗದಿ ನುಡಿವ ಬಲು ಉನ್ನತ ಮಹಿಮರಾ ನೋಡಿದೆ (ತೀರ್ಥಮ. ೬೨). [ ತತುವ + ಮಾರ್ಗ ]

**ತತುವು** 'ತತಿ$_1$' ನೋ.

**ತತ್ಕಾರು** (ನಾ). (?): ಲಾಹೆರಿಯ ಮಧ್ಯದೇಶಂಗಳೊಳ್ ಮಡಗಿ ತತ್ಕಾರಿನಿಂ ನಿಟ್ಟಿಸುರೆ ಬೆಳಗಿದರ್ ರಾಗಗಳ ಭೇದದಂತೆ (ಪರಶು. ೩೧-೧೫). 'ತತ್ತ್ಕಾರ' ಪರಾ. [ ? ]

**ತತ್ಕಾಲ** (ನಾ). ಆ ಕಾಲ; ಆ ಸಮಯಂ ; ತಕ್ಷಣ : ಆರ್ಯರಾತ್ರ್ಯ ತನುಗಳ್ ತತ್ಕಾಲದೊಳ್ ಮಾಯಮಾಗೆ (ಶಾಂತಿಪು. ೬-೧೨) ; ಸುತನಂ ಕಂಡುರ್ಬಿ ತತ್ಕಾಲದೊಳ್ . . . ಇತ್ತರಂದು ಸಕಲರ್ಗಾನಂದದಿಂ ವಸ್ತ್ರವಂ (ಹಮ್ಮೀರ. ೨-೨೪) ; ಒಂದು ಮನೆಯನ್ನು ನೋಡಿದರೆ ತತ್ಕಾಲದಲ್ಲಿ ಮನುಷ್ಯರು ಕಾಣದೆ ಇದ್ದಾಗ್ಯೂ ಅದು ಮನುಷ್ಯ ಕಟ್ಟಿದ್ದಲ್ಲವೆಂದು ಎಂದಾದರೂ ನೆನಸುವನೋ (ಮುಂಬಯಿ. ೪-೫೯).

[ ಸಂ. (ತದ್ + ಕಾಲ) ]

**ತತ್ಕಾಲಂ** (ಅ). ೧. ಆ ಕಾಲದಲ್ಲಿ ; ಆಗಿನ ಕಾಲದಲ್ಲಿ : ದೊರೆಕೊಂಡಿರೆ ಸೊಗಯಿಸುಗುಂ ಪುರಾಣಕಾವ್ಯಪ್ರಯೋಗದೊಳ್ ತತ್ಕಾಲಂ ವಿರಸ ಕರಮವು ದೇಸಿಗೆ ಜರದ್ವಧೂವಿಷಯಸುರತರ ಸರಸಿಕತೆವೋಲ್ (ಕವಿರಾ. ೦-೫೦). ೨. ಕೂಡಲೆ ; ಒಡನೆ. [ ಸಂ. ]

**ತತ್ಕಾಲೀನ** (ಗು). ಆ ಕಾಲದ ; ಆ ಕಾಲಕ್ಕೆ ಮಾತ್ರ ಸಂಬಂಧಪಟ್ಟ ; ತಾತ್ಕಾಲಿಕ : ಪತ್ರಿಕೆಗಳಿಗೆ ಇತಿಮಿತಿಯಿದೆ. ಅವು ತತ್ಕಾಲೀನವಾದವು (ಪತ್ರಿಕಾ. ೫೬). [ ಸಂ. ]

**ತತ್ಕ್ರಿಯ** (ಗು). ನಿರ್ದಿಷ್ಟವಾದ ಕೆಲಸದಲ್ಲಿ ತೊಡಗಿದ. [ ಸಂ. ]

**ತತ್ಕ್ಷಣ** (ನಾ). ಆ ಗಳಿಗೆ ; ಅದೇ ಗಳಿಗೆ. [ ಸಂ. (ತದ್ + ಕ್ಷಣ) ]

**ತತ್ಕ್ಷಣಂ** (ಅ). ಆ ಸಮಯದಲ್ಲಿ ; ಅದೇ ಗಳಿಗೆಯಲ್ಲಿ ; ಕೂಡಲೆ ; ಒಡನೆ. [ ಸಂ. ]

**ತತ್ತ**$_1$ (ನಾ). ನಿಜವಾದುದು ; ಸತ್ಯ ; ತಥ್ಯ : "ತತ್ತ(ತ್ತು) – ತಥ್ಯ = ನಿಜ" (ತದ್ಭಕೋ. ೦೬). [ <ಸಂ. ತಥ್ಯ ]

**ತತ್ತ**$_2$ 'ತಳ್$_2$' ಪರಾ.

**ತತ್ತ**$_3$ 'ತಳ್$_3$' ಪರಾ.

**ತತ್ತಕಾರ** (ನಾ). [ಸಂಗೀತ] ತಾಳಹಾಕುವಾಗ ಮಾಡುವ ಶಬ್ದೋಚ್ಚಾರಣೆ : ಸುರುಚಿರ ಸೂತ್ರಧಾರಕ ತತ್ತಕಾರವ ವಿರಚಿಸಿ ಜವನಿಕೆದೆಗೆಯೆ . . . ಸುಪ್ರೌಢೆಯರುರು ಪುಷ್ಪಗಳ ಸೂಸಿದರು (ಕಂಠವಿ. ೮-೬೦) ; ತತ್ತಕಾರವನೆಸಗಿ ಧೆಂಕಕಂ ಧೆಂಕಕಿಟವೆನಲು ತಿತ್ತಕಟ ಧಿಕಟ ನಭ ತೋಂಗ ಕಿಟಟಿಟವೆಸಗೆ (ಲಿಂಗಪು. ೩೬-೧೮). [ದೇ.॥ ತೆಲು. ತತ್ತಕಾರ, ತತಕಾರ]

**ತತ್ತನಯ** (ನಾ). ಆತನ ಮಗ : ತತ್ತನಯಂ . . . ಚಾಪಾಗಮಚತುರ ಚತುರ್ಮುಖಿಂ ಚತುರ್ಮುಖನೆಂಬಂ (ಶಂರಾಮಾ. ೨-೬೩ ವ).

**ತತ್ತನಯರು** = ಆ ಮಕ್ಕಳಂ : ತತ್ತನಯರೊಳಿನಗೆ ತಾನೆ ದೊರೆಕೊಂಡವಂ ದತ್ತನೆಂದನಂ (ಜೈಮಿಥಾ. ೨೮-೫೬). [ಸಂ. (ತದ್+ತನಯ)]

**ತತ್ತಪಣ** 'ತತ್ತುಪಣ' ನೋ.

**ತತ್ತಪಣಂಗೆಯ್** 'ತತ್ತುಪಣಂಗೆಯ್' ನೋ.

**ತತ್ತಬಳ** (ನಾ). (?) : ತತ್ತಬಳ[ಪಾಠಾಂ. ಳ]ತಾಳಗೊಟ್ಟಿಯೆನುತ್ತೊಂದಂ [ಪಾಠಾಂ. ತ್ತಾದಂ]ರುಷಿಯರೊಡನೆ ಜಡಮತಿಗಳು ತೋರುತ್ತಿರ್ಪರ್ (ಸಮಪ. ೦೪-೧೬). [ ? ]

**ತತ್ತರ, ತತ್ತಟ** (ನಾ). ೧. ನಡುಕ ; ಕಂಪನ : ಹತ್ತು ಶಿರದನ ಕರದ ಘಾಯದ ತತ್ತರಕೆ ಬೆಂಡಾಗಿ ದಿವಿಜರು ಅಳಲುತ್ತ ಬಂದರು (ಗಗಶಾ. ೦೬-೩೨) ; ಕುಂದಾಗಿ ಮನದೊಳು ನಡುಗಿ ತತ್ತರ ಪುಟ್ಟಿ (ಯಜೋರ. ೯೧). 'ತತ್ತರಂಗೊಳ್', 'ತತ್ತರಂಬಡೆ' ಪರಾ. ೨. ಅತಿಯಾದ ಆತುರ; ಅವಸರ ; ಗಡಿಬಿಡಿ : ತತ್ತರಬೇಡೊಯ್ಯನೊಳ್ಪಾಗಿ ನಿರ್ಮಿಸೆಪ್ಪತ್ತೆರಡ ಭವವಾಸಗಳಾ (ಭರತ. ೬೧-೫೩). ೩. ಕಕ್ಕಾಬಿಕ್ಕಿ ; ತಬ್ಬಿಬ್ಬು ; ಗಾಬರಿ ; ಗೊಂದಲ ; ದಿಗ್ಭ್ರಮೆ : ಅನೇಕ ಗುಂಪುಗಳು . . . ತತ್ತರದಿಂದ ವನದಲ್ಲಿರುವ ಹುಲ್ಲೆ ಮೊದಲಾದ ಮೃಗಗಳನ್ನು ತುಳಿಯುತ ಘೀಳಿಡುತ, ದಿಕ್ಕುದಿಕ್ಕುಗಳಿಗೋಡಿದವು (ಕೃಪಾಳ. ೧೫೦). △ **ತತ್ತಟ**: ೩. ಹಟಗಿವಿಗಳ ಕಬ್ಬಂಗಳ ಹೊಟಗಳೆಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ಬಟ ತಾಟಿಗ ಬೀಟಿಗ ವೆತ್ತಟತತ್ತಟವೆಕ್ಕಸಕ್ಕಮಸ್ತಂವ್ಯಸ್ತಂ (ಗಿರಿಕ. ೧-೨೩) ; ದಮನಂ ಹಯಮಂ ಸೆಟೆವಿಡಿದು ನಿಜಪುರಕೆ ಕಳಿಪಲೊಡಮಿತ್ತಲ್ ಹಯದ ಬೆಂಬಲದ ಕಾಪಿನಾಳ್ಗಳ್ ತತ್ತಟದಿನೊತ್ತರಿಸಿ ಪತ್ತೆಸಾರ್ದು (ರಾಮಾಶ್ವ. ೮೬-೧೧). 'ತರ$_1$', 'ಎತ್ತಟತತ್ತಟ', 'ತಟತಟ' ಪರಾ.

[ ದೇ.॥ ತಮಿ. ಮಲ. ತತ್ತರ ; ತೆಲು. ತತ್ತಟ ]

**ತತ್ತರಂಗೊಳ್, ತತ್ತರಂಗೊಳು, ತತ್ತರಗೊಳು, ತತ್ತರಗೊಳ್ಳು** (ಕ್ರಿ). ೧. ನಡುಕವನ್ನು ಹೊಂದು ; ನಡುಗು ; ಕಂಪಿಸು ; ತತ್ತರಿಸು : ನಡು ಬಳ್ಕಿ ತತ್ತರಂಗೊಳೆ ನಡೆ ಮುಟ್ಟಿ ನಲ್ಲನಡಿದಾವರೆಯೊಳ್ ಮುಡಿಯಿಟ್ಟು ಮೊಟ್ಟಿದಳ್ (ಚಿಕವಿ. ೬-೨೪೮). **ತತ್ತರಂಗೊಳು :** ಅಬ್ಧಿಯೊಳ್ ಛಾಯೆ ಕಂಗೊಳಿಸೆ ತತ್ತರಂಗೊಳುತುರಗಸಂದೋಹ ನಕ್ರ ನೀರಾನೆಗಳ್ಳುಳಿದಾಟದಿ ಮತ್ತೊಂದನೊಂದಲೆದು ವಾತಾಳದೆಡೆಗೈದೆ (ವಂಕಾರಾ. ೫-೧-೨೪). **ತತ್ತರಗೊಳು :** ೧. ಇಟ್ಟು ತತ್ತರಗೊಳುತ ಬೀಳುತ ಕೊಟ್ಟ ಕೈಯನು ಪಿಡಿದುಯೇಳುತ (ಕೃಕರ್ಣಾ. ೧-೬೦). ೨. ಆತುರಪಡು : ಹೃದಯದ ಬಯಕೆಯನರುಹಲು ನಾಚುತಲಿರೆ ತತ್ತರಗೊಳುತಿಹ ಬಗೆಯು (ಕವಿಕಾ. ೩೩-೪). **ತತ್ತರಗೊಳ್ಳು** : (ಕ). [ತತ್ತರ+ಕೊಳು (<ಕೊಳ್$_1$)]

**ತತ್ತರಂಗೊಳು** 'ತತ್ತರಂಗೊಳ್' ನೋ.

**ತತ್ತರಂದರಿ** 'ತತ್ತಟಿಂದಟ' ನೋ.

**ತತ್ತರಂಬಡು, ತತ್ತರಬಡು** (ಕ್ರಿ). ಆತುರಪಡು ; ತವಕಿಸು : ಅಮರ್ದಂ ಪೀರ್ವಾಸೆಯಿಂ ತತ್ತರಂಬಡುರ್ತಿಪೊಳ್ಳಿವಿ (ಚಿಕವಿ. ೪-೪೧). **ತತ್ತರಬಡು :** ತತ್ತರಬಡದೆ ಕಂಗೆಡದೆ ಭುಕ್ತಿಯ ಕಿಟಿತುತ್ತು ತುತ್ತಾಗಿ ಕೈಕೊಂಡು ತುತ್ತಿಗೆ ತಕ್ಕ ಪಾನವ ಕೊಂಡು ಸುಖಿಸಿರಿ (ಭರತ. ೦೯-೩೬).

[ ತತ್ತರ + ಪಡು$_1$ ]

**ತತ್ತರಂಬಡೆ** (ಕ್ರಿ). ನಡುಕದಿಂದ ಕೂಡಿರು; ಗದ್ಗದವಾಗು: ತತ್ತರಂಬಡೆದ ಮಾತು (ರೇವಣ. ೪೮-೯). [ ತತ್ತರ + ಪಡೆ$_1$ ]

**ತತ್ತರಗಡಿ** (ಕ್ರಿ). ಚೂರುಚೂರಾಗಿ ಕತ್ತರಿಸು ; ಉರವಣಿಸಿ ಪೊಕ್ಕು ಏವೆಯಾಟ ಮಾತ್ರದಲಿ ತತ್ತರಗಡಿದು ಮೆದೆಗೆಡಹಿ (ನವನೋ. ೫೯-೦೪) ; ಬಾಣಂಗಳನ್ನು ತತ್ತರಗಡಿದು ನಗುತ (ನವನೋ. ೩೩-೦೪). 'ತತ್ತಟಿಂದಟ' ಪರಾ. [ <ತಟ$_1$ + ಕಡಿ$_1$ ]

**ತತ್ತರಗುಟ್ಟು** (ಕ್ರಿ). (ಭಯದಿಂದ) ನಡುಗು ; ತತ್ತರಿಸು : ಯಾವ ಸಮಯದಲ್ಲಿ ಏನಾಗುವುದೋ ಎಂದು ನನ್ನ ಮನವು ತತ್ತರಗುಟ್ಟುವುದು (ಏಕಾಪ. ೧೩೦) ; ಕಾಲವು ಕಳೆದ ಹಾಗೆಲ್ಲಾ ದೇವೇಂದ್ರನ ಮನವು ತತ್ತರಗುಟ್ಟಲಾರಂಭಿಸಿತು (ಬಿನ್ನಬೇ. ೦೩೨). [ ತತ್ತರ + ಕುಟ್ಟು$_1$ ]

**ತತ್ತರಗೊಳು** 'ತತ್ತರಂಗೊಳ್' ನೋ.

**ತತ್ತರಗೊಳ್ಳು** 'ತತ್ತರಂಗೊಳ್' ನೋ.

**ತತ್ತರಣಿ, ತತ್ತರಾಣಿ, ತತ್ರಾಣಿ** (ನಾ). (ಉಕ) ರೈತರು ಹೊಲಕ್ಕೆ ಅಥವಾ ಪ್ರವಾಸಕ್ಕೆ ಹೋಗುವಾಗ ಕೊಂಡೊಯ್ಯುವ ಕುಡಿಯುವ ನೀರಿನ ಪಾತ್ರೆ ; ಹೂಜಿಯ ಆಕಾರದಲ್ಲಿದ್ದು ಚಪ್ಪಟೆಯಾಗಿರುವ ಮಣ್ಣಿನ ಪಾತ್ರೆ : ಹಾದೀಯ ಬುತ್ತಿಗಳ ತಗತೀಲಿ ಕಟಗೊಂಡು ನೀರಿನ ತತ್ತರಣಿ ತುಂಬ್ಯಾರಾಗ (ಜನ್ನಜಾ. ೩೩೦). **ತತ್ತರಾಣಿ :** ರೊಟ್ಟಿ ಚಟ್ಟನಿ ಕಟ್ಟಿಕೊಂಡು ನೀರಿನ ತತ್ತರಾಣಿ ಬಗಲಿಗೇರಿಸಿ . . . ಸಜ್ಜಾಗಿ ನಿಂತನು (ಪವನ. ೧೧೬). **ತತ್ರಾಣಿ**$_1$ : ಒಂದು ತತ್ರಾಣಿಯನ್ನು ಗಾಡಿಯ ಕಳಿಗೆಗೆ ಕಟ್ಟಿದನು (ಬಾಬಲ. ೩೫).

[ ←ಮರಾ. ತತ್ತರಣೀ, ತತ್ತರಾಣೀ ]

**ತತ್ತರದರಿ** 'ತತ್ತಱಂದಱು' ನೋ.

**ತತ್ತರನಡೆ** (ಕ್ರಿ). ಅಸ್ಥಿರವಾದ ಹೆಜ್ಜೆಗಳನ್ನಿಡು ; ತಪ್ಪು ತಪ್ಪು ಹೆಜ್ಜೆಗಳನ್ನಿಡು ; ದಟ್ಟಡಿಯಿಡು : ತತ್ತರನಡೆವ ತೊದಲ್ನುಡಿವ ತಾ ಪೆತ್ತ ಮಾತೆಯನೊಮ್ಮೆ ತೊಡರ್ವ (ಶಾಂತೀಶ. ೮-೧೧). [ ತತ್ತರ + ನಡೆ$_1$ ]

**ತತ್ತರಪಡು** (ಕ್ರಿ). ತಬ್ಬಿಬ್ಬಾಗು: ಪಾಪಿಷ್ಠನಾದ ಬೇಡನು ತತ್ತರಪಡುತ್ತಾ . . . ಓಡಿಹೋಗಿ ಹುಲಿಯ ಬಾಯಿಗೆ ತುತ್ತಾದನು (ಕಥಾಮಂ. IV, ೮೬). [ ತತ್ತರ + ಪಡು$_1$ ]

**ತತ್ತರಬಡು** 'ತತ್ತರಂಬಡುಂ' ನೋ.

**ತತ್ತರಾಣೆ** 'ತತ್ತರಣೆ' ನೋ.

**ತತ್ತರಿಸು** (ಕ್ರಿ). ೧. ನಡುಗು; ಕಂಪಿಸು ; ತಡಬಡಿಸು : ಭೀಕರ ಶಬರಸೇನೆ ಕವಿದುದು ಸರಭಸದಿಂ ದೆಸೆ ಮಸುಳ್ದು ತತ್ತರಿಸುವಿನಂ (ಕುಸುಮಾ. ೧೪-೯೫); ನಡುನಡುಗಿ ಬಟಲ್ದು ತತ್ತರಿಸುತ್ತೆ . . . ಕಳ್ಗುಡಿದು ಸೊರ್ಕಿ ರಮಣಿಯರೆಸೆದರ್ (ಉದ್ಭಟ. ೫-೯೦) ; ಅಂಧಕಾರಣ್ಯದಲ್ಲಿ ನಿಂದು ತತ್ತರಿಸುತಿಹೆನೋ (ಪುರಂದ. ೧-೭-೧) ; ದೊಡ್ಡ ಸಂಸಾರಭಾರವನು ಹೊರುತಾ ಹೆಗಲ ಹೊರೆಯಲಿ ಬಳುಕಿ ತತ್ತರಿಸುತಿರುತಾ ದುಗುಡದಿಂ ಬಳಲುವನು (ಕವಿಪು. ೩೬-೨) ; ಓಣಿಯ ಜನ ತತ್ತರಿಸಿದರು (ಹಬ್ಬಿಬ. ೮೧). ೨. ತ್ವರೆಗೊಳ್ಳು; ಆತುರಪಡು : ಸಂಪಿಟನ ತೊಡೆ ಸೋಂಕಿದುತ್ತಮ ಗಣಿಕೆಗೆ ತವಕ ತತ್ತರಿಸುತೇಳ್ವಂತೆ ಅವನೀಶರತ್ನನ ತೊಡೆಸೋಂಕಲೊಡನೆ ವಾರುವಮಣಿ ನಲಿದು ಕುಣಿದುದು (ಭರತ. ೨೯-೨೧). ೩. ಅಲುಗಾಡು ; ಅಲ್ಲಾಡು (?) : ಕಲಧೌತಂ ಪರಿಸೂತ್ರಂ ಸಾಲಮೆನಸುಂ ಕಣ್ಗೊಪ್ಪಿ ಬೆಳ್ದಿಂಗಳಂ ಪೊಳೆವಿಂದೂಪಳಗೋಪುರಂ ಬೆಳಗಿನಿಂದಂ ಬೀಱು ಸಾರದ್ರುಮಂಗಳ ಷಂಡಂ ನೆಱು ಸುತ್ತಿ ತತ್ತರಿಸೆ ಮಾನಸ್ತಂಭಮಾಕಾಶಮಂಡಲಮಂ ಚಿತ್ರಿಸೆ ತನ್ನ ರತ್ನರಚನಾರಶ್ಮಿಪ್ರತಾನಂಗಳಿಂ (ಮಹಾನೇ. ೮-೯೬). [ತತ್ತರ + – ಇಸು$_3$]

**ತತ್ತಲಮಗ** (ನಾ). ಯಾವಾಗಲೂ ಸೇವೆಗೆ ಸಿದ್ಧನಾಗಿರುವವನು ; ಜೀತದ ಆಳು : ಆಚಾರವೆ ಪ್ರಾಣವಾದ ರಾಮೇಶ್ವರಲಿಂಗವು ಆವರಿಗೆ ತತ್ತಲಮಗನಾಗಿಪ್ಪನು (ಏಲೇಶ್ವ. ೯೦) [ <ತೊಟ್ಟು + ಮಗ ]

**ತತ್ತಲುಗೂಸು** (ನಾ). = ತತ್ತಲಮಗ : ತತ್ತ್ವವಿದೆಯೆಂದು ಮಿಕ್ಕಾದವರಿಗೆ ಹೇಳುವಾಗ . . . ಆ ತತ್ತ್ವವೂ ವಸ್ತುವೂ ತನ್ನ ತತ್ತಲುಗೂಸೇ (ಸರ್ವಪ. ೧೨೯-೬೫೪). [ <ತೊಟ್ಟು + ಕೂಸು ]

**ತತ್ತವಣೆ,** ತಥಪಣೆ (ನಾ). ೧. ಜೋಡಣೆ ; ಹೊಂದಿಕೆ : ಉತ್ತಮದ ಗದೆ ವಜ್ರ ಕುಂತವಂಕುಶವೆನಿಪ ಪುಟ್ಟಿ ಭರದಿ ಹತ್ತಿರೆಯಿತರೆ ನಸುನಗುತ್ತಲಭವಂ ಭುಜಕೆ ತತ್ತವಣೆಯಾಗಿ ಧರಿಸಿರಲು (ಲಶಿಚಿ. ೨೧-೧೧). "ಅಲಂಕಾರ" (ಲಶಿಚಿಂ. ಕೋಶ); ಹತ್ತುಸಾವಿರ ಕೈ ಪ್ರಮಾಣದ ಸುತ್ತುವಳಯದ ಮಣಿಯ ಶಿಲೆಗಳ ತತ್ತವಣೆಗಳ ತೆಕ್ಕೆವೆಳಗಿನ . . . ವರವಿಧಾನದಲೆಸೆದುದಾಸ್ಥಾನ (ಕುವ್ಯಾಸ. ೧-೧೪). ೨. ಹಾಚಿಕೆ ; ಉಪಾಯ : ಮುತ್ತಯನು ಮಾಡಿದ ನಿಯೋಗದ ತತ್ತವಣೆ ಲೇಸಾಯ್ತು (ಕುವ್ಯಾವಿ. ೭-೨೪). ೩. ವಿಸ್ತಾರ; ಹಬ್ಬುಗೆ : ಮೇರುವಿಗೆ ಪಶ್ಚಿಮದಿಶಾವೃತದಾಚೆ ವಿಸ್ತರದ ಯೋಜನಗಳೆರಡು ಸಾವಿರದಳವಿಯುತ್ತಮದ ನೀಲಪರ್ವತದವಧಿ ದಕ್ಷಿಣಕೆ ನೈಷಧಾಚಲವೆ ಮೊದಲು ತತ್ತವಣೆ ಮೂವತ್ತ ನಾಲ್ಕು ಸಾವಿರ ಯೋಜನ (ಲಶಿಚಿಂ.೨೬-೬೦). ೪. ರಹಸ್ಯ; ಮರ್ಮ (?): ಅತಿಕಾಮುಕನು ಲುಬ್ಧನು ಶೂರನೆಂಬವನು ಕ್ಷುತ್ತು ಘನವಾಗುಳ್ಳನಿಂತೀ ಹತ್ತುಜನವಾವಾಗ ಧರ್ಮದ ತತ್ತವಣೆಗಳನಱಿಯರೈ (ಕುವ್ಯಾಉ. ೩-೭೬). **ತಥಪಣೆ :** ೧. ಒಬ್ಬೊಬ್ಬರಂ ತರ್ಕೈಸಿ ತಥಪಣೆಗಳೆರಡರೊಪ್ಪಗೆಯಾಗಿ ನೆರೆ ಪೋಲ್ತು ಸುಖನಿದ್ರೆಯೊಳಗಿರಲು (ನವಮೋ. ೨೬-೨೪). 'ತತ್ತುಪಣ' ಪರಾ. [ <ತತ್ತು$_2$ ]

**ತತ್ತಳ$_1$** 'ತಟತಟ' ನೋ.

**ತತ್ತಳ$_2$** 'ತಲ' ಪರಾ.

**ತತ್ತಳಂಗೊಳ್,** ತತ್ತಳಂಗೊಳು, ತತ್ತಳಗೊಳ್ (ಕ್ರಿ). ಕಂಗೆಡು ; ತಬ್ಬಿಬ್ಬಾಗು ; ದಿಕ್ಕುಕೆತಪ್ಪು : ಮತ್ತದಂತಿಯು ತೆಱದಿನೊತ್ತಿ ಭರದಿಂ ಪಾರ್ಥನೊತ್ತಿಗೈತರೆ ಕಂಡು ಹರಿ ವಿಜಯನಂ ಜಱಿಯಲು ತತ್ತಳಂಗೊಳದೆಚ್ಚು (ಜೈಮಿಭಾ. ೧೯-೧೫). **ತತ್ತಳಂಗೊಳು :** ಆಱುಯೆನೆಂದರ್ಪಿಸದೆಯಿರಬಹುದೆ ಶ್ರೀಗುರುವೆ . . . ಚಿತ್ತೈಸುವಿದಱೊಳಗೆ ತತ್ತಳಂಗೊಳುವವಗೆ (ದೀಕ್ಷಾಬೋ. ೧೦೦-೭೭). **ತತ್ತಳಗೊಳ್.** 'ತತ್ತಳಗೊಳಿಸು' ಪರಾ. [ ತತ್ತಳ$_1$ (<ತಟತಟ) + ಕೊಳ್$_1$ ]

**ತತ್ತಳಂಗೊಳು** 'ತತ್ತಳಂಗೊಳ್' ನೋ.

**ತತ್ತಳಂಬೀಳು** (ಕ್ರಿ). ಹೆದರು ; ಗಾಬರಿಪಡು : ಇತ್ತನಾಗ ದಧೀಚಿ ಬೆನ್ನಸ್ಥಿತ್ತ ಸುರರಿಗೆ ವಿಶ್ವಮಿತ್ರನು ಮತ್ತೆ ಬಹು ಉಪದ್ರ ಕೊಡೆ ತಟ್ಟದನೆ ವಾಸಿಷ್ಠಪುತ್ರ ಕೇಳ್ನಾಧುಗಳು ಸತ್ಯಕೆ ತತ್ತಳಂಬೀಳುವರೆ (ಜ್ಞಾನಸಿಂ.೨೪-೨೪). [ ತತ್ತಳ$_1$ (<ತಟತಟ) + ಬೀಳು$_1$ (<ಬೀೞ್$_1$) ]

**ತತ್ತಳಗೆಯ್** (ಕ್ರಿ). ಕೋರೈಸು ; ಕುಕ್ಕು : ಸುತ್ತಣ ಮಣಿಗಲ್ಲ ಹೊಂಗೋಟೆ ನೋಡಲು ತತ್ತಳಗೆಯ್ವುದಕ್ಷಿಗಳ (ಪೋಹತ. ೩-೬). [ ತತ್ತಳ$_1$ (<ತಟತಟ) + ಕೆಯ್$_1$ ]

**ತತ್ತಳಗೈ** (ಕ್ರಿ). ತಬ್ಬಿಬ್ಬುಗೊಳ್ಳು. 'ತತ್ತಳಗೈಸು' ಪರಾ. [ ತತ್ತಳ$_1$ (<ತಟತಟ) + ಗೈ (<ಕೆಯ್$_1$) ]

**ತತ್ತಳಗೈಸು**(ಕ್ರಿ). ಕಂಗೆಡಿಸು; ದಿಕ್ಕು ತೋಚದಂತೆ ಮಾಡು: ಮಾಡಿರುವ ಪಾತಕವು ವ್ಯಾಧಿರೂಪಗಳಿಂದ ಪೀಡಿಸಿ ತನುವ ತತ್ತಳಗೈಸಿ ನೆಲಕಿಕ್ಕಿ ತೀಡಿ ಬಸವಳಿದ ಬಳಿಕ (ಕನಕ. ೨೧೩-೧). [ ತತ್ತಳಗೈ + – ಸು$_1$ ]

**ತತ್ತಳಗೊಳ್** 'ತತ್ತಳಂಗೊಳ್' ನೋ.

**ತತ್ತಳಗೊಳಿಸು** (ಕ್ರಿ). = ತತ್ತಳಗೈಸು : ಎತ್ತಲಡಗಿದಿ ಎನ್ನ ಚಿತ್ತದ ವಲ್ಲಭನೆ ತತ್ತಳಗೊಳಿಸುವುದು ಸೋತ್ತುಮತನವಲ್ಲ (ಮೋಕ್ಷದೀ. ೯೪-೩). [ ತತ್ತಳಗೊಳ್ (<ತತ್ತಳಂಗೊಳ್) + – ಇಸು$_3$ ]

**ತತ್ತಳಿಕೆ** (ನಾ). ಕಳವಳ ; ತಳಮಳ : ತತ್ತಳಿಕೆಯುಂ ಮತ್ತೆ ತಾಳಲಾರದೆ ತಾನೆ ಚಾವಡಿಗಿರದೆ ಪರಿಯಲಾ ಕಾಣಿಸಿತು . . . ಶ್ರೀರಾಮನಕ್ಷುಬ್ಧ ಶರಧಿಸಮ ವಿಗ್ರಹಂ (ಶ್ರೀರಾಮಾ. ೭೮-೧೬) ; ಬಿಂಕದ ಎಡೆಗಡಲುಬ್ಬರವಿಳಿತಕೆ ಸೃಷ್ಟಿಯ ಪ್ರಾಣದ ತತ್ತಳಿಕೆ (ಭಾವಗೀ. ೩೪೫). [ ತತ್ತಳ$_1$ (<ತಟತಟ) + – ಇಕೆ ]

**ತತ್ತಳಿಸು** 'ತಟತಟಿಸು' ನೋ.

△ **ತತ್ತಱ** 'ತತ್ತರ' ನೋ.

**ತತ್ತಱಂತಱು** 'ತತ್ತಱಂದಱು' ನೋ.

**ತತ್ತಱಂದಱು,** ತತ್ತರಂದರಿ, ತತ್ತರದರಿ, ತತ್ತಱಂತಱು, ತತ್ತಱತಱು, ತತ್ತಱದಱು, ತತ್ತಱಾದಱು, ತಳ್ಳಱದಱು (ಕ್ರಿ). ಚೂರುಚೂರಾಗಿ ಕಡಿ ; ಕೊಚ್ಚಿಹಾಕು : ಖದಿರಯುಗಳಮಂ ತಱುವಂತೊಂದಿ ನಿಲ್ಲದಿಂದೆ (ದಲ್) ತತ್ತಱಂದಱುವೆನೆಂದು (ಶಾಂತಿಪು. ೩-೭೬ ವ); ವೀರರಂ ಧುರದೊಳೆ ತತ್ತಱಂದಱಿದು ತಳ್ಗಿಸುತ . . . ನೆಗಳ್ದನಕ್ರಮಕಾರಿ ಜಿತಾರಿ ತಾರಕಂ (ಗಿರಿಕ. ೬-೫) ; ನಿನ್ನನೀ ಧುರದೊಳೆನ್ನ ಶರಾಳಿಯ ಕೂರ್ಪು ತತ್ತಱಂದಱುಯದೆ (ಮಹಾನೇ. ೭-೨೪) ; ಗಜನಿಕರದೊಳ್ ಕಂಠೀರವಂ ಪೊಕ್ಕು ತತ್ತಱಂದಱುಪೋಲ್ (ಜಿಬಪು. ೪೩-೯) ; ದುಷ್ಟರಾಕ್ಷಸರಂ ಸಮೂಲಂ ತತ್ತಱಂದಱುದುದಱುಂ ಮೂಜಗಮುಂ ಸೊಗಂ ಬಾಳ್ವುದು (ರಾಮಾಶ್ವ. ೧೨-೧೩). **ತತ್ತರಂದರಿ:** ಸಿಂಹವಕ್ತ್ರನ ಸೇನೆಯುಂ ಬಿಡದೆ ತತ್ತರಂದರಿವುತಿರೆ (ಘೋರಾಸು. ೬೯-೨೨). **ತತ್ತರದರಿ :** ಅವನ ಸೈನ್ಯದವರಸ್ನೂ ತತ್ತರದರಿದೇ ತೀರಿಸೋಣ (ವಿಗಡ. ೫೨-೨). **ತತ್ತಱಂತಱು :** ಗಾಣದೊಳಿಕ್ಕಿ ಪಿಱುವ

ಕೀಸಿ ಸಾಸಿವೆಯಂ ಬಱಿವ ತತ್ತಱಿಂ[ಪಾಠಾಂ. ಟಿ] ತ[ಪಾಠಾಂ. ದ]ಱಿವ ಪಲತೆಱದ ದಂಡನೆಗಳುಂ (ವರ್ಧಪು. ೧೧-೪೭ ವ). **ತತ್ತಱತಱಿ:** ಗೋವರಣ್ನ ಬರೆ ಪಾಯಿಸಿ ಘೋಟಿಯಿಲರ್ ತಗುಳ್ದು ತತ್ತಱತಱಿ [ಪಾಠಾಂ. ಳ್ದಱಿದಿಱಿ, ಳ್ದುಱದಿಱಿ]ದಿಕ್ಕಿ ದೇಗುಲಕೆ ಪೆರ್ಮರನಂ ಕಡಿವಂತೆ ಮಾಡಿದರ್ (ಪಂಪಭಾ. ೮-೯೫); ಬಾಗಿಲೊಳ್ ಮುಸುಱಿ ನಿಂದ ಘಟಾವಳಿಯಂ ತೆರಳ್ಚಿ ತತ್ತಱದಱಿದೊತ್ತಿ ಪೊಕ್ಕನಭಿಮನ್ಯು ವಿರೋಧಿ ಬಳಾಂಬುರಾಶಿಯಂ (ಪಂಪಭಾ. ೧೧-೯೩); ಸುತ್ತಿದ ಅಷ್ಟಮದಂಗಳನೆಲ್ಲವ ತತ್ತಱದಱಿದನು ತನುಗುಣಂಗಳ (ಶಿವಗೀ. ೨೪೯); ತತ್ತಱದಱಿದು ಹೊಯ್ದಾಡಿದರ್ಘ ಗುಜ್ಜರದ ರಾವುತರು (ಕುಮಾಭೀ. ೪-೭೦); ಅನಿತು ಬಲ ಮಂ ಕರದ ಚಕ್ರದಿಂ ತತ್ತಱದಱಿದು (ಜೈಮಿಭಾ. ೨೦-೫೦). **ತತ್ತಱಿದಱಿ:** ಹಸಿವು ತೃಷೆ ವಿಷಯವೆಂಬ ಮರಂಗಳನೆ ಕಂಡು ಪರಿಣಾಮವೆಂಬ ಕೊಡಲಿ ಯಲ್ಲಿ ತತ್ತಱಿದಱಿದು (ಚನ್ನವ. ಶ. ೧೮೯-೨೭೭); ಆಳ ತತ್ತಱಿದಱಿದು ತಳಪಟ ಮಾಡಿದನು ದ್ರೋಣ (ಕುಮಾದ್ರೋ. ೧೮-೪೭); ಶ್ರೀಗಿರಿಯಲ್ಲಿ ಗೆಯ್ದು ತನುವ ತತ್ತಱಿದಱಿದನಘನೆಂದೆನಿಸಿಕೊಂಡನು (ಭೈರವೇ. ೧-೩೪೦). **ತಳ್ತಱಿದಱಿ:** ಭಾಳ ಕೀಲಿಱ್ಗ್ನನೆಯಿಂ ತಳ್ತಱಿದಱಿ [ಪಾಠಾಂ.ಟಮಾಱಿ] ದುಬ್ಬರವೆಂಬಿವನಱಿದಿಱಿದರ್ ಪೆಣಬಣಂಬೆಗಳ್ ನಗೆವಿನೆಗಂ (ಪಂಪಭಾ. ೧೦-೮೨).

**ತತ್ತಱಿಂದಱಿಯಿಸಿಕೊಳ್** = ಚೂರುಚೂರಾಗಿ ಕತ್ತರಿಸಿಕೊಳ್ಳು: ಹೊತ್ತಗಾಯದೊಳುರುಳಬೀಳುವರ್ಗಡಿಯಿಲ್ಲತತ್ತಱಿಂದಱಿಯಿಸಿ ಕೊಳುತ್ತ ಹೊಯ್ದಾಡುವರ್ಗಡಿಯಿಲ್ಲ (ಸಮ್ಯಕೌ. ೮-೪೧). [ <ತಱಿ$_1$ ]

△ **ತತ್ತಱಗೊಳ್** (ಕ್ರಿ). ಕಂಗೆಡು; ತಬ್ಬಿಬ್ಬಾಗು; ದಿಕ್ಕುತಪ್ಪು: ಭೂಪಾಲರ ಪಡೆ ತಳವೆಳಗಾಗಿ ತತ್ತಱಗೊಳುತ . . . ಕವಿದುದು (ಕರ್ಣಮ. ೫-೧೭).

[ ತತ್ತಱ (<ತತ್ತರ) + ಕೊಳ್$_1$ ]

**ತತ್ತಱತಱಿ** 'ತತ್ತಱಿಂದಱಿ' ನೋ.

**ತತ್ತಱದಱಿ** 'ತತ್ತಱಿಂದಱಿ' ನೋ.

**ತತ್ತಱಿದಱಿ** 'ತತ್ತಱಿಂದಱಿ' ನೋ.

**ತತ್ತಟಿ** 'ತಟಿತಟಿ' ನೋ.

**ತತ್ತಟಿಗುದಿ** 'ತಟಿತಟಿಗುದಿ' ನೋ.

**ತತ್ತಟಿದುಟಿ** 'ತೊಟ್ಟುಟಿದುಟಿ' ನೋ.

**ತತ್ತಾತಿತ್ತಿ** (ನಾ). (?): ಹುಟ್ಟುವಾತ ಮದ್ದಳೆಯ ಕಟ್ಟಿದ ನಡೆವಾತ ತಾಳವನೊತ್ತಿದ ಬಿಡುವಾತ ಶ್ರುತಿಯನೆತ್ತಿದ ತತ್ತಾತಿತ್ತಿಯೆಂಬಾಟ ಇತ್ತಲೆ ಉಳಿಯಿತ್ತು (ಅಂಬಿವ. ೨೦೬-೨); "ಆತ್ಮತ್ರಯಂಗಳಲ್ಲಿ ಕೂಡಿ ಪ್ರವರ್ತಿ ಸುತ್ತಿರ್ಪರೆಂಬುದೀಗ ತತ್ತಾತಿತ್ತಿಯೆಂಬಾಟಯೆಂಬ ಶಬ್ದಕ್ಕರ್ಥ" (ಅಂಬಿವ. ಟೀಕು). [ ? ].

**ತತ್ತಿ** (ನಾ). ಮೊಟ್ಟೆ; ಅಂಡ: "ಅಂಡಂ ತಾಂ ತತ್ತಿ" (ವಸುಕೋ. ೪೦-೧೧); "ಪೇಶೀ, ಕೋಶಃ,ಅಂಡಂ – ಈ ೩ ತತ್ತಿ" (ನಾಚಿರಾ. ೦೦೫); ಓವದೆ ರಣದೊಳ್ ಮಕ್ಕಳನಾಂ ಕೊಂದೊಡೆ ತನ್ನಿಕ್ಕಿದ ತತ್ತಿಯನೆ ಪಾವು ನೊಣೆವಂತಕ್ಕುಂ (ಪಂಪಭಾ. ೧೦-೧೩); ನೆಲಕ್ಕೆ ಬಿಱ್ದಡೆದ ಪಲ್ಲಿಯ ತತ್ತಿಯೊಳಗಿರ್ದ ಮಱಿ ಕಲದೊಳಿರ್ದ ಮಕ್ಷಿಕಮಂ ಪಿಡಿದುಕೊಳ್ವುದಂ ಕಂಡು (ಚಾವುಂಪು. ೯೯-೧೩); ನೆಗೆದ ಮುಗಿಲ್ವೊಯ್ಲಿಂ ತಾರಗೆಗಳ್ ಪಿರಿದೊಡೆದು ಸೂಸಿದಪ್ಪುವೆನಲ್ ಮಿಂಚುಗಳಿಕ್ಕುವ ತತ್ತಿಗಳೆನಲುಗು ತಂದವು ತುಱುಗಿ ತೋರವನಿ ಪೊಸಗಾರೊಳ್ (ಮಲ್ಲಿಪು. ೮-೮೭); ತಾರಗೆಗಳ ತತ್ತಿಗಳಂ ಕಾರಿರುಳೊಳ್ ಕಱಿವ ಗಗನಲಕ್ಷ್ಮಿವೊಲ್ (ಸೂಕ್ತಿಸು. ೬-೧೭); ತರಣಿಬಿಂಬದ ತತ್ತಿಗಳನುತ್ತರಿಸಿ ತೋಱುವ ತಿಮಿರವುಂಟೇ (ಕುಮಾಕ. ೧೬-೩೭). [ ದೇ.॥ ತುಳು. ತತ್ತಿ ]

**ತತ್ತಿಕ್ಕು** (ಕ್ರಿ). "ಆಲಿಂಗಿಸು, ಸೇರಿಸು" (ಸಿದ್ಧರಾ. ಕೋಶ.): ಹೊತ್ತ ಮದನನ ವೇಷವವಯವದೊಳತಿ ಚೆಲುವುವೆತ್ತ ರತಿಕಲಹಚಿಹ್ನಂ ಹಸಿಯ ಹರೆಯ ಕೈ ತತ್ತಿಕ್ಕಿದೆಡದ ಕೋಮಳೆವೆರಸಿ ಬಂದು ವಂದಿಸಿ ನಿಂದು ನೀಲಪಟನು (ಸಿದ್ಧರಾ. ೪-೬೧). [ ತತ್ತು$_4$ + ಇಕ್ಕು ]

**ತತ್ತು$_1$** (ಕ್ರಿ). ಆಲಿಂಗಿಸು; ಅಪ್ಪು: ಜಪವನಲುಕುತಂ ಕುಲುಕುತಂ ಇಷ್ಟಲಿಂಗವ ಪಣೆಯೊಳೊತ್ತುತಂ ತತ್ತುತಂ ಶಿಷ್ಟಪೂಜೆಯ ತೋಱಿಯ ಸನಕಂ ವ್ಯಸನಕಂ ವ್ಯಾಪರಿಪನೆ ಶರಣನು (ಷಶಿಲ. ೫-೭೫). [<ತಱ್$_1$]

**ತತ್ತು$_2$** (ನಾ). ೧. ಸೇರಿಕೊಂಡಿರುವುದು; ಸಂಬಂಧಿಸಿರುವುದು; ಹೊಂದಿಕೆ; ಜೋಡಣೆ; ಸಂಬಂಧ: ತಿರುಳು ಅಂಕುರ ನಾಸ್ತಿಯಾದಲ್ಲಿ ಸಿಪ್ಪೆ ಹುಟ್ಟುವುದಕ್ಕೆ ಉಭಯದ ತತ್ತಿಲ್ಲದಾಗದು (ಅಱಿಮಾ. ೧೩೯-೧೩೧); ಕುಂಭಗಳ ಹುದುಗಿಕ್ಕಿದ ಕಿಚ್ಚು . . . ಒಳಗೆ ಮುಟ್ಟಿದಡೂ ಹೊಱಗೆ ಮುಟ್ಟಿದಡೂ ಪಾಕಪ್ರಯತ್ನ ತಪ್ಪದಾಗಿ ಇಂತೀ ಗುಣದಂತೆ ಹೊಱಗಣ ಕ್ರಿಯಾಪದ ಒಳಗಣ ಜ್ಞಾನಸಂಭವ ಉಭಯದ ತತ್ತಿಲ್ಲ (ಮದೇವ. ೨೭೬-೨೭). ೨. ಹಂಚಿಕೊಂಡ ಭಾಗ,–ಪಾಲು: ಮಹಾಜನಂಗಳು ತಂವೊಳು ಸರ್ವೈಕಮತ್ಯವಾಗಿ ತಮಗೆ ಪ್ರವಿಷ್ಟವಾದ ಭೂರಣನ ನಿರುಗುಂದದ ಹಳ್ಳಿಗಳನು ಧ್ರುವವುಂಡಿಗೆಯಾಗಿ ಹಚ್ಚಿಕೊಂಡ ಕ್ರಮ ಆನೆಗನ ಕೆಱೆ ಆ ಕಾಳಬೋವನಹಳ್ಳಿ ಮಂಚಗೌಡನಹಳ್ಳಿ ತತ್ತು ೧ ಕಂ ವೃತ್ತಿ ೨೪ . . . ಅಜ್ಜಗೌಡನಹಳ್ಳಿ ಕುನಿಕಿಲ ಹಳ್ಳಿ ತತ್ತು ೧ ಕಂ ವೃತ್ತಿ ೨೭ ಅನ್ತು ತತ್ತು ನಾಲ್ಕಕಂ ವೃತ್ತಿ ನೂಱು (ಎಕ. XII, ತಿಪಟೂ. ೪೧-೪೩; 1324); ಮಾರು ಗಡಿಗೆಯ ಮಲ್ಲರಸಯ್ಯಂಗಳ ತತ್ತಿನ ಹೊಂನೆಯನ ಹಳ್ಳಿ . . . ಆ ತತ್ತಿನ ವೃತ್ತಿ ಹನ್ನೊಂದಱವೊಳಗಣ ವೃತ್ತಿಗಳಿಗೆ ಹಳ್ಳಿವಿವರಣೆಗಳಾಗಿ . . . ಮಾಡಿಕೊಂಡ ಕ್ರಮ (ಮೈಆರಿ. ೧೯೪೦, ೧೦-೧೨; 1360); ಗುಂಭಳ್ಳೀ ಗ್ರಾಮದಲ್ಲಿ ಕಾಗಲವಾಡೀ ತತ್ತಿನ ಮಹಾಜನರಿಗೆ ಬಿಡಿಸಿಕೊಟ್ಟ ಹೊಲಕ್ಕೆ ನೆಟ್ಟ ಕಲ್ಲ ವಿವರ (ಎಕ. III, ತಿರುಮ. ೬೩-೫೭೦; 1748).

**ತತ್ತುಮಾಡಿಸು** = ಸೇರುವಂತೆ ಮಾಡು; ಸೇರಿಸು: ಎತ್ತಿ ಬರೆಯಿಸಿ ಖಾನರ ರಾಜ್ಯಂಗಳ ತತ್ತುಮಾಡಿಸಿ ಬಾದುರಗೆ ಇತ್ತನು (ಕುರಾಸಾಂ. ೧೮-೯೮). **ತತ್ತುಹಾಕು** = (ಕರಾ) (ದನಗಳನ್ನು) ಜೊತೆಯಾಗಿ ಕಟ್ಟು: ಇಷ್ಟು ಕಿರಿಯಗಲದ ದಾರಿಯಲ್ಲಿ ದನಗಳಿಗೆ ತತ್ತುಹಾಕಿ ಹೊಡೆದರೆ ನಡೆಯಲಾಗಲಿಕ್ಕಿಲ್ಲ (ರೂಢಿ). [ <ತತ್ತು$_1$ ]

**ತತ್ತು$_3$** (ನಾ). ೧. ಎಡಹುವಿಕೆ; ಮುಗ್ಗರಿಸುವುದಂ: (ಶ). ೨. ಅಪಾಯ; ಗಂಡಾಂತರ; ದುರದೃಷ್ಟ: ಕರಮೆಸೆದತ್ತು ಕೌಮುದಿಯ ಬಿತ್ತು ಚಕೋರಿಯ ತುತ್ತು ನೀರಜೋತ್ಕರದ ವಿಪತ್ತು ತಾರಗೆಗಳ ತತ್ತು [ಪಾಠಾಂ. ತುತ್ತು, ಕರ್ತು]ಸುಧಾಂಬುಧಿಯೊತ್ತು . . . ಮೂಡ ದೆಸೆಯಿಂದೊಗೆತರ್ಪ ಹಿಮಾಂಶುಮಂಡಲಂ (ಗಿರಿಕ. ೪-೮೫); (ಪುಣ್ಯಾಸ್ರ. ೧-೧೧೭ ನೋ).

[ ದೇ.॥ ತಮಿ. ತತ್ತು ]

**ತತ್ತು$_4$** (ನಾ). ಅದು; ಪರಮಾತ್ಮ: ಭಕ್ತನ ತತ್ತು ಕುಱುಹಿನ ಇಷ್ಟ ಐಕ್ಯನ ತತ್ತು ಕುಱುಹಿನ ಕಳೆ (ಕಲ್ಯಾಣಾಂ. ೨೯೪-೫೮). 'ತತ್ತುಗೊತ್ತು' ಪರಾ.

**ತತ್ತಾಗು** = ಅದು ಆಗು; ಪರಮಾತ್ಮನಾಗು: ಆತ್ಮಘಟ ಮಧ್ಯ ದಲ್ಲಿ ನಿಂದು . . . ಬಾಯಲ್ಲಿ ಉಂಬಂತೆ ಪಂಚೇಂದ್ರಿಯಕ್ಕೆ ತತ್ತಾಗಿ ಹಂಚಿ ಕೊಂಡಿಹುದು ಒಂದೆ ಆತ್ಮ (ಅಱಿಮಾ. ೧೪೪-೧೪೯); ಕತ್ತಲೆಯು ಬೆಳುದಿಂಗಳೆಂಬೆರಡು ಕುಱುಹಿಲ್ಲದತ್ಯಮಲ ದಿವದಲ್ಲಿ ಬಱಿಯ ಬಿಸಿಲಿಪ್ಪಂತೆ ತತ್ತಾದ ಪುಣ್ಯಪಾಪದ ಕುಱುಹಿಗೆಡೆಗುಡದ ಭಕ್ತಿಯೆನಿಸುವ ಪದದಲಿ ನಿತ್ಯ ವೆನಿಸುವ ಶೈವತೇಜವೇ ತೊಳಗಿ ಬೆಳಗುತಿಪ್ಪುದು (ಲಶಿಚಂ. ೫೪-೪೫); "ಯಥಾರ್ಥವಾದ, ಅದರತನ ಒದಗಿದ, ಸಂಬಂಧಿಸಿದ" (ಲಶಿಚಂ. ಕೋಶ). [ <ಸಂ. ತದ್ ]

**ತತ್ತು₅** 'ತಳ್₃' ಪರಾ.

**ತತ್ತುಕ**(ನಾ). ಜೊತೆಯಂವ ; ಗೆಳೆಯ ; ಜೊತೆಗಾರ (?) : ಹುತ್ತಿನಿಂ ಫಣಿವೆರಸಿ ಕೆಡೆಯೆ ಕಂಡೊಡನಿರ್ದ ತತ್ತು[ಪಾಠಾಂ. ಜತ್ತ]ಕಂಗಳು ಹೆದಱಿ ಬಿಟ್ಟೋಡಿ ಹೋದರೂರತ್ತಲ್ (ಹಜಕಾ. ೧೩-೧೦) : "ಬಾಲಕ" (ಪ್ರಭಣ್ಣ); "ವಟು" (ಷಟ್ಪನಿ). [ ತತ್ತು₂ + -ಕ₃ ]

**ತತ್ತುಗಾಱಿಕೆ** (ನಾ). ಪರಸ್ಪರ ಹೊಂದಾಣಿಕೆ : ಎತ್ತ ನಡೆದಳವಳೆಡಬಲ ಕೊಲೆದಳೆನ್ನತ್ತ ಬಂದಂತಾಯ್ತು ನಿಮ್ಮ ತತ್ತುಗಾಱಿಕೆಯು ಬಲ್ಲೆನು ಸುಮ್ಮನಿರಿಯೆಂದು ಒತ್ತಿ ನುಡಿದನು ರಾಣಿಯರ (ಭರಜ. ೧೪-೧೩೫).
[ ತತ್ತು₂ + -ಕಾಱ + -ಇಕೆ ]

**ತತ್ತುಗೊತ್ತು** (ನಾ). "ತತ್ತ್ವದ ಗೊತ್ತು, ನಿಜದ ತಿಳಿವಳಿಕೆ" (ವೀಶೈಮಾ. ಕೋಶ) : ಇಷ್ಟಲಿಂಗಕ್ಕು ಪ್ರಾಣಲಿಂಗಕ್ಕು ತತ್ತುಗೊತ್ತಲ್ಲದೆ ಬೆಚ್ಚಂತಿರಬಲ್ಲರೆ ಆತನೇ ಇಷ್ಟ – ಪ್ರಾಣ – ತೃಪ್ತಮುಕ್ತನೆಂಬೆ(ವೀಶೈಮಾ. ೧೯-೭೩) : ನಿನ್ನಂಗವೆನ್ನಂಗದಲ್ಲಿ ಪ್ರೇರಿಸಿ ನಿನ್ನಲಿವು ಎನ್ನಾತ್ಮನಲ್ಲಿ ನಿಂದು ಅಱಿವಹನ್ನಕ್ಕ ನನಗೂ ನಿನಗೂ ತತ್ತುಗೊತ್ತು (ಸರ್ವವ. ೫೮-೩೦೩) ; ರೂಪುರುಚಿಯಾಗುವ ಭಾವ ನಿನ್ನೊಡನೆ ನನಗೂ ನಿನಗೂ ತತ್ತುಗೊತ್ತು (ಸುಂಕಬಂ. ೪೪) ; ಮನ ವಚನ ಕಾಯ ತ್ರಿಕರಣಶುದ್ಧವಾಗಿ ಭಕ್ತಂಗೆ ಸತ್ಯ ವಿರಕ್ತಂಗೆ ಜ್ಞಾನವೆಂದು ತತ್ತುಗೊತ್ತನಿಕ್ಕಿ ಹಚ್ಚಿ ಹಾಯ್ಕಿದಲ್ಲಿ ಈ ಉಭಯದ ಚಿತ್ತದಲ್ಲಿ ವೇದಿಸುವ ವಸ್ತು ಆವುದು (ಮಾಧೂಳ. ೪೭೩-೭೯).
[ ತತ್ತು₀ + ಗೊತ್ತು ]

**ತತ್ತುಗೊಳ್** (ಕ್ರಿ). ಕೂಡಿಕೊಳ್ಳು ; ಸೇರಿಕೊಳ್ಳು : ತತ್ತುಗೊಂಡಿಹ ಮಹಾದೋಷಗಳು ನಾಲ್ಕು (ರತ್ನಶಾ. ೨೦-೦೩). [ ತತ್ತು₂ + ಕೊಳ್₁ ]

**ತತ್ತುಪಣ, ತತ್ರಪಣ** (ನಾ). ಜೊತೆಗೊಳಿಸುವಿಕೆ; ಹೊಂದಿಕೊಳ್ಳುವಿಕೆ: ನಿತಂಬಿನಿ ನಾನಾಪ್ರಕಾರದ ತತ್ತುಪಣಂಗಳಿಂ ಜೊತ್ತಿಸಿ ವಶೀಕೃತಂಮಾಡಿ (ಸುಕುಮಾ. ೭-೧೩ ವ). 'ತತ್ತುಪಣಂಗೆಯ್' ಪರಾ. **ತತ್ರಪಣ** : 'ತತ್ರಪಣಂಗೆಯ್' ಪರಾ. 'ಜಾಣಪಣ' ಹೋ.
[ ತತ್ತು₂ + -ಪಣ₁ ]

**ತತ್ತುಪಣಂಗೆಯ್, ತತ್ರಪಣಂಗೆಯ್** (ಕ್ರಿ). ಜೊತೆಗೊಳಿಸು (?) : ಮೇಗುದೋಱುವರ್ ತತ್ತುಪಣಂ[ಪಾಠಾಂ. ವಳ್ಳುಳ್ಳುಪಣಂ]ಗೆಯ್ವರ್ ಮೆಳ್ಪಡಂ ನುಡಿವರ್ (ಮದತಿ. ೧೦-೭೫). **ತತ್ರಪಣಂಗೆಯ್** : ನಿಜ ತನೂಜಂಗೆ ವಿವಾಹೋತ್ಸವಮಂ ಮಾಡಲೆಂದು ಮನದೊಳ್ ಮಂತಣಮಿರ್ದು . . . ತನ್ನ ಬಲ್ಲಂದದೊಳೆಲ್ಲಂ ನುಡಿದೊಡಂಬಡಿಸಲೆಂದು ಕೆಲಕ್ಕೆ ಬಂದು ಕೆಯ್ಯನೊತ್ತಿಯುಂ ಕಾಲನೊತ್ತಿಯುಂ ತತ್ರ[ಪಾಠಾಂ. ತ್ತು]ಪಣಂಗೆಯ್ದು (ಅಜಿಪು. ೫-೯೫ ವ). [ ತತ್ರಪಣ + ಕೆಯ್₁ ]

**ತತ್ತುವ** 'ತತುವ' ನೋ.

**ತತ್ತ್ವ**(ನಾ). ೧. ಪರಮಾತ್ಮನ ಸ್ವರೂಪವೇ ಆಗಿರುವ ಆತ್ಮನ ಸ್ವರೂಪ. ೨. ದಿಟ; ಸತ್ಯ : ಸಾವುಂ ಪುಟ್ಟುಮದಿಲ್ಲದನಾವನವಂ ದೇವನಾತನೆಂದುದೆ ತತ್ತ್ವಂ (ಪಂಚತಂ. ೧೩೦-೧೭) ; ಬಿಸುಟು ಮಿಥ್ಯಾಮಾರ್ಗಮಂ ಮಾಯೆ ಲೌಕಿಕಮಂ ತತ್ತ್ವವಿರುದ್ಧಮಂ ಕುಮತಮಂ (ಸುಕುಮಾ. ೧-೪೭) ; ತತ್ತ್ವವನಱಿದೆನೆಂದು ಮೃತ್ಯುವ ಕರೆಕೊಂಡೆನಯ್ಯಾ (ಬಸವ. ೩೨೭). ೩. ಸಾರಭೂತವಾದ ಗುಣ ; ಸಾರಸತ್ತ್ವ. ೪. ಮೂಲಭೂತವಾದ ವಸ್ತು; ಭೂಮಿ, ನೀರು, ತೇಜಸ್ಸು, ಅನಿಲ, ಆಕಾಶವೆಂಬ ಪಂಚ ಮಹಾಭೂತಗಳು : "ಭೂಸಲಿಲ ತೋಜೋನಿಲಾಕಾಶಮಿವು ತತ್ತ್ವ ಭಾಷೆಯುಕ್ಕು" (ಮಂಗರಾ. ೧೭-೧೪). ೫. ಸೃಷ್ಟಿಯ ಎಲ್ಲ ವಸ್ತುಗಳಲ್ಲಿಯೂ ಇರುವ ಸತ್ತ್ವ, ರಜಸ್ಸು, ತಮಸ್ಸೆಂಬ ಮೂರು ಗುಣಗಳು. ೬. (ಸಾಂಖ್ಯದರ್ಶನದ ಪ್ರಕಾರ) ಮೂಲಭೂತವಾದ ಇಪ್ಪತ್ತೈದು ವಸ್ತುಗಳು : "ಪ್ರಕೃತಿ ಮಹತ್ ಅಹಂಕಾರ, ಕಣ್ಣು ಮೊದಲಾದ ಜ್ಞಾನೇಂದ್ರಿಯಗಳು ಐದು, ವಾಕ್ಕು ಮೊದಲಾದ ಕರ್ಮೇಂದ್ರಿಯಗಳು ಐದು, ಉಭಯ ಸ್ವರೂಪವಾದ ಮನಸ್ಸು ತನ್ಮಾತ್ರೆಗಳು ಐದು, ಆಕಾಶಾದಿ ಭೂತಗಳು ಐದು ಜೀವಾತ್ಮನೂ ಸೇರಿ ಇಪ್ಪತ್ತೈದು ತತ್ತ್ವಗಳು" (ಹಿಂದಸಾ. ೫೫). ೭. ಇಪ್ಪತ್ತೈದು ಎಂಬ ಸಂಖ್ಯೆಯ ಸಂಕೇತ: "ತತ್ತ್ವಮಿಪ್ಪತ್ತೈದು" (ಮಂಗರಾ. ೦೦೪-೯). ೮. ಸಿದ್ಧಾಂತ ; ನಿಯಮ ; ಸೂತ್ರ : 'ಮುಯ್ಯಕ್ಕೆ ಮುಯ್ಯ' ಎಂಬ ತತ್ತ್ವವನ್ನು ಲೋಕಮಾನ್ಯ ಟಿಳಕರು ಪ್ರತಿಪಾದಿಸಿದರೆ . . . ಮೋಸಕ್ಕೆ ಸತ್ಯವೆಂದು ಮಹಾತ್ಮಾ ಗಾಂಧೀಜಿಯವರು ಸಾರಿದರು (ಧರ್ಮಸಾ. ೧೪೮). 'ತತ್ತ್ವಪ್ರಣಾಳಿ' ಪರಾ. ೯. ಆಗಮದ ರೀತಿಯಲ್ಲಿ ಉಕ್ತವಾದ ೩೬ ತತ್ತ್ವಗಳು : ಷಟ್ತ್ರಿಂಶ ತತ್ತ್ವಕ್ಕತೀತ ಕೂಡಲಸಂಗ (ಬಸರ. ೦೩-೬೭) ; ಆಗಮ ರೀತ್ಯಾ ಷಟ್ತ್ರಿಂಶ ತತ್ತ್ವಗಳು (ವಿವೇಕ. ೧೭೩). ೧೦. ಅರ್ಥ; ತಾತ್ಪರ್ಯ: ಸಂಧಿ ವಿಭಕ್ತಿ ಸಮಾಸಗಳಂದಮನವಱಿದೆಯೊಳ್ಪಿದೆ ತುಱುಗಿದ ತತ್ತ್ವದ ಬಂಧ ಮನಱಿಯದೆ ಪೇಟ್ವಂ ಮಂದಿಯ ಕಂಡೊಳ್ವ ನಾಯಿ ನಿಷ್ಕಾರಣದೊಳ್ (ಜಕುನಿ. ೧೩೭). ೧೧. [ಕಾವ್ಯಮೀ]ಶ್ಲೇಷಾಲಂಕಾರಗಳಲ್ಲಿ ಒಂದು ಬಗೆ; ಒಂದು ಅರ್ಥದ ಜೊತೆಯಲ್ಲಿಯೇ ಮತ್ತೊಂದು ಅರ್ಥವು ಬರುವಂತೆ ಮಾಡುವ ವರ್ಣನೆ : ಬಗೆಗೆ ಪೆಱತರ್ಥಮೊಂದಂ ನೆಗಟ್ಟುತುಂ ನೆಗಟ್ವ ತತ್ತ್ವವರ್ಣನೆ ತತ್ತ್ವಂ (ಕಾವ್ಯಾವ. ೭೫೫). ೧೨. [ಸಂಗೀತ] ವಿಲಂಬಿತ ಲಯ : (*). P ಈ ಶಬ್ದವನ್ನು 'ತತ್ವ' ಎಂದು ಬರೆಯುವುದೂ ಉಂಟು. [ ಸಂ. ]

**ತತ್ತ್ವಕಾರಣ** (ನಾ). ಸೃಷ್ಟಿತತ್ತ್ವಕ್ಕೆ ಆಧಾರಭೂತನಾದವನು: ತತ್ತ್ವತೀತಂ ತತ್ತ್ವವಿಭುತ್ವಯುತಂ ತತ್ತ್ವಕಾರಣಂ . . . ಎಸೆದನಾಸ್ಥಾಯಿಕೆಯೊಳ್ (ರಾಜಶೇ. ೧೪-೧೧೧). [ ತತ್ತ್ವ + ಕಾರಣ ]

**ತತ್ತ್ವಕೋವಿದ** (ನಾ). ತತ್ತ್ವವನ್ನು ಕೂಲಂಕಷವಾಗಿ ಬಲ್ಲವನು; ತತ್ತ್ವಜ್ಞಾನಿ : ವಿಶ್ವವಿಖ್ಯಾತ ತತ್ತ್ವಕೋವಿದರು, ಉದ್ದಾಮ ಸಾಹಿತಿಗಳು ಭಗವದ್ಗೀತೆಯ ಅಮೃತಪಾನ ಮಾಡಿ ತಮ್ಮ ಬಾಳಜ್ಯೋತಿಯನ್ನು ಬೆಳಗಿಸಿಕೊಂಡಿದ್ದಾರೆ (ಧರ್ಮಸಾ. ೧೨೭).
[ ತತ್ತ್ವ + ಕೋವಿದ ]

**ತತ್ತ್ವಗರ್ಭ** (ನಾ). ತತ್ತ್ವದಿಂದ ತುಂಬಿದುದು; ತತ್ತ್ವಜ್ಞಾನವನ್ನೊಳಗೊಂಡುದು : ಭಾವಂ ಭಾಸುರ ತತ್ತ್ವಗರ್ಭಮಯನಂ ಚಾರಿತ್ರಗರ್ಭಂ . . . ಎಂಬನ್ನೆಗಂ ತ್ರೈವಿದ್ಯ ಶ್ರುತಕೀರ್ತಿದೇವನೆಸೆದಂ (ಚಂದ್ರಪು. ೧-೩೪).
[ ತತ್ತ್ವ + ಗರ್ಭ ]

**ತತ್ತ್ವಚಯ** (ನಾ). ತತ್ತ್ವಗಳ ಸಮೂಹ : ಜಿತಕರ್ಮಂ ಸಮುಪಾತ್ತ ತತ್ತ್ವಚಯಮುರ್ವರ್ಮಂ . . . ಜಿನಧರ್ಮಂ (ಚಂದ್ರಪು. ೧-೮).
[ ತತ್ತ್ವ + ಚಯ ]

**ತತ್ತ್ವಜ್ಞ**(ನಾ).=ತತ್ತ್ವಕೋವಿದ : ಕಲಾಕುಶಲನಂ ತತ್ತ್ವಜ್ಞನಂ ಪೆತ್ತಪೈ (ಪಂರಾಮಾ. ೧೦-೧೪). [ ಸಂ. ]

**ತತ್ತ್ವಜ್ಞಾನ** (ನಾ). ಮೋಕ್ಷಕ್ಕೆ ಸಾಧಕವಾದ ಪರಮಾತ್ಮನ ಅರಿವು; ಸತ್ಯದ ಅರಿವು :). ತತ್ತ್ವಾಲೋಕಂ – ತತ್ತ್ವಜ್ಞಾನಂ (ಅಪ್ಪುದು) (ಶಮುದ. ೩ ಟೀಕು). [ ತತ್ತ್ವ + ಜ್ಞಾನ ]

**ತತ್ತ್ವಜ್ಞಾನಿ** (ನಾ). ತತ್ವಗಳನ್ನು ಬಲ್ಲವನು; ದಾರ್ಶನಿಕ : ರಾಮಕೃಷ್ಣ ಪರಮಹಂಸ, ವಿವೇಕಾನಂದ ಅರವಿಂದರಂಥ ತತ್ತ್ವಜ್ಞಾನಿಗಳು . . . ಭಗವದ್ಗೀತೆಯಿಂದ ಸ್ಫೂರ್ತಿ ಪಡೆದಿದ್ದಾರೆ (ಧರ್ಮಸಾ. ೧೨೭).
[ ಸಂ. ತತ್ತ್ವಜ್ಞಾನಿನ್ ]

**ತತ್ತ್ವದರ್ಶಿ** (ನಾ).=ತತ್ತ್ವಜ್ಞಾನಿ : ಈ ವೈವಿಧ್ಯ ಪ್ರಯೋಜನದ ತತ್ತ್ವವನ್ನು ಪ್ಲೇಟೋ ತತ್ತ್ವದರ್ಶಿಯು ಬಹುವಾಗಿ ಪ್ರತಿಪಾದಿಸಿದ್ದಾನೆ (ರಾಜ್ಯಶಾ. ೪೩). [ ಸಂ. ತತ್ತ್ವದರ್ಶಿನ್ ]

**ತತ್ತ್ವದೃಷ್ಟಿ** (ನಾ). ಪರತತ್ತ್ವವನ್ನು ಕುರಿತ ಆಲೋಚನೆ; ತಾತ್ತ್ವಿಕ ದೃಷ್ಟಿ: ಭಾರತೀಯ ತತ್ತ್ವದೃಷ್ಟಿಗೆ ತಾತ್ತ್ವಿಕ ವಿಮರ್ಶೆಯೇ ಮುಖ್ಯವಾಗಿ ಕಾಲಮಾನಗಳ ವಿಚಾರ ಅಪ್ರಸ್ತುತವೆನಿಸಿದಂತಿದೆ (ಭಾರದ. ೧೧೯). [ತತ್ತ್ವ + ದೃಷ್ಟಿ]

**ತತ್ತ್ವಪರಿಣತ**(ನಾ).=ತತ್ತ್ವಕೋವಿದ: ಸುದತ್ತಾಚಾರ್ಯರ ಸಮುದಾಯದೊಳಿರ್ದು ತತ್ತ್ವಪರಿಣತನಾದಂ (ಯಶೋಚ. ೪-೭೭). [ತತ್ತ್ವ + ಪರಿಣತ]

**ತತ್ತ್ವಪ್ರಣಾಲಿ** (ನಾ). ಸಿದ್ಧಾಂತದ ಕ್ರಮ; ವಿಚಾರಸರಣಿ: ಮಹಾತ್ಮಾ ಗಾಂಧೀಜಿಯವರ ತತ್ತ್ವಪ್ರಣಾಲಿ ಕ್ರೈಸ್ತರ ಮತ್ತು ಕಾಂಟ ಮಹಾಶಯನ ತತ್ತ್ವಗಳ ಮೇಲೆ ನಿಂತಿದೆ (ಧರ್ಮಸಾ. ೧೧೯). [ತತ್ತ್ವ + ಪ್ರಣಾಲಿ]

**ತತ್ತ್ವಪ್ರತಿಪಾದನ** (ನಾ). ತತ್ತ್ವದ ವಿವರಣೆ; ಸಿದ್ಧಾಂತವನ್ನು ಪ್ರತಿಪಾದಿಸುವುದು: ಚೇತನಾಚೇತನ ವಸ್ತುಗಳೆಲ್ಲ ಈಶ್ವರಾಂಶ ಎಂಬ ತತ್ತ್ವ ಪ್ರತಿಪಾದನವನ್ನೂ . . . ವಿವರಿಸಿದೆ (ಪುಣ್ಯಾರ. ೧೦೦, ಪೀಠಿಕೆ): ಉಪನಿಷತ್ತಿನ ತತ್ತ್ವಪ್ರತಿಪಾದನ ಮತ್ತು ನೀತಿಸಂದೇಶ ಇದಕ್ಕೆ ಭಿನ್ನವಲ್ಲ (ಪುಣ್ಯಾರ. ೮೩). [ತತ್ತ್ವ + ಪ್ರತಿಪಾದನ]

**ತತ್ತ್ವಬೋಧ** (ನಾ).=ತತ್ತ್ವಜ್ಞಾನ: ಕಾವ್ಯಸಮಾಧಿಯಿಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ ನಿರ್ಮಳ ತತ್ತ್ವಬೋಧಮುದ್ಯೋತಿಪುದೆಂಬುದಂ ಬಯಸಿ ಪೇಟಲೊಡರ್ಚಿದೆನೀ ಪ್ರಬಂಧಮಂ (ಜಗವಿ. ೦-೧೭). [ತತ್ತ್ವ + ಬೋಧ]

**ತತ್ತ್ವಮಸಿ** (ನಾ). [ಅದ್ವೈತ] ನೀನೇ ಪರಮಾತ್ಮ ಎಂಬ ಜ್ಞಾನ; ಆತ್ಮ ಮತ್ತು ಬ್ರಹ್ಮರ ಐಕ್ಯಜ್ಞಾನ: ತತ್ತ್ವಮಸಿ ಎಂಬುದನಱಿದು ಕತ್ತಲೆದೊಡುವಿರಯ್ಯಾ (ಬಸವ. ೯೧); ತತ್ತ್ವಮಸಿ ವಾಕ್ಯದೊಳು ಲಿಂಗಾಂಗದ ನಿರಂತರಿತ ಸಂಯೋಗಮಂ ತಿಳಿಯ ಪೇಳ್ದ ದೇಶಿಕೋತ್ತಮನ ಚರಣಾಂಬುಜಕ್ಕೆ ಶರಣು (ಲಶಿಜಿಂ. ೫೨-೫); ವಿನುತಾತ್ಮ ಸುಸ್ವಯಂಪ್ರಕಾಶ ತತ್ತ್ವಮಸಿಯ ನಘ ಜೀವಾತ್ಮತಾದಾತ್ಮ್ಯ ಸತ್ಯಬ್ರಹ್ಮಘನತರಾನಂದವಾಕ್ಯಾರ್ಥ. . .ಬಿತ್ತರಿಪೆನು (ವೀಶೈಪು. ೫-೧೩); ಸೂಚನೆ 'ತತ್ತ್ವಮಸಿ' ಎಂಬ ವೇದಾಂತವಾಕ್ಯದಲ್ಲಿ ತತ್ ಎಂದರೆ ಸರ್ವಶಕ್ತಿ ಮೊದಲಾದ ಗುಣವುಳ್ಳ ಬ್ರಹ್ಮನೆಂದರ್ಥ. ತ್ವಂ ಎಂದರೆ ಅಲ್ಪಶಕ್ತಿ ಮೊದಲಾದ ಸಕಲ ದೋಷವುಳ್ಳ ನೀನು ಎಂದರ್ಥ (ಹಿಂದಸಾ. ೨೦೭). [P ಸಂಸ್ಕೃತದಲ್ಲಿ ಇದು ಒಂದು ಪದವಲ್ಲ; ವಾಕ್ಯ: ತದ್ + ತ್ವಂ + ಅಸಿ]

**ತತ್ತ್ವರಹಸ್ಯ** (ನಾ). ಸತ್ಯದ ಮರ್ಮ: ಪರಮ ತತ್ತ್ವರಹಸ್ಯವನು ವಿಸ್ತರಿಸಿ ತುರ್ಯಾರೂಢರಾಗಿಯೆ ಚರಿಸುತಿಹ ಗಗನಾರ್ಯರಿಗೆ . . . ವಂದಿಸುವೆ (ಗಗತಾ. ೦-೧). [ತತ್ತ್ವ + ರಹಸ್ಯ]

**ತತ್ತ್ವವೇದಿ** (ನಾ).=ತತ್ತ್ವಕೋವಿದ: ಆ ಕಪಿ ತಾಂ ತಾಪಸರ ಸವಿಾಪದೊಳ್ ಬಳೆದ ಕಾರಣದಿಂ ತತ್ತ್ವವೇದಿಯಪ್ಪುದಱಿಂ ಮತ್ತಮಿಂತೆಂದುದು (ಪಂಚತಂ. ೧೪೩-೧೯). [ಸಂ. ತತ್ತ್ವವೇದಿನ್]

**ತತ್ತ್ವಶಾಸ್ತ್ರ** (ನಾ). ತತ್ತ್ವಸ್ವರೂಪವನ್ನು ತಿಳಿಸುವ ಶಾಸ್ತ್ರ; ದರ್ಶನಶಾಸ್ತ್ರ: ಸೌಂದರ್ಯಮೀಮಾಂಸೆ . . . ಅಲ್ಲಿ ತತ್ತ್ವಶಾಸ್ತ್ರದ(Philosophy) ಅಂಗವಾಗಿ ಬರುತ್ತದೆ (ಭಾರಮಿಾ. ೮). [ತತ್ತ್ವ + ಶಾಸ್ತ್ರ]

**ತತ್ತ್ವಸುವಾಲಿ** (ನಾ). ತತ್ತ್ವಬೋಧಕವಾದ ಸುವ್ವಾಲೆ ಪದ: ತತ್ತ್ವಪ್ರತಿಪಾದಕವಾದ ವಿಷಯಗಳನ್ನೇ . . . ಶ್ರೀ ಜಗನ್ನಾಥದಾಸರು ಜನಸಾಮಾನ್ಯರಿಗೆ 'ತತ್ತ್ವಸುವಾಲಿ' ಗಳಲ್ಲಿ ಹೇಳಿದ್ದಾರೆ (ಜಗದಾ. ೩೦೩). [ತತ್ತ್ವ + ಸುವಾಲಿ (<ಸುವ್ವಾಲೆ)]

**ತತ್ತ್ವಾತೀತ** (ನಾ). ಎಲ್ಲ ತತ್ತ್ವಗಳನ್ನು ವಿಾರಿದವನು; ಭಗವಂತ: ತತ್ತ್ವಾತೀತಂ ತತ್ತ್ವವಿಧುತ್ವಯುತಂ . . . ಎಸೆದನಾಸ್ಥಾಯಿಕೆಯೊಳ್ (ರಾಜಶೇ. ೧೯-೧೧೧). [ತತ್ತ್ವ + ಅತೀತ]

**ತತ್ತ್ವಾಧಿಕಾರಿ** (ನಾ). ತತ್ತ್ವೋಪದೇಶಕ್ಕೆ ಯೋಗ್ಯನಾದವನು,-ಅರ್ಹತೆಯನ್ನು ಪಡೆದವನು: ದಂಭದರ್ಪಗಳೇನುಮಿಲ್ಲದ ಶಾಂತರೇ ತತ್ತ್ವಾಧಿಕಾರಿಗಳು (ಅಮೃತ. ೦-೧೯). [ತತ್ತ್ವ + ಅಧಿಕಾರಿ₁]

**ತತ್ತ್ವಾನುಭಾವ** (ನಾ). ತತ್ತ್ವದ ಅನುಭವ; ತತ್ತ್ವ ಸಾಕ್ಷಾತ್ಕಾರ: ಚಿತ್ತನಿರ್ಮಲವಾದಾತ್ಮನು ಭಕ್ತಿಯಿಂದೆ ಸತ್ಯಶರಣರಲ್ಲಿ ತತ್ತ್ವಾನುಭಾವವ ಬೆಸಗೊಂಡರೆ ನಿತ್ಯ ಶಿವಪದ ಘಟಿಸುವುದಕ್ಕೆ ತಡವಿಲ್ಲವಯ್ಯ (ಅಖಂಡೇ. ೧೯೭-೧೭). [ತತ್ತ್ವ + ಅನುಭಾವ]

**ತತ್ತ್ವಾರ್ಥ** (ನಾ). ಸತ್ಯ; ವಸ್ತುಸ್ಥಿತಿ: ತತ್ತ್ವಾರ್ಥಮನಱಿಯದ ಮುನ್ನಮಪಾರ್ಥಂ ರಂಜಿಸದ ಫಳಿಕು ಮಣಿಯೊಲಿರದೇ (ಜಗವಿ. ೦-೧೪); ಯಾವುದೋ ಘನವಾದ ತತ್ತ್ವಾರ್ಥವನ್ನು ಕೇಳಿದವನಂತೆ ಏಜೆಂಟ್ ತಲೆದೂಗಿದ (ಯೋಧಪು. ೨೫). [ತತ್ತ್ವ + ಅರ್ಥ]

**ತತ್ತ್ವಾಲೋಕ** (ನಾ).=ತತ್ತ್ವಜ್ಞಾನ: ಅರ್ಥದೆ ತತ್ತ್ವಾಲೋಕಂ ತತ್ತ್ವಲೋಕದಿನಾಕಾಂಕ್ಷಿಪ ಮುಕ್ತಿಯಕ್ಕುಂ (ಶಮದ. ೩). [ತತ್ತ್ವ + ಆಲೋಕ]

**ತತ್ತ್ವೌಘ** (ನಾ). ತತ್ತ್ವಗಳ ಸಮೂಹ; ನಿಯಮಾವಳಿ: ದಕ್ಷಿಣಾವೃತ್ತ ವೃತ್ತ ತ್ರಿತಯಾಂತರ್ವರ್ತಿ ತಾನೆಂಬಿನಮನುಗತ ತತ್ತ್ವೌಘದೊಳ್ ತತ್ತ್ವದಿಂದನ್ವಿತಮಂ ವಿಸ್ತಾರಮತ್ಯಪ್ರಕಟಿತ ಮನದಿಂ ಮೆಚ್ಚಿದಂ ದೇವರಾಜಂ (ಅಜಿಪು. ೫-೨೩). [ತತ್ತ್ವ + ಓಘ]

**ತತ್ಥಳಿಸು** 'ತಟತಟಿಸ್ಸು' ನೋ.

**ತತ್ಪದ** (ನಾ). ಆ ಸಮಯ: ವನರುಹಷಂಡದ ವಾರಿಯ ತನಿಗೊರ್ಬುಗೆ ತೊಲಗಿ ತಿಳಿಯೆ ತತ್ಪದದೊಳ್ ತಾವಿನಮುಖ ವೀಕ್ಷಾತುರತೆಯಿನೆನಸುಂ ನಿಮಿರ್ದಂತೆ ತೋಱಿದವು ಜಲಜಂಗಳ್ (ಕುಸುಮಾ. ೬-೪೬). [ಸಂ. (ತದ್ + ಪದ)]

**ತತ್ಪರ** (ಗು). ೧. ಅನಂತರದ; ಅದಾದಮೇಲೆ ಬರುವ. ೨. ಮುಖ್ಯವಲ್ಲದ; ಮತ್ತೊಂದಕ್ಕೆ ಅಂಗವಾದ. ೩. ಅದನ್ನೇ ಪರಮಾರ್ಥವೆಂದು ತಿಳಿದ; ಅದರಲ್ಲಿ ಆಸಕ್ತಿಯುಳ್ಳ,-ಶ್ರದ್ಧೆಯುಳ್ಳ,-ಮಗ್ನನಾದ,-ತಲ್ಲೀನನಾದ. (ನಾ). ೪. ಆಸಕ್ತನಾದವನು; ಪರಾಯಣನಾದವನು: ಸಕಳಾಗಮಕೋವಿದರೆಂದು ಧರ್ಮ್ಯತತ್ಪರರಿವರೆಂದು ಕೂರ್ತು (ಸೌಇಇ. XX, ೪೯-೫೮; 1076): ಪ್ರತಿಯೊಂದು ಧರ್ಮದವರೂ ತಮ್ಮ ತಮ್ಮ ಕರ್ತವ್ಯಗಳಲ್ಲಿ ತತ್ಪರರಾಗಿ ಸಮಾಜದ ಭದ್ರತೆಯನ್ನು ಕಾಪಾಡಿಕೊಂಡು ಹೋಗುವುದು ಅಂದಿನ ಮುಖ್ಯ ಗುರಿಯಾಗಿತ್ತು (ಧರ್ಮಸಾ. ೧೧೪). [ಸಂ. (ತದ್ + ಪರ)]

**ತತ್ಪರತೆ**(ನಾ). ೧.ಹೊಂದಿಕೊಳ್ಳುವಿಕೆ: ಇರೆ ಶಬ್ದಾರ್ಥಂಗಳ್ ತತ್ಪರತೆಯಿಂ (ಕಾವ್ಯಾವ. ೪೩೦). ೨. ಆಸಕ್ತಿ; ಶ್ರದ್ಧೆ; ಪರಾಯಣತೆ: ರೋಮಂಥಲೀಲಾ ತತ್ಪರತೆಯಿಂ ದರನಿಮಿಾಲಿತಾಕ್ಷಂಗಳಾದ ಕಾಡೆರ್ಮೆಯ ಮೊಗದಿನುಗುವ ನೊರೆಯಂ (ಚಂದ್ರಪು. ೮-೪ ವ); ತಪಸ್ವಿಕಾರ್ಯದಲ್ಲಿ ನನಗಿರುವ ತತ್ಪರತೆಯನ್ನು ತಿಳಿಸಿ ಅವರ ಘತ್ರಕೃತ್ಯವನ್ನು ನೆರವೇರಿಸತಕ್ಕವನಾಗು (ಶಾಕುಂತ. ೨೯-೧೭). [ಸಂ. ತತ್ಪರತಾ]

**ತತ್ಪುರುಷ** (ನಾ). ೧. ಪರಮಾತ್ಮ. ೨. ಶಿವನ ಪೂರ್ವದಿಕ್ಕಿನ ಮುಖ: ಮಾರುತವೆಲ್ಲ ಮಹಾದೇವನ ತತ್ಪುರುಷಮುಖ ನೋಡಾ (ಸಿದ್ಧವ. ೯೯-೫೮೫); ಪರಶಿವನ ತತ್ಪುರುಷಮುಖದಿಂದೆ ವಾಯುತತ್ತ್ವ ಪುಟ್ಟಿತ್ತು (ಅಖಂಡೇ. ೩೯-೨೨). 'ಅಘೋರ' ಪರಾ. ೩. [ವ್ಯಾಕ] ಸಮಾಸಗಳಲ್ಲಿ ಒಂದು; "ಉತ್ತರಪದದ ಅರ್ಥವು ಪ್ರಧಾನವಾಗಿ ಪೂರ್ವಪದವು ತೃತೀಯಾದಿ ವಿಭಕ್ತಿಗಳಿಂದ ಕೂಡಿ ಆಗುವ ಸಮಾಸವು ತತ್ಪುರುಷ" (ಕ್ಕಬಿಡಿ. ೨೦): "ಉತ್ತರಪದದರ್ಥಂ ಮಯ್ಯೊತ್ತಿರೆ ತತ್ಪುರುಷಂ" (ಕಾವ್ಯಾವ. ೨೦೪); ತತ್ಪುರುಷಕ್ಕೆ-ಮಲ್ಲಿಗೆನನೆ, ಮಾಣಿಕಗಂಪು, ಅಲರ್ವಕ್ಕಿ (ಶಮದ. ೧೭೪ ಪ್ರಯೋ). [ಸಂ.

**ತತ್ಪುರುಷವಕ್ತ್ರ** (ನಾ).=ತತ್ಪುರುಷ ೨ : ಸುಲಲಿತ ನವಕನಕಕಂಜಕಿಂಜಲ್ಕದ ಮಂಜುಲರುಚಿಯಂ ಪಳಿದೆಸೆದುದು ವಿಲಸಿತ ತತ್ಪುರುಷವಕ್ತ್ರಮಹಿ ಕುಂಡಲನಾ (ಶಬಶಂ. ೫-೬). [ ತತ್ಪುರುಷ + ವಕ್ತ್ರ ]

**ತತ್ಪೂರ್ತ** (ಗು). "ಒಂದು ಉದ್ದೇಶಕ್ಕಾಗಿ ಗೊತ್ತುಮಾಡಿದ; ಅವಶ್ಯ ಬಿದ್ದಂತೆ ನೇಮಿಸಿದ; ತತ್ಪೂರ್ತ" (Ad hoc. ಇಂಕನಿ.). [ ಸಂ. (ತದ್ + ಪೂರ್ತ) ]

**ತತ್ಪೂರ್ವ** (ಗು). (ಅದಕ್ಕಿಂತ) ಹಿಂದಿನ ; ಮುಂಚಿನ : ಋಷಭದೇವನ ಕಾಲವು ತತ್ಪೂರ್ವದ್ದು (ಭಾರದ. ೧೭೪). [ ಸಂ. (ತದ್ + ಪೂರ್ವ) ]

**ತತ್ರಾಣಿ** 'ತತ್ರರಣಿ' ನೋ.

**ತತ್ರಾಪಿ** (ಅ). ಅದರಲ್ಲೂ ; ವಿಶೇಷವಾಗಿ : ತತ್ರಾಪಿ, ಯುದ್ಧ ಮುಗಿದು ಶಾಂತಿಯುಗ ಆರಂಭವಾದಂದಿನಿಂದ . . . ಅದರ ಗುರಿಯನ್ನು ಯಾರು ಕೇಳಬೇಕು (ನಾಡಿಗೇ. ೨೭೪); ತತ್ರಾಪಿ ಈ ಕಾಲಗಳಲ್ಲಿ ಸರ್ಕಾರದ ಒಂದು ಸಾಧಾರಣವಾದ ಉದ್ಯೋಗ ದೊರೆತರೂ ಜನರು ಅಟ್ಟಹಾಸದಿಂದ ಮೆರೆಯುತ್ತಾರೆ (ಮಾಮರ. ೭೧). [ ಸಂ. (ತತ್ರ + ಅಪಿ) ]

**ತತ್ವ₁** (ನಾ). ೧. ≡ ತತ್ತ್ವ ೧ : ನಿನ್ನ ಬೆಸಗೊಂಡ ತತ್ವ[ಪಾಠಾಂ. ತ್ತ್ವ]ಮುಂ ಹೇಯೋಪಾದೇಯರೂಪದಿಂ ದ್ವಿವಿಧಮಕ್ಕುಂ (ಆದಿಪು. ೧೧-೬೧ ವ) ; ಪಗೆವಂಗಂ ಕೆಳೆಯುಂಗವಾರ್ದ್ರಮತಿಯುಂ ತ್ವನ್ಮೂರ್ತಿ ತೀರ್ಥೇಶ ಮಾಡುಗು ವಾಳೋಚಿಸೆ ನಿನ್ನ ತತ್ವಮ[ವಿ]ಸಂವಾದಂ ದುರಾಪಂ ಗುಣಾಬ್ಧಿಗಭೀರಂ ಭವದೀಯಂ (ಶಾಂತಿಪು. ೮-೧೫೭) ; ವಸ್ತುವಿನ ಸ್ವರೂಪಮಂ ತತ್ವಮೆಂಬುದು (ಶ್ರಾವಕಾ. ೭೪-೧೫). ೨. ≡ ತತ್ತ್ವ ೪ : ಧರೆ ಜಲಾನಲ ಮಾರುತಾಂಬರ ವಿರುವ ತತ್ವಗಳು (ಗಗಶಾ. ೪-೧೨೮). ೩. ≡ ತತ್ತ್ವ ೬: ಐದು ತತ್ವಗಳಾದ ಪೊಂದಕ್ಕೈದು ಕಡೆಯಲಿ ತತ್ವವಿಪ್ಪತ್ತೈದು ಕೂಡಿದ ತನುವಿನಲಿ ಮಂಚಿಸದೆ ನೀನಿರಲು (ಹರಿಸಾ. ೬೫) ; ಸುಗ್ರಾಸವೊಬ್ಬರಿಗಂಪವಾಸವೊಬ್ಬರಿಗೆನ್ನುವ ತತ್ವವು ಸಾಕು (ಇಂಜಾಪ. ೧೭೪-೮೦). [ ಸಂ. ]

**ತತ್ವ₂** (ನಾ). [ವ್ಯಾಕ] 'ತ' ಎಂಬ ಅಕ್ಷರ ; ತಕಾರ : ಋತ್ವಕ್ಕಾರಾದೇಶಂ ತತ್ವಂ ಪೀನಂ ವಿಧಾತ್ರ ಶಬ್ದಂ ರಾಂತಂ (ಶಮದ. ೮೪). [ ಸಂ. ]

**ತತ್ವಗೋಷ್ಠಿ** (ನಾ). ತತ್ತ್ವವಿಚಾರವನ್ನು ಕುರಿತು ಚರ್ಚೆಮಾಡುವ ಸಭೆ : ಯೋಜಿಪ ಬಾಡಿಪ ತತ್ವಗೋಷ್ಠಿಯೊಂದುಟಿಯದೆ ಭಾವಿತಾತ್ಮರ ಹಮಿಂದ್ರರೊಡಂಬಡೆದಿಚ್ಛೆ ರೂಪಮಂ ನೆಟಲುಮನೆಯ್ದೆ (ಶಾಂತಿಪು. ೯-೧೩೧). [ ತತ್ವ₁ + ಗೋಷ್ಠಿ ]

**ತತ್ವಜಿಜ್ಞಾಸು** (ನಾ). ತತ್ತ್ವವನ್ನು ತಿಳಿಯ ಬಯಸುವವನು : ನಚಿಕೇತನಂಥ ತತ್ವಜಿಜ್ಞಾಸುಗಳು ಮಾನವನ ಇತಿಹಾಸದಲ್ಲಿ ವಿರಳ (ಮುಕ್ತಾರ. ೩, ಪೀಠಿಕೆ). [ ತತ್ವ₁ + ಜಿಜ್ಞಾಸು ]

**ತತ್ವಜ್ಞ** (ನಾ). ೧. ತತ್ತ್ವವನ್ನು ಬಲ್ಲವನು. ೨. (ಯಾವುದೇ ಶಾಸ್ತ್ರದ) ನಿಯಮಗಳನ್ನು ಚೆನ್ನಾಗಿ ತಿಳಿದವನು : ತತ್ವಂ ವ್ಯಾಜಸ್ತುತಿ . . . ಎಂದಿಂತು ತಾತ್ಪರ್ಯದಿಂದಂ ತತ್ವಜ್ಞರ್ ವಿಸ್ತರಿಸೆ ನೆಗಬ್ದುಂ ಶ್ಲೇಷಭಾಗ ಪ್ರಭೇದಂ (ಕಾವ್ಯಾವ. ೭೫೪). [ ಸಂ. ತತ್ತ್ವಜ್ಞ ]

**ತತ್ವಜ್ಞಾನ** (ನಾ). ≡ ತತ್ತ್ವಜ್ಞಾನ : ಮುನಿಮುಖ್ಯರಿವರಜ್ಞಾನಿಗಳು ಶಿಶುಪಾಲ ತತ್ವಜ್ಞಾನ ಪಂಡಿತನು (ಕುವ್ಯಾಸ. ೮-೫೦) ; ತತ್ವಜ್ಞಾನಕ್ಕೆ . . . ಮನನ ಧ್ಯಾನಗಳು ಮುಖ್ಯ ಸಾಧನಗಳು (ಭಾರದ. ೨೮೦). [ ತತ್ವ₁ + ಜ್ಞಾನ ]

**ತತ್ವಜ್ಞಾನಿ** (ನಾ). ≡ ತತ್ತ್ವಜ್ಞಾನಿ : ದೊಡ್ಡ ತತ್ವಜ್ಞಾನಿ, ಲೇಖಕ ನೆಂಬುದನ್ನು ಬಲ್ಲೆ (ಮೂರುದಾ. ೧೩೪). [ ಸಂ. ತತ್ತ್ವಜ್ಞಾನಿನ್ ]

**ತತ್ವದೃಷ್ಟಿ** (ನಾ). ≡ ತತ್ತ್ವದೃಷ್ಟಿ : ತತ್ವದೃಷ್ಟಿಯಿಲ್ಲದ ಅಂಥ ಶಿಕ್ಷಣ ಫಲಪ್ರದ ವಾಗುವುದು ಹೇಗೆ ಸಾಧ್ಯ (ಶಿಕ್ಷದ. ೫) ; ಸಂಸ್ಥೆಯ ಕಾರ್ಯಕ್ರಮಗಳ ತತ್ವದೃಷ್ಟಿ ಮತ್ತು ಉದ್ದೇಶ (ಶಿಕ್ಷದ. ೩೩೨). [ ತತ್ವ₁ + ದೃಷ್ಟಿ ]

**ತತ್ವನಿಕ್ಷೇಪ** (ನಾ). ತತ್ತ್ವದ ನೆಲೆ,-ನಿಧಿ : ದೊರಕಿತು ಸತ್ಕಾವ್ಯ ಸರಸ ಕಥಾಲಾಪದೊಳಗತುಳ ತತ್ವನಿಕ್ಷೇಪ (ಇಂಜಾಪ. ೯೨-೯೯). [ ತತ್ವ₁ + ನಿಕ್ಷೇಪ ]

**ತತ್ವನಿಶ್ಚಯ** (ನಾ). ತತ್ತ್ವವನ್ನು ಕುರಿತ ನಿಶ್ಚಿತವಾದ ಜ್ಞಾನ : ತತ್ವನಿಶ್ಚಯಮನಾಂತ ಲಸನ್ಮತಿ . . . ವಿಲಾಸಮಂ ಸಮುದ್ಧರಿಪಂ (ಚಂದ್ರಪು. ೩-೮೪). [ ತತ್ವ₁ + ನಿಶ್ಚಯ ]

**ತತ್ವಪಟಲ** (ನಾ). ತತ್ವಸಮೂಹದ ಅಧ್ಯಾಯ : ವಾತೂಲತಂತ್ರದೊಳು ತತ್ವಪಟಲದೊಳುಸುರ್ದ . . . ಪಂಚವಿಂಶತಿ ಮಹಾಲಿಂಗೋದ್ಭವ ಪ್ರಸಂಗಂ (ವೀಶ್ವಪು. ೬-೬-೮೫). [ ತತ್ವ₁ + ಪಟಲ₂ ]

**ತತ್ವಪದ** (ನಾ). ತತ್ತ್ವವನ್ನು ಪ್ರತಿಪಾದಿಸುವ ಹಾಡು ; ತಾತ್ವಿಕ ವಿಚಾರಗಳುಳ್ಳ ಹಾಡು : ಶರೀಫರ ತತ್ವಪದಗಳು ಇದೇ ಮಾದರಿಯ ಪದಗಳು (ಶರೀಫ. I, ಮೊದಲಮಾತು). [ ತತ್ವ₁ + ಪದ₃ ]

**ತತ್ವಪ್ರತಿಪಾದನೆ** (ನಾ).=ತತ್ತ್ವಪ್ರತಿಪಾದನ: ಆಧ್ಯಾತ್ಮಿಕ ದೃಷ್ಟಿಯಿಂದ ನೂತನ ವೈಜ್ಞಾನಿಕ ಸಿದ್ಧಾಂತಗಳೂ ಉತ್ತಮವಾದ ತತ್ವಪ್ರತಿಪಾದನೆ ಯಾಗಿಲ್ಲ (ಮುಕ್ತಾರ. ೯೧, ಪೀಠಿಕೆ). [ ತತ್ವ₁ + ಪ್ರತಿಪಾದನೆ ]

**ತತ್ವಭಾವನೆ** (ನಾ). ತತ್ತ್ವವನ್ನು ಕುರಿತು ಆಲೋಚನೆ ಮಾಡುವುದು: ತತ್ವಭಾವನೆಗೆ ಮನಂದಂದು . . . ತಪಶ್ಚರಣನಿರತನಾದೊಂ (ಶಾಂತಿಪು. ೫-೬೬ ವ) ; ತತ್ವಭಾವನೆಯಂ ಪರಿಭಾವಿಸುತ್ತುಮಿರಲದುವೆ ವೈರಾಗ್ಯ ಹೇತುವಾಗೆ (ಪುಷ್ಪಪು. ೯-೬ ವ). [ ತತ್ವ₁ + ಭಾವನೆ ]

**ತತ್ವಮಥನ** (ನಾ). ತತ್ತ್ವವನ್ನು ಕುರಿತ ಚರ್ಚೆ : ಈ ಬಗೆಯ ಸತ್ಯಾನ್ವೇಷಣೆ ಮತ್ತು ತತ್ವಮಥನವೂ ಕೊನೆಗೆ ವಿಫಲವಾಗುತ್ತದೆ (ಹೊಸಕ್ಷಿ. ೨೮೭). [ ತತ್ವ₁ + ಮಥನ ]

**ತತ್ವಮಸಿ** (ನಾ). ≡ ತತ್ತ್ವಮಸಿ: ಸದ್ಗುರು ಮುಖದಿ ತತ್ವಮಸಿಯನೆ ತಿಳಿದು ಸತ್ಯವಿಂತೆಂದು ಅಱಿದಿಪ್ಪ ಜ್ಞಾನಿ ತಾ ಸತ್ತು ಹುಟ್ಟುವನೆ (ಸರ್ವಜ್ಞ. ೩೫೦). [ ಸಂ. ತತ್ತ್ವಮಸಿ ]

**ತತ್ವಮೂಲ** (ನಾ). ಸತ್ಯದ ಮೂಲ : ತತ್ವಮೂಲದ ನಿಜವನ್ನೆದಿದ ಸತ್ಯಸಂಧನಿಗೇಕೆ ಕರ್ಮಜ್ಞಾನವಳಕಿಗಳು (ಗಗಶಾ. ೦೭-೪೯). [ ತತ್ವ₁ + ಮೂಲ ]

**ತತ್ವರುಚಿ** (ನಾ). ತತ್ತ್ವವನ್ನು ತಿಳಿದುಕೊಳ್ಳಬೇಕೆಂಬ ಅಭಿರುಚಿ ; ತತ್ವಜಿಜ್ಞಾಸೆ : ಮಾನಿತ ತತ್ತ್ವಾರ್ಥಶ್ರದ್ಧಾನದಿನಾ ಸೂರ್ಯಮಿತ್ರ ಮುನಿಪತಿಗವಧಿಜ್ಞಾನಂ ತೊಟ್ಟನೆ ಪುಟ್ಟಿದುದೇನಂ ಪುಟ್ಟಿಸದು ತತ್ವರುಚಿ ಪುಟ್ಟಲೊಡಂ (ಸುಕುಮಾ. ೩-೪೭). [ ತತ್ವ₁ + ರುಚಿ ]

**ತತ್ವವಿದ** (ನಾ).=ತತ್ತ್ವಕೋವಿದ: ತತ್ವವಿದರಾದೊಡಂ ಸರಸತ್ವಕ್ಕೆಡೆಗುಡದ ಜಡರದೆಂತಟಿದಪರೋ (ಅಶಂಪು. ೧-೪೪); ಲೋಕ ಸನ್ಮಾನ್ಯನು ಆ ಮಂಕು ತಿಮ್ಮನು ಅನುಭಾವಿಕವಿ ತತ್ವವಿದನು (ಇಂಜಾಪ. ೬೩-೧). [ < ಸಂ. ತತ್ತ್ವವಿದ್ ]

**ತತ್ವವಿನಿಶ್ಚಯ** (ನಾ).=ತತ್ವನಿಶ್ಚಯ : ತತ್ವವಿನಿಶ್ಚಯಮೆ ಮನಂಬುಗೆ ಮುಂದಂ ಮನಂಬೊಕ್ಕಪುದೇ (ಶಾಂತಿಪು. ೯-೧೧). [ತತ್ವ₁ + ವಿನಿಶ್ಚಯ]

**ತತ್ವವಿಲಾಸಿ** (ನಾ). ತತ್ತ್ವಜಿಜ್ಞಾಸೆಯಲ್ಲಿ ಆನಂದಪಡತಕ್ಕವನು,–ಆಸಕ್ತನಾದವನು: ಈ ಸಿರಿ ಈ ಸೊಬಗೀ ಪ್ರಾಯದೊಳು ಬುದ್ಧಿ ಬೇಸರ ವಾಗದೆಚ್ಚತ್ತು ಆ ಸಿದ್ಧಪದವಿಗೆ ಕಣ್ಣಿಟ್ಟು ತತ್ವವಿಲಾಸಿಯಾರರಸ ನಿನ್ನಂತೆ (ಭರಚ. ೨-೪೦). [ ಸಂ. ತತ್ತ್ವವಿಲಾಸಿನ್ ]

**ತತ್ವವೇತ್ತ** (ನಾ).=ತತ್ತ್ವಕೋವಿದ : ರಸ್ಕಿನ್ ಎಂಬ ಸುಪ್ರಸಿದ್ಧ ಆಂಗ್ಲ ತತ್ವವೇತ್ತನು . . . ಈ ರೀತಿ ಬರೆಯುತ್ತಾನೆ (ಭಾಷಾಶಾ. ೨೫) ; ಆ ತತ್ವವೇತ್ತರ ಕಾವ್ಯವಿಭೂತಿಯ ನೆನೆದು ವಂದಿಸುವೆನು ನಾನು (ಇಂಜಾಪ. ೨೦೩-೧). [ ಸಂ. ತತ್ತ್ವವೇತ್ತೃ ]

**ತತ್ತ್ವವೇದಿ** (ನಾ).=ತತ್ತ್ವಕೋವಿದ : ಕುಲೋದ್ಭೂತರುಂ ತತ್ತ್ವವೇದಿಗಳುಂ ಮನೆವಾಟನಾಸೆವಡಲಾಗದು (ಶಾಂತಿಪು. ೪-೮೩ ವ). [ಸಂ. ತತ್ತ್ವವೇದಿನ್]

**ತತ್ತ್ವಶಾಸ್ತ್ರ** (ನಾ). ಅಧ್ಯಾತ್ಮತತ್ತ್ವವನ್ನು ತಿಳಿಸುವ ಶಾಸ್ತ್ರ; ದರ್ಶನ ಶಾಸ್ತ್ರ: ಹಿಂದಿನ ಕಾಲದಲ್ಲಿ ವಿಜ್ಞಾನವೇ (Science) ಬೇರೆ, ತತ್ತ್ವಶಾಸ್ತ್ರವೇ (Philosophy) ಬೇರೆ ಎಂಬ ವಿವೇಚನೆಯು ಸ್ಪಷ್ಟವಾಗಿರಲಿಲ್ಲ (ಭಾಷವಿ. ೫). [ ತತ್ತ್ವ$_1$ + ಶಾಸ್ತ್ರ ]

**ತತ್ತ್ವಸಾಕ್ಷಾತ್ಕಾರ**(ನಾ).ತತ್ತ್ವವನ್ನು ಕಾಣುವುದು,-ಅನುಭವಿಸುವುದು: ತತ್ತ್ವಸಾಕ್ಷಾತ್ಕಾರವನ್ನು ಪಡೆದಿರುವ ಜ್ಞಾನಿಗಳು ಈ ತತ್ತ್ವಗಳು ೩೬ ಎಂದು ನಿರೂಪಿಸಿರುವರು (ಭಾರದ. ೨೦೩). [ ತತ್ತ್ವ$_1$ + ಸಾಕ್ಷಾತ್ಕಾರ ]

**ತತ್ತ್ವಸುವ್ವಾಲಿ** (ನಾ). = ತತ್ತ್ವಸುವಾಲಿ : ಜಗನ್ನಾಥದಾಸರ . . . ತತ್ತ್ವಸುವ್ವಾಲಿಗಳು ತ್ರಿಪದಿಯ ರೂಪದಲ್ಲಿಯೂ ಇವೆ (ಸುವರ್ಣ. ೧೧೬). [ ತತ್ತ್ವ$_1$ + ಸುವ್ವಾಲಿ (<ಸುವ್ವಲೆ) ]

**ತತ್ತ್ವಾಂಧ** (ನಾ). ತತ್ತ್ವದ ವಿಷಯದಲ್ಲಿ ಕುರುಡಾದವನು ; ತತ್ತ್ವವನ್ನು ತಿಳಿಯಲಾರದವನು : ಜೀವಿತ ಮರಣಂಗಳೆಂಬಿವಬಟ್ಟಳಮುಂ ಪುಸಿಯ ಪೊಟ್ಟಳಮುಮಕ್ಕುಮದರ್ಕರ್ನ [ ರ್ಣ ] ಹೃದಯನುಮನೇಡಮೂಕನುಂ ತತ್ತ್ವಾಂಧನುಂ ವಸ್ತುಬಾಹ್ಯನುಂ ನೆಬುಗುಂ (ಶಾಂತಿಪು. ೮-೧೩೩ ವ). [ ತತ್ತ್ವ$_1$ + ಅಂಧ ]

**ತತ್ತ್ವಾತ್ಮಕ** (ನಾ). ತತ್ತ್ವಗಳನ್ನು ಒಳಗೊಂಡಿರುವವನು; ತತ್ತ್ವಸ್ವರೂಪ; ಪರಮೇಶ್ವರ : ಧರಣಿ ಮೊದಲೆನೆ ಭೂತಪಂಚಕ ಮರುತಪಂಚಕ ವಿಷಯ ಮಿಂದ್ರಿಯ ಕರಣವಿಪ್ಪತ್ತೈದು ತತ್ತ್ವಾತ್ಮಕನ ಚಿಂತಿಸಿದ (ಕುವ್ಯಾಅ. ೫-೧). [ ಸಂ. ತತ್ತ್ವಾತ್ಮಕ ]

**ತತ್ತ್ವಾನ್ವೇಷಣೆ** (ನಾ). ಸತ್ಯವನ್ನು ಹುಡುಕುವುದು; ತತ್ತ್ವದ ಶೋಧನೆ: ವಿಜ್ಞಾನದ . . . ತತ್ತ್ವಾನ್ವೇಷಣೆಯ ಮಾರ್ಗದಲ್ಲೇ ಏನೋ ನ್ಯೂನತೆ ಇದೆಯೆಂದು ವ್ಯಕ್ತವಾಗುತ್ತದೆ (ಮುಕ್ಕಾರ. ೫. ಪೀಠಿಕೆ). [ತತ್ತ್ವ$_1$+ಅನ್ವೇಷಣೆ]

**ತತ್ವಾರ** (ನಾ). ಕೊರತೆ; ಅಭಾವ: ದೇಶದಾಗ ಧಾನ್ಯದ ರಾಶಿ ತುಂಬಿದ್ದರೂ ಬಹು ಜನರಿಗೆ ತುತ್ತುಕೂಳಿಗೆ ತತ್ವಾರ ಬಂದು ಕೂತದ (ಜನಜೀ. ೬) ; ತವರುಮನೆಯೆಂದು ಬಂದರೆ ಒಂದು ಕಪ್ಪು ಚಹಾಕ್ಕೂ ತತ್ವಾರ (ನವವಿ. ೧೯) ; ಹೆಸರು ಕ್ಷೀರಸಾಗರಭಟ್ಟ ಮನೆಯಲ್ಲಿ ಮಜ್ಜಿಗೆಗೆ ತತ್ವಾರ (ಗಾದ).

**ತತ್ವಾರವಾಗು** = ಅಭಾವವುಂಟಾಗು; ಕೊರತೆಯಾಗು : ಮಜ್ಜಿಗೆಗೆ ತತ್ವಾರವಾಗಿಲ್ಲ (ಬಾಳಿಗಿ. ೨೦) ; ತುತ್ತುಗಂಜಿಗೆ ತತ್ವಾರವಾಗಿರುವಾಗ (ಮುಂಗಾಮು. ೩೦). [ ದೇ. ತುಳು. ತತ್ವಾರ, ತತ್ತಾರ ]

**ತತ್ತ್ವಾರ್ಥ** (ನಾ). = ತತ್ತ್ವಾರ್ಥ : ನುಡಿದುದ ತತ್ತ್ವಾರ್ಥಂ ಕೆಯ್ಗೊಡಿದುದೆ ಸತ್ವೈಕಹಿತಕರಂ (ಪುಷ್ಪಪು. ೧-೧೮) ; ಲೀನವಾದ ತತ್ತ್ವಾರ್ಥವನ್ನು ಹೊಂದಿಸುವುದು ಲಿಂಗ (ಅರ್ಕಮೂ. ೩೦). [ ತತ್ತ್ವ$_1$ + ಅರ್ಥ ]

**ತತ್ತ್ವಾರ್ಥವಿನಿಶ್ಚಯ** (ನಾ). = ತತ್ತ್ವನಿಶ್ಚಯ: ಬಗೆ ತತ್ತ್ವಾರ್ಥವಿನಿಶ್ಚಯಂ ಬಡೆಯೆ ನೈರ್ಗ್ರಂಥ್ಯಂ ಪೊದಟ್ಟಿತ್ತು (ಪುಷ್ಪಪು. ೧-೫). [ ತತ್ತ್ವಾರ್ಥ + ವಿನಿಶ್ಚಯ ]

**ತತ್ತ್ವಾರ್ಥಶ್ರದ್ಧಾನ** (ನಾ). ತತ್ತ್ವಾರ್ಥದಲ್ಲಿ ಶ್ರದ್ಧೆ,-ನಂಬಿಕೆ : ಅಲ್ಲಿ ತತ್ತ್ವಾರ್ಥಶ್ರದ್ಧಾನಂ ಸಮ್ಯಗ್ದರ್ಶನಂ (ಆದಿಪು. ೧೧-೬೦ ವ) ; ತತ್ತ್ವಾರ್ಥ ಶ್ರದ್ಧಾನ ಪಟುತ್ವಂ ಸಮ್ಯಕ್ತ್ವಂ (ಶಾಂತಿಪು. ೬-೪೬). [ ಸಂ. ತತ್ತ್ವಾರ್ಥಶ್ರದ್ಧಾನ ]

**ತತ್ತ್ವಾಲೋಕ** (ನಾ). = ತತ್ತ್ವಾಲೋಕ. [ ತತ್ತ್ವ$_1$ + ಆಲೋಕ ]

**ತತ್ತ್ವೋಕ್ತಿ** (ನಾ). ತತ್ತ್ವವನ್ನು ಕುರಿತ ಮಾತು : ತತ್ತ್ವೋಕ್ತಿ ನಿರ್ಣೀತಿ ಯೊಳ್ ಪೊಟ್ಟುಗಳೆವುತ್ತಿರ್ದಂ ನರೇಂದ್ರಾತ್ಮಜಂ (ಪುಷ್ಪಪು. ೪-೬೬). [ ತತ್ತ್ವ$_1$ + ಉಕ್ತಿ ]

**ತತ್ತ್ವೋಪನ್ಯಾಸ** (ನಾ). ತತ್ತ್ವವನ್ನು ಕುರಿತ ವ್ಯಾಖ್ಯಾನ : ಭಾರತದಲ್ಲಿ ಬರುವಂತೆ ದೀರ್ಘವಾದ ತತ್ತ್ವೋಪನ್ಯಾಸಗಳಾಗಲಿ ಅಡ್ಡವಿಚಾರಗಳಾಗಲಿ ರಾಮಾಯಣದಲ್ಲಿ ಕಂಡುಬರುವುದಿಲ್ಲ (ಭಾರದ ೮೯). [ತತ್ತ್ವ$_1$ + ಉಪನ್ಯಾಸ]

**ತತ್ಸಮ** (ಗು). ೧. ಅದಕ್ಕೆ ಸಮಾನವಾದ : ದಟ್ಟಡಿಯನಿಕ್ಕುವ ಬಾಲಕನಂಗ ದೊಂದು ಮಾರ್ಪೊಳಪಿರೆ ನೀಲಕುಟ್ಟಿಮದೊಳುರ್ವರೆ ತಜ್ಜನನೀಸಪತ್ನಿ ಸಾಂ ತಳೆದಳೊ ತತ್ಸಮಾತ್ಮಭವನಂ ಪುರುಡಿಂದೆನೆ ಕಣ್ಗೆ ರಂಜಿಕುಂ (ರಾಜಶೇ. ೪-೭೩). (ನಾ). ೨. ವ್ಯತ್ಯಾಸವನ್ನು ಹೊಂದದೆ ಅಥವಾ ಅಲ್ಪ ವ್ಯತ್ಯಾಸ ದೊಂದಿಗೆ ಕನ್ನಡದಲ್ಲಿ ಬಳಕೆಯಾಗುವ ಸಂಸ್ಕೃತ ಶಬ್ದ : ಮಣಿ ಮಂಚಂ ಪಟ್ಟಣಂ ತೋರಣಮಟ್ಟಂ . . . ಗಲ್ಲಂ ಮಲ್ಲಂ ತಳಮಿಂತೆಲ್ಲಂ ತತ್ಸಮಮುಂ (ಶಮದ. ೨೪೮); ಚಿಂತೆ ಪರಿಹರಿಪ ಮಾಟಕ್ಕಿಯೊಳಂತುಸುರ್ವೆಂ ದೇಸಿ ತದ್ಭವಂ ತತ್ಸಮಮಂ (ಚತುನಿ. ೨) ; ಮಲ್ಲಿಗಗಾಳಿಗೆ ಮಲ್ಲವಾತು ಮಲ್ಲಮುರಾಂತಕಂ ತಾನಿವೆಂದು ಸೊಬಗಿಡಿದ ತತ್ಸಮಕೆ ಕನ್ನಡ ಸಕ್ಕದಂ ಗಳಲಿ ಕ್ರಮದಿಂದ ತೋರ್ಪುದಾಹರಣೆಯಕ್ಕುಂ (ಕಬ್ಬಿಕೈ. ೯೯); ವಿಕಾರವನ್ನು ಪಡೆಯದೆ ಅಥವಾ . . . ಅತ್ಯಲ್ಪವಿಕಾರವನ್ನು ಪಡೆದ ಸಂಸ್ಕೃತ ಶಬ್ದಗಳಿಗೆ 'ತತ್ಸಮ' ವೆಂಬ ಹೆಸರು ಬಳಕೆಗೆ ಬಂದಿದೆ. ಆದರೆ ಕೇಶಿರಾಜನು ಅವನ್ನು ಸಮಸಂಸ್ಕೃತವೆನ್ನುತ್ತಾನೆ (ಕೈಪಿಡಿ. ೧೪). [ ಸಂ. (ತದ್ + ಸಮ) ]

**ತತ್ಸವಿತುರ್ವರೇಣ್ಯ** (ನಾ). ಗಾಯತ್ರೀ ಮಂತ್ರವನ್ನು ಜಪಮಾಡು ವವನು ; ವೈದಿಕ ಬ್ರಾಹ್ಮಣ : ಅಹಿಂಸಾಲಕ್ಷಣೋ ಧರ್ಮಮೆಂಬುದನೀ ತತ್ಸವಿತುರ್ವರೇಣ್ಯರಟಿದರ್ (ಸಮಪ. ೩೬೯, ಅನು. I) ; (ತತ್ಸವಿತು ರ್ವರೇಣ್ಯರೆಂದು ಶ್ರೌತರ್) (ಶಮದ. ೭೫ ಪ್ರಯೋ). [P ಸಂಸ್ಕೃತದಲ್ಲಿ ಇದು ಒಂದು ಪದವಲ್ಲ ; ತದ್, ಸವಿತುಃ, ವರೇಣ್ಯ ಎಂಬ ಮೂರು ಪದಗಳು. ಕೇಶಿರಾಜನ ಪ್ರಕಾರ ಇಂತಹ ಪದಪುಂಜಗಳಂ ಮತ್ತು ವಾಕ್ಯಗಳನ್ನು ಕನ್ನಡದಲ್ಲಿ ಲಿಂಗವಾಗಿ ಉಪಯೋಗಿಸಬಹುದು.]

**ತತ್ಸ್ವರೂಪ** (ನಾ). ಆ ಸ್ವರೂಪ ; ಅದರ ಸ್ವರೂಪ : ತದ್ಗಣಿಕಾ ಭವನಮುಮಂ ತೋಱೆ ನಾಯಕಂ ನಾಗರಕಾದಿಗಳ್ಗೆ ತತ್ಸ್ವರೂಪಕಥನ ವಿತತನಾಗಿ ಪೋಗಿ (ಶಾಂತಿಪು. ೮-೯೦ ವ) ; ಮಿಗೆ ನುಡಿಯಲಮ್ಮೆನು ತತ್ಸ್ವರೂಪವ ತೋಱಬೇಕೆಂದ (ಕುವ್ಯಾಭೀ. ೩-೬೦). [ ಸಂ. (ತದ್ + ಸ್ವರೂಪ) ]

**ತತ್ಸ್ವರೂಪಗುಣ** (ನಾ). ಅದಕ್ಕೆ ಸಮಾನವಾದ ಧರ್ಮವುಳ್ಳುದು : ಉರುಪಿತ್ತಶೋಕಪಲ್ಲವ ವಿರಚಿತ ಶಯನೀಯಮೆನ್ನ ಮೆಯ್ಯಂ ಪೀನಂ ಸ್ಫುರದನಲ ಪ್ರತಿನಿಧಿ ತತ್ಸ್ವರೂಪಗುಣಮಕ್ಕುಮೆಂಬುದೆಂದುಂ ಯುಕ್ತಂ (ಕವಿರಾ. ೩-೩೭). [ ತತ್ಸ್ವರೂಪ + ಗುಣ ]

**ತಥಪಣೆ** 'ತತ್ತ್ವಪಣೆ' ನೋ.

**ತಥಾಗತ** (ಗು). ೧. ಆ ರೀತಿಯಾಗಿರುವ; ಆ ಸ್ಥಿತಿಯಲ್ಲಿರುವ.(ನಾ). ೨. ಬುದ್ಧ : "ಬುದ್ಧಂ ಸಮಂತಭದ್ರಂ ಸಿದ್ಧಾರ್ಥಂ ಮುನಿ ತಥಾಗತಂ . . . ಶಾಕ್ಯ ಸುಗತಂ" (ವಸ್ತುಕೋ. ೨-೧೦); ಶೈವಾನ್ ಪಾಶುಪತಾಂಸ್ತಥಾಗತ ಸುತಾನ್ ಕಾಪಾಲಿಕಾನ್ (ಎಕ. II, ೬೭-೭೦ : 1129) ; ಬಾಗುವೆನಾ ಸುಗತನಿಗಾತನೆನ್ನ ತಥಾಗತ ಕರುಣಾಳು ಹಿತನು (ಸೌನಂದ. ೧೫-೩೭) ; ಬತ್ತಿದೆಡೆಗೆ ಚಿಮ್ಮುವ ತೊರೆ ಬರುವದೆಂತೊ ಅಪರಿಹಾರ್ಯ ಅಂತೆ ತಥಾಗತನ ಕಾರ್ಯ (ಕ್ರೌಂಚಪ. ೬೧). ೩. ಜೈನ ಅಥವಾ ಬೌದ್ಧ ಭಿಕ್ಷು : ಉಪಾಸಕರಲ್ಲದವರ ಮನೆಯಲ್ಲಿ ತಥಾಗತರು ಭಿಕ್ಷೆಯನ್ನು ಗ್ರಹಿಸುವುದಿಲ್ಲ (ತೀರ್ಥಕ. ೬೩). 'ತಥಾಗತಮತ' ಪರಾ. ೪. ಜಿನ. [ ಸಂ. ]

**ತಥಾಗತಮತ** (ನಾ). ಬೌದ್ಧಮತ : ತಥಾಗತಮತಮಂ ತಿರಸ್ಕರಿಸಿ . . . ಲೋಕಾಯತಶಾಕ್ಯಮತಾವಲಂಬಿಯನವಿಲಂಬಿತಂ ಗೆಲ್ದು (ಶಾಂತಿಪು. ೮-೧೪೭ ವ). [ ತಥಾಗತ + ಮತ ]

**ತಥಾತಿಥಿ** (ನಾ). ಪೂರ್ವೋಕ್ತ ತಿಥಿ ; ಹಿಂದೆ ಹೇಳಿರುವ ದಿವಸ : ಈ ವೀರನರಸಿಂಗರಾಯಪುರವನು ನಿಂಮು ಗ್ರಾಮಕೆ ತಥಾತಿಥಿಯಲಾ × × × ವೀರನರಸಿಂಗದೇವಮಹಾರಾಯರಿಗೆ ಶುಕ್ರುತವಾಗಬೇಕೆಂದು . . . ಕೊಟ್ಟೆಉ (ಸೌಇಇ. IX-ii, ೪೭೮-೧೩ ; ?). [ ಸಂ. (ತಥಾ + ತಿಥಿ) ]

**ತಥಾಸ್ತು** (ಅ). ಹಾಗೇ ಆಗಲಿ ; ಆಗಲಿ : ಸರ್ವರಾಜ್ಯವನಾದಡಂ ನಿಮಗೆ ಕೊಡಹಡೆವೆನ್ನೆಸಲ್ಲದೀಯೊಂದುತೇಜಮಂ ಕೊಡೆನೆಂದು ಭೂಪಾಲನು ನುಡಿಯಲು ತಥಾಸ್ತು ಹಡೆದೆಂ ಹಡೆದೆನವನೀಶರೊಡೆಯ . . . ಎಂದೆಡೆವಿಡದೆ ಹೊಗಳಿ (ಹಚಕಾ. ೮-೩೨) ; ಅದರ್ಕೆ ಸಿರಿಯರಸಂ ತಥಾಸ್ತು, ಎಂದು ಕಳುಪಿದಂ (ರಾಮಾಶ್ವ. ೧೩-೧೧).
[ ℙ ಸಂಸ್ಕೃತದಲ್ಲಿ ಇದು ಒಂದು ಪದವಲ್ಲ, ವಾಕ್ಯ; ತಥಾ + ಅಸ್ತು ]

**ತಥ್ಯ** (ನಾ). ನಿಜವಾದುದು ; ಸತ್ಯ : ಪಾಂಡುತನಯರ್ ನಿರ್ದೋಷಿಗಳ್ ತಥ್ಯಮಿಂತು ರಣಸ್ಥಾನದೊಳಿನ್ನೆರಟ್ಟುಡಿವೆನೇ (ಪಂಪಭಾ. ೧೩-೯೧) ; ಪಥ್ಯಮುಂ ತಥ್ಯಮುಮಾಗೆ ನುಡಿದು ಸಂಬೋಧಿಸಿದ ಗುರುಗಳ ವಚೋವಿಸ್ತರಮಂ . . . ಅವಧಾರಿಸಿ (ಸುಕುಮಾ. ೧೨-೧೩ ವ) ; ತಡವಿದೇತಕೆ ತಥ್ಯವನು ಗೋರಕ್ಷ ನೋಡೆಂದ (ಪ್ರಭುಲೀ. ೧೯-೩೩); ನೀನಾಡಿದಿನಿತೆಲ್ಲವುಂ ತಥ್ಯವಹುದು (ಜೈಮಿಭಾ. ೯-೩೧) ; ಪಾಂಡುರಂಗನು ಹೇಳಿದ ಮಾತಿನಲ್ಲಿ ತಥ್ಯವಿತ್ತು (ಸವುಜೀ. ೯೬೮). [ ಸಂ. ]

**ತಥ್ಯಾಂಶ** (ನಾ). ನಿಜಾಂಶ ; ಸತ್ಯದ ಅಂಶ : ಇವುಗಳಲ್ಲಿ ತಥ್ಯಾಂಶವು ಎಷ್ಟಿದೆ ಎಂಬುದನ್ನು ಹೇಳುವುದಕ್ಕೆ ಸಾಧ್ಯವಿಲ್ಲ (ಕರ್ಣಾಅ. ೭).
[ ತಥ್ಯ + ಅಂಶ ]

**ತಥ್ಯಾಭಿಯೋಗ** (ನಾ). ನಿಜವಾದ ಪ್ರಯತ್ನ,-ಉದ್ಯೋಗ : ಮಳಯಕೇತು . . . ತನ್ನ ಮಂತ್ರಿ ಮುದ್ರಾರಾಕ್ಷಸರಿಗೆ ತಥ್ಯಾಭಿಯೋಗಮಾದೊಡಂ ಮಿಥ್ಯಾಭಿಯೋಗಮೆಂದು ನಿಶ್ಚೈಸಿ ನಿರ್ವಿಚಾರದಿಂ ನಿರ್ದಾಟಿಸಿ ಕಳಿದೊಡೆ (ಪಂಚತಂ. ೨೪೮-೧೭). [ ತಥ್ಯ + ಅಭಿಯೋಗ ]

**ತಥ್ಯೆ** (ನಾ). = ತಥ್ಯ : " ತಥ್ಯೆ ಸತ್ಯೋಕ್ತಿ " (ವಸ್ತುಕೋ. ೩೧-೩೩).
[ ಸಂ. ತಥ್ಯ ]

**ತದಂಗುಟ್ಟಿ** (ನಾ). ಒಂದು ಊರಿನ ಹೆಸರು (?) : ತದಙ್ಗುಟ್ಟಿ ಸೋಮಯಾಜಿ ಭಟ್ಟಸ್ಯ ಪುತ್ರಾಯ (ಮೈಆರಿ. ೧೯೪೨, ೭೫-೧೦೬ ; 819).
[ ? ]

**ತದಂಶಕ** (ನಾ). ಆತನ ಅಂಶದಿಂದ ಕೂಡಿದುದು ; ಪರಮಾತ್ಮನ ಅಂಶರೂಪವಾದುದು : ಸಂದ ವಿಶ್ವಮದಾತ್ಮನಿಗೆ ಬೇರೊಂದು ತೋರಿದಡುಂ ತದಂಶಕಮೆಂದು ತಿಳಿ (ಗಗತಾ. ೧೪-೨೦). [ಸಂ.]

**ತದಕಲ್** (ನಾ). ಹೊಡೆತ ; ಪೆಟ್ಟು : " ತೃಂಹಣಂ, ತೃಂಹಣೀಯಂ, ಈ ೨ ತದಕಲ್ " (ಕಾಶಕ್ತ. ೨೨೫).
[ ತದಕು$_1$ (<ಸದಕು$_1$) + – ಅಲ್$_2$ ]

**ತದಕು$_1$** 'ಸದಕು$_1$' ನೋ.

**ತದಕು$_2$** (ನಾ). ಹೊಡೆಯುವುದು ; ಬಡಿಯುವುದು. ೨. ರತಿಚಾಪಲ್ಯ : ಮುದುಕನಾದರೂ ತದಕು ಬಿಡಲಿಲ್ಲ (ಗಾದೆ). [ <ತದಕು$_1$ ]

**ತದಕು$_3$** 'ತದುಕ್ಕು' ನೋ.

**ತದಕುಗ** (ನಾ). ಹೊಡೆಯುವವನು : "ತೃಂಹಸ್, ತೃಂಹಕಃ, ತೃಂಹಃ, ಈ ೩ ತದಕುಗಂ" (ಕಾಶಕ್ತ. ೨೨೫).
[ ತದಕು$_1$ (<ಸದಕು$_1$) + – ಗ$_2$ ]

**ತದನಂತರ$_1$** (ನಾ). ಅದರ ತರುವಾಯ : ತದನಂತರದೊಳ್ ಬಂದು (ನೇಮಿಪು. ೮-೧೭೬) ; ತದನಂತರದೊಳಾ ಮುರಾಂತಕಂ ಧೃತರಾಷ್ಟ್ರ . . . ಕುಂತಿಯರ್ಗಭಿನಮಿಸಿ (ಜೈಮಿಭಾ. ೭-೧೯). [ ಸಂ. (ತದ್ + ಅನಂತರ) ]

**ತದನಂತರ$_2$** 'ತದನಂತರಂ' ನೋ.

**ತದನಂತರಂ, ತದನಂತರ$_2$** (ಅ). ಆ ಬಳಿಕ ; ಆಮೇಲೆ : ತದನಂತರಮಿರದಾಕೆಯನುದಾತ್ತ ಧಾತ್ರೀತನೂಜೆ ಪರಿವಿಡಿಯೊಳ್ ತಂದಿದಿರೊಳ್ ನಿಱಿಸಿ (ಶಾಂತಿಪು. ೫-೧೨೧) ; ತದನಂತರಂ ಕಾಯಕ್ಲೇಶಮೆಂಬಾಬನೆಯ ತಪಮನೆತ್ತಿಕೊಂಡು (ಸುಕುಮಾ. ೪-೮ ವ) ; ತನ್ಮೊಳಾಳೋಚಿಸಿ ತದನಂತರಂ (ಜಗವಿ. ೧-೩೫ ವ). **ತದನಂತರ$_2$ :** ಮನಸ್ಸಿನ ಅನುಸಂಧಾನದ ರೂಪದಲ್ಲಿ ತದನಂತರ ವ್ಯಕ್ತವಾಗುವ ವಿಮರ್ಶವು ಪ್ರತಿಯೊಂದು ಸ್ಥಿತಿಯಲ್ಲಿಯೂ ಬೇರೆಯಾಗಿರುತ್ತದೆ (ತತ್ತ್ವಪ್ರಾ. ೪೪೫). [ <ತದನಂತರ$_1$ ]

**ತದರಬಂಡಿ** (ನಾ). ಒಂದು ಊರಿನ ಹೆಸರು (?) : ತದರಬಣ್ಡಿ ಅಣಿಲೆಯರ ಮಗ ನೆಲ್ಮಲ್ಲ ಅಣಮ್ಮನಳಿಯ ತೊಱುವನಿಕ್ಕಿಸಿ ಸಗ್ಗಿಯಾದಂ (ಎಕ. IX, ಹೊಸಕೋ. ೧೧೦-೫ ; ಸು. 900). [ ? ]

**ತದರ್ಥ** (ಗು). ನಿರ್ದಿಷ್ಟ ಉದ್ದೇಶಕ್ಕಾಗಿ ಗೊತ್ತುಮಾಡಿದ ; ತಾತ್ಕಾಲಿಕ : " ತಾತ್ಪೂರ್ತಿಕ ; ತದರ್ಥ " (Ad hoc. ಪತ್ರಿನಿ. ೩).
[ ಸಂ. (ತದ್ + ಅರ್ಥ) ]

**ತದರ್ಥನ್ಯಾಯಾಧೀಶ** (ನಾ). ನಿರ್ದಿಷ್ಟವಾದ ನ್ಯಾಯವಿಚಾರಣೆಗಾಗಿ ನೇಮಕಗೊಂಡ ನ್ಯಾಯಾಧೀಶ : ತದರ್ಥನ್ಯಾಯಾಧೀಶರು (Ad hoc Judges. ಪತ್ರಿನಿ. ೩) ; ನ್ಯಾಯಾಧೀಶರೊಬ್ಬರು ಅವಶ್ಯ ಕಂಡಷ್ಟು ಕಾಲದವರೆಗೆ . . . ತದರ್ಥನ್ಯಾಯಾಧೀಶ ರೂಪದಲ್ಲಿ ಹಾಜರಾಗಿ ಕೆಲಸಮಾಡುವಂತೆ ಲಿಖಿತ ಮೂಲಕವಾಗಿ ಬಿನ್ನೈಸಬಹುದು (ಭಾಧಾನ. ೬೯).
[ ತದರ್ಥ + ನ್ಯಾಯಾಧೀಶ ]

**ತದರ್ಥಸಮಿತಿ** (ನಾ). ನಿರ್ದಿಷ್ಟ ಉದ್ದೇಶಕ್ಕಾಗಿ ರಚಿತವಾದ ಸಮಿತಿ : " ತದರ್ಥ ಸಮಿತಿ " (Ad hoc Committee. ಪತ್ರಿನಿ. ೩).
[ ತದರ್ಥ + ಸಮಿತಿ ]

**ತದರ್ಧ** (ನಾ). ಅದರ ಅರ್ಧದಷ್ಟು ಪ್ರಮಾಣ ; ಅದರ ಅರ್ಧ : ಷಟ್ಪದಿಗಾಱುಱಿಡಿಯೆರಡಱಲ್ಲಿಯೊಂದೇನಿಯಮಂ ಮೂಱಿರ್ಕೊಂದು ತದರ್ಧಂ (ಛಂದೋಂಬು. ೫-೨೧ ಅಡಿಟಿ). [ ಸಂ. (ತದ್ + ಅರ್ಧ) ]

**ತದರ್ಧಪ್ರಮಿತ** (ಗು). ಅದರ ಅರ್ಧದಷ್ಟು ಅಳತೆಯ : ಅದು ಯೋಜನ ಶತಮೂಲ ವಿಸ್ತೃತಮುಂ . . . ತದರ್ಧಪ್ರಮಿತೋಪರಿಮತಲವಿಸ್ತಾರಮುಂ (ಆದಿಪು. ೧೩-೬೯ ವ). [ ತದರ್ಧ + ಪ್ರಮಿತ ]

**ತದವಸಾನ** (ನಾ). ಅದರ ಕೊನೆ,-ಮುಕ್ತಾಯ : ಪ್ರಿಯಮಿತ್ರ ಮಜ್ಜನಂಬುಗುವಿನಮಲ್ಲಿರ್ದು ತದವಸಾನದೊಳಶೇಷಭೂಷಣ ಭೂಷಿತೆಯುಂ ಪಡಿಯಱಂ ಕಾಣಿಸೆಯುಂ (ಶಾಂತಿಪು. ೯-೧೦೦ ವ).
[ ಸಂ. (ತದ್ + ಅವಸಾನ) ]

**ತದಸು** (ಕ್ರಿ). ೧. ಹೊಡೆಯಿಸು ; ತದೆಯಿಸು : ಬಂಟನಾಗಿಹ ಕೃಷ್ಣನಿಂ ತದಸಿಕೊಂಡಂಗೆ ಕುಂತಣೆಯನಾಡಿ (ಬಕೋಪು. ೧೩-೩). ೨. ಸಂಭೋಗಿಸು : ಚಲಿಸಿ ಮೂತ್ರವೊಸರ್ವ ತೂತುಗಳೆಳಿಪಿದವದಿರು ತದಸಿಕೊಂಬಾ ಕುಳಿಗಳು ರಜೋದೂಷ್ಯವಹ ರೋಹಿತದ ಕುರುವುಗಳು (ಬಸಪು. ೪೦-೭೦).
[ <ತದೆ$_1$ + – ಸು$_1$ ]

**ತದಸ್ತು** (ಅ). ಅದು ಆಗಲಿ : ನೀವುಂ ಹಸ್ತೋದಕಂಗೆಯ್ವುದನೆ ಭಾಸ್ಕರ ಭಟ್ಟ ದಣ್ಣನಾಯಕಂ ತದಸ್ತುವೆಂದು . . . ಹಸ್ತೋದಕಂ ಮಾಡಿ ಬಿಟ್ಟರ್ (ಸೌಇಇ. XX, ೪೭-೪೨ ; 1072). 'ತಥಾಸ್ತು' ಪರಾ.
[ ℙ ಇದು ಸಂಸ್ಕೃತದಲ್ಲಿ ಒಂದು ಪದವಲ್ಲ ; ವಾಕ್ಯ : ತದ್ + ಅಸ್ತು ]

**ತದಾತನ** (ಗು). ೧. ಆ ಸಮಯದ. (ನಾ). ೨. ಆಗಲೇ ಇರತಕ್ಕುದು ; ವರ್ತಮಾನ ಕಾಲದ್ದು : ನೈಮಿತ್ತಕನಂ ಬರಿಸಿ ತದಾತನಮುಮತ್ಯಂತ ನೂತನಮುಮಪ್ಪುದೊಂದು ಲಗ್ನಮಂ ಪೇಟಿಮೆಂಬುದುಂ (ಶಾಂತಿಪು. ೫-೩೭ ವ). 'ಅಧುನಾತನ' ಪರಾ. ೨. = ತದಾತ್ವ : " ತದಾತ್ವಂ ತದಾತನಂ ತತ್ಕಾಲಂ " (ವಸ್ತುಕೋ. ೧೪-೧೪). [ ಸಂ. ]

**ತದಾತ್ವ** (ನಾ). ವರ್ತಮಾನ ಕಾಲ; ತತ್ಕಾಲ : "ತತ್ಕಾಲಂ, ತದಾತ್ವಂ– ಈ ೨ ಆಗಳೆಯಪ್ಪ ಕಾಲಂ" (ಹಲಾಯು. ೩೦–೧೧೮). [ಸಂ.]

**ತದಾತ್ವಸುಖ** (ನಾ). ತಾತ್ಕಾಲಿಕ ಸುಖ ; ವರ್ತಮಾನಕಾಲದ ಸುಖ : ಭಾವಿಯೆನಿಸಿರ್ದ ಭೋಗದೊಳಾವುದು ನಿಶ್ಚಯಮತೀತಮದತೀತಮೆ ದಲ್ ಜೀ[ವಂ] ತದಾತ್ವಸುಖಲವಸೇವೆಗೆ ಕಳವಳಿಪುದದಱೊಳೇಂ ಪುರು ಳುಂಟೇ (ಚಂದ್ರಪ್ರ. ೩–೩೭). [ತದಾತ್ವ + ಸುಖ]

**ತದಾನೀಂ** (ಅ). ಆಗ ; ಆ ಸಮಯದಲ್ಲಿ. [ಸಂ.]

**ತದಾರಭ್ಯ** (ಅ). ಆಗಿನಿಂದ ; ಅಂದಿನಿಂದ. [ಸಂ. (ತದ್ + ಆರಭ್ಯ)]

**ತದಿಕು** 'ತದುಕು₂' ನೋ.

**ತದಿಗಿಣ** (ನಾ). ಸಂಗೀತ, ನೃತ್ಯಗಳಲ್ಲಿ ತಾಳವನ್ನು ಸೂಚಿಸುವ ಒಂದು ಅನುಕರಣ ಪದ. 'ತದಿಗಿಣಿಸು' ಪರಾ.

**ತದಿಗಿಣಿಸು** (ಕ್ರಿ). ಕುಣಿ; ನರ್ತಿಸು : ಹಮಿಂಗ್ ಬರ್ಡ್ ಎಂಬ ಹೂಗುಬ್ಬಿಯು ಹೂವಿನ ಒಳಗೆ ತನ್ನ ನೀಳ ಚುಂಚನ್ನು ನೀಡಿ ಜೇನನ್ನು ಹೀರುವ ತನಕ, ಅದೇ ಸ್ಥಳದಲ್ಲಿ ತದಿಗಿಣಿಸಿ (Flutter) ಹಾರುವುದುಂಟು (ಬಾಲಪ್ರ. III, ೧೫೦೩). [ತದಿಗಿಣ + – ಇಸು₃]

**ತದಿಗಿಲು** 'ತದುಕಿಲು' ನೋ.

**ತದಿಗೆ** (ನಾ). ಹುಣ್ಣಿಮೆ ಅಥವಾ ಅಮಾವಾಸ್ಯೆಯ ನಂತರದ ಮೂರ ನೆಯ ದಿನ ; ಪಕ್ಷದ ಮೂರನೆಯ ದಿನ ; ತೃತೀಯೆ : ನಿಮಗಕ್ಷಯ ದಾನಮಕ್ಕೆಂದು ಪುಣ್ಯದಿನಂ ವೈಶಾಖಶುದ್ಧ ತದಿಗೆಯಕ್ಷತೃತೀಯೆಯೆಂಬ ಪುಣ್ಯದಿನಮಾಯ್ತು (ಜಾವುಂಪು. ೫೭–೨೭) ; ಯಕಾರಕ್ಕೆ ಗಕಾರಂ . . . ದ್ವಿತೀಯಾ–ಬಿದಿಗೆ ; ತೃತೀಯಾ–ತದಿಗೆ (ಶಮದ. ೨೫೫ ಪ್ರಯೋ) ; ಆ ಪಕ್ಷಂಗಳೊಳಗೆ . . . ಕುಬೇರನೇ ದೇವತೆಯಾಗುಳ್ಳ ತದಿಗೆ . . . ಚಂದ್ರ ನಧಿದೇವತೆಯಾದಪೌರ್ಣಮೆಯೆನಿಪ ಶುಭಾಶುಭರೂಪವಾದ ಹದಿನೈದು ತಿಥಿಗಳುಳ್ಳದ್ದೇ ಶುಕ್ಲಪಕ್ಷ (ವಿವೇಕ. ೩೨೦). [<ಸಂ. ತೃತೀಯಾ]

**ತದೀಯ** (ಗು). ಅವನಿಗೆ ಸಂಬಂಧಿಸಿದ ; ಆ ವ್ಯಕ್ತಿಯ ; ಅದರ ; ಅವರ : ತದೀಯ ಕರ್ಣಾಭರಣವಂ ಪೊರ್ದಿ (ಜಗವಿ. ೨–೪೩ ವ) ; ತದೀಯಾಂಬುಜಪದಮಂ ತನ್ನ ಶಿರೋಂಬುಜದಿಂದರ್ಚಿಸಲ್ ಪರಿಚ್ಛೇದಿ ಸಿದಂ (ಯಶೋಧ. ೪–೪೪). [ಸಂ.]

**ತದುಕ** 'ತದುಕು₂' ನೋ.

**ತದುಕಿಲು,** ತದಿಗಿಲು (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ : ನೆಲ್ಲಿ ಹೇರಳೆ ನಿಂಬೆ ಮಾಗಾಯಲ್ಲ ಮಾಣಸೇಲಕ್ಕಿಗರೆಯೆಳೆ ಬೆಲ್ಲವತಮಂಬಟೆಯ ತದುಕಿಲಸುಂಡೆ . . . ಗುಳ್ಳ ತಿಂತ್ರಿಣಿಯುಪ್ಪುಗಾಯಿ ಗಳೆಲ್ಲ ಸುಪ್ವಾರಿಯರು ಬಡಿಸಿದರು (ಅನಂತಾ. ೬–೨೫–೩೮). **ತದಿಗಿಲು :** ಆಲವರಳಿಯ ಅತ್ತಿ ಕಿತ್ತಳೆ ಜಾಲ ತದಿಗಿಲು . . . ಬಿದಿರು ಬೂರಗ ಲೀಲೆಯೊಳು ಮನವೊಪ್ಪಿತು (ಗೋಪಾಡು. ೧–೫). [<ತದುಕು₂]

**ತದುಕು₁** 'ಸದಕು₁' ನೋ.

**ತದುಕು₂,** ತದಕು₃, ತದಿಗು, ತದುಕ (ನಾ). ಒಂದು ಬಗೆಯ ಮರ ; ಆನೆಬೇಲ ; ಸಲ್ಲಕೀವೃಕ್ಷ : "ಗಜಭಕ್ಷ್ಯಾ, ಸುವಹಾ, ಸುರಭೀ, ರಸಾ, ಮಹೇರಣಾ, ಕುಂದುರುಕೀ, ಸಲ್ಲಕೀ, ಹ್ಲಾದಿನೀ ಈ ೮ ತದುಕು" (ನಾಚಿರಾ. ೧೧೦) ; ಕುದಿಯಿಸುವುದೆಣ್ಣೆಯಂ ಮುಂ ತದುಕಿಂ ಗುಗ್ಗುಳದಿನಕ್ಕೆ . . . ತವಕ್ಷೀರದಿನಕ್ಕಾ ತೈಲದೊಂದು ಕಾಳಿಕೆ ಕಿಡುಗುಂ (ಲೋಕೋಪ. ೬–೧೩) ; ಮಾಗುಳಿ ಬಿದಿರ ಕಳಲೆ ಪೊಸ ತದುಕಂಬಟೆಯ ಕಾಯ್ಗಳಿಂದ ಸಮೆದೊಪ್ಪುವುಪ್ಪಿನ ಕಾಯ್ಗಳಂ ಮಾಳ್ಪುದು (ಸೂಪಶಾ. ೩–೧೭) ; ಆನೆ ವಿಂಡತ್ತಲೊಂದೆಸೆಯ ಆನಂದ ಮಿಗೆಯಾಡುತಿರ್ದುವು ತದುಕಿನ ಕಾನನ ದೊಳು ಮೇವುಗೊಳುತ (ನಾಗಕು. ೧೩–೧೭೭). **ತದಕು₃ :** "ಸಲ್ಲಕೀ, ಗಜಪ್ರಿಯಾ–ಈ ೨ ತದಕು" (ಹಲಾಯು. ೩೩–೪೭) ; ತದ[ಪಾಠಾಂ. ದು]ಕಿನ ತಾಳ ತೆಂಗಿನ ತಳಂಕಿನ ತುಂಬುರ ಚಿಲ್ಲ ಬೆಲ್ಲವತ್ತದ . . . ಮರಂಗಳ ಕೊಂಬುಗಳ್ (ಲೀಲಾವ. ೬–೨೭) ; (ಸೂಕ್ತಿಸು. ೩–೨೫ ಸೂ) ; ಹುಣಿಸೆ ತದಕು ತುಂಬುರು ಬೆಳಲ್ ಬೆಲ್ಲವತ್ತ . . . ಚನ್ನಂಗಿ ಮೊದಲಾದ ವೃಕ್ಷಂಗಳಿಂ ವನಮೆಸೆದುದು (ಚಿಬಪು. ೫೩–೧೮). **ತದಿಕು :** ಪುಳಿಗೂಟಂ ತದಿಕಿನ ಕೆಂದಳಿರಂ ಪಾಲ್ಗನೆಯನೆಳೆಯ ಪುಲ್ಲಂ . . . ತಂದು ಪೊರೆವುದುಂ ಗಜಶಿಶುವಂ (ಧರ್ಮಾಮೃ. ೧೩–೧೨೯) ; ಬೇಲ ಬೇವಿಬ್ಬಡಲೆ ತೇಗರುಹಾಳ ತಂಡಸ ತಡಸ ತುಗ್ಗಿಲು ತದಿಕು ತಪಸಿಗಳ . . . ತಮಾಲ ತರು ಮೊದಲಾದ ವ ನ ಭೂ ಜಾ ಳಿ ಯ ಲಿ ಹೊಳೆದರಕಂಪನನಸಮರಣರಥವ (ತೊರರಾ. ೬–೧೮–೧೮) ; ಮಾದಲ ಮಾವು ತದಿ[ಪಾ ಠಾ ೦. ದು]ಕಿನೆಳಿಗಾಯಿಕ್ಕಿ ಪೊಗ್ಗರಿಸಿಯರ್ಧಮಂ ಬಿದಿರ ನಳಿಗೆಯೊಳಿಕ್ಕಿಯರ್ಧಮಂ ನೇತ್ರದೊಳು ಕಟ್ಟಿ ಶೈತ್ಯಂ ಮಾಳ್ಪುದು (ಸೂಪಶಾ. ೨–೪೭). **ತದುಕ :** ಹಾಲೆ ಹಲಸು . . . ಜಾಲ ತದುಕ ಅರನೆಲಿಮೇಲೆನಿಸುವ ಮಾವು ಆಲದಮರಗಳ ಸಾಲೆಸೆದಿಹವು ಅಲ್ಲಲ್ಲಿ (ಮಾದೇಸಾಂ. ೧–೫೦).

**ತದುಕಿನಧೂಪ** = ಒಂದು ಬಗೆಯ ಧೂಪ ; ಹಾಲುಮಡ್ಡಿ : "ತುರುಷ್ಕಃ, ಪಿಂಡಕಃ, ಸಿಲ್ಹಃ, ಯಾವನಃ–ಈ ೪ ತದುಕಿನ ಧೂಪ. ಮಡ್ಡಿಯ ಧೂಪವೆಂದೂ ಎಂಬರು" (ನಾಚಿರಾ. ೧೧೪).

**ತದುಕುಗಾನು** (ನಾ). ತದುಕಿನ ಮರಗಳಿರುವ ಕಾಡು,–ಅಡವಿ ; ಸಲ್ಲಕೀವನ:ಮುಂತೊಂದು ತದುಕುಗಾನೊಳು ಹೇರಾನೆಯ ತಿಂಥಿಣಿಯನು ಕಂಡನಾಗ (ಶ್ರೀಪಾಲ. ೬–೪೩). [ತದುಕು₂ + ಕಾನು (<ಕಾನ್)]

**ತದುಕ್ತ** (ಗು). ಅದರಲ್ಲಿ ಹೇಳಿದ ; ಆ ವಿಷಯದಲ್ಲಿ ಹೇಳಿರುವ : ಓರ್ವಂ ಪಾರ್ವಂ ಬಂದು ತೀರ್ಥಯಾತ್ರಾಫಲಮಂ ತದುಕ್ತವಿಧಿಯಂ ನೆಱ ತಿಳಿಪಿ ಮಾಯಮಾದೊಂದು ಕನಸಂ ಕಂಡು (ರಾಮಾಶ್ವ. ೭೫–೧೭).
[ಸಂ. (ತದ್ + ಉಕ್ತ)]

**ತದುಗತ** (ಗು). = ತದ್ಗತ ೧ : ತದುಗತವಾಗಿ ನಿರಂತರ ನಿಜಲಿಂಗದಿ ಪರಮಾನಂದವನೆಯ್ದಿ (ಶಿವಗೀ. ೪೧೮) ; ಜಗದ ಕಣ್ಣಿಗೆ ಮಾಯದ ಮಂಜ ಕವಿಸಿ ನಿಜಪದದಲ್ಲಿ ತದುಗತನಾದ (ಶರಚ. ೩೪೯).
[<ಸಂ. ತದ್ಗತ]

**ತದುಪಾಂತ** (ನಾ). ಅದರ ಪಕ್ಕ,–ಸಮೀಪ: ಮತ್ತಂ ತದುಪಾಂತದೊಳ್ (ಶಾಂತಿಪು. ೧–೭೦ ವ) ; ತದುಪಾಂತ ಸಮಯದೊಳನ್ನತರ ವೇದನೀಯ ಬೇವಗತಿ . . . ಎಂಬೆಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ (ಪಂಚಮಾ. ೧೩–೮೦ ವ) ; ಅಧರವೋಷ್ಠ ದಂತವಾಸಂ ತದುಪಾಂತಮಂತದು ಸೃಕ್ವಾಭಿಧಾನಂ (ವಸ್ತುಕೋ. ೬೯–೧೫). [ಸಂ. (ತದ್ + ಉಪಾಂತ)]

**ತದುಭಾಗ** (ನಾ). ಅದರ ಭಾಗ ; ಆ ಭಾಗ : ಗಿರೀಂದ್ರ ವನಾಂತರದ ಪುಣ್ಯಾಗಣಿತ ತೀರ್ಥಂಗಳೊಳು ತದುಭಾಗ[ಪಾಠಾಂ. ತದ್ಭಾಗ]ಪುಣ್ಯಾಯತನ ಗಣ್ಯಸ್ಥಾನ ಭೂಮಿಯುಲಿ (ಬಸವು. ೧೯–೩೨). [<ಸಂ. ತದ್ಭಾಗ]

**ತದೆ₁** 'ಸದೆ₁' ನೋ.

**ತದೆ₂** (ನಾ). ಬಡಿತ ; ಹೊಡೆತ ; ಪೆಟ್ಟು : ಅವರಾತಂಗವಪಾತನೊಂದು ತದೆಗಂ ಬೆಂಗೊಟ್ಟಂತುಮಿಂತುಮೋಡಿ ತಮ್ಮೊಡೆಯಂಗಿಂತಿದಂ ಪೇಟ್ಟುದುಂ (ರಾಮಾಶ್ವ. ೧೫೪–೩). [<ತದೆ₁]

**ತದೆವಡೆ** (ಕ್ರಿ). ಏಟು ತಿನ್ನು : ಊರ ಸೀರೆಗಸಗಂ ತದೆವಡೆದನೆನಿಪ್ಪ ನಾಡನುಡಿ (ಅರ್ಥನೀ. ೮–೭೯). [ತದೆ₂ + ಪಡೆ₁]

**ತದೇಕಚಿತ್ತ** (ನಾ). ೧. ಅದರಲ್ಲೇ ನೆಟ್ಟ ಮನಸ್ಸು. ೨. ಅದರಲ್ಲೇ ನೆಟ್ಟ ಮನಸ್ಸುಳ್ಳವನು ; ತನ್ಮಯವಾದ ಮನಸ್ಸುಳ್ಳವನು : ಮೊಕ ದ್ದಮೆಗೆ ಸಂಬಂಧಿಸಿದ ಕಡತವನ್ನು ಬಿಚ್ಚಿಕೊಂಡು ತದೇಕಚಿತ್ತನಾದನು (ಪುನರು. ೩೭೪) ; ತದೇಕಚಿತ್ತನಾಗಿ ನನ್ನ ವಾಚನವನ್ನು ಕೇಳುತ್ತ ಕುಳಿತ (ದೀಪಹ. II, ೪). [ಸಂ. (ತದ್ + ಏಕಚಿತ್ತ)]

**ತದ್ಗತ** (ಗು). ೧. ಅದರಲ್ಲಿ ಮಗ್ನನಾದ,-ಆಸಕ್ತನಾದ,-ಶ್ರದ್ಧೆಯುಳ್ಳ. (ನಾ). ೨. ಲೀನನಾದವನು ; ಐಕ್ಯಹೊಂದಿದವನು : ಕೂಡಲ ಸಂಗಮದೇವನಲ್ಲಿ ತದ್ಗತನಾ[ಪಾಠಾಂ. ವಾ]ದೆನಯ್ಯಾ (ಬಸವ. ೮೪೫).

**ತದ್ಗತವಾಗು** = ಐಕ್ಯವಾಗು ; ಲೀನವಾಗು : ತನ್ನಲ್ಲಿ ತಾನು ತದ್ಗತವಾಗಿಪ್ಪ ಶಿವಯೋಗಿಗೆ ಭಿನ್ನವಿಲ್ಲ ನೋಡ (ಶರಜ. ೩೬೦).

[ ಸಂ. (ತದ್ + ಗತ) ]

**ತದ್ಗುಣ** (ಗು). ೧. ಆ ಗುಣವುಳ್ಳ. (ನಾ). ೨. ಅದರ ಅಥವಾ ಆ ವ್ಯಕ್ತಿಯ ಗುಣ,-ಲಕ್ಷಣ. ೩.=ತದ್ಗುಣಾಲಂಕಾರ: ಅತಿ ಬಹುಲಸ್ಥಿತಿಯಿಂ ಸಂಗತಗುಣಮವಿಭೇದಿಯಾಗೆ ತದ್ಗುಣಮೆನಿಕುಂ (ಕಾವ್ಯಾವ. ೭೪೭).

[ ಸಂ. (ತದ್ + ಗುಣ) ]

**ತದ್ಗುಣಾಲಂಕಾರ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು: ಒಂದು ವಸ್ತು ತನ್ನ ಗುಣಮಂ ಬಿಟ್ಟುಪೆಱತೊಂದಱ ಗುಣಮಂ ಪಡೆಯೆಯದು ತದ್ಗುಣಾಲಂಕಾರಮೆನಿಪುದು ಎಂತೆನೆ:-ಮುತ್ತಿನ ಸರಮಂ ಕೆಂದಳದೊತ್ತಿನೊಳಿಟ್ಟೆಱಗಿ ನಿನಗೆ ಸಾಮಂತನೃಪರ್ ಮತ್ತದನೆ ಪದ್ಮರಾಗಂಗೆತ್ತುಚ್ಚರಿವಡುವರ್ (ಅಪ್ರತಿ. ೧೧೮-೨೦) ; ಯಾವುದಾದರೂ ಒಂದು ವಸ್ತು ತನ್ನಗುಣವನ್ನು ಬಿಟ್ಟು ಮತ್ತೊಂದು ವಸ್ತುವಿನ ಗುಣವನ್ನು ಪಡೆಯಿತೆಂದು ವರ್ಣಿಸುವುದು ತದ್ಗುಣಾಲಂಕಾರ (ಕೈಪಿಡಿ. ೨೮೭).

[ ತದ್ಗುಣ + ಅಲಂಕಾರ ]

**ತದ್ದಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮತ್ತದ್ದಯ್ಯ ಮಾಖಿಣ್ಣ ಭಟ್ಟಾರರ್ಗ್ಗೆ ವಿದ್ಯಾದಾನಗೊಟ್ಟ ಮಣ್ಣು ಬಟ್ಟವಾಳಯ್ಗಣ್ಡುಗಂ (ಎಕ. V, ಅರಕ. ೨೪-೭ ; ಸು. 900). [ ತದ್ದ ? + ಅಯ್ಯ$_1$ ]

**ತದ್ದರ** (ನಾ). ಒಬ್ಬಾತನ ಹೆಸರು : ಮತ್ತನ್ನೂರ್ಱಯ್ವತ್ತರದಱ ಚತುರಾಘಾಟದ ಸೀಮೆಯಾವುದೆಂದರೆ ತದ್ದರಪೊಲದ ಬ[ಡ]ಗಿ ಪೊಲದ ಸಂದಿನಲೀಶಾನ್ಯದ ಗುಡ್ಡೆ . . . ಅಲ್ಲಿಂ ಬಡಗಲು ಸೀವಟ್ಟದ ತದ್ದರಪೊಲದ ಸಂದಿನಲು ವಾಯುವ್ಯದ ಗುಡ್ಡೆ (ಸೌಇಇ. XX, ೧೮-೩೭, 980). [ ? ]

**ತದ್ದಲು** (ನಾ). ಬೇಲಿ ಮೊದಲಾದವುಗಳಿಗೆ ಇಡುವ ಮುಳ್ಳಿನ ಬಾಗಿಲು ; "ಕುರಿಯ ರೊಪ್ಪಕ್ಕೆ ಅಥವಾ ಹುಲ್ಲುಕೊಪ್ಪಲು ಮುಂತಾದುವುಗಳ ಬಾಗಿಲಿಗೆ ಇಡುವ ಬಿದಿರಿನಮುಳ್ಳಿನ ಅಥವಾ ಸೋಗೆಯ ಬಾಗಿಲು" (ನನ್ನೂ ರು. ಟಿಪ್ಪಣಿ) : ಹುಲ್ಲನ್ನು ತಿಂದು ಬಾಯಾರಿದ ಕುರಿಮರಿಗಳು ತದ್ದಲಿನ ಆ ಕಡೆ (ನನ್ನೂರು. ೧೫). 'ತಡಮೆ' ಪರಾ. [ ? ]

**ತದ್ದವಾಡಿ** 'ತರ್ದವಾಡಿ' ನೋ.

**ತದ್ದಿನ** (ನಾ). ೧. ಆ ದಿನ : ಸುರೆ ಮಾಂಸವ ಭುಂಜಿಸುವ ತದ್ದಿನವೇ ದೋಷದಿನ (ಆದವ. ೯೪-೧೫೭). ೨. ಶ್ರಾದ್ಧ ; ತಿಥಿ : ಕುಂತಿಯ ಪತಿಯ ತದ್ದಿನ ಕಾಲ ಬಂದುದು ಕೃಷ್ಣನಿರುತಿರೆ ತದ್ವನಂಗಳಲಿ(ಕುವ್ಯಾ.ಅ.೭.೧೪. ೩-೦); ತದ್ದಿನಕೆ ಮಱುದಿವಸದೊಳ್ಪೀಳ್ದು ಟಹೆಸಪಾತ್ರಂಗೆ (ಜೈಮಿಭಾ. ೧೦-೨೭). P ಶ್ರಾದ್ಧವು ಅಮಂಗಳವಾಚಕವೆಂದು ಹೀಗೆ ಪ್ರಕಾರಾಂತರದಿಂದ ಹೇಳಲ್ಪಡುತ್ತದೆ. [ ಸಂ. (ತದ್ + ದಿನ) ]

**ತದ್ದು** 'ತರ್ದು$_2$' ನೋ.

**ತದ್ಧರ್ಮ** (ಗು). ೧. ಆ ಕೆಲಸವನ್ನುಳ್ಳ. (ನಾ). ೨. ಆ ಧರ್ಮ ; ಆ ಕೆಲಸ. [ ಸಂ. (ತದ್ + ಧರ್ಮ) ]

**ತದ್ಧಿತ** (ಗು). ೧. ಅದಕ್ಕೆ ಹಿತವಾದ. (ನಾ). ೨. [ವ್ಯಾಕ] ಧಾತುವಲ್ಲದ ಪ್ರಕೃತಿಗಳಿಗೆ ಸೇರಿ ವಿಶಿಷ್ಟವಾದ ಅರ್ಥವನ್ನು ಸೂಚಿಸುವ ಪ್ರತ್ಯಯ: ಚರಮಸ್ವರಕ್ಕೆ ಚರಮಾಕ್ಷರಕಕ್ಕುಂ ಲೋಪಮಗುರ್ದೊಳ್ ತದ್ಧಿತವೊಂದಿರೆ (ಶಮದ. ೨೦೯) ; ಮಿಕ್ಕ ಪ್ರಕೃತಿಗಳ ಮೇಲೆ ಸೇರುವ ಕೆಲವು ಪ್ರತ್ಯಯಗಳಿಗೆ ತದ್ಧಿತಪ್ರತ್ಯಯಗಳೆಂದೂ . . . ಹೆಸರಿದೆ (ಕೈಪಿಡಿ. ೧೫). ೩. [ವ್ಯಾಕ] ತದ್ಧಿತಪ್ರತ್ಯಯ ಸೇರಿ ಆದ ನಾಮಪದ : ಗಣನಾವಿಶೇಷ ಪರಿಪೂರಣದೊಳಮನಿತಿನಿತೆನಿತ್ತು ಶಬ್ದಂಗಳ ಪೂರಣದೊಳಮನೆಯ ಪ್ರತ್ಯಯಮೊಣರ್ದು ಸಮಂತೊಂದಿ ತೋಱುಗುಂ ತದ್ಧಿತದೊಳ್ (ಕಾವ್ಯಾವ. ೩೬೮).

[ ಸಂ. ]

**ತದ್ಧಿತಾಂತ** (ನಾ). [ವ್ಯಾಕ] ತದ್ಧಿತಪ್ರತ್ಯಯಗಳು ಸೇರುವುದರಿಂದ ಉಂಟಾಗುವ ಪದ : ಮಿಕ್ಕ ಪ್ರಕೃತಿಗಳ ಮೇಲೆ ಸೇರುವ ಕೆಲವು ಪ್ರತ್ಯಯಗಳಿಗೆ ತದ್ಧಿತಪ್ರತ್ಯಯಗಳೆಂದೂ ಇವುಗಳಿಂದ ನಿಷ್ಪನ್ನವಾದ ಶಬ್ದಗಳಿಗೆ ತದ್ಧಿತಾಂತಗಳೆಂದೂ ಹೆಸರಿದೆ (ಕೈಪಿಡಿ. ೧೫).

**ತದ್ಧಿತಾಂತ ನಾಮ**=ನಾಮಂ ಪ್ರಕೃತಿಯ ಮೇಲೆ ತದ್ಧಿತಪ್ರತ್ಯಯವು ಸೇರಿ ಆಗುವ ಪದ: ನಾಮಪ್ರಕೃತಿಗಳಿಗೆ ಬೇರೆ ಬೇರೆ ಅರ್ಥಗಳಲ್ಲಿ ಬೇರೆ ಬೇರೆ ಪ್ರತ್ಯಯಗಳು ಸೇರಿ ತದ್ಧಿತಾಂತನಾಮಗಳಾಗುತ್ತವೆ (ಮಧ್ಯಮ. ೧೩೬). **ತದ್ಧಿತಾಂತ ಭಾವನಾಮ** = ತದ್ಧಿತಪ್ರತ್ಯಯ ಸೇರಿ ಸಾಧಿತವಾದ ಭಾವನಾಮ : ಭಾವವನ್ನು ಎಂದರೆ ವಸ್ತುಧರ್ಮವನ್ನು ತಿಳಿಸುವ ಕೆಲವು ತದ್ಧಿತಪ್ರತ್ಯಯಗಳು ಸೇರಿದರೆ ತದ್ಧಿತಾಂತಭಾವನಾಮಗಳಾಗುತ್ತವೆ (ಕೈಪಿಡಿ. ೧೯) ; ಭಾವನಾಮಗಳಲ್ಲಿ ಧಾತುಗಳಿಂದ ಹುಟ್ಟತಕ್ಕವುಗಳಿಗೆ ಕೃದಂತಭಾವನಾಮಂಗಳೆಂದೂ, ನಾಮಪ್ರಕೃತಿಗಳಿಂದ ಹುಟ್ಟತಕ್ಕವುಗಳಿಗೆ ತದ್ಧಿತಾಂತ ಭಾವನಾಮಗಳೆಂದೂ ಹೆಸರು (ಮಧ್ಯಮ.೧೨೪). **ತದ್ಧಿತಾಂತಾವ್ಯಯ**=ನಾಮಂಪ್ರಕೃತಿಯ ಮೇಲೆ ತದ್ಧಿತಪ್ರತ್ಯಯವು ಸೇರಿ ಆಗುವ ಅವ್ಯಯ : ತದ್ಧಿತಾಂತಾವ್ಯಯಗಳು – (i) ಸಾದೃಶ್ಯಾರ್ಥದಲ್ಲಿ . . . ಪೊಲ್, ಅಂತೆವೋಲ್, ಅಂತಿರೆವೋಲ್ ಎಂಬ ಪ್ರತ್ಯಯಗಳು ಬರುವುವು . . . ಹರಿವೊಲ್, ಇಂದ್ರುಂಬೋಲ್. (ii) ಒಂದು ಮೊದಲಾದ ಸಂಖ್ಯಾವಾಚಿಗಳಿಗೆ ಆವೃತ್ತಿ ಎಂಬರ್ಥದಲ್ಲಿ ಮೆ ಸೇರುವುದು–ಒರ್ಮೆ, ಇರ್ಮೆ, ಸಾಸಿರ್ಮೆ (ಕೈಪಿಡಿ. ೫೨). [ ತದ್ಧಿತ + ಅಂತ$_2$ ]

**ತದ್ಬಲ, ತದ್ಬಳ** (ನಾ). ೧. ಒಂದು ಬಗೆಯ ಬಿಲ್ಲು : ದಂಡಾಸನಂ ತೀರಿ "ತದ್ಬಲ[ಪಾಠಾಂ. ಳ]ಮೆಂದು ಬಿಲ್ಲ ಭೇದಂಗಳಕ್ಕು" (ಮಂಗರಾ. ೭೭-೩೩). 'ತೀರಿ' ಪರಾ. **ತದ್ಬಳ**: ೨. ಒಂದು ಬಗೆಯ ಬಾಣ : "ತೀರೀ ತದ್ಬಳಃ . . . ಅಂಬಿನ ಭೇದಂಗಳು" (ಹಲಾಯು. ೭೭-೩೧೩). [ ಸಂ. ]

**ತದ್ಬಳ** 'ತದ್ಬಲ' ನೋ.

**ತದ್ಭವ** (ಗು). ೧. ಅದರಿಂದ ಹುಟ್ಟಿದ, -ಉಂಟಾದ; ಅದರಲ್ಲಿ ಹುಟ್ಟಿದ ; ಅಲ್ಲಿಯ : ಗೃಹೋಪಕಂಠವನಭೂಜಮೆ ಕಲ್ಪಮಹೀಜದೊಪ್ಪಮಂ ತಳೆಯೆ ಧನಾಢ್ಯ ದಂಪತಿಯೆ ತದ್ಭವ ದಂಪತಿಯಂದಮಂ ಪುದುಂಗೊಳಿಸೆ ಪುರಂ ವಿರಾಜಿಪುದು ದೇವಕುರುಪ್ರತಿಮಾನಮೆಂಬಿನಂ (ಚಂದ್ರಪು. ೧೧-೭೨). (ನಾ). ೨. ಅದರಲ್ಲಿ ಹುಟ್ಟಿದುದು ; ಅಲ್ಲಿ ಜನ್ಮತಾಳಿದುದು : ಅವಱ ವಿಪರ್ಯಯವೃತ್ತಿ ಪ್ರವಿಭಕ್ತ ವಿಕಲ್ಪಮಕ್ಕುಮುತ್ತರಮಾರ್ಗಂ ಸವಿಶೇಷ ಗುಣಮನತಿಶಯಧವಳೋಕ್ತಿಕ್ರಮದಿ ನಱಿಪುವೆಂ ತದ್ಭವದೊಳ್ (ಕವಿರಾ. ೨-೫೫) ; ಕರಚರಣ ಸಮಾಯೋಗದೆ ಕರಣಂ ನೂಱೆಂಟು ತದ್ಭವಂಗಳ್ ಮೂವತ್ತೆರಡಂಗಹಾರವೆಸೆದುವು ಸರೋಚಕಂಗಳ್ ಸುಚಾರಿಗಳ್ ಸುರಪತಿಯಾ (ಆದಿಪು ೫-೮). ೩. ಆ ಜನ್ಮ ; ಪೂರ್ವಜನ್ಮ : ಇನ್ನೆನ್ನ ನಿನ್ನ ತದ್ಭವ ಸಂಬಂಧದ ಬಂಧುರಲಂಬಪ್ರಾರಂಭಮಂ ಕೇಳ್ವೆಯಪ್ಪೊಡೆ (ಶಾಂತಿಪು. ೭-೮೩ ವ) ; ಜಾತಿಸ್ಮರೆಯಾಗಿ ತದ್ಭವಪ್ರತ್ಯಯದಿಂ ಭವಸ್ವರೂಪಮಂ . . . ಕೇಳ್ದು ತಿಳಿದು (ಸುಕುಮಾ. ೮-೧ ವ). ೪. [ವ್ಯಾಕ] ಸಂಸ್ಕೃತದಿಂದ ಅಥವಾ ಪ್ರಾಕೃತದಿಂದ ಹುಟ್ಟಿದ ಅಪಭ್ರಂಶ ಶಬ್ದ : ಸಕ್ಕದದ ತದ್ಭವಂಗಳ ಲಕ್ಕಣಮಂ ಕನ್ನಡಕ್ಕೆ ಲಕ್ಷಿಸಿ ಪೇಟ್ವೆಂ (ಶಮದ. ೨೫೩) ; ವಿಕಾರವನ್ನು ಪಡೆದ ಸಂಸ್ಕೃತ ಶಬ್ದಗಳಿಗೂ ವಿಕಾರವನ್ನು ಪಡೆದ ಅಥವಾ ಪಡೆಯದ ಪ್ರಾಕೃತಶಬ್ದಗಳಿಗೂ 'ತದ್ಭವ' ವೆಂಬ ಹೆಸರಿದೆ (ಕೈಪಿಡಿ. ೧೪). [ ಸಂ. (ತದ್ + ಭವ) ]

**ತದ್ಭಾವ** (ನಾ). ೧. ಅದರ ಭಾವ; ಅದರ ಪರಿಣಾಮ: "ತಳ್ಕು – ಅನುಲೇಪನೇ, ತದ್ಭಾವೇ ಚ(ಪ್ರಕಾಶ)" (ಶಮಧ). ೨. ಅದರ ಸ್ವಭಾವ. ೩. ಒಂದು ಇನ್ನೊಂದಾಗಿ ಮಾರ್ಪಡುವುದು: ಉತ್ಪಾದ ತದ್ಭಾವ, ಪರಿಣಾಮ, ಅವಸ್ಥೆ, ಆಕಾರ ಎಂಬೀ ಪದಗಳು ಏಕಾರ್ಥಕಗಳು (ಹಿಂದಸಾ. ೭೮). [ಸಂ. (ತದ್ + ಭಾವ)]

**ತದ್ರೂಪ** (ನಾ). ೧. ಅದರ ರೂಪ,–ಆಕಾರ: ಇಂತಹ ತದ್ರೂಪು ತದ್ರೂಪಂಗಳ ಹೊದ್ದಿಹವಾದ ಕಾರಣ ಇಂತೀ ಆತ್ಮತತ್ವ ಭೇದದಲ್ಲಿ ಆಗುಚೇಗೆಯನಱಿಯಬೇಕು (ವೋಳಿಮಾ. ೧೧–೪೧). ೨. ಅದರಂತೆ ಇರುವುದು; ಪ್ರತಿರೂಪ; ಯಥಾವತ್ತಾದ ರೂಪ: ಕತೆಗಾರ್ತಿಯರು ಸಾಂಸಾರಿಕ ಜೀವನದಲ್ಲಿಯ ಅತ್ತೆ – ಸೊಸೆಯರ ಸಂಬಂಧ . . . ಭಾವ–ಮೈದುನರ ಸಂಬಂಧಗಳನ್ನು ತದ್ರೂಪವಾಗಿ, ರಸವತ್ತಾಗಿ ಚಿತ್ರಿಸಬಲ್ಲರು (ಚಾಗಿನ. III, ಮುನ್ನುಡಿ). [ಸಂ. (ತದ್ + ರೂಪ)]

**ತದ್ರೂಪು** (ನಾ). ೧. = ತದ್ರೂಪ ೧: ಇಂತಿಹ ತದ್ರೂಪು ತದ್ರೂಪಂಗಳ ಹೊದ್ದಿಹವಾದ ಕಾರಣ (ವೋಳಿಮಾ. ೧೧–೪೧). ೨. = ತದ್ರೂಪ ೨: ಹಾಗೆ ಪಡೆದ ಬಿಂಬಕಲ್ಪನೆ ಪ್ರತ್ಯಕ್ಷಾನುಭವದ ತದ್ರೂಪವಾಗಿದ್ದರೆ ಅದು ವಾಸ್ತವಿಕ (ನೈಜ) ಬಿಂಬಕಲ್ಪನೆ (ಶಿಕ್ಷದ. ೫೧೭). [<ಸಂ. ತದ್ರೂಪ]

**ತದ್ವತ್ತು** (ಗು). ಅದರ ಹಾಗಿರುವ; ಅದರಂತಿರುವ.

**ತದ್ವತ್ತಾಗಿ** = ಅಂತೆಯೇ; ಹಾಗೆಯೇ; ಇದ್ದುದಿದ್ದಂತೆ; ಯಥಾವತ್ತಾಗಿ: ಅಲ್ಲಿ ಕಾಣುವುದು ನಡೆಯುವುದೆಲ್ಲವನ್ನೂ ತದ್ವತ್ತಾಗಿ ಚಿತ್ರಿಸಲು ಅವನ ತೊಡಗುತ್ತಾನೆಂದು ಭಾವಿಸೋಣ (ಸಮಾಲೋ. ೧೧೩); ಪಾಶ್ಚಾತ್ಯ ಅರ್ಥಶಾಸ್ತ್ರದ ತತ್ತ್ವಸಿದ್ಧಾಂತಗಳನ್ನು ತದ್ವತ್ತಾಗಿ ಅಂಗೀಕರಿಸಿ (ಭಾರದ. ೩೫೦). [ಸಂ. ತದ್ವತ್]

**ತದ್ವಿಪರೀತ** (ನಾ). ಅದಕ್ಕೆ ವಿರುದ್ಧವಾದುದು; ಬೇರೆಯಾದುದು: ಹುಸಿ ಪರದ್ರೋಹವು ಪರಸ್ತ್ರೀವ್ಯಸನ . . . ಆತ್ಮಸ್ತುತಿಯೆನಿಪ್ಪವನು ಬಿಸುಟು ತದ್ವಿಪರೀತದಲಿ ವರ್ತಿಸುವನವನೇ ರಾಯನು (ಕುವ್ಯಾಉ. ೩–೭೧); ಬಡವರ ಸಮುಯಕ್ಕೆ ಅವನ ನಡತೆ ತದ್ವಿಪರೀತ (ನಿಬಂಧ. I, ४४४).

[ಸಂ. (ತದ್ + ವಿಪರೀತ)]

**ತದ್ವಿರುದ್ಧ** (ಗು). ಅದಕ್ಕೆ ಪ್ರತಿಯಾದ,–ವಿರುದ್ಧವಾದ: ದೇಶಂ ವರರಾಷ್ಟ್ರಾದಿ ನಿವೇಶಾಂತಂ ತದ್ವಿರುದ್ಧವಚನಂ ಮಿಗೆ ಸಂಕ್ಲೇಶಕರಂ (ಕವಿರಾ. ೧–೧೧೧). [ಸಂ. (ತದ್ + ವಿರುದ್ಧ)]

**ತದ್ವ್ಯತಿರಿಕ್ತ** (ನಾ). ಅದರಿಂದ ಭಿನ್ನವಾದುದು,–ಬೇರೆಯಾದುದು: ಓಡಿದು ನಿಮ್ಮಾಗ್ರಹದಿಂದಂ ನಿಱಿಸಿದ ಪದಾರ್ಥ ಸುಖದುಃಖ ಹರ್ಷ ವಿಷಾದಂಗಳೊಳಾದುದೊಂದು ವಿಜ್ಞಾನ ಸಂತಾನಮಾದುದಲ್ಲದೆ ತದ್ವ್ಯತಿರಿಕ್ತಂ ಜೀವನೆಂಬುದಿಲ್ಲ (ಶಾಂತಿಪು. ೮–೧೪೩ ವ).

[ಸಂ. (ತದ್ + ವ್ಯತಿರಿಕ್ತ)]

**–ತನ** (ಪ್ರ). [ವ್ಯಾಕ] ಒಂದು ತದ್ಧಿತ ಭಾವನಾಮ ಪ್ರತ್ಯಯ: ತನಿಮಿಕೆಯುಮೆಂಬಿವುಂ ಚೇತನಭಾವದೊಳಕ್ಕುಂ (ಕಾವ್ಯಾವ. ೩೪೩); ತನಕ್ಕೆ – ಕಲಿತನಂ, ಚದುರತನಂ, ಆಳ್ತನಂ, ಜಾಣತನಂ (ಶಮುದ. ೨೧೧ ಪ್ರಯೋ). [<ಪ್ರಾ. ತಣ]

**ತನಕ, ತನಕ್ಕ** (ಅ). ಪರ್ಯಂತ; ವರೆಗೆ: ಆಡುವನ್ನತನಕ ಅಂಗಳ ಬಾಗಿಲಲ್ಲಿ ಗುಡಿಗೂಟ ಎನ್ನಬಹುದೆ (ಬಲೇಶ್ವ. ೩೭); ಆನಂದದಿಂದಾಡಿ ಪಾಡಿದನು ನಡುವಗಲ ತನಕ (ಸಿದ್ಧರಾ. ೨–೧೭); ಪುಟ್ಟಿದುದು ಮೊದಲಿಂದು ತನಕೊಂದದಕೆ ಹಂಗಿನೊಳೊಂದೆನುಸಿಕನೆ (ಬಸಪು. ೬೧–೫೭); ಋಷಿಗಳೈವರ ಕಾಲದಲಿ ಕರೆ ನಾಳೆತನಕಿಹೆನೆಂದನಸುರಾರಿ (ಕುವ್ಯಾಆ. ೬೮೩. ೩–೧); ತಾನು ತನ್ನ ಮಕ್ಕಳ ಕಾಲ ತನಕ ನಾಲ್ಕು ಮುಡಿ ತಳಿವನೂ ಗೇಣಿಗೆ ಬಿತ್ತಿ (ಸಾಇಇ. IX–ii, ४४४–३४: 1433); ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ (ಪುರಂದ. ३–೧४४ ಪಲ್ಲವಿ); ಮುಂಡಿಯ ತನಕ ಬರುವ ಒಂದು ಪಂಚೆ (ಕಳಹು. ೧). **ತನಕ್ಕ**: ಚೇಳು ವ್ಯಾಳಂ ಮಕ್ಷಿಕ ತಾಳಿದವವು ಪುಚ್ಛದಂತ ಶಿರದಿಂ ವಿಷಮಂ ತಾಳಿದ ವಿಷಮಂ ದುರ್ಜನ ಕಾಲಿಂದಂ ಶಿರತನಕ್ಕ (ನೀತಿಸಾ. ೩೨೩). 'ಅನ್ನಕಂ' ಪರಾ. [ದೇ. ತೆಲು. ದನುಕ, ದಾಕ]

**ತನಕರ** 'ತನಕರಂ' ನೋ.

**ತನಕರಂ, ತನಕರ** (ಅ). = ತನಕ: ಪಾಂಡವರು ಇಂದಿನಾಹವ ತನಕರಂ ಸೌಖ್ಯಜೀವಿಗಳು (ತುರಂಗ. ೭೩–೫೪). **ತನಕರ**: ಅವರು ಇನ್ನಿಷ್ಟು ದಿನ ತನಕರ ನೊಂದಡವಿಯೊಳಗೆ ನಡೆದಿಲ್ಲಿ ಪರಿಯಂತರಂ ಬಂದಡೇನಪ ರಾಘವೇ (ತುರಂಗ. ४೩–೯). 'ಅನ್ನಕ್ಕರ' ಪರಾ. [<ತನಕ]

**ತನಕಲಿ, ಟಣಕಲಿ** (ನಾ). ನೀರಿನಲ್ಲಿ ಜೊಂಡಿನಂತೆ ಬೆಳೆಯುವ ಒಂದು ಬಗೆಯ ಗಿಡ; ಅಪು: ಇದರಿಂದ ಬಿಸಿಲಿಗೆ ತಲೆಯನ್ನು ಮರೆ ಮಾಡಿಕೊಳ್ಳುವ ಪರಂಗಿ ಟೋಪಿಗಳನ್ನು ಮಾಡುತ್ತಾರೆ. ಕಿರೇಬೆಂಡು ಅಲಗಿನ ಗಿಡ, ತನಕಲಿ (ವ್ಯಜಿಗಿ. ೩–೫೧). **ಟಣಕಲಿ**: (೬). [?]

**ತನಕಿ, ತನಖಿ$_1$, ತನಿಕಿ, ತನಿಕೆ, ತನಿಖಿ, ತನಿಖೆ** (ನಾ). ೧. ಪರೀಕ್ಷಿಸುವುದು; ವಿಚಾರಣೆ; ಶೋಧನೆ: (೬). **ತನಖಿ$_1$**: ೧. ಶ್ರೀತ್ತರಪತಿ ಗಿರ್ರಿ ಮೇಲೆ ಆಗತಕ ಬ್ರಾಹ್ಮಣ ಸಂತರ್ಪಣೆ ಬಗ್ಗೆ ತನಖಿ ಅಪ್ಪಣೆ ಕೊಟ ವಿವರಾ (ಮ್ಯಅರಿ. ೧೯೩೮, ३೭–३: 1830). ೨. (ಹಳ್ಳಿಗಳಲ್ಲಿ) ಒಬ್ಬನಿಗೆ ಸೇರಿದ ಜಮೀನುಗಳು ಮತ್ತು ಅವುಗಳಿಂದ ಬರಬೇಕಾದ ಕಂದಾಯದ ವಿವರಗಳನ್ನು ತಿಳಿಸುವ ದಾಖಲೆ ಪುಸ್ತಕ: (೬). **ತನಿಕಿ**: ೧. ಗೌಡರು ನನ್ನನ್ನೇ ತನಿಕೀಗೆ ತಗೊಂಡರೆ ನಾ ಹ್ಯಾಗೀ ಊರಾಗಿರೋದು (ಸಣ್ಣಕ. IX, ೩೮). **ತನಿಕೆ**: ೧. ತನಿಕೆ ಕ್ರಮ ನಡೀಬೇಕಂತೆ ಅಂದನು (ಮುನಿಮಾ. ೨೧೩). **ತನಿಖಿ**: ೧. ಕೊತ್ವಾಲನನ್ನು ಕರೆಸಿ ಅವನು ನಡೆಸಿದ ತನಿಖಿಯ ಸ್ವಭಾವವನ್ನು ತಿಳಕೊಳ್ಳಬೇಕಾಗಿದೆ (ವಾಗ್ಮೀವಿ. ೨೧೭). **ತನಿಖೆ**: ೧. ವ್ಯಾಜ್ಯದ ತನಿಖೆಯ ಬಗ್ಗೆ ಒಂದು ದಿವಸವನ್ನು ಗೊತ್ತುಮಾಡತಕ್ಕದ್ದು (ಗ್ರಾಮಾಕ. ೨೮).

**ತನಿಖೆ ಮಾಡು** = ಶೋಧನೆ ಮಾಡು: ಆಫೀಸಿನ ವರ್ಗಖಿರದಿಗಳನ್ನು ವನು ತನಿಖೆ ಮಾಡಿದನು (ಪುನರು. ३೭४); ಅವರು ಹೊರಗೆ ಬರುವ ಜನರನ್ನೂ ಒಳಗೆ ಹೋಗುವ ಜನರನ್ನೂ ತನಿಖೆಮಾಡಿ ನೋಡುತ್ತಿದ್ದರು (ಜಂಗಾಳ್ಕ. ३೧३). [←ಅರ. ಹಿಂ. ತನಕೀಹ್]

**ತನಕ್ಕ** 'ತನಕ' ನೋ.

**ತನಖಾ** 'ತನಖೆ$_2$' ನೋ.

**ತನಖಿ$_1$** 'ತನಕಿ' ನೋ.

**ತನಖೆ$_2$, ತನಖಾ** (ನಾ). ಸಂಬಳ; ತಲಬು: ಬಹದರರಿಗೆ ಸಲ್ಲತಕ್ಕ ತನಖೆಹಣವನ್ನು ಸತ್ಯಮಂಗಲದಲ್ಲಿ ದಳವಾಯಿ ದೇವರಾಜಯ್ಯ ಅರಿಶಿನವರು ತರಿಶಿಕೊಳುತ್ತಾಯಿರಲಾಗಿ (ಹೈದರ. ೭३). **ತನಖಾ**: ಸೈನಿಕರ ತನಖಾಗಳು (ತಿಂಗಳ ಸಂಬಳಗಳು) ಕಾಲಕಾಲಕ್ಕೆ ಸರಿಯಾಗಿ ದೊರೆಯುತ್ತಿದ್ದುದರಿಂದ (ಕಭವಿ. II, ३४೧).

[←ಪಾರ. ತನಖ್ವಾಹ್; ಹಿಂ. ತನಕಾಹ್; ಮರಾ. ತನಖಾ, ತನ್ಖಾ]

**ತನತು** 'ತನತ್ತು' ನೋ.

**ತನತ್ತು, ತನತು, ತನ್ನತು, ತನ್ನದು** (ಸ). ತಮುತು, ತಮುತ್ತು, ತಮುಂತು, ತಮುಂತ್ತು, ತಮುದು, ತಮ್ಮದು, ತಮ್ಮುತು, ತಮ್ಮುತ್ತು (ಬಹುವ): ತನಗೆ ಸೇರಿದುದು. "ತನತ್ತೆಂದುಂ ತನ್ನದು" (ಕಶಸಾ. ३೭–೫४३); ಅನಿತ್ತನಿತ್ತಂ ವನದೊಳ್ ವನೇಚರಂ ತನತ್ತು ಬಿಲ್ಲಾನದನೊತ್ತಿಕೀಸುಗುಂ (ಭಾಷಾಭೂ. ೬೮ ಉದಾ); ಮುನಿಸಿದು ನಿನತ್ತು ಸೈರಣೆಯೆನತ್ತು ಕೆಳದಿಗೆ ತನತ್ತು ಸಂದಿಸುವೆಸಕಂ (ಶಮುದ. ೧४೭ ಪ್ರಯೋ). **ತನತು**:

"ತನತೆಂದು ತನ್ನದಕ್ಕು" (ಕವಿಕಂ. ೨೧೯); ತನತೊಂದು ಜನ್ಮಮಂ ಸಫಲಂ ಮಾಟ್ಪುದು (ಆದಿಪು ೧೨-೧೨೦); ನಿನತೆನತು ತನತೆನಿಪ್ಪವು ಜನಿಯಿಸುಗುಂ ನಿನ್ನದೆನದುಂ ತನ್ನದೆನಿಪ್ಪಿನಿತಱೊಳಂ (ಶಮದ. ೧೪೭); ತನತು ವಿಚಿತ್ರಮಪ್ಪ ನಡೆಮಾಡದ ಗಾಡಿಯ ಸದ್ವಿಮಾನಮಂ ತನತು ಸುರಮ್ಯಹರ್ಮ್ಯದ ವಿಳಾಸದ ರುಂದ್ರ ಫಣೀಂದ್ರ ಗೇಹಮಂ (ಪುಷ್ಪಪು. ೯-೧೦೦); ತನುವಿದು ತನತಲ್ಲೆಂದು ವಿಚಾರಿಸಿ (ಜಯುಕಾ. ೧೬-೩೨); ನಿನಗೆಂದಾದೋದನಮಂ ತನತೆಂದುಂ ತಿಂದವಂಗಪಾಯುಂ ಬಕರ್ಗಂ (ಕಂದಶ. ೬೬). **ತನ್ನತು :** ತನ್ನತೂಟಂ[ಪಾಠಾಂ. ತನ್ನುಂಡೂಟಮಂ]ತನಗೆ ಜನ್ಮಾಪೂರ್ವಮಪ್ಪುದಱಿಂ ಮಹಾವಿಸ್ಮಯಂಬಟ್ಟು (ಧರ್ಮಾಮೃ. ೧-೧೫೪). **ತನ್ನದು :** ನೆಗಟ್ತೆವೆತ್ತ ಪತಿಭಕ್ತಿಯ ಮೈಮೆಯ ಮಾನಸಿಕ್ಕೆಯುಗ್ಗಲದ ಪೊಗಟ್ತೆ ತನ್ನದೆನೆ ಪೆಂಪು ಮನೋಹರಿಗಲ್ಲದಕ್ಕುಮೇ (ಆದಿಪು. ೧-೭೨); ತನ್ನದೆಂದೇ ಸ್ಮರಿಸಿ ಪಶುಗಂ ಪ್ರಾಣಪದವಾಗಿಪ್ಪುದಾ ಕಱುವು (ಬಸಪು. ೫೧-೫೨). **ತಮತು :** ನಿಮತು ಎಮತು ತಮತುಂ; ವಿಕಲ್ಪದಿಂದವಱ ದ್ವಿಭರ್ಾವಮುಮುಂಟು – ನಿಮತ್ತು ಎಮತ್ತು ತಮತ್ತು – ಎಂದು (ಶಮದ. ೧೪೭ ವೃತ್ತಿ); ಅಸಮ ಪದಂ ತಮತೆಂಬುದನೊಸೆದೀರೇಳ್ಜಗಕೆ . . . ಕಾಣಿಸುವರ್ (ಕಂದಶ. ೪೮). **ತಮತ್ತು :** ಪರಬೊಮ್ಮಂ ತಿಳಿದುಂ ತಮತ್ತು ಕಱಿಯಂ ತೀರ್ಥಂಗಳೊಳ್ನೀಗಿಯುಂ (ಮೈಸೂಮ. ೫-೩೬). **ತಮುತು :** ವಿಭುಗಳ್ ನಭದಿಂ ಬಂದು ಪೊಕ್ಕಲ್ಲಿ ಧೈರ್ಯಚ್ಯುತಿಯಿಂ ಕೊಂಡೋಡಿ ಪೋದರ್ ತಮುತೊಡಮೆಯನೇಂ ಬಂದರೇಗೆಯ್ದರೆಂಗುಂ ಕ್ಷಿತಿಪಾಳಾನೀಕಂ (ನೇಮಿಪು. ೧೦-೧೦೬). **ತಮುತ್ತು :** ತಮುತ್ತಿರ್ವರುಮಂ ನೋಳ್ಪ ಪುಳಿಂದಿಯರಂ ನೋಡುತ (ಜಯುಕಾ. ೧೫-೩೫). **ತಮ್ಮತು :** ನಿಮ್ಮತೆಮ್ಮತು ತಮ್ಮತೆನೆ ಬಹುವಚನ ಮಕ್ಕುಂ (ಶಬ್ದಶೈ. ೩೦). **ತಮ್ಮದು :** ಬೆಳೆದ ಬೆಳಸಿನಾಯವು ತಂಮದು (ಎಇ. XXIII, ೩೦-೬೫; 1265). **ತಮ್ಮುತು :** ಆ ಪಾಂಡವರ್ ತಮ್ಮುತಯ್ವರುಮಿರ್ದರ್ ದ್ರುಪದಾಧಿರಾಜಪುರದೊಳ್ (ಪಂಪಭಾ. ४-೨); ತಮ್ಮುತಿರ್ವರುಂ ಪೊನ್ನಿಗನಿಂ ಬರೆಯಿಸಿದರ್ . . . ಸಲೆ ಪುರಾಣ ಚೂಡಾಮಣಿಯಂ (ಅಜಿಪು. ೦-೩೪). **ತಮುತ್ತು :** ಇವು ತಮ್ಮುತ್ತಿರ್ಬ್ಬರ ಕಲ್ಗಳ್ (ಎಇ VI, ೧೬೦-೫; 765); ತಮ್ಮುತ್ತು ಮೂವರಾ ಪಾಶುಪತಂ (ಎಇ. IX, ೧೮-೫; ಸು. 900); ತಮ್ಮುತ್ತಿರ್ಬ್ಬೊರ್ ತುಱುಗೋಳೊಳ್ ಕಾದಿ ಸತ್ತರ್ (ಎಕ. IV, ಹುಣಸೂ. ೯೨-೮; ಸು. 920). [ <ತಾನ್ ]

**ತನದೆಕಲ್** (ನಾ). ಒಂದು ಊರಿನ ಹೆಸರು (?) : ಭಟರ್ ತನದೆಕಲ್ಲ ತುರುಗಳೊಳ್ ಕಾದಿ ಸತ್ತು ಸಗ್ಗತರ್ ಆದರ್ (ಮೈಆರಿ. ೧೯೨೩, ೩೦-೧೫; 8ನೆಯ ಶತ). [ ? ]

**ತನನ, ತನನನ** (ನಾ). ಹಾಡಿನ ಪ್ರಾರಂಭದಲ್ಲಿ ಗುಣುಗುಟ್ಟುವಿಕೆ; ತನ್ನಲ್ಲಿ ತಾನು ಹಾಡನ್ನು ಗುಣುಗುಣಿಸುವುದು : 'ತನನವೆನ್ನು' ಪರಾ. **ತನನನ :** ತನ್ನ ಕೊಂದುಕೊಂಬ ಜನ ಭಾವವಿರದ ತನನನ (ಅರಳು. ೧೧೯-೧೨).

**ತನನನ** 'ತನನ' ನೋ.

**ತನನನವೆನ್ನು** 'ತನನವೆನ್ನು' ನೋ.

**ತನನವೆನು** 'ತನನವೆನ್ನು' ನೋ.

**ತನನವೆನ್ನು, ತನನನವೆನ್ನು, ತನನವೆನು** (ಕ್ರಿ). ೧. ಹಾಡಿನಲ್ಲಿ ಮಗ್ನವಾಗು. ೨. (ಆಲಂ) ಆನಂದಪರವಶವಾಗು: ಪತಿಯ ಪ್ರಾಣಗಳೊಡನೆ ತನನವೆಂದಿತು ದೇಹ (ಚಿಂತನ. ೧೫-೧೧). **ತನನನವೆನ್ನು :** ೨. ದೊರೆತ ಕುಮಾರನನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಮನವೆಲ್ಲ ತನನನವೆನ್ನುತಿರಲು . . . ಹೊರಟನು (ಶರಜ. ೬೯೪). **ತನನವೆನು:** ೨. ನಿನ್ನ ಮನನದಿಂದ ತನನವೆನುತಿದೆ ತನು ಪಾವನಾ (ಗರಿ. ೧೧೩-೫). [ತನನ+ಎನ್ನು(<ಎನ್$_1$)]

**ತನಮಾನಿ** (ನಾ). ಒಂದು ಬಗೆಯ ಕಂಠಾಭರಣ : ತನಮಾನಿ ವಜ್ರ ಪಚ್ಚದ ಬಳಿ ಮೂಗಿನಲಿ ರನ್ನದ ಮೂಗುತಿ ಇಟ್ಟಿಹಳು (ಸಿದ್ಧಪು. ೧೯-೭೩).

[ ←ಮರಾ. ತನಮಣೀ, ತನ್ಮಣೀ ]

**ತನಯ** (ನಾ). ಮಗ; ಸುತ : "ಸೂನುಃ, ಸಂತತಿಃ . . . ತನಯಃ, ಸ್ತನಂಧಯಃ, ಅಪತ್ಯಂ – ಈ ೧೨ ಮಗವು" (ಹಲಾಯು. ೮೨-೩೪೩); ತನಯಶತಮಾದುದಲ್ತೆನಗನಿವಾರಿತ ದುಃಖಶತಮೆ ತಾನಾದುದು (ಪಂಪಭಾ. ೧೪-೮); ಅತ್ತಿಮಬ್ಬೆಗಮಾದಂ ತನಯಂ ಪಡೆವಳತ್ತೈಲಂ (ಅಜಿಪು. ೧-೪೧); ತನಯನಂ ಪೆತ್ತಳ್ ಗಡಂ ನಿನ್ನ ಪತ್ನಿ (ಜಗವಿ. ೩-೨೩).

**ತನಯಳ್** = ಮಗಳಂ : ತನಯಳಂ ಬಸವಂಗೆ ಭಕ್ತಿಯೊಳಿತ್ತು ಶರಣೆಂದ (ಬಸಪು. ४ ಸೂಚನೆ). [ ಸಂ. ]

**ತನಯಸ್ಥಾನ** (ನಾ). [ಜ್ಯೋತಿ] ಜಾತಕದಲ್ಲಿ ಲಗ್ನದಿಂದ ಐದನೆಯ ಸ್ಥಾನ; ಪುತ್ರಸ್ಥಾನ : ವನಜದ್ವಿಟ್ಸುತನೊಂದಿದಂದುದಯದೊಳ್ ಪ್ರಾಜ್ಞಂ . . . ತನಯಸ್ಥಾನದೊಳಾತ್ಮಮಂತ್ರಿ ರಿಪುವೊಳ್ ನಿಶ್ಶತ್ರು (ಜಾತತಿ. ೧೮-೦೦). [ ತನಯ + ಸ್ಥಾನ ]

**ತನಯೆ** (ನಾ). ಮಗಳು : "ದುಹಿತಾ, ತನಯಾ, ಪುತ್ರೀ–ಈ ೩ ಮಗಳ್" (ಹಲಾಯು. ೮೩-೩೫೦); ತನಯೆ ತಪದಿಂದ ನೀ ನಿನ್ನನೆಯಲ್ಲದೆ ನಮ್ಮ ಕುಲಮುಮಂ ಬೆಳಗಿದೆ (ಶಾಂತಿಪು. ४-೧೦೫). [ ಸಂ. ತನಯಾ ]

**ತನಸಿಮೆಳೆ** (ನಾ). ಒಂದಂ ಬಗೆಯ ಸಸ್ಯ: ತಂದಾಸಿ, ತಂಡರಸಿ, ತನಸಿಮೆಳೆ (ಮೈಜಿಗಿ. ४೦-೮೧೭). [ ತನಸಿ$_0$ + ಮೆಳೆ ]

**ತನಾಲುಮೊನಾಲು** (ನಾ). ಆನೆಯ ಒಂದು ಬಗೆಯ ಅಲಂಕಾರ ವಸ್ತು (?) : ಆನೆಗೆ ಅಲಂಕಾರಕ್ಕೆ . . . ಹಿತ್ತಾಳೆ ಗುರಾಣಿಗೆ ಚಿಂನದ ಮುಲಾವಿನ ಗುಬ್ಬಿ ४ ಸಹ ೧ ಯಿದಕ್ಕೆ ಚಿಂನದ ಮುಲಾವಿನ ತನಾಲುಮೊನಾಲು ಬೆಳ್ಳಿಸರಪಣೀ ಸಹ ಕತ್ತಿ ೧ (ಎಕ. XIV, ನಂಜನ. ೨೯೨ ಪುಟ. ೧४೨; 1847).

[ ? ]

**ತನಿ$_1$** (ಕ್ರಿ). ತನಿತು, ತನಿತ್ತು (ಭೂತನ್ಯೂ). ೧. ಒಂಟಿಯಾಗಿರು; ಪ್ರತ್ಯೇಕವಾಗಿರು; ಬೇರೆಯಾಗಿರು : ಮೊಟ್ಟೆ ತನಿತುಟಿಯೆ ಪಕ್ಕಿ ಪಾಱಿದನಿತೇ ಒಡಲೊಡನೆ ಉಸಿರಿನೆಡೆ ನಂಟು (ಕುಱಳ್. ೧-೩४-೮). ೨. ಪಕ್ವವಾಗು; ಹಣ್ಣಾಗು; ಮಾಗು : ತನಿತು ತೊಡಂಬೆವಿಟ್ಟುದಿರ್ದ ಪಣ್ಗಳನಟ್ತಿಯೆ ಮೆಲ್ದು (ಚಂದ್ರಪು. ೩-೧೫). ೩. ಹೆಚ್ಚಾಗು; ಅತಿಶಯವಾಗು : ಗೀತವಾದ್ಯ ನಿನದಂ ಜಗಮಂ ಪಿಡಿದಿರ್ದ ಗಾಳಿಯೊಳ್ ಮೇಳಿಸೆ ತಾಂಡವಂ ತನಿತು ದಂದಮರೇಂದ್ರ ತನುಪ್ರಯೋಗದಿಂ (ಮಹಾನೇ. ೯-೧೧). ४. ಸೊಗಸಾಗು; ಹಿತವಾಗು: ಮೊಱೆಯಂ ಮಿಱುವ ಮಾತು ಕೆಂದೆಸಪ ನಾಣ್ಣಾಣಂ ತನಿತ್ತಿಂಬು ಮೈಮಱಪಂ . . . ಅಳುಂಬಂ ಕೂಟದೊಳ್ ನಲ್ಲರಾ (ಚಂದ್ರಪು. ೮-೬೮); ನ್ಯೂನತೆಗಳಿನೀ ಜಗಮಂ ತೋರಿ ಸಾರಿ ಪೆಣೆದು ಬಿದಿ ಬಿಸಾಡೆ ನರರ ಮಿಡುಕಿನಾ ನೆರೆನೆರೆವೋಲ್ ತಿರ್ದುವ ಮೊಗಸಂ ಮೆಲ್ಲನೆ ಪರಿಪೂರ್ಣತೆಗೊಲ್ದೇರುವಾರ್ಪನವರ ತನಿವ ಗೆಲ್ಲವ ಕವಿ ನಿರವಿಪಂ (ಸಂಸಪ. ೧೫-೯).

[ದೇ.॥ ತಮಿ. ಮಲ. ತನಿ; ತೆಲು. ತನರು, ತನಿಯು; ಮಲ್ತೊ. ತನ್ಕರೆ]

**ತನಿ$_2$** (ನಾ). ೧. ಒಂಟಿಯಾಗಿರುವಿಕೆ; ಏಕಾಂತ; ಏಕಾಂತತೆ : ಬಯ್ತಿಡಿವರ್ ಕಲ್ಲಱಿಯೊಳ್, ಒರ್ವಳನೆ ತನಿಯಾಗಿ (ಅಂತಿಗೊ. ४೦-೮೩೫); ಮನೆಯಲ್ಲಿ ತನಿಯಾಗಿ ಹಾಡುವಾಗ ಕಾಣದ ಒಂದು ಹೊಸ ಸೊಗಸು, ಈ ಮೇಳಗಾನದಲ್ಲಿ ಕಂಡುಬರುತ್ತದೆ (ಕರ್ನಾಕ. ೩೫೭); ಈಗ ನಾವಿಬ್ಬರೇ ತನಿಯಾಗಿ ಒಟ್ಟಿಗಿದ್ದೆವು (ಕುಟುಂಸಾ. ೧೫೩); ಪುಷ್ಪಿಸಿದ ಮರಗಳ ಮಧ್ಯದಲ್ಲಿ ಪರಾವಸುವಿನ ಹೆಂಡತಿ ತನಿಯಾಗಿ ನಡೆಯುತ್ತಾ ಇದ್ದಳು (ವ್ಯಾಸಜಿ. ೧೭೧). ೨. ಅಂದ; ಸೊಗಸು 'ತನಿಗೆಡು' ಪರಾ. (ಗು). ೩. ಪ್ರತ್ಯೇಕವಾದ; ಬೇರೆಯಾದ: ಕೃಷ್ಣಯ್ಯರ್ ಅವರ ತನಿ ಪಿಟೀಲು ಕಚೇರಿಯೊಂದು ಒಮ್ಮೆ

ಏರ್ಪಾಡಾಗಿತ್ತು (ನಾಕಲಾ. ೯೦). ೪. ಚೆನ್ನಾಗಿ ಬೆಳೆದ ಪುಷ್ಟವಾದ ; ಪಕ್ವವಾದ ; ಪೂರ್ಣವಾಗಿ ವಿಕಾಸಗೊಂಡ. 'ತನಿಗರುಳು', 'ತನಿಗರ್ಬು', 'ತನಿಜವ್ವನ' ಪರಾ. ೫. ಹೆಚ್ಚಾದ; ಅತಿಶಯವಾದ: ಉಕ್ಕಿದುದು ತನಿವೀರರಸ ಕುದಿದುಕ್ಕಿ ಹರಿದುದು ರೌದ್ರರಸ (ಕುವ್ಯಾ.ಕ. ೧೬-೨೭) ; ತನಿನೇಹದೆಸೆವ ಜಾಣಿನ ಬರ್ದಿನೆಯರು (ಭೈರವೇ. ೨-೧೯) ; ಭಾವಿಸೆ ಸೊಗದ ಸುಗ್ಗಿಯ ತನಿಸೊಕ್ಕಿನ್ನನಾವರಿಪುದು ಮತ್ತೇವೆ (ಹದಿಬ. ೦-೯೩). ೬. ಹದವಾದ ; ಹಿತಕರವಾದ ; ಸವಿಯಾದ. 'ತನಿರಸ', 'ತನಿವಾಲ್' ಪರಾ. ೭. ಹೊಚ್ಚ ಹೊಸತಾದ ; ತಾಜಾ : 'ತನಿಯುಡಗು', 'ತನಿರಕುತ' ಪರಾ. ೮. ನಿರ್ಮಲವಾದ; ಪರಿಶುದ್ಧವಾದ. 'ತನಿಜೊನ್ನ', 'ತನಿಯೆಣ್ಣೆ' ಪರಾ.

ತನಿತನಿ (ದ್ವಿರುಕ್ತಿ) : ಶಾಂತಲಾದೇವಿ ಊಳಿಗದ ಹೆಣ್ಣೊಂದೊಂದನ್ನೂ ತನಿತನಿಯಾಗಿ ನೋಡಿದಳು (ಸವತಿ. ೨೬೭) : ನಾಲ್ಕು ಕಡೆಗಳಲ್ಲೂ ತನಿತನಿಯಾಗಿ ಏಕಘನದ ನಿಡುಬಂಡೆಗಳು—ವಿಶ್ವಶಿಲ್ಪಿ ನಿರ್ಮಿಸಿದ ಅದ್ಭುತ ಕಮಲದ ದಳಗಳಂತೆ (ನಂಟರು. ೧೩೫). ತನಿಯಳ್ = ಒಂಟಿಯಾಗಿರುವವಳು ; ಏಕಾಕಿನಿ : ತನ್ನವನ ಕಳೆದುಕೊಂಡಿನಿಯಳ್ . . . ತನ್ನೊಳೇ ಬಾಡುವಳು ತನಿಯಳ್ (ಪಾರಸಿ. ೨೦-೪೫೮). [ <ತನಿ₁ ]

**ತನಿ₃** 'ತಣ್ಣಿ₃' ನೋ.

**ತನಿಕಛೇರಿ** (ನಾ). ಒಂದು ವಾದ್ಯಕ್ಕೆ ಅಥವಾ ಒಬ್ಬನೇ ಸಂಗೀತಗಾರನಿಗೆ ಪ್ರಾಧಾನ್ಯ ಏರುವ ಸಂಗೀತ ಕಚೇರಿ : ಆಧುನಿಕ ಸಂಗೀತದಲ್ಲಿ ಪಿಟೀಲು, ತನಿಕಛೇರಿ ನಾಡಲೂ ಉಪಯೋಗವಾಗಿದೆ (ಸಂಗೀಷಂ. ೧೮೫).
[ ತನಿ₂ + ಕಛೇರಿ (<ಕಚೇರಿ) ]

**ತನಿಕಾಧಿಕಾರಿ** (ನಾ). ಪರೀಕ್ಷೆ ಅಥವಾ ವಿಚಾರಣೆ ನಡೆಸಲು ಬಂದ ಅಧಿಕಾರಿ : ಎಲ್ಲ ಮಟ್ಟದಲ್ಲೂ ತನಿಕಾಧಿಕಾರಿಯಂತೆ ಶಿಕ್ಷಿಸುವ ಮನೋಭಾವದ ದರ್ಪದಿಂದ ಕೆಲಸ ಮಾಡುವುದು ತಪ್ಪಿ ಸ್ನೇಹಿತನಂತೆ, ಹಿರಿಯ ವ್ಯಕ್ತಿಯಂತೆ ವರ್ತಿಸಬೇಕು (ಶಿಕ್ಷದ. ೭೫೪).
[ P ಇದು ವ್ಯಾಕರಣಬದ್ಧವಲ್ಲ ]

**ತನಿಕಿ** 'ತನಕಿ' ನೋ.

**ತನಿಕೆ** 'ತನಕಿ' ನೋ.

**ತನಿಖಿ** 'ತನಕಿ' ನೋ.

**ತನಿಖಿಸು** (ಕ್ರಿ). ಪರಿಶೀಲಿಸು ; ಪರೀಕ್ಷಿಸು : ಸುರೇಶನ ಮಾತಿನಲ್ಲಿಯ ಸತ್ಯಾಂಶವನ್ನು ವಿಶ್ವಾಸ ತನಿಖಿಸಿ ನೋಡಿದ (ದೀಪಪ. II, ೩೧೯).
[ ತನಿಖೆ (<ತನಕಿ) + -ಇಸು₃ ]

**ತನಿಖೆ** 'ತನಕಿ' ನೋ.

**ತನಿಖೆವರದಿ** (ನಾ). ಪರೀಕ್ಷೆ ಅಥವಾ ಪರಿಶೀಲನೆಯಲ್ಲಿ ಕಂಡು ಬಂದ ಅಂಶಗಳನ್ನು ತಿಳಿಸುವ ವರದಿ : ಸ್ಕೂಲುಗಳ ತನಿಖೆವರದಿಗಳನ್ನು ಬರೆದಿರಲಿಲ್ಲ (ರಂಗಕ. ೨೦). [ ತನಿಖೆ(<ತನಕಿ) + ವರದಿ ]

**ತನಿಗಂಡ** (ನಾ). (ಕತ್ತರಿಸಿ)ಬೇರೆಯಾದ ಮಾಂಸ: ಮುಱಿದ ಮೂಳೆಗಳುಂ ಪಱಿದ ಪೊರ್ಕುಳ್ಗಳುಂ ಸೋರ್ವ ಕರುಳ್ಗಳುಂ ಆರ್ವ ಮರುಳ್ಗಳುಂ ಕೆತ್ತುವ ತನಿಗಂಡಮುಂ ಕುಣಿವ ಮರುಳ್ತಂಡಮುಂ (ಪಂರಾಮಾ. ೧೩-೫೪ ವ); ತನಿಗಂಡದ ತಂಡಂ ಭೋಂಕನೆ ಸೂಸೆ (ನೇಮಿಪು. ೧೧-೧೮೦).
[ ತನಿ₂ + ಕಂಡ₁ ]

**ತನಿಗಂಧ** (ನಾ). = ತನಿಗಂಪು : ಶೋಭಿಸುವ ತನಿ[ಪಾಠಾಂ. ಸು]ಗಂಧ ಮುಣ್ಮಿದೊಡೆ ಜನರ ನಿದ್ರಾಭಂಗಮಾಗಿ ಕಂಡಪರ್ (ಜೈಮಿಭಾ. ೨೬-೮).
[ ತನಿ₂ + ಗಂಧ ]

**ತನಿಗಂಪ** (ನಾ). (?) : ಮದವದ್ವೈರಿಯನಾಂತು ಪೊಯ್ಯೆ ಜಯಶೀಲಂ ವಿಷ್ಣು ವಿದ್ವಿಷ್ಟನುರ್ಬ್ಬಿದಕತ್ತಾಱದೆ ಪಾಱೆ ಬಿಳ್ದ ತನಿಗಂಪಂ ಕಪ್ಪೆ ಗೂಂತಿಕ್ಕುತಿರ್ದ್ದುದು ವೀರರ್ಕ್ಕಳ ಬಿಳ್ದ ತೋಱಿಪ್ಪಿಡಿದ ಖಳ್ಗಂ ಪೊಯ್ವ ಸೂಳ್ಗೊಳ್ಗೊಱುತಿರ್ದುದಿದೇನದ್ಭುತಮಾಯ್ತೊ ವೀರವಿಭವಂ ಸಂಗ್ರಾಮ ರಂಗಾಗ್ರದೊಳ್ (ಎಕ. V, ಬೇಲೂರು. ೦೭೦-೦೭ ; 1160). [ ? ]

**ತನಿಗಂಪು** (ನಾ). ಅತಿಶಯವಾದ ಸುವಾಸನೆ ; ಶ್ರೇಷ್ಠವಾದ ಸುಗಂಧ: ಅಲರ್ದರೆಗಳಿಗೆಯೆ ಜಾದಿಯ ಮಲೆಪುಂ ಮಲ್ಲಿಗೆಯ ಪೊಂಕಮುಂ ಬಟಿಕ ವನಾರ್ ತಲೆಯೊಳ್ ತಾಳ್ದುವರೆಂದೆನಲೆದುದೊ ಸಿಂಧುರಮೆ ತವದ ತನಿಗಂಪಿಂದಂ (ಆದಿಪು. ೧೧-೧೧೮) ; ತನಿಗಂಪಂ ಚಂಪಕಂ ವಿಸ್ಫುರಿತ ವದನಮುಂ ಪಂಕಜಂ . . . ಪೋಲ್ವೆಯಂ ತಾಳ್ದಿದುದು (ಸುಕುಮಾ. ೯-೭೫); ಬಿರಿದ ಸಂಪಗೆಯ ತನಿಗಂಪಿಂ ತೀವಿರ್ಪುದಱಿಂದೆಂದುಂ ಪೂವಿನ ಪೊಟಲೆಂಬುದೊಂದು ಪೆಸರೆಸೆದಿರ್ಕುಂ (ಕಬ್ಬಿಕಾ. ೨೭): ತಿಳಿಗೊಳನಪುಳಿನಸ್ಥಳದ ಕಮಲಕೈರವದ ತನಿಗಂಪುವೆರಸಿ ಸುಳಿವ ತಣ್ಣೆಲರ ತಂಪಂಕಂಡು (ಹಜಕಾ. ೭-೪೦) : ಪಾದರಿಗಳ ತಣ್ಪುಗಂಪು ಸರಸೀರುಹದೊಳ್ತನಿಗಂಪು ಮಲ್ಲಿಕೋತ್ಕರದ ಬೆಡಂಗುಗಂಪು (ರಾಜಶೇ. ೧೦-೧೯). [ ತನಿ₂ + ಕಂಪು ]

**ತನಿಗಣೆ** (ನಾ). ಶ್ರೇಷ್ಠವಾದ ಬಾಣ : ತನಿಗಣೆಗಳಿಂದಹಿತರಂಗದ ಕೊನೆಗಳನು ಖಂಡಿಸುತ (ಜರಾಮಾ. ೪೭-೬೫). [ ತನಿ₂ + ಕಣೆ₁ ]

**ತನಿಗಬ್ಬು** 'ತನಿಗರ್ವು' ನೋ.

**ತನಿಗರುಳು** (ನಾ). ಚೆನ್ನಾಗಿ ಬೆಳೆದ ಕರುಳು : ತಿನ್ನಡಗನೊಡೆಹೊಯ್ದು ಭೀಮನ ಬೆನ್ನಲುಗಿ ತನಿಗರುಳನು (ಕುವ್ಯಾ.ಕ. ೦೫-೦೭) ; ಕಾಱಿದನು ತನಿಗರುಳ ಪನಸನು (ಕಾಶಿರಾ. ೨೭-೩). [ ತನಿ₂ + ಕರುಳು (<ಕರುಳ್) ]

**ತನಿಗರ್ಪು** (ನಾ). ಅತಿಶಯವಾದ ಕಪ್ಪು; ಅಚ್ಚ ಕಪ್ಪು : ತೊಳಪ ತನಿಗರ್ಪು ಕೇಶಾವಳಿಯೊಳೊತ್ತರಿಸಿ (ಕುಸುಮಾ. ೭-೧೩೩ ರಗಳೆ) ; ಪೂರ್ವಾಂಗನೆ ಮುಚ್ಚಿದಕ್ಷಿಪಕ್ಷ್ಮದ ತನಿಗರ್ಪೆನಿಸಿದುದು ಕೊನರ್ವ ಕತ್ತಲೆ ನಭದೊಳ್ (ಅನಂಪು. ೩-೭೭) ; ಬೆಳ್ಪೊಗರಿಂ ಕೆಂಗದಿರಿಂ ತನಿಗರ್ಪೊಳ್ಪೆಳಮಿನುಗಿಂ ಪೊನ್ನೆಳಪಿಂ (ಉದ್ಯದೇ. ೭-೧೫). [ ತನಿ₂ + ಕರ್ಪು₁ ]

**ತನಿಗರ್ಬು** 'ತನಿಗರ್ವು' ನೋ.

**ತನಿಗರ್ವು, ತನಿಗಬ್ಬು, ತನಿಗರ್ಬು** (ನಾ). ಚೆನ್ನಾಗಿ ಬಲಿತ ಕಬ್ಬು ; ರಸಭರಿತವಾದ ಕಬ್ಬು : ಮಿಡಿದೊಡೆ ತನಿಗರ್ವು[ಪಾಠಾಂ. ಬ್ಬು] ರಸಂ ಬಿಡುವುವು (ಪಂಪಭಾ. ೧-೫೬). **ತನಿಗಬ್ಬು** : ಪಸುರೆಲೆಗಳ ಬಿಟ್ಟು ತನಿಗಬ್ಬಿನೊಳಗಣ ರಸವ ಕೊಂಬಾನೆಗಳಂತೆ ಹಸಗೆಟ್ಟು ತನುಸುಖಕೊಲಿಯದೆ ಕೆಲರು ಭೇದಿಸಿ ನಿಜಸುಖವ ಭೋಗಿಪರು (ಭರಚ. ೦-೧೦೭). **ತನಿಗರ್ಬು**: ಎಳನೀರ್ಗಳ ತನಿಗರ್ಬಿನ ತಿಳಿರಸದ ರಸಾಲಪಕ್ವಫಳಸಾರದ . . . ಪಾನಂಗಳನಲ್ಲಲ್ಲೆಱೆವರಾ ಪ್ರಪಾಪಾಲಿಕೆಯರ್ (ವ್ಯಪವಿ. ೯-೩೦).
[ ತನಿ₂ + ಕರ್ವು₁ ]

**ತನಿಗಲಿ** (ನಾ). ಶ್ರೇಷ್ಠನಾದ ಶೂರ : ತನಿಗಲಿಗಳಾಱುಸಾವಿರಮುಂ ಪೊರಳ್ಚಿ . . . ಸೆಕ್ಕಿದಂ ಕಾಯಱದೊಳ್ಸಾಯುತವನಂ (ಜೈಮಿಭಾ. ೨೩-೦).
[ ತನಿ₂ + ಕಲಿ₂ ]

**ತನಿಗಲೆ** (ನಾ). ಉತ್ತಮವಾದ ಕಲೆ : ಕೊಟ್ಟು ಕುಡುಕುದಂಬುಲಮುಂ ಸವಿಯುಂ ತಟ್ಟುವ ತನಿಗಲೆಯುಪಚರದಿಂ ಮನಮುಟ್ಟೆ ಕರಂ ಕೂಡಿದರ್ (ಜಯುಕಾ. ೨-೫೩). [ ತನಿ₂ + ಕಲೆ₃ ]

**ತನಿಗಳ್** (ನಾ). ಸವಿಯಾದ ಕಳ್ಳು-ಮದ್ಯ : ತನಿಗಳ್ಳ ತವಕಿಗಂ ಬಾಡಿನ ಬಾಕುಳನೀತನೆಂದು ಲೋಹದ ರಸಮಂ ತನು ಕುಡಿಯೆ ಕುಡಿಯಿಪರ್ (ಅನಂಪು. ೯-೩೫). [ ತನಿ₂ + ಕಳ್₃ ]

**ತನಿಗಾಲುವೆ** (ನಾ). ತುಂಬಿ ಹರಿಯುವ ಕಾಲುವೆ : ಸೀಳಿ ನಾಯ್ಗಳ ನೆತ್ತರಿನ ತನಿಗಾಲುವೆಯಲೀ ಬೆಳಸುವೆನು ದಿವಿಜಾಳಿಗಳ ಸಂತೋಷ ಸಸಿಯನೆನುತ್ತ ಗರ್ಜಿಸಿದ (ಕುವ್ಯಾಅ. ೧೧-೧೦).
[ ತನಿ₂ + ಕಾಲುವೆ (<ಕಾಲ್ವಾಯ್) ]

**ತನಿಗಾಣಿ** (ನಾ). ಒಂದು ವಂಶದ ಹೆಸರು (?) : ದೇವಣಸೆಟ್ಟಿಯರ ಕೋಣನ ಕಾವ ತನಿಗಾಣಿ ಮಾಳೆಯ ಗೇಸಿದ ಉತ್ತರಂಗ (ಇಎ. ೧೯೪೭, ಬೈಲಹೊಂಗಲ್. ೩೫೦-೨ ; 13ನೆಯ ಶತ). [ ? ]

**ತನಿಗಿಚ್ಚು, ತನಿಗಿರ್ಚು** (ನಾ). ೧. ಹಿತಕರವಾದ ಬೆಂಕಿ,-ಕಾವು : ನೆನೆಯಲೊಡಮೆತ್ತಿ ಮನದೊಳ್ ತನಿಗಿಚ್ಚಂ[ಪಾಠಾಂ. ರ್ಚಂ]ಹಿಮಮ ನೋಡಿಸುವ ನವಯುವತೀಸ್ತನಭರವಂ ತೆಗೆದಪ್ಪಿದ ಮನುಜರದೇನರಿವುದರಿದೆ ಮಾಗೆಯ ಮೂಗಂ (ಲೀಲಾವ. ೯-೧೭) ; (ಕಾವ್ಯಸಾ. ೭೮೯ ನೋ). ೨. ಪ್ರಖರವಾದ ಬೆಂಕಿ : ಕೇರಿಕೇರಿಗಳೊಳು ತನಿಗಿಚ್ಚು ನೆಗೆದು ದಳ್ಳುರಿಯ ಕೊನೆನಾಲಗೆಯಿಂದ ತೆಗೆತೆಗೆದಾ ಪುರಜನಗಳ ತಿಂದು ತೇಗಿದುದು (ಕುರಾಸಾಂ. ೧೦-೪೭). **ತನಿಗಿರ್ಚು** : ೨. ತನಿಗಿರ್ಚು ಕರಗಿಕುಂ ಕಾಂಚನವಂ ಕರಗಿಕುಮೆ ವಜ್ರಮಂ (ಶಾಂತಿಪು. ೧೧-೩೩) ; ಮನೆಮನೆದಪ್ಪದೆ ನೆಗೆದುದು ತನಿಗಿರ್ಚಿ[ಪಾಠಾಂ. ಚ್ಚಿ]ನೆ ದಹನವಿದ್ಯೆಯಿಂ ಸುಟ್ಟಂ ಪಾವನಿ ಲಂಕೆಯಂ (ಪಂರಾಮಾ. ೧೧-೧೪೪). [ ತನಿ$_2$ + ಕಿಚ್ಚು ]

**ತನಿಗಿಡಿ** (ನಾ). ಪ್ರಜ್ವಲಿಸುವ ಕಿಡಿ ; ತೀಕ್ಷ್ಣವಾದ ಕಿಡಿ : ತನಿಗಿಡಿಯ ದಳ್ಳುರಿಯ ನಾಲಿಗೆಕೊನೆಗಳಲ್ಲಾಡಿದವು ಕಡುಲಾಗಿನಲಿ ಲಂಬಿಸಿ ಚುಂಬಿಸಿದುದುರಿ ಲಲಿತನಂದನವ (ಕುವ್ಯಾಆ. ೨೦-೨೭) ; ರಘುಗರಘುಗಿಪ ತೇಜದ ಸುಪ್ರತಾಪದ ಮೊಗದ ಕೋಪದ ತಾಪಕದ ತನಿಗಿಡಿಯ ದಾಡೆಗಳ (ತೊರರಾ. ૬-೯-೭). [ ತನಿ$_2$ + ಕಿಡಿ ]

**ತನಿಗಿರ್ಚು** 'ತನಿಗಿಚ್ಚು' ನೋ.

**ತನಿಗೀತೆ** (ನಾ). ಒಂಟಿಯಾಗಿ ಹಾಡುವ ಗೀತೆ : ಗ್ರೀಕ್ ರುದ್ರನಾಟಕದಲ್ಲಿ ಒಬ್ಬನೇ ನಟನು ಹಾಡುವ ಗೀತೆ : ತನಿಗೀತೆ (Monody. ಇಂಕನಿ.) ; ಪ್ರಮಿತ್ಯೂಸ್ ಮತ್ತು ಆಯೋ ಇವರ ತನಿಗೀತೆ, ಮೇಳಗೀತೆಗಳ ಅಡಕ . . . ಇವೆಲ್ಲ ಪರಿಣಾಮಕಾರಿಯಾದವು (ಬದ್ಧಪ್ರ. LVIII, ಪೀಠಿಕೆ). [ ತನಿ$_2$ + ಗೀತೆ ]

**ತನಿಗುದಿ$_1$** (ಕ್ರಿ). ಹೆಚ್ಚಾಗಿ ಕುದಿ ; ಕತಕತನೆ ಕುದಿ ; ತೀವ್ರವಾಗಿ ಕುದಿ : ರಘುಳಕೆ ತಿಳಿಗೊಳದುದಕ ಕಾದುಚ್ಚಳಿಸಿದವು ತನಿಗುದಿದು ಮತ್ಸ್ಯಾವಳಿಗಳಂ ಬುಜದೆಸಳು ಸೀದವು ತುಂಬಿಗಳು ಸಹಿತ (ಕುವ್ಯಾಆ. ೨೦-೫೪). [ ತನಿ$_2$ + ಕುದಿ$_1$ ]

**ತನಿಗುದಿ$_2$** (ನಾ). ತೀವ್ರವಾದ ಕುದಿತ. 'ತನಿಗುದಿಗುದಿ' ಪರಾ. [ ತನಿ$_2$ + ಕುದಿ$_2$ ]

**ತನಿಗುದಿಗುದಿ** (ಕ್ರಿ). = ತನಿಗುದಿ$_1$ : ಝಳಕೆ ಘೀಳಿಟ್ಟೊಱಲಿದವು ಕರಿಕುಳ . . . ಹಯವೋಡಿದವು ಮುಮ್ಮಳಿಸಿ ತನಿಗುದಿಗುದಿದು ಕೋಟಲೆಗೊಂಡುದರಿಸೇನೆ (ಕುವ್ಯಾದ್ರೋ. ೧೯-೩೭). [ ತನಿಗುದಿ$_2$ + ಕುದಿ$_1$ ]

**ತನಿಗುಸುರು** (ನಾ). ಶ್ರೇಷ್ಠವಾದ ಕುಸುರಿಕೆಲಸ: ಇಂಥ ಪದವನು ಹಾಡು ಹಾಡೊಮ್ಮೆ ನಲ್ಲೆ, ಅಂಥ ತನಿಗುಸುರನ್ನು ನೀನೋರ್ವೆ ಬಲ್ಲೆ! (ಗರಿ. ೨೯-೧೦). [ ತನಿ$_2$ + ಕುಸುರು$_2$ (<ಕುಸುರಿ$_1$) ]

**ತನಿಗುಳ್ಳ** (ನಾ). ಒಂದು ಬಗೆಯ ಬದನೆ ; ಮುಳ್ಳುಬದನೆ : ವಾರ್ತಾಕೀ, ಹಿಂಗುಳೀ, ಸಿಂಹೀ, ಭಂಟಾಕೀ, ದುಷ್ಪ್ರದರ್ಷಿಣೀ – ಶಿ ಬದನೇಗಿಡದಲ್ಲಿ ಮುಳ್ಳುಜಾತಿ ಗುಳ್ಳ, ವಾದಿರಾಜಗುಳ್ಳ, ತನಿಗುಳ್ಳ, ರಾಮಗುಳ್ಳ, ಮುಂತಾದದ್ದು (ಸಿದ್ಧಾಂತಿ. ೧೨೧). [ ತನಿ$_2$ + ಗುಳ್ಳ ]

**ತನಿಗೆಂಡ** (ನಾ). ನಿಗಿನಿಗಿ ಕೆಂಡ ; ಪ್ರಜ್ವಲಿಸುವ ಬೆಂಕಿ : ಉಗ್ರದ್ವಿಪಂಗಳ್ ಪಳಂಚೆ ನಿಕೃಷ್ಟೋನ್ನತ ದಂತದಂತಹತಿಯಿಂದೊರಂತೆ ಪೋರುತ್ತಿರಲ್ ತನಿಗೆಂಡಂಗಳ ತಂದಲುರ್ವೆ ಪೊಗೆಯುತ್ತುಂ ಪೊತ್ತಿ (ಶಾಂತೀಶ್ವ. ೮-೯೦) ; ತನಿಗೆಂಡಮನೊಟಿಲೆ ಪತ್ತಲೇನಱಿದಪುದೇ(ಪುಷ್ಪಪು. ೧೪-೨೯) ; ಕೊಕ್ಕರಿಸುತುಗುವ ತನಿಗೆಂಡದಿಂಡೆಗಳ ಸಲೆ ಮುಕ್ಕುಳಿಸಿ ಮೊಗೆವ ಪೆರ್ಗಿಚ್ಚುಗಳ ವೆಂಕೆ (ಜೈಮಿಭಾ. ೧೩-೧೨). 'ತರಿಗೆಂಡ' ಪರಾ. [ ತನಿ$_2$ + ಕೆಂಡ ]

**ತನಿಗೆಚ್ಚು** (ನಾ). ಹೆಚ್ಚಾದ ಎದೆಗಾರಿಕೆ,-ಶೌರ್ಯ: ಮೊದಲ ಬಲುಹನು ಕಂಡೆನಿನ್ನೀ ತುದಿವರನ ತನಿಗೆಚ್ಚು ನಮ್ಮನು ಬೆದಱಿಸುವುದೋ ಶಿವಶಿವಾ ತಪ್ಪೇನು (ಕುವ್ಯಾಕ. ೨೦-೧೮). [ ತನಿ$_2$ + ಕೆಚ್ಚು$_4$ (<ಕೆರ್ಚು) ]

**ತನಿಗೆಡು** (ಕ್ರಿ). ಸೊಗಸುಗೆಡು ; ಅಂದಗೆಡು ; ಕಾಂತಿಹೀನವಾಗು : ನಟ್ಟಿರುಳ ತಾವರೆಯವೊಲು ತನಿಗೆಟ್ಟ ವದನದ ನಯನಜಲಗಳ ನಿಟ್ಟುಸಿರಿನಲಿ ಬಂದರು (ನಿಭಾಗ. ೧೧-೧-೩೪). [ ತನಿ$_2$ + ಕೆಡು$_1$ ]

**ತನಿಗೆಡೆ** (ಕ್ರಿ). ಬಲವಾಗಿ ಬೀಳು ; ದೊಪ್ಪನೆ ಬೀಳು ; ವಿವಶವಾಗಿ ಉರುಳು : ಇನಿತು ಬಲ ತೂಕಡಿಸಿ ರಥೋಂಪಿಸಿ ತನಿಗೆಡೆಯೆ (ಕುವ್ಯಾವಿ. ೮-೮೮) ; ಚೆನ್ನಾಗಿ ಬಸವಳಿದು ಅಸುವಿರೆ ಹೊಂದಿದರು ಧರೆಗೊಬ್ಬರೊಬ್ಬರ ಮೇಲೆ ತನಿಗೆಡೆದು (ನಿಭಾಗ. ೧೦-೭-೮). [ ತನಿ$_2$ + ಕೆಡೆ$_1$ ]

**ತನಿಗೆತ್ತು$_1$** (ಕ್ರಿ). ಹೆಚ್ಚಾಗಿ ಅದಿರು,-ಸ್ಪಂದಿಸು,-ನಡುಗು: ನಿಡುಸುಯ್ಯುಧರಂ ತನಿಗೆತ್ತಲ್ ಮನಮಿಕ್ಕೊಯ್ಯನೆ ನುಡಿದಂ (ಕಾದಂಬ. ೩೪೫) ; ಮನದೊಳ್ ಮನ್ಮಥರಾಗಮುಬ್ಬರಿಸಿ ನೋಟಂ ನಟ್ಟು ನೋಟಕ್ಕೆ ತೊಟ್ಟನೆ ಗಾತ್ರಂ ತನಿಗೆತ್ತಿ (ಕುಸುಮಾ. ೯-೭೦): ಗಾತ್ರವೆತ್ತಂ ತನಿಗೆ[ಪಾಠಾಂ. ಗಿ]ತ್ತ ಲಾಕ್ಷಣದಿನಾ ಪಟಚಿತ್ರದ ಮೇಲೆ ಪಾಯ್ದು . . . ಮೂರ್ಛೆಯನಾಗಳಿಯ್ದಿದಳ್ (ಕುಸುಮಾ. ೧೨-೮೪). [ ತನಿ$_2$ + ಕೆತ್ತು$_1$ ]

**ತನಿಗೆತ್ತು$_2$** (ನಾ). ಅತಿಶಯವಾದ ನಡುಕ,-ಸ್ಪಂದನ : ಪದಪು ಮನಕ್ಕೆ ಸೊರ್ಕು ನಯನಕ್ಕೆಸೆಯುತ್ತಿರೆ ಚುಂಬನಾಭಿಲಾಷದ ತನಿ[ಗಿ]ತ್ತು ಬಾಯ್ಗೆ ಬಳಸಲ್ (ಆದಿಪು. ೪-೧೫); ತಮ್ಮ ಕೆಂಪಂ ಕಣ್ಗಳ್ಗೆ ಕೊಟ್ಟು ಕಣ್ಗಳ ಬೆಳ್ಪಂ ತಮಗೆ ಮಾಱುಗೊಂಡಂತೆ ತನಿಗೆ[ಪಾಠಾಂ. ಗಿ]ತ್ತುವೆರಸಿ ಬತ್ತಿ ಸೊಗಯಿಸುವ ಬೆಳರ್ವಾಯ್ಗಳೊಳ್ (ಪಂಪಭಾ. ೪-೮೮ ವ). [ ತನಿ$_2$ + ಕೆತ್ತು$_4$ ]

**ತನಿಗೆದಱು$_1$** (ಕ್ರಿ). ೧. ಚೆನ್ನಾಗಿ ಚೆದರಿಹೋಗು ; ಚೆಲ್ಲಾಪಿಲ್ಲಿಯಾಗು : ತೆಱಹ ಕೊಡುಕೊಡು ಭಾಷೆಕಾಱನು ಮೆಱೆದು ಹೋಗಲಿ ವಹ್ನಿಕುಂಡದೊಳೊಱಗುವುದ ನೋಡುವೆವೆನುತ ತನಿಗೆದಱಿತರಿಸೇನೆ (ಕುವ್ಯಾದ್ರೋ. ೧೪-೩೭); ವನಧಿಗಳು ತುಳುಕಾಡೆ ತಾರಕಿ ತನಿಗೆದಱಿ ತಳ್ಳಂಕಗೊಳೆ ಮೇದಿನಿ . . . ಬೊಬ್ಬಿಱಿದುಬ್ಬಿದನು ರಘುಜ (ತೊರರಾ. ૩-૬-೭). ೨. ಚೆನ್ನಾಗಿ ಸರಿಸು,-ಓಸರಿಸು : ಕುರುಳ ತುಂಬಿಯ ತನಿಗೆದಱಿ ಮುಖಸರಸಿಜವ ಚುಂಬಿಸಿ (ಕುವ್ಯಾಆ. ೨೦-೫೦). ೩. ಹೆಚ್ಚಾಗಿ ಕೆದಕು,-ಕಲಕು : ಅಳಕನಿಕರವ ಕುಣಿಸಿ ಮಣಿಕುಂಡಲವನಲುಗಿಸಿ ಹಣೆಯ ಮುತ್ತಿನ ತಿಲಕವನು ತನಿಗೆದಱಿ ನಡೆದುದು ಕೂಡೆ ಸತಿನಿವಹ (ಕುವ್ಯಾಆ. ೧೮-೨೨). [ ತನಿ$_2$ + ಕೆದಱು$_1$ (<ಕೆದಱ್$_1$) ]

**ತನಿಗೆದಱು$_2$** (ನಾ). ಹೆಚ್ಚಾಗಿ ಚೆದರುವಿಕೆ,-ಹರಡುವಿಕೆ : ಬೆಳ್ನೊರೆಯ ತೊಳಪೆಳೆಯ ಮಾನ್ಬೊಳೆಯುಲಿರದೆಳೆಯಲೆಡೆಸೆಳೆಯ ತುಂತುಱಿನ ತನಿಗೆದಱಿನ . . . ಅತುಳಗಂಗೆ ಸುತರಂಗೆ ನೋಳ್ಪಂಗೆ ಸಲೆ ಕಣ್ಗೆಸೆದಳಂದು ದಿವಿಜಸಿಂಧು (ಜೈಮಿಭಾ. ೯-೨೪). [ ತನಿ$_2$ +ಕೆದಱು$_2$ (<ಕೆದಱ್$_2$) ]

**ತನಿಗೆನೆವಾಲ್, ತನಿಗೆನೆವಾಲು** (ನಾ). ರುಚಿಕರವಾದ ಕೆನೆಹಾಲು : ಬಾಯ್ಗೊರಂದದಿಂ ತೀವಿದ ತನಿಗೆನೆವಾಲಂತೆ ನೇರ್ಪಟ್ಟ ನಿನ್ನಗ್ಗದ ದೇಹಚ್ಛಾಯೆಯಿಂ ತಣ್ಣನೆ ತಣಿಯದೆ ಲೋಕತ್ರಯಂ (ಧರ್ಮನಾ. ೫-೬೩). **ತನಿಗೆನೆವಾಲು** : ಖಂಡಶರ್ಕರೆ ಬೆರೆಸಿದ ತನಿಗೆನೆವಾಲನಂಡಲೆವವಳ ಚೆಂದುಟಿಗೆ . . . ಎಳೆದಳಿರೆಂಬುದಿದು ಸರಿಗಂಡು ಪೇಳ್ವುಪಮಾನವಲ್ಲ (ಕುರಾಸಾಂ. ೭-೩೩). [ ತನಿ$_2$ + ಕೆನೆವಾಲ್ ]

**ತನಿಗೆನೆವಾಲು** 'ತನಿಗೆನೆವಾಲ್' ನೋ.

**ತನಿಗೆರಳ್** (ಕ್ರಿ). ಹೆಚ್ಚಾಗಿ ಕೆರಳಂ; "ಅತಿಯಾಗಿ ಕೋಪಿಸು" (ಪ್ರಭಣ.). [ ತನಿ$_2$ + ಕೆರಳ್ (<ಕೆಳರ್) ]

**ತನಿಗೊಂಬು** (ನಾ). (?) : ಊರುಂ ಮೂಳಿಯಂ ತಿಂಬಗುರು ಪಯಗರಿಯು ತನಿಗೊಂಬಂ ಬಳಿಗೊಯ್ಕಲ್ ಪೂಣ್ದು ತುದಿಯೊಳೋಡಿಪೋಪ ಭೀರುವಪ್ಪ ಪಣೆದಕಾಟನಂತೆ (ಶಾಂತಿಪು. ೮-೪೯ ವ).
[ತನ್ನಿ$_2$+ಕೊಂಬು ?]

**ತನಿಗೊಡಹು** (ಕ್ರಿ). ಚೆನ್ನಾಗಿ ಕೊಡಹು,–ಒದರಂ,–ಜಾಡಿಸು : ಮೊನೆಯಲಗು ಮುಕ್ಕುಱುಕೆ ರಥವನು ತನಿಗೊಡಹಿ ಮುಗ್ಗಿದವು ತೇಜಿಗಳನು ವರಕೆ ಮುಖದಿರುಹಿದವು ಕಲಿಭೀಷ್ಮನುಪಟಳಕೆ (ಕುಮಾ.ಭೀ. ೯-೩೪).
[ ತನ್ನಿ$_2$ + ಕೊಡಹು$_1$ (<ಕೊಡಪು) ]

**ತನಿಗೊಬ್ಬು** 'ತನಿಗೊರ್ವು$_1$' ನೋ.

**ತನಿಗೊರ್ಬು** 'ತನಿಗೊರ್ವು$_2$' ನೋ.

**ತನಿಗೊರ್ವಿಸು** (ಕ್ರಿ). ಇನ್ನೂ ಅಧಿಕಗೊಳಿಸು ; ತುಂಬ ಬಲಗೊಳಿಸು : ಇಂದ್ರವನದರಲ್ಗಳಂ ಪೊಡರ್ಚುವಲ್ಲಿ ಕಂಕಣದ ಮೆಲ್ಲುಲಿಯಿನೆಳಸುವಳಿಗಳಿನಿದನಿಯಂ ತನಿಗೊರ್ವಿಸಿಯುಂ (ಚಂದ್ರಪು. ೧೧-೧೪೫ ವ).
[ ತನಿಗೊರ್ವು$_1$ + –ಇಸು$_3$ ]

**ತನಿಗೊರ್ವು$_1$**, ತನಿಗೊಬ್ಬು (ಕ್ರಿ). ೧. ಚೆನ್ನಾಗಿ ಕೊಬ್ಬು ; ಹೆಚ್ಚಾಗಿ ಪುಷ್ಟಿಗೊಳ್ಳು; ಬೀಗಂ ; ಬೀಗಿ ಬೆಳೆ : ತನಿಗೊರ್ವಿದ ವೀರರ ಮೆಯ್ಗೆ ಪುಗವೆ ಸನ್ನಾಹಂಗಳ್ (ಚಂದ್ರಪು. ೧೦-೬೩) ; ಅಳಿಗಳ ಪಕ್ಷಸಂಭವ ಮರುತ್ತತಿಯಿಂ ತನಿಗೊರ್ವಿ ಕಂಪಿತಾಖಿಲ ಕುಸುಮೋಲ್ಲಸತ್ಪರಿಮಳೋತ್ಕರದಿಂ ಪೊಚ್ಚೆಯೇಱಿ . . . ಸುಟ್ಟಿವುದು ಸಂತತಂ ಪುರಬಹಿರ್ವನಚಾರಣನಾ ಸಮೀರಣಂ (ಕುಸುಮಾ. ೨-೭೧). ೨. ಹೆಚ್ಚಾಗಿ ಉಬ್ಬು,–ಉಕ್ಕು : ಪರಮಜಿನ ದಿವ್ಯಾಂಗಗಂಧದಿ ಪರಿಕಲಿಸಿ ತನಿಗೊರ್ವಿ . . . ಪರಿದು ನಿರ್ಜರವಾಗಿ ಪರಿವಾ ಪರಮಪಾವನ ಗಂಧಜಲ (ಸಾಳ್ವಭಾ. ೩೩-೬೯). ತನಿಗೊಬ್ಬು : ೧. ಕುಳ್ಳಿರ್ವ್ವ ಸರೋಜಪಂಡಮಲರ್ದ್ದೊಪ್ಪುವ ಮಲ್ಲಿಗೆ ಮಾಧವೀಲತಾವಳಿ ತನಿಗೊಬ್ಬಿದಿಕ್ಷುವನಂ . . . ಕಣ್ಗೊಳಿಸುವುದು (ಎಕ.XI, ಚಿತ್ರದು. ೨೩-೨೭ ; 1205). [ ತನ್ನಿ$_2$ + ಕೊರ್ವು$_1$ ]

**ತನಿಗೊರ್ವು$_2$**, ತನಿಗೊರ್ಬು (ನಾ). ೧. ಹೆಚ್ಚಾದ ಕೊಬ್ಬು,–ಮಂದ,–ಸೊಕ್ಕು : ಎಡೆವಿಡದೆ ಮಟಿಗಱಿವ ವಾಸವನ ತನಿಗೊರ್ವು ತಳಕಿಟಿಯೆ ತಳೆದು ಗೋವರ್ಧನವನನುಗೊಳಿಸಿ (ಗೀತಗೋ. ೬-೪). ತನಿಗೊರ್ಬು : ೨. ಹೆಚ್ಚಾದ ಉಬ್ಬರ : ವನರುಹಷಂಡದ ವಾರಿಯ ತನಿಗೊರ್ಬುಗೆ ತೊಲಗಿ ತಿಳಿಯೆ ತತ್ಪದದೊಳ್ ಶಾಮಿನಮುಖ ವೀಕ್ಷಣಾತುರತೆಯಿನೆನಸುಂ ನಿಮಿರ್ದಂತೆ ತೋಱಿದುವು ಜಲಜಂಗಳ್ (ಕುಸುಮಾ ೬-೪೭).
[ ತನ್ನಿ$_2$ + ಕೊರ್ವು$_2$ ]

**ತನಿಗೊಳ್ಳು** (ಕ್ರಿ). ಪುಷ್ಪವಾಗು ; ಸಮೃದ್ಧವಾಗು : ವೀರರಸದಷ್ಟೇ ಶಾಂತರಸವು ಈ ಯುಗದ ಕೃತಿಗಳಲ್ಲಿ ತನಿಗೊಂಡಿದೆ (ಕಸಾಜ. ೪೨) ; ಅವನ ಶಕ್ತಿವಿಶೇಷಗಳೆಲ್ಲ ಇದರಲ್ಲಿ ತನಿಗೊಂಡು ಮೇಳಗೊಂಡಿವೆ (ಕಸಾಜ. ೧೮೩).
[ ತನ್ನಿ$_2$ + ಕೊಳ್ಳು$_1$ (<ಕೊಳ್$_1$) ]

**ತನಿಗೋಡು** (ನಾ). ಕೊಬ್ಬಿ ಬೆಳೆದ ಕೊಂಬು : ಹುಲ್ಲೆಗೊಂಬತ್ತು ಮುಖ ಬೆಳ್ಳಿಲಿಗೆ ನಾಲ್ಕು ತನಿಗೋಡು ಮೂಡಿದ್ದನಿಲ್ಲಿಯೇ ಕಂಡೆ (ಸರ್ವಜ್ಞ. ೨೦೬೯). [ ತನ್ನಿ$_2$ + ಕೋಡು$_5$ ]

**ತನಿಚೂಣಿ** (ನಾ). ಬಲವಾದ ಮುಂದಳ ; ಮುಂಭಾಗದ ಪ್ರಬಲವಾದ ಸೈನ್ಯ : ರಾವುತರು ರಾವ್ತರ ತಱುಬಿದರು ತನಿಚೂಣಿ ಮಸಗಿತು ತಾಱು ಥಟ್ಟಿನಲಿ (ಕುಮಾ.ಕ. ೨-೦೬). [ ತನ್ನಿ$_2$ + ಚೂಣಿ (<ಚೂಳಿ$_1$) ]

**ತನಿಜಡಿ** (ಕ್ರಿ). ಹೆಚ್ಚಾಗಿ ಬಳುಕು ; ಭಾರದಿಂದ ಜಗ್ಗು : ವೃಂದದಲಿ ನಾನಾ ಮೃಗೌಘವ ಕೊಂದು ಮಾಂಸದ ಹೊಱಿಗಳನು ಯಮನಂದನನ ಹೊರೆಗಟ್ಟಿದರು ಕಂಬಿಗಳು ತನಿಜಡಿಯೆ (ನಿಘಾಗ. ೧೧-೬೮-೨೨).
[ ತನ್ನಿ$_2$ + ಜಡಿ$_2$ ]

**ತನಿಜವ್ವನ** (ನಾ). ೧. ತುಂಬುಯೌವನ,–ಪ್ರಾಯ. ೨. ತುಂಬುವೊಲೆ,–ಸ್ತನ: ತೆಳುವಸುಱ ಸೆಳೆನಡುವ ನುಣ್ದೊಡೆಗಳ ಬೆಳೆದ ತನಿಜವ್ವನದ ಕಡು ಚಲು ಶಬರಿಯರು (ಸಾಳ್ವಭಾ. ೧೮-೭). [ ತನ್ನಿ$_2$ + ಜವ್ವನ ]

**ತನಿಜಿನುಗುದನಿ** (ನಾ). ಮಧುರವಾಗಿ ಗುಣುಗುಣಿಸುವ ಧ್ವನಿ ; ಇಂಪಾದ ಮೆಲುದನಿ : ಜಾಲಗಾರನು ಉಸುಕು ಜಾಳಿಸುವ ಹಾಗೆ ಜೊತೆಗಾರ ತನಿಜಿನುಗುದನಿಯಲಿ ಸೋಸುತಿಹನು (ಉಯ್ಯಾಲೆ. ೧೧-೧೧).
[ ತನ್ನಿ$_2$ + ಜಿನುಗು$_1$ (<ಜಿನುಂಗು$_1$) + ದನ್ನಿ$_2$ ]

**ತನಿಜೇನು** (ನಾ). ಸವಿಯಾದ ಜೇನಂ : ತನಿಜೇನನು ಹೀರಿಹುದೆ (ಕವಿಕಾ. ೨೩-೯) ; ತನಿಜೇನ ಸುರಿಸುಗುಂ ತನ್ನ ಮೆಚ್ಚಿರುವರಳಿ (ಕಾಲೂರ. ೪೭-೭೪).
[ ತನ್ನಿ$_2$ + ಜೇನು$_1$ (<ಜೇನ್$_1$) ]

**ತನಿಜೊನ್ನ** (ನಾ). ಅಚ್ಚ ಬೆಳುದಿಂಗಳಂ ; ಶುಭ್ರವಾದ ಚಂದ್ರಿಕೆ : ಚಂದ್ರಂ ಪರಿವೇಷದಿನಗ್ಗಳವೊಪ್ಪುವ ತನಿಜೊನ್ನದಿನತ್ತಿ ಕಣ್ಗೆಡ್ಡಂಬಡೆದಂ (ಉದ್ಭದೇ. ೪-೧೪) ; ತನಿಜೊನ್ನವಾಲನೀಂಟುವ ಪದದೊಳದು ಬತ್ತೆ ಮನದೊಳಂ ಕಂದಿ ತೋಱುವ ಹಂಸಮಱಿಯೊ (ಜಿಬಪು. ೧೦-೮೭).
[ ತನ್ನಿ$_2$ + ಜೊನ್ನ ]

**ತನಿತು** 'ತನ್ನಿ$_1$' ಪರಾ.

**ತನಿತ್ತು** 'ತನ್ನಿ$_1$' ಪರಾ.

**ತನಿನಂಜು** (ನಾ). ತೀಕ್ಷ್ಣವಾದ ನಂಜು ; ಘೋರವಿಷ : ಕಿಚ್ಚಿನುರಿ ಪತ್ತದೆ ಪೊತ್ತುವ ಬೇಗೆ ಪಾವು ತಿನ್ನದ ತನಿನಂಜು ತನ್ನಿಯರೊಳಾದಳುಪಿಂ ಪೆಱತುಂಟೆ ಲೋಕದೊಳ್ (ಲೀಲಾವ. ೪-೩೩). [ ತನ್ನಿ$_2$ + ನಂಜು$_2$ ]

**ತನಿನಗೆ** (ನಾ). ಅತಿಶಯವಾದ ನಗೆ,–ಹಾಸ್ಯ : ಗಂಡುಗಲಿಗಳೊ ವೀರಸಿರಿಯುಳಿವಿಂಡರೋ ತನಿನಗೆಯು ಬಿರುದಿನ ಭಂಡರೋ (ಕುಮಾ.ಶ. ೨-೫೦) ; ತನಿನಗೆಯನುಬ್ಬಿಸುವ ಹಾಸ್ಯದ ವಿನುತ ಪರಿಹಾಸಕರಿನೆಸೆದುದು ಸಭೆ ದಶಾನನನ (ತೊರರಾ. ೬-೧೧-೧೧). [ ತನ್ನಿ$_2$ + ನಗೆ ]

**ತನಿನಿದ್ರೆ** (ನಾ). ೧. ಗಾಢವಾದ ನಿದ್ದೆ : ನೆನಸಿಂಗೆ ಸಾತ್ವಿಕಂ . . . ತನಿನಿದ್ರೆಗಲ್ಲಿ ತಾಮಸಗುಣಂ ಬೀಜವೆನಿಸಿರ್ಪುದು (ಅನುಸಾ. ೨-೪-೧೧). ೨. ಅತಿಶಯವಾದ ಜಡತೆ : ಕರ್ಮವಶದಿಂದೆ ತನಿನಿದ್ರೆ ಮುಸುಕುತಿಹುದೊರ್ಮೆ (ಅನುಸಾ. ೫-೫-೨) ; ಜೀವನದಲ್ಲಿರುವ ಭಕ್ತಿಯು ತನಿನಿದ್ರೆಯಿಂದ ಎಚ್ಚತ್ತು ಜೀವನ ನಿಜಸ್ವರೂಪವನ್ನು ಪ್ರಕಾಶಿಸುತ್ತದೆ (ತತ್ವಜ್ಞಾ. ೩೯೨). [ ತನ್ನಿ$_2$ + ನಿದ್ರೆ ]

**ತನಿನೀರ್** (ನಾ). ತಿಳಿಯಾದ ನೀರು : ಐಗೂರರಸನ ಪೆಂಡಿರ ಮೂಗುತಿ ಕಣ್ಬನಿಯೊಳಿಱಿದ ಕಾಡಿಗೆಯಿಂ ಕರ್ಪಾಗಿ ಬಱಿಕು ಗುಂವ ತನಿನೀರ್ ತಾಗುವಿನಂ ತೊಳಗಿತೆಂದಿನಂತಪ್ರತಿಮಾ (ಅಪ್ರತಿ. ೦೧೯-೦೩).
[ ತನ್ನಿ$_2$ + ನೀರ್$_1$ ]

**ತನಿನುಡಿಸು** (ಕ್ರಿ). (ಹಾಡಿಗೆ ಮೇಳವಾಗಿರದೆ) ಒಂಟಿಯಾಗಿ, ಪ್ರತ್ಯೇಕವಾಗಿ ವಾದ್ಯ ನುಡಿಸು : ಎಷ್ಟೋ ಬಾರಿ ತಮ್ಮ ಕಚೇರಿಗಳಲ್ಲಿ ಅವರು ಕೊನೆಯಲ್ಲಿ ಮಾತ್ರ ಮೃದಂಗ ನುಡಿಸುವವರಿಗೆ ತನಿನುಡಿಸಲು ಬಿಡುತ್ತಿದ್ದುದೂ ಉಂಟು (ಸಂಗೀತ. ೩೪).
[ ತನ್ನಿ$_2$ + ನುಡಿಸು (<ನುಡಿಯಿಸು) ]

**ತನಿನೇಹ** (ನಾ). ಅತಿಶಯವಾದ ಸ್ನೇಹ,–ಪ್ರೀತಿ : ತನಿನೇಹದಿಂ ಹರಣವಾಗಿಪ್ಪಳಾತಂಗೆ (ಇಹರ. ದೇ. ೨೯-೪) ; ಬಾವನ್ನಮಂ ತನಿನೇಹದಿಂ ಪೂಸಿ ಪೂಮಾಲೆಗಳ ಸೂಡಿ (ಕೊಟ್ಟೂಬ. ೪-೦೩೪). [ ತನ್ನಿ$_2$+ ನೇಹ ]

**ತನಿನೋಟ** (ನಾ). ನಿರ್ಮಲವಾದ ದೃಷ್ಟಿ ; ಪರಿಶುದ್ಧವಾದ ದೃಷ್ಟಿ : ತನಿನೋಟವಂ ನೋಡಿ ಬೆಟ್ಟಿತೆಂದಂಜುತಂ (ರುದ್ರರ. ದೇ. ೨೦೪-೧೧) ; ಮನದೊಳ್ಗಿರಿಶಧ್ಯಾನಂ ತನಿನೋಟದೊಳೀಶಮೂರ್ತಿ (ಉದ್ಭಟ. ೧-೧೦೪).
[ ತನ್ನಿ$_2$ + ನೋಟ ]

**ತನಿಪರಿಮಳ** (ನಾ). = ತನಿಗಂಪು : ತಿಳಿಗೊಳನ ತಂಪಗಿವ ತಕ್ಕೆಯು ತೊಳಲಿಕೆಯ ತಾವರೆಯ ತನಿ[ಪಾಠಾಂ. ತಿಳಿ]ಪರಿಮಳದ ವಿಸರದ ಹಸರದಲಿ ತೀಡಿದುದು ತಂಗಾಳಿ (ತೊರರಾ. ೨-೭-೩).
[ ತನ್ನಿ$_2$ + ಪರಿಮಳ (=ಪರಿಮಲ) ]

**ತನಿಪಾಕ** (ನಾ). ಹದವಾದ ಪಾಕ ; ರುಚಿಯಾದ ಪಾಕ : ರೂಪ ಸೌಂದರ್ಯ ಯವ್ವನ ಶೃಂಗಾರ ಕಲೆಗಳೆಂಬ ಪಂಚಾಸವಗಳನ್ನು . . . ಅಂಗಜಾಗ್ನಿಯಿಂದ ಹದಗಾಸಿ ತನಿಪಾಕ ಮಾಡಿಕೊಂಡು ಸವಿನೋಡಿಯೇ ಬಿಡಬೇಕು (ಮಂತ್ರಶ. ೩೯-೧೭). [ ತನ್ನಿ$_2$ + ಪಾಕ$_2$ ]

**ತನಿಬಾಳೆ** (ನಾ). ಬಾಳೆಯಲ್ಲಿ ಒಂದು ಜಾತಿ: ಬಾಳೆ ರಸಬಾಳೆ ಬಿಟುಬಾಳೆ ತನಿಬಾಳೆ ಕೆಂಬಾಳೆ (ವಿವೇಕ. ೨೦೦). [ ತನ್ನಿ$_2$ + ಬಾಳೆ$_1$ (<ಬಾಟೆ) ]

**ತನಿಬಿಗಿ** (ಕ್ರಿ). ಗಟ್ಟಿಯಾಗಿ ಕಟ್ಟು ; ಬಲವಾಗಿ ಬಂಧಿಸು : ಹೊಗೆಯ ನೊಡೆದೊಳಬಿದ್ದು ಕಿಡಿಗಳನುಗಿದು ದಳ್ಳುರಿದುಟುಗಲನು ತನಿಬಿಗಿದು ಭೀಮನ ರಥದ ಸುತ್ತಲು ಸೂಸಿ . . . ಉರವಣಿ ಸಿತಮಳಾಸ್ತ್ರ (ಕುಮಾವ್ಯಾದ್ರೋ. ೧೯-೪೭). [ ತನ್ನಿ$_2$ + ಬಿಗಿ$_1$ ]

**ತನಿಬಿಡು** (ಕ್ರಿ). ಸಂಗೀತಕಚೇರಿಯಲ್ಲಿ ವಾದ್ಯಗಾರನಿಗೆ ತನಿಬಾರಿಸಲು ಅವಕಾಶ ಕೊಡು : ಗಾಯಕನು ಹಾಡಿನ ಕೊನೆಯಲ್ಲಿ ಮದ್ದಳೆಯವನಿಗೆ ತನಿಬಿಟ್ಟನು (ರೂಢಿ). [ ತನ್ನಿ$_2$ + ಬಿಡು$_1$ ]

**ತನಿಬೀಜ** (ನಾ). ಗಟ್ಟಿಯಾದ ಬೀಜ ; ಸಾರವತ್ತಾದ ಬೀಜ : ಪ್ರೇಮರಸದಲಿ ಬೇಟ ಬೇಟುದ್ದಾಮಭುಜನಕ್ಕಿದನು ಚಿತ್ತದ ತಾಮಸದ ತನಿಬೀಜ ಮುಸುಕಿತು ಹರ್ಷರಚನೆಯಲಿ (ಕುಮಾವ್ಯಾ.ಸ. ೧೩-೯).
[ ತನ್ನಿ$_2$ + ಬೀಜ ]

**ತನಿಬೆಲ್ಲ** (ನಾ). ಸಿಹಿಯಾದ ಬೆಲ್ಲ ; ರುಚಿಕರವಾದ ಬೆಲ್ಲ : ಶೋಧಿಸಿದ ತನಿಬೆಲ್ಲವಿಕ್ಕಿದ ಹೂರಿಗೆಯ ಮೆದೆಯಲ್ಲಿ . . . ನೋಡಲಿ ನಮ್ಮನೆಂದುದು ಧೂರ್ತವಟುನಿಕರ (ಕುಮಾವ್ಯಾ.ಆ. ೧೫-೭) : ಹರಿಶರಣರಚ್ಚು ಬುಧಜನರಿಗೆ ಪೆಚ್ಚು . . . ಕೇಳ್ವರಿಗಿದು ತನಿಬೆಲ್ಲದಚ್ಚು (ಮೋಹತ ೧-೩೮).
[ ತನ್ನಿ$_2$ + ಬೆಲ್ಲ ]

**ತನಿಬೆಳಕು** 'ತನಿವೆಳಗು' ನೋ.

**ತನಿಮದ** (ನಾ). ಅಧಿಕವಾದ ಮತ್ತು : ಉದ್ದಾಮ ಸಿಂಹಧ್ವನಿಗೆ ನಿದ್ರಾ ತಾಮಸದ ತನಿಮದವಡಗೆ ಕಂದೆರೆದನಾ ಹನುಮ (ಕುಮಾವ್ಯಾ.ಆ. ೧೦-೧೨).
[ ತನ್ನಿ$_2$ + ಮದ$_1$ ]

**ತನಿಮನೆ** (ನಾ). ಹಿತದ ನೆಲೆ : ತಾಯೆ ತನಿಮನೆಯೋ (ಗಂ. ೭-೧) : ತಾಯಿಯು ತನಿಮನೆಯಾಗಿದ್ದಾಳೆ (ಗೊತ್ತು.ಗು. ೧೩೭). [ ತನ್ನಿ$_2$+ಮನೆ ]

**ತನಿಮರ್ವು** (ನಾ). ದಟ್ಟವಾದ ಕತ್ತಲೆ ; ಕಗ್ಗತ್ತಲೆ ; ಗಾಢಾಂಧಕಾರ : ಅಸ್ತಂಗತ ಸೂರ್ಯನಾಗಲ್ ತನಿಮರ್ವುರ್ವಲ್ (ಉದ್ಭಟ. ೧೦-೩೭).
[ ತನ್ನಿ$_2$ + ಮರ್ವು ]

**ತನಿಮಸಗು** (ಕ್ರಿ). ಹೆಚ್ಚಾಗಿ ಕೆರಳು ; ಅತಿಶಯವಾಗಿ ಉದ್ರೇಕಗೊಳ್ಳು ; ಇಟ್ಟಣಿಸುವೀ ರಣಮದಾಂಧನ ತೊಟ್ಟುಳಿಕೆಯನು ಕೇಳ್ದು ರಾಯ ಘರಟ್ಟನಿಲ್ಲಾ ಎನುತ ತನಿಮಸಗಿತು ಭಟಸ್ತೋಮ (ಕುಮಾವ್ಯಾ.ಕ. ೨೦-೨).
[ ತನ್ನಿ$_2$ + ಮಸಗು$_1$ ]

**ತನಿಮಳೆ** 'ತನಿವಳೆ' ನೋ.

**ತನಿಮಾಡಿಸು** (ಕ್ರಿ). ತಂಪುಮಾಡಿಸು ; ಶಾಂತಿಮಾಡಿಸು : ಆಗಲೇ ಒಂಬತ್ತು ಜನರನ್ನು ತೆಗೆದುಕೊಂಡಿದ್ದ ಪ್ಲೇಗಿನಮ್ಮ ಎಳನೀರಿನ ತನಿಮಾಡಿಸಿ ಕೊಂಡು ಹೊರಟು ಹೋದಳು (ನನ್ನೂರು. ೯೨).
[ ತನ್ನಿ$_3$ (<ತಣ್$_3$) + ಮಾಡು$_1$ + – ಇಸು$_3$ ]

**ತನಿಮಾವು** (ನಾ). ಮಾವಿನಲ್ಲಿ ಒಂದು ಬಗೆ : ಮಾವು ಸೀಮಾವು ತನಿಮಾವು ಗಿಣಿಮಾವು (ವಿವೇಕ. ೨೦೦). [ ತನ್ನಿ$_2$ + ಮಾವು ]

**ತನಿಮಿಂಚು** (ನಾ). ಉಜ್ವಲವಾದ ಮಿಂಚು ; ಕಣ್ಣನ್ನು ಕೋರೈಸುವ ಮಿಂಚು : ಆಃ ನೀನು ಬಂದೆ ತನಿಮಿಂಚಿನುರುಳಿ ತನ್ನನ್ನೆ ತೂಗುವಂತೆ (ಹೃದಸ. ೯-೫). [ ತನ್ನಿ$_2$ + ಮಿಂಚು$_3$ ]

**ತನಿಮಿನುಗು** (ನಾ). ಹೆಚ್ಚಾದ ಕಾಂತಿ,–ಪ್ರಕಾಶ : ತನಿಮಿನುಗು ವೋಟಿಯ ಕಣ್ಣ ಕೆಂಪಿನ ಘನಭಯಂಕರರೂಪ ಭೀಮನ ಕಂಡನವನೀಶ (ಕುಮಾವ್ಯಾ.ಆ. ೧೧-೪). [ ತನ್ನಿ$_2$ + ಮಿನುಗು$_2$ ]

**ತನಿಮೊನೆದೋಱಿಸು** (ಕ್ರಿ). ಚೆನ್ನಾಗಿ ಗೋಚರಿಸುವಂತೆ ಮಾಡು,– ಅಭಿವ್ಯಕ್ತಗೊಳಿಸು : ಮನದೊಳೆ ವಾಕ್ಕಿನೊಳ್ಕರತಳಾಮಳಕಾಕೃತಿಯಾಗಿ ಸತ್ಯ ಚಿದ್ಘನ ಪರಮಾರ್ಥಮುಚ್ಚಳಿಸಿ ತೋಱುತಿಹಂತೆ ಮದೀಯ ಕಾಯದೊಳ್ತನಿಮೊನೆದೋಱಿಸಯ್ಯ ಪರಮಪ್ರಭುವೇ (ಶತಕ. ೭೮).
[ ತನಿಮೊನೆದೋಱು + – ಇಸು$_3$ ]

**ತನಿಮೊನೆದೋಱು** (ಕ್ರಿ). ಚೆನ್ನಾಗಿ ಗೋಚರವಾಗು ; ಸ್ಪಷ್ಟವಾಗಿ ಕಾಣಿಸು. 'ತನಿಮೊನೆದೋಱಿಸು' ಪರಾ.
[ ತನ್ನಿ$_2$ + ಮೊನೆದೋಱು ]

**ತನಿಮೊರೆ** (ಕ್ರಿ). ಇಂಪಾಗಿ ಝೇಂಕರಿಸು : ನೈದಿಲುಗಳಲಿ ತನಿಮೊರೆವ ತುಂಬಿಯ ಕಳರವಕೆ ಬೆಚ್ಚಿದವು . . . ಮಮ್ಮಲುಮಱುಗುತಿರ್ದವು ಜಕ್ಕವಕ್ಕಿಗಳು (ಕುಮಾವ್ಯಾದ್ರೋ. ೦೭-೧೫). [ ತನ್ನಿ$_2$ + ಮೊರೆ$_1$ ]

**ತನಿಮೊಲೆ** (ನಾ). (ಹಾಲು) ತುಂಬಿದ ಸ್ತನ : ಕಿಱುಹುಲ್ಲೆ ಮೋಹದ ಶಿಶುಗೆ ತನಿಮೊಲೆಯಾವೂಡುತಿದೆ (ಸಾಳ್ವಭಾ. ೩-೯). [ ತನ್ನಿ$_2$ + ಮೊಲೆ$_1$ ]

**ತನಿಮೋಹರ** (ನಾ). ದೊಡ್ಡ ಮೊತ್ತ; ಬಹಳವಾಗಿ ದಟ್ಟಯಿಸಿದುದು: ಊಹೆದೆಗಹಿನ ಕಂಬನಿಯ ತನಿಮೋಹರದ ಘನಶೋಕವಹ್ನಿಯ ಮೋಹುಗಾಡಿನ ಮನದ ಕೌರವನಿತ್ತನೋಲಗವ (ಕುಮಾವ್ಯಾದ್ರೋ. ೧-೦೨).
[ ತನ್ನಿ$_2$ + ಮೋಹರ ]

**ತನಿಯನ್** (ನಾ). ಗುರುಗಳ ಪ್ರಾರ್ಥನಾರೂಪವಾದ ಬಿಡಿ ಪದ್ಯ : ಮೇಲುಗೋಟೆ ತಿರುನಾರಾಯಣಸ್ವಾಮಿಯವರ ಸನ್ನಿಧಿ ಮೊದಲಾದ ಸನ್ನಿಧಿಗಳಲ್ಲಿ ಪ್ರಬಂಧಾನುಸಂಧಾನಗಳು ನಡವಾಗ . . . ರಾಮಾನುಜ ದಯಪಾತ್ರ ತನಿಯನೆ ಆವ ರೀತಿಗೆ ನಡದು ಬಂತು ಯೀಗಲೂ ಅದೇ ರೀತಿಗೆ ರಾಮಾನುಜದಯಪಾತ್ರ ತನಿಯನೆ ನಡಶಿಕೊಂಡು ಬರ್ರುವದೂ (ಮೈಆರಿ. ೧೯೩೮. ೧೫-೫ ; 1709). [ ←ತಮಿ. ತನಿಯನ್ ]

**ತನಿಯಡಗು** (ನಾ). = ತನಿಗಂಡ : ಏಱ ಬಾಯ್ಗೆ ಬಾಯೊಡ್ಡಿ ರಕ್ತವನೀಂಟಿ ತನಿಯಡಗನಡಸಿ ತಿಂದು ಬಸುಱು ನೆಱ ಬೀಗೆ ಡಬ್ಬನೆ ತೇಗಿ (ಸಾಳ್ವಭಾ. ೨೫-೨೩). [ ತನ್ನಿ$_2$ + ಅಡಗು$_3$ ]

**ತನಿಯರಳು** (ಕ್ರಿ). ಚೆನ್ನಾಗಿ ಅರಳು ; ಪೂರ್ಣವಾಗಿ ವಿಕಸಿತವಾಗು : ಹರಿಹರನಿಗಿಂತ ಬೇಗನೆ ಅವನ ಪ್ರತಿಭೆ ತನಿಯರಳಿ ಗಮಗಮಿಸತೊಡಗಿತೆಂದು ಹೇಳಬಹುದು (ಕಸಾಚ. ೩೫೩).
[ ತನ್ನಿ$_2$ + ಅರಳು$_1$ (<ಅಲರ್$_1$) ]

**ತನಿಯುಣ್** (ಕ್ರಿ). ಒಬ್ಬನೇ ಉಣ್ಣು ; ಒಂಟಿಯಾಗಿ ಅನುಭವಿಸು : ನೆರಪಿದುವನ್ ತಾಮೋ ತನಿಯುಣ್ಬುದು (ಕುಹಳ. ೧-೨೩-೯).
[ ತನ್ನಿ$_2$ + ಉಣ್ ]

**ತನಿಯುರಿ** (ನಾ). ತೀಕ್ಷ್ಣವಾದ ಉರಿ ; ಪ್ರಖರವಾದ ಬೆಂಕಿ : ಉಗಿದನು ನಿಜಾಯುಧವ ದಿನಪಕೋಟಿಯ ರಶ್ಮಿಯನು ತುದಿಮೊನೆಯೊಳುಗುಳುವ ಬಾಯಿಧಾರೆಯ ತನಿಯುರಿಯ ತೆಕ್ಕೆಯಲಿ ಥಳಥಳಿಸುವ ಮಹಾಂಕುಶವ (ಕುಮಾವ್ಯಾದ್ರೋ. ೩-೫೫). [ ತನ್ನಿ$_2$ + ಉರಿ$_2$ ]

**ತನಿಯೆಣ್ಣೆ** (ನಾ). ಶುದ್ಧವಾದ ಎಣ್ಣೆ ; ತಿಳಿಯಾದ ಎಣ್ಣೆ : ತನುವೆಂಬ ತನಿಯೆಣ್ಣೆ ನೆನಹೆಂಬ ತಿಳಿದುಪ್ಪ ಘನಜ್ಞಾನಜ್ಯೋತಿಯುರಿಯಲಜ್ಞಾನದ ನೆನಹದೆತ್ತಣದು (ಸರ್ವಜ್ಞ. ೪೫೭). [ ತನ್ನಿ$_2$ + ಎಣ್ಣೆ ]

**ತನಿಯೆರಕ** (ನಾ). ಚೆನ್ನಾಗಿ ಎರಕಹೊಯ್ದ ಮೂರ್ತಿ,–ಆಕಾರ : ವೀರದೈತ್ಯನ ಬಹಳ ದುಷ್ಪರಿವಾರವದನಾರಣೆಸುವರು ಮುಂಗಾರಿರುಳ ತನಿಯೆರಕ ನೀಲಾಚಲದ ಖಂಡರಣೆ (ಕುಮಾ.ಭ. ೯–೩೪).
[ ತನಿ$_2$ + ಎರಕ$_2$ ]

**ತನಿಯೆರೆ** 'ತಣಿಯೆಱೆ' ನೋ.

**ತನಿಯೆರೆತ** (ನಾ). ತನಿ ಎರೆಯುವಿಕೆ ; ತರ್ಪಣ ಬಿಡುವಿಕೆ : ಏಕೆನ್ನ ನಿಸಿದಿಗೆಯ ಬಳಿ ಬಾಗಿ ಬಾಡಿ ನಿಂದಿರ್ಪಳೀ ನನ್ನರಸಿ ? ತನಿಯೆರೆತವೇಕೀಗ ? (ಪಾರಸಿ. ೨೬–೫೮೨). [ ತನಿ$_3$ (<ತಣಿ$_3$) + ಎರೆತ$_1$ ]

**ತನಿಯೊಸರು** (ನಾ). ಹೆಚ್ಚಾಗಿ ಸುರಿಯುವಿಕೆ,– ಒಸರುವಿಕೆ: ಎನಿತು ನರುಗಂಪು . . . ತನಿಯೊಸರ ಪೂವುಡಿಯ ಪೊಸಸೋನೆಯೆನಿತು (ಕಾಲೂರ. ೧೨೦–೨೫೦). [ ತನಿ$_2$ + ಒಸರು$_2$ (<ಒಸರ್$_1$) ]

**ತನಿರಕುತ** (ನಾ). ೧. ಹೊಸರಕ್ತ ; ಬಿಸಿನೆತ್ತರು : ಮನದೊಳಗೆ ಕೌರವನ ಕರುಳನು ತನಿರಕುತದಲಿ ಕುದಿಸಿದರು(ಕುಮಾ.ಸ ೧೪–೬೫). ೨. ರುಚಿಯಾದ ರಕ್ತ: ನೋಡುವನು . . . ಬಾಡುಗರುಳಿನ ಚೀತ್ಕೃತಿಯ ತಲೆಯೋಡುಗಳ ತನಿರಕುತಪಾನದ ಶಾಕಿನೀಜನವ (ಕುಮಾ.ಗ. ೩–೧೦). [ ತನಿ$_2$ + ರಕುತ ]

**ತನಿರನ್ನ** (ನಾ). ಶ್ರೇಷ್ಠವಾದ ರತ್ನ : ತನಿರನ್ನದೊಂದು ಕೆಂಗಿಡಿಯು ಕುಡಿಯೆ ಸಿಡಿದರಳಿ ಉರುಳಿದಂತೆ (ಅರಳು. ೫–೩).
[ ತನಿ$_2$ + ರನ್ನ ]

**ತನಿರಭಸ** (ನಾ). ಅತಿಶಯವಾದ ರಭಸ,–ವೇಗ : ಸೂಗುರಿಸೆ ತುದಿವಾಲ ವಮರರ ಕೂಗುಗಳ ಕಹಳೆಗಳ ಹಱೆ ತಾಗುಗಳ ತನಿರಭಸ[ಪಾಠಾಂ. ಹರುಷ]ದಲಿ ಹಾಱಿದನು ಹನುಮಂತ (ತೊರರಾ. ೪–೧೨–೩೩).
[ ತನಿ$_2$ + ರಭಸ ]

**ತನಿರಸ** (ನಾ). ೧. ಸವಿಯಾದ ರಸ: ಗಿಳಿಗಳ ಗೂಡಿಂದುದಿರ್ವ ದಾಳಿಂಬದ ಬಿತ್ತುಗಳಿನೊಸರ್ವ ತನಿರಸದಳಿಪದೊಳಂ(ಕಾದಂಪೂ. ೯೭); ತಮ್ಮಿಂ ತಾವೆ ಬಿಗಿದು ಬಿರಿವಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪರಿಪೊನಲೆ ಪರಿನೀರಾಗೆ (ಪಂಚತಂ. ೧೧೭–೧೫) ; ಅಂಬುಜವನವಿದಿರು ಬಂದಂತೆ ಕಂಪಿನ ತನಿರಸದ ತಾವರೆಯ ತೆಕ್ಕೆಯ ತೋಳ ತೋಱಿಕೆಯ ಜಿನುಗುದುಂಬಿಯ ಜಾಳಿಗೆಯ ತನಿಮಿನುಗುವೋಱಿಯ . . . ಭೀಮನ ಕಂಡನವನೀಶ (ಕುಮಾ.ಭ. ೧೧–೪); ಕುಱಿ ಕಬ್ಬಿನೊಳು ಹೊಕ್ಕು ಅಱಿವುದೆ ತನಿರಸವ (ಸರ್ವಜ್ಞ. ೪೨೦); ತನಿರಸಂ ಸೋಱುವನ್ನಂ ನಾಲಗೆಯೂಱೆ ಸೀಯೆಂದು ಚುಂಬಿಸಿಯುಂ (ರಾಮಾಶ್ವ. ೬೧–೧೭). ೨. ಶುದ್ಧವಾದ ರಸ; ತಿಳಿಯಾದ ರಸ: ಬೆಳರ್ಮಣ್ಣ ಪೊಸಕಡಾಯದೊಳ್ ತುಂಬಿದ ನೀಲಿಯ ತನಿರಸಮೆಂಬಂತಿರೆ ಕಳಿಂದಜೆಯ ಕರ್ಮಡುವಿನೊಂದು ಪೊಳೆಪಿಂ (ರಾಮಾಶ್ವ. ೫೨–೨೨). ೩. ಗಟ್ಟಿಯಾದ ಕದಡು ; ಮಂದವಾದ ದ್ರವ,–ಕಲ್ಕ : ಕಾರ್ಮುಗಿಲಂ ಜನವ ಕಲಸಿ ತನಿರಸದೊಳು ನೆಱೆ ಪೊರಳ್ಚಿದ ನೀಲಪುತ್ರಿಕೆಗಳಂತೆ . . . ನಡೆತಹ ಕಿರಾತರ ತನುಚ್ಛವಿ (ರಾಘಚ. ೧೭–೬೪). ೪. ಮನೋಹರವಾದ (ಕಾವ್ಯವಿಷಯಕವಾದ) ಶೃಂಗಾರಾದಿ ನವರಸಗಳು : ಕಂದಂಗಳವ್ಯತಲತಿಕಾಕಂದಂಗಳನೂನವಾಕ್ಯಫಲವಿಲಸನ್ಮಾಕಂದಂಗಳ್ ತನಿರಸದುಕ್ಕಂದಂಗಳ್ (ಗಿರಿಕ. ೧–೧೨). ೧ , ೪ : ಕೊರ್ವಿ ಪೊಱಪೊಣ್ಮೆ ತನಿರಸಮುರ್ವೆ ಕರಂ ಕೊಂಕು ಕಿವಿವರಂ ನವ್ಯಗುಣಂ ಪರ್ವೆ ತೆಗೆದಿಸುವ ಕಾವನ ಕರ್ವಿನ ಬಿಲ್ಲಂತೆ ಕಾವ್ಯಮೇಂ ಮೋಹಿಸದೇ (ಧರ್ಮನಾ. ೧–೪೭). [ ತನಿ$_2$ + ರಸ ]

**ತನಿರಸವಡೆ** (ಕ್ರಿ). ಮನೋಹರವಾದ ಶೃಂಗಾರಾದಿ ನವರಸಗಳಿಂದ ಕೂಡಿರು : ಇನಿವಾತುಗಳ ಸತ್ಪದಬಂಧ ವ್ಯಂಗ್ಯೋಕ್ತಿ ಧ್ವನಿಯರ್ಥ ಗೌರವದಿಂದೆ ತನಿರಸವಡೆದ ಮತ್ಕೃತಿಯ ಚಿತ್ರೈಸು (ಮೋಹಹ. ೨೮–೨).
[ ತನಿರಸ + ಪಡೆ$_1$ ]

**ತನಿವಂಡು** (ನಾ). ರುಚಿಯಾದ ಮಕರಂದ : ಅಲರ್ದ ತಾವರೆಯ ತನಿವಂಡಿನ ಪನಿಗಳಿಂ (ಕಾದಂಪೂ. ೧೧೭) ; ತಮ್ಮ ತನಿವಂಡನೂಡಿ ನಡಪಿದ ಮೋಹದಿಂ ಬಸಿಱೆಳಗೆ ಬಯ್ತು ಮುಚ್ಚುವಂತಿರಳಿವಳಗವುನೊಳಕೊಂಡು ನಳಿನಿಗಳ್ ಮುಗಿಯೆಯುಂ (ವರ್ಧಪು. ೬–೨೩ ವ).
[ ತನಿ$_2$ + ಬಂಡು$_1$ ]

**ತನಿವಗೆ** (ನಾ). ಶುದ್ಧವಾದ ಮನಸ್ಸು ; ವಾತ್ಸಲ್ಯ : ಗಂಗಾಂಬೆ ಮತ್ತು ನೀಲಾಂಬಿಕೆಯರು . . . ಶರಣರಿಗೆಲ್ಲ ತನಿವಗೆಯ ತಾಯಂದಿರಾಗಿ ಬಾಳಿದರು (ಶರಜ. ೧೮೩). [ ತನಿ$_2$ + ಬಗೆ$_3$ ]

**ತನಿವಡಹ** (ನಾ). ಹೆಚ್ಚಾದ ಜಡಿಮಳೆ : ತನಿವಡಹಕ್ಕೆ ಕೋಡಿ ತನು ಪೊರ್ಬುಳಿವಂದು ಕೊರಲ್ ಕುಸುಂಗಿ . . . ಮೃಗಪ್ರಕರಮಿರ್ದುದು (ಕುಸುಮಾ.೬–೩೪); ತನಿವಡಹಕ್ಕೆ ಕೋಡಿ ತನುಪೊರ್ವುಳಿವಂದು ಕೊ[ರ]ಲ್ಕುಸುಂಗಿ ಮೃಗಪ್ರಕರಮಿರ್ದುದು (ಶಾಂತೀಶ್ವ. ೧೨–೫೪).
[ ತನಿ$_2$ + ಬಡಹ (<ಬಡಪ) ]

**ತನಿವಣ್**, ತನಿವಣ್ಣು (ನಾ). ಪಕ್ವವಾದ ಹಣ್ಣು ; ಹದವಾಗಿ ಮಾಗಿದ ಹಣ್ಣು : ಪಥಿಕರ್ಬರ್ಕೆಂದು ಭೃಂಗಂಗಳಿಂದುಲಿವಂತಿರ್ದುದು ಪಣ್ಮಬಕ್ಕೆ ತನಿವಣ್ಣಾಗಿರ್ದುದಿಮ್ಮಾವು (ಆದಿಪು. ೧೧–೬೮) ; ನಾಲಗೆ ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ (ಗಿರಿಕ. ೨–೩೯); ತನಿವಣ್ಣಂ ಲಂಚಮಿವಾವೆಂ ಪುರುಳಿ ನಿನಗೆ . . . ಎನ್ನೋಪನನಿಂದಾರಯ್ದು ತಂದೆನ್ನೊಡನಿರಿಸಿದೊಡೆ (ಕಬ್ಬಿಗಕಾ. ೩೧೮); ಪೊಂಗೆ ಪರಿಮಳವಿದೆನಿಪ ಕಬ್ಬಿಂಗೆ ನಿತವಣ್ಣಾದ ತೆಱದಲಿ (ಪ್ರಭುಲೀ. ೧೯–೫೭). **ತನಿವಣ್ಣು** : ತನಿವಣ್ಣರಲು ಕಸುಗಾಯನೇತಕೆ ಕೊಯ್ದೆ (ಬಸವು. ೪೮–೧೧); ಕೊನರಿಲ್ಲದ, ಮಿಡಿಯಿಲ್ಲದ . . . ತನಿವಣ್ಣಿಲ್ಲದ ಮರಂಗಳಿಲ್ಲ (ರಾಮಾಶ್ವ. ೫೩–೨೪) ; ತನಿವಣ್ಣು ಕೆನೆವಾಲು ತಾಂಬೂಲ ನೀಡುವೆನು (ಕವಿಸೋ. ೪೫–೧೩). [ ತನಿ$_2$ + ಪಣ್$_3$ ]

**ತನಿವಣ್ಣು** 'ತನಿವಣ್' ನೋ.

**ತನಿವದನು** (ನಾ). ಸರಿಯಾದ ಹದ,–ಪಕ್ವತೆ : ತನಿವದನಾಗಿ ಕೆಂಪನೊಳಕೊಂಡು ಸುಗಂಧಮನಾಂತು (ದಶಕು. ೬–೨೫)
[ತನಿ$_2$ + ಪದನು (<ಪದನ್$_1$)]

**ತನಿವರಿ** (ಕ್ರಿ). ೧. ಬೇರೆ ಬೇರೆಯಾಗಿ ಓಡಾಡು ; ಸಡಗರದಿಂದ ನಡೆದಾಡು : ತವತವಗೆ ತನಿವರಿವ ಜನದುತ್ಸವವನದನೇನೆಂಬೆನಂದಿನ ದಿವಸಮೊಸಗೆ ಯನಮರಲೋಕದೊಳು (ಕುಮಾ.ಭ. ೧೨–೫೮). ೨. ಹೆಚ್ಚಾಗಿ ಹರಡು,–ವ್ಯಾಪಿಸು: ಮೊರೆವ ತುಂಬಿಯ ತಟ್ಟುಗಳ ತನಿವರಿವ ತಂಪಿನ ತುಱು ಗಲಿನ ತತ್ಸರಸಿಯನು ದೂರದಲಿ ಕಂಡುಬ್ಬಿದನು ಕಲಿಭೀಮ (ಕುಮಾ.ಭ. ೧೦–೪೨). [ ತನಿ$_2$ + ಪರಿ$_2$ ]

**ತನಿವಳೆ**, ತನಿಮಳೆ (ನಾ). ಹಿತವಾದ ಮಳೆ : ತನತನಗೆ ತರುಣಿಯರು ಹೂವಿನ ತನಿವಳೆಯ ಕಱೆದರು (ಕುಮಾ.ಸ. ೩–೬೦) ; ಗಿಳಿಯ ತುಂಬಿಯ ಹಂಸೆಗಳ ಕೋಗಿಲೆಯ . . . ಕಲರುತಿಯ ಕರ್ಣಾಮೃತದ ತನಿವಳೆಯ ಕಱೆದುದು ಇಭಪುರಿಯ ಹೊಱವಳಯದುದ್ಯಾನ (ಕುಮಾ.ಉ.೭–೨೩). **ತನಿಮಳೆ**: ನಿರ್ಜರರ ಭೇರಿ ನವಾಯಿಯಲಿ ಮೊಳಗಿದವು ಸುರಿದವು ಮುಗುಳ ತನಿಮಳೆಯ (ಕುಮಾ.ಸ. ೮–೮); ಮುನಿಜನ ಜಾಲವನು ನೋಡಿದನು ಕಱೆದನು ಕೃಪೆಯ ತನಿಮಳೆಯ (ಕುಮಾ.ಭ. ೫–೨೪). [ ತನಿ$_2$ + ಮಳೆ (<ಮಱೆ) ]

**ತನಿವಾಲ್**, ತನಿವಾಲು, ತನಿಹಾಲು(ನಾ). ೧. ರುಚಿಕರವಾದ ಹಾಲು; ಸವಿಯಾದ ಹಾಲು : ತನಿವಾಲನುಂಡು ಬಳೆವರಗಿಳಿಗಳ್ (ತಿರುರ. ದೇ. ೨–೧೧); ನಂಬಿ ಕೊಡಗೂಸು ಕೊರ್ತಿತ್ತ ತನಿವಾಲ್ಕುಡಿದೆ(ಸೌಂದಪು.೧೧–೧೫); ತನಿವಾಲ್ಗೆ ತವರಾಜ ಸಕ್ಕರೆಯನೊಡಗಲಸಿ (ರೇವಣ. ೧೧೫–೭). ೨. ಗಟ್ಟಿಯಾದ ಹಾಲು : ಧಾನ್ಯದೊಳಕ್ಕಿ ಪಾಲೊಳ್ ತನಿವಾಲ್ (ಧರ್ಮಾಮೃ. ೯–೧೦೮). **ತನಿವಾಲು**$_1$ : ೧. ಪುಟದ ಸಕ್ಕರೆಯನು ತನಿವಾಲಿನೊಳು ಸೂಸಿ

ಗುಟುಕಿಸುವಂತೆ ಸಂಗೀತ (ಭರತ. ೨೫-೧೨). ಅವಳ ಕೊರಳಿಂದ ಹೊರಟ ಹಾಡುಗಳು ತನಿವಾಲನೆರೆದು ಅವನ ಮನಸ್ಸನ್ನು ತಂಪಾಗಿಸಿದವು (ಹಾಹುತ್ತ. ೬೨). ೨. ಬಟ್ಟವಾಲನು ಚಿಲುಪಾಲನು ಕೆನೆವಾಲನೆಟ್ಟೆವಾಲನು ತನಿವಾಲ . . . ಎಡೆಮಾಡಿದಳರಸಗೆ (ಭರತ. ೧೦-೩೪). **ತನಿಹಾಲು: ೨.** ಕೆನೆಹಾಲು, ಎಟ್ಟೆಹಾಲು, ತನಿಹಾಲು . . . ತಂದು ಎಡೆಮಾಡಿದಳು (ಮಾಮಲ್ಲಿ. ೫೪). [ ತನಿ₂ + ಪಾಲ್₁ ]

**ತನಿವಾಲು** 'ತನಿವಾಲ್' ನೋ.

**ತನಿವಿತ್ತು** (ನಾ). ಸಾರವತ್ತಾದ ಬೀಜ; ಉತ್ತಮವಾದ ಬೀಜ: ಒಲಿದು ಕುಂದಣದ ತನಿವಿತ್ತುಗಳ ಬಿತ್ತಿ ಮಿಗೆ ಬಳೆಯಿಪ ವಸಂತಮಾಲಾಕಾರನನೆ (ನಂದಿಮಾ. ೭-೧೮). [ ತನಿ₂ + ಬಿತ್ತು₂ (<ಬಿಟ್ಟು) ]

**ತನಿವಿಷ** (ನಾ). ತೀಕ್ಷ್ಣವಾದ ನಂಜು; ಘೋರವಿಷ: ರಾಮನಾಮಕೆ ತಣಿಯಲಿಲ್ಲವೆ ಶಿವನ ಗಂಟಲ ತನಿವಿಷ (ಹಾಡುವಾ. ೪೯-೩). [ ತನಿ₂ + ವಿಷ ]

**ತನಿವೀರರಸ** (ನಾ). ಮಿಗಿಲಾದ ಶೌರ್ಯ; ಅತಿಶಯವಾದ ಪರಾಕ್ರಮ: ತೆತ್ತಿಸಿದಂಬೊಡಲೊಳಿಡಿದ ತನಿವೀರರಸವೊತ್ತರಿಸಿ ಮೇಲುಕ್ಕುವಂದದಿಂ ಬಸಿವ ಬಿಸಿನೆತ್ತರೆಸೆದಿರೆ (ಜೈಮಿಭಾ. ೧೨-೨೫). [ ತನಿ₂ + ವೀರರಸ ]

**ತನಿವು** 'ತಣಿವು' ನೋ.

**ತನಿವೆಚ್ಚು** 'ತನಿವೆರ್ಚು' ನೋ.

**ತನಿವೆರ್ಚಿಸು** (ಕ್ರಿ). ಹೆಚ್ಚಾಗಿ ಅಭಿವೃದ್ಧಿಪಡಿಸು: ಧರ್ಮಮಂ . . . ಗಜಹಯರತ್ನಕೋಶಶತತಿಯಂ ತನಿವೆರ್ಚಿಸಿ ನಳನೃಪಂ ಪರಿಪಾಲಿಸುವಂ ಧರಿತ್ರಿಯಂ (ನಳಚಂ. ೨೫). [ ತನಿ₂ + ಪೆರ್ಚಿಸು ]

**ತನಿವೆರ್ಚು, ತನಿವೆಚ್ಚು, ತನಿಹೆಚ್ಚು** (ಕ್ರಿ). ೧. ಅತಿಶಯವಾಗಿ ಹೆಚ್ಚು; ಬಹಳವಾಗಿ ವರ್ಧಿಸು: ಚುಂಬನಮೊರ್ವೆಗೊರ್ವೆ ತನಿವೆರ್ಚುವುದು (ಚಂದ್ರಪು. ೬-೮೪); ಅಂಗಕಾಂತಿ ತನಿವೆರ್ಚೆ ಮುಖಾಬ್ಜವರಲ್ದು ಸಮ್ಮದಂ ನನೆಕೊನೆವೋಗಿ . . . ಮನೋನುರಾಗದಿಂ ವನಿತೆಯ ಮೂರ್ತಿ ನೂತ್ನ ವೆನಿಸಿತ್ತು (ನಳಚಂ. ೨೮೦); ಸಂತತಂ ಪರಿಕಿಸಲಂತರಂಗ ಬಹಿರಂಗಸುಖಂ ತನಿವೆರ್ಚೆ ಯೋಗಮುಬ್ಬರಿಸೆಯನೂನಧರ್ಮಮೊದಗಿಪ್ಪುದು ತಪ್ಪದು (ದಶಕು. ೮-೫೦). **ತನಿವೆಚ್ಚು: ೨.** ಬಹಳವಾಗಿ ಉಬ್ಬು,-ಹಿಗ್ಗು; ಸಂತೋಷಪಡಂ: ಸೂನುಗೊಲವಿಂ ಸೊಡರ್ವಕ್ಕಿನ ಬೊಟ್ಟನಿಟ್ಟು ತೂಪಿಱಿದು ಪಲರ್ಮೆಯುಂ ಪರಸಿ . . . ತನಿವೆಚ್ಚು[ಪಾಠಾಂ. ರ್ಚು]ವ ಸ್ಯೆಪೆನಗೆಂದು ಸಾರ್ಗುಮೋ (ಚಂದ್ರಪು. ೩-೪೫). **ತನಿಹೆಚ್ಚು: ೨.** ವೈರಿಯ ಘಾಯಘಾಯದ ಧರಧುರಕೆ ತನಿಹೆಚ್ಚಿ ಮನದುಬ್ಬರದಲಿಱಿದಾಡಿದರೆ ದಿಟ ಕೃತಕೃತ್ಯ ತಾನೆಂದ (ಕುವ್ಯಾಕ. ೮-೩೯). [ ತನಿ₂ + ಪೆರ್ಚು₁ ]

**ತನಿವೆಳಗು, ತನಿಬೆಳಕು**(ನಾ). ೧. ಉಜ್ಜ್ವಲವಾದ ಪ್ರಕಾಶ; ಥಳಥಳಿಸುವ ಕಾಂತಿ: ಚಂದ್ರಾದಿತ್ಯರುಗಳ ತನಿವೆಳಗನು ನಿಂದಿಸುತ್ತಿಹ ದಿವ್ಯದೇಹ (ತ್ರಿಪುಸಾಂ. ೨೪-೩೭೫); ಮೋಳವದ ತನಿವೆಳಗುಗಳ ಮಣಿಮೌಳಿಮಂಡಿತರು . . . ಹೊಕ್ಕರು ಸಭಾಸ್ಥಳವ (ಕುವ್ಯಾಸ. ೨-೧); ನೆನೆಯಿಸುತಿಂದ್ರಚಾಪವ ತೊಟ್ಟ ತೊಡಿಗೆಯ ತನಿವೆಳಗಿಂದ ಭೂವರನು ಮನವೊಲಿದೆಯ್ದುಂದು ಮಂಡಿಸಿದನು (ಕುರಾಸಾಂ. ೧೧-೭೧). **೨.** ಶುಭ್ರವಾದ ಕಾಂತಿ; ಧವಳ ಕಾಂತಿ: ತನಿವೆಳಗಿಂ ತೊಳಗುವ ಪಳುಕಿನ ಕುಟ್ಟಿಮತಳದೊಳೆಸೆವ ಚೂತ ಕುಜಾತಂ (ಕುಸುಮಾ. ೧-೧೧೪); ನಸುನಗುತೆ ಮೊಗವೆತ್ತಿ ದೊಡೆ ಹಾಲಂತೆ ತನಿವೆಳಗನುಗುಳುತೊಗೆವುತಿದೆ ನೆಱೆದಿಂಗಳು (ಪದ್ಮರಾ. ೮-೯೫); ಪಳುಕಿನಲಿ ಮನಸಿಜ ಸಮೆದ ಪುತ್ಥಳಿಯೊಯೆನೆ ಬೆಳುವಸದನದ ತನಿವೆಳಗಿನಲಿ ಶಿವದೇವಿ ಬಂದಳು (ಸಾಳ್ವಭಾ. ೩೨-೪೫). **ತನಿಬೆಳಕು: ೩.** ಹಿತವಾದ ಕಾಂತಿ,-ಬೆಳಕು: ಕಣ್ಣುಗಳ ಬಣ್ಣ ನೀನು ಉಣ್ಣಸಾ ತನಿಬೆಳಕು ಹಣ್ಣು ಜೇನು (ಅರಳು. ೧೨-೬). [ ತನಿ₂ + ಬೆಳಗು₂ ]

**ತನಿವೆಳ್ದಿಂಗಳ್** (ನಾ). ಸೊಗಸಾದ ಬೆಳುದಿಂಗಳು: ತಳತಳಿಸುವ ತನಿವೆಳ್ದಿಂಗಳ . . . ಭಾಂಡಮೆನಿಸಿತಜಾಂಡಂ (ಕುಸುಮಾ. ೧೦-೧೬); ತನಿವೆಳ್ದಿಂಗಳ್ಸಮಂತಾತಪದ ಬಿಸುಪ ವಾದತ್ತು (ಉದ್ಭಟ. ೭-೫೭); ತನಿವೆಳ್ದಿಂಗಳ ಬಳಗಂ ಮುನಿಮೂರ್ತಿಯನಾಂತುದು (ಶಾಂತೀಶ್ವ. ೨-೪). [ ತನಿ₂ + ಬೆಳ್ದಿಂಗಳ್ ]

**ತನಿವೇಟ** (ನಾ). ೧. ಅತಿಶಯವಾದ ಕಾಮಾಸಕ್ತಿ,-ಪ್ರಣಯ,-ಕಾಮ: ತನಿವೇಟದಲಿ ತಾಮಸಿ ನಿರಂಬರೆಯಾಗಿ ನಲಿದಪ್ಪಿದಳು ನಿಜಪತಿಯ (ತೊರರಾ. ೫-೩-೪); ಓರ್ವನೊಳ್ವಂಚಿಸಿ ಕೊರ್ವಿದ ಬೇಟಮನೊರ್ವ ನೊಳಿಲ್ಲದಿರ್ದೊಡಂ ತನಿವೇಟಮುರ್ವಿಸಿ ಪಣವಂ ಪಡೆವುದು (ರಾಜಶೇ. ೧೧-೯೩). **೨.** ಹಲವು ಬಗೆಯಾದ ಶೃಂಗಾರಚೇಷ್ಟೆ: ದೇಸಿಯನಾಂತ ಕನ್ನಡಿತಿಯರ್ . . . ಪಲರ್ ವೇಸಿಯರುಳ್ಳ ವೈಸಿಕಮನೀಯೆಡೆಯೊಳ್ ನೆರೆವರ್ಗರ್ ಡುಕ್ಕಿ ಪೇರಾಸೆಯೊಳಾಟಪಾಟ ತನಿವೇಟದ ಕೂಟದ ನಾಟಕಂಗಳಿಂ (ಚಕವಿ. ೫-೧೬೫). [ ತನಿ₂ + ಬೇಟ₂ (<ಬೇಂಟ) ]

**ತನಿವೇಸಗೆ, ತನಿವೇಸಿಗೆ** (ನಾ). ತೀಕ್ಷ್ಣವಾದ ಬೇಸಿಗೆ; ನಡುಬೇಸಿಗೆ: ತನಿವೇಸ[ಪಾಠಾಂ. ಸಿ]ಗೆಯ ದಿನದೊಳಧ್ವರಾಶ್ವದ ಕೂಡೆ ಪಡೆ ನಡೆದುದು (ಜೈಮಿಭಾ. ೧೫-೫). **ತನಿವೇಸಿಗೆ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತನಿ₂ + ಬೇಸಗೆ ]

**ತನಿವೇಸಿಗೆ** 'ತನಿವೇಸಗೆ' ನೋ.

**ತನಿವೊಗರ್, ತನಿಹೊಗರು** (ನಾ). ಉಜ್ಜ್ವಲವಾದ ಪ್ರಕಾಶ,-ಕಾಂತಿ: ಕೈನೀಡಿದನು ತುದಿಯಂಬಿನಲಿ ತುಱುಗಿದ ಕಿಡಿಯ ಬಿಱುಕೇಸುರಿಯ ಧಾಳಿಗಳ ತನಿವೊಗರ ಬಲುವೊಗೆಯ ಹೊರಳಿಯ . . . ಹೊಂಗಱಿಯ ನಾರಾಯಣಮಹಾಶರಕೆ (ಕುವ್ಯಾದ್ರೋ. ೧೯-೧೪). **ತನಿಹೊಗರು:** ಸಾಹಸದ ತನಿಹೊಗರಿನಾತಗಳೆಲ್ಲಿ ಭೀಮಾರ್ಜುನರ ಬರಹೇಳು(ಕುವ್ಯಾದ್ರೋ. ೧-೫೩); ತನಿಹೊಗರುಗಣೆಗಳ ಸೂಸಿದನು ರವಿಸೂನು ಸಮರದಲಿ (ಕುವ್ಯಾದ್ರೋ. ೧೩-೩೩). [ ತನಿ₂ + ಪೊಗರ್ ]

**ತನಿವೊನಲ್** (ನಾ). ತುಂಬು ಹೊಳೆ; ಮಹಾಪೂರ: ಕಮಳಭವನ ಕವಿತಾರಸಮುಮರ್ದಿನ ತನಿವೊನಲನಂಗವೋಹನಬಾಣಂ(ಶಾಂತೀಶ್ವ.೧-೫೯). [ ತನಿ₂ + ಪೊನಲ್ ]

**ತನಿಸಯ್ಪು** (ನಾ). ಹೆಚ್ಚಿನ ಪುಣ್ಯ: ತನ್ನ ಬಾಳ್ವೆಯ ಬೆಸುಗೆಯೆಂದೆಣಿಸಿ ಪಣ್ಣಿಕವ ತನಿಸಯ್ಪುದೆನ್ನುವಳ್ ಕಾಲೂರ ಚೆಲುವೆ (ಕಾಲೂರ. ೧೧೫-೨೩೮). [ ತನಿ₂ + ಸಯ್ಪು ]

**ತನಿಸವಿ** (ನಾ). ಅತಿಶಯವಾದ ರುಚಿ: ಕವಿತೆ ತಪಃಫಲದಾ ತನಿಸವಿ ಯೆಂಬುದು (ಸಂಸಪ. ೧೩-೩೨). [ ತನಿ₂ + ಸವಿ₂ ]

**ತನಿಸುಸಿಲ್** (ನಾ). ಸವಿಯಾದ ಸಂಭೋಗ; ಸುಖರತಿ: ಶಶಿಶಿಲಾ ಸದನದೋವರಿಯ ಪೂವಸೆಯೊಳ್ ತನಿ[ಪಾಠಾಂ. ಸವಿ]ಸುಸಿಲೆಸಗುವ ಖಚರದಂಪತಿಗಳ ಗಳರವದ ಕಳಕಳಮಂ ಕೇಳ್ದು (ಶಬಶಂ. ೩-೩೫ ವ). [ ತನಿ₂ + ಸುಸಿಲ್ ]

**ತನಿಸೂಱೆ** (ನಾ). ಹೆಚ್ಚಾಗಿ ಕೊಳ್ಳೆಹೊಡೆಯುವುದು,-ಸೂರೆಗೊಳ್ಳುವುದು: ದ್ವೀಪಪಾಲಕರ ಸೆಱೆವಿಡಿದು ತನಿಸೂಱೆಯಲಿ ಪಡೆ ನೆಱೆ ದಣಿಯಲಾ ಮ್ಲೇಚ್ಛಪರ್ಗವ ತಱಿದು ಶೋಧಿಸಿ ತೆಗೆದನಲ್ಲಿಯ ಸಾರ ವಸ್ತುಗಳ (ಕುವ್ಯಾಸ. ೪-೧೨). [ ತನಿ₂ + ಸೂಱೆ ]

**ತನಿಸೂಱೆಬಿಡು** (ಕ್ರಿ). ಹೆಚ್ಚಾಗಿ ಸೂರೆಮಾಡು: ಕಿಚ್ಚುಗಿಡಿಗೆದಱುವ ಸಿಳೀಮುಖ ಕೊಚ್ಚೆಲಿಭದವಯವವನಮರರಿಗಚ್ಚರಿಯ ತನಿಸೂಱೆಬಿಟ್ಟನು ಭೀಮ ಬವರದಲಿ (ಕುವ್ಯಾದ್ರೋ. ೧೨-೨೦). [ ತನಿಸೂಱೆ + ಬಿಡು₁ ]

**ತನಿಸೆಳಕು** (ನಾ). ಮಧುರವಾದ ಸೆಳಕು; ಹಿತಕರವಾದ ಮಳೆ: ಚೈತ್ರನ ತನಿಸೆಳಕಿನ ಸೋಂಕಿಗೆ ಮಧುಮಯವಾಗಿದೆ ಗಾಳಿ (ನಲಮು. ೯೬-೧). [ ತನಿ₂ + ಸೆಳಕು ]

**ತನಿಸೊಂಕು** 'ತನಿಸೋಂಕು₂' ನೋ.

**ತನಿಸೊಕ** 'ತನಿಸೊಗ' ನೋ.

**ತನಿಸೊಕ್ಕು₁** (ಕ್ರಿ). ಹೆಚ್ಚಾಗಿ ಮದವೇರು,-ಉನ್ಮತ್ತವಾಗು: ಸಂಗರ ಜಯದ ಮಡುವಿನಲಿ ಸಲೆ ಸೊಗಸಿ ತನಿಸೊಕ್ಕಿ ದೆಸೆಪಟದುಳಿದು ಸೌಭದ್ರೇಯ ಭೃಂಗನ ಬಿಲುದನಿಯು ಭರವಂಜಿಸಿತು (ಕುವ್ಯಾ.ದ್ರೋ. ೬-೩೦): ಗಣಿಕೆಯರಮಧ್ಯದಲಿ ಮದ್ಯದ ತಣಿವಿನಲಿ ತನಿಸೊಕ್ಕಿ ಬತ್ತಲೆ ಕುಣಿವ ಭಂಗಿಯ ಭಂಡರು (ಕುವ್ಯಾ.ಶ. ೯-೨೦). [ತನಿ₂+ಸೊಕ್ಕು₁ (<ಸೊರ್ಕು₁)]

**ತನಿಸೊಕ್ಕು₂** 'ತನಿಸೊರ್ಕು' ನೋ.

**ತನಿಸೊಗ, ತನಿಸೊಕ** (ನಾ). "ಹೆಚ್ಚಾದ ಸುಖ; ಬಹು ಆನಂದ": (ಪ್ರಭಣ್ಟ). **ತನಿಸೊಕ**: ಪದವುಂ ಮೋಕ್ಷಚತುಷ್ಟಯಮುಂ ಬಯಸದೆ ದುಚ್ಚೌಕಮನಾಡುವ ತನಿಸೊಕದೊದವಂ ಮುದವುನೆರಳ್ಕಯ್ಯಿಂದಿತ್ತಿದ್ದುಗವಾಡುವವನು (ಉದ್ಭದೇ. ೩-೦೩). [ ತನಿ₂ + ಸೊಗ ]

**ತನಿಸೊಬಗು** (ನಾ). ಮಿಗಿಲಾದ ಅಂದ; ಅತಿಶಯವಾದ ಸೌಂದರ್ಯ: ತನಿಸೊಬಗಂ ಪ್ರಸಾರಿಸಿ ಸಮಂಚಿತ ಕೈತವಮಂ ನಿಮಿರ್ಚಿ . . . ಸುಮ್ಮನೆ ಪೊಗಟುತ್ತೆಯಿರ್ಪುದೆ ವಸುಂಧರೆಯೊಳ್ಪೆಲೆವೆಣ್ಗೆ ಲಕ್ಷಣಂ (ಉದ್ಭಟ. ೧೦-೬೦); ತನಿಸೊಬಗುವಡೆದ ಸನ್ಮೋಹನದ ಕಣಿಯೆ ಬಾ (ಜೈಮಿಭಾ. ೬-೨೫).

[ ತನಿ₂ + ಸೊಬಗು ]

**ತನಿಸೊರ್ಕು, ತನಿಸೊಕ್ಕು₂** (ನಾ). ೧. ಹೆಚ್ಚಾದ ಮದ,-ಅಮಲು: ಅಲರ್ವಂಡನುಂಡು ತನಿಸೊರ್ಕಿಂ ಸೊರ್ಕಿ ತೆಱಂದಿರಿದು ಪಾಱುವ ಪೆಣ್ದುಂಬಿಗಳ ಬಳಗಮಂ (ಕಾದಂಉ. ೫೨೬); ಕಾಯಜನೆಸುಗೆಯ ಕಮ್ಮಸರಂಗಳ ಗಾಯದ ತನಿಸೊರ್ಕಿಂ . . . ಲೋಚನಮಂ ಮುಚ್ಚಿ (ಜಯುಕಾ. ೪-೩೬). **ತನಿಸೊಕ್ಕು₂**: ೧. ಬೆಡಗು ಬೇಟ ತನಿಸೊಕ್ಕು ತವಕ ತಳ್ಕಂಕಇನಿವಾತು ದಣಿವಿಲ್ಲದ ಕೂಟವಾ ನಾಡವನಿತೆಯರೊಳಗೆಸೆದಿಹುದು (ಕುರಾಸಾಂ. ೨-೬೨); ಭಾವಿಸೆ ಸೊಗದ ಸುಗ್ಗಿಯ ತನಿಸೊಕ್ಕನ್ನನಾವರಿಪುದು ಮತ್ತೇವೆ (ಹದಿಬ. ೦-೪೩). ೨. ಮಾದಕತೆ: ತಾವರೆವಂಡಿನ ತನಿಸೊಕ್ಕಿಂ ಸೊಕ್ಕಿದ ಪೆಣ್ದುಂಬಿಗಳಿಂಚರಂಗಳೊಳಂ (ಕಾದಂಪೂ. ೦೦೬); "ಮದ್ಯ" (ಕಾದಂಪೂ. ಅಡಿಟಿ). [ ತನಿ₂ + ಸೊರ್ಕು₂ ]

**ತನಿಸೋಂಕು₁** (ಕ್ರಿ). ಹಿತವಾಗಿ ಸ್ಪರ್ಶಿಸು; ಮೃದುವಾಗಿ ಮುಟ್ಟು: ತನಿ[ಪಾಠಾಂ. ನು]ಸೋಂಕಿ ಸೋಂಕಿನೊಳ್ ಬಂದು ನಿಂದ ಸಹಕಾರ ಕಾಂತನೊಳ್ ಸೊಗಯಿಸಿದತ್ತೆನಸುಂ . . . ಪ್ರಿಯಮಲ್ಲಿಕಾಲತಾವೇಷ್ಟಿತಕಂ (ಚಂದ್ರಪು. ೬-೯೩); ತಳೆದು ನಿಜಾಂಗಪೀಠತಟದೊಳ್ ಜನನಂ ತನಿಸೋಂಕಿ ಹಸ್ತದಿಂ ಪುಳಕಿತಗಾತ್ರನಾಗಿ ಮಘವಂ ಮೆಟಿದು (ಪುಷ್ಪಪು. ೧೦-೨೨).

[ ತನಿ₂ + ಸೋಂಕು₁ ]

**ತನಿಸೋಂಕು₂, ತನಿಸೊಂಕು** (ನಾ). ಮೃದುವಾದ ಸ್ಪರ್ಶ; ಹಿತವಾದ ಸ್ಪರ್ಶ: ಸುರನಂದನದಿಂ ಪೊದಟ್ದ ಬಲ್ಮುಗುಳ್ಗಳ ತಂದಲಂದು ಕವಿತಂದುದದಂ ತನಿಸೋಂಕು ಸೋಂಕಿ ಮೆಲ್ಲಗೆ ಮಲಯಾನಿಳಂ ಸುಟಿದೊಡಂದು ಜಗಂ ಪೊಸತಾದುದು (ಪಂಪಭಾ. ೦೪-೦೯); ತುಹಿನಕರನ ತಣ್ಣದಿರ್ಗಳ ತನಿಸೋಂಕಿನಿಂ ತಣ್ಪುವಡೆದ ತಾರಹಾರಂಗಳೊಳಂ (ಕಾದಂಉ. ೫೯೮); ತನಿಸೋಂಕಿಂ ತನಗೀಯೆ ಹರ್ಷಭರಮಂ ಲಜ್ಜಾಭರಾಕುಂಚಿತಾನನೆ ವೈದೇಹಿ . . . ಇತ್ತು ತಿರ್ಯಗ್ವಿಲೋಕನಮಂ (ಪಂರಾಮಾ. ೫-೦೦೦). **ತನಿಸೊಂಕು**: ಇನಿಯಳ ತನಿಸೊಂಕಿನ್ನುಣಿಸೆನೆ ಮಾಲ್ಯಾಭರಣ ಲೇಪನಂ ತಂಬುಲಮೆಂಬಿನಿತುಂ ರಾಗವುನಾಗಿಸೆ ಮನದೊಳ್ ದಿವಿಜೇಂದ್ರ ವಿಭವದಿಂ ಸುಖಿಮಿರ್ದಂ (ಕಾವ್ಯಾವ. ೨೨೫). [ ತನಿ₂ + ಸೋಂಕು₂ ]

**ತನಿಹರಕೆ** (ನಾ). ತುಂಬು ಹರಕೆ; ಪೂರ್ಣಾಶೀರ್ವಾದ: ತೂಪಿಱಿದು ಸುಳಿವುಪ್ಪಾರತಿಯ ತನಿಹರಕೆ ತಳಿತುದು ತಾಯ ನೇಮದಲಿ (ಕುವ್ಯಾ.ಅ. ೬-೩೦). [ ತನಿ₂ + ಹರಕೆ (<ಪರಕೆ₁) ]

**ತನಿಹಳುಕು** (ನಾ). ಹಿತಕರವಾದ ಹಳುಕು,-ತುಂಡಂ: ತೊಲಗಿ ನಿಂದರು ಕರ್ಪೂರದ ತನಿಹಳುಕನಣಲೊಳಗಡಸಿ ದಂಡೆಯ ಬಲಿದು ಬಱಸಿಡಿಲೆಱಕವೆನೆ ತಾಗಿದರು ಬಳಸಿನಲಿ (ಕುವ್ಯಾ.ಸ. ೨-೧೦೩). [ತನಿ₂ + ಹಳುಕು (<ಪಳಿಕು)]

**ತನಿಹಾಡಿಕೆ** (ನಾ). "ಯಾವ ಪಕ್ಕವಾದ್ಯವೂ ಇಲ್ಲದೆ, ಇದ್ದರೂ ಅದನ್ನು ಬಹಳ ಗೌಣವಾಗಿಟ್ಟು ಒಬ್ಬನೇ ಹಾಡುವ ಹಾಡು, ನುಡಿಸುವ ಗೀತೆ; ತನಿಹಾಡಿಕೆ" (ಶಿಂಎಂ. ಇಂಕನಿ.).

[ ತನಿ₂ + ಹಾಡಿಕೆ ]

**ತನಿಹಾಲು** 'ತನಿವಾಲ್' ನೋ.

**ತನಿಹುಲ್ಲು** (ನಾ). ಸವಿಯಾದ ಹುಲ್ಲು; ರುಚಿಕರವಾದ ಹುಲ್ಲು: ಆನೆ ಕುದುರೆ ಗೋವು ತನಿಹುಲ್ಲ ನೀರಾಶೆಯುಳಿದು ಹನಿವ ಕಂಬನಿಯಿಂದ ದೂನಿಸುತೊಂದೆರಳ್ದಿನವಿದ್ದುವಾ ರಾಯನಗಲೆ (ಭರಜ. ೭೮-೧೦೪).

[ ತನಿ₂ + ಹುಲ್ಲು (<ಪುಲ್) ]

**ತನಿಹೆಚ್ಚು** 'ತನಿವೆರ್ಚು' ನೋ.

**ತನಿಹೆದಱು** (ಕ್ರಿ). ಬಹಳವಾಗಿ ಬೆದರು,-ದಿಗಿಲುಗೊಳ್ಳು: ಸೂಳೈಸಿದರು ಭುಜಪನು ಸಿಡಿಲು ತನಿಹೆದಱಿ (ಕುವ್ಯಾ.ದ್ರೋ. ೨-೯). [ತನಿ₂ + ಹೆದಱು₁]

**ತನಿಹೊಗರಿಱು** (ಕ್ರಿ). ಅತಿಶಯವಾದ ಪ್ರಕಾಶವನ್ನು ಬೀರು; ಹೆಚ್ಚಾದ ಕಾಂತಿಯನ್ನು ಹರಡು: ಹೊಸ ಕೈದುಗಳ ಮಿಂಚಿನ ಮಕುಟಮಣಿ ಕಾಂತಿಗಳ ಸುರಧನುವಿನ ಚತುರ್ಬಲರವದ ಸಿಡಿಲುಗಳ ವಿಗಡಕುಂಭಜ ಮೇಘಋತು ತನಿಹೊಗರಿಱಿದು ಪರಬಲದ ಕಡುವೇಸಗೆಗೆ ಕವಿದುದು ರಾಜಹಂಸ ಪ್ರಕರವೋಸರಿಸೆ (ಕುವ್ಯಾ.ದ್ರೋ. ೧-೪೮).

[ ತನಿಹೊಗರು (<ತನಿವೊಗರ್) + ಇಱು₁ ]

**ತನಿಹೊಗರು** 'ತನಿವೊಗರ್' ನೋ.

**ತನಿಹೊಗೆ** (ನಾ). ದಟ್ಟವಾದ ಹೊಗೆ: ದುಗುಡವೋ ಮೇಣ್ ವಿಕ್ರಮಾಗ್ನಿಯ ತಗಹುಗಳ ತನಿಹೊಗೆಯೊ ರಾಯರ ಮೊಗವ ನೋಡೈ (ಕುವ್ಯಾ.ದ್ರೋ. ೧೬-೨೪). [ ತನಿ₂ + ಹೊಗೆ₂ (<ಪೊಗೆ₂) ]

**ತನಿಹೊಟ್ಟು** (ನಾ). ಬೇರೆಯಾದ ಸಿಪ್ಪೆ; ಬರಿಯ ಹೊಟ್ಟು: ತೂಱಿದರೆ ತನಿಹೊಟ್ಟು ಗಾಳಿಗೆ ಹಾಱುವುದು ಕುಲಗಿರಿಯ ಬೈಸಿಕೆ ಜಾಱುವುದೆ (ಕುವ್ಯಾ.ದ್ರೋ. ೧೬-೪೪). [ ತನಿ₂ + ಹೊಟ್ಟು (<ಪೊಟ್ಟು) ]

**ತನಿಹೊರಳು** (ಕ್ರಿ). ಹೆಚ್ಚಾಗಿ ಹೊರಳಾಡು,-ಉರುಳಾಡು: ಪಾಂಚಾಲ ಸತಿಯರು ಜೀವದಲಿ ಜಾಱಿದರು ರಮಣರ ಮೇಲೆ ತನಿಹೊರಳಿ (ಕುವ್ಯಾಗ. ೦೨-೯). [ ತನಿ₂ + ಹೊರಳು (<ಪೊರಳ್) ]

**ತನಿಹೊಳಹು** (ನಾ). ಹೆಚ್ಚಾದ ಹೊಳಪು,-ಕಾಂತಿ: ತಳಿತ ಮಿಂಚಿನ ಮುಱಿವುಗಳೊ ತನಿಹೊಳಹುಗಳೊ ಖಂಡೆಯದ ಧಾರೆಯ ಕೊಳುಗಿಡಿಯೊ (ಕುವ್ಯಾ.ದ್ರೋ. ೦೪-೭). [ ತನಿ₂ + ಹೊಳಹು₁ (<ಪೊಳೆಪು) ]

**ತನಿಹೊಳೆ** (ಕ್ರಿ). ಹೆಚ್ಚಾಗಿ ಪ್ರಕಾಶಿಸು,-ಮಿರುಗು: ಮಿಱುಮಿಱುಪ ದಿವ್ಯಾಭರಣಕಿರಣದ ತುಱುಗಿನಲಿ ತನಿಹೊಳೆವ ದಿವ್ಯಾಂಬರದ ಕಾಂತಿಯಲಿ . . . ಒಪ್ಪಿದರಿಂದ್ರತೇಜದಲಿ (ಕುವ್ಯಾ.ಅ. ಓರಿಇ. ೩೩-೫೬); ಎಡಬಲಕೆ ತನಿಹೊಳೆವ ತೇಜಿಯ ಕಡುಮದದ ಕರಿಘಟೆಯ . . . ಕಳಕಳವಾಯ್ತು ರಣದೊಳಗೆ (ಕುವ್ಯಾ.ದ್ರೋ. ೯-೧೨).

[ ತನಿ₂ + ಹೊಳೆ₁ (<ಪೊಳೆ₁) ]

**ತನು** (ಗು). ೧. ತೆಳುವಾದ; ಕೃಶವಾದ: "ಕ್ಷಾಮಂ, ಶಾಂತಂ, ಕೃಶಂ . . . ತನು – ಈ ೭ ಅಸಿದು" (ಹಲಾಯು. ೧೮೯-೩); ತನು ತನುವಾಗೆ ನೋಂತು (ಅಜಿಪು. ೩-೨); ವನಿತೆಯ ತನುತನು ಹರಿಚಂದನ ಶಾಖೆಯ

ನಡರ್ದು . . . ನೋಳ್ಪ ಭುಜಗಾಂಗನೆಯೆನೆ ಘನವೇಣಿ ಜಾಣೆಗೇ ನೊಪ್ಪಿದುದೊ (ರಾಜಶೇ. ೭-೫೯). 'ತನುಮಧ್ಯೆ' ಪರಾ. ೨. ಕೋಮಲವಾದ. 'ತನುಗಾತ್ರಿ' ಪರಾ. ೩. ಸಣ್ಣ; ಚಿಕ್ಕ: ತನುವಲ್ಲದತನುತಾಪಂ ತನುವಂ ಸುಡೆ . . . ತನುಮಧ್ಯೆಯರಲರ್ವಾಸಿನ ಮೇಲೆ ಪಾಸಿದರ್ ತನುತನುವಂ (ಮಲ್ಲಿಪು. ೩-೨೯). 'ತನುಮುನಿ' ಪರಾ. (ನಾ). ೪. ಮೈ; ದೇಹ: "ತನುಃ, ತನೂಃ . . . ಗಾತ್ರಃ, ಅಪಘನಃ, ಮೂರ್ತಿಃ —ಈ ೧೭ ಶರೀರಂ" (ಹಲಾಯು. ೮೪-೩೫೭); ಪಾರ್ದಚ್ಚ ವೃಷಾಂಕನಂಬು ತನುವಂ ಪಚ್ಚಂತೆ ಕೊಂಡತ್ತು (ಪಂಪಭಾ. ೮-೧೭); ತನುವಂ ತೆಯ್ದುಪ್ಪಳಕ್ಕಂ ಬ್ರತದೊಳ್ (ಕಾದಂಬು. ೭೯); ತನು ಕರಗಿ ಮನ ಕರಗಿ ಮಾಡುವದು ಭಕ್ತಿಸ್ಥಲ (ಬಸವ. ೮೭೪); ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯ ನೀನು (ಮಹಾದೇ. ಬ. ೧೨-೯); ತನುವ ಮುಟ್ಟಿದನು ಪುಳಕಜಲದಲಿ ನನೆದು (ಕುಮಾ. ೮-೮); ತನು ನಿನ್ನದು ಜೀವನ ನಿನ್ನದೊ (ಕನಕ. ೩೭ ಪಲ್ಲವಿ); ತನುವರಿಯದ ನೋವಿಲ್ಲ ಮನವರಿಯದ ಪಾಪವಿಲ್ಲ (ಗಾದೆ). ೫. ಚರ್ಮ; ತೊಗಲು.

**ತನುಮಾಡು** = ಸೊರಗಿಸು; ಕೃಶಗೊಳಿಸು: ಪಿರಿದಪ್ಪ ದಾರುಣ ವ್ರತದಹನಾರ್ಚಿಯಿಂದನುದಿನಂ ತನುವಂ ತನುಮಾಡುತಿರ್ಪನೆಂಬತನು ವಿ ರೋ ಧ ಮು ಂ ತನುವಿರೋಧಮುಮೊಪ್ಪುಗುಮತ್ತಿಮುಬ್ಬೆಯೊಳ್ (ಅಜಿಪು. ೧-೪೯). **ತನುವಾಗು** = ಸೊರಗಂ; ಕೃಶವಾಗು: ತನು ತನುವಾಗೆ ನೋಂತು . . . ತಾಳ್ದಿದಂ ವಿಮಲವಾಹನಯೋಗಿ ತಪೋನಿಯೋಗವಂ (ಅಜಿಪು. ೩-೨). [ಸಂ.]

**ತನುಕಂಪ** (ನಾ). ದೇಹದಲ್ಲಿನ ಕಂಪನ; ಮೈನಡುಕ: ಶ್ರೀಗಿರೀಶನ ಹೃದಯ ಭುಗಿಲಿಡಿದು ತ ನು ಕ ಂ ಪ ವಾ ಗಿ ಜರ್ಝರಿಸಿ ತಲ್ಲಣ ಗೊಳುತಿರಲು (ಪವಪೋ. ೬-೪೮). [ತನು + ಕಂಪ₂]

**ತನುಕಾಂತಿ** (ನಾ). ದೇಹದ ಕಾಂತಿ,-ತೇಜಸ್ಸು: ತನುಕಾಂತಿ ತುಂಬಿದ ಸಭೆಯೆಂಬ ಕೊಳದಲ್ಲಿ . . . ರಾಜಹಂಸನಿದ್ದನು (ಭರಚ. ೧-೨೯); ಭಕ್ತರ ಭವದುರಿ ತಣಿಯದೆ ಹರ ನಿನ್ನ ತನುಕಾಂತಿಯಿಂದೆ (ಇಂಚಾಪ. ೭೫-೬೦).

[ತನು + ಕಾಂತಿ]

**ತನುಕೇಶ** (ನಾ). ತೆಳುವಾದ ಕೂದಲು: ತನುಕೇಶಂ ಪುಣ್ಯವಂತಂ ಕುಟಿಳ ಮೃದು ಘನಸ್ನಿಗ್ಧ ಕೇಶಂ ಮಹೀಶಂ ಧನವಂತಂ (ಲೋಕೋಪ. ೧೧-೨೭).

[ತನು + ಕೇಶ]

**ತನುಗಂಪು** (ನಾ). ಮೈಯ ಪರಿಮಳ; ದೇಹದ ಸಂಗಂಧ: ಪೂಸುವೊಡೆ ಕಸ್ತುರಿ ಜವಾಜಿಗಳ್ಮಿಸಲೇ ಪರಿಮಳವು ಸುತ್ತಲು ಸೂಸಿ ತನುಗಂಪಿನಲಿ ಮಘಮಘಿಸಂವಳು ಯೋಜನವ (ಕುಮಾಅ. ಓರಿ೩. ೨೯-೧೪); ಅಂಬರ ಚರಿಯರ ತನುಗಂಪಿಗೆಬಗುವ ತುಂಬಿಯು ಬಳಗದಂದದಲಿ ಜಂಬುನೇಱಲೆ ಗಳೊಪ್ಪಿದುವು (ಕಂಸವಿ. ೨-೪೪).

[ತನು + ಕಂಪು]

**ತನುಗತ** (ಗು). ದೇಹವನ್ನು ಸೇರಿದ,-ಬೆರೆತ (?): ಬಾರಿಸಿದ ಸರಣಿ ಶ್ರ ಮೋ ದ್ಭ ವ ವಾ ರಿ ತನುಗತವಾದವಂಗ ಮನೋರಥದಲುಬ್ಬಿದುದು ವಿಶ್ವಾಮಿತ್ರಮುನಿವರನ (ತೊರರಾ. ೦-೯-೦೭).

[ತನು + ಗತ₃]

**ತನುಗಾತ್ರ** (ನಾ). ಬಡಕಲುಮೈಯುವನಂ; ಕೃಶವಾದ ಶರೀರವುಳ್ಳವನು: ತನುಗಾತ್ರಂ ದೀನನೇತ್ರಂ ತುಷಲಘುತರವಾತ್ರಂ (ರಕ್ಷಾಶ. ೨೦).

[ತನು + ಗಾತ್ರ]

**ತನುಗಾತ್ರಿ**(ನಾ). ಕೋಮಲವಾದ ಶರೀರವುಳ್ಳವಳು; ಕೋಮಲಾಂಗಿ: ತನುಗಾತ್ರಿ ನಿನ್ನ ತಪಿಪಂ ಮನಸಿಜನಾವಗಮುಮೆನ್ನನಾದೊಡೆ ದಹಿಪಂ (ಶಾಕುಂತ. ೩೮-೭೪). [ಸಂ. ತನುಗಾತ್ರೀ]

**ತನುಗುಣ** (ನಾ). ದೇಹಗುಣ; ದೇಹಧರ್ಮ: ಅಂತರಂಗದಲ್ಲಿ ಸುಳಿದಾಡುವ ತನುಗುಣಾದಿಗಳ ಮನಗುಣಾದಿಗಳ ಪ್ರಾಣಗುಣಾದಿಗಳ ಕಳೆದಲ್ಲಿ ಶರಣರಹರೆ (ಅವಜಂ. ೯೧-೪೦೪). [ತನು + ಗುಣ]

**ತನುಗೆಡು** (ಕ್ರಿ). ದೇಹವು ಸೊರಗು; ಬಡವಾಗು; ಕೃಶವಾಗು: ವಿನಯವಿದ್ಧಧಿಕರನು ತನುಗೆಟ್ಟ ಬಡವರನು . . . ಕರೆದುಣ್ಣದವನೂಟ ಶುನಕ ತಿಂದಂತೆ (ಸರ್ವಜ್ಞ. ೬೬೦). [ತನು + ಕೆಡು₁]

**ತನುಗೊಳ್**(ಕ್ರಿ). ಮೈದಳೆ; ದೇಹವನ್ನು ಧರಿಸು; ಮೂರ್ತಿಮತ್ತಾಗು: ಜಲಜನಾಭನ ಭಕುತಿ ತನುಗೊಂಡಿಳಿಗೆ ಪುರುಷಾರ್ಥವನು ಮಾಡುತ ಸುಳಿವವೊಲು ನರಲೋಕವಂದ್ಯನು ಯಮುನೆಗೈತಂದ (ನಿಭಾಗ. ೩-೨-೩೫).

[ತನು + ಕೊಳ್₁]

**ತನುಗ್ರಹಣ** (ನಾ). ದೇಹವನ್ನು ಧರಿಸುವುದು; ಜನ್ಮತಾಳುವುದು; ಅವತಾರ: ಅನಿಮೇಷರಕ್ಷಣಾರ್ಥಂ ನಿನಗೆ ತನುಗ್ರಹಣಂ . . . ಕುಶೇಶಯನಯನಾ (ಜಗವಿ. ೩-೧೦೩). [ತನು + ಗ್ರಹಣ]

**ತನುಚತುಷ್ಟಯ** (ನಾ). [ದ್ವೈತ] ನಾ ರಾ ಯ ಣ ನ ಅ ನಿ ರು ದ್ಧ, ಪ್ರದ್ಯುಮ್ನ, ಸಂಕರ್ಷಣ ಮತ್ತು ವಾಸುದೇವ ಎಂಬ ನಾಲ್ಕು ಬಗೆಯ ರೂಪಗಳು: ತನುಚತುಷ್ಟಯಗಳೊಳು ನಾರಾಯಣನು ಹೃತ್ಕಮಲಾಖ್ಯ ಸಿಂಹಾಸನದೊಳನಿರುದ್ಧಾದಿ ರೂಪಗಳಿಂದ ಶೋಭಿಸುತಾ (ಹಸಾರ. ೩-೭); "ತನುಚತುಷ್ಟಯಗಳೊಳು=ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವನೆಂಬ ನಾಲ್ಕು ರೂಪಗಳುಳ್ಳ ತನ್ನ ಶರೀರಗಳಲ್ಲಿ" (ಹಸಾರ. ೩-೭ ಪದ್ಯಾರ್ಥ). [ತನು + ಚತುಷ್ಟಯ]

**ತನುಚ್ಛವಿ** (ನಾ). = ತ ನು ಕಾ ಂ ತಿ: ತಾವರೆಯ ಮಿತ್ರನ ಕರಗಿ ಕರುವಿನೊಳಿಟ್ಟದರೆಂದೆನೆ ಥಳಥಳಿಸಿ ತೊಳಗುವ ತನುಚ್ಛವಿಯ . . . ವರಕುಮಾರನ ಕಂಡು (ಕುಮಾಅ. ೩-೨೦). [ತನು + ಛವಿ]

**ತನುಚ್ಛಾಯೆ** (ನಾ). = ತನುಕಾಂತಿ: ಈ ಕಾಂತಿಯಿಾ ತನುಚ್ಛಾಯೆಯಿಾ ವಿಸ್ಮಯಂ . . . ಮಾನವರ್ಗಿಲ್ಲ ದೇವರ್ಕಳ ಚರಿತವಿದು (ನಂಬಿರ. ೧೭-೨೦).

[ತನು + ಛಾಯೆ]

**ತನುಜ** (ನಾ). ೧. ಮಗ; ಸುತ: "ಸೂನುಃ, ಸಂತತಿಃ, ಆತ್ಮಜಃ, ತನುಜಃ, ಪುತ್ರಃ . . . ಅಪತ್ಯಂ—ಈ ೧೨ ಮಗವು" (ಹಲಾಯು. ೮೨-೩೪೩); ತನುಜರು ಮನುಜರುಮುಚಿತಾಸನದೊಳ್ ಮಂತ್ರಿಗಳುಮಿರೆ (ಪಂರಾಮಾ. ೧೨-೪೫); ತನುಜಜನಖಿಳಾರ್ಥಕಲ್ಪಾವನಿಜಂ (ಪುಷ್ಪಪು. ೩-೯೨); ಕಂದನಾವೆಡೆ ತನ್ನ ಮೋಹದ ಸಿಂಧುವಾವೆಡೆ ತನುಜವನಮಾಕಂದನಾವೆಡೆ (ಕುಮಾದ್ರೋ. ೮-೧೭); ಮನದೊಲೆ ತನುಜರೆಂದೆಂಬ ಜಾಣ್ನುಡಿಯನರಿತು (ಶ್ರೀರಾಮಾ. ೧೨-೩೦೫). ೨. ಮರಿ; ಪೋತ: ಆನೆಯ ತನುಜನ ಆಡು ಮುಟ್ಟಿದರೆ ಹೀನವಾರಿಗಪ್ಪುದಯ್ಯ (ಘನವ. ೧೫). [ಸಂ.]

**ತನುಜನ್ಮ** (ನಾ). = ತನುಜ ೧: "ನಂದನ ತನುಜನ್ಮ ತೋಕ ಸುತ ಪುತ್ರ ತನೂಭವ ಸೂನುನಾಮಕಂ ತನಯಂ" (ವಸ್ತುಕೋ. ೫೪-೧೭).

[ಸಂ. ತನುಜನ್ಮನ್]

**ತನುಜಾತ** (ನಾ). =ತನುಜ ೧: ತನುಜಾತೋದಯಮಪ್ಪ ಪುಣ್ಯದಿನವಂ ಮೆಯ್ವೆರ್ಚೆ ಕಾಣಲ್ಕೆ ನೋನೆನೋ (ಸುಕುಮಾ. ೯-೧೦೩); ತನ್ನಯ ತನುಜಾತರುಗಳನಾಹವಕೆ ಭೂತಳೇಶನು ಬೀಳ್ಕೊಡಲು (ಶ್ರೀ ಪು ಸಾ ೦. ೧೮. ೦೯೯); ನಿನ್ನ ತನುಜಾತರಭ್ಯುದಯಕಾಗಿ ಬಂದಿಹೆನ್ (ಶ್ರೀರಾಮಾ. ೩೦-೭೮). [ಸಂ.]

**ತನುಜಾತಕಾಮೇಷ್ಟಿ** (ನಾ). ಪುತ್ರನನ್ನು ಪಡೆಯುವುದಕ್ಕಾಗಿ ಮಾಡುವ ಯಜ್ಞ; ಪುತ್ರಕಾಮೇಷ್ಟಿ: ದಶರಥನೃಪಂ . . . ದಾರೆಯರ್ವೆರಸಿ, ತನುಜಾತಕಾಮೇಷ್ಟಿಯುಂ ಕೈಕೊಂಡು (ಶ್ರೀರಾಮಾ. ೧೧-೨೯೯).

[ಸಂ. (ತನುಜಾತ + ಕಾಮ + ಇಷ್ಟಿ)]

**ತನುಜಾತೆ** (ನಾ). ಮಗಳು ; ಪುತ್ರಿ : ದ್ರುಪದತನುಜಾತೆಯಂ ಪಿಡಿದೆತ್ತಿ ಕರುಣೆಯಿಂದುಪಚರಿಸಿ ಮನೆಗೆ ಬೀಳ್ಕೊಟ್ಟು (ಜೈಮಿಭಾ. ೨-೩೧). [ ಸಂ. ತನುಜಾತಾ ]

**ತನುಜೆ** (ನಾ). = ತನುಜಾತೆ : ಸ್ತ್ರೀರತ್ನದೊಳ್ ಮಿಗಿಲೆಂಬ ಪೆಂಪಿನ ತನುಜೆಯಂ ಕೊಟ್ಟಂ (ಶಾಂತಿಪು. ೧೧-೬೯) ; ನೀಲಧ್ವಜಂ . . . ಪಡೆದನತಿರೂಪಗುಣಶೀಲಗಳಿಂದೆಸೆವ ತನುಜೆಯ (ಜೈಮಿಭಾ. ೯-೩). [ ಸಂ. ತನುಜಾ ]

**ತನುತನುತ್ರ** (ನಾ). ಮೈಕವಚ ; ಮೈಜೋಡು : ವನದೊಳಗೆ ರತ್ನಮೃಗಮಾಗಿ ನಲಿಯುತಂ ಪೊನ್ನತನು ತನುತ್ರಂ ಚಾಪಂ ತನಗಮರೆ ಕಿನ್ನರಾಕೃತಿಯಿನೆಸೆದು ತೋರ್ಪಂ ತುಲಾಂತಿಮದ್ರೇಕ್ಕಾಣಂ (ಜಾತತಿ. ೮೯-೨೦). [ ತನು + ತನುತ್ರ ]

**ತನುತರ** (ಗು). ೧. ಹೆಚ್ಚು ಸೂಕ್ಷ್ಮವಾದ, – ಕೋಮಲವಾದ : ಅನೈಕಾಂತಿಕರ್ಕಲರ್ತನುತರ ತನುಗಳೊಳಮತಿವಿಶದ ಪ್ರಜ್ಞಾತಿಶಯಮಂ ಕಾಣಲಾದಪ್ಪುದು (ಆದಿಪು. ೨-೧೦ ವ) ; ಕೇಶ ತನುತರತಂತುವನ್ನೆಳೆದು ಕುಶಲದಿಂ ನೆಯ್ದುಮೃತಕೌಶೇಯ ಯುವನಿಕಾಚ್ಛಾದಿತಂ ಮೆರೆದಿರೆ ಮನೋಹರಾಸ್ಪಷ್ಟ ಕಾನನಭೂಮಿ (ಶ್ರೀರಾಮಾ. ೨೦೦-೧೭೦). ೨. ತೀರ ಸಣ್ಣ ; ಅತ್ಯಲ್ಪವಾದ ; ಕ್ಷುದ್ರವಾದ : ಶಿಶಿಕಂಠನಲ್ಪವ್ರತಕ್ಕೆ ತನುತರ ತಪಕ್ಕಮೇನೊಲ್ದಪನೇ (ಶಬಶಂ. ೨-೮೬). [ ಸಂ. ]

**ತನುತಲ** (ನಾ). ದೇಹದ ಅಡಿ : ತನುತಲಲೀನಳಾಗಿಹ ಛಾಯೆ ತುಸು ಕೂಡ ಹೊರಗಡೆಗಿಣುಕಳೆಂದೆನಲು ಇಂಥ ಅವಸರದೊಳು ಪಾಂಥನೆ ನೀ ಕೂಡ ವಿರಮಿಸಬಾರದೆ ಹೇಳು (ಗಾಥಾಸ. ೧-೪೯). [ ತನು + ತಲ ]

**ತನುತಾಪ**(ನಾ).ದೇಹದ ತಾಪ: ತನುತಾಪದಿಂದೆ ಪೊರ್ದಿದ ಬನಮುರಿವುದು (ವರ್ಧಪು. ೪-೭೦) ; ತನುತಾಪಕ್ಕಾಱದೆ ಮೇದಿನಿಯೊಳ್ಪೊರಳ್ವರಸನಂ ನಿರೀಕ್ಷಿಸಿ (ತ್ರಿಪುವಿ. ೩೩-೪೬). [ ತನು + ತಾಪ್ಪ ]

**ತನುತೆ** (ನಾ). ತೆಳುವಾಗಿರುವಿಕೆ ; ಕೋಮಲತೆ : ಶುಭಾಂಗಿಯು ತೆಳ್ವಸಿರ ತನುತೆಯನ್ನಣಕವಾಡಿ ಇಳಿಹುತ್ತಿದೆ (ಮಂತ್ರಶ. ೮೯-೨). [ಸಂ. ತನುತಾ]

**ತನುತ್ರ** (ನಾ). ಕವಚ ; ಚಿಲಖತ್ತು ; ಜೋಡು : ದಿವ್ಯ ಶರಾಸನ ಶರಧಿ ವಿಚಿತ್ರ ತನುತ್ರಂಗಳೆಲ್ಲಮಂ ಗೆಲ್ಲಮಂ ತನಗಾವಗಂ ಕೊಳ್ವಂತೆ ಕೊಂಡು (ಪಂಪಭಾ. ೮-೧೦೦ ವ) ; ನೆಱೆಯೆ ತನುತ್ರಮಿಕ್ಕಿದವೊಲಿಟ್ಟ ಮಲಂ ತಿನೆ ಮೆಯ್ಯನೊರ್ಮೆಯುಂ ತುಱಿಸುವುದಿಲ್ಲ (ಎಕ. II, ೩೫೧-೧೬ ; 1119) ; ಶರಹತಿಗೆ ಭೀಮನ ಬಲುಪತಾಕೆ ತನುತ್ರ ರಥ ಕರ್ಣಾಸ್ತ್ರಮಯವಾಯ್ತು (ಕುವ್ಯಾದ್ರೋ. ೧೩-೩೫). [ ಸಂ. ]

**ತನುತ್ರಯ** (ನಾ). ಸ್ಥೂಲ, ಸೂಕ್ಷ್ಮ, ಕಾರಣವೆಂಬ ಮೂರು ಬಗೆಯ ಶರೀರಗಳು : ಸ್ಥೂಲಸೂಕ್ಷ್ಮಕಾರಣವೆಂಬ ತನುತ್ರಯವನಱಿತು (ಮೋಳಿಮಾ. ೦೫೦-೫೭೦) ; ಎನ್ನ ತನುತ್ರಯಂಗಳಲ್ಲಿ ಮುಸುಕಿದ ಮಲತ್ರಯಂಗಳ ಕಳೆದು ಲಿಂಗತ್ರಯಗಳ ನೆಲೆಗೊಳಿಸಿದ ಗುರುವೇ (ಅಖಂಡೇ. ೧೯-೬) ; ತನುತ್ರಯಗಳನು ಹೇಳ್ವೆ ಅರಿಯೈ ತನಯ ಸ್ಥೂಲವು ಸೂಕ್ಷ್ಮ ಕಾರಣ (ಜ್ಞಾನಸಿಂ. ೪-೮೯). [ ತನು + ತ್ರಯ ]

**ತನುತ್ರಾಣ** (ನಾ). ೧. ದೇಹದ ಶಕ್ತಿ. ೨. = ತನುತ್ರ : “ ಸನ್ನಾಹಂ, ಕವಚಂ, ವರ್ಮ, ತನುತ್ರಾಣಂ . . . ಜಾ(ಳಿ)ಳಕಾ–ಈ ೧೦ ಕವಚಂ ” (ಹಲಾಯು. ೭೬-೩೦೫). [ ಸಂ. ]

**ತನುತ್ವ** (ನಾ). ೧. = ತನುತೆ : “ಕಟಿಲ್ – ತನುತ್ವೇ (ಸಣ್ಣನಾಗು)” (ಶಮಧಾ). ‘ತನುತ್ವಂಬಡೆ’ ಪರಾ. ೨. ದೇಹವನ್ನು ಹೊಂದಿರುವಿಕೆ: ಮಿತನಖಕೇಶಶೋಭಿತ ತನುತ್ವಮಭುಕ್ತ್ಯುಪಸರ್ಗಭಾವಂ . . . ಪರಿಶೀತದೇಹಬಿಂಬತೆವೆರಸಿಂತು ಪತ್ತತಿಶಯಂಗಳಿವೇಂ ಜಿನನೊಳ್ ಪೊದಟ್ಟುವೋ (ಆದಿಪು. ೧೦-೪೨). [ ಸಂ. ]

**ತನುತ್ವಂಬಡೆ** (ಕ್ರಿ). ತೆಳುವಾಗು; ಬಡವಾಗು: ತನುನಾಮಮುಮಂ ಸಾರ್ಥಕಂ ಮಾಳ್ಪಂತೆ ತನು ತನುತ್ವಂಬಡೆಯೆ (ರಾಜಶೇ. ೭-೯೨ ವ). [ತನುತ್ವ+ಪಡೆ₁]

**ತನುದಂಡ** (ನಾ). ದೈಹಿಕ ಶಿಕ್ಷೆ : ಸಮನಿಸೆ ಹಾ ಮಾ ಧಿಗ್ದಂಡಮಯ್ಯು ರಿಂದಾಯ್ತು ಭರತನಿಂ ತನುದಂಡಂ (ಪಂರಾಮಾ. ೧-೮೯). [ ತನು+ ದಂಡ ]

**ತನುದಂಡನೆ** (ನಾ). ದೇಹವನ್ನು ದಂಡನೆಗೆ ಗುರಿಪಡಿಸುವುದು ; ವ್ರತನೇಮಗಳಿಂದ ದೇಹವನ್ನು ದಂಡಿಸುವುದು : ಅಜ್ಞಾನಿಗಳಾದಂಥ ಗಂಡಂದಿರು ಬಾಹ್ಯಪ್ರಪಂಚವನ್ನು ತನುದಂಡನೆಯಿಂದ ನಿವೃತ್ತಿ ಮಾಡಬೇಕೆನ್ನುವವರು (ಕರ್ನಾಕ. ೧೫೨). [ ತನು + ದಂಡನೆ ]

**ತನುಧರ್ಮ** (ನಾ). ದೇಹದ ಗುಣ : ತನುಧರ್ಮಮಿಂದ್ರಿಯಧರ್ಮಂ ಘನ ಸಂಪದದಾದ ಪರ್ವೆ . . . ಅಧ್ರುವಂ (ನೇಮಿಪು. ೧೪-೪೯); ತನುಧರ್ಮಗಳೊಳಿದು ವಿಚ್ಛಿನ್ನ ಸ್ವೈರಣೆಯಲಿ ಮಲುಹಣನು . . . ಒಲುಮೆಯಂ ನೆನೆವ (ಬಸವಪು. ೪೨-೨೦). [ ತನು + ಧರ್ಮ ]

**ತನುಧಾತುಜ್ಞ** (ನಾ). ದೇಹದ ಧಾತುಗಳ ಬಗ್ಗೆ ತಿಳಿದವನಂ ; ವೈದ್ಯ : ಧಾತುಜ್ಞರ್ ಸಂತತ ತನುಧಾತುಜ್ಞರ್ ಭೂರಿಸಾರಧಾತುಜ್ಞರ್ ಸದ್ಧಾತುಜ್ಞರ್ ನೆರೆದಿರ್ದರ್ (ಹಮ್ಮಿರ. ೨-೧೦೩). [ ಸಂ. ]

**ತನುನವಿರ್** (ನಾ). ದೇಹದ ರೋಮ; ಮೈಗೂದಲು : ಬೇಗದಲ್ಲಿ ತನು ನವಿರ್ಗುಡಿಗಟ್ಟೆ (ಕಂನವಿ. ೯-೫೪). [ ತನು + ನವಿರ್ ]

**ತನುಪರಿಮಳ** (ನಾ). = ತನುಗಂಪು : ತರುಣಿ ನಿಜತನುಪರಿಮಳದಲುಱಿ ಹೊರೆದ ಹೂವಿನ ದಂಡೆಯನು ನಿಜವರನ ಕೊರಳಲಿ ಹಾಯ್ಕಿದಳು (ಕುವ್ಯಾಅ. ೧೫-೩೫); ಆ ತರುಣಿಯರ ತನುಪರಿಮಳದ ಸೋಂಕಿನಲಿ ಸುತ್ತಲು ಪರಿಮಳಿಸಿದುದು ತರು (ತೊರರಾ. ೧-೫-೪೫). [ ತನು + ಪರಿಮಳ (=ಪರಿಮಲ) ]

**ತನುಪುಳಕ** (ನಾ). ಮೈನವಿರೇಳುವುದು ; ರೋಮಾಂಚನ : ಸಂದಣಿಸೆ ತನುಪುಳಕ ಪರಮಾನಂದರಸಮಯ ನಯನಜಲಭರದಿಂದಲೆಸೆದರು (ಕುವ್ಯಾಅ. ೨೨-೫೩); ತನುಪುಳಕದುಬ್ಬುಗಳಲಾಲಿಂಗನವ ಮಾಡಿದನೊಲಿದು . . . ಮುನಿರಾಯ (ತೊರರಾ. ೧-೧೧-೨೩). [ತನು + ಪುಳಕ (=ಪುಲಕ)]

**ತನುಭವ** (ನಾ). = ತನುಜ ೧: ತನುಭವಲಾಭ ದೌಹದ ನಿಮಿತ್ತದ ಸಂಗತಿ . . . ಇನಿತುಂ ಸುತಶೋಭನ ವರ್ಣನ ಸ್ಥಳಂ (ಸೂಕ್ತಿಸು. ೭-೧); ತನುಭವರ ನಾವೇನೆಂದು ಕಾಣೆವೆ ಸಾಕೆವೇ ಹೆತ್ತು (ಬಸವಪು. ೨೪-೬೨); ತನುಭವರಿಲ್ಲದೀ ತನ್ನ ಅರಸುತನವದು ಮೆಱೆಯದು (ಕೌಶಿರಾ. ೧-೩೫). [ ಸಂ. ]

**ತನುಭವೆ** (ನಾ).=ತನುಜೆ: ತನುಭವೆಯನೀವುದೆನಗರ್ಚನೆಮಾಡುವೆನೊಲ್ದು ದೇವಿ ನಿನಗಾಂ (ಲೀಲಾವ. ೭-೪೪). [ ಸಂ. ತನುಭವಾ ]

**ತನುಭೃದ್ಗಣ** (ನಾ). ಜೀವಸಮುದಾಯ; ಜೀವ ಜಾಲ: ಕ್ಷಣಭಂಗವೃತ್ತಿ ತನುಭೃದ್ಗಣಜೀವನಮಲ್ಲಿ ಸಂಶಯಂ ನೋಟಱ್ಪೊಡಿನಿತ್ತಣಮಿಲ್ಲ (ಚಂದ್ರಪು. ೨-೩೦); ತನುಭೃದ್ಗ[ಪಾಠಾಂ. ದ್ಘು]ಣದೊಳ್ತೋರ್ಪೀ ತನುಧನ ಲೋಭಂಗಳೆಂತುಮೇಂ ತೋರ್ಕುಮೆ ಪೇಳ್ ನಿನಗೆ (ರಾಜಶೇ. ೦೩-೧೬). [ ಸಂ. (ತನುಭೃತ್ + ಗಣ) ]

**ತನುಮಧ್ಯ** (ನಾ). ೧. ಸಣ್ಣನಡು ; ತೆಳುವಾದ ಸೊಂಟ : ತನುಮಧ್ಯಂ ನಿರುಪಮರೂಪನ ವಿನಯ ವಿಳಾಸನಿಧಿಯ ತನುಮಧ್ಯಂ (ಕುಸುಮಾ. ೭-೧೨೬) ; ತನುಮಧ್ಯಂ ಬಟ್ಟೆ ಬೆನ್ನಿ ಮರ್ಡಿಸೆ . . . ಎಂ ಮೆಱೆದಳೊ ಸುರತಕ್ರೀಡೆಯಂ (ಕಾವ್ಯಸಾ. ೬೬೪) ; ಶಂಕರ ತನುಮಧ್ಯದುಮೆಯೊಡನೆ (ಗುರುಚಾ.೨-೬೪). ೨. [ಛಂದ]ಪ್ರತಿಪಾದದಲ್ಲಿ ಆರು ಅಕ್ಷರಗಳುಳ್ಳ ಒಂದು ಅಕ್ಷರವೃತ್ತ; ತಿಲಕವೃತ್ತ: ವ್ಯೋಮಾದಿ ಜಲಾಂತಂ ತಾಮಾಗೆ ನಿತಾಂತಂ ಶ್ರೀಮಾನಿನಿ ಕೇಳಾ ನಾಮಂ ತನುಮಧ್ಯಂ [ಪಾಠಾಂ. ಧ್ಯೆ] (ಛಂದೋಂಬು. ೨-೭೪). [ ತನು + ಮಧ್ಯ ]

**ತನುಮಧ್ಯೆ** (ನಾ). ಸಣ್ಣ ನಡುವಿನವಳು ; ಚೆಲುವೆ: ಭಂಗುರಕೇಶಪಾಶೆ ತನುಮಧ್ಯೆ ಮೃಗಾಕ್ಷಿ (ಶಾಂತಿಪು. ೮-೧೦೬) ; ತನುಮಧ್ಯೆ ಕೇಸರಚ್ಛವಿ ವನಜಾನನೆ ಪೃಥುನಿತಂಬೆ ಕಂಡಳ್ ನೃಪಸಿಂಹನಾ (ಅನಂಪು. ೪-೧೨೦).
[ ಸಂ. ತನುಮಧ್ಯಾ (ತನು + ಮಧ್ಯ + – ) ]

**ತನುಮಾನಸ** (ನಾ). ಮನಸ್ಸನ್ನು ಸೊರಗಿಸುವುದು; ಮನೋನಿಗ್ರಹ: ಯೋಗವಾಸಿಷ್ಠಕಾರರ ಸಪ್ತಭೂಮಿಕೆಗಳು ಬೇರೆ. ಅವು ಯಾವವೆಂದರೆ:– ಶುಭೇಚ್ಛೆ . . . ವಿಚಾರಣಾ – ಆತ್ಮವಿಚಾರವನ್ನು ಮಾಡುವದು, ತನುಮಾನಸ–ಮನಸ್ಸನ್ನು ವಿಷಯಗಳ ಕಡೆಗೆ ಬಿಡದೆ ಸೊರಗಿಸುವದು (ಅಮೃತ. ೬-೬ ಅಡಿಟ). [ತನು + ಮಾನಸ ]

**ತನುಮುನಿ** (ನಾ). ಸಣ್ಣದೇಹವುಳ್ಳ ಋಷಿ ; ಕುಳ್ಳ ಮುನಿ : ಅಗಸ್ತ್ಯಂ ತನುಮುನಿ ಮುನಿದಾಪೋಶನಂಗೊಂಡೊಡೆತ್ತಂ ಪುಡಿವಿಟ್ಟತ್ತೊಂದೆ ಧೀಂಕಾದುದು ಕಪಿಗಣುವಂಗೆಂದಗಟು ವಾರ್ಧಿಯಂ ಕೀಟ್ಬಡಿಕುಂ (ಜಗವಿ. ೨-೧೮). [ ತನು + ಮುನಿ$_3$ ]

**ತನುಮೆ** 'ತನ್ಮೆ' ನೋ.

**ತನುಮೋಹ** (ನಾ). ಶರೀರದ ಮೋಹ : ತನುಮೋಹಂ ಸಾಡೆ ತನ್ನಿಂ ತೊಲಗಿ (ಶಾಂತೀಶ್ವ. ೯-೧೪೯). [ ತನು + ಮೋಹ ]

**ತನುರಕ್ಷೆ** (ನಾ). ಅಂಗರಕ್ಷಣೆ ; ಮೈಗಾವಲು : ವನಿತೆಯ ತನುರಕ್ಷೆಗೆ ತಕ್ಕನುಚರಜನ ಕುಶಲಜನ . . . ಸಖಿಜನಮೆನಿತನಿತುಮನವನಿಪತಿ ನಿಯೋಜಿಸಿ ತಳರ್ದಂ (ಪುಷ್ಪಪು. ೪-೧೪). [ ತನು + ರಕ್ಷೆ ]

**ತನುರುಚಿ** (ನಾ). ದೇಹಕಾಂತಿ : ತನುರುಚಿ ರೂಪು ಸನ್ನುತ ವಯಸ್ಸ್ವರ ಚೇಷ್ಟೆಗಳಿಂದಮೊಂದಿ ನಿನ್ನನೆ ನೆಟಿ ಪೋಲ್ತುದೊಂದು ಗಿಳಿ (ಪಂಚತಂ. ೧೨೦-೩) ; ತನುರುಚಿ ಕರ್ಣಕುಂಡಲ ಮರೀಚಿ ವಿಯತ್ತಳಮೆಲ್ಲಮಾ ಪಳಚ್ಚನೆ ಬೆಳಪಂತು (ಪಂಸಾಮಾ. ೪-೨೦). [ ತನು + ರುಚಿ ]

**ತನುರುಜೆ** (ನಾ). ದೈಹಿಕ ರೋಗ ; ಶಾರೀರಕ ಅಸ್ವಸ್ಥತೆ : ತನುರುಜೆಗೆ ಪಥ್ಯಾನ್ನ, ಬಾಯ ಚಪಲಕ್ಕಲ್ಲ (ಮಂಕುಕ. ೯೧೭).
[ ತನು + ರುಜೆ ]

**ತನುರುಹ** (ನಾ). ಮೈನವಿರು ; ಮೈಗೂದಲು : ತನುರುಹಮುಗೆವೊಯ್ದ ವೊಲಿರೆ . . . ಅತನುಸುಖದ ಸುತನುವಿಂತನುಭವಿಸುತಿರ್ದಳ್ (ರಾಜಶೇ. ೧೧-೧೨೦). [ ಸಂ. ]

**ತನುರೋಮಾವಳಿ** (ನಾ). ಮೈನವಿರುಗಳ ಸಮೂಹ : ತನುರೋಮಾವಳಿ ಗೊಯ್ಯನೊಯ್ಯನೆ ಪಸರ್ಪಂ ಚೂಚಕಕ್ಕೊಯ್ಯನೊಯ್ಯನೆ ಕರ್ಪಂ . . . ಮಿಗೆ ಮಾಡುವಾ ಸತಿಯ ಗರ್ಭಾಧಾನಮೇನೊಪ್ಪಿತೋ (ಪುಷ್ಪಪು. ೯-೧೧೬).
[ ತನು + ರೋಮ + ಆವಳಿ$_1$ (= ಆವಲಿ) ]

**ತನುವರ್ಣ** (ನಾ). ದೇಹದ ಬಣ್ಣ : ತನುವರ್ಣಂ ಮುಗಿಲಿಂದ್ರಚಾಪಲತೆ ನಾನಾರತ್ನಭೂಷಾಂಶು (ಉದ್ಭಟ. ೧-೬). [ ತನು + ವರ್ಣ ]

**ತನುವಾತ** (ನಾ). [ಜೈನ] ವಿಶ್ವಾಕಾಶವನ್ನು ಆವರಿಸಿಕೊಂಡಿದ್ದು, ಎಂಟು ಲೋಕಗಳಿಗೆ ಆಧಾರವಾಗಿರುವ ಮೂರು ಅನಿಲಗಳಲ್ಲಿ ಕೊನೆಯದು: ಘನೋದಧಿ ಘನಾನಿಳ ತನುವಾತತ್ರಿತಯ ಭಾಗದೊಳ್ ನೆಲಸಿರ್ದಂ (ಆದಿಪು. ೧೭-೫೦ ವ) ; ಎಂಟುಂ ಪೊಡವಿಗಳಂ ತಾಳ್ದಿದುವೋಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ ಅವರ ಪೆಸರ್ಗಳುಂ ಘನೋದಧಿ ಘನವಾತ ತನುವಾತಂಗಳೆಂಬುವು (ಶಾಂತಿಪು. ೧೨-೫೦ ವ). [ ತನು + ವಾತ ]

**ತನುವಿಕಾರ** (ನಾ). ೧. ದೇಹವಿಕಾರ ; ಅಂಗವಿಕಾರ: ತನುವಿಕಾರಂ ಪೆರ್ಚಿದಂತೆ ಮನಸಿನ ಮಮತೆ ನೂರ್ಮಡಿಸಿತ್ತು ಕೈಕೆಯ ಮೇಲೆ (ಶ್ರೀರಾಮಾ. ೨೪-೬೩೧). ೨. [ನಾಟ್ಯ] ಅಂಗಾಂಗಗಳ ಚಲನೆಯ ಮೂಲಕ ಭಾವಗಳನ್ನು ಸೂಚಿಸುವುದು ; ಅಭಿನಯ : "ಅಂಗಹಾರವೆನೆ ತನುವಿಕಾರವಮದಕ್ಕು" (ಮಂಗರಾ. ೨೩-೨). [ ತನು + ವಿಕಾರ ]

**ತನುವಿಡಿ** (ಕ್ರಿ). ೧. ಆಕಾರವನ್ನು ತಾಳು ; ಮೈದಳೆ ; ದೇಹವನ್ನು ಧರಿಸು : ಕುಡಿಯಲಮೃತವನಮರರಿಗೆ ತನುವಿಡಿದು ತನ್ವಂಗಿಯು ತಪೋಧನರೊಡೆಯನೋವಿದನಮರನಿಕರವ (ನಿಭಾಗ. ೨-೩-೭) ; ಮನಸಿಜ ನರರೂಪ ತಾಳಿ ತನುವಿಡಿದೈತರುವಂದದೊಳಾಕ್ಷಣ ಕೊನಬುದೋಱುತಲೈತಂದ (ಕಂಸವಿ. ೯-೯೭). ೨. ಬದುಕಿರು ; ಜೀವಿಸು : ಜನಿಸಿದಳು ಮತ್ತಿಂದು ನಿಜಸುತೆಯೆನಿಸಿ ಸತಿ ಜಗದೇಕನಾಥನ ವನಿತೆ ತಥ್ಯಾನಾನು ರಂಜಿತ ಚಿತ್ತವೃತ್ತಿಯಲಿ ತನುವಿಡಿದಳು (ನಿಭಾಗ. ೪-೫-೧೫); ನಳಿನೋದ್ಭವ ಕೋಟಿವತ್ಸರ ತನುವಿಡಿದಳಿದೊಡದೇನು ವೃಥಾಯು ಸುಳಿಗುರುಳಬಲೆಯ ತೋಳತಕ್ಕೆಯೊಳೊಂದು ಗಳಿಗೆ ಬಾಳಲು ಮುಕ್ತಿಯಹುದು (ಪೋಹಚ ೩೩-೯೩). ೩. ದೇಹವನ್ನು ಹಿಡಿದಿಡು ; ಪ್ರಾಣವನ್ನುಳಿಸಿಕೊಳ್ಳು : ಗಿಡುಮರಗಳಿಡಿದಡವಿಯಲಿ ತನುವಿಡಿದು ಬದುಕುವುದೆಂತು ಮಂಗಳೇ (ನಳಚ. ೭-೧೫). [ ತನು + ಪಿಡಿ$_1$ ]

**ತನುವಿದಾಹ** (ನಾ). ದೇಹಕ್ಕುಂಟಾಗುವ ತಾಪ ; ದೇಹತಾಪ : ಬಿಸಜೋದ್ಭವಂಸಮೆದನಂಬುದಮಂ ಪವಮಾನ ಧೂಮತೇಜೋಂಬುಗಳಿಂದಮೆಂಬ ನುಡಿ ಸತ್ಯಮದಲ್ಲದೊಡುಂತೆ ಕಾರಕಾದಂಬಿನಿ ಮಾಟ್ಕುಮೇ ಬಿರಯಿಗಂಗಜ ವಹ್ನಿ ವಿಜೃಂಭಮಂ ವಿಳೋಳಾಂಬಕವಾಗಿಯಂ ತನುವಿದಾಹ[ಪಾಠಾಂ. ಹೃದಯ ತಾಪ]ಮನುತ್ಕಳಿಕಾ ಪ್ರಪಂಚಮಂ (ಚಂದ್ರಪು. ೪-೩೩).
[ತನು + ವಿದಾಹ]

**ತನುವು** (ನಾ). ಒದ್ದೆ ; ತೇವ : ಶಾಖ ಮತ್ತು ತನುವು (Temparature & Humidity) (ಕೀಟಬಿ. ೫೦) ; ಚೊಕ್ಕಟಗೊಳಿಸಿದ ಫಾರಂ ಮೇಲೆ ತನುವಿನಿಂದ ಮಾಡಿರುವ ಫ್ಲಾಂಗನ್ನು ಇಟ್ಟು . . . ಬಿಗಿಯಿಂದ ಒತ್ತಬೇಕು (ಮುದ್ರಕ. ೫೮). [ <ತಣ್$_2$ + – ವು ]

**ತನುವೆರಸು** (ಅ). ದೇಹ ಸಹಿತವಾಗಿ ; ಸಶರೀರವಾಗಿ : ತನುವೆರ ಸೊಯ್ಯಲ್ಕನಿಗಳನಲಂ ಸ್ವರ್ಗಕ್ಕೆ ಸೇತುಗಟ್ಟಿದನೆನೆ ಪಾವನಹೋಮ ಧೂಮಮೊಗೆಯಲ್ (ಕಾದಂಪೂ. ೨೧೪). [ ತನು + ಬೆರಸು$_3$ ]

**ತನುವೆಳೆ** (ಕ್ರಿ). ಶರೀರವು ಬೆಳೆ,–ವೃದ್ಧಿಸು : ಬಿಟ್ಟು ಪೂರ್ವಶರೀರವನು ಸತಿ . . . ತಂಪಿನ ಬೆಟ್ಟದಬಲೆಗೆ ವಿಧಿ ಸದಸ್ಯವ ಕೊಟ್ಟವೊಲು ತನುವೆಳೆದಳಾ ಮೇನಕೆಯ ಜಠರದಲಿ (ನಿಭಾಗ. ೪-೫-೨) ; ದಿನದಿನಕೆ ತುಸುಮಾತ್ರ ಸುತ್ತಲು ತನುವೆಳ[ಳೆ]ದನುರಿ ಹೊಡೆದ ಬಹಳಾಂಜನಗಿರಿಯವೋಲು (ನಿಭಾಗ. ೬-೯-೯). [ ತನು + ಬೆಳೆ$_1$ ]

**ತನುವೇರು** (ಕ್ರಿ). ತಂಪಾಗಿರು ; ತೇವ ಉಂಟಾಗು ; ತಂಪಡರು : ನೆನೆಯಕ್ಕಿ ನೆನೆಗಡಲಿ ಗೊನೆಯ ಬಾಳೀಹಣ್ಣು ತನುವೇರಿದಡಿಕಿ ಬಿಳಿಯೆಲಿಯ ತಗೊಂಡು ಗಂಗವ್ವ ಪೂಜೆಗೈದಾರ (ಲೋಕಗೀ. ೧೩೨) ; ಎಂಟುದಿನ ಮಳೆ ಸುರಿದು ಗೋಡೆಗಳೆಲ್ಲ ತನುವೇರಿದೆ (ರೂಢಿ).
[ ತನುವು + ಏರು$_1$ (<ಏಱ್$_1$) ]

**ತನುವ್ಯಸನ** (ನಾ). ಹತ್ತುಬಗೆಯ ವ್ಯಸನಗಳಲ್ಲಿ ಒಂದು : ತನುವ್ಯಸನ, ರಾಜ್ಯವ್ಯಸನ ವಿಶ್ವವ್ಯಸನ ಸ್ತ್ರೀವ್ಯಸನ . . . ಕಾಷ್ಠವ್ಯಸನಗಳೆಂಬ ದಶವ್ಯಸನಗಳಿಂ ಹಸಗೆಟ್ಟು (ವಿವೇಕ. ೨೪೭). 'ದಶವ್ಯಸನ' ಪರಾ.
[ ತನು + ವ್ಯಸನ ]

**ತನುಶಕ್ತಿ** (ನಾ). ದೇಹದ ಶಕ್ತಿ : ತನುಶಕ್ತಿಯಱಿದು ತಿಂಗಳ್ಗೆ ನಾಲ್ಕು ಪರ್ವೋಪವಾಸಮಂ ಮಾಟ್ಪ (ಶಾಂತೀಶ್ವ. ೧೩-೮೦). [ ತನು + ಶಕ್ತಿ ]

**ತನುಸಂಭವ**(ನಾ). =ತನುಜ ೧: ಈ ಘಟೋತ್ಕಚನ ತನುಸಂಭವಂ ಬಡವನೇ ಮೇಘನಾದಂ (ಜೈಮಿಭಾ. ೨-೩೩). [ ತನು + ಸಂಭವ ]

**ತನುಸಿದ್ಧ** (ನಾ). ದೇಹಸಿದ್ಧಿಯನ್ನು ಪಡೆದವನು : ಖೋಡಿಗಳೆವುದು ಮಾಯೆಗೀಯೆಯನೇಡಿಸುವುದಾ ಮಿತ್ತುಗಿತ್ತುವ ರೂಢಿಯಲಿ ತನುಸಿದ್ಧರಾವೈ ಪ್ರಭುವೆ (ಪ್ರಭುಲೀ. ೧೯-೨೩). [ ತನು + ಸಿದ್ಧ ]

**ತನುಸೂತಕ** (ನಾ). ದೇಹದ ಮೈಲಿಗೆ ; ಶರೀರಕ್ಕೆ ಸಂಬಂಧಿಸಿದ ಸೂತಕ : ಎನ್ನ ಕುಲಸೂತಕವನಳಿದ ಬಸವಣ್ಣ ಎನ್ನ ಛಲಸೂತಕವ ಕಳೆದ ಬಸವಣ್ಣ ಎನ್ನ ತನುಸೂತಕವ ಕಳೆದ ಬಸವಣ್ಣ (ವಚಸಂ. ೩೮೨-೨೬). [ ತನು + ಸೂತಕ ]

**ತನುಸೋಂಕು** (ನಾ). ಮೈಯನ್ನು ಮುಟ್ಟುವುದು ; ದೇಹಸ್ಪರ್ಶ : ತನುಸೋಂಕಂ ನಿದ್ರೆಯಿಂದೆಚ್ಚಱಿಸಿ (ಮಲ್ಲಿಪು. ೬-೬೫). ತನುಸೋಂಕಂ ಶಚಿ . . . ಅಟ್ಟುಱಂ ಪಡೆಯೆ (ಮಲ್ಲಿಪು. ೧೨-೧೯). [ ತನು + ಸೋಂಕು₂ ]

**ತನುಸೌಂದರ್ಯ** (ನಾ). ದೇಹದ ಚೆಲುವು : ತನುಸೌಂದರ್ಯದಿನನ್ನನಿನ್ನ ನೆನಲ್ . . . ಬಾರದು ನಿನ್ನನೇಂ ಪಿರಿಯಯೋ (ಶಾಂತಿಪು. ೧-೮೫). [ ತನು + ಸೌಂದರ್ಯ ]

**ತನುಸ್ಥಾನ** (ನಾ). [ಜ್ಯೋತಿ] ಜನ್ಮಲಗ್ನ ; ಜನ್ಮಕುಂಡಲಿಯಲ್ಲಿ ಒಂದನೆಯ ಸ್ಥಾನ : ಭೌಮನಿಂ ಧರ್ಮಕರ್ಮಾಷ್ಟಮ ಲಾಭದ್ಯೂನ ಬಂಧು ದ್ವಿತಯ ಸಮತನುಸ್ಥಾನದೊಳ್ ಮಾಟ್ಕುಮೊಳ್ಪಂ (ಜಾತತಿ. ೧೧-೮). [ ತನು + ಸ್ಥಾನ ]

**ತನೂಜ** (ನಾ). ೧. ಮಗ ; ಸುತ : ಜನ್ಮಾಂತರ ಪುಣ್ಯದಿನೆಮಗೆ ನಿನ್ನ ದೊರೆಯ ತನೂಜಂ ದೊರೆಕೊಂಡಂ (ಜಗವಿ. ೩-೯೩) ; ತನೂಜರಿರ್ವರುಂ . . . ಉತ್ಸವಮಂ ನಿರ್ಮಿರ್ದರ್ (ಪುಷ್ಪಪು. ೪-೭೩). ೨. [ಜ್ಯೋತಿ] ಜನ್ಮಕುಂಡಲಿಯಲ್ಲಿ ಲಗ್ನದಿಂದ ಐದನೆಯ ಸ್ಥಾನ : ತುಷಾರಕರ ನಿಂದೇಕಾದಶ ದ್ರವ್ಯ ಧರ್ಮ ತನೂಜಾಸ್ತದೊಳಿಂದ್ರಮಂತ್ರಿ ಶುಭದಂ ಶೇಷಂಗಳೊಳ್ ನಿಂದಿತಂ (ಜಾತತಿ. ೧೦-೧೧). 'ಇನತನೂಜ' ಪರಾ. [ ಸಂ. ]

**ತನೂಜಮಂದಿರ** (ನಾ). [ಜ್ಯೋತಿ] ಜನ್ಮಲಗ್ನದಿಂದ ಐದನೆಯ ಸ್ಥಾನ; ಜಾತಕನ ಪುತ್ರಸಂಬಂಧವಾದ ವಿಷಯಗಳನ್ನು ತಿಳಿಸುವ ಸ್ಥಾನ : ಧನಧರ್ಮಾಂತ್ಯ ತನೂಜಮಂದಿರದೊಳುಗ್ರರ್ ಕೂಡಿ ನಿಂದಂದು ಬಂಧನ ಮಾ ಮಂದಿರದಂದದಿಂ ಸಮನಿಕುಂ ಮರ್ತ್ಯಂಗೆ (ಜಾತತಿ. ೨೦-೨೫). [ ತನೂಜ + ಮಂದಿರ ]

**ತನೂಜಾತೆ** (ನಾ). = ತನುಜಾತೆ : ಎನ್ನ ತನಯಂಗೆ ತಕ್ಕಳ್ ನಿನ್ನ ತನೂಜಾತೆ ರೂಪವತಿ ಸೀತೆ ಗಡಾ (ಪಂರಾಮಾ. ೫-೧೮). [ ಸಂ. ತನೂಜಾತಾ ]

**ತನೂಜಾಳಿ** (ನಾ). ಮಕ್ಕಳ ಸಮೂಹ : ತನೂಜಾಳಿಯುಂ ಬಂಧುವರ್ಗಂ ತಾವೆತ್ತಂ ವಂತ್ತೆ ಶೋಕಂ ಮುಸುಕಿ ನಡೆಯೆ (ರಕ್ಷಾಶ. ೪೧). [ ತನೂಜ + ಆಳಿ₄ ( = ಆಲಿ₄) ]

**ತನೂಜೆ** (ನಾ). = ತನುಜಾತೆ : " ದುಹಿತೃ ನಂದನೆ ಪುತ್ರಿ ತನೂಜೆ ಸೂತಿ ತಾನೆನಿಕ್ಕುಂ " (ವಸ್ತುಕೋ. ೫೪-೧೭); ಪರಿಣಯವಾಂತ ತನ್ನ ತನೂಜೆಯಂ ಗುಣವಂತೆಯಂ ಸಿಂಗರಿಸವೇಳ್ಕೆನೆ (ಬಸಪು. ೪-೩೨) ; ಅವಳಿಮಕ್ಕಳ್ಗಳಂ ಪೆತ್ತಳ್ ಸುಮಿತ್ರೆ ಮಗಧೇಶ್ವರತನೂಜೆ (ಶ್ರೀರಾಮಾ. ೧೬-೪೨೨). [ ಸಂ. ತನೂಜಾ ]

**ತನೂದರ** (ನಾ). ತೆಳುವಾದ ಹೊಟ್ಟೆ : ಶಿರಮನಿನರಶ್ಮಿ ಪದತಳ ಸರೋಜಮಂ ತಪನತಪ್ತ ಶಿಖಿರಾಗ್ನಿ ತನೂದರಮಂ ಕ್ಷುಧಾನಳಂ ಸುಡೆ ಕರಿಂ[ಕು]ವರಿದಗಮನಘವಿಘಾತಂ ಪೋಲ್ತಂ (ಸುಕುಮಾ. ೪-೧೪). [ ತನು + ಉದರ ]

**ತನೂದರಿ** (ನಾ). ತೆಳುವಾದ ಹೊಟ್ಟೆಯುಳ್ಳವಳು ; ಚೆಲುವೆ : ಈಕೆಯ ದೊಂದು ಕಾಂಕ್ಷೆಯಿಂದಾಗಿಯುಮಾ ತನೂದರಿಗೆ ಧೀರತೆಯುಂ . . . ದೊರೆಕೊಳ್ಳುಂ (ಕಾದಂಬ. ೩೯೨) ; ಆ ತನೂದರಿ ವೈದೇಹಿ ಮರುತ್ಸುತಂಗೆ ನಿಜ ಚೂಡಾರತ್ನಮಂ ನೀಡಿದಳ್ (ಪಂರಾಮಾ. ೧೧-೧೧೧). [ ಸಂ. ತನೂದರೀ (ತನು + ಉದರ + – ) ]

**ತನೂನಪಾತು** (ನಾ). ಬೆಂಕಿ ; ಅಗ್ನಿ : " ಸಪ್ತಾರ್ಚಿಃ, ಬಹುಲಃ . . . ಜಾತವೇದಾಃ, ತನೂನಪಾತ್ . . . ಹುತಾಶನಃ–ಈ ೪೦ ಕಿಚ್ಚಿನ ಪೆಸರ್ " (ಹಲಾಯು. ೧೨-೬೩) ; " ಕೃಪೀಟಯೋನಿ ತನೂನಪಾತ್ತ್ವಮೋಘ್ನನೆನಲ್ಕಗ್ನಿಯಕ್ಕುಂ " (ಮಂಗರಾ. ೦೪-೭) ; ಚಿನ್ಮೂರ್ತಿ ನಿರ್ಜರಸರಿನ್ಮಸ್ತಕ ತನೂನಪಾನ್ನಿಹಿರ ಶಶಿನೇತ್ರ (ಪದ್ಮರಾ. ೬-೧). [ ಸಂ. ತನೂನಪಾತ್ ]

**ತನೂಭವ** (ನಾ). ೧. = ತನುಸಂಭವ : ನಿನ್ನರಸನಣುಗದಮ್ಮನ ನಿನ್ನ ತನೂಭವನ ಸಾವುಗಂಡುಂ ಮಾಣ್ಬಾ (ಪಂಪಭಾ. ೧೨-೧೬೪). ೨. [ಜ್ಯೋತಿ] ಜನ್ಮಲಗ್ನದಿಂದ ಐದನೆಯ ಸ್ಥಾನ : ದಿವಿಜೇಜ್ಯಂ ನಿಲೆ ಜನ್ಮಲಗ್ನ ಗೃಹದೊಳ್ ಪ್ರಾಜ್ಞಂ . . . ತನೂಭವದೊಳ್ ನಿಶ್ಚಯ ಬುದ್ಧ ನಾಱಱಿಡೆಯೊಳ್ ನಿಶ್ಮತ್ತು (ಜಾತತಿ. ೧೮-೧೧-೧). [ ಸಂ. ]

**ತನೂರುಹ** (ನಾ). ೧. = ತನುರುಹ : " ರೋಮ, ತನೂರುಹಂ–ಈ ೨ ಮೆಯ್ಯ ಕೂದಲ್" (ಹಲಾಯು. ೮೬-೩೭೦); ತಾಳ್ದಿತಿಮುದಮಂ ತನೂರುಹಂ ಗುಡಿಗಟ್ಟುತ್ತೇಳ್ದಿರೆ (ರಾಜಶೇ. ೪-೨೮). ೨. ಪಕ್ಷಿಗಳ ರೆಕ್ಕೆ, –ಪಕ್ಕ : " ತನೂರುಹಂ ಗರುತ್ ಪತ್ರಂ . . . ಪಕ್ಷಃ–ಈ ೯ ಎಱ (ಂ) ಕೆ " (ಹಲಾಯು. ೪೦-೮೬) ; ಒಮ್ಮೆ ಗಿರಿಗಳ ತನೂರುಹಗಳನು ತರಿದೊಟ್ಟಿ ವಜ್ರಾಯುಧದ ಕೀರ್ತಿ ಮೊಳಗಿಸಿದನು (ದ್ಯಾವಾಪೃ. ೧೯-೧). [ ಸಂ. ]

**ತನೆ, ಜನೆ, ತೆನ್ನೆ**₂ (ನಾ). ೧. (ಸಾಮಾನ್ಯವಾಗಿ ಪಶುಗಳ) ಬಸಿರು ; ಗಬ್ಬ ; ಗರ್ಭ : ಆ ಬೆಳೆಯ ಮೇಯ ಬಂದ ಎರಳೆ ತನೆಯಿಲ್ಲದೆ ಮಱಿ ಗಂಡಿತ್ತು (ಕೋಲಶಾಂ. ೧೬-೧೧) ; ಸ್ರವದ್ಗರ್ಭೆ, ಅವತೋಕೆ ತನೆ ಕರಗಿದ ಆಕಳು (ನಾಚಿರಾ. ೫) ; ಬಾಳೆಯ ಕೇಡದರ ಗೊನೆಯೆ, ಹೇಸರ ಕೇಡದರ ತನೆಯೆ (ಗೀವಿಂ. ೮೫-೬೯). 'ತನೆತುಂಬು' ಪರಾ. ೨. ಗಬ್ಬವಾದ ಹಸು : ಗರ್ಭಿಣೀ ವಾ ತನೆ ಮೇಣ್ (ನೀತಿವಾ. ೦೬-೧೨). ಜನೆ : ೩. ಮೊಟ್ಟೆಯಲ್ಲಿರುವ ಹಳದಿಬಣ್ಣದ ಲೋಳೆ ; ಬಂಡಾರ : (೫). ತೆನ್ನೆ : ೧. ಅಮರಾಂಗನೆಯರ್ ದಿವಿಜೇಂದ್ರಲೋಕ ಸಂಜನಿತ ಮಹೌಷಧಿ ಪ್ರಕರದಿಂ ಜಿನಮಾತೆಗೆ ಮಾಡೆ ಗರ್ಭಶೋಧನೆಯನದೇನಮಾನುಷ ಮೆನಲ್ಕೊರೆಯಾಗೆ ಶರೀರಮಬ್ಜಜನ್ಮನೆ ಸಮೆದಿಂದುಕಾಂತ ವನಕಾಂತೆ ಪೊಲೇಂ ತೆನೆ ತೆಳ್ಪುವೆತ್ತುದೋ (ಶಾಂತಿಪು. ೯-೦೧೮) ; ತೆನೆಯ ಹಸುವನು ಕೊಟ್ಟು ಹಗ್ಗಕೆ ಮನದ ಜಿನುಗುವರಂತೆ ಕಾಣ್ಬುದು ನಮ್ಮ ನಡೆವಳಿಯು (ರಾಮಾಸಂ. ೨-೩-೩೦).

**ತನೆಯಾಗು, ತೆನೆಯಾಗು**=ಗಬ್ಬವಾಗು; ಗರ್ಭ ಧರಿಸು : ಗುರುವೆಂಬ ಗೂಳಿ ಮುಟ್ಟಲು ಶಿಷ್ಯನೆಂಬ ಮಣಕ ತನೆಯಾಯಿತ್ತು (ಚನ್ನಪ. ೪. ೩.೮೬-೮೧೫); ತೆನೆಯಾಗದ ಪಸುವಿಂಗಾಡಿನ ತುಪ್ಪಮನಕ್ಕೆ . . . ಲಕ್ಕಿಯ ಬೇರನೆಯ್ದೆ ಮೆದ್ದುಗುಟ್ ಕಟ್ಟುಗುಂ ನಿಶ್ಚಯದಿಂ (ಲೋಕೋಪ. ೯-೦೮೯); ಅನುವರ್ಷಂ ತಪ್ಪದೆ ತಾಂ ತೆನೆಯಪ್ಪುದೆ ದಲ್ ಸಮಾಂಸಮೀನೆಯೆ [ನಿ]ಕ್ಕುಂ (ವಸ್ತುಕೋ. ೯೦-೮). [ ದೇ.॥ ತಮಿ. ಚಿನೈ; ಮಲ. ಚನ ; ತುಳು. ತನೆ, ಹನೆ; ತೆಲು. ಚೆನ ]

**ತನೆತುಂಬು, ತೆನೆತುಂಬು**₂ (ಕ್ರಿ). ಬಸಿರಾಗು ; ಗಬ್ಬವಾಗು ; ಗರ್ಭ ಧರಿಸು : ಕೋಣನ ಕಿವಿಯಲ್ಲಿ ಮೂಱು ಹಸು ತ[ಪಾಠಾಂ. ತೆ]ನೆತುಂಬಿ ಕಱುವೊಂದನೀಯಿತ್ತು (ಕೋಲಶಾಂ. ೩೩-೨೦). **ತೆನೆತುಂಬು**₂ : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತನೆ + ತುಂಬು₁ ]

**ತನೆನಿಲ್, ತೆನೆನಿಲ್ಲು** (ಕ್ರಿ). ಗರ್ಭನಿಲ್ಲು : ತ[ಪಾಠಾಂ. ತೆ]ನೆ ನಿಲಲು ಪ್ರಪ್ರೌಹಿಯದು (ಮಂಗರಾ. ೫೪-೩). **ತೆನೆನಿಲ್ಲು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತನೆ + ನಿಲ್ ]

**ತನೆಬಲಿ, ತೆನೆಬಲಿ** (ಕ್ರಿ). ಗರ್ಭ ಬೆಳೆ : ತ[ಪಾಠಾಂ. ತೆ]ನೆ ಬಲಿಯೆ ಪಲ್ಕಿನಿ [ಲಿಕ್ಕಿ]ಯದು" (ಮಂಗರಾ. ೫೪-೩). **ತೆನೆಬಲಿ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತನೆ + ಬಲಿ₁ ]

**ತನೆಯಾವು,** ತೆನೆಯಾವು (ನಾ). ಗರ್ಭ ಧರಿಸಿದ ಹಸು : ಪ್ರಷ್ಠೌಹೀ, ಗರ್ಭಿಣೀ – ಈ ೨ ತ[ಪಾಠಾಂ. ತೆ]ನೆಯಾವು" (ಹಲಾಯು. ೪೫-೧೧೪). **ತೆನೆಯಾವು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ ತನೆ + ಆವು ]

**ತನೆಯಿರು** (ಕ್ರಿ). ಗಬ್ಬವಾಗಿರು : ಗೊಡ್ಡುಎಮ್ಮೆಯನ್ನು ಈ ದಿನ ತನೆಯಿದೆಯೆಂದು . . . ಮಾರಿಬಂದೆ (ಯಮದೂ. ೩೭).

[ ತನೆ + ಇರು$_1$ (<ಇರ್$_1$) ]

**ತನೆವಂದಿ** (ನಾ). ಗಬ್ಬವಾದ ಹಂದಿ ; ಗರ್ಭಿಣಿ ಹಂದಿ : ಪಿಡಿವಂದೀ ತನೆವಂದಿ ಕುರುಡು ಕುಂಟೆಂದಲಸದಱಿದಂತು . . . ಸಿಲೆಯ ಮೇಲಾದೊಡಂ ಶಕುನಮಂ ನಿಱಿಪಂತೆ ನಿಱಿಸುವೆಂ ಪಂದಿಯಂ ನೀಂ ಮೆಚ್ಚಲುಂ (ಪಂಪಭಾ. ೫-೪೭) ; ಹಂದಿವಿಂಡಿನೊಳಗೆ 'ಪಿಡಿವಂದಿ' ಇದು, 'ತನೆವಂದಿ' ಇದು . . . ಎಂದು ಅರಿತುಕೊಳ್ಳಬೇಕು (ನಾಡೋಜ. ೩೧೮). ☞ ಈ ಶಬ್ದರೂಪದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ.

[ ತನೆ + ಪಂದಿ ]

**ತನ್ನತು** 'ತನತ್ತು' ನೋ.

**ತನ್ನದು** 'ತನತ್ತು' ನೋ.

**ತನ್ನವಿಕೆ** (ನಾ). ತಂಪು ; ಶೈತ್ಯ : ತನ್ನವಿಕೆ ಪ್ರಬಲಿಸಲ್ ಕ್ಷಯರೋಗಿ ಜೈಸಿದಂ ಚಂಡಾಂಶುವ (ಪರಶು. ೧೫-೨೯). [ <ತನುವು + – ಇಕೆ ]

**ತನ್ನಾಕ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ: ಸಮಪಾದದಿಂದ ಎರಡು ಹೆಜ್ಜೆಯಲ್ಲಿ ಮುಂದುಗಡೆಯಲ್ಲಿ ನಡೆದು ಹಿಂದಕ್ಕೆ ಮುಖವಾದವನು ಕುಳ್ಳಿರುವಂಥಾ ಭಾವ ಆವದುಂಟು ಅದರ ಹೆಸರು ತನ್ನಾಕ ಎರದು ತಿಳಿವುದು (ಖಡ್ಗಟೀ. ೪-೫೩). [ ಇದು 'ತಾನಕ' ಎಂಬುದರ ಅಪಲಿಖಿತವಿರಬಹುದು ]

**ತನ್ನಾಕಾರ** (ನಾ). [ಸಂಗೀತ] ಸ್ವರಗಳನ್ನು ಜೋಡಿಸಿದ ಪಲ್ಲವಿಯ ಭಾಗ : ಪಲ್ಲವಿಯ ಸಾಹಿತ್ಯದಲ್ಲಿ ಮಧ್ಯೆಮಧ್ಯೆ ಅರ್ಥವತ್ತಾದ ಶಬ್ದಗಳಿಗೆ ಮನೋಧರ್ಮ ಸ್ವರಕಲ್ಪನೆ ಮಾಡುವ ಸಂಪ್ರದಾಯವೂ ಇದೆ ಇದಕ್ಕೆ 'ತನ್ನಾಕಾರ' ಎಂದು ಹೆಸರು (ಸಂಗೀಚಂ. ೯೪). [ ಸಂ. ]

**ತನ್ನೆಲಿವುಳುಕ** 'ತನ್ನೆಲಿಹುಳಿಗ' ನೋ.

**ತನ್ನೆಲಿಹುಳಿಗ,** ತನ್ನೆಲಿವುಳುಕ (ನಾ). ಒಂದು ಬಗೆಯ ಗಿಡ : ತನ್ನೆಲಿಹುಳಿಗನ ಬೇರನು ಎಮ್ಮೆಹಾಲಲ್ಲಿ ಅರೆದು ಕುಡಿಯ ಕೊಡಿಸಲು ಸೂತಕವಿಲ್ಲದ ಸ್ತ್ರೀಗೆ ಸೂತಕವಹುದು (ವೈದ್ಯಸಾ. II, ೪೩) : ಒಂದೆಲಗನ ಸೊಪ್ಪು . . . ತನ್ನೆಲಿಹುಳಿಗನ ಗೆಡ್ಡೆ ಇವುಗಳನ್ನು ಸಮಾಂಶವಾಗಿ ಆನೆಯ ಮೂತ್ರದಲ್ಲಿ ಅರೆದು ಕುಡುಹುಮಾಡಿ ನೆಳಲಲ್ಲಿ ಒಣಗಿಸಿ, ಗೋಮೂತ್ರದಲ್ಲಿ ನಸ್ಯ . . . ಮಾಡಿಸಲು ಉನ್ಮಾದ ಶಮನವಹುದು (ವೈದ್ಯಸಾ. II, ೫೦). **ತನ್ನೆಲಿವುಳುಕ:** ತನ್ನಲಿವುಳಕಗಿಡ : (ಕ). [ ? ]

**ತನ್ಮತ** (ನಾ). ಆತನ ಮತ–ಅಭಿಪ್ರಾಯ : ಕಂತುವೆ ಪರಮಾತ್ಮನಾಗೆ ತನ್ಮತಮೆ ಸಿದ್ಧಾಂತಮಾಗೆ (ಶಾಂತಿಪು. ೭-೧೦ ವ).

[ ಸಂ. (ತದ್ + ಮತ) ]

**ತನ್ಮಧ್ಯ** (ನಾ). ಅದರ ಮಧ್ಯ : ತನ್ಮಧ್ಯದೊಳಿರ್ಪುದು ರುಚಿವನ್ಮೇರು ನಗೇಂದ್ರಂ (ಶಾಂತಿಪು. ೧-೫೭). [ ಸಂ. (ತದ್ + ಮಧ್ಯ) ]

**ತನ್ಮಯ** (ಗು). ೧. ಅದರಲ್ಲಿಯೇ ಮಗ್ನವಾದ; ತಲ್ಲೀನವಾದ. (ನಾ). ೨. ಅದರಲ್ಲಿಯೆ ಸಂಪೂರ್ಣವಾಗಿ ತೊಡಗಿದವನು ; ತಲ್ಲೀನನಾದವನು : ತಾಂ ತನ್ಮಯನಾಗಿ ತಚ್ಚರಿತಂ ಕಾವ್ಯಂಗಳೊಳ್ಕೂಡೆ ಬಣ್ಣಿಸಿ (ಆದಿಪು. ೧-೩೭). [ ಸಂ. ]

**ತನ್ಮಯತೆ** (ನಾ). ಮಗ್ನತೆ ; ತಲ್ಲೀನತೆ ; ಇನಿಯಳಿ ನಿಜಮೆನ್ನುತೆ ದರ್ಶನ ಸುಖವಂ ತನ್ಮಯತೆಯನೊಂದಿದ ಮನದಿಂದನುಭವಿಪೆ (ಶಾಕುಂತ. ೯೦-೧೫೫). [ ಸಂ. ತನ್ಮಯತಾ ]

**ತನ್ಮಯತ್ವ** (ನಾ). =ತನ್ಮಯತೆ : ಶ್ರದ್ಧಾಭಕ್ತಿಯಿಂದ ದೇವರನ್ನು ಅರ್ಚಿಸುವಾತನು ತನ್ಮಯತ್ವವನ್ನು ಪಡೆಯುವನು (ಭಾರದ. ೭೮). [ ಸಂ. ]

**ತನ್ಮಾತ್ರ** (ನಾ). ಪಂಚಮಹಾಭೂತಗಳಿಗೆ ಕಾರಣಗಳಾದ ಐದು ಸೂಕ್ಷ್ಮ ದ್ರವ್ಯಗಳು ; ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳೆಂಬ ಐದು ದ್ರವ್ಯಗಳು: ಆ ಜ್ಞಾನ ಮನ ಬುದ್ಧಿ ಚಿತ್ತ ಅಹಂಕಾರಂಗಳಿಂದವೆ ಪಂಚ ತನ್ಮಾತ್ರಂಗಳುತ್ಪತ್ತಿ ಆ ಪಂಚತನ್ಮಾತ್ರಂಗಳಿಂದವೆ ಪಂಚಭೂತಂಗಳುತ್ಪತ್ತಿ (ಮಹಾದೇ. ಕ. ೧೪೭-೩೪೦) ; ಮುಂದದೇ ಹಮ್ಮು ಹಮ್ಮಿಂದೆ ತನ್ಮಾತ್ರವಿಂತೆಂದು ತಿಳಿ (ಮನೋವಿ. ೩-೪) ; ಐದು ಭೂತಗಳ ಅಸಾಧಾರಣ ಗುಣಗಳಿಗೆ ಅನುಸಾರವಾಗಿ ಕಾರಣವಸ್ತುಗಳೂ ಐದಾಗಿರಬೇಕು. ಇವನ್ನು ತನ್ಮಾತ್ರಗಳೆಂದು ಕರೆಯುವ ವಾಡಿಕೆ (ಭಾತತ್ತ್ವ. ೩೨೩). [ ಸಂ. ]

**ತನ್ಮಾತ್ರೆ** (ನಾ). ೧.=ತನ್ಮಾತ್ರ : ಮಗನೆ ರಾಜಸವಾದ ಹಮ್ಮಿನಲೊಗೆದವೀ ತನ್ಮಾತ್ರೆಗಳು ಕೇಳ್ಗಳಿದೀ ತನ್ಮಾತ್ರೆಗಳಿನೀ ಭೂತಪಂಚಕವು (ಅಮೃತ. ೪-೧೩) ; ಐದು ಭೂತಗಳು, ಐದು ತನ್ಮಾತ್ರೆಗಳು, ಹನ್ನೊಂದು ಇಂದ್ರಿಯಗಳು, ಅಹಂಕಾರ, ಮಹತ್ತು, ಮೂಲಪ್ರಕೃತಿ ಇವೇ ಇಪ್ಪತ್ತನಾಲ್ಕು ತತ್ತ್ವಗಳು (ಭಾರದ. ೨೨೨). ೨. ಮೂಲ ಉದ್ದೇಶ (?) : ಹೀಗೆ ಈ ಕಾದಂಬರಿಯ ತನ್ಮಾತ್ರೆಗಳಲ್ಲಿ ಮನೋವಿಶ್ಲೇಷಣವೂ ಒಂದು ಮುಖ್ಯ ಅಂಶವಾಗಿದೆ (ಸಮಜೀ. ೨೭ ಪೀಠಿಕೆ). [ ಸಂ. ತನ್ಮಾತ್ರ ]

**ತನ್ಮೂಲಕ** (ಅ). ಅದರ ಮೂಲಕ ; ಅದರ ಮುಖಾಂತರ : ಜೀವನ ತತ್ತ್ವವನ್ನೂ ತನ್ಮೂಲಕ ಶಿಕ್ಷಣತತ್ತ್ವವನ್ನೂ ಘೋಷಿಸಬೇಕು (ಶಿಕ್ಷದ. ೩೩); ಕಲೆಯಿಂದಾಗಲಿ, ಕಾವ್ಯದಿಂದಾಗಲಿ ಸಂವೇದನೆಯನ್ನು ಪಡೆವ ಸಹೃದಯನೂ ತನ್ಮೂಲಕ ಆತ್ಮೋತ್ಕರ್ಷವನ್ನು ಪಡೆಯುವುದು (ಕಾವ್ಯಕು. ೧೫). [ ಸಂ. (ತದ್ + ಮೂಲಕ) ]

**ತನ್ಮೆ,** ತನುಮೆ (ನಾ). ರೀತಿ ; ಕ್ರಮ ; ನಿಶ್ಶೀಲವ್ರತತ್ವಂಚ – ಶೀಲಂಗಳು ವ್ರತಂಗಳುಮಿಲ್ಲದ ತನ್ಮೆಯುಂ (ತಸೂವ್ಯ. ೨೧೮) ; ಅವ್ಯಾಘಾತಿ ಚ – ಅನ್ಯ ವಸ್ತುಗಳಿಂ ತನಗಂ ತನ್ನಿಂದಮನ್ಯವಸ್ತುಗಳ್ಗಂ ಏನುಂ ಬಾಧೆಯಿಲ್ಲದ ತನ್ಮೆಯಿಂ (ರೀತಿಯಿಂ)ಅವ್ಯಾಘಾತಮುಂ ಅಪ್ಪ ಆಹಾರಕಶರೀರ (ತತ್ತ್ವಪ್ರ. ೦೦೮); ಸದ್ವ್ಯಸನೋದ್ಯೋಗದೊಳು ಪಿರಿದುಮರ್ಥಶರೀರಮಂ ಕ್ಷಪಿಯಿಸುವ ತನ್ಮೆಯುಂ ಸಾಧು ಗುರು ಗುಣಾಧಿಕರೊಳು ನಯವಿನಯ ಭಯಭಕ್ತಿಯುಕ್ತತೆಯುಂ . . . ಪದ್ಮಲೇಶ್ಯಾಪರಿಣಾಮಮೆಂದಱಿವುದು (ಪಸಾರ. ೪೦೭). **ತನುಮೆ :** ವ್ಯಾಘ್ರ ಸಿಂಹ ಮಾರ್ಜಾರ ಪರಿಣತೆಯಂತೆ ನಿಕೃಷ್ಟಮಪ್ಪ ಚೇಷ್ಟೆಯುಂ ಸಜ್ಜನಜನಂಗಳಿಗೆ ವಶವಾಗದ ತನುಮೆಯುಂ ಮೊದಲಾದ ದುಷ್ಟವರ್ತನೆಯೊಳು ವರ್ತಿಸುವ ಜೀವನ ಪರಿಣತಿಯಂ ಕೃಷ್ಣಲೇಶ್ಯಾಪರಿಣಾಮಮೆಂದಱಿವುದು (ಪಸಾರ. ೪೦೪). [ ? ]

**ತನ್ವಂಗಿ** (ನಾ). ಕೋಮಲವಾದ ಶರೀರವುಳ್ಳವಳು ; ಕೋಮಲಾಂಗಿ: ಇಕ್ಕಿದಳ್ ನಡುಗುತಂ ತನ್ವಂಗಿ ತಾಂಬೂಲಮಂ (ಕಾದಂಉ. ೫೯) ; ತನ್ವಂಗಿಗೇಂ ಚೆಲ್ವುವೀಱಿದುವೋ ಮುತ್ತಿನ ಪಚ್ಚಮುಂ ದುಗುಲಮುಂ (ಜಗವಿ. ೨-೭೨) ; ನಿನ್ನನುಳಿದೆನಗಾವ ಸಗ್ಗಮುಂ ರುಚಿಸದೆಲೆ ತನ್ವಂಗಿ (ಶ್ರೀರಾಮಾ. ೯೦-೩೩೦). [ ಸಂ. ತನ್ವಂಗೀ (ತನು + ಅಂಗ + – ) ]

**ತನ್ವಂತರ** (ನಾ). ಬೇರೆ ದೇಹ ; ಇನ್ನೊಂದು ದೇಹ : ಸಪ್ತನಾಕ ಸಪ್ತ ನರಕ ಅದರ ಬೆಳಕು ಕತ್ತಲು ಮನ್ವಂತರ ತನ್ವಂತರ ಅದರ ಕೋಟಿ ಕೊತ್ತಲು (ನಾದಲೀ. ೭೦-೨೨). [ ಸಂ. ]

**ತನ್ವಿ** (ನಾ). ೧.–ತನ್ವಂಗಿ: ತನ್ವಿ ನೃಪನಂ ಕಣ್ಣಾರ್ವಿನಂ ನೋಡಿದಳ್ (ಮಲ್ಲಿಪು. ೯-೧೭) ; ಆ ಮಹಾಪುರುಷನೇ ತಕ್ಕವರನೀ ತನ್ವಿಗೆನುತೆ (ಪದ್ಮರಾ. ೩-೩೫) ; ತನ್ವಿ ತನ್ಮಧುರಸುಗಂಧದಿಂ ತಿಳಿದು ಸೇವಿಸಿದಳ್ ಮಧುವಂ ನಿಜೇಚ್ಛೆಯಿಂ (ಕಾವ್ಯಸಾ. ೯೭೩); ತನ್ವಿಯಂ ಬೀಳ್ಕೊಂಡ ಸಮರಕನುವಾಗುತಿರಲ್ (ಜೈಮಿಭಾ ೧೧-೨೭). ೨. [ಛಂದ] ಪ್ರತಿ

ಪಾದದಲ್ಲಿಯೂ ೨೪ ಅಕ್ಷರಗಳಿರುವ ಸಂಕೃತಿ ಎಂಬ ವರ್ಣ ಛಂದಸ್ಸಿಗೆ ಸೇರಿದ ಒಂದು ವೃತ್ತ; P ಇದಕ್ಕೆ ಸುಂದರವೃತ್ತವೆಂಬ ಹೆಸರಿದೆ: ಇಂದು ನಭಂಗಳ್ ಸುರಪುರಪವನೇಂದುದ್ವಯಮಾಗಿರೆ ಕುಲಿಶ ಜಲಂಗಳ್ ಮುಂದಿರೆ ಬಾಣಾದ್ರಿಗಳೊಳೆ ಯತಿಗಳ್ ನಿಂದಿರೆ . . . ಧರೆಗಿದು ಪರಿದತ್ತೆಲ್ಲಿಯುಮುದ್ಭವಕರಮೆನೆ ತನ್ವೀ (ಛಂದೋಂಬು. ೨-೧೯೧).

[ ಸಂ. ತನ್ವೀ ]

**ತಪ₁** (ನಾ). ಒಂದು ಅನುಕರಣ ಪದ. 'ತಪಗುಡು' ಪರಾ.

**ತಪತಪ** (ದ್ವಿರುಕ್ತಿ) : ತಪತಪ ತೊಯ್ದು ನೀರಿಳಿವುದು (ಹಾಡುಪಾ. ೨೧-೫).

**ತಪ₂** (ನಾ). ೧. ಮಾಘಮಾಸ : "ಮಾಘಮಾಸಮಂ ತಪಮೆಂಬುದು" (ಹಲಾಯು. ೧೯-೧೧೪) ; "ಕ್ರಮದೊಳೊಂದಿರೆ ಮಧು ಮಾಧವಂ ಶುಕ್ರಂ . . . ತಪಮುಂ ತಪಸ್ಯಮೆಂದಿಂತು ಸಮನಿಕ್ಕುಂ ಚೈತ್ರಾದಿ ನಾಮಂಗಳ್" (ವಸ್ತುಕೋ. ೧೭-೧೨); "ಸಹಸ್ಯಾಖ್ಯಮದು ಹೇಮಂತಮಾ ತಪ ತಪಸ್ಯ ಮಮುಶಿಶಿರಂ" (ಮಂಗರಾ. ೨೧-೧೧). ೨. ಏಳು ಊರ್ಧ್ವಲೋಕಗಳಲ್ಲಿ ಒಂದು; ತಪೋಲೋಕ : "ಬಿತ್ತರದ ಭೂರ್ಭುವಂ ಸ್ವರ್ಮಹಂ ಜನ ತಪಂ ಸತ್ಯಮೆಂದೇಬು ಮೇಲಣ ಲೋಕಮಕ್ಕು" (ಮಂಗರಾ. ೧೧-೩೨).

[ ಸಂ. ತಪಸ್ ]

**ತಪ₃** (ನಾ). ೧. ಬಿಸಿ ; ಶಾಖ ; ಉಷ್ಣತೆ. ೨. ಪ್ರಕಾಶ. ೩. ಗ್ರೀಷ್ಮ ಋತು; ಬೇಸಿಗೆಕಾಲ: "ನಿದಾಘಂ ತಪಾಹ್ವಯಂ ಗ್ರೀಷ್ಮಂ" (ವಸ್ತುಕೋ. ೧೭-೧೩). ೪. ವ್ರತನಿಯಮಾದಿಗಳಿಂದ ದೇಹವನ್ನು ದಂಡಿಸುತ್ತ ಧ್ಯಾನ ಮಾಡುವುದು ; ತಪಸ್ಸು : "ಗತಿ ಪರಿವ್ರಾಜಂ ವ್ರತಂ ನಿಯಮವೆನೆ ತಪಂ" (ಮಂಗರಾ. ೧೩೫-೩೬); ದ್ವಾದಶವಿಧಮಪ್ಪ ತಪದೊಳ್ ನೆಗಟ್ದು (ವಡ್ಡಾರಾ. ೧-೫) ; ತಪದೊಳ್ ನರನಿಂತೊಂದಿ ನಿಲೆ (ಪಂಪಭಾ. ೮-೯) : ಜೀವದಯೆ ಧರ್ಮಮಿಂದ್ರಿಯಸೇವನೆಯಂ ಬಿಟ್ಟೊಡದುವೆ ತಪಮುಪಶಮದಿಂ (ಪಂಚತಂ. ೧೨೦-೧೮); ಪೆತ್ತ ಪರೀಷಹಜಯಮೆ ತಪಂ ತಪಕೆ ಬೇಱೆ ಕೋಡೆರಡೊಳವೇ (ಯಶೋಚ. ೧-೪೯) ; ಪ್ರಾಜಾಪತ್ಯಾದಿ ವ್ರತಗಳಿಂ ಧರ್ಮಾರ್ಥಮಾಗಿ ಶರೀರಶೋಷಣಂಗೈವುದೇ ತಪವೆನಿಸುವದು (ವಿವೇಕ. ೧೩೯); ಬನದೊಳು ಗೈವ ಬರಿಯ ತಪಗಳು ಕುಲವನಿತೆಯರಿರವಿಗೆ ದೊರೆಯೆ (ಹದಿಬ. ೨-೨೪). ೫. ನೋವು ; ದುಃಖ. 'ತಪಗುಟ್ಟು', 'ತಪಿಸು' ಪರಾ.

**ತಪದಂಕಕಾಱ** = ಶ್ರೇಷ್ಠ ತಪಸ್ವಿ ; ಶಕ್ತನಾದ ತಪಸ್ವಿ ; ಒಂದು ಬಿರುದು : ವಿಸ್ಫುರಿತ ಶಿವಾಗಮಂ ಸುರಿಗೆಯಾಗಿರೆ ಪಾಪವನೊತ್ತಿ ಕುತ್ತಿ ನಿಷ್ಠುರಮಿಱಿದಿನ್ತು ಕೊನ್ದ ತಪದಂಕಮಿದೀ ತಪದಂಕಕಾಱನ (ಎಕ. XII, ಶಿರಾ. ೨೪-೭೩ ; 943) ; ಮಾರ್ಮಲೆವಗ್ಗ್ಯಂಗಜವೈರಿ ತಾಂ ಭಂಗಿಯ [ಲ್ತ]ಪದಂಕಕಾಱ ವಾಮದೇವಂ (ಸೌಇಇ. XX, ೨೪-೨೬ ; 1034).

[ ಸಂ. ]

**ತಪ₄** (ನಾ). ಹನ್ನೆರಡು ವರ್ಷಗಳ ಅವಧಿ,-ಕಾಲಮಾನ ; ಒಂದು ಪಟ್ಟ (ಉಕ) : ನಾನು ಈ ಕೊಲೆ ಸುಲಿಗೆಯ ವ್ಯವಸಾಯ ಮಾಡಹತ್ತಿ ೩ ತಪಗಳಾದವು (ಅಂಬಿಕ. ೧೭೪). [ ←ಮರಾ. ತಪ ]

**ತಪಆಚಾರ** (ನಾ). [ಜೈನ] ಪಂಚಾಚಾರಗಳಲ್ಲಿ ಒಂದು ; ದ್ವಾದಶ ತಪಗಳನ್ನು ಪಾಲಿಸುವುದು ತಪಆಚಾರವು (ಜೈನಧ. ೧೦೦) ; ಪಂಚಾಚಾರ ಗಳು—೧. ದರ್ಶನಾಚಾರ, ೨. ಜ್ಞಾನಾಚಾರ, ೩. ಚಾರಿತ್ರಾಚಾರ, ೪. ತಪಆಚಾರ, ೫. ವೀರ್ಯಾಚಾರ (ಜೈನಧ. ೯೯).

[ ಸಂ. (ತಪಸ್ + ಆಚಾರ) ]

**ತಪಆರಾಧನೆ** (ನಾ). [ಜೈನ] ನಾಲ್ಕುವಿಧವಾದ ಆರಾಧನೆಗಳಲ್ಲಿ ಒಂದು ; ಸಮ್ಯಗ್ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರ, ಸಮ್ಯಕ್ತಪ ಇವು ಆರಾಧನೆಯ ನಾಲ್ಕು ಅಂಗಗಳು : ಖ್ಯಾತಿ ಪೂಜಾಲಾಭ ಸತ್ಕಾರಾದಿಗಳೀ ತಪದಿಂದಕ್ಕುಮೆಂದು ಬಗೆಯದನಶನಾದಿ ತಪದೊಳ್ ನೆಗಟ್ದುದು ತಪ[ಪಾಠಾಂ. ಪಾ]ಆರಾಧನೆ (ಜೀವಸಂ. ೩-೮ ವ).

[ ಸಂ. ತಪಆರಾಧನಾ (ತಪಸ್ + ಆರಾಧನಾ) ]

**ತಪಂಗೆಯ್**, ತಪಗೆಯ್, ತಪಗೈ (ಕ್ರಿ). ತಪಸ್ಸನ್ನು ಆಚರಿಸು,-ಮಾಡು : ಪನ್ನೆರಡು ವರ್ಷಂಬರಂ ಗುರುಗಳನಗಲದೆ ತಪಂಗೆಯ್ದು (ವಡ್ಡಾರಾ. ೬-೨೪) ; ಕೈಲಾಸದೊಳೀಶ್ವರಂಗೆ ತಪಂಗೆಯ್ದು ಮೆಚ್ಚಿಸಿ ಬರಂಬಡೆದು ಪೋದಂ (ಪಂಪಭಾ. ೭-೩೨ ವ) ; ಆ ತಪೋವನದೊಳ್ . . . ತಪಂಗೆಯ್ಯುತ್ತಿರಲ್ (ಕಾದಂಪೂ. ೯೮೯) ; ವನಿತೆಯ ಮೇಗಾಲ್ಗಳ ಪಾಸಟಿಯಂ ನಾಮೆಯ್ದುವೆವೆಂದು ಮನದೊಳ್ ಭಾವಿಸಿ ನೀರ್ನೆಲೆ ಯೊಳಗಾ ದಿನದಿ ತಪಂಗೆಯ್ದುವು ಕೂರ್ಮಂ (ಜಯುಕಾ. ೩-೨೪).

**ತಪಗೆಯ್** : ತಪಗೆಯ್ವ ಮುಖ್ಯ ಋಷಿಯರ್ (ಮಂಗರಾ. ೭೬-೧೧) ; ನಿನ್ನಯ ಮೊಗನೋಡದೆ ತಪಗೆಯ್ವ ಶಿವನ ಗೂಢ ಹೃತ್ಕಮಲವನೊಡೆ ಯೆಚ್ಚು ನಿನಗೆ ಕೈಗೂಡದೆ ಬಿಡೆನೆಂದ ನಗುತ (ಮೋಹತ. ೨೫-೭).

**ತಪಗೈ** : ನಿಂತೆ ತಾಸಿನ ತಪಗೈದೆ ಪ್ರತ್ಯಕ್ಷವಾಯಿತು ಕಡೆಗೊಮ್ಮೆ ಆ ಬಸ್ಸು (ಇಂಚಾಪ. ೧೦೩-೫). [ ತಪ₃ + ಕೆಯ್₁ ]

**ತಪಂಗೊಳ್** (ಕ್ರಿ). ತಪಸ್ಸನ್ನು ಕೈಗೊಳ್ಳು,-ತೊಡಗು : ಕರ್ಮದ ತೊಡರಂ ಪಱಿವಂತೆ ಕೇಶಪಾಶಮನಂತಾಗಡೆ ಪಱಿದು ತಪಂಗೊಂಡಂ (ಆದಿಪು. ೬-೨೪) ; ಇತ್ತ ವೈದೇಹಿ ಪೃಥುಮತಿಕಂತಿಯರ ಪಕ್ಕದೆ ತಪಂ ಗೊಂಡು (ಪಂರಾಮಾ. ೧೬-೩೪ ವ). [ ತಪ₃ + ಕೊಳ್₁ ]

**ತಪಂಬಡು** (ಕ್ರಿ). ೧. = ತಪಂಗೆಯ್ : ಕುಮಾರ ಬ್ರಹ್ಮಚಾರಿಯಾಗಿ ಭದ್ರಬಾಹು ತಪಂಬಟ್ಟು (ವಡ್ಡಾರಾ. ೬೪-೨೩) ; ಈಗಳಿನ್ನ ತಪಂಬಟ್ಟ ಫಲಮುಂಟಕ್ಕುಮಪ್ಪೊಡೆ ವಿದ್ಯಾಧರನಪ್ಪೆನಕ್ಕೆ (ಆದಿಪು. ೨-೪೦ ವ) : ನೀನಿಲ್ಲಿ ತಪಂಬಡವೇಡ (ಧರ್ಮಾಮೃ. ೨-೨೦೦) ; ಒಡಲನೊಣಗಿಸಿ ಯುಗ ವಹ್ನಿಯ ನಡುವೆ ನಿಂದು ತಪಂಬಡದೆ . . . ಪಡೆದನಮಮ ನಿರಾಯಾಸ ದೊಳೀ ಮೃಡನ ಕರುಣವನು (ಬಸವು. ೪-೭೩). ೨. ತಾಪಪಡು : ರಾಗದ್ವೇಷಂ ತನಗುಂಟಾಗೆ ತಪಂಬಟ್ಟು ನಮೆವನವನಿನಿಸಾನುಂ ರಾಗ ದ್ವೇಷಂ ತನ್ನಿಂ ಪೋಗೆ ತಪಂಬಿಟ್ಟು ನಮೆವನವನಿನಿಸಾನುಂ (ಧರ್ಮಾಮೃ. ೫-೧೧೭). [ ತಪ₃ + ಪಡು₁ ]

**ತಪಂಬಡುಹ** (ನಾ). ತಪಸ್ಸನ್ನು ಮಾಡುವಿಕೆ ; ತಪಸ್ಸಿನ ಆಚರಣೆ : "ಪರಿವ್ರಜ್ಯಾ, ವ್ರತಾದಾನಂ, ಪ್ರವ್ರಜ್ಯಾ, ಗತಿಃ– ಈ ೪ ತಪಂಬಡುಹ" (ಹಲಾಯು. ೧೨೮-೯೧). [ ತಪಂಬಡು + – ಹ್ಯ ]

**ತಪಃಕ್ಲಾಂತ** (ಗು). ತಪಸ್ಸಿನ ಆಚರಣೆಯಿಂದ ಸೊರಗಿದ,-ಕೃಶವಾದ: ಬಿಸಿಲ್ಪಸುಳಿ ತನ್ನ ಕೋಮಲಕರದ ಕಿಸಲಯೋಪಮ ಮೃದುಲ ರೋಚಿಯ ಬೆರಲ್ಗಳಿಂ ಸೋಂಕಿ ಸಂತಯ್ಸಿದುದೊ ಸೀತೆಯ ತಪಃಕ್ಲಾಂತ ಚರಣಾರವಿಂದಂಗಳಂ (ಶ್ರೀರಾಮಾ. ೪೮೭-೯).

[ ಸಂ. (ತಪಸ್ + ಕ್ಲಾಂತ) ]

**ತಪಃಕ್ಲೇಶಸಹ** (ನಾ). ತಪಸ್ಸಿನ ಕಷ್ಟಗಳನ್ನು ನಿರ್ವಿಕಾರಭಾವದಿಂದ ಸಹಿಸಿಕೊಳ್ಳುವವನು ; ಇಂದ್ರಿಯನಿಗ್ರಹವುಳ್ಳ ತಪಸ್ವಿ : "ದಾಂತಃ, ತಪಃಕ್ಲೇಶಸಹಃ– ತಪಸ್ಸು ಮಾಡುವುದರೊಳಗುಂಟಾಗುವಂಥ ಕಷ್ಟವನ್ನು ಸಹಿಸಿಕೊಳ್ಳುವನ ಹೆಸರು" (ಸಿದ್ಧಾಂತಿ. ೧೯೭). [ ಸಂ. ]

**ತಪಃಪರೀಷಹ** (ನಾ). [ಜೈನ] ತಪಸ್ಸನ್ನು ಆಚರಿಸುವಾಗ ಸಹಿಸಿಕೊಳ್ಳ ಬೇಕಾದ ಬಿಸಿಲು, ಚಳಿ, ಹಸಿವು, ಬಾಯಾರಿಕೆ ಮೊದಲಾದ ಕ್ಲೇಶಗಳು : ಧೈರ್ಯಂ ಘೋರತಪಃಪರೀಷಹಸಮೂಹಪ್ರಾಪ್ತಿಯೊಳ್ . . . ಸಂಕ್ಷೋಭಿಪಾಚಾರ್ಯರ್ ತಾಮೆಮಗೀಗೆ ಸಪ್ತಪರಮಸ್ಥಾನೋದ ಯೋಪಾಯಮಂ (ಚಂದ್ರಪು. ೧-೩). [ ಸಂ. (ತಪಸ್ + ಪರೀಷಹ) ]

**ತಪಃಪ್ರಭಾವ** (ನಾ). ತಪಸ್ಸಿನ ಶಕ್ತಿ,–ಪ್ರಭಾವ : ಕುರಂಗಯೂಥದೊಳ್ ಬೆರಸಿದುವಂದು ಪೆರ್ಬುಲಿಗಳಿಂದ್ರತನೂಜತಪಃಪ್ರಭಾವದಿಂ (ಪಂಪಭಾ. ೭–೮೦) ; ಮುನೀಶಂಗೆ . . . ಎಜಗಿದನಸುರಂ ಸಂದೆಯಮೇನೆಜಗಿಸುವುದ ದೊಂದುಗ್ರತಪಃಪ್ರಭಾವಮೆಂತಪ್ಪರುಮಂ (ಜಗವಿ. ೨–೯೧) ; ಪೂಜ್ಯರಾದ ಕಣ್ವರು ತಪಃಪ್ರಭಾವದಿಂದ ಇದನ್ನೆಲ್ಲಾ ಬಲ್ಲರು (ಶಾಕುಂತ. ೧೧೫–೬). [ ಸಂ. (ತಪಸ್ + ಪ್ರಭಾವ) ]

**ತಪಃಶೀಲ** (ನಾ). ತಪೋನುಷ್ಠಾನದ ಪ್ರವೃತ್ತಿ ; ತಪಸ್ಸಿನಲ್ಲಿ ಆಸಕ್ತಿ : ಸಮ್ಯಕ್ತಪಃಶೀಲಜಾಲಂ ಪೊರೆದಂತೇವಾಸಿ ಭವ್ಯಾವಳಿಗತುಳ ತಪಃಶೀಲಮಂ ಮಾಡೆ ಲೋಕೋತ್ತರರಾದಾಚಾರ್ಯರೆಮ್ಮಂ ನಿಯಮಿಸುಗೆ ನಿಜಾನುಗ್ರಹ ಪ್ರೌಢಿಯಿಂದಂ (ಪುಷ್ಪಪು. ೧–೩). [ ಸಂ. (ತಪಸ್ + ಶೀಲ) ]

**ತಪಕೀರ** (ನಾ). (ಉಕ) ನಸ್ಯ ; ನಾಸೀಪುಡಿ : ಕೆಲವು ದಿನ ಗೋವಿಂದಭಟ್ಟ ವಾಡೆಯ ದೇವರಪೂಜೆಯನ್ನು, ತನ್ನ ತೈನಾತೀ, ತಪಕೀರ ಗುರುಭಟ್ಟನಿಗೆ ಒಪ್ಪಿಸಿದ್ದ (ದೀಪಹ. II, ೮) : ತಪಕೀರ ಗುರುಭಟ್ಟ ಪಂಥೇರು ಭಾರದ ಘಂಟೆಯನ್ನು ಎತ್ತಿ ಬಾರಿಸುತ್ತಾನೆ (ದೀಪಹ. II, ೮೯). [ ←ಮರಾ. ತಪಕೀರ್, ತಪಕೀಲ್ ]

**ತಪಕ್ಕನೆ** (ಅ). ಇದ್ದಕ್ಕಿದ್ದಂತೆ; ರಭಸದಿಂದ : ಅವನು ತಪಕ್ಕನೆ ಬಿದ್ದನು (ರೂಢಿ). [ ತಪಕ್$_0$ + – ಅನೆ$_1$ ]

**ತಪಗುಟ್ಟು** (ಕ್ರಿ). ಮರುಗು ; ಪರಿತಪಿಸು : ಕಾಲೇಜಿಗೆ ಹೊರಟಮೇಲೆ ಅವನ ಅಂತಃಕರಣವು, ತಮ್ಮನ್ನು ಬಿಟ್ಟು ಹೊರಟಿರುವ ತಾತನನ್ನು ನೆನಸಿಕೊಂಡು ತಪಗುಟ್ಟುತ್ತಿತ್ತು (ವಂಶವೃ. ೪೮೩). [ ತಪ್$_3$ + ಕುಟ್ಟು$_1$ ]

**ತಪಗುಡು** (ಕ್ರಿ). ಪೂರ್ತಿ ಒದ್ದೆಯಾಗು; ತೊಯ್ದು ನೀರು ತೊಟ್ಟಿಕ್ಕು: ಮಳೆಯಲ್ಲಿ ನೆನೆದು ತಪಗುಟ್ಟುತ್ತಾ ಬಂದ (ರೂಢಿ).

ತಪತಪಗುಡು (ದ್ವಿರುಕ್ತಿ) : ಹೆಚ್ಚಾಗಿ ಒದ್ದೆಯಾಗಿರು,–ನೀರು ಜಿನುಗುತ್ತಿರು : ಜವುಳುಭೂಮಿಯ ಹಾಗೆ ನೆಲವೆಲ್ಲವೂ ತೇವಿನಿಂದ ಯಾವಾಗಲೂ ತಪತಪಗುಡುತ್ತಿತ್ತು (ಮೂಪಾಸಾ. ೬೩). [ ತಪ್$_1$ + ಕುಡು$_1$ (<ಕೊಡು$_1$) ]

**ತಪಗೆಡಿಸು** (ಕ್ರಿ). ತಪಸ್ಸನ್ನು ಕೆಡಿಸಂ ; ತಪೋಭಂಗವಮಾಡು : ನಿನ್ನಾಳ್ದ ನೆನ್ನಯ ತಪಗೆಡಿಸಿದ ಕಾರಣದಿಂದ ಕಿಡಿಸುರಿವಕ್ಷಿಯಿಂದುರುಹಿದೆ (ಮೋಹತ. ೮–೨೯). [ ತಪ$_3$ + ಕೆಡಿಸು$_1$ ]

**ತಪಗೆಡು** (ಕ್ರಿ). ತಪಸ್ಸು ಕೆಡು; ತಪೋಭಂಗವಾಗು: ನಿಷ್ಕಾಮಾತುರರು ದುಂಡುಮಲ್ಲಿಗೆಗೋಲು ತಾಗಲು ತಪಗೆಟ್ಟು ಬೆಂಡಾದರತಿವಿರಹದಲಿ (ಮೋಹತ. ೨೪–೨೨). [ ತಪ$_3$ + ಕೆಡು$_1$ ]

**ತಪಗೆಯ್** 'ತಪಂಗೆಯ್' ನೋ.

**ತಪಗೇಡಿ** (ನಾ). ತಪಸ್ಸನ್ನು ಕೆಡಿಸುವವನು,–ಭಂಗಗೊಳಿಸುವವನು : ತಪಗೇಡಿಯನು ಬಿಡದೆಬ್ಬಿಸೆಮುಗೆಡೆಮಾಡಿ ಕೊಡಬೇಕು (ಕುವ್ಯಾ. ಆ. ೫–೨೨). [ ತಪ$_3$ + ಕೇಡಿ$_1$ ]

**ತಪಗೈ** 'ತಪಂಗೆಯ್' ನೋ.

**ತಪಚ್ಚಲೆ** (?). (?) : ಅನೇಕಶೀಲಗುಣದೊಪ್ಪಿದೊರಿನ್ತು ಲೆಕ್ಕಿಸದುಮ್ ನೆನೆಗೆನ್ದೊರು ಮುನಿಯಿಂದಲ್ತಪಚ್ಚಲೆ ನೋನ್ತು ತಾಮ್ ತಮಗೆ ಮೃತ್ಯುವರವಾನಱಿದಂ ಶ್ರೀಪುತ್ತಿಯ × × × (ಎಕ. II, ೧೧೫–೨ : ಸು. 700). [ ? ]

**ತಪಟೆ** 'ತಂಬಟ' ನೋ.

**ತಪತಪನೆ** (ಅ). 'ತಪತಪ' ಎಂದು ಸದ್ದಾಗುವಂತೆ; ನೀರಂ ತೊಟ್ಟಿಕ್ಕುವಂತೆ : ಬೇವಿನ ಮರದ ಕೆಳಗೆ ಒಂದೆರಡು ಜೀವಿಗಳು ತಪತಪನೆ ತೋಯಿಸಿಕೊಂಡರೂ ಬೇರೆ ಕಡೆಗೆ ಹೋಗಲಾರದೆ . . . ಅಲ್ಲಿಯೇ ನಿಂತಿವೆ (ಮುಗಿಮ. ೪). [ <ತಪ$_1$ + – ಅನೆ$_1$ ]

**ತಪತಿ** (ನಾ). (ವಿಂಧ್ಯಪರ್ವತದಲ್ಲಿ ಹುಟ್ಟಿ, ಪಶ್ಚಿಮಕ್ಕೆ ಮಂಹಾರಾಷ್ಟ್ರದಲ್ಲಿ ಹರಿಯುವ) ಒಂದು ನದಿಯ ಹೆಸರು: ಕನ್ಯಾರಾಶಿಯ ನಕ್ಷತ್ರಗಳು ನರ್ಮದಾ ತಪತೀನದಿಗಳಂತೆ ಎರಡು ಸಮಾನಾಂತರ ತಾರಾಪ್ರವಾಹಗಳಾಗಿ ಆಕಾಶದಲ್ಲಿ ಹರಿಯುತ್ತಿರುವಂತೆ ಕಾಣುತ್ತವೆ (ನಕ್ಷತ್ರ. ೬೪). [ ಸಂ. ತಪತೀ ]

**ತಪನ** (ಗು). ೧. ಬಿಸಿಯನ್ನುಂಟುಮಾಡುವ; ಕಾಯಿಸುವ ; ಸುಡುವ. (ನಾ). ೨. ಸೂರ್ಯ : "ರವಿ ಮಾರ್ತಂಡಂ ಪತಂಗಂ ತಪಿ ತಪನನಿನಂ ಭಾನು ಪೂಷಂ . . . ತರಣಿ ಸಪ್ತಾಶ್ವನಾದಿತ್ಯನಕ್ಕುಂ" (ವಸ್ತುಕೋ. ೧೧–೬೪) ; ಶ್ರೀಮದುದಯಾದ್ರಿಶಿಖರೋದ್ಭಾವೋದಯ ತಪನವಿಭವರೂಪಂ (ಸೌಇಇ. XX, ೧೪–೧೪; 980) ; ರಾಜವೆಸರಂ ಚಂದ್ರಂಗೆ ತೀವ್ರಪ್ರತಾಪದ ಪೆರ್ಚಂ ತಪನಂಗೆ . . . ಸೈರಿಸುವಂ ಪೆಱಂಗೆ ಪೆಱತೇಂ ಲಂಕೇಶ್ವರಂ ಸೈರಿಸಂ (ಪಂರಾಮಾ. ೧೧–೨೩೫) ; ಸುರನದಿಯಲ್ಲಿ ಮಿಂದು ಸುರಮಾರ್ಗ ಕಚೌಘಮನೆಯ್ದೆ ಬಿರ್ಚಿ . . . ತಪನಾತಪದಾಱಿಸಿ (ರಾಜಶೇ. ೩–೫). ೩. ಪರಿತಪಿಸುವುದು; ದುಃಖಿಸುವುದು. ೪. [ಜೈನ] ಒಂದು ನರಕಬಿಲದ ಹೆಸರು : ವಾಲುಕಾಪ್ರಭೆಯೊಳ್ ತಪ್ತ ತಪಿತ ತಪನ ತಾಪನ ವಿತಾನ ಉಜ್ವಲ ಪ್ರಜ್ವಲ . . . ಪ್ರಕೀರ್ಣಕವಿಕಲ್ಪದಿಂ ಪಂಚ ದಶಲಕ್ಷಬಿಲಂಗಳಪ್ಪುವು (ತತ್ತ್ವಪ್ರ. ೧೨೦). [ ಸಂ. ]

**ತಪನಕರ** (ನಾ). ಸೂರ್ಯನ ಕಿರಣ : ತಪನಕರಂ ತನುಗಳನುರ್ಚಿ ಪೋಗೆ (ಆದಿಪು. ೧೧–೫೦). [ ತಪನ + ಕರ$_3$ ]

**ತಪನಕುಲ** (ನಾ). ಸೂರ್ಯವಂಶ : ತಪನಕುಲದ ವಿಜಯಶ್ರೀಯೊಪ್ಪೆ (ಹಹಕಾ. ೧೨–೩೦ ರಗಳೆ): ನೆನೆ ನೈಜಧರ್ಮಮಂ ಜನ್ಮದುದ್ದೇಶಮಂ, ತಪನಕುಲನೃಪಸೂನು (ಶ್ರೀರಾಮಾ. ೧೭೦–೪೮೭). [ ತಪನ + ಕುಲ ]

**ತಪನತನುಜ** (ನಾ). ಸೂರ್ಯನ ಮಗ; ಸುಗ್ರೀವ : ಬರಬರಲು ತಪನತನುಜನ ಕಂಡು ಮನದಲಿ ತಪಿಸಿ (ತೊರರಾ. ೬–೨೫–೩೦). [ ತಪನ + ತನುಜ ]

**ತಪನತಪ್ತ** (ಗು). ಸೂರ್ಯನ ಕಿರಣಗಳಿಂದ ಕಾಯ್ದ ; ಬಿಸಿಲಿನಿಂದ ಕಾಯ್ದ : ನಿಂದ ಶಿಲೆ ತಪನತಪ್ತಮಿದೆಂದಂಬುಜನಿಳಯೆ ಪದ್ಮವಿಷ್ಟರಮಂ ಕುಂದೇಂದು ಧವಳಾತಪತ್ರಮನಂದು ಕೃತೇಚ್ಛಂಗೆ ಪಡೆದು ಪದೆಪಂ ಮೆಱೆದಳ್ (ಆದಿಪು. ೯–೮೫) ; ಪದತಳಸರೋಜಮಂ ತಪನ ತಪ್ತ ಶಿಖಿರಾಗ್ನಿ . . . ಸುಡೆ (ಸುಕುಮಾ.೪–೧೪). [ ತಪನ + ತಪ್ತ ]

**ತಪನಬಿಂಬ** (ನಾ). ಸೂರ್ಯಮಂಡಲ : ತಪನಬಿಂಬಮದೊಪ್ಪುತಿರಲಾ ತಪನ ಸರ್ವವ್ಯಾಪ್ತನಾದೊಲು (ಗಗತಾ. ೧೪–೪೫). [ ತಪನ + ಬಿಂಬ ]

**ತಪನಸುತ** (ನಾ). ೧. ಸೂರ್ಯನ ಮಗ; ಕರ್ಣ: ತಪನಸುತಂ ಬೇಱಾಂ ಬೇಱೆ (ಗದಾಯು. ೨–೨೦). 'ತಪನಸುತನಂದನ' ಪರಾ. ೨. ಯಮ. ೩. ಶನಿ. ೪. ಸುಗ್ರೀವ. [ ತಪನ + ಸುತ ]

**ತಪನಸುತನಂದನ** (ನಾ). ಕರ್ಣನ ಮಗ; ವೃಷಕೇತು : ತಪನಸುತ ನಂದನ ಸುಧನ್ವರ್ಗೆ ಕಾಳೆಗಂ ಪೂಣ್ದುದಾಡಂಬರದೊಳು (ಜೈಮಿಭಾ. ೧೨ ಸೂಚನೆ). [ ತಪನಸುತ + ನಂದನ ]

**ತಪನಾತಪ** (ನಾ). ಸೂರ್ಯನ ಬೆಳಕು; ಕಡುಬಿಸಿಲು; ಸುಡುಬಿಸಿಲು: ತಪನಾತಪದಿಂ ಚೇಷ್ಟಾಕ್ಷಪಣೆಯನೊಳಕೊಂಡು (ಪಂರಾಮಾ. ೭–೯೫) ; ಚಪಳಾಕ್ಷಿಯರಾ ಗಿರಿಯೊಳ್ತಪನಾತಪಮೆಯ್ದೆ ಸುಟ್ಟೊಡಿರಲಾಱದೆ ಪಾಱಿ (ರಾಜಶೇ. ೧–೧೧೫). [ ತಪನ + ಆತಪ ]

**ತಪನಾಸ್ತ್ರ** (ನಾ). ಸೂರ್ಯಾಸ್ತ್ರ: ಇಸೆ ತಮದಂಬಿನಿಂ ದಶಮುಖಂ ತಪನಾಸ್ತ್ರದಿನದ್ರಿಬಾಣದಿಂದಿಸೆ ದನುಜಾಧಿಪಂ ಕುಲಿಶಸಾಯಕದಿಂ . . . ತಱಿದಂ ಗದಾಯುಧಂ (ಪಂರಾಮಾ. ೧೪–೧೬೦). [ ತಪನ + ಅಸ್ತ್ರ ]

**ತಪನೀಯ** (ಗು.) ೧. ಕಾಯಿಸಬೇಕಾದ ; ಬಿಸಿಮಾಡಬೇಕಾದ. (ನಾ). ೨. ಬಂಗಾರ ; ಚಿನ್ನ ; ಸುವರ್ಣ : "ಹೇಮ, ಸ್ವರ್ಣಂ . . . ಚಾಮಿಕರಂ, ಕರ್ಬುರಂ, ತಪನೀಯಂ – ಈ ೨೫ ಹೊನ್(ಪೊನ್)" (ಹಲಾಯು. ೫೯–೨೦); ಹೇಮಾರ್ಜುನ ತಪನೀಯ ವೈಡೂರ್ಯ ವಜ್ರರಜತ ಹೇಮಮಯಂಗಳುಂ (ಆದಿಪು.೧–೪೮ವ); ಬೀಟಿವೀಟಿ ತಪನೀಯಗೋಪುರ ದ್ವಾರದಿಂ ರತ್ನಚೂರ್ಣಘಟಿತಮುಂ (ಅಜಿಪು. ೬–೨೦ವ) : ಮುನಿಯಂ ತಪನೀಯಸರೋಜರಾಜಿಯಿಂ ಪೂಜಿಸಿದಳ್ (ಮಲ್ಲಿಪು. ೪–೪೫). [ ಸಂ. ]

**ತಪನೀಯರೇಖೆ** (ನಾ). ಚಿನ್ನದ ಗೆರೆ ; ಸುವರ್ಣರೇಖೆ : ಆಯಿದನು ಶಸ್ತ್ರಾಸ್ತ್ರದಲಿ ದಿವ್ಯಾಯುಧವನರೆಬಳಿದ ವರ ತಪನೀಯರೇಖೆಯು ಕುಣಿವ ಗಂಟೆಯು ಹೊಳೆವ ಹೊಂಗಟ್ಟಿಯು . . . ಶಕ್ತಿಯನು ನೃಪತಿ (ಕುವ್ಯಾ.ಶ. ೩–೬೫). [ ತಪನೀಯ + ರೇಖೆ ]

**ತಪನೀಯಸಾನು** (ನಾ). (ಮೇರುಪರ್ವತದ) ಚಿನ್ನದ ಶಿಖರ : ಇದಱ ತಪನೀಯ ಸಾನುಗಳ್ ಜನಸವನಗಂಧೋದಕಂಗಳಿಂ ಪೂವಲಿಯಂ ಮುದದೆ ತಲೆಯೊಳ್ ಪೊತ್ತಂತಿರ್ಪುವು (ಶಾಂತಿಪು. ೧೦–೬೭). [ತಪನೀಯ+ಸಾನು]

**ತಪನೀಯಸೂತ್ರ** (ನಾ). ಚಿನ್ನದ ಎಳೆ : ತಪನೀಯಸೂತ್ರದೊಳ್ . . . ಬ್ರಹ್ಮಸೂತ್ರಾಭಿಧಾನ ಯಜ್ಞೋಪವೀತದಿಂ ಪವಿತ್ರಗಾತ್ರರ್ಮಾಡಿ (ಆದಿಪು. ೧೫–೧೧ ವ). [ ತಪನೀಯ + ಸೂತ್ರ ]

**ತಪನೆ** (ನಾ). ತಾಪ ; ಕಷ್ಟ ; ದುಃಖ ; ಕ್ಲೇಶ : ಸುರಪಸಭೆಯಲಿ ಗಾಧಿಸುತ ವಸಿಷ್ಠಸ್ಪರ್ಧೆ ಧರೆಯೊಳದರಿಂ ಹರಿಶ್ಚಂದ್ರಂಗೆ ತಪನೆ (ಮುಂಕುಕ. ೩೦೭); ಹೇಳಲಾಗದ ಹಸಿವು, ತಾಳಲಾಗದ ತಪನೆ (ಮುಂಕುಕ. ೩೫೦). [ ಸಂ. ತಪನ ]

**ತಪನೋದಯ** (ನಾ). ಸೂರ್ಯೋದಯ: ಪರಮ ತಪಸ್ತಪನೋದಯಾ ಚಳಾಯಮಾನರನುಭಯಸಮಾನರಂ . . . ಕಂಡು (ಸುಕುಮಾ. ೯–೧೦೮ ವ) ; ರಾಮಭುಜಪ್ರತಾಪ ತಪನೋದಯ ಶೈಲಮುಪಾಂತ ಪರ್ವತಸ್ತೋಮಸಮನ್ವಿತಂ ಬರುತುಮಿರ್ದಪುದೆಂಬಿನೆಗಂ (ಪಂರಾಮಾ. ೧೧–೧೬೦). [ ತಪನ + ಉದಯ ]

**ತಪನೋಪಲ** (ನಾ). ಸೂರ್ಯಕಾಂತ ಶಿಲೆ. 'ತಪನೋಪಲಪುತ್ರಿಕೆ' ಪರಾ. [ ತಪನ + ಉಪಲ ]

**ತಪನೋಪಲಪುತ್ರಿಕೆ** (ನಾ). ಸೂರ್ಯಕಾಂತಶಿಲೆಯ ಪ್ರತಿಮೆ : ಅನಲವನಿತೆಯಂತೆ ಕನಲ್ದು ಬಿಸಿಲೇಱದ ತಪನೋಪಲಪುತ್ರಿಕೆಯಂತೆ ಕಾಯ್ದು (ಲೀಲಾವ. ೧೪–೩೩ ವ). [ ತಪನೋಪಲ + ಪುತ್ರಿಕೆ ]

**ತಪಮಾನ್** (ಕ್ರಿ). = ತಪಂಗೊಳ್ : ಪಡೆ ನೀಂ ಪಾಶುಪತಾಸ್ತ್ರಮಂ ಗಿರಿಶನಿಂ ಪೋಗಿಂದ್ರಕೀಲಕ್ಕೆ ಪೆಂಪಿಡರ್ದುದ್ಯತ್ತಪಮಾಂಪುದೆಂದು ಬೆಸನಿತ್ತಂ ವ್ಯಾಸಂ (ಶಬಶಂ. ೨–೧೧೭). [ ತಪ್ $_3$ + ಆನ್ $_1$ ]

**ತಪಮಿರ್** (ಕ್ರಿ). = ತಪಂಗೆಯ್ : ರಿಪುಜಯ ಕಾರಣಶರಮಂ ಪ್ರಪತ್ತಿಯಿಂ ಪಡೆವೆನೆಂದು . . . ತಪಮಿರ್ದಪಂ (ಶಬಶಂ. ೨–೧೧೭) ; ಪೆರರ್ ಮುನೀಂದ್ರರೊಲ್ದಾವುದ ಕಾಂಕ್ಷಿಪರ್ ತಪಗಳಿಂ ತಪಮಿರ್ದಪರಲ್ಲಿ ತಾಮಿವರ್ (ಶಾಕುಂತ. ೧೦೩–೧೭೫). [ ತಪ್ $_3$ + ಇರ್ ]

**ತಪಯೋಗ** (ನಾ). ತಪಸ್ಸಿನ ಸಂಬಂಧ : ತಪಸಿಗೆ ಪಿಂಗುವವೋಲಾ ತಪಯೋಗಂ ತಿಣ್ಣಮಾದ ರಾಗೋದಯದಿಂ ತಪನಂಗೆ ಪಿಂಗಿದತ್ತಾತಪ ಯೋಗಂ ತಿಣ್ಣವಾಗೆ ಸಂಧ್ಯಾರಾಗಂ (ಪಂರಾಮಾ. ೧೦–೧೭೮) ; ಅನುಕೂಲ ವರ್ತನೆ ಸರಸ್ವತಿಗಾ ತಪಯೋಗದೊಳ್ಪೊಡಂಬಡೆ ಶರದಾಗಮಂ ನೆನೆಯಿಸಿ ದತ್ತು ಜಿನಾಗಮ ದಿವ್ಯಯೋಗಿಯಂ (ಮಲ್ಲಿಪು. ೮–೧೧೯). [ತಪ್ $_3$+ಯೋಗ]

**ತಪರಾಕಿ,** ತಪರಾಕು, ತಪರಾಕೆ (ನಾ). (ಉಕ) ಅಂಗೈಯಿಂದ ಕೆನ್ನೆಗೆ ಕೊಡುವ ಏಟು ; ಕಪಾಳಮೋಕ್ಷ : ಕುಡಚಿಯು ತೆಪ್ಪಗಾಗಿ ಕುಳಿತ, ಒಂದು 'ತಪರಾಕಿ' ಹೊಡೆಯಿಸಿ ಕೊಂಡವನಂತೆ (ಸಮುಜೀ. ೧೧೪೬); ನಾಲ್ಕು ತಪರಾಕಿ ಕೊಡಬೇಕು ಎನಿಸುತ್ತದೆ (ಪದ್ಮಸ. ೨೦೨); ಈ ಸಲವೇನೊ ನನ್ನ ಕೈಯಿಂದ ತಪರಾಕಿ ತಿಂದೆ (ಹೊಸಕ್ಷಿ. ೫೦). **ತಪರಾಕು :** ಅಂಗೈ ಯಿಂದ ಕೊಟ್ಟ ಏಟು, ಅಪ್ಪಳಿಕೆ, ತಪರಾಕು (Smack. ಇಂಕನಿ.). **ತಪರಾಕೆ :** ಎಲ್ಲಿಯಾದರೂ ರಾಕ್ಷಸರು ಕಂಡರೆ ಅವರಿಗೊಂದೊಂದು ತಪರಾಕೆ ಕೊಟ್ಟು ಅವರ ಪ್ರಾಣಹರಣ ಮಾಡುತ್ತಿದ್ದರು (ತುಳಸಿ. ೨೫೮).

[ ←ಮರಾ. ತಪರಾಕ್, ಚಪರಾಕ್ ]

**ತಪರಾಕು** 'ತಪರಾಕಿ' ನೋ.

**ತಪರಾಕೆ** 'ತಪರಾಕಿ' ನೋ.

**ತಪರು** (ನಾ). ಜೊಳ್ಳು ; "ಅವರೆ ಮುಂತಾದ ಕಾಯಿಂಗಳು ಹಣ್ಣಾಗು ವುದಕ್ಕೆ ಮೊದಲೇ ಒಣಗಿ, ಒಳಗೆ ಏನೂ ಇಲ್ಲದಿರುವುದು" (ನನ್ನೂರು. ಟಿಪ್ಪಣಿ) : ನಾನು ಫಹಣಿ ಬರೆದದ್ದು ಕಾರಬ್ಬಕ್ಕೆ ಇನ್ನೂ ಹದಿನೈದು ದಿನ ಇದೆ ಅನ್ನುವಾಗ, ಆಗ ಅದರಲ್ಲಿ ಒಂದು ತಪರೂ ಇರಲಿಲ್ಲ (ನನ್ನೂರು. ೦೬೩). [ ? ]

**ತಪರ್ಲೋಕ** (ನಾ). = ತಪೋಲೋಕ : ಲಲಾಟದಲ್ಲಿ ತಪರ್ಲೋಕ ಮೂರ್ಧ್ನಿಯಲ್ಲಿ ಸತ್ಯಲೋಕ (ಅಖಂಡೇ. ೧೬೨–೧೨೪).

[ <ಸಂ. ತಪೋಲೋಕ ]

**ತಪಲೆ** 'ತಪ್ಪಲೆ' ನೋ.

**ತಪಶೀಲ** 'ತಪಸೀಲು' ನೋ.

**ತಪಶೀಲು** 'ತಪಸೀಲು' ನೋ.

**ತಪಶೀಲುವಾರು** (ಗು). ವಿವರಗಳನ್ನು ಅನುಸರಿಸಿರುವ; ವಿವರಗಳ ಮೇರೆಗೆ ಇರುವ : ಅದರ ಬಗ್ಗೆ ತಪಶೀಲುವಾರು ಅನುಕ್ರಮಣಿಕೆಯನ್ನು ಕೊಟ್ಟಿರುತ್ತದೆ (ಮುಂಬವ್ಯಾ. ೩ ಪ್ರಸ್ತಾವನೆ). [←ಮರಾ. ತಪಶೀಲವಾರ್]

**ತಪಶ್ಚರಣ** (ನಾ). ತಪಸ್ಸನ್ನು ಆಚರಿಸುವುದು ; ತಪಸ್ಸಿನ ಆಚರಣೆ : ಬಾಹುಬಲಿಕುಮಾರಂ ತಪಶ್ಚರಣನಿಶ್ಚಳ ನಿಶ್ಚಯಮನನಾದಾಗಳ್ (ಆದಿಪು. ೧೪–೧೩೦ ವ) ; ಮಹಾತ್ಮಂ ಸಕಳದುರಿತಹರಣಕರಣಕಾರಣ ತಪಶ್ಚರಣ ಪರಿಣತಾಂತರಂಗನಾಗಿ (ಸುಕುಮಾ. ೧೧–೮೩ ವ).

[ ಸಂ. (ತಪಸ್ + ಚರಣ) ]

**ತಪಶ್ಚರಣೆ** (ನಾ). = ತಪಶ್ಚರಣ : ಎಮುಗಾವಂದದಿಂ ನೀವೊರೆದು ನೋಡು ವಡಿದು ತಪಶ್ಚರಣೆ (ಬಸವು. ೦೨–೨೯). [ ಸಂ. ತಪಶ್ಚರಣ ]

**ತಪಶ್ಚರಿತ** (ನಾ). = ತಪಶ್ಚರಣ: ಮಱಿಯದ ಘೋರದುಶ್ಚರ ತಪಶ್ಚರಿತಂ ಮಳಧಾರಿದೇವರ (ಎಕ. II, ೧೧೭–೯೨; 1123). [ಸಂ. (ತಪಸ್ + ಚರಿತ)]

**ತಪಶ್ಚರಿಯ** (ನಾ). = ತಪಶ್ಚರಣ : ವನದೊಳೊಬ್ಬನು ಕೌಶಿಕಾಹ್ವಯ ಮುನಿ ತಪಶ್ಚರಿಯದಲಿ . . . ಇದ್ದನು (ಕುವ್ಯಾಕ. ೧೭–೧೪).

[ <ಸಂ. ತಪಶ್ಚರ್ಯಾ ]

**ತಪಶ್ಚರ್ಯೆ** (ನಾ). = ತಪಶ್ಚರಣ: ಮೊದಲೇ ತಪಶ್ಚರ್ಯೆಯಿಂದ ಪೀಡಿತ ವಾದ ತಂದೆಯ ಶರೀರವು . . . ಬಹಳವಾಗಿ ಕಳವಳಪಡುವುದು (ಶಾಕುಂತ. ೫೮–೧೭). [ ಸಂ. ತಪಶ್ಚರ್ಯಾ ]

**ತಪಸ,** ತವಸ (ನಾ). ಒಂದು ಬಗೆಯ ಮರ ; ತಾಪಸತರು ; ಇಂಗುದೀ ವೃಕ್ಷ : "ಸಂಯಮನಮೆನಲು ತಪಸಂ" (ಮಂಗರಾ ೩೪–೯) ; ತಪಸದ ಚಿಗುರಂ ತಂದು ಏಳು ಹಸಿಯಮಣಸಿನ ಸಕ್ಕೆ . . . ಅರೆದು ಹಳೇ ನೀರೊಳಗೆ ಔಷಧಿಯ ತೆಗೆದುಕೊಂಬುದು (ವಿವೈವಿ. ೯೫) ; ತಪಸದ ಎಲೆ, ಕರಿಬೇವಿನ ಸೊಪ್ಪು . . . ಮೊಸರ ನೀರಲ್ಲಿ ಕೊಡಿಸಲು ಗುಲ್ಮ, ಮಹೋದರ . . . ಇವಿಷ್ಟು ಪರಿಹರ (ವೈದ್ಯಸಾ. I, ೩೦೦). **ತವಸ :** "ಮಾತೃವೃಕ್ಷ – ತವಸ, ಹೊಂಗೆ" (ಔಷಧಿ. ೦೨೪) ; ಹುಲಿಗಿಲಬೇರ್ತವಸದ ತಿಗುಡು ಲಕ್ಕಿ ಕಡಸಿಗೆಯ ಬೇರ್ (ಕಲ್ಯಾಕಾ. ೪–೨೨). 'ತವಸಿ' ಪರಾ.

[ <ತವಸಿ ]

**ತಪಸಿ** 'ತವಸಿ' ನೋ.

**ತಪಸಿಗ** 'ತವಸಿಗ' ನೋ.

**ತಪಸಿಗಿಡ** (ನಾ). ಒಂದು ಬಗೆಯ ಗಿಡ: "ಪ್ರಕೀರ್ಯಃ, ಪೂತಿಕರಜಃ ಪೂತಿಕಃ, ಕಲಿಕಾರಕಃ – ೪ ತಪಸೀಗಿಡದ ಹೆಸರು" (ಸಿದ್ಧಾಂತಿ. ೧೦೪).
[ ತಪಸಿ (<ತವಸಿ) + ಗಿಡ (<ಗಿಡು) ]

**ತಪಸಿರ್** (ಕ್ರಿ). ತಪಸ್ಸಿನಲ್ಲಿ ತೊಡಗಿರು; ತಪಸ್ಸನ್ನಾಚರಿಸು: ವನದೊಳು ತಪಸಿರ್ದ ವಿಶ್ವಾಮಿತ್ರನ ಘನಮೋಹಪಾಶದೆ ಬಿಗಿದು ಮನಸಿಜನಲೆಗೈದಿಸಿದಳೂರ್ವಶಿ (ಕಂನವಿ. ೯–೧೪೭). [ ತಪಸು (<ತವಸು) + ಇರ್$_1$ ]

**ತಪಸೀಲು,** ತಪಶೀಲ, ತಪಶೀಲಂ, ತಪ್ಸೀಲು (ನಾ). ೧. ವಿವರ, ವಿವರಣೆಗಳಿಂದ ಕೂಡಿದ ಹೇಳಿಕೆ; ನಿರೂಪಣೆ: (ಮ್ಯಗೆಜಿ. IV, ೭೪೭): ಸರಕಾರದಿಂದ ದೊರೆತ ಬಿರುದು ಮೊದಲಾದುವುಗಳ ತಪಸೀಲು (ಗುರುದ. ೧೦). ೨. ಯಾದಿ; ಪಟ್ಟಿ. **ತಪಶೀಲ:** ೧. ವಜಾ ಜಾರಿಯ ನಾಮತಿ ಸದರಿ ತಪಶೀಲ ಮೇರಿಗೆ (ಮ್ಯಆರಿ ೧೯೩೯, ೪೨–೬೦: 1825). **ತಪಶೀಲು:** ೧. ಶಾಸನಸಂಸ್ಥೆಯು ಸಾಮಾನ್ಯವಾಗಿ ಅವಸರದಲ್ಲಿ ಕೆಲಸ ಮಾಡುತ್ತದೆ, ಅದಕ್ಕೆ ಆಡಳಿತದ ತಪಶೀಲುಗಳು ಸಂಪೂರ್ಣವಾಗಿ ತಿಳಿದಿರುವುದಿಲ್ಲ (ರಾಜ್ಯಶಾ. ೩೪೭); ಆಯಾ ಬಾಬಿಗೆ ತಂದ ಸಾಮಾನುಗಳ ಖರ್ಚಿನ ತಪಶೀಲನ್ನು ಪರಿಶೀಲಿಸಿ ಕೊಟ್ಟು ತೆಗೆದುಕೊಳ್ಳುವ ಕೆಲಸವೂ ಸಾಗಿತ್ತು (ಚಿತಸ. ೭೪). **ತಪ್ಸೀಲು:** ಈ ವಿದ್ಯಮಾನದ ತಪ್ಸೀಲು ರಿಪೋರ್ಟನ್ನು ತರಿಸಿಕೊಂಡು . . . ಪ್ರಸಿದ್ಧಿಪಡಿಸಿದರು (ಮಹಾವಂ. II, ೭); ಯಾವುದಾದರೂ ಲೆಕ್ಕಕ್ಕೆ ತಪ್ಸೀಲು ಕೊಡಿ ಅಂದರೆ ಕೊಡುತ್ತಿರಲಿಲ್ಲ (ನನ್ನೂರು. ೧೮೨).
[ ←ಅರ. ಹಿಂ. ತಫ್‌ಸೀಲ್; ಮರಾ. ತಪಶೀಲ್, ತಪಸೀಲ್ ]

**ತಪಸೀಲುವಿಚಾರಣೆ** (ನಾ). ಕೂಲಂಕಷವಾದ ವಿಚಾರಣೆ: (ಅಧಿಕಾರಿ ಅಥವಾ ನ್ಯಾಯಾಧಿಕಾರಿ ನಡಸುವ) ಕ್ರಮಬದ್ಧ ವಿಚಾರಣೆ; ತಪಸೀಲು ವಿಚಾರಣೆ (Inquisition. ಇಂಕನಿ.). [ ತಪಸೀಲು + ವಿಚಾರಣೆ ]

**ತಪಸು** 'ತವಸಂ' ನೋ.

**ತಪಸುದಾಳ್,** ತಪಸಂದಾಳು (ಕ್ರಿ). ತಪಸ್ಸನ್ನು ಕೈಕೊಳ್ಳು: ನೊಂದವರ್ತಪಸುದಾಳ್ದರು (ಭರಜ. ೪೭–೧೦). **ತಪಸುದಾಳು:** ಮುನ್ನೆನ್ನೊಬ್ಬ ತಂಗಿ ಕೈಲಾಸದೊಳ್ತಪಸುದಾಳಿದಳು (ಭರಜ. ೩೫–೮೭).
[ ತಪಸು (<ತವಸು) + ತಾಳ್$_1$ ]

**ತಪಸುದಾಳು** 'ತಪಸಂದಾಳ್' ನೋ.

**ತಪಸ್ತಪ್ತ** (ನಾ). ತಪಸ್ಸಿನಿಂದ ಕ್ಲೇಶಗಳಿಗೆ ಒಳಗಾದವನಂ; ತಪಸ್ಸು ಮಾಡಿದವನು: ಕಂತುವೆ ತಾಂ ಪದ್ಮೋದ್ಭವತ್ವಂಬಡೆದುಲಿದು ತಪಸ್ತಪ್ತನಾಕಾಂತೆಯಂ ಸಾರವಿಲಾಸಾಕ್ರಾಂತೆಯಂ ನಿರ್ಮಿಸಿ ಜಯಿಸಿದನಿಂ ಬಣ್ಣಿಸಲ್ ಬಲ್ಲನಾವಂ (ಪುಷ್ಪಪು. ೩–೨೩). [ ಸಂ. (ತಪಸ್ + ತಪ್ತ) ]

**ತಪಸ್ಥೆ** (ನಾ). ತಪಸ್ಸಿನಲ್ಲಿ ತೊಡಗಿದವಳಂ; ತಪೋನಿರತೆ: ಹನುಮನರಸಿಯರೆಲ್ಲಂ ಸುಮತಿಗಂತಿಯರ ಪಕ್ಕದೊಳ್ ತಪಸ್ಥೆಯರಾದರ್ (ಪಂರಾಮಾ. ೧೭–೪೨ ವ). [ ಸಂ. ತಪಸ್ಸ್ಥಾ ]

**ತಪಸ್ಯ** (ನಾ). ಫಾಲ್ಗುಣಮಾಸ: "ಫಾಲ್ಗುಣಮಾಸಮಂ ತಪಸ್ಯವೆಂಬುದು" (ಹಲಾಯು. ೧೯–೧೧೪). [ ಸಂ. ]

**ತಪಸ್ಯೆ** (ನಾ). ತಪಸ್ಸು: ಜಯಿಸುಗೆ ರಸತಪಸ್ಯೆ ದೊರೆಕೊಳುಗೆ ಚಿರಶಾಂತಿ ಸಿರಿಗನ್ನಡಂ ಗೆಲ್ಗೆ (ಶ್ರೀರಾಮಾ. ೬–೧೩೪).
[ ಸಂ. ತಪಸ್ಯಾ ]

**ತಪಸ್ವಿ** (ನಾ). ೧. ತಪಸ್ಸನ್ನಾಚರಿಸುವವನು; ಋಷಿ: "ಪರಾಶರೀ. ಬ್ರತೀ, ಭಿಕ್ಷುಃ, ಮಸ್ಕರೀ, ಪಾರಿರಕ್ಷಕಃ, ಪಾರಿವ್ರಾಜಕಃ, ತಪಸ್ವೀ, ಕರ್ಮಂದೀ, ತಾಪಸಃ–ಈ ೯ ತಪಸ್ವಿ" (ಹಲಾಯು. ೬೮–೨೫೫); "ತಾಪಸಂ ಕರ್ಮಂದಿ ಮಸ್ಕರಿ ವ್ರತಿ ಭಿಕ್ಷುವಾಪರಾಶರಿ ತಪಸ್ವಿಯೆನಿಕ್ಕು" (ಮಂಗರಾ. ೬೬–೯); ಬಂದರದೊ . . . ಕಲಶಸಂಲಗ್ನಕರರಾ ತಪಸ್ವಿಗಳ್ (ಶ್ರೀರಾಮಾ. ೧೭೭–೩೪). ೨. ಬಡವ; ತಿರಂಕ; ದರಿದ್ರ. ೩. ಕರುಣಾಜನಕನಾದವನು; ಕರುಣೆಗೆ ಯೋಗ್ಯನಾದವನು: "ತಪಸ್ವಿಯೆನಿಕುಂ ಕೃಪಾನುಕಂಪ್ಯಾತ್ಮಕನುಂ" (ವಸ್ತುಕೋ. ೧೩೭–೧೧೫). ೪. ದವನ: "ತಪಸ್ವಿ[ಪಾಠಾಂ. ಸಿ]ಋಷಿಮಿತ್ರ [ಪಾಠಾಂ. ಪುಷ್ಪ, ಪುತ್ರ]ಮೆನೆ ದವನನಾಮಮಂ" (ಮಂಗರಾ. ೪೧–೩೪). ೫. ಬೆಂಕಿ; ಅಗ್ನಿ. ೬. ಒಂದು ಬಗೆಯ ಮರ; "ತಪಸೀಮಂರ" (ನಾನಾರ. ೧೧೦ ಟೀಕು); "ಕರುಣಂ ಜ್ವಲನಂ ಯತಿ ತರು ನಾಲ್ಕುಂ ನೆಲೆಯುಳ್ಳ ತಪಸ್ವಿಶಬ್ದಮೆನಿಕುಂ ಜಗದೊಳ್" (ನಾನಾಕಂ. ೧೩೨); "ದಹನ ಕುಜಾತಭೇದ ಕರುಣಂ ಯತಿಯಿಂತು ತಪಸ್ವಿಯಕ್ಕು" (ನಾನಾರ. ೧೧೦).
[ ಸಂ. ತಪಸ್ವಿನ್ ]

**ತಪಸ್ವಿಕನ್ಯೆ** (ನಾ). ಋಷಿ ಕನ್ಯೆ; ಋಷಿಪುತ್ರಿ: ತಪಸ್ವಿಕನ್ಯೆಯರು ತಮ್ಮ ತಮ್ಮ ಪ್ರಮಾಣಕ್ಕೆ ತಕ್ಕ ಸೇಚನಘಟಗಳಿಂದ ಎಳಸಸಿಗಳಿಗೆ ನೀರೆರೆಯುವುದಕ್ಕೆ ಇಲ್ಲೇ ಸಂಚರಿಸುತ್ತಿರುವರು (ಶಾಕುಂತ. ೮–೩).
[ ತಪಸ್ವಿ + ಕನ್ಯೆ ]

**ತಪಸ್ವಿನಿ** (ನಾ). ೧. ತಪಸ್ಸನ್ನಾಚರಿಸುವವಳು: ಪಾರ್ವತಿ ತಪಸ್ವಿನಿಯಾಗಿ ತಿಳಿಗೊಳದೊಳು ಮಿಂದನುದಿನಂ ಜಪತಪ ಸಮಾಧಿ ನಿಯಮಂಗಳಿಂದೆ ಭಜಿಸಿದಳಂತರಾತ್ಮನಂ (ಜೈಮಿಭಾ. ೧೫–೧೭); ಏಕವೇಣೀಧರಳಾಗಿ ದಿವ್ಯತಪಸ್ವಿನಿಯಂತೆ ಕಂಗೊಳಿಸುತ್ತಿದ್ದಾಳೆ ಶಕುಂತಲೆ (ಧರ್ಮಸಾ. ೭೩). ೨. ದೀನಳಾದವಳು; ದರಿದ್ರಳಾದ ಹೆಂಗಸು. ೩. ಒಂದು ಬಗೆಯ ಔಷಧಿಸಸ್ಯ: ಮೆಣಸು, ಜಾಕಾಯಿ, ಲವಂಗ, ತಪಸ್ವಿನೀಗಿಡ ಮುಂತಾದಲೆಯಾದ ಸಂಬಾರದ ಪದಾರ್ಥಗಳು ದೊರೆಯುತ್ತವೆ (ಪ್ರಶಾಇ. II, ೧೬). ೪. ಜಟಾಮಾಂಸಿ ಮತ್ತು ಅದರಿಂದ ತಯಾರಿಸಿದ ಸುಗಂಧ ತೈಲ: "ತಪಸ್ವಿನಿ ಜಟಿಳೆ ಮಾಂಸಿ" (ವಸ್ತುಕೋ. ೩೭–೨೨).
[ ಸಂ. ತಪಸ್ವಿನೀ ]

**ತಪಸ್ಸು** (ನಾ). ೧. ಕಾವು; ಶಾಖ. ೨. ಬೆಂಕಿ; ಅಗ್ನಿ. ೩. ವ್ರತನಿಯಮಾದಿಗಳಿಂದ ದೇಹವನ್ನು ದಂಡಿಸುತ್ತ ಧ್ಯಾನ ಮಾಡುವುದಂ: ನಿರ್ಮಲಕರ್ಮವೆಂತೆಂದೊಡೆ ತಪಸ್ಸು, ಕರ್ಮ, ಜಪ, ಧ್ಯಾನ, ಜ್ಞಾನವೆಂದೈದು ತೆಱನಾಗಿಪ್ಪುದು (ವಿವೇಕ. ೦೩೯); ತಪಸ್ಸುಯೆನ್ನಲಾಗಿ ಕೃಚ್ಛ್ರ ಚಾಂದ್ರಾಯಣಗಳು (ಈಶ್ವಸ್ವ. ೨೨–೪); ಬುದ್ಧಿಯನ್ನು ಬದಲಾಗದಂತೆ ತಡೆಯುವುದೇ ತಪಸ್ಸು (ಆತ್ಮಾರ್ಪ. ೧೩೩); ಭಗೀರಥನು ಈಶ್ವರನನ್ನು ದೀರ್ಘ ತಪಸ್ಸಿನಿಂದ ಒಲಿಸಿ, ಗಂಗೆಯು ನಿಧಾನವಾಗಿ ಧರೆಗೆ ಇಳಿಯುವಂತೆ ಮಾಡಿದನು (ನನದಿ. ೧೧). ೪. ಮಾಘಮಾಸ. ೫. ಏಳು ಊರ್ಧ್ವ ಲೋಕಗಳಲ್ಲಿ ಒಂದು; ತಪೋಲೋಕ. ೬. [ಜ್ಯೋತಿ] ಜನ್ಮಲಗ್ನದಿಂದ ಒಂಭತ್ತನೆಯ ಸ್ಥಾನ; ಧರ್ಮಸ್ಥಾನ. [ ಸಂ. ತಪಸ್ ]

**ತಪಟಿಕೆಟಿ** (ನಾ). ಒಂದು ಊರಿನ ಹೆಸರಂ: ಎಳಚಾಗವಳ್ಳಿಯ ಮಾರಯ್ಯ ತಪಟಿಕೆಟಿ ಬಸವಯ್ಯ ಕಮ್ಮಳದೊಳೆ ಮೆಚ್ಚಿ ಕೊಟ್ಟ (ಎಕ. III, ನಂಜನ. ೯೮–೩; 898 ?). [ ? ]

**ತಪಾತ್ಯಯ** (ನಾ). ಬೇಸಗೆಯ ಕೊನೆಗಾಲ; ಮಳೆಗಾಲ: "ಪ್ರಾವೃಟ್ ತಪಾತ್ಯಯಮೆನಲು ಮಳೆಗಾಲಮಕ್ಕು" (ಮಂಗರಾ. ೨೨–೧೩).
[ ತಪ$_3$ + ಅತ್ಯಯ ]

**ತಪಾಸಗೆಡು** (ಕ್ರಿ). ೧. ಪರಿಶೀಲನೆ ಮಾಡದಿರು; ತಾಳ್ಮೆಗೆಡಂ; ಸಹನೆಯಿಲ್ಲದಿರು. ೨. ತೃಪ್ತಿಗೆಡು; ಅತೃಪ್ತಿಯನ್ನು ಹೊಂದಿರು: ತೋಟದ ನೆಲ ಬಲು ತಪಾಸಗೆಟ್ಟದ್ದು. ಎಷ್ಟು ಧಾರೆ ಎರೆದರೂ, ನುಂಗಿ ನೀರು ಕುಡಿದು ಮತ್ತೆ ಬಾಯಿ ತೆರೆದುಕೊಂಡೇ ಇರುತ್ತದೆ (ಗಾಳಿಪ. ೧೦೨).
[ <ತಪಾಸು + ಕೆಡು$_1$ ]

**ತಪಾಸಗೇಡಿ** (ನಾ). ಸಹನೆಯಿಲ್ಲದವನು ; ಆತುರಗಾರ : ತಪಾಸಗೇಡಿಯನ್ನು ಉಪವಾಸ ಇಟ್ಟರೆ ಉಟ್ರು (ಉಟ್ಟದ್ದು) ಕಳೆದುಕೊಂಡು ಊಟಕ್ಕೆ ಕುಳಿತನಂತೆ (ಗಾದೆ). [ <ತಪಾಸು + ಕೇಡಿ$_1$ ]

**ತಪಾಸಣೆ, ತಪಾಸಣೆ** (ನಾ). ಕೂಲಂಕಷವಾದ ವಿಚಾರಣೆ ; ಪರಿಶೀಲನೆ ; ಪರೀಕ್ಷೆ ; ತನಿಖೆ : ಆ ರಜಿಷ್ಟರಿನ ತಪಾಸಣೆಯಿಂದ ಅರ್ಜದಾರನಿಗೆ ಯೋಗ್ಯ ಮುದ್ದತಿನೊಳಗೆ(ಕಭಾಗ. ೧೫ ಪರಿ); ಈ ಕೊಲೆಯ ತಪಾಸಣೆಯನ್ನು ಯಾರು ಮಾಡುತ್ತಿದ್ದಾರೆಂದೂ ಕೇಳಿದರು (ಕೂಂದಯಾ. ೫೨) ; ಈ ಮೊಕದ್ದಮೆಯ ತಪಾಸಣೆಗಾಗಿ ಬೇಗನೇ ಕಲೆಕ್ಟರರು ಸ್ವತಃ ಬರುವವರಿದ್ದರು (ಪೋಡಶಿ. ೩೦೦); ಈ ಹೆಣಾನ ಈಗ ಡಾಕ್ಟರ ತಪಾಸಣೆಗೆ ಕಳಿಸಬೇಕು (ಜನಜೀ. ೫೦) ; ಯಾವುದೋ ಶಾಲೆಯ ವಾರ್ಷಿಕ ತಪಾಸಣೆ ಮುಗಿಸಿಕೊಂಡು ಅದೇ ಕಾರಿನಲ್ಲಿ ಬಂದ ಎ. ಓ. ಸಾಹೇಬರು . . . ಕೇಳಿದರು (ಬಿನ್ನಹಿಂ. ೧೨). **ತಪಾಸಣೆ:** ಅವರ ಸುತ್ತುಮುತ್ತ ಇರುವ ವ್ಯಕ್ತಿಗಳ ವಿಚಾರವಾಗಿ ಕೊಂಚ ತಪಾಸಣೆ ನಡೆಸಬೇಕಾಯಿತು (ಕೃಷ್ಣಭೂ. ೧೬೮) ; ನಿನ್ನ ಕಾಯಿಲೆ ವಿಚಾರ, ಬಿದ್ದ ಕನಸುಗಳ ತಪಾಸಣೆ ಇವುಗಳಿಗಾಗಿ ನಿನ್ನನ್ನು ಬರಹೇಳಿದ್ದು (ಮನೋಸಂ. ೮೯); ನಾನೇ ಡ್ಯೂಟಿಯ ಮೇಲಿದ್ದುದರಿಂದ ತಪಾಸಣೆಗಾಗಿ ನಾನೇ ಹೋಗಬೇಕಾಯಿತು (ರಕ್ತಗೋ. ೩೯).

**ತಪಾಸಣೆಮಾಡು** = ಶೋಧ ಮಾಡು ; ತನಿಖೆಮಾಡು ; ಪರೀಕ್ಷೆ ಮಾಡು : ನಿನ್ನನ್ನೂ ನಿನ್ನ ಮನೆಯನ್ನೂ ತಪಾಸಣೆ ಮಾಡುವೆವು (ಕೊತಕಾ. ೩೮) ; ಸಣ್ಣ ಸಾಹೇಬರು . . . ಕುದುರೆ ಹತ್ತಿಕೊಂಡು ಹೊರಟು ಹೊತ್ತು ಮುಳುಗುವ ತನಕ ತಪಾಸಣೆ ಮಾಡಿದರು (ಪ್ರೇಮೂಶ್ರ. ೧). [ ←ಮರಾ. ತಪಾಸಣೀ ]

**ತಪಾಸಣೆಗಾರ** (ನಾ). ತನಿಖೆಮಾಡುವ ಅಧಿಕಾರಿ ; ಪರೀಕ್ಷಕ : ಸರಕಾರೀ ತಪಾಸಣೆಗಾರನು ಬಂದಾಗ . . . ಕೆಲವು ಹಳ್ಳಿಯವರೂ ಸ್ವತಃ ಡಾಕ್ಟರ ಜೋಶಿಯವರೂ ಒಂದೇ ರೀತಿಯಲ್ಲಿ ಸಾಕ್ಷಿ ನುಡಿದಿದ್ದಾರೆ (ಬೀಟಿನಾ. ೧೬). [ ತಪಾಸಣೆ + – ಕಾರ$_1$ ( <– ಕಾಱ) ]

**ತಪಾಸಣೆ** 'ತಪಾಸಣೆ' ನೋ.

**ತಪಾಸಿಸು** (ಕ್ರಿ). ೧. ಪರೀಕ್ಷಿಸು; ಪರಿಶೀಲನೆಮಾಡು; ತಪಾಸುಮಾಡು: ಇನ್ಸ್‌ಪೆಕ್ಟರ್ ಜನರಲ್ ಆಫ್ ರಜಿಷ್ಟ್ರೇಷನ್ ಎಂಬೊಬ್ಬ ಬೇರೆ ಅಧಿಕಾರಿಯು ಸಬ್‌ರಜಿಷ್ಟ್ರಾರ ಜನರ ಕೆಲಸವನ್ನು ತಪಾಸಿಸುತ್ತಿರುತ್ತಾನೆ (ಕಭಾಗ. ೩೮೦); ಡಾಕ್ಟರರು ಶಶಿಯನ್ನು ತಪಾಸಿಸಿದ ಮೇಲೆ ಕೇಳಿದ ಮೊದಲ ಪ್ರಶ್ನೆ (ಕ್ಷಿತಿಜ. ೭೦) ; ಕೈಯನ್ನು ಹಿಡಿದು ನಾಡಿಯನ್ನು ತಪಾಸಿಸಿದಳು (ಸಮಸಾ. ೫); ಇನ್ನೊಬ್ಬರ ಲೆಕ್ಕ ತಪಾಸಿಸಿ ಜವಾಬು ಕೇಳುವುದು ಗೌರವದ ಲಕ್ಷಣ (ಗಾಳಿಪ. ೧೯೨). ೨. ಪರೀಕ್ಷೆ ಮಾಡಿಸು ; ತಪಾಸು ಮಾಡಿಸು : ಆತ ಆ ಡಾಕ್ಟರರಲ್ಲಿಗೆ ಹೋಗಿ ತಪಾಸಿಸಿಕೊಂಡು ಬಾರದಿದ್ದಲ್ಲಿ ಸಂಜೆ ನಾನೇ ಕರೆದೊಯ್ಯುವುದಾಗಿ ನಿರ್ಧರಿಸಿದ್ದೇನೆ (ನಡೆದಾ. II, ೧೨೩೮). [ ತಪಾಸು + – ಇಸು$_3$ ]

**ತಪಾಸು** (ನಾ). ೧. ಪರೀಕ್ಷಿಸುವುದು ; ಪರಿಶೀಲನೆ : ಇನ್ನೊಮ್ಮೆ ನಿಮ್ಮ ಪೇಪರುಗಳನ್ನು ನಾವು ತಪಾಸು ಮಾಡಿದೆವು (ಚಿಲುಕಿ. ೧೪೬). ೨. ಹುಡುಕುವುದು; ಶೋಧನೆ: ಗಡಿಯಲ್ಲಿ ಕ್ರಮದಂತೆ ತಪಾಸು ನಡೆಯಿತು (ದಕ್ಷಿನ. ೩೬) ; ಅವನ ಕಿಸೆ ತಪಾಸು ಮಾಡಿದರು (ವ್ಯನಿ. ೬೪) ; ಅವರು ತಪಾಸುಮಾಡಿ ಆಶೆಯಿಲ್ಲ ಎಂದು ಕಂಡುಕೊಂಡರು (ಅನ್ನ. ೧೯೨).

**ತಪಾಸುಮಾಡು, ತಪಾಸಮಾಡು** = ಪರಿಶೀಲಿಸು; ಪರೀಕ್ಷಿಸು: ಕಳ್ಳರ ಬಗೆಗಳನ್ನೂ ಚೆನ್ನಾಗಿ ತಪಾಸುಮಾಡಿ ವಿಂಗಡಿಸಿ ವರ್ಗೀಕರಿಸಲು ಅವಕಾಶ ದೊರೆಯಿತು (ನಡೆದಾ. II, ೬೫೦) ; ನರ್ಸಳು ಬರೆದಿಟ್ಟ ರಿಪೋರ್ಟನ್ನು ಲಕ್ಷ್ಯಪೂರ್ವಕವಾಗಿ ನೋಡುತ್ತ ಅವರವರನ್ನು ತಪಾಸಮಾಡಿ ವಿಚಾರಿಸುತ್ತ . . . ಬಂದನು (ಅನ್ನ. ೭೨). ೨. ಹುಡುಕು ; ಶೋಧಿಸು ; ಪತ್ತೆಮಾಡು : ಅವನು ಯಾವ ಊರಿಗೆ ಹೋದ . . . ಎಲ್ಲ ಅವನನ್ನು ತಪಾಸುಮಾಡೋಣ (ನಾಪೋಲೀ. ೨೬೪). **ತಪಾಸಹಚ್ಚು**=ಪತ್ತೆಮಾಡು: ಖೂನಿ ತಪಾಸಹಚ್ಚಾಕ . . . ಹೋಗತೀರೆನ್ರೀ ? (ಮೇದಿಮು. ೨೭).
[ ←ಮರಾ. ತಪಾಸ್ ; ಅರ. ತಫಹ್ಹುಸ್ ]

**ತಪಾಳೆ** 'ಚಪ್ಪಳೆ' ನೋ.

**ತಪಾಟ** (ನಾ). ಒಂದು ವಂಶದ ಹೆಸರು (?) : ಅತ್ತಿಯ ಕೊಲದ ತಪಾಟ ನಾಗಯ್ಯಂಗಂ ಜೋಗಬೆಗಂ ಪುಟ್ಟಿದ ಮಗ (ಎಕ. VII, ಶಿಕಾರಿ. ೨೯೬–೧೦; 1065). [ ? ]

**ತಪಿ** (ನಾ). ಸೂರ್ಯ : "ರವಿ ಮಾರ್ತಂಡಂ ಪತಂಗಂ ತಪಿ ತಪನನಿನಂ . . . ದ್ಯುಮಣಿ ತರಣಿ ಸಪ್ತಾಶ್ವನಾದಿತ್ಯನಕ್ಕುಂ" (ವಸ್ತುಕೋ. ೧೧–೬೪); ತಪಿಯಿಂ ನಿರ್ಧೂತದೋಷಂ ವಿಶದಶಶಿಯಿನತ್ಯಂತಕಾಂತಂ . . . ಪರಮ ಜಿನಮತಾಂಭೋಜಿನೀರಾಜಹಂಸಂ (ಸುಕುಮಾ. ೯–೧೦೭).
[ ಸಂ. ತಪಿನ್ ]

**ತಪಿತ** (ಗು). ೧. ಕಾಯ್ದು ; ಬಿಸಿಯಾದ : ತಪಿತಕಿರಣ ಪ್ರಚಾರಂಗಳಿಲ್ಲದ ದಿವಾಧಿಪ ವಿರೂಪಾಕ್ಷನೇತ್ರಾಗ್ನಿಯಿಂ ದಹಿಸದಿಹ ಚಪಲ ಮನ್ಮಥ (ಕುವಂ. ೧೬). ೨. ಸುಟ್ಟ. (ನಾ). ೩. [ಜೈನ] ಒಂದು ನರಕಬಿಲ : ವಾಲುಕಾಪ್ರಭೆಯೊಳ್ ತಪ್ತ . . . ತಪಿತ ತಪನ ತಾಪನ . . . ಪಂಚದಶಲಕ್ಷ ಬಿಲಂಗಳಪ್ಪುವು (ತತ್ತ್ವಪ್ರ. ೧೨೦).
[ ಸಂ. ]

**ತಪಿತೆ** (ನಾ). ತಾಪಗೊಂಡವಳು (?) : ವಿಫಲೆ ವಿಹ್ವಲೆ ವಿಷಮ ವಿರಹಿ ವಿಪರೀತೆ ವಿಗೆ ತಪಿತೆ ತಸ್ಕರೆ ತವಕಿ ತವೆ ತಂದ್ರಿ ತಾಮಸಿಯೆನಿಪ ವನಿತೆಯರ ನಿಜಕೆ ನಿಲಿಸಿ ನಿಶ್ಚೈಸಿದೊಡೆ ಬಳಿಕ ಬಳಲಿಕೆ ಬಾರದೆ (ಜೈಮಿಭಾ. ೫–೭೦) ; "ಮನ್ಮಥಬಾಧೆಯಿಂದ ಕೂಡಿದವಳು" (ಜೈಮಿಭಾ. ಟೀಕ).
[ ಸಂ. ತಪಿತಾ ]

**ತಪಿಸು** (ಕ್ರಿ). ೧. ಉರಿ; ಸುಡು; ಪ್ರಜ್ವಲಿಸು: ಅವಳ ಶೂಲದ ಶಿಖಿಯಲಾ ವನನಿವಹ ಸೀಕರಿಯಾಯ್ತು ತಾರೆಗಳವನಿಗುದುರಿದವರೆಲೆ ತಪಿಸಿತು ಬಿಂಬ ದಿನಮಣಿಯ (ತೊರರಾ. ೧–೧೧–೭) ; ಅತ್ಯುಗ್ರದಿಂ ತಪಿಸುವ ದಿವಾಕರ ಪ್ರಭೆಯಿಂದುರಿಯೆ ರಥಂ (ಜೈಮಿಭಾ. ೨೩–೨೦). ೨. ತಪಸ್ಸುಮಾಡು : ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಿಪಿದ್ದೆ [ಪಾಠಾಂ. ತಪಸ್ಸಿದ್ದೆ] ನೋಡಾ (ಮಹಾದೇ. ಬ. ೨೫–೪೮) ; ಸತಿಯರು ಬಂದರೈ ಧರಣಿಯಲಿ ತಪಿಸಲಿಕೆಂದು ಮಾಡಿದರೊಂದು ಸಾವಿರ ವರುಷ ತಪಸುಗಳ (ಕುವ್ಯಾಆ. ೬ರಿ೩. ೩೩–೧೦) ; ಅಬುಜಜಂ ತಪಿಸಿದಂ ಶಿವನ ಕುರ್ತು (ಜಿಬಪು. ೧೩–೯) ; ಹಿಮಕರನೈದಿ ಚಿತ್ರಜಾರಿಯ ಕುರ್ತು ತಪಿಸುತಿರೆ (ನವಮೋ. ೨–೧೬). ೩. ಪರಿತಪಿಸು ; ದುಃಖಪಡು ; ನೋಯು : ತಪನತನುಜನ ಕಂಡು ಮನದಲಿ ತಪಿಸಿ ತಂದನು ಕಂಗಳಿಗೆ ತನಗಪಯಶವು ಸಂಭವಿಸಿತೇಯೆಂದಶ್ರುವಾರಿಗಳ (ತೊರರಾ. ೬–೨೫–೩೦); ತಪಸಿಗಳ ತಂಡದೊಳುಚ್ಚಾಟಣ ಜಪಗಳೊಳು ಓಂಕಾರವಲ್ಲದೆ ತಪಿಸೆ[ಪಾಠಾಂ. ಸಿ]ತನ್ನೃತಮಿಲ್ಲ ತಜ್ಞನಪದದೊಳೆಂದೆಂದು (ಮಡೇಪು. ೨–೨೧) ; ತಾನವನನಗಲ್ದ ಸಂತಾಪದಿಂ ತಪಿಸುತಿರ್ದಂ (ಜೈಮಿಭಾ. ೧೭–೬೪); ಆತುರಾತುರದೊಳು ಮದುವೆಸಿಂದೆನು ಅಂದು . . . ತಪಿಸುತಲಿರುವೆನು ಸಾವಧಾನದೊಳಿಂದು ಆಗಬಾರದುದಾಯಿತೆಂದು (ಇಂಜಾಪ. ೨೦೩–೫೩) ೪. ತಾಪಗೊಳಿಸು; ಉದ್ವೇಗವನ್ನುಂಟುಮಾಡು : ಮದನನಾ ದೊಡಿರುಳುಂ ಪಗಲುಂ . . . ತಪಿಸುವನಕಟಾ ನಿನ್ನೊಳ್ ಕೂಡಲೆಳಸಿದೆನ್ನಂಗಗಳಂ (ಶಾಕುಂತ. ೩೮–೬೭); ತನುಗಾತ್ರಿ ನಿನ್ನ ತಪಿಪಂ ಮನಸಿಜ ನಾವಗಮುಮೆನ್ನನಾದೊಡೆ ದಹಿಪಂ (ಶಾಕುಂತ. ೩೮–೬೮).
[ ತಪ$_3$ + – ಇಸು$_3$ ]

**ತಪುತ** (ಗು). ಕಾಯಿಸಿದ ; ಕಾಯ್ದ : ಭುಜದಲ್ಲಿ ತಪುತ ಮುದ್ರಾಂಕಿತ ಧರಿಸಿದ ಮನುಜ ಬಂದು (ತೀರ್ಥಮ. ೮೭) ; ತಪುತ ಮುದ್ರಾಹೀನ ನಿನ್ನ ನೋಡಿದರೇನು (ವಿದಾಕ್ಷ. ೧೦೮-೩). [ <ಸಂ. ತಪ್ತ ]

**ತಪೇಲಿ** 'ತಪ್ಪಲೆ' ನೋ.

**ತಪೋಕಾಮ** (ನಾ). ತಪಸ್ಸನ್ನಾಚರಿಸಲು ಬಯಸುವವನಂ : ರತಿಕಾಮರಿಂದಖಿಳ ಸಿದ್ಧಿಸಾಧನಮಕ್ಕುಮತಿತಪೋಕಾಮರಿಗೆ ನೈಷ್ಠ ಚಲಿಸದ ರತಿಯು (ನವಮೋ. ೧೩-೫೦). P ಇದಂ ಅಸಾಧು ರೂಪ.
[ <ಸಂ. ತಪಸ್ಕಾಮ ]

**ತಪೋಗ್ರ** (ನಾ). ತಪಸ್ಸಿನ ಪರಾಕಾಷ್ಠೆ ; ಉಗ್ರವಾದ ತಪಸ್ಸು (?) : ಬಾಳಾಮೇಲ್ಮಿಖಿ ಮೇಲೆ ಸರ್ಪ್ಪದ ಮಹಾದನ್ತಾಗ್ರದುಳ್ಸಲ್ವವೊಲ್ ಸಾಲಾಮ್ಬಾಲ ತಪೋಗ್ರದಿನ್ತು ನಡದೊಂ ನೂಱಿಣ್ಬು ಸಂವತ್ಸರಂ (ಎಕ. II, ೨೨-೨ ; 700). [ ಸಂ. (ತಪಸ್ + ಅಗ್ರ) ]

**ತಪೋಗ್ರಹಣ** (ನಾ). ತಪಸ್ಸನ್ನು ಕೈಕೊಳ್ಳುವುದಂ ; ಪುತ್ರೀವಿಯೋಗ ವಿಷಾದಮುಂ ತತ್ತಪೋಗ್ರಹಣ ಪ್ರಮೋದಮುಂ ಸೂಟ್ಸೂಟಿೞೊಳ್ ಪೆರ್ಚೆ (ಶಾಂತಿಪು. ೪-೦೦೪ ವ). [ ಸಂ. (ತಪಸ್ + ಗ್ರಹಣ) ]

**ತಪೋತ್ಯಯ** (ನಾ). = ತಪಾತ್ಯಯ : "ವರ್ಷಾಃ, ಪ್ರಾವೃಟ್, ತಪೋತ್ಯಯಃ – ಈ ೩ ಮೞೆಗಾಲಂ" (ಹಲಾಯು. ೨೦-೧೧೬).
[ ಸಂ. (ತಪಸ್ + ಅತ್ಯಯ) ]

**ತಪೋಧನ** (ನಾ). ತಪವೇ ಧನವಾದವನಂ ; ಶ್ರೇಷ್ಠನಾದ ತಪಸ್ವಿ : ಏೞ್ಕೋಟಿ ತಪೋಧನಮುಮಂ ಕೆಱೆಯುಮನಾರಾಮೆಯುಮಂ ಕವಿಲೆಯುಮನೞಿದ ಪಾಪಮಕ್ಕು (ಎಇ. XXVI, ೪-೧೯ ; 906) : ತಪೋವನದ ತಪೋಧನರ ತಪಃಪ್ರಭಾವಕ್ಕೆ ಚೋದ್ಯಂಬಟ್ಟು (ಪಂಪಭಾ. ೧-೧೧೫ ವ) ; ಶಿಲೆಗಳೊಡನೆಯು ಬೆರಸಿ ಬೆಳೆವುತ ಶಿಲೆಗಳಾಕಾರ ಪ್ರಕಾರದಿ ಚಲಿಸಿದಾಗಳು ಯೋಗದಿಂದಿಹ ವರ ತಪೋಧನರು (ಬಸಪು. ೧೯-೭೯) ; ತಪೋಧನಕಳಭರಿಗೆ ಸ್ವಣೆಯೆನಲು ಮೆಱೆದುದು ರೂಪವಂಗನೆಯ (ಕುವ್ಯಾಅ. ೧೩-೨೩). [ ಸಂ. (ತಪಸ್ + ಧನ) ]

**ತಪೋಧನಾಖ್ಯಾನ** (ನಾ). ೧. ತಪಸ್ವಿಗಳ ಕಥೆ. ೨. [ಜೈನ] ತ್ರಿಷಷ್ಟಿ ಶಲಾಕಾಪುರಂಷರನ್ನು ಕುರಿತ ಕಥೆ : ತಪೋಧನಾಖ್ಯಾನಮೆಂಬುದು ಜಿನತೀರ್ಥದೊಳ್ ಪುಟ್ಟಿದ ತ್ರಿಷಷ್ಟಿಶಲಾಕಾಪುರುಷರ ತಪದ ಶ್ರಾವಕ ನಿಯೋಗಂಗಳ ಮೆಯ್ವಿಡಿತಕ್ಕೆ ಯಂತ್ರತಂತ್ರಾನುಪೂರ್ವಿಗಳಿಂ ಸದ್ಧರ್ಮ ಕಥನಂಗೆಯ್ವುದು (ಚಾವುಂಪು. ೧೨). [ ತಪೋಧನ + ಆಖ್ಯಾನ ]

**ತಪೋಧನೆ** (ನಾ). ತಪಸ್ಸೇ ಧನವಾದವಳು; ತಪಸ್ವಿನಿ: ಪವನವೇಗೆಯುಂ ಸುಲೋಚನಾರ್ಯಿಕಾ ಕ್ರಮಕಮಳ ಸಮೀಪದೊಳ್ ತಪೋಧನೆಯಾದಳ್ (ಶಾಂತಿಪು. ೯-೮೭ ವ). [ ಸಂ. ತಪೋಧನಾ (ತಪಸ್ + ಧನ + –) ]

**ತಪೋಧರ** (ನಾ). ತಪಸ್ಸನ್ನು ಕೈಕೊಂಡವನು ; ತಪಸ್ವಿ : ಅಂತು ದುರ್ಧರ ತಪೋಧರನಾದಂ (ಚಂದ್ರಪು. ೨-೫೯ ವ). [ ಸಂ. ]

**ತಪೋನಿಧಾನ** (ನಾ). = ತಪೋಧನ : ಪರಮ ತಪೋನಿಧಾನ ವಸುಧೈಕ ಕುಡುಂಬ[ಕ] (ಎಕ. II, ೭೯-೫೩ ; ಸು. 1100).
[ ಸಂ. (ತಪಸ್ + ನಿಧಾನ) ]

**ತಪೋನಿಧಿ** (ನಾ). = ತಪೋಧನ : ಈತನಿದಿರೆದ್ದರ್ಘ್ಯಪಾದ್ಯವನಾ ತಪೋನಿಧಿಗಿತ್ತು . . . ಬೆಸಗೊಂಡನವರಾಗಮನ ಸಂಗತಿಯ (ಕುವ್ಯಾಅ. ೯-೩); ನೀನಾವನ ಚಿಂತಿಸುತೆ ತಪೋನಿಧಿಯಾದೆನ್ನನರಿಯದಾದೆಯೊ (ಶಾಕುಂತ. ೪೭-೭೯). [ ಸಂ. (ತಪಸ್ + ನಿಧಿ) ]

**ತಪೋನಿಯಮ** (ನಾ). ತಪಸ್ಸಿನ ನಿಯಂಮ,–ಕಟ್ಟುಪಾಡಂ : ಉೞಿದ ತಪೋನಿಯಮಮಂ ನಿಷ್ಕಿಂಚನತ್ವಮರ್ಹನ್ಮತದೊಳ್ (ಶಾಂತಿಪು. ೬-೫೬).
[ ಸಂ. (ತಪಸ್ + ನಿಯಮ) ]

**ತಪೋನಿಯುಕ್ತ** (ನಾ). ತಪಸ್ಸಿನಲ್ಲಿ ತೊಡಗಿದವನು : ಅನಿತುಗ್ರತ ತಪೋನಿಯುಕ್ತರಾರೆನೆ ನೆಗಟ್ದಾರ್ಯನಂದಿಮುನಿನಾಥರೆ ಜಂಗಮತೀರ್ಥರಲ್ಲವೆ (ಚಾವುಂಪು. ೩-೧೭). [ ಸಂ. (ತಪಸ್ + ನಿಯುಕ್ತ) ]

**ತಪೋನಿಯೋಗ** (ನಾ). ತಪಸ್ಸಿನ ಆಚರಣೆ ; ತಪೋನುಷ್ಠಾನ : ಶತಬಳನಂ ಸಹಸ್ರಬಳಖೇಚರನಿಟ್ಟು ತಪೋನಿಯೋಗನಿಶ್ಚಿತಮನನಾಗಿ (ಆದಿಪು. ೨-೧೯) ; ಪರತ್ರಸೌಖ್ಯಮಂ ಪೂಣ್ಬ ತಪೋನಿಯೋಗಮನದಂ ಮಱೆದು (ಚಂದ್ರಪು. ೨-೪೦). [ ಸಂ. (ತಪಸ್ + ನಿಯೋಗ) ]

**ತಪೋನಿರತ** (ನಾ). = ತಪೋನಿಯುಕ್ತ : ಕಾಡಿಗೆ ಹೋಗಿ ತಪೋನಿರತರಾಗಿದ್ದು ಯಥಾಕಾಲದಲ್ಲಿ ದೇಹವನ್ನು ಬಿಟ್ಟರು (ವಚಭಾ. ೧೬).
[ ಸಂ. (ತಪಸ್ + ನಿರತ) ]

**ತಪೋನುಷ್ಠಾನ** (ನಾ). ತಪಸ್ಸಿನ ಆಚರಣೆ : ಅನಶನವೃತ್ತ್ಯಾದಿ ತಪೋನುಷ್ಠಾನಮುಂ . . . ನಿಮಗಿವು ಕುಲಾಚಾರಂಗಳ್ (ಆದಿಪು. ೧೫-೧೩ ವ) ; ಎಲೆ ಋಷಿಗಳಿರ ಸಾಕಿನ್ನೆಂದು ಪರಿಯಂತೀ ತಪೋನುಷ್ಠಾನದಾಯಾಸ (ಕುವ್ಯಾಕ. ೬-೩). [ ಸಂ. (ತಪಸ್ + ಅನುಷ್ಠಾನ) ]

**ತಪೋನೈಷ್ಠೆ** (ನಾ). ತಪಸ್ಸಿನಲ್ಲಿ ನಿಷ್ಠೆ,–ಶ್ರದ್ಧೆ : ಕಲಕಿ ನಿಶ್ಚಲಚಿತ್ತ ವಿಕಸಿಸಿಯೆ ಕರಣಾಳಿ ನೆಲೆದಪ್ಪಿ ಮನೋನಿಲನ ಬೆರದು ಸಂಚಲಿಸಲು ತಪೋನೈಷ್ಠೆ ಕಾಷ್ಠೆ ಮುರಿದು (ನವಮೋ. ೬-೨೦).
[ <ಸಂ. ತಪೋನೈಷ್ಠ್ಯ ]

**ತಪೋನ್ನತಿ** (ನಾ). ತಪಸ್ಸಿನ ಏಳಿಗೆ,–ಮೇಲ್ಮೆ : 'ತಪೋನ್ನತಿವಡೆ' ಪರಾ. [ ತಪ$_3$ + ಉನ್ನತಿ ]

**ತಪೋನ್ನತಿವಡೆ** (ಕ್ರಿ). ತಪಸ್ಸಿನ ಮೇಲ್ಮೆಯನ್ನು ಪಡೆ : ಒಮ್ಮನವೆರಸಿ ತಪೋನ್ನತಿವಡೆದಿರ್ದ ನಿರ್ಮಳಾತ್ಮಕ ಶಿವನೊಢಲ ದಿಮ್ಮೇಳೆ ಹೊಯ್ವನು (ಮೋಹತ. ೬-೨೩). [ ತಪೋನ್ನತಿ + ಪಡೆ$_1$ ]

**ತಪೋಪಳ** (ನಾ). (?) : ಇದಿರೊಳ್ ನಿಂದೊಡೆ ವಜ್ರ ಸ್ಥೈರಿಸನಿರಲ್ವೇಡೆ ಮ್ಮೊಳೊಳ್ವೊಕ್ಕು ನಿಲ್ವುದು ನೀನೆಂದು ಕಡಂಗಿ ಕಾಲ್ವಿಡಿವವೋಲ್ ತನ್ನೂರ್ಮಿಗಳ್ ಬಂದುವಂದಿದಱಿಂ ಪೋದ ತಪೋಪಳಂ (?) [ಪಾಠಾಂ. ಬಳಂ]ಗಗನಮಂ ಮಾರ್ಪೊಯ್ಕೆ ಕಣ್ಗೊಪ್ಪಿ ತೋರ್ಪುದಿದುತ್ಪ್ರೇಂಖದ ಸಂಖ್ಯ ಶಂಖಧವಳಂ ಗಂಭೀರ ನೀರಾಕರಂ (ಪಂಪಭಾ. ೪-೨೪). [ ? ]

**ತಪೋಬಲ** (ನಾ). ತಪಸ್ಸಿನ ಪ್ರಭಾವ; ತಪಶ್ಶಕ್ತಿ : ಲಿಖಿತನ ತಪೋಬಲದಿಂದೆ ಮರಳಿ ಕೈಯುಂ ಪಡೆದನಾ ಶಂಖಿನು (ಜೈಮಿಭಾ. ೦೦-೪೫).
[ ಸಂ. (ತಪಸ್ + ಬಲ) ]

**ತಪೋಭರ** (ನಾ). ತಪಸ್ಸಿನ ಆಧಿಕ್ಯ ; ಅತಿಶಯವಾದ ತಪಸ್ಸು : ಜರೆ ಬಿರುಗಾಳಿಯ ತೆಱದಿಂದಿರದೆಯ್ದಿ ಮದೀಯ ಕಾಯತೃಣಕುಟಿಯುಂ ಜರ್ಝರಿತಂ ಮಾಡದ ಮುನ್ನಮೆ ಪರಮ ತಪೋಭರಮನಾಂಪ ಬಗೆಯಂ ಬಗೆದಂ (ಚಂದ್ರಪು. ೪-೧೬).
[ ಸಂ. (ತಪಸ್ + ಭರ) ]

**ತಪೋಭಾರ** (ನಾ). ತಪಸ್ಸಿನ ಹೊಣೆ,–ಕರ್ತವ್ಯ : ತನ್ನ ಮಗಂ ಸಿಂಹನಾದಂಗೆ ರಾಜ್ಯಭಾರಮನಿತ್ತು ತಪೋಭಾರದೊಳ್ ತಾಂ ನಿಂದು (ಶಾಂತಿಪು. ೭-೦೦೭ ವ). [ ಸಂ. (ತಪಸ್ + ಭಾರ) ]

**ತಪೋಮಾಸ** (ನಾ). ಮಾಘಮಾಸ : ಸೂರ್ಯ ಹೊಸ ಯೌವನದಿಂದ ಥಳಥಳಿಸುವ ತಪೋಮಾಸದ ಶುಕ್ಲಪಕ್ಷದಲ್ಲಿ . . . ಮಂತ್ರಕರ್ಮವನ್ನು ನೆರವೇರಿಸಿದ (ಚಿತಂಬಾ. ೫೮). [ ಸಂ. (ತಪಸ್ + ಮಾಸ) ]

**ತಪೋರಾಜ್ಯ** (ನಾ). ತಪಸ್ಸಿನ ಸಾಮ್ರಾಜ್ಯ,–ಆಧಿಪತ್ಯ : ಮೊದಲೊಳ್ ತಾಂ ಯೌವರಾಜ್ಯಂ ಬೞಿಕೆ ನಡುವೆ ಸಂದಾಧಿರಾಜ್ಯಂ ಬೞಿಕ್ಕಂ ತುದಿಯೊಳ್ ಕೈವಲ್ಯಸೌಖ್ಯಪ್ರದಮೆನಿಪ ತಪೋರಾಜ್ಯಂ (ಚಂದ್ರಪು. ೨-೫೦).
[ ಸಂ. (ತಪಸ್ + ರಾಜ್ಯ) ]

**ತಪೋರೂಪಮಾರ್ಗ** (ನಾ). ತಪೋನುಷ್ಠಾನದ ಮಾರ್ಗ : ಮೃಗಶೃಂಗನೆಂಬೊಂ ತಾಪಸಕುಮಾರನಾತಂ ಬಾಲಕಾಲಪರಿಗೃಹೀತ ತಾಪಸಾಚರಣಂ ತಪೋರೂಪಮಾರ್ಗಮಂ ಮೆಚ್ಚದೆ ಮಿಥ್ಯಾಂಧಕಾರಾವಕುಂಠಿತ ಸಮ್ಯಗ್ದರ್ಶನನಾಗೆ (ಶಾಂತಿಪು. ೭-೪೩ ವ). [ ಸಂ. (ತಪಸ್ + ರೂಪ + ಮಾರ್ಗ) ]

**ತಪೋಲಕ್ಷ್ಮಿ** (ನಾ). ತಪಸ್ಸಿನ ಐಶ್ವರ್ಯ,-ಮಹಿಮೆ,- ಪ್ರಭಾವ : ಆದಿದೇವನ ತಪೋಲಕ್ಷ್ಮಿಗೆ ವಿಸ್ಮಯಾಕ್ಷಿಪ್ತ ಚಿತ್ತನಾಗಿ ಪೊಡವಟ್ಟು (ಆದಿಪು. ೯-೧೦೦ ವ). [ ಸಂ. ತಪೋಲಕ್ಷ್ಮೀ (ತಪಸ್ + ಲಕ್ಷ್ಮೀ) ]

**ತಪೋಲೋಕ** (ನಾ). ಏಳು ಊರ್ಧ್ವಲೋಕಗಳಲ್ಲಿ ಒಂದು. [ ಸಂ. (ತಪಸ್ + ಲೋಕ) ]

**ತಪೋವನ**(ನಾ). ತಪಸ್ವಿಗಳು ಇರುವ ವನ,-ಆಶ್ರಮ:ಪಾವನ ತಪೋವನ ಸಂಚರಣಕ್ಕೆ ತಾನೆ ಮತ್ತೆ ಜಿಕಮುನಾಂತುದೀಗಳನಿವಾರಣಮೆನ್ನಯ ಚಿತ್ತವಾರಣಂ (ಚಂದ್ರಪು. ೪-೧೫) ; ಬಳಿಕ ತಾಪಸವೃಂದವನು ಕಾರುಣ್ಯನಿಧಿ ಕಳುಹಿದ ತಪೋವನಕೆ (ಕುಮಾ.ಉ. ೯-೮೦). [ಸಂ. (ತಪಸ್+ವನ)]

**ತಪೋವಲ್ಕಲ** (ನಾ). ತಪಸ್ವಿಗೆ ಯೋಗ್ಯವಾದ ನಾರುಬಟ್ಟೆ : ತೇಜಸ್ವಿ, ತರುಣಂ ತಪೋವಲ್ಕಲವಸ್ತ್ರಶೋಭಿ (ಶ್ರೀರಾಮಾ. ೧-೫). [ ಸಂ. (ತಪಸ್ + ವಲ್ಕಲ) ]

**ತಪೋವಿಘ್ನ** (ನಾ). ತಪಸ್ಸಿಗೆ ಅಡ್ಡಿ,-ತಡೆ : ತಪೋವಿಘ್ನಮೇ ಮೂರ್ತಿವೆತ್ತಂತಿರೆ ಸೊರ್ಕಾಂತಾನೆಯ್ತಂದಪುದು (ಶಾಕುಂತ. ೧೭-೩೩). [ ಸಂ. (ತಪಸ್ + ವಿಘ್ನ) ]

**ತಪೋವೃತ್ತಿ** (ನಾ). ತಪಸ್ಸಿನ ಆಚರಣೆ : ಘೋರ ತಪೋವೃತ್ತಿಯನಾಂತ ಪೆಂಪತಿಬಳಂಗಕ್ಕುಂ ಪೆಜರ್ಗಕ್ಕುಮೇ (ಆದಿಪು. ೧-೮೧). [ ಸಂ. (ತಪಸ್ + ವೃತ್ತಿ) ]

**ತಪೋವೃದ್ಧ** (ನಾ). ತಪಸ್ಸಿನಿಂದ ಹಿರಿಯ,-ಶ್ರೇಷ್ಠ : ಜ್ಞಾನವೃದ್ಧಂ ತಪೋವೃದ್ಧಂ ವಯೋವೃದ್ಧಂ ನರೇಶ್ವರಂ (ಜೈಮಿಭಾ. ೩೨-೧೧). [ ಸಂ. (ತಪಸ್ + ವೃದ್ಧ) ]

**ತಪೋವೃದ್ಧಿ** (ನಾ). ತಪಸ್ಸಿನ ಹೆಚ್ಚಳ,-ಅತಿಶಯ : ತಪೋಭಾರದೊಳ್ ತಾಂ ನಿಂದು ಶುಭಭಾವ ನಿತಾಂತ ಶುದ್ಧಾಂತರಂಗನನಶನಾದಿ ತಪೋವೃದ್ಧಿವರ್ತಿತಾದ್ಯಾವಸಾನನೊರ್ಮೆ ಗಿರಿನಂದನಗಿರಿಶಿಖರಾಯಮಾನಂ (ಶಾಂತಿಪು. ೭-೧೧೭ ವ). [ ಸಂ. (ತಪಸ್ + ವೃದ್ಧಿ) ]

**ತಪೋವೇಷ** (ನಾ). ತಪಸ್ವಿಯ ಸೋಗು ; ತೋರಿಕೆಗಾಗಿ ಧರಿಸಿದ ಋಷಿವೇಷ : 'ತಪೋವೇಷಗೊಳ್' ಪರಾ. [ಸಂ. (ತಪಸ್+ವೇಷ)]

**ತಪೋವೇಷಗೊಳ್** (ಕ್ರಿ). ತಪಸ್ವಿಯ ಸೋಗು ಹಾಕು ; (ತೋರಿಕೆಗಾಗಿ) ತಪಸ್ವಿಯ ವೇಷವನ್ನು ಧರಿಸು : ಧರ್ಮಧ್ವಜಃ, ಲಿಂಗವೃತ್ತಿಃ- ಈ ೨ ತಪೋವೇಷಗೊಂಡವಂ (ಹಲಾಯು. ೭೭-೨೫೦). [ ತಪೋವೇಷ + ಕೊಳ್$_1$ ]

**ತಪೋವೇಷಿ** (ನಾ). ತಪಸ್ವಿಯಂತೆ ವೇಷವನ್ನು ಧರಿಸಿದವನು ; ಕಪಟ ತಪಸ್ವಿ : ಶಮನು ಶಮನಾಕಾರನಾದುತ್ತಮ ತಪೋವೇಷಿಗೆ ಸದಾನಂದ ಮನೊದಗಿಸುವ ಸತ್ಕುಲಾಧಿಪ ಚೆನ್ನಿಗನೆ ಬಾರಾ (ಬಸವು. ೨೪-೪೦). [ ಸಂ. ತಪೋವೇಷಿನ್ ]

**ತಪೋಹೀನತೆ** (ನಾ). ೧. ತಪಸ್ಸು ಇಲ್ಲದಾಗುವಿಕೆ ; ತಪೋಭಂಗ. ೨. ಮಾಘಮಾಸ ಕಳೆದು ಹೋಗುವಿಕೆ ; ಚಳಿ ಕಡಮೆಯಾಗುವಿಕೆ. ೧, ೨ : ಆಜಿಡಿ ಸುಗಂಧೋತ್ಫುಲ್ಲ ಪುಷ್ಪಕ್ಕುಪಾತ್ತ ತಪೋಹೀನತೆ ಚೈತ್ರದೇಟ್ಗೆ ಮಹದ್ವಂದಿಗ್ರಹಂ ತ್ಯಾಗಿಗವ್ರತಯೋಗಂ ಜಳಪಕ್ಷಿಗಲ್ಲದೆ ಇನಕ್ಕಿಲ್ಲಲ್ಲಿ ಬೇಜಿಲ್ಲಿಯುಂ (ಪುಷ್ಪಪು. ೨-೨೯). [ ಸಂ. ತಪೋಹೀನತಾ (ತಪಸ್ + ಹೀನತಾ) ]

**ತಪ್ತ** (ಗು). ೧. ಕಾಯಿಸಿದ ; ಬೆಂದ ; ಸುಟ್ಟ : ತಪ್ತತಪನೀಯಚ್ಛಾಯನುಂ ಸಪ್ತಹಸ್ತೋಚ್ಛ್ರಯನುಂ . . . ಆಗಿ (ಆದಿಪು. ೨-೬೯ ವ); ಶಾಪಮನಿತ್ತಂ ಮುನಿಸಿಂ ತದ್ವಿಪ್ರಂ ನಂದನಮರಣಪ್ರಭವಶೋಕಪಾವಕತಪ್ತಂ (ಪಂಚತಂ. ೨೬೯-೨೨). ೨. ನೊಂದ ; ವ್ಯಥಿತ ; ದುಃಖಿತ : ಕೊನೆಯರಿಯದ ರಣರಂಗಗಳಿಂದ ತಪ್ತವಾಗಿರುವ ಜನಜೀವನದ ಸುಖ ಶಾಂತಿಯನ್ನು ಸಾಧಿಸಬೇಕು (ಶಿಕ್ಷದ. ೨೨). (ನಾ). ೩. [ಜೈನ] ಒಂದು ನರಕ ಬಿಲ: ವಾಲುಕಾಪ್ರಭೆಯೊಳ್ ತಪ್ತ ತಪಿತ ತಪನ ತಾಪನ . . . ಪಂಚದಶಲಕ್ಷ ಬಿಲಂಗಳಪ್ಪುವು (ತತ್ತ್ವಾಪ್ರ. ೧೨೦). [ ಸಂ. ]

**ತಪ್ತಕಾಂಚನ** (ನಾ). ಕಾಯಿಸಿದ ಚಿನ್ನ ; ಪುಟವಿಟ್ಟ ಚಿನ್ನ : ಅಗ್ಗಳ ಮನೋಹರಂ ತಪ್ತಕಾಂಚನಮಯಂ . . . ವಜ್ರಕಲ್ಪಿತದ ಸೋಪಾನಂಗಳಿಂ (ವೀಕ್ಷ್ಮಪು. ೩-೨-೨೦) ; ಚಂದ್ರಮಂಡಲದಿಂದ ತಪ್ತಕಾಂಚನದ ಕಾಂತಿಯಿದ್ದ ಅಮೃತರಸಪ್ರವಾಹವೊಂದು . . . ಹರಿದು ಬಂದಿತು (ಶಾಂತಲಾ. ೨೫೦). [ ತಪ್ತ + ಕಾಂಚನ ]

**ತಪ್ತಕಾಂಚನರೂಪ** (ನಾ). ಪುಟವಿಟ್ಟ ಚಿನ್ನದಂತೆ ತೇಜಸ್ವಿಯಾದ ರೂಪವುಳ್ಳವನು : ಸಪ್ತಾರ್ಚಿ ಸುಪ್ರತಾಪಾ ತಪ್ತಕಾಂಚನರೂಪನಪ್ಪ ಸರ್ವೇಶ್ವರ (ವೀಕ್ಷ್ಮಪು. ೪-೨೦-೨). [ ತಪ್ತಕಾಂಚನ + ರೂಪ ]

**ತಪ್ತಕೃಚ್ಛ್ರ**(ನಾ). ಆಹಾರ ಸೇವನೆಯಲ್ಲಿ ಪಾಲಿಸುವ ಒಂದು ಕಠಿನವಾದ ವ್ರತ ; ಮೂರು ದಿವಸ ಬಿಸಿನೀರು, ಮೂರು ದಿವಸ ಬಿಸಿಹಾಲು, ಮೂರು ದಿವಸ ಬಿಸಿತುಪ್ಪ, ಮೂರು ದಿವಸ ಬಿಸಿಗಾಳಿ – ಹೀಗೆ ಸೇವನೆ ಮಾಡುವ ಒಂದು ವ್ರತ : ಮಹತ್ಕಷ್ಟಸಾಧ್ಯಂಗಳಾದ ತಪ್ತ ಕೃಚ್ಛ್ರ . . . ಮುಂತಾದವುಗಳ ಪಕ್ಷಮಾಸಾದಿಕಂಗಳಲಿ ಅನ್ನಮಂ ಪೆರ್ಚಿಸಿ ತಗ್ಗಿಸಿಕೊಂಬುದು (ವಿವೇಕ. ೧೩೮). [ ತಪ್ತ + ಕೃಚ್ಛ್ರ ]

**ತಪ್ತಜತುಲೇಪ** (ನಾ). ಒಂದು ನರಕದ ಹೆಸರು ; ಕರಗಿಸಿದ ಅರಗನ್ನು ಮೈಗೆ ಸವರುವ ಶಿಕ್ಷೆಯುಳ್ಳ ನರಕ : ಕ್ರತು ಪೂತಿಮಾಂಸ ತಪ್ತಜತು ಲೇಪ ದ್ರವತ್ರಪು ಪುಟ್ಪಾಸವೆಂಬೈದು ಮಂತ್ರಿನರಕಂಗಳಿಂ (ವಿವೇಕ. ೧೮೦). [ ತಪ್ತ + ಜತು$_1$ + ಲೇಪ ]

**ತಪ್ತಜಾಂಬೂನದ** (ನಾ). =ತಪ್ತಕಾಂಚನ : ತಪ್ತಜಾಂಬೂನದಾಂಗ . . . ಭಾಳನೇತ್ರ (ಭಾವಚಿಂ. ೩-೮) ; ತಪ್ತಜಾಂಬೂನದದ ದೀಪ್ತಿಯನಣಕವಾಡಿ ಮಿಸುಪ ಮಿಸುನಿಯ ಪಾತ್ರೆಯಲಿ ಸುಪಾಯಸರಸಂ . . . ಕುಣಿಯೆ (ಶ್ರೀರಾಮಾ. ೧೩-೩೪೭). [ ತಪ್ತ + ಜಾಂಬೂನದ ]

**ತಪ್ತತಪ** (ನಾ). [ಜೈನ] ತಪಋದ್ಧಿಗಳಲ್ಲಿ ಒಂದು; ಈ ಋದ್ಧಿ ಅಥವಾ ವಿಶೇಷ ಶಕ್ತಿಯಿಂದ ಉಂಡ ಆಹಾರವು ಮಲರುಧಿರಾದಿಗಳಾಗದೆ ಕಾಯ್ದ ಕಬ್ಬಿಣದ ಮೇಲೆ ಬಿದ್ದ ಜಲಕಣದಂತೆ ಆವಿಯಾಗಿ ಹೋಗುವುದು : ಕಾಯ್ದ ಕಬ್ಬುನದ ಮೇಲೆ ಬಿದ್ದ ಜಲಕಣಂಗಳಂತೆ ಉಂಡಾಹಾರಮುಂ ಮಲರುಧಿರಾದಿಗಳಾಗದೆ ತಪ್ತಮಪ್ಪುದು ತಪ್ತತಪಮೆಂಬುದು (ಶ್ರಾವಕಾ. ೯೪-೨೨). [ ತಪ್ತ + ತಪ$_3$ ]

**ತಪ್ತತೈಲ** (ನಾ). ೧. ಕಾಯ್ದ ಎಣ್ಣೆ : ಈ ಖಳನಂ ಕಟಾಹಪೂರಿತ ತಪ್ತತೈಲದೊಳ್ಮುಳುಗಿಸು (ಜೈಮಿಭಾ. ೧೧-೩೦). ೨. ಒಂದು ನರಕದ ಹೆಸರು; ಕಾಯ್ದ ಎಣ್ಣೆಯಲ್ಲಿ ಮುಳುಗಿಸುವರೆಂದು ನಂಬಲಾದ ನರಕ: ಮಹಾಚೂರ್ಣ ಮೂಲಸಂಚೂರ್ಣ ಕಟಪಕ್ಷಪ್ರಮರ್ದನ ತಪ್ತಶೈಲ ತಪ್ತತೈಲವೆಂಬೈದು ಮಂತ್ರಿನರಕಂಗಳಿಂ (ವಿವೇಕ. ೧೮೧). [ ತಪ್ತ + ತೈಲ ]

**ತಪ್ತಮಾಷ** (ನಾ). ಸಪ್ತದಿವ್ಯಗಳಲ್ಲಿ ಒಂದು ; ಮಾನುಷ ಪ್ರಮಾಣಗಳಿಂದ ವಿವಾದವನ್ನು ಬಗೆಹರಿಸಲು ಸಾಧ್ಯವಾಗದಿದ್ದಾಗ ಪ್ರಯೋಗಿಸಲಾಗುತ್ತಿದ್ದ ದಿವ್ಯ ಪ್ರಮಾಣಗಳಲ್ಲಿ ಒಂದು ; ಹದಿನಾರಂಗುಲ ಅಗಲ, ನಾಲ್ಕಂಗುಲ ಆಳ ಇರುವ ಪಾತ್ರೆಯಲ್ಲಿ ಇಪ್ಪತ್ತು ಪಲ ಎಣ್ಣೆ ಇಲ್ಲವೆ ತುಪ್ಪವನ್ನು ಹಾಕಿ ಮರಳುವಂತೆ

ಕಾಯಿಸಿ ಅದರಲ್ಲಿ ಒಂದು ಮಾಷ ಅಥವಾ ಮಾಸಿ ತೂಕದ ಚಿನ್ನ ಇಲ್ಲವೆ ತಾಮ್ರವನ್ನು ಹಾಕಲಾಗುತ್ತಿತ್ತು. ಆರೋಪಿಯು ಅದನ್ನು ಹೆಬ್ಬೆರಳು, ತೋರುಬೆರಳು ಮತ್ತು ನಡುಬೆರಳುಗಳಿಂದ ಹಿಡಿದು ತೆಗೆಯಬೇಕಾಗಿತ್ತು. ಕೈ ಸುಡದಿದ್ದರೆ ಆತನು ನಿರಪರಾಧಿ ಎಂದು ಸಿದ್ಧಮಾಡಲಾಗುತ್ತಿದ್ದಿತು : ಸತಿ ಧರ್ಮ್ಮರೂಪದಿಂ ಶ್ರೀಕಲಿದೇವ ಸ್ವಾಮಿಯಲ್ಲೀ ಕೋಷ ರವಿತಣ್ಣುಲವಗ್ನಿ ತಪ್ತಮಾಷಂ ಜಲವಿಷದಳ ಸಪ್ತದಿವ್ಯಮುಂ ವರ್ತ್ತಿಸುಗುಂ (ಸೌಇಇ. IX-I, ೧೫೩-೭೪ ; 1083).

[ ತಪ್ತ + ಮಾಷ ]

**ತಪ್ತಮುದ್ರಾಂಕನ** (ನಾ). ಶಂಖ, ಚಕ್ರ ಮೊದಲಾದ ಗುರುತುಳ್ಳ ಮುದ್ರೆಗಳನ್ನು ಕಾಯಿಸಿ ದೇಹದಲ್ಲಿ ಗುರುತು ಹಾಕುವುದು; P ಇದು ವೈಷ್ಣವರಲ್ಲಿರುವ ಒಂದು ಸಂಪ್ರದಾಯ. ಮಠಾಧಿಪತಿಗಳು ತಮ್ಮ ಶಿಷ್ಯವೃಂದಕ್ಕೆ ಈ ವಿಧಿಯನ್ನು ನೆರವೇರಿಸುತ್ತಾರೆ.

[ ಸಂ. (ತಪ್ತ + ಮುದ್ರಾ + ಅಂಕನ) ]

**ತಪ್ತಮುದ್ರಾಧಾರಣೆ** (ನಾ). = ತಪ್ತಾಮುದ್ರಾಂಕನ : ಶಂಖ, ಚಕ್ರ, ಗದಾ, ಪದ್ಮ, ನಾರಾಯಣ ಮುದ್ರೆಗಳನ್ನು ಧರಿಸುವುದು ಮತ್ತು ತಪ್ತ ಮುದ್ರಾಧಾರಣೆಯನ್ನು ಮಾಡಿಕೊಳ್ಳುವುದು ಇವುಗಳು ಬಾಹ್ಯ ದೀಕ್ಷೆಗಳು (ಹಸಾರ. ೧೬-೩೦ ಟೀಕು).

[ ಸಂ. ತಪ್ತಮುದ್ರಾಧಾರಣ (ತಪ್ತ + ಮುದ್ರಾ + ಧಾರಣ) ]

**ತಪ್ತಮುದ್ರೆ** (ನಾ). ೧. ಕಾಯಿಸಿದ ಶಂಖಚಕ್ರಾದಿಗಳ ಮುದ್ರೆ. ೨. = ತಪ್ತಮುದ್ರಾಧಾರಣೆ : ತಪ್ತಮುದ್ರೆಯಿಲ್ಲದವನ ಜನ್ಮವ್ಯಾತಕೆ (ವಿದಾಕ್ಮ. ೨೮-೬). [ ಸಂ. ತಪ್ತಮುದ್ರಾ (ತಪ್ತ + ಮುದ್ರಾ) ]

**ತಪ್ತಲೋಹ** (ನಾ). ಕಾಯಿಸಿದ ಕಬ್ಬಿಣ : ಆ ನಿಸಿತಯುತ ತಪ್ತಲೋಹ ಸಮಾನಶೂಲಂಗಳಲಿ ತೆಗೆಸೆನೆ (ಬಸಪು. ೫೦-೪೨) ; ಪರಸ್ತ್ರೀಯ ಕೂಟಂಗಳಲ್ಲಿ ಲವಲವಿಸುತ್ತ ನಿಸ್ತ್ರಿಂಶ ಯಮನ ಭಟರಿಂ ತಪ್ತಲೋಹವನಿತಾಪರಿಷ್ವಂಗ ರಾಗೆ (ವೀಶ್ಮಪು. ೪-೨-೨೦). [ ತಪ್ತ + ಲೋಹ ]

**ತಪ್ತಶೈಲ** (ನಾ). ಒಂದು ನರಕ ; ಕಾದ ಕಲ್ಲಮೇಲೆ ಉರುಳಿಸುವ ಶಿಕ್ಷೆ ಇರುವ ನರಕ: ಮಹಾಚೂರ್ಣ ಮೂಲಸಂಚೂರ್ಣ ಕಟಪಕ್ಷಪ್ರಮರ್ದನ ತಪ್ತಶೈಲ ತಪ್ತತೈಲವೆಂಬೈದು ಮಂತ್ರಿನರಕಂಗಳಿಂ (ವಿವೇಕ. ೧೮೧).

[ ತಪ್ತ + ಶೈಲ ]

**ತಪ್ತಸೂಚೀಶೂಲ** (ನಾ). ಒಂದು ನರಕ; ಕಾದ ಸೂಜಿಯಿಂದ ಚುಚ್ಚುವ ಶಿಕ್ಷೆಯಿರುವ ನರಕ : ಅಸ್ಥಿಬಂಧಬಾಧೆ ತಪ್ತಸೂಚೀಶೂಲ ಗುದಶಂಕು ತಾಪ ಬಹುದುಃಖ ಮಹಾದುಃಖವೆಂಬೈದು ಮಂತ್ರಿನರಕಂಗಳಿಂ (ವಿವೇಕ. ೧೬೧). [ ಸಂ. (ತಪ್ತ + ಸೂಚೀ + ಶೂಲ) ]

**ತಪ್ತಾಂಗಾರ** (ನಾ). ಒಂದು ನರಕ; ಕೆಂಡವನ್ನು ಸುರಿಯುವ ಶಿಕ್ಷೆಯುಳ್ಳ ನರಕ : ಸೂಚೀಮುಖ ಕಾಲ ಖಡ್ಗ ಕ್ಷುರಧಾರೆ ಅಂಬರೀಷಕ ತಪ್ತಾಂಗಾರ ಮಹಾದಾಹ ಸಂತಾಪಂಗಳೆಂಬವೇ ಯೆಂಟು ಮಹಾನರಕಂಗಳು (ವಿವೇಕ. ೧೬೯). [ ತಪ್ತ + ಅಂಗಾರ ]

**ತಪ್ತಾಯಃಪಿಂಡ** (ನಾ). ಕಾಯಿಸಿದ ಕಬ್ಬಿಣದ ಗುಂಡು : ಅಂಬುಜದ [ದಲ] ಮನವರ್ಚಿ ನಿತಂಬಿನಿ ಪಿಡಿದಿರ್ದ ಕುಚಮೆ ತಪ್ತಾಯಃಪಿಂಡಂ ಬೋಲ್ತಿರೆ ನಲ್ಮೆಗೆ ದಿವ್ಯಂಬಿಡಿದಳೊ ಪೇಟೆಮನಿಪಳಾ ವ್ಯತಿಕರದೊಳ್ (ಚಂದ್ರಪು. ೫-೧೩೧). [ ತಪ್ತ + ಅಯಃಪಿಂಡ ]

**ತಪ್ತಾಯಸ** (ನಾ). ೧. ಕರಗಿಸಿದ ಲೋಹ: ಶ್ರವಣವಿವರದೊಳ್ ತಪ್ತಾಯಸಮಂ ಪೊಯ್ದಂತೆ ದಾರಕವಿದಾರಣಮುಂ ದಾರಪರಾಭವಮುಂ ತನಗಟಲಂ . . . ಒದವಿಸೆ (ಪಂರಾಮಾ. ೯-೪೬ ವ). ೨. ಕಾದ ಕಬ್ಬಿಣ : ತಾರುಣ್ಯ ಯೌವನಾದಿಗಳೆಲ್ಲ ವೀಚಿಕಾಕಾರ . . . ತಪ್ತಾಯಸೋಪರಿ ಪತಿತ ಕಂಕಣಕಮಾಯುಸ್ಸಿದು (ವೆಂಕಾರಾ. ೨-೯-೧೯). [ ತಪ್ತ + ಆಯಸ₃ ]

**ತಪ್ತಾಯಸರಸ** (ನಾ). ಕರಗಿಸಿದ ಕಬ್ಬಿಣದ ದ್ರವ,—ಲೋಹರಸ : ಕಡುಸೀಯೆನೆ ಕುಡಿಯೆಂದು ತಂದು ಕುಡಿಯಿಸುವರ್ ತಪ್ತಾಯಸರಸಮಂ (ಶಾಂತಿಪು. ೭-೯೭). [ ತಪ್ತಾಯಸ + ರಸ ]

**ತಪ್ತಾಶ್ಮ** (ನಾ). ಸೂರ್ಯಕಾಂತ ಶಿಲೆ : ವಜ್ರಮುಂ ಕರಗಿ ಪರಿಗುಂ ಸೋಷ್ಣಾಭೂಮಧ್ಯದೊಳ್ ಹಿಮವದ್ವಸುಂಧರೆಯೊಳಿರೆ ತಪ್ತಾಶ್ಮಂ ಶೀತಾಶ್ಮದಂತಿರೆ ಕೋಡುಗುಂ (ಶಾಂತಿಪು. ೭-೮೫).

[ ಸಂ. ತಪ್ತಾಶ್ಮನ್ (ತಪ್ತ + ಅಶ್ಮನ್) ]

**ತಪ್ತ್ಯ** (ಗು). ೧. ಕಾಯಿಸುವ. (ನಾ). ೨. ಕಾಯಿಸುವ ಉಪಕರಣ ; ತಾಪಕ. [ ಸಂ. ]

**ತಪ್ಪ₁** 'ತವು₁' ಪರಾ.

**ತಪ್ಪಂಗಾಯಿ** (ನಾ). ತುಳುನಾಡಿನಲ್ಲಿ ಪ್ರಚಲಿತವಿರುವ ಒಂದು ಆಟ ; ಗುಂಪಿನ ಮಧ್ಯದಲ್ಲಿ ಎಸೆದ ತೆಂಗಿನಕಾಯಿಗಳನ್ನು ಬೇರೆಯವರಿಗೆ ತೆಗೆದುಕೊಳ್ಳಲು ಬಿಡದೆ ತಾನೇ ಪಡೆಯುವುದಕ್ಕೆ ಹೋರಾಡುವ ಒಂದು ಬಗೆಯ ಆಟ : ತಪ್ಪಂಗಾಯಿ (A kind of play with coconuts) ಅಂಬೋಡಿ ಜಾತ್ರೆ . . . ಬೋಂಟೆ (Hunting) ಇತ್ಯಾದಿಗಳು ತುಳುವರ ಧೈರ್ಯ, ಸ್ಥೈರ್ಯ, ವೀರತ್ವದ ಕುರುಹುಗಳು (ತುಳುನಾ. ೩೦).

[ ←ತುಳು. ತಪ್ಪಂಗಾಯಿ, ತೇಪಂಗಾಯಿ ]

**ತಪ್ಪಂಡಿ** 'ತಪ್ಪಡೆ' ನೋ.

**ತಪ್ಪಟ** 'ತಂಬಟ' ನೋ.

**ತಪ್ಪಟೆ** 'ತಂಬಟ' ನೋ.

**ತಪ್ಪಡಿ₁** (ನಾ). ೧. ತಪ್ಪು ಹೆಜ್ಜೆ ; ದಟ್ಟಡಿ ; ತತ್ತರಿಸುವ ಹೆಜ್ಜೆ : ಮೆಲ್ಲನೆ ತತ್ತರಿಸೆದ್ದು ಭಿತ್ತಿಯ ಪಿಡಿದು ನಿಲ್ಲುತ್ತೆ ತಪ್ಪಡಿಗಳಿಡುತಿಡುತೆ ಕೆಡೆವುತ್ತೆ (ನವಮೋ. ೧೫-೫೪); ತೊದಲಾಟ ಒಂದಂದ ತಪ್ಪಡಿಯು ಬಲು ಚೆಂದ (ಗರಿ. ೧೧೯-೬). ತಪ್ಪಡಿ ತಪ್ಪೀಸಿ ತೊದಲಾಟ ಬಿಟ್ಟೂ ಮೊಲಿಹಾಲ ಕುಡಿದು (ಮೂಕರ್ಕಾ. ೧೧೦-೫). ೨. ದಾಪುಗಾಲು : ನೀಮಿರ್ವರುಂ ಪೂರ್ವಾಭಿಮುಖರಾಗಿ ತಪ್ಪದೆ ತಪ್ಪಡಿಯನಷ್ಟೋತ್ತರಶತಪ್ರಮಿತಮಂ ಮಟಿಯದೆ ನೆಟಿ ಇಟ್ಟಲ್ಲಿ ನಿಲ್ಲಿಂ (ನೇಮಿಪು. ೩-೧೫೯ ವ) ; ಮೆಟ್ಟಡಿಯ ಕೊಂಡು ರೊಕ್ಕವ ಕೊಡಿ ಒಪ್ಪಿದರಿರಲಿ, ಒಪ್ಪದಿರ್ದಡೆ ಮೂಱು ಮುಖದಪ್ಪಗೆ ತೊಟ್ಟಹೆ ತಪ್ಪಡಿಯ ಮೆಟ್ಟಿ ಹೋಗುತ್ತಿದ್ದೇನೆ (ಮಾದೂಳ. ೦-೧೦೩) ; ಕೆಂಚಿಕಬ್ಬೆಯಿಂ ಮೂಡಲು ಹತ್ತು ತಪ್ಪಡಿಯು ಕಳದು ತೆಂಕಣಕ್ಕೆವು ಬಡಗಣಕ್ಕೆವು ಸಮವಾಗಿ ಕೊಟ್ಟನು (ಕಇ. II, ೩೮-೪೭ ; 1235). ೩. (ಆಲಂ) ಕ್ರಮ ತಪ್ಪುವಿಕೆ : ತನ್ನ ಕೈಕೆಳಗೆ ಬಂದ ತಪ್ಪಡಿಗಳನ್ನಿಡುವ ತರುಣ ಕಾರಕೂನರ ಮೇಲೆ ಹರಿಹಾಯುವ ಅನೇಕ ಸುಖಸ್ವಪ್ನಗಳನ್ನು . . . ಕಲ್ಪಿಸಿಕೊಂಡಿದ್ದನು (ಗಂಮಾಯಿ. ೧೧) ; ಏನೋ ತಪ್ಪುಹಾದಿಯಲ್ಲಿ ತಪ್ಪಡಿ ಇಟ್ಟಿದ್ದಾಗಿತ್ತು (ಹುಜ್ಜಾಟ. ೯೬).

[ ತಪ್ಪು₁ + ಅಡಿ₁ /ತಮಿ. ತಪ್ಪಟ ]

**ತಪ್ಪಡಿ₂** 'ತಪ್ಪಡೆ' ನೋ.

**ತಪ್ಪಡಿಯಿಡು** (ಕ್ರಿ). ದಟ್ಟಡಿಯಿಡು ; ತಪ್ಪುಹೆಜ್ಜೆಹಾಕು : ಭಿತ್ತಿಯುಂ ಪಿಡಿದು ನಿಲ್ಲುತ್ತೆ ತಪ್ಪಡಿಯಿಡುತೆ (ನವಮೋ. ೧೨-೨೦).

[ ತಪ್ಪಡಿ₁ + ಇಡು₁ ]

**ತಪ್ಪಡಿಸು** 'ಚಪ್ಪರಿಸು' ನೋ.

**ತಪ್ಪಡೆ, ತಪ್ಪಂಡಿ, ತಪ್ಪಡಿ₂** (ನಾ). (ಬಟ್ಟೆ ಮೊದಲಾದುವು) ಬಹಳವಾಗಿ ತೊಯ್ದಿರುವುದು; ನೆನೆದು ತೊಟ್ಟಿಕ್ಕುತ್ತಿರುವುದು: ತೊಯ್ದು ತಪ್ಪಡೆಯಾಗಿದ್ದ ಆಕೆಯ ಅಚ್ಚ ಕಪ್ಪಾದ ಕೂದಲು . . . ಹರಡಿಕೊಂಡಿದ್ದವು (ಅಂಬಿಕ. ೪). ತಪ್ಪಂಡಿ : ತಾಯಿಯ ಮೈ ತೊಯ್ದು ತಪ್ಪಂಡಿಯಾಗಿದೆ (ಹೊಸಕ್ಕಿ. ೨೦೦). ತಪ್ಪಡಿ₂ : ನಿಯತ ದ್ವಿತ್ವಕ್ಕೆ – ಪಪ್ಪುಕಂ, ಕಪ್ಪಡ,

ಬಿಪ್ಪಂಡಂ . . . ಕಪ್ಪಳಿ, ತಪ್ಪಡಿ, ಅಓಪ್ಪಂ (ಶಮದ. ೩೭ ಪ್ರಯೋ): ಇಳಿಯುತ್ತಿರುವ ಬೆವರಿನಿಂದ ತೊಯ್ದು ತಪ್ಪಡಿಯಾದ ಕುಪ್ಪಸ (ಮತ್ಸ್ಯ. ೩); ಶರ್ಟು ತೊಯ್ದು ತಪ್ಪಡಿಯಾಗಿ ದೇಹಕ್ಕೆ ಅಂಟಿಕೊಂಡಿದೆ (ಮುಗಿಮ. ೪); ಬರಿದಾದ ಹಾಸಿಗೆಯನ್ನು ಬೆಳಗಾಗುವವರೆಗೂ ತೊಯ್ದು ತಪ್ಪಡಿ ಮಾಡಿದಳು (ನಿರಾಥ. ೫೯). [ತಪ್ಪ$_0$ + ಅಡೆ$_8$]

**ತಪ್ಪಣ** (ನಾ). ಹಡಗಿನ ಅಡಿ,- ಕೆಳಭಾಗ : "ಹಡಗಿನ ಮುಖಂ ಕೋಟಪತ್ರಮೆನಿಸಿಕ್ಕುಮಾ ಹಡಗಿನಿದ್ದೆಸೆ ಪುಳಿಂದಂ ಮಂಗವಮಕ್ಕುಮಾ ಹಡಗಿನಡಿ ಪಟ್ಟಣಂ ತಪ್ಪ[ಪಾಠಾಂ. ರ್ಪ]ಣಮೆನಿಕ್ಕದಟ ಹಿಂದು ಚುಕ್ಕಣ ಮೆನಿಕ್ಕುಂ" (ಮಂಗರಾ. ೦೨೦-೫). [?]

**ತಪ್ಪಣಿ$_1$** (ನಾ). ನೆಯ್ಗೆಯಲ್ಲಿ ಅಣಿ ತಪ್ಪುವುದು : (+).
[ತಪ್ಪು$_1$ + ಅಣಿ$_2$]

**ತಪ್ಪಣಿ$_2$** 'ಚಪ್ಪಳೆ' ನೋ.

**ತಪ್ಪಣೆ** 'ಚಪ್ಪಳೆ' ನೋ.

**ತಪ್ಪಣೆಗುಟ್ಟು** 'ಚಪ್ಪಳೆಗಂಟ್ಟು' ನೋ.

**ತಪ್ಪನೆ** (ಅ). ೧. ಬೇಗನೆ ; ಕೂಡಲೆ : ಇದ್ದಕ್ಕಿದ್ದಂತೆ : ಒಪ್ಪಂಬಡೆದಿರ್ದ ಪೊನ್ನ ಕಳಸಸಮೂಹಂ ತಪ್ಪನೆ ಪುರಮಂ ನೋಡಲ್ದಪ್ಪದೆ ಬಂದಿರ್ದ ಸೂರ್ಯಕುಲಮೆನೆ ತೋರ್ಕುಂ (ಹಾಲಾಸ್ಯ. ೧-೪-೭೦): ಅಪ್ಪ ಗುರುಸ್ವಾಮಿ ತಪ್ಪನೆ ಬರೋರಲ್ಲ ಉತ್ತು ಸದರ್‌ಹೋಗಿ ಕರತನ್ನಿ (ನಾಪದ. ೦೨೩); ತಪ್ಪನೆ ಬಾ ಅಂದರೆ ತಬ್ಬಲಿಕ್ಕಿ ಬಂದ ಹಾಗೆ (ಗಾದೆ). ೨. ಸಂಪೂರ್ಣವಾಗಿ : ಅದರ ಶರೀರವೆಲ್ಲ ತಪ್ಪನೆ ತೊಯ್ದು ನೀರಿಳಿಯುತ್ತಿದ್ದವು (ಬಂಗಾಹ. ೨೨).
[ತಪ್$_0$ + - ಅನೆ$_1$./ತೆಲು. ತೆಪ್ಪುನ, ದಬ್ಬುನ]

**ತಪ್ಪರಿಕೆಹುಲ್ಲು** (ನಾ). ಒಂದು ಜಾತಿಯ ಹುಲ್ಲು : ಮಂಜು ಹುಲ್ಲು, ತಪ್ಪರಿಕೆ ಹುಲ್ಲು (ಮೃಜಿಗಿ. ೧೪-೨೪೭).
[ತಪ್ಪರಿಕೆ$_0$ + ಹುಲ್ಲು (<ಪುಲ್)]

**ತಪ್ಪರಿಸಾಡು** (ಕ್ರಿ). ತಡವರಿಸು ; ತಡಕಾಡು : ಅಪರಿಚಿತರ ಕೈಯಿಂದ ಸುಬ್ಬು ತನ್ನ ತಂದೆಯನ್ನು ತನ್ನ ಕೈಗೆ ತೆಗೆದುಕೊಂಡನು. ತಪ್ಪರಿಸಾಡುತ್ತಾ ಅವರು ತಮ್ಮ ಕೋಣೆಯೊಳಕ್ಕೆ . . . ಹೋದರು (ಅವತ. ೧೮೦). [ತಪ್ಪರಿಸು$_0$ + ಆಡು$_1$]

**ತಪ್ಪರೆಹುಲ್ಲು** (ನಾ). ಒಂದು ಜಾತಿಯ ಹುಲ್ಲು : ಗಂಡು ಅಕ್ಕಬುಹುಲ್ಲು, ತಪ್ಪರೆಹುಲ್ಲು, ಹೊಂಬಾಳೆಹುಲ್ಲು, ಸಣ್ಣಕ್ಕಿಹುಲ್ಲು (ಮೃಜಿಗಿ. ೩೦-೫೮೫).
[ತಪ್ಪರೆ$_0$ + ಹುಲ್ಲು (<ಪುಲ್)]

**ತಪ್ಪಲ್$_1$** (ನಾ). ಎಡಹುವಿಕೆ ; ತಪ್ಪುವಿಕೆ : (+).
[ತಪ್ಪು$_1$ + - ಅಲ್$_2$/ತಮಿ. ಮಲ. ತಪ್ಪಲ್]

**ತಪ್ಪಲ್$_2$** 'ತಟ್ಟಿಲ್' ನೋ.

**ತಪ್ಪಲ** 'ತೊಪ್ಪಲು$_1$' ನೋ.

**ತಪ್ಪಲಕ್ಕಿ**(ನಾ). ತಪ್ಪಿಬಿದ್ದ ಅಕ್ಕಿ ; ಚೆಲ್ಲಿದ ಅಕ್ಕಿ (?) : ತನು ಮನ ಧನ ಸಕಲ ಸಂಪತ್ತುಳ್ಳ ನಿಮ್ಮ ಶರಣರ ತಪ್ಪಲಕ್ಕಿಯನಾಯ್ದು ತಂದು ಎನ್ನೊಡಲ ಹೊರೆವೆನಲ್ಲದೆ ಅಮಲೇಶ್ವರಲಿಂಗಕ್ಕೆ ನೀಡುವ ಬಯಕೆ ಎನಗಿಲ್ಲ (ಶೂನ್ಯಸಂ. ೨೩೨-೪೭). [ತಪ್ಪಲ್? + ಅಕ್ಕಿ$_1$]

**ತಪ್ಪಲಿಕೆ** (ನಾ). ದಂಡೆ ; ತೀರ (?) : ಎತ್ತಬಾರದ ಕಲ್ಲು ನೀರಮೇಲೆ ತೆಪ್ಪದಂತೆ ಹೋಹಾಗ ಮೇಲೆ ಕುಳಿತು ಒತ್ತುವರ ನುಂಗಿತ್ತು ನುಂಗಿದವರು ಅಲ್ಲಿದ್ದಂತೆ ಹೊಳೆಯ ನೀರ ತಪ್ಪಲಿಕೆ ಕುಡಿದು ತೆಪ್ಪ ಪೃಥ್ವಿಯಲ್ಲಿ ಸಂದಿತ್ತು (ಕಲ್ಯಾಶಾಂ. ೭-೧೦೩). 'ತಪ್ಪಲು$_3$' ಪರಾ. [?]

**ತಪ್ಪಲು$_1$** 'ತಟ್ಟಿಲ್' ನೋ.

**ತಪ್ಪಲು$_2$** 'ತೊಪ್ಪಲು$_1$' ನೋ.

**ತಪ್ಪಲು$_3$** (ನಾ). ೧. ದಡ ; ತೀರ : ತೆಪ್ಪವ ಹತ್ತಿ ಒತ್ತುವನಂತೆ ತೆಪ್ಪ ತಪ್ಪಲಿಗೆ ಸೇರಿದ ಮತ್ತೆ ಒತ್ತುವುದು ಹತ್ತುವುದೆ (ಮೋಳಿಮಾ. ೧೪೪-೫೪೯). ೨. ಸಮೀಪ ; ಬಳಿ : ತಾ ತಪ್ಪಿದಲ್ಲಿ ತಪ್ಪನೊಳಗಿಟ್ಟುಕೊಳ್ಳಬೇಕೆಂದು ಭಕ್ತರು ಜಂಗಮದ ಬಾಗಿಲ ತಪ್ಪಲ ಕಾಯದೆ (ಏಲೇಶ್ವ. ೨); ಕಂಡ ಚಿತ್ತ ವಸ್ತುವಿನಲ್ಲಿ ಮಗ್ನವಾದ ಮತ್ತೆ ಸಂಸಾರ ವಿಷಯಕ್ಕೆ ಮತ್ತನಪ್ಪುದೇ ಮತ್ತೆ ಭಕ್ತರ ಗೃಹ ರಾಜದ್ವಾರದ ತಪ್ಪಲ ಕಾಯ್ವುದೇ ಆ ಚಿತ್ತ (ಸರ್ವವ. ೧೩೭-೬೮೦). 'ತಟ್ಟಿಲ್' ಪರಾ. [?]

**ತಪ್ಪಲೆ, ತಪಲೆ, ತಪೇಲಿ, ತಪ್ಪೇಲಿ** (ನಾ). ಅಡಿಗೆ ಮಾಡಲು ಮತ್ತು ನೀರು ತುಂಬಲು ಉಪಯೋಗಿಸುವ ಹಿತ್ತಾಳೆ ಅಥವಾ ತಾಮ್ರದ ಪಾತ್ರೆ : ಚೊಕ್ಕ ಬೆಳ್ಳಿಯ ಭಾಂಡಭಾಜನ ಇಕ್ಕಿ ತಪ್ಪಲೆ ಬಿಂದಿಗೆಗಳಂ ದಿಕ್ಕು ದಿಕ್ಕಿಲಿ ಹೂಡಿ ಅಡಿಗೆಯ ಮಾಡತೊಡಗಿದರು (ಶರಲೀ. ೫೪-೮); ತಂಬಿಗೆಯು ತಪ್ಪಲೆಯು ಅವು ತಾಂ ಉಂಬುದಕ್ಕೆ ಕುಡಿವದಕೆ ಬಾಹುವು (ಜ್ಞಾನಸಿಂ. ೪೨-೧೪); ಕೊಳಡಲೊಂದು ತಪ್ಪಲೆಯಾ (ಪಕುಭಾ. ೨೨-೩೦); ತಪ್ಪಲೆಯ ತಳದ ಕೆರಕಲು ಸಾರಿನ ಬೇಳೆಯ ಕಾಳಿನ ಚರಟ (ಚಿಸ್ವಕ. ೦೦). **ತಪಲೆ :** ಹನಗಂಡಿಯ ಅಖಂಡ ತಪಲೆಗಳು ಪ್ರಸಿದ್ಧ ಉಂಟು (ಕಭಾಗಿ. ೩೦೨). **ತಪೇಲಿ :** ಅವರು ಕೂಡ ಸಣ್ಣ ತಪೇಲಿ ಬೋಗುಣಿ ಮುಂತಾದ ಪಾತ್ರೆಗಳನ್ನು ಮಾಡುತ್ತಾರೆ (ಕಭಾಗಿ. ೪೫೩); ನಮ್ಮ ಮನೆಯೊಳಗಿನ ತಪೇಲಿಗಳೂ ಕೊಡಗಳೂ (ಮುಂಬಯಿ. ೫-೪೩). **ತಪ್ಪೇಲಿ:** ಅನ್ನದ ತಪ್ಪೇಲಿಯನ್ನು ಹತ್ತಿರ ಎಳೆದುಕೊಂಡು . . . ಊಟ ಮಾಡುತ್ತಿದ್ದಳು (ಮಾರ್ಗದ. ೦೯); ನಿನಗೊಂದು ತಾಮ್ರದ ತಪ್ಪೇಲಿಯನ್ನು ಕೊಡುವೆನು (ಮಥಾರ. ೦೩); ಆಹಾರ ಮಂತ್ರಿ ಎಂದರೆ ಅವರೇ ತಮ್ಮ ಅನ್ನದ ತಪ್ಪೇಲಿ ಅಂತ ತಿಳಿಕೊಂಡಂತಿದೆ (ಹನ್ನೊಂದ. ೭೬).
[ದೇ.॥ ತಮಿ. ತಪಲೈ ; ತಪಿಲೈ ; ತುಳು. ತಪಲೆ ; ತೆಲು. ತಪೆಲ, ತಪೇಲ, ತಪ್ಪೇಲ]

**ತಪ್ಪಳಿಕ್ಕು** 'ಚಪ್ಪಳೆಯಿಕ್ಕು' ನೋ.

**ತಪ್ಪಳಿಸು** (ಕ್ರಿ). ಚಪ್ಪರಿಸು (?) : ಕುಸುಮಕುಲ[ದ]ಪರಿಮಳಾಮೋದಕ್ಕೆಡೆಗೊಟ್ಟು ಮೆಚಿವ ಸಿರಿಮುಡಿಯೊಳು ನೀಲದರಮನೆಯ (?) . . . ತೊ[ಡಂಬೆ]ಯುಂ ತಪ್ಪಳಿಸುವ ಪೆಣ್ದುಂಬಿಗಳಂತೆ ಲಲಾಟರಂಗದೊಳುಂಗುರಿಸಿ ಸಂಗಡದಿಂ ಕುಣಿವ ನೀಳಾಳಕಂಗಳ (ಬಸರ. ೦೨-೮೦). [?]

**ತಪ್ಪಳೆ** 'ಚಪ್ಪಳೆ' ನೋ.

**ತಪ್ಪಳೆಗುಟ್ಟು** 'ಚಪ್ಪಳೆಗುಟ್ಟು' ನೋ.

**ತಪ್ಪಾಡು** (ಕ್ರಿ). ಸಂಳ್ಳುಹೇಳು : ಉಪ್ಪು ಸಪ್ಪನೆಯಕ್ಕು ಕರ್ಪುರವು ಕರಿದಕ್ಕು ಸರ್ಪನಿಗೆ ಬಾಲವೆರಡಕ್ಕು ಶ್ರವಣ ತಾ ತಪ್ಪಾಡಿದಂದು (ಸರ್ವಜ್ಞ. ೦೦೦೭). [ತಪ್ಪು$_2$ + ಆಡು$_1$]

**ತಪ್ಪಾಳೆ** 'ಚಪ್ಪಳೆ' ನೋ.

**ತಪ್ಪಿತ** (ನಾ). ತಪ್ಪು ; ಅಪರಾಧ : ಯುದ್ಧದ ತಪ್ಪಿತವನ್ನು ಜರ್ಮನರ ಮೇಲೆ ಹೊರಿಸಿ ಇನ್ನಿಲ್ಲದಷ್ಟು ದಂಡವನ್ನು ಹೊರಿಸಿದರು (ಬಾಲಪ್ರ. II, ೦೦೫೩); ತಾವು ದಂಡೆತ್ತಿ ಬಂದ ತಪ್ಪಿತಕ್ಕಾಗಿ ಮಹಮ್ಮದನಿಂದ ತಮಗೆಲ್ಲಿ ದಂಡನೆಯಾಗುವುದೋ ಎಂದು ಭಯಪಟ್ಟು (ಶೃಗಂಬ. ೮೭); ತಾನು ಮಾಡಿದ ತಪ್ಪಿತಗಳು ಭೀಷ್ಮರಿಗೆ ಜುಗುಪ್ಸೆಯಾಗಿ ಇರುವುದನ್ನು ಮೊದಲಿನಿಂದಲೂ ಅರಿತಿದ್ದ (ವ್ಯಾಸಜಿ. ೩೩೪). 'ಒಪ್ಪಿತ' ಹೋ.
[<ತಪ್ಪು$_1$./ತಮಿ. ಮಲ. ತೆಲು. ತಪ್ಪಿತ]

**ತಪ್ಪಿತಸ್ಥ** (ನಾ). ತಪ್ಪು ಮಾಡಿದ ವ್ಯಕ್ತಿ ; ಅಪರಾಧಿ : ನಿಮ್ಮ ತಪ್ಪಿಗಾಗಿ ನಾನು ತಪ್ಪಿತಸ್ಥಳಾಗಬೇಕು (ರಂಗರೋ. ೨೭); ತಪ್ಪಿತಸ್ಥನಲ್ಲದ ತನ್ನ ಆನಂದನಿಗೆ ಅನಿರೀಕ್ಷಿತವಾಗಿ ನಿರ್ದಯ ಪ್ರಹಾರವಾಗಲಿದೆ (ಮರಳಿ. ೧೫೦).
[ತಪ್ಪಿತ + - ಸ್ಥ]

**ತಪ್ಪಿಸು** (ಕ್ರಿ). ೧. ತಪ್ಪುಮಾಡು : ಸಾರಿಯನಿಡುತ ತಪ್ಪಿದೆನೆಂದೊ ಪಾಸಂಗಿಗಳ ನಾನಿಂತೊಂದನೊಂದಂ ಪಿಡಿದು ತಪ್ಪಿಸಿ ಹಾಯಿಕಿದೆನೆಂದೊ (ಬಸವು. ೪೩–೧೩). ೨. ತಪ್ಪುವಂತೆ ಮಾಡು ; ನೆರವೇರದಂತೆಮಾಡು; ಅಡ್ಡಿಪಡಿಸು : ಇವ ತಪ್ಪಿಸಿ ಎನ್ನುವ ರಕ್ಷಿಸಯ್ಯ (ಬಸವ. ೧೧) ; ಬೊಪ್ಪ ನಿತ್ಯನು ವರವನೆವಗದು ತಪ್ಪಿಸಲು ತೀರುವುದೆ . . . ತಪ್ಪಿಸಿತಲೇ ದೈವಗತಿ ನಮ್ಮಪ್ಪನೇ ಕೆಡಸಿದನು ನವಗಿನ್ನಪ್ಪುದಾಗಲಿ (ಕುವ್ಯಾಸ. ೧೭–೭); ಬುದ್ಧಿಯು ವಿಧಿಯನ್ನು ತಪ್ಪಿಸಲಾರದು (ವಚಭಾ. ೯). ೩. ಮೀರು ; ಅತಿಕ್ರಮಿಸು : ಪರಿವಿಡಿಯ ದಿನವೇಳೆದಪ್ಪಿಸದಿರು ಮಟ್ಟೆಯದಿರು ನೀನಲಸದಿರು ತರಳೆ (ಬಸವು.೦೪–೩); ಕೊಟ್ಟ ಮಾತನ್ನು ತಪ್ಪಿಸಬಾರದು (ರೂಢಿ). ೪. ಸಿಕ್ಕದಿರಂ; ತೊಡಕದಿರಂ ; ದೂರವಿರು : ಕೆಳದಿಯನಾಗಳ್ಕಣ್ಗೋತ್ಪಳದಿಂದಂ ಮೋದೆ ತಪ್ಪಿಸಲ್ಪರಿವಳ ಬೆನ್ನೊಳ್ ಪರಿವಳಿರದೆ ನಗುತಂ ನಳಿನಾನನೆ (ಕಾದಂಬ. ೯೯) ; ಚಕ್ರದಂತೆ ತಪ್ಪಿಸಲರಿದಪ್ಪ ಸೂಜಿಯ ಮೊನೆಯಂತೆ ಕೂರಿತಪ್ಪ (ಧರ್ಮಾಮ್ಮ. ೩–೦೪೭). ೫. ಕಳೆ; ನೀಗು ; ಹೋಗಲಾಡಿಸಂ; ನಿವಾರಿಸು; ಪರಿಹರಿಸಂ : ತಪ್ಪಿಸಿ ಕಾಂತರಂ ಸಿಡಿದು ಮೆಲ್ಲನೆ ಬಂದು ಬಂದುಪಕಾಂತರಂ ಸಮಂತಪ್ಪಿ (ಉದ್ಭಟ. ೧೧–೧೦೨) : ತಪ್ಪಿಸಿದನುದ್ಧವಗೆ ಶಾಪವ ತಪ್ಪಿಸಿದನಿಲ್ಲುಳಿದ ಯಾದವದರ್ಪಕರಿಗಸುರಾರಿ (ನಿಭಾಗ. ೧೦–೧–೪೮) ; ಸುಲಭವಾಗಿ ನಿಮ್ಮೆಲ್ಲರ ಬಂಧನವನ್ನು ತಪ್ಪಿಸಿ ಬಿಡುವೆನು (ರಾವಿಜ. ೧೭) ; ಅವನ ನಶ್ಯದ ಚಟವನ್ನು ತಪ್ಪಿಸಿದರು (ರೂಢಿ). ೬. ದೊರೆಯದಂತೆ ಮಾಡು ; ದಕ್ಕದಂತೆ ಮಾಡು : ಬೊಪ್ಪ ದೇಶಿಗ ರಾದೆವೈ ವಿಧಿ ತಪ್ಪಿಸಿತಲಾ ನಮ್ಮ ಭಾಗ್ಯವನು (ಕುವ್ಯಾಅ. ೫–೨೦) ; ಆತ ತಡವಾಗಿ ಬಂದು ನನಗೆ ಗಾಡಿ ತಪ್ಪಿಸಿ ಬಿಟ್ಟ (ರೂಢಿ). ೭. ತಡೆ ; ನಿಲ್ಲಿಸಂ : ತನುಜ ಕೇಳಚ್ಚರಿಯನಾ ಸ್ಯಂದನದ ಮೇಲಣ ಮುಂಡ ಬೊಬ್ಬೆಯ ನಿನದ ತಪ್ಪಿಸಿ ತಪ್ಪದೆಸುತಿರ್ದುದು ಕಕುತ್ಸ್ಥಜನ (ತೊರರಾ. ೩–೩–೨೪) ; ದರ್ಪಕಶಾಸ್ತ್ರವಲ್ಲದೆ ಧರಿತ್ರಿಯೊಳಿಡಿದಿರ್ಪ ನಾನಾ ಶಾಸ್ತ್ರಗಳನು ತಪ್ಪಿಸೆ ಶ್ರವಣನಾಳವ ಮುಚ್ಚುವಂದದೆ ಕೊಪ್ಪನಿಕ್ಕಿದರು ಕರ್ಣದಲಿ (ಮೋಹತ. ೨೩–೩೭); ಮಗುವಿಗೆ ಎದೆ ಹಾಲು ತಪ್ಪಿಸಿದ್ದಾರೆ (ರೂಢಿ). ೮. ಚಾತುರ್ಯ ದಿಂದ ಜಾರಿಕೊಳ್ಳು ; ನುಣುಚಿಕೊಳ್ಳು ; ಮಗುವು ರಾಘವನೆಂದು ತಪ್ಪಿಸಿ ನುಡಿದ ನುಡಿ ನಿನಗೆ ನಿಗರವೇ (ತೊರರಾ. ೧–೯–೩೦) ; ಅವಳು ಬೇಕಾದಷ್ಟು ನೆವ ಹೇಳಿ ತಪ್ಪಿಸಿಕೊಂಡಾಗ್ಯೂ ಅವನು ಕೇಳಲಿಲ್ಲ (ಮುಂಬಯಿ. ೪–೬). ೯. ಮಾರ್ಗ ಬಿಟ್ಟು ಹೋಗುವಂತೆ ಮಾಡು ; ಬೇರೆ ಕಡೆಗೆ ತಿರುಗಿಸು : ಹಿಡಿದು ಬಗಿವೆನು ಪಾರ್ಥನನು ಕೆಲಕಡೆಗೆ ತಪ್ಪಿಸಿ ಧರ್ಮಪುತ್ರನ ಬಿಡೆನು (ಕುವ್ಯಾದ್ರೋ. ೦–೪೧). ೧೦. ವಿಮುಖ ವಾಗು ; ಮಾರ್ಗವನ್ನು ಬಿಟ್ಟು ಬೇರೆ ದಾರಿ ಹಿಡಿ ; ದಾರಿ ತಪ್ಪು: (೩).೧೧. ಮಾಡದೆ ಇರಂ; ಮಾಡದೆ ಬಿಡು: ಸಾಲೆಗೆ ಹೋಗುವುದನ್ನು ತಪ್ಪಿಸಬಾರದು (ಮುಂಬಯಿ. ೦–೧೨) ; ನೀನು ಈಗ ಎರಡು ದಿವಸದಿಂದ ಆ ಕೆಲಸಕ್ಕೆ ತಪ್ಪಿಸಿದರೂ ತಪ್ಪಿಸಿರಬಹುದು (ಮುಂಬಯಿ. ೪–೧೫೪) ; ನಾಳೆ ನಮ್ಮ ಮನೆಗೆ ಬರಲು ತಪ್ಪಿಸಬೇಡ (ರೂಢಿ). ೧೨. ಕೆಡಿಸಂ; ಹಾಳು ಮಾಡಂ : ವಿಧಿಯು ಬುದ್ಧಿಯನ್ನು ತಪ್ಪಿಸಿಬಿಡುತ್ತದೆ (ವಚಭಾ. ೯). ೧೩. ಮರೆಯಾಗುವಂತೆ ಮಾಡು ; ಕಾಣದಂತೆ ಮಾಡು : 'ಕಣ್ತಪ್ಪಿಸು' ಪರಾ. ೧೪. ಕಳಚು ; ಬಿಚ್ಚು ; ಬಿಡಿಸಂ : ಗಂಟು ತಪ್ಪಿಸು (ರೂಢಿ); ಕುಣಿಕೆ ತಪ್ಪಿಸು (ರೂಢಿ). ೧೫. ಪಾರುಮಾಡಂ ; ಉಳಿಸು : ಈ ಹಿಂಸೆಯಿಂದ ನನ್ನನ್ನು ತಪ್ಪಿಸು (ರೂಢಿ).

**ತಪ್ಪಿಸಾಟ** = ತಪ್ಪಿಸುವಿಕೆ ; ಜಾರಿಕೊಳ್ಳುವುದಂ : ಒಳ್ಳೆಯ ಪದ್ಯ ಕಾವ್ಯದ ಎಷ್ಟೋ ಭಾಗದಲ್ಲಿ ಸರಳರಗಳೆಯೆಂಬ ನಂಬಿಗೆಯನ್ನು ಉಂಟು ಮಾಡುವ ನಿರಂತರ ಸೂಚನೆಯೂ ಅದರ ತಪ್ಪಿಸಾಟವೂ (Evasion) ಮೋಹಕತೆಯನ್ನು ತಂದಿವೆ (ಗೊತ್ತುಗು. ೧೧೬). **ತಪ್ಪಿಸಾಡು** = ಮರೆಯಾಗಿ ಓಡಾಡಂ : ಅವನೇಕೆ ಹೀಗೆ ದೂರ ದೂರ ಪಲಾಯನಮಾಡಿ ತಪ್ಪಿಸಾಡು ತ್ತಿರುವ ? (ಇಪ್ಪಕ. ೨೭೪). **ತಪ್ಪಿಸಿಕೊಳ್ಳು** = ೧. ಓಡಿಹೋಗಂ ; ಪರಾ ರಿಯಾಗಂ: ಆ ರಾತ್ರಿ ಹಯಾತನ ತಂದೆ ಅಲ್ಲಿಂದ ತಪ್ಪಿಸಿಕೊಂಡು ಹಿಂತಿರುಗಿ ಬಂದು ನಡೆದದ್ದನ್ನೆಲ್ಲಾ ನಮ್ಮೂರಿನಲ್ಲಿ ಹೇಳಿದ (ಚಿಂಗಾಳ್ಕ. ೨೪); ನಾವುಗಳು ಈ ದಿನವೇ ಇಲ್ಲಿಂದ ತಪ್ಪಿಸಿಕೊಂಡು ಹೋಗಬೇಕಾಗಿದೆ (ರಾವಿಜ. ೧೪). ೨. ನುಣುಚಿಕೊಳ್ಳು ; ಜಾರಿಕೊಳ್ಳು : ನೀವು ದಿಕ್ಕುಂದೆಸೆಯು ಯೆನುತಿರೆ ದೇವ ದೇವ ತಪ್ಪಿಸಿಕೊಂಡು ಹೋಹುದು ನೀತಿಯೇ ನಿಮಗೆ (ಬಸವು. ೪೭–೪೭); ತನ್ನಚಿವುದೋಲಿದೆ . . . ತಾ ತನ್ನ ತಪ್ಪಿಸಿಕೊಂಡು ಹೋದನು (ಕೂನ್ನಸಂ. ೨೭–೧೯). ೩. ಮಾರ್ಗ ಬಿಟ್ಟುಹೋಗು ; ತನ್ನ ಜೊತೆಯವರಿಂದ ಅಥವಾ ಗುಂಪಿನಿಂದ ಬೇರೆಯಾಗು ; ಸಂಬಂಧ ಕಳೆದುಕೊ ; ದಾರಿತಪ್ಪು : ಅದರ ಸಂಗಡ ಮನುಷ್ಯನ ಹೆಜ್ಜೆಯಿಲ್ಲದ ಕಾರಣ ಅದು ಬಹುತರ ತಪ್ಪಿಸಿಕೊಂಡ ಒಂಟಿಯೆಂದು ಗ್ರಹಿಸಿದೆನು (ಮುಂಬಯಿ. ೪–೧೭೦) ; ಮಗು ತಪ್ಪಿಸಿಕೊಂಡಿದೆ (ರೂಢಿ).

[ ತಪ್ಪು₁ + – ಇಸು₃ ]

**ತಪ್ಪು₁** (ಕ್ರಿ). ೧. ರೀತಿಗೆಡು ; ಕ್ರಮಕೆಡಂ ; ತಪ್ಪುಮಾಡು : "ತಪ್ಪು— ಸ್ಖಲನೇ" (ಶಮುಧಾ) ; ಪಾಂಗಟಿದು ದೋಷಮಂ ಪಿಂಗಿಸಿ ತಪ್ಪದೆ ಬಗೆದು ಪೇಟ್ವುದಾಗಮಮುದಾರನೃಪತುಂಗದೇವ ವಿದಿತಕ್ರಮದಿಂ (ಕವಿರಾ. ೧–೪೪) ; ದಿವ್ಯಶರದಿಂ ಶಿರವಂ ಪಱಿಯೆ ಚ್ಚೊಡಾತನೊತ್ತಂ ಬದಿನಾಂತೊಡಾಂ ಬಱಿದೆ ತಪ್ಪಿದೆನೆಂದು ಕಿರೀಟಿ (ಪಂಪಭಾ. ೧೧–೭೯) ; ತಪ್ಪಿತಪ್ಪಿ ತಿದ್ದಿಕೊಂಡಿಹೆನೆಂದರೆ ಹಸನಾಗಬಲ್ಲುದೆ (ಕೂನ್ನಸಂ. ೪೧–೨೦). ೨. ಅನ್ಯಾಯ ಅಥವಾ ಅಪಚಾರ ಮಾಡಂ ; ಕೆಡಕುಮಾಡಂ ; ದ್ರೋಹ ಬಗೆ : 'ಅಟ್ಟಿಱಿಳಿನ್ನಂ ಪೊರೆದೆಯ್ದೆ ನಂಬಿದ ನೃಪಂಗೆಂತಾಜಿಯೊಳ್ ತಪ್ಪುವೆಂ (ಪಂಪಭಾ. ೯–೭೦) ; ಚಾಳುಕ್ಯ ವಂಶದೊಳೆಲ್ಲಿಯುಮಿನ್ನೆವರೆಗಂ ನುಡಿದು ಪುಸಿವುದುಂ ಆಡಿ ಅಳು ಪುವುದುಂ ಕೂಡಿ ತಪ್ಪುವುದುಂ . . . ಕನಸಿನೊಳಪ್ಪೊಡಮಿಲ್ಲಂ (ಗದಾಯು. ೨–೭ ವ) ; ಆನುಮಾತನುಂ ಪರಸ್ಪರೋಪಕಾರಿಗಳದಱಿಂದೋ ರೊರ್ವರ್ಗೆ ತಪ್ಪುವರಲ್ಲ (ಪಂಚತಂ. ೧೦೭–೧) ; ಒಂದಿಱುಂಪೆಯ ಪ್ರಾಣಕ್ಕಂ ತಪ್ಪದಾತಂ ನಿನ್ನ ಪ್ರಾಣಕ್ಕೆ ತಪ್ಪುವನೆ ತಪ್ಪಲಱಿಯಂ (ಧರ್ಮಾಮ್ಮ. ೨–೦೩೫) ; ಜವನ ಮೀಸೆಯ ಕೀಳುವರು . . . ಅಳಿಗಾಳ್ದನಂ ಕೊಲ್ವರು ತಪ್ಪೆ ತಪ್ಪುವರು (ಸೌಇಇ. XI-i, ೨೦೫–೩೭ ; 12ನೆಯ ಶತ) : ಸಾಕಿದ ಪತಿಗೆ ತಪ್ಪಿದನ . . . ಗತಿಗಳಾಗಲಿ ರಣದೊಳೋಡಿದರೆ (ಕುವ್ಯಾದ್ರೋ. ೨–೮). ೩. ಮೀರು ; ಅತಿಕ್ರಮಿಸು ; ಭಂಗಮಾಡು ; ನಡೆಸದೆ ಇರು : ಈ ಸ್ಥಿತಿಯನ್ ತಪ್ಪಿ ಕೊಣ್ಡರಪ್ಪೊಡೆ (ಹೈಅರಿ. ೧೯೩೭, ೨೭–೫೭ ; 372) ; ಷಡ್ಗುಣಾಳಂಕಾರಂ ನುಡಿದು ತಪ್ಪದಂ (ಸೌಇಇ. IX-i, ೨೨–೭ ; 897) ; ಅವರ್ ನನ್ನಿಯಂ ತಪ್ಪೆಯುಂ ಸಪ್ತ ಸಮುದ್ರಂ ಮೇರೆಯಂ ತಪ್ಪೆಯುಂಮೊಳರೆ ಬಿಗುರ್ತಾಂಪವರ್ (ಪಂಪಭಾ. ೮–೮೬) ; ಈ ಸ್ಥಿತಿಯಂ ತಪ್ಪದನ್ನು ಊರೊಡೆಯ ಪಿಟ್ಟೆಯ್ಯಂ . . . ಪನ್ನಿರ್ಮ್ಮರ್ತ್ತರ್ಕೆಯ್ಯಂ ಕೊಟ್ಟರ್ (ಇಅ. XII, ೨೫೭–೧೧; 951); ಪಟಿಯಂ ಕೇಳ್ದೆನೊ ಮೇಣ್ನುಡಿವಟಿಯಂ ತಪ್ಪಿದೆನೊ (ಗದಾಯು. ೫–೧೪); ಸಂದ ರೇವಣಸಿದ್ಧನಾಡಿ ತಪ್ಪುವನೆ (ಸಿದ್ಧರಾ. ೧–೪೫) ; ಸತಿಯನೊಲ್ಲೆನು ಬ್ರಹ್ಮ ಚರ್ಯಸ್ಥಿತಿಗೆ ತಪ್ಪುವನಲ್ಲ (ಕುವ್ಯಾಅ. ೨–೩೭): ಕೊಟ್ಟ ಭಾಷೆಗೆ ತಪ್ಪಿದರೆ ಸೃಷ್ಟಿಯೊಳು ಶ್ರೀಹರಿಯು ಮೆಚ್ಚನು (ಗೋಹಾಡು. ೭೮). ೪. ಬಿಡು ; ಉಳಿ : ಮನೆಮನೆದಪ್ಪದೆ ಪರಿಪರಿದನವರತಂ ತಿರಿವರನ್ಯಸಮಯದ ಯತಿ ಗಳ್ (ಸಮುಪ. ೭–೧೩) ; ಮನೆಮನೆದಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯ (ಮಹಾದೇ. ಬ. ೭೯–೨೦೦); ಗಗನದಿಂದಿಳಿವಂಗಾಧಾರವಾಗುತ್ತೆ ತಪ್ಪುವರೆ (ಬಸರ. ೪–೨೯) ; ಉಪದೇಶ ಕೇಳಿದರೂ ಉಪದ್ರ ತಪ್ಪಲಿಲ್ಲ

(ಗಾದ). ೫. ನೆರವೇರದಿರು ; ನಡೆಯದಿರು ; ಆಗದಿರು : ಕೀರ್ತಿನೊಳ್ ಬಿಟ್ಟಂಗೆ ಸಾವು ತಪ್ಪದು (ಪಂಚತಂ. ೮೯-೫) ; ಜಂಗಮಮುಖದಿಂದೆ ನಿಂದೆ ಬಂದರೆ ಕೊಂಡವಾಟಿಂಗೆ ಹೋಹುದು ತಪ್ಪದು (ಬಸವ. ೧೧೬) ; ಸಾವಕಾಶ ಮಾಡಿದರೆ ವಿಪತ್ತು ತಪ್ಪದು (ರಾವಿಜ. ೧೬). ೬. ಸಿಕ್ಕದಿರು ; ದೊರೆಯದಿರು : ಪಾಂಡವರ್ ಮುನ್ನಮೆ ನಿನ್ನ ಕೆಯ್ಗೆವಂದರೆನಗಮಾ ಬೆಸಂ ತಪ್ಪಿದುದು (ಪಂಪಭಾ. ೮-೪೩ ವ) ; ರಣದ ಮಿಾಸಲಿನೇಟು ತಪ್ಪಿತು (ಕುಮಾವ್ಯಾದ್ರೋ. ೧-೩೪). ೭. ಇಲ್ಲವಾಗು ; ಚ್ಯುತವಾಗು : ಆರಯಿದು ಮುಗನೆನಿಸುವೀ ಪಮುಕಾರವಪ್ಪೊಳು ಪೊಳೆತಡಾ ದಾತಾರನುಳಿವೆನ್ನಿಂದ ತಪ್ಪುವುದೆನುತ ಮನದೊಳಗೆ (ಕುಮಾವ್ಯಾದ್ರೋ. ೬-೩೨) ; ಪದವಿ ತಪ್ಪಿದ ಮೇಲೆ ನೆಂಟರಿಪ್ಪರೆ ನವಂಗೆ ಕಟ್ಟಿಟ್ಟ ಹಗೆ ಕಾಣ ಕೊನೆಗೆ (ಇಂಜಾಪ. ೬೨-೫೦). ೮. ತಾಗದಿರು ; ಬೀಳದಿರು : ಅವನಿಯಂ ಪೊಯ್ದು ಕಯ್ಯಪ್ಪಿ ದೊಡಂ ತಪ್ಪುಗು . . . ಸಾವುಂ ನೋವುಂ ಏಗೆಯ್ದುಂ ತಪ್ಪಲಟಿಯದು (ಧರ್ಮಾಮೃ. ೬-೧೦೦) ; ಕೋಲು ತಪ್ಪಿದ ಫಣಿಯವೊಲು ಲಯಕಾಲ ಕೊದಟುವ ಸಿಡಿಲವೊಲು ಹೀಹಾಳಿಸುತ ತಮತಮಗೆ ಬಯ್ದುದು-ಕೊಡೆ ಪರಿವಾರ (ಕುಮಾವ್ಯಾ. ೧೩-೧) ; ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರ್ಷ ಆಯುಸ್ಸು (ಗಾದ). ೯. ಸುಳ್ಳಾಗು ; ಹುಸಿಯಾಗು ; ವ್ಯರ್ಥವಾಗು; ನಿಷ್ಫಲವಾಗು: ನಿನಗೀವುದನೇಂ ನುಡಿದನೆ ಏ ಅದು ಕಯ್ಯಾದು ನುಡಿದುದು ತಪ್ಪುಗುಮೆ ಗಂಗಚೂಡಾಮಣಿಯಾ (ಎಕ. II, ೫೯-೯೮ ; 974) ; ಈತಂ ಕಾರ್ಯಾತುರನಪ್ಪುದು ತಪ್ಪದು (ಪಂಚತಂ. ೩೪-೬) ; ಪರಮಾಗಮಂ ಪುಸಿಯೆಂಬೆಯಪ್ಪೊಡೀ ಸಿದ್ಧಾಂತದೊಳ್ ಪೇಟಿಪಟ್ಟ ಗಣಿತ ಜೋಯಿಸಂಗಳೇಕೆ ತಪ್ಪವು (ಧರ್ಮಾಮೃ. ೫-೧೯೭) ; ಸವಣರ ನುಡಿಯೆಂದುಮಂತುಮೇಂ ತಪ್ಪುಗುಮೇ (ಚಂದ್ರಪು. ೬-೯೪) ; ಬಳಿಕ್ಕೆ ಹಗಡಗಿ ಹೋದನೋ ತಾನೆ ಬಲ್ಲಂ ಕುಱುಹು ತಪ್ಪದೆನುತ್ತಾರ್ರೈದನು (ಸಿದ್ಧರಾ. ೨-೩೫) ; ನಾ ಕೊಟ್ಟ ವರದೊಳು ತುಸುಮಾತ್ರ ತಪ್ಪದು (ವೋಹಚ. ೪-೨೪). ೧೦. ಸಂಳ್ಳಾಡು ; ಸಂಳ್ಳಹೇಳಂ : ಮಟಿಗಾಲ ಮುಂಟೆಂದು ತಪ್ಪಿದ ಜೋಯಿಸಂ ಬಾವಿಯು ನೀರನಡಕಿ ನೀರ್ವೊಯ್ದ ನೆಂಬ ಕಥೆಯಂತೆ (ಪಂಚತಂ. ೧೨೭-೨) ; ಸಾಕ್ಷಿಯಾಗಿ ತಪ್ಪಿ ನುಡಿವರ್ಗೆ ಪಾಪಮೆ ಸಂಭವಿಸುವುದು (ಪಂಚತಂ. ೧೭೭-೧೬) ; ಕುರುಕುಲಲಲಾಮರು ತಪ್ಪಿನುಡಿಯರೆನುತ್ತ ಮಂಡಿಸಿದ (ಕುಮಾವ್ಯಾದ್ರೋ. ೧೩-೩೯). ೧೧. ದಂರಾಸೆ ಮಾಡು ; ಕಾಮಿಸು : ಪರಲಲನೆಗೆ ತಪ್ಪಿದನಂ ಧರಣೀಶಂ ಕಂಡು ಕನರ್ದಿರ್ದಡೆ (ಸಮುಪ. ೫-೬೦) ; ಪರರ ಸತಿಯಾನನಂಗರತಿಯಲಿ ಬೆರಸಿತ್ತಿಲ್ಲ ಸಮಸ್ತ ಸುಜನರ ಸಿರಿಗೆ ತಪ್ಪಿದುದಿಲ್ಲ (ತೊರರಾ. ೧-೫-೧೯) ; ಯಿದಕೆ ತಪ್ಪಿದವನು ತಂನ × × ತಾಯಿಗೆ ತಪ್ಪಿದವನು (ಎಕ. XIV, ಹುಣಸೂ. ೧೪೮-೪; ?). ೧೨. ಹಾಳಾಗು; ಹದಗೆಡು; ಕೆಡು: ರಾಯನನುಜರು ಕೈದುಗೊಳಿ ರಣದಾಯ ತಪ್ಪಿತು ನೃಪತಿ ಮಾರಿಯ ಬಾಯ ತುತ್ತಾದನು (ಕುಮಾವ್ಯಾದ್ರೋ. ೫-೨೨) ; ದೇವತೆಗಳು ಧರಿಸಿದ ಪುಷ್ಪಮಾಲ್ಯಂಗಳು ಬಾಡಿದವು ದೇವತೆಗಳ ಮುಖಕಾಂತಿಯು ತಪ್ಪಿತು (ಕೃವಾಅ. ೫೨) ; ಜಾತಿ ತಪ್ಪಿದರೂ ನೀತಿ ತಪ್ಪಬಾರದು (ಗಾದ). ೧೩. ಎದುರಿಗೆ ಬಾರದೆ ಇರು : ನಾಳೆ ಫಲುಗುಣ ತಪ್ಪಿದರೆ ಭೂಪಾಲಕನ ಕಟ್ಟುವೆನು ರಣದಲಿ ಶೂಲಿಯಡ್ಡೈಸಿದರೆ ಹಿಡಿವೆನು ಚಿಂತೆ ಬೇಡಿದಕೆ (ಕುಮಾವ್ಯಾದ್ರೋ. ೪-೯). ೧೪. ಗುರಿ ಕೆಡು : ಅಪರಾದ್ಧೇಷುವೆಂಬವನೆಚ್ಚು ತಪ್ಪಿದವಂ (ಹಲಾಯು. ೭೭-೩೦೭) ; ಬೆಟ್ಟಮೆಚ್ಚ ಧನಿ ಯ ಸರಲೆಂಬಿವು ತಪ್ಪುವೊಡಂ (ಚಂದ್ರಪು. ೬-೯೪) ; ತಪ್ಪಿದ ಹೆಜ್ಜೆಗಳಿಗೆ ಸರಿಯಾದ ದಾರಿಯನ್ನೂ . . . ಕೊಟ್ಟಿತು (ಪ್ರಬಂಧ. ೩೪). 'ಕೈ ತಪ್ಪು₁' ಪರಾ. ೧೫. ಗುರಿಗೆ ಸಿಕ್ಕದಿರು : ಪೆಣ್ಣಾಳಿಟ್ಟ ಕೀರ್ಗಲ್ಗಳನೊಂದಿನಿತ್ತೂಲೆದು ತಪ್ಪುತೆ ಕಾಡಿದುದೊಂದು ಕೋಡಗಂ (ಕವಿಜ. II, ೨೨೫ ರಾಮನಾಥವಿಲಾಸ). ೧೬. ಮುಗಿ ; ತೀರು; ಕಳೆ: ಅವಧಿ ತಪ್ಪಿದುದಾಟಿನೆ ಪತ್ತು ತಿಂಗಳಾದುವು ಬರಲಾತನಾಟಿದೊಡೆ ಸಾಯಲುಮಾಟಿನೆ (ಆದಿಪು. ೧೨-೪೩); ಅಂಬರಿಗುಮಾಯು ತಪ್ಪಿದೊಡೆಂಬೀ ನಾಣ್ಣುಡಿಯನಲ್ಲಿ ಪುಸಿಮಾಡದೆ ಕೂರಂಬೊಂದು ಬಂದು ನಡೆ (ಧರ್ಮಾಮೃ. ೧-೨೦೯). ೧೭. ಅಯೋಗ್ಯವಾಗು ; ತಪ್ಪಾಗು ; ಪ್ರಮಾದವಾಗು : ಈ ಧನು ಚಂಡಿಯಿದು ನಮಗಲ್ಲ ನಾವ್ ಮುಂಕೊಂಡು ತಪ್ಪಿತು (ಕುಮಾವ್ಯಾಆ. ೧೪-೧೬) ; ಲೆಕ್ಕ ತಪ್ಪಿತು (ರೂಢಿ).

ತಪ್ಪದೆ, ತಪ್ಪಾದೆ (ನಿಷೇಧಾರ್ಥಕ ರೂಪ) ೧. ಬಿಡದೆ; ಕುಂದಿಲ್ಲದೆ; ಲೋಪವಿಲ್ಲದೆ : ಕಟ್ಟಪ್ಪಿನಾ ಶೈಲದುಳ್ . . . ತಪ್ಪದೆ ನೋನ್ತು (ಎಕ. II, ೭೭-೩ ; ಸು. 700); ಅನುವರ್ಷಂ ತಪ್ಪದೆ [ತಾಂ] ತೆನೆಯಪ್ಪುದೆ ದಲ್ ಸಮಾಂಸಮೀನೆಯೆ(ನಿ)ಕ್ಕುಂ (ವಸ್ತುಕೋ. ೯೦-೮) ; ಹಣವನ್ನು ತಿಂಗಳ ಅಂತ್ಯದಲ್ಲಿ ತಪ್ಪದೆ ಕೊಡಬೇಕು (ಆಡುನಾ. ೦೨೩); ಕಟ್ಟಪ್ಪಿನಾ ವೆಟ್ಟದುಳ್‌ಶ್ರೀಸಂಗಂಗಳ ಪೇಟ್ದ ಸಿದ್ಧ ಸಮಯುನ್ತಪ್ಪಾದೆ ನೋನ್ತಿಮ್ಬಿನಿನ್ (ಎಕ. II, ೨೭-೧ ; ಸು. 700). ೨. ನಿಶ್ಚಯಂವಾಗಿ ; ಖಂಡಿತವಾಗಿ : ಮನುಗಳೊಳೀತನೆ ಪದಿನಾಲ್ಕನೆಯಾತಂ ತಪ್ಪದಪ್ಪನೆನಿಸಿಯುಂ (ಆದಿಪು. ೬-೭೦) ; ನಿಜಾಭಿಮಾನಮಂ ಧರಿಯಿಸುವಲ್ಲಿ ಚಾದಗೆವೊಲಪ್ಪುದು ತಪ್ಪದವಾತ್ಯಲಕ್ಷಣಂ (ಕಾವ್ಯಸಾ. ೪೨೨). ತಪ್ಪತಪ್ಪದೆ = ತಪ್ಪದೆ ೧. ಸೊಪ್ಪುಸೊಪ್ಪುಗಳ ಮೆಳೆಮೆಳೆಗಳಂ ಸೋವುತ್ತೆ ತಪ್ಪತಪ್ಪದೆ ಶರಶರಂಗಳಂ ತೆಗೆದೆಚ್ಚು (ಜೈಮಿಭಾ. ೨೮-೪೦). ತಪ್ಪಲೆಚ್ಚಂ = ಬಾಣಪ್ರಯೋಗದಲ್ಲಿ ಗುರಿ ತಪ್ಪಿದವನಂ ; ತಪ್ಪಾಗಿ ಗುರಿಯಿಟ್ಟು ಬಾಣ ಪ್ರಯೋಗ ಮಾಡಿದವನು: ಲಕ್ಷ್ಯಚ್ಯುತಂ ತಪ್ಪಲೆಚ್ಚನ[ಪಾಠಾಂ. ವನ]ಕ್ಕು (ಮಂಗರಾ. ೮೭-೩೫). ತಪ್ಪಿ ಬರು = ೧. ದ್ರೋಹ ಬಗೆ; ಎದುರುಬೀಳು : ಕುಮಾರ ಬಲ್ಲಾಳದೇವನು ತಮ್ಮಯ್ಯಂಗೆ ತಪ್ಪಿ ಬಂದು ತಳಿಗೆ ನಾಡಂ ಕೊಡಗಿ ನಾಡಂ ಹೊಕು (ಮ್ಯಆರಿ. ೧೯೩೨, ೩೪-೩ ; 1172 ?). ೨. ಅಕಸ್ಮಾತ್ತಾಗಿ ಬರು : ತಾವು ನಮ್ಮ ಮನೆಗೆ ತಪ್ಪಿ ಬಂದಂತೆ ಕಾಣುತ್ತದೆ! (ರೂಢಿ).
[ದೇ.॥ ತಮಿ.ಮಲ. ತುಳು. ತಪ್ಪು ; ಕೊಡ. ತಪ್ ; ತೆಲು. ತಪ್ಪು ]

**ತಪ್ಪು₂, ತಪ್ಪು₁** (ನಾ). ೧. ಎಡಹುವುದು; ಮುಗ್ಗರಿಸುವುದು: ಜಾರುವುದು : 'ಕೈತಪ್ಪು₂' ಪರಾ. ೨. ಅಪರಾಧ; ಅವಿವೇಕ; ಪ್ರಮಾದ; ಪಾಪ : ಅವರ್ ತಪ್ಪಿದ ಬಟಿಕ್ಕೆ ತಪ್ಪಿದ ತಪ್ಪೆ[ಂ] [ಪಾಠಾಂ. ಲೆ]ಗಳ ನನ್ನಿಗೊಪ್ಪಮಲ್ಲದ ತಪ್ಪೇ (ಪಂಪಭಾ. ೭-೫೨); ಎನ್ನ ತಪ್ಪು ಅನಂತಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲಾ (ಬಸವ. ೩೨೨); ಒಲ್ಲದಿರಬೇಡ ಲೇಸೊಲ್ಲೆಯೇ ಕೊಲ್ಲೆಯೆಮ್ಮಲ್ಲಿ ತಪ್ಪಿಲ್ಲ (ಹಚಳಾ. ೮-೭೭); ತಪ್ಪುಗಳನೆಲ್ಲ ನೀನೊಪ್ಪಿಕೊಳ್ಳೊ ನಮ್ಮಪ್ಪ (ಪುರಂದ. ೦-೦೭೭ ಪಲ್ಲವಿ). ೩. ಸಲ್ಲದುದಂ ; ಸರಿಯಲ್ಲದುದಂ ; ಅನುಚಿತವಾದುದಂ : ತಪ್ಪುಮನೆ ನುಡಿಯೆನೆಂಬುದಿದೊಪ್ಪದು ನಿನಗೆ (ಪಂಪಭಾ. ೬-೫೨) ; ಕಾರ್ಯಸಖಂ ಶಕುನಿ ಗಡಾ ಶೌರ್ಯಸಖಂ ಸೂತಜಂ ಗಡಾ ಭೀಷ್ಮಶರಾಚಾರ್ಯರ ನುಡಿ ತಪ್ಪು ಗಡಂ (ಗದಾಯು. ೨-೨೭). ೪. ಕುಂದು ; ದೋಷ ; ಸ್ಖಾಲಿತ್ಯ : ಎನ್ನೊಂದು ತಪ್ಪನಟಿದತ್ತೆಂದೀ ಮನಕಂ ಪಿರಿದುಂ ಲಜ್ಜಿಸುವೆಂ (ಕಾದಂಬ. ೨೯೧); ಈ ಶತಕದೊಳ್ ತಪ್ಪಿರ್ದೊಡಂ ತಿದ್ದಿ ತೋರ್ಪುದು (ಸೋಮೇಶ. ೨); ಇನ್ನೆನ್ನ ಮೇಲೆ ತಪ್ಪಿಲ್ಲ ತಪ್ಪಿಲ್ಲೆನುತೆ (ತಿರುರ. ಬೇ. ೦೩-೧೧) ; ತನುಜ ತಪ್ಪೇನದಕೆ ಕಾಳೆಗವೆನಗೆ ತನಗೆನಬೇಕು ವೀರರು (ಕುಮಾವ್ಯಾದ್ರೋ. ೧-೩೫) ; ಶುಕಸಾರಿಕೆಗಳು ಹೆಜ್ಜೆ ಹೆಜ್ಜೆ ಗೂ ವಿದ್ಯಾರ್ಥಿಗಳ ತಪ್ಪುಗಳನ್ನು ತಿದ್ದುತ್ತಿದ್ದವು (ಬಾಣಅ. ೯). ೫. ಕೇಡು ; ದ್ರೋಹ : ಪಿಂಗಳಕನನೆಗೆ ತಪ್ಪಂ [ಪಾಠಾಂ. ಪ್ಪಲ್]ಬಗೆವಾಗಳೆಂತಿರ್ಪಂ (ಪಂಚತಂ. ೧೭೭-೮). ೬. ಸುಳ್ಳು ; ಅಸತ್ಯ : ಕರ್ಣ ತಪ್ಪಿಲ್ಲೆಂದೆನಿಪ ನುಡಿಯೊಳ್ . . . ಎಸೆದಂ (ಛಂದೋಂಬು. ೧-೨೪); ಹಿಂದುಳಿದ ಸಂಪದವನೆಣಿಸುವುದು ಹುಸಿಯಲ್ಲವಿಂದೀಗ ತೋಱಬಪ್ಪುದೆ ಹುಸಿಯದುಂಟೆ ತಪ್ಪೆಂದಡದಕೇಂ (ಹಚಳಾ. ೦೨-೪೦). ೭. ಅಪರಾಧ

ಕ್ಕಾಗಿ ತೆರಬೇಕಾದ ದಂಡ : ನಾನೀಗ ತಪ್ಪು ವಸೂಲು ಮಾಡದಿದ್ದಿರೆ ನಾಳೆ ಒಣಮೇವಿಗೆ ಸೊನ್ನೆ ಬೀಳುತ್ತದೆ (ಪುನರು. ೨೮೭). 'ತಪ್ಪುತೆರು' ಪರಾ. ೮. ಒಂದು ಬಗೆಯ ತೆರಿಗೆ,–ಸುಂಕ : ಮನ್ನೆಗಾಣಿಕೆ ಸೇಸೆ ತಪ್ಪನ್ನೆಯ ವಾಯದಾಯಮಿವು ಸಲ್ಲವು (ಸೌಇಇ. IX–I, ೨೫೦–೫೫; 1149); ಅಂನ್ಯಾಯ ಕಿಱುಕುಱ ತಪ್ಪು ತೌಡಿ ಪೊಟಗಾದ ಸಮಸ್ತ ಬಳಿ ಸಹಿತಂ . . . ಸಲುಉದು (ಎಕ. XI, ಹಿರಿಯೂ. ೮೭–೩೦ ; 1313) ; ಅಳಿವಂನ್ಯಾಯ ಸುಂಕ ಹಟ್ಟಿದರೆ ತಪ್ಪು ತೌವುಡಿ . . . ಕೊಟ್ಟೆಉ (ಎಕ. XI, ಚಿತ್ರದು. ೨–೨೨ ; 1355) ; ಪೊಸಗೆವುಪಚಾರ ತಪ್ಪುವೊಪ್ಪು ಸುಂಕಸಾದಿಲ . . . ವೊ[ದ]ಲಾಗಿ ಆವುದೊಂದುಯಿಲ್ಲದೆ . . . ಸರ್ವಬಾಧೆ ಪರಿಹಾರ (ಸೌಇಇ. IX–II, ೪೦೮–೩೦ ; 1364). ೯. ಹರಕೆ ತೀರಿಸಲಾಗದಂದಕ್ಕಾಗಿ ದೇವರಿಗೆ ದಂಡದ ರೂಪದಲ್ಲಿ ಕೊಡುವ ಕಾಣಿಕೆ: ಹರಕೆ ತೀರಿಸಲಿಲ್ಲ, ನಂಜುಂಡನಿಗೆ ತಪ್ಪುಕಟ್ಟಬೇಕು (ರೂಢಿ). 'ತಪ್ಪುಗಾಣಿಕೆ' ಪರಾ. ೧೦. (?) : ವನದಲ್ಲಿ ಹುಲ್ಲೆ ಕಾಡುಹಂದಿವೊದಲಾದ ಮೃಗಗಳನ್ನು ಕೊಂದು . . . ಕಾಡುಕಿಚ್ಚಿನಲ್ಲಿರುವ ಬೆಂಕಿಯಲ್ಲಿ ಸುಟ್ಟು ತನ್ನ ಕಯ್ಯಲ್ಲಿರುವ ಕತ್ತಿ ಕೊನೆಯಿಂದ ಎತ್ತಿ ಪೂದಿ ತಪ್ಪುಮಾಡಿ ಬೆಂತೊ ಬೇಯಲಿಯಿಲ್ಲವೊ ರುಚಿಯಾಗಿದೆಯೊ ಯಿಲ್ಲವೊ (ಶಿವದ. ೧೦೫–೭). △ತರ್ಪು$_1$: ೬. ಸೀರ್ಪಿನ ಬಣ್ಣದ ಮುಗಿಲುಂ ನೇರ್ಪಡೆ ಮುಱಿಯಾಗದಾದೊಡಂ ಮುಱಿ ಕಿಱಿದುಂ ತೋರ್ಪಂತೆ ಪನಿತು ಮಾಣ್ಬುಂ ತರ್ಪಿಲ್ಲ ಕಪಿಲವರಹಮಿಹರ ಗಾರ್ಗ್ಯರ (ಮತ)ದಿಂ (ಜಟ್ಮಿಮು. ೮–೧೩).

ತಪ್ಪುತಪ್ಪು (ಧ್ವಿರುಕ್ತಿ): ಇಂದುವಮೌಳಿಗೆ ಮುನ್ನವರ್ಪಿಸಿ ಸಂದ ನಿರ್ಮಾಲ್ಯದ ಶಿರೋಬ್ಬುಮನಿಂದು ಸಂದಿಸಿಕೊಳ್ವುವರೇ ಇದು ತಪ್ಪು ತಪ್ಪೆನುತ (ಬಸಪು. ೪೯–೧೭). ತಪ್ಪುಒಪ್ಪಿಕೊಳ್ಳು = ಮಾಡಿದ ಅಪರಾಧವನ್ನು ಒಪ್ಪಿಕೊಳ್ಳು: (ಕ). ತಪ್ಪು ಮಾಡು= ೧. ಸಲ್ಲದುದನ್ನು ಮಾಡು; ಅಪರಾಧಮಾಡು: ತಪ್ಪು ಮಾಡಿದೆ, ಕ್ಷಮಿಸಿ (ರೂಢಿ). ೨. ತಪ್ಪಾಗಿ ತಿಳಿದುಕೊಳ್ಳು,–ಭಾವಿಸು : ನೀವ್ಯಾರೋ ದಾರಿಹೋಕರೆಂದು ತಪ್ಪು ಮಾಡಿದೆ (ಪುನರು. ೨೮೨). ೩. ದೋಷಮಾಡು ; ಪ್ರಮಾದಮಾಡು : ಲೆಕ್ಕ ತಪ್ಪು ಮಾಡಿದ್ದೀಯ (ರೂಢಿ).

[ <ತಪ್ಪು$_1$./ತಮಿ. ಮಲ. ತುಳು. ತೆಲು. ತಪ್ಪು ]

**ತಪ್ಪುಕ** (ನಾ). ೧. ತಪ್ಪುಮಾಡಿದವನು ; ದ್ರೋಹಿ ; ಅಪರಾಧಿ : ಈ ಸೀಮೆಯಲ್ಲಿ ತಪ್ಪಿದೆನಾದಡೆ ಆಚಾರವೆ ಪ್ರಾಣವಾದ ರಾಮೇಶ್ವರಲಿಂಗಕ್ಕೆ ತಪ್ಪುಕನಹೆನು (ಬಲೀಶ್ವ. ೬೫) ; ತ್ರಿವಿಧ ತ್ರಿವಿಧದಲ್ಲಿ ತಪ್ಪಿದ ತಪ್ಪುಕ ನಾನಯ್ಯ (ಬಸವ. ೩೫೦) ; ಅರ್ಕನ ಅದ್ಭುತದಲ್ಲಿ ಕೆಟ್ಟರು ಹಲಬರು ತಪ್ಪುಕರಾದರು ಹಲಬರು (ಅವಚಂ. ೫೫–೯೨). ೨. ನಿಯಂಮುವನ್ನು ಅಥವಾ ಆಜ್ಞೆಯನ್ನು ಮೀರಿದವನು : ತಪ್ಪಬಾರದು ರಾಯರಾಡಿದ ಭಾಷೆ ಕಪ್ಪವ ಸುರುತಾಳನಿಗೆ ತಪ್ಪುಕರಾಗದೀವುದು ಕಜ್ಜ (ಕುರಾಸಾಂ. ೧೮–೭). [ ತಪ್ಪು$_2$ + – ಕ$_3$ ]

**ತಪ್ಪುಕಲ್ಪನೆ** (ನಾ). ತಪ್ಪಾಗಿ ಭಾವಿಸುವುದು ; ತಪ್ಪಾಗಿ ಊಹಿಸುವುದು : ತಪ್ಪುಕಲ್ಪನೆಯಿಂದ ಅನಾಹುತ ತಪ್ಪಿದ್ದಲ್ಲ (ರೂಢಿ).

[ ತಪ್ಪು$_2$ + ಕಲ್ಪನೆ ]

**ತಪ್ಪುಕಾಣಿಕೆ** 'ತಪ್ಪುಗಾಣಿಕೆ' ನೋ.

**ತಪ್ಪುಕೊಡು** (ಕ್ರಿ). ದಂಡಕೊಡು : ಅವನು ಮಾಡಿದ ಅಪರಾಧಕ್ಕೆ ೨೫ ರೂಪಾಯಿ ತಪ್ಪುಕೊಡಬೇಕೆಂದು ಪಂಚರು ತೀರ್ಮಾನಿಸಿದರು (ರೂಢಿ).

[ ತಪ್ಪು$_2$ + ಕೊಡು$_1$ ]

**ತಪ್ಪುಗಂಟು** (ನಾ). ೧. ತಪ್ಪಾಗಿ ಹಾಕಿದ ಗಂಟು ; ಬಿಚ್ಚಲಾಗದ ಗಂಟು ; ತೊಡಕಾದ ಗಂಟು : (ಕ). ೨. ನಿಯಂಮಕ್ಕೆ ವಿರುದ್ಧವಾದ ಸೇರುವಿಕೆ,–ಸಂಬಂಧ : (ಕ). ೩. ಸಂಪರ್ಕ ಕಳೆದು ಹೋಗುವಿಕೆ ; ಸಂಬಂಧ ತಪ್ಪುವಿಕೆ : ನಾವು ಮುಂದೆ ಹೋಗುವೆವು; ನೀನು ಹಿಂದೆ ಉಳಿಯುವೆ. ನಮಗೂ ನಿಮಗೂ ತಪ್ಪುಗಂಟಾದೀತು (ಮುಂಬಯಿ. ೩–೭೭).

[ ತಪ್ಪು$_1$ + ಗಂಟು ]

**ತಪ್ಪುಗಾಣ್** (ಕ್ರಿ). ತಪ್ಪಾಗಿ ಭಾವಿಸು ; ತಪ್ಪಾಗಿ ಎಣಿಸು : ಮುಂದಪ್ಪುದನ್ ತಪ್ಪುಗಂಡನ್ (ಪಾರಸಿ. ೧೭–೩೯೭). [ತಪ್ಪು$_2$+ಕಾಣ್]

**ತಪ್ಪುಗಾಣಿಕೆ, ತಪ್ಪುಕಾಣಿಕೆ** (ನಾ). ಮಾಡಿದ ತಪ್ಪಿಗಾಗಿ ದಂಡದ ರೂಪದಲ್ಲಿ ಕೊಡುವ ಕಾಣಿಕೆ; ತಪ್ಪುದಂಡ : ನಾವು ಈ ಪ್ರಪಂಚದಲ್ಲಿ ಏನಾದರೂ ಮಾಡಬಾರದ್ದನ್ನು ಮಾಡಿದರೆ ಅದಕ್ಕೆ ಒಂದಲ್ಲ ಒಂದು ರೀತಿಯಲ್ಲಿ ತಪ್ಪುಗಾಣಿಕೆ ಕೊಡಲೇ ಬೇಕಾಗುತ್ತೆ (ವೀರಯೋ. ೫೪). **ತಪ್ಪುಕಾಣಿಕೆ** : ನಂಜುಂಡೇಶ್ವರನಿಗೆ ತಪ್ಪುಕಾಣಿಕೆ ಕೊಡಲು ನಂಜನಗೂಡಿಗೆ ಹೋಗಬೇಕಾಗಿದೆ (ರೂಢಿ).

[ ತಪ್ಪು$_2$ + ಕಾಣಿಕೆ (<ಕಾಣ್ಕೆ) ]

**ತಪ್ಪುಗಾರ** 'ತಪ್ಪುಗಾಱ' ನೋ.

**ತಪ್ಪುಗಾಲು** (ನಾ). ೧. ಕತ್ತರಿಗಾಲು ಹಾಕಿ ಒಂದು ಪಾದವನ್ನು ನೆಲದ ಮೇಲೆ ಊರಿ ಇನ್ನೊಂದನ್ನು ಊರದೆ ಅಡ್ಡವಾಗಿ ಇಟ್ಟಿರುವುದು : ತಪ್ಪುಗಾಲಿಕ್ಕಿ ತ್ರಿಭಂಗಿಯಿಂದು ನಿಂದು ಒಪ್ಪುತಿರ್ಪೊಂದು ಪೊಸಕೊಳಲಂ ಕೊಳುತ್ತುಂದು (ಅನಾರ. ದೇ. ೧೮೦–೦೩). ೨. = ತಪ್ಪುಹೆಜ್ಜೆ : ಮಗು ತಪ್ಪುಗಾಲು ಹಾಕುತ್ತಿದೆ (ರೂಢಿ). [ತಪ್ಪು$_1$ + ಕಾಲು(<ಕಾಲ್$_1$)]

**ತಪ್ಪುಗಾಱ, ತಪ್ಪುಗಾರ** (ನಾ). ತಪ್ಪುಮಾಡಿದವನು; ಅಪರಾಧಿ: ದರ್ಪದಲಿ ಧಿಕ್ಕರಿಸಿ ನೋಡುವ ತಪ್ಪುಗಾಱನನೊಯ್ದು ಸೂಚೀಮುಖ ಸಮಾಖ್ಯದಲಿ. . .ನೇಣಿನಲಿ ಹೊಲಿವರು (ನಿಘಾಗ ೫–೧೧–೪೦) ; ತಪ್ಪುಗಾಱನೆ ಬೀಳಧೋಗತಿಗೆಂದಲುಱ ಮುನಿದು (ನಿಘಾಗ. ೬–೦೫–೪೪). **ತಪ್ಪುಗಾರ** : ಯಾರು ಇದರೊಳಗೆ ತಪ್ಪುಗಾರರು ಇದು ತಿಳಿಯದ ಹೊರತು ನಾ ಏನೂ ಬರೀಲಿಕ್ಕೆ ತಯಾರಿಲ್ಲ (ಅಪನಾ. ೧೧೩) ; ತನ್ನನ್ನು ತಪ್ಪುಗಾರನೆಂದು ತಿಳಿದಿ (ಇಪ್ಪಕ. ೨೬೩). [ ತಪ್ಪು$_2$ + – ಕಾಱ ]

**ತಪ್ಪುಗೊಳ್** (ಕ್ರಿ). ತಪ್ಪನ್ನು ಎಣಿಸು ; ಅಪರಾಧವೆಂದು ಭಾವಿಸು : ಒಪ್ಪುಗೊಂಬನೊ ಮೇಣು ತನ್ನಲಿ ತಪ್ಪುಗೊಂಬನೊ ತನ್ನ ಮತಿಗೀ ಮುಪ್ಪು ಬಂದುದಿದೇಕೆ (ನಿಘಾಗ. ೧೦–೧೩–೪೨). [ತಪ್ಪು$_2$ + ಕೊಳ್$_1$ ]

**ತಪ್ಪುತಡ** (ನಾ). = ತಪ್ಪುತಡೆ : ತಪ್ಪುತಡವಿಲ್ಲದೆ ತಪಸಿಗಪ್ಪುದೇ ಶೂಲದ ವಿಧಿ (ಸರ್ವಪ. ೧೬೨–೭೭೮). [ ತಪ್ಪು$_2$ + ತಡ$_1$ ]

**ತಪ್ಪುತಡೆ** (ನಾ). ತಪ್ಪು ; ಸ್ಖಾಲಿತ್ಯ: ಬಾಲಪ್ರಪಂಚವೆಂಬ ಜ್ಞಾನಕೋಶವು ಅದರಲ್ಲಿ ಎಷ್ಟೆ ತಪ್ಪುತಡೆಗಳಿದ್ದರೂ ಬಾಲಕರಿಗಿಂತ ಬಾಲಕರ ತಂದೆತಾಯಿಗಳಿಗಾಗಿಯೇ ರಚಿಸಿರಬೇಕಾಗಿ ಕಂಡು ಬರುವದು (ಸಾಹಿಸಂ. ೯೨).

[ ತಪ್ಪು$_2$ + ತಡೆ$_2$ ]

**ತಪ್ಪುತಾಕು** (ನಾ). = ತಪ್ಪುತಡೆ : ತಪ್ಪಿದರ್ಗುಳಿವಿನ್ನೆಂತೊ ತಪ್ಪುತಾಕನು ನೋಡದೊಲು ರಂಗಾಯೆಂಬಳಿಪ್ಪನ್ನ ಪೊರೆಯದೇನಿಹೆನೆ (ಶತಸಾಂ. ೩೭–೯೭). [ ತಪ್ಪು$_2$ + ತಾಕು$_2$ (<ತಾಂಕು$_2$) ]

**ತಪ್ಪುತೆರು** (ಕ್ರಿ). ತಪ್ಪಿಗಾಗಿ ದಂಡ ಸಲ್ಲಿಸು ; ತಪ್ಪುದಂಡ ಕೊಡು : ಹಸುಗಳನ್ನು ಬಿಟ್ಟುಬಿಡಬೇಕೆಂದೂ ತಮ್ಮ ಬಳಿ ತಪ್ಪುತೆರಲು ಹಣವಿಲ್ಲವೆಂದೂ. . .ಅವರು ಪ್ರಾರ್ಥಿಸಿದರು (ಪುನರು. ೨೮೭).

[ ತಪ್ಪು$_2$ + ತೆರು$_1$ (<ತೆಱು$_1$) ]

**ತಪ್ಪುತೆಱು** (ಕ್ರಿ). ಮರೆಯಾದದ್ದು ಕಾಣು; "ದೋಷವನ್ನು ಪ್ರಕಟಿಸು" (ಪ್ರಭಣ್ಣ) : ನಯನಾಯುಸ್ಕಾಂತ ಸಂದರ್ಶನದಿಂ ಮುನ್ನಮೊಳಗೆ ಸಿಲ್ಕಿದನನೆಯ ಪುಣುಂಬುಗಳ್ [ಪಾಠಾಂ. ಳ] ತ[ಪಾಠಾಂ. ಗ]ಪ್ಪುತೆಱದು ಪೊಱಮಡುವಂತೆ ಮೆಯ್ಮಾವಿರ್ ಮೊಗಸೆ (ಲೀಲಾವ. ೧೦–೪೫ ವ).

[ ತಪ್ಪು$_2$ + ತೆಱು$_1$ ]

**ತಪ್ಪುದಂಡ** (ನಾ). ತಪ್ಪು ಮಾಡಿದ್ದಕ್ಕಾಗಿ ತೆರುವ ಹಣ : ದಣ್ಣಾಯಕರ ಪದತಳಕ್ಕೆಱಗಿ ತಪ್ಪುದಂಡಕ್ಕೆ ಪನ್ನಿಚ್ಛಾಸಿರ ಹೊನ್ನಂ ಕೊಟ್ಟು (ಬಸರ. ೬-೮೭). [ ತಪ್ಪು₂ + ದಂಡ ]

**ತಪ್ಪುದಂಡಣೆ** (ನಾ). ತಪ್ಪಿಗೆ ಕೊಡುವ ಶಿಕ್ಷೆ : ತಿಳಿಯೆಯೇನ್ ನೀನ್, ಬಱಿದೆ ಬಡಬಡಿಪ ನಾಲಗೆಗೆ ತೆಱಲಿರ್ಪ ತಪ್ಪುದಂಡಣೆಗಳೇನೆಂಬುದನ್ ? (ಬದ್ಧಪ್ರ. ೦೯-೩೮೪). [ ತಪ್ಪು₂ + ದಂಡಣೆ ]

**ತಪ್ಪುದಲೆ** (ನಾ). (?) : ತಿಪ್ಪಗನು ಸುಂಕವನು ಕಟ್ಟಿಯೆ ತಪ್ಪುದಲೆ ಮಾಡುತ್ತಲಿರಲಿಕೊಪ್ಪುವಡೆ ತಿಪ್ಪಗನು ಬೇರೆ ಸುಂಕದವ ಬೇರೆ (ಜ್ಞಾನಸಿಂ. ೮-೧೩೦). [ ? ]

**ತಪ್ಪುದಾರಿ** (ನಾ). ಯೋಗ್ಯವಲ್ಲದ ಮಾರ್ಗ ; ಅಡ್ಡದಾರಿ : ತಪ್ಪುದಾರಿ ವಿಡಿದೊಪ್ಪದಿಂ ನಡೆದರ್ (ಚೆಳವಂ. ೪೩-೧೮) ; ತನ್ನವನು ತಪ್ಪುದಾರಿಗೆ ಹೋಗುತ್ತಲಿದ್ದರೆ . . . ತಿಳಿಯ ಹೇಳಿ ತಿರಿಗಿಸಬೇಕು (ವಚಕಾ. ೨೭). [ ತಪ್ಪು₂ + ದಾರಿ ]

**ತಪ್ಪುನಂಬುಗೆ** (ನಾ). ಸಲ್ಲದ ನಂಬಿಕೆ; ತಪ್ಪುಕಲ್ಪನೆ ; ಕುರುಡುನಂಬಿಕೆ; ಅಂಧಶ್ರದ್ಧೆ : ಈ ತಪ್ಪುನಂಬುಗೆಯನ್ನು ಕ್ರಮೇಣ ವಾದಿಸಿ ಬಿಡಿಸಿದೆ (ಜಿಂಗಾಳ್ಕ. ೨೯೦). [ ತಪ್ಪು₂ + ನಂಬುಗೆ ]

**ತಪ್ಪುನಡೆ** (ನಾ). ಸಲ್ಲದ ನಡವಳಿಕೆ ; ಕೆಟ್ಟ ನಡತೆ : "ಶುರಾ–ತಪ್ಪು ನಡೆ" (ಕಾಶಕ್ಕೆ. ೨೨). [ ತಪ್ಪು₂ + ನಡೆ₂ ]

**ತಪ್ಪುನುಡಿ** (ನಾ). ದೋಷಯುಕ್ತವಾದ ಮಾತು : "ತಪ್ಪುನುಡಿ ಅಬದ್ಧವೆಂಬುದು" (ಹಲಾಯು. ೨೩-೧೪೦). [ ತಪ್ಪು₂ + ನುಡಿ₂ ]

**ತಪ್ಪುನೆಪ್ಪು** (ನಾ). ತಪ್ಪಾದುದು ಮತ್ತು ಸರಿಯಾದುದು ; ದೋಷ ಗುಣ : ತಪ್ಪುನೆಪ್ಪುಗಳ ವಿಮರ್ಶೆಗಾಗಲಿ ತಿದ್ದುವ ಗೊಡವೆಗಾಗಲಿ ಹೋಗಲಿಲ್ಲ (ರೂಪಸಂ. ೨೯). [ ತಪ್ಪು₂ + ನೆಪ್ಪು₆ (< ನೇರ್ಪು₁) ]

**ತಪ್ಪುನೋಟ** (ನಾ). ಕದ್ದುನೋಡುವುದು ; ಕಳ್ಳನೋಟ (?) : ಮನೋಜನ ಪೂವಿನಂಬು ತೀವಿದ ದೋಣೆ ತೀವಿ ತನ್ನನಿಸೆ ಜಾಣನೆ ತಪ್ಪದೆ ತಪ್ಪುದಪ್ಪ ನೋಡಿದುದಱಿಂ ಗುಣಾರ್ಣವನನಾ ಸತಿ ತಪ್ಪದೆ ತಪ್ಪುನೋಟದೊಳ್ (ಪಂಪಭಾ. ٧-٧٥). [ ತಪ್ಪು₁ + ನೋಟ ]

**ತಪ್ಪುನೋಡು** (ಕ್ರಿ). ನೇರವಾಗಿ ನೋಡುವುದನ್ನು ತಪ್ಪಿಸಿ ನೋಡು ; ಕದ್ದುನೋಡು : ಸಾಧ್ವಸದಿಂ ಬೆಮರ್ ಬೆಮರ್ವೆಡೆಗಳಿನುಣ್ಮಿ ಪೊಣ್ಮಿದುದು ಕಣ್ ನಡೆ ನೋಡದೆ ತಪ್ಪುನೋಡಿ ನಾಣೆಡೆಯೊಳಮಾದು ದಾಸತಿಗೆ ನೋಡಲೊಡಂ ಪಡೆವೆಚ್ಚಿ ಗಂಡನಂ (ಪಂಪಭಾ. ೫-೧೫) ; ಅವನವನತಾನನನಪಾಂಗಾವಳೋಕನದೊಳಾಕೆಯುಂ ತಪ್ಪುನೋಡುತ್ತುಂ ಪೋಗಿ (ಶಾಂತಿಪು. ೮-೮೩ ವ). [ ತಪ್ಪು₁ + ನೋಡು ]

**ತಪ್ಪುಮೂಲೆ** (ನಾ). ಯಾರೂ ಬಾರದ ಪ್ರದೇಶ; ಕೊಂಪೆ: ಇಷ್ಟುದೂರ, ವಿವಿಕ್ತವಾದ ಈ ತಪ್ಪುಮೂಲೆಗೆ ಬಂದ ಕಾರಣವೇನು (ಪುನರು. ೫೭೪). [ ತಪ್ಪು₂ + ಮೂಲೆ ]

**ತಪ್ಪುವಟ್ಟೆ** (ನಾ). ಸಲ್ಲದ ದಾರಿ ; ದುರ್ಮಾರ್ಗ : ಮತಿವಂತನಿರ್ದುಂ ತಪ್ಪುವಟ್ಟೆ ಪೋಗುವುದು ನಾಣ್ಗೇಡು (ಬದ್ಧಪ್ರ. ೫೫-೧೨೦೪). [ ತಪ್ಪು₂ + ಬಟ್ಟೆ₃ ]

**ತಪ್ಪುವಿಡಿ, ತಪ್ಪುಹಿಡಿ** (ಕ್ರಿ). ತಪ್ಪನ್ನು ಕಂಡುಹಿಡಿ,–ಗುರುತಿಸು : ಮುನಿಕುಮಾರರೋದುವ ವೇದವೇದಾಂಗಂಗಳಂ ತಪ್ಪುವಿಡಿದು ಜಡಿದು ಬಗ್ಗಿಸುವ . . . ಅರಗಿಳಿಗಳುಮಂ (ಪಂಪಭಾ. ೧-೧೧೫ ವ) ; ವೇದಂಗಳ ನೋದೆ ತಪ್ಪುವಿಡಿದಂತೇವಾಸಿಗಳ್ಗೋದುವೆಟ್ಟುವು . . . ಕೇಳೀಶುಕ ಸಾರಿಕಾತತಿಗಳ್ (ಜಗವಿ. ೯-೧೧೫). **ತಪ್ಪುಹಿಡಿ :** ವಿದಿತ ಜಂಗಮವಾಗಿ ಮುನ್ನಾಡಿದ ನುಡಿಗಳೊಳು ತಪ್ಪುಹಿಡಿಯೆ[ಪಾಠಾಂ. ತಪ್ಪ ಹಿಡಿಯೆ, ಹಿಡಿಯೆ ತಪ್ಪುವ]ನಿದಕೆ (ಬಸವು. ೨೫-೩೩). [ ತಪ್ಪು₂ + ಪಿಡಿ₁ ]

**ತಪ್ಪುಸಹಿಸು** (ಕ್ರಿ). = ತಪ್ಪುಸೈರಿಸು : (೬). [ ತಪ್ಪು₂ + ಸಹಿಸು ]

**ತಪ್ಪುಸಾಧಿಸು** (ಕ್ರಿ). ತಪ್ಪುಮಾಡಿ ಮಾಡಿಲ್ಲವೆಂದು ಸಾಧಿಸು ; ತಾನು ಮಾಡಿದ್ದೇ ಸರಿಯೆಂದು ವಾದಿಸು: ತಪ್ಪು[ಪಾಠಾಂ. ಪ್ಪ]ಸಾಧಿಪ ನೃಪನೊಳಿಪ್ಪವನೆ ಕಡುಹೆಡ್ಡ (ಸರ್ವಜ್ಞ. ೭೭೭) ; ಮಾಡೋದು ಮಾಡಿ, ತಪ್ಪುಸಾಧಿಸಬೇಡ, ಸುಮ್ಮನಿರು (ರೂಢಿ). [ ತಪ್ಪು₂ + ಸಾಧಿಸು ]

**ತಪ್ಪುಸೈರಿಸು** (ಕ್ರಿ). ತಪ್ಪನ್ನು ಸಹಿಸಿಕೊಳ್ಳು. [ ತಪ್ಪು₂ + ಸೈರಿಸು ]

**ತಪ್ಪುಹಚ್ಚು** (ಕ್ರಿ). = ತಪ್ಪುಹೊರಿಸು : (೬). [ ತಪ್ಪು₂ + ಹಚ್ಚು₁ ]

**ತಪ್ಪುಹಿಡಿ** 'ತಪ್ಪುವಿಡಿ' ನೋ.

**ತಪ್ಪುಹೆಜ್ಜೆ** (ನಾ). ೧. = ತಪ್ಪಡಿ₁ ೧: ಈ ತಪ್ಪುಹೆಜ್ಜೆಗಳನ್ನಿಡುವಾಗ ಮಗುವು ಏಳುವುದು ಬೀಳುವುದು ಜಾಸ್ತಿಯಾಗುತ್ತದೆ (ಗೃಹವಿ. ೧೨೭). ೨. ತಪ್ಪು ದಾರಿಯಲ್ಲಿ ಇಡುವ ಹೆಜ್ಜೆ ; ತಪ್ಪಾದ ನಡವಳಿಕೆ : ಮಂತ್ರಿಮಂಡಲವು ಕಾರ್ಯರೀತಿಯಲ್ಲಿ ಪೇಚಾಡುತ್ತಿರುವಂತೆ ಅಥವಾ ತಪ್ಪುಹೆಜ್ಜೆಹಾಕುವಂತೆ, ತೋರಿದಾಗ ಅದಕ್ಕೆ ಯುಕ್ತಮಾರ್ಗವನ್ನು ಸೂಚಿಸುವುದು (ರಾಜ್ಯಾಂಗ.೯೭). [ ತಪ್ಪು₂ + ಹೆಜ್ಜೆ (< ಪಜ್ಜೆ) ]

**ತಪ್ಪುಹೊರಿಸು** (ಕ್ರಿ). ದೋಷಾರೋಪಣೆ ಮಾಡು: ತಪ್ಪುಹೊರಿಸಿದವನಿಗೆ ಒಪ್ಪುವವನು ಯಾರು (ಗಾದೆ) ; ನನ್ನ ಮೇಲೆ ವೃಥಾ ತಪ್ಪುಹೊರಿಸಬೇಡ (ರೂಢಿ). [ ತಪ್ಪು₂ + ಹೊರಿಸು (< ಪೊಱಿಸು) ]

**ತಪ್ಪುಹೊರು** 'ತಪ್ಪುಹೊಱು' ನೋ.

**ತಪ್ಪುಹೊಱು, ತಪ್ಪುಹೊರು** (ಕ್ರಿ). ದೋಷಾರೋಪಣೆಗೆ ಗುರಿಯಾಗು; ಅಪವಾದವನ್ನು ಹೊರು : ತಪ್ಪುಹೊಱದವೊಲಾವ ಶಪಥವನೊಪ್ಪುಗೊಳಲದ ಮಾಡುವೆನು ದಿಟ ತಪ್ಪು ಸಂಧಿಸಿತಾದಡಿಲ್ಲಿಯೆ ಬಿಸುಡುವೆನು ತನುವ (ತೊರರಾ. ೬-೫೩-೭೮). ತಪ್ಪುಹೊರು : ಯಾರೋ ಮಾಡಿದ ಕೆಲಸಕ್ಕೆ ತಾನು ತಪ್ಪುಹೊರಬೇಕಾಯಿತು (ರೂಢಿ). [ ತಪ್ಪು₂ + ಹೊಱು (< ಪೊಱು) ]

**ತಪ್ಪೆಣಿಕೆ** (ನಾ). ತಪ್ಪು ಕಲ್ಪನೆ,–ಗ್ರಹಿಕೆ : ರಾಣಿವಾಸದೊಡನೆ ಕಲಹಿಸಿ ಕೋಪಿಸಿಕೊಂಡಿದ್ದ ರಾಯರ ತಪ್ಪೆಣಿಕೆಯನ್ನು ತಿದ್ದುವುದಕ್ಕಾಗಿಯೇ (ಸಾಹಿಜೀ. ೯೦). [ ತಪ್ಪು₂ + ಎಣಿಕೆ ]

**ತಪ್ಪೇಲಿ** 'ತಪ್ಪಲೆ' ನೋ.

**ತಪ್ಪೊಪ್ಪಿಗೆ** (ನಾ). ತಪ್ಪನ್ನು ಒಪ್ಪಿಕೊಳ್ಳುವುದು : ತಾನೇ ಗುಂಡು ಹಾರಿಸಿದ್ದೆಂದು ತಪ್ಪೊಪ್ಪಿಗೆಯ ಮುಚ್ಚಳಿಕೆ ನೀಡಿದ್ದರಿಂದ ಅವಳಿಗೆ ಶಿಕ್ಷೆ ವಿಧಾಯಕವಾಯಿತು (ಪುನರು.೪೯೩). [ತಪ್ಪು₂ + ಒಪ್ಪಿಗೆ (< ಒಪ್ಪುಗೆ)]

**ತಪ್ಪೊಪ್ಪು₁** (ಕ್ರಿ). ತಪ್ಪನ್ನು ಒಪ್ಪಿಕೊಳ್ಳು : ಹುಚ್ಚಿನಿಂ ತಪ್ಪೊಪ್ಪೆ ಬಾಯ್ಕೈಗಳಂ ಬಿಗಿದು (ಕಾಲೂರ. ೭೭-೧೪೦). [ ತಪ್ಪು₂ + ಒಪ್ಪು₁ ]

**ತಪ್ಪೊಪ್ಪು₂** (ನಾ). ತಪ್ಪು ಮತ್ತು ಸರಿ ; ಗುಣ ಮತ್ತು ದೋಷ ; ನ್ಯಾಯಾನ್ಯಾಯ : ದ್ಯೂತಪ್ರಸಂಗದಲ್ಲಿ ಆಟಗಾರರ ತಪ್ಪೊಪ್ಪುಗಳನ್ನು ಸೂಚಿಸಿ ಸರಿಗೊಳಿಸುವ 'ಮಧ್ಯಸ್ಥ' . . . ಆ ದ್ಯೂತವನ್ನು ನಿರೀಕ್ಷಿಸುತ್ತಿರಬೇಕೆಂಬುದು ಪದ್ಧತಿ (ಕನ್ನಇ. ೧೬೯) ; ಹೆಬ್ಬುಲಿಯು ಬರುತಿಹುದು ತಪ್ಪೊಪ್ಪುಗಳ ನೆಲದ ಕೀಳ್ಮೇಲನೆಣಿಸಿ (ಕಾಲೂರ. ೯೪-೧೮೭). [ ತಪ್ಪು₂ + ಒಪ್ಪು₂ ]

**ತಪ್ಪೋಲೆ** (ನಾ). ಗ್ರಂಥದ ಮುದ್ರಣದಲ್ಲಿ ಉಳಿದುಕೊಂಡಿರುವ ತಪ್ಪುಗಳನ್ನೂ ಅವುಗಳ ತಿದ್ದುಪಡಿಗಳನ್ನೂ ಸೂಚಿಸುವ ಪಟ್ಟಿ : ಒಂದು ಪುಸ್ತಕದಲ್ಲಿ ಅದರಲ್ಲಿಯ ಅಶುದ್ಧಗಳನ್ನು ಕೊಟ್ಟಿರುವ ಪಟ್ಟಿ ; ತಪ್ಪೋಲೆ (Erratum. ಇಂಕನಿ.); ಪೀಠಿಕಾಭಾಗಕ್ಕೆ ಸಂಬಂಧಿಸಿದ ಭಾಗಗಳಾವುವೆಂದರೆ: (೧) ಪುಸ್ತಕದ ಸಂಕ್ಷೇಪವಾದ ಹೆಸರು . . . (೯) ಚಿತ್ರಪಟ್ಟಿ (೧೦) ತಪ್ಪೋಲೆ (೧೧) ಉಪನಾಮ (ಮುದ್ರಕ. ೪೨). [ ತಪ್ಪು₂ + ಓಲೆ ]

**ತಪ್ಸೀಲು** 'ತಪಸೀಲು' ನೋ.

**ತಥರೀಕು** (ನಾ). ಹಂಚುವಿಕೆ ; ಪಾಲುಮಾಡುವಿಕೆ: (ಕ).
[ ←ಅರ. ಹಿಂ. ಮರಾ. ತಥರೀಕ್ ]

**ತಥಾವತು** (ನಾ). ೧. (ಲೆಕ್ಕಪತ್ರ ಮೊದಲಾದುವುಗಳ ವಿಷಯದಲ್ಲಿ) ಹೆಚ್ಚುಕಡಮೆ ; ವ್ಯತ್ಯಾಸ ; ಅಂತರ ; ಫರಕು : ಮೂರುವರುಷದ ಮೇಲೆ ಟೀಪುಸುಲ್ತಾನರು ಸಲ್ಲಾಕೆ ತಥಾವತು ಮಾಡುವವರಾಗಿಯೂ ನಾನಾಪ್ರಕಾರ ವಿರುದ್ಧಮಾಡುವ ಮತಲಪ್ಪಿನಲ್ಲಿ ಇದ್ದಾರೆಯೆಂಬ ಸಮಾಚಾರ (ರಾಜೇಂದ್ರ. ೫೪). ೨. ನ್ಯೂನತೆ ಅಥವಾ ದೋಷದಿಂದ ಕೂಡಿದುದು ; ತಪ್ಪು : ಈ ಪ್ರಕಾರ ಗಳಿಗ್ಗೆ ವಂದೊಂದು ಮಾತು ಆಗುವದರಿಂದ ನಿಮ್ಮ ಮಾತು ತಥಾವತು ಆಗಿ ಕಾಣುತ್ತದೆ (ರಾಜೇಂದ್ರ. ೬೪). [ ←ಅರ. ಹಿಂ. ಮರಾ. ತಥಾವತ್ ]

**ತಥಾವತುಗಾರ** (ನಾ). ಹಣವನ್ನು ತಿಂದು ಹಾಕುವವನು,–ದುರುಪಯೋಗ ಮಾಡಿಕೊಳ್ಳುವವನು : ತಥಾವತುಗಾರ ತಪ್ಪಿದರೆ ತಿಪ್ಪಯ್ಯಗೆ ಏನು ಕೋಪ ? (ಗಾದೆ). [ತಥಾವತು + – ಗಾರ (<– ಕಾರ) ]

**ತಬಕ₁** (ನಾ). ಗೊಂಚಲು; ಸಮೂಹ (?) : ಕಬರಿಯರಳ ಕಯ್ಯ ರತ್ನದ ತಬಕೂರ್ವಿ[ಪಾಠಾಂ. ಸ್ತಬಕೂರ್ವಿ, ತಬಕೊರ್ವಿ]ಕೆಯ ತೋರಣದಳಾಗಲ ವಳಾಳಿಗಬಲೆ ನೋಡವನ ಚಿತ್ರವನೆಂದು (ಸೊಬಗಿನ. ೨೫–೨೦).
[ <ಸಂ. ಸ್ತಬಕ ]

**ತಬಕ₂** 'ತಬಕು' ನೋ.

**ತಬಕು, ತಬಕ₂, ತಬುಕು** (ನಾ). ತಾಂಬೂಲ, ಪೂಜೆಯ ಸಾಮಾನು ಮೊದಲಾದುವುಗಳನ್ನು ಇಡಲು ಉಪಯೋಗಿಸುವ, ಚಿತ್ರಕೆಲಸದ ಲೋಹದ ತಟ್ಟೆ : ತಂಬುಲಿಗನ ಕೈಯ ತಬಕನರ್ಕಕೀರ್ತಿ ಒಯ್ಯನೆ ಸೆಳೆಕೊಂಡು ತಂದೆಗೆಲೆಯ ತನ್ನ ಕೈಯಾರೆ ಕೊಡತೊಡಗಿದನು (ಭರತ. ೨೭–೭೭); ಕಸ್ತೂರಿ ಗಂಧ ಅತ್ತರು ಹೊಸ ಚಿನ್ನಮಯ ತಬಕಿನಲಿ ಹಿಡಿದವರು ಕೆಲರು (ಶ್ರೀಕೃಪಾ. ೩೭) ; ತಾಂಬೂಲದ ತಬಕು (ಬೆಳುವ. ೧೭೦) ; ತಬ್ಬಲಿ ತಬಕು ಕದ್ದು ಜಗಲೀಲಿ ಸಿಕ್ಕಿ ಬಿದ್ದ (ಗಾದೆ). **ತಬಕ₂** : ತಬಕಗಳ ಹಿಡಿದು ನಿಂದವರು ಹಾರ ಹಿಡಿದವರು (ಶ್ರೀಕೃಪಾ. ೦೮) ; ಬೆಳ್ಳಿಯಿಂದ ತಾಟು ತಬಕ ಬಟ್ಟಲು ತಂಬಿಗೆ ವೇಲೆ ಮುಂತಾದ ಸಾಮಾನುಗಳನ್ನು . . . ಮಾಡುವ ನಡತೆಯುಂಟು (ಮುಂಬಯಿ. ೪–೧೩೦) ; ಕುಂಕುಮ ಅರಿಷಿಣ ಮೊದಲಾದುವುಳ್ಳ ಪೂಜೆಯ ತಬಕವಿದೆ (ನಾಧಾರಿ. ೩೮). **ತಬುಕು** : ನಗುತ ತಾಂಬೂಲವನು ತಬುಕಿನಲಿಯಿರಿಸಿ (ಬಾಣಾಕ. ೧೧) ; ಅವನ ಮುಂದಕ್ಕೆ ವೀಳೆಯದ ತಬುಕನ್ನು ತಂದಿರಿಸಿದಳು (ಕುಡಿಕೂ. ೪೮).
[ ←ಅರ. ಹಿಂ. ಮರಾ. ತಬಕ್ ]

**ತಬಟೆ** 'ತಂಬಟ' ನೋ.

**ತಬಣ್ಣಬಲ** (ನಾ). ಒಂದು ಊರಿನ ಹೆಸರು : ಪಣ್ಡಿತ ಭಟಾರರ್ತ್ಸಾಣಮ ನಾಳುತಿರೆ ತಬಣ್ಣಬಲಬೀವಿನೊಳೆ ಈಸಗಮುಣ್ಣ ಸತ್ತೊಡೆ (ಮೈಅರಿ. ೧೯೨೭, ೦೦೦–೪ ; 10ನೆಯ ಶತ). [ ? ]

**ತಬಲ** 'ತಬಲೆ' ನೋ.

**ತಬಲಕು** (ನಾ). ಕಾಗದ ಪತ್ರಗಳ ಕಟ್ಟು,–ಕಂತೆ : (ಕ).
[ ←ಅರ. ತಬ್ಲಕ್ ; ಮರಾ. ತಬಲಕ್ ]

**ತಬಲಕುದಾರ** (ನಾ). ೧. ಕಾಗದಪತ್ರಗಳನ್ನು ಕಟ್ಟುವ ದಾರ. ೨. ಸೆಣಬಿನ ದಾರ. [ ತಬಲಕು + ದಾರ₁ ]

**ತಬಲಾ** 'ತಬಲೆ' ನೋ.

**ತಬಲಾತರಂಗ** (ನಾ). ತಬಲಾದ ನಾದದ ಅಲೆ : ಉಕ್ಕು, ಉತ್ಸಾಹಗಳಿಗೆ ತಬಲಾತರಂಗವೊ ಜಲತರಂಗವೊ ಸಹಾಯ (ಬಾಲಪ್ರ. II, ೯೭೭). 'ಕಾಷ್ಠತರಂಗ', 'ಜಲತರಂಗ' ಹೋ.
[ ತಬಲಾ(<ತಬಲೆ) + ತರಂಗ ]

**ತಬಲೆ,** ತಬಲ, ತಬಲಾ(ನಾ). (ತಾಳವನ್ನು ಸೂಚಿಸುವುದಕ್ಕಾಗಿ ಬಾರಿಸುವ) ಒಂದು ಬಗೆಯ ಚರ್ಮವಾದ್ಯ,–ತಾಳವಾದ್ಯ: ತಬಲಾದವನು ತಬಲೆಯನ್ನು ಸರಿಪಡಿಸಿದ (ಅಬೋಲೀ. ೧೭೪) ; ಒಂದು ತಬಲೆಯನ್ನು ತೆಗೆದುಕೊಂಡು ದಪದಪ ಬಡಿಯತೊಡಗಿದರು(ಕುರಿಹಿಂ. ೪). **ತಬಲ**: ತಬಲ ಹೊಡೆಯುವುದರಲ್ಲಿ ಆತ ಎತ್ತಿದ ಕೈ (ರಾಯಳ. ೫೫). **ತಬಲಾ** : ಜೊತೆಗೆ ರೋಹಿಣಿಯು ಸ್ವರಸೇರಿಸಿ, ತಬಲಾ ಬಾರಿಸುತ್ತಿದ್ದಳು (ಬಂಕಿಮ. ೭೨).
[ ←ಅರ. ತಬಲಹ್, ತಬ್ಲಾ ; ಹಿಂ. ಮರಾ. ತಬಲಾ ]

**ತಬಸಿ** 'ತವಸಿ' ನೋ.

**ತಬೀಯತು,** ತಬ್ಬೇತ (ನಾ). ೧. ಪ್ರಕೃತಿ ; ಸ್ವಭಾವ : (ಕ). **ತಬ್ಬೇತ**: ೨. ಆರೋಗ್ಯ : ತಬ್ಬೇತ ಠೀಕ್ ಅದ ಇಲ್ಲೋ ? (ದೀಪಹ. II, ೨೦೦).
[ ←ಅರ. ತಬೀಯತ್; ಹಿಂ. ತಬೀಅತ್; ಮರಾ. ತಬಿಯತ್ ]

**ತಬುಕು** 'ತಬಕು' ನೋ.

**ತಬೇಲಿ,** ತಬೇಲೆ (ನಾ). ಕುದುರೆ ಲಾಯ ; ಅಶ್ವಶಾಲೆ : ಬೆಳಗಿನ ಕುದುರೆಗಳನ್ನು ಕೋಚಿನ ಸೇಜು ತಬೇಲಿಗೆ ತರುತ್ತಲೂ, ಅವು ಆರುತ್ತಲೇ ಅವಕ್ಕೂ ಮಾಲೀಸ್ (ಹಂಗೂಲಿ. ೭೫) ; ನಮ್ಮ ಸೋದರಮಾವ ಕರೀಂಖಾನರು ಹುಜೂರು ತಬೇಲೀಲೆ ಅಲ್ವಾ ಇರೋದು (ಮಲ್ಲಿ. ೩೩). **ತಬೇಲೆ** : 'ಖಾಸ್‌ತಬೇಲೆ' ಪರಾ.
[ ←ಹಿಂ. ತಬೇಲಾ, ತವೇಲಾ ; ಮರಾ. ತಬೇಲಾ; ಅರ. ತವೇಲಹ್, ತವೀಲಾ ]

**ತಬೇಲೆ** 'ತಬೇಲಿ' ನೋ.

**ತಬ್ದಿಲು** 'ತಬ್ದೀಲು' ನೋ.

**ತಬ್ದೀಲು,** ತಬ್ದಿಲು (ನಾ). ಬದಲಾವಣೆ : ಪಲ್ಲಟ ; ಪರಿವರ್ತನೆ ; ಅದಲುಬದಲು : ಚಾಲ್ತಿ ಸಾಲಿನ ಬಾಕಿಯನ್ನೂ ಗುದಸ್ತ ಬಾಕಿಯನ್ನೂ ಬೇರೆ ಬೇರೆ ಹಾಕಿ ಎಂದು ಹೇಳಿದರೆ ಎರಡನ್ನೂ ತಬ್ದೀಲುಮಾಡಿ ತಲೆ ಕೆಡಿಸುತ್ತಿದ್ದರು (ನನ್ನೂರು. ೦೫೩). **ತಬ್ದಿಲು** : ಅವಸರದಲ್ಲಿ ಒಂದರ ಶಬ್ದ ಇನ್ನೊಂದಕ್ಕೆ ತಬ್ದಿಲಾಗಿ ಬರೆಯಲ್ಪಟ್ಟ ಕೆಲವು ತೂಗುಪಟ್ಟಿಗಳೂ ಇವೆ (ರೂಪಸಂ. ೫೯). [←ಅರ. ಹಿಂ. ತಬ್‌ದೀಲ್ ]

**ತಬ್ಬರಿಸು₁** (ಕ್ರಿ). ಎಡಹು ; ಮುಗ್ಗರಿಸು : ತವಕಪಟ್ಟವ ತಬ್ಬರಿಸಿ ಬಿದ್ದ (ಗಾದೆ). 'ಕಬ್ಬರಿಸು', 'ಟೆಬ್ಬರಿಸು' ಹೋ. [ ದೇ.॥ ತಮಿ. ತವಟು ]

**ತಬ್ಬರಿಸು₂** (ಕ್ರಿ). ತಬ್ಬು ; ವ್ಯಾಪಿಸು (?) : ವರ್ಣಿಸುವ ಗಬ್ಬಿಗರ್ ತ್ರೈಲೋಕ ದುರ್ಲಭದ ನಿರ್ಣಯದ ಆಗಾರಮಂ ಪೊಕ್ಕು ವ್ಯಂತರು ಪಚರ್ನಯ ಕದಂಬ ಸೌರಂಭಮಾಘ್ರಾಣಮಂ ನಿಬ್ಬರದಿ ತಬ್ಬರಿಸಲು (ಜಿನಮು. ೩೦–೩೦). 'ಇಕ್ಕರಿಸು₂', 'ಉಕ್ಕರಿಸು' ಹೋ.
[<ತಬ್ಬು₂ + – ಇಸು₃ ]

**ತಬ್ಬರಿಸು₃** (ಕ್ರಿ). ೧. ಭಯ ವಿಹ್ವಲನಾಗು. ೨. ದುಃಖಪರವಶನಾಗು : (ಕ). ೩. ಆಶ್ಚರ್ಯ ಚಕಿತನಾಗು: 'ತಬ್ಬಿಬ್ಬು' ಪರಾ. [ ? ]

**ತಬ್ಬಲಿ** (ನಾ). ೧. ತಂದೆಯನ್ನು ಅಥವಾ ತಾಯಿಯನ್ನು ಇಲ್ಲವೆ ತಂದೆ ತಾಯಿಗಳಿಬ್ಬರನ್ನೂ ಕಳೆದುಕೊಂಡಿರುವ ಮಗು ; ಅನಾಥ ಶಿಶು ; ಪರದೇಶಿ ಮಗು : ಈತಂಗಳು ತಬ್ಬಲಿಗಳಲ್ಲು (ಅದ್ಭುತ. ೪೭–೭); ದೀನ ತಬ್ಬಲಿಯ ಕಾಪಾಡುವವರಿಲ್ಲ (ಕಪಿಪು. ೩೫–೭); ಪಾಂಡವರು ತಂದೆಯಿಲ್ಲದ ತಬ್ಬಲಿಗಳಾಗಿದ್ದಾಗ ನೀನು ಅವರನ್ನು ಪೋಷಿಸಿದೆ (ವಚಭಾ. ೨೫೩) ; ತಬ್ಬಲಿ ಹುಡುಗಿ ಕೈಬಿಡಬೇಡ (ಕಳಹು. ೮೭). ೨. ದಿಕ್ಕಿಲ್ಲದುದು; ಅನಾಥವಾದುದು : ಆ ಭಿಕ್ಷುಕನ ಹೆಣ ತಬ್ಬಲಿಯಾಗಿ ಬಿದ್ದಿತ್ತು (ರೂಢಿ). 'ತಬ್ಬಲಿಪ್ರೇತ' ಪರಾ. ೩. ಕೀಳಾದ ವಸ್ತು ಅಥವಾ ತುಚ್ಛನಾದ ವ್ಯಕ್ತಿ : 'ತಬ್ಬಲಿದನ', 'ತರುವಲಿ' ಪರಾ.
[ದೇ.॥ ತುಳು. ತಬ್ಬಿಲು, ತಬ್ಬುಲಿ; ತೊದ. ತೊಬೆರಿ]

**ತಬ್ಬಲಿಕೂಸು** (ನಾ). ತಾಯಿಯಿಲ್ಲದ ಮಗು ; ಅನಾಥಶಿಶು : (ಕ).
[ ತಬ್ಬಲಿ + ಕೂಸು ]

**ತಬ್ಬಲಿದನ** (ನಾ). ತೊಂಡುದನ ; ಪೋಲಿದನ : (ಕ).
[ ತಬ್ಬಲಿ + ದನ ]

**ತಬ್ಬಲಿಪ್ರೇತ** (ನಾ). ಕೇಳುವವರಿಲ್ಲದ ಹೆಣ; ದಿಕ್ಕಿಲ್ಲದ ಶವ ; ಬೇವಾರ್ಸಿ ಹೆಣ : ನೀರ ಪಾತಳಿಯ ಮೇಲೆ ಕವುಚಿಬಿದ್ದ ತಬ್ಬಲಿಪ್ರೇತ ತೇಲುತ್ತಿತ್ತು (ಮೂರುದಾ. ೩೨೬). [ ತಬ್ಬಲಿ + ಪ್ರೇತ ]

**ತಬ್ಬಿಬ್ಬಾಟ** (ನಾ). ದಿಗ್ಭ್ರಮೆಗೊಳಿಸುವ ಆಟ : ಒಬ್ಬಳ ಬಸಿಱಿಂದಲಿ ಬಂದು ಮತ್ತೊಬ್ಬಳ ಕೈಯಿಂದಲಿ ಬಳೆದು ಕೊಬ್ಬಿದ ಭೂಭಾರವನಿಳುಹಲು ಇಂಥ ತಬ್ಬಿಬ್ಬಾಟ[ಪಾಠಾಂ. ತಬ್ಬುಬ್ಬಿದಾಟ]ಗಳೆಲ್ಲಿ ಕಲಿತೆಯ್ಯ (ಪುರಂದ. ೧-೯೬-೧). [ ತಬ್ಬಿಬ್ಬು + ಆಟ ]

**ತಬ್ಬಿಬ್ಬಿ** 'ತಬ್ಬಿಬ್ಬು' ನೋ.

**ತಬ್ಬಿಬ್ಬಿಗೊಳ್** 'ತಬ್ಬಿಬ್ಬುಗೊಳ್' ನೋ.

**ತಬ್ಬಿಬ್ಬು**, ತಬ್ಬಿಬ್ಬಿ (ನಾ). ೧. ಕಕ್ಕಾಬಿಕ್ಕಿ ; ದಿಗ್ಭ್ರಮೆ : ತಾಮಸ ತಲ್ಲಣ ತಬ್ಬಿಬ್ಬು ತಳ್ಳಂಕ ಕಾಮಕಾರಿಕೆ ಕಟ್ಟಳಲಸೀಮೆ ಯಜಿಯದಲ್ ಸಲಹು (ಶತಸಾಂ. ೩೪-೭೮) ; ತವೆ ತಬ್ಬಿಬ್ಬಂ ತಾಳ್ದಿ ತೂಟ್ದಿ ತಾಳ್ದನ ಸಿರಿಯಂ (ಚಿಕವಿ. ೨-೯೭) ; ಅತ್ಯಗತ್ಯವಾದ ಮಹತ್ಕಾರ್ಯವನ್ನು ಎಸಗುವಾಗ . . . ಹೃದಯದೌರ್ಬಲ್ಯಗಳು, ಕ್ಷುದ್ರಬಾಧೆಗಳು, ತಬ್ಬಿಬ್ಬುಗಳು, "ಶ್ರೀ"ಯವರಿಗೆ ಒದಗಿ ಬಂದುದು ಪ್ರಕೃತಿವಿಲಾಸ (ಕಒಸಾ. X, ಪೀಠಿಕೆ). ೨. ನಡೆನುಡಿಗಳಲ್ಲಿ ತಡಬಡ,– ತಡವರಿಸಂವಿಕೆ : ಬೆನ್ನೊಳ್ ನಟ್ಟ ಸರಳ ತಬ್ಬಿಬ್ಬೆಸೆವ ನಡೆನುಡಿಗಳ (ಚಬಪು. ೪೯-೨೪). **ತಬ್ಬಿಬ್ಬಿ** : ೧. ಪ್ರಸಾದವ ಕೊಂಡಲ್ಲಿ ಉಳಿಕಳವುಬ್ಬಸ ತಬ್ಬಿಬ್ಬಿ ಹಾನಿ ವೃದ್ಧಿಗೆ ಎಡೆಯಿಲ್ಲದೆ (ದಾಸೋಸಂ. ೪೭) ; ಪೊಡವಿಪಾಲರು ವಿಕಳದ ನುಡಿಯ ತಬ್ಬಿಬ್ಬಿಗಳಲಿರ್ದರು (ಸನತ್ಕು. ೧೪-೧೯); ತಬ್ಬಿಬ್ಬಿಯಿಲ್ಲದೆ ಮಲೆವುತ ಸಾಗುತಂದುಬ್ಬಿನಿಂದೆಳೆದ ಹುಯ್ಯಲನು (ಕುರಾಸಾಂ. ೧೯-೧೦೭).

ತಬ್ಬಿಬ್ಬನಾಡು = ತೊದಲುತ್ತ ಮಾತನಾಡು ; ಅಸ್ತವ್ಯಸ್ತವಾಗಿ ಮಾತಾಡು; ಅರ್ಥವಿಲ್ಲದ ಮಾತನಾಡು: ಸಪ್ತಾವಸ್ಥೆಯಡಸಿರ್ದರಂತೆ ತಬ್ಬಿಬ್ಬನಾಡುತ್ತ ಮಧುಪಾನದಬಲೆಯರೆಸೆದರು (ವೀರಮ. ೮-೫೫). **ತಬ್ಬಿಬ್ಬಾಗು**, ತಬ್ಬಿಬ್ಬಿಯಾಗು = ೧. ಕಕ್ಕಾಬಿಕ್ಕಿಯಾಗು ; ದಿಕ್ಕು ತೋಚದಂತಾಗು ; ಗಾಬರಿಯಾಗು : ನಾನು ತಬ್ಬಿಬ್ಬಾಗಿ ಉತ್ತರವಿತ್ತೆ (ನಾಪೋಲೀ. ೨೩೬) ; ಒಂದು ಕ್ಷಣ ಅವನು ತಬ್ಬಿಬ್ಬಾದ (ಹೊಸಕ್ಕಿ. ೩೭). ತಬ್ಬಿಬ್ಬಿಯಾಗದೆ ತಳ್ಳಂಕಗೊಳ್ಳದೆ ಬೊಬ್ಬೆಯಿಕ್ಕದೆ ಜೋಕೆಯುಱಿದು . . . ಒಂದೊಂದು ಕಲೆಯ ಮೈಯುಬ್ಬುವೊಲು ಕೇಳಿಸಿದರು (ಭರಚ. ೧-೭೧) ; ಸಮಾಜದ ಸನ್ನಿವೇಶಗಳನ್ನೇ ಶಾಲೆಯ ಎಳೆಯ ಮಕ್ಕಳ ಮುಂದೆ ತಂದೊಡ್ಡುವುದಾದರೆ, ಅವರು ತಬ್ಬಿಬ್ಬಿಯಾದಾರು (ಶಿಕ್ಷದ. ೬೯). ೨. ತಡವರಿಸು; ತೊದಲು: ನಡೆಗೆ ತಡಬಡಮಾಯ್ತು ವಾಣಿ ತಬ್ಬಿಬ್ಬಾಯ್ತು (ಚಬಪು. ೨೦-೧೯). **ತಬ್ಬಿಬ್ಬುಮಾಡು** = ಏನೂ ತೋರದಂತೆ ಮಾಡು ; ತಬ್ಬಿಬ್ಬುಮಾಡು ; ಪೀಡಿಸು ; ಕಾಡಿಸು (Molder. ಇಂಕನಿ.).

[ ದೇ.॥ ತುಳು. ತಬ್ಬಿಬ್ಬು, ತಬ್ಬುದಿಬ್ಬು ; ತೆಲು. ತಬ್ಬಿಬ್ಬು ]

**ತಬ್ಬಿಬ್ಬುಗೊಳ್**, ತಬ್ಬಿಬ್ಬಿಗೊಳ್, ತಬ್ಬಿಬ್ಬುಗೊಳು (ಕ್ರಿ). ಗಾಬರಿಗೊಳ್ಳು ; ಕಕ್ಕಾಬಿಕ್ಕಿಯಾಗು ; ದಿಗ್ಭ್ರಾಂತನಾಗು ; ದಿಕ್ಕುತೋಚದಂತಾಗು: ದಬ್ಬುದಲೆಗೊಂಬ ವಾರಣ ವಾಹಕಪ್ರತತಿ ತಬ್ಬಿಬ್ಬುಗೊಂಬ [ಪಾಠಾಂ. ಬ್ಬಿ ನಡೆವ] ತುರಗಾರೋಹಕ ಪ್ರತತಿ (ಸಮ್ಮಕೌ. ೮-೬೩) ; ತಬ್ಬಿಬ್ಬುಗೊಂಡು ಮೊಱಿಗೆಯ್ವರಿಂ ಸುಯ್ವರಿಂ (ಚಬಪು. ೪೭-೨೦) ; ಇಂತು ಮಾಱಾಂತ ಬಲಮಂ ಕಡಿದಬ್ಬರಕೆ ತಿಗುಳನಾಡನಿತುಂ ತಬ್ಬಿಬ್ಬಿಗೊಳೆ (ಚಿಕವಿ. ೫-೯೦). **ತಬ್ಬಿಬ್ಬಿಗೊಳ್** : ಸಬ್ಬಜನರು ತಬ್ಬಿಬ್ಬಿಗೊಳಲು ಊರಬ್ಬರ[ಪಾಠಾಂ. ಗಳು ತಬ್ಬಿಬ್ಬುಗೊಳುತಿರಲುಬ್ಬೆಗ]ಪಿರಿದಾಯ್ತೆಂದು (ತ್ರಿಪುಸಾಂ. ೧೭-೧೮೩) ; ತಬ್ಬಿಬ್ಬಿಗೊಂಬ ಹಿರಣ್ಯಾಕ್ಷನ ಪೌಜಿನುಬ್ಬೆಯ ಕಂಡು ಕೋಪದೊಳು (ನೇಮಿಸಂ. ೧೨-೭೫) ; ಬೊಬ್ಬೆಯಬ್ಬರದುಬ್ಬಿಗೆ ಭೀತಿಗೊಂಡಾಗ ತಬ್ಬಿಬ್ಬಿಗೊಂಡುಚಿ ಭಟರು . . . ಕಂಗೆಟ್ಟೋಡೆ (ಕಂಪವಿ. ೧೮-೫೦). **ತಬ್ಬಿಬ್ಬುಗೊಳು**: ಮೂಱುವೃತಕ್ಕೆ ಮುಕ್ಕುತಕ್ಕೆನಾಗಿ ತಬ್ಬಿಬ್ಬುಗೊಳುತ್ತಿದ್ದೇನೆ (ಐಲೇಶ್ವ. ೪೫) ; ಇದು ಮನಸಿನ ವಿಕಾರವೆಂಬುದನು ಒಬ್ಬರೂ ತಿಳಿಯದೆ ತಬ್ಬಿಬ್ಬು[ಪಾಠಾಂ. ಬ್ಬಿ]ಗೊಳುತ್ತಿದಾರೆ ನೋಡಾ (ಸಿದ್ಧವ. ೧೦೯-೩೩೮). [ ತಬ್ಬಿಬ್ಬು + ಕೊಳ್$_1$ ]

**ತಬ್ಬಿಬ್ಬುಗೊಳಿಸು** (ಕ್ರಿ). ಗಾಬರಿಗೊಳಿಸು; ಕಕ್ಕಾಬಿಕ್ಕಿಗೊಳಿಸು: ಜನರ ತಲೆಯೊಳು ಬರೆದ ಬಿದಿಯ ತಬ್ಬಿಬ್ಬುಗೊಳಿಸುವನು (ಗೀತಗೋ. ೧೯-೧) ; ತಬ್ಬಿಬ್ಬುಗೊಳಿಸುತ ತವಕದಿಂ ಪಿಡಿದರು ಹೆಬ್ಬುಲಿ ಕರಡಿ ಹಂದಿಗಳ (ಚಂದ್ರಹಾ. ೧-೬೬). [ ತಬ್ಬಿಬ್ಬುಗೊಳ್ + – ಇಸು$_3$ ]

**ತಬ್ಬಿಬ್ಬುಗೊಳು** 'ತಬ್ಬಿಬ್ಬುಗೊಳ್' ನೋ.

**ತಬ್ಬಿಬ್ಬುಮಾತು** (ನಾ). ತಡಬಡಗೊಂಡ ಮಾತು : ತಬ್ಬಿಬ್ಬುಮಾತುಗಳಿಂದಾ ತನ್ನ ಸೇವಕರಂ ಕೂಗಿ (ಸೌಗಂಧಿ. ೫೩೮-೧೩).
[ ತಬ್ಬಿಬ್ಬು + ಮಾತು$_1$ ]

**ತಬ್ಬಿಬ್ಬುವೋಗು** (ಕ್ರಿ).=ತಬ್ಬಿಬ್ಬುಗೊಳ್: ತಾಳಮೇಳದ ಗತಿಯ ಗಮಕದ ಕೀಲಣೆಯ ಕಾಲಾಟ ವಿಘಟಿಸಿ ಚಾಳಿಯಲಿ ತಬ್ಬಿಬ್ಬುವೋಗು[ಪಾಠಾಂ. ವೆನಿಸು]ತಲಿರ್ದಳಾ ಮಾಯೆ (ಪ್ರಭುಲೀ. ೭-೨೭). [ತಬ್ಬಿಬ್ಬು + ಪೋಗು$_1$]

**ತಬ್ಬಿಸು** (ಕ್ರಿ). ೧. ಅಪ್ಪಿಕೊಳ್ಳುವಂತೆ ಮಾಡು ; ಆಲಿಂಗಿಸುವಂತೆ ಮಾಡು : (ಕ). ೨. ಹುಲ್ಲಿನ ಹೊರೆ, ಸೌದೆ ಮೊದಲಾದುವನ್ನು ತೆಕ್ಕೆಯಲ್ಲಿ ಹಿಡಿಸು : (ಕ). [ ತಬ್ಬು$_1$ (<ತಬ್ಬು$_1$) + – ಇಸು$_3$ ]

**ತಬ್ಬು$_1$** 'ತಟ್ಟು$_1$' ನೋ.

**ತಬ್ಬು$_2$** 'ತಟ್ಟು$_2$' ನೋ.

**ತಬ್ಬೇತ** 'ತಬೀಯತು' ನೋ.

**ತಮ** (ನಾ). ೧. ಕತ್ತಲೆ; ಅಂಧಕಾರ: "ತಿಮಿರಂ . . . ಅಂಧಕಾರಂ ತಮಂ ತಮಿಸ್ರಮದಕ್ಕುಂ" (ವಸ್ತುಕೋ. ೧೧-೬೩) ; " ಮರ್ಬಿನೆ ತಮಂ " (ಕಬ್ಬಿಗ. ೧೧); ತಮದೊಡ್ಡಿರ್ದಪೊಲಿರ್ದ ಕಾಮರ್ಮುಗಿಲ ತಳ್ತೊಡ್ಡೆಲ್ಲಮಂ . . . ಎಚ್ಚು ತೂಳ್ದಿ (ಆದಿಪು. ೧೩-೬೦) ; ತಮಂ ತಲೆಯನೆತ್ತಿದಂತು ಮಸುಳ್ವಂತು ಸೂರ್ಯೇಂದುಗಳ್ ಸಮಸ್ತ ಮಣಿಕೂಟ ಕೋಟಿಗಳ ಕಾಂತಿಗಳ್ ಸಂತತಂ ನಿಮಿರ್ಕೆವಡೆದೊಪ್ಪೆ (ಲೀಲಾವ. ೮-೭೦) ; ಪಗಲು ಕಡೆಗಾಣೆ ತಮವೆಂಬ ಗಿಡುಗಂಗಳ್ಕಿ ಖಗದ ಮಱಿಗಳು ಬಿಗುತೋಡಿ (ಭಾವಚಿಂ. ೭-೧೪). ೨. ಮೂರು ಮೂಲ ಗುಣಗಳಲ್ಲಿ ಒಂದು ; **ತಮೋಗುಣ**: ಸತ್ವಂ ಸಾತ್ವಿಕಗುಣಕೆ . . . ಅಧಿಕೋದ್ಧತ್ವಂ ತಮಕ್ಕೆ ನೆಲೆಯಾಯ್ತುತ್ಕಂತಂ ನೃಪನಿದೇಂ ತ್ರಿಮೂರ್ತ್ಯಾತ್ಮಕನೋ (ಪುಷ್ಪಪು. ೩-೬) ; ಹರಿ ದತ್ತಾತ್ರೇಯನಗಜಾವರನೇ ದುರ್ವಾಸನಬ್ಜಜಂ ಚಂದ್ರಂ ಭಾಸುರಚಿತ್ತ ತಮದ್ಯಗೋದ್ಭವರುರುತೇಜಃಪುಂಜರಾದರತ್ರಿಗೆ ಪುತ್ರರ್ (ಎಕ. V, ಬೇಲೂರು. ೯೨-೧೩; 1279) ; "ಕಾಲತುದಿ" (ಶಾಪಮಂ. ಟಿಪ್ಪಣಿ. ೨೯೫); ಯಮಳರೊಱಗಿರೆ ಕಂಡು ಮನದಲಿ ತಮವ ಹಿಡಿದನು ನೀರು ಗುಡಿದೀ ಮಮತೆ ಮಿಗಲಾರೈವೆನೆನುತಿಳಿದನು ಸರೋವರವ (ಕುವ್ಯಾ. ೮. ೨೩-೨೨). ೧,೨: ಕಣ್ಮಲರ ಬೆಳ್ಪುಗಳಾಲಿಯ ಕಟ್ಪಿನೊಳ್ ಪೊದಳ್ದೊಡನೊಡನೋಡುವಟ್ಟೆನಗೆ . . . ಸತ್ವಮಂ ತಮಮುಮಂ ಕಡೆಗಣ್ಣೊಳ್ ಕಂಡೆನೋ ಪಳಾ (ಪಂಪಭಾ. ೪-೭೮). ೩. ಕತ್ತಲೆಯನ್ನು ಹರಡುವ ಅಸ್ತ್ರ; ಅಂಧಕಾರಾಸ್ತ್ರ: ಅರಸನೆಚ್ಚಾ ಸರ್ಪಬಾಣವ ಗರುಡಬಾಣದಿ ತಮಕೆ ತರಣಿಯ(ಕಾಶಿರಾ. ೨೨-೩೦). ೪. ರಾಹು ; "ಭಾನುರಿಪು ಸಿಂಹಿಕಾಪ್ರಿಯಸೂನು ತಮಂ

ರಾಹು" (ವಸ್ತು.ಕೋ. ೧೩-೭೫); ತಮ ಶಶಾಂಕನ ನುಂಗಲಾಜಿದೆ ಕ್ರಮದಲಾ ರೋಹಿಣಿಯು ನುಂಗಲು ಭ್ರಮಿಸಿ ಹರಿತಹವೋಲು (ಕೌಶಿರಾ. ೩೭-೧೫). ೫. ಅಜ್ಞಾನ : ಮಾಂದಿಸಿ ತಮವಮಂ ದೃಷ್ಟಿಯೊಳೊಂದಿಸಿ ತತ್ತ್ವಾರ್ಥಮಂ ಜಗದ್ವ್ಯವಹಾರಕ್ಕಂದು[ಱ] ಮಾಡಿದ ವಿದ್ಯಾನಂದಸ್ವಾಮಿಯ ಮಹೋದಯಂ ಕೇವಳಮೇ (ಪುಷ್ಪಪು. ೧-೨೫); ವೇದ ತಮದಿ ಮುಳುಗಿತ್ತು, ಮನುಜಮನ ತಮದ ಬೀಡು ಆಗಿ (ಅರಲು. ೪೩೪-೧೦). ೬. ಸಲ್ಲದ ಕಾರ್ಯ; ಪಾಪ: ಮಾಡದೊಡೆ ತಾಯ್ಗೆ ಮರಣಂ ಮಾಡಿದೊಡೆನ್ನೊಂದು ಗತಿಗೆ ಕೇ[ಡಿಂ]ದೇನಂ ಮಾಡುವೆನೆಂದಾಂದೋಳಮನಾಡೆ ಮನಂ ತಮಮನಪ್ಪುಕಯ್ಯನಿಳೀಶಂ (ಯಶೋಚ. ೩-೨೦). ೭. ಪಾದಾಗ್ರ; ಕಾಲಿನ ತುದಿ. ೮. ರಾಕ್ಷಸ; ದುಷ್ಟ: ಎಲೆ ಮುರಾರಿ ಮುಕುಂದ ವೇದವ ಕಳಲು ತಮನನು ಸೀಳ್ದೆ (ಕೌಶಿರಾ. ೮೩-೪೭); ಘನ ತಮನ ವಧಿಸುತಲಿ ವೇದವ ವನಜಸಂಭವಗಿತ ಮತ್ಸ್ಯನೆ (ಸುದಾಮ. ೩-೧೫). [ ಸಂ. ]

**ತಮಂಗ** (ನಾ). ವೇದಿಕೆ; ಜಗಲಿ; ರಂಗಸ್ಥಳ: 'ತಮಂಗ ಮಂಟಪ' ಪರಾ. [ ಸಂ. ]

**ತಮಂಗಮಂಟಪ** (ನಾ). ರಂಗಮಂಟಪ; ಸಭಾಮಂದಿರ: ಮೂಡವೆಟ್ಟಿನ ಕೋಡುಂಗಲ್ ನಡೆದು ಬರ್ಪಂತೆ ಬಂದು ತಮಂಗಮಂಟಪದ ಮತ್ತವಾರಣದ ಕೆಲಕ್ಕೆ ಮತ್ತವಾರಣಮಂ ಸಾರ್ಚಿ ಪೊಡೆವಡುತ್ತುಂ (ಅನಂಪು. ೨-೨೯ ವ). [ ತಮಂಗ + ಮಂಟಪ ]

**ತಮಂಧ** (ನಾ). ೧. ಕಗ್ಗತ್ತಲೆ; ದಟ್ಟವಾದ ಕತ್ತಲೆ: ತಮಂಧ ಘನ ಜ್ಯೋತಿ ಕಿಱಿದೆನ್ನಬಹುದೇ (ಬಸವ. ೬); ಮುಕುರಕ್ಕೆ ತಮಂಧವೆಂದು ಒರಸಿದವರುಂಟೇ (ಮೋಳಿಮಾ. ೪೯-೧೫೩); ಹಂಪೆಯ ಮಾದಿರಾಜನ ಜ್ಞಾನದೀಪ್ತಿಕೆ ಕವಿವ ಮಾಯಾತಮಂಧವಳಿವಂತೆನ್ನ ಹೃದಯದೊಳು ಬೆಳಬೆಳಗುಗೆ (ಹಪಕಾ. ೧-೧೦). ೨. ಅಜ್ಞಾನ: ತಮಂಧ ಗುಱಿಯಾಗಿ ಲಯವಾಗಿ ಹೋದವರ ಕಂಡೆ ಕಾಮ ಗುಱಿಯಾಗಿ ಬೆಂದು ಹೋದವರ ಕಂಡೆ (ಅವಚಂ. ೩೧-೧೩೨); ಮೋಹ ಮಾಯಾಧಿಕ ತಮಂಧ ಸಮೂಹಮಂ ಸಂಹರಿಸಿ (ಬಸಪು. ೮-೫೭); ಕಡು ಚೆಲುವಿನೂರ್ವಸಿಯ ಸಂಗವ ಬಿಡದೆ ವಿಷಯಾಸಕ್ತನಾಗಿಯೆ . . . ಕಡುತಮಂಧ[ಪಾಠಾಂ. ಡ]ದೊಳಿರ್ದನು (ನಿಘಾಗ. ೧೦-೩೨೩). [ <ಸಂ. ತಮೋಂಧ ]

**ತಮಂಧಪಟ** (ನಾ). = ತಮಂಧವೃಂದ: ಒಡಲುಗೊಂಡ ತಮಂಧ ಪಟವೋ ನಡೆವ ನೀಲಾದ್ರಿಗಳೊ . . . ಎನಲೆಡೆವಿಡದೆ ಸಂದಣಿಸಿ ಬೇಡರು ಬಂದರಾಯೆಡೆಗೆ (ಬಸಪು. ೫೮-೪೮). [ ತಮಂಧ + ಪಟ್ಟ ]

**ತಮಂಧವೃಂದ** (ನಾ). ಕಗ್ಗತ್ತಲೆಯ ಮೊತ್ತ, ಹರಹು: ಇದು ಪರ್ಬಿರ್ದ ತಮಂಧವೃಂದಮಿದು ಕಾಳಿಂದೀ ಪ್ರವಾಹಾಂಬುವಿಂತಿದು . . . ತಾನೆಂಬಂತೆ ಮೆಯ್ಯುಗ್ಗಿಪಿನೊಪ್ಪದಿನಂದೆಳ್ತರುತಿರ್ದುದುಗ್ರ ಶಬರಾನೀಕಂ (ತ್ರಿ ಪು ವಿ. ೨೭-೪೩). [ ತಮಂಧ + ವೃಂದ ]

**ತಮಂಧಾಕಾರ** (ನಾ). ಶೂನ್ಯ (?) : ಭ್ರೂಮಧ್ಯಸ್ಥಾನದಲ್ಲಿ ಆಜ್ಞಾಚಕ್ರ ಮನವೆಂಬ ಮಹಾಭೂತ ತಮಂಧಾ[ಪಾಠಾಂ. ದಾ]ಕಾರ ದ್ವಿದಳ ಪದ್ಮ ಅಲ್ಲಿಹ ಅಕ್ಷರವೆರಡು (ಅವಚಂ. ೪೪-೧೮೪). [ ? ]

**ತಮಃಪಟ** (ನಾ). = ತಮಂಧಪಟ: ಬೆಸಗೊಳೆ ದಶನದ್ಯುತಿ ದೆಸೆದೆಸೆಯ ತಮಃಪಟಮನುಗಿಪಟಂಗೊಳೆ ದೇವಂ ಬೆಸಸಿದನಾ ಕನ್ನೆಗೆ (ಶಾಂತಿಪು. ೪-೬೫); ಘನಮೋಹತಮಃಪಟಾವೃತಂ ಜಗಮಿದಱೊಳ್ ಮುನಿಭಾನು ಭವದ್ವಾಕ್ಪ್ರಭೆಯನಿಶಂ ಬೆಳಗದೊಡೆ ಸತ್ಪ್ರವರ್ತನಮುಂಟೇ (ಚಂದ್ರಪು. ೯-೩೦); [ ಸಂ. (ತಮಸ್ + ಪಟ) ]

**ತಮಃಪಟಲ, ತಮಃಪಟಳ** (ನಾ). ಕತ್ತಲೆಯ ಮೊತ್ತ; ಅತಿಶಯವಾದ ಅಂಧಕಾರ: ಮಡದಿಯರ ಮುಡಿಮುಡಿಗಳೊಡನೊಡನೊರಸಲೊಡನೊಗೆದು ನೆಗೆವ ಪುಡಿಗತ್ತುರಿಯ ಪರಾಗಪಟಲಂ ಪರೆದು ಪರಿಕಲಿಸಿ ಹಸನರುಚಿ ಚಂದ್ರಿಕೆಗಗಿದು ನೆಗೆವ ತಮಃಪಟಲದಂತೆ ಪರಿರಂಜಿಸೆಯುಂ (ರಾಜಶೇ. ೭-೧೭ ವ). ತಮಃಪಟಳ: ಬಲವರುತಿರ್ಪ ಭಾನುಗೆ ತಮಃಪಟಳಂ ಸುಗಿದಭ್ರಮೇಖಳಾವಳಯಮನಾಸೆವಟ್ಟು ನೆಲಸಿರ್ದುದೊ ಪೇಟಿನೆ ಮಂದರಾಗ್ರದೊಳ್ ನೆಲಸಿದ ನೀಲಚೂಳಿಕೆ (ಮಲ್ಲಿಪು. ೧೨-೯೦). [ ಸಂ. (ತಮಸ್ + ಪಟಲ) ]

**ತಮಃಪಟಳ** 'ತಮಃಪಟಲ' ನೋ.

**ತಮಃಪ್ರಭೆ** (ನಾ). ಒಂದು ನರಕದ ಹೆಸರು; ಕತ್ತಲೆ ತುಂಬಿರುವ ನರಕ: ಪದಿನಾಱು ಸಾಸಿರಯೋಜನ ಬಾಹುಲ್ಯದಿಂ ತಮಃಪ್ರಭೆಯೆಂಬಾಱನೆಯ ನರಕಂ (ಸುಕುಮಾ. ೧೧-೪೧ ವ). [ ಸಂ. ತಮಃಪ್ರಭಾ (ತಮಸ್ + ಪ್ರಭಾ) ]

**ತಮಃಸಂಗತಿ** (ನಾ). ೧. ಕತ್ತಲೆಯ ಒಡನಾಟ,-ಸಹವಾಸ. ೨. ತಮೋಗುಣದ ಸಂಪರ್ಕ. ೧, ೨: ತಮಃಸಂಗತಿ ರಾತ್ರಿಗಾಱಿಡಿ ಸುಗಂಧೋತ್ಪಲ್ಲಪುಷ್ಪಕ್ಕುಪಾತ್ತ ತಪೋಹೀನತೆ ಚೈತ್ರದೇಱ್ಗೆ ಮಹದ್ವಂದಿಗ್ರಹಂ ತ್ಯಾಗಿಗವ್ರತಯೋಗಂ ಜಳಪಕ್ಷಿಗಲ್ಲದೆ ಜನಕ್ಕಿಲ್ಲಿಲ್ಲಿ ಬೇಱಿಲ್ಲಿಯುಂ (ಪುಷ್ಪಪು. ೨-೨೯). [ ಸಂ. (ತಮಸ್ + ಸಂಗತಿ) ]

**ತಮಕ** (ನಾ). ಶ್ವಾಸರೋಗದಲ್ಲಿ ಒಂದು ಬಗೆ: ಈ ಶ್ವಾಸರೋಗವು ಕ್ಷುದ್ರಕವೆಂದೂ, ತಮಕವೆಂದೂ, ಛಿನ್ನವೆಂದೂ, ಮಹಾನೆಂದೂ, ಊರ್ಧ್ವವೆಂದೂ ಐದು ವಿಧವಾಗಿರ್ಪುದು. . .ವಾಯುವು ಊರ್ಧ್ವಮುಖವಾಗಿ ಶ್ಲೇಷ್ಮವನ್ನು ಪ್ರತಿಲೋಮವಾಗಿ ಶಿರಸ್ಸಿಗೈದಿಸಿ ತಮಕವೆಂಬ ಶ್ವಾಸವನ್ನುಂಟುಮಾಡುವುದು (ಸಕವೈ. ೨೨೮). [ ಸಂ. ]

**ತಮಕು** (ನಾ). ಡಂಗುರ ಸಾರುವ ಒಂದು ಚರ್ಮವಾದ್ಯ; ತಮಟೆ: ಎನಗೊಂದೇ ತೋಣೆ ಬೆಂಗಳೂರು ಬಱಿಕಂ ಬೇಱೊಂದು ನಾಡೆಂದಿಗುಂ ಮನಗಾಣಲ್ಕೆಣೆಯಾಗದೆಂದು ತಮಕಂ ಪೊಯ್ಸುತ್ತೆ ತುಂಕೂರು ತಾಂ ಜನರಿಂದಂ ಪೆಸರಾಂತೆ (ಮೈಸೂಮ. ೩-೧೨). 'ಟುಮುಕು' ಪರಾ. [ ←ಹಿಂ. ಮರಾ. ಟಮಕೀ./ತಮಿ. ತಮುಕ್ಕು ]

**ತಮಟೆ** 'ತಂಬಟ' ನೋ.

**ತಮಟೆಬಳ್ಳಿ** (ನಾ). ಒಂದು ಬಗೆಯ ಬಳ್ಳಿ: ತಮಟೇಬಳ್ಳಿ, ಶಂಬೆ (ಮೈಜಿಗಿ. ೧೬-೨೯೭). [ ತಮಟೆ + ಬಳ್ಳಿ ]

**ತಮಡಿ** 'ತಮ್ಮಡಿ' ನೋ.

**ತಮಣಿ** 'ತಮ್ಮಣಿ' ನೋ.

**ತಮತ** (ಗು). ೧. ಇಚ್ಛಿಸುವ; ಹಂಬಲಿಸುವ. ೨. ಬಯಸಲ್ಪಟ್ಟ; ಅಪೇಕ್ಷಿಸಲ್ಪಟ್ಟ. [ ಸಂ. ]

**ತಮತು** 'ತನತ್ತು' ಪರಾ.

**ತಮತ್ತು** 'ತನತ್ತು' ಪರಾ.

**ತಮನ** (ನಾ). ಉಸಿರುಕಟ್ಟುವಿಕೆ. [ ಸಂ. ]

**ತಮನಿಭ** (ನಾ). ಕತ್ತಲೆಯಂತೆ ಇರುವುದು: ಮಲಯದ ಅನಿಲನು ತಾನಹನನಲನು ಮಣಿಭವನವು ತಮನಿಭವು ಕನ್ನಡಿಸುವ ನವಕವಿಯುವ ನಾವನು ವಿರಹಿಣಿಯರ ಬವಣೆಯನು (ಇಂಚಾಪ. ೨೦೦-೮೭). [ ಸಂ. (ತಮ + ನಿಭ) ]

**ತಮಪ್ರಭೆ** (ನಾ). = ತಮಃಪ್ರಭೆ: ಅಲ್ಲಿಂ ಕೆಳಗೇಕರಜ್ಜು ಪ್ರಮಾಣಾಂತರದೊಳಮಘವಿಯೆಂಬ ಪೆಸರ ತಮಪ್ರಭೆಯೆಂಬಾಱನೆಯ ನರಕವಿರ್ದುದು (ಆಜಿಪು. ೧೧-೬ ವ); ಅಧೋಲೋಕದಲ್ಲಿ (೧) ರತ್ನಪ್ರಭೆ, . . . (೬) ತಮಪ್ರಭೆ, (೭) ಮಹಾತಮಪ್ರಭೆ ಎಂದು ಏಳು ನರಕಗಳು ಇರುತ್ತವೆ (ಜೈನಪ. ೪೪೭). [ <ಸಂ. ತಮಃಪ್ರಭಾ ]

**ತಮರ್,** ತವರ್, ತವರು₁, ತವುರು, ತೌರು (ನಾ). ೧. ತನ್ನವರು; ಬಾಂಧವರು; ಸ್ವಕೀಯರು: (ಸ). ೨. ಜನ್ಮಸ್ಥಳ; ಹುಟ್ಟೂರು. 'ತಮರೂರ್' ಪರಾ. **ತವರ್:** ೧. ಜನಪಿತೃಗಳ್ ಜನತನಯಂ ಜಿನೇಂದ್ರ ತವರೆಲ್ಲವೊಡನೆ ತಳರಲೊಡಂ ಬಿಮ್ಮನೆಯಾಗಿ ಮದುವೆ ಗಳುಪಿದ ಮನೆಯಂದದಿನಿರ್ದುದಂದಯೋಧ್ಯಾನಗರಂ (ಅಜಿಪು. ೬-೯೦); ತಾಯೇ ತವರೇ ತ್ರಿಭುವನದಾಯುವೆ ಜಗದುಸಿರೆ ಜಗದ ಕಣ್ಣೆ ಜಗನ್ನಿ ರ್ಮಾಯನಿಧಿಯೇ ಸುಧಿಯೇ ಕಾಯೆನ್ನಂ ಕರುಣದಿಂದೆ ಸಲಹೆನು ತಿರ್ದಂ (ಗಿರಿಕ. ೪ ೪೮). ೩. ನೆಲೆ; ವಾಸಸ್ಥಾನ; ಆಶ್ರಯಸ್ಥಾನ: ಅಱಿವಿನ ತವರೆನೆ ಧರ್ಮದ ದಗುಂತಿಯೆನೆ ನೆಗಟ್ದಳ್ ಭೂಭುವನಕ್ಕೆ ಸಾವಿಯಬ್ಬೆಗವಮವನಿಜೆಗಂ ದೊರೆಯೆನಲ್ಕೆ ಪೆಣ್ದಿರುವೊಳರೇ (ಎಕ. II, ೦೪೯-೬ ; ಸು. 950); ಇದು ಪೆಂಪಿಂಗೆ ತವರ್ಸುಖಕ್ಕೆ ಕಣಿ ಸೌಖ್ಯಕ್ಕಾಗರಂ (ಸುಕುಮಾ. ೧-೬೯); ದಯಾನದಿಗುತ್ಪತ್ತಿಯ ಬೆಟ್ಟು ತತ್ವದ ತವರ್ . . . ಎನೆ ಜನಂ ಭೂಭಾಗದೊಳ್ಪೆಂಪುವೆತ್ತುದು (ಸೌಇಇ. XI-1, ೦೦೦-೦೮; 1071); ಠಕ್ಕಿನ ಪಟಕ್ಕೆ ಕಾಳಿಯ ತವರ್ ಕವಡಿಂಗೆಡೆ ಸೊರ್ಕಿನಿರ್ಕೆ (ಚಿಕವಿ. ೬-೭೪). ೪. ಹುಟ್ಟಿದ ಮನೆ; ತಾಯಿ-ತಂದೆಗಳ ಮನೆ: ತಾಯ್ತಂದೆ ಬಂಧು ಬಳಗವೆ ಕುಲವೆ ಬಲವೆ ಛಲವೆ ತವರೆ ಕಣ್ಣೆ ಗತಿಯೆ ಮತಿಯೆ . . . ಕಾವುದು ಕಾವು[ದೆ]ಂಬೆ (ಬಸರ. ೨-೫೪). **ತವರು₁:** ೧. ತಂದೇ ತವರೇ ಹೊಣೆಯೇ ತೊಣೆಯೇ (ಉದ್ಭದೇ. ೩-೨೮). ೨. ಈತನ ತವರು ಹಂಪಿಯ ಬಳಿಯ ನಿಂಬಾಪುರ (ಭಾರದ. ೨೮೭). ೩. ದಯದ ಸಿರಿಯುಂ ದಯದ ತವರುಂ ದಯ ದೊಱತೆಯುಂ . . . ಎಂದೆನಿಪ (ಸಾನಂಚ. ೮-೬೭); ರಸಪೂರ ಭಾವದ ತವರೆನಿಸಿ ತ್ರಿಜಗದ ಸಭೆಯು ಬೆಱಗಾಗೆ ನರ್ತಿಸಿದ (ಸಾಳ್ವಭಾ. ೩೩-೯೯); ಭಾರತ ಖಂಡದವನಿಯೊಪ್ಪುತಿಹುದು ಸಕಲ ಸುಖಭೋಗ ಮೋಕ್ಷಕ್ಕೆ ತಾಂ ತವರೆನಿಸುತ (ಗುರುಚಾ. ೧-೦೪); ಆಸೆಯ ರಂಗವೊ, ಈ ಭುವನವು ಆಶಯಗಳ ಹಿರಿ ತವರೊ (ವಿಸೀಗೀ. ೮-೨); ಎಲ್ಲ ವಿದ್ಯೆಯ ತವರು ಆಕೆ (ಸವಚಿಜೀ. ೨೦೯). ೪. ತವರು ಪೊಕ್ಕಿಲು ಮಾಗಿ ಮದ್ಗೃಹಮಿವಳ್ಗೀ ಸಂತಸಕ್ಕಿಲ್ಲ (ಅರ್ಧನೇ. ೭-೦೯); ಆ ಸತಿ ತನ್ನ ತವರಿನಲಿ ಇರಲು ಬಹುದಿನ ಸವೆಯೆ (ಕುವ್ಯಾಆ. ೬೮೩. ೨೫-೪೫); ಮಾವನ ಮಗಳು ಮುನಿದು ತವರಿಗೆ ಹೋಗ್ಯಾಳೊ (ಗಾಳಗು. ೦೭); ಹೊಸ ಹೆಂಡತಿಯನ್ನು ಮೊದಲ ಬಾರಿ ತವರಿಗೆ ಕಳುಹಿಸಿದ ಗಂಡನಂತೆ . . . ತಪಸ್ಸು ಮಾಡಿದ (ಹುಚ್ಚುಹು. ೧೭). 'ತವರುಮನೆ' ಪರಾ. **ತವುರು:** ೩. ಹಿಂದೂ ಸಂಸ್ಕೃತಿಯ ತವುರಾಗಿದ್ದ ವಿಜಯನಗರದ ಕಾಲದಲ್ಲಿ ನಾಟ್ಯಕಲೆಯು . . . ಮಾನ್ಯವಾಗಿತ್ತು (ಭಾರದ. ೫೫೦). ೪. ವರಕುಮಾರರು ನಮಗೆ ಜನಿಸಿದ ಹರುಷವಾರ್ತೆಯ ನಮ್ಮ ತವು[ಪಾಠಾಂ. ಶೌ]ರಿಗೆ ನಿರುತದಲಿ ಹೇಳೆನಲು (ಸಂಭಪು. ೧೫-೯೩): ಅಟ್ಟಕೆ ಏಣ್ಯಾಸೆ ಬೆಟ್ಟಕೆ ಬಿದಿರಾಸೆ ಹೆಣ್ಣುಮಕ್ಕಳಿಗೆ ತವುರಾಸೆ (ನಾಪದ. ೬೮). **ತೌರು:** ೧. ಅತ್ತಿಗೆ ತೌರಲ್ಲ ಹಿತ್ತಾಳೆ ನಗವಲ್ಲ (ಇಂಜಾಪ. ೦೬೦-೯೩); ಹೋಗೋಳು ಹೋಗ್ರೀಯ ಹೊನ್ನೋಲೆ ಅತಿಗವ್ವ ತೌರೊಳ್ಳೇದೆಂದು ಇರಬೇಡ (ನಾಪದ. ೭೦). ೩. ಭಾಗೀರಥೀಪಿತನ ಗತಿಗೆ ತೌರಿದೆಯೆನುತ . . . ನೋಡುತ್ತ ಬೆರಗಿನಿಂ ಕುಳ್ಳಿರ್ದನು (ವಂಕಾರಾ. ೫-೨-೩). ೪. ಹೆಣ್ಣುಮಕ್ಕಳನ್ನು ತೌರಿಗೆ ಕರೆದುಕೊಂಡು ಬಂದು (ಮಗಮಾಂ. ೧); ಹೆಂಡತಿಯನ್ನು ಒಮ್ಮೆ ತೌರಿಗೆ ಕಳಿಸಿದವರು . . . ಹಿಂದೆ ಕರೆದುಕೊಂಡು ಬರಲೇ ಇಲ್ಲ (ರಕ್ತರೂ. ೫೩).

**ತವರುಮಾಡಿಸು** = ತವರುಮನೆಯ ಉಪಚಾರವನ್ನು ಮಾಡಿಸು: ಅವರವರ ಪತಿಕುಲದಿಂದ ಒಟ್ಟಿಗೆ ಕರತಂದು ಅವರಿಗೆ ತವರುಮಾಡಿಸುವಲ್ಲಿ ಆತನ ಮನಸ್ಸು ಸುಖಾಸುಖಗಳ ನಡುವೆ ಆಂದೋಲಿಸುವಂತೆ (ಕನ್ನಇ. ೩).

[ದೇ.॥ ತಮಿ. ಮಲ. ತಮರ್; ತೆಲು. ತಮರು]

**ತಮರೂರ್,** ತವರೊರು, ತೌರೂರು (ನಾ). ೧. (ಹೆಣ್ಣಿನ) ಹುಟ್ಟಿದ ಊರು; ಜನ್ಮಸ್ಥಳ: ತಮರೂರ್ಗೆವೋಪ ಕುಲಜಾಂಗನೆಯರ್ ಕಮಲೋದರಂಗೆ ಪಡೆದರ್ ಮುದಮಂ (ಕಾವ್ಯಾವ. ೬೨). **ತವರೂರು:** ೧. ಸುಲೋಚನೆಯಾವುದ್ದಾಮ ನದಿಯ ಹೆಮ್ಮಡುವಂ ಹೊಕ್ಕಳ್ ತಾವರೆಸನಿವಾಸಿನಿ ತವರೂರಂ ತವಕದಿ ಹುಗುವಂತೆ (ಜಯುಕಾ. ೯-೨೯); ಶ್ರೀಕಾಂತಂಗೆ ತವರೂರೆನಿಸಿ ಸಂತಸವಡೆದುದಾ ಸೌರಾಷ್ಟ್ರ ಸಕಲದಿಗಂತಕ್ಕೆ ಸತ್ಕೀರ್ತಿವಡೆದು (ಮೋಹತ. ೨-೦೫); ತವರೂರ ಮಾಱೆಯಿಸಿ ನಿದ್ರೆಯ ತೊಱೆಯಿಸಿ ಸವಿಗಳನಱೆಯಿಸು (ಭರತ. ೬-೩೯); ಅವನ ತವರೂರಿನವ ರಾದರೊ ಅವನನ್ನು ಒಪ್ಪದೆ ಒಲ್ಲದೆ ಹೀಗಳೆದರು (ಗೊಲ್ಲೊಥಾ. V. ಮುನ್ನುಡಿ): ತವರೂರ ದಾರೀಲಿ ಕಲ್ಲಿಲ್ಲ ಮುಳ್ಳಿಲ್ಲ (ಹಳ್ಳಿಯ. ೯೧). ೨. ಆಶ್ರಯಸ್ಥಾನ; ನೆಲೆ: ಕಾಮ ಕ್ರೋಧ ದ್ವೇಷ ಮೋಹಗಳ ತವರೂರು ರಾಜಕೀಯವೆಂಬುದನ್ನು ಅವಳು ಚೆನ್ನಾಗಿ ಅರಿತಿದ್ದಳು (ಶ್ರೀರಾಯ. ೨೭೪). **ತೌರೂರು:** ೧. ಹೆಣ್ಣಿಗೆ ತೌರೂರು ರಸಬಾಳೆಹಣ್ಣಂತೆ (ಜಗೀತ. ೩೦); ತೊಟ್ಟಿಲ ಹೊತ್ಕೊಂಡು ತವರುಬಣ್ಣ ಉಟ್ಕೊಂಡು ಅಪ್ಪ ಕೊಟ್ಟೆಮ್ಮಿ ಹೊಡಕೊಂಡು ತೌರೂರ ತಿಟ್ಟತ್ತಿ ನಿಂದು ನೋಡ್ಯಾಳೋ (ಗರತಿ. ೫೭). ೨. ಇಂದಿನ ಕಳಸಾಪುರವೆಂದರೆ . . . ಕೃತ್ರಿಮ ಮೋಸಗಳ ತೌರೂರು (ಕಳಹು. ೦೦೩). [ತಮರ್+ಊರ್]

**ತಮರ್ಮನೆ,** ತವರುಮನೆ, ತವರ್ಮನೆ, ತೌರುಮನೆ, ತೌರ್ಮನೆ (ನಾ). ೧. (ಹೆಣ್ಣಿನ) ಹುಟ್ಟಿದ ಮನೆ; ತಂದೆತಾಯಿಯರ ಮನೆ: ಗಱಪುವೆಳಗಿಳಿಯ ಬಳಗಕ್ಕೆ ತಮ[ಪಾಠಾಂ. ವ]ರ್ಮನೆಯಾದಿಮ್ಮಾವಿನ ಪೊದಱೊಳಂ (ಕಬ್ಬಿಕಾ. ೩೦). **ತವರುಮನೆ:** ೧. ನಿನ್ನ ದೆಸೆಯಿಂ ಮಿಗೆ ತವರುಮನೆಗಾಯ್ತು ಕಡುದುಃಖಗಳು (ಸಾಳ್ವಭಾ. ೩೦-೩೭); ತನ್ನ ತವರುಮನೆಗೆಲ್ಲ ತಾನೊಡತಿಯೆಂಬುನ್ನತಿವಡೆವುದಱಿಂದ ತನ್ನಿನಿಯನಿ ಗೂಳಿಗದವಳಪ್ಪುದು ಸಂಪನ್ನತೆಯೆಂದು ಬಗೆವುದು (ಹದಿಬ. ೩-೩೫); ತವರು ಮನೆಯಲ್ಲಿ ಹೆಂಡತಿಯನ್ನು ಬಿಟ್ಟು ಬಂದು ನಾರಾಯಣ ಎಲ್ಲಿಗೋ ಓಡಿಹೋದನು (ಕ್ಯಾಗಮ. ೨೦೯); ತಾಯಿ ಇದ್ದರೆ ತವರುಮನೆ, ನೀರಿದ್ದರೆ ಕೆರೆ ಭಾವಿ (ಗಾದ). ೨. ನೆಲೆ; ಆಕರ; ಆಶ್ರಯ: ಸವಿನುಡಿಯ ದುರ್ವ್ಯಸನಿ ತೊಂಡಿನ ತವರುಮನೆ ಬಾಹಿರರಿಗಾಶ್ರಯಭವನ (ಕುವ್ಯಾಸ. ೧೦-೧೨); ನೀಲಗಿರಿ ಹಲವು ದ್ರಾವಿಡಭಾಷೆ ಉಪಭಾಷೆಗಳ ತವರುಮನೆ ಯಾಗಿದೆ (ದ್ರಾವಿವಿ. ೪೦೧). **ತವರ್ಮನೆ:** ೧. ಮದಾಳಿಯುಂ ನಂದನವನದಿಂ ಸರೋಜವನದಿಂದಮಗಲ್ದ ಮದಾಳಿಯಂತೆ ಮಱುಗಿ ತನ್ನ ತವರ್ಮನೆ ಯಲ್ಲಿರ್ಪುದುಂ (ಸುಕುಮಾ. ೬-೩೨ ವ); ತವರ್ಮನೆಯವರಂ ಕಂಡೊಡೆ ರಾಗಿಸಿ ಕರೆದೊಡನುಂಡುಂ ಬೇಡಿದುದನೀವರಱಗುಲಿವೆಂಡಿರ್ (ಸಮುಪು. ೫-೯೭); ಎನ್ನ ತವರ್ಮನೆ ಗೆಂಟಾದುದಕ್ಕುಬ್ಬೆಗಂಬಟ್ಟಿರ್ದಂ (ಬಂಹರಿ. ೯-೬೦ ವ); ಲಕ್ಷ್ಮಿಯ ತವರ್ಮನೆ ತಿಂಗಳ ಪೆತ್ತ ತಂದೆ . . . ವಲಂ ಮಹಾರ್ಣವಂ (ಕಾವ್ಯಸಾ. ೬೯). ೨. ಪಂಡಿತಮಂಡಳಿಗಂ ಕವಿಮಂಡಳಿಗಂ ತನ್ನ ಮನೆ ತವರ್ಮನೆ (ಅಜಿಪು. ೦-೨೮); ಸಕಲಗುಣಾಢ್ಯೆ ಸತ್ಕದ ತವರ್ಮನೆ . . . ನಿರ್ಮಳ ಸಚ್ಚರಿತ್ರೆ (ಧರ್ಮಾಮೃ. ೮-೧೫೭); ಸುರತರು ಸುಗಂಧದ ತವರ್ಮನೆಯಿದೆಂದೆನಿಪ ಪೂದೋಟವಂ ದೂರದಿಂ ಕಂಡು ಸೊಂಪೇಱ (ಪುಷ್ಪರ.ಹ. ೫೨೨-೨೨); ಕಡು ಚಲುವಿನ ತವರ್ಮನೆ ಇದು (ಸಾಳ್ವಭಾ. ೩೦-೩೦); ಅವನಾಶ್ರಮವು ವಿದ್ಯೆಯ ತವರ್ಮನೆಯಾಗಿತ್ತು (ಮಹಸ. ೬೦). **ತೌರುಮನೆ:** ೧. ತೌರುಮನೆಗೆಯ್ದಿರ್ದು ಬಹುದಿನ ನಾರಿ ರನ್ನೆ ಸುಭದ್ರೆ (ಜಿನಭಾ. ೩೨-೪೭); ಎಂಥ ಮೋಹದ ಮಗಳಾದರೂ ತೌರುಮನೆಯನ್ನು ಒಂದು ದಿನ ಬಿಡಲೇಬೇಕು (ಕಾವ್ಯಸ. ೪೭); ಸಕಲ ಸೌಭಾಗ್ಯಕ್ಕೂ ತೌರುಮನೆಯಾದ ಲಕ್ಷ್ಮಿಯು ತಾನು ಉದ್ಧಾರವಾಗ ಬೇಕೆಂದು ನಿನ್ನ ಕೈ ಹಿಡಿದು ನಿನ್ನ ಮನೆಯಲ್ಲಿ ನೆಲೆಯಾಗಿದ್ದಾಳೆ (ನೀತಿಚಂ.

VIII, ೨೯). **ತೌರ್ಮನೆ:** ೧. ಅವರ್ಗೆ ತಾಯ್ಮನೆ ಅವರ್ಗೆ ತೌರ್ಮನೆ [ಪಾಠಾಂ. ತವರ್ಮನೆ]ಯುವರ್ಗೆ ಹೊಕ್ಕಿಲಮನೆಯುಂ ಮೇಳಂಗವಿಯ ಬೆಳಗುವನೆಯ್ದೆ ರಕ್ಷಿಪ್ಪರಮನೆಯುಂ ತಾನೆ (ಸಾನಂಜ. ೯–೧೨). ೨. ಮನಸಿಜ ನಂಕದ ಕಣವಿಂಪಿನ . . . ಚದುರ ತೌರ್ಮನೆಯೆನಿಸಿ ವಿರಾಜಿಕುಂ ಸುವೇಶ್ಯಾವಾಟಂ (ಉದ್ಭಟ. ೧–೭೯) ; ಅಂತಃಪುರವು ಲಕ್ಷ್ಮಿಗೆ ತೌರ್ಮನೆ ಯಾಗಿಯಿರುತ್ತಿರಲು (ಸೌಗಂಧಿ. ೩೦–೧೧).

[ ತವರ್ + ಮನೆ ]

**ತಮವಿಡಿ** (ಕ್ರಿ). ೧. ಕತ್ತಲೆ ಕವಿ; ಅಂಧಕಾರ ಆವರಿಸು: (+). ೨. ಮಂಕು ಕವಿ ; ಅಜ್ಞಾನ ಆವರಿಸು : ಕುಮತಿಗಳು ನಾಯ್ಮಾಲನುಂಡರೊ ತಮವಿಡಿದು ಮರುಳ್ಗೊಂಡರೊ (ಬಸವು. ೫೪–೩೦). [ ತವು + ಪಿಡಿ$_1$ ]

**ತಮಸಾನದಿ** (ನಾ). ಒಂದು ನದಿಯ ಹೆಸರು : ಪುಣ್ಯಾಶ್ರಮಮೊಂದು ತಮಸಾನದಿಯ ತೀರದೊಳ್ ಪೆಸರ್ವಡೆದಿರ್ಪುದು (ಅದ್ಭುತ. ೧–೬) ; ಅಯೋಧ್ಯೆಗೆ ಅನತಿದೂರದಲ್ಲಿ ಹರಿಯುವ ತಮಸಾನದಿಯ ತೀರದಲ್ಲೇ ಅವನ ಪುಣ್ಯಾಶ್ರಮವು . . . ಇದ್ದಿರಬೇಕು (ಭಾರದ. ೮೬)

[ ಸಂ. ತಮಸಾನದೀ (ತಮಸಾ + ನದೀ) ]

**ತಮಸಿ** (ನಾ). ಒಂದು ನರಕದ ಹೆಸರು : ಪಂಕಪ್ರಭೆಯೊಳ್ ಆರಾ ಮಾರಾ ತಾರಾ ಚರ್ಚಾ ತಮಸೀ ಘಾಡಾ . . . ಪ್ರಕೀರ್ಣಕವಿಕಲ್ಪದಿಂ ದಶಲಕ್ಷಬಿಲಂಗಳಪ್ಪುವು (ತತ್ತ್ವಪ್ರ. ೧೨೦). [ ? ]

**ತಮಸೀಲು** (ನಾ). = ತಪಶೀಲು : ಟೀಪುಸುಲ್ತಾನರ ಶೀಮೆ ಸರಹದ್ದು ತಮ್ಮಶೀಮೆ ಸರಹದ್ದು ಸಹ ನೋಡಿ ತಮಸೀಲಲ್ಲು ಬರಕೊಂಬ ಬಗ್ಗೆ ಈ ಇಂಜನೇರುಸಾಹೇಬರು ಮಹಾಬುದ್ಧಿಶಾಲಿಯರಾಗಿ ಇದ್ದಾರೆ (ರಾಜೇಂದ್ರ. ೫೦). [ P ಇದು ತಪಶೀಲು ಎಂಬುದರ ಅಪಲಿಖಿತ ]

**ತಮಸೂಕು** (ನಾ). ಕರಾರುಪತ್ರ; ಲಿಖಿತ ದಾಖಲೆ : (+).

[ ←ಅರ. ಹಿಂ. ತಮಸ್ಸುಕ್; ಮರಾ. ತಮಸೂಕ್, ತಮಾಸೂಕ್ ]

**ತಮಸ್ತಮ** (ನಾ). ಗಾಢವಾದ ಕತ್ತಲೆ ; ಘೋರಾಂಧಕಾರ : ಚಂಡ ವಿರೋಧಿಸಾಧನ ತಮಸ್ತಮ[ಪಾಠಾಂ. ಶ್ಚಯ]ಮೋಡೆ ವಿಶಿಷ್ಟಪದ್ಮಿನೀ ಷಂಡಮರಲ್ದು ರಾಗದಿನೊಱಲ್ದಿರೆ . . . ಮಿಕ್ಕ ಸೆವ ಪ್ರಚಂಡ ಮಾರ್ತಾಂಡನಲರ್ಚುಗೆನ್ನ ಹೃದಯಾಂಬುಜಮಂ ನಿಜವಾಙ್ಮರೀಚಿಯಿಂ (ಪಂಪಭಾ. ೧–೩) ; ಆ ಚರಿಕೆ ಗೃಧ್ರಪಿಂಛಮಹಾಚಾರ್ಯಾಂಘ್ರಿನಖಭಾನು ರುಚಿಯರ್ಹದ್ಬಲ್ಯಾಚಾರ್ಯ ಪದನಖರ ಶಶಿರೋಚಿ ಮದೀನಸ್ತಮಸ್ತ ಮೋನಿರಸನಮಂ (ಚಂದ್ರಪು. ೧–೧೮).

[ ಸಂ. (ತಮಸ್ + ತಮಸ್) ]

**ತಮಸ್ತೋಮ** (ನಾ). ಕತ್ತಲೆಯ ಮೊತ್ತ,–ಹೆರಹು : ತಮಸ್ತೋಮ ಚೈತ್ರಪ್ರದೀಪಂಗಳ್ . . . ಮಹದಮೃತನಿಧಿಸ್ಫೂರ್ತಿಗಳ್ ಪುಷ್ಪದಂತ ಶ್ರೀಪಾದಂಗಳ್ (ಪುಷ್ಪಪು. ೧–೧). [ ಸಂ. (ತಮಸ್ + ಸ್ತೋಮ) ]

**ತಮಸ್ವಿನಿ** (ನಾ). ಇರುಳು ; ರಾತ್ರಿ : “ತಮಿ, ತಮಿಸ್ರಾ, (ಕಥಿತಾ), ತಮಸ್ವಿನೀ, ವಿಭಾವರೀ . . . ರಾತ್ರಿ :– ಈ ೧೯ ಇರುಳಿನ ಪೆಸರ್” (ಹಲಾಯು. ೧೮–೧೦೭); ವಾರಕಾಂತೆಯರ ಭೂಷಣಕಾಂತಿಯ ಕೆಂಬಿಸಿಲ್ಗಳಾ ವಗಮೆಸೆಯುತ್ತಿರಲ್ ವಿಷಮಬಾಣನ ತೀವ್ರ ಶರಾನಳಾರ್ಚಿಗಳ್ ತಗುಳ್ದು ವೆನಲ್ಕೆ ತೋರ್ಪುವು ತಮಸ್ವಿನಿಗಳ್ ವಿಧುವಿಪ್ರಲಂಭದಿಂ (ಕಾದಂಪೂ. ೩೦೨). [ ಸಂ. ತಮಸ್ವಿನೀ ]

**ತಮಸ್ಸಂಹೃತಿ** (ನಾ). ೧. ಕತ್ತಲೆಯನ್ನು ಹೋಗಲಾಡಿಸುವುದು. ೨. ಅಜ್ಞಾನ ನಿವಾರಣೆ. ೧, ೨ : ಜನಕನೊಳನುರೂಪತೆಯಿಂ ತನೂಭವಂ ತಾಳ್ದಿದಂ ತಮಸ್ಸಂಹೃತಿಯಿಂ ಘನತೇಜದಿನುನ್ನತಿಯಿಂ ಕನತ್ಪ್ರದೀಪೋ ಪಜಾತದೀಪಾಕೃತಿಯಿಂ (ಚಂದ್ರಪು. ೪–೯).

[ ಸಂ. (ತಮಸ್ + ಸಂಹೃತಿ) ]

**ತಮಸ್ಸು** (ನಾ). ೧. ಕತ್ತಲೆ; ಅಂಧಕಾರ. ೨. ರಾಹು. ೩. ಅವಿದ್ಯೆ ; ಅಜ್ಞಾನ : ತಮಸ್ಸು ಮಾಯೆ ಮೋಹ ಅವಿದ್ಯೆ ಅನ್ಯತಾತ್ಮಿಕೆಯೆಂಬವೇ ಮಾಯಾಪಂಚಕಂ (ವಿವೇಕ. ೨೮) ; ಜ್ಞಾನದ ಜ್ಯೋತಿ ಜಗದ ತಮಸ್ಸಿಗೆ ಹಿಡಿದಂತಿದೆ ದೀಪ (ಅರಳು. ೩೪೧–೧೧). ೪. ಗುಣತ್ರಯಗಳಲ್ಲಿ ಒಂದು; ತಮೋಗುಣ: ತಮಸ್ಸೆಂದರೆ ನಿದ್ರೆ, ಆಲಸ್ಯ, ಮೋಹ, ಮೊದಲಾದುವುಗಳಿಗೆ ಹೇತುವಾಗಿರುವ ಗುಣ (ಹಿಂದಸಾ. ೨೩೭). ೫. ಪಾಪ.

[ ಸಂ. ತಮಸ್ ]

**ತಮಸ್ಸ್ವಭಾವ** (ನಾ). ತಾಮಸ ಸ್ವಭಾವ: ಪಡೆಯುೞಿಯಲಾದೊಡ[ಿ]ಯುಂ ಕಿಡಿಸುಂಗುವುಂತಕಳಂಕ ನೃಪಮಂಡಲಮಂ ತಡೆಯದೆ ತಮಸ್ಸ್ವಭಾವಂ ಕಿಡಿಸುವವೋಲೞಿದು ರಾಹು ಶಶಿಮಂಡಲಮಂ (ಕವಿರಾ. ೩–೦೯೭).

[ ಸಂ. (ತಮಸ್ + ಸ್ವಭಾವ) ]

**ತಮಟ್** (?). (?) : ತೆಮಟ್, ಎಸಟ್, ತಮಟ್, ಪಸಟ್, ತುಟಿಲ್ (ಶಬ್ದಾನು. ೧೪೦ ವ್ಯಾಖ್ಯಾ). [ ? ]

**ತಮಾಂ, ತಮಾಮು** (ಗು). ಎಲ್ಲ ; ಸಕಲ ; ಪೂರ್ತಿ ; ಸಂಪೂರ್ಣ : ಈ ಪ್ರಕಾರವೇ . . . ತಮಾಂ ಗ್ರಾಮ ಮುನಸೂಫರುಗಳು ನಡೆದುಕೊಳ್ಳ ಬೇಕು (ಗ್ರಾಮಾಕ. ೨) ; ತಮಾಂ ದಂಡು ಉರುಳಿಹೋಯಿತು (ಕರ್ನಾಸಂ. ೨೩). **ತಮಾಮು:** ಈ ವಿಷಯದಲಿ ಕುಂಪಣೀ ತಮಾಮು ಇಂಗ್ರೇಜರು ಬರೆದು ಕಳಿಸಿರುವದೇನೆಂದರೆ (ಜಾಮವಂ ೨೨೪) ; ಲಡಾಯದ ಕೈಫಿಯತ್ತು ತಮಾಮು ಬರೆಯುವ ಬಗ್ಗೆ ನಾವು ವಕೀಲರಾಗಿ ದೊರೆಗಳ ಬಳಿಯೆ ಇದ್ದೇವು (ರಾಜೇಂದ್ರ. ೧೧೯). [ ←ಅರ. ಹಿಂ. ತಮಾಮ್ ]

**ತಮಾಮು** ‘ತಮಾಂ’ ನೋ.

**ತಮಾಲ, ತಮಾಳ** (ನಾ). ೧. ಒಂದು ಬಗೆಯ ಮರ; ಹೊಂಗೆ: ಕಱಂಗಿ ಕತ್ತಲಿಪ ತಮಾಲಪಾದಪದ ಪಲ್ಲವಮಂ (ಕಾದಂಪೂ. ೭೮೭) : ತುಱುಗಿದೆಲೆವಸೆಯೊಳೊಲೆದಾಡುವ ತಮಾಲಂಗಳಿಂ (ಹಜಕಾ. ೩–೩೩) ; ಮಧುಲಕ್ಷ್ಮಿಯ ಕೇಶಪಾಶಮೆನೆ ಮಡಲ್ತು ಕಱಂಗಿ ಕಟ್ಟಲಿಸಿದ ತಮಾಲದಿಂ (ರಾಮಾಶ್ವ. ೫೩–೧೮) ; ವಸಂತದ ಮುಂಸ್ಸೂಚನೆಯನ್ನು ಎಲ್ಲಕ್ಕೂ ಮೊದಲಿಗೆ ಹೊತ್ತು ತಂದ ತಮಾಲವನ್ನು ನೋಡಿದಾಗ (ಈಪಸೂ. ೧೫೬). ೨. ಹಣೆಯ ಮೇಲೆ ಇಟ್ಟುಕೊಳ್ಳುವ ಬೊಟ್ಟು ; ತಿಲಕ : (+). ೩. ಕತ್ತಲೆ: ಗಿರಿಜಾಲೋಲ ಭವರಜದೂರ ಪಾಪತಮಾಲಭಾಸ್ಕರ (ಶಂಕದಾ. ೪–೧). **ತಮಾಳ :** ೧. “ಕಾಳಸ್ಕಂಧಂ ತಮಾಳಮೆನೆ ತಾಪಿಚ್ಛಂ” (ವಸ್ತುಕೋ. ೩೪–೮) ; ಸರಳ ತಮಾಳ ತಾಳ ಹರಿಚಂದನ ನಂದನಭೂಜರಾಜಿಯಿಂ ಸುರಿವಲರೋಳಿ ತದ್ವನಲತಾಂಗಿಯ ಸೂಸುವ ಸೇಸೆಯಾಯ್ತು (ಪಂಪಭಾ. ೫–೫೨) ; ತಿಳಿಗೊಳದ ತಡಿಯ ತಮಾಳದ ತಣ್ಣೆೞಲ ಪದ್ಮರಾಗದ ಪಾಸಱೆ ಯ ಮೇಲೆ ನಿಂದು (ಮಲ್ಲಿಪು. ೩–೧೦೫) ; ಒಂದು ಭಯಂಕರಭಲ್ಲಮುಲ್ಲ ಸದ್ಬಾಳತಮಾಳಗುಲ್ಮದೊಳಗಿರ್ಪುದುಂ (ಪುಷ್ಪಪು. ೫–೭೨).

[ ಸಂ. ]

**ತಮಾಲಪತ್ರ, ತಮಾಳಪತ್ರ** (ನಾ). ೧. ಹೊಂಗೆಯ ಎಲೆ : “ಕಾಲಸ್ಕಂಧಃ–ಅತ್ತಿ, ತುಂಬರು, ತಮಾಲಪತ್ರ, ಪರಂಬೆ, ಪತ್ರಕ?” (ಓಷಧಿ. ೩೦). ೨. = ತಮಾಲ ೨ : “ತಿಳಕಂ ತಮಾಲಪತ್ರಂ” (ವಸ್ತುಕೋ. ೭೬–೯). ೧, ೨ : ಆ ಮಹಾವನಂ . . . ಕಾಂತಾಕದಂಬದಂತೆ ಲೋಹಿತ ಚಂದನಾಲಂಕೃತಮುಂ ತಮಾಲಪತ್ರ ಶೋಭಿತಮುಂ (ಚಂದ್ರಪು. ೫–೫೨ ವ). **ತಮಾಳಪತ್ರ :** ೧. ತಮಾಳಪತ್ರದ ತಮಾಳಪತ್ರಮುಮಂ ಹೊನ್ನೆಯ ಚಿನ್ನಪೂವುಮಂ . . . ಮನೋಹರಮೆನೆ ಸಮೆದು ತಮಗೆ ಪಸದನಂಗೊಂಡು (ಚಂದ್ರಪು. ೭–೧೧೪ ವ). ೨. “ತಿಳಕಂ, ತಮಾಳಪತ್ರಂ, ಚಿತ್ರಕಂ . . . ಲಾಲಾಟಿಕಾ–ಈ ೬ ಬೊಟ್ಟು” (ಹಲಾಯು. ೮೯–೩೮೭).

[ ತಮಾಲ + ಪತ್ರ ]

**ತಮಾಲಪತ್ರೆ** (ನಾ). ಹೊಂಗೆ ಎಲೆ: ದ್ರಾಕ್ಷಿಚೂರ್ಣ, ದ್ರಾಕ್ಷಿಹಣ್ಣು, ಕೊತ್ತುಂಬರಿ . . . ಏಲಕ್ಕಿ, ತಮಾಲಪತ್ರೆ, ನೆಲ್ಲಿಚಟ್ಟು . . . ಸಕ್ಕರೆ ಬೆರಸಿ ನಿತ್ಯವೂ ಉದಯಕಾಲದಲ್ಲಿ ಸೇವಿಸೆ ಪಿತ್ತಜ್ವರ, ಪಾಂಡು, ಕಾಮಾಲೆ ಸಹ ಮಾಣ್ಗುಂ (ಸಕವೈ. ೮೪). [ ತಮಾಲ + ಪತ್ರೆ$_1$ ]

**ತಮಾಲಮಾಲೆ** (ನಾ). ಹೊಂಗೆಯ ಮರಗಳು ಗುಂಪು: ತಮಾಲಮಾಲೆಗಳೆ ಸಂಗೀತಶಾಲೆಗಳಾಗೆಯುಂ . . . ಚಂಪಕವೀಧಿಗಳೆ ವಿನೋದ ವಿಹರಣ ವೀಥಿಗಳಾಗೆಯುಂ ಬೀಡುಬಿಡುತ್ತುಂ (ಚಂದ್ರಪು. ೬-೮೭ ವ).

[ ತಮಾಲ + ಮಾಲೆ ]

**ತಮಾಲರೇಖೆ** (ನಾ). ತಿಲಕದ ಗೆರೆ: ಪಣೆವಾಸಱೆಯೊಳಮರ್ಚೆ ರಚಿಸಿದ ತಮಾಲರೇಖೆಯು . . . ಕಣ್ಗೆವಂದ ಗಂಧಸಿಂಧುರ ಸಂದೋಹದಿಂ (ರಾಜಶೇ. ೬-೧೧ ವ). [ ತಮಾಲ + ರೇಖೆ ]

**ತಮಾಲವನ** (ನಾ). ಹೊಂಗೆಮರಂಗಳ ತೋಪು: ಮುಂದೆ ಮಂದೈಸಿದ ತಮಾಲವನದ ಕಾಳದೊಳಂ ಮುಗುಳ್ತ ಮಾಧವೀಲತೆಯ ಜೊನ್ನದೊಳಂ (ಮಲ್ಲಿಪು. ೩-೧೧೧). [ ತಮಾಲ + ವನ ]

**ತಮಾಲವೀಥಿ** (ನಾ). ತಮಾಲವೃಕ್ಷಗಳ ಸಾಲು: ಎಡೆವಿಡದಿಡಿದ ತಮಾಲವೀಥಿಯೊಳೊಗೆದ ಕತ್ತಲೆಯಿಂ (ಕಾದಂಪೂ. ೧೦೭).

[ ತಮಾಲ + ವೀಥಿ ]

**ತಮಾಲವೃಕ್ಷ** (ನಾ). = ತಮಾಲ ೧: "ತಮಾಲಃ- ವರಣ, ತಮಾಲವೃಕ್ಷ" (ಓಷಧಿ. ೬೫). [ ತಮಾಲ + ವೃಕ್ಷ ]

**ತಮಾಲಿ**, ತಮಾಳಿ (ನಾ). ವರುಣವೃಕ್ಷ; ವಲಸೆಗಿಡ. **ತಮಾಳಿ**: 'ತಮಾಳೀವನ' ಪರಾ. [ ಸಂ. ತಮಾಲೀ ]

**ತಮಾಶೆ** 'ತಮಾಷೆ' ನೋ.

**ತಮಾಷೆ**, ತಮಾಶೆ, ತಮಾಸೆ (ನಾ). ೧. ವಿನೋದದ ಪ್ರಸಂಗ; ಮೋಜಿನ ಸಂಗತಿ; ಮನೋರಂಜಕವಾದ ದೃಶ್ಯ: ಎಲ ಎಲಾ ಒಳ್ಳೇ ತಮಾಷೆ ಇವರು ಆನೆಯನ್ನು ಮುಟ್ಟಿನೋಡಿ ಏನು ಹೇಳುತ್ತಾರೋ ಕೇಳೋಣ (ಕಥಾವಂ. IV, ೨೨); ಬರುತ್ತಿರುವಾಗ ಒಂದು ತಮಾಷೆ ನಡೆಯಿತು (ಪಂಚಾಮೃ. ೧). ೨. ಮೋಜಿನ ವಸ್ತು, ವ್ಯಕ್ತಿ: ತಮಾಷೆ ಯಾಗಿದೆ ಅಂದುಕೊಂಡೇ ನಾನು ಅವನ ಬಗ್ಗೆ ತಿಳಿದುಕೊಂಡೆ (ನಡೆದಾ. II, ೧೦೨೪); ಸರಿಯಾಗಿ ಮಾತನಾಡಿದರೆ ಒಂದು ತಮಾಷೆ ಕೊಡುತ್ತೇನೆ (ಅಲಹೂ. ೦೫೭). ೩. ನಗೆ; ಹಾಸ್ಯ; ವಿನೋದ: ಜಗಲಿ ಮೇಲೆ ಎಲ್ಲರೂ ತಮಾಷೆಯಾಗಿ ಮಾತನಾಡುತ್ತಿದ್ದೆವು (ಹುಟ್ಟಿಹ. ೦೩೪); ತಮಾಷೆಗಾಗಿ ಅವಳ ಕಿವಿಹಿಂಡಿದೆ (ನಾಪೂಲೀ. ೧೮೨); ಎಲ್ಲರೂ ತಮಾಷೆಯಾಗಿಯೂ, ಸಂತೋಷವಾಗಿಯೂ ಕಾಲ ಕಳೆದೆವು (ಪ್ರಕಾಪ. ೧೧೩). ೪. ಇಂದ್ರಜಾಲದ ಪ್ರದರ್ಶನ; ಗಾರುಡಿಯ ಆಟ: (ಕ). **ತಮಾಶೆ**: ೧. ಅದೊಂದು ತಮಾಶೆಯಾಗಿತ್ತು (ನಡೆದಾ. I, ೪೪೩). ೫. ಶೃಂಗಾರದ ಅತಿರೇಕವುಳ್ಳ ಒಂದು ಬಗೆಯ ಗ್ರಾಮೀಣ ರೂಪಕ: ತಾನೂಬಾಯಿ ಸಾತಾರಕರ ಮೇಳದ 'ಗೋಕುಲಗಮನ' ತಮಾಶೆಯ ಆಟ (ದೀಪಹ. II, ೩೮೫).

**ತಮಾಸೆ**: ೧. ಬಂದರೆ ತಮಾಸೆ ನೋಡುವಿರಿಯೆಂದೂ ಹೇಳಿ (ಹೃದರ. ೬೪).

**ತಮಾಷೆಮಾಡು** = ಹಾಸ್ಯಮಾಡು: ಚೇಷ್ಟೆಮಾಡಂ: ಆ ಕುರಿತು ನನ್ನನ್ನು ಒಂದು ಬಗೆಯಿಂದ ತಮಾಷೆ ಮಾಡಿದಳು (ನಿಷ್ಕಾಮ. ೧೮): ತಮಾಷೆಮಾಡುತ್ತ ಹೇಳಿದರು (ಮರಳಿ. ೬).

[ ←ಅರ. ತಮಾಶಾ; ಹಿಂ. ಮರಾ. ತಮಾಶಾ, ತಮಾಸಾ ]

**ತಮಾಷೆಗಾರ** (ನಾ). ೧. ಆಟ, ನೋಟ, ಪ್ರದರ್ಶನ ಮುಂತಾದಂವು ಗಳಲ್ಲಿ ಆಸಕ್ತಿಯುಳ್ಳವನು: (ಕ). ೨. ತಮಾಷೆಮಾಡುವುದೇ ಜೀವನ ವೃತ್ತಿಯಾದವನು; ಹಾಸ್ಯಗಾರ; ವಿದೂಷಕ: (ಕ).

[ ತಮಾಷೆ + - ಗಾರ (< - ಕಾಱ) ]

**ತಮಾಷೆಬಂಗಲೆ** (ನಾ). (ಮನರಂಜನೆಯನ್ನುಂಟುಮಾಡುವ) ಪ್ರಾಣಿ ಸಂಗ್ರಹಾಲಯ; ಮೃಗಪಕ್ಷಿಗಳ ಪ್ರದರ್ಶನಾಲಯ: ಹುಡುಗರೆಲ್ಲ ತಮಾಷೆಬಂಗಲೆಗೆ ಹೊರಡಲು ತವಕಿಸುತ್ತಾರೆ (ಮಧ್ಯಮ. ೬೩).

[ ತಮಾಷೆ + ಬಂಗಲೆ ]

**ತಮಾಸೆ** 'ತಮಾಷೆ' ನೋ.

**ತಮಾಳ** 'ತಮಾಲ' ನೋ.

**ತಮಾಳಪತ್ರ** 'ತಮಾಲಪತ್ರ' ನೋ.

**ತಮಾಳಿ** 'ತಮಾಲಿ' ನೋ.

**ತಮಾಳಿಕಾಳಕೆ** (ನಾ). ೧. ತಮಾಲದಂತೆ ಕಪ್ಪಾದ ಕುರುಳುಳ್ಳವಳು. ೨. ತಮಾಲವೃಕ್ಷಗಳೇ ಕೂದಲಾಗುಳ್ಳವಳು. ೧, ೨: ಲಲಿತತಮಾಳಿ ಕಾಳಕೆ ಕನದ್ದ್ವಿಜಪಜ್ಙ್ತಿ ನಿಕಾಮಕೋಮಳಾಂಗಲತೆಯಶೋಕಕಾಂತ ಕಳಿಕಾಧರೆ . . . ಬರಲ್ ವನಲಕ್ಷ್ಮಿ ಪೇಟ್ಟಿವಳ್ ಕಲಪಿಕನಾದದಿಂದೆ ನಿಜಲೀಲೆಯನೀಕ್ಷಿಸಲೆಂದು ದೇವಿಯುಂ (ಚಂದ್ರಪು. ೭-೭೧).

[ ಸಂ. ತಮಾಲಿಕಾಲಕಾ (ತಮಾಲಿಕಾ + ಅಲಕ + – ) ]

**ತಮಾಳೀವನ** (ನಾ). = ತಮಾಲವನ: ಘನವಹ್ನಿಜ್ವಾಲೆ ಧೂಮಾವಳಿಯೊ ಗಗನಗಂಗಾತಟೋದ್ಯತ್ತಮಾಳೀವನಮೋ ವಿದ್ಯುನ್ನಟೀಕರ್ಬುರ ಜವನಿಕೆಯೋ . . . ಮೇಣೆನೆ ನೆಗೆದುದಳಿಶ್ಯಾಮಳಂ ಮೇಘಜಾಳಂ (ಚಂದ್ರಪು. ೪-೩೦); ನಿಗಳನ್ನೀಳ ಸ್ತನಯಿತ್ನುಕುಳತಮಾಳೀವನಪ್ರಸೂನಂ ಗಳೆನಿಸಿದುವು ಕರಕಂಗಳ್ (ಚಂದ್ರಪು. ೪-೩೭).

[ ಸಂ. ತಮಾಲೀವನ (ತಮಾಲೀ + ವನ) ]

**ತಮಿ$_1$** (ನಾ). ತಾಮಸ ಸ್ವಭಾವದವನು; ಅಜ್ಞಾನಿ: ಸಮಯಮಱಿಯದ ತಮಿಗಳಿರಾ ಒಡೆಯನನಱಿಯದ ಕಡುಮೂರ್ಖರಿರಾ (ವಾಗೀರ. ದೇ. ೨೬೫-೫). [ ಸಂ. ತಮಿನ್ ]

**ತಮಿ$_2$** (ನಾ). ಇರುಳು; ರಾತ್ರಿ: "ತಮಿ[ಮಾ]ಸತೀಯು ಶರ್ವರಿ ತಮಿಸ್ರ ನಿಶೆ . . . ಯಾಮಿನಿಯಕ್ಕುಂ" (ವಸ್ತುಕೋ. ೧೫-೫). [ ಸಂ. ]

**ತಮಿಸು** 'ತಣ್ಪಿಸು' ನೋ.

**ತಮಿಸ್ರ** (ನಾ). ಕಗ್ಗತ್ತಲೆ; ಗಾಢಾಂಧಕಾರ: "ತಿಮಿರಂ ಸಂತಮಸಂ ಧ್ವಾಂತಮಂಧಕಾರಂ ತಮಂ ತಮಿಸ್ರಮುದಕ್ಕುಂ ಸಮುದಿತ ಘನಬಹುಳ ತಮಂ ತಮಿಸ್ರಮಂತಂಧತಮಸಮಕ್ಕುಂ ಪೆಸರಿಂ" (ವಸ್ತುಕೋ. ೦೧-೬೩); ಪರೆವುದು ದುರಿತತಮಿಸ್ರಂ . . . ಯಶೋಧರ ಚರಿತ್ರಕಥಾಶ್ರವಣಮೆಂಬ ಚಂದ್ರೋದಯದೊಳ್ (ಯಶೋಚ. ೧-೪). [ ಸಂ. ]

**ತಮಿಸ್ರೆ** (ನಾ). ೧. ಗಾಢವಾದ ಕತ್ತಲೆ; ಅಂಧಕಾರ. ೨. ಇರುಳು: ರಾತ್ರಿ: "ತಮಿ[ಮಾ]ಸತೀಯು ಶರ್ವರಿ ತಮಿಸ್ರ . . . ಯಾಮಿನಿಯಕ್ಕುಂ" (ವಸ್ತುಕೋ. ೧೫-೫). [ ಸಂ. ತಮಿಸ್ರಾ ]

**ತಮಿಳ** (ನಾ). ತಮಿಳುದೇಶದವನು: ತಮಿಳರನ್ನು ಅರವರೆಂದೂ, ತಿಗಳರೆಂದೂ . . . ಕರೆದಿದ್ದಾರೆ (ದ್ರಾವಿವಿ. ೦೦೪).

[ ತಮಿಳು (<ತಮಿೞ್) + – ಅ$_7$ ]

**ತಮಿಳಿತ್ತಿ** (ನಾ). ತಮಿಳಂ ದೇಶದವಳು: ಗೊತ್ತಾಗಲಿಲ್ಲವೆ, ಅವಳು ತಮಿಳಿತ್ತಿ, ಅವಳಿಗೆ ಕನ್ನಡ ಬರೋದಿಲ್ಲವಂತ (ನಡೆದಾ. II, ೯೩೦).

[ ತಮಿಳು (<ತಮಿೞ್) + – ಇತ್ತಿ ]

**ತಮಿಳು** 'ತಮಿೞ್' ನೋ.

**ತಮಿೞ್**, ತಮಿಳು (ನಾ). ೧. ದ್ರಾವಿಡಭಾಷೆಗಳಲ್ಲಿ ಒಂದು; ಅರವಭಾಷೆ; ತಿಗಂಳರ ಭಾಷೆ: ದ್ರಮಿಳ >ದಮಿೞ್ >ತಮಿೞ್ ಆಗಿದೆಯೆಂದೂ ವಿವರಿಸುವರು (ದ್ರಾವಿವಿ. ೦೦೯); ಶಿಲಪ್ಪದಿಕಾರಮ್‌ನಲ್ಲಿ ತಮಿೞ್ ಎಂಬ ಪದ, ಬಹುಶಃ ಮೊಟ್ಟಮೊದಲ ಬಾರಿಗೆ, ಪ್ರಯೋಗ ವಾಗಿದೆ (ದ್ರಾವಿವಿ. ೦೧೦). ೨. ಅರವಭಾಷೆಯನ್ನಾಡುವವರ ದೇಶ;

ತಮಿಳುದೇಶ : ಮುತ್ತಮಿೞ್ ಪಾಟ್ಟಿನ ತಮಿೞ್‌ಮಗಳ್ ಪೆತ್ತ ನುಣ್ ತಣ್ ಬೆಳಗಿನ ಮುತ್ತಿನ ಮಣಿಯುನ್ (ಹೊಂಗಳು. ೪೪-೩).

**ತಮಿಳು :** ೧. ಸಂಸ್ಕೃತಭಾಷೆಯೊಂದನ್ನು ಬಿಟ್ಟರೆ ಭಾರತೀಯ ಭಾಷೆಗಳಲ್ಲೆಲ್ಲಾ ತಮಿಳು ಬಹಳ ಪ್ರಾಚೀನಕೃತಿಗಳನ್ನು ಪಡೆದ ಭಾಷೆ (ಪ್ರಾವಿವಿ. ೧೦೭). [ ದೇ.॥ ತಮಿ. ಮಲ. ತಮಿೞ್ ; ತುಳು. ತಮುಳ್, ತಮುಳು. /ಸಂ. ದ್ರವಿಡ, ದ್ರಮಿಲ, ದ್ರವಿಡ ]

**ತಮುತು** 'ತನತ್ತು' ಪರಾ.

**ತಮುತ್ತು** 'ತನತ್ತು' ಪರಾ.

**ತಮೋಂಧ** (ನಾ). ಕಗ್ಗತ್ತಲೆ ; ಗಾಢಾಂಧಕಾರ : ತುಱುಗಿದ ತಮೋಂಧಮೊಯ್ಯನೆ ಜಾಱಿತಳಿಕುಲದ ಸೆಱೆ ಬಿಟ್ಟುದು . . . ತಲೆದೋಱಿದಂ ತರಣಿ (ಜೈಮಿಭಾ. ೩೧-೬೩). [ ಸಂ. (ತಮಸ್ + ಅಂಧ) ]

**ತಮೋಗುಣ** (ನಾ). ಸೃಷ್ಟಿಯ ಮೂರು ಮೂಲಗುಣಗಳಲ್ಲಿ ಒಂದು; ತಮಸ್ಸು : ಸತ್ವಗುಣಾಭಿಮಾನಿ-ಶ್ರೀದೇವಿಯು, ರಜೋಗುಣಾಭಿಮಾನಿ ಭೂದೇವಿಯು, ತಮೋಗುಣಕ್ಕೆ-ಅಭಿಮಾನಿ ದುರ್ಗಾದೇವಿ (ಹಸಾರ. ೧-೨ ವಿಶೇಷಾರ್ಥ); ಪ್ರಕೃತಿ, ಪುರುಷ . . . ಸತ್ವರಜಸ್ತಮೋಗುಣಗಳ ವಿಭಾಗ- ಈ ಎಲ್ಲವನ್ನು ಕುರಿತು ಸಾಂಖ್ಯದರ್ಶನ ವಿಮರ್ಶಿಸಿದೆ (ಭಾರದ. ೧೦೩). [ ಸಂ. (ತಮಸ್ + ಗುಣ) ]

**ತಮೋಘ್ನ** (ಗು). ೧. ಕತ್ತಲೆಯನ್ನು ಹೋಗಲಾಡಿಸುವ. (ನಾ). ೨. ಅಗ್ನಿ : "ಸಪ್ತಾರ್ಚಿಃ . . . ತಮೋಘ್ನಃ, ಲೋಹಿತಾಶ್ವಃ, ಹುತಾಶನಃ- ಈ ೪೦ ಕಿಚ್ಚಿನ ಪೆಸರ್" (ಹಲಾಯು. ೧೨-೬೪). [ ಸಂ. ]

**ತಮೋಜ್ಞ** (ನಾ). ತಮೋಗುಣದಿಂದ ಉಂಟಾದ ಅಜ್ಞಾನ ; ಮಿಥ್ಯಾಜ್ಞಾನ : ನುಡಿಗೆ ಪುಸಿದಟವಟದಿಂದನ್ಯರ್ಗೆ ಕನ್ನೆಯನಿತ್ತೆಮ್ಮನೇಳಿಸಿದ ಕಾರಣದಿಂದೆ ನಿನಗೆ ತಮೋಜ್ಞಮಕ್ಕೆ (ಅದ್ಯುಕ. ೧೪-೧೫). [P 'ತಮೋಜ್ಞತೆ' ಯೆಂಬುದು ಸರಿಯಾದ ರೂಪ]

**ತಮೋಧಿ** (ನಾ). ಅಂಧಕಾರದ ರಾಶಿ : ಭವದಿಂದಂ ಭವದೊಳ್ ವ್ರತಂ ದ್ವಿವಿಧಂ . . . ಉದಾತ್ತೋದ್ವಿಕ್ರಮಾವಾಪ್ತಿ ಸಪ್ತವಿಧಂ ಪೇೞ್ವ ತಮೋಧಿಯಂ ಕಿಡಿಸಿದಂ ಸೌಜನ್ಯಕಂದಾಂಕುರಂ (ಶಾಂತಿಪು. ೧೧-೧೧೪). [ ಸಂ. ]

**ತಮೋಪಹ** (ಗು). ೧. ಕತ್ತಲೆಯನ್ನು ಕಳೆಯುವ. (ನಾ). ೨. ಅಗ್ನಿ. ೩. ಸೂರ್ಯ. ೪. ಚಂದ್ರ. [ ಸಂ. ]

**ತಮೋಬಂಧ** (ನಾ). ಅಜ್ಞಾನದ ಕಟ್ಟು,-ಬಂಧನ : ನೆಱವಂ ತಾಳ್ದಿದಪಾಸ್ತದುರ್ನಯತಮೋಬಂಧಂ ಶ್ರುತಸ್ಕಂಧಮಾದಱಿವಿಂದಂ ಗಣನಾಯಕರ್ಸಮಱೆ ಭವ್ಯಶ್ರೇಣಿಗವ್ಯಾಜದಿಂದಱಿಯಲ್ಕಾಲ್ಕನುಯೋಗಮಾದುದು (ಆದಿಪು. ೧-೩೯). [ ಸಂ. (ತಮಸ್ + ಬಂಧ) ]

**ತಮೋಮಣಿ** (ನಾ). ೧. ಒಂದು ಬಗೆಯ ರತ್ನ ; ನೀಲರತ್ನ ; ಇಂದ್ರನೀಲ. ೨. ಮಿಂಚುಹುಳು ; ಹೊನ್ನೆಹುಳು ; ಖದ್ಯೋತ. [ ಸಂ. (ತಮಸ್ + ಮಣಿ) ]

**ತಮೋಮಯ** (ಗು). ಕತ್ತಲೆ ಕವಿದ,-ತುಂಬಿದ ; ಅಂಧಕಾರ ಆವರಿಸಿದ. [ ಸಂ. ]

**ತಮೋಯೋಗ್ಯ** (ನಾ). ತಮೋಲೋಕವನ್ನು ಪಡೆಯಲು ಯೋಗ್ಯನಾದವನು : ಜೀವಾತ್ಮರಲ್ಲಿ ಉತ್ತಮಮಧ್ಯಮಾಧಮ ಭೇದದಿಂದ ಮುಕ್ತಿಯೋಗ್ಯರು, ತಮೋಯೋಗ್ಯರು, ನಿತ್ಯಸಂಸಾರಿಗಳೆಂದು ಭೇದವಿರುವುದು (ಹಿಂದಸಾ. ೨೭೪). [ ಸಂ. (ತಮಸ್ + ಯೋಗ್ಯ) ]

**ತಮೋರಿ** (ನಾ). ೧. ಕತ್ತಲೆಯ ವೈರಿ ; ಸೂರ್ಯ : ಕುರುರಾಜೋಗ್ರತಮಸ್ತಮೋರಿ ಕುರುರಾಜೇಭೇಂದ್ರಕಂಠೀರವಂ (ಗದಾಯು. ೧-೭೪). ೨. ಅಗ್ನಿ. ೩. ಚಂದ್ರ. [ ಸಂ. (ತಮಸ್ + ಅರಿ) ]

**ತಮೋಲೋಕ** (ನಾ). ಕತ್ತಲೆಯ ಲೋಕ ; ಪಾಪಿಗಳು ಹೊಂದುವ ಲೋಕ ; ನರಕ : ಎರಡನೆಯವರು ನಿತ್ಯನರಕವೆಂಬ ತಮೋಲೋಕ ಪ್ರಾಪ್ತಿಗೆ ಸಾಧನವನ್ನು ಸಂಪಾದಿಸಿಕೊಂಡು ನಿತ್ಯದುಃಖಾನುಭವಕ್ಕೆ ಸಿದ್ಧರಾಗುವರು (ಹಿಂದಸಾ. ೨೭೫). [ ಸಂ. (ತಮಸ್ + ಲೋಕ) ]

**ತಮೋವಿಕೃತಿ** (ನಾ). ೧. ಕತ್ತಲೆಯ ವಿಕಾರ. ೨. ತಮೋಗುಣದ ವಿಕಾರ. ೧, ೨ : ಆತತ ಸೈನ್ಯರಜಸ್ಸಂಜಾತ ತಮೋವಿಕೃತಿ ತೂಳ್ದಿದುದು ಸತ್ವಮುಮಂ ಖ್ಯಾತರಿಪುಭೂಮಿಪಾಲವ್ರಾತಕ್ಕಾಶ್ರಯವಿಶೇಷಮೇಂ ಕೇವಲಮೇ (ಚಂದ್ರಪು. ೧೧-೨೯). [ ಸಂ. (ತಮಸ್ + ವಿಕೃತಿ) ]

**ತಮೋವಿಭ್ರಾಂತಿ** (ನಾ). ರಾಹುವೆಂಬ ಭ್ರಾಂತಿ : ಕರಿ ಪರ್ಬಿದವನ ಮರ್ಚಿ ಪುಷ್ಕರದೆ ಬೀಸುತ್ತಿಟ್ಟೊಡಾಕಾಶದೊಳ್ . . . ತಮೋವಿಭ್ರಾಂತಿಯಿಂದಳ್ಕಿ ಭಾಸ್ಕರನೇಳ್ತರ್ಪುದನೊತ್ತಿ ಖಂಡಿಸಿ ಖಗೇಶಂ ರಕ್ಷಿಸಿತ್ತರ್ಕನಂ (ರಾಜಶೇ. ೫-೭೮). [ ಸಂ. (ತಮಸ್ + ವಿಭ್ರಾಂತಿ) ]

**ತಮೋವೈರಿ** (ನಾ). ಕತ್ತಲೆಯ ಶತ್ರು ; ಸೂರ್ಯ : "ಹರಿದಶ್ವಂ ತಮೋವೈರಿ ಹಂಸಂ . . . ತರಣಿ ಸಪ್ತಾಶ್ವನಾದಿತ್ಯನಕ್ಕುಂ." (ವಸ್ತುಕೋ. ೧೧-೬೪). [ ಸಂ. (ತಮಸ್ + ವೈರಿ) ]

**ತಮೋಹ** (ನಾ). ೧. ಕತ್ತಲೆಯನ್ನು ನಿವಾರಿಸುವವನು : ಆ ನೃಪೇಂದ್ರಂ . . . ವೀತಿಹೋತ್ರನಂತೆ ವಿತತಕಾಂತಾರತಮೋಹನುಂ (ರಾಜಶೇ. ೩-೯ ವ). ೨. ಸೂರ್ಯ. ೩. ಅಗ್ನಿ. ೪. ಚಂದ್ರ. [ ಸಂ. ]

**ತಮೋಹರ** (ಗು). ೧. ಕತ್ತಲೆಯನ್ನು ಕಳೆಯುವ ; ಅಂಧಕಾರವನ್ನು ಪರಿಹರಿಸುವ : ಶರದದ ಚಂದ್ರನಂ ವಿಮಲಚಂದ್ರಿಕೆ ಬಾಳದಿನೇಶನಂ ತಮೋಹರಕಿರಣಂ . . . ಪೊರ್ದುವಂತೆ ಸುಂದರ ನವಯೌವನಂ ನೆಱೆಯೆ ಪೊರ್ದೆ ಗುಣಾರ್ಣವನೊಪ್ಪಿ ತೋಱಿದಂ (ಪಂಪಭಾ. ೨-೩೯). (ನಾ). ೨. ಕತ್ತಲೆಯನ್ನು ಕಳೆಯುವುದು ; ಅಂಧಕಾರದ ನಿವಾರಣೆ : ಬಲವದ್ವೈರಿ ತಮೋಹರಾತಿಪಟುಗಳ್ ಪದ್ಮಾಸನಸ್ಪರ್ಶ ಸಲ್ಲಲಿತಂಗಳ್ . . . ಮಹೀವಲಯೋದ್ದ್ಯೋತ ಕರಂಗಳಾನತಜನಕ್ಕಾನಂದಮಂ ಮಾೞ್ಕೆ ಮಂಗಳಮುಚ್ಚಂಡಕರಂ ಮಹೀವಳಯದೊಳ್ಚಾಳುಕ್ಯಮಾರ್ತಂಡನಾ (ಗದಾಯು. ೦-೪). ೩. ಅಜ್ಞಾನವನ್ನು ನಿವಾರಿಸುವವನು : ತತ್ಸುರಸಮುದಯಂ ಚೇತೋವಾಕ್ಕಾಯಶುದ್ಧಿಗಳೊಳ್ ತಮೋಹರನನೆಱೆದರ್ (ಶಾಂತಿಪು. ೧೦-೨೦). [ ಸಂ. (ತಮಸ್ + ಹರ) ]

**ತಮ್ಮ, ತಂಬಿ$_1$** (ನಾ). ೧. ಕಿರಿಯ ಸಹೋದರ : "ಕನಿಷ್ಠಃ, ಅವರಜಃ, ಅನುಜಃ — ಈ ೩ ತಮ್ಮಂ" (ಹಲಾಯು. ೮೩-೩೩೨) ; "ಜಘನ್ಯಜಃ, ಕನಿಷ್ಠಃ, ಯವೀಯಸ್, ಅವರಜಃ, ಅನುಜಃ — ಈ ೫ ತಮ್ಮನು" (ನಾಚಿರಾ. ೧೧೯) ; ಈ ಕಲ್ಲ ಪುೞಿದೆಗಾವುಣ್ಡ ತಮ್ಮ ಗುಱಿಯಮ್ಮ ನಿಱಿಸಿದೊ (ಎಇ. XXI, ೨೦೮-೪ ; 888) : ಆ ಕೂಸೆಂಬುದು ನಿಮ್ಮ ತಮ್ಮನಪ್ಪ ವಾಯುಭೂತಿಯ ಜೀವಮೆನೆ (ವಡ್ಡಾರಾ. ೧೦-೧) ; ಅವರ ತಮ್ಮೋಜಮ್ಮಯ್ಯಂ ದೇಗುಲಮಂ ಮಾಡಿಸಿ (ಎಕ. VIII, ತೀರ್ಥಹ. ೨೭-೧೧ ; 929) ; ನೀಂ ಕ್ರೋಧನನಾಗಲ್ ನಿನ್ನ ತಮ್ಮಂ ನಿನಗೆಱಗಂ (ಆದಿಪು. ೧೪-೮೪) : ತನ್ನ ತಮ್ಮನ ಕಣ್ಣಂ ಕರ್ದುಕುವ ಕಾಗೆಗಳುಮಂ . . . ಕಂಡು (ಗದಾಯು. ೫-೩ ವ) ; ಅಳುಕುವಡಕಟ ಕೊಲ್ಲೆನು ನಿನ್ನ ತಮ್ಮನ ಕರಸು ಫಲುಗುಣನ (ಕುವ್ಯಾಕ. ೩೦-೧೫). ೨. ಹಿರಿಯರು ಕಿರಿಯರನ್ನು ಕುರಿತು ಮಾತನಾಡುವಾಗ ಪ್ರೀತಿ, ವಿಶ್ವಾಸ ಸೂಚಕವಾಗಿ ಬಳಸುವ ಮಾತು : ತಮ್ಮ ಕೇಳು ಪುರಾತರೊಳಗೊಲವಿಂ ಮಹಿಳೆಯರನಾತ್ಮಭವರಂ ತಮ್ಮುವಂ ಕೊಟ್ಟವರೊಳರು (ಬಸಪು. ೨೫-೧೭) ; ಎಲವೋ ತಮ್ಮ ನಿಮಗಿಂದಸುರರಿಪು ತೆತ್ತಿಗನಲೇ (ಕುವ್ಯಾದ್ರೋ. ೧೦-೫೦).

**ತಂಬಿ$_1$:** ೧. ದೇವನೂರ ಚಿಕ್ಕೇಶವನ ದೇವಗಳ ತಂಬಿಗಳ ಮಕ್ಕಳು (ಎಕ. VI, ಕಡೂರು. ೧೩-೮ ; 1518).

ತಮ್ಮಂದಿರ್, ತಮ್ಮಂದಿರು, ತಮ್ಮಗಳು, ತಮ್ಮದಿರು, ತಮ್ಮರು (ಬಹುವ): ತಮ್ಮಂದಿರಪ್ಪ ಕುಮಾರರೊಡನೆ ಸ್ವಾಮಿ ಕಾರ್ತಿಕಂ ಬಳೆದು (ವಡ್ಡಾರಾ. ೧೧೬-೧೭); ಈ ತಮ್ಮಂದಿರೊಳಿಂತಿಂತು ಕಟ್ಟುವರ್ಪುದು ಪೆಂಪೇ (ಆದಿಪು. ೧೪-೧೩೮); ತಮ್ಮಂದಿರ್ ತಾಯಿಂದಿರ್ ಅಣ್ಣಂದಿರ್ ತಂದೆವಿರ್ (ಭಾಷಾಭೂ. ೪೩ ಉದಾ); ನಿನಗೆ ಎಷ್ಟು ಜನ ತಮ್ಮಂದಿರು—? (ರೂಢಿ): ಬಾಳಿನಲಿ ಕೈಹಿಡಿದು ನಡೆಸಿದಿರಿ ಜೊತೆಯು ಅಣ್ಣಗಳನು ತಮ್ಮಗಳಿಗೆ ಕಂಡದ್ದ ತೋರಿ ತೆರೆಸಿದಿರಿ ಕಣ್ಣುಗಳನು (ಹೃದಸ. ೭೬-೧೭); ಶಿವಶಿವಾ ಕೌರವನ ತಮ್ಮದಿರವಗಡಿಸಿದರು. (ಕುಮಾವ್ಯಾಕ. ೧೩-೧೯); ಧರ್ಮಸುತ ಸಭೆಯೊಳೊಪ್ಪಿದಂ ತಮ್ಮರೊಡನೆ (ಕುರಂಗ. ೨೩-೧).

[ದೇ.॥ ತಮಿ. ತಮ್ಬಿ; ಮಲ. ತಮ್ಬಿ, ತಮ್ಪಾನ್; ತುಳು. ತಮ್ಮಯ್ಯ, ತಮ್ಮೆಯು; ಕೊಡ. ತಂಬಿ, ತಮ್ಮಣೇ; ತೆಲು. ತಮ್ಮುಡು; ಗೊಂಡಿ. ತಮ್ಮುರ್; ಕುಇ. ತಂಬೆಸ]

**ತಮ್ಮಂಗವಮ** (?) (ನಾ). (?) : ತಪ್ಪು ತಲುಡಿ ದಂಡ ಉಂಡಿಗೆ ಹಡರಹನು ಕೊಂಬಂಣ ಕೊಡಿದೆ ತಂಮಂಗವಮ ಹಿಡಿವೆ (ಎಕ. IX, ಕಾನಕಾ. ೪೧-೦೩ : 1300). [ ? ]

**ತಮ್ಮಗೌಡ** (ನಾ). ಒಬ್ಬಾತನ ಹೆಸರು : ರೇವಂತ ನಡೆಗೌಡ ಸುರಿತಂಣ ಪಿರಿಯ ತಮ್ಮಗೌಡರು (ಎಕ. VII, ಶಿವಮೊ. ೧೧೪-೧೬ : 950).

[ತಮ್ಮ + ಗೌಡ$_1$ (<ಗಾವುಂಡ)]

**ತಮ್ಮಚಿ** (ನಾ). ಒಂದು ಊರಿನ ಹೆಸರಂ (?) :

**ತಮ್ಮಚಿಯ ಮುದ್ರೆ** = ನಾಣ್ಯಗಳ ಮೇಲೆ ಒತ್ತುತ್ತಿದ್ದ ಒಂದು ಬಗೆಯ ಮುದ್ರೆ : ಕುಳಿಯ ಸುಂಕವ ತಮ್ಮಚಿ[ಯ] ಮುದ್ರೆಯ ಪೊತ್ತ ದೊಳ್ × × × ಕೆ ತಿಂಗಳಿಗೊಂದು ಗದ್ಯಾಣ ಪೊನ್ನುಮಂ ತಮ್ಮಚಿಯ ಮುದ್ರೆಯ ಮೂಱುವೀಸದ ಕತ್ತಡಕೆಯ . . . ಲೆಕ್ಕಂ ಮಾಡಿ ಕುಡುವರ್ (ಸೌಇಇ. XI-ii, ೧೫೦-೩೨ : 1102). [ ? ]

**ತಮ್ಮಟ$_1$** 'ತಂಬಟ' ನೋ.

**ತಮ್ಮಟ$_2$, ತಮ್ಮಡ$_1$** (ನಾ). ಒಂದು ಬಗೆಯ ಬಳ್ಳಿ: (ಮ್ಯಾಜಿಗಿ. ೬೨-೧೩೬೪). **ತಮ್ಮಡ$_1$ :** 'ತಮ್ಮಡವಳ್ಳಿ' ಪರಾ. [ದೇ.॥ ತಮಿ. ತಮ್ಮತ]

**ತಮ್ಮಟೆ** 'ತಂಬಟ' ನೋ.

**ತಮ್ಮಟ್ಟೆ** 'ತಂಬಟ' ನೋ.

**ತಮ್ಮಡ$_1$** 'ತಮ್ಮಟ$_2$' ನೋ.

**ತಮ್ಮಡ$_2$** (ನಾ). ತಡೆದುದು ; ಅಡ್ಡಿ ; ವಿಘ್ನ : "ತಮ್ಮಡಂ=ತಡೆದುದು" (ಶಮುದ. ಪರಿ. ೨). [ ?./ತಮಿ. ತಮ್ಮಿಟು ]

**ತಮ್ಮಡವಳ್ಳಿ** (ನಾ). = ತಮ್ಮಟ$_2$ : "ಕ್ಷಾರಕಿಯೊನಲ್ಕೆ ತಮ್ಮಡ[ಪಾಠಾಂ. ಡಿ] ವಳ್ಳಿ[ಪಾಠಾಂ. ಲ್ಲಿ]"(ಮಂಗರಾ. ೪೪-೫೫). [ತಮ್ಮಡ$_1$ (<ತಮ್ಮಟ$_2$)+ಬಳ್ಳಿ]

**ತಮ್ಮಡಿ$_1$, ತಮಡಿ** (ನಾ). ೧. ಗುರು; ಆಚಾರ್ಯ : ಸ್ವಸ್ತಿ ಶ್ರೀಭಟ್ಟಾರಕ ಥಿಟ್ಟಗಪಾನದಾ ತಮ್ಮಡಿಗಳ ಶಿಷ್ಯರ್ (ಎಕ. II, ೦೯-೧ : ಸು. 700); ಆಟ್ಟುಡಿ ತಮ್ಮಡಿಗಳ . . . ನಿಸಿಧಿಗೆ (ಎಕ. II, ೦೫-೧ : ಸು. 800); ಶ್ರೀಸಿಂಹನನ್ದಿ ತಮ್ಮಡಿಗಳ್ (ಕೊಪ್ಪಶಾ. ೭-೧ ; 1010); ಆದಿಯೊಳು ಕಂಡ ನವಣೆಯ ಕೆಯ್ಯ ತಮ್ಮಡಿಯ ಹೆಸರಲೊಂದು . . . ಗುರು ಮೂರ್ತಿಯುಲಿ ಬಳಿಕ್ಕೊಂದಿಂತು ಹದಿನೇಳು ಯೋಗಲಿಂಗಂಗಳಂ ನಿರ್ಮಿಸಿದನು (ಸಿದ್ಧರಾ. ೩-೪೪). ೨. ಒಡೆಯ ; ಯಜಮಾನ : ತಮ್ಮಡಿಗೆ ಪೊಱವ ಶ್ವಾನಂ ದಮ್ಮಿ[ಪಾಠಾಂ. ವರ್ಮಿ, ಧರ್ಮಿ]ಯನೇಕೆ ಬಾಱಲಿತ್ತಪುದು ಎಂಬಂತೆ (ಪಂಚತಂ. ೧೭೮-೧೫). ೩. ಪೂಜಾರಿ ; ಅರ್ಚಕ : "ದೇವಾಜೀವಃ, ದೇವಲ" (ನಾಚಿರಾ. ೯); ಪೂಜೆಸುವ ತಮ್ಮಡಿ ಲಿಂಗವಾದುದ ಕಂಡೆ (ಮೋಳಿಮೂ. ೨೬೭-೮೧೯); ಕವಾಟಂ ಬಂಧಿಸಿ ಪಿರಿದುಂ ಬೀಯಗವುನಿಕ್ಕಿದರ್ ತಮ್ಮಡಿಗಳ್ (ಉದ್ಭಟ. ೧೧-೫೮); ಕಣ್ಣಪನ ಮನದ ವಿರಳಪ್ರಿಯಭಕ್ತಿಯಂ ಮುಗ್ಧಸ್ವಭಾವವನು ಭವಹರಂ ತಾಂ ತಮ್ಮಡಿಗೆ ತೋಱುವೆನೆನುತ (ಬಸಪು. ೦೮-೪೫); ಶ್ರೀಸೋಮೇಸ್ವರನ ತಮ್ಮಡಿ ಕೇತಜೀಯ (ಎಕ. XI, ಹಿರಿಯೂ. ೫೨-೩೬; 1428); ಗುಡಿಯ ಗೋಪುರಮಂ ಕೆಡಪಿ ತಮ್ಮಡಿಯಂ ಜಡಿಯಲು (ವೃಷವಿ. ೩೬-೪ ವ); ಆ ದಾರಿಯಲ್ಲಿ ಹೋಗುತ್ತಿದ್ದ ಒಬ್ಬ ತಮ್ಮಡಿ ಇವರ ಮಾತುಗಳನ್ನು ಕೇಳಿ ಹತ್ತಿರ ಬಂದು (ನಗಗ. ೫೬); ತನಗೇ ಇಲ್ಲದ ಮಾರಿ ತಮ್ಮಡಿಗೆ ವರ ಕೊಟ್ಟೀತೇ? (ಗಾದೆ). ೪. ಋಷಿ ; ಮುನಿ : ಇದೇನು ತಮ್ಮಡಿ ನಿನಗೆ ತಪದಲಿ ಖಡ್ಗ ವೇಕೆ (ಕುಮಾವ್ಯಾಆ. ೬-೨); ಜಡೆಯ ಹೊತ್ತುದೊ ಸಿಡಿಲು ಶಿವಶಿವ ಪಡಬ ತಮ್ಮಡಿಯಾದನೋ (ಕೌಶಿರಾ. ೩-೧೩). **ತಮಡಿ :** ೩. ಮನವ ಮಡಿಯಾಗಿಡಲು ದಮ್ಮಡಿಯ ತಮ್ಮಡಿ ನಮಗೆ ಬೇಕೀತನಿಗೊನಲ್ಲೊರೆಯೆ ತಮಡಿ (ಗಡೀಶ. ೭೦-೫). [ ←ತೆಲು. ತಮ್ಮಡಿ ]

**ತಮ್ಮಡಿ$_2$** 'ತಮ್ಮಡೆ' ನೋ.

**ತಮ್ಮಡೆ, ತಮ್ಮಡಿ$_2$** (ನಾ) (?) : ಆ ಮುಂಗುಳನಹಳ್ಳಿಯಲ್ಲಿ ತಮ್ಮಡೆಯಾದಡೆ ಅಣ್ಣನೊಡವೆ ತಮ್ಮಂಗೆ ತಮ್ಮನೊಡವೆಯಣ್ಣಂಗೆ (ಎಕ.IX,ಚನ್ನಪ.೭೩-೩೦; 1318). **ತಮ್ಮಡಿ$_2$:** ಅನ್ಯಾರೂ ಇಲ್ಲದಿದ್ದಡೆ ಆ ಅಪುತ್ರಿಕದ ನಕಱ ದೇವಾಲ್ಯಕೆಕ್ಕುವದು ತಮ್ಮಡಿ ಎಂಬ ವಾರ್ತೆ ಇಲ್ಲವೊಡವತಲೆ (ಎಕ. IX, ಚನ್ನಪ. ೭೩-೩೬ ; 1318). [ ? ]

**ತಮ್ಮಣಿ** 'ತಮ್ಮಣೆ' ನೋ.

**ತಮ್ಮಣಿಗೊಳಿಸು** (ಕ್ರಿ). ಸಮಾಧಾನಪಡಿಸು ; ಶಾಂತಗೊಳಿಸು : ನಾನೇ ತಪ್ಪನ್ನು ಒಪ್ಪಿಕೊಂಡಂತಾಗಿ ಅವಳ ಬೇಗುದಿಯ ಮನಸ್ಸನ್ನು ತಮ್ಮಣಿಗೊಳಿಸಿದಂತೆಯಾಗಿತ್ತು (ಹೇಮಂತ. ೨೭). [ತಮ್ಮಣಿಗೊಳು + – ಇಸು$_3$]

**ತಮ್ಮಣಿಗೊಳು, ತಮ್ಮಣಿಗೊಳ್ಳು** (ಕ್ರಿ). ಉಪಶಮನಗೊಳ್ಳು; ಶಾಂತತೆ ಹೊಂದು; ಸಮಾಧಾನವಾಗು. 'ತಮ್ಮಣಿಗೊಳಿಸು' ಪರಾ. **ತಮ್ಮಣಿಗೊಳ್ಳು:** ನಟರಾಜನ ಭಾವಸಮಾಧಿಯು ಒಂದಿಷ್ಟು ತಮ್ಮಣಿಗೊಂಡ ಬಳಿಕ ನಸು ಕಣ್ತೆರೆದು ನಿಟ್ಟಿಸಿದರೆ ಮುಂದೆ ನಿಂತ ಗೌರಿ ಮೊರೆಯಿಡುತ್ತಿದ್ದಾಳೆ (ಶಾಳಬ. ೧). [ತಮ್ಮಣಿ (<ತಮ್ಮಣೆ) + ಕೊಳು (<ಕೊಳ್$_1$)]

**ತಮ್ಮಣಿಗೊಳ್ಳು** 'ತಮ್ಮಣಿಗೊಳು' ನೋ.

**ತಮ್ಮಣೆ, ತಮಣೆ, ತಮ್ಮಣಿ** (ನಾ). ಶಾಂತಿ; ಸಮಾಧಾನ; ಉಪಶಮನ: ದೇಶದಲ್ಲಿ ತಮ್ಮಣೆ (ಶಾಂತಿ) ಯಿರಲಿಲ್ಲ (ಅಕ್ಕರ. ೦೪೦). **ತಮಣೆ :** ಶಾನಾಗ ತಣಿಯದೆ ಯಾರು ಏನೆಂದರು ತಮಣೆಗೆ ಬರುವುದೆ ಗೋಳು (ಇಂಜಾಪ. ೩೦-೪೪). **ತಮ್ಮಣಿ :** 'ತಮ್ಮಣಿಗೊಳಿಸು', 'ತಮ್ಮಣಿಗೊಳು' ಪರಾ.

**ತಮ್ಮಣಿಯಾಗು** = ಶಮನವಾಗು; ಶಾಂತವಾಗು : ಇವರ ದಂಗೆಗಳು ತಮ್ಮಣಿಯಾದವು (ಇಂಗ್ಲಂಡ. ೨೦೦). [?./ಪ್ರಾ. ಥಂಭಣ./ಸಂ. ಸ್ತಂಭನ ]

**ತಮ್ಮತು** 'ತನತ್ತು' ಪರಾ.

**ತಮ್ಮದು** 'ತನತ್ತು' ಪರಾ.

**ತಮ್ಮಲೋಪಾದಿ** (ನಾ). (?) : ಸತ್ತಿಮಂಗಲದ ಸಾಮಿಯ ಸಮ್ಮಸ್ದಂ ಮಾರಯ್ಯನುಂ ಪುಣಿಸೆಯಮ್ಮನುವಿಟ್ಟು ತಮ್ಮಲೋಪಾದಿಗೊಟ್ಟರ್ (ಎಕ. IX, ಹೊಸಕೋ. ೧೧೧-೭ ; 997). [ ? ]

**ತಮ್ಮಿನುಗ** (ನಾ). ತಂಪಾದ ಬೆಳಕಂ ಅಥವಾ ಕಾಂತಿಯುಳ್ಳವನಂ; ಚಂದ್ರ : ಕೆಂಗದಿರ ತಮ್ಮಿನುಗ ಮರಗೂಳ (ಮುಲ್ಲಾರಿ. ೨-೪೦).

[ತಂ$_1$ (<ತಣ್$_2$) + ಮಿನುಗು$_2$ + – ಅ$_7$ ]

**ತಮ್ಮಿಸು** 'ತಣ್ಪಸು' ನೋ.

**ತಮ್ಮುಟುಕಾಱ** (ನಾ). ತಮ್ಮಟೆ ಬಾರಿಸುವವನಂ : ಅಮೃತಪಡಿ ನಂದಾದೀಪ್ತಿ ನೈವೇದ್ಯ ಸ್ಥಾನಿಕ ಹಸಟು ತಂಮುಟುಕಾಱರಿಗೆ ಸಂದು ಬಂದು (ಎಕ. VIII, ಸೊರಬ. ೩೭೯-೧೯ ; 1533).

[ತಮ್ಮುಟು$_0$ (<ತಂಬಟ) + – ಕಾಱ ]

**ತಮ್ಮುತು** 'ತನತ್ತು' ಪರಾ.

**ತಮ್ಮುತ್ತು** 'ತನತ್ತು' ಪರಾ.

**ತಮ್ಮುಳಿ** (ನಾ). ಒಬ್ಬಾತನ ಹೆಸರು (?) : ಬಾಗೆಯೂರ ಬಲ್ಲಹನೇಱಿ ನೊಳ್ಪಿಯಾನ್ ವೈರಿಳ್ ಸಮಪದರುಳ್ ಕೊಪುಳವೂರಬಾಳಿಯೊಳ್ಪೊಣ್ಣೆ ದಿಕ್ಕಿಜ್ಜಿಯ ತಮ್ಮುಳಿ ಪಡೆಯುಳಿಱಿದು ಸತ್ತನ್ (ಎಕ. XVI. ತುಮುಕೂ. ೯೩-೧೪ ; ಸು. 780). [ ? ]

**ತಮ್ಮೆ** (ನಾ). ೧. ಕಿವಿಯ ಹಾಲೆ, ಮೂಗಿನ ತುದಿ ಮುಂತಾದ ಮೂಳೆಯಿರದ ಸ್ಥಳ. ೨. (ಕುದುರೆ, ದನ ಮುಂತಾದುವುಗಳನ್ನು ಕಟ್ಟಿ ಹಾಕಲು ಬಳಸುವ) ಹಗ್ಗದ ಕುಣಿಕೆ. ೩. ದನಗಳ ಗಂಗೆದೊಗಲು : (ಕಿ). [ ದೇ.॥ ತೆಲು. ತಮ್ಮೆ ]

**ತಮ್ಮೆಗಿಡ** (ನಾ). ೧. ಒಂದು ಬಗೆಯ ಗಿಡ ; "ಉದ್ದಾಲಕ" (ಪಂಡಿತ). ೨. ಒಂದು ಬಗೆಯ ಪೊದೆ. P ಇದರ ಬೇರನ್ನು ಔಷಧಿಗಾಗಿ ಉಪಯೋಗಿಸುತ್ತಾರೆ. [ ತಮ್ಮೆ$_0$ + ಗಿಡ (<ಗಿಡು) ]

**ತಯಾರಿ** 'ತಯಾರು' ನೋ.

**ತಯಾರಿಕೆ** (ನಾ). ೧. ಅಣಿಮಾಡುವಿಕೆ ; ಸಿದ್ಧಪಡಿಸುವಿಕೆ : ಅಜಯ . . . ಬಾಂಬ್ ತಯಾರಿಕೆಯ ಕೆಲಸದಲ್ಲಿ ನಿರತನಾಗುತ್ತಿದ್ದ (ಅಕ್ಕಾರ್ಪ. ೧೩೮) ; ಉಪಕರಣಗಳ ತಯಾರಿಕೆಯ ಹಕ್ಕನ್ನು ತಮಗೆ ವರ್ಗಾಯಿಸಬೇಕೆಂದು ಬೇಡಿಕೆ ಬಂದಿತು (ಸಸ್ಯಕ. ೯೯). ೨. ತಯಾರಾದ ವಸ್ತು : ಇದು ಟಾಟಾ ಕಂಪನಿಯ ತಯಾರಿಕೆ (ರೂಢಿ). [ ತಯಾರು + – ಇಕೆ ]

**ತಯಾರಿಸು** (ಕ್ರಿ). ಸಿದ್ಧಪಡಿಸು ; ಸಜ್ಜುಗೊಳಿಸು : ದೊಡ್ಡ ಒಲೆಯಾದರೆ ಯಾವುದೇ ಅಡುಗೆಯನ್ನೂ ಅದರಲ್ಲಿ ತಯಾರಿಸಬಹುದು (ಅಡುಸಾ. ೧೭) ; ಒಂದು ಕಾವಡಿಯನ್ನು ತಯಾರಿಸಿ ಹೊರಟನು (ಸುಧಾ. ೫೭) ; ಚಹಾ ತಯಾರಿಸಿಕೊ (ಮಹಾತ್ಮಾ. ೧೩). [ ತಯಾರು + – ಇಸು$_3$ ]

**ತಯಾರು**, ತಯಾರಿ, ತಯ್ಯಾರಿ (ನಾ). ಸಿದ್ಧತೆ ; ಸಿದ್ಧಪಡಿಸುವಿಕೆ ; ಏರ್ಪಾಡು ; ಸಜ್ಜು ; ಅಣಿ. **ತಯಾರಿ :** ಇನ್ನೊಂದು ಗ್ಲಾಸು ಎತ್ತಿ ಕುಡಿಯುವ ತಯಾರಿಯಲ್ಲಿದ್ದರು (ದೀಪಹ. I, ೧೫೯). **ತಯ್ಯಾರಿ :** ಮೊದಲು ಚಹಾ ಫಳಾರದ ತಯ್ಯಾರಿ ನಡೀಲಿ (ಧನಂಜ. ೫೭).

**ತಯಾರಾಗು** = ೧. ಸಿದ್ಧವಾಗು ; ಅಣಿಯಾಗು : ಸಂಗಡಿಗರೊಡನೆ ತಯಾರಾಗಿ ಬನ್ನಿರಿ (ನಡದಾ. I, ೪೩೮) ; ಅವಳು ತಿರುಗಿ ಹೊಡೆಯಲು ತಯಾರಾಗುವವರೆಗೂ ಹೊಡೆಯುತ್ತಿರುವುದೇ ಮೇಲು (ಹುಚ್ಚುಹು. ೧೫). ೨. ನಿರ್ಮಾಣವಾಗು ; ಉತ್ಪನ್ನವಾಗು : ಭ್ರೂಣವು ತಯಾರಾಗುವುದು (ಸಸ್ಯಕ. ೧೮). **ತಯಾರುಮಾಡಿಸು, ತಯ್ಯಾರುಮಾಡಿಸು**=ಸಿದ್ಧವಾಗುವಂತೆ ಮಾಡು ; ರಚಿಸುವಂತೆ ಮಾಡು ; ನಿರ್ಮಾಣಮಾಡಿಸು : ಬೆಳೆದು ಬದಲಾಯಿಸುತ್ತಿರುವ ಕನ್ನಡಕ್ಕೆ ತಕ್ಕ ವ್ಯಾಕರಣವೊಂದನ್ನು ತಯಾರುಮಾಡಿಸಿಕೊಡುವ ಕೆಲಸವು ನಮ್ಮ ವಿದ್ಯಾಪ್ರಚಾರ ಇಲಾಖೆಯವರ ದೃಷ್ಟಿಯಲ್ಲಿದೆ (ಸಾಹಿಶ. ೫೮) ; ಕೋಟೆಯನ್ನು ರಚಿಸಿ, ಅದರ ಸುತ್ತ ಅಗಳು ಮುಂತಾಗಿ ತೆಗೆಸಿ ತಯ್ಯಾರುಮಾಡಿಸಿ (ರಾಜೇಂದ್ರ. ೨). **ತಯಾರುಮಾಡು** = ೧. ಸಿದ್ಧಮಾಡು; ಸಜ್ಜುಮಾಡು ; ಅಣಿಗೊಳಿಸು : ಶ್ರೀಪಾದರಾಜರು ದ್ವೈತಮತ ಪ್ರಚಾರಮಾಡಲು . . . ಭಾಗವತರ ತಂಡವೊಂದನ್ನು ತಯಾರು ಮಾಡಿದರು (ಜಗದಾ. ೮೧); ಮೈಸೂರಿನಿಂದಲೇ ತಯಾರುಮಾಡಿ ತಂದಿದ್ದ ಚಿರೋಟಿಗಳನ್ನೂ . . . ಎಲ್ಲರಿಗೂ ಹಂಚಿದರು (ಮೂಲಾನ. ೦೨೩). ೨. ಉತ್ಪಾದಿಸು ; ಉತ್ಪನ್ನಮಾಡು : ಇಂತಹವರು ಇಲ್ಲಿಯೋ, ಹೀಗೆಯೋ ಅದನ್ನು ತಯಾರುಮಾಡಿ ಇಂಥವರ ಮೂಲಕವೇ ಮಾರಿರುವರೆಂಬುದು ತಿಳಿಯದು (ಹಣಪ್ರ. ೧೧).

[ ←ಹಿಂ., ಮರಾ. ತಯಾರ್, ತಯಾರೀ, ತಯ್ಯಾರ್, ತೈಯಾರೀ ; ಪಾರ. ತಯ್ಯಾರ್, ತಯ್ಯಾರೀ ; ಅರ. ತೈಯಾರ್ ]

**ತಯಿಮಾಸ** 'ತೈಮಾಸ' ನೋ.

**ತಯ್ಯಾನ** (ನಾ). (?) : ಸಡಗರದಿ ಬಹರಗ್ರ ವೈಮಾನ ತಯ್ಯಾನ ತುಡುಕುತಿಹವೇಣ್ಡಿಸೆಯ ಸಿಂಗರದ ಭಂಗರದೊಳ್ಪಿದೆ ಮಧುಬಲಿ ಬಂಧನ (ಜಿನಮು. ೪೭-೨೯). [ ? ]

**ತಯ್ಯಾರಿ** 'ತಯಾರು' ನೋ.

**ತರ್**, ತರು$_1$ (ಕ್ರಿ). ತಂದ (ಭೂತಕೃ), ತಂದು (ಭೂತನ್ಯೂ), ತರ್ಪ, ತಹ$_1$, ತಾಹ$_1$ (ವರ್ತಕೃ), ತಾ$_1$, ತಾರ$_4$ (ವಿಧ್ಯರ್ಥ). ೧. ತೆಗೆದುಕೊಂಡು ಬರು: ಪದಿಂಬರ್ ತರ್ಪ ಪೊಱೆಯನೊರ್ವನೆ ತರ್ಪಂ (ವಡ್ಡಾರಾ. ೭೭-೪) ; ಪೇರಡವಿಯೊಳ್ ಪಣ್ಫಲಂಗಳ ನಱಿಸಿ ತನ್ನಿಮೆಂದು ಪೇೞ್ವುದುಂ (ಧರ್ಮಾಮೃ. ೨-೧೯೩) ; ತಾರಂ ತಾರರ್ ; ಬಾರಂ ಬಾರರ್ (ಭಾಷಾಭೂ. ೨೨೭ ಉದಾ) ; ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮಂಡೆಗೆ ಹುವ್ವ ತಾಹೆನಲ್ಲದೆ ಹುಲ್ಲ ತಾರೆನು (ಮಹಾದೇ. ೧೧-೧) ; ಹೊಳಲ ಹೊಱಶೂಲದಲಿ ರಿಪುಗಳ ಸೆಳಸುವೆನು ತಾ ವೀಳೆಯುವನು (ಕುಮಾಭೀ. ೧-೭). ೨. ಕರೆತರು ; ಕರೆದುಕೊಂಡು ಬರು : ತಾರಾ ಜಾನಕಿಯಂ ಪೋಗಿ ತಾರಾ ತರಳನೇತ್ರೆಯಂ (ಕವಿರಾ. ೨-೧೨೮) ; ನಾಳಿನೋಲಗದೊಳ್ ತಂದು ಕಾಣಿಸು (ಪಂಪಭಾ. ೯-೨೮ ವ) ; ಆಕೆಯಂ ತರ್ಪುದನುಱಿಯೆ ಬಱಿಕ್ಕಿಲ್ಲ ಬೇಱೊಂದುಪಾಯಂ (ಕಾದಂಪೂ. ೮೫೯) ; ಅಪ್ಸರಗಣಿಕೆಯರು ಕೋಮಳನ ತಂದರು ವಾಸವನ ಸಿಂಹಾಸನದ ಹೊರೆಗೆ (ಕುಮಾದ್ರೋ. ೬-೬೫) ; ಅರ್ಧರಾತ್ರಿಯ ಹೊತ್ತಿನೊಳಗಾಗಿ ಸುಗುಣಾನಿರುದ್ಧನ ತಹೆನು (ಮೋಹತ. ೩೦-೧೧); ನಾಲ್ಕೆಂಟು ದಿನದೊಳು ಕಂತುಸನ್ನಿಭನ ನಾ ತಹೆನು (ಕಂನವಿ. ೯-೦೪೫). ೩. ಕೊಡು ; ನೀಡು : ಚಿಂತಿಸದಿರ್ ತಾ ತೋಱು ನಿನ್ನೀ ಬರೆದ ಪಟಮನುತ್ಫುಲ್ಲಪಂಕೇಜನೇತ್ರೇ (ಆದಿಪು. ೩-೪೪) ; ಎನಗೆ ತರಲಾಱದಿರ್ದೊಡಂ ನಿಮಗಪ್ಪನಿತಾಹಾರಮನಿಂದಿನೊಂದು ದಿವಸಕ್ಕಮಱಿಸಿಕೊಳ್ಳಿಂ (ಪಂಚತಂ. ೦೪೩-೧) ; ಒನಕೆಯುಂ ತಾ ಶಿರದೊಳಾಂ ಸುತ್ತಿದಪೆನೆಂಬಾ ನರನವೊಲು ಆಯಿತ್ತು (ಬಸಪು. ೨೦-೨೧) ; ಅಮೆಲ ಸುಮತಿಯುಂ ತಾಯೆನಗೆ ತಾಯೆ (ಜೈಮಿಭಾ. ೧-೪). ೪. ವಿಸ್ತರಿಸು ; ಚಾಚು : ಕಯ್ಯುಗೆ ಕರಮಂ ತರಲಾಱದೆ (ಗದಾಯು. ೪-೩೦). ೫. ಎತ್ತು; ಹೊರಕ್ಕೆ ತರು: ಎಳೆಯುಂ ವಿಕ್ರಮದಿಂ ತರಲ್ ಮಹೀಧರಂ ಮುನ್ ಪಂದಿಯಾದಂತೆ (ಪಂಪಭಾ. ೮-೫೫). ೬. ಉಂಟುಮಾಡು : ಮುದಿತ ಸುರಾನಂದ ಬಾಷ್ಪೋದಬಿಂದೂತ್ಕರಮೆಂಬಂತಾಗೆ ತಂದತ್ತರಲ ಮಱಿಗಳಂ ಪುಷ್ಪಮೇಘಪ್ರತಾನಂ (ಆದಿಪು. ೦೪-೧೧೮) ; ಬವರವಾದರೆ ಹರನ ವದನಕೆ ಬೆವರ ತಹೆನು (ಕುಮಾದ್ರೋ. ೪-೫೭). ೭. ನಿಶ್ಚಯಿಸು ; ನಿರ್ಧರಿಸು : ಅತ್ತ ಮನಂ ತರಲೆವೇಡ (ಸಮುಪ. ೩-೮೧) ; ಈ ಧರ್ಮಮಂ ಪತ್ತುವಿಡಿಸಿ ಮದೀಯ ಧರ್ಮದೊಳಿ ಪತ್ತಿಸುವೆನೆಂಬ ಬಗೆಯುಂ ತಂದು ಸೆಟ್ಟಿಗಿಂತೆಂದಂ (ಧರ್ಮಾಮೃ. ೧-೧೧೯) ; ಜನದ ಕೊಲೆಗೆಲಸದ ನಿರೂಪಕೆ ಮನವ ತಂದಳು ಮೃತ್ಯು (ಕುಮಾದ್ರೋ. ೭-೩೫). ೮. ಮದುವೆ ಮಾಡಿಸು ; ಸಂಬಂಧ ಬೆಳೆಯುವಂತೆ ಮಾಡು: ಆತನ ತಂಗೆಯುಂ ಜ್ಯೋತಿರ್ಮಾಲೆಯುಂ ನಿಮ್ಮ ಮಗನರ್ಕಕೀರ್ತಿಗೆ ತರ್ಪುದು (ಚಾವುಂಪು. ೫೦-೧೫). ೯. ಮದುವೆ ಮಾಡಿಕೊಳ್ಳು ; ಸಂಬಂಧ ಬೆಳೆಸು : ಎರಡನೆಯ ಹಿಡಿಂಬಿಯುನೆಮ್ಮರಸಂ ರಕ್ಕಸಿಯನೆಲ್ಲಿ ತಂದನೊ ನಿನ್ನಂ (ಗದಾಯು. ೨-೯). **ತರು$_1$ :** ೧. ತಮ್ಮಲ್ಲಿದ್ದ ಪುಡಿದುಡ್ಡುಗಳಿಗೆ ಎಣ್ಣೆಯನ್ನು ಕೊಂಡು ತಂದರು (ರಾವಿಜ. ೨೨) ; ಮರಿಯಾನೆ ಬೆಳ್ಳಿಹೊರೆ ತರುವುದೆಂಬಂತೆ (ಕಾಲೂರ. ೭೨-೧೩೦). ೨. ಎಲೆ ನಾರಿ ನೀನಾತನ ತರುವನಕ ಸಲೆ ಸೈರಿಸದೆನ್ನ ಮನಸು (ಕಂನವಿ. ೯-೦೫೧) : ಅದೇ ದೇವರು ನನ್ನನ್ನು ಇಲ್ಲಿಗೆ ತಂದನೆಂದು ತಿಳಿದುಕೋ (ಮುಂಬಯಿ. ೪-೭೮). ೩. ತಾರಕ್ಕ ಬಿಂದಿಗೆ ನಾ ನೀರಿಗೊಲ್ಹಗುವೆ ತಾರೇ ಬಿಂದಿಗೆಯ

(ಪುರಂದ. ೧-೪೯ ಪಲ್ಲವಿ) ; ಇಲ್ಲಿ ತಾ ಅದನ್ನು ನಾವಿಬ್ಬರೂ ಸರಿಯಾಗಿ ಹಂಚಿಕೊಂಡು ಬಿಡುವಾ (ಮುಂಬಯಿ. ೪-೫೦) ; ಮಾತು ಬಲ್ಲವ ಮಾಣಿಕ ತಂದ, ಮಾತು ಅರಿಯದವ ಜಗಳ ತಂದ (ಗಾದೆ). ೧೦. ಕೊಂಡುಕೊಳ್ಳು: ತನಗೆ ಹೇಗೋ ದೊರೆತ ದುಡ್ಡು ತರುವ ಪಡಿಪದಾರ್ಥ ಅದು ಗುರು ಲಿಂಗ ಜಂಗಮಕ್ಕೆಂದೂ ಅರ್ಪಿತವಾಗಬಾರದು (ಮೋಳಿಗೆ. ೧೦೭ ಪ್ರಸ್ತಾವನೆ) ; ದುಡ್ಡಿದ್ದರೆ ಅದನ್ನೂ ತರಬಹುದಿತ್ತು (ರೂಢಿ).

**ತಂದಿಕ್ಕು** = ೧. ಸಂಪಾದಿಸಿಕೊಡಂ; ತಂದುಕೊಡಂ: ತಾವಿರ್ಬರುಂ ಕಿವಿದು ತಂದಿಕ್ಕಿದೆಂಜಲೆವುಟುವುಮಂ ತಿಂದು (ಆದಿಪು. ೩-೩೪ ವ) ; ಇನ್ನುಮೆ ನ್ನೊಡಲೊಳಿನ್ನೀ ಪ್ರಾಣಮುಳ್ಳನ್ನಮೇವದೆ ಕೌಂತೇಯರನಿಕ್ಕಿ ಪಂದಲೆಗಳಂ ತಂದಿಕ್ಕು (ಗದಾಯು. ೯-೨೯) ; ಕಂದಮೂಲಫಲಂಗಳಂ ಪೆಱರ್ ತಂದಿಕ್ಕೆ ತಿಂದು ಆನಂದಮನಸ್ಕರಾಗಿ ನಿಂದ ತಪೋಧನರುಮಂ (ಪಂಚತಂ. ೦೯-೧೦). ೨. ತೆಗೆದುಕೊಂಡು ಬಂದು ಬಡಿಸು,–ನೀಡಂ : ಮೋಸದಿಂದಮುಣ್ಬುದು ನಾವೇನಂ ತಂದಿಕ್ಕಿದೊಡಂ (ಧರ್ಮಾಮೃ. ೧-೧೬೩). ೩. ಎಸೆ ; ಬಿಸುಡು ; ಕೆಡವು : ಈ ದೊರೆಯನುಮಳವಟಿಯೆ ವಸುಂಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ (ಆದಿಪು. ೧೪-೧೧೨) ; ಇಂತನ್ನಯದಿಂದೀ ಪಟುವಿನೊಳೆನ್ನರಸನನಿಂತು ಬಿದಿಯೆ ತಂದಿಕ್ಕುವುದೇ (ಪಂಪಭಾ. ೨-೩೨). ೪. ತಂದು ಸೇರಿಸು ; ಕೂಡಿಸು ; ಬೆರೆಸು : ಮುಖದರ್ಪಣಕ್ಕೆ ತಂದಿಕ್ಕಿದ ರನ್ನದ ಪಿಡಿ ಸೂಡೆಯುಮೇನೆನೆ . . . ಕಂಬುಕಂಧರಮೆಸೆಗುಂ (ಮಲ್ಲಿಪು. ೩-೭೩); ಸಕ್ಕದಮಂ ಪೇಟ್ವೊಡೆ ನೆಱೆ ಸಕ್ಕದಮಂ ಪೇಟ್ಗೆ ಸುದ್ಧಗನ್ನಡದೊಳ್ತಂದಿಕ್ಕುವುದೇ ಸಕ್ಕದಮಂ (ಧರ್ಮಾಮೃ. ೧-೪೨). ೫. (ಜಗಳ, ವಿರಸ ಮುಂತಾದುವನ್ನು) ಉಂಟುಮಾಡು : ಆ ಕೊರಮ ಅವರಿಬ್ಬರ ನಡುವೆ ತಂದಿಕ್ಕಿದ (ರೂಢಿ).

**ತಂದಿರಿಸು** = (ಸಮಿಾಪಕ್ಕೆ) ತಂದು ಇಡು ; ತೆಗೆದುಕೊಂಡು ಬಂದು ಇಡು : ನೆಲೆಯ ಕರುಮಾಡದ ಕಾಂಚನಕಲಶತತಿಯಿನೆಸೆದುದು ಕನಕಾದ್ರಿ ಯನಲ್ಲಿ ಕಡೆದು ತಂದಿ[ಪಾಠಾಂ. ಕಂಡ]ರಿಸಿದವೋಲ್ (ಕಾದಂಪೂ. ೫೦೪) ; ಮಂಗಳದ್ರವ್ಯಂಗಳಂ ಕೊಡೆ ತಂದಿರಿಸಿ (ನಂಬಿರ. ೩-೨೯) ; ಬೆಟ್ಟದ ಕೆತ್ತು ತಂದಿರಿಸಿದಂದದಿ ಮುಗಿಲಟ್ಟಣೆ ತನೆಗಳಗ್ರದಲಿ ಬಟ್ಟರನ್ನಗಳ ತೆತ್ತಿಸಿದ ಹೊಂಗಲಸಂಗಳಿಟ್ಟಿರ್ದುವು (ಮೋಹನ. ೨೦-೮). **ತಂದೀ**=ತಂದುಕೊಡಂ : ಕಾಣಿಕೆಯ ತಂದಿತ್ತರು ಗೀರ್ವಾಣಫಣಿನರರಾಜರು (ತೊರವೆ. ೦-೭-೨) : ಕಂಗೊಳಿಸುವ ಮಾದಳವಣ್ಣ ತಂದಿತ್ತು (ಮೋಹನ. ೪-೫೦). **ತಂದುಕೊಡು, ತಂದುಕುಡು** = ತೆಗೆದುಕೊಂಡು ಬಂದು ಕೊಡಂ ; ಒದಗಿಸು : ತಂದೆ ತಾಯ್ಗಳು ಮೃಗಗಳಾದವು ಬಂಧು ಬಳಗವು ಖಗಗಳಾದುವು ತಂದು ಕೊಟ್ಟವರಾದರಾ ಮೃಗಗಳು ಕಿರಾತಂಗೆ (ಸಾಳ್ವಭಾ. ೫-೫೦): ಅಂಜನಚೋರಂ ಘುಟಿಕಾಪ್ರಯೋಗದಿಂದದೃಶ್ಯರೂಪದಿಂ ಪೋಗಿ ಕಳ್ದು ತಂದು ಕುಡುವ ಸಮರ್ಥನೆಂಬುದಂ ತಾಂ ಬಲ್ಲಳಪ್ಪುದಱಿಂದ (ಧರ್ಮಾಮೃ. ೨-೧೦೮).

**ತಂದುಕೊಳ್, ತಂದುಕೊಳು, ತಂದುಕೊಳ್ಳು** = ೧. ಕರೆದುಕೊಳ್ಳು ; ಬರಮಾಡಿಕೊಳ್ಳು : ತನಗಱಿಕೆಯ ಮಿಟ್ಟುವನಿಂತು ತಂದುಕೊಂಡರು ಮೊಳರೇ (ಶಾಂತಿಪು. ೩-೭೨) ; ಮುಂಗುರುಳಗರ ಕಣ್ಣಿನೊಳೊತ್ತಿ ಜಲವನು ಹಿಂಗದೆ ತಂದುಕೊಂಡಾಗ ಅಂಗನೆ ಪುಸಿಗೆ ದುಃಖಿಸುತ (ಕಂನವಿ. ೬-೦೭೬). ೨. ತಾಳು ; ಹೊಂದು ; ಪಡೆ : ತಂದೆ ನೀನಹನೆಂಬ ಹಮ್ಮನು ತಂದುಕೊಳದಿರು (ತೊರವೆ. ೦-೯-೩೯). ೩. ಮದುವೆ ಮಾಡಿಕೊಳ್ಳು ; ಮನೆ ತುಂಬಿಸಿಕೊಳ್ಳು: ಮಾವನ ಮಗಳ, ತಂದುಕೊಂಡೇನು ತೆರ ಹೇಳಿ (ಹಳ್ಳಿಬಾ. ೫೨). **ತಂದುಹಾಕು**=೧. ಸಂಪಾದನೆ ಮಾಡು ; ಗಳಿಸಿಕೊಡು: ಹತ್ತು ಜನರ ಸಂಸಾರಕ್ಕೆ ತಂದುಹಾಕುವವ ಒಬ್ಬನೇ ಆದರೆ ಬಹಳ ತೊಂದರೆ (ರೂಢಿ). ೨. (ಜಗಳ, ವಿರಸ ಮುಂತಾದುವನ್ನು) ಉಂಟು ಮಾಡು ; ಕಲ್ಪಿಸು ; ಉತ್ಪತ್ತಿಮಾಡು : ಎನಗೂ ನಿನಗೂ ಹಗೆಯಿಲ್ಲ, ಎನ್ನೆಡೆ ನಿನ್ನೆಡೆ ತಂದುಹಾಕಿದವರೆ ಹಗೆ (ಸಗಬೊ. ೫೭) ; ತಂದುಹಾಕಿ ತಮಾಷೆ ನೋಡಿದ (ರೂಢಿ). **ತಂದೊಡ್ಡು** = ೧. ಈಡುಮಾಡು ; ಗುರಿಮಾಡು : ವನಿತೆಯುಮಂ ನಂಟರುಮಂ . . . ತೊಱೆದು ತಪಕಂ ತನುವಂ ತಂದೊಡ್ಡಿ (ಧರ್ಮಾಮೃ. ೬-೬೯). ೨. ಉಂಟುಮಾಡು ; ಕಲ್ಪಿಸು : ಆಗ ಮನೋವ್ಯಥೆಯನ್ನುಂಟುಮಾಡುವ ಸನ್ನಿವೇಶಗಳನ್ನು ತಂದೊಡ್ಡಬೇಕು (ಶಿಕ್ಷದ. ೦೧೯). **ತರವೇಟ್, ತರಹೇಳು** = ೧. ತರುವಂತೆ ಹೇಳು ; ತೆಗೆದುಕೊಂಡು ಬರುವಂತೆ ಹೇಳು : ಸಾರಥಿಯಪ್ಪೊಡಪ್ಪ ನೆನಗೀತನೆ ಪೋ ಪೆಱರೇವರಿಂ ನೆರಂಬಾರೆನೆನುತ್ತೆ ತನ್ನ ರಥಮಂ ತರವೇಟ್ಟು (ಪಂಪಭಾ. ೮-೯೮); ಅದು ಪೊಱಗಾಗೆ ನೀನೇನಂ ತರವೇಟ್ಟೊಡಂ ತಂದಿತ್ತಪೆನಿದೊಂದು ಮಾತ್ರಂ ಬೇಡ (ಧರ್ಮಾಮೃ. ೨-೧೦೮) ; ತರವೇಟ್ ಮಾಣಿಕ್ಯಭಂಡಾರವಂ (ಕಾವ್ಯಾವ. ೧೦೩). ೨. ಕರೆತರುವಂತೆ ಹೇಳು ; ಕರೆದುಕೊಂಡು ಬರುವಂತೆ ಹೇಳು : ತರವೇಟ್ಟು[ಪಾಠಾಂ. ಟ್ಟಿ] ವಿಜಯಪರ್ವತಗಜಮಂ (ಆದಿಪು. ೧೨-೫೭) ; ಎನ್ನ ಮಗನನಂತಕಪುರದಿಂ ತರವೇಟ್ಬುದು (ಅಜಪು. ೧೧-೧೫) ; ಕನಸಿಂದದಂ ನೆರೆದವನಂ ನೆನಸಿಂ ನೆರೆದಪ್ಪೆನೆಂದು ತರವೇಟ್ಡಪೆ ಕಾಂತನಂ (ಜಗವಿ. ೧೭-೧೧೨) ; ತರವೇಟ್ ಸಾಳುವ ಮೇಗನಂ ತೊಗರನಂ ಹೆಗ್ಗಾಳನಂ ಜೂಗನಂ (ನಳಚಂ. ೬೬) ; ಇತ್ತ ನವರಿಗೆ ನೇಮವನು ಮುನಿಪೋತ್ತಮನ ತರಹೇಳೆ (ತೊರವೆ. ೦-೫-೩೪). **ತರವೋಗು**=ತರಲು ಹೋಗು ; ತೆಗೆದುಕೊಂಡು ಬರಲು ಹೋಗು : ಸಮಿತ್ಕುಶಮಂ ತರವೋಪ ಧೌತವಲ್ಕಲಮನಲುಂಬುಪಕ್ಷಮಣಿಯಂ ಸಮಯೀ ಪ್ಯವಸಾಯಮೆತ್ತಲುಂ (ಕಾದಂಪೂ. ೨೨೪). **ತರುಬರು** = (ಉಳಕೆ) (ಸಾಮಾನು ಮೊದಲಾದುವನ್ನು) ಕೊಂಡು ತಂದು ಒದಗಿಸು ; ವಹಿವಾಟು ನಡೆಸು: ಜಯಂತನು ಮನೆಯ ತರುಬರುವ ವ್ಯವಸ್ಥೆಯನ್ನು ಮಾಡುತ್ತಿದ್ದನು (ಜಯಂತ. ೦೫೩); ಮನೆಯಲ್ಲಿ ತರುಬರುವ ಸಣ್ಣ ದೊಡ್ಡ ಕೆಲಸಗಳನ್ನೆಲ್ಲ ಅವನೇ ಮಾಡುತ್ತಿದ್ದನು (ಸಂಚಿತ್ರ. ೨೪) ; ತರುಬರೋನ ಹೆಂಡತಿ ಅಡಬಲ್ಲಳು, ತಲೆಕೆರೆದುಕೊಂಡು ಉಣಬಲ್ಲಳು (ಗಾದೆ). **ತಾರಮ್ಮಯ್ಯ** = ಸಣ್ಣಮಕ್ಕಳನ್ನು ಆಡಿಸುವ ಒಂದು ಬಗೆಯ ಆಟ ಮತ್ತು ಆಗ ಹೇಳುವ ಹಾಡು : ಕೈಯ ತಾರಮ್ಮಯ್ಯಕ್ಕೆ ತೊಡಲ ನುಡಿಯ ತಿಲ್ಲಾಣ (ಉಯ್ಯಾಲೆ. ೦೯-೫). **ತಾರಮ್ಮಯ್ಯ ಮಾಡು** = ೧. ತಾರಮ್ಮಯ್ಯಹಾಡು : ಏನೋ ಸಮಯ ಎಂದು ಸಹಾಯ ಕೇಳಿದರೆ ತಾರಮ್ಮಯ್ಯ ಮಾಡಿಬಿಟ್ಟರು (ರೂಢಿ). ೨. ನಟಿಸು ; ಸೋಗುಹಾಕು. **ತಾರಮ್ಮಯ್ಯ ಹಾಡು** = ನಕಾರ ಸೂಚಿಸು; ಇಲ್ಲವೆಂದು ಕೈಯಾಡಿಸು: 'ಹಣಕ್ಕೀ ಕಷ್ಟವಾಗಿದೆಯಪ್ಪಾ, ನೋಡೋಣ ತಡೆ" ಎಂದು ತಾರಮ್ಮಯ್ಯ ಹಾಡಿದರು (ಮರಳಿ. ೦೭೨). ℙ ಈ ಧಾತು ಹಲವು ಶಬ್ದಗಳ ಜೊತೆಗೆ ಸೇರಿ ಸಂಯುಕ್ತಧಾತುಗಳಾಗಿ ವಿವಿಧವಾದ ಅರ್ಥಗಳಲ್ಲಿ ಬಳಕೆ ಯಾಗುತ್ತದೆ. ಉದಾ: ಎಯ್ತರ್, ಇಱುತರ್, ನಡೆತರ್, ಬೀಟ್ತರ್, ವಂನಂದರ್ ಇತ್ಯಾದಿ. [ದೇ.॥ ತಮಿ. ಮಲ. ತರು; ತೆಲು. ತೇರ್]

**ತರ$_1$** (ನಾ). (ಭಯ ಅಥವಾ ಕೋಪದಿಂದ) ನಡುಗುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ. 'ತರಗಂಟ್ಟು', 'ಥರ$_1$' ಪರಾ.

**ತರತರ$_1$** (ದ್ವಿರುಕ್ತಿ) : ಅದನ್ನು ಕೇಳಿ ತರತರ ಎಂದು ನಡುಗಿದಳು (ರೂಢಿ).

**ತರ$_2$** (ನಾ). ಸುಂಕ; ತೆರಿಗೆ : ತಿಱುನರಯಂಗಲ್ಲ ಕೊಯ್ದೆಲೆಯ ಹೇಱಿಂಗೆ ವೀಸವೊಂದು ತರ (?ಕೊಟ್ಟರ್) (ಮುಂಬರಾ. XI, ೨೫೪-೨೬ ; 1144). [ℙ ಇದು 'ತೆರ' ಎಂಬುದರ ಅಪಲಿಖಿತವಿರಬಹುದು ]

**ತರ$_3$, ಥರ$_2$** (ನಾ). ೧. ಸಾಲು ; ಓಳಿ ; ಕ್ರಮ ; ಪಂಕ್ತಿ : "ತರ ಪರಿವಿಡಿಯೆನಲ್ಕಿವು ಪರಿಯರ್ಥದೊಳ್" (ಕಶಶ. ೪೪) ; ತರದಿಂ ದೆಯ್ದುದ

ಮೊಗದೊಳ್ ಕರದೊಳ್ ತೊಡೆಯೊಳ್ ಪದಂಗಳೊಳ್ ದ್ವಿಜರುಂ ಭೂಪರುಮಂತೆ ವೈಶ್ಯರುಂ ಶೂದ್ರರುಮೋಜೆಯಿನೊಗೆದರೆಂಬರಿನ್ನವು ಪುಸಿಗಳ್ (ಸಮಪ. ೧೧-೫೪); ಇಂತು ತರದಿಂ ಸ್ವಪ್ನಂಗಳನೀರೆಂಟಂ ನೃಪ ಕುಲತಿಳಕನ ಸಿದ್ಧಾರ್ಥನರಸಿ ಕಂಡಳ್ಕಲವಿಂ (ವರ್ಧಪು. ೧೩-೬೩): ತರದೆ ಪಾಱಿದುವು ಬೆಳ್ವಕ್ಕಿ ನೂಲ್ದೆಗೆದಂತೆ (ಅನಂಪು. ೯-೧೬ ರಗಳೆ): ಹರಿಸದೆ ಸಗ್ಗದ ಜತಿಗಳ್ ನೆರೆದಂತೆರಡುಂ ಕೆಲಂಗಳೊಳ್ ತರದಿಂ ಕುಳ್ಳಿರೆ (ಕಬ್ಬಿಕಾ. ೧೬೪). ೨. ಸರಿಯಾದುದು; ಯೋಗ್ಯವಾದುದು; ಉಚಿತವಾದುದು: ತರವಲ್ಲದ ಕಾರ್ಯಮಂ ಪೊಗಳ್ದಡೆ ಸುರನರನಾಗಲೋಕ ಮೆಚ್ಚುವುದೇ (ಚೋರಹರ. ೭-೪೦); ಆವಳು ನಮ್ಮೊಡೆಯಂಗೆ ತರವಾದವಳ್ (ದೇವೀಮ. ೫-೭೫); ಕಯ್ಗೆ ಬಾರದ ಬೇಂಟೆಗಿಂದು ಕಯ್ ತುಡುಕುವುದೆ ತರವಲ್ಲ (ಅಂಶಿಗೂ. ೫-೭೭). ೩. ಅಂತಸ್ತು; ಯೋಗ್ಯತೆ; ದರ್ಜೆ: ಬರಿಸಿ ಋಷಿಗಳನವರವರ ತರವಱಿದು ಕೊಡಿಸಿದನು (ಕುಮ್ಮಾಅ. ೩-೩೭). ೪. ಮನೋಹರತೆ; ಸೌಂದರ್ಯ: ಮುನ್ನ[೦] ಕೆಯ್ಗೆ[ಯ್ಯುತಿರ್ದ] ತರದ ಗುಱುಗೆಯರಪ್ಪಂತಃಪುರ ಪುರಂಧ್ರಿಯರಂ ಕರೆದು (ಪಂಪಭಾ. ೩-೪೪ ವ): ತವತವಗೆ ಸಿದ್ಧ ಕನ್ಯಾನಿವಹಂ ಸಂಧ್ಯಾರ್ಚನಕ್ಕೆ ಸೂಸಿದ ಕುಸುಮಾಳಿವೊಲೆಸೆಯೆ ಪರೆದು ಕಣ್ಗೊಳಿಪುವು ತರದಿಂ ತುಱುಗಿ ಮಿಱುಪ ತಾರಾನಿಕರಂ (ಕಾದಂಪೂ. ೫೮೦); ಅಲರ್ಗಳನಾಂತ ಪಾದರಿಗಳೊಳ್ ತರದಿಂದೆಱಗಿರ್ದ ತುಂಬಿಗಳ್ (ಕಬ್ಬಿಕಾ. ೫೭). **ಥರ₄:** ೨. ದೊರೆಗಳೊಳುಮೆ ಉಂಟೆಂದೆಲ್ಲರೊಳು ಹಗೆ ಥರವಲ್ಲ [ಪಾಠಾಂ. ದೊರೆ ಎನ್ನ ಬಲವು ಸುಸ್ಥಿರ ವೆಂದೆಲ್ಲರ ಹಗೆ ತರವಲ್ಲ] (ಪುರಂದ. ೨-೪೫-೨); ಥರವಲ್ಲದ ಮಾತು ಮರಾ ಏರಿದರೂ ಆದೀತೇ ? (ಗಾದೆ). ೩. ಬೊಕ್ಕಸದಿ ತರಿಸಿದಂ ಧನಕನಕಮಣಿಗಳಂ ದಿಕ್ಕುದಿಕ್ಕಿನ ಧರಣಿಸುರರಿಗಂ . . . ಅವರವರ ಥರವನರಿತು ಇತ್ತನು (ತುರಂಗ. ೯೦-೩೦).

**ತರಂತರ, ತರತರ₄, ಥರಥರ₄** (ದ್ವಿರುಕ್ತಿ): ೧. ಸಾಲು; ಪಂಕ್ತಿ; ಕ್ರಮ: ನವದೂರ್ವಾಂಕುರಮಂ ಪಲ್ಲವಮಂ ಪೂಗೊಂಚಲಂ ತರಂತರದಿಂ ನೀಡುಮವೊಲ್ಮಣಿಕಿರಣಂ ಪೊಣ್ಮುವಿನಂ ಮಣಿದೊಡವನೋರ್ವಳಂಗನೆಗಿತ್ತಳ್ (ಮಲ್ಲಿಪು. ೪-೬೨); ಮುತ್ತು ಪಚ್ಚೆ ಪವಳಂ ವಜ್ರಂ ಸುನೀಲಂ ತರಂತರದಿಂ ಸಾಲಿಡೆ (ಪುಷ್ಪಪು. ೯-೫೪); "ತರತರವೆಂದು ಪಂಕ್ತಿಯೊಳ್" (ಕರ್ಣಾನಿ. ೦೨); ನೆಲದಾಕಾಶದೆಡೆಯೊಳಂಬುಗಳಂ ತರತರದಿಂದೆಚ್ಚು ಸೋಪಾನಂ ಮಾಡಿ (ಪಂಪಭಾ. ೭-೩೮ ವ); ಕಾರ್ಮುಕವ ತುಡುಕಿ ತರತರದಲ್ಲೈತಂದು ಬಿಲ್ಲಿನ ತಿರುವ ತೊಡಿಸಲು (ಸಂಭಪು. ೧೯-೨೮); ವರ ಸಣ್ಣಕ್ಕಿಯೋಗರ ತೊವ್ವೆ ಪಳಿದ್ಯವ ತರತರದಲಿ ಬಡಿಸಿದರು (ಮೋಹತ. ೩-೫೦). ೨. ಸಮೂಹ; ಗುಂಪು; ರಾಶಿ: ಸುರಿವ ಖಂಡದ ರಕುತಧಾರೆಗೆ ತರತರದಿ ದಾಯ್ದೆಗೆದು ಶಾಕಿನಿಯರ ಸಮೂಹವು ಬಳಿಯಲೈದಿತು ಪಾರ್ಥನಂದನನ (ಕುಮ್ಮಾದ್ರೋ. ೩-೪೧); ಕರುಣಾಮೃತಾಬ್ಧಿಯ ಕಲ್ಲೋಲಗಳಂತೆ ತರತರದೊಳು ಕವಿತರುವ ಸರಸಕಟಾಕ್ಷವನೆಸಗಿಯೆನ್ನೊಳು (ಹದಿಬ. ೦-೩೦); ಧುರದೊಳಗೆ ಬಿಲುಗಾಱರೊಗ್ಗಿನ ಹರಿಗೆಕಾಱರು ಹಲಗೆಯವರುಬ್ಬರದ ಡೊಂಕಣಿಕಾಱರಾಂತು ಕೃತಾಂತನಾಲಯವ ಥರಥರದಿ ಶೀವಿದರು ರುಧಿರದ ಹರಹು ಹೇರಾಳಿಸಿತು ಚೂಣಿಯೊಳು (ಕುಮ್ಮಾಭೀ. ೪-೪೭). ೩. ಅಂತಸ್ತು; ದರ್ಜೆ; ಮಟ್ಟ: ಕೊಟ್ಟನು ಬಂಗಾರವ ಬಲುಸುರುಳಿನ ಪಟ್ಟೆಯ ಕರಿತುರಂಗಗಳ ಕೊಟ್ಟನವರ ತರತರವಱಿದವನಂತೆ (ರಾಮವಿ. ೭-೪೮). ತರದೆ = ನಿರಂತರವಾಗಿ; ಒಂದೇ ಸಮನೆ: ಅನುಭವಿಸಿದ ಕೋಟಲೆಗಳನಿನಿಸಂದೆಣಿಸಲ್ಕೆ ಮೌಕ್ತಿಕಾಕ್ಷಾವಳಿಯುಂ ಮಪಜದಳನಯನೆ ಸಮೆದಪಳೆನೆ ಸುರಿದುವು ತರದೆ ತೋರ ಕಣ್ಬನಿದುಱುಗಲ್ (ಕಾದಂಉ. ೨೯೨). [ದೇ.೩ ತಮಿ. ಮಲ. ತುಳು. ತೆಲು. ತರ]

**ತರ₄** 'ಥರ₃' ನೋ.

**ತರ₅** (ನಾ). ಜವ; ವೇಗ: "ರಯಂ ಜವಂ ರಂಹಸಂ ತರ ಸ್ಯದಮೆನೆ ವಾಜಮೆನಲೋಟಮಕ್ಕುಂ" (ಮಂಗರಾ. ೮೧-೦೩); "ತರ–ತರಸ್=ವೇಗ" (ಕದ್ಯಕೋ. ೦೭): ತರದೇಂ ಬರ್ಪುದೆ ತೊಟ್ಟನಿಲ್ಲಿಗೆ ಮಹೀಭೃತ್ಕಂತುವಂ ದೇವಿ ಮೆಯ್ಗರೆದಾತಂ ಬರವೇಟ್ಕುಮೆಂದಿರದೆ ನಿನ್ನಂ ತಂದೆ (ಕುಸುಮಾ. ೧೩-೯೭). [ಸಂ. ತರಸ್]

**ತರ₆** 'ತರಹ' ನೋ.

**ತರಂಗ** (ನಾ). ೧. ಅತ್ತಿತ್ತ ಅಲೆಯುವುದು,–ಚಲಿಸುವುದು. ೨. ನೀರು, ವಿದ್ಯುತ್ತು, ಶಬ್ದ ಮೊದಲಾದುವುಗಳ ತೆರೆ,–ಅಲೆ: "ವೀಚೀ, ಭಂಗಃ, ತರಂಗಃ – ಈ ೩ ತೆರೆ" (ಹಲಾಯು. ೧೦೮–೩೦); "ವಳಿಯೆನೆ ತರಂಗವಿದು ತಾಂ" (ಕವಿಕಂ. ೯೦); ರಂಗತ್ತುಂಗತರಂಗಭಂಗುರಲಸದ್ಗಂಗಾಜಳಂ (ಪಂಪಭಾ. ೧೪-೩೧); ಜಳಧಿ ತರಂಗತಾಡಿತ ಮಹೀಪತಿ ಚಕ್ರಧರಂ ತಪಂಬಡಲ್ (ಅಜಿಪು. ೧೧-೧); ಒಡೆದ ಮಂದರವನು ತರಂಗದಲುದಧಿ ಹೊಯ್ವಂಡದಲಿ ಹೊಕ್ಕವು ಕುದುರೆ (ಕುಮ್ಮಾಕ. ೦೦-೮); ಉಚ್ಚಳಿತ ತರಂಗಪ್ರಪಾತದಿಂ ಚಲಿಯಿಪ ಪಾಂಗಳವಡೆ (ರಾಜಶೇ. ೦೨-೭೪); ಪುಲ್ಮನೆಯೊಳಿರ್ದು ಸೀತಾದೇವಿ ತಾನುತ್ಕಂಠೆ, ನೋಡುತಿರ್ದಳ್ ತರಂಗೋಲ್ಲಾಸಮಂ (ಶ್ರೀರಾಮಾ. ೩೩೦-೭). ೩. ಭಾಗ; ಪ್ರಕರಣ; ಅಧ್ಯಾಯ: ಆ ಒಂದು ಸಾಹಸದ ಸೋಲು–ಗೆಲುವುಗಳನ್ನು ಈ ಪ್ರಬಂಧದ ತರಂಗ ತರಂಗಗಳಲ್ಲಿ ಯಾರಾದರೂ ಕಾಣಬಹುದು (ಸೌಂದಸ I, ಮೊದಲಮಾತು). ೪. ಕುದುರೆಯ ಒಂದು ಬಗೆಯ ಗತಿ; ನಾಗಾಲೋಟ. ೫. [ಛಂದ] ಪ್ರತಿಪಾದದಲ್ಲಿ ಇಪ್ಪತ್ತೊಂದು ಅಕ್ಷರಗಳಿರುವ ಒಂದು ಸಮವೃತ್ತ: ಪಾವಕಂ ತ್ರಿದಿವ ಪಾವಕಂ ದಿವಿಜ ಪಾವಕಂ ಸುರಪ ಪಾವಕಂ . . . ಭಾವಿಸಿಂತಿದನೆ ಪೀವರಸ್ತನೆ ತ[ಪಾಠಾಂ. ತು]ರಂಗಮಂ (ಛಂದೋಂಬು. ೨-೦೫೦). [ಸಂ.]

**ತರಂಗಭಂಗ** (ನಾ). ಅಲೆಗಳು ಒಡೆಯುವಿಕೆ,–ಚೂರಾಗುವಿಕೆ: ಸುಧಾರ್ಣವಮೆಸೆದತ್ತು ರತ್ನವಳಯಾಂಚಿತ ತುಂಗತರಂಗಭಂಗದಿಂ (ಮಲ್ಲಿಪು. ೦೨-೧೩೦). [ತರಂಗ + ಭಂಗ]

**ತರಂಗಮಾಲೆ** (ನಾ). ಅಲೆಗಳ ಸಾಲು: ಕರಿಮಕರಂಗಳುಚ್ಚಳಿತ ಭಂಗುರ ತುಂಗತರಂಗಮಾಲೆಯಂ ಖರರದನಾಗ್ರದಿಂದಿಱಿಯೆ ಮುತ್ತುಗಳಂತಿರೆ ಸೂಸಿ ಪಾಯ್ವ ಶೀಕರದೊಳೆ ನಾಂದು (ಕಾವ್ಯಸಾ. ೭೮ ಶೂದ್ರಕ). [ತರಂಗ + ಮಾಲೆ]

**ತರಂಗರೇಖೆ** (ನಾ). ಅಲೆಯ ಆಕಾರದಲ್ಲಿ ಅಂಕುಡೊಂಕಾಗಿ ಇರುವ ರೇಖೆ,–ಗೆರೆ: ಸಂದೇಹಗ್ರಸ್ತವಾದ ಅಕ್ಷರವನ್ನೋ ಪದವನ್ನೋ ಪಂಕ್ತಿಗಳನ್ನೋ ನಿರ್ದೇಶಿಸಲು . . . ಅವುಗಳ ಕೆಳಗೆ ಒಂದು ತರಂಗರೇಖೆಯನ್ನು ಎಳೆದಿರುತ್ತಾರೆ (ಕನ್ನಸಂ. ೨೦೮). [ತರಂಗ + ರೇಖೆ]

**ತರಂಗಲಹರಿ** (ನಾ). ಅಲೆಗಳ ಸಾಲು,–ಪರಂಪರೆ: ಒಂದೇ ತರಂಗಲಹರಿಯಲ್ಲಿ ಬರುವ ಜಾತಿಯವು (ಮೂರ್ತಿಕಾ. ೩೨-೨). [ತರಂಗ + ಲಹರಿ₁]

**ತರಂಗಲೇಖೆ** (ನಾ). ಅಲೆಯ ಪಂಕ್ತಿ: ತಡೆಯದೆ ಚಿತ್ರವೇತ್ರಧರೆಯುಂ ರಥಮಂ ಕ್ಷಿತಿಪಾಂತರಕ್ಕದಂ ನಡೆಯಿಸಿದಳ್ ಸಮೀರಣಸಮುತ್ಥವಿಲೋಲ ತರಂಗಲೇಖೆ ಚೆಲ್ವಿಡಿದ ಸರೋರುಹಾಂತರಕೆ ಮಾನಿತಮಾನಸರಾಜಹಂಸಿಯಂ ನಡೆಯಿಸುವಂತೆ ಸುಂದರನತಾಂಸೆಯನಲ್ಪಕಪೋಲಮಾಂಸೆಯಂ (ಶಾಂತಿಪು. ೫-೧೧೨). [ತರಂಗ + ಲೇಖೆ]

**ತರಂಗವಾದ** (ನಾ). [ವಿಜ್ಞಾ] ಬೆಳಕು ಅಲೆಗಳ ಮೂಲಕ ಪ್ರಸರಿಸುವುದೆಂಬ ವಾದ: ತರಂಗವಾದವೂ ಬೆಳಕು ಪ್ರಸರಿಸುವಾಗ ಅನುಸರಿಸುವ ನಿಯಮಗಳನ್ನು ಸಾಧಿಸಲು ತಕ್ಕ ತಳಹದಿಯಾಗಿದೆ (ಭೌತವಿ. ೨೦೦). [ತರಂಗ + ವಾದ₃]

**ತರಂಗವಿಕ್ಷೇಪ** (ನಾ). ಅಲೆಗಳ ತುಯ್ದಾಟ,–ಕ್ಷೋಭೆ: ನಕ್ಷತ್ರಮಾಲೆಗಳು . . . ನೀಲಾಂಬರದಲ್ಲಿ ತೇಲಾಡುವುದಾದರೆ ಅದಾ ಸಾಗರದ ತರಂಗ ವಿಕ್ಷೇಪದ ಸ್ವರೂಪಕ್ಕೆ ಹೋಲುವುದು (ಕಪಾಕುಂ. ೧೮). [ತರಂಗ + ವಿಕ್ಷೇಪ]

**ತರಂಗಾಭ** (ಗು). ಅಲೆಗಳಂತಿರುವ : ಸಾರಸಾರಸನಾದಾಮಸಾರಸಾರ ನಿತಂಬೆಯಂ ತಾರಾತಾರಾತರಂಗಾಭಾಕಾರತಾ ರಮಣೀಯೆಯಂ (ಕವಿರಾ. ೨–೧೩೦). [ಸಂ.]

**ತರಂಗಿಣಿ** (ನಾ). ೧. ತೆರೆಗಳಿಂದ ಕೂಡಿದುದು ; ಹೊಳೆ ; ತೊರೆ; ನದಿ : "ಹ್ರದಿನಿ ತರಂಗಿಣಿ . . . ಧುನಿ ತೊಱೆ" (ವಸ್ತುಕೋ. ೨೩–೧೧) : ನಿರವದ್ಯ ನಿಖಿಲ ವಿದ್ಯಾತರಂಗಿಣೀಸಂಗದಲಿ ತೋಱುವ ಸುೞಿಯಂತಿರೆ . . . ಗಂಭೀರ ನಾಭಿಮಂಡಲಮೆಸೆಗುಂ (ಕಾದಂಪೂ. ೭೩೭) ; ಸೀತಾ ತರಂಗಿಣೀತರಂಗೋತ್ತರೆಯುಂ ನೀಲಾಚಲ ವಿಚಿತ್ರರತ್ನಕಟಕಮುಂ . . . ತನಗೆ ಸಹಜಾಭರಣವಾಗೆ (ಮಲ್ಲಿಪು. ೩–೨೩ ವ); ನವೀನ ನಿಜಭಕ್ತಿತರಂಗಿಣಿ ಮಿಱುತುಬ್ಬರಂಬರಿಯುತುಂ (ಶಂಪಾಶ. ೬) ; ಲಕ್ಷ್ಮಣದೇವನೆಸೆದನಯ್ . . . ನೆರೆಯೇರ್ದ ಮಳೆಗಾಲದ ಮಹಾ ತರಂಗಿಣಿಯ ಧೀರ ಶೈಲಿಯಲಿ (ಶ್ರೀರಾಮಾ. ೨೬–೬೮೮). ೨. [ಸಂಗೀತ] ಒಂದು ರಾಗದ ಹೆಸರು : ತರಂಗಿಣಿ–ಚಾರುಕೇಶಿ (ಸಂಗೀಚಂ. ೪೭). [ಸಂ. ತರಂಗಿಣೀ]

**ತರಂಗಿತ** (ಗು). ಅಲೆಗಳಿಂದ ಕೂಡಿರುವ; ತೆರೆಗಳೆದ್ದಿರುವ ; ಅಲೆಅಲೆಯಾಗಿರುವ : ದೂರದ ತರಂಗಿತ ದಿಗಂತದಲಿ ಚೈತ್ರರವಿ ಮುಗಿಲ ನೆತ್ತರ್ಗೆಂಪಿನಲಿ ಮುಳುಗುವೋಲಂತೆ (ಶ್ರೀರಾಮಾ. ೧೪–೩೭೮). [ಸಂ.]

**ತರಂಗಿಸು** (ಕ್ರಿ). ೧. ಅಲೆಯಂತೆ ಚಲಿಸು,– ಸಂಚಲವಾಗು : ಮತ್ತಂ ವಳಿವಕ್ರತೆಯನೀವ ವಹಣಿ ತರಂಗಿಸುವ ತಿರುಪು ಸುಳಿಗೊಳ್ವ ಹೆಂಪು ಇಂಪಂ ಕಱಿವ ಸುಧಾರಸಗಾನಂ ನಾನಾರಸದ ಲಹಣಿಯ ರೂಪುವಡೆಯೆ ಪಾಡುವ ಗಾಯಕರೊಳಂ (ಗಿರಿಕ. ೨–೧೦೫ ವ); ಘನಮೃದುತರ ಮೃದಂಗಗತಿ ರಯಿಸಲು ತರಂಗಿಸುವ ತಾನಮಾನಂಗಳ ಸುಗೀತಂಗಳು (ಸೌಂದಪು. ೧–೪೦). ೨. (ಆಲಂ) ಸಂದಣಿಸು ; ದಟ್ಟಯಿಸು : ಕೆಲಬಲದೊಳ್ ತುರಂಗಬಲಂ ತರಂಗಿಸೆ ಪದಾತಿಬಲಂ ಪಡಿಸಲಿಸೆ (ನಂಚಿರ. ೧೨–೧೪) ; ತರಂಗಿಪ ತನು ಕಾಂತಿಯಿಂದ ಶೃಂಗಾರರಸ ತಾನೆ ಸ್ತ್ರೀರೂಪನಾಂತ ಬೆಡಂಗಿನೊಳಿರ್ದಳಾ ಕನ್ನೆ (ಭರತ. ೫೮–೯೭). [ತರಂಗ + – ಇಸು$_3$]

**ತರಂಗು** (ನಾ).=ತರಂಗ ೨ : "ತರಂಗ–ತರಂಗು; ದಂಡ–ದಂಡು" (ಶಮಂದ. ೨೭೮ ಪ್ರಯೋ): "ತರಂಗು – ತರಂಗ = ನೀರ ತೆರೆ" (ಶದ್ಬಕೋ. ೧೭). [ <ಸಂ. ತರಂಗ ]

**ತರಂಗೊಳ್** (ಕ್ರಿ). ೧. ಸಾಲುಗೊಳ್ಳು ; ಕ್ರಮವನ್ನು ಹೊಂದು : ತರಂಗೊಂಡಿಕ್ಕಿದ ಹೊಸ ಹೊಂಗೇದಗೆಯಸಲ್ಗಳ್ (ಜಯುಕಾ. ೫–೬). ೨. ಸಾಲುಗೊಳಿಸು ; ಕ್ರಮವಡಿಸು : ಎಣಿಸಿ ತರಂಗೊಂಡು ನಕ್ಷತ್ರಮಂ ಪೇಳಾರಾನುಂ ಬಲ್ಲರೆ (ಎಕ. VII, ಶಿವಮೊ. ೬೪–೮೭ ; 1112). ೩. ಒಟ್ಟುಗೂಡು ; ಗುಂಪುಗೂಡು ; ಮೇಲೆ ಮೇಲೆ ಒದಗು : ವಿತತ ಪ್ರಾಚ್ಯಾದ್ರಿಪೀಠಾಗ್ರಿಮದರುಣಶಿಲಾವೃತ್ತಲಿಂಗಂಬೊಲಿಂಬಾಯ್ತು ತರಂಗೊಂಡೇಟ್ಗೆಯಿಂ ರಾಗದಿನುಪಚಿತಚೇತಶ್ಚಕೋರೀಕದಂಬಂ (ಜಗವಿ. ೧೭–೧೦೪) ; ಅಖಿಲವಿಮಾನ ತರಂಗೊಂಡು ತಡೆಯದೆ ನೊಂಕೆ (ಭರತ. ೫೭–೮೫). ೪. ಮನೋಹರವಾಗು ; ಸುಂದರವಾಗು : ಇದೇಲಾವನ ಪೊದ್ದುಗೊಂಡ ಕದಳೀಕಾಂಡಂ ತರಂಗೊಂಡ ಚೂತದ ಸಾಲ್ (ಶಂರಾಮಾ. ೧–೧೦೦).

**ತರತರಗೊಳ್ಳು** (ದ್ವಿರುಕ್ತಿ) : ದಂಡಧರ ಸೇನಾಧಿಪರು ಉದ್ದಂಡ ರಾಜರು . . . ತಂಡತಂಡದಿ ನಮಿಸಿ ತರತರಗೊಂಡು ಕುಳಿತಿರೆ (ಬಿಜ್ಜಪು. ೬೬–೧೩). [ತರ$_3$ + ಕೊಳ್$_1$]

**ತರಂಗೊಳಿಸು** (ಕ್ರಿ). ಕ್ರಮವಡಿಸು ; ಓರಣಗೊಳಿಸು : ತೆಗೆದು ತರಂಗೊಳಿಸಿದ ಪಂಚವರ್ಣ್ಣಗೆಯ ಪಟ್ಟೆಯ ಸಿಂಗರಿಸಿದ ಮಕರತೋರಣದ . . . ವೈಢೂರ್ಯದ ಲೋವೆಯ ಗಾಡಿವಡೆದ ಮಂಟಪದ ಮಧ್ಯದಲ್ಲಿ ನೆರೆದ ವಿಬುಧರಿಂ (ರಾಜಶೇ. ೮–೫ ವ). [ತರಂಗೊಳ್ + – ಇಸು$_3$]

**ತರೆಂಟು** 'ತಱಂಟಂ' ನೋ.

**ತರಂಡ$_1$** (ನಾ). ನೀರಿನ ಮೇಲೆ ಹೋಗುವ ಸಾಧನ; ತೆಪ್ಪ; ದೋಣಿ: ಎಸೆವ ವಾರ್ಧಿಯಂ ನೋಡುತುಂ ಕೊಂಡಾಡುತುಂ ತರಂಡದ ಮೇಲವರ್ಪೋಗುತಿರೆ (ಪದ್ಮರಾ. ೧೧–೦೭೬) ; ಕಲುಷಜಲಮುತ್ತರಿಪೊಡವದಿರ ಲಲಿತಪದಧೂಳೀತರಂಡಂಗೊಳದೆ ಶಕ್ಯನೆ ಮಾನವಂ ದುರ್ಮಾನವಂದ್ಯ ದೃಶಂ (ವಿವೇಚ. ೧೨–೬). [ಸಂ.]

**ತರಂಡ$_2$** (ನಾ). ಒಂದು ಬಗೆಯ ಸಸ್ಯ (?) : "ಗ್ರಂಥಿಫಲಾ – ತರಂಡ" (ಓಷಧಿ. ೪೭). [?]

**ತರಂಬಿಡಿ, ತರವಿಡಿ, ಥರಂಬಿಡಿ, ಥರವಿಡಿ** (ಕ್ರಿ). ೧. ಸಾಲುಹಿಡಿ ; ಕ್ರಮವಂನ್ನು ಹೊಂದು : ದೆಸೆದೆಸೆಯೊಳ್ ತರಂಬಿಡಿದು ಪಾಱುವ ವೀರರ ಸೆಕ್ಕೆ (ಎಕ. VII, ಶಿಕಾರಿ. ೨೪೨–೨೨ ; 1163). ೨. ಚೆಲುವಾಗು ; ಮನೋಹರವಾಗು : ಎಡ್ಡವಾದ ಪಡ್ಡಳಿಯ ಕಿಱುನನೆಯ ಕೊನೆ ತರಂಬಿಡಿದು ತೋಱೆ ಮೂಱುಂ ಧಾರೆಗಳನಳವಡಿಸಿದ ಕಿಂಕಿರಾತದೆಸಟಿ ಕಂಕಣಂಗಳುಮಂ (ಜಗವಿ. ೬–೧೭ ವ) ; ಪರಿವಿಡಿಯಿಂ ತರಂ[ಪಾಠಾಂ. ದಿತ್ತರಂ]ಬಿಡಿದು ಕಂದರ್ಪನಂ ಪಿಂದುಗಳೆವಂದಮಂ ತಳೆದು ನಿಂದ ರಾಜಪುತ್ರರಿಂ (ರಾಜಶೇ. ೫–೧೯ ವ). **ತರವಿಡಿ:** ೧. ತರವಿಡಿದು ಹಡಪದಾರತಿಯ ಮಜ್ಜನದಿ ಸಿಂಗರದ ಭೂಷಣ ಯಕ್ಷಕರ್ದಮದ . . . ನೆರವಿಗಳ್ಸಹಿತ ಪುಷ್ಪಕವೇೞ (ಲಕಿಚಂ. ೧೩–೭); ಕುರುಬಲನಿಕರ ತಳಿತುದು ತರವಿಡಿದು ಕಳನೊಂದು ಮೂಲೆಯಲಿ (ಕುಮಾ.ಕ. ೨–೯). ೨. ಚಿಮ್ಮುವ ಚಾಮರದ ತರವಿಡಿದ ಸೀಗುರಿಗಳ ವಿಡಾಯಿಯ ನೊಸಲ ಬಾಸಿಗದ . . . ರಾಜ ಕುಮಾರಕರು ನಡೆತಂದರೊಲವಿನಲಿ (ತೊರರಾ. ೧–೦೬–೪೦). **ಥರಂಬಿಡಿ:** ೧. ಸಿರಿ ಸತಿಯರ ಸಾಲ್ವಿಡಿದಿಹ ಸರ್ವಾಮರನಿಚಯದ ಮುಂದೆ ಥರಂಬಿಡಿದಿಪ್ಪ ದಿಶಾಧಿಪರಂ ಬಳಸಿದ ಮನುಮುನಿತತಿಯಿಂ ಸಭೆಯೊಪ್ಪಿದುದು (ವೀರೇಚ. ೧–೦೫). **ಥರವಿಡಿ:** ೧. ಅಂಗಣದ ವೀಧಿಗಳ ಥರವಿಡಿದಂಗಡಿಯ ಪುಣ್ಯೋಪಕರಣದ ತುಂಗರಚನೆಯ ರಾಜಮಾರ್ಗದ ವರಪತಾಕೆಗಳ . . . ಈಕ್ಷಿಸುತ ನಡೆದರು (ನಿಭಾಗ. ೧೧–೩೬–೩೦).

**ತರತರಂಬಿಡಿ** (ದ್ವಿರುಕ್ತಿ) : ೧. ಸಾಲಾಗು ; ಕ್ರಮವಾಗಿರು ; ಓಳಿಗೊಳ್ಳು: ಗಜಘಟಾಘಳಕ ಕರಿಮಕರ ಕೈಗೈದ ಬಿಳಿಯ ಚಮರಿಗಳು ನೂರೆ ತರತರಂ[ಪಾಠಾಂ. ಥರಥರಂ] ಬಿಡಿದ [ಪಾಠಾಂ. ಬಿಡದೆ, ವಿಡಿದ] ಥಟ್ಟುಗಳು ತೆರೆತೆರೆಯ ಬಳಗ (ಸೋಮುಚ. ೫–೩೦) ; ಮಹಾವಿಭವದಿಂ ಪರಿಪರಿಯ ಬಣ್ಣದಾರತಿಗಳಂ ಹೊನ್ನ ಹರಿವಾಣಂಗಳೊಳ್ ತುಂಬಿಸಿ ತರತರಂಬಿಡಿದು ನಡೆತಂದು . . . ನಿವಾಳಿಸಿ ಬಿಸುಟು ತೂಪಿಱಿದು (ಚಬಪು. ೫–೧೯). ೨. ಮನೋಹರವಾಗು; ಚೆಲುವಾಗು: ಮತ್ತಮಾಸ್ಥಾನಮೆಂಬ ನೀರ್ ತೆಗೆದ ರತ್ನಾಕರದೊಳಲ್ಲಲ್ಲಿ ತರತರಂಬಿಡಿದುಗುಡಿಸಿದ ರತ್ನರಾಶಿಗಳೆ ಮೆಂಬಂತೆ ಮಣಿನಿಕರಖಚಿತ ಮಕುಟಕೋಟಿಗಳ್ ಮೆಱೆಯೆ (ಗಿರಿಕ. ೨–೧೦೫ ವ). [ತರ$_3$ + ಪಿಡಿ$_1$]

**ತರಂಬೆಱು** (ಕ್ರಿ).=ತರಂಬಿಡಿ ೧: ನೆರೆನೆರೆದು ತರಂಬೆತ್ತು ಭರ್ಮಹರ್ಮ್ಯಂಗಳೊಳ್ಕೊರ್ಮೆಯಿಂ ನೋಳ್ಪ ಪೊಳಲ್ವೆಂಡಿರ ಕಣ್ಗೆ ಕೌತುಕಾವಹಮಾಗೆ ನರೇಂದ್ರಂ ತುರಂಗಮಂ ಕರತಳಾಸ್ಫಾಳನಂಗೆಯ್ದು (ರಾಜಶೇ.೧೩–೭೭ ವ). [ತರ$_3$ + ಪೆಱು$_1$]

**ತರಕಟ** 'ತಱಿಕಟ' ನೋ.

**ತರಕಟಾಲು** (ಗು). ಕೆಲಸಕ್ಕೆ ಬಾರದ; ಉಪಯೋಗವಿಲ್ಲದ: ತರಕಟಾಲು, ಕ್ಷುದ್ರ,-ಮನುಷ್ಯ (Scrub. ಇಂಕನಿ.) ; ಅದು ನಿಮ್ಮ ತರಕಟಾಲು ಗಡಿಯಾರದ ಹಾಗಲ್ಲ (ಸಾಹೇಬ್. ೯೪೩). 'ತಟಿಕಟ' ಪರಾ.

[ ←ತೆಲು. ತರಕಟ, ತಟಿಕಟ = ವ್ಯರ್ಥ, ಪೊಳ್ಳು ]

**ತರಕಲು** (ನಾ). ೧. ಒರಟಾದಂದು ; ನಯವಿಲ್ಲದಂದು. ೨. ಕಲ್ಲು, ಮರಳಂಗಳ ಸಣ್ಣ ಕಣ. ೩. (ಧಾನ್ಯಗಳ) ನಂಚ್ಚು; ತರಿ; ರವೆ: (+).

**ತರಕಲು ತರಕಲು** (ದ್ವಿರುಕ್ತಿ) : ಅವರು ಆ ಕಡ್ಡಿಯನ್ನು ಪೆಟ್ಟಿಗೆಯ ಮೇಲೆ ತರಕಲು ತರಕಲಾಗಿದ್ದ ಕಡೆ ಸ್ವಲ್ಪ ತಿಕ್ಕಿದರು (ಕಳಹು. ೯೮) ; ಅವರ ಮೈಯೂ ಮೊಸಳೆಯ ಚರ್ಮದಂತೆ ತರಕಲು ತರಕಲು (ನಮ್ಮರು. ೩೮). [ ತರಕು + - ಅಲು (< - ಅಲ್₂). / ತೆಲು. ತರಕಲು ]

**ತರಕಷ್** 'ತರಕಸ' ನೋ.

**ತರಕಷಿ** 'ತರಕಸ' ನೋ.

**ತರಕಸ**, ತರಕಷ್, ತರಕಷಿ (ನಾ). ೧. ಬಾಣದ ಕೋಶ ; ಬತ್ತಳಿಕೆ : ತರಕಸ ಸಿಂಗಾಡಿ ಕೂರಂಬು ಖೇಡೆಯ ಕರವಾಳು (ಚಂಪ್ರಸಾಂ. ೨೦-೫೯) ; ಸರಳು ತುಂಬಿದ ತರಕಸ ಸಿಂಗಾಡಿಗಳಿರದೆ ಸಾಸಿರ ಬಂಡಿಗಳಲಿ ಪರಿಪೂರ್ಣದಲಿ ಬರುತಿರ್ದುವು (ಕಂನವಿ. ೧೦-೩೭) ; ಬೆನ್ನ ಬಳಿಯ ತರಕಸ (ಬತ್ತಳಿಕೆ)ಗಳನ್ನು ಪುಡಿಮಾಡಿದರು (ಕರ್ಣಾಜ. ೧೪೭). ೨. ಅಂಬು; ಬಾಣ: ಅದಱ ಮೇಲಿದ್ದ ಬಲ್ಲಹಂಗೆ ಬಲ್ಲಹ ಟೌಳಿ ಸುಲಲಿತ ತರಕಸ ಸಿಂಗಾಡಿಗತ್ತಿ (ಸುಂಕಬಂ. ೬೪) : ತರಕಸ ಸಿಂಗಾಡಿ ಕರದೊಳು ಬಲ್ಲೆಯ ತುಂರಗದ ಮೇಲೆ ಕತ್ತಿಗಳು . . . ಠೌಳಿಯನಾಂತುರವಣಿಸಿತ್ತು ರಾವುತರು (ಅಂಜಚ. ೬-೭೦). ೩. ಬಿಲ್ಲು; ಧನುಸ್ಸು : ಪೊನ್ನ ಬತ್ತಳಿಕೆಯಂ ಬೆನ್ನೊಳ್ಳಳಿದು ತರಕಸ ಮನೆಡಮೆಗಲೊಳ್ಕೊಡರ್ಚಿ (ರಾಜಶೇ. ೬-೧೧ ಪ). **ತರಕಷ್**: ೨. ಮೊದಲು ತರಕಷ್ ಕಮಾನ್ ಲಡಾಯಿ ಆಯಿತು (ಚಿಕ್ಕಪಾ. ೫೭). **ತರಕಷಿ** : ೨. ಅನಂತರ ರಾಜಭೂವರರು ಖಾಸಾ ಆನೆಗಳಿಗೆ . . . ಸವಡೋಲು ಹಾಕಿಸಿ ತರಕಷಿ ಕಮಾನುಗಳನ್ನು ಆ ಸವಡೋಲಿನಲ್ಲಿಡಿಸಿದರು (ಬಖೈರು. ೧೩).

[ ←ಹಿಂ. ತರಕಸ್, ತರಕಶ್, ತೀರಕಸ್ ; ಮರಾ. ತರಕಸ್, ತರಕಶ್, ತರ್ಕಶ್ ; ಪಾರ. ತರ್‌ಕಶ್, ತೀರ್‌ಕಶ್ ]

**ತರಕಾರಿ**, ತರ್ಕಾರಿ₂ (ನಾ). ೧. ಕಾಯಿಪಲ್ಯ ; ಅಡುಗೆಗಾಗಿ ಬಳಸುವ ಸಸ್ಯ, ಕಾಯಿ ಮೊದಲಾದುವು : ಮಾರುಕಟ್ಟೆಯಿಂದ ತಂದ ತರಕಾರಿಗಳನ್ನು ಮೊದಲು ತೊಳೆದು . . . ಕೊನೆಗೆ ಬೇಯಿಸುವುದಷ್ಟೆ (ಅಡುಸಾ. ೦೨) ; ರಾಧಾಬಾಯಿ ತರಕಾರಿ ತರಲೆಂದು ಕೆಲಸದ ಆಳಿನ ಜೊತೆಗೆ ಮಾರ್ಕೆಟಿಗೆ ಹೋದರು (ವಾತ್ಸಲ್ಯ. ೨೩) ; ತರಕಾರಿ ತೋಟಗಳನ್ನು ಮಾಡಬೇಕಾದರೆ ನೀರು, ಗೊಬ್ಬರ ಇವುಗಳ ವಸತಿ ಚೆನ್ನಾಗಿರಬೇಕು (ವ್ಯವಮು. ೫೯). ೨. ತರಕಾರಿಯಿಂದ ಬೇಯಿಸಿ ಮಾಡಿದ ಪಲ್ಯ : ತರಕಾರಿ ಊಟಕ್ಕೆ ಸೊಗಸು ಕೊಡುತ್ತದೆ (ರೂಢಿ). **ತರ್ಕಾರಿ₂**: ೧. ತರ್ಕಾರಿ ತರಲು ಚಿಲ್ಲರೆ ತೆಗೆದುಕೊಳ್ಳಲು ಅಂಗಿಯ ಜೇಬಿಗೆ ಕೈಹಾಕುತ್ತಾನೆ (ನಡದಾ. I, ೫೦೨). [ ←ಪಾರ. ಹಿಂ. ಮರಾ. ತರಕಾರೀ ]

**ತರಕಿ**, ತರಕ್ಕಿ(ಗು). ೧. ಬಲವಾದ; ಹೆಚ್ಚಿನ; ಮೇಲಾದ: ದುರುಳ ದೈತ್ಯರ ಕೊಂದು ನಾರಿಯರಿಗೊಲಿದು ನೀ ಸರಕು ಮಾಡದೆ ಜಾಂಬವಂತನೊಡನೆ ತರಕಿ ಯುದ್ಧವ ಮಾಡಿ ತಪ್ಪದೆ ಮುರಹರಾ ಕೌಸ್ತುಭ ಸ್ಯಮಂತಮಣಿ ಮುದ್ದು ಕನ್ನಿಕೆಯ ಕರಗ್ರಹಣವನೆ ಮಾಡಿ (ಶ್ರೀಕೃಪಾ. ೦೪). **ತರಕ್ಕಿ** : (ನಾ). ೨. ಏಳಿಗೆ ; ಅಭಿವೃದ್ಧಿ ; ಉನ್ನತಿ : ನಿಮ್ಮ ತರಕ್ಕೀ ಸಲುವಾಗಿ ನಾನೇಸ್ವತಃ ನಿಮ್ಮನ್ನು ರಿಕಮೆಂಡ್ ಮಾಡಿ ಕಳಿಸೀನಿ(ಜೀದಾನ. ೬೨).

[ ←ಮರಾ. ತರಕೀ ; ಪಾರ. ಅರ. ಹಿಂ. ತರಕ್ಕೀ ]

**ತರಕು**, ದರಕು, ದರಗು₂, ದೊರಗು (ನಾ). ೧. ಒರಟಾದುದಂ; ನಯವಿಲ್ಲದುದು. ೨. ತರಿತರಿಯಾದುದು; ನುಚ್ಚು : (+). **ದರಕು** : ೧. 'ದರಕಂದನಿ' ಪರಾ. **ದರಗು₂** : ೧. 'ದರಗುನಾಲಗೆ' ಪರಾ. **ದೊರಗು**: ೧. ಒರಟಾದ ನೆಲ ಇಲ್ಲವೆ, ದೊರಗಿನ ಮೈಯುಳ್ಳ ಪದಾರ್ಥ (ಬಾಲಕ್ಷ. II, ೮೦೯) ; ಪಾತ್ರೆ ಒರಸುವ ವಸ್ತ್ರ ದೊರಗಾಗಿ ಟವಲಿನಂತೆ ಇರಬೇಕು (ಅಡುಸಾ. ೪೭).

**ತರಕುತರಕು** (ದ್ವಿರುಕ್ತಿ) : ಹಿಟ್ಟು ತರಕುತರಕಾಗಿದೆ (ರೂಢಿ).

[ <ತಱು₂. / ತಮಿ. ತರಿಚು; ಮಲ. ತರಿಸು; ತುಳು. ದೊರಗ್ ]

**ತರಕ್ಕಿ** 'ತರಕಿ' ನೋ.

**ತರಕ್ಕು** (ನಾ). ಒಂದು ಬಗೆಯ ಭೂಮಿ (?) : ಮುಕ್ಕಣ್ಣ ಕತ್ತು ಮಣಮ್ಮನೆಯುಮ್ಮಾಟುಪ್ಪಟ್ಟಿಯುನ್ನರಕ್ಕುವ್ ಒಡೆಅನ್ (ಮ್ಯುಆರಿ. ೦೯೪೨, ೩೦-೫೪.; 610). [ ? ]

**ತರಕ್ಷು** (ನಾ). ೧. ಹುಲಿಯ ಜಾತಿಗೆ ಸೇರಿದ, ಮೈಮೇಲೆ ಪಟ್ಟೆಗಳುಳ್ಳ ಒಂದು ಬಗೆಯ ಪ್ರಾಣಿ; ಕಿರುಬ. ೨. ಹುಲಿ; ವ್ಯಾಘ್ರ: "ವ್ಯಾಘ್ರಃ, ದ್ವೀಪೀ, ಪುಂಡರೀಕಃ, ತರಕ್ಷುಃ, . . . ಮೃಗಾರಿಃ – ಈ ೭ ಹುಲಿ" (ಹಲಾಯು. ೩೮-೭೩) ; ವಾಯಸಗೃಧ್ರಸಂಕುಳವೃಕಪ್ರಕರೋರು ತರಕ್ಷು ಋಕ್ಷ ಗೋಮಾಯು ನಿಕಾಯಮಂ ತಣಿಪಿ (ಪಂಪಭಾ. ೭೦-೦೦೭); ಎರಲೆಯ ಕೋಡಿಂ ಕಣ್ಣಂ ತರಕ್ಷು ತುಱುಸಿದುವು ನೆಱೆದು ಸಿಂಗದ ಮಱೆಗಳ್ ಶರಭದ ಕೆಲದೊಳ್ ನಲಿದುವು ನಿರವದ್ಯಚರಿತ್ರನಿರ್ದ ಋಷ್ಯಾಶ್ರಮದೊಳ್ (ಮಲ್ಲಿಪು. ೦೪-೦೮); ತರುಣ ವನಹರಿಣಯುಗಮಂ ತರಕ್ಷು ಪಿಡಿವಂತೆ ಚಂಡಕರ್ಮಂ ಪಿಡಿದಂ (ಯಶೋಚ. ೧-೪೭); ಕನಲ್ಕೆಯಿಂ ನೋಡಿ ಕಡಂಗಿ ಗರ್ಜಿಪ ತರಕ್ಷುಗಳೊಪ್ಪುಗುಮಾ ವನಾಂತದೊಳ್ (ರಾಜಶೇ. ೫-೭೩). [ ಸಂ. ]

**ತರಗ** 'ತಱಗು' ನೋ.

**ತರಗಡಿ** (ಕ್ರಿ). ಸಾಲನ್ನು ಕಡಿ; ಗುಂಪಿನಿಂದ ಬೇರೆಮಾಡು: ಪಿಂಕೊಂಡು ಬಹ ಸೇನೆ ತರಗಡಿದು ಕರಗಡಿದು ನೂಂಕಿದರು (ಜನಮು. ೩೯-೨೫).

[ ತರ₃ + ಕಡಿ₂ ]

**ತರಗಡೆ** (ನಾ). ಕೊರತೆ ; ನಷ್ಟ ; ಹಾನಿ : ಅಪಹಾರಃ, ಅಪಚಯಃ – ೨ ಹಾನಿಯ ಪೆಸರು. ಕೊಯಿಲು, ಕಸುಗೊಳ್ಳುವಿಕೆ, ತರಗಡೆ ಬರುವಿಕೆ (ಸಿದ್ಧಾಂತಿ. ೩೦೦). [ <ತಱಕಟ ]

**ತರಗತಿ** (ನಾ). ೧. ವರ್ಗ ; ಇಯತ್ತೆ; ಕ್ಲಾಸು : ಕೊನೆಯ ತರಗತಿಯವರೆಲ್ಲಾ ನುಗ್ಗಿ ಖುರ್ಚಿಗಳನ್ನು ಆಕ್ರಮಿಸಿ . . . ಕಲ್ಲುಗಳನ್ನು ತೆಗೆದುಕೊಂಡು ಹೊಡೆಯಲಾರಂಭಿಸಿದರು (ರಾಯಳ. ೭೭) ; ಪ್ರಥಮ ಮಧ್ಯಮ ತರಗತಿಯ ಪಾಠಗಳನು ಮನೆಯೊಳೆ ಹೇಳಿದರೆನಗೆ (ಇಂಜಾಕ. ೦೪-೫೮). ೨. ಮಟ್ಟ ; ದರ್ಜೆ : ಸಲಕರಣೆಗಳು . . . ಒಳ್ಳೆಯ ತರಗತಿಯವುಗಳಾಗಿರಬೇಕು (ಅಡುಸಾ. ೩೨); ಬಿ. ಎ. ಪರೀಕ್ಷೆಯಲ್ಲಿ ಅತಿಉಚ್ಚ ತರಗತಿಯಲ್ಲಿ ಉತ್ತೀರ್ಣನಾದನು (ಸನ್ನಳ. ೯೫). ಇದನ್ನು 'ತರ+ಗತಿ' ಎಂಬ ಸಂಸ್ಕೃತ ಶಬ್ದಗಳಿಂದ ರೂಪಿಸಿಕೊಂಡಿರಬಹುದು. ತರ = ತರಣ, ಗತಿ = ಗಮನ. [ ?. / ತೆಲು. ತರಗತಿ ]

**ತರಗಬರಗ** 'ತಾಱಗಬೀಱಗ' ನೋ.

**ತರಗಾರ** (ನಾ). ಇಟ್ಟಿಗೆ ಕೆಲಸ ಮಾಡುವವನು ; ಉಪ್ಪಾರ : ಗೋಡೆಯನ್ನು ತರಗಾರರು ಕಟ್ಟುತ್ತಾರೆ (ಮುಂಬಯಿ. ೪-೦೦೮) ; ಆವಳ ಗಂಡ ರುದ್ರಪ್ಪ ತರಗಾರ (ಬಂದಜೀ. ೭೯). [ ? + - ಗಾರ (< -ಕಾಱ) ]

**ತರಗು₁** 'ತಱಗು' ನೋ.

**ತರಗು₂**, ತರುಗು (ನಾ). ೧. ದಳ್ಳಾಳಿ ; ಸುಂಕ ; ವಟ್ಟ : 'ತರಗುಪೇಟೆ' ಪರಾ. ೨. ದಳ್ಳಾಳಿ ವ್ಯಾಪಾರ ನಡೆಸುವ ಸ್ಥಳ : ಹಳೇ ತರಗಿಗೆ ಬಂದು ಯಾರನ್ನು ಕೇಳಿದರೂ ಹೇಳುತ್ತಾರೆ (ಶಾಯಿಕ. ೮೨). **ತರುಗು** : ೩. ಸೋಡಿ ; ರಿಯಾಯಿತಿ : "ತರುಗು, ವಟ್ಟ, ದಳ್ಳಾಳಿ" (Discount. ಪಾರಿನಿ. ೩೦).

**ತರಗಿಸಂಗಡಿ** = ದಳ್ಳಾಳಿ ಅಂಗಡಿ; ವ್ಯಾಪಾರದ ವಮೌಲ್ಯದ ಮೇಲೆ ರುಸುಮು ತೆಗೆದುಕೊಳ್ಳುವ ಅಂಗಡಿ: (+). **ತರಗಿನ ಪೇಟೆ** = ಮಾರುವ ಸ್ಥಳ; ಅಂಗಡಿ ಬೀದಿ : ವಿಪಣಿಃ, ಪಣ್ಯವೀಥಿಕಾ – ೨ ಅಂಗಡಿಬೀದಿ, ತರಗಿನ ಪೇಟೆ, ಮಾರ್ಕೆಟ್ಟು, ಮಾರುವ ಕೇರಿ (ಸಿದ್ಧಾಂತಿ. ೮೮).

[ ದೇ.ಶ ತಮಿ. ಮಲ. ತರಕು; ತೆಲು. ತರಗು, ತರುಗು, ತಱುಗು ]

**ತರಗುಗುಡಿಸು** (ಕ್ರಿ). ೧. ಒಣಗಿದ ಎಲೆಗಳನ್ನು ಗುಡಿಸು; ಕಸಕಡ್ಡಿಗಳನ್ನು ಗುಡಿಸು : ಅವನು ತರಗುಗುಡಿಸುತ್ತಿದ್ದಾನೆ (ರೂಢಿ). ೨. (ಆಲಂ) (ಮನೆ ಕಟ್ಟುವ ಸಂದರ್ಭದಲ್ಲಿ) ಭೂಶುದ್ಧಿಮಾಡು : ಯಲೆಯೂರವಳಿತವದರಮನಹಳಿ ಗ್ರಾಮವನು ನಿನಿಗೆ ಪುವ್ರಕೆ ನಡದು ಬರುವಂತ ತರಗು[ಗು]ಡಿಸಿ ಕಟ್ಟಿಸಿದ ದಸೆಗೌಡನ ಹಳಿ (ಎಕ. XII, ಶಿರಾ. ೯೩-೦೦ : ೪) ; ಅವರು ತರಗುಗುಡಿಸಿ ಮನೆ ಕಟ್ಟಿದಾಗ ಯಾವ ತರಹ ಮನೆ ಕಟ್ಟಿದರೋ ಅದೇ ತರಹ ಮನೆಗಳಲ್ಲಿ, ಬಹುಶಃ ಅದೇ ಮನೆಗಳಲ್ಲಿ, ಈಗಲೂ ಇದ್ದಾರೆ ಎಂದು ಹೇಳಬಹುದು (ಪನ್ನೂರು. ೬).

[ ತರಗು$_1$ (<ತಱಗು) + ಗುಡಿಸು$_1$ (<ಗುಡಿಯಿಸು) ]

**ತರಗುಟ್ಟು** (ಕ್ರಿ). (ಕೋಪ ಅಥವಾ ಭಯದಿಂದ) ನಡುಗು; ಕಂಪಿಸು: ತರಗುಟ್ಟುತ್ತಾ . . . ಅವರ ಮನೆಯ ಋಣಾನುಬಂಧ ಹರಿಯಿತು ಎಂದು ಮನಸ್ಸಿನಲ್ಲಿ ತೀರ್ಮಾನಿಸಿಕೊಂಡಳು (ಕೂನಳ. ೦೯೯). 'ಥರಗುಟ್ಟು' ಪರಾ.

**ತರತರಗುಟ್ಟು** (ದ್ವಿರುಕ್ತಿ) : ಅವನು ಹೆದರಿಕೆಯಿಂದ ತರತರಗುಟ್ಟಿದ (ರೂಢಿ). **ತರತರಗುಟ್ಟಿಸು** = ಬಹಳವಾಗಿ ನಡುಗಿಸು : ಅನೇಕ ವಿಷಯಗಳನ್ನು ಸಂಗ್ರಹಿಸಿಕೊಂಡು ಬಂದಿದ್ದ ನಬತೋವ್ ತರತರಗುಟ್ಟಿಸುವಂಥ ಸುದ್ದಿ ತಂದಿದ್ದನಂ (ಪುನರು. ೩೪೩). [ ತರ$_1$ + ಕುಟ್ಟು$_1$ ]

**ತರಗುಪೇಟೆ** (ನಾ). ದಳ್ಳಾಳಿ ವ್ಯಾಪಾರ ನಡೆಯುವ ಪೇಟೆ,–ಮಾರುಕಟ್ಟೆ : ಹೊಸ ತರಗುಪೇಟೆಗಳ ಮಂಡಿವರ್ತಕರು (ಶಾಮಿಕಾಂ. ೦೯೯).

[ ತರಗು$_2$ + ಪೇಟೆ$_2$ ]

**ತರಗೆಲೆ** 'ತಱಗೆಲೆ' ನೋ.

**ತರಚಲು** (ನಾ). ತರಚಿಕೊಂಡುದು ; ಪರಚಿದುದು: ಏನಾದರು ಗೀಚುಗಳು ಛಾಯೆಗಳು ತರಚಲುಗಳು (ಗ್ರಾಮಾಳ. ೫೯).

[ ತರಚು$_1$ (<ತಱಚು) + – ಅಲು (< – ಅಲ್$_2$) ]

**ತರಚೀಟಿ** (ನಾ). ಕರಚೀಟಿ ; ಅಪ್ಪಣೆ ಚೀಟಿ : ತಾಟಿತಸು ಕಂಶದಲುಸುರ ಪರಿಪಾಟ ತಪ್ಪಿತು ವ್ಯತ್ಯುವಿನ ತ[ಪಾಠಾಂ. ಥ, ದ, ಧ]ರಚೀಟಿ ಹಿಡಿದನೊ ಹೇಳೆನೆಲು ಮಲಗಿದನು ವ್ಯೆಮಱೆದು (ಕುಮಾ್ಯಗ. ೬-೧೨).

[ ? + ಚೀಟಿ$_2$ (<ಚೀಟು$_2$) ]

**ತರಚು$_1$** 'ತಱಚು' ನೋ.

**ತರಚು$_2$** 'ತಱಿಚು' ನೋ.

**ತರಜೆಗತ್ತರಿ** (ನಾ). (ಕುದುರೆಗೆ ತೊಡಿಸುವ) ಒಂದು ಬಗೆಯ ಆಭರಣ: ನೆತ್ತಿಯ ಬೆಳ್ಗಱಿಯ ನೊಸಲ ಕನ್ನಡಿಯ ರೇವಂತಮಾಲೆಯ ಗರ್ಗರದ ತರಜೆಗತ್ತರಿಯ ಪೊರ್ಕುಳ ಘಂಟೆಯ . . . ತುರಗಸಂಘಾತದಿಂ (ರಾಜಶೇ. ೬-೧೧ ವ). [?]

**ತರಟ** (ನಾ). ಬೋಳುತಲೆಯುಳ್ಳವನು : ಅವನೊಬ್ಬ ತರಟ (ರೂಢಿ).

[ ತರಟು (<ತಱಟು) + – ಅ$_7$ ]

**ತರಟು** 'ತಱಟು' ನೋ.

**ತರಟುತಲೆ** 'ತಱಟುದಲೆ' ನೋ.

**ತರಟುದಲೆ** 'ತಱಟುದಲೆ' ನೋ.

**ತರಟೆ** 'ತಱಟೆ' ನೋ.

**ತರಡಿ** (ನಾ). (ಉಕ) ಚಿಕ್ಕ ತಟ್ಟೆ; ಸಣ್ಣ ತಬಕ: ವಿಜಯಾಬಾಯಿ ಎದ್ದು ಒಳಗೆ ಹೋಗಿ ಒಂದು ತರಡಿಯಲ್ಲಿ ಅಂದೇ ತಯಾರಮಾಡಿದ ಗುಲಾಬಜಾಮು ಮತ್ತು ಚಕ್ಕುಲಿ ತೆಗೆದುಕೊಂಡು ಬಂದಳು (ಕ್ಷಿತಿಜ. ೬೦).

[ ←ಮರಾ. ಥರಡೀ ]

**ತರಡಿಗೆ** (ನಾ). (?) : ಪಡುವಲು ತೆಂಕಣದ ಕಲ್ಲಯ ಬಂಡರೆ ಬಡಗಲು ಪಡುವಲು ಕರಿಯ ತರಡಿಗೆ ಮೂಡಲು ಬಡಗಲು ಬೀಚನ ಮರಡಿ . . . ಬಂಡೆ ತೆಂಕಲು ಯೀ ಚತುಸೀಮೆ (ಎಕ. X (S), ಮಾಲೂರು. ೦೪೬-೦೦ : 149ಶ). [?]

**ತರಡು** 'ತರುಡು' ನೋ.

**ತರಣ$_1$** (ನಾ). ತ್ರಾಣ; ಶಕ್ತಿ; ಸಾಮರ್ಥ್ಯ : "ತ್ರಾಣ – ತರಣ" (ಶಮದ. ೨೫೪ ಪ್ರಯೋ) ; "ತರಣ – ತ್ರಾಣ = ಶಕ್ತಿ, ಆಧಾರ" (ತದ್ಭ ಕೋ. ೦೭) ; ಅಂದಿನ ಮಹಿರಾವಣ ರಾವಣ ಕುಂಭಕರ್ಣಾದ್ಯರ ಸೊರ್ಕುಂ ಜೆರ್ಕುಂ ನಿಮ್ಮವರ ತರಣದ ನೆಲೆಯುಂ ಪೇಟವೆ ! (ರಾಮಾಶ್ವ. ೦೦೨-೦೯). [ <ಸಂ. ತ್ರಾಣ ]

**ತರಣ$_2$** (ಗು). ೧. ದಾಟಿಸುವ ; ಪಾರುಗಾಣಿಸುವ : ಪ್ರಬಲಭಕ್ತಿಷಂಡಂ ಸುಗುಣಮಣಿಕರಂಡಂ ಭವಾಂಬುಧಿತರಣ ತರಂಡಂ (ಪದ್ಮರಾ. ೦-೦೯). (ನಾ). ೨. ದಾಟುವಿಕೆ ; ಪಾರಾಗುವಿಕೆ. 'ತರಣಪಣ್ಯ' ಪರಾ. ೩. (ನೀರನ್ನು) ದಾಟುವ ಸಾಧನ ; ಹಡಗು, ದೋಣಿ, ಹರಿಗೋಲು ಮುಂತಾದುವು : ಸಕಲ ಭಯಹರನೆ ನಿನ್ನಭಯಕರಂ ಸಂಸಾರವಾರ್ಧಿ ತರಣಂ ಶರಣಂ (ವಸ್ತ್ರ ಪಂ. ೦೬-೦೨೧). [ ಸಂ. ]

**ತರಣಕ** (ನಾ). ದಾಟುವವನು ; ಪಾರಾಗುವವನು ; ಅತಿಕ್ರಮಿಸುವವನು : ಧೃತಮಾನಮಾನಸರ್ಕಪಿತಮುಖಕರ್ಕಶವರ್ತಿತತರಣತರಣ ಕರ್ಚಂಡಭುಜಬಲಯುತನರ್ತಿತಕಾಷ್ಮೀರಕಾಷ್ಮಿಗಳ್ಕಡುಪಿಂದೆ ಕಾದಿದರ್ (ಚ್ಯಮಿಥಾ. ೨೨-೩೦). [ ಸಂ. ]

**ತರಣದ್ರೋಣಿ** (ನಾ). (ನೀರನ್ನು) ದಾಟಿಸುವ ದೋಣಿ; ಹರಿಗೋಲು: ದುರಿತವ್ರಾತಲತಾಕೃಪಾಣಿ ವಿಸರದ್ದು ರ್ಬೋಧ ರೋಧಸ್ವಿನೀತರಣ ದ್ರೋಣಿ . . . ವಾಣಿ (ಚಂದ್ರಪ್ರ. ೦-೦೨). [ ತರಣ$_2$ + ದ್ರೋಣಿ ]

**ತರಣಪಣ್ಯ** (ನಾ). ದಾಟಿಸುವುದಕ್ಕಾಗಿ ಕೊಡುವ ಕೂಲಿ ; ದೋಣಿಗೆ ಕೊಡುವ ಕೂಲಿ : ನಾವಿಕರ್ಗೆ ತರಣಪಣ್ಯಮನಿತ್ತು ಮನ್ನಿಸಿ ಇರ್ವರು ಮನುಕೂಲದೆಡೆಯ ಪುಳಿನದೊಳಿಟ್ಟಿದರ್ (ರಾಮಾಶ್ವ. ೩೦-೯).

[ ತರಣ$_2$ + ಪಣ್ಯ ]

**ತರಣಿ** (ನಾ). ೧. ದಾಟುವಿಕೆ ; ಹಾಯುವಿಕೆ. ೨. ದಾಟುವ ಸಾಧನ ; ದೋಣಿ ; ಹರಿಗೋಲು ; ಹಡಗು : "ತರಣಿ ಯಾನ ಪಾತ್ರಂ" (ವಸ್ತುಕೋ. ೨೩-೦೦) : ಪ್ರಬಲವಾದ ಜಲಪ್ರವಾಹದ ವೇಗವು ತರಣಿಯನ್ನು ರಸೂಲಪುರದ ನದಿಯ ಮಧ್ಯಭಾಗಕ್ಕೆ ಹೊಡೆದುಕೊಂಡು ಹೋಯಿತು (ಕಪಾಕುಂ. ೮). ೩. ಸೂರ್ಯ ; ರವಿ ; ಭಾನು : "ರವಿ ಮಾರ್ತಂಡಂ . . . ತರಣಿ ಸಪ್ತಾಶ್ವನಾದಿತ್ಯನಕ್ಕುಂ" (ವಸ್ತುಕೋ. ೦೦-೬೪) ; ಸನ್ನಯಾಯಿಕೋದ್ಯತ್ತಿಮಿರ ತರಣಿಯಾ ಬಂಧನೀ ಬಂದನೀ ಬಂದನ್ (ಎಕ. II, ೦೪೦-೦೪೬ : 1145) ; ನರಸಿಂಗಮೊನೆಯರ್ ಶಾವೆ ಕೈಗೊಟ್ಟು ತರಣಿಯಂ ಪೂರ್ವಾದ್ರಿಗೇಱಿಸುವ ಮಾಳ್ಕೆಯಿಂ (ನಂಬಿರ. ೫-೬೪) ;ತರಣಿ ತೇಜಂಗೆಡದಿರಗ್ನಿ ಬಿಸುಪಾಱದಿರು (ಹಹಕಾ. ೨-೩೦) ; ತರಣಿ ದೂರದೊಳಿಹನು ; ಕಿರಣ ನಮಗೆಟಕುವುದು (ಮಂಕುಕ. ೨೦೯). ೪. ಒಂದು ಬಗೆಯ ಅಸ್ತ್ರ ; ಸೂರ್ಯಾಸ್ತ್ರ : ಅರಸನೆಚ್ಚಾ ಸರ್ಪಬಾಣವ ಗರುಡಬಾಣಾದಿ ತಮಕೆ ತರಣಿಯ (ಕೌಶಿರಾ. ೨೨-೩೦). ೫. ಒಂದು ಬಗೆಯ ಸಸ್ಯ : ತರಣಿ, ರಾಯಬೋರೆ (ವೃಕಿಗಿ. ೨೦-೩೬೪) : ಪಾಪಟಿ, ಪಾಪಟಿ, ತರಣಿ, ಸೂಳೆಬೊಟ್ಟುಗಿಡ (ವೃಕಿಗಿ. ೬೦-೧೨೦೩).

ತರಣಿಯ ತನಯ=ಸೂರ್ಯನ ಮಗ ; ಕರ್ಣ : ತರಣಿಯ ತನಯನ ನೆನೆದಾಸ್ಮರಣದೇ ಕಣ್ಗಳ್ಮುನ್ನ ಶೋಕವಮಹಾಸಾಗರಮಂ ತವೆ ಪೀರ್ದುದು ಭೀಕರ ಮತ್ಸ್ಯೋಪಾಗ್ನಿ ಬಾಡಬಾಗ್ನಿಯ ತೆಱದಿಂ (ಗದಾಯು. ೫-೩೭). [ಸಂ.]

**ತರಣಿಕರ** (ನಾ). = ತರಣಿಕಿರಣ : ತರಣಿಕರೋತ್ಕರಾಹತಿಗೆ ತಕ್ಕ ತಮಂ ನೆಱೆ ಬಂದು ತನ್ನಸಾವರಿಸಿದುದು (ಕುಸುಮಾ. ೨-೫೮) [ತರಣಿ + ಕರ$_3$]

**ತರಣಿಕಾಂತ** (ನಾ). ಸೂರ್ಯಕಾಂತ ; ಸ್ಫಟಿಕ : "ತರಣಿಕಾಂತಮಿನಾಶ್ಮ ಮೆಂದೆನಲ್ ಸ್ಫಟಿಕಮಕ್ಕು" (ಮಂಗರಾ. ೩೦-೬). [ತರಣಿ + ಕಾಂತ$_2$]

**ತರಣಿಕಿರಣ** (ನಾ). ಸೂರ್ಯಕಿರಣ : ತರಣಿಕಿರಣಕ್ಕೆ ಭುಗಿಲೆಂದುರಿವಿನ ಮಾಣಿಸಾನುವಿಂದವೋಸಱಿಪೆಡೆಯೊಳ್ (ಚಂದ್ರಪ್ರ. ೧೦-೩೭). [ತರಣಿ + ಕಿರಣ$_1$]

**ತರಣಿಕುಲ** (ನಾ). ೧. ಹಡಗುಗಳ ಗುಂಪು,-ಸಮೂಹ. ೨. ಸೂರ್ಯ ವಂಶ; ರವಿಕುಲ: ತರಣಿಕುಲಾಗ್ರಗಣ್ಯ ಬಿಡದಾಲಿಸು (ಉದ್ಭಟ. ೬-೧೧೯). ೧, ೨ : ತರಣಿಕುಲರಥಘನಹರಿದ್ವಿರದಾತುಳವನಚರಾಗ್ರಪದಬಲದಿಂದಂ ಧರಣೀಶಂ ರಾಮನವೊಲ್ ಸುರಗಣವರವರದ ಶರಧಿಕರಮೆಸೆದಿರ್ಕುಂ (ಅಭಿನ್ಯ.ರ. ೦-೪೦). [ತರಣಿ + ಕುಲ]

**ತರಣಿಜ** (ನಾ). ೧. ಸೂರ್ಯನ ಮಗ; ಕರ್ಣ; ತರಣಿಜನಂತೆ ದಾನ ಗುಣದಿಂ ರಘುವಂಶಜನಂತೆ ಸತ್ವದಿಂ . . . ಅಮರನೀತಿ ಸಮಾಖ್ಯದ ಭಕ್ತ ನೊಪ್ಪುವಂ (ತ್ರಿಪುವಿ. ೯-೫). ೨. ಸುಗ್ರೀವ : ಮುನ್ನ ನೊಂದವರಳು ಕುವರು ದಿಟ ಎನ್ನ ಪತಿ ತರಣಿಜನ ನುಡಿಸುವೆ ಹರನ ಹೊಣೆಗೊಡುವೆ (ಕೌಶಿರಾ. ೭-೬). ೩. ಶನಿ. ೪. ಯಮ. [ಸಂ.]

**ತರಣಿನಂದನ** (ನಾ). = ತರಣಿಜ ೨ : ತರಣಿಯಂತಿಹ ರತುನಪದಕವ ತರಣಿನಂದನಗಿತ್ತ ಮಾಣಿಕವಿರಚಿತಾಂಗವನಿತ್ತನಂಗದಗೆ (ಕೌಶಿರಾ. ೪೪-೫೨). [ತರಣಿ + ನಂದನ]

**ತರಣಿಪ್ರಭ** (ನಾ). ಸೂರ್ಯನಂತೆ ಕಾಂತಿಯುಳ್ಳವನು,-ತೇಜಸ್ವಿ ; ತರಣಿಪ್ರಭನರ್ಭಕನೀ ತರುಣಿಯ ಹೃತ್ತಿಮಿರಮಂ ನಿರಾಕರಿಸಿ ತಿರಸ್ಕರಿಸಿದಂ (ಜಗವಿ. ೨-೯೨). [ಸಂ. (ತರಣಿ + ಪ್ರಭಾ + -)]

**ತರಣಿಬಾಣ** (ನಾ). ಸೂರ್ಯಬಾಣ ; ಸೂರ್ಯಾಸ್ತ್ರ: ಕರದಿ ಕೋದಂಡ ದಲಿ ರಘುಪತಿ ತರಣಿಬಾಣವ ಹೂಡಿ ತೆಗೆದಿಸೆ . . . ಬೆಳಕು ಪಸರಿಸಿತು (ಕೌಶಿರಾ. ೦೯-೨೭). [ತರಣಿ + ಬಾಣ]

**ತರಣಿವೀಧಿ** (ನಾ). ಪೂರ್ವಪಶ್ಚಿಮವಾದ ಬೀದಿ ; ಸೂರ್ಯಬೀದಿ : ಎರಡು ಬಾಗಿಲ ಸೂತ್ರದಲಿ ವಿಸ್ತರಿಸಿದಂಗಡಿ ಸೋಮವೀಧಿಯ ತರಣಿ ವೀಧಿಯಲವರವರ ಪಾಳೆಯಕೆ ಮುರಿವುಗಳ ಸುರರು ಸ್ಪೃಶ್ಯಿಸಬಾರದಿನ್ನೀ ನರರುಗಳ ಪಾಡೇನು (ಕುಮ್ಮಾ.ಉ. ೧೦-೪೮). 'ಸೋಮವೀಧಿ' ಪರಾ. [ತರಣಿ + ವೀಧಿ]

**ತರಣಿಸುತ** (ನಾ). ಸೂರ್ಯನ ಮಗ; ಶನಿ : ಗುರುರವಿಗಳುತ್ತುಂಗ ಭಾಗೆಯುಲಿರಲು ತರಣಿಸುತ ಜೂಕದಲಿ ಮೆಱೆದಿರೆ . . . ಪುತ್ರೋದಯ ಗಳಾದವು ಭೂಪ ದಶರಥಗೆ (ಕೌಶಿರಾ. ೦-೬೭). [ತರಣಿ + ಸುತ]

**ತರಣೋಪಾಯ** (ನಾ). ದಾಟುವ ಉಪಾಯ ; ಪಾರಾಗುವ ಹಂಚಿಕೆ: ಅವರೊಡನೆ ಸಹಕಾರವಾಗಲೀ "ರಾಜಿ" ಯಾಗಲೀ ಸಾಧ್ಯವಿರಲಿಲ್ಲ ಸಾಧಿಸಿದರೆ ಅದು ಕೇಶವನೊಡನೆ ಸಾಧಿಸಬೇಕು. ಇದೇ ತರಣೋಪಾಯ ವೆಂದು ಅವರಿಗೆ ಮನವರಿಕೆಯಾಯಿತು (ಸಮುಜೀ. ೩೪೬). [ತರಣ$_2$ + ಉಪಾಯ]

**ತರತಮ** (ನಾ). ಹೆಚ್ಚು ಕಡಮೆ ; ಮೇಲು ಕೀಳು ; ತಾರತಮ್ಯ : ತರತಮವಾಗಿ ಯೋಗಿತತಿ ಯೋಗವಿಭೇದದ ನಿಟ್ಟಿಪ . . . ಮಹಾತ್ಮನೆ (ಜಗವಿ. ೬-೪೦) ; ವಾಚಕರ ತರತಮಗಳನ್ನರಿತು ಗ್ರಂಥಗಳನ್ನಾಯ್ದುಕೊಳ್ಳ ಬೇಕು (ಗ್ರಂಥಾಲ. ೦೧). [ಸಂ.]

**ತರತಮಭಾವ** (ನಾ). ನ್ಯೂನಾಧಿಕ್ಯ ; ತಾರತಮ್ಯ : ಕೂಡಿ ನುಡಿವಡ ಯೊಳೆಂದುಂ ಕೂಡದು ಲಿಂಗತ್ರಯಕ್ಕೆ ತರತಮಭಾವಂ (ಶಮದ. ೦೪೧). [ತರತಮ + ಭಾವ$_2$]

**ತರತರ$_1$** 'ತರ$_1$' ಪರಾ.

**ತರತರ$_2$** 'ತರ$_3$' ಪರಾ.

**ತರತರ$_3$** 'ತರಹ' ಪರಾ.

**ತರತರನೆ** (ಅ). ಗಡಗಡನೆ : ಛಳಿಯಿಂದ ಅವನು ತರತರನೆ ನಡುಗುತ್ತಿದ್ದಾನೆ (ರೂಢಿ). [<ತರ$_1$ + - ಅನೆ$_1$]

**ತರತರಿಸು$_1$** (ಕ್ರಿ). ನಡುಗಂ ; ಕಂಪಿಸು : ಹಱಿಯ ಹೊಯ್ಲಿನಲುಮರಗಿರಿ ತರತರಿಸೆ (ತೊರರಾ. ೩-೬-೮) : ಎಡವುತೆ ಪೂರ್ಣಕುಂಭಗಳ ಭೃಂಗಾರವ ಕೆಡವುತ ತರತರಿಸುತೆ ಬಿರ್ದು ಒಡೆವುತೆ ಗಳಿಗೆವಟ್ಟಲ ಪಾರ್ವರ ಮೇಲೆ ಕೆಡೆದನು ಮೂರ್ಛೆವೋದವನಂತೆ (ತ್ರಿಭುತಿ. ೯-೩೫). [<ತರ$_1$ + - ಇಸು$_3$]

**ತರತರಿಸು$_2$** (ಕ್ರಿ). ವಿಧವಿಧವಾಗಿರು : ಫಲ್ಗಿಸಿ ಗಟ್ಟಿಯ ಕಟ್ಟಿದ ಪರಿಯ [ಯು]ರು ಪುಲ್ಲಿಗೆಗಳು ತರತರಿಸೆ (ಮೋಹತ. ೩-೫೭). [<ತರ$_6$ + - ಇಸು$_3$]

**ತರತರೀತ** (ನಾ). ೧. ಸೊಗಸಾದುದು ; ತಾಜಾ : ನಮಗೆ ತರತರೀತ ಬೇಕು (ರಕ್ತಾಕ್ಷಿ. ೩೦೮). ೨. ಚಟುವಟಿಕೆಯುಳ್ಳದುದು ; ಲವಲವಿಕೆ ಯುಳ್ಳುದು : ಜಳಕಾ ಬಗೀಹರಿಸಿ, ಅಷ್ಟ ಉಂಡ ಅಡ್ಡಾಗರಿ ತರತರೀತ ಆಗತೀರಿ (ದೀಪಹ. I, ೦೩೫). [<-ಮರಾ. ತರತರೀತ್]

**ತರತ್ತರಂಗ** (ನಾ). ಚಲಿಸುತ್ತಿರುವ ಅಲೆ : ಭಾಸ್ಕರತನೂಜೆಯನುಭಯತಟ ನಿಕಟಕುಸುಮನಿವಹ ತತ್ತರಾಗಪಟಳ ಪಿಶಂಗಿತತರತ್ತರಂಗಸರೋಜೆಯಂ ಮೆಚ್ಚಿ ಪೊಗಟ್ದು ಜಲಕ್ರೀಡೆಯಾಡಲ್ ಬಗೆದು (ಪಂಪಭಾ. ೫-೫೮ ವ). [ಸಂ. (ತರತ್ + ತರಂಗ)]

**ತರತ್ತರಂಗೆ** (ನಾ). ಚಲಿಸುತ್ತಿರುವ ಅಲೆಗಳುಳ್ಳವಳು ; ಉಕ್ಕುತ್ತಿರುವ ತರಂಗಗಳುಳ್ಳವಳು ; ನದಿ : ಗಂಗೆಗೆ ಶಫರೋಚ್ಚಳಿತ ತರತ್ತರಂಗೆ ಗೊರ್ವಳೆ ಬಂದಳ್ (ಪಂಪಭಾ. ೧-೯೦). [ಸಂ. ತರತ್ತರಂಗಾ (ತರತ್ + ತರಂಗ + -)]

**ತರತ್ತರಳ** (ಗು). ಚಲಿಸುವ ; ಕಂಪಿಸುವ ; ಚಂಚಲವಾದ : ಸುಲಿಪಲ್ ಮಿಂಚಿನ ಗೊಂಚಲುಟ್ಟ ದುಗುಲಂ ಗಂಗಾನದೀಫೇನಮುಜ್ಜ್ವಲ ಮುಕ್ತಾ ಭರಣಂ ತರತ್ತರಳ ತಾರೋದಾರ ಭಾಭಾರಮಂಗಲತಾ ಲಾಲಿತ ಸಾಂದ್ರ ಚಂದನರಸಂ ಬೆಳ್ದಿಂಗಳೆಂಬೊಂದು ಪಂಬಲ ಬಂಬಲ್ಗೆ[ಡೆ]ಯಾಗೆ ಬೆಳ್ಪಸದಕಕೆ ಕಣ್ಗೊಪ್ಪಿತಾ ಕಾಂತೆಯಾ (ಪಂಪಭಾ. ೧-೦೩೭). [ಸಂ. ತರತ್ತರಲ (ತರತ್ + ತರಲ)]

**ತರತ್ತಾರನೇತ್ರ** (ನಾ). ೧. ಚಂಚಲವಾದ ಗುಡ್ಡೆಯಿರುವ ಕಣ್ಣು. ೨. ಅಂತಹ ಕಣ್ಣುಗಳುಳ್ಳವನು : ಘನಕೋಪಾಟೋಪವಮಂ ತಾಳ್ದರುಣತರ ತರತ್ತಾರನೇತ್ರಂ ತತಸ್ಪಂದನಯುಕ್ತೋಷ್ಠಂ . . . ಭೋಂಕನೆ ಬಂದಂ (ರಾಜಶೇ. ೫-೧೨೦). [ಸಂ. (ತರತ್ + ತಾರ + ನೇತ್ರ)]

**ತರದೂದು, ತದ್ರೂದು** (ನಾ). ೧. ಸಜ್ಜು ; ಏರ್ಪಾಟು ; ಸಿದ್ಧತೆ ; ತಯಾರಿ : ಆಳು ಬಹಳ ತರದದೂದಿನಿಂದ . . ತಗಾದೆ ತಪ್ಪಿಸಿಕೊಂಡು . . . ಓಡಿಹೋದನು (ಕಥಾಮಂ. IV, ೬೫) ; ತಮ್ಮ ಇಷ್ಟ ಈಡೇರು ವುದಕ್ಕೆ ತಕ್ಕ ತರದೂದನ್ನು ಮಾಡುತ್ತಿದ್ದರು (ಮುಸುಗಿ. ೫೨) : ತನಗೆ

ಬಹಿಷ್ಕಾರ ಹಾಕಿಸಬೇಕೆಂತ ತರದೂದು ನಡೆಸುತ್ತಾ ಇದಾರೇಂತ ಹೇಳು (ಘೋಂಗಲ್. ೨೨); ಹೀಗೆ ಕೆಲಸದ ತರದೂದಿನಲ್ಲಿರುವಾಗ ಒಂದು ವಿಶೇಷ ಘಟನೆ ಜರುಗಿತು (ಇ ಬ ದು. ೦೨೯). **ತರ್ದೂದು:** ೨. ಅವಸರ; ಜರೂರು: ಅವರು ತರ್ದೂದಾಗಿ ಹುಣಸೂರಿಗೆ ಹೋಗವ್ರೆ (ಸರ್ವಮಂ. ೦೫).
[←ಅರ. ತರದ್ದುದ್; ಹಿಂ. ತರದ್ದುದ್; ಮರಾ. ತರತೂದ್, ತರದೂದ್]

**ತರದೇವಾಡಿ** 'ತರ್ದವಾಡಿ' ನೋ.

**ತರನದಿ** (ನಾ). ದಾಟಬೇಕಾದ ನದಿ: ಉರಗವು ಗಜ ಹಯ ಸಿಂಹವು ಚರಿಸುವ ಪಥದೊಳಗೆ ತಾವು ಬೆದರದೆ ಬೇಗಂ ಹರಿಯನು ನೆನೆಯುತ ಮನದೊಳ್ ತರನದಿಗಳ ದಾಂಟಿ ಭರದಿ ಬಂದರು ವನದೊಳ್ (ಹಮೂಜ. ೬೫). [ಸಂ. ತರನದೀ]

**ತರನ್ಮಣಿ** (ನಾ). (?): ಕಿಱಿದೆಂದನಱಿವೆಳ್ಪುಂದುಱಿದ ನರಂ ಚಿಂತಿತಾರ್ಥದಿ ತರನ್ಮಣಿಯಂ ಕಿಡಿದೆಂದುಱಿದನ ತೆಱದಿಂ ಬಱಿದಾಗದೆ ಬಯಸಿದರ್ಥಮಂ ಪಡೆದಪನೆ (ಶ್ರೀಪದಾ. ೧೧). [?]

**ತರಪಡಿ** (ನಾ). ಅಡಕೆಯಲ್ಲಿರುವ ಧೂಳು, ಚೂರುಗಳ ತೂಕವನ್ನು ಸರಿತೂಗಿಸುವುದಕ್ಕಾಗಿ ಕೊಡುವ ಹೆಚ್ಚಿನ ಭಾಗ: ಗೇಣಿದಾರರು ಗೇಣಿಯನ್ನು ಕೊಡುವುದರ ಜೊತೆಗೆ ತರಕಾರಿ, ತರಪಡಿ, ತಳರಾಸಿ, ಮೇಲ್ಗೊಳಗ, ಲಾಭಸರೆ ಮುಂತಾದ ಮರ್ಯಾದೆಗಳನ್ನೂ ಭೂಮಾಲೀಕರಿಗೆ ಕೊಡಬೇಕಾಗಿತ್ತು (ಹಂಜಪಂ. ೧೧).
[ತರ? + ಪಡಿ$_1$]

**ತರಪಣ್ಯ** (ನಾ). = ತರಣಪಣ್ಯ. [ಸಂ.]

**ತರಪು** (ನಾ). ವಜ್ರವನ್ನು ಹೋಲುವ ಒಂದು ಬಗೆಯ ಕಡಮೆ ಬೆಲೆಯ ಬಿಳಿಯ ಹರಳು: (ಕ).
[ದೇ.॥ ತಮಿ. ತರುವು, ತಱುವು; ತೆಲು. ತರುಪು, ತಱುವು]

**ತರಪೇತಿ** 'ತರಬೇತು' ನೋ.

**ತರಪೇತು** 'ತರಬೇತು' ನೋ.

**ತರಪೇತುಕೇಂದ್ರ** (ನಾ). (ಯಾವುದಾದರೊಂದು ವಿಷಯದಲ್ಲಿ) ಶಿಕ್ಷಣವನ್ನು ಕೊಡುವ ಕೇಂದ್ರ,–ಸಿದ್ಧಪಡಿಸುವ ಸಂಸ್ಥೆ: ಅವನು ತರಪೇತು ಕೇಂದ್ರದಲ್ಲಿ ಶಿಕ್ಷಣ ಪಡೆದು ಬಂದಿದ್ದಾನೆ (ರೂಢಿ).
[ತರಪೇತು (<ತರಬೇತು) + ಕೇಂದ್ರ]

**ತರಫ್** 'ತರ್ಫೆ' ನೋ.

**ತರಫು, ತರ್ಫಿ, ತರ್ಫು** (ನಾ). ೧. ನಿಟ್ಟು; ದಿಕ್ಕು; ಪಕ್ಷ. 'ಚೌತರಫು' ಪರಾ. ೨. ಗುಂಪು; ಬಣ; (ಕ). ೩. ದೇಶದ ಒಂದು ಭಾಗ; ಜಿಲ್ಲೆ: (ಕ). **ತರ್ಫಿ:** ೨. ಮುನಿಸೀಪಾಲಿಟಿ ಮತದಾರ ತರ್ಫಿಯಿಂದ ಅನಿಲನು ಆ ಕಾರಕೂನನ ಮೇಲೆ ಕೇಸುಹಾಕಿದನು (ಅಪನಾ. ೮೧); ಇಸೋಪನು ಮುಂದೆ ಬಂದು, ತನ್ನ ಒಡೆಯ ತರ್ಫಿಯಿಂದ . . . ಹೇಳಿದನು (ಇಸೋಕಪ. ೯). **ತರ್ಫು:** ೧. ಪ್ರಜೆಗಳ ತರ್ಫಿನಿಂದ ಕರಿಸಿಕೊಂಡ ಪ್ರತಿನಿಧಿಗಳನ್ನು ಕೂಡಿಕೊಂಡು ರಾಜ್ಯವನ್ನು ಸಾಗಿಸಿದರು (ಮುಂಬಯಿ. ೬–೧೩೦); ಕೋರ್ಟಿನಲ್ಲಿ ಪೋಲೀಸು ತರ್ಫು ಕೇಸನ್ನು ನಡೆಸಿದ ಇನ್‌ಸ್ಪೆಕ್ಟರು ಚನ್ನಮರಪಜರವರು ಹೇಳಿದರು (ಕಲಿನ. ೩೧೪).
[←ಅರ. ಹಿಂ. ಮರಾ. ತರಫ್, ತರ್ಫ್]

**ತರಫೆ** 'ತರ್ಫೆ' ನೋ.

**ತರಬರ** (ನಾ). ಆತುರ; ಚಿಂತೆ (?): ತರಬರದೊಳು ವೈಷ್ಣವರನು ನೆನೆವಿಗೊಂಡಿರದೃತಂದೊಡನೆನ್ನ ಕರೆದೊಯ್ಯು (ಕರ್ನಾಕ. ೩೨೬).
[?]

**ತರಬಿಯತ್ತು** 'ತರಬೇತು' ನೋ.

**ತರಬೇತಿ** 'ತರಬೇತು' ನೋ.

**ತರಬೇತು, ತರಪೇತಿ, ತರಪೇತು, ತರಬಿಯತ್ತು, ತರಬೇತಿ, ತರ್ಬಿಯತ್ತು** (ನಾ). ಶಿಕ್ಷಣ; ತಿದ್ದುವಿಕೆ; ಪಳಗಿಸುವಿಕೆ; ಸಿದ್ಧಗೊಳಿಸುವಿಕೆ: ಅನುಭವಶಾಲಿಗಳಾದ ಒಬ್ಬ ವೈದ್ಯರನ್ನೂ, ಉತ್ತಮ ತರಬೇತು (Training) ಪಡೆದ ಸೂಲಗಿತ್ತಿಯನ್ನೂ ಗೊತ್ತುಮಾಡಬೇಕು (ಗೃಹವಿ. ೧೦೨). **ತರಪೇತಿ:** ವಸ್ತುತಃ ನಿಸ್ವಾರ್ಥತೆಯು ಸಾಧನೆಗೆ ಅದು ಉತ್ತಮ ತರಪೇತಿಯನ್ನು ಕೊಡಬಲ್ಲದೆಂಬುದನ್ನು ಹಿಂದೂಧರ್ಮವು . . . ತೋರಿಸಲು ಯತ್ನಿಸುತ್ತಿದೆ (ತತ್ತ್ವಪ್ರಾ. ೫೭೮); ಆತನಿಗೆ ಕೆಲವು ಅರ್ಹತೆಗಳಿರಬೇಕು: ಸೂಕ್ಷ್ಮದೃಷ್ಟಿ, ಹೆಚ್ಚಿನ ಲೌಕಿಕಜ್ಞಾನ . . . ಮುದ್ರಣದಲ್ಲಿ ತರಪೇತಿ . . . ಮತ್ತು ಎಲ್ಲಾ ವಿಷಯಗಳ ಅರಿವು (ಮುದ್ರಕ. ೨೯). **ತರಪೇತು:** "ಅವನ ತರಪೇತೇ ಇರಬೇಕು" ಎಂದು . . . ಹೇಳುತ್ತಾರೆ (ಗೋಪುರ. ೬೦); ನೀವೆಲ್ಲ ಮುಂದೆ ನಮ್ಮ ದೇಶದ ನಾಯಕರಾಗುವವರು. ಈಗಿನಿಂದಲೇ ಅದಕ್ಕೆ ತರಪೇತು (ಆನಾಮಿ. ೫೨). **ತರಬಿಯತ್ತು:** ಜ್ಞಾಪಕಶಕ್ತಿಯು ತರಬಿಯತ್ತಿಗೆ ಕೋಷ್ಟಕಗಳ ಅಭ್ಯಾಸವೂ ಅರ್ಥರಹಿತವಾದರೂ . . . ಪದ್ಯಗಳ ಕಂಠಪಾಠವೂ ಆರಂಭವಾದುವು (ಶಿಕ್ಷದ. ೦೨೩); ಅನುವಂಶೀಯತೆ, ಪರಿಸ್ಥಿತಿ ಮತ್ತು ತರಬಿಯತ್ತು ಈ ಮೂರರ ಸಂತತವಾದ ಪ್ರಭಾವದಿಂದ ಪ್ರತಿಯೊಬ್ಬರ ವ್ಯಕ್ತಿತ್ವವೂ ಬೆಳೆಯುತ್ತದೆ (ಕ್ರಿಯಾಶಿ. ೦೬). **ತರಬೇತಿ:** ಜೋಸೆಫ್‌ಹೊಕರನ ಸಸ್ಯವಿಜ್ಞಾನದ ವಿದ್ಯಾಭ್ಯಾಸ ಮತ್ತು ತರಬೇತಿ, ತಂದೆಯ ವನಸ್ಪತಿಗಳ ಸಂಗ್ರಹದಿಂದ ಪ್ರಾರಂಭವಾಯಿತೆನ್ನಬಹುದು (ಸಸ್ಯಕ. ೮); ಅಧ್ಯಾಪಕತರಬೇತಿಗೆ ಸೇರುವ ಯೋಚನೆ ಮಾಡಿದ (ತ್ಯಾಗವು. ೧೮೮); ನಾಳೆನಿಂದಲೇ ನಮ್ಮ ತರಬೇತಿ ಆರಂಭವಾಯಿತೆಂದೇ ತಿಳಿಯಿರಿ (ಅಪನಾ. ೧೬) **ತರ್ಬಿಯತ್ತು:** ಬಹಳ ಬಗೆಯಿಂದಾ ನವಗೆ ತರ್ಬಿಯತ್ತು ಮಾಡಿದರು (ರಾಜೇಂದ್ರ. ೦೦೮).

**ತರಬೇತಾಗು, ತರಪೇತಾಗು** = ತರಪೇತಿಯನ್ನು ಹೊಂದು; ಶಿಕ್ಷಣವನ್ನು ಪಡೆ: ತರಬೇತಾದವರು ೩೦–೪೦ಜನ (ಸಸ್ಯಕ. ೫೯); ಈ ರೀತಿ ತರಪೇತಾದ ಮಾರ್ಕೊಪೋಲೊನನ್ನು ಖಾನನು ಕಳುಹಿಸಿಕೊಟ್ಟನು (ಪ್ರವಾಇ. II, ೭); ವೃತ್ತಿಶಿಕ್ಷಣಶಾಲೆಯಿಂದ ಹೊರಬಿದ್ದವರೆಲ್ಲರೂ ತಕ್ಷಣ ಕಾರ್ಯ ಆರಂಭಿಸುವಷ್ಟು ತರಪೇತಾಗಿರುವುದಿಲ್ಲ (ಶಿಕ್ಷದ. ೧೯೬).

**ತರಬೇತುಕೊಡು, ತರಪೇತಿಕೊಡು** = ಶಿಕ್ಷಣವನ್ನು ಕೊಡು: ನಂಜರಾಜನೇ . . . ಸೈನ್ಯಕ್ಕೆ ತರಬೇತು ಕೊಟ್ಟು ಯುದ್ಧಕ್ಕೆ ಸಿದ್ಧಪಡಿಸುತ್ತಿದ್ದನು (ಶ್ರೀರಾಯ. ೧೧೬); ಸಾಹಿತ್ಯ . . . ನಟನಾ ಕೌಶಲ್ಯದಲ್ಲಿ ತರಬೇತು ಕೊಟ್ಟವರು ನಮ್ಮ ರಾಯರು (ಬೆಂದಜೀ. ೦೦೮); ಅವರಿಗೆ ತರಬೇತು ಕೊಡುತ್ತಿದ್ದ ಆಸ್ಪತ್ರೆಗಳು ಕೂಡ ಸುಸಂಘಟಿತವಾಗಿದ್ದವು (ಮಾನವಾ. ೩೩); ಅನೇಕ ಕಾರ್ಯಾಲಯಗಳನ್ನು ಇಡಿಸಿ ಕೆಲಸವಿಲ್ಲದವರಿಗೆ ತರಪೇತಿ ಕೊಡಿಸಿದೆವು (ಪ್ರತಾಪ. ೯೦).

**ತರಬೇತುಗೊಳಿಸು, ತರಬಿಯತ್ತುಗೊಳಿಸು** = ತರಬೇತುಮಾಡು: ಮಗನನ್ನು ಬಟ್ಟೆ ಹೊಲಿಯುವುದಕ್ಕೆ ತರಬೇತುಗೊಳಿಸಿದ್ದ (ತ್ಯಾಗಮು. ೫೫); ಮಾಧವರಾಯರ ಉಪದೇಶವೂ, ಸಹವಾಸವೂ ದೇಶಕ್ಕಾಗಿ ದುಡಿಯಲು ತರಬೇತುಗೊಳಿಸಿತು (ಕುರುಕಾ. ೧೪೨); ಅಪರಾಧಿಯನ್ನು ಉಳಿಸುವುದಕ್ಕಾಗಿ ಈ ವಕೀಲರು ಸುಳ್ಳು ಹೇಳುವ ಸಾಕ್ಷೀದಾರರನ್ನು . . . ತರಬಿಯತ್ತುಗೊಳಿಸುತ್ತಿರುತ್ತಾರೆ (ಮಾತನಾ. ೯೫).

**ತರಬೇತುಮಾಡು, ತರಪೇತುಮಾಡು, ತರಬಿಯತ್ತುಮಾಡು** = ತಯಾರುಮಾಡು; ಸಿದ್ಧಮಾಡು; ಪಳಗಿಸು: ಅವರನ್ನು ತರಬೇತುಮಾಡಲು ಮೈಸೂರು ಸರ್ವಪ್ರಯತ್ನವನ್ನೂ ಮಾಡಬೇಕು (ದಾದಾನ. ೧೪೭); ತರಬೇತು ಮಾಡಿದರೆ . . . ಮಗುವನ್ನು ಬೆಳೆಸುವ ಕೆಲಸ ಸುಲಭವಾಗುತ್ತದೆ (ಗೃಹವಿ. ೧೧೫); ಆತನಿಗಾಗಿಯಾದರೂ ಆಕೆಯನ್ನು ತರಪೇತುಮಾಡಬೇಕು (ಕಂಕಣ. ೭೯); ಕಾಶೀಬಾಯಿಯವರು. . . ಸ್ತ್ರೀಯರನ್ನು ತರಪೇತು ಮಾಡುವುದರಲ್ಲಿ ರಾಣಿಗೆ ಸಹಾಯಮಾಡುತ್ತಿದ್ದರು (ಝಾರಾಣಿ. ೦೬೯);

ಅವನು ನಮ್ಮ ಟೀಮನ್ನು ಎಷ್ಟು ಚೆನ್ನಾಗಿ ತರಪೇತು ಮಾಡಿದ ಎಂದರೆ ಶಾಲೆಯ ಎಲ್ಲಾ ಟೀಮುಗಳನ್ನೂ ನಾವೇ ಗೆದ್ದು ಜಯಭೇರಿ ಹೊಡೆದುಬಿಟ್ಟೆವು (ಶ್ಯಾಲವು. ೨೨೦) ; ಅವನ ನಾಟಕಗಳಲ್ಲಿ ಆಗಿಂದಾಗ ಜಿಂಕೆಯ ಬೇಟೆ, ಕುದುರೆಗಳನ್ನು ಸಾಕಿ ತರಬಿಯತ್ತು ಮಾಡುವುದು . . . ಅಲ್ಲಗಳೆಯಬುವಂಥಾದ್ದಲ್ಲ (ಷೇಕ್ಸ್ಪಿ. ೭).

[ ←ಅರ. ತರ್ಬಿಯತ್ ; ಹಿಂ. ತರಬಿಯತ್ ; ಮರಾ. ತರಬೇಜ್ ತರಬೇತ್, ತರಬೇದ್ ]

**ತರಮು** (ನಾ). (ಉಕ) ಕಂದಾಯ : ಅವನು ತರಮು ಕಟ್ಟಿ ಬರಲಿಕ್ಕೆ ಹೋಗಿದ್ದಾನೆ (ರೂಢಿ).

[ ←ಅರ. ಮರಾ. ತರವ್ = ಕಂದಾಯ ಹಾಕಲು ಆಸ್ತಿಯನ್ನು ಬೆಲೆ ಕಟ್ಟುವುದು ]

**ತರಲ**, ತರಳ (ಗು). ೧. ಅತ್ತಿತ್ತ ಚಲಿಸುವ; ಕಂಪಿಸುವ; ಚಂಚಲವಾದ; ಅಸ್ಥಿರವಾದ: ದುಃಖದ ಹೊರ ಉಬ್ಬರವು ಹೀಗೆ ತರಲವಾಗುತ್ತ ಹೋಗು ವದೇನೋ ನಿಜವೇ (ಕಾಳರಾ. ೩). ೨. ಹೊಳೆಯುವ ; ಮಿಂಚುವ ; ಮಿರುಗುವ. 'ತರಲತೆ' ಪರಾ. ೩. ದ್ರವರೂಪವಾದ; ದ್ರವೀಭೂತ ವಾದ. ೪. ಕಾಮುಕನಾದ ; ವಿಷಯಲಂಪಟನಾದ. (ನಾ). ೫. ಬೆರಗು ; ವಿಸ್ಮಯ ; ಆಶ್ಚರ್ಯ : ತರಲಾ[ಪಾಠಾಂ. ಳಾ]ರ್ಥದಲ್ಲಿ ಬೆಳ್ಪಳಮುಕ್ಕುಂ (ಶಮದ. ೩೦೨). ೬. ಎಳೆವಯಸ್ಸಿನವನು ; ಬಾಲಕ ; ಹುಡುಗ : " ಚಂಚಲ: ಹಾರಮಧ್ಯಮಣಿ ಬಾಲಕರುಂ ತರಲಾಭಿಧಾನ " (ನಾನಾರ. ೬೪). ೭. ಹಾರದ ಮಧ್ಯದಲ್ಲಿರುವ ಮಣಿ,–ರತ್ನ ; ಪದಕ: " ಹಾರಮಧ್ಯದ ರತ್ನನಾಯಕಂ ತರಲ[ಪಾಠಾಂ. ಳ]ಮದು " (ಮಂಗರಾ. ೧೦೦–೨೪); ಮಿರುಗುವ ಕೆಂಬರಲ ತರಲದಂತಿರೆ ಸಸಿಗಲ್ (ದಮಸ್ವ. ೧–೯೦). ೮. [ಛಂದ] ಪ್ರತಿಪಾದದಲ್ಲಿ ಹತ್ತೊಂಬತ್ತು ಅಕ್ಷರಗಳಿರುವ ಒಂದು ಸಮವೃತ್ತ. **ತರಳ**: ೧. ತರಳಕಟಾಕ್ಷಮಾಲೆಯೊ ಸಿತೋತ್ಪಲಮಾಲೆಯೊ ಕಯ್ಯ ಮಾಲೆಯೊ (ಮಲ್ಲಿಪು. ೨-೫೯); ವಿದ್ಯಾಧರನ ಜನ್ಮಸ್ಥಾನವಾದತ್ತಸಮ ತರಳಗಂಭೀರಸದ್ಗೇಹವಾದತ್ತೆನಿಸಲ್ಕಿಂತುಳ್ಳ ನಾನಾಮಹಿಮೆಯೊಳೆಸೆಗುಂ ಚಾರುಕರ್ಣಾಟದೇಶಂ (ಎಕ. VIII, ಸೊರಬ. ೨೬೦–೧೫ ; 1408) : ಆ ಗಂಭೀರ ದಿಗ್ದಂತಿ, ತೊರೆದು ಗಾಂಭೀರ್ಯವಂ, ತರಳ ಚಂಚಲಚಿತ್ತದಿಂ ಬೀದಿವರಿವುದಯ್ ದೆಸೆದೆಸೆಗೆ (ಶ್ರೀರಾಮಾ. ೯೬-೪೬೩). ೨. ತರಳಸ್ಫಾಟಿಕ ಭಿತ್ತಿರುಚಿರಮಂ . . . ಪುರಾಣಕೂಪಮನಗಾಧಮಂ ಭೀಕರಮಂ ಅಂತಾ ಬಾವಿಯುಂ ತೋಱಿ (ಪಂಚತಂ. ೯೦–೧೬). ೫. " ತರಳಂ ಚಂಚಲರೂಪಂ " (ವಸ್ತುಕೋ. ೦೨೬–೫೩). ೬. ತರಳನಪೂರ್ವಿಗಂ . . . ವರವಿಪ್ರಂ (ಗಿರಿಕ. ೯–೯೦); ಮನೆಯವರೆಯ್ದೆ ಕರಕರಿಪ ದುಃಖವನು ತರಳ ನಿನ್ನಂ ನೋಡಿ ಮಱೆದು ಪರಿಣಾಮಮಂ ಧರಿಸುತಿಪ್ಪೆನ್ನ ಗೋಣಂ ಕೊಯ್ದೆ (ಹಚಕಾ. ೧೨–೨೮) ; ತರಳರರ್ಜುನ ಸಾತ್ಯಕಿಗಳಿವದಿರಿಗೆ ಪಂಥವದೇತಕೆ (ಕುವ್ಯಾದ್ರೋ. ೦೨–೧೫) ; ನರಸಿಂಹನ ಜಯಂತಿಯಲಿ ಜನಿಸಿದೀ ತರಳನು ನರಸಿಂಹನೈಸೆ (ಕಂನವಿ. ೪–೬೭); ಈ ತರಳ ಬಿಟ್ಟಿಯಣ್ಣನು . . . ಆನೆಗಳ ಹಿಂಡು ಹಿಂಡು ಗಳನ್ನೂ, ಕೊಳೆಯನ್ನೂ ತಂದನಂತೆ (ಸವತಿ. Xii, ಪ್ರಸ್ತಾವನೆ). ೭. "ತರಳಂ ಹಾರೋಪನದ್ಧ ಮಧ್ಯಮರತ್ನಂ" (ವಸ್ತುಕೋ. ೦೨೬–೫೩) ; " ಹಾರದ ನಡುವೆಯಿದ್ದ ನಾಯಕರತ್ನವು ತರಳಂ ಎನಿಸುಗು " (ನಾಚಿರಾ. ೧೨೩) : ತರಳಮನಾಂತ ಚಂದನದಳಂಕೃತಿ ಭಾವಮನಾಂತ ವಸ್ತುವಿಸ್ತರ ಕೃತಿ (ಚಂದ್ರಪು. ೩–೪೯). ೮. ಸುರಪ ಶೀತಕರಾಗ್ನಿ ಮಾರುತ ಭಾನುಯುಗ್ಮಗಣಂ ಗಳಿಂ ಪರದೊಳೊಪ್ಪೆ ಹಿಮಾಂಶು ಶೇಖರನಿರ್ದು ವಿಶ್ರಮಣಂ ದಿಶಾಕರಿಯೊ ಳ್ತಾಗಿರೆ ಸಂದು ದಿಂತಿದು . . . ತರಳಂ ಕವೀಂದ್ರಜನಸ್ತುತಂ (ಛಂದೋಂಬು. ೨–೧೨೧). ೯. ಮಗ ; ಸಂತ : ತಾಯಿ ಮಾರಿಯಾದರೆ ತರಳನೆಲ್ಲಿ ಹೋದಾನು ? (ಗಾದೆ). [ ಸಂ. ]

**ತರಲತೆ**, ತರಳತೆ (ನಾ). ೧. ಕಂಪಿಸುವಿಕೆ ; ಚಂಚಲವಾಗಿರುವಿಕೆ ; ಚಾಂಚಲ್ಯ : ಸರಳತರೋಷ್ಣ ನಿಶ್ವಸಿತಮಾರುತನಿಂದೆ ನಿಜೋತ್ತರೀಯ ದೊಳ್ ತರಲ[ಪಾಠಾಂ. ಳ]ತೆಯಂ ನಿಯೋಜಿಪ ನೆಗಟ್ಕೆಗೆ ಕಾರಣಮೇನೊ ಕಾಮಿನೀ (ಚಂದ್ರಪು. ೩–೫೪). ೨. ಹೊಳೆಯುವಿಕೆ ; ಪ್ರಕಾಶ ; ಮಿರುಗುವಿಕೆ. **ತರಳತೆ**: ೧. ನೀಂ ಭವ್ಯನೈ ಮುತ್ತಿನ ಮಿಥ್ಯಾಜ್ಞಾನಿವೋಲ್ ನೀಂ ತರಳತೆವೆರಸಿಂತೇಕೆ ವಿಭ್ರಾಂತನಪ್ಪೈ (ಆದಿಪು. ೩–೭); ಅನ್ಯರ್ಪರಿಭವಿಸಿದೊಡಂಜುವುದೆ ಸ್ಫೈರಣೆ ತರಳತೆಯೆ ನೋಡುತ್ಸಾಹ ಮೆಂಬಧೂರ್ತರ್ (ಕಾದಂಪೂ. ೫೬೬) ; ಕರೆದು ತಳ್ಳುವ, ತಳ್ಕರಿಸು ತೊಳಗೆ ಕಿಚ್ಚಿಡುವ ತರಳತೆಯದೇಂ ತಂತ್ರ ? (ಮಂಕುಕ. ೧೭೯).

[ ಸಂ. ತರಲತಾ ]

**ತರಲಾಕ್ಷಿ**, ತರಳಾಕ್ಷಿ (ನಾ). ೧. ಚಂಚಲವಾದ ಕಣ್ಣು. ೨. ಚಂಚಲವಾದ ಕಣ್ಣುಗಳುಳ್ಳವಳು ; ಚಂಚಲಾಕ್ಷಿ : ಲಿಪಿಯನೆತ್ತಿ ವಾಚಿಸಿಕೊಂಡ ತರಲಾ[ಪಾಠಾಂ. ಳಾ]ಕ್ಷಿ ತಾನದಕೆ ಮತ್ತೊಂದಭಿಪ್ರಾಯಮಂ ತಿಳಿದಳ (ಜೈಮಿಭಾ. ೩೦–೨೬). **ತರಳಾಕ್ಷಿ**: ೧. ತರಳಾಕ್ಷಿದ್ವಂದ್ವಂ (ಲೀಲಾವ. ೨–೪೭). ೨. ತರಳಾಕ್ಷಿಯನಾ ಕಾದಂಬರಿಯಂ . . . ಚಿಂತಿಸುತುಮಿರ್ದಾಯಿರುಳನ ದೆಂತಾನುಮವನಿಪಾಲಂ ಕಳೆದಂ (ಕಾದಂಬ. ೧೮೩) : ಅಲರ್ಗಣೆಯ ನರ್ಚಿಸಿದ ವಿಚಕಿಲಮಾಲೆಯನಾಂತ ಪೂರ್ಣಕುಂಭದ ಚೆಲ್ವಂ ಗೆಲೆವಂದುದಿಲ್ಲ ಕುಚಮಂಡಲಮಿದು ತರಳಾಕ್ಷಿ ಮುತ್ತಿನೇಕಾವಳಿಯಿಂ (ರಾಜಶೇ. ೩–೫೯).

[ ಸಂ. ತರಲಾಕ್ಷೀ (ತರಲ + ಅಕ್ಷಿ + –) ]

**ತರಲಾಪಾಂಗ**, ತರಳಾಪಾಂಗ (ನಾ). ಚಂಚಲವಾದ ಕಡೆಗಣ್ಣು– ಕಡೆಗಣ್ಣ ನೋಟ : ತರಲಾಪಾಂಗವಿಲಾಸಸ್ಫುರಿತಮೆ ಲೆಕ್ಕಣಿಕೆಯಾಗೆ ನಲ್ಲಳ ಮುನ್ನಂ ಬರೆದತನುಚರಿತಮಿಾಗಳ್ ಬರೆದಂತಿರ್ದಪುದು ಮನ್ಮನಃ ಪುಸ್ತಕದೊಳ್ (ಆದಿಪು. ೪–೧೪) ; ತರಲಾಪಾಂಗದಿನಾ ನೃಪಾಲತಿಲಕಂ . . . ನಿರಂತರಮುದ್ಯಾನವಿನೋದಮಂ ಸಲಿಸುವಂ (ಅನಂಪು. ೨–೧೮). **ತರಳಾಪಾಂಗ**: ಪರುಷಾಳಾಪಮುಮತಿನಿಷ್ಠುರವೀಕ್ಷಣಮುಖವಿಕಾರಮಂ ಮಱಸಿರೆಯುಂ ತರಳಾಪಾಂಗಮುಮಾಕೆಯ ದರಹಸಿತಮುಮಱಿಯೆ ಪೇೞ್ಗುಮೆಱಕಮನೆರ್ದೆಯೊಳ್ (ಕವಿರಾ. ೩–೧೧೯) ; ತರಳಾಪಾಂಗಂಗಳೊಳ್ ಮಚ್ಚರಿಪಲರ್ಗಣೆಯಂ ಕಟ್ಟಿ ತೂಪಂದದಿಂ (ಲೀಲಾವ. ೭–೧೪) : ತರುಣಿ ಯರ ತನುಪರಿಮಳದ ಸೋಂಕಿನಲಿ ಸುತ್ತಲುಪರಿಮಳಿಸಿದುದು ತರು ಸುತರಳಾಪಾಂಗರೋಚಿಯಲಿ ಮುರಿದುದಾ ಪುರಗತ್ತಲೆಯ ವ್ಯೆಸಿರಿ (ತೊರರಾ. ೧–೫–೪೫). [ ಸಂ. (ತರಲ + ಅಪಾಂಗ) ]

**ತರಲಾಯತಾಕ್ಷಿ**, ತರಳಾಯಂತಾಕ್ಷಿ (ನಾ). = ತರಲಾಕ್ಷಿ ೨ : ಚಿಂತಾ ತರಳತ್ವಮಂ ತೋಱೆವುದಂತದಱಿಂ ತರಲಾ[ಪಾಠಾಂ. ಳಾ]ಯತಾಕ್ಷಿ ನಿರ್ಹೇತುಕಮಪ್ಪ ಖೇದಮಂ (ಚಂದ್ರಪು. ೩–೬೫) ; ಲಾವಣ್ಯಕಾಂತಿಯಿಂ ದಿಕ್ತಟವ ಬೆಳಗುತ್ತ ನಿನ್ನ ನಡೆಮುಖವಿರಲು ತರಲಾಯತಾಕ್ಷಿ (ಧನ್ಯಾಲೋ. ೦೦೪). **ತರಳಾಯತಾಕ್ಷಿ**: ಇಂದುಕರಶ್ಚುತ ಚಂದ್ರಕಾಂತ ಪುತ್ರಿಕೆಯೊಸರ್ವಂತೆ ರ್ಘುಮ್ಮಗೆ ಬೆಮರ್ತಿರವಿಂ ತರಳಾಯತಾಕ್ಷಿಯಾ (ಶಾಂತಿಪು. ೮–೯೬). [ ಸಂ. (ತರಲ + ಆಯತ + ಅಕ್ಷಿ + –) ]

**ತರಲಿತ**, ತರಳಿತ (ನಾ). ಅಲ್ಲಾಡುವುದು ; ಚಲಿಸುವುದು ; ಚಂಚಲ ವಾದುದು: "ತರಲಿ[ಪಾಠಾಂ.ಳಿ]ತಂ ಪ್ರೇಂಖಿತಂ ಲುಳಿತಮಲ್ಲಾಡುವುದು" (ಮಂಗರಾ. ೧೩೪–೩೨). **ತರಳಿತ**: "ಪ್ರೇಂಖೋಳಿತಂ, ತರಳಿತಂ, ಪ್ರೇಂಕಿತಂ, ಲುಳಿತಂ – ಈ ೪ ಅಲ್ಲಾಡುವುದು ". (ಹಲಾಯು. ೧೨೩–೬೧).

[ ಸಂ. ]

**ತರಲೆ$_1$**, ತರಳ$_1$ (ನಾ). ೧. ಕಾಟ ; ಹಿಂಸೆ : ತಂಟೆ ; ಪೀಡೆ ; ಜಂಜಾಟ: ಈ ಒಣ ತರಲೆ ಏಕೆ ಕಟ್ಟಿಕೊಳ್ಳುತ್ತೀ ಅಪ್ಪ ? (ಕಾಮಿಕಾಂ. ೫): ಹೋದ ಮರುದಿನವೇ ತಲೆತುಂಬ ತರಲೆ ತುಂಬಿಕೊಂಡು ಕೆಟ್ಟಮೋರೆ

ಮಾಡಿಕೊಂಡು ಹಿಂದಿರುಗುತ್ತಿದ್ದ (ಬಾಗಿನ. ३೮); ಸಂಸಾರ ಅಂದ್ಮೇಲೆ ತರಲೆ ತಾಪತ್ರಯ ಇದ್ದೇ ಇರುತ್ತೆ (ಹೊಸಕ್ಕ. ೯೩). ೨. ಅಪ್ರಯೋಜಕ ವಾದುದು; ನಾಡಾಡಿಯಾದುದು: ಅವನ ಬ್ಯಾಟಿಂಗು ಸಹ ಅಂಥ ತರಲೆಯಲ್ಲ (ಸ್ವಾಮಿಸ್ನೇ. ೧೬೬); ಮನೆಯ ಕಡೆ ತರಲೆ ಹೊಲದ ಕಡೆ ಪುರಲೆ (ಗಾದೆ). ೩. ಆಧಾರರಹಿತವಾದ ದೂರು; ಪಿಸುಣು; ಚಾಡಿ: ಅರಸರ ಕಿವಿಗೆ ತರಲೆ ಹಾಳು, ಬಾಗಿಲ ಕಿವಿಗೆ ಒರಲೆ ಹಾಳು (ಗಾದೆ). ೪. ತರಲೆಮಾಡುವ ಸ್ವಭಾವದವನು; ತಂಟೆಕೋರ: ಆ ತರಲೆಯ ಸಹವಾಸ ಮಾಡಬೇಡ (ರೂಢಿ). ತರಳೆ₁: ೪. "ಶುದ್ಧ ತರಳೆಗಳು" ಎಂದು ರಾಮಣ್ಣನವರು ಒಂದೇ ಮಾತಿನಲ್ಲಿ ಉತ್ತರ ಕೊಟ್ಟರು (ಕೆಳಹು. ೦೦೪).

[ದೇ.॥ ತುಳು. ತರಳೆ]

**ತರಲೆ₂, ತರಳೆ₂** (ನಾ). ಅಕ್ಕಿಯ ಗಂಜಿ; ಅಂಬಲಿ. **ತರಳೆ₂**: "ಯವಾಗೂ . . . ತರಲಾ, ವಿಲೇಪಿಕಾ – ಈ ೫ ಗಂಜಿ" (ಹಲಾಯು. ೫೩-೧೬೫).

[ಸಂ. ತರಲಾ]

**ತರಲೆಅರ್ಜಿ, ತರಳೆಅರ್ಜಿ** (ನಾ). ತಂಟೆ, ತಕರಾರುಗಳಿಂದ ಕೂಡಿದ ಅರ್ಜಿ: ಒಂದೋ ಎರಡೋ ಮೂಕರ್ಜಿ ತರಲೆಅರ್ಜಿ ಬೋರಂಟ ಬಿಟ್ಟಿರಾಯ್ತು (ಮುನಿಮಾ. ೦೦೫). **ತರಳೆಅರ್ಜಿ**: ಶ್ಯಾನುಭೋಗನೂ ಸಹ ರೈತರಿಗೆ ವಿರೋಧವಾಗಿ ಬೇಕಾದಂತೆ ತರಳೆಅರ್ಜಿಗಳನ್ನು ಬರೆಯುತೊಡಗಿದ್ದನು (ಗರುಡಾ. ೧೦೫). 'ಮೂಗರ್ಜಿ' ಪರಾ.

[ತರಲೆ₁ + ಅರ್ಜಿ₂]

**ತರಲೆಕಾರ** (ನಾ) ತರಲೆಯನ್ನುಂಟುಮಾಡುವವನು; ತಂಟೆಕೋರ: "ದ್ರಾಘಕಃ, ದ್ರಾಘನಃ, ದ್ರಾಘಮಾಣಃ – ಈ ೩ ತರಲೆಕಾರನುಂ, ನಿಡಿಯನುಂ" (ಅಕಳ್ಕ. ೯೩). [ತರಲೆ₁ + –ಕಾರ₁ (< ಕಾಱ)]

**ತರಲೆತನ** (ನಾ). ತರಲೆಮಾಡುವ ಸ್ವಭಾವ; ಕಿಡಿಗೇಡಿತನ: ಹಳ್ಳಿಗಳು ಏಳಿಗೆಯಾಗಬೇಕಾದರೆ, ಇಂಥ ತಂದಿಟ್ಟು ತಮಾಷೆ ನೋಡುವ ತರಲೆತನ ತಪ್ಪಬೇಕು (ನಮ್ಮಳ್ಳಿ. ೪೪). [ತರಲೆ₁ + –ತನ]

**ತರಲೆವ್ಯವಹಾರ** (ನಾ). ತಂಟೆ, ತಕರಾರುಗಳಿಂದ ಕೂಡಿದ ಕಾರ್ಯಭಾರ, –ವಹಿವಾಟು: ಯಾವುದೋ ತರಲೆವ್ಯವಹಾರ, ನಾನು ಸಿಕ್ಕಿಕೊಂಡು ಒದ್ದಾಡಬೇಕಾಗಿದೆ (ರೂಪಕ. ೨೭೩). [ತರಲೆ₁ + ವ್ಯವಹಾರ]

**ತರಲೇಕ್ಷಣ** (ನಾ). ಚಂಚಲವಾದ ಕಣ್ಣು: ನಮ್ರಶಿರೋಧರೆ ಸೀತೆ ಲೋಕಸಂತ್ರಾಸಿಯ ರೂಪು ಪಾದನಖದರ್ಪಣದೊಳ್ ಪಲವಾಗಿ ತೋರೆ ಕಂಡಾ ಸತಿ ಬೆರ್ಚಿ ಮುಚ್ಚಿದಳೆರಟ್ಕರದಿಂ ತರಲೇಕ್ಷಣಂಗಳಂ (ಪಂಪರಾಮಾ. ೯-೧೦೨). [ಸಂ. (ತರಲ + ಈಕ್ಷಣ)]

**ತರವಂಗಿ** 'ತರುವಂಗಿ' ನೋ.

**ತರವತ** (ನಾ). ತೀಕ್ಷ್ಣತೆ; ತೀವ್ರತೆ (?): ಕಿರಿಯಣ್ಣನರ್ಥೋಪಾರ್ಜನೆಯಿಂ ಮನದೆರಕದಿನಾ ದಶಪುರಕೆ ತರವರನಾದ ಬೇಸಗೆಯೊಳು ಬಂದೊಂದು ಮಿರುಪ ದೈವದ ಶಾಲೆಯೊಳು ಮಲಗಿರಲು (ಪ್ರಭಂಜ. ೩-೧೫೭).

[?]

**ತರವರಿ** (ಕ್ರಿ). (ಯೋಗ್ಯತೆಯಲ್ಲಿ) ವ್ಯತ್ಯಾಸವನ್ನು ತಿಳಿ, –ತಾರತಮ್ಯವನ್ನು ತಿಳಿ: ತರವರಿತು ಇಹಪರಾತ ಶಾಸ್ತ್ರಿಗ ದುರುಳನಡೆಗೈನೆಂದು ಪಹಿಸತಿ ಮುರುಕದಲಿ ನಿನಗಿತ್ತ ರಾಜ್ಯವ ಬಸವನೆನಲರಸು (ಚಿಬ್ಬಪು. ೬೦-೩೦); ರಾಜಕುಮಾರಕರ್ ಸಂಭ್ರಮಂ ಮಿಕ್ಕು ಪೊಕ್ಕು ತರವರಿದಿಕ್ಕಿದ ಪೊನ್ನಗದ್ದುಗೆಗಳೊಳುಕ್ಕಿವಂ ಮಿಗೆ ಕುಳ್ಳಿರ್ಪಾಗಳ್ (ದಮುಸ್ನ. ४-೬ ವ).

[ತರ₃ + ಅರಿ₂ (< ಅಱಿ)]

**ತರವಳಿ₁** (ನಾ). ತೆರ; ಪ್ರಕಾರ; ರೀತಿ: ಪರಿಪರಿಯ ವರ್ಣಾಶ್ರಮಂಗಳ ತರವಳಿಯ ಕೇರಿಗಳ ಲಕ್ಷ್ಮೀಕರವನಭಿವರ್ಣಿಸುವಡಸದಳವಾಗಿ ಫಣಿಪತಿಗೆ (ಅನಂರಾ. ೧-೧೭-೬). [←ತಮಿ. ತರವಟಿ]

**ತರವಳಿ₂** (ಗುಂ). ಕ್ಷುದ್ರವಾದ; ಅಲ್ಪವಾದ: ಪರಮಾತ್ಮ ನೀನು ಪರತತ್ತ್ವವೆಂದು ಭಾವಿಸಿ ನಿನ್ನ ಬಯಸಿ ಮಿಕ್ಕ ತರವಳಿ ದೈವದಾಸಗೆ ಸಿಲುಕಿದಾರಿದಪ್ಪುವೆನೆಂತು (ಗೀತಗೋ. ೬೫). [?]

**ತರವಾರ, ತಲವಾರ್, ತಳವಾರ₂** (ನಾ). ಕತ್ತಿ; ಖಡ್ಗ: ಕಾಲಭೈರವನ ಹಣೆಗಣ್ಣಿನಂತೆ ಕಿಚ್ಚಿಡುವ ಪುಲಿಕೇಶಿಯ ತರವಾರದ ಧಾರೆಯಿಂದ ಪಲ್ಲವೇಂದ್ರನ ಕಿಚ್ಚಿದೆ ಬಾಡಿಹೋಯಿತು (ಕರಕ್ಕ. ೧೨). **ತಲವಾರ್**: ಪೋಲಿ ಸಾಂಬಾ ತಲವಾರ್ ಪೆಟ್ಟು ತಿಂದು ಗೌಡರ ಕೇರಿ ತಾಲಿಂನಲ್ಲಿ ಸಾಯುತಾ ಬಿದ್ದಿದ್ದಾನೆ (ಕಲಸ. ೨೬೩); 'ತಲವಾರ್' ಶಬ್ದಕ್ಕೆ ಒಂದು ವಿಶೇಷ ಅರ್ಥವಾಗುತ್ತದೆಂಬುದನ್ನು . . . ತಿಳಿಸಿರಿ (ಭಾರತೀ. ೧೫). **ತಳವಾರ₂**: ತಿಗುಳರ ಪಡೆಯುಂ ಕೂಡೆ ಬೆಂಕೊಂಡ ಗಂಡಂ ತಳವಾರಲು ತಳ್ತ ಭೂಪಾಳರ ಹೆಡತಲೆಯುಂ ಧೊಪ್ಪೆನಲು ಹೊಯ್ದ ಗಂಡಂ(ಎಕ. IV, ಸಾಗಮಂ. ೬೬-೦೦ : 1145).

[←ಹಿಂ. ಮರಾ. ತರವಾರ್, ತಲವಾರ್ / ಸಂ. ತರವಾರಿ]

**ತರವಾರಿ** (ನಾ). = ತರವಾರ: "ತರವಾರಿ ಮಂಡಲಾಗ್ರಂ . . . ಅಡಾಯುಧಮೆನಿಕ್ಕು" (ಮಂಗರಾ. ೮೮-೩೭); ತದ್ವಧೂದ್ಭಗುತ್ಪಳಕುಳಕುಟುಮಳಿತಹೃದ×ದು ರವಿಮಂಡಳಮೊ ತರವಾರಿ ಪೆರ್ಮ್ಮ್ಭೂಪಾಳಕನ (ಸಾಇಇ. XI-II, ೦೫೯-೦೭ : 1083); ಜಾನುದಘ್ನಮಾದುವು ತರವಾರಿಯಿಂದಿಱಿಯೆ ಲೋಹಿತವಾರಿಗಳಾಸವಾರಿಗಳ್ (ಪಂಪಾಮಾ. ೦೩-೩೦); ಕದನದೊಳಂದು ನಿನ್ನ ತರವಾರಿಯ ಬಾಯಿಗೆ ಮೆಯ್ಯನೊಡ್ಡಲಾಱದೆ ನಳಿದಿನ್ನುಮಂತದನೆ ಜಾನಿಸಿ ಜಾನಿಸಿ (ಎಕ. II, ३೪೦-३३ : 1175); ಚಾಪವಿದ್ಯೆಯುಂ ಚಾರಣ ಚೊರಣಾದಿ ತರವಾರಿಯ ವಿದ್ಯೆಯುನಾಗಮಂಗಳಂ . . . ಈತನಲ್ಲದಿಳೆಯೊಳ್ ಮಿಗೆ ಬಲ್ಲವರಾರ್ (ದಕಳು. ೧೦-೯೬).

[ಸಂ.]

**ತರವಿಡಿ** 'ತರಂಬಿಡಿ' ನೋ.

**ತರವೀಸ, ತಾರವಿಸ** (ನಾ). ಒಂದು ಬಗೆಯ ನಾಣ್ಯ ಮತ್ತು ಅದರ ಬೆಲೆ: ನೂರಯಿಪ್ಪತ್ತು ವರಹ ತರವೀಸ ಉಳಿಯದೆ ನಂಮ ಅರಮನಿಗೆ ಸಾಕಲ್ಯವಾಗಿ (ಎಕ. VI, ಕೊಪ್ಪ. ३೦-೬ : 1591 ?). **ತಾರವಿಸ**: ಮುವತ್ತು ವರಹಂನು ತಾರವಿಸ ವುಳಿಯದೆ ಸಲ್ಲಿಸಿಕೊಂಡೆವಾಗಿ (ಮ್ಯಾಆರಿ. ೧೯೩೦, ೧೦-೧೯ : 1585). [←ಪಾರ. ತರ್ವೀಜ್]

**ತರಸ₁** (ಗು). ೧. ಚಲಿಸುವ; ಸಂಚರಿಸುವ: "ತ್ರಾಸ – ತರಸ" (ಶಮದ. ३३४ ಪ್ರಯೋ). (ನಾ). ೨. ಭಯ; ಹೆದರಿಕೆ; ಅಂಜಿಕೆ: "ತರಸಂ ತ್ರಾಸದೊಳಂ" (ಕರ್ಣಾನಿ. ೯೨); "ತರಸ – ತ್ರಾಸ = ಭಯ, ಆಯಾಸ" (ತದ್ಭಕೋ. ೧೭). [<ಸಂ. ತ್ರಾಸ]

**ತರಸ₂** (ನಾ). ಮಾಂಸ; ಬಾಡು; ಅಡಗು: "ಪಲಲಂ, ಜಾಂಗಲಂ . . . ತರಸಂ – ಈ ೮ ಮಾಂಸ" (ಹಲಾಯು. ೧೦೪-೪); ಹಿಂಸಾಜನ್ಮಂ ತರಸಂ ಅದಂ ತಿನ್ಬುದಾರ್ಹಮಜಿನಲ್ತು (ನೀತಿಮಂ. II, ३೦೪). [ಸಂ.]

**ತರಸು** (ನಾ). ಸಾಗುವಳಿಯಿಲ್ಲದುದಂ; ಜಂಬರು. 'ತರಸಂಭೂಮಿ' ಪರಾ. [<ತರಕು]

**ತರಸುಭೂಮಿ** (ನಾ). ಸಾಗುವಳಿಯಿಲ್ಲದ ಭೂಮಿ; ಪಾಳುಬಿದ್ದ ಭೂಮಿ; ಬಂಜರು: (ಕ).

[ತರಸು + ಭೂಮಿ]

**ತರಸ್ವಿ** (ಗುಂ). ೧. ವೇಗವಾದ; ಶೀಘ್ರವಾದ. (ನಾ). ೨. ವೇಗಶಾಲಿ; ಚುರುಕಾದವನು: "ತರಸ್ವಿನ್, ತ್ವರಿತಃ, ವೇಗಿನ್, ಪ್ರಜವೀ, ಜವನಃ, ಜವಃ – ೬ ಜಾಗ್ರತೆಯೂ, ತ್ವರೆಯೂ, ವೇಗವೂ ಉಳ್ಳವನು" (ಸಿದ್ಧಾಂತಿ. ३३३). ३. ಕೆಚ್ಚುಳ್ಳವನು; ಧೈರ್ಯಶಾಲಿ; ಶೂರ; ಧೀರ. ೪. ಚಾರ; ದೂತ; ಹರಿಕಾರ. ೫. ಗರುಡ. [ಸಂ. ತರಸ್ವಿನ್]

**ತರಹ, ತರ್ಹ₆, ತರಹಾ, ತರಹೆ, ಥರ್ಹ₄** (ನಾ). ರೀತಿ; ವಿಧ; ಕ್ರಮ; ಪ್ರಕಾರ; ಬಗೆ: ಯಾವುದಾದರೂ ಒಂದು ತರಹದಲ್ಲಿ ನಮಗೆ ಸಹಾಯ ಮಾಡು (ಮುನಿಮಾ. ೧೩೩); ಮಂಜುನಾಥರಾಯರು ಈಗಿನ ಕಾಲದ ತರಹದವರಾದುದರಿಂದ ಅವರ ಸಂತೋಷಕ್ಕೆ ಅಡ್ಡಿ ಬರಲಿಲ್ಲ (ದೂಬಿಟ್ಟ. ೪೮); ಬಾಜಾಬಜಂತ್ರಿ, ವಗೈರೆ ನಾನಾ ತರಹ ವಾದ್ಯಗಳು (ಗುರುದ. ೧೧); ತನ್ನ ದೇಶದ ಉನ್ನತ ಸಾಂಸ್ಕೃತಿಕ ಸಂಪತ್ತಿಗೆ ಒಂದು ವಿಶೇಷ ತರಹದ ಮಮತೆ (ಸಸ್ಯಕ. ೧೫೦). **ತರ್ಹ₆**: ಯರಡು ತಿಂಗಳಿಗೆ ಊಟಕ್ಕೆ ಬೇಕಾದ ಸಾಮಾನು ಅರಮನೆ ತರದಿಂದ ಕೊಟ್ಟು (ರಾಜೇಂದ್ರ. ೪೩); ಅವಂದಿರಿಗೆ ಅನ್ನಬಟ್ಟೆಯನ್ನು ಅರಮನೆ ತರದಿಂದ ಕೊಡಿಸಿ ಕೊಡುತ್ತಾ (ರಾಜೇಂದ್ರ. ೫೯); ಬೇರೆ ಬೇರೆ ಕಡೆಯಲ್ಲಿ ಬೇರೆ ಬೇರೆ ತರದ್ದಾಗಿರುತ್ತದೆ (ಕಭಾಗ. ೪); ತುಟಿಗಳು, ಕೆನ್ನೆಗಳು . . . ಇತರ ಅಂಗಗಳು ಎಲ್ಲರಿಗೂ ಒಂದೇ ತರದವು (ರಾಮಾನ. ೧೧೪); ನಮಗೇನಾದರೂ ಸಮರ್ಥನಾದ ವಕೀಲ ಮೊದಲೇ ಸಿಕ್ಕಿದ್ದರೆ ಅದರ ತರವೇ ಬೇರೆಯಾಗುತ್ತಿತ್ತು (ಪುನರು. ೩೧೪). **ತರಹಾ**: ಇನೋ ಒಂದು ತರಹಾ ಆಗುತ್ತೆ (ದೂಬಿಟ್ಟ. ೧೦೦); ನಾನು ಈಗ ಇರುವ ತರಹಾದಲ್ಲಿ ಕಳೆದುಹೋದ ಕಾಲವನ್ನು ಬೇರೆ ವಿಧವಾಗಿ ಕೂಡಿಸಿಕೊಳ್ಳಲು ಅವಕಾಶವಿಲ್ಲ (ಇಬದು. ೫೫). **ತರಹೆ**: ಅವರು ನಾನಾ ತರಹೆ ವಿಗ್ರಹಗಳನ್ನು ಪೂಜಿಸುತ್ತಾರೆ (ಪ್ರಪಾ. I, ೦೯); ನಮ್ಮ ಹೃದಯದಲ್ಲಿ ಅದೊಂದು ತರಹೆಯ ಹಗುರವೇರ್ಪಟ್ಟಿತು (ಸುಂದರಿ. ೧೩). **ಥರ್ಹ₄**: ಸುಗ್ಗಿಯೆಲ್ಲೂ ಒಂದು ಥರದ ಥಂಡಿ (ಜಂಡಮ. ೧೭-೧೪); ಅವನ ಬಿ. ಎಸ್‌ಸಿ. ಆಗಿಬಿಟ್ಟರೆ ಸಾಕು, ಎಲ್ಲ ಥರದಲ್ಲಿಯೂ ನನ್ನ ಮನಸ್ಸಿಗೆ ಸಮಾಧಾನವಾಗುತ್ತೆ (ವಂಶವೃ. ೪೪೪).

**ತರತರ್ಹ₃, ಥರಥರ್ಹ₃** (ದ್ವಿರುಕ್ತಿ): ತರತರದೌಷಧಿಗಳಿವಱ ದೊರೆಯೆನಿಸುಗುಮೇ (ಜಮದ. ೭-೧೪); ತರಿಸಿದರು ಭಂಡಾರದಲಿ ತರತರದ ನೂತನ ವಸ್ತುಗಳ [ಪಾಠಾಂ. ನವಭರಿತವಾದ ಸುವಸ್ತುಗಳ] ವಿಸ್ತರಿಸಿ ಕಟ್ಟಿದರಗಲದಲಿ ವೈವಾಹಮಂಟಪವ (ನಳಚ. ೩-೫); ಬಗೆಬಗೆಯಾಸೆಗಳಿಗೊಳಗಾದ ನಾವು ಜಂಗಮಗಳನ್ನೂ ತರತರವಾಗಿ ಕಾಡುತ್ತೇವೆ (ನಾಡೋಜ. ೧); ತರತರವಾಗಿ ಹೇಳಿದ್ದು ಮರೆತರೆ ಮರಕ್ಕಿಂತ ಕಡೆ (ಗಾದೆ); ಯಮುನ ಪುರಿಯಲಿ ಥರಥರದ ಕೇರಿಗಳ ಸಲೆ ಸಿಂಗರಿಸಿದರು (ಕುವ್ಯಾದ್ರೋ. ಓರಿಇ. ಪರಿ. ೫೪೪); ಥರಥರದ[ಪಾಠಾಂ. ತರತರದ] ಮುಗಿಲಟ್ಟಳೆಯ ವಿಸ್ತರದ ವಿಮಲಸ್ಫಟಿಕ ಬದ್ಧರದಾಳುವೇರಿಗಳು (ಕೊರರಾ. ೧-೯-೧೦); ಕಿರಿದಾದ ರತ್ನಶಿಲೆಗಳಲ್ಲಿ ಥರಥರವಾಗಿ ಕೊರದು ಖಡಿಸಿರುವ ಸ್ತಂಭ (ಸಾಗಂಧಿ. ೪-೧೧); ಹೊಸ ಕಾಯ್ದೆ ಕಟ್ಟಳೆ ಥರಥರದ್ದು ಆಗಲಿಕ್ಕೆ ಹತ್ಯಾವ (ಧನಂಜ. ೩೨). 'ತರ್ಹ₃' ಪಲಾ. [ ←ಅರ. ಹಿಂ. ತರಹ್; ಪಾರ. ಮರಾ. ತಹಾಱ ]

**ತರಹರ** (ನಾ). ೧. ತಂಗುವಿಕೆ; ನಿಲ್ಲುವಿಕೆ: (೬). ೨. ಸೈರಣೆ; ಸಹನೆ; ತಾಳ್ಮೆ: (೬). ೩. ಸಮಾಧಾನ; ನೆಮ್ಮದಿ; ಶಾಂತಿ: ತರಹರವು ನಮಗಿಲ್ಲಲಾ ಪುತಂರರೆಯೆನುತ ಪಡಿತಳಿಸಿ ಗಂಧರ್ವರ ಚಮೂಪರು ನೂಕಿದರು ತಲುಬಿದರು ಪರಬಲವ (ಕುವ್ಯಾಅ. ೧೯-೪೫); ರುದ್ರಾಣಿ ತನ್ನಯ ತಾಮಸಾಂಗದ ಮಾಯೆಯನು ಕಳುಹೆ . . . ಬಳಿಕಲಿ ಸಮಾಧಿ ಪ್ರಾಣಿಗಳಿಗಿಲ್ಲಿಯದು ತರಹರವು (ಪ್ರಭುಲೀ. ೩-೧೭); ಆಕೆಗೀಪರಿ ಸನ್ನೆದೋಱದುಪಪತಿಗೆ ನಾನಾ ಕುಶಲಮಪ್ಪ ಸಂಜ್ಞೆಗಳಿಂದಮೆರ್ದಗೆ ತರಹರವಿತ್ತು (ಚಿಬಪು. ೯-೧೩). ೪. ಸೇರಿಕೆ; ಹೊಂದಿಕೆ; ಐಕ್ಯ: ಒಡೆದ ಮಡಕೆಗೆ ಒತ್ತಿ ಮಣ್ಣ ಮೆತ್ತಿದರೆ ಅದು ತರಹರವಹುದೆ ಗುಹೇಶ್ವರ (ಅವಚಂ. ೪೩-೧೯೦); ಅಂಗ ಲಿಂಗದಲ್ಲಿ ತರಹರವಾಗಿ ಸಮತೆ ಶಾಂತಿಯಲ್ಲಿ ತರಹರವಾಗಿ ಮನ ಜ್ಞಾನದಲ್ಲಿ ತರಹರವಾಗಿ ಭಾವ ನಿರ್ಭಾವದಲ್ಲಿ ತರಹರವಾಗಿರಬಲ್ಲಡೆ ಆತನೇ ಅಚ್ಚಶರಣನು ಕಾಣಾ ಗುಹೇಶ್ವರ (ಅವಚಂ. ೧೧೯-೫೪೦); ನಿಮ್ಮ ಮಹಾಜ್ಞಾನದ ಸಂಗದಿಂದೆ ಎನ್ನ ಸಕಲ ಕರಣಂಗಳು ನಿಮ್ಮಲ್ಲಿ ತರಹರವಾದವಾಗಿ ಅಖಂಡೇಶ್ವರ ನಿಮ್ಮ ಪರಮಪ್ರಸಾದವು ಎನಗೆ ಸಾಧ್ಯವಾಯಿತ್ತಯ್ಯಾ (ಅಖಂಡೇ. ೧೭೭-೫೭). ೫. ತ್ವರೆ; ಅವಸರ; ತವಕ; ಆತುರ: ಸಿಂಹಾನೀಕ ಚಟಿಯೆಂಬ ಚತುರಂಗಾಣದ ತರಹರದೊಳು ಹಲಗೆಯ ಮಗ್ಗುಲೊಳು ಖಡ್ಗವಂ ಜಡಿದರು (ಸೋಮಚ. ೫-೧೪); ಧರೆ ಮೆಚ್ಚುವಂತೆ ಕಳ್ಳರನಱಸಿ ತಹುದಕ್ಕೆ ತರಹರದಿನೆಂಟುದಿನದವಧಿಯಂ ಕೊಡು ಮೇಲೆ ತರದಾದೊಡಾಜ್ಞೆಯಂ ನಾವಿವಗೆ ಮಾಳ್ಪೆವಿಂತಿದಕೆ ಸಂದೇಹ ಬೇಡ (ಸಮ್ಯಕ್ತ್ವಾ. ೨-೨೪). ತರಹರದಲಿ ಬಂದಳಬುಜಾಕ್ಷಿ ಶಂಬರಾಸುರನ ಪಟ್ಟಣವನೀಕ್ಷಿಸುತ (ಮೋಹತ. ೯-೩೮). 'ತರಹರಪಡು' ಪರಾ. ೬. ಸ್ಥೈರ್ಯ; ಕೆಚ್ಚು. 'ತರಹರಣೆ' ಪರಾ. ೭. ಉಪಾಯ; ಗತಿ; ದಾರಿ: ಮುಱಿಯೆನುತ ಗಂಧರ್ವಬಲ ಮುಕ್ಕುಱಿಕಿ ಕೌರವ ಬಲವ ತತ್ತುಱಿದುದು ತರಹರವಿಲ್ಲೆನಿಸಿ ಹೊಗಿಸಿದನು ಪಾಳೆಯವ (ಕುವ್ಯಾಅ. ೧೯-೩೪). ೮. ದುರವಸ್ಥೆ; ದುಸ್ಥಿತಿ: ಬಳಿಕ ಭೀಮನ ತರಹರವನಱಿದಾಚೆಯಲಿ ಸಂವರಿಸಿಕೊಂಡನು ನಕುಳ ಬಿಟ್ಟನು ಸೂಠಿಯಲಿ ರಥವ (ಕುವ್ಯಾಕ. ೨೦-೦೩). ೯. ಅಪೇಕ್ಷೆ; ಹಂಬಲ. 'ತರಹರಿಕೆ' ಪರಾ. ೧೦. ನಡಂಗುವಿಕೆ; ಕಂಪನ. ೧೧. ಚೇತರಿಸಿಕೊಳ್ಳುವಿಕೆ; ಎಚ್ಚೆತ್ತುಕೊಳ್ಳುವಿಕೆ. ೧೨. ಹೋಗಲಾಡಿಸುವಿಕೆ; ಇಲ್ಲದಾಗುವಿಕೆ. 'ತರಹರಿಸಂ' ಪರಾ. ೧೩. ವಿಚಾರ; ಆಲೋಚನೆ: ಮೇಲೆ ನಿಮ್ಮಡಿಯಲ್ಲದಾತಗೆ ಕಾಳಗಕ್ಕಂಗೆಯ್ಯುತೀರದು ಹೇಳಲಮ್ಮೆನು ಮರ್ಕಟಂಗಳಿಗಿಲ್ಲ ತರಹರವು (ಕಾಶಿರಾ. ೨೧-೧೮).

**ತರಹರಂಗೊಳ್, ತರಹರಗೊಳ್** (ಕ್ರಿ). ೧. ಬಯಸು; ಅಪೇಕ್ಷಿಸು: ಉತ್ಪಲವಿಲೋಚನೆಯರರುಣಪಲ್ಲವಪಾಣಿತಳದ ಮಿಸುನಿಯ ಪಾತ್ರೆಯೊಂದಿನಿಸು ಮುಟ್ಟದಂತೆ ತರಹರಂಗೊಂಡು ದತ್ತಾವಧಾನದೊಳೊಂದು ಹೊರೆಯಲ್ಲಿ ಕುಕ್ಕರಿಸಿ (ಸಮ್ಯಕ್ತ್ವಾ. ೯-೧೧). **ತರಹರಗೊಳ್**: ೨. ನೆಮ್ಮದಿಗೊಳ್ಳು; ಸಮಾಧಾನದಿಂದಿರು: ಈವರಿಗುಂಟೆ ಸೋಲವೆಂದೆನಲು ಸ್ಮರಗಾರು ಸೋಲಲ್ಕೆ ಹೆಣ್ಣ ಬಿಟ್ಟೆವೆ ನಾವು ತರಹರಗೊಳ್ಳಿರೈಯೆಂದಾ (ಭರತ. ೫೦-೮೪). [ ತರಹರ + ಕೊಳ್₁ ]

**ತರಹರಗೊಳ್** 'ತರಹರಂಗೊಳ್' ನೋ.

**ತರಹರಣೆ** (ನಾ). ೧. ಸ್ಥೈರ್ಯ; ಕೆಚ್ಚು: ನರನ ಶರಸಂಧಾನವರ್ಜನ ನಿರುಪಮದ ದೃಢಮುಷ್ಟಿ ರಾಮನ ತರಹರಣೆ ಮಾರುತನ ದೋರ್ವಲ ವೆರಸಿತಾ ಸುಕುಮಾರಕಗೆ ತಾನಾಹವಾಗ್ರದಲಿ (ಜೀವಂಚ. ೯-೩೨); ಬರಬರಲು ರಿಪುಭಟನ ಹೊಯ್ಲುಗಳ ಧರಧುರಕೆ ಕಲಿ ಸಾತ್ಯಕಿಯ ತರಹರಣೆ ತಗ್ಗಿತು (ಕುವ್ಯಾದ್ರೋ. ೦೪-೧೧). ೨. ಉಪಾಯ; ಗತ್ಯಂತರ: ಉಂಡು ತೀರಿಸಬೇಕು ತಾ ಮುಂಕೊಂಡು ಮಾಡಿದ ಪುಣ್ಯ ಪಾಪದ ತಂಡವನು ತರಹರಣೆಯಿ[ಪಾಠಾಂ. ಇವಿ]ಲ್ಲದೆ ಭವಭವಂಗಳಲಿ (ಕುವ್ಯಾಅ. ೩-೦೨೦).

[ <ತರಹರ ]

**ತರಹರಪಡು** (ಕ್ರಿ). ತವಕಪಡು; ಆತುರಗೊಳ್ಳು: ಇಂದ್ರಿಯಗಳನ್ನು ಎಳೆಯುವುದಕ್ಕೆ ಮನಸ್ಸು ತರಹರಪಡುತ್ತದೆ (ಗೀತಾಸಂ. ೪೭).

[ ತರಹರ + ಪಡು₁ ]

**ತರಹರವಾಗು** (ಕ್ರಿ). ೧. ಸಮಾಧಾನಹೊಂದು; ಶಾಂತಿಯನ್ನು ಪಡೆ: ಎನ್ನ ತನು ಕರಣೇಂದ್ರಿಯಂಗಳೆಲ್ಲ ತರಹರವಾದುವಯ್ಯ ನಿಮ್ಮ ನೆನಹಿನ ಬಲದಿಂದೆ (ಅಖಂಡೇ. ೧೦೩-೩೪). ೨. ಐಕ್ಯವಾಗು; ಲೀನವಾಗು; ಸೇರಿಕೆಯಾಗು: ಪಶ್ಚಿಮದ್ವಾರದ ಧವಳಾರವಂ ಪಶ್ಚಿಮದಿ ಪೊಕ್ಕು ತ್ರಿವಿಧ ಗತಿಯ ಶೂನ್ಯಸಿಂಹಾಸನದ ಮೇಲೆ ತರಹರವಾದೊಡೆ ನಂಬುವುದೆನ್ನ ಮನವು (ಬಸವ. ಕ. ೧೩೪೯); ಕಲಕೆ ಚಕ್ರವ್ಯೂಹ ಹಂಸಾವಳಿಗೆ ಹಂಸವ್ಯೂಹ ಹಿಂದಣ ಬಲದೊಳಾ ಮೋಹರಕೆ ತರಹರವಾಯ್ತು ಪದ್ಮದಲಿ (ಕುವ್ಯಾದ್ರೋ. ೦೨-೨೩). [ ತರಹರ + ಆಗು₁ ]

**ತರಹರವಿಡು** (ಕ್ರಿ). ತಾಳ್ಮೆಗೆಡು ; ಸ್ಥೈರಣೆಗೆಡಂ : ಅಡಿಗಡಿಗೆಯ್ಯುರುತಿಹ ಮಹಾಜುವರೆ ಕೋಟಿಬಂಧು ವರ್ಗವನು ತರಹರವಿಡದರ್ಕಕೀರ್ತಿರಾಜೇಂದ್ರ ನಾದರಿಸಿದನಯ್ಯನಂದದೊಳು (ಭರತೇ. ೭೯-೯೦).

[ ತರಹರ + ಬಿಡು$_1$ ]

**ತರಹರಿ** (ನಾ). ತರಹರವುಳ್ಳವನು ; ಸಹನಶೀಲ; ಸಮಾಧಾನಿ : ಜ್ಞಾನಿ ತರಹರಿ ಶಾಸ್ತ್ರಿ ಸುಗುಣಿ . . . ಅತಿಮಹಿಮ ದಾನಿಯೆಂದಿಳೆ ತನ್ನನೆಳಸಿ ಬಣ್ಣಿಸಿದೊಡಭಿಮಾನಿಸದೆ ನಡೆವುದಚ್ಚರಿ ಶಂಭುಲಿಂಗ(ಕೈವಲ್ಯ. ೭೭-೫೩-೩).

[ ತರಹರ + – ಇ$_3$ ]

**ತರಹರಿಕೆ** (ನಾ). ೧. ಸಮಾಧಾನ ; ನೆಮ್ಮದಿ ; ಶಾಂತಿ : ಸರಸಿಜಾಸನ ಸೂನು ಕೇಳ್ ತರಹರಿಕೆಗೊಂಬುದೆ ತರಣಿಕಿರಣಸ್ಫುರಣೆಯಲಿ ಮಱುಕ ಮಾಡಿದನು ತಮ್ಮಂಗೆ ಪಕ್ಷಗಳ (ತೊರರಾ. ೪-೧೧-೧೯). 'ತರಹರಿಕೆ ದೋಱು' ನೋ. ೨. ಅಪೇಕ್ಷೆ; ಹಂಬಲ ; ಮನೋರಥ : ತರಹರಿಕೆ ಕೈಗೂಡ[ಪಾಠಾಂ. ಡಿ]ದವನೀಶ್ವರನು ಕೌಸಲೆ ಸಹಿತ . . . ಕಡುಕಾಹುರದ ಕಟ್ಟಳಲಿಕೆಯಲ್ಲಿದಿದನವನಿಜಾಪತಿಯು (ತೊರರಾ. ೨-೩-೫೩). ೩. ಸಂಕಟ ; ತಳಮಳ ; ಚಡಪಡಿಕೆ : ಸಹದೇವನಂ ಕಳುಪಲಾತಂ ಪೋಗಿ ಧರಣಿ ಯೋಳ್ಬಿದ್ದವನ ನೋಡದೆ ಮಹಾಸರಿನ ತರಹರಿಕೆಯಿಂ ಮೇಲಣಾತನ ವಿಚಾರಿಸದೆ ತಾನೆ ನೀರ್ಗುಡಿದು ಬಂದು ವರಗಿದಂ (ತುರಂಗ. ೪೪-೫೦). ೪. [ಸಂಗೀತ] (ಒಂದೇ ಸ್ಥಾಯಿಯಲ್ಲಿ) ತಂಗುವಿಕೆ, -ನಿಲ್ಲುವಿಕೆ : ಕೊಂಕು ಜತಿ ಜೋಕೆ ಮಾರ್ಗವಣೆ ವಹಣಿ ತರಹರಿಕೆ ಕಂಪಿತ ಹೊಂಪು ಬಾಗು . . . ನುತ ಶುದ್ಧ ಸಾಳಂಗ ಸಂಕೀರ್ಣವಂ ಯಥೋಚಿತ ತಾರ ಮಧುರ ಮಂದ್ರಂಗಳಿಂ ಹಾಡಿ ಭೂಪತಿಯ ದುಗುಡವನು ತೊಳೆದರು ರಾಗರಸಲಹರಿಯಿಂದ (ಹದಶಾ. ೭-೩). [ ತರಹರ + – ಇಕೆ ]

**ತರಹರಿಕೆದೋಱು** (ಕ್ರಿ). ಪರಿಹಾರ ಕಾಣು ; ಸಮಾಧಾನ ಕಾಣು : ಅರಸಿ ಸೀತೆಯ ನೆನೆದು ಹುಟ್ಟಿದ ವಿರಹಶಿಖಿಯುಬ್ಬರದ ತಾಪಕೆ ತರಹರಿಕೆ ದೋಱದೆ ಸರೋವರದೊಳಗೆ ಮಂಡಿಸಿದ (ತೊರರಾ. ೩-೧೨-೩೮).

[ ತರಹರಿಕೆ + ತೋಱು ]

**ತರಹರಿಸು** (ಕ್ರಿ). ೧. ತಾಳಿಕೊಳ್ಳು ; ಸೈರಿಸು ; ಸಹಿಸಿಕೊಳ್ಳು : ರಥಾ ನೀಕಂ ವಿರಥವಾಗಿ ತುರಂಗಕುಲಂ ತರಹರಿಸಲಾಱದೆ (ಗಿರಿಜೆ. ೬-೭೭ ವ) : ಒಂದು ಹರಿಣನೆಯ್ದೆಂದೆಡೆಯ ಸಗಣಿಯೊಳಗೆಡಹಿ ತರಹರಿಸಲಾಱದೆ ಮುಗ್ಗಿ ಬಿದ್ದುದು (ಸಿದ್ಧರಾ. ೪-೪೨) ; ದ್ಯುಮಣಿಯೊದೆದರೆ ತರಹರಿಸುವುದೆ ತಿಮಿರ (ಕುವ್ಯಾದ್ರೋ. ೧೪-೩೨) ; ಕಳವಳಿಸಿ ತರಹರಿಸಲಾಱದೆ ಬಳಿಕಲಲ್ಲಮಗಾವ ಬೀಡಿನ ನೆಲೆಯ ಮಾಡಿದಿರೆನುತ ಸಖಿಯರ ಕೇಳಿದಳು ಮಾಯೆ (ಪ್ರಭುಲೀ. ೫-೨೨) ; ಗೋವಿಂದನಿಲ್ಲದೆ ಭೂತಳಂ ನವಗೆ ಸಾಧ್ಯವಾಗಿರ್ಪುದದು ನಿಶ್ಚಯವಿದು ಎಂದರಸರು ಹದನಮನ್ನರಿದು ತನ್ನ ತಮ್ಮಂದಿರನ್ನೊಡಗೊಂಡು ತರಹರಿಸಿ ಶೋಕದೊಳ್ಮಂದಿಗಂ ನೇಮಿಸಿದ ವಾರ್ತೆಯಂ ತಹುದೆಂದು ನಾಲ್ದೆಸೆಗೆ ಚಾರಕರನು (ತುರಂಗ. ೯೧-೫). ೨. ಸಂತೋಷಪಡು: ಪಾದಕೆಱಗಿಯುಂಗುಟವನು ಕಚ್ಚಿದಳ್ ತರಹರಿಸುತಲಿ (ಮೋಹತ. ೧೪-೯೨). ೩. ಹೊಂದಿಕೊಳ್ಳು : ತಾಳದಲಿ ತರಹರಿಸಿ ಮೆಲ್ಲನೆ ಮೇಳದಲಿ ಮೈನಿಗುರಿ . . . ಗಮಕಿಸುತ ಮೊಷ್ಟಿದರ್ಳಾ ಮಾಯೆ (ಪ್ರಭುಲೀ. ೪-೫೭). ೪. ಆತುರಪಡು ; ತವಕಪಡಂ : ನಿನ್ನ ಕಣ್ಣ ಹೊಲದಾಚೆಗಾಗಿ ರವಿ ತಣ್ಣಗಿರುವವರೆಗೂ ಸುಳ್ಳೆ ಪಳ್ಳೆ ತರಹರಿಸಬೇಡ, ಇರು ಅಲ್ಲೆ, ಬೈಗ ಮರೆಗೂ (ಮೇಘದೂ. ೯-೩೪). ೫. ಸ್ಥೈರ್ಯ ಹೊಂದಿರು ; ಧೈರ್ಯದಿಂದ ಕೂಡಿರು : ಹರಿಯ ರೌದ್ರದ ಕೋಪಶಿಖಿಯನು ವರಹಿರಣ್ಯಕ ಕಂಡು ಬಗೆಯದೆ ತರಹರಿಸಿ ಬಿಗಿದಿಕ್ಕಿ ತಳುಕನು ಬಿಸುಟು ಕೈದುವನು ಕರವನುದ್ಧತ ನಗುತ ನುಡಿದನು (ಸಂಭಪ. ೮-೧೦೦). ೬. ಚೇತರಿಸಿಕೊಳ್ಳು ; ಚೈತನ್ಯವನ್ನು ಹೊಂದಂ: ತರಹರಿಸಿ ನರನಿಕ್ಕಿದನು ಶಂಕರನ ವಕ್ಷಸ್ಥಳವನು (ಕುವ್ಯಾ. ೬-೩೨). ೭. ಕಳವಳಿಸು ; ಸಂಕಟಪಡು ; ನೋಯು ; ಚಡಪಡಿಸು : ಆಯಿರಳೆ ಬೆನ್ನನರಸಂ ಬಿಡದೆ ಗಮಿಸೆ ಬಿಸಿಲಿಂದ ದಣಿದು ನೀರಡಿಸಿ ತರಹರಿಸುತಿರಲೆ ತೆರಳುತಿರೆ (ಪ್ರಾಭರಾ. ೮-೩೭) ; ಸರಳೊಂದನೆಚ್ಚೆ ತಾ ಕಡ ಹಲ್ಕೆ ಛಾಯದಿಂ ತರಹರಿಸಿ ಬಿದ್ದಲ್ಲಿ ಮರಣವಂ ಪಡೆಯಲ್ಕೆ ಹರಸಾಯಾ ಹಂದಿ ನಮ್ಮದು ಯನಲ್ಕ ರ್ಜುನಂ ತನ್ನದೆಂದನು ಶಬರಗೆ (ತುರಂಗ. ೨೭-೨೩); ತಾಯಿಯ ಮಾತನ್ನು ನೆನೆಸಿಕೊಂಡು ತರಹರಿಸಿದನು (ನಂಜುಂಡ. ೪೮); ಮಧುಸೂದನ ಮರುಕೊಳಿಸಿದ ಹಳೆಯ ವೇದನೆಯಿಂದ ತರಹರಿಸಿದ (ರೂಪಸ. ೬೨). ೮. ಕಳವಳಕ್ಕೆ ಈಡುಮಾಡಂ ; ನೋಯಿಸು : ಗುರುವೆ ಕರುಣಿಸಿ ಬಂದು ಬಾರದೆ ತರಹರಿಸಲೇಕೆನುತ ಚಿಂತಾಶರಧಿಯೊಳಗದ್ದಿದನು ಕೇಳುತ ಬಸವ ಮನದೊಳಗೆ (ಪ್ರಭುಲೀ. ೧೪-೧೮). ೯. ತತ್ತರಿಸು ; ನಡುಗು ; ಕಂಪಿಸು : ಅಱಸಿ ಕಾಲ್ಗೆಱಗುವೆನೆನುತೆದ್ದು ತನು ತರಹರಿಸುತ ತೊಳಲ್ದಳಾಲಯವ (ಮೋಹತ. ೨೭-೪೯). ೧೦. ತಡವಮಾಡು; ವಿಲಂಬ ಮಾಡು : ಕರದಲಮೃತವನೆಱೆಯೆ ದೈತ್ಯರು ತರಹರಿಸದದ ನುಂಗೆ (ಸಂಭಪ. ೫-೧೨೮) ; ಸುರುತಾಳ ದಂಡೆತ್ತಿ ಬಂದು ದುರ್ಗವ ಮುತ್ತೆ ತರಹರಿಸದೆ ರಾಮಕುಮರ ತುರಗವನೇಱಿ ತುರುಕಬಲವನು ಧುರಧರಣಿಯೊಳಗೆ ಹರಹುವನು (ಕುರಾಸಾಂ. ೩೪-೨೦). ೧೧. ಹೋಗಲಾಡಿಸು ; ಪರಿಹರಿಸು: ಹರಿಗೆಯ ಹಿಡಿದವ ಇದಿರ ಗೆದ್ದಿಹನೆಂದು ಅದನೆದೆಗಿಕ್ಕಿಕೊಂಡು ಉರವಣಿಸಿಕೊಂಡು ಬಾಹ ಸಮರವ ತರಹರಿಸಿದೆನೆಂದು ಇದಿರಿಗೆ ಈಡಹ ತೆಱನಂತೆ ಅಕ್ಕೆ ಹಾನಿಯೆ (ವಚನಮಾ. ೫೭-೩೩೭) ; ಸುಳಿವ ಸುತ್ತುವ ಡಗೆಯಂ ತರಹರಿಪ ಸಾರ್ವ ಪಾರ್ವಬ್ಬರಿಪೆಸಕಂ ಮಿಱುಕಿ ಕಾದಿದರ್ ಕಡುಗಲಿಗಳ್ (ಶಬಶಂ. ೪-೭೭). ೧೨. ತೊರೆ; ಬಿಡು : ತರುಗಿರಿಸರಸಿಸರಿತ್ಪುರವನಗಳ ನಿರದೆ ವರ್ಣಿಸುವ ಕವಿಗಳು ಪುರುಷರೊಳಗೆ ಶೌರ್ಯಾದಿಗುಣಗಳಿರೆ ತರಹರಿಸುವರೆ ಪೊಗಳದೆ (ಕುರಾಸಾಂ. ೧-೯೫). ೧೩. ಸಂಭ್ರಮಿಸು: ತನ್ನಯ ಸೈನ್ಯವಿದನುಳಿದು ಧರಣಿಯಲ್ಲಿ ನೃಪನೊಬ್ಬನುಂಬನೆ ಪುರಕೆ ನೇಮವ ಕೊಡಲಿಬೇಕುದು ತಥಹರಿಸಬೇಡ (ಕುವ್ಯಾಅ. ೭೧೩. ೨೬-೧೩).

ತರಹರಿಸಿಕೊಳು= ಚೇತರಿಸಿಕೊಳ್ಳು : ಕಲಿ ಪವನಸುತ ತರಹರಿಸಿ ಕೊಳುತೆಱಗಿದನು ರಕ್ಕಸನ (ತೊರರಾ. ೫-೫-೩೩). [ ತರಹರ + – ಇಸು$_3$ ]

**ತರಹಾ** 'ತರಹ' ನೋ.

**ತರಹೆ** 'ತರಹ' ನೋ.

**ತರಹೆವಾರಿ** 'ತರಹೇವಾರಿ' ನೋ.

**ತರಹೇವಾರಿ,** ತರಹೆವಾರಿ (ಗು). ವಿಧವಿಧವಾದ ; ಬಗೆಬಗೆಯಾದ ; ವಿವಿಧ ರೀತಿಯ : ಸೀರೇನ ತರಹೇವಾರಿ ಉಡುವ ರೀತಿ(ಹಂಗೂಲಿ. ೫೩) ; ಇದರಲ್ಲಿ ತರಹೇವಾರಿ ನೇಗಿಲುಗಳುಂಟು (ವ್ಯವಮ. ೧೯). **ತರಹೆವಾರಿ :** ಹೆಣ್ಣುಮಕ್ಕಳಿಗೆ . . . ಹಂಚಿಕಡ್ಡಿಯಿಂದ ತರಹೆವಾರಿ ಬುಟ್ಟಿಗಳನ್ನು ಮಾಡುವುದನ್ನು ಕಲಿಸುತ್ತಿದ್ದಾರೆ (ದಿಲ್ಲಿಪ. ೧೧೩).

[ ←ಮರಾ. ತರ್ಹೇವಾರ್ ]

**ತರಳ** 'ತರಲ' ನೋ.

**ತರಳತನ** (ನಾ). ೧. ಬಾಲ್ಯ : ತರಳತನದಲಿ ಕೆಲವು ದಿನ ದುರುಭರದ ಗರ್ವದಿ ಕೆಲವು ದಿನ ಮೈಮಱೆದು ನಿಮ್ಮಡಿಗೆಱಗದಾದೆನು (ಹರಿಸಾ. ೫೦): ಈ ತರಳತನದ ಪೂರ್ವವಯಸ್ಸಿನಲ್ಲಿಯೇ ಸ್ವರ್ಗದ ಅಥವಾ ಭೂಲೋಕದ ಆವ ಅಪ್ಸರೆಯಿಂದಾದರೂ ನಿನಗೇನಾಗಬೇಕು ? (ಚಟ್ಯಲ. ೨೫-೨೫). ೨. ಹುಡುಗತನ; ಹುಡುಗಾಟಿಕೆ; ಚಾಪಲ್ಯ : ತರಳತನದಲಿ ನುಡಿಯದಿರು ಸಂಗರಕೆ ಕರೆ ನಿಮ್ಮಯ್ಯನನು (ಕುವ್ಯಾದ್ರೋ. ೬-೪೯) ; ಮರುಳಲಾಯಿಲೆ ಕಂದ ದಶಕಂಧರನದಾರೆಂದಱಿಯಲಾ ಬಿಡು ತರಳತನವನು (ತೊರರಾ. ೪-೯-೧೫) ; ತರಳತನದಿಂದೆ ಹಯಮೇಧಕುದ್ಯೋಗಿಪರೆ ಹೇಳು (ಜೈಮಿಭಾ. ೨-೫೭). [ ತರಳ (=ತರಲ) + – ತನ ]

**ತರಳತರ** (ಗು). ೧. ಅತಿಚಂಚಲವಾದ; ಹೆಚ್ಚು ಚಲನೆಯುಳ್ಳ: ತರಳತರಲೋಚನಂ ನಿರ್ಝರರಾಗರಸಂ ಮುಖಾರವಿಂದಂ ನಿನ್ನಾ ದೊರೆ ಕೊಳಿಸಿದೊಸಗೆಯೇಂ ಬಂಧುರಮೆಂಬುದು (ಕವಿರಾ. ೩-೧೭); ತರಳತರ ವೃತ್ತಮೌಕ್ತಿಕ ಪರಿಕರಮೇಕಾಂತಕಾಂತಮೆಕ್ಕಾವಳಿ ಕಂಧರದೊಳ ವರ್ದಸೆಯೆ ಪೊಲ್ತುದು ಪರಿವೇಷಂಗೊಂಡ ಚಂದ್ರನಂ ಮುಖಚಂದ್ರಂ (ಆದಿಪು. ೪-೩೭); ಅಪಾಂಗವಿಕ್ಷೇಪ ತರಳತರತಾರಕಾರೋದರ ನಯನಂಗಳಿಂದಡಿಗಡಿಗೆ ನೋಡುತ್ತಮಿರ್ದು (ಕಾದಂಊ. ೫೦). ೨. ಪ್ರಕಾಶಮಾನವಾದ; ಕಾಂತಿಯುಕ್ತವಾದ. [ಸಂ.]

**ತರಳತಾರ** (ನಾ). ಒಂದು ನರಕದ ಹೆಸರು: ಬಳಿಕ ಕುಂಭೀಪಾಕ ಸುಪಾಕ ಪ್ರಮುಖ ದಾರುಣ ಅಂಗಾರಕಮೆಂಬೈದು ಮಂತ್ರಿನರಕಂಗಳಿಂ ಸೇರಿ ತರಳತಾರಮೆಂಬರಸುನರಕವಿಹುದು (ವಿವೇಕ. ೧೮೦). [ಸಂ.]

**ತರಳತಾರನೇತ್ರ** (ನಾ). ಚಂಚಲವೂ, ಕಾಂತಿಯುಕ್ತವೂ ಆದ ಕಣ್ಣು ಗಳುಳ್ಳವನು: ನಂದಗೋಪನುಂ ಯಶೋದೆಯುಂ . . . ಪುಂಡ ರೀಕಾಕ್ಷವದನ ವಿನ್ಯಸ್ತ ನಿರಸ್ತ ತರಳತಾರನೇತ್ರರುಂ ನಿಸ್ಸಂಜ್ಞ ತ್ರಿಸಂಜ್ಞ ಗಾತ್ರರುಮಾಗೆ (ಜಗವಿ. ೩-೯೪ ವ). [ತರಳ (=ತರಲ)+ತಾರ೩+ನೇತ್ರ]

**ತರಳತೆ** 'ತರಲತೆ' ನೋ.

**ತರಳತೆವೆಱು** (ಕ್ರಿ). ಚಂಚಲತೆಯನ್ನು ಹೊಂದು: ತರಳತೆವೆತ್ತ ಲೋಚನ ಚಕೋರಿ (ತ್ರಿಪುವಿ. ೨೪-೧೭೭). [ತರಳತೆ (=ತರಲತೆ) + ಪೆಱು೧]

**ತರಳನಯನೆ** (ನಾ). ಚಂಚಲವಾದ ಕಣ್ಣುಗಳುಳ್ಳವಳು: ಇದಿರೆಟ್ಟಲ್ ತರಳನಯನೆ ಸಂಭ್ರಮದಿಂದಂ (ಕಾದಂಊ. ೩೫).
[ಸಂ. ತರಲನಯನಾ (ತರಲ + ನಯನ + –)]

**ತರಳನೇತ್ರೆ** (ನಾ). = ತರಳನಯನೆ: ತಾರಾ ಜಾನಕಿಯುಂ ಪೋಗಿ ತಾರಾ ತರಳನೇತ್ರೆಯುಂ (ಕವಿರಾ. ೨-೧೨೪).
[ಸಂ. ತರಲನೇತ್ರಾ (ತರಲ + ನೇತ್ರ + –)]

**ತರಳಭಾವ** (ನಾ). ಚಂಚಲವಾಗಿರುವಿಕೆ; ಅಸ್ಥಿರತೆ; ಚಾಂಚಲ್ಯ; "ಅರುಮೆ" (ಚಕುನಿ. ಕ. I, ೬೨). [ತರಳ (=ತರಲ) + ಭಾವ೭]

**ತರಳಲೋಚನೆ** (ನಾ). = ತರಳನಯನೆ: ತರಳಲೋಚನೆ ಮುಂಗುಚಂಗಳೊಳಾದ ಚೆಲ್ವಿಗಳಂ . . . ತೋಱು ನೀಂ (ಧರ್ಮಾಮ್ನ. ೩-೨೨೮). [ಸಂ. ತರಲಲೋಚನಾ (ತರಲ + ಲೋಚನ + –)]

**ತರಳವೃತ್ತ** (ನಾ). = ತರಲ೮: ತರಳವೃತ್ತಮೆನಿಪ್ಪುದೊಪ್ಪಿರೆ ನಂಭರಂಸ ಜಜಂಗಮುಂ (ಛಂಬುಡಿ. ೮೭). [ತರಳ (=ತರಲ) + ವೃತ್ತ]

**ತರಳಾಂಬಕೆ** (ನಾ). = ತರಳನಯನೆ: ತರಳಾಂಬಕೆ ನೀನಿಲ್ಲಿರ್ದೊರೆದೀ ಸುಕುಮಾರಚಂದ್ರನಾರೆಂದೀಗಳ್ಪರಿಕಿಸಿ ಬಾರ (ಉದ್ಭಟ. ೭-೧೯).
[ಸಂ. ತರಲಾಂಬಕಾ (ತರಲ + ಅಂಬಕ + –)]

**ತರಳಾಕ್ಷಿ** 'ತರಲಾಕ್ಷಿ' ನೋ.

**ತರಳಾಪಾಂಗ** 'ತರಲಾಪಾಂಗ' ನೋ.

**ತರಳಾಪಾಂಗೆ** (ನಾ). ಚಂಚಲವಾದ ಕಡೆಗಣ್ಣ ನೋಟವುಳ್ಳವಳು: ತರಳಾಪಾಂಗೆಯ ರೂಪವಿಭ್ರಮವಿಲಾಸಾಶ್ಚರ್ಯಮಂ ನೋಡಿ ತದ್ವಿರ ಹಾವಸ್ಥೆಯೊಳಂಗಜಂ ಕರಗಿದಂ (ಅನಂಪು. ೩-೨೩).
[ಸಂ. ತರಲಾಪಾಂಗಾ (ತರಲ + ಅಪಾಂಗ + –)]

**ತರಳಾಯತಾಕ್ಷಿ** 'ತರಲಾಯತಾಕ್ಷಿ' ನೋ.

**ತರಳಾಯತೇಕ್ಷಣೆ** (ನಾ). = ತರಲಾಯತಾಕ್ಷಿ ೨: ದುರ್ವ್ಯಸನೆ ದುರಾತ್ಮೆಯಪ್ಪ ವಧು ಸಜ್ಜನಮೇ ತರಳಾಯತೇಕ್ಷಣೇ (ಮಂದತಿ. ೮-೭); ಸುಯ್ಯೆಲರ್ಕೊರಗಿಪುದೇಕೆ ಪೇಳಧರಪಲ್ಲವಮಂ ತರಳಾಯತೇಕ್ಷಣೇ (ರಾಜಶೇ. ೩-೫೭).
[ಸಂ. ತರಲಾಯತೇಕ್ಷಣಾ (ತರಲ + ಆಯತ + ಈಕ್ಷಣ + –)]

**ತರಳಿತ** 'ತರಲಿತ' ನೋ.

**ತರಳೀಕೃತ** (ಗು). ನಡುಗುವಂತೆ ಮಾಡಿದ; ಕಂಪನಕ್ಕೆ ಒಳಗುಮಾಡಿದ: ಅಂಗೀಕೃತಕಳಾವರ್ಗನುಂ ಕೃತಾರ್ಥೀಕೃತವಂದಿವರ್ಗನುಂ . . . ತರಳೀ ಕೃತಾಶಾವರ್ಗನುಂ . . . ನಮ್ರೀಕೃತ ಸಾಮಂತವರ್ಗನುಮಾಗಿ (ಚಂದ್ರಪ್ರ. ೪-೨೮ ವ). [ಸಂ. ತರಲೀಕೃತ]

**ತರಳೆ$_1$** 'ತರಲೆ$_1$' ನೋ.

**ತರಳೆ$_2$** 'ತರಲೆ$_2$' ನೋ.

**ತರಳೆ$_3$** (ನಾ). ೧. ಎಳೆಯ ಪ್ರಾಯಂದವಳು; ಹುಡುಗಿ; ಬಾಲೆ: ತರಳೆ ನಿನ್ನಂ ನಂಬಿ ಹೋದಹೆವಕ್ಕ ಛನ್ನಕ್ಕ (ಬಸಪು. ೦೪-೩). ೨. ತರುಣಿ; ಯುವತಿ: ಸೆಱಗ ಬಿಡಿಸಿರೆ ತಂದೆಗಳಿರೆಂದೊಱಲಿದಳು ತರಳೆ (ಕುಮಾ್ಯಸ. ೦೪-೧೦೪); ಭಾವರಸಪುಳಕಪ್ರಪೂರದಲೋವೆನುತ ತನು ಮಱೆದು ತದ್ಗತಭಾವದಲಿ ತಲೆವಾಗಿ ಬಿನ್ನಹ ಮಾಡಿದಳು ತರಳೆ (ನಿಭಾಗ. ೧೧-೩-೪೯); ತರಳೇ ಶರಣರ ಚರಿತವನಱಿಯದ ದುರುಳೇ (ಉದ್ಭದೇ. ೩-೬೯).
[ತರಳ (= ತರಲ) + – ಎ೭]

**ತರಳೆಅರ್ಜಿ** 'ತರಲೆಅರ್ಜಿ' ನೋ.

**ತರಳೆವೆಣ್ಣು** (ನಾ). ಚಿಕ್ಕ ಪ್ರಾಯದ ಹೆಣ್ಣು: ಸೆಱಗುವಿಡಿಯೆ ಸಾರ್ಸಾರೆಂಬ ಕರವನು ಭರದೆ ತುಡುಕಲೊಡೆಮುಱಿವ ಪರಳುವೊಲೆಗಳ ಪಿಡಿಯಲು ನಿಟ್ಟಿಸಿ ನೋಳ್ಪ ತರಳೆವೆಣ್ಣುಗಳೊಪ್ಪಿದರು (ಕಂಸವಿ. ೭-೧೭೫).
[ತರಳೆ$_3$ + ಪೆಣ್ಣು (<ಪೆಣ್)]

**ತರಾಂತುರಿ** 'ತರಾತುರಿ' ನೋ.

**ತರಾಜು** 'ತ್ರಾಸು$_1$' ನೋ.

**ತರಾಟ** 'ತರಾಟೆ' ನೋ.

**ತರಾಟೆ**, ತರಾಟ (ನಾ). ಆಕ್ಷೇಪಣೆ; ತಕರಾರು: ಮಿಸ್ಟರ್ ವರ್ಣನನು ನಾನು ಅವನಿಗೆ ಕೊಡತಕ್ಕ ಸಾಲದ ವಿಚಾರವನ್ನು ನನಗೆ ತಿಳಿಯ ಪಡಿಸಿದನು. ಆದರೆ ಅಂಥ ತರಾಟೆ ಮಾಡಲಿಲ್ಲ (ಬೆಂಜಪ್. ೧೦೪). **ತರಾಟ**: ಆಫೀಸಿನಲ್ಲೇ ತಗೊಂಡ ತರಾಟಗೆ ಹೆಡ್ಮಾಸ್ಟರ್ (ನವನೀ. ೪೨).

**ತರಾಟೆಗೆ ತೆಗೆದುಕೊಳ್ಳು, ತರಾಟಗೆ ತೆಗೆದುಕೊಳ್ಳು** = ಆಕ್ಷೇಪಗಳಿಗೆ ಗುರಿ ಮಾಡು; ತರ್ಜನೆಮಾಡು; ಆಕ್ಷೇಪಿಸು: ಅವರ ಬೈಗುಳದ ನಿಘಂಟಿ ನಿಂದ ಆಯ್ದು ತೆಗೆದ ಪದಗಳನ್ನೆಲ್ಲ ಪ್ರಯೋಗಿಸಿ ಚೆನ್ನಾಗಿ ತರಾಟೆಗೆ ತೆಗೆದು ಕೊಂಡರು (ಮಲೆಮ. ೩೮೩); ಗಂಡನು ಹೀಗಿದ್ದರೂ ಅವನನ್ನು ತರಾಟೆಗೆ ತೆಗೆದುಕೊಳ್ಳದೆ ಯಾವಾಗಲೂ ಹಸನ್ಮುಖಿಯಾಗಿರುತ್ತಿದ್ದ ನನ್ನ ತಾಯಿಯ ಮೇಲೆ ಅಜ್ಜಿ ಒಮ್ಮೊಮ್ಮೆ ಕೋಪಿಸಿಕೊಳ್ಳುತ್ತಿದ್ದಳು (ಧರ್ಮಶ್ರೀ. ೬); ಅವರು ಮ್ಯಾನೇಜರನ್ನು ತರಾಟೆಗೆ ತೆಗೆದುಕೊಂಡಂತ ತೋರುತ್ತೆ (ತುಂಬಿಕೊ. ೪೮); ಬೇರೆ ದಾರಿ ಕಾಣದೆ ಅವನನ್ನು ತರಾಟಗೆ ತೆಗೆದುಕೊಂಡೆ (ಪುನರು. ೪೯೨).
[←ಮರಾ. ತರಾಠಾ = ಜಂಬ, ಬಡಾಯಿ]

**ತರಾತುರಿ**, ತರಾಂತುರಿ (ನಾ). ೧. ಅವಸರ; ತ್ವರೆ; ಆತುರ; ತವಕ: ನಡಿಗೆಯಲ್ಲಿ ತರಾತುರಿ ಇಲ್ಲವಾದರೂ ಪೂರ್ತಿ ಚಟುವಟಿಕೆಯಿಂದ ಸಜೀವ ವೇಗವೇ ಕಾಣುತ್ತದೆ (ಹಕ್ಕಿನೋ. ೪೯); ಕಣ್ಣು ಬಿಟ್ಟಾಗಲೆಲ್ಲ, ಅಲ್ಲಿಂದಿಲ್ಲಿಗೆ ತರಾತುರಿಯಲ್ಲಿ ಓಡಾಡುವ ಹೆಜ್ಜೆಗಳ ಸಪ್ಪಳ ಕೇಳುತ್ತಿತ್ತು (ಸ್ವಾಮಿಸ್ವೇ. ೫೭); ಶಲ್ಯದಿಂದ ನೆತ್ತಿ ಒರಸಿಕೊಂಡು ಹೊರಡುವ ತರಾತುರಿ ತೋರಿದರು (ಮಾಮನ. ೧೪೪); ಹಣಕ್ಕೆ ತರಾತುರಿ ಮಾಡುತ್ತಿದ್ದಾರೋ? (ಶನಿಸಂ. ೩೭); ಬೆಳಗ್ಗೆಯಿಂದ ಅತ್ಯಂತ ಕೆಲಸದ ತರಾತುರಿ (ಸಾಹೇಬ್. ೧೭೪). **ತರಾಂತುರಿ**: ೨. ಜರೂರಾದುದು; ಒಡನೆ ಗಮನಿಸಬೇಕಾದುದು: ರಜಾ ಚೀಟಿಗಳಲ್ಲಿ ಮುಕ್ಕಾಲುಭಾಗ ರೋಗೋದ್ಭವ, ಒಕ್ಕಾಲು ತರಾಂತುರಿಯ ಗೃಹಕೃತ್ಯದಿಂದ ಬರೆಯಲ್ಪಟ್ಟವು (ಗಾಳಿಪ. ೫೦). [?]

**ತರಾಯಿ** (ಗುಂ). ಕಡೆದ ; ಕಂಡರಿಸಿದ . 'ತರಾಯಿಕಂಬ' ಪರಾ.
[ ←ಪಾರ. ತರಾಹೀ ]

**ತರಾಯಿಕಂಬ** (ನಾ). ಕುಸುರಿಕೆಲಸ ಮಾಡಿದ ಕಂಬ ; ಕಂಡರಿಸಿದ ಸ್ತಂಭ : ಅರಮನೆಯ ಮುಂಭಾಗದಲ್ಲಿ ವಿಶಾಲವಾದ ನಾಲ್ಕು ಪಡಸಾಲೆಗಳು, ಆ ಪಡಸಾಲೆಗಳಿಗೆಲ್ಲಾ ತರಾಯಿಕಂಬಗಳು (ಶ್ರೀರಾಯ. ೪೩).
[ ತರಾಯಿ + ಕಂಬ$_1$ (<ಕಂಭ) ]

**ತರಾರ** (ನಾ). (?) : ಸಮಸ್ತರಾಜ್ಯಭರ ನಿರೂಪಿತ ಮಹಾಸನ್ಧಿವಿಗ್ರಹ ಪದವೀಪ್ರತಿಷ್ಠಿತಂ ಸಮಸ್ತಶಾಸ್ತ್ರಪಾರಗಂ ಶ್ರೀಮತ್ಸನ್ಧಿವಿಗ್ರಹಿ ಗುಣಾಂಕುಶೇನ ತರಾರಂ ಭಿಲ್ಲೋಯಕ್ಷ × × × ನೃಜನನೀಸಟಿಯಿಂ ಆದಿತ್ಯಂ × × × ಗೋಬಿಟ್ಟ × × × (ಕಇಅ. ೨೫-೮-೮೩ ; ೯ನೆಯ ಶತ).
[P ಇದು 'ತಳಾರ' ಎಂಬುದರ ಅಪಲಿಖಿತವಿರಬಹುದು ]

**ತರಾಸು** 'ತ್ರಾಸು$_1$' ನೋ.

**ತರಿ$_1$** 'ತಱಿ$_1$' ನೋ.

**ತರಿ$_2$** 'ತಱಿ$_2$' ನೋ.

**ತರಿ$_3$** 'ತಱಿ$_3$' ನೋ.

**ತರಿ$_4$** (ನಾ). ಹಡಗು ; ದೋಣಿ : ಪತಂಗದಂಚೆಗರಿಯುಲಿ, ವಿಹಂಗವೆಲರ ತರಿಯುಲಿ, ಅಲರ ಪರಿಸೆಯುಲಿ ನಿನ್ನ ನಾ ಪಾರ್ವನೊಸಗೆಯುಮುದಿನ!(ಗೀವಿಂ. ೩೯-೨೪) : ಕಡಲೆನಿತು ಕೆರಳ್ದೊಡಂ, ಕಡೆವುದೇಂ ಕರೆಯುಂ? – ಆಯುರವಧಿಯುನೆನ್ನ ನನ್ನಳವೆ ಮೀರೆ? ಕಾವನಾಚೆಗೆ ನಿನ್ನ ತೇರಿಸಿದ ತರಿಯುಂ, ಗೆಣೆವಕ್ಕಿ ಹೆಗಲಂತೆ ತನ್ನಣೆಯ ಸೇರೆ (ಗೀವಿಂ. ೫೮-೪೪). [ ಸಂ. ]

**ತರಿ$_5$** (ನಾ). ಗದ್ದೆ ; ನೀರಾವರಿ ಭೂಮಿ : ಐನ್ ಸರ್ಕಾರಿ ನೀರು ಅಥವಾ ಇತರ ಜಲಾಧಾರದಿಂದ ಭತ್ತಾ ಮುಂತಾದ ಪೈರಿಡುವ ಭೂಮಿಯನ್ನು ತರಿ (ಅಥವಾ ಗದ್ದೆ) ಎಂದು ಹೇಳುವುದು (ಭೂಮಿಅ. ೩೩) ; ಅವನ ಬಳಿಯಿದ್ದ ಕಾನೂನಿಗೆ ಮೀರಿದ ತರಿ ಭೂಮಿಯನ್ನೆಲ್ಲ ಸರ್ಕಾರ ಸ್ವಾಧೀನ ಪಡಿಸಿಕೊಂಡಿತು (ರೂಢಿ). [ ←ಹಿಂ. ತರೀ ]

**ತರಿಗೆಂಡ** 'ತಱಿಗೆಂಡ' ನೋ.

**ತರಿಚು** 'ತಱಿಚು' ನೋ.

**ತರಿಚುಗೆಡೆ** 'ತಱಿಚುಗೆಡೆ' ನೋ.

**ತರಿತರಿ$_1$** 'ತಱಿ$_1$' ಪರಾ.

**ತರಿತರಿ$_2$** 'ತಱಿ$_2$' ಪರಾ.

**ತರಿತೀಪು, ತರ್ತೀಪು** (ನಾ). ೧. ಪ್ರೀತಿ; ಪ್ರೇಮ; ಇಷ್ಟ : ತವಕ ಚುಂಬನತಕ್ಕೆ ತರಿತೀಪು ನಿನ್ನಂತ ಸವಿಗಾರಗಲ್ಲದೆ ಜಡದೇಹಿಗುಂಟೆ (ಸಾರಂಗ ೮). **ತರ್ತೀಪು**: ೨. ವೈವಿಧ್ಯ; ವಿವಿಧತೆ : ತರ್ತೀಪಿನ ತಿಂಡಿ, ಭಕ್ಷ್ಯ (Regale. ಇಂಕನಿ.). [←ಅರ. ತರ್ತೀಬ್; ಹಿಂ. ಮರಾ. ತರತೀಬ್./ತೆಲು. ತರಿತೀಪು]

**ತರಿಪೈರು** (ನಾ). ಗದ್ದೆಯಂ ಪೈರು ; ನೀರಾವರಿ ಬೆಳೆ ; ಬತ್ತ, ಕಬ್ಬು ಮೊದಲಾದುವು : ದೇಶದ ಬಹುಭಾಗದಲ್ಲಿ ಈ ಪೈರಿಗೆ ನೀರಾವರಿಯು ಬೇಕೇ ಬೇಕು. ಭತ್ತ ಈ ಜಾತಿಗೆ ಸೇರಿದ್ದು. ಇದನ್ನು ತರಿಪೈರು ಎನ್ನುತ್ತಾರೆ (ಶಿಲ್ಪಶಾ. ೩೬೪) : ತರಿಪೈರುಗಳು:–ಇವುಗಳಲ್ಲಿ ಮುಖ್ಯವಾದದ್ದು ಭತ್ತ (ವ್ಯವಸ. ೪೬).
[ತರಿ$_5$ + ಪೈರು (<ಪಯಿರ್)]

**ತರಿಯಿಸು** 'ತರಿಸು$_2$' ನೋ.

**ತರಿಲ್** (ಕ್ರಿ). ಕಳಚಿಬೀಳಂ ; ಉದುರಂ ; ಬಿದ್ದುಹೋಗಂ (?) : ತಲೆಯೊಡೆದೊಕ್ಕು ನೆತ್ತರೊಡವಾಯ್ದು ಮಿದುಳ್ ಕಡಿವೆತ್ತು, ನೆತ್ತಿ ಕಣ್ ತೊಲಗಿ ತರಿಲ್ದು ಪಲ್ಪರಿದು ಬಾಯ್ದುಟಿ ಸೀಟ್ದು (ಜೀವಿಂ. ೨-೧೧೪).
[P ಇದು 'ಕಟಲ್' ಎಂಬುದರ ಅಪಲಿಖಿತವಿರಬಹುದು ]

**ತರಿವಿಂಡಿ** 'ತುಱುವಿಂಡಿ' ನೋ.

**ತರಿಸ** (ನಾ). ೧. ಬಾಯಾರಿಕೆ ; ನೀರಡಿಕೆ. ೨. ಇಚ್ಛೆ ; ಅಭಿಲಾಷೆ ; ಅಪೇಕ್ಷೆ. ೩. (ಅಲಂ) ಒಣಗುವಿಕೆ ; ಬಾಡುವಿಕೆ : ಈ ತೆಱನೊಳ್ ರಕ್ಕಸನ ಹರಿಸಂ ತರಿಸವಾಗೆ ತಱಿಸಂದು ಮನದೆ ಮಾಯೆಯುಂ ಬಗೆದು ಕವಡುಬಿಜ್ಜೆಯನೊಡ್ಡಿ ನಿಲ್ವುದುಂ (ರಾಮಾಶ್ವ. ೧೧೪-೧).
[<ಸಂ. ತರ್ಷ]

**ತರಿಸಲ್** 'ತಱಿಸಲ್' ನೋ.

**ತರಿಸಲ** 'ತಱಿಸಲ' ನೋ.

**ತರಿಸಲಂಗೆಯ್** (ಕ್ರಿ). ನಿಶ್ಚಯಿಂಸಂ ; ನಿರ್ಧಾರಮಾಡು : ಮದುವೆನಾಳಂ ತರಿಸಲಂಗೆಯ್ದು ಕಾಳು ತಾಂ ಪದಪಿನಿಂ ಬಂದಪಂ (ಕಾರೂರ. ೦೪೦-೩೦೫).
[ ತರಿಸಲ (<ತಱಿಸಲ) + ಕೆಯ್$_1$ ]

**ತರಿಸಲ್ಕೆ** (ನಾ). ನಿಶ್ಚಯ ; ನಿರ್ಣಯ ; ತೀರ್ಮಾನ : ವನಿತೆಯಂ ತಂದೊಪ್ಪಿಸುತೆ ಶರಣ್ಬೋಗದಿರೆ ಮೊಳಗುವುದು ರಣಭೇರಿ, ವಾನರಪತಾಕಿನಿಯ ಪೂಣ್ಕೆಯುಂ, ತರಿಸಲ್ಕೆಯುಂ ಲೋಕಲೋಕಾಂತರಂಗಳಿಗೆ ಸಾರಿ (ಶ್ರೀರಾಮಾ. ೬೨೮-೨೪೦).
[ ತರಿಸಲ್ (<ತಱಿಸಲ್) + –ಕೆ ]

**ತರಿಸು$_1$** (ಕ್ರಿ). ೧. ತರುವಂತೆ ಮಾಡು ; ಹತ್ತಿರಕ್ಕೆ ಬರಿಸು : ಮಿಕ್ಕ ವಂದನವನದಲ್ಲಿಗಲ್ಲಿಗೆ ತರಿಪ್ಪೆನನಂಗಸುಖೋಚಿತಂಗಳಾ (ಕವಿರಾ. ೨-೧೦೪): ಮುಱುಕಲ್ಲಂ ಕದಂಬ ತರಿಸಿ × × (ಎಕ. II, ೪೪೩ ; ಸು. ೯೦೦); ಸಮಸ್ತವಾರಿಧಿ ಪರೀತ ಮಹೀತಳದರ್ಥಮೆಲ್ಲಮಂ ತರಿಸಿ ನೆಗಟ್ತೆಯಂ ನಿಱಿಸಲಾಪೊರ್ಡೆ ಮಾಡಿರೆ ರಾಜಸೂಯಮಂ (ಪಂಪಭಾ. ೬-೧೮); ತರಿಸಿ ಜವನದಱ ನಿರ್ಮಾಲ್ಯರಕ್ತಪುಷ್ಪಮನೆ ಮುಡಿದು (ಜಗವಿ. ೯-೫೭) : ತರಿಸಿದನು ಹಿಮರುಚಿಯ ಹಿಂಡಿದ ಪರಮಶೀತೋದಕವೊ ತಾನೆನೆ ಸುರಭಿಪರಿಮಳ ಪಾನವನು ಪರಿಪರಿಯ ಕುಡಿನೀರ (ಕುವ್ಯಾಭೀ. ೧೦-೨೫). ೨. ಕರೆಸು : ಅರಸಂ ಕೂಸುಮನರಸಿಯುಮನೊಡಗೊಂಡು ಬನ್ನಿಮೆಂದು ತರಿಸಿ (ವಡ್ಡಾರಾ. ೧೧೨-೨೨).

**ತರಿಸಿಕೊಡು** = ೧. ತರುವಂತೆ ಮಾಡಿಕೊಡು : ಸುಧೆಯನೀಗಿಂತು ತರಿಸಿಕೊಡುವೆನೆನಲ್ಕೆ ಬಿಟ್ಟನು ಸುರಪತಿಯನು (ಸಂಭಪ. ೫-೫೭). ೨. ಹತ್ತಿರಕ್ಕೆ ಬರುವಂತೆ ಮಾಡಿಕೊಡು : ಬಹುಶ್ರುತ ಮಂತ್ರಿ ಮಂತ್ರರೂಪ ನಿಷ್ಪಾದಿತ ಮಾಯಾಗಾಣಿತಿಯರನಮಿತಂಗೆ ತರಿಸಿಕೊಟ್ಟು (ಶಾಂತಿಪು. ೨-೮೦ ವ); ತೇಜಿಯ ತರಿಸಿಕೊಡಲೇಱಿದನು (ನಳಚ. ೭-೫). **ತರಿಸಿಕೊಳ್** = ತರುವಂತೆ ಮಾಡಿಕೊಳ್ಳು ; ಕಸಿದುಕೊಳ್ಳು : ಕುಲಧನಚಯಮಂ ತರಿಸಿಕೊಳಲ್ ಬಗೆದ ಧಟನ ಪುರುಳಂ ಪೊಣರ್ದಾಗಳಱಿವೆನು ಗ್ರಾಹವದೊಳ್ (ಆದಿಪು. ೧೨-೯೯) ; ಪೆಱರರ್ಥಕ್ಕೆಱಗುವನುಂ ಪೆಱರರ್ಥಮನೆಯ್ದೆ ತರಿಸಿಕೊಳ್ವವನುಂ ಕೇಳಱಿವೊಡೆ ಕೊಲ್ವರ್ (ಧರ್ಮಾಮೃ. ೧೨-೨೩೫) : ಕರವನವರವರೊಡಬಡಿಕೆಯಲಿ ತರಿಸಿಕೊಂಡು ಸಮಸ್ತಧರಣೀಶ್ವರರಿಗಧಿಪತಿಯಾಗಿ ಮೆಱೆದನು ರಾಜತೇಜದಲಿ (ಕೊರಟಾ. ೧-೩-೨). [ ತರ್ + –ಇಸು$_3$ ]

**ತರಿಸು$_2$, ತರಿಯಿಸು** (ಕ್ರಿ). ದಾಟು ; ಪಾರಾಗು ; ದಡವನ್ನು ಸೇರು : ಉಡುಪಮಂ ತರಿಸು ನದಿಯಂ ತರಿಸವೇಳ್ಕುಂ (ಪಂಚಾರಾ. ೨-೦೬-೩೩). **ತರಿಯಿಸು** : ಅಮಿತ ಮಕರಧ್ವಜೋತ್ಕಲಿಕಮನಾತ್ಮಸುಹೃದ್ವಿಯೋಗ ವಡಬಾನಲ ದುರ್ದಮಮಂ ದಿನಾಬ್ಧಿಯಂ ಧೈರ್ಯಮೆಂಬ ಭೈತ್ರದಿನಿಳಾಧಿಪಂ ತರಿಯಿಸಿದಂ (ಕಾದಂಬ. ೪೬೦) ; ಪರಿಕಿಪೊಡೆ ನಿನ್ನ ಮಗನೀ ಮರೀಚಿ ಬಹುವಿಧ ಭವಾಬ್ಧಿಯಂ ಕ್ರಮದಿಂದಂ ತರಿಯಿಸಿ ಗಳಿತಾಖಿಳ ಕರ್ಮರಜಸನಿಂ ಕಡೆಯ ತೀರ್ಥಕರನಾದಪ್ಪಂ (ವರ್ಧಪು. ೧೦-೪೬).
[ ತರಣ$_2$ + –ಇಸು$_3$ ]

**ತರಿಳಕೆಂಡ** 'ತರಿಳಗೆಂಡ' ನೋ.

**ತರಿಳಗೆಂಡ,** ತರಿಳಕೆಂಡ (ನಾ). ನಿಗಿನಿಗಿ ಎನ್ನುವ ಕೆಂಡ; ಪ್ರಕಾಶಮಾನವಾಗಿರುವ ಕೆಂಡ: ಎಱೆವ ತಣ್ಣೀರನೆಳಸುವೆಳೆವಳ್ಳಿಗೆ ತರಿಳ [ಪಾಠಾಂ. ತರಿ]ಗೆಂಡವ ತಳಿವಂತೆ (ಹ ದಿ ಬ. ೬-೨೮). **ತರಿಳಕೆಂಡ:** ರಣಧೂಳಿ ಪರಿವಡದುದುರಿಯುಡಗಿ ಕೆಳಗಡೆ ತರಿಳಕೆಂಡವನಾಂತು ಮೇಗಡೆ ಹರಹಿ ಗಗನದಿ ನೆಗೆವ ಧೂಳಿಯು ಹೊರಳಿಯಿಂದದಲಿ (ಅಂಜಜ. ೩-೪೩). 'ತಳಲುಗೆಂಡ' ಪರಾ. [<ತಱಿಗೆಂಡ]

**ತರೀಖು** (ನಾ). ಮಾರ್ಗ; ಹಾದಿ: ಆಯ್ತು ನಿನ್ನಿನ ತೇದಿ, ನಾಳಿನ ಹಾದಿ ನಿನ್ನೆ ತರೀಖು (ಸೂರ್ಯಪಾ. ೫೦-೩).

[←ಅರ. ಹಿಂ. ತರೀಕ್; ಮರಾ. ತರೀಕ್, ತರೀಖ್]

**ತರು₁** 'ತರ್' ನೋ.

**ತರು₂** (ನಾ). ಮರ; ವೃಕ್ಷ: "ವೃಕ್ಷಃ . . . ತರುಃ . . . ಪಾದಪಃ– ಈ ೧೯ ಮರಂ" (ಹಲಾಯು. ೨೯-೩೩); ಮುಕುಳಿತ ಕುಸುಮಿತಾಪರಿಮಿತ ಫಲಿತ ತರುಗಳೆ (ಸುಕುಮಾ. ೩-೪೭); ಏಕೆ ಹುಟ್ಟಿಸಿದೆ ಇಹಲೋಕದುಃಖಿಯ . . . ಎನಗಾಗಿ ಮತ್ತೊಂದು ತರು ಮರನಿಲ್ಲವೇ (ಬಸವ. ೬೪); ಆತಪತಾಪದಿಂದಮಿದು ನಿಸ್ತೃಣನಿರ್ಜಳನಿಷ್ಪ್ರವಾಳವಲ್ಲೀತರುವಾದುದೀಯೆಡೆಯೊಳಿನ್ನಿರವಾಗದು ಪೋಪುದುತ್ತಮಂ (ಜಗವಿ.೩-೬೪); ಚರಿಪಾರಣ್ಯದ ಪಕ್ಷಿಗೊಂದು ತರು ಗೊಡ್ಡಾಗಲ್ ಫಲಂ ತೀವಿದಾ ಮರಗಳ್ ಪುಟ್ಟವೆ (ಸೋಮೇಶ. ೨೩); ಪುಸ್ತಕದಿ ದೊರೆತರಿವು ಮಸ್ತಕದಿ ತಳೆದ ಮಣಿ ಚಿತ್ತದೊಳು ಬೆಳೆದರಿವು ತರು ತಳೆದ ಪುಷ್ಪ (ಮಂಕುತಿ. ೬೫). [ಸಂ.]

**ತರುಂಬ₁** 'ತಱುಂಬು₁' ನೋ.

**ತರುಂಬು₂** 'ತಱುಂಬು₂' ನೋ

**ತರುಂಬುವಡು** (ಕ್ರಿ). ಅಡ್ಡಿಯನ್ನು ಹೊಂದು; ತೊಂದರೆಪಡು: ಮಹಾಸನ್ನಿಧಾನವು ಎಲ್ಲಿಯೂ ತರುಂಬುವಡದೆ ಜಡಿತಿಯಾಗಿ ಬಿಜಯಮಾಡಿ (ಮಂತ್ರಿಶ. ೧೨೫-೩೩). [ತರುಂಬು₂ (<ತಱುಂಬು₂) + ಪಡು₁]

**ತರುಕುಟಿ** (ನಾ). ಒಂದು ಬಗೆಯ ಪ್ರಾಣಿ; ಅಳಿಲು: "ತರುಕುಟಿ [ಪಾಠಾಂ. ಟೆ] ತ್ರಿವಳಿಯೆನಲಣಿಲ್ಗದು" (ಮಂಗರಾ. ೪೯-೧೩).

[ತರು₂ + ಕುಟ್ಟಿ₂]

**ತರುಕೋಟರ** (ನಾ). ಮರದ ಪೊಟರೆ: ಪುಲ್ಲುಂ ಪುಳ್ಳಿಯುಂ ಮೊದಲಾದ ಕಸಂಗಳೆಲ್ಲಮಂ ಚಿರಂಜೀವಿ ತೋಱಿದ ಗಿರಿಗುಹಾದ್ವಾರಂಗಳೊಳಂ ತರುಕೋಟರ ಕುಟೀರಂಗಳೊಳಮಿಡಿದಿಡಿದು ತೀವಿ ಬಟಿಕ್ಕೆ ಕೊಳ್ಳಿಗಳನಲ್ಲಿಗಲ್ಲಿಗೆ ತಗುಳ್ಚುವುದು (ಪಂಚತಂ. ೨೬೬-೨).

[ತರು₂ + ಕೋಟರ]

**ತರುಗು** 'ತರಗು₂' ನೋ.

**ತರುಚ** (ನಾ). ಒಂದು ಬಗೆಯ ಸಸ್ಯ: ನಲಗುಳ್ಳ, ಶುಂಠಿ, ಪುಷ್ಕರಮೂಲ . . . ತರುಚನ ಬೇರು, ಆಡುಸೋಗೆ . . . ಕಷಾಯವಿಕ್ಕಿ ಸೇವಿಸೆ ಜಿಹ್ವಕ ಸನ್ನಿ ಶಮನವಹುದು (ಸಕವೈ. ೧೬೬). [?]

**ತರುಚಯ** (ನಾ). ಮರಗಳ ಗುಂಪು; ತೋಪು: ಹಸುವು ಹಾಲನು, ಹೊಲವು ಕೂಳನು, ಹಸನು ತೊಡಿಗೆಯು ಮಂದೆಯೂ, ಬಿಸಿಲೊಳಾಶ್ರಯವನ್ನು ತರುಚಯ ಎಸೆಗಲವ ಸುಖಿಮನುಜನೈ! (ಕವಿಪು. ೪೧-೨).

[ತರು₂ + ಚಯ]

**ತರುಚರ** (ನಾ). ಕೋಡಗ; ಮಂಗ; ಕಪಿ; ವಾನರ: ದುರ್ವಾಸನಾಶ್ವಾನನಂ ಪರಿಹರಿಸಲಾಱದೆ ತರುಚರನಂ ಮಾಟ್ಟುದುಂ(ಪಂಚತಂ.೨೬೦-೨೦); ಧರಣಿಪತಿ ದಶರಥಗೆ ನಾನವತರಿಸುವೆನು ಸುತನಾಗಿ ಧರೆಯಲಿ ತರುಚರರು ನೀವಾಗಿ ಜನಿಸುವುದೆಂದು ನೇಮಿಸಿದ (ಕೌಶಿರಾ. ೧-೧೬); ಶರಗಳಿಂದಂ ನಿಶಾಚರರಿಡುತ ಬರಲು ತರುಚರರು ಭೂರುಹ ಭೂಧರಂಗಳಿನೆಚ್ಚು (ವೆಂಕಾರಾ. ೬-೩೯-೨). [ಸಂ.]

**ತರುಚರಕಾಂತೆ** (ನಾ). ಹೆಣ್ಣುಕೋತಿ; ವಾನರಿ: ಬಿರಿಕಿನೊಳೊಯ್ಯನೊಯ್ಯನರೆದೋಱುವ ಬಿತ್ತುಗಳಿಂ ವಿಳಾಸಮಾವರಿಸಿದ ದಾಡಿಮೀಫಲಮನೊಯ್ಯನೆ ಚುಂಬಿಸಿ ಬರ್ಪ ಕಾಂತನಂ ತರುಚರಕಾಂತೆ ಕಂಡು (ಪುಷ್ಪಪು. ೫-೮೭). [ತರುಚರ + ಕಾಂತೆ]

**ತರುಚರೇಶ್ವರ** (ನಾ). ವಾನರರ ಒಡೆಯ; ಕಪೀಶ್ವರ: ಕರೆಸಲಂದೀರ್ಕ್ಕೆದು ದಿಕ್ಕಿನ ತರುಚರೇಶ್ವರ ಭಟರ ಪಡೆಗಳ . . . ಕಟಿಬಲ ನೆರೆದುದರ್ಬುದ ಪದ್ಮಪಡೆಗಳಲಿ (ಕೌಶಿರಾ. ೯-೯). [ತರುಚರ + ಈಶ್ವರ]

**ತರುಜಾತ** (ನಾ). = ತರುಚಯ: ಪಾತಾಳವರಂ ಸ್ವಚ್ಛ ಗುಣಾತಿಶಯದೆ ಕಾಣಲೆಯ್ದೆ ಬಂದಪುದೆಂಬೀ ಮಾತನೊದವಿಪುದು ತಟತರುಜಾತ ಪ್ರತಿಬಿಂಬವಿಸರವಂತಾ ಸರದೊಳ್ (ಚಂದ್ರಪು. ೫-೩೯). [ತರು₂ + ಜಾತ]

**ತರುಟಗಿ,** ತರುಂಟಗೆ (ನಾ). ಒಂದು ಬಗೆಯ ಸಸ್ಯ; ಚಗಚೆ; "ಚಕ್ರಮರ್ದ" (ಪಂಡಿತ. ೨೯೦). **ತರುಟಗೆ:** "ಚಗಚೆಗಿಡ" (ಪ್ರಭಣ).

[<ಚಗಚೆ]

**ತರುಟೆಗೆ** 'ತರುಂಟಿಗಿ' ನೋ.

**ತರುಡು,** ತರಡು (ನಾ). ಅಂಡಾಶಯ; ಬೀಜ; ವೃಷಣ: "ವೃಷಣಂ= ತರುಡು" (ಕಾಶಕ. ೬೦); ಮುಷ್ಕಮಂ ಕ್ಷಣಯೋರ್ಮಧ್ಯೇ–ತರುಡಿಗೂ ತೊಡೆಯು ಕೀಲಿಗೂ ನಡುವೆ (ಬಾಹಟೀ. ೨-೪-೮ ವ); ತರುಡು, ವೃಷಣ (Testicles. ಇಂಕನಿ.). **ತರಡು:** ಹೊಲೆಯನ ಚಿನ್ನಕ್ಕೆ ತರಡೇ ಒರೆಗಲ್ಲು (ಗಾದೆ). 'ಗೋದರುಡು' ಪರಾ. [ದೇ.॥ ತುಳು. ತರಡ್, ತರ್ಡ್]

**ತರುಣ** (ಗು). ೧. ಎಳೆಯದಾದ; ಆಗತಾನೆ ಹುಟ್ಟಿದ: ತರುಣ ಮೃಣಾಲಗರ್ಭರುಚಿವೆತ್ತ ರಘೂದ್ವಹ ದೇಹದೀಪ್ತಿ (ಪಂರಾಮಾ. ೧೨-೧೫); ಕರಚರಣ ಶುದ್ಧಿಯಂ ಮಾಡಿ ಸಂಧ್ಯಾವಂದನಂಗೆಯ್ದು ತರುಣಶಶಿಚೂಡನಡಿದಾವರೆಯನರ್ಚಿಸಿ (ಹಡಕಾ. ೧೦-೧); ವಿಳಸತ್ಪೂರ್ವಾದ್ರಿಯೊಳ್ಪ್ರಸುರತರುಣದಿನಾಧೀಶಬಿಂಬಂ ಸುಧಾಬ್ಧಿಸ್ಥಳದೊಳ್ಪಾಲಂ ಮರಾಳಂ . . . ಮೇಣ್ಪಳಿವಂತೆ(ರಾಜಶೇ. ೪-೬೫). 'ತರುಣಾತಪ'ಪರಾ. ೨.ಹೊಸದಾದ; ನವೀನ. (ನಾ). ೩. ಹರೆಯದವನು; ಯುವಕ: ತರುಣಂ ತಾನಿವನೊರ್ಬ ಮರ್ತ್ಯನೆನೆ ನೋಡಿನ್ನುಂಟೆ ಮರ್ತ್ಯಂಗೆ ಬಿತ್ತರಿಪೀ ರೂಪವಿಳಾಸಂ (ಕುಸುಮಾ. ೧೧-೧೦೬); ತರುಣನೆನ್ನೊಳು ತರಳನೆನ್ನೊಳು ದುರುಳನೆನ್ನೊಳು ಮರುಳನೆನ್ನೊಳು ಹುರುಳದೇನುಂಟೈ (ಸಾನಂಡ. ೯-೧೦೬); ಪರಮಾರ್ಥ ನಿರ್ಣಯದತಿರಹಸ್ಯದ ತತ್ವಮಿದನಾಚರಿಸಿ ಬದುಕಲೆ ತರುಣ ನೀನೆಂದ (ಗಗತಾ. ೧೪-೪೨). ೪. ಅನಂತರದ ಕಾಲ; ಆಮೇಲಿನ ಸಮಯ:ಈ ತರುಣದಲ್ಲಿ ಒಂದು ದಿನ ಅಪರಂಪಾರಸ್ವಾಮಿ ಓಂಕಾರೇಶ್ವರನ . . . ಧ್ಯಾನಕ್ಕೆ ಎಂಬಂತೆ ಕುಳಿತನು (ಚಕರಾ. ೧೩೫); ಆ ಸ್ನೇಹ ಬಲಿತ ತರುಣದಲ್ಲಿ ಒಂದು ದಿನ ರಾತ್ರಿ ನಚಿಕೇತ, ಗೋಶಾಲೆಯಲ್ಲಿದ್ದ ಕರುವನ್ನು ತನ್ನೊಂದಿಗೆ ಮಲಗಲು ಕರೆದುಕೊಂಡು ಬಂದು(ಚಿತಂಬಾ.೮೧); ಆ ಮನುಷ್ಯ ನಮ್ಮೂರಿಗೆ ಬಂದ ತರುಣದಲ್ಲಿ ಎಷ್ಟು ಕಾಟ ಕೊಟ್ಟಿವು (ಸುವಸಂ. ೧). [ಸಂ.]

**ತರುಣಕುರಂಗಧರ** (ನಾ). ಎಳೆಯ ಚಂದ್ರ; ಬಾಲಚಂದ್ರ: ತರುಣಕುರಂಗಧರಧರ ಭಕ್ತರಾಚಾರಂಗಳಿಂತಹವು (ಬಸವು. ೪೨-೮೨).

[ತರುಣ + ಕುರಂಗಧರ]

**ತರುಣಜನಾಂಗ** (ನಾ). ಯುವಕರ ಪೀಳಿಗೆ; ಎಳೆಯರ ಪೀಳಿಗೆ: ಈ ಬರಹಗಾರರಲ್ಲಿನ ಬಹುಸಂಖ್ಯೆ ತರುಣಜನಾಂಗ (ರೂಪಸಂ. ೩೭).

[ತರುಣ + ಜನಾಂಗ]

**ತರುಣಜ್ವರ** (ನಾ). ಜ್ವರಗಳಲ್ಲಿ ಒಂದು ಪ್ರಕಾರ; ಅಲ್ಪಾವಧಿಯ ಜ್ವರ: ಏಳುರಾತ್ರಿ ಪರ್ಯಂತರ ತರುಣಜ್ವರವೆನಿಸಿಕೊಂಬುದು. ಹತ್ತುರಾತ್ರಿ ಪರ್ಯಂತರ ಮಧ್ಯಮಜ್ವರವೆನಿಸಿಕೊಂಬುದು. ಆದರ ಮೇಲೆ ಪುರಾಣಜ್ವರ

ವೆನಿಸಿಕೊಂಬುದು (ವೈದ್ಯಸಾ. I, ೫೩) ; ಸಕಲರಿಗೂ ಬಹಳವಾದ ರೋಗಗಳಲ್ಲಿ ಒಂಬತ್ತು ದಿನ ಪರ್ಯಂತ ಬರುವ ಜ್ವರವು ತರುಣಜ್ವರವೆನಿಸಿಕೊಂಬುದು (ಸಕವೈ. ೧೦೨). [ ಸಂ. ]

**ತರುಣತೆ** (ನಾ). = ತರುಣತ್ವ : ತರುಣತೆ ಪೋಗಿ ಜಿನಾಗಮಪರಿಣತೆ ನಿಮಗಾಗೆ (ಆಜಿಪು. ೨-೧೦೧) ; ನಳನಳಿಪ ತ ರು ಣ ತೆ ಯ ಸೊಂಪುವೆತ್ತರುಣತೆಯ ತಳಿರಿಡಿದ ತೋರಣದ . . . ಬಗೆ ಕಂಗಳಿಂಬಿಗೆ ಕೌತುಕಂಗಳಿಂ ಬೀದಿಗಳೊಳೆಸೆದಿರ್ಪುವು (ಜೈಮಿಭಾ. ೩-೧೭).
[ ಸಂ. ತರುಣತಾ ]

**ತರುಣತ್ವ** (ನಾ). ಎಳೆಯತನ; ಎಳೆಯ ಹರಯ; ಯೌವನ : ತರುಣತ್ವ ದುರ್ಲಭಂಗಳ್ ಪರಿಣತಿ ಸುಖದಂಗಳೆನಿಪ ಸತ್ಕ್ರಿಯೆಗಳನಾ ಧರಣೀಶಸುತಂ ಪಲಿತಾಂಕುರವಿಲ್ಲದ ವೃದ್ಧನಂದದಿಂದಾಚರಿಪಂ (ಚಂದ್ರಪು. ೨-೨೦).
[ ಸಂ. ]

**ತರುಣದಿನಾಧೀಶ** (ನಾ). ಎಳೆಯ ರವಿ ; ಬಾಲಸೂರ್ಯ : ವಿಳಸತ್ಪೂರ್ವಾದ್ರಿಯೊಳ್ಪಸುರ ತರುಣದಿನಾಧೀಶಬಿಂಬಂ ಸುಧಾಬ್ಧಿ ಸ್ಥಳದೊಳ್ಪಾಲಂ ಮರಾಳಂ . . . ಮೇಣ್ಬಳೆವಂತೆ (ರಾಜಶೇ. ೪-೭೫).
[ ತರುಣ + ದಿನಾಧೀಶ ]

**ತರುಣವೃಷ** (ನಾ). ಪ್ರಾಯಂದ ಹೋರಿ,-ಗೂಳಿ: ತರುಣವೃಷಂ ಕೆಲೆದು ತೊಟಲ್ತರೆ ಕಂಡುದಱಿಂದೆ ಜೈನದೀಕ್ಷೆಗೆ ಮೆಯ್ಯಂ ತರುಣಜನಂಗಳೆ ತರ್ಪರ್ ಪರಿಣತವಯಸರ್ಕಳಪ್ಪವರ್ ಮೆಯ್ದಾರರ್ (ಆದಿಪು. ೧೫-೪೧).
[ ತರುಣ + ವೃಷ ]

**ತರುಣವೇಣು** (ನಾ). ಎಳೆಯ ಬಿದಿರು ; ಕಳಿಲೆ : ಮರಕತವರ್ಣಮಂ ತರುಣವೇಣು ತನುಚ್ಛವಿಯಿಂದೆ ವಜ್ರಮಂ ಸುರುಚಿರಮಪ್ಪ ಮುತ್ತೆನಿಪ ದಂತಚಯಂಗಳದೊಂದು ಕಾಂತಿಯಿಂ . . . ಹೋಲ್ತಳ್ (ಎಶ್. XII, ಚಿಕ್ಕನಾ. ೪೩-೧೪ : 1171). [ ತರುಣ + ವೇಣು ]

**ತರುಣಶಶಿಚೂಡ** (ನಾ). ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನು; ಶಿವ : ತರುಣಶಶಿಚೂಡನಡಿದಾವರೆಯನರ್ಚಿಸಿ (ಹಚಕಾ. ೧೦-೧).
[ ಸಂ. (ತರುಣ + ಶಶಿ + ಚೂಡಾ + –) ]

**ತರುಣಾತಪ** (ನಾ). ಎಳೆಯ ಬಿಸಿಲು ; ಹೂಬಿಸಿಲು : ಪೊನಲ್ವರಿದ ಮಡುಗಳ ಕೆಸಱೊಳೊಗೆದ ನೃಪಮಂಡಲದ ಕನಕಾಭರಣಕಿರಣತರುಣಾತಪದೊಳಲರ್ದ . . . ಬೆಳ್ದಾವರೆಗಳ ಹಂತಿಗಳಂತೆ ಪಡೆಯೊಳೆಸೆದವು ತಳ್ತಿಡಿವ ಸತ್ತಿಗೆಯ ಸಾಲ್ಗಳು (ಜೈಮಿಭಾ. ೧೨-೬) ; ಕನತ್ಕನಕಮಯ ಮಣಿಭೂಷಣಾಂಶುವಿಸರದರುಣತರುಣಾತಪದೊಳ್ಮಲ್ಲಗಾಳೆಗಮನೊಡರ್ಚೆ (ರಾಜಶೇ. ೭-೧೭ ವ). [ ತರುಣ + ಆತಪ ]

**ತರುಣಾರುಣ** (ನಾ). ಎಳೆಯ ಕೆಂಬಣ್ಣ : ತರುಣಾರುಣಭಾಸುರಕಾಂತಿಯುತೇ ಚರಣಾರುಣಪದ್ಮನತಾರ್ಯಶತೇ (ರಾಜಶೇ. ೧೨-೧೦೮).
[ ತರುಣ + ಅರುಣ ]

**ತರುಣಾರ್ಕ** (ನಾ). = ತರುಣದಿನಾಧೀಶ : ಕಿಡಿ ಕಿಱಿದಾದೊಡಂ ಸುಡದೆ ಕಾನನಮಂ ತರುಣಾರ್ಕನಾದೊಡಂ ಕಿಡಿಸನೆ ತೀವ್ರಮಪ್ಪ ತಮಮಂ (ಪಂರಾಮಾ. ೪-೪೮). [ ತರುಣ + ಅರ್ಕ$_2$ ]

**ತರುಣಿ** (ನಾ). ಪ್ರಾಯದ ಹೆಣ್ಣು ; ಹರಯದವಳು ; ಯುವತಿ : "ತರುಣಿಯಕ್ಕು ನವಯೌವನೆ ತಾಂ ಸಂತತಮೇಱುಂಜವ್ವನೆ" (ಕವಿಕಂ. ೧೭೬) ; ತರಣಿಪ್ರಭನರ್ಭಕನೀ ತರುಣಿಯ ಹೃತ್ತಿಮಿರಮಂ ನಿರಾಕರಿಸಿ ಬಹಿಷ್ಕರಿಸಿದಂ (ಜಗವಿ. ೨-೯೨); ತರುಣಿಯರ ತಂಡದೊಳ್ ಮಿಸುಕಬಾರದು (ನಂಬಿರ. ೧೫-೧೦೪) ; ತರುಣಿ . . . ಹೂವಿನ ದಂಡೆಯನ್ನು ನಿಜವರನ ಕೊರಳಲಿ ಹಾಯ್ಕಿದಳು (ಕುಮಾ.ಆ. ೧೫-೩೫); ಅವಳೇನೂ ಬರಿಯ ನಲ್ಮೆಯ ತರುಣಿಯಲ್ಲ (ಧರ್ಮಸಾ. ೭೭). [ ಸಂ. ತರುಣೀ ]

**ತರುಣಿಮ** (ನಾ). ತಾರುಣ್ಯ ; ಯೌವನ : ನಡೆ ಮಾಣ್ದ ಕಚರಿಯೆಂಬೀ ನುಡಿಗೆಡೆಗೊಟ್ಟಳ್ ಲತಾಂಗಿ · ನವತರುಣಿಮದೊಳ್ (ಚಂದ್ರಪು. ೫-೧೦೦) ; ಸಿಂಗದ ಶಿಶುವಂ ತಾನಿಳಿಕೆಯ್ವೊಳ್ಪಡುವಿನ ನೃಪತನುಜೆಯ ತರುಣಿಮ ಮೊಪ್ಪಿದುದು (ಜಯುಕಾ. ೩-೨೨). [ ಸಂ. ತರುಣಿಮನ್ ]

**ತರುಣೀಕೇಕರ** (ನಾ). ಹರಯದ ಹೆಣ್ಣಿನ ಓರೆನೋಟ ; ಯುವತಿಯ ಕಡೆಗಣ್ಣ ದೃಷ್ಟಿ : ಆ ಪುರಮಂ ತರುಣೀಕೇಕರಮರೀಚಿನೀರಾಜಿತಾಕ್ಷತಾಂಗಂ ಪೊಕ್ಕಂ (ಚಂದ್ರಪು. ೬-೪೨). [ ಸಂ. (ತರುಣೀ + ಕೇಕರ) ]

**ತರುಣೇಂದು** (ನಾ). ಎಳೆಯ ಚಂದ್ರ ; ಬಾಲಚಂದ್ರ : ತರುಣೇಂದು ದಿನಕ್ರಮದಿಂ ಪರಿವರ್ಧಿಸಿ ವಾರಿನಿಧಿಯನೊದವಿಪ ತೆಱದಿಂ ಮುರರಿಪು . . . ಪರಿವರ್ಧಿಸಿ ಜನದ ಮುದಮನೊದವಿಸುತಿರ್ದಂ (ಜಗವಿ. ೩-೪೦).
[ ತರುಣ + ಇಂದು$_3$ ]

**ತರುಣೇಂದುಜೂಟ** (ನಾ). ಬಾಲಚಂದ್ರನನ್ನು ಮುಡಿಯಲ್ಲಿ ಉಳ್ಳವನು ; ಶಿವ : ಮುನಿವಲ್ಲಭಂ ತರುಣೇಂದುಜೂಟನ ಸಮ್ಮುಖದೊಳೊಲವಿಂದೆ ಕೈಮುಗಿದು (ಬಸವು. ೧-೫೬). [ತರುಣೇಂದು + ಜೂಟ$_2$]

**ತರುಣೇಂದುಧರ** (ನಾ). ಬಾಲಚಂದ್ರನನ್ನು ಧರಿಸಿದವನು ; ಶಿವ : ಮನೆದೈವವು ನಿಮಗೆ ತರುಣೇಂದುಧರನಿರೆ ಅನ್ಯದೈವದ ಸೇವೆ ಸನ್ಮತವೇ (ಬಸವು. ೩-೭೬). [ ಸಂ. ]

**ತರುಣೇಂದುಮೌಳಿ,** ತರುಣೇಂದುಮೌಳಿ (ನಾ). ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಶಿವ : ತರುಣೇಂದು ಮೌಳಿ[ಪಾಠಾಂ.ಳಿ]ಯಂ ಪ್ರಾರ್ಥಿಸಿದೊಡಿತ್ತನತಿಕರುಣದಿಂದಪರಿಮಿತ ವಸ್ತುವಂ (ಜೈಮಿಭಾ. ೫-೩೬).
**ತರುಣೇಂದುಮೌಳಿ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತರುಣೇಂದು + ಮೌಳಿ ]

**ತರುಣೇಂದುಮೌಳಿ** 'ತರುಣೇಂದುಮೌಳಿ' ನೋ.

**ತರುನಿವಹ** (ನಾ). = ತರುಚಯ : ತರುನಿವಹಕ್ಕೆ ತಮ್ಮದಟೆ ತಮ್ಮ ವಿಲಾಸಮೆ . . . ಎಂತು ನೋಟ್ಪಡಂ ನಿರುಪಮಮಾಗಿ ಕಣ್ಗೆ ಕರಮೊಪ್ಪಿದ ಮಾಮ್ರಮಹೀಜರಾಜಿಗಳ್ (ಸುಕುಮಾ. ೪-೪೨). [ ತರು$_2$ + ನಿವಹ ]

**ತರುಬಿಸು** (ಕ್ರಿ). ೧. ಅಡ್ಡಗಟ್ಟು ; ತಡೆದು ನಿಲ್ಲಿಸು : ಅವನು ಮಾಡಿದ ಕಥೆಯನ್ನು ಕುದುರೆಯ ತರುಬಿಸಿ ಹೇಳಲುದ್ಯುಕ್ತಳಾಗುವಳು (ಕನ್ನಜಾ. ೧೦೨). ೨. ಹೊಡೆದಟ್ಟು ; ಓಡಿಸು : ಕೋಪದಿಂದಾ ಚರರ್ಕಳನವಂ ತರುಬಿಸಿ (ಶೇಷರಾ. ೨೬-೨). [ ತರುಬು$_1$ (<ತಱುಂಬು$_1$) + – ಇಸು$_3$ ]

**ತರುಬು$_1$** 'ತಱುಂಬು$_1$' ನೋ.

**ತರುಬು$_2$** 'ತಱುಂಬು$_2$' ನೋ.

**ತರುಮಗು** (ನಾ). ಹುಡುಗ ; ಬಾಲಕ.
**ತರುವಕ್ಕಳು** (ಬಹುವ) : ತರುವಕ್ಕಳ ಕೂಡಿ ನೀರಾಟವ ಹೊಕ್ಕು ಉಟ್ಟುದ ಹೋಗಾಡಿಹನೆಂದು ಬಾಯಬಾಯಕುಟ್ಟಿ ಬ್ರಹ್ಮಪಾಶವೆಂಬ ಕಿಱುಗೆಯನುಗಿದುಕೊಂಡಳು ನಮ್ಮವ್ವೆ (ಅಪಚಂ. ೯೧೧-೬೩೫); ಹರುಷದಿಂ [ದ] ಲಿಂಗಪೂಜೆಗೆ ಮನಂ ಬೆರಸುತಂ ಇರೆ ಕೆಲವು ತರುವಕ್ಕಳೋದುತಿರೆ ಕಂಡಲ್ಲಿ ತರುಣನಂ ತಂದೋದ ಕುಳ್ಳಿರಿಸಲು (ಮಡಿಕ್ಸಾ. IV, ೧೦೦೦ : ಮೈದುನ ರಾಮಯ್ಯನ ರಗಳೆ). 'ತರುವಲಿ' ಪರಾ. [ ತರು? + ಮಗು ]

**ತರುಮು** 'ತಱುಂಬು$_1$' ನೋ.

**ತರುಮೊದಲ್** (ನಾ). ಮರದ ಕೆಳಭಾಗ,-ಬುಡ : ಅವಾಗ್ಯಾಗಮೆನೆ ಬುಧ್ನಮೆನಲು ಎಸೆವ ತರುಮೊದಲಕ್ಕು (ಮಂಗರಾ. ೩೨-೨).
[ ತರು$_2$ + ಮೊದಲ್ ]

**ತರುರುಹ** (ನಾ). ಮರದಲ್ಲಿ ಹುಟ್ಟುವಂತಹುದು ; ಪರಾವಲಂಬಿ ಸಸ್ಯ; ಬದನಿಕೆ : "ಮಾರ ತರುತರುಹವೆನೆ [ತರುರುಹವೆನಲು] ಬಂದಣಿಕೆಯಕ್ಕು" (ಮಂಗರಾ. ೪೩-೪೦). [ ಸಂ. ]

**ತರುವಂಗಿ,** ತ ರ ವ ಂ ಗಿ (ನಾ). ಒಂದು ಬಗೆಯ ಪ್ರಾಣಿ : ತರುವಂಗಿ[ಪಾಠಾಂ.ಕುರಿಗಿ, ತರುವಂದಿ]ಕಾಳ್ಬೆಕ್ಕು ಮುಂಗುಲಿ ಮುಸುವಂದಿ ನರಿ ಬೆಟ್ಟುಗುಱಿ ಗುಮ್ಮ ಮಿಗಗಳ . . . ಪೂತ್ತೈಯ್ದಿದರು (ಸೊಬಸೋ. ೧೧-೫೬) ; ನರಿ ಹುಲಿಯುಡು ತರುವಂಗಿ ಚಮರಿಮಿಗವೆರಲುಣಿಯಾನೆ ಯುರಸುಮಿಗವೆಂಟಡಿಯುರಡುತಲೆಯು ಪಕ್ಕಿಯಿನೊಪ್ಪಿದುದಾ ದಾರುಣ ಮಪ್ಪಡವಿ (ಜಯುಕಾ. ೧೫-೨೯). **ತರವಂಗಿ :** ತರವಂಗಿ ಸಾರಂಗ ಮೊಲ ಮುಚ್ಚು ಮುಸುಗಳನಿರದೆ ಕೊಂದವು ಜಾಯಿಲಗಳು (ಕುಠಾಸಾಂ. ೨೭-೯೦).

[ ? ]

**ತರುವಂಡಬಾದಿ** (ನಾ). ಒಬ್ಬಾತನ ಹೆಸರು (?) : ಸ್ವಸ್ತಿಶ್ರೀ ತರುವಣ್ಣ ಬಾದಿ (ಎಕ. XII, ಮದ್ದಗಿ. ೨೬-೧ ; ?). [ ? ]

**ತರುವರಿ** 'ತರುವಲಿ' ನೋ.

**ತರುವರಿಗತನ** (ನಾ). ಹುಡುಗತನ ; ಹುಡುಗಾಟ: ಅಱಿಸಿ ಪಿಡಿ ದೆಕ್ಕಟಿಗ ತರುವರಿಗತನವನೆಂದೆಂದು ಬಿಟ್ಟಪೆ ಬಿಟ್ಟಪೆಯುಯೆಂದು (ಮದೇಪು. ೨೫-೩೦). [ ತರುವರಿ (<ತರುವಲಿ) + – ಗ$_{2}$ + – ತನ ]

**ತರುವಲಿ, ತರುವರಿ, ತಲುವರಿ, ತಲುವುರಿ** (ನಾ). ೧. ಚಿಕ್ಕ ಪ್ರಾಯ ದವನು; ಬಾಲಕ; ಹುಡುಗ: "ತರುವಲಿಯೆನೆ ತರಳಂ" (ಭಾರನಿ.೫೪); ಕರುಣದಿನೆಮ್ಮಂ ತಾಯ್ವೋಲ್ ತರುವಲಿಗಳನೆಯ್ದೆ ನಡಪಿದಜ್ಜರ್ ನೀಂ (ಪಂಪಭಾ. ೧೧-೪೮) ; ತರುವಲಿಯ ತಲೆಯ ಕಿರೀಟಮನಾಲಿಕಲ್ಲ ಮಱೆ ಕೊಂಡುದೆಂಬಂತೆ (ಧರ್ಮಾಮೃ. ೧-೧೫೮) ; ಬೆರಕೆಗೆ ಪೇಸುವಳ್ ಬೊಜಗರಪ್ಪರ ನಂಟರೊಳಂಗಹೀನರುಂ ತರುವಲಿ ಗಂಡರುಂ ಮನೆಗೆ ಬಂದೊಡೆ ನಾಣ್ಚುವಳ್ (ಲೀಲಾವ. ೨-೮೧) ; ಉಲಿವ ತರುವಲಿಗಳೆಲ್ಲ ಗಿಳಿವಿಂಡುಗೆಡೆದಿಹರು ಅಱಿಯದ ಮೌನಿಯ ಮುಕ್ತಿಯುದೇನೋ (ಅವಚಂ. ೧೭೭-೭೯೩) ; ತೊಲತೊಲಗು ತರುವಲಿಗೆ ರಣವಿದು ಸುಲಭವೇ (ಕುವ್ಯಾಕ. ೪-೧೨) ; ಕಿಱುಕುಳರಂ ತರುವಲಿಗಳಂ ತಱುಂಬಿ ಗೆಲ್ವೊಂದು ಗೆಲ್ಲಮೆ ಪೊಲ್ಲಮೆಯಾಗದೇಂ ನಿಮಗೆ? (ರಾಮಾಶ್ವ. ೧೪೫-೧೩). ೨. ಬಾಲಿಕೆ ; ಹುಡುಗಿ ; ತರಳೆ : ತರುವಲಿಗೆ ಕಲಿಸಿದಳು ಮುದಿಸೂಳೆ ಹುಲಿಮುಱಿಗೆ ಬೇಂಟೆಯಂ ಕಲಿಸುವಂತೆ (ಹಜಕಾ. ೪-೨೦) ; ಎಲಗೆ ತರುವಲಿ ಮೂಲಹಾಲಂ ಸಲೆಯುಭವನಿಂದೇಕೆವೊಲ್ಲನು (ಬಸಪು. ೧೪-೩೦); ಎಲೆ ತರುವಲಿ ಬಟ್ಟಲ ಪಾಲ್ನೆಲಕೊಕ್ಕುದೊ ನೀನೆ ಪೀರ್ದೆಯೋ ಪೇಳಿದನು (ವೃಷವಿ. ೯-೮೮). ೩. ತಬ್ಬಲಿ ; ಅನಾಥ ವ್ಯಕ್ತಿ ; ಪರದೇಶಿ : ಊರವರೆಲ್ಲಮಿಂತೆಂದರೀ ತರುವಲಿ ನಮ್ಮೂರೊಳಿರೆ ನಮಗೆ ಸಾವುಂ ಕೇಡುಮುಮೋಘಮಕ್ಕುಂ (ವಡ್ಡಾರಾ. ೭೬-೧೮);ತರುವಲಿಯಾಗಿರ್ಪ ನಿಷ್ಠುರ ದುಃಖಮುನೆಯ್ದುವರ್ದಾರಿದ್ರತೆಯಿಂದಂ ಪಿರಿದಪ್ಪ ನೋವನೆಯ್ದುವರ್ (ಧರ್ಮಾಮೃ. ೬-೧೮೫). **ತರುವರಿ :** ೧. ಕರದ ಪಿರಿದಪ್ಪ ತರುವಿಂ ತರುವರಿ [ಪಾಠಾಂ. ಲಿ ] ಯಂ ತದೆದುವೊದೆದುಮಂತಕವದನಾಂತರದೊಳ್ ತೂಂತದೆ ಟಕ್ಕಂ ಪೊರೆದವೊಲ್ (ವರ್ಧಪು. ೨-೫೨) ; ಮುರಮಥನ ಚಿತ್ತೈಸಿದೈ ತರುವರಿಯ ಸಾಭಿಪ್ರಾಯುವಾಕ್ಯಸ್ಫುರಣವನು (ಕುವ್ಯಾಕ. ೨೦-೨೮). ೩. ಕಾಡೊಳಗಾರ ಮಗನೆಂದಱಿಯದೆಳೆಶಿಶುವು ಪೊರೆಯುವೇಳ್ದಿನಗಿತ್ತೆ ನೀನಾ ತರುವರಿಯು ಕಡುಕೊಬ್ಬಿ ಜವ್ವನಭರದಿ ತನ್ನನೆ ಹಿಡಿದನೆಂದಳು ತೋಱಿದಳು ಮೈಯ (ಸಾಳ್ವಭಾ. ೨೯-೨೦). **ತಲುವರಿ :** ೧. ತೊಲಗೆಲವೊ ತಲುವರಿಗೇಕೆ ರಣವಿದು ಹಲಬರು ಪಿಂದೆ ಸೊಕ್ಕಿನಲೀ ನೆಲೆಗೆಟ್ಟುಹೋದರು (ದೇವಾಂಪು. ೪-೧೩೨) ; ತಲುವರಿಗಳಲ್ಲಿ ಕಂಡಾ ಲಿಂಗವಂ ಕಡೆಗೆ ತೊಲಗ ಮಡಗಲು ಬಂದು ತಡಕಿ ನೋಡಲು ಲಿಂಗ ಕೆಲದೊಳಿರೆ ಕರದಲ್ಲಿ ತಕ್ಕೊಂಡು (ಗುರುಜಾ. ೫-೬೪). **ತಲುವುರಿ :** ೧. ತಲುವುರಿ ನಮಗೆಂದು ನಂದಗೋಪ ಗೋಪಿ ತಿಳಿದು ನಿನ್ನ ಪೂಜಿಸಲಿಲ್ಲವಯ್ಯಾ (ತೀರ್ಥಮ. ೮೨).

**ತರುವಲಿತನ, ತಲುವರಿತನ** (ನಾ). ಹುಡುಗತನ ; ಹುಡುಗಾಟಿಕೆ ; ಎಳಸುತನ : ಸದ್ಧರ್ಮಮನುಂ ಮಱೆಯದೆ ಸನ್ಮಾನಿಮತಮಂ ತರುವಲಿತನದಿಂದಮೇಱಿಸದೆ (ಧರ್ಮಾಮೃ. ೧೨-೫೯) ; ಇನಿಯಂ ಮಾಡಿದ ತರುವಲಿ[ಪಾಠಂ. ತೆರವಲ್ಲ]ತನಕ್ಕೆ ಕಡುಮುಳಿದು (ಶೃಂಗಾರ. ೪-೪೩) ; ಸಾಕು ತರುವಲಿತನದ ಮಾತುಗಳೇಕೆ ಗರುವರ ಮುಂದೆ (ಕುವ್ಯಾದ್ರೋ. ೫-೪೩) ; ನರ ತರುವಲಿತನವ ಕೈವಿಡಿದನೀಯುಪರಾಧವಂ ಕ್ಷಮಿಸು (ಕೋಗಯು. ೧೭-೭೩); ಏನೆಂಬೆನೀ ತರುವಲಿತನದ ನಿಮ್ಮ ನುಡಿಗಂ ನಡೆಗಂ (ರಾಮಾಶ್ವ. ೧೨೬-೫). **ತಲುವರಿತನ :** ಎಲೋ ಕೃಷ್ಣ ಎಂದರೆ ಬೆದರಿ ಓಡಿ ಪೋಗಿ . . . ತಲುವರಿತನದಿಂದ ಕ್ರೀಡೆಯಾಡುತಲಿರೆ (ವಿಸೋತ್ಸು. ೧೯-೩).

[ ತರುವಲಿ + – ತನ ]

**ತರುವಳಿ** (ನಾ). (ಮದುವೆಮಾಡಿ) ಹೆಣ್ಣನ್ನು ತರುವಿಕೆ,–ತಂದು ಕೊಳ್ಳುವಿಕೆ : ಅಂತಹ ಮನೆಗಳಿಗೆ 'ಕೊಡುವಳಿ ತರುವಳಿ' ಕೂಡದು ಎಂದು ಮುಂತಾಗಿ ಉಪನ್ಯಾಸ ಕೊಟ್ಟು . . . ಕಳುಹಿಸುತ್ತಿದ್ದಳು (ಬೆಳುಮ. ೨೯) ; ಒಂದು ವಟಾರದಿಂದ ಇನ್ನೊಂದು ವಟಾರಕ್ಕೆ ಕೊಡುವಳಿ ತರುವಳಿ (ಹೆಣ್ಣು ಕೊಡುವುದು ತರುವುದು) ಉಂಟು (ಹುಟ್ಟಹ. ೨೩). 'ಕೊಡುವಳಿ' ಪರಾ. [ ತರು$_{1}$ (<ತರ್) + – ವಳಿ$_{1}$ ]

**ತರುವಳೆ** (ನಾ). ಭಾರಿ ಮಳೆ ; ರಭಸದ ಮಳೆ ; ಸುರಿಯುತ್ತಿರುವ ಮಳೆ (?) : ಬಿಸಿಲ ತಾಪ ಗ್ರೀಷ್ಮದಲಿ ರೂಢಿಸಿದ ತರುವಳೆ ವರುಷದಲಿ ಕಂಪಿಸುವ ಬಲು ಛಳಿ ಹಿಮದಲಾ ಶಿಶಿರದಲಿ ಶರದದಲೀ ಕೆಸಱು ಹೇಸಿಕೆಯಿಾ ವಸಂತದಲೆಸೆವ ಪಲ್ಲವ ಕುಸುಮಫಲ ಭೋಗಿಸುವವರಿ ಗುಂಟಿದಕೆ ಸರಿಯೇ ಮಿಕ್ಕ ಋತುಜಾಲ (ತಿಮ್ಮಅ. ೫-೧೨).

[ ತರು ? + ಮಳೆ (<ಮೞೆ) ]

**ತರುವಾಯು$_{1}$** 'ತಱುವಾಯ್' ನೋ.

**ತರುವಾಯು$_{2}$** 'ತಱುವಾಯಂ'$_{2}$ ನೋ.

**ತರುವಾಯಿ** 'ತಱುವಾಯ್' ನೋ.

**ತರುವಾಯಿ** 'ತಱುವಾಯು$_{2}$' ನೋ.

**ತರುವೋಜ** (ನಾ). [ಛಂದ] ಒಂದು ಬಗೆಯ ಪದ್ಯಜಾತಿ ; ಚೌಪದಿ: ಇದರ ರೀತಿ ಅದ್ದಂಕಿಯ ಪಂಡರಂಗನ ಶಾಸನದಲ್ಲಿ (ಕ್ರಿ. ಶ. ಸು. ೮೪೪) ಕಾಣಬರುವ "ತರುವೋಜ" ಎಂಬ ಪದ್ಯರೂಪದಲ್ಲಿ ಗೋಚರವಾಗುತ್ತದೆ. ತರುವೋಜದಲ್ಲಿ ಸಮಾನವಾದ ನಾಲ್ಕು ಪಾದಗಳುಂಟು (ಸಮಾಲೋ. ೨೧೮).

[ ? ತೆಲು. ತರುವೋಜ ]

**ತರುವ್ರಾತ** (ನಾ). ಮರಗಳ ಗುಂಪು,–ಸಮೂಹ : ಪಶ್ಚಿಮಾಶಾನಿಳ ಪಾತೋಜ್ಜೃಂಭಿತಂ ಬಂದುದು ವಿರಹಿತರುವ್ರಾತಮಂ ಪರ್ವುವುಗ್ರಾನಳ ನೆಂಬಂತಬ್ದಕಾಲಂ (ಚಂದ್ರಪು. ೪-೨೯). [ ತರು$_{2}$ + ವ್ರಾತ ]

**ತರುಶಿಫೆ** (ನಾ). ಮರದ ಬಿಳಿಲಂ: ಅಂತೆಯ್ದಿ ತರುಶಿಫೆಯಂ ಪಿಡಿದಡರ್ವನ ನಲ್ಲಿರ್ಪುದೊಂದು ಕಪಿ ಕಂಡು ಬೇಗಮಿದಿರಂ ಬಂದು ಅಂಜದಿರೆಂದು ಕೈಯಂ ಪಿಡಿದು ತೆಗೆವುದುಂ (ಪಂಚತಂ. ೧೦೭-೨೧). [ ತರು$_{2}$ + ಶಿಫೆ ]

**ತರುಷಂಡ** (ನಾ). = ತರುವ್ರಾತ : ಗಿರಿಶಾದ್ರೀಂದ್ರದ ಪೂರ್ವೋತ್ತರದಿಶೆ ಯೊಳ್ ಕಾರ್ಮುಗಿಲ್ಗಳೆಱಗಿದುವೆನೆ ಕಾರಿರುಳೆಳಸಿತೆನೆ ಕಱಂಗಿದ ತರುಷಂಡ ಮನವನಿಪಾಲತನಯಂ ಕಂಡಂ (ಕಾದಂಪೂ. ೬೩೨) ; ಮಹಾಕಟಕಂ ನಡೆ ವುತ್ಸವಕ್ಕೆ ಪಕ್ಕಾಗಿ ಜಗಕ್ಕೆ ಬೀಱಿದುವು ಪೆಂಪಂ . . . ಅನೇಕ ರಮ್ಯ ತರುಷಂಡಮನೇಕನದೀನದಾಂತಿಕಾಭೋಗಂ (ಪುಷ್ಪಪು. ೫-೪೭).

[ ತರು$_{2}$ + ಷಂಡ ]

**ತರುಸಾರ** (ನಾ). ಮರದ ಚೇಗು,–ತಿರುಳು : "ಕೆಚ್ಚು–ತಂತುವಾಯ ಕ್ರಿಯಾಯಾಂ (ನೆಯ್ಗೆಯ ಕೆಲಸ), ತರುಸಾರೇ ಚ (ಚೇಗು)" (ಶಮಧಾ).

[ ತರು$_{2}$ + ಸಾರ$_{3}$ ]

**ತರುಹ** (ನಾ). ತರಂವಿಕೆ : ಸಾಧಕನವನೊಬ್ಬ ನೇತ್ರವಟ್ಟೆಯನುಟ್ಟುಕೊಂಡು ಸೂತ್ರಧಾರಿಯನಟಿಸುತ್ತ ಬಂದನಯ್ಯಾ ಕರೆಯಿರೈ ಕರೆದು ತೋಱಿಸಿರೈ ತರಿ[ರು]ಹಕ್ಕೆ ನೆರೆಹಕ್ಕೆ ಹೋಱಗಾದನು (ಸರ್ವವ. ೨೮-೧೩೩); ದೂರದಲ್ಲಿರ್ದುದಂ ಹತ್ತಿರಕ್ಕೆ ತರುಹ (ಪ್ರತ್ಯಾಹಾರ, ಉಪಾದಾನ) (ನಾಚಿರಾ. ೬). [ತರು$_1$ (<ತರ್) + – ಹ$_2$]

**ತರೆ** 'ತಱು$_1$' ನೋ.

**ತರೆಯ** 'ತಱು$_3$' ನೋ.

**ತರ್ಕ** (ನಾ). ೧. ಊಹೆ; ಅನುಮಾನ; ಕಲ್ಪನೆ: "ಅನುಮಾನಮೂಹಮೆನೆ ತರ್ಕಮಕ್ಕು" (ಮಂಗರಾ. ೯-೧೦); ತರ್ಕವೆಂದರೆ ಊಹೆ; ಯಾವುದಾದರೊಂದು ಅಂಶದಲ್ಲಿ ಕಾರಣೋಪಪತ್ತಿ ಚಿಂತೆ (ಹಿಂದಸಾ. ೧೧೭); ಈ ವಾದ–ವಿವಾದಗಳಿಗೆ, ಖಂಡನೆಮಂಡನೆಗಳಿಗೆ ತರ್ಕ ಊಹೆಗಳಿಗೆ ಕೊನೆ ಮೊದಲಿಲ್ಲ (ದ್ರಾವಿವಿ. ೪೯). ೨. ಪರ್ಯಾಲೋಚನೆ; ವಿಚಾರ. ೩. ಚರ್ಚೆ ; ವಾದವಿವಾದ : "ತರ್ಕಯತಿ–ತರ್ಕಿಸಿದಪುದು ; ತರ್ಕಃ–ವಿವಾದಂ" (ಕಾಶಕ್ಕ. ೨೮೧); ತರ್ಕ ಮಾಡುವವ ಮೂರ್ಖನಿಂದ ಕಡೆ (ಗಾದೆ). ೪. ಒಂದು ವಾಕ್ಯದಲ್ಲಿ ಅರ್ಥಕ್ಕೆ ಅಥವಾ ಅನ್ವಯಕ್ಕೆ ಅವಶ್ಯವಾಗಿರುವ,ಬಿಟ್ಟುಹೋಗಿರುವ ಪದಗಳನ್ನು ಸೇರಿಸುವಿಕೆ ; ಅಧ್ಯಾಹಾರ ಪೂರ್ವಕೆ ; ೫. ಕಾರಣ ; ಉದ್ದೇಶ ; ಹೇತು ; ಮೂಲ. ೬. = ತರ್ಕಶಾಸ್ತ್ರ : ವಿದಿತ ವ್ಯಾಕರಣದ ತರ್ಕದ ಸಿದ್ಧಾಂತದ ವಿಶೇಷದಿಂ ತ್ರೈವಿದ್ಯಾಸ್ಪದರೆಂದೀ ಧರೆ ಬಣ್ಣಿಪುದು ದಿವಾಕರನಂದದೇವಸಿದ್ಧಾಂತಿಗಳಂ (ಸುಕುಮಾ. ೧-೩೮); ಮೇಣಖಿಳ ಸಿದ್ಧಾಂತ ಶಾಸ್ತ್ರ ಪುರಾಣ ತರ್ಕಂಗಳಿಗೆ ನಿಜವಂ ಕಾಣಿಸದೆ ಸೂಕ್ಷ್ಮದೊಳೆಸೆವುತಿಹ ಲಿಂಗ ಸನ್ಮೂರ್ತಿ (ಬಸವು. ೫೦-೭೦). ೭. ಅಪೇಕ್ಷೆ : ೮. ನೈಯಾಯಿಕರು ಹೇಳುವ ಹದಿನಾರು ಪದಾರ್ಥಗಳಲ್ಲಿ ಒಂದು: ಗೌತಮೋಕ್ತ ನ್ಯಾಯವು ಪ್ರಮಾಣ, ಪ್ರಮೇಯ . . . ತರ್ಕ ನಿರ್ಣಯ . . . ನಿಗ್ರಹಸ್ಥಾನಂಗಳೆಂಬ ಷೋಡಶ ಪದಾರ್ಥಂಗಳಂ ನಿರೂಪಿಸುತ್ತಲಿ (ವಿವೇಕ. ೧೦); ತರ್ಕ ಎಂದರೆ ವ್ಯಾಪ್ಯವನ್ನು ಅಂಗೀಕರಿಸುವುದರಿಂದ ಉಂಟಾದ ವ್ಯಾಪಕದ ಆರೋಪ (ಭಾತತ್ತ್ವ. ೭೪೪); ನ್ಯಾಯದರ್ಶನದಲ್ಲಿ ಪ್ರಮಾಣ . . . ತರ್ಕ ನಿರ್ಣಯ . . . ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದಸಾ. ೧೧೨); "ಕಾಂಕ್ಷೆಯೊಳು ವಿತರ್ಕದೊಳೂಹೆಯೊಳು ತರ್ಕ ಶಬ್ದಮಕ್ಕುಂ" (ಮಂಗರಾ. ೧೫೩-೫೮); "ಕಾಂಕ್ಷೆ ವಿಚಾರಮೂಹ ಸಂಪಾದಿತಕರ್ಮಮೆಂಬಿನಿತು ತರ್ಕಮೆನಿಕ್ಕು" (ನಾನಾರ. ೧೪೯). [ಸಂ.]

**ತರ್ಕಕ** (ನಾ). = ತರ್ಕಜ್ಞ. [ಸಂ.]

**ತರ್ಕಜ್ಞ** (ನಾ). ತರ್ಕಶಾಸ್ತ್ರವನ್ನು ಬಲ್ಲವನು: ಕವಿ ಪ್ರಕರದಿಂ ತರ್ಕಜ್ಞರಿಂ ಶಬ್ದವಿದ್ಯೆಯೊಳಬ್ಜಾಸನಕಲ್ಪರಪ್ಪ ವಿಳಸದ್ಬುಧೇವರಿಂ ದೇವತಾಲಯದಿಂದೊಪ್ಪುವ . . . ಉಜ್ಜೈನಿಯನೆಯ್ದಿ ಬಂದನಜಿತಂ(ಪಂಚತಂ. ೧೯೩-೧೫); ತಜ್ಞರ್ಪರೀಕ್ಷಿಸಲು ಶಬ್ದಜ್ಞಂ ಶಾಸ್ತ್ರಜ್ಞನಖಿಳ ತರ್ಕಜ್ಞಂ. . . ಶ್ರೀರಾಜಗುರು ಕಳೇಶ್ವರದೇವಂ (ಶಾಸಪ. ೯೨ ; 1179). [ಸಂ.]

**ತರ್ಕತಂತ್ರ** (ನಾ).=ತರ್ಕಶಾಸ್ತ್ರ : ಮುಕುತಿಯಿದಱೊಳು ಕರತಳಾಮಳಕಭರಿತ ಬೊಮ್ಮದ ಸುತ್ತುಗೊಳಸನು ಸರಿದ ಠಾವೀ ತರ್ಕತಂತ್ರದ ತರದ ಯುಕುತಿಗೆ ತೊಳಸುಗೊಳ್ಳದ ಠಾವಲಾ (ಕುವ್ಯಾಉ. ೧-೨೨); ಆದಿಯಾಧಾರಗಳಿಲ್ಲದಂದು ನಾದಬಿಂದುಕಳೆಗಳಿಲ್ಲದಂದು ವೇದಶಾಸ್ತ್ರಾಗಮ ತರ್ಕತಂತ್ರಗಳಿಲ್ಲದಂದು . . . ಅಖಂಡೇಶ್ವರಾ ನಿಮ್ಮ ನೀವಱಿಯದೆ ಅನಂತಕಾಲವಿರ್ದಿರಂದು (ಅಖಂಡೇ. ೧-೧). [ತರ್ಕ + ತಂತ್ರ]

**ತರ್ಕಬದ್ಧ** (ಗು). ೧. ತರ್ಕಕ್ಕೆ ಒಳಪಟ್ಟಿರುವ ; ನ್ಯಾಯಸಮ್ಮತವಾದ. (ನಾ). ೨. ನ್ಯಾಯಸಮ್ಮತವಾದುದು : ಈ ಸಿದ್ಧಾಂತ ತರ್ಕಬದ್ಧವಲ್ಲ (ಮುಕ್ಕಾರ. ೯೭, ಪೀಠಿಕೆ). [ತರ್ಕ + ಬದ್ಧ]

**ತರ್ಕಮತ** (ನಾ). ತರ್ಕಶಾಸ್ತ್ರದ ಅಭಿಪ್ರಾಯ: ಈ ಅಕ್ಷರಗಳಿಗೂ ಧ್ವನಿಗೂ ಆಶ್ರಯ ಆಕಾಶವೆಂದು ತರ್ಕಮತ (ಹಿಂದಸಾ. ೧೪೨). [ತರ್ಕ + ಮತ]

**ತರ್ಕಯಿಸು** 'ತಟ್ಕೈಸು' ನೋ.

**ತರ್ಕಯುಕ್ತಿ** (ನಾ). ತರ್ಕಶಾಸ್ತ್ರದ ತಂತ್ರ,–ಉಪಾಯ : ಭೃಗುದಧೀಚಾದ್ಯರ ಮಹೋದ್ಧತ ಶಾಪ ಶಕ್ತಿಯು ನಿರತ ಗೌತಮ ಮುಖ್ಯರತುಳಿತ ತರ್ಕಯುಕ್ತಿಗಳು (ಬಸವು. ೫೩-೫). [ತರ್ಕ + ಯುಕ್ತಿ]

**ತರ್ಕರಸಿಕ** (ನಾ). ತರ್ಕದಲ್ಲಿ ಆಸಕ್ತಿಯುಳ್ಳವನು; ತರ್ಕದಲ್ಲಿ ಸಂತೋಷ ಹೊಂದುವವನು : ಅರಿಸ್ಟಾಟಲನು ಕೇವಲ ತರ್ಕರಸಿಕ, ಸ್ವಸೂತ್ರಾವಲಂಬಿ ಎನ್ನುವುದನ್ನು ಒಪ್ಪಲಾಗುವುದಿಲ್ಲ (ಅರಿಕಾ. ೩೦). [ತರ್ಕ + ರಸಿಕ]

**ತರ್ಕವರಿಷ್ಠ** (ನಾ). ತರ್ಕಶಾಸ್ತ್ರದಲ್ಲಿ ನಿಪುಣ ; ತರ್ಕಶಾಸ್ತ್ರ ಪಾರಂಗತ : ಕವಿತಾಪಿತಾಮಹತ್ತರ್ಕವರಿಷ್ಠರ್ವ್ವಕ್ರಗಚ್ಛದೊಳ್ ಪೆಸರ್ವ್ವಡೆದರ್(ಎಕ. II, ೬೯-೨೩ ; 1100). [ತರ್ಕ + ವರಿಷ್ಠ]

**ತರ್ಕವಾದ** (ನಾ). ತರ್ಕಬದ್ಧವಾದ ಚರ್ಚೆ,–ವಾದ : ಹದಿನೆಂಟು ಸಾವಿರ ಹೆಂದದಾರುಹತರು ಕಡಗಿ ನಡೆತಂದು ತರ್ಕಿಸಿ ತರ್ಕವಾದಕ್ಕಾಱದೇ ಸೋಲ್ಪುತ್ತಿಂದು (ಬಸವು. ೫೦-೨೩). [ತರ್ಕ + ವಾದ$_3$]

**ತರ್ಕವಿದ್ಯೆ** (ನಾ). = ತರ್ಕಶಾಸ್ತ್ರ : ರಣರಹಸ್ಯಜ್ಞಾನಿಗಳು ವಿಗೆ ಮಣಿದರಿಂದ್ರಿಯವಶಕೆ ರಿಪುಭಟಗಣ ವಿದಾರಣ ತರ್ಕವಿದ್ಯಾವೀತರಾಗಿಗಳು (ಕುವ್ಯಾಭೀ. ೭-೧೦). [ತರ್ಕ + ವಿದ್ಯೆ]

**ತರ್ಕವಿವಾದ** (ನಾ). = ತರ್ಕವಾದ : ವೇದ ವೇದಾಂತಾದಿ ಸಿದ್ಧಾಂತಾದಿ ತರ್ಕವಿವಾದದಿಂ ಸಂಪಾದಿಸುತ್ತಾ . . . ವಿಧಿಯುಕ್ತಾದಿಗಳಿನೊಡಬಡಿಸುತಂ (ಬಸವು. ೫೦-೧೨). [ತರ್ಕ + ವಿವಾದ]

**ತರ್ಕಿಸು** 'ತಟ್ಕೈಸು' ನೋ.

**ತರ್ಕಶಾಸ್ತ್ರ** (ನಾ). ಷಡ್ದರ್ಶನಗಳಲ್ಲಿ ಒಂದು; ತರ್ಕದ ನಿಯಮಗಳನ್ನು ತಿಳಿಸುವ ಶಾಸ್ತ್ರ ; ಆನ್ವೀಕ್ಷಿಕೀವಿದ್ಯೆ ; ನ್ಯಾಯಶಾಸ್ತ್ರ : ತರ್ಕಶಾಸ್ತ್ರದಲೆಸೆವ ವಾಕ್ಯಗಳೆಕ್ಕಜಗಳಿಂದನ್ನರನು ಹಿಂದಿಕ್ಕಿ (ಗಗತಾ.೧೩-೧೯); ಈ ತರ್ಕಶಾಸ್ತ್ರದಲ್ಲಿ ಪ್ರಾಚೀನ ತರ್ಕ, ನವೀನ ತರ್ಕ ಎಂಬ ಎರಡು ವಿಭಾಗವಿರುವುದು (ಹಿಂದಸಾ. ೧೧೩). [ತರ್ಕ + ಶಾಸ್ತ್ರ]

**ತರ್ಕಶುದ್ಧಿ** (ನಾ). ವಾದಕ್ರಮದಲ್ಲಿಯ ಶುದ್ಧತೆ,–ನಿರ್ದುಷ್ಟತೆ ; ವಾದದಲ್ಲಿ ದೋಷವಿಲ್ಲದಿರುವಿಕೆ : ಆ ಉತ್ತರಗಳ ತರ್ಕಶುದ್ಧಿಯನ್ನು ಪರೀಕ್ಷಿಸುತ್ತ ಅವನ ದಾರಿ ಸಾಗುತ್ತದೆ (ದೂರಸ. ೨೮೨). [ತರ್ಕ + ಶುದ್ಧಿ]

**ತರ್ಕಸಂಬಂಧಿ** (ಗು). ತರ್ಕಕ್ಕೆ ಸಂಬಂಧಿಸಿದ ; ವಾದಕ್ಕೆ ಸಂಬಂಧಪಟ್ಟ : (Dialectical. ಪಾರಿನಿ. ೨೯). [ತರ್ಕ + ಸಂಬಂಧಿ]

**ತರ್ಕಸರಣಿ** (ನಾ). ವಾದಿಸುವ ರೀತಿ : ತರ್ಕಸರಣಿಯಿಂದ ಮಾಸ್ತರರಿಗೆ ಸಮಾಧಾನವಾಗಲಿಲ್ಲ (ಮೂರುದಾ. ೮೦); ಇನ್ನು ನಾಲ್ಕುವರ್ಷ ಮದುವೆಯಾಗದೆ ಇದ್ದಿದ್ದರೆ ಏನು ಹಾನಿ ? ಎಂಬುದು ಅವರ ಆಗಿನ ತರ್ಕಸರಣಿ (ವಾತ್ಸಲ್ಯ. ೫೦). [ತರ್ಕ + ಸರಣಿ]

**ತರ್ಕಸಾಧಕ** (ನಾ). ತರ್ಕದಿಂದ ಸಾಧಿಸುವವನು ; ವಾದ ಮಾಡುವವನು : ಭಂಟನಹೆ ಭಕುತರಿಗೆ ನೆನೆವರು ನಂಟರೆಮಗೊಲಿದಂತೆ ಹೊಗಳಿದರೆಂಟುಮಡಿ ಹಿಗ್ಗುವೆವು ಮೆಚ್ಚೆವು ತರ್ಕಸಾಧಕರ (ಕುವ್ಯಾಉ.೫-೮). [ತರ್ಕ + ಸಾಧಕ]

**ತರ್ಕಸಿದ್ಧಾಂತ** (ನಾ). ತರ್ಕಶಾಸ್ತ್ರದ ಸಿದ್ಧಾಂತ; ತರ್ಕದಿಂದ ಸಿದ್ಧವಾಗುವ ಅಭಿಪ್ರಾಯ : ವೇದಕ್ಕೂ ವಕ್ತೃವಿನ ಅಭಿಪ್ರಾಯವೆಂಬ ತಾತ್ಪರ್ಯ ಇರಬೇಕಾದರೆ ಪರಮೇಶ್ವರನೇ ವೇದವನ್ನು ಹೇಳಿರಬೇಕೆಂದೂ ವೇದ ಪೌರುಷೇಯ, ಇದರಿಂದ ಈಶ್ವರಸಿದ್ಧಿಯೆಂದೂ ತರ್ಕಸಿದ್ಧಾಂತ (ಹಿಂದಸಾ. ೧೪೫). [ತರ್ಕ + ಸಿದ್ಧಾಂತ]

**ತರ್ಕಾಭಾಸ** (ನಾ). ತಪ್ಪಾದ ತರ್ಕ : (ಮೋಸಗೊಳಿಸುವುದಕ್ಕಾಗಿ ಹೂಡಿದ) ಕೂಟತರ್ಕ, ಕುತರ್ಕ, ತರ್ಕಾಭಾಸ, ಸತ್ಯಾಭಾಸ (Sophism. ಇಂಕನಿ.). [ ತರ್ಕ + ಆಭಾಸ ]

**ತರ್ಕಾರಿ$_1$** (ನಾ). ಒಂದು ಬಗೆಯ ಗಿಡ ; ತಕ್ಕಿಲೆ : "ಜಯಾ, ಜಯಂತೀ, ತರ್ಕಾರೀ, ನಾದೇಯಾ, ವೈಜಯಂತಿಕಾ ಇ ತಕ್ಕಿಲೇ ಗಿಡ, ತಗ್ಗೀಸೊಪ್ಪಿನ ಗಿಡ" (ಸಿದ್ಧಾಂತಿ. ೧೧೧). [ ಸಂ. ತರ್ಕಾರೀ ]

**ತರ್ಕಾರಿ$_2$** 'ತರಕಾರಿ' ನೋ.

△ **ತರ್ಕಿಲ್** 'ತಕ್ಕಿಲ್$_2$' ನೋ.

**ತರ್ಕಿಸು$_1$** 'ತಟ್ಕಿಸು' ನೋ.

**ತರ್ಕಿಸು$_2$** (ಕ್ರಿ). ೧. ಊಹಿಸು ; ಆಲೋಚಿಸು ; ವಿಚಾರಮಾಡು : ಚಳುಕಿಯನೆ ಶಿಂಶುಮಾರಂ ಕುಳೀರಮದು ಕರ್ಕಿ ತರ್ಕಿಸಲ್ ಕರ್ಕಟಕಂ (ವಸ್ತುಕೋ. ೨೩-೬) ; ಅವುಗಳಲ್ಲಿ ಕೆಲವು ವಸ್ತುಗಳ ಖರೀದಿಗಾಗಿಯೆ . . . ಕಳುಹಿಸಿರಬಹುದೆಂದು ಶೇಟಜಿ ತರ್ಕಿಸಿದ್ದರು (ರತ್ನಗೋ. ೨೧) ; ಮೊದಲನೆಯದು ಕಾರ್ಯಕಾರಣವನ್ನು ತರ್ಕಿಸುವ ಬುದ್ಧಿಶಕ್ತಿ (ಇಸ್ಲಾಂಸಂ. ೨೩೫). ೨. ತರ್ಕಮಾಡಂ ; ವಾದಮಾಡಂ ; ಚರ್ಚಿಸಂ : ವೇದಾಂತ ಸಿದ್ಧಾಂತ ಪ್ರಮಾಣ ಶಾಸ್ತ್ರಂಗಳನೋದಿ ತರ್ಕಿಸುವ ಪಂಡಿತರ್ಕಳೊಡನೆ ತೊಡರ್ದು ನಂಡಿದು ಸದುತ್ತರಂಗುಡುತಿರ್ಪ ಶುಕಶಾರಿಕಾನಿಕಾಯಂಗಳುಮಂ (ಪಂಚತಂ. ೧೧೮-೬) ; ತರ್ಕ ತರ್ಕಿಸಲಟಿಯದೆ ಅತರ್ಕ್ಯಲಿಂಗವೆಂದು ಮನಂಗೊಳ್ಳವು (ಬಸವ. ೯೫೨); ನೀನೊಡೆಯನೆಂದಱಿದೀಶ್ವರ ನಿಮ್ಮನರ್ಚಿಸುತ್ತಿರದಿರದೆಲ್ಲರೊಳ್ ಮಥಿಸಿ ತರ್ಕಿಸಿ ನೋಯಿಸಿ ನೋಯುತುಂ (ಪಂಪಾಶ. ೬೩). [ ತರ್ಕ + -ಇಸು$_3$ ]

**ತರ್ಕಿಸು$_3$** (ಕ್ರಿ). (?) : ತರ್ಕಿಪ ಬಗದಾರೆಯು ಕೂಡೆ ಬಹ ಕೊಳರ್ವಕ್ಕಿಯ ಕೆಲದಾಡಿಸುತ ದಿಕ್ಕಿಗೆ ಪೆಸರಾಂತ ಸಿಬಿಲಿಗೆ ಕವಳವನಿಕ್ಕಿ ಕಾದಿಸುತಿರ್ದ ಮದನ (ಮೋಹತ. ೫-೩೫). [ ? + – ಇಸು$_3$ ]

△ **ತರ್ಕು** 'ತಕ್ಕು$_2$' ನೋ.

**ತರ್ಕುಮೆ** (ನಾ). ತರುವಿಕೆ ; ತೆಗೆದುಕೊಂಡು ಬರುವಿಕೆ : ತರ್ಕುಮೆ, ತರ್ಕುಮೆಗಳ್ ; ಬರ್ಕುಮೆ, ಬರ್ಕುಮೆಗಳ್ (ಶಬ್ದಾನು. ೫೭೨ ಪ್ರಯೋ). **P** ಕೆಲವೆಡೆಯಲ್ಲಿ ಧಾತು ಮತ್ತು ಪ್ರತ್ಯಯದ ನಡುವೆ 'ಕಂ' ಎಂಬ ಆಗಮವು ಬರುತ್ತದೆ. [ <ತರ್ + – ಮೆ$_1$ ]

**ತರ್ಕೆ** 'ತಟ್ಕಿ' ನೋ.

**ತರ್ಕೆಯ್ಸು** 'ತಟ್ಕಿೖಸು' ನೋ.

**ತರ್ಕ್ಯೆಸು** 'ತಟ್ಕ್ಯೆಸು' ನೋ.

△ **ತರ್ಗಿ** 'ತಗ್ಗಿ$_1$' ನೋ.

**ತರ್ಗಿಸು** 'ತಟ್ಗಿಸು' ನೋ.

**ತರ್ಗು$_1$** 'ತಟ್ಗು' ನೋ.

**ತರ್ಗು$_2$** 'ತಗ್ಗು$_2$' ನೋ.

**ತರ್ಗೊತ್ತು** 'ತಗ್ಗೊತ್ತು' ನೋ.

**ತರ್ಜನ** (ನಾ). ೧. ಹೆದರಿಸುವಿಕೆ ; ಬೆದರಿಸುವಿಕೆ. 'ತರ್ಜನೋಕ್ತಿ' ಪರಾ. ೨. ನಿಂದಿಸುವಿಕೆ ; ಅವಹೇಳನ ಮಾಡುವಿಕೆ ; ಹೀಯಾಳಿಸುವಿಕೆ ; ದೂಷಣೆ : ದಂಡನ ಖಂಡನ ತಾಡನ ಪೀಡನ ಗರ್ಜನ ತರ್ಜನಾದಿಗಳನೆಯ್ದಿ ನಿಲಲೆಡೆಯಿಲ್ಲದೆ (ಅಜಿಪು. ೧೧-೧೦ ವ) ; ಬಾರಿಪ ನಿಮ್ಮ ತರ್ಜನದಿನೀ ಜನದೊಂದುಲಿ ಮಾಣ್ಗೆ (ಪುಷ್ಪಪು. ೭-೩೫). [ ಸಂ. ]

**ತರ್ಜನನಿರತ** (ನಾ). ನಿಂದಿಸುವುದರಲ್ಲಿ ನಿರತನಾದವನು,–ಆಸಕ್ತನಾದವನು : ತರ್ಜನನಿರತರಪ್ಪ ದುರ್ಜನರಂ ಬಾರಿಸಿ (ಶಾಂತಿಪು. ೬–೨೫ ವ). [ ತರ್ಜನ + ನಿರತ ]

**ತರ್ಜನಿ** (ನಾ). ಗದರಿಸಲು ಉಪಯೋಗಿಸುವ ಬೆರಳು ; ಕೈಯ ಹೆಬ್ಬೆರಳಿನ ಪಕ್ಕದ ಬೆರಳು ; ತೋರುಬೆರಳು : ಅತಿ ಲಲಿತತರ್ಜನೀ ತರ್ಜಿತ ಪರಿಜನೆಯರ್ (ಆದಿಪು. ೭-೧೪) ; ಸುರಧಾತ್ರಿಯು ತರ್ಜನಿಯಂ ಬೆರಲ್ಗಳಿಂ ಪಿಡಿದು . . . ತತ್ತರುಣಂ ಮರಕತಕುಟ್ಟಿಮದ ಮೇಲೆ ದಟ್ಟಡಿಯಿಡುವಂ (ಮಲ್ಲಿಪು. ೧೩-೫೭) ; ಅಂಗುಷ್ಠಕ್ಕೆ . . . ತರ್ಜನಿಯಿನಳೆಯೆ ತಾಂ ಪ್ರಾದೇಶಂ (ವಸ್ತುಕೋ. ೬೯-೧೩) ; ಲೋಟಕ್ಕೆ ಹಾಕಿದ್ದ ಕಾಫಿಯಲ್ಲಿ ತೇಲುತ್ತಿದ್ದ ಒಂದು ಸಣ್ಣ ಕಸವನ್ನು ತರ್ಜನಿಯಿಂದ ತೆಗೆದು, ನೋಡಿ, ಬಿಸಾಡಿದರು (ಕಾನೂರು. ४೫४) ; ಶಾಲೆಯ ಮೇಷ್ಟರು ತುಂಟ ವಿದ್ಯಾರ್ಥಿಯನೆಂದರು ತೋರಿ ತರ್ಜನಿಯ (ಇಂಚಾಪ. ೧೨೦-೯೨). [ ಸಂ. ತರ್ಜನೀ ]

**ತರ್ಜನೆ** (ನಾ). = ತರ್ಜನ ೨ : ವೀರಪುರುಷರೆಲ್ಲರೂ ಅಸ್ತ್ರಧಾರಿಗಳಾಗಿ ಕೋಪದಿಂದ ತರ್ಜನೆ ಮಾಡುತ್ತ . . . ಭೀಷ್ಮನನ್ನು ಬೆನ್ನುಹತ್ತಿದರು (ಭೀಷ್ಮಪ. ೨೮). [ ಸಂ. ತರ್ಜನ ]

**ತರ್ಜನೋಕ್ತಿ** (ನಾ). ಗದರಿಸುವ ನುಡಿ ; ಬೆದರಿಕೆಯ ಮಾತು : ಅದೆ ವಿಸರತ್ನಭಾಕಳಕಳಂ ಪ್ರತಿಹಾರಕ ತರ್ಜನೋಕ್ತಿ ತಾನದೆ ಕಳಗೀತನಾದಮದೆ ಮನ್ಮಥನಾಥನ ಬೀಡುದಾಣವಿಂತಿದು ದಿಟಂ (ಚಂದ್ರಪು. ೧೧-೬೧). [ ತರ್ಜನ + ಉಕ್ತಿ ]

**ತರ್ಜಿತ** (ಗು). ೧. ಬೆದರಿಸಲ್ಪಟ್ಟ : ಅತಿಲಲಿತ ತರ್ಜನೀ ತರ್ಜಿತ ಪರಿಜನೆಯರ್ (ಆದಿಪು. ೭-೧೪). ೨. ನಿಂದಿಸಲ್ಪಟ್ಟ. (ನಾ). ೩. ಬೆದರಿಸುವಿಕೆ; ಗದರಿಸುವಿಕೆ : ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳ ಭಯಂಗೊಳಿಸಿದುದುದ್ಧಕೀರಮದಕೋಕಿಲ ಗ ರ್ಜಿ ತ ತ ರ್ಜಿ ತ ಂ ಗ ಳಿ ಂ (ಶಮದ. ೬೭ ಪ್ರಯೋ). [ ಸಂ. ]

**ತರ್ಜಿತೆ** (ನಾ). ೧. ಗದರಿಸಲ್ಪಟ್ಟವಳು. ೨. ತೆಗಳಲ್ಪಟ್ಟವಳು ; ನಿಂದಿಸಲ್ಪಟ್ಟವಳು : ತನ್ನ ತಾನಱಿಯದಲೆ ಚಪಲೆ ನೀನಿದಾವ ಕಜ್ಜ ಕುಜ್ಜುಗಂಗೆಯ್ದೆಯೆಂದು ಲಜ್ಜೆಯಿಂ ತರ್ಜಿತೆಯಾದಂತೆಯುಂ . . . ನಿನಗೆ ತರಳತೆಯಿದೆತ್ತಣಿಂ ಬಂದುದೆಂದು ಧೈರ್ಯಮೆ ಧಿಕ್ಕರಿಸುವಂತೆಯುಂ ಅತಿಲಜ್ಜಿತೆಯಾಗಿ ತನ್ನೊಳಿಂತೆಂದಳ್ (ಕಾದಂಉ. ೭೩). [ ಸಂ. ತರ್ಜಿತಾ ]

**ತರ್ಜಿಸು** (ಕ್ರಿ). ೧. ಗದರಿಸು ; ಬೆದರಿಸು : ಪಿರಿದೆನಿಪ ಭರದೆ ನಡೆಯಲ್ ಘುರುಘುರಿಸಲ್ ಘೋರಘೋಣವಿವರಂ ಕಿ[ಳಿಙಬ್ಬರದಿಂ] ತೀವಿದು ದಾಶಾಂತರಮಂ ಜವದಿಂದೆ ಗರುಡನಂ ತರ್ಜಿಪವೋಲ್ (ಕಾದಂಪೂ. ४೫೨) ; ಅವನು ಮಗನನ್ನು ತರ್ಜಿಸಿ "ಏನು ಮಾತಿದ್ದರೂ ಬೆಳಗಾಗ ಆಡು . . . ರಂಪು ಮಾಡಬೇಡ" ಎಂದನು (ಚಿಕರಾ. ४೩); ಅವರು ಸಾರಸ್ವತ ಪ್ರಾಸಾದದ ಮೊಗಸಾಲೆಯಲ್ಲಿ ಕುಳಿತು, ಕೂಗಿ, ಕರೆದು, ತರ್ಜಿಸಿ, ಗರ್ಜಿಸಿ ಕೈಕೈ ಮಿಲಾಯಿಸುವ ಕಾರಬಾರ ನಡಸುತ್ತಿರುತ್ತಾರೆ (ನಿಬಂಧ. II, ೨೬೧). ೨. ನಿವಾರಿಸು ; ವಿರೋಧಿಸು ; ತಡೆಗಟ್ಟು : "ತರ್ಜಿಸು – ನಿವಾರಣೇ" (ಶಮುಧಾ). [ ತರ್ಜನ + – ಇಸು$_3$ ]

**ತರ್ಜುಮೆ** (ನಾ). ಒಂದು ಭಾಷೆಯಿಂದ ಇನ್ನೊಂದಂ ಭಾಷೆಗೆ ಬದಲಾಯಿಸುವಿಕೆ ; ಭಾಷಾಂತರ ; ಅನುವಾದ : ಭಾರತೀಯ ಖಗೋಳ ಗ್ರಂಥಗಳ ಪೈಕಿ ಎಲ್ಲೋ ಕೆಲವು ಮಾತ್ರ ಇಂಗ್ಲಿಷಿಗೆ ತರ್ಜುಮೆಯಾಗಿವೆ (ತತ್ವಪ್ರಾ. ४೮೭) ; ಎಷ್ಟಾದರೂ ಭಾವ ತರ್ಜುಮೆಯಾಗಿ ಮಾತಾಗಬೇಕು (ಏಳಜೀ. ೩೯). [ ←ಅರ. ಹಿಂ. ಮರಾ. ತರ್ಜುಮಾ ]

**ತರ್ಣಕ** (ನಾ). ಆಗ ತಾನೆ ಹುಟ್ಟಿದ ಕರು : "ತರ್ಣಕಾಭಿಧಾನಂ ಸದ್ಯೋಜಾತಂ" (ವಸ್ತುಕೋ. ೮೯-೫) ; "ತರ್ಣಕಃ, ವತ್ಸಃ–ಈ ೨ ಹೋ(ಱ)ರಿ" (ಹಲಾಯು. ४४-೦೧೯) ; ಪರಿಯುತ್ತವ್ವಳಿಸುತ್ತುಮೆಣ್ದೆಸೆಗಮೊಂದೀದಾವು ಮೆಯ್ಸೋರ್ಚಿ ಹೂಂಕರಿಸುತ್ತುಂ ಬಿಡೆ ಕಂಡಕಂಡವರ್ಗಳಂ ಬೆನ್ನಟ್ಟುತುಂ ತ[ಪಾಠಾಂ. ಕ]ರ್ಣಕಂ ಬರೆ ಬೆನ್ನೋಳ್ ನಲವಿಂದದಂ ಮಿಗೆ ಮರಲ್ದಾ

ಘ್ರಾಣಿಸುತ್ತುಂ ಪುರೀವರ ವೀಥ್ಯಂತರದೊಳ್ ಮಹಾರಭಸವಂ ಮಾಡಿತ್ತು (ವರ್ಧಪು. ೩-೪); ನಾಲಗೆಗಳಂ ಪರಪಿ ತುದಿಯಲೊಸರುವ ಕಣಗಳ ಜಾಳದಿಂ ತರ್ಣಕಗಳುಪಚರಿಸಿ ಮರುಗುತೆಳೆವಾಳೆಯಂದದಿ ಕಂದಿ ಕುಂದಿ ಬಳಲ್ದುಂ ಜೋಲ್ದು ತಾಳಲಾರದೆ ನಡುಗಿ ಮಿಡುಕುವ ಕುರಂಗಗಳ ತಂಡಂಗಳೆಸೆದಿರ್ದವು (ವೆಂಕಾರಾ. ೩-೬-೧೩). [ಸಂ.]

**ತರ್ತೀಪು** 'ತರಿತೀಪು' ನೋ.

**ತರ್ದವಾಡಿ**, ತದ್ದವಾಡಿ, ತರದೆವಾಡಿ, ತರ್ದ್ರವಾಡಿ, ತರ್ಧವಾಡಿ (ನಾ). ಒಂದು ನಾಡಿನ ಹೆಸರು ; ಈಗಿನ ಬಿಜಾಪುರದ ಸುತ್ತ ಮುತ್ತಣ ಪ್ರದೇಶ : [ಶ್ರೀ]ಮತ್ ತೈಲಪರಸ[ರ್] × × × [ತರ್ದ್ದ] ವಾಡಿ[ಸಾ]ಸಿರಮುಮನನುಂಗಜೀವಿತಮಾಳುತ್ತ (ಸೌಇಇ. XI-1, ೪೦-೫; 965); ಗೋನರಾಜನೂರ್ಜ್ಜಿತತೇಜಂ ಕಟ್ಟಿಸಿದಂ ಕೆಱೆಯಂ ಮೋರಿಟ್ಟಗೆಯೊಳ್ತರ್ದ್ದವಾಡಿ ನಾಡೊಳಗೀಗಳ್ (ಎಕ. VIII, ಸಾಗರ. ೧೧೯-೫೩; 1042); ಮತ್ತಂ ತರ್ದ[ೞ]ವಾಡಿ ಮಧ್ಯಗ್ರಾಮ ಬಾಗವಾಡಿಪುರವರಾಧೀಶ್ವರ ಮಾದಿರಾಜನ ತನೂಜಂ ಬಸವರಾಜನ ಮಹಿಮೆಯೆಂತೆಂದಡೆ (ಎಇ. XXI, ೧೨-೮ ; 1260). **ತದ್ದವಾಡಿ:** ಅಱಿಕೆಯ ಗಟ್ಟಗೆಯುಂ ಪೆರ್ದೊಱೆಯುಂ ಪರಿದಲ್ಲಿ ತದ್ದವಾಡಿಗೆ ತೆಂಕಲ್ ತೊಱೆಗಳೆಗೆ ಬಡಗಲಿರ್ದುದು . . . ಬೆಳುಗಲಿದೇಶಂ (ಆಜಿಪು. ೧೨-೪೪) ; ತದ್ದವಾಡಿ ಸಾಸಿರದ ಬಳಿಯ ಕಂಪಣ ಮುತ್ತಗೆ ಮೂವತ್ತಱ ಮೊದಲ ಬಾಡ (ಸೌಇಇ. XI-ii, ೧೪೧-೬ ; 1097) ; ಟಕ್ಕಳಿಗೆಯಲ್ಲಿ ಕರಿದು ಮರಮೊಗೆ ಮ ೨ ಮನೆ ೧ ತದ್ದವಾಡಿ ನಾಡೊಳಗೆ ಭೂಮಿ (ಕಇ. II, ೪೨-೨೩ ; 1306). **ತರದೆವಾಡಿ:** ಮೆರೆದ ಪೆಮ್ಮಾಡಿರಾಯ ತರದೆವಾಡಿಯು ಗೆದ್ದು (ಕನ್ನಜಾ. ೨೭೪). **ತರ್ದ್ರವಾಡಿ:** ತದ್ದ್ರ್ರವಾಡಿ ನಾ × × × ನಿಡುವಣಿಯ ಮೇಲಾಳಿಕೆಯ . . . ಕನ್ನಸೆಟ್ಟಿ ಕಾದಿ (ಸೌಇಇ. XI-ii, ೧೮೪-೨ ; 1101). **ತರ್ಧವಾಡಿ:** ತರ್ದ್ಧವಾಡಿಯ ಬಳಿಯ ಕಾರಕುಱುವಂ ನಾಲ್ವತ್ತಱೊ[ಳ]ಗೆ ಪೆರ್ದ್ದೊಱೆಯ ಬಡಗದಟಿಯ ತಂಗೊಡಗೆಯ ಬೀಡಿನೊಳ್ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರ್ದ್ದ (ಸೌಇಇ. XI-i, ೧೧೬-೧೩ ; 1075). [ತರ್ದ$_0$ + ಪಾಡಿ$_1$]

**ತರ್ದು$_1$** (?) (ಕ್ರಿ). ತದುಕು ; ಬಡಿ ; ತದೆ ; ಸದೆ (?) : ಚೋಳನ ನಾಳುಮಾಡುವುದು ಗೂರ್ಜ್ಜರರಂ ಸಲೆ ತರ್ದ್ದಿಕುಂ ಕರಂ ಲಾಳನನಾಳಿಮಾಡುವುದು . . . ಈ ಕುಱುಗೋಡ ಕೋಟೆ (ಸೌಇಇ. IX-i, ೨೯೬-೧೩; 1176). 'ತದೆ$_1$' ಪರಾ. [?]

**ತರ್ದು$_2$**, ತದ್ದು, ದದ್ದು$_1$, ದರ್ದು$_1$ (ನಾ). ೧. ಒಂದು ಬಗೆಯ ಚರ್ಮರೋಗ ; ಹುಳುಕಡ್ಡಿ : ಅರಗಾಮಳಕಫಳಂ ವೃಕ್ಷರಾಜಪತ್ರಂ ಚಗಚ್ಚೆಯೆಕ್ಕೆಯಿವಂ ಕೊಂಡರೆದಿಂಬಾಗಿರೆ ಪೂಸುಗೆ ಶಿರೋವ್ರಣಂ ತರ್ದು ದುಂದುಱಿಂಬಿವು ಕಿಡುಗುಂ (ಲೋಕೋಪ. ೯-೫೮) ; ಉರ್ದುಂ ಬಿರ್ದುಂ ತರ್ದುಂ ಮರ್ದುಂ . . . ಗುರ್ದೆಯುಂ ಸರೇಫ ಪದಂಗಳ್ (ಶಮದ. ೩೭); ಕೆರಕು ತುಱಿಗ(ಖ)ಜ್ಜಿ . . . ಕುಷ್ಠ ತರ್ದುಂ ನರವುಲಿ ದುಷ್ಟವ್ರಣಂಗಳಿಂದಱಿವುದು (ಅಶ್ವಶಾ. ೧೨-೧). **ತದ್ದು:** ೧. ತದ್ದು ತುಱಿ ತಲೆಬೇನೆ . . . ಕೆಟ್ಟಹುಣ್ಣು ಮೊದಲಾದ ಇಂತೀ ಮುನ್ನೂಱಱುವತ್ತು ವ್ಯಾಧಿಯನು ಶಿವನು ಹರಿಯಬಿಟ್ಟು ನೋಡುವ (ಮಡಿಮಾ. ೨೪-೩೪) ; ಪಿಡಿಯದು ದೋಷಮಿಲ್ಲದತಿ ನಿರ್ಮಲಮಪ್ಪೆಡೆಯಂ ಜಲೂಕನೋಗಡಿಸದೆ ಬಾವು ತದ್ದು[ಪಾಠಾಂ. ದುರ್ದು] ತುಱಿಯುಳ್ಳ ತ್ರಿದೋಷದ ತಾಣಮಂ ಕರಂ ಪಿಡಿವುದು ಮರ್ತ್ಯರೊಳ್ (ಜೀವಸಂ. ಪರಿ. ೧-೧೧) ; ಜಂಗಲನೀರಕೋಷ್ಟ, ಕನ್ನೈದಿಲ ಎಸಳು, ಹಿಪ್ಪಲಿ, ರಕ್ತಚಂದನ ಇವಿಷ್ಟನು ನೀರಲ್ಲಿ ಅರೆದು ಮುಖಕ್ಕೂ ಹಣೆಗೂ ಚೆನ್ನಾಗಿ ಲೇಪವ ಮಾಡಿಸಲು ತದ್ದು ತುಱಿ ಹೋಗುವುದು (ವೈದ್ಯಸಾ. II, ೧೪೬). ೨. (ಪಿತ್ತದಿಂದ) ಮೈಯಲ್ಲಿ ಉಂಟಾಗುವ ಗಂದೆ ಮುಂತಾದ ಊತ : ಪಿತ್ತದಿಂದ ಮೈಯೆಲ್ಲಾ ತದ್ದಾಗಿದೆ (ರೂಢಿ). **ದದ್ದು$_1$ :** ೧. "ತರ್ದು (ತದ್ದು, ದದ್ದು, ದಡ್ಡು) – ದರ್ದ್ರು" (ತದ್ಭಕೋ. ೧೭) ; ಈ ಔಷಧಿಗಳ ಪ್ರತ್ಯೇಕ ಎರಡು ವರಹ ತೂಕವ ಚೂರ್ಣಿಸಿ ಹಾಕಿ ಕಾಸಿ ಹದದಲ್ಲಿ ಇಳುಹಿ ಮೈಗೆ ಲೇಪ ಇಕ್ಕಿಸಲು ಹದಿನೆಂಟು ತೆಱದ ಕುಷ್ಠ, ಶ್ವಿತ್ರ, ದದ್ದು ಮುಂತಾದ ಸಕಲವ್ರಣಂಗಳು ನಾಶವಹವು (ವೈದ್ಯಸಾ. I, ೩೯೫). ೨. ಅಯಿಲೇಯಕಚೂರ್ಣ . . . ಎಳನೀರಿನಿಂದಾಗಲಿ, ನೊರೆಹಾಲಿನಿಂದಾಗಲಿ, ಜೇನುತುಪ್ಪದಿಂದಾಗಲಿ ತೆಗೆದುಕೊಳ್ಳಲು ಪೈತ್ಯದಿಂದಾದ ಗಂದೆ, ದದ್ದು ಮುಂತಾಗಿ ಮಾಣ್ಗುಂ (ಸಕವೈ. ೧೪೩). **ದರ್ದು$_1$ :** ೧. "ದರ್ದುಗಳ್ ತರ್ದುಗಳೊಳ್" (ಕರ್ಣಾನಿ. ೧೭). [<ಸಂ. ದದ್ರು]

**ತರ್ದು$_3$** (ನಾ). ಮರದ ಸೌಟು, –ಸಟ್ಟುಗ: "ದರ್ವೀ, ತರ್ದೂಃ, ಖಜಕಾ, ದಾರುಹಸ್ತಃ – ಈ ೪ ಸಟ್ಟುಗಂ" (ಹಲಾಯು. ೫೨-೧೫೭).
[ಸಂ. ತರ್ದೂ]

**ತರ್ದೂದು** 'ತರದೂದು' ನೋ.

**ತರ್ದ್ರವಾಡಿ** 'ತರ್ದವಾಡಿ' ನೋ.

**ತರ್ಧವಾಡಿ** 'ತರ್ದವಾಡಿ' ನೋ.

**ತರ್ಪ** 'ತರ್' ಪರಾ.

**ತರ್ಪಣ** (ನಾ). ೧. ತೃಪ್ತಿಪಡಿಸುವಿಕೆ ; ಸಂತೋಷಗೊಳಿಸುವಿಕೆ : ಸತತಂ ಬ್ರಾಹ್ಮಣತರ್ಪ್ಪಣಂ ಯಜನಕಾರ್ಯ್ಯಂ ದೇವತಾಪೂಜೆ ತತ್ಪಿತೃಸಂತಾನಕ ತೃಪ್ತಿ ಬಂದತಿಥಿಸತ್ಕಾರಂ ಜಗನ್ನೂತ ವಿಶ್ರುತ ನೈಮಿತ್ತಿಕಮೆಂದು ಸಂದ ನಿಗಮಾನುಷ್ಠಾಣಮಂ ಮಾಡಲ್ (ಕಇಅ. ೩-೨-೮೭ ; 1058). ೨. ತೃಪ್ತಿ : "ತಣಿವುದು ಸಾಹಿತ್ಯಂ ತರ್ಪಣಮೆನಿಸುಗುಂ" (ವಸ್ತುಕೋ. ೯೩-೭). ೩. ದೇವತೆ ಅಥವಾ ಪಿತೃಗಳಿಗೆ ಕೊಡುವ ಜಲಾಂಜಲಿ,– ತಿಲಾಂಜಲಿ ; ಪಿತೃಯಜ್ಞ, ದೇವಯಜ್ಞ ಮುಂತಾದುವು : ಶ್ರುತಿಪಠಣವೋ ತರ್ಪಣವೊ ಮೇಣತಿಥಿಪೂಜೆಯೊ ಭೂತಯಜ್ಞವೊ ಹುತವಹಾರಾಧನೆಯೊ ರಣವೀರ್ಯ್ಯದ್ಯಱೊಳಗೇನು (ಕುವ್ಯಾ, ದ್ರೋ. ೬. ೧೮-೫೭) ; ಕೆಲವು ಸಲ ಕಣ್ಣೀರಿನ ನಾಲ್ಕು ಹನಿಗಳಿಂದ ತರ್ಪಣವನ್ನು ಕೊಡುತ್ತಿದ್ದನು (ಕ್ಷಾಮತಾ. ೪). ೪. ಯಜ್ಞಕಾರ್ಯಗಳಲ್ಲಿ ಉಪಯೋಗಿಸುವ ಉರುವಲು ; ಸಮಿತ್ತು : "ಏಧಸ್, ತರ್ಪಣಂ, ಇಂಧನಂ, ಏಧಃ . . . ಸಮಿತ್, ಇಧ್ಮ–ಈ ೬ ಪುಳ್ಳಿ" (ಹಲಾಯು. ೧೩-೬೯).
[ಸಂ.]

**ತರ್ಪಣಗೈಸು** (ಕ್ರಿ). ತೃಪ್ತಿಪಡಿಸು ; ಸಂತೋಷಗೊಳಿಸು : ಶ್ರೀಕೃಷ್ಣ ಸನುಮತದಿ ಸಕಲಭೂಸುರಚಯಕೆಪೊಲಿದು ತರ್ಪಣಗೈಸಿ ದಕ್ಷಿಣ ಸುತಾಂಬೂಲ ಮುಖ್ಯೋಚಿತಮನಿತ್ತು ಕಳುಪಲು (ನವಪೋ. ೧೫-೪೪).
[ತರ್ಪಣ + ಕೈಸು (<ಕೆಯ್ಸು)]

**ತರ್ಪಣಗೊಡು** (ಕ್ರಿ). ದೇವತೆ ಅಥವಾ ಪಿತೃಗಳಿಗೆ ಜಲಾಂಜಲಿ ಅಥವಾ ತಿಲಾಂಜಲಿಗಳನ್ನು ಕೊಡು : ಭೀಮರಥಿಯನು ಕಂಡು ಮುಳುಗಿ ತರ್ಪಣಗೊಟ್ಟು ನಡೆದ (ಅಬ್ಬಲೂ. ೩-೩).
[ತರ್ಪಣ + ಕೊಡು$_1$]

**ತರ್ಪಲ್** 'ತಟ್ಪಲ್' ನೋ.

**ತರ್ಪಿಸು** (ಕ್ರಿ). ೧. ತೃಪ್ತಿಪಡಿಸು ; ಸಂತೋಷಗೊಳಿಸು : (+). ೨. = ತರ್ಪಣಗೊಡು : (+). [ತರ್ಪಣ + – ಇಸು$_3$]

△ **ತರ್ಪು$_1$** 'ತಪ್ಪು$_2$' ನೋ.

**ತರ್ಪು$_2$** (ನಾ). (?) : ಜಡೆಯೆಂಬುದೇ ಜಂಗಮಸ್ಥಳ ತಲೆಯೆಂಬುದೇ . . ತರ್ಪು ಆಕಾಶವೆಂಬುದೇ ಕಾಂತಿ (ಹಾಸ್ಯಮಂ. ೩). [?]

**ತರ್ಫ಼** 'ತರಪು' ನೋ.

**ತರ್ಫು** ‘ತರಫು’ ನೋ.

**ತರ್ಫೆ, ತರಫ್, ತರಫೆ** (ಅ). ಪರವಾಗಿ ; ಪಕ್ಷವಹಿಸಿ ; ಮೂಲಕ : ಗಂಗಾಬಾಯಿ ತರ್ಫೆ, ಆಕಿ ದತ್ತಕಮಗನ ಪಾಲನ ಕರ್ತಾ ಕೊಟ್ಟ ವರದೀ ಪ್ರಕಾರ ವಾರಸಾ ಮಾಡಿಬಿಟ್ಟೆ (ಗ್ರಾ ಮೂ ಯ. ೩೫೪) : ನನ್ನ ತರ್ಫೆ ಹೇಳೋದನ್ನೆಲ್ಲಾ ನಿನ್ನ ಕಿವೀ ಮ್ಯಾಲ ಇಟ್ಟು ಬಿಡತೇನಿ (ಗಂಮಾಯಿ. ೧೧೨). **ತರಫ್ :** ಬರಾವರ್ದು ಪಟೇಲ ಮತ್ತು ಬರಾವರ್ದ್ ಶಾನುಭೋಗರ ಗೈರುಹಾಜರಿಯಲ್ಲಿ ಗುಮಾಸ್ತೆ ತರಫ್ ಕೆಲಸ ನಡೆಯುತ್ತಿದೆ (ನನ್ನೂರು. ೧೫೪). **ತರಫೆ :** ಪೋಲೀಸಿನೋರಿಗೆ ನಮ್ಮ ತರಫೆ ಶಿಫಾರಸ್ಸು ಹೇಳಿ ಈ ಕಾಟ ತಪ್ಪಿಸ್ಬೇಕು (ಮುಯ್ಯಿ. ೫೦). [ <ತರಫು ]

**ತರ್ಬಿಯತ್ತು** ‘ತರಬೇತು’ ನೋ.

**ತರ್ಬು$_1$** ‘ತಬ್ಬು$_1$’ ನೋ.

**ತರ್ಬು$_2$** ‘ತಱುಂಬು$_1$’ ನೋ.

**ತರ್ಬು$_3$** ‘ತಬ್ಬು$_2$’ ನೋ.

**ತರ್ಬುಗ** (ನಾ). ಆಲಿಂಗನ ಮಾಡುವವನು ; ಅಪ್ಪಿಕೊಳ್ಳುವವನು : “ಶ್ಲೇಷನ್, ಶ್ಲೇಷಕಃ, ಶ್ಲಿಷ್ಟಃ, ಶ್ಲಿಷ್ಟವಾನ್, ಶ್ಲೇಷ್ಟಾ, ಈ ೫ ತರ್ಬುಗಂ” (ಕಾಶಕ್ಕ. ೧೮೭). [ ತರ್ಬು$_1$ (<ತಬ್ಬು$_1$) + – ಗ$_2$ ]

**ತರ್ಬುಗೆ** (ನಾ). ಅಪ್ಪಿಕೊಳ್ಳುವಿಕೆ ; ಆಲಿಂಗನ : “ಶ್ಲಿಷ್ಟಂ, ಶ್ಲಿಷ್ಟಿಃ, ಶ್ಲೇಷಃ, ಶ್ಲೇಷಣಂ, ಶ್ಲೇಷಣೀಯಂ, ಈ ೫ ತರ್ಬುಗೆ” (ಕಾಶಕ್ಕ. ೨೬೩). [ ತರ್ಬು$_1$ (<ತಬ್ಬು$_1$) + – ಗೆ ]

**ತರ್ಮ** (ನಾ). ಯೂಪಸ್ತಂಭದ ಅಗ್ರಭಾಗ ; ಯಜ್ಞಪಶುವನ್ನು ಕಟ್ಟುವ ಕಂಬದ ತುದಿ : “ತರ್ಮ, ಯೂಪಾಗ್ರಂ – ಯೂಪಸ್ತಂಭದ ಕೊನೆಯ ಹೆಸರು” (ಸಿದ್ಧಾಂತಿ, ೧೮೯). [ ಸಂ. ತರ್ಮನ್ ]

**ತರ್ಮು** ‘ತಱುಂಬು$_1$’ ನೋ.

**ತರ್ವಾಯ** ‘ತಱುವಾಯ್’ ನೋ.

**ತರ್ವಾಯಗೊಳ್** ‘ತಱುವಾಯಗೊಳ್’ ನೋ.

**ತರ್ವಾಯಿ** ‘ತಱುವಾಯ್’ ನೋ.

**ತರ್ಷ** (ನಾ). ೧. ಬಾಯಾರಿಕೆ ; ನೀರಡಿಕೆ ; ಪಿಪಾಸೆ : “ಉದನ್ಯಾ, ತರ್ಷಃ, ತೃಷ್ಣ, ಪಿಪಾಸಾ–ಈ ೪ ನೀರಟ್ಕೆ” (ಹಲಾಯು. ೬೦–೨೦೮) ; “ಉದನ್ಯಾ, ಪಿಪಾಸಾ, ತೃಟ್(ಷ್), ತರ್ಷಃ– ೪ ದಾವರದ ಹೆಸರು, ಬಾಯಾರಿಕೆ, ನೀರಡಿಕೆ” (ಸಿದ್ಧಾಂತಿ. ೨೪೯). ೨. ಇಚ್ಛೆ ; ಅಪೇಕ್ಷೆ ; ಅಭಿಲಾಷೆ : “ದೋಹದಂ, ಇಚ್ಛಾ . . . ಅಭಿಲಾಷಃ, ತರ್ಷಃ ೧೨ ಕೋರಿಕೆಯ ಹೆಸರುಗಳು, ಅಂದರೆ . . . ಇಚ್ಛಿಸುವಿಕೆ, ಆಶೆಪಡುವಿಕೆ” (ಸಿದ್ಧಾಂತಿ. ೬೦) ; ಹರ್ಷಿತ ಕರ್ಷಕ ವರ್ಷ ಕರ್ಷಿತೌಷಧಿ ತರ್ಷ (ಹಂಸದ. ೧೭೦–೬). [ ಸಂ. ]

**ತರ್ಷಣ** (ನಾ). ೧. ಬಾಯಾರಿಕೆ ; ನೀರಡಿಕೆ. ೨. ಇಚ್ಛೆ ; ಬಯಕೆ. [ ಸಂ. ]

**ತರ್ಷಿತ** (ಗು). ೧. ಬಾಯಾರಿಕೆಯಿಂದ ಕೂಡಿದ ; ಪಿಪಾಸೆಯುಳ್ಳ. ೨. ಅಪೇಕ್ಷಿಸುವ; ಬಯಸುವ. (ನಾ). ೩. ನೀರಡಿಸಿದವನು ; ಬಾಯಾರಿದವನು : “ತೃಷಿತಃ, ತರ್ಷಿತಃ, ಪಿಪಾ(ಸುಃ), ಪಿಪಾಸಿತಃ–ಈ ೪ ನೀರಡಿಸಿದಾತಂ” (ಹಲಾಯು. ೫೯–೨೦೭). [ ಸಂ. ]

**ತಲ, ತಳ** (ನಾ). ೧. ಸಮಂತಟ್ಟಾದ ಮೇಲ್ಮೈ,–ಪ್ರದೇಶ. ೨. ಹಸ್ತ ; ಅಂಗೈ : ತಲದೊಳ್ ತಳೆದಾ ಚೂತದ ಫಲಗುಚ್ಛಮನಟ್ಟಿತಟ್ಟು ವಿಜಯಾವತಿ ಕಣ್ಮಲರಾಱೆ ನೋಡುತಿರ್ದಳ್ (ಕುಸುಮಾ. ೫–೬೪). ೩. ಕಾಲಿನ ಬುಡ ; ಅಂಗಾಲು. ೪. ಆಳ ; ಗಭೀರತೆ. ೫. ಕೆಳಭಾಗ ; ಬುಡ ; ಅಡಿ : ಆಕಾಶವು ದೊಡ್ಡ ಬಾಣಲೆಯಂತೆ ನಮಗೆ ಕಾಣುತ್ತದೆ. ನಕ್ಷತ್ರಗಳೂ, ಇತರ ಆಕಾಶಕಾಯಗಳೂ ಈ ಬಾಣಲೆಯ ತಲಕ್ಕೆ ಅಂಟಿಕೊಂಡಿರುವಂತೆ ಕಾಣುತ್ತವೆ (ನಕ್ಷತ್ರ. ೬). ೬. ಮೂಲ : ವೇದಾಂತಗಳು ಪಲವು ಅವಱೊಳು ವಿವಾದಂಗಳವು ಕೆಲವು ಭೇದಿಸಿ ನೋಡಲು ವೇದ್ಯಮಾಗದು ತಲವು (ಗೀತಗೋ. ೪೮–೩). ೭. ತಗ್ಗು ; ಹಳ್ಳ. ೮. ನೆಲ; ಭೂಮಿ. ೯. ತಾಳೆಮರ; ಪನೆಮರ: “ತೃಣರಾಜಃ, ತಲಃ, ತಾಲಃ–ಈ ೩ ತಾಱೆ” (ಹಲಾಯು. ೩೨–೩೯). ೧೦. ಬಾಣಪ್ರಯೋಗ ಮಾಡುವಾಗ ಬಿಲ್ಲಿನ ಹೆದೆಯು ಕೈಯನ್ನು ಕೊರೆಯದಂತೆ ಎಡಗೈಗೆ ಹಾಕಿಕೊಳ್ಳುವ ತೊಗಲಿನ ಚೀಲ; ಗೋಧೆ. ೧೧. ನೈಸರ್ಗಿಕರೂಪ ; ಸಾರಭೂತವಾದ ಸ್ವರೂಪ. ೧೨. ಮೊಳಕೈಯಿಂದ ಮಣಿಕಟ್ಟಿನವರೆಗಿನ ಭಾಗ ; ಮುಂದೋಳು. ೧೩. ಖಡ್ಗ ಮೊದಲಾದುವುಗಳ ಹಿಡಿಕೆ,–ಹಿಡಿ. ೧೪. ಎಡಗೈಯಿಂದ ವೀಣೆ ಮೊದಲಾದುವುಗಳ ತಂತಿಗಳನ್ನು ಒತ್ತುವುದು. ೧೫. ಕಾಡು ; ಅರಣ್ಯ ; ಕಾನನ. ೧೬. ಏಳು ಅಧೋಲೋಕಗಳಲ್ಲಿ ಒಂದು : “ತಲ[ಪಾಠಾಂ. ಳ] ಮತ್ತತಳ ವಿತಳ ಸುತಳಂ ರಸಾತಳ ತಳಾತಳಮು ಪಾತಾಳಮೆಂದು ವರ್ತಿಸುವ ತಳಲೋಕ ಮೇಟಕ್ಕು” (ಮಂಗರಾ. ೧೦–೩೨). ೧೭. ಹೊಂಡ. ೧೮. ಗುತ್ತಿಗೆದಾರನು ಜಮೀನುದಾರನಿಗೆ ಕೊಡಬೇಕಾದ ಬೆಳೆಯ ಭಾಗ,– ಪಾಲು. ‘ತಲವಾಸಿ’ ಪರಾ. **ತಳ :** ೧. ಗಲ್ಲಂ ಮಲ್ಲಂ ತಳಮಿಂತೆಲ್ಲಂ ತತ್ಸಮಂ (ಶಮದ. ೨೯೮) : ಕೊಟ್ಟಿರುವ ಗೋಳವನ್ನು ನಿಯತ ಪರಿಮಾಣದಲ್ಲಿರುವ ಎರಡು ಭಾಗವಾಗುವಂತೆ ಒಂದು ತಳ (Plane) ದಿಂದ ಭೇದಿಸುವುದು (ಗಣಿಜ. ೩೮); ಬಲು ಚಿಕ್ಕದಾದ ನಿನ್ನಯ ತಳದ ಮೇಲೆ ಸಲೆ ನಿತ್ಯವಾಗು ತಿರಲೀ ತೆರದ ಲೀಲೆ (ಕಎಪು. ೧೪–೬). ೨. “ತಳಮಱಿಗೆ ಚಪೇಟಂ” (ವಸ್ತುಕೋ. ೧೩೩–೯೪) ; “ಬೆರಲುಂ ತಳಮುಂ ಬೆರಸಿದೊಡೆ ಪ್ರತಳಮೆಂಬುದು ಅದನೆ ತಳಮುಮೆಂಬುದು” (ಹಲಾಯು. ೮೮–೩೮೩) ; ಕೆಂದಾವರೆಯ ಬಣ್ಣದಂತಪ್ಪ ತಳಮುಮಂ ಕಂಡು (ವಡ್ಡಾರಾ. ೧೪೮–೧೯); ಅಳವಿನೊಳೆನ್ನುಮನಿನಿಸಗ್ಗಳಿಸಿದ ಹರಿಗನೊಳಿದಿರ್ಚಿ ಕರ್ಣಂ ಗೆಲಲುಮ್ಮಳಿಪಂ ಗಡಮೆಂದೋಪಳ ತಳಮಂ ಪೊಯ್ದಾಶ್ವರಂ ಮುಗುಳ್ನಗೆ ನಕ್ಕಂ (ಪಂಪಭಾ. ೧೨–೧೪೪) ; ಗುಡಿಲಂತೆ ಬಾಗಿದ ಬೆನ್ನುಂ ಪುಟ್ಟನಂತೆ ಬೆರಲ್ಗಳಿಲ್ಲದ ತಳಮುಂ (ಧರ್ಮಾಮೃ. ೪–೭೫) ; ಬಾರ್ಯ ಕರ್ಣ ಬಾಯೆನುತ ತುಳುಕಿದನು ಕಂಬನಿಯ ಕೋಮಳತಳದಿ ಪ್ಪೈದಡವಿದನು (ಕುಮಾವ್ಯದ್ರೋ. ೧–೨೩). ೩. ಉಡಿದಿರ್ದ ಕಯ್ದು ನೆತ್ತರ ಕಡಲೊಳಗಡಿಗಡಿಗೆ ತಳಮನುರ್ಚುತ್ತಿರೆ ಕಾಲಿಡಲೆಡೆವಡೆಯದೆ ಕುರುಪತಿ ದಡಿಗವೆಣಂಗಳನೆ ಮೆಟ್ಟಿ ನಡೆಯುತ್ತಿರ್ದಂ (ಗದಾಯು. ೪–೧೪) ; ಬಹುಳ ಬಹಳ ಗಗನ ಪ್ರಮಾಣಮಂ ತಳದೊಳಳೆದು ಕಂಡರುಮೊಳರೇ (ಸುಕುಮಾ. ೧ ೫೮) ; ತಳಮನುಡಿದಿಡುವ ಕಣ್ಣಂ ಕಳೆದೇಱಿಪ ಕರುಳ ತೋರಣಂಗಟ್ಟುವ . . , ಬೀರರ್ (ಯಶೋಚ. ೧–೫೪). ೪. “ತಳನಾಮಂ ಮತ್ತನೂರ್ಧ್ವಂ” (ವಸ್ತುಕೋ. ೧೩೩–೯೪) ; ಶಂಕರಂ ಸ್ವಪದದಿಂದೊತ್ತಿ ತಳಕಿಳಿದ ಧರೆಯಂ ತೋಱಿಯುಪರಿಗೆತ್ತನೇ ವೃಷಾಕೃತಿಯಾಂತು (ಪದ್ಮರಾ. ೧೧–೬೬) ; ಮಳೆಗಱೆವುದು ಬೆಳೆ ಪೆರ್ಚುವುದಿಳೆ ತಳಕಿಳಿದು ಪೋಗದೆ ತಡೆದಿಹುದು ಪಳಿವಿಲ್ಲದ ಪತಿವ್ರತೆಯ ನಡತೆಯ ಬಳದೊಳು (ಹದಿಬ. ೨–೯). ೬. ಇದಱ ತಳಮನೆ ಪಿಡಿಯೆ ಬೆದಕುತಿರೆ (ಅಶ್ವತ್ಥಾ. ೧–೧೫). ೮. ನಿಮ್ನ ಘನೋನ್ನತ ಪ್ರದೇಶಂಗಳನಾ ಸಮಾನತಳದಲ್ಲಿಯೆ ಚಿತ್ರಕನೆಯ್ದೆ ತೋರ್ಪವೋಲ್ (ಪಂಪಭಾ. ೧೩–೨೧) ; ಬೆಂಮಣಸೆಟ್ಟಿ ತಾನು ತಂನ ಮಕ್ಕಳ ಕಾಲತನಕ ೪ ಮುಡಿ ತಳವನೂ ಗೇಣಿಗೆ ಬಿತ್ತಿ ವರುಷಂಪ್ರತಿ. . . ಒರವೆಯಕ್ಕಿಯನೂ ನಡಸಿ ಬಹರು (ಸೌಇಇ. IX–ii, ೪೪೪–೩೪ ; 1433). ೯. “ತಳಮುಂ ತಾಳಮುಮೆನೆ ಪನೆ” (ವಸ್ತುಕೋ. ೩೩–೪). ೧೦. “[ತಳಂ ]ಗೋಧಿಕಾಖ್ಯಂ” (ವಸ್ತುಕೋ. ೧೩೩–೯೪). ೧೯. ಹೆಬ್ಬೆರಳ ತುದಿಯಿಂದ ಕಿರಿಬೆರಳ ತುದಿಯವರೆಗಿನ ಅಂತರ ; ಗೇಣು. ೨೦. ಹಿಂಭಾಗ ; ಪೃಷ್ಠ : ತಾನು

ಬಂದು ಆಳಿನ ಕೈಗೆ ಚೀಟಿ ಕೊಟ್ಟು ಕರುಣೆಯಿರದ ಬೆಂಚಿಗೆ ಮಾಂಸ ಸಾಲದ ತನ್ನ ತಳವನ್ನು ಒಪ್ಪಿಸಿ ಗಂಟೆಯಾಗಿತ್ತು (ಬಳಜೀ.೫೦). ೨೧. ಸ್ಥಳ: ಬಳ್ಳಿಗಾವೆಯ ತಳದ ಹುಲ್ಲೆಯ ಬಯಲೊಳ್ (ವ್ಯಾಅರಿ.೧೯೫೫, ೬೫-೮; 1024?); ಕಪ್ಪಡಿಗೆಱೆಯುಂ ಮೂಡ ಮತ್ತರ್ ಇನ್ನೆರಡುಂ ತಳದ ಮತ್ತರಿರ್ಪ್ಪತ್ತನಾಲ್ಕು (ಸೌಇಇ. XI-1, ೮೪-೩೨ ; 1049) : ತಳದ ಬಣಂಜಿಗರುಂ ನಾನಾದೇಶಿಗಳುವಿರ್ದ್ದು ದೇವರ್ಗ್ಗೆ ನಿವೇದ್ಯಕ್ಕೆ ಬಿಟ್ಟ ಧರ್ಮವಪ್ಪುದು (ಸೌಇಇ. IX-1, ೧೪೧-೨೯; 1079); ಕುಱುಗೋಡ ತಳದೊಳಗೆ ತಳರದಯ್ಯೂರ್ವ್ವರುಂ (ಸೌಇಇ. IX-1, ೨೯೬-೨೫ ; 1176) ; ಲಲಿತಸೇನೆಯನೆತ್ತಲೋಸುಗ ತಳಕೆ ಗುರುವೈತರಲಿಕೆನನುದಯಾದ್ರಿಗೈತಂದ (ಕುವ್ಯಾಅ. ೬೦೩. ಪರಿ. ೩೨೧). ೨೨. ಹುಟ್ಟೂರು; ಸ್ವಂತದ ಊರು: ತಳ ಯಾವುದು? (ಜಟ್ಟಹೊ. ೪೦). ೨೩. (ಅಲಂ) ಕೈವಾಡ ; ಕೈಚಳಕ : ವಿಭೀಷಣ ಬಂದು ನಮ್ಮಣ್ಣನ ತಳವಿದು ಜಗದಂಬಿಕೆಗೆ ಮುಳಿವವರಿಲ್ಲಿದು ನಿಜವೆಂದು ಪೇಳಲು ತಿಳಿದುದು ಮೂರ್ಛೆಯುವನಿಗೆ (ರಾಮವಿ. ೧೮-೦೬೫).

**ತಟ್ಟತಳ, ತತ್ತಳ₂ ( ದ್ವಿರುಕ್ತಿ ) :** ನರಕದ ನೆಲೆವಿಡಿದಿಪ್ಪತ್ತೆಂಟು ಬಿಡುದಾಣಂಗಳಿಂ ಕೆಳಗೆ ತಟ್ಟತಳ ದಟ್ಟಡಿಯಲೆಕ್ಕಲನಂತಿರ್ಪ ನರಕವನೊಂದನುಱಿದೆಲ್ಲಾ ನರಕಂಗಳುಮನಾ ಯಾತನೆಗಳುಮಂ ಪಾಪಂಗಳನುಂಡು ನವೆದು (ಸಾನಂಚ. ಕಥಾಗರ್ಭಸಂಧಿ, ೨೩ ವ) ; ಅಟ್ಟಡಿಯಲೆಲ್ಲಾ ನಿರಯದಿಂ ತಟ್ಟತಳದೊಳು ಕಟ್ಟಕಡೆಯಲಿ ದುಟ್ಟನೀ ತೆಱದಿಂದೆ ಯೆಕ್ಕಲನಾಗಿರಲು ಕಂಡು (ಸಾನಂಚ. ೮-೨೧) ; ಮನುಷ್ಯನು ಮೊದಲು ನಿರ್ಜೀವವಾಗಿದ್ದು, ತರುವಾಯ ಸಚೇತನವಾಗಿ . . . ಕ್ರಮೇಣ ರಾಗದ್ವೇಷಗಳಿಗೆ ಸಿಕ್ಕಿದನು. ಇದು ಅವನ ಬೀಳಿನ ತತ್ತಳ (ಇಸ್ಲಾಂಸಂ. ೨೯೨).

**ತಳದ ತಾಯಿ =** ಊರನ್ನು ರಕ್ಷಿಸುವ ದೇವತೆ ; ಗ್ರಾಮದೇವತೆ : ಆಗಿನ ಸರಕಾರದ ವಹಿವಾಟಿನಲ್ಲಿ, ಜನಾಂಗದ ರಚನೆಯಲ್ಲಿ ಅಮಲ್ದಾರರೆಂದರೆ ನಿಜವಾಗಿಯೂ 'ತಳದ ತಾಯಿ' (ಕಲಸ. ೧೪೦). **ತಳದವ್ವ =** ಗ್ರಾಮದೇವತೆ : ತಳದವ್ವನ ಗುಡಿ . . . ಭಜನೆಯ ಜನರು ಕೂಡಿದ್ದಾರೆ (ಹೊಸಂಸಾ. ೧೮). **ತಳದ ಸೆಟ್ಟಿ =** ಸ್ಥಳೀಯ ವ್ಯಾಪಾರಿ (?) : ನಾನಾ ದೇಶಾಭ್ಯಂತರದ ಗವಱೆಗ[ಳುಂ ಮು]ಮ್ಮುರಿದಂಡಮುಂ . . . ತಳದ ಸೆಟ್ಟಿಯರುಂ ನಕರಂಗಳ್ಳ [ಳುಂ] (ಎಇ. V, ೧೯-೬೩ ; 1161). **ತಳದೊಕ್ಕಲು=**ಊರಿನ ನಿವಾಸಿಗಳು; ಸ್ಥಳೀಯರು : ಏಲ್ಲಿಯ ತಳದೊಕ್ಕಲುಂ ಪೊಱಗಣ ಭ್ರಮಾಂತುಕರುಂ ಮಾಱಿದ ಸೀರೆಗಂ ಅಡಕೆಗಂ ಪೊಂಗೊಂದು ಸಲೆ ವೀಸಮಂ ಆಯಂ ಮಾಡಿಬಿಟ್ಟರು (ಕಇಅ. ೧-೧-೮ ; 1092) ; ಧಾರಾಪೂರ್ವಕಂ ಮಾಡಿ ಬಿಟ್ಟಾಯವೆಂತೆಂದಡೆ ದಂಡಿನೊಕ್ಕಲುಂ ತಳದೊಕ್ಕಲುಂ ದೆವಸವಳಿಮೊಣೆಗಾಣದಲ್ಲಿ ಸೊಳಸವೆರಡು (ಎಇ. XX, ೧೨-೪೮ ; 1167). **ತಳಮಾರೆ =** ೧. ಕೈಯಾರೆ; ಕೈತುಂಬ: ತಳವೆಳಗಾದ ಲಕ್ಷ್ಮೀಕಾಂತೆಯ ಚಳದಳಿಕುಳವಿನೀಳ ಕುಟಿಲಕುಂತಲಂಗಳಂ ತಳಮಾರೆ ತೆಗೆದು ಕುರುಕುಲಕುಟುಂಬನ ಘಟಚೇಟಿಯುಂ ಕೊಂಡುಪೋಪಂತೆ ಮಗುಟಿ ಕೊಂಡುಪೋಗಿ (ಗದಾಯು. ೯-೦೬ ವ); ಚಟ್ಟಯ್ಯದೇವನ ಕೀರ್ತಿ[ಗೆ]ದೇವನ ಪ್ರಸ್ಥಾವದೊಳು ಭಯಂ ಬಲ ನೋಡಲ್ವಳವಾರೆಯಿಱಿದು ನರಲೋಕಮಂ ಬಿಟ್ಟು ದೇವಲೋಕಪ್ರಾಪ್ತನಾದಂ (ಕಇ. V, ೭-೨೯ ; 1071). ೨. ಅಂಗಾಲು ಪೂರ್ತಿಯಾಗಿ : ತೊಳಪ ಹರಿನ್ಮಣಿ ಕುಟ್ಟಿಮತಳದೊಳ್ ತಳಮಾರೆ ತಳಮನೂಱಿ ಬೆಡಂಗಂ ತಳೆದು ತಳರ್ನಡೆ ನಡೆವೆಡೆಯೊಳದೇಂ ಜನನಿಗೆ ವಿನೋದಮಂ ಮಾಡಿದನೋ (ಸುಕುಮಾ. ೧೦-೩೯). [ ಸಂ. ]

**ತಲಕಾಡು** 'ತಟಿಕ್ಕಾಡು' ನೋ.

**ತಲಗ** (ನಾ). ಒಂದು ಬಗೆಯ ಮರ: (ಎಸಮ್ಯ. XXI, ೧೪).

[ ? ]

**ತಲಘಾತ** (ನಾ). ಸಮತಟ್ಟಾದ ಪ್ರದೇಶದಿಂದ ಬೀಳುವ ಏಟು,-ಪೆಟ್ಟು : ಕೊಂಬುಗಳ ಮಧ್ಯಪ್ರದೇಶದಲ್ಲಿ ಮುಖದಿಂದ ತಿವಿದರೆ ತಲಘಾತ ವೆನಿಸಿಕೊಳ್ಳುವುದು (ಸೌಗಂಧಿ. ೨೭೮-೧೦). [ ತಲ + ಘಾತ್ಯ ]

**ತಲಚೌಪದಿ** (ನಾ). [ಛಂದ] ನಾಲ್ಕು ಸಾಲುಗಳುಳ್ಳ ಒಂದು ಬಗೆಯ ಪದ್ಯಜಾತಿ; ☞ ಒಂದು ಮತ್ತು ಮೂರನೆಯ ಸಾಲುಗಳಲ್ಲಿ ಮೂರು ಮಾತ್ರೆಯ ನಾಲ್ಕುಗಣಗಳೂ, ಎರಡು ಮತ್ತು ನಾಲ್ಕನೆಯ ಸಾಲುಗಳಲ್ಲಿ ಮೂರು ಮಾತ್ರೆಯ ಮೂರುಗಣ ಮತ್ತು ಒಂದು ಗುರುವೂ ಇರುವ ಚೌಪದಿ: ತಲಚೌಪದಿ (ಛಂದೋವಿ. ೨೭೮). 'ತಲಷಟ್ಪದಿ' ಪರಾ.

[ ತಲ ? + ಚೌಪದಿ ]

**ತಲಪರಗಿ** 'ತಲಪರಿಗೆ' ನೋ.

**ತಲಪರಿಗೆ,** ತಲಪರಗಿ, ತಲಪರೆ, ತಲೆಪರವು, ತಲೆಪರಿ (ನಾ). ೧. ನೆಲದೊಳಗಿರುವ ನೀರು ಮೇಲೆ ಉಕ್ಕಿ ಬರುವ ಸ್ಥಳ; ಜಲದ ಕಣ್ಣು ಇರುವ ಸ್ಥಳ ; ಬುಗ್ಗೆ ; ಊಟೆ : ಅಚ್ಯುತರಾಯಪುರವೆಂಬ ಗ್ರಾಮದ ವುತ್ತರಭಾಗದಲ್ಲಿ ತಲಪರಿಗೆಯನು ತೆಗೆಸಿ ನೂತನ ತುಂಗಭದ್ರೆಯೆಂಬ ಹೆಸರುಳ್ಳ ಕಾಲುವೆಯನೂ ತಂದು (ಸೌಇಇ. IX-ii, ೫೮೩-೧೨ ; 1537) ; ತಲಪರಿಗೆ : ನೆಲದೊಳಗಿನ ನೀರು ಮೇಲೆ ಹರಿದು ಬರುವ ಸ್ಥಳ. ಇದು ತೆಲುಗಿನ ನೆರೆಯ ನಾಡಿನಲ್ಲಿ ಬಳಕೆಯಲ್ಲಿರುವ ಪದ (ನಮ್ಮನು. ೧೫೮). **ತಲಪರಗಿ :** ೨. (ಅಲಂ) ಮೂಲಕಾರಣ,-ನಿಮಿತ್ತ : ಇಷ್ಟೊಂದು ಸಂತೋಷಕ್ಕೂ ಅಟ್ಟಹಾಸಕ್ಕೂ ಯಾರ ಔದಾರ್ಯವು ಮುಖ್ಯವಾದ ತಲಪರಗಿಯಾಗಿತ್ತೋ ಆ ಪುಣ್ಯಾತ್ಮನ ಪಾದಸ್ಪರ್ಶವು ಪ್ರಸ್ತದ ಮನೆಗೆ ಆದಲ್ಲಿ(ಮಾಮರಾ. ೬೫).**ತಲಪರೆ:**೧.ಆಚಂದ್ರಾರ್ಕಸ್ಥಾಯಿಗಳಾಗಿ ನಡುವಳ್ಳ ತಲಪರೆಯ ನೀರುಲ ಮಾವಿನಮರದ ಸ್ಥಳದಲ್ಲೂ ಮರದ ಗದೆ ಖ ೧ ಅ ಖಂಡುಗ ಗದೆನು ಸುಖದಿಂ ಅನುಭವಿಸುವದೂ (ಸೌಇಇ. IX-ii, ೫೯೭-೧೨; 1541). **ತಲೆಪರವು :** ೧. ಹೊಳೆಯಾಗಲಿ ಕೆರೆಯಾಗಲಿ ಹಳ್ಳದ ತಲೆಪರವು ಕತಿಬಿಗಳು ಮುಂತಾದ ಸ್ಥಲಗಳಲ್ಲಿ ಕಾವಲಿಯನ್ನು ಮಾಡಿ (ಕೃಷಿಪ್ರ. ೫೯). **ತಲೆಪರಿ :** ೧. ತಾಟಿಱಿಯರ್ಗೆ ಎರೆಕಾಡು ಇರ್ಪ್ಪತ್ತೈಮತ್ತರು ತಲೆಪರಿಯೊಳು ಐವತ್ತು ಮತ್ತರ್ಕ್ಕೆಸುಕಾಡುಂ ಕೀಟ್ಕಿಱಿ ಮೂವತ್ತರ್ಮಡಿ ಕಾಡುಂ (ಸೌಇಇ. IX-i, ४೭-೭ ; 8ನೆಯ ಶತ). [ ? ]

**ತಲಪರೀಕ್ಷೆ** (ನಾ). ತಳಭಾಗದ ಪರೀಕ್ಷೆ ; ಕೆಳಭಾಗದ ಪರಿಶೀಲನೆ : ಈ ವಿಧವಾಗಿ ಸಮುದ್ರದ ಬುಡವನ್ನು ಪರೀಕ್ಷಿಸುವುದಕ್ಕೆ ತಲಪರೀಕ್ಷೆ ಎಂಬ ಹೆಸರು ಕೊಡಲ್ಪಟ್ಟಿದೆ (ಮುಂಬಯಿ. ೬-೩೦೩). [ ತಲ + ಪರೀಕ್ಷೆ ]

**ತಲಪರೆ** 'ತಲಪರಿಗೆ' ನೋ.

**ತಲಪಿಸು,** ತಲುಪಿಸು, ತಲ್ಪಿಸು (ಕ್ರಿ). ತಲಪುವಂತೆ ಮಾಡಂ; ಮುಟ್ಟಿಸು; ಸೇರಿಸು : ಇಬ್ಬರು ದೀವಟಿಗರು ಅಮಾತ್ಯನನ್ನೂ, ದಂಡನಾಯಕನನ್ನೂ ಅವರವರ ಮನೆಮುಟ್ಟ ಹೋಗಿ ತಲಪಿಸಿದರು (ಸವತಿ. ४೨). **ತಲುಪಿಸು:** ಹಾಗೂ ಹೀಗೂ ಮಾಡಿ ಅಂಗಳದ ಬಾಯಿಗೆ ತಪ್ಪಲೆಯನ್ನು ತಲುಪಿಸಿದೆವು (ಜಂಗಾಳ್ಮ. ೯) ; ಮಾಲ್ಕಿ ಬಸ್ಸು ಹೇಗೋ ನಮ್ಮನ್ನು ಸುದೈವದಿಂದ ಅಲ್ಲಿಗೆ ಸುರಕ್ಷಿತವಾಗಿ ತಂದು ತಲುಪಿಸಿದ್ದಿತು (ಹೇಮಂತ. ೩೦೦). **ತಲ್ಪಿಸು :** ಜಲ್ಪವಿರಿಸದೆ ವಿಜಯಕೀರ್ತಿಚರಣಾಬ್ಜಕಾ ತಲ್ಪಿಸುವೆನೆನಲಪ್ಪಿಯೂಳಿಗನೆಯನುಜನೆಂಬೊಲ್ಪಿಸಿಂ ಬೀಳ್ಕೊಟ್ಟನು (ಜಿನಮು. ೨೭-೧೭).

[ ತಲಪು₁ + – ಇಸು₃ ]

**ತಲಪು₁,** ತಲುಪು₁ (ಕ್ರಿ). ಮುಟ್ಟು ; ಸೇರು : ಸಿದ್ದೇಶ್ವರನ ಬೆಟ್ಟದ ಬಳಿಗೆ ತಲಪುವಷ್ಟರಲ್ಲಿ (ರಾಜೇಂದ್ರ. ೩) ; ಆಂಜನೇಯನು ರಾಮ ಲಕ್ಷ್ಮಣರನ್ನು ತನ್ನ ಹೆಗಲಿನ ಮೇಲೆ ಕೂರಿಸಿಕೊಂಡು ಬಂದು ಯುದ್ಧ ರಂಗಕ್ಕೆ ತಲಪಿದನು (ನೀತಿಚಂ. XII, ೧೧) ; ರಾಜ್ಯದ ಇತರ ಸಿಬ್ಬಂದಿಗಳೊಂದಿಗೆ ತಾತ್ಯಾದೀಕ್ಷಿತನು ಬಿಟ್ಟೂರನ್ನು ತಲಪಿ ಅಲ್ಲಿ ತನಗೂ ಗಂಗಾಧರ

ರಾಯನಿಗೂ ಆದ ಸಂಭಾಷಣೆಯನ್ನು . . . ತಿಳಿಸಿದನು (ಘೂರಾಡಿ. ೩೩).

**ತಲುಪು₁ :** ವ್ಯವಸ್ಥಿತವಾದ ಪ್ರತಿಯೊಂದು ಸಂಸ್ಕೃತಿಯೂ ಸತ್ಯಕ್ಕೆ ತಲುಪಲು ತನ್ನದೇ ಆದ ಒಂದು ಹಾದಿಯನ್ನು ಹೊಂದಿರುತ್ತದೆ (ತತ್ತ್ವಪ್ರ. ೪೩೩) ; ಏದುತ್ತಾ ತೇಕುತ್ತಾ ಅಲ್ಲಿ ಬಂದು ತಲುಪಿದ ಸುರೇಶ (ಆಜೋಲೀ. ೯೬) ; ನಾನು ಮನೆ ತಲುಪಿದಾಗ ನನ್ನ ಮಾವನಿಂದ ತಾರು ಬಂದಿತ್ತು (ಗಾಳಿಗು. ೭೦) ; ಆತ ಅಂಚೆಮನೆ ತಲುಪಿದಾಗ ಅಂಚೆ ಅಧಿಕಾರಿ ಊಟಕ್ಕೆ ಹೋಗಿದ್ದ (ಭಾರತಿ. ೪). [ ದೇ.॥ ತುಳು. ತಲಪು ]

**ತಲಪು₂**, ತಲಹು₂, ತಲಿಪು, ತಲುಪು₂ (ನಾ). ೧. ಅಂತ್ಯ ; ತುದಿ : ಆ ಕೆಟಿಗೆ ತೊಬು ಬಿಸಿಲ ಸಂಭ್ರಮದ ಕಲ್ಲು ಕಂಜನಾಳದ ನೂಲಿನ ಕಂಭ ಆ ತಲಪಿಂಗೆ ಅಂದಿನ ಮುಚ್ಚುಳು (ಅವರೀ. ೮೫). ೨. ಗುರಿ; ಲಕ್ಷ್ಯ : ಒಂದು ಕಣ್ಣ ಕುಂಭಕೆ ಕುಣಿಕೆ ಒಂದು ಕಣ್ಣ ಎರಡಜ ತಲಪು ಕೂಡಿದ ಕುಣಿಕೆ (ಸುಂಕಬಂ. ೨೯) ; ಈ ಉಭಯವ ಭೇದಿಸಿದಡೆ ಕುಣಿಕೆಯ ಮಣಿ ತಲಪಿಗೇಱಿತ್ತು (ಮದೇವ. ೨೭೦-೬). **ತಲಹು₂ :** ೧. ಹಳುವದಲಿ ಹನ್ನೆರಡು ವರುಷದ ತಲಹಿ[ಪಾಠಾಂ. ಕಳಹಿ]ನಜ್ಞಾತದಲಿ ವರುಷವ ಕಳೆವಿಡಿದು ಸಾಧನವೆಯಾಯ್ತು ಶಿಖಂಡಿತನವೆಂದ (ಕುವ್ಯಾ.ಆ. ೮-೫೨) ; ತಲಹಿನಲಿ ನೀನೋಡು ನೆರೆ ನೆನೆದುಳಿದವರ ನಾ ಕಾಣೆ (ಪ್ರಹ್ಲಾ.ಚ. ೭-೨೩). ೨. ತಲ ಹಿಲ್ಲದ ಕೋಲು ಹೊಳ್ಳುಹಾಱುವುದಲ್ಲದೆ ಗುಱಿಯ ತಾಗಬಲ್ಲುದೆ (ಬಸವ. ೨೦೨) : "ಗುರಿಮುಟ್ಟುವ ಶಕ್ತಿ (?)" (ಬಸವ. ಕೋಶ). ೩. ಮುಟ್ಟು ವಿಕೆ ; ಹೊಂದುವಿಕೆ ; ಸೇರುವಿಕೆ : ನಳಿನನಾಭನು ದೇವವೃಂದದ ಬಳಗದಲಿ ಭೂದೇವಧರ್ಮದ ತಲಹಿನುದ್ವಾಹಿಕವ ಪಾರ್ಥಗೆ ಮಾಡಲನು ವಾದ (ಕುವ್ಯಾ.ಆ. ೭೧೩. ೩೬-೮೮). **ತಲಿಪು :** ೧. ಆ ತಲಿಪಿಂಗೆ ಅಂದಿನ ಮುಚ್ಚುಳು ಇಂದಿನ ದ್ವಾರದಲ್ಲಿ ಸೂಸುತ್ತಿರಲಾಗಿ ಸಾಳಿವನ ಬೆಳೆಯಿತ್ತು (ವಚಸಂ. ೫೪೭-೧). **ತಲುಪು₂ :** ೪. ಪಾವತಿ ; ಜಮಾ ; ಸಂದಾಯ : ಲೆಕ್ಕ ತಪಾಸಿಗರ ಕೆಲಸ ಲೆಕ್ಕವು ಸರಿಯಾಗಿದೆಯೊ ಹೇಗೆ, ಮಾಡಿದ ವೆಚ್ಚವು ಕಾಲಕಾಲಕ್ಕೆ ರಸೀದಿ ತಲುಪುಗಳನ್ನು ಪಡೆದಿದೆಯೊ ಹೇಗೆ . . . ನೋಡಿ ಪ್ರಶಸ್ತಿಯನ್ನು ಕೊಡುವುದು (ತಳ್ಳಡಿ. ೬೩). [ <ತಲಪು₁ ]

**ತಲಪುಷ್ಪಪುಟ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : ತಲಪುಷ್ಪಪುಟ, ಲೀನ, ವಿವರ್ತಿತ . . . ಗಂಗಾವತರಣ—ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). [ ಸಂ. ]

**ತಲಬಾಲು** (ನಾ). ಕೆಲವು ಜನಾಂಗದಲ್ಲಿ ವಿವಾಹಕಾಲದಲ್ಲಿ ನಡಸುವ ಒಂದು ಸಾಂಪ್ರದಾಯಿಕ ವಿಧಿ ; ವಧೂವರರು ಪರಸ್ಪರರ ತಲೆಯ ಮೇಲೆ ಅಕ್ಕಿಯನ್ನು (ಅಕ್ಷತೆ) ಚೆಲ್ಲುವುದು: (ಎಸಮ್ಮ. XIII, ೭).[ ? ]

**ತಲಬು₁**, ತಲುಬು (ನಾ). ೧. ಸಂಬಳ ; ಪಗಾರ ; ವೇತನ : ಹುಕುಂ ನಾಮೆ ಪ್ರಕಾರಕ್ಕೆ ಆಮಿಲನ ರಜಾ ತಲಬಿನಲ್ಲಿಯಿದ್ದುಕೊಂಡು ಸರಕಾರದ ಆಹುಮದಿ ದವಲತ್ತಿಗೆ ಶ್ರೇಯಸ್ಸು ಅಪೇಕ್ಷಿಸಿಕೊಂಡು ಸು ಖ ದ ಲ್ಲಿ ಯಿರೋದು (ಎಕ. IX, ದೊಡ್ಡಬ. ೧೨-೩ ; 1785) ; ಲೋಕಲ್ ಗೌರ್ನ ಮೆಂಟಿನವರಿಂದ ಮಂಜೂರಾದ ಮೇರಿಗೆ ದೊಡ್ಡದಾರರಿಗೆ ತಲಬುಗಳನ್ನು (ಸಂಬಳ) ಪಾವತಿ ಮಾಡುವದು (ಗ್ರಾಮಾಕ. ೦೦೦); ನೀವು ಮಾಡುತ್ತಿರುವ ಕೆಲಸಕ್ಕೆ ಈಗ ಕೊಡುತ್ತಿರುವ ತಲಬೇ ಹೆಚ್ಚು (ಇಬದು. ೧೨೫) ; ಎರಡು ವರ್ಷ ಅರ್ಧ ತಲಬಿನ ರಜವನ್ನು ಪಡೆದುಕೊಂಡಿದ್ದರು (ಜಗಜಂ. ೦೫). ೨. ತೆವಲು; ಚಟ; ಗೀಳು: ಎಲೆ-ಅಡಿಕೆಯ ತಲಬೂ ಮಾಯವಾಯ್ತು (ಅಂಬಿಕ. ೫) ; ತಂಬಾಕದ 'ತಲಬು' ಮಿತಿಮೀರಿದಾಗ ಎಂದಿನ ಹಾಗೆ ತಾನು ಕುಳಿತಲ್ಲಿಂದ ಎದ್ದು ಹೋಗಿ (ಬನಸಿ. ೫). **ತಲುಬು :** ೨. ಕಳುವು ಮಾಡಿ ಕೂಡ ಕುಡಿತದ ತಲುಬು ತೀರಿಸಿಕೊಳ್ಳುವ ಅವನ ನಡತೆ ಸೇರದ ಊರಿನವರು ಕೆಲವರು, ಇವರನ್ನು ಹೊರಗೆ ಹಾಕುವುದೆಂದು ಕೂಡ ನಿಶ್ಚಯಿಸಿದ್ದರು (ಹೊಸಕ್ಷಿ. ೬೯).

ತಲಬುಮಾಡು = ತೆವಲುಂಟುಮಾಡು : ಅವರು ನಡುನಡುವೆ ತಂಬಾಕು ಸೇದುತ್ತಿದ್ದರು ; ಎಲೆ-ಅಡಿಕೆ ತಲಬುಮಾಡುತ್ತಿದ್ದರು (ಅಂಬಿಕ. ೫).
[ ←ಅರ. ಹಿಂ. ಮರಾ. ತಲಬ್ ]

**ತಲಬು₂** 'ತಲಹು₂' ನೋ.

**ತಲಮುಖ** (ನಾ). [ನಾಟ್ಯ] "ಮೊದಲು ಉದ್ವೃತ್ತ ಹಸ್ತವನ್ನು ಮಾಡಿ ಮೊಳಕೈಗೆ ಸಮನಾಗುವಂತೆಯೂ, ಅಂಗೈಗಳು ಒಂದಕ್ಕೊಂದು ಎದುರಾಗಿರುವಂತೆಯೂ ಕೈಗಳನ್ನು ಪಕ್ಕೆಯಲ್ಲಿ ನಿಲ್ಲಿಸುವುದು" (ಲಾಸ್ಯರಂ. ೨೪೮, ಗದ್ಯಾನುವಾದ) : ಚತುರಸ್ರ, ಉದ್ವೃತ್ತ, ತಲಮುಖ, ಸ್ವಸ್ತಿಕ . . . ಉಲ್ಬಣ, ವಲಿತ, ಲಲಿತ — ಈ ಮೂವತ್ತು ನೃತ್ತಹಸ್ತಂಗಳ್ (ಲಾಸ್ಯರಂ. ೨-೪೪ವ); ಈ ಕೆಳಗೆ ಹೇಳಿರುವ ಹಸ್ತಗಳು ನೃತ್ತಹಸ್ತಗಳು—೧. ಚತುರಸ್ರ, ೨. ಉದ್ವೃತ್ತ, ೩. ತಲಮುಖ . . . ೩೦. ವಲಿತ (ಅಭಾನ್ನ. ೪೯). [ ತಲ + ಮುಖ ]

**ತಲಮೊಱ** (ನಾ). (?): ಅರಿಉರ ಪನ್ನಿರ್ವ್ವರು ಮೂ × × ಯ್ಯುನ್ನಲ ಮೊಱಮುನಿಱಿಸಿದಾ ಕಾರೆಯರುಂ ಪೊರಳನ್ವಯರುಂ (ಎಕ. IV, ಗುಂಡ್ಲುಪೇ. ೮೯-೦೪ ; 750). [ ? ]

**ತಲವಕಾರ**, ತಳವಕಾರ (ನಾ). ಒಂದು ಉಪನಿಷತ್ತಿನ ಹೆಸರು ; ಕೇನೋಪನಿಷತ್ತು : ಕೇನ ಉಪನಿಷತ್ತಿಗೆ ತಲವಕಾರವೆಂದು ಮತ್ತೊಂದು ಹೆಸರು (ಭಾತತ್ತ್ವ. ೫೨) ; ಕೇನೋಪನಿಷತ್ತು ಸಾಮವೇದದ ತಲವಕಾರ ಬ್ರಾಹ್ಮಣಕ್ಕೆ ಸೇರಿದೆ (ಭಾರದ. ೩೪). **ತಳವಕಾರ:** ಈಶಾವಾಸ್ಯ, ತಳವಕಾರ . . . ಮೊದಲಾದವೆ ಶತೋಪನಿಷತ್ತುಗಳು (ವಿವೇಕ. ೪). [ ಸಂ. ]

**ತಲವಗೆ** (ನಾ). ಒಂದು ಊರಿನ ಹೆಸರು : ಕೋಗಳಿ[ಯ]ಯ್ನೂರರ ಕಂಪಣಂ ಬಿಕ್ಕಿಗನೆರ್ಪ್ಪತ್ತಱೊಳಗಣ ತಲವಗೆಯ ಭೋಗೇಶ್ವರದೇವರ್ಗೆ . . . ಬಿಟ್ಟ ತೋಟ (ಸೌಇಇ. IX-i, ೮೭-೦೪ ; 1034). [ ? ]

**ತಲವನನಗರ** (ನಾ). ಒಂದು ಊರಿನ ಹೆಸರು ; ಇದು 'ತಲಕಾಡು' ಎಂಬುದರ ಸಂಸ್ಕೃತೀಕರಣ: ಶ್ರೀಕವ್ವರಾಜಃ ಪುನ್ನಾಡ ಎಡೆನಾಡು ವಿಷಯೇ ವ(ಬ)ದನೊಗುಪ್ಪೆ ನಾಮಗ್ರಾಮಃ ತಲವನನಗರಮಧಿವಸತಿ ವಿಜಯಸ್ಕಂಧಾವಾರೆ (ಮೈಆರಿ. ೧೯೨೭, ೧೨೨-೫೩; 800). 'ತಳವನಪುರ' ಪರಾ. [ತಲವನ₀ + ನಗರ]

**ತಲವಾರ್** 'ತರವಾರ' ನೋ.

**ತಲವಾಸಿ**, ತಲೆವಾಶಿ (ನಾ). ಸಾಲವಾಗಿ ಕೊಟ್ಟ ಧಾನ್ಯಕ್ಕೆ ಧಾನ್ಯರೂಪ ವಾಗಿ ಕೊಡುವ ಬಡ್ಡಿ : ಕುಸೀದಕಃ, ವಾರ್ದುಕಃ, ವೃದ್ಧ್ಯಾಜೀವಃ, ವಾರ್ಧುಷಿಃ—೪ ಬಡ್ಡಿ ತಲವಾಸಿ ಮುಂತಾದ ಚುಂಗಡಿಲಾಭದಿಂದ ಬದುಕುವವನ ಹೆಸರು (ಸಿದ್ಧಾಂತಿ. ೨೩೬); ರೈತರಿಗೂ ನೂರಾರು ವರಹಗಳು ಬಡ್ಡಿಗೆ ತಲವಾಸಿಗೆ ದವಸಕ್ಕೆ ಸಹ ಕೊಟ್ಟು ತೆಗೆದುಕೊಳ್ಳುತ್ತಾ . . . ಇರುವವನು (ಕಥಾಮಂ. IV, ೬೫). **ತಲೆವಾಶಿ :** ನೂರಾರು ಖಂಡುಗ ರಾಗಿ ಯನ್ನು ಬಡವರಿಗೆ ಬಗ್ಗರಿಗೆ ತಲೆವಾಶಿಗೆ ಕೊಟ್ಟುಬಿಟ್ಟನು (ಕಥಾಮಂ. IV, ೨೦). [ ತಲ + ವಾಸಿ₄ ]

**ತಲವಿತ್ತಿಲು** (ನಾ). ಮುಖ್ಯವಾದ ಹಿತ್ತಿಲು (?): ಆ ಮನೆಯ ತಲಹಿತಲ ನೀರ ಓಣಿ ಪರ್ಯಂತ ಮುನ್ನಿನ ಪ್ರಮಾಣಿನಲು . . . ಆ ಮನೆಯ ತಲ ವಿತ್ತಿಲ ನೀರ ಓಣಿಯಂ ತೆಂಕಣತೋಟವನು ಸರಿಭಾಗಿಯಾಗಿ ಹ[o]ಚಿ ಕೊಂಡಲ್ಲಿ (ಸೌಇಇ. IX-ii, ೪೫೭-೨೯ ; 1455).
[ ತಲ ? + ಪಿತ್ತಿಲು (<ಪಿಂತಿಲ್) ]

**ತಲವಿನ್ಯಾಸ** (ನಾ). ಅಡಿಪಾಯದ ಕ್ರಮ,-ರೀತಿ : ವಸ್ತುವಿನ ತಲ ವಿನ್ಯಾಸವು ಹೀಗಿದೆ (ಸಾಹಿಸಂ. ೦೬) ; ಚಾಳುಕ್ಯರ ಕಾಲದ ಕಟ್ಟಡಗಳಲ್ಲಿ ಡಂಬಳದ ದೊಡ್ಡ ಬಸವ ದೇವಾಲಯದಲ್ಲಿ ಮಾತ್ರ ಈ ನಕ್ಷತ್ರಾಕಾರದ ತಲವಿನ್ಯಾಸವಿದೆ (ಹೊಯ್ಸಾವಾ. ೯). [ ತಲ + ವಿನ್ಯಾಸ ]

**ತಲವಿಲಸಿತ** (ನಾ). [ನಾಟ್ಯ] ನೂರೆಂಟುಂ ಕರಣಗಳಲ್ಲಿ ಒಂದು ; "ಕಾಲ್ಬೆರಳುಗಳನ್ನೂ, ಅಂಗಾಲನ್ನೂ ಮೇಲ್ಮುಖ ಮಾಡಿ ಪಾರ್ಶ್ವಕ್ಕೆ ನೀಡಿ ಆ ಪಾರ್ಶ್ವದ ಕೈಯಿಂದ ಪತಾಕಹಸ್ತವನ್ನು ಮಾಡಿ ನೀಡಿರುವ ಕಾಲ್ಬೆರಳುಗಳ ತುದಿಯನ್ನು ಮುಟ್ಟುವುದು. ಈ ರೀತಿ ಎರಡುಂ ಪಾರ್ಶ್ವಗಳಲ್ಲೂ ಮಾಡುವುದು": (ಲಾಸ್ಯರಂ. ೩೯೭, ಗದ್ಯಾನುವಾದ) : ಅಂಗಾಲೂರ್ಧ್ವಾಸ್ಯದಿನಿರೆ ಸಂಗಡಿಸೆ ಪತಾಕಹಸ್ತಮುದ ಙ್ಗ್ರುಮನಿಂತಂಗನೆ ಕೇಳ್ ತಿರುಗೀ ಕ್ರಮದಂಗಮನಿಮ್ಮೆಯ್ಯೊಳಿಸಗೆ ತಲವಿಲಸಿತಮುಂ (ಲಾಸ್ಯರಂ. ೪-೧೦೮). [ಸಂ.]

**ತಲವು** (ನಾ). ಬೀಜ ಬಿತ್ತಲು ಉಪಯೋಗಿಸುವ ಒಂದು ಬಗೆಯ ಸಾಧನ ; ಸಡ್ಡೆ : ಮೂರು ತಾಳಿನ ಕೂರಿಗೆ ಕಟ್ಟಿ ತಲವಿನ ಮೇಲೆ ದಾಸಯ್ಯ ಬೀಜ ತಾನೆ ಬಿತ್ತಿದ (ನದೀಪ. ೬೭). [?]

**ತಲಶಿಲೆ** (ನಾ). ಮೂಲಶಿಲೆ : ಸಿಲಿಕ, ಅಭ್ರಕ, ಮೃತ್ತಿಕೆಯ ಸ್ಲೇಟು ಮುಂತಾದ ಥರಗಳಿಗೆ ತಲಶಿಲೆಗಳು ಅಥವಾ ಮೂಲಶಿಲೆಗಳು ಎನ್ನುತ್ತಾರೆ (ಮುಂಬಯಿ. ೬-೨೪೩). [ತಲ + ಶಿಲೆ]

**ತಲಷಟ್ಪದಿ** (ನಾ). [ಛಂದ] ಷಟ್ಪದಿಗಳಲ್ಲಿ ಒಂದು ಬಗೆ : ತಲಷಟ್ಪದಿ; ಉತ್ಸಾಹದ ಎರಡೇ ಚರಣಗಳನ್ನು ಆರು ಕಿರಿಚರಣಗಳಲ್ಲಿ ಬಿಡಿಸಿ ಷಟ್ಪದಿಯ ರೂಪದಲ್ಲಿಟ್ಟು ರಚಿಸಿಕೊಂಡ ಬಂಧವಿದು (ಛಂದೋವಿ. ೨೭೦).
[ತಲ? + ಷಟ್ಪದಿ]

**ತಲಸಂಘಟ್ಟಿತ** (ನಾ). [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು; "ವೈಷ್ಣವಸ್ಥಾನಕದಲ್ಲಿ ನಿಂತುಕೊಂಡು ಡೋಲಪಾದಚಾರಿಯನ್ನು ಮಾಡುವ ಸಮಯದಲ್ಲೇ ಕೈಗಳನ್ನು ತಟ್ಟಿ ಬಲಗೈಯನ್ನು ಸೊಂಟಕ್ಕೆ ತಂದು ಎಡಗೈಯಿಂದ ರೇಚಿತ ಮಾಡುವುದು" (ಲಾಸ್ಯರಂ. ೩೦೪, ಗದ್ಯಾನುವಾದ) : ತಲಪುಷ್ಪಪುಟ, ಲೀನ . . . ತಲಸಂಘಟ್ಟಿತ, ಉದ್ವೃತ್ತ . . . ಗಂಗಾವತರಣ–ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). [ಸಂ.]

**ತಲಸಂಸ್ಫೋಟಿತ** (ನಾ). [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು ; "ದಂಡಪಾದ, ಅತಿಕ್ರಾಂತ ಈ ಎರಡು ಚಾರಿಗಳಲ್ಲಿ ಒಂದನ್ನು ಮಾಡಿ ಮುಂದುಗಡೆ ನೆಲವನ್ನು ಕಾಲಿನಿಂದ ಗಟ್ಟಿಸಿ ಕೈಗಳಿಂದ ತಾಳ ಹೊಡೆಯುವುದು" (ಲಾಸ್ಯರಂ. ೩೦೦, ಗದ್ಯಾನುವಾದ) : ತಲಪುಷ್ಪಪುಟ . . . ತಲಸಂಸ್ಫೋಟಿತ, ಗಂಗಾವತರಣ–ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). [ಸಂ.]

**ತಲಸ್ಪರ್ಶಿ** (ಗು). ೧. ಬುಡವನ್ನು ಮುಟ್ಟುವ; ತಳವನ್ನು ಸ್ಪರ್ಶಿಸುವ; ಆಳವಾದ. (ನಾ). ೨. (ಆಲಂ) ಸಮಗ್ರ ; ಸಂಪೂರ್ಣ : ಅಲಂಕಾರಶಾಸ್ತ್ರವನ್ನು ತಲಸ್ಪರ್ಶಿಯಾಗಿ ವ್ಯಾಸಂಗಮಾಡಿ . . . ಪ್ರಶಸ್ತಿಯನ್ನು ಪಡೆದಿದ್ದಾತೆ (ಧ್ವನ್ಯಾಲೋ. vi, ಮುನ್ನುಡಿ). [ಸಂ. ತಲಸ್ಪರ್ಶಿನ್]

**ತಲಹು₁** (ನಾ). ತಲೆಮಾರು ; ವಂಶ ; ಪೀಳಿಗೆ : ಆವನೋರ್ವಂ ಸದಾ ರುದ್ರಾಕ್ಷಿಯಂ ಧರಿಸೆ ಪಾವನಂ ಕುಲದೊಳಿಪ್ಪತ್ತೊಂದು ತಲಹಿನಿಂ ದೇವಕೋಟಿಯ ನಡುವೆ ಶಿವಲೋಕಕೆಯ್ದುವಂ (ಲಶಿಚಂ. ೪೨-೦೫) ; ಚತುರಾಸ್ಯನಿಂದಾದ ಹತ್ತನೆಯ ತಲಹಿನ ಯಯಾತಿಗೆ ಬ್ರಹ್ಮನೈದನೆಯ ವಳಿಯ ಶುಕ್ರಾಚಾರ್ಯ (ಲಕ್ಷ್ಮಭಾ. ೧೪-೧೨). [ < ತಲೆ₁ + -ಹು₂ ]

**ತಲಹು₂** 'ತಲಪು₂' ನೋ.

**ತಲಹು₃**, ತಲಬು₂ (ನಾ). ಪ್ರದೇಶ ; ಎಲ್ಲೆ ; ಗಡಿ (?) : ಗದ್ದೆಯ ತಲಹಿನಲು ನಟ್ಟ ವಾಮನಮುದ್ರೆಯ ಕಲ್ಲಿಂ ಪಡುವಲು (ಎಕ. VIII, ತೀರ್ಥಹ. ೧೨೯-೩೫ ; 1404) ; ತೆಂಕಲು ಕಡಗೆಯ ಮಾನಿಯ ತಲಹಿನಲು ನಟ್ಟ ಕಲ್ಲು ಒಂದು (ಎಕ. VIII, ತೀರ್ಥಹ. ೧೭೭-೨೫ ; 1415). **ತಲಬು₂**: ಮುವರು ಅಡಿಗಳು ಅವರಿಗೆ ಬಿಟ್ಟ ಬಾಳು ಕಂಬಳ ಗದ್ದೆ ಕುಸಿಯ ತರದ ಗದೆಗಳು ೫ ಒತ್ತಿನ ತಲಬು ೧ ನಡುತಾಟ ಹಾಳಿ ೭ ಅಂತ್ಯ ಮು ೧೦ ಗದೆ ಗೇಣಿ ಅಕ್ಕಿ ಮು ೫೪ ಬಲಿ ಕಲಚರುವಿಗೆ ಹಿರಿಗದೆ ಒತ್ತಿನ ತಲಬುವ ಮುಡಲು ಹೊಳೆ ಒತ್ತಿನ ಹಾಳಿಗಳು ೭ ಸಹ ಹ ೬೦ ಗದೆ ಗೇಣಿ ಅಕ್ಕಿ ಮು ೬ ॥ (ಸೌಇಇ. IX-II, ४೭೦-४೭ ; 1482). [?]

**ತಲಹುವಿಡಿ** (ಕ್ರಿ). ಪರಂಪರೆಯನ್ನನುಸರಿಸು ; ಪರಂಪರಾಗತವಾಗಿ ಬರು ; ಪಾರಂಪರ್ಯವಾಗಿರು ; ತಲೆಮಾರಿನಿಂದ ಬರು : ಬಿಡದೆ ಹಿರಿಯರ ತಲಹು[ಪಾಠಾಂ.ರು ಬಹುತರ]ವಿಡಿದೊದವಿಸಿರ್ದೊಡವೆ ಗೊಡೆಯನಪ್ಪೊಬ್ಬ ಮಗನಂ ಪರಮನಂ ಬೇಡಿ ಪಡೆವುದು (ಸೋಮಜ. ೦-೬೭). [ತಲಹು₁ + ಪಿಡಿ₁]

**ತಲಾ** 'ತಲೆ₁' ಪರಾ.

**ತಲಾಟಿ** 'ತಲಾಠಿ' ನೋ.

**ತಲಾಠಿ**, ತಲಾಟಿ (ನಾ). (ಹಳ್ಳಿಗಳಲ್ಲಿ ಜಮೀನುಗಳ ಲೆಕ್ಕ ಪತ್ರ ಇಟ್ಟುಕೊಂಡು, ಕಂದಾಯ ವಸೂಲು ಮಾಡುವ ಗ್ರಾಮದ) ಲೆಕ್ಕಿಗ; ಕುಲಕರಣಿ ; ಶಾನುಭೋಗ : ಮಾವನವರು ತಲಾಠಿ ಕೆಲಸದಲ್ಲಿದ್ದರು (ಸ್ಮೃತಿಚಿ. ೬೦). **ತಲಾಟಿ** : ತಲಾಟಿಪದ್ಧತಿಯು ಮೊದಲಿನಿಂದಲೂ ಈ ಜಿಲ್ಲೆಯಲ್ಲಿ ಜಾರಿಯಲ್ಲಿರುವುದರಿಂದ ನಾಲ್ಕಾರು ಹಳ್ಳಿಗೊಬ್ಬ ತಲಾಟಿ ಇರುವನು (ಕರವೀ. ೮). [ ←ಮರಾ. ತಲಾಠೀ, ತಲಾಟೀ ]

**ತಲಾತಲ**, ತಳಾತಳ (ನಾ). ೧. ಏಳು ಅಧೋಲೋಕಗಳಲ್ಲಿ ಒಂದು : ತಳ ಮತ್ತತಳ ವಿತಳಸುತಳಂ ರಸಾತಳ ತಲಾತಲ[ಪಾಠಾಂ. ತಳಾತಳ]ಮು ಪಾತಾಳಮೆಂದು ವರ್ತಿಸುವ ತಳಲೋಕಮೇಳಕ್ಕು (ಮಂಗರಾ. ೧೦-೩೨). ೨. (ಆಲಂ) ತೀರ ಕೆಳಗಿನ ಭಾಗ ; ತಟ್ಟತಳ : ಯಾವುದು ಆಯಾ ಸಂದರ್ಭಕ್ಕೆ ಉಚಿತವೋ ಅಷ್ಟನ್ನು ಮಾತ್ರ ನಮ್ಮ ಪ್ರಜ್ಞೆ ಬರಮಾಡಿಕೊಳ್ಳುತ್ತದೆ. ಉಳಿದವು 'ಅಜ್ಞಾತ'ದ ತಲಾತಲದಲ್ಲಿ ಬಿದ್ದಿರುತ್ತವೆ. (ಸೌಂದಸ. ೪). **ತಳಾತಳ**: ೧. ಪಾತಾಳ ಮಹಾತಳ ರಸಾತಳ ತಳಾತಳ ಸುತಳ (ವಿವೇಕ. ೦೬೦) ; ಬೀಸಿ ಬಡಿಗೆ ಬಿಱುಬುಗಾಳಿ ನೆಲನ ಮೇಲ್ ತಳಾತಳದಿನದಱ ಅಡಿಯ ಅದಿರ್ವಿನಂ (ಬದ್ಮಪ್ರ. ೫೬- ೦೨೦೫). 'ರಸಾತಲ' ಪರಾ. [ಸಂ.]

**ತಲಾಮಲಕ**, ತಳಾಮಳಕ (ನಾ). ೧. ಅಂಗೈಯಲ್ಲಿರುವ ನೆಲ್ಲಿಕಾಯಿ. ೨. (ಆಲಂ) ಸ್ಪಷ್ಟವಾದುದು: "ನಿಜಮುಂ ನಿರ್ಮಲಮುಂ ತಲಾಮಲಕಮಕ್ಕುಂ" (ನಾನಾರ. ೦೬೭). **ತಳಾಮಳಕ** : ೨. ನಿನಗೆ ಪಥ್ಯಮಾವುದದಂ ಮಾಡಾಮೂಲಚೂಲಮೆಮಗೆ ತಳಾಮಳ[ಪಾಠಾಂ. ಬ]ಕಂ ಭವನಿಬದ್ಧ ಮಟಲಿಸಿತೆಮ್ಮಂ (ಯಶೋಚ. ೦-೬೫). 'ಕರತಲಾಮಲಕ' ಪರಾ.
[ತಲ + ಆಮಲಕ]

**ತಲಾರ** (ನಾ). ಗೆಜ್ಜೆ (?) : ನೂಲ ತೊಂಗಲ ತಲಾರದ ಮೆಲ್ಲುಲಿ ಪೆರ್ಚೆ ಮೆಲ್ಪು ಮತ್ತೊಱಗೆ ಕರಂಗಳಿಂ ನಿಱಿದುಱುಂಬಿದೆ ವಾದ್ಯದೊಳೊಂದಿನಿಂದು ಮುಂದೆಱಗಿ ಲಯಂಗಳೊಳ್ ತಗುಳ್ದೆ ನರ್ತಿಸಿದಾಕೆಯರೊಪ್ಪಿ ತೋಱಿದರ್ (ಸೂಕ್ತಿಸು. ೦೩-೧೮). [?]

**ತಲಾರಿಕೆ** 'ತಳವಱಿಕೆ' ನೋ.

**ತಲಾವು** (ನಾ). ಕೆರೆ ; ಕೊಳ ; ಸರೋವರ : (ಮೈಗೆಜ. IV, ೭೮೭).
[ ←ಹಿಂ. ಮರಾ. ತಲಾವ್; ಪಾರ. ತಲಾವ್, ತಾಲಾಬ್.
/ಪ್ರಾ. ತಲಾಅ. / ಸಂ. ತಡಾಗ ]

**ತಲಾವುಅಮಾನಿ** (ನಾ). ಯಾವುದೇ ನಿರ್ದಿಷ್ಟ ಗ್ರಾಮಕ್ಕೂ ಸೇರದೆ ಸರ್ಕಾರದ ವಶದಲ್ಲಿರುವ ಕೆರೆ : ಮದ್ದಕದ ಕೆರೆ, ಎಲ್ಲರಿಗೂ ಸೇರಿದ ಕೆರೆ : (ಮೈಗೆಜ. IV, ೭೮೭). 'ಅಮಾನಿಕೆರೆ' ಪರಾ. [ತಲಾವು+ಅಮಾನಿ]

**ತಲಾಶೆ** 'ತಲಾಸು' ನೋ.

**ತಲಾಷ್** 'ತಲಾಸು' ನೋ.

**ತಲಾಷು** 'ತಲಾಸಂ' ನೋ.

**ತಲಾಷಿ** 'ತಲಾಸಂ' ನೋ.

**ತಲಾಶು, ತಲಾಶೆ, ತಲಾಷ್, ತಲಾಷು, ತಲಾಸಿ** (ನಾ). ಹುಡುಕುವಿಕೆ; ಶೋಧನೆ; ತಪಾಸಣೆ; ಪತ್ತೆಹಚ್ಚುವಿಕೆ: ದೊಳ್ಳ ಹೇಳಿದ್ದ ಕೆಮ್ಮಣ್ಣುಬ್ಬಿನ ಹಳ್ಳದ ಆ ಸ್ಥಳಕ್ಕೆ ಹೋದನು, ತಲಾಸು ಮಾಡುವುದಕ್ಕೆ (ಮಲೆಮ. ೪೫೦). **ತಲಾಶೆ:** ಅನುಮಾನಕ್ಕೆ ಆಸ್ಪದ ಬರದಂತೆ ರಾಜನ 'ತಲಾಶೆ'ಯಲ್ಲಿ ಅನ್ವಾರಿಯು ಜತೆಗೂ ಅವನೂ ಹಾರಾಡುವುದಕ್ಕೆ ಮೊದಲು ಮಾಡಿದ (ನಟಸಾ. ೨೯೦). **ತಲಾಷ್:** ಎಲ್ಲವನ್ನು ಒಂದೊಂದಾಗಿ ತಲಾಷ್ ಮಾಡಿಸುವವರೆಗೆ ಆರೇಳು ತಿಂಗಳಾಯ್ತು (ಮನೋನಂ. ೧೩೯). **ತಲಾಷು:** ಅವನ ಚಮತ್ಕಾರದಿಂದ ನೋವು ಹಿಡಿದು ಪ್ರಕರಣ ತಲಾಷು ಮಾಡಿದ್ದಕ್ಕಾಗಿ ಮೇಲು ಉದ್ಯೋಗಸ್ಥರ ಶ್ಲಾಘನೆಗೆ ಹ್ಯಾಗೂ ಯೋಗ್ಯನಾದನು (ವಾಗ್ಮೀವಿ. ೧೪೬); ಕಾನ್‌ಸ್ಟೇಬಲನ್ನು ಹತ್ತಿರದಲ್ಲಿದ್ದ ಗ್ರಾಮಕ್ಕೆ ನೀರಿಗೂ, ಒಂದು ಬಂಡಿ ತಲಾಷುಮಾಡಿ ತರುವುದಕ್ಕೂ ಕಳಿಸಿದ್ದಾಗಿಯೂ . . . ಹೇಳಿದರು (ಕಲನೆ. ೩೮೬). **ತಲಾಸಿ:** ಇದು ಪೂಜಾರಿ ಬಿರುಮ ತಲಾಸಿ ಮಾಡಿದ್ದು (ಕುಡಿಕೊ. ೨೨೪).

[ ← ಪಾರ. ತಲಾಶ್; ಹಿಂ. ಮರಾ. ತಲಾಶ್, ತಲಾಸ್ ]

**ತಲಿನ, ತಳಿನ** (ಗು). ೧. ಕೆಳಭಾಗದಲ್ಲಿರುವ; ತಳಭಾಗದ. ೨. ಕೆಳತರದ; ಕೀಳುಮಟ್ಟದ; ಕನಿಷ್ಠವಾದ. ೩. ತೆಳುವಾದ; ಸೂಕ್ಷ್ಮವಾದ. ೪. ಸಣ್ಣದಾದ; ಚಿಕ್ಕದಾದ. ೫. ಪ್ರತ್ಯೇಕವಾದ; ತೆರಪುಳ್ಳ; ಅಂತರವುಳ್ಳ. (ನಾ). ೬. ಹಾಸಿಗೆ; ಶಯ್ಯೆ; ತಲ್ಪ. **ತಳಿನ:** ೭. ತೆಳುವಾದುದು: "ಕ್ಷಾಮಂ, ಶಾಂತಂ, ಕೃಶಂ, ಕ್ಷೀಣಂ, ಪೇಲವಂ, ತಳಿನ(ಮ)ಂ, ತನು—ಈ ೭ ಅಸಿದು" (ಹಲಾಯು. ೧೧೯–೩೨). [ ಸಂ. ]

**ತಲಿಪು** 'ತಲಪು$_2$' ನೋ.

**ತಲಿಮಿಲಿತ** (ಗು). ತಳಮಳಗೊಂಡ: ಮಾಯಾದೇವಿಯು ಈ ವಿಚಿತ್ರವಾದ ವ್ಯಂಗ್ಯದಿಂದ ತಲಿಮಿಲಿತಳಾದಳು (ಮೃಜಲ. ೧೧). [ ? ]

**ತಲುಪಣೆ** (ನಾ). ತಲಪುವಿಕೆ; ಪಾವತಿಯಾಗುವಿಕೆ; ಕೈಸೇರುವಿಕೆ: ಅವರ ಕಾಗದಪತ್ರಗಳ ಮತ್ತು ಗಂಟುಮೂಟೆಗಳ ತಲುಪಣೆ . . . ಅಂಥ ಕಡುಬೇಸಗೆಯ ದಿನದಂದು ಬಹು ಕ್ಲೇಶದಾಯಕವಾಗಿತ್ತು (ಪುನರು. ೪೫೩). [ ತಲುಪು$_1$ (<ತಲಪು$_1$) + – ಅಣೆ$_4$ ]

**ತಲುಪಿಸು** 'ತಲಪಿಸು' ನೋ.

**ತಲುಪು$_1$** 'ತಲಪು$_1$' ನೋ.

**ತಲುಪು$_2$** 'ತಲಪು$_2$' ನೋ.

**ತಲುಬು** 'ತಲಬು$_1$' ನೋ.

**ತಲುವರಿ** 'ತರುವಲಿ' ನೋ.

**ತಲುವರಿತನ** 'ತರುವಲಿತನ' ನೋ.

**ತಲುವುರಿ** 'ತರುವಲಿ' ನೋ.

**ತಲೆ$_1$** (ನಾ). ೧. ದೇಹದ ಒಂದು ಅಂಗ; ಮಂಡೆ; ಉತ್ತಮಾಂಗ; ರುಂಡ; ಶಿರಸ್ಸು; ಮಸ್ತಕ: ಕೂಸಿನ ತಲೆಯೊಳ್ಬಿಣ್ಪೊಱೆಯನಿಟ್ಟ ಪೋಲಸುಖಕರಂ (ಕವಿರಾ. ೨–೬); ಪನ್ನೆರಡು ತಲೆಯ ಪಾವುಮಂ ಚಂದ್ರ ನೊಡೆದುದುಮಂ . . . ಇಂತೀ ಪದಿನಾಱುಂ ಕನಸುಗಳಂ . . . ಕಂಡಂ (ವಡ್ಡಾರಾ. ೮೫–೨೫); ತನ್ನ ಮನಮನಱಿದು ಮುಟ್ಟೆ ನುಡಿದ ಕೆಳದಿಯ ನುಡಿಗೆ ಪೆಱತೇನುಮನೆನಲಱಿಯದೆ ನಾಣ್ಚಿ ತಲೆಯಂ ಬಾಗಿ ನೆಲನಂ ಬರೆಯುತ್ತುಂ (ಪಂಪಭಾ. ೪–೭೪ ವ); ಕಾಳನೊ ರಾವಣನೋ ಶಿಶುಪಾಳನೊ ತಾನೆನಿಸಿ ನೆಗಟ್ದ ನರಗನ ತಲೆ ತನ್ನಾಳಾಳ ಕಯ್ಗೆವನ್ದುದು (ಎಕ. II, ೫೯–೯೫; 974); ಎನಿತು ತಾಳವಮರನನೇಱಿದೊಡಂ ತಲೆಗೆ ಕಾಲ್ಕೆಳಗೆಂಬಂತೆ (ಧರ್ಮಾಮೃ. ೬–೧೭೩); ತಲೆಯಿಲ್ಲದ ಅಟ್ಟೆಗೆ ಪಟ್ಟವ ಕಟ್ಟುವ ಉಭಯ ಭ್ರಷ್ಟರ ನೋಡಾ (ಬಸವ. ೬೨); ಕೃಪಾಚಾರಿಯರ ಸೇನೆಗೆ ತಲೆಯ ಋಣ ಸಂಬಂಧ ಸವೆದುದು (ಕುಮಾ.ದ್ರೋ. ೬–೫); ತಲೆಯಲಿ ಕರಿದು ಕೂದಲು ಗಳೌಷಧಿಗಿಲ್ಲ (ಮೋಹತ. ೧೮–೭೮); ತಲೆ ಗಟ್ಟಿ ಎಂದು ಕಲ್ಲು ಹಾಯಬಾರದು (ಗಾದೆ); ಕಾಸೂ ಹಾಳು ತಲೆಯೂ ಬೋಳು (ಗಾದೆ). ೨. ವಂಶ; ಕುಲ; ಸಂತತಿ; ಪೀಳಿಗೆ; ತಲೆವಾರು: ಸಲೆ ಸಂದಿರ್ಪತ್ತೊಂದುಂ ತಲೆವರೆಗಂ ನಮಗೆ ಪರಿಭವಂ (ಪಂಪಭಾ. ೭–೫೬); ದೇಗುಲವಂ ಮಾಡಿಸಿ ತಮ್ಮ ಮಾತಾಪಿತೃಗಳಿರ್ಪ್ಪತ್ತೊಂದ ತಲೆಗಂ ಪರೋಕ್ಷ ವಿನಯುಂಗೆಯ್ದು ದೇವರ್ಗ್ಗೆ ಕೊಟ್ಟ ಭೂಮಿ (ಎಕ. IV. ಗುಂಡ್ಲುಪೇ. ೯೩–೨೩; 1049); ನಾನೋವದಿಪ್ಪತ್ತೊಂದು ತಲೆವೆರಸಿ ನರಕಕ್ಕೆ ಹೋಹನೇ (ಹಜಕಾ. ೮–೭೬). ೩. ಮುಖ್ಯವಾದುದು; ಉತ್ತಮವಾದುದಂ; ಶ್ರೇಷ್ಠವಾದುದಂ: ನೊಣಂಬವಾಡಿ ಮೂವತ್ತಿಚ್ಛಾಸಿರಕ್ಕೆ ತಲೆಯೆನಿಸಿದ ಕೋಗಳಿಯಯ್ನೂಱುಮಂ (ಸೌಇಇ.IX–1, ೨೯೩–೧೧; 1162); ಅನ್ತು ಪೊಗಳ್ತೆಗಂ ನೆಗಳ್ತೆಗಂ ನೆಲೆಯುಂ ತಲೆಯುಮಪ್ಪ . . . ಕಲಿ ತೈಲಭೂಮಿಪಾಲಂಗಂ (ಎಇ. XVI, ೩೫೭–೨೩; ?). ೪. ಮೂಲ; ಮೊದಲು; ಬುಡ; ಆದಿ: ಜಗದ ಮಾಯೆಗಿವಂ ತಲೆ (ರೇರಾವ. ೪–೭೫): ಕಾಲುವೆ ಆರಂಭವಾಗುವ ಅಣೆಕಟ್ಟೆಗೆ ಕಾಲುವೆಯ "ತಲೆ" ಎಂದು ಹೆಸರು (ಭೂವಿವ. ೩೮೭). ೫. ಕೊನೆ; ತುದಿ; ಅಂಚು: ತೆಂಕಣ ತಲೆಯ ಪುಣುಸೆ ಅಣಲೆಯ ಮರಂ (ಎಕ. XII, ಶಿರಾ. ೩೮–೪೩; 878). 'ಇರ್ತಲೆವೊತ್ತು' ಪರಾ. ೬. (ಆಲಂ) ಕೂದಲು; ರೋಮ: ತಲೆಯನಿರುಳ್ಪಿಕ್ಕಿದೊಡೆತ್ತಲಾನು ಮೊಂದಲ್ಲಿ ಭಾಗ್ಯಮುಳ್ಳಾರೋಮಂ ತಲೆಯಿಂದುದಿರ್ದೊಡೆ ಬಳಿಯಂ ನಿಲಲಱಿಯದು ಭಾಗ್ಯಮೆಂಬರಱಿವಿಲ್ಲದವರ್ (ಸಮುಪ. ೧–೪೫ ಅನುಬಂಧ); ತಲೆಯಂ ಬಲುದಡಿಗರ್ಕಱ ನಿಲಲಾಱದೆ ಸುಂಟೆದಿಂದ ಕೋಡಗದಂತುಮ್ಮಳಿಸಿ (ಧರ್ಮಾಮೃ. ೧–೧೪೧); ಹೆಡೆದ ತಾಯಿಲ್ಲ ತಾಯುಳ್ಳೊಡೆ ತಲೆ ಹೀಗೆ ಜಡೆಗಟ್ಟಿಕೊಂಡು ಮಾಸಿಹುದೇ (ಮೋಹತ. ೨೦–೨೫); ಮತ್ತಾಗ ತಲೆಯ ಕೆದಱಿಕೊಂಡು ಜನ ಕಾಡಹತ್ತಿದರೇನನುಸಿರುವೆ (ಕಂನವಿ. ೧೧–೪೯). ೭. (ಆಲಂ)ಬುದ್ಧಿ; ತಿಳಿವಳಿಕೆ: ಮನೆಯ ಖರ್ಚು ವಿಷ ಏರಿದ ಹಾಗೆ ಏರುತ್ತಾ ಇದೆ. ಅದರ ವಿಷಯ ನಿಮ್ಮ ತಲೆಗೆ ಏನೇನೂ ಹೊಕ್ಕ ಹಾಗೆ ಕಾಣುವುದಿಲ್ಲ (ಯೋಧಪು. ೩೦); ತಲೆ ಇಲ್ಲದ ಮನುಷ್ಯ (ರೂಢಿ). 'ತಲೆಕೆಡು' ಪರಾ.

**ತಲೆತಲೆ** (ದ್ವಿರುಕ್ತಿ): ೧. ಉಳಿದ ಪಕ್ಷಿಗಳು ಅದನ್ನು ತಲೆತಲೆ ಕುಕ್ಕುತ್ತವೆ (ಮುಂಬಯಿ. ೩–೧೧೬); ಜುಟ್ಟು ಹಿಡಿದುತಂದು ತಲೆತಲೆಗೆ ಡಿಕ್ಕಿ ಹೊಡಸುವವನು (ವಚಭಾ. ೧೬). ೨. ತಲೆತಲಾಂತರ: ತಲೆತಲೆಯಿಂದಲೂ ಆ ಕೆಲಸ ಸಾಗಿಸಿಕೊಂಡು ಬಂದಿದ್ದರು (ಗಂಗಾಸಾ. ೧೧). **ತಲಾ** = ಪ್ರತಿಯೊಂದು ತಲೆಗೆ; ಪ್ರತಿಯೊಬ್ಬ ವ್ಯಕ್ತಿಗೆ; ಪ್ರತಿಯೊಂದಕ್ಕೆ: "ಪ್ರತಿಯೊಬ್ಬನಿಗೆ, ತಲಾ" (Per capita. ಪತ್ರಿನಿ. ೬೧); ತನಗಿದ್ದ ಇಬ್ಬರು ಮಕ್ಕಳನ್ನು ಕರೆದು ತಲಾ ಒಂದೊಂದು ರೂಪಾಯಿ ಕೈಗೆ ಕೊಟ್ಟು (ಕಥಾಮಂ. IV, ೧೩); ದಾಸೋಜನು ಮತ್ತು ಚಾವಣನು ತಲಾ ನಾಲ್ಕು ಬೇಲೂರಿನ ಶಿಲಾಬಾಲಕಿಯರ ವಿಗ್ರಹಗಳನ್ನು ಮಾಡಿದರು (ಭಾರದ. ೫೦೫); ಹಳಬರಿಗೂ, ಓಲೆಕಾರರಿಗೂ ತಲಾ ಐದ್ಯೆದು ರೂಪಾಯಿಗಳಂತೆ ಒಟ್ಟು ಇಪ್ಪತ್ತೈದು ರೂಪಾಯಿ ಕೊಟ್ಟು (ನಾಪೂಲೀ. ೨೦೮). **ತಲಾಂತರ, ತಲೆಯಂತರ** = ೧. ವಂಶ; ಪೀಳಿಗೆ: ನಮ್ಮ ತಲಾಂತರದವರೆಲ್ಲ ಹಳ್ಳಿಯಲ್ಲೇ ಜೀವಿಸುತ್ತಿದ್ದರು (ರೂಢಿ). ೨. = ತಲೆವಾರು ೧: ಕಳೆದ ಒಂದು ತಲೆಯಂತರದಲ್ಲಿ ಅಮೇರಿಕಾ, ಚೀಣಾ, ಈಜಿಪ್ಟ್ ಮೊದಲಾದ ದೇಶಗಳಲ್ಲಿ . . . ಕ್ರಾಂತಿಯೆದ್ದಿತು (ಜಗಸಂ. ೨). **ತಲಾ ವರಮಾನ** = ಪ್ರತಿಯೊಬ್ಬರ ಆದಾಯ, – ಉತ್ಪತ್ತಿ: (Per capita income. ಪತ್ರಿನಿ. ೬೧). **ತಲೆ ಅಪ್ಪಳಿಸು** = (ಹಾವಿನಂತೆ) ಆಕ್ರೋಶಮಾಡು: ಅವನು ತಲೆ ಅಪ್ಪಳಿಸಿ ನಿಂತಾಗ ಯಾರೂ ಎದುರಾಗುವಂತಿಲ್ಲ (ರೂಢಿ).

**ತಲೆಕೆಳಕನೆ** = ತಲೆಕೆಳಗಾಗಿ ; ಮೇಲ್ಭಾಗ ಕೆಳಭಾಗಕ್ಕೆ ಬರುವಂತೆ ; ಅಡಿಮೇಲಾಗಿ : ದ್ವಾರವೊಂಬತ್ತರೊಳು ಪುಗಿಸಿ ಹೇಸದಲ್ಲಿ ದೂತರೆಯ್ದಿ ಉರಿವ ಕಿಚ್ಚಿನೊಳಗೆ ತಲೆಕೆಳಕನೆ ಪಿಡಿದು ಸೀವುತಿಪ್ಪ (ಸಾನಂಪ. ೬-೧೦೩ ರಗಳೆ). **ತಲೆಕೆಳಗಾಗಿಸು** = ೧. ಬೀಳುವಂತೆ ಮಾಡು ; ನಾಶಮಾಡು ; ಹಾಳು ಮಾಡು : ತಳುವದಂಗಜ ಚೋರನಾಗಿ ಪಾಂಥರ ತಲೆಕೆಳಗಾಗಿ ಸುತ್ತಿಹನಲ್ಲಿ (ಕುಠಾಸಾಂ. ೨-೩೮). ೨. ತಲೆ ಬಗ್ಗಿಸುವಂತೆ ಮಾಡು ; ಒಪ್ಪುವಂತೆ ಮಾಡು ; ಶರಣಾಗಿಸು : ಅವನನಾ ಲಲಿತಾಂಗಿಯ ಲಾವಣ್ಯ ತಲೆಕೆಳಗಾಗಿಸದಿರದೆನುತೆದೆಯೊಳಾ ಲಲನೆ ಬಂದಳು ರತ್ನಿಯೆಡೆಗೆ (ಕುಠಾಸಾಂ. ೨೬-೧೭). **ತಲೆಕೆಳಗಾಗಿ ಹಾಕು**=ಅಡಿಮೇಲು ಮಾಡಿಹಾಕು; ಮಗುಚಿ ಹಾಕು : ಚಾಪೆಯನ್ನು ತಲೆಕೆಳಗಾಗಿ ಹಾಕಿದ್ದಾನೆ (ರೂಢಿ). **ತಲೆಕೆಟಗಾಗಿ ಬೀಳ್, ತಲೆಕೆಳಗಾಗಿ ಬೀಳು** = ತಲೆ ಕೆಳಮುಖವಾಗಿ ಬೀಳು, – ಒರಗು : ಬಡಿಗೊಂಡ ಮೊಲದಂತೆಯುಂ ತಲೆಕೆಟಗಾಗಿ ಬಿಟ್ಟರ್ (ಶಾಂತಿಪು. ೪-೩೦ ವ) ; ಮರದ ಮೇಲಿಂದ ಕಾಲು ಜಾರಿ ತಲೆ ಕೆಳಗಾಗಿ ಬಿದ್ದನು (ರೂಢಿ). **ತಲೆಕೆಟಗಾಗು, ತಲೆಕೆಳಕಾಗು, ತಲೆಕೆಳಗಾಗು, ತಳಕೆಳಕಾಗು** = ೧. (ನಾಚಿಕೆಯಿಂದ) ತಲೆತಗ್ಗು, – ಬಾಗು : ಅರಸ ನೀತನ ಭಕ್ತಿಗಂ ವ್ಯವಸಾಯಕ್ಕಂ ಮೆಚ್ಚಿ ತನ್ನ ತಂದೆಮ್ಮೆರ್ಗಳೊಳೊಂದುಮಂ ಕೊಳ್ಳದೆ ನೀನೇ ಕೊಳ್ಳೆಂದು ಕೊಟ್ಟೊಡಾ ದಯೆಗೆ ನಯಂಬಡೆದೆನೆಂದು ತಲೆಕೆಟಗಾಗಿ ಮೇಗುಗಾಣದೆ (ಸುಕುಮಾ. ೬-೩೫ ವ). ೨. ತಲೆ ಕೆಳಭಾಗಕ್ಕೆ ಬರು : ತಲೆಕೆಟಗಾಗಿ ನೇಲ್ವುದು ಶಬಾವಳಿ (ಅರ್ಧನೇ. ೫-೩೭) ; ತ್ರಿನಯನಂ ಪೂಜಿಸಿಯಿದಕೆ ಮನವನುಮತಿಸದಡೆ ಲೋಹಶೂಲದೊಳನಿಬರಂ ತೆಗೆಸುವೆನು ತಲೆಕೆಳಕಾಗಿ ನಿಮ್ಮುವನು (ಬಸಪು. ೫೦-೫೧) ; ತುಂಗಬಲನುರುಪಕ್ಷಹತಿಗೆ ರಥಾಂಗವಜಿಗಿಜಿಯಾಯ್ತು ರಥದ ತುರಂಗ ತಲೆಕೆಳಕಾಗಿ ಕೆಡೆದವು (ತೊರರಾ. ೩-೧೧-೧೬) ; ಕುದುರೆ ತಲೆಕೆಳಗಾದುದಿಳೆಯುದ್ದುದು ರಸಾತಳಕೆ (ಕುವ್ಯಾ.ಕ. ೬-೨೦). ೩. ಗರ್ವಪಡು ; ಅಹಂಕಾರಪಡು : ವಿಟಕೋವಿದತ್ವದ ಹಮ್ಮಿನಿಂ ನೀನಿಂತು ತಲೆಕೆಳಕಾಗಿ ನಡೆಯುತಿಹೆ (ಬಸಪು. ೪೨-೧೭). ೪. ಅಸ್ತವ್ಯಸ್ತವಾಗು ; ವ್ಯತ್ಯಾಸ ಹೊಂದು : ಆವನೊಬ್ಬನ ಕಂಡರರಿಗಳ ಜೀವ ತಲೆಕೆಳಕಹುದು ಸುಭಟರ ದೇವನಾತನು ಪಾರ್ಥ (ಕುವ್ಯಾ.ಕ. ೯-೫) ; ಹರಿಕಟಕದುಬ್ಬರಕಯೋಧ್ಯಾಪುರವು ತಲೆಕೆಳಕಾ[ಪಾಠಾಂ. ಗಾ]ಯ್ತು (ತೊರರಾ. ೪-೯-೧೧) ; ಕಳವಳದ ಮನವು ತಲೆಕೆಳಗಾದುದವ್ವಾ(ಮಹಾದೇ.ಬ. ೧೪೧-೦೩೧);ಕೌರವೇಶ್ವರನ ಸೇನೆ ತಲೆಕೆಳಗಾ[ಪಾಠಾಂ. ಕಾ]ಯ್ತು ಪಾರ್ಥನ ಸೂನುವಿನ ಮರಣದಲಿ (ಕುವ್ಯಾ.ದ್ರೋ. ೮-೪೨) ; ನೊಂದುಕೊಂಡರು ತಂದೆ ತಮ್ಮೆಲ್ಲ ಹಂಚಿಕೆಯೊಟ್ಟಿಗೆ ತಲೆಕೆಳಗಾಗೆ (ಇಂಜಾಪ. ೧೯-೮೦) ; ಅವರನ್ನು ನೆನೆದ ಕೂಡಲೇ ನನ್ನ ಎಲ್ಲ ವ್ಯಾಪಾರಗಳೂ ತಲೆಕೆಳಗಾಗುತ್ತವೆ (ಬದುಜ. ೧೨೦); ನಾವೆಲ್ಲಾ ಸೇರಿ ಹಾಕಿಕೊಂಡಿದ್ದ ಯೋಜನೆಗಳೆಲ್ಲಾ ತಳಕೆಳಕಾಯಿತು (ರೂಢಿ). ೫. ಬೀಳು ; ಚ್ಯುತವಾಗು ; ಭ್ರಷ್ಟವಾಗು : ತನ್ನ ಮಟಿದು ದೇವರ ಕಂಡಿಹೆನೆಂದೆಂಬರು ತನ್ನುವ ಮಟಿದು ದೇವರ ಕಂಡಿಹೆನೆಂಬ ಕಾರಣ ಹರಿ ಸುರ ಬ್ರಹ್ಮಾದಿಗಳೆಲ್ಲರೂ ತಲೆಕೆಳಗಾಗಿ ಹೋದರು (ವಚಸಂ. ೮೪-೨೭ ಅಂಬಿವ). ೬. ನಾಶವಾಗು ; ಹಾಳಾಗು : ಅಟುವು ತಲೆಕೆಳಗಾಯ್ತು ಧೈರ್ಯದ ನಿಟಿಗೆ ನಗೆಗೆಡೆಯಾಯ್ತು (ಕುವ್ಯಾ.ವಿ.೨-೧೨). **ತಲೆಕೆಟಗುಮಾಡು, ತಲೆಕೆಳಗುಮಾಡು**=೧. ಬುಡಮೇಲು ಮಾಡು; ನಾಶಮಾಡು; ಹಾಳು ಮಾಡು : ಕೌರವರಂ ಭೈರವಂಬಾಯ್ದರಂತೆ ತಲೆಕೆಟಗುಮಾಡಿ (ಧರ್ಮಾಮೃ. ೭-೯೫) ; ಗೌಡನ ಮಗು ಎಲೆ ಅಡಕೆ ಚೀಲವನ್ನು ತಲೆಕೆಳಗು ಮಾಡಿ ಹೊಗೆಸೊಪ್ಪನ್ನು ಕೆಳಗೆ ಚೆಲ್ಲಿತು (ರಾಮೂಸ. ೧೧೧). ೨. ವ್ಯತ್ಯಾಸವಾಗುವಂತೆ ಮಾಡು ; ಪಲ್ಲಟಗೊಳಿಸು : ದೂರದರ್ಶಕದ ಮೂಲಕ ಮೊಟ್ಟಮೊದಲು ಚಂದ್ರಬಿಂಬದಲ್ಲಿ ನೋಡಿದ ವಿಷಯಗಳು ಜ್ಯೋತಿಶ್ಶಾಸ್ತ್ರವನ್ನೇ ತಲೆಕೆಳಗುಮಾಡಿದವು (ಜ್ಯೋತಿವಿ. ೨೦೯) ; ಹಳೆಯ ನಂಬುಗೆಗಳನ್ನು ತಲೆಕೆಳಗುಮಾಡುವ ಹೊಸ ವಿಚಾರಗಳು . . . ನಮ್ಮ ಬದುಕನ್ನು ಪರಿವರ್ತಿಸುತ್ತಿವೆ (ಸೌಂದಸ. ೨೭೭). ೩. ತಳಮಳವುಂಟಾಗು; ಕ್ಷೋಭೆಗೊಳ್ಳು : ಕಪಿಬಲಮಹಾರ್ಣವವ ತಲೆಕೆಳಗುಮಾಡಿತ್ತು ಸೇನಾಜಲನಿಧಿಯ ಬೊಬ್ಬಾಟ (ತೊರರಾ. ೬-೧೩-೩). **ತಲೆಗಿಂಬಾಗಿಸು** = ತಲೆಗೆ ಆಶ್ರಯವಾಗಿಸು ; ತಲೆದಿಂಬಾಗಿ ಮಾಡು : ಶಾನಭಾಗರು ತಮ್ಮ ಬಟ್ಟೆಹಾಕಿದ ಕೈಚೀಲವನ್ನೇ ತಲೆಗಿಂಬಾಗಿಸಿ ಹಾಸುಗೆಯ ಮೇಲೆ ಅಡ್ಡ ಪಾದರು (ಮೂರುದಾ. ೭). **ತಲೆಗಿಂಬಾಗು** = ತಲೆಗೆ ಆಶ್ರಯವಾಗು ; ತಲೆದಿಂಬಾಗು : ರಾಜಪುತ್ರರು ಹೊಳೆವ ಪದಕದ ಕೊರಳ ತಲೆಗಿಂಬಾದ ತೋಳುಗಳ . . . ದಳಿತದಂಷ್ಟ್ರಾನನದಲೆಸೆದರು ಸಾಲ ಶಯನದಲಿ (ಕುವ್ಯಾ.ದ್ರೋ. ೫-೭೯). **ತಲೆಗಿಂಬು** = ತಲೆಗೆ ಆಶ್ರಯವಾದುದು ; ತಲೆದಿಂಬು : “ ಉಚ್ಛೀರ್ಷಕಂ, ಉಪದಾನಂ, ಉಪಬರ್ಹಂ – ಈ ೩ ತಲೆಗಿಂಬು ” (ಹಲಾಯು. ೫೨-೧೫೪) ; ಉಂಡೆಸುತ್ತಿ ಮೇಲುದನಾಗಳ್ ತಲೆಗಿಂಬುಮಾಡಿ ನೃಪಕುಲತಿಲಕಂ ಪಟ್ಟಿರ್ದನಿರ್ಪುದುಂ (ಕಾದಂಪೂ. ೬೫೦); ಕವಲಂಬುಂ ತಲೆಗಿಂಬಿನ ಕವುಳುಡೆ ಶರಮಂಚವೆರಸಿದರಲೆಯ ಹಾಸಂಬಿವು . . . ಬಿಡದೆಸೆದಿರೆ . . . ಶರಶಯನದೊಳಿರ್ದಂ (ಗದಾಯು. ೫-೩೯) ; ತಲೆಗಿಂಬನೆರಡು ದೆಸೆಯೊಳು ನಿಲಿಸುಗೆ (ಮದಶಿ. ೧೦-೨೩) ; ಸಂಬಳಿಗೆಯ ಪರ್ಣ ಚೂರ್ಣ ಕೊಂಬ ಕರ್ಪೂರಕರಂಡವ ಸ್ಮರನ ತಲೆಗಿಂಬಿನೊಳ್ ತಂದಿರಿಸಿದರು (ಮೋಹತ. ೧೬-೨೭); ನರ್ಸು ಒಳಗೆ ಹೋಗಿ ಒಂದು ಸಣ್ಣ ಹಾಸಿಗೆ, ಒಂದು ತಲೆಗಿಂಬು ತರುವಳು (ಉದಮ್ಮ. ೩). **ತಲೆಗೂಡುಗಟ್ಟು** = (ಗಿಡ, ಎಲೆ ಮೊದಲಾದವುಗಳ) ತುದಿಯು ಮುರುಟಿಕೊಳ್ಳು, – ಸುಕ್ಕುಗಟ್ಟು : ಬೀಜಗಳು ಮುಗ್ಗು ಹಾಯಿದಿದ್ದರೆ ಮುಂದೆ ಮೆಣಸಿನ ಗಿಡಗಳು ತಲೆಗೂಡುಗಟ್ಟಿ ಎಲೆಗಳು ಮುದುಡಿಕೊಂಡು ಗಿಡಗಳು ಕೆಡುವವು (ಕೃಷಿಪ್ರ. ೭೦). **ತಲೆಗೆ ಕಟ್ಟು** = ೧. (ಬಲಾತ್ಕಾರದಿಂದ ಜವಾಬ್ದಾರಿಯನ್ನು) ಹೊರಿಸು, – ಹೇರು : ಹಾಗೆ ಬಲಾತ್ಕಾರದಿಂದ ತನಗೆ ಕಟ್ಟಿದರೆ ಸಂತೋಷದಿಂದ ತಲೆಗೆ ಕಟ್ಟಿಸಿಕೊಂಡೇನು (ರಂಗಕ. ೫) ; ಆ ಮನೆಯನ್ನು ಅವರ ತಲೆಗೆ ಕಟ್ಟುವುದಕ್ಕೆ ಏಜೆಂಟ್ ಸರಿಯಾದ ಪೀಠಿಕೆ ಹಾಕಿದ್ದನು (ಯೋಧಪು. ೨೫) ; ತಲೆಗೆ ಕಟ್ಟಿದ ಅನೇಕ ಸಂಗತಿಗಳಿಗೂ (ನನ್ನಜೂ. ೩೨) ; ತಪ್ಪಿನ ಹೊಣೆಯನ್ನು ಅವನ ತಲೆಗೆ ಕಟ್ಟಿದರು (ರೂಢಿ). **ತಲೆಗೆ ಗಂಟುಹಾಕು** = ಹೊಣೆಯನ್ನು ಆರೋಪಣೆ ಮಾಡು : ಪಕ್ಕದ ಮನೆಯಲ್ಲಿ ಆದ ಕಳ್ಳತನವನ್ನು ಅವನ ತಲೆಗೆ ಗಂಟು ಹಾಕಿದರು (ರೂಢಿ). **ತಲೆಗೆ ತರು** = ಹಾನಿ ಉಂಟುಮಾಡು; ನಷ್ಟ ಉಂಟುಮಾಡು : ಪುಸ್ತಕವನ್ನು ಕಳೆದು ನನ್ನ ತಲೆಗೆ ತಂದಿಟ್ಟನು (ರೂಢಿ). **ತಲೆಗೆವರ್, ತಲೆಗೆಬರು** = ೧. ಪ್ರಾಣಾಪಾಯ ಒದಗು : ತಲೆಗೆ ವಂದುದೆಮೆಯೊಳ್ ಪೋದಂತೆ(ಚಿಕವಂ.೪೨-೧೪). ೨. ಹಾನಿಯಾಗು ; ತೊಂದರೆಯಾಗು ; ಅಪಾಯವಾಗು: ದುಷ್ಟನಿಗೆ ನೆರವಾಗಲು ಹೋಗಿ, ಈಗ ನನ್ನ ತಲೆಗೆ ಬಂದಿದೆ (ರೂಢಿ). **ತಲೆಗೆ ಹಚ್ಚಿಕೊಳ್ಳು** = ಯೋಚನೆ ಮಾಡು ; ಚಿಂತೆಮಾಡು : ಒಟ್ಟು ಎಷ್ಟು ಸಂಪಾದನೆಯಾಯಿತು ಒಂದನ್ನೂ ಇವರು ತಲೆಗೆ ಹಚ್ಚಿಕೊಂಡಿದ್ದಿಲ್ಲ (ಹೊಸಕ್ಷಿ. ೨೪೮). **ತಲೆಗೆ ಹತ್ತು** = ಅರಿವಿಗೆ ಬರು ; ತಿಳಿವಳಿಕೆಯುಂಟಾಗು : ಎಷ್ಟು ಬುದ್ಧಿ ಹೇಳಿದರೂ ಅವನ ತಲೆಗೆ ಹತ್ತಲಿಲ್ಲ (ರೂಢಿ). **ತಲೆಗೆ ಹಾಕಿಕೊಳ್ಳು** = ೧. ತಲೆಗೆ ಹಚ್ಚಿಕೊಳ್ಳು. ೨. ಗಮನ ಕೊಡು ; ಗ್ರಹಿಸು ; ಪರ್ಯಾಲೋಚಿಸು : ನಾಲ್ಕು ಲಾತ ಬಿಗಿದು ಇವನಿಗೆ ಬುದ್ಧಿ ಕಲಿಸೋದು ಬಿಟ್ಟು ಇವನ ಮಾತುಗಳನ್ನೆಲ್ಲ ತಲೆಗೆ ಹಾಕಿಕೊಳ್ಳುತ್ತಿರುವರಲ್ಲಾ ಎಂದು ಅಂದುಕೊಂಡರು (ಹೊಸಕ್ಷಿ. ೧೦೬). **ತಲೆಗೇರಿಸಿಕೊಳ್ಳು** = ಹೆಚ್ಚು ಪ್ರೀತಿಯಿಂದ ಕಾಣು ; ಅತಿ ಸಲಿಗೆಯನ್ನು

ಕೊಡಂ : ಆತ ಮಗಳನ್ನು ತುಂಬಾ ತಲೆಗೇರಿಸಿಕೊಂಡಿದ್ದ (ರೂಢಿ). **ತಲೆಗೇಱಿಸು, ತಲೆಗೇರಿಸು** = ೧. ತಲೆಯ ಮೇಲೆ ಇಡಂ ; ತಲೆಯಲ್ಲಿ ಧರಿಸಂ : ನೀಲಮಣಿ ತಲೆಗೇಱಿಸಿದ ತೃಣವದಕೆ ಸರಿಯೇ (ಕುವ್ಯಾದ್ರೋ. ೧-೩೪). ೨. ಹೆಚ್ಚು ಪ್ರೀತಿಯಿಂದ ಕಾಣು ; ಅತಿ ಸಲಿಗೆಯನ್ನು ಕೊಡು ; ಕಿಱಿಯಂದು ತಂದೆ ಬಗ್ಗಿಸಲಱಿಯನೆ ತಾಯ್ ಬಡಿದು ತಿಳಿಪಲಱಿಯಳೆ ವಿಷಯಕ್ಕೆಱಗಿದರಂ ತಲೆಗೇಱಿಸೆ ಕೊಱಚಾಡುವರೆಂದುಪಾಯದಿಂದೋದಿಸಿದೆಂ (ಸುಕುಮಾ. ೨-೬೨) ; ತಿಳಿಯದ ಮಗುವೆಂದು ಕರೆದುಕೊಂಡು ಬಂದು, ತಲೆಗೇರಿಸಿದಿರಿ (ವಾತ್ಸಲ್ಯ. ೩೬೫). **ತಲೆಗೇಱು, ತಲೆಗೇರು** = ೧. ತಲೆಗೆ ಹತ್ತು ; ತಲೆಯನ್ನು ಸೇರು : ಲಲನಾಮುಖೇಂದುಲಾವಣ್ಯಲೀಲೆಯಂ ಪಡೆವ ಬಣ್ಣದಿಂ ಕಂಪಿಂದೇನಲೆದುದೊ ಬಯ್ಯುಗದಂತಿರೆ ತಲೆಗೇಱುವ ಕುಸುಮನಿಚಯಮಂ ಕಾಶ್ಮೀರಂ (ಆದಿಪು. ೧೧-೧೨೪) ; ದೇವನ ತಲೆಗೇಱಿದ ಪುಷ್ಪಾಪಳಿಯಂ ಮುಟ್ಟಿ (ಸಮಪ. ೧-೧೨೦). ೨. ಅತಿಯಾಗು; ಮಿತಿಮೀರು; ಹೆಚ್ಚಾಗು; ನೆತ್ತಿಗೇರು : ನರಜನ್ಮದಲ್ಲಿ ಹುಟ್ಟಿ ಲಿಂಗಮುಖಿವನಱಿಯದೆ ಉದಮದ ಸೊಕ್ಕಿ ತಲೆಗೇಱಿತ್ತೆ ಅಯ್ಯಾ (ಬಸವ. ೫೮೫) ; ತಲೆಗೇಱಿ ಸೊಕ್ಕುತೊನೆವರ್ (ಸೋಮೇಶ. ৬৪) ; ಅತಿಭಕ್ತಿ ತಲೆಗೇಱಿ ಹಿರಿಯ ಮಾಹೇಶ್ವರರೆಂದು ಪೊಲೆಗಲಸಿ ಅವರ ಮನೆಯೊಳುಂಡುದಲ್ಲದೆ (ಬಸರ. ೧೧-೩೧) ; ತಲೆಗೇರುವನಕವೂ ಬಾಳಿನ ರಸಾಯನವ ಕುಡಿದು ಕುಣಿಯುವ ಹಿಗ್ಗು (ನವ್ಯಧ್ವ. ೩-೧); ಪುರುಷೋತ್ತಮನಿಗೆ ಸಿಟ್ಟು ತಲೆಗೇರಿತು (ಮೂರುದಾ. ೨೬೦) ; ಮದ್ಯ ತಲೆಗೇರಿರಬೇಕು(ಅಶ್ವಮ. ೧೧೨). **ತಲೆಗೊಂದು ಮಾತು**=೧. ಒಬ್ಬೊಬ್ಬರಿಗೆ ಒಂದೊಂದು ಮಾತು : ಅವರು ಬಂದು ತಲೆಗೊಂದು ಮಾತನ್ನು ಹೇಳಿ ಹೋದರು (ರೂಢಿ). ೨. (ಇಚ್ಛೆ ಬಂದಂತೆ) ಒಬ್ಬೊಬ್ಬರೂ ಆಡುವ ಮಾತು; ಒಮ್ಮತವಿಲ್ಲದ ಮಾತು : ಅಭಿಪ್ರಾಯ ಕೇಳಿದರೆ ತಲೆಗೊಂದು ಮಾತು ಆಡಿದರು (ರೂಢಿ). **ತಲೆ ಚಚ್ಚಿಕೊಳ್ಳು** = ೧. ತಲೆಯನ್ನು ಕುಟ್ಟಿಕೊಳ್ಳು : ಕೋಪದ ಭರದಲ್ಲಿ ತಲೆ ಚಚ್ಚಿಕೊಂಡನು (ರೂಢಿ). ೨. ತಿಳಿದುಕೊಳ್ಳಲು ಹೆಣಗು,–ತಿಣುಕು ; ಹೆಚ್ಚು ಆಲೋಚನೆಮಾಡು : ಏನು ಭಾಷೆಯೋ ಏನು ಜ್ಞಾನವೋ ನನಗೇನೋ ತಲೆ ಚಚ್ಚಿಕೊಂಡರೂ ತಿಳಿಯಲಿಲ್ಲ (ರಾಯಕ. ೫೮). **ತಲೆತಲಾಂತರ, ತಲತಲಾಂತರ** = ವಂಶಪರಂಪರೆ : ವೈರವೆಲ್ಲಿ ಅಡಗುತ್ತದೆ? ಅದು ತಲೆತಲಾಂತರದ ವರೆಗೆ ಬರುತ್ತದೆ (ವಚಥಾ. ೩೩೯) ; ಇಂಥ ವಾದಗಳು ತಲೆತಲಾಂತರದವರೆಗೂ ನಡೆದು ಬರುವುವು (ಸಾಹಿಸ. ೧೪೭) ; ತಲೆತಲಾಂತರದವರೆಗೂ ಸವೆಯದ ಐಶ್ವರ್ಯ ಸಿಕ್ಕುತ್ತದೆ (ಪಂಚಾಮ್ನ. ೭೬) ; ತಲತಲಾಂತರಗಳಿಂದ ಈ ಹಳ್ಳಿಯಲ್ಲಿಯೇ ವಾಸವಾಗಿದ್ದ ಒಂದು ದೊಡ್ಡ ಮನೆತನದ ಸೊಸೆ ಇಂದು ಹಳ್ಳಿಯನ್ನು ದಾಟಿದಳು (ಮಧ್ಯಮ. ೧೨೭) ; ಕೆಲವು ಪ್ರದೇಶಗಳಲ್ಲಿ ತಲತಲಾಂತರದಿಂದ ಬೆಳೆದು ಬಂದ ಆಹಾರ ಪದ್ಧತಿಗಳು ಆ ಪ್ರದೇಶದ ಜನಗಳ ಆರೋಗ್ಯಕ್ಕೆ ನೆರವಾಗದೆ ಇರುವುವು (ಗೃಹವಿ. ೧). **ತಲೆಬಾಲ** = ೧. ತಲೆ ಮತ್ತು ಬಾಲ : ಹಲಬರ ನುಂಗಿದ ಹಾವಿಂಗೆ ತಲೆಬಾಲವಿಲ್ಲ ನೋಡಾ (ಬಸವ. ೮೫೭). ೨. ಮೊದಲು ಮತ್ತು ಕಡೆ ; ಆದಿ ಮತ್ತು ಅಂತ್ಯ ; ಪೂರ್ವಾಪರ : ತಲೆಬಾಲವಿಲ್ಲದ ಮಾತು (ರೂಢಿ). **ತಲೆಬಾಲಂಗೆಡು**=ಹಿಂದು ಮುಂದು ತಿಳಿಯದಂತಾಗು; ಪೂರ್ವಾಪರ ವಿವೇಚನೆ ಇಲ್ಲದಂತಾಗು: ಪಾಪಂ ತಲೆಗಂಡ ಪಂದೆಯಂದದೆ ತಲೆಬಾಲಂಗೆಟ್ಟು ಜಗುಟ್ಟಿ ಕವಿಯುಂ ಕವಿಯೇ (ಧರ್ಮನಾ. ೧-೫೦). **ತಲೆ ಬಿರಿ** = ೧. ತಲೆಯಂ ಒಡೆ, – ಬಿರಂಕುಬಿಡು. ೨. ತಲೆ ಚಿಟ್ಟುಹಿಡಿ : ನರನು ನರನೆಂದು ಅನವರತ ತಲೆ ಬಿರಿಯೆ ಹೊಗಳುವಿರಿ (ಕಂನುಹು. ೧೨೩). **ತಲೆ ಬಿಸಿಮಾಡಿಕೊಳ್ಳು**=ಮನಸ್ಸಿಗೆ ಕ್ಲೇಶವುಂಟಾಗುವಂತೆ ಮಾಡಿಕೊಳ್ಳು; ಮನಸ್ಸು ವ್ಯಗ್ರವಾಗುವಂತೆ ಮಾಡಿಕೊಳ್ಳು; ಮನಶ್ಶಾಂತಿಯನ್ನು ಕಲಕಿಕೊಳ್ಳು : ನಾನು ಹಾಗೇನೂ ತಲೆ ಬಿಸಿ ಮಾಡಿಕೊಳ್ಳಲಾರೆನು. ತಿಳಿದಷ್ಟು ತಿಳಿಯುತ್ತದೆ (ಕುರುಕ್ಷಾ. ೩೫). **ತಲೆಬುಡ**=ತುದಿ ಮತ್ತು ಬುಡ; ಕಡೆ ಮೊದಲು; ಹಿಂದು ಮುಂದು; ಪೂರ್ವಾಪರ : ಈ ಪ್ರಶ್ನೆಯ ತಲೆಬುಡ ಗೊತ್ತಾಗದೇ ಗೊಂದಲದಲ್ಲಿ ಬಿದ್ದ ಮೋನಪ್ಪನಾಯ್ಕರು . . . ಕೇಳಿದರು (ಮೂರುದಾ. ೨೬೦). **ತಲೆ ಮಾಡಿಸಿಕೊಳ್ಳು** = ಕ್ಷೌರ ಮಾಡಿಸಿಕೊಳ್ಳು : ವೈದಿಕರು ಅಮಾವಾಸ್ಯೆಯ ದಿನ ತಲೆ ಮಾಡಿಸಿ ಕೊಳ್ಳುವುದಿಲ್ಲ (ರೂಢಿ). **ತಲೆಮೇಲೆ ನಿಲ್ಲು** = ಸಮೀಪದಲ್ಲಿದ್ದು ಬಲಾತ್ಕರಿಸು,– ಒತ್ತಾಯಮಾಡಂ : ಕೂಲಿಗಾರರು, ತಲೆ ಮೇಲೆ ನಿಂತಲ್ಲದೆ ಸರಿಯಾಗಿ ಕೆಲಸಮಾಡುವುದಿಲ್ಲ (ರೂಢಿ). **ತಲೆಮೇಲೆ ಬರು** = ೧. ತಲೆಯಂ ಮೇಲೆ ಬರು ; ತೀರ ಸಮೀಪಕ್ಕೆ ಬರು : ತಲೆ ಮೇಲೆ ಬರುವುದು ತನ್ನನು ತುಳಿದರು ಎಂದೆದ್ದ ದಾರಿಯ ಧೂಳು (ಇಂಚಾಪ. ೧೩೪–೫೯). ೨. ಅಪವಾದ ಬರು ; ಆಕ್ಷೇಪಣೆಯುಂಟಾಗು : ಕಳ್ಳತನದ ವಿಚಾರ ಅವನ ತಲೆಮೇಲೆ ಬಂದಿದೆ (ರೂಢಿ). **ತಲೆಯಂ ತೂಗು**= ೧. ತಲೆಯನ್ನು ತೂಗು,–ಆಡಿಸು. ೨. ಮೆಚ್ಚು : ತಲೆಯಂ ತೂಗುವ ನೊರ್ವನುರ್ವಿ ಕೆಲದೊಳ್ ಕಾಟ್ಟಿಬಟ್ಟಮಂ ಕಟ್ಟಿ ಕೋಟಲೆಗೊಂಡೂಟ್ಟಿವನೊರ್ವಂ (ಲೀಲಾವ. ೧-೪೦) ; ತಲೆಯಂ ತೂಗಿ ಬೆರಲ್ಗಳಂ ಮಿಡಿದು (ಜಗವಿ. ೫-೧೦೪). **ತಲೆಯ ತುರಿಸು** = ೧. ತಲೆಯನ್ನು ತುರಿಸಂ,–ಕೆರೆ : ನಾನವನ ಮನೆಯುಮಂ ಬಲಗಾಲು ಮುಂತಾಗಿ ಹೊಕ್ಕ ದಿನದಿಂದ ಬಲುಗೆಲಸವಲ್ಲದೆ ಯಿನಿಸು ತಲೆಯ ತುರಿಸುವೊಡೆ ಹೊತ್ತಂ ಕನಸಿನಲ್ಲಿಯು ಕಾಣೆ (ಸಮ್ಯಕ್ತಾ. ೮-೧೯). ೨. ಅಪಮಾನದ ಅರಿವನ್ನು ಪ್ರದರ್ಶಿಸು : ಯಾಕೋ ಹೀಗೆ ಮಾಡಿದೆಯೆಂದರೆ ತಲೆಯ ತುರಿಸುತ್ತಾ ನಿಂತು ಬಿಟ್ಟನು (ರೂಢಿ). **ತಲೆಯ ಮನೆ** = ಬೀದಿಯ ಮೊದಲ ಮನೆ: ಕೇರಿಯ ತಲೆಯ ಮನೆ (ಎಇ. XIII. ৬৭-৮৩ ; 1112). **ತಲೆಯ ಮೇಲೆ ಕೂಡಿಸಿಕೊಳ್ಳು** = ಅತಿ ಸಲಿಗೆಯನ್ನು ಕೊಡು : ಆತ ಚಿಕ್ಕವಯಸ್ಸಿನ ಮಕ್ಕಳನ್ನೆಲ್ಲಾ ತಲೆಯ ಮೇಲೆ ಕೂಡಿಸಿಕೊಂಡಿದ್ದಾನೆ. ಯಾರೂ ಅವನ ಮಾತು ಕೇಳುವುದಿಲ್ಲ (ರೂಢಿ). **ತಲೆಯ ಮೇಲೆ ಕೂರು** = ೧. ಸಮೀಪದಲ್ಲಿದ್ದು ಬಲಾತ್ಕರಿಸು, ಒತ್ತಾಯ ಮಾಡಂ : ತಲೆಯ ಮೇಲೆ ಕೂರದೆ ಕೆಲಸ ಬೇಗ ಆಗುವುದಿಲ್ಲ (ರೂಢಿ). ೨. ಮತ್ತೊಬ್ಬರ ಸಮೀಪದಲ್ಲಿದ್ದು ತೊಂದರೆಕೊಡು : ಈ ಕಷ್ಟಕಾಲದಲ್ಲಿ ಬಂಧುಗಳೂ ಬಂದು ತಲೆಯ ಮೇಲೆ ಕೂತಿದ್ದಾರೆ (ರೂಢಿ). ೩. ಅತಿ ಯಜಮಾನಿಕೆ ವಹಿಸು ; ಹೆಚ್ಚು ಸದರ ಮಾಡಿಕೊಳ್ಳು : ಸ್ವಲ್ಪ ಸಲಿಗೆ ಸಿಕ್ಕಿದರೆ ಸಾಕು ತಲೆಯ ಮೇಲೆ ಕೂರುತ್ತಾನೆ (ರೂಢಿ). **ತಲೆಯ ಮೇಲೆ ಕೈಯಿಡು** = ಇನ್ನೊಬ್ಬರ ತಲೆಯ ಮೇಲೆ ಕೈಯನ್ನು ಇಡು ; ಆಶೀರ್ವದಿಸು : ಗುರುಗಳು 'ಒಳ್ಳೆಯದಾಗಲಿ' ಎಂದು ಶಿಷ್ಯನ ತಲೆಯ ಮೇಲೆ ಕೈಯಿಟ್ಟರು (ರೂಢಿ). **ತಲೆಯ ಮೇಲೆ ಕೈ ಹೊರು**=ಅಸಹಾಯಕತೆಯಿಂದ ದಿಕ್ಕುತೋರದಂತಾಗು ; ದಾರಿ ಕಾಣದಂತಾಗು : ಆತ್ಮೀಯರ ಕೃತಘ್ನತೆ, ಸಾಲಗಾರರ ಉಪದ್ರ . . . ಇವುಗಳ ವಿಷಯವನ್ನೇ ತಲೆಯ ಮೇಲೆ ಕೈಹೊತ್ತು ಆಲೋಚಿಸುತ್ತಿದ್ದನು (ಇಪ್ಪಕ. ೨೬೩). **ತಲೆಯ ಮೇಲೆ ಮೆಣಸು ಅರೆ** = ಅತಿಯಾದ ಹಿಂಸೆಯನ್ನು ಕೊಡು,–ಕಿರುಕುಳವನ್ನು ಕೊಡು : ರಮಾಬಾಯಿಯವರೇ ಇವರ ತಲೆಯ ಮೇಲೆ ಮೆಣಸರೆದರು (ಸಮಜೀ. ೧೧೬) ; ಆ ಪುಂಡನನ್ನು ನೀವು ದಂಡಿಸದೆ ಹೀಗೇ ಬಿಟ್ಟರೆ ಆತ ನಮ್ಮ ತಲೆಯ ಮೇಲೆ ಮೆಣಸು ಅರೆಯುವನು (ಜೀವಪ್ರ. ೧೦೦). **ತಲೆಯ ಮೇಲೆ ಹೊತ್ತುಕೊಳ್ಳು** = ೧. ತನ್ನ ತಲೆಯ ಮೇಲೆ ಇಟ್ಟುಕೊಳ್ಳು,–ಹೊತ್ತುಕೊಳ್ಳು: (ಕ). ೨. ಹೆಚ್ಚು ಜವಾಬ್ದಾರಿಯನ್ನು ವಹಿಸಂ,– ಮುತುವರ್ಜಿ ವಹಿಸು. ೩. ಹೆಚ್ಚು ಪ್ರೀತಿಮಾಡು, – ಲಾಲನೆ ಮಾಡಂ, – ಮುದ್ದಿಸು: (ಕ). ೪. ಅನವಶ್ಯಕ ಪ್ರಾಧಾನ್ಯಕೊಡಂ. **ತಲೆಯೆಲ್ಲಾ ಮಾತನಾಡು** = ವಿಪರೀತವಾಗಿ ಮಾತನಾಡು ; ತಲೆಹರಟೆ ಹೊಡೆ : ಆ ಚಿಕ್ಕ ಹುಡುಗ ತಲೆಯೆಲ್ಲಾ ಮಾತನಾಡುತ್ತಾನೆ (ರೂಢಿ).

**ತಲೆಯೊಳಾಗು** = ಮನಸ್ಸಿನಲ್ಲಿ ಉಂಟಾಗು,–ಉತ್ಪತ್ತಿಯಾಗು : ಮಲಹರನ ಸದ್ಭಕ್ತಿ ನಿನ್ನಯ ತಲೆಯೊಳಾಯಿತೆ (ಬಸಪು. ೫೫-೧೩). **ತಲೆಯೊಳಾನು**=(ಅಪ್ಪಣೆ ಮೊದಲಾದುವನ್ನು ನೆರವೇರಿಸಲು) ಸಂತೋಷದಿಂದ ಒಪ್ಪಿಕೊಳ್ಳು, – ಶಿರಸಾ ವಹಿಸು : ಯುವರಾಜನೃಪಂ ನಯವಿನಯವಿನೂತಂ ತಲೆಯೊಳಾಂತು ಕೈಕೊಂಡು ಮಹೋತ್ಸವದಿಂದಂ ರಾಜಾದೇಶವನಾಗಳ್ ಬಿರ್ಚಿ ನೋಡಿ ತಾಂ ಬಾಚಿಸಿದಂ (ಕಾದಂಬ. ೨೫೭) ; ಭೂಪೋತ್ತಮನಾಜ್ಞೆಯಂ ತಲೆಯೊಳಾಂತು ಪದಾನತನಾಗಿ ಕಪ್ಪಮಂ ತೆತ್ತು (ಪಂರಾಮಾ. ೮-೨೬). **ತಲೆವಾರ** = ಮೇಲ್ಭಾಗದ ವರೆಗೆ ; ಪೂರ್ಣವಾಗಿ : ಮೂಗಿಯ ಮೂಗಂ ತಲೆವಾರ ಕೊಯ್ದು ತಲೆಯೊಂದಂ ಕಂಠದೊಳ್ ಕಟ್ಟಿ ಪಾಟಿಯನೊಕ್ಕಾಕೆಯನಂದು ಬಂಧುಜನಮೆಲ್ಲಂ ನಿಂದು ನೋಟ್ಪಾಕೆಯಂ . . . ಕಂಡು (ಸುಕುಮಾ. ೬-೨೯). **ತಲೆ ಹತ್ತರವ**=ಹತ್ತು ತಲೆಗಳನ್ನುಳ್ಳವನು ; ದಶಕಂಠ ; ರಾವಣ : ಬಲಿಯ ದಾನವ ಬೇಡಿ ನೆಲನ ಅಳೆದು ನಿಂದ ದಾಸಯ್ಯ ಬಂದ ಕಾಣೆ ಲಲನೆಯನೊಯ್ಕೆ ತಾ ತಲೆ ಹತ್ತರನ [ರವನ] ಕೊಂದ ದಾಸಯ್ಯ ಬಂದ ಕಾಣೆ (ಪುರಂದ. ೨-೩೬-೨). **[ದೇ.॥ ತಮಿ. ತಲೈ ; ಮಲ. ತಲ ; ಕೊಡ. ತಲೆ ; ತುಳು. ತರೆ ; ತೆಲು. ತಲ; ಕೊಲಾಮಿ. ನಾಯ್ಕಿ. ತಲ್; ಪರ್ಜಿ. ತೆಲ್; ಕುಯಿ. ತ್ಲೂ; ಕುವಿ. ತ್ರಾಯೂ ; ಮಲ್ತೊ. ತಲಿ ]**

**–ತಲೆ$_3$**(ಪ್ರ). ಒಂದು ನಾಮವಾಚಕ ಪ್ರತ್ಯಯಂ: 'ಅದಲೆ', 'ದಲೆ' ಪರಾ.

**ತಲೆಕಂಡಿಕೆ**(ನಾ). ಮೊದಲ ಭಾಗ(?): ರವಿಯಣಗೇರಿಯ ಹಾಳ ಹಸುಗೆಯ ಬಡಗಣ ತಲೆಕಂಡಿಕೆಯಲ್ಲಿ ಪಡೆದ ಮತ್ತರು ಮೂರು (ಎಇ. XVIII, ೧೮೫-೩೫ ; 1077). [ತಲೆ$_1$ + ಕಂಡಿಕೆ$_2$]

**ತಲೆಕಟ್ಟು**, ತಲೆಗಟ್ಟು (ನಾ). ೧. ತಲೆಯ ಪಟ್ಟಿ, –ಬಂಧನ : ಕಣ್ಮಲರಿಂ ಬಾಷ್ಪಾಂಬು ಕಯ್ಯಿಂ ಕಡಗವಡಿಗಳಿಂ ನೂಪುರಂ ವಕ್ತ್ರದಿಂ ಸುಯಿ ತಲೆಕಟ್ಟಿಂ ಮಾಲೆಪೂವಾಕೆಗಳ ಗಳಕದಿಂ ಬೀಳ್ವುದುತ್ತಾರ ಹಾರಂ (ಎಕ. VIII, ಸೊರಬ. ೧೯೦-೬ ; 1198) ; ಕೆಯ್ಯ ಗುಂಡಿಗೆ ಮೋಟು ಕುಂಚದ ಹರಿದ ತಟ್ಟುಮೆಯ್ಯ ಗೇಣುದ್ದದ ಮಲಂ ಹರಿದ ತಲೆಕ[ಪಾಠಾಂ. ಥ]ಟ್ಟು ಮಿಂಚುದಲೆ ಹಡಿಕೆವಾಯ್ ಹಗೆಹಲ್ಲುಗಳ ಮೋಟಿ (ಏಕಾಂರ. ಹ. ೨೮೬-೨); ತಲೆಕಟ್ಟು; ಬೆಸಕೋಲ್ (ಶಮದ. ೬೫ ಪ್ರಯೋ). ೨. ಕ, ಗ ಮುಂತಾದ ಅಕ್ಷರಗಳ ಮೇಲ್ಭಾಗದ ಅಡ್ಡ ಗೆರೆ ; ತಲೆಕೊಟ್ಟು : ಪೊಕ್ಕುಳು ತಲೆಕಟ್ಟುಮನನ್ತ್ಯಕ್ಕರದವಯವಮನಱಿದು ಖಣ್ಡರಿಸಲುಕೀ ಇಕ್ಕುಡನೆ ಬಲ್ಲಂ (ಎಕ. XI, ದಾವಣ. ೦೧೯-೨೫ ; 1113) ; ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಟಿ ಚೆಲ್ವು ಮಾತ್ರೆಯೊಳ್ ನಿಂದ ಬೆಡಂಗು (ಪುಷ್ಪಪು. ೧೯-೫೮) : ಪ್ರಾಚೀನ ಹಳಗನ್ನಡ ಲಿಪಿಗಳಲ್ಲಿ ಅಕ್ಷರಗಳಿಗೆ ತಲೆಕಟ್ಟು ಇಲ್ಲ (ಭಾಷಾಶಾ. ೧೩೩) ; ಮುದ್ರಣಕ್ಕೂ ಲಿಪಿಯಂತ್ರಕ್ಕೂ ತೊಡಕೆನಿಸುವ ತಲೆ ಕಟ್ಟು, ಇಳಿ . . . ಅಡಿಯೊತ್ತುಗಳು ಕನ್ನಡದ ಬರವಣಿಗೆಯ ವೈಶಿಷ್ಟ್ಯಗಳು (ಸಂಶೋಧ. ೫). ೩. ಶಿರೋನಾಮೆ ; ಶೀರ್ಷಿಕೆ : ಈ ನಾಟಕಕ್ಕೆ ನಾಮಧಾರಿಯೆಂಬ ಹೆಸರೂ ಆ ಸೂತ್ರದ ವಿವರಣೆಯೆಂದು 'ಅಂದರೆ ರಾವ ಸಾಹೇಬ' ಎಂಬ ಹೆಸರೂ ಈ ನಾಟಕದ ತಲೆಕಟ್ಟಾಗಿ ಬಂದಿದೆ (ಸಾಸಮಾ. ೬೦). ೪. ತುದಿ ; ಅಂಚು : ನಮ್ಮ ಗದ್ದೆಯ ತಲೆಕಟ್ಟಿನಲ್ಲಿ ಒಂದು ಹೊಂಗೆ ಮರವಿದೆ (ರೂಢಿ). **ತಲೆಗಟ್ಟು** : ೧. ತಳರ ತಲೆಗಟ್ಟು ದಂತದ ಬಳೆ ಕತ್ತುರಿ ಬೊಟ್ಟುಮುತ್ತಿನೇಕಾವಳಿ ಬಿಲ್ ಪೊಳೆವಂಬು ಬೆನ್ನನಿಡುಬತ್ತಳಿಕೆ ವಿರಾಜಿಸೆ ಪುಳಿಂದನಂದೊಳಪೊಕ್ಕಂ (ರಾಜಶೇ. ೫-೨೮). [ತಲೆ$_1$ + ಕಟ್ಟು$_2$]

**ತಲೆಕಡಿ** 'ತಲೆಗಡಿ' ನೋ.

**ತಲೆಕರಡು** (ನಾ). (ಕರಾ) ತಲೆಯ ಕೆಟ್ಟು ಹೋಗುವಿಕೆ ; ತಲೆ ಬೇಸರ. [ತಲೆ$_1$ + ಕರಡು$_3$]

**ತಲೆಕಳಸ** (ನಾ). ತಲೆಯ ಮೇಲಿರುವ ಕಲಶ; ವೀರರ ಒಂದು ಲಾಂಛನ (?) : ಬಲಿಪಟ ಹನುಮನ ಬಾಲ ಚಬುಕು ಕೊಳ್ಳಿ ತೊಲಗದ ಕಂಭ ಮುಂದುಳಿವ ತಲೆಕಳಸದ ಬಿರಿದಿನ ಹರಿಗೆಯ ಮುಂದಿ ಕಲಹಕ್ಕೆ ಪೊಱಮಟ್ಟರೊಸೆದು (ಕುರಾಸಾಂ. ೧೧-೩೩). [ತಲೆ$_1$ + ಕಳಸ (= ಕಲಸ)]

**ತಲೆಕಾಪು** 'ತಲೆಗಾಪು' ನೋ.

**ತಲೆಕಾಯಿ** (ನಾ). ತಲೆಬುರುಡೆ ; ℗ ತಿರಸ್ಕಾರ, ತೆಗಳಿಕೆ ಮುಂತಾದುವನ್ನು ಸೂಚಿಸುವ ಸಂದರ್ಭದಲ್ಲಿ ಬಳಸುವ ಶಬ್ದ : ಹೇಳೋದೇನಿದೆ ಮೈದುನ ಬಾಬು, ಅವನ ತಲೆಕಾಯಿ (ಸಾಹೇಬ್. ೪೧೯). [ತಲೆ$_1$ + ಕಾಯಿ$_4$ (<ಕಾಯ್$_4$)]

**ತಲೆಕುಡಿ** (ನಾ). ವಂಶದ ಕುಡಿ ; ವಂಶದ ಬೆಳವಣಿಗೆ ; ಸಂತಾನ : ಕುಲವನಿತೆಯರ ಕೂಟದಿಂದವೆ ಕುಲದ ತಲೆಕುಡಿ ಹಬ್ಬುವುದು (ಕುವ್ಯಾವಿ. ೦೭೩. ೨-೪೬). [ತಲೆ$_1$ + ಕುಡಿ$_2$]

**ತಲೆಕುತ್ತು** 'ತಲೆಗುತ್ತು$_1$' ನೋ.

**ತಲೆಕೂಗು** (ನಾ). ಹೆಚ್ಚು ಗದ್ದಲ ; ದೊಡ್ಡ ಗಲಾಟೆ : ಕೊಂಬು ತಮಟೆಯ ಧ್ವನಿ ಹಾ ಹೊ ಧ್ವನಿಗಳಿಂದ ತಲೆಕೂಗನ್ನು (ದೊಡ್ಡ ಗದ್ದಲ) ಆರಂಭಿಸಿದರು (ಹುಟ್ಟಿಹ. ೨೬). [ತಲೆ$_1$ + ಕೂಗು$_2$]

**ತಲೆಕೂದಲು** 'ತಲೆಗೂದಲ್' ನೋ.

**ತಲೆಕೂಳು** (ನಾ). ಬುದ್ಧಿ ; ಯೋಚನೆ (?) : ತಲೆಕೂಳ ಸಂಭ್ರಮಕೆ ನಲಿನಲಿದು ನಿಂದನು ಚೆಲುವ ಗುರು ಬಸವಣ್ಣ ಯೋಗಿನಾಥ (ಬಸಸ್ತೋ. ೮೬). [ತಲೆ$_1$ + ಕೂಳು$_2$ (<ಕೂಳ್$_1$)]

**ತಲೆಕೆಡಿಸು** 'ತಲೆಗೆಡಿಸು' ನೋ.

**ತಲೆಕೆಡು** 'ತಲೆಗೆಡು' ನೋ.

**ತಲೆಕೆದರು** 'ತಲೆಗೆದಱು' ನೋ.

**ತಲೆಕೆರೆ** (ಕ್ರಿ) ೧. (ಉಗುರು ಮೊದಲಾದುವುಗಳಿಂದ) ತಲೆಯನ್ನು ಕೆರೆ, – ಗೀರು ; ತುರಿಸು : ತಲೆಯಲ್ಲಿ ನವೆಯುಂಟಾಗಿ ಮಗು ತಲೆ ಕೆರೆಯುತ್ತಿದೆ (ರೂಢಿ). ೨. ಕ್ಷೌರಮಾಡು; ತಲೆ ಬೋಳಿಸು : ಕ್ಷೌರಿಕರಿಗೆ ತಲೆಕೆರೆಯುವುದು ವೃತ್ತಿ (ರೂಢಿ). ೩. (ಅಲಂ) ತಲೆಯನ್ನು ಬಾಚು. ಕೂದಲನ್ನು ಬಾಚಿ ಹೆಣೆ ; ಸಾಯಂಕಾಲವಾದರೂ ತಲೆಕೆರೆದುಕೊಂಡಿಲ್ಲ (ರೂಢಿ). ೪. ವಿಚಾರಕ್ಕೆ ಒಳಗಾಗು ; ಆಲೋಚಿಸು : ನಾನು ತಲೆ ಕೆರೆದುಕೊಂಡೆ, ಬುದ್ಧಿಯನ್ನು ಅತ್ತಿತ್ತ ಓಡಿಸಿದೆ (ನಾಪೋಲೀ. ೯೨). ೫. ದೈನ್ಯವನ್ನು ತೋರು ; ಬೇಡು : ಮೆಚ್ಚಕ್ಕಾಗಿ ರಾಮಪ್ಪ ತಲೆ ಕೆರೆಯಬೇಕಾಗಿರಲಿಲ್ಲ (ಒಡ್ಡಿಉ. ೪೪). [ತಲೆ$_1$ + ಕೆರೆ$_1$]

**ತಲೆಕೇಣಿ** (ನಾ). (ಯುದ್ಧದಲ್ಲಿ) ತಲೆಯನ್ನು ಮಾಸಲಾಗಿಡುವಿಕೆ ; ತಲೆಯನ್ನು ಒತ್ತೆಯಿಡುವಿಕೆ: ಬೆರದುದುಭಯರ ಚೂಣಿ ಮೂದಲೆವೆರದ ಬೆಡಗಿನ ವಾಣಿ ನಮ್ಮ ಸಮರಕೆ ಖುದುವೇ ಬೋಣಿ ಕೊಂಬೆವು ಭಟರ ತಲೆಕೇಣೀ (ಕೃಕರ್ಣಾ. ೬-೬೬). [ತಲೆ$_1$ + ಕೇಣಿ$_3$]

**ತಲೆಕೊಟ್ಟು** (ನಾ). = ತಲೆಕಟ್ಟು ೨: ಇದು ಅಕ್ಷರಗಳ ತಲೆಯ ಮೇಲೆ ಕೊಡುವ ಚಿಹ್ನೆಯಾಗಿ 'ತಲೆಕೊಟ್ಟು' ಎಂಬ ರೂಪವನ್ನು ಒಪ್ಪಬಹುದು (ಸಂಶೋಧ. ೧೯). [ತಲೆ$_1$ + ಕೊಟ್ಟು$_1$]

**ತಲೆಕೊಡವು** 'ತಲೆಗೊಡಪು' ನೋ.

**ತಲೆಕೊಡಹು** 'ತಲೆಗೊಡಪು' ನೋ.

**ತಲೆಕೊಡು** 'ತಲೆಗೊಡು' ನೋ.

**ತಲೆಕೊಳ್ಳಿ** 'ತಲೆಗೊಳ್ಳಿ' ನೋ.

**ತಲೆಕೊಳ್ಳಿಇರಿ** 'ತಲೆಗೊಳ್ಳಿಇಱಿ' ನೋ.

**ತಲೆಕೋವೆ** (ನಾ). ಮಕ್ಕಳಿಗೆ ತಲೆಯಲ್ಲಿ ಉಂಟಾಗುವ ಒಂದು ಬಗೆಯ ಬಾವು, – ಗುಳ್ಳೆ : (ಶ). [ತಲೆ$_1$ + ಕೋವೆ$_4$]

**ತಲೆಗ** (ನಾ). (?) : ತಲೆಗರ ಸಿಕ್ಷಿತ ಬಲು ಹೊಱಿ ಬಂದು ಗೆಲವಾವುದು ತಾಂ ಚರಿಸಲಿಕಿಂದು ಸಲೆ ಕೃತ ದುಷ್ಕೃತ ಚಿಂತೆಗೆ ಸಂದು ಫಲವಾವುದು ನಿರ್ಜಿಣ ನಿನಗೊಂಕು (ಅವಧೂ. ೪೭) ; ಸಾರಂಗ ಅಂಕವಿಲಲಾಟನಂ ಜೂಟನಂ ಸಾರಂಗ ತನುಜವಾಮಾಂಗನಂ ಭಂಗನಂ ಸಾರಂಗತೇಜ ಅಜವಲಿಗನಂ ತಲೆಗನಂ ಸಾರಂಗ ಮೌಲಿ ತ್ರಾಹಿ (ಜಿಬಪು. ೬೩-೭೭ ಬ). [ ? ]

**ತಲೆಗಂಟು** (ನಾ). ಕೂದಲಿನ ಗಂಟು ; ತುರುಬು : "ತಲೆಗಂಟು; ತುರುಬು" (Chignon. ಇಂಕನಿ.). [ ತಲೆ$_1$+ಗಂಟು ]

**ತಲೆಗಂಡುಹಾಕು** (ಕ್ರಿ). "ಮರದ ಬುಡವನ್ನು ಕಡಿದು ಉರುಳಿಸಿದ ನಂತರ ಸಿವುಡಿನ ಮೇಲಿರುವ ಕೊಂಬೆ ರೆಂಬೆಗಳನ್ನು ತಲೆಕಡೆಯಿಂದ ಕಂಡುಂಹಾಕುವುದು, ಅಂದರೆ ಬೇಕಾದ ಅಳತೆಗೆ ತುಂಡು ತುಂಡು ಮಾಡುವುದು" (ನನ್ನೂರು. ಟಿಪ್ಪಣಿ) : ಮಧ್ಯಾಹ್ನ ಹಿಟ್ಟು ಉಣ್ಣುವುದರೊಳಗೆ ತಲೆಗಂಡುಹಾಕಿ ಮನೆಗೆ ಬರುತ್ತಿದ್ದರಂತೆ (ನನ್ನೂರು. ೧೪೩).
[ ತಲೆ$_1$ + ಕಂಡು$_2$ (<ಕಂಡ$_1$) + ಹಾಕು (<ಪಾಯ್ಕು$_1$) ]

**ತಲೆಗಂದಾಯ** (ನಾ). ಪ್ರತಿಯೊಬ್ಬ ವ್ಯಕ್ತಿಯೂ ಕೊಡಬೇಕೆಂದು ವಿಧಿಸುವ ತೆರಿಗೆ; ಹಿಂದಿನ ಕಾಲದಲ್ಲಿ ಮುಸಲ್ಮಾನ ದೊರೆಗಳು ಹಿಂದೂಗಳ ಮೇಲೆ ವಿಧಿಸುತ್ತಿದ್ದ ಕಂದಾಯ ; ಜಿಜಿಯಾ ಎಂಬ ತೆರಿಗೆ : ಕಾಲಕ್ರಮದಲ್ಲಿ ಅವರಲ್ಲಿ ಅನೇಕರು ತಲೆಗಂದಾಯವನ್ನು ತಪ್ಪಿಸಿಕೊಳ್ಳಲು ಇಸ್ಲಾಂ ಮತವನ್ನು ಸ್ವೀಕರಿಸಿದರು(ತತ್ವಪ್ರಾ. ೫೩೫): ಮೊದಲು ಮೊದಲಿನ ಮುಸಲ್ಮಾನ್ ದೊರೆಗಳು ಹಲವರು, ಹಿಂದೂಗಳು ಒಂದು ತಲೆಗಂದಾಯವನ್ನು ಮಾತ್ರ ಒಪ್ಪಿಸಿ ತಮ್ಮಷ್ಟಕ್ಕೆ ತಾವು ಇರಲು ಬಿಟ್ಟರೆಂದು ಇತಿಹಾಸ ಹೇಳುತ್ತದೆ (ಭಾರದ. ४೧೪). [ತಲೆ$_1$+ಕಂದಾಯ]

**ತಲೆಗಟ್ಟಿಸು** (ಕ್ರಿ). ತಲೆಗೆ ಪೆಟ್ಟುಕೊಡಂ ; ತಲೆಗೆ ತಾಗು : ಅವನು ಯಾವ ದಿಕ್ಕಿಗೆ ಉಡ್ಡಾಣಮಾಡಬೇಕೆಂದರೂ . . . ಹಲಧರಗೋಷ್ಠಿಯ ಬೃಹದ್ಭಿತ್ತಿಯೇ ಎದುರಾಗುತ್ತದೆ; ತುಸು ಮಿಸುಗಹೋದರೂ ಅದು ತಲೆಗಟ್ಟಿಸುತ್ತ ಇರುತ್ತದೆ (ಇಪ್ಪಳ. ४೦೭).
[ ತಲೆ$_1$ + ಗಟ್ಟಿಸು$_2$ (<ಘಟ್ಟಿಸು) ]

**ತಲೆಗಟ್ಟು** 'ತಲೆಕಟ್ಟು' ನೋ.

**ತಲೆಗಡಿ, ತಲೆಕಡಿ** (ಕ್ರಿ). ತಲೆಯುನ್ನು ಕಡಿ ; ರುಂಡವನ್ನು ಕತ್ತರಿಸಂ,– ತುಂಡರಿಸು : ಸುಗ್ಗಗಾವುಣ್ಣನ ಮಗ ಬಸವನ × × ದೆ ಮುಂದೆಣ್ಣರ ಮಾರುಗ ತಲೆಗಡಿದಂ (ಎಕ. V, ಅರಸೀ. ೧೭೫-೩ ; 908) ; ವಾನರರ ಕರಡಿಗಳ ಕೊಂಡಿನ್ನೇನು ಫಲ ರಾವಣನ ತಲೆಗಡಿದೇನು ಲಂಕೆಯನೊಯ್ದು ನೀರೊಳಗದ್ದಿ ಫಲವೇನು (ಕಾಶಿರಾ. ೨೨-೭೦) ; ರಣಮಹಾಮಾರಿಯ ಮುಂದೆ ಬೊಬ್ಬಿಱಿದು ತೋಱಿದು ಕೋಣನ ತಲೆಗಡಿವಂತೆ ಹರಾರಿ ಖಂಡಿಸಿದ ಖಂಡೆಯದೆ (ವೀರಹತ. ೧೨-೭೭) ; ತೊಡಂಕಿದ ವೀರನನಡಂಗೆ ಪೊಯ್ದು ಮಂಚಿಸಿ ಪಾಯ್ದು ವೀರನಂ ಸಂಚಮಱಿದೆಱಗುವ ತೊಲಗದೆ ನಿಂದ ವೀರನಂ ತಲೆಗಡಿದುರುಳ್ಚುವ (ರಾಜಶೇ. ೬-೧೦ ವ) ; ಬಿದ್ದ ಕಿವಿನುಡಿ ಬಾಯ್ಗಳಿಂ ಬೆಳೆದು ಕಣ್ಣಿಲ್ಲದಿದ್ದುದಂ ತಲೆಗಡಿಯುತಿಲ್ಲದೆಯೆ ಬಾಳ್ಗಂ (ಕಾಲೂರ. ೧೦೭-೨೦೫). **ತಲೆಕಡಿ :** ಪಾನನಿರೋಧಕ್ಕೆ ಮುನ್ನ ಕುಡಿಯುವುದು ಎಂದರೆ ತಲೆಕಡಿದಷ್ಟು ಕೆಟ್ಟದ್ದು ಎಂಬ ಭಾವನೆಯಿತ್ತು (ನನ್ನೂರು. ೩೦೫). [ ತಲೆ$_1$ + ಕಡಿ$_2$ ]

**ತಲೆಗಡಿಕ, ತಲೆಗಡುಕ** (ನಾ). ತಲೆಯುನ್ನು ಕಡಿಯುವವನು: ಮೂರನೆಯ ತಲೆಗಡಿಕನು ಸ್ವಾತಂತ್ರ್ಯ ದೇವತೆಯ ಅಚ್ಚಿಯ ಮಗ (ದೇಕನ್ನ. ೧೨೨). **ತಲೆಗಡುಕ :** ಆಳ ತಲೆಗಡುಕ × × × ಹಿಡಿದೊರೆವೊ × × × ಪಕಡುವ × × × ಗಳವಳಿಸಿ ನಗುವರೊದ್ದರರಾವೊಳಿಯ (ಎಕ. XVI, ತುಮಕೂ. ೧೦೦-೨೦ : 1163). [ ತಲೆ$_1$ + ಕಡಿಕ$_2$ ]

**ತಲೆಗಡಿತ** (ನಾ). ತಲೆಯುನ್ನು ಕಡಿಯುವಿಕೆ; ರುಂಡವನ್ನು ತುಂಡರಿಸುವಿಕೆ : ಕೋಲವುಳಿಗಱಿವಸುರರಾಯನ ತೋಳುಗಳಿಗೊಮ್ಮೊಮ್ಮೆ ಮುಂಡದಲೇಳುವಗಣಿತ ತಲೆಗಡಿತಕೊಮ್ಮೊಮ್ಮೆ ಮಾರ್ಗಣವ ಬೀಳುಗೊಡುತಿರ್ದನು (ತೊರರಾ. ೬-೫೧-೨೦). [ ತಲೆ$_1$ + ಕಡಿತ$_2$ ]

**ತಲೆಗಡುಕ** 'ತಲೆಗಡಿಕ' ನೋ.

**ತಲೆಗಡ್ಡಣೆ** (ನಾ). ಜಡೆಗಟ್ಟಿದ ತಲೆಯಂ ಕೂದಲಂ: ಗಣನೆಗೈದದ ಹಗಲ ಹಿರಿಯುಬ್ಬಣದ ಕನಕದ ಝಗೆಯ ತಲೆಗಡ್ಡಣೆಯ ನೇಣಿನ ಹೊಗರ ಮೋಱಿಯ ಕಂಪಿನಾಲಿಗಳ (ಕುಮ್ಮಾಭೀ. ೩-೧೦).
[ ತಲೆ$_1$ + ಕಡ್ಡಣೆ$_0$ (<ಕಡ್ಡಣ) ]

**ತಲೆಗರೆ** (ಕ್ರಿ). ತಲೆಯುನ್ನು ಮರೆಸಿಕೊಳ್ಳು ; ಅಡಗಿಕೊಳ್ಳು ; ಮರೆಯಾಗಂ; ಕಾಣದಂತಾಗಂ : ನೆಗಟ್ದರಿಗನ ಸಾಹಸವೊರ್ಮೆಗೊರ್ಮೆ ಕೆಲದವರ ಮಾತಿನೊಳ್ ತನ್ನ ಮನಂ[ಬು]ಗೆ ಮಂತ್ರಪದಕ್ಕುರಗಂ ಸುಗಿವಂತೆವೊಲಗಿದು ಸುಗಿದು ತಲೆಗರೆದಿರ್ಪಂ (ಪಂಪಭಾ. ೭-४೩) ; ಪಡುವಣ ಕಡಲ್ವುಗೆ ಪರಿವ ಬೆಳ್ದಿಂಗಳ ಬೆಳ್ವೊನಲೊಳುರ್ವಿದ ಬೊಬ್ಬುಳಿಕೆಗಳಂತೆ ತಾರಗೆಗಳ್ ತಲೆಗರೆಯೆ(ಕಾದಂಉ.४೨೯);ದಿನಕರನುಂ ಹಿಮಕರನುಂ ಘನಾಘನಾಂತರಿತರಾದರೆನೆ ತಲೆಗರೆದರ್ (ಪಂರಾಮಾ. ೩-೨೭) ; ತಲೆಗರೆಯದೆ ಪೊಕ್ಕು ಹೊಯ್ದಾಡಿ ರಣದೊಳು ತಲೆಗೊಟ್ಟ ವೀರ ಭಟರನು ತಲೆದಡವುತ ಕೊಂಡೊಯ್ದರು ಸಗ್ಗದ ತಲೆವೆಣ್ಣಳು ತವಕದಲಿ (ಕುರಾಸಾಂ. ೧೨-೮೭) ; ಕುಟುಕುವ ಕೀಟದ ಕಾಟದ ಭಯದಿನ್ ತಲೆಗರೆದೋಡುತು ಮೋಡುತುಮಿರ್ಪಳ್ (ಬದ್ಮಪ್ರ. ೩೦-೬೭೮). [ ತಲೆ$_1$ + ಕರೆ$_3$ ]

**ತಲೆಗವಿ** (ಕ್ರಿ). ತಲೆಯುನ್ನು ಮುಚ್ಚಿಕೊಳ್ಳು ; ತಲೆಯುನ್ನು ಮರೆಮಾಡಿಕೊಳ್ಳು: ಯುಧಿಷ್ಠಿರಂ ತಲೆಗವಿವ[ಪಾಠಾಂ. ಯು]ನಲ್ಲದೆಯುಮೇವದೊಳ್ ತಲೆಗವಿದು ಸಿಗ್ಗಂ ಕೊಂಡಾಡಿ ನೆತ್ತಮನಾಡಿ (ಪಂಪಭಾ. ೭-೨ ವ).
[ ತಲೆ$_1$ + ಕವಿ$_1$ ]

**ತಲೆಗಳಚು** (ಕ್ರಿ). ತಲೆಯುನ್ನು ಕಳಚಂ; ತಲೆಯುನ್ನು ಇಳುಹಂ ; ಕೊಲ್ಲು : ವೈರಿಗಳನೈವರಂ ನಳಿನಾಕ್ಷ ಕೊಡನೆಂಬುದಂ ಬಲ್ಲೆ ಸೇನೆಯಂ ತಲೆಗಳಚಿದನೆ ಸಾಕು ತಪ್ಪಲ್ಲ ಬವರದೋಳ್ಗುರುಸುತನಿಗಿಂದಧಿಕರುಯಿಳೆಯೊಳಿನ್ನಿಲ್ಲ (ತುರಂಗ. ೭೭. ೫೫). [ ತಲೆ$_1$ + ಕಳಚು (<ಕಟಲ್ಚು$_1$) ]

**ತಲೆಗಳ್ಳ** (ನಾ). (ಪ್ರಾಣಭಯದಿಂದ) ತಲೆ ಮರೆಸಿಕೊಳ್ಳುವವನು ; ಜೀವಗಳ್ಳ : ಅಳ್ಳೆದೆಯ ಮನ್ನೆಯರನೊಗ್ಗಿನ ಡೊಳ್ಳುಗರ ಕಟವಾಯ ಕೊಯ್ ತಲೆಗಳ್ಳರಿವದಿರು ತಱುಚುಗೆಡೆವರ ಹೋಗಹೇಳೆನುತ (ಕುಮ್ಮಾದ್ರೋ. ೩-೨೦). [ ತಲೆ$_1$ + ಕಳ್ಳ$_1$ ]

**ತಲೆಗಾ, ತಲೆಗಾಯ್, ತಲೆಗಾಯಿ**(ಕ್ರಿ). ತಲೆಯುನ್ನು ಕಾಪಾಡಂ; ಜೀವವನ್ನು ರಕ್ಷಿಸು : ಮೂರ್ಧಾಭಿಷಿಕ್ತರ ಮುಡಿಗಟ್ಟಿನ ಪಟ್ಟಿಗಳನುಗಿಪಟಂಗೊಂಡು ತಲೆಗಾದು ಕಳಿಪಿ (ಜಗವಿ. ೦೫-೫ ವ) ; ಎಲವೋ ಮರುಳೆ ಮಿಾಱಿದಡಿಂದುಧರ ತಲೆಗಾವಡೀಗಳೆ ಕೊಂದಡಲ್ಲದೆ ಬಿಡೆನು (ಕುಮ್ಮಾದ್ರೋ. ೧೧-೧४) ; ಮರ್ಕಟಂಗಳೆ ನೆನೆದು ನೋಡುವುದೇನು ಸಾಱಿದೆ ಹೋಗಿ ತಲೆಗಾವೆ (ಕಾಶಿರಾ. ೧೯-४೧). **ತಲೆಗಾಯ್ :** ಧರ್ಮಮೆ ತಲೆಗಾಯ್ಗುಂ (ಅಜಿಪು. ೨-೭೭) : ತಲೆಗಾಯೆನ್ನಯ ದೈವಮಲ್ಲಿ ಮೊದಲೊಳ್ ತಳ್ತಿಲ್ಲಿ ಕಾರುಣ್ಯದಿಂ ಸಲೆ ನೀಂ ಕಾಯೆ ಬರ್ದುಂಕಿದೆಂ (ಕುಸುಮಾ. ೧೧-೨೫) ; ತಲೆಗಾಯೀ ಭಟನಂ ಪೊಣರ್ಚಿ ಪೊಡೆದಿಕ್ಕೀ ದ್ರೋಹನಂ (ಅನಂಪು. ೧೧-೫೭): ರಾಮಕಟಕದ ಹಾನಿಯನು ತಲೆಗಾಯ್ದು ಜಾಂಬವಗೇನು ಕೊಱತೆಯೆನುತ್ತ ಜಱಿದನು ಗರುಡಿಯಾಚಾರ್ಯ (ಕುಮ್ಮಾಭೀ. ೧-೩೭) ; ದ್ರೋಹಿದೈತ್ಯನ ಸೀಳಿದವಮರವ್ಯೂಹವನು ತಲೆಗಾಯ್ದು (ಕಾಶಿರಾ. ४೩-४४). **ತಲೆಗಾಯಿ :** ತಾಯೆ ಬಾರೆ ಕುಮಾರನ ತಲೆಗಾಯಿ ಎಂಬಂತೆ ಕಾಡಹೊ ಕ್ಕೆಯ ಲಿಂಗವ ಪೂಜಿಸುವಾತನ ಭಕ್ತನೆಂಬರು (ಅವಚಂ. ೯೧-४೦೭); ಸಂಗರದ ಭೂರಿಶ್ರವನ

ಖಡುಗದ ಕರವ ಕತ್ತರಿಸಿದನು ತಲೆಗಾಯಿದನು ಸಾತ್ಯಕಿಯ (ಕುಮಾವ್ಯಾದ್ರೋ. ೧೪-೧೩) ; ರಾಯ ರಘುಪತಿ ವನದೊಳಗೆ ವಜ್ರಾಯುಧನ ನಿಜನಂದನನ ತೃಣಸಾಯಕದಲಿಟ್ಟೊಡನೆ ತಲೆಗಾಯಿದನು ಕರುಣದಲಿ (ತೊರರಾ. ೩-೭ ಸೂಚನೆ). [ ತಲೆ$_1$ + ಕಾ$_1$ ]

**ತಲೆಗಾಣ್** (ಕ್ರಿ). ಎದುರಿಗೆ ಕಾಣು : ಪಾವಂ ತಲೆಗಂಡ ಪಂದೆಯಂದದೆ ತಲೆಬಾಲಂಗೆಟ್ಟು ಜಗುಟ್ಟಿ ಕವಿಯುಂ ಕವಿಯೇ (ಧರ್ಮನಾ. ೧-೫೦).

[ ತಲೆ$_1$ + ಕಾಣ್ ]

**ತಲೆಗಾಪು,** ತಲೆಕಾಪು (ನಾ). ೧. ಮುಖ್ಯವಾದ ಕಾವಲು ; ಅಂಗ ರಕ್ಷಣೆ. **ತಲೆಕಾಪು** : ೨. ತಲೆಯ ರಕ್ಷಣೆಗಾಗಿ ಧರಿಸುವ ಟೊಪ್ಪಿಗೆ ; ಶಿರಸ್ತ್ರಾಣ : (ಸಿಪಾಯಿಗಳು, ಬೆಂಕಿ ಆರಿಸುವವರು ಮೊದಲಾದವರ) ತಲೆ ಕಾಪು; ಸೀಸಕ; ಶಿರಸ್ತ್ರಾಣ (Helmet. ಇಂಕನಿ.).

**ತಲೆಗಾಪಿನಾಳ್** = ಅಂಗರಕ್ಷಣೆಗೆ ಇರುವ ಆಳು ; ಅಂಗರಕ್ಷಕ : ತಲೆದೆಸೆಯೊಳಿರ್ದ ಕರವಾಳಂ ಕೊಂಡು ನಿಂದ ನೆಱೆಯೊಳಳರದಿರ್ದ ತಲೆಗಾಪಿನಾಳುಕ್ಕಡದಾಳ ಮೇಲಿಕ್ಕಿ ಉಕ್ಕಡದಾಳ್ ಘರವಟ್ಟಿಗೆಯಾಳ ಮೇಲಿಕ್ಕಿ (ಗದಾಯು. ೯-೩೩ ವ). [ ತಲೆ$_1$ + ಕಾಪು ]

**ತಲೆಗಾಯ್** 'ತಲೆಗಾ' ನೋ.

**ತಲೆಗಾಯಿ** 'ತಲೆಗಾ' ನೋ.

**ತಲೆಗಿರಿ** (ಕ್ರಿ). ತಲೆಯನ್ನು ಬೋಳಿಸು ; ಕೂದಲನ್ನು ತೆಗೆ ; ಕ್ಷೌರ ಮಾಡು : ತಲೆಗಿರಿ(ಱಿ)ದುಟ್ಟು[ಪಾಠಾಂ. ಗೆದಱುಟ್ಟು]ಕಾಸೆಯನೊಡಲ್ ಕುಸಿವಂತಿರೆ ನೊಂದು ಚಿತ್ತದೊಳ್ (ಜೀವಸಂ. ೮೯-೪೩) ; ತಲೆಗಿರಿದು ಕೃಷ್ಣಂಗೆ ತಲೆಗೊಳ್ಳಿ ಇಱಿದೊಡವನಳಲಿ ಕಿಚ್ಚಂ ಹಾಯ್ದರೆ (ಸಾನಂಜ. ೩-೧೩೦). [ ತಲೆ$_1$ + ಕಿರಿ$_1$ ]

**ತಲೆಗುಡಿಸಲು** (ನಾ). ಎತ್ತರದಲ್ಲಿ ಕಟ್ಟಿರುವ ಗುಡಿಸಲು ; ಅಟ್ಟಣೆಯ ಮೇಲೆ ಕಟ್ಟಿರುವ ಗುಡಿಸಲು : ಮೇಲೊಂದು ತಲೆ[ಪಾಠಾಂ. ಹುಲು] ಗುಡಿಸಲಂ ಕಟ್ಟಿ ಕಾಯುತ್ತಿರ್ದನಿರುಳು ಹಗಲೆನ್ನದೆ (ಹಚಕಾ. ೧೧-೪೩).

[ ತಲೆ$_1$ + ಗುಡಿಸಲು (<ಗುಡಿಸಿಲ್) ]

**ತಲೆಗುಡು** 'ತಲೆಗೊಡು' ನೋ.

**ತಲೆಗುಡ್ಡೆ** (ನಾ). ತಲೆಗೆ ಸುತ್ತುವ ಸಣ್ಣ ವಸ್ತ್ರ ; ತಲೆವಸ್ತ್ರ : (ಕ).

[ ತಲೆ$_1$ + ಗುಡ್ಡೆ$_2$. / ತಮಿ. ತಲೈಕ್ಕುಟ್ಟೈ ]

**ತಲೆಗುತ್ತ,** ತಲೆಗುತ್ತು$_2$ (ನಾ). ೧. ತಲೆಬೇನೆ ; ತಲೆನೋವು : ರಸಿಯಿಸಿದೊಡೆ ತಲೆಗುತ್ತಂ ಮಸಗಿದೊಡೆಗ್ಗುವೊಡೆ ತಿರಿಗಿ ಕೆಡೆವೊಡೆ . . . ರಾಸ್ನಾದಿ ತೋಯಮಂ ಕುಡೆ ತೀರ್ಗುಂ (ಲೋಕೋಪ. ೯-೨೩೯). **ತಲೆಗುತ್ತು$_2$** : ೧. ಈ ಪ್ರಕಟಣೆಗಳು ಸೇರಿ ಪೋಲಿಸರಿಗೆ ತಲೆಗುತ್ತನ್ನು ಒದಗಿಸುತ್ತಿದ್ದವು (ಧೂಮಮ. ೮೯). ೨. ಅಪಮಾನ: ನಿನಗೆ ಸಾರಥಿಯಾದ ಬಾಹಿರತನವೆ ಶಾನದು ಸಾಲದೇ ಬೇಱೆನಗೆ ತಲೆಗುತ್ತಾವುದೆನುತವೆ ಬಿಸುಟು ವಾಘೆಯುವ (ಕುಮಾವ್ಯಾಕ. ೯-೩೭). [ ತಲೆ$_1$ + ಕುತ್ತ ]

**ತಲೆಗುತ್ತಿಸು** (ಕ್ರಿ). (ನಾಚಿಕೆ, ಅವಮಾನಗಳಿಂದ) ತಲೆ ತಗ್ಗಿಸುವಂತೆ ಮಾಡು; ತಲೆಯುನ್ನು ಬಗ್ಗಿಸುವಂತೆ ಮಾಡು: ದಶಕಂಧರನ ತಲೆಗುತ್ತಿಸಿದನಾಹವದೊಳಿಂದ್ರನು ಬಾಹುಸತ್ವದಲಿ (ಉತ್ತರಾ. ೩೩-೮೫) ; ಮೊಳೆನಗೆ ಮಿನುಗೆ ಹಾಸ್ಯವ ನುಡಿದಾಕೆಯ ತಲೆಗುತ್ತಿಸಿದಳೇನನೆಂಬೆ (ಕಂನವಿ. ೬-೧೬೦). [ ತಲೆಗುತ್ತು$_1$ + – ಇಸು$_3$ ]

**ತಲೆಗುತ್ತು$_1$,** ತಲೆಕುತ್ತು (ಕ್ರಿ). ೧. ತಲೆಯನ್ನು ತಗ್ಗಿಸು; ತಲೆಬಾಗಿಸು: ಎಡೆಯೊಳ್ ದೂಂಟಿಂದೆ ದೂಂಟಿಂಗೆ ಪೆರ್ವಱಿಯಂ ಪೊಯ್ಸಿ ಕೆಲಕ್ಕೆ ನಾಣ್ಚಿ ತಲೆಗುತ್ತಿಪಾರ್ಕೆಯೇಂ ಜೋಡೆಯೇ (ಪಂಪಭಾ. ೪-೮೩); ಲಜ್ಜೆಯಿನವಳ್ ತಲೆಗುತ್ತಿದಳ್ (ನಳಚಂ. ೧೩೫) ; ಈಶನ ಬಗೆಯ ಭಾವವನಱಿದು ತಲೆಗುತ್ತಿದನು ಕಮಲಭವ (ಕುಮಾವ್ಯಾಕ. ೬-೨೩) ; ಒತ್ತಿ ಕಾಲಿಡಲೊಡನೆ ಗಿರಿ ತಲೆಗುತ್ತುತಿರ್ದುದು (ತೊರರಾ. ೪-೧೩-೩೪) ; ನೀಚೋಕ್ತಿಯ ದನಿಯನು ಕೇಳಿ ತಲೆಗುತ್ತಿ ಲೋಚನ ತಪ್ತವಾರಿಯನು ಭೂಚಕ್ರದೊಳು ಹರಿಸುವ ದುಕ್ಕಿಯ ಕಂಡು (ಮೋಹತ. ೧೦-೧೪). ೨. (ಮತ್ತೊಬ್ಬರ) ತಲೆಯನ್ನು ಹೊಡೆ, – ಪೆಟ್ಟುಕೊಡು : (ಕ). **ತಲೆಕುತ್ತು** : ೧. ಅವಳು ತಲೆಕುತ್ತಿ ಕರತಳದಲ್ಲಿದ್ದ ಪವಲಿಕಾಯಿಗಳನ್ನು ನೋಡಿದಳು (ಹುಲಿಹಾ. ೩೬೩). [ ತಲೆ$_1$ + ಕುತ್ತು$_1$ ]

**ತಲೆಗುತ್ತು$_2$** 'ತಲೆಗುತ್ತ' ನೋ.

**ತಲೆಗುತ್ತುಗೆ** (ನಾ). ತಲೆಯನ್ನು ತಗ್ಗಿಸಿರುವಿಕೆ ; ತಲೆ ಬಾಗಿರುವ ಸ್ಥಿತಿ : ಹೊತ್ತ ಮೋನದ ವಿವಿಧ ವಾದ್ಯದ ಕೆತ್ತ ಬಾಯ್ಗಳ ಪಾಠಕರ ತಲೆಗು[ಪಾಠಾಂ. ಕೈಹ]ತ್ತುಗೆಯ ಮೋಱೆಯ ಮಹೀಪತಿ ಹೊಕ್ಕನರಮನೆಯ (ಕುಮಾವ್ಯಾದ್ರೋ. ೧-೧೧). [ ತಲೆಗುತ್ತು$_1$ + – ಗೆ ]

**ತಲೆಗುದುರೆ** (ನಾ). ಉತ್ತಮವಾದ ಕುದುರೆ; ಶ್ರೇಷ್ಠವಾದ ಕುದುರೆ: ನೂಱಾರು ಕುದುರೆಯ ತಲೆ[ಪಾಠಾಂ. ಲ]ಗುದುರೆಯ ರೂಪ ಮಿಗಿಱಿ ಪೊಗಳಲಳವಲ್ಲ ಮೂಱುಲೋಕದ ಚೆಲ್ವ ತಲೆಗುದುರೆಯ ಕಣ್ಣೂಱಿ ಪೊಗಳಲೊರ್ವರಳವೆ (ಕುರಾಸಾಂ. ೯-೩೭). [ ತಲೆ$_1$ + ಕುದುರೆ ]

**ತಲೆಗುಸಿ** (ಕ್ರಿ). ತಲೆಯನ್ನು ತಗ್ಗಿಸು, – ಬಾಗಿಸು : ನಗುತಾಕೆ ತಲೆಗುಸಿದಳು ಕೂಡೆ (ಭರಚ. ೩೮-೧೧೫). [ ತಲೆ$_1$ + ಕುಸಿ$_1$ ]

**ತಲೆಗೂದಲ್,** ತಲೆಕೂದಲು, ತಲೆಗೂದಲು (ನಾ). ತಲೆಯ ಕೂದಲು: ಗಾಳಿಯಿಂ 'ಲೆಗೂದಲಲುಗಲು (ಬಸಪು. ೨೦-೧೩). **ತಲೆಕೂದಲು** : " ಚಿಕುರಃ . . . ಶಿರೋರುಹಃ – ೬ ತಲೆಕೂದಲು, ಮಂಡೆಗೂದಲು " (ಸಿದ್ಧಾಂಶಿ. ೧೭೦) ; ತಲೆಕೂದಲಿಲ್ಲದವಳು ತುರುಬು ಬಯಸಿದಳಂತೆ (ಗಾದೆ). **ತಲೆಗೂದಲು** : ಆ ಯುವಕನ ತಲೆಗೂದಲು ತೆರೆತೆರೆಯಾಗಿದ್ದು, ರೂಪರೇಖೆಗಳು ಮನೋಹರವಾಗಿದ್ದುವು (ಪುನರು. ೨೩೭).

**ತಲೆಗೂದಲಂತರ**=ಬಹಳ ಸೂಕ್ಷ್ಮವಾದ ಅಂತರ : ಜೀವಕೆ ಸಾವಿಗೆ ತಲೆಗೂದಲಂತರವೆನ್ನುವುದರಿವಾಯಿತಾಗ (ಇಂಜಾಪ. ೪೦-೮೯).

[ ತಲೆ$_1$ + ಕೂದಲ್ (<ಕೊಂದಲ್) ]

**ತಲೆಗೂದಲು** 'ತಲೆಗೂದಲ್' ನೋ.

**ತಲೆಗೆಡಹು** (ಕ್ರಿ). ತಲೆಯನ್ನು ಕೆಡಹು, – ಬೀಳಿಸು ; ಕೊಲ್ಲು : ಅಱಿಯ ಬಹುದಿನ್ನು ಕೇಳ್ನಿನ್ನ ತಲೆಗೆಡಹದೊಡೆ ಕುಱುಹಿಟ್ಟು ನೀನಾಡಿದಿನಿತೆಲ್ಲವಂ ದಿಟಂ ಮಱೆಯದಿರ್ಸಕು (ಜೈಮಿಭಾ. ೧೭-೫೬).

[ ತಲೆ$_1$ + ಕೆಡಹು (<ಕೆಡಪು) ]

**ತಲೆಗೆಡಿಸು,** ತಲೆಕೆಡಿಸು (ಕ್ರಿ). ೧. ಹೆಚ್ಚು ವಿಚಾರಕ್ಕೆ ಒಳಗುಮಾಡು ; ಹೆಚ್ಚು ಆಲೋಚನೆಯುಂಟುಮಾಡು ; ಕ್ಷೋಭೆಗೊಳಿಸು : ಮನುಷ್ಯನಿಗೆ ಮುಂಬರುವ ಸಂಗತಿಗಳ ಅರಿವಿದ್ದಿದ್ದರೆ, ಮಂದಿಯ ಮತ್ತು ಜನಾಂಗಗಳ ತಲೆಗೆಡಿಸುವ ಈ ಸಮಸ್ಯೆಗಳು ಮೂಡುತ್ತಲೇ ಇರಲಿಲ್ಲ (ಕಾಲಯಾ. ೨). **ತಲೆಕೆಡಿಸು** : ೧. ಹೋಗು ತಲೆಕೆಡಿಸಿಕೊಳ್ಳಬೇಡ (ಬೆಟ್ಟಹೊ. ೫೨); ಸಾಂಪತ್ತಿಕ ವ್ಯವಹಾರಗಳ ವಿಷಯಕ್ಕೆ ಎಂದೂ ಭವಾನಿಚರಣ ತಲೆಕೆಡಿಸಿಕೊಳ್ಳುವ ಪ್ರಸಂಗವೇ ಬರುತ್ತಿರಲಿಲ್ಲ (ಇಪ್ಪಕ. ೩೫೫). ೨. ಬುದ್ಧಿಯನ್ನು ಪರಿವರ್ತಿಸು ; ಬುದ್ಧಿಭ್ರಮಣವಾಗುವಂತೆ ಮಾಡು ; ಬುದ್ಧಿವಿಕಲ್ಪವಾಗುವಂತೆ ಮಾಡು ; ಹುಚ್ಚುಹಿಡಿಸು : ಎಲ್ಲಿಂದಲೋ ಬಂದ ಈ ಬೈರಾಗಿ ಮುಕ್ತಾದೇವಿಯ ತಲೆಕೆಡಿಸಿದ್ದಾನೆ (ಆಶ್ರಮ. ೧೧). ೩. (ಆಲಂ) ಊಹೆ, ಭಾವನೆಗಳು ಬದಲಾಗುವಂತೆ ಮಾಡು ; ಅಭಿಪ್ರಾಯಗಳು ವ್ಯತ್ಯಾಸವಾಗುವಂತೆ ಮಾಡು ; ದುರ್ಭಾವನೆಯುಂಟುಮಾಡು : ಕಾರ್ಯಾರಂಭಕ್ಕೆ ಮುಂಚೆಯೇ ಈ ಜನರ ಸಹವಾಸ ನನ್ನ ತಲೆಕೆಡಿಸಬಹುದು (ಪುನರು. ೩೩೮).

[ ತಲೆಗೆಡು + – ಇಸು$_3$ ]

**ತಲೆಗೆಡು,** ತಲೆಕೆಡು (ಕ್ರಿ). (ಅಲಂ) ಬುದ್ಧಿಗೆಡು; ಬುದ್ಧಿ ವಿಕಲ್ಪವಾಗು; ಭ್ರಾಂತಿಯುಂಟಾಗು: ತಲೆಗೆಟ್ಟುದ ತಲೆವಿಡಿದೆ ನೆಲೆಗೆಟ್ಟುದ ನಿರ್ಧರಿಸಿದೆ (ಅವಚಿಂ. ೩೦೯-೯೪೩): ತಲೆ ತಲೆಗೆ[ಪಾಠಾಂ. ಗೊ] ಟ್ಟೋಡುವ ಕೋಟಲೆಗಾಱದೆ ತದ್ಗಿರೀಂದ್ರಮಂ ಸಾರ್ದುರ್ (ವರ್ಧಪು. ೧೦-೮೩): ನೆಲೆಗೆಟ್ಟೆಂ ನೀತಿಗೆಟ್ಟೆಂ ಮಱೆದು ಮಿಗೆ ಮನಂಗೆಟ್ಟೆನಾನು ಬುಗೆಟ್ಟೆಂ ತಲೆಗೆಟ್ಟೆಂ ತಂದೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೫೩): ಇಂದಿನ ರಣದಿ ಕಾಣ್ಬೆ ನಿನ್ನ ತಲೆಗೆಟ್ಟನಲೆಯಾ ಕಟ್ಟೆರ್ಪ ಕತೆಯ ಪೊಳ್ಕಂ! (ಶ್ರೀರಾಮಾ. ೬೫೫-೩೧೦); ಎದ್ದವನು ತಲೆಗೆಟ್ಟು ಒಂದೇಟು ಹೊಡೆದೇ ಬಿಟ್ಟನು (ಕಾಲೂರ. ೧೬, ಕಥಾಸಾರ). **ತಲೆಕೆಡು:** ಅವಳ ರೂಪಾತಿಶಯದಿಂದ ಅವನಿಗೆ ತಲೆಕೆಟ್ಟಿದೆ (ಸಂಸಕ. ೧೦೦).

[ ತಲೆ$_1$ + ಕೆಡು$_1$ ]

**ತಲೆಗೆದರ,** ತಲೆಗೆದರಿ (ನಾ). ೧. ಒಂದು ಬಗೆಯ ಸಸ್ಯ: "ಮುಕ್ತಕೇಶೀ— ತಲೆಗೆದರ" (ಓಷಧಿ. ೧೩೬). **ತಲೆಗೆದರಿ:** ೨. ಒಂದು ಬಗೆಯ ಸಸ್ಯ: ಔಡಲದೆಣ್ಣೆ, ಒಳ್ಳೆಣ್ಣೆ, ಬೇವಿನೆಣ್ಣೆ, ಇಪ್ಪೆಯೆಣ್ಣೆ, ಹೊಂಗೆಯೆಣ್ಣೆ ಇವು ಐದನ್ನು ಸಮಾನಂಗೊಂಡು, ತಲೆಗೆದರಿ(ಸಹಮೂಲ), ನುಗ್ಗಿಬೇರು . . . ಇವಂ ಇಡಿದು (ಸಕವೈ. ೧೭೮).

**ತಲೆಗೆದರಿ** 'ತಲೆಗೆದರ' ನೋ.

**ತಲೆಗೆದರು** 'ತಲೆಗೆದಱು' ನೋ.

**ತಲೆಗೆದಱು,** ತಲೆಕೆದರಂ, ತಲೆಗೆದರು (ಕ್ರಿ). ತಲೆಯನ್ನು ಕೆದರು; ಕೂದಲನ್ನು ಅಥವಾ ಗರಿಗಳನ್ನು ಬಿಚ್ಚಿಕೊಳ್ಳು,–ಹರಡಿಕೊಳ್ಳು: ಗಱಿ ಮೂಡಿದೊಡಾಗಳಂತೆ ತಲೆಗೆದಱಿ [ಪಾಠಾಂ. ಗೇಱಿ] ಕರಂ ಮೆಱೆವೀ ಪೊಂಗೇದಗೆಯೊಳ್ಗಱಿಯೊಳ್ ಗಱಿಗಟ್ಟಿ ಮಾಱವೇ ಮಿಕ್ಕಲರಂ (ಜಗವಿ. ೧೪-೮೩); ಭೂಪಾಲಕರು ತಲೆಗೆದಱಿ ಹುಯ್ಯಲನಾಲಿಸುತ ಹೊಱಮಂಟು ತಳಕೆಳಕಾಯ್ತು ನೃಪಕಟಕ (ಕುವ್ಯಾದ್ರೋ. ೮-೪೪); ತಲೆಗೆದಱಿ ತೆಗೆದೋಡುವಮರಾವಳಿಯನುಱಿ ಸದೆಬಡಿದು (ತೊರರಾ. ೧-೧೧-೧೧); ಮಾಂಟುವಗ್ಗದ ಶೋಕದಿಂದಿರದೆ ಪೊಱಮಟ್ಟು . . . ಏಳುತ್ತೆ ಬೀಳುತ್ತೆ ತಲೆಗೆದಱಿ ಬಾಯ್ಬಿಡುತ್ತೆ (ಜೈಮಿಭಾ. ೩೧-೫೪). **ತಲೆಕೆದರು:** ಬಾಳೆ ಬಾಳ್ಮಸೆಯುವುದು ತೆಂಗು ತಲೆಕೆದರುವುದು (ಕಾಲೂರ. ೧೧೩-೩೩೪). **ತಲೆಗೆದರು:** ಪರದೇಶದಲ್ಲಿ ಹಸಿವು ನೀರಡಿಕೆಗಳಿಂದ ಬಳಲಿ ತಲೆಗೆದರಿ ಕಂಗೆಟ್ಟು ಹೋಗಿದ್ದ ಅವರನ್ನು ನೋಡಿ . . . ಧೈರ್ಯ ಹೇಳಿದನು (ವಚಭಾ. ೩೦೮): ಕ್ರಾಂತಿ ಎಂಬುವ ಭೂತ ತಲೆಗೆದರಿ ಹುಚ್ಚೆದ್ದು ಸುತ್ತುತಿದೆ ಭೀಮ ಛಾಯೆಯ ಚೆಲ್ಲಿ (ಪಾಂಚಜ. ೫೩-೭). [ ತಲೆ$_1$ + ಕೆದಱು$_1$ (<ಕೆದಱ್$_1$) ]

**ತಲೆಗೆಲ** (ನಾ). ತಲೆಯ ಪಕ್ಕ; ತಲೆಯ ಒಂದು ಬದಿ,–ಮಗ್ಗುಲು: ತಲೆಗೆಲದೊಳು ಕೈಯಿತ್ತವಳ್ಮಾನವ ತಳೆದಿರ್ದಳೀನ ಬಣ್ಣಿಸುವೆ (ಕಂಸವಿ. ೯-೧೭೩). [ ತಲೆ$_1$ + ಕೆಲ$_1$ ]

**ತಲೆಗೇಡು** (ನಾ). ತಲೆಗೆ ಕೇಡು; ಜೀವಕ್ಕೆ ತೊಂದರೆ,–ಅಪಾಯ: ಎಲ್ಲಿಗಾದರೂ ಓಡಿ ತಪ್ಪಿಸಿಕೊಳ್ಳುವ, ಬಾ! ತಡೆದರೆ ತಲೆಗೇಡು (ಚಂದ್ರಸ. ೧೦೦). [ ತಲೆ$_1$ + ಕೇಡು ]

**ತಲೆಗೇರಿ** (ನಾ). ತಲೆ ಸುತ್ತುವಿಕೆ; ತಲೆ ಗಿರಕಿ ಹೊಡೆಯುವಿಕೆ; ಬವಳಿ ಬರುವಿಕೆ: ಮೊಟ್ಟಮೊದಲು ತರಗತಿಯ ಒಳಗೆ ಕಾಲಿಟ್ಟಾಗ ವಾಸುವಿಗೆ ನಿಜವಾಗಿಯೂ ತಲೆಗೇರಿಯೇ ಬಂದುಬಿಟ್ಟಿತು (ಬಾಡಿಬ. ೪೩).

[ ತಲೆ$_1$ + ಗೇರಿ (<ಘೇರಿ) ]

**ತಲೆಗೊಡ** (ನಾ). ಆನೆಯ ಕುಂಭಸ್ಥಳ: ಅಲರಂಬನಾನೆಯ ತಲೆಗೊಡದೊಳು ಕಣ್ಗೊಳಿಪ ಮಲ್ಲಿಗೆಯುಚ್ಚನನೆಯ ಬಲುಮಾಲೆಯೆನೆ ಬಗೆಗೊಂಡುದಾ ಬಾಲೆಯ ನೆಲೆಮೊಲೆಯೊಳು ತೋರ ಹಾರ (ಕುರಾಸಾಂ. ೨೯-೯೧); ಮೊಲೆ ತಲೆಗೊಡ ತೋಳ್ಗೊಂಡಿಲು ಜೌವನ ಬಲುಮದ ಕಾಮರಾಯನಿಗೆ ಸಲೆ ಸಂದ ಪಟ್ಟದಾನೆಗಳೆನೆ ಗಣಿಕಾಲಲನೆಯರೆಸೆದರರ್ತಿಯಲಿ (ಕಂಸವಿ. ೬-೧೦೬). ☞ಇದು 'ಶಿರಃಕುಂಭ' ಎಂಬುದರ ಅನುವಾದ.

[ ತಲೆ$_1$ + ಕೊಡ$_2$ ]

**ತಲೆಗೊಡಪು,** ತಲೆಕೊಡವು, ತಲೆಕೊಡಹು, ತಲೆಗೊಡಹು (ಕ್ರಿ). ೧. ತಲೆಯನ್ನು ಕೊಡಹು,–ಅಲ್ಲಾಡಿಸು: ಕಡುಗಾದ ಪಡೆವಣಿಗೆ ತಲೆಗೊಡುಪುತ್ತಂ ಭಯಮನುಳಿದು ಪುಗೆ ಸೋಗೆಯು ಸೊಂಪಡರ್ದ ಪೊಸ ಪೀಲಿಯೊಳ್ ಫಣಿ ಬಿಡದುರಿದುದು(ರಾಜಶೇ. ೫-೪೩). **ತಲೆಕೊಡವು:** ೧. ರಾಮದಾಸ ತಲೆಕೊಡವಿ ಹೇಳಿದ (ಅಶ್ವಮ. ೧೧೪). **ತಲೆಕೊಡಹು:** ೧. ತಿಳಿಯದವರು ಆಗಬಹುದು ಎಂದು ತಲೆಕೊಡಹಿದರು (ಜಯಂತ. ೨೨೬). ೨. ತಲೆಯ ಕೂದಲನ್ನು ಕೊಡಹು: ಅಭ್ಯಂಜನ ಸ್ನಾನವಾದ ಮೇಲೆ ಚೆನ್ನಾಗಿ ತಲೆಕೊಡಹಬೇಕು (ರೂಢಿ). ೩. ಚಿಂತೆಯನ್ನು ದೂರಮಾಡು: ಆ ವಿಷಯದ ಬಗ್ಗೆ ಯಾವ ತೀರ್ಮಾನವೂ ದೊರಕದಿದ್ದುದರಿಂದ ಅದರ ಬಗ್ಗೆ ತಲೆಕೊಡಹಿಕೊಳ್ಳಲು ಆತ ಪ್ರಯತ್ನಪಟ್ಟ (ರೂಢಿ). **ತಲೆಗೊಡಹು:** ೧. ಮದದಿಗುದಂತಿಕುಲ ತಲೆಗೊಡಹೆ ಕಮಲಭವಾಂಡಮಂಡಲ ಜಡಿಯೆ ಜರಿದುದು ಧರಣಿ ಸೇನಾಗಣದ ಭಾರದಲಿ (ತೊರರಾ.೬-೧-೧೨); ಚತುರಂಗಬಲಭಾರದಿಂ ತಲೆಗೊಡಹೆ ದಿಶಾದಂತಿಗಳು (ಕುರಾಸಾಂ. ೧೯-೭). ೪. (ತಲೆ ಅಲ್ಲಾಡಿಸುವುದರ ಮೂಲಕ) ಅಸಮ್ಮತಿ ಸೂಚಿಸು; ಒಪ್ಪಿಗೆ ಇಲ್ಲವೆಂದು ಸೂಚಿಸು: ಹಿರಿದು ಪರಿತಾಪದಲಿ ದೇಹವನುರುಹಿಕೊಂಡು ಪುರಾರಿ ಶಂಕರ ಹರ ತ್ರಿಯಂಬಕಯೆನುತ ತಲೆಗೊಡಹಿದನು ಕಲಿಹನುಮ (ತೊರರಾ. ೫-೨-೮೨); ನೃಪನ ಮಾತಂ ಕೇಳ್ದು ವಾಜಿ ತಲೆಗೊಡಹಿ ಮುರರಿಪುವನೀಕ್ಷಿಸುವಭಿಪ್ರಾಯಮಂ ಮೋದದಿಂ ವಿಪುಲಮತಿ ನಕುಲಂಗೆ ಸೂಚಿಸಿದೊಡೆ (ಜೈಮಿಭಾ. ೩೪-೧೩).

**ತಲೆ ಕೊಡಹಿಕೊಂಡೇಳು** = ಚೇತರಿಸಿಕೊಂಡು ಏಳು; ಎಚ್ಚೆತ್ತುಕೊಳ್ಳು: ಚಿಂತಾಮಗ್ನನಾಗಿದ್ದವನು ತಲೆ ಕೊಡಹಿಕೊಂಡೆದ್ದನು (ರೂಢಿ).

[ ತಲೆ$_1$ + ಕೊಡಪು ]

**ತಲೆಗೊಡಹು** 'ತಲೆಗೊಡಪು' ನೋ.

**ತಲೆಗೊಡು,** ತಲೆಕೊಡು, ತಲೆಗುಡು (ಕ್ರಿ). ೧. ತಲೆಯನ್ನು ಇಡು,–ಇಟ್ಟುಕೊಳ್ಳು; ಒಡ್ಡು: ಧ್ರುವದ ನೆಲೆಗೆ ತಲೆಗೊಟ್ಟು ತಿರುಗೆ ತಿರುಗುವುದು ತಿರೆಯು ಪ್ರೀತಿ (ಅರಳು. ೪೯-೧೧). ೨. ತಲೆಯನ್ನುಕೊಡು; ಬಲಿಯಾಗು; ಆಹುತಿಯಾಗು; ಅಸು ನೀಗು: ಇರದೆ ಚಕ್ರಕ್ಕೆ ತಲೆಗೊಟ್ಟ ನಾಗಾರ್ಜುನಂ (ಸಿದ್ಧರಾ. ೧-೧೧); ಬೀರರ್ಸನ ಕೂಡೆ ತಲೆಗೊಟ್ಟು ಆತಂಗೆ ನೆತ್ತರುಗೊಡಗೆ . . . ಬಂಮರ್ಸರು ಕೊಟ್ಟ . . . ಭೂಮಿ (ಎಕ. VIII, ಸಾಗರ. ೧೧೯-೧೯; ಸು. 1250); ದ್ರೋಣ ಭೀಷ್ಮರುಗೂಡ ತಲೆಗೊಟ್ಟೆ ಸಱಲಿ ತಾ ಮಾಡಿತೇನರಸಂಗೆನುತ ಮಱುಗಿದನು ಕಲಿಕರ್ಣ (ಕುವ್ಯಾಕ. ೨೭-೭); ತೊಳಗುವ ದೀಪಶಿಖೆಗೆ ಬಂದು ಹರಣವನಳಿವ ಪತಂಗದಂತೆನ್ನ ಲಲಿತಾಂಗ ಲಾವಣ್ಯಲಹರಿಗೆ ಮೋಹಿಸಿ ತಲೆಗೊಡಬೇಡೆಂದಾಡಿದನು (ಕುರಾಸಾಂ. ೩೪-೭೬); ಕಾದ ಕಂಪಿಲರಾಯ ಭೇದವೇನರಿಯದಲೆ ಛೇದಿಸಲು ಸಿರವ ಹೇಳಿಸಿದ ಮಗರಾಮು ಸಾಧು ಶಿವನೆಂದು ತಲೆಗೊಟ್ಟ (ಜನಗೀ. ೬೯). ೩. ತಲೆಯ ಮೇಲೆ ಹೊರು,–ಹೊತ್ತುಕೊಳ್ಳು: ಬೀಳಲುಗಳಿಂದ ಒಂದು ಡೋಲಿಯನ್ನು ಮಾಡಿ ದೊಡ್ಡನನ್ನು ಮಲಗಿಸಿ ಕೆಲವರು ತಲೆಗೊಟ್ಟು ಹೊತ್ತು ಮುಂದೆ ನಡೆದರು (ಕಾಲೂರ. ೭ ಕಥಾಸಾರ). ೪. (ಅಲಂ) ಹೊಣೆಯನ್ನು ಹೊರು; ಜವಾಬ್ದಾರಿಯನ್ನು ವಹಿಸಿಕೊಳ್ಳು: ಬೆಂಗೊಂಡು ಬಾಳ್ವೆಯೊಳ್ ಹೊರಲಾರದಿಹ ಹೊರೆಗೆ ತಂಗಿ ತಲೆಗೊಟ್ಟು ನೀ ನೆರವಿತ್ತೆಯೆನಗೆ (ಕಾಲೂರ. ೧೭೮-೪೦೨). ೫. "ನಿತ್ತರಿಸು, ಸೈರಿಸು, ತಾಳು" (ಕಂನುಹು. ೮೪). **ತಲೆಕೊಡು:** ೧. ತಣ್ಣನೆ ನೆಳಲನು ಹೆರರಿಗೆ ನೀಡುವೆ ಬಿಸಿಲಿಗೆ ನೀ ತಲೆಕೊಡುವೆ (ಇಂಚಾಪ. ೧೧೪-೫೬). ೨.

ದೇಶದ ಸ್ವಾತಂತ್ರ್ಯಕ್ಕಾಗಿ ಅನೇಕ ವೀರರು ತಲೆಕೊಟ್ಟರು (ರೂಢಿ). ೩. ಪಿಡಿದು ಮಲಗಿಸಿ ಕೆಲರ್ ತಲೆಕೊಟ್ಟರೊಸೆದು (ಕಾಲೂರ. ೧೦೦-೨೦೦). ೪. ಸೋಲಾದೊಡಂ ಪೊಳಲ ಪಾಲ್ವೊರೆಗೆ ತಲೆಕೊಡುವ ಕಾಲೂರ ಬಯಕೆಯಂ ತೋರೆ ಮೆರವಣಿಗೆ (ಕಾಲೂರ ೧೦೩-೨೦೪); ಎಲ್ಲ ಖರ್ಚಿಗೂ ಒಬ್ಬನೇ ತಲೆಕೊಡಲು ಹೋಗಬೇಡ (ರೂಢಿ). ೬. ತಲೆಗೂದಲನ್ನು ದೇವರಿಗೆ ಅರ್ಪಿಸು,–ಕೊಡಂ. **ತಲೆಗುಡು:** ೨. ಕುರುವೂರ ಚೋಳನಿ ಭವಜಿದ ಭಕ್ತನಿಗೆ ತಲೆಗುಡನೆ (ಭಾವಚಿಂ. ೮-೩೪). [ ತಲೆ$_1$ + ಕೊಡು$_1$ ]

**ತಲೆಗೊಯ್** (ಕ್ರಿ). ತಲೆಯನ್ನು ಕತ್ತರಿಸಂ ; ಶಿರಚ್ಛೇದ ಮಾಡು : ಜಲಂಧರಂ ಬರೆ ಜಯಾರ್ಥಂ ವಾರ್ಧಿಯೊಳ್ಚಕ್ರಮಂ ಬರೆದಂಗುಷ್ಠದಿನೆತ್ತಿ ಸುತ್ತೆ ತಲೆಗೊಯ್ದಂ ಶರ್ವನಾ ಚಕ್ರದಿಂ (ರಾಜಶೇ. ೩-೯೫).

[ ತಲೆ$_1$ + ಕೊಯ್ ]

**ತಲೆಗೊಯಿಕ** 'ತಲೆಗೊಯ್ಕ' ನೋ.

**ತಲೆಗೊಯಿಲು** (ನಾ). ೧. (ಪೈರುಗಳ) ತುದಿಯನ್ನು ಕೊಯ್ಯುವಿಕೆ; ತೆನೆಯನ್ನು ಕತ್ತರಿಸುವಿಕೆ ; ಕೊಯ್ಲು; ಕಟಾವು. ೨. ತಲೆಯಂ ಕೊಯ್ಲು. ೧, ೨: ಬೆಳಪ ಕೆಯ್ಗಳೊಳ್ ತಲೆಗೊಯಿಲು ಮುಳಿದ ಕಡುನಲ್ಲರೊಳ್ ಪೊಯ್ಲು (ಬಂಹರಿ. ೧–೧೯ ರಗಳೆ).

[ ತಲೆ$_1$ + ಕೊಯಿಲು (<ಕೊಯ್ಲು) ]

**ತಲೆಗೊಯ್ಕ**, ತಲೆಗೊಯಿಕ (ನಾ). ೧. ತಲೆಯನ್ನು ಕತ್ತರಿಸುವವನು; ತಲೆಗಡಿಕ ; ಕೊಲೆಪಾತಕ. 'ಕೊರಳುಗೊಯ್ಕ' ಪರಾ. ೨. ಆಲಂ) ಮೋಸಗಾರ; ವಂಚಕ; ಕಪಟಿ; ದಗಾಕೋರ : (೪). **ತಲೆಗೊಯಿಕ** ೧. "ಕೊಲೆಗಡುಕ" (ಜಾನಕೋ. ೬೫). 'ಎದೆಗೊಯ್ಕ' ಪರಾ.

[ ತಲೆ$_1$ + ಕೊಯ್ಕ$_2$ ]

**ತಲೆಗೊಯ್ಸು** (ಕ್ರಿ). ತಲೆಯನ್ನು ಕತ್ತರಿಸುವಂತೆ ಮಾಡು ; ಕೊಲ್ಲಿಸು.

**ತಲೆಗೊಯ್ಸಿಕೊಳ್** = ತಲೆಯನ್ನು ಕೊಯ್ಯಿಸಿಕೊಳ್ಳು: ಪಲವು ಕಾಲಂ ಬೆಳೆದಿದೇಂ ಫಲಂ ಕಡೆಯಲ್ಲಿ ತಲೆಗೊಯ್ಸಿಕೊಂಬುದೆಂದುಂ ಬಿಡದೆನುತೆ ನಾಣ್ಚೆ ತಲೆವಾಗಿದುವೊ . . . ಶಾಲಿಗಳ್ (ಜಬಪು. ೧೧–೧೧).

[ ತಲೆ$_1$ + ಕೊಯ್ಸು ]

**ತಲೆಗೊಳ್** (ಕ್ರಿ). ೧. ತಲೆಯನ್ನು ತೆಗೆದುಕೊಳ್ಳು ; ಬಲಿತೆಗೆದುಕೊಳ್ಳು ; ಕೊಲ್ಲು : ನಲುವತ್ತನಾಲ್ವರ್ಮ್ಮಂಡಳಿಕರ ತಲೆಗೊಂಡ ಗಂಡ (ಎಕ. XII, ಶಿರಾ. ೪೦–೩೨ ; 1040) ; ಸಫಲಮಕ್ಕೆಂದು ಸುದರ್ಶನಜನ್ಮಮುವನ ತಲೆಗೊಂಡೆನುತೆ ಸುದರ್ಶನಮನಸುರಮಥನಂ ಪಿಡಿದಂ (ಜಗವಿ. ೧೪–೧೧೫) ; ಕಂಸಭೂಪತಿ ತನ್ನ ದುರ್ಧರತರಮಪ್ಪ ಸೇನೆಯಾನು ತಲೆಗೊಳ್ಳೆ ತಡೆಯದೆನುತ ಕೈವೀಸಲು (ನೇಮಿಸಂ. ೧೬–೧೪೦) ; ಎಲವೊ ಸುರಪಾಲ ನೂಱಾರ್ಸೂಳೊಳಂ ನಿನ್ನ ತ [ಪಾಠಾಂ. ಕೊ] ಲೆಗೊಳ್ಳದುಳುಹಿ ಬಿಟ್ಟುದನಱಿದು ಮತ್ತೆನ್ನ ಕಲಹಕಿದಿರಾದೆ (ಜಬಪು. ೪೯–೮). ೨. ಸ್ವೀಕರಿಸು ; ಪಡೆ; ಹೊಂದು : ಕನಸಿ ದೆವ್ವದೊಲುಮೆ ತಲೆಗೊಂಡೆ ಸತಿ ಚೆನ್ನಪೊಂಗನ ರಂಗನ ಕಂಡೆ (ನಡದಾ. I, ೪೩೪). [ತಲೆ$_1$+ಕೊಳ್$_1$]

**ತಲೆಗೊಳ್ಳಿ**, ತಲೆಕೊಳ್ಳಿ (ನಾ). ಶವಸಂಸ್ಕಾರದ ಸಮಯದಲ್ಲಿ ಶವದ ಮುಂದೆ ಹಿಡಿಯುವ ಮಂತ್ರಪೂತವಾದ ಕೊಳ್ಳಿ : ಗಂಗಾದೇವಿ ಮುಂದೆಯಾದಳು ಗೌರಿದೇವಿ ಒಲೆಯ ಕಳೆದಳು ಚಂದ್ರಸೂರ್ಯರಿಬ್ಬರೂ ನೀರಿಳಿದರಲ್ಲಾ ವಾಯುದೇವ ವಿಮಾನವ ಹೊತ್ತ ವಾಸುದೇವ ತಲೆಗೊಳ್ಳಿಯನಿಱಿದ ಅಲ್ಲಿಂದತ್ತ ಗೊಗೇಶ್ವರ ಸತ್ತನೆಂಬ ಸುದ್ದಿ (ಅವಜಂ. ೧೯೧–೮೬೪) ; ಮಾಡಿರ್ದ ಚಿತೆಯ ಮೇಲರಸನಂ ಪಟ್ಟಿರಿಸಿ . . . ವರಕುಮಾರಕನಿಂದೆ ತಲೆಗೊಳ್ಳಿಯುಮನಿಱಿಸಿ[ಪಾಠಾಂ. ತಲೆಕೊಳ್ಳಿಯಂ ಕೊಡಿಸಿ] (ಒಹಿರ. ಹ. ೨೦೨–೯). **ತಲೆಕೊಳ್ಳಿ:** 'ತಲೆಕೊಳ್ಳಿ ಇರಿ' ಪರಾ.

[ ತಲೆ$_1$ + ಕೊಳ್ಳಿ$_1$ ]

**ತಲೆಗೊಳ್ಳಿಇಱಿ**, ತಲೆಕೊಳ್ಳಿಇರಿ (ಕ್ರಿ). ಶವಕ್ಕೆ ಮಂತ್ರಪೂತವಾದ ಕೊಳ್ಳಿಯನ್ನು ಸ್ಪರ್ಶಮಾಡಿಸಂ ; ಶವಸಂಸ್ಕಾರಮಾಡು : ತಲೆಗಿರಿದು ಕೃಷ್ಣಂಗೆ ತಲೆಗೊಳ್ಳಿ ಇಱಿದೊಡವನಳಿಲಿ ಕಿಚ್ಚಂ ಹಾಯ್ದುರುಚ್ಯುತನೊಳು ಕಲಿ ರುಕ್ಮಿಣಿ ಪ್ರತತಿ ಬಲನೊಳಾ ರೋಹಿಣಿಯು ಮೊಲಿದು ತೊಳ್ಕೆಗೊಟ್ಟುದುಮನವರೊಳು (ಸಾನಂಜ. ೨–೧೨೦). **ತಲೆಕೊಳ್ಳಿಇರಿ :** ತಿಥಿದಿವಸ ಬೆಳಗ್ಗೆ ಕರ್ಮಮಾಡಬೇಕಾದವನು . . . ಕೊಳ್ಳಿಯ ಮೇಲೆ ಬೆಣ್ಣೆ ಇಟ್ಟುಕೊಂಡು ಗುದ್ದಿನ ಸುತ್ತ ಮೂರು ಸುತ್ತು ಬಂದು ಧೂಪ ಹಾಕುತ್ತಾನೆ. ಅನಂತರ ತಲೆಯನ್ನು ಬೋಳಿಸಿ ಕೊಳ್ಳುತ್ತಾನೆ. ಈ ಇಡೀ ಕ್ರಿಯೆಗೆ 'ತಲೆಕೊಳ್ಳಿ ಇರಿಯುವುದು' ಎಂದು ಹೇಳುತ್ತಾರೆ (ನನ್ನೂರು. ಟಿಪ್ಪಣಿ). [ ತಲೆಕೊಳ್ಳಿ + ಇಱಿ$_1$ ]

**ತಲೆಗೋಱು** (ಕ್ರಿ).=ತಲೆಗೊಯ್: ಇರುಳ್ ಬಿಟ್ಟು ತಲೆಗೋಱುವ ಕಳ್ಳರ್ (ಅಶ್ವಶಾ. ೨೯–೫೬೯). [ ತಲೆ$_1$ + ಕೋಱು$_1$ ]

**ತಲೆಗೋ** (ಕ್ರಿ). ಜವಾಬ್ದಾರಿಯನ್ನು ಹೊರಿಸು; ಹೊಣೆಯನ್ನು ಹೇರು: ಪಿರಿದೊಂದಾಗ್ರಹದಿಂದಮಾದ ದಯೆಯಿಂದಂ ದೇವರೆನ್ನಂ ಧರಾಭರದೊಳ್ ತಂದು ತೊಡರ್ಚಿ ಪೂಣ್ದು ತಲೆಗೋದಿರ್ದುಂ[ಪಾಠಾಂ. ಗಂಡಿರ್ದುಂ, ಗೊಟ್ಟಿರ್ದುಂ]ಬಟಿಕೆಂತುಮಿಾ ಧರಣೀಭಾರಮನಾಂ ಬಿಸುಟಿಱ್ಪೊಡದು ಚಿಃ ಲೋಕಕ್ಕೆ ಖಾತ್ವಾ ಸವಿಾಕರಣಂ ಭೌತಿಕ ಮೋದಕವ್ಯತಿಕರಂ ತಾನೆಂಬುದುಂ ಮಾಡದೇ (ಆದಿಪು. ೪.೮೦). [ ತಲೆ$_1$ + ಕೋ$_1$ ]

**ತಲೆಚಮರ** (ನಾ). ಬಿಲ್ಲು ಮುಂತಾದುವುಗಳ ತುದಿಗೆ ಕಟ್ಟುವ ಒಂದು ಬಗೆಯ ಕುಚ್ಚು,–ಚಾಮರ,–ಗೊಂಡೆ : ಕುಸುಮಮಂಜರಿಯು ತಲೆಚಮರವೆರಸಿ ಮನ್ಮಥನೆಸೆದನು (ಸಿದ್ಧರಾ. ೪–೬೪). [ ತಲೆ1 + ಚಮರ ]

**ತಲೆಚಮರಿ** (ನಾ). = ತಲೆಚಮರ : ಫುಲ್ಲಶರನಂಜ ಕರ್ಬಿನ ಬಿಲ್ಲಂ ತಲೆಚಮರಿವೆರಸು ಬಿಸುಟಂತೆ ತಪೋವಲ್ಲಭನ ಕೆಲದ ವೇತ್ರಲತೋಲ್ಲಸಿತ ಕಳಾಪಗುಚ್ಛಮೆಸೆದುದು ತುಚ್ಛಂ (ಅನಂಪು. ೩–೪೮). [ತಲೆ$_1$ + ಚಮರಿ]

**ತಲೆಚವಲ** (ನಾ). (?)

**ತಲೆಚವಲಗಂಡರಬಾಲ** = ಒಂದು ಬಿರುದು : ದಂಡಿವಳ್ಳಿಯ ಬಿರುದುಬಿ[ಲುಂ]ಕಕಾರ ಬೀಡಿನ ಹನುಮ ತಲೆಚವಲಗಂಡರಬಾಲ ಚಲುಡನಾಯಕನ ಮಗ ತಂಮನಾಯಕ (ಕಇ. I, ೪೨–೮ ; 1423).

[ ತಲೆ$_1$ + ? ]

**ತಲೆಚಂದಿ** (ನಾ). ತಲೆಗೆ ಸುತ್ತಿಕೊಳ್ಳುವ ಬಟ್ಟೆಯ ತುಂಡು,– ಅರಿವೆ ತುಂಡು : ಹರನ ಕಾಲಂ ಬಂಧಿಸಿದ ತಲೆಚಂದಿಯಿಂ (ಬಸಪು. ೪೪–೬೨).

[ ತಲೆ$_1$ + ಚಂದಿ ]

**ತಲೆಚಿಟ್ಟು** (ನಾ). ಮಾನಸಿಕ ಅಸ್ವಸ್ಥತೆ ; ಮನಸ್ಸಿಗೆ ಕಿರಿಕಿರಿ ಉಂಟಾಗುವಿಕೆ ; ಜಂಗುಪ್ಸೆಯಾಗುವಿಕೆ; ಮನಸ್ಸಿನ ವ್ಯಗ್ರತೆ,– ಆವೇಗ,– ಉದ್ವೇಗ: ಎಂಟು ದಿವಸವೆಲ್ಲ ಒಂದೇ ಸಮನೆ ಮಳೆಯಾದಪ್ಪು ತಲೆಚಿಟ್ಟು ಆಯಿತು (ಕನಕ. ೪೦).

**ತಲೆಚಿಟ್ಟು ಹಿಡಿ** = ಮನಸ್ಸಿಗೆ ಬೇಸರ ಉಂಟಾಗು ; ಜಂಗುಪ್ಸೆಯುಂಟಾಗು; ಅಸಹನೀಯವಾಗು: ಸಂಸಾರವಂತೂ ನನಗೆ ತಲೆಚಿಟ್ಟು ಹಿಡಿದಿದೆ (ಕುರಿಹಿಂ. ೩); ಸುಮ್ಮನೆ ಈಗ ಬಂದಾಳು, ಆಗ ಬಂದಾಳೆಂದು ಆಸೆಯಿಟ್ಟು ಕಾದು ನಿರಾಶೆಪಟ್ಟು ತಲೆಚಿಟ್ಟು ಹಿಡಿದಿತ್ತು (ಅಲಹೂ. ೩೪).

[ ತಲೆ$_1$ + ಚಿಟ್ಟು$_2$ ]

**ತಲೆಚೀಟಿ** (ನಾ). ಒಂದು ವಸ್ತುವಿನ ಪೂರ್ವಾಪರಗಳನ್ನು ಬರೆದು ಆ ವಸ್ತುವಿನ ಮೇಲೆ ಅಂಟಿಸುವ ವಿಳಾಸದ ಚೀಟಿ; ಗುರುತುಚೀಟಿ; ಹೆಸರುಚೀಟಿ : (ಗುರುತು ಪಟ್ಟಿ, ತಲೆಚೀಟಿ, ಮೊ. ನ್ನು) ಅಂಟಿಸು, ಕಟ್ಟು (Lable. ೩೪೩೩.); ಅಲ್ಲಿಂಚೆಯ ತಲೆಚೀಟಿಗಳಿಲ್ಲಂಗಡಿಗಳ್ ಬರಿಬರಿದೆ ಪೆಸರ್ಗಿರ್ಕುಂ (ಮೈಸೂಮು. ೬–೧೯) [ ತಲೆ$_1$ + ಚೀಟಿ$_2$ (<ಚೀಟು$_2$) ]

**ತಲೆಭಳಿ** (ನಾ). ಒಂದು ಬಗೆಯ ತಲೆಬೇನೆ; ತಲೆಯಲ್ಲಿ ಉಂಟಾಗುವ ಭಳಿ, – ನಡುಕ : ಶ್ರೀಗಂಧವನ್ನು . . . ಆಡಿನ ಹಾಲಲ್ಲಿ ತೇದು ಕುಡಿಯೆ ರಕ್ತವ ಕಾರುವುದು ಮಾಣ್ಗುಂ, ತಲೆಭಳಿ ಬಿಡುವುದು (ವಿವೈವಿ. ೬).
[ ತಲೆ$_1$ + ಭಳಿ(<ಚಳಿ$_2$) ]

**ತಲೆಸೌಳಿ** (ನಾ). ತಲೆಗೆ ಧರಿಸುವ ಕವಚ ; ಶಿರಸ್ತ್ರಾಣ ; ಸೀಸಕ : ಹೊದೆಯ ಕೈಪೊಡೆಯ ತರತರದ ಜೋಡುಗಳ ತಲೆಸೌಳಿಗಳ ಸಮರ ಸನ್ನಾಹದಾಯತಗಳ (ಜೈಬಪು. ೪೧-೫೩). [ ತಲೆ$_1$ + ಸೌಳಿ$_2$(<ಟವುಳಿ$_2$) ]

**ತಲೆಡವುಗೆ** (ನಾ). ತಲೆಬುರುಡೆ : ಆ ೮೦೦ ಜನ ಸ್ವಾನಿಷರ ತಲೆಡವುಗೆಗಳನ್ನೂ, ಮೈ ಎಲುವುಗಳನ್ನೂ ಕೂಡಿಸಿ (ಮುಂಬಯಿ. ೬-೩೫೦).
[ ತಲೆ$_1$ + ಡವುಗೆ (<ಡೋವಿ) ]

**ತಲೆತಗ್ಗಿಸು** (ಕ್ರಿ). ೧. ತಲೆಯನ್ನು ಕೆಳಗೆಮಾಡಂ, – ಬಾಗಿಸು : ಗಿರಿಯ ಮತ್ತೆ ತಲೆತಗ್ಗಿಸಿ ಮೌನವಾಗಿ ಬೀಡಿ ಸೇದತೊಡಗಿದ (ಮಣ್ಣುಹೆ. ೮೮) ; ಅವನು ಬೆಚ್ಚಿ, ಒಂದು ಗಳಿಗೆ ನನ್ನನ್ನು ವಿಲಕ್ಷಣವಾಗಿ ದಿಟ್ಟಿಸುತ್ತಿದ್ದು ಮತ್ತೆ ತಲೆತಗ್ಗಿಸಿ ಕುಳಿತುಕೊಂಡ (ನಾಪೋಲೀ. ೨೦೩). ೨. (ಆಲಂ) ನಾಚಿಕೆಪಟ್ಟುಕೊಳ್ಳು ; ಸಂಕೋಚಪಡಂ ; ಅವಮಾನಹೊಂದಂ : ವ್ಯಂಗ್ಯವಾಗಿ ವಿದ್ಯಾರ್ಥಿಗಳ ಚಳವಳಿಯ ವಿಷಯವಾಗಿ ಮಾತನಾಡಿದರೆ ಸಾಮಿ ತಲೆ ತಗ್ಗಿಸುವನು (ನಿರಾತೆ. ೧೧೪) ; ಮೆಲ್ಲಗೆ ನಕ್ಕು ತಲೆತಗ್ಗಿಸಿದನು (ಕಳಹು. ೩) : ಇವಳೊಬ್ಬಳಿಂದ ನಾವೆಲ್ಲಾ ತಲೆತಗ್ಗಿಸುವಂತಾಗಬೇಕಾದೀತು (ಕುಸುಸಂ. ೧೦೭). ೩. ಒಪ್ಪು ; ಮಣಿ ; ಸಮ್ಮತಿಸು ; ಬಾಗು ; ಅಧೀನವಾಗು ; ವಿಧೇಯತೆಯನ್ನು ತೋರು : ಅಧಿಕಾರಕ್ಕೆ ತಲೆತಗ್ಗಿಸಿರುವುದಾಗಿಯೂ (ಪ್ರಮಹ. ೪೯) ; ಯಾರೇ ಆದರೂ ನ್ಯಾಯಕ್ಕೆ ತಲೆತಗ್ಗಿಸಿ ನಡೆಯಬೇಕು (ರೂಢಿ). [ ತಲೆ$_1$ + ತಗ್ಗಿಸು (<ತಟ್ಗಿಸು) ]

**ತಲೆತಪ್ಪಿಸು** (ಕ್ರಿ). ಮರೆಯಾಗಂ ; ಕಾಣದಂತಾಗು ; ಅಡಗಿಕೊಳ್ಳು.
**ತಲೆತಪ್ಪಿಸಿಕೊಳ್ಳು** = ೧. ತಲೆಯನ್ನು ಏಟಿನಿಂದ ಪಾರಾಗುವಂತೆ ಮಾಡು : ಬೀಸುವ ದೊಣ್ಣೆಗೆ ತಲೆ ತಪ್ಪಿಸಿಕೊಂಡರೆ ಸಾವಿರ ವರ್ಷ ಆಯುಸ್ಸು (ಗಾದೆ). ೨. ಕಣ್ಮರೆಯಾಗಂ; ಕಾಣದಂತೆ ಅಡಗಿಕೊಳ್ಳು ; ಕಣ್ಣುತಪ್ಪಿಸು : ಕೊನೆಗೆ ತಲೆತಪ್ಪಿಸಿಕೊಂಡು ಓಡಿಹೋಗಿದ್ದನು (ಪ್ರಮಹ. ೪೫); ರೂಪಚಂದನ ಕೊಲೆಯ ಪ್ರಕರಣವು ಬಹುದಿನ ನಡೆಯಲಿಲ್ಲ. ತುಳಸಿ ತಲೆತಪ್ಪಿಸಿಕೊಂಡಿದ್ದ (ಜಮಿನ್ನಾ. ೧೫೪). [ತಲೆತಪ್ಪು + – ಇಸು$_3$]

**ತಲೆತಪ್ಪು** (ಕ್ರಿ). ಮರೆಯಾಗು ; ಕಾಣದಂತಾಗು : ಕಳ್ಳದಾರಿಯ ದೂರಿ, ಒಂದು ಹಲನರ ದೋಣಿ ತಲೆತಪ್ಪಿ ನುಸುಳೆ, ಓರೊರ್ವರುಂ ನಿಮ್ಮ ತಲೆದಂಡ, ಎಚ್ಚರಿಕೆ ! (ಪಾರಸಿ. ೧೫-೩೪೫). [ ತಲೆ$_1$ + ತಪ್ಪು$_1$ ]

**ತಲೆತರ** (ನಾ). = ತಲೆದೆಸೆ (?) : ದೇವರಂಗಭೋಗ ಉಪಹಾರಕ್ಕೆಂದು ಅದನೂರ ತಳವುಕಾರ ಇರುಳುನೀಕ್ಕಿಯಾಂಡರು ಬಿಟ್ಟ ತೋಟಸ್ಥಳ ಕಬ್ಬಲಗಟ್ಟದ ಕೆಳಗೆ ಶೀರುಳಂಗೊವೊಪ್ಪರಡ್ಡಕದ ತಲೆತರದ ಮೂಡಣ ಕಡೆ ಕಂಮ ೨೦೦ ಅಂದು ಅಶೇಷಮಹಾಜನಂಗಳು ಬಿಟ್ಟ ದಮ್ಮ್ಮ (ಸೌಇಇ. IX-1, ೧೪೧-೪೭ ; 1174). [ ತಲೆ$_1$ + ತರ? ]

**ತಲೆತಾಕಿಸು** (ಕ್ರಿ). ೧. ತಲೆಯು ತಾಕುವಂತೆ ಮಾಡು,–ಸ್ಪರ್ಶವಾಗುವಂತೆ ಮಾಡು. ೨. ನಮಸ್ಕಾರಮಾಡು : ಅವನು ಒಮ್ಮೆ ದೇವಿಯ ಚರಣ ತಲದಲ್ಲಿ ತಲೆತಾಕಿಸಿ ದೇವಿಯ ಆಸನವನ್ನು ಸರಿಸಿದನು (ಇಪ್ಪಕೆ. ೩೩೨).
[ ತಲೆತಾಕು (<ತಲೆದಾಗು) + – ಇಸು$_3$ ]

**ತಲೆತಾಕು** 'ತಲೆದಾಗು' ನೋ.

**ತಲೆತಾಗು** 'ತಲೆದಾಗು' ನೋ.

**ತಲೆತಾಟಾಡಿಸು** (ಕ್ರಿ). ತಲೆಗಳನ್ನು ಹಾಕಲಾಡಿಸು,–ಅಪ್ಪಳಿಸು : ಬುಡದೂಟಾಡಿಸಿ, ತಲೆತಾಟಾಡಿಸಿ ಗುಡಿಸಲ ಮಾಡನು ಹುಲುಹುಲುಮಾಡಿಸಿ ಬಂತೈ ಬಂತೈ (ಕೆಎಪು. ೨೮-೫). [ ತಲೆ$_1$ + ತಾಟಾಡಿಸು ]

**ತಲೆತಾಟಿಸು** (ಕ್ರಿ). = ತಲೆತಾಟಾಡಿಸು.
**ತಲೆತಾಟಿಸಿಕೊಳ್ಳು** = ೧. ತಲೆಯನ್ನು ಅಪ್ಪಳಿಸಿಕೊಳ್ಳು. ೨. ಹಾಳಾಗು; ನಾಶವಾಗು : ಅವನೆಲ್ಲಿ ಬೇಕಾದರೂ ಹೋಗಿ ತಲೆತಾಟಿಸಿಕೊಳ್ಳಬಹುದೆಂದೂ, ಅಲ್ಲಿಗೆ ಮಗನ ಸಂಬಂಧ ಹರಿಯಿತೆಂದೂ ತಂದೆ ಮಗನಿಗೆ ಘೋಷಿಸಿದನು (ಪುನರು. ೩೪೧). [ ತಲೆ$_1$ + ತಾಟಿಸು (<ತಾಂಟಿಸು) ]

**ತಲೆತಿನ್ನು** (ಕ್ರಿ). ಮಾನಸಿಕವಾದ ತೊಂದರೆಯನ್ನುಂಟುಮಾಡಂ ; ಸಮಸ್ಯೆಯನ್ನುಂಟುಮಾಡು ; ಚಿಂತೆಯನ್ನುಂಟುಮಾಡು : ಈ ಸಾಲವನ್ನು ತೀರಿಸುವುದು ಹೇಗೆಂಬ ಚಿಂತೆ ಅಂದಿನಿಂದಲೂ ಪ್ರೇಮಶಂಕರರ ತಲೆತಿನ್ನುತ್ತಿತ್ತು (ಪ್ರೇಮಸೂಶ್ರ. ೨೪೫) ; ಬಹಳ ದಿನಗಳಿಂದ ಗಂಗನ ಹಳ್ಳಿಯಲ್ಲಿ ತಲೆತಿನ್ನುತ್ತಿದ್ದ 'ಕರಡೀಮಜಲಿ' ನ ಪ್ರಕರಣವೂ . . . ಬಗೆ ಹರಿಯಿತು (ಹಬ್ಬಿಬ. ೩೭) ; ಹೊಸ ವಿಚಾರವೊಂದು ನನ್ನ ತಲೆತಿನ್ನಹತ್ತಿದೆ (ದೇವಸಾ. ೦೧೪). [ ತಲೆ$_1$ + ತಿನ್ನು (< ತಿನ್) ]

**ತಲೆತಿರುಕ$_1$** (ನಾ). ೧. (ಆಲಂ) ಬುದ್ಧಿಗೆಟ್ಟವನು ; ಹುಚ್ಚ ; ಬುದ್ಧಿಭ್ರಮಣೆಯಾದವನು : ನಿನ್ನನ್ನು ನೋಡಿದರೆ, ತಲೆತಿರುಕನಂತೆ ಕಾಣುತ್ತದೆ (ರಾಜ್ಕೋಡ. ೧೯೯) ; ಆಹಾರ ನಿದ್ರೆಗಳನ್ನು ತೊರೆದು ಸದಾ ಮಗನ ಹಂಬಲದಲ್ಲಿಯೇ ತಲೆತಿರುಕರಂತಾಗಿದ್ದಾರೆ (ಬಾಗಿನ. ೬೮) ; ಕಚೇರಿಯಲ್ಲಿ ಹೀಗೆ ತಲೆತಿರುಕನಂತೆ ಗೊಂದಲ ಹಾಕಿ . . . ಮತ್ತೆ ಹುಡುಕಾಡತೊಡಗಿದನು (ಇಪ್ಪಕೆ. ೪೨೪) : ಈ ಗದೆಯನ್ನು . . . ತಿಂಮನಂತಹ ತಲೆತಿರುಕರಿಗೆ ಕೊಡು (ಹನ್ನೊಂದ. ೧೪೮). ೨. ಉನ್ಮತ್ತ ; ದುರಹಂಕಾರಿ ; ತಿಳಿಗೇಡಿ : ತಲೆತಿರುಕರಂತೆ ವಿಧ್ವಂಸಕ ಕಾರ್ಯಗಳನ್ನು ಮಾಡಲಾರೆ ಎಂದು ಖಂಡತುಂಡವಾಗಿ ಹೇಳಿಬಿಟ್ಟೆ (ಕುರುಕಾ. ೧೪೯) ; ಪ್ರಾರ್ಥನೆಯ ಹೊತ್ತಿನಲ್ಲಿ ಮಹಾತ್ಮಾಗಾಂಧಿಯವರು ಇಂದು ತಲೆತಿರುಕನೋರ್ವನಿಂದ ಗುಂಡಿಗಾಹುತಿಯಾದರೆಂಬ ಸುದ್ದಿಯನ್ನು . . . ವಿವರಿಸಿ ಹೇಳಿದನು (ಕಂಬಹು. ೮೭) : ಅವರಲ್ಲಿ ತಲೆತಿರುಕನೆಂದರೆ ಶರಭನೊಬ್ಬನು (ಭೂಮಿತಾ. ೭೩). (ಗು). ೩. ಬುದ್ಧಿಗೆಟ್ಟ ; ತಿಳಿವಳಿಕೆಯಿಲ್ಲದ ; ಅವಿವೇಕದ : ಏನೋನೋ ಬಡಬಡಿಸುತ್ತಾನೆ. ಇವು ತಲೆತಿರುಕ ವಿಚಾರಗಳಲ್ಲವೇ ವಸುಮತಿ ? (ಮಣ್ಣಮ. ೩೩೧) ; ಕಾಮಿನಿಯೂ ಸ್ವಲ್ಪ ತಲೆತಿರುಕ ಹುಡುಗಿ, ತಿಳಿಗೇಡಿ ; ಯಾರ ಅಂಕೆಯೂ ಇಲ್ಲ (ಮುಕ್ತಿ. ೧೩೯).
[ ತಲೆ$_1$ + ತಿರುಕ (<ತಿರಿಕ$_1$) ]

**ತಲೆತಿರುಕ$_2$** (ನಾ). ತಲೆತಿರುಗುವಿಕೆ ; ತಲೆಸುತ್ತುವಿಕೆ ; ಬವಳಿ ಬರುವಿಕೆ: ತಲೆತಿರುಕದಿಂದ ಪ್ರಾರಂಭವಾದ ಅಸೌಖ್ಯ ಇಷ್ಟೊ ಕಠಿಣವಾಯಿತಲ್ಲಾ ! ಎಂದು ವನಜೆ ಖಿನ್ನಳಾದಳು (ತ್ಯಾಗಮ. ೧೬೩). [ <ತಲೆತಿರುಗು$_1$ ]

**ತಲೆತಿರುಕತನ** (ನಾ). ಬುದ್ಧಿಗೇಡಿತನ ; ಹುಚ್ಚುತನ : ನೆಲ ಮಾತ್ರ ಇನ್ನೂ ಅದುರುತ್ತಲಿತ್ತು ; ಅವನ ಕೋಪವನ್ನು, ತಲೆತಿರುಕತನವನ್ನು ಆ ತಾಯಿಗೆ ಮನಗಾಣಿಸಿಕೊಡುತ್ತಿರುವ ಹಾಗೆ (ಬನಸಿ. ೧೩) ; ಆದರೆ ಅವರ ನಡೆ ಮತ್ತು ಹಾವಭಾವಗಳಲ್ಲಿ ತಲೆತಿರುಕತನದ ಆವ ಲಕ್ಷಣಗಳೂ ಇರಲಿಲ್ಲ (ಕಾಲಾಯಾ. ೭) ; ತಿಳಿದವರಾದರೂ ತಿಳಿದೂ ತಿಳಿದೂ ತಿಳಿಯದವರಂತೆ ತಲೆತಿರುಕತನದ ತಿರುಗಣೆಯಲ್ಲಿ ತಿಕ್ಕಾಡುವದಿಲ್ಲವೆ (ಉದಮ್ಮ. ೪೪).
[ ತಲೆತಿರುಕ$_1$ + – ತನ ]

**ತಲೆತಿರುಗಿಸು** (ಕ್ರಿ). ೧. ತಲೆಯನ್ನು ತಿರುಗಿಸು, – ಸುತ್ತುವಂತೆ ಮಾಡು. ೨. (ಆಲಂ) ಮದವೇರುವಂತೆ ಮಾಡು: ತಲೆತಿರುಗಿಸುವುದು ಸೋಮ, ತಲೆಹೋಗಿಸುವುದು ಕಾಮ (ಅಶ್ವಮೇ. ೫೫). ೩. ಅಹಂಕಾರವನ್ನು ಉಂಟುಮಾಡು : ಹಣದ ಮದ ಅವನಿಗೆ ತಲೆತಿರುಗಿಸಿದೆ (ರೂಢಿ).
[ ತಲೆತಿರುಗು$_1$ + – ಇಸು$_3$ ]

**ತಲೆತಿರುಗು$_1$** (ಕ್ರಿ). ೧. ತಲೆಸುತ್ತು ಬರಂ ; ಬವಳಿಬರು ; ಪಿರಿದಪ್ಪ ಶ್ರಮದಿಂ ನಿತ್ತರಿಸದೆ ತಲೆತಿರುಗಿ ಮಱುಗಿ ಮೋಲುಸಿರಿಟ್ಟು

. . . ಉರುಳ್ವ ಮುನಿಪನಂ (ಧರ್ಮಾಮೃ. ೪-೧೭೦) : ಕಷಾಯ ಕಾಯಿಸಿ ಸಕ್ಕರೆ ಮತ್ತು ಜೇನುತುಪ್ಪ ಬೆರಸಿ ಕೊಡಲು . . . ತಲೆತಿರುಗುವುದು, ರಕ್ತವಾಂತಿ, ಕಾಮಾಲೆ ಇವಿಷ್ಟು ರೋಗಗಳೂ ಪರಿಹಾರವಾಗುವುವು (ಸಕಪ್ರ. ೯೪) ; ಸೂರ್ಯಗೋಳಗಳು . . . ಅಚಿಂತ್ಯವಾದ ದೂರಗಳನ್ನು ಬಿಟ್ಟು ಕಳೆಯುತ್ತ ತಲೆತಿರುಗುವಷ್ಟು ವೇಗದೊಡನೆ ಹಾರಿಹೋಗುತ್ತಲಿರುವುವು (ಜ್ಯೋತಿರ್ವಿ. ೬೯). ೨. (ಆಲಂ) ಬುದ್ಧಿಭ್ರಂಶವುಂಟಾಗು ; ಬುದ್ಧಿಭ್ರಮಣವಾಗು, – ವಿಕಲ್ಪವಾಗು : ತಲೆ ಹೆಗಲ ಮೇಲಿದೆಯೊ ಮತ್ತೆಲ್ಲಿಯಾದರೂ ಉಂಟೋ ? ತಲೆತಿರುಗಿಲ್ಲವಷ್ಟೆ? (ಇಪ್ಪಕ. ೨೭೪). ೩. ಅಹಂಕಾರವುಂಟಾಗು ; ಉನ್ಮತ್ತತೆಯುಂಟಾಗು : ಅಧಿಕಾರಬಲದಿಂದ ಅವನಿಗೆ ತಲೆತಿರುಗಿದೆ (ರೂಢಿ). [ ತಲೆ₁ + ತಿರುಗು₁ ]

**ತಲೆತಿರುಗು₂** (ನಾ). ೧. ತಲೆತಿರುಗುವಿಕೆ ; ತಲೆಸುತ್ತುವಿಕೆ ; ಶಿರೋಭ್ರಮಣ: ತಲೆತಿರುಗು, ಉರಿ . . . ಪಿತ್ತರೋಗದ ಚಿಹ್ನೆಗಳು (ಬಿಚಿಕಿ. ೯). ೨. (ಆಲಂ) ಹೆಮ್ಮೆ ; ಅಹಂಕಾರ : ಅಧಿಕಾರಕ್ಕೆ ಬಂದಮೇಲೆ ಆತನಿಗೆ ತುಂಬಾ ತಲೆತಿರುಗು ಉಂಟಾಗಿದೆ (ರೂಢಿ). [ ತಲೆ₁ + ತಿರುಗು₂ ]

**ತಲೆತುರಿಸು** (ಕ್ರಿ). ೧. ತಲೆಯನ್ನು ತುರಿಸು; ತಲೆಯ ಮೇಲೆ ಕೈಯಾಡಿಸು ; ತಲೆಯನ್ನು ಕೆರೆ. ೨. (ಆಲಂ) ವಿಚಾರಮಾಡು; ಚಿಂತನೆಗೊಳಗಾಗು: ಯಾವ ಪೇಚನ್ನು ಹಾಕಬಹುದೆಂದು ಆವನ ಸಂಗಡಿಗರು ತಲೆ ತುರಿಸಿಕೊಳ್ಳುತ್ತಿರುವಾಗ (ಗ್ರಾಮಾಯ. ೫೨).

[ ತಲೆ₁ + ತುರಿಸು (<ತುಱಿಸು) ]

**ತಲೆತೂಗು** ‘ತಲೆದೂಗು₁’ ನೋ.

**ತಲೆತೆಗೆ** ‘ತಲೆದೆಗೆ’ ನೋ.

**ತಲೆತೊನೆ** ‘ತಲೆದೊನೆ’ ನೋ.

**ತಲೆದಂಡ** (ನಾ). ತಲೆಯನ್ನು ದಂಡವಾಗಿ ಒಪ್ಪಿಸುವಿಕೆ ; ತಪ್ಪಿಗೆ ಶಿಕ್ಷೆಯೆಂದು ತಲೆಯನ್ನು ಕೊಡುವಿಕೆ: ಎನ್ನ ಒಡಲವಸರಕ್ಕೆ ಕುದಿದೆನಾದಡೆ ತಲೆದಂಡ (ಬಸವ. ೭೧೯) ; ಬೇಡಿಬೇಡಿದ ಶರಣಂಗೆ ನೀಡದಿರ್ದಡೆ ತಲೆದಂಡ (ಬಸರ. ೧೨-೯) ; ಕಳ್ಳದಾರಿಯ ದೂರಿ, ಒಂದು ಹೆಲನರ ದೋಣಿ ತಲೆತಪ್ಪಿ ನುಸುಳೆ, ಓರೊರ್ವರುಂ ನಿಮ್ಮ ತಲೆದಂಡ, ಎಚ್ಚರಿಕೆ ! (ಪಾರಸಿ. ೧೫-೩೪೫); ಕೆಲಸದಲಿ ಎಡವಿದಿರೊ ನಿಮಗಿಂದು ತಲೆದಂಡ! ತಿಳಿಯಿತೆ? (ಚಂದ್ರಸ. ೦೧೯).

[ ತಲೆ₁ + ದಂಡ ]

**ತಲೆದಡವು**, ತಲೆದಡಹು (ಕ್ರಿ). ೧. ತಲೆಯನ್ನು ಸವರು,–ನೇವರಿಸು ; ತಡವರಿಸು : ಅಂಬುಗಳೆಚ್ಚಡಮರರು ವೀರದೈತ್ಯರ ಕೆಚ್ಚೆದೆಯನುಚ್ಚಳಿಸಿ ರಥ ಹಯ ದಾನದಂತಿಗಳಾ ಮುತ್ತಿ ಮುಸುಕಿತು ಕಾರಗತ್ತಲೆ ಬೆಚ್ಚವೊಲು ಮುಂಗಾಣದರಿಬಲ ಬೆಚ್ಚಿ ಬೆದರುತಲೋಡಿದುದು ತಲೆದಡವುತೆಣ್ದೆಸೆಗೆ (ಅನಂರಾ. ೧-೧೫-೬). ೨. ಪ್ರೀತಿ ಸ್ನೇಹಗಳಿಂದ ತಲೆಯನ್ನು ಮೃದುವಾಗಿ ಸ್ಪರ್ಶಿಸು ; ಮುಂಡಾಡು : ಇಂತು ಮಾಡುವರೆಯರಿವಾಳ್ತಾಂಡ ಎನುತೆ ತಲೆದಡವಿ ಕಯ್ವಿಡಿದೆತ್ತಿ ಶಂಕರಂ (ಅರಿಕ. ದೇ. ೧೭೭- ೨೧) ; ಎಲ್ಲರೋಪಾದಿಯಿಂ ನಡೆವುದೆಲೆ ಮಗನೆ ಎಂದಪ್ಪಿ ತಲೆದಡವುತ್ತ ಹೋದನಾ ಮುದ್ದಯ್ಯನು (ಸಿದ್ಧರಾ. ೨-೧೪) ; ಬೇಡ ಮನೋವ್ಯಥೆಯೆಂದು ನೇಹದಿಂ ತಲೆದಡವುತ್ತೆ ನೋಡು ಪರಮ ಪ್ರಭುವೇ (ಶತಕ. ೩-೩೦) ; ಕರುಣಾವಲೋಕನದಿಂದ ತಲೆದಡವಿದನು ಬಾಲಿಕೆಯ (ನಿಘಾಗ. ೪-೫-೧೨). ತಲೆದಡಹು : ೨. ಇಂತೀ ಅಸಂಖ್ಯಾತರೆಲ್ಲರೂ ತಮ್ಮ ಕರುಣದ ಕಂದನೆಂದು ತಲೆದಡಹಿ ರಕ್ಷಿಸಿದ ಕಾರಣ ಚೆನ್ನಮಲ್ಲಿಕಾರ್ಜುನಯ್ಯನ ಪಾದಕ್ಕೆ ಯೋಗ್ಯಳಾದೆನು (ಮಹಾದೇ. ಬ. ೧೪೭-೨೨೮) ; ಬಾಲಕನ ತಲೆದಡಹಿ ತನ್ನಂಘ್ರಿಕಮಲವನಿಳುಹಿದನು ಮೂರ್ಧ್ನಿಯಲಿ ತಾರಾಲಲನೆಯನು ಸಂತೈಸಿದನು (ತೊರರಾ. ೪-೫-೨೩). [ ತಲೆ₁ + ತಡವು₂ ]

**ತಲೆದಡಹು** ‘ತಲೆದಡವು’ ನೋ.

**ತಲೆದಗ್ಗು** (ಕ್ರಿ). ತಲೆಯನ್ನು ತಗ್ಗಿಸು,–ಬಾಗಿಸು : ತಲೆದಗ್ಗಿ ಪರಿವ ಕಳಕಳವುನಾಲಿಸುತ್ತಡ್ಡವರಿಯೊಳಾಂತು ನಿಂದಿರ್ದ ಪರಿವೊಟ್ಟಜೆಯಿಂ ಸಿಲ್ಕಿದರಂ ಪಿಡಿವ (ರಾಜಶೇ. ೬-೧೦ ವ). [ ತಲೆ₁ + ತಗ್ಗು₁ (<ತಟ್ಗು) ]

**ತಲೆದಾಗು**, ತಲೆತಾಕಂ, ತಲೆತಾಗು (ಕ್ರಿ). ೧. ತಲೆಗೆ ತಾಗು ; ತಲೆಗೆ ಬಡಿ,–ತಗುಲು : ತಳನನಗಟ್ಟು ಮೇಲೆ ಕೆಡಪಿ ಕೊಂಬರೆ ತಲೆದಾಗಿಯುಂ ನಿಮಿರ್ದಪರೆ (ಚಿಕವಂ. ೪೫-೯). **ತಲೆತಾಕು** : ೨. (ಆಲಂ) ಅನುಭವಕ್ಕೆ ಬರಂ : ತಲೆತಾಕಿದ ಮೇಲೆ ಅವನಿಗೆ ಬುದ್ಧಿ ಬಂತು (ರೂಢಿ). **ತಲೆತಾಗು**: ೨. ಮಾರ್ಗವೊಂದರಲೊಮ್ಮೆ ಮೂವರು ಹೋಗಲಾಗದುಯೆಂಬ ನುಡಿ ತಲೆತಾಗಿತು (ಕಾಶಿರಾ. ೨೯-೧೬); ತಲೆತಾಗಿದಲ್ಲದೆ ಬುದ್ಧಿ ಬಾರದು (ಗಾದೆ).

[ ತಲೆ₁ + ತಾಗು₁ (<ತಾಂಕು₁) ]

**ತಲೆದಾಳ್** (ಕ್ರಿ). ತಲೆಯಲ್ಲಿ ಧರಿಸಂ,–ಪಡೆ,–ಹೊಂದು : ಮಿಟ್ಟುಮಂ ದಾಂಟುವುದುಂ ಕೈಗೂಡುಗುಂ ನೋಂಪಿಯಾರ್ಪನ್ ತಲೆದಾಳ್ದವರ್ಗೆ (ಕುಚಿಆಳ್. ೧-೨೭-೯). [ ತಲೆ₁ + ತಾಳ್₁ ]

**ತಲೆದಿಂಬು** (ನಾ). (ಮಲಗಿಕೊಳ್ಳುವಾಗ) ತಲೆಗೆ ಆಸರೆಯಾಗಿ ಇಟ್ಟುಕೊಳ್ಳುವ ದಿಂಬು ; ಅರಳೆ ಮೊದಲಾದವುಗಳನ್ನು ತುಂಬಿ ತಯಾರಿಸಿದ ಮೆತ್ತೆ ; ತಲೆವೊಟ್ಟೆ : ಶಿಷ್ಯನ ವನದೊಳೊಂದಿನ ಕರೆದು ಜಾನುವ ತನಗೆ ತಲೆದಿಂಬಾಗಿ ಮಲಗಿದ ತ್ರಿಗುಣವರ್ಜಿತನು (ಸಂಭಪ. ೧೭-೧೦೬) ; ಕರದ ತಲೆದಿಂ[ಪಾಠಾಂ. ಗಿಂ]ಬಿನಲಿ ನಿದ್ರೆಯ ಭರದಲಿರ್ದನು (ತೊರರಾ. ೫-೨-೩೮) ; ಜಾಣ ಕೆಂಗಪ್ಪಾ ಮಲ್ಗೋ ಮಂಚದ ಮೇಲೆ ತಾಳೇಯ ಹೂವಿನ ತಲೆದಿಂಬೋ (ಹುಟ್ಟಹ. ೩೪) ; ಚಿಂತೆ ಹಾಸಲುಂಟು ಹೊದೆಯಲುಂಟು, ತಲೆದಿಂಬಿಗೂ ಆದೇ (ಸುವಸಂ. ೧೧) : ಅವಳು ತನ್ನ ಹಾಸುಗೆಯ ಮೇಲೆ ಬಿದ್ದುಕೊಂಡು ತಲೆದಿಂಬಿನಲ್ಲಿ ಮುಖ ಮುಚ್ಚಿ ರೋದಿಸುತ್ತಿದ್ದಳು (ಅಶ್ರುಮ. ೬೨). [ ತಲೆ₁ + ದಿಂಬು₂ ]

**ತಲೆದಿರುವು₁** (ಕ್ರಿ). ೧. ತಲೆಯನ್ನು ತಿರುಗಿಸಂ,–ಓರೆಮಾಡು : (+). ೨. (ಆಲಂ) ಔದಾಸೀನ್ಯ ತೋರಿಸಂ ; ವಿಮುಖನಾಗು : ಹಿರಿಯಂರ ಮಾತಿಗೆ ತಲೆದಿರುವಬೇಡ (ರೂಢಿ). [ ತಲೆ₁ + ತಿರುವು₁ (<ತಿರಿಪು₁) ]

**ತಲೆದಿರುವು₂** (ನಾ). ತಲೆತಿರುಗುವಿಕೆ ; “ ಬುದ್ಧಿಭ್ರಮಣೆ ” (ಪ್ರಭಣ).

[ ತಲೆ₁ + ತಿರುವು₂ (<ತಿರಿಪು₂) ]

**ತಲೆದಿವಸ** (ನಾ). ಉತ್ತಮವಾದ ದಿನ ; ಶುಭದಿನ : ಸ್ವಸ್ತಿ ಶಕವರಿಷಮೆಣ್ಬನೂಱ ಎಣ್ಬತ್ತೇಟನೆಯ ಕ್ರೋಧನ ಸಂವತ್ಸರದ ಮಾರ್ಗಶಿರ ಮಾಸದ ಪುಣ್ಣಮೆ ತಲೆದಿವಸಮಾಗೆ ಸತ್ಯವಾಕ್ಯ ಮಾರಸಿಂಘದೇವಂ ಪ್ರಿಥಿವೀರಾಜ್ಯಂಗೆಯ್ಯುತ್ತಿರೆ (ಎಕ. IV, ಚಾಮರಾ. ೪೮-೪ ; 965); ಸ್ವಸ್ತಿ ಸಕ ನೃಪ ಕಾಳಾತೀತ ಸ × × ಗಳ್ ೯೨೬ನೆಯ ಕ್ರೋದಿ ಸಂತ್ಸರ ಪಾಲ್ಗುಣ ಮಸದ ಪುಣ್ಣಮೆ ತಲೆದಿವಸಮಾಗೆ (ಎಕ. IX(S), ಚನ್ನಪ. ೧೯೨-೬; 1004); ಕಾರ್ತ್ತಿಕಮಾಸದ ಪೂರ್ಣ್ಣಮೆ ತಲೆದಿವಸಮಾಗೆ (ಮೈಆರಿ. ೧೯೪೭, ೨೮-೪ ; 1032). [ ತಲೆ₁ + ದಿವಸ ]

**ತಲೆದಿವಿಸು** (ಕ್ರಿ). ತಲೆಯನ್ನು ತಿವಿಯುವಂತೆ ಮಾಡು,–ಚುಚ್ಚುವಂತೆ ಮಾಡು :

**ತಲೆದಿವಿಸಿಕೊಳ್** = ತಲೆಯನ್ನು ತಿವಿಯುವಂತೆ ಮಾಡಿಕೊಳ್ಳು,–ತಿವಿಸಿಕೊಳ್ಳು : ಮಾನಧನನಂ ನೆಗಟ್ತೆಯ ಮಾನಸನಂ ತನಗೆ ಹಿತನನೊಂದಟಿದೋಷಕ್ಕಾ ನರಪತಿ ಕೆಡಿಪೊಡೆ ಕಣ್ ಬೇನೆಗೆ ತಲೆದಿವಿಸಿ ಕೊಳ್ವನಂ ನೆಟಿ ಪೋಲ್ಗುಂ (ಸೂಕ್ತಿಸು. ೧೬-೬೩). [ ತಲೆ₁ + ತಿವಿಸು ]

**ತಲೆದುಡಿಗೆ** ‘ತಲೆದುಡುಗೆ’ ನೋ.

**ತಲೆದುಡುಗೆ**, ತಲೆದುಡಿಗೆ (ನಾ). ೧. ತಲೆಯಲ್ಲಿ ಧರಿಸುವ ಆಭರಣ ; ಶಿರೋಭೂಷಣ : ಚೆನ್ನಪೂಗಳೆಡೆಯೆಡೆಯೊಳ್ ನಿಮಿರ್ದು ಮಿಱುಮಿಱುಗುವ ತಲೆದುಡುಗೆಯುಂ ತಲೆದುಡುಗೆಯೊಳೊಡಂಬಡಂ ಪಡೆದು ಮಿಳಿರ್ದು

ಪೊಳೆವ ಪೊಂದಳಿರುಂ (ಆದಿಪು. ೪-೯೦ ವ); ಕುಟಿಲ ಕೇಶಾವಳಿಯೋಗಡಿಸದೆ ಪನಿಗಳ್ ನಿಲೆ ತಲೆದುಡುಗೆಯ ಮುತ್ತಿನವೊಲೆಸೆಯೆ ಸತಿ ಸೊಗಯಿಸಿದಳ್ (ಶಾಂತಿಪು. ೮-೪೩); ಗಂಡುಗೋಗಿಲೆಯ ತುಂಡಖಂಡದಿನುದಿರ್ದು ನೆಲೆವೆಣ್ಗೆ ತಲೆದುಡುಗೆಯ ಮಾಣಿಕದ ಕಿಱುವರಲ್ಗಳಂತಿರ್ದ ಸಹಕಾರ ಕೋರಕಂಗಳಿೞಂ (ಮಲ್ಲಿಪು. ೩-೩೩); ಧರಣಿಗೆಸೆವ ತಲೆದುಡುಗೆಯ ವೊಲ್ಮೊವತ್ತಾರುಂ ಬಾಡಂ ಶ್ರೀವಾಸಂ ರಾಜಧಾನಿಯಂ ಸ್ತುತಿಯಿಸುವಂ (ಸೌಇಇ. XX, ೧೭೫-೧೭; 1190). ೨. (ಅಲಂ) ಚೂಡಾಮಣಿಯಂತಿರ್ಪುದು; ಶ್ರೇಷ್ಠವಾದುದು: ಪೃಥುಲನಿತಂಬಿನೀಕದಂಬಸುಖಾಪರೋಹಣ ಸೋಪಾನಪಂಕ್ತಿಗಳ ತಲೆದುಡುಗೆಯೆನಿಸೆ ನಿಱಿಸಿದ ಹೇಮರಜತರತ್ನ ದ್ರೋಣೀ ಕಟಾಹ ಪರಿವೇಷ್ಟನದಿಂ (ಅನಂಪು. ೭-೩೪ ವ); ಪೆಂಡಿರ ತಂಡಕ್ಕೆ ತಲೆದುಡುಗೆಯಾಗಿ (ಕಬ್ಬಿಗಕಾ. ೩೩೪). **ತಲೆದುಡಿಗೆ:** ೧. ಮದಿರಾರಸದಿಂದಂ ಬಾರ್ಚಿದರೋ ಪೇಟಿನಿಸಿ ಪೊಳೆವ ತಲೆದುಡಿಗೆಯ ರನ್ನದಿನೊಸರ್ವ ರಾಗರುಚಿಯಂ ಪುದಿದೆಸೆದುದು ಕೇಶಪಾಶಮಾ ಕಾಮಿನಿಯಾ (ಕಾದಂಲು. ೨೦): ಮರಕತ ಮಂಗಲವೇದಿಕೆ ಧರಾಂಗನಾ ಕೇಶಬಂಧದಂತಿರೆ ಮುಕ್ತಾವಿರಚಿತ ರಂಗವಲಿ ಮನೋಹರವಾದುದು ತೊಳಗಿ ಪೊಳೆವ ತಲೆದುಡಿ[ಪಾಠಾಂ. ಡು]ಗೆವೋಲ್ (ಪಂಚಾಪಾ. ೫-೧೨೦). ೩. ಶ್ರೇಷ್ಠವಾದ ತೊಡುಗೆ; ಉತ್ತಮವಾದ ಆಭರಣ: ಪೂವಂ ಕಡುಸಲವಿಂ ತಿಱಿದು ಬೇಗದಿಂ ಸವಣನ ಮಲ್ಲಡಿಗೆ ತಲೆದುಡಿಗೆ ಮಾಡುವ ಪಿಡಿಗಳ್ (ಕಬ್ಬಿಗಕಾ. ೨೨೪). [ ತಲೆ$_1$ + ತುಡುಗೆ (<ತೊಡುಗೆ) ]

**ತಲೆದೂಂಕು**, ತಲೆದೂಗು$_2$ (ನಾ). ೧. ತಲೆಯನ್ನು ತೂಗುವಿಕೆ; ತಲೆಯನ್ನು ಅಲ್ಲಾಡಿಸುವಿಕೆ,–ಒನೆಯುವಿಕೆ: ಎಲೆಯುಲುಹು ತಳದ ಕಂಸಾಳೆ ಮರನೊಲಹು ತಲೆದೂಂಕು[ಪಾಠಾಂ. ತೂಕ] ನೆಱೆ ಕಳಿತ ಹಣ್ಣಲೆ ಮೆಚ್ಚನಲು ನವಿಲು ನರ್ತನಂಗೆಯ್ದುವಂತಾ ವನದೊಳು (ಹಡಳಾ. ೩-೩೭); (ಸೋಮಚ. ೨-೮೦ ನೋ). **ತಲೆದೂಗು$_2$:** ೨. (ಅಲಂ) ಮೆಂಚ್ಚುವಿಕೆ; ಮೆಂಚ್ಚುಗೆಯನ್ನು ಸೂಚಿಸುವಿಕೆ: ಮೇಲಣ ಜಗದ ಜನ ಹಾರೈಸಿ ತಲೆದೂಗುಗಳೆಲಿರಲಿದ್ದೆಸೆಯ ಬಲ ಮೆಱೆದುದು ಮಹಾಹವವ (ತೊರರಾ. ೭-೧೪-೨೦). [ ತಲೆ$_1$ + ತೂಂಕು$_2$ ]

**ತಲೆದೂಕ** (ನಾ). ೧. = ತಲೆದೂಂಕು ೧: ಆ ನಿನ್ನ ಮೃದುಮಧುರಸ್ವರದಲ್ಲಿ . . . ಭಾವಭಂಗಿಗಳಲ್ಲಿ, ಹಸ್ತಮುದ್ರೆಗಳಲ್ಲಿ, ಬೆರಲಿರಿತದಲ್ಲಿ ತಲೆದೂಕದಲ್ಲಿ, ಮುಖದ್ಯುತಿಯಲ್ಲಿ . . . ನಿಜವಾಗಿ ಧನ್ಯವಾದುವು (ಬಟ್ಟಅ. ೧೩-೧೨). ೨. = ತಲೆದೂಂಕು ೨: ಅಂತು ಪಾಡುವಾಡುವುಯ್ಯಲ ತೂಕಂ ಕೂಡೆ ತಲೆದೂಕಮನೊಡರ್ಚೆ (ಅನಂಪು. ೮-೭ ವ). [ ತಲೆ$_1$ + ತೂಕ ]

**ತಲೆದೂಗಾಟ** (ನಾ). ತಲೆಯನ್ನು ತೂಗುವಿಕೆ; ತಲೆಯಾಡಿಸುವಿಕೆ: ಬಂದ ಮಂತ್ರಿಗೆ ತನ್ನ ತರಳಲೋಚನೆ ತನಗೆಂದ ಮಾತಿನೊಳೊಂದಿನಿತು ಕುಂದದೆ ನುಡಿದನಾತಗೆ ತಲೆದೂಗಾಟ ಕುಂದದೆ ಪೆರ್ಚಲಾ ನೃಪತಿ (ಕುರಾಸಾಂ. ೩೫-೪). [ ತಲೆ$_1$ + ತೂಗಾಟ ]

**ತಲೆದೂಗಿ** (ನಾ). ತಲೆಯನ್ನು ತೂಗಿಸುವಂಥದು: ಯೌವನವು ಸುಮ್ಮಾನ ಮುಪ್ಪು ಮಿಡುಕಾಟ ಯೌವನವು ಶೃಂಗಾರಿ, ಮುಪ್ಪು ತಲೆದೂಗಿ (ಇಂಗೀತ. ೪-೯). [ ತಲೆದೂಗು$_2$ + – ಇ$_3$ ]

**ತಲೆದೂಗಿಸು** (ಕ್ರಿ). ೧. ತಲೆಯನ್ನು ತೂಗಿಸು; ತಲೆಯನ್ನು ಅಲ್ಲಾಡಿಸು,–ಒಲೆದಾಡಿಸು. ೨. (ಅಲಂ) ಮೆಂಚ್ಚಿಸು; ಹರ್ಷಗೊಳಿಸು: ನೋಡೆ ತಲೆದೂಗಿಪ ಸುಂದರಮೆನಿಪ ಕುಸುರಿವೆಸದಿಂದರಮನೆ ಮಾಟ್ಪುದು ಮಯಂಗಮತಿ ವಿಸ್ಮಯಮಂ (ಮಲ್ಲಿಪು. ೨-೭೯); ಸಾರ್ದ ಬಾಳಪಂಡಿತ ಮೃತಿಯಿಂ ಸುರಂ ಸುಮನರಂ ತಲೆದೂಗಿಸಿದಂ ನಿರಂತರಂ (ಚಂದ್ರಪು. ೯-೫೯); ಬಸಂತನೊಲ್ದು ಸಂವರಣೆಯನೆಯ್ದೆ ತೋಱಿ ತಲೆದೂಗಿಸಿದಂ ನನೆವಿಲ್ಲ ಬೀರನಾ (ಕಬ್ಬಿಗಕಾ. ೨೦೧); ರುತ್ವಿಜರುಲುಹು ತಲೆದೂಗಿಸಿತು ನಭದ ಹವಿರ್ಭುಜಾವಳಿಯ (ತೊರರಾ. ೧-೭-೪೭); ಆಗಮ ಕಾವ್ಯನಾಟಕದೊಳೆಲ್ಲರ ತಲೆದೂಗಿಸಿ ಮಲಗಿಸಬಹುದು (ಭರತೇ. ३-೯೩); ಜಾಣರಂ ತಲೆದೂಗಿಸದೆ ನುಡಿದೊಡಾ ಪದಕ್ಕೊಣೆಯುಂ ಬಹುದು (ಜೈಮಿಭಾ. ೧-೮); ಹರಿದಾಸರ ಸಾಹಿತ್ಯಸಂಗೀತಗಳಲ್ಲಿರುವ ಸಾಮರಸ್ಯ ತಲೆದೂಗಿಸುವಂತಹುದು (ಜಗದಾ. ೬೫). [ ತಲೆದೂಗು$_1$ + – ಇಸು$_3$ ]

**ತಲೆದೂಗು$_1$**, ತಲೆತೂಗು (ಕ್ರಿ). ೧. ತಲೆಯನ್ನು ತೂಗು,–ಅಲ್ಲಾಡಿಸು: ತಲೆದೂಗುವಂದದೆ ಕಳಮೆಯ ತೆನೆಗಳಂದೊಲೆದಾಡುತಿರ್ದುವರ್ತಿಯಲಿ (ಕಂನವಿ. ೫-೭೨); ತಲೆದೂಗೆ ತೆಂಗುಗಳ್ ಮೆರೆವ ಕಾಲೂರು (ಕಾಲೂರ. ೪೭-೭೭). ೨. ತಲೆಬಾಗಂ; ನಮಸ್ಕರಿಸು: ವೇದಿಕೆಗೆ ತಲೆದೂಗುವವನು (ಬಟ್ಟಅ. ೮೪-೮) ೩. ಓರೆಯಾಗು; ವಾಲು; ಒಲೆ: ನಿನ್ನ ಕೃಪೆ ತಾನತ್ತಲಿನಿತೆ ತಲೆದೂಗಿದರೆ ಮನೆದಪ್ಪುವುದೆ ನನ್ನ ಸುಮನೋರಥಂ? (ಅನಿಕೇ. ೫೨-೭). ೪. ಕರೆ; ಆಹ್ವಾನಿಸು: ನಲ್ಲೆಯಂ ನಗುನಗುತ ಹೂಗಿಡಂ ತಲೆದೂಗುತಿಲ್ಲಿ ಬಾಬಾರೆಂದು ಕರೆಯುತಿಹವಲ್ಲಿ (ಕಾಲೂರ. ೧೦೨-೨೩೩). ೫. ಆಶ್ಚರ್ಯ, ಸಮ್ಮತಿ, ಮೆಚ್ಚಿಕೆ, ಹರ್ಷ ಮೊದಲಾದ ಮನೋಗತ ಭಾವಗಳನ್ನು ಸೂಚಿಸಲು ತಲೆಯನ್ನು ಅಲ್ಲಾಡಿಸು. (i) ಆಶ್ಚರ್ಯಕ್ಕೆ: ಇದಾರ ಚೆಲ್ವಿನಂಕುರವೆಂದು ಮೂಗಿನೊಳ್ ಕೈಯಿಟ್ಟು ತಲೆದೂಗಿ ಬೆಱಗಾಗಿ (ಸಂಬಿರ. ३-೫೦); ಅಚ್ಚರಿವಟ್ಟೇ ಸುರಾದ್ರಿ ತಲೆದೂಗುವವೋಲ್ ನಿಚ್ಚಮೆಸೆದಪುದು . . . ಶಿಖರಂ (ಪುಷ್ಪಪು. ೧೦-೬೦): ಆ ಮಹಾ ಮೋಹರವನೊಡೆಯಲು ಸೋಮಕುಲಜರು ಭೀತರಾದರು ಹಾ ಮಹಾದೇವೆನುತ ಧರ್ಮಜ ನೋಡಿ ತಲೆದೂಗಿ (ಕುಮ್ಮಾದ್ರೋ. ೪-೩೩); ಬ್ರಹ್ಮನು ತಲೆದೂಗಲಿದ್ದಾನೆ (ಕೈಲಾಕ. ೪೨). (ii) ಸಮ್ಮತಿಗೆ: ಬಗೆಗೊಂಡಿನಿಸಂ ತಲೆದೂಗುವಂತೆವೋಲ್ ನಾಡೆ ಪೊದಟ್ಟು ನೀಳ್ದು (ಪಂಪಭಾ. ೩೮-೩);ಅಹುದಿವಲ್ಲೆಂಬೆಣಿಕೆ ಮನದಲಿ ವಹಿಸಲಱಿಯದೆ ನೂಪುರಂಗಳಿವಹುದೆನುತ ಕೆಲಸೆಗೆದು ತಲೆದೂಗಿ[ಪಾಠಾಂ. ಗುತ್ತಿ]ದನು ಸೌಮಿತ್ರಿ (ತೊರರಾ. ೪-೨-೮೮); ಮಟಮಟ ಮಧ್ಯಾಹ್ನದೊಳು ರಾಜನ್ಯೆತಂದು ಇದು ಅರ್ಧರಾತ್ರಿಯೆಂದೆನಲು ಅಹುದಹುದೆಪ್ಪೊಂದು ತಾರೆಗಳಿಹವೆಂದು ತಲೆದೂಗಿ ನುಡಿವುದೆ ಮೇಲು (ಇಂಚಾಪ. ೨೧೮-೭೮). (iii) ಮೆಚ್ಚಿಕೆಗೆ: ಸಲವಿಂ ತಲೆದೂಗನೆ ಪದ್ಮಸಂಭವಂ (ಚಂದ್ರಪು. ೧-೧೪೪): ಬರೆದೆ ಲೇಸು ಬರೆದೆಯೆನುತ್ತುಂ ಬಱಿದೆ ತಲೆದೂಗುವುದಱಿಂ[ಪಾಠಾಂ. ತೂಕವದಱಿಂ]ಬಱಿದಪ್ಪುದು ಕಾವ್ಯಮಱಿಯದರ ಜಾಣಿಂದಂ (೧೧೪. ೧-೨೪); ವೇದ ಶಾಸ್ತ್ರಕೆ ಮೂಢ ತಲೆದೂ[ಪಾಠಾಂ. ತೂ]ಗಲಿಲ್ಲ (ಪುರಂದ. ३-೫೭-೧): ನಾನಾ ಕುಶಲದಿಂದೊಪ್ಪುವರಮನೆಯಂತನಂತ ವಿಭವಂಗಂಡು ತಲೆದೂಗಿ ಬಸವಸತ್ಯಂತ ವಿಸ್ಮಿತನಾಗಿ (ಚಬಪು. ೫-೫೪); ತೆಂಬೆಲರ ಸೊಗಸಿಂಗೆ ತಲೆದೂಗುವಂತೆ (ಜೈಮಿಭಾ. ೩-೭); ವಿದೇಶೀಯರೂ ಕೂಡ ತಲೆದೂಗುವಂತೆ ಮಾಡಿದನು (ಕಪಪು. ೭-೪೯). **ತಲೆತೂಗು:** ೫. ಸುಶ್ರಾವ್ಯವಾದ ಸಂಗೀತವನ್ನು ಕೇಳಿ ಸಭೆಯ ಜನ ತಲೆತೂಗುತ್ತಿದ್ದರು (ರೂಢಿ).

[ ತಲೆ$_1$ + ತೂಗು$_1$ (<ತೂಂಕು$_1$) ]

**ತಲೆದೂಗು$_2$** 'ತಲೆದೂಂಕು' ನೋ.

**ತಲೆದೂಳು** (ನಾ). ತಲೆಯಲ್ಲಿ ಹತ್ತಿರುವ ಧೂಳು,–ಕಸ:

**ತಲೆದೂಳು ಜಾಡಿಸಿಕೊಳ್ಳು** = ೧. ತಲೆಯಲ್ಲಿ ಹತ್ತಿರುವ ಧೂಳನ್ನು ಜಾಡಿಸಿಕೊಳ್ಳು,–ಕೊಡವಿಕೊಳ್ಳು. ೨. ಬಹಳವಾಗಿ ಯೋಚಿಸು, ಹೆಚ್ಚು ಕಷ್ಟಪಡಂ; ಪ್ರಯಂತ್ನಪಡು: "ನಾ" "ನಾ" ಅಂಬೋಪವರು ತಲೆದೂಳು ಜಾಡಿಸಿಕೊಂಡರು ಅವನ್ನು ತಿಳಿದುಕೊಳ್ಳಲಿಕ್ಕೆ (ಅಶ್ವಮೇ. ३೫).

[ ತಲೆ$_1$ + ದೂಳು (<ಧೂಳ್) ]

**ತಲೆದೆಗೆ**, ತಲೆತೆಗೆ (ಕ್ರಿ). ೧. ಮರೆಯಾಗು; ಅಡಗು; ಮುಚ್ಚಿಟ್ಟುಕೊಳ್ಳು: ಪಿಂದೆ ತಲೆದೆಗೆದ ಕದಿರ್ಗಳ್ ಸಂದಣಿಗೊಂಡರ್ಕಬಿಂಬದಿಂ

ಪೊಱಪೊಣ್ಮುತ್ತೊಂದೊಂದನೊರಸಿ ಕಿಡಿವಿಡುವಂದದೆ ಕಡುವಿಸಿಲ ಪೊಳೆಪುವಡೆದುದು ಕಾಯ್ಪಂ (ಲೀಲಾವ. ೫-೩೪). 'ತಲೆಗರೆ' ಪರಾ.

**ತಲೆತೆಗೆ :** ೨. ಕತ್ತರಿಸು ; ಕೊಲ್ಲು ; ಸಂಹರಿಸು : "ತಲೆತೆಗೆಯುವ ತಪ್ಪು, ವಧಾರ್ಹ ಅಪರಾಧ" (Capital offence. ಪತ್ರಿನಿ. ೧೫).
[ ತಲೆ$_1$ + ತೆಗೆ$_1$ ]

**ತಲೆದೆವಸ** (ನಾ). =ತಲೆದಿವಸ : ಸುಭಕೃತು ಸಂವತ್ಸರದ ಭದ್ರಪದ ಮಸದ ಪೆಱ್ ತಲೆದೆವಸಮಾಗೆ (ಮೈಆರಿ. ೧೯೩೦, ೧೪-೫; ಸು. 835) ; ಪಾಲ್ಗುಣ ಸುಕ್ಲಪಕ್ಷದ ನನ್ದೀಸ್ವರಂ ತಲೆದೆವಸಮಾಗೆ (ಎಕ. I, ೯೪-೫ ; 977) ; "ಪರ್ವದ ತಲೆ ; ಕೊನೆಯ ದಿನ" (ಎಕ. I, XXX ಪೀಠಿಕೆ).
[ ತಲೆ$_1$ + ದೆವಸ ]

**ತಲೆದೆಸೆ** (ನಾ). ತಲೆಯ ದಿಕ್ಕು ; ತಲೆಯ ಕಡೆ ; ತಲೆಯ ಬಳಿ,—ಹತ್ತಿರ : ದುರ್ಯೋಧನನುಮಾಗಳೆ ಬಂದು ಬಲಿಬಂಧನನ ತಲೆದೆಸೆಯೊಳ್ ಕುಳ್ಳಿರೆ (ಪಂಪಭಾ. ೯-೧೦ ವ) ; ಆ ಕಳಕಳಮಂ ಕೇಳ್ದು ಕರತಳದಿಂ ಕಣ್ಣಂ ಪೊಸೆಯುತ್ತುಮೆಟ್ಟು ತಂತಮ್ಮ ತಲೆದೆಸೆಯೊಳಿರ್ದ ಕರವಾಳಂ ಕೊಂಡು (ಗಧಾಯು. ೯-೩೨ ವ) ; ತಲೆದೆಸೆಯೊಳಿರ್ದಡಾಯ್ದ ಮನೋಲವಿಂದಾನುರ್ಚಿ (ದಶಕು. ೯-೭೪) ; ಎದ್ದು ಬಳಿಗೆ ಹೋಗಿ, ತಲೆದೆಸೆಯಲ್ಲಿ ಕುಳಿತೆ (ಸೀತಾರ. ೧೯). [ ತಲೆ$_1$ + ದೆಸೆ$_1$ ]

**ತಲೆದೊಡವು** (ನಾ). ತಲೆಯ ಆಭರಣ ; ಶಿರೋಭೂಷಣ : ಇದನೆ ತಲೆ ದೊಡವುಮಾಡಿಯೆ ಪದಪದ್ಮಕ್ಕೆಱಗಿಪಳ್ ಶಚೀವಧುವಂತಾ ತ್ರಿದಶೇಂದ್ರನಂ (ಜಗವಿ. ೧೨-೭೭); ಮುಂದಲೆಯಿಂದಂ ಪಿಂಗದಿರ್ಪೀ ತಲೆದೊಡವು (ಚಂದ್ರಪು. ೮-೭೩) ; ವನಲಕ್ಷ್ಮಿಯ ಮುತ್ತಿನ ತಲೆದೊಡವಿದು ತಾನೆಂದೆನೆ ತಳ್ತತಿಮುಕ್ತಕಂ ಮುಗುಳ್ತುದು ಬನದೊಳ್ (ಕುಸುಮಾ. ೫-೯೦) ; ಕಡುಕಾಮಿ ಬಿಡು ಕಂಪಿಲರಾಯಗೆ ತಲೆದೊಡವಾದೆನ್ನೀ ನಳಿತೋಳ ಕೊಡುವೆನೆ ನಿನಗೆ (ಕುರಾಸಾಂ. ೩೪-೮೦). [ ತಲೆ$_1$ + ತೊಡವು ]

**ತಲೆದೊನೆ,** ತಲೆತೊನೆ (ಕ್ರಿ). ೧. ತಲೆಯನ್ನು ಒನೆ ; ತಲೆಯನ್ನು ಸರಿಸು : ರಂಜಿಪ ಹೊಂಗಟ್ಟಿನ ಬಿಲ್ಲ ಮನ್ಮಥ ಸಿಂಜಿನಿಗೊಳಿಸಿ ಜೇವೊಡೆಯೆ ಅಂಜಿದು ಫಣಿರಾಯ ತಲೆದೊನೆಯಲು ರತ್ನ ಗುಂಜಿಯಂತೆಸೆದು ಚೆಲ್ಲಿದುವು (ಮೋಹತ. ೧೨-೫೩): ಓರಂತೆ ಭಾವರತಿಸೌಖ್ಯ ಪೀಯೂಷರಸಧಾರೆಯಂ ಚಿತ್ತದಿಂದೀಂಟಿ ನೆಱೆ ತಣಿದು ಬಾಯಾಱೆ ತಲೆದೊನೆದು ನೀರಂ ನಿಲಿಸುತಿರ್ಪರಾ ಪಥಿಕರ್ಕಳು (ಚಬಪು. ೧೧-೧೫). **ತಲೆತೊನೆ :** ೨. (ಅಲಂ) ಮೆಚ್ಚುಗೆಯನ್ನು ಸೂಚಿಸು : ಕಪ್ಪನಾ ಕುಶಲತೆಯ ಶಿಲ್ಪಕೆ ಮನಂ ಮೆಚ್ಚಿ ನಿಲ್ಪಟ್ಟು ತಲೆತೊನೆದನ್ (ಶ್ರೀರಾಮಾ. ೪೪೮-೯೦).
[ ತಲೆ$_1$ + ತೊನೆ$_1$ ]

**ತಲೆದೊಱೆ** (ನಾ). (ಶಿವನ) ತಲೆಯಲ್ಲಿರುವ ತೊರೆ ; ಗಂಗೆ : ತಿಣ್ಣವಾದರೆ ತನ್ನ ತಲೆದೊಱೆಯನು ಮುಕ್ಕಣ್ಣನೀ ಬನದೊಳಿಟ್ಟಂತೆ ತಣ್ಣೊರೆಗಲ್ಲ ಸೋಪಾನದ ಕೊಳ ಬೆಳರ್ವಣ್ಣನ ಬಿರುತೋಡಿದವು (ಮೋಹತ. ೨೪-೫೫). [ ತಲೆ$_1$ + ತೊಱೆ$_3$ ]

**ತಲೆದೋರು** 'ತಲೆದೋಱು' ನೋ.

**ತಲೆದೋಱ್** 'ತಲೆದೋಱು' ನೋ.

**ತಲೆದೋಱಿಸು** (ಕ್ರಿ). ಕಾಣಿಸಿಕೊಳ್ಳು ; ವ್ಯಕ್ತವಾಗು : ನೆಲೆಗೊಳ್ಳದು ಚಿತ್ತ ಮಗನೆ ನೀನಿದಿರ್ವಂದು ತಲೆದೋಱಿಸೆಂದಳಲಿದಳು (ಮೋಹತ. ೪-೮೧) ; ಕಠಾರಿಯ ಮೊನೆ ಮೊಳೆ ಬೆನ್ನೊಳು ತಲೆದೋಱಿಸಲು (ಮೋಹತ. ೧೨-೬೮). [ ತಲೆದೋಱು + – ಇಸು$_3$ ]

**ತಲೆದೋಱು,** ತಲೆದೋರು, ತಲೆದೋಱ್ (ಕ್ರಿ). ೧. ಕಂಡುಬರು ; ಕಾಣಿಸು ; ವ್ಯಕ್ತವಾಗು ; ಪ್ರಕಾಶಕ್ಕೆ ಬರು : ನೆತ್ತರ ಕಡಲ್ಗಳೊಳ್ ಮಿಳಿರ್ವ ಪಟವಿಗೆಗಳ್ ತಲೆದೋಱೆ ಮುಳುಂಗಿದ ರಥಂಗಳುಂ (ಪಂಪಭಾ. ೧೦-೧೦೭ ವ) ; ಮಲಯದೆ ಮಾಱಿ ಕೀಱ್ ತಲೆದೋಱದೆ ಕಪ್ಪಮನಿತ್ತು ಬಂದು (ಸಾಇಇ. IX-1, ೯೫-೧೭ ; 1041) ; ಜಿನರುಂ ವಸುಧೆಯೊಳಿರ್ದ ಪರಿರ್ದುಂ ಮಿಸುಕುವ ಕಲಿಗಾಲದೆಸಕದಿಂ ತಲೆದೋಱರ್ (ಧರ್ಮಾಮೃ. ೫-೧೯೪) ; ಕೂಡಲ ಸಂಗಮದೇವನಲ್ಲದೆ ತಲೆದೋಱುವ ದೈವಂಗಳನಂದೂ ಕಾಣೆನಿಂದೂ ಕಾಣೆ (ಬಸವ. ೫೪೦) ; ಮೋಱೆಯಂ ಬಾಗಿಸುತ ಬಸವನ ದೂಱಿಗೊಳಗಾದೆನೆಯೆನುತ ತಲೆದೋಱದತ್ತಲೆ ಸರಿವುತಿರೆ (ಬಸಪು. ೮-೩೧); ನಿಸ್ಸಾಳಕೋಟಿಯ ಧರಧುರದ ದೆಖ್ಖಾಳದಲಿ ತಲೆದೋಱದನು ಪಾರ್ಥ (ಕುವ್ಯಾಕ. ೪-೧೪) ; ಕಾಷ್ಠದೊಳಿರ್ದ ವಹ್ನಿ ಮಥನೋದ್ಭವದಿಂ ತಲೆದೋಱದಲ್ಲಿ ತತ್ಕಾಷ್ಠದ ಭಾವಮುಂಟೆ (ಶತಕ. ೧-೩೭). ೨. ಉಂಟಾಗು; ಉತ್ಪತ್ತಿಯಾಗು ; ಹುಟ್ಟು : ತದ್ಭೋಗಿಫಣಾಮಣಿದ್ಯುತಿಯೆ ಕಟ್ಟಿಲೆಯಂ ತಲೆದೋಱಲೀಯದು (ಪಂಪಭಾ. ೪-೧೭) ; ತನ್ಮಹಾಭಾಗನ ರೂಪನೀಕ್ಷಿಸುವವೊಲ್ಪುಳಕಂ ತಲೆದೋಱದತ್ತು (ಕಾದಂಪೂ. ೭೪೭) ; ಆದಿ ಅನಾದಿ ಇಲ್ಲದಂದು ನಾದಬಿಂದು ಕಳೆ ಮೊಳೆದೋಱದಂದು ಶ್ರುತಿಸ್ಮೃತಿಗಳು ತಲೆದೋಱದಂದು (ಆದವ. ೧-೨) ; ತಪ್ಪೊಂದುಂ ತಲೆದೋಱದಂತೆ ಪಲರೆಲ್ಲರ್ ತಿರ್ದಿದೀ ಕಬ್ಬಂ (ಕಬ್ಬಿಕಾ. ೫) ; ಏನನೆಂಬೆನು ನಮ್ಮ ಪುಣ್ಯದ ಹಾನಿ ತಲೆದೋಱದರೆ (ಕುವ್ಯಾಕ. ೧೭-೩೧) ; ಮರುಳಲಾಯಲೆ ತಮ್ಮ ತಪ್ಪಿಸಿ ತರಣಿ ತಲೆದೋಱದರೆ ವೈರವ ಧರಿಸಬಲ್ಲನೆ ಭರತ ನಾರೆಂದಱಿಯಲಾ ನೀನು (ತೊರರಾ. ೨-೬-೨೦). **ತಲೆದೋರು :** ೨. ಆ ವಿಷಯದಲ್ಲಿ ಆಕ್ಷೇಪಕರವಾದ ಒಂದು ಪ್ರಶ್ನೆ ತಲೆದೋರಬಹುದು (ನಾಡೋಜ. ೧೪೩) ; ಹದಿನಾರನೆಯ ಶತಮಾನದಲ್ಲಿ . . . ಚಂಪೂ ಗ್ರಂಥಗಳಲ್ಲದೆ ರಗಳೆ ಷಟ್ಪದಿಗಳ ಗ್ರಂಥಗಳೂ ಕನ್ನಡದಲ್ಲಿ ತಲೆದೋರಿದ್ದುವು (ತವನಿ. ೩೭) ; ಅನೇಕ ಬಗೆಯ ಯೋಚನೆಗಳು ತಲೆದೋರುತ್ತಲಿದ್ದುವು (ರಾವಿಜ. ೯) ; ಅನುಮಾನಗಳು ಒಮ್ಮೆಯೇ ತಲೆದೋರಿದುವು (ಮುನಿಮಾ. ೧೦). **ತಲೆದೋಱ್ :** ೧. ಗುಣನಿಧಿಯಂ ನೋಡಲ್ಕಾ ಫಣೀಂದ್ರನುತ್ಕಂಠನಾಗೆ ತಲೆದೋರ್ಪ ಫಣಾಮಣಿರುಚಿಗಳಂತೆ ಪೊಳೆದುವು ಮಣಿಭೂಮಿಯೊಳೆಸೆವ ದೀಪಿಕಾಪ್ರಕರಂಗಳ್ (ಕಾದಂಪೂ. ೫೧೪).
[ ತಲೆ$_1$ + ತೋಱು ]

**ತಲೆನವಿರ್,** ತಲೆನವಿರು (ನಾ). ತಲೆಯ ಕೂದಲು ; ತಲೆಗೂದಲು : ಅರಸಿಯುಮಂ ತಲೆನವಿರಂ ಪಿಡಿದು ದಱದಱನೆಱೆದುಕೊಂಡು ಬಂದಂ (ವಡ್ಡಾರಾ. ೧೧೭-೨೫) ; ಪರಾಕ್ರಮಧವಳನ ಶರಪರಿಣತಿಯಂ ಕಂಡು ದುರ್ಯೋಧನನ ಮೊಗಂ ತಲೆನವಿರ ಗಂಟಿಂ ಕಿಱಿದಾಗೆ (ಪಂಪಭಾ. ೨-೭೭ವ); ಯುವತಿಯರೋರೊರ್ವರ ತಲೆನವಿರಂ ತಲೆನವಿರೊಳಡಸಿ ಕಟ್ಟುತ್ತುಂ ಮೋದುವುದುಮ್ (ಪಂರಾಮಾ. ೧೪-೧೦೦) ; ಕೆದರ್ದ ತಲೆನವಿರರಮೆ ಮುಗಿದ ಕಣ್ಗಳ್ ಜೋಲ್ದ ವದನದಿಂ ಭುಜದೊಳೊಱಗಿದ ಕೊರಲ್ (ಚಬಪು. ೧೦-೭೩) ; ಅರೆದೆಱೆದ ಕಣ್ಗಳಿಂ ಕೆದರ್ದ ತಲೆನವಿರಿಂದೆ ಜಗಿಜಗಿಯಾದ ಪೊಡೆಯಿಂದೆ . . . ಬಿಳ್ದ ಪೆರ್ವೆಣಂಗಳಿಂದತಿ ಭಯಾವಹಮಾದ ಬಟ್ಟೆಯಂ ನಿಟ್ಟಿಸುತ್ತಿರೆ (ರಾಜಶೇ. ೫-೧೨೦ ವ). **ತಲೆನವಿರು :** ತಲೆನವಿರ ಹಿಣಿಲಿಱಿದು ತಿಲಕವ ಗೆಲಿದು ಕಿಗ್ಗಟ್ಟಿನ ಕಠಾರಿಯ ಹೊಳೆವ ಗೊಂಡೆಯ ಮೆಱೆಯೆ ಗಂಡಂದವನು ಕೈಕೊಂಡ (ಕುವ್ಯಾವಿ. ೬-೪೯) ; ಕರಿಯ ತಲೆನವಿರೆಣ್ಣೆಗಂಟು ಬೆನ್ನಿನೊಳೊಲೆಯೆ (ಭಿಕ್ಷಾಜ. ೩-೨೯). [ ತಲೆ$_1$ + ನವಿರ್ ]

**ತಲೆನವಿರು** 'ತಲೆನವಿರ್' ನೋ.

**ತಲೆನಾಯಕ** (ನಾ). ಮುಂಖ್ಯನಾದ ನಾಯಕ; ನಾಯಕಶ್ರೇಷ್ಠ : ನಿಲಲುಂ ನೂಂಕಲುಮಱಿಯಂ ಗೆಲಲುಂ ಪೆಱರೊಳರೆ ಕರ್ಣನಲ್ಲದೆ ಕರ್ಣಂ ತಲೆನಾಯಕನಾರುಮುಮಂ ನಿಲೆ ನಿಲ್ವನ್ನೂಂಕೆ ನೂಂಕುವರ್ಗೆಲೆ ಗೆಲ್ವರ್ (ಗದಾಯು. ೩-೭೪). [ ತಲೆ$_1$ + ನಾಯಕ ]

**ತಲೆನಿಮಿರು** (ಕ್ರಿ). ತಲೆಎತ್ತು ; ತಲೆ ನೆಟ್ಟಗೆ ಮಾಡು.

ತಲೆ ನಿಮಿರಿ ನಿಲ್ಲು = ೧. ತಲೆಯೆತ್ತಿ ನಿಲ್ಲು; ತಲೆಯನ್ನು ಸೆಟಿಸಿ ಕೊಂಡು ನಿಲ್ಲು; ನೇರವಾಗಿ ನಿಲ್ಲು. ೨. ಅಹಂಕಾರದಿಂದ ಬೀಗು; ಹೆಮ್ಮೆಯಿಂದ ಮೆರೆ: ಕೆಲವು ಬಾರಿ ದುರಹಂಕಾರದಿಂದ ತಲೆ ನಿಮಿರಿ ನಿಲ್ಲುವ ಪಕ್ಕವಾದ್ಯಗಾರರನ್ನೂ, ಗಲಾಟೆಮಾಡುವ ಮೃದಂಗದವರನ್ನೂ ಹಿಡಿತದಲ್ಲಿಟ್ಟುಕೊಂಡು, ಬುದ್ಧಿಗಲಿಸಲು, ನೂರಾರು ಎಳೆಗಳನ್ನುಳ್ಳ ಲಯವಿನ್ಯಾಸದ ವೈಖರಿಯನ್ನೂ ಬಳಸುವುದುಂಟು (ಸಂಗೀತ. ೩೮). [ತಲೆ$_1$ + ನಿಮಿರು$_1$ (<ನಿಮಿರ್)]

**ತಲೆನೀರ್,** ತಲೆನೀರು (ನಾ). ೧. ತಲೆಗೆ ಹಾಕಿಕೊಳ್ಳುವ ನೀರು. 'ತಲೆನೀವಿರ್ಾ' ಪರಾ. ತಲೆನೀರು: (ಕರಾ). ೨. ಬೆಟ್ಟದ ಮೇಲಿನಿಂದ ಹರಿದುಬರುವ ನೀರು: ಈ ಜಮೀನಿಗೆ ತಲೆನೀರು ತುಂಬ ಇದೆ (ರೂಢಿ). [ತಲೆ$_1$ + ನೀರ್$_1$]

**ತಲೆನೀರು** 'ತಲೆನೀರ್' ನೋ.

**ತಲೆನೀಮಿರ್ಾ** (ಕ್ರಿ). ೧. ತಲೆಗೆ ನೀರು ಹಾಕಿಕೊಳ್ಳು; ಎರೆದುಕೊಳ್ಳು; ಅಭ್ಯಂಜನಸ್ನಾನ ಮಾಡು. ೨. ಋತುಸ್ನಾನ ಮಾಡು: ಅಂತಳವಲ್ಲ ದೊಪ್ಪಿ ತಲೆನೀಮಿರ್ದಂದು ರಜನೀಸಮಯದೊಳ್ ಪವಡಿಸಿ (ಶಾಂತಿಪು. ೯-೨೦೦ ವ); ಕೆಂಪಿನ ಪಸದನಮಂ ಕಳೆದು ತಲೆನೀಮಿರ್ದಂದು ಬೆಳ್ಪಸದನಂಗೆಯ್ದು (ಅರ್ಧನೇ. ೨-೧೩ ವ); ಪ್ರಭಾವತಿಯೊಂದು ದಿವಸಂ ತಲೆನೀಮಿರ್ದಂದು . . . ನಿದ್ರಾವಶಗತೆಯಾಗಿ ಮಲಂಗಿರ್ದು (ಜೀವಸಂ. ೧೯೫-೨೬ವ). [ತಲೆನೀರ್ + ಮಿಾ]

**ತಲೆನೆಳಲ್** (ನಾ). ಶಿಖರದ ನೆಳಲು; ತುದಿಯ ನೆಳಲು (?): ಮಲೆಯ ತಲೆನೆಳಲ್ಗಾಂಕೆಗೊಂಡಿರ್ದುದಾತನ ನೆಳಲ್ ದೈತ್ಯಗಾತ್ರಂ, ಭೂತಭೀಷಣಂ (ಶ್ರೀರಾಮಾ. ೫೫೮-೩೭೫). [ತಲೆ$_1$ + ನೆಳಲ್ (<ನೆಟಲ್$_1$)]

**ತಲೆನೇಣ್** (ನಾ). ತಲೆಗೆ ಕಟ್ಟುವ ಹಗ್ಗ: ತಲೆನೇಣ್ಗೊಂದು ಮೃಗೇಂದ್ರವಾಲಕುಲಮಂ . . . ಕೊಂಡು (ಕುಸುಮಾ. ೧೪-೫೬). [ತಲೆ$_1$ + ನೇಣ್$_1$]

**ತಲೆನೋವು** (ನಾ). ೧. ತಲೆಯಲ್ಲಿ ಉಂಟಾಗುವ ನೋವು; ತಲೆಬೇನೆ; ಶಿರೋವೇದನೆ: ತಲೆನೋವಿಗೆ: – ಕವಡೆಯನು ತೇದು . . . ನೀರಲ್ಲಿ (ಅರೆದು ಹಚ್ಚಲು) ತಲೆನೋವು ಮಾಣ್ಗುಂ (ವಿಷ್ಣವಿ. ೬೦); ತಲೆನೋವಿನ ನೆವ ಹಾಕಿ . . . ಮನೆಗೆ ಬಂದಿದ್ದೆ (ರೂಪಸಂ. ೧೩); ಒಂದು ಹೊಟ್ಟೆಯ ನೋವು ಮತ್ತೊಂದು ತಲೆನೋವು . . . ಕರೆದಾಗ ಬರುವಂತೆ ಕೊಟ್ಟಿದೆ ದೈವವು ವರದವೋಲಂಗನೆಯರಿಗೆ (ಇಂಜಾಪ. ೧೮೦-೫೫); ಏನು ಮಂಡೆ ಮಾರಿ ಬಂದಿದೆಯೇ ನಿನಗೆ? ತಲೆನೋವೇನೇ ನಿನಗೆ? (ಹಳ್ಳಿಹಾ. ೧೦೪); ತಾಯಿ ಕಂಡರೆ ತಲೆನೋವು (ಗಾದೆ). ೨. (ಆಲಂ) ಕಷ್ಟ; ತೊಂದರೆ; ಸಂಕಟ: ಅವನಿಗೆ ಕೆಲಸವೆಂದರೆ ತಲೆನೋವು (ರೂಢಿ).

ತಲೆನೋವು ಬರು = ೧. ತಲೆಯಲ್ಲಿ ನೋವು ಉಂಟಾಗು; ತಲೆಬೇನೆ ಬರು: ಅವರಿಗೆ ತಲೆನೋವು ಬಂದಿದೆ (ರೂಢಿ). ೨. ಹೆಚ್ಚು ಶ್ರಮವಾಗು; ತೊಂದರೆಯುಂಟಾಗು; ಕ್ಲೇಶವುಂಟಾಗು: ಕಚೇರಿಯಲ್ಲಿ ನಾಲ್ಕು ಜನರು ರಜ ತೆಗೆದುಕೊಂಡು ನನಗೆ ತಲೆನೋವು ಬಂದಿದೆ (ರೂಢಿ). [ತಲೆ$_1$ + ನೋವು]

**ತಲೆಪಂಕ್ತಿ** (ನಾ). ಮೇಲಿನ ಸಾಲು; ಮೊದಲ ಸಾಲು: "ಶಿರೋನಾಮವಿರುವ ಪುಟದ ಮೇಲ್ಪಂಕ್ತಿ; ತಲೆಪಂಕ್ತಿ; (ವರ್ತಮಾನ ಪತ್ರಿಕೆಯ) ಶಿರೋನಾಮ ಅಥವಾ ಉಪಶಿರೋನಾಮ; ವಿಷಯನಿರೂಪಕ ಮೇಲ್ಪಂಕ್ತಿ" (Head-line. ಇಂಕನಿ.); ಈಗ ಜನಸಾಮಾನ್ಯಕ್ಕೆ ದಿನಪತ್ರಿಕೆಗಳ ತಲೆಪಂಕ್ತಿಗಳೇ ಸಾಕಾಯಿತು (ಶಿಲ್ಪನಾ. ೧೬೫). [ತಲೆ$_1$ + ಪಂಕ್ತಿ]

ತಲೆಪಟ್ಟೆ(ನಾ). ೧. ತಲೆಗೆ ಕಟ್ಟಿಕೊಳ್ಳುವ ಪಟ್ಟಿ: (Head-band. ಇಂಕನಿ.). ೨. (ಬಾಗಿಲ) ಮೇಲ್ಭಾಗದಲ್ಲಿರುವ ಮರದ ಸಣ್ಣಪಟ್ಟಿ; ಬಾಗಿಲಿನ ತಲೆಪಟ್ಟಿ; ಗಂಧವಟಿಗೆ: "ನಾಸೆ – ಬಾಗಿಲ ತಲೆಪಟ್ಟಿ" (ಗಂಗಾಮು. ೧೮೨). ೩. ಶಿರೋನಾಮೆ; ತಲೆಬರೆಹ; ಶೀರ್ಷಿಕೆ: ಈ ಯುಗದ ಕಾಲವಿಸ್ತಾರವು ಮೊದಲಿನ ಯುಗಗಳಿಗಿಂತ ಇಮ್ಮಡಿಯಾಗಿದೆ . . . ಯಾವೊಂದೇ ತಲೆಪಟ್ಟಿಯಿಂದ ಇದನ್ನು ಗುರುತಿಸುವುದು ಕಷ್ಟ (ಕಸಾಚ. ೨೪೩). ೪. ತಲೆಗೆ ಇಷ್ಟೊಂದು ಹಾಕಿದ ಚಂದಾ: ಶ್ರೀರಾಮನವಮಿ ಉತ್ಸವಕ್ಕಾಗಿ ತಲೆಪಟ್ಟಿ ಎತ್ತಲಾಗಿದೆ (ರೂಢಿ). 'ತಲೆಗಂದಾಯ' ಪರಾ. [ತಲೆ$_1$ + ಪಟ್ಟಿ$_2$]

**ತಲೆಪಟ್ಟು** (ನಾ). (ತಲೆನೋವಿಗಾಗಿ)ತಲೆಗೆ ಹಾಕುವ ಪಟ್ಟು,–ಲೇಪನ: ಅವರು ತಲೆಪಟ್ಟು ಹಾಕಿಕೊಂಡಿದ್ದಾರೆ (ರೂಢಿ). [ತಲೆ$_1$ + ಪಟ್ಟು$_1$]

**ತಲೆಪಡು** (ಕ್ರಿ). ೧. ಎದುರಾಗು; ಪ್ರತಿಭಟಿಸು; ಎದುರಿಸು: ಮತ್ತೊಂದು ಮೊನೆಯೊಳ್ ರಾವಣನ ಬಲದ ಭೂತನುಂ ಸಂಭೂತನುಂ ಕುಟಿಲನುಂ ಕಾಲದಂಡನುಂ ಊರ್ಮಿಯುಂ ತರಂಗನುಂ ವಾನರ ಬಲದೊಳ್ ತಲೆಪಟ್ಟು [ಪಾಠಾಂ. ಮುಟ್ಟು] ಮಲೆದು ಕಾದುವಲ್ಲಿ (ಪಂರಾಭ್ಯು. ೧೪-೧೩೨ ವ); ಕರಚರಣಂಗಳು ಮೂಡಿರ್ದ ಕೈಲಾಸ ವರ ನೀಲಗಿರಿಯ ಕಿಳ್ಪಡಿಸಿ ದೊರೆ ಸಮರ್ಥಿಕೆಯೊಳಿರ್ವರು ಬಂದು ತಲೆಪಟ್ಟು ಹರ ಷಖರ ಧ್ವಂಸಿ ಕಾದಿದರು (ಮೋಹತ. ೩೯-೨೪). ೨. ಉಂಟಾಗು; ಸಂಭವಿಸು; ಒದಗು: ಬೆಳಸಿ ತಲೆಪಟ್ಟ ದುರಿತಂಗಳೊಳಿಕ್ಕತುಳಕ್ಕೆ ತಕ್ಕನುಷ್ಠಾನ ಪದಾವಳಿಯುಂತಿರ್ದುದು ತಿರ್ದಿದ ಪಳಿತಾರ್ಥಶ್ಮಶ್ರುಲಂಬ ಕೂರ್ಚಕಳಾಪಂ (ಅನಂಪು. ೨-೪೧); ತಲೆಪಟ್ಟುದುಭಯಸೈನಿಕಕೆ ಚೂಳಿಯೊಳಾಜಿ (ಕಬಕು. ೩೮-೩೫). 'ತಲೆಮುಡಂ' ಪರಾ. [ತಲೆ$_1$ + ಪಡು$_1$]

**ತಲೆಪರವು** 'ತಲಪರಿಗೆ' ನೋ.

**ತಲೆಪರಿ** 'ತಲಪರಿಗೆ' ನೋ.

**ತಲೆಪಾಗು** (ನಾ). ತಲೆಗೆ ಸುತ್ತಿಕೊಳ್ಳುವ ಬಟ್ಟೆ,–ರುಮಾಲು: ತಲೆಪಾಗು ಸುತ್ತಿಕೊಂಡಲ್ಲಿ ಶರೀರಕ್ಕೆ ಅಲಂಕಾರವೂ ಮೈಯಲ್ಲಿ ವಾತ ಪಿತ್ತ ಶ್ಲೇಷ್ಮಹರವೂ . . . ಆಗಿ ಮನಸ್ಸಿಗೆ ಬಹಳ ಸಂತೋಷವನ್ನು ಕೊಡುತ್ತವೆ (ಸಕವ್ಯ. ೩೫): ಹೆಬ್ಬಾವನು ಹಿಡಿದು ತಲೆಪಾಗ ಸುತ್ತಿ ಹಂಪಾದೇವೀ ತಾವು ಬಂದಾನು ಸ್ವಾಮಿ (ತುಂಗಭ. ೬೮); ಮೂರ್ಖನಂತೆ ತಲೆಪಾಗನ್ನು ಸುತ್ತಿರುವನು (ಝಾರಾಚಿ. ೬೭). [ತಲೆ$_1$ + ಪಾಗು$_2$]

**ತಲೆಪೂಸು** 'ತಲೆವೂಸು' ನೋ.

**ತಲೆಪೆಣ್ಮಣಿ** (ನಾ). ಹೆಂಗಸರಲ್ಲಿ ಶ್ರೇಷ್ಠಳಾದವಳು; ಸ್ತ್ರೀರತ್ನ: ಬಾಳು ಪೊನ್ನಬಳಸಿನುಡಿಯ ಪರ್ಸದ ತಲೆಪೆಣ್ಮಣಿ . . . ದರ್ಕ್ಕವುಪನ ಕಣ್ಮಣಿ (ಪಾರಸಿ. ೮-೧೬೮). [ತಲೆ$_1$ + ಪೆಣ್ಮಣಿ]

**ತಲೆಪೊರು** 'ತಲೆವೊಱು' ನೋ.

**ತಲೆಪೊಱೆ** 'ತಲೆವೊಱೆ' ನೋ.

**ತಲೆಪೊಱೆಯ** (ನಾ). ತಲೆಯ ಮೇಲೆ ಭಾರವನ್ನು ಹೊತ್ತುಕೊಂಡವನು; ತಲೆಹೊರೆಯನ್ನುಳ್ಳವನು: ಇರ್ಪ್ಪದಿನ್ನರಾ ಎಟ್ಟುಕೊಳ್ ಇಲ್ಲೆ ತಲೆಪೊಱೆಯರ್ಕ್ಕ ಸುಙ್ಕಂ x x ತ್ತು ಸರ್ವ್ವ ಪರಿಹಾರಂ (ಎಕ. XIV. ಎಳಂದೂ. ೧೪೯-೯; 750 ?). [ತಲೆಪೊಱೆ (<ತಲೆಪೊಱೆ) + – ಅ$_7$]

**ತಲೆಬಂಟ** (ನಾ). "ಮುಂಖ್ಯ ಸೇವಕ" (ಪ್ರಥಜ್ಞ). [ತಲೆ$_1$ + ಬಂಟ$_1$]

**ತಲೆಬರಹ** 'ತಲೆಬರೆಹ' ನೋ.

**ತಲೆಬರೆಹ,** ತಲೆಬರಹ (ನಾ). ೧. ಶಿರೋನಾಮೆ; ಶೀರ್ಷಿಕೆ: ಪದ್ಯದ ತಲೆಬರೆಹವು ಉಚಿತವಾಗಿದೆ (ರೂಢಿ). **ತಲೆಬರಹ:** ೧. ಈ ಪುಸ್ತಕದ ತಲೆಬರಹವು ಸೂಚಿಸುವಂತೆ, ದೇವಸಾಕ್ಷಾತ್ಕಾರವು ಗೀತೆಯಲ್ಲಿಯ 'ಅಪೂರ್ವತೆ'ಯೆನಿಸುತ್ತದೆ (ಧರ್ಮಸಾ. ೦೫೩). ೨. ಹಣೆಬರೆಹ; ವಿಧಿ; ಅದೃಷ್ಟ: ಎಱಗಿದರಿಗೆ ಪಣೆಯಕ್ಕರ ನೆಲೆಯಾತಗೆಱಗದರಿಗೆ ತಲೆಬರಹ ನೆಱೆ ಲೋಪವೆಂದಜ ಬರೆದಂತೆ ಪೊಗರಿಂದ ಮೆಱೆವುದಂತಸಿಪತ್ರವವನ (ವರ್ಧಚ. ೬-೫೪). 'ಹಣೆಬರೆಹ' ಪರಾ. [ತಲೆ$_1$+ಬರೆಹ (<ಬರೆಪ)]

**ತಲೆಬಳಚು** 'ತಲೆಬಳಿಚು' ನೋ.
**ತಲೆಬಳಸು** 'ತಲೆವಳಸು' ನೋ.
**ತಲೆಬಳಿಚು,** ತಲೆಬಳಚು (ಕ್ರಿ). ೧. ತಲೆಯನ್ನು ಕಾಯು,–ಉಳಿಸು : ಎಲೆಲೆ ಪ್ರಳಯದ ರುದ್ರನನು ತಲೆಬಳಿಚಿಬಿಟ್ಟನು ದ್ರೋಣನಕಟಾ ನೆಲನೊಡೆಯನಾಪ್ತಿಗರು ಬಗೆದರು ಸ್ವಾಮಿದ್ರೋಹಿಕೆಯ (ಕು ವ್ಯಾ. ದ್ರೋ. ೧೦-೭). **ತಲೆಬಳಚು: ೨.**ಕೊಲ್ಲು ; ನಾಶಮಾಡು : ಇಂದ್ರಿಯವ ನೊಡೆತುಳಿದು ಕರ್ಮದ ಬಂದಿಯನು ತಲೆಬಳಚಿ [ಪಾಠಾಂ. ತಲೆಬಳಿಚಿ, ನೆಱೆ ಕಳಿಚಿ] ವಿಷಯದ ದಂದುಗವನೀಡಾಡಿ ಮಾಯಾಪಾಶವನು ಹಱಿದು (ಕುವ್ಯಾ.ಉ. ೩-೮೩). [ ತಲೆ$_1$ + ಬಳಿಚು ]
**ತಲೆಬಾಗಿಲು** 'ತಲೆವಾಗಿಲ್' ನೋ.
**ತಲೆಬಾಗಿಸು** 'ತಲೆವಾಗಿಸು' ನೋ.
**ತಲೆಬಾಗು** 'ತಲೆವಾಗು$_1$' ನೋ.
**ತಲೆಬಾಚು** (ಕ್ರಿ). ತಲೆಗೂದಲನ್ನು ಹಿಕ್ಕು,–ಬಾಚಣಿಗೆಯಿಂದ ಸರಿಪಡಿಸು : ಅವ್ವಾ, ನನ್ನ ತಲೆಬಾಚು (ನಡದಾ. II, ೯೪೯).
[ ತಲೆ$_1$ + ಬಾಚು (<ಬಾರ್ಚು) ]
**ತಲೆಬುರುಡೆ** (ನಾ). ತಲೆಯೋಡು ; ತಲೆಚಿಪ್ಪು ; ಕಪಾಲ : ತುಂಗಳ ಮಾಸ್ತರರು ಅವನ ತಲೆಬುರುಡೆಯನ್ನೇ ಹಾರಿಸುವರು (ರಂಗರೋ. ೨೬) ; ಕೆದರಿದರೆ ಕೈಗೆ ಬರುವುವು–ಬೆನ್ನೆಲುವು, ತಲೆಬುರುಡೆ, ಬಿಡಿ ಎಲುವು ! (ಕಲ್ಲೋಲ. ೨೫-೩). [ ತಲೆ$_1$ + ಬುರುಡೆ ]
**ತಲೆಬೆಲಗು** (ನಾ). ದೊಡ್ಡದಾದ ತೊಲೆ; ಮಧ್ಯದ ತೊಲೆ; ಉದ್ದವಾದ ತೊಲೆ,–ದೂಲ : ಮುಂದೆ ತಲೆಬೆಲಗಿನಿಂದ ಎರಡು ಪಕ್ಕಗಳಿಗೂ ಅಡ್ಡಬೆಲಗುಗಳ ಮೇಲೆ (ಮುಂಬಯಿ. ೪-೧೧೮). [ ತಲೆ$_1$ + ಬೆಲಗು ]
**ತಲೆಬೆಲೆ** (ನಾ). ೧. ಪರಮಾವಧಿ ಬೆಲೆ ; ಹೆಚ್ಚುಬೆಲೆ. **೨.** ತಲೆಗಾಗಿ ಕೊಡುವ ಬೆಲೆ; (ತಲೆ ಉಳಿಸಿಕೊಳ್ಳುವುದಕ್ಕಾಗಿ)ತಲೆಗೆ ಪ್ರತಿಯಾಗಿ ತೆರುವ ದ್ರವ್ಯ : ಅದರ ಬದಲಿಗೆ ನಿಮ್ಮ ತಲೆ ಕೊಡಿ. ಅಲ್ಲದಿದ್ದರೆ ತಲೆ ಬೆಲೆ ದ್ರವ್ಯಕೊಡಿ ಎಂಬುದಾಗಿ ಕೇಳಿದ್ದರಿಂದ, ಅವರು ಲಾಚಾರಾಗಿ ೪೦,೦೦೦ ವರಹ ತಲೆಬೆಲೆ ಕೊಟ್ಟು (ರಾಜೇಂದ್ರ.೨೪).
[ ತಲೆ$_1$ + ಬೆಲೆ ]
**ತಲೆಬೇನೆ** 'ತಲೆವೇನೆ' ನೋ.
**ತಲೆಬೇಸರ** 'ತಲೆವೇಸಱು' ನೋ.
**ತಲೆಬೇಸರಿಕೆ** (ನಾ). ಮನಸ್ಸಿಗೆ ಬೇಸರವುಂಟಾಗುವಿಕೆ,–ಜುಗುಪ್ಸೆಯಾಗುವಿಕೆ : ಯೋಗಪ್ರಯೋಗಗಳೆಂದರೆ ಅವರಿಗೆ ತಲೆಬೇಸರಿಕೆ (ವಿಚಾಮಂ.೭೦); ಪಾರ್ವತಿಗೆ ಒಂದು ದಿನ ತಲೆಬೇಸರಿಕೆ ಬಂತು (ಪ್ರಹಾರ. ೭).
**ತಲೆಬೇಸರಿಕೆ ಹಿಡಿಸು**=ಮನಸ್ಸಿಗೆ ಬೇಸರವುಂಟುಮಾಡು; ಜುಗುಪ್ಸೆಯಾಗುವಂತೆ ಮಾಡು: ಪೆಜತ್ತಾಯರ ಕಾಡುಹರಟೆ ನನಗೆ ತಲೆಬೇಸರಿಕೆ ಹಿಡಿಸಿತು (ಗಂಗಾವ. ४೯). [ ತಲೆಬೇಸರು$_2$ (<ತಲೆವೇಸಱು)+– ಇಕೆ]
**ತಲೆಬೇಸರು$_1$** (ಕ್ರಿ). ಮನಸ್ಸಿಗೆ ಆಲಸ್ಯವುಂಟಾಗು,–ಜಂಗುಪ್ಸೆಯುಂಟಾಗು : ಸಾಕಪ್ಪಾ ಇವರ ಸಹವಾಸ ಎಂದು ತಲೆಬೇಸತ್ತು ಹೋಗಿದ್ದರು (ಚತಸ. ೧೪೩). [ ತಲೆ$_1$ + ಬೇಸರು$_1$ (<ಬೇಸಱು$_1$) ]
**ತಲೆಬೇಸರು$_2$** 'ತಲೆವೇಸಱು' ನೋ.
**ತಲೆಬೋಳ್** (ನಾ). ತಲೆಯು ಬೋಳಾಗಿರುವಿಕೆ; ತಲೆಯಲ್ಲಿಯ ಕೂದಲನ್ನು ತೆಗೆದಿರುವಿಕೆ : ಸೂಡಿದ ಜಡೆಯನಿಳುಹಿ ತಲೆಬೋಳ್ಗಳ ಮಾಡಿದರೇನ ಬಣ್ಣಿಸುವೆ (ಮೋಹತ. ೧೮-೫೦). [ ತಲೆ$_1$ + ಬೋಳ್ ]
**ತಲೆಬೋಳಿಸು**(ಕ್ರಿ). ೧. ಕ್ಷೌರಮಾಡು; ಮುಂಡನಮಾಡು. **೨.** (ಆಲಂ) ನಷ್ಟವನ್ನುಂಟುಮಾಡು : ಪೇಟೆಗೆ ಕರೆದುಕೊಂಡು ಹೋಗಿ ಹತ್ತು ರೂಪಾಯಿ ತಲೆಬೋಳಿಸಿದರು (ರೂಢಿ).
**ತಲೆಬೋಳಿಸಿಕೊಳ್ಳು**=೧. ಕ್ಷೌರಮಾಡಿಸಿಕೊಳ್ಳು ; ಆಯುಷ್ಕರ್ಮ ಮಾಡಿಸಿಕೊಳ್ಳು : ಗ್ರಾಮಶಾಂತಿಗೆ ತಳವಾರ ತಲೆಬೋಳಿಸಿಕೊಂಡ (ಗಾದೆ). ೨. ನಷ್ಟವನ್ನುಂಟುಮಾಡಿಕೊಳ್ಳು ; ಹಾನಿಮಾಡಿಕೊಳ್ಳು : ಕಂಡ ಕಂಡವರಿಗೆ ಹಣಕೊಟ್ಟು ತಲೆಬೋಳಿಸಿಕೊಂಡ (ರೂಢಿ).
[ ತಲೆ$_1$ + ಬೋಳಿಸು ]
**ತಲೆಭಾರ** (ನಾ). ೧. ತಲೆಯು ಭಾರವಾಗಿರುವಿಕೆ; ಜಾಡ್ಯ ಉಂಟಾಗುವಿಕೆ : ತಲೆಭಾರದಾತಂಗೆ, ಕಠಿಣವಾದ ರೋಗದಿಂ ಜಡನಾದಾತಂಗೆ, ತಲೆ ತಿರುಗುವಾತಂಗೆ . . . ಸೇಕಂಗೊಳ್ಳಲು ಆ ವ್ಯಾಧಿ ತೀರ್ಗುಂ (ವಿವ್ಯ.ವಿ. ೮೪). **೨.** ತಲೆಯ ಮೇಲಿದ್ದ ಭಾರ; ತಲೆಗೂದಲು: ತಲೆಭಾರ ಇಳಿದಿತ್ತು, ಅಂಗಾರ ಬೆಳೆದಿತ್ತು ; ಮೈಯನ್ನು ಮುಚ್ಚಿತ್ತು ಕೆಂಪುಸೀರೆ (ಸಖೀಗೀ. ೯೯-೫). **೩.** (ಆಲಂ) ತುಂಬ ತೊಂದರೆ ; ಅಧಿಕ ಕಷ್ಟ : ಕಂಪನೀ ಸರಕಾರದ ಆಡಳಿತಕ್ಕೆ ಚಿಕ್ಕ ದೊಡ್ಡ ಎಲ್ಲ ಕೆಲಸಗಾರರನ್ನು ಇಂಗ್ಲಂಡದಿಂದಲೇ ರಫ್ತುಮಾಡಿ ತರುವುದು ಬ್ರಿಟಿಷರಿಗೆ ತಲೆಭಾರವೆನಿಸಿತು (ಮೂವಾದ. ೯೪). [ ತಲೆ$_1$ + ಭಾರ ]
**ತಲೆಮಂಡೆ** (ನಾ). ೧. ತಲೆಬುರುಡೆ ; ಡವಗೆ : ಸುರಿಗೆ ಶುಭಂಕರಗತ್ತಿಗೆ ಕರಗಂ ತಲೆಮಂಡೆ ಮರುಳ ಬಾಯ್ವುಱಿ ಪಱಿಯಾಗಿರೆ (ಕಾವ್ಯಾವ. ೬೬). **೨.** ತಲೆ ; ಶಿರಸ್ಸು : ಸುಂದರಿಯರ ತಲೆಮಂಡೆಗಳು ಶ್ರೀಮಂತರ ನೆಣದುಂಡೆಗಳು . . . ತೇಲಿ, ತೇಲಿ ನುಗ್ಗುತಲಿವೆ ಕಸಕಡ್ಡಿಯ ಹೋಲಿ (ಪಾಂಚಜ. ೭೦-೧). **೩. ಶ್ರೇಷ್ಠವಾದುದು ; ಅತ್ಯುತ್ತಮವಾದುದು :** ಬೇಡಿದೊಂದೊಂದೂರು ನಮ್ಮಯ ನಾಡ ತಲೆಮಂಡೆಗಳು (ಕುವ್ಯಾ.ಉ. ೯-೩೦). [ ತಲೆ$_1$ + ಮಂಡೆ$_1$ ]
**ತಲೆಮುಕಿ** (ನಾ). ಎತ್ತರವಾದ ಪ್ರದೇಶ ; ಮೇಡು : ಸ್ವಸ್ತಿ ಕೊಪ್ಪದ ಸೀಮೆಯಿಟಿಗನ ಮಹಿಪಾಲ ರಾಗೋಡ ಗ್ರಾಮದಿಂದ ಗ೧೫ ॥ ೪ ॥ ತಲೆ ಮುಕಿಯಿಂದ ಗ೩ ಲ್ ॥ ಉಭಯಂ ಗ೧೯ (ಎಕ. VIII, ತೀರ್ಥಹ. ೧೮೨-೧೬ ; 1641). [ ತಲೆ$_1$ + ಮುಕಿ (<ಮುಕ್ಕಿ$_1$) ]
**ತಲೆಮಗ** (ನಾ). ಹಿರಿಯ ಮಗ ; ಜ್ಯೇಷ್ಠ ಪುತ್ರ : ಅವನು ನಮ್ಮ ವಂಶಕ್ಕೇ ತಲೆಮಗ (ರೂಢಿ). [ ತಲೆ$_1$ + ಮಗ ]
**ತಲೆಮಡಿ** (ನಾ). (?) : ತಳಿಗೆ ನಾಡು ಸಾಯಿರ ಭೂಮಿಗೆ ತಲೆಮಡಿ ಆವಳೂರ ಹನ್ನೆರಡರಲ್ಲಿ ಜೋಳದ ಹಾಳ ಬಿಟ್ಟಿಗೌಡನ ಮಗ . . . ಕಾದಿ ಬಿದ್ದು ಸುರಲೋಕಪ್ರಾಪ್ತನಾದ (ಎಕ. VI, ಚಿಕ್ಕಮ. ೫೫-೬ ; 1195).
[**P** ಇದು 'ತಲೆಮುಡಿ' ಎಂಬುದರ ಅಪಲಿಖಿತವಿರಬಹುದು ]
**ತಲೆಮಡು** 'ತಲೆವಡು' ನೋ.
**ತಲೆಮಣಿ** 'ತಲೆವಣಿ' ನೋ.
**ತಲೆಮರಸು** 'ತಲೆಮರೆಸು' ನೋ.
**ತಲೆಮರೆಸು,** ತಲೆಮರಸು (ಕ್ರಿ). ತಲೆತಪ್ಪಿಸು; ಕಾಣೆಯಾಗು; ಅಡಗು: ಭಾರತದ ಸ್ವಾತಂತ್ರ್ಯ ಸಂಗ್ರಾಮದ ಸಮಯದಲ್ಲಿ ಅನೇಕ ದೇಶಭಕ್ತರನ್ನು ತಲೆಮರೆಸಿ ರಕ್ಷಿಸಲಾಗುತ್ತಿತ್ತು (ರೂಢಿ). **ತಲೆಮರಸು :** ಶತ್ರುದಾಳಿಯಲ್ಲಿ ಅವರನ್ನು ತಲೆಮರಸಿ ಉಳಿಸುವುದು ಬಹಳ ಕಷ್ಟವಾಯಿತು (ರೂಢಿ).
**ತಲೆಮರೆಸಿಕೊಳ್ಳು, ತಲೆಮರಸಿಕೊಳ್ಳು** = ತಲೆಯನ್ನು ಮರೆಮಾಡಿಕೊಳ್ಳು; ಅಡಗಿಕೊಳ್ಳು; ಅವಿತುಕೊಳ್ಳು: ಸೂರ್ಯನ ಉಗ್ರಾವತಾರವನ್ನು ಕಂಡು ಹೆದರಿದಂತೆ, ಗಾಳಿಯು ಎಲ್ಲೊ ತಲೆಮರೆಸಿಕೊಂಡಿದೆ (ಚಿತಂಬಾ. ೧೦) ; ಈ ಕಾಲನೆಂಬುವ ಪ್ರಾಣಿ . . . ಎಲ್ಲೊ ತಲೆಮರೆಸಿ ಕೊಂಡು ಓಡಾಡುತಿದ್ದಾನೆ (ನೆಲಮು. ೩೦-೩) ; ನಾನು ಈಗ ತಲೆಮರೆಸಿ ಕೊಂಡಿರುವುದು ನಿಮಗೆ ಗೊತ್ತೇ ಇರಬಹುದು (ಬರಬಾ. ೧೧೬) ; ತಲೆಮರಸಿಕೊಂಡ ಹಾಸ ಹಾಸ್ಯವಾಗಿ ಹೊಮ್ಮಿತು (ನಡದಾ.II, ೧೦೦೮).
[ ತಲೆ$_1$ + ಮರೆಸು (<ಮಱೆಯಿಸು) ]

**ತಲೆಮಲಂಗು** (ನಾ). ಮಲಗುವಾಗ ತಲೆಗೆ ಆಶ್ರಯವಾಗಿರುವುದು; ತಲೆದಿಂಬು: ಮೇಣಿದು ತಲೆಮಲಂಗಿನೊಳಿಟ್ಟ ಬಲಗೆಯ್ಯ ಸೆಳ್ಳುಗುರ್ಗಳ ಬೆಳಗಿನ ಬಿಂಬವೋ . . . ಎಂಬ ಸಂದೆಯಮನೊದವಿಪ ದಿವ್ಯ ಕಿರೀಟದಿಂ (ಜಿಕವಂ. ೩೩-೧೩). [ ತಲೆ$_1$ + ಮಲಂಗು$_2$ ]

**ತಲೆಮಲೆ** (ಕ್ರಿ). (ಶತ್ರುವನ್ನು ಎದುರಿಸಲು) ತಲೆಯನ್ನು ಮುಂದಕ್ಕೆ ಚಾಚು,–ನಿಗುರಿಸು: ಕಾಳ್ಕೋಣವೊಂದು ತನ್ನಂ ತಿವಿಯೆ ತಲೆಮಲೆತು, ಕೋಡಣೆದು ಗುಟುರಿಕ್ಕಿ ಧಾವಿಸುವವೋಲ್ (ಶ್ರೀರಾಮಾ. ೭೯೦-೨೮೨).
[ ತಲೆ$_1$ + ಮಲ್ಕೆ ]

**ತಲೆಮಟಿ** (ನಾ). ತಲೆಯ ರಕ್ಷಣೆಗಾಗಿ ಧರಿಸುವ ಸಾಧನ; ಶಿರಸ್ತ್ರಾಣ; ಸೀಸಕ: ಮಡವ ಮಿಱುವ ಕಬ್ಬಿಮುಂಡಿಯ ಪಡಿದೊಡೆಯ ತಲೆಮಟಿಯ ಹರಿಗೆಯ ಕಡಿತಲೆಯ ಕಲಿ ತುಳುವ ಪಡೆ ಹೊಯ್ದಾಡಿತಿಳೆ ಹಿಳಿಯೆ (ಕುಮ್ಮಾ.ಭೀ. ೪-೩೭). 'ತಲೆಗಾಪು' ಪರಾ. [ ತಲೆ$_1$ + ಮಟಿ$_2$ ]

**ತಲೆಮಾಡು** (ಕ್ರಿ). ೧. ತಲೆಯನ್ನು ಇರಿಸು: ಮೈಮೇಲಿನ ಕೋಟನ್ನೂ . . . ಕೈಚೀಲದಲ್ಲಿ ತುಂಬಿ ಅದನ್ನು ತಲೆಮಾಡುವ ದಿಕ್ಕಿಗೆ ಇರಿಸಿದರು (ಮೂರುದಾ. ೫). ೨. ಕ್ಷೌರಮಾಡಂ; ಮುಂಡನ ಮಾಡಂ: ನಾಪಿತ ತಲೆ ಮಾಡುತ್ತಾನೆ (ರೂಢಿ). [ ತಲೆ$_1$ + ಮಾಡು$_1$ ]

**ತಲೆಮಾಣಿಕ** (ನಾ). ತಲೆಯಲ್ಲಿರುವ ಮಾಣಿಕ: ರಜನಿಯೆಂಬ ಮದೋತ್ಕಟದ ದಿಗ್ಗಜದ ಕುಂಭಸ್ಥಳಕೆ ಮೋಹಿದ ವಿಜಿತಬಲನಂಕುಶದ ತಲೆಮಾಣಿಕ ವಿದೆಂಬಂತೆ ಗಜಗಲಿಸಿತಿನಬಿಂಬ (ತೊರರಾ. ೧-೧೯-೨). [ ತಲೆ$_1$+ಮಾಣಿಕ ]

**ತಲೆಮಾತು** (ನಾ). ತಲೆಯೆಲ್ಲಾ ಮಾತು; ತಲೆಹರಟೆ: ಅವನಾ ತಲೆ ಮಾತಿನ, ಮಿಸೆಬಾರದ, ಆ ಗೇಣುದ್ದದ ಗಂಡಿಗೆ ನಾವು . . . ಶರಣು ಹಾಡಬೇಕಂತೆ (ಮಂತ್ರ.ಶ. ೮೦-೨೨). [ ತಲೆ$_1$ + ಮಾತು$_1$ ]

**ತಲೆಮಾರು** (ನಾ). ೧. ಪೀಳಿಗೆ; ತಲಾಂತರ: ಭಾರತೀಯ ಮತ್ತು ಐರೋಪ್ಯ ಕಲಾವಿದರ ಒಂದು ಇಡೀ ತಲೆಮಾರನ್ನೇ ಪ್ರೋತ್ಸಾಹಿಸಿ ಚೇತನ ನೀಡಬಲ್ಲ ಕಲಾಸಂಪತ್ತು ಅಜಂತೆಯಲ್ಲಿ ಇನ್ನೂ ಉಳಿದಿದೆ (ಭಾರದ. ೫೩೩); ಹತ್ತು ತಲೆಮಾರುಗಳಲ್ಲಿ ಕುಳಿತು ತಿಂದರೂ ಈ ಆಸ್ತಿ ಸವೆಯುವುದಿಲ್ಲ (ಮಣ್ಣುಮ. ೪೫); ಇವನ ಸಂತತಿಯವರು ಅನೇಕ ತಲೆಮಾರುಗಳು ಆಳಿ ಮಹತ್ಕಾರ್ಯವನ್ನು ಸಾಧಿಸಿದರು (ಪ್ರವಾಇ. I, ೪೭); ಕಳೆದ ಒಂದು ತಲೆಮಾರಿನಿಂದ ನಮ್ಮ ಜನ ಕಾಣುತ್ತಿದ್ದ ಕನಸು ಈ ಪುಸ್ತಕಗಳ ಪ್ರಕಟಣೆಯಿಂದ ನನಸಾದಂತಾಗಿದೆ (ಗೃಹವಿ. III, ಮುನ್ನುಡಿ). 'ತಲೆಮೊಱೆ' ಪರಾ. ೨. ಹೊಲ ಉಳುವಾಗ, ಪ್ರಾರಂಭಮಾಡುವ ಭಾಗ,–ತುದಿ: ನೇಗಿಲು ಪ್ರತಿಸಾರಿಯೂ ತಲೆಮಾರಿಗೆ ಹೋಗಿ ತಿರುಗಬೇಕು (ರೂಢಿ).
[ <ತಲೆಮೊಱೆ ]

**ತಲೆಮಾಲೆ** (ನಾ). ೧. ತಲೆಯಲ್ಲಿ ಧರಿಸಿದ ಮಾಲೆ,–ಹಾರ: ತಲೆವಳಸಿ ನೆಲೆಗೊಳಿಸಿದ ಮಾಣಿಕ್ಯದ ತಲೆಮಾಲೆಯ ಪರಿಸರದೊಳೆಳಲೆವಿಟ್ಟ ಕನಕ ದರಳೆಲೆಮಾಲೆಯ (ರಾಜಶೇ. ೭-೧೧೩); ತಲೆಯ ತಲೆಮಾಲೆಯನ್ನು ತೆಗೆದು ಹಾಕಿ ಸುತ್ತಲೂ ನವಿಲುಗರಿಗಳನ್ನು ಸಿಕ್ಕಿಸಿ ಅಲಂಕಾರ ಮಾಡಿಕೊಂಡನು (ಭಾಮತಿ. ೯೭). ೨. ತಲೆಗಳ ಮಾಲೆ; ರುಂಡಮಾಲೆ: ಕಳಚಿ ತಲೆಮಾಲೆಯನು ಕೊಟ್ಟನು ಕೆಲದವರ ಕೈಯಲಿ (ಕುಮ್ಮಾ.ಕ. ೭-೧೧); ಕೆಂಜೆಡೆ ಮಿಱುಗಿ ತಲೆಮಾಲೆಗಳ್ ಶೋಭೆವೆತ್ತು ರಂಜಿಸೆ ಮದನಬಲಶಿಕ್ಷನಮಳ ಭಾಳಾಕ್ಷಂ ವಿರೂಪಾಕ್ಷನಿರ್ದಂ ವಿಲಾಸದಿಂದೆ (ಜಿಬಪು. ೨-೨೨). [ ತಲೆ$_1$ + ಮಾಲೆ ]

**ತಲೆಮಾಲೆಗೊರಲ** (ನಾ). ರುಂಡಮಾಲೆಯನ್ನು ಕೊರಳಲ್ಲಿ ಧರಿಸಿದವನು; ಶಿವ: ತಿರುಕುಳಿಗೆ ಮಾನವೆತ್ತಣದು ತೆಗೆ ತಲೆಮಾಲೆಗೊರಲಂಗೆ ಮಹಿಮೆಯೆಲ್ಲಿಯದು (ಜಿಬಪು. ೧೮-೧೧). [ತಲೆಮಾಲೆ+ಕೊರಲ್+–ಅ$_7$]

**ತಲೆಮಾಱಿ** (ನಾ). ೧. (ಒಡೆಯನಿಗೆ) ತಲೆಯನ್ನು ಮಾರಿಕೊಂಡವನು; ಸ್ವಾಮಿಭಕ್ತನಾದ ಯೋಧ: ಬೀಳುತಿರ್ದರು ಭಟರು ಮತ್ತೆ ಛಡಾಳಿಸಿತು ತಲೆಮಾಱಿಗಳು ಹೆಣಸಾಲನೆಡಹಿದರರುಣವಾರಿಯ ತೊಱೆಯನೀಸಿದರು (ಕುಮ್ಮಾ.ಭೀ. ೯-೧೫). ೨. (ದುರ್ವ್ಯಸನಕ್ಕೆ) ತಲೆಯನ್ನು ಮಾರಿಕೊಂಡವನು; ಅವಿವೇಕಿ: ತಲೆಮಾಱಿ ಕಂಡನು ದ್ರೌಪದಿಯನರಮನೆಯ ಬಾಗಿಲಲಿ (ಕುಮ್ಮಾ.ವಿ. ೨-೧೫). [ ತಲೆ$_1$ + ಮಾಱು$_1$ + – ಇ$_3$ ]

**ತಲೆಮಿಗು** (ಕ್ರಿ). ಅತಿಶಯವಾಗು; ಅತ್ಯಧಿಕವಾಗು: ಪಾರದೆ ಬರ್ಪ ದೂದವಿಯರಂ ತವಕಂ ತಲೆಮಿಕ್ಕು ನೀವಿಯಂ ಚಾರುಕಳಾಪದೊಳ್ನಿಲಿಸುತುಂ ದೆಸೆಯಂ ನಡೆ ನೋಡುತುಂ (ಶಾಂತೀಶ್ವ. ೧೧-೭೪); ತಲೆಮಿಕ್ಕೆಯ್ದೆ ತಗುಳ್ದು ಗೊಂಟುಗೊಳಿಸುತ್ತುಗ್ರಾಂಧ್ಯಮಂ ಕೈರವಾವಳಿಯೊಳ್ ಪೊಕ್ಕು . . . ತಣ್ಣಗಿರ್ದಗಳೆತ್ತಂ ಪರ್ಬಿದತ್ತು (ಕುಸುಮಾ. ೪-೪೮). [ತಲೆ$_1$+ಮಿಗು]

**ತಲೆಮುಚ್ಚು** (ನಾ). ೧. ಮಳೆ ಬಿಸಿಲುಗಳಿಂದ ರಕ್ಷಿಸುವಂತೆ ಅಳವಡಿಸಿರುವ ಆವರಣ,–ಮೇಲ್ಕಟ್ಟು,–ಮೇಲ್ಮುಸುಕು: ತಲೆ ಮುಚ್ಚು ಇರುವ, ಆಳು ಅಥವಾ ಆಳುಗಳು ಎಳೆಯುವ, ಹಗುರವಾದ ಎರಡು ಚಕ್ರದ ಬಂಡಿ (Jinricksha. ಇಂಕನಿ.). ೨.=ತಲೆಮಱಿ: ಜೋಡು ಕಬ್ಬಿಣದ ತಲೆಮುಚ್ಚು (Casque) ಒಂದು ಛುರಿಕೆಯು ನಡುವಿನಲ್ಲಿ ನೇತಾಡುತ್ತಿದೆ (ಆರ್ಯಕ. ೧). [ ತಲೆ$_1$ + ಮುಚ್ಚು$_2$ ]

**ತಲೆಮುಟ್ಟ** (ಅ). ಕಡೆಯವರೆಗೆ; ಕೊನೆಯವರೆಗೆ; ಅಂತ್ಯದವರೆಗೆ: ತಮ್ಮ ನುಡಿದುದನೆ ತಲೆಮುಟ್ಟ ಸಾಧಿಸಿ[ಪಾಠಾಂ. ತಲೆಮುಟ್ಟು ಸಾಱಿಸಿ] ಬಾಯಂ ಬಡಿದು (ಧರ್ಮಾಮೃ. ೭-೨೦೭). [ತಲೆ$_1$+ಮುಟ್ಟ$_2$ (<ಮುಟ್ಟಂ)]

**ತಲೆಮುಡಿ** (ನಾ). ಕಿರೀಟ: ಅಂತಾ ಕಾಂತೆ ವಿಜಯಕ್ಕೆಂದು ಪೋದ ನಲ್ಲನ ತಲೆಮುಡಿಯಡಂಗುವನ್ನಮೇೞ್ದಿಟ್ಟು ನೋಡಿಯುಂ ಬಯಲಾಸೆಯಿಂ ಬೀಡಂ ಪೊಕ್ಕಳ್ (ರಾಮಾಶ್ವ. ೪೯-೨೦). [ ತಲೆ$_1$ + ಮುಡಿ$_3$ ]

**ತಲೆಮುಸುಕು, ತಲೆಮುಸುಗಂ** (ನಾ). ತಲೆಯ ಮುಸುಕು; ಅವಕುಂಠನ: ಕೃಪ ಗುರುಜ ಕೃತವರ್ಮರು ರಥಾಶ್ವಂಗಳನು ದೂರದಲಿರಿಸಿ ತಲೆಮುಸುಕಿನಲಿ ಬಂದರು ಕೊಳನ ತಡಿಗಾಗಿ (ಕುಮ್ಮಾಗ. ೪-೩೦); ತಲೆ ಮುಸುಕಿನಲ್ಲಿ ಅವರು ತಲೆಯಾಡಿಸುತ್ತಿದ್ದಾಗ (ಜಗದಾ. ೦೬೯). **ತಲೆ ಮುಸುಗು**: ಕಂಡು ಅಸುರೇಂದ್ರನೈತರವನರುಗಾದರೊಯ್ಯನೆಯೆ ತಲೆ ಮುಸುಗ ದಾದಿಯರ್ (ಶ್ರೀರಾಮಾ. ೭೩೭-೮೧).
[ ತಲೆ$_1$ + ಮುಸುಕು$_2$ (<ಮುಸುಂಕು$_2$) ]

**ತಲೆಮುಸುಗು** 'ತಲೆಮುಸುಕು' ನೋ.

**ತಲೆಮೆ** (ನಾ). ೧. ಶ್ರೇಷ್ಠತೆ. ೨. ಶ್ರೇಷ್ಠತೆಯನ್ನು ಪಡೆದವನು; ಪ್ರಾಧಾನ್ಯವನ್ನು ಹೊಂದಿದ ವ್ಯಕ್ತಿ: ಪಾರಸಿಕರುತ್ತಮರದಾರಾರು, ಜಾತಿಯಲಿ ಶೌರ್ಯದಲಿ ತಲೆಮೆ ತಾವಾರು (ಪಾರಸಿ. ೦೭-೧೧).
[ ತಲೆ$_1$ + – ಮೆ$_1$./ತಮಿ. ತಲೆಮೈ ]

**ತಲೆಮೆಟ್ಟಿಸು** (ಕ್ರಿ). ತಲೆಯನ್ನು ಮೆಟ್ಟುವಂತೆ ಮಾಡು: ಕನ್ನಡಿಗರು ಯಾರನ್ನೂ ತಲೆಮೆಟ್ಟಲಿಕ್ಕೂ ಇಲ್ಲ, ಯಾರಿಂದಲೂ ತಲೆಮೆಟ್ಟಿಸಿಕೊಳ್ಳಲಿಕ್ಕೂ ಇಲ್ಲ (ವಿಜಾಮಂ. ೧೭). [ ತಲೆಮೆಟ್ಟು + – ಇಸು$_3$ ]

**ತಲೆಮೆಟ್ಟು** (ಕ್ರಿ). ೧. ತಲೆಯನ್ನು ಕೆಳಕ್ಕೆ ಒತ್ತು; ತುಳಿ; ಬೀಳಿಸು: ಅರಿವಿನ ಬೇಲಿಯ ತಲೆಮೆಟ್ಟಿ ಧೀರತೆವಿಡಿಯುತ . . . ಸಾಗುತಿರೆ (ಪ್ರಬಂಧ. ೧೦೪). ೨. ಹಿಂದೆ ಸರಿಸು; ಮೀರು: ಸರಿಯವರ ತಲೆಮೆಟ್ಟಿ ಮುಂದೆ ನಿಲ್ಲುವೆ (ಕನ್ನಬಾ. ೧೦೯-೨೦); ನಮ್ಮೆಲ್ಲರ ತಲೆಮೆಟ್ಟಿ ಜಿಗಿದು ಹೋದದ್ದು ಹೇಗೆ? (ಕಳ್ಳಕಾ. ೩೯); ಸಂಸ್ಕೃತ ಕವಿಗಳನ್ನು ತಲೆಮೆಟ್ಟಿ ಹಾರಿದೆವೆಂದು ಪ್ರತಿಷ್ಠೆ ಕೊಚ್ಚುತ್ತಾ (ಕಬಸಾ. ೯). ೩. (ಅಲಂ) ಕಾಡು; ಪೀಡಿಸು; ತೊಂದರೆ ಕೊಡಂ: ತಲೆಮೆಟ್ಟುತಿರೆ ಕಾಟ ಮಕ್ಕಳಿಬ್ಬರ ನೋಡಿ ನಲಿದೆ ನೀಂ ಪೋದೆಯೇನೆಮ್ಮೊಡಲನುರಿಸಿ (ಕಾಲೂರ. ೧೭೬-೩೯೫); ತಲೆಮೆಟ್ಟಿದ ಕ್ಷೋಭೆಯನ್ನು ನಿಯಂತ್ರಿಸಲು ರಾಜಕಾರಣಿಯು ಅಸಮರ್ಥನೂ ಆಗಬಹುದು (ಸಾಸಮಾ. ೩೫). [ ತಲೆ$_1$ + ಮೆಟ್ಟು$_1$ ]

**ತಲೆಮೆರಕ** (ನಾ). ಅತಿಯಾಗಿ ಜಂಭ ಕೊಚ್ಚಿಕೊಳ್ಳುವವನು ; ಅಹಂಕಾರಿ : ಆ ತಲೆಮೆರಕನ ಮಾತನ್ನು ನಂಬಬೇಡ (ರೂಢಿ). 'ತಲೆ ಮೆರಕತನ' ಪರಾ. [ <ತಲೆಮೆರೆ + – ಕ$_3$ ]

**ತಲೆಮೆರಕತನ** (ನಾ). ಅತಿಯಾಗಿ ಜಂಭಪಡುವಿಕೆ,–ಬೀಗುವಿಕೆ,– ಅಹಂಕಾರ ಪಡುವಿಕೆ : ತಲೆಮೆರಕತನದೊಳಗೆ ನಾಲ್ಕೊರುಷ ಹಲವುತೆರ ಕೆಟ್ಟವನಿಗೀಗೇನುಲಿಯಲರಿವನೆ ಮಂತ್ರಿ (ಬಿಜ್ಜ.ಪು. ೬೪–೨).

[ ತಲೆಮೆರಕ + – ತನ ]

**ತಲೆಮೆರೆ** 'ತಲೆಮೆಱು$_1$' ನೋ.

**ತಲೆಮೆಱು$_1$**, ತಲೆಮೆರೆ (ಕ್ರಿ). ಎಲ್ಲರಿಗೂ ಮೇಲಾಗಿ ಮೆರೆ ; ಅತಿಯಾಗಿ ಜಂಭಪಡು ; ಅಹಂಕಾರಪಡು ; ಬೀಗು : ಇನ್ ನಿನ್ನ ಸೊರ್ಕನುರ್ಕಿನೊಳ್ ತಲೆಮೆಱಿಯ ನೀನ್ ! (ಬದ್ಧ.ಪ್ರ. ೬–೧೧೧). **ತಲೆಮೆರೆ :** ಕಿಕ್ಕಿರಿದು ನೆರೆದು ಚೆಂದದಲಿ ಹೂವು ಗರಿ ಸೆಕ್ಕಿ ತಲೆಮೆರೆದು (ಇಂಗೀತ. ೧೭–೧೨).

[ ತಲೆ$_1$ + ಮೆಱು$_1$ ]

**ತಲೆಮೆಱು$_2$** (ನಾ). ೧. ಹೊಗಳಿಕೆ ; ಪ್ರಶಂಸೆ ; ಬೀಗುವಿಕೆ : ಪೆರ್ಮನೆ ತನಮೇನ್, ಕಲಿತನದುರ್ಕೇನ್, ಆಳ್ಗಳ ಸಾಲೊಳ್ ತಲೆಮೆಱು ಸೊರ್ಕೇನ್ ? (ಅಶ್ವಶಾ. ೨೬–೫೧೧). (ಗು). ೨. ಹೆಮ್ಮೆಯ; ಬೀಗುವ; ಅಹಂಕಾರದ : ಓವೋ ತಲೆಮೆಱುಶಾಸನವೋ, ಓವೋ ಸ್ಮೂಸನ ಅರಸಿಕೆಯೋ (ಬದ್ಧ.ಪ್ರ. ೨೨–೪೬೩). [ <ತಲೆಮೆಱು$_1$ ]

**ತಲೆಮೊರೆ** 'ತಲೆಮೊಱು' ನೋ.

**ತಲೆಮೊಱಡು** (ನಾ). ಎತ್ತರವಾದ ಸ್ಥಳ,–ದಿಬ್ಬ,–ತಿಟ್ಟು : ಸೀಮಾನ್ತರ ಮೂಡಾಯೊಳಗೆರೆಯ ಪಾದರಿ ಎ ಅನ್ತೆ ಬಂದು ಕೆಱಿಯುಳ್ಕೂಡಿ ಪೆರ್ವಳ್ಳಮೆ ಸನ್ದು ಪಡುವಾಯ್ ನೋಡಿ ಪೆರ್ವುಣಸೆ ಎ ತೆಂಕಾಯ್ ತಲೆಮೊಱಡೆ ಬೆದಿಕೆರೆ ಎ (ಮೈ.ಆರಿ. ೧೯೨೭, ೧೧೪–೪೭ : 726).

[ ತಲೆ$_1$ + ಮೊಱಡು (<ಮೊರಡಿ) ]

**ತಲೆಮೊಱು**, ತಲೆಮೊರೆ (ನಾ).=ತಲೆಮಾರು : ನಿನ್ನ ಸಂತಾನಂ ಆದೊಡಂ ಪದಿಮೂಱು ತಲೆಮೊಱಿಯ ಕಳೆದು (ಬದ್ಧ.ಪ್ರ. ೪೧–೫೪೯). **ತಲೆಮೊರೆ :** ಈ ತಲೆಮೊರೆಯ ಅಗ್ರಕತೆಗಾರರಾದ ಶ್ರೀ ಶ್ರೀನಿವಾಸರನ್ನಾಗಲಿ ಶ್ರೀ ಆನಂದರನ್ನಾಗಲಿ ಸರಿದೂಗುವ ಕತೆಗಾರರನ್ನು ನಾವು ಕಾಣಲಾರೆವು (ಸುವರ್ಣ. ೧೪೫) ; ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಏಳುತ್ತಿದ್ದ ಹೊಸ ತಲೆಮೊರೆಯ ಜನದ ಅಭಿಪ್ರಾಯ ಬೇರೆಯಾಗಿತ್ತು (ದಾದಾನ. ೨೭). [ ತಲೆ$_1$ + ಮೊಱು$_3$ ./ತಮಿ. ತಲೈಮುಱೈ ]

**ತಲೆಯರಿ** (ಕ್ರಿ). ತಲೆ ಕತ್ತರಿಸು ; ಶಿರಚ್ಛೇದನ ಮಾಡು : ಭೃಗುಪತ್ನಿಯಾದ ದಿವ್ಯಾದೇವಿಯಂ ಪೆಣ್ಗೊಲೆಗೆ ಹೇಸದಕಟ ತಲೆಯರಿಯೆ (ಪದ್ಮರಾ. ೧೦–೧೨೭). [ ತಲೆ$_1$ + ಅರಿ$_1$ ]

**ತಲೆಯಳಿಗ** (ನಾ). ೧. ತಲೆಯನ್ನು ನಾಶಮಾಡುವವನು ; ಕೊಲೆಗಡಿಕ. ೨. (?) : ತಲೆಯಳಿಗನ ಪೆತ್ತ ಲಲನೆಯ ತಂದೆಯ ಘಳಿಲನೆ ತೆಗೆದು ನುಂಗಿದಗೆ . . . ವಂದಿಸುವೆ (ಅಬ್ಬಲೂ. ೧–೪).

[ ತಲೆ$_1$ + ಅಳಿ$_1$ (<ಅೞಿ$_1$) + – ಗ$_2$ ]

**ತಲೆಯಾಡಿಸು** (ಕ್ರಿ). ೧. ತಲೆಯನ್ನು ಅಲ್ಲಾಡಿಸು : ಇವನ ಆಟ ಆಯ್ತು ಅನ್ನುವಂತೆ ತಲೆಯಾಡಿಸಿದರು (ಮುನಿಮಾ. ೫೦). ೨. ನಿಷೇಧ ಸೂಚಿಸು; ಇಲ್ಲವೆಂದು ಸೂಚಿಸು : ಅವುಗಳ ವಿಚಾರದಲ್ಲಿ ಯಾವುದೇ ನಿಶ್ಚಿತ ವಿವೇಚನೆ ಮಾಡುವುದು ಸಾಧ್ಯವಿಲ್ಲ ಎಂದು ವಿದ್ವಾಂಸರು ತಲೆಯಾಡಿಸಿದ್ದೂ ಉಂಟು (ದ್ರಾವಿವಿ. ೪೭). [ ತಲೆಯಾಡು + – ಇಸು$_3$ ]

**ತಲೆಯಾಡು** (ಕ್ರಿ). ೧. ತಲೆಯು ಅಲುಗು ; ತಲೆಯು ಅಲ್ಲಾಡು : ಸತ್ತು ತಪ್ಪೊಪ್ಪದೆನೆ ತಲೆಯಾಡುತಿಹುದು (ಕಾಲೂರ. ೧೧೨–೨೧೫). ೨. ನಿಷೇಧವನ್ನು ಸೂಚಿಸು. 'ತಲೆಯಾಡಿಸು' ಪರಾ. [ತಲೆ$_1$+ಆಡು$_1$]

**ತಲೆಯಾನಿಸು** (ಕ್ರಿ). ತಲೆಯನ್ನು ಒಡ್ಡು,–ಇರಿಸು : ಬಿಸಿಲಿನ ಬೇಗೆಗೆ ತಲೆಯಾನಿಸಿ ತರುವುಂ ಶ್ರಿತರ ತಂಪಿಸುವುದಲೆ ನೆಳಲಿಂ (ಶಾಕುಂತ. ೬೩–೧೧೭).

[ ತಲೆಯಾನು + – ಇಸು$_3$ ]

**ತಲೆಯಾನು** (ಕ್ರಿ). ತಲೆಯನ್ನು ಒಡ್ಡು : ಪುಣ್ಯ ಪೂರುಷರ ಪದರಜಕೆ ಮಱಿದೊಮ್ಮೆ ತಲೆಯಾನದೆ ತದುಕ್ತಿ ಸುಧಾಮುಕುಂದಾಭ್ಯುದಯವನು ಕಿವಿಗೇಳದವರಾಯುಷ್ಯವೇಕೆ (ನಿಘಾಗ. ೪–೧೪–೪೨).

[ ತಲೆ$_1$ + ಆನು$_1$ (<ಆನ್$_1$) ]

**ತಲೆಯಾರ್**, ತಲೆಯಾರು (ನಾ). ೧. ಸಾಲಾಗಿ ಉಳುವಾಗ ಮುಂಭಾಗದಲ್ಲಿರುವ ಎತ್ತುಗಳ ಜೊತೆ: (+). ೨. ನೊಗವನ್ನು ಕಟ್ಟಿರುವ ಎತ್ತುಗಳ ಜೊತೆ : ಬಳವಱಿದು ಹರೆಯವಱಿದೆಣೆಯಱಿದು ಬಗೆಯೆತ್ತುಗಳನಾಯ್ದು ಹಲವು ತಲೆಯಾರ್ಗಳಂ ಹೂಡಿ (ಸಿದ್ಧರಾ. ೬–೨೫). ೩. ಎತ್ತುಗಳನ್ನು ಹೂಡಿರುವ ನೇಗಿಲು: (+). **ತಲೆಯಾರು:** ೪. ಪಳಗಿಸುವುದಕ್ಕಾಗಿ ಮೊದಲ ನೊಗದ ಹಿಂದೆ ಕಟ್ಟಿರುವ ಎತ್ತುಗಳ ಜೊತೆ : "ನೊಗನ ತಲೆಯಾರು ಭಂಡಿ ಎಂಬ ಇವೆಲ್ಲಂ ಹೂಡುವ ಎತ್ತುಗಳು. ಕ್ರಮದಿಂದ ಯುಗ್ಯ, ಪ್ರಾಸಂಗ್ಯ, ಶಾಕಟ ಎನಿಸುಗು "(ನಾಚಿರಾ. ೬).

[ ತಲೆ$_1$ + ಆರ್$_3$ ./ ತೆಲು. ತಲೇರು ]

**ತಲೆಯಾರು** 'ತಲೆಯಾರ್' ನೋ.

**ತಲೆಯಾವು** (ನಾ). ಶ್ರೇಷ್ಠವಾದ ಹಸು ; ಉತ್ತಮವಾದ ಆಕಳು : "ಶ್ರೇಷ್ಠಾ, ನೈಚಿಕೀ–ಈ ೨ ತಲೆಯಾವು" (ಹಲಾಯು. ೪೫–೧೧೭) : "ನೈಚಿಕೆ ಶ್ರೇಷ್ಠೆಯೆನೆ ತಲೆಯಾವೆನಿಕ್ಕು" (ಮಂಗರಾ. ೫೪–೪).

[ ತಲೆ$_1$ + ಆವು ]

**ತಲೆಯಾಳ್**, ತಲೆಯಾಳು (ನಾ). ಮುಂಖ್ಯ ವ್ಯಕ್ತಿ ; ಮುಂದಾಳು ; ನಾಯಕ : ತಲೆಯಾಳ್ಗಳಿವರು ಎಣಿಸಲ್ಕೆ ಮಿಕ್ಕವರ್ ಮಿಕ್ಕವರ್ (ಪಾರಸಿ. ೧೪–೩೦೯). **ತಲೆಯಾಳು :** ತೇರು ಮಾಡುವಾಗ ಗಿರಿಯಯ್ಯನೇ ತಲೆಯಾಳು; ದೇವರು ಹೊರಡಿಸುವುದಕ್ಕೆ ಅವನೇ ಬರಬೇಕು (ಸುವಸಂ. ೪೭) ; ರಾಜಕುಮಾರನ ನಾಮಕರಣ ಮಹೋತ್ಸವಕ್ಕೆ ನಾಡಿನ ತಲೆಯಾಳುಗಳೆಲ್ಲ ನೆರೆದರು (ಸವತಿ. ೧೪೫) ; ದನಗಾರರ ತಲೆಯಾಳು ನಗರಕ್ಕೆ ಓಡಿಬಂದು ವಿರಾಟನ ಕುಮಾರ ಉತ್ತರನನ್ನು ಕಂಡು ಮೊರೆಯಿಟ್ಟನು (ವ್ಯಾಸಜಿ. ೨೩೨);

[ ತಲೆ$_1$ + ಆಳ್$_3$ ]

**ತಲೆಯಾಳು** 'ತಲೆಯಾಳ್' ನೋ.

**ತಲೆಯಿಕ್ಕು** (ಕ್ರಿ). ೧. ತಲೆಯನ್ನು ಇಡು : ಅಂತದಱ ಮೊದಲೊಳ್ ಕೆಲವು ದಿವಸಂ ತಲೆಯಿಕ್ಕಿ ಪಟ್ಟಿರ್ದುದನೊಂದು ದರ್ದುರಂ ಕಂಡು (ಪಂಚತಂ. ೨೬೯–೮). ೨. ತಲೆಯನ್ನು ತಗ್ಗಿಸು,–ಬಾಗಿಸು : ಮಿಕ್ಕು ಮಾಸುವ ಬೆಳಗು ಕೆಂಪಡರ್ದ ಮುಗಿಲು ತಲೆಯಿಕ್ಕುವಬುಜಂ . . . ನಲಿವ ಜಾರೆಯರು ಸಂಜೆಯಲಿ ರಂಜಿಸಿದರು (ಸೋಮಶ. ೨–೧೧).

[ ತಲೆ$_1$ + ಇಕ್ಕು ]

**ತಲೆಯಿಡು** (ಕ್ರಿ). ೧. ತಲೆಯನ್ನು ಇಡು,–ಚಾಚು : ಕೋಟೆಯ ತೆನೆಯೆಡೆ ಗಂಡಿಯೊಳ್ ತಲೆಯಿಟ್ಟು ನೀಟಲಿ ನೋಡುವರುಗಳ ಸೂಟಿಯ ಬಾಣಗಳಿಂದಿಟ್ಟು ಜೀವವ ದಾಟಿಸಿದರು ಯಮಪುರಿಗೆ (ಕಂನವಿ. ೧೮–೭೭) ; ಉತ್ತರ ದಿಕ್ಕಿಗೆ ತಲೆಯಿಟ್ಟು ಮಲಗಬಾರದು (ರೂಢಿ). ೨. ತಲೆದೋರು; ಬರು ; ಪ್ರವೇಶಮಾಡು : ಈ ಕಡೆಗೆ ತಲೆಯಿಡಬೇಡ (ರೂಢಿ); ಅವನು ಬಾಯಿಯಲ್ಲಿ ದೇವರ ಬಗ್ಗೆ ಭಕ್ತಿಯ ಮಾತನಾಡುತ್ತಿದ್ದರೂ ದೇವಾಲಯಕ್ಕೆ ತಲೆಯಿಡುತ್ತಿರಲಿಲ್ಲ (ರೂಢಿ). [ ತಲೆ$_1$ + ಇಡು$_1$ ]

**ತಲೆಯಿಣುಕು** (ಕ್ರಿ). = ತಲೆಯಿಡು ೨. : ನೆರೆದೀ ಕಲಿಗಳಿದಿರ್ ನಾಣ್ಚದೆ ನಿರಾಶೆ ? ತಲೆಯಿಣುಕಲಣ್ಮದೆ ಭಯಂ ? (ಶ್ರೀರಾಮಾ. ೫೫೫–೧೯೩).

[ ತಲೆ$_1$ + ಇಣುಕು (<ಇಣಿಕು) ]

**ತಲೆಯಿಾ** (ಕ್ರಿ). ಜನ್ಮವನ್ನು ಕೊಡು; ಜೀವಕೊಡು; ಹುಟ್ಟಿಸು: ಹೊಲದ ಪುರುಳೆಲ್ಲೊ ಮನೆಮನೆಯ ಕೈಮಿಂಚಿ ತಲೆಯಿತ್ತ ಕಾಲೂರನುಳಿದು ಮರೆಯಾಯ್ತು (ಕಾಲೂರ. ೧೨೦-೨೫೫). [ ತಲೆ$_1$ + ಈ$_2$ ]

**ತಲೆಯುಡಿಗೆ** (ನಾ). ತಲೆಯಲ್ಲಿ ಧರಿಸುವ ಉಡಿಗೆ; ತಲೆವಸ್ತ್ರ; ರುಮಾಲು, ಟೋಪಿ, ಪಾಗು ಮೊದಲಾದುವು; ಶಿರೋವೇಷ್ಟನ: "ತಲೆಯುಡಿಗೆ (ಮು., ಹೆಂಗಸಿನ ಅಲಂಕಾರದ ತೊಡಿಗೆ)" (Head-dress. ಇಂಕನಿ.); "ತಲೆಯುಡಿಗೆ, ಉಷ್ಣೀಷ; ಉಡಿಗೆ, ಉಡುಪು" (Tire. ಇಂಕನಿ.). [ ತಲೆ$_1$ + ಉಡಿಗೆ (<ಉಡುಗೆ) ]

**ತಲೆಯುಡೆ** (ನಾ). = ತಲೆಯುಡಿಗೆ: ಒಂದೇ ಒಂದು ವ್ಯತ್ಯಾಸವೆಂದರೆ ಮದುವೆಯಾದ ಹೆಂಗಸರು ತಮ್ಮ ತಲೆಯುಡೆಯಲ್ಲಿ ಮೂರಡಿ ಉದ್ದದ ಮರದ ಕೊಂಬನ್ನು ಸಿಕ್ಕಿಸಿಕೊಳ್ಳುವುದು (ಪ್ರವಾಇ. I, ೨೮೯). [ ತಲೆ$_1$ + ಉಡೆ$_2$ ]

**ತಲೆಯುದ್ದ** (ನಾ). ತಲೆಯವರೆಗಿನ ಎತ್ತರ; ಆಳೆತ್ತರ: ತಲೆಯುದ್ದದ ಪೂವಿನ ಘಟ್ಟಿ ಕಾಮದೇವನ ಕೃತಕಾದ್ರಿಯಂತೆಸೆಯೆ (ಅಜಿಪು. ೨-೧೩); ಮಂದೈಸಿ ತಲೆಯುದ್ದಮಾಗಿ ತುಱುಗಿ ಬೆಳೆದೊಱಗಿ ರಾಜಿಸುವ ರಾಜಾನ್ನದ ಕುಸುಂಕುಱಿಗಳೊಳಗೆ (ಲೀಲಾವ. ೫-೮೪). [ ತಲೆ$_1$ + ಉದ್ದ ]

**ತಲೆಯುರ್ಚು** (ಕ್ರಿ). ೧. ತಲೆಯನ್ನು ತಪ್ಪಿಸಿಕೊಳ್ಳು; ತಲೆಮರೆಸಿಕೊಳ್ಳು: ಇಂದೆ ಹಳಿಯುಂ ಗಡ ಕೂಡುವನಾತನಂ ಗೆಲಲ್ ಬಂದಪುದೇ ಬಱಿಕ್ಕದುವೆ ಕಾರಣಮಾಗುಱಿದಿರ್ದನಂಥರಾಣ್ಣಂದನನಲ್ಲದುಂತು ತಲೆಯುರ್ಚುಗುವೆ ರಣರಂಗ ಭೂಮಿಯೊಳ್ (ಪಂಪಭಾ. ೧೩-೭೫). ೨. ಒಡಂಬಡದಿರು; ವಿಮುಖನಾಗು: ಪೆರ್ಚುಗೆ ಭರತಕುಲಂ ನೆಲೆವೆರ್ಚುಗೆ ನಿಮ್ಮೆರಡು ತಂಡಮೊದವಿದ ನಣ್ಪಂ ಕರ್ಚುಗೆ ಕಲುಷಂ ನೀಂ ತಲೆಯುರ್ಚದಿರೆನ್ನೆಂದ ನುಡಿಗೆ ಕುರುಕುಳತಿಳಕಾ (ಪಂಪಭಾ. ೧೩-೬೭). [ ತಲೆ$_1$ + ಉರ್ಚು ]

**ತಲೆಯೂರ್** 'ತಲೆಯೂಱು' ನೋ.

**ತಲೆಯೂರು** (ನಾ). ೧. ಮುಖ್ಯವಾದ ಊರು; ಪ್ರಮುಖ ಪಟ್ಟಣ: ಎನ್ನ ನಾಡೊಳ್ ತಲೆಯೂರೆನಿಪ ಬೂಕನ ಕೆರೆಯಂ ಕೊಂಡು . . . ತಿರುಕುಳಿ ಪಾರ್ವರ್ಗಿತ್ತಂ (ಚಿಕವಂ. ೧೩-೧೧). ೨. "ಎಲ್ಲೆಯಲ್ಲಿರುವ ಗ್ರಾಮ, ಗಡಿ ಸರಹದ್ದಿನಲ್ಲಿರುವ ಊರು" (ಪ್ರಭಣ್ಣ). ೩. ಒಂದು ಊರಿನ ಹೆಸರು: ತೆರೆಯೂರು ಕೊಯತೂರು ಕೊಂಗಳಿಯುಚ್ಚಂಗಿ ತಲೆಯೂರು ಪೊಂಬುಚ್ಚವನ್ನಾ ಸುರಚೌಕಬಳೆಯವಟ್ಟಣಯೆಂದಿವು ಮೊದಲಾಗನೇಕ ದುರ್ಗ್ಗತ್ರಯಂಗಳನಶ್ರಮದಿಂ ಕೊಂಡು (ಎಕ. II, ೧೩೨-೨೭; 1123). [ ತಲೆ$_1$ + ಊರು$_3$ (<ಊರ್) ]

**ತಲೆಯೂಱು, ತಲೆಯೂರ್, ತಲೆವೂರು** (ಕ್ರಿ). ೧. ತಲೆಯನ್ನು ಕೆಳಕ್ಕೆ ಊರು; ತಲೆಕೆಳಗಾಗಿರು: ತಲೆಯೂಱಿ ತಪಸ್ಸಿದ್ದೊಡೆ ಅಲ್ಲಿ ಮೂರ್ತಿಯ ತೋಱುವಾತನು ನೀನೆ (ಸಮಾವ. ೮-೩೧); ಸಿಂಹಾಸನದಿಂ ತಲೆಯೂಱಿ ಕೆಡೆದರತಿಬಳ ಭೂಪರ್ (ಜಗವಿ. ೮-೮೨); ತಲೆಯೂಱಿ ತಪಂಗೆಯ್ಗೆಮ (ಶ್ರಾವಕಾ. ೧೧೯-೪); ಉದ್ದನ ಮರನ ತುದಿಗೇಱಿ ತಲೆಯೂಱಿ ಬಿದ್ದು ಸತ್ತಂತೆ (ಸರ್ವಜ್ಞ. ೪೫೩). ೨. ತಲೆ ತಗ್ಗಿಸು; ತಲೆಬಾಗಿಸು: ಕಾಲ ಕಾಮರ ಗೆಲುವ ಉಪಾಯವಾವುದೆಂದು ತಲೆಯೂಱಿ ನೆಲನ ಬರೆವುತಿಪ್ಪೆ (ಘನವ. ೧೫). **ತಲೆಯೂರ್**: ೩. "ತಲೆಗೊಡು, ತಲೆಯನ್ನದುಮು" (ಪ್ರಭಣ್ಣ). **ತಲೆವೂರು**: ೪. ಮಲಗು; ವಿಶ್ರಮಿಸು: ಬೆಳಗಿನಿಂದ ಸಂಜೆಯತನಕ ತಲೆವೂರಲು ಪುರುಸೊತ್ತಿಲ್ಲ (ರೂಢಿ). [ ತಲೆ$_1$ + ಊಱು$_1$ ]

**ತಲೆಯೆತ್ತು** (ಕ್ರಿ). ೧. ತಲೆಯನ್ನು ಮೇಲಕ್ಕೆ ಎತ್ತು; ಮುಖವನ್ನು ಮೇಲೆಮಾಡು: ತಡಬಡಿಸುವ ನುಡಿ ತಲೆಯೆತ್ತುವ ನವಿರಡಸಿದ ಬೆಱಗೆಸೆಯಲು . . . ರಾಜಕುಮಾರಂ ನೋಡಿದನು (ಜಯಕಾ. ೩-೧೪); ತಲೆಯೆತ್ತೆ ಕೂದಲ ಸೆಳೆಕೊಳ್ವ ಮುಳ್ಳು ಮೈಯಲುಗೆ ಸೀಳುವ ಬಲುಮುಳ್ಳು (ಕಂಕವಿ. ೧೮-೪೭); ಉಲಿಯದೆ ಕೆಲಿಯದೆ ತಲೆಯೆತ್ತಿ ನೋಡದೆ ಬಲು ಬಲ್ಲತನದಿ ಇರುವವಳು ದೊರೆಯುವುದು ಸಲೆ ಗುರು ಕರುಣ (ಸರ್ವಜ್ಞ. ೧೬೭೪). ೨. ಉಂಟಾಗು; ಹುಟ್ಟು; ಉತ್ಪತ್ತಿಯಾಗು; ಉದ್ಭವವಾಗು: ತಲೆದಡವಿ ನಂಬುಗೆಯಿತ್ತು ಸಂತೈಸುತಿರೆ ನಲಿವು ತಲೆಯೆತ್ತೆ[ಪಾಠಾಂ. ಯೆತ್ತಿ, ಯೊತ್ತಿ]ಹರುಷವಂಗವನಡರೆ (ಸೋಮಚ. ೪-೯); ಎಲ್ಲ ದರ್ಶನಗಳೂ ಅವೈದಿಕಮತಗಳಾದ ಜೈನ, ಬೌದ್ಧ ಚಾರ್ವಾಕಾದಿಗಳನ್ನು ಖಂಡಿಸುವುದಕ್ಕೇ ತಲೆಯೆತ್ತಿದಂಥವುಗಳು (ಭಾರದ. ೧೨೨); ತವೊಮ್ಮೊಳೊಗೆತನದೊಡಕು ತಲೆಯೆತ್ತಿದಾಗಳ್ (ಬದ್ಧಪ್ರ. ೧೨-೨೧೩); ಮಹಮ್ಮದನು ಬೋಧಿಸುತ್ತಿದ್ದ ಮತವು ತಲೆಯೆತ್ತಿ, ಮುನ್ನೂರ ಅರವತ್ತು ವಿಗ್ರಹಗಳ ಪೂಜೆಯು ನಿಂತುಹೋದರೆ (ಪ್ರಮಹ. ೨೩). ೩. ಸೆಟೆದು ನಿಲ್ಲು; ಹಂಗು ಇಲ್ಲದಿರು: ಮೇರುಗಿರಿಯೊಂದು ದಿನ ಗರ್ವದಿಂ ತಲೆಯೆತ್ತಿ ಕೆಂಗದಿರ ಹೊಂಗದಿರ ಜಿಹ್ವೆಯಲಿ ನುಡಿಯಿತ್ತು (ಕವಿಸೋ. ೨೦-೧); ಸೊಕ್ಕಿನಲಿ ತಲೆಯೆತ್ತಿ ಜೊತೆಯವರ ಕೂಟದಲಿ ನಾವು ಸಮ ನಿಮಗೆಂದು ನುಡಿವ ಬಲವಿಲ್ಲ! (ಕನ್ನಬಾ. ೧೦೪-೧೧). ೪. ಪ್ರಕಟವಾಗು; ತೋರು: ಕಾಡೊಳ್ಪು ತಲೆಯೆತ್ತಿ ಸೊಡರೆತ್ತಿ ತೋರ್ದಂತೆ ನೋಡುತಿಹ ಬೆಳ್ಳಿಯಂ ಕಂಡಲ್ಲೆ ನಿಂದು (ಕಾಲೂರ. ೧೨೭-೨೬೭). ೫. ಚೇತರಿಸಿಕೊಳ್ಳು; ಎಚ್ಚೆತ್ತುಕೊಳ್ಳು; ಸುಧಾರಿಸಿಕೊಳ್ಳು: ಸಲೆ ನಮೆವ ರೋಗಿ ಬೇಗಂ ತಲೆಯೆ[ಪಾಠಾಂ. ಯು]ತ್ತಲ್ (ಸಮಪ. ೩-೬೪); ಅವನು ವ್ಯಾಪಾರದ ನಷ್ಟದಿಂದ ತಲೆಯೆತ್ತಲು ಆಗಲೇ ಇಲ್ಲ (ರೂಢಿ). ೬. ಪ್ರಗತಿ ಪಡೆ; ಏಳಿಗೆ ಹೊಂದು: ಕನ್ನಡ ತಲೆಯೆತ್ತುವ ಬಗೆ ಹೇಗೆ? (ರೂಢಿ).

**ತಲೆಯೆತ್ತಿ ತಿರುಗು** = ಮರ್ಯಾದೆಯಿಂದ ಓಡಾಡು; ಧೈರ್ಯದಿಂದ ಓಡಾಡು; ಯಾವ ಅಪವಾದವೂ ಇಲ್ಲದೆ ಇರು: ತಾನು ಶಹರಿನಲ್ಲಿ ತಲೆಯೆತ್ತಿ ತಿರುಗುವುದಕ್ಕಿಲ್ಲ (ಮುಂಗಾಮು. ೧೧). **ತಲೆಯೆತ್ತಿ ನಡೆ** = ತಲೆಯೆತ್ತಿ ತಿರುಗು: ಅನುವರದೊಳಿಂದು ಶೌರಿಗೆ ವಿಮುಖನಾಗಿ ನೀಂ ಬಂದೆಯಾದೊಡೆ ಮಾವನ ಮನೆಯೊಳಾಂ ತಲೆಯೆತ್ತಿ ನಡೆವೆನೆಂತು (ಜೈಮಿಭಾ. ೧೧-೬). **ತಲೆಯೆತ್ತಿ ನಿಲ್ಲು** = ೧. ಹುಟ್ಟಿಕೊಳ್ಳು; ಉಂಟಾಗು: ಈ ಶೈವಧರ್ಮದ ಅಕ್ಕಪಕ್ಕದಲ್ಲಿಯೇ ಕಾಳಾಮುಖ ಸಂಪ್ರದಾಯದ ಒಂದು ಶಾಖೆಯೂ ತಲೆಯೆತ್ತಿ ನಿಂತಿತ್ತು (ಶೂನ್ಯಕು. ೧). ೨. ಆತ್ಮವಿಶ್ವಾಸದಿಂದಿರು: ಗಾಳಿ, ನೀರು, ಬೆಳಕಿನಲಿ ತೂಗಿ ತಲೆಯೆತ್ತಿ ನಿಂತವರೆ ಮಾನವರು (ನೆಲಮು. ೪೬-೮). ೩. ಚೇತರಿಸಿಕೊಳ್ಳು; ಅಭಿವೃದ್ಧಿ ಹೊಂದು: ಕತ್ತಲ ಕಣಿವೆಯಿನೆಂತೊ ಮೇಲ್ಬೆತಂದೆ ಮತ್ತೊಮ್ಮೆ ತಲೆಯೆತ್ತಿ ನಿಂದೆ (ಇಂಚಾಪ. ೧೮೪-೮). ೪. ಗೌರವದಿಂದಿರು: ಇಂದಲ್ಲ ನಾಳೆ ನಮ್ಮ ದೇಶ ಸ್ವಾತಂತ್ರ್ಯವನ್ನು ಗಳಿಸಿ ವಿಶ್ವದಲ್ಲಿ ತಲೆಯೆತ್ತಿ ನಿಲ್ಲುತ್ತದೆ (ಕಳಹು. ೧೧೨). [ ತಲೆ$_1$ + ಎತ್ತು$_1$ ]

**ತಲೆಯೆಱಿಕ** (ನಾ). (ಲಜ್ಜೆ, ಅವಮಾನಗಳಿಂದ) ತಲೆ ಬಾಗುವಿಕೆ; ತಲೆ ತಗ್ಗಿಸುವಿಕೆ: ನೆರೆದೀ ಸಭೆಯೊಳ್ ಲಜ್ಜಾಭರದಿಂ ತಲೆಯೆಱಿಕ ಮಾದುದಿಂದೆನಗೆ (ಸುಕುಮಾ. ೨-೨೮); ಕರಕಿಸಲಯರುಚಿಯಿಂದಂ ಪರಿಭವಮಾಯ್ತೆಂಬ ಲಜ್ಜೆಯಿಂ ತಲೆಯೆಱಿಕಂ ಪಿರಿದಾಯ್ತೆನೆ ಜೋಲ್ದು ಸಡಿಲ್ದರುಣಾಶೋಕಪ್ರವಾಳಮಂ ವಧು ತಿಱಿದಳ್ (ಮಲ್ಲಿಪು. ೬-೭೦); ಮೂಱಾವರ್ತನವೊಂದು ತಲೆಯೆಱಿಕಮುಮಿಂತೆ ದಂಡಕದ ಕಡೆಯೊಳಂ ಪೇಟ್ದು (ಪಸಾರ. ೩೩೭). [ ತಲೆ$_1$ + ಎಱಿಕ$_2$ ]

**ತಲೆಯೆಱಗು** (ಕ್ರಿ). ತಲೆಬಾಗು; ನಮಸ್ಕರಿಸು: ಹಲಬರೆಮ್ಮೊತ್ತಿಗೆ ಬಂದು ಹೋದರು ಮುಂದೆ ಕೆಲಬರು ದೂರದೊಳ್ಗಿಂದು ತಲೆಯೆಱಗಿದರು (ಭರಜ. ೩೯-೨೦). [ ತಲೆ$_1$ + ಎಱಗು$_1$ ]

**ತಲೆಯೇಱು$_1$** (ಕ್ರಿ). ತಲೆಗೇರು; ನೆತ್ತಿಗೇರು; ಹೆಚ್ಚಾಗು; ಮಿತಿಮೀರು: ನಿರ್ವಿಕಾರ ಸ್ವರೂಪನಪ್ಪ ಪರಮಂಗೆ ಸ್ವಪ್ನೋಪಮಾಹಂಮಮತೆ ತಲೆಯೇಱೆ (ಗಿರಿಕ. ೮-೪೫). [ ತಲೆ$_1$ + ಏಱು$_1$ (<ಏಱ್$_1$) ]

**ತಲೆಯೇಱು$_2$** (ನಾ). ತಲೆಯಲ್ಲಿಯ ಗಾಯ,-ಹುಣ್ಣು: "ತಲೆಯಲ್ಲಿ ಘಾಯ" (ಪ್ರಭಣ್ಣ). [ ತಲೆ$_1$ + ಏಱು$_4$(<ಏಱ್$_4$) ]

**ತಲೆಯೊಡೆ** (ಕ್ರಿ). ೧. ತಲೆಯನ್ನು ಒಡೆ,-ಸೀಳು: ಬಡಿವನಲ್ಲಿಯ ಮಕ್ಕಳನು ತಲೆಯೊಡೆವನರೆಬರ (ಸಾಳ್ವ ಭಾ. ೨೦-೫೪): ತಗುಲಿದರೆ ತಲೆಯೊಡೆವ ಪೇರಾಲಿಕಲ್ಲುಗಳ್ ವೆರಸಿ ಕರೆದುದು ಮುಸಲಧಾರೆ (ಶ್ರೀರಾಮಾ. ೬೩೪-೧೨೪). ೨. (ಆಲಂ) ಬಗ್ಗುಬಡಿ; ದೋಚು: ಆ ಜಮೀನ್ದಾರ ಬಡವರ ತಲೆಯೊಡೆದು ಆಸ್ತಿಯನ್ನು ಸಂಪಾದಿಸಿದ್ದಾನೆ (ರೂಢಿ).

ತಲೆಯೊಡಕೊಳ್ಳು = ಬಹಳವಾಗಿ ಯೋಚನೆಮಾಡಿ ಅಥವಾ ಮಾತಾಡಿ ದಣಿ; ತಲೆಕೆಡಿಸಿಕೊಳ್ಳು: ಇನ್ನು ನೀವು, ನಿಮ್ಮ ಮಗ, ಮನಸಿನಿಂದ ಪ್ರೇಮದಿಂದ ಕಲಿಸುತ್ತೀರಿ. ಇತರರು ಏಕೆ ಪುಕ್ಕಟೆ ತಲೆಯೊಡಕೊಳ್ಳಬೇಕು ಹೇಳಿ (ಪ್ರೇಮಾಶ್ರ. ೨೪೭). [ ತಲೆ$_1$ + ಒಡೆ$_1$ ]

**ತಲೆಯೊಡೆತ**(ನಾ).೧.(ನರಗಳ ತಂಡಿತದಿಂದ)ತಲೆಯಲ್ಲಿ ನೋವುಂಟಾಗುವಿಕೆ; ತಲೆಸಿಡಿತ; ತಲೆನೋವು: ಸೌದೆ ಸೀಳುತ್ತಿದ್ದಾಗ ತಲೆಯೊಡೆತದಿಂದ ನಿಂತುಕೊಳ್ಳಲಾರದೆ ನಿನ್ನ ತೊಡೆಯ ಮೇಲೆ ಮಲಗಿದೆ (ವಚಭಾ. ೧೭೪). ೨. (ಆಲಂ) ಬಗ್ಗು ಬಡಿಯುವಿಕೆ: ಬಡವರ ತಲೆಯೊಡೆತದಿಂದಲೇ ಅನೇಕರ ಆಸ್ತಿ ಬೆಳೆಯುತ್ತಿದೆ (ರೂಢಿ). [ ತಲೆ$_1$ + ಒಡೆತ ]

**ತಲೆಯೊಡೆಯ** (ನಾ). ರಕ್ಷಕ; ಒಡೆಯ; ಹೊಣೆಗಾರ; ಗೊತ್ತುಗಾರ: ನೀವುಂ ತಲೆಯೊಡೆಯರ್ಗೆ ತಲೆಸುತ್ತಂ ಮಾರ್ಕೊಂಡರೆನಿಸಿ ನಗೆಯಂ ಮಾಡಿಕೊಳ್ಳದೆ . . . ಕೂಸಂ ಕುಡುವುದು (ಧರ್ಮಾಮೃ. ೧೦-೪೨); ನಿನ್ನಸುವ ಕಳೆವೆನೀಗಳೆ ಕಾಯ್ದುಕೊಂಬಡೆ ಛಳೆಯದಲಿ ಬರಹೇಳು ನಿನ್ನೀ ತಲೆಯೊಡೆಯನಹ ವಿಷ್ಣುವನು ನೀ ಬೇಡಿಕೊಳ್ಳೆಂದ (ನಿಘಾಗ. ೭-೭-೧೦). [ ತಲೆ$_1$ + ಒಡೆಯ$_1$ ]

**ತಲೆಯೊಡ್ಡು** (ಕ್ರಿ). (ಹಿಂಸೆಗೆ) ಈಡಾಗು; ಗುರಿಯಾಗು: ಮುಂದಿನ ಅರ್ಧಗಂಟೆಯವರೆಗೆ ವೆಂಕಟರಮಣನ ತಡೆಯಿಲ್ಲದ ಮಾತಿನ ಪ್ರವಾಹಕ್ಕೆ ತಲೆಯೊಡ್ಡಿ ಕುಳಿತಿರಬೇಕಾಯಿತು (ಮೂರುದಾ. ೧೯೭). [ತಲೆ$_1$ + ಒಡ್ಡು$_1$]

**ತಲೆಯೊತ್ತು$_1$, ತಲೆವೊತ್ತು** (ಕ್ರಿ). ೧. ತಲೆಯನ್ನು ತೂರಿಸು,-ಅದುಮು,-ಒತ್ತು: ಡಾಳಮಂ ಪಸರಿಪ ತೋರಮುತ್ತಿನ ಸರಂ ಮೊಲೆಯೊಳ್ ತಲೆಯೊತ್ತೆ (ಕಬ್ಬಿಗಕಾ. ೩೪೩). ೨. ಹೊಡೆದಾಡು; ಎದುರಾಗಿ ನಿಲ್ಲು; ಯುದ್ಧಮಾಡು: ತಿರುಪಱಿದೊಡೆ ದಂಡಾದಂಡಿ ರಣಂ ಬಿಲ್ಲಿಂದಮಾಯ್ತು ಬಿಲ್ಮುಱಿದೊಡೆ ಗೋಣ್ಮುಱಿಗೆ ತಲೆಯೊ[ಪಾಠಾಂ. ವ]ತ್ತುತ್ತಿರ್ಪೊಂದುರವಣೆಯಿಂದಾದುದಾ ಕಚಾಕಚಿ ಯುದ್ಧಂ (ಚಂದ್ರಪು. ೧೦-೭೦); ಮುಳಿದೊತ್ತಿ ನೂಂಕಿ ಕಣೆಯಂ ಬಿಲ್ಲಂ ಬಿಸುಟ್ಟೆಕ್ಕೆಯಿಂ ಕೂರಾಳ್ಗಳ್ ತಲೆಯೊ[ಪಾಠಾಂ. ವ]ತ್ತಿ ಕಟ್ಟಿದಲಗಿಂದಂ ಕುತ್ತಿ ವ್ಯೈಯಿಕ್ಕಿದರ್ (ಕಬ್ಬಿಗಕಾ. ೨೭೭); ಅವನಿಯಲಿ ನಿನ್ನೊಡನೆ ತಲೆಯೊ[ಪಾಠಾಂ. ಯೆ]ತ್ತುವ ನೃಪಾಲಕರಿಲ್ಲ (ಕುವ್ಯಾ ಉ. ೯-೮); ಮೃತ್ಯು ನಿನಗಾನೆನ್ನೊಡನೆ ತಲೆಯೊತ್ತಿ ನೋಡೆಂದೆನುತ ಬೊಬ್ಬಿಱಿವುತ್ತ ದೈತ್ಯನ ತಱುಬಿದನು ಬಲವೆಲ್ಲ ಬೆಱಗಾಗೆ (ಕುವ್ಯಾದ್ರೋ. ೧೬-೩೦). ೩. ಕಷ್ಟಪಡು; ತೊಂದರೆಯನ್ನನುಭವಿಸು: ಇಂತು ತಲೆಯೊತ್ತುತ ಮಹಾವಿಪಿನಾಂತರವ ತೊಳಲಿದೆವು (ಕುವ್ಯಾ ಅ. ೧೪-೧೨). **ತಲೆವೊತ್ತು:** ೨. ತಲೆವೊ[ಪಾಠಾಂ. ವ]ತ್ತಿದುದೆನೆ ಹೊಯ್ದುದು" (ಭಾರನಿ. ೫೦); ತಲೆವೊತ್ತೆ ತಾರಕಾವಳಿ ತಲೆಗರೆದಿದೆ ರಾಹುವದನ ಶಶಿಬಿಂಬದ ಪಿಂದಲೆಯೊಳೆನೆ ತೋರ ಮುತ್ತಿನ ತಲೆದುಡುಗೆಯಿನೆಸೆದುದಲರ ಸೋರ್ಮುಡಿ ಸತಿಯಾ (ಪುಷ್ಪಪು. ೩-೫೭); ಗೆಲ್ಲಕೆ ಹಾರದೆ ಕುತರ್ಕಕ್ಕೆ ತಲೆವೊತ್ತದೆಲ್ಲೆಡೆಯೊಳಂ ವಾಸಿಗಂ ಗಾಸಿಯಾಗದೆ (ಸಿದ್ಧೇಪು. ೨೦-೭೬). ೪. ತಲೆಯನ್ನು ಸವರು; ಸಮಾಧಾನಪಡಿಸು: ಕಲಹಕ್ಕೆ ಕಚ್ಚೆವಾಸುವ ತಲೆವೊ[ಪಾಠಾಂ. ವ]ತ್ತೆ ಕೆರಳ್ವ ಜಗಳವಾಡುವನುಂ ತಾಂ ಸಲೆ ಬೈಸಿಸಿಕೊಳ್ವಂ ನಿರ್ಮಳನಕ್ಕುಂ ಕೇಳಲೊಡನೆ ಜೈನಾಗಮಮಂ (ಸಮಪು. ೩-೫೭). [ ತಲೆ$_1$ + ಒತ್ತು$_1$ ]

**ತಲೆಯೊತ್ತು$_2$** (ನಾ). ಗುಂಪು; ಸಂದಣಿ; ಸಮೂಹ: ರಘುಗರಘುಗಿಪ ತನುರುಚಿಯ ಮಿಂಚನು ಮಿಗುವ ಖಡ್ಗಚ್ಛವಿಯ ತಲೆಯೊತ್ತುಗಳ ಚಾವಡಿಯೊಳಗೆ ಕೌರವರಾಯನೈತಂದ (ಕುವ್ಯಾ ಆ. ೭-೨೬); ಮುನಿನಿವಹ ತಲೆಯೊತ್ತುಗಳಲೆಸೆದರು (ನಿಘಾಗ. ೧೦-೯೨-೨). [ ತಲೆ$_1$ + ಒತ್ತು$_2$ ]

**ತಲೆಯೊಲೆ** (ಕ್ರಿ). ೧. ತಲೆಯನ್ನು ಒಲೆದಾಡಿಸು; ತಲೆಯಾಡಿಸು: ಅವಳು ತಲೆಯೊಲೆಯುತ್ತ, ಮುಗುಳುನಗೆ ಸೂಸುತ್ತ, ಬಿರುಬಿರನೆ ಕಾವಲುಗಾತಿಯನ್ನು ಹಿಂಬಾಲಿಸುತ್ತಿದ್ದಳು (ಪುನರು. ೨೧೨). ೨. ತಲೆದೂಗು; ಮೆಚ್ಚು: ಹುಲಿಗುಲಿಯ ನೆಲ್ಲೂರು ನೋಡಿ ನುಡಿ ಬಿಚ್ಚುತುಂ ತಲೆಯೊಲೆದು ಪೊಗಳುತುಂ ಪೊಗಳ್ಕೆಯಂ ಪೊಸೆದುಂ (ಕಾಲೂರ. ೧೦೫-೨೦೪). [ ತಲೆ$_1$+ಒಲೆ$_1$ ]

**ತಲೆಯೊಲೆತ** (ನಾ). ತಲೆದೂಗುವಿಕೆ; ತಲೆಯಾಡಿಸುವಿಕೆ: ರಿಪು ಭಯಾಕಾರಮಾ ವಿಪುಲ ವಪುವಂ ಮೆಚ್ಚಿ ನೋಡಿ, ಕುಳ್ಳಿರವೇಳ್ದು, ತಲೆಯೊಲೆತದಿಂ ಪಡಿತುಳಿಲ್ ಗೆಯ್ವುಮಂ ಸಲಿಸಿ ತಾನುಂ ಕುಳಿತನಾ ಕುಬೇರಾರಿ (ಶ್ರೀರಾಮಾ. ೬೨೦-೧೦೩). [ ತಲೆ$_1$ + ಒಲೆತ ]

**ತಲೆಯೋಟೆ** (ನಾ). = ತಲೆಬುರುಡೆ: ತಮ್ಮಿಂದಂ ಕೊಲೆವಡೆದ ಪಾರ್ವರ ತಲೆಯೋಟೆಯನೊರ್ಕೈಯ್ಯೊಳ್ಕಪ್ಪರೆಯಾಗಿ ಪಿಡಿದು (ಭಾರಶಾಂ. ೩೫-೨೫೦). [ ತಲೆ$_1$ + ಓಟೆ$_2$ ]

**ತಲೆಯೋಡಿಸು** (ಕ್ರಿ). ವಿಚಾರಮಾಡು; ಬುದ್ಧಿಯನ್ನು ಉಪಯೋಗಿಸು: ಅವನು ತಕ್ಷಣ ತಲೆಯೋಡಿಸಿ ಕುತ್ತಿನಿಂದ ಪಾರಾದನು (ರೂಢಿ). [ ತಲೆಯೋಡು$_1$ + – ಇಸು$_3$ ]

**ತಲೆಯೋಡು$_1$** (ಕ್ರಿ). ಬುದ್ಧಿ ಕೆಲಸಮಾಡು; ಯೋಚನೆ ಹೊಳೆ,-ಸ್ಫುರಿಸು: ಪರೀಕ್ಷೆಯಲ್ಲಿ ಚೆನ್ನಾಗಿ ಬರೆಯಲು ಅವನಿಗೆ ತಲೆಯೋಡಲಿಲ್ಲ (ರೂಢಿ). [ ತಲೆ$_1$ + ಓಡು$_1$ ]

**ತಲೆಯೋಡು$_2$** (ನಾ). = ತಲೆಬುರುಡೆ: ನೋಡುವನು ಹೆಣದಿನಹಿಗಳ ಹೇರಾಳ ರಕ್ಕಸರ . . . ಬಾಡುಗರುಳಿನ ಚೀತ್ಕೃತಿಯ ತಲೆಯೋಡುಗಳ ತನಿರಕುತಪಾನದ ಶಾಕಿನೀ ಜನವ (ಕುವ್ಯಾಗ. ೩-೧೦); ಸುರಭಿವಿಲೇಪನ ಸುರುಚಿರ ರತ್ನಾಭರಣಮನತಿಗಳೆಯಿಸಿ ತಲೆಯೋಡಲುಗುರಳ ತೊವಲ್ದೊವೆಗಳೀಶನ ಸಾಮಿಪ್ಯಂಬಡೆವಂತೆ (ಜಯಕಾ. ೧-೧೯); ತಲೆಯೋಡುಗಳಲ್ಲಿ ರಕ್ತವ ತುಂಬಿ ಕೈಯೊಳುಱೆ ಸವಿದು ಚಪ್ಪರಿದು . . . ನಲಿದಾಡಿದುವು ಮರುಳುಗಳು (ಕಂನವಿ. ೧೫-೭೦); ಪಾಪ, ಇದಾರದೊ ತಲೆಯೋಡು (ಇಂಗೀತ. ೩೨-೧೭). [ ತಲೆ$_1$+ಓಡು$_2$ ]

**ತಲೆಯೋಳ್** 'ತಲೆವೋಳ್' ನೋ.

**ತಲೆರನ್ನ** (ನಾ). ೧. ತಲೆಯಲ್ಲಿ ಧರಿಸುವ ರತ್ನ; ತಲೆಮಣಿ; ಚೂಡಾಮಣಿ. ೨. (ಆಲಂ) ತಲೆಮಣಿಯಂತಿರುವವನು; ಶ್ರೇಷ್ಠನಾದ ವ್ಯಕ್ತಿ; ಉತ್ತಮನಾದ ಪುರುಷ: ಮೋಹರದಾರಭಟೆಯನು ಸಾಹಸಿಗಳ ತಲೆರನ್ನ ಚೆನ್ನಿಗರಾಮ ಕಾಹುರ ಮಿಗೆ ನೋಡಿದನು (ಕುರಾಸಾಂ. ೦೩-೭೦): ಜಿತೇಂದ್ರಿಯರ ತಲೆರನ್ನ ಚೆನ್ನಬಸವಂ ಸುಖದೊಳಿರುತಿರ್ದನು (ಚಬಪು. ೫-೬೫). [ ತಲೆ$_1$ + ರನ್ನ ]

**ತಲೆರನ್ನೆ** (ನಾ). ತಲೆಮಣಿಯಂತೆ ಇರುವವಳು ; ಶ್ರೇಷ್ಠಳಾದ ಸ್ತ್ರೀ ; ಉತ್ತಮಳಾದ ಹೆಂಗಸು : ಲಲನೆಯರ ತಲೆರನ್ನೆ ಮೋಹೋತ್ಪನ್ನೆ . . . ಶಶಿಬಿಂಬೆ (ನವಮೋ. ೫-೫) ; ಪ್ರೌಢವೆಣ್ಣುಗಳ ತಲೆರನ್ನೆಯನ್ನೀನಿಂತು ಕೊಂಡಾಡುವುದದ್ಯಾಕೆ ಪೇಳುವಡಾನು ಶಕ್ತನೆ (ನವಮೋ. ೩೩-೪).
[ ತಲೆರನ್ನ + – ಎ₂ ]

**ತಲೆರಾಸಿ** (ನಾ). ಉತ್ಕೃಷ್ಟವಾದ ಭೂಮಿ ; ಫಲವತ್ತಾದ ಭೂಮಿ (?) : ಕೆಂಗೂರ ಮಹಾಜನ ಮೂನೂರ್ಬ್ಬರು ಪಸುಣ್ಡೆ ಬೋವರ ದುಗ್ಗಸೆಟ್ಟಿಗೆ ತುಂಬ್ಬಿಡಿಸುವನ್ನು ಕೊಟ್ಟ ಸ್ಥಿತಿ ಅವುದೆನ್ದಡೆ ಕೆಱೆಯ ಕೆಱಗೆ ತಲೆರಾಸಿಯಲಿ ಬಿತ್ತಲಟ್ಟೆಯುಂ ಖಣ್ಡುಗ ಗಟ್ಟಿಯುಂ ಕೆಱೆಗೆ ಸಲ್ಗು (ಸೌಇಇ. IX–i, ೨೭–೬ ; ಸು. 10ನೆಯ ಶತ). [ ತಲೆ₁ + ರಾಸಿ ]

**ತಲೆರೋಮ** (ನಾ). ತಲೆಗೂದಲು : ತಲೆರೋಮಮಂ ಜಡೆಗಟ್ಟಿ ಪೇನಿಱಿದು ಬಾಯೊಳ್ಗೀವೆ (ಸುಕುಮಾ. ೪-೫೭). [ ತಲೆ₁ + ರೋಮ ]

**ತಲೆಲಕ್ಷ್ಮಿ** (ನಾ). ಸುಂದರಿಯರಲ್ಲಿ ಶ್ರೇಷ್ಠಳಾದವಳು : ಧರೆಯ ಲಕ್ಷ್ಮಿಯರ ತಲೆಲಕ್ಷ್ಮಿಯಾರಾಮ, ಏಷ್ಮದಾ ಸವ್ರಾಜ ಸಾರ್ವಭೌಮ (ಪಾರಸಿ. ೫-೧೧೧). [ ತಲೆ₁ + ಲಕ್ಷ್ಮಿ ]

**ತಲೆವಡಿಕೆ** (ನಾ). ಸಮ್ಮುಖವಾಗುವಿಕೆ: ಪೊಡಮಡಿಕೆ, ತಲೆವಡಿಕೆ, ಚಿವುಡಿಕೆ, ಅಡಿಕೆ (ಶಬ್ದಾನು. ೫೭೦ ಪ್ರಯೋ). [ ತಲೆವಡು + – ಇಕೆ ]

**ತಲೆವಡು,** ತಲೆಮಡು (ಕ್ರಿ). ೧. ಅಭಿಮುಖವಾಗು ; ಎದುರಿಸು ; ಪ್ರತಿಭಟಿಸು : ಯುದ್ಧದೊಳ್ ವೃಷಧ್ವಜನುಮನಿಕ್ಕಿ ಗೆಲ್ದರಿಗನೊಳ್ ತಲೆವಟ್ಟಿದಿರಾಗಿ ನಿಂದು ಸೂತಜನಿಱಿವಂ ಗಡಂ (ಪಂಪಭಾ. ೧೨-೪೦) ; ಪಲತೆಱದ ವಿಷಯದತ್ತಲ್ತಲೆವಟ್ಟರ್ದಿಂದ್ರಿಯಂಗಳ್ಳೆದಾಗಿರ್ದುಂ ಸಲೆ ಶತಸಹಸ್ರ ಸಂಖ್ಯೆಯ ನಲೆಯದೆ ಮಾಣ್ದಪುವೆ ಮಾಯ್ದು ಸಿರಿಯುಳ್ಳವರಂ (ಕಾದಂಪೂ. ೫೫೪) ; ಚಲಮಂ ಪಿಡಿದೇಂ ಬಿಡುವೆನೆ ಸಲೆ ನುಡಿವೆಂ ನುಡಿದ ನುಡಿಯನೆಂದಾಗ್ರಹದಿಂ ತಲೆವಟ್ಟು ನುಡಿವ ನುಡಿಯಂ ತೊಲಗಿ ಕೈಕೊಂಡ ಮಿಥ್ಯದಭಿಮಾನತೆಯಂ (ಪಸಾರ. ೯೯೭). **ತಲೆಮಡು :** ೧. "ತಲೆಮಡು (ತಲೆ + ಮಡು)ಶಿರಸ್ಸಂಧಾನೇ (ತಲೆವಡು)" (ಶಮಧಾ) ; ಅಂತೆರಡುಂ ಪಡೆಯ ನಾಯಕರೊರ್ವರೊರ್ವರೊಳ್ ತಲೆಮಟ್ಟು ಕಾದುವಾಗಳ್ (ಪಂಪಭಾ. ೧೧–೧೧೪ ವ); ತಲೆಮಟ್ಟು ಪಾಯ್ದು ವೀರ್ಯಾವಲೇಪ ದಿಂದಿಱಿದು ಬಿಟ್ದುಮೆಟ್ದು (ಕಾವ್ಯಾವ. ೪೪೭): ತೆಗೆತೆಗೆದು ತಲೆಮಟ್ಟು ಕಱೆದರು ಬಿಗಿದ ಬಿಲುಗಳಲತಿರಥರು . . . ಹಯವ ತಱಿದರು ಸಾರಥಿಯ ಕೆಡಹಿ (ಕುವ್ಯಾಭೀ. ೮-೯೭) ; ದಿಟ್ಟೆ ಮುಷ್ಟಿಯು ಸರಿಸದಲಿ ತಲೆಮಟ್ಟು ಕವಿದರು ಭೀಮ ಫಲುಗುಣರಿಟ್ಟ ತೊಡರಿನೊಳಾರು ಸಿಲುಕರು ದಿವಿಜದನುಜರಲಿ (ಕುವ್ಯಾದ್ರೋ. ೧೮–೨೮). ೨. ತಲೆಬಾಚು ; ತಲೆಯೊಡ್ಡು ; ತಲೆಕೊಡು ; ಈಡಾಗು ; ಗುರಿಯಾಗು : ರಾಜ್ಯ ಸಿರಿ ತೊಲಗಿದಡೆ ಪೂರ್ವಗುಣವಳಿವುದೇ ಮುನ್ನ ಭವಿನಿಳಯದೊಳು ತಲೆಮಟ್ಟು ದುಡಿದ ಗಾವದಿಯ್ಕೆಸೆ ಭೂಪಾಲನಲ್ಲೆಂದನು (ಹಜಕಾ. ೧೧–೩೩) ; ಪಾವನೆಯೆಂದೇ ಒಪ್ಪುಗೊಂಡೆನದಱಿನೀ ವಿಲಗವೊಂದಕ್ಕೆ ತಲೆಮಟ್ಟೆಂ (ರಾಮಾಶ್ವ. ೨೪–೨೮). ೩. ಸೇರು; ಕೂಡಿಕೊಳ್ಳು: ಸಲೆ ನಮೆವಾವಿನ ಮೆಯ್ಯೊಳ್ತ ಲೆಮಟ್ಟಂ[ಪಾಠಾಂ. ಮುಟ್ಟಂ]ತೆಂತು ನಿಂದರಾ ದೇವರ್ಕಳ್ (ಸಪುಪ. ೯–೬೩). 'ತಲೆವೊತ್ತು' ಪರಾ. [ ತಲೆ₁ + ಮಡು₁ ]

**ತಲೆವಣ** (ನಾ). ಒಂದೊಂದು ತಲೆಗೆ ಇಂತಿಷ್ಟು ಎಂದು ವಿಧಿಸುವ ಹಣ,–ಸುಂಕ ; ತಲೆದೆರಿಗೆ : ಎಪ್ಪತ್ತೆಕ್ಕಂ ತಲೆವಣ ತಂಮ ವಳಿತದ ಅರಸಿಯ ಕೆಱೆಯ ಸ್ವಯಂಭು ಕಲಿದೇವರ ವರ ಸನದೊಳು ನಿಲ್ಸಿ (ಎಕ. XI, ದಾವಣ. ೮೭–೧೮; 1264); ರಣಮಾರ್ಗದಿ ನಿಖಿಳಾಯುಧವೇಱಿನ ಬಣಗುಗಳ್ ಬಂದು ತನ್ನೊಡನೆ ಸೆಣಸಲು ಕೂರ್ಗೋಲಗಾಜಿ ಸುಂಕಕೆ ತಲೆವಣಗೊಂಡು ಬಿಟ್ಟರೆಲ್ಲರನು (ಮೋಹತ. ೩೫–೧೭). [ ತಲೆ₁ + ಪಣ₃ ]

**ತಲೆವಣಿ,** ತಲೆಮಣಿ (ನಾ). ೧. ತಲೆಯಲ್ಲಿರುವ ಮಣಿ: ತಲೆಯಲ್ಲಿರುವ ರತ್ನ : ತಲೆವಣಿಯ ಫಣಿಗಳಂ ಸುಲಿವೊಲದಡಗಂ ಪೊತ್ತ ಬೇಡರುಂ ಮರಗಳ ಕಟ್ಟಲೆ ತಲೆಮುಟ್ಟಿಡಿದಿರೆ ಮುಂದಲೆಯೊಳ್ ಸೊಡರಿಟ್ಟು ನಡೆವ ತೆಱದಿಂ ನಡೆದರ್ (ಲೀಲಾವ. ೬–೩೦) ; ಗುರುಸುತನ ತಲೆವಣಿ ಕಿತ್ತು ತಂದೀವಂತೆ ಕಟ್ಟಳೆಯಿಟ್ಟು ನಿಯಮಿಸುತ (ತಿಮ್ಮಸ್ತ್ರೀ. ೨–೩೮). ೨. (ಆಲಂ) ಶ್ರೇಷ್ಠ ; ಅಗ್ರೇಸರ : ದಾನಿಗಳ ತಲೆ ವಣಿಯೆ (ಪದ್ಮರಾ. ೭–೪೧) ; ಸತಿಯರ ತಲೆವಣಿ ಸಖಿಯೊಡನಿರ್ದಳು ರತಿ ಸರಸತಿಯ ಠೀವಿಯಲಿ (ಮೋಹತ. ೨೭–೫): ಚದುರರ ತಲೆವಣಿ ತದ್ಭವ ಮೋಕ್ಷ ಸಂಪದನ ಬಣ್ಣಿಸಲೆನ್ನ ಹವಣೆ (ಭರಚ. ೧–೨೧) ; ರಾಜೇಂದ್ರು ರಾರಾಜಿಸುತಿರ್ಪ ಸನ್ಮಾರ್ಗದೋಜೆಗೆ ತಲೆವಣಿಯೆನಿಸಿ (ನಾಗಕು. ೨–೯೮). **ತಲೆಮಣಿ:** ೨. 'ಕಣ್ಣು ಕಾಣದಗಾವಿಲ' ಕಬ್ಬಿಗರು ಪವಾಡವೇ ಶರಣತತ್ವದ ತಲೆಮಣಿಯೆಂದು ದಣಿಯದೆ ಬಣ್ಣಿಸಿ ಹುಚ್ಚರಂತೆ ಹಾಡಿರಬಹುದೇ ? (ಮೋಳಿಮಾ. ೯೨, ಪ್ರಸ್ತಾವನೆ) ; ಈ ಯುಗಕ್ಕೆ ಮೊದಲಿಗನಾದ ಕುಮಾರ ವ್ಯಾಸನು ಕನ್ನಡಕ್ಕೆ ತಲೆಮಣಿಯಾದ ಕವಿಗಳಲ್ಲಿ ಒಬ್ಬನು (ಕಸಾಚ. ೨೪೭); ಭಾರತದ ತರುಣರ ತಲೆಮಣಿ . . . ಆದರ್ಶವ್ಯಕ್ತಿ ಸುಭಾಷಚಂದ್ರರೇ ನಮಗೆ ಎದುರಾಳಂತೆ (ಪ್ರಣಸ. ೬೮). [ ತಲೆ₁ + ಮಣಿ₃ ]

**ತಲೆವತ್ತು** (ಕ್ರಿ). ಮುಖಕ್ಕೆ ಮುಖವಿಡು ; ಚುಂಬಿಸು (?) : ತಲೆಗರೆಯ ದಣ್ಮ ಸತ್ತರ ತಲೆಗಳನಟ್ಟೆಯೊಳವರ್ಚಿಕೊಂಡುಯ್ವೆಡೆಯೊಳ್ ತಲೆತಡ ವರಲಮರಿಯರೇಂ ತಲೆಯಂ ತಲೆವಿಡಿದು ಬಿಡದೆ ತಲೆವತ್ತಿದರೋ (ಪಂರಾಮಾ. ೧೩–೫೭). [ ತಲೆ₁ + ಪತ್ತು₁ ]

**ತಲೆವರಿಗೆ,** ತಲೆಹರಿಗೆ (ನಾ). (ಯುದ್ಧದಲ್ಲಿ) ತಲೆಯನ್ನು ರಕ್ಷಿಸುವ ಫಲಕ; ಗುರಾಣಿ: ಕಲ್ಯಾಣವಱಿಯೆ ಕಟಕವಱಿಯೆ ಬೇಂಟೆಯನಾಡುತಿದ್ದೆ . . . ಆರು ಹಿರಿಯರು ಕಾದಿ ಗೆಲಿದು ಗುಹೇಶ್ವರಲಿಂಗದಲ್ಲಿಗೆ ತಲೆವರಿಗೆಯನಿಕ್ಕಿ ಬಂದೆನ್ನ [ಪಾಠಾಂ. ತಲೆವರಿಯನಿಕ್ಕಿ ಬಂದೆನೆನ್ನ, ತಲೆವರಿಯ ಬಂದೆ ಎನ್ನ, ತಲೆವರಿಗೆಯನಿಕ್ಕಿ ಬಂದನೆನ್ನ] ಕೈ ನೋಡಿ ಭೋ (ಅವಚಂ ೧೨೦–೫೪೭) ; ಮನದೊಳಮಾದರಿಸದೆ ತನ್ನನೆಯಿಳಿಕೆಯ್ದಿರ್ಪ ತುದಿಯ ದಿವಮನದಿರ್ಪಲ್ ಮುನಿದು ತಲೆವರಿಗೆಗೊಂಡತನು ನಭಮ ನಡರ್ದಪ್ಪನೆನಿಸಿದಂ ಶಶಲಕ್ಷ್ಮಂ (ವರ್ಧಪು. ೬–೯೯); ಮೆಟ್ಟೆ ಹೆಣನನು ಖಚರ ಬಲಹುರಿಗಟ್ಟಿ ತಲೆವರಿಗೆಯಲಿ ಪಾರ್ಥನ ಕಟ್ಟಳವಿಯಲಿ ಚೂರಿಸಿದ ರುಬ್ಬಣದ ಮೊನೆಗಳಲಿ (ಕುವ್ಯಾಆ. ೨೦–೨೪); ತಲೆವರಿಗೆಯನಿಕ್ಕಿ ಜಯರಾಜ ಕಿತ್ತ ಕೂರಲಗುವೆರಸು ಮುಂದೆ ನೆಗೆದಾ (ಭರಚ. ೩೪–೮೦); ತಲೆವರಿಗೆಯಿಂದೆ ಕೆಲರಗಳ ಸರಿಸದೊಳಾಗ ತಲೆದೋಱಿದರ್ (ಚೆಬಪು. ೪೨–೨೭). **ತಲೆಹರಿಗೆ:** ಮುಸಲ್ಮಾನರು ತಲೆಹರಿಗೆಗಳನ್ನೊಡ್ಡಿಕೊಳ್ಳುತ್ತ, ಅಲಗಿನ ಗಾಯಗಳ ನ್ನೆಣಿಸದೆ ಮೇಲಕ್ಕೇರಿಬಂದು (ಕವೀರ. ೧೨೭). [ ತಲೆ₁ + ಪರಿಗೆ₃ ]

**ತಲೆವಲಗೆ** (ನಾ).=ತಲೆವರಿಗೆ : ಒಲೆದು ಗಜವಿಟ್ಟಣಿಸಿದವು ತಲೆವಲಗೆಯಲಿ ಕಲಿಪಾಯದಳ ಪಡಿತಳಿಸಿತೊಳಹೊಕ್ಕೊಕಿದವು ಬದ್ದರದ ಬಂಡಿಗಳು (ಕುವ್ಯಾದ್ರೋ. ೧೮–೪೪). [ ತಲೆ₁ + ಪಲಗೆ ]

**ತಲೆವಸ್ತ್ರ** (ನಾ). ತಲೆಗೆ ಸುತ್ತಿರುವ ವಸ್ತ್ರ ; ತಲೆದುಡುಗೆ ; ಪಾಗು : ಒಂದು ಹೂಮಾಲೆ, ತಲೆವಸ್ತ್ರ, ಒಂದು ಕುದುರೆ ಮತ್ತು ಒಂದು ಛತ್ರಿಯನ್ನು ಬಹುಮಾನವಾಗಿ . . . ಅವರಿಗಿತ್ತನು (ತುಳುನಾ. ೧೩೪).
[ ತಲೆ₁ + ವಸ್ತ್ರ ]

**ತಲೆವಳಸು,** ತಲೆಬಳಸು (ಕ್ರಿ). ತಲೆಯನ್ನು ಬಳಸು ; ತಲೆಯನ್ನು ಸುತ್ತು,–ಆವರಿಸು: ತಲೆವಳಸಿ ನೆಲೆಗೊಳಿಸಿದ ಮಾಣಿಕ್ಯದ ತಲೆಮಾಲೆಯ ಪರಿಸರದೊಳೆಳಲೆವಿಟ್ಟ ಕನಕದರಳೆಲೆಮಾಲೆಯ (ರಾಜಶೇ. ೬–೧೧ ವ). **ತಲೆಬಳಸು :** ತಲೆಬಳಸಿ ಉಂಡರೂ ಬಾಯಿಗೇ ಹೋಗುವುದು (ಗಾದೆ).
[ ತಲೆ₁ + ಬಳಸು₁ ]

**ತಲೆವಳ್ಳಿ** (ನಾ). ಮುಖ್ಯವಾದ ಹಳ್ಳಿ; ಪ್ರಧಾನವಾದ ಗ್ರಾಮ: ಆ ವಸ್ತು ವಾಹನಂಗಳಂ ದೇಗುಲಂಗಳ್ಗಂ ಪಾರ್ವರ್ಗಮಿತ್ತುಮೆನ್ನ ನಾಡೊಳ್ ತಲೆವಳ್ಳಿಗಳ ನಗರಂಗೆಯ್ದಂ (ಚಿಕವಂ. ೧೨-೧೩); ಸುತ್ತಣ ತಲೆವಳ್ಳಿ ಕಾಲೂರ್ಗಳಿಂದ ಧೂರ್ತ ದುರ್ಜನರೂ ಪಂಜುಗಳ್ಳರೂ ಅವನ ಸಹಾಯಕ್ಕೆ ಬಂದು (ಬಟ್ಟಿಅ. ೧೮೯-೯). [ತಲೆ$_1$ + ಪಳ್ಳಿ$_1$]

**ತಲೆವಱಿ**$_1$ (ಕ್ರಿ). ತಲೆಯ ಕೂದಲನ್ನು ಕೀಳು,-ಹರಿ; ಲೋಚುಮಾಡು: ತಲೆವಱಿದುಟ್ಟುದಿಕ್ಕಿ ಸುರಲೋಕ ಸುಖಂಗಳನುಣ್ಬೆವೆಂಬ ಬತ್ತಲೆಗರ ಮಾತುಗೇಳದಿರು (ಆದಿಪು. ೨-೯); ಪಡಿಯಱ ದೊರಪಯ್ಯನ ಪಿರಿಯರಸಿ ಪಾಂಬಬ್ಬೆ ತಲೆವಱಿದು ಮೂವತ್ತುವರಿಸಂ ತಪಂಗೆಯ್ದು ನೋನ್ತು ಬ್ಬ ಮುತಾಣಮೇಱಿದರ್ (ಎಕ. VI, ಕಡೂರು.೧-೧೫; 971); ತಲೆವಱಿದುಟ್ಟುದಂ ಬಿಸುಟು ಮಿಾಯದೆ ಮೇಕದೆ ದಂತಪಂತಿಯಂ ಸುಲಿಯದೆ . . . ಏಕಭುಕ್ತಮಂ ಸಲಿಸುವ ಘೋರವೀರತಪಮಿಾ ತಪಮಾ ತಪದಿಂದಮುಗ್ಗಳಂ (ಸುಕುಮಾ. ೩-೫೯). [ತಲೆ$_1$ + ಪಱಿ$_1$]

**ತಲೆವಱಿ**$_2$ (ಕ್ರಿ). ಚೆನ್ನಾಗಿ ಅಲಂಕರಿಸು; ಶ್ರೇಷ್ಠವಾದ ಅಲಂಕಾರ ಮಾಡು: ಗೈರಿಕ ರಸಾರ್ದ್ರಮಂ ಸಿಂಧೂರದೆ ತಲೆವಱಿದುದಂ ಕರಂ ಕಂಡಾಂ ಸಂಧ್ಯಾರಾಗದೊಳಱಿಯದೆ ಮದವಾರಣಮಂ ಸೋಂಕಿ ಕೆಲದೊಳೊಯ್ಯನೆ ಪೋದೆಂ (ಕವಿರಾ. ೩-೯೩); ತಲೆವಱಿದೋಜೆಯ ಪಿಡಿಯ ನೇಱಿ ಪೆಂಡವಾಸದೊಳ್ವೆಂಡಿರ್ ಬಳಸಿ ಬರೆ (ಪಂಪಭಾ. ೩-೪೮ ವ); ತಲೆವಱಿದಾನೆ ಸುತ್ತಿ ಪಲವುಂ ಬರೆ ತಳ್ತಿರೆ ಮೇಘಡಂಬರಂ ಲಲನೆಯರಿಕ್ಕೆ ಚಾಮರಮನಿರ್ಕೆಲದಾನೆಯು ಪುಷ್ಪಕಂಗಳೊಳ್ ನೆಲಸಿ ಕುಳಾಚಳಾಕೃತಿಯ ನೇಱಿ ಗಜೇಂದ್ರಮಂ (ಪಂರಾಮಾ. ೫-೧೦೮). [ತಲೆ$_1$ + ಪಱಿ$_2$]

**ತಲೆವಱಿ**$_3$ (ನಾ). ತಲೆಯ ಅಲಂಕಾರ; ತಲೆಯ ಅಲಂಕರಣ: ಕೆದಱ ವೀಲಿಯ ಚಲ್ಲಣದ ಸೊಕ್ಕಿದೆಕ್ಕಲನ ತಿದಿಯೆಕ್ಕವಡದ ಗರುಡನ ಗಱಿಯ ತಲೆವಱಿಯ[ಪಾಠಾಂ. ವರೆಯ, ವುರದ]ಮದಗಜದ ಮುತ್ತಿನೇಕಾವಳಿಯ . . . ಕೆಲದ ಚಮರದ ಗೊಂಡೆಯದಲೆಸೆವ ಜವ್ವನದ ಶಬರಿಯರು (ಸೋಮಚಿ. ೩-೧೪). [ತಲೆ$_1$ + ಪಱಿ$_4$]

**ತಲೆವಾಗಿಲ್,** ತಲೆಬಾಗಿಲು, ತಲೆವಾಗಿಲು (ನಾ). ಮುಂಬಾಗಿಲು; ಹೊರಬಾಗಿಲು; ಪ್ರವೇಶದ್ವಾರ; ಮುಖ್ಯದ್ವಾರ: ಶೃಂಖಲಾ ಬಂಧನೆಯಂ ಮಾಡಿ ತಲೆವಾಗಿಲ ಕೆಲದ ಪುಲುಮನೆಯೊಳಿರಿಸಿ (ವರ್ಧಪು. ೧೫-೫೪ ವ). **ತಲೆಬಾಗಿಲು:** ಮೋಹಾರ್ಣವಮಗ್ನೆಯಾಗಿ ತಲೆಬಾಗಿಲ ಬಳಿ ನಿಂತುಕೊಂಡು (ಶುಕಸ. ೧೭); ಜಗತ್ತಿನ ತಲೆಬಾಗಿಲಿಗೆ ಬೇಗನೆ ಪ್ರಯಾಣಮಾಡೋಣ (ಜ್ಯೋತಿರ್ವಿ. ೮೪); ರಂಗನು ಸೋಮನಾಥನನ್ನು ತಲೆ ಬಾಗಿಲವರೆಗೆ ಕಳಿಸಿ ಬಂದನು (ರಂಗರೋ. ೧೬೩); ತಲೆಬಾಗಿಲಲ್ಲೇ ತಾಯಿ ನೋಡಿದ ಮೇಲೆ ಒಳಗೇನು ನೋಡುವೆ ಮಗಳ ಚಂದ (ಹುಟ್ಟಿಹ. ೧೦೪). **ತಲೆವಾಗಿಲು:** ಕೆಲವೆಡೆ ಕೇರಿಗಳೊಳಗೆಡೆಯಾಡುವ ಸಲೆ ಸೊಬಗರನೀಕ್ಷಿಸೆ ಯಾತುರದಿಂ ತಲೆವಾಗಿಲನೆಯ್ದುವ ನೃಪಸುತೆಯರೆಸೆದರಾವುದಯದೊಳು (ಜಯುಕಾ. ೧೨-೧೭); ಹೂವಿನ ಹೊತ್ತಿನೊಳ್ತಲೆವಾಗಿಲೊಳಿಹ ಭಾವಕಿಯರ ನಿಟ್ಟಿಸುತ . . . ಗೃಹಕ್ಕೆತಂದ (ಕಂಸವಿ. ೧೦-೨೩); ಜಾರೆಯರು ತಲೆ ವಾಗಿಲನಿಕ್ಕಿ ನೋಡುವ ಚರಿಯಗಳ ಕಂಡು (ವೆಂಕಾರಾ. ೫-೭-೧); ತಲೆ ವಾಗಿಲಲ್ಲಿ ಯಾರೋ ಕೂಗಿದ ಹಾಗಾಗಲು . . . ಬಾಗಿಲನ್ನು ತೆರೆದನು (ಪಿಶಾಪ. ೪೫); ಮೆರವಣಿಗೆಯು ಸಂಭ್ರಮದಿಂದ ಅರಮನೆಯ ತಲೆವಾಗಿಲನ್ನು ಮುಟ್ಟಿತು (ಮಣಿಸ. ೫೭).

[ತಲೆ$_1$ + ಬಾಗಿಲ್. / ತಮಿ. ತಲೈವಾಯಿಲ್; ತೆಲು. ತಲವಾಕಿಲಿ]

**ತಲೆವಾಗಿಲು** 'ತಲೆವಾಗಿಲ್' ನೋ.

**ತಲೆವಾಗಿಸು,** ತಲೆಬಾಗಿಸು (ಕ್ರಿ). ೧. ತಲೆಯನ್ನು ಬಗ್ಗಿಸು,-ಕೆಳಕ್ಕೆ ಬಾಗಿಸು: ನೀನಂಜವೇಡೆನಲಾಗ ಬೆಬ್ಬನೆ ಬೆಱವುತಂ ತಲೆವಾಗಿಸುತ ನಿಲುಕುತ್ತ (ಬಸಪು. ೩೮-೧೭). ೨. (ನಾಚಿಕೆ, ಸಂಕೋಚ, ಅವಮಾನ ಮೊದಲಾದುವುಗಳಿಂದ) ತಲೆಯನ್ನು ಬಗ್ಗಿಸು,-ತಗ್ಗಿಸು: ಕುಡುವಳ್ ಕಿವಿಯಂ ಮದುಕ್ತಿಗವಲೋಕಿಸೆ ನಾನೊಡನೆ ತಲೆವಾಗಿಪಳ್ (ಶಾಕುಂತ. ೧೭-೩೧). ೩. (ನಾಚಿಕೆ, ಸಂಕೋಚಗಳಿಂದ) ತಲೆಯನ್ನು ಬಗ್ಗಿಸುವಂತೆ ಮಾಡು: ದೃಷ್ಟಿಪ್ರತ್ಯಯಂಗಳನಾಗವೋಕ್ತದಿ ತೋಱುವಂ ತಲೆವಾಗಿಸು ವೆನಿನಿಬರನು (ಬಸಪು. ೫೦-೫೨); ನುಣ್ದೊಡೆ ಬಾಳೆಯೋಳಿಯಂ ತಲೆವಾಗಿಸಲ್ ಸೊಗಸನೇವಣ್ಣಿಪೆಂ (ಪದ್ಮರಾ. ೩-೨೭); ನಾಗೇಂದ್ರನಂ ಬಿಡದೆ ತಲೆವಾಗಿ ಸಿತ್ತಮುರನಾಗೇಂದ್ರನಂ ಬುದ್ಧಿದೋಱಿಸಿತ್ತು ಪುರಮರ್ದನಾಗೇಂದ್ರನಂ ನಿಂದು ಬೆಱಗಾಗಿಸಿತ್ತಮಲ ಧರ್ಮಜನ ಕೀರ್ತಿ (ಜೈಮಿಭಾ. ೨-೧೨). ೪. ಸೋತು ತಲೆಬಾಗುವಂತೆ ಮಾಡು; ಪರಾಜಯಗೊಳಿಸು: ಹೋಗಬಿಡೆ ನಿನ್ನನಿಲಜನ ತಲೆವಾಗಿಸುವೆನಿನ್ನೆನುತ ಶಕಟದ ಬಾಗಿಲಲಿ ಗಿರಿಯಂತೆ ನಿಂದನು ಸಮರಕನುವಾಗಿ (ಕುಮ್ಮಾದ್ರೋ. ೧೩-೧೫). **ತಲೆಬಾಗಿಸು:** ೨. ಈ ಸ್ತ್ರೀಯರೂ ಲಜ್ಜೆಯಿಂದ ತಲೆಬಾಗಿಸುವಂತೆ ನೀನು ಕಲಿತಿರುವ ವಿಧೇಯತೆಯನ್ನು ಇವರಿಗೂ ಕಲಿಸು (ಕವಿಕ. ೬೫). ೫. ಸೋಲು; ಮಣಿ: ಚಳಿ ಮಳೆ ಬಿಸಿಲು ಯಾವುದಕ್ಕೂ ಆತ ತಲೆಬಾಗಿಸುತ್ತಿರಲಿಲ್ಲ (ಅಶ್ವಮು. ೨).

[ತಲೆವಾಗು$_1$ + - ಇಸು$_3$]

**ತಲೆವಾಗು**$_1$, ತಲೆಬಾಗು (ಕ್ರಿ). ೧. ತಲೆಯನ್ನು ಬಾಗಿಸು,-ತಗ್ಗಿಸು: ಪವನಂ ಪರ್ಚಿದ ಮಹಾವೃಕ್ಷಂಗಳಂ ಕೀೞ್ವುದಲ್ಲದೆ ಮೃದುವಪ್ಪ ತೃಣಂಗಳಂ ಕೀೞದು ಅದೆಂತೆನೆ ನೀಚಂಗಳಾಗಿ ತಲೆವಾಗಿರ್ಪ ಕಾರಣಂ(ಪಂಚತಂ. ೪೭-೧೧); ಕೊಂಬಾಸೆಯಿಲ್ಲದೆ ನೆಲಕೆ ಹೊಱೆಯಾಗದೆ ಬದುಕಿ ತಲೆವಾಗಿ ಬೆಳೆದೊಂದೆಡೆ ಯೊಳಿರ್ದ (ಹಡಕಾ. ೩-೩೧); ತಲೆವಾಗಿ ಕಣ್ಣೈದಿಲಲರಿಕೆಯಿಂಪು ಕಳೆಯೆ ನಾಸಾನಿಲನ ಕಂಪು ಸುಳಿಯೆ (ಚಬಪು. ೧-೨). ೨. (ನಾಚಿಕೆ, ಸಂಕೋಚ, ದುಃಖ ಮೊದಲಾದ ಭಾವನೆಗಳಿಂದ) ತಲೆಯನ್ನು ತಗ್ಗಿಸು,-ಕೆಳಮುಖಮಾಡು: ಲಜ್ಜಾಮಹಾಭಾರದಿಂ ತಲೆವಾಗಿತ್ತೆನೆ ಪಕ್ವಶಾಳಿ ಕಣಿಶಾಳೀನಮ್ರಮೊಪ್ಪಿರ್ದುರ್ದೇಂ ಗೆಲೆವಂದತ್ತೊ ಸುವರ್ಣವರ್ಣದಿನಿಳಾ ಶ್ರೀಯುಟ್ಟ ಪೊಂಬಟ್ಟೆಪೋಲ್ (ಜಗವಿ. ೨-೫); ಉಸುರಲ್ಕೆ ನಾಣ್ಚೆ ತಲೆವಾಗಿ . . . ಈಕ್ಷಿಸಿದಳ್ ಕಟಾಕ್ಷದಿಂ (ಕುಸುಮಾ. ೩-೫೦); ಪಾರ್ವತಿ ನಿಜೇಶನನೆಯ್ದಿ ವಂದಿಸಿ ಮತಿಯೊಳತಿ ಚಿಂತಾಕುಳದಿ ತಲೆವಾ[ಪಾಠಾಂ.ಬಾ]ಗಿ ನಾಚಿರಲು (ಬಸಪು. ೭-೪೫); ಮೆಟ್ಟಿ ನೋಡಿದನಹಿತ ರಾಯರ ಥಟ್ಟುಗಳ ತೆರಳಿಕೆಯನುತ್ಸಹಗೆಟ್ಟು ಫಲುಗುಣ ಸೆಡೆದು ಮನದಲಿ ನೊಂದು ತಲೆವಾಗಿ (ಕುಮ್ಮಾಭೀ. ೩-೨೭); ಅರಸನನುತಾಪದಿಂ ತಲೆವಾಗಿ ಮಾತಾಡದಿರುತಿರ್ದನನಿಲ ಸಂಚಾರವೊಂದಿನಿತಿಲ್ಲದುರಿವ ಕಡುವೇಸಗೆಯ ಬಿಸಿಲಿಂದೆ ಬಸವಳಿದ ಕೋಮಲ ರಸಾಲದಂತೆ (ಜೈಮಿಭಾ. ೨-೧೪); ಒಲೆಯುವವಳು ಹಸ್ತಿನಿಯು ಮಲೆಯುವವಳು ಚಿತ್ತಿನಿಯು ತಲೆವಾಗಿ ನಡೆವಳು ಶಂಖಿನಿಯು ಪದ್ಮಿನಿಯು ಸುಲಭವಾಗಿಹಳು (ಸರ್ವಜ್ಞ. ೧೬೩೪). ೩. (ಅಲಂ) ನಮಸ್ಕರಿಸು; ಶರಣಾಗು; ವಿನಯವನ್ನು ತೋರು: ತಲೆವಾಗುತ್ತಿರ್ದುವೆಂಬಂತೆಱಪ ಲತೆಗಳಿಂದರ್ಚಿಸುತ್ತಿರ್ದುವೆಂಬಂತಲರ್ಗಳ್ ತಳ್ತಲ್ಲುಗುತ್ತಿರ್ದಖಿಳ ತರುನಿಕಾಯಂಗಳಿಂ (ಕಾದಂಪೂ. ೨೨೨); ಆಡಿಂಗೆ ಮೆಲ್ಲನೆಱಗುಗೊ ಕೋಡುಳ್ಳಾವಿಂಗೆ ಮತ್ತೆ ತಲೆವಾಗುಗೆ (ಸಮುಪ. ೯-೭೨); ಆಚಾರಲಿಂಗಪ್ರಾಣಿಯಾದೊಡೆ ಭವಿಗಳಿಗೆ ತಲೆವಾಗದಿರಬೇಕು (ಆದಪ. ೭-೧೨); ನಿಜಜನನಿಯಾದ ಭೂದೇವಿಯಂ ಮನಂಬುಗೆ ಪೂಜೆಗೆಯ್ದು ತಲೆವಾಗಿ ನಿಂದನುವೊಯೆನಿಸಿ ಬಾಳೆಗಳ್ ಮೆಱೆದುವು (ಪದ್ಮರಾ. ೮-೩೫); ನಗುತ ಸಾತ್ವಕಿಯೆಂದನವಧರಿಸೈ ಗುರೋರಪಿಯೆಂದು ನೀ ಗುರುವೆಂದು ತಲೆವಾಗಿದನು ವಿನಯದಲಿ (ಕುಮ್ಮಾದ್ರೋ. ೧೦-೭); ಕೈಮುಗಿದಾ ಹರೀಶ್ವರಸೂನು ವರವೈದೇಹಿಯರಸನ ಸರಸಿಜಾಂಘ್ರಿದ್ವಯಕೆ ತಲೆವಾಗಿ (ತೊರರಾ. ೬-೧೦-೨೩). ೪. (ಅಲಂ) ಮೆಚ್ಚುಗೆ ಸೂಚಿಸು; ಒಪ್ಪಿಗೆಯನು ಸೂಚಿಸು; ಸಮ್ಮತಿಸು:

ತಲೆವಾಗದ ಚಾಗಿಗಳಿಲ್ಲ ತಳ್ತು ಕುಕ್ಕುರಿಸದ ವೀರರಿಲ್ಲ ನತರಾಗದ ಬಲ್ಲಿದರಿಲ್ಲ ಕೀರ್ತಿಯಿಂ ತುಱುಗದ ದಿಕ್ಪ್ರತಾನಮಣಮಿಲ್ಲೆನೆ ಬಾಳ್ವ ನಗಾಧಿನಾಯಕಂ (ಗಿರಿಕ. ೨-೧೦೫); ಮಹಾ ಶೋಭಾಯಮಾನವಾದ . . . ನಕ್ಷತ್ರದಂಡಕ್ಕೆ ಮೆಚ್ಚಿ ತಲೆವಾಗಲು ಇನ್ನೂ ನಾವು ಸಾವಕಾಶ ಮಾಡಲಾಗದು (ಜ್ಯೋತಿರ್ವಿ. ೪೪); ದಂಡಿಯ ಆ ಬೋಧನೆಗೆ ನಾವೂ ತಲೆವಾಗುತ್ತೇವೆ (ನಾಡೋಜ. ೩೬೫). ೫. (ಅಲಂ) ವಿಧೇಯವಾಗು; ವಿನಯವನ್ನು ತೋರಿಸು; ಸೋಲೊಪ್ಪಿಕೊಳ್ಳು; ವಶವಾಗು: ನಿನಗಂ ದುಂ ತಲೆವಾಗದ ನಿನಗಳ್ಕದ ನಿನ್ನ ವೇಳೆಗಾಯದ ಪಿರಿದುಂ ನಿನಗೆ ಬೆಸಕೆಯ್ದು ಬಾಟದ ನಿನಗೋಡದ ಪಗೆವರೆಂಬರಿಲ್ಲಿಂದುವರಂ (ಕಬ್ಬಿಕಾ. ೧೪೪); ವಾದದಲಿ ತಲೆವಾಗಿ ಭಂಗಿತರಾದ ಜೈನರು ಮತ್ತೆಯುಂ ಸಂವಾದಿಸಿದರು (ಬಸವಪು. ೫೦-೭೭); ಫಲಸಂಪದಂ ತಮಗೊದವಿದಲ್ಲಿ ಸಜ್ಜನರ್ ತಲೆವಾಗಿರಲ್ವೇಳ್ಕುಮಿಂತೆಂದು ತೋರ್ಪನುವೊ ತಲೆವಾಗಿ ನಡೆವವರ್ಗೆ ತಲೆವಾಗುವರ್ ಸರ್ವರೆಂದಭಿನಯಿಸುವ ಬಗೆಯೋ . . . ಎನಲ್ ಕಳಮಾಳಿಯೆಸೆದುವಲ್ಲಲ್ಲಿ ಚೆಲ್ಲಂಗೆಯ್ವುತುಂ ಕಾಯ್ದು ವಲ್ಲವಿಯರಿಂ (ಪದ್ಮರಾ. ೮-೧೪); ಅನ್ಯಾಯ, ಅನೀತಿಯೆಂದು ಮನವರಿಕೆಯಾದ ಮಾತಿಗೆ ತಲೆವಾಗದೆ (ಯಕ್ಷಪ್ರ. ೧೮೩).

**ತಲೆಬಾಗು:** ೩. ಅವರಿಗೆ ತಲೆಬಾಗಿ ಕೈಮುಗಿಯುತ್ತೇನೆ (ಕಾಲೂರ. ೫ ನಾಲ್ಕುಮಾತು). ೫. ಧರ್ಮಕ್ಕೆ ಸಕಲರೂ ತಲೆಬಾಗುತ್ತಿದ್ದ ಕಾಲವದು (ಶ್ರೀರಾಯ. ೮); ಸಮಾಜದ ಸಂಪ್ರದಾಯಗಳಿಗೂ ನೈತಿಕ ಆಚರಣೆಗಳಿಗೂ ಅವರು ತಲೆಬಾಗಬೇಕಾಗುತ್ತದೆ (ಶಿಕ್ಷದ. ೬೨); ವೇದಗಳನ್ನು ಸ್ವತಃ ಪ್ರಮಾಣವಾಗಿ ಸ್ವೀಕರಿಸಿರುವ ವಿದ್ವಾಂಸರೆಲ್ಲರೂ ಉಪನಿಷತ್ತುಗಳಿಗೆ ತಲೆಬಾಗಿದ್ದಾರೆ (ಭಾರದ. ೪೭); ಯಾರ ಒತ್ತಾಯಕ್ಕೂ ತಲೆಬಾಗಬೇಡ (ಹಂಗೀತ. ೮೫). [ತಲೆ$_1$ + ಬಾಗು$_1$]

**ತಲೆವಾಗು$_2$** (ನಾ). ತಲೆಯನ್ನು ಬಾಗಿಸುವಿಕೆ; ಕೊರಳು ಕೊಂಕಿಸುವಿಕೆ: ಬಾಲೆಯೊರ್ವಳ್ . . . ನಸುನಗೆಯುರೆನೋಟದ ತಲೆವಾಗಿನ ವಿಲಾಸದಿಂ . . . ಬರುತುಮಿರ್ದಳ್ (ರಾಮಾಶ್ವ. ೪೮-೨೮). [ತಲೆ$_1$ + ಬಾಗು$_3$]

**ತಲೆವಾಗುಹ** (ನಾ). ತಲೆಯನ್ನು ಬಾಗಿಸುವಿಕೆ, – ತಗ್ಗಿಸುವಿಕೆ: "ಅವಾಙ್ಮುಖಮುಪಾಚೀನಮೆನೆ ತಲೆವಾಗುಹಂ" (ಮಂಗರಾ. ೧೩೪-೩೩). [ತಲೆವಾಗು$_1$ + – ಹ$_2$]

**ತಲೆವಾಯ್** (ಕ್ರಿ). ತಲೆಯಿಂದ ಹಾಯು,–ತಾಟಿಸು: ಪಣೆಪಣೆಗೆ ಕೊಂಬು ಕೊಂಬಿಗೆ ಪೆಣೆದು ತಲೆವಾಯ್ದು ಗೂಳಿಗೂಳಿಗೆ ಹಣಾಹಣೆಯಾಗುವೊಲಂತೆ ಹಿಂಡುಗೊಂಡರೆಬಂಡೆಯೆದ್ದಿದ್ದುವಲ್ಲಲ್ಲಿ (ಶ್ರೀರಾಮಾ. ೩೭೪-೬೫). [ತಲೆ$_1$ + ಪಾಯ್$_1$]

**ತಲೆವಾರು** (ನಾ). ತಲೆಯ ಹಗ್ಗ,–ಪಾಶ: ತನ್ನ ಹುಸಿ ಮಾಡಿ ಇನ್ನೊಂದ ದಿಟಮಾಡುವ ಅಣ್ಣಂಗೆ ನಂಬುಗೆ ಇನ್ನಾವುದೋ ತನ್ನೊಳಗಣ ಘನವ ತಾ ತಿಳಿಯಲಱಿಯದೆ ಪರಬ್ರಹ್ಮಕ್ಕೆ ತಲೆವಾರನಿಕ್ಕಿ ಸೆಳೆದಿಹೆನೆಂಬಣ್ಣ ಗಾವಿಲನೆಂದಾತನಂಬಿಗಚೌಡಯ್ಯ (ವಚಸಂ. ೮೫-೨೭); ಶ್ರುತಿಹೇಳಿದತ್ತ ಹರಿಹರಿದು ಬಳಲದಿರೋ ಶೂನ್ಯಕ್ಕೆ ತಲೆವಾರನಿಕ್ಕದಿರೋ ವಸ್ತುಹೃದಯದಲುಂಟೆಂದು ನೆನೆಯದಿರೋ (ಅವಚಂ. ೨೦೭-೯೨೮); "ತಲೆಯನ್ನು ಬಂಧಿಸುವುದು; ಕಟ್ಟುವುದು" (ಶೂನ್ಯಸಂ. ಕೋಶ). [ತಲೆ$_1$ + ಬಾರು$_1$ (<ಬಾರ್$_4$)]

**ತಲೆವಾಶಿ** 'ತಲವಾಸಿ' ನೋ.

**ತಲೆವಿಕ್ಕು** (ಕ್ರಿ). ೧. ಕೂದಲನ್ನು ಹಿಕ್ಕು; ಬಾಚು; ತಲೆಬಾಚು; ಉಗುರ್ಗಳ ಕಾಂತಿಯಿಂದಳಕವಲ್ಲಿಗೆ ನೀರ್ದಳಿವಂತೆ ಮೆಲ್ಲ ಮೆಲ್ಲಗೆ ತಲೆವಿಕ್ಕಿ (ಶಂಧಾಮಾ. ೫-೪೩); ಆಳೆನೆಯ ಕೇಶದಲ್ಲಿಯಲರುಂ ತಳಿರುಂ ಪೊಳೆವಂದದಿಂದೆ ಕೋಮಳ ನಖಕಾಂತಿಯುಂ ಮೃದುತಳ ದ್ಯುತಿಯುಂ ನಿಮಿರ್ವನ್ನವೊಯ್ಯನಾಗಳೆ ತಲೆವಿಕ್ಕಿ (ಚಂದ್ರಪು. ೭-೬೪); ಅರಿನೃಪರಿಂತು ತಮ್ಮ ತಲೆಯಂ ತಲೆವಿಕ್ಕರೆ (ಅನಂಪು. ೩-೧೦೦). [ತಲೆ$_1$ + ಪಿಕ್ಕು]

**ತಲೆವಿಡಿ$_1$**, ತಲೆಹಿಡಿ (ಕ್ರಿ). ೧. ತಲೆಯ ಬಳಿ ಇರು: ನಿನ್ನಯ ಸುಚಿಗುರುಳಿಲ್ಲವಿವೆನ್ನಯ ಮಱಿಯೆಂದು ಬಂದು ತಲೆವಿಡಿದವೊಲಾ ಚೆನ್ನೆಯ ತಲೆವಿಡಿದಿರ್ದುದು ತಾಂ ನಱುಗಂಪಿಂಗೆ ತುಂಬಿದುಱುದುಂಬಿ ಕರಂ (ಚಂದ್ರಪು. ೭-೧೦೨). ೨. ತಲೆಯನ್ನು ಹಿಡಿದುಕೊಳ್ಳು: ಮಱಿಗೊಂಡ ಭಕ್ತಿಯ ನೊಡನೆ ತಲೆವಿಡಿದೆತ್ತುಮಂದ ತಲೆಯನೆತ್ತುವನು (ಬಸವಪು. ೩-೩೮); ತಲೆವಿಡಿದೆತ್ತಿ ತಕ್ಕೈಸಿ ತನ್ನಯ ತೊಡೆಯೊಳಗೆ ಕುಳ್ಳಿರಿಸಿಕೊಂಡು (ಕಂನವಿ. ೯-೦೬೨). ೩. (ಬಲಾತ್ಕಾರದಿಂದ) ಹಿಡಿದುಕೊಳ್ಳು; ಬಂಧಿಸಂ; ಸೆರೆಹಿಡಿ: ಕೃಷ್ಣೆಯ ಮುಂದಲೆಯಂ ಪಿಡಿದೆಟೆವಲ್ಲಿಯೆ ತಲೆವಿಡಿದರ್ ನಮ್ಮ ಬೀರಮಂ ಕೌರವರುಂ (ಪಂಪಭಾ. ೭-೫೭); ಕಡೆಗಾಲದ ಸಿಡಿಲಂತಿರೆ ಕಿಡಿಯಂ ಕಾಱುತ್ತೆ ಕೀಱಿ ಬರೆ ಬಂಚಿಸಿ ತನ್ನೆಡಗಯ್ಯಿಂ ಶಕ್ತಿ ಬಲಂಗಿಡೆ ಪಿಡಿದಿಟ್ಟವನ ಶಕ್ತಿಯಂ ತಲೆವಿಡಿದಂ (ಪಂರಾಮಾ. ೮-೪೨); ಕಳ್ಳನ ಕೈಯಲ್ಲಿ ಒಂದು ಒಳ್ಳೆಯ ರತ್ನವ ಕಂಡಡೆ ಎಲ್ಲರೂ ಬಂದು ತಲೆವಿಡಿವರಯ್ಯ (ಸರ್ವವ. ೪೯-೨೬೩); ಅರಿನೃಪನ ತಲೆವಿಡಿದರಾ ದ್ವೈಪಾಯನ ಸರೋವರದ ಮಧ್ಯದಲಿ (ಕುಮ್ಮಾಗ. ೪-೫೪). ೪. ವಿಚಾರು; ಧಿಕ್ಕರಿಸು; ಸೋಲಿಸು: ಕಟ್ಟಲೆಯಂ ತಲೆವಿಡಿದು ಕಾಳಮನಾಳಿಗೊಳ್ವ ತಮಾಳ ಲತೆಯ ಬಾಳ್ಗೊಂಪದ ಬಳಸು (ಅನಂಪು. ೭-೧೦ ವ). ೫. ಅನುಸರಿಸು: ಕಾಣದುದ ಕಂಡೆ ಕೇಳದುದ ಕೇಳಿದೆ ಮುಟ್ಟಬಾರದುದ ಮುಟ್ಟಿದೆ ಅಸಾಧ್ಯವ ಸಾಧಿಸಿದೆ ತಲೆಗೆಟ್ಟುದ ತಲೆವಿಡಿದೆ ನೆಲೆಗೆಟ್ಟುದ ನಿರ್ಧರಿಸಿದೆ (ಅವಚಂ. ೨೦೯-೯೪೨). ೬. (ಅಲಂ) ವ್ಯಭಿಚಾರಕ್ಕೆ ಪ್ರೇರಿಸು; ಕೆಟ್ಟನಡತೆಗೆ ಎಳೆ. 'ತಲೆವಿಡಿಗಲಿ' ಪರಾ. **ತಲೆಹಿಡಿ:** ೬. 'ತಲೆಹಿಡಿಕ' ಪರಾ. ೭. ತಲೆಯನ್ನು ಕವಿ,–ಆವರಿಸು; ಪರಿಣಾಮ ಬೀರು: ವಿಚಾರ ಚೆನ್ನಾಗಿ ತಲೆಹಿಡಿದಿದೆ (ರೂಢಿ). [ತಲೆ$_1$ + ಪಿಡಿ$_1$]

**ತಲೆವಿಡಿ$_2$** (ನಾ). ೧. ಕೂದಲನ್ನು ಹಿಡಿದು ಕಟ್ಟಿದ ಗಂಟು; ಮುಡಿಗಂಟು. ೨. ಬಂಧನ; ಸೆರೆ. 'ತಲೆವಿಡಿವಿಡಿ' ಪರಾ. [<ತಲೆವಿಡಿ$_1$]

**ತಲೆವಿಡಿ$_3$** (ನಾ). ಒಂದು ಬಗೆಯ ಸುಂಕ,–ತೆರಿಗೆ (?): ಕ್ರಿಯೆಂಬ ಬೇಹಾರ ಮಾಱುವಾಗ ಆಚಾರವೆಂಬ ಸೆಟ್ಟಿ ಕೊಂಬಲ್ಲಿ ಅಱಿವೆಂಬ ಸುಂಕ ಹುಟ್ಟಿತ್ತು ತಲೆವಿಡಿ ಕಾಳುವಿಡಿ ಬಂದಿತ್ತು (ಸುಂಕಬಂ. ೧೦); ಪ್ರಾಣಲಿಂಗಿ ಶರಣನಯಿಕ್ಕ ಇಂತೀ ತ್ರಿವಿಧವೊಂದೇ ಬೀಜ ತಲೆವಿಡಿಯಿಲ್ಲ (ದಾಸೋಸಂ. ೩೯); ತಾಳಿಡಿದ ಜ್ಞಾನದ ಸೀಮೆಗೆ ತಲೆವಿಡಿ ಕೊರಳುವಿಡಿ ಬಾರದೆ ವ್ರತವೆ ಘಟವಾಗಿ ಸನ್ಮಾರ್ಗವೆ ಆತ್ಮನಾಗಿ (ಏಲೇಶ್ವ. ೧೭೦); ಏನ ಹಿಡಿದಲ್ಲಿಯೂ ತಡೆವಿಡಿಯಿಲ್ಲದೆ ಏನ ಬಿಟ್ಟಲ್ಲಿಯೂ ಕುಳವಿಡಿಯಿಲ್ಲದೆ . . . ಪರಮ ವಿರಕ್ತನಿರವು (ಸರ್ವವ. ೧೩೮-೬೮೩). [?]

**ತಲೆವಿಡಿಗ** (ನಾ). ಕಪಾಲಿ; ಶಿವ (?): ತೆಂಕಲು ಪರಿಹರಪುರದ ಗಡಿಯ ಕಲ್ಲಿನ ಒತ್ತಿನಲು ನಟ್ಟ ವಾಮನ ಮುದ್ರೆಯಕಲ್ಲು ೧ ನಯಿರುತ್ಯದಲು ತಲೆವಿಡಿಗನ ಗುಡಿಯ ತುದಿಯ ನೀರುವರಿಯಲೂ ನಟ್ಟ ವಾಮನ ಮುದ್ರೆಯ ಕಲ್ಲು ೧ (ಎಕ. VIII, ತೀರ್ಥಹ. ೧೩೩-೧೯; 1404). [ತಲೆವಿಡಿ$_1$ + – ಗ$_2$]

**ತಲೆವಿಡಿಗಲಿ** (ನಾ). ವ್ಯಭಿಚಾರಕ್ಕೆ ಪ್ರೇರಿಸುವುದರಲ್ಲಿ ಪ್ರವೀಣನಾದವನು; ಚತುರನಾದ ಕುಂಟಣಿಗ (?): ತಾಱುಂತಟ್ಟುಂ ಪರಿದು ತಾಗಿ ಮಾೂಗೊಡೆಯೆ ಬಾಗಿವಾಗಿ ಪರಿವ ಬೆಗಡುಗಲಿಗಳುಮಂ ತೂಂಕಡಿಂ ತಡದಡಿಸುತ್ತಿರ್ದು ತಡವೆರಿಸಿ ಕಡೆಗೋಲಂ ನೆಗಪಿ ಬತ್ತಲೆ ಪರಿವ ತಲೆವಿಡಿಗಲಿಗಳುಮಂ (ಲೀಲಾವ. ೫-೧೦೪ ವ). [ತಲೆವಿಡಿ$_1$ + ಕಲಿ$_2$]

**ತಲೆವಿಡಿವಿಡಿ** (ಕ್ರಿ). ೧. ಮುಡಿಗೂದಲನ್ನು ಹಿಡಿ. ೨. ಬಂಧಿಸು. ೧, ೨: ತಲೆವಿಡಿವಿಡಿವುದು ರತಿ ಕಲಹದ ಕಾದಲರೊಳ್ ದಂಡಂ ವೃದ್ಧಜನದ ಕರತಳದೊಳಗಲ್ಲದೆ ಮತ್ತಾ ಜನಪದದೊಳಗೊಂದಿನಿಸಿಲ್ಲಂ (ಜಯಕಾ.೧-೩೭). [ತಲೆವಿಡಿ$_2$ + ಪಿಡಿ$_1$]

**ತಲೆವಿಣಿಲು** (ನಾ). ಹೆಣೆದಿರುವ ತಲೆಗೂದಲು : ಬಳಿಸಲಿಸಿತ್ಯನೂರ್ವರಾತನ ಬಳಿಯ ಪಂಚಚಮೂಪಸುತರುಬ್ಬಳಕೆವಾತಿನ ಬಿಗಿದ ಕಾಸೆಯು ಬಲಿದ ತಲೆವಿಣಿಲ (ತೊರರಾ. ೫-೫-೧೩) ; ಬಿಗಿದ ಕಾಸೆಯ ತಲೆವಿಣಿಲ ಮೊನೆದೆಗೆದ ಹೂ ಮೊಗ್ಗೆಗಳ ಹೊದಱಿನ ಹೊಗರ ಹೊಸದೇಸಿಯಲಿ ಯುದ್ಧೋನ್ಮತ್ತನನುವಾದ (ತೊರರಾ. ೬-೨೯-೨೭).

[ ತಲೆ$_1$ + ಪಿಣಿಲು$_1$(<ಪಿಣಿಲ್$_2$) ]

**ತಲೆವಿಲ್,** ತಲೆವಿಲು, ತಲೆವಿಲ್ಲು (ನಾ). ಉತ್ತಮವಾದ ಬಿಲ್ಲು ; ಶ್ರೇಷ್ಠವಾದ ಧನುಸ್ಸು : ಮುದದಿಂ ದಿನನುದಯಂಗೆಯ್ಯದೆಯುಂ ಕಟ್ಟಲೆಯ ನರುಣನಲೆದೊಂ ನಿನ್ನಭ್ಯುದಯದೊಳಾಂತರಿಸೇನೆಯನಿದಿರ್ಚಿ ತಲೆವಿಲ್ಲೆ ನೆರೆದು ತವಿಸುವ ತೆಜದಿಂ (ಶಾಂತಿಪು.೫-೯೦); ಲೋಕವಿಶ್ರುತ ಸೀಮಾಂತವನಂ ನಿಮಿರ್ಚಿದ ಸಮುದ್ರಂ ಯುದ್ಧದೊಳ್ಬಂಧನಸ್ಥಿತನಾದಂ ತಲೆವಿಲ್ಲೋಳೆಂದೊಡೆ ನಳಂ ಗಂಡಂ ಪೆಱರ್ಗಂಡರೇ (ಪಂರಾಮಾ. ೧೨-೩೪) ; ತಲೆವಿಲ್ಗೊಂಡುದ್ಗಮಾಸ್ತ್ರಂ ಕವಿದಿಸುತೆ (ಧರ್ಮನಾ.೫-೩೭); ಸೇದಿ ಸಿಂಜಿನಿಯ ತಲೆವಿಲ್ಗೊಂಡು ಪೊಕ್ಕರ್ ಧನುರ್ಧರರ್ ಮೂದಲಿಸುತೆ (ಜಿಬಪು. ೧೭-೧೪). **ತಲೆವಿಲು :** ಖಳನಿಕರವಲ್ಲಲ್ಲಿ ತಲೆವಿಲುಗಳಲಿ ತಱುಬಿದರು ಮಂಡಳಿಸಿ ಕುಬುಬಿಱಿದಟ್ಟಿ . . . ಹರಿಕುಲೇಶ್ವರನ (ತೊರರಾ. ೫-೪-೨೦) ; ತಲೆವಿಲುಗಳಿಂದಿಬ್ಬರೊಂದೇ ಜಳಕದಲಿ ಸರಳುಗಳಬಿಡೆ ಬಲುಗಲಹ ನಡೆದುದು (ತೊರರಾ. ೬-೩೦-೨೦). **ತಲೆವಿಲ್ಲು :** ತಲೆವರಿಗೆಯಲಿ ಕವಿದರು ಕಾಲವರಾರ್ದು ತಲೆವಿಲ್ಲುಗೊಂಡು ಬಿಲ್ಲವರು ತೊಲತೊಲಗೆನುತ ಮುಸುಕಿದರು (ಕುರಾಸಾಂ. ೧೩-೭೯).

[ ತಲೆ$_1$ + ಬಿಲ್ಲು$_1$ (<ಬಿಲ್$_2$) ]

**ತಲೆವಿಲು** 'ತಲೆವಿಲ್' ನೋ.

**ತಲೆವಿಲ್ಲು** 'ತಲೆವಿಲ್' ನೋ.

**ತಲೆವೀಡು** (ನಾ). ಶ್ರೇಷ್ಠನೆಲೆ,-ಬೀಡು: ನೆಲೆವೀಡು ರತಿಗೆ ತಿರುವಾಯ್ದಲೆವೀಡಂಗಜಶರಕ್ಕೆ ಕಾಮನ ಕಿಸುಗಣ್ಮಲರ್ವೀಡು ವಿಯೋಗಿಗೆ ಸಂಕಲೆವೀಡು ವಸಂತದಂತಿಗುಪನಗರವನಂ (ಚಂದ್ರಪು. ೧-೧೦೩).

[ ತಲೆ$_1$ + ಬೀಡು$_2$ ]

**ತಲೆವೀದಿ** (ನಾ). ೧. ಬಾಗಿಲ ಮುಂದಿನ ಭಾಗ. ೨. ಬೈತಲೆ : ಮಜ್ಜನ ವನುಲೇಪನವುಡೆ ನಿಱಿ ಪೊಸ ಸಜ್ಜುಕ ತಲೆವೀದಿಯ ಮಣಿ ತಿಲಕಂ . . . ಮುಡಿಯಿಂ ಕೆಂಬಜ್ಜೆವರಂ ರಚಿಸಿದ ಸಿಂಗರವೊಪ್ಪಿದುವಾ ಬಾಲಿಕೆಗೆ (ಜಯಕಾ. ೫-೨೦). ೧, ೨ : ತಂಗೆ ತಲೆವೀದಿಯಂ ತೊಡೆಯದಿರು ಕೂಡೆ ಚಳೆಯಂಗೆಯ್ದಲಂಕರಿಸು (ಹಚಕಾ. ೪-೨೪). [ ತಲೆ$_1$ + ಬೀದಿ ]

**ತಲೆವೀಸು** (ಕ್ರಿ). ತಲೆಯನ್ನು ಅಲ್ಲಾಡಿಸು ; ನಿರಾಕರಿಸು ; ಅಸಮ್ಮತಿ ಸೂಚಿಸು : ನೀಂ ತಲೆವೀಸದುರ್ವರಾ ಶ್ರೀಯನಿದಾಗದೆನ್ನದೊಳಕೊಳ್ ಪರವೋತ್ಸವದಿಂ ಗುಣಾರ್ಣವಾ (ಪಂಪಭಾ. ೧೪-೧೭) : ಸುತ ತಲೆವೀಸದೆ ಮತ್ಸಂತತಿ ಜನ್ಮಾರ್ಥಮೆ ವಧೂಪರಿಗ್ರಹಣ ಪ್ರಸ್ತುತಮನೊಡಂಬಡುವುದು (ಚಂದ್ರಪು. ೧೩. ೩೦). [ ತಲೆ$_1$ + ಬೀಸು$_1$ ]

**ತಲೆವೂರು** 'ತಲೆಯೂಱು' ನೋ.

**ತಲೆವೂಸು,** ತಲೆಪೂಸು (ಕ್ರಿ). (ಎಣ್ಣೆ, ಪರಿಮಳದ್ರವ್ಯ ಮೊದಲಾದುವನ್ನು) ತಲೆಗೆ ಹಚ್ಚು,-ಲೇಪಿಸು : ನಿನ್ನ ಗಂಡಂಗೆ ತಲೆವೂಸಿ ಮಿಾಯಲೆಱೆದು (ಪಂಚತಂ. ೨೭೨-೨೪). **ತಲೆಪೂಸು :** ಕುಂಬಾಱ ಬಮ್ಮಣ ತಲೆಪೂಸದನ್ನವುಣದ ವೀರಬ್ರತಮ ಕಯ್ಕೊಣ್ಡು ಪ್ರತಿಷ್ಠೆಯಂ ಮಾಡಿಸಿದ ಕುಂಭೇಸ್ವರ ದೇವರಂಗಭೋಗಕ್ಕೆ . . . ಬಿಟ್ಟ ಗಟ್ಡಿ ಕಮ್ಮವಿಂನೂಱು (ಎಕ. XI, ಹೊಳಲ್ಕೆ. ೬೪-೨೪ ; 1126) ; ಪರಿಪರಿಯ ಕಮ್ಮೆಣ್ಣೆಯನು ಅಚ್ಚರಸೆಯರು ತೆಗೆತಂದು . . . ತಲೆಪೂಸಿದರು ಶಿವದೇವಿಗೊಲವಿನಲಿ (ಸಾಳ್ವಭಾ. ೩೨-೪೦). [ ತಲೆ$_1$ + ಪೂಸು$_1$ ]

**ತಲೆವೆಟ್ಟ** (ನಾ). ಎತ್ತರವಾದ ಪ್ರದೇಶ (?) : ಅರುಹಣಂ[ದಿ]ಭಟ್ಟಾರಕರವರ ಶಿಷ್ಯರಾ[ದ ಆ]ರ್ಯ್ಯ ಪಂಡಿತರ್ಗ್ಗೆ ತಲೆವೆಟ್ಟವೊ[ಳ]ಗಣ ಸ್ಥಳದ ಮತ್ತರು ಮೂವತ್ತು . . . ನೂಱಿಪ್ಪ[ರ್ದಿ]ಮ್ಮಹಾನದೊಳ್ ಸರ್ವ್ವಬಾಧ ಪರಿಹಾರಮಾಗಿ ಕಾ[ಲಂ ಕ]ರ್ಚ್ಚಿ[ಬಿಟ್ಟು]ಕೊಟ್ಟರು (ಸಾ ಇ ಇ. XI-i, ೧೧೩-೨೯ ; 1074). [ ತಲೆ$_1$ + ಬೆಟ್ಟ (<ಬೆಟ್ಟು$_2$) ]

**ತಲೆವೆಣ್** (ನಾ). ಶ್ರೇಷ್ಠಳಾದ ಹೆಂಗಸು ; ಉತ್ತಮ ಸ್ತ್ರೀ: ತಲೆಗರೆಯದೆ ಪೊಕ್ಕು ಹೊಯ್ದಾಡಿ ರಣದೊಳು ತಲೆಗೊಟ್ಟ ವೀರಭಟರನು ತಲೆದಡವುತ ಕೊಂಡೊಯ್ದರು ಸಗ್ಗದ ತಲೆವೆಣ್ಗಳು ತವಕದಲಿ (ಕುರಾಸಾಂ. ೧೨-೮೬).

[ ತಲೆ$_1$ + ಪೆಣ್ ]

**ತಲೆವೆರಸು** (ಕ್ರಿ). ತಲೆಯನ್ನು ಕೂಡಿಕೊಂಡಿರು ; ಜೀವದೊಂದಿಗಿರು ; ಪ್ರಾಣಸಹಿತವಾಗಿರು : ಮಲೆತು ನೀನೆನ್ನೊಡನೆ ರಣದಲಿ ಹಳಚಿ ನೀ ತಲೆವೆರಸಿ ಮರಳಿದಡಿಳುಹುವೆನು ಕೈದುವನು ಶರಸನ್ಯಾಸ ನನಗೆಂದ (ಕುವ್ಯಾದ್ರೋ. ೫-೪೨) ; ಹೊಗುವಡೆ ತಲೆವೆರಸಿ ಹೊಗಲೀಯೆನಿದಿರಾಗೆನುತ ಮೂದಲಿಸೆ (ಕುವ್ಯಾದ್ರೋ. ೧೪-೩). [ ತಲೆ$_1$+ಬೆರಸು$_1$ ]

**ತಲೆವೆಲೆ** (ನಾ). (?) : ತಲೆವೆಲೆ ಪೂರ್ಣಭಾಗದ ಕಪ್ಪುರದ ಬೆಳ್ಳೆಲೆಗೆ ಚೂರ್ಣಾಂಕಿತಗೆಯ್ದು ಲಲನೆಯರೊಬ್ಬುಳಿಗೆಯ್ದಿತ್ತ ವೀಳ್ಯವ ಸಲೆ ಸಮರ್ಪಿಸಿದನೀಶ್ವರಗೆ (ಮೋಹತ. ೨೦-೪೨). [ ? ]

**ತಲೆವೇನೆ,** ತಲೆಬೇನೆ (ನಾ). ೧. ತಲೆಯಲ್ಲಿ ಉಂಟಾಗುವ ವ್ಯಾಧಿ,-ನೋವು : ಉದಯಿಪ ನೇಸಱಿಂ ಕಿಡದ ಕಟ್ಟಿಳೆ ಕಿತ್ತಲಗಿಂ ಕಱುತ್ತು ಕುತ್ತದ ತಲೆವೇನೆಯಂತಕನ ಬಾರಿಗೆ ಬಾರದ ಸಾವು . . . ಪೆಱತುಂಟೆ ಲೋಕದೊಳ್ (ಲೀಲಾವ. ೪-೫೨). ೨. (ಅಲಂ) ಮನಸ್ಸಿಗೆ ಉಂಟಾಗುವ ಕಷ್ಟ,-ತೊಂದರೆ,-ಬೇಸರ : ವೇದವೇದಾಂಗ ಉಪನಿಷತ್ ಶಾಸ್ತ್ರ ಪುರಾಣೇತಿಹಾಸಗಳಲ್ಲಿರುವ ಬಾಲಶಿಕ್ಷೆಯ ನೀತಿ ರೀತಿಗಳು ಅವನ್ನೆಲ್ಲಾ ಗಿಳಿಯೋದಿ ಕೇಳಿಸಿ, ನಮಗೆ ತಲೆವೇನೆಯನ್ನುಮರಿಸಿ - ಹುಚ್ಚುಹಿಡಿಯಿಸಿ ಬಿಡಬೇಕೆಂದಲ್ಲ (ಬಿಟ್ಟಳ. ೧೧೫-೧೨). **ತಲೆಬೇನೆ :** ೧. ಶೀತಂ ನಡುಕಂ ಬೆಮರು ದ್ಭೂತಂ ತಲೆಬೇನೆ ಪಾರ್ಶ್ವವೇದನೆ ತೃಷ್ಣೋಪೇತಚ್ಛವಿ ಬತ್ತುವ ಬಾಯ್ ವಾತಜ್ವರ ಚೇಷ್ಟೆ (ಕಲ್ಯಾಕಾ. ೩-೭): ಪಲಕಾಲ ಪೊಱಿ ತಲೆಬೇನೆಯಾದೊಡೆ ಶೇಷ ನೆಲಭಾರಕಾನೆ ಕೂರ್ಮಗಳ ತೊಲಗದೊಲಿರಿಸಿ (ವರ್ಧಚ. ೧೧-೧೪). ೨. ಪ್ರಕಟಿತವಾದ ಹಲಕೆಲವು ಗ್ರಂಥಗಳು ತುಂಬ ಅಶುದ್ಧವೂ ಅಸುಂದರವೂ ಆಗಿ ಓದುಗರಿಗೆ ತಲೆಬೇನೆಯನ್ನು ತರುವಂಥವುಗಳಾಗಿವೆ (ತವನಿ. ೦೪). [ ತಲೆ$_1$ + ಬೇನೆ ]

**ತಲೆವೇಸಱು,** ತಲೆಬೇಸರ, ತಲೆಬೇಸರು$_2$ (ನಾ). ಮನಸ್ಸಿಗೆ ಉಂಟಾಗುವ ಆಲಸ್ಯ,-ಜುಗುಪ್ಸೆ : ಸೀರ್ಕರಡಿಯನ್ನಳೆ ನಾದಿನಿಯೊಲ್ದುವೊಲ್ಲದನ್ನಳೆ ಗಡ ಸೂಳೆಯೆಂದೊಡಿನಿತಂ ತಲೆವೇಸಱಿನೆಂತು ನೀಗುವೆಂ (ಪಂಪಭಾ. ೪-೯೮). **ತಲೆಬೇಸರ :** ಸಾಮಾಜಿಕರಿಗೆ ಇಂಥ ಜೀವನನಾಟಕವು ತಲೆಬೇಸರವನ್ನುಂಟು ಮಾಡೀತು (ಸಾಹಿವಿ. ೬೪) ; ರಘುನಾಥ ಮಾಸ್ತರರಿಗೆ ತಲೆಬೇಸರವಾಯಿತು (ರಂಗರೋ. ೭೭). **ತಲೆಬೇಸರು$_2$ :** ಅವರಿಗೆ ತಲೆಬೇಸರಾಗಿತ್ತು (ರಂಗರೋ. ೫೦). [ತಲೆ$_1$ + ಬೇಸಱು ]

**ತಲೆವೊಂದು** (ಕ್ರಿ). ತಲೆಗೆ ಹೋಗು ; ತಲೆಗೆ ಸೇರು ; ಅರ್ಥವಾಗು ; ಅರಿವು ಮೂಡು : ತಾನನುಚಿತದಿ ದುರ್ಜನರುಗಳ ಪಾಲಿಸಿದ ಫಲವು ಕೈಯೊಡನಾಯ್ತು ಸಚಿವರು ಖಳನಿವನು ಬೇಡೆಂದು ನೀತಿಯ ತಿಳುಹಿದುದ ತಲೆವೊಂದಿತೆನಗೆಂದರಸನಳವಳಿದ (ಜೀವಂಚ. ೪-೭೩). [ತಲೆ$_1$ + ಪೊಂದು$_1$]

**ತಲೆವೊಡೆ** (ನಾ). ೧. ತಲೆಯೊಡೆತ; ತಲೆಬೇನೆ. ೨. (ಅಲಂ) ಜುಗುಪ್ಸೆ; ಬೇಸರ ; ಕಿರಿಕಿರಿ : ತನ್ನ ತಲೆವೊಡೆಯಾಗಿರ್ದ ತಪಮನೊಡೆಯಿಕ್ಕುವಂತೆ . . . ಮರುಭೂತಿಯ ತಲೆಯೊಡೆದು ನುಚ್ಚುನೂಱಾಯ್ತಾಗಳ್ (ಪಾರ್ಶ್ವಪು. ೪-೫೬). [ ತಲೆ$_1$ + ಒಡೆ$_2$ ]

**ತಲೆವೊಣೆ,** ತಲೆಹೊಣೆ (ನಾ). ೧. ತಲೆಗಳನ್ನು ಬೀಳಿಸುವ ಹೊಣೆಯುಳ್ಳದು ; ತಲೆ ಕತ್ತರಿಸುವ ಹೊಣೆಯುಳ್ಳದು : ಉಗುಳ್ಚಿದಂಕಗಳಂ ವೈರಿವೋಹರದಣೆ ತಲೆವೊಣೆಗಳಂ ಪಗೆಗಳೆರ್ದೆವಣೆಗಳಂ ರವಿಗಣೆಗಳಂ ಕ್ಷಣದೊಳು (ಜೈಮಿಭಾ. ೨೧-೮೮). **ತಲೆಹೊಣೆ : ೨.** ತಲೆಯಲ್ಲಿ ಹೊತ್ತಿರುವ ಹೊಣೆ, – ಜವಾಬ್ದಾರಿ : ತಲೆಹೊಣೆಯು ಬೆಲೆಯ ತಮ್ಮರಸನಾಣೆಯಂ ಪೊತ್ತು . . . ಸಾರುತೆ ಕಟಿಧ್ವಜಂ ತಾಂ ಮೆರೆವ ನಾಡೊಡೆಯರೆಲ್ಲರ್ಗೆ ಕಟ್ಟಾಜ್ಞೆಯಂ (ಶ್ರೀರಾಮಾ. ೩೪೭-೨೦೭).

[ ತಲೆ$_1$ + ಪೊಣ್ಕೆ$_2$ ]

**ತಲೆವೊತ್ತು** 'ತಲೆಯೊತ್ತು$_1$' ನೋ.

**ತಲೆವೊಯ್,** ತಲೆಹೊಯ್ (ಕ್ರಿ). ತಲೆಯನ್ನು ಹೊಡೆ,–ಕತ್ತರಿಸು : ಎನ್ನ ನುಡಿಯು ಮಿಱೆ ತಲೆವೊಯ್ದರಾದೊಡೆ ಬನ್ನವಪ್ಪುದು ನಿಮಗಿಂದು (ಪ್ರಭಂಜ. ೨-೧೫೭) ; ಅಂತರಿಸದುಱಿಬಿ ತಲೆವೊಯ್ವುತುಂ ಬಯ್ವುತುಂ . . . ಭ್ರಾಂತಿಬಡಿಸಿದರಾಗ (ಜಬಪು. ೨೪-೧೧) : ತಲೆವೊಯ್ದನ್ ಒಂದನ್, ತುಯ್ದೊಗೆದನ್ ಒಂದನ್ (ಅಶ್ವತ್ಥಾ. ೧೨-೨೫೭). **ತಲೆಹೊಯ್ :** 'ತಲೆಹೊಯ್ಕು' ಪರಾ. [ ತಲೆ$_1$ + ಪೊಯ್$_1$ ]

**ತಲೆವೊಯಿಸು (ಕ್ರಿ).** ತಲೆಯನ್ನು ಹೊಡೆಯಿಸು ; ಕೊಲ್ಲಿಸು : ಅರಸಂ ತಲೆವೊಯಿಸಲ್ ಪಾತಕಿ ಭವಸೇನಂ ಪಿರಿದುಂ ಕೋಪಾತುರನಾಗಿಯಳಿದು (ಜಯುಕಾ. ೧೩-೨). [ ತಲೆ$_1$ + ಪೊಯಿಸು (<ಪೊಯ್ಸು) ]

**ತಲೆವೊಯ್ಕು,** ತಲೆಹೊಯ್ಕು (ನಾ). ೧. ತಲೆಯನ್ನು ಹೊಡೆಯುವವನು; ಕೊಲೆಗಾರ ; ಕಟುಕ. ೨. (ಆಲಂ) ವಂಚನೆಮಾಡುವವನು ; "ತಲೆ ಹೊಡೆಯುವವನು ; ಕಟುಕ, ಘಾತಕಿ, ಮೋಸಗಾರ, ತಲೆವೋಕ" (ಪ್ರಭಣ್ಣ). **ತಲೆಹೊಯ್ಕು : ೩.** (ಆಲಂ) ಬೇಸರವುಂಟುಮಾಡುವವನು : ಎರಡನೆಯ ತಲೆಹೊಯ್ಕನು ಕತೆಗಾರನಾಗಿರುತ್ತಾನೆ (ದೇಕನ್ನ. ೧೨೦). [ ತಲೆವೊಯ್ + – ಕ$_3$ ]

**ತಲೆವೊರು** 'ತಲೆವೊಱು' ನೋ.

**ತಲೆವೊರೆ** 'ತಲೆವೊಱೆ' ನೋ.

**ತಲೆವೊಲ (ನಾ).** ೧. ಎತ್ತರವಾದ ಪ್ರದೇಶ : ತಲೆವೊಲದ ನಾನಲ್ವಳ್ಳದ ದರಿಯ ಕುತ್ತುಱಿಂಗೆ ಕೊಣಕಿಡುವ ಪುಲ್ಲೆ (ಮಲ್ಲಿಪು. ೬-೪). ೨. ಮುಖ್ಯವಾದ ಸ್ಥಳ,–ಪ್ರದೇಶ: ಸರಭಗಳ ಕಾಲಾಟವಾ ಕೇಸರಿ ಶರಭಗಳ ತಿಂದು ತೇಗುವ ಪಿರಿಯ ಭೇರುಂಡಗಳ ತಲೆವೊಲನೆನಿಸಿತಾ ವಿಪಿನ (ಸಾಳ್ವಭಾ. ೫-೪). ೩. (?) : ಆದಿಯನಾದಿಗಳಿಲ್ಲದಂದಿನ ಕೂಗು ನಾದಬಿಂದುಗಳಿಲ್ಲದಂದಿನ ಕೂಗ ಕಂಡು ಕೂಗಿದೆ ಈಡಾ ಪಿಂಗಳ ಸುಷುಮ್ನನಾಳ ಮಧ್ಯದ ಕೂಗ ಕಂಡು ಕೂಗಿದೆ ಗುಹೇಶ್ವರನೆಂಬ ತಲೆವೊಲನ ದಾಂಟಿ ಅಲ್ಲಮ ಕೂಗಿದ ಕೂಗು (ಅವಚಂ. ೧೫೨-೬೯೫); ಎರಡೂರ ಬಟ್ಟೆ ಒಂದಾದ ತಲೆವೊಲದಲ್ಲಿ ಒಬ್ಬ ತನ್ನ ತಲೆಯ ಕೊಯ್ದು ಮುಂದಿರಿಸಿಕೊಂಡು ಮುಂಡದಲೂಹಿನ ಕಳೆವುದ ಕಂಡೆ (ಸರ್ವವ. ೨೦೫-೯೩೦).

[ ತಲೆ$_1$ + ಪೊಲ$_1$ ]

**ತಲೆವೊಱು,** ತಲೆಪೊರ್‌, ತಲೆವೊರು (ಕ್ರಿ). ೧. ತಲೆಯ ಮೇಲೆ ಹೊರು. ೨. ಹೊಣೆಯನ್ನು ಹೊರು ; ನಾಯಕತ್ವವನ್ನು ವಹಿಸಿಕೊಳ್ಳು ; ಮುಂದಾಳುತನವನ್ನು ವಹಿಸಿಕೊಳ್ಳು : ತಲೆವೊತ್ತು ಮತ್ತೆ ನೂಕಲು ಬಲ್ಲಾಳನ ಬಲವಣ್ಣ ಭೈರವದೇವ ಒಲೆದನೊಯ್ಕನೆ ರಾಯನ ಮೇಲೆ (ಕುಠಾಸಾಂ. ೧೩-೪೩). **ತಲೆಪೊರು : ೧.** ಹುಲಿಯ ಕೈಕಾಲ್ಗಳಂ ಬಿಗಿದು ದಡಿಯಂ ಕೋದು ತಲೆಪೊತ್ತರಣ್ಬರೆದೆ ಹೆಗಲ ಕೆಚ್ಚಿನಲಿ (ಕಾಲೂರ. ೧೧೧-೨೦೨). **ತಲೆವೊರು : ೩.** ಆಜ್ಞೆಯನ್ನು ಪಾಲಿಸು; ಶಿರಸಾವಹಿಸು: ಇರುವ ಸೈನಿಕರೂ ಕಾವಲವೀರರೂ . . . ಆರ ಆಜ್ಞೆಗಳನ್ನು ತಲೆವೊತ್ತು ಪರಿಪಾಲಿಸುತ್ತಿರುವುದು ? (ಬಿಟ್ಟಆ. ೭೨-೯). [ ತಲೆ$_1$ + ಪೊಱು ]

**ತಲೆವೊಱೆ,** ತಲೆಪೊಱೆ, ತಲೆವೊರೆ, ತಲೆಹೊರೆ, ತಲೆಹೊಱೆ (ನಾ). ೧. ಒಬ್ಬ ಮನುಷ್ಯ ತಲೆಯ ಮೇಲೆ ಹೊರಬಹುದಾದಷ್ಟು ಭಾರ; ತಲೆಯ ಮೇಲಿರುವ ಹೊರೆ : "ವಿವಧಂ ವಿವಂದಮೆನೆ ತಲೆವೊಱೆ[ಪಾಠಾಂ. ಮೊಟ್ಟೆ]ಯೆನಿಕ್ಕು" (ಮಂಗರಾ. ೬೩-೩೬) ; ಅಯ್ವದಿಂಬರುಂ ಸಾಸಿರ್ವ್ವರು(ಂ) ವಿರ್ದು ಬಾರಿಕೇಚಂಗೆ ಕೊಟ್ಟರು[ವೊ][ಕ್ಕ]ಲಲು ಹಾಗ ತಲೆವೊಱೆಗೆ ಬೇಳೆ (ಸೌಇಇ. IX-I, ೬೬-೨೨ ; ೧೫1) ; ತಂಬುಲಿಗ ಸಾಸಿರ್ವ್ವರಿರ್ದ್ದು ದೇವರ್ಗ್ಗೆ ಹೇಱಿಂಗೊಂದು ವೀಸವುಂ ಕೊಟ್ಟರು ಮತ್ತಂ ತಲೆವೊಱೆಗರೆವೀಸ (ಸೌಇಇ. XX, ೮೪-೫೫ ; 1123) ; ಪಾಳಯಕೆ ಗಜಪುರದ ವಂಕಕೆ ಕೀಲಿಸಿತು ದಂಡಿಗೆಯ ಸಂದಣಿ ಮೇಲು ಸರಕಿನ ಬಂಡಿ ತಲೆವೊಱೆಯೆತ್ತು ಕಂಬಿಗಳ (ಕುವ್ಯಾಗ. ೪-೧೮). **ತಲೆಪೊಱೆ : ೧.** 'ತಲೆಪೊಱೆಯ' ಪರಾ. **ತಲೆವೊರೆ : ೧.** ತಂಬುಲಿಗರ್ವ್ವಿಟ್ಟಾಯಂ ಭಂಡಿಗೆಲೆ ನೂಱು ಹೇಱಿಂಗೆ ನೂಱು ತಲೆವೊರೆಗೈವತ್ತು ದೇವರ ಮುಂದಣಂಗಡಿಯೆರಡು (ಎಇ. XX, ೧೨-೫೪ ; 1167). **ತಲೆಹೊರೆ : ೧.** ಅದರೆಡೆಯ ದಾರಿಯ ಪಕ್ಕಗಳಲಿ ಎರಡೆರಡರಂತೆ ತಲೆಹೊರೆಯ ಕಟ್ಟೆಗಳೂ . . . ಇರುವುವು (ಮಂತ್ರಶ. ೪೦-೮); ತಲೆಹೊರೆಯ ಬೆಡಗಿನಿಂ ಕಾಡೆಡೆಯ ತುಳಿಯುವಳ್ ಕಾಲೂರ ಚೆಲುವೆ (ಕಾಲೂರ. ೬೦-೦೦೩). **೨.** ತಲೆಯ ಮೇಲೆ ಹೊರುವಿಕೆ,–ಹೊತ್ತುಕೊಳ್ಳುವಿಕೆ: ಆಹಾರ ಸಾಮಗ್ರಿಗಳನ್ನೂ ಬೆಟ್ಟವನ್ನೇರುವ ಸಲಕರಣೆಗಳನ್ನೂ ತಲೆಹೊರೆಯಿಂದ ಸಾಗಿಸಬೇಕಾಗುವುದು (ಕಪಪು. ೬-೯೨). **೩.** (ಆಲಂ) ಮಿತಿಮಿಾರಿದ ಹೊರೆ ; ಹೆಚ್ಚಿನ ಹೊರೆ : ನಮ್ಮ ಮಕ್ಕಳ ವಿದ್ಯಾಭ್ಯಾಸ ನಮಗೆ ತಲೆಹೊರೆಯಾಗಬಾರದು (ರೂಢಿ). **ತಲೆಹೊಱೆ: ೧.** "ವಿವಧಃ, ವೀವಧಃ, ಭಾರಃ, ಪರ್ಯಾಹಾರಃ– ಈ ೪ ತಲೆಹೊಱೆ" (ಹಲಾಯು. ೧೨೫-೬೩) ; ಜಕ್ಕಿಸೆಟ್ಟಿ ಮಕ್ಕಳು ಮದಿಸೆಟ್ಟಿ ಮಚಿಸೆಟ್ಟಿ ಮದಲಾದಯಿವರು ತಲೆಹೊಱೆ ಉಡಕಿತ × × × ವತ್ಸರದ ಚೈತ್ರ (ಎಕ. II, ೩೭೭-೯ ; 1120) ; ಆ ಹೇಮವನಜವನಾ ವಜ್ರಮುಷ್ಟಿ ಅನುರಾಗದಿಂ ತಲೆಹೊಱೆ ಹೊತ್ತು ಬಂದಾ ಮುನಿಯ ಸನ್ನಿಧಿಯೊಳು ನಿಂದು (ನೇಮಿಸಂ. ೧೪-೬೧). **೩.** ಮನದಾಂದೋಳವನು ಬಿಡಿ ಬಿಸುಡಿ ಚಿಂತಾಭರದ ತಲೆಹೊಱೆಯ (ತೊರರಾ. ೫ ೩-೦೦೨) ; ಹಲಬರ ಬರಿಸಿ ಕೊಂಡೊಸಗೆಯೊಳ್ಕೊಡದಾನು ತಲೆಹೊಱೆಯಾಗಿ ಕೊಟ್ಟಾಗ ಬಳಿಕೆನ್ನ ತಂಗಿಯ ಹೆಚ್ಚುಗಾಣ್ಬನೆ ಹತ್ತಱೊಳಗೆ ಹನ್ನೊಂದಾಗಿ ಕಾಣ್ಬ (ಭರಜ. ೩೮-೦೩೨). [ ತಲೆ$_1$ + ಪೊಱೆ ]

**ತಲೆವೊಱೆಗಟ್ಟು (ಕ್ರಿ).** ತಲೆಯ ಮೇಲೆ ಹೊರುವ ಹೊರೆಯನ್ನು ಕಟ್ಟು : ಮಟ್ಟಿಯ ಮುಟ್ಟುಗದರಳೆಯ ಸವುದೆಗಳನಳತೆಯೊಳ್ ಕೊಯ್ದಿರ್ಪನಾರಿಂ ತಲೆವೊಱೆಗಟ್ಟೆ ತರ್ಪ ವಟುಗಳಿಂದೆಯುಂ . . . ಬಿರಿಮುಗುಳಂ ತಿಱಿತರ್ಪ ಮುನಿಕನ್ಯೆಯರಿಂದೆಯುಂ ಪುಣ್ಯಾಶ್ರಮಂ ಮನೋಹರಮಾಯ್ತು (ರಾಮಾಶ್ವ. ೪೩-೦೬). [ ತಲೆವೊಱೆ + ಕಟ್ಟು$_1$ ]

**ತಲೆವೋಕ,** ತಲೆಹೋಕ (ನಾ). ೧. ತಲೆಯನ್ನು ಕಳೆದುಕೊಂಡವನು ; ತಲೆಯು ಕತ್ತರಿಸಲ್ಪಟ್ಟವನು ; ಬ್ರಹ್ಮ. ಪಂಚಮುಖನಾಗಿದ್ದ ಬ್ರಹ್ಮನ ಒಂದು ತಲೆಯನ್ನು ಶಿವನು ತೆಗೆದಂದು, ಬ್ರಹ್ಮನು ಚತುರ್ಮುಖನಾದನೆಂದು ಪೌರಾಣಿಕ ಕಥೆಯಿದೆ. **೨.** ತಿಳಿವಳಿಕೆಯಿಲ್ಲದವನು; ಅವಿವೇಕಿ ; ಮೂಢ : ಅವರಂ ತೆಗಟಿದ ನಾಡುಗರಂ ತಾನೊಗೆಯಿಸಿದಂ ಬಱಿದೆ ಬಿದಿಯುದೇಂ ತಲೆವೋಕಂ (ಚಕವಿ. ೧-೩೩). ೧, ೨: ಆಃ! ತಲೆವೋಕನೊಂದು ಮಾಟವೇ!(ರಾಮಾಶ್ವ.೩೪-೧೭). **ತಲೆಹೋಕ: ೨.** ಬ್ರಹ್ಮದೇವಂ ತ್ರಿಭುವನಪತಿ ತಾನೆಂದಹಂಕಾರದಿಂದಂ ತಲೆಹೋಕಂ ತಾನದಾಗಿರ್ದಪಂ (ಪಾಪ್ರಾಶ. ೧೧). 'ತಲೆಹೋಕತನ' ಪರಾ. **೩.** ಪುಂಡ ; ಧೂರ್ತ : "ಮೈಗಳ್ಳನಾಗಿ ಬೀದಿ ಅಲೆಯುವವನು; ಮೈಗಳ್ಳ, ಅಲೆಮಾರಿ, ತಲೆಹೋಕ ; ದಗಾಕೋರ ; ಠಕ್ಕ ; ಪಟಿಂಗ" (Rogue. ಇಂಕನಿ.).

**ತಲೆಹೋಕನಯ್ಯ**=ಬ್ರಹ್ಮನ ತಂದೆ; ವಿಷ್ಣು: ನೀ ಕುಮಾರಕನಾದೊಡಾ ತಲೆಹೋಕನಯ್ಯನ ಬಿಡು ನನಗೆ ಸಮತೂಕವೆನಿಸಿದ ಬದುಕ ನಿನಗೀವೆನು ಕಣಾ (ಪ್ರಹ್ಲಾಚ. ೧೩-೫೦). [ ತಲೆ$_1$ + ಪೋಕ ]

**ತಲೆವೋಳ್**, ತಲೆಯೋಳ್ (ನಾ). ಕತ್ತರಿಸಿದ ತಲೆಯ ಹೋಳು,-ಸೀಳು : ಮಡಿಮಡಿದುರುಳ್ವ ಕಟ್ಟಾಳ್ಗಳಿಂ ಬಾಳ್ಗಳಿಂದೊಡೆದ ತಲೆವೋ[ಪಾಠಾಂ. ಯೋ]ಳ್ಗಳಿಂದೆ ಕಡುಭಯಂಕರಮಾಗಲು (ಜೈಮಿಭಾ. ೪-೪೭). **ತಲೆಯೋಳ್** : ಕಡಿದ ತಲೆಯೋ[ಪಾಠಾಂ. ಸೀ]ಳ್ಗಳಿಂ ತೋಳ್ಗಳಿಂ ಬಾಳ್ಗಳಿಂದಡೆಗೆಡೆದ ರುಂಡದಿಂ ಮುಂಡದಿಂ . . . ರಣಾಂಕಣಮೆಸೆದುದು (ಜಬಪು. ೪೩-೪೪). [ ತಲೆ$_1$ + ಪೋಳ್$_2$ (<ಪೋೞ್$_2$)]

**ತಲೆಶೂಲೆ** (ನಾ). ೧.=ತಲೆವೇನೆ ೧ : ಸುರುಸುರುಕೆಯ ಸಮೂಲ ರಸವಂ . . . ಎಣ್ಣೆಯಲ್ಲಿ ಅಟ್ಟು ಹಿಂಗುಹಾಕಿ ನೆತ್ತಿಗೊತ್ತಲು ಕಪಾಲಶೂಲೆ ಮಾಣ್ಗುಂ, ನೆತ್ತಿಯ ಶೂಲೆ, ತಲೆಶೂಲೆ ಮಾಣ್ಗುಂ (ವಿಪ್ರವಿ. ೧೯೦); ಮರುದಿನ ಬಂದಿತು ಛಳಿಜ್ವರ ಮನೆಯ ಮಡದಿಗೆ ತಲೆಶೂಲೆ (ನಾಪದ. ೯೦). ೨. = ತಲೆವೇನೆ ೨ : ಸಹನಶೀಲತೆಯಲ್ಲಿ ನಿಸ್ಸೀಮರಾದ ಅಣ್ಣಪ್ಪನವರಿಗೆ ಈ ಮಾಸ್ತರರು ತಲೆಶೂಲೆಯನ್ನೇ ಕೊಡಹತ್ತಿದರು (ರಂಗರೋ. ೫೦). [ ತಲೆ$_1$ + ಶೂಲೆ ]

**ತಲೆಸರ** (ನಾ). ತಲೆಗಳಿಂದ ಮಾಡಿದ ಸರ ; ರುಂಡಮಾಲೆ : ಪಣ್ಗೆಂಡ ದಚ್ಚಿಯಂ ತಾಳ್ದ . . . ತಲೆಸರಂದಳೆದ ಶಿವ ಹರುಷದಿಂ ಪೊರೆಗೆ ನನ್ನಾ (ನಂದಿಮಾ. ೨೦-೫೨). [ ತಲೆ$_1$ + ಸರ$_6$ ]

**ತಲೆಸವರು**$_1$ (ಕ್ರಿ). ೧. ಗಿಡ ಮರಗಳ ಮೇಲ್ಭಾಗವನ್ನು ಕತ್ತರಿಸು : ತೋಟಿಗ ಉದ್ಯಾನದ ಹೂಗಿಡಗಳ ತಲೆಸವರುತ್ತಿದ್ದಾನೆ(ರೂಢಿ). ೨.(ಪ್ರೀತಿ, ಕನಿಕರಗಳಿಂದ) ತಲೆಯನ್ನು ನೇವರಿಸು ; ಬೋಳೈಸು; ತಲೆದಡವು: ಅದನ್ನು ಕನಿಕರದಿಂದ ತಲೆಸವರಿ (ನಡದಾ. II, ೮೯೭); ಸುಂದರಮ್ಮ ಮಗಳ ತಲೆಸವರಿ . . . ಎಂದರು (ದೂಬಿಟ್ಟ. ೨೨) ; (ಅವನನ್ನು ತಲೆಸವರಿ ಸಂತೈಸುತ್ತಾ) (ಚಂದ್ರಸ. ೭-೨೪). ೩. (ಆಲಂ) ಕೃತಕವಾದ ಕನಿಕರ ತೋರಿಸು ; ತೋರಿಕೆಯ ಸಮಾಧಾನ ಹೇಳು : ಬಾಯಿಮಾತಿನಲ್ಲಿ ತಲೆಸವರಿ ಕಳುಹಿಸಿದರು (ರೂಢಿ).

**ತಲೆಸವರಿ ಮಾತನಾಡು** = ಹೊಗಳು: ತಲೆಸವರಿ ಮಾತನಾಡುವುದರಲ್ಲಿ ಅವನು ಬಹಳ ನಿಪುಣ (ರೂಢಿ). [ ತಲೆ$_1$ + ಸವರು$_1$ (<ಸವಱು$_1$) ]

**ತಲೆಸವರು**$_2$ (ನಾ). ತಲೆಯನ್ನು ಕತ್ತರಿಸುವಿಕೆ ; ಕೊಲ್ಲುವಿಕೆ : ತಂದೆಯಿಲ್ಲದ ಸುತರ ತಲೆಸವರು ನಮಗೆ ಬಹುದಪಕೀರ್ತಿ (ತುರಂಗ. ೧೩-೯). [ ತಲೆ$_1$ + ಸವರು$_2$ (<ಸವಱು$_2$) ]

**ತಲೆಸಿಂಬಿ** (ನಾ). ತಲೆಗೆ ಇಟ್ಟುಕೊಳ್ಳುವ ಸಿಂಬಿ : ಕೊಡವು ಭಾರವಾಗಿರುವುದರಿಂದ ತಲೆಸಿಂಬಿಯ ಆವಶ್ಯಕತೆ ಇತ್ತು (ರೂಢಿ). [ ತಲೆ$_1$ + ಸಿಂಬಿ (<ಸಿಂಬೆ) ]

**ತಲೆಸುತ್ತು** (ನಾ). ೧. ತಲೆಸುತ್ತುವಿಕೆ ; ತಲೆತಿರುಗು ; ಬವಳಿ: ಅವರು ತಲೆಸುತ್ತು ಬಂದು ಮಲಗಿದ್ದಾರೆ (ರೂಢಿ). ೨. ತಲೆಗೆ ಸುತ್ತುವ ವಸ್ತ್ರ, ಪಾಗು ಮೊದಲಾದುವು ; ತಲೆದುಡಿಗೆ : "ಶೀರ್ಷಕಂ ತಲೆಸುತ್ತು" (ಮಂಗರಾ. ೧೧೧-೨೪) ; ತಳಿರುಡೆ ಪುಲ್ಲ ಕಂಕಣಮಶೋಕೆಯ ಬಿಲ್ ಬಿಳಿಯಂಬು ಕಾಡಪೂಗಳ ತಲೆಸುತ್ತು ಮಾಂದಳಿರ ಕೈಪೊಡೆ ರಂಜಿಸೆ (ಅರ್ಧನೇ. ೩-೬೦) ; ರಾಜೀವಲೋಚನಂ ಕ್ರೀಡಿಸಿದಂ ಪೀಲಿಯ ತಲೆಸುತ್ತಿನ ಪಚ್ಚೋಲೆಯ ಪೊಂಬಟ್ಟೆಯುಡೆಯ ಚೆಲ್ವೆಸೆವಿನೆಗಂ (ಜಗನಿ. ೪-೯೭); ಹರಣ ಮುಳ್ಳೊಡೆ ಹಾಡಿಯುಣಲ್ಕೆ ಬರ್ಪುದೊರ್ಮೆಗೆ ತಲೆಸುತ್ತುವೋಗಿ ತಲೆಯಿರ್ದೊಡೆ ಸಾಲ್ವುದು (ಪುಷ್ಪಪು. ೫-೪೪) ; ಮತ್ಸ್ಯ ತಲೆಸುತ್ತಾಗಿ ಹರನ ಮುಡಿಯಲ್ಲಿದೇಕೋ (ಗಣಭಾ ೬೯-೪) ; ತಲೆಸುತ್ತ ತೆಗೆದೊಡನೀಡಾಡಲಾ ಕೇಶ ನೆಲದೊಳಿರ್ದುದು ತೆಕ್ಕೆಗಟ್ಟಿ (ಭರಚ. ೭೦-೯೨); ತಣ್ಣೀರಲ್ಲಿ ಅದ್ದಿ ತಂದ ತನ್ನ ತಲೆಸುತ್ತಿನಿಂದ ಅವನ ಗಾಯವನ್ನು ಬಿಮ್ಮಾಗೆ ಸುತ್ತಿ ಹಿಡಿದು (ಹಬ್ಬರ. ೩೨-೫). ೩. (ಆಲಂ) ಅಹಂಕಾರ ; ದರ್ಪ ; ಒಣ ಹೆಮ್ಮೆ : ಅಧಿಕಾರದ ತಲೆಸುತ್ತು, ಕಕ್ಕಸದ ಎದೆ, ಕಿಡಿಕಣ್ಣುಗಳಿಂದ ದಡಿವಿಡಿದು ಹುಲಿಗಳಂತೆಯೇ ಬಂದುಮದುವೆ ಮನೆಯನ್ನು ನುಗ್ಗಿದರು (ಕಾಲೂರ. ೧೫ ಕಥಾಸಾರ). [ ತಲೆ$_1$ + ಸುತ್ತು$_2$ ]

**ತಲೆಸೂಡು** (ಕ್ರಿ). ತಲೆಯ ಮೇಲೆ ಹೊತ್ತುಕೊಳ್ಳು ; ವಹಿಸಿಕೊಳ್ಳು : ತಲೆಸೂಡಿ ಮುನ್ನ ಕಜ್ಜದ ಫಲಮಂ ಬೆಸಗೊಂಡುಮೆ[ೞ]ವನಲ್ಲಿಂ ಬಟಿಯಂ ತಲೆಯಂ ಕಿರಿಯಿಸಿ ದಿವಸಮನಲಸದೆ ಬೆಸಗೊಳ್ವನಂತು ಗಾವಿಲನಕ್ಕುಂ (ಕವಿರಾ. ೩-೧೪೪). [ ತಲೆ$_1$ + ಸೂಡು$_1$ ]

**ತಲೆಸೇಸೆ** (ನಾ). ತಲೆಯ ಮೇಲೆ ತಳಿಯುವ ಅಕ್ಷತೆ ; ಮಂಗಳಾಕ್ಷತೆ : ವನಲಕ್ಷ್ಮಿ ಪಳುಕಿನ ಪರಿಯಾಣಂಗಳೊಳು ಬಂದುಗೆಯರಳಂ ಮಂಗಳಾರತಿಯೆತ್ತೆ ರತಿ ಜಾಜಿಯ ಸಣ್ಣನನೆಗಳಂ ತಲೆಸೇಸೆಯನಿಕ್ಕೆ (ನಂಬಿರ. ೧೦-೪೪). [ ತಲೆ$_1$ + ಸೇಸೆ ]

**ತಲೆಸೊಪ್ಪು** (ನಾ). (ಮರ, ಗಿಡಗಳ) ತುದಿಯಲ್ಲಿರುವ ಸೊಪ್ಪು ; ಕುಡಿಯೆಲೆ : ನೋಡಿತ್ತಲಾಲಿಸಾ ತರಗೆಲೆಯ ಸಪ್ಪುಳಂ ಕಾಣಲ್ಲಿ ಮುರಿಗೊಳ್ಳುತಿದೆ ಮರದ ತಲೆಸೊಪ್ಪು (ಶ್ರೀರಾಮಾ. ೩೦೫-೧೦೭). [ ತಲೆ$_1$ + ಸೊಪ್ಪು$_3$ ]

**ತಲೆಹಂಚು** (ನಾ). ಹೆಂಚಿನ ಮೇಲ್ಛಾವಣಿಯ ಎರಡು ಸೂರುಗಳು ಸೇರುವ ಮೇಲ್ಭಾಗದಲ್ಲಿ ಮಗುಚಿಹಾಕುವ ದೊಡ್ಡ ಗಾತ್ರದ ಹೆಂಚು; ದಬ್ಬುಹೆಂಚು: ಅದಕ್ಕೆ ಬೆಲಗುಗಳೂ . . . ಹಂಚುಗಳೂ ತಲೆಹಂಚುಗಳೂ ಬೇಕಾಗುತ್ತವೆ (ಮುಂಬಯಿ. ೪-೧೧೭) ; ಹಂಚು ಹೊಚ್ಚಿ ಬೆಂಕಟ್ಟಿನ ಮೇಲೆ ತಲೆಹಂಚು ಹಾಕುತ್ತಾರೆ (ಮುಂಬಯಿ. ೪-೧೧೪). [ ತಲೆ$_1$ + ಹಂಚು$_3$ (<ಪಂಚು$_4$) ]

**ತಲೆಹತ್ತು** (ಕ್ರಿ). ೧. ತಲೆಗೆ ಸೇರು,-ಅಂಟು,-ಅಳವಡು : ಎಣ್ಣೆ ತಲೆಹತ್ತಿದೆ (ರೂಢಿ). ೨. (ಆಲಂ) ಮನಸ್ಸಿಗೆ ತೋಚು ; ಬುದ್ಧಿಗೆ ತೋರು,-ಗೋಚರವಾಗು.

**ತಲೆಹತ್ತಿದ ಮಾತು** = ಮನಸ್ಸಿಗೆ ತೋರಿದ ಮಾತು ; ವಿವೇಚನೆಯಿಲ್ಲದ ನುಡಿ ; ಹಿಂದು ಮುಂದು ಪರಿಶೀಲಿಸದ ಮಾತು : ಆಚೆಗೆ ನಡೆ ಎಂದು ತಲೆಹತ್ತಿದ ಮಾತುಗಳನ್ನು ಆಡಿದನು (ನೀತಿಚಂ. XI, ೦೩). [ ತಲೆ$_1$ + ಹತ್ತು$_1$ (<ಪತ್ತು$_1$) ]

**ತಲೆಹರಟೆ** (ನಾ). ೧. ಅತಿಯಾದ ಮಾತು ; ವಿವೇಕವಿಲ್ಲದ ಮಾತು : ನೀನು ಹುಡುಗನಾದರೂ ಸಭೆಯಲ್ಲಿ ಮುದುಕರ ಹಾಗೆ ಮಾತನಾಡುವುದು ತಲೆಹರಟೆ (ವಚಭಾ. ೦೦೦): ಶ್ರೀಧರನಿಗೆ ಈ ತಲೆಹರಟೆಯೆಲ್ಲ ಬೇಡವೆಂದು ಬರಿ (ವಾತ್ಸಲ್ಯ. ೭೨) ; ನಿನ್ನ ತಲೆಹರಟೆಯನ್ನು ಕೇಳಿಕೊಳ್ಳಲು ನನಗೆ ಸಮಯವಿಲ್ಲ (ರಂಗರೋ. ೧೨೩) ; ನೀವು ಇದನ್ನು ತಲೆಹರಟೆ ಎಂದು ಏತಕ್ಕೆ ಹೇಳುತ್ತಿದ್ದೀರಿ (ಘೂರಾತ. ೧೯). ೨. ತಲೆಹರಟೆಯುಳ್ಳವನು ; ಅಧಿಕ ಪ್ರಸಂಗಿ : ಅವರು ಕುಪಿತರಾಗಿ ತಲೆಹರಟೆ, "ನೀನೂ ನನ್ನನ್ನು ಹಾಸ್ಯಮಾಡುತ್ತೀಯಾ" ಎಂದರು (ರಾಯಕ. ೫೦); "ಹೂ, ಹೋಗು, ತಲೆಹರಟೆ" ಎಂದು ಕಾಲು ಝಾಡಿಸಿದರು (ಮುಂಗಾಮು. ೦೦೨). [ ತಲೆ$_1$ + ಹರಟೆ ]

**ತಲೆಹರಿಗೆ** 'ತಲೆವರಿಗೆ' ನೋ.

**ತಲೆಹರುಕ** (ನಾ). ಬುದ್ಧಿಸ್ಥೈರ್ಯವಿಲ್ಲದವನು ; ಬುದ್ಧಿಚಾಂಚಲ್ಯವುಳ್ಳವನು ; ತಿಳಿಗೇಡಿ ; ಅವಿವೇಕಿ. 'ತಲೆಹರುಕತನ' ಪರಾ. [ ತಲೆ$_1$ + ಹರುಕ (<ಪಱುಕ) ]

**ತಲೆಹರುಕತನ** (ನಾ). ಅವಿವೇಕ : ಅವನ ಮಾತಿನಲ್ಲಿ ಯಾರನ್ನೂ ಲಕ್ಷಿಸದ ತಲೆಹರುಕುತನವಿತ್ತು (ಮರಳಿ. ೦೦). [ ತಲೆಹರುಕ + – ತನ ]

**ತಲೆಹಾಕು** (ಕ್ರಿ). ೧. ತಲೆದೂಗು ; ಒಪ್ಪಿಗೆ ಸೂಚಿಸು ; ಸಮ್ಮತಿಸು : ಬ್ರಾಂಡಿಂಗ್ಸ್ ದಂಪತಿಗಳು "ಹೂಂ" ಎಂದು ತಲೆಹಾಕಿದ ರೀತಿಯಿಂದಲೇ ಏಜಂಟನು ಬುಟ್ಟಿಗೆ ಬೀಳುವನು ಬಿತ್ತೆಂದು . . . . ಗುಣಿಸಿಕೊಂಡನು (ಯೋಧಪು. ೨೪). ೨. ಉಂಟಾಗು ; ಉದ್ಭವಿಸು ; ತಲೆದೋರು ; ಕಾಣಿಸು ; ಒದಗು : ದುರಭಿಮಾನ ನಡುವೆ ತಲೆಹಾಕಿತು (ನಿರಾತ. ೮೬); ಅವರ ದಾಂಪತ್ಯದಲ್ಲಿ ಹಣಕ್ಕೆ ಸಂಬಂಧಿಸಿದ ವಿರಸವೇನೂ ತಲೆಹಾಕಲಿಲ್ಲ (ಒಡ್ಡಿ.ಉ. ೧); ಇವುಗಳೆಲ್ಲೆಲ್ಲಾ ಅವನ . . . ಜೀವನದ ಸಂಗತಿಗಳು ಅಲ್ಲಲ್ಲಿ ತಲೆಹಾಕಿರುವುದೂ ಅಸಂಭವವಲ್ಲ (ಕಾವ್ಯಸ.೧೦೩); ಆದರೆ ಇಲ್ಲಿ ಇನ್ನೊಂದು ಸಮಸ್ಯೆ ತಲೆಹಾಕುತ್ತದೆ (ದ್ರಾವಿವಿ. ೩೪). ೩. (ಆಲಂ) ಮಧ್ಯೆ ಪ್ರವೇಶಿಸು; ನಡುವೆ ಬಾಯಿಹಾಕು : ಶಿಕ್ಷಣದ ವಿಷಯದಲ್ಲಿ ನೀವು ಸುಮ್ಮನೆ ತಲೆ ಹಾಕತೊಡಗಿದ್ದೀರಿ (ರಂಗಗರೋ. ೮೦); ಯಾರೂ ಇದರಲ್ಲಿ ತಲೆಹಾಕಬಾರದು (ತತ್ವಪ್ರಾ. ೬೧೨) ; ತಮಗೆ ಸಂಬಂಧಪಡದ ವ್ಯವಹಾರದಲ್ಲಿ ಅವರು ತಲೆ ಹಾಕಬಾರದು (ಪುನರು. ೩೩೦). ೪. (ಆಲಂ) ಯೋಚನೆಮಾಡು ; ಮನಸ್ಸನ್ನು ತೊಡಗಿಸು : ಗಿಡಮೂಲಿಕೆಯ ಔಷಧೋಪಚಾರ ಮಾಡುವುದು ಮುಂತಾದವುಗಳಲ್ಲಿಯೂ ಅವರು ತಲೆಹಾಕಿದ್ದರು (ಗಂಗಾಸಾ. ೨೫). [ ತಲೆ$_1$ + ಹಾಕು (<ಪಾಯ್ಕು$_1$)]

**ತಲೆಹಾಕುತನ** (ನಾ). ಮಧ್ಯೆ ಪ್ರವೇಶಿಸುವಿಕೆ; ಅನಪೇಕ್ಷಿತವಾಗಿ ಬಾಯಿ ಹಾಕುವ ಸ್ವಭಾವ; ಅಧಿಕಪ್ರಸಂಗತನ: ತನ್ನ ಆಸ್ತಿಪಾಸ್ತಿಗಳ ವಿಲೇವಾರಿ ವಿಷಯದಲ್ಲಿ ತನ್ನ ಭಾವಮೈದುನನ ತಲೆಹಾಕುತನ ನೆಕ್ಕಲ್ದೋವನಿಗೆ ಸರಿಬೀಳಲಿಲ್ಲ (ಪುನರು. ೪೨೭). [ ತಲೆಹಾಕು + – ತನ ]

**ತಲೆಹಾರಿಸು** (ಕ್ರಿ). ತಲೆಯನ್ನು ಕತ್ತರಿಸು ; ಕೊಲ್ಲು : ತಲೆಹಾರಿಸಿ ಬಿಡು ತ್ತಾರೆ (ದಾಲತ್. ೨೭೪). [ ತಲೆ$_1$ + ಹಾರಿಸು (<ಪಾಱಿಸು) ]

**ತಲೆಹಿಡಿ** 'ತಲೆವಿಡಿ$_1$' ನೋ.

**ತಲೆಹಿಡಿಕ, ತಲೆಹಿಡುಕ** (ನಾ). (ವ್ಯಭಿಚಾರಕ್ಕೆ) ಜನರನ್ನು ಒದಗಿಸಿ ಕೊಡುವವನು ; ಕುಂಟಣಿಗ. 'ತಲೆಹಿಡಿಕಿ' ಪರಾ. **ತಲೆಹಿಡುಕ** : ೧. ಅಂಥವನು ತಲೆಹಿಡುಕನಾಗುವುದು ಸಾಧ್ಯವೇ ? (ನಾಪೋಲೀ. ೨೫೪). 'ತಲೆಹಿಡುಕತನ' ಪರಾ. [ ತಲೆ$_1$ + ಹಿಡಿಕ ]

**ತಲೆಹಿಡಿಕಿ** (ನಾ). (ವ್ಯಭಿಚಾರಕ್ಕೆ) ಜನರನ್ನು ಒದಗಿಸುವವಳು,– ಪ್ರೋತ್ಸಾಹಿಸುವವಳು. [ ತಲೆಹಿಡಿಕ + – ಇ$_2$ ]

**ತಲೆಹಿಡುಕ** 'ತಲೆಹಿಡಿಕ' ನೋ.

**ತಲೆಹಿಡುಕತನ** (ನಾ). (ವ್ಯಭಿಚಾರಕ್ಕೆ) ಜನರನ್ನು ಒದಗಿಸುವಿಕೆ ; ಕುಂಟಣಿತನ: (ನೀಚ ಮನೋದ್ರೇಕಗಳಿಗೆ, ದುರುದ್ದೇಶಗಳಿಗೆ) ಸಹಾಯಕ ನಾಗಿರು ; ಒಬ್ಬನ ಕಾಮಾಭಿಲಾಷೆ ತೀರಿಸಲು ಸಹಾಯಮಾಡು ; ತಲೆ ಹಿಡುಕತನ ಮಾಡು (Pander. ಇಂಕನಿ.).

[ ತಲೆಹಿಡುಕ (<ತಲೆಹಿಡಿಕ) + – ತನ ]

**ತಲೆಹಿಡುಕಿ** (ನಾ). = ತಲೆಹಿಡಿಕಿ : (ಕಳ್ಳೊಲುಮೆಯ ವ್ಯವಹಾರದಲ್ಲಿ) ತಲೆ ಹಿಡುಕ (ಕಿ). (Pander. ಇಂಕನಿ.). [ ತಲೆಹಿಡುಕ(<ತಲೆಹಿಡಿಕ)+–ಇ$_3$ ]

**ತಲೆಹುಣ್ಣು** (ನಾ). ತಲೆಯಲ್ಲಿ ಉಂಟಾಗುವ ಒಂದು ಬಗೆಯ ಹುಣ್ಣು: ಉಮ್ಮತ್ತದ ಬೇರು . . . ಬೆಲ್ಲ, ಗಣಿಕೆಸೊಪ್ಪಿನ ರಸ, ಇವಂ ಅರೆದು ಪೂಸೆ ತಲೆಹುಣ್ಣು ಮಾಣ್ಗುಂ (ವಿವೈವಿ. ೬೦).

[ ತಲೆ$_1$ + ಹುಣ್ಣು (<ಪುಣ್) ]

**ತಲೆಹುಳಿ** 'ತಲೆಹುಟಿ' ನೋ.

**ತಲೆಹುಳು** (ನಾ). ೧. ತಲೆಯಲ್ಲಿರುವ ಹುಳು; ಸೀರು, ಹೇನು. ೨. (ಆಲಂ) ಹುಚ್ಚುಹುಚ್ಚಾದ ವಿಚಾರ ; ತಪ್ಪುತಿಳಿವಳಿಕೆ : ನಾನು ಒಳಿತಾಗಿ ಸಿಟ್ಟುಮಾಡಿ, ಆತನ ತಲೆಹುಳುಗಳನ್ನು ಜಾಡಿಸಿದನು (ಮುಂಬಯಿ. ೪–೧೯೭).

ತಲೆ ಹುಳು ಕೊಡಹು = ೧. ತಲೆಯಲ್ಲಿರುವ ಹುಳುಗಳನ್ನು ಬೀಳಿಸು ; ಹೇನು ತೆಗೆ. ೨. ಗ್ರಹಚಾರ ಬಿಡಿಸು ; ತರಾಟೆಗೆ ತೆಗೆದು ಕೊಳ್ಳು : ರೇಗಿದರೆ ಅವನ ತಲೆ ಹುಳು ಕೊಡಹಿಬಿಡುತ್ತೇನೆ (ರೂಢಿ).

[ ತಲೆ$_1$ + ಹುಳು$_2$ (<ಪುೞು$_1$) ]

**ತಲೆಹುಳುಕ** (ನಾ). ೧. "ಹರಟೆ ಹೊಡೆಯುವ, ಮನ ಬಂದಂತೆ ವರ್ತಿಸುವ, ಗಾಂಭೀರ್ಯವಿಲ್ಲದ ಮನುಷ್ಯ; ಹರಟೆಯ ಮಲ್ಲ ; (Flibbertigibbet. ಇಂಕನಿ.). ೨. ಹುಚ್ಚ; ಭ್ರಮಿಷ್ಟ: ಅವನೊಬ್ಬ ತಲೆ ಹುಳುಕ, ಬುದ್ಧಿ ಸ್ವಾಧೀನವಿಲ್ಲ (ರೂಢಿ).

[ ತಲೆ$_1$ + ಹುಳುಕು (<ಪುೞುಕು) + – ಅ$_7$ ]

**ತಲೆಹುಟಿ, ತಲೆಹುಳಿ** (ಕ್ರಿ). ತಲೆಕೆಡು ; ಬುದ್ಧಿಕೇಡು ; ಹುಚ್ಚುಹಿಡಿ. **ತಲೆಹುಳಿ** : ಅವನೇಕೆ ತಲೆಹುಳಿತವನಂತೆ ಆಡುತ್ತಾನೆ ? (ರೂಢಿ).

ತಲೆಹುಟಿತನಾಯಿ, ತಲೆಹುಳಿತನಾಯಿ = ೧. ಗೊತ್ತುಗುರಿಯಿಲ್ಲದೆ ಸುತ್ತುವ ಮನುಷ್ಯ ; ಅಲೆಮಾರಿ : ತಲೆಹುಟಿತ ನಾಯ ಸ್ವಡು (ಸೂಕ್ತಿಸು. ೮–೪೨೩); ಅವನೊಬ್ಬ ತಲೆಹುಳಿತ ನಾಯಿ ; ಬೀದಿ ಅಲೆಯ ಲು ಹೋಗಿದ್ದಾನೆ (ರೂಢಿ). ೨. ಹುಚ್ಚು ನಾಯಿ : ಅವನು ತಲೆಹುಳಿತ ನಾಯಿಯಂತೆ ಸುತ್ತುತ್ತಿದ್ದಾನೆ (ರೂಢಿ). [ ತಲೆ$_1$ + ಹುಟಿ (<ಪುಟಿ)]

**ತಲೆಹೊಗಿಸು** (ಕ್ರಿ). = ತಲೆಹಾಕು ೩ : ಹೊರಗಿನವನೊಬ್ಬನು ನಡುವೆ ತಲೆಹೊಗಿಸುವುದು ಸರಿಯಲ್ಲವೆಂದು ನನ್ನೆಣಿಕೆ (ಕನ್ನಇ. ೧೬೭).

[ ತಲೆ$_1$ + ಹೊಗಿಸು (<ಪೊಗಿಸು) ]

**ತಲೆಹೊಡಕ** (ನಾ). = ತಲೆವೊಯ್ಕ ೧: ಬೋರ್ನಿಯೋದ ಡಯಾಕರು ಮೊನ್ನೆಯ ತನಕ ತಲೆಹೊಡಕರಾಗಿಯೇ ಇದ್ದರು (ಬಾಲಪ್ರ.III, ೧೬೧೨). 'ತಲೆಹೊಡಕತನ' ಪರಾ. [ ತಲೆ$_1$ + ಹೊಡೆ$_1$ (<ಪೊಡೆ$_1$) + – ಕ$_3$ ]

**ತಲೆಹೊಡಕತನ** (ನಾ). ತಲೆಯನ್ನು ಹೊಡೆಯುವಿಕೆ ; ಕೊಲ್ಲುವಿಕೆ : ಡಯಾಕರಲ್ಲಿ ತಲೆಹೊಡಕತನವಿದ್ದಾಗ ಅವರು, ತಾವು ಕೊಂದವರ, ಎಲುಬು, ತಲೆಗೂದಲುಗಳನ್ನು ಕೊಡುತ್ತಿದ್ದರು (ಬಾಲಪ್ರ. III, ೧೬೧೨).

[ ತಲೆಹೊಡಕ + – ತನ ]

**ತಲೆಹೊಣೆ** 'ತಲೆವೊಣೆ' ನೋ.

**ತಲೆಹೊಯ್** 'ತಲೆವೊಯ್' ನೋ.

**ತಲೆಹೊಯ್ಕ** 'ತಲೆವೊಯ್ಕ' ನೋ.

**ತಲೆಹೊರೆ** 'ತಲೆವೊಱೆ' ನೋ.

**ತಲೆಹೊರೆಗ** (ನಾ). ೧. ತಲೆಯ ಮೇಲೆ ಹೊರೆ ಹೊರುವವನು ; ಭಾರಹೊರುವವನು. ೨. (ಆಲಂ) ಅನಪೇಕ್ಷಿತವಾಗಿ ಹೊರೆಯಾಗಿರು ವವನು; ತಲೆಭಾರವಾಗಿರುವವನು : ಅವರಿಗೆ ಬಹಳ ತಲೆಹೊರೆಗೆ [ರೆಗ]ನಾಗಿರ್ದನದು ನಿಮಿತ್ತಂ ಸಾಯ ಹಾರಿದರುಯೆಂದು ಮರುಗಿ (ನವಮೋ. ೫–೧೨). [ ತಲೆಹೊರೆ (<ತಲೆವೊಱೆ) + – ಗ$_2$ ]

**ತಲೆಹೊಱೆ** 'ತಲೆವೊಱೆ' ನೋ.

**ತಲೆಹೋಕ** 'ತಲೆವೋಕ' ನೋ.

**ತಲೆಹೋಕತನ** (ನಾ). ಮೂರ್ಖತನ ; ಅವಿವೇಕ : ಸೆಱಗು ಬೆಱಗಂ ಪಾರದೆ ತಲೆಹೋಕತನದಿಂದ ಬಂದು ಪವುಜಿಕ್ಕಿಯನಿಸಲವರಿಕೆಯಿಲ್ಲದೇ ಹೊಕ್ಕೇಱಿಯಿಱಿದನು (ಸಮ್ಯಕೌ. ೮–೪೫) ; ತಪ್ಪುಕಾರ್ಯದಿ ತನ್ನ ತಲೆ ಹೋಕತನದಿ ಅಪ್ಪ ನಿನ್ನನು ಕೊಂದು ಅಪಕೀರ್ತಿ ಪಡೆದೆ (ಸಾರಂಗ. ೩೪).

[ ತಲೆಹೋಕ (<ತಲೆವೋಕ) + – ತನ ]

**ತಲೆಹೋಗಿಸು**(ಕ್ರಿ). ತಲೆಯು ಹೋಗುವಂತೆ ಮಾಡು; ಪ್ರಾಣಾಪಾಯ ವುಂಟುಮಾಡು : ತಲೆತಿರುಗಿಸುವುದು ಸೋಮ, ತಲೆಹೋಗಿಸುವುದು ಕಾಮ (ಅಶ್ವಮೇ. ೫೫).

[ ತಲೆ$_1$ + ಹೋಗಿಸು (<ಪೋಗಿಸು) ]

**ತಲೋದರಿ,** ತಳೋದರಿ (ನಾ). ೧. ತೆಳುವಾದ ಹೊಟ್ಟೆಯುಳ್ಳ ಹೆಂಗಸು; ಕೃಶವಾದ ಉದರವುಳ್ಳವಳು; ಸುಂದರ ಸ್ತ್ರೀ: ಸಸಿಯಂ ನೋಡಿ ತಲೋ[ಪಾಠಾಂ. ಳೋ]ದರಿ ಬಿಸುಸುಯ್ದುಂ ಬಯ್ದುಮಿಂತು ಮಾಡಿದ ಬಿದಿಯಂ (ಶಮದ. ೨೨೭ ಪ್ರಯೋ); ಆಭರಣತತಿಗೀ ತಲೋ[ಪಾಠಾಂ. ಳೋ]ದರಿಯಾಭರಣವಹುದಲ್ಲದೇ ಬಳಿಕಾಭರಣವೀ ರೂಪವತಿಗಾಭರಣವಲ್ಲ (ಬಸಪು. ೪-೩೩); ದೆಸೆದೆಸೆಗಳೊಳು ಸಂಜ್ಞೆಗಳು ಸೂಚಿಸೆ ತಲೋ[ಪಾಠಾಂ. ಳೋ]ದರಿ ಕರೆವುತಿರೆ ಮುಂದೆಸೆಯೊಳಂದುಗೆ ಘಲಿರುಘಲಿರೆನೆ ಗೆಜ್ಜೆಗಳು ಮೊರೆಯೆ (ಬಸಪು. ೨೪-೪೪). **ತಳೋದರಿ :** ೧. ವರ ತನೂಭವರಂ ಪಡೆ ನೀಂ ತಳೋದರೀ (ಪಂಪಭಾ. ೧-೧೦೪); ಉರದಡಕಿಲ್ವಣ್ಣಂ ಕರ್ದುಕಿರದಧರದ ಪುಣ್ಗೆವಾಯ್ದ ವಿಾಂಗಗಿದು ತಳೋದರಿ ದರಿಯನೆಯ್ದುವಿನವಮಾ ಸರೋವರಂ ಕಡಿಡೆ ಬೆರ್ಚಿ ದೆಸೆ ದೆಸೆವರಿದಳ್ (ಶಾಂತಿಪು. ೮-೪೪); ಭಸಿತವನೇಕೆವುದ್ಧೂಳಿಸೆ ತಳೋದರಿ ನೀನು (ಬಸಪು. ೧೨-೧೭); ಈತನೇ ಧರ್ಮಜನು . . . ಈ ತಳೋದರಿ ದ್ರುಪದಸುತೆಯೀ ಕೌತುಕವಲೇ ಭುವನಜನ ವಿಖ್ಯಾತರಲ್ಲಿಂದೆಲ್ಲಿ ಮೂಡಿದರೆನುತ ಬೆಬಗಾದ (ಕುವ್ಯಾವಿ. ೧೦-೧೫). ೨. ಗೃಹಿಣಿ ; ಹೆಂಡತಿ : ವೃಕೋದರಂ ತನ್ನ ತಳೋದರಿಯ ಮುಖಮಂ ನೋಡಿ (ಪಂಪಭಾ. ೧೨-೧೫೨ ವ); ವೇದಪುರುಷನ ಸುತನ ಸುತನ ಸಹೋದರನ ಹೆಮ್ಮಗನ ಮಗನ ತಳೋದರಿಯು . . . ಜಠರದಿ ಜನಿಸಿದನಾದಿಮೂರುತಿ ಸಲಹೊ (ಕುವ್ಯಾಆ. ೧-೨೩). [ಸಂ. ತಲೋದರೀ(ತಲ + ಉದರ + – )]

**ತಲೋದ್ವೃತ್ತ** (ನಾ). [ನಾಟ್ಯ] ಮೂವತ್ತೈದು ದೇಶೀಯ ಭೌಮಚಾರಿಗಳಲ್ಲೊಂದು; ಪ ಕಾಲ್ಬೆರಳುಗಳನ್ನು ಮಡಿಸಿ ನೆಲದ ಮೇಲಿಟ್ಟು ಮುಂದಕ್ಕೆ ನಡೆದು ನಿಂತುಕೊಳ್ಳುವುದು : ಬೆರಲ್ಗಳನಿಳೆಯೊಳ್ ಮಡಿದುಂ ಮುಂದಕ್ಕೆ ಮಗುಳ್ದುಮಂತೇ ನಿಲಲುಂ ಮಡದಿ ಕೇಳ್ ತಲೋದ್ವೃತ್ತಂ (ಲಾಸ್ಯರಂ. ೬-೭೨). [ಸಂ. (ತಲ + ಉದ್ವೃತ್ತ)]

**ತಲ್ಪ, ತಳ್ಪ** (ನಾ). ೧. ಹಾಸಿಗೆ; ಶಯ್ಯೆ; ಸುಪ್ಪತ್ತಿಗೆ. 'ತೂಲತಲ್ಪ', 'ಮೃದುತಲ್ಪ' ಪರಾ. ೨. ಹೆಂಡತಿ ; ಸತಿ ; ಪತ್ನಿ : "ಸ್ವಸ್ತ್ರೀಯುಂ ಶಯನಸ್ಥಳಂಗಳಿವು ತಲ್ಪಾ[ಪಾಠಾಂ. ಳ್ಪಾ]ಖ್ಯಾನಮುಂ" (ನಾನಾರ. ೧೧೧). ೩. ಮಾಳಿಗೆ ; ಮಹಡಿ ; ಕರುಮಾಡ. ೪. ತೆಪ್ಪ ; ದೋಣಿ. **ತಳ್ಪ :** ೧. "ತಳ್ಪಮೆನೆ ತಳಿಮಮೆನೆ ಸುಪ್ಪತಿಗೆಗಕ್ಕು ನಾಮಂ" (ಮಂಗರಾ. ೬೦-೧೫); ಅವ್ಯತಾಂ ಭೋರಾಶಿ ಶಯ್ಯಾಸದನದೊಳುರುವೀಚೀಸಮುತ್ತುಂಗ ಮಂಚಾಗ್ರಿಮಶೇಷಾನಳ್ಪತಳ್ಪಸ್ಥಳದೊಳ್ ಅಘಹರಂ ಶ್ರೀಧರಂ ಯೋಗನಿದ್ರೋದ್ಯಮದಿಂದಿರ್ದು (ಎಕ. VII. ಶಿಕಾರಿ. ೧೨೩-೩ ; 1159); ಜಳಶಯನನವತರಿಸುವುದಂ ತಿಳಿದಲ್ಲಿಂ ಮುನ್ನ ದುಗ್ಧವಾರಿಧಿ ತಳ್ಪಚ್ಛಳದಿಂದವತರಿಸಿತ್ತಾ ನಿಳಯದೊಳಿನೆ ಧವಳತಲ್ಪಮೆಸೆದುದನಲ್ಪಂ (ಜಗವಿ. ೨-೭೪); ಸಜ್ಜೆವನೆಯೊಳಗೆ ಮೃದುವೆನಿಪ ತಳ್ಪದ ಮೇಲೆ ಸಜ್ಜನಂ ನೆಲಸಿ (ಬಸರ. ೯-೧೨೯); ನಿನಗಿಂಬಲ್ಲದು ತಳ್ಪಮೆಂದು ತೆಗೆದಿಟ್ಟು (ಸೂಕ್ತಿಸು. ೧೪-೮); ಜಳಪಕ್ಷಿಗಳುಲಿಯಿಂದಂ ಕಳಹಂಸಂ ಕಮಳತಳ್ಪದಿಂದೇಳ್ವವೊಲೊಲ್ದಿಳೆಯರಸನೆಳ್ದನಾ ಮಂಗಳಪಾಠಕರುಲಿಯಿನಮಳ ತಳ್ಪಸ್ಥಳದಿಂ (ರಾಜಶೇ. ೪-೨೭); ನಿಮ್ಮಾಜ್ಞೆಯಿಂದ ಹರಿಗೆ ತಳ್ಪವಾಗಿರ್ದನು (ಭೈರಸೂ. ೨೭). ೨. "ಪೆಂಡಿತಿಯಲ್ಲಿಯುಂ ತಳ್ಪಮೆಂಬುದು" (ಹಲಾಯು. ೧೩೫-೨೪); "ತನ್ನ ಸತಿಯಲ್ಲಿ ತಳ್ಪಮೆಂದೆಂಬುದು" (ಮಂಗರಾ. ೦೪೧-೧೩). ೪. "ತಳ್ಪಂ, ಉಡುಪಃ, ಪ್ಲಪಃ – ಈ ೩ ತೆಪ್ಪಂ" (ಹಲಾಯು. ೧೧೧-೪೯). ೫. ಕೊಳ ; ಪುಷ್ಕರಿಣಿ ; ಹೊಂಡ : "ವೇಶಂತಃ, ಪಲ್ವಲಂ, ತಳ್ಪಂ–ಈ ೩ ಕೊಳಹೆ" (ಹಲಾಯು. ೧೧೧-೫೩); "ವಿಖ್ಯಾತದಿಂ ಸರಸಿ ಕಾಸಾರ ಕೊಳನು ಮತ್ತಾ ತಳ್ಪ[ಪಾಠಾಂ. ಕಳ್ಪ, ತಲ್ಲ]ಮೆನೆ ಪಲ್ವಲಾಖ್ಯಮೆನೆ ವೇಸಂತವೆನಲು ಕೊಳಹಕ್ಕೆ ನಾಮಂ" (ಮಂಗರಾ. ೧೨೩-೧೪). [ಸಂ.]

**ತಲ್ಪಿಸು** 'ತಲಪಿಸು' ನೋ.

**ತಲ್ಪು** (ನಾ). (?) : ಕಟಿದ ಭವಕ್ಕೆ ಪೇಸುವಡೆವಾಸುರಕರ್ಮದತಲ್ಪನರ್ಥಿಸುತ್ತಟಿವೊಡನಿರ್ದೊಡಂಬಡುವ ಯೋಜಿಪ ಬಾಜಿಪ ತತ್ವಗೋಷ್ಠಿಯೊಂದುಟಿಯದೆ (ಶಾಂತಿಪು. ೯-೧೫೦).

[ಪ ಇದು 'ತಳ್ಪು' ಎಂಬುದರ ಅಪಲಿಖಿತವಿರಬಹುದು]

**ತಲ್ಮಡ** (ನಾ). ಯೆಹೂದಿಯರ ಪವಿತ್ರಗ್ರಂಥ; ಯೆಹೂದ್ಯರ ಧರ್ಮಗ್ರಂಥ : ಕ್ರಿಸ್ತ ಮಹಮದ ರಾಮಕೃಷ್ಣ ಜೊರಾಸ್ತ ಗೌತಮರು ದಿವ್ಯ ವೇದ ಕೊರಾನು ಬೈಬಲು ತಲ್ಮಡಾಧಿಗಳು (ಅಗ್ನಿಹಂ. ೧೦-೧೮).

[ ←ಇಂ. Talmud ]

**ತಲ್ಲ** (ನಾ). ಕೊಳ ; ಪುಷ್ಕರಿಣಿ ; ಸರೋವರ : "ಸರಸಿ ಕಾಸಾರ ಕೊಳನು ಮತ್ತಾ ತಲ್ಲ[ಪಾಠಾಂ. ಕಳ್ಪ, ತಳ್ಪ]ಮೆನೆ ಪಲ್ವಲಾಖ್ಯಮೆನೆ ವೇಸಂತವೆನಲು ಕೊಳಹಕ್ಕೆ ನಾಮಂ" (ಮಂಗರಾ. ೧೨೩-೧೪). 'ತಳ್ಪ' ಪರಾ.

[ಸಂ.]

**ತಲ್ಲಖಿನಾಮಾ** 'ತಲ್ಲಾಖಿನಾಮಾ' ನೋ.

**ತಲ್ಲಜ** (ನಾ). ಉತ್ತಮನಾದವನು ; ಶ್ರೇಷ್ಠ : ಅಲ್ಲಿ ಸಂದಮರಾತ್ಯ ದೀಪ್ತರು ತಲ್ಲಜಾಧಮಮಧ್ಯಮರು ತಂತಮ್ಮ ಕರ್ಮಗಳಿಂ (ಸೌನಂದ. ೧೦-೩೨). [ಸಂ.]

**ತಲ್ಲಣ** 'ತಲ್ಲಟ' ನೋ.

**ತಲ್ಲಣಂಗೊಳ್** 'ತಲ್ಲಟಂಗೊಳ್' ನೋ.

**ತಲ್ಲಣಗೊಳ್** 'ತಲ್ಲಟಂಗೊಳ್' ನೋ.

**ತಲ್ಲಣಗೊಳ್ಳು** 'ತಲ್ಲಟಂಗೊಳ್' ನೋ.

**ತಲ್ಲಣದೋಱ್** (ಕ್ರಿ). ವ್ಯಥೆಯನ್ನುಂಟುಮಾಡು ; ಚಿಂತೆಗೊಳಿಸು : ಸಲ್ಲದಪ್ಪಾ ನೀವು ನನ್ನ ಮನಸಿಗಿಷ್ಟು ತಲ್ಲಣದೋರ್ಪುದು ಚದುರೆ (ಭರತ. ೪೫-೬೫). [ತಲ್ಲಣ (<ತಲ್ಲಟ) + ತೋಱ್ (<ತೋಱು)]

**ತಲ್ಲಣಿಕೆ** (ನಾ). ಅಂಜಿಕೆ ; ಭಯ ; ಭೀತಿ : ನುಡಿದಳು ತರುಣಿ ತನ್ನೆದೆಯ ತಲ್ಲಣಿಕೆಯಂ (ಶ್ರೀರಾಮಾ. ೪೫೨-೨೦೧).

[ತಲ್ಲಣ (<ತಲ್ಲಟ) + – ಇಕೆ]

**ತಲ್ಲಣಿಗ** (ನಾ). ೧. ಭಯಗೊಂಡವನು : ತಲ್ಲಣಿಗ ಪೇಳ್ದ ಕಬ್ಬದ ಪಾಂಗಿನಂತಲ್ಲವೆಲ್ಲಿಯುಂ ವಿದ್ವತ್ಸಭಾವಲಯ ಮೆಚ್ಚೆ ಕೈಯ್ಯಲ್ಲಿರಿಸಿದಾಮಳಕದಂತೊರೆವೆ (ಲಿಂಗಪು. ೧-೨೨). ೨. ಭಯಪಡಿಸುವವನು ; ಭಯಂಕರನಾದವನಂ : ಘಲ್ಲಿಸಿದನುಬ್ಬಿಱಿದು ತಬ್ಬಿದ ತಲ್ಲಟೆಯ ತವಕಿಗರ ತೋಟಿಯ ತಲ್ಲಣಿಗ[ಪಾಠಾಂ. ಣಿಯ]ನಱಿಯಟ್ಟಿ ಸದೆದನು ಸಕಲ ವಾನರರ (ತೊರರಾ. ೬-೨೭-೩೭). ೩. ಕೊಲೆಗಾರ : ಬಂದನಾ ಪರವಾದಿಮಸ್ತಕದ ಶೂಲ ಬಂದನಾ ಪರವಾದಿ ಮೋಷ ತಲ್ಲಣಿಗ (ಶರಲೀ. ೯೪-೧೦೦).

[ತಲ್ಲಣ (<ತಲ್ಲಟ) + – ಇಗ]

**ತಲ್ಲಣಿಸು** 'ತಲ್ಲಟಿಸು' ನೋ.

**ತಲ್ಲಳ** 'ತಲ್ಲಟ' ನೋ.

**ತಲ್ಲಳಿಸು** 'ತಲ್ಲಟಿಸು' ನೋ.

**ತಲ್ಲಟ,** ತಲ್ಲಣ, ತಲ್ಲಳ (ನಾ). ೧. ಹೆದರಿಕೆ ; ಭಯ ; ಭೀತಿ ; ಅಂಜಿಕೆ : "ತಲ್ಲಟಂ = ಭಯಂ" (ಶಮದ. ಪರಿ. ೧); "ಭೀತಿ ತಲ್ಲಟಮೆನಿಪ್ಪುದು" (ಸಂಜೀವ. ೩); ನೆಱಿ ಮಾರ್ ಪೆಱಗಿಕ್ಕಿ ಕಾವರಾರಾರ್ಮೊನು ತ್ರೊಟಿಲ್ದಟಲುತಿರ್ಪುದೆ ನಾರಕರ್ಗಲ್ಲಿ ತಲ್ಲಟಂ (ಶಾಂತಿಪು. ೬-೯೪); ಜಳಜಮುಖಿ ನಾಡೆಯುಂ ತಲ್ಲಟದಿಂ ಭೋರೆಂದು ಸುಯ್ದು ತನ್ನಂ ದುಃಖಾನಳ ನಳುರೆ ತನ್ನೊಳಿಂದಳ್ (ಧರ್ಮಾಮೃ. ೩-೫೪); ಕಲ್ಲಮಟಿ ಕಟಿಯೆ ಪು[ಗ] ಲೆಡೆಯಿಲ್ಲದೆ ಕಡು ನೊಂದು ಜೀವಧನ [ಮುಂ] ಜನಮುಂ ತಲ್ಲಟದಿಂ ಕೋಳ್ಗುದಿಗೊಳ್ವಲ್ಲಿ ಕುಮಾರಂ ಭಯಸ್ಥರಾಗದಿ[ರೆಂ]ದಂ (ಬಂಹರಿ. ೬-೨೨);

ಪುಲ್ಲೆಯ ಹಿಂಡನೊಂದು ಪುಲಿ ಗೆಂಟಱೊಳೊಯ್ಯನೆ ಕಂಡು . . . ಅದರ್ಕೆ ಲಂಘಿಸಲ್ ತಲ್ಲಟದಿಂ ಕುನುಂಗಿ ನೆಱೆ ನೀಂಟಿಸಿ ನೀಳ್ದ ಕೊರಲ್ಗೆ ಪಾಯ್ದು (ದಶಕು. ೨-೧೧೩) ; ಎಮ್ಮ ಜಾತಿಗೀ ಚಕಿತತೆ ಸಲ್ಲದೆಂದು ದಿಟವೊಂದಿದೊಡಂ ಬಳೆದತ್ತು ತಲ್ಲಟಂ (ಚಿಕವಿ. ೬-೨೦೮). ೨. ಚಿಂತೆ ; ಮನೋವ್ಯಥೆ : ಅದಂ ಪರದನೀಕ್ಷಿಸಿ ಚಂದನವಪ್ಪುದೆಂಬುದಂ ಮೆಲ್ಲನೆ ಚಿತ್ತದಿಂದಱಿದದಂ ಕಡಿವೀ ಕಡುಸೇದೆಯೇಕೆ ನೀನೊಲ್ಲದೊಡೊಂದು ದೊಡ್ಡ ಪೊರೆ ಪುಳ್ಳಿಯ ನೀವೆನಿದಕ್ಕೆ ನೀನಿದ ತಲ್ಲಟವಾಗದೀವುದೆನೆ (ಧರ್ಮಪ. ೯-೯). **ತಲ್ಲಣ :** ೧. "ತಲ್ಲಣ [ಪಾಠಾಂ. ಳ]ಮೆನೆ ಭಯಮಕ್ಕುಂ" (ಭಾರಸಿ. ೨೦) ; ಅಂತನಿಬರ ಮನಕ್ಕೆ ತಲ್ಲಣಂ ಬರ್ಪಂತೆ ಬಂದು (ಶಾಂತಿಪು. ೫-೯೪ ವ) ; ಅಜನೀಕೆಯ ಸೆಳ್ಪುಗುರಿಂಗೀಯೆ ತನ್ನ ಚೆಲ್ವಂ ಪಿರಿದುಂ ತಲ್ಲಣದಿಂ ಕೇದಗೆಗಳ್ ಮುಳ್ಳ್ಗಳ್ ಪೊಕ್ಕಿರ್ಪವಿನ್ನುಮತಿ ಭಯದಿಂದಂ (ಧರ್ಮಾಮೃ. ೩-೧೫೬) ; ಮೋಹಮುಂ ಗರ್ವಮುಂ ತಲ್ಲಣಮುಂ ತೀರ್ಗುಂ ದಿಟಂ ನಿಮ್ಮಯ ನಿಜ ಶರಣಂಗಂ (ಪಂಪಾಶ. ೪೫) : ಇನನುಟ್ಟುದಂ ಬಿಸುಡೆ ತಲ್ಲಣದಿಂ ಮದನಂ ಬಿಸುಟ್ಟನುಟ್ಟುದಂ (ಪುಷ್ಪಪು. ೧೩-೧೦೭) : ಕರ್ಣನ ಸೆಣಸಿ ನಿಂದನು ಮತ್ತೆ ಸಮರಾಂಗಣದ ಚೌಪಟಮಲ್ಲನಿತ್ತನು ಪಡೆಗೆ ತಲ್ಲಣವ (ಕುವ್ಯಾದ್ರೋ. ೧೬-೪೮). ೨. ಕೊಲೆಯಿಂದೊಂದನಸತ್ಯಮೆಂಬೆರಡಂ . . . ಅನಾಕುಳಂ ತೊಱೆದೊಡೇಂ ಹೃಲ್ಲಾಸಮೇ ದೋಷಮೇ ಮಲಮೇ ತಲ್ಲಣಮೇ ಕೃತಾಂತಭಯಮೇ ಸಂತಾಪಮೇ ಬೇವಸಂ (ಶಾಂತಿಪು. ೭-೫) ; ವಿಗಡ ವೀರಾನೀಕವಿದೆ ತಲ್ಲಣದೆ ತಗಹಿನಲೇಕೆ ಕಾಲಕ್ಷೇಪವೆಂದನು ಕೌರವರ ರಾಯ (ಕುವ್ಯಾದ್ರೋ. ೧೬-೨೩). ೩. ತಾಪ ; ಸಂಕಟ ; ಕಳವಳ : ತೀವ್ರದ ತೃಷೆ ಮೊಕ್ಕಳವಾಗೆ . . . ತಲ್ಲಣದಿಂ ಬಿಸುಸುಯ್ದುಮ್ಮಳಿಸಿ (ಧರ್ಮಾಮೃ. ೧-೧೫೫) ; ಉದಕವ ಕುಡಿದು ಬಳಿಕಾರೈವೆನಿದನೆನುತ ಲವಲವಿಸಿ ತಾಳಿಗೆಯ ತಲ್ಲಣದವನು ಹೊಕ್ಕನು ಕೊಳವನು (ಕುವ್ಯಾಆ. ೨೩-೨೦) : ಜಗದೊಳಾವ ಭ್ಯಾಸಿಯೋ ತಾಳಿಗೆಯ ತಲ್ಲಣದೊಳಗೆ ನೆಗಹಿನ ಸುಗಮಸಾಹಸನರರೆ ಮರಪು ಭಾಪೆಂದುದುಭಯಬಲ (ಕುವ್ಯಾದ್ರೋ. ೧೩-೦೪). ೪. ಆವೇಗ; ಉದ್ವೇಗ: ಒದವಿದ ತಲ್ಲಣಂಬೆರಸು ಚೆಚ್ಚರದಿಂ ಪಿಡಿದೆತ್ತಿ ಶಂಕೆಯಿಂ ಸುದತಿಯ ಪಾಂಗಿದೇನೆನುತಂ . . . ಮೇಲುದಱ ಸೆಱಂಗಿನಿಂ ನಯದೆ ಬೀಸಿದನಾ ಮನುಜೇಂದ್ರಚಂದ್ರಮಂ (ಕಾದಂಪೂ. ೯೨೯) : ಗೂಡುವಾಯ್ವ ಮೆಲ್ಲೆರ್ದೆಯ ತಲ್ಲಣಕ್ಕೆ ಬೆಱಗಾದ ತೆಱದಿನಖಿಳಾಂಗಸ್ಪಂದಮುಮಂದ ಮಾಗೆಯುಂ (ವರ್ಧಪು. ೬-೨ ವ) ; ತವಕದಿನಪ್ಪಿ ತಲ್ಲಣದೆ ಚುಂಬಿಸಿ ನಿಲ್ಲದೆ ನಾಣ್ಗೆವಾಯ್ದು ಕೂಡುವ ಬಗೆಯಿಂತುಟೆಂದುಸಿರ್ವ ಬಲ್ಮೆಯನಾನಱಿಯೆಂ (ದಶಕು. ೯-೬೪). ೫. ದಿಗ್ಭ್ರಮೆ; ಕಕ್ಕಾಬಿಕ್ಕಿ: ತಡೆಯದೆ ಮಗಳೆಂದಳಿಯನ ನಡುವಂ ತಟ್ಕೈಸಿಕೊಂಡು ಹಿತ್ತಲ ದೆಸೆಯೊಳ್ ಬಿಡದೋಡುವಾಕೆ ಕಾಣದೆ ಕೆಡೆದಳ್ತಲ್ಲಣದಿನಾಗಳೆಂಜಲಕುಟಿಯೊಳ್ (ಧರ್ಮಾಮೃ. ೨-೪೪) ; ಕೂಗಿಡುತಿರ್ಪಟುತಿರ್ಪ ತತ್ಪುರೀಜನದ ಪೊದಟ್ಟ ತಲ್ಲಣದ ಮಲ್ಲಣೆ ಬೀದಿಯೊಳಾದುದದ್ಭುತಂ (ವರ್ಧಪು. ೩-೫). **ತಲ್ಲಳ :** ೧. ಯುಧಿಷ್ಠಿರ ನಾಳ್ವ ದೇಶದೊಳ್ ಮಱೆ ಮೋಸ ವಾಸಿ ತಲ್ಲಳ ತಳೆ ವಿಯೋಗ ಮಲಸಿಕೆ ಕರ್ಕಶಂಗಳಿವು ಮೊಳೆದೋಱವೇವೇಳ್ವೆನು (ಜೈಮಿಭಾ. ೨-೫).

[ ದೇ.॥ ತುಳು. ತಲ್ಲಣ ; ತೆಲು. ತಲ್ಲಡ ]

**ತಲ್ಲಟಂಗೊಳ್, ತಲ್ಲಣಂಗೊಳ್, ತಲ್ಲಣಗೊಳ್, ತಲ್ಲಣಗೊಳ್ಳು (ಕ್ರಿ).** ೧. ಭಯಗೊಳ್ಳು ; ಭೀತಿ ಹೊಂದು ; ಅಂಜು ; ಗಾಬರಿಪಡು : ತಲಕಾಡು ತಲ್ಲಟಂಗೊಳೆ (ಚಿಕವಿ. ೨-೬೫) : ಮನದೆ ತಲ್ಲಟಂಗೊಂಡು ನಾಥನೆಡೆಗೆ ಪರಿತಂದು ಗೈದ ಗೈಮೆಯಂ ಬಯ್ದ ಬಯ್ಗಳಂ ಬಿನ್ನವಿಸಿದರ್ (ರಾಮಾಶ್ವ. ೧೨-೩೦). **ತಲ್ಲಣಂಗೊಳ್ :** ೧. ಕಂಡು ಕಿರಾತನೊರ್ವ ನಿಭಮಸ್ತಕಮೌಕ್ತಿಕಲೋಭದಿಂದೆ ಕೋದಂಡಮನಾರ್ಪಿನಿಂ ತೆಗೆದು ಕೂರ್ಪಿನ ಬಾಣದಿನೆಚ್ಚೊಡುರ್ಚಿ ವೇದಂಡಲಲಾಟದಿಂ ಪೆಱಗೆ ಪೇಚಕದೊಳ್ ಮಿಗೆ ಮೂಡೆ ತಲ್ಲಣಂಗೊಂಡುದು (ಗಿರಿಕ. ೧-೧೧೩) : ಕೆಲ ಪೌಜು ನಿತ್ತರಿಸಲಾಱದೆ ಚೆಲ್ಲಿಪಿಲ್ಲಿಯಾದುದು . . . ತಲ್ಲಣಂಗೊಂಡು ತಕ್ಕಳಿದು ನಿಂದೆಡೆಯಲ್ಲಿ ನಿಲ್ಲದಾಯಿತು . . . ಜಿತಶತ್ರುವಿಱಿವಿಱಿತಕೆ (ಸಮ್ಯಕೌ. ೮-೫೧). ೨. ಚಿಂತೆಗೊಳ್ಳು ; ತಳಮಳಗೊಳ್ಳು: ಅತಿ ತಾಪೋದ್ರೇಕದಿಂದಂ . . . ಕೊರಗುವ ಸೌಂದರವತಿಯಂ ಕಂಡೆಲ್ಲಾ ಸಖಿಯರ್ ತಲ್ಲಣಂಗೊಂಡು (ಉದ್ಭಟ. ೭-೩ ವ). **ತಲ್ಲಣಗೊಳ್ :** ೧. ಮನ್ನೆಯರು ತಲ್ಲಣಗೊಂಡು ಖಾನನಿಗೆ ಬೇಡಿದುದಿತ್ತು ನಿಲ್ಲದೆ ಕೂಟಕೈದಿದರು (ಕಂನವಿ. ೧೧-೬೨) ; ಬೆದರಿ ದನಗಸ್ತ್ಯಂ ತ್ರಿಶಂಕು ತಲ್ಲಣಗೊಂಡ (ವೆಂಕಾರಾ. ೫-೧-೨೩). ೨. ಸಂತಸದಿ ನುಡಿವುತಿರ್ದಳದೊಂದು ತಾಣದೊಳ್ವಲ್ಲವರ ಚಿತ್ತ ತಲ್ಲಣಗೊಂಬೊಲು (ವೆಂಕಾರಾ. ೫-೬-೫೨). **ತಲ್ಲಣಗೊಳ್ಳು :** ೧. ದುರ್ಗದಲ್ಲಿದ್ದ ರಕ್ಷಕ ಭಟರು . . . ತಲ್ಲಣಗೊಳ್ಳಲಾರಂಭಿಸಿದರು (ರಾವಿಜ. ೨೩) : ತಲ್ಲಣಗೊಂಡಿದ್ದ ಬಿಲಿಬೋಬನು ಒಮ್ಮಿಂದೊಮ್ಮೆ ಉತ್ಸಾಹಿತನಾದ (ಮಹಾತ್ಮಾ. ೯೨). ೨. ಇದೇಕೆ ನನ್ನ ಹೃದಯ ತಲ್ಲಣಗೊಂಡಿದೆ ? (ವಚಭಾ. ೨೮೪) ; ಮನ್ನಣೆ ಸಿಕ್ಕದಿದ್ದರೆ ತಲ್ಲಣಗೊಳ್ಳಬಹುದೇ ? (ಗಾದೆ). [ ತಲ್ಲಟ + ಕೊಳ್$_1$ ]

**ತಲ್ಲಟಿಸು, ತಲ್ಲಣಿಸು, ತಲ್ಲಳಿಸು, ತಳ್ಳಳಿಸು (ಕ್ರಿ).** ೧. ಭೀತಿಗೊಳ್ಳು ; ಭಯಗೊಳ್ಳು ; ಗಾಬರಿಹೊಂದು ; ಪರಮಯೋಗಿಗೆ ಯೋಗ ನಿಯೋಗ ಘಾತಮಂ ಘಟಿಯಿಸೆ ರಂಭೆಯೆಂಬಳ ತಿಲೋತ್ತಮೆಯೆಂಬಳ ಬರ್ಪುದರ್ಕೆ ತಲ್ಲಟಿಸಿ ಭಯಾಕುಳರ್ ಪೆಱಱ (ಶಾಂತಿಪು. ೯-೨೮) ; ಸೋಲ್ತುಂ ತಣಿಯದೆ ತಲ್ಲಟಿಸಿ ತಳ್ಳಂಕಗುಟ್ಟುವಳುರ್ಕೆಯುಮಿರ್ದ ರೂಪನಿರ್ದಂತಿರೆರ್ದೆಯಂ ಕುದಿಯಿಸಲ್ (ಲೀಲಾವ. ೧೦-೪೫ ವ); ವಿರಾಟಂ ತುಱುವಿನ ಕೋಳ್ವಾಯ ನೆಯ್ದಿ ಮಿತ್ತುವಿನ ಬಾಯನೆಯ್ದಿದಂತೆ ತಲ್ಲಟಿಸಿಯುಂ (ಬಂಹರಿ. ೧೧-೪೨ ವ) ; ಕಣ್ಗೆಟ್ಟಲ್ಲಿ ತಲ್ಲಟಿಸಿ ಮೂಗರಿವಟ್ಟು ಕೆಟ್ಟಂ (ಚಿಕವಿ. ೨-೫೧) ; ಸಾವೆನಗೆ ಇಲ್ಲದಿರ್ಪಾಗಳೇತರ್ಕೆ ತಲ್ಲಟಿಸವೇಟ್ಯುಮಾನ್ ? (ಬದ್ಮಪ್ರ. ೪೯-೧೦೬೨). ೨. ತಳಮಳಗೊಳ್ಳು ; ಚಿಂತೆಗೀಡಾಗು ; ವ್ಯಾಕುಲಗೊಳ್ಳು : ತದೀಯ ದುಸ್ತರ ಸ್ಮರದಶಾವ್ಯತಿಕರಕ್ಕೆ ತಲ್ಲಟಿಸಿ (ವರ್ಧಪು. ೪-೮೪ ವ) ; ದನುಜರುಡುಗಿ ಕರಂ ತಲ್ಲಟಿಸೆ ವಿಯೋಗಿಗಳಿಂಬಂ ಘಟಿಯಿಸಲಂದೊಗೆದುವೊಂದಿ ಹಿಮಕರಕಿರಣಂ (ಸೂಕ್ತಿಸು. ೮-೨೫೮). ೩. ಆವೇಗಗೊಳ್ಳು ; ಉದ್ವೇಗಹೊಂದು : ಬಗೆಗಿಂದುಮ್ಮಳವಾಗೆ ತಲ್ಲಟಿ[ಪಾಠಾಂ. ಣಿ]ಸಿ ಬಾಟಂ ಸಾಧಿಸುತ್ತಿರ್ದ ಪೆರ್ಮಗನಂ ನೋಡುವೆನೆಂದು ಪೋಗಿ (ಪಂರಾಮಾ. ೯-೪೩). **ತಲ್ಲಣಿಸು:** ೧. ತಲ್ಲಣಿಸದಲಸದಿಡು ಮೃದುಪದಮಂ (ಕವಿರಾ. ೨-೪) ; ದೇವಲೋಕಂ ಮೇಲೆ ಬಿರ್ದಪುದೆಂದು ತಲ್ಲಣಿಸಿ ಬೆಬ್ಬಳಿಸಿ ನೋಡುತಿರ್ಪುದುಂ (ಧರ್ಮಾಮೃ. ೮-೨೦೪); ಬಸವರಾಜಂ ಪೊಗಳ್ತೆಗೆ ತಲ್ಲಣಿಸಿ ತಗ್ಗಿ ಮಲ್ಲಣಿಗೊಂಡು (ಬಸರ. ೮-೭೦) : ಪಾವಿನ ಭಯದಿಂ ತಲ್ಲಣಿಸುವಂತಿರಾಯ್ತೆನಗಿಲ್ಲಿ ವಿಪತ್ತು (ದಶಕು. ೨-೧೩೩): ಪ್ರಳಯದಿನದಲಿ ತಿವಿವ ಸಿಡಿಲವ್ವಳಿಸುವಂತಿರೆ ರೌದ್ರರವ ಘುಳುಘುಳಿಸಿ ತಲ್ಲಣಿಸಿತ್ತು ಕೌರವರಾಯ ಪರಿವಾರ (ಕುವ್ಯಾದ್ರೋ. ೮-೪೦); ತಲ್ಲಣಿಸದಿರು ಕಂಡ್ಯಾ ತಾಳು ಮನವೆ ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ (ಕನಕ. ೬೧ ಪಲ್ಲವಿ); ತದ್ರಣಾದ್ಭುತ ವಿಜೃಂಭಿತ ಗರ್ಜನೆಗೆತ್ತು ತೀವ್ರಕಂಪನಮೆರ್ದೆಗಾಗೆ ತಲ್ಲಣಿಸಿ ಮಲ್ಲಳಿಗೊಳ್ವರರಾತಿಭೂವರರ್ (ರಾಜಶೇ. ೫-೧೩) : ತಲ್ಲಣಿಸಯೇನ್ ನುಡಿಯಲ್ಕೆ ಅಂತಪ್ಪ ನುಡಿಗಳನ್ ? (ಬದ್ಮಪ್ರ. ೪೯-೧೦೬೧) ; ಇಲ್ಲದವನು ತಲ್ಲಣಿಸನು (ಗಾದೆ). ೨. ಪೋದೆಡೆಯೊಳಸ್ಮದೀಯ ಕುಶಲವಾರ್ತೆಗೆ ತಲ್ಲಣಿಸಲ್ವೇಡೆಂದು ತನ್ನ ಮನೋಹಿತದ ಕಾರ್ಯನಿಶ್ಚಯಮನಱಿಯೆ ನುಡಿದು (ಶಾಂತಿಪು. ೨-೬೬ ವ) ; ಕಾವವರಾರೆನುತ ತಲ್ಲಣಿಸುತಿರ್ದುದು ಪಾಂಡುಸುತಸೇನೆ (ಕುವ್ಯಾದ್ರೋ. ೩-೫೮). ೩. ಪಲ್ಲಂ ಸುಲಿಯದೆ ವನಿತೆಯರಂ ಪಂಬಲಿಸದೆ ತಲ್ಲಣಿಸದಿರ್ಪುದತ್ಯುತ್ಸವದಿಂ (ಧರ್ಮಾಮೃ. ೧-೧೩೪); ಇಂತಹ ಅಪನಿಂದೆಯು ನನಗೆ

ಬಂದಿರುವುದರಿಂದ ನನ್ನ ಮನಸ್ಸು ಬಹಳ ತಲ್ಲಣಿಸುತ್ತಿದೆ (ರಾವಿಜ. ೩). ೪. ನಡುಂಗಂ; ಕಂಪಿಸು; ತತ್ತರಿಸು: ಗಾಳಿಗೊಡ್ಡಿದ ಸೊಡರಂತೆ ನಡುಗಿ ಸೂಳೆಯ ಕೊರಳಂತೆ ಕ[ತ]ರ್ಗಿ ಪಿಡಿವೆತ್ತ ಕಳ್ಳನಂತೆ ತಲ್ಲಣಿಸಿ (ಧರ್ಮಾಮೃ. ೧-೧೬೮); ಓಗರದೆಸರಂತೆ ಕುದಿಗೊಂಡವು ಸಪ್ತಸಾಗರ ಮೇರು ತಲ್ಲಣಿಸೆ ಕೂಗಿದುವಿರದೆ ದಿಗ್ಗಜ (ಮೋಹತ. ೩೫-೪೫). **ತಲ್ಲಳಿಸು:** ೧. ಪಾಣ್ಡ್ಯಂ ಭಯಗೊಣ್ಡಂ . . . ತಲ್ಲಳಿಸಿದಂ ಚೋಳಂ (ಸೌಇಇ. XX, ೯೯-೧೮; 1076 ?); ತಲ್ಲಳಿಸುವರ ತನುಲಯದಲಙ್ಬುಳ್ಳವರು (ನಿಭಾಗ. ೫-೬-೩೮). ೩. ಮಲಗಿದನು ಕಲಿಭೀಷ್ಮನೆನೆ ತಲ್ಲಳಿಸಿದನು ಕುರುರಾಯನುದರದೊಳಿಳಿದುದಾಯುಧವೆಂಬ ತೆಱದಲಿ ತಳ್ಕುವಾಱಿದನು (ಕುವ್ಯಾಭೀ. ೧೧-೧೫). **ತಳ್ಳಳಿಸು:** ೧. ತಳ್ಳಳಿಸಿ ದಶಕಂಠ ನೇಮಿಸೆ ನಿಲ್ಲದಸುರಾನೀಕ ಕವಿದುದು (ಕೌಶಿರಾ. ೩೨-೬). ೩. ಪೊಡವಿಯೋರಡಿಗೊರ್ಮೆಯಿತ್ತತ್ತೊಡನೊಡನೆ ತಳ್ಳ[ಪಾಠಾಂ. ಲ್ಲ]ಳಿಸುತಿರೆ ಕೈದುಡುಕುತಿರ್ದರು (ಸಾಳ್ವಭಾ. ೨೨-೬೭). ೪. ತಳ್ಳಳಿಸಿ ಕಪಿರಾಯ ಬಿದ್ದನು ಗಲ್ಲದಲಿ ಬಿಸಿನೆತ್ತರೊಕ್ಕುದು (ಕೌಶಿರಾ. ೨೦-೪೮); ಧರಣೀಶನು ತಳ್ಳಳಿಸಿ ಬಾಲನೇನಾದನೊ ಕಣಾ ರಣದೊಳಳ್ಕಿರಿಯುತಿದೆ ಕಳಕಳಂ . . . ಎಂದೆನಲು (ತುರಂಗ. ೫೦-೯೫). ೫. ತೂಗಾಡು; ಒಲೆದಾಡು: ತಳ್ಳಳಿಪ ಮಣಿಲಂಬಣದ ಮುಗಿಲಳ್ಳಿಱಿವ ಮಣಿಗಳಸಗಳ ಚೆಲುವೊಳ್ಳಿತೆನೆ ಪೊಂಬಸದಿಗಳಿ ಆ ಪೊಳಲೊಳೆಸೆದಿಹುವು (ಸಾಳ್ವಭಾ. ೨-೧೫).

[ ತಲ್ಲಟಿ + – ಇಸು₃ ]

**ತಲ್ಲಾಕ್**(ನಾ).ವಿವಾಹ ವಿಚ್ಛೇದ; ಘಟಸ್ಫೋಟ (ಉಕ): ಹುಚ್ಚಿಯೆಂದು ಕಂಡಿದ್ದರಿಂದ ಅವಳಿಗೆ 'ತಲ್ಲಾಕ್' ಕೊಟ್ಟಿದ್ದ (ವಿವಾಹವಿಚ್ಛೇದ ಮಾಡಿಕೊಂಡಿದ್ದ)ನೆಂದು ಮಬಾರಕನು ಹೇಳುತ್ತಾನೆ (ಬಂಕಿಮ. ೨೫೦). 'ತಲ್ಲಾಖನಾಮಾ' ಪರಾ. [←ಅರ.ಹಿಂ. ತಲಾಕ್; ಮರಾ. ತಲ್ಲಾಖ್]

**ತಲ್ಲಾಖನಾಮಾ,** ತಲ್ಲಖನಾಮಾ (ನಾ). ವಿವಾಹವಿಚ್ಛೇದನ ಪತ್ರ; ಸೋಡಚೀಟಿ (ಉಕ): ನಿನಗೆ ನಾನು ತಲ್ಲಾಖನಾಮಾ ಬರೆದಿಟ್ಟು ಬಲು ದಿನಗಳಾದವು (ಗಾಳಿಪ. ೧೮೬). **ತಲ್ಲಖನಾಮಾ:** ನನ್ನ ಬೀಬೀ ತಲ್ಲಖನಾಮಾ ಕಳಿಸಿದ್ರೂ ಇಷ್ಟ ಕಾಳಜಿ ಮಾಡತಿದ್ದಿಲ್ಲಾ (ದೀಪಹ. I, ೧೫೭).

[ ←ಮರಾ. ತಲ್ಲಾಖನಾಮಾ ]

**ತಲ್ಲಿ** (ನಾ). ಯುವತಿ: "ತಲ್ಲಿ–ಹರೆಯದ ಹುಡಗಿ" (ಜಾನಕೋ. ೬೫).

[ ಸಂ. ತಲ್ಲೀ ]

**ತಲ್ಲಿಯು,** ತಲ್ಲೀಯಂ (ನಾ). ಮಗ್ನವಾಗಿರುವಿಕೆ; ಲೀನವಾಗಿರುವುದು; ತಲ್ಲೀನತೆ: ಇರ್ಪರು ಪದಾರ್ಥ ಪ್ರಸಾದವೆಂದಱಿಯದರು ಇಂತು ಲಿಂಗದೊಳು ತಲ್ಲಿಯವಾಗಿಪ್ಪವರು ಎಂತು ಬಲ್ಲರು ದುರ್ಗುಣವ ಸುಗುಣಂಗಳವರು ಅಂಗ ಲಿಂಗವೋ ಲಿಂಗವಂಗವೆಂದಱಿಯದರು (ದೀಕ್ಷಾಬೋ. ೧೫೩-೧೯). **ತಲ್ಲೀಯು:** ಒಳ್ಳಿಹ ಪದದಲ್ಲಿ ತಲ್ಲೀಯರಾದೆವೆಂದು ಬಲ್ಲತನವ ಮೆಚ್ಚಿ ಇರಲಾಗಿ (ಮೋಳಿಮಾ. ೪೦-೧೬೮); ಶರಣರ ಚಿತ್ತವು ಲಿಂಗದಲ್ಲಿ ತಲ್ಲೀಯವಾಗಿ ಭಕ್ತರು ನೆನೆದಂತೆ ಶಿವನು ಪೂಜೆಗೊಂಬನೆಂದು . . . ನಿರೂಪಿಸಿದನು (ಭೈರಸೂ. ೧೯). [ <ಸಂ. ತಲ್ಲಯ ]

**ತಲ್ಲೀನ** (ನಾ). ಒಂದೇ ವಿಷಯದಲ್ಲಿ ಆಸಕ್ತನಾಗಿರುವವನು; ಲೀನವಾಗಿರುವವನು; ಮಗ್ನನಾಗಿರುವವನು: ಶಿವಭಕ್ತನಾದ ಈ ಕವಿಯು ಅವರ ಚರಿತ್ರೆಗಳಲ್ಲಿ ತಲ್ಲೀನನಾದುದರಿಂದ ಹಾಡುಗಳಲ್ಲಿ ಭಕ್ತಿಯ ಆವೇಶವು ತುಂಬಿಲ್ಲ ಹರಿದಿದೆ (ಕನ್ನಜಾ. ೧೯೦); ಕೆಲವರು ಒಬ್ಬರ ಮುಖವನ್ನೊಬ್ಬರು ನೋಡುತ್ತ ಪರಸ್ಪರ ಪರಿಚಯದಲ್ಲಿ ತಲ್ಲೀನರಾಗಿದ್ದರು (ಪುನರು. ೨೩). [ ಸಂ. ]

**ತಲ್ಲೀನತೆ** (ನಾ). ಒಂದೇ ವಿಷಯದಲ್ಲಿ ಮುಳುಗಿರುವಿಕೆ; ಮಗ್ನತೆ; ತಾದಾತ್ಮ್ಯ: ದುಡಿಮೆಯ ವಿಶ್ವದಲ್ಲಿ ತಲ್ಲೀನತೆಯನ್ನು ಪಡೆಯಲು ಯಶೋದೆ ಸಮರ್ಥಳಾದಳು (ವಾತ್ಸಲ್ಯ. ೧೮೩); ರೋಹಿಣಿ . . . ಕವನವನ್ನು ತಲ್ಲೀನತೆಯಿಂದ ಹಾಡಿದಳು (ರಂಗರೋ. ೬೭); ಈ ತಲ್ಲೀನತೆಗೆ ಕಲಾಕೃತಿ ನಮ್ಮನ್ನು ಮರುಳಾಗಿಸುವುದೇ ಕಾರಣ (ಸೌಂದಸ. ೬೩).

[ ಸಂ. ತಲ್ಲೀನತಾ ]

**ತಲ್ಲೀಯು** 'ತಲ್ಲಿಯಂ' ನೋ.

**ತವಂಗ,** ತವಕ್ಕ, ತವಗ (ನಾ). ೧. ಕಟ್ಟೆ; ಜಗಲಿ; ಅಟ್ಟಣೆ; ವೇದಿಕೆ: "ಅವರ್ಕೆವೆತ್ತೆಸೆದು ತೋರ್ಪ ತವಂಗವುದಿಂದ್ರಕೋಶಕಂ" (ವಸ್ತುಕೋ. ೪೮-೧೭); "ತವಂಗಮೆಂದು ತವಗಂ" (ಕಶಸಾ. ೩೦-೬೫೮); ಯುವರಾಜಂ ಬಂದೀಗಳ್ ತವಂಗದಲ್ಲಿರ್ದನೆಂದು ಪರಮೋತ್ಸವದಿಂ ತವತವಗೆ ಪರಿದು ಪರಿಜನನಿವಹಂ ಬಿನ್ನವಿಸೆ (ಕಾದಂಉ. ೨೬೩); ಈಕ್ಷಣಸುಖಂ ಕೈಗಣ್ಮೆ ನಿಶ್ರೇಣಿಯಿಂ ಗಣಿಕಾಶ್ರೇಣಿಯುಮೇಱಿ ನಿಂದುದು ತವಂಗಶ್ರೇಣಿಯಂ ಲೀಲೆಯಿಂ (ಜಗವಿ. ೬-೪೪); ಚತುರ್ಮುಖ ದ್ವಾರೋದಾರಮಪ್ಪುತ್ತುಂಗ ಸರ್ವಾವಸರ ತವಂಗಮನೇಱಿ (ಚಂದ್ರಪ್ರ. ೯-೩ ವ); ಮಾರನ ಚಾಪಾಗಮ ವಿಸ್ತಾರಮನೀಕ್ಷಿಪ ತವಂಗಂ . . . ಇದೆನೆ ಸೂಳೆಗೇರಿ ಮಿಗೆ ಸೊಗಯಿಸುಗುಂ (ಪಾರ್ಶ್ವಪು. ೭-೩೬). ೨. ಉನ್ನತವಾದ ಪೀಠ,–ಆಸನ: ವರವೇದಿ ತಟ್ಟಿ ತಳೆ ಗೋಪುರವಾಳ್ವೆಱಿ ಪಡಿ ತವಂಗವಂಕದ ಕಳನೋವರಿ ಸೀಯಬಾರವಂತಃಪುರಮುಯ್ಯಲ್ ಕೃತಕಶಿಖರಿಯುದ್ಯಾನವನಂ (ಪುಷ್ಪಪು. ೬-೨೩). **ತವಕ್ಕ:** ೨. ತಾವು ಕೆಲವು ಮಂದಿಯನ್ನು ಬೆಂಗಾವಲಿಗೆ ಇಟ್ಟುಕೊಂಡು ಊರೊಳಗೆ ತವಕದ ಮೇಲೆ ಇರಬೇಕು (ಚಿತ್ರಪಾ. ೨೪). **ತವಗ:** ೧. "ಇಂದ್ರಕೋಶಮೆನೆ ತವಗಮಕ್ಕು" (ಮಂಗರಾ. ೫೭-೫); ಘುಳು ಘುಳಿಸುತಿರ್ಪ ತವಗವನೊಪ್ಪದಿಂದೇಱಿ ತೊಳತೊಳಪ ಸಿಂಹಾಸನದ ಮೇಲೆ ತಾಂ ಮಿಱಿ ಕುಳ್ಳಿರ್ದು (ಬೊಮ್ಮರ. ೧೬೭-೧೦); ಈಗೇಳಿ ತವಗದಾರಾಧನೆಯ ಕೈಕೊಳಲ್ ಬೇಗಬಹುದೆಂದು ಬಿನ್ನೈಸೆ ಸಿದ್ಧೇಂದ್ರನಾ ತವಗಕ್ಕೆ ನಡೆತಂದನು (ಸಿದ್ಧರಾ. ೮-೮೨); ಉರಿಕರಿಯಾದ ಕರಿಕೊಳ್ಳಿಗಳನಱಿಸಿ ಸಿದ್ದಿಗೆಯ ನುಲಿಯ ಒತ್ತಿ ಬಿಗಿಬಿಗಿದು ಹಂಜರಿಸಿ ತವಗವನಿಕ್ಕಿ ಮತ್ತೆ ಮೇಲೊಂದು ತಲೆಗುಡಿಸಿಲಂ ಕಟ್ಟಿ ಕಾಯುತ್ತಿರ್ದಂ (ಹಚಕಾ. ೧೧-೪೩); ನೆಟ್ಟನೆ ಶೂಲದ ಮರ ಹಳೆಯ ಸಿದ್ದಿಗೆಯ ಕಟ್ಟಿ ತವಗವಮಾಡಿ ಕುಳಿತ (ಹರಿಸಾಂ. ೪-೧೮). ೨. ಗಿಡುಗ ಲಂಘನದಿಂದ ತವಗವನಡರೆ ಲಂಘಿಸಿ . . . ಕಂಸನೆಡಗಾಲಾ ಪಿಡಿದು ನೆಗೆದಪ್ಪಳಿಸೆ (ಸಾಳ್ವಭಾ. ೨೨-೭೬); ಸ್ಫುರಿಸುವ ಮಂಚದೊಳಂತಃಪುರನಾರಿಯರೊಳಗೆ ಮಂಡಿಸಿದರಾ ಕಂಸಾಸುರನುನ್ನತ ಸೌಧಾಗ್ರದೊಳಿರಿಸಿದ ತವಗ[ಪಾಠಾಂ. ಕ]ದೊಳೆ ನೋಡುತುಂ ಕುಳ್ಳಿರ್ದಂ (ವಿಷ್ಣುಪು. ೫-೫-೨೯). ೩. (ಕೋಟೆಯಲ್ಲಿ ಫಿರಂಗಿ ಮೊದಲಾದವುಗಳನ್ನು ಇಡುವುದಕ್ಕಾಗಿ ಮಾಡಿದ) ವಿಶಿಷ್ಟವಾದ ಜಗಲಿ: ತವಗ ತಳಿ ಮುಳುವೇಲಿ ಬಾಗಿಲ ಜವಳಿಗದ ಬೀಯಗದಲಿದ್ದುದು ದಿವಿಜವನವು (ಕುವ್ಯಾಅ. ೧೮-೨೭); ತಳಿ ಮುಳುವೇಲಿ ಮರದೆ ಪಿರಂಗಿಗಳಿಗಾಗಳವಟ್ಟ ತವಗ ಸುರಂಗ ಬಳಸಿಯೊಪ್ಪಿದುವಾ ಕೋಟೆಯಗಳ ಹೊಱವಳೆಯದೊಳತಿ ಚೋದ್ಯವಾಗಿ (ಕಂಠವಿ. ೦೨-೧೨); ಪುರದ್ವಾರ ಕೋಟೆ ಕೊತ್ತಳ ತವಗಂಗಳಂ ಭದ್ರಪಡಿಸಿ ಅತಿಜತನದಿಂ ಜಾಗ್ರುತಾಯುಕ್ತನಾಗಿ ಇದ್ದನು (ಕುಕಸ. ೧೪೫); ಮುಗಿಲಟ್ಟಣೆ ತವಗವೊ ಮೇರುಮಂದಿರ ಅಗಳು ಆಳ್ವೇರಿ ಕೊತ್ತಳದಾ (ಸೌಂದಕಾ. ೧-೨೦); ಅಗ್ಗದ ಕೊತ್ತಳಗಳುಪಕೋಟೆ ತವಗಗಳಿದ್ದ ಮೋರ್ವೆಗಳ . . . ಈಕ್ಷಿಪರಿಗಸದಳವೆನಿಸಿತಾ ನಗರ (ಅಂಬಿಕಾ. ೮-೯); ಸುರುಚಿರದ ಕೋಟೆಯ ಸುವಲಯದೊಳ್ . . . ಅಂಬುಗಂಡಿಗಳ್ ಬೆಳಗಿದವು ಪಜ್ಜಳಿಸಿ ವರಶತಘ್ನಿಸಮಿಶ್ರದಿಂ ಶಿವನ ಶಿಖಿನಯನವೆಂಬಂತೆ ತವಗಂಗಳು (ವೆಂಕಾರಾ. ೧-೪-೬); ಫಿರಂಗಿಯ ತವಗ ಎಂದರೆ ತೋಪುಗಳನ್ನು ಇರಿಸುವುದಕ್ಕೆ ರಚಿಸಿದ ಎತ್ತರವಾದ ಪೀಠ ಎಂದರ್ಥ (ಕರ್ನಾಜ. ೩೨).

[ <ಸಂ. ತಮಂಗ. / ತಮಿ. ತವುಕ; ತೆಲು. ತಮುಕ, ತಮುಗ]

**ತವಕ$_1$** (ನಾ). ೧. (ಅತಿಯಾದ) ಬಯಕೆ ; ಆತುರ ; ಉತ್ಸುಕತೆ : ತಮ್ಮ ತಮ್ಮ ನಿಖಿಳ ವ್ಯಾಪಾರವ[ನುಳಿದ]ರಸನ ನೋಡುವ ತವಕದೆ ಮಿಗೆ ನಗರಲೋಕಮೆಯ್ದಿತ್ತಾಗಳ್ (ಕಾದಂಪೂ. ೪೭೫) : ತನ್ನ ತವಕಕ್ಕೆ ನೆರೆವಾತನತಿಕಷ್ಟಂ (ಮದತಿ. ೧೦-೬೯) : ಗುಹೇಶ್ವರನ ಬೆರಸಿ ಭೇದಗೆಟ್ಟ ಬಳಿಕ ಮತ್ತೆ ಸಂಗವ ಮಾಡಿಹೆನೆಂಬ ತವಕವೇಕಯ್ಯ (ಅವಚಂ. ೯೮-೪೪೦); ತವಕದಿಂ ಸ್ತುತಿಯಿಸುತೆ ಗದಗದಿಸುವರ್ ಕೆಲರು (ಬಸರ. ೭-೯೨): ಉನ್ನತಿಯೊಳಿಪ್ಪ ಬಸವಜಗನ್ನುತನನಿದಿರ್ಗೊಂಬ ತವಕದಿ . . . ಬಂದಂ (ಬಸಪು. ೫-೧೧) ; ಒಳಹೊಗಿಸಿ ಸಾತ್ಯಕಿಯ ಸಿಕ್ಕಿಸಿ ಗೆಲುವ ತವಕವ ಕಂಡು ಕೆಣಕಿದರಳವಿಯಲಿ (ಕುವ್ಯಾ.ಕ. ೮-೫): ಸೀತೆಗೆ ವೈಖಾನಸರ ಮುತ್ತೈದೆಯರನೇವೊಟ್ಟಿಂಗೆ ಕಾಣ್ಬೆನೋ ಎಂಬೊಂದು ತವಕದಿಂ ನಡೆ ಮುಂಚಿದುದು (ರಾಮಾಶ್ವ. ೩೩-೧). ೨. ಅವಸರ ; ತ್ವರೆ : ಬಡವರ ಬಿನ್ನಹವನು ತಂದವನೀಶ್ವರರಿಗೆ ಪೇಳಿ ತವಕದೆ ಕಾಣಿಸಿಯಿಪ್ಪಾರ್ಥ ಗೊಡಿಸುತಿರ್ಪವರ ಕೇರಿಗಳೊಪ್ಪುತಿಹುವು (ಕಂನವಿ. ೬-೪೬). ೩. (ವಿಯೋಗದಿಂದುಂಟಾಗುವ) ಉತ್ಕಂಠತೆ: ಸವೆದುದಿರುಳಿಂದೂಪಲಂಗಳ ನಿವಹ ಬಲಿದುದು ಚಕ್ರವಾಕದ ತವಕ ತಗ್ಗಿತು ತರಣಿಯುಡರಿವನುದಯಪರ್ವತವ (ಕುವ್ಯಾ.ದ್ರೋ. ೯-೬). [ ದೇ.॥ ತಮಿ. ತವಕ್ಕ ; ತೆಲು. ತಮಕ. / ಪಾರ. ತವಕುಅ ; ಅರ. ತವಕ್ಕುಅ ; ಮರಾ. ತವಕಾ ]

**ತವಕ$_2$** 'ತವಂಗ' ನೋ.

**ತವಕಂಗೊಳ್,** ತವಕಗೊಳ್, ತವಕಗೊಳಂ (ಕ್ರಿ). ೧. ಕಾತರಪಡು ; ಉತ್ಕಂಠಿತವಾಗು. 'ತವಕಂಗೊಳಿಸು' ಪರಾ. **ತವಕಗೊಳ್ :** ೨. ಬಯಸು ; ಉತ್ಸುಕವಾಗಿರು : ಎನ್ನನಿಯನ ಪಾದಸೇವೆಯಿಲ್ಲದೆ ನಾನೆನ್ನೆಗಮಿಂತಿರ್ಪೆನೆಂದು ತನ್ನೊಳು ತಾನೆ ತವಕಗೊಂಬ ಸತಿಯ ಮಹೋನ್ನತಿಗಿನ್ನೆಣೆಯುಂಟೆ (ಹದಿಬ. ೭-೨೦). **ತವಕಗೊಳು :** ೩. ಅವಸರಪಡಂ ; ತ್ವರೆಗೊಳ್ಳು : ಬಿಡು ಬಿಡು ಬಂದರೆನುತಲತಿ ತವಕಗೊಳಲು (ನವಮೋ. ೧೭-೨೮). [ ತವಕ$_1$ + ಕೊಳ್$_1$ ]

**ತವಕಂಗೊಳಿಸು,** ತವಕಗೊಳಿಸಂ (ಕ್ರಿ). ಕಾತರಗೊಳಿಸಂ ; ಉದ್ವೇಗಗೊಳಿಸು : ಅವಲೋಕನಮಾತ್ರದಿಂ ಅಸುರವರ್ಗದ ಮನಸ್ಸುಗಳಂ ತವಕಂಗೊಳಿಸುತ್ತಾ ಬರುತ್ತಿರುವ ನಾರಾಯಣಿಯ ಪ್ರತಿಬಿಂಬವೋ ಎಂಬಂತೆ ಇದ್ದಳು (ಮುದ್ರಾಮಂ. ೧೭೪). **ತವಕಗೊಳಿಸು :** ಜ್ಞಾಪಕವೆಂಬುದೊಂದು ಮಂತ್ರಜಾಲವಲ್ಲವೆ . . . ಮನಸ್ಸನ್ನು ಹಠಾತ್ತನೆ ಚಿಂತಾಸಮುದ್ರದಲ್ಲಿ ಮುಳುಗಿಸಿ ತವಕಗೊಳಿಸಲು ಅದಕ್ಕೆ ಚೆನ್ನಾಗಿ ಗೊತ್ತುಂಟು (ಸುಂದರಿ. ೪೭). [ ತವಕಂಗೊಳ್ + – ಇಸು$_3$ ]

**ತವಕಂಬೆಱು** (ಕ್ರಿ). ಆತುರಪಡು ; ಉತ್ಸುಕಗೊಳ್ಳು : (+).
[ ತವಕ$_1$ + ಪೆಱು$_1$ ]

**ತವಕಕಾರ್ತಿ** (ನಾ). ತವಕಗೊಂಡವಳು ; ಉತ್ಕಂಠಿತೆ : ಲಜ್ಜೆಯ ಲಂಚಗುಳಿಯ ನೋಟದ ತವಕಕಾರ್ತಿಯು ಯೌವನಂ ತೀವಿದ ಸುಖಮೌನಿಯ . . . ಮಾಸಲಮನವಮಂ ತನ್ನತ್ತ ಸೆಳೆದು (ನಂಬಿರ. ೧೪-೪೬).
[ ತವಕಕಾಱ + – ತಿ$_1$ (<–ಇತ್ತಿ) ]

**ತವಕಕಾಱ** (ನಾ). ತವಕಗೊಂಡವನು. 'ತವಕಕಾರ್ತಿ' ಪರಾ.
[ ತವಕ$_1$ + – ಕಾಱ ]

**ತವಕಗೊಳ್** 'ತವಕಂಗೊಳ್' ನೋ.

**ತವಕಗೊಳಿಸು** 'ತವಕಂಗೊಳಿಸು' ನೋ.

**ತವಕಗೊಳು** 'ತವಕಂಗೊಳ್' ನೋ.

**ತವಕಪಡು** (ಕ್ರಿ). ಅವಸರಪಡು; ಆತುರಪಡು : ಧೃಷ್ಟದ್ಯುಮ್ನನು ತಂದೆಗೆ ತಿಳಿಸಲು ತವಕಪಡುತ್ತ ಮನೆಗೆ ಹೋದನು (ಪಚಭಾ. ೫೬).
[ ತವಕ$_1$ + ಪಡು$_1$ ]

**ತವಕವಾಡು** (ಕ್ರಿ). = ತವಕಪಡು : ತವಕವಾಡುವ ತತ್ತರಿಪ ತಲ್ಲಣಿಸುವ ಬವಣಿಗೊಳುವ ಬಂಬಲಿಡುವ ಕವಿವ ಕಾತರಿಪ ಕರಗುವ ಕಾಲೂಱುವ ಸವಿನೋಟಗಳ ಸಮನಿಪುದು (ಚಿಕವಿ. ೬-೧೫೭ ಸಾಂಗತ್ಯ).
[ ತವಕ$_1$ + ಆಡು$_1$ ]

**ತವಕಿ** (ನಾ). ಅತಿಯಾಗಿ ಆಸೆಪಡುವವನು ; ಆಸೆಗಾರ : ಮಕರಕೇತನ ರತಿಗಳಲಿ ಹೇಸಿಕೆಗಳಂ ಹುಟ್ಟಿಸುವೆನೆನುತ ತವಕಿಗೆ ಸತಿಯಿಂತೆಂದಳು (ಬಸಪು. ೪೦-೫೧) ; ಸಮರಜಯಸಾಧಕರು ಮಂತ್ರಭ್ರಮಿತರಾಯ್ತಾಪ ಜಯವಧೂವಿಭ್ರಮಕಟಾಕ್ಷದ ಛಾಯದಲಿ ಕಳವಳಿಸದವರಾರು ಸಮತೆಯಾಯಿತು ತವಕಿಗಳಿಗುದ್ಭ್ರಮಿಗಳಿಗೆ ತಿಳಿವಾಯ್ತು (ಕುವ್ಯಾ.ಕ. ೫-೧೫).
[ ತವಕ$_1$ + – ಇ$_3$ ]

**ತವಕಿಗ** (ನಾ). ೧.=ತವಕಿ: ತನಿಗಳ್ಪ ತವಕಿಗಂ ಬಾಡಿನ ಬಾಕುಳನೀತನೆಂದು ಲೋಹದ ರಸಮಂ . . . ಕುಡಿಯಿಪರ್ (ಅನಂಪು. ೯-೩೫) ; ಸವಿವಾಯ ತುತ್ತಿನ ತವಕಿಗರು ಹೊಯ್ದಾಡಿದರು ಸಭೆಯಲಿ ಸುರೇಶ್ವರನ (ಕುವ್ಯಾ.ಸ. ೭-೩೯). ೨. ಉತ್ಸುಕನಾದವನು ; ಆತುರಗಾರ : ಶರಣರೆಂಬವರು ಜನನಕ್ಕೆ ತವಕಿಗರಲ್ಲ (ಚನ್ನವ. ಕ. ೫೮೨-೧೯೫) ; ಅಲರ್ಗಣ್ಗಳಮರ್ದುರ್ಗಂ ತೊದಳ್ನುಡಿಯ ತವಕಿಗಂ (ಬಸರ. ೧-೧೪೯) ; ಮನದಿಂ ಮುಂದೆ ಹೆಜ್ಜೆಯ ತವಕಿಗರು ಬಹುದೆನ್ನ ಸಂಗಾತ (ಕುವ್ಯಾ.ಕ. ೮-೩೧) ; ತಾಮಸದ ತವಕಿಗರು ತಿವಿದಾಡಿದರು ತೀವ್ರದಲಿ (ತೊರರಾ. ೬-೭-೪೦) ; ಸಿರಿಬಲ್ಲ ಹನೂಟಿಗದೊಳ್ತವಕಿಗರ್ ತವ್ಮೊಳ್ತಾಂ ನುಡಿವ ಸಿರಿವಾತುಗಳಂ ಕೇಳ್ದಂ (ಚಿಕವಂ. ೧೯೮-೭) ; ಇಂದಿಗೆಂದಣಿಗೆಯ್ದು ತವಕಿಗರಿಗೆಲ್ಲ ಮೋಣ್ ನಾಳೆಯುಂ ನಿಲುಕಿ ನಿಟ್ಟಿಪರಿಗೆಲ್ಲ ಕೂಗುತಿದೆ ಕತ್ತಲೆಯ ಕಾವಲಿನ ಕೋಳಿ (ಗೀವಿಂ. ೧೧೯-೧೬). 'ರಣದವಕಿಗ' ಪರಾ. [ ತವಕ$_1$ + – ಇಗ ]

**ತವಕಿಗತನ** (ನಾ). ಆತುರ ; ಅವಸರ ; ಗಡಿಬಿಡಿ : ಓಡಿಹೋಗಿ . . . ತೊಳ್ತಂದು ತವಕಿಗತನದಿಂದ ಆ ಚೀಲಗಳನ್ನೆತ್ತಿ ತೂಗಿ ತೂಗಿ ನೋಡಿ ಬಾಯ್ಕಟ್ಟಿನ ದಾರಗಳನ್ನೆಳೆಯುತ್ತಿರುವರು (ಬಟ್ಟಅ. ೫೪-೨೦).
[ ತವಕಿಗ + – ತನ ]

**ತವಕಿಸು** (ಕ್ರಿ). ೧. ಬಯಸು ; ಉತ್ಸುಕಗೊಳ್ಳು : ಮುನಿಯುತ್ತುಂ ಮುದ್ದಿಸುತ್ತುಂ ತೊನೆದು ತವಕಿಸುತ್ತುರ್ವುತ್ತುಂ ಗರ್ವಿಸುತ್ತುಂ (ರಕ್ಷಾಶ. ೬೫) ; ಸವನಿಸೆ ಹಮ್ಮದಂ ನಡುಪ ಕಾಲ್ . . . ಇರ್ವರೊಳೊಪ್ಪೆ ನೋಡಿದರ್ ತವಕಿಪ ಕಣ್ಮಲರ್ ಸುಸಿಲನೊಪ್ಪಿಸೆ ಕಾವನುಮಿಚ್ಚೆ ಗಾರ್ತಿಯುಂ (ಕಬ್ಬಿಕಾ. ೩೩೨) ; ತವಕಿಸಿ ಹಂಸಮಂಡಳಿ ಮೃಣಾಳದ ಕೋಮಳ ದಂಡಕಾಂಡಮಂ ಸವಿದುಱೆ ಸೊಕ್ಕಿದತ್ತು (ಬಾಧಪು. ೪-೬೭) ; ಭೂತದ ಹೆಣನ ತೀನಿಗೆ ತವಕಿಸುವ ಬೇತಾಳಸಂತತಿಯ (ಕುವ್ಯಾ.ಗ. ೩-೧೨) ; ಮಂಜುಳೆಯನ್ನು ಕಾಣಬೇಕು ಎಂದು ಮನಸ್ಸು ತವಕಿಸುತ್ತಿತ್ತು (ವಾತ್ಸಲ್ಯ. ೩೫೩). ೨. ತ್ವರೆಮಾಡು ; ಆತುರಪಡು ; ಅವಸರಪಡು : ವಿವರ ವಿದಕ್ಕನ್ನೇನನಾದಡೆ ತವಕಿಸದೆ [ಪಾಠಾಂ. ಪಡೆ] ಕೇಳಿದೊಡೆಹಗೆ ಹೇಳುವೆನು (ಬಸಪು. ೫೦-೪೩) ; ದೂಸಕನ ರಕ್ತದಲಿ ನಿನ್ನಯ ಕೇಶವನು ಕಟ್ಟಿಸುವೆ ನಿನ್ನಯ ಭಾಷೆ ತನ್ನದು ತಾಯೆ ತವಕಿಸಬೇಡ ನೀನೆಂದ (ಕುವ್ಯಾ.ಅ.೨-೨೦) ; ಕಿವಿಗೊಟ್ಟೊಯ್ಯನೊಯ್ಯನೆ ತವಕಿಸದೆ ತಡೆತಡೆದು ತೋಱುವ ದನಿಯ ನಾಲಿಸುತ (ತೊರರಾ. ೬-೩೬-೧೭) ; ತವಕಿಸಿ ನಡೆನಡೆಯೆನುತಿಪ್ಪಳಿವಳೆಷ್ಟು ದಿವಸದಿಂ ಕಾಣಳೊ ಪತಿಯಾ (ಭರಚ. ೫-೧೪) ; ಕಲಹಸಮಯಂಗಂಡು ಲಳಿ ಮಸಗಿದುವು ಕುದುರೆಗಳ್ ದಂತಿಗಳ್ ತಮ್ಮ ನೆಳಲನಿದಿರಾನೆಯೆಂದಪ್ಪಳಿಸಿದುವು ಪಟುಭಟರ್ ಮುಂಚಿ ತವಕಿಸಿದರು (ಜಿಬಪು. ೪೮-೩೭). ೩. ದುಡುಕು ; ಮುನ್ನುಗ್ಗು : ಬಿಗಿವ ಬಿಡಿಸಿಕೊಳ್ವ ತೆಗೆವ ತವಕಿಸುವ ನೆಗೆವ ನಿಗುರಿಯೊಳಸರಿವ . . . ಹೋರಾಟದ ವಿಗಡಮಲ್ಲರುಗಳೊಪ್ಪಿದರು (ಕಂನವಿ. ೨೦-೯೩). [ ತವಕ$_1$ + – ಇಸು$_3$ ]

**ತವಕೀರ,** ತವಕೀಲು (ನಾ). ಕೂವೆಹಿಟ್ಟು ; ಅರಾರೂಟು: ಮುಂಬಯಿ ೨೦ ಮಣದ ಖಂಡಗಕ್ಕೆ ಕಿಮ್ಮತ್ತು ಆಗತಕ್ಕ ಜೀನಸಗಳು ೧. ಅರಾರೂಟ (ತವಕೀರ) (ಮುಂಬವ್ಯಾ. ೧೨೦) ; ಆರಾರೋಟ (ತವಕೀರ) (ಮುಂಬವ್ಯಾ. ೧೯೩). **ತವಕೀಲು :** ತವಕೀಲು, ಸಬ್ಬಕ್ಕಿ, ಬಟಾಟೆ . . . ಮುಂತಾದ ಪಿಷ್ಟೋತ್ಪಾದಕ ಕಂದಮೂಲಾದಿಗಳು (ಮುಂಬಯಿ. ೫-೧೬೩).
[ ←ಮರಾ. ತವಕೀರ್, ತವಕೀಲ್, ತವಖೀರ್, ತವಖೀಲ್, ತವಾಶೀರ್ ; ಅರ. ತಬಾಶೀರ್ ; ಪಾರ. ತವಾಶೀರ್ ; ಹಿಂ. ತವಾಖೀರ್: ಗುಜ. ತವಖಾರ್. / ಸಂ. ತವಕ್ಷೀರ ]

**ತವಕೀಲು** 'ತವಕೀರ' ನೋ.

**ತವಕ್ಷೀರ** (ನಾ). ೧. ಬಿದಿರನ ಗಿಣ್ಣುಗಳಲ್ಲಿ ದೊರೆಯುವ, ಔಷಧಿಗೆ ಉಪಯೋಗಿಸುವ ಒಂದು ಬಗೆಯ ದ್ರವ್ಯ ; ಬಿದಿರಂಪ್ಪು ; ವಂಶಲೋಚನ : "ತುತ್ಥಾ – ತವಕ್ಷೀರ, ವಂಶಲೋಚನ" (ಓಷಧಿ. ೬೧) ; ಮರಿಚ ತವಕ್ಷೀರಮನಿಂತರೆದೊಪ್ಪುವ ಜೇನುತುಪ್ಪದಿಂ ನಯನಕ್ಕಂ ವಿರಚಿಸಿ ದಂಜನಮದು ಸಂಹರಿಕುಂ ಕಡವಿನ ವಿಷಂಗಳಂ (ಖಮದ. ೧೩-೬೦) ; ತವಕ್ಷೀರ, ದ್ವೀಪದ್ರಾಕ್ಷಿ . . . ಚೂರ್ಣವನ್ನು ಮಾಡಿ (ಸಕವೈ. ೮೪). ೨. ಗೋಧಿ, ಅಕ್ಕಿ ಮೊದಲಾದುವುಗಳಿಂದ ತೆಗೆದ ಸತ್ತ್ವ : "ತಂಡುಲೋದ್ಭವ – ತವಕ್ಷೀರ" (ಓಷಧಿ. ೬೬). ೩. ಕೂವೆಗಿಡ ಮತ್ತು ಅದರ ಗಡ್ಡೆ : "ಶ್ರೇಷ್ಠಕಂದಃ – ತವಕ್ಷೀರ, ನೆಲಗುಂಬಳ" (ಓಷಧಿ. ೧೬೦) ; ಕೂವೆಗಿಡ, ತವಕ್ಷೀರ (ವೃಜಿಗಿ. ೨೬-೪೯೬). [ ಸಂ. ]

**ತವಗ** 'ತವಂಗ' ನೋ.

**ತವಗವಿಡು** (ಕ್ರಿ). ಅಟ್ಟಣೆಯನ್ನುಕಟ್ಟು ; ವೇದಿಕೆಯನ್ನು ನಿರ್ಮಿಸು : ವಸುಧೇಶ ರವಿಯನಂಬರದಿ ಕಾಣಿಸಿಕೊಂಬಡೆಸೆವ ತವಗವಿಟ್ಟ ತೆಱದಿ ಮುಸುಕಿದ ಚಿತ್ರದೊಲೊಪ್ಪುವ ಕರುಮಾಡವೆಸೆವುದು ಕಣ್ಗೆ ಕೌತುಕದಿ (ವರ್ಧಜ. ೧-೧೩೪). [ ತವಗ (<ತವಂಗ) + ಇಡು$_1$ ]

**ತವಜ್ಜೀಂ** 'ತಾಜೀಂ' ನೋ.

**ತವಜ್ಜುಗುಸ್ತರ** (ನಾ). ಕರುಣಾಳು ; ಅನುಗ್ರಹಶಾಲಿ : ತವಜ್ಜುಗುಸ್ತರ ಮೊಕಲೀಸಾನರವರು ಸಹ (ರಾಜೇಂದ್ರ. ೧೩೬).
[ ←ಪಾರ. ತವಜ್ಜುಹ್ ; ಅರ. ತವಜ್ಜು ; ಹಿಂ. ತವಜ್ಜುಹ್ ; ಮರಾ. ತವಜ್ಜೀಹ್, ತವಜೀ ]

**ತವಡು** 'ತವುಡು' ನೋ.

**ತವಡುಕುಟ್ಟು, ತೌಡುಕುಟ್ಟು** (ಕ್ರಿ). (ಆಲಂ) ನಿಷ್ಪ್ರಯೋಜಕವಾದ ಕೆಲಸವನ್ನು ಮಾಡು; ವ್ಯರ್ಥವಾಗಿ ಕಾಲಹರಣಮಾಡು: ನಿಮ್ಮ ಈ ತವಡು ಕುಟ್ಟೋ ಮಾತು ಪೊಳ್ಳು ಬೆದರಿಕೆ ಕೇಳಲಿಕ್ಕಂತೂ ನನಗೆ ಸುತರಾಂ ಅವಕಾಶವಿಲ್ಲ (ಹೊಸಂಸಾ. ೩೩). **ತೌಡುಕುಟ್ಟು :** ಅವರು ಬರೀ ಮಾತಿನಲ್ಲೇ ತೌಡುಕುಟ್ಟಿದರು (ರೂಢಿ). [ ತವಡು (<ತವುಡು) + ಕುಟ್ಟು$_1$ ]

**ತವಡೊಣೆ** 'ತವು$_1$' ಪರಾ.

**ತವತವ** (ನಾ). ಒಂದು ಅನುಕರಣ ಶಬ್ದ : ತವತವನುಗ[ಪಾಠಾಂ. ಸುಗ, ನುಗು]ಳು ತಪ್ಪದಿರೆ ಕಚ್ಚುವ ಮಹಾಷ್ಟಫಣೀಶ್ವರಾಂಶದ ಪವನಭಕ್ಷಣ ರಾಜಿ ಗಾರುಡಮಂತ್ರ ಸಂಸ್ಕಾರ (ಬಸಪು. ೪೬-೩೦).

**ತವದಿ** (ನಾ). ಒಂದು ಬಗೆಯ ಧಾನ್ಯ ; ರಾಗಿ : "ರಾಗೀ = ತವದಿ" (ಕಾಶಕೋ. ೧೩೮). [ ←ತೆಲು. ತವಿದ, ತವ್ವಿದ, ತಮಿದ]

**ತವದೊಣೆ** 'ತವು$_1$' ಪರಾ.

**ತವನ** (ನಾ). ಸ್ತೋತ್ರಮಾಡುವುದು; ಸ್ತವನ: ಸ್ಪರ್ಶ, ಪರುಸ; ಸ್ಫಟಿಕ, ಪಟಿಕ . . . ಸ್ತವನ, ತವನ (ಶಬ್ದಾನು. ೧೫೦ ಪ್ರಯೋ).
[ <ಸಂ. ಸ್ತವನ ]

**ತವನಿಧಿ** 'ತವು$_1$' ಪರಾ.

**ತವರ್** 'ತವುರ್' ನೋ.

**ತವರ,** ತಗರ$_1$, ತವರು$_2$ (ನಾ). ಒಂದು ಬಗೆಯ ಲೋಹ ; ವಂಗ ; ತ್ರಪು: "ವಂಗಂ, ಮಧುರಂ, ತ್ರಪು– ಈ ೩ ತವರಂ" (ಹಲಾಯು. ೨೮-೧೮); ಕಾಸಂಟ ಕೊಡಿಗೆಗೆ ವಿ ೫ ತವರದಡೆಗೆ ವಿ ೨॥ (ಕಇಅ. ೧೦೪-೮-೩೦ ; 1076); ಮುರಿಗಂಚು ತವರ ಹಿತ್ತಾಳೆ ತಾಮ್ರ ಇವು ಮೊದಲಾದ ಲೋಹವ ತನ್ನ (ಸರ್ವವ. ೧೨೭-೬೪೭) ; ಮೈಯ ತವರದ ತೊಡಿಗೆ ಎಸೆವುತಿರೆ ಬಂದು ಮಹಮನೆಯ ಗೋವಳನಲ್ಲಿ . . . ಬಸವಂಗೆ ಬಿನ್ನೈಸಿದಂ (ಬಸರ. ೯-೧೦೩); ತನ್ನ ಗುರುವ ನಿಂದೆಗೇಳಿದವನ ಕಿವಿಯೊಳೆಱೆದು ಕಾಯ್ದ ತಾಮ್ರ ಸೀಸ ತವರವಾದಿಯಾದ ರಸವನೆಱೆದು (ಸಾನಂಜ. ೬-೧೧೩ ರಗಳೆ) ; ಬಲಿದ ಚಂದ್ರಿಕೆ ಕರಗಿ ಕಡುಗಿದ ತವರವಾದುದು ಕೀಚಕನ ದೆಸೆಗೆ (ಕುವ್ಯಾವಿ. ೨-೫೪) ; ಹವಣಿಸಿ ಹಲವು ಕಬ್ಬುನವ ತಾಡಿವ ತನ್ನ ತವರವ ತಡಕೊಂಬುದರಿದೆ (ಮೋಹತ. ೪೦-೪೯). **ತಗರ$_1$:** "ತಗರ–ತವುರ (ತ್ರಪು)" (ತದ್ಭಕೋ. ೧೬). **ತವರು$_2$ :** ತಾಮ್ರ ತವರುಗಳನ್ನು ಹಾಳತವಾಗಿ ಬೆರಸುವುದರಿಂದ ಕಂಚು ಎಂಬ ಮಿಶ್ರಧಾತು ಆಗುವುದು (ಮುಂಬಯಿ. ೪-೧೩೭) ; ಹಿತ್ತಾಳೆ, ಸತ್ವ, ತವರು, ಸೀಸ ಮತ್ತು ಕಂಚು (ಮುಂಬವ್ಯಾ. ೩೬ ಪ್ರಸ್ತಾವನೆ).
[ ದೇ.॥ ತಮಿ. ಮಲ. ತಕರ ; ತುಳು. ತಮರ್, ತಮರ, ತವರ; ತೆಲು. ತಗರ, ತಮರ, ತವರ ]

**ತವರಾಜ** (ನಾ). ೧. ಒಂದು ಬಗೆಯ ಬಿಳಿಯ ಸಕ್ಕರೆ : ತವರಾಜ ಬಂಧದೊಳಂದಂಬೆತ್ತ ಲಡ್ಡುಗೆಗಳುಮಂ . . . ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೧೧-೩೯ ವ) ; ಹಾಲ ತೊಱೆಗೆ ಬೆಲ್ಲದ ಕೆಸಱು ಸಕ್ಕರೆಯ ಮಳಲು ತವರಾಜದ ನೊರೆತೆರೆಯಂತೆ ಅಪ್ಪರ ವಚನವಿರಲು (ಬಸವ. ೨೯೦) ; ಸವಿವ ಪಯಂ ತವರಾಜಂ ತನಿವಣ್ಗಳು ಶಿವಾರ್ಪಿತವಲ್ಲದುದಂ ಸವಿದ ಶರಣನಂತೆ (ನಂಬಿರ. ೧೬-೧೬); ಪಿರಿದು ತವರಾಜ ಕಟ್ಟಿದಿರೊಳಾಗಳು ಮಿರಲದಂ ಬಿಟ್ಟು ತೌಡಂ ಮುಕ್ಕುವನವೊಲು (ಬಸಪು. ೬೦-೪೫) ; ತನಿವಾಳ್ಗೆ ತವರಾಜ ಸಕ್ಕರೆಯನೊಡಗಲಿಸಿ (ರೇವಣ. ೧೧೫-೭); ತವರಾಜ ಘಟ್ಟನವಾತು ಗೋಧುಮೆಯ ಹಿಟ್ಟು ಖರ್ಜೂರ ದ್ರಾಕ್ಷೆವಣ್ಗಳ ಪೊಱೆ ಸಾಲಿಟ್ಟವು ಕೊಟ್ಟಿಗೆಯೊಳಗೆ (ಕುಂರಾಸಾಂ. ೪೦-೫೫). ೨. (ಆಲಂ) ಹಿತವಾದುದಂ ; ಪ್ರಿಯವಾದುದು ; ಜವಳಿವೆಱೆ ಮನುಜರೂಪದಿನ ವನಿಯೊಳೊಗೆದಂತೆ ಕಾಂತಿ ಮೆಱೆದಪುವಿಂದಿಂತಿವರ್ಗಳ ಚೆಲ್ವಿಕೆ ಕಣ್ಗಳ ತವರಾಜಮನಿಂದು ಕಂಡೆನೀ ಬಾಲಕರಂ (ಯಶೋಚ. ೧-೬೧).
[ ಸಂ. ]

**ತವರು$_1$** 'ತವುರ್' ನೋ.

**ತವರು$_2$** 'ತವರ' ನೋ.

**ತವರುಮನೆ** 'ತವುರ್ಮನೆ' ನೋ.

**ತವರೂರು** 'ತವುರೂರ್' ನೋ.

**ತವರೆ** (ನಾ). (?) : ಹಂನ್ನೆರಡು ಕೈವಡ ಮುಂತಗಿ ಸೀವೆ ಗಳುಡಿಕೆ ಮುಂತಗಿ ತವರೆ ಮಟಿಯಗೆ × ದೊಕನಿಲು (ಎಕ. VII, ಶಿವಮೊ. ೧೦೮-೪೮ ; 1558). [ ? ]

**ತವರ್ತನ** (ನಾ). ತವರುಮನೆಯಾಗಿರುವಿಕೆ ; ತವರುಮನೆಯ ಉಪಚಾರ ನೀಡುವಿಕೆ ; ರಕ್ಷಣೆಯಾಗಿರುವಿಕೆ : ಎಮಗೆಲ್ಲರಿಗೆ ನಮ್ಮ ಭಾರತಮಿದೊಂದು ತವರು ಗಡ ! ರಾಷ್ಟ್ರೀಯ ಶಿಕ್ಷಣಮೆ ಬಂದು ಒಟ್ಟಿನ ತವರ್ತನವನೆಸಗಿನ್ನು ಮುಂದು ! (ಗೀವಿಂ. ೩೫-೨೪).
[ ತವರ್ (<ತವುರ್) + – ತನ ]

**ತವರ್ದೆಸೆ** (ನಾ). ತವರು; ಆಶ್ರಯ; ನೆಲೆ: ತಪ್ಪುಗಳ ತವರ್ದೆಸೆಯೆನಿಪ ವೇಶ್ಯಾಶ್ರಯಂ (ಜಿಬಪು. ೦೦-೯). [ ತವರ್ (<ತವುರ್) + ದೆಸೆ ]

**ತವರ್ನಾಡು** (ನಾ). ತಾಯಿನಾಡು ; ಆಶ್ರಯ ; ನೆಲೆ : ನಿನ್ನ ಮೆಯ್ ಪಿರಿಯುಸಿರ್ ಬೀಡು, ಪೆರ್ಬಗೆಯ ಪೆರ್ವೆಗೆ ತವರ್‌ನಾಡು (ಶ್ರೀರಾಮಾ. ೭೦೭-೩೩೩). [ ತವರ್ (<ತವರ್ಮ) + ನಾಡು ]

**ತವರ್ಮನೆ** 'ತವರ್ಮನೆ' ನೋ.

**ತವಲಾಯ** 'ತವಲಾಯಿ' ನೋ.

**ತವಲಾಯಿ,** ತವಲಾಯ (ನಾ). ೧. ಕರ್ಪೂರದ ಹಳಕು,-ಬಿಲ್ಲೆ : "ತವಲಾಯಿಯೆಂದು ಕಪ್ಪುರವಳಿಕು" (ಕಕಸಾ. ೩೨-೬೭೨) ; "ತವಲಾಯಿಯೆ ಕಪ್ಪುರವಳಿಕು" (ಕವಿಕಂ. ೨೮೮). ೨. ಕರ್ಪೂರವನ್ನು ಹಾಕಿ ಇರಿಸುವ ಕರಂಡ,-ಭರಣಿ : ವರ ಜವಾಜಿಯ ಶೃಂಗಗಳ ಕರ್ಪೂರದ ತವಲಾಯಿಗಳ ಸಾದಿನ ಭರಣಿಗಳ ಮೃಗನಾಭಿಗಳನಡಕಿದರು ಬಂಡಿಯಲಿ (ಕುವ್ಯಾ.ಆ. ೧೨-೧೬): ತೆಗೆಸಿದನು ಗಜದಂತಮಯ ಪೆಟ್ಟಿಗೆಗಳನು ಕರ್ಪೂರದ ತವಲಾಯಿಗಳ ಹವಳದ ಮಂಚವನು ಮಣಿಖಚಿತ ರಚನೆಗಳ (ಕುವ್ಯಾ.ಸ. ೫-೪೫) ; ಉಗಿದರೋ ಕತ್ತುರಿಯ ತವಲಾಯಿಗಳ ಮುಚ್ಚಳವನೆ ಕವಾಟವ ತೆಗೆಯೆ ಕವಿದರು ದಿವ್ಯಪರಿಮಳಸಾರ ಪೂರವಿಸೆ (ಕುವ್ಯಾ.ಆ. ೭-೮೯); ಕರ್ಪೂರದ ತವಲಾಯಿಗಳನೊಡೆದೊಡೆದು ಭಟರಿಗೆ ಹಾಯಿಕಿದನಂಜುಳಿಗಳಲಿ ಮೊಗೆ ಮೊಗೆದು ಬೇಸಱದೆ (ಕುವ್ಯಾ.ಕ. ೮-೩೩) ; ತಾಯೆನ್ನುತ ಘನಸಾರದುರು ತವಲಾಯಿಗಳ ನೂಕಿದನು ಮುದದಲಿ ಬಾಯಿತಂಬುಲವಿತ್ತು ತಮ್ಮನ ಮತ್ತೆ ತಕ್ಕೈಸಿ (ಕುವ್ಯಾ.ಕ. ೧೮-೯) ; ರಘುಗರಘುಗಿಪ ಹೊಂಬೆಸದ ರಂಜಣಿಗೆಗಳ ನವಕರ್ಪೂರದ ತವಲಾಯಿಗಳ ತಿಂಥಿಣಿ ಮೆಱೆದುದಲ್ಲಿಯ ಸುತ್ತುವಳಯದಲಿ (ತೊರರಾ. ೧-೧೩-೯). ೩. ವೀಳೆಯ ; ತಾಂಬೂಲ : (ಕ). **ತವಲಾಯ :** ೩. "ತವಲಾಯಮೆನಲ್ ವೀಳೆಯು" (ಭಾರನಿ. ೨೩). [ ? ]

**ತವಸ** 'ತಪಸ' ನೋ.

**ತವಸಿ,** ತಪಸಿ, ತಬಸಿ, ತವಸೆ (ನಾ). ೧. ತಪಸ್ಸನ್ನು ಮಾಡುವವನು; ತಪಸ್ವಿ ; ಋಷಿ: "ತವಸಿ ರಿಸಿಯುಮೆನೆ ಋಷಿಯಕ್ಕುಂ" (ಕವಿಕಂ. ೧೮೭) ; ಮುತ್ತ ಕುರುಡ ತವಸಿಗಳ ಕೈಯಂ ಪಿಡಿದುಯ್ದು ವರ್ತ ಗುಹೆಗಳಂ ಪುಗಿಪ ಪೊಱಮಡಿಪ ಚಪಳ ಕಪಿಗಳುಮಂ (ಪಂಪಭಾ. ೧-೧೧೫ ವ) : ಈ ಜವ್ವನಿಗ ತವಸಿ ತೊಟ್ಟಿರ್ಪ ಕರ್ಣಾವತಂಸಂ ಪೊಸತೀ ಲೋಕಕ್ಕೆ (ಕಾದಂಪೂ. ೭೬೦) ; ವತ್ವಲೋಪಕ್ಕೆ—ಈಶ್ವರ–ಈಸರ . . . ತಪಸ್ವಿ–ತಪಸಿ, ತವಸಿ (ಶಮದ. ೨೮೧ ಪ್ರಯೋ) ; ವಟುಜನದ ನಡುವೆ ಶೋಭಿಸಿದಂ ವಿಮಲಜ್ಞಾನಿವೆಸರ ತವಸಿ (ಜಯಕಾ. ೨-೨೫); ಆಯುತಿ ಹೆಣ್ಣುಗಳೇನು ಗಹನವೆಂಬ ಬಾಯಿಬಡಿಕ ತವಸಿಗಳ ತಾಯೆ ನೀ ಕೆಡೆಮೆಟ್ಟು (ಮೋಹತ. ೨೩-೪೬). ೨. ಒಂದು ಬಗೆಯ ಮರ ; ಇಂಗುಳದ ಮರ ; ತಾಪಸತರು : "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಮಾರಕಃ ಈ–೪ ತವಸಿಯ ಮರ" (ನಾಚಿರಾ. ೧೦೭) ; "ಚಿರಬಿಲ್ವ–ತವಸಿ, ಹೊಂಗೆ" (ಓಷಧಿ. ೫೨) ; ತವಸಿಯ ಬೇರ ಕಷಾಯಾಂಬುವಿನೊಳಮದ ಪಲವು ಸೂಱೊಳಂ ಭಾವಿಸಿದೋಮುವನರೆದು (ಲೋಕೋಪ. ೯-೧೨೩) ; ತವಸಿಯ ತೊವಲೊಳಗೆ ಪುನರ್ನವಿಯುಮನಾ ಕಟ್ಟಿಗಿರಿಯುಮಂ ಲೊಕ್ಕಿಯುಮಂ ಸವನಾಗಿ ಕೂಡಿಕೊಳ್ವುದು ಲವಣ ಸಮೇತಂ (ಅಶ್ವಶಾ. ೭-೩೨). **ತಪಸಿ :** ೧. ನ ಕ ರ ಮು ಂ ಸ್ಥಾನದ ತಪಸಿಯರ್ಕಳುಂ ಗಾಮುಣ್ಡುಗಳುಂ (ಸೌಇಇ. IX-I, ೧೯-೫; ೯ನೆಯ ಶತ) ; ಎರಡು ಗೀಜಗವಕ್ಕಿಗಳಂ ವಿಗುರ್ವಿಸೆಯಾ ತಪಸಿಯು ಗಡ್ಡದೊಳವು ಗೂಡನಿಟ್ಟಿರ್ಪುದುಂ (ಧರ್ಮಾಮೃ. ೨-೨೨೦); ಭಾಪುರೇ ಜಗದೀಶ ತಪಸಿಯ ರೂಪದಲಿ ತಲೆಗಡಿದೆ (ಕೌಶಿರಾ. ೪೩-೪೭).೨. ತಾಪತರುಃ–ತಪಸಿ, ಇಂಗುಳ" (ಓಷಧಿ. ೬೭) ; "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಕಾರಕಃ–೪ ತಪಸೀಗಿಡದ ಹೆಸರು. ನೌಲೆಗಿಡವೆಂದು ಕೆಲವರನ್ನುವರು" (ಸಿದ್ಧಾಂತಿ. ೧೦೮) ; ತಾಪಿಸುವ ತಪಸೆನಗೆಂದುಕೆಡುವುದು ತಪಸಿಯೇ ಹೇಳಾ (ಬಸಪು. ೪೫-೩೬): ತದಿಕು ತಂಡಸು ತಡಸು ತಪಸಿ ಕುರಂಜಿ ಖರ್ಜೂರ (ತೊರರಾ. ೩-೧-೨೬) ; ತಪಸಿಬೇರಿನ ಪಟ್ಟಿ . . . ಬೆಳ್ಳುಳ್ಳಿ ಇವುಗಳನ್ನರೆದು ಪೊಟ್ಟಣ ಕಟ್ಟಿ ಕಟ್ಟಿಕೊಳ್ಳಲು ಛಳಿಜ್ವರ ನಿಲ್ಲುವುದು (ಸಕವೈ. ೭೬) ; ಬೆಲ್ಲವತ್ತಂ ಬೇವು ಬಿಕ್ಕೆ ತಂಡಸಿ ತಪಸಿ (ಸಿದ್ಧಕಾ. ೬-೧೭) ; ಮರಗಳು–ಹೆಸವ, ಹೆಬ್ಬಲಸು . . . ಕೂಲಿ, ತಡಸಲು, ತಪಸಿ, ನಂದಿ (ನಮ್ಮನು. ೨೩೬). **ತಬಸಿ :** ೨. ತಬಸಿಯ ಒಳನಾರು ಸೇರು ೧ (ಸಕವೈ. ೧೩೫). **ತವಸೆ :** ೨. "ಪೂತಿಕರಜಃ–ತವಸೆ, ಹೊಂಗೆ" (ಓಷಧಿ. ೧೦೨) ; ಚಿತ್ರಕ ನುಗ್ಗಿ ತವಸೆಯಾರಗ್ವಧ ಕತ್ತರಿ ಬ್ರಹ್ಮದಂಡೆ ಬಿಲ್ವಂ (ಖಮದ. ೮-೧೬). 'ತಪಸ' ಪರಾ. [<ಪ್ರಾ. ತವಸಿ./ಸಂ. ತಪಸ್ವಿನ್]

**ತವಸಿಗ,** ತಪಸಿಗ (ನಾ). ತಪಸ್ವಿ ; ಋಷಿ : ಆರಾಶ್ರಮ ? ತವಸಿಗರಾರೇ ಬಗೆಯುವರಿವರು? (ಅಹಲ್ಯ. ೬-೪). **ತಪಸಿಗ :** ಅತ್ತ ಮುನ್ನವೆ ಗೌಳ ತಪಸಿಗರಿ[ಪಾಠಾಂ. ಳಿ]ತ್ತ ಕಾಂತಿಯು ಪೂಜೆಯಂ . . . ಭಜಿಸುತಿರಲು (ಬಸಪು. ೪೩-೨೮). [ತವಸು + – ಇಗ ]

**ತವಸಿಣಿ** (ನಾ). ತಪಸ್ಸನ್ನಾಚರಿಸುವವಳು ; ತಪಸ್ವಿನಿ : ನರೆತ ನವಿರ ಬಱತ ಮೆಯ್ಯ ತವಸಿಣಿ (ರಾವಮಾಶ್ವ. ೧೨೦-೨೬). [<ಸಂ. ತಪಸ್ವಿನೀ ]

**ತವಸು,** ತಪಸು (ನಾ). ತಪಸ್ಸು : ಬೆಟ್ಟದ ಮೇಲೆ ಕೈಯೆತ್ತಿ ಪಲರುಂ ಜತಿಗಳ್ ತವಸಿಂಗೊಳಗಾಗಿ (ಕಬ್ಬಿಕಾ. ೨೨೬) ; ಇನಿಯಳಂ ಬಿಟ್ಟು ತವಸನಾರ್ ಗೆಯ್ದರೋ (ಸೌನಂದ. ೭-೧೩). **ತಪಸು:** ತಾಪಿಸುವ ತಪಸೆನಗೆಂದು ಕೆಡುವುದು ತಪಸಿಯೆ ಹೇಳಾ (ಬಸಪು. ೪೫-೩೬); ತಪಸಿಗೆ ನಿನ್ನ ಮಾವಾಜಿ ಸಾಗಿದ (ಭರತಚ. ೪೩-೧೫). [<ಸಂ. ತಪಸ್ ]

**ತವಸೆ** 'ತವಸಿ' ನೋ.

**ತವಾಯಿ** (ನಾ). ೧. ದಂಡ ; ತಪ್ಪು : (ಕ). ೨. (ವ್ಯಾಪಾರದಲ್ಲಿ) ನಷ್ಟ : (ಕ). ೩. ಆಪತ್ತು ; ಸಂಕಟ : ನಿನ್ನ ತಮ್ಮನಿಗೆ ಒಂದು ತವಾಯಿ ಬಂದಿತ್ತು. ಅವನ ಸಾಲವನ್ನು ತೀರಿಸುವುದಕ್ಕಾಗಿ ನಾನು ಹೊಣೆಯಾದೆ (ಸುಮಚ. ೧೨೪). [ ←ಪಾರ. ತವಾಈ ; ಮರಾ. ತವಈ, ತವಾಈ ]

**ತವಿ** 'ತವೆ$_1$' ನೋ.

**ತವಿಗೋಲ್** (ನಾ). ನಾಶಕರವಾದ ಬಾಣ (?) : ಹಯದವುನಕ್ಕಮೇಱಿದನ ಬಿನ್ನಣಕಂ ದೊರೆಯಾಗಿಯುಂ ನೆಗಱ್ತೆಯ ಪಣಿದಕ್ಕೆ ಮಿಕ್ಕೆಸೆವ ತಕ್ಕಿನ ಬೀರರನಟ್ಟಿ ಕೊಲ್ವಳುರ್ಕೆಯ ತವಿಗೋಲ[ಲು]ಮಿಲ್ಲದಿರೆಯುಂ ವಿಭುಗಱ್ತೆಯ ಸೆಂಡನಾಡಲಾನೆಯ ಪರಿ ನೋಡಲೆಂದೊಲೆದು ಮಾಡಿದ ವಾಹಳಿಗಳ್ ಮನೋಹರಂ (ಶಾಂತಿಪು. ೯-೧೪೪).

[ <ತವಿಲ್$_2$ ? + ಕೋಲ್$_1$ ]

**ತವಿಯಿಸು** (ಕ್ರಿ). ಕಡಮೆ ಮಾಡು ; ಕುಂದಿಸು : ಒಡೆಯರಿಲ್ಲೆಂಬ ಪೌರರ ಮನವಿಡಿದ ತವಿಯಿಸುತ ನಡೆದನು (ಪ್ರಭಂಜ. ೨-೮೭). 'ತವಿಸು' ಪರಾ. [ ತವಿ (<ತವೆ$_1$) + – ಇಸು$_3$ ]

**ತವಿಲ್$_1$** (ಕ್ರಿ). ಕುಂದು ; ಕುಗ್ಗು ; ನಷ್ಟವಾಗು : ಕನತ್ಕನಕ ಚಾಮರಂ ಧವಳ ಚಾಮರಂ ಕೆಯ್ಗಳೊಳ್ . . . ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯಂ ವೃಷಭಲಕ್ಷಣಂ ಲಕ್ಷ್ಮಿಯಂ (ಗದಾಯು. ೯-೩). [ <ತವು$_1$ ]

**ತವಿಲ್$_2$,** ತವಿಲು (ನಾ). ೧. ಕುಂದು : ಕೊರತೆ ; ಕ್ಷಯ: ಸಿರಿಯ ತವಿಲಿಂ ಮಕ್ಕಳ್ ಕೈಮಿಕ್ಕು ಪೇಱ್ದುದು ಗೆಯ್ಯೆದಿರ್ಪಿರವಂ[ವಿಂ] . . . ಚಿಂತಿಸಿ ದುಃಖದೊಳ್ ಪಿರಿದುಮವರಿಂ ಕಣ್ಗೆಟ್ಟಂ (ಸುಕುಮಾ. ೨-೯); ನೇತ್ರ ಜ್ಯೋತ್ಸ್ನೆಯುಂ ರತ್ನಮಂಡನಬಾಲಾತಪಮುಂ ತದುಕ್ಕೆ ತವಿಲಂ ತರ್ಪನ್ನ ಮೇಱ್ಪಿರ್ಪಳಂ . . . ಕಣ್ಣೆಮೆಯಿಕ್ಕದೀಕ್ಷಿಸಿದನಾ ಸ್ತ್ರೀರತ್ನಮಂ ಲಕ್ಷ್ಮಣಂ (ಪಂರಾಮಾ. ೮-೬) ; ಮೊದಲೊಳ್ ಲಾವಣ್ಯಸರ್ವಸ್ವದ ತವಿಲನಣಂ ನೋಡದಾ ಕನ್ನೆಯಂ ಮಾಡಿದಂ . . . ಪದ್ಮಸದ್ಮಂ (ಚಂದ್ರಪು. ೫-೯೭) ; ಅನೇಕ ನವೀನ ರತ್ನಮಯದರ್ಪಣ ಕನಕಕಳಶ ವಿಚಿತ್ರಪತ್ರ ಪರಿಶೋಭಿತ

ಮಾಗಿ ನವೀನಕ್ರೀಡೆ ತವಿಲಿಲ್ಲದ ನವಿಲುಯ್ಯಾಲ ಮುಂದೊರ್ವ ವಿದಗ್ಧವನಿತೆ (ಗಿರಿಕ. ೪-೧೫೭ ವ). ೨. ಕೊನೆ ; ಅವಸಾನ; ನಾಶ: ಕವಿವ ನೆಳಲೊಳ ಗಾವನಿರ್ದನಾತಂಗೆ ತಾಂ ತವಿಲೆಡಱು ಬಡತನ ನಿರೋಧವಪಕೀರ್ತಿ ಪರಿಭವಭಯಂ ಹಱಿವುದು(ಹಜಕಾ. ೭-೧೧); ಕಾಯಲಿಟ್ಟೆಡೆಯೊಳ್ ಪಾಲಿರೆ (ಡೆ) ನೀರ ತಪ್ಪ ತವಿಲುಂ ಸಂಶುದ್ಧ ಸುಕ್ಷೇತ್ರಮಪ್ಪೆಡೆಯೊಳ್ ಬಿತ್ತಿದ ಬೀಜದೊಂದು ತವಿಲುಂ . . . ಪೇಟ್ ತಪ್ಪುವೇ ಜೀವನೇ (ಜೀವಸಂ. ೨೨೨-೨೪) ; ನವರಸಸುಖದೊಳಗೋಲಾಡಿಸುವಳ್ ತವಿಲಱಿಯದ ಕೂಟ ಮನೊಸೆದೀವಳ್ (ಉದ್ಭರ. ೧೫೭-೧೫) ; ನೆಲ್ಲಿ ಬೆಳುಹೂಲಿಗಳ ಬೇರಿಲ್ಲಣ ಮುಳುಗೊಗ್ಗಿಯೆಂಬಿನಿತ್ತಱ ಪುಡಿಯಂ ಚೆಲ್ಲನೆ ಮೂಗಿನೊಳೂಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ (ಖಮದ. ೭-೫೩). ೩. ಖರ್ಚು ; ವ್ಯಯ: ನವುಗಾವಗಂ ತವಿಲನೆಯ್ದದ ನಲ್ಲುಣಿಸಿತ್ತಂ (ಕುಸುಮಾ. ೧೧-೯೨). ೪. ಬಡತನ; ದಾರಿದ್ರ್ಯ; ದೈನ್ಯ: "ಎಡಱೆಂದುಂ ತವಿಲೆಂದುಂ ದಾರಿದ್ರ್ಯಂ" (ಕಶಸಾ. ೭೧-೭೦೨) ; "ಎಡಱೆನುತುಂ ತವಿಲೆನಲ್ಕೆ ದಾರಿದ್ರ್ಯಂ" (ಕವಿಕಂ. ೨೪೨) ; ಅವನ ಸತ್ಕರಿಪ ಸೋಂಕಿನೆ ದುಃಖಂ ತವಿಲಸುರ್ಬ್ಬಯಮುಮುತ್ಕಟ ಸುತ್ತುಂ ಸವಿಯಿಕುಂ ಜಗಕೆ ಹರ್ಷದಲಂಪಂ ಕವಿಯ ಸಿದ್ಧರಸಲೀಲೆವಿಚಿತ್ರಂ (ಸಂಸಪ. ೧೭-೧). ೫. ತೊಂದರೆ ; ವಿಪತ್ತು : (೬). ೬. ಸಂಕೋಚ: 'ತವಿಲ್ದೊಱೆ' ಪರಾ. ೭. "ಆಲಸ್ಯ; ಬೇಸರಿಕೆ" (ಪ್ರಭಣ್ಣ). ೮. (?): ಪೊಣ್ಮುವ ರೋಮಾಂಚದ ಸಾಲನೆತ್ತುವ ತವಿಲ್ಲಾ[ಪಾಠಾಂ. ಲ್ಯಾ]ರ್ಗಂಡು ಹಮ್ಮೈಸಿ ಹಾರವದಿಂದೆಚ್ಚಱುವಿಚ್ಚೆ ಪಚ್ಚೆ ನೆರೆದರ್ ತಮ್ಮಿಚ್ಚೆಯಿಂ ಕಾದ ಲರ್ (ಅನಂಪು. ೮-೫೦) ; (ಕಾವ್ಯಸಾ. ೭೫೯ ನೋ). ತವಿಲು : ೫. ಲೋಕದ ಅಸುಖ ಹಿಂಸೆ ತವಿಲು ಸಂತಾಪ ಆಧಿವ್ಯಾಧಿಗಳನ್ನು ತಗ್ಗಿಸಲು ನಿರ್ವಂಚನೆಯಿಂದ ಕಷ್ಟಪಡುತ್ತಿರುವ ಸಾತ್ತ್ವಿಕ ಸಾಹಸಿ (ಸಂಸಕ. ೧೧೭).

ತವಿಲಾಗು = ೧. ತಗ್ಗು ; ಕೊರತೆಯಾಗು ; ಕಡಮೆಯಾಗು : ಕುಂದದ ಚಂದ್ರಲೇಖೆ ನಸುಗಂದದೆ ರಂಜಿಪ ಪುಷ್ಪಮಾಲೆ ಕುಂದೊಂದದ ಸೋಮಶಾಖೆ ತವಿಲಾಗದ ಕೆಂಗೊನೆವಾಟೆ . . . ಎಂಬಂದದನೇಕ ನಾಮ ದೆಸೆಗುಂ ಮೃದುಬಂಧುರ ಗಂಧಶಾಲಿಗಳ್ (ದಶಕು. ೧-೨೪) ; ಕ್ಷಾಮ ಮಡುರ್ತು ಧಾನ್ಯತೃಣಪತ್ರಜಲಂ ತವಿಲಾಗಲ್ (ದಶಕು. ೧೨-೬೯). ೨. ನಾಶವಾಗು; ಸಾಯು; ಅಳಿದುಹೋಗು: ನಾನಾಸೆಯಿಂದಂ ತವಿಲಾದಂ ಕೋಪದಿಂದಳ್ಕಿದಂ (ರಕ್ಷಾಶ. ೨೪) ; ಎತ್ತ ಲಯವಾದೆ ಮದೀಶ್ವರ ಎತ್ತಣ ಕ್ರಮಕ್ಕೊದವಿದೆ ಎತ್ತ ಸಾರ್ದೆ ಕಳಿದೆತ್ತಲಣಂ ತವಿಲಾದೆ ಮನ್ಮಥಾ (ಗಿರಿಕ. ೮-೭೪); ಎಲೆ ತಂದೆಗಳಿರ ನೀಮಿತನೊಳ್ ತಾಗಿ ತವಿಲಾಗಲ್ವೇಡಿಂ ಬೇಡಿಕೊಂಡೆಂ (ಶಾಂತೀಶ್ವ. ೫-೧೭೭ ವ) ; ಕವಿಗಳಿಂ ತನ್ನ ಕೃತಿಯಂ ನಾಡೆ ತಿರ್ದಿಸಿದೊಡವನಿಯೊಳ್ ಚಂದ್ರಾರ್ಕರುಳ್ಳನ್ನೆವರೆಗಮದು ತವಿಲಾಗದು (ಆರಾಜ. ೧-೪೭). ೩. ಖರ್ಚಾಗು; ವ್ಯಯವಾಗು : ಆ ತವನಿಧಿಯೂ ತವಿಲಾಗಿ ಹೋಗಿದ್ದಿತು (ಶರಜ. ೫೮).

[ ತವು₂ + – ಇಲ್₃./ತಮಿ. ತವಲ್ ]

ತವಿಲಿಲಿ (ನಾ). ನಾಶರಹಿತವಾದುದು : ಭವಿಸೂತಕಾದಿ ಕರ್ಮವನೆಸಗುವ ವನಂತೆ ಶಿವಭಕ್ತನಂ ಕಂಡನಾದೊಡವನೆ ತವಿಲಿಲಿ[ಪಾಠಾ. ಲಿತಿ, ಲೆಲ]ಯ ನರಕಾಗ್ನಿ ಭವನದೊಳಗೋರಂತೆ ನವೆವನೆಂದೊರೆದ ಸೌರಾದಿಯಿಂದಂ (ಸಾನಂಜ. ೩-೮೮). [ ತವಿಲ್₂ + – ಇಲಿ₃ ]

ತವಿಲು 'ತವಿಲ್₂' ನೋ.

ತವಿಲ್ದೊಱೆ (ಕ್ರಿ). ಸಂಕೋಚವನ್ನು ತೊರೆ ; ದೈನ್ಯವನ್ನು ಬಿಡು : ಕಾಂತೆಯರ್ ತಡಿಗೇರ್ದನಂತ ಭೂಷಾಂಬರಗಳಂ ತಾಳ್ದು ಭಕ್ತಿಯಿಂದಂ ತವಿಲ್ದೊಱೆದುವಾಕಾಂತನ . . . ಸಂತರ್ಪಣಂಗೈದು (ನಂದಿಮಾ. ೬-೫೫); ಎಲೆ ಮಗನೆ ನಿನ್ನಿಷ್ಟಾರ್ಥಮಂ ತವಿಲ್ದೊಱೆದುಸಿರಾಲಿಸುವೆನೆಂದು ಜಗ ದಂತರಾತ್ಮಿಕೆ ನುಡಿದಳು (ನಂದಿಮಾ. ೯-೩೦). [ತವಿಲ್₂ + ತೊಱೆ₁]

ತವಿಲ್ಪಗಲ್ (ನಾ). ಇಳಿಹೊತ್ತು; ಸಂಜೆ: ಶ್ರೀಯಂ ಮದೀಯಪ್ರಿಯಾಬ್ಜ ನಿಯಂ ತೊಟ್ಟುಟಿಮಾಡಿ ಕೀಟ್ಟಡಿಸಿದಂ ತಾನೆಂದು ಕಾಯ್ದಂತೆ ಕೆಂಪಿನ ಸೊಂಪಂ ತಳೆದಂ ತವಿಲ್ಪಗಲೊಳಂ ವಿಶ್ವಂಭರಾವಲ್ಲಭಂ (ಅನಂಪು. ೭-೫೭).

[ ತವಿಲ್₂ + ಪಗಲ್ ]

ತವಿಸು₁ (ಕ್ರಿ). ೧. ನಾಶಮಾಡು; ಕೊಲ್ಲು: ಅಱಿದಱಿಪಿ ಬಱಿಯನುಱಿಯದೆ ಪಱಿವರುಮಂ ತವಿಸಿ ಕಟಿಯದುಱಿವಳನಾದಂ ಪಱಿಕೆಯ್ದುತೊಟ್ಟನುಱಿ ದಂತುಱಿದ ಮಹಾಪುರುಷರಱಿಯದುಱಿದರೆ ಸಿರಿಯಂ (ಕವಿರಾ. ೩-೧೭೫); ಎನ್ನೊಡಲನಾಂ ತವಿಪೆಂ ರಣರಂಗಭೂಮಿಯೊಳ್ (ಪಂಪಭಾ. ೯-೭೦) ; ಇದಿರಾನ್ನರಂ ತವಿಸಿ × × × (ಎಇ. XVIII, ೩೪-೧೪ ; 1082); ತವಿಸಿದಂ ದಿವಿಜಾರಿ ವಿರೋಧಿಸೈನ್ಯಮಂ (ಜಗವಿ. ೭-೮೪) ; ಕಪ್ಪೆಗಳೊಱಲೆ ಬೋಟೆ ಗಿಱಿಲುಗಳೆಂಬ ಹೊಳೆವಳಿಯ ಮಾನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಜಕಾ. ೫-೪೭) ; ಅದ್ವೈತರನಪಹರಿಸಿ ತವಿಸಿ ಚಾರ್ವಾಕರ ನವನಿಯೊಳು ಶಿವನ ಭಕ್ತಿಯ ತಾಂ ಪ್ರತಿಷ್ಠಿಸಿ (ಬಸಪು. ೫೩-೧೧) ; ಉರಗಬಾಣವನಿವರು ಕಱಿದರು ಗರುಡಶರದಲಿ ಪಾರ್ಥ ತವಿಸಿದನು (ಕುಮಾ್ಯಭೀ.೯-೪೪);ಮುದ್ರಿಸುವೆವಿವನ ವೀರವನೆನುತೆ ಕವಿಸಿದರ್ತವಿಸಿದರ್ ಸುರರದಟನು (ಜಬಪು.೪೩-೪೨); ಸಿಂಹಳಂ ...ಪೊಕ್ಕನಳ್ಕಿ ಕಡಲಿಂ ತೊಡದಿರ್ ತವಿಪಂಬಂ[ಪಾಠಾಂ.ಬಿಂ] (ರಾಜಶೇ. ೬-೧೧೧) ; ನೀನೇ ಜಗಮಂ ತವಿಪ್ಪೆ ಯೌರ್ವಂ ಪಯೋನಿಧಿಯನೀಂಟುವವೋಲ್(ವಿಷ್ಣುಪು.೫-೨-೧೭೪); ತವಿಪಂ ಪಗೆಯಂ ಕೋಲಿಂ (ಸೌನಂದ. ೨-೨೭). ೨. ಪರಿಹರಿಸು ; ನಿವಾರಿಸು : ದಿವಿಜನೋ ಫಣಿನಾಯಕನೋ ಮನೋಭವನಿವಂ ಕರವೊಪ್ಪಿದನೆಂಬುದಂ ಕವಿಗಳಿಟ್ಟ ವಿಶಂಕೆಯ ಪಾಟಿಯಂ ತವಿಸಿ ನಿಲ್ಕೆ ಮನೋಹರ ಕಾವ್ಯದೊಳ್ (ಕವಿರಾ.೧-೧೪೦) ; ಉತ್ಪಲಪತ್ರದೊಳೊಲ್ದು ಬೀಸಿಯುಂತ್ಪಲ್ಲಶರಾಗ್ನಿಯಂ ತವಿಸುವುಜ್ಜುಗಮಂ ತಳೆದಂ ಮ ನಃ ಪ್ರಿ ಯ ಂ (ದಶಕು. ೬-೧೧೭) ; ಭವ ಭವಾರ್ಜಿತ ದುರಿತಕೋಟಿಯ ತವಿಸುವಗ್ಗದ ನಾಮ (ತೊರರಾ. ೧-೧-೧೪): ಅಲ್ಲಿ ನಿಜಸಖಿಯರಬ್ಬಲೆಯ ಚಿತ್ತದಾಸಱಂ ಮೆಲ್ಲಮೆಲ್ಲನೆ ತವಿಸಲೆಂದುಪ ಚರಿಸಲು (ಜೈಮಿಭಾ. ೩೦-೩೭) ; ವರ ಪುಣ್ಯಕಥೆವೇಳ್ದು ನಮ್ಮ ಕಿವಿ ಯಾಸಱಂ ತವಿಸೆಂದರು (ನಂದಿಮಾ. ೨-೩೭) ; ಬನದ ತಪಸ್ವಿಗಳ್ಗುಪಹತಿ ಗೆಯ್ವುದಿದಂ ತವಿಪುದೆನಗೆ ಕರ್ತವ್ಯಮಕ್ಕುಂ (ಶಬಶಂ. ೪-೨೪ ವ) ; ಶಶಿವೊಗದ ಪಾಣ್ಬೆಯರು . . . ಯಮುನ ಕೋಪವ ತವಿಪರು (ಏಕೋಪು. ೪-೭೦). ೩. ಕುಗ್ಗಿಸು ; ಕ್ಷೀ ಣ ಗೊ ಳಿ ಸು : "ತವಿಸು—ಕ್ಷಯೇ (ಕ್ಷೀಣವಾಗುವಂತೆ ಮಾಡು)" (ಶಮಧಾ) ; ಪಿರಿದಪ್ಪ ತಪದೊಳೊಡಲಂ ವರಧರ್ಮದೊಳರ್ಥಮೆಲ್ಲಮಂ ತವಿಸುವರಂ ಧರೆ ನಚ್ಚಿ ಮೆಚ್ಚಿ ಬಣ್ಣಿಪುದು (ಧರ್ಮಾಮೃ. ೪-೨೨) ; ಕುಡಿದಂಭೋಧಿಗಳೇಟಿಮಂ ತವಿಪುದೇ ಗೋತ್ರಾದ್ರಿ ಸಂಘಾತಮಂ ಪಿಡಿದೇಂ ಕೀಟ್ಟಿದೆ (ಕಾವ್ಯಾವ. ೩೦೪). ೪. ನಾಶವಾಗು ; ಇಲ್ಲವಾಗು ; ನಿವಾರಣೆಯಾಗು : ಇಂತೆಂದನೇಕ ದೃಷ್ಟಂಗಳಿನವನ ಸಂಶಯಂ ತವಿಸಲೊರೆಯೆ (ಪದ್ಮರಾ. ೧೨-೪೩); ಸಂದೇಹದುದಯಂಗಳೆಯ್ದೆ ತವಿಪುವು (ಅನುಸಾ. ೬-೪-೧೭). ೫. ವ್ಯಯಮಾಡು ; ಖರ್ಚುಮಾಡು ; ವಿನಿಯೋಗಿಸು: ತನ್ನೊಡಮೆಯನನವರತ ದಾನದಿಂ ತವಿಸಿ ಜಸಂಬಡೆದಳ್ (ಅಜಪು. ೧-೫೧) ; ವಿಪ್ರಾವಳಿಗೆ ತವಿಸಿ ಧನಮಂ (ಬೊಂಕಶಾ. ೧೯೪೪, ಬಂಕಾಪುರ. ೨೧-೪೨; 1069) ; ಪರಮಾರ್ತ್ಥಂ ವಿದ್ವದರ್ತ್ಥಂ ತವಿಸದನ ಧನಂ ವ್ಯರ್ತ್ಥಂ (ಎಕ.V, ಬೇಲೂರು. ೧೨೪-೪೪; 1133); ಸವಿ ತವದನ್ನೆಗಂ ಮನದ ಪತ್ತುಗೆಗಳ್ ಕಿಡದನ್ನೆಗಂ ಪೆಱುಗವಳಿಡೆಯಾಗದನ್ನೆಗಮೊಡಂಬಡು ಮೇವಮುಮಿಲ್ಲದನ್ನೆಗಂ ತವಿಪುದು ತನ್ನನೊಪ್ಪಿಸುವುದು(ಚಂದ್ರಪು.೮-೮೧). ೬. ಕಳೆ ; ಪೋಲುಮಾಡು: ಸ್ತ್ರೀದ್ಯೂತವ್ಯಸನಾದಿಗಳಿನಾ ಪೊನ್ನೆಲ್ಲಮಂ ತವಿಸಿ (ಚಾವುಂಪು. ೩೪೭-೫). ೭. ಕೃಶಗೊಳಿಸು ; ಸೊರಗಿಸು ; ಸವೆಯಿಸು : ನೋಂಪಿಗಳಿಂದಂ ಗಿಡಿಗಿಡಿಜಂತ್ರಂ ಮಿಳಿಮಿಳಿನೇತ್ರಮಾಗಿ

ತಮ್ಮ ಮೆಯ್ಯಂ ತವಿಸಿ (ವಡ್ಡಾರಾ. ೧೫೧-೨೫) ; ದೇಹೋತ್ಪನ್ನ ಪರೀಷಹ ಸಂಹತಿ ತನ್ನೊಡಲಂ ನೆಱೆಯೆ ತವಿಸುತಿರ್ಪುದುಂ (ಆದಿಪು. ೨-೫೨) ; ತವಿಸುತಿರೆ ತಪದೊಳೊಡಲಂ (ಸಮುಪ. ೪-೪೧); ಒಡಲೆಂತುಂ ಕಿಡಲಿರ್ದುದು ಕಿಡುವೊಡಲಂ ತವಿಸಿ ಕಿಡದ ಮುಕ್ತಿಶ್ರೀಯುಂ ಪಡೆಯಲ್ಕೆ (ಧರ್ಮಾಮೃ. ೪-೧೨೦) ; ತವಿಸಲ್ವೇಟ್ಪುದು ಜನ್ಮಕ್ಕವಶಿಷ್ಟಾನಿಷ್ಟಯೋಗಮಂ (ಅನಂಪು. ೬-೩೫) ; ತನಗೆ ಮಕ್ಕಳಾದುದಿಲ್ಲೆಂದು ಮೆಯ್ಯಂ ತವಿಸಿ ನೋಂಪಿಯಂ ನೋಂತಳ್ಗಡಾ (ರಾಮಾಶ್ವ. ೪೬-೩). ೮. ವಿರೂಪಗೊಳಿಸು: ತದ್ವನಿತೆಯಂ ತಂದು ಲಕ್ಷ್ಮಣನಿನವಳ ಕ್ಷಿತಿಯುಱೆಯೆ ತವಿಸಿ (ಪಾಸೋಪು. ೯-೧೫೭). ೯. ಸೋಲಿಸು : ನಿಕಳಂಕಸ್ವಾಮಿಗಳನು ತವಿಸಿದ ಬೌದ್ಧನಿಕರವ ಗೆಲ್ದು ತರ್ಕದೊಳು ಸಕಲ ವಿದ್ವಜ್ಜನ ಪೊಗಳೆ ಸಿಂಗಳಕಟ್ಟಿದಕಳಂಕ ಸ್ವಾಮಿ ಗೊಂದಿಪೆನು (ನಾಗಕು. ೦-೧೩). ೧೦. ಮುಗಿಸಂ ; ಪೂರೈಸು ; ಕೊನೆ ಗೊಳಿಸಂ : ತಲ್ಪಯಾಗಕ್ಕಿದು ಪ್ರಯೋಗಪದ್ಧತಿಯಂತಿರ್ಪುದು ಇದಂ ತವಿಸಿ ಮುಂತಣ್ಗೆ ನಡೆಯುವೇಟ್ಪುದು (ಚಿಕವಿ. ೬-೧೩೩ ವ); ಬವಸಿ ನೊಂದು ಕಜ್ಜಮಂ ತವಿಸಿ ಬೇಸರ್ಗೆ ಕುಡಿಯರ್ ಕಡುಸುಮ್ಮಾನದಿನೊಂದೆಡೆಯೊಳ್ ನೆರೆದು (ರಾಮಾಶ್ವ. ೨೨-೨೦). ೧೧. ನಿಲ್ಲಿಸು ; ಸಾಕುಮಾಡು : ಬಲ್ದಣಿದೆ ಇಂದು ಮೊದಲ್ಗೊಂಡು ತಪಮಂ ತವಿಸೈ (ಅದ್ಭುತ. ೨೯-೫). ೧೨. ಉಪಶಮನಗೊಳಿಸು ; ಶಾಂತಗೊಳಿಸು : ತದ್ವನದಿ ನೆಳಲುಂ ನೀರುಯಿರ್ದಪವು ಅಸುವಿನನುತಾಪಮಂ ತವಿಸವ್ವ (ನವಮೋ. ೮-೨೩) ; ತನ್ನ ಹೆಂಡಿರನು ತಾನೆ ತವಿಸದಿನ್ನಾರು ಶಮಿಸಲಹುದು (ಮೇಘದೂ. ೧೦-೩೯); ತವಿಸಲಾರದ ದುಃಖವೊಂದನ್ನು ಮರೆಯಲು ಅವನು ಸುಖವನ್ನರಸಿ ಮುಂಬಯಿಗೆ ಬಂದಿದ್ದ (ರೂಪಸ. ೬೦). ೧೩. [ಗಣಿತ] ಭಾಗಾಕಾರ ಮಾಡು; ಭಾಗಿಸು: ಭಾಗಂ ಎಂಬುದಕ್ಕೆ ಪೆಸರು: ತವಿಸು, ಭಾಗಿಸು, ಉಗಿ, ಎತ್ತು, ಕೊಡು, ಕೊಳು (ವ್ಯವಹಾ. ೧೨-೧೨). ೧೪. (?) : ತವಿಪಂ ಮಾರಂಗಳಿಂ ಕಂಪರಂ ಪರಮೋತ್ಸಾಹದೆ ಪುಟ್ಟ ಸನ್ತವಿದುನ್ನೂನತ ಕಂಪರಾತ್ರಿರ್ಕೃತನಂನಾವೊಂನಂ (ಎಕ. XIV, ಎಡತೊ. ೩೧-೪ ; ಸು. 900). [ ತವು₁ + – ಇಸು₃ ]

**ತವಿಸು₂** (ಕ್ರಿ). ೧. ತಪಸ್ಸುಮಾಡು : ಅಲೌಕಿಕ ಚಮತ್ಕಾರ ಸಿದ್ಧಿಗಾಗಿ ತವಿಸಿ 'ಸಿದ್ಧ'ರೆನಿಸುವ ಗುರಿಯ ಯತಿಮುನಿಗಳು (ಕರ್ನಾಟ. ೬೪) ; ಚಿಂತೆಯ ಕಾರ್ಮುಗಿಲಿರುಳೊಳಗೆನ್ನದೆ ಬೆಳಕನು ಕಾಣಲು ತವಿಸಿತ್ತು (ಭಾವಗೀ. ೨೮೯). ೨. ಪರಿತಪಿಸು ; ವ್ಯಾಕುಲಪಡು ; ದುಃಖಿಸು : ಎಲೆ ಮಾರಾಯನೆ ನೀಂ ತವಿಸಬೇಡ ಆಂ ಬೇಗದಿಂ ಬರ್ಪೆಂ(ಮಿತ್ರಗೋ. ೪೨).

[ <ತಪಿಸು₂ ]

**ತವು₁** (ಕ್ರಿ). ತಪ್ಪ (ಭವಿಕೃ). ೧. ಕುಗ್ಗು ; ಕಡಮೆಯಾಗು ; ಕ್ಷಯಿಸು; ಸವೆ : "ತವು–ಕ್ಷಯೇ" (ಶಮಧಾ); ನೆಗಟ್ದ ನೀಲಾಂಜನೆ ತನ್ನಾಟಮನೊಱಲ್ದು ನೋಡುವ ನೋಟಕರಂ ತವದ ಮಾಟ್ಕೆಯಿಂ ಮೋಹಿಸಿದಳ್ (ಆದಿಪು. ೯-೩೮) ; ಒಱತೆಯುಳ್ಳನ್ನೆಗಮೆನಿತಂ ತೋಡಿಕೊಂಡಡನ್ನೀರ್ತವದಂತಗಣಿತಪುಣ್ಯಮುದುಳ್ಳನ್ನೆಗಂ . . . ತವದು ಧನಮೇಗೆಯ್ದುಂ (ಸಮುಷ. ೫-೧೩೭); ಬಡಬಾನಳಂ ಬಿಡದಾಗಳುಂ ತಗುಳೆ ಪೀರೆಯುಮಂತದೆಳ್ಳನಿತಪ್ಪೊಡಂ ತವದಂತೆವೋಲ್ ಬಗೆದು ನೋಡೆ ಮಹಾತ್ಮರಪ್ಪವರೇಕರೂಪರದೆಲ್ಲಿಯುಂ (ಕಾವ್ಯಾವ. ೭೨೩) ; ತವದ ಪೊಡರ್ಪಿನಿಂದಿಸುವ ಕೂರ್ಗಣೆ (ಜಗವಿ. ೭-೫೯) ; ತವದಾಯುಷ್ಯಮು ಮೇಟಿಗ್ಗುಂದದೊಡಲುಂ (ಅನಂಪು. ೯-೪೧); ಆತುಕೊಳ್ಳೈ ಕೋಲುಗಳ ಕೈಯಾ ತವದ ಕಣೆಗಳಿಗೆವುಗ್ರಭಟಾತಿಶಯರಾರೆನುತ ತೆಗೆದೆಚ್ಚರು ಮಹಾ ರಥರು (ಕುಮಾರವ್ಯಾ. ಕರ್ಣ. ಪರ. ೨೯೧) ; ತವದ ಕಾಮೋದ್ರೇಕದಲಿ ಕೊಡುವ ಸಮಪ್ರಣಯಿಗಳ ನೀಡುಗಣ್ಣೆಮೆಗಳರೆಮುಗಿವುತಿರೆ (ಸಾಳ್ವಭಾ. ೧೮-೩೭); ೨. ಅಳಿ; ಸಾಯು; ನಾಶವಾಗು: ತತ್ಸುಯೋಧನಸುತರೆನ್ನ ಬಾಣಗಣದಿಂ ತವದಿರ್ದಪರೊ (ಪಂಪಭಾ. ೧೧-೧೦೭) ; ಸಂನ್ಯಸನಮಂ ಕೈಕೊಂಡ ಮಹಾಪುರುಷನ ಕರ್ಮ೦ . . . ಸೊಡರಂ ಪೊರ್ದಿದ ಪತಂಗದಂತೆ ತವುಗುಂ (ಧರ್ಮಾಮೃ. ೧೪-೧೦೨) ; ತನು ತವುವನ್ನಮೋತಗಲದಿರ್ಕೆ ವನೆನ್ನೊಳೆ ನೋಡದಿರ್ಕೆವಂ ಕನಸಿನೊಳಪ್ಪೊಡಂ ಪೆಱರಂ (ಲೀಲಾವ. ೨-೮೫) ; ಎತ್ತ ದವಾನಳನಟುಱಿದುದತ್ತಲೆ ಪೇರಡವಿ ತವುವ ತೆಱದಿಂ (ಜಗವಿ. ೭-೬೭). ೩. ವ್ಯಯವಾಗು ; ತೀರು : ಭೋಗಿಪೆನೆನ್ನ ಜವ್ವನಮುಮಿಾ ಧನಮುಂ ತವುವನ್ನೆಗಂ (ಆದಿಪು. ೩-೬೩) ; ತನ್ನ ದೊಣೆಯಂಬುಗಳ್ ತವುವನ್ನೆಗಮೆಚ್ಚಂಬು ತಪ್ಪೊಡಭಿವಾದಯೆನಲ್ಕಿನ್ನೆನಗೆ ಪದನಿದೆಂದು (ಪಂಪಭಾ. ೧೩-೪೦); ಆಕೊರ್ಗೊಳ್ವೊಡಂ ತವದ ಕನಕರಾಶಿಗಳುಂ (ಚಾವುಂಪು. ೭೧-೧೭); ತವೆ ತೈಲಂ ದೀಪಂ ನಂದುವಂತೆ (ಪಂರಾಮಾ. ೧-೮೨); ವಾರ್ಧಿವಾರ್ಪ್ರತಮಂ ಸುಱ್ಕಿನೆ ತವುವಿನೆಗಂ ಪೀರನೇ ಕೋಪದಿಂ ಪೊಯ್ಯನೆ ಬೆಟ್ಟಂ ಪಿಟ್ಟು ಪಿಟ್ಟಾಗಿರೆ ಸಮರದೊಳೀ ವೀರಪೆರ್ಮಾಡಿದೇವಂ (ಎಕ. VII, ಶಿವಮೊ. ೪-೯೪; 1122); ಪನ್ನೆರಡುವರುಷದಂದಿಗೆ ಮೂವತ್ತೆರಡು ಕೋಟಿಯುಂ ನೆಱೆಯೆ ತವುವುದವೊಂದು ದಿವಸದ ಬೀಯಕ್ಕೆ ಮನೆಯುಂ ಮಾಱೆ (ಬಂಹರಿ.೪-೩ ವ). ೪. ಮುಗಿ; ಕೊನೆಗೊಳ್ಳು; ಉಪಾದ್ರಿಯೊಳ್ ದ್ರವಿಣಮುಂ ಬಯ್ದುದ್ಧತಂ ತನ್ನುಸಿರ್ ತವೆ ಪಂಕಪ್ರಭೆಯೊಳ್ ದಶಾಬ್ಧ್ಯುಪಮೆಯಿಂ ದುಃಖಾಗ್ನಿಯೊಳ್ ಬೆಂದು (ಆದಿಪು. ೫-೪); ನುಡಿಯಿಸಿ ಕೇಳ್ಗುಂ ಹರಿಗನ ಪಡೆಮಾತನೆ ಮಾತು ತಪ್ಪೊಡಂ ಮತ್ತಮದಂ ನುಡಿಯಿಸುಗುಂ ಮೊದಲಿಂದಾ ನುಡಿ ಪಱಿಪಡೆ ಮುಳಿದು ನೋಡುಗುಂ ಕೆಳದಿಯರಂ (ಪಂಪಭಾ. ೪-೫೬); ಇಸೆ ನಿಶಿತಶಸ್ತ್ರಹತಿಯಿಂ ಬಸವೞಿದು ಶರಾಸನಾಗಮಾಚಾರ್ಯನುಮಂದಸುವಂ ಬಿಟ್ಟಂ ವಿದ್ಯಾಪ್ರಸರತೆಯೇ ಗೆಯ್ದುದಾಯು ತಪ್ಪೊಡೆ ಪೇೞೆಂ (ನೇಮಿಪು. ೧೨-೧೩೪) ; ಕುಸುಮದಿಂ ಮೊರೆದೇಟ್ಪಳಿಜಾಲದೊಂದು ಝಂಕಾರಮುಮೊರ್ಮೆಯುಂ ತವದು ಭಾವಿಪೊಡಲ್ಲಿಯ ನಂದನಂಗಳೊಳ್ (ಜಗವಿ. ೨-೧೧). ೫. ಮರೆಯಾಗು; ಮುಳುಗು ; ಅಸ್ತಮಿಸು: ತವುತಿರ್ದತ್ತಲ್ತೆ ತಾರಾಸಮುದಯಮಿದೊ ಪಂಪಾಸರಸ್ತೀರ ಸುಪ್ತೋತ್ಥವಿಹಂಗಧ್ವಾನಮೀ ಪೊಣ್ಮುವುದು (ಕಾದಂಬ. ೭೦೪). ೬. ಸೊರಗು; ಕೃಶವಾಗು; ಬಡವಾಗು: ಇರ್ಪತ್ತೊಂದು ದೆವಸ ಮೇಕೋತ್ತರವೃದ್ಧಿಯಿಂ ಮನಂ ತವದೆ ತನು ತವೆ ನೋನುತ್ತಿರ್ಪಿನಂ (ಶಾಂತಿಪು. ೪-೬೭ ವ) ; ಧರ್ಮಮುಂ ಗೆಯ್ದು ತಪ್ಪೊಕ್ಕಲ ಬಡತನಮಂ ತಪಂಗೆಯ್ದು ತಪ್ಪನ ಮೆಯ್ಯ ಬಡತನಮುಂ ಸನ್ಯಾಸದೊಳ್ ಸತ್ತನ ಸಾವುಮಂ ತವಿಲುಂ ಬಡತನಮುಂ ಸಾವುಮೆಂಬುದೆ (ಜೀವಸಂ. ೪೮-೧೬ ವ). ೭. ಹಿಮ್ಮೆಟ್ಟು; ಹಿಂಜರಿ: ಇವರಂತಲ್ತು ಮಹೀಶೂರವರದಟದು ಬೇಱೆ ವಿಾಱೆ ಪೋಪುದು ಮೋಸಂ ತವುವುದು ಲೇಸೆಂದುಱೆ ಸಾರುವ ಹನುಮನ ಮಾತನೆಣಿಸದೆಯ್ತಂದನವಂ (ಚಿಕವಿ. ೨-೧೦೦). ೮. ನಾಶಪಡಿಸು : ತವುಗೆ – ತಪ್ಪಂ, ತಪ್ಪಪಂ. ತಪ್ಪಂ ತನ್ನೊಳ್ ಪಳಂಚಿ ಕಿಡುಗುಟ್ಟಿ ತಪ್ಪುವಂಬುಗಳನವಂ (ಶಮದ. ೨೪೦ ಪ್ರಯೋ).

**ತವದೊಣೆ, ತವಡೊಣೆ** = ಎಷ್ಟು ಬಾಣಗಳನ್ನು ಹೊರಗೆ ತೆಗೆದರೂ ಬರಿದಾಗದ ಬತ್ತಳಿಕೆ; ಅಕ್ಷಯತೂಣೀರ : ವಿಕ್ರಾಂತತುಂಗನುತ್ತುಂಗ ಭುಜಪರಿಘದೆರಡುದೆಸೆಯೊಳಂ ತವದೊಣೆಗಳಂ ಬಿಗಿದು (ಪಂಪಭಾ. ೫-೮೪ ವ); ಬಿಗಿದ ತವದೊಣೆಗೆ ಕೆಯ್ಯಂ ನೀಡಿ ನಿಶಿತಾಸ್ತ್ರಮನೊಂದನುರ್ಚಿ ಕೊಂಡು (ಶಾಂತಿಪು. ೪-೪ ವ) ; ಪೆಗಲೊಳ್ ತವದೊಣೆಯುಂ ಬಿಗಿದು (ಪಂರಾಮಾ. ೯-೫೭); ತವದೊಣೆಯಿಂ ತವದ ಮಂತ್ರಾಸ್ತ್ರಪ್ರಯೋಗದಿಂ ಕೈಮಿಕ್ಕು ಮ್ಯೆಮೆದಳೆಯಲುಂ (ಜಗವಿ. ೧೫-೫ ವ) ; ಉರುತರವೆನಿಸಿದ ತವ[ಪಾಠಾಂ. ವ]ದೊಣೆ[ಯಂ] ಚಚ್ಚರವಾಗಲ್ಪೆಗಲೊಳ್ಬಿಗಿದು . . . ನಡೆದಂ (ಕುಮುರಾ. ೮-೪೨) ; ತವಡೊ[ಪಾಠಾಂ. ದೊ]ಣೆಗಳಂ ಬಿಗಿದು ಗಾಂಡೀವಮಂನೇಱಿಸಿ ನೀವಿ ಜೇವೊಡೆದು (ಪಂಪಭಾ. ೭-೩೭ ವ).

ತವನಿಧಿ = ಅಕ್ಷಯವಾದ ನಿಧಿ : ಇನ್ನು ಚತುರಂತ ಧಾತ್ರೀಕಾನ್ತೆಯನಳ ವಡಿಸಿ ಚಕ್ರವರ್ತಿಶ್ರೀಯಂ ತಾಂ ತಳೆದು ಸುಖದೆ ಪಲಕಾಲನ್ನವೆ ತವನಿಧಿಗಧೀಶನಾಹವಮಲ್ಲಂ (ಎಕ. VII, ಶಿಕಾರಿ. ೧೩೬–೫ ; 1068); ದಾಸಿದೇವ ತನ್ನ ವಸ್ತ್ರವನಿತ್ತು ತವನಿಧಿಯ ಪ್ರಸಾದವ ಪಡೆದ (ಬಸವ. ೩೨೦) ; ಒಬ್ಬ ಶಿವಶರಣ ಚೋಳದಾಸ ಉಣಲುಂಡಲಿತ್ತ ಕೈಯೊಡನೆ ಹೊನ್ನ ಮಳೆ ತವನಿಧಿಯ ಹಡೆದರು (ಆದವ. ೧೨–೨೨) ; ಅವನಾಗ ತವನಿಧಿಯ ಅಡಗಿಸಿದನಲ್ಲಿಯೆ (ಬಸವು. ೨೩–೯) ; ಬೆದಱು ತವನಿಧಿಯಾಯ್ತು ಪಟುಭಟರೆದೆಗಳಿಬ್ಬಗಿಯಾಯ್ತು (ಕುವ್ಯಾಭೀ. ೧೦–೧೩) ; ಸವಿದು ಸವೆಯದ ಸವಿಯ ಸಾರಿನ ತವನಿಧಿಗಳಹ ತನ್ನದೊಂದೊಂದವಯವದ ಲಾವಣ್ಯ ರಸಪೀಯೂಷಪಾನದಲಿ (ನಿಭಾಗ. ೩–೧೩–೪೨); ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವು ಒಂದು (ಕಸಾಚ. ೨೯೬).

[ದೇ.॥ ತಮಿ. ತವು, ತವು, ತವ್ವು, ತಾವು]

**ತವು$_2$** (ನಾ). ೧. ಕಡಮೆಯಾಗುವಿಕೆ; ತಗ್ಗುವಿಕೆ: (+). ೨. ಅಳಿವು ; ನಾಶ ; ಕ್ಷಯ : "ತವು ಕ್ಷಯಮಕ್ಕುಂ" (ಕವಿಕಂ. ೨೨೩).

[<ತವು$_1$./ ತಮಿ. ತವ್ವು, ತಾವು ; ತುಳು. ತಾವು]

**ತವುಂಕಲ್**, ತವುಕಲ್, ತೌಂಕಲ್, ತೌಕಲ್ (ನಾ). ೧. ಕುಗ್ಗುವುದು ; ಕಡಮೆಯಾಗುವುದು ; ಕ್ಷಯ : "ತವುಂ[ಪಾಠಾಂ. ತೌಂ]ಕಲ್ ಕ್ಷಯ" (ಶಬ್ದಮಂ. ೬೫): ಔಕಾರಕ್ಕೆ – ಕವುಂಗು, ಕೌಂಗು . . . ತವುಂಕಲ್, ತೌಂಕಲ್ (ಶಮದ. ೧೫೬ ಪ್ರಯೋ). ೨. "ಅರೆವಿಮಿದಿದ ಬತ್ತ" (ಶಮದ. ಸ. ೧೬೮ ಪ್ರಯೋ. ಅಡಟ). **ತವುಕಲ್ :** ೧. ರಥದೊಳಗುಳ್ಳಾಯುಧಂಗಳೆಲ್ಲಂ ತವುಕಲಾಗೆ ಮಾಣ್ದು ಮಾಣ್ದೆಸುವುದು ಸೈಂಧವಂ ಕಂಡು (ಬಂಹರಿ. ೧೨–೩೩ ವ). ೩. ಮುಗಿಯುವಿಕೆ; ಕೊನೆ: ಅಗ್ರಜಾತ ಪಾದಪಯೋಜಾತಂಗಳ್ಗೆಱಗಿ ಕತಿಪಯಾವಶೇಷಮಾದ ತವುಕಲ ಕಲಹಮನೆನಗೆ ದಯೆಗೆಯ್ವುದೆಂದು ಬೇಡಿಕೊಳ್ವುದುಂ (ಶಾಂತಿಪು. ೮–೩೨ ವ). **ತೌಂಕಲ್ :** ೧. 'ತವುಂಕಲ್' ಉಲ್ಲೇಖದ 'ಶಮದ' ಪ್ರಯೋಗವನ್ನು ನೋಡಿ. **ತೌಕಲ್ :** ೩. ಎಣ್ಬತ್ತೊಂದುಲಕ್ಕಬರಿಸಂ ಬಟ್ಟಾ ಪರಮಾಯುವ ತೌಕಲೊಳರ್ಧರಾತ್ರದೊಳ್ ಕಟಿದು ಸಪ್ತಮಾವನಿಗಿಟಿದೊಂ (ಶಾಂತಿಪು. ೫–೭೧). [ತವು$_1$ + – ಕಲ್$_4$]

**ತವುಕಲ್** 'ತವುಂಕಲ್' ನೋ.

**ತವುಕುರಿ**(ನಾ). ಒಂದು ಬಗೆಯ ತೆರಿಗೆ: ದಣ್ಡದೋಷಂ ತವುಕುರಿ ತವುದಾಯ ಸುಬೂದಗೂಳ ಪ್ರಾ[ಯ]ಶ್ಚಿತ್ತಂ ತಿಪ್ಪೆಸು[ಙ್ಕ]ಂ ಗಾಡಿಯ ಸುಙ್ಕಂ (ಎಕ. XI, ದಾವಣ. ೧೩೯–೫೦ ; 1106). [?]

**ತವುಗೆ, ತೌಗೆ** (ನಾ). ಕೊನೆ ; ಅವಸಾನ : (+). **ತೌಗೆ :** ತಳೆದ ಸುಮನೋದಾಮಂ ನೀರೋಡಿ ಬಾಡಿದುದು . . . ತಂದ್ರುತೆ ಚಿತ್ರಮಂ ಬಳಸಿದುದು ಪೇಟಾವೊಂಗೇನಾಗದಾಯುವ ತೌಗೆಯೊಳ್ (ಚಂದ್ರಪು. ೪–೭೭). [ತವು$_1$ + – ಗೆ]

**ತವುಟಿ** 'ತವುಟೆ' ನೋ.

**ತವುಟೆ,** ತವುಟಿ (ನಾ). ಒಂದು ಬಗೆಯ ಗಿಡ ; ಬೆಟ್ಟದ ನೆಲ್ಲಿಗಿಡ : (+). **ತವುಟಿ:** ಗುಡ್ಡದ ನೆಲ್ಲಿ, ತವುಟ (ಮೃಜಿಗಿ. ೬೬–೧೩೪೪).

[ದೇ.॥ ತಮಿ. ತವಿಟ್ಟು]

**ತವುಡಂಗಿ** 'ಚವುಡಂಗಿ' ನೋ.

**ತವುಡಿ$_1$**, ತವುಡೆ, ತೌಡಿ, ತೌವುಡಿ (ನಾ). ಒಂದು ಬಗೆಯ ತೆರಿಗೆ : ಸಲುವುದು ಪಟ್ಟಣಕೇರಿಯಲಿ ತಪ್ಪು ತವುಡಿ ದಂಡ ಉಂಡಿಗೆ (ಎಕ. IX, ಬೆಂಗಳೂ. ೬೧–೨೦ ; 1332). **ತವುಡೆ :** ಆಯದೆಱ ಹಡುವರ ಬೀರವಣ . . . ದಣ್ಡಾಯ ತವುಡೆಯೊಳಗಾದ ಸಮಸ್ತ ಕಿಱುಕುಡವೆಲ್ಲವಂ (ಎಕ. V, ಬೇಲೂರು. ೫೯–೮೭ ; 1117) ; ಅಳಿವು ಅಂನ್ಯಾಯ ತಪ್ಪು ತವುಡೆ . . . ಸಲುವುದು (ಮೈಆರಿ. ೧೯೪೦, ೧೪–೧೭ ; 12ನೆಯ ಶತ). **ತೌಡಿ :** ಅಳಿವು ಅಂನ್ಯಾಯ ಕಿಱುಕುಳ ತಪ್ಪು ತೌಡಿವೊಳಗಾದ ಸಮಸ್ತ ಬಳಿ ಸಹಿತಂ . . . ಪುತ್ರ ಪೌತ್ರಾದಿಗಳಿಗೆ ಸಲುಉದು (ಎಕ. XI, ಹಿರಿಯೂ. ೮೭–೨೧ ; 1313) ; ಅಳಿವು ಅನ್ಯಾಯ ಕಿಱುಕುಳ ತಪ್ಪು ತೌಡಿವೊಳಗಾದ ಸಮಸ್ತ ಬಳಿ ಸಹಿತವಾಗಿ . . . ಪುತ್ರ ಪೌತ್ರಾದಿಗಳಿಗೆ ಸಲ್ವುದು (ಎಕ. XVI, ಚಿಕ್ಕನಾ. ೬೮–೨೪ ; 1318) ; ಪೂರ್ಬ್ಬಾಯ ಅಪೂರ್ಬ್ಬಾಯ ತಪ್ಪೆ ತೌಡಿ ಕಿಱುಕುಟ ಸ್ಥಾನಮಾಂನ್ಯವೊಳಗಾಗಿ ಸಮಸ್ತಬಳಿಸಹಿತವಾಗಿ (ಎಕ. XII, ಗುಬ್ಬಿ. ೩೦–೬೫ ; 1331). **ತೌವುಡಿ :** ಅಳಿವನ್ನಾಯ ಸುಂಕ ಹಟ್ಟಿ[ದೆರೆ] ತಪ್ಪು ತೌವುಡಿ (ಎಕ. XI, ಚಿತ್ರದು. ೨–೨೨ ; 1355). [?]

**ತವುಡಿ$_2$** (ನಾ). ತೆರವು ; ಖಾಲಿ ; ವಾರಸುದಾರರು ಇಲ್ಲದಿರುವ ಸ್ಥಿತಿ (?) : ನಿರುಗುಂದದ ಸಿದ್ಧನಾಥದೇವರ ಸ್ಥಾನಿಕ ನಲ್ಲಜೀಯನ ಮಗ ಸಿದ್ಧಜೀಯನು ಸ್ವರ್ಗ್ಗಸ್ತನಾಗಲು ಆ ಸ್ಥಾನ ತವುಡಿ ಆಗಲು ಪಟ್ಟಮಹದೇವಿಯರ ಮಗ ಚೋಳಯ್ಯಂಗೆವುಂ . . . ಸಲುವಂತಾಗಿ (ಎಕ. XI, ಹೊಳಲ್ಕೆ. ೧೨೨–೨ ; 1268 ?). [?]

**ತವುಡು,** ತವಡು, ತಿವುಡು$_2$, ತೌಡು (ನಾ). ೧. ಬತ್ತ ಮುಂತಾದ ಧಾನ್ಯದ ಹೊಟ್ಟು ; ಉಮಿ : "ಶವಿಾ, ಶಂಬಾ – ೨ ಕಾಯಿ ಧಾನ್ಯವನ್ನು ಒಡೆಯಿಕ್ಕಿದ ಹೊಟ್ಟು, ಸಿಪ್ಪೆ ತವುಡಿ[ಪಾಠಾಂ. ತೌಡಿ]ಗೂ ಹೆಸರು" (ಸಿದ್ಧಾಂತಿ. ೨೪೦) ; ಸತುಷಾಭ್ಯವಹಾರೀ ಚೇತಿ = ತವುಡುವೆರಸಿಯುಂಬ [ಸುಂಬ]ನೆಂತೊಳ್ಳಿತುಂ ಪೊಲ್ಲದುಮಂ ಪೇಟ್ವರುವೆಂದಿಂತು (ನೀತಿವಾ. ೩೧–೭): ತವುಡಂ ತಿಂದು ತುಯ್ಯಲನುಂಡನೆಂಬಂತೆ (ಧರ್ಮಾಮೃ. ೦೩–೧೪೦); ತವುಡಂ ತಂಡುಲಾಪೇಕ್ಷೆಯಿಂ ಕುಟ್ಟುತ್ತುವಿುರ್ಪಂತು (ಮಹಾನೀ.೦೬–೬೦ ವ); ಕೆಂದೆಟ್ ಮಿಡಿದೊಡೆ ತವುಡಂ ತಂದಿಕ್ಕಿದ ಧೂಪದಿಂದೆ ತದ್ವಿಷ ಮಟಿಗುಂ (ಖಮದ. ೧೦–೪೦); ಘನದರಿದ್ರತೆಯಾದುದಯ್ಯೋ ಮನೆಯೊಳಗೆ ನೋಡಲು ತವುಡು ನೊಣವಿಂಗೆಱಗಲಿಲ್ಲ (ಬಸವು. ೨೩–೬) ; ಹೊತ್ತುವುದು ಸಟಿಯಹುದು ನನೆಗುದಿಯಹುದು ತವುಡು [ಪಾಠಾಂ. ತಡಹು]ಹತ್ತಿಹುದು . . . ಒಣಗಿಹುದು ದೋಷವಶನಕ್ಕೆಂಟು ತೆಱನಪ್ಪುದು (ಸೂಪಶಾ. ೩–೧). ೨. ಪುಡಿ ; ಧೂಳು : ಬಲದ ಪದಹತಿಗೆ ತವುಡಾಯ್ತು ಗಿರಿಸಂಕುಲಂ (ಜೈಬಪು. ೪೮–೨೨) ; ಭತ್ತದ ಉಮಿ ಅಥವಾ ಹೊರಕವಚವನ್ನು ತೆಗೆದರೆ ಬರುವ ಅಕ್ಕಿಯಲ್ಲಿ ಮೇಲ್ಭಾಗದಲ್ಲಿ ಭ್ರೂಣ, ಕಂದುಬಣ್ಣದ ಹೊರಕವಚ, ಅನಂತರ ತವುಡು ಮತ್ತು ಒಳಗೆ ಪಿಷ್ಟದ ಭಾಗ ಇರುತ್ತವೆ (ಅಡುಶಾ. ೬೨). ೩. (?): ತದ್ವ್ಯಕ್ಷಕುಲ ಮಹಾತ್ಮಗ್ಯಸ್ತ ನಿಕರದಿಂದುದ್ವರ್ತನಂ ಮಾಡಿ ದಾಮ್ಲ ಮಧುರಂಗಳಿಂ ಸದ್ವಿಚಾರದ ತುಱುವೆ ತವುಡು ಸುಣ್ಣಂಗಳಿಂ . . . ಗೋಧೂಮ ತಿಲ ಮಾಷ ಸಂಪದ್ವಿಮಲ ಪಕ್ವಾನ್ನಮಂ ವ್ಯಂಜನಂಗಳಂ ಪರವೆಯರು ಗಡಣಿಸಿದರು (ಜೀರಮ. ೦೦–೨೭). **ತವಡು :** ೧. ತವಡು ತಿಂಬುವವನಿಗೆ ಒಯ್ಯಾರವೇಕೆ ? (ಗಾದೆ). **ತಿವುಡು$_2$ :** ೧. 'ತಿವುಡುಗಳೆ' ಪರಾ. ೪. ಹಣ್ಣು ಮೊದಲಾದುವುಗಳ ಸಿಪ್ಪೆ : ಬಾಟಿಯ ಪಣ್ಣೇಱಲ ತಿವುಡಾಳೋಚಿಸೆ ಮೇಣದುಕ್ಕಿನುದಕಂ ಮೇಣ್ ಸಿತಬಾಳಂ ತೋಯಸಮೇತಮದೇಱಲಮೇನಿಟ್ಟಿಯೆಸೆವ ವಿಷಮಂ ಕಳೆಗುಂ (ಖಮದ. ೨–೪೬). **ತೌಡು :** ೧. ಒಪ್ಪುವ ಮಾಣಿಕಮಂ ತೌಡಿಂಗ ವಯವದಿಂ ಮಾಱುಗುಡುವ ಮರುಳಂ ಪೋಲ್ಗುಂ (ಶಾಂತಿಪು ೧೧–೯೧) ; ಆರಾನುಂ ಭರಂಗೆಯ್ದು ಕಬ್ಬುಗಳಂ ಜೋಳವನಕ್ಕಿಯುಂ ಕಡಲೆಯುಂ ತೌಡಂ ಮಸಂ ಪೆರ್ಚೆ ಪಿಂಡಿಗಳಂ ಪುಲ್ಗಳಸಿಕ್ಕೆ ಮೇದು (ಧರ್ಮಾಮೃ. ೧೨–೧೧೬); ತೌ[ಪಾಠಾಂ. ತವು]ಡಿನ ಮಾಱೊಳ್ ಮಾಣಿಕಂ ದೊರೆಕೊಂಡೊಡಂ ಕೆಮ್ಮಗೆ ಸಾರ್ದು ಬಂದ ನಿಧಿಯೆನ್ನದೆ ಮಾಱಿಂದು ಬಗೆವಾ (ಜೀವಸಂ. ೨೧೪–೩ ವ); ಮುತ್ತನೊಗುವರೆ ಮೊಱನ ತೌಡಿಗೆ (ಕಾಶಿರಾ. ೨೩–೩೦) . ೫. (ಅಲಂ) ನಿಷ್ಪ್ರಯೋಜಕವಾದುದಂ ;

ನಿಸ್ಸಾರವಾದುದು : ವೇದಶಾಸ್ತ್ರಾಗಮಪುರಾಣಂಗಳೆಂಬುವ ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿ ಭೋ (ಮಹಾದೇ. ಬ. ೪೬-೧೦೭). [ದೇ.॥ ತಮಿ. ತವುಟು, ತವಿಜು; ಮಲ. ತವಿಡು; ತುಳು. ತವುಡು, ತೌಡು ; ಕೊಡ. ತವ್ವಿ ; ತೆಲು. ತವುಡು, ತೌಡು]

**ತವುಡೆ** 'ತವುಡಿ$_1$' ನೋ.

**ತವುತರ್, ತೌತರ್** (ಕ್ರಿ). ೧. ಕಡಮೆಯಾಗು ; ಕುಗ್ಗು ; ಕುಂದು ; ಕ್ಷೀಣಿಸು : ಅವನೋದುವನಿತು ಶಕ್ತಿಯೆ ತವುತಂದೊಡೆ ಪಂಚಪದದ ನಾಮಾಕ್ಷರಮಂ ಧ್ರುವವೋದುವುದು (ಆದಿಪು. ೨-೩೫); ಆಗಳೋಡುವಾತನ ಭಯಮಟ್ಟುವಾತನ ಚಲಂ ತವುತಂದುವು ತತ್ಸಮಿಾಪದೊಳ್ (ಶಾಂತಿಪು. ೬-೪೦) ; ಅಮರಲೋಕಸುಖಾಮೃತಸೇವೆಯಿಂದ ತಣ್ಣನೆ ತಣಿದಾಯುರಬ್ಧಿಗಳನುಕ್ರಮದಿಂದಯುನಾವಶೇಷಮುಂಟೆನೆ ತವುತರ್ಪುದುಂ ತನುವಳಂಕರಣಾಂಬರಪುಷ್ಪಮಾಲಿಕಾಜನಿತ ವಿವರ್ಣದಿಂದನಿಬರುಂ ತಿಳಿದಾಯುವಿನಂತ್ಯಚಿಹ್ನಮಂ (ಮಹಾನೇ. ೨-೩೪). ೨. ಸಾಯು ; ಅಳಿ; ನಾಶವಾಗು ; ಇಲ್ಲದಂತಾಗು : ಜವನೆರ್ದೆ ಬಿರ್ಚುವ ತೆಱದಿಂ ತವುತರ್ಪುದುಮುಭಯಬಲಧನುರ್ಧರಸೈನ್ಯಂ ಜವನೆರ್ಪೋೞ್ ಗಳ್ ತಗುವಂತೆ ತಾಗಿದರಡುರ್ತು ಕಡಿತಲೆಕಾಱರ್ (ಪಂಪರಾಮಾ. ೧೩-೫೩) ; ದೂರದೊಳೆ ಕಂಡು ವನಾಂತರದೊಳ್ ನಿಪಾನಪಂಕಾವಿಳವಾರಿಯಂ ಹರಿಣಿಯೊಂದು . . . ಉಷ್ಣತೃಷ್ಣಾವಶಮಂದಮಂದಗತಿ ಬರ್ಪನಿತರ್ಕಿನ ತಾಪದಿಂದೆ ತಜ್ಜೀವನಮುಂ ಮೃಗಾಂಗನೆಯ ಜೀವನಮುಂ ತವುತಂದು ಪೋರ್ಪೊದಲ್ (ಚಂದ್ರಪ್ರ. ೯-೭೮). ೩. ಬರಿದಾಗು ; ಖರ್ಚಾಗು ; ವ್ಯಯವಾಗು; ಕೊನೆಗಾಣು: ಕುಡೆ ತವುತಪ್ಪುದಲ್ತು ಪಡೆದಂಗೆಡಱಲ್ಲ ದರಿದ್ರನಪ್ಪನುಂ ಪಡೆಗುವುದಕ್ಕೆ ಬೇಱೆ ಬೆಲೆ ಬೇಡ . . . ಕೂಡೆ ಪುಂಜಿಸಿದ ವಾಙ್ಮಯರತ್ನಚಯಂ ಜಿನೇಶನಾ (ಸಮಪ. ೨-೨೦) ; ಅನುಪಮ ವಸಂತ ತಿಳಕೆಯೊಳನುನಯದಿಂದಂತು ಚಾರುದತ್ತನಿರಲ್ ತದ್ಧನಮುಂ ತವುತಂದುದು (ನೇಮಿಪು. ೪-೫೭) ; ಕೆಱೆ ನೆಱೆ ನೀರ್ ತವುತರೆ ಬಱಿಗೆಱೆಯಾದುವು (ಜಗವಿ. ೧೭-೬೪). ೪. ಕಡಮೆಮಾಡು; ಕುಗ್ಗಿಸು : (ಕ). **ತೌತರ್ :** ೨. ವಿಳಯೋಗ್ರಾಂತಕನಂತೆ ಮುಂತಣ ಬಲಂ ತೌತಂದುದಂ ಕಂಡು ದೋರ್ವಲವಿಖ್ಯಾತನಗುರ್ವಿನಂಕದ ಕಲಿ ಶ್ವೇತಂ ಧನುರ್ಜ್ಯಾರವಂ ಬಳೆಯಲ್ ಜೇವೊಡೆ ಗೆಯ್ದು (ನೇಮಿಪು. ೧೨-೮).

[ತವು$_1$ + ತರ್]

**ತವುದಟ್ಟಿಗೆ** (ನಾ). ಒಂದು ಊರಿನ ಹೆಸರು: ಗಾವುಂಡಯ್ಯ ನಾಟ್ಗವು [ಡು]ಗೆಯ್ಯೆ ತವುದಟ್ಟಿಗೆ ನಱಿಚ್ಚೆಗವುಣ್ಡನ ಮಗ ಅಮ್ಮಣ್ಣಗವುಣ್ಡ ತನ್ನೂರಳಿವ ಕಣ್ದು (ಎಕ. VIII, ಸೊರಬ. ೩೩೪-೯ ; 999). [?]

**ತವುದಲೆ, ತೌದಲೆ** (ನಾ). ಮಂಗಿವು; ಮುಕ್ತಾಯ; ಕೊನೆ; ಅಂತ್ಯ: ಜೂದಾಡಿ ಸೋಲ್ತು ನನ್ನಿಗೆ ಮೇದಿನಿಯಂ ಕೊಟ್ಟು ಪಾಂಡುನಂದನರಿೞೆಗಳ್ ಪೋದೊಡಮೇನ್ ತಿಣುಕಾಗದೆ ಪೋದಪುದೇ ನಮ್ಮ ನೃಪತಿಗವು ತವುದಲೆಯೊಳ್ (ಪಂಪಭಾ. ೭-೧೮) ; ಅವರನುಭವಿಸುವರಾಯುವ ತವುದಲೆವರ ಮಧಿಕದುಃಖಮಂ (ಅಜಿಪು. ೧೧-೧೧) ; ಕವುಂಗು, ಕೌಂಗು ; ತವುದಲೆ, ತೌದಲೆ[ಪಾಠಾಂ. ಕವದಲೆ, ಕೌದಲೆ] (ಭಾಷಾಭೂ. ೧೨೩ ಉದಾ) ; ಶಿಶಿರದ ತವುದಲೆಯುಂ ನವವಸಂತಸಮಯಪ್ರವೇಶಮುಂ ತಮ್ಮೊಳ್ ಸಂದಿಸೆ ಬಣ್ಣಿಸಲರಿದು (ಗಿರಿಕ. ೭-೩೫). **ತೌದಲೆ :** ಅರಮನೆಗಿಂಬುವೆತ್ತ ರಣ ಮಂಡಳಮಾ ರಣಮಂಡಳಕ್ಕೆ ಬಿತ್ತರಿಸಿದ ಬೀದಿ ವೀಧಿಗಳ ತೌದಲೆ[ಪಾಠಾಂ. ಕಾದಲೆ, ಕಾಲ್ನೆಲೆ]ಗೊಪ್ಪುವ ಮಂಡಪಂ ಮನೋಹರತರ ಮಂಡಪಕ್ಕೆ ಕರುವಿಟ್ಟವೊಲಿರ್ಪ ಸುಧಾಗೃಹಂಗಳಚ್ಚರಿಯೆನೆ ಚೈತ್ರಚಂದ್ರಮರೆ ಚಿತ್ರಿಸಿದಂತೆಸೆದಿರ್ಪುದಾ ಪುರಂ (ಅನಂಪು. ೧೧-೧೩) ; (ಸೂಕ್ತಿಸು. ೪-೧೪೭ ನೋ).

[ತವು$_1$ + -ದಲೆ]

**ತವುದಲೆಗಾಣಿಸು, ತೌದಲೆಗಾಣಿಸು** (ಕ್ರಿ). ಕೊನೆಯನ್ನು ಕಾಣಿಸು ; ಕೊಲ್ಲು ; ನಾಶಪಡಿಸು : ತೊಲಗದೆ ನಿಂದ ವೀರನಂ ತಲೆಗಡಿದುರುಳ್ಚುವ ಮೂದಲಿಪ ವೀರನಂ ತವು[ಪಾಠಾಂ. ತೌ]ದಲೆಗಾಣಿಪ (ರಾಜಶೇ. ೬-೧೧ ವ). **ತೌದಲೆಗಾಣಿಸು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ತವುದಲೆ + ಕಾಣಿಸು]

**ತವುದಾಯ** (ನಾ). ಒಂದು ಬಗೆಯ ಸುಂಕ: ದಣ್ಡದೋಷಂ ತವುಕುರಿ ತವುದಾಯ ಸುಬೂದಗೂಳ ಪ್ರಾ[ಯ]ಶ್ಚಿತ್ತಂ ತಿಪ್ಪೆಸು[ಙ್ಕ]ಂ ಗಾಡಿಯ ಸುಙ್ಕಂ (ಎಕ. XI, ದಾವಣ. ೧೩೯-೩೦ ; 1106). [?]

**ತವುರು** 'ತವುರ್' ನೋ.

**ತವುಳಿ** 'ಟವಳಿ' ನೋ.

**ತವೆ$_1$, ತವಿ** (ಕ್ರಿ). ೧. ಕುಂದು ; ಕಡಮೆಯಾಗು : "ತವೆದುದು ತೀರ್ದುದು ಬೀತುದು ಸವೆದುದೆನಲ್ ಕ್ಷಯಮನೈದಿತೆಂದಱಿಗೆ ಬುಧರ್" (ಭಾರನಿ. ೪೨) ; ಚಕೋರಚಿತ್ರದೊಳ್ ನೆಲಸಿದ ಸನ್ಮದಂ ತವೆದು ತೊಟ್ಟನೆ ಪೋಯ್ತು . . . ನೆಱೆ ನಿಷ್ಕಳನಾಗೆ ಕರಂ ನಿಶಾಕರಂ (ಕುಸುಮಾ. ೪-೬೪); ತವೆಯದ ಸೊಬಗಿಂ ನೀರಾಟವನಾಡುವ ಕಾಂತೆಯರ್ಕಳೊಳ್ಚನನಾಥಂ . . . ಜಲಕೇಳಿಯಂ ನೆಗಟ್ಚುತಮೆಸೆದಂ (ಉದ್ಭಟ. ೯-೯೭); ಗೃಹಗುಪ್ತಂ ವಣಿಙ್ಮುಖ್ಯನಿರ್ಪಂ ಮುದದಿಂ ಕಲ್ಯಾಣದಿಂದಂ ತವೆಯದ ನವರತ್ನಂಗಳಿಂ (ದಶಕು. ೧೨-೧೩೨) ; ಲತೆಗೆಸೆವಾಲಿಂಗನದಿಂ . . . ಅತಿರಂಜಿಸುವಮಳ್ಗಬ್ಬಿಗೆ ತವೆಯದ ರತಿಯ ಪರಿಣತೆಯಿನಾ ಮೋಹಿಪ ದಂಪತಿಗಳ್ ಮುಂ ಗುರುವಾಗಿ ಕರಂ ಕ್ರೀಡಿಸದರ್ ವನದೊಳಗೆ (ಜಯಕಾ. ೧೨-೬೭); ತವಕಂ ತವೆಯದವೊಲ್ . . . ಅಣ್ಮಂಗೊಲವೀವಳ್(ಉದ್ಭದೇ. ೨-೬೨). ೨. ಮುಗಿ ; ತೀರು : ಅಲ್ಲಿಯ ಸಾರಮಪ್ಪ ಬೆಳಸಂ ಸಲೆ ಕೊಯ್ದುದಱೆ ತೀರ್ಚಲಾಱರಂತಲ್ಲದೆ ಕೊಯ್ದೊಡಂ ತವೆಯಲೊಕ್ಕಿ ಸುರಾಶಿಗಳಂ ವಿನಿರ್ಮಿಸಲ್ ಸಲ್ಲರ್ (ಬಾಧಪು. ೪-೦೮). **ತವಿ :** ೩. ಸೊರಗು ; ಬಡವಾಗು; ಕೃಶವಾಗು : ಅನುದಿನಂ ನೋಂತು ನೋಂತು ತನು ತವಿಯೆ (ರಾಮಾಶ್ವ. ೬೭-೦೮). ನವೆ, ಸವೆ, ತವಿ(ತವು), ಸೊರಗು, ಕೊರಗು, ನೆಳ್ಗು (ನೆಗ್ಗು) (ಕಂನುಡು. ೮೬). [<ತವು$_1$./ತಮಿ. ತವ]

**ತವೆ$_2$** (ಅ). ಅತಿಶಯವಾಗಿ, ಹೆಚ್ಚಾಗಿ, ಪೂರ್ತಿಯಾಗಿ, ಸಂಪೂರ್ಣವಾಗಿ, ಚೆನ್ನಾಗಿ, ಸರಿಯಾಗಿ, ಮುಗಿಯುವಂತೆ ಎಂಬೀ ಅರ್ಥಗಳಲ್ಲಿ ಪಾದಪೂರಣಕ್ಕಾಗಿ ಬರುವ ಶಬ್ದ : "ನೆಱೆ ಸಲೆ ತವೆ ಮಿಗೆಯೊಗು ಮಿಗೆಯುಱೆಯೆಂಬಿವು ಪಾದಪೂರಣಾರ್ಥಂ"(ಚತುನಿ. ೩೪); ದುಷ್ಟನೊರ್ವ್ವನದಱ ಫಲಮಂ ತವೆ ತಿಂಬಮಂ . . . ಕುಷ್ಟೆವಿಟ್ಟಿ ಬಿದಿರನ್ತೆ ಕುಲಕ್ಷಯಮಾಗುಗುಂ (ಎಕ. VIII, ನಗರ. ೬೦-೦೩ ; 897) ; ಭುಜಬಲಿ ಕಣ್ಣೊಳೆ ತವೆ ಪೀರ್ವವೊಲೇ ನಿಶ್ಚಳ ತನು ನಡೆ ನೋಡೆ ಭರತರಾಜಂ ಸೋಲ್ತಂ (ಆದಿಪು. ೧೪-೧೧೫) ; ಪೊಸ ಪೂಮಾಲೆಯಿರ್ದೊಡೇನು ತವೆ ಮುಡಿವರಿಲ್ಲದೊಡೆ (ಹಜಕಾ. ೧-೨೫) ; ತಿಮಿಯಂ ತಿಮಿಂಗಿಳನಡಂಗುವಿನಂ ತವೆ ನುಂಗೆ (ಕಾವ್ಯಸಾ. ೬೭); ನವರತ್ನದ ಗಿಂಡಿಯ ಪನ್ನೀರಲಿ ತವೆ ಕೈಕಾಲ್ಮೊಗದೊಳೆದು (ಕಂಸವಿ. ೧೦-೫೩). [<ತವು$_1$]

**ತವೆ$_3$** (ನಾ). ೧. ರೊಟ್ಟಿ ಮೊದಲಾದುವನ್ನು ಬೇಯಿಸಲು ಉಪಯೋಗಿಸುವ ಕಬ್ಬಿಣದ ಒಂದು ಬಗೆಯ ಸಾಧನ; ಕಾವಲಿ; ಹಂಚು: ಅಡುಗೆ ಮಾಡಲು ಅವರಲ್ಲಿ ಗಡಿಗೆ–ಮಡಕೆಗಳೂ ತಪ್ಪೇಲಿ ತವೆಗಳೂ ಇದ್ದಿಲ್ಲ (ಮತಂಟ. ೨೫); ಇನ್ನು ಧಾರವಾಡದಲ್ಲಿರುವುದೆಂದರೆ ಕಾಯ್ದ ತವೆಯ ಮೇಲೆ ತಲೆಯಿಟ್ಟು ಮಲಗಿದಂತೆ (ಮುಕ್ತ. ೨೦೦); ರೊಟ್ಟಿಗಳನ್ನು ಸುಡಲು ಆತ ತವೆ ಹಚ್ಚಿದ (ಧೂಮಮು. ೯೪). ೨. ಅಡುಗೆಯ ಪಾತ್ರೆಗಳ ಮೇಲೆ ಮುಚ್ಚುವ ತಾಮ್ರ, ಹಿತ್ತಾಳೆ ಮೊದಲಾದುವುಗಳಿಂದ ಮಾಡಿದ ಮುಚ್ಚಳ : (ಕ). [←ಹಿಂ. ಮರಾ. ತವಾ]

**ತಶಬೀರು** 'ತಸಬೀರು' ನೋ.

**ತಶಬೀರುಯಂತ್ರ** (ನಾ). ಚಿತ್ರವನ್ನು ತೆಗೆಯುವ ಯಂತ್ರ ; ಛಾಯಾ ಗ್ರಹಣ ಯಂತ್ರ : ನಾಟಕಕಾರರು ತಮ್ಮ ಮನಸ್ಸೆಂಬ ತಶಬೀರುಯಂತ್ರ (Camera) ದಿಂದ, ನಮ್ಮ ಹಳ್ಳಿಯ ಸಮಾಜದ ಕೆಲವು ದೃಶ್ಯಗಳನ್ನು ಮೂಡಿಸಲು ಯತ್ನಿಸಿದ್ದಾರೆ (ತಿಡುಗು. ೪, ಪೀಠಿಕೆ).

[ ತಶಬೀರು (<ತಸಬೀರು) + ಯಂತ್ರ ]

**ತಷ್ಟ** (ಗು). ಕೆತ್ತಿದ ; ಹೆರೆದು ತೆಳುವಾಗಿ ಮಾಡಿದ. [ ಸಂ. ]

**ತಷ್ಟಿ** (ನಾ). ತೊಂದರೆ; ಕಷ್ಟ: ಸೃಷ್ಟಿಸುವ ರಕ್ಷಿಸುವ ಕೆಡಿಸುವ ತಷ್ಟಿಯಿಲ್ಲದವಂ ಸವಿಗಳಿಂ ದೃಷ್ಟವಾಗದವಂ (ಬಸಪು. ೫೧-೪೯). "ಉಸಾಬರಿ" (ಬಸಪು. ಕೋಶ). [ ? ]

**ತಷ್ಟೃ** (ನಾ). ಬಡಗಿ ; ಮರಗೆಲಸದವನು. [ ಸಂ. ]

**ತಸಕ್** 'ತಸಕು$_2$' ನೋ.

**ತಸಕಲು** (ನಾ). ಮೋಸ ; ವಂಚನೆ ; ಠಕ್ಕು : (+).

[ ತಸಕು$_1$ (<ತಸುಕು) + – ಅಲು ( < –ಅಲ್$_2$) ]

**ತಸಕು$_1$** 'ತಸುಕು' ನೋ.

**ತಸಕು$_2$**, ತಸಕ್ (ನಾ). ಒಂದು ಅನುಕರಣ ಶಬ್ದ. **ತಸಕ್** : 'ತಸಕ್ಕನೆ' ಪರಾ.

**ತಸಕ್ಕನೆ** (ಅ). ತಸಕ್ ಎಂದು ಶಬ್ದವಾಗುವಂತೆ : (+).

[ ತಸಕ್ (<ತಸಕು$_2$) + – ಅನೆ$_1$ ]

**ತಸದೀಕು**, ತಸ್ತಿಕು, ತಸ್ತೀಕು (ನಾ). ೧. ದೇವಸ್ಥಾನ, ಮಸೀದಿ, ಛತ್ರ ಮೊದಲಾದುವುಗಳಿಂದ ವಶಪಡಿಸಿಕೊಂಡಿರುವ ಭೂಮಿಂಗೆ ಪರಿಹಾರವಾಗಿ, ಸರಕಾರವು ಕೊಡುವ ನಿಗದಿಯಾದ ಹಣ : ಚತ್ರದ ತಸದೀಕಿನ ಐವಜಿನಲ್ಲಿ ಶ್ರೀಮಠಕ್ಕೆ ಸಲ್ಲುತ್ತಾಯಿದದಂನ್ನು ಮವಕುಫ್ ಮಾಡ್ಸಿ (ಮೈಆರಿ. ೧೦೩೮, ೨೬-೯ : 1830). ೨. ಸರ್ಕಾರವು ಕೊಡುವ ವರ್ಷಾಶನ ; ಉಂಬಳಿ : ನಿತ್ಯನೈಮಿತ್ತಿಕ ಪೂಜಾ ನಡೆಯೂ ಬಗ್ಗೆ ತಸದೀಕು ದಾಖಲೆಯ ಮಾಡಿಸಿ ತಸದೀಕಿಗೆ ದಸಕತ್ತು ಮೊಹರು ಮಾಡಿಸಿರುವ ಪ್ರಕಾರ ಖುಲ್ಲ ತಸದೀಕು ಕಂ ೨೨ (ಎಕ. III, ತಿರುಮ. ೫೭-೬೦ ; 1855); ಮಾಜಿ ಅಮಿಾಲರು ಕಾಗದಪತ್ರ, ತಸದೀಕು, ಜಿನಸಿ ಮುಂತಾದುದನ್ನು ವಹಿಸಿಕೊಡುವುದು (ಮಹಾವಂ. II, ೫೭) ; ಪ್ರಾಕಿನಿಂದ ಹತ್ತೋ ಇಪ್ಪತ್ತೋ ರೂಪಾಯಿ ತಸದೀಕು ಸಿಗುತ್ತದೆಯಂತೆ (ಹಹಸ. ೧); ಅರ್ಚಕ ವೃತ್ತಿಗೆ ಪ್ರತಿಫಲವಾಗಿ ಹದಿನಾರು ರೂಪಾಯಿ ತಸದೀಕು ಕೊಡುತ್ತಾರೆ (ಅನಾಥ. ೯). **ತಸ್ತಿಕು** : ೨. ಸರಕಾರದಯಿಂದಾ ಯೆನಾದರ್ರು ತಸ್ತಿಕು ಅಪ್ಪಣೆ ಆಗಬೇಕೆಂಬದಾಗಿ (ಮೈಆರಿ. ೧೯೪೨, ೩೯-೧೫; 1813). **ತಸ್ತೀಕು** : ೧. ಮುನ್ನೂರು ತೊಂಬತ್ತಮೂರು ವರಹಾವು ಐದುಹಣ ತಸ್ತೀಕು ನಡಶಿಕೊಂಡು ಬರುವಂತೆ (ಎಕ. III, ಮೈಸೂರು. ೧-೨೦ ; 1822) ; ತಸ್ತೀಕು ನಿರೂಪಕ್ಕೆ ಅಪ್ಪಣೆ(ಎಕ. II, ೧೭-೨೫ ; 1830) ; ಈ ದೇವರಿಗೆಲ್ಲಾ ನಿತ್ಯ ಕಟ್ಟಲೆ ಪಡಿತರ ದೀಪಾರಾಧನೆ ರಥೋತ್ಸವ ಮೊದಲಾದ ಉತ್ಸವಗಳು ನಡೆಯುವದಕ್ಕೆ ತಸ್ತೀಕುಗಳನ್ನು ಉಂಟುಮಾಡಿ ಗ್ರಾಮ ಭೂಮಿಗಳನ್ನು ಕೊಡಿಸಿದನು (ಚಾಮವಂ. ೫೬) ; ಛತ್ರದ ತಸ್ತೀಕು ಹೆಚ್ಚಿಸುವ ವಿಚಾರ ಅರಿಕೆಮಾಡಿಕೊಳ್ಳಲು ಬಂದೆ (ಚಂಗಾಳ್ಳ. ೫೩೬).

[ ←ಅರ. ತಸದ್ದುಕ್; ಮರಾ. ತಸ್‌ದೂಕ್, ತಸ್ದೀಕ್ ]

**ತಸಬೀರ** 'ತಸಬೀರು' ನೋ.

**ತಸಬೀರು**, ತಶಬೀರಂ, ತಸಬೀರ, ತಸವೀರು, ತಸ್ವೀರಂ (ನಾ). ಚಿತ್ರ; ಭಾವಚಿತ್ರ : ನಮ್ಮ ತಸಬೀರು ಬರೆಯುವೆಯಾ ಎಂದು ಹೋಳಕರನು ಕೇಳಲು (ಮುಂಬಯಿ. ೩-೪೯) ; ಮೊಗಲ ಅರಸರು ತಸಬೀರು (Portrait) ಪ್ರಿಯರು (ಬಾಲಪ್ರ. I, ೩೨೧) ; ಅದು ನನ್ನ ತಂದೆಯ ತಸಬೀರು (ನಿಷ್ಕಾಮ. ೭೫). **ತಶಬೀರು:** ಒಂದು ಚಿತ್ರ ಅಥವಾ ತಶಬೀರು(ತಿಡುಗು ೩೧). **ತಸಬೀರ** : ದೊಡ್ಡ ದೊಡ್ಡ ಚೌಕಟ ಸಹ ಕನ್ನಡಿಗಳೂ ತಸಬೀರಗಳೂ . . . ಹೇಳಿ ತಯಾರಮಾಡಿಸಬೇಕಾಗುತ್ತದೆ (ಮುಂಬಪ್ರಾ. ೨೮೧). **ತಸವೀರು** : ಮನೆಯ ತಸವೀರುಗಳನ್ನೂ ಮಾರಿದೆಯಾ (ದೇವದಾ. ೯೨) ; ಅದರಿಂದಲೇ ಅವರಲ್ಲಿ, ತಸವೀರನ್ನು (Portrait) ಬರೆಯುವ ಪದ್ಧತಿಯು ಬೆಳೆದುದು (ಭಾಚಿತ್ರ. ೩೦). **ತಸ್ವೀರು** : ತಸ್ವೀರು ಬರೆಯುವಂಥ ನಸ್ ಸಾಹೇಬರವರು ಮಡಿಕೇರಿಗೆ ಬಂದು ಇದ್ದಲ್ಲಿ (ರಾಜೇಂದ್ರ. ೧೪೭).

[ ←ಅರ. ತಸ್ಬೀರ್; ಹಿಂ. ತಸ್ವೀರ್; ಮರಾ. ತಸ್‌ಬೀರ್; ತಸ್‌ವೀರ್ ]

**ತಸರೀಫ್**, ತಸ್ಲೀಪು (ನಾ). ಗೌರವಪೂರ್ವಕವಾಗಿ ಕೊಟ್ಟ ಕಾಣಿಕೆ,– ಉಡುಗೊರೆ : ವಿಲಾಯತಿಯಿಂದ ಬಂದ ತಸರೀಫ್ ಪದಾರ್ಥಗಳನ್ನು . . . ಆನೆಯ ಮೇಲೆ ಅಂಬಾರಿಯಲ್ಲಿಟ್ಟು ಸಕಲ ಮರ್ಯಾದೆಗಳೊಡನೆ ಮೆರೆವಣಿಗೆ ಮಾಡಿಸಿಕೊಂಡು (ಮಹಾವಂ. II, ೧೧೮). **ತಸ್ಲೀಪು:** ಅರಸರು ಅವನನ್ನು ಸಮಾಧಾನ ಪಡಿಸಿ ಅನೇಕ ತಸ್ಲೀಪು ತಾಂಬೂಲಗಳನ್ನು ಕೊಟ್ಟು ಮರ್ಯಾದೆ ಮಾಡಿ ಕುಳ್ಳಿರಿಸಿದರು (ಬಪ್ಪರು. ೩).

[ ←ಅರ. ಹಿಂ. ತಶ್‌ರೀಫ್ ; ಮರಾ. ತಶ್‌ರೀಫ್, ತಸ್‌ರೀಫ್ ]

**ತಸವೀರು** 'ತಸಬೀರು' ನೋ.

**ತಸುಕು**, ತಸಕು$_1$ (ನಾ). ಮೋಸ; ವಂಚನೆ; ಠಕ್ಕು: ನಾಗರಿಕತೆಯೆಂದೆನಿಸಿಕೊಳ್ಳುವ ಲೋಕಾಚಾರದ ತಸುಕುಗಳನ್ನೂ ಮರೆಯುವಂತೆ ಮಾಡುವೆಯಲ್ಲವೆ ನೀನು (ಜ್ಯೋತಿರ್ವಿ. ೧೮). **ತಸಕು$_1$** : ಇನ್ನೂ ನಿಮ್ಮ ತಸಕು ಬಿಡುವದಿಲ್ಲವಷ್ಟೆ? (ವಾಗ್ದೇವಿ. ೧೪೯). [ ದೇ.॥ ತೆಲು. ತ್ರಸುಕು ]

**ತಸ್ಕರ** (ನಾ). ಕಳ್ಳ ; ಚೋರ : "ಐಕಾಗಾರಿಕಃ, ತಸ್ಕರಃ, ದಸ್ಯುಃ . . . ಸ್ತೇನಃ–ಈ ೧೦ ಕಳ್ಳಂ" (ಹಲಾಯು. ೫೬-೧೮೩) ; ತಸ್ಕರನನಧನನಂ ನೀಡಱಿಂ ನೋಡಿ ಕಂಡಳ್ (ಸುಕುಮಾ. ೭-೧೮) ; ದುರ್ಜನಂ ದುರ್ಮದಂ ತಸ್ಕರರೆಂಬೀ ಕಂಟಕಸ್ತೋಮದ ನಡುವೊಡಲಿರ್ಪಂದಮೇಂ ಸೋಜಿಗಂ (ರಕ್ಷಾಶ. ೨೯) ; ಪುಂಡಾಟವ ಕಲಿತ ಮಗನು ತಸ್ಕರ ಭೃತ್ಯಂ ಚಂಡಿಯು ಮಾಡುವ ಸೊಸೆ ಪಗೆ ಕಂಡಾ (ಪಂಚಶ. ೩೦-೪೮); ನಾನು ತಸ್ಕರನಾಗಿ . . . ಗುಲಾಬಳ ಮಂದಿರವನ್ನು ಹೊಕ್ಕೆನು (ಎಳೆಕ.೫೫). [ಸಂ.]

**ತಸ್ಕರಶಾಸ್ತ್ರ** (ನಾ). ಚೋರವಿದ್ಯೆ ; ಕಳತನದ ಉಪಾಯ ಮೊದಲಾದುವುಗಳನ್ನು ತಿಳಿಸುವ ಶಾಸ್ತ್ರ : ಆ ಕಳ್ಳನು ಬಗೆಬಗೆಯ ತಸ್ಕರ ಶಾಸ್ತ್ರಗಳಲ್ಲಿ ಬಹು ಕುಶಲನಾದವನು (ಕಸಾಚಿ. ೧). [ ತಸ್ಕರ + ಶಾಸ್ತ್ರ ]

**ತಸ್ಕರಿಸು** (ಕ್ರಿ). ಕಳವುಮಾಡು ; ಕದಿ; ಅಪಹರಿಸು: ಶಿವಭಕ್ತರು . . . ಅನ್ಯದ್ರವ್ಯವ ತಸ್ಕರಿಸಿಕೊಳ್ಳಲಾಗದೆಂಬುದಂ . . . ನುಡಿದರ್ ಮಹಾಪುರಾತನರು (ಗಣಭಾ. ೧೬೭): ಪರಮವೇದಂಗಳ ತಸ್ಕರಿಸಿದ ತಮಾಸುರ ಗುಪ್ತದೊಳಡಗಿರಲು (ಮೋಹತ. ೩೭-೨೨) ; ರಾವಣ ನಿಮ್ಮನ್ನು ದುರುಳ ಬುದ್ಧಿಯಲ್ಲಿ ತಸ್ಕರಿಸಿಕೊಂಡಿತ್ತ ಬರಲು (ಹನುಮ. ೩೩) ; ತಮ್ಮ ವಸ್ತುವನ್ನು . . . ಇತರರು ತಸ್ಕರಿಸಿಕೊಂಡು ಹೋಗಲು ಅವಕಾಶ ಕೊಟ್ಟು (ರಾವಿಜ. ೮೧). [ ತಸ್ಕರ + – ಇಸು$_3$ ]

**ತಸ್ಕರೆ** (ನಾ). ಅಪಹರಿಸುವವಳು; ಕಳ್ಳಿ: ತಪಿತೆ ತಸ್ಕರೆ ತವಕಿ ತವೆ ತಂದ್ರಿ ತಾಮಸಿಯೆನಿಪ ವನಿತೆಯರ ನಿಜಕೆ ನಿಲಿಸಿ ನಿಶ್ಚೈಸಿದೊಡೆ ಬಳಿಕ ಬಳಲಿಕೆ ಬಾರದೆ (ಜೈಮಿಭಾ. ೫-೬೧). [ ಸಂ. ತಸ್ಕರಾ ]

**ತಸ್ಕಾನ** (ನಾ). ಮಲ ; ಹೇಲು : ಆ ವಿಷಯ ತೀರಿದ ಬಳಿಕ ಆ ಯೋನಿ ತಸ್ಕಾನದ ಕುಣಿಗಿಂದ ಕಡೆಯಾಗಿಪ್ಪುದು ನೋಡಾ (ಸಿದ್ಧೇವ. ४೧-೧೧೨) : ಲಲನೆಯರ ನಂಬಿ ಶಿವಸುಖವನಱಿಯದಿಹ ಮಲದೇಹಿಗೆತ್ತಣದು ನಿತ್ಯಾ ತಸ್ಕಾನದಾ ಕುಳಿಯು ವಿಸ್ತರಿಸಲೇತಕೆಲೊ ವಿಸ್ತರಿಸಿ ಹೋದಳಡ್ಡವಾಗ ಹುದು ನರಕವದು ಒತ್ತರಿಸಿ ಕಳದಡವ ಮುಕ್ತಾ (ಗುರುಬೋ. ೧೦-೧೦೬).

[←ಪಾರ. ಮರಾ. ದಸ್ತ್ ]

**ತಸ್ತ** 'ತಸ್ತು' ನೋ.

**ತಸ್ತಿಕು** 'ತಸದೀಕು' ನೋ.

**ತಸ್ತೀಕು** 'ತಸದೀಕು' ನೋ.

**ತಸ್ತು,** ತಸ್ತ (ನಾ). ಅಗಲವಾದ ಬಾಯುಳ್ಳ ಹಿತ್ತಾಳೆ ಅಥವಾ ತಾಮ್ರದ ನೀರಿನ ಪಾತ್ರೆ: (ಕ). **ತಸ್ತ:** ಟಂಕಸಾಲೆಯಲ್ಲಿ ೧೨೫೦ ರೂಪಾಯಿ ತೂಕ ಬೆಳ್ಳಿಯನ್ನು ತಸ್ತದಂಥದ್ದೊಂದು ಮುಶಿಯೊಳಗೆ . . . ಕರಗಿಸುವರು (ಕಥಾಗ. ೨೮೩). [ ←ಪಾರ. ಹಿಂ. ತಷ್ತ್; ಮರಾ. ತಸ್ತ್ ]

**ತಸ್ಥಿವಾಂಸಕೆ** (ನಾ). [ಸಂಗೀತ] ಶ್ರುತಿಗಳಲ್ಲಿ ಒಂದು : ರೇಣುಕಿ, ಲಲಿತೆ, ತಸ್ಥಿವಾಂಸಕೆ[ಪಾಠಾಂ. ತಸ್ತುವಾಂಸೆ, ಸ್ವರವಾಂಸೆ]ಯೆಂಬ ನಾಲ್ಕು ಶ್ರುತಿಗಳೇ ಪಂಚಮಸ್ವರದಿಂದೊಗೆದವು (ವಿವೇಕ. ೨೩೨). [ ? ]

**ತಸ್ಲೀಪು** 'ತಸರೀಫ್' ನೋ.

**ತಸ್ಲೀಮು** (ನಾ). ಸಲಾಮು; ವಂದನೆ: ಆತನು ಮೂರು ಸಾರೆ ತಸ್ಲೀಮು ಮಾಡಿ ಹಿಂದಕ್ಕೆ ಸರಿಯಲು . . . ಮಂತ್ರಿಯು ತಸ್ಲೀಮು ಮಾಡಹತ್ತಿದನು (ಸತ್ಯಸಾ. ೪೬). [ ←ಅರ. ಹಿಂ. ಮರಾ. ತಸ್ಲೀಮ್ ]

**ತಸ್ಪೀರು** 'ತಸಬೀರು' ನೋ.

**ತಹ**[1] 'ತರ್' ಪರಾ.

**ತಹ**[2] (ನಾ). ಸಂಧಾನ ; ಒಪ್ಪಂದ. 'ತಹಪತ್ರ' ಪರಾ.

**ತಹಮಾಡು** = ಸಂಧಾನಮಾಡು : ಮುಂದಹ ಕಾರ್ಯಗಳ ತಹಮಾಡಿ ನಿರ್ಧರಿಸೆನಲು ಜಾಂಬವ ಮುಖ್ಯಮಂತ್ರಿಗಳ ಕೂಡಿ ಯೋಚಿಸಿದನು (ಅನಂರಾ. ೪-೨-೨೮). [ ←ಪಾರ. ಮರಾ. ತಹ್ ]

**ತಹಕ** (ನಾ). ತವಕ ; ಕಾಳಜಿ ; ಚಿಂತೆ ; ಗೊಡವೆ (?) : ಮೆಲುತಿರಲು ಬೇವನು ಸಹಜದಿಂ ಬೇಡೆನಲು ಬಿಡುವನೆ ತನಗೆ ವಿಷವೇರಿ ಅಹಿತವಾದರೆ ತಾನೆ ಬಿಡುವನು ತಹಕ ನಮಗೇಕದಕ (ಜಿನಭಾ. ೨೦-೬೪) ; ಅಹಿತ ಬಂದಿಹುದೀಗ ಮುಂದವರಿಹರು ಅನ್ಯೋನ್ಯದಲಿ ಯಿಂತಿದಕೇನು ಸಂಗಟದಾ ತಹಕ ನಮಗೇಕಾನು ನೀ ನೆರವಹುದು ಅವರವರಿಂಗೆ ಸರಿಯಂತಿಹುದೊ ಅದಕೇನೆಮಗೆ (ಜಿನಭಾ. ೪೭-೪೨) ; ಇಹುದು ಸಂತಸದಲ್ಲಿ ಕಾರ್ಯದ ತಹಕವರಿದ್ಯೆದಿಸುವೆನೆಂದತಿಗಹಕದಲಿ ಮತ್ಸ್ಯೇಂದ್ರ ಸಹಿತೊಲವಿಂದ ಬೀಳ್ಕೊಟ್ಟ (ಜಿನಭಾ. ೬೨-೮). [ <ತವಕ? ]

**ತಹಕೀಕು** (ನಾ). ೧. ಶೋಧನೆಯಿಂದ ಸಿದ್ಧವಾದುದು ; ಸತ್ಯಸಂಗತಿ; ನಿಶ್ಚಿತವಾದುದು : (ಕ). ೨. ಒಂದು ವಿಷಯ ಅಥವಾ ಘಟನೆಯ ಮುಖ್ಯ ಅಂಶಗಳನ್ನು ಕಂಡುಹಿಡಿಯುವುದು ; ಶೋಧನೆ ; ವಿಚಾರಣೆ; ತನಿಖೆ : ಆಗ ತಕರಾರು ಸಲ್ಲಾ ಆದ ಪ್ರಕಾರ ತಹಕೀಕು ಮಾಡಲಾದೀತು (ರಾಜೇಂದ್ರ. ೫೦). [ ←ಅರ. ಹಿಂ. ಮರಾ. ತಹಕೀಕ್ ]

**ತಹಕೂಫ್** 'ತಹಕೂಬ' ನೋ.

**ತಹಕೂಬ,** ತಹಕೂಫ್ (ನಾ). ಕೆಲಕಾಲದವರೆಗೆ ತಡೆಹಿಡಿಯುವಿಕೆ ; ಸಮಯವನ್ನು ಮುಂದೂಡುವುದು: ಈ ಮೂರೂ ತಾಲೂಕಿನ ರೈತರು ಸರಕಾರದವರಿಗೆ ಮೊರೆ ಇಟ್ಟು ಕಂದಾಯ ವಸೂಲಿ ತಹಕೂಬ ಇಡಲು ಪ್ರಾರ್ಥಿಸಿಕೊಂಡಿದ್ದರು (ಕರವೀ. ೬೩) ; ತಮ್ಮ ಚಟುವಟಿಕೆಗಳನ್ನು ದಯವಿಟ್ಟು ಸದ್ಯಕ್ಕೆ ತಹಕೂಬ ಇಡಬೇಕು (ಗಂಮಾಯಿ. ೯೮).
**ತಹಕೂಫ್ :** ಅರಸನು ಪಾರ್ಲಿಮೆಂಟ ಸಭೆಯನ್ನು ಒಂದು ಸಭಾಕಾರ್ಯ ಕಾಲದಿಂದ ಮತ್ತೊಂದು ಸಭಾಕಾರ್ಯ ಕಾಲದವರೆಗೆ ತಹಕೂಫ್ ಮಾಡಬಹುದು (ಮುಂಬಯಿ. ೬-೧೩೬).
[ ←ಮರಾ. ತಹಕೂಬ್, ತಕೂಬ್ ; ಅರ. ತವಕ್ಕುಫ್ ]

**ತಹತಹ** (ನಾ). ೧. ಆತುರ ; ತವಕ. 'ತಹತಹಪಡು' ಪರಾ. ೨. ಕಳವಳ ; ಚಿಂತೆ : ಯಾತಕೀ ಪರಿತಾಪ ಲಕ್ಷ್ಮಣ ಚೇತರಿಪನಿನಕುಲನ ಬಾಣದಿ ಯಾತುಧಾನರು ಮಡಿವರೀ ನುಡಿಗಿಲ್ಲ ಸಂದೇಹ . . . ತಹತಹವೇಕೆ ನಿನಗೆಂದ (ಅನಂರಾ. ೬-೧೮-೫೦); 'ಯಾವ ಮಹಾರಾಯ ಮಾಡಿದನೊ ತಾಸಿಗೆ ಅರವತ್ತು ನಿಮಿಷ' ಎಂದು ಶಾಮಿಗೆ ತಹತಹ (ಕರಿಕಂ. ೨೫).
[ದೇ.॥ ತಮಿ. ತಹೈಪು ; ತೆಲು. ತಹತಹ ]

**ತಹತಹಪಡು** (ಕ್ರಿ). ೧. ಆತುರಪಡು ; ತವಕಪಡು : ಅನುವಿನ ವಿಷಯ ತಿಳಿಯಬೇಕೆಂದು ಆನಂದನ ಮನಸ್ಸು ತಹತಹಪಡುತ್ತಿತ್ತು (ಮುರುಕು. ೯೯) ; ಅವರ ಒಡವೆಗಳ ಚಿನ್ನವನ್ನು ಎಷ್ಟು ಹೊತ್ತಿಗೆ ಬೆಂಬೂದಿಯಿಂದ ಬಾಚಿಕೊಳ್ಳುವೆವೋ ಎಂಬುದಾಗಿ ಪುರೋಹಿತರು ತಹತಹಪಡುತ್ತ ನಿಂತಿದ್ದರು (ಭಾರವೀ. ೯). ೨. ಕಳವಳಪಡು ; ಸಂಕಟಪಡು : ಎಚ್ಚರವೇನೂ ಬರಲಿಲ್ಲ . . . ಏನು ಮಾಡಬೇಕೆಂದು ತೋರದೆ ತಹತಹಪಡುತ್ತ ನಿಂತಿದ್ದನು ಅಮರ (ಸಿಡಿಲು. ೮೮) ; ಎರಡು ಹೊತ್ತು ಸರಿಯಾದ ಊಟ ಕಂಡರೆ ಸಾಕಲ್ಲಾ ಎಂದವನು ತಹತಹಪಡುತ್ತಿದ್ದ (ಶನಿಸಂ. ೬೫).
[ ತಹತಹ + ಪಡು[1] ]

**ತಹತಹಿಸು** (ಕ್ರಿ). ಆತುರಪಡು ; ತವಕಿಸು : ಮಿಂಚಿನ ಕೆಂಚುರಿನಾಲಗೆ ನಮ್ಮನೆ ನೋಣೆವಂತೆ ತಹತಹಿಸಿದೆ, ಗುಡುಗಾಗಿದೆ, ನಮ್ಮನೆ ನಗುವಂತೆ (ಅಹಲ್ಯೆ. ೨೧-೧೦). [ ತಹತಹ + - ಇಸು[2] ]

**ತಹನಾಮೆ,** ತಹಾನಾಮೆ (ನಾ). ಲಿಖಿತವಾದ ಒಪ್ಪಂದ; ಕರಾರುಪತ್ರ: ಮಹೀಶೂರದೇಶವನ್ನು ವಿಭಾಗ ಮಾಡಿಕೊಡುವ ವಿಷಯದಲ್ಲಿ ಇಂಗ್ಲಿಷ್‌ನವರಿಗೂ ನಿಜಾಮರವರಿಗೂ . . . ಒಂದು ತಹನಾಮೆಯು ನಡೆಯಿತು (ಚಾಮುವಂ. ೨೬೧) ; ಆ ಕಾಲದಲ್ಲಿ ಇಂಗ್ಲಿಷ್ ಸರ್ಕಾರದವರಿಗೂ ಮೈಸೂರು ಮಹಾರಾಜರವರ ಕಡೆ ಮಹಾಮಾತ್ಯಶ್ರೀ ಲಕ್ಷ್ಮಮ್ಮಣ್ಣಿಯವರಿಗೂ ನಡೆದ ತಹನಾಮೆಯು ಪ್ರಕಾರ (ಮಹಾವಂ. II, ೩) ; ರಾಬರ್ಟ್ ಟೈಲರ್ ಸಾಹೇಬರ ಮಾರಿಪತ್ತಿನಿಂದ ತಹನಾಮೆಯನ್ನು ಬರೆಸಿ, ತಲಚೇರಿ ಸರಕಾರದ ದಫ್ತರದಲ್ಲು ಮಡಗಿ ಇದೆ (ರಾಜೇಂದ್ರ. ೫೩). **ತಹಾನಾಮೆ :** ತಹಾನಾಮೆ ಬರದು ಇಡುವಾಗ್ಯೆ (ರಾಜೇಂದ್ರ. ೩೦). [ ←ಮರಾ. ತಹನಾಮಾ ]

**ತಹಪತ್ರ** (ನಾ). = ತಹನಾಮೆ : ಅದೇ ರೀತಿ ತಹಪತ್ರ ಮಾಡಿ ವಕೀಲರ ಕೈಯಲ್ಲಿ ಕೊಡುವಂತೆ ನಿಶ್ಚಯವಾಯಿತು (ಹಸಿವು. ೬೦).
[ ತಹ[2] + ಪತ್ರ ]

**ತಹಬಂದು** (ನಾ). ೧. ನಿಯಮ ; ನಿರ್ಬಂಧ : ಮುನ್ನಂ ಮಾಡಿದ ತಹಬಂದು ಕಟ್ಟುಗಳ್ ಮುರಿದುವೆಂಬ ಭಾವಮಂ ಮಾಡಿ (ಕಳನ್ಮ. ೧೦-೩೮). ೨. ಹತೋಟಿ ; ಹಿಡಿತ ; ವಶ : ಸಾವಿತ್ರಿಯ ಮನಸ್ಸನ್ನು ತಹಬಂದಿಗೆ ಹೇಗೆ ತರುವುದೆಂದು ಯೋಚಿಸುತ್ತ ಕುಳಿತ (ಕಾಯಿಕ. ೬೨) ; ಅವಳು ಆ ಯೋಚನೆಯನ್ನು ತಹಬಂದಿಗೆ ತೆಗೆದುಕೊಂಡಳು(ರೂಪಾರಾಣಿ. ೬೪).
**ತಹಬಂದಿಗೆ ತರು** = ಆಳವಿಗೆ ತರು ; ಹತೋಟಿಗೆ ಒಳಪಡಿಸು : ಈ ಸೀಮೆಯನ್ನು ತಹಬಂದಿಗೆ ತರುವುದಕ್ಕೆ ಪೂರ್ಣಯ್ಯನವರಿಗೆ ತುಂಬಾ ಸಹಾಯಮಾಡಿದರು (ಮಹಾವಂ. II, ೩) ; ತುಳಸಾಬಾಯಿಯವರು ಘಾಬರಿಯನ್ನು ಸ್ವಲ್ಪ ತಹಬಂದಿಗೆ ತಂದುಕೊಂಡು (ನಡದಾ. I, ೮೫೩).
**ತಹಬಂದಿಗೆ ಬರು** = ಹತೋಟಿಗೆ ಬರು ; ಸಮಸ್ಥಿತಿಗೆ ಬರು : ತರಗತಿ ತಹಬಂದಿಗೆ ಬಂತು (ಸ್ವಾಮಿಸ್ಮೃ. ೪೭) ; ಏದುಸಿರು ಇನ್ನೂ ತಹಬಂದಿಗೆ ಬಂದಿರಲಿಲ್ಲ (ವಂಶವೃ. ೨೮೨) ; ಚಿಕಿತ್ಸೆಯನ್ನು ಪ್ರಾರಂಭಿಸಿದ ೨೪ ಗಂಟೆಗಳೊಳಗೆ ರೋಗ ತಹಬಂದಿಗೆ ಬಾರದೆ ಹೋದಲ್ಲಿ (ಕಲರೋ. ೨೫) ; ವೈದ್ಯರು ಎಷ್ಟು ಪ್ರಯತ್ನ ಪಟ್ಟರೂ ರೋಗ ಇನ್ನೂ ತಹಬಂದಿಗೆ ಬಂದಿಲ್ಲ (ರೂಢಿ). [ ? ]

**ತಹರೀರು** (ನಾ). ಸಾರ್ವಜನಿಕ ಕೆಲಸಗಳ ಮೇಲ್ವಿಚಾರಕರಿಗೆ ಕೊಡುವ ಸಂಭಾವನೆ,–ಭತ್ಯ : (ಕ).
[←ಅರ. ಮರಾ. ತಹರೀರ್ = ಲೇಖನಕ್ಕಾಗಿ ಕೊಡುವ ಸಂಭಾವನೆ ]

**ತಹಲ್** 'ತಹಲು' ನೋ.

**ತಹಲು,** ತಹಲ್ (ನಾ). ಸದ್ಯ ; ಪ್ರಕೃತಕಾಲ: ಡೆಪ್ಯೂಟಿಕಮಿಷನ್ನರೋ ಸಬ್‌ಡಿವಿಜನ್ ಆಫೀಸರೋ ತಾಲ್ಲೂಕಿನಲ್ಲಿ ತಯಾರಿಸಿ ತಹಲಿಗೆ ತರಲ್ಪಟ್ಟ ಲೆಖ್ಖಗಳನ್ನು . . . ಖಾಯಂ ಮಾಡುತ್ತಾರೆ (ಕಲಿನೆ. ೧೫೭). **ತಹಲ್ :** ಇಬ್ಬರನ್ನೂ ನಾನು ತಹಲ್‌ವರೆಗೂ ಒಂದು ಏಟು ಕೈಎತ್ತಿ ಹೊಡೆದಿಲ್ಲ (ಬೆಂಗೂಲಿ. ೧೨೭).  [ ? ]

**ತಹಶೀಲದಾರ** 'ತಹಸೀಲುದಾರ' ನೋ.

**ತಹಶೀಲುದಾರ** 'ತಹಸೀಲುದಾರ' ನೋ.

**ತಹಶೀಲ್ದಾರ** 'ತಹಸೀಲುದಾರ' ನೋ.

**ತಹಸಿಲದಾರ** 'ತಹಸೀಲುದಾರ' ನೋ.

**ತಹಸೀಲಿ** 'ತಹಸೀಲು' ನೋ.

**ತಹಸೀಲು,** ತಹಸೀಲಿ, ತಹಸೀಲೆ, ತಾಸೀಲು (ನಾ). ೧. ಕಂದಾಯದ ವಸೂಲಿ: (೩). ೨. ಕಂದಾಯದ ವಸೂಲಿಗಾಗಿ ಮಾಡಿದ ಜಿಲ್ಲೆಯ ಭಾಗ ; ತಾಲ್ಲೂಕು : ಖಾಂಡ್ವಾ ತಹಸೀಲಿನಲ್ಲಿರುವ ಈಗಿನ ಮಾಂಧಾತ ವೆಂದೂ...ಹೇಳಿದ್ದಾರೆ(ಕರ್ನಾಟ. ೨); ತಹಸೀಲುಗಳಿಗೆಲ್ಲಾ ಈ ಸಮಾಚಾರ ವನ್ನು ತಿಳಿಯಪಡಿಸಿ ಅಂಗ್ಲೇಯ ಸರ್ಕಾರವನ್ನು ಸ್ಥಾಪಿಸಿದರು (ಝಾರಾಣಿ. ೧೫೦). **ತಹಸೀಲಿ :** ೨. ರಾಜಾನುಗ್ರಹಕ್ಕೆ ಸಂಪೂರ್ಣ ಪಾತ್ರನಾಗಿ ಆದವಾನಿಯ ತಹಸೀಲಿಯಲ್ಲಿದ್ದನು (ಕಥವಿ. II, ೨). **ತಹಸೀಲೆ :** ೨. ಸರಕಾರದಲ್ಲಿ ನೌಕರಿಗೆ ಸೇರಿದ್ದರೂ ಬಹುಕಾಲ ತಹಸೀಲೆಯ ವರ್ಗದಲ್ಲಿ ತಾಲೂಕುಗಳನ್ನು ಆಳಿ . . . ನಿವೃತ್ತರಾಗಿದ್ದರು (ದಾಸಕೊ. ೭): ರಂಗನಾಥರಾಯರ ತಹಸೀಲೆಯು ಆಳಿಕೆಯಲ್ಲಿ ಅವರು ತಾಲೋಕು . . . ಕ್ಷಾಮಕ್ಕೆ ಈಡಾಯಿತು (ದಾಸಕೊ. ೮). **ತಾಸೀಲು :** (೩).
[ ←ಅರ. ಹಿಂ. ತಹಸೀಲ್; ಮರಾ. ತಹಸೀಲ್; ತಹಶೀಲ್ ]

**ತಹಸೀಲುದಾರ,** ತಹಶೀಲದಾರ, ತಹಶೀಲುದಾರ, ತಹಶೀಲ್ದಾರ, ತಹಸಿಲದಾರ, ತಹಸೀಲ್ದಾರ, ತಾಶೀಲ್ದಾರ, ತಾಸಿಲ್ದಾರ, ತಾಸೀಲುದಾರ (ನಾ). ತಾಲ್ಲೂಕಿನ ಕಂದಾಯವನ್ನು ವಸೂಲು ಮಾಡುವ ಅಧಿಕಾರಿ ; ಮಾಮಲೇದಾರ(ಉಕ) ; ತಾಲೂಕಿನ ಮುಖ್ಯಾಧಿಕಾರಿ: (೩). **ತಹಶೀಲದಾರ :** ಕನ್ನೆಯ ತಂದೆಯು ದೊಡ್ಡದೊಂದು ತಾಲೂಕಿನ ತಹಶೀಲದಾರನಾಗಿದ್ದನು (ತೊಳೆಮು. ೨೦೮). **ತಹಶೀಲುದಾರ :** ಆ ತಾಲೂಕಿನಲ್ಲು ಇರುತ್ತಿದ್ದ ತಹಶೀಲುದಾರ ಮುಂತಾ ದವರಿಗೆ ತಾಕೀತಿ ಸಹ ಬರೆಸಿ (ರಾಜೇಂದ್ರ. ೧೨೩). **ತಹಶೀಲ್ದಾರ:** ಮದರಾಸ್ ಕಲ್ಕತ್ತಾ ಮಧ್ಯಪ್ರಾಂತ್ಯ ಬೊಂಬೈ ಜಿಲ್ಲಾದಲ್ಲಿ ತಹಶೀಲ್ದಾ ರರುಗಳ ಹಾಜರಾತಿ ಹುಕುಂನಲ್ಲಿರತಕ್ಕದ್ದು (ಗ್ರಾಮಾಕ. ೪). **ತಹಸಿಲ ದಾರ :** ಅದು ಆ ಪ್ರಾಂತದ ಸಬ್‌ರಿಜಿಸ್ಟ್ರಾರರಿಂದ ಹಿಡಿದು, ತಹಸಿಲದಾರ ರನ್ನು . . . ಕಲೆಕ್ಟರ ದೊರೆಗಳವರೆಗೂ ತಿಳಿದ ವಿಷಯ (ಹಸಿವು. ೨೯). **ತಹಸೀಲ್ದಾರ :** ಸೀತಾರಾಮನು ಬಾಕಿದಾರರನ್ನೂ ತಹಸೀಲ್ದಾರರನ್ನೂ ಸೆರೆಯಲ್ಲಿಡಿಸಿದನು (ಬಂಕಿಮ. ೩೦೮). **ತಾಸಿಲ್ದಾರ :** ನಾವಿಬ್ಬರೂ ಪೂಂಗಾಪೂರು ತಾಲೂಕಿನ ತಾಸಿಲ್ದಾರರ ಸೇವಕರು (ಪ್ರತಾಪ. ೩೪). **ತಾಸೀಲುದಾರ :** (೩). [ ←ಅರ. ಪಾರ. ಹಿಂ. ತಹಸೀಲ್‌ದಾರ್ ; ಮರಾ. ತಹಸೀಲ್ದಾರ್ ; ತಹಶೀಲ್ದಾರ್ ]

**ತಹಸೀಲೆ** 'ತಹಸೀಲು' ನೋ.

**ತಹಸೀಲ್ದಾರ** 'ತಹಸೀಲುದಾರ' ನೋ.

**ತಹಾನಾಮೆ** 'ತಹನಾಮೆ' ನೋ.

**ತಹಿ** (ನಾ). ಒಡನಾಟ ; ಜೊತೆ ; "ಸ್ನೇಹ" (ಪ್ರಭಣ್ಣ) : "ತಹಿ (?) ಯಂತದು[ಪಾಠಾಂ. ತಹೆಯೆಂದುಂ]ಜ[ಪಾಠಾಂ. ಜೊ]ತ್ತು" (ಚತುನಿ. ೯೨) ; ಉಂಟುಂಟು ತಹಿಯಾಗಿ ನಿಮ್ಮೊಳಗೆ ನೀವು ಪಳೆನಂಟುಗಳ ಬೆದಕಬೇಡ (ಸೌಂದಪು. ೩-೮). 'ತಹಿಕಾಱ' ಪರಾ.  [ ? ]

**ತಹಿಕಾಱ** (ನಾ). ಜೊತೆಗಾರ ; ಸ್ನೇಹಿತ : ಕನ್ನದ ಬೊಮ್ಮಿದೇವಯ್ಯನ ನೊಲವಿನೊಡಗೊಂಡು ಬರುತಾ ಗಳಿಹಮಂ ಕೊಂಡು ಮನಮೊಸೆದು ತಹಿಕಾಱನವೊಲರಮನೆಯನಂಜದೆ ಹೊಕ್ಕು (ಬಸಪು. ೩೦-೦೦).
[ ತಹಿ + – ಕಾಱ ]

**ತಳ್**₁ 'ತಟ್ಟ್₁' ನೋ.

**ತಳ್**₂, ತಟ್ಟ್₂ (ಕ್ರಿ). ತತ್ತ₂, ತಳ್ತ₁ (ಭೂಕೃ). ತಳ್ತು₂ (ಭೂತನ್ಯೂ). ೧. ಎದುರಿಸು; ಪ್ರತಿಭಟಿಸು; ಆಕ್ರಮಣ ಮಾಡು: ಕೆದಱ ಚತುರ್ಬಲಂ ಬೆದಱ ತಳ್ತ ದಳಂ . . . ಗುಣಾರ್ಣವನಂದು ಲಕ್ಕಲೆಕ್ಕದೆ ಕೊಳೆ (ಪಂಪಭಾ. ೮-೨೧) ; ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳ್ ಬಾಳ್ ಪಳಂಚಿ ಮಾರ್ಕೊಡಿವಿಡೆ (ಪಂಪಭಾ. ೧೦-೪೨); ರಣದೊಳರಾತಿಭೂಭುಜಬಲಂಗಳನುಗ್ರಭುಜಾಸಿಯೊಳ್ ಖಿಣಿಲ್ ಖಿಣಿಲೆನೆ ತಳ್ತು ಪೊಯಿದು ಪಡಲಿಟ್ಟ ಪೊಲಾಗಿರೆ ಮಾಡಿ (ಎಕ. VIII, ಸಾಗರ. ೧೦೯-೩೨ ; 1042) ; ಪರಿದೆಯ್ದಿ ತಾಗಿ ಧುರದೊಳಿದಿರ್ಚ್ಚಿದ ವೀರಭಟರಂ ಅದಟಿನ ಕಾಳಿಗನಿರದೆಯ್ದಿ ತಾಗಿ ತಳುರ್ತ್ತೆಸುಉದು (ಎಕ. VIII, ಸೊರಬ. ೬-೯ ; 1165) ; ℙ ಇದು ತಳ್ತು ಎಂಬುದರ ಅಪಲಿಖಿತವಿರಬಹುದು. ತತ್ತರೆ ಭೂತನಾಥನ ತಡೆವನೆಂದನು ದನುಜ ರಘುಪತಿಗೆ(ಕಾಶಿರಾ. ೩೬-೨೦); ಕನಸು ಮನಸಿನೊಳಾಗಳೆನ್ನಯ ತನುವಿನಲಿ ನೀ ಸುಳಿದು ಮುಚ್ಚಿಸಿಯಿನಿತು ಧಾವತಿಗೊಳಿಸಿ ನಿಷ್ಕರುಣದಲಿ ನೀನೆನ್ನ ಕನಲಿ ನುಡಿದೊಡೆ ನಾನು ಬಿಡುವೆನೆ ತನಗೆ ತತ್ತಡೆ ಭಾವಿಸಲು ಸಾವನಿತು ಬಂದೊಡೆ ಬರಲಿ ಬಿಡೆ ನಾನೆಂದಳಾ ಮಾಯೆ (ಪ್ರಭುಲೀ. ೭-೪೦); ಈ ಬಲವನು ತತ್ತೊಡರಿದೋಡಿಸುವೊಡಸುರಂಗೆ ವಶವೆ (ಜೈಬಪು. ೩೮-೨೪). ೨. ತಡೆ ; ಅಡ್ಡಿಪಡಿಸು : 'ತಳ್ವೊಯ್₂', 'ತಳ್ವು₁' ಪರಾ. △**ತಟ್₂ :** ಬಾಳ್ ಕಿಟ್ಟು ಇದಿರೆ ನಡದು ಕಟ್ವಿತ್ತವೋಗಿ ತಟ್ಟು ಸತ್ತ (ಸೌಇಇ. IX-i, ೬-೧೦ ; 9ನೆಯ ಶ).

**ತತ್ತಾಳು** = ಎದುರಿಸಿದ ಸೈನಿಕ : ಕೆಟ್ಟು ಬಂದವರಲ್ಲ ರಿಪುಶಿರದಿಂ ಸೇತುಗಟ್ಟಿ ಬಂದೆವು ಜೀಯ ತೊರೆಗೆ ಕುಟ್ಟುತ್ತ ಬಂದೆವು ತತ್ತಾಳನೆಂದನು ದಿಟ್ಟ ಕನ್ನಡಿಗ ಮಾಚಯ್ಯ (ನಾಗಕು. ೧೬-೧೨). **ತಳ್ತಿಕ್ಕು**=ಮೇಲೆ ಬಿದ್ದು ಹೊಡೆ; ಎದುರಿಸಿ ಕೊಲ್ಲು: ಕೆಂಚನೆಂಬೋನಿಳಾಮಹಿತಂ ವೀರನರ್ಕ್ಕಸುತ ನಿನುದಾರ[ಂ] ಪಿಡಿದಡಸಿ ನವಿಲ ಕೊನ್ದಡಿಗಿ[ಡೆ] ತಳ್ತಿಕ್ಕಿ ಬೇಡವಡೆಯಂ ಬಲ್ಲಾಳ್ಪಡೆದಂ ಬೆಳ್ವಲಮಂ (ಸೌಇಇ. XI-i, ೪೫-೩ ; 980). **ತಳ್ತಿಱಿ**₁, **ತಳುತಿಱಿ, ತಳುತ್ತಿಱಿ, ತಳ್ತಿರಿ,** △**ತಟ್ಟಿಱಿ** = ತಳ್ತಿಕ್ಕು : ದುಗ್ಗಯ್ಯ ಸಾನ್ತನೂರ ತೊಱುಗೊಳ್ಳ ಧಾಳಿ ಕಳ್ಳರೊಳ್ತಳ್ತಿಱಿದು ಅಟ್ಮಿ ಸತ್ತ (ಎಕ. IX(8), ಕಾನಕಾ. ೪೮-೧೬ ; ಸು. 900) ; ಅತಂಗೆ ಚಕ್ರಿವೇಟ್ಕುಮೆ ಪೋ ತಳ್ತಿಱಿದಾಮೆ ಗೆಲ್ವಂ (ಆದಿಪು. ೧೪-೬) ; ಪೊಱಗಣರಿವರ್ಗಮಂ ತಳ್ತಿಱಿದು ಗೆಲಲ್ಬರ್ಕುಮೊಳಗಣರಿಷಡ್ವರ್ಗಂ ನೆರೆದಿರೆ ಬಾರದು (ಶಾಂತಿಪು. ೨-೦೭) ; ಪೊಯ್ಕುಲೋಡಿ ಪೋಗುವುದಿಲ್ಲದೆ ತಾಗಿ ತಳ್ತಿಱಿಯಲಱಿಯೆವು (ಪಂಚತಂ. ೨೦೬-೫) ; ಸಾರಥಿಗಳ್ ಸಾರಥಿಗಳೊಡನೆ ತಳ್ತಿಱಿಯೆ (ಪಂರಾಮಾ. ೧೩-೬೮) ; ನೆರೆದಿಂತೀಗಳೆ ಪೋಗಿ ತಳ್ತಿಱಿವೆನೆಂಬಾ ಮಾತದಂತಿರ್ಕೆ (ಕಬ್ಬಿಕಾ. ೧೫೯) ; ಪೆಱಮೆಟ್ಟ ತುಱುಗಿ ಮಿಗೆ ತಳ್ತಿಱಿದಪ್ಪುವೊಡನೊಡನೆ ತಮ್ಮೊಳೀ ಕಾಂತೆಯು ನುಣ್ದುಱುಗೆವೆಗ[ಣ್ಗ]ಳ್ಕೀಗಿನ ಕೊಱತೆಗೆ ದಲ್ಪಾಱುಗಣ್ಣ ಬೞಗಿದು ಸಹಜಂ (ಪುಷ್ಪಪು. ೩-೫೦) ; ಮುಂಡಮುಂಡ ಗಳೆದ್ದು ಜವದಿ ತಳ್ತಿಱಿದು ಗೆಲಗೊಂಡುದು (ಲಶಿಜಿಂ. ೧೭-೧೭); ಸಿರಿವುರದ ಬೀರಣ್ಣನುಭಯ ಬಲಂ ನೋಡಲು ತಳುತಿಱಿದು ಸುರಲೋಕ ಪ್ರಾಪ್ತನಾದಂ (ಕಇ. V, ೯-೨೮; 1072); ತಾಗಿ ತಳುತಿಱಿದು ಸ್ವರ್ಗಲೋಕ ಪ್ರಾಪ್ತನಾದ (ಎಕ. VII, ಶಿವಮೊ. ೧೦೮-೭ ; 1188 ?) ; ಗೊರವರ ಹೊನ್ನಯ್ಯಂ ತುಱುವಂ ಪಿಂತಿಕ್ಕಿ ಪಲರಂ ಕೊಂದು ತಳುತ್ತಿಱಿದು

ದೇವಲೋಕಕ್ಕೆ ಸನ್ನೊಂ (ಎಕ. VIII, ಸೊರಬ. ೬೪-೧೧ ; 1032) ; ಒತ್ತೊತ್ತಿ ಬರುವ ಸೈನ್ಯಕ್ಕೆ ಅವನು ಇದಿರಾಗಿ ತಾಗಿ ತಳ್ತಿರಿದು ಕೊಂದನು (ಕವೀರ. ೨೬) ; ಎಡೆಯೊಳ್ತಾಗಿ ತ[ಟ್ಟಿ]ಱಿದು ಸಗ್ಗವೋಱಿದಂ (ಸೌಇಇ.IX-1, ೪-೯; ಸು. ೨ನೆಯ ಶತ). **ತಳ್ತಿಱಿಯಿಸು**=ಒಬ್ಬರನ್ನೊಬ್ಬರು ಆಕ್ರಮಿಸಿ ಕಾದಾಡುವಂತೆ ಮಾಡು ; ಕೊಲ್ಲಿಸು : ಇಱಿಯಿಸುವ್ವೆ ಸೋದರರ್ಕಳಂ ತಮ್ಮೊಳ್ತಟ್ಟಿ [ಳ್ತಿ] ಱಿಯಿಸುವ್ವೆ ಗುರುಶಿಷ್ಯರನಱಗುಲಿ ನಿನ್ನಿಂ ನಿಕೃಷ್ಟರಾದರುಮೊಳರೇ (ಗದಾಯು. ೯-೭). [ದೇ.॥ ತಮಿ. ತಳ್]

**ತಳ್$_3$** (ಕ್ರಿ). ತತ್ತು$_3$, ತಳಿತ$_2$, ತಳ್ತ$_2$ (ಭೂತಕೃ). ತತ್ತು$_5$, ತಳ್ತು$_3$ (ಭೂತನ್ಯೂ). ೧. ತಳೆ ; ಧರಿಸು ; ಹೊಂದು : ಧ್ಯಾನದೊಳಭವಂ ನೆಱೆದಿನಿಸಾನುಮನರೆಮುಚ್ಚಿ ಕಣ್ಗಳಂ ನಿಶ್ಚಳಿತಂ ತಾನಿರ್ದು ಮಱಿದು ಕೆಂದಿದ ವಿಮಾನಂ ತಳ್ತಾ[ಪಾಠಾಂ. ಳ್ಕಾ]ಡದಿರ್ದ ಮಡುವಂ ಪೋಲ್ತಂ (ಪಂಪಭಾ. ೮-೧೩) ; ತಚ್ಚಂದ್ರಿಕಾನವ್ಯಸಂಗಮದಿಂ ಸಂಭವಿಸಿಪ ಸೀರ್ಪನಿಗಳಂ ತಳ್ತಲ್ಲಿ ವಿಸ್ತಾರಮಪ್ಪಮಳೇಂದೂಪಲದೊಂದು ಪಾಸಱೆ ಕರಂ ಶುಭ್ರದ್ಯುತಿವ್ರಾತದಿಂದಮೆ ವಿಭ್ರಾಜಿಸುತಿರ್ದುದು (ಕುಸುಮಾ. ೧೦-೬೪). ೨. ಹರಡು; ವ್ಯಾಪಿಸು; ಕವಿ; ಆವರಿಸು: ಚೆಲ್ವಾದ ಲತಾಂತಂ ತಳ್ತ ಶಯ್ಯಾಶ್ರಿತ ಸಿತಮೃದುಳ ಪ್ರಚ್ಛದಚ್ಛನ್ನ ಶಯ್ಯಾತಲದೊಳ್ . . . ಶೂದ್ರಕನೃಪತಿ ಸುಖಾಸೀನನಾಗಿರ್ದನಾಗಳ್ (ಕಾದಂಪೂ. ೮೦) ; ಧರಣೀನ್ದ್ವಂಬರಮೆಯ್ದೆ ಸಪ್ತತಳಮಂ ತಳ್ತತ್ತು . . . ಅಜಾಣ್ಡತಟದೊಳ್ಕೀರ್ತ್ತಿರ್ಲತಾವಲ್ಲಿ (ಸೌಇಇ. IX-1, ೧೦೨-೩೬ ; 1046) ; ತಡೆವಿಡಿದು ಪವಳದ ಬಳ್ಳಿ ತಳ್ತ ಪಾಲ್ಗಡಲ ಚೆಲ್ವುಮಂ ನಿಜಾಂಗಪ್ರಭೆ ನಿರಾಕರಿಸುತ್ತುಮಿರೆ (ವರ್ಧಪು. ೧೦-೨೪ ವ) ; ಏಟುಂ ಕಡಲಂ ಕಡಂಗಿ ಕುಡಿವೆಂ ತಳ್ತಾಱಿಲಂ ಪೊಯ್ದು ತೂಱುವೆನ್ನೆದುಂ ಮೊಗಮುಳ್ಳನಂ ಕೆಡಪುವೆಂ (ಕಬ್ಬಿಕಾ. ೧೫೪) ; ತಳಿತ ಹೋಮದ ಹೊಗೆಗಳಲಿ ದಿನಬಲದೊಳಾಯುಷ್ಯಾಭಿವೃದ್ಧಿಯ ಬೆಳವಿಗೆಗಳಹವರಸ (ಕುವ್ಯಾಉ. ೩-೫೫) ; ತಳಿತ ಮೇಘದಿ ಹೊಳೆವ ಮಿಂಚಿನ ಬಳಗವೆನೆ ಹಂಸಗಳು ನಭದಿಂದಿಳಿಗಿಳಿದ ಸತಿಯರ ಸಭಾಮಂಡಲದಿ ಕುಳ್ಳಿರಲು (ನಳಚ. ೨-೩೨). ೩. ಸೂಸು ; ಚೆಲ್ಲು : ಕರುಳಿನ ಜೊಂಡು ಮಸಗಿತು ಕಡಿದ ಖಂಡದ ದಿಂಡು ತಳಿತುದು (ಕುವ್ಯಾಭೀ. ೯-೧೩) ೪. ಉಂಟಾಗು; ಆಗು; ಸಂಭವಿಸು: ಬೀತ ಸೊಂಪಿನ ತಳಿತ ಚೆಲಿಗಿನ ಪಾತಕದ ಪರುಠವದ ಮುಖದ ಮಹೀತಳಾಧಿಪ ಸುಯ್ದು ನೊಂದನು ಶಿವಶಿವಾಯೆನುತ (ಕುವ್ಯಾಆ. ೪-೧೭) ; ಪೊಱಗಂಧಕಾಸುರಂಗಂ ನಾಡೆ ವಿಗಡವೀರೇಶಂಗೆ ಕಾಳೆಗಂ ತಳ್ತುದು (ಚೆಬಪು. ೫೦-೩೦) ; ತನಗವರೊಳು ತ[ಪಾಠಾಂ. ತೆ]ತ್ತುದಾಹವಮೆಂದು ನಿಜಸುತಂ ಬಿನ್ನೈಸೆ (ಜೈಮಿಭಾ. ೨೫-೫೮) : ಕಾಳಗ ತತ್ತುದವರಿಬ್ಬರಿಗೆ (ಕೋಗಯು. ೧೦-೩೮). ೫. ಮೂಡು ; ಹುಟ್ಟು ; ಗೋಚರಿಸು : ತಳಿರ್ ಪುದಿದಾವ್ರುದಂತೆ ತೇಜೋನಿಧಿಯಪ್ಪ ಬಾಲರವಿ ತಳ್ತ ವಿಯತ್ತಳದಂತೆ ವಿಶ್ವಧಾತ್ರೀನುತ ಕೌಸ್ತುಭಾಭರಣನಚ್ಯುತನೀಗೆವಂಗೊಲ್ದು ರಾಗಮಂ (ಸೂಕ್ತಿಸು. ೧-೧) . ೬. ಚಿಗುರು ; ಮೊಳಕೆಯೊಡೆ ; ಪಲ್ಲವಿಸು : ಸೊಗಯಿಸಿ ಬಂದ ಮಾಮರನೆ ತಳ್ತಲೆವಳ್ಳಿಯೆ ಪೂತ ಜಾತಿಸಂಪಗೆಯೆ . . . ನೋಟಿಪ್ಪೊಡಾವ ಬೆಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಪಂಪಭಾ. ೪-೨೮); ಪವಳದ ಬಳ್ಳಿಯ ತುಱುಗಲ್ಪವಣಿಲ್ಲದೆ ತಳ್ತು ಬೆಳೆದು ಕುಡಿವಿಟ್ಟಪರಾರ್ಣವ ತಟದೊಳ್ಪಱಿದಪುದೆಂಬವೊಲಿರ ದೆಸೆದತ್ತು ಸಾಂದ್ರ ಸಂಧ್ಯಾರಾಗಂ (ಕಾದಂಪೂ. ೨೭೭). 'ತಳ್ತೆ$_1$' ಪರಾ.

**ತತ್ತಕಲಹ** = ಉಂಟಾದ ಜಗಳ ; ಒದಗಿದ ಕಾದಾಟ : ಸೇದಿರಾಜಂ ತತ್ತಕಲಹದೊಳ್ ಕಪಟಜಂಗಮವಿಱಿಯೆ ಶಿವನೆಂದು ಕಾದುತೆ (ಚೆಬಪು. ೫೫-೩೮). **ತತ್ತಕಾರಿಯ** = ತೊಡಗಿದ ಕೆಲಸ ; ಉದ್ದೇಶಿಸಿದ ಕಾರ್ಯ; "ಹಿಡಿದ ಕೆಲಸ" (ಲಶಿಚಂ.ಕೋಶ): ಭೂತಳದೊಳುದಿಸಿದ ನಂದಿಕೇಶ್ವರಂ ಯುಕ್ತಿಯಿಂ ನೋಳ್ಪಡೀಶ್ವರ ತಾನೆಯೆಂದೆನಿಪ ಯೋಗಪರಮಾನಂದನು ತತ್ತಕಾರಿಯವೇ[ಪಾಠಾಂ.. ರ್ಯವದೇ]ನು (ಲಶಿಚಂ. ೨೯-೧). **ತತ್ತಕಾರ್ಯ**=ತತ್ತಕಾರಿಯ: ಅದು ಮಾಣಲೀಗ ನಿನಗಂ ತತ್ತಕಾರ್ಯವೆಂ [ಪಾಠಾಂ. ಕಾರಣಂ ನಾನು ನಿನಗೇನ ಮಾಡಲೆಂ]ಬುದನುಸುರು ಸುರಪ (ಲಶಿಚಂ. ೧೪-೨೭). **ತತ್ತಕಾಳೆಗ** = ತೊಡಗಿದ ಯುದ್ಧ : ಮೇಣಾವ ಶಶಿವಂಶಾವಳಿಯ ನೆಮ್ಮುಗೆಯ ನೆಗಳಿದೆ ತ[ಪಾಠಾಂ. ತೆ]ತ್ತಕಾಳೆಗಕೆ (ಕುವ್ಯಾಭೀ. ೩-೩೪). **ತತ್ತವಸರ** = ಒದಗಿದ ಅಗತ್ಯದ ಸಂದರ್ಭ,- ಆವಶ್ಯಕತೆ : ಬಿಜಯಂಗೆಯ್ವುದೊಳಕಡೆಗೆಂದೊಡೆಮಗೊಳಗಾವ ತತ್ತವಸರವು ನಮಗೇಕರಸುಮನೆಗಳಲಿ ಭಾವಿಸಲು ಸಂಚಾರ (ಪ್ರಭುಲೀ. ೦೪-೦೭); "ಇರುವ ಕೆಲಸ" (ಪ್ರಭುಲೀ. ಕೋಶ). **ತತ್ತವೇಳೆ** = ಒದಗಿದ ಸಮಯ,-ಸಂದರ್ಭ : ತೆತ್ತಿಗರು ತಾವಾದ ಕಾರಣ ತತ್ತವೇಳೆಯಲಾದಿರ್ದೈ ದಿಟ ಹೆತ್ತ ತಂದೆಗಳಹುದು ಮಡಿವಳ ಚನ್ನಬಸವಗಳು (ಪ್ರಭುಲೀ. ೨೩-೪೭). **ತತ್ತಹೊತ್ತು** = ತತ್ತವೇಳೆ : ಎಲೆಲೆ ಬಾಣಸಿ ತತ್ತಹೊತ್ತಿನ ಚಲವ ಮರಳಿಚಬೇಕು ಮಲ್ಲನ ಗೆಲಿದುಕೊಡು ಹರುಷಾಮೃತವನೆನ್ನಾತ ನೀನಿಂದು (ಕುವ್ಯಾವಿ. ಓಠಿಇ. ೪-೬೩).: ಪೂತು ಪಾಯಿಕು ತತ್ತಹೊತ್ತಿನೊಳಾತುಕೊಂಬವರಾರು (ಕುವ್ಯಾದ್ರೋ. ೪-೧೧). **ತಳ್ತಱೆ**= ೧. ಮುತ್ತು ; ಕವಿ ; ಆವರಿಸು : ಮಿಱಿದ ಖೇದಮುಂ ಮುದಮುಮೊರ್ಮೆಯೆ ಕೋಕ ಚಕೋರ ಕೋಟಿಗಿಂತೇಱಿದುದು . . . ವಿಯೋಗಿಗೆ ಪಯೋನಿಧಿಗೊರ್ಮೆಯೆ ಕಿರ್ಚು ಪೆರ್ಚಿ ತಳ್ತಱಿದುದಾಗಳಂತಮರ ದಿಕ್ಕುಧರೇಂದ್ರಮನೇಱೆ ಚಂದ್ರಮಂ (ಕುಸುಮಾ. ೧೦-೧೧). ೨. ಅಲುಗಾಡಿಸು ; ಚಲಿಸು : [ಮೆಯ್ಯಂ ತೂಗುತ್ತುಂ] ಉನ್ಮತ್ತಚೇಷ್ಟೆಯಿಂದೆರೆಯುಂ ತಿಂದ ವಿಮಾನಂತೆ ಪೊಳೆಯುತ್ತುಂ ಪೊಲ್ಲಮನನಾಗಿ ಕಯ್ಯಂ ತಳ್ತಱಿದು ಪೆಟಿರ್ಗಂಜಿ . . . ಪರವಶಮಾದರಂತೆ ಜಡನಾಗುತ್ತುಂ ವಿರಲಾಗದೆಂಬೀ ಮೂವತ್ತೆರಡು ದೋಷಂಗಳಿಂ ಪಿಂಗಿ (ಧರ್ಮಾಮೃ. ೫-೧೩೭). **ತಳ್ತುನೋಡು**=ಚೆನ್ನಾಗಿ ನೋಡು; ಮನಸ್ಸಿಟ್ಟು ನೋಡು: ಎಳವರೆಯದೊಳೆಳೆಯರ್ಕಳನೆಳಸುತೆ ನಳಿದೋಳ್ಗಳಿಂದೆ ಬಿಗಿದಪ್ಪಿ ಮನಂಗೊಳೆ ತಳ್ತುನೋಡಿ ಮುದ್ದಿಪ ವಿಳಾಸವೊಂದಕ್ಕೆ ನೋಂತುದಿಲ್ಲಾಂ ಕೆಳದೀ (ರಾಜಶೇ. ೩-೪೭). **ತಳ್ತೊಗೆ**=ಅಂದವಾಗಿ ಉದಯಿಸು,-ಕಾಣಿಸಿಕೊಳ್ಳು: ಇರುಳೆಂಬ ಕಂಭದಿಂ ಹಿಮಕರನಾದಂ ಕರಿಯ ತೆಱದಿ ತಟ್ಟೊ [ಳ್ತೊ]ಗೆಯೆ ಸುಧಾಕಿರಣ ಮದವುಣ್ಮೆ ಪರಿದುದು ವಿರಹಾಕುಳರೆಂಬ ಬೀರರಂ ಪೆಣಚುತ್ತುಂ (ಅಜಿಪು. ೬-೪೩).

**ತಳ್$_4$** (ನಾ). ಅಡ್ಡಿ ; ಅಡಚಣೆ ; ತಡೆ : (?). [ <ತಳ್$_2$ ]

**ತಳ** 'ತಲ' ನೋ.

**ತಳಂಕು** (ನಾ). ಒಂದು ಬಗೆಯ ಮರ : ತದಕಿನ ತಾಳ ತೆಂಗಿನ ತಳಂಕಿ[ಪಾಠಾಂ..ಗಿ]ನ ತುಂಬುರ ಚಿಲ್ಲ ಬೆಲ್ಲವತ್ತದ ಬಿಳಿಯತ್ತಿಯಿಪ್ಪೆಯ ಮಾರಂಗಳ . . . ಕಾನನವೆತ್ತ ನೋಟಿಪ್ಪೊಡಂ (ಲೀಲಾವ. ೬-೨೭). [?]

**ತಳಂಗು** (ಕ್ರಿ). ಗರ್ಜಿಸು ; ಗರ್ಜನೆಮಾಡು : ಕಟ್ಟಳ ತಾಗಿ ತಳಂಗೆ ಕಟ್ಟದಲಗಂ ತಳ್ತಿಱಿದು ಮೆರೆವ ಹಡವಳ ಸುಬ್ಬ (ಎಕ. VIII, ಸಾಗರ. ೯೫-೧೪ ; 1189). [ ←ತಮಿ. ತಟಙ್ಕು ]

**ತಳಂಗೆಡು** (ಕ್ರಿ). ಆಧಾರ ತಪ್ಪು; ನೆಲೆಯಿಲ್ಲದಾಗು: ಭರತನಳ್ಕರೆಯೊಂದೆ ಪಿರಿಯ ನೆಮ್ಮಾಗಿರ್ದ ಕುಬ್ಜೆಯಾತ್ಮಂ ತಳಂಗೆಟ್ಟುರುಳ್ದುದು (ಶ್ರೀರಾಮಾ. ೧೧೪-೭೭). [ತಳ (= ತಲ) + ಕೆಡು$_1$ ]

**ತಳಂಗೊಳ್** (ಕ್ರಿ). ಕೈಯಲ್ಲಿ ಹಿಡಿ : ಚಾಮರಂ ಧವಳಚಂಚತ್ತಾಳವೃಂತಂ ಸಮಂತು ತಳಂಗೊಂಡೊಡನೆಟ್ಟಿರಲ್ ಮದನರಾಜ್ಯಶ್ರೀಲಸನ್ಮೂರ್ತಿವೆತ್ತಿತೆನಲ್ ಭೀಮತನೂಜೆ ಪೊಕ್ಕಳೊಲವಿಂದುದ್ವಾಹಗೇಹಾಂತಮಂ (ನಳಚಂ. ೩೩೦). [ ತಳ( = ತಲ) + ಕೊಳ್$_1$ ]

**ತಳಂಬಿಗೂಲಿ** (ನಾ). ಒಂದು ಬಗೆಯ ತೆರಿಗೆ : ಮಹಾಜನಂ ಮಹಾದೇವಯ್ಯಂಗೆ ನಾವಿದವಾರಿಯುಂ ತಳಂಬಿಗೂಲಿಯುಮನಾವಕಾಲಮುಂ ಪರಿಹಾರಂ ಮಾಡಿದರ್ (ಸೌಇಇ. IX-1, ೧೩೨-೨೭ ; 1068).

[ ತಳಂಬಿ? + ಕೂಲಿ$_1$ ]

**ತಳಕ್**(ನಾ). ಮಿಂಚಿನ ವೇಗವನ್ನು ಅಥವಾ ಮಿಂಚಿನಂತೆ ಹೊಳೆಯುವುದನ್ನು ಅನುಕರಿಸುವ ಶಬ್ದ. 'ತಳಕ್ಕನೆ' ಪರಾ.

**ತಳಕ** (ನಾ). ಒಂದು ಬಗೆಯ ಔಷಧಿ ಮೂಲಿಕೆ : ಈಶ್ವರಿ ನೆಲಅಣಬೆ ಚಿತ್ರಮೂಲ ತಳಕ ಜ್ಯೋತಿಕಾಷ್ಠ . . . ಯಿವ ಸಮಾನಂಗೊಂಡು ಲೇಪವಂ ಮಾಡಲು ಮಾಣ್ಗು (ವಾತಾಚಿ. ೧೩-೧). [ ? ]

**ತಳಕಂಭ** 'ತಳಗಂಬ' ನೋ.

**ತಳಕಟ್ಟು** 'ತಳಗಟ್ಟು' ನೋ.

**ತಳಕಾಡು** 'ತಟ್ಟಕ್ಕಾಡು' ನೋ.

**ತಳಕಿತ್ತು** (ಕ್ರಿ). ಜಾಗಬಿಡು ; ಊರು ಬಿಟ್ಟುಹೋಗು ; ಓಡಿಹೋಗು ; ದೂರವಾಗು: ಇಲ್ಲಿಂದ ತಳಕಿತ್ತಬೇಕೆಂದು ಪ್ರಸ್ತಾಪ ತೆಗೆದ ಕೂಡಲೇ ವಾಂಗಾನು ಈದ ಹುಲಿಯಂತೆ ಮೈಮೇಲೆ ಬಂದನು (ಮೋದಿಮ. ೧೫೭): ಹಾನಗಲ್ಲು ಬನವಾಸಿಸೀಮೆಗಳಿಂದ ಹೊಯ್ಸಳರು ತಳಕಿತ್ತುವಂತೆ ಮಾಡುವುದು (ತವನಿ. ೧೪೩); ತಂದೆಗೆ ಜಡ್ಡಾಗಿದೆಯೆಂದು ತಾರು ಕೊಟ್ಟರೂ . . . ಅಲ್ಲಿಂದ ತಳಕಿತ್ತಿರಲಿಲ್ಲ (ಬಟ್ಟಹೊ. ೧೫) ; ತಳಕಿತ್ತಿ ಓಡಲೆ ; ತಳವೂರಿದ ಚಿಂತಿ (ಸಖೀಗೀ. ೪೮-೨) : ಈ ಮಾತು ನೆನಪಾಗುತ್ತಲೇ ಅವಳ ಸಮಾಧಾನವು ತಳಕಿತ್ತತೊಡಗಿತು (ಮುತ್ತ್ಯದ. ೯೯).

[ ತಳ (=ತಲ) + ಕಿತ್ತು$_1$ ]

**ತಳಕೀಳು** (ಕ್ರಿ). = ತಳಕಿತ್ತು : ಒಂದೆರಡು ವಾರದೊಳಗೆ ತಳಕೀಳಬೇಕು (ಬಾಬಲ. ೫೭) ; ಮುದ್ರಣದ ಕರಡು ಕಾಗದದೊಳಗಿನ ಕಾಟುಹಾಕಿದ ಅಂಶದ ಹಾಗೆ, ತಾವು ತಳಕೀಳತಕ್ಕದ್ದು (ಇಪ್ಪಕ. ೪೮೪).

[ ತಳ (= ತಲ) + ಕೀಳು$_1$ (<ಕೀಟ್$_1$) ]

**ತಳಕು$_1$**, ತಳ್ಕು$_1$ (ಕ್ರಿ). ೧. ಹೊಳೆ ; ಮಿನುಗು : ಕಿವಿಗಳಲ್ಲಿ ತಳಕುವ ಭಂಗಾರದ ಕರ್ಣಭೂಷಣಗಳು ತೂಗಾಡುತ್ತಿದ್ದುವು (ಕಪಾಕುಂ. ೯೪). **ತಳ್ಕು$_1$** : ೨. ಲೇಪಿಸು ; ಬಳಿ ; ಸವರು : "ತಳ್ಕು – ಅನುಲೇಪನೇ, ತದ್ಭಾವೇ ಚ (ಪ್ರಕಾಶ)" (ಶಮಧಾ).

[ ದೇ.॥ ತಮಿ. ತಳುಕ್ಕು ]

**ತಳಕು$_2$**, ತಳುಕು$_4$, ತಳ್ಕು$_4$, ಥಳಕು, ಥಳುಕು (ನಾ). ೧. ಹೊಳಪು ; ಮಿನುಗು ; ಕಾಂತಿ : ಮುಗಿಲಲ್ಲಿ ನೆರೆದ ಚಿಕ್ಕೆಯ ಜಾತ್ರೆಗೆ – ಇರುಳ ತಳಕಿಗೆ (ಉಯ್ಯಾಲೆ. ೧೦೫-೪); ಅವಿಭಾಜ್ಯವಾಗಿಯೂ ನೆನೆವವರ ಹಿತವರಿತು ರೂಪಿನುಪದೆಯ ಭೂಮೆ ಪತಿಕರಿಪ ತಳಕೋ (ಮಲೆದೇ. ೨೮-೪). ೨. ಒನಪು ; ಒಯ್ಯಾರ ; ಬೆಡಗು : ಈ ಹುಡುಗಿ ಬಹಳ ತಳಕು ಮಾಡುತ್ತಾಳೆ (ರೂಢಿ). **ತಳುಕು$_4$** : ೧. ಬಲುಸರಳ ಸರಿವಳೆಯ ಮಿದುಳೊಡೆಗಲಸುಗಳಡಾಯುಧದ ತಳುಕಿನ ಕೊಳುಗುಳದ ಜಯಸಿರಿಯ ಕಾಹಿನೊಳಾರು ನೀನೆಂದ (ಕುಮ್ಯಾಸ. ೨-೭೮). ೨. ಅಳಿಯನು ತಂಗಿಯ ಮಕ್ಕಳು ತಳುಕಿನ ಪೆಂಡತಿಯು ಬಂಧುಜನ ಸಂತತಿಯುಂ ತಳಿಯೊಳಗತ್ತೆಯು ಮಾವನು ತಿಳಿಯದವೋಲೊಳಗೆ ತಿಂಬ ಮೂಷಕತತಿಗಳ್ (ನೀತಿಸಾ. ೮೪೪). ೩. ಒಂದು ಬಗೆಯ ಕಿವಿಯ ಆಭರಣ : ಕರ್ಣತಾಟಂಕ ಜಡಿಯೆ ತಳುಕು ದುಮ್ಮಾಳಿಸಲು . . . ನೂಪುರರವವಡಿಗಡಿಗೆ ಬಿಡದುಲಿಯೆ (ಕೃಷ್ಣಗೋ. ೧-೧೧೧) ; ಪಿರಿಯ ತಳುಕು ಬಾವುಲಿಗಳಂ ಕಿವಿಗಳೊಳಿಟ್ಟು (ಸೌಗಂಧಿ. ೨೨೯-೬). ೪. ಗಾಂಭೀರ್ಯ ; ಬಿಗುಮಾನ : ತಳುಕನುಗಿದೀಡಾಡಿ ಪರಿಣತ ಪುಳಕದಲಿ ನನೆನನೆದು ಹರುಷದ ಜಲಧಿಯಲಿ ಮನ ಮುಳುಗಿ (ಕುಮ್ಯಾಉ. ೯-೬೩).

**ತಳ್ಕು$_4$**: ೨. 'ತಳ್ಕಿಕ್ಕು' ಪರಾ. ೫. ಅನುಲೇಪನ; ಕದಡು; ಕಲ್ಕ: ಇಂದೊಳದಿನುನ್ಮದಷಟ್ಪದವೃಂದವಿಾಗಳೀಗಳೆ ಮೊರೆದತ್ತು ಚಂದನದ ತಳ್ಕ[ಪಾಠಾಂ. ತ್ಕ]ಬಲಾನಿಕರಕ್ಕದೀಗಳೀಗಳೆ ನೆಗಟ್ದತ್ತೆಲೇ ಪುಗಿಲಿದಾಗಡೆ ವೇಡ ವಸಂತರಾಜನಾ (ಆದಿಪು. ೧೩-೫): ಒತ್ತಿದ ತಳ್ಕೆತ್ತಿದ ತಟ್ ಮುತ್ತಿನ ಪೊಸದುಡುಗೆ ತಳಿರ ಸೋಮರ್ಾಡಿ ಮನಮಂ ಪತ್ತಿಸಿ ಜೊತ್ತಿಸೆ . . . ಬಂದರರಸಿಯರರೆಬರ್ (ಪಂಪಭಾ. ೫-೫೯) ; ಬೆಳಗುವ ಚಂದನದಣ್ಪಂ ತೊಳಗುವ ಕುಂಕುಮದ ತಳ್ಕಿನಿಂ ಕರಮೆಸೆದಂ (ಕಾದಂಪೂ. ೨೯). **ಥಳಕು** : ೧. ಇದನ್ನೇ ಥಳಕು ಎಂದು ಕರೆಯುವುದು (ನನ್ನಪ. ೨೯). ೩. ಪದಕ ಕಂಠಿಯು ಥಳಕು ಚಿಂತಾಕು ಸರಿಗೆಗಳು (ಜಾಜಾಕ. ೧೧). **ಥಳುಕು** : ೨. ಸೋಮು ಥಳುಕಿನ ಜೀವನಕ್ಕೆ ಮಾರುಹೋಗಿದ್ದ (ಅನಾಮಿ. ೫೨) ; ಕಾಲೇಜಿನ ಹುಡುಗಿಯಾದರೂ ಶ್ರೀಮಂತನ ಮಗಳಾದರೂ ಥಳುಕಿನ ಶೃಂಗಾರವಿಲ್ಲ (ನಿಶಉ. ೫೭).

ಥಳಕು ಪಳಕು, ಥಳಕು ಬೆಳಕು (ದ್ವಿರುಕ್ತಿ) : ಥಳಕು ಪಳಕುಗಳೇನೆ ಇರಲಿ, ಯಾರು ಸಾಜ, ಅವನೆ ರಾಜ (ಇಂಗೀತ. ೩೭-೧೪) ; ಆ ಹೊಸ ಸೊಸೆಯು ಥಳಕು ಬೆಳಕುಗಳಿಂದ ರಾಯರಂತಹ ದೊಡ್ಡಮನುಷ್ಯರು ತಮ್ಮ ಮನೆಗೆ ಬಂದಿರುವಾಗ (ರಾಯಚಕ. ೧೦೦).

[ <ತಳಕು$_1$. / ತಮಿ. ತಳುಕು ; ತೆಲು. ತಳುಕು, ತಳ್ಕು ]

**ತಳಕು$_3$** 'ತಟ್ಕು' ನೋ.

**ತಳಕುಮಲಕು**, ತಳಕುಮಳಕು (ನಾ). ಗಂಟುಹಾಕುವುದು; ಜೋಡಣೆ: ಇಷ್ಟೆಲ್ಲಾ ತಳಕುಮಲಕುಗಳನ್ನು ಹಾಕಿ ಪುನಃ ಬಿಡಿಸಿ ಎಲ್ಲರನ್ನೂ ಆನಂದಾಂಬುಧಿಯಲ್ಲಿ ನಲಿದಾಡಿಸಿ ನೋಡಿದ ಆ ಪರಮೇಶ್ವರನ ಲೀಲೆಯೆಂಥಾದ್ದು (ಭದ್ರಾಯು. ೫೭). **ತಳಕುಮಳಕು** : ಪ್ರೇಮಕ್ಕೆ ಇದಕ್ಕೆ ತಳಕುಮಳಕು ಹಾಕುವ ಅವನ ಗುರಿ ತಿಳಿಯಲಿಲ್ಲ (ಬಾಬಲ. ೭೯).

[ ತಳಕು$_3$ (<ತಟ್ಕು) + ಮಲಕು$_2$ ]

**ತಳಕುಮಳಕು** 'ತಳಕುಮಲಕು' ನೋ.

**ತಳಕ್ಕನೆ** (ಅ). ಪ್ರಕಾಶಮಾನವಾಗಿ ; ಜಗ್ಗನೆ : ಗಳಗಳನೆ ಮುಕ್ಕುಳಿಸಿ ನೀರನುಗುಳೆ ತಳಕ್ಕನೆ[ಪಾಠಾಂ. ಪಳಲ್ಕನೆ, ದಳಕ್ಕನೆ, ಪಳಚ್ಚನೆ] ಮಿಂಚಲು (ಬಸಪು. ೪೨-೩೦). [ ತಳಕ್ + – ಅನೆ$_1$ ]

**ತಳಗಂಬ**, ತಳಕಂಭ (ನಾ). ಆಧಾರಸ್ತಂಭ : ಧಾತ್ರೀಧರಮನಿತುಮಂ ಗುಂಡುಗಲ್ಲಿಕ್ಕಿ ದಿಗ್ದಂತಿ ಸಮೂಹೋತ್ತುಂಗ ಗಾತ್ರಾಪರಮವೆ ತಳಗಂಬಂಗಳಾಗಲ್ಕಿದೇಂ ಮಾಡಿಸಿದಂ ಹಿಮ್ಯಾದ್ರಿಯಂ ದೇಗುಲಮನೆನೆ ಮಹಾದೇವ ದಂಡಾಧಿನಾತಂ (ಎಇ. XIII, ೪೭-೫೭ ;1112) ; ಧರೆ ರಂಗಂ ಕುಳಪರ್ವತಾಳಿ ತಳಗಂಬಂಗಳು ದಿಶಾಭಿತ್ತಿ ಭಿತ್ತಿ ರಸಾಲಂಕೃತ ಚಿತ್ರಪುತ್ರಿಕೆಯರಾ ದಿಗ್ದೇವಿಯರ್ (ಎಇ. XIII, ೪೭-೫೮; 1112) ; ದೇವಸ್ಥಾನದ ಭಾರವನ್ನು ಹೊರುವ ಕಂಬಗಳನ್ನು 'ತಳಗಂಬ'ಗಳೆಂದು ಕರೆದಿದೆ (ಕಶಾಅ. ೯೬೩). **ತಳಕಂಭ** : ಪೃಥ್ವಿಕುಳ ಮಂಟಪದ ಮೇಲೆ ಪದಶಿಲೆ ಬಿಗಿದು ತಳಕಂಭ [ಪಾಠಾ. ಬ]ಕಳಶದ ಮೇಲೆ ಕೆಸಬುಗಲ್ಲು (ಅವಚಂ. ೨೭-೧೧೨).

[ ತಳ (= ತಲ) + ಕಂಬ$_1$ (<ಕಂಭ) ]

**ತಳಗಟ್ಟು**, ತಳಕಟ್ಟು (ನಾ). ೧. ಆಧಾರವಾದ ಚೌಕಟ್ಟು,–ರಚನೆ : ರಾಕೆಟ್ಟಿನ ತಳಗಟ್ಟು ಸುಮಾರು ೭೦ ಅಂಗುಲಗಳ ಅಡ್ಡಳತೆ ಇದ್ದಿತು (ಅಕಾಶ. ೪೭). ೨. (ಆಲಂ) ಮೂಲತತ್ತ್ವ, – ನಿಯಮ: ಆತ್ಮವಿಶ್ವಾಸವೇ ಅವರ ಹೆದ್ದಾರಿ ; ಸ್ವಾರ್ಥತ್ಯಾಗವೇ ಆ ಮಾರ್ಗದ ತಳಗಟ್ಟು (ರಾಜವ. ೧೫). **ತಳಕಟ್ಟು** : ೧. 'ಕಾಣಿಕೆ' ಯ "ನುಡಿ"ಯನ್ನೇ ನೋಡಿ. ಇದರ ತಳಕಟ್ಟು ಹಿಂದಿನ ಭೋಗಷಟ್ಪದಿ (ಸಮಾಲೋ. ೧೯) ; ಗಾಡಿಯ ಚಕ್ರಗಳ ಚೌಕಟ್ಟು ; ಗಾಡಿಯ ತಳಕಟ್ಟು (Carriage. ಇಂಕನಿ.). [ ತಳ (= ತಲ) + ಕಟ್ಟು$_2$ ]

**ತಳಗಡಿ** (ನಾ). ದಡದ ಕೆಳಭಾಗವನ್ನು ಕೊರೆಯಂಬಿಕೆ : ತೆಳುವುಡಿಯ ಮಳಲಿಡಿಯಲಿತ್ತಡಿಯ ತಳಗಡಿಯ ಪೊಳೆ (ಜ್ಞಮಿಥಾ. ೯-೨೪). [ ತಳ (= ತಲ) + ಕಡಿ$_3$ ]

**ತಳಗಡೆ** (ನಾ) ಕೆಳಭಾಗ ; ಕೆಳಗಿನ ಹಂತ . 'ತಳಗಡೆಕಾಲು' ಪರಾ. [ ತಳ (= ತಲ) + ಕಡೆ$_3$ ]

**ತಳಗಡೆಕಾಲು** (ನಾ). ಏಣಿ ಅಥವಾ ನಿಚ್ಚಣಿಕೆಯ ತೀರ ಕೆಳಗಿನ ಮೆಟ್ಟಿಲು ; ಪಟ್ಟಿ ; ತಳದ ಹಲ್ಲಂ : (೬). [ ತಳಗಡೆ + ಕಾಲು$_1$ (<ಕಾಲ್$_1$) ]

**ತಳಗಲ್ಲು** (ನಾ). ಅಡಿಗಲ್ಲು; ತಳಹದಿಯ ಕಲ್ಲು ; ಅಸ್ತಿಭಾರಶಿಲೆ: ಆಯುರ್ವೇದದ ಆದರ್ಶಶಾಲೆಗೆ ತಳಗಲ್ಲು ಹಾಕಿ ಹತ್ತುವರ್ಷವಾಯಿತು (ಕಗದ್ಯ. ೧೨೦). [ ತಳ (= ತಲ) + ಕಲ್ಲು (<ಕಲ್$_3$) ]

**ತಳಗು$_1$** 'ತೆಳ್ಪು$_1$' ನೋ.

**ತಳಗು$_2$** (ನಾ). ಕೆಳಭಾಗ ; ಬುಡ: ಮೇಲಿಲ್ಲ ತಳಗಿಲ್ಲ ನಡುವಿಲ್ಲ ರೂಪಿಲ್ಲ (ವೀಶೈಪು. ೧-೨-೪).

ತಳತಳಗು (ದ್ವಿರುಕ್ತಿ): ಸೆರಸೆರಗು, ಬೆಳಬೆಳಗು, ತಳತಳಗು, ಮೇಮೇಗು, ಮೂಮೂಗು (ಶಬ್ದಾನು. ೩೯೨ ಪ್ರಯೋ). [ <ತಳ ]

**ತಳಗು$_3$** (ನಾ). (?) : ತಳಗು ಕಲೆ ಕಚರಿ ಜರ್ಝರೆ ಪುಳಕಂ ತಿಳಿಗಾರೆ ತಿರವಿ ವರ್ಣಮಣಂ ಸಂಗಳಿಸದೆ ಪಳುಕಿನ ಕುಟ್ಟಿಮತಳಮದು ತಳತಳಿಸಿ ತೊಳಗುವುದು ತನಿವೆಳಗಿಂ (ಕುಸುಮಾ. ೦-೧೧೫). [ ? ]

**ತಳಚಪ್ಪಟೆ** (ನಾ). ನೆಲೆಗಟ್ಟು ; ಕುಟ್ಟಿಮ : ಆ ಬಾಗಿಲವಾಡಗಳು ಅಡಿಗೆ ಮನೆ ಆ ಮುಂದಣ ಚಪ್ಪರವೋಲಗದ ಫಾಳಿಮಂಟಪ ಸುತ್ತಣ ತಳಚಪ್ಪಟೆ (ಸೌಇಇ. IX-ii, ೫೮೫-೧೪ ; 1538). [ ತಳ (= ತಲ) + ಚಪ್ಪಟೆ ]

**ತಳಚಿಪ್ಪೆ** (ನಾ). = ತಳಚಪ್ಪಟೆ: ರಘುಪತಿರಾಜವೊಡೆಯರು ಮಾಡಿಸಿದ ತಳಚಿಪ್ಪೆಯ ಸೇವೆ (ಮೈಆರಿ. ೧೯೩೮, ೧೨-೪ ; ಸು. 1538). [ ತಳ (= ತಲ) + ಚಿಪ್ಪೆ (<ಚಪ್ಪೆ$_1$) ]

**ತಳಚ್ಛಂದ** (ನಾ). ತಳದ ವಿನ್ಯಾಸ : ಆ ನಾಲ್ದೆಸೆಯ ಮಾನಸ್ತಂಭಂಗಳೆಡೆಯೆಡೆಯೊಳರ್ಧಯೋಜನವ್ಯಾಸಮನಪ್ಪುಕೆಯ್ದು ಸ ಮ ಚ ತು ರ ಶ್ರ ಂ ಪಾದಾಧಿಕ ಚ ತು ರ ಶ್ರ ಂ ವೃತ್ತಮಾಯತವೃತ್ತಮಷ್ಟಾಶ್ರಂಗಳೆಂಬ ತಳಚ್ಛಂದಂಗಳಿಂ (ಚಂದ್ರಪು. ೧೫-೨೨ ವ). [ ಸಂ. ತಲಚ್ಛಂದ ]

**ತಳಚ್ಛವಿ** (ನಾ). ಒಂದು ಬಗೆಯ ಬಣ್ಣ ; ಬಿಳುಪು ಮತ್ತು ಕಪ್ಪು ಬಣ್ಣದ ಮಿಶ್ರಣ : ರೋಮುವೊಡೆಗು ಕರಂ ಕಡುರೋಮಂಗಳ್ಕಂ ತಳಚ್ಛವಿ ಪ್ರಕಟನದಿಂ ತಾಮಸ ಹರಿಸಮನೋಡುಗುವಮಾ ಮಾರುತರುಚಿ ಹಯಂಗಳೊಳ್ ಕರಮಶುಭಂ (ಅಶ್ವಶಾ. ೩-೫೦). [ ಸಂ. ತಲಚ್ಛವಿ ]

**ತಳಝಾಡಿಸು** (ಕ್ರಿ). (ಚೀಲ ಮೊದಲಾದುವುಗಳನ್ನು) ತಳ ಬರಿದಾಗುವಂತೆ ಕೊಡಹು ; ಒದರು ; ಖಾಲಿಮಾಡು : ಮನೆಯಲ್ಲಿಯ ಕಾಳು ಕಡಿಗಳೆಲ್ಲ 'ತ ಳ ಝಾ ಡಿ ಸಿ' ಪ್ರತಿಯೊಂದು ಒಕ್ಕಲುಕುಟುಂಬವೂ ಹಪಹಪಿಸಿತು (ಬರಹಾ. ೫೮). [ ತಳ (= ತಲ) + ಝಾಡಿಸು (<ಜಾಡಿಸು) ]

**ತಳತಂತ್ರ** (ನಾ). ೧. ಕಾ ಲಾ ಳು ಗ ಳ ಪಡೆ; ಪದಾತಿಸೈನ್ಯ : ಜಾಳಾಂಧ್ರದೇಶದ ಅರಸು . . . ತಳತಂತ್ರ ಮಾರ್ಬಲ ಸಹಿತ ರಾಜಬೀದಿಯೊಳು ಬರುತ್ತಿರಲು ಹಜ್ಜೆಗಾಣದೆ ತಳಿತ ಕಾರೆಯ ಮೆಳೆಯೊಳಗಿಪ್ಪ ಬಿಜ್ಜು ಅರಸು ಆನೆ ಮೊದಲಾದ ತಳತಂತ್ರ ಮಾರ್ಬಲವ ನುಂಗಿತ್ತ ಕಂಡೆ (ಸರ್ವವ. ೨೦೫-೯೩೦) ; ಮುಂದಣ ತನ್ನ ತಳತಂತ್ರಮಂ ಕಿಲಕ್ಕೆ ತೊಲಗವೇಟ್ಟು . . . ವನಕೇಳೀವಾರಣಮನಣೆದು ನೂಂಕಿ (ಚಂದ್ರಪು. ೧೦-೯೪ ವ) ; ಲಲಿತಾಂತಃಪುರಕೋಟಿ ಪಿಂದೆ ತ ಳ ತ ಂ ತ್ರ ಂ ಮುಂದೆ (ಪುಷ್ಪಪು. ೮-೨೭) ; ವ್ಯೂಹವನು ರಚಿಸುವೆನು ನಾಳಿನೊಳಾಹವಕೆ ತಳತಂತ್ರವೊಂದೇ ಮೋಹರಕೆ ನಡೆತರಲಿ ಷಡುರಥರಾದಿಯಾದವರು (ಕುವ್ಯಾದ್ರೋ. ೮-೬೭) ; ತಳತಂತ್ರದಗಲವ ದಾಟಲಾಜಿದೆ ಮೇಲೆ ಚಲಪಕ್ಷಿಗಳಾಗ ಬಳಲಿ ಇಳೆಯೊಳುದಿರಿದುವು (ಕಂನವಿ. ೧೦-೨೭); ತಳತಂತ್ರವೀರರ ಜೀವಿತವ ಹಿಡಿಯದಿರು (ಶಂಕದಾ. ೧೩-೭). ೨. ಸೈನ್ಯ : (೬). ೩. (ಅಲಂ) ಕೈಚಳಕ ; ಮೋಸಗಾರಿಕೆ ; ಏನೋ ತಳತಂತ್ರಮಾಡಿ ಕೆಲಸ ಸಾಧಿಸಿಬಿಟ್ಟ (ರೂಢಿ). [ ತಳ (= ತಲ) + ತಂತ್ರ ]

**ತಳತಂತ್ರಗೂಡು** (ಕ್ರಿ). ಕಾಲಾಳಿನ ಪಡೆಯನ್ನು ಜೊತೆಗೂಡು ; ಪದಾತಿಸೈನ್ಯವನ್ನು ಒಡಗೊಂಡಿರು : ನರಸಿಂಹಪುರ ಬೇಲೂರ ದೊರೆಗಳಾಗ ಹರುಷದೆ ತಳತಂತ್ರಗೂಡಿ . . . ಭರದಲಿ ಬಂದರೇನೆಂಬೆ (ಕಂನವಿ. ೩-೨೪) ; ತಳುವದೆ ತಳತಂತ್ರಗೂಡಿ ಸನ್ನಾಹದೊಳಳವಟ್ಟು ನಡೆದ ನುಬ್ಬಿನಲಿ (ಕಂನವಿ. ೧೦-೧೦). [ ತಳತಂತ್ರ + ಕೂಡು$_1$ ]

**ತಳತಳ** 'ತಟಿತಟಿ' ನೋ.

**ತಳತಳಗುಟ್ಟು** (ಕ್ರಿ). ತಳತಳಿಸು ; ಹೊಳೆ ; ಮಿಂಚು : (೬). [ ತಳತಳ (<ತಟಿತಟಿ) + ಕುಟ್ಟು$_1$ ]

**ತಳತಳನೆ** 'ತಟಿತಟನೆ' ನೋ.

**ತಳತಳಿಕೆ** (ನಾ). ತಳತಳಿಸುವುದು ; ಹೊಳಪು ; ಪ್ರಕಾಶ : "ಜ್ವಲ– ದೀಪ್ತೌ, ತಳತಳಿಕೆಯೊಳ್" (ಕಾಶಕ. ೧೯೫). [ ತಳತಳ (<ತಟಿತಟಿ) + – ಇಕೆ ]

**ತಳತಳಿಸು** 'ತಟಿತಟಿಸು' ನೋ.

**ತಳತಾಳ** (ನಾ). ಕೈಯಿಂದ ಹಾಕುವ ತಾಳ : ತಾಳತರುವಿತತಿಯೊಳ್ ಬೇತಾಳಂಗಳ್ ಮೊಱೆದು ತೆಱೆದು ಬಾಯ್ಗಳನಾ ಪಾತಾಳಬಿಲಂಗಳ ವೋಲ್ ತಳತಾಳಲಯಕ್ರಮದೆ ಕುಣಿಯೆ ಭಯಮನನಾದೆಂ (ಕವಿರಾ. ೩-೧೯೩). [ ತಳ (= ತಲ) + ತಾಳ$_2$ (= ತಾಲ) ]

**ತಳತ್ತಳಿಸು** 'ತಟಿತಟಿಸು' ನೋ.

**ತಳಥಳ** 'ತಟಿತಟಿ' ನೋ.

**ತಳಥಳಿಸು** 'ತಟಿತಟಿಸು' ನೋ.

**ತಳದಳಿಸು** 'ತಟಿತಟಿಸು' ನೋ.

**ತಳಧಾರಣೆ** (ನಾ). ಸ್ಥಳದ ಧಾರಣೆ ; ಸ್ಥಳೀಯ ಬೆಲೆ ; "ಮೂಲ ಬೆಲೆ" (ಜಾನಕೋ. ೬೫). [ ತಳ (= ತಲ) + ಧಾರಣೆ ]

**ತಳಪ$_1$** (ನಾ). ೧. ಹೊಳಪು ; ಕಾಂತಿ ; ಪ್ರಕಾಶ : "ತೊಳಗು, ಬೆಳಗು, ಮಿನುಗು . . . ಮಿಂಚು, ಡಾಳಂ, ಪೊಗರ್, ತ[ಪಾಠಾಂ. ತೊ]ಳಪಂ, ಮಸೆ–ಈ ೧೪ ಕಾಂತಿ" (ಕಶಸಾ. ೧೧-೨೦೩) ; "ಮಸೆಯೆಂದು ತಳಪ [ಪಾಠಾಂ. ತೊಳಪ]" (ಕಬ್ಬಿಕೈ. ೫೩) ; "ತೊಳಗೆನೆ ಮಿನುಗೆನೆ . . . ಕಳೆ ಪೊಳಪು ಪೊಣಱು ಮಸೆಯೆನೆ ತ ಳ ಪ ಮೆ ನ ಲ್ ಕವಿಗಳಿಂದೆ ಕಾಂತಿಯೆನಿಕ್ಕುಂ" (ಕವಿಕಂ. ೧೦೦) ; ರಥಾಳಪದಲಿ ಬೊಬ್ಬಿಡುವಡಾಯುಧ ಹೊಳವುಗಳ ಡೊಂಕಣಿಯ ತಳಪದ ಬೆಳಗುಗಳ (ಕುವ್ಯಾಭೀ. ೨-೬) ; ತಳಿತ ಹೊಗರಿನ ಬಾಯಿಧಾರೆಯ ಹೊಳಹುಗಳ ಹೊಸಮಸೆಯ ತಳ[ಪಾಠಾಂ. ಳಿ]ಪದ ಬೆಳಗುಗಳ (ಕುವ್ಯಾದ್ರೋ. ೫-೧೩) ; ಹೊಂಬರಹದ ಸುರೇಖೆಯ ತಳಪದಸ್ತ್ರದಲವಳ ಹಸ್ತವ ಕಳಚಲೆಚ್ಚನು (ತೊರರಾ. ೧-೧೦-೧೩) ; ತೆರೆಯ ಹರಿಗೆ ತಳಪದ ಕತ್ತಿ ಮೆಯ್ಗೋಡು . . . ಬಿಗಿದುಟ್ಟ ದಟ್ಟಿಯ ಹರಿಗೆಯವರು ತಱುಬಿದರು (ಕುರಾಸಾಂ. ೧೧-೩೦) ; ಚುಚ್ಚಿದಳು ಶೂಲದಲಿ ಕವಚವ ಬಿಚ್ಚಿದಳು ಖಡ್ಗದಲಿ ದೈತ್ಯನ ಮುಚ್ಚಿದಳು ಹೊಂಗರಿಯ ಹೊದರಿನ ತಳಪದಸ್ತ್ರದಲಿ (ಅಂಬಿಕಾ. ೧೮-೭೪). ೨. ತಲೆಗೂದಲು ಹೊ ಳೆ ಯು ವ ಂ ತೆ ಹಚ್ಚುವ ಕಪ್ಪು ; ತಲೆಗೂದಲನು ಸಿಂಗರಿಸುವುದಕ್ಕಾಗಿ ಹಚ್ಚುವ ಲೇಪನ ; "ನರೆಗೆ

ಇಡುವ ಕಪ್ಪು" (ಜತುನಿ. ಕಿ I, ೬೮). 'ಪಟಿಪು' ಪರಾ. ೩. (ಸುಗಂಧ ದ್ರವ್ಯಗಳ) ಲೇಪನ: ಹೊನ್ನಬಟ್ಟಲಲಿ ಕುಂಕುಮ ಗಂಧ ಸಲಿಲ ಬಾವನ್ನ ಕಸ್ತೂರಿ ಕಪ್ಪುರವ ಚೆನ್ನಾಗಿ ಹದಮಾಡಿ ಲೇಪಿಸಿ ಪೆಣ್ಣಲಿರನ್ನೆಗೆ ತಳಪನಿಕ್ಕಿದರು (ಮೋಹತ. ೩೦-೫). [ <ತಳಪು₁ ]

**ತಳಪ್ಪ₂** (ನಾ). ಹಾಸುಗೆ ; ತಲ್ಪ. 'ಅಹಿಪತಿತಳಪ' ಪರಾ. [ <ಸಂ. ತಲ್ಪ ]

**ತಳಪಗಣ್ಣು** (ನಾ). ಹೊಳಪುಗಣ್ಣು ; ಥಳಥಳಿಸುವ ಕಣ್ಣು : ಎಳಿನಗೆ ಗಣ್ಣೆಸಳ್ಗಣ್ಣು ತಾವರೆಗಣ್ಣು ತಳಪಗಣ್ಣು [ಪಾಠಾಂ. ಪೊಳಪೆಳಿವಾಳಿಗಣ್ಣು] . . . ಬಾಲೆಯರು (ಕುರಾಸಾಂ. ೨೦-೪೪). [ ತಳಪು₁ + ಕಣ್ಣು (<ಕಣ್) ]

**ತಳಪಟ** (ನಾ). ೧. ಸಮತಲವಾದ ಪ್ರದೇಶ ; ಬಯಲು ; ಮೈದಾನ: "ತಳಪಟವೆಂದೊಡೆ ಬಯಲು" (ಛಾರನಿ. ೩೪) ; ಇಱುಬಿನಲಿ ಸಿಕ್ಕಿರ್ದ ಹುಲಿಯನು ಮುಱಿದು ಕಳೆಯದೆ ತಳಪಟಕೆ ಬಿಟ್ಟೆಱಿಯಬಹುದೇ ಕೊಂದು ಕೂಗದೆ ಬಿಡುವುದೇ ಬಳಿಕ (ಕುವ್ಯಾ.ಅ. ೮-೨೦); ಹೊಲಬುದಪ್ಪಿದ ತಳಪಟದ ಹೆಬ್ಬುಲಿಯವೊಲು ನಿನ್ನಾತ ಸಿಲುಕಿದ ನಿಲುಕಿ ನೋಡಿದನೆಲ್ಲಿ ತೋಱಿರ್ಜುನನನೆನಗೆನುತ (ಕುವ್ಯಾದ್ರೋ. ೧೪-೩೭) ; ತೋಱಿದನು ತಾ ಬಳಿಕವಗೆ . . . ತಳಪಟದೊಳಗೆ ಹಾರಕ ಹಾಱುವಭಿನವ ಭಾವ ಭಂಗಿಯು ಬಹಳ ಕೌತುಕವ (ತೊರರಾ. ೩-೮-೧೪) . ೨. ರಣರಂಗ ; ಯುದ್ಧಭೂಮಿ : ಹೊಳೆಹೊಳೆದು ಹೊಂದೇರು ಹರಿದವು ತಳಪಟಕೆ (ಕುವ್ಯಾಭೀ.೮-೨); ತಳಪಟವ ತುಂಬಿತ್ತು ಪಯದಳವು(ಕುವ್ಯಾದ್ರೋ. ೧೨-೮).

**ತಳಪಟವ ಮಾಡು**= ೧. ನೆಲವನ್ನು ಸಮತಲವಾಗಿ ಮಾಡು; ಮಟ್ಟ ಮಾಡು : ಕುಳಿ ತೆವರ ತಳಪಟವ ಮಾಡುವ ಪದಾಗ್ರದ ಸಲಿಕೆ ಗುದ್ದಲಿ ಹಾರೆಗಳ ಬಲುಗೆಲಸದೊಡ್ಡರ ಕಳಕಳದಿ ಬರುತಿರ್ದುದಸುರ ರಥ (ತೊರರಾ. ೫-೭-೧೨). ೨. ನೆಲಸಮ ಮಾಡು; ನಾಶ ಮಾಡು: ತಳಪಟವ ಮಾಡಿದನು ಭಾಷೆಯ ಬಳಿಗೆ ಕೊಂದನು ಹತ್ತುಸಾವಿರ ನೆಲನ ವಲ್ಲಭರನು (ಕುವ್ಯಾಭೀ. ೬-೬) ; ಕೊಲುತ ಕಯ್ಯಲಿ ನೆರೆದ ಸೇನೆಯ ತಳಪಟವ ಮಾಡಿದನು (ಕಾಶಿರಾ. ೨೫-೩೭); ರಥಿಕರ ತಳಪಟವ ಮಾಡಿದನು ನಿವಿರೆಷಾರ್ಥದಲಿ ಕಲಿಹನುಮ (ತೊರರಾ. ೬-೩೦-೬) ; ಕದಳಿವೃಂದಂಗಳಂ ತಳಪಟವ ಮಾಡುವ ಮದೇಭವೋಲ್ ಕೋಪಮಂ ಧರಿಸಿದಂ ಕಲಿಭೀಮನು (ತುರಂಗ. ೫೫-೩೪). **ತಳಪಟವಾಗು** =೧. ನೆಲ ಸಮತಟ್ಟಾಗು : ಲಂಕಾ ಪೊಡವಿ ತಳಪಟವಾಯ್ತು ಕಪಿವಾಹಿನಿಯು ಕಾಲ್ದುಳಿಗೆ (ತೊರರಾ. ೬-೬-೨೨). ೨. ನೆಲಸಮವಾಗು ; ನಾಶವಾಗು : ತೇರು ತಳಪಟವಾಗಿ ಬಿದ್ದುದು (ಕಾಶಿರಾ. ೩೩-೩೦) ; ಅಟವಿ ತಳಪಟವಾ [ಪಾಠಾಂ. ಕೆಳಕಾ]ಗೆ ನಡೆದುಗ್ಗಟದ ಮಲೆಯಾದ್ರಿಯಲಿ ಬಿಟ್ಟುದು ಪಟುಪರಾಕ್ರಮಿ ನೀಲನಾಜ್ಞೆಯಲಾ ಮಹಾಸೇನೆ (ತೊರರಾ. ೬-೧-೧೫) ; ಕೂಡೆ ತಳಪಟವಾಯ್ತು ಗದೆಯ ಬಿರುಹೊಯ್ಲಿನೊಳ್ ಗಜವೃಂದವು (ತುರಂಗ. ೬೦-೩೩).

[ ←ಮರಾ. ತಳವಟ್, ತಳಪಟ್ = ಕುಲಕ್ಷಯ, ಸರ್ವನಾಶ; ಹಿಂ. ತಲಪಟ್ = ನಾಶ ]

**ತಳಪಟಂಮಾಡು,** ತಳಪಟವಮಾಡು(ಕ್ರಿ). ನೆಲಸಮಮಾಡು;ಧೂಳೀಪಟ ಮಾಡು ; ಪೂರ್ತಿ ಹಾಳುಮಾಡು ; ನಿರ್ನಾಮಗೊಳಿಸು : ಮೊಳೆವ ಬೀಜವನು ಕ್ರಿಮಿಕೀಟಕಂಗಳು . . . ಉಳಿದ ಬೆಳೆಯಂ ನಕುಲ ಹೆಗ್ಗಣಂಗಳು ಕಾವ ಬಳವಂತರೆಲ್ಲರಂ ಸರ್ಪಸಂತತಿ ತಿಂದು ತಳಪಟಂಮಾಡಿ ನಾಡೆಲ್ಲಮಂ ಗೋಳಿಡಿಸುತಿರ್ದುವು (ಹಡಕಾ. ೩-೬೩). **ತಳಪಟಮಾಡು :** ಆಳ ತತ್ತ್ವಱಿದಱಿದು ತಳಪಟಮಾಡಿದನು ದ್ರೋಣ (ಕುವ್ಯಾದ್ರೋ.೧೮-೪೭); ಸಾಲಸಂದಣಿ ಮರನನಗಲಕೆ ತೂಳಿ ತಳಪಟಮಾಡಿದನು ಬನದಗಲದಲಿ ಹನುಮ (ತೊರರಾ. ೫-೪-೮). [ ತಳಪಟ + ಮಾಡು₁ ]

**ತಳಪಟಗಾಱ** (ನಾ). ಸಮಂತಳ ಮಾಡುವವನು : ಅಳೆದುಕೊಂಬುದು ಧರೆಯನಾವ ಸ್ಥಳದಲಭಿಮತವೆಂದು ಬಲಿ ಕೈಗಳ ಮುಗಿಯಲಸುರಾಂತಕನು ತನ್ನೊಳಗೆ ನಸುನಗುತ ಕಳೆವರವ ನಿಗುಚಿದನು ರವಿಮಂಡಲ ವನಂಡಲೆವುತ್ತಲಂಬರತಳದ ತಳಪಟಗಾಱ ಕೈಕೊಂಡನು ತ್ರಿವಿಕ್ರಮವ (ನಿಭಾಗ. ೮-೧೭-೪). [ ತಳಪಟ + – ಕಾಱ ]

**ತಳಪಟಮಾಡು** 'ತಳಪಟಂಮಾಡು' ನೋ.

**ತಳಪಟವರಿಗೆ** (ನಾ). ಸಮಂತಲವಾದ ಒಂದು ಬಗೆಯ ಗುರಾಣಿ,–ಢಾಲು : ಇಡಿದ ತಳಪಟವರಿಗೆ ಹೊಱಸುತ್ತಡಸಿ ಕವಿವಾ ಬಿಲ್ಲು ಬಿಲ್ಲಿನ ಬಿಡೆಯೊಳೌಕಿದ ಮುಸುಂಡಿ ಸಲ್ಲಹ ಶಕುತಿ ಸಬಳದಲಿ (ಕುವ್ಯಾದ್ರೋ. ಓರಿ೩. ಪರಿ. ೨೭೫). [ ತಳಪಟ + ಪರಿಗೆ₃ ]

**ತಳಪಟ್ಟು** (ನಾ). ೧. ಕೆಳಗಿನಿಂದ ಹಿಡಿಯುವ ಪಟ್ಟು,–ಹಿಡಿತ. ೨. ಕುಸ್ತಿಯ ಒಂದು ಪಟ್ಟು. ೧, ೨ : ಜಡೆಯೆಂಬುದು ಗೊರವಂಗೆ ತಟ್ಟೆಂಬುದು ಸವಣಂಗೆ ತಳಪಟ್ಟೆಂಬುದು ಹೊಲ್ವಂಗಲ್ಲದೆ ಕೊಲ್ವ ಗೆಲ್ವ ಕಲಿಗಂ ಬಿರುದಂಗಮೇವುದು (ಅನಂಪು. ೨-೨೮ ವ). [ ತಳ (= ತಲ) + ಪಟ್ಟು₁ ]

**ತಳಪವೆಱು** (ಕ್ರಿ). ಹೊಳಪಿನಿಂದ ಕೂಡಿರು; ತಳತಳಿಸು ; ಪ್ರಕಾಶಿಸು: ಪಜ್ಜಳಿಪ ದಾಡೆಯ ಮುರಿದ ಕೆವಿಮ್ಮಾಸೆಗಳ ಕೆಂಗಣ್ಣ ತಳಪವೆತ್ತಿಹ ಖಡ್ಗಹಸ್ತದ . . . ಭೈರವಂ (ಶಂಕದಾ. ೧೫-೩೪). [ ತಳಪು₁ + ಪೆಱು₁ ]

**ತಳಪಳನೆ** (ಅ). (ಕುದಿಯುವುದನ್ನು ಹೇಳುವಾಗ) ತೀವ್ರವಾಗಿ ; ಸಳವಂಳನೆ: ಛಿಳಿಛಿಳಿಲ್ ಛಿಳಿಲೆಂದು ಚಿಮ್ಮಿತು ಜಲಜಜಾಂಡದ ಚಿಪ್ಪು ಕುದಿದುದು ತಳಪಳನೆ ತತ್ಕಮಲಜಾಂಡಾವರಣ ಜಲರಾಶಿ (ತೊರರಾ. ೫-೮-೬೦) ; ತಳಪಳನೆ ಕುದಿವೆಣ್ಣೆಗೊಪ್ಪರಿಗೆ ಕಾಯ್ವಲ್ಲಿಗೆಳತರಿಸಿ (ಜೈಮಿಭಾ. ೧೦-೩೦). [ ತಳಪಳ₀ + – ಅನೆ₁ ]

**ತಳಪಾಯ** (ನಾ). ೧. ಅಡಿಪಾಯ ; ತಳಹದಿ ; ಬುನಾದಿ : ಈಗೇನಿದೆ . . . ಮಣ್ಣಿನಲ್ಲಿ ಹುದುಗಿ ನಿದ್ರಿಸಿದ ಮನೆಮಠಗಳ ತಳಪಾಯಗಳು ಮಾತ್ರವೇ (ಆಳನಿ. ೧೪೬) ; ಬಿಡುಗಡೆಯ ತಳಪಾಯದ ಮೇಲೆ ನಾನು ನನ್ನ 'ಕನಸಿನ ಮನೆ'ಯನ್ನು ಕಟ್ಟಿದೆ (ಕಮನಿ. ೨೩೪). ೨. ಮೂಲವಾದ ಅಂಶ,– ಆಧಾರ: ಇವೆಲ್ಲವಕ್ಕೂ ಬೇಕಾಗುವ ತಳಪಾಯ ನಮ್ಮ ಯಕ್ಷಗಾನನೃತ್ಯದಲ್ಲಿದ್ದೇ ಇದೆ (ಯಕ್ಷಬ. ೧೦೬). [ ತಳ (= ತಲ) + ಪಾಯ₃ ]

**ತಳಪು₁,** ತಳ್ಪು₁, ಥಳಪು (ನಾ). ಹೊಳಪು ; ಕಾಂತಿ ; ಮಿನುಗು : "ಪೊಗರ್ತೊಳಗು ಬೆಳಗಾವಗಂ ಮಿನುಗು ತ[ ಪಾಠಾಂ. ತೊ]ಳಪುಂ ಮಿಱುಗು . . . ಮಿಂಚು ಡಾಳಂ ತಾವೆನಲ್ಕಾಂತಿಗೆ ಪೆಸರ್" (ಕಬ್ಬಿಕೈ. ೨೪) : "ತಳಪು ಕಾಂತಿ" (ಕಶರ. ೪೩); ನೀರಧರನಿಚಯ ಚತುರಂಗ ಬಲದಂಗ ತರವಾರಿಗಳ ತಳಪ ತಳಪಿಂದ್ರಧನುರುಚಿಕ ರುಚಿರಭೂರಿ ಭೇರಿ ಪ್ರಣಾದಂ ಮೊಳಗು (ಮದೇಪು. ೧೩-೨೦) ; ಜಾತಿಮುತ್ತಿನಯಳಿಯು ಜಾಣೆ ಬೈತಲೆ ತಳಪಿಗಾತುಹಾಕಿದಳು ಇಮ್ಮಡಿಕೆಯಲಿ ಸಂಪಿನಲಿ ದೂತಿಯರು ಚಂದ್ರ ಸೂರ್ಯರ ಮುಂದಲೆಗೆ ಸಾರ್ಚಿ ನೂತನೊಪ್ಪದ ಬಟ್ಟು ನೊಸಲಿಲೊಲುವಂತೆ (ಶ್ರೀಕೃಪಾ. ೧೧). 'ತಳಪೆತ್ತು' ಪರಾ. **ತಳ್ಪು₁ :** ಪೊಳೆವುತ್ತಾತಾಸಿಜಾಳಂಗಳ ಸಕಲುಷಸಾದೀಕ್ಷಣೋದಂಶುಜಾಳಂಗಳ ತಳ್ಪಂ ತಾಳ್ದಿ ಚಂಚಚ್ಚಪಲಶಫರಸಂದೋಹದಿಂದಂ ಪುವಾಳಾವಳಿಯಿಂದಂ ತಳ್ತ ವೀಚೀಚಯಮಿದೆನಿಸಿ ಸೈನ್ಯಾಬ್ಧಿಯಿಂ ಬರ್ಪ ವಾಹಂಗಳನೌರ್ವಜ್ವಾಲೆಯಂತಚ್ಚುತನ ಕಣೆಗಳಟ್ಟಾಡಿಸುತ್ತಿರ್ದುವೆತ್ತಂ (ಜಗವಿ. ೧೨-೧೮). **ಥಳಪು :** ಸಕ್ಕರೆ ತುಟಿ ಕೂರ್ಮಿ ಕದಪು–ಕಣ್ಣೆ ಗಿಕ್ಕಿದ ಸೊಬಗಿನ ಕಪ್ಪು–ತಲೆ ಹಿಕ್ಕಿ ಬಾಚಿದ ಕೇಶ ಥಳಪು-ಸರ್ವ ದಿಕ್ಕು ಮೋಹಿಸುವಂಥ ವಲಪು (ವಿದಾಕೃ. ೧೦೩-೧೧). [ ದೇ.॥ ತಮಿ. ತಳತಳಪ್ಪು ]

**ತಳಪು₂** 'ತಟ್ಪು₂' ನೋ.

**ತಳಪುಗಣ್** (ನಾ). ಹೊಳಪುಗಣ್ಣು: ತಳಪುಗಂಗಳ ಮುಚ್ಚಿ ತೆಱೆವಳನುಳಿವುದದು ಶಿವನಂಶಕಲ್ಲದೆ ನರರಿಗೆಂತಹುದು (ಸುಸಾರ. ೯೯-೨).

[ ತಳಪು₁ + ಕಣ್ ]

**ತಳಪೆತ್ತಿಸು** (ಕ್ರಿ). ಹೊಳಪನ್ನುಂಟುಮಾಡು: ವಸಂತನೆಂಬೆಸೆದ ಕಮ್ಮಱಂ ಶಶಿಬಿಂಬಶಾಣದೊಳ್ ಮಸೆದು ತಳಪೆತ್ತಿಸಿದ ಕುಸುಮಶರನ ಕೂರಸಿಯಂ ತೇರ್ರೈಸಿದ ಮುತ್ತಿನ ಮುಗ್ಧೆಯರುಂ (ಶಾಂತೀಶ್ವ. ೭-೯೩ ವ).

[ ತಳಪೆತ್ತು + – ಇಸು₃ ]

**ತಳಪೆತ್ತು** (ಕ್ರಿ). ಹೊಳಪು ಕೊಡು ; ಕಾಂತಿಗೊಳಿಸು : ಎಸೆವಮೃತಾಂಶುಬಿಂಬ ಮಣಿಶಾಣದೊಳಿಂತು ಬಸಂತಗಮ್ಮಱಂ ಮಸೆದು ಪಳಚ್ಚನಾಗಿ ತಳಪೆತ್ತಿದ ಕಾಮನ ಖಡ್ಗದಂತೆ ಮೋಹಿಸಿತೆನಸುಂ ಸ್ವಯಂಪ್ರಭೆಯ ರೂಪವಿಲಾಸದ ಪಾಟಿ (ಶಾಂತೀಶ್ವ. ೨-೨೧). [ ತಳಪು₁ + ಎತ್ತು₁ ]

**ತಳಪ್ರಹಾರಿ** (ಗು). ೧. (ವೈರಿಗಳನ್ನು) ಕೆಳಕ್ಕುರುಳುವಂತೆ ಹೊಡೆಯುವ,- ಇಕ್ಕಿ ಮೆಟ್ಟುವ. (ನಾ). ೨. ಅಂಗೈಯಿಂದ ಹೊಡೆಯುವವನು. ೩. ಇಕ್ಕಿ ಮೆಟ್ಟುವ ವ್ಯಕ್ತಿ : ಸುಲಿಪಲ್ ತಟ್ಬುಲ ತಾರಕಾವಯವಮಂ ಪೀನಂ ಲಲಾಟಾಗ್ರದೊಳ್ ನೆಲೆಗೊಂಡೊಪ್ಪುವ ವೀರಪಟ್ಟಮುದಯಂಗೆಯ್ವಂದುವಂ ತೋರ್ಪ ತೊಂಗಲೆ ಜಂಬೂವಿಟಪ ಪ್ರಹಾರ[ವಾಲ]ರುಚಿಯಂ ವಕ್ತ್ರಾರುಣಂ ಸಂಜೆಯುಂ ಗೆಲೆ ಪೋಲ್ತತ್ತು ತಳಪ್ರಹಾರಿಯ ಶಿರಂ ಹೇಮಾದ್ರಿಯಾಕಾರಮಂ (ಕಾವ್ಯಸಾ. ೫೨೫ ಕೊದ್ರಕ); ಸರಸಿರುಹದಲರ ನಡುವಣ ಸಿರಿಯವೊಲತ್ಯಂತಮಪ್ಪ ತೇಜದಿನಂತಃಪುರಮನಲಂಕರಿಪುದಱಿಂ ಧರೆಸವತಿತಳಪ್ರಹಾರಿಯೆನೆ ಸಲೆ ನೆಗಟ್ದಳ್ (ಎಇ. XV, ೩೩೧-೧೩ : 1028) ; ಮಣಲರಭೀಮಂ ಅರಿಮನ್ನೆಯ ತಳಪ್ರಹಾರಿ (ಎಇ. XVI, ೩೩೫-೨೨; 1038) ; ರಿಪುಮಂಡಳಿಕ ತಳಪ್ರಹಾರಿ (ಮುಂಬರಾ. XI, ೨೪೭-೧೧ ; 1121). [ ಸಂ. ತಲಪ್ರಹಾರಿನ್ ]

**ತಳಬೋಗಿ** (ನಾ). ತಳಭೋಗದ ಸುಂಕವನ್ನು ತೆಗೆದುಕೊಳ್ಳುವವನು : ಸಮಸ್ತಗುಣಸಂಪನ್ನರಪ್ಪ ಸುಂಕವೆರ್ಗ್ಗಡೆ ಬಮ್ಮಣ್ಣ ಅಯ್ಯಮಯ್ಯ ತಳಬೋಗಿ ದಾಸಿಯಣ್ಣಂ ಸಮಸ್ತ ಸುಂಕಿಗ (ಎಇ. XVI, ೩೩೧-೧೭ : 1077). [ <ಸಂ. ತಲಭೋಗಿನ್ ]

**ತಳಭಂಡ** (ನಾ). ವ್ಯಾಪಾರದ ಸರಕು ಮತ್ತು ಆ ಸರಕಿನ ಮೇಲೆ ಕೊಡಬೇಕಾದ ಸುಂಕ (?) :

**ತಳಭಂಡದ ಸುಂಕ** = ಸ್ಥಳದ ಸರಕಿನ ಮೇಲಣ ಸುಂಕ (?) ; "ವ್ಯಾಪಾರಸಾಮಗ್ರಿಗಳ ಮೇಲಿನ ಸುಂಕ" (ಕಶಾಅ. ೩೯೯) : ಆ ಯೆರಡೂರ ತಳಭಣ್ಡದ ಸುಂಕವೊಳಗಾಗಿ ಯಿನ್ತಿನಿತುಮಂ ಭುಜಬಳ ಗಂಗಪೆರ್ಮ್ಮಾಡಿದೇವರುಂ ಗಂಗಮಹಾದೇವಿಯರುಂ . . . ದೇವರ ಶ್ರೀಪಾದಪದ್ಮಮೂಳದೊಳ್ ಧಾರಾಪೂರ್ವ್ವಕಂಮಾಡಿ ಬಿಟ್ಟರು (ಎಕ. VII, ಶಿವಮೊ. ೯೭-೪೭ ; 1113). [ತಳ (=ತಲ) + ಭಂಡ₁ (<ಬಂಡ₁)]

**ತಳಭಿತ್ತರಿ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ: ಕೆಳಗಡೆಯಲ್ಲಿ ಇದಿರಾದವನ ಬಂಡಿಕೋಲನ್ನು ಮುಟ್ಟಿಸಿ ಆಮೇಲೆ ಒಳಗೆ ತಿರುಹುವುದು ಮುಂತಾಗಿ ಪಾದಗಳಲ್ಲಿ ಏಟು ಆವದು ಅದು ತಳಭೇದನವೂ ತಳಭಿತ್ತರಿಯೆಂದು ತಿಳಿಯಲ್ಪಟ್ಟಿತು (ಖಡ್ಗಟೀ. ೫-೭೮).

[ ತಳ (=ತಲ) + ಭಿತ್ತರಿ ]

**ತಳಭೇದನ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ ; ಕಾಲುಗಳಿಗೆ ಹೊಡೆಯುವ ಹೊಡೆತ: ಕೆಳಗಡೆಯಲ್ಲಿ ಇದಿರಾದವನ ಬಂಡಿಕೋಲನ್ನು ಮುಟ್ಟಿಸಿ ಆಮೇಲೆ ಒಳಗೆ ತಿರುಹುವುದು ಮುಂತಾಗಿ ಪಾದಗಳಲ್ಲಿ ಏಟು ಆವದು ಅದು ತಳಭೇದನವೂ ತಳಭಿತ್ತರಿಯೆಂದು ತಿಳಿಯಲ್ಪಟ್ಟಿತು (ಖಡ್ಗಟೀ. ೫-೭೮). [ ತಳ (=ತಲ) + ಭೇದನ ]

**ತಳಭೋಗ** (ನಾ). ಒಂದು ಬಗೆಯ ತೆರಿಗೆ: ತೋಂಟಕ್ಕೆ ಕರವಂದ ತಳಭೋಗಮುಸತು ಮೊದಲಾಗೆ ಸರ್ವ್ವಬಾಧಾಪರಿಹಾರಂ (ಸೌಇಇ. XI-1, ೫೨-೭೪ ; 1007) ; ಸೂರ್ಯ್ಯಗ್ರಹಣ ನಿಮಿತ್ತಂ ತಳಭೋಗದುಣ್ಬಳಿಯ ಪೊಂಗೆರೆಡುವರೆ ವೀಸಮಮಂ ಪರಮೇಶ್ವರ ದತ್ತಿಯಾಗೆ ಪಡೆದು (ಸೌಇಇ. XI-1, ೧೧೭-೧೫ ; 1076) ; ತಕ್ಕಿಲ ೩ ಮತ್ತರ್ಕ್ಕೆಯುಮಂ ಕರವಡ ತಳಭೋಗ ತಳಾಱರಾಯುವೊಳಗಾಗಿ ಸರ್ವ್ವಬಾಧಾಪರಿಹಾರವಾಗಿ ಬಿಟ್ಟರು (ಕಇ. II, ೧೦-೩೧ ; 1080). [ ತಳ (=ತಲ) + ಭೋಗ ]

**ತಳಮುಗುಚು** (ಕ್ರಿ). ೧. ಬುಡಮೇಲು ಮಾಡು ; ತಲೆಕೆಳಗುಮಾಡು ; ಕಿತ್ತುಹಾಕು ; ನಾಶಮಾಡು : ಬಿಗಿದ ಬಾಣದ ದಡ್ಡಿಯನು ತಳಮುಗುಚಿದನು ನೂಱಂಬಿನಲಿ (ಕುವ್ಯಾಕ. ೪-೧೩) ; ಬಳಿಕವ ಗೋರಿದನು ಗುಡಿಯುಱಿದು ಬಾಲದ ಗೋರೆಯಲಿ ತಳಮುಗುಚಿದನು ತೋರಣದ ಸಾಲುಗಳ (ತೊರರಾ. ೫-೭-೧೭). ೨. ತಳವನ್ನು ಕಲಕು,-ಕದಡು; ಕ್ಷೋಭೆಗೊಳಿಸು (?) : ಸೊಗಸು ತಳಿತುದು ತರಳಮನ ತಳಮುಗುಚಿದಂತಾಯ್ತು ವರೊಲವು ಕಾಡಿಗೆಯ ಕೆಸಱೊಳಗೆದ್ದ ನೀಲದ ಸರಿಗೆ ಸರಿಯಾಯ್ತು (ಕುವ್ಯಾಅ. ೧೭-೧೮) ; ಸಿಡಿಲ ಪಳಗಿಸುವರಿವು, ರವಿಯ ಸೆರೆಹಿಡಿವರಿವು, ಸಾಗರದ ತಳಮುಗುಚಿ ಸೂರೆಗೈವರಿವು (ಮಲೆದೇ. ೪೮-೨).

[ ತಳ (= ತಲ) + ಮುಗುಚು (<ಮುಗುಚ್ಚು) ]

**ತಳಮಳ**, ತಳವಳ, ತಳ್ಳಮಳ (ನಾ). ೧. ದಿಗಿಲು ; ಕಕ್ಕಾಬಿಕ್ಕಿ ; ಬೆರಗು: "ತಳಮಳಂ ಬೆಳ[ಱ]ಗಾಗಿಪ ವೇಳೆಯೊಳ್ ಕರಂ"(ಕರ್ಣಾನಿ.೩೫); "ತಲ್ಲಣಂ ತಳವೆಳಗು ಬಕ್ಕುಡಿ ಬೆಗಡಳುರ್ಪು ಮಲ್ಲಳಿ ಬಿಗುರ್ಬಬ್ಬಳಂ ತಳಮಳವೆನಲ್ಕೆ ಸೊಲ್ಲಿಪುದು ಬೆಱಗಪ್ಪ ಭಾವದೊಳು" (ಶಬ್ದಮಂ. ೫೦). 'ತಳಮಳಂಗೊಳ್', 'ತಳಮಳಗು₂' ಪರಾ. ೨. ಕಳವಳ ; ಸಂಕಟ : ಚಿತ್ತಕ್ಷೋಭೆ : ತಮಾಷೆಯ ಮಾತು ತಳಮಳಕ್ಕೆ ಹೇಗೆ ದಾರಿಮಾಡುತ್ತದೆ (ಮಹಾಗ. IV, ಮುನ್ನುಡಿ) : ನಲ್ಲೆಯ ಬಗೆಯಾಳದಾ ತಳಮಳವಿಂದು ಮತ್ತೊಮ್ಮೆಯುಕ್ಕಿತು ಕುದಿದು (ಇಂಚಾಪ. ೫೧-೪೪) ; ರೈತರ ತಳಮಳದ ಬೆಂಕಿ ಜಮಿನಾನುದಾರರನ್ನು ಒಂದಿಲ್ಲ ಒಂದು ದಿನ ಸುಡದೇ ಬಿಡುವುದಿಲ್ಲ (ಮಣ್ಣಮ. ೧೦೧). **ತಳವಳ** : ೧. "ತಳವಳವೆ [ಪಾಠಾಂ. ಮಳಗೆ]ನಲ್ಕೆ ತಾಂ ಬೆಱಗಾಗುಹಂ" (ಕಬ್ಬಿಕ್ಕ. ೮೦). ೨. 'ತಳವಳಿಸು' ಪರಾ. **ತಳ್ಳಮಳ** : ೩. ತೀವ್ರವಾಗಿ ಕುದಿಯುವುದು: 'ತಳ್ಳಮಳಗೊಳಿಸು' ಪರಾ.

**ತಳಮಳಮಾಗು** = ಕಲಕಂ ; ಕದಡಂ; ಅಲ್ಲೋಲಕಲ್ಲೋಲವಾಗು: ಸೀರ್ಪನಿ ಸಿಡಿಯೆ ತೆರೆಮಸಗೆ ಕೊಳಂ ತಳಮಳಮಾಗೆ ಮೀಂಗಳ್ ಮೆಯ್ಗರೆಯೆ ದಟಂಬಟನೆ ಕೈಕಾಲ್ಗಳೊಳೀಸುವ ಕಾವನ ಪಟ್ಟದಾನೆಗಳೆಂ ಬೋಲಾಡಿದರ್ ಬಾಲೆಯರ್ (ರಾಮಾಶ್ವ. ೧೨೩-೨೪).

[ ದೇ.॥ ತುಳು. ತಳಮಳ, ತಳಬಳ ]

**ತಳಮಳಂಗೆಯ್** (ಕ್ರಿ). ಕ್ಷೋಭೆಗೊಳಿಸು ; ಅಲ್ಲೋಲಕಲ್ಲೋಲಗೊಳಿಸು : ದಿವಿಜ ದನುಜ ಮನುಜರೊಳಂ ಮೊನೆಯೊಳಳ್ಕದ ಬಳ್ಕದತಿಕಾಯನಂ ಹತಕಾಯನಂಗೆಯ್ದಂಗೆ ತನ್ನೊಂದಟ್ಕಿಯಿಂ ಬರ್ದಿಲಮಂ ತಳಮಳಂಗೆಯ್ದಂ (ರಾಮಾಶ್ವ. ೧೭೦-೨೫). [ ತಳಮಳ + ಕೆಯ್₁ ]

**ತಳಮಳಂಗೊಳ್**, ತಳಮಳಗೊಳ್, ತಳಮಳಗೊಳು, ತಳಮಳಗೊಳ್ಳು (ಕ್ರಿ). ೧. ದಿಗಿಲುಗೊಳ್ಳು; ಕಕ್ಕಾವಿಕ್ಕಿಯಾಗು: ಮೊಳಗಿದುವು ಬಹುವಾದ್ಯತತಿ ಹೆಕ್ಕಳಿಸಿ ರಿಪುಬಲ ತಳಮಳಂಗೊಳಲ್(ಕೋಗಯು. ೧೮-೭೮). **ತಳಮಳಗೊಳ್** : ೧. ಬಲಮೆಲ್ಲಂ ಬೆನ್ನೀರ್ವೊನಲೆಯ್ದಿದ ಬಿಲದೊಳಗಣ ಬೆಳ್ಳಿಲಿವಿಂಡಿನವೋಲ್ ತಳಮಳ[ಪಾಠಾಂ. ತೆಡಹೊಳ]ಗೊಂಡತ್ತು (ಜಯುಕಾ. ೬-೫೫). **ತಳಮಳಗೊಳು** : ೨. ಕಳವಳಗೊಳ್ಳು ; ಸಂಕಟಪಡು; ಚಿಂತೆಗೊಳಗಾಗು; ಕ್ಷೋಭೆಗೊಳ್ಳು: ತನೂಭವನುಳ್ಳೊಡಾಗಲಿ

ನಿಲಿಸಿದಡೆ ನಿಂದವೆವೆನುತ ಮಲಧಾರಿ ಮುನಿಹಂಸ ಸಲೆ ಪರಸಿ ಬಿಜಯಂಗೆಯಲು ತಳಮಳಗೊಳುತೆ ದಾನಾಂತರಾಯವು ಪಳಿಯಿಸಿತ್ತೈನೆ ಪುತ್ರಲಾಭವು ನಿನಗೆ ಸಮನಿಪುದೇ (ಸಾಳ್ವಭಾ. ೩-೭) ; ವ್ಯಸನಾಭಿಭೂತರು ಉತ್ಸಾಹಹೀನರು ದೀನರು ನಷ್ಟಚೇತನರು . . . ತಳಮಳಗೊಳುವರು ಬರಿದೆ (ಇಂಚಾಪ. ೧೪೭-೭೩). **ತಳಮಳಗೊಳ್ಳು: ೨.** ಶಾಂತಲೆಯ ಮನಸ್ಸು ತಳಮಳಗೊಂಡಿತು (ಶಾಂತಲಾ. ೭೫) ; ಅವನ ಮನಸ್ಸು ತಳಮಳಗೊಳ್ಳುತ್ತಿತ್ತು (ರಾವಿಜ. ೫೩). [ ತಳಮಳ + ಕೊಳ್$_1$ ]

**ತಳಮಳಕು** (ನಾ). ಹೊಳಪು (?) : ಚಿಲಕತ್ತು ಒರೆಗತ್ತಿ ತಳಮಳಕಿನ ಸಾಲುಬಂಟರ ಸಾಲು ಐನೂರು . . . ಹಿರಿದು ಬಯಲಾಗ ನಿಂತಾಗ (ಲೋಕಗೀ. ೨೨೭). [ ? ]

**ತಳಮಳಗು$_1$** (ಕ್ರಿ). ದಿಗಿಲುಗೊಳ್ಳು ; ಕಂಗೆಡು; "ಹೆದರು, ತಲ್ಲಣಿಸು" (ಪ್ರಭಣ್ಣ) : ತಳಮಳಗು[ಪಾಠಾಂ. ಗೊ]ತ್ತುಂ ಜನಿತ ನಿಜಭೀತಿ ಮನಂಗೊಳೆ ಕಳವಳಿಸಿ ಚಲಿತ ನಿಲಲಣ್ಣದೆ ಮಕ್ಕಳವೊಳಗೆ ಸುಟಿದರರಸಂ ಮನದೊಳ್ಮಳಿದಸಿಯನೆ ನೋಡಿ ಪರಿವಾರದವರ್ (ಕವಿರಾ. ೨-೧೪೯) ; ತಳಮಳ[ಪಾಠಾಂ. ಳು]ಗುತ್ತೈಱಗುವುದುಂ ವಿಳಸನ್ಮಾಗಧ ಕಿರೀಟ ರತ್ನಾಂಶು ಗಣಂ ಗಟಿಯಿಸಿದುದವನ ಗರ್ವಮೆ ಗಟಿಯಿಸುವಂತಿರೆ ನೃಪೇಂದ್ರ ಪದಸರಸಿಜದೊಳ್ (ಆದಿಪು. ೧೨-೧೦೨) ; ಒಳಕೊಳ್ ಮುಂ ನಿನಗಿಲ್ಲದ ಮುಳಿಸಂ ಕಾಲ್ಗೆಱಗಿದೋಪನಂ ತೊಱೆ ದಯೆಯಿಂ ತಳಮಳಗು[ಪಾಠಾಂ. ಮಳುಕು]ತ್ತನುನಯದಿಂ ತಿಳಿಪಲ್ಕೆಂದೆಱಗದನ್ನರುಮುಟಿಗುಂ (ಕಾವ್ಯಾವ. ೯೫೭) ; ಮುಳಿದಿರೆ ನಿಜವಲ್ಲಭೆಯಂ ತಿಳಿಪಲ್ ಕಾಲ್ಗೆಱಗಲಿನಿಯನಿರ್ಪವಸರದೊಳ್ ಜಳಧರನಿನದಂ ನೆಗೆದುದು ತಳಮಳಗುತ್ತಾಕೆ [ಪಾಠಾಂ. ಗಾದಾಕೆ, ಗಾಗಾಕೆ]ತಾನೆ ಬಿಗಿಯಪ್ಪುವಿನಂ (ಕಾವ್ಯಾವ. ೭೫೪).

**ತಳಮಳಗು$_2$**, ತಳವಳಗು (ನಾ). ಬೆರಗಂ ; ವಿಸ್ಮಯ : "ತಳಮಳಗು = ಬೆಱಗಾಗುಹಂ" (ಶಮದ. ಪರಿ. ೨). **ತಳವಳಗು :** "ತಳವಳಗೆಂದು ನಿಬ್ಬೆಱಗು" (ಶಶಸಾ. ೩೦-೬೨೮).

**ತಳಮಳಗಾಗು** = ೧. ದಿಗಿಲುಗೊಳ್ಳು ; ಕಕ್ಕಾಬಿಕ್ಕಿಯಾಗು ; ಅಂಜು : ಒಳಗಱಿಯದೆ ಪಚ್ಚೆಯ ಸಿಲೆಗಳನಂಚೆಯ ಪಿಂಡು ಕಂಡು ಪಾವಸೆಗೆತ್ತವ್ವಳಿಸಿ ಕದುರ್ಕುತ್ತುಮೇಂ ತಳಮಳಗಪ್ಪುವೊ ನಗೆ ಖಗೇಂದ್ರ ಮಿಥುನಚಯಂಗಳ್ (ಶಾಂತಿಪು. ೨-೯೮). **೨.** ಕಳವಳಗೊಳ್ಳು; ಸಂಕಟಪಡು ; ಕ್ಷೋಭೆಗೊಳ್ಳು : ಇರ್ಮಡಿಸಿದ ಶೋಕದಾವಾನಲ ನೆರ್ದೆಯೊಳ್ ಪೊಟ್ಟಿರದ ಕಿರ್ಚಿನಂತಳುರೆ ತಳಮಳಗಾಗಿ ಸ್ವೈರಣೆಗೆಟ್ಟು ಬಾಯಟಿದಟುತಂ (ಶಾಂತಿಪು. ೧-೯೪ ವ). [ <ತಳಮಳಗು$_1$ ]

**ತಳಮಳಗುಟ್ಟು** (ಕ್ರಿ). ತಳಮಳಿಸು ; ಕಳವಳಪಡು ; ಕ್ಷೋಭೆಗೊಳ್ಳು: ಆ ಅಸ್ತ್ರವನ್ನು ಬಿಟ್ಟನು . . . ಅವುಗಳ ಜ್ವಾಲೆಯಲ್ಲಿ ಲೋಕವೇ ಬೆಂದು ಹೋಗುವಂತೆ ತಳಮಳಗುಟ್ಟಲು (ವಚಭಾ. ೩೦೯).

[ ತಳಮಳ + ಕುಟ್ಟು$_1$ ]

**ತಳಮಳಗುಡು** (ಕ್ರಿ). = ತಳಮಳಗುಟ್ಟು : ಜಳವಿಹಗಂಗಳ್ ಮಲರೊಳಗುಲಿವಳಿಗಳುಮಳವುಗಟಿಯೆ ತಳಮಳಗುಡೆ ಗೊಂದಳಗಳ ರವದಿಂದು ಲಿದವು ಕೊಳನೊಳಕೊಳಲಂಜ ಪುಯ್ಯಲಿಡುವಂತಾಗಳ್ (ಬಂಹರಿ. ೧೨-೪೪).

[ ತಳಮಳ + ಕುಡು$_1$ (<ಕೊಡು$_1$) ]

**ತಳಮಳಗೊಳ್** 'ತಳಮಳಂಗೊಳ್' ನೋ.

**ತಳಮಳಗೊಳಿಸು**, ತಳ್ಳಮಳಗೊಳಿಸು (ಕ್ರಿ). ೧. ಕಳವಳಗೊಳಿಸಂ ; ಕಲಕು ; ಕ್ಷೋಭೆಗೊಳಿಸು : ಬಹಿರಂತರುಪವನಂಗಳೊಳಹರಹಮಾ ಪರಭೃತಂಗಳುಲಿವ ರವಂಗಳ್ ಸಹಸಾ ತಳಮಳಗೊಳಿಸಿದವಹೋ ಮನಂಗಳನಿತಸ್ತತಂ ವಿರಹಿಗಳಾ (ಕವಿರಾ. ೧-೫೩). **ತಳ್ಳಮಳಗೊಳಿಸು : ೨.** ತೀವ್ರವಾಗಿ ಕುದಿ ; ಕತಕತನೆ ಕುದಿ : ಎಲ್ಲಿಯೆಲ್ಲಿಲ್ಲಾವ ಸಮಯದೊಳಿಲ್ಲ ಮಾರುತಿ ಪಾರ್ಥನಾ ಗುಣದಲ್ಲಿ ಮನಸೋತಾಡುತಿಹರಾ ನುಡಿಗಳ್ಕೆತಂದೂ ತಳ್ಳಮಳಗೊಳಿಪಾಜ್ಯದೊಳು ಜಲ ಚೆಲ್ಲಿದಂತಾ ಕೌರವನ ಮನದಲ್ಲಿ ಬುದ್ಬುದ ಕೋಪ ಮಸಗಿದುದು (ಜನಭಾ. ೧೨-೧೭).

[ ತಳಮಳಗೊಳ್ (<ತಳಮಳಂಗೊಳ್) + - ಇಸು$_3$ ]

**ತಳಮಳಗೊಳು** 'ತಳಮಳಂಗೊಳ್' ನೋ.

**ತಳಮಳಗೊಳ್ಳು** 'ತಳಮಳಂಗೊಳ್' ನೋ.

**ತಳಮಳಲ್** (ನಾ). (ಕೊಳ, ಸಮುದ್ರ ಮೊದಲಾದುವುಗಳ) ತಳದಲ್ಲಿರುವ ಮರಳಂ,-ಮಳಲು : ತಳಮಳಲ ಮೊಗೆಮೊಗೆದು ಕದಡಿತು ಕೊಳನ ಜಲಚರನಿಚಯವೀ ಬೊಬ್ಬುಳಿಕೆ ಮಿಗಲೊಬ್ಬುಳಿಕೆ ನೆಗೆದವು ವಿಗತವೈರದಲಿ (ಕುವ್ಯಾಗ. ೫-೨) ; ಸಮುದ್ರಂ ಕುದಿದು ತಳಮಳಲನುಗುಳುತಿರ್ದುದು (ಜಿಬಪು. ೯೦-೨೦) ; ಕಡಲು ಕುದಿದುಕ್ಕಿದುದು ತಳಮಳಲ ಮಾಣಿಕ್ಯ ಸಿಡಿಗೊಂಡವು ಬತ್ತಿದುದು ಕೆರೆ ಭಾವಿ ಹರಿ ಚಕ್ರವಂ ತುಡುಕಲು (ತುರಂಗ. ೨೨-೯೦).

**ತಳಮಳಲಾಗು**=ತಳದ ಮರಳು ಕಲಕಂ,-ಕದಡು; ಪ್ರಕ್ಷುಬ್ಧವಾಗು: ನೆಲ ಬಿರಿವಂತೆ ನಾನಾವಾದ್ಯರಭಸದಿ ಕುಲಗಿರಿ ನಡನಡುಗಿದವು ಜಲನಿಧಿ ತಳಮಳಲಪ್ಪವೊಲನಿರುದ್ಧ ಬಲಗೂಡಿ ಬಂದ ಪಟ್ಟಣಕೆ(ಮೋಹತ. ೧೯-೮೭).

[ ತಳ (= ತಲ) + ಮಳಲ್ (<ಮಣಲ್) ]

**ತಳಮಳಲೇಳು** (ಕ್ರಿ). ತಳದ ಮರಳಂ ಮೇಲಕ್ಕೇಳು ; ಅಲ್ಲೋಲ ಕಲ್ಲೋಲವಾಗು : ಇಳೆಯದಿರಲು ತಾರಗೆಯುದಿರಲು ತಳಮಳಲೇ [ಪಾಠಾಂ. ಗೊ]ಳಲು ಮುನ್ನೀರು (ಕುರಾಸಾಂ. ೧೨-೪೫) ; ನಡನಡುಗಿದುವು ಪರ್ವತ ತಳಮಳಲೆದ್ದು ಕಡಲೇಳು ಮೇರೆದಪ್ಪಿದುವು (ಮೋಹತ. ೩೭-೨೭).

[ ತಳಮಳಲ್ + ಏಳು$_1$ (<ಏಱು$_1$) ]

**ತಳಮಳವೇಳು** (ಕ್ರಿ). ತಳಮಳ ಉಂಟಾಗಂ ; ಕಳವಳವಾಗು : ಅವರ ಅಂತರಾಳದಲ್ಲಿ ಮಾತ್ರ ತಳಮಳವೆದ್ದಿತು (ಹಬ್ಬಬ. ೧೦೮).

[ ತಳಮಳ + ಏಳು$_1$ (<ಏಱು$_1$) ]

**ತಳಮಳಿಸು**, ತಳವಳಿಸು (ಕ್ರಿ). ಕಳವಳಿಸು ; ಸಂಕಟಪಡು ; ಕ್ಷೋಭೆಗೊಳ್ಳು: ಆಗುಳಿಸುವ ತಳಮಳಿಸುವ . . . ತೇಂಕುವ ತೇಗುವ ಕಂಟಳಿಸುವಖಿಳ ವಿಕೃತಿಗೆ ಸಲ್ಲಂ (ಪುಷ್ಪಪು. ೧೨-೮೪) ; ಅವನ ಹೃದಯ ಏಕೋ ತಳಮಳಿಸುತ್ತಿತ್ತು (ದಕ್ಷಿನ. ೭೩) ; ಅವಳ ಪ್ರಗತಿಯನ್ನು ಕಂಡು ಒಳಗೊಳಗೇ ತಳಮಳಿಸುತ್ತಿದ್ದ (ಅಶ್ವಮ. ೫೯). **ತಳವಳಿಸು :** ಕಳವಳಿಸಂ ಕನಲನೊನಲನಳ್ಕಂ ಬಳ್ಕಂ ಚಳವಳಿಸಂ ಚಪ್ಪರಿಸಂ ತಳವಳಿಸಂ ಬೇಸಱಿಯ್ದು ಬೆಳ್ಳಗದಿನಿರಂ (ಅಜಿಪು. ೫-೯೦) ; ನೀಂ ತಳವ[ಪಾಠಾಂ. ಮ]ಳಿಸದಿರೆಂದಿ ನಿಯಳಂ ಸಂತೈಸಿ (ಜೈಮಿಭಾ. ೧೧-೦೨) ; ವ್ಯಾಕುಲದಿ ಕಳವಳಿಸಿ ಹಳವಳಿಸಿ ತಳವಳಿಸಿ ಹೀಕರಿಸಿ ಭೀಕರಿಸಿ (ಜಿನಮು. ೨೪-೨೩) ; ಈ ಪರಿ ಬೆಳತನಕ ತಳವಳಿಸಿದರಿಂದ ಮುಖವು ಕಳೆಗುಂದಿ (ಕಗದ್ಯ. ೧೯).

[ತಳಮಳ + - ಇಸು$_3$ ]

**ತಳಮಿತಮಧ್ಯೆ**(ನಾ).ಒಂದು ಹಿಡಿ ಅಳತೆಯ ನಡುವುಳ್ಳವಳು;ತೆಳ್ಳನೆಯ ಸೊಂಟವುಳ್ಳವಳು ; ಸೂಕ್ಷ್ಮಮಧ್ಯೆ: ತಳಮಿತಮಧ್ಯೆಯನಾಯತ ವಿಳೋಳಲೋಚನೆಯನುನ್ನತಸ್ತನಯುಗೆಯಂ . . . ಉಟಿದಂ (ಕವಿರಾ. ೩-೦೦). [ ಸಂ. ತಲಮಿತಮಧ್ಯಾ (ತಲ + ಮಿತ + ಮಧ್ಯ + -) ]

**ತಳಮೀನು** (ನಾ). ಒಂದು ಬಗೆಯ ಮೀನು : "ನೀರಿನ ತಳದಲ್ಲಿ ವಾಸವಾಗಿರುವ ಮೀನು ; ತಳಮೀನು" (Ground-fish. ಇಂಕನಿ.).

[ ತಳ (=ತಲ) + ಮೀನು$_2$ (<ಮೀನ್$_3$) ]

**ತಳಮುಟ್ಟ** (ಅ). ತಳದವರೆಗೂ ; ಬುಡದವರೆಗೂ : ಅಗೆ ತಳಮುಟ್ಟ [ಟ್ಟ] ಕೋಟೆಯ ದ್ವಾರಗಳ ಮಾಡಿ ಹೊಗುವಡ್ಡಲಾದರಿಭಟರ ಮಿಗೆ ಬೀಳಲಿಱ (ಕಂನವಿ. ೧೪-೮). [ತಳ(= ತಲ) + ಮುಟ್ಟ$_2$ (<ಮುಟ್ಟಂ)]

**ತಳಮುಟ್ಟಿಸು** (ಕ್ರಿ). (ಆಲಂ) ಕಂಗ್ಗಿಸು; ಎದೆಗುಂದಿಸು: ಇನ್ನೂ ಮಾಡಬೇಕಾಗಿರೋ ಕೆಲಸ, ಈಗಾಗಲೇ ನನ್ನನ್ನು ತಳಮುಟ್ಟಿಸಿ ಬಿಟ್ಟಿದೆ (ವೀರಯೋ. ೦೪). [ತಳ (= ತಲ) + ಮುಟ್ಟಿಸು]

**ತಳಮೇಲು** (ನಾ). ೧. ಅಡಿಮೇಲು; ತಲೆಕೆಳಗು. ೨. ವ್ಯತ್ಯಸ್ತವಾದುದು; ವಿಪರೀತವಾದುದು. ೩. ಮಲ್ಲಯುದ್ಧದ ಒಂದು ಪಟ್ಟು,–ವರಸೆ: ಹೊಕ್ಕರಿಬ್ಬರು ಬಿಸುಟು ಮರಗಳ ಡೊಕ್ಕರಕೆ ಫಣಿರಾಜನೆದೆ ನೆಳಿನಿಕ್ಕೆನಲು ತಳಮೇಲು ತಳಬಲ ಸಂಧಿ ಬಂಧದಲಿ (ತೊರರಾ. ೪–೪–೨೭): ಗಳಹತ್ತ ಡೊಕ್ಕರ ತಳಮೇಲು ಪೈಸರ ಸುಳಿವು ವಂಚನೆ ಪತನದಲಿ ಅಳವಟ್ಟು ಗಾಯಗಾಯಕೆ ಕೆನ್ನೀರ್ಗಳು ತುಳುಕೆ ಹೋರಿದರೇನೆಂಬೆ (ಕಂನವಿ. ೨೦–೯೨).

**ತಳಮೇಲಕಿಕ್ಕು** = ಕೆಳಗು ಮೇಲಾಗು; ಕೆಳಭಾಗ ಮೇಲಕ್ಕೆ ಹೋಗು: ನಿನ್ನೆ ಮೊದಲಾಗಿ ಕೂಳಿಲ್ಲದೇ ಹಿರಿದಾಗಿ ಹಸಿದ ಕಾರಣದಿ ಬೆಂಬತ್ತಿದೊಡಲಿರದೆ ತಳಮೇಲಕಿಕ್ಕುವ ದಿಟ್ಟೆ ಹೂಳಿದಂಗುಳು ಸಾರವಱತ ಬಾಯಿ (ಸಮ್ಮಕಾ. ೧೦–೪೯). **ತಳಮೇಲಾಗು** = ಸತ್ತ್ವವನ್ನು ಕಳೆದುಕೊಳ್ಳು: ವಿಷವೀರ್ಯ ದುಸ್ಸಹವಾದ ಕಂಗಳ ಸುಯ್ಯ ಹೊಗೆಗಳ ಭೀಕರಾನನದ ಹಾದಿಯನು ಹತ್ತಿಸುತ ಬಹ ಕಾಳೋದರುರಗನ ಕಡುಹು ತಳಮೇಲಾದುದೆಯ್ದಲು ನೆಱೆಯದಾ ವೇದಾಂತವಿಶ್ರುತನ (ನಿಭಾಗ. ೧೦–೧೭–೩೭). **ತಳಮೇಲುಮಾಡು**=೧. ಬುಡಮೇಲುಮಾಡು; ಹಾಳುಮಾಡು; ನಾಶಪಡಿಸು: ಕೊಲೆಯೆಂಬ ಕೋಟೆಯ ಬಲಯುತವಹ ಮೂಱು ಪೊಳಲನು ಬಳಸಿರುತಿರಲು ತೊಲಗದ ಹಿಂಸೆಯೆನಿಪ ವಜ್ರಹಾರಿಯಿಂ ತಳಮೇಲು ಮಾಡಿದರಂದು (ತ್ರಿಪುಸಾಂ. ೨೨–೨೫೪). ೨. ವ್ಯತ್ಯಸ್ತಗೊಳಿಸು: ಭಾರತದಲ್ಲಿ ನಮ್ಮ (ಕ್ರಿಸ್ತ)ಮತದ ಬೇರು ಎಂದಿಗೂ ಊರಲಾರದು . . . ಅದಕ್ಕೆ ಬದಲಾಗಿ ಭಾರತದ ಜ್ಞಾನಧಾರೆಯು ಯೂರೋಪಿನಲ್ಲಿ ಪ್ರವಹಿಸಿ ನಮ್ಮ ವಿಚಾರಗಳನ್ನು ತಳಮೇಲುಮಾಡುವುದು (ಭಾರದ. ೪೭). ೩. ತಳದಲ್ಲಿರುವುದನ್ನು ಮೇಲೆ ತರು; ಕೈಯಾಡಿಸು; ತೊಳಸು: ತೆಂಗಿನಕಾಯ ಹೂದಿಕ್ಕಿ ತಳಿದು ಬೇಯದ ತೆಱದಿನಡುವಿವಾಗಲದಱೆಸರು ಹೆಚ್ಚಿದರೆ ತೆಗೆದು ಹಾಕಿ ಒಳಗುಳ್ಳ ಚಟ್ಟಿಯೊಳು ಹೊಸತುಪ್ಪವೆಱೆದದಂ ತಳಮೇಲು ಮಾಡಿ ಬೇಯಿಸಿಕೊಂಡು (ಸೂಪಶಾ. ೪–೫೮). **ತಳಮೇಲೊಡರ್ಚು** = ತಳಮೇಲುಮಾಡು ೨: ಮುನಿಸಿಂ ಲೆಕ್ಕಕೆ ಬಾರದಂತೆ ಮದನಾ ನೀನೆಚ್ಚು ಬಾಣಂಗಳಂ . . . ಕಾವಂಗೈದು ಕೋಲಂತವರ್ಕೆನಿತೋ ಎನ್ನವೊಲಿರ್ಪವಂ ಗುಱಿಯೆನುತ್ತುಂ ಲೋಗರೊಲ್ದಾಡುವೀಯನು ವಾತಂ ತಳಮೇಲೊಡರ್ಚಿದೆ ಗಡಾ (ಮಿತ್ರಗೋ. ೩೯–೫೯).

[ತಳ (=ತಲ) + ಮೇಲು (<ಮೇಲ್)]

**ತಳರ್**, ತಳರು (ಕ್ರಿ). ೧. ಚಲಿಸು; ಕದಲು; ಅಲ್ಲಾಡು: "ತಳರ್–ಚಲನೇ" (ಶಮಧಾ): ನೀವೊಂದು ಕೆಲದೊಳ್ ಪುಗುಱದೆ ತಳರದೆ [ಪಾಠಾಂ. ಮಸಗದೆ]ಕೈಯುಂ ಕಾಲ್ಗಳುಮನುಡುಗದೆ ನೀಡದೆ ಬಾಟ್ಸನ್ನೆಗಂ ಪಟ್ಟಿರ್ದು ಪಂಚನಮಸ್ಕಾರಮಂ ಮನದೊಳ್ ಓದುತ್ತಿರಿಂ (ವಡ್ಡಾರಾ. ೮೨–೨೮): ಪಿಡಿದಾರ್ಪ ಭರದಿನೆತ್ತಲ್ಕೊಡರಿಸಿದೊಡೆ ನೆಲದಿನಣಮೆ ತಳರದೆ ಬಿಲ್ ನಿಲ್ವೊಡೆ (ಪಂಪಭಾ. ೩–೫೯); ಪ್ರಳಯಾನಿಳನಿಂ ಕನಕಾಚಳಮೆಂತುಂ ತಳರ[ಪಾಠಾಂ. ರಳ]ದಂತೆ ದರ್ಶನಶುದ್ಧಂ ಚಳಿಯಿಸಲಱಿಯಂ (ಸಮಪು. ೪–೧೩೩); ಬಾಹುಬಲಿಯಂತೆ ನಿಂದೆಡೆಯಿಂ ತಳರದೆ (ಧರ್ಮಾಮೃ. ೬–೨೩೨); ಜಳನಿಧಿ ಮೇರೆಯ ದಾಂಟುಗು ತಳರುಗು ಕನಕಾದ್ರಿ (ಸೌಇಇ. XX, ೩೦೪–೭; 12ನೆಯ ಶತ); ಸಂಕಿಲಿನಾಚಿಯರ ನೋಟದೊಡನೆ ತನ್ನ ನೋಟಂ ಘಳಿಲನೆ ಸಂದಿಸೆ . . . ನಡೆಗೆಟ್ಟು ಕಂಪಿಸಿ ನಸು ಬೆಮರ್ತು ಹೊಸನೋಟಂ ಹೋರಟೆಗುಟ್ಟಿ ತೈತಿಕ್ಕಿ ತಳರದೆ [ಪಾಠಾಂ. ತರಳದೆ, ತರಳರದೆ, ತೆರಳದೆ] ತಂತವ್ಮೊಳಪೊಕ್ಕ ರೂಪು ಮಂಗುಳಲಾಱದೆ ನಟ್ಟು ನೋಡುತ್ತಿರಲ್ (ನಂಬಿರ. ೧೨–೫೩): ಬಡಹಂ ಕೈಕೊಂಡುದುರ್ವೀತಳಮದು ನೆಱೆ ಜೋಗಿರ್ದು ಮೆಟ್ಟಲ್ಕೆ ಬಲ್ಪೊಂದೆಡೆಯಿಲ್ಲೆಂಬಂತೆ ಪಂಕಂ ಮಸಗೆ . . . ತಳರದಲ್ಲಲ್ಲಿ ತಮ್ಮುಳ್ಳ ಕಾಲಿಂ ಬಿಡೆ ಕೀಲಿಲ್ಕಾಱದಿರ್ದಂತಿರೆ ಮೃಗನಿಕರಂ ಕೋಡುತುಂ ಕೂಡೆ ಕಾಡೋಳ್ (ಕುಸುಮಾ. ೬–೩೫); ಮುನಿದೈನೂಱುಂ ಕುನ್ನಿಗಳನಿತುಮನೊರ್ಮೊದಲೆ ತೋಱೆ ಕುಕ್ಕುಱಿಸಿ ಮಹಾಮುನಿ ತಳರದೆ ಮೇರುವೊಲಿರೆ (ಯಶೋಚ. ೪–೪೩); ತಳರ್ವ ವಿಮಾನಕೋಟಿ ನಡೆದೊಪ್ಪುವ ವಾರಣಕೋಟಿ ಬಾಜಿಪಗ್ಗಳಿಕೆಯ ತೂರ್ಯಕೋಟಿ . . . ಬಗೆಗೊಂಡುದು (ಪುಷ್ಪಪು. ೧೦–೩೦); ಕಾಳಮೇಘಾಳಿ ನಡೆದಪುವೊ ಕೈಕಾಲ್ ಮೂಡಿ ನೀಲಾದ್ರಿಗಳ್ ತಳರ್ದಪುವೊ . . . ಪೇಳೆನಲ್ಕೆ (ಚಬಪು. ೩೨–೩೩). ೨. ಅದಿರು; ನಡುಗು; ಕಂಪಿಸು: ಅಂತು ಪುಗವೇಟ್ಟುದುಂ ದಿಗ್ದಂತಿಗಳುಂ ಕುಲನಗಂಗಳುಂ ಗಡಣಂಗೊಂಡೆಂತು ಕವಿತರ್ಕುಮಂತೆ ನೆಲಂ ತಳರ್ವಿನೆಗಂ ಪ್ರಚಂಡ ಕೋದಂಡಧರರ್ . . . ಬಂದು (ಪಂಪಭಾ. ೨–೭೦); ತಳರೆ ತಳರ್ಚ್ವಂಗೆ ಕನಕಾಚಳಮೊತ್ತುವಂಗೆಲೇ ವಿಯತ್ತಳಂ . . . ಚಟ್ಟಮನೆಂಬ ಜಟ್ಟಿಗಂ (ಎಕ. XI, ದಾವಣ. ೪೩–೪೭; 1164); ಕಿಡುತಂದುದು ಮನದಱೆಯುಮೆ ನುಡಿಯ ತೊಡಳ್ ಪಿಂಗಿ ಪೋಯ್ತು ತಳರ್ವಡಿಯೊಳ್ ಬಲ್ಪಡರ್ದುದು . . . ನಾಡೆ ಶೈಶವಾತಿಕ್ರಮದೊಳ್ (ಚಂದ್ರಪು. ೪–೨); ಚೌರಿಯ ಗಾಳಿಯ ಕೋಟ್ಗೆ ಬೆಟ್ಟುಗಳ್ ತಳರೆ (ಕಬ್ಬಿಕಾ. ೨೦೪). ೩. ಹೊರಡು; ಪ್ರಯಾಣ ಮಾಡು; ಮುಂದುವರಿ; ಸಾಗು: "ಪೊಱಮಟ್ಟಂ ತಳರ್ದನಕ್ಕುಂ" (ಕವಿಕಂ. ೨೬೬); ತೆಱಪನೆ ಪಾರ್ದಿಪಂ ಮಾಯ್ದುಱುಗುಲಿ ಜವನದಱೆನಿನಿಸು ಪೊಟ್ಟುಂ ತನ್ನಂ ಮಱೆದಿರಲಕ್ಕುಮೆ ತಳರದೆ ತಱಿಸಲದಿನ್ನೆಱೆದುಮಱೆದುಮಿರ್ಪುದೆ ಚದುರಂ (ಆದಿಪು. ೪–೭೬); ಅಪರಾಚಲಶಿಖರದತ್ತಲೊಯ್ಯನೆ ತಳರ್ದಂ ರಾಜೀವಜೀವಿತೇಶ್ವರನಾಗಳ್ (ಕಾದಂಉ. ೧೩೮); ಬನದಿಂದರಗಿಳಿ ತಳರ್ವುವು ದೇಶಾಂತರಕ್ಕೆ (ಅಜಿಪು. ೨–೯); ಅಲಿಂಗನೇಚ್ಛೆಯೊಳ್ ನಿಮಿರ್ವ ಗಾತ್ರಮಂ ತಳರಲೀಯದೆ ತಱುಂಬುವಂತಿರಗ್ಗಳಿಸಿದುತ್ಕಟಸ್ತಬ್ಧಭಾವಮುಂ (ವರ್ಧಪು. ೬–೧೨ ವ); ಅಲ್ಲಿಂ ತಳರ್ದು ಮೋನದಿಂ ಸಾಧುಬ್ರಾಹ್ಮಣನಂತೆ ಚಪ್ಪರದಿಂ ಪೊಱಮಟ್ಟು (ನಂಬಿರ. ೭–೮೩); ಅಲ್ಲಿಂ ತಳರ್ದು ಮನೆಗೆಯ್ಬೆಗಮೆಱೆದು ಯ್ದಂದದೆ ಬಂದು (ಯಶೋಚ. ೩–೨೯); ಇಳಿದಂದಳವನು ತತ್ಪುರದ ಮುಂದಲ್ಲಿಂದ ತಳರ್ದು ಕಾಲ್ನಡೆಯಿಂದ ಪೊಱವೊಳಲ ದಾಟಿ (ಸೌಂದಪು. ೩–೯೫); ನಲಿದು ನರ್ತಿಸುತಮರನಗರಿಗೆ ತಳರ್ದನಮರವಿಮಾನದಲಿ (ತೊರರಾ. ೨–೭–೦೭); ದಿನಪನುದಯಕ್ಕರಸು ನೀರಾಟಕಂ ಪೋಪ ವಿನಯದಿಂ ಪುರುಷರೆಲ್ಲರು ತಳರ್ವುದೆಂದು ಮಿಗೆ ಮನೆಮನೆಗೆ ಡಂಗುರವ ಸಾಱೆಸೆ(ಪ್ರಾಢರಾ. ೨–೩೯); ತುಂಗಭದ್ರೆಯನಾಗ ಗಿರಿಸುತೆಗೆ ತೋಱೆಸುತೆ ತುಂಗ ಸಂತೋಷದಿಂದಂ ತಳರೆ (ಚಬಪು. ೩೪–೨೨); ಮಾನಸಸರದತ್ತ ತಳರ್ದುದಾ ಕಳಹಂಸಂ (ದಮುಸ್ತ. ೨–೪೭). ೪. ದಾಟು; ಮೀರು: ಪುರದ್ವಾರಮಂ ತಳರ್ದು ಗಂಭೀರವಾದ್ಯಂಗಳ ಮಹಾರವಂಗಳು ಪೊಣ್ಮಲೋರಂತೆ ನಡೆದು ಬಂದು ಸಾರತರವೈಹಾಳಿಯಾ ರಮ್ಯಸುಸ್ಥಲವ ಸೇರಲು (ಭಾವಚಿಂ. ೮–೯). ೫. ವೇಗವಾಗಿ ಹೋಗು; ಓಡು; ದೌಡಾಯಿಸು: ಸರಳ ಪೊದಟ್ಟಿ ಬಲ್ಸರಿಯ ಕೋಳ್ಗಿರಲಾಱದೆ ಬಿಲ್ ತೆರಳ್ದು ದುರ್ಧರ[ಹಯ]ಮುಟ್ಗಿ . . . ದಂತಿ ಘಟೆಗಳ್ ಪೆಱಗಿಟ್ಟೊಡೆ ಕಟ್ಟೆಗಟ್ಟಿದಂತಿರೆ ತಳರ್ದತ್ತರಾತಿಬಲಮಾಂಪವರಾರ್ ಕದನತ್ರಿಣೇತ್ರ[ನಂ] (ಪಂಪಭಾ. ೩–೭೦); ಇರ್ಪುದೊಂದು ಮಹಾಗಿರಿದುರ್ಗಂಬರವ ತಾಗುತ ತಳರ್ವ ತರಣಿಯ ಕುದುರೆಗಳಿಂಗಾಗಿಹುದದು ತಾಗುದಾಣ (ಕುರಾಸಾಂ. ೪–೦೩); ಸಿಂಗರಿಸಿರ್ದ ಥಳಥಳಿಪ ಮಣಿರಥಾವಳಿಗಳು ಪಳಂಚಿದವು ಜೋಡಿಸುವ ಸಾರಥಿಗಳಿಂ ತಳ[ಪಾಠಾಂ. ಳ]ರ್ವ ಹಯಚಯದಿಂದೆ (ಸಾಳ್ವಭಾ. ೨೫–೧೭); ಬಡಬಂಗಳ್ಕೆ

ಶಂಖ ಸಮುದಯಂ ನೆಗೆದು ಪೋಪಂತೆ ಬೆಗಡುಗೊಂಡು ತಳರ್ವ ತರುಣ ಮರಾಳಂಗಳಿಂ (ರಾಜಶೇ. ೧-೧೦೩ ವ). ೬. ದಂಡೆತ್ತಿ ಬರು ; ಆಕ್ರಮಣ ಮಾಡು : ಜಳಧಿತರಂಗತಾಟಿತ ಧರಾತಳಭಾರಮಿದೆತ್ತ ಬಾಳನೆತ್ತಳವಿನಿತುಂಟೆ ತಾಳ್ದಲಿದನೊಟ್ಟಜೆಯಿಂ ಕೊಳಲೆಂದು ವೈರಿಗಳ್ ತಳರ್ದಪರೆಂತು ತನ್ನ ಬಲಮಿಲ್ಲದೆ ತಾಳ್ದುವೆಂ (ಆದಿಪು. ೪-೮೪). ೭. ಹಬ್ಬು ; ಹರಡಂ ; ಪ್ರಸರಿಸು : ಬೆಳಗುಗಳ ಬಳೆದ ಬಳಗದ ಬಳಸುಗಳೊಳಗೊಳಗೆ ತೊಳಗಿ ಪೊಳೆಪೊಳೆದೊಳಗುಚ್ಚಳಿಸಿ ತಳತಳಿಸಿ ದೆಸೆಗಳನಳುರ್ದುಸಿರೊಳ್ ಕೆಳರ್ದು ಮಿಳಿರ್ದು ತಳರ್ದತ್ತಾಗಳ್ (ಕಾವ್ಯಾವ. ೨೩). 'ತಳರ್ಪು' ಪರಾ. ೮. ಹಿಂಜರಿ ; ಹಿಮ್ಮೆಟ್ಟು ; ಅಳುಕು : ಚಳುಕ್ಯಕುಳತಿಳಕನಪ್ಪ ವಿಜಯಾದಿತ್ಯಂಗೆ ಗೋವಿಂದರಾಜಂ ಮುಳಿಯೆ ತಳರದೆ ಪೆಱಗಿಕ್ಕಿ ಕಾದ ಶರಣಾಗತ ಜಳನಿಧಿಯ ಪೆಂಪುಮಂ (ಪಂಪಭಾ. ೯-೫೨ ವ) : "ಚಲಿಸದೆ" (ಪಂಪದೀ. ೩೨೦) ; ಸುರವಾರಣಮಾ ವಾರಣದೊರಗಂ ಬರಲಱಿಯದೆಂತುಮಾ ವಸುಮತಿಯೊಳ್ ಪರಿಕಿಸುವೊಡಮಳವಲ್ಲಂ ಧುರಕದಲ್ಲಿರ್ದಾಸೆಯಿಂದೆ ತಳರದದೆಂದುಂ (ನೇಮಿಪು. ೧೧-೫೨) ; ಕುಱುಗೋಡ ತಳದೊಳಗೆ ತಳರದಯ್ದೂರ್ವ್ವರುಂ ನೆಱೆ ನೋಪ್ಪರ್ಡವರೊಳಗೆ ಪಗೆಗಂಜರೊರ್ವರುಂ (ಸೌಇಇ. IX-i, ೨೯೬-೨೫ ; 1176). ೯. ಸಡಿಲಬೀಳು ; ಕಳಚಿಬೀಳು ; ಉದುರು: ಬೀಸುವ ಚಾಮರದ ಗಾಳಿಯಲಂಪಿನೊಳಲ್ಲುಗುವ ಬಂಬಲ್ಗುರುಳ್ಗಳ ಬಂಬಲಿಂದಂ ತಳರ್ವ ಚಿನ್ನಪೂಗಳನವಯುವದೊಳೆ ಸಯ್ತು ಮಾಡುವ ಕೆಯ್ತಮುಮಂ (ಆದಿಪು. ೪-೯ ವ). ೧೦. ಆಗು; ಉಂಟಾಗು: ತನುವಿಂದೊಂದು ಗುಣಗಳಿಂದೆರಡು ಸಾಹಿತ್ಯಂಗಳಿಂ ಮೂಱು ಸನ್ಮನದಿಂ ನಾಲ್ಕು . . . ಸುತತ್ವದಿಂದೆ ತಳರ್ದೆಂಟಂಗಂ ಭುಜದ್ವಂದ್ವದೊಳ್ ತನಗಿನ್ನಾರ್ ಸರಿ ನಾಗವರ್ಮ ಕೃತಿಗೆಂದಂ ಕಾಳಿದಾಸಂಬರಂ (ಛಂದೋಂಬು. ೧-೨೫). **ತಳರು :** ೨. ಆತನ ಮನಸಿನ ಬಗೆಯಱಿಯದೆ ನಾರಿ ಸೋತಳು ನೀ ತಳರೆಂದು ಕಾತರಿಸಿಯೆ ಕರೆದೊಡೆ ಪರಿಹಾಸ್ಯದ ಮಾತಲ್ಲದೆ ಸೊಗಸಲ್ಲ (ಕಂನವಿ. ೯-೧೪೦); ನೋಟವ ಮಿಂಚಿಸಿ ಮೊಗವನು ಹೊಂಚಿಸಿ ತಳುವದೆ ಹೊನ್ನಿಯು ತಳರಿದಳು (ನಲ್ಕ. ೧೧-೨೪); ಎಳಹರೆಯವೆಂಬ ಸಂತಸದ ಹೊನಲಡಗುತಿರೆ . . . ಕಡೆಯುಡುಗಿ ಹಡಿಲಾಗಿ ಬಗೆ ಅಳಲ ಮಡಿಲಾಗಿ ತಳರುತಿದೆ ಮೃತ್ಯುವಿನ ತಡಿಗೆ (ಭಾರಂಗ. ೬-೮). ೩. ಕಿಡಿಗಣ್ಣಿನಿಂದಳಿದುಳಿದ ದೇಹವನಿನ್ನು ಸುಡಿಸದೆ ತಳರೆಂದ ನಗುತೆ (ಮೋಹತ. ೩೮-೮) ; ರಕ್ಕಸವಗೆ ಖಗರಾಜಂಗೆ ಪೇಳ್ದ ಪೆಣ್ಮಕ್ಕಳು ಭೀತಿಸದಂತೆ ಚೊಕ್ಕಟವಾಗಿ ನೀ ತಳರೆಂದು ಬಳಿಕವೆ ಪಕ್ಕೆಯ ಪರುಠವಿಸಿದನು (ಮೋಹತ. ೪೨-೬). ೯. ಕಿವಿಗಳಿಗಮರ್ದಿನ ಸರಿಯುವೊಲಿನಿದಪ್ಪ ಸವಿನುಡಿ ತಳರಿತು ಬಿನದ ತವೆದುದೊಡನೆ ಹೆಱಸಾರಿತವಳ ಲವಲವಿಕೆ (ಚಂಪ್ರಸಾಂ.೧೦-೩೩). 'ತೆರಳ್' ಪರಾ. ೧೧. "ಹೊಡೆದಟ್ಟು" (ಗುರುಚಾ. ಕೋಶ) : ಬಸವರಾಯ ನಮ್ಮಯ ಮನೆಯ ಸತಿಸುತರ ತೆಕ್ಕೊಂಡು ನಾಯ ತಳರುವ ತೆಱದೊಳೆನ್ನೋರ್ವನಂ ನೂಂಕಿ ಜಂಗಮಕ್ಕಿತ್ತನಕಟ (ಗುರುಚಾ. ೮-೪೯). ೧೨. ನಿಧಾನವಾಗು. ೧೩. ಬಳಲು ; ಆಯಾಸಗೊಳ್ಳು. ೧೪. ಜೋಲುಬೀಳು. 'ತಳರ್ನಾಲಗೆ' ಪರಾ.

[ ದೇ.॥ ತಮಿ. ತಳರ್ ; ಮಲ. ತಳರು ; ಕೊಡ. ತಳರ್ ;
ತೆಲು. ತರಲು, ತಲರು, ತಱಲು ]

**ತಳರ** 'ತಳವಱ' ನೋ.

**ತಳರಡಿ** (ನಾ). ತತ್ತರಿಸುವ ಹೆಜ್ಜೆ ; ತಪ್ಪುಹೆಜ್ಜೆ ; ದಟ್ಟಡಿ : ತಳರಡಿಯಿಡುತಂ ಕುಟ್ಟಿಮತಳದೊಳ್ಮಾರ್ಪೊಳೆಯುತಿರೆ ನಿಜಪ್ರತಿಬಿಂಬಂಗಳನೀಕ್ಷಿಸುತಿರೆ ಕೌತುಕಚಳನಯನದೆ ತನಯನೆಂದು ಬಱಿಸಂದಪನೋ (ಕಾದಂಪೂ. ೩೬೦) ; ತಳರಡಿಯಿಡುವತ್ತಲೆ ಪರಿದೆಳಸುವ ಜನನಿಯರ ದಿಟ್ಟಿ ಮಣಿಕುಟ್ಟಿಮಮಂ ಬಳಸೆ ಪೊಸತಲರ್ದ ನೆಯ್ದಿಲ್ಗೊಳದೊಳಗಣ ರಾಜಹಂಸನಂ ನೆನೆಯಿಸಿದರ್ (ಪಂರಾಮಾ. ೩-೧೪೦) ; ಎಳವಸಲೆಯ ಮೇಲೊಯ್ಯನೆ ತಳದಾರ್ಡುವ ರಾಜಹಂಸ ಬಾಳಕನೆಂಬೊಂದಳತೆಗೆವಂದಂ ಮರಕತತಳದೊಳ್ ತಳರಡಿಯನಿಡುವ ತನ್ನೃಪತನಯಂ (ಚಂದ್ರಪು. ೧೩-೩). [ ತಳರ್ + ಅಡಿ$_1$ ]

**ತಳರಾಸಿ** (ನಾ). ರಾಶಿಯನ್ನು ತುಂಬಿಕೊಂಡಾಗ ಕೆಳಗೆ ಉಳಿಯುವ ಉಳಿಕೆಕಾಳಿನ ರಾಶಿ,–ಸಣ್ಣ ರಾಶಿ (?) : ಗೇಣಿದಾರರು ಗೇಣಿಯನ್ನು ಕೊಡುವುದರ ಜೊತೆಗೆ ತರಕಾರಿ, ತರಪಡಿ, ತಳರಾಸಿ, ಮೇಲ್ಗೊಳಗ, ಲಾಭಸೆರೆ ಮುಂತಾದ ಮರ್ಯಾದೆಗಳನ್ನೂ ಭೂಮಾಲೀಕರಿಗೆ ಕೊಡಬೇಕಾಗಿತ್ತು (ಪಂಜಪಂ. ೧೦). [ ತಳ (= ತಲ) + ರಾಸಿ$_2$ ]

**ತಳರಿಕೆ** (ನಾ). ಚಲನೆ (?) : ಮಿಸುಪ ಪೊಸದಳಿರ್ಗಳೊಳಂ ತಳಿರ್ವೆರಲ ತಳರಿಕೆ[ಪಾಠಾಂ. ತರತರಕೆ]ಯ ತುಂಬಿಯ ತಳರ್ವಕ್ಕಿಯ ಕುಸುಂಕುಱು ಗೊಂಡೆಸಟಿ ಬಾಟ್ವೀಲಿಯ ಕೇಸರದ ಕಕ್ಕುಂಡಱಿಯ ಕಾಪಿನ ಕಂಪಿನ ಕೋಶಮಿರ್ಪಂತೆ ಪೊಸವಾಸಿಗಮನೆತ್ತಿದಂ[ಪಾಠಾಂ. ತ್ತುವಂ]ತೆಯುಮಿರ್ಪ ಗೊಂಚಲ್ಗಳೊಳಂ (ಲೀಲಾವ. ೮-೫೧ ವ). [ ತಳರ್ + – ಇಕೆ ]

**ತಳರಿಸು** (ಕ್ರಿ). ಕಳುಹಿಸು ; ಕಳಿಸು ; ಸಾಗಿಸು : ತಳುಮಾಡದೀ ಬಿಳ್ದ ಬಂಧುಗಳನೆಚ್ಚಱಿಸಿ ನಮ್ಮ ನಿಜಪುರವರಕ್ಕೆ ತಳರಿಸೆನಲ್ (ಸಮ್ಯಕೌ. ೧೦-೫೩). [ ತಳರ್ + – ಇಸು$_3$ ]

**ತಳರು** 'ತಳರ್' ನೋ.

**ತಳರುಜೆ** (ನಾ). ಕುದುರೆಯ ಗೊರಸಿನ ಒಂದು ಬಗೆಯ ರೋಗ : ಅರಿದಾಳಂ ಬೆಲ್ಲಂ ಸಜ್ಜರಸಂ ಕಾಸೀಸಮರಗು ಕೇವರ್ಣಾಸಿವನೊಂದಿರೆ ತಿಲತೈಲದೊಳಟ್ಟಂತೊರಸುಗೆ ತುರಗಕ್ಕೆ ಪಿಂಗುಗುಂ ತಳರುಜೆಯುಂ (ಲೋಕೋಪ. ೯-೨೪೪) ; "ತಳರೋಗ" (ಲೋಕೋಪ. ಟೀಕು).

[ ತಳ (= ತಲ) + ರುಜೆ ]

**ತಳರೋಗ** (ನಾ). = ತಳರುಜೆ : ಕಿಱುಗಲ್ಗೊಳ್ ಕೆಸಱೊಳ್ ಮೊಳೆ ಕೊಱಡುಗಳೊಳ್ ಮುಳ್ಳೊಳಿಡುಕುಱಿಡೆಗಳೊಳಂ ಪಾಯ್ದುಱದೆ ಕೊಳಗುಗಳ್ ಸಲೆ ಕುತ್ತಿಱಿದೊಡೆ ಕುತ್ತಡಿಯನಿಡುವೊಡದು ತಳರೋಗಂ (ಅಶ್ವಶಾ. ೧೫-೧); ಮತ್ತೊಂದುಪಾಯಮುಂಟೆಲ್ಲ ತೆಱದ ತಳರೋಗಂಗಳ್ಗ ಪಶಮಮಂ ಪುಟ್ಟಿಸುಗುಂ ತ್ರಿಫಲೆಯುಮೆಳ್ಳೆಣ್ಣೆಯೂಡೆ ತಳರೋಗ ಹರಂ (ಅಶ್ವಶಾ. ೧೫-೬). [ ತಳ (= ತಲ) + ರೋಗ ]

**ತಳರ್ಚು** (ಕ್ರಿ). ೧. (ಸ್ಥಾನದಿಂದ) ಕದಲಿಸು ; ಸರಿಸು ; ಅಲ್ಲಾಡಿಸು ; ಚಲಿಸುವಂತೆ ಮಾಡು : "ತಳರ್ಚು – ಸ್ಥಾನಾಪಗಮನೇ" (ಶಮಧಾ) ; ಎಣ್ಬರಿಂದಂ ತಳರ್ಚಲಾಱದಂತಪ್ಪ ಪಿರಿದೊಂದು ಸಿಲೆಯಂ ತಂದು ತಲೆಯತ್ತಿಟ್ಟು ಪಟ್ಟಿರ್ದುದಂ . . . ಕಂಡು (ವಡ್ಡಾರಾ. ೬೬-೨೭); ಪದಘಾತಕ್ಕೆ ಧರಿತ್ರಿ ಬಾಯ್ವಿಡೆ ಭುಜಾದಂಡಂಗಳಂ ಸಾರ್ಚಿ ಬಿರ್ಚಿದಿಳಾಸಂಧಿಗೆ ಮೆಯ್ವೊಣರ್ಚಿ ನೆಲೆಯಿಂದಕ್ಷೂಣಸತ್ವಂ ತಳರ್ಚಿ ದಶಗ್ರೀವನ ಕಂಠಕಂದಳದ ಬೇರಂ ಕೀಳ್ವವೋಲ್ ಕಿಟ್ತಂ . . . ಸಿದ್ಧಶೈಲೇಂದ್ರಮಂ (ಪಂರಾಮಾ. ೧೧-೯) ; ನೋಡಿ ಮಹೋಗ್ರಚಾಪಮನದಂ ಕೆಲರಾಗಳೆ ಪಿಂಗಿ ಪೋದರ್ . . . ಉದ್ಧತಿಕೆಯಿಂ ಕೆಲರೆಯ್ದಿ ತಳರ್ಚಿ ಬಿಟ್ಟು ನಾಡಾಡಿಯದಲ್ಲದೆಂದು ಪುಡಿಯಂ ಬಿದಿರ್ದಂದವರೆಟ್ದು ಪೋಪುದುಂ (ನೇಮಿಪು. ೯-೯೬) ; ತಳರೆ ತಳರ್ಚ್ಚುವಂಗೆ ಕನಕಾಚಳಮೊತ್ತುವಂಗೆಲೇ ವಿಯತ್ತಳಂ . . . ಚಟ್ಟವನೆಂಬ ಜೆಟ್ಟಿಗಂ (ಎಕ. XI, ದಾವಣ. ೪೩-೪೭ ; 1164) : ಎಂದುಂ ಕಾಲಕ್ಕೆ ಚಲಂ ಸಂದುದು ಮೂಜಗದೊಳಚಲಮೆಂದೊಡೆ ನಗುತುಂ ಬಂದು ತಳರ್ಚುಗುಂ (ಅರ್ಧನೇ. ೪-೧೯) ; ಪದತಳಮಂ ತಳರ್ಚಲಿನಿಸಿಲ್ಲನೆ ಧಾರಿಣಿ ಮಾಯವಾದುದೋ . . . ತನುವಿಂಗೆ ಸಾರಲಿನಿಸಿಲ್ಲನೆ ನಾಲ್ದೆಸೆ ತಾಪಿಸಿತ್ತೋ ಪೇಱಿದು ವಿಪರೀತಮೆಂದು ಸುಱಿವರ್ ನೆಲೆ ಕಟ್ತಲೆ ಪೆತ್ತುದೇಱಿಗ್ಗಿಯಂ (ಸೂಕ್ತಿಸು. ೮-೭೧). ೨. ಸ್ಥಳ ಬಿಟ್ಟುಹೋಗು ;

ಹೊರಡು : (ಕ). ೩. ಹಿಂಜರಿ ; ಅಳುಕು ; ಹೇಸು : ನಿಷ್ಠುರ ಗಜರಾಜಿಯಿಂ ತುಟಿಸಿಕೊಳ್ವುದು ಪೆರ್ಗಡಲಲ್ಲಿ ಗಂಟಲಂ ಮುಳಿದು ತಳರ್ಚದಿಕ್ಕುವುದು ಲೇಸು ಕುದೃಷ್ಟಿಗೆ ಸೋಲು ಕೂಸನಾದರದೊಳಿ ಬೇಗವಿಮಾವುದಱಿಂ (ಧರ್ಮಾಮೃ. ೧೦-೪೯). ೪. ಚೆದರಿಸು ; ಚೆಲ್ಲಾಪಿಲ್ಲಿ ಗೊಳಿಸು : ಅಲರ್ದ ಪೊಸಸಿಂದುರಂಗಳನಲೆವಳಿಕುಳಮಂ ತಳರ್ಚಿ ತಣ್ಮಲೆವೆಲರೀಯಲೆಯದಪುದೆಮ್ಮಂತಃಪುರಲಲನೆಯರಂ(ಆದಿಪು. ೧೧-೯೦) ; ದೋಷಮಂ ತಳರ್ಚುವ ಗುಣಮಂ ಕಟಲ್ವುವಮರ್ದಿಂಪನೊಡರ್ಚುವ . . . ಕಾವ್ಯಸತ್ಕಳಾರ್ಣವ ಮೃಗಲಕ್ಷ್ಮಲಕ್ಷಣವಚೋವಧುವಂ ಬುಧರೊಲ್ದು ವರ್ಣಿಕುಂ (ಪುಷ್ಪಪು. ೧೪-೫೭) ; ಮಹಾಡ್ರೂಂಕಾರದಿಂದಂ ತಳರ್ಚಿ ಕೆಲವರನೊಡನೆ ವಾಲಾಗ್ರದಿಂದಿರದೆ ಬಾರ್ಚಿ ಕೆಲಬರನಿಂತು ಪುಂಗವಂ ಭಂಗವಂ ಮಾಡುತ್ತೈತರುತಿರ್ದನು (ಚಿಬಪು. ೪೪-೧೯).
[ ತಳರ್ + – ಚು$_1$ ]

**ತಳರ್ನಡೆ** (ನಾ). ದಟ್ಟಡಿ ; ಅಸ್ಥಿರವಾದ ಹೆಜ್ಜೆ ; ತಪ್ಪುಹೆಜ್ಜೆ : ನಡೆವ ತಳರ್ನಡೆಯೊಳ್ ಪುಡಿಪುಡಿಯಾದುವು ಶಿಲೆಗಳೊಡದು (ಪಂಪಭಾ. ೨ ೫) ; ಕಿವಿಗಿನಿದೆನಿಪ್ಪ ವೀಣಾರವದೊಳನಾದರಮನುಂಟುಮಾಡಿತ್ತು ತನೂಭವನ ತಳರ್ನಡೆಯೊಳ್ ಪೊಣ್ಮುವ ಮೃದುಪದಕನಕಕಿಂಕಿಣೀಝುಣಝುಣಿತಂ (ಪಂರಾಮಾ. ೩-೧೨೭) ; ಈ ನಡೆದುದೆ ತಾಯ ಬೆನ್ನೊಳೆ ತಳರ್ನಡೆಯಿಂ ಕಳಹಂಸ ಪೋತಕಂ(ಅರ್ಧನೇ.೦-೯೪); ಕಂಪಿಕುಂ ಧರೆ ತಳರ್ನಡೆವಂಘ್ರಿಭರಕ್ಕೆ ಕೃಷ್ಣನಾ (ಜಗವಿ. ೩-೪೩) ; ಪೊರಳ್ದುರುಳ್ದಂಬೆಗಾಲಿಕ್ಕಿ ದಟ್ಟಡಿಯನಿಟ್ಟರದೆ ತಳರ್ನಡೆ ನಡೆದು (ಕುರಾಸಾಂ. ೭-೬೭) ; ತೊದಲ್ನುಡಿಯ ಸೊಗಸು ತಳರ್ನಡೆಯ ಗಾಡಿ ಮನಂಬುಗೆ ಕಣ್ಗೆಂಬಾದರಾಲಂಬಾಲಕರ್ ಬಾಲಕರ್ (ರಾಮಾಶ್ವ. ೧೫೦-೨೮). [ ತಳರ್ + ನಡೆ$_2$ ]

**ತಳರ್ನಾಲಗೆ** (ನಾ). ಜೋಲಾಡುವ ನಾಲಗೆ ; ಚಾಚಿದ ನಾಲಗೆ : ಸೋಱುವ ಜೊಲ್ಲೆಸರಬಿಯ ಮೊದಲಾಗೆ, ಱೊಬ್ಬೆಯ ನೀಟದ ತಳರ್ನಾಲಗೆ ಕೀಟಲಾಗೆ (ರಾಮಾಶ್ವ. ೧೧೧-೨೯). [ ತಳರ್ + ನಾಲಗೆ ]

**ತಳರ್ನುಡಿ** (ನಾ). ೧. ತೊದಲುಮಾತು ; ತಡವರಿಸುತ್ತ ಆಡುವ ಮಾತು : ದಡದಡಿಪಡಿ ಪಡಿಮಾತಂ ಪಡೆಯಲೊಡರ್ಚುವ ಮನಂ ತಡಂಬಡಿಪ ತಳರ್ನುಡಿಯಗಡಿಗೊಡನೊಡನಿಟ್ಟೆಡೆಗೊಂಡಿರೆ ನುಡಿದ ನಾಗಳಾ ಚರಮುಖ್ಯಂ (ರಾಜಶೇ. ೬-೩೩). ೨. ನಡುಗುವ ದನಿ ; ಕಂಪಿಸುವ ಸ್ವರ : (ಕ). [ ತಳರ್ + ನುಡಿ$_2$ ]

**ತಳರ್ನೋಟ** (ನಾ). ಚಂಚಲವಾದ ದೃಷ್ಟಿ: ಕೊಡಕೆ ನಿಮಿರೆ ನವಿರ್ಕೊರ್ಕ್ಕರಿಸೆ ತಳರ್ನೋಟದಿಂ ನೋಟ್ಟ ಹರಿಣಸಂದೋಹದಿಂದೆಯುಂ (ರಾಮಾಶ್ವ. ೩-೨೮). [ ತಳರ್ + ನೋಟ ]

**ತಳರ್ಪು** (ನಾ). ವಿಸ್ತಾರ ; ಹರಹು : ತನ್ನ ಜಸದಂತೆ ಪಸರಿಸಿದಚ್ಚವೆಳ್ದಿಂಗಳನಾಕೆಯ ಕಣ್ಗಳ ಬೆಳ್ಪಿನ ತಳರ್ಪನುತ್ತುಂ ಪೆಳ್ಪಳಿಸಿ ಚಂದ್ರನಂ ನೋಡಿ (ಪಂಪಭಾ. ೪-೬೯ ವ). [ ತಳರ್ + – ಪು$_1$ ]

**ತಳರ್ವಕ್ಕಿ**(ನಾ). (ಚೆಲುವಾಗಿ)ನಡೆಯುವ ಪಕ್ಷಿ; "ನಡೆವಕ್ಕಿ, ಹಂಸಪಕ್ಷಿ" (ಪ್ರಭಣ್ಣ) : ತಳಿರ್ವೆರಲ ತರತರಕೆಯ ತುಂಬಿಯ ತಳರ್ವಕ್ಕಿಯ ಕುಸುಂಕುಱುಗೊಂಡೆಸಟ ಬಾಟ್ವೀಲಿಯ ಕೇಸರದ ಕಕ್ಕುಂದರಿಯ ಕಾಪಿನ ಕಂಪಿನ ಕೋಶವಿರ್ಪಂತೆ (ಲೀಲಾವ. ೮-೫೦ ವ). [ ತಳರ್ + ಪಕ್ಕಿ$_1$ ]

**ತಳರ್ವಜ್ಜೆ** (ನಾ). ಚುರುಕಾಗಿ ಇಡುವ ಹೆಜ್ಜೆ : ತಳರ್ವಜ್ಜೆ ತಟಪುಟ ನಿಡುವಾಗ ವಿಟರೆದೆ ತಳಹೊಳೆಗೊಳುತಿಹುದೊಡನೆ (ಭರಜ. ೧೨-೬೮).
[ P ಇದು 'ತಳಿರ್ವಜ್ಜೆ'ಯ ಅಪಲಿಖಿತವಿರಬಹುದು ]

**ತಳರ್$_1$**, ತಳಲು$_1$ (ಕ್ರಿ). ಹೋಗು ; ತೆರಳು : ಕಾಂಚಿಯೊಳ್ ವಿರಾಜಿಸಲೊಸಗೆಯಿಂದ ಸಂದರುಶನಂಗೆಯ್ದು ತಳಲ್ದಿರ್ದನೆಂದು ಕೂಷ್ಮಾಂಡ ಗಣನಾಥಂ ಪೇಳ್ದನು (ನಂದಿಮಾ. ೧೦-೫೩). **ತಳಲು$_1$** : ಕಲುಷಯುತ ಚಂಡಾಲನೊಂದುದಿನ ಶಿವಭಕ್ತರಲಘುತರದುಪಕರಣಮಂ ಕದ್ದುಕೊಂಡವಂ ತಳಲುತಿರೆ ಬೆಂಬತ್ತಿ ಬರಲೋಡಿ ಬಂದು ಮಸಣದೊಳು ಕೆಡೆದಸುವ ಬಿಡಲು (ಪಾಸೋಪು. ೩-೮೭). 'ತೆರಳ್' ಪರಾ. [ <ತಳರ್ ? ]

**ತಳಲ್$_2$**, ತಳಲು$_2$ (ಕ್ರಿ). ಚಿಗುರು; ಪಲ್ಲವಿಸು: "ಎಳೆ[ಪಾಠಾಂ. ಲೆ]ತಳಲ್–ಪಲ್ಲವ ಪ್ರಾಪ್ತೌ (ಎಲೆ ಚಿಗುರು)" (ಶಮಧಾ); "ತಳಲ್ – ಶಾಖಾಮುಖೇ (ಚಿಗುರು)" (ಶಮಧಾ). **ತಳಲು$_2$**: 'ತಳಲುಗಾವಿ', 'ತಳಿರ್$_1$' ಪರಾ. [ ? ]

**ತಳಲು$_1$** 'ತಳಲ್$_1$' ನೋ.

**ತಳಲು$_2$** 'ತಳಲ್$_2$' ನೋ.

**ತಳಲು$_3$** 'ತಟಲ್' ನೋ.

**ತಳಲು$_4$**, ತಳಿಲು$_3$ (ನಾ). ನಿಗಿನಿಗಿಯಾದುದು ; ಪ್ರಖರವಾದುದು. 'ತಳಲುಗೆಂಡ', 'ತಳಲುರಿ' ಪರಾ. **ತಳಲು$_3$** : ಮೂಳೆಯ ಮಾಂಸ ತಳಲು ಸುಡುಗೊಳ್ಳಿಯು ನೀಳದ ಹುರಿಯು ಬಾರುಗಳು ತಾಳಿಸಿ ತಿಂಬ ಸೀಗುಡಿ ಕರಿಮಾನಿನ ಗೂಳಯವನು ಕಂಡ ರಾಯ (ಹರಿಸಾಂ. ೪-೨). [ ದೇ.II ತಮಿ. ತಟಲ್, ತಣಲ್, ಅಟಲ್ ; ಮಲ. ಅಟಲ್, ಅಟಲು ]

**ತಳಲುಂಬಳಲುಂ**, ತಳಲುಮಳಲು (ಅ). ನುಗ್ಗುನುರಿಯಾಗಿ; ನುಗ್ಗುನುಗ್ಗಾಗುವಂತೆ. 'ತಳಲುಂಬಳಲುಂಗುಟ್ಟು' ಪರಾ. **ತಳಲುಮಳಲು**: 'ತಳಲುಮಳಲುಗುಟ್ಟು' ಪರಾ. [ ? ]

**ತಳಲುಂಬಳಲುಂಗುಟ್ಟು**, ತಳಲುಮಳಲುಗುಟ್ಟು (ಕ್ರಿ). ನುಗ್ಗುನುರಿಯಾಗುವಂತೆ ಕುಟ್ಟು ; ನುಗ್ಗುನುಗ್ಗಾಗುವಂತೆ ಹೊಡೆ ; ಅಜಗಿಜಿಯಾಗುವಂತೆ ಚಚ್ಚು : ಮುಳಿದು ಗಜೆಗೊಂಡು ಕೌರವಕುಳವಿಳಯಂ ಕೌರವಾನುಜರ್ಕಳನಾಗಳ್ ತಳಲುಂಬಳಲುಂಗುಟ್ಟದನೆಳೆಯೊಳ್ ಪಡಲಿಟ್ಟು ಸೊಪ್ಪುಸೊಪಡಪ್ಪಿನೆಗಂ (ನೇಮಿಪು. ೧೨-೮೩). **ತಳಲುಮಳಲುಗುಟ್ಟು**: ಕೌರವಾನುಜರ ತಳಲುಮಳಲುಗುಟ್ಟಿ ಪಡಲಿಟ್ಟಂದದಿನಿಳೆಯೊಳು ನೆರಪಿದನು (ನೇಮಿಸಂ. ೨೯-೩೮). [ ತಳಲುಂಬಳಲುಂ + ಕುಟ್ಟು$_1$ ]

**ತಳಲುಗಾವಿ**(ನಾ).=ತಳಿರ್ಗಾವಿ ೨: ಹಲವಾಭರಣ ತಳಲುಗಾವಿ ಪೊಂಬಟ್ಟು ಸೆಳೆಗೋಲು ಕೈಯ ಕೊಳಲ ಧ್ವನಿಗೈಸುತ್ತಾಕಳ ಕಾಯಿದನೀತ (ವಿಸೂ.ೀಸು. ೫೯-೦). [ ತಳಲು$_2$ (<ತಳಲ್$_2$) + ಕಾವಿ ]

**ತಳಲುಗೆಂಡ** (ನಾ). ಚೆನ್ನಾಗಿ ಉರಿಯುವ ಕೆಂಡ ; ನಿಗಿನಿಗಿ ಕೆಂಡ ; ತನಿಗೆಂಡ : ಬಳಿಕಮಾ ಗೂಡ ಬಿಸಿಮಾಡಿ ಮತ್ತದಱೊಳಗೆ ತಳಲುಗೆಂ[ಪಾಠಾಂ. ಕೆಂ]ಡವ ಹಾಕಿ ಅದಱ ಮಧ್ಯದೊಳೊಂದು ಕಳಸಿಗೆಯನಿರಿಸಿ (ಸೂಪಶಾ. ೫-೨೭) ; ತಳಲುಗೆಂಡದ ರಾಸಿಯ ಮೇಲೆಯುಱುಪೆಯ ಬಳಗ ಮುಸುಕಿ ಸಾವಂತೆ (ರಾಮವಿ. ೧೮-೧೧೮). [ ತಳಲು$_4$ + ಕೆಂಡ ]

**ತಳಲುಪಂಚಮಿ** (ನಾ). ಹೊಲದಲ್ಲಿ ಬೆಳೆ ಪಕ್ವವಾದಾಗ ಮಾಡುವ ಒಂದು ಬಗೆಯ ಹಬ್ಬ : ಹೂವುಪಂಚಮಿ, ಕಾಯಿಪಂಚಮಿ, ತಳಲುಪಂಚಮಿ ಎಂದು ಹುತ್ತದ ಹತ್ತಿರ ಪೂಜೆ ಊಟಗಳು ನೆರವೇರುತ್ತಿದ್ದವು (ಹುಟ್ಟುಹ. ೬೫). [ ತಳಲು$_3$ (<ತಟಲ್) + ಪಂಚಮಿ ]

**ತಳಲುಮಳಲು** 'ತಳಲುಂಬಳಲುಂ' ನೋ.

**ತಳಲುಮಳಲುಗುಟ್ಟು** 'ತಳಲುಂಬಳಲುಂಗುಟ್ಟು' ನೋ.

**ತಳಲುರಿ** (ನಾ). ಧಗಧಗಿಸುತ್ತಿರುವ ಉರಿ : ತಱಿಗೆಂಡದ ತಳಲುರಿಯೊಳು ಮಧುರ ಬೊಬ್ಬಿಱಿದು ಧೀಂಕಿಟ್ಟನಂದು (ಸೂಬಸೋ. ೯-೭೨).
[ ತಳಲು$_4$ + ಉರಿ$_2$ ]

**ತಳಲುಶ್ರಮ** (ನಾ). ಮಾರ್ಗಾಯಾಸ : ವಿಳಸಿತವೆನಿಪ್ಪ ಹೊಱವಳಲು ಪಾಂಥಾವಳಿಗೆ ನೆಳಲು ಜೀವೋನ್ನುಖದ ತಳಲುಶ್ರಮದ ಬೇರ ಕಿಳಲು ಮನವಂ ಸೂಱೆಗೊಳಲು ಸಾಕೆಂದು ಹೊಗಳುತ್ತಲ್ಲಿಯಱವಟಿಗೆಯ . . . ಈಕ್ಷಿಸಿ (ಸೋಮಚ. ೧-೧೧೪). [ ತಳಲು$_1$ (<ತಳಲ್$_1$) + ಶ್ರಮ ]

**ತಳಲೆ** 'ತಾಳೋಲೆ' ನೋ.

**ತಳಲೋಕ** (ನಾ). ಕೆಳಗಿನ ಲೋಕ ; ಅಧೋಲೋಕ ; ಪಾತಾಳ : ಚೆಲುವಿಕೆಗವನ ಶೃಂಗಾರಕೆ ಜಾಹ್ನೆಗೆ ವಿಲಸಿತಗಂಭೀರಗುಣಕೆ ತಳಲೋಕ ನರಲೋಕ ಸುರಲೋಕದೊಳು ಮೆಚ್ಚಿ ತಲೆದೂಗದವರೊಬ್ಬರಿಲ್ಲ (ಭರಜ. ೭೬-೩). [ತಳ (=ತಲ) + ಲೋಕ]

**ತಳವಕಾರ** 'ತಲವಕಾರ' ನೋ.

**ತಳವಗಲ್** (ಕ್ರಿ). ನೆಲೆದಪ್ಪು ; ಆಶ್ರಯತಪ್ಪಿ ಉರುಳು (?) : ಆರ ಮೃದೂಕ್ತಿಯಂ ಬಯಸಿ ಕೇಳ್ದು ತನೂಜ ಮದೀಯ ಕರ್ಣದೊಳ್ ಪೂರಿಪೆನಿಂ ರಸಾಯನಮನಾರ ಮುಖೇಂದುವನೊಲ್ದು ನೋಡಿ ವಿಸ್ಫಾರಿಪೆನೀ ಮದಕ್ಷಿಗೆ ಸುಧಾರಸಪೂರಮನೆಂದು ತಾರಹಾರಾ[ಹಾ] ರವದಿಂದವಳ್ ತಳವಗಲ್ದಳೊಱಲ್ದನಿಳಾತಳಾಧಿಪಂ (ಚಂದ್ರಪು. ೫-೧೭).
[ತಳ (=ತಲ) + ಅಗಲ್$_1$]

**ತಳವಗ್ಗ** (ನಾ). = ತಳವರ್ಗ (?) : ಗಜವದ ನಿಸನ್ದ ತಳವಗ್ಗ ಮಾದಿಯರ ವಿದ್ಯಾದರ ಪ್ರಿತುವೀ ಗಂಗದೇಸ (ಮೈಆರಿ. ೧೯೩೦, ೯-೩೯ ; 267 ಕ್ರಿಶ).
[?]

**ತಳವಟಗೊಳ್ಳು** (ಕ್ರಿ). ತಳವಮಳಗೊಳ್ಳು (?) : ಅರಮನೆಯೊಳಿಹರೆಲ್ಲ ಹಾಯೆಂದಱಚಿ ಕಂಬನಿಯೊಸರಿ ಶೋಕದ ಭರದಿ ತಳವಟಗೊಂಡು ಸುಮ್ಮನಿರಲ್ಕೆ (ತಿಮ್ಮಸ್ವೀ. ೧-೧೫) ; " ಮುಳುಗಿಹೋಗು " (ಷಟ್ಪನಿ).
[ತಳವಟ$_0$ (<ತಳಪಟ) + ಕೊಳ್ಳು$_1$ (<ಕೊಳ್$_1$)]

**ತಳವಡು** (ಕ್ರಿ). ಕುಳಿತುಕೊಳ್ಳು; ಆಸೀನನಾಗು: ತಡೆ ನಿಲ್ಮಾಣ್ಮಾಣ್ಬಲ್ಲೆ ತಳವಡು ಮಿಡುಕಿನ್ನೇಕೆ ಸಾರ್ (ಚಕವಿ. ೬-೧೭೪).
[ತಳ (=ತಲ) + ಪಡು$_1$]

**ತಳವನ** (ನಾ). = ತಲಕ್ಕಾಡು : ಮಲೆಯಂ ಸಾಧಿಸಿ ಮಾಣ್ದನೇ ತಳವನಂ ಕಾಂಚೀಪುರಂ ಕೋಯತೂರ್ಮ್ಮಲೆನಾಡಾ ತುಳುನಾಡು . . . ಇವೆಲ್ಲಂ ಭುಜಾಬಲದಿಂ ಲೀಲೆಯೆ ಸಾಧ್ಯವಾದುದೆಣೆಯಾರ್ವ್ವಿಷ್ಣು ಕ್ಷಮಾಪಾಳನೊಳ್ (ಎಕ. V, ಅರಸೀ. ೧-೧ ; 1168). ☞ ಇದು 'ತಲಕಾಡು' ಎಂಬುದರ ಸಂಸ್ಕೃತೀಕರಣ. [ತಳ (=ತಲ) + ವನ]

**ತಳವನಪುರ** (ನಾ). = ತಲಕ್ಕಾಡು : ತಳವನಪುರದೊಳ್ತಳವಿತ್ತಿಯ ಮಣ್ (ಎಕ. I, ೧-೨೦ ; 466) ; ತಳವನಪುರದೊಳಿಟ್ಟು (ಮೈಆರಿ. ೧೯೩೩, ೩೮-೪ ; 801); ಎಳೆಗೆಸೆವ ಕೋಯತೂರ್ತ್ತಳವನಪುರಮಂತೆ ರಾಯರಾಯಪುರಂ (ಎಕ. VII, ಶಿವಮೊ. ೬೪-೧೬ ; 1112). 'ತಲವನನಗರ' ಪರಾ.
[ತಳವನ + ಪುರ$_3$]

**ತಳವರ** 'ತಳವಱ' ನೋ.

**ತಳವರ್ಗ** (ನಾ). ಅಂಗರಕ್ಷಕ ದಳ (?) : ಅನೇಕ ಪ್ರಜೆ ಪರಿವಾರ ಬಂಧುವರ್ಗ್ಗಮುಂ ತಳವರ್ಗ್ಗಮುಂ ಕುಲಸ್ತ್ರೀ ಚಿಕ್ಕಲದೇವಿಯುಂ ಬೆಸಕೆಯ್ಯೆ (ಎಕ. IX, ಕೊಡಗು. ೫೭-೩೯ ; 1095) ; ದೂರೀಕೃತಾರಿ ಷಡ್ವರ್ಗನುಂ ಸವಿಾಕೃತ ತ್ರಿವರ್ಗನುಂ ದೃಢೀಕೃತ ತಳವರ್ಗನುಂ ನವಿಾಕೃತ ಸಾಮಂತವರ್ಗನುಮಾಗಿ (ಚಂದ್ರಪು. ೪-೨೮ ವ) ; ಪದ್ಮನಾಭ ನರನಾಥನಾತನ ಮನವಮುಮಂ ಪತ್ತೆಸಾರ್ವ ತಳವರ್ಗದ ನಿಗ್ರಹ ವೃತ್ತಿಯುಮಂ ಕಂಡಿದು ಮದೀಯ ವಿಕ್ರಾಂತ ದರ್ಶನಾರ್ಥಮೆಂದು (ಚಂದ್ರಪು. ೧೧-೯೪ ವ). 'ತಳತಂತ್ರ' ಪರಾ. [ತಳ (=ತಲ) + ವರ್ಗ]

**ತಳವಳ** 'ತಳವಂಳ' ನೋ.

**ತಳವಳಗು** 'ತಳವಂಳಗು$_2$' ನೋ.

**ತಳವಳಿಸು** 'ತಳವಂಳಿಸು' ನೋ.

**ತಳವಱ, ತಳರ, ತಳವರ, ತಳವಾರ$_1$, ತಳವಾಱ, ತಳಱ, ತಳಾರ$_1$,** ತಳಾರಿ, ತಳಾಱ, ತಱವಳ, ತಱವಾಳ, ತಾಳವಾರ$_2$ (ನಾ). ಕಾವಲುಗಾರ ; ಗ್ರಾಮರಕ್ಷಕ ; ನಗರರಕ್ಷಕ : ಮಂತ್ರಿ ಪುರೋಹಿತ ತಳವಱಾದಿಗಳ್ಗಿಂತೆಂದೋಲೆಯನಟ್ಟಿದೊಂ (ವಡ್ಡಾರಾ. ೭೫-೧೪) ; ಸೇನಾಪತಿ ತಳವಱ ದಂಡನಾಯಕ ಪ್ರಭೃತಿಗಳುಂ (ಅಜಿಪು. ೧೦-೨ ವ) ; ತಳವಱರ್ . . . ದುರಾತ್ಮಂ ಸಿಲ್ಕಿದನೆಂದಾತನಂ ಪಿಡಿದು (ದಶಕು. ೧೨-೯೭ ವ); ದುಃಖಂಗಳನನುಭವಿಸುತ್ತಿರ್ಪರ್ ತಳವಱರ ವಶಕ್ಕೆ ಸಂದ ಕಳ್ಳರ ತೆಱದಿಂ (ಬಾಧಪು. ೫-೪) ; ಬಲ ಮಹಾಂಬುಧಿಯೊಳಗಿರುಳ ಮೋಲ್ತಳವಱನು ಹೈಡಂಬಿ[ಪಾಠಾಂ. ತಱವಳಿಕೆ ಹೈಡಿಂಬಂಗೆ] (ಕುವ್ಯಾಉ. ೧೦-೪೯) ; ಹೊಳೆವ ಕಠಾರಿ ಕೈಗತ್ತಿ ತೋಮರ ಬಿಲ್ಲು ಬಲುದಡಿ ಪಿಡಿಚಕ್ರದಲಿ . . . ತಳವಱರೂರ ಕಾದಿಹರು (ಮೋಹತ. ೧೮-೧೦೩) ; ತುಂಬಿಗಳೆಂಬದಿಗರ್ೋಲನಾಂತೆಲರ್ ತಳವಱನಂತೆ ಸಾಱುತನುಗೆಯ್ದುದು ದರ್ಪಕವೀರಸೇನೆಯಂ (ಚಕವಿ. ೬-೩೬). **ತಳರ:** ಅರಟ್ಟಗ ತಳರ ಕೂಡಲೂರ ವೃತ್ತಿ ನೊಕ್ಕಿಊರೊಳೆ . . . ಕೊಟ್ಟ ನೆಲ (ಮೈಆರಿ. ೧೯೧೭, ೦೩-೬ ; 8ನೆಯ ಶತ) ; ಬಮ್ಮಂದಳರಂ [ಕೊ]ಣ್ಣು ಬಿಟ್ಟ ಸರಣ ವ್ರಿತ್ತಿ (ಮೈಆರಿ. ೧೯೩೦, ೭೫-೩೯ ; 1082). **ತಳವರ:** ಕಾವಲು ನಿಂತಿಹ ತಳವರರಂದದ ತೆಂಗಿನ ಕೌಂಗಿನ ಸಾಲಲ್ಲಿ (ನಳ್ಕ. ೩-೨). **ತಳವಾರ$_1$:** ಜತ್ತ ತಳವಾರ ಪೊಗುಣ್ದ ಕಾಳೆಗದುಳ ಎಱಿದು ಸತ್ತ (ಎಕ. IX, ನೆಲಮಂ. ೩೪-೩ ; ಸು. 750 ?) ; ಬಟ್ಟೆಗಾರಕದ ತೆರನು ತಳವಾರ ಮುಖಾಂತ್ರ (ಎಕ. VII, ಶಿವಮೊ. ೩-೨೫ ; 1671) ; ಕಳವು ಮಾಡದಿದ್ದರೂ ಕಳ್ಳನೆಂಬ ಶಂಕೆಯಿಂದ ತಳವಾರರು ಶೂಲಕ್ಕೆ ಹಾಕಲು (ಕೃವಾಅ. ೧೦೨) ; ನಲಿಯುತ ಕಾಲಚಕ್ರನು ತಾನೆಂಬುವ ತಳವಾರನಿರುವನಾ ನೃಪಗೆ (ಸೌಗಂಪ. ೧-೨೨) ; ಊರಿನ ತಳವಾರ ತಾಸಿಗೊಮ್ಮೊಮ್ಮೆ ಗಂಟೆ ಬಾರಿಸುವುದನ್ನು ಕೇಳಿ (ಧರ್ಮಸಾ. ೬೩); ಗ್ರಾಮಶಾಂತಿಗೆ ತಳವಾರ ತಲೆ ಬೋಳಿಸಿಕೊಂಡ (ಗಾದೆ). **ತಳವಾಱ:** ಹಾಹಾಕ್ರಂದನರವದಿಂ ಪುಯ್ಯಲಿಡುವ ಕರುಣಾರವಮಂ ತಳವಾಱಂ ಕೇಳ್ದು (ಪಂಚತಂ. ೭೪-೧) ; ನೆಲ ತಳವಾಱನಾದಡೆ ಕಳ್ಳಂಗೆ ಹೋಗಲೆಡೆಯುಂಟೇ (ಮೋಳಿಮಾ. ೬೮-೨೭೩) ; ಆ ಕಾಂತಕನೆಂಬ ತಳವಾಱ ನಾಯಕಂ ಅರಸನೋಲಗದಿಂ . . . ಪೋಗುತ್ತಿರೆ (ದಶಕು. ೮-೨೬೪ ವ) ; ಐಸಱ್ರೋಳೀಕ್ಷಿಸುತ ತಳವಾಱರದೆಯಿದೆ ಪೋದನೆಂದೆನುತ (ಬಸವು. ೫೬-೪೮) ; ತಳವಾಱವರ ಮುಂತಾಗಿ ಯೆಲಾಉ ಸರ್ವಮಾನ್ಯವಾಗಿ ಬಿಟ್ಟು (ಎಕ. X (8), ಮುಳಬಾ. ೫-೨ ; 15ನೆಯ ಶತ) ; ಜಡಿವ ದನಿಗಳಿಂದ ತಳವಾಱರುಗಳ ಪಡೆ ತಿರುಗುವುದು ದುರ್ಗದಲಿ (ಕಂನವಿ. ೧೧-೧೪೦). **ತಳಱ:** ಅಮಾವಾಸ್ಯೆಯುಂದು ತಳಱಙ್ಗೆ ಆವಣದೊಳೊರ್ವ್ವಳ್ಳ ಜೋಳಂ (ಕಇಅ. ೮೬-೧೮-೪೨ ; 932) ; ಇನ್ನೆನಿಸಿ ನೆಗಟ್ದ ನ್ರಿಪತಿಗೆ ಸನ್ನಂ ಜಯಲಕ್ಷ್ಮಿಯಂ ಭುಜಾಸಿಯೊಳಿರಿಸಲ್ಕಿನ್ನಿವನೆನೆಟೆವನೆನಿಸುವನೆನ್ನುಂ ಶ್ರೀ ತಳಱ ನಾಗವರ್ಮ್ಮಂ ಧರೆಯೊಳ್ (ಸೌಇಇ. XX, ೫೫-೨೫ ; 1082). 'ತಳಱಸುಂಕ' ಪರಾ. **ತಳಾರ$_1$:** ' ತಳಾರ, ತಳವಾರ – ತಲಾರೋ ನಗರಾರಕ್ಷಕಃ ' ಸಂ – ಸ್ಥಲವಾರಃ (ಕಸಾಪ. II, ೧೮೨); ಆ ಪಟ್ಟಣದಲ್ಲಿ ಯಮದಂಡನೆಂಬವನೊಬ್ಬ ತಳಾರ (ಕಸಾಜ. ೧) ; ಆಗಿನ ಕಾಲದಲ್ಲಿ ಈ ತಳಾರನು, ಈಗಿನ ಪೋಲೀಸರಂತೆ ಹಳ್ಳಿಗಳಲ್ಲಿರುತ್ತಿದ್ದನೆಂದು ಹೇಳಬಹುದು (ಕನ್ನಜಾ. ೧೪೨). **ತಳಾರಿ:** (ರೈಸಗೆ. II, ೫೬೨); ಒಕ್ಕಲಿಗನು ಮುಂದೆ ತೋಟಿ ತಳಾರಿಗಳು ಹಿಂದೆ (ಕಥಾಮಂ. IV, ೨೦) ; ಪಟೇಲಿ, ಶಾನುಭೋಗಿ, ನೀರಗಂಟಿ, ತೋಟಿ ಅಥವಾ ತಳಾರಿ ನೌಕರಿಯು ಖಾಲಿಯಾದಾಗ (ಗ್ರಾಮಾಕ. ೯೦). **ತಳಾಱ:** ತಳಾಱಂಗೆ ಇಪ್ಪತ್ತನಾಲ್ಕು ದ್ರಮ್ಮ (ಹೈಆರಿ. ೧೯೩೭, ೨೭-೨೮ ; 572) ; ತಳಾಱಂಗೆ ಕಳ್ಳನೀತನಲ್ಲೆಂಬುದೊಂದು ನಂಬುಗೆಯಾಗಿ (ವಡ್ಡಾರಾ. ೧೨೪-೩೩) ; ತಳಾಱನಂತೆ ನಿದ್ರೆಗೆಟ್ಟು (ಧರ್ಮಾಮೃ. ೦-೭೬೮) ; ತಳಾಱನ ಕೆಯ್ಯಿಂ ಬಡಗಲು (ನಾಂದೇಡ್. ೩೦-೧೯ ; 1134) ; ಅಂಧತಮಮುಮನೋಡಿಸಿ ದೋಷಾಕರನಂ ಕಳೆಗುಂದಿಸಿ

ಪರಿವರಿದುವು ತರಣಿಯು ತಳಾಱಿರಂತಿರೆ ಕಿರಣಂ (ಗಿರಿಕ. ೫-೭) ; ಸಂದಣಿಸಿ ಚೋರರೊಡವೆಗಳ ಕೊಂಡೊಯ್ಯುತಿರಲಂದು ಕಾಣುತ್ತಂ ತಳಾಱರಟ್ಟಿ ಬರಲ್ಕೆ (ಪಾಸೋಪು. ೧೩-೧೦). **ತಱವಳ :** ಕಲುಕುಟಿಗರಂ ಬಡಗಿಯರನಾ ಬಳಿಗೆಲಸಮಂ ಮಾಳ್ಪರಂ ತರ[ಱ]ವಳರ[ಪಾಠಾಂ. ಮಾಳ್ಪವರುಗಳ ತಳುವದಿಱ]ನಚ್ಚಾಳುಗಳಂ . . . ಸುಯಿಧಾನರಂ ಹಲವಾಳುಗಳನಾಯ್ದು (ಬಸವು. ೧೬-೧೩) ; ತಱವಳರಾ ರನ್ನವೊಳಲ್ಗೇರಿಗೇರಿಯೊಳೊಜಲಿಸಿದರು ಡಂಗುರವನು (ಸೊಬಸೋ. ೨೦-೩೦) ; ತಱವಳರ ತೊಳಲಿಕೆಯ ಮೇಲೆಚ್ಚಱಿಕೆ ಮಸುಳಿಸೆ ಮಧ್ಯರಾತ್ರಿಯೊಳಿಱಿತದಂಘವಣೆಯಲಿ ಪರುಠವಿಸಿದನು ಗುರುಸೂನು (ಕುವ್ಯಾಗ. ೯-೧೪). **ತಱವಾಳ :** ಬನವಾಸಿಯೆಂಬ ಪಟ್ಟಣದಲ್ಲಿ ಕನಕರತಿಯೆಂಬ ಅರಸು ಮನಸಿಜನೆಂಬ ಪ್ರಧಾನ ಕನಸ ಕಂಡಡೆ ಅಱವ ತಮಸೂನು ತಱವಾಳ[ಪಾಠಾಂ. ತಳವಾಱ] (ಕೋಲಶಾಂ. ೨೧-೭) ; ಮೊಱೆಯಿಟ್ಟು ಸುಯ್ಯಾಲಿಡುತಲಾ ಪೊಳಲಿನ ತಱವಾಳಗಱುಪೆ ಕೇಳ್ದವನು (ರಾಮವಿ. ೧೬-೭೩). **ತಾಳವಾರ$_2$ :** ತಾಳವಾರನುಂ ಕಾಕಂಬಾಟ ಕಂಬಯ್ಯನುಂ ಅಸಗಗೊಡ ಸಿರಿಯಮ್ಮನುಂ (ಎಕ. XI, ಚಿತ್ರದು. ೭೫-೨೨ ; 941).

[ <ಪ್ರಾ. ತಲವರ, ತಲಾರ./ಸಂ. ತಲವರ, ತಲಾರಕ್ಷ. / ತುಳು. ತಳವಾರೆ ; ತೆಲು. ತಲವರಿ, ತಲವಾರಿ, ತಲಾರಿ ]

**ತಳವಱಗಾಹು** (ನಾ). ನಗರರಕ್ಷಣೆ; ಪಹರೆ; ಕಾವಲು : ಆಹವಕೆ ನಿನ್ನೂರ ತಳವಱಗಾಹಿನವರನು ಕಳುಹುವುದು (ಕುವ್ಯಾಭೀ. ೧-೧೦).

[ ತಳವಱ + ಕಾಹು$_1$ (<ಕಾಪು) ]

**ತಳವಱಗೇರಿ** (ನಾ). ತಳವಾರರು ವಾಸಿಸುವ ಕೇರಿ,-ಓಣಿ : ಚೋರ ರಂಗದ ಮಾತು ತಳವಱಗೇರಿಯಲಿ ಭೂಷಣವೆ (ತೊರರಾ. ೬-೨೨-೭).

[ ತಳವಱ + ಕೇರಿ ]

**ತಳವಱಿಕೆ,** ತಲಾರಿಕೆ, ತಳವಾರಿಕೆ, ತಳವಾಱಿಕೆ, ತಳಾರಿಕೆ, ತಳಾಱಿಕೆ, ತಱವಳಿಕೆ, ತಱವಾಳಿಕೆ (ನಾ). ೧. ತಳವಾರನ ವೃತ್ತಿ,-ಕೆಲಸ ; ಕಾವಲು ; ರಕ್ಷಣೆ ; ಮೇಲ್ವಿಚಾರಣೆ : ಅಲ್ಲಲ್ಲಿ ಜಾವಮುಕ್ಕಡೆ (ಗ)ರವಟಿಗೆ ತಳವ(ಱಿಕೆ)ಯು(ಮ)ಕ್ಕೈಕ್ಕೆಯೊಳಂ ಠಾಣಾಂತರವಂ ನಿರವಿಸೆಯುಂ (ಪುಷ್ಪಪು. ೭-೬೯ ವ). ೨. ಕಾವಲು ಅಥವಾ ಪಹರೆಯ ವ್ಯವಸ್ಥೆಗಾಗಿ ಕೊಡಬೇಕಾದ ಸುಂಕ : ಬಂಕದೆಱ ಸಿದ್ಧಾಯ ಬಿಟ್ಟ ಕೊಟ್ಟಣವನುಪ ಸುಂಕ ಮಲವದಿಕೆ ಸೊಲ್ಲಗೆ ಕವಣ ಕಡ್ಡಾಯದಂಕೆ ತಳವಱಿಕೆ ಕೋರಾಯ ಗುತ್ತಿಗೆ ಅಪುತ್ರಿಕೆ ದಂಡವುಂಡಿಗೆಗಳು (ಸಿಂಗಿರಾ. ೨೨-೨೭). **ತಲಾರಿಕೆ:** ೧. ಸುಂಕವ ಕೊಂಡವನು ತನ್ನ × × × ತಲಾರಿಕೆಗೆಲು ಮದುವೆ × × ಮದವಣಿಗೆ ಕೊಟ್ಟವನುಯೆಂದು ಹಾಕಿದ ಶಾಸನ (ಸೌಇಇ. IX-ii, ೪೮೦-೧೩ ; 1510). **ತಳವಾರಿಕೆ:** ೧. ಹರುಷದಿ ತಳವಾರಿಕೆ ನಿನಗೆಂದಾಗ ಕರದು ಕೊಟ್ಟನು ವೀಳೆಯವ (ಜಿನರಾ. ೬-೪೭) ; ಅಪ್ಪನ ತಳವಾರಿಕೆಯಲ್ಲಿ ಮಗಳ ಸೂಳೆಗಾರಿಕೆ ಚಂದ (ಗಾದೆ). ೨. ಏನುಳ್ಳ ಸುಂಕ ತಳವಾರಿಕೆಗೆಲು ಸಲುವ ಅಂಬಲಿ ವುಡುಗೊರೆ ಗೌಡುಂಬಳಿ ಸಹವಾಗಿ (ಎಕ. VII, ಶಿವಮೊ. ೭೦-೩೦ ; 1431) ; ಸೀಮೊಗ್ಗೆ ತಳವಾರಿಕೆಯಿಂದ ಗಾಜನೂರು ಯಡತೊರೆ ಸೀಮೆಯಲ್ಲೂ ಯಿಾ ಮಠಕ್ಕೆ ಉತ್ತಾರವಾದ ಗ್ರಾಮದವರು . . . ತೈಗೆದುಕೊಂಡು ಹೋಹಂಥಾದಕ್ಕೆ (ಎಕ. VIII, ತೀರ್ಥಹ. ೯೦-೬೬ ; 1709); ಭೈರನಾಯಕನು ಕೊಟ್ಟ ಭೈರಾಪುರಕ್ಕೆ ಜೋಡಿ ಬೇಡಿಗೆ ತಳವಾರಿಕೆ ವಿರಹಿತ (ಮೈಆರಿ. ೧೯೨೭, ೪೫-೭ ; ?). **ತಳವಾಱಿಕೆ :** ೧. ಮಂದಾನಿಲಗೆ ಚೈತ್ರ ತಳವಾಱಿಕೆಯನಿತ್ತಂದದೊಳೆಸೆದನೇವೇಳ್ವೆ (ಕಂನವಿ. ೯-೧೦). ೨. ಸುಂಕ ಮಗ್ಗಮೆ ತಳವಾಱಿಕೆ ಕಾಣಿಕೆ ಕಡ್ಡಾಯ (ಎಕ. X, ಮುಳಬಾ. ೨೦-೨ ; 1468) ; ಅಂಕ ಸುಂಕ ಟಂಕಸಾಲೆ ತಳವಾಱಿಕೆ ನಿಧಿ ನಿಕ್ಷೇಪ (ಎಕ. VIII, ಸಾಗರ. ೧೬೩-೨೩ ; 1488). **ತಳಾರಿಕೆ :** ೨. ದಂಡ ದೋಷ ತಳಾರಿಕೆ . . . ಕಳ್ಳರ ಬಾಧೆ ಆ ಆಸ್ತಳದ ಮಹಾಜನಂಗಳದಲ್ಲದೆ ಮೂನೂರ್ವ್ವರ ಕಾರಣವಿಲ್ಲ (ಎಕ. VI, ತರೀಕೆ. ೫೫-೨೪ ; 1291 ?). **ತಳಾಱಿಕೆ :** ೧. ಯಮದುದಂಡಂಗಂ ಪೊಟಲ ತಳಾಱಿಕೆಯಂ ಕೊಟ್ಟು (ವಡ್ಡಾರಾ. ೧೩೩-೧೭) ; ಹಡವಳರವರಿಗೆ ತಳಾಱಿಕೆಗೆ ಯಿಕ್ಕಿದ ಮತ್ತರಾಱು (ಸೌಇಇ. XV, ೧೨೨-೬೮ ; 1173) ; ಬಸಂತನ ಕಾಪು ಕಾಮದೇವನ ರತಿಯಾಜ್ಞೆ ಚಂದ್ರನ ತಳಾಱಿಕೆ ತೆಂಬೆಲರೊಂದು ಬೆಂಬಲಂ (ಅನಂಪು. ೧-೮೬) ; ಬಂದ ಬಸಂತನ ಬೀಡು ಮಂದಮಾರುತನ ತಳಾಱಿಕೆ ಯೂರ್ಗಳೆಂಬಂದದೊಳಾ ವನವಿಹುದು (ಶ್ರೀಪಾಲ. ೧-೬೩). ೨. ಪೊಱ ವೆಚ್ಚಮೊಳವೆಚ್ಚಮಂತೆ ಸುಂಕಂ ತಳಾಱಿಕೆ ಚರಾದಾಯಮೆಂಬಿಂತೆಲ್ಲವಂ ಪರಿಕಿಸಿ (ಪದ್ಮರಾ. ೪-೨೪). **ತಱವಳಿಕೆ:** ೧. ಅಱಿಯೆ ನೀನೆಲೆ ಮರುಳೆ ಗರುಡನ ತಱವಳಿ[ಪಾಠಾಂ. ರಿ]ಕೆಯೊಳು ಹಾವು ಕನ್ನವ ಕೊಱೆದು ಬದುಕುವುದೇ (ಕುವ್ಯಾವಿ. ೮-೭೩). ೨. ಹಗಿಲುವಣಂ ಇದು ತಱವಳಿಕೆಗೆ ಕೊಟ್ಟುದು (ಕಇ. IV, ೧೬-೨ ; ?). **ತಱವಾಳಿಕೆ:** ೧. ತೋಟಂಗಳ ತಱವಾಳಿಕೆ ಊರ ತಱವಾಳಿಕೆ ಸೇನಬೋವಿಕೆ ಇಂತಿವೆಲ್ಲವಕ್ಕೆವೂ ಹತ್ತುವ ಹೊನ್ನಿಂಗೆ (ಎಕ. XII, ಚಿಕ್ಕನಾ. ೨-೬೬ ; 1261). ೨. ಸುಂಕಕಾರುಕದಿಂದಿರುಪು ತಱವಾಳಿಕೆಕ್ಕ ಅಂತು ೧೨ ॥ ೧ (ಮೈಆರಿ. ೧೯೩೪, ೫೩-೧೩ ; 1405). 'ತಳಱುಸುಂಕ' ಪರಾ. [ ತಳವಱ + -ಇಕೆ ]

**ತಳವಱಿತಿ** (ನಾ). ತಳವಾರನ ಹೆಂಡತಿ: ಅರಸನ ಪೆಂಡತಿ, ಅರಸಿತಿ, ಏವಂ ಪ್ರಧಾನಿತಿ, ತಳವಱಿತಿ, ಸುಂಕಿಗಿತಿ, ತೋಟಿಗಿತಿ (ಶಬ್ದಾಸು. ೧೯೧ ಪ್ರಯೋ).

[ ತಳವಱ + -ಇತಿ$_1$ (<-ಇತ್ತಿ) ]

**ತಳವಾರ$_1$** 'ತಳವಱ' ನೋ.

**ತಳವಾರ$_2$** 'ತರವಾರ' ನೋ.

**ತಳವಾರಗಟ್ಟೆ** (ನಾ). ತಳವಾರನಂ ಕಾರ್ಯವನ್ನು ನಿರ್ವಹಿಸುವ ಸ್ಥಳ ; ಕೊತವಾಲನ ಚಾವಡಿ : ಪುರ ಪೇಟೆ ತಳವಾರಗಟ್ಟೆ ಮುಂತಾದುವಂ ರಚನೆಗೈಸಿ (ಕೆಳನೃ. ೧-೧೦೫). [ ತಳವಾರ$_1$ (<ತಳವಱ) + ಕಟ್ಟೆ$_1$ ]

**ತಳವಾರನಬಳ್ಳಿ** (ನಾ). ಒಂದು ಬಗೆಯ ಬಳ್ಳಿ : ಹುಳಿಮಂಗರವಳ್ಳಿ, ತಳವಾರನ ಬಳ್ಳಿ (ಮೈಜಿಗಿ. ೨೨-೩೯೯) ; ಜುಟ್ಟುವೆಬಳ್ಳಿ, ತಳವಾರನ ಬಳ್ಳಿ . . . ಕುಂಟಗ (ಮೈಜಿಗಿ. ೭೦-೧೨೦೫).

**ತಳವಾರಸರಕಾರ** (ನಾ). ದೇಶದ ಸಂರಕ್ಷಣೆಯನ್ನಷ್ಟೇ ನೋಡಿಕೊಳ್ಳುವ ಸರಕಾರ : ಶಿಪಾಯಿ, ಮ್ಯಾಜಿಸ್ಟ್ರೇಟು, ಪೋಲೀಸು . . . ಇವರಿಂದ ಆಗುವಂಥ ಪ್ರಜಾಸಂರಕ್ಷಣೆಯೇ ಬಹುಪುರಾತನವಾದ ರಾಜ್ಯಕರ್ತವ್ಯ. ಇಂಥಾ ಸರಕಾರವನ್ನು ಸಂಕ್ಷೇಪವಾಗಿ "ತಳವಾರ ಸರಕಾರ" ಎಂದು ಕರೆಯಬಹುದು (ರಾಜ್ಯಶಾ. ೧೬೦). P ಇದು 'police state' ಎಂಬುದರ ಕನ್ನಡ ಅನುವಾದ. [ ತಳವಾರ$_1$ (<ತಳವಱ) + ಸರಕಾರ ]

**ತಳವಾರಿಕೆ** 'ತಳವಱಿಕೆ' ನೋ.

**ತಳವಾಸುಗೆ** (ನಾ). ನೆಲಗಟ್ಟು : ತಳವಾಸುಗೆಯೆ [ಪಾಠಾಂ. ವಾಸಿಗೆಯು] ಪಚ್ಚೆ ಪಳಿಕೆಸೆವ ಪಾಗರಂ ಹೊಳೆವ ವಜ್ರಸ್ತಂಭ (ಮನೋವಿ. ೧-೨೩).

[ ತಳ (= ತಲ) + ಪಾಸುಗೆ ]

**ತಳವಾಱ** 'ತಳವಱ' ನೋ.

**ತಳವಾಱವರಿ** (ನಾ). = ತಳಱುಸುಂಕ : ತಳವಾಱವರಿ ಮುಂತಾಗಿ ಯೆಲಾಉ ಸರ್ವಮಾನ್ಯವಾಗಿ ಬಿಟ್ಟು (ಎಕ. X (8), ಮುಳಬಾ. ೫-೨ ; 15ನೆಯ ಶತ). [ ತಳವಾಱ (<ತಳವಱ) + ವರಿ$_1$ ]

**ತಳವಾಱಿಕೆ** 'ತಳವಱಿಕೆ' ನೋ.

**ತಳವಿಘಾತಿ** (ನಾ). ಹೆಜ್ಜೆಯ ಹೊಡೆತ ; ಪದಾಘಾತ : ಉಗುರು ಸೋಂಕಿನಲಬುಜಜಾಂಡದ ಬಿಗುಹು ಬಿಡುವುದು ತಳವಿಘಾತಿಗೆ ಜಗತಿ ಜರಿವುದು (ತೊರರಾ. ೭-೮-೧೦). [ ತಳ (= ತಲ) + ವಿಘಾತಿ ]

**ತಳವಿಡಿ** (ಕ್ರಿ). ಕೈಯಂನ್ನು ಹಿಡಿ ; ಹಸ್ತಲಾಘವ ಕೊಡು : ಯುವರಾಜನನ್ನು ತಳವಿಡಿದುಯ್ದು ನಿವಿಷ್ಟಮಾಡಿ (ಬಟ್ಸಅ. ೩೮-೨೫).
[ ತಳ (=ತಲ) + ಪಿಡಿ$_1$ ]

**ತಳವಿತ್ತಿ**, ತಳವಿರ್ತಿ, ತಳವ್ರಿತಿ (ನಾ). = ತಳವೃತ್ತಿ : ಅವ್ವಲಿವಂಣ್ಣಂ ತಳವನಪುರದೊಳ್ತಳವಿತ್ತಿಯ ಮಣ್ಣ್ಪುಗರಿಗೆಱೆಯೊಳ್ಪನ್ನಿರ್ಕಣ್ಡುಗಂ ಪಿರಿಕೆಱೆಯೊಳಂ . . . ಪನ್ನಿರ್ಕ್ಕಣ್ಡುಗಂ ಮನೋಹರಂ ದತ್ತಂ (ಎಕ. I, ೧-೨೦ ; 466) : ಅಂಗಭೋಗ ರಂಗಭೋಗ ಜೀರ್ನ್ನೋದ್ಧಾರಕ್ಕಂ ಪಾರಣೆಯ ಜಂಗಮಾರಾಧನೆಗಂ ಕೊತ್ತಸಿ ಕುಱುವನಿಗೆ ತಳವಿತ್ತಿ ಅಂಕವಲ ಕೂಂಡಿನಾಡೊಳು ಸಲುವಂತೆ (ಎಇ. XXI, ೨-೬೧ ; 1260). **ತಳವಿರ್ತಿ:** ಮಹಾದೇವರಿಗೆ ಅಂಕನಾಥವೆಸರಿಂ ಅಂಕವಲತಳವಿರ್ತಿ ಕೊತ್ತಸಿ ಕುಱುವನಿಗೆ ಈ ಹಳ್ಳಿ ಮಾಂಧಾತ ಚಕ್ರವರ್ತ್ತಿ ಬಿಟ್ಟ ಧರ್ಮ್ಮ (ಎಇ. XX1, ೨-೫೫ ; 1260). **ತಳವ್ರಿತಿ :** ಶ್ರೀ ಸ್ವಯಂಭುದಕ್ಷಿಳ ಸೋಮನಾಥದೇವರ ಅಂಗಭೋಗ [ಕ್ಕಂ] ಶ್ರೀಗಂನ್ಧಕ್ಕೆ ತಳವ್ರಿತಿಯ ಸೂಳೆವೊಲದ ದಸವನ್ಧದ ತಮಗೆ ನಡೆವ ಎಂಟ್ಟು ಗದ್ಯಾಣ ಹೊನ್ನುಮಂ . . . ಬಿಟ್ಟರು (ಸೌಇಇ. XX, ೨೨-೩೪ ; 1153). [ <ತಳವೃತ್ತಿ ]

**ತಳವಿರ್ತಿ** 'ತಳವಿತ್ತಿ' ನೋ.

**ತಳವುಕಾರ** (ನಾ). ೧. ಸಾಮವೇದದ ತಲವಕಾರ ಶಾಖೆ. ೨. ಆ ಶಾಖೆಗೆ ಸೇರಿದವನು : ದೇವರಂಗಭೋಗ ಉಪಹಾರಕ್ಕೆಂದು ಆದನೂರ ತಳವುಕಾರ ಇರುಳುನೀಕ್ಕಿಯಾಂಡರು ಬಿಟ್ಟ ತೋಟಸ್ಥಳ (ಸೌಇಇ. IX-I, ೧೪೧-೪೫ ; 1174). [ <ಸಂ. ತಲವಕಾರ ]

**ತಳವೂರು** (ಕ್ರಿ). ೧. ನೆಲೆಯಾಗಿ ನಿಲ್ಲು ; ನೆಲಸು ; ತಂಗು : ಭದ್ರವಾಗಿ ತಿಂಗಳ ದಿನ ತಳವೂರಿ ಬಿಡ್ತೀನಿ (ಮರಳಿ. ೧೪೭); ಅಮೆರಿಕೆಗೆ ತೆರಳಿ ಅಲ್ಲಿಯೇ ತಳವೂರಿದನು (ಪ್ರಬಂಧ. ೧೦೧); ಬಹಳ ಜನ ಪ್ರವಾಸಿಗಳು ಪಶ್ಚಿಮ ಕರಾವಳಿಯಲ್ಲೇ ಮೊದಲು ತಳವೂರಿದ್ದು (ಪ್ರವಾಇ. II, X ಪ್ರಸ್ತಾವನೆ) ; ಅಂದು ಅವನ ಮುಖದ ಮೇಲೆ ಅಪೂರ್ವಕಳೆ ತಳವೂರಿರಬೇಕು (ಸುವಸಂ. ೫೨) ; ಎಳೆಯ ಕಾಲದಲ್ಲಿ ಆರಂಭವಾದ ಗುರುತುಗಳು ಅವರಲ್ಲಿ ಭದ್ರವಾಗಿ ತಳವೂರುತ್ತವೆ (ಶಿಕ್ಷದ. ೨೦೩). ೨. ಕುಳಿತುಕೊಳ್ಳು ; ಟಿಕಾಣಿ ಹಾಕು : ವರನ ಕಡೆಯ ದಿಬ್ಬಣ ಆಗಲೇ ಬಂದು . . . ಅಶ್ವತ್ಥ ಕಟ್ಟೆಯ ಮೇಲೆ ತಳವೂರಿದೆ (ಮೂರುದಾ. ೨೦೫) : ಕಂಪನಿಯೊಂದು ಅಲ್ಲಿಗೆ ಬಂದು ತಳವೂರಿತು (ನಾಪೋಲಿ. ೧೬೧).
[ ತಳ (=ತಲ) + ಊರು$_1$ (<ಊಱು$_1$) ]

**ತಳವೃತ್ತಿ** (ನಾ). ದೇವಾಲಯ ಮೊದಲಾದುವುಗಳ ಸಂರಕ್ಷಣೆಗಾಗಿ ಬಿಟ್ಟು ಕೊಟ್ಟ ದತ್ತಿ : ಶ್ರೀಮತ್ ಶಂಕರಗಣ್ಡರಸಂ ಕುಪಣದೊಳ್ತನ್ನ ಮಾಡಿಸಿದ ಜಯಧೀರ ಜಿನಾಲಯದ ತಳವೃತ್ತಿಗೆ ಪೊಲನಂ ಬೇಡಿದೊಡೆ (ಶಾಸಪ. ೫-೧೨ : 965) ; ಬಸದಿಗೆ ತಳವೃತ್ತಿ ಸಾಯಿರ ಮತ್ತರು(ಂ) ಮಿಪ್ಪತ್ತುನಾಲ್ಕುಮತ್ತರು ಗಟ್ಟಿಯುಂ (ಸೌಇಇ. IX-I, ೭೭-೩೦ ; 992) ; ಶ್ರೀಲೊಕ್ಕಿಗುಣ್ಡಿಯೊಳ್ಬಸದಿಯಂ ಮಾಡಿಸೆಯದಕ್ಕೆ ತಳವೃತ್ತಿಯೆಂದು ಕೊಟ್ಟ ಸುಱುಕಿಯ ಸೀಮಾಮರ್ಯ್ಯಾದೆ (ಸೌಇಇ. XI-I, ೫೨-೫೭ ; 1007) ; ದುರ್ಜ್ಜಯ ವೈರಿಮದೇಭಸಿಂಹನುಂಮೆನೆ ನೆಗಟ್ದಂ ಜಯಲಕ್ಷ್ಮೀಪತಿ ತಳವೃತ್ತಿಯ ಹೆಗ್ಗಡೆ ಮಲಿದೇವನೆನೆ ಪೊಗಳದರಾರು (ಕೊಲ್ಹಾಶಾ. ೧೧-೧೯ ; 1151). [ತಳ (=ತಲ) + ವೃತ್ತಿ$_2$ ]

**ತಳವೆಳಗಾಗಿಸು** (ಕ್ರಿ). ದಿಗಿಲುಗೊಳಿಸು ; ಗಾಬರಿಗೊಳಿಸು : ತಳಕಾಡಂ ತಳವೆಳಗಾಗಿಸಿ ಅಮ್ಮಚವಾಡಿಯಂ ಮಱ್ಮಱಿವುಗಿಸಿ (ಚಿಕವಿ. ೨-೨೯).
[ ತಳವೆಳಗಾಗು + - ಇಸು$_3$ ]

**ತಳವೆಳಗಾಗು** (ಕ್ರಿ). ೧. ದಿಗಿಲುಗೊಳ್ಳು ; ಗಾಬರಿಯಾಗು ; ದಿಕ್ಕುತೋಚದಂತಾಗು : ಉಮ್ಮಳಿಸಿ ಕಳವಳಿಸಿ ವಿರಹಾಕುಳನವೊಲಾ ಖಚರನಿಂತು ತಳವೆಳಗಾದಂ (ಆದಿಪು. ೨-೧೪); ಬೆಳಗಿ ಸಮಸ್ತ ಭೂವಳಯಮಂ ನಿಜತೇಜದಿನಾಂತ ದೈತ್ಯರಂ ತಳವೆಳಗಾಗೆ ಕಾದಿ (ಪಂಪಭಾ. ೧೩-೭೪) ; ಅತ್ತ ಪುಲಿಯಿತ್ತ ದರಿಯೆಂದತ್ತಿತ್ತಡಿಯಿಡದೆ ಲಕ್ಷ್ಮಿ ತಳವೆಳಗಾದಳ್ (ಗದಾಯು. ೯-೧೬) : ನಿದ್ರೆಗೆಟ್ಟಿರ್ದ ಯಶೋಭದ್ರೆಗಱಿಪಿದೊಡೆ ತಳವೆಳಗಾಗಿಯೆಟ್ದು ಬಂದು ತಾನುಮಾಕೆಗಳುಂ ಮಾಡದೊಳಗೆಲ್ಲಂ ನೋಡಿ ಮಗನಂ ಕಾಣದೆ (ಜೀವಸಂ. ೧೧೩-೪೫ ವ) : ಅದು ಜಾತಿಸ್ಮರನಾಗಿ ಬೆನ್ನಬೆನ್ನನೆ ಪರಿದೆಯ್ತರೆ ಪರದಿ ಬೆಚ್ಚಿ ತಳವೆಳಗಾದಳ್ (ಪುಣ್ಯಾಸ್ರ.೧-೫೪); ಕಪಿರೋಮಾಳಿ ಸೋಂಕಿನಲಂಜಿ ತಳವೆಳಗಾದುದಖಿಳಜನ(ತೊರರಾ.೬-೧೦-೨೬). ೨. ಬೆರಗಾಗು ; ಆಶ್ಚರ್ಯಚಕಿತವಾಗು ; ವಿಸ್ಮಯಪಡು : ಬೆಳಗುಗಳೆಲ್ಲವೊಂದುರುಳಿಯಾಗಿ ನಭಸ್ಥಳದಿಂದ ಮಿಾ ಮಹೀತಳಕಿೞಿತರ್ಪುದೆಂದು ಮನುಜಾಕೃತಿಯೆಂದು ಮುನೀಂದ್ರನೆಂದು . . . ಕಮಳಸಂಭವನಂದನನೆಂದು ನೋಟಕರ್ ತಳವೆಳಗಾಗೆ ಸಾರೆವರೆ ನೀರದಮಾರ್ಗದಿನಂದು ನಾರದಂ (ಪಂಪಭಾ. ೬-೬) ; ತರುಣರು ತಳ[ಪಾಠಾಂ. ಳೆ]ವೆಳಗಾಗೆ . . . ವಿರಹಾಗ್ನಿಯಿಂ ವಿಕಳತೆಗೊಳೆ ವಿಟರಾ ಸರಸಿಜನೇತ್ರೆಯೆಯ್ದಿದಳು (ಕುರಾಸಾಂ. ೬-೮೧). ೩. ಕಳವಳಿಸು ; ತಲ್ಲಣಿಸು ; ವ್ಯಾಕುಲಗೊಳ್ಳು ; ಪರಿತಪಿಸು : ತಿಳಿದಿರ್ದ ಕೊಳದ ಜಲದೊಳ್ ಪಳಚ್ಚನೆಸೆದಿರ್ದ ತನ್ನ ನೆೞಲಂ ತನ್ನೋಪಳೆ ಗೆತ್ತು ಮುೞುಗಿ ಕಾಣದೆ ತಳವೆಳಗಾಗಿರ್ದ ವಿರುಳ ವಿರಹ ವಿಹಂಗಂ (ಅಜಿಪು. ೬-೬೨) ; ಸಾಸವೆಗುಡಿದಂತಿರೆ ಕರಮೆ ಮುೞುಗಿ ತಳವೆಳಗಾದಂ (ಧರ್ಮಾಮೃ. ೧-೧೪೩) ; ಮೂರ್ಛೆದಿಳಿದುಂ ಮೋಹಮೂರ್ಛೆ ತಿಳಿಯದಿರೆ ತಳವೆಳಗಾಗಿ ತನ್ನೊಳ್ತಾನೆ ಬಗೆದು (ಅರ್ಧನೇ. ೨-೪೮ ವ) ; ಬಳಿಸಂದು ತಿರುಗಿ ತಳವೆಳಗಾಗಿ ಅಳವಳಿಯುತಲ್ಲಿಯುಂ ಪಡೆಯದಾತುರನಾಗಿ (ಟಿಂಡೋರ. ಹ. ೫೦೫-೩) ; ಖಳನಿವನೆಂದಿಗಳಿವನೆನುತ್ತ ತಳವೆಳಗಾಯ್ತು ಸುರಕಟಕ (ತೊರರಾ. ೬-೨೬-೪೨). ೪. ಭಾವೋದ್ವೇಗಕ್ಕೊಳಗಾಗು ; ಉದ್ರಿಕ್ತವಾಗು ; ಉತ್ತೇಜಿತವಾಗು : ಎನಿತಂತರದೊಳ್ಕಂಡಿರೆಲ್ಲಿದಂ ಬಂದನೆ ಭೂಕಾಂತನೆನುತ್ತಂ ಬೆಸಗೊಳುತಂ ತಳವೆಳಗಾಗಿ (ಕಾದಂಉ. ೫೧೫) ; ತಳವೆಳಗಾದಂ ವನಿತಾತಿಳಕದ ಪೆಱೆನೊಸಲ ರೋಚನಾತಿಲಕದ ಚೆಲ್ವೆಱೆಕುಳಿಗೊಳೆ ಸಮ್ಮೋಹನತಿಳಕದವೋಲ್ ಮನಮನವನಿಪಾಲಕತಿಲಕಂ (ಪಂರಾಮಾ. ೫-೬೧) ; ಆನೊಂದ ಕನಸ ಕಂಡೆ . . . ಆತನನಪ್ಪಿಕೊಂಡು ತಳವೆಳಗಾದೆನೆಲಗೇ ಚೆನ್ನಮಲ್ಲಿಕಾರ್ಜುನನ ಕೂಡಿ ಕಣ್ಮುಚ್ಚಿ ತೆಱೆದು ತಳವೆಳಗಾದೆನೆಲಗೇ (ಮಹಾದೇ. ಬ. ೪೧-೯೦); ಎನ್ನ ಮಹಾಘನವ ನಿಲವಿನ ಪ್ರಭೆಯನುಟ್ಟು ತಳವೆಳಗಾಗಿ ಸ್ವಯಜ್ಞಾನಿ ಕೂಡಲಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ನಿಲವ ಮಡಿವಾಳನಿಂದಱಿದು ಬದುಕಿದೆನಯ್ಯಾ (ಬಸಹೆ. ೮೨-೨೪೭) ; ಚಿಂತಾಪರವಶತೆಯಿನಿನಿಸಂ ತಡೆದಿದಿರೇೞದಾತ್ಮಪರ್ಯಂಕದೊಳಾ ಕಾಂತಂ ಕುಳ್ಳಿರೆ ಕಂಡು ಕರಂ ತಳವೆಳಗಾಗಿ ಸಖಿಯನೇಂ ನೋಡಿದಳೋ (ಪುಷ್ಪಪು. ೩-೬೬) ; ಬಳಿಕಲ್ಲಿ ನೆರೆದಿರ್ದ ಪಾರ್ಥಿವರೆದೆ ತಳವೆಳಗಾಗೆ ರಾಯನ ಕುವರಿ . . . ಐದಿದಳಾ ಸಭೆಗೆ (ಕರ್ಣಪ. ೫-೧೨). ೫. ಭ್ರಾಂತಿಗೊಳಗಾಗು ; ಭ್ರಮಿಸು : ತಳತಳಿಸಿ ಪೊಳೆವ ಮಾವಿನ ತಳಿರ್ಗಳಶೋಕೆಗಳ ಮಿಸುಪ ಲತೆಗಳ ನೆಲೆ ಬಳ್ವಳ ಬಳೆದ ಬೇಟದುರುಳಿಯ ಬಳಗಮಿದೆಂದೆಳೆಯಳೆಳಸಿ ತಳವೆಳಗಾದಳ್ (ಪಂಪಭಾ. ೫-೩) ; ಗಳಿಲನೆ ಕಾಂತೆ ಚಿತ್ರಪಟದೊಪ್ಪವನೀಕ್ಷಿಸಿಯಾಗಳೊಮ್ಮೊದಲ್ ಪುಳಕಿತೆಯಾಗಿ ಕಂಪಿಸಿ ಬೆಮರ್ತಧರಂ ನಸುಗೆತ್ತೆ ಲಜ್ಜೆ ಕೈಗಳೆದು ಕಳಾಪಮೊಯ್ಯನೆ ಸಿಡಿಲ್ದು ಕರಂ ಮಱವಟ್ಟು ಚಿತ್ತದೊಳ್ ತಳವೆಳಗಾಗಿ ಮೆಯ್ಮಱೆದಳಿಂತುಟೆನಲ್ ನಿಜಚಿತ್ರವಿಭ್ರಮಂ (ದಶಕು. ೧೦-೫೧). ೬. ಬುಡ ಮೇಲಾಗು ; ಅಸ್ತವ್ಯಸ್ತವಾಗು : ಏಳಣ್ಣ ಬೆಳಗಾಯ್ತು ; ತಮವು ತಳವೆಳಗಾಯ್ತು (ಮುಕ್ತಕಂ. ೩೦-೧).
[ ತಳವೆಳಗು$_1$ + ಆಗು$_1$ ]

**ತಳವೆಳಗು₁** (ನಾ). ೧. ಭಯ ; ದಿಗಿಲು ; ದಿಗ್ಭ್ರಾಂತಿ : ಸುಯ್ಯಗ್ಗಳ ಬಿಸುಪಲ್ಲದಿಲ್ಲುಸಿರ್ಗಳಂಗಭವಜ್ವರಮಲ್ಲದಿಲ್ಲ ಮೆಯ್ಯುಳವೆಳಗಲ್ಲ ದಿಲ್ಲಟಿವುಮಿಲ್ಲೆರ್ದೆತಲ್ಲಟವುಲ್ಲದಿಲ್ಲ ಕೋಮಳೆಗೆ (ಅನಂಪು. ೮-೩೯) ; ಕೊಲಲು ಬಂದನಲಾಯೆನುತೆ ತಳ[ಪಾಠಾಂ. ಕಳ, ತಲೆ]ವೆಳಗಿನಲಿ ತಲೆ ಮುಸುಕಿನಲಿ . . . ರಾಮರಾಮೆನುತಿರ್ದಳಬುಜಾಕ್ಷಿ (ತೊರರಾ. ೬-೪೫-೩೦) ; ಕೊಳುಗುಳದೊಳದಟರೆರ್ದೆಗುಮ್ಮಳಮಂ ತಳವೆಳಗನುಂಟು ಮಾಡುವ ಕಲಿಗೆ (ನೀತಿಮಂ. I, ೩೬೨). ೨. ಬೆರಗು ; ಆಶ್ಚರ್ಯ ; ವಿಸ್ಮಯ : "ತಲ್ಲಣಂ ತಳವೆಳಗು ಬಳ್ಕುಡಿ ಬೆಗಡಳುರ್ಪು . . . ಬಿಗುರ್ ಬೆಬ್ಬಳಂ ತಳಮಳವೆನಲ್ಕೆ ಸೊಲ್ಲಿಪುದು ಬೆಱಗಪ್ಪ ಭಾವದೊಳು" (ಶಬ್ದಮಂ. ೫೦) ; "ತಳವೆಳಗೆನಲ್ ಬೆರಗೆನಿಕ್ಕು" (ಕಶರ. ೧೨೪) ; ನೋಡಲ್ಕಮ್ಮದೆ ಕಣ್ಮುಚ್ಚಿ ತಳವೆಳಗಾಗುತೆ ನೋಡಿದಳ್ (ಉದ್ಯರೇ. ೩-೯). ೩. ಭಾವೋದ್ವೇಗ ; ಉದ್ರೇಕ : "ತಳವೆಳಗೆಂದೆನ್ನಲದುವೆ ನಿಬ್ಬರಮುಕ್ಕುಂ" (ಕವಿಕಂ. ೨೪೩) : ಕಳಭಾಷಿಣಿ ನಿನಗಾಂ ನೆಱೆ ತಿಳಿವಂತಿರಲೇನನುಸಿರ್ವೆನಾತನ ಕೆಯ್ಯಂಗಳನವನೆನುತುಂ ಜಾನಿಸಿ ತಳವೆಳಗಿಂ ಜರಿಯುತಿರ್ದು ಮತ್ತಿಂತೆಂದಳ್ (ಕುಸುಮಾ. ೧೨-೧೫೨). ೪. ಕಳವಳ ; ಚಿಂತೆ ; ವ್ಯಾಕುಲತೆ. 'ತಳವೆಳಗಾಗು' ಪರಾ. ೫. ಭ್ರಮೆ ; ಭ್ರಾಂತಿ. 'ತಳವೆಳಗಾಗು' ಪರಾ. ೬. ತಲೆಕೆಳಗು ; ಅಸ್ತವ್ಯಸ್ತತೆ : ಮೂಗಿನ ಕಪ್ಪುಪಣಿತೆಯ ಕತ್ತಲೆ ಜ್ಯೋತಿಯೆಂಬರು . . . ಮಾಣಿಕ್ಯ ಸ್ವಯಂಜ್ಯೋತಿ ಜ್ಞಾನದ ಪ್ರಭೆ ಮಹಾಲಿಂಗ ಗಜೇಶ್ವರನ ನೆನೆವ ಮನವು ಕಾಪಳ ತಳವೆಳಗು ಭೋ (ಸರ್ವವ. ೭೫-೩೯೭) ; "ಬುಡಮೇಲು, ತಳವೆಳಗು, ಅಡಿಮೇಗು, ತಲೆಕೆಳಗು, ತಿರುವು ಮುರುವು, ಅದಲುಬದಲು" (ಕಂನುಹು. ೮೮). [<ತಳಮಳಗು₁]

**ತಳವೆಳಗು₂** (ನಾ). ಸಂತ್ತಲಿನ ಪ್ರಕಾಶ (?) : ಒಳಗೆ ಶೋಧಿಸಿ ಹೊಱಗೆ ಶುದ್ಧವಿಸಿ ಒಳಹೊಱಗೆಂಬ ಉಭಯಶಂಕೆಯ ಕಳೆದು ಸ್ಫಟಿಕದ ಶಲಾಕೆಯಂತೆ ತಳವೆಳಗುಮಾಡಿ (ಮಹಾದೇ. ಬ. ೨೧-೩೭). [ತಳ ? + ಬೆಳಗು₂]

**ತಳವೆಳಗುಗೊಳ್** (ಕ್ರಿ). ೧. ದಿಗಿಲುಗೊಳ್ಳು ; ಬೆದರು : ಬಾಣವೃಷ್ಟಿಯ ಬಹಳತೆಯ ಸರಿ ಕಾಣಿಸಿತು ಕಪಿಯೂಥನಾಥರ ತಾಣದಲಿ ತಳವೆಳಗುಗೊಳೆ ತರಣಿಜ ಸಮೀರಜರು (ತೊರರಾ. ೬-೩೮-೪). ೨. ಬೆರಗಾಗು; ಆಶ್ಚರ್ಯಪಡು; ವಿಸ್ಮಿತನಾಗು : ಅದು ಬಳಿಕ . . . ಮೃದು ಕರಾಂಜಲಿಯರ್ಘ್ಯದುದಕವ ಮಧ್ಯದೊಳೆ ಬೀಳೆ ಕೆದರಿ ಹರಿ ಕೋಪಿಸುತ ಲಂಬರಸದನವನು ಮಿಗೆ ನೋಡಿ ಕಾಣದೆ ಹೃದಯದೊಳ್ ತಳವೆಳಗು ಗೊಂಡಾಶ್ಚರ್ಯಮನನಾದ (ಕೋಗಯು. ೫-೮). [ತಳವೆಳಗು₁ + ಕೊಳ್₁]

**ತಳವೃತಿ** 'ತಳವಿತ್ತಿ' ನೋ.

**ತಳಸಂಕಲೆ** (ನಾ). =ತಳಹಗ್ಗ : ಬಲವೊರಜೆ ಎಡವೊರಜೆ ಬೆನ್ನಿನ ವಿಳಿಯ ಜಾಳಿಗೆವೊರಜೆ ತಳಸಂಕಲೆಯ ತೊಡರಂಕಣಿಯ ಕೊಂಡೆಯ ಪಕ್ಕಗಂಟೆಗಳ . . . ಬಿಗಿದರು (ಕುವ್ಯಾದ್ರೋ. ೩-೨) ; ಬೆಳಗುವ ದಂತ ಪೊಂಬೊರಜೆ ತಳಸಂಕಲೆ ತೊಡರುಲಿವ ಪೊಕ್ಕಳಗಂಟೆಯೆಳಸಲೆಯ್ತಂದುದಾ ಹಸ್ತಿ (ಕುರಾಸಾಂ. ೭-೮೯) ; ಬಿಗಿದು ಗುಳವನು ತಳಸಂಕಲೆಯುನಳವಡಿಸಿ ಕರಿಯನೇಱೆ ಕಲಿಜೋದರೆಲ್ಲಂದರಂದು (ಕುರಾಸಾಂ. ೧೧-೨೫).

[ ತಳ (= ತಲ) + ಸಂಕಲೆ ]

**ತಳಸಂಚ** 'ತಳಸಂಚು' ನೋ.

**ತಳಸಂಚು**, ತಳಸಂಚ (ನಾ). ೧. ಖಡ್ಗಯುದ್ಧದ ಒಂದು ವರಸೆ ; ಕೆಳಮಟ್ಟದಲ್ಲಿ ಕತ್ತಿಯನ್ನು ಬೀಸುವುದು : ತಳಸಂಚು ಮೇಲ್ಸಂಚು ಹಿಂಕೋರೆ ಮುಂಕೋರೆ ಬಲಸನ್ನೆಯೆಡದ ಸನ್ನೆಯೊಳು ಅಲಗ ನೀಡಿದರಲಗಿನೊಳಾಂತು ನೆಗೆದು ಮೈ ಹೊಳೆದು ತಪ್ಪಿಸಿದವೆಲ್ಲವನು (ಭರಜ. ೬೩-೨೭). ೨. [ಸಂಗೀತ] ವಾದ್ಯವನ್ನು ನುಡಿಸುವುದರಲ್ಲಿ ಒಂದು ಗತ್ತು ; ಮಂದ್ರದಲ್ಲಿ ತೋರಿಸುವ ಚಮತ್ಕಾರ: ತಳಸಂಚು ಮಧ್ಯಸಂಚುಪ್ಪರದ ಸಂಚುಗಳನಳವಡಿಸಿ ಸಂಯೋಗ ವಿಪ್ರಯೋಗಾಕ್ರಮೋಜ್ವಳ ಸಕ್ರಮದಿನ ಸ್ವರ ಸ್ವರ ಜನಿತವಾದ ವಿವಿಧ ವಿಧ ಪಾಠಂಗಳಂ (ಪದ್ಮರಾ. ೩-೫೪). ೩. [ನಾಟ್ಯ] ನೃತ್ಯದ ಒಂದು ಗತಿ : ತಳಸಂಚು ಮಧ್ಯಸಂಚುಪ್ಪರದ ಸಂಚು ಮಂಜುಳವಾಗೆ ನಿಡುಗಣ್ಣ ಥಾಳವಾಳವನಾಡಲೆಳೆಮಿಂಚುಪೋರಣದಿ ಳಾಯದ ವಿಡಾಯಿಯಂದಂಬಡೆಯೆ . . . ದೇಶಿಯನಾಡಿದಳು ಪರವೆನಾಚಿ (ಸೌಂದಪು. ೮-೧೦) ; "ನಾಟ್ಯದ ತಾಳದಲ್ಲಿ ಮೊದಲನೆಯ ಕಾಲ" (ಪಟ್ಟನಿ). **ತಳಸಂಚ :** ೧. ಮಿಾಱೆ ತಳಸಂಚದೊಳು ಮೊನೆಯನು ತೋಱೆ ತಿರುಪಿನೊಳಣೆದು ಕಳಚುವರೇಱುಗಾಣದೆ ಮಧ್ಯಸಂಚಕೆ ಸಿಲುಕಿ ಕೈ ಮಾಡಿ . . . ದಂಡೆಯನ್ನೆತ್ತಿ ಕಾದಿತು ಸುರಗಿಯತಿಬಲರು (ಕುವ್ಯಾಭೀ. ೪-೨೨). ೪. (?): ಭರದ ಮುಷ್ಟಿಯ ಬಿಲ್ಲೊಳಡಗಿತೊ ಶರೀರವನೆ ತಳಸಂಚದೊರ್ಮೆಯ್ಯಿರವಿನಿಂ ನೆಱೆ ನಿಂದು ಕೂರ್ಗಣೆವಿಳುಕನಾಯತದೀ ತಿರುವಿನೆಡೆಯೊಳು ತೊಡಚಿ (ಸಾಳ್ವಭಾ. ೫-೨೭).

[ ತಳ (=ತಲ) + ಸಂಚು ]

**ತಳಸಮಸ್ತ** (ನಾ). ಊರಿನ ಪ್ರಮುಖ ಜನ ; ಎಲ್ಲ ಸಮಸ್ತರು : ಹತ್ತಿಯ ಸೋಬಿಸೆಟ್ಟಿ ಮಗಂ × × × ಱೆ ಬೀರಿಸೆಟ್ಟಿ ಇನ್ತಿವರ್ಮುಖ್ಯಮಾಗಿ ತಳಸಮಸ್ತವಿರ್ದ್ದು (ಸೌಇಇ. XI-II, ೧೯೮-೯ ; 1123).

[ ತಳ (=ತಲ) + ಸಮಸ್ತ ]

**ತಳಸಾರ್** (ಕ್ರಿ). ತಳವನ್ನು ಸೇರು ; ತಳಮುಟ್ಟು : ತಳಸಾರ್ದುದು ಪಾಲ್ಗಡಲೀ ಮಳರಹಿತನ ಮಜ್ಜನಕ್ಕೆ ಸಲಿಲಂ ಕಲಿಲಂಗಳಿವಾದುವೆಂದು ದೇವರ್ಕಳನಿಂದ್ರಂ ಹಸ್ತಸಂಜ್ಞೆಯಿಂ ಬಾರಿಸಿದಂ (ಅನಂಪು. ೫-೬೨).

[ ತಳ (= ತಲ) + ಸಾರ್₁ ]

**ತಳಸಾರಿಕೆ** 'ತಳಸಾರಿಗೆ' ನೋ.

**ತಳಸಾರಿಗೆ**, ತಳಸಾರಿಕೆ (ನಾ). ಒಂದು ಬಗೆಯ ತೆರಿಗೆ; ಸ್ಥಳದ ತೆರಿಗೆ : ಬಡಗಿಕೊಂಟೆಯ ಮನೆದೆಱೆ ಹೊಲದೆಱೆ ಸಾದಂ ಬಣ್ಣಿಗೆ ಬಳಂಬೆಯ ತೆಱೆ ತಳಸಾರಿಗೆ ಕಾಣಿಕೆ ಕವಣಾಯ ದಣ್ಡದಾಯವಿನ್ತಿನಿತುಮಂ . . . ಕೊಟ್ಟರ್ (ಸೌಇಇ. IX-I, ೧೭೨-೧೮ ; 1106) ; ಅಂಗಡಿ ೧ ಅದಕ್ಕೆ ತಳಸಾರಿಗೆ ದನಬಳ ಕೊಟ ಹ[೧] ಸವಮಳೆ[ಗ](ಸೌಇಇ. XV, ೨೩೨-೧೦ ; 1206); ಯಿಬ್ಬಡಗ ೬ ಕಯ್ಯನೀಳದ ಅಂಗಡಿ ೧ ಅದರ ತಳಸಾರಿಗೆಗೆ ಸ × × ಕೊಟ ಹ ೧(ಕಇ. V, ೬೬-೧೦ ; 1206) ; ಸುಂಕಾಧಿಕಾರಿ ಭಿಲ್ಲವನಾಯಕಂ ಮಲ್ಲಿಕಾರ್ಜುನ ದೇವರಿಗೆ ಧೂಪದೀಪಕ್ಕೆ ಮೊಲದ ಕಲ್ಲೊಳು ಸುಂಕ ತಳಸಾರಿಗೆ . . . ಧಾರಾಪೂರ್ವ್ವಕವಾಗಿ ಮಾಡಿದರು (ಸೌಇಇ. IX-I, ೩೭೪-೨೦ ; 1210). **ತಳಸಾರಿಕೆ :** ಒಳವಾಱು ಹೊಱವಾಱು ತಳಸಾರಿಕೆ ಅಲೆದೆರೆ ತೋಟದೆರೆಯೇನುಳ್ಳದನೂ . . . ಕೊಟ್ಟೆವಾಗಿ (ಎಕ. VIII, ತೀರ್ಥಹ. ೧೩೦-೪೪; 1404). [ ತಳ (= ತಲ) + ಸಾರಿಗೆ₁ ]

**ತಳಸಿಂಗ** (ನಾ). ಒಂದು ಬಗೆಯ ಔಷಧಿ ಮೂಲಿಕೆ (?) : ದೇವದಾರಿ ಬೇರು, ಭೂದೇವಿಬೇರು, ತೀಟಕೋಗಿಲಬೇರು, ತಳಸಿಂಗ, ಈಪತ್ರೆ ಇವು ಒಂದೊಂದೂ ೫ ಗ ತೂಕ (ಸಕವೈ. ಪರಿ. ೪೫೨). [ ? ]

**ತಳಸುಂಕ** (ನಾ). ಭೂಮಿಕಂದಾಯ : ಸಂತೆಯ ತಳಸುಂಕ ವಸೂಲಿ ಮಾಡುತ್ತಾರೆ (ರೂಢಿ). [ ತಳ (= ತಲ) + ಸುಂಕ ]

**ತಳಸೋಸು** (ಕ್ರಿ). ೧. ಬಾವಿ, ಕೊಳ ಮೊದಲಾದುವುಗಳ ತಳದ ಹೂಳನ್ನು ತೆಗೆ. ೨. ತಳದವರೆಗೂ ಬೆದಕಿ ಶೋಧನೆ ಮಾಡು ; ಸಂಪೂರ್ಣವಾಗಿ ನೋಡು ; ಶೋಧಿಸು : ಮೊಹೆಂಜೋದಾರೋ ಸಂಸ್ಕೃತಿಯು ದ್ರಾವಿಡರದಿದ್ದದ್ದಾದರೆ ಕನ್ನಡವನ್ನು ಇನ್ನೂ ತಳಸೋಸಿ ನೋಡುವ ಅಗತ್ಯವು ಬಹಳೇ ಇದೆ (ಸಾಹಿಸಂ. ೧೪೩) ; ತಮವನೆಲ್ಲ ತಳಸೋಸಿ ಮಾಡು ಸ್ಥಿರಶಾಂತಿ ಕಾಂತಿಯಾಗಿ (ಹೃದಸ. ೬೨-೯).

[ ತಳ (= ತಲ) + ಸೋಸು ]

**ತಳಹಗ್ಗ** (ನಾ). ಆನೆಗೆ ಕಟ್ಟುವ ಹಗ್ಗ,–ಸರಪಳಿ : ತಳಕ್ಕೆ–ಕರತಳ, ಕೆಂದಳ, ತಟ್ಟುತಳ, ತಳಹಗ್ಗ, ಧರಣೀತಳ–ಎಂಬಂತೆ (ಶಮದ. ೨೯೮ ಪ್ರಯೋ); ತಳಹಗ್ಗಮೆಂದು ಕರತಳ ಪಾದತಳಮುಮೆಂದು . . . ತತ್ಸಮಕೆ ಕನ್ನಡ ಸಕ್ಕದಂಗಳಲಿ ಕ್ರಮದಿಂದ ತೋರ್ಪುದಾಹರಣೆಯಕ್ಕುಂ (ಶಬ್ದಿಕೃ. ೯೭). 'ತಳಸಂಕಲೆ' ಪರಾ. [ ತಳ (=ತಲ) + ಹಗ್ಗ ]

**ತಳಹಚ್ಚು** (ಕ್ರಿ). ತಳಕ್ಕೆ ಇಳಿಸು ; ತಳಕಾಣುವಂತೆ ಮಾಡು ; ಬರಿದು ಮಾಡು: ಅನ್ನ–ರಘುಣಕ ಮಾಡಿದೆ. ಮೂವರೂ ಅದನ್ನು ತಳಹಚ್ಚಿ ಮುಗಿಸಿದೆವು (ಸ್ಮೃತಿಚಿ. ೨೫೭). [ ತಳ (=ತಲ) + ಹಚ್ಚು$_1$ ]

**ತಳಹತ್ತ**, ತಳಹತ್ತು$_2$ (ನಾ). ಮಲ್ಲಯುದ್ಧದ ಒಂದು ಪಟ್ಟು : ಕರವಳಯ ತಳಹತ್ತ ಡೊಕ್ಕರ ಶಿರವ ಧಣುಧಣುವಟ್ಟತಳ ಪೊಪ್ಪರದುಮಂಗುಲ ಕಂದ ಡೊಕ್ಕರ ತೋರಹತ್ತದಲಿ . . . ತೋಱಿದರು ಕೌಶಲವ (ಕುವ್ಯಾಅ. ೬–೨೯) ; ಕರವಲಯಕೋರೊರ್ವೆ ತಳಹತ್ತಕೋರೊರ್ವೆ ಸರಿಸ ಮಂಕಡಕೊರ್ವೆ . . . ಹರಿ ಕಮಲಭವರೊದಗಿದರ್ (ಜಬಪು. ೧೬–೪೯) ; ತಳಹತ್ತ ಡೊಕ್ಕರ ಲವಣೆ ಲಾಗು ಕರವಳಯದಿಂದ (ತರ್ಕಕಾ. ೪–೩೪). **ತಳಹತ್ತು$_2$ :** ಅಂತರಿಪ ನರಸಿಂಗ ಪಟ್ಟಸುಮಂತಡರೆ ತಳಹತ್ತು [ಪಾಠಾಂ. ತ್ರ] ಗಳಹತ್ತಂ ತುಳಿಲವಿಂದಾಣದಲಿ ಹರಿ ಕಾದಿ ಬಳಲಿಸಿದಾ (ಸಾಳ್ವಭಾ. ೨೨–೬೨). 'ಗಳಹತ್ತ', 'ತೋರಹತ್ತ' ಪರಾ.

[ < ಸಂ. ತಲಹಸ್ತ ? ]

**ತಳಹತ್ತು$_1$** (ಕ್ರಿ). ೧. ಕೆಳಮಟ್ಟಕ್ಕೆ ಇಳಿ ; ತಗ್ಗು : ಗಂಗಾಪ್ರವಾಹದಂಥ ಆಕೆಯ ವಾಗ್ಧೋರಣೆಯಲ್ಲಿ ಮಿಕ್ಕವರ ಪ್ರಸಂಗವು ತಳಹತ್ತಿ ಹೋಗುತ್ತಿದ್ದಿತು (ಲಕ್ಷ್ಮೀಪ್ರ. ೧೨). ೨. ನೆಲಸು; ಇರು : ಅವನು ಎಲ್ಲೂ ತಳಹತ್ತಲಿಲ್ಲ (ರೂಢಿ). ೩. ತಳಕಾಣು ; ನೆಲೆಯನ್ನು ತಿಳಿ : ಎಷ್ಟೇ ಆದರೂ ಅವನ ಗುಟ್ಟು ತಳಹತ್ತುವುದು ಕಷ್ಟ (ರೂಢಿ). ೪. (ಬೇಯಿಸುವಾಗ) ತಳಕ್ಕೆ ಅಂಟಿಕೊಳ್ಳು ; ತಳಹಿಡಿ ; ಸೀಯು : ಕಷಾಯದಲ್ಲಿ ಕದಡಿ ಶೋಧಿಸಿ ೩೦ ಪಲ ಬೆಲ್ಲ, ತುಪ್ಪ ೨೦ ಪಲ ಸಹ ಹನಿಸಿ ತಳಹತ್ತದ ಹಾಗೆ ಸಟ್ಟುಗದಿಂ ತೊಳಸಿ ಲೇಹ್ಯಪಕ್ವದಿಂದಿಳುಹಿ (ಸಕವೈ. ೨೯೬).

[ ತಳ (= ತಲ) + ಹತ್ತು$_1$ (< ಪತ್ತು$_1$) ]

**ತಳಹತ್ತು$_2$** 'ತಳಹತ್ತ' ನೋ.

**ತಳಹದಿ** (ನಾ). ತಳಪಾಯ ; ಅಸ್ತಿವಾರ ; ಬುನಾದಿ : ಗೋಡೆಯನ್ನು ಕಟ್ಟುವ ಮೊದಲು ತಳಹದಿಯು ಬೇಕಲ್ಲವೆ (ಹೂಬಿಸಿ. ೬೩) ; ಕಟ್ಟಲಿರುವ ಗಾನಮಂದಿರಕ್ಕೆ ಈ ಆಲಾಪವೇ ತಳಹದಿ (ಅಬೋಲೀ. ೧೬೫) ; ಜಗತ್ತೆಲ್ಲ ಈಶ್ವರಾಂಶ ಎಂಬ ತತ್ವಜ್ಞಾನ ಮಾತ್ರ ನಿಜವಾದ ವಿಶ್ವಪ್ರೇಮಕ್ಕೆ ತಳಹದಿಯಾಗಬಲ್ಲುದು (ಜುಕ್ವಾರ. ೪೩ ಪೀಠಿಕೆ). [ ತಳ (= ತಲ) + ಹದಿ$_2$ ]

**ತಳಹರಿ** (ಕ್ರಿ). ಕೆಳಕ್ಕೆ ಹರಿ (?) : ಎಡೆವಿಡದೆಯೆಡೆಯಾಡುತಿರ್ಪರ ತೊಡಿಗೆಗಳ್ಸಾಟ್ಯಾಡಿಯುದಿರ್ದರಲುಡಿ ಸುರತ್ನಾವಳಿ ಕನಕನಗರೋಹಣಾದ್ರಿಗಳ ನಡುವೆ ಸುರಿದುರುವಳಿಯ ಬಿರುವೊನಲ್ಗೊಡೆದು ಪರಿದೇಳ್ತಂದು ತಳಹರ[ರಿ]ದೆಡೆಯು ಪುಳಿನ ಪರಳ್ಗಳೆನಿಸಿಹವಾ ಪ್ರಚೂಳಿಯಲಿ (ಮದೇಪು. ೨–೪೦). [ ತಳ (= ತಲ) + ಹರಿ$_2$ (< ಪರಿ$_2$) ]

**ತಳಹಸಿ** (ನಾ). ನೆಲದ ಕೆಳಪದರದಲ್ಲಿ ಉಂಟಾಗಿರುವ ತೇವ ; ತಳದವರೆಗೂ ಇರುವ ಹಸಿ : ಮಳೆಯಾಗಿ ಸಾಲಿನಲ್ಲಿ ನೀರು ನಿಂತು ತಂಪಾದರೆ ಹೊಲವು ಚೆನ್ನಾಗಿ ಹಸಿಯಾಗಿ ತಳಹಸಿ ಕೊಡುವುದು (ಕೃಷಿಪ್ರ. ೮೩). [ ತಲ (= ತಳ) + ಹಸಿ$_2$ (< ಪಸಿ$_3$) ]

**ತಳಹಳ**, ತಳಹೊಳ (ನಾ). ೧. ದಿಗಿಲು; ದಿಗ್ಭ್ರಮೆ. 'ತಳಹಳಂಗೊಳ್' ಪರಾ. ೨. ತಳಮಳ ; ಕಳವಳ ; ವ್ಯಾಕುಲತೆ. 'ತಳಹಳಗೊಳ್' ಪರಾ. **ತಳಹೊಳ : ೨.** "ಕ್ಲದ – ವೈಕಲ್ಯೇ, ತಳಹೊಳದೊಳ್" (ಕಾಶಕ್ಕ. ೧೩೬). 'ತಳಹೊಳಗೊಳ್' ಪರಾ.

**ತಳಹಳಂಗೊಳ್**, ತಳಹಳಗೊಳ್, ತಳಹೊಳಂಗೊಳ್, ತಳಹೊಳಗೊಳ್ (ಕ್ರಿ). ೧. ಬೆಗಡುಗೊಳ್ಳು ; ದಿಗಿಲುಗೊಳ್ಳು ; ದಿಕ್ಕುತೋಚದಂತಾಗು : ನಿಜಪುರಕೆ ಪೋಪ ದಾರಿ ಆವ ಕಡೆಯೆಂದು ಕಾಣದೆ ತಳಹ[ಪಾಠಾಂ.ಹೊ]ಳಂಗೊಳುತ್ತಾ ವನಾಂತದೊಳು ಮದ್ದಳೆಯ ಹೊಕ್ಕಿಲಿಯಂತೆ . . . ವೈಶ್ಯನಿಕುರುಂಬಮೆಲ್ಲವುಂ ತಬ್ಬಿಬ್ಬುಗೊಂಡುದಾಗ (ಸಮ್ಯಕೌ. ೧೦–೪೦). **ತಳಹಳಗೊಳ್ : ೧.** ಕೊಳದೊಳಲರ್ದಬ್ಜದಲರಂ ನಳಿನೇಕ್ಷಣೆ ಮುಱಿವೆನೆಂದು ಪುಗೆ ತೆರೆವೊಯ್ಲಿಂ ಮುಳುಗುತ್ತೇಳುತೆ ಭಯದಿಂ ತಳಹಳಗೊಳ್ವಂತೆ[ಪಾಠಾಂ. ತಳಮಳಗಾದಂತೆ, ತಳಹೊಳಗೊಳ್ವಂತೆ]ಕಣ್ಗದೇಂ ರಂಜಿಸಿತೋ (ರಾಜಶೇ. ೧೦–೪೬). ೨. ತಳಮಳಿಸು; ವ್ಯಾಕುಲಗೊಳ್ಳು : ಅಳಲುತ ಬಳಲುತಂಜುತ ಚಿಂತೆಯಾಂತಳ ತಳಹಳಗೊಳುತ ತಲ್ಲಣಿಸಿ ಕಳವಳಿಸುತ ಕಂಗೆಟ್ಟು ರಂಗಾಯೆಂಬೆಳೆಯಳನು (ಶತಸಾಂ. ೩೪–೮೦). **ತಳಹೊಳಂಗೊಳ್ :** ೧. ಮೇಲಿನ 'ತಳಹಳಂಗೊಳ್' ಉಲ್ಲೇಖಕ್ಕೆ ಕೊಟ್ಟಿರುವ 'ಸಮ್ಯಕೌ' ಪ್ರಯೋಗದ ಪಾಠಾಂತರವನ್ನು ನೋಡಿ. **ತಳಹೊಳಗೊಳ್:** ೧. ಜಲಧಿ ಮೇರೆಯ ಮಿಱಿ ಪೆರ್ಚೆ ತಳಹೊಳಗೊಳೆ[ಪಾಠಾಂ. ತಳವಳಗೊಳೆ, ತಳಹೊಳಗಾಗಿ] ತಾರಾಲೋಕ ಭೇರೀಕುಳ ಮೊಳಗಿದುದು ಬೇಗದೊಳು (ಕುರಾಸಾಂ.೧೬–೧೯); ದಳವಾಯಿ ನಂಜರಾಜೇಂದ್ರನ ಡಾಳಿನ ಹೊಳಹು ಡಮಾಮಿಯಬ್ಬರದ ಸುಳಿವ ಕಂಡಾಕ್ಷಣ ಹತ್ತು ಪೌಜೊಂದಾಗಿ ತಳಹೊಳಗೊಂಡುದೇವೇಳ್ವೆ (ಕಂನವಿ. ೧೭–೫೦). ೨. ಅಳುವರ್ಗಂಗಜಾಗ್ನಿಯ ತಾಳಲಾಱದೆ ತಳಹೊಳಗೊಳುತಾ ತರಳಾಕ್ಷಿ ತಳುವದಲ್ಲಿಂದೆಳ್ದು . . . ತೊಳಲಿದಳರಮನೆಯೊಳಗೆ (ಕುರಾಸಾಂ. ೨೫–೨೨): ತಳವರ್ಜೆಷ್ಟೆ ತಟಪುಟನಿಡುವಾಗ ವಿಟರೆದೆ ತಳಹೊಳಗೊಳುತಿಹುದೊಡನೆ (ಭರಜ. ೧೨–೬೮); ಇಳಿವ ಕಣ್ಣೀರು ಬಾಯ್ಮುದ್ರೆ ತಲೆಗಿಟ್ಟ ಮುಸುಕಿಂದ ಬೀದಿಯೊಳ್ಬರೆ ಕಂಡು ತಳಹೊಳಗೊಂಡಿತು ನಗರ (ಭರಜ. ೭೦–೬). [ ತಳಹಳ + ಕೊಳ್$_1$ ]

**ತಳಹಳಗೊಳ್** 'ತಳಹಳಂಗೊಳ್' ನೋ.

**ತಳಹಿಡಿ** (ಕ್ರಿ). ೧. = ತಳಹತ್ತು ೧ : ಅನ್ನ ತಳಹಿಡಿದಿದೆ (ರೂಢಿ). ೨. (ಜಟ್ಟಿಕಾಳಗದಲ್ಲಿ) ನೆಲಕಚ್ಚು : ನಮ್ಮೂರ ಪೈಲ್ವಾನ ಜಿದ್ದಿನ ಕುಸ್ತಿಯಲ್ಲಿ ತಳಹಿಡಿದು ಕುಸ್ತಿಯನ್ನು ಸಮಮಾಡಿದ (ರೂಢಿ).

[ ತಳ (= ತಲ) + ಹಿಡಿ$_1$ (< ಪಿಡಿ$_1$) ]

**ತಳಹೊಳ** 'ತಳಹಳ' ನೋ.

**ತಳಹೊಳಂಗೊಳ್** 'ತಳಹಳಂಗೊಳ್' ನೋ.

**ತಳಹೊಳಗ** (ನಾ). ದುಃಖಿಸುವವನು ; ಅಳುವವನು ; ವ್ಯಾಕುಲಪಡುವವನು : "ಕ್ರಂದಕಃ, ಕ್ರಂದಮಾನಃ, ಈ ೨ ತಳಹೊಳಗಂ" (ಕಾಶಕ್ಕ. ೧೩೬). [ ತಳಹೊಳ (< ತಳಹಳ) + – ಗ$_2$ ]

**ತಳಹೊಳಗೊಳ್** 'ತಳಹಳಂಗೊಳ್' ನೋ.

**ತಳಹೊಳಗೊಳಿಸು** (ಕ್ರಿ). ೧. ದಿಗಿಲುಗೊಳಿಸು ; ದಿಗ್ಭ್ರಮೆಗೊಳಿಸು: ಬಳಿಕ ಸಂಗಮದೇವನಿಡೆ ಕಂತುಕ ಕೈದಳಕೆ ಸಿಕ್ಕದೆ ರಿಪುಭಟರ ತಳಹೊಳಗೊಳಿಸಿ ತಳುವದೆಯ್ದಿ ಲಗ್ಗೆಯ ಕಳಕುಳವನು ಮಾಡಿದುದು (ಕುರಾಸಾಂ. ೩೦–೮೫). ೨. ಕ್ಷೋಭೆಗೊಳಗುಮಾಡು: ಪ್ರಳಯಪವನನಂದದಿನೊಂದು ಸುಂಟುರೆ ಸುಳಿದಾ ಭೈತ್ರವನಿರದೆ ತಳಹೊಳಗೊಳಿಸಿ ಮತ್ತಾ ಕೂಪಕಂಬ ಮನುಳಿಯದೆ ಮುಱಿದು ಹಾಕಿದುದು (ನೇಮಿಸಂ. ೧೦–೧೮೦).

[ ತಳಹೊಳಗೊಳ್ (< ತಳಹಳಂಗೊಳ್) + – ಇಸು$_3$ ]

**ತಳಹೊಳಿಸು** (ಕ್ರಿ). ತಳಮಳಿಸಂ; ದುಃಖಿಸು; ಅಳಂ; ವ್ಯಾಕುಲಪಡಂ: "ಕ್ರಂದತೇ, ಕ್ರಂದಯತಿ = ತಳಹೊಳಿಸಿದಪಂ" (ಕಾಶಕ್ಕ. ೧೩೬).

[ ತಳಹೊಳ (< ತಳಹಳ) + – ಇಸು$_3$ ]

**ತಳಟಿ** 'ತಳವಟಿ' ನೋ.

**ತಳಅಸುಂಕ** (ನಾ). ಒಂದು ಬಗೆಯ ಸುಂಕ ; ತಳವಾರನಿಗೆ ಸಲ್ಲುವ ತೆರಿಗೆ : ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಮತ್ತರೆಂಟು ಪೂದೋಂಟಂ ನಾಲ್ಕು . . . ವಡ್ಡರಾವುಳ ವದ್ದಾ೯ದಾನ ತಳಅಸುಂಕಂ ಮಾನ್ಯಂ (ಎಕ. VII, ಶಿಕಾರಿ. ೧೩೭-೫೪ ; 1114).

[ ತಳಅ (<ತಳವಅ) + ಸುಂಕ ]

**ತಳಾತಳ** 'ತಲಾತಲ' ನೋ.

**ತಳಾತಳಲೋಕ** (ನಾ). = ತಲಾತಲ ೧ : ಜಾನುವಿನಲ್ಲಿ ಮಹಾತಳಲೋಕ ಉರುವಿನಲ್ಲಿ ತಳಾತಳಲೋಕ (ಅಜಂಡೀ. ೧೪೧-೨೪); ಕಟಿ—ಕಟಿಪ್ರದೇಶವು, ತಳಾತಳಂ—ತಳಾತಳಲೋಕವೆಂದು, ಪ್ರೋಕ್ತಂ—ಹೇಳಲ್ಪಟ್ಟಿತು (ಉತ್ತಟೀ. ೪೧-೫). [ ತಳಾತಳ (= ತಲಾತಲ) + ಲೋಕ ]

**ತಳಾಮಳಕ** 'ತಲಾಮಲಕ' ನೋ.

**ತಳಾಯ**(ನಾ). ಮಲ್ಲಯುದ್ಧದಲ್ಲಿ ಒಂದಂ ಭಂಗಿ,—ವರಸೆ (?): ತೆಱಹು ಗೊಂಡು ತಳಾಯದಲಿ[ಪಾಠಾಂ. ಹಕೊಂಡು ತಳಾಯುಧದಿ, ಹುಗೊಂಡು ತಳಾಯುತದಿ]ಬೊಬ್ಬಿಱಿದು ಬಾಹಪ್ಪಳಿಸಿ ನಿಂದಿದರಱಿಚಿ ನೆಲಕುಕ್ಕುರಿಸೆ ಕರಿ ಕಮರಾಹಿನಾಯಕರು (ತೊರರಾ. ೬-೧೭-೩೭).

[ ತಳ (= ತಲ) + ಆಯ$_7$ ]

**ತಳಾರ$_1$** 'ತಳವಅ' ನೋ.

**ತಳಾರ$_2$** (ನಾ). ೧. ತಡ ; ನಿಧಾನ ; ವಿಳಂಬ : ಇದಕ್ಕಿಂತ ಮುಂಚೆ ಬಂದು ಏನು ಮಾಡಬೇಕಾಗಿತ್ತಿಲ್ಲಿ ಎಂದು ತಳಾರದಲ್ಲಿಯೇ ಬಂದೋ (ಜಂಗಾಳ್ಕ. ೨೯೮) ; ನೋಡಿಕೊಂಡು ಬನ್ನಿ ತಳಾರದಲ್ಲಿ ಎಂದು ಉತ್ತರವಿತ್ತ (ರಾಗಿಚಿ. ೨೦೩) ; ತಳಾರ ಮಾಡಬಾರ್ದು ಬುದ್ದಿ (ಶಕಾರ. ೦೫೦). ೨. ವಿರಾಮ : ಹಿಂದಿನ ಆ ಸೊಗಸು, ಆ ತಳಾರ, ಆ ಹಾಸ್ಯ, ಗೇಲಿ, ಇನ್ನೊಬ್ಬನ ಮನೆಯ ಮದುವೆ ತನ್ನ ಮನೆಯ ಮದುವೆ ಎಂಬ ಭಾವನೆ ಇಲ್ಲವೇ ಇಲ್ಲ (ನನ್ನೂರು. ೩೧೬). [ <ತಳರ್ ]

**ತಳಾರಗೋಲ್** (ನಾ). ತಳವಾರನು ಗಸ್ತು ತಿರುಗುವಾಗ ನೆಲಕ್ಕೆ ಕುಟ್ಟುವ ಕೋಲು : ಸಬಳಗಜ್ಜೆಗಳ ತಳಾರಗೋಲ ಗಗ್ಗರಿಗಳ ಬಾಜಣೆ (ಮಂತ್ರಶ. ೩೦-೬). [ ತಳಾರ$_1$ (<ತಳವಅ) + ಕೋಲ್$_1$ ]

**ತಳಾರಿ** 'ತಳವಅ' ನೋ.

**ತಳಾರಿಕೆ** 'ತಳವಱಿಕೆ' ನೋ.

**ತಳಾರಿಸು** (ಕ್ರಿ). ವಿರಮಿಸು; ವಿಶ್ರಾಂತಿ ತೆಗೆದುಕೊಳ್ಳು: ಅವಳೀನಾದ್ರೂ ತಳಾರಿಸಿಕೋತಾಳೆ ಅಂತೀರ. ಇಲ್ಲ. ಆವಾಗಲೆ ಕಣಜದ ಕಡೆಗೆ ಹೋಗ್ತಾಳೆ (ಪುನರು. ೪೭೭). [ ತಳಾರ$_2$ + - ಇಸು$_3$ ]

**ತಳಾಲೆ** 'ತಾಳೋಲೆ' ನೋ.

**ತಳಾಅ** 'ತಳವಅ' ನೋ.

**ತಳಾಅಗೂಲಿ** (ನಾ). = ತಳಅಸುಂಕ : ಸೋವಗಾವುಣ್ಡಂ ಪೆರ್ಗ್ಗಡೆ ಸೋವಯ್ಯ[ನಿ]ನ್ನಱುವಗ್ಗಾ೯ವುಣ್ಡುಗಳ್ಕಿಟ್ಟು ಮಂನೆಯ ಸಾಮ್ಯದೊಳ್ ಬಿಟ್ಟ ಮನ್ನ೯ಣೆಯೆನ್ನೆನ್ನೊಡೆ ಮನ್ನೆಯದೆಱಿ ಅಳಿವಸತಾಯ ಪೊ[ಗೆ] ವೊಗೆ ತಳಾಅಗೂಲಿ (ಸೌಇಇ. XI-i, ೭೫-೨೦ ; 1042) ; ಬೆಳುಗೊಡೆ ಬಾಗಿಲು ಜೋಳ ತಳಾಅಗೂಲಿ ಅಸತನ್ನಾಯ (ಬೊಂಕಶಾ. ೧೯೩೦, ಬಾಗವಾಡಿ. ೦೦೩-೪೪ ; 1165).

[ ತಳಾಅ (<ತಳವಅ) + ಕೂಲಿ$_1$ ]

**ತಳಾಅಗೆಯಿ** (ನಾ). ತಳವಾರನ ಜೀವಿತಕ್ಕಾಗಿ ಕೊಟ್ಟ ಗದ್ದೆ : ಅಂಬಿಗ ಗೆಯಿ ಮತ್ತ ೮ ತಳಾಅಗೆಯಿ ಮತ್ತ ೧೨ ಅಂತಿನಿತುಮಂ ಸ್ವಧರ್ಮದಿಂ ಪ್ರತಿಪಾಳಿಪ್ಪರ್ (ಸೌಇಇ. IX-i, ೭೪-೮ ; 981).

[ ತಳಾಅ (<ತಳವಅ) + ಕೆಯಿ (<ಕೆಯ್$_4$) ]

**ತಳಾಱಿಕೆ** 'ತಳವಱಿಕೆ' ನೋ.

**ತಳಾಱಿಕೆಯಾಯ** (ನಾ). ತಳವಾರನಿಗೆ ಸಲ್ಲುವ ಆಯ,—ವರ್ಷಾಶನ : ಶ್ರೀಮತು ಹಟ್ಟಗಾಱ ಕಡಂಬರ ಕಾಡೆಯನಾಯಕನುಮವರ ಮಾವಂ ಸೋವೆಯನಾಯಕನುಂ ತಳಾಱಿಕೆಯಾಯದಲ್ಲಿ ಶ್ರೀಮರುಳೇಶದೇವರ ನನ್ದಾದೀವಿಗೆಗೆ ಡೊಂಕಿವಣ ಮಾನೆಣ್ಣೆ ಸಹಿತಂ ಬಿಟ್ಟ ಗಾಣವೊಂದು. . . ತಳಾಱಿಕೆಯಾಯದೊಳಗೆ ಕೊಟ್ಟು ಸಧರ್ಮ್ಮದಿಂ ಪ್ರತಿಪಾಳಿಸಿ ನಡಸುವರು (ಕಇ. II, ೦೦-೩೭ ; 1181). [ ತಳಾಱಿಕೆ (<ತಳವಱಿಕೆ) + ಆಯ$_7$ ]

**ತಳಾಱು** (ನಾ). ೧. ತಳವಾರ ; ಕಾವಲುಗಾರ : ಶ್ರೀಚೋಱ ಮಹಾರಾಜಙ್ಗೆ ಚಾತೆಯಪರಸಿನ × × ಕಣ್ಣ ಕೊಟ್ಟ ಱಾಮಡಿಯ ತಳಾಱು ಮಿಣ್ಣಪೋದಿಯ ಪಿಳ್ಳೆಯ ತಲೆದ × × ಗಾರಮುಮವ್ × × (ಎಕ. X, ಗೌರಿಬಿ. ೭೩-೪ ; 900). ೨. ತಳವಾರನ ವೃತ್ತಿ,—ಕೆಲಸ : 'ತಳಾಱುಗೆಯ್' ಪರಾ. ೩. = ತಳಅಸುಂಕ (?): ಉಗುರಮೂನೂ ರ್ವ್ವರುಂದರ್ಪಣನಮಂ ದೇವರ್ಗ್ಗೆ ಪೇೞಿಂಗೆ ವೀಸ ತಲೆವೊಱಿಗರೆವೀಸವಂ ಬಿಟ್ಟರ್ ತಳಾಱಿನೊಳು ದೇವರ್ಗ್ಗೆ ಬಿಟ್ಟ ಗದ್ಯಾಣ ೧ (ಸೌಇಇ. XI-ii, ೧೪೫-೩ ; 1198). [ ತಳಾಱ (<ತಳವಅ)+ - ಉ$_4$ ]

**ತಳಾಱುಗೆಯ್** (ಕ್ರಿ). ತಳವಾರನ ಕೆಲಸವನ್ನು ಮಾಡು ; ಕಾವಲು ಮಾಡು : ಮಗನೆ ನೀನೆನ್ನ ತಳಾಱು[ಪಾಠಾಂ. ನಿನ್ನನೆನ್ನ ತಳಾಱಿಕೆ] ಗೆಯ್ವಂದು ಕಳ್ದೊಡೆ ನಿನ್ನಂ . . . ದಂಡಿಸದಾಗಳೇನಾಯ್ತು (ವಡ್ಡಾರಾ. ೧೨೯-೯) ; ಆನುಮಿಾ ಪೊಲಿಲೊಳ್ ತಳಾಱುಗೆಯ್ವೆಂ [ಪಾಠಾಂ. ಱನೆಂ] (ವಡ್ಡಾರಾ. ೧೨೯-೧೪). [ ತಳಾಱು + ಕೆಯ್$_1$ ]

**ತಳಿ$_1$, ತಳ್ಳೆ$_2$** (ಕ್ರಿ). ೧. (ನೀರನ್ನು) ಚಿಮುಕಿಸು ; ಸಿಂಪಡಿಸು ; ಸೂಸು; ಸೇಚನಮಾಡು : "ತಳಿ—ಸೇಚನೇ(ಚಿಮುಕಿಸು), ಸೇತ್ರ ಚ (ಸತ್ರ) ಸ್ಥೂಲದಾರೌ ಱಟಂ(ತಟಿ)"(ಶಮಧಾ); ನಾನಾಪ್ರಕಾರದ ಯಂತ್ರಂಗಳಿಂದಂ ಜೀರ್ಕೋಲವಿಗಳಿಂದಂ ತಳಿಯುತ್ತಂ ನೀರ್ಗಳಂ ಸೂಸುತ್ತಂ ಜಲಕ್ರೀಡೆಯಂ . . . ಆಡುತ್ತಿರ್ಪನ್ನೆಗಂ (ವಡ್ಡಾರಾ. ೧೩೭-೩) ; ಪದನಱಿದು ತಳಿದ ಮೃಗಮದಸಲಿಲದೊಳ್ ಮೆಲ್ಲಮೆಲ್ಲನುಳ್ಳಲರ್ದು ಚೆಲ್ವಿಂಗೆ ಮುಡಿಗವಿ ದಂತೆ ತೋಱುವ ತೋರಮಲ್ಲಿಗೆಯ ಮುಡಿಯುಮೆಸೆಯೆ ಕೈಗೆಯ್ದಾಗಳ್ (ಆದಿಪು. ೪-೧೧೪); ಬಟಲ್ದರ ಮೊಗದೊಳ್ ನೀರಂ ತಳಿದು ಬೀಸಿ ಚೇತರಿಸಿ ದಾಗಳ್ (ಧರ್ಮಾಮೃ. ೧೦-೮೭) : ಯುವತಿಯರು ತಳಿವ ಪನ್ನೀರ ಮಂಜಿಂಗೆ (ಹಡಕಾ. ೩-೬೨) ; ಅಡಿಗಡಿಗುತ್ಸವದೆ ತಳಿವ ಪಟವಾಸಚಯಂ (ಪುಷ್ಪಪು. ೦೨-೧೮) ; ತಳಿತಳಿದು ಪನ್ನೀರನಕ್ಷಿಗೆ ಚಳಿಯವನು ಹಿಡಿದೆತ್ತಿ (ಕುವ್ಯಾಶ. ೧-೧೦) ; ಬಗೆಯೊಳೂಗೆದ ಬೇಟದಗೆಗೆ ನೀರ್ದ[ಪಾಠಾಂ. ದಿ೯]ಳಿ ವಂತೆ ಮೃಗನೇತ್ರೆಯರು ಪಥಿಕರ್ಗೆ ನಗುತ ನೀಱಿರೆವುತಿಹರು (ಕುರಾಸಾಂ. ೨-೪೭). ೨. ಎರಚಂ ; ಚೆಲ್ಲಂ ; ಉದುರಿಸು : ಅತಿಸಿತಸರ್ಷಪ ಶೇಷಾಕ್ಷತಂಗಳಂ . . . ಪರಸಿ ತಳಿದರ್ (ಸುಕುಮಾ. ೧೧-೬) ; ಡಕ್ಕೆಯ ಮೇಲೆ ಅಕ್ಕಿಯ ತಳಿದೆನು (ಬಸವ. ೭೫೦) ; ಆಱಿಸಿದೋಗರದೊಳ್ ಪೊದಟ್ಟು ಕಮ್ಮಗೆ ಕೆನೆಗೊಂಡ ಗೆಡ್ಡೆ ಮೊಸರಂ ಸುರಿದೇಲೆಯ ಚೂರ್ಣವಿಕ್ಕಿ ಪೊಯ್ದೊಗುಮಿಗೆ ಬೇಳೆಗೆಯ್ದ ಮೆಳಸಂ ತಳಿದಲ್ಲದ ಚಲ್ಲಿಯಂ . . . ಇತ್ತನಟ್ಟಿಯಿಂ (ಲೀಲಾವ. ೫-೭೦) ; ನಿಷ್ಠೆ ನೇಮಂಗಳ ಜೀರಗೆ ಬೆಲ್ಲಂಗಳಂ ತಳಿದು (ಬಸರ. ೪-೧೦೪) ; ಚಾರು ಚಂದ್ರಿಕೆಯ ಬೀಜಂಗಳೋ ಚಂದ್ರಂ ಚಕೋರಾವಳಿಗೆ ತಳಿದ ಕುಟುಕುಗಳೊ (ಹಡಕಾ. ೩-೭೯) ; ಕಚಾವಳಿಗಳಂ ಬಗಿಬಗಿದು ಪುಡಿಗತ್ತುರಿಯನೆಯ್ದೆ ತಳಿದೋರಣಂಗೊಳಿಸಿ (ಪದ್ಮರಾ. ೩-೪೪) ; ತಳಿವ ನಿನ್ನಂಬಿನ ಮಳೆಗೆ ಮನ ನಲಿವ ಚಾತಕಿಯಱ ಯೆಲಾ (ಕುವ್ಯಾಕ. ೧೪-೧೯) ; ಸುರಸತಿಯರಕ್ಷತೆಯ ತಳಿದರು ಹರಸಿ ನಳನೃಪಗೆ (ನಳಚ. ೮-೬೪) ; ಏನೇನೋ ಬೋಧಿಸಿ ಮಂಕುಬೂದಿಯನ್ನು ತಳಿದು ಮಾನಸನಂ . . . ಕೊಂಡು ಪೋದಳೆಂದು ರೋದನಂಗೈಯುತ್ತೆ (ಅರ್ಜಾವಿ. ೨೯-೫). ೩. (ಬೀಜವನ್ನು) ಊರು ; ಬಿತ್ತು ; ನೆಡು :

ಬಗಯೊಳ್ಬೀಟದ ಬೀಜಮಂ ತಳಿದು ನೀರ್ವೊಯ್ವಂದದಿಂ . . . ಎತ್ತಿ ತಣ್ಣಳಸಮಂ ನೀರ್ವೊಯ್ವುದುಂ (ಮಲ್ಲಿಪು. ೨-೨೯) ; ಪೃಥ್ವಿಯಲ್ಲಿ ಅಪ್ಪು ಸಾರವಿಲ್ಲದಿರೆ ಬೀಜವ ತಳಿಯಲಾಗಿ ಪ್ರತ್ಯಕ್ಷ ಅಂಕುರ ದೃಷ್ಟವಪ್ಪುದೇ (ಸರ್ವವ. ೧೩೭-೬೮೦) ; ಆ ನೆಲದೊಳುಳ್ಳುದೊವ್ಮನ ಬೀಜವಂ ತಳಿದು (ಇಳಿರ. ದೇ. ೫೦-೧೧). ೪. ಹರಡು ; ಕೆದರು : ತಲೆಗಳೊಟ್ಟಿಲ ತೋಳ ಕಡಿಗಳ ತಳಿದ ಖಂಡದ ಕುಣಿವ ಮುಂಡದ ಸುಳಿಯ ರಕುತದ ಕಡಲ ರೌಕುಳವಾಯ್ತು ನಿಮಿಷದಲಿ (ಕುವ್ಯಾ.ಶ. ೦೩-೨೬). ೫. ಥಳಿಸು; ಕುಟ್ಟು; ಹೊಡೆ. 'ಅಕ್ಕಿದಳಿ', 'ತಳಿಸು₁' ಪರಾ. ತಳ್ಕೆ₂ : ೧. ಜಳಧಿಗೆ ಜಳಧಿಯ ಜಳಮಂ ತಳೆದಂಜುಳಿಯಿಂದಮರ್ಘ್ಯಮಿಾವಂತೆ (ವರ್ಧಪು. ೦೪-೯೬); ಉದಕವನು ತಳಿಯಲಸವಸದಿಂದ ಅಡಪಚ್ಚಿಯೆಂದೇಳೆ (ಪ್ರಾಥರಾ. ೨-೨೯).

**ತಳಿಯಪಡು**=ಚಿಮುಕಿಸಲ್ಪಡು ; ಸುರಿಯಲ್ಪಡು : ಸಂಸಿತ್ತೋ- ತಳಿಯಪಟ್ಟೊನಾಗಿ (ವಡ್ಡಾರಾ. ೧೦೭-೭).

[ ದೇ.॥ ತಮಿ. ಮಲ. ತಳಿ ; ತುಳು. ತಳಿಪು, ತಲಿಪು; ಕೊಡ. ತಳಿ ]

**ತಳಿ₂**, ಚಳಿ₃, ಚಳೆ₁, ಥಳಿ, ದಳಿ₁ (ನಾ). ಸಿಂಪಡಿಸುವುದು ; ನೆಲ ಗುಡಿಸಿದ ನಂತರ ನೀರನ್ನು ಚೆಲ್ಲುವುದು ; ಚಳೆಯ ; ಸೇಚನ : ಕಲ್ಯಾಣಿಯು ಅದೇ ಸಮಯಕ್ಕೆ ಎದ್ದು ಹೊಸತಿಲು ಸಾರಿಸಿ, ಬಾಗಿಲ ಮುಂದೆ ತಳಿ ಹಾಕಿ . . . ಒಳಗೆ ಹೋದಳೆಂದರೆ ಹೊರಗೆ ಬರುತ್ತಿರಲಿಲ್ಲ (ಅಪವಾ. ೩೦). **ಚಳಿ₃** : ಹಾದಿಯ ಉಡುಗಿಸಿ ಹಾಲ ಚಳಿಯ ಕೊಟ್ಟು (ಲೋಕಗೀ. ೩೫). 'ಚಳಿಕೊಡು' ಪರಾ. **ಚಳೆ₁** : ಪನ್ನೀರ ಚಳೆಯಿಂ ಕಸ್ತುರಿಯ ಸಾರಣೆಯಿಂ (ಹಮ್ಮಿರ. ೨-೫೫ ವ) ; ಚಳೆಯನುರೆ ಚೆಲ್ಲುವವು ಬಗ್ಗಮರಿಗಳು (ನವಮೋ. ೬-೧೧) ; ಭೋಗಿಗಳು ಪನ್ನೀರಿನ ಚಳೆಯನ್ನು ಬಯಸಿದರು (ಕಗದ್ಯ. ೯೭). **ಥಳಿ** : ಮಾತೆಲ್ಲ ಮುತ್ತಿನ ಎಳಿ ಜೇನಿನ ಥಳಿ (ಮೂರ್ತಿಶಾ. ೫೦-೯) ; ಅಣ್ಣ ಬರತಾನಂತ ಅಂಗಳಕೆ ಥಳಿಕೊಟ್ಟು (ಹಳ್ಳಿಯ. ೦೦೦). **ದಳಿ₁** : ಶಿವನ ದಾಸೋಹದ ಶಿಶುವೆಂದು ಕಸಕಿಲಂ ಪಿಡಿದು ಬಯಲನುಡುಗಿ ಹೊತ್ತ ನೀರಲ್ಲಿ ದಳಿಯ [ಪಾಠಾಂ. ಪುತ್ಥಳಿಯ, ಪೃಥ್ವಿಯ] ಸೌಖ್ಯವ ಮಾಡಿ (ಚನ್ನಮ. ಕ. ೩೩೨-೫೦೭).

**ತಳಿಹಾಕು, ಥಳಿಹಾಕು** =ನೆಲವನ್ನು ಗುಂಡಿಸಿ ನೀರನ್ನು ಚಿಮುಕಿಸು : ನಗರ ಸಭೆಯ ಕಟ್ಟಡದ ಸುತ್ತಲೂ ತಳಿಹಾಕಿ (ಭಾರತಿ. ೮೪) ; ಮನೆ ಮುಂದೆ ಥಳಿಹಾಕಿ ರಂಗೋಲಿ ಹಾಕುತ್ತಿದ್ದಾಳೆ (ರೂಢಿ). **ತಳಿಹೊಡೆ** = ತಳಿ ಹಾಕು : ಈ ನನ್ನಯಂತರಂಗದ ಸಭಾಮಂಟಪವ ನಾನೆನ್ನ ಕೆನ್ನೀರಿನಿಂದ ತಳಿಹೊಡೆದೆನ್ನೆ (ಸಖೀಗೀ. ೬೬-೧೦) ; ತುಳಸಿಯ ಕಟ್ಟೆಯ ಸುತ್ತು ತಳಿ ಹೊಡೆದು ರಂಗವಲ್ಲಿಯನ್ನು ಬರೆದಳು (ಜಯಂತ. ೧).

[ <ತಳಿ₁./ತಮಿ. ತಳಿ ]

**ತಳಿ₃** (ನಾ). ಛತ್ರ ; ಅನ್ನಸತ್ರ : "ತಳಿ-ಸೇಚನೇ (ಚಿಮುಕಿಸು), ಸತ್ರೇಚ (ಸತ್ರ) ಸ್ಥೂಲದಾರೌ ಜಟಿಂ (ತಟಿ)" (ಶಮಧಾ) ; ಆರೋಗ್ಯಶಾಲೆಗಳುಂ ತಳಿಗಳುಮಟವಟಿಗೆಗಳುಂ . . . ಪ್ರಾಣಿಗಳ್ಗಾರ್ಮಮಪ್ಪುದುಂ (ಪಸಾರ. ೯೨-೧) ; ತಳಿಯ ಕೂಟಿದಿರ್ದೊಳ್ ಪಣ್ಣಾರವೆ (ಶಮುದ. ಮ. ೨೭ ವೃತ್ತಿ) ; ಬಗೆಯಾ ಜಗಂ ಗಡಾ ಮುರುಕು ತಳಿಯಂತೆ (ಗೀವಿಂ. ೧೧೮-೧೧).

[ ದೇ.॥ ತಮಿ. ಮಲ. ತಳಿ ]

**ತಳಿ₄** 'ತಟಿ' ನೋ.

**ತಳಿ₅** (ನಾ). ೧. ವಂಶ ; ಮನೆತನ: "ಸೇಚನ ವಂಶ ಸ್ಥೂಲದಾರುಗಳೊಳು ತಳಿ" (ಶಬ್ದಮಂ. ೧೦೪) ; ಈ ಕಾಳು ತಿನ್ನುವ ತಳಿಯವರು ಕಂಡ ತಿನ್ನುವ ನಮ್ಮ ತಳಿಯವರನ್ನು ನುಂಗಿ ನೀರು ಕುಡಿಯುವವರು (ಮುಂಬಯಿ. ೬-೨೮೮). ೨. ಆನುವಂಶಿಕವಾದ ಗುಣ : ತಳಿ ಅಪ್ಪನದು ಮಾತ್ರ ಅಲ್ಲ ತಕರೆ, ಅವ್ವನದೂ ಹೌದು. ಮಗಳ ತಳಿ ಅಪ್ಪನಿಗಿನ್ನ ಅವ್ವನದೇ ಹೆಚ್ಚು (ಚಿಕರಾ. ೫೦೦). ೩. ಪಶು ಅಥವಾ ಧಾನ್ಯಗಳ ಪೀಳಿಗೆ : "ತಳಿಯೆನಲ್ಗೋವುಗಳ ವಂಶದೊಳ್ ಸತ್ರದೊಳ್ ಕುಳನದು" (ಸಂಜೀವ. ೨೪) ; ಒಟಗಿರ್ದುವು ತಳಿಯ ನಾಯ್ಗಳೋರೊಂದೆಡೆಯೊಳ್ (ಲೀಲಾವ. ೬-೦೩); ಉತ್ತಮ ತಳಿಯ ಕುದುರೆ ಕಟ್ಟಿದ್ದ ರಬ್ಬರ್ ಪಟ್ಟಿಯ ಸಣ್ಣ ಬಂಡಿ (ಪುನರು. ೧೮೪) ; ಹೊಸ ತಳಿಯ ಬೀಜಗಳನ್ನು ಉಪಯೋಗಿಸಿದಲ್ಲಿ ಹತ್ತಿಯ ಉತ್ಪತ್ತಿಯು ಹೆಚ್ಚಾಗುತ್ತದೆ (ವ್ಯವಮ. ೪೩).

[ ←ಮರಾ. ಥಳ್, ಥಳೀ ]

**ತಳಿಕೀರೇಸೊಪ್ಪು** (ನಾ). ಒಂದು ಬಗೆಯ ಸೊಪ್ಪು: (ಮೃಜಿಗಿ. ೪೭-೯೧೫).

[ ತಳಿಕೀರೆ₀ + ಸೊಪ್ಪು₃ ]

**ತಳಿಕುದುರೆ** (ನಾ). ಜಾತಿ ಕುದುರೆ ; ಜಾತ್ಯಶ್ವ : ನಾಡ ಕುಳತಿಳಕಮಪ್ಪ ಮುಕ್ಕಡರ ಸೋವಿಸೆಟಿಯ ಮಗಂ ಕಾಳೆಯನಾಯಕ ತಳಿಕುದುರೆಯಂ ನಿಟಿದು ಪಲರಂ ಕೊಂದು ತುಱುವಂ ಮಗುಳ್ಚಿ ಸುರಲೋಕಪ್ರಾಪ್ತನಾದ (ಎಕ. VII, ಶಿಕಾರಿ. ೧೮೧-೭ ; 1170 ?). [ ತಳಿ₅ + ಕುದುರೆ ]

**ತಳಿಕೆ₁** 'ತಟಿಕ್ಕ' ನೋ.

**ತಳಿಕೆ₂** (ನಾ). ಒಂದು ಬಗೆಯ ಔಷಧಿ ಸಸ್ಯ : "ಮಹಾತ್ವಕ್ಕಃ – ತಳಿಕೆ" (ಓಷಧಿ.೧೧೪). [ ? ]

**ತಳಿಕೆಬೀಳು** 'ತಕ್ಕೆಬೀಳು' ನೋ.

**ತಳಿಗು** 'ತಳ್ವು₁' ನೋ.

**ತಳಿಗೂಳು** (ನಾ). ಬೆರಳಿನಿಂದ ಸಿಡಿಸಿದ ಅನ್ನ ; ತೀರ ಅಲ್ಪವಾದ ಆಹಾರ : ಜಂಗಮಕ್ಕೆ ತಳಿಗೂಳ ತಳಿದು ತಾ ಗಂಗಳ ತುಂಬಿ ಒಟ್ಟಿಸಿಕೊಂಡು ಕೊಂಬನೇ ಪ್ರಸಾದಿ (ಸಿದ್ಧೇವ. ೯೮-೩೦೨).

[ ತಳಿ₁ + ಕೂಳು₂ (<ಕೂಟ್₁) ]

**ತಳಿಗೆ, ತಣಿಗೆ** (ನಾ). ತಟ್ಟೆ ; ತಾಟು : " ಅಮತ್ರಂ, ಭಾಜನಂ, ಪಾತ್ರಂ, ಸ್ಥಾಲಂ – ಈ ೪ ತಳಿಗೆ " (ಹಲಾಯು. ೫೪-೧೭೨) ; ಪೊನ್ನ ತಳಿಗೆಯೊಳ್ ನಾಯ್ ತುಯ್ಯಲುಣ್ಬುದುಮಂ (ವಡ್ಡಾರಾ. ೮೫-೨೮) ; ಮುಳಿದು ತನಗರ್ಘ್ಯಮೆತ್ತಿದ ತಳಿಗೆಯೊಳಿಡೆ ತಿಟಿದ ತೆಱದೆ ತಲೆ ಪಱಿದಾಗಳ್ ಕಳಕಳಿಸಿ ನಗುತುಮಿರ್ದುದು ತಳಿಗೆಯ ಮೇಲಸುರನದಟದೇನಚ್ಚರಿಯೋ (ಪಂಪಭಾ. ೭-೬೪) ; ಅಡ್ಡಣಿಗೆಯುಂ ತಳಿಗೆಯುಂ (ಎಕ. XI, ಚಿತ್ರದು. ೭೫-೧೪; 941): ಕಯ್ಯುಲುಂಬುದರಿದೋ ತಳಿಗೆಯಲುಂಬುದರಿದೋ (ಧರ್ಮಾಮೃ. ೭-೮೧) ; ನಮ್ಮ ಕುನ್ನಿಗೆ ಕೂಸ ಕೊಡಬೇಡ ನಮ್ಮ ಸೊಣಗಂಗೆ ತಳಿಗೆಯನಿಕ್ಕಬೇಡ (ಬಸವ. ೭೫೨) ; ನೂಕಿದವು ರತುನಾರತಿಯ ತಳಿಗೆಗಳು ವರಕಾಂತಾಕದಂಬದಲಿ (ಕುವ್ಯಾ.ಕ. ೦೮-೦೨) ; ತಳಿಗೆ ತಂಬುಗೆ ಗಿಂಡಿ ಹರಿವಾಣ ಪಡಿಗ ಬಟ್ಟಲು ಮೊದಲಾಗಿ ಭೋಜನಕೆ . . . ಅನುಗೊಳಿಸಿದರು (ಭರತ. ೪-೫೮) ; ಕೊಡಲಿ ಗುದ್ದಲಿ ಮಚ್ಚು ತಳಿಗೆಯಿಲ್ಲವೆಯೆಂದು ನುಡಿಯೆ ಶ್ರೀಪೂಜ್ಯಪಾದೇಂದ್ರಾ ತಡಕಿ . . . ಹುಡುಗ ನುಣ್ಣುವ ಬಟ್ಟಲೀಯೆ (ಪೂಜ್ಯಚ. ೦೨-೯೫). 'ತಳಿಗೆದೋರಣ' ಪರಾ. **ತಣಿಗೆ** : ತೀರಣವ ಬೀಜವಂ ಮೊಸರ ನೀರಿಂದ ತೇದು ತಣಿಗೆಗೆ ಮೆತ್ತಿ (ವಿವ್ಯವಿ. ೩೩) ; ಒಣಗಿದ ಮರ ಚಿಗಿತು ಬಿಣಲು ಬಿಡುವದ ಕಂಡೆ ತಣಿಗೆಯ ತಾಣಕೆದು ಬಹುದು (ಸರ್ವಜ್ಞ. ೨೦೬೧) ; ಚಂದ್ರನ ಮರಿಯಂತಿರುವ ಕಂಚಿನ ತಣಿಗೆಯಿಟ್ಟರು (ಹುಟ್ಟಿಹ. ೧೧) ; ತಣಿಗೆ ಅನ್ನ ಉಂಡದ್ದು ಸುಳ್ಳೆ (ಚಿಕರಾ. ೦೬೧).

**ತಳಿಗೆ ತುಂಬು** = ನೈವೇದ್ಯಕ್ಕೆ ಎಡೆತುಂಬು.

[ ದೇ.॥ ತಮಿ. ತಳಿಕ್ಕೈ; ಮಲ. ತಳಿಕ; ತೆಲು. ತಳಿಗ, ತಲಿಗ ]

**ತಳಿಗೆಗಾರ್ತಿ** (ನಾ). ಆರತಿಯ ತಟ್ಟೆಯನ್ನು ಹಿಡಿದಿರುವವಳು : ಸೊಲ್ಲಿಸಿದರು ಜಾಗು ಬೊಲ್ಲು ಶಬ್ದವ ಕೆಂಬಲ್ಲ ತಳಿಗೆಗಾರ್ತಿಯರು (ಮೋಹತ. ೦೫-೩೭). [ ತಳಿಗೆ + – ಕಾಟಿ + – ತಿ₁ (< – ಇತ್ತಿ) ]

**ತಳಿಗೆಗುಡು** (ಕ್ರಿ). ತಟ್ಟೆಯನ್ನು ಕೊಡಂ: ಬೇಗದಿಂದಂ ವಣಿಜರೆಲ್ಲ ತಮ್ಮಂಗಳದ ಬಾಗಿಲುಗಳಿಕ್ಕಿ ಜರಹಾಯ್ದವನ ಸದನಕ್ಕೆ ಯೇಗೆಯ್ಯಲುಂ ತಳಿಗೆಗುಡಲಾಗದುಜಿದೆ ಪಾತ್ರದ ಬೆಂಬಳಿಯೊಳು ಬಹುದು (ಸಿದ್ಧೇಪು. ೧೯-೧೭). [ ತಳಿಗೆ + ಕುಡು$_1$ (<ಕೊಡು$_1$) ]

**ತಳಿಗೆತಂಬುಲ** 'ತಳಿಗೆದಂಬುಲ' ನೋ.

**ತಳಿಗೆತೋರಣ** 'ತಳಿಗೆದೋರಣ' ನೋ.

**ತಳಿಗೆದಂಬುಲ,** ತಳಿಗೆತಂಬುಲ (ನಾ). (ಇದಿರುಗೊಳ್ಳುವ ಇಲ್ಲವೆ ಬೀಳ್ಕೊಡುವ ಸಂದರ್ಭದಲ್ಲಿ) ತಟ್ಟೆಯಲ್ಲಿಟ್ಟ ವೀಳೆಯಂ,- ತಾಂಬೂಲ: ತಳಿಗೆದಂಬುಲದಾರತಿಯ ಮಂಗಳಿತ ರಭಸದೊಳಖಿಳ ರಾಜವಾಳಿಗಳೊಸಗೆಯೊಳಿವರು ಹೊಕ್ಕರು ರಾಜಮಂದಿರವ (ಕುವ್ಯಾಸ. ೧-೪); ನಾಲ್ವರಿಗೆ ಕೊಟ್ಟನು ವೀಳೆಯವ ಹಿರಿಯರಸಿ ತಂದಳು ತಳಿಗೆ ದಂ[ಪಾಠಾಂ. ತಂ]ಬುಲ ಮಂಗಳಾರುತಿಯ (ಕುವ್ಯಾಸ. ೩-೧೩). **ತಳಿಗೆತಂಬುಲ:** ಬಳಿಕ ಸುಮುಹೂರ್ತದಲಿ ಹೊಱಗುಡಿ ಬಳಸಿ ಹೊಯ್ದುವು ರಾಣಿವಾಸದ ನಿಳಯನಿಳಯದ ತಳಿಗೆತಂಬುಲ ಮಂಗಳಾರ್ತಿಗಳ (ಕುವ್ಯಾಆ. ೭ರಿ೩. ೩೫-೭). [ ತಳಿಗೆ + ತಂಬುಲ ]

**ತಳಿಗೆದೋರಣ,** ತಳಿಗೆತೋರಣ (ನಾ). ತಟ್ಟೆಯಾಕಾರದ ಬಿಲ್ಲೆಗಳಿಂದ ಮಾಡಿದ ಕಂಚಿನ ತೋರಣ: ತಳಿಗೆದೋ[ಪಾಠಾಂ. ರತೋ]ರಣದಿಂದ ತಳಿತ ಕುಸುಮದಿಂದ ತಳಿರ ಬಾಗಿಲ್ವಾಡದಿಂದ . . . ಪೊಳಲು ಕಂಗೆಸೆದುದು (ಕುರಾಸಾಂ. ೪೦-೬೬); ಚೆಂದಳಿರ್ದೋರಣ ತಳಿಗೆದೋರಣ ಹೇಮದಿಂದಾದ ಅಂದವಡೆದ ರತ್ನದೋರಣದೊಳು ರಾಯ ಬಂದನೊಂದೆರಡು ಪಯಣವ ಪುಷ್ಪದೋರಣದಿ (ಭರತೇ. ೩೬-೨೬). **ತಳಿಗೆತೋರಣ:** ನಳಿನನಾರಿ ಕೋಟಿ ರೂಪನು ತಾಳಿ ಭೂತಳಕಿಳಿದು ಕಂಠೀರವೇಶ್ವರನ ಹೊಳೆಯುವೋಲಗ ಶಾಲೆಯ ನಿಟ್ಟೆಪಂದದೆ ತಳಿಗೆತೋರಣಗಳೊಪ್ಪಿದುವು (ಕಂನವಿ. ೨೦-೨೪); ತಳಿಗೆತೋರಣ ಕಟ್ಟಿ ಪರಮ ಮಂಗಳವಾಗಿ ಸುಳಿದಿದೆ ಬಲು ಕಾಂತಿ ಗಗನವ ಮುಟ್ಟಿ (ಹೀರ್ಥಮ. ೨೯). [ ತಳಿಗೆ + ತೋರಣ ]

**ತಳಿಗೆಹಸಾದ** (ನಾ). ತಳಿಗೆಯಿಂದ ತೆಗೆದುಕೊಡುವ ಪ್ರಸಾದ; "ತಾನು ಊಟಮಾಡುವ ಎಡೆಯನ್ನೇ ಪ್ರೀತಿಯಿಂದ ಇನ್ನೊಬ್ಬರಿಗೆ ಕೊಡುವುದು" (ಪ್ರಭಣ): ತೆಡೆಯದಂಗವಿಸುತೆ ತಳಿಗೆಹಸಾದಕ್ಕೆ ಪಡೆವುದು ಭಕ್ತಿಭಾವದೊಳು (ಚಕವಿ. ೬-೧೫೭ ಸಾಂಗತ್ಯ). [ ತಳಿಗೆ + ಹಸಾದ ]

**ತಳಿತ$_1$** 'ತೞ್$_1$' ಪರಾ.

**ತಳಿತ$_2$** 'ತಳ್$_3$' ಪರಾ.

**ತಳಿತ$_3$** 'ತಳಿರ್$_1$' ಪರಾ.

**ತಳಿತು** 'ತಳಿರ್$_1$' ಪರಾ.

**ತಳಿನ** 'ತಲಿನ' ನೋ.

**ತಳಿಪ** (ನಾ). ತಳಿಯುವಿಕೆ; ಚಳೆಯ; ಸಿಂಪಡಿಸುವಿಕೆ; ಸೇಚನ: ಗಿಳಿಗಳ ಗೂಡಿಂದುದಿರ್ವ ದಾಳಿಂಬದ ಬಿತ್ತುಗಳಿನೊಸರ್ವ ತನಿರಸದಳಿಪ ದೊಳಂ (ಕಾದಂಪೂ. ೯೭); ವಿಷ ನಿಷೇಕ ಇವ=ವಿಷದ ತಳಿಪದಂತೆ (ನೀತಿವಾ. ೯-೭); ಕೇರ ಚಿತ್ರದಂತೆ ಪೂವಿನ ಬಣ್ಣದಂತೆ ತಳಿಪದ ಚೆಲ್ವಿನಂತೆ ಮರುಳ ಮನ್ನಣೆಯಂತೆ . . . ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೭-೧೨೨); ಮೃಗಮದದ ಯಕ್ಷಕರ್ದಮದಗರುವ ಕುಂಕುಮದ ಕದಡುನೀರ್ದಳಿಪದಿನೋಲಗಿಸಿದುವು ಸುಟಿವ ತಂಗಾಳಿಗೆ ನೃಪಗೃಹವೀಥಿ ಬೆರಕೆಗಂಪಿನ ಸೊಂಪಂ (ಪುಷ್ಪಪು. ೪-೩೩).

[ ತಳಿ1 + – ಪ$_2$ ]

**ತಳಿಪು** (ನಾ).=ತಳಿಪ: ಕೊಟಿಯುಂ ಬಿಣ್ಪುಂ ಲೋಳೆಯುಮಳವಲ್ಲದ ವಜ್ರಲೇಪದಂತಿರೆ ಧಾತ್ರೀತಳಪತಿಯ ಮೆಯ್ಯೊಳೆಲ್ಲಂ ತಳಿಪಂ ತಳಿದಂತೆ ಕೂಡಿ ಪತ್ತಿತ್ತಾಗಳ್ (ಧರ್ಮಾಮೃ. ೪-೧೭೭). [ ತಳಿ$_1$ + – ಪು$_2$ ]

**ತಳಿಮ** (ನಾ). ಹಾಸಿಗೆ; ಹಾಸು: "ತಳ್ಪಂ, ತಳಿಮಂ-ಈ ೨ ಪಾ(ಹಾ)ಸು" (ಹಲಾಯು. ೫೦-೧೫೨). [ ಸಂ. ತಲಿಮ ]

**ತಳಿಮಳೆ** (ನಾ). ತುಂತುರು ಮಳೆ; ಸೋನೆ: ಪಳವಾನೇ! ಪೊಸ ಎಲರೇ! ತಳಿಮಳೆಯೇ! ಚೆಲ್ವು ಬೆಳೆಯೆ! (ಹೊಂಗಳು. ೪೫-೧೭).

[ ತಳಿ1 + ಮಳೆ (<ಮಟೆ) ]

**ತಳಿಯಲಾರ, ತಳ್ಳಿಯ** (ನಾ). ದೇವಾಲಯದಲ್ಲಿ ನರ್ತನದ ಸೇವೆ ಮಾಡುವವಳಂ; 'ತಳಿಯಲಾರಕುಲ' ಪರಾ. **ತಳ್ಳಿಯ:** ಕೆತ್ತುವ ಹತ್ತುವ ದೇವರಡಿಯರಿಂ ಮುತ್ತುವ ಮಣಿವಾಡುವ ತಳ್ಳಿಯರಿಂ[ಪಾಠಾಂ. ಪಡಿಯಱಿರಿಂ] . . . ಪೊನ್ನಾಂಬಲದಧಿಪತಿಯೊಪ್ಪಿರ್ದಂ (ತಿರುನಾ. ದೀ. ೨೨೭-೮). [ ←ತಮಿ. ತಳಿಯಿಲಾರ್ ]

**ತಳಿಯಲಾರಕುಲ** (ನಾ). ನಟ್ಟುವರ ಕುಲ: ಪೆರುಮಾಳೆಯನೋಲೈಪ ತಳಿಯಲಾರ [ಪಾಠಾಂ. ತಳಿಲಾರ, ಕಳಿಲಾರ, ತಳಿಯರಾಲದ]ಕುಲದ ಪರಮಯೌವನೆಯಪ್ಪ ಪರವೆನಾಚಿಯರೆಂಬ ಕನ್ನಾಕನಕಲತೆಯಿರ್ದಪುದು (ನಂಬಿರ. ೧೦-೧೩); ಆಕೆಯ ಕುಲಂ . . . ಶಿವನೋಲಗದ ತೊತ್ತುತನಂ ತಳಿರ್ತ ತಳಿಯಲಾರಕುಲಂ (ನಂಬಿರ. ೧೧-೧೩). [ ತಳಿಯಲಾರ + ಕುಲ ]

**ತಳಿಯಿಸು,** ತಳಿಸು$_2$ (ಕ್ರಿ). ೧. ಸಿಂಪಡಿಸು; ಚಿಮುಕಿಸು; ಚಳೆಯ ಕೊಡು; ಸೇಚನಮಾಡು: ಪೊೞಲ ಬೀದಿಗಳೊಳೆಲ್ಲಂ ಗಂಧೋದಕ ಪಂಚಗವ್ಯಂಗಳಂ ತಳಿಯಿಸಿ (ಪಂಪಭಾ. ೪-೫ ವ); ಪೊೞಲ ವೀಥಿಗಳೊಳೆಲ್ಲಂ ನೀರಂ ತಳಿಯಿಸಿ ಫಲಪುಷ್ಪಂಗಳಂ ಕೆದಱಿಸಿದೊಡೆ (ಜಾವುಂಪು. ೩೫-೨೩). **ತಳಿಸು$_2$:** ೨. ತಳಿಯುವಂತೆ ಮಾಡಂ; ಎರಚಿಸು; ಚೆಲ್ಲಿಸು: ಕಟವೆಯ ಬಿತ್ತಂ ತರಿಸಿ ಮನೆಯ ಮುಂದಣಕೆಡೆಯೊಳ್ತಳಿಸೆ ಪೊಕ್ಕು ಬಿತ್ತಂ ಪಿಡಿದು ನಿಂದು (ಬಂಹರಿ. ೯-೩೨ ವ). [ ತಳಿ1 + – ಇಸು$_3$ ]

**ತಳಿಯೂರ್** (ನಾ). ಒಂದು ಊರಿನ ಹೆಸರು: ವಿನೋದಿ ಮಣಲೆಯರ ತಳಿಯೂರಾಳ್ವ ತಿ× (ಎಕ. IV, ಗುಂಡ್ಲುಪೇ. ೮೭-೧೦; ಸು. 750).

[ ತಳಿ? + ಊರ್ ]

**ತಳಿರ್$_1$,** ತಳಿರು$_1$, ತಳಂರ್ (ಕ್ರಿ). ತಳಿತ್ತ, ತಳಿರ್ತ (ಭೂತಕೃ); ತಳಿತು, ತಳಿರ್ತು (ಭೂತನ್ಯೂ), ೧. ಚಿಗಿ; ಚಿಗಂರು; ಪಲ್ಲವಿಸಂ: "ತಳಿರ್– ಪಲ್ಲವೋತ್ಪತ್ತೌ" (ಶಮಧಾ); "ತಳಿರ್ತುದೆಂದುಂ ತಳಿರೇಱಿದುದೆಂದುಂ ತಳಿರಿಡಿದುದು" (ಕಶಸಾ. ೧೧-೮೧); ತಳದ ಕಡುಗೆಂಪು ಪುದಿದವ್ವಳಿಸಿರೆ ಸುರಯುವತಿ ಮಧುರ ತಂತ್ರೀನಾದಂ ಕೊಳೆ ಬೀಣೆಯ ದಂಡಿಗೆಯುಂ ತಳಿರ್ತುದೆಂಬೊಂದು ಶಂಕೆಯಂ ಪುಟ್ಟಿಸಿದಳ್ (ಆದಿಪು. ೭-೨೦); ಮಾಮರ ತಳಿತಲ್ಲದೆ ಸ್ವರಗೈವುದೆ ಕೋಗಿಲೆ (ಮಹಾದೇ. ಬ. ೧೩೯-೩೧೫); ನವಚೂತಂ ತಳಿರ್ವಂದದಿಂ ತಳಿರ್ಗುಮೇ ಸ್ಥಾಣೂತ್ಕರಂ ಚೈತ್ರದೊಳ್ (ಜಗವಿ. ೧-೧೩); ಬರ್ದುಂಕಿದೆಂ ಬರ್ದುಂಕಿದೆನೆನ್ನ ಭಾಗ್ಯದ ಬೆಳೆ ತಳಿರ್ತುದು (ಗಿರಿಕ. ೧೦-೨೬ ವ); ತಳಿತ ಚೂತದ ಸಸಿಗಳವನಿಗೆ ಮಲಗುವಂತಿರೆ (ಕುವ್ಯಾದ್ರೋ. ೫-೬೯); ದಂಡಿಗೆ ತಳಿತುದೋಯೆನಿಸಿದುದು ಕೆಂದಳ ದೊಂದು ಕೆಂಪಿನಲಿ (ಸಾಳ್ವಭಾ. ೩೨-೨೪); ತಳಿತು ಹೂವ ತಳೆದು ಬೇಗ ಫಲಗಳಿತ್ತಿತು (ವಿಸೀಗೀ. ೬೨-೦೨). ೨. ಅರಳು; ವಿಕಸಿಸು: ತಿಳಿದ ತಿಳಿಗೊಳದ ತಳಿತ ತಾವರೆಯರಳ ತಂಡುಲದ ರುಚಿಯ ಕಳಹಂಸೆ ಬಯಸು ಮತೆ (ಆದವ. ೧೬-೩೬); ಪೊಳೆತು ಪೊಳೆ ದಳವೇಱಿ ನಿವಿರ್ದಮರ್ದಳರ್ದು ಹಸ್ತಾಂಭೋರುಹಂಗಳು ತಳಿತು ನಳನಳಿಸಿದವು ಅಮಮಾ ವೀರ ದಸರಯನ (ಬಸವು. ೩೮-೩೯); ಶಿವಲಿಂಗಪ್ರಸಾದದ ತಳಿತ ಹೂವಿನ ದಂಡೆಯನು ಕೋಮಲೆಗೆ ಕೊಟ್ಟನು ಹರಸುತಲಿ (ಪ್ರಭುಲೀ. ೪-೬೨); ಗುರುಸುತನ ತನುವೋ ಪೂತ ಮುತ್ತವೊ ತಳಿತೆಸೆವ ಕೆಂದಾವರೆಯ ಬನವೊ (ಕುವ್ಯಾಕ. ೩-೨೫). ೩. (?): ಖೂಳನೆಂಬೆನೆ ನೀ ಸಮಸ್ತ ಕಳಾನಿಪುಣನು ಬಾಲನೆಂಬೆನೆ ಮೇಲೆ ಪಲಿತದ ಬೀಡು ಬಿಟ್ಟಿದೆ ತಳಿತ ತನುವಿನಲಿ (ಕುವ್ಯಾಕ.

೫-೨೦); ನೊರೆ ರಕುತ ಸುಳಿ ಮಸಗಿ . . . ಕರುಳ ಬಂಬಲು ಖಂಡ ದಿಂಡೆಯು ತುಱುಗಿದೆಲುವಿನ ತಳಿತ ಚರ್ಮದ ಶಿರದ ತಡಿಗಳಲಡಸಿ ಹರಿದುದು ವೈರಿಸೇನೆಯಲಿ (ಕಾವ್ಯಾದ್ರೋ. ೨-೫೭). ℙ 'ಕಳಿತ' ಇರಬಹುದಂ. **ತಳಿರ್ಚು$_1$**: ೧. ತಳಿರಿದುದು ಮುಂಬೆಳಗಿಂದ್ರದಿಕ್ಕಟದಿ (ಶ್ರೀರಾಮಾ.೯೫-೪೮೭). **ತಳುರ್**: ೪. (?) ಬಗ್ಗಿಸುವ ಕೋಗಿಲೆ ತಳ್ತೆಲೆವಳ್ಳಿ ಸುತ್ತಲುಂ ತುಱುಗಿ ತಳುರ್ತ್ತ ಮಾಮಾರನಿಕಾಯಂ (ಇಆ. XII, ೯೭-೧೬; 1197); ತುಱುಗಿ ತಳುರ್ತ್ತ ಮಾಮರದ ನಿಂಬೆ ಕದಂಬಕ ದ್ರಾಕ್ಷಪಣ್ಗಳಿಂ (ಕಇ.I,೩೧-೬; 12ನೆಯ ಶತ).

**ತತ್ತಳಿರ್** (ದ್ವಿರುಕ್ತಿ): ಮಧುಋತುವಿನಲ್ಲಿ ಆ ವೃಕ್ಷವಲ್ಲಿ ತತ್ತಳಿತು ಹೂವ ಬಿಟ್ಟು ದಿಗ್ದೇಶವಲ್ಲಿ ಹೊರಚೆಲ್ಲಿ ಬಹವು (ಮುಕ್ತಕಂ. ೦೬-೧).

[ದೇ.॥ ತಮಿ. ಮಲ. ತಳಿರ್, ತುಳಿರ್; ತೆಲು. ತಲರು]

**ತಳಿರ್$_2$**, ತಣಿರು, ತಳಿರ್ಚು$_2$ (ನಾ). ೧. ಚಿಗುರು; ಪಲ್ಲವ: "ಪಲ್ಲವಂ ಕಿಸಲಯಂ–ಈ ೨ ಮರದ ತಳಿರ್" (ಹಲಾಯು. ೩೧-೩೦); ವನರುಹದಂತೆ ಮುಖಂ . . . ತಳಂ ತಳಿರಂತೆ (ಕವಿರಾ. ೩-೭೦); ತಳಿರೊಳ್ ನೀನೆ ಬೆಡಂಗನ್ಯೆ ನನೆಗಳೊಳ್ ನೀಂ ನೀಱನ್ಯೆ ಪುಷ್ಪಸಂಕುಳದೊಳ್ ನೀನೆ ವಿಳಾಸಿಯ್ಯೆ . . . ಭೃಂಗಕೋಕಿಳಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ (ಆದಿಪು. ೧೧-೯೮); ತಳಿರ್ಗಳಿಱುಂಬಿನಲ್ಲಿ ತುದಿಗೋಡ ಮೊದಲ್ಗಳ ತಾಣದಲ್ಲಿ . . . ಸುತ್ತಲುಂ ಗಿಳಿಗಳ ಹಿಂಡುಗಳ್ ನೆರೆದು ಕೂಡಿ (ಕಾದಂಪೂ. ೧೨೭); ಹಬ್ಬಕ್ಕೆ ತಂದ ಹರಕೆಯು ಕುಱು ತೋರಣಕ್ಕೆ ತಂದ ತಳಿರ ಮೇಯಿತ್ತು (ಬಸವ. ೧೨೯); ತನುಲತೆಗಂಕುರಂ ತಳಿರಲರ್ ಮಧುಸಂಗದೊಳಾಯ್ತು ಚೋದ್ಯಮೆಂದೆನೆ ಮಧುಪಾನಜಾತಪುಳಕೇಕ್ಷಣ ಶೋಣಿಮಘರ್ಮಬಿಂದುಗಳ್ ತನಗೆಸೆಯಲ್ (ಜಗವಿ. ೦೬-೧೧೭); ತೋರಣದ ತಳಿರಂ ಪಱಿದು ಶಿವದಿಡುತ್ತಿರಲ್ (ನಂಬಿರ. ೬-೫೮); ಬಿಸಿಲೊಳು ಬಿಸುಟ ತಳಿರಂತೆ (ಹಡಕಾ. ೮-೭೨); ಬಗ್ಗಿಸಲೆ ಕೋಗಿಲೆ . . . ತಳಿರಿಲ್ಲ ಮೆಂಬೆಯು (ರಾಮಾಶ್ವ. ೨-೩). ೨. "ಕಿರಣ, ಮಯೂಖ"(ಪ್ರಭಣ್ವ): ಬಾಳ ತೃಣಂಗಳ್ಗೆಂದೆಳಸುಗುಂ ಪಸುರ್ಗಲ್ಗಳ ಕಾಂತಿಯಂ ಮೃಗೀಬಾಳಕನಲ್ಲಿ ಕೆಂಬರಲ ಕೆಂದಳಿರಂ ಬಿಸಿಲೆಂದು ನಟ್ಟಿರುಳ್ ಮೇಳಿಸುಗುಂ ರಥಾಂಗಂ (ಮಲ್ಲಿಪು. ೨-೭೭). **ತಣಿರು**: ೧. ಅಣಂಗರ ಕರವಿಡಿದು ನಗುತ ದಣಿದರ್ಭಕರಂತೆ ತಣಿರ ಮರದ ನೆಳಲಿಗೈದಿ ಘನಶ್ಯಾಮಲ ಕೃಷ್ಣ (ಪ್ರಸಭಾ. ೨೯-೧೨). **ತಳಿರ್ಚು$_2$**: ೧. ಚಿಗುರು ತಳಿರು ಪತ್ರ ಮೊದಲಾದವಱಲ್ಲಿಯು ಗಂಧವ ನಱುವುದು (ಆದವ. ೫-೧೨); ತಳಿರುಗಳ್ ಪೂವಣ್ಣು ವಿಪ್ರದ್ವಯಂ ಮುಕುರಂ ಮಾಂಸವು . . . ಆರ್ ಕಂಡೊಡಂ ಶಕುನಂ ಶೋಭನಕಾಸ್ಪದಂ (ಸೋಮೇಶ. ೬೭); ಹಿಡಿದೊನಕೆಯಲ್ಲಿ ತಳಿರನಲರಿಸಿ (ಬಸಪು. ೯೨-೨); ತಳಿರು ಪೊಂಬಾಳೆ . . . ನಂದನದೊಳೊಪ್ಪಿದುವು (ಕಂಸವಿ. ೨೪-೮೦).

[ <ತಳಿರ್$_1$./ತಮಿ. ಮಲ. ತಳಿರ್, ತುಳಿರ್; ತುಳು. ತಳಿರ್]

**ತಳಿರಂಬು** (ನಾ). (ಚಿಗುರಿನಂತೆ) ಕೋಮಲವಾದ ಬಾಣ: ಮರಲಂಬು ತಳಿರಂಬುಗಳ್ಗೆ ರನ್ನದಣಸಂ ಬಂಧಿಪಂತಂಗುಲಿಗಳೊಳ್ ರನ್ನದುಂಗುರಂಗಳಂ ಸಂಗಳಿಸಿಯುಂ (ವೃಷವಿ. ೫-೧೪ ವ). [ತಳಿರ್$_2$ + ಅಂಬು$_2$]

**ತಳಿರಡಿ** (ನಾ). ಚಿಗುರಿನಂತೆ ಕೋಮಲವಾದ ಪಾದ: ಎಸೆಯೆ ವಿಳಾಸಂ ನಡೆತಂದರ್ ಕೇಸಡಿ ತಳಿರಡಿಗಳ ಮೆಲ್ಲಡಿಗಳತನುಶರಸನ್ನಿಭೆಯರ್ (ಜಗವಿ. ೪-೧೧೯); ತಳಿರಡಿಯ ಮೆಲ್ಲಡಿಯ ತಾವರೆಗಳಡಿಯ ಥಳಥಳಿಪ ಚೆನ್ನಡಿಗಳಸಿಯಡಿಯ ಲಲಿತಾಂಗಿಯರ್ (ಜಬಪು. ೩೭-೪೧). [ತಳಿರ್$_2$ + ಅಡಿ$_1$]

**ತಳಿರಡಿದಳೆ** (ಕ್ರಿ). ಚಿಗುರಿನಂತೆ ಕೋಮಲವಾದ ಪಾದಗಳನ್ನು ಹೊಂದು,– ಪಡೆ: ಹಿಮರುಚಿಕಾಂತ ತತ್ಕ್ರೀಡಾಕುಳಿಗೆ ಕುಂಕುಮದಲರ್ದುಳಿದೊಡೆಗಲಸಿ ರಮಣಿಯರ್ ತಳಿರಡಿದಳೆದಿರ್ದ ಲತೆಯಂತೆ ರಮಣೀಯವಾಯ್ತು ಕೆನ್ನೀರು (ಮೋಹತ. ೧೪-೩೭). [ತಳಿರಡಿ + ತಳೆ$_1$]

**ತಳಿರಲರ್ವಿಜ್ಜಳ** (ನಾ). ಚಿಗುರೆಲೆಗಳಿಂದ ಹಾಗು ಹೂವುಗಳಿಂದ ಮಾಡಿದ ಬೀಸಣಿಗೆ: ತಳಿರಲರ್ವಿಜ್ಜಳದಿಂ ಬೀಸಿಕೊಳುತ ವಿರಹದೊಳಗಿರಲು (ಪ್ರಭಂಜ. ೪-೧೩).

[ತಳಿರ್$_2$ + ಅಲರ್$_2$ + ಬಿಜ್ಜಳ (<ಬಿಜ್ಜಣ)]

**ತಳಿರಿಡಿ** (ಕ್ರಿ). ಚಿಗುರು; ಪಲ್ಲವಿಸು; ಚಿಗುರೆಲೆಗಳಿಂದ ತುಂಬಿರು: "ತಳಿರ್ತುದೆನೆ ತಳಿರಿಡಿದುದು" (ಶಬ್ದಮಂ. ೨೨); "ತಳಿರ್ತುದೆನಲ್ಕೆ ತಳಿರಿಡಿದುದಕ್ಕೆ ಪೆಸರಕ್ಕು" (ಶಬ್ದಿಕ್ಕೆ. ೧೯); ತಳಿರಿಡಿದ ತೋರಣದ ಚೆಲ್ವನಾಂತೋರಣದ . . . ಚಲಿತಲೀಲಾಸ್ಪದ ಪತಾಕೆಗಳ (ಜೈಮಿಭಾ. ೩-೧೭).

[ತಳಿರ್$_2$ + ಇಡಿ$_2$]

**ತಳಿರಿಡು** (ಕ್ರಿ). = ತಳಿರಿಡಿ: ಆ ಸಂಜೆವಳ್ಳಿ ತಳಿರಿಟ್ಟು ಪೂತುದೋ . . . ಎನಲ್ಕಾ ಸಮಯದೊಳ್ಕಳಿತ ತಾರಾಳಿ ಕಂಗೆ ಮಂಗಳವಾಗಿ ರಾಜಿಸಿದವು (ಮದೇಪು. ೧೫-೫). [ತಳಿರ್$_2$ + ಇಡು$_1$]

**ತಳಿರಿಸು** (ಕ್ರಿ). ಚಿಗುರಿಸು; ಪಲ್ಲವಿಸುವಂತೆ ಮಾಡು: ಕಳುಹಿದೊಡೊಳಹೊಕ್ಕು ವೃಕ್ಷಂಗಳ ನೆಱೆ ತಳಿರಿಸಿದನು ಚೈತ್ರ ಬಿಡದೆ (ಮೋಹತ. ೭-೯); ಬಿತ್ತಿ ಬೆಳೆಯಿಸಿ ಹಬ್ಬಿಸಿ ತಳಿರಿಸಿ ಅರಲ್ಚಿ ವಿಡಿಮಾಡಿ (ಮಂತ್ರಶ. ೮೩-೨೪).

[ತಳಿರ್$_1$ + – ಇಸು$_3$]

**ತಳಿರು$_1$** 'ತಳಿರ್$_1$' ನೋ.

**ತಳಿರ್ಚು$_2$** 'ತಳಿರ್$_2$' ನೋ.

**ತಳಿರುಗಾವಿ** 'ತಳಿರ್ಗಾವಿ' ನೋ.

**ತಳಿರುಗಾಸೆ** 'ತಳಿರ್ಗಾಸೆ' ನೋ.

**ತಳಿರುಗೆಂಪು** 'ತಳಿರ್ಗೆಂಪು' ನೋ.

**ತಳಿರುಡೆ** (ನಾ). ಚಿಗುರುಗಳಿಂದ ಸಿದ್ಧಪಡಿಸಿದ ಉಡುಪು: ಮದನ ಮಂದಿರದ ಬಾಗಿಲಿಗೆ ತೋರಣವ ಕಟ್ಟಿದವೊಲು ತಳಿರುಡೆ ಮೆಱೆಯೆ (ಮೋಹತ. ೧೯-೭೩); ಕೆದಱುದಲೆ . . . ಪುದಿದ ತಳಿರುಡೆ ಸುರಗಿ ಪುಲಿವಾಲದಲಿ ವಿರಚಿಸಿದ ಹದುರುಗಂಕಣ (ಸಾಳ್ವಭಾ. ೫-೭); ತಳಿರುಡೆ ಸಂಜೆಗೆಂಪು ಪೊಸಮುತ್ತಿನ ಹಾರಮೆ ತಾರಕಾಳಿ (ಶಬಶಂ. ೩-೬).

[ತಳಿರ್$_2$ + ಉಡೆ$_2$]

**ತಳಿರುತೊಂಗಲು** 'ತಳಿರ್ದೊಂಗಲ್' ನೋ.

**ತಳಿರುತೋರಣ** 'ತಳಿರ್ದೋರಣ' ನೋ.

**ತಳಿರುದೋಱು** (ಕ್ರಿ). ಚಿಗುರಂ ಕಾಣಿಸಿಕೊಳ್ಳು; ಪಲ್ಲವಿಸು: ಕಳಿದರಧ್ವಶ್ರಮವನಾ ತಿಳಿಗೊಳನ ತೀರದ ತಳಿರುದೋಱಿದ ನಳನಳಿಪ ಮಾಮರನ ನೆಳಲಲಿ (ತೊರರಾ. ೨-೪-೨೨). [ತಳಿರ್ಚು$_2$ (<ತಳಿರ್$_2$) + ತೋಱು]

**ತಳಿರುಯ್ಯಲ್** (ನಾ). ಚಿಗುರಿನಿಂದ ಕೂಡಿದ ಉಯ್ಯಾಲೆ,–ಜೋಕಾಲಿ: ತಳಿರುಯ್ಯಲ್ ಶ್ರುತಿಯಿಂದಮೊಂದೆ ಕೊರಲೊಳ್ ಜೀಯೆಂಬಿನಂ ಪಾಡುವಿಂದೊಳಂ (ಶಾಂತಿಪು. ೮-೭೫); ಎಳಮಾವೇ ತಳಿರುಯ್ಯಲೇ ಕೊಳಿತಗುಳ್ದಿಂದೋಳಮೇ ಕೋಗಿಲೇ ಗಿಳಿಯೇ . . . ನೀಮೆಲ್ಲರುಮೆನ್ನ ಬರ್ದುಗೆಯನಾನಲ್ಲಂಗೆ ಪೇಱಿಂ ಗಡಿಂ (ಕಾವ್ಯಾವ. ೧೨೯); ಮೃಗಲಕ್ಷ್ಮ ಮೃಗಕ್ಕೆ ಗೋರಿಯುಂ ಪಾಡುವ ಮಾಟ್ಕೆಯುಂ ಬಳಿಯೆ ಗೀತರವಂ ತಳಿರುಯ್ಯಲಾಡಿದಳ್ (ಚಂದ್ರಪು. ೮-೪೪).

[ತಳಿರ್$_2$ + ಉಯ್ಯಲ್]

**ತಳಿರುವಾಡ** (ನಾ). ತಳಿರಿನ ಮನೆ; ಎಲೆವನೆ: ಶುಕಸಮೂಹವು ಹೆಮ್ಮರಗಳ ತಳಿರುವಾಡಗಳಲ್ಲಿ ಕುಳಿತು . . . ಹಾಡುತ್ತಿದ್ದುವು (ಶ್ರೀರಾಪ. ೬೮).

[ತಳಿರ್ಚು$_2$ (<ತಳಿರ್$_2$) + ವಾಡ$_1$]

**ತಳಿರುಳಿ** (ನಾ). = ತಳಿರಂಬು: ಇವಳ್ಗಾವಿನ ತಳಿರುಳಿ ಮುರಿದಾ ಕಂತು ಕವ್ಮಿದನಪ್ಪ ಬಿಲ್ಗೊಂಡು ಸುಮ್ಮಾನದಿಂದೆಸುವನು ವಿರಹಿಗಳನು (ಶ್ರೀಪಾಲ. ೧೨-೫). [ತಳಿರ್$_2$ + ಉಳಿ$_5$]

**ತಳಿರೆಲೆ** (ನಾ). ಚಿಗುರೆಲೆ; ಎಳೆಯ ಎಲೆ: ಅಲ್ಲಲ್ಲಿಗೆಳವಾಳೆಯ ತಿರುಳಿಲೆಗಳೊಳಂ ತಾವರೆಯ ತಳಿರೆಲೆಗಳೊಳಂ . . . ಸಮೆದ ಬಿಜ್ಜಣಿಗೆಗಳುಮಂ (ಕಾದಂಬ. ೨೦೭); ತೆಣ್ಣಾಳಿಯಲಪಿನೊಳುಲಿವ ತಳಿರೆಲೆಯ ದನಿಗೆ ಬೆರ್ಚುವ ಶಿಶುವಂ (ಮಲ್ಲಿಪು. ೩-೧೦೫); ಕರತಳದ ತಳಿರೆಲೆಯ ಕಡಿದೋಳುಗಳ ಕೊಂಬುಗಳ . . . ರಣವನವೆಸೆದುದೀತನ ಖಡ್ಗಚೈತ್ರದಲಿ (ಕುಮ್ಮಾದ್ಯ. ೬-೪೨). [ ತಳಿರ್$_2$ + ಎಲೆ$_1$ ]

**ತಳಿರೊಡೆ** (ಕ್ರಿ). ಚಿಗುರೊಡೆ; ಅಂಕುರಿಸು; ಕುಡಿಯಿಡು: ಕರಗಿ ಖಂಡನದರುಣವಾರಿಯಲಿ ಗಿಡು ಲತಾಳಿ ವಸಂತದಲಿ ತಳಿರೊಡೆದ[ಪಾಠಾಂ. ತೊಡದ, ತೊಡವ, ರೊಡವ]ಶೋಕೆಯ ಧಾತನಗಲಕೆ ಪಡೆದವಮರ ವಿಮಾನತತಿ ಕೆಂಪಾದವಭ್ರದಲಿ(ತೊರರಾ. ೧-೧೧-೧೪). [ತಳಿರ್$_2$ + ಒಡೆ$_1$]

**ತಳಿರೋವರಿ** (ನಾ). ಚಿಗುರೆಲೆಗಳಿಂದ ಮಾಡಿದ ಕೋಣೆ; ಎಲೆಮನೆ; ಲತಾಕುಂಜ: ತರಳೆ ಮಿಗೆ ತಲ್ಲಣಿಸಿ ತಳಿರೋವರಿಯ ಹೊಗುತಿರಲು (ಕುಮ್ಮಾ. ಅ. ೨೨-೧೯). [ ತಳಿರ್$_2$ + ಓವರಿ ]

**ತಳಿರೋಳಿ** (ನಾ). ಚಿಗುರೆಲೆಗಳ ಸಮೂಹ: ತಳಿರೋಳಿ ತಗುಳ್ದು ತಳ್ತ ಕೇತನತತಿ ಚಾಮರೋತ್ಕರದೆಲರ್ ಮಲಯಾನಿಲನಾಗೆ ರಾಜರಾಜನ ಪಡೆ ಚೆಲ್ವನೇನೆಟೆದುಕೊಂಡುದೊ ಬಂದ ಬಸಂತರಾಜನಾ (ಆದಿಪು. ೧೩-೬). [ ತಳಿರ್$_2$ + ಓಳಿ ]

**ತಳಿರ್ಗಯ್, ತಳಿರ್ಗೈ** (ನಾ). ಚಿಗುರಿನಂತೆ ಕೋಮಲವಾದ ಕೈ: ತಳಿರ್ಗಯ್ಯೊಳರರೆ ರಂಜಿಸುವ ಪೂಚೆಂಡಿನಿಂ (ಪದ್ಮರಾ. ೫-೪೨); ತಳಿರ್ಗಯ್ಯ ತೆಳ್ವಸುಱ ಸುಳಿಗುರುಳ ಸೆಳೆನಡುವಿನೆಳಜವ್ವನದ ಮುದ್ದುಮೊಗದ . . . ಮಹಾಪಾತಿವ್ರತಾಜನಂ (ಚಿಬಪು. ೨೦-೧೫). **ತಳಿರ್ಗೈ:** ತಳಿರ್ಗೈಯೊಳ್ ಪಿಡಿದಪರಂಜಿಯ ಸೆಳೆಯಲರ್ವಿಲ್ಲನ ಪಡಿಯಱತಿಯ ಕೈಯೊಳಗೊಪ್ಪುವ ಸೆಳೆಯಂತೆ ವಿರಾಜಿಸಿತು (ಜಯ ಕಾ. ೨-೪೭); ತಳಿರ್ಗೈಯ ತಂಪಿಗ ವಿರಹಮಂ ತವಿಸಿ ನೆರೆಯೊ (ಚಿಬಪು. ೧೯-೩೭).

[ ತಳಿರ್$_2$ + ಕಯ್$_2$ (<ಕೆಯ್$_2$) ]

**ತಳಿರ್ಗಳಸ**(ನಾ). (ಮಂಗಳಕಾರ್ಯಗಳಲ್ಲಿ ಪೂಜಿಸುವ)ಚಿಗುರೆಲೆಗಳನ್ನು ಇಟ್ಟಿರುವ ಕಳಶ: ತಳಿರ್ಗಳಸಂ ಮುಕುಂದರವಮೆತ್ತಿದ ಮುತ್ತಿನ ಮಂಟಪಂ ಮನಂಗೊಳಿಪ ವಿತಾನಪಙ್ತಿ (ಪಂಪಭಾ. ೧-೧೦೭); ನಳನಳಿಪ ಜಾಗದೊಪ್ಪುವ ತಳಿರ್ಗಳಸದ ಬೆಳಪ ರತ್ನದೀಪದ (ಚಂದ್ರಪು. ೦೩-೩೯); ನಿಂದು ತಳಿರ್ಗಳಸ[ಪಾಠಾಂ. ಶ]ದಿಂ ಮೆಱೆವ ವನಿತೆಯರೊಳಗೆ (ನಂಬಿರ. ೫-೮೭). [ ತಳಿರ್$_2$ + ಕಳಸ$_1$ (<ಕಲಸ) ]

**ತಳಿರ್ಗಾಲ್** (ನಾ). ಚಿಗುರಿನಂತೆ ಕೋಮಲವಾದ ಪಾದ: ತಳಿರ್ಗಾಲ್ಗಳ ತಾರಾಪಥಮಧ್ಯದ ಹಸುಳೆವೆಱೆಯ ಹಣೆಯ . . . ಲಲನೆಯರ ವಿಲಾಸಂ ನೃಪನಱೆತಮನೆಳಕುಳಿಗೊಳಿಸಿದುದು(ಜಯಕಾ. ೨-೩). [ತಳಿರ್$_2$ + ಕಾಲ್$_1$]

**ತಳಿರ್ಗಾಲ** (ನಾ). ಚಿಗುರು ಬಿಡುವ ಕಾಲ; ವಸಂತಋತು: ಮಳೆಗಾಲ ಹಿಮಗಾಲ ಚಳಿಗಾಲ ಹೋಗಿಹವು ತಳಿರ್ಗಾಲ ಬೆಳೆಗಾಲ ಫಲಗಾಲ ಬಹವು (ವಿಸೀಗೀ. ೨೮-೬). [ತಳಿರ್$_1$ + ಕಾಲ ]

**ತಳಿರ್ಗಾವಿ**, ತಳಿರುಗಾವಿ (ನಾ). ೧. ಚಿಗುರಿನಂತಿರುವ ಕಾವಿಬಣ್ಣ; ಎಳಗೆಂಪು: ಅತ್ರಿಕುಮಾರಂ . . . ಪೊಸಗಾವಿಯುಡೆಯನಟ್ಟಿದುದಱಿಂ ಕಿಱುಗೆಂಪಾದ ವೇದಪುಷ್ಕರಣಿಯುದಕದಿಂ ರಾಮಾನುಜಾಚಾರ್ಯರ ದುಗುಲಮಂ ತಳಿರ್ಗಾವಿಗೆಯ್ವುದೆಂದುಂ (ಚಿಕವಂ. ೧೮-೧೨). **ತಳಿರುಗಾವಿ:** ೨. ಚಿಗುರಿನ ಬಣ್ಣದ ಅಂಚಿನ ಬಟ್ಟೆ: ಪಟ್ಟಾವಳಿ ದೋತ್ರ ಬಹಿರ್ವಾಸದಳೆದು ತಳಿರುಗಾವಿಯನುಟ್ಟು ಜಪದ ಮಂಟಪದಲ್ಲಿ ಕುಳಿತರು ಬುಧರು ಸಂದಣಿಸಿ (ಮೋಹತ. ೩-೪೪); ಬಿಳಿಗಾವಿ ಗಾವಿ ಎಳೆಗಾವಿ ಹೆಗಾವಿ ತಳಿರುಗಾವಿಗಳ ಪೋಲಿವ ನಾನಾ ಬಣ್ಣಗಳೊಟ್ಟಿ ಮೆರೆವ (ಹನುಮ. ೮೨). [ ತಳಿರ್$_2$ + ಕಾವಿ ]

**ತಳಿರ್ಗಾಸೆ**, ತಳಿರುಗಾಸೆ (ನಾ).=ತಳಿರ್ಗಾವಿ ೨: ಮುನಿಜನಂಗಳೊಗೆದಾಱಲಿಕ್ಕಿದ ತಳಿರ್ಗಾಸೆಗಳ ಸೋರ್ದ ಬಣ್ಣದಿಂ (ಕಾದಂಪೂ. ೦೦೭): ಹೊದೆದ ಧವಳೋತ್ತರೀಯದ ಉಟ್ಟ ತಳಿರ್ಗಾಸೆಯ[ಪಾಠಾಂ. ದೋರ್ತ್ರದ]ಇಕ್ಕಿದ ಯಜ್ಞೋಪವೀತದ (ನಂಬಿರ. ೧೬-೧೦೪); ಉಟ್ಟ ತಳಿರ್ಗಾಸೆಗಳನಳವಡಿಸಿಕೊಂಡು (ವೀಶ್ವಪು. ೨-೧೨-೨೨); ಒಡಲ ಭಸಿತೋದ್ಧೂಳನದ ಕಂಜೆಡೆಯ ರುದ್ರಾಕ್ಷಾವಿಕಲ್ಪದ ಜಡಿವ ಮಣಿಕುಂಡಲದ ನಿಡುಗಡ್ಡದ ತಳಿರ್ಗಾಸೆ ಉಡಿಗೆ ಬಹಿರ್ವಾಸದ . . . ಗಣೇಶನಂ ಕಂಡ (ಶಂಕರಾ. ೧೦-೭೩). **ತಳಿರುಗಾಸೆ:** ಎಲವೊ ಮಟ್ಟೆಯ ಮದನ ದರ್ಭೆಯ ತಿಲದ ಮನ್ಮಥ ವಿಮಲಧೋತ್ರದ ತಳಿರುಗಾಸೆಯ ಕಾಮ ಕೃಷ್ಣಾಜಿನದ ಕಂದರ್ಪ (ಕುಮ್ಮಾ. ಅ. ೧೫-೨೦); ಬೆರಲೊಳೊಪ್ಪುವ ಪವಿತ್ರದ ತಿರುಪುತಿರ್ಪ ಜಪಸರವ ನಿಱಿವಿಡಿದುಟ್ಟ ತಳಿರುಗಾಸೆಯ (ಸೌಂದಪು. ೧-೩೩); ತಳಿರುಗಾಸೆಯ ಧೋತ್ರ ಬಹಿರ್ವಾಸ ಮೂಗಿನಿಂದಿಳಿದ ನಾಮಗಳ ವೈಷ್ಣವರು (ಮೋಹತ. ೧೭-೩೦). [ ತಳಿರ್$_2$ + ಕಾಸೆ$_2$ ]

**ತಳಿರ್ಗೆಂಪು**, ತಳಿರುಗೆಂಪು (ನಾ). ಚಿಗುರೆಲೆಯ ಕೆಂಬಣ್ಣ: ಕುರುಳ ಕಾಳಿಕೆ ಮೈಕಾಂತಿ ಕೈ ತಳಿರ್ಗೆಂಪು ಪಿರಿದಾದ ಬಾಯ್ದೆಱೆ ಬೆಳ್ಪು (ಕಂನವಿ. ೫-೬೫). **ತಳಿರುಗೆಂಪು:** ಸಂಜೆಗೆಂಪ ತಳಿರುಗೆಂಪ ತುಟಿಯ ಕೆಂಪು ಮೀರಲು (ಕವಿಸೂೀ. ೨೨-೯). [ ತಳಿರ್$_2$ + ಕೆಂಪು$_1$ ]

**ತಳಿರ್ಗೈ** 'ತಳಿರ್ಗಯ್' ನೋ.

**ತಳಿರ್ಗೊಂಚಲ್** (ನಾ). ಚಿಗುರಿನ ಗೊಂಚಲು; ಪಲ್ಲವಗುಚ್ಛ: ತಳಿರ್ಗೊಂಚಲ ತಳ್ತ ಕೆಂಪಿನಿಂ ಪುದಿದಮರಾವನೀರುಹಮೊ ಪೇಟಿನೆ ಬಾಲಕನಾದಮೊಪ್ಪಿದಂ (ಕಾದಂಪೂ. ೪೦೪). [ ತಳಿರ್$_2$ + ಗೊಂಚಲ್ ]

**ತಳಿರ್ಗೊಂಬು** (ನಾ). ಚಿಗುರೆಲೆಗಳಿಂದ ಕೂಡಿದ ಕೊಂಬೆ: ಇರ್ತಡಿ ವಿಡಿದು ನಟ್ಟ ತಮಾಲದ ತಳಿರ್ಗೊಂಬುಗಳಿಂ (ಕಾದಂಬ. ೨೦೪); ಬಂದು ಮಾಮರದ ತಳಿರ್ಗೊಂಬನುಯ್ಯಲಾಡಿ (ಪುಷ್ಪಪು. ೨-೪೪); ಕಮಲಕೆಱಗು ವಳಿಕುಲಮೋ ತಳಿರ್ಗೊಂಬಡರ್ದ ಬರ್ಹಿಯೋ (ಜೈಮಿಭಾ. ೫-೧೫).

[ ತಳಿರ್$_2$ + ಕೊಂಬು$_1$ ]

**ತಳಿರ್ಚು** (ಕ್ರಿ). ಚಿಗುರಿಸು; ಪಲ್ಲವಿಸುವಂತೆ ಮಾಡು: ಮರಗಳೆಡೆಯೆಡೆಯ ನೆಲನಂ ಚರಣಾಂಶುವಿನಿಂ ತಳಿರ್ಚು ಬಯಲಂ ನಿಜಕೇಕರರುಚಿಯಿನಲರ್ಚೆಟ್ಟಂದರಸಿ ಬನಕ್ಕಂ ಬಟೆಕ್ಕೆ ಸಿರಿ ಪರಿಪೂರ್ಣಂ (ಚಂದ್ರಪು. ೭-೭೨). [ ತಳಿರ್$_1$ + -ಚು$_1$ ]

**ತಳಿರ್ಜೊಂಪ** (ನಾ). = ತಳಿರ್ಗೊಂಚಲ್: ತಳಿರ್ಜೊಂಪದೋವರಿಯ ತಣ್ಪುಳಿಲೆಡೆಯೊಳ್ಮಿಸುಪ ಚಂದ್ರಕಾಂತದ ಘಟದೊಳ್ಕುಳಿರ್ವಾಲಿನೀರ ನಬಳಾವಳಿ ತಣ್ಗರಗದೊಳಿ ತೀವಿ ಪಥಿಕರ್ಗೆಱೆಗುಂ (ವೃಷವಿ. ೪-೨೭).

[ ತಳಿರ್$_2$ + ಜೊಂಪ$_1$ ]

**ತಳಿರ್ತ** 'ತಳಿರ್$_1$' ಪರಾ.

**ತಳಿರ್ತು** 'ತಳಿರ್$_1$' ಪರಾ.

**ತಳಿರ್ದುಟಿ** (ನಾ). ಚಿಗುರಿನಂತೆ ಇರುವ ತುಟಿ; ಪಲ್ಲವಾಧರ: ತಳಿರ್ದುಟಿಯೊನಲು ಚುಂಬಿಸಿದಂತೆ ನಲಿವರುಂಟೊಲಿವರಾರಧ್ಯಾತ್ಮರಸಕೆ (ಭರಪ. ೨-೫೧); ಅಳಿಚಳಾಳಕಂ ತಳಿರ್ದುಟಿ ಕೋಮಳ ತನುಲತೆ . . . ಕಳಹಂಸಗಮನಮೆಳೆಯಳ್ಗಿಸೆಗುಂ (ರಾಜಶೇ. ೭-೧೦೨). [ ತಳಿರ್$_2$ + ತುಟಿ$_2$ ]

**ತಳಿರ್ದೊಂಗಲ್**, ತಳಿರುತೊಂಗಲು (ನಾ).=ತಳಿರ್ಗೊಂಚಲ್: ಸುಱಿದಳಿರಾಯ್ತು ಪೂಗಣೆಗೆ ಕೆಂಗಱಿ ಕೈಪೊಡೆಯಾಯ್ತು ನುಣ್ದಳಿರ್ತಳದಳಿದೊಂಗಲಾಯ್ತು ನಿಱಿಗೊಂಡು ತಳಿರ್ . . . ಕಂತುಗೆನಲೇವುದೊ ಮಿಕ್ಕ ತಳಿರ್ವಿಯೋಗಿಯಂ ಕಳಕುಳಮಾಗೆ ಮಾಟಿಪ್ಪೆಡೆಗಶೋಕೆಯ ಕೆಂದಳಿರೊಂದೆ ಸಾಲದೇ (ಮಲ್ಲಿಪು. ೫-೨೦); ನಿಱಿದಳಿ[ರ್]ದೊಂಗಲಂ ತಳೆದಶೋಕೆ (ಎಕ. XI, ದಾವಣ. ೩೫-೩೭ ; 1160); ಇರೆ ನವಪದ್ಮರಾಗಚಷಕಂ

ನಿಜಹಸ್ತತಳಾಗ್ರದೊಳ್ ಮನೋಹರಿ ತಳಿರ್ದೊಂಗಲಂ ತಳೆದ ಕೋಮಲ ವಲ್ಲರಿಯಂತೆ . . . ಎಸೆದಳ್ (ಜಗವಿ. ೧೬-೧೧೫); ಪಸುರ್ದಳಿರ್ದೊಂಗಲಿಂ ಪುದಿದ ಬಲ್ಲನೆಯಿಂ ಮುಗುಳಿಂದಲರ್ಗಳಿಂ. . .ಎಸೆವುದೊಂದು ಬಿಲ್ವಕುಜಂ (ದಶಕು. ೮-೭) ; ಚೆಂಬೊಳೆಪಾಂತ ಜಡೆಗಳೆಳದಳಿರ್ದೊಂಗಲಾಗೆ (ನಂದಿಮಾ. ೨-೨೪). **ತಳಿರುತೊಂಗಲು :** ಮಂಜಕ್ಕ ಮನೆಯನ್ನು ತಳಿರುತೊಂಗಲು ಗಳಿಂದ ಅಲಂಕರಿಸಿದಳು (ಹಾಹುತ್ತ. ೮೪). [ ತಳಿರ್$_2$ + ತೊಂಗಲ್ ]

**ತಳಿರ್ದೊಂಬೆ** (ನಾ). = ತಳಿರ್ಗೊಂಚಲ್ : ಸೋಗೆ ಮಾವು ಮೊದಲಾದ ತಳಿರ್ದೊಂಬೆಗಳಿಂ (ಚಕಪಂ. ೮೫-೪) ; ಗಂಡುಗೋಗಿಲೆಗಳ್ ಮೆಲ್ಲಳಿ ರ್ದೊಂಬೆಯೊಳ್ ಗಿಳಿಗಳಿವ್ಮಾವಣ್ಗಳೊಳ್ . . . ಎಂದಿಗಂ ತಣಿಯದಂತೆ (ಚಕವಿ. ೧-೯೧). [ ತಳಿರ್$_2$ + ತೊಂಬೆ$_1$ ]

**ತಳಿರ್ದೋರಣ,** ತಳಿರುತೋರಣ (ನಾ). ಚಿಗುರೆಲೆಗಳಿಂದ ರಚಿಸಿದ ತೋರಣ : ಸುರಧನು ತಳಿರ್ದೋರಣವಾಲಿ ರಂಗವಲಿ ಬದ್ಧವಣಂ ಜಳದರವಮಾಗೆ ಜಯಮಂಗಳಸೂಚಕಮಾದುದತನುಗಾ ಘನಸಮಯಂ (ಚಂದ್ರಪು. ೪-೯೨) ; ತಳಿರ್ದೋರಣಂ ಅಲರ್ದೋರಣಂ (ಶಮುದ. ೯೩ ಪ್ರಯೋ) ; ಮಿಱುಗುವ ತಳಿರ್ದೋರಣಂಗಳಂ ಕಟ್ಟಿಸುತ (ಜ್ಞಮಿಭಾ. ೮-೩). **ತಳಿರುತೋರಣ :** ತಳಿರುತೋರಣ ಮಾವಿನಸೊಪ್ಪು ಮುಂತಾ ದವುಗಳನ್ನು ಕಟ್ಟುವದಕ್ಕೋಸ್ಕರ ಬಾಗಿಲ ಹೊರಗಡೆ ಕಾಣುವಂತೆ ೨ ಕಂಭಗಳಿಂದ ಕಟ್ಟಲ್ಪಟ್ಟ ದ್ವಾರಬಂಧನದ ಚೌಕಟ್ಟು ಮನೆಯ ಹೊರಬಾಗಿಲು (ಸಿದ್ಧಾಂತಿ. ೯೨) ; ಬಾಗಿಲಿಗೂ ರಂಗಮಂಟಪಕ್ಕೂ ತಳಿರುತೋರಣಗಳನ್ನು ಕಟ್ಟಿದರು (ಕಪಪು. ೩-೪೦). [ ತಳಿರ್$_2$ + ತೋರಣ ]

**ತಳಿರ್ಪಟ** (ನಾ). ಚಿಗುರೆಲೆಗಳಿಂದ ಮಾಡಿದ ಕೊಡೆ (?) : "ತಳಿ [ಪಾಠಾಂ. ಳ]ರ್ಪಟ ಸತ್ತಿಗೆಯುಕ್ಕುಂ" (ಭಾರನಿ. ೯೧). [ ತಳಿರ್$_2$ + ಪಟ$_3$ ]

**ತಳಿರ್ಮಂಟಪ** (ನಾ). ಚಿಗುರೆಲೆಗಳಿಂದಾದ ಮಂಟಪ; ಬಳ್ಳಿ ಮಂಟಪ: ಕಂಠಗತಪ್ರಾಣದ ಕುವರಿಯ ತಳಿರ್ಮಂಟಪದೆಡೆಗೆ ಸಾರ್ಚಿದರು (ಮೋಹತ. ೨೮-೧೨). [ ತಳಿರ್$_2$ + ಮಂಟಪ ]

**ತಳಿರ್ವಂದರ್** (ನಾ). ಚಿಗುರೆಲೆಗಳ ಚಪ್ಪರ,-ಮಂಟಪ : ಕನಕನಗದ ನಂದನವಮಧ್ಯದ ಮಂದಾರತರುಗಳ ತಳದ ತಣ್ಣೆಳಲ ತಳಿರ್ವಂದರ ಮಲ್ಲಿಕಾಕುಸುಮಮಾಲಿಕಾಲಂಕೃತ ಕುಸುಮಮಂಟಪದೊಳ್ (ರಾಜಶೇ. ೧-೧೩೫ ವ). [ ತಳಿರ್$_2$ + ಪಂದರ್ ]

**ತಳಿರ್ವಜ್ಜೆ** (ನಾ) = ತಳಿರಡಿ : ತಳಿರ್ವಜ್ಜೆಯ ತರುಣಲತಾಮಧ್ಯದ . . . ಲಸದ್ಬಿಂಬಾಧರದೆಳಜವ್ವನೆ (ಜಯುಕಾ. ೧೧-೧೮) ; ತಳಿರ್ವಜ್ಜೆಗಳ ತಾವರೆ ವಜ್ಜೆಗಳ ತಳತಳಿಸುವ ರನ್ನವಜ್ಜೆಗಳ ನಳಿನನೇತ್ರೆಯರು (ಕುರಾಸಾಂ. ೨೧-೪೩). [ ತಳಿರ್$_2$ + ಪಜ್ಜೆ ]

**ತಳಿರ್ವಟ್ಟೆ** (ನಾ). ೧. = ತಳಿರುಡೆ : (೩). ೨. ಚಿಗುರಿನ ಬಣ್ಣದ ಬಟ್ಟೆ ; ಕೆಂಬಣ್ಣದ ಬಟ್ಟೆ : ನನೆಯಂಬನುಟ್ಟ ತಳಿರ್ವಟ್ಟೆಯನಾಗಳೆ ಮೆಚ್ಚು ಗೊಟ್ಟು ಮೆಲ್ಲನೆ ನಡೆತಂದು (ಕಬ್ಬಿಕಾ. ೮೨) ; ನೆಲೆಗೊಳಿಸಿ ಕಟ್ಟಿದ ಪೊಂ ಬಟ್ಟೆಯ ವಿತಾನದ ಪರಿಸರದೊಳ್ನಿಱಿವಿಡಿದೆಳಲೆವಿಟ್ಟ ತಳಿರ್ವಟ್ಟೆಯ ಚಿತ್ರಾವಳಿಯ ಮೇಲ್ಕಟ್ಟು (ರಾಜಶೇ. ೮-೫ ವ). [ ತಳಿರ್$_2$ + ಬಟ್ಟೆ$_2$ ]

**ತಳಿರ್ವಡಿಸು** (ಕ್ರಿ). ಚಿಗುರಿಸು ; ಪಲ್ಲವಿಸುವಂತೆ ಮಾಡು: ಕತಿಪಯ ಪದಗತಿಯಿಂ ಶೀತಕರೋಪಲ ಕುಟ್ಟಿಮತಳಮಂ ತಳಿರ್ವಡಿಸಿ (ಶಾಂತೀಶ್ವ. ೧೫-೭೨ ವ). [ ತಳಿರ್$_2$ + ಪಡು$_1$ + – ಇಸು$_3$ ]

**ತಳಿರ್ವಡೆ** (ಕ್ರಿ). = ತಳಿರಿಡಿ: ಇತ್ತರದಲಿ ತಳಿರ್ವಡೆದಿರ್ದ ಮಾಮರ ಮತ್ತೇಭ ಗಿಳಿ ತೇಜಿವಿಂಡು (ಮೋಹತ. ೭-೧೯). [ ತಳಿರ್$_2$ + ಪಡೆ$_1$ ]

**ತಳಿರ್ವಣ್ಣ** (ನಾ). ಚಿಗುರಿನ ಬಣ್ಣ ; ಕೆಂಬಣ್ಣ : ಹಸುರುಗುಪ್ಪಸ ನವಿಲ ಗಱಿವೆರೆದ ಸೆಱಗಿನಿಂದೆಸೆವ ತಳಿರ್ವಣ್ಣದ ಸುರಿಯ ಸೇಲೆ (ರಾಘಚ. ೧೭-೭೫). [ ತಳಿರ್$_2$ + ಬಣ್ಣ ]

**ತಳಿರ್ವನೆ** (ನಾ). = ತಳಿರೋವರಿ : ತಳಿರ್ವನೆಯೊಳ್ ನಲ್ಲನಂ ನೆನೆದು ದೂಱಿಸುತಿರ್ಪಿಚ್ಚೆಗಾರ್ತಿಗಾ ತೆಱನೆಲ್ಲಮಂ ಬಿನ್ನಪಂಗೆಯ್ದು (ಕಬ್ಬಿಕಾ. ೩೨೦) ; ಪಟ್ಟಣದ ಪೊಱವಳಯದೊಳ್ ಲತಾಸಂತತಿಗಳಿಂ ಕುಸುಮ ಶೋಭೆಯಿಂ . . . ಫಲಾನೀಕದಿಂ ತಳಿರ್ವನೆಗಳಿಂ (ಚಿಬಪು. ೧೧-೨೦) : ತಳಿರ್ವನೆ ಪುಷ್ಪಮಂಟಪ ದಿವ್ಯ ಪುಳಿನಸ್ಥಳಗಳಿಗಿನಿಯರನೊಯ್ದು (ಕಂನವಿ. ೫-೧೧೧). [ ತಳಿರ್$_2$ + ಮನೆ ]

**ತಳಿರ್ವಸೆ** (ನಾ). = ತಳಿರ್ವಾಸು : ನಿನ್ನಯ ವಿರಹೋದ್ರೇಕದಿನಿನ್ನುಂ ತಳಿ ರ್ವಸೆಯ ಮೇಲೆ ಪೊರಳುತ್ತಿರ್ದಾ ಕನ್ನೆಯ ರೂಪೆನ್ನಿದಿರೊಳ್ ಸನ್ನಿದ ಮಾದಂತೆ ತೋಱುತ್ತಿರ್ದಪುದೀಗಳ್ (ಕಾದಂಉ. ೩೨೫) ; ಸಿರಿಖಂಡದ ಬಂಡಿನೊಳಲಂಬಿ ತಳಿರ್ವಸೆಯ ಪಕ್ಕದೊಳ್ ನೇಱಿದ ನವೀನ ಚಮರ ಜಂಗಳುಂ (ವರ್ಧಪು. ೫-೬೩ ವ) ; ತಳಿರ್ವಸೆಯ ತಾಣದೊಳ್ಮಲಯಜದ ಮಾಡದೊಳ್ . . . ನಿಲಲಱಿಯದುಪ್ಪರಿಗೆದುದಿನೆಲೆಯ ಚಂದ್ರಶಾಲೆಗೆ ಬಂದಳಂಬುಜಾಕ್ಷಿ (ಜ್ಞಮಿಭಾ. ೩೦-೩೬). [ ತಳಿರ್$_2$ + ಪಸೆ$_3$ ]

**ತಳಿರ್ವಾಯ್** (ನಾ). ಚಿಗುರಿನಂತೆ ಕೋಮಲವಾದ ಬಾಯಿ; ಕೆಂಪಾದ ಬಾಯಿ : ಬಂದರ್ ಪವಳವಾಯ ತಳಿರ್ವಾಯ ತೊಂಡೆವಾಯೊಳ್ವೆಂಡಿರ್ (ಜಗವಿ. ೪-೧೨೨) ; ತೀವಿದ ಪಾಲ್ಗೊಲೆಯಂ ತಳಿರ್ವಾಯಿಂ ಡಾವರಿಸುತ ಕರ್ಚುವ ಕಂದನ (ಜಯುಕಾ. ೨-೩೭). [ ತಳಿರ್$_2$ + ಬಾಯ್ ]

**ತಳಿರ್ವಾಸಿಕೆ** (ನಾ). = ತಳಿರ್ವಾಸು : ತಳಿರ್ವಾಸಿಕೆಯೊಳು ಮಲಗಿ ಪನ್ನೀರ್ಗಳ ತಳಿದಲರ್ವಿಜ್ಜಣಿಗೆಯಲಿ . . . ಬೀಸಿಕೊಳುತಲಿ (ಸಾಂದಕಾ. ೪-೭೫). [ ತಳಿರ್$_2$ + ಪಾಸಿಕೆ ]

**ತಳಿರ್ವಾಸಿಗೆ**(ನಾ). =ತಳಿರ್ವಾಸು:ಚಿಗುರ್ದ ಮಾಮರನೆಳಲಿನಿಂ ತಳಿರ್ವಾಸಿಗೆ ಯ ಗೆಯ್ದು ಕುಳ್ಳಿರಿಸುತ್ತ (ನವಮೋ. ೧೬-೩೪). [ ತಳಿರ್$_2$ + ಪಾಸಿಗೆ ]

**ತಳಿರ್ವಾಸು** (ನಾ). ಚಿಗುರೆಲೆಗಳಿಂದ ಮಾಡಿದ ಹಾಸಿಗೆ,–ಹಾಸು : ಇನಿಯನಗಲ್ದು ಪೋಗಿ ಪರದೇಶದೊಳಿರ್ದಪನಾಸುಮಿಲ್ಲಿ ಮಾವಿನ ತಳಿ ರ್ವಾಸಿನೊಳ್ ಪೊರಳುತಿರ್ದಪೆನಾಗಳುಂ (ಆದಿಪು. ೧೨-೪೨) ; ತರುಣಿಯ ವಿಯೋಗತಾಪಕ್ಕೆ ರಜನಿಯುಂ ಕೆಳದಿಯಂತೆ ತಳಿರ್ವಾಸಂ ಬಿತ್ತರಿಸುತ್ತ ಮಿರ್ದಳೆಂಬಂತಿರೆ ಬಿತ್ತರಿಸಿತ್ತು ಸಾಂದ್ರ ಸಂಧ್ಯಾರಾಗಂ (ಕಾದಂಉ. ೩೨೦) ; ಅಡೆವೊತ್ತಿನ ತಳಿರ್ವಾಸಿನ ಪಿಡಿದಿರ್ದಂಬುಜದ ನಡುವೆ . . . ಪುಟಪಾಕಂಗುಡೆ ಸುಡುವಂತಿರ್ಪುವಲ್ಲಿ ವಿರಹಿಜನಂಗಳ್ (ಅಜಿಪು. ೨-೧೦) ; ತಳಿರ್ವಾಸಿನಿಂದೆ ಸೆಜ್ಜೆಗೆ ಕೆಳದಿಯರೆಂತರ್ಕೆ ಕೊಂಡುಪೋದರ್ ವಿರಹಾಕುಲೆಯಂ (ಶಮುದ. ೧೦೮ ಪ್ರಯೋ). [ ತಳಿರ್$_2$ + ಪಾಸು$_2$ ]

**ತಳಿರ್ವೇಱಿಸು** (ಕ್ರಿ). ೧. ಚಿಗುರನ್ನು ತಳೆಯುವಂತೆ ಮಾಡು ; ಚಿಗುರಿಸು : ಮೃದುಪದಘಾತದಿಂದಸುಕೆಯಂ ತಳಿರ್ವೇಱಿಸಿ (ಮಲ್ಲಿಪು. ೬-೫೩) : ಅರುಣತಲದ್ಯುತಿತತಿಯೆಡೆದೆಱಪುಗಳಿಂದುಣ್ಮುವಂದದಿಂ ಕೆಂಬೆರ ಲುಂಗುರದಿನೊಗೆವರುಣರುಚಿಮಂಜರಿ ತಳಿರ್ವೇಱಿಸಿದುದೈದೆ ಕರ ಶಾಖೆಗಳಂ (ಚಂದ್ರಪು. ೬-೬೧). ೨. ಚಿಗುರಿಟ್ಟಂತೆ ಕೆಂಪಾಗಿಸು : ಪಸರಿಪ ಪಾದರಾಗಮಿಳೆಯಂ ತಳಿರ್ವೇಱಿಸೆ . . . ನಡೆತಂದುದು ಸೌಂದರೀಜನಂ (ಚಂದ್ರಪು. ೬-೯೫). [ ತಳಿರ್ವೇಱು + – ಇಸು$_3$ ]

**ತಳಿರ್ವೇಱು** (ಕ್ರಿ). ಚಿಗುರನ್ನು ತಳೆ ; ಚಿಗುರಂ ; ಪಲ್ಲವಿಸು : ರಥಂ ರಥದೊಳಾರ್ದು ಪಳಂಚೆ ನಭಂ ದಿಶಾತಟಂ ಧರೆ ಕಡುಗೆಂಪದಾಯ್ತೊಗೆವ ಶೋಣಿತದಿಂದೆ ಜಗಂ ಮಹಾಪನಾಂತರಮೆ ಪೊದಟ್ದು ರೌದ್ರರಸಸೇಚನದಿಂ ತಳಿರ್ವೇಱಿತೆಂಬಿನಂ (ಜಗವಿ. ೭-೫೨). [ ತಳಿರ್$_2$ + ಪೇಱು$_1$ ]

**ತಳಿರ್ಪೊದಱ್** (ನಾ). ಚಿಗುರೆಲೆಗಳಿಂದ ತುಂಬಿದ ಪೊದರು;ಚಿಗುರೆಲೆಗಳ ದಟ್ಟಣೆ : ದಾವಾಗ್ನಿ ನಿಡುಪುರಿಯ ನಾಲಗೆಗಳೆನೆ ಕೆಂಪುದೀವಿದಟ್ಟಯಿಸಿರ್ದ ತಳಿರ್ಪೊದರ್ಗಳ ಕೆಳಗನಾವರಿಸುತೆಲ್ಲ ತಳಿರಿಂದಶೋಕ ದ್ರುಮಂಗಳ್ ಕರಂ ಮೆಱೆದುವಂದು (ಚಿಬಪು. ೪೫-೧೯). [ ತಳಿರ್$_2$ + ಪೊದಱ್ ]

**ತಳಿರ್ವೊಱೆ** (ನಾ). ಚಿಗುರೆಲೆಗಳ ಹೊರೆ: ತಳಿರ್ವೊಱೆವೊತ್ತುದಲ್ಲದಲರಂ ಸಲೆ ತಾಳ್ದುವ ಸೈಪುವೆತ್ತುದೇ ಮಳಯಜಂ (ಚಂದ್ರಪು. ೭-೯೨).
[ ತಳಿರ್$_2$ + ಪೊಱೆ ]

**ತಳಿರ್ವೋಗು** (ಕ್ರಿ). ಚಿಗುರಿಡು ; ಪಲ್ಲವಿಸು : ಪೊಸತಲರ್ದ ಕೊಸಗು ತಳಿರ್ವೋದಸುಗೆ ಪಸುರ್ನನೆಯೊಳಿಡಿದ ಮಲ್ಲಿಗೆ (ಆದಿಪು. ೧೧-೮೫). ‘ಅಲರ್ವೋಗು’ ಪಠಾ. [ ತಳಿರ್$_2$ + ಪೋಗು$_1$ ]

**ತಳಿಲು$_1$** ‘ತಟಿಲ್’ ನೋ.

**ತಳಿಲು$_2$** ‘ತಾಳಿಲು’ ನೋ.

**ತಳಿಲು$_3$** ‘ತಳಲು$_3$’ ನೋ.

**ತಳಿವರ** (ನಾ). ಮರದ ದಿಮ್ಮಿ ; ಸ್ಥೂಲದಾರು : ತಳಿವರ ನೂಲ ಹರಿಗೆ ಕಬ್ಬುನದ ಬಲ್ವಲಗೆ . . . ಮಕರದಿಬ್ಬಿ ಸಲೆ ಮೆಱೆದವು ದುರ್ಗದೊಳಗೆ (ಕುರಾಸಾಂ. ೩೭-೫೭). [ ತಳಿ$_4$ (<ತಟಿ) + ಮರ$_1$ ]

**ತಳಿವು** (ನಾ). ತಳಿಯುವಿಕೆ ; ಸೇಚನ : “ಘರತಿ–ಚಿಮುಕಿಸಿದಪುದು . . . ಘರ್ತವ್ಯಂ, ಘರಣೀಯಂ, ಘಾರ್ಯಂ ಈ ೩ ತಳಿವು” (ಕಾಶಬ್ದ. ೭೫).
[ ತಳಿ$_1$ + – ವು ]

**ತಳಿಶಾಸ್ತ್ರ** (ನಾ). “(ಜನನಕ್ರಿಯೆಗೆ ಸಂಬಂಧಪಟ್ಟ ಶರೀರವಿಜ್ಞಾನವನ್ನೂ, ತಳಿಯೆಬ್ಬಿಸುವ ಕುಶಲವಿದ್ಯೆಯನ್ನೂ ಒಳಕೊಂಡ) ಆನುವಂಶೀಯದ ಮತ್ತು ಜೀವಿಮಾದರಿಗಳ ರೂಪಸ್ಥಿತಿ ವ್ಯತ್ಯಯದ ವಿಚಾರ : ತಳಿಶಾಸ್ತ್ರ” (Genetics. ಇಂಕನಿ.). [ ತಳಿ$_5$ + ಶಾಸ್ತ್ರ ]

**ತಳಿಸಾರಿ** (ನಾ). ಎಸೆದ ಲೆತ್ತದ ಕಾಯಿ : ದುಗನ ಹಾಯಿಕು ತನಗೆ ಹಾಯ್ಕಿತ್ತಿಗನವೆಂಬಬ್ಬರದ ಹಾಸಂಗಿಗಳ ಬೊಬ್ಬೆಯ ಸಾರಿಗಳ ಮಣಿ ಖಟಿಲನಿಸ್ವನವ . . . ಬೀದಿಗಳ ತಳಿಸಾರಿಗಳ ಧಾಳಾಧೂಳಿ ಮಸಗಿತು (ಕುವ್ಯಾಸ. ೧೩-೫೦). [ ತಳಿ$_1$ + ಸಾರಿ$_3$ ]

**ತಳಿಸು$_1$, ಚಳಿಸು$_1$, ಛಳಿಸು$_1$, ತೊಳಸು$_1$, ತೊಳಿಸು, ಥಳಿಸು$_1$** (ಕ್ರಿ). ೧. (ಬತ್ತ ಮೊದಲಾದುವನ್ನು) ಕುಟ್ಟು: ಕೇಸಕ್ಕಿಯಂತೆ ತಳಿಸಿದಕ್ಕಿಯಂತೆ ಕರ್ಚಿದಕ್ಕಿಯಂತೆ (ಧರ್ಮಾಮೃ. ೧೨-೩೪) ; ಘನವ ಕಾಂಬುದಕ್ಕೆ ಮನವೆಂತಾಗಬೇಕೆಂದರೆ ಅಕ್ಕಿಯ ತ[ಪಾಠಾಂ. ಥ]ಳಿಸಿದಂತೆ ಹಲ್ಲ ಸುಲಿದಂತೆ ಕನ್ನಡಿಯ ನೋಡಿದಂತೆ ಮನ ನಿರ್ಮಲವಾದಲ್ಲದೆ ಘನವ ಕಾಣಬಾರದು (ಲಿಂಗವ. ೧೨-೪೭) ; ಶಶಿಕಾಂತದಿಂ ಸಮೆದೊರಲ್ಗಳೊಳಂ ಬಿದಿರಕ್ಕಿಯಿಕ್ಕಿ . . . ಸುವ್ವಿ ಸುವ್ವಿಯೆಂದಳವಡೆ ರಾಗದಿಂ ತಳಿಸಿದರ್ ವನದಲ್ಲಿ ಪುಳಿಂದಕಾಂತೆಯರ್ (ಗಿರಿಕ. ೧-೧೨೩) ; ತ[ಪಾಠಾಂ. ಚ]ಳಿಸಿ ರಾಜಾನ್ನದಕ್ಕಿಯನ್ನು ನಾಲ್ಕೈದು ಸೂಳ್ ತೊಳೆದು (ಸೂಪಶಾ. ೩-೨) ; ಉಯ್ಯ ಮುನ್ನೊತ್ತಿ ಕೇಸಕ್ಕಿಯ ತಳಿಸುವರುಯ್ಯಿದ್ದು ಬಿಳಿಯಕ್ಕಿ ಬಿಳುಪು (ಭರಜ. ೫೪-೨೨). ೨. ಹೊಡೆ ; ಚಚ್ಚು : ಸಿಟ್ಟಿಗೆದ್ದು ಕೈಯೊಳಗಣ ಕೋಲಿನಿಂದ ಸಂಗನನ್ನು ಒಳಿತಾಗಿ ತಳಿಸಿದನು (ಮುಂಬಯಿ. ೨-೩೯) ; ಅವರು ಇವನನ್ನು ಒಳಿತಾಗಿ ತಳಿಸಿದರು(ಮುಂದಾಕಿ. ೧೫೪). **ಚಳಿಸು$_1$:** ೧. ಪುಳಿಂದಿಯರು ಪಾಡಿ ಚಳಿಸಿದರು ಬಿದಿರಕ್ಕಿಗಳನು (ಹಡಕಾ. ೫-೩೩); ಬಿದಿರಕ್ಕಿಗಳಂ ಚಳಿಸುತ್ತೆ ಪಾಡಿದರ್ ಮದವತಿಯರ್ ಕಿರಾತಸತಿಯರ್ ಪ್ರಭುಮೇರುವ ಲೀಲೆಯೇಟಿಗ್ಗಿಯಂ (ಪುಷ್ಪಪು. ೫-೯೨) ; ಚೆಲ್ವೆತ್ತಕ್ಕಿಗಳ ಶಿವನಿವೇದನಕೆ ಯೋಗ್ಯವೆಂದುಱೆ ಶೋಧಿಸುತ್ತ ಚಳಿಸಿ (ವೀಶೈಪು. ೭-೧೧-೬೭) ; ಯವೆಯನ್ನು ಚಳಿಸಿ ಅಕ್ಕಿ ಮಾಡಿ ಕುದುರೆಗೆ ತಿನ್ನಿಸುವುದು(ಅಶ್ವಟೀ. ೫೨-೧); ಗೋದಿಯ ಚಳಿಸಿ ಅಕ್ಕಿಯ ಪಾಯಸನಡುವ ಹಾಗೆ ಅಡುವುದು (ಭೀಮುಸೂ. ೨೫). **ಛಳಿಸು$_1$ :** ೧. ಚಿತ್ತ ಸಾಳಿವನವೆಂಬ ತಂಡುಲ ತೊಳೆಯದೆ ಛಳಿಸದೆ ಕುಂಭದೊಳಗೆ ಹಾಕಿ (ನಗೆಮಾ. ೮೭); ಇಂದುಮುಖಿಯರಿಂದುಕಾಂತದೊರಳನಿಕ್ಕಿ ಚಂದನದೊನಕೆಯ ಪಿಡಿದು ಛಂದದಲಿ ಬಿದಿರಕ್ಕಿಯ ಛಳಿಸುತ (ಅಂಜಚ. ೨-೬೩) ; ಸುವ್ವಿಯೆಂದಾ ವನವನಿತೆಯರ್ ಬಿದಿರಕ್ಕಿ ಛ[ಪಾಠಾಂ. ಚ, ತ]ಳಿಪರು (ಸೂಬಸೋ. ೧೪-೬೩) ; ಅಕ್ಕಿಯಾನು ಛಳಿಸಲು ಕೈಯ ಬಳೆಯುಲಿಯೆ (ನಿಭಾಗ. ೧೧-೧೬-೧೨) ; ಶಶಿಕಾಂತದೊರಳಿನೊಳ್ಬಿದುರಕ್ಕಿಯಂ ಪೊಯ್ದು . . . ಗಾನರಸ ಬಸಿವ ರಾಗಂಗಳಿಂದೆ ಬಿಸಜಗಣ್ಣೇಱೆಯರ್ಪಾಡಿ ಛಳಿಸಲ್ (ಏಕೋಪು. ೧೦-೪೪). ೨. ಛಲವೆತ್ತು ಛದ್ಮನೆಯಿಂ ತುಚ್ಛಭೂಪರು ಛಳಿಪ ಕರ್ಗಣೆ ಗಣೆಯಾಗೆ ಛಳಿಗಂಡವೊಲು ಮೂರ್ಛೆಗೈಸಿ (ಶತಸಾಂ. ೬೯-೪೯). **ತೊಳಸು$_1$ :** ೧. ವನಿತೆ ಸೌಟನೊಳಕ್ಕಿಯ ತೊಳಸಿ ಒನಕೆಲಿ ಓಗರ ಹದ ನೋಡಿ (ಪುರಂದ. ೧-೧೧೧-೩) ; ತೊಳ[ಪಾಠಾಂ. ತಳಿ, ಚಳಿ]ಸಿದಕ್ಕಿಯ ನನೆಹಿ ಕುಟ್ಟಿ ಸೋದಿಸಿಕೊಂಡು (ಸೂಪಶಾ. ೧-೬೩) ; ತೊಳಸದಕ್ಕಿಯ ತಿಂಬ ಕಿಲುಬು ತಳಿಗೆಯಲುಂಬ ಕೊಳಗದಲಿ ಹಣಗಳನು ಅಳೆದುಕೊಂಡು (ವಿದ್ಯಾಕ್ಕ. ೪೦-೧). **ತೊಳಿಸು :** ೧. ಕೇರಿಯ ಹಸನಾಗಿ ತೊಳಿಸಿದಕ್ಕಿಯನೀಗ ಎಸರೀಗೆ ನಾ ಹೊಯ್ದೆ (ಚಿದಾವ. ೭೮-೭). **ಥಳಿಸು$_1$ :** ೧. ನೀರ ಒರಳ ಮಾಡಿ ನೆಳಲನೊನಕೆಯಮಾಡಿ ಆಕಾರವಿಲ್ಲದಕ್ಕಿಯ ಥ[ಪಾಠಾಂ. ತ]ಳಿಸುತ್ತಿರಲು (ಬಸಹೆ. ೧೧೧-೩೦೨) ; ಚಂದನದೊನಕೆಗಳನು ಪಿಡಿದು ಮನದೆಱೆಯರ ಪಾಡುತಾ ಬಿದಿರಕ್ಕಿಗಳನು ಥಳಿಪರು (ಜೀವಂಸಾಂ. ೨೦-೧೪) ; ಮಡದೀನ ಎಬ್ಬಿಸಿದರ ಅರನಿದ್ದಿನಾದಾವ ಎರಡೊಬ್ಬಿ ಮಾಡಿ ಥಳಿಸವ್ವ (ಮಲ್ಲಿಗೆ. ೯೨). ೨. ನನ್ನನ್ನು ಚೆನ್ನಾಗಿ ಥಳಿಸಿ ರೂಪಾಯಿಗಳನ್ನು ತೆಗೆದುಕೊಂಡು ಹೋದನು (ಕುಂಕುಮ. ೮೪) ; ಅಪ್ಪ ಚೆನ್ನಾಗಿ ಒಂದು ಹುಣಸೆಯ ಟೊಂಗೆಯಿಂದ ಥಳಿಸಿದ್ದರು (ವಾತ್ಸಲ್ಯ. ೩೨). [ ತಳಿ$_1$ + – ಸು$_1$ ]

**ತಳಿಸು$_2$** ‘ತಳಿಯಿಸಂ’ ನೋ.

**ತಳಿಸು$_3$, ತೊಳಸು$_5$, ಥಳಿಸು$_2$** (ಕ್ರಿ). ೧. ಹೊಳೆ ; ತಳತಳಿಸು ; ಪ್ರಕಾಶಿಸು: ರಾಜಿಸಿತು ಸರಯೂ ನದಿಯ ಪಕ್ಷಮೋಕುಳಿಯ ಕಾಂತಿಯಿಂ ತಳಿಸಿ (ಶ್ರೀರಾಮಾ. ೩೧-೧೦೫). ೨. ಹೊಳಪುಕೊಡು ; ಮಸೆ ; ಹರಿತಗೊಳಿಸು : ಎಳಗೊನೆಯ ಚಿವುಟುವೊಡೆ ಕೊಡಲಿಯ ತಳಿ[ಪಾಠಾಂ. ರಿ] ಸುವರೆ ಕೇಳೆಲವೊ ಕಪಿ ನಿನ್ನೊಳಗೆ ಕಾದುವಡೇಕೆ ಕೈದುಗಳಸ್ತ್ರಹೀನನಲಿ (ತೊರರಾ. ೬-೨೩-೧೦) ; ತಳಿಸಿದ ಕೊಡಲಿಯೊಲ್ ಸಂದು ಸಂದುಗಳಂ ಕರ್ತರಿಪುದುಂ (ಚಕಬಿ. ೧೪). **ತೊಳಸು$_5$ :** ೨. ಆಯುಧಗಳನ್ನು ತೊಳಸುವ ವೃತ್ತಿ ನಮ್ಮೂರ ಕಮ್ಮಾರನದು (ರೂಢಿ). **ಥಳಿಸು$_2$ :** ೨. ಕುಡುಗೋಲು ಥಳಿಸಿ, ಹಲ್ಲು ಹೊಯ್ಕಿಸಿ, ಹೊಲಕೊಯ್ಯಲು ಸಿದ್ಧರಾಗುತ್ತಾರೆ (ನನ್ನೂರು. ೪೩). [ <ತಳತಳ + – ಇಸು$_3$ ]

**ತಳಿಸು$_4$** (ಕ್ರಿ). ಒಂದಕ್ಕೊಂದು ತಾಗಂ,–ಸೇರಂ: ಪರಸ್ಪರ ಕಲಿತ ಕರಜಾನೂರುಪಾದದ್ವಿತಯಬದ್ಧದಲಿ ತಳಿಸಿ ತೊಡರುವ ಬೀಸಿ ಬಿಸುಡುವ ನಿಲುವಿನಿಂದಡಿಯಿಂದ ಚಲಿಸುವ ಹಲವು ಪರಿವಿಡಿಯಿಂದ ಹಳಚಿದರಂದು ಭಯ ಭಟರು (ನಿಭಾಗ. ೧೦-೪೧-೮). [ ತಳ್$_1$ (<ತಟ್) + – ಇಸು$_3$ ]

**ತಳಿಹ** (ನಾ). (?) : ತಳಿಹದ ಪಚ್ಚೆಯಂಗಿ ತಲೆಸುತ್ತಿದ ಕತ್ತರಿವೀಲಿ ಪೊಂಕದೊಳ್ ತಳೆದಸಿಧೇನು . . . ಕರಂಗಿ ಕತ್ತಲಿಸುವ ಮೆಯ್ಯ ಕಾಡೊಡೆಯರ್ರೈತರೆ ನೋಟ್ಟವರ್ಗಾಯ್ತು ಕೌತುಕಂ (ಪುಣ್ಯಾಸ್ರ. ೨-೬೨) ; ಹೊಗರಿನ ಹೊಳಹು ಗಗನವನುಗುಳೆ ಧಾರೆಯ ಬಲುಗಿಡಿಗಳುರಿ ಮಸಗೆ ತ[ಪಾಠಾಂ. ಬ, ತೊ]ಳಿಹದ ಬಣ್ಣ ಗಜಗಜಿಸೆ . . . ಕವಲಂಬಲಗಿ ನಂಬೀಸಾಡಿದವು ಪರಸ್ಯೆನ್ಯಸಾಗರವ (ಕುವ್ಯಾದ್ರೋ. ೧೦-೪). [ ? ]

**ತಳಿಹೋರಿ** (ನಾ). ತಳಿಮಾಡಲು ಸಾಕಿದ ಹೋರಿ ; ಬೀಜದ ಹೋರಿ: ಹೆಸರಾಂತ ೩೦೦೦ ತಳಿಹೋರಿಗಳನ್ನೂ ಕಳುಹಿಸಿದನು (ಪ್ರವಾಇ. I, ೭೦, ೮೩೬). [ ತಳಿ$_5$ + ಹೋರಿ (<ಪೋರಿ$_1$) ]

**ತಳು** (ನಾ). ಅಂಗೈ ; ಕರತಳ (?) : ಪಿಡಿದುದಧಿಯಂಬಾಸೆದೋಱಿಸಿ ಕೊಡುತೆ ಪುಷ್ಕರಣಕ್ಕೆ ತಳುವನು ತೊಡರ್ದು ನಿಗ್ಗವದೆಡೆಯಲಂಘ್ರಿ ಗಳೆಡೆಯಲೆಲರಂತೇ (ಸಾಳ್ವಭಾ. ೬ ೧೪).
[ Pಇದು ‘ತಳ’ ಎಂಬುದರ ಅಪಲಿಖಿತವಿರಬಹುದೆ ? ]

**ತಳುಕಿಕ್ಕು** 'ತಟ್ಟಿಕ್ಕು' ನೋ.
**ತಳುಕು$_1$** 'ತಳ್ಕು$_2$' ನೋ.
**ತಳುಕು$_2$** 'ತಳ್ಕು$_3$' ನೋ.
**ತಳುಕು$_3$** 'ತಟ್ಕು' ನೋ.
**ತಳುಕು$_4$** 'ತಳಕ್ಕು$_2$' ನೋ.
**ತಳುಗು** 'ತಳ್ವು$_1$' ನೋ.
**ತಳುತು** 'ತಟ್$_1$' ಪರಾ.
**ತಳುಪು** (ಕ್ರಿ). (?) : ನಾಲು ತುಬರಲು ಹಾಡಿಯು ಕಟ್ಟಿ ತಳುಪೆವು ನೀಲು ಅಂಮೆಂಬಳದಲು (ಸೌಇಎ. ೧೯೩೧. ಮಂಗಳೂರು. ೩೩೭-೯ ; 1450). [ ? ]
**ತಳುರ್** 'ತಳಿರ್$_1$' ನೋ.
**ತಳುವಿಕ್ಕು$_1$** (ಕ್ರಿ). ಆಧಾರ ಕೊಡು ; ಅವಲಂಬನ ನೀಡು : ಭೀಮ ಬೇಗದಲಿ ಕರಗಳನು ತಳುವಿಕ್ಕಿ ಭವನವ ಜರಿಯಲೀಯದೆ ಕೆಲಕೆ ತೆಗೆದಪನು (ಕುವ್ಯಾ.ಆ. ೭೨೪. ೩೩-೩). [ ತಳುವು$_2$ (<ತಳ್ವು$_2$) + ಇಕ್ಕು ]
**ತಳುವಿಕ್ಕು$_2$** (ಕ್ರಿ). ಹೊಳಪು ಕೊಡು ; ಮಸೆ : ಹರಿತೆಗೊಳಿಸು : ಪದಮಾಡಿ ತಳುವಿಕ್ಕಿ ಪೊಳೆವ ಬತ್ತೀಸಾಯುಧವಿಡಿದಭ್ಯಾಸಿಗಳ (ವೋಹತ. ೧೭-೮೩). [ ತಳುವು$_0$ (<ತಳಪು$_1$) + ಇಕ್ಕು ]
**ತಳುವು$_1$** 'ತಳ್ವು$_1$' ನೋ.
**ತಳುವು$_2$** 'ತಳ್ವು$_2$' ನೋ.
**ತಳುಹು$_1$** 'ತಳ್ವು$_1$' ನೋ.
**ತಳುಹು$_2$** 'ತಳ್ವು$_2$' ನೋ.
**ತಳೆ$_1$** (ಕ್ರಿ). ೧. ಧರಿಸು; ತೊಡು; ತೊಟ್ಟುಕೊಳ್ಳು : "ತಳೆ – ಧಾರಣೇ, ಆತಪತ್ರ ಭೇದೇ ಇಲು (ತಟು)" (ಶಮಧಾ) ; "ತಳೆದುದೆಂದುಂ ಅಂತು ದೆಂದುಂ ತಾಳ್ದುದೆಂದುಂ ಪೊತ್ತುದೆಂದುಂ ಧರಿಸಿದುದರ್ಕೆ ಪೆಸರ್" (ಕಶಸಾ. ೧೫-೨೮೯) ; ಪೊಳೆವೆಳೆವೆಟ್ಟಿಯುಂ ತನ್ನೊಳ್ಳೆಳೆಯದ ಕಾರಿರುಳ ತೆಱದೆ ಕುಸುಮಾವಳಿಯುಂ ತಳೆಯದ ನಿನ್ನ ಬಟಲ್ಮುಡಿ (ಕಾದಂಪೂ. ೩೩೮) ; ನಂದನವನಲಕ್ಷ್ಮಿ ಕೀರರವದಿಂ ಪೊಗಟ್ದಿತ್ತ ಪಸಾಯುದಚ್ಚಮುತ್ತಿನ ಪೊಸ ಪಚ್ಚಮಂ ತಳೆದವೊಲದಿರ್ಮುತ್ತೆ ಮುಗುಳ್ದುದೆತ್ತಲುಂ (ಚಂದ್ರಪು. ೭-೪೧) ; ತಳೆವಂತೆ ಮಣಿತ್ರಯಮಯ ವಿಳಸತ್ಕೇಯೂರವಳಯಮಂ ತದ್ಭೂಪಂ ತಳೆದಂ ತ್ರಿಖಂಡಮಯ ಭೂವಳಯಮನಾತ್ಮೀಯ ಭೂರಿಭುಜ ಮಂಡಲದೊಳ್ (ವರ್ಧಪು. ೮-೭೫). ೨. ಪಡೆ ; ಹೊಂದು ; ತಾಳು : ವಿರೋಧಿಗಳಂ ಸಾಧಿಸಿ ವೀರಮಂ ತಳೆದರ್ (ಎಇ. XIII, ೩೨೯-೨; 920); ಉಂತೆ ತೊಡಳಿಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕೆಯಿಂ ತಳೆಯೆ ನೆಱೆಯೆ ಕೆಯ್ಗೆಯ್ದು (ಪಂಪಭಾ. ೭-೮೧ ವ) ; ಪರಮ ಶ್ರೀಯಂ ತಳೆದೊಗೆದೆರೆಯೊಂ ಪರವೋಪಕಾರಿ ಧರ್ಮಜ್ಞಂ (ಎಕ. III, ತಿರುಮ. ೭೯-೧ ; 980) ; ತಳೆದಳ್ ಪಟ್ಟಮನೆಸೆದಿರೆ ಗಂಗನ ಪಟ್ಟಮಹಾದೇವಿ (ಎಕ. VII, ಶಿವಮೊ. ೯೭-೧೨ ; 1113) ; ಪ್ರಾಣಲಿಂಗವಾದರೆ ಪ್ರಕೃತಿಯ ತಳೆವುದೆ (ಆದವ.೩೨-೯೨) ; ಆ ವನಿತೆಯೊಪ್ಪಿದಳಿಂದುವಂ ತಳೆದ ರಾತ್ರಿಯಂತೆ (ಸಿದ್ಧರಾ. ೧-೪೮) ; ಪೊನ್ನ ಬೆಟ್ಟು ಕೈಯುಂ ಕಾಲಂ ತಳೆದಿರ್ದುದೆಂಬಿನಂ ಕಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ (ಕಬ್ಬಿಕಾ. ೧೬೩) ; ತಳೆದನುನ್ನತಿಯ ತೊಳೆದನಘಮಲಪಂಕಮಂ . . . ಬಸವ ಕುಂಜರನು (ಬಸಪು. ೫೯-೫೪) ; ಖ್ಯಾತಿಯ ತಳೆದು ಕೊರಂಬಿನಲಿ ಹೊಳಿದನು (ಕುವ್ಯಾದ್ರೋ. ೩-೫೧) ; ಪೆಂಡಿರೊಳೆಣೆಯಿಲ್ಲದ ಕೀರ್ತಿಯ ತಳೆದೆಸೆದಳು ದಮಯಂತಿ (ಹದಿಬ. ೩-೪೭). ೩. ಹಿಡಿ ; ಹಿಡಿದುಕೊಳ್ಳು : ಕಂಡು ಗೆಂಟಱೊಳೆ ಪೊಡೆವಟ್ಟು ಮೆಲ್ಲನೆ ನೀಡೆ ಲೇಸುಗೆಯ್ದೆಯೆಂದೆನ್ನಂ ಕರತಲದೊಳ್ ತಳೆದು (ಕಾದಂಉ. ೭೫೦) ; ಉಟಿದ ರಾಯರ ಕೊಡೆಗಳ್ ಗಡಣದೊಳೆ ತಳೆದಣಂಬೆ[ಪಾಠಾಂ. ಮೆಱೆವಣಂಬೆ]ಯ ಕೊಡೆವೋಲ್ ಬೆಳ್ಗೊಡೆಗಳಾದುವು (ಕಬ್ಬಿಕಾ. ೫೦) ; ಥಳಥಳಿಸುವ ಖಡ್ಗವಿಡಿದೆಡಗೈಯೊಳು ತಳೆದಡ್ಡಣಿಗಳ ಭಟರು (ಜೀವಂಸಾಂ. ೮-೩೫). ೪. ಕೈಕೊಳ್ಳು ; ಅಂಗೀಕರಿಸು ; ಸ್ವೀಕರಿಸು : ನಾಲ್ಕುಮಂ ತಳೆದು ಮಗಳೆ ತೊಱೆ ನೀಂ ಪೆಱಿವಂ (ಸುಕುಮಾ. ೭-೩೪) ; ಆ ನಾಚಿದಣ್ಣಿ ನಾಥನನೂನಗುಣಂ ಚಕ್ರವರ್ತಿ ದಯೆಯಿಂ ಬೆಸಸಲು . . . ನಿಖಿಳ ಮಂತ್ರಿಪದವಮಂ ತಳೆದ (ಎಇ. XXVIII, ೫-೨೯ ; 1082) ; ಮಗನೆ ಮದೀಯ ರಾಜ್ಯಪದವಮಂ ತಳೆದೆನ್ನನಶೇಷಧಾತ್ರಿಯಿಂ ಪೊಗಟಿಪುದು (ನೇಮಿಪು. ೧-೯೨). ೫. ಹೊರು ; ವಹಿಸು ; ತಳೆದೇನಿರ್ದರೋ ತಮ್ಮ ತಮ್ಮ ತಲೆಯೊಳ್ರಾಜಾಜ್ಞೆಯಂ (ಕಾದಂಪೂ.೨೩) ; ವಿಶ್ವಮೃಗಾವಳಿಯಾಧಿಪತ್ಯಮಂ ತಳೆದು (ಪಂಚತಂ. ೫೦-೧) ; ಶಿವನಾಜ್ಞೆಯಂ ಚಿತ್ತದೊಳ್ ತಳೆವುತಂ (ತಿರುರ. ದೀ. ೮-೧೯) ; ಎನ್ನ ನೀನಲ್ಲದೆ ತಳೆವರಾರೆನುತ್ತದಂ ಮನ್ನಿಸುತೆ ವಾಹನಂಗೆಯ್ದಂ (ಪದ್ಮರಾ. ೧೧-೧೭) ; ಇಳೆಯನೆಮ್ಮಯ್ಯ ಶನಿವೇಗನು ತಳೆದನಜ್ಜನು ಜ್ವಲನವೇಗನು ತಳೆದನಾ ಜಿನರೂಪನ (ಸಾಳ್ವಭಾ. ೧೬-೨೭). ೬. ಕಟ್ಟು ; ಬಂಧಿಸು : ನುಡಿಗಳೊಳಾಸೆಯುಂಟೆನಲೊಡಂ ತಳೆದಂತಿರೆ ನಿಲ್ವುದೇತುಮಾವೆಡೆಯೊಳಮಾಸೆಗಾಣೆನೆನೆ ತೊಟ್ಟನೆ ಪೋಪುವು ನಲ್ಲರಿರ್ಪ ರೀರೊಡಲೊಳಗಿರ್ಪ ಜೀವಂ (ಪಂಪಭಾ. ೮-೧೦೪). 'ತಾಳ್$_1$' ಪರಾ.
**ತಳೆ$_2$** 'ತಳಿ$_1$' ನೋ.
**ತಳೆ$_3$, ದಳೆ$_3$** (ನಾ). ೧. (ಪ್ರಾಣಿಗಳ ಕಾಲುಂಗಳಿಗೆ ಕಟ್ಟುವ) ಹಗ್ಗ ; ಸಂಕೋಲೆ : "ತಟು = ಆತಪತ್ರಂ ; ತಳೆಯೆಂಬ ಕ್ರಿಯೆಯೊಳಂ ಪಶುವಿನ ತಳೆಯೊಳಂ ಕುಳಂ" (ಶಮದ. ಪರಿ. ೧) ; "ತಳೆಯೆಂದುಂ [ಪಾಠಾಂ. ತಳ್ಳೆಂದುಂ] ದಾವೆಂದುಂ, ಅಗ್ಗರಣೆಯೆಂದುಂ ರಜ್ಜು" (ಕಶಸಾ. ೩೧-೬೫೧) ; ತಳೆಯಿಂದ ಬಿಗಿದೊಡನೆ ತಿಳಿಯುಗುಂ ಬೋಳನಂ ಕೆಳನೂಂಕಿ ಕಮ್ಮರಿಗೆ, ಬಡಿದೆ, ಕೊಲದುಳಿದೆ (ಕಾಲೂರ. ೧೬೩-೩೬೦). 'ತಳೆಯಿಂಕ್ಕು' ಪರಾ. ೨. ಸೆರೆ ; ಬಂಧನ : ಅಳಿವು ಪಳಿವನ್ನಾಯ ಮಱಿ ಮೋಸ ವಾಸಿ ತಲ್ಲಳ ತಳೆ ವಿಯೋಗಮಲಸಿಕೆ ಕರ್ಕಶಂಗಳಿವು ಮೊಳೆದೋಱುವು (ಜೈಮಿಭಾ. ೨-೫). ೩. (ಅಡಕೆ, ತೆಂಗು ಮೊದಲಾದ) ಮರಗಳನ್ನು ಹತ್ತುವಾಗ ಕಾಲುಗಳಿಗೆ ಹಾಕಿಕೊಳ್ಳುವ ಗುದಿ : ಒಬ್ಬೊಬ್ಬರು ತಳೆಯಿಲ್ಲದೆ ಬರಿಗಾಲಿ ನಿಂದಲೂ ಮರ ಹತ್ತುತ್ತಾರೆ (ರೂಢಿ). **ದಳೆ$_3$:** ೧. 'ದಳೆಯಿಂಕ್ಕು' ಪರಾ.
[ ದೇ.॥ ತಮಿ. ತಳೈ ; ಮಲ. ತಳ ; ತುಳು. ತಳೆ, ತಲೆ ; ಕೊಡ. ತಳೆ, ದಳೆ ; ತೆಲು. ತಲಗು ]
**ತಳೆ$_4$** 'ತಟು' ನೋ.
**ತಳೆಕಾಡು** 'ತಟಿಕ್ಕಾಡು' ನೋ.
**ತಳೆತ$_1$** (ನಾ). ತಾಳುವಿಕೆ ; ಧರಿಸುವಿಕೆ ; ಧಾರಣೆ : "ಮಲ, ಮಲ್ಲ, ಕಲ, ಕಲ್ಲ–ಧಾರಣೇ, ತಳೆತದೊಳ್" (ಕಾಶಕ್ಕ. ೪೫) ; "ಕಕ್ಷ – ಧಾರಣೇ, ತಳೆತದೊಳ್ . . . ಕಕ್ಷಣಂ, ಕಕ್ಷಣೀಯಂ, ಈ ೨ ತಳೆತಂ" (ಕಾಶಕ್ಕ. ೧೧೪) ; "ಭ, ಭು . . . ಭಾವ್ಯಂ ಈ ೮ ತಳೆತಂ" (ಕಾಶಕ್ಕ. ೦೨೮).
[ ತಳೆ$_1$ + –ತ$_2$ ]
**ತಳೆತ$_2$** (ನಾ). ತಳಿಯಂವಿಕೆ ; ಸಿಂಪಡಿಸುವಿಕೆ ; ಸೇಚನ : "ವಟ್ಟ– ಸೇಚನೇ, ತಳೆತದೊಳ್" (ಕಾಶಕ್ಕ. ೨೦) ; "ಮುಂಡ–ಸೇಚನೇ, ತಳೆತದೊಳ್" (ಕಾಶಕ್ಕ. ೨೪). [ ತಳೆ$_2$ (<ತಳಿ$_1$) + –ತ$_2$ ]
**ತಳೆಯಿಕ್ಕು, ದಳೆಯಿಂಕ್ಕು** (ಕ್ರಿ). (ದನಗಳ ಕಾಲುಗಳಿಗೆ) ಹಗ್ಗವನ್ನು ಕಟ್ಟು ; ಗುದಿಕಟ್ಟು : ಎಳಮಿಂಚಂ ತಳೆ[ಪಾಠಾಂ. ಟು]ಯಿಕ್ಕಿ ಚಾದಗೆಗಳಂ ಬಿಟ್ಟೋಡಿ ಬಲ್ಗೆಚ್ಚಲಿಟ್ಟಳಿ ನೀಳಾಂಬುದದಿಂ ಬಟಲ್ದ ಗಗನಶ್ರೀಧೇನುವಂ ಕೋಮಳಾಮಳ ದೀರ್ಘಾಮೃತ ಧಾರೆಗಳ್ಸರಿಯೆ ಭೋರ್ಭೋರೆಂಬಿನಂ ಶಕ್ರಚಾಪಳತಾದಾಮಕದಿಂದೆ ಕಟ್ಟಿ ಕಱೆದಂ ಕಾರೆಂಬ ಗೋಪಾಳಕಂ (ಅರ್ಧನೇ. ೮-೩) ; ಕಱುವಂ ಬಿಡು . . . . ತಗುಳ್ದೊದೆವಾವಂ ತುಱಿಸು

ತಳೆಯಿಕ್ಕು ತಡೆಯದೆ ಮುೞುವಂ ಸುರಿಯೆಂಬ ಸರವೆ ತುೞುಗಾರ್ತಿಯರೊಳ್ (ಲೀಲಾವ. ೫-೧೨೦). **ದಳೆಯಿಕ್ಕು :** ಬಲಿದು ಗೂಂಟಗಳನೆತ್ತಾನೆ ಕುದುರೆಗಳ ನೀಂ ದ[ಪಾಠಾಂ. ನಿ]ಳೆಯಿಕ್ಕು . . . ಎಂದೆಂಬ ದನಿಯುಭಯಕಟಕದೊಳೆಸೆದುದು (ಜಬಪು.೪೮-೬೦). 'ದಳೆಯಿಕ್ಕಿಸು' ಪರಾ.

[ ತಳ್ $_3$ + ಇಕ್ಕು ]

**ತಳೆವಿಡಿ** 'ತಱಿವಿಡಿ' ನೋ.

**ತಳೋದಕಪ್ರವಾಹ** (ನಾ). (ಸಮುದ್ರದ) ತಳಭಾಗದಿಂದ ಹೊರಡುವ ನೀರಿನ ಪ್ರವಾಹ : ಮೇರುಗಳಿಂದ ಸಮಭಾಜಕವೃತ್ತದ ಕಡೆಗೆ ತಣ್ಣಗಿರುವ ನೀರು ಒಳಗೆಯೆ ಚಲಿಸಿ ಈ ಉಷ್ಣೋದಕದ ಸ್ಥಾನವನ್ನಾಕ್ರಮಿಸಲು ಹೊರಡುವುದಕ್ಕೆ ತಳೋದಕಪ್ರವಾಹಗಳು ಎಂದೂ ಹೆಸರು. ಅತ್ಯುಷ್ಣಪ್ರದೇಶಗಳಲ್ಲಿ ನೀರು ಆವಿಯಾಗಿ ಹೋಗುವುದು ಹೆಚ್ಚಾದುದರಿಂದ ತಳಭಾಗದಿಂದ ತಣ್ಣೀರಿನ ತಳೋದಕಪ್ರವಾಹಗಳು ಹೊರಟು ನಷ್ಟವಾದ ನೀರನ್ನು ತುಂಬುತ್ತವೆ (ಭೂವಿವ. ೯೧).

[ ತಳ ( = ತಲ) + ಉದಕ $_2$ + ಪ್ರವಾಹ ]

**ತಳೋದರಿ** 'ತಲೋದರಿ' ನೋ.

**ತಳೋಪಲಾತ**(ನಾ).೧. ಕೆಳಭಾಗದಲ್ಲಿ ಕಲ್ಲುಗಳಿಂದ ಕೂಡಿಕೊಂಡುದು. ೨. [ಸಂಗೀತ] ಒಂದು ತಾಳಭೇದದಿಂದ ಕೂಡಿರುವುದು. ೧, ೨ : ಆ ಮಹಾವನಂ . . . ಸನ್ನದ್ಧಸಪ್ತಿಯುತ ಖಲೀನಶಾಖಾಮುಖಮುಂ ಉಪಕಂಠ ಚಳಚ್ಚಾಮರಮುಂ ತಾಳಪಾತವಿಧಿಯಂತೆ ಶಮ್ಯಾರಮ್ಯಮುಂ ತಳೋಪಲಾತಮುಂ (ಚಂದ್ರಪು. ೫-೫೨ ವ).

[ ಸಂ. (ತಲ + ಉಪಲ + ಆತ ; ತಲ + ಉಪಲಾತ) ]

**ತಳ್ಕಯ್ಸು** 'ತಱ್ಕೈಸು' ನೋ.

**ತಳ್ಕರಿಸು** 'ತಱ್ಕಿಸು' ನೋ.

**ತಳ್ಕವಿಸು** 'ತಱ್ಕೈಸು' ನೋ.

**ತಳ್ಕಿಕ್ಕು** (ಕ್ರಿ). ಒನಪು ಹೊಂದು ; ವಿಲಾಸಗೊಳ್ಳು : ಗುಣವತಿಯ ನಡೆ ತಳುವಿ ತಳ್ಕಿಕ್ಕೆ ಕೂಡೆ ಭಾವಂಗಳಿಂ ನುಡಿ ಬಳಲ್ದೊಪ್ಪುತಿರೆ ಮೆಲ್ಪಿನ ಗುಣಂಗಳಿಂ (ಬಸರ. ೧-೧೦೩).

[ ತಳ್ಕು $_4$ (<ತಳಕು $_2$) + ಇಕ್ಕು ]

**ತಳ್ಕಿಡಿ** (ಕ್ರಿ). ಆವರಿಸಂ ; ಕವಿ ; ವ್ಯಾಪಿಸು : ಕಮಳಿನಿಯಿನಿಯನಸ್ತಮಿಸಿ ದಳಲುರಿಯಲೊದವಿ ಮುಂಗುಡಿವರಿದು ಗಗನಮಂ ತಳ್ಕಿಡಿದು ಬೆಂದ ಕಾರ್ಬೊಗೆಯೋ . . . ಪೇಳೆನೆ ರಾತ್ರಿ ಕಣ್ಗೆಸೆದುದು (ಸೋಮಚ. ೨-೮).

[ ತಳ್ಕು $_5$ (<ತಱ್ಕು) + ಇಡಿ $_2$ ]

**ತಳ್ಕಿಸು** 'ತಱ್ಕಿಸಂ' ನೋ.

**ತಳ್ಕೞ್** (ಕ್ರಿ). (ವಿಸ್ತಾರವಾಗಿ) ಲೇಪಿಸು,–ಸವರು,–ಬಳಿ: ಕುಳಿರ್ಕೋಟ್ಟ ಚಂದನರಸಮನೆರ್ದೆಯೊಳಂ ಮೆಯ್ಯೊಳಂ ತಳ್ಕೞಿದು (ಪಂಪಭಾ. ೫-೫ ವ): ತಾನುಂ ಹಿಡಿಂಬೆಯುಮವನ ಬರಿಯ ನರವಿನಡಗಿನಿಡುವಿನೆಡೆಯ ಕೆನ್ನೆತ್ತರೊಳೊರ್ವರೊರ್ವರಂ ತಳ್ಕೞಿದುಂ ಬೊಬ್ಬಿೞಿದುಂ (ಪಂಪಭಾ. ೧೨-೧೫೪ ವ). [ ತಳ್ಕು $_4$ (<ತಳಕು $_2$) + ಇೞ್ $_2$ ]

**ತಳ್ಕು $_1$** 'ತಳಕು $_1$' ನೋ.

**ತಳ್ಕು $_2$, ತಳುಕು $_1$** (ಕ್ರಿ). ೧. ತಬ್ಬು ; ಅಪ್ಪು : ಆತಂಗೆ ಸುತರಿಲ್ಲದವನಳಿಯೆ ಭದ್ರೆಯುಂ ಭೂತಳಾಧೀಶನ ಕಳೇವರವ ಕೆಡದಂತೆ ತಾ ತಳ್ಕಿ ಸಹಗಮನಮಂ ಮಾಳ್ಪೆನೆಂಬನಿತರೊಳ್ ಖಚರವಾಣಿಯಾಗೆ (ಲಕ್ಷ್ಮಭಾ. ೨೫-೨೫). **ತಳುಕು $_1$ :** ೨. ಸೇರಿಸು ; ತಳುಕುಹಾಕು : ಸೆಳೆದು ಬಿಗಿಯಪ್ಪಿದನು ಕರದಲಿ ತ[ಪಾಠಾಂ. ಕ, ತು]ಳುಕಿ ಕರವನು ತಂದು ತನ್ನಯ ಕೆಲದೊಳಗೆ ಕುಳ್ಳಿರಿಸಿದನು ಸಿಂಹಾಸನಾರ್ಧದಲಿ (ಕುವ್ಯಾಆ. ೯-೮೩). 'ತಱ್ಕು' ಪರಾ.

[ <ತಱ್ $_1$ ]

**ತಳ್ಕು $_3$, ತಳುಕು $_2$** (ಕ್ರಿ). ೧. ಹೆದರಂ ; ಕುಗ್ಗು ; ಹಿಂಜರಿ : ಅಳ್ಕಿದೆ ಕುಳ್ಕಿದೆ ಮಳ್ಕಿದೆ ಮತಿಗೆಟ್ಟು ತಳ್ಕಿದೆ ತಲ್ಲಣಗೊಂಡೆ (ಶತಸಾಂ. ೧೫-೮೫). ೨. ಚಲಿಸಂ ; ಅಲ್ಲಾಡು ; ಒಲೆ : ಕೆಲಕೆಲರ್ ತಜ್ಜಲವನೀಸುತುಂ ಸೂಸುತುಂ ಕೆಲಕೆಲರ್ ಕುಚಭರದೆ ಬಳ್ಕುತುಂ ತಳ್ಕುತುಂ ಕೆಲಕೆಲರ್ ಬೆಂಬತ್ತಿ ಬಯ್ಯುತುಂ ಪೊಯ್ಯುತುಂ ಪೊನ್ನಂಡೆಗಳನೆ ಪಿಡಿದು . . . ಕಣ್ಗೆಸೆದರಾ ಕೊಳದೊಳು (ಜಬಪು. ೩೭-೬೮). **ತಳುಕು $_2$ :** ೧. ವೈರಿಯೊಳ್ ಜಳುಕದೆ ತಳುಕದೆ ವಳಕಿಸಿ ಬೆದರದೆ ದಳನೇತ್ರ ಹರುಷದಿ ಪೊರಟು (ಹಮುಚ. ೭೧). ೨. ಉಭಯ ದಿಟ್ಟಿಗಳ ನಾಸಾಗ್ರದಲಿ ನೆಲೆಗೊಳಿಸಿ ಬಳಿಕ ತೊಳಲುವೀ ಮರುತನುಂ ಸ್ತಂಭಿಸುವನದರಿಂದ ತಳುಕದಲೆ ಮನ ನಿಲುವುದೈಸೆ (ವೆಂಕಾರಾ. ೨-೧೦-೨೨). [ ? ]

**ತಳ್ಕು $_4$** 'ತಳಕು $_2$' ನೋ.

**ತಳ್ಕು $_5$** 'ತಱ್ಕು' ನೋ.

**ತಳ್ಕೆ** 'ತಱ್ಕೆ' ನೋ.

**ತಳ್ಕೆಗೆಯ್** 'ತಱ್ಕೆಗೆಯ್' ನೋ.

**ತಳ್ಕೈಸು** 'ತಱ್ಕೈಸು' ನೋ.

**ತಳ್ಗಿಸು** 'ತಱ್ಗಿಸು' ನೋ.

**ತಳ್ಗು** 'ತಱ್ಗು' ನೋ.

**ತಳ್ತ $_1$** 'ತಳ್ $_2$' ಪರಾ.

**ತಳ್ತ $_2$** 'ತಳ್ $_3$' ಪರಾ.

**ತಳ್ತಳ** 'ತಟತಟ' ನೋ.

**ತಳ್ತಳಗುದಿ** 'ತಟತಟಗುದಿ' ನೋ.

**ತಳ್ತಳನೆ** 'ತಟತಟನೆ' ನೋ.

**ತಳ್ತಳಿಸು** 'ತಟತಟಿಸು' ನೋ.

**ತಳ್ತಱದಱ್** 'ತತ್ತಱಿಂದಱ್' ನೋ.

**ತಳ್ತಱ್ $_1$** 'ತಳ್ $_2$' ಪರಾ.

**ತಳ್ತಱ್ $_2$** 'ತಳ್ $_3$' ಪರಾ.

**ತಳ್ತು $_1$** 'ತಟ್ $_1$' ಪರಾ.

**ತಳ್ತು $_2$** 'ತಳ್ $_2$' ಪರಾ.

**ತಳ್ತು $_3$** 'ತಳ್ $_3$' ಪರಾ.

**ತಳ್ಪ** 'ತಲ್ಪ' ನೋ.

**ತಳ್ಪಲ್** 'ತಪ್ಪಲ್' ನೋ.

**ತಳ್ಪು $_1$** 'ತಳಪು $_1$' ನೋ.

**ತಳ್ಪು $_2$** (ನಾ). ತಳೆದಿರುವಿಕೆ ; ಹೊಂದಿರುವಿಕೆ : ವಧೂಕಾಂತರ್ ಪಾಣಿಗ್ರಹಣವಿಧಿಯೊಳ್ ರಾಗವಿಸರರ್ ಸುಧಾಸಿಕ್ತಾಶೋಕಪ್ರತತಿಯುಮ ಶೋಕಾವನಿಜಮುಂ ಮಧುಶ್ರೀಯೊಳ್ ತಟ್ಟಿರ್ದುವು ತಳಿರ ತಳ್ಪಿಂದೆನಿಸಿದ ಪ್ರದಾನಾನಂಗೇಭಂ ಬೆದೞ್ ನೆರೆದಿರ್ದುಂ ಮದುವೆಯೊಳ್ (ಶಾಂತಿಪು. ೬-೧೩) ; ಕುಳಶೈಲವ್ರಾತದಿಂದಂ ಬಳಸಿದ ಕನಕಾದ್ರೀಂದ್ರಮೆಂಬಂತೆ ಭೂಭೃತ್ಕುಳಮೆತ್ತಂ ಸುತ್ತೆ ರತ್ನಾಭರಣಕಿರಣಜಾಲಗಂಳಿಂದಿಂದ್ರಚಾಪಂಗಳ ತಳ್ಪಿಂದೊಪ್ಪಮಂ ತಾಳ್ದಿದ ಘನಸಮಯಂ ತಾನಿದೆಂಬಂದದಿಂ ಕಣ್ಗೊಳಿಸಿರ್ದಂ ಪಾದಪೀಠಾಂಕಿತ ಮಣಿಮಯ ಪರ್ಯಂಕದೊಳ್ದಿ ಕ್ರಮಾಂಕಂ (ಕಾದಂಪೂ. ೨೬) ; ಕಟ್ಟಿದ ಮನಃಪ್ರಿಯಮಿರಹದಿನಟಿಲ್ದು ಬಸವಟ್ಟಿದು ಮೋದೆ ತನ್ನುರದೊಳ್ ಬಾಸುಟಿ ತಳ್ಪು ಶೋಕಶಿಖಿಯಂ ಕಟಲ್ಚಲೆಂದೊಟ್ಟಿದಸುಗೆದಳಿರಂ ಪೋಲ್ಕುಂ (ಕಾವ್ಯಾವ. ೨೦೦) ; ತೂರು ನೊರೆ, ಕುದಿವ ನೊರೆ, ಬೆಳ್ಪಿನೊಳ್ ಬೆಳ್ಪು ! . . . ನೀರ್‌ಬೀಳ ಬೆಳ್ನೊರೆಯ ಬಿಸಿಲ ಬೆಳ್ದಿಂಗಳಾ ಮಳೆಬಿಲ್ಲ ತಳ್ಪು (ಹೊಂಗಳು. ೧೬-೮).

ತಳ್ಪಾಗು=ಹೊಂದಿಕೊಳ್ಳು ; ಸಮಾನವಾಗು (?) : ತರುಣಾರ್ಕಂ ನೆಲಸಿರ್ದ ಪೂರ್ವಗಿರಿನಾಥಂ ಪೋತಶೀತಪ್ರಭಾಕರನೊಪ್ಪಿರ್ದಮೃತಾಬ್ಧಿ ದಾರಕನಮೇರು ಪ್ರೀತಿ ಚೆಲ್ವಾದ ಚೈತ್ರರಥಂ ತಾನೆನೆ ಸೂನು ಮೇಘ ರಥನಿಂ ತಳ್ಪಾದನು [ನ] ಣ್ಪಂಗೆ ಪದ್ಮರಥಂ ತುಂಗಭುಜಂ ಗಭೀರವಿಭವಂ ಸಂಸಾರಸಾರೋದಯಂ (ಅನಂಪು. ೩-೨೭). [ ತಳ್$_3$ + – ಪು$_2$ ]

**ತಳ್ಪೊಯ್$_1$** 'ತಟಿಪ್ಪೊಯ್' ನೋ.

**ತಳ್ಪೊಯ್$_2$** (ಕ್ರಿ). ೧. ತಡೆ ; ಅಡ್ಡಿಪಡಿಸು : "ತಳ್ಪೊಯ್ (ತಳ್ + ಪೊಯ್) ಪ್ರತಿಹತೇ (ತಡೆದು ನೂಕು)" (ಶಮಧಾ). ೨. (ಅಲೆಯಾಗಿ) ಅಪ್ಪಳಿಸು; ಘಟ್ಟಿಸು; ಬಡಿ : ಪಟುಪಟಹ ಶಂಖರುತಿ ದಿಕ್ತಟವಂ ತಳ್ಪೊಯ್ಯೆ (ಪಂರಾಮಾ. ೨-೧೦) : ಇನಿಯುವಳಂ ಮುನ್ನುರ್ಚಿದ ನನೆಗಣೆ ತಳ್ಪೊಯ್ಯುದ್ದೆರ್ದೆಯನೆಂಬುತ್ಸವದಿಂ ತನಗೆ ಹಿತಕಾರಿಯಾಗಿರೆ ಮನೋಜನಂ ನೃಪತಿ ಬಗೆದನಾರ್ದಿಸುತಿರೆಯುಂ (ವರ್ಧಪು. ೪-೧೪); ಚರು ಚಾರುಗಂಧಮಂ ಕವರ್ವನೆಂಬೊಂದು ಪುರುಡಿಂ . . . ಕಿನಿಸಿಂ ಕಿಚ್ಚಂ ತಳ್ಪೊಯ್ದುಂ ಧೂಮಧ್ವಜಮಂ ಮುಟ್ಟಿದುಂ . . . ಪಾವನಪವನಂ ತೀಡೆ (ರಾಮಾಶ್ವ. ೪೩-೩). ೩. ತಿರಸ್ಕರಿಸು; ಮೀರು: ವಾರಾಶಿ ಧೀರಸ್ವರಮಂ ತಳ್ಪೊಯ್ವ[ಪಾಠಾಂ. ಯ್ದ]ಜೇಂದ್ರಾದ್ಯಮರ ಜಯಜಯಧ್ವಾನದಿಂದಾ ಗಳೆಟ್ಟಾದರದಿಂ ಕುಳ್ಳಿರ್ದನಾಲೋಕನಕೃತವಿಬುಧಾನಂದಕಂದಂ ಮುಕುಂದಂ (ಜಗವಿ. ೧-೫೩). ೪. ಅಪ್ಪಳಿಸಲ್ಪಡು; ಹೊಡೆಯಲ್ಪಡು: ಚಿತ್ರರಥನಂದನೆಯ ಮದನಾನಲಂ ದಿನಕರೋದಯಂ ಮೊದಲ್ಗೊಂಡು ಸೂರ್ಯಕಾಂತೋಪಲಾನಲನಂತೆ ಗಾಳಿಯಿಲ್ಲದುರಿಯುತಂ . . . ಧಾರಾ ಗೃಹಂಗಳಿನುಪಶಮಿಸದಂತೆಂತು ವಿಚಲಿತ ಜಲಯಂತ್ರ ವಿನಿರ್ಗಳಿತಂಗಳಪ್ಪ ಶಿಶಿರಶೀಕರನಿಕರ ತಾರಕಿತ ವಾರಿಧಾರೆಗಳಿಂ ತಳ್ಪೊಯ್ವುದಂತಂತೆ ಸಿಡಿಲ ಕಿಚ್ಚಿನವೊಲಗ್ಗಳಮುರಿವುದು (ಕಾದಂಬ. ೩೨೭). [ ತಳ್$_2$ + ಪೊಯ್$_1$ ]

**ತಳ್ಪೊಯ್$_3$** (ಕ್ರಿ). ೧. ತುಂಬು ; ಕವಿ ; ಹಬ್ಬು ; ವ್ಯಾಪಿಸು : ದಿವಾಪ್ಸರೋವೃಂದಮಿಾ ಕ್ಷಿತಿಗೇನಿಂದ್ರನ ಶಾಪದಿಂದಿಟಿದುವೋ ಪೇಟಿಂಬ ಶಂಕಾಂತರಂ ಮತಿಗಂ ಪುಟ್ಟುವಿನಂ ಕರಂ ಪರಕೆಗಳ್ ತಳ್ಪೊಯ್ಯೆ ಸೇಸಿಕ್ಕಿತಿಂದ್ರುತನೂಜಂಗಿದಿರ್ವಂದು ಷೋಡಶ ಸಹಸ್ರಾಂತಃಪುರಂ ಕೃಷ್ಣನಾ (ಪಂಪಭಾ. ೪-೩೯) : ಅಲ್ಲಿರ್ದರೆಲ್ಲಮಿದೇನೋ ಕವಿತರ್ಪುದೀಗಳೆನುತಂ ತಳ್ಪೊಯ್ವ ತಣ್ಪಿಂದಮೆಯ್ದೆ ಮುಟುಂಗುತ್ತಿರಲುಣ್ಮಿತೊವೋದಲೊಳ್ . . . ಹೈಮಪ್ರಭಾಮಂಡಲಂ(ಕಾದಂಬ.೭೦೨); ತಳ್ಪೊಯ್ದು ತರಳನಯನದ ಬೆಳ್ಪು ತಳತ್ತಳಿಸಿ ಮಿಳಿರ್ದು ಪೊಳೆಯೆ ಗವಾಕ್ಷಂಗಳ್ಪಜ್ಜಳಿಪಿನಂ (ಸುಕುಮಾ. ೧೧-೧೪) : ಬಲವದ್ವೈರಿ [ವ್ರ]ಜಂ ತಂನಡಿಗೆಱಗುವಿನಂ ತಂನ ತೇಜಂ ದಿಶಾಮಂಡಳದೊಳ್ತಳ್ಪೊಯ್ವಿನಂ (ಸೌಇಇ. IX-i, ೧೬೦-೭ ; 1091) : ನತನಾನಾಮರ ಮೌಳಿರತ್ನಕಿರಣಂ ನಾನಾಪ್ಸರಃ ಕೇಕರದ್ಯುತಿ ನಾನಾ ಚಮರೀಜವಾಯು ಸಭೆಯಂ ತಳ್ಪೊಯ್ಯಲಿರ್ದಂ ಜಗತ್ಪತಿಯೊಡ್ಡೋಲಗ ದೊಳ್ (ಜಗವಿ. ೧-೨೭) ; ದೆಸೆಯಂ ಬಾಲಾತಪಂ ಬಾಸಣಿದುದೆನೆ ತಳ್ಪೊಯ್ಯೆ ದೇಹಾಂಶು . . . ಬಂದಂ ಚಾರಣಂ (ಚಂದ್ರಪು. ೫-೨೦) ; ನಾದೇಯಮಾಗಿ ದಿವ್ಯಾಮೋದಂ ತಳ್ಪೊಯ್ದು ಪೊಂಗೆ ಕಂಪಾಯ್ತೆಂಬಂತಾದುದು ಸುವರ್ಣಗಿರಿ ಗಂಧೋದಕದಿಂ ತ್ರಿಭುವನೈಕಚೂಡಾಮಣಿಯಾ (ಅನಂಪು. ೫-೭೯). ೨. ಕಾಣಿಸಿಕೊಳ್ಳು ; ಗೋಚರಿಸು : ಬಿಸಿಲಂ ಬೆಳ್ದಿಂಗಳೊಟ್ಟೈಸಿದುದೊ ಪಗಲೊಳಂ ಚೋದ್ಯಮೆಂಬಂತು ಚೆಲ್ವಾಗಸದಿಂ ತಳ್ಪೊಯ್ವುದುಂ ಕಂಡಿದು ಖಚರದುಕೂಲಾಂಬರದ್ಯೋತಮೋ . . . ದಿಗಿಭದಂತಾವಳೀಚ್ಛಾಯೆಯೋ ಭಾವಿಸಲೆಂದಾ ವೇಗದೊಳ್ ವಿಸ್ಮಯರಸವಿಸರಸ್ಯಂದಿಯಾದಂ ಮುಕುಂದಂ (ಜಗವಿ. ೧೦-೪). ೩. ಪ್ರತಿಬಿಂಬಿಸು ; ಪ್ರತಿಫಲಿಸು : ಕುರುಳ ನೆಱಲ್ಗಳ್ ತನ್ನೊಳೆ ತಳ್ಪೊಯ್ದು ನೆಗಟ್ದೆ ಕಱಿಯನೆ ಪೋಲ್ತಂ ನುನ್ನಂ ಸೊಗಯಿಸುತಿರೆ ಸಿರಿಗನ್ನಡಿ ಕನ್ನಡಿಪುದಾದುದಿಂದುಶ್ರೀಯಂ(ಆದಿಪು.೭-೧೦); ಆಗು ವುರ್ವೆ ಕೆಯ್ಮಿಕ್ಕು ಕಾದಲ್ನಡೆತಪ್ಪಾವೇಗದೊಳ್ಮುಮ್ಮಟಿಸಿದ ಪಲವುಂ ರಾಜಚಿಹ್ನಂಗಳಂ ಬೆಳ್ಗೊಡೆಗಳ್ತಳ್ಪೊಯ್ದುದೇಂ ಕಣ್ಗೊಳಿಸಿದುದೊ ವಿನಕ್ಷತ್ರಕಚ್ಛತ್ರ ಪಿಂಡಂ [ಪಾಠಾಂ. ಕನಚ್ಛತ್ರ ಕಚ್ಛತ್ರ ಸಿಂಧು] (ಪಂಪಭಾ. ೧೩-೩೮). ೪. ತೊಡಗು (?) : ಅವರೊಂದೊರ್ವರೊಳೆಕ್ಕೆಯಿಂ ಸೆಣಸಿ ಕೊಳ್ಕೊಳ್ಳೆಂದು ಕೆಯ್ಗೆಯ್ಯೊಳೊಪ್ಪುವ ಹಾರಂ ಮೊಲೆಯೊಳ್ ತೊಡಂಕೆ ವಳಯಂ ಕರ್ಣಾಂತಮಂ ತಾಳ್ದೆ ಸಾರ್ದವತಂಸಂ ಕದಪಂ ಪಳಂಚಿ ಬೆಸದೊಳ್ ತಳ್ಪೊಯ್ದರಾ ದೇವಿಯುದ್ಭವಮುಂ ವಿಭ್ರಮಲೀಲೆಯುಂ ನಗುವಿನಂ ಸ್ತ್ರೀರಾಜ್ಯ ಸಾಮ್ರಾಜ್ಯಮಂ (ಶಾಂತಿಪು. ೯-೧೯೯). [ ತಳ್$_3$ + ಪೊಯ್$_1$ ]

**ತಳ್ಪೊಯ್$_4$** (ನಾ). ಅಡ್ಡಿ ; ಪ್ರತಿಹತ : "ತಳ್ಪೊಯ್, ತಡಂಬರೆ. . . . ತಡಂಬೊಯ್–ಈ ೨೫ ಪ್ರತಿಹತಕ್ಕೆ ಪೆಸರ್" (ಕಶಸಾ. ೧೫-೨೯೭): "ತೊಡರ್ದುದು ಮಾರ್ಕೊಂಡುದು ಪರಿವಿಡಿಯಿಟಿಸಿದು ದೆಯ್ದೆ ನೂಂಕಿದುದು. . . ಕಡೆಗಣಿಸಿದುದಕ್ಕು ಪೋರ್ಕುಳಿಯು ತಳ್ಪೊಯ್ಯುಂ" (ಕವಿಕಂ. ೧೩೮). [ ತಳ್$_2$ + ಪೊಯ್$_3$ ]

**ತಳ್ವಿಸು** (ಕ್ರಿ). ತಡಮಾಡಿಸು ; ವಿಳಂಬಕ್ಕೆ ಕಾರಣವಾಗು : ನಾವೇನು ಲೇಸುಗೈದೆವು ಸ್ವಾಮಿ ನಿನಗಿದಿರಾವುದುಂಟದಕಲ್ಲ ನಿನ್ನ ಸೇವೆಯ ವ್ಯಂತರರೊಳು ಪೂಜ್ಯರೆಂಬೊಂದು ಭಾವ ತಳ್ವಿಸಿತೆಂದರವರು (ಭರಜ. ೩೫-೪೧). [ ತಳ್ವು$_1$ + – ಇಸು$_3$ ]

**ತಳ್ವು$_1$, ತಳಗು$_1$, ತಳಿಗು, ತಳುಗು, ತಳುವು$_1$, ತಳುಹು$_1$** (ಕ್ರಿ). ೧. ತಡಮಾಡು; ನಿಧಾನಮಾಡು; ವಿಳಂಬಮಾಡು : "ತಳ್ವು–ಕಾಲಕ್ಷೇಪೇ (ಕಾಲ ಕಳೆಯು)" (ಶಮಧಾ); ತಳ್ವದೆಯ್ದೆ ನಾಂ ತುಱುವನೆ ಕೊಳ್ವಮಂತು ತುಱುಗೊಂಡೊಡೆ ಪಾಂಡವರಿರ್ಪ ಗಂಡರೇ (ಪಂಪಭಾ. ೮-೮೯) ; ಒಂದು ದಿನಂ ನೀಂ ತಳ್ವಿದೊಡಂದಸುವಿಂಗುಪಟಳಂ ಮನಃಪ್ರಿಯ ಕೇಳ್ (ಉದ್ಭಟ. ೧೦-೬೫) ; ತಳ್ವಿದಂ ನಲ್ಲನೆನುತ್ತದೊರ್ವಳೆಳೆವೆಣ್ ಸುರಿದಳ್ ಮಿಗೆ ಕಣ್ಣನೀರ್ಗಳಂ (ಕಬ್ಬಿಕಾ. ೬೩) ; ಅಱುದಿಂಗಳಂ ತಳ್ವಿದಂ (ಶಮದ. ೧೨೮ ಪ್ರಯೋ) ; ಏತಱಿದಿಂದವನಾ ಒರ್ವಳ್ನೆರೆಯಲ್ಬಾರದೆನುತ ರತಿ ತಳ್ವದೆ ಬಹುರೂಪಂ ತಾಳಿದಳೆನೆ ಸರ್ವರನನುಕರಿಸುವ ವಾರಸ್ತ್ರೀನಿವಹವೆಸೆದುದಲ್ಲಿ (ಜಯಕಾ.೧-೬೩); ಬರವೇಳೆಂಬುದುಮವಂ ಪೋಗಿ ತಳ್ವದಾ ಕ್ರವ್ಯಾದನಾವ ವ್ಯಾಧನಂ ಪುಗಿಸಿದಾಗಳ್ (ರಾಜಶೇ. ೫-೨೩ ವ). ೨. ನೂಕು ; ತಳ್ಳು : ಆಳ್ವರನೆಂದೊಡಾಳ್ವರನಾಳ್ವಿ ಸಗೆಯ್ಸಿದನಂನ್ಯಭೂಮಿಪರಂ ಬಾಳ್ವರಸೆಯ್ದೆ ಬಾಳ್ವಿರಸು ಬಾಳ್ದಲೆಗೊಂಡನದಿನ್ನುಮಾನ್ತಡೆ ತಳ್ವೆ ನಿಜಪ್ರತಾಪದಹನಂ ಕಡುತಳ್ವೆ ವಿರೋಧಿಗಳ್ ಚಲಂಗೊಳ್ವರ್ × × ಒಯ್ದುಗೊಳ್ವ ಪೆಱರ್ಪ್ಪಗೆ ಗೊಳ್ವರೆ ಕುನ್ತಳೇಶನೊಳ್ (ಎಕ. XI, ದಾವಣ. ೩-೭ ; 1121). **ತಳಗು$_1$** : ೩. ತಂಗು ; ನಿಲ್ಲು : ಮಳೆ ಬೆಳೆಯಲಿ ಸಂತುಷ್ಟಿವಡೆದು ಜನ ತಳಗಿದುದತಿಹರುಷದಲಿ (ಕಂನವಿ. ೩-೧೦೦) ; ಎಲೆ ಬಾಲೆ ಚಾಮುಂಡಿ ತಾವು ಕೊಟ್ಟರೆ ತಳಗೇವು (ಹಳ್ಳಬಾ.೨೫); ರಂಗದೇವರು, ಪ್ರತಿದಿನವೂ ಒಂದೊಂದು ಹಳ್ಳಿಗೆ ಹೋಗಿ, ಆ ರಾತ್ರಿ ಅಲ್ಲಿ ತಳಗಿ, ಭಕ್ತಾದಿಗಳಿಂದ ಪೂಜೆ ಗೊಳ್ಳುತ್ತಾನೆ (ಹೇಮಾಶೀ. ೨೮). **ತಳಿಗು** : ೩. ನೃತ್ತ ಗೀತವಾದ್ಯಾದಿಗಳಂ ರಚಿಸುತ ಅಲ್ಲಲ್ಲಿ ತಳಿಗಿರುವ ಕಿನ್ನರ ಕಿಂಪುರುಷಾದಿ ದೇವರ್ಕಳ ಸಮೂಹಂಗಳಿಂದಲೂ (ಪುರುಚ. ೧೨೦) ; ತಮ್ಮನ ದಂಡು ಬೆಂಗ್ಳೂರಿಗೋಗಿ ತಳಿಗ್ಯಾವೆ (ನಾಪದ. ೧೬). **ತಳುಗು** : ೩. ಮೊಳಗಿದ್ಕೆ ನಿಜತತ್ವರವದಲಿ . . . ತಳುಗಿದ್ಕೆ ಶ್ರೀ ಸಮವಸರಣದಿ ದೇವ ಸಲಹೆಂದ (ಸನತ್ಕು ೧-೪೦) ; ಮೈಸೂರಿನ ಅಂಗಡಿ ಬೀದಿಯು ಹದಿನೈದು ದಿನ ಇಲ್ಲೆ ತಳುಗುತ್ತಿತ್ತು (ಹುಟ್ಟಹ. ೬೫); ಹೂಹೂಗಲೆಯುವ ದುಂಬಿಯು ಚಿಂದದೆ ಕಂಗಳ ಮುಟ್ಟುತ ಲರೆಚಣ ತಳುಗದೆ (ಗೋಕುನಿ. ೫೯-೪). **ತಳುವು$_1$** : ೧. ಎನಗೆ ಪರಸೇವೆ ಪರಾಙ್ಮುಖವೆಂದು ಒಡೆಯರಿಗೆ ಎಡೆಮಾಡೆಂದು ಎನಗೆ ತಳುವೆಂದಡೆ ಒಪ್ಪುವರೇ ನಿಜ ಶರಣರು (ಮೋಳಿಮಾ. ೨೧-೮೪) ; ಬರವನೆಳಸಿರ್ದಯ್ಯ

ದೇವ ತಳುವಿದೆನೆಂದು ಉರವಣಿಸಿ ಬರುತಿರ್ದ ತಂದೆ ಮುಳಿಯದಿರೆಂದು (ಬಸರ. ೩-೬೩) : ತನಯುನೆಂದುಂ ಬಪ್ಪ ಹೊತ್ತಿಂಗೆ ಬಾರದಿರೆ ಮನ ನೊಂದಿದೇಕೆ ತಳುವಿದನೆನ್ನ ಕಂದನೆಂದೆನುತ (ಹಡಕಾ. ೧೨-೧೦) ; ಅವ್ವೆಯು ತಳುವಿದಡೆ ಭರವಸದಿ ಬಂದೂಡುವನು ತಾನೇ (ಬಸಪು. ೪೭-೪೦) ; ಗಳಿಗೆ ತಳುವಿದೊಡಗ್ನಿಯೊಳಗಹೆನೆಂದ ರಘುನಾಥ (ಕೌಶಿರಾ. ೯-೩೦) ; ಬಳಿಕ ನಂಬುಗೆಗೊಂಡು ಜೋದಾವಳಿ ಬೇಗ ತಳುವದೋಡಿತು ದೆಸೆದೆಸೆಗೆ (ಕಂನವಿ. ೧೫-೧೦೦). ೩. ಎಲ್ಲಿ ಹಕ್ಕಿ ಗಿಡಗಿಡದಲಿ ತಳುವಿ, ತಳುವಿ ಎದೆಗಡಲಲಿ ನೆಗೆವ ಭಾವವೀಚಿಗಳನು ಮೊಗೆಯುತಿರುವುದೊ (ನಡಬಂ. ೫೦-೧೧). ೪. ಸಾವಕಾಶವಾಗು ; ನಿಧಾನವಾಗು : ಗುಣವತಿಯು ನಡೆ ತಳುವಿ ತಳ್ಕಿಕ್ಕೆ ಕೂಡೆ ಭಾವಂಗಳಿಂ ನುಡಿ ಬಳಲ್ದೊಪ್ಪುತಿರೆ ಮೆಲ್ಪಿನ ಗುಣಂಗಳಿಂ (ಬಸರ. ೧-೧೧೧). **ತಳುಹು₁ :** ೧. ಕ್ಷಣಕ್ಕೆ ಕ್ಷಣಕ್ಕೆ ತಿಳಿ ನೀ ಎಂದರೆ ತಳುಹದೆ ತನ್ನ ನಿಜವ ಕೊಡನೆ ಕಪಿಲಸಿದ್ಧಮಲ್ಲೇಂದ್ರ (ಸಿದ್ಧವ. ೧೧-೫೯) : ಎನ್ನ ಒಯಿದು ಬೀಳಿಸುವರಗ್ನಿಯೊಳಗೀಗ ನೀವು ಕೇಳಿ ತಳುಹದೆ ಬನ್ನಿ ಬೇಗ (ಪಾಂಡಚ. ೪೫-೧೩) ; ಇನ್ನು ಬಾರನೇತಕವನು ? ಫಲ್ಗುಣಡಲ ನಳೆಯಲೆಂದು ಬರಿದೆ ತಳುಹುತಿರುವನೆ ? (ಕವಿಕಾ. ೩೫-೫). ೨. ನಾಳೆ ತಾನಿರೆನೇಕೆ ತಳುಹುವೆ ಕಾಲವನು ಕರುಣಾಳುವೆಂಬೀ ಘಾಳಿಮಾತಂತಿರಲಿ ತೋಱಿಸೆನುತ್ತ ಹಲುಬಿದಳು (ನಿಭಾಗ. ೪-೫-೩೦). ೩. ಶಾಂತಕೂಲ ತಲ್ಪದಲ್ಲಿ ನಾವೆಯೊಂದು ತಳುಹಿದಾಗ ಗಾಳಿಯಂತೆ ಸುಳಿದು ಸೋಂಕಿ ಹಾಯನೇಕೆ ತೂರಿದೆ ? (ಕವಿಕಾ. ೮೭-೧೪). ೫. ಹಿಂದೇಟು ಹಾಕು ; ಹಿಂಜರಿ ; ಅಳುಕು : ಎನಿತೋ ಕೋಗಿಲೆಗಳ ನುಣ್ಗೊರಳನು ಹಿಸುಕಲು ತಳುಹದ ಕಲಿಭಟನಿವನು (ಕವಿಕಾ. ೪೨-೧೪). [ ತಳ್₂ + – ವು ]

**ತಳ್ವು₂,** ತಳುವು₂, ತಳುಹು₂ (ನಾ). ೧. ತಡ ; ವಿಳಂಬ ; ನಿಧಾನ : ಬಾಡಿದುದೇಕೆ ನಿನ್ನ ತನುವಲ್ಲರಿ . . . ನಿನ್ನಳಕಸಂತತಿ ನೀಟ್ಟಿರಲೇಕೆ ತಳ್ವುಮಂ ಮಾಡದೆ [ಪಾಠಾಂ. ತಳ್ಮಾಡದೆ] ಪೇೞೆನಗೆ (ಪುಣ್ಯಾಸ್ರ. ೧-೬೩). 'ತಳ್ವುಗೆಯ್' ಪರಾ. ೨. ಆಧಾರ ; ಅವಲಂಬನ : ದಾನಪರನಂ ನಿಜೋನ್ನತಮಾನನನಾರೂಢ ವಿಪುಳ ವಂಶನನಂತೊಂದಾನೆಯನಪಾಯಪಂಕದೊಳೀನುಂ ತಳ್ವಿ[ಪಾಠಾಂ. ಳ್ಪಿ]ಲ್ಲ ದಿರ್ದುದಂ ಕಾಣಿಸಿದಂ (ಕವಿರಾ. ೩-೧೨೯). **ತಳುವು₂ :** ೧. ಎಲ್ಲರ ಮೆಯ್ಗಳೊಳಂ ತಳುವಿಲ್ಲದೆ ಬಾಸುಟ್ಟಿಳೊಗೆಯೆ . . . ನೆತ್ತರನೆ ಕಾೞಿ ಕೆಡೆದರ್ (ಧರ್ಮಾಮೃ. ೩-೨೦೩) ; ಮುಳಿದು ವಿಯುಕ್ತ ವಲ್ಲಭಜನಂ ತಳುವಿಲ್ಲದೆ ತಟ್ಟಿಗೊಂಡುದು . . . ವಿನಳವಿಗಳುಂಬಮೋ ಪುದಿದ ಮಾಗೆಯ ಶೀತವಿಜೃಂಭಪಾತನಂ (ಕುಸುಮಾ. ೭-೨೦) : ಖುಲ್ಲರಿವದಿರ ಬಿಡಿಸಿದೊಡೆ ತಳುವಿಲ್ಲದಹುದಪಘಾತ (ಕುವ್ಯಾಅ. ೨೦-೨) ; ತಳುವ ಮಾಡದೆ ಹೇಳೆನುತ ಹನುಮಂತ ಘರ್ಜಿಸಿದ (ತೊರರಾ. ೭-೨೩-೯). ೨. 'ತಳುವಿಕ್ಕು₁' ಪರಾ. ೩. ಅವಕಾಶ (?) : ಅವನೊಳಗಾಗುವಂತೆ ಮಾತುಗಳ ತಿಳಿದು ನುಡಿಯಬೇಕು ತರಬೇಕವನನು ತಳುವುಂಟು ತವಕಿಸಬೇಡ (ಕುರಾಸಾಂ. ೨೪-೧೪). **ತಳುಹು₂ :** ೧. ಅಲ್ಲಿ ತಡೆಹಡೆದು ತಾಂ ತಳುಹಿಲ್ಲದೆ ನಿಜದೇಶಕೆಯ್ದೆವಂದು (ಧರ್ಮಪ. ೨-೩೯) ; ಇಳೆಯ ಪಾಲನ ನೀನು ತಳುಹ ಮಾಡದೆಯಿಗಾಗ ಕಳುಹುಯೆಂದೊರೆಯೆ (ಹಮಚ. ೫೭) ; ನಳಿನಮಿತ್ರನ ಸುತನಳಿಯನ ಪೆತ್ತನ ಗೆಳೆಯನ ಬಾಯಿಗಾಹುತಿಯ ತಳುಹ ಮಾಡದೆಯಿತ್ತನ (ಅಬ್ಬಲೂ. ೨-೩).

**ತಳುಮಾಡು, ತಳುವುಮಾಡು** = ೧. ತಡಮಾಡು ; ವಿಳಂಬಮಾಡು : ಕಾಳೆಗಮನೆನ್ನೊಳು ತಳುಮಾಡದೆ ಮಾಡಲೆನ್ನ ಭುಜಬಲಮಂ ನಿನಗೆ ತೋರ್ಪೆಂ (ಪುಣ್ಯಾಸ್ರ. ೫-೩೨ ವ) ; ಮಾಡದಿಂದಿಳಿದು ಮೇಲ್ಮಾಳಿಗೆಯೊಳು ತಳುಮಾಡದಿಳಿದು (ಭರಚ. ೧೨-೭) ; ಎಲೆಲೆ ವೃಷಭ ಪೊಱಮಡು ತಳುವುಮಾಡದಿರಿನ್ನೆನುತ (ಬಸಪು. ೩೨-೩೪). ೨. ತಂಗು ; ಉಳಿ : ಆತನ ಪೊಳಲೊಳು ನಾಲ್ಕಯ್ದು ಮಾಸ ತಳುಮಾಡಿದನು ಪ್ರಭಂಜನ ಪೃಥಿವೀಲಲನಾಧಿಪನು (ಪ್ರಭಂಜ. ೨-೨೭). **ತಳುವಾಗು** = ತಪ್ಪಾಗು : ಒಲ್ಲೆ ಎನ್ನೋ ಕಹಳೆಕಾಱ ಬಿಂದವ ಹೞಿದು ನಿಂದು ಹಾಡಿರೋ ಚೆಣಿತಿಯರಿರಾ ತಾಳವಿಲಿ [ಲ್ಲಿ] ತಳುವಾಯಿತ್ತಲ್ಲಾ (ಸರ್ವವ. ೪೮-೨೫೫).

**ತಳ್ವಿಲ್ಲದೆ** = ತಡವಿಲ್ಲದೆ ; ಕೂಡಲೆ ; ಬೇಗನೆ : ಖಾಂಡವಮನಾಂ ತಳ್ವಿಲ್ಲದಿಂದೂಡುವೆಂ (ಪಂಪಭಾ. ೫-೭೪) ; ಪೂಜಿಪ ಭಕ್ತಿ(ಕ್ತ)ಜನಕ್ಕೆ ಮುಕ್ತಿ ತಳ್ವಿಲ್ಲದೆ ಕೂಡುಗೆಂದು ಪೊಗರ್ದ್ದ(ಟ್ಟ)೦ (ಎಇ. XVI, ೩-೯ ; 980) ; ನೀನೀಗಳ್ತಳ್ವಿಲ್ಲದೆ ಬೆಸಸೆನ್ನಂ ಭೂವಲ್ಲಭನುಮನಿಂದೆ ತಂದಪೆಂ ಚಂದ್ರ ಮುಖೀ (ಕಾದಂಉ. ೩೦೩) ; ಪೋಪೆನೀಗಳ್ ತಪಂಬಡಲೆಂದುತ್ತಮ ಸತ್ವನೂರ್ಜಿತಗುಣಂ ಸಿಂಹಾಸನಂ ಭೇರಿ ಬೆಳ್ಗೊಡೆಯಿಂತೆಲ್ಲಮನೊಲ್ಲದಿರ್ದ ನರಸಂ ತಳ್ವಿಲ್ಲದಾಸ್ಥಾನದಿಂ (ಅಜಿಪು. ೧೦-೫೪) ; ಎಲೆ ತೀಡುವ ತೆಂಗಾಳಿಯೆ . . . ತಳ್ವಿಲ್ಲದೆ ಕಾದಲನಂ ತಂದೊಡೆ ನಱುಸುಯ್ಯೆಲರಿಂದಂ ನಿನ್ನನಾಗಳುಂ ನೆಱೆ ಪೊರೆವೆಂ (ಕಬ್ಬಿಕಾ. ೭೦). [ <ತಳ್ವು₁ ]

**ತಳ್ವುಗೆಯ್** (ಕ್ರಿ). ತಡಮಾಡು ; ವಿಳಂಬಮಾಡು : ಮೃಡಭಕ್ತರಸುವನ ಭವಂ ಕುಡದೀಗಳ್ತಳ್ವುಗೆಯ್ದನಾಂ ಸೈರಿಪೆನಲ್ತು (ವೃಷವಿ. ೨೫-೨೯).

[ ತಳ್ವು₂ + ಕೆಯ್₁ ]

**ತಳ್ಳಂಕ,** ತಳ್ಳಂಕು (ನಾ). ೧. ಚಿಂತೆ ; ಕಳವಳ ; ಕಾತರ : "ಸಿಡಿಮಿಡಿ ಯೆನಲ್ತಳ್ಳಂಕಮಕ್ಕು" (ಕಬ್ಬಿಕ್ಕೆ. ೬೭) : "ಸಿಡಿಮಿಡಿ ಕಾತಳಮೆನಲ್ಕೆ ತಳ್ಳಂಕ" (ಶಬ್ದಮಂ. ೫೦) ; ತಂದು ಪೂಮಾಲೆಯಂ ಸಾದರ ದಿಂದಾವಂಗೆ ತಾನಿಕ್ಕುವಳೊ ತಡೆಯದಿಂದಿಂತು ತಳ್ಳಂಕದಿಂದೊಂದಿರು ತಿರ್ದಂತೆಯೆ ವೀಕ್ಷಾತುರಮಯ ನಯನಾನೀಕಮಾ ರಾಜಲೋಕಂ (ಶಾಂತೀಶ್ವ. ೪-೨೫೭) ; ನೀವೇನೆಂದಿರ್ದ್ದೆ ನಿಮ್ಮಣ್ಣ ದೇವನ ಮುಂದೆ ಭಾಷೆಗಳ ತಂದಿರ್ದ್ದೆ ತಳ್ಳಂಕವನು ನಮಗೆಂದು ಕೊಡುವಿರಿ ಕೌರವನ ತಮ್ಮಂದಿರ್ದ್ದೆ ನೀವೆನುತ ಸುಳಿದನು ಸಿಂಹನಾದದಲಿ (ಕುವ್ಯಾಕ. ೧೯-೨೨) ; ಹಳ್ಳಿಗರಾ ನೀರೆಱೆವ ನೀೞೆಯರ ಪೊಂಬಳ್ಳಿ ಮೆಯ್ಗಂಡು ವಿರಹದ ತಳ್ಳಂಕದಿಂ ಮೆಯ್ಮಱೆದು ಬಿಳ್ದ ನೋಳ್ಪರ ಘೊಳ್ಳೆಂದು ನಗಿಸುವರಲ್ಲಿ (ಕುರಾಸಾಂ. ೨-೪೪). ೨. ಹೆದರಿಕೆ ; ಭಯ ; ತಲ್ಲಣ : "ಡಿಳ್ಳಮೆನಲ್ ತಲ್ಲಣಮದು ತಳ್ಳಂಕಮೆ ಭೀತಿಯಕ್ಕುಂ" (ಭಾರನಿ. ೫೭) ; ಕುಳ್ಳಿರ್ದುದ ಕಂಪಿಸುವ ಭಕ್ತನಂ ಸೈತಿಡುತೆ ತಳ್ಳಂಕದಿಂದೆ ಬೆಬ್ಬಳಿಪನಂ ಮಾಣಿಸುತೆ (ಸೀದಿರ. ದೇ. ೬೫-೨) ; ತವತವಗೆ ತಳ್ಳಂಕದಲಿ ಪಾಂಡವರು ನಡುಗಿತು ಪಾರ್ಥ ಬಲು ಗರವಪಟಿದಂತಿರೆ ಮೂಕನಾದನು ಬೆರಳ ಮೂಗಿನಲಿ (ಕುವ್ಯಾಭೀ. ೭-೩೭) : ನೀರಾಡುವಾ ಮೊಗ ನಿಡುಸುಯ್ವ ನಾಸಿಕ ತೇರೈಸುವಾ ತಳ್ಳಂಕ (ಶ್ರೀಪಾಲ. ೪-೯೫). ೩. ಅಲುಗಾಟ ; ಹೊಯ್ದಾಟ ; ಚಲನೆ : ತಗ್ಗಿದುದು ಧಾತ್ರೀತಳಂ ಕುಲಾಚಲಚಯಂ ನೆಗ್ಗಿದುದುಸಿರ್ವೊಯ್ವ ಬಸಿಱ ತಳ್ಳಂಕದಿಂ ಮುಗ್ಗಿದುದು ದಿಕ್ಕರಿಕುಲಂ . . . ಆ ಬಲದ ಭಾರದಗ್ಗಳಿಕೆಯೆಂತೊ (ಜಬಪು. ೪೮-೫). 'ತಳ್ಳಂಕಂಗುಟ್ಟು' ಪರಾ. ೪. ತೊಂದರೆ ; ಕಷ್ಟ : ಅಳ್ಳಿಯಂ ಕೊಳ್ಳಿಯಿಂದಿರಿವವೋಲ್ ಪೇಳಿದರ್ ತಳ್ಳಂಕಮಂ ತಿಳಿಯದಳಿ ಪೊಳ್ಳಿನಿರವಂ (ಕಾಲೂರ. ೧೫೯-೩೫೦). **ತಳ್ಳಂಕು:** ೩. 'ತಳ್ಳಂಕುಗುಟ್ಟು', 'ತಳ್ಳಂಕಂಗೆಡೆ' ಪರಾ.

**ತಳ್ಳಂಕಂಗುಟ್ಟು,** ತಳ್ಳಂಕಗುಟ್ಟು, ತಳ್ಳಂಕುಗುಟ್ಟು (ಕ್ರಿ). ೧. ತುಳು ಕಾಡು ; ತುಂಬಿ ಸೂಸು : ಪ್ರಳಯಕಾಲ ಜಾತೋತ್ಪಾತ ವಾತ ನಿರ್ಘಾತದಿಂದಮಳ್ಳಾಡಿ ತಳ್ಳಂಕಂಗುಟ್ಟುವ ಜಳನಿಧಿಗಳಂತೆ (ಪಂಪಭಾ. ೧೦-೬೫ ವ). **ತಳ್ಳಂಕಗುಟ್ಟು:** ೧. ಸುರವಿರಚಿತ ಮಂದಾನಿಳಾಂ ದೋಳದಿಂದಂ ಸುರವಂದಿಸ್ತೋತ್ರದಿಂದಂ ಪೆಸೆ ಗಗನತಳಂ ತೀವಿ ತಳ್ಳಂಕ [ಪಾಠಾಂ. ಕು]ಗುಟ್ಟುತ್ತಿರೆಯುಂ (ಆದಿಪು. ೧೦-೧೮) ; ತನ್ನೊಳ್ಪೆಲೆವೆರ್ಚಿ ರಾಗರಸವಾಗಳ್ತೀವಿ ತಳ್ಳಂಕಗುಟ್ಟುವ ಪದ್ಮಾಕರದಂತೆ ಕಾಂತೆ ತಳೆದಳ್

ಬೇಱೊಂದು ಲಾವಣ್ಯಮಂ (ಮಲ್ಲಿಪು. ೪-೯೮) ; ತಳ್ಳಂಕಗುಟ್ಟಿತ್ತು ತೀರ್ದುದು ದುಗ್ಧಾಂಬುಧಿ ಮೇರುಪೀಠಮೆನೆ ಮಿಂದಂ ಜಿಣ್ಣಂ (ಅನಂಪು. ೫-೯೯). ೨. ತುಳುಕಿಸು ; ಅಲ್ಲೋಲಕಲ್ಲೋಲಗೊಳಿಸು : ಜಗುನೆಯ ಮಡುವಂ ತಮ್ಮರಸಿಯರ ವಿಕಟ ನಿತಂಬಬಿಂಬಂಗಳ ಘಟ್ಟಣೆಯೊಳಮರೆ ಬಿಗಿದೊಗೆದ ಮೊಲೆಗಳಳ್ಳೇಱಿನೊಳಳ್ಳಾಡಿ ತಳ್ಳಂಕ [ಪಾಠಾಂ. ಕು] ಗುಟ್ಟಿ ನೀರಾಟಮಾಡುವಾಗಳ್ (ಪಂಪಭಾ. ೫-೬೩ ವ) : "ನೀರನ್ನು ಟುಂಮುಕಿ ಹೊಡೆ, ಎರಡು ಬಾಹುಗಳಿಂದಲೂ ಅಪ್ಪಳಿಸು" (ಪ್ರಭಣ್ಣ). **ತಳ್ಳಂಕುಗುಟ್ಟು :** ೧. ಲಾವಣ್ಯರಸಂ ತಳ್ಳಂಕುಗುಟ್ಟೆ ಮಿಳ್ಳಿಸಿ ದಳ್ಳಿಱಿದಾಡುವ ಜನೇಂದ್ರಶಿಶುಮಂ (ಶಾಂತಿಪು. ೧೦-೮) ; ನಾನಾವಿನೋದಂಗಳಂ ಚಿತ್ರರತಕ್ರೀಡಾವಿನೋದಂಗಳೊಳೆ ಮೆಱೆವ ಕೂಟಂಗಳಿಂ ಕೂಡಿ ಲಾವಣ್ಯರಸಂ ತಳ್ಳಂಕುಗುಟ್ಟುತ್ತಿರೆ ಕರಮೆಸೆಗುಂ ವಾರನಾರೀಕದಂಬಂ (ಸುಕುಮಾ. ೯-೭೩). ೩. ಕಳವಳಿಸು ; ಕಾತರಿಸು : ಓರೊರ್ವರನೊಡಲೊಳಡಸಿಕೊಳಲ್ ಕಡಂಗಿಸುವ ಕಡ್ಡವಣೆಯುಂ . . . ಮೋಲ್ವಾಯಲ್ ಮುಸಗಿಸುವಸವಸಮುಮೆನುತ್ತೆ ಸೋಲ್ತುಂ ತಣಿಯದೆ ತಲ್ಲಱಿಸಿ ತಳ್ಳಂಕುಗುಟ್ಟುವಳುರ್ಕೆಯುಂ (ಲೀಲಾವ. ೧೦-೪೫ ವ). [ ತಳ್ಳಂಕ + ಕುಟ್ಟು$_1$ ]

**ತಳ್ಳಂಕಂಗೊಳ್**, **ತಳ್ಳಂಕಗೊಳ್**, **ತಳ್ಳಂಕಗೊಳು**, **ತಳ್ಳಂಕಗೊಳ್ಳು**, **ತಳ್ಳಂಕುಗೊಳ್** (ಕ್ರಿ). ೧. ಹೆದರು; ದಿಗಿಲುಬೀಳು ; ಭಯಪಡು: ಕರಿಕರಾಗ್ರದಿಂ ಮುಱಿದ ತಳಿರ ತದುಕ್ಕಿನ ಮರದ ನಿಡುಗೋಡೊಳಱಿಯದೆಱಗಿ ಮಱಿವೆರಸಿ ಕುಳ್ಳಿರ್ದು ಪಸಿಯ ಪಗಿನದೊಳ್ ಕಾಲ್ ಜಗಿಲ್ತು ತಳ್ಳಂಕಂಗೊಳ್ವ ಸಮಯದೊಳ್ (ರಾಜಶೇ. ೫-೫೫ ವ) ; ಬಳ್ಳಿವರಿವ ಮಿಂಚಂ ಕಂಡು ತಳ್ಳಂಕಂಗೊಂಡು ಕೀಱಿ ಪ್ಯೆಗರೆದು ಜೋಡಿಗನ ಬರವನೆ ಪಾರ್ವ ಪೆಣ್ಬಕ್ಕಿಗಳ ತಂಡದಿಂದೆಯುಂ (ರಾಮಾಶ್ವ. ೪-೨) ; ಪಿರಿಯರ್ ತಳ್ಳಂಕಂಗೊಳ್ವರಲ್ಪರೊಳ್ ಬೆರೆಯಲ್ (ನೀತಿಮಂ. II, ೩೦೦). **ತಳ್ಳಂಕಗೊಳ್ :** ೧. ತರ್ಕಿಗಳ್ತಳ್ಳಂಕಗೊಳೆ ವ್ಯಾಕರಣಿಗಳ್ ವಿಹ್ವಲರಾಗೆ (ಉದ್ಭಟ. ೪-೬೩ ವ) ; ಕೇಣವಿಲ್ಲದೆ ಮಣಿದು ತಳ್ಳಂಕಗೊಳ್ವ ಬಿಜ್ಜಳಗೆ ಬಸವೇಶನೆಂದಂ (ಪ್ರಭುಪು. ೭-೮೬). ೨. ಅಲ್ಲೋಲಕಲ್ಲೋಲವಾಗು ; ಕ್ಷೋಭೆಗೊಳ್ಳು : ಪದಘಾತಕ್ಕವನೀತಳಂ ಕಟಲೆ ಪಾತಾಳಾಬ್ಧಿ ತಳ್ಳಂಕಗೊಂಡುದು (ಗದಾಯು. ೮-೦೦); ವನಧಿಗಳು ತುಳುಕಾಡೆ ತಾರಕಿ ತನಿಗೆದಱಿ ತಳ್ಳಂಕಗೊಳೆ ಮೇದಿನಿ ಸುರಾಚಲವಲುಗೆ ಬೊಬ್ಬಿಱಿದುಬ್ಬಿದನು ರಘುಜ (ತೊರರಾ. ೩-೬-೭). **ತಳ್ಳಂಕಗೊಳು :** ೧. ಪರಶುಧರನದಟನನುಭವಿಸಿ ತಳ್ಳಂಕಗೊಳುತಿರುತಿರ್ದನು (ವೆಂಕಾರಾ. ೫-೦-೧೭). **ತಳ್ಳಂಕಗೊಳ್ಳು :** ೧. ತಬ್ಬಿಬ್ಬಿಯಾಗದೆ ತಳ್ಳಂಕಗೊಳ್ಳದೆ ಬೊಬ್ಬೆಯಿಕ್ಕದೆ ಜೋಕೆಯಱಿದು . . . ಒಂದೊಂದು ಕಲೆಯ ಮೈಯುಬ್ಬುವೊಲು ಕೇಳಿಸಿದರು (ಭರತ. ೧-೭೦) ; ತಳ್ಳಂಕಗೊಂಡು ನಾ ಪಟ್ಟ ಕಷ್ಟಕ್ಕೆ ಅವನಿಟ್ಟ ಫಲವಿಷ್ಟೆ? (ಕಗದ್ಯ. ೭೮) ; ಯಾವ ಕಡೆ ಓಡೋಣ? ಎಂದು ಪೌರರು ಕುದಿದು, ಅದಿರಿ, ಅಳ್ಳಾಡಿ ತಳ್ಳಂಕಗೊಂಡರು (ಕಲ್ಲಿಕಾ. ೧೩೫). **ತಳ್ಳಂಕುಗೊಳ್ :** ೧. ಟಂಕಾರರವಂ ಕಿವಿಯಂ ಭೋಂಕೆನೆ ಮಿಗೆ ತೀವೆ ಪುಗಲ್ ದೆಸೆಗಾಣದೆ ತಳ್ಳಂಕು [ಪಾಠಾಂ. ಕಂ] ಗೊಳುತಿರ್ಪ ವನಮೃಗಮಂ ಕವಿತಂದೆಚ್ಚುದಾಗ ವನಚರನಿಕರಂ (ಪಾರ್ಶ್ವಪು. ೧೨-೭೬). [ ತಳ್ಳಂಕ + ಕೊಳ್$_1$ ]

**ತಳ್ಳಂಕಗುಟ್ಟಿಸು** (ಕ್ರಿ). ಕಳವಳಗೊಳ್ಳುವಂತೆ ಮಾಡು ; ಕ್ಷೋಭೆಗೊಳಿಸು: ಕಡಲಂ ಕೈಗಾದು ತಳ್ಳಂಕಗುಟ್ಟಿಸಿ ವಿದ್ವಿಣ್ಣೃಪಕಾಂತೆಯ ಕರ್ಣಲಿರ್ದೆಗಳ್ ಝಲ್ಲೆಂಬಿನಂ ಪೊಣ್ಮೆ ದಳ್ಳಿಸುಗುಂ ದಕ್ಷಿಣ ಚಕ್ರವರ್ತಿಯ ಜಯಪ್ರಸ್ಥಾನಭೇರೀರವಂ (ಸೂಕ್ತಿಸು. ೧೮-೧೨).

[ ತಳ್ಳಂಕಗುಟ್ಟು (<ತಳ್ಳಂಕಂಗುಟ್ಟು) + – ಇಸು$_3$ ]

**ತಳ್ಳಂಕಗುಟ್ಟು** 'ತಳ್ಳಂಕಂಗುಟ್ಟು' ನೋ.

**ತಳ್ಳಂಕಗೊಳ್** 'ತಳ್ಳಂಕಂಗೊಳ್' ನೋ.

**ತಳ್ಳಂಕಗೊಳಿಸು** (ಕ್ರಿ). ಹೆದರಿಸು; ಭಯಪಡಿಸು; ತಬ್ಬಿಬ್ಬುಗೊಳಿಸು: "ತಡಮಾಡಿದಂ–ತಳ್ಳಂಕಗೊಳಿಸಿದಂ" (ಶಮದ. ಪರಿ. ೨).

[ ತಳ್ಳಂಕಗೊಳ್ (<ತಳ್ಳಂಕಂಗೊಳ್) + – ಇಸು$_3$ ]

**ತಳ್ಳಂಕಗೊಳು** 'ತಳ್ಳಂಕಂಗೊಳ್' ನೋ.

**ತಳ್ಳಂಕಗೊಳ್ಳು** 'ತಳ್ಳಂಕಂಗೊಳ್' ನೋ.

**ತಳ್ಳಂಕಿಸು** (ಕ್ರಿ). ೧. = ತಳ್ಳಂಕಗೊಳಿಸು : ವಿಲಯವಿರೂಪನಯನನ ಭಾಳಲೋಚನದಗ್ನಿಕಣದಂತೆ ತಾಪಿಸಿದವು ಜಗತ್ರಯವನುರಿತಾಪದಲಿ ತಳ್ಳಂಕಿಸಿತು [ಪಾಠಾಂ. ಸುತ] ಮೇಲಾ ಪುರಂದರ ಧನದ ಯಮ ವರುಣಾದಿ ನಿರ್ಜರರ (ತೊರರಾ. ೬-೨೪-೧೪). ೨. ಕ್ಷೋಭೆಗೊಳ್ಳು ; ಅಲ್ಲೋಲಕಲ್ಲೋಲವಾಗು : ಕೂಡೆಕೂಡೊಗೆವ ಬಿಸುಸುಯ್ ಬಳಲ್ವ ಕಣ್ ತಳ್ಳಂಕಿಪೆರ್ದೆ ದೈನ್ಯವಚನಮಿನಿತುಂ ಕೂಡಿ ಬೇಱೊಂದು ಸೊಗಸಂ ಸೂಸೆ . . . ಪಾಡಳಿವ ವಿರಹಿಣಿಯರೇಂ ಬಂದರೋ ಶಾಂತಿಮಯನನೀಕ್ಷಿಸುವಾಸೆಯಿಂ (ಪದ್ಮರಾ. ೩-೭೦). [ ತಳ್ಳಂಕ + – ಇಸು$_3$ ]

**ತಳ್ಳಂಕು** 'ತಳ್ಳಂಕ' ನೋ.

**ತಳ್ಳಂಕುಗುಟ್ಟು** 'ತಳ್ಳಂಕಂಗುಟ್ಟು' ನೋ.

**ತಳ್ಳಂಕುಗೆಡೆ** (ಕ್ರಿ). ಭಯದಿಂದ ಕುಸಿ,–ಉರುಳು,–ಬೀಳು : ಮೆಟ್ಟಿದ ಭರಕ್ಕೆ ಧರಣಿಯೆರ್ಗುಡಿಸೆ ಚತುರಂಗಬಲಮನಿತುಂ ಚಿತ್ರದ ಪಲಗೆಯಂ ತೊಡಗೆಡಪಿದಂತಳ್ಳಾಡಿ ತಳ್ಳಂಕುಗೆಡೆಯೆಯುಂ (ಅನಂಪು. ೧೪-೬ ವ).

[ ತಳ್ಳಂಕು (<ತಳ್ಳಂಕ) + ಕೆಡೆ$_1$ ]

**ತಳ್ಳಂಕುಗೊಳ್** 'ತಳ್ಳಂಕಂಗೊಳ್' ನೋ.

**ತಳ್ಳಬಾಱು$_1$** 'ತಳ್ಳವಾಱು$_1$' ನೋ.

**ತಳ್ಳಬಾಱು$_2$** 'ತಳ್ಳವಾಱು$_2$' ನೋ.

**ತಳ್ಳಮಳ** 'ತಳಮಳ' ನೋ.

**ತಳ್ಳಮಳಗೊಳಿಸು** 'ತಳಮಳಗೊಳಿಸು' ನೋ.

**ತಳ್ಳವಾರಿಕೆ** (ನಾ). = ತಳ್ಳವಾಱು$_2$ : ನಿಬ್ಬರದಿ ಬೆಂಡಾಗಿ ಭೂಪತಿ ದುಬ್ಬುದುಡುಕೆಂದುಸುರು ಬಸುರಿನ ತಳ್ಳವಾರಿಕೆಯ ಉಬ್ಬಸದೊಳುರಿ ಮಸಗಿ ಮರುಗಿದರಿಬ್ಬರಂಗದ ನೋವನೀಕ್ಷಿಸಿ ತಬ್ಬಿದನು (ಕೃಷ್ಣಕ. ೯-೧೩).

[ ತಳ್ಳವಾರು (<ತಳ್ಳವಾಱು$_1$) + – ಇಕೆ ]

**ತಳ್ಳವಾರು** 'ತಳ್ಳವಾಱು$_1$' ನೋ.

**ತಳ್ಳವಾಱು$_1$**, **ತಳ್ಳಬಾಱು$_1$**, **ತಳ್ಳವಾರು**, **ತಳ್ಳುವಾಱು**, **ದಳ್ಳುಬಾಱು** (ಕ್ರಿ). ಕಂಪಿಸು ; ತತ್ತರಿಸು ; ತಲ್ಲಣಿಸು ; ಧೈರ್ಯಗುಂದು : ಹುರಿದ ಧೈರ್ಯದ ತಳ್ಳವಾಱುವ ತರಳಹೃದಯದ ದೇವರಿಂದ್ರನನಱಸಿ ಕಂಡರು ತಮ್ಮೊಳಾಳೋಚನೆಯ ಮಾಡಿದರು (ಕುಮಾ್ವ.ಕ. ೭-೧೨). **ತಳ್ಳಬಾಱು$_1$ :** ಕುಂದಿದರು ಕಾತರಿಸಿ ಕಳವಳಿಸಿ ಮಱುಗಿದರು ಮನಗುಂದಿದರು ಮೈಮಱೆದರದ್ದರು ಶೋಕಜಲಧಿಯೊಳಱುಗೊಂಡರು ತಳ್ಳಬಾಱಿದರವರು ನಿಮಿಷದಲಿ (ಕುಮಾ್ವ.ಗ. ೮-೫೭); ಸತ್ವವಿಲ್ಲದ ಮಲಜನಿತ ದೇಹದಲಿ ಯಾನೆಂದಲಸದೇ ಬಗೆದಂಜಿ ಕಾಂತ ತಳ್ಳಬಾಱುವರೆ (ನಿಭಾಗ. ೧೧-೨-೩೮). **ತಳ್ಳವಾರು :** ತಳ್ಳವಾರಿತು ವೈರಿಸೇನೆಗಳ್ ಬಾಯ್ಬಿಡುತಲಳ್ಳಿವೊಯ್ದು ತಲಿರಲ್ (ತುರಂಗ. ೫೦-೩೯); ತಳ್ಳವಾರಿತು ನಿಲ್ವಡರಿದೆನುತ ಜಲಜಲಧಿ ಚಲ್ಲುತಿರ್ದುದು ನಿಮ್ಮ ರಾಯ ನಾಯಕರು ನೆರದಳ್ಳಿವೊಯ್ವುತ . . . ನಿಂದಿರ್ದರಾ ಕಲ್ಲು ಮರಗಳಂತೆ (ತುರಂಗ. ೬೯-೩೦). **ತಳ್ಳುವಾಱು :** ಮಲಗಿದನು ಕಲಿಭೀಷ್ಮನೆನೆ ತಲ್ಲಳಿಸಿದನು ಕುರುರಾಯನುದರದೊಳಿಳಿದು ದಾಯುಧಪೆಂಬ ತೆಱದಲಿ ತಳ್ಳುವಾ[ಪಾಠಾಂ. ಬಾ]ಱಿದನು (ಕುಮಾ್ವ.ಭೀ. ೧೦-೧೫). **ದಳ್ಳುಬಾಱು :** ರಣಕೆ ತವಕಿಸಿ ಬಳಿಕ ತಾಗುವ ಕಣೆಯ ದಾಳಿಗೆ ದಳ್ಳುಬಾಱು[ಪಾಠಾಂ.ತಳ್ಳುವಾಱು]ವ (ಕುಮಾ್ವ.ಭೀ. ೮-೩೪). 'ಅಳ್ಳಿಬಾಱು' ಪರಾ. [ ದೇ.॥ ತಮಿ. ತಳ್ಳವ್ವಾಱು, ತಳ್ಳವಾಱು ]

**ತಳ್ಳವಾಱು₂**, ತಳ್ಳಬಾಱು₂, ತಳ್ಳುಬಾಱು(ನಾ). ಹೃದಯದ ವೇಗವಾದ ತುಡಿತ; ಅಳ್ಳೆಗಳು ಹೊಡೆದುಕೊಳ್ಳುವಿಕೆ; ಧೈರ್ಯಗುಂದುವಿಕೆ; ಹೌಹಾರುವಿಕೆ: ಮರಳಿ ಮರಳೀಕ್ಷಿಸಿ ನಿಜಾಂತಃಕರಣದತುಳ ವ್ಯಥೆಯ ಸುಯ್ಲಿನ ಶಿರದ ತೂಗಿನ ತಳ್ಳವಾ[ಪಾಠಾಂ. ಳ್ಳುಬಾ]ಱಿನಲಳಲಿದಳು ಕಾಂತೆ (ತೊರರಾ. ೨-೩-೪೦). **ತಳ್ಳಬಾಱು₂:** ಬದುಕಿತೇ ತಲೆಯೆನುತ ಬಳಲುವ ವದನದುಸುರಿನ ತಳ್ಳಬಾಱಿನ ಕೆದಱುವುಂಡೆಯ ಕಲಿತ ಭಯದ ಸುಮಾಲಿ ಹರಿತಂದು . . . ಹಾಯ್ಕಿದನು ಬಲು ಬೆದಱಿಕೆಯ (ತೊ ರ ರಾ. ೫-೫-೩). **ತಳ್ಳುಬಾಱು:** ಮೇಲಿನ 'ತಳ್ಳವಾಱು' ಉಲ್ಲೇಖದ 'ತೊರರಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ < ತಳ್ಳವಾಱು₁ ]

**ತಳ್ಳಸು** (?) (ಕ್ರಿ). ತಲ್ಲಣಿಸು; ಭಯಪಡಂ (?): ಸೆಡೆದಂ ಚೋಳಂ ಕಳಿಂಗಂ ಸುಗಿದನಗಿದನಾ ಗೂರ್ಜ್ಜರ × × × ನಾಥಂ ವಲಪಂ ತಳ್ಳಸಿದ ನಿರದಟ್ಟೋಡಿದಂ ಮಾಳವ × × ×ನಾರಿಂ ಶರಣವೇಳೆನೆ ನಗುತಿರ್ದನಾಂಧ್ರಂ (ಎಕ. VIII (S), ಸೊರಬ. ೫೮೬-೨೩; 1201).

[ ℙ ಇದು 'ತಳ್ಳಳಿಸು' ಎಂಬುದರ ಅಪಲಿಖಿತವಿರಬಹುದು ]

**ತಳ್ಳಳಿಸು** 'ತಲ್ಲಟಿಸು' ನೋ.

**ತಳ್ಳಾಗತಿಗೆಱೆ³** (ನಾ). ಒಂದು ಕೆರೆಯ ಹೆಸರು: ತಳ್ಳಾಗತಿಗೆಱೆಯಾ ಪಳ್ಳವ್‌ಎಂಬದಱಾ ಪಡೇಯುವ್ ಬೆಸದವಂಗೆ ಅರೆ ಆಳ್ ತೆಱುವೊದು ಶ್ರೀ (ಪ್ರಾಆರಿ. ೧೯೩೪, ೮೦-೧೧೨; 799). [ ತಳ್ಳಾಗತ್ತಿ + ಕೆಱೆ³ ]

**ತಳ್ಳಿ** (ನಾ). ೧. ಸಂಬಂಧ; ಸಂಗ; ಒಡನಾಟ; ಸಹವಾಸ: ಇವಗೀ ಪದುಮನಾಭನ ತಳ್ಳಿಯೆಲ್ಲಿಂದೆಲ್ಲಿ ಬಂತೆನುತ (ಪ್ರಹ್ಲಾ.ಚ. ೬-೧೧); ಜನನ ಮರಣವಿಲ್ಲ ಜಾತಿ ಸಂಕರವಿಲ್ಲ ತನುವಿನ ತಳ್ಳಿ ತಾನಿಲ್ಲ ಎನಿಪುದು ನಿನ್ನಲ್ಲಿ ಮುಕ್ತಿವಡೆದರಿಗೀಯನಕ ಪಾಲಿಸೊ ರಂಗಧಾಮ (ಶತಸಾಂ. ೧೭-೯೭); ಹಳ್ಳಿಗರಿಗರಿವಡದು ಭಕ್ತವತ್ಸಲ ನಿಮ್ಮ ತಳ್ಳಿ ಇಲ್ಲದ ಜಾವಳಗೆ ತೋರದು ಕಲ್ಪ (ಲಿಂಗಪು. ೭-೪). ೨. ಕಟ್ಟು; ಬಂಧನ: ಬಲ್ಲವರ ಸಂಗದಿಂದ ನಿಂದ ಸಂಸಾರದ ತಳ್ಳಿಯ ಹಱಿಯಬೇಕು (ವೋಲಿಮಾ. ೬೦-೨೪೭); ಆ ಜಂಗಮ ಬಂದು ಎನ್ನ ಹುಳ್ಳಿಯಂ ಬಿಡಿಸಿ ತಳ್ಳಿಯಂ ಹಱಿದು (ವೋಲಿಮಾ. ೨೧೯-೭೭೨); ನಂಬದಿರು ಮನೆಯನು ನಂಟರನು ಲಿಂಗವೆ ತಂಬಿಗೆಯು ವಡವೆ ಪಶುವು ತಳ್ಳಿ ಕಾಣೊ ಲಿಂಗವೆ (ಚಿದಾಕೋ. ೮೯-೧). ೩. ಗೊಡವೆ; ತಂಟೆ; ಗೋಜು: ಒಳ್ಳಿಯ ಠಾವಲಿ ಪುಟ್ಟದೆ ಮಱುವುಟ್ಟ ತಳ್ಳಿಯ ತೊಡಕು ಬೇಡೆನುತ ಬೆಳ್ಳಿಯ ಪಿಡಿಯ ಕತ್ತಿಯ ತಂದು ಹೊಕ್ಕುಳ ಬಳ್ಳಿಯ ಕೊಯ್ದರರ್ಭಕನ (ವೋಹತ. ೧೭-೨೧); ಪರಿಚರ್ಯೆ ಮನೆವಾಳ್ತೆಯೆಂದೆಂಬ ತಳ್ಳಿಯವಳಲ್ಲ (ಜೈಮಿಭಾ. ೧೦-೨೪); ಪೊಣರ್ದು ಪೊಣರ್ದಾ ಮರಾಟರ್ ತಣಿದಾ ತಳ್ಳಿಯನೆ ಬಿಟ್ಟು ತಟ್ಟನೆ ತೆಳರ್ದರ್ (ಅಪ್ರತಿ. ೬೦-೫೭); ಎಲ್ಲಿ ನೋಡಿದಡಲ್ಲಿ ಟೊಳ್ಳುಜಾಲಿಯ ಮುಳ್ಳು . . . ಬಡಗಲ ತಳ್ಳಿ ಬೇಡೆಂದ (ಸರ್ವಜ್ಞ. ೧೬೧೧); ಇದರ ತಳ್ಳಿಗೆ ಬರಬೇಡ (ರಾಜೇಂದ್ರ. ೪೭); ದೊಡ್ಡವರ ತಳ್ಳಿ ಬೇಡ (ಆಳನಿ. ೫೯). ೪. ಹೋರಾಟ; "ಬಂಡಾಯ" (ಗಂಗಾಮ. ೬೫೦): ಸಂಗೊಳ್ಳಿಯ ರಾಯಪ್ಪನು ತಳ್ಳಿಯ ಆರಂಭದಲ್ಲಿ ಇಲ್ಲಿಯ ಮಾಮಲೇದಾರ ಕಚೇರಿಯನ್ನು ಸುಟ್ಟನು (ಕಭಾಗ. ೪೯೨). ೫. ನಿಂದೆ; ಅಪವಾದ: ಹುಸಿ ಕಳವು ಡಂಭಕವು ನುಸುಳು ಆಱಿಡಿ ತಳ್ಳಿ ಹಿಸುಣ ಹೀನಾದಯದ ಶಬ್ದಗಾರ (ಸುಸಾರ. ೬); ಎಲ್ಲಿ ನೋಡಿದರಲ್ಲಿ ಕೊಲೆ ಕುಟ್ಟು ಕಳವುಗಳ್ ತಳ್ಳಿಗಳ್ ಜಾತಿಸಂಕರ ಠಕ್ಕು (ತುರಂಗ. ೯೧-೭). ೬. ದೂರು; ಆಕ್ಷೇಪಣೆ: ನಮ್ಮ ಹಿರಿಯರು ಗಳಿಸಿದ ಮಠಮಾನ್ಯವೆಂದು ಹೋರಾಡಿ ತಳ್ಳಿ ತಗಾದಿ ಮಾಡಿ ಸರಕಾರಕ್ಕೆ ಹೊನ್ನ ಕೊಟ್ಟವರು ಮಹೇಶ್ವರರಲ್ಲ (ವಚಶಾ. I, ೩೩೧); ತಾನೆ ಚಿದಾನಂದ ತಾನಾದ ಬಳಿಕ ತಳ್ಳಿ ತಗಾದಿಗಳಿಲ್ಲ (ಚಿದಾಕೋ. ೧೧೧-೨); ಇದೆಲ್ಲಾ ಸನ್ನಿಧಾನಕ್ಕೆ ತಳ್ಳಿರೂಪವಾಗಿ ಬರೆದು ಇರುವದಾಗಿ ಅವಿಶ್ವಾಸ ದಿಂದ ತಿರಸ್ಕರಿಸಿದರೆ ದರಬಾರಿನ ತೇಜವೇ ಕಂದಿಹೋದೀತು . . . ಈ ತಳ್ಳಿಯು ಅಂಚೆಯ ಮೂಲಕ ಕಳುಹಿಸೋಣ ಅದು ವಿಳಂಬವಿಲ್ಲದೆ ಅರಮನೆಯ ಬಕ್ಷಿಯ ಕೈಗೆ ಬಂತು (ವಾಗ್ಭೇವಿ. ೨೨೭). 'ತರಳಿ₁' ಪರಾ. ೭. (ಉಕ) ಕಣದಲ್ಲಿ ತೆನೆ ತುಳಿಸಲು ಎತ್ತುಗಳನ್ನು ಸಾಲಾಗಿ ಕಟ್ಟುವುದು: ತೆನೆಯ ಮೇಲೆ ಇಂದು ತಳ್ಳಿ ಕಟ್ಟಿದ್ದೇವೆ (ರೂಢಿ).

**ತಳ್ಳಿಬಳ್ಳಿ**, **ತಳ್ಳುಬಳ್ಳಿ** = ೧. ಬಂಧನ; ಕಟ್ಟು: ತನುವ ಗುರುವಿಗಿತ್ತು ಮನವ ಲಿಂಗಕ್ಕಿತ್ತು ಧನವ ಜಂಗಮಕ್ಕಿತ್ತು . . . ತಳ್ಳಿಬಳ್ಳಿಯನೆ ಹಱಿದು ನಿಮ್ಮಲ್ಲಿ ನೆಲೆಗೊಂಡ ಕಾರಣ ಚನ್ನಮಲ್ಲೇಶ್ವರನ ಪಾದದಲ್ಲಿ ನಿರ್ಮುಕ್ತಳಾದೆನಯ್ಯಾ (ಲಿಂಗವ. ೮೧-೯೦); ನಂದನಕೆ ನಲ್ಲಳಿರ್ದೆಡೆಗೆಯ್ದು ಲೆಳಸುವೆವೆ ಇಂದಿರಾಧೀಶನಿಂ ತಳ್ಳುಬಳ್ಳಿಯದಹುದಱಿಂದಿಲ್ಲಿ ಜೀವಿಸುವೆ ವೆಂಬೆವೇ ಕಾವನಬ್ಬರಂ ಪಿರಿದಾಗಿರ್ಪುದು (ಸಮ್ಯ ಕೌ. ೩-೨೦). ೨. ಗೊಡವೆ; ಗೋಜು: ಕಾತರಗೇತರವನು ನೀವು ನಿಮ್ಮಂಬು ಜಾತಾಕ್ಷಿಯರು ಬಲ್ಲಿರೈಸೆ ಆ ತಳ್ಳಿಬಳ್ಳಿಯ ನಾವೇನ ಬಲ್ಲೆವು (ಭರಜ. ೯-೨೭); ಎಲ್ಲರ್ಗೆ ತಂದೆತಾಯೆಂದಿಬ್ಬರುಂಟೆಮಗಿಲ್ಲವಿಬ್ಬರ ತಳ್ಳಿಬಳ್ಳಿ (ಭರಜ. ೫೯-೧೧೭). [ ದೇ.॥ ತುಳು. ತಳ್ಳಿ ]

**ತಳ್ಳಿಅರ್ಜಿ** 'ತಳ್ಳಿಯರ್ಜಿ' ನೋ.

**ತಳ್ಳಿಕಾರ** 'ತಳ್ಳಿಕಾಱ' ನೋ.

**ತಳ್ಳಿಕಾರಿಕೆ** (ನಾ). ದೂರುವ ಸ್ವಭಾವ; ಚಾಡಿಕೋರತನ: ಸುಳ್ಳು ಗಳಾಡೋದು ಎಷ್ಟು ತಳ್ಳಿಕಾರಿಕೆ ಬೆಟ್ಟದಷ್ಟು (ಚಿದಾವ. ೩೨-೨).

[ ತಳ್ಳಿಕಾರ (<ತಳ್ಳಿಕಾಱ) + -ಇಕೆ ]

**ತಳ್ಳಿಕಾಱ**, ತಳ್ಳಿಕಾರ (ನಾ). ದೂರು ಹೇಳುವವನು; ಚಾಡಿಕೋರ: ತಳ್ಳಿಕಾಱರ ನ್ಯಾಯ ಪಟ್ಟಣಕೆ ಹರೆವುದು ಸುಳ್ಳೊ ದಿಟವೊ ಹೇಳು ಬಸವ (ಬಿಜ್ಜರಾ. ೧೦-೧೩೨). **ತಳ್ಳಿಕಾರ:** 'ತಳ್ಳಿಕಾರಿಕೆ' ಪರಾ.

[ ತಳ್ಳಿ + -ಕಾಱ ]

**ತಳ್ಳಿಕೋರ** (ನಾ). ತಂಟೆಕೋರ; ಜಗಳಗಂಟಿ: ಹಳ್ಳಿ ಪಟ್ಟಣವಾಗಿ ಡಿಳ್ಳಿಯಲಿ ಕೊಲೆಯಾಗಿ ತಳ್ಳಿಕೋರಾರು ಪೆಚ್ಚುತ್ತ ಜಗದೊಳಗೆ ಒಳ್ಳೆತನವಿಲ್ಲ (ಕಾಲಸಂ. ೫೬-೨೦). [ ತಳ್ಳಿ + -ಕೋರ₃ ]

**ತಳ್ಳಿಮಾತು** (ನಾ). ಆಕ್ಷೇಪಣೆಯ ಮಾತು: ನಿನ್ನ ಗೃಹಕೃತ್ಯವನ್ನು ನೋಡಲು ನಾನು ನಿನ್ನ ಆಳಲ್ಲ; ಈ ತಳ್ಳೀಮಾತುಗಳನ್ನು ನನಗೆ ಹೇಳ ಬೇಡ ಎಂದಳು (ನೀತಿಚಿಂ. IX, ೨೩). [ ತಳ್ಳಿ + ಮಾತು₁ ]

**ತಳ್ಳಿಯು** 'ತಳಿಯುಲಾರ' ನೋ.

**ತಳ್ಳಿಯರ್ಜಿ**, ತಳ್ಳಿಅರ್ಜಿ (ನಾ). ಮೇಲಧಿಕಾರಿಗಳಿಗೆ ದೂರನ್ನು ಕೊಂಡೊಯ್ಯುವ ಅನಾಮಿಕ ಪತ್ರ; ಮೂಗರ್ಜಿ: (ಕ). **ತಳ್ಳಿಅರ್ಜಿ:** ಯಾರೂ ತಳ್ಳಿಅರ್ಜಿ ಗಿಳ್ಳಿಅರ್ಜಿಗಳನ್ನು ಹಾಕಿ ಕೆಸರೆಬ್ಬಿಸುವ ಉದ್ಯಮಕ್ಕೆ ಹೋಗಲಿಲ್ಲ (ಕಾನೂರು. ೪೮೩); ಇವರು ಕದ್ದು ಸಾರಾಯಿ ತಯಾರಿಸಿ ಕುಡಿಯುತ್ತಿರುವರೆಂದು ತಳ್ಳಿಅರ್ಜಿ ಅಬ್ಕಾರಿಇಲಾಖೆಗೆ ತಲಪಿತು (ಭ್ರಾಂತಿಸು. ೬೧). [ ತಳ್ಳಿ + ಅರ್ಜಿ₂ ]

**ತಳ್ಳಿವರಿ** (ಕ್ರಿ). ಸಂಬಂಧವನ್ನು ಹೊಂದು: ಇಲ್ಲದುದ ನೀನುಸುರೆ ಹೆಂಗಳಿಗುಳ್ಳುದೈ ಸತಿ ಕಾಮಮೋಹದಿ ತಳ್ಳಿವರಿವಾ ಬೇಟದಾತುರವಾ ದಡದಕೇನೂ (ಸಾಳ್ವಭಾ. ೨೯-೬). [ ತಳ್ಳಿ + ಪರಿ₂ ]

**ತಳ್ಳಿವಲೆ** (ನಾ). ಒಂದು ಬಗೆಯ ಬಲೆ: ಕೊಡತಿವಲೆ ಕೋಲುವಲೆ ತಳ್ಳಿವಲೆ ಬಳ್ಳಿವಲೆ . . . ಮಂದಸಿನವಲೆಯ ಹೊಱಿಗಳ ಬೇಡವಡೆ ನೆರೆದುದೇನೆಂಬೆನು (ಹಚಕಾ. ೫-೮); ಹಲ್ಲುಮುಱಿದಹಿಯಂತೆ . . . ಹೆಬ್ಬುಲಿ ತಳ್ಳಿವಲೆ ಬಿದ್ದಂತೆ ಸಿಂಗನ ಕಾಲು ಮುಱಿದಂತೆ (ಕಾಶಿರಾ. ೧೯-೩).

[ ತಳ್ಳಿ ? + ಬಲೆ₁ ]

**ತಳ್ಳಿವೊನಲು** (ನಾ). ಅನೇಕ ತೊರೆಗಳು ಸೇರಿದ ನದಿಯ ಪ್ರವಾಹ: ಘುಳುಘುಳಿಸಿ ಕವಿವ ತೆರೆಗಳು ಹಳಚಿ . . . ಮುರಿದಿಳಿವ ಪೊಳೆವ ಸುಳಿಗಳ ಬಳಗಮಂ ಬಳಸಿ ಭೋರ್ಗರೆದು ಬೊಬ್ಬಿಡುವ ತಳ್ಳಿವೊನಲು (ಹಜಕಾ. ೧೧-೨೯). [ ತಳ್ಳಿ + ಪೊನಲು (<ಪೊನಲ್) ]

**ತಳ್ಳಿಸು$_1$** (ಕ್ರಿ). ನೂಕಿಸು; ದಬ್ಬಿಸು; ದೂಡಿಸು: ಸ್ವಾಮಿಗಹಿತವ ಮಾಳ್ಪ ಮನುಜರ ಭೂಮಿಯಲಿ ನಿಜಸಭೆಯ ದೆಶೆಯಿಂ ಭೂಮಿಯೊಡೆಯರು ಪೊರಗೆ ತಳ್ಳಿಸುವಂತೆ (ಅರ್ಜವಿ. ೨೦-೧೬); ಜನಗಳನ್ನು ಆ ಕಡೆ ಈ ಕಡೆ ತಳ್ಳಿಸಿ ದಾರಿಮಾಡಿಸಿಕೊಂಡು (ಜಂಗಾಳ್ಯ. ೬೦೬); ಬೆಟ್ಟದ ಮೇಲಿನಿಂದ ತಳ್ಳಿಸಿದನು (ನೀತಿಚಂ. I, ೮). [ ತಳ್ಳು + -ಇಸು$_3$ ]

**ತಳ್ಳಿಸು$_2$** (ಕ್ರಿ). ಮಊದಲಿಸು; ನಿಂದಿಸು: ನಿಲ್ಲು ನಿಲ್ಲೆಲೊ ಮೂಢ ಮೂಲಕ ಕೊಲ್ಲದಿರು ಕೋಡಗಗಳನು ತಳ್ಳಿಸದಿದಿರಾಗು ಮೈದೋಱುತ್ತ ಕೈದೋಱು (ಮೂಲರಾ. ೩-೧೬). [ ತಳ್ಳಿ + -ಇಸು$_3$ ]

**ತಳ್ಳು** (ಕ್ರಿ). ೧. ನೂಕು; ದಬ್ಬು; ದೂಡಂ; ಸರಿಸು: ಹುಲ್ಲಾದರೂ ತಳ್ಳಿ ಹೋಹ ಜಲವ ತಡೆವುದು (ಸರ್ವವ. ೧೮-೯೦); ಮೆಲ್ಲಮೆಲ್ಲನೆಯೆದ್ದು ಹಿಂದಕೆ ತಳ್ಳಿದನು (ಕುವ್ಯಾಅ. ಓಕಿಇ. ೩೦-೨೮); ದೇಸಾಯರ ಮನೆಗೆ ಹೋಗಿ ಬಾಗಿಲ ತಳ್ಳಿದನು (ಗಂಮಾಯಿ. ೦೦೧); ಕರುಣಾಹೀನಗೆ ಕರುಣವ ತೋರದೆ ತಳ್ಳಿದಿರೆನ್ನನು ದುಸ್ಸಹ ನರಕಕೆ ದಳ್ಳುರಿ ವೈಧವ್ಯಕೆಯಿನ್ನು (ಕವಿಸೋ. ೫೬-೫). ೨. (ಜೋರಾಗಿ) ಹೊಡೆದುಕೊಳ್ಳು; ಬಡಿದುಕೊಳ್ಳು: ಪ್ರಕಟಿಸಿದ ಕಟಿ ತಳ್ಳುವಳ್ಳಿ ಬೆಂಡಾದ ಮೈ . . . ಸೊಪ್ಪಾದ ಧರವೊಪ್ಪಿತಾ ಕಾಂತೆಗೆ (ಜ್ಞಮಿಭಾ. ೧೧-೨೫). ೩. ಕಳೆ; ಸಾಗಿಹೋಗು; ವ್ಯತೀತವಾಗು: ಕೆಲವು ಕಾಲ ತಳ್ಳಿತು (ದೇವೀಚಾ. ೫೮).

**ತಳ್ಳಿಬಿಡು**=ಕಡೆಗಣಿಸಂ; ನಿರಾಕರಿಸು: ನೂತನ ಪರೀಕ್ಷಾಕ್ರಮವನ್ನು ತಳ್ಳಿಬಿಡುವುದು ಉಚಿತವಲ್ಲ (ಶಿಕ್ಷದ. ೩೫೯); ಅವಳ ಅಪ್ಪ ಅಮ್ಮ ಒಪ್ಪುವರೇ ಎನ್ನುವ ಪ್ರಶ್ನೆಯನ್ನು ಅಸಡ್ಡೆಯಿಂದ ಬದಿಗೆ ತಳ್ಳಿಬಿಟ್ಟೆ (ಅಲಹೂ. ೩೯). **ತಳ್ಳಿಹಾಕು** = ತಳ್ಳಿಬಿಡು: ಇಷ್ಟು ಮಂದಿಯ ಸಾಕ್ಷ್ಯವನ್ನು ತಳ್ಳಿಹಾಕಿರುವುದು ಎಷ್ಟು ಅವಮಾನಕರ (ಪ್ರತಾಪ. ೬೨); ನಿನ್ನನ್ನೂ ಭೀಷ್ಮನನ್ನೂ ತಳ್ಳಿಹಾಕಿ ಯುಧಿಷ್ಠಿರನನ್ನು ದೊರೆಯಾಗಿ ಮಾಡಬೇಕಂತೆ (ವಚಭಾ. ೨೮). [ ದೇ.॥ ತಮಿ. ಮಲ. ತಳ್ಳು; ತುಳು. ತಳ್ಳು, ತಲ್ಲು ]

**ತಳ್ಳುಗಾಡಿ** (ನಾ). ನೂಕಿಕೊಂಡಂ ಹೋಗುವ ಬಂಡಿ; ತಳ್ಳುವ ಬಂಡಿ: ತಳ್ಳುಗಾಡಿಯ ತುಂಬ ಚಂದ್ರಹಾಸ (ಶಿಲಾಲ. ೬೯-೧೦). [ತಳ್ಳು+ಗಾಡಿ$_3$]

**ತಳ್ಳುತಳ್ಳಂ** (ಅ). ತಳತಳನೆ (?): ಕಾಂಚನಾದ್ರಿಯ ಶಿಖರದೊಳು ಮಹ ಮಿಂಚು ತೋರಲು ತಳ್ಳುತಳ್ಳಂ ಚಂಚಿಗೆಯು ಮಹಮಂತ್ರದ ಮಿಂಚಿನ ಗೊಂಚಲಂದದಲಿ (ಕೃಷ್ಣಾಕ. ೦-೧೨.). [ ? ]

**ತಳ್ಳುಪಡಿ** (ನಾ). ೧. ತಳ್ಳಿಹಾಕುವುದು; ವಜಾ ಮಾಡಂವುದಂ; ತೆಗೆದು ಹಾಕಂವುದು: ೨೧ನೇ ಪ್ರಕರಣದಲ್ಲಿ ನಮೂದಿಸಿರುವ ನಿಯಮಗಳಿಗೆ ಒಳಪಟ್ಟು ಡಿಸ್ಮಿಸ್ ಯಾ ತಳ್ಳುಪಡಿ ಮಾಡಲ್ಪಡತಕ್ಕದ್ದು (ಗ್ರಾಪಾಶ. ೯೯). ೨. "ಕೂಡಲೆ ಅಥವಾ ಮುಂಗಡವಾಗಿ ಮೊಬಲಗು ಕೊಟ್ಟದ್ದಕ್ಕಾಗಿ ನಿಯತವಾದ (ಬೆಲೆಯ)ವೊತ್ತದಿಂದ ಕಡಮೆ ಮಾಡಿದ ಮೊಬಲಗು; ವಟ್ಟ; ತಳ್ಳುಪಡಿ; ಸೋಡಿ" (Discount. ಇಂಕನಿ.).

[ ದೇ.॥ ತಮಿ. ತಳ್ಳುಪಟಿ ]

**ತಳ್ಳುಬಂಡಿ** (ನಾ). ೧. "ಮಕ್ಕಳಿಗೆ ನಡಗೆ ಕಲಿಸುವುದಕ್ಕಾಗಿ ಮಾಡಿರುವ ನಡೆಗಾಡಿ; ಮಕ್ಕಳ ತಳ್ಳುಬಂಡಿ; ಕೈಬಂಡಿ" (Go-Cart. ಇಂಕನಿ.). ೨. ನಡೆಯಲಂ ಬಾರದ ಮಕ್ಕಳನ್ನು ಕೂಡಿಸಿ ತಳ್ಳಿಕೊಂಡು ಹೋಗಂವ ಬಂಡಿ: (ಮೂರು ಅಥವಾ ನಾಲ್ಕು ಚಕ್ರಗಳಿದ್ದು, ಹಿಂದಿನಿಂದ ತಳ್ಳಿ ನಡಸುವ) ಮಕ್ಕಳ ತಳ್ಳುಬಂಡಿ (Perambulator. ಇಂಕನಿ.). ೩. = ತಳ್ಳುಗಾಡಿ. [ ತಳ್ಳು + ಬಂಡಿ ]

**ತಳ್ಳುಬಾಱು** 'ತಳ್ಳವಾಱು$_2$' ನೋ.

**ತಳ್ಳುವಾಱು** 'ತಳ್ಳವಾಱು$_1$' ನೋ.

**ತಳ್ಳೊಳ** (ನಾ). (?): ನಡುವಗಲ (ಕಂಜ) ಕುಮುದವನದ ವಿಳಾಸಕ್ಕಮವಿಕಾಸಕ್ಕಂ ನೆಲೆಯಾದುಭಯ ಪಕ್ಷರಾಜಲೋಕದನುಜೀವಿಲೋಕದ ಪುರನಾರೀಜನಂಗಳೊಳೀ ತಳ್ಳೊಳಂ ಮಾಣ್ಬುದುಂ ಮಂಚಸ್ಥರಾಜನ್ಯಕಮಂ ಶ್ರೀವಿಜಯಂ ವಿಸರ್ಜಿಸೆ . . . ತಮ್ಮ ತಮ್ಮ ಶಿಬಿರ ನಿವೇಶಂಗಳ್ಗೆ ಪರೆದು (ಶಾಂತಿಪು. ೬-೩ ವ). 'ತಳಹೊಳ' ಪರಾ. [ ? ]

**ತಱ** 'ತೆಱ$_1$' ನೋ.

**ತಱಂಗು** 'ತಱಗು' ನೋ.

**ತಱಂಟು**, ತರಂಟಂ, ತರಟಂ, ತಱಟ್ಟಿ$_1$, ತಱಟು (ನಾ). ೧. ಕೂದಲು ಉದುರಿದ ಸ್ಥಿತಿ,-ಉದುರಿಹೋಗಿರುವಿಕೆ. 'ತಱಂಟುದಲೆ' ಪರಾ. **ತರಂಟು**. **ತರಟು$_1$**: ೧. 'ತರಟುದಲೆ' ಪರಾ. **ತಱಟ್ಟಿ$_1$**: ೧. 'ತಱಟಿದಲೆ' ಪರಾ. **ತಱಟು**: ೧. ತಲೆತ[ಪಾಠಾಂ. ದ]ಱಟಪ್ಪಿನಮಡಕಿದರಲಸದೆ ದೇವಂಗೆ ದೇವಿಯರ್ ಪುಷ್ಪ ಫಲಾವಳಿಯಂ (ಆಜಿಪು. ೬-೧೦೦): ಕನ್ನೆಯ ಪುರ್ವುಂ ನೊಸಲುಮಂ ಸಮಱಿದಾಗಳ್ ಆ ಪುರ್ವುಂ ಬೋಳಪುರ್ವಾಗೆ ನೊಸಲುಂ ತಱಟನಂತಾಗೆ (ಬಂಹರಿ. ೯-೬ ವ): ಕಿಱಿದೆಡೆಯ ಯಶದ ಭವದಿಂ ತಱ[ಪಾಠಾಂ. ಕರ]ಟಾದವೊಲಣೆಯೆ ಬುಗುಟು ನೆಗೆದೊಡೆ ಶಿರದೊಳ್ (ಪಾರ್ಶ್ವಪು. ४-೨೬). 'ತಱ$_1$' ಪರಾ. ೨. ಬೋಳುತಲೆ: ತಱಟಿನ ವಿಡಂಗರುಂ ಮಿಂಚುದಲೆ ಒಣಕರುಂ ನಿಡುಗಯ್ಯ ದಡಿಗರುಂ . . . ಸುತ್ತ ಮುತ್ತಿರಲು (ವಾಗೀರ. ದೇ. ೨೫೪-೨೦).

**ತಱಂಟಾಗು**, **ತರಂಟಾಗು**, **ತಱಟಾಗು** = ೧. ಕೂದಲು ಇಲ್ಲದಂತಾಗಂ,-ಉದುರಿಹೋಗು: ಪುಣ್ಯಮಿಲ್ಲದೆ ಬೆವಸಾಯದಿಂ ಸಿರಿಯಕ್ಕುಮೆಂದೆಯಪ್ಪೊಡೆ ನೆತ್ತಿ ತಱಂಟಾಗೆ ಪುಳ್ಳಿಯನಡಕುವ ಬಡವರ್ಗಂ ಬಟ್ಟೆಗಟ್ಟಿ ಬಡಿವ ಬೇಡರ್ಗಂ ಪಿಡಿಯೇಕಾಗದು (ಧರ್ಮಾಮೃ. ೬-೧೩೩): ಪೂವಂ ದೇವಂಗಾದರದಿನಡಕಿ ತಲೆ ತಱಟಾದುವು (ಆಜಿಪು. ೫-೬೫). ೨. ಬೋಳಾಗು; ಬರಿದಾಗು: ತಱಂಟಾದ ಬಱುಗೊಂಬುಗಳಂ ಕಂಡು (ಧರ್ಮಾಮೃ. ೧೧-೭೮); ದಿಂಡುರುಳಿ ಪರಿದೆಲೆ ತರಂಟಾಗಿ ನಿಡುಚಾಚಿ ಕೆಡೆದಿರ್ದ ಬಳ್ಳಿತೋಳಿನ ಬೆರ್ಚುಸಾಕ್ಷಿಯಂ (ಶ್ರೀರಾಮಾ. ೨೫೨-೬೪೫).

[ ದೇ.॥ ಕೊತ. ತರ್ದ್, ತರ್ವ್; ತೊದ. ತಱ್, ತರ್ಟ್, ತರ್ಫ್, ತಱ್‌ಮಡ್./ಮರಾ. ತರಟೀ, ತರಟೇ ]

**ತಱಂಟುದಲೆ**, ತರಟುಂತಲೆ, ತರಟುಂದಲೆ, ತಱಟಿದಲೆ, ತಱಟುದಲೆ (ನಾ). ೧. ಕೂದಲು ಉದುರಿಹೋದ ತಲೆ; ಬೋಳುತಲೆ: ಎನಿಸು ಶಕ್ತಿಯುಳ್ಳೊಡಮೌಷಧಂ ತಱಂಟುದಲೆಯೊಳ್ ರೋಮಮಂ ಪುಟ್ಟಿಸಲಾಱದು (ಧರ್ಮಾಮೃ. ೬-೬೬); ತಱಂಟುದಲೆ ಜೋಲ್ದಿಹ ಮೈ ತೊವಲರ್ಧ ಪೊಟ್ಟೆಮೂಗಿನ ಪರ್ಬಿರ್ದ ಪುರ್ಬು ತೆರೆಗೊಂಡ ಮೊಗಂ (ಪುಣ್ಯಾಸ್ರ. ೩-೮೨). **ತರಟುತಲೆ**: ೨. ಬೋಳುತಲೆಯವನಂ; ಭಿಕ್ಷು: ನಿತ್ಯವೂ ತರಟುತಲೆಯನ್ನು ಕಂಡಲ್ಲದೆ ಊಟಮಾಡಬೇಡ ಎಂದರು (ಕಸಾಚ. ೧೦೩). **ತರಟುದಲೆ**: ೧. "ಖಲತಿ - ತರಟುದಲೆ" (ಅಕಾನಿ. ೮-೨೬); ತರಟುದಲೆ ಬಿರಿತ ಮೈ ಸೊರಟು ಮೂಗಿನ ಜಾಣೆ (ಶರಲೀ. ೩೬೩-೨). **ತಱಟಿದಲೆ**: ೧. 'ತಱಟಿದಲೆಯ' ಪರಾ. **ತಱಟುದಲೆ**: ೧. "ಖಲತಿಃ, ಇಂದ್ರಲುಪ್ತಕಃ ಈ ೨ ತಱಟುದಲೆಯವನು" (ನಾಚಿರಾ. ೦೧೯); ನೀತಿಯಲ್ಲದ ಮಣ್ಣನಿಟ್ಟರುಂ ಕೆಟ್ಟರುಂ ತಱಟುದಲೆ ವರಟು ಜನರು (ಷತಿಲ. ೩-೦೦).

[ ತಱಂಟು + ತಲೆ$_1$ ]

**ತಱಂಟುವುರ್ವು** (ನಾ). ಬೋಳಾದ ಹುಬ್ಬು: ಕಱಿವಿಡಿದಿರ್ದ ಪೇರೊಡಲ . . . ತಱಂಟುವುರ್ವು ತಾಪೆಱಿದಿರೆ ಬೆನ್ನನೆಯ್ದುವ ಕುದಾನವನಂ ಹರಿ ಕಂಡು ಬೆರ್ಚಿತಂ (ಹಾಲಾಸ್ಯ. ೧-೨-೬೬). [ ತಱಂಟು + ಪುರ್ವು ]

**ತಱಿಂಬೆ** 'ತಱುಂಬು$_2$' ನೋ.

**ತಱಿಕಟ,** ತರಕಟ (ನಾ). ೧. ಅಧಿಕವಾದ ಬಾಧೆ; ಅತಿಯಾದ ತೊಂದರೆ. 'ತಱಿಕಟಗಾಡು' ಪರಾ. **ತರಕಟ :** ೨. "ಕಠೋರತನ, ನಿಷ್ಠುರತೆ" (ಪ್ರಭಣ್ಣ). 'ಕಱಿಕಟ' ಪರಾ. [ ? ]

**ತಱಿಕಟಕಾಡು** 'ತಱಿಕಟಗಾಡು' ನೋ.

**ತಱಿಕಟಗಾಡು,** ತಱಿಕಟಕಾಡು (ಕ್ರಿ). ಅತಿಯಾಗಿ ತೊಂದರೆಕೊಡು,–ಕಾಡಂ,–ಬಾಧಿಸು,–ನೋಯಿಸು : ಅಕಟಕಟಾ ಶಬ್ದದ ಲಜ್ಜೆಯ ನೋಡಾ ಗುಹೇಶ್ವರನನಱಿಯದ ಅನುಭಾವಿಗಳೆಲ್ಲರ ತಱಿ[ಪಾಠಾಂ. ಕಟ, ತರ]ಕಟಗಾಡಿತ್ತು (ಅವಚಂ. ೬೦-೨೬೪) ; ದೇವನೊಳ್ಳಿದನೆಂದು ಮುಯ್ಯಾನಲು ಬೇಡಾ ತ[ಪಾಠಾಂ. ಕ]ಱಿಕಟಗಾಡಿದ[ಪಾಠಾಂ. ಕಾಡಿದ, ಕಾಡಿಹ, ಕಾಡುವ]ನೊಳ್ಳಿದನೆ (ಬಸವ. ೧೪೮) ; ತಱಿಕಟಗಾಡಲ್ಸೈರಿಸಿ . . . ನೇಹದ ಮಗನಂ ತಱಿದಿಕ್ಕಿದುದಕ್ಕೊಲವಿಂ ಕಱೆಗೊರಲಂ ಮಚ್ಚಿ ರೂಪು ದೋಱಿದಂ (ತ್ರಿಪುವಿ. ೧೦-೮೦) ; ಪರಸತಿಯರಿಗಳುಪುವರ ಕಂಡವರ ತಱಿಕಟಗಾಡಿ ಬೇಡುತಿಹ ಱೋಡಗರ ಸತ್ಪುರುಷರಂ ನಿಂದಿಪ (ಷತಿಲ. ೧೩-೨೯). **ತಱಿಕಟಕಾಡು :** ಕರುಣವಾರಿಧಿ ಶಿವನು ಎನುತಲಿ ಅಱಿದ ಮರುಳರು ಕವಿಗಳೆಂಬರು ಬರಿಯ ತಱಿಕಟಕಾಡುವಾತನು ಕರುಣಿಯೆಂತಹನು (ಸುಸಾರ. ೫೪ ಪಲ್ಲವಿ). [ ತಱಿಕಟ + ಕಾಡು$_1$ ]

**ತಱಿಗು,** ತರಗ, ತರಗು$_1$, ತಱಿಂಗು, ದರಗು$_1$ (ನಾ). ೧. ಒಣಗಿದುದು; ಒಣಗಿದ ವಸ್ತು,–ಪದಾರ್ಥ. 'ತಱಿಗೇಳ್' ಪರಾ. ೨. ಒಣಗಿದ ಎಲೆ,–ಗರಿ : ಅಪ್ಪು ಕೂಡಿದ ಎಲೆ ನಾಮರೂಪಾದಂತೆ ಅಪ್ಪುವಡಗೆ ಅಚೇತನದ ತಱಿಗಾಯಿತ್ತು (ಮೋಳಿಮಾ. ೭೩-೨೮೯) ; ಭಿನ್ನರುಚಿವಡೆದ ಸಂಭಾರವಮಂ ಕಲಸಿಯೊಗ್ಗರಿಸಿ ಬಾಳೆಯ ತಱಿಗಿನೊಳಗಿಡುವುದು (ಸೂಪಶಾ. ೪-೭೫) ; ಪೂಸಿ ಪನ್ನೀರನುಱೆ . . . ಬೇಸಗೆಯ ತಱಿಗೆನಿಸಿ ಬಿಸುಸುಯ್ವುಳುರಿಮಸಗಿ (ಚಿಕಸ. ೨೪). ೩. ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ಖಾದ್ಯ,–ಭಕ್ಷ್ಯ : ಹೋಳಿಗೆ ಮಂಡಗೆ ತಱಿಗು ನಾಡೆ ರುಚಿವೆರಸಿದ ಲಡ್ಡುಗೆ . . . ಮೊದಲಾಗಿರ್ದ ಪಲವು ಭಕ್ಷ್ಯಮನಾಗಳ್ ಆಜ್ಯಯುತಮಪ್ಪುವಂ ಮೆಲ್ದು (ಧರ್ಮಾಮ್ಮ. ೧-೧೪೭) ; ಹಾಲ ಮಂಡಿಗೆ ಗಳನಟ್ಟು ಮೇಲೆನಿಪ್ಪ ತಱಿಗ ಪೂಷಣಂಬುಮಂ ತೆರಳ್ಕೆ ಇಟ್ಟು (ವೈಜರ. ಹ. ೨೬೬-೨); ತಱಿಗು ಚಕ್ಕುಲಿ ಹೂಸಣಂಬ ಹೂರಿಗೆಗಳಂ . . . ತೆಱಿಹಿಲ್ಲೆನಿಸಿ ಗಡಣಿಸುತ್ತ (ಸಿದ್ಧರಾ. ೮-೮೫) : ಮಂಡಗೆ ತಱಿಗುವಿಡ್ಡಲಿಗೆಯುಂ . . . ಬೊಂಬೆದೊಟ್ಟಿಲು ಮೊದಲಿವೆಲ್ಲವನು ತಂದು ಕೊಡುವರು (ಬಸಪು. ೧೪-೧೫) ; ಚಕ್ಕುಲಿ ಗಾರಿಗೆ ವಡೆ ದೋಸೆಯಿಡ್ಡಲಿಗೆ ತಱಿಗವುಗಂ . . . ನಾರೀತತಿ ಮುನಿಜನಕ್ಕೆ ಬಡಿಸಿದುದಾಗಳ್ (ತ್ರಿಪುವಿ. ೧೦-೩೪) : ಪುರಿಗಡುಬು ತಱಿಗು ಚಕ್ಕುಲಿ ಕರಂಜಿಗಾಯತಿರಸಂ . . . ನೀಂ ಬಯಸೆ ಪೋಗಿ ತಂದಪೆನೀಗಳ್ (ವೃಷವಿ. ೯-೭೮). **ತರಗ :** ೪. ಗಾಯ, ಮಣ್ಣು ಮೊದಲಾದುವು ಒಣಗಿ ಮೇಲೆದ್ದುದು ; ಹೆಕ್ಕಳೆ : ಬೇಸಿಗೆಯಲ್ಲಿ ಅದರೊಳಗಿನ ನೀರು ಬತ್ತಿಹೋಗಿ, ಬರಿ ಉಪ್ಪಿನ ತರಗಗಳು ತಳಕ್ಕೆ ಉಳಿಯುತ್ತವೆ (ಮುಂಬಯಿ. ೪-೨೦೦). **ತರಗು$_1$:** ೧. ಚೇತನವೆಲ್ಲ ಬೆಂಡಾಗಿ ಹೋಗಿಹುದು ಒಣಗಿ ತರಗಾಗಿಹುದು (ಯಶೋಧ. ೧೧) ; ತಮ್ಮ ಮಾಮೂಲಿನಂತೆ ಕಬ್ಬಿನ ತರಗು, ಈಚಲ ಒಣಗರಿ, ಸೋಗೆ ಇವುಗಳಿಂದ ಬೆಳಕು ಮೂಡೇ ತೀರಬೇಕು (ಹುಟ್ಟಿಹ. ೨೮). ೨. ತರಗು ಮೊದಲಾದ ಆಹಾರದಿಂದುದರಭರಣವಂ ಮಾಡುವ ಅಶ್ವಗಳು (ಸೌಗಂಧಿ. ೩೦೯-೧೨) : ತರಗು ಕಂಡರೆ ಚಿಗುರಿಗೆ ಹಾಸ್ಯ ಎಂದನು(ಚಿಕರಾ.೨೬೩):ತರಗು ತಿಂಬುವುದೇ ಪರಮಸುಖ (ಗಾದೆ) ; ತರಗು ತಿನ್ನುವವನ ಮನೆಗೆ ಹಪ್ಪಳಕ್ಕೆ ಹೋದರು (ಗಾದೆ). ೩. ತರಗು, ಚಕ್ಕುಲಿ . . . ಇವೆಲ್ಲಾ ಇವೆ ನಮ್ಮ ಮನೆಯಲ್ಲಿ (ಕಸಾಚಿ.೧೧೬). **ತಱಿಂಗು :** ೩. ಪಾಲುಂಡೆ ಮಂಡಗೆ ಎಣ್ಣೂರಿಗೆ ಬಿಸುಪೂರಿಗೆ ತಱಿಂಗೆಳ್ಳುಂಡೆ . . . ಭಕ್ಷ್ಯಚಯಮಂ ತಂದಿಕ್ಕಿದರ್ಕಾಂತೆಯರ್ (ಧರ್ಮಪ. ೨-೫೫). **ದರಗು$_1$ :** ೨. ದರಗನುರಿಯೊಳಗೆ ಬಿಸುಟುರುಹಿದಂದದಿಂ ಮಹಾಪಾತಕಂ ಪೋಗಿ (ತುರಂಗ.೧-೧೯); ಕಾಲಿಟ್ಟು ತೆಗೆದರೆ ಮಂಡಿಯುದ್ದದ ದರಗು ಅದರ ಝುರರಝುರ ಶಬ್ದ (ಮಧುನ. ೧೦೯).

**ತರಗಗುಡಿಸು, ತರಗಘೂಡಿಸು**=ಭೂಶುದ್ಧಿಮಾಡು : ಮನೆ ಕಟ್ಟುವ ಮುಂಚೆ ನಿವೇಶನದ ತರಗ ಗುಡಿಸಬೇಕು (ರೂಢಿ): ಮಾಳೆಯ ಮದಿಗೊಂಡ ಗೌಡಾರು ತರಗ ಘುಡಿಸಿ ಕಟಿದರು (ಎಕ. XI, ಹೊಳಲ್ಕೆ. ೭೬-೮; ?). ತಱಿಗನುಡುಗು = ತರಗಗುಂಡಿಸು : ಬ್ರಹ್ಮಸಮುದ್ರದ ಅಶೇಷ ಮಹಾಜನಂಗಳು ಈ ವೂರ ತಱಿಗನುಡಿಗಿ ಮಾಡಿದ ಗವುಡುಗಳಿಗೆ . . . ಕೊಟ್ಟ ಸಾಸನ (ಎಕ. VI, ಕಡೂರು. ೫೪-೬ ; 1261).

[ದೇ.॥ ತಮಿ. ಚರುಕು]

**ತಱಿಗೆಲೆ,** ತರಗೆಲೆ (ನಾ). ಒಣಗಿದ ಎಲೆ: ತಱಿಗೆಲೆಗಳಂ ಮೇದು ಗಜಯೂಥ ಮುಂಡು ಪೋದ ಬಟೆಕ್ಕೆ ಕದಡಿದ ನೀರ್ಗಳನುಂಡಿಂತು ಪಲಕಾಲಂ ಸಂಯಮವೆಂಬ ಬ್ರತಮಂ ಸಲಿಸುತ್ತಂ (ಪದ್ಮರಾ. ೧೫೬-೨೪) ; ಇರ್ವರ ರಥಂಗಳುಂ ಸುಟ್ಟುರೆಯೊಳಗಣ ತಱಿಗೆಲೆಯಂತೆ ತಿಣ್ಣನೆ ತಿರಿಯೆ (ಪಂಪಭಾ. ೧೨-೭೫ ವ) ; ತಱಿಗೆಲೆ ಗಿಱುಕೆನೆ ಬೇಡಂ ಪೊಱೆಗೆಯ್ದಿದನೆಂದು ಭಯದೆ ಮಱುಗಿದೆನಾಗಳ್ (ಕಾದಂಪೂ. ೧೯೦) ; ಮರುಳ ಪಯಣಕ್ಕೆ ತಱಿಗೆಲೆಯೆ ಸಂಗಡಿಗನೆಂಬಂತೆ (ಧರ್ಮಾಮ್ಮ. ೧-೧೯೫) ; ತಱಿಗೆಲೆ ಗಿಱಿಕೆಂದೊಡೆ ಹೊಱಿಗ ನಾಲಿಸುವೆ (ಬಸವ. ೩೭೪): ಉರಿವಗ್ನಿಯೆಡೆಗೆ ತಱಿಗೆಲೆ ಮುನಿದು ಬಪ್ಪಂದದಿ (ಸಿದ್ಧರಾ. ೭-೨೭) ; ಪಿಂತೆ ಪಿನಾಕಿ ಪಯೋಜೋದರ ವಿಧಿ ಮುಂತಾದವರೆಲ್ಲವರಂ ತಱಿಗೆಲೆಯಂತತಿಲಘುಮಾಡಿದ ದರ್ಪಕನೇಂ ಬಡವನೆ (ಜಯಕಾ. ೮-೮). **ತರಗೆಲೆ :** ವನದೊಳಗೆ ತರಗೆಲೆಯ ಭುಂಜಿಸಿ ದಿನವ ಕಳಿಯುತಲಿರ್ದರು (ದೇವೀಮ. ೧-೫೩) ; ಜೀವಿಗಳನ್ನು ತರಗೆಲೆಯಂತೆ ಸುಳಿ ಸುತ್ತಿಸಿ (ಕಾವ್ಯಸ. ೩೮) ; ಕೆಲಸವಂ ಬಿಟ್ಟೆನಿಸು ತರಗೆಲೆಗೆ ಕಿಚ್ಚೊಟ್ಟೆ (ಕಾಲೂರ. ೭೭-೧೪೩) ; ಬಿರುಗಾಳಿ ಬಂದಾಗ ತರಗೆಲೆಯಾದರು ಹಾರುವುದಾಕಾಶದತ್ತ (ಇಂಜಾಪ. ೧೪೭-೨೩). [ ತಱಿಗು + ಎಲೆ$_1$ ]

**ತಱಿಗೇಳ್** (ಕ್ರಿ). ಒಣಗಿ ಹೋಗು; ತರಗಾಗು: ಸಂಚಾರದಿಂದ ತಱಿಗೆದ್ದು ತನ್ನಂಗದ ಸಂಚಿತವ ಬಿಟ್ಟು ವಾಯುವಿನ ಸಂಚಾರದಲ್ಲಿ ಎಯ್ದಿ (ಮಾದೂಳ. ೪೭೦-೬೮). [ ತಱಿಗು + ಏಳ್$_1$ (<ಏಱ್$_1$) ]

**ತಱಿಚು,** ತರಚು$_1$ (ಕ್ರಿ). ಕೀಳು ; ಸುಲಿ ; ಗೀರಾಗು : ತಲೆಯ ಕೂದಲ ತಱಿಚನೇ (ಪ್ರಭುಪು. ೭-೯೦). **ತರಚು$_1$ :** ಗದ್ದಗದ್ದೆಗೂ ನೆಲ್ಲು ತರಚಿರುವ ಬರೀ ಹುಲ್ಲನ್ನು ಕಂಡನು (ಕಥಾಮಂ. IV, ೩೧). [ <ತಱಿ$_1$ ]

**ತಱಿಟಿ$_1$** 'ತಱಿಂಟು' ನೋ.

**ತಱಿಟಿ$_2$** (ನಾ). ಬೋಳುತಲೆಯುಳ್ಳವನು : ಪಾಪಗ್ರಹಮದುದಯದೊಳಿರೆ ಪಾಪೇಕ್ಷಣಮಾಗೆ ತಱಿಟಿಯಕ್ಕುಂ (ಜಾತತಿ. ೨೦-೨೦).

[ ತಱಿಟು (<ತಱಿಂಟು) + – ಇ$_3$ ]

**ತಱಿಟಿ$_3$,** ತರಟೆ (ನಾ). ಒಂದು ಬಗೆಯ ಸಸ್ಯ : "ಖಬುರಾ–ತಱಿಟಿ" (ಓಷಧಿ. ೪೩) ; "ತೀವ್ರಃ–ತಱಿಟಿ" (ಓಷಧಿ. ೭೦). **ತರಟೆ :** "ತಾರಟೀ–ತರಟೆ" (ಓಷಧಿ. ೬೭). [ ? ]

**ತಱಿಟಿದಲೆ** 'ತಱಿಂಟುದಲೆ' ನೋ.

**ತಱಿಟಿದಲೆಯ** (ನಾ). ಕೂದಲು ಉದುರಿಹೋದ ತಲೆಯುಳ್ಳವನಂ ; ಬೋಳಂತಲೆಯಂವನು : "ಖಳತಿಃ, ಶಿಪಿವಿಷ್ಟಃ, ಐಂದ್ರಲುಪ್ತಕಃ–ಈ ೩ ತಱಿಟಿದಲೆ(ಯಂ)" (ಹಲಾಯು. ೯೯–೪೫೪).

[ತಱಿಟಿದಲೆ (<ತಱಿಂಟುದಲೆ) + – ಅ$_7$ ]

**ತಱಿಟು** 'ತಱಿಂಟು' ನೋ.

**ತಱಿಟುದಲೆ** 'ತಱಿಂಟುದಲೆ' ನೋ.

**ತಱಟುಮಂಡೆ** (ನಾ). ಕೂದಲು ಉದುರಿದ ತಲೆ; ಬೋಳುತಲೆ: ಖಲತಿ, ಶಿಪಿವಿಷ್ಟಃ–ತಱಟುಮಂಡೆಯುವನು (ನಾಚಿರಾ. ೬) ; ಬೆಱತ ಮೋಱೆಯು ಗಂಟುಪುರ್ಬಿನ ತಱಟುಮಂಡೆಯು ದೊಡ್ಡ ಮೂಗಿನ . . . ಕುಱುಬನು (ಬಸಪು. ೨೦–೧೨). [ ತಱಟು (< ತಱಂಟು) + ಮಂಡೆ$_1$ ]

**ತಱತಱ** (ನಾ). ೧. ಅಸ್ತವ್ಯಸ್ತತೆ. 'ತಱತಱನೆ' ಪರಾ. ೨. ಒಣಗಿರುವಿಕೆ; ಬಾಡಿರುವಿಕೆ: ನೆಱೆ ಕಾಯ್ದ ಬಲ್ವಿಸಿಲೊಳು ಕೋಮಲತನು ತಱತಱ ನಾಗಲಂದಲ್ಲಿ (ಶ್ರೀಪಾಲ. ೪–೫೯). ೩. ದಿಕ್ಕುತೋಚದಂತಾಗುವಿಕೆ; ತಬ್ಬಿಬ್ಬಾಗುವಿಕೆ. 'ತಱತಱಿಸು', 'ತತ್ತರ' ಪರಾ.

**ತಱತಱಾಗು** = ಅಸ್ತವ್ಯಸ್ತವಾಗು ; ತಾರುಮಾರಾಗು ; ಕೆದರಿ ಹೋಗು: ತಱತಱಾಗಿರ್ದ ಕುಂಕುಮದ ನಿಜವದನಮಂ ತೆಱೆದ ಕಣ್ಗಳೊಳೆ ಧವಳಿಸಿದ ನಿಜವದನಮಂ (ಆದಿಪು. ೭–೨೭ ರಗಳೆ) ; ಮತ್ತಮೊರ್ವಳ್ ಕಂಪಿಂಗೆ ಪಾಯ್ದ ಪಱಮೆಯು ಗಱಿ ತಾಗೆ ತಱತುಱ[ ತಱತಱಾ ]ಗೆ ಪರೆದ ರೇಖೆಯಂ ನಖಾಗ್ರದಿಂ ತೊಡೆದು ತಿರ್ದಿ ಜಗಮಂ ಕಡೆಗಣಿಸಿ ಗೆಲ್ದ ಕಡೆಗಣ್ಗಳ ಗೆಲ್ಲಮಂ ಶಾಸನಂ ಬರೆವಂತೆ ಬರೆಯೆ (ಲೀಲಾವ. ೧೨–೭೧ ವ).

[ ದೇ.॥ ತೆಲು. ತಱತಱ ]

**ತಱತಱಂ** (ಅ). ಅಸಂಬದ್ಧವಾಗಿ; ಅಸ್ತವ್ಯಸ್ತವಾಗಿ: ಆರೆವೊರಕನುಮೆನಿಸಿ ತಱತಱಂ ನುಡಿದು ಸಭಾಂತರದೊಳ್ ರಂಜಿಪುದೆ (ಅಜಿಪು. ೧–೮೯).

[ < ತಱತಱ ]

**ತಱತಱನೆ** (ಅ). ಅಸ್ತವ್ಯಸ್ತವಾಗಿ ; ಸಿಕ್ಕಾಪಟ್ಟೆ : ಮಹಾಮಹೀಜದೊಳ್ ತಱತಱನಾಗಿ ಮಾಱೊರಸುತುಂ ಮಲೆಯುತ್ತೊಲೆಯುತ್ತೆ ಸುತ್ತಿ ಕೈ ಪಱಿದ ಗಜೇಂದ್ರನಂತೆ ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೧೦೦೨). [ ತಱತಱ + – ಅನೆ$_1$ ]

**ತಱತಱಿಸು** (ಕ್ರಿ). ಒದ್ದಾಡು ; ಕಳವಳಿಸು : ಕಿಱುವೊಗೆಗಳೊಗೆಯೆ ದಳ್ಳುರಿ ತುಱುಗೆ ನಭಂಬರೆಗಮಳುರ್ವ ನಿಜಶಿಖಿಯಿಂದಂ ಬಿಱುವರಿಯ ಶಿಖಿಗೆ ತಾರಗೆ ತಱತಱಿಸುತಮಿರ್ದುವು (ಬಂಹರಿ. ೧೦–೪೦) ; ಜಗವಿದು ತಱತಱಿಸುತಿಹುದಘದೊಳಗೆ (ಸ್ವರೂಪಾ. ೨–೧೯); ಮಱದಂತಿಹ ಬೆದಱುವ ಬೀಗುತ್ತಿಹ ತಱತಱಿಸುವ ಬೆಱತಂತಿಹ ಮೈಯಂ (ಯೋಗಾಂವಿ. ೨–೨೬).

[ ತಱತಱ + – ಇಸು$_3$ ]

**ತಱಬಱಿಕ** 'ತಾಱಗಬೀಱಗ' ನೋ.

**ತಱವಳ** 'ತಳವಱ' ನೋ.

**ತಱವಳಿಕೆ** 'ತಳವಱಿಕೆ' ನೋ.

**ತಱವಾಳ** 'ತಳವಱ' ನೋ.

**ತಱವಾಳಿಕೆ** 'ತಳವಱಿಕೆ' ನೋ.

**ತಱಿ$_1$**, ತರಿ$_1$, ತರೆ, ತಱೆ (ಕ್ರಿ). ೧. ಕತ್ತರಿಸು ; ಛೇದಿಸು ; ಸೀಳು ; ತುಂಡುಮಾಡು : "ತಱಿ – ಛೇದೇ (ಕತ್ತರಿಸು), ಖದಿರೇ ಚ (ಕಗ್ಗಲಿ ಮರ)" (ಶಮುಧಾ) ; ಬಡಿ ಕೊಲೆ ಕಟ್ಟೆಱಿ ಮುಱಿ ತಱಿ[ಪಾಠಾಂ. ಕಡಿ] ನಡುವಂ ಕೊಱೆ . . . ಮೊಗಮಂ ಸುಡು (ಪದ್ಮರಾ. ೧೨೭–೯) ; ದಾವಶಿಖಿ ಶಿಖೆಯನಿಱಿಪುದಿದಾವ ಸರಲ್ ಪೇಱಿಮೆನಿಪ ಸರಲಿಂ ತಱಿದಂ (ಪಂಪಭಾ. ೧೩–೪೧) ; ಖದಿರಯುಗಳಮಂ ತಱಿವಂತೊಂದಿನಿಲ್ಲದಿಂದೆ(ದಲ್) ತತ್ತಱಿಂದಱಿವೆನೆಂದು (ಶಾಂತಿಪು. ೩–೬೬ ವ) ; ಶ್ರೀಗಂಧವ ಕೊಱೆದಡೆ ತಱಿದಡೆ ತೇದಡೆ . . . ಪರಿಮಳ ಘನವಾಗಿಪ್ಪುದಲ್ಲದೆ ದುರ್ಗಂಧವಾಗದು (ಚನ್ನವ. ಕ. ೧೨೮–೨೮೬) ; ಸಮಿತ್ಕಾಂಡಮನಱ್ತಿಯಿಂ ತಱಿವವೋಲ್ ತಱಿದು (ಜಗವಿ. ೧೮–೮೨) ; ಪರಿವುದು ಮನಖೇದವನು ತಱಿವುದು ದುಗುಡವೃಕ್ಷದ ಬೇರ (ಅಂಜಚ. ೮–೨೩) ; ಗಿರಿಯ ತಱಿವರೆ ಶಕ್ರನಲ್ಲದೆ ನೆರೆದ ದಿವಿಜಸಮೂಹ ಮಾಡುವ ಭರವಸಿಕೆ ತಾನೇನು (ಕುವ್ಯಾದ್ರೋ. ೩–೨೨) ; ಇಱಿಯಲೆತ್ತಿದ ಕೈಗಳೆಲ್ಲವ ತಱಿದು ಬಿಸುಟನು (ಕೌಶಿರಾ. ೪೨–೨); ಅರಿಯು ಬಂದಾಗ ತಱಿಯದ ಸುರಿಗೆಯನು ಅರೆದು ಕುಡಿಯೆಂದ (ಸರ್ವಜ್ಞ. ೭೫೮). ೨. (ಹೂವು ಮೊದಲಾದುವನ್ನು) ಕೀಳು ; ಕೊಯ್ಯು : ಕುಸುಮವ ತಱಿದು ತಂದು ಶಿವಾಗಮದಿ ವಿಸ್ತರಿಸಿ ಸಿತಿಕಂಠನ ಪದಾಂಬುಜಕೆಱಗಿ ಬೀಳ್ಕೊಂಡ (ಕುವ್ಯಾಸ. ಓರಿಇ. ೭–೩೨) ; ಇರವಳಿ ದಾತನ ಹೆಸರಾಂತು ವನದೊಳಗಿರಲಿರವಂತಿಗೆ ತಱಿದು ಹರತಪಧ್ವಂಸಿಯ ಮಟ್ಟಾಯುಧವೆಂದು ಸುರಗಿಯ ಮುಱಿದಿಕ್ಕಿದಳು (ಮೋಹತ. ೨೪–೬೬) ; ತಱಿದ ನೈದಿಲಪೂಗಳೆಂತೆಸೆವ ಕಣ್ಗಳಿಂ (ಚಬಪು. ೧೯–೪೪). ೩. ನಾಶ ಮಾಡು ; ಧ್ವಂಸಮಾಡು : ಧರಣಿಯಲ್ಲೀ ನೃಪನ ವಂಶವ ತಱಿವೆನಿಪ್ಪತ್ತೊಂದು ಭಾರಿಯು (ಕುವ್ಯಾಆ. ಓರಿಇ. ೨೬–೨೪) ; ದುರಿತಗಳೆಲ್ಲವ ತಱಿದು ಸಿರಿ ಪುರಂದರವಿಠಲ ಎನ್ನನು ಪೊರೆದು (ಪುರಂದ. ೧–೯–೩) ; ಬಾಲೆಯೊಡಲ ಸಂತಾಪವ ತಟ್ಟನೆ ತಱಿದು (ಮೋಹತ. ೧೦–೧೮) ; ಎಱಗಿದ ಭಕ್ತರೊಳಘವ ತಱಿದು (ಕಂನವಿ. ೭–೯೮). ೪. ತರಚು ; ಗೀರು ; ಗಾಯವಾಗು : ತಱಿದು ಕೊಳೆ ದೋಣಿವೋಗಿರ್ದ ಪೆರ್ಬುಣ್ಗಳಿಂ (ಕಾದಂಉ. ೨೭೧ ರಗಳೆ). ೫. (ಕೂದಲು) ಉದುರು ; ಬೋಳಾಗು ; ತರಟಾಗು : ತಲೆ ವಿಂಶತ್ಯಬ್ದದಿಂದಿತ್ತೊಳಗೆ ತಱಿತೊಡಂ . . . ಅಂತಾತ ನಲ್ಪಾಯುವಕ್ಕುಂ (ಲೋಕೋಪ. ೧೧–೨೭). 'ತಱಂಟು' ಪರಾ. **ತರಿ$_1$** : ೧. ಅರಿಭೂಪಾಳರನಾಜಿಯೊಳು ತರಿದು ಕೊಲ್ವೇಕಾಂಗವೀರಂ (ಸೌಇಇ. XI-i, ೮೬–೧೬ ; 1050) ; ಗಂಡುಗಲಿಗಳ ಮಾರಿ ರುಂಡವ ತರಿವಳು (ಕನ್ನಜಾ. ೯೬). ೩. ತರಿದು ಸಮಸ್ತ ವಿಘ್ನಂಗಳ ಲೋಕವ ಪೊರೆದು . . . ಬಿತ್ತರಿಸು ನೀ ಶುಭತತಿಯನ್ನು (ಸೌಗಂಪ. ೧–೩) ; ಕಾನನವ ಪೊಕ್ಕು ಕಿಮ್ಮೀರಾದಿಗಳ ತರಿದು ಮಾನಿನಿಗೆ ಸೌಗಂಧಿಕವನೆ ತಂದ (ಕಭವಿ. ೪೪) ; ಹಿಂದಕ್ಕೆ ಪರಶುರಾಮ ರಾಜರನ್ನೆಲ್ಲ ತರಿದು ಸವರಿ ನೆಲವನ್ನು ಈಯಲಿಲ್ಲವೆ ಬ್ರಾಹ್ಮಣರಿಗೆ (ಬಿದುರಿ. ೫) ; ಮಲೆಯ ಬನ ಬನವ ತರಿವ ಮೂಡಲಗಾಳಿ (ಉಯ್ಯಾಲೆ. ೧೫–೫) ; ತರಿದುಬಿಡು, ತೊರೆದುಬಿಡು, ತೊಡೆದುಬಿಡು ನೆನ ಹಿಂದ ಕರೆಕರೆಯ ಬೇರುಗಳ (ಮಂಕುಕ. ೬೪೮). ೬. ಹೊಡೆ ; ಬಡಿ ; ಥಳಿಸು: ತರಿದು ಲಂಕಿಣಿಯ ಲಂಕಾನಗರದೊಳಗೆಲ್ಲ ಚರಿಸಿ (ವೆಂಕಾರಾ. ೫–೩ ಸೂಚನೆ) ; ಅವಳು ಆ ಮಗುವಿಗೆ ಬಿಡುವಿಲ್ಲದಂತೆ ಕೆಲಸ ಹೇಳುತ್ತಿದ್ದಳು ; ಕೋಪ ಬಂದಾಗ ಹಿಡಿದುಕೊಂಡು ತರಿಯುತ್ತಿದ್ದಳು (ಪುನರು. ೭) ; ಇದೇನು ದನ ತರಿದ ಹಾಗೆ ಹೊಡೆಯೋದು (ಭೀಮಕಾ. ೧೬). **ತರೆ** : ೧. "ಕೊಯ್ಯು, ಕೆತ್ತು, ಕೊತ್ತು, ಕಡಿ, ಕತ್ತರಿಸು, ಸವರು, ತರೆ" (ಕಂನುಹು. ೮೨). ೨. ಹುಡುಗರು ಗಿಡದ ಹೂವನ್ನೆಲ್ಲಾ ತರೆದಿದ್ದಾರೆ (ರೂಢಿ). ೪. ಅವನ ವಾರದ ಗಡ್ಡ ಅದರ ಮಿದುಕೆನ್ನೆಯನ್ನು ತರೆದಿರಬೇಕು (ಖಳಜೀ. ೧೩೦). **ತಱೆ** : ೧. ಮುನಿಗಳ ಗಡ್ಡಂಗಳಂ ಜಟಾಳಿಯನುಱೆ ನೆಟ್ಟನೆ ತಱೆದುಟ್ಟುದನೆಳೆಯಲ್ (ವೀರವಿ. ೧೨–೬೫). ೪. ತಂತಮ್ಮ ಮಕ್ಕಳ ತಱೆ [ಪಾಠಾಂ. ಱಿ]ದ ಮೆಯ್ಯುಮಂ ಮುಱಿದ ಕೆಯ್ಯುಮಂ ಪಱಿದ ಕಿವಿಯುಮಂ . . . ಯಶೋದೆಗೆ ತೋಱಿ ದೂಱೆ (ಅರ್ಥನೇ. ೭–೮೫ ವ) ; ತುಱುತುಱುನೆ ತಿಂಬ ತನುವಂ ನೆಱೆ ಪಂದಿಗಳೊಱಸಿಕೊಂಡ ಭರದಿಂದೆತ್ತಂ ತಱೆಯದ ಕೋಡುಂಗಲ್ಲುಂ ಮುಱಿಯದ ಪೆರ್ಮರನುಮಿಲ್ಲಮಂತಾ ಕಾಡೊಳ್ (ಸೂಕ್ತಿಸು. ೩–೯೨). ೭. ತೆಗೆದುಹಾಕು ; ಮಾಫಿ ಮಾಡು ; ಬಿಟ್ಟುಬಿಡು : ನಂಮ ಅರಮನೆಗೆ ಸಲುವ ಮದುವೆಯ ಸುಂಕವನು ಕುಳವ ತಱೆದು ಬಿಟವಾಗಿ (ಎಕ. XII, ತಿಪಟೂ. ೧೨೯–೧೭ ; 1548).

**ತಱಿತಱಿ**, ತರಿತರಿ$_1$ (ದ್ವಿರುಕ್ತಿ) : ಪೊಡೆಪೊಡೆ ಕಡಿಕಡಿ ತಱಿತಱಿ (ಧರ್ಮಾಮ್ಮ. ೬–೧೯೨) ; ಬಿಡದೆ ದೊನ್ನೆಗಳಲಿ ರುಧಿರಮಂ ಹಿಡಿದಲುಗಳಂ ತಱಿತಱಿದು (ಬಸಪು. ೩೮–೩೩) ; ತೆಗೆದು ದಾರಿಗೆ ಹೆಜ್ಜೆಹೆಜ್ಜೆಗೆ ಚಿಗುರು ದೋಱಿದ ತಳಿರ ತಱಿತಱಿ[ಪಾಠಾಂ. ಪಱಿಪಱಿ]ವಗಲದಲಿ ಪಸರಿಸುತ (ತೊರರಾ. ೨–೪–೧೯) ; ತಱಿತಱಿದು ಕತ್ತರಿಸಿ ಚುಚ್ಚಿ ನಟ್ಟುಚ್ಚಳಿಸಿ

(ಜೈಮಿಭಾ. ೪-೪೪); ನಿರಿ ಬಿಗಿದು ಕರೆಕರೆದು ತರಿತರಿದು . . . ಉರುವಲಂ ತುರುಗಲಿಂ ಪೊರೆಗಾಯ್ದರಾವೆಣ್ಗಳು (ಕಾಲೂರ. ೧೨೫-೨೬೪).

[ದೇ.॥ ತಮಿ. ಮಲ. ತಱಿ ; ತುಳು. ತರಿಪು; ತೆಲು. ತರುಗು, ತರುವು, ತಱುಗು, ತಱುವು, ತರ್ಗು, ತರ್ವು ; ಕೊಲಾ. ನಾಯ್ಕಿ. ತರ್ಗ್ ; ಕುರುಖ್. ತಾರ್ನಾ ; ಮಲ್ತೊ. ತರೆ ; ಬ್ರಾಹುಈ. ತಱಿಂಗ್ ]

**ತಱಿ$^{3}_{2}$, ತರಿ$_2$** (ನಾ). ೧. ಕತ್ತರಿಸುವಿಕೆ. ೨. ಕಗ್ಗೊಲೆ. 'ಕುಱಿದಱಿ$_2$' ಪರಾ. ೩. ಅಕ್ಕಿ, ಗೋಧಿ ಮೊದಲಾದ ಧಾನ್ಯಗಳ ಸಣ್ಣ ನುಚ್ಚು ; ರವೆ : ತಱಿಯಾದ ಸೊಜ್ಜಿಗೆಯ ಹಿಟ್ಟನೊಳು ಬೆಣ್ಣೆ ಸಕ್ಕರೆಯಿಕ್ಕಿ ಬಟ್ಟ ವಾಲೊಳಗಂ ಬಲಿಯ ತೆಱದಿ ಬೆರಸಿ (ಸೂಪಶಾ. ೧-೨೦). ೪. ಒರಟಾದುದು; ಬಿರುಸಾದುದು. 'ತಱಿಗಲ್ಲು' ಪರಾ. ೫. ಹರಿತವಾದ ಬೆಣೆ; ಚೂಪಾದ ದಸಿ : "ಕೂರದಸಿ [ಪಾಠಾಂ. ಮಸಿ, ಸಸಿ] ಖಂಡನಗಳೊಳ್ ತಱಿ" (ಶಬ್ದಮಂ. ೧೧೭). ೬. ಮಗ್ಗ. 'ತಱಿಕಡಮೆ' ಪರಾ. **ತರಿ$_2$ :** ೩. ಹಿಟ್ಟು ಬೀಸು ಅಂದರೆ ಶುದ್ಧ ತರಿ ಮಾಡಿಡುವಳು (ದೇಶಾಂಕ. ೧೧). ೫. ಬೆಟ್ಟನ ಕಲ್ಲೊಳ್ ತರಿಯಂ ಬೆಟ್ಟಲೊಡಂ ಮೊನೆಪಿಡುತ್ತಮೊಳವುಗ ದೆಂದುಂ (ನೀತಿಮಂ. I, ೨೮೨); ಅತ್ತಿತ್ತ ತರಿಯಿರಿತ ಕೂರುಗುರ್ಗಳ ಕೊರೆತ (ಕಾಲೂರ. ೯೭-೧೯೦) ; ಮಸೆದ ಬಯಕೆಯ ತರಿಯಸೊರೆಯೊಳಡಗಿಸಿದಂ (ಕಾಲೂರ. ೧೨೬-೨೬೮). ೭. ಕಲ್ಲು, ಮರಳುಗಳ ಸಣ್ಣ ಕಣ : (ಸ).

**ತರಿತರಿ$_2$** (ದ್ವಿರುಕ್ತಿ) : ಸೂರ್ಯನನ್ನು . . . ಪರೀಕ್ಷೆ ಮಾಡಿದರೆ, ಆತನ ಮೇಲ್ಮೈ . . . ತರಿತರಿಯಾಗಿ ಕಾಣುತ್ತದೆ (ಜ್ಯೋತಿರ್ವಿ. ೮೭) ; ಒಳವಲಯದಲ್ಲಿ ತರಿತರಿಯಾಗಿರುವ ದ್ರವರೂಪದ ವಸ್ತುವಿರುತ್ತದೆ (ಪ್ರಾಣಿಶಾ. ೪೪). [<ತಱಿ$^{3}_{1}$./ತಮಿ. ತಱಿ, ತಱಿಕ್ಕೈ; ಮಲ. ತಱಿ, ತರಿ]

**ತಱಿ$^{3}_{3}$, ತರಿ$_3$, ತರೆಯ, ತಱುಯ, ತಱಿಯ$_1$** (ನಾ). ೧. ಒಂದು ಬಗೆಯ ಪೊದೆ: (ಸ). ೨. ಒಂದು ಬಗೆಯ ಮರ; ಕಗ್ಗಲಿ ಮರ; ಖದಿರವೃಕ್ಷ: "ತಱಿ—ಭೇದೇ (ಕತ್ತರಿಸು), ಖದಿರೇ ಚ (ಕಗ್ಗಲಿಮರ)" (ಶಮಧಾ) ; ತಱಿ ತಾಱಿ ಹೊನ್ನೆ ಕುಟಜಂ (ಕಾವ್ಯಸಾ. ೧೦೪೦ ಶೂದ್ರಕ) ; ತಱಿಯ ಪುಳ್ಳಿಗಳಂ ಕಡಿದೊಟ್ಟಿ ಕಿಚ್ಚನಿಕ್ಕಿ ಸುಟ್ಟು (ವಡ್ಡಾರಾ. ೧೧೪-೧೨) ; ಅಲ್ಲಿಯ ಮರಂಗಳೆಲ್ಲಂ ತಱಿಯ ಮರಂಗಳೆ ಕಲ್ಗಳೆಲ್ಲಂ ಮೊನೆಕಲ್ಗಳೆ (ಬಂಹರಿ. ೮-೧೩ ವ) ; ತಱಿ ತಾಱಿಯತ್ತಿ ಮುತ್ತುಗ ಬೆತ್ತಂ (ಮಹಾನೀ. ೪-೭೨) ; ತಾಱಿ ತೇಗು ತಱಿ ತಂಡಸು ಬೊಬ್ಬುಲಿಯಿಪ್ಪೆ . . . ಆದಿಯಾದ ಪೆರ್ಮರಗಳ ಕಾಡೊಳ್ಳೆತರುತಮಿರ್ದರ್ (ಪುಣ್ಯಾಸ್ರ. ೩-೭೪) ; ತಱಿ ತಾಱಿ ಕಡವ ಕನ್ನೆಲ್ಲಿ . . . ತುಂಬುರವರಗಳಿಂ ನಿಲ್ಲದೆ ಮೆಱೆದುದಾ ವಿಪಿನ (ಕುರಾಸಾಂ. ೨೭-೫೫). **ತರಿ$_3$ :** ೧. 'ಎಡತರಿ' ಪರಾ. **ತರೆಯ :** ೨. "ಗಾಯತ್ರೀ . . . ದಂತಧಾವನಃ — ೪ ತರೆಯದ ಮರದ ಹೆಸರು, ಕಗ್ಗಲೀಮರ" (ಸಿದ್ಧಾಂತಿ. ೧೦೮). **ತಱಿಯ :** ೨. "ದಂತಧಾವನಃ, ಖದಿರ, ಗಾಯತ್ರೀ = ತಱಿಯದ ಮರ" (ನಾಚರಾ. ೬) ; "ತಱಿಯವದು ಖದಿರ ಮೆನಿಸಿಕ್ಕು" (ಮಂಗರಾ. ೩೬-೧೭) ; ಪುತ್ತಿಸಂತೆ ತಪದೊಳ್ಮೇಲಸಿಯನಾಗದೆ ತಱಿಯದ ಮರನಂತೆ ವಕ್ರವಾಗದೆ (ಧರ್ಮಾಮೃ. ೫-೯೯) ; ತಱಿಯವೆ ಕರೆವುತಿರಲಿಂತಱಿಯದಿಹರೆ ಮತ್ತಿಯೇ ಹೇಳೆನ್ನ ದುಃಖಕೆ ಮತ್ತೆ ಪರಿ ಹಾರವಾವುದೋ (ಬಸಪು. ೪೫-೩೮) ; ಮರವಿವಕೆ. ತಱಿಯ ಹೊನ್ನೆಗಳು ಬಾಗೇ (ವೀಶೈಪು. ೭-೫-೫೦). **ತಱಿಯ$_1$ :** ೨. ಚಂದನದ ಸನ್ನಿಧಿಯಲಿ ಪರಿಮಳ ತಾಗಿ ಬೇವು ಬೊಬ್ಬುಳಿ ತಱಿಯ ಗಂಧಂಗಳಾಗವೆ (ಬಸವ. ೧೧೦); ತಡಸು ಕಕ್ಕೆಯಂಕೋಲೆ ತಱಿಯಂ ಹಲಸು ಹೇಸವಂ . . . ಮೊದಲಾದ ವೃಕ್ಷಂಗಳಿಂ ವನಮೆಸೆದುದು (ಚಿಬಪು. ೫೩-೧೮).

**ತಱಿ$^{3}_{4}$** (ನಾ). ೧. ಜೋಡಿಸಿರುವುದು ; ಕೂಡಿಸಿರುವುದು ; ಸಂಬಂಧ ಪಟ್ಟಿರುವಿಕೆ : (ಸ). ೨. ನಿಶ್ಚಯಿಸಿದುದು; ನಿರ್ಣಯಿಸಿದುದು. 'ತಱಿಸಲ್' ಪರಾ. [ದೇ.॥ ಮಲ. ತಱಿ ]

**ತಱಿಕ** (ನಾ). ಕತ್ತರಿಸುವವನು ; ಕಡಿಯುವವನು ; ಕಟುಕ : ತಾಯ ಕೊರಳ ತಱಿಕನೆಂದರು ನಿನ್ನ ನಾ ಬಿಡೆನೋ (ಪುರಂದ. ೧-೨೩-೨).

[ ತಱಿ$^{3}_{1}$ + – ಕ$_3$ ]

**ತಱಿಕಡಮೆ** (ನಾ). ಒಂದು ಬಗೆಯ ತೆರಿಗೆ ; ಮಗ್ಗದ ಮೇಲಿನ ತೆರಿಗೆ : ಯಿ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ . . . ಸೆಕುಕಡಮೆ ತಱಿಕಡಮೆ ಆಸುವವುದು ಮಕ್ಕಳ ಕಡಿಮೆ . . . ಹಲ ಉಪಾಧಿಗಳೂ ಸಹ ಸೇರ್ಸಿ ಕೊಟ್ಟೆವಾಗಿ (ಸೌಇಇ. IX-ii, ೪೭೩-೮ ; 1470) ; ತಱಿಕಡಮೆ ಮೂವಡೆ ಮರವಡೆ ಕಳುವಡೆ . . . ಅಕ್ಷೀಣಿ ಆಗಾಮಿ ಸಿದ್ಧ ಸಾಧ್ಯವೆಂಬ ಅಷ್ಟಭೋಗ ತೇಜಸಾಮ್ಯಗಳನು (ಸೌಇಇ. IX-ii, ೪೭೭-೬ ; 1472).

[ ←ತಮಿ. ತಱಿಕ್ಕಟಮೈ ]

**ತಱಿಕೇರಿ** (ನಾ). ಒಂದು ಊರಿನ ಹೆಸರು; P ಚಿಕ್ಕಮಗಳೂರು ಜಿಲ್ಲೆಯ ಈಗಿನ ತರೀಕೆರೆ: ಆಱಿಯೂರು ಹಱಿಗೆ ಕಡವೂರು ಸೀಮೊಗೆ ತಱಿಕೇರಿ ಹೆನ್ನವುರದ ಗಾವುಣ್ಡವೃತ್ತಿಯುಮನಿರ್ಪ್ಪತ್ತು ಕುದುರೆ ಗವಯ್ಯೂರಾಳ್ಗಳನಿತ್ತು (ಎಕ. VII, ಶಿವಮೊ. ೧೧-೫೦ ; 1085 ?).

[ ತಱಿ$^{3}_{3}$ ? + ಕೇರಿ ]

**ತಱಿಗಲ್ಲು** (ನಾ). ಒರಟುಗಲ್ಲು ; ಬಿರುಸಾದ ಕಲ್ಲು : ಮೊರಡಿಗಳೊಡೆದ ತಱಿಗಲ್ಲೊಳಗೆ ಹೊಸ ಕಡಿವಡೆದ ಕೊಲ್ಲಿಯ ಕುಮ್ಮರಿಯ ಮೇಲೆ . . . ಎಳೆದು ಕೊಂಡೊಯ್ವರು ಮಹಾಪಾತಕನನು (ಪ್ರಹ್ಲಾದ. ೯-೩೯).

[ ತಱಿ$^{3}_{2}$ + ಕಲ್ಲು (<ಕಲ್$^3$) ]

**ತಱಿಗೆಂಡ, ತರಿಗೆಂಡ** (ನಾ). ಉರಿಯುವ ಕೆಂಡ; ನಿಗಿನಿಗಿಯಾದ ಕೆಂಡ : ಮಱದೆನೊಡಲನರಗಳಿಗೆ ನಾನೇನೆಂದಱಿಯದೆ ಮರನಾದೆನು ಮೇಲೆ ತಱಿಗೆಂಡವನೊಡಲೊಳು ಹೊಯಿದುರುಹಿದ ತೆಱನಾದುದು (ಸೊಬಸೋ. ೭-೫೦) ; ಬಳಿಕ ಬೇವಾಗ ಗಂಜಿಯ ಬಸಿದುಕೊಂಡು ಮುಚ್ಚಳ ನಿಕ್ಕಿ ಘಟ್ಟಿ ಪಾವಡೆಗಟ್ಟಿ ತಱಿಗೆಂಡದೊಳಗೆ ಹೊಂಗಿಸಿಕೊಂಡು (ಸೂಪಶಾ. ೩-೨) ; ತಱಿಗೆಂಡ ಕಾದೆಣ್ಣೆಯಂಬಲಿ ಮಳೆಯನು ಕಱಿದಾಳ್ವರಿಗಿಳಿದರನು ಬಱಕೆಯ್ದು ನಿಂದಿಱಿದಾಡಿದರು (ಕುರಾಸಾಂ. ೪೫-೭); ತಱಿಗೆಂಡಕೆ ಬಂದು ಮುಗ್ಗಿ ಮುತ್ತುವ ಬಲುವೊಜಿಲೆಯ ಬ್ಬಳಗದಂದದೊಳು ನೆಱಿಗಲಿರಾಯ ರಾವುತರು ಮೂದಲಿಸುತ ತಱುಬಿದರು (ರಾಮವಿ. ೧೮-೪೪) ; ತಱಿಗೆಂಡ ದೊಲು ದುರ್ಜನರವರ ನೀ ಕಂಡು ನುಡಿಸದಿರು (ಶಂಕರಾ. ೧೭-೪೭). **ತರಿ ಗೆಂಡ :** ತರಿಗೆಂಡದ ಮೇಲೆ ಸುಟ್ಟ ರೊಟ್ಟಿಯ ವಾಸನೆ ಅಡುಗೆಮನೆ ಯಲ್ಲಿ ತುಂಬಿತ್ತು (ರೂಢಿ). 'ತನಿಗೆಂಡ' ಪರಾ. [ ತಱಿ ? + ಕೆಂಡ ]

**ತಱಿಗೊಱಡು** (ನಾ). ನಿಗಿನಿಗಿ ಕೆಂಡಗಳನ್ನು ಚೆಲ್ಲುವ ಒಂದು ಬಗೆಯ ಸಾಧನ : ಹುರಿವ ಮಳಲ ರಾಸಿ . . . ಉರಿವ ಪುಲ್ಗಳ ದೊಂದೆ ಸುರಿವ ಕೆಂಡದ ತಱಿಗೊರಡೆ[ಪಾಠಾಂ. ಕರಮೆ]ಸೆದುದು ದುರ್ಗದೊಳಗೆ (ಕುರಾಸಾಂ. ೩೭-೫೫). [ ತಱಿ ? + ಕೊಱಡು (<ಕೊಱಂಡು) ]

**ತಱಿಚು, ತರಚು$_2$, ತರಿಚು** (ನಾ). ೧. (ಆಲಂ)ಹೀಯಾಳಿಸುವ ಮಾತು; ನಿಂದೆ ; ಮೂದಲಿಕೆ : ದೂರದಿಂದಿಡುವ ತಱಿಚುಗಳ ರವಗಳಿಗೆ ಮಿಗೆ ಹುಬ್ಬಿಱಿದು ಹಣುಗುತ ಹರಿಬದಾಜಿಯ ಹೊಱಿಗೆವಾಳರ ಬರವ ಬಯಸು ತಿರ್ದನಾ ಹನುಮ (ತೊರರಾ. ೫-೫-೨). 'ತಱಿಚುಗೆಡೆ' ಪರಾ. **ತರಚು$_2$ :** ೨. ವಿರೋಧ ; ಪ್ರತಿಭಟನೆ ; ತಿಕ್ಕಾಟ : ಇನಿತು ಮಾತ್ರಕೆ ತರಚಿನಾಳೋಚನೆಗಳೇತಕೆ (ಕೋಗಯ. ೧೭-೫೭) ; ಅರಿತು ಸರಿಯಲ್ಲದರ ಕೂಡಣ ತರಚು ಲೇಸಲ್ಲೆಂಬ ಗಾದೆಯ ಮರೆದು ತಾನೇಕವನ ಕೆಣಕಿದೆ ನೆಂದನಸುರಾರಿ (ಕೋಗಯ. ೨೭-೩). **ತರಿಚು :** ೧. 'ತರಿಚುಗೆಡೆ' ಪರಾ.

[ <ತಱಿ$_1$ ]

**ತಱಿಚುಗೆಡೆ, ತರಿಚುಗೆಡೆ** (ಕ್ರಿ). ಹೀಯಾಳಿಸು ; ನಿಂದಿಸು : ಆಗಲೇಱಿಸಿ ನುಡಿದ ನುಡಿ ತಾನೀಗಳೇನಾಯಿತ್ತು ನುಡಿಗಳ ತಾಗನಱಿಯದೆ ತಱಿಚು

ಗೆಡೆವರೆ ಗರುವರಾದವರು (ಕುವ್ಯಾವಿ. ೮-೧೫) : ಅಳ್ಳಿದೆಯ ಮನ್ನೆಯರ ನೊಗ್ಗಿನ ಡೊಳ್ಳುಗರ ಕಟವಾಯ ಕೊಯ್ ತಲೆಗಳ್ಳರಿವದಿರು ತಱಿಚು ಗೆಡೆವರ ಹೋಗ ಹೇಳು (ಕುವ್ಯಾದ್ರೋ. ೩-೨೦) ; ತಱಿಚುಗೆಡೆವುದ ಬಲ್ಲೆ ನೀ ಹುಲು ಪಱಿಯ ಕಪಿ ನೀ ಕೆಣಕಿ ಸಾಯದೆ ಕೆಲಕೆ ಸಾರೆಂದ (ತೊರರಾ. ೬-೨೩-೬). **ತರಿಚುಗೆಡೆ :** ಅರಿಯದಜ್ಞಾನದಲಿ ದೇವರ ಚರಣಕಮಲವ ಸೇರಿ ಬದುಕದೆ ತರಿಚುಗೆಡೆದರು ನರಕ ಪೌಂಡ್ರಕ ಮಗಧರೆಂಬವರು (ಕೋಗಯು. ೩-೪೨). [ ತಱಿಚು + ಕೆಡ್$_2$ ]

**ತಱಿತ** (ನಾ). ಕತ್ತರಿಸುವಿಕೆ ; ನಾಶಮಾಡುವಿಕೆ. 'ಕುಮ್ಮರಿದಱಿತ' ಪರಾ. [ ತಱಿ$_1$ + – ತ$_2$ ]

**ತಱಿಪಾಟ್**(ನಾ). ಒಂದು ಊರಿನ ಹೆಸರು: ಬೆಳ್ವಿಂದ ಗುಡ್ಡನೂರ್ತ್ತಱಿ ಪಾಟಿತಿ ಪ್ರಸಿದ್ಧಾಗ್ರಾಮಾಃ (ಇಆ. XII, ೧೬-೯ ; 735). [ ತಱಿ? + ಪಾಟ್ ]

**ತಱಿಮಿಂಡಿ** 'ತುಱುಮಿಂಡಿ' ನೋ.

**ತಱಿಮೊರಬು** (ನಾ). (?) : ಕಾಯಾನಳನಳುರ್ದು ಕಳಿವಂತಳುರೆ ಬಱಲ್ದ ಟಲ್ದುಂ ಧೃತಿಯನವಳಂಬಿಸಿ ಬಿಸಿಲಂ ಬೆನ್ನೊಳಿಕ್ಕಿ ನೀರ್ನೆಟಿಲನಱಿಸಿ ಗುಗ್ಗರಿಗಲ್ಲ ವರಿವರಲ ತಱಿಮೊರಬಿನ ನುಚ್ಚುವಣಲ ನೀರಱಿದು ಪರಿದು ದಿಂಟೆಯ ದರಿಯ ಕುಱಿಯ ಕುತ್ತುಱ ಕುಱಿವಳ್ಳಮಂ ಕಂಡದಱ ಬಱಿ ವಿಡಿದು ಬೆಳೆದ ಬಳ್ಳಿಯ ಪಸಿಯ ಪುಲ್ಲ ಪೂಲಿಯ ನಾನಲನಱಿದು ನಡೆ ವಾಗಳ್ (ಲೀಲಾವ. ೬-೪೯).

[ P ಇದು 'ತಱಿಮೊರಡಿ' ಎಂಬುದರ ಅಪಲಿಖಿತವಿರಬಹುದೆ ? ]

**ತಱಿಯ** 'ತಱು$_3$' ನೋ.

**ತಱಿಯಿಸು, ತಱಿಸು** (ಕ್ರಿ). ೧. ಕತ್ತರಿಸಂ ; ಸೀಳು ; ಛೇದಿಸಂ : ಕ[ರು]ಳ ಬೋ[ನಿಡಿ]ಗಲ್ಲೊಳಿಕ್ಕಿ ಎಟ್ದಿ[ಯ]ಮಗೆ ಪಲ[ರ್ಮ್ಮ]ಡಿ ಆದಿತ್ಯಂಗೆತ್ತಿ ಇತ್ತಕ್ಕೆಮಳ್ಗೆಲ್ಲ ತೋಱಿ ಬೇರನ್ದಱಿಯಿಸಿ × × ತೊಟ್ಟಿರ್ದು ತಂಱು (ಸೌಇಇ. XI-I, ೧೧-೨೩ ; 865). **ತಱಿಸು :** ೨. ಕತ್ತರಿಸಂವಂತೆ ಮಾಡು. 'ದಿಂಡುದಱಿಸಂ' ಪರಾ.

**ತಱಿಸಿಕೊಳ್** = ಕೊಯ್ಯಿಸಿಕೊಳ್ಳು ; ಕತ್ತರಿಸಿಕೊಳ್ಳು : ತಱಿ [ಪಾಠಾಂ. ತರಹರಿ]ಸಿಕೊಂಡು ಭಕ್ತರಾದರೆಮ್ಮವರು ಕೊಱಿಯಿಸಿಕೊಂಡು ಭಕ್ತರಾದರೆಮ್ಮವರು (ಬಸವ. ೨೫೫) ; ಇರುಳುಗಳ್ಳನ ಕೂಡೆ ಸೇರಿದ ಮರುಳಿನಂತಿರೆ ನೀವು ರಣದಲ್ಲಿ ತಱಿಸಿಕೊಂಬಿರಿ (ಕುವ್ಯಾದ್ರೋ. ೧೭-೩೨). [ ತಱಿ$_1$ + – ಇಸು$_3$ ]

**ತಱಿವಣಲ್** (ನಾ). ತರಿತರಿಯಾಗಿರುವ ಮರಳು : ಕಿಸುಗಾಡುಮಂ ನೆಗ್ಗಿಲ್ಗಾಡುಮಂ ನಿಡುವುಲ್ಲುಮಂ ಮಣಲುಮಂ ಮಣ್ಮಣಲುಮಂ ತಱಿ ವಣಲುಮಂ . . . ಬಳ್ಳಿಯುಮಂ ಕಳ್ಳಿಯುಮಂ ಕಳೆದು ಪೋಗಿ (ಲೀಲಾವ. ೬-೨೦). [ ತಱಿ$_2$ + ಮಣಲ್ ]

**ತಱಿಸಲ್, ತರಿಸಲ್** (ಕ್ರಿ). ೧. ನಿಶ್ಚಯಿಸು ; ನಿರ್ಧಾರ ಮಾಡು ; ಗಟ್ಟಿಮನಸ್ಸು ಮಾಡು ; ದೃಢಸಂಕಲ್ಪ ಮಾಡು : "ತಱಿಸಲ್– ನಿಶ್ಚಯೇ" (ಶಮಧಾ) ; "ತಱಿಸಂದುದು ನಿಶ್ಚಯಾರ್ಥಂ" (ಚತುನಿ. ೪೫) ; ದೋಸಮಿನಿತೆಂದು ಬಗೆದುದ್ಭಾಸಿಸಿ ತಱಿಸಂದು ಕನ್ನಡಂಗಳೊಳೆಂದುಂ ವಾಸುಗಿಯುಮಱಿಯಲಾಱದೆ ಬೇಸಱುಗುಂ ದೇಶಿ ಬೇಱಿ ಬೇಱಪ್ಪುದಱಿಂ (ಕವಿರಾ. ೧-೪೬) ; ಅವರಂ ಪೆಱಗಿಕ್ಕಿ ಕಡಂಗಿ ಕಾದಿ ನಿತ್ತರಿಸುವೆನೆಂದು . . . ತಱಿಸಂದು ತಾಗಿದಂ (ಪಂಪಭಾ. ೧೧-೩೭) ; ಚಕ್ರಮನಾಕ್ರಮಿಸಲೆಂದು ತಱಿಸಂದಿರ್ದ೦ (ಪಂರಾಮಾ. ೧೪-೧೪೧) : ಏವಂದರೇವೋದರೆನ್ನದೆ ಕಾದಲ್ಕುಱಿಸಲ್ವುಮೆಂದು [ಪಾಠಾಂ. ಕಾಲ್ಕುಱಿಸಲ್ವುಮೆಂದು, ಕಾಲ್ಕುಱಿ ಸಂದು] (ಶಮದ. ಸ. ೧೪೮ ಪ್ರಯೋ) ; ತಿಳಿದನೆ ಶಂಭುವೆಂದು ತಱಿಸಂದು ಮಹೋಜ್ಜ್ವಳ ಶೈವಶಕ್ತಿಯಗ್ಗಳಿಕೆಯ ಕಂಡು (ಶಬಶಂ. ४-९४) ; ಅಱಿಯದ ಪೆಣ್ಣನಾದರಿಸಿ ಅಂಜಿಕೆಗಳ ಪಱಿವುಗ್ಗೆಯದೆ ಬಲ್ಮೆದೋಱಿ ತಱಿಸಂದು ಮಳೆಗೆ ಬಾಯ್ದೆಱೆವ ಚಾದಗೆಯೊಳು ಬಱಿಸಿಡಿಲೆಱಗಿತೆಂಬಂತೆ (ಹದಿಬ. ೬-೨೬). ೨. ನಿಶ್ಚಿತವಾಗು ; ಖಚಿತವಾಗು ; ದೃಢವಾಗು ; ಬೇರೂರು : ಪಾಡುಗಳಿಂದಂ ತಱಿಸಲೆ ಮಾಡಿದುದಂ ಪಾಡುಗಬ್ಬವೆಂದು ಬುಧರ್ ಕೊಂಡಾಡುವರ್ (ಕಾವ್ಯಾವ. ೯೫೪) ; ಸಂಧಿಯಾನವು ತಱಿಸಂದಿದಿರೊಳ್ ಸ್ವರಂಗಳಾವುವು ನಿಲೆಯುಂ (ಶಮದ. ೫೪) ; ಬೀತುದು ಬಿಂಕಮೋಡಿದುದು ಮೂಢತೆ ಮೂಡಿದುದಶ್ರು ಕಣ್ಗಳೊಳ್ ಕಾತುದು ಭೀತಿವಲ್ಲರಿ ಮನೋಗದಮುಂ ತಱಿಸಂದು ನಿಂದುದು (ಶಬಶಂ. ४-೦೦೩) ; ತನ್ನೊಳ್ ತಱಿಸಂದ ನಿಚ್ಚಟದ ಬಕುತಿಯಿಂ ನೆನೆನೆನೆದು ಜಗದೊಡೆಯಂಗೆ ಗೆಲವಕ್ಕೆ . . . ಎನುತೆ ಕನವರಿಸುತುಂ (ರಾಮಾಶ್ವ. ೯೮-೧೪). **ತರಿಸಲ್ :** ೧. ಮೊದಲೀ ವಿಘ್ನಮಂ ಪರಿಹರಿಸಿ ಮುಂತೆ ಮುಂದಣ ಬಟ್ಟೆಯಂ ತರಿಸಲ್ವೆನ್ (ಚಂದ್ರಸ. ೬೦). [ ತರಿ$_4$ + ಸಲ್$_1$ ]

**ತಱಿಸಲ, ತರಿಸಲ, ತಱಿಸಲಂ** (ನಾ). ನಿರ್ಣಯಂ ; ದೃಢನಿಶ್ಚಯ ; ದೃಢಸಂಕಲ್ಪ : "ತಱಿಸಲಂ ನಿರ್ಣಯಂ" (ಶಮದ. ಪರಿ. ೨) ; ನೆಱಿಮನೆಯೊಳಿರ್ದ ಮನುಜಂ ನೆಱಿಬಿಟ್ಟು ಬಱಿಕ್ಕ ನಿಲ್ಲದೋಡುವ ತೆಱದಿಂ ಪೆಱಪಿಂಗಿ ಸೆದೆದು ನಿಲ್ಲದೆ ತಱಿಸಲದಿಂ ಬಿಟ್ಟು ಸಕಲರಾಜ್ಯಶ್ರೀಯಂ (ಧರ್ಮಾಮೃ. ೧೧-೧೩೪) ; ಇದೆ ದೆಯ್ವಂ ಧರ್ಮಂ ತಾನಿದೆ ಪೆಱತಿಲ್ಲೆಂಬ ಮನದ ತಱಿಸಲಮಖಿಳಾಭ್ಯುದಯ ಸುಖಹೇತು ಮುಕ್ತಿವುದಮಿದು ಸಮ್ಯಕ್ತ್ವಮೆಂಬ ಪೆಸರಂ ಪಡೆಗುಂ (ಪಸಾರ. ೯೧೮-೧೩) ; ಪೆಂಪೀವ ಸಿರಿವೆಱುವೊಡಂ ಪೆಱರ್ಗಹಿತಮಂಗೆಯ್ಯಮೆ ಮಾಸಱತಮರ ತಱಿಸಲಂ (ಕುಜೀಳ್. ೧-೩೨-೧). **ತರಿಸಲ :** 'ತರಿಸಲಂಗೆಯ್' ಪರಾ. **ತಱಿಸಲು :** 'ತಱಿಸಲುವೋಗು' ಪರಾ. [ ತಱಿಸಲ್ + – ಅ$_6$ ]

**ತಱಿಸಲವು** (ನಾ). = ತಱಿಸಲ : "ತಱಿಸಲವೆಂದು ನಿರ್ಣಯಂ" (ಕರ್ಣಾನಿ. ೫೯) ; "ತಱಿ[ಪಾಠಾಂ. ಱು]ಸಲವು ನಿರ್ಣಯಂ" (ಕಬ್ಬಿಗ. ೭೯) ; ಎರಡಱಿಯದ ತಱಿಸಲವಮರ್ದಿರೆ ಸುಧರ್ಮಮುನಿಪದಪದ್ಮಕ್ಕೆಱಗಿ . . . ಅಥ ಬಲಮನೆಲೆದು ಶಿಲೆಯೊಳ್ ಪೊಯ್ದಂ (ಆದಿಪು. ೩-೫೦) ; ಕೇಳ್ದಿರೆ ಪಾಂಡು ಸುತರ ಮುನಿಸಿನ ತಱಿಸಲವಿನ ಚಲದ ಬಲದ ಕಲಿತನದಳವಂ (ಪಂಪಭಾ. ೧೦-೨) ; ಧರೆಗತ್ಯಾಶ್ಚರ್ಯಮಿಾ ಯೋಗ್ಯತೆ ತಱಿಸಲವಂ ಕಂಡು ಚಾಲುಕ್ಯ ಚಕ್ರೇಶ್ವರನಾ (ಹೈಆಸಿ. V, ೬-೯ ; 1083) ; ಆಗಳಾತನ ಮನದ ತಱಿಸಲವಂ ಕಂಡು (ಪಂರಾಮಾ. ೨-೨೦ ವ) ; ಕಂದ, ಅಶ್ವತ್ಥಾಮ, ಏನ್ ನಿನ್ನ ತಱಿ ಸಲವು? (ಅಶ್ವತ್ಥಾ. ೨೪-೪೭೩) ; ಕಡೆಗೆ ತಾನಿದುವೆ ತಱಿಸಲವಾಯ್ತು (ಅಂತಿಗೊ. ೦೩-೨೫೬). [ ತಱಿಸಲ್ + – ವು ]

**ತಱಿಸಲಿಸು**(ಕ್ರಿ). ನಿರ್ಣಯಂಮಾಡಿಸು: ನಿರ್ಣಯವನ್ನು ಕೈಗೊಳ್ಳುವಂತೆ ಮಾಡಂ : ಕುಱಿಗೊಂಡು ನೆಗಟ್ದನಿಚ್ಚೆಯನಱಿಯದೆ ತನ್ನಿಚ್ಚೆಯಿಂದೆ ಕಜ್ಜಂಬೆಟ್ಟಿಂ ತ[ಪಾಠಾಂ. ದ]ಱಿಸಲಿಸಲಾಱನಾರ್ತನ ತೆಱನಱಿಯದೆ ಮರ್ದುವೆಟ್ಟ ಬೆಜ್ಜನ ತೆಱದಿಂ (ಕವಿರಾ. ೩-೧೫೨). [ ತಱಿಸಲ್ + – ಇಸು$_3$ ]

**ತಱಿಸಲು** 'ತಱಿಸಲ' ನೋ.

**ತಱಿಸಲುವೋಗು** (ಕ್ರಿ). ಸಂಪೂರ್ಣವಾಗಿ ಒಳಗಾಗು ; ದೃಢವಾಗಿ ಗುರಿಯಾಗು ; ಈಡಾಗಂ : ಮನದ ಮರ್ಕಟತನವೆಂತು ಮಾಣ್ಬುದೆನ್ನಾ ಹೃದಯದ ಕಲ್ಮಷವೆಂತು ಮಾಣ್ಬುದೆನ್ನಾ ಕಾಯವಿಕಾರಕ್ಕೆ ತಱಿಸಲು ವೋದೆನು ಎನಗಿದು ವಿಧಿಯೆ ಕೂಡಲಸಂಗಮದೇವಾ (ಬಸವ. ४೧). [ ತಱಿಸಲು (<ತಱಿಸಲ) + ಪೋಗು$_1$ ]

**ತಱಿಸು** 'ತಱಿಯಿಸು' ನೋ.

**ತಱಿಹ** (ನಾ). ಕತ್ತರಿಸಂವಿಕೆ ; ತರಿದುಹಾಕುವಿಕೆ. 'ಕುಱುದಱಿಹ' ಪರಾ. [ ತಱಿ$_1$ + – ಹ$_2$ ]

**ತಱುಂಪು** 'ತಱುಂಬು$_1$' ನೋ.

**ತಱುಂಬು$_1$**, ತರುಂಬು$_1$, ತರುಬು, ತರುಮು, ತರ್ಬು$_2$, ತರ್ಮು, ತಱುಂಪು, ತಱುಬು$_1$ (ಕ್ರಿ). ೧. ತಡೆ ; ನಿಲ್ಲಿಸು ; ಮುಂದೆಹೋಗ ದಂತೆ ಮಾಡು : "ತಱುಂಬು – ಗತಿಸ್ತಂಭೇ(ಅಡ್ಡಗಟ್ಟು)ಶಿಲೋದ್ವಹನ ದಾರೌ ಚ (ಸನ್ನೆಯ ಕೋಲು)" (ಶಮದ) ; ಎನಸುಂ ಮೈ ಬಿಸುಪೇಱೆ ವಾಸಗೃಹಮಂ ತೀವಿತ್ತು ಸುಯ್ಲಾಳಿ . . . ವಿಗಳದ್ಬಾಷ್ಪಾಂಬುಧಾರಾಳಿ ತದ್ವನಭೂಜಾವಳಿಗಾಲವಾಲಜಲವಾಯ್ತುಬ್ಬಾಕ್ಷ ನಿನ್ನಂದಮಂ ನೆನೆಯುತ್ತಿರ್ಪ ಮನಂ ತಱುಂಬುತಿರೆ ಜೀವಂ ನಿಂದುದಾ ತನ್ವಿಯಾ (ಜಗವಿ. ೧೧-೩೯) ; ಆಲಿಂಗನೇಚ್ಛೆಯೊಳ್ ನಿಮಿರ್ವ ಗಾತ್ರಮಂ ತಳರ ಲೀಯದೆ ತಱುಂಬುವಂತಿರಗ್ಗಳಿಸಿದುತ್ಕಟ ಸ್ತಬ್ಧಭಾವಮುಂ (ವರ್ಧಪು. ೬-೧೨ ವ). ೨. ಎದುರಿಸು ; ಪ್ರತಿಭಟಿಸು : ಒತ್ತಿ ತಱುಂಬಿ ನಿಂದ ರಿಪು ಭೂಜಸಮಾಜದ ಬೇಗ್ಗಳಂ ನಭಕ್ಕೆತ್ತದೆ ಬಂದು ತನ್ನ ಮಱಿವೊಕ್ಕೊಡೆ ಕಾಯದೆ . . . ಮಾಣ್ದು ಬಾಹ್ವು ಪುಟುವಾನಸನೆಂಬನಜಾಂಡಮೆಂಬುದೊಂದತ್ತಿಯ ಪಣ್ಣೊಳಿರ್ಪ ಪುಟುವಲ್ಲದೆ ಮಾನಸನೇ ಮುರಾಂತಕಾ (ಪಂಪಭಾ. ೫-೭೫) ; ಅಭ್ರಮನಿರದೆ ತಱುಂಬುವ ತೆಱದಿಂದಮೆತ್ತಿಪೊತ್ತಂಸ ದೊಳಭ್ರಂಬರೆಗವೊಗೆಯೆ ನೋಟಕ್ಕಿಂಬಾದುದು ಮೇಘರಥ ವಿಯತ್ಪಥ ಗಮನಂ (ಶಾಂತಿಪು. ೯-೭೩) ; ಎಂತೊದಱುವರೆಂತು ಪಾಯಿಸುವರೆಂತು ತಱುಂಬುವರೆನ್ನುತ್ತು ನಿಲ್ವರೆಂತೊದವುವರೆಂತು ಲಕ್ಷ್ಮಣನೊಳಾಂತು ಬರ್ದುಂ ಕುವರನ್ಯಭೂಭುಜರ್ (ಎಕ. VII, ಶಿಕಾರಿ. ೧೩೭–೨೯ ; 1068) ; ವಿನಮಿತ ನಾಗಿ ನಿಂದು ನಿಜ ನಿಶ್ವಸಿತೋಚ್ಚತೆಯಂ ತಱುಂಬಿ ಮೆಲ್ಲನೆ ನಿಟಿಲಾಗ್ರ ಘರ್ಮ ಜಲಮಂ ಬೆರಲಿಂ ಬಟಿಯುತ್ತುಂ (ಕುಸುಮಾ. ೧೧-೯) ; ಮುಟ್ಟಿ ಮೂದಲಿಸಿ ಕಟ್ಟಿದಿರ್ಗೆವಂದು ಮೆಟ್ಟಿ ತಱುಂಬಿದ ಸಿಂಹಚೂಡನಂ . . . ಕಂಡು (ಅನಂಪು. ೧೧-೪೯ ವ). ೩. ತಾಗು ; ತಗಲು : ಗಗನತಳಮಂ ತಱುಂಬುವಂತಿರ್ದ ಶಿಖರಿ ಶಿಖರಂಗಳಿಂದಂ . . . ಭಯಂಕರಾಕಾರಮಪ್ಪ ದ್ವೈತವನಕ್ಕೆ ಬಂದು (ಪಂಪಭಾ. ೭-೨೯ ವ); ಅಸುರಮಾಗೆ ದಾಡೆಗಳೊಡಲ್ಪಳಿ ದಂಬರವಂ ತಱುಂಬೆ (ಪಂರಾಮಾ. ೧೧-೧೦೭) ; ತನು ತನುಮಂ ತಱುಂಬೆ ಮಿಗೆ ಕೂರಸಿ ಕೂರಸಿಯಂ ಪಳಂಚೆ (ಎಕ. VII, ಶಿಕಾರಿ. ೨೪೨–೨೩ ; 1163). ೪. ಮುಂದುವರಿಯದಿರಿಂ ; ನಿಲ್ಲು ; ಸ್ಥಗಿತವಾಗು : ಚಕ್ರರತ್ನಮ ಯೋಧ್ಯಾಪುರಮಂ ಪುಗದೆ ತಱುಂಬಿ ನಿಂದುದಂ ಕಂಡುಂ (ಆದಿಪು. ೧೪-೩ ವ); ಒಳಗೆ ಸಮಸ್ತ ಭೂಭೃದಧಿಕಂ ಪ್ರಬಳಂ ಮನುಜೇಂದ್ರ ಮಂದರಂ ಬಳಿಯೆ ತಱುಂಬಿ ಸಂಚಳಿಸದಿರ್ದಪುದೀ ನಡು (ಪುಷ್ಪಪು. ೪-೪). ೫. ಪರವಾಗು ; ಮುಂದೆ ಬರು: ಪ್ರತಿಷೇಧದ ಧಾತುಗೆ ಮುಂದೆ ತಱುಂಬೆ ವಿಭಕ್ತಿ ಪೂರ್ವ ಕಾಲಕ್ರಿಯೆಯೊಳ್ ಪ್ರತಿಷೇಧವದೆಂಬುದು ಮುಂದೆ ತೋಱೆ ಮೇಣ್ ದ್ವಿತ್ವವೃತ್ತಿ ನಿತ್ಯಮೆನಿಕ್ಕುಂ (ಶಮದ. ೭೦). ೬. ಮೀರಿಸು ; ಸೋಲಿಸು ; ಗೆಲ್ಲು : ಮೇನಕೆ ರಂಭೆಯೂರ್ವಶಿ ಸುಕೇಶಿ ತಿಲೋತ್ತಮೆ ಮಂಜುಘೋಷೆ ಯೆಂಬೀ ನೆಗಟ್ದಗ್ಗದಚ್ಚರಿಯರಚ್ಚರಿಯಪ್ಪ ವಿಳಾಸಮಂ ನಿಜಭ್ರೂನಟನೈಕ ದೇಶಮೆ ತಱುಂಬಿದುದೆಂಬ ಸುರೂಪ ವಿಭ್ರಮಶ್ರೀ ನಿಜಮಾಗೆ ರಂಜಿಸುವ ರಲ್ಲಿಯ ರೂಢಿಯ ಗಾಡಿಗಾರ್ತಿಯರ್ (ಪುಷ್ಪಪು. ೨-೭೭). ೭. ಎತ್ತು ; ಆಕ್ರಮಿಸು; ಹಿಡಿ; ಸುತ್ತುಗಟ್ಟು: ಪದೆದಿನಿಸಂ ತಳರ್ಚುವ ತಳರ್ಚಿದುದಂ ಮೊಟಕಾಲ್ಗೆ ತರ್ಪ ತಂದುದನುರದಿಂ ತಱುಂಬುವ ತಱುಂಬಿದುದಂ ಪೆಗಲಲ್ಲಿ ಗೆತ್ತುವೆತ್ತಿದುದನೆ ನೆತ್ತಿಯೊಳ್ ತಳೆದು ಪೊಂಗಳ ಭಾರಮನುಯ್ವ ವಿಪ್ರ ವೃಂದದ ಪಡಿಮಾತೆ ಪೇೞದೆ ಯುಧಿಷ್ಠಿರ ರಾಜನ ಚಾಗದೇಟಿಗ್ಗಿಯಂ (ಜಗವಿ. ೧೭-೧೪) ; ಪರನೃಪನೆನ್ನ ಮಿತ್ರಪುರವಂ ತವೆ ಮುತ್ತಿದನೆಂದು ಕೇಳ್ದು ಚೆಚ್ಚರಮಿದೆ ಬಂದೆನಿತ್ತಲವನತ್ತ ಮದೀಯ ಪುರಪ್ರಭಾಗಮುಂ ಭರದೆ ತಱುಂಬಿದಂ ಗಡವನಂ ತಗುಳ್ದಟ್ಟುವೆಂ (ರಸರ. ೦-೭೦). **ತರುಂಬು$_1$** : ೨. 'ತರುಂಬುವಡಂ' ಪರಾ. **ತರುಬು** : ೧. ಜಕಾತಿ ಕಟ್ಟೆಯನ್ನು ದಾಟಿ ಮುಂದೆ ಇರುವ ಗಿಡದ ಕೆಳಗೆ ಗಾಡಿಯನ್ನು ಯಲ್ಲನು ತರುಬಿದನು (ರಕ್ತಧ್ವ. ೧೩); ಅನಂತ ಪಾರವಾದ ಒಂದು ಕುರಿಯ ಹಿಂಡನ್ನು ಕಣ್ಣೆದುರಿಗೆ ತರುಬಿಕೊಂಡು ಅವುಗಳನ್ನು ಒಂದೊಂದಾಗಿ ಎಣಿಸಲು ನನಗೆ ಹೇಳ ಲಾಯಿತು (ಗಾಳಿಪ. ೧೩೦) ; ಹುಲ್ಲನ್ನು ಮೇಯಿಸಲೆಂದು ತಮ್ಮ ಎಮ್ಮೆ ಗಳನ್ನು ತರುಬಿ ನಿಂತಿದ್ದಳು (ನಡದಾ. II, ೧೨೬೨). ೨. ತರುಬುವವನು ಬಹು ವಿಘ್ನದಲಿ ವಿಧಿ ತರುಬಲಾರದೆ ನಿಲಲು ಕೆಲಕಡೆಗುರುಬಬೇಕ್ಕೆ ಮುಂದಣಾ ಮಾರ್ಗವನು ತಾ ಹತ್ತಿ (ಜ್ಞಾನಸಿಂ. ೧೩-೪೦); ತಾಯಿಯ ಧನಿಯು ತಾರಕ್ಕೆ ಮುಟ್ಟಲು ಶಂಕರರಾಯರು ಅದನ್ನು ತರುಬಿ ಎಂದರು (ಕನಕ. ೩೯). ೪. ಹೋಗು ನಿನದಾರಿ ಬಲುದೂರ ಆವೂರ ತೇರು ನಿನಗಾಗಿ ತರುಬಯ್ತೊ (ಹಳ್ಳಿಯ. ೩೦). ೮. ಅಟ್ಟು ; ಓಡಿಸು ; ಪ್ರೇರಿಸು : ಮನಸ್ಸು ಮುಂದು ಗಡೆಯಲ್ಲಿ ಎಳೆವಂತೆ ಇರುವುದು ; ಮನ್ಮಥನು ಹಿಂಭಾಗದಲ್ಲಿ ತರುಬುವಂತೆ ಇರುವನು (ವಡಕಾ. ೧೭) ; ಕಿನ್ನರನು ಓಡಿ ಹೋಗಿದ್ದ ಬೀಮಣ ತ್ರಿಶಂಕು ಶನಿಯರನ್ನು ಅಲ್ಲಿಗೆ ತರುಬಿಕೊಂಡು ಬರುವನು (ಬಿಗಾಳಿ. ೯) ; ಉರುಬಿ ನಿಂದಾ ಬರುವ ಕರಿಗಳು ಎರಗಿ ಬರುತಿಹ ಗಂಡು ಮೃಗಗಳು ತರುಬಿ ಬರುತಿಹ ಮಲೆಯ ಹೋರಿಯು ಬಳಸೆ ಮೆರೆದವರಣ್ಣದಿ (ಗೋಹಾಡು. ೧೫). **ತರುಮು** : ೧. ಓಡುವವನೂ ಬೆತ್ತಲೆ ತರುಮುವವನೂ ಬೆತ್ತಲೆ (ಕಥಾಮಂ. IV, ೨೦). **ತರ್ಬು$_2$** : ೧. ಕುಶನೊಂದಿ ಹೊಂದೇರ ಶರದರ್ಬುವ ನೋಡೆಂದು ಬೆಂಬಲದ ವಾಹಿನಿಯ ತರ್ಬಿದಂ ಸರ್ಬ ಸನ್ನಾಹದಸ್ತ್ರಂಗಳಂ ಚಲ್ಲಿ ಎಲ್ಲಾ ದೇಶಕೆ (ಜಿನಮು. ೩೪-೮). **ತರ್ಮು** : ೯. ತಗ್ಗಿಸು ; ಕಡಿಮೆ ಮಾಡು : ಈ ಸತಿಯುಮ್ಮಳವನೆಣಿಸದಲೆ ಮನವನು ನಿಮ್ಮದಿಯೊಳಿಡಿರೆಂದು ಪೇಳುವಿರಕಟ ಶೋಕವನು ತರ್ಮದಿರಲಾ ನಾಮ ಸಲುವುದೆ (ಜಿನಭಾ. ೪೮-೫೦). ೧೦. ತಾಗುವಂತೆ ಮಾಡು ; ಮುಟ್ಟಿಸು : ನಮ್ಮ ವಿದ್ಯಾನಾಡಿನೊಳು ದುಷ್ಕರ್ಮನಿವನಾರಾರಿಗುಪಟಳ ತರ್ಮುವನು (ಜಿನಭಾ. ೪೫-೪). **ತಱುಂಪು** : ೨. ಅನನ್ತಪಾಳನಾಗಳೆ × × ಕೆಯ್ಯುಗ್ಗಮಾಗಳೆ ಕಡಂಗುಗುಮಾಗಳೆ ನಟ್ಟು ನಿಲ್ಕುಮಾಗಳೆ ತಱಿಸಲ್ಕುಮಾಗಳೆ ತಱುಂಪುಗುಮಾಗಳೆ ಪೊಟ್ಟುವಾಯ್ಕುಂ . . . ಆಗಳೆ ಕೊಂದು ಕೂಗುಗು (ಕಇ. V. ೦೪-೭ ; 1099). **ತಱುಬು$_1$** : ೧. "ತಱುಬೆಂದೆನೆ ತಡೆಯಲ್ಕೆ" (ಕವಿಕಂ. ೧೯೯). ೨.ಸದಾಶಿವನ ಪೂಜಿಸುವೆನೆಂದು ಹೋದಡೆ ತಱುಬಿ[ಪಾಠಾಂ. ಕದುಬಿ] ಹಿಡಿವವಯ್ಯಾ ಸಕಲ ವಿಪತ್ತುಗಳು (ಚನ್ನಪ. ಕ. ೨೨೧-೪೯೨) ; ಮುಱಿದು ಬಹ ನಿಜಸೇನೆಗಭಯದ ಸೆಱಗ ಬೀಸುತ ಭೀಮಸೇನನ ತಱುಬಿ ನಿಂದನು ಭೀಷ್ಮ (ಕುವ್ಯಾ.ಭೀ. ೭-೫) ; ತಱುಬಿ ಕಾದುವ ಕಲಿಗಳೆಲುಗಳ ಮುಱಿದು ರಕುತವ ಹಿಂಡಿ ನೆತ್ತರ ತೊಱೆಯ ಹರಿಸಿದರೂರೊಳಗಲದಲಸುರಭಟ ನಿಕರ (ತೊರರಾ. ೬-೩೭-೧೪) ; ಪೆಱೆನೊಸಲಿನ . . . ಪೆಣ್ಗಳ ತಂಡ ತಱುಬಿದುದಾರತಿವಿಡಿದು (ಕುರಾಸಾಂ. ೩೪-೧೩) ; ಬಿರುದಿನ ಹೊಣಕೆಯ ಹೊಂತಕಾರಿಗಳಾಗ ತಱುಬಿದರರಿವಾಹಿನಿಯ (ಕಂಪವಿ. ೧೫-೨೫) ; ಸರಥಂ ಸುರಥಂ ದಂಡಂಗೊಂಡು ದಾಱಿಡುವ ದೆಖ್ಖಾಳದ ದಕ್ಕಡಿಗರಂ ತಱುಬಿ ನಿಂದಂ (ರಾಮಾಶ್ವ. ೧೪೩-೨೨) ; ಎನ್ನೊಡೆಯು, ತಱಿಸಂದು ತುಱುಗಳನ್ ಕೊಲ್ವೆಯಾ? ಮೂಗುಸಿರ್ಗಳನ್ ತಱುಬಿ, ಮಂದೆಗಳನಿಡಿದು (ಅಶ್ವತ್ಥಾ. ೮-೧೫೪). ೩. ತಾಯಿಮಳಲನು ತಱುಬಿದಬುಧಿಯ ದಾಯಿಗರು ತಾವಿವ ರೆನಲು ಬಿಡೆ ನೋಯ ಬೆರಸಿದುದುಭಯಬಲ ಬಲುಖತಿಯ ಬಿಂಕದಲಿ (ಕುವ್ಯಾಶ. ೨-೧೨). ೪. ಎಲೆ ಧನಂಜಯ ಹಗೆಯ ಹೆಚ್ಚಿದ ಹಳುವವಿದೆಲಾ ವಜ್ರಿಸುತ ನಿನ್ನಳವಿಯಲಿ ತಱುಬಿದೆ ಸುಯೋಧನ ಸೈನ್ಯಗಿರಿನಿಕರ(ಕುವ್ಯಾ.ಭೀ. ೩-೨೫) ; ಇರದೊಂದು ಪೆರ್ಗುಂಡನು ಕಟ್ಟಿ ಕೊರಳಲಿ ಪುರದ ಬಾಗಿಲೊಳ್ ನಿಂದಿರಲ್ ಬಟ್ಟೆಯಿಲ್ಲದೆ ಸರ್ವರುಂ ತಱುಬಿ ನಿಲೆ (ಚೆಬಪು. ೬-೩೭). ೧೧. ಕಳಿಸು ; ತಳ್ಳು ; ನೂಕಂ (?) : ಪೆಣ್ದಿಂಬಿಗಳ ಸರಮನೆತ್ತಿ ತಱುಂಬುತ್ತುಂ ಬಂದುದಾ ಪ್ರಭಾತ ಸಮೀರಂ (ಪಂಪಭಾ. ೧೨-೧೦೫) :

ರಾಜಗೃಹಕ್ಕೆ ಮಿಕ್ಕ ಗಜದಂತಚಯಂಗಳುಮಂ ಚಮೂರ ಕೃಷ್ಣಾಜಿನ ವನ್ಯವಸ್ತುಚಯಮಂ ಬಿದಿರಕ್ಕಿಯುಮಂ ತಱುಂಬಿ . . . ತದ್ವೃಷಭದತ್ತನ ಗೇಹದೊಳಂದು ಕಂಡೆ ನಾನೀ ಜನಸಂಸ್ತುತ ಪ್ರತಿಯುಗಂಗಳನರ್ಚಿಪ ಸಜ್ಜನಂಗಳಂ (ನೇಮಿಪು. ೧-೭೬) : ಕೆಲವು ದಿವಸಕ್ಕೆ ಭವದೇವಂ ಬಂದು ಸುಕಾಂತನಂ ಕೊಲ್ವೆನೆಂದು ತಾನುಪಾರ್ಜಿಸಿ ತಂದ ಧನವೆಲ್ಲಮಂ ಕೊಟ್ಟು ಭೃತ್ಯರಂ ತಱುಬಲದಂ ಸುಕಾಂತಂ ಕೇಳ್ದು ಭವದೇವನಂಜಿಕೆಗೆ ಪುರಮಂ ಬಿಟ್ಟು (ಪುಣ್ಯಾಸ್ರ. ೬-೪೩ ವ) ; ಸುಕಾಂತನಂ ಕೊಲ್ವೆನೆಂದು ತಾನಾರ್ಜಿಸಿ ತಂದ ದ್ರವ್ಯದಿಂ ಪಲಂಬರ್ವೀರ ಭಟರಂ ತಱುಬಿ ರಾತ್ರಿಯೊಳು ಸುಕಾಂತಂ ತನ್ನಿರ್ದ ಮನೆಯಂ ಮುತ್ತೆ (ಪುಣ್ಯಾಸ್ರ. ೧೧-೫ವ). [ ದೇ.॥ ತಮಿ. ತಱುಗು = ತಡೆಯಲ್ಪಡು ; ತೆಲು. ತಱುಮು, ತಱುವು ]

**ತಱುಂಬು$_2$, ತರಂಂಬು$_2$, ತರುಂಬು$_2$, ತಱಂಬೆ, ತಱುಪು$_1$, ತಱುಬು$_2$**(ನಾ). ೧. ತಡೆಯುವಿಕೆ ; ಪ್ರತಿಭಟನೆ : "ತಱುಂಬೆಂದು ತಡೆವುದು" (ಕಶಸಾ ೨೩-೪೮೦). ೨. ಭಾರವಾದ ಕಲ್ಲುಗಳನ್ನು ಎತ್ತಲು ಉಪಯೋಗಿಸುವ ಕೋಲು ; ಸನ್ನೆಕೋಲು : "ತಱುಂಬು–ಗತಿಸ್ತಂಭೇ (ಅಡ್ಡಗಟ್ಟು) ಶಿಲೋದ್ವಹನ ದಾರೌ ಚ (ಸನ್ನೆಯ ಕೋಲು)" (ಶಮಧಾ); "ಗತಿಸ್ತಂಭದೊಳ್ ಸಿಲೆಯನೆತ್ತುವ ಮರದೊಳುಂ ತಱುಂಬಕ್ಕು" (ಶಬ್ದಮಂ. ೧೦೨). ೩. (ನದಿಯ ನೀರು ತಂದು ನೂಕಿರುವ) ಮರಳುರಾಶಿ: ಕಾಡಾನೆಗಳ ಕೋಡೇಱಿಂದಿಡಿದು ಕಳೆದ ಖರ್ಜೂರದ ಕಡಿಗಳಂತೆ ತಡಿದಡಿಯ ತಱುಂ[ಪಾಠಾಂ. ಱಿಂ]ಬಿನೊಳ್ ಬಿಸಿಲಂ ಕಾಯ್ವ ಮೊಸಳೆವಿಂಡಿನ ಪಸರಂಗಳೊಳಂ (ಚಂದ್ರಪು. ೫-೪೦ ವ) ; ತಱುಂಬಿನೊಳ್ ಬಿಟ್ಟ ಮೀನಂತೆ ಮಿಡಮಿಡ ಮಿಡುಕಿ (ಜೀವಸಂ. ೧೧೩-೪೭ ವ). **ತರುಂಬು$_2$ :** ೪. ಅಡ್ಡಿ ; ತೊಂದರೆ. 'ತರುಂಬುವಡು' ಪರಾ. **ತರುಬು$_2$:** ೨. ತರುಬಿಲ್ಲದ ಒಡ್ಡನು, ಬಿರಿಸಿಲ್ಲದ ಹುರಿಯು (ಗಾದ). **ತಱಂಬೆ :** ೩. ತಪೋಧನರಾಹಾರದಾನಕ್ಕಮ್ಮಾಟಕೂಟಕ್ಕಂ ತಱಂಬೆಯ ಪೊಲದ ಹಗರಣಿಗನ ಬಾಗಿಂ ಪಡುವಣ ದೆಸೆಯಲಿ ದಿನಗುಣಿಗನ ಮೂಱು ಮತ್ತರು (ಸೌಇಇ. IX–1, ೧೭೫-೪೨ ; 1099). **ತಱುಪು$_1$ :** ೩. ವಿಳಸಲ್ಲತಿಕಾಗೃಹಮಾಳೆ ಮಂಗಳಾಸ್ಪದ ಪುಲಿನಸ್ಥಲಂ ಪುದಿದ ಕೆಂಪಿನ ಶಾಲಿಯ ಕೆಯ್ವೊಲಂಗಳಿಲ್ಲದ ತಱುಪುಂ ತಱುಂಬುನೆಲನುಂ ಪರಿಭಾವಿಪೊಡಿಲ್ಲದೆಲ್ಲಿಯುಂ (ಶಾಂತೀಶ್ವ. ೧-೧೦೧). **ತಱುಬು$_2$ :** ೨. ರಕ್ಕಸ ಕಿಂಕರರು ಬೊಬ್ಬಿಱಿದು ಬಲುಸನ್ನೆಗಳಲುಕ್ಕಿನ ತಱುಬುಗಳಲೆತ್ತಿದರು ತೇರಿಗೆ ತಗ್ಗಲವನಿತಳ (ತೊರರಾ. ೫-೭-೬). [ < ತಱುಂಬು$_1$ ]

**ತಱುಂಬುನೆಲ** (ನಾ). ಮರಳಂ ಭೂಮಿ ; ಉಸುಕು ನೆಲ (?): ಮದನ ವಿಹಾರ ಭೂಮಿಯೆನಿಸಿರ್ಪ ವನಾವಳಿ ವಾರಿಜಾಕರಂ ವಿದಳಿತ ಪುಷ್ಪರಾಜಿ . . . ಪುದಿದ ಕೆಂಪಿನ ಶಾಲಿಯ ಕೆಯ್ವೊಲಂಗಳಿಲ್ಲದ ತಱುಪುಂ ತಱುಂಬುನೆಲನುಂ ಪರಿಭಾವಿಪೊಡಿಲ್ಲದೆಲ್ಲಿಯುಂ (ಶಾಂತೀಶ್ವ. ೧-೧೦೧).

[ ತಱುಂಬು$_2$ + ನೆಲ$_1$ ]

**ತಱುಪು$_1$** 'ತಱುಂಬು$_2$' ನೋ.

**ತಱುಪು$_2$** (ನಾ). ಕಡೆಗಂದಿಯಾದ ಹಸು ಅಥವಾ ಎಮ್ಮೆ. 'ತಱುಪೆರ್ಮೆ' ಪರಾ. [ ?. /ತಮಿ. ತಱುವು=ಕಡಮೆಯಾಗು ]

**ತಱುಪೆರ್ಮೆ** (ನಾ). ಕಡೆಗಂದಿ ಎಮ್ಮೆ : ನೆಱೆವೊರಸುಗೆ ಕಾವಲಿಯಂ ಕಿಱುಕುಸಲೆಯ ಬೇರೊಳಕ್ಕೆ ಕೊಳಗುಳಿಕೆಲೆಯೊಳ್ ತಱುಪೆರ್ಮೆಯ ಪಾಲಂ ಬಟಿಕೆರೆದಟ್ಟೊಡೆ ಮೃದುವೆನಿಪ್ಪ ಪಾಲವುಗಕ್ಕುಂ (ಲೋಕೋಪ. ೮-೯) ; ತುಱುವೆಯ ಬೇರನಿಕ್ಕಿ ತಱುಪೆರ್ಮೆಯ ಪಾಲುಮಮರ್ದುಮಪ್ಪಿನಂ ಮಱುಗಿಸಿ . . . ಮಾಟ್ಪುದು ಕ್ಷೀರದುಂಡೆಯಂ (ಲೋಕೋಪ. ೮-೧೦) ;

[ ತಱುಪು$_2$ + ಎಮ್ಮೆ ]

**ತಱುಬಿಸು** (ಕ್ರಿ). (?) : ಆಟಿಲಪಡಿಯ ಜ ೧ ತಱುಬಿಸಿಕೊಂಡು ಉಂಬ (ಬೊಂಕಶಾ. ೧೯೪೮, ಕುಮಟ. ೧೦೦-೬ ; ?). [ ? ]

**ತಱುಬು$_1$** 'ತಱುಂಬು$_1$' ನೋ.

**ತಱುಬು$_2$** 'ತಱುಂಬು$_2$' ನೋ.

**ತಱುಬುಲ್ಲು** (ನಾ). ಒಂದು ಬಗೆಯ ಹುಲ್ಲು ; "ಕುಡುಂಗಕ" (ನಾಚಿರಾ. ೬).

[ ? + ಪುಲ್ಲು (<ಪುಲ್) ]

**ತಱುಮಿಂಡಿ** 'ತುಱುಮಿಂಡಿ' ನೋ.

**ತಱುವಾೞ** (?). (?) : ಧುರದೊಳ್ ಗುಂಡಪಮಾತ್ಯಂ ನರಮೇಧವ ಮಾಡದುಳಪನೆಂದೆನಲಾ ಭೀತರು ಮರನನೇಱಿ ಹೂವಿನ ತಱುವಾೞ ತಱುವಾೞ ಎನುತ್ತಮಿದ್ದರ್ದರದೇನೋ (ಎಕ. V, ಬೇಲೂರು. ೩-೯೦ ; 1397 ?). [ ? ]

**ತಱುವಾಯ್, ತರುವಾಯು$_1$, ತರುವಾಯಿ, ತರ್ವಾಯಂ$_1$, ತರ್ವಾಯಿ, ತಱುವಾಯಂ$_1$, ತಱುವಾಯಿ, ತಱುವಾಯು** (ನಾ). ೧. ಕ್ರಮ ; ಪರಿವಿಡಿ : "ತಱುವಾಯೆಂದುಂ, ಪಾಟಿಯೆಂದುಂ ಕ್ರಮಂ" (ಕಶಸಾ. ೨೫-೫೧೯); ತಱುವಾಯಿಂದಾ ಯುಗಳಂಗಳೊಳೆ ಹ್ರಸ್ವಕ್ಕೆ ಹ್ರಸ್ವಂ ಪರಮಾದೊಡಂ ದೀರ್ಘಕ್ಕೆ ದೀರ್ಘಂ ಪರಮಾದೊಡಂ . . . ಸವರ್ಣ ಸಂಜ್ಞೆ ವರ್ತಿಸುಗುಂ (ಶಮದ. ೭ ವೃತ್ತಿ) ; ತಱುವಾಯಿಂ ಗುರುವುಂ ದೀರ್ಘಮುಂ ಗೂಢಸಂಧಿಯುಮಾಗಿ ಸ್ವಭಾವದಿಂದೇಕಾರಂ ಮೊದಲಾದ ಸಂಧ್ಯಕ್ಷರಂಗಳಪ್ಪುವು (ಶಮದ. ೧೦ ವೃತ್ತಿ) : ಕ್ರಮದೆ – ತಱುವಾಯಿಂದೆ (ಶಮದ. ೧೦ ಟೀಕೆ). ೨. ಅನಂತರದ ಸಮಯ ; ಮುಂದಿನ ಸರದಿ : ಆ ತಱುವಾಯಲಿ [ಪಾಠಾಂ. ಅನಂತರಂ] . . . ವನಪ್ರತೋಳಿಕಾದ್ವಾರಮಂ ಪೊಕ್ಕು (ಚಂದ್ರಪು. ೭-೮೩ ವ) ; ರಾಯಕಟಕಪಿತಾಮಹನ ತಱುವಾಯಲಭಿಷೇಕವನು ಕೌರವರಾಯ ಮಾಡಿಸಿ ಪತಿಕರಿಸಿದನು ಕುಂಭಸಂಭವನ (ಕುವ್ಯಾದ್ರೋ. ೧ ಸೂಚನೆ) ; ನೀವು ಕಟಕಾಚಾರ್ಯ ಪುತ್ರರು ನೀವಿರಲು ಕೃಪನಿರಲು ದಳವಾಯ್ ನಾವಹೆವೆ ನೀವಿಂದು ತೇಜೋದ್ವಯದಲಧಿಕರಲೆ ನಾವು ತಱುವಾಯವರು (ಕುವ್ಯಾಶ. ೧-೨೦); ಇಳೆಯ ಮೇಲೆ ಕೌಂತೇಯನ ಮಹಾಧ್ವರದ ವಾಜಿಗಳ್ತಿರುಗಿ ತಱುವಾಯೊಳಿಲ್ಲಿಗೆ ಬಂದೊಡಾವು ಕಟ್ಟಿದೆವು (ಜೈಮಿಭಾ. ೩೨-೩) ; ಕೃಷ್ಣಾಚ್ಯುತರೆಂಬ ರಾಯರ್ಶ್ಯವರ ತಱುವಾಯಿಂ ಮುದದೊಳೆಳೆಯಂ ಪೊಱೆದ ಸದಾಶಿವರಾಯಂಗೆ (ಚಿಕವಂ. ೨-೧). ೩. ಸಮಯ ; ಅವಕಾಶ ; ಪ್ರಸಂಗ : ನಿಲ್ಲಿ ಭಯ ಬೇಡಾವ ರಣವಿದು ತಲ್ಲಣಕೆ ತಱುವಾಯೆ ದೀವಿಗೆ ಪಲ್ಲವಿಸಿದರೆ ತಳಿತುದೇ ಭುಜಶೌರ್ಯ ಕುರುಬಲಕೆ (ಕುವ್ಯಾದ್ರೋ. ೧೫-೩೯). **ತರುವಾಯು$_1$ :** ೧. " ಕ್ರಮಃ – ತರುವಾಯಂ " (ಕಾಶಕ್ಯ. ೪೦). **ತರುವಾಯಿ :** ೧. " ತರುವಾಯಿಯೆನಲು ತರ ಪರಿವಿಡಿಯೆನಲ್ಕಿವು ವುಪರಿಯರ್ಥದೊಳ್" (ಕಶರ. ೪೪). **ತರ್ವಾಯು$_1$:** ೨. ಉದಿತ ಧರ್ಮದ ನೆಲೆಯನುರ್ವೀಶ ನೀತಿಗಳ ನಿಶ್ಚಯವನ್ನೆದೆ ಸಾಂಗೋಪಾಂಗವಾಗಿ ಬರಿಸಿ ತರ್ವಾಯೊಳಾ ಕುಮಾರರ್ಗೆ ಮುನಿನಾಥಂ ಧನುರ್ವೇದಮಂ ಶಿಕ್ಷೆಗೈದು (ಜೈಮಿಭಾ. ೧೯-೫೪); ಧರ್ಮದಿಂದಮೆ ರಾಜ್ಯ ಪರಿಪಾಲನಂಗೆಯ್ದು ವೈಕುಂಠಯಾತ್ರೆಯಂ ಮಾಡಿದನಾ ತರ್ವಾಯದೊಳ್ (ದಿವ್ಯಚ. ೬-೨೮ ವ) ; ಆ ತರ್ವಾಯದ ಹಾಡೇ ನಿಜವಾದ ಲಾವಣಿ (ಸುವರ್ಣ. ೪೩). ೪. (ಹೇಳಿದ ಪಾಠವನ್ನೇ) ಪುನಃ ಪುನಃ ಹೇಳುವುದು; ಸಂತೆ ಹೇಳುವುದು ; ಪುನಃ ಪುನಃ ಪಠಿಸುವುದು : ತರ್ವಾಯಕ್ಕೆ ಸಿಕ್ಕಿದಲ್ಲಿ ವೇದಾಂತಿಯಾದ ಆಗುಚೇಗೆಯನಾಡಿಹೆನೆಂದು ಆಗಮಿಕನಾದ (ಶಿವಮಂ. ೪೪) ; ಕೇಳುವ ಕೆಲವು ವಿದ್ಯಾರ್ಥಿಗಳಿಗೆ ವಸ್ತ್ರ ಕೂಳು ವೀಳೆಯ ವಿತ್ತು ಮುದದಿ ಆಳುಗೊಳಿಸಿ ಪ್ರತಿದಿವಸದಿ ತರ್ವಾಯ ಹೇಳುವ ವಿಬುಧರೊಪ್ಪಿದರು (ಮೋಹತ. ೩-೩೭) ; ಯಜುಃಶಾಖೆ ಅಧ್ಯಯನಕೆ . . . ಗ ೧೨ ಆ ತರ್ವಾಯ ಕೌಶಿಕಗೋ ಆಪಸ್ತಂಭ × × × ಭಟ್ಟರಿಗೆ . . . ಗ ೧೨ (ಎಕ. VIII, ತೀರ್ಥಹ. ೧೯-೧೦೧ ; 1573). ೫. ಪುನಃ ಅದನ್ನೇ ಮಾಡುವುದು; ಪುನರಾವೃತ್ತಿ : ಸರ್ವರೊಳಗೆ ಮುತ್ತೈದೆಯಾಗಿರ್ದ

ವೈಧವ್ಯವನಾಂತು ಬಾಳುವೆನೆ ಗರ್ವದ ನುಡಿಯಲ್ಲ ತನಗೆ ತನ್ನಾಳ್ದನ ತರ್ವಾಯ ಮಾಡೆಂದಳಳುತ (ಮೋಹತ. ೮-೩೭). **ತರ್ವಾಯಿ:** ೪. ಆ ಗೋತ್ರದ ಆ ಗ್ರಾಮದ ತಿರುಮಲಭಟ್ಟರ ಪುರುಷೋತ್ತಮ ಭಟ್ಟರಿಗೆ ಶಾಸ್ತ್ರದ ತರ್ವಾಯಿಗೆ ಕಾರಗಡೀಲಿ ಗ ೧೮ (ಎಕ. VIII, ತೀರ್ಥಹ. ೧೯-೧೦೪ ; 1573). **ತಱುವಾಯ್$_1$:** ೧. 'ತಱುವಾಯುಗೊಳ್' ಪರಾ. **ತಱುವಾಯಿ:** ೧. "ಪಾಟಿ ತಱುವಾಯಿ ಕ್ರಮಮದು" (ಕವಿಕಂ. ೨೦೮). 'ತಱುವಾಯಿಗೊಳ್' ಪರಾ. **ತಱುವಾಯು:** ೧. "ಪರ್ಯಾಯಂ" (ನಾಚಿರಾ. ೬).

[ದೇ.‖ತಮಿ. ತಱುವಾಯ್,ತರುವಾಯ್; ತೆಲು. ತರುವಾಯಿ,ತರುವಾತ]

**ತಱುವಾಯ್$_1$** 'ತಱುವಾಯ್' ನೋ.

**ತಱುವಾಯ್$_2$**, ತರುವಾಯ್$_2$, ತರುವಾಯೆ, ತರ್ವಾಯ್$_2$ (ಅ). ಆಮೇಲೆ ; ಆ ಬಳಿಕ : ರಾಯ ಕಟಕಾಚಾರ್ಯನಾ ತಱುವಾಯ ಸೇನಾ ಪಟ್ಟವನು ರಾಧೇಯನಲಿ ರಚಿಸಿದನು ಮುದದಲಿ ಕೌರವರ ರಾಯ (ಕುವ್ಯಾಕ. ೧ ಸೂಚನೆ) ; ಸಮರದಲಿ ಗುರು ಗಾಂಗೇಯ ಕರ್ಣ ದ್ರೌಣಿಗಳ ತಱುವಾಯ ಲೆಕ್ಕಕೆ ಸಂದನೈ ಮಝು ಪೂತು ಪಾಯ್ಕೆನುತ (ಕುವ್ಯಾಕ. ೨೦-೩೫). **ತರುವಾಯ್$_2$:** ತರುವಾಯ ಹೇಳ್ವೆ (ಜ್ಞಾನಸಿಂ. ೧-೧೭) : ಕಾಯಿಗಳನ್ನು ಒಣಗುವ ತನಕ ಗಿಡದ ಮೇಲೆ ಬಿಡುತ್ತಾರೆ. ತರುವಾಯ ಅವನ್ನು ಕೊಯ್ದು . . . ಮಾರಾಟಕ್ಕೆ ಕಳುಹಿಸುತ್ತಾರೆ (ಮುಂಬಯಿ. ೪-೪೦). **ತರುವಾಯೆ:** ಶ್ರೀಮಂತರು ನಿವೃತ್ತರಾದ ತರುವಾಯೆ–ದಳವಾಯಿ ತನವಂ ಕೊಡಿಸಬೇಕೆಂದೂ (ಚಿಟ್ಟಅ. ೨೨-೭). **ತರ್ವಾಯ್$_2$:** ಆ ತರ್ವಾಯ ವೈಶ್ವದೇವವಂ ಮಾಡಿ (ಶುಕಸ. ೪೧) ; ಯೋಗ್ಯೋಪಚಾರಂಗೈದು ತರ್ವಾಯಯಾಸನವನಿತ್ತು ಕುಳ್ಳಿರಿಸಿ (ಜೋರಬ. ೧-೩೨).

[ <ತಱುವಾಯ್$_1$ ]

**ತಱುವಾಯುಗೊಳ್**, ತರ್ವಾಯಗೊಳ್, ತಱುವಾಯಿಗೊಳ್ (ಕ್ರಿ). ಕ್ರಮವಾಗಿರು ; ಸಾಲಾಗಿರು : ತಱುವಾಯ[ಪಾಠಾಂ. ಯಿ]ಗೊಂಡು ಕುಳ್ಳಿಹಲ್ಲಿ ಸಂಸ್ಕಾರ್ಯ ಎನಿಸುಗು (ನಾಚಿರಾ. ೬). **ತರ್ವಾಯಗೊಳ್:** ಗೀರ್ವಾಣ ಯಕ್ಷ ಗುಹ್ಯಕ ಸಿದ್ಧ ಸಾಧ್ಯ ಗಂಧರ್ವ ಕಿಂಪುರುಷ ಕಿನ್ನರರ ತರ್ವಾಯಗೊಂಡು ಮೇಲೇಳುಲೋಕದೊಳಿಪ್ಪ ಸರ್ವರ ರೂಹ ತೋಱು ದಳು (ಮೋಹತ. ೩೦-೧೧). **ತಱುವಾಯಿಗೊಳ್:** ಮೇಲಿನ 'ನಾಚಿರಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ ತಱುವಾಯ್$_1$ (<ತಱುವಾಯ್) + ಕೊಳ್$_1$ ]

**ತಱುವಾಯಿ** 'ತಱುವಾಯ್' ನೋ.

**ತಱುವಾಯಿಗೊಳ್** 'ತಱುವಾಯುಗೊಳ್' ನೋ.

**ತಱುವಾಯು** 'ತಱುವಾಯ್' ನೋ.

**ತಱಿ** 'ತಱಿ$_1$' ನೋ.

**ತಱಿಕಾಡು** 'ತಟ್ಟಿಕ್ಕಾಡು' ನೋ

**ತಱಿಯ್$_1$** 'ತಱಿ$_3$' ನೋ.

**ತಱಿಯ್$_2$** (ನಾ). ತರಿಭೂಮಿ (?) : ಸಂಭು ಮೇಳೇಶ್ವರದೇವರಿಗೆ ಹೊಲಸ್ಥಳಕಂ ೩೦ ಗದ್ದೆ ಸ್ತ ಹೊಲವೇರಿಯ ಕೆಯಿ ಕೊ ೬ ತಱಿಯದ ಹಾಳಕೆಯಿ ಕೊ ೧೪ ಕಂಬಹಾಳ ಕೆಯಿ ಕೊ ೬ ಹತ್ತಿಯಹಾಳ ಕೆಯಿ ಕೊ ೪ (ಮೈಆರಿ. ೧೯೨೮, ೧೭-೫೪ ; ಸು. 1200). 'ತರಿ$_5$' ಪರಾ.

[ ? ]

**ತಱೌದಾರಿ** (ನಾ). (?) : ತೆಲ್ಲಿಗ ಸೋಯಿ ಸೆಟ್ಟಿ ತಾನೂರಕಯ್ಯಲು ಆಱು ಹೊಂಗೆ ಬ್ಯವಹಾರವಾಗಿ[ಮಾಡಿದ]ಗುಗುವಿನ ದಶಕದ ತಱೌದಾರಿಯಿಂದ × × × ವಟುಕಂ ಗಿರ ೧೦೦ವಂ ತೋಟಕ್ಕೆ ಕೊಟ್ಟನ್ (ಕಇ. I, ೩೩-೩೨ ; 1246). [ ? ]

**ತಟ್$_1$**, ತಳ್$_1$ (ಕ್ರಿ). ತಳಿತ$_1$, ತಳ್ತ$_1$, ತಟ್ಟಿ (ಭೂತಕೃ), ತಳುತು, ತಳ್ತು$_1$, ತಟ್ಟು (ಭೂತನ್ಯೂ). ೧. ಸೇರು ; ಕೂಡು; ಒಡಗೂಡಂ : ಶ್ರೀತಟ್ಟುರದೊಳ್ ಕೌಸ್ತುಭಜಾತದ್ಯುತಿ ಬಳಸಿ ಕಾಂಡಪಟದಂತಿರೆ ಸಂಪ್ರೀತಿಯಿನಾವನನಗಲಳ್ ನೀತಿನಿರಂತರನುದಾರನಾ ನೃಪತುಂಗಂ (ಕವಿರಾ. ೧-೧) ; ಪಸರಿಸಿ ನೀಳ್ದ ತನ್ನ ಜಸದೊಳ್ ಪೆಱನೊರ್ವನ ಕೀರ್ತಿ ತಟ್ಟು ರಂಜಿಸೆ (ಪಂಪಭಾ. ೧೪-೩೯) ; ಎರಡುಂ ವಿದ್ಯಾಧರಶ್ರೇಣಿಯೊಳೆಡೆಯೆಡೆಯೊಳ್ ಜೈನ ಚೈತ್ಯಾಳಿ ತಟ್ಟಂಬರಮಂ ತಟಕ್ಕೈಸಿ ನಾನಾ ಮಣಿ ಕಿರಣಗಣ ಜ್ಯೋತಿಗಳ್ . . . ಬೆಳಗೆ (ಶಾಂತಿಪು. ೨-೧೧೭) ; ವಿಸರುಹದಂತೆ ಕೇಸರಮನಾಂತುದು . . . ಚಂದ್ರಮನಂತೆ ಸುಪಕ್ಷದಿಂದೆ ರಂಜಿಸಿದುದು ಪುಂಜನಗ್ಗದ ಸುವಸ್ತುವಿನಂತಿರೆ ತಟ್ಟು ಹೇಂಟೆಯೊಳ್ (ಯಶೋಚ. ೩-೭೮): ಪೂಗಳ ಪೊಸಗಂಪಿನೊಳ್ ಪೊರೆದು ತುಂಬಿಗಳಿಂಚರದಲ್ಲಿ ತಟ್ಟು . . . ಎಲರಲ್ಲಿ ತೀಡುವುದು ಮೆಲ್ಲನೆ ಮೆಲ್ಲನೆ ರಯ್ಯಮೆಂಬಿನಂ (ಕಬ್ಬಿಗಕಾ. ೩೩). ೨. ಬಿಗಿ ; ಬಂಧಿಸು ; ಅಪ್ಪು : ನಾಗಶಯ್ಯೆಯೊಳ್ ನಾಗಿಣ ನಾಗಬಂಧದೊಳ್ ತಟ್ಟು ಗುಣಾರ್ಣವನಂ ಮರುಳ್ಚಿದಳ್ (ಪಂಪಭಾ. ೪-೧೭) ; ಬಲದೇವಂ . . . ತಮ್ಮಂ ಸಯೆ ಬಳ್ಳಿಯುಂ ನಿಗಳಮುಂ ತಟ್ಟಿಂದುವುಂ ಬಳ್ಳಿಸಂಕಲೆಯುಂ ಪೋದ ಗಜಂ ಬನಕ್ಕೆ ತಳರ್ವಂತುದ್ವೇಗದಿಂ ಮೋಹ ಶೃಂಖಲೆ ಪಾಱೆ ತಪೋವನಕ್ಕೆ ತಳರ್ದುಂ (ಶಾಂತಿಪು. ೪-೧೦೮). ೩. ಹೊಂದಿಕೊಳ್ಳು ; ಹೊಂದಿಕೆಯಾಗಿರು ; ಅನುರೂಪವಾಗಿರು : ಸಮಸಂಸ್ಕೃತಂಗಳೊಳ್ ತಟ್ಟು[ಪಾಠಾಂ. ಸಯ್ತು]ಮಿರ್ದಿರೆ ಕನ್ನಡಮನಱಿದು ಪೇಟ್ಗೆ (ಕವಿರಾ. ೧-೫೦) ; ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್ ಪುಗುವುದು ಪೊಕ್ಕು ಮಾರ್ಗದೊಳೆ ತಟ್ಟುದು ತಟ್ಟೊಡೆ ಕಾವ್ಯಬಂಧಮೊಪ್ಪುಗುಂ (ಪಂಪಭಾ. ೧-೮) ; ತ್ರಿದಶ ಮರುದಿಂದ್ರ ಪುರಚಂದ್ರಸಲಿಲಂಗಳ್ ತುದಿಯೊಳಿರೆ ತಟ್ಟು ಹರರಲ್ಲಿ ಯತಿ ನಿಲ್ಕುಂ (ಛಂದೋಂಬು. ೨-೦೫೮). ೪. ದಟ್ಟೈಸು ; ಇಟ್ಟಣಿಸು ; ಸಾಂದ್ರವಾಗು ; ಗಾಢವಾಗು : ಕೊಂಕಿದ ಕೊಂಕು ತದ್ವಿಷಯ ಕಾಂತೆಯ ಪುರ್ವಿನ ಕೊಂಕಿನಂತೆ ಚೆಲ್ವಂ ಕುಡೆ ತಟ್ಟಿರಟ್ಟಿಡಿಯ ಪೂಮರದಿಂ ಕಟಿವೂಗಳತ್ತಮಿತ್ತಂ ಕವಿದಲ್ಲಿ ಮೆಲ್ಲನುಗೆ (ಆದಿಪು. ೧-೬೦). ೫. ಅಂಟು ; ತಗುಲು ; ಹತ್ತು : ನೆತ್ತರ್ ತಟ್ಟ ಬಲ್ಲಲೆಯ . . . ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೫೩೩ ಶೂದ್ರಕ); ಕ್ಷತ್ರತೇಜಂ ಹಿಮಮಳುರ್ವಪೊಲಬ್ಬಂಗಳಂ ಗರ್ವಮದ್ಭುಮಿಪರಂ ತಟ್ಟಳ್ದೆ ಕೊಂಡತ್ತದು (ಶಾಂತಿಪು. ೧೦-೧೧೦). **ತಳ್$_1$:** ೧. ಮಲೆತೆನ್ನನೊಲಿದಂತೆ ನಿಂದಿಸಲ್ಕೆನ್ನ ಸತ್ಕುಲದ ಕುಂದಂ ನೋಡೆ ನಿನಗಲ್ಲ ಮದನಹರ ಜಲಜ ಸಂಭವಗರಿದು ತತ್ತಡೆಲೆ ಮುನಿಪ ಕೇಳೆಂದನು ಹರಿಶ್ಚಂದ್ರನು (ಹಚಕಾ. ೮-೩೮) ; ಮಡುವಿನಲಿ ತಳುತಿರಲಿಕಿಂದಿರನಡಿಗೆಱಗಿ ಶ್ರೀ ಗರುಡದೇವರ ಝಡಿತೆಯಲಿ ಕಳುಹಿದನು ಬಂದನು ಕದ್ರುವಿನ ಮನೆಗೆ (ಸಂಭಪು. ೫-೫೮) ; ರುಧಿರಾಂಭೋನಿಧಿಯೊಳಂಭೋಧಿ ತಳ್ತುದು (ಉತ್ತರಾ. ೫-೨೨); ಸಹಜಾತರಾದ ನಿಮ್ಮೈವರೊಳ್ ತಾ ತಳ್ತಿರದೆ ವಿರೋಧಿಸಿದನೆಮ್ಮಯ್ಯಂ (ಜೈಮಿಭಾ. ೨-೩೯). ೪. ರವಿಕರ ಕೆಡಗುಡದಿಡಿದಿಡಿದು ಸುತ್ತಿ ಮುತ್ತಿ ಕವಲಿಱಿದು ಕವಿವ ಲತಾಂತಜಾಳದ ತಳ್ತ ನೆಳಲಿಂ ಕಳ್ತಲಿಸುವ ಓಲಗಸಾಲೆಯೊಳ್ (೧೧೧೪. ೭-೧೧ ಪ) ; ಬಾಲಳಿಗುರುಳವರು ನುಣ್ಣುರುಳ ತಳಿತ ನೀಲದ ಕುರುಳವರಾ ಕುವರಿಯ ಬಳಿವಿಡಿದೈದಿತೊಗ್ಗಿನಲಿ (ಮೋಹತ. ೨೪-೧೧). ೬. ನೆಡು ; ನಾಟು : ನರನ ಕುದುರೆಯ ಮೇಲೆ ಸಿಂಧದ ಹರಿಯ ತನುವಿನ ಮೇಲೆ ತಳಿತವು ಶರನಿಕರ (ಕುವ್ಯಾದ್ರೋ. ೩-೫೦) ; ಎಸಲು ಕಣೆ ಮುಕ್ಕುರುಕಿದವು ಹೊಸ ಮಸೆಯ ಧಾರೆಯ ತೋರಕಿಡಿಯಲಿ ಮುಸುಕಿತರಸನ ತೇರು ತಳಿತವು ಮೆಯ್ಯೊಳಂಬುಗಳು (ಕುವ್ಯಾದ್ರೋ. ೫-೨೦).

**ತಟ್ಟಿಪ್ಪು, ತಳ್ಳಪ್ಪು** = ಗಾಢವಾಗಿ ಆಲಿಂಗಿಸು: ಸರ್ವಾಂಗವನೆನ್ನಂಗಂಗಳೊಳ್ ಮೆಯ್ಗರೆದುವೆನಿಸಿ ಮೆಯ್ಯಾರೆ ತಟ್ಟಿಪ್ಪಿ (ಕಾದಂಉ. ೩೨೨); ಶಾಂತಲಾದೇವಿ ಬಮ್ಮಲದೇವಿಯನ್ನು ತನ್ನ ಎರಡೂ ತೋಳುಗಳಿಂದ ತಳ್ಳಪ್ಪಿ ಕರೆದುಕೊಂಡಳು (ಸವತಿ. ೧೦೦). **ತಟ್ಟಿಡಿ** = ದಟ್ಟವಾಗಿ ಕವಿ; ಗಾಢವಾಗಿ ಆವರಿಸು: ತಮಾಲವನಂಗಳ ಮರ್ವು ಪರ್ವಿ ಕರ್ಮುಡುಗಳೊಳೆಡ್ಡೆ ಮಾರ್ತೊಳಗೆ ನೀಲಸರೋಜವನಂಗಳಲ್ಲಿ ತಟ್ಟಿಡಿದಿರೆ ಕಾಳಗತ್ತಲೆ ತಗುಳ್ದಿರುಳಾದುದೆ ಗೆತ್ತು (ಕಾದಂಪೂ. ೬೩೯). **ತಟ್ಟಿಡು** = ಒಂದಕ್ಕೊಂದು ಹೆಣೆ; ತಳಕುಹಾಕು: ಎರಡು ಕೆಯ್ಯಂ ತಟ್ಟಿಟ್ಟು ಮಾಟ್ಟುದುಂ . . . ಎಂದಿವು ಮೂವತ್ತೆರಡು ದೋಷಂಗಳಪ್ಪುವು (ಪಸಾರ. ೬೮೭-೯೬). **ತಟ್ಟಿರು** = ೧. ಕೂಡಿರು; ಹೊಂದಿರು: ತಳಿರಿಂ ತಟ್ಟಿತ್ತ ಶೋಕದ್ರುಮವೆಳಗೊನರಿಂದೊಂದಿತಿಮ್ಮಾವು (ಕಾದಂಉ. ೭೪೦); ಪರಮಾಲೋಚನದೊಳ್ . . . ನಿಬಿಡಕಾಯೋತ್ಸರ್ಗದೊಳ್ ಶುದ್ಧಿ ತಟ್ಟಿರೆ (ಸುಕುಮಾ. ೪-೧೫). ೨. ತಟ್ಟಿರು; ತಾಗಿರು; ತಗುಲು: ಮದನದಾವದಹನಂ ತಟ್ಟಿರ್ದಪುದಿಲ್ಲ ನಿನ್ನನದಱಿಂದುಪದೇಶಂಗೆಯ್ಯುತಿರ್ಪುದಿದು ಸುಖಮಲ್ತೆ (ಕಾದಂಪೂ. ೪೪೯). ೩. ಬೆರೆತಿರು; ಲೀನವಾಗಿರು: ಅಕ್ಷಯಸುಖದೊಳ್ ತಟ್ಟಿರು ನೀಂ ಸುರುಳ್ದಿರ್ಪ ಮರುಳ್ತನಮಿನ್ನೇಕೆ ದೇವ ಜನ್ಮಾಟವಿಯೊಳ್ (ಅಜಿಪು. ೬-೭೪); ಜಿನಪಾದಾಂಭೋಜದೊಳ್ತಟ್ಟಿರೆ ಮತಿ (ಧರ್ಮಾಮೃ. ೧-೫); ತಟ್ಟಿರ್ದನಿಂದ್ರಪ್ರತಿಮಂ ಲೀಲಾವತೀದೇವಿಯ ಹೃದಯದೊಳ್ (ಲೀಲಾವ.೧೪-೯೭). **ತಟ್ಟಿಮೆ, ತಳಿತೆವೆ**=ದಟ್ಟವಾದ ರೆಪ್ಪೆಗೂದಲು,-ಕಣ್ಣೆವೆ: ಬಳ್ವಳ ನೀಳ್ದ ಕಣ್ಮಲರ ತಟ್ಟಿಮೆಯಿಂ ಕರೆಗಣ್ಮಿ . . . ಬಾಷ್ಪಜಳಮಂ ಕಳಿದು (ಪಂಪಭಾ. ೭-೭೪); ತಟ್ಟಿಮೆದುಱುಗಲಿನಿಟಿದುವು ಮಿಗೆ ಬಾಷ್ಪವಾರಿ ಧಾರಾಪೂರಂ (ಕಾದಂಪೂ. ೮೩೦); ಅಳಕನಿಚಯದ ಕುಂಭಿನೊಸಲಿನ ತಳಿತೆವೆಯ ನಿಡುಹುಬ್ಬುಗಳ (ಕುವ್ಯಾಭೀ. ೩-೭೭). [ದೇ.॥ ತಮಿ. ತಟ್ಟಾಲ್, ತಟು=ಅಪ್ಪಿಕೊಳ್ಳುವಿಕೆ]

△**ತಟ್₂** 'ತಳ್₂' ನೋ.

**ತಟತಟ**, ತತ್ತಳ್₁, ತತ್ತಟ, ತಳತಳ, ತಳಥಳ, ತಳ್ತಳ, ತಟ್ಟಟ (ನಾ). ೧. ತೀವ್ರವಾಗಿ ಕುದಿಯುವುದನ್ನು ಅನುಕರಿಸುವ ಶಬ್ದ. 'ತಟತಟಗುಂದಿ' ಪರಾ. ೨. ಹೆಚ್ಚಾಗಿ ಪ್ರಕಾಶಿಸುವುದನ್ನು ಅನುಕರಿಸುವ ಶಬ್ದ: ಗಟಗಟ, ಕವಕವ, ಛಟಿಲ್, ಛಟಿಲ್, ತಟತಟ . . . ಖಟಿಲನೆ, ದುಘುಮ್ಮನೆ ಇತ್ಯಾದಿ (ಕೃಪಿಡಿ. ೫೨). 'ತಟತಟನೆ', 'ತಟತಟಿಸು' ಪರಾ. **ತತ್ತಳ್₁**: ೨. ತತ್ತಳ ಸೀರೆಯನುಟ್ಟು ಮುತ್ತುರತ್ನ ಮಾಣಿಕವ ತೊಟ್ಟು (ಎಬಕಾ. ೧೩೬-೭). ೩. ಕಕ್ಕಾಬಿಕ್ಕಿ; ತಬ್ಬಿಬ್ಬು; ಗಾಬರಿ; ಗೊಂದಲ; ದಿಗ್ಭ್ರಮೆ: ಬತ್ತಿದರು ಕುರುಪತಿಗೆ ಭಯವನು ತತ್ತಳದ ತವಕದಲಿ ರಾಯನ ಮೊತ್ತದಕ್ಷೋಹಿಣಿಯ ಮಾರ್ಬಲ ಸಹಿತ ಹೊಱವಂಟ (ಕುವ್ಯಾಆ. ೬ರಿ೩. ೨೫-೫); ತತ್ತಳದ ಬೇಟದೊಳ್ಬೆಂಡಾಗಿ ವಿಷಯ ನಿಂದಿರ್ದಳಾತನ ಪೊರೆಯೊಳು (ಜೈಮಿಭಾ. ೩೦-೨೩); ಸುತ್ತದೆ ಪಲಬಗೆಯ ತೀರ್ಥಯಾತ್ರಾದಿಗಳಂ ಗೊತ್ತಿನ ಹಾಲಾಸ್ಯದೊಳಂ ತತ್ತಳಮಂ ಬಿಟ್ಟು ಮುಕ್ತಿಯ ಪಡೆದನವಂ (ಹಾಲಾಸ್ಯ. ೧-೧-೭೧). **ತತ್ತಟ**: ೧. 'ತತ್ತಟಗುಂದಿ' ಪರಾ. **ತಳತಳ**: ೧. 'ತಳತಳನೆ' ಪರಾ. ೨. ರಕ್ತಾಶೋಕಪಲ್ಲವದಂತೆ ತಳತಳ ತೊಳಗುವ [ಪಾಠಾಂ. ತೊಳತೊಳಗುವ]ಕರತಳ ಪಲ್ಲವಂಗಳ್ (ಪಂಪಭಾ. ೨-೯೪ ವ). 'ತಳತಳಿಸು' ಪರಾ. ೪. ತೊಳಲುವುದನ್ನು ಅಥವಾ ಸಂಕಟಪಡುವುದನ್ನು ಅನುಕರಿಸುವ ಶಬ್ದ: ಬಡವರನ್ನು ಯಾಕೆ ಸುಮ್ಮನೆ ತಳತಳ ಅನ್ನಿಸುತ್ತೀ? (ರೂಢಿ). ೫. ಸೂರ್ಯೋದಯಂ; "ಉದಯ" (ಜಕುನಿ. ೬. I, ೨೩). **ತಳಥಳ**: ೨. 'ತಳಥಳಿಸು' ಪರಾ. **ತಳ್ತಳ**: ೨. 'ತಳ್ತಳಗುಂದಿ' ಪರಾ. **ತಟ್ಟಟ**: ೧. 'ತಟ್ಟಟಗುಂದಿ' ಪರಾ.

**ತತ್ತಳವಾಡು** = ಗಾಬರಿಯಿಂದ ಮಾಡು; ಗಡಿಬಿಡಿಯಿಂದ ಮಾಡು (?): ನಿತ್ಯಕರ್ಮವ ಮುಱಿದರು ದೇವಪೂಜೆಯ ತತ್ತಳ ಮಾಳ್ಪರು ತಪದ ಚಿತ್ತವನೊಡೆದರು ಸನ್ಮುನಿವರರು ದಂಡೆತ್ತಿ ಮನ್ಮಥ ಬಹ ಭರಕೆ (ಮೋಹತ. ೬-೨೪). **ತತ್ತಳಗಾಗು** = ತಳಮಳಗೊಳ್ಳು; ಕಾತರಗೊಳ್ಳು: ಗಳರವಗಳ ಮಾಳ್ಪ ಬಗೆದರೆ ಹಲುಬುವ ಕೋಳರ್ವಕ್ಕಿ ಕೆಲವು ಲಾವುಗೆಯ ಬಳಸದ ದನಿಗೇಳ್ದ ಮುನಿಗಳ ಚಿತ್ತ ತತ್ತಳವಾದುದೇನ ಹೇಳುವೆನು (ಮೋಹತ. ೭-೧೬).

**ತಟತಟಗುದಿ**, ತತ್ತಟಗುಂದಿ, ತಳ್ತಳಗುದಿ, ತಟ್ಟಟಗುದಿ (ಕ್ರಿ). ತೀವ್ರವಾಗಿ ಕುದಿ; ಜೋರಾಗಿ ಮರಳು; ಕತಕತನೆ ಕುದಿ: "ತಟತಟಗುದಿ, ತಟ್ಟಟಗುದಿ-ಎಂಬಿವು ಕಾಸುವ ರಸದ್ರವ್ಯಾನುಕರಣಂಗಳ್" (ಶಮದ. ಪರಿ. ೧). **ತತ್ತಟಗುದಿ**: ಮೇಗೆ ಸಿಡಿಲ್ದಗುಳಂತೆ ಕೂಡೆ ತತ್ತಟಗುದಿಯುತ್ತುಮಿರ್ಪ ಕುದಿಯೊಳ್ ಸಿಡಿದಲ್ಲಿಯ ಮುತ್ತುಗಳ್ (ಪಂಪಭಾ. ೧೧-೧೫೩); ತತ್ತಟಗುದಿದುವು ಭವನ ದೀರ್ಘಿಕಾಚ್ಚಜಲಂಗಳ್ (ಶಾಂತಿಪು. ೩-೧೦೬); ತತ್ತಟಗುದಿದು ಕಾಯ್ದು ಕಾಯ್ಗೊಡದೆಣ್ಣೆಯೊಳರ್ದಿ (ಅಜಿಪು.೧೧-೧೦ ವ). **ತಳ್ತಳಗುದಿ**: ತಳ್ತಳಗುದಿದೆಣ್ಣೆಯೊಳ್ ಬಟಲೆ ತೆಗೆವುದುಂ (ಸುಕುಮಾ. ೧೧-೪೭ ವ). **ತಟ್ಟಟಗುದಿ**: ಮೇಲಿನ 'ಶಮದ' ಪ್ರಯೋಗವನ್ನು ನೋಡಿ. [ತಟತಟ + ಕುದಿ₁]

**ತಟತಟನೆ**, ತಳತಳನೆ, ತಳ್ತಳನೆ (ಅ). ೧. ಹೆಚ್ಚಾದ ಕಾಂತಿಯಿಂದ ಕೂಡಿ; ತಳತಳಿಸುತ್ತ; ಪ್ರಕಾಶಮಾನವಾಗಿ: ಪಂಚಪಾಂಡವರ ತಲೆಗಳಂ ಕೊಂಡು ತಟತಟನೆ ನೇಸರ್ಮೂಡುವಾಗಳ್ ಬಂದು (ಗದಾಯು. ೯-೩೨ ವ); ತಟತಟನೆ ನೇಸರ್ಮೂಡಿದುದು ಮಿಟ್ಟು ಮೂಡುವ ತೆಱದಿಂ (ಶಮದ. ೧೯೩ ಪ್ರಯೋ). **ತಳತಳನೆ**: ೧. ತಳತಳ[ಪಾಠಾಂ. ಥಳಥಳ]ನೆ ಕಾಹೇಱಿದದಱಲಿ ನಲಿದು ಬತ್ತೀಸಾಯುಧಂಗಳಿನಲಘುಮತಿಯಲಿ ವೀರಗೆಲಸವನಾಚರಿಸಿ (ಬಸವು. ೫೩-೫೩); ತಳತಳನೆ ತೊಳಪ ರದನದ ಬೆಳಗಂತಃಸ್ಥಿತ ಕೃಪಾಸುಧಾಂಭೋನಿಧಿಯಗ್ಗಳಿಸಿ ತೆರೆಮಸಗಿದಂತಿರೆ ಜಳರುಹರಿಪುಮೌಳಿ ತಾಪಸಂಗಿಂತೆಂದಂ (ಶಬಶಂ. ೨-೧೦೪). ೨. ಕೊತಕೊತನೆ; ಕತಕತನೆ; ತೀವ್ರವಾಗಿ: (೬). **ತಳ್ತಳನೆ**: ೨. ತಳ್ತಳನೆ ಕುದಿವ ಕರ್ಬೊನ್ನ ಕಾಯ್ಗೊಂಡೆಣ್ಣೆಯೊಳ್ ಬಟಲೆ ತೆಗಪುವರುಂ (ಆದಿಪು. ೫-೮೫ ವ). [ತಟತಟ + - ಅನೆ₁]

**ತಟತಟಿಸು**, ತಂಥಳಿಸು, ತತ್ತಳಿಸು, ತತ್ಥಳಿಸು, ತಳತಳಿಸಂ, ತಳತ್ತಳಿಸಂ, ತಳಥಳಿಸಂ, ತಳದಳಿಸಂ, ತಳ್ಳಳಿಸಂ, ತಟತ್ತಟಿಸಂ (ಕ್ರಿ). ೧. ಹೆಚ್ಚಾಗಿ ಹೊಳೆ,-ಪ್ರಕಾಶಿಸು; ತೇಜೋಮಯವಾಗಿರು: ಉರಿಯುರುಳಿಯಂತಪ್ಪ ಕಣ್ಣಂ ಕೃತಾಂತನಂತಾಕಾರಮಾಗಿ ತಟತಟಿಸಿ ಪೊಳೆವ ಕತ್ತಿಗೆಯುಂಬೆರಸು ಪೊಱಮಟ್ಟು ಕೀರ್ತಿಗೆಯೆಂಬುಗ್ರ ದೇವತೆ . . .ಬೆಸನಂ ಬೇಡೆ (ಪಂಪಭಾ. ೮-೪೨ ವ); ಸಿಡಿಲ ಬಳಗಮನೊಳಕೊಂಡಂತೆ ತಟತಟಿಸಿ ಪೊಳೆವ ಕೆಯ್ದುಗಳ್ ತೀವಿದ. . .ಪಸುರ್ಪೊನ್ನ ರಥಮನೇಱಿ (ಪಂಪಭಾ. ೧೨-೫೩ ವ); ಪೊಱಗಣೊಳಗಣೆರಡುಂ ಲೇಶ್ಯಾಶುದ್ಧಿಯಂ ತಾಳ್ದಿ ತಟತಟಿಸಿ . . . ಮಣಿಕುಟ್ಟಿಮಭೂಮಿಭಾಗದೊಳಮಮಿತ ವಿಕ್ರಮದೇವನ ದಿವ್ಯಚ್ಛಾಯೆ ಪ್ರತಿಬಿಂಬಿಸೆ (ಶಾಂತಿಪು. ೯-೩೩ ವ). **ತಂಥಳಿಸು**: ೧. ಮೊಳಗಿದುದು ರಣಭೇರಿ ಗಾರ್ದಭಕಲಿತ ಘೋರ ವರೂಥವೇರಿದ ಹೊಳೆಹೊಳೆದು ಚಲಿಸುವ ಮಯೂರಧ್ವಜನ ಟಿಕ್ಕೆನಲಿ ಥಲವದದ ಚತುರಂಗಬಲ ತಂಥಳಿಸಿ ನಡೆದುದು (ಅನಂರಾ. ೬-೫-೩). **ತತ್ತಳಿಸು**: ೧. ಗಂಧಾದಿ ಪಂಚ ತನ್ಮಾತ್ರೆಗಳು ನಿತ್ಯಮೊಂದೊಂದಕ್ಕೆ ನಾನಾಪ್ರಭೇದದಿಂ ಬೇಱೆ ಬೇಱಿರುತಿಪ್ಪವು ಪ್ರತ್ಯಕ್ಷಮೆನಿಸಿತೊಂದೊಂದಱೊಳವೆಲ್ಲವುಂ ತತ್ತಳಿಸಿದೊಂದೆ ರೂಪಿನೊಳಿರುತಿಪ್ಪವು (ಲಶಿಚಂ.೫೩-೪೬). ೨. ಗಾಬರಿಗೊಳ್ಳು; ಹೆದರು; ನಡುಗು: ಬೆದಱಿದಳು ಮಾಯೆಯಪ

ಮೃತ್ಯು ತತ್ತಳಿಸಿತ್ತು ಕದಲಿದಂ ಕಾಲಂ (ಲಶಿಜಂ. ೩೦-೧೨). **ತತ್ಥಳಿಸು :** ೧. ಮುತ್ತಿನಾ ತುರಾಯಿ ಅಂಗಿ ಮುಂಡಾಸು ತತ್ಥಳಿಪ ತಾಳಿ ವಜ್ರತಾಳಿ ಚೌಕುಲಿ ಮುತ್ತಿನ ಕುಂಡಲವಿಟ್ಟು (ವಾದಿಕೀ. ೪೦-೪). **ತಳತಳಿಸು :** ೧. ತಳತಳಿಸಿ ತೊಳಗಿ ಬೆಳಗುವ ಪಳಿಕಿನ ಸಜ್ಜೆಯೊಂದು ಮುಱಿಯೊಳಿರ್ದೆರಲೆ ಮಹೋಜ್ವಳ ತುಹಿನಕಿರಣಮಂಡಲದೊಳಗಣ ಹರಿಣಂಬೊಲೊಪ್ಪಿ ತೋಱಿತ್ತಾಗಳ್ (ಕಾವ್ಯಸಾ. ೧೦೫೫ ಶೂದ್ರಕ) ; ಬೆಳಗುವ ಮಂಗಳ ದೀಪಾವಳಿಗಳ ಬೆಳಗತ್ತಮಿತ್ತಮಜ್ಜೊತ್ತಿದಪೋಲ್ ತಳತಳಿಸಿ ಬೆಳಗೆ ಬೆಳಗನೆ ಮೊಳೆತಂತೊಪ್ಪಿದುವು ತೊಳಪ ರನ್ನದ ಕೇರ್ಗಳ್ (ಆದಿಪು. ೪-೩೪); ನವಯುವ್ವನರಾಗರಸಾರ್ಣವದೊಳ್ ತಳತಳಿಸಿ ಪೊಳೆವುತಿರ್ದುವು ಮುತ್ತುಂ ಪವಳಮುಮೆನೆ ಕಣ್ಗೊಳಿಪುವು ಯುವತಿಯ ಸುಲಿಪಲ್ಲು ಮೆಸೆವ ಬಿಂಬಾಧರಮುಂ (ಕಾದಂಉ. ೦೫) ; ತಳತಳಿಪ[ಪಾಠಾಂ. ಕಳಕಳಿಪ]ರನ್ನದೆನೆ ಶತಯೋಜನಂಗಳಿಂಬಳತೆ (ಜಬಪು. ೨೮-೯). ೩. ತೀವ್ರವಾಗಿ ಕುದಿ,- ಮರಳು : ಶ್ರವಣವಿವರಕ್ಕೆ ಲೋಹದ್ರವಮಂ ತಳತಳಿಸಿ ಕಾಯ್ದುದಂ ಬಿಟ್ಟಂತಾ ಯುವತಿ ಕಡುನೊಂದು (ಮಹಾನೇ. ೧೭-೨೨). **ತಳತ್ತಳಿಸು:** ೧. ಪೊಟಲೊಳಗೊಪ್ಪೆ ಕನ್ನಡಿಯ ಕಂಚಿನ ತೋರಣದೋಳಿಗಳ್ ತಳತ್ತಳಿಸೆ ವಿಚಿತ್ರಕೇತುತತಿಗಳ್ ಮಿಳಿರ್ದಾಡೆ (ಪಂಪಭಾ. ೩-೭೪) : ಪೊಳೆದೆಸೆವ ರತ್ನದ ಪರ್ಣದೊಳಗೆ ತಳತ್ತಳಿಪ ತರಣಿಕಿರಣಾವಳಿವೊಲ್ (ಕಾದಂಪೂ. ೪೩೪) ; ತಳ್ಪೊಯ್ದು ತರಳನಯನದ ಬೆಳ್ಪು ತಳತ್ತಳಿಸಿ ಮಿಳಿರ್ದು ಪೊಳೆಯೆ (ಸುಕುಮಾ.೧೧-೦೪); ಕಲ್ಪಲತೆಗೆ ಪಾಸಟಿಯಾದಳ್ ನಳನಳಿಸುವ ಜನಶಿಶುವಂ ತಳೆದು ತಳತ್ತಳಿಪ ಹರಿಯ ವರವಧುವಾಗಳ್ (ವರ್ಧಪು. ೧೩-೯೭). **ತಳಥಳಿಸು :** ೧. ತಳಥಳಿಪ ಪದಾರ್ಥಮನೇಂ ಕಾಣ್ಬನೆ ದೋಷದೃಷ್ಟಿ ದುರ್ಮತಿ (ಶಬ್ದಾನು. ೧೪೦ ಪ್ರಯೋ). **ತಳದಳಿಸು :** ೧. ಪುರು ಪರಮೇಶ್ವರನ ದೂತನಂ ಕಾಣ್ಬವೊಲಾ ಭರತಂ ಕಂಡಂ ಕೆನ್ನೆಯ ನರೆಯಂ ತಳದಳಿಸಿ ಪೊಳೆವ ಮಣಿದರ್ಪಣದೊಳ್ (ಆದಿಪು. ೧೭-೭೧) ; ತಳದಳಿಸಿ ತೊಳಗಿ ಬೆಳಗುವ ವಿಳಸನ್ಮಣಿಕಿರಣಶಿಖಿಯ ಬಳಗದ ಬೆಳಗಂ ತಳೆದೆಸೆವ ತಾಣದೀವಿಗೆಗಳಂ (ಶಾಂತಿಪು. ೬-೧೦೭) ; ತಳದ[ಪಾಠಾಂ. ತ, ಥ]ಳಿಸಿ ಪೊಳೆಯೆ ಸೀತೆಯ ಚಳನಯನಂ ಖಚರ ಚಕ್ರವರ್ತಿಯ ಚಿತ್ತಂ ಕೊಳ ದೊಳಗೆಳವಾಟ ತೆಱಂಬೊಳೆವಂತೆ ಕಲಂಕಿ ಕದಡಿದತ್ತಾಕ್ಷಣದೊಳ್ (ಪಂರಾಮಾ. ೯-೭೯). **ತಳ್ಳಳಿಸು :** ೩. ಎಱೆವರ್ ತಳ್ಳಳಿಸಿ ಕುದಿವ ಲೋಹದ್ರವಮಂ (ವರ್ಧಪು. ೧೧-೨೧). **ತಟತ್ತಟಿಸು :** ೧. ತಟತ್ತಟಿಸಿ ಬೆಳಗೆ ಕೆಯ್ದಾವಿಗೆಗಳ್ (ಪಂಪಭಾ. ೪-೫೩) ; ಬೆಳಗುವ ಸೊಡರ್ಗಳ ಬೆಳಗುಮನಿಳಿಸಿ ತಟತ್ತಟಿಸಿ ಪೊಳೆಯೆ ತಮ್ಮಯ ಬೆಳಗಗ್ಗಳಿಸಿ ತಟತ್ತಟಿಸಿ ವಿದ್ಯುದ್ವಿಳಸಿತಮೆನಿಸಿದುವು ನರನ ದಿವ್ಯಾಸ್ತ್ರಂಗಳ್ (ಪಂಪಭಾ. ೧೦-೪೭). 'ಥಳಥಳಿಸು' ಪರಾ. [ ತಟತಟ + – ಇಸು$_3$ ]

**ತಟತ್ತಟಿಸು** 'ತಟತಟಿಸು' ನೋ.

**ತಟಪಟ** (ನಾ). ಒಂದು ಅನುಕರಣ ಶಬ್ದ. 'ತಟಪಟನೆ' ಪರಾ.

**ತಟಪಟನೆ** (ಅ). ಶೀಘ್ರವಾಗಿ ; ಕತಕತನೆ : ಪಱುಗಟ್ಟಿದ ಪಾಪಮಂ ಕೈಗಟ್ಟಿದ ತಪೋನಳನೆ ಸುಡುಗುಮೊಟ್ಟಿದ ಕಿಚ್ಚಿಂ ತಟಪಟನೆ ಪುಳ್ಳಿಯೊಳಗಣ ಪುಱು ಬೇಗಂ ಬೇಗುಮೆಗ್ಗ ಬೇಗುಮೆ ದುರಿತಂ (ಅರ್ಧನೇ. ೪-೦೨೯). [ ತಟಪಟ + – ಅನೆ$_1$ ]

**ತಟಲ್**, ತಳಲು$_3$, ತಳಿಲು$_1$ (ನಾ). ಬಲಿತ ಕಾಯಿ ; ಒಣಗಿದ ಕಾಯಿ : "ತಟಲ್=ಮುತ್ತ ಕಾಯ್" (ಶಮದ. ಪರಿ. ೧) ; "ತಟಲೆಂದು ಮುತ್ತ ಕಾಯ್" (ಕಶಸಾ. ೫-೭೯) ; ಪಂಚಾಕ್ಷರೋಚ್ಚಾರಣ ಕಾಲ ಪರ್ಯಂತಂ ತಟಲೊಳಗಣ ಬೀಜದಂತೆ ದ್ರವ್ಯಮನೋವಾಕ್ಕಾಯದೊಳೊಂದದೆ (ಪುಷ್ಪಪು. ೧೪-೫೧ ವ). **ತಳಲು$_3$ :** ಹೊಲದವರೆಯ ನೆಟ್ಟು ಸೊಡಗೆಯ ಸುಲಿದಲ್ಲಿ ತಳಲು ಬಲಿದು ಒಡೆದುದಿಲ್ಲ (ಮೋಳಿಮಾ. ೨೭೫-೮೦೭) ; ಅದಾರಿಯಲ್ಲಿ ಉದ್ದಕ್ಕೂ ಹತ್ತುಮಾರು ಇಪ್ಪತ್ತುಮಾರಿಗೊಂದರಂತೆ ಕೊಬ್ಬರಿ ತಳಲುಗಳು ಬಿದ್ದಿರುತ್ತಿದ್ದುವು (ಗರುದಾ. ೧೧೦). **ತಳಿಲು$_1$ :** ಹೊಲಕ್ಕೆ ಹೋಗಿ ಅವರೆ ತಳಿಲು ಆಯ್ದುಕೊಂಡು ಬಂದಳು (ಅನಾಮಿ. ೩೦).

**ತಟಿ**, ತಳಿ$_4$ (ನಾ). ೧. ಮರದ ದಿಮ್ಮಿ ; ಕೊರಡು ; ದಪ್ಪನಾದ ಮರದ ತುಂಡು : "ತಟಿ = ಸ್ಥೂಲ ದಾರು ; (ಸತ್ಯಾರ್ಥದೊಳ್ ಕುಳಂ)" (ಶಮದ. ಪರಿ. ೧); ಗಿಡುವಂ ಪಿತ್ತಿಲನೋಣಿಗೇರಿಡುಕುಱುಂ ಪ್ರಾಕಾರಮಂ ನುರ್ಗಿದಂಗಡಿಯುಂ ಬೇಲಿಯನಿಕ್ಕಿಸಿರ್ದ ತಳಿ[ಟಿ]ಯುಂ ನೀರ್ದಾಣಮಂ . . . ಅಟಿದೇಗುಲಂಗಳೆಡೆಯುಂ ಕಾದಿರ್ಪ ಪಾಣ್ಬರ್ಕಳುಂ (ಸೂಕ್ತಿಸು. ೮-೧೩೫). 'ನೂಂಕುದಟಿ' ಪರಾ. ೨. ಆನೆಗಳು ಹೋರಾಡುವುದಕ್ಕಾಗಿ ಸುತ್ತಲೂ ಮರದ ದಿಮ್ಮಿಗಳನ್ನು ನೆಟ್ಟು ಹಾಕಿದ ಬೇಲಿ ; "ಆನೆಗಳನ್ನು ಗುದ್ದಾಡಲಿಕ್ಕೆ ಬಿಡುವ ಸ್ಥಳ" (ಪ್ರಥಣ್ಣ) : ತನ್ನ ಮನೆಯಂಗಣದೊಳ್ ಸೆಂಡಾಡುವ ತಟಿಯುಮಾನೆಯ ನೇಱುವ ವಿನೋದಂ ವೈಹಾಳಿ ಮೊದಲಾಗೊಡೆಯ ವಿನೋದಸ್ಥಾನಂ ಗಳೆಲ್ಲಮಂ ಮಾಡಿಸಿ (ವಡ್ಡಾರಾ. ೪೫-೨೧) ; ತೋರದೆರೆ ಮುಱಿಯೆ ಮೂಡುವ ವಾರಣಮಂ ಪೋಲ್ತುದಡಸಿ ನಿಡುಗಯ್ಯಂ ಭಂಡಾರಿಸಿ ಮೆಡಱಿದ ತಟಿಯಂ ಬಾರಿಯುಮಂ ಮುಱಿಯೆ ಪೊಯ್ದು ಪೊಱಮಡು ವಿಭಮಂ (ಅರ್ಧನೇ. ೫-೧೧೩) ; ಸ್ತಂಬೇರಮನೆಂಟುಮನೊತ್ತಂಬದೆ ದಿಗಧಿಪರೊಳೀಟ್ಟುಕೊಂಡವನದಟಿಂ ಕಂಬಕ್ಕಂ ತಟಿಗಂ ತೊಡೆಗಂ ಬೀದಿಗಮಳವಡಲ್ ಖಳಂ ಶಿಕ್ಷಿಸಿದಂ (ಜಗವಿ. ೧೧-೮೨) ; ಜಗಜಟ್ಟಿ ಗಳಖ್ಖಡಂಗಳೊಳ್ ಮರಳದೆ ಪಾರ್ವಶಕ್ತಿ ತಟಿ[ಪಾಠಾಂ. ಳೆ, ಲೆ] ಯೊಳ್ ನಡೆಪೋರ್ವ ಮದದ್ವಿಪಂಗಳೊಳ್ ಪುರುಡಿಸೆ ಸುತ್ತಲುಂ ಪೊಱ ಪೊಟಲ್ಮೆಱಿಗುಂ ವಿಜಯೋತ್ಸವಂಗಳಂ (ಅನಂಪು. ೧-೮೯) ; (ಸೂಕ್ತಿಸು. ೪-೮೫ ನೋ) ; ತಟಿಯೊಳ್ ಚೌದಂತನೆನ್ನಾನೆಗೆ ಮಲೆದೊಡೆ ವೈಹಾಳಿ ಯೊಳ್ ದಿಗ್ಗಜಂ ಬೆಂಬಟಿಯೊಳ್ ಕಾಲ್ಗೋದೊಡೆ (ಅನಂಪು. ೨-೩೦). "ಆನೆ ಹೋರಲಿಕ್ಕಿದ ಸ್ಥಳಂ" (ಪದ್ಮಸಾ. II, ೧೫೪ ಟಿಪ್ಪಣಿ) ; ಗರುಡಿಯ ಬಳಸಿಂ ಬಿಜ್ಜೋದರಗಳದಿಂದಾನೆ ಹೋರಲಿಕ್ಕಿದ ತಟಿಯಿಂ (ಶಮದ. ೧೦೭ ಪ್ರಯೋ) ; ತ[ಪಾಠಾಂ. ಕ]ಟಿಯೊಳ್ ಪೋರ್ವ ಮದಾಂಧ ಸಿಂಧುರ ಚಯಂ ವಾಹ್ಯಾಳಿಗೈತರ್ಪ ಶಾಕಳ ವಾಹಾವಳಿ . . . ಮನಂಗೊಳಿಕುಂ ತನ್ನಗರೀಬಹಿಃಪುರವನಪ್ರಾಂತಪ್ರದೇಶಂಗಳೊಳ್ (ಧರ್ಮನಾ. ೨-೪೮). ೩. ಶತ್ರುಗಳು ಕೋಟೆಯನ್ನು ಮುತ್ತದಂತೆ ಸುತ್ತಲೂ ಮರದ ದಿಮ್ಮಿಗಳನ್ನು ನೆಟ್ಟು ಹಾಕುವ ಬೇಲಿ: ವರವೇಲಿ ತಟ್ಟೆ ತಟಿ ಗೋಪುರ ವಾಳ್ವೞಿ ಪಡಿ ತವಂಗವಂಕದ ತಳನೋವರಿ ಸೀಯಬಾರವಂತಃಪುರ ಮುಯ್ಯಾಲ್ ಕೃತಕ ಶಿಖರಿಯುದ್ಯಾನವನಂ (ಪುಷ್ಪಪು. ೬-೨೩). **ತಳಿ$_4$ :** ೧. ಕಳನ ಚೌಕದ ಸುತ್ತಲೊಟ್ಟಿಸಿ ತಳಿಗಳನು ಬಹಳಾಗ್ನಿಯನು ಕೈ ಕೊಳಿಸಿದರು ದಹಿಸಿದರು ಬಹಳಾಕ್ಷೋಹಿಣೀಭಟರ (ಕುಮ್ವಾಗ. ೦೨-೨೩) : ತೊಲೆ ತಳಿ ವರನೂಲ ಹರಿಗೆ ಬದ್ದರ ಬಂಡಿ ಬಲೆ ಹಗ್ಗ ಮರುಳ ಕೈ ಕವಣೆ ಹಲಗೆ ಸಬಳ ದಸಿ ಹಾವಿನ ಹೇಳಿಗೆ ಸಲೆ ಮೆಱಿದವು ದುರ್ಗದೊಳಗೆ (ಕುರಾಸಾಂ. ೪೨-೩೭) ; ಪಾಳಿಯಗಳ ಸಂರಕ್ಷಣೆಗಾಗಿ ಅಲ್ಲಲ್ಲಿ ದೊಡ್ಡ ದೊಡ್ಡ ತಳಿ(ಮರದ ದಿಮ್ಮಿ)ಗಳನ್ನು ಸುತ್ತಲೂ ನಿಲ್ಲಿಸಿ ಅವುಗಳಿಗೆ 'ಮುಳುವೇಲಿ'ಗಳನ್ನು ಬಿಗಿಯುತ್ತಿದ್ದರು (ಕರ್ನಾಜ. ೫೮). ೨. ತಳಿಯ ದಾಟುವ ಕರಿಯಂ ಘಳಿಲನೆವಿಡಿದುಗಿಯೆ (ಎಕ. VIII, ನಗರ. ೩೫-೪೫ : 1077). ೩. ಜಕ್ಕೆಯನಾಯಕಂ ಮೊನೆಯಿಟ್ಟಿಗೊಂಡನಾಯಕರ ಮೇಲೆವಾಯಲು ತಳಿಯ ಮುಱಿವಿಡಿದು ಹಡಿಕಟ್ಟಿದಾಳೆಚ್ಚು ಗೂಡಂಬುಗೊಂಡು ಕೆಡಹಲ್ (ಪ್ರ್ಮುಆರಿ. ೧೯೪೧, ೪೨-೧ : 13ನೆಯ ಶತ) ; ಥಗೆಯ ತಳಿ ಮುಱಿದುದು ಮನೋರಥದಗಳು ತುಂಬಿತು ನರನ ಮನ ಬುದ್ಧಿಗಳು ನೆಱಿ ಸಿಲುಕಿತ್ತು ಹರುಷೋತ್ಸವದ ದಾಳಿಯಲಿ (ಕುಮ್ವಾಅ

೬-೧೦೦) ; ತಳಿ ನಡೆಚಪ್ಪರ ಡಗ್ಗೆ ಬದ್ದರಗಳ ಬಳಿಸಂದು ಭಟರು ಸಂದಣಿಸಿ ಬಳಸಿ ಕೋಟೆಯ ಲಗ್ಗೆಯೊಳು ಹತ್ತಿದರು ಕಳಕಳರವ ಮಸಗೆ ಬಲದೊಳು (ಕುರಾಸಾಂ. ೪೫-೩) ; ತಳಿ ಬೇಲಿ ಬದ್ದರಗಳಂ ಮುಱಿದು ಕೊಂಡೊಯ್ಯು ನೊಳಪೊಕ್ಕು (ಜಬಪು. ೫೦-೧೨). ೪. ಬೇಂಕಿ ; ಕೆಂಡ : ತಳಿರ ತಗಡಿನ ಮನೆಗಳಲಿ ತಳಿಗಳ ಶಿಖಾಸೇವೆಯಲಿ ನೆನೆದನು ಬಳಿಕ ಭರತನೃಪಾಲನಾ ಭಾಸ್ಕರಕುಲೋತ್ತಮನ (ತೊರರಾ. ೩-೨-೫). ೫. ಬೇಲಿ: ಕೆಲದೊಳ್ಳೆ ಗಾವುದದೊಳಿಕ್ಕಿದ ತಳಿಯ ಮಧ್ಯದೊಳಖಿಳ ವಸ್ತ್ರಾವಳಿಯನೊಟ್ಟಿದರು (ಕುವ್ಯಾಸ. ೬-೧೪) ; ತಳಿಯ ಮುಱಿದು ಕರಿಪತಿ ಕದಳೀವನದೊಳಗೆ ಪೋಗಲು ಕಲಭಗಳು ಬಳಿಸಲುವಂತಾ ರಾವಣನಿಱಿದ ಬಲದೊಳಪೊಕ್ಕುದಾ ಪರಿವಾರ (ಕುರಾಸಾಂ. ೪೦-೬೭).

**ತಟಿ³ಕಿಕ್ಕು** 'ತಟ್ಕಿಕ್ಕು' ನೋ.

**ತಟಿ³ಕು** 'ತಟ್ಕು' ನೋ.

**ತಟಿ³ಗೋಂಟೆ** (ನಾ). ಒಂದುಂ ಬಗೆಯ ಕೋಟೆ ; ಮರದ ದಿಮ್ಮಿಗಳಿಂದ ಮಾಡಿದ ಕೋಟೆ (?) : ನಿಶಿತ ಶರಕೋಟಿಯೊಳ್ ತಳಿ[ಟಿ³]ಗೋಂಟೆಯನಿಕ್ಕಿ (ಪಂಪಭಾ. ೧೨-೧೮ ವ) ; ಕೋಂಟೆಗೆ – ತಟಿ³ಗೋಂಟೆ, ಧೂಳಿಕೋಂಟೆ, ಹತ್ತುಗೋಂಟೆ, ಹೆಡಗೆಗೋಂಟೆ (ಶಮದ. ೨೯೮ ಪ್ರಯೋ).
[ ತಟಿ³ + ಕೋಂಟೆ ]

**ತಟುಂದಾಟಿ³** (ನಾ). ಒಂದು ಬಗೆಯ ಪೊದೆ; ಅಗ್ನಿಮಂಥ; ನರುವಲು: ನಂದಪ್ಪೊಲಯನೇರಿನಂದಪೊಲೆಯನೇರಿಯಿ[ಂ]ಮೇಲಯೇರಿ ತಟುಂದಾಟಿ³ [ತ]ಟುಂದಾಟಿ ಅಡುಂಬು ಅಡು[ಂ]ಬಿನಿಂದಂ ವಾಯುವ್ಯ[ದ] ಕೋಣ ಪಿರೆಯ ಉಟಿ³ಂದಿ(ಎಇ.X, ೬೭-೭೭; ಸು. 892). [ ←ತಮಿ. ತಟುತಾಟ್ಕಿ ]

**ತಟಿ³, ಚಳ್ಳೆ₄, ಚಳೆಯ್ಯು₃, ತಳ್ಳೆ₄** (ನಾ). ೧. ಒಂದು ಬಗೆಯ ಕೊಡೆ,– ಛತ್ರಿ,–ಸತ್ತಿಗೆ : "ತಳಿ–ಧಾರಣೇ ; ಆತಪತ್ರ ಭೇದೇ ಬಿಟಂ (ತಟಿ³)" (ಶಮುಧಾ) ; ಕೊಡೆ ತಟಿ³ ತಳ್ಳ ಸೀಗುರಿ ಕರೀಂದ್ರ ಘಟಾಳಿ ತುರಗಂ ಸೈನ್ಯಮುರ್ಕುಡುಗದೆ ಬರ್ಪ ನಾಯಕ ಬಲಂ (ಆದಿಪು. ೪–೯೨) ; ಒತ್ತಿದ ತಳ್ಕೆತ್ತಿದ ತಟಿ³ ಮುತ್ತಿನ ಪೊಸದುಡುಗೆ ತಳಿರ ಸೋರ್ಮುಡಿ ಮನವಂ ಪತ್ತಿಸಿ ಜೊತ್ತಿಸೆ . . . ಬಂದರರಸಿಯರರೆಬರ್ (ಪಂಪಭಾ. ೫–೫೯) ; ಸುಟಿ³ಗಳ್ನೀರ್ದಿಗುರಿಯವೋಲ್ಸುಳಿದುವು ತೆರೆ ತೆರೆಯನಟ್ಟಿದುವು ಬೆಟ್ಟದ ಬೆಂಬಟಿ³ಯಂ ಬೆಟ್ಟಟ್ಟುವವೋಲ್ತಟಿ³ ತಳ್ತುವೊಲಿರ್ದುವೊಗೆದ ಮಣಿಕಿರಣಂಗಳ್ (ಪಂರಾಮಾ. ೧೨–೯೦); ಕೊಡೆಯು ತಟಿ³ಯು ಸೀಗುರಿಯ ಚೌಕಸತ್ತಿಗೆಯು ಮುತ್ತಿನ ರಥುಲ್ಲರಿಯು ಮೊತ್ತಮಂ (ಚಂದ್ರಪು. ೧೨–೮೩ ವ) ; ತಳಿತ ತಟಿ³ಯ ನೆ ಟ ಲೊ ಳು ಬಂದು ತನ್ನಯ ನಿಳಯವನೊಳಪೊಗುತಿರಲು (ಅಂಜಜ. ೧೦–೨೬೫). 'ಪೀಲಿದಟಿ³' ಪರಾ. **ಚಳ್ಳೆ₄:** ೨. ಮಂದುವೆ ಮುಂತಾದ ಮಂಗಳಕಾರ್ಯಂಗಳ ಮೆರವಣಿಗೆಯಲ್ಲಿ ನಾಲ್ಕು ಮೂ ಲೆ ಗೂ ನಾಲ್ಕು ಜನ ಹಿಡಿದುಕೊಂಡುಹೋಗುವ ಬಿಳಿಯ ಬಟ್ಟೆಯ ವಿತಾನ; (ಎಸಮ್ಮ. I, ೧೦). **ಚಳೆಯ್ಯು₃ :** ೧. ಎತ್ತಿದ ಚಳ[ಳೆ]ಯ ವೃತ್ತತೆಯ ನೋಳ್ಪೊಡೆ ಕಣ್ಣಾ ಕುತ್ತಿದುವೇನ ಬಣ್ಣಿಸುವೆ ಲಾಗಿಸಿ ನಭಕುಪ್ಪರಿಸುವ ಬಂದಿದಿರಾಗಿ ನಿಲ್ಲುವ ಭೂತದಂತೆ (ವೋಹತ. ೧೧–೬೭). ೨. ಧಾರೆಗೆ ಹೊತ್ತಾಯಿತು ಚಳೆಯ ಹಿಡಿದು ವರನನ್ನು ಕರೆತನ್ನಿ (ರೂಢಿ). **ತಳ್ಳೆ₄ :** ೧. "ಸಿತಚ್ಛತ್ರದೊಳ್ ತಳೆಯಕ್ಕು" (ಕಶರ. ೪೩) : ಮದನಮದಮರ್ದನನ ಬರವಿಂಗೆ ಕೂಡೆ ನೆಗಪಿದ ತಳೆಗ[ಪಾಠಾಂ. ಳಿರ್ಗ]ಳೆನಿಸಿರ್ದವಾ ಮೇಘ (ಸಿದ್ಧರಾ. ೩–೩೨); ಕರಿಣಿಗಳು ತಳೆ ಮಾಡಿ ಪಲ್ಲವವಿಡಿವವಾತಪಜಾಲ ಬಳಸಿದುದೆಂದು ಕೇಸರಿಗೆ (ವರ್ಧಜ. ೯–೨೮); ಮಾರುತ ಪರಿಮಳದಾಲವಟ್ಟ ವನಿಕ್ಕೆ ಆರವೆ ತಳೆ ಛತ್ರವಿಡಿಯೆ (ಅಮುಂಸಾಂ. ೫–೫೫).

**ತಟಿ³ಯವರ್**=ಛತ್ರಿಹಿಡಿಯುವವರು ; ಸೇವಕರು : ಪ್ರಸಾದಮೆನ್ನದೆ ಇಜ್ಜಣಮಟಿ³ಯೆ ನರಗನಿಱಿಯೆ ತನ್ನಟಿ³ಯಸುಂ ತನ್ನ ಮಕ್ಕಳುಂ ತನ್ನೊಕ್ಕಲುಂ ಪ್ರಜೆಯುಂ ತ ಟಿ³ ಯ ವ ರು ಂ ಪೆರ್ಮ್ಮಾಡಿಯ ಬೆಸದೊಳಿಱಿದು ನರಗನೊಳಿಱಿದು ಕಾದಿ ಸತ್ತರ್ (ಎಕ. VI, ಕಡೂರು. ೧೪೭–೭ : 972). [ ದೇ.॥ ತಮಿ. ತಟ್ಟಿ ; ಮಲ. ತಟಿ ]

**ತಟಿ³ಕಾಡು** 'ತಟಿ³ಕ್ಕಾಡು' ನೋ.

**ತಟಿ³ಕ್ಕಾಡು, ತಲಕಾಡು, ತಳಕಾಡು, ತಳೆಕಾಡು, ತಱಿ³ಕಾಡು, ತಟಿ³ಕಾಡು** (ನಾ). ಒಂದು ಊರಿನ ಹೆಸರು ; ₱ ಈಗಿನ ಮೈಸೂರು ಜಿಲ್ಲೆಯ ತಲಕಾಡು : ಕಾರ್ತ್ತಿಗೆ ಪುಣ್ಣಮೆ ಅನ್ದು ತಟಿ³ಕ್ಕಾಡು ಇರ್ಪ್ಪತ್ತಯ್ವರ್ಕಂ ಸಿನ್ದರಸರುಂ ದೇವಸತ್ತಿ ಅರಸರುಂ (ಎಕ. III, ತಿರುಮ. ೧–೪: 726). **ತಲಕಾಡು:** ತಲಕಾಡ ಹನ್ನು × × ವರು ಮದ್ದೂರ ಗಣೆಯರುಂ (ಎಕ III, ನಂಜನ. ೧೨೨–೨೭ : ? ಕ್ರಶ) ; ಶ್ರೀ ಸಾಕ್ಷಿನಾಂ ತಲಕಾಡು ಹನುವನು (ಇಅ. VIII, ೧–೩ ; ? ಕ್ರಶ). **ತಳಕಾಡು :** ಮತ್ತಂ ಚಕ್ರಗೊಟ್ಟ ತಳಕಾಡು ನೀಲಗಿರಿ ಕೊಂಗು ನಂಗಲಿ ಕೋಳಾಲಂ ತೆರೆಯೂರು ಕೊಯತೂರು (ಎಕ. II, ೧೩೨–೨೬ : 1123) ; ತಳಕಾಡು ಗಂಗವಾಡಿ ನೊಳಂಬವಾಡಿ ಕೊಂಗು ನಂಗಲಿ ಬನವಸೆ . . . ಇಂತೀ ಸಮಸ್ತ ದುರ್ಗ್ಗಂಗಳಂ (ಎಕ. VII, ಶಿವಮೊ. ೪೦–೫೩ : 1180). **ತಳೆಕಾಡು:** ಹೊಯ್ಸಳದೇವರಾಜ್ಯಂ ತಳೆಕಾಡ ಪಟ್ಟಣವಮ್ ಆ ಪುರದಱುಸಾಯಿರಮುವರ್ . . . ನಗರೀಶ್ವರ ದೇವರ್ಗೆ ಕೊಟ್ಟ ಧರ್ಮವಮ್ (ಮೈಆರಿ. ೧೯೦೫, ೨೦–೭ : 1147) ;ತಳೆಕಾಡು ನಾಡು ಕೊಂಡ ಭುಜಬಳವೀರ ಗಂಗಂ (ಮೈಆರಿ. ೧೯೨೭, ೪೧–೨೦ : 1173). **ತಱಿ³ಕಾಡು :** ಶ್ರೀ ಕಾಲಾವಿಗ್ಗ್ಗರ ವಡಿಗಳ ಶಿಷ್ಯರ್ ತಱಿ³ಕಾಡ ಪೆಟ್ಜಿಡಿಯ ಮೊದೆಯ ಕಲಾಪಕದ ಗುರವಡಿಗಳ್ಪೆರ್ಪ್ಪತ್ತೊನ್ದು ದಿವಸಂ ಸನ್ಯಾಸನಂ ನೋನ್ತು ಮುಂಡಿಪ್ಪಿದಾರ್ (ಎಕ. II, ೩೩–೨ ; ಸು. 700). **ತಟಿ³ಕಾಡು :** ತಟಿ³ಕಾಡಾ ಮೇಗೆಟ್ಟನ್ದು ಪೆರ್ಮ್ಮಾನಡಿಗಳಾ ಬೆಸದೆ ಮಹಾರಾಜಪ್ಪಾಲಿನಾಡಾ ನೆಱಿ³ಯಲ್ವೇಟಿ³ಡೆ (ಸೌಇಇ. IX–I, ೨೦–೪ ; 9ನೆಯ ಶತ) ; ತಟಿ³ಕಾಡ ಮಹಾನಗರಮುಂ ಪಟ್ಟಣವಸನ್ನರ ಮಣ್ಟಾಯ್ಯನು ಇಪ್ಪತ್ತು ಅಯ್ವರು (ಎಕ. XIV, ತಿರುಮ. ೨೦೪–೬ ; ಸು. 933). [ ? ]

**ತಟಿ³ದುಱುಗಲ್** (ನಾ). ಕೊಡೆಗಳ ನೆರವಿ ; ಸತ್ತಿಗೆಗಳ ಸಂದಣಿ : ಸಿವಿಗೆ ತಟಿ³ದುಱುಗಲೊಡನಿಕ್ಕುವ ಕುಂಚಂ ಲೀಲೆವಡೆಯೆ ಚೆಲ್ವೆಸೆದುದು ಷ ಣ್ಣ ವ ತಿ ಸಹಸ್ರಾಂತಃಪುರಮವಯವದೊಳೆ ಭರತ ಚಕ್ರವರ್ತಿಯ ಕೆಲದೊಳ್ (ಆದಿಪು. ೧೧–೩೯) ; ಕಿಕ್ಕಿಱಿಗಿಟಿ³ದ ತಟಿ³ದುಱುಗಲ ನಡುವೆ ಪೊನ್ನರಥಮನೇಱಿ ನಿಂದಂ ಭೂರಿಶ್ರವಂ (ಪಂಪಭಾ. ೧೦–೫೭ ವ).
[ ತಟಿ³ + ತುಱುಗಲ್ (<ತುಱುಂಗಲ್) ]

**ತಟಿ³ವಿಡಿ, ತಳೆವಿಡಿ** (ಕ್ರಿ). ಬಿಳಿಯ ಕೊಡೆ ಹಿಡಿ ; ಛತ್ರಿಯನ್ನು ಹಿಡಿ : ಗಟಿ³ಯಿಸುವ ತಮಂ ಮೂಡಲ್ ಪೊಟಿ³ಗಟ್ಟುವ ಸಂಜೆಗೆಂಪು ಪಡುವಲ್ ಕೈಕೊಂಡೆಟಿಲೆ ಧರೆಗರ್ಧನಾರಿಯ ತಟಿ³ವಿಡಿದಂತಾಯ್ತು ಗಗನಮಂಡಲಮಿನಿಸುಂ (ಅನಂಪು. ೭–೭೨). **ತಳೆವಿಡಿ :** ಮಳೆ ಕೊಡುವ ಬೆಟ್ಟಗಳ ಮೊಲೆಯುಂಡು ಹಸುರೆಲೆಯ ತಳೆವಿಡಿದು ನೆಲದ ದಾರಿಯ ನೋಳ್ಪ ಚೆಲುವೆ (ಕಾಲೂರ. ೨೩–೭). [ ತಟಿ³ + ಪಿಡಿ$_1$ ]

**ತಟ್ಕಿಯಿಸು** 'ತಟ್ಕೈಸು' ನೋ.

**ತಟ್ಕಿಯ್ಸು** 'ತಟ್ಕೈಸು' ನೋ.

**ತಟ್ಕಿಕ್ಕು, ತಳುಕಿಕ್ಕು, ತಟಿ³ಕಿಕ್ಕು** (ಕ್ರಿ). ತಳಕುಹಾಕು ; ಜೋಡಿಸು; ಹೊಂದಿಸು ; ಅಳವಡಿಸು : ಆಕೆಯ ರೂಪಾತಿಶಯಮಂ ಪೇಟ್ವಡೆ . . . ನಖನಿಕಾಯಂಗಳ್ಗೆ ತಾರಾವಳಿಗಳ ತೋರವೆಳಗುಗಳಂ ತಟ್ಕಿಕ್ಕಿದಂತೆ (ಪುಣ್ಯಾಸ್ರ. ೨–೩೨ ವ). **ತಳುಕಿಕ್ಕು :** ಬೆಳಗು ಬೆಳಗಂ ಹಳಚಿದಂತಾಯ್ತು ಭಯಜ್ಞಾನ ತಳು[ಪಾಠಾಂ. ಳಿ]ಕಿಕ್ಕಿ ಕಳೆಯಲಳವಟ್ಟುದುಭಯಜ್ಞಾನ (ದೀಕ್ಷಾಬೋ. ೧೪೩–೧೮); ಪದಕೆಱಗಲಂದು ಬಿಗಿಯಪ್ಪಿ ಕರದಿಂ ಕರವ

ತಳುಕಿಕ್ಕಿ ಇಂದುಧರ ನಡೆತಂದನರಮನೆಗೆ (ಲಶಿಚಂ. ೯-೨೯); ಮತ್ತೆ ಹೂವಿನ ಮಳೆಗಳಾತನ ನೆತ್ತಿಯಲಿ ಸುರಿದವು ಮುರಾಂತಕನತ್ತ ತಿರುಗಿದನವನಿಪನ ಕರತಳವ ತಳುಕಿಕ್ಕಿ (ಕುವ್ಯಾ.ಗ. ೮-೪೨) ; ಮತ್ಕರತಳ ದೊಡನೆಯಂತಕನು ನಿಜ ಕರತಳವ ತಳುಕಿಕ್ಕಿ(ತಿಮ್ಮ.ಅ. ೬-೭೦). **ತಟಿಕಿಕ್ಕು:** ಪೊಡರ್ಪ ದಾಡೆಗಳ್ ಪಿರಿದಳವಟ್ಟ ಮಿಸೆ ತಟಿಕಿಕ್ಕಿದ ಪುರ್ವುಡಿದಿರ್ದ ಮೆಯ್ (ಪುಹಾ.ಸ್ರ. ೮-೧೦).

[ ತಟ್ಕು + ಇಕ್ಕು ]

**ತಟ್ಕಿಸು, ಠೆಕ್ಕಿಸು, ತಕ್ಕಿಸು$_2$, ತರ್ಕಿಸು$_1$, ತಳ್ಕರಿಸು, ತಳ್ಕಿಸು, ತೆಕ್ಕಿಸು** (ಕ್ರಿ). ೧. ಅಪ್ಪು ; ಆಲಿಂಗಿಸು : ಪಡಗೊಡೆಯೆ ಪಲಗೆಯೊಂದಂ ಪಿಡಿದಬಲೆಯನೆನ್ನ ಕೌಂಕುಳೊಳ್ ತಟ್ಕಿಸಿಕೊಂಡೆಡೆವಿಡದೆ ಪುಣ್ಯದಿಂದಂ ತಡಿಗೆಯ್ದಿದಂ (ದಶಕು. ೨-೮೪) ; ಎನ್ನಂ ತನ್ನಿರ್ಕೆಯ್ಯಿಂ ಕರಂ ತಟ್ಕಿಸಿ (ದಶಕು. ೧೩-೬೨). **ಠೆಕ್ಕಿಸು: ೨.** ಒಡ್ಡು ; ಅಡ್ಡವಾಗಿ ಹಿಡಿ; ಮುಂದಕ್ಕೆ ಚಾಚು : ತೊಲತೊಲಗೆನುತುಂ ಹರಿಗೆಯ ಠೆಕ್ಕಿಸಿ ಸಲೆ ಕೂರಸಿಯಂ ಚಿಮ್ಮುತ್ತಂ ಬಂದು (ಕುಮುರಾ. ೮-೪೫). **ತಕ್ಕಿಸು$_2$ :** ೧. ಬಿಸುಡದಿರು ಬಿಸುಡದಿರು ಬೇಡಬೇಡಕಟಕಟ ಹಸುಳೆ ನೊಂದಹನೆಂದು ಬೀಳ್ವವನನೆತ್ತಿ ತಕ್ಕಿಸಿಕೊಂಡು (ಹಡಕಾ. ೧೨-೩೭); ನೊಸಲೆಡೆಯನು ಚುಂಬಿಸಿ ತಕ್ಕಿಸುತ ಪರವಶೆಯಾದಳೀನ ಬಣ್ಣಿಸುವೆ (ಕಂನವಿ. ೯-೧೭೭); ತಕ್ಕಿಸಿದನ್ನೆವರಂ (ತುರಂಗ. ೨೭-೧೫). ೩. ನೆಡು ; ನಾಟಿಸು ; ಚುಚ್ಚು : ತರಣಿಜಂ ಕಡು ಮುಳಿದು ಖಾತಿಯಿಂದ ಮಕ್ಕಳ ಶಿರೋಮಣಿಗೆ ತೆಗೆದೆಸಲ್ಕಣೆ ಶಿಶುವ ತಕ್ಕಿಸಿತು (ತುರಂಗ ೫೦-೩೩). **ತರ್ಕಿಸು$_1$ :** ೪. ತಾಕು ; ತಗುಲು : ಮುಟ್ಟು : ನೆಗೆದುರಿ ಭುಘುಗಿಲ್‌ಭುಗಿಲೆನುತುಮಗುರ್ವಿಸಿ ಪರ್ವೆ ನೀಳ್ದ ನಾಲಗೆಗಳ ತಕ್ಕೆ ತರ್ಕಿಸೆ ನಭಸ್ಥಲಮಂ (ಮುಹಾನೀ. ೧೭-೨೯). **೫. ಜೋಡಿಸು; ಜೊತೆ ಮಾಡು; ಸೇರಿಸು :** ತನ್ನ ಪುತ್ರಂಗೆ ತಾನೆ ಗುರು ವಾದೆನೆಂಬ ಗುರುದ್ರೋಹಿಯ ಮಾತು ಕೇಳಲಾಗದು ಎನ್ನ ತಂದೆಯೇ ಎನಗೆ ಗುರುವೆನ್ನುವ ಗುರುದ್ರೋಹಿಯ ಮುಖವ ನೋಡಲಾಗದು ಅವರಿಬ್ಬರೊಳಗೆ ಗುರುಶಿಷ್ಯ ಸಂಬಂಧವನಾಚರಿಸಿದೊಡೆ ಅವರಿಬ್ಬರ ತರ್ಕಿಸಿ ಕಟ್ಟಿ ಹೊತ್ತಿಸಿ ನೊಂದಿಸಿ ಸುಡುವ ನಮ್ಮ ಕೂಡಲ ಚನ್ನ ಸಂಗಮದೇವಾ (ಚನ್ನವ. ೨೫-೩). **ತಳ್ಕರಿಸು :** ೧. ಕರುವು ಬಂದಿದಿರ ಹುದು ಮೋಹನದ ರೂಪಿನಲಿ . . . ಕರೆದು ತಳ್ಳುವ, ತಳ್ಕರಿಸುತೊಳಗೆ ಕಿಚ್ಚಿಡುವ ತರಳತೆಯದೇಂ ತಂತ್ರ ? (ಮಂಕುಕ. ೧೭೯). **ತಳ್ಕಿಸು :** ೧. ನಗುತ ಸಾಕೇಳೆಂದು ರಾಯನ ತೆಗೆದು ತಳ್ಕಿಸಿ ಕೈಯ ತಳುಕಿನೊಳಗಧರನು ನೃಪಸಭೆಗೆ ಬಿಜಯಂಗೈದನೊಲವಿನಲಿ (ಕುವ್ಯಾ.ಸ. ೬-೨೨) ; ತಳ್ಕಿಸುವ ಪ್ರೀತಿಯಿಂ ತವಕಿಸಿ ನಿಗುರ್ವ ತೋಳ್ (ಜಿಬಪು. ೧೯-೩೨). **ತೆಕ್ಕಿಸು :** ೧. ಕುಡಿಯಲ್ಕಣಮಾಱದೊಡಂ ಕುಡಿಸಿದನೊಡನುಂಡವಂಗವಂ ತೆಕ್ಕಿಸಿ ಕೊಂಡಡಮುವನ ವಿಷಮುದಿಱಗುಂ (ಖಮದ. ೫-೫೪) ; ಒಬ್ಬಳನು ಮುದ್ದಿಡುತ ಒಬ್ಬಳನು ತೆಕ್ಕಿಸುತ ಮತ್ತೊಬ್ಬಳನು ಬಳಸುತಾ (ನನಲ್ಲ. ೩೫-೫). [ ತಟ್ಕು + - ಇಸು$_3$ ]

**ತಟ್ಕಿಱ** (ನಾ). ತಾಗಿ ಇರಿಯುವಿಕೆ; ಸಂಘಟ್ಟನ (?): ತಕ್ಕುಂ ತಗುಳ್ದು ಕಾಯ್ಪೊದವೆ ಕೋಟ್ಕಳ ತಳ್ಕಿ[ಟ್ಕಿ]ಱಯಿಂದೆ ಕೆಂಡಮಲ್ಲೊಕ್ಕರೆ ತೇನತೇನಮುವತಂ ಬಿಗುಣಂ ತಿಗುಣಂಗೊಳಲ್ ಮೊಗಂಬೊಕ್ಕ ಗಜಂಗಳಂ ನಿಜ ಭುಜಾರ್ಗಳವಗ್ಗಳೆಯಾಗಿ ಸಾರ್ಚಿ ಕೈಯಿಕ್ಕಿಸಿ ಪಿಂಗಿಪಂ ಪಿಡಿದು ಪಿಂಗಿಸುವಂತಿರೆ ಜಂತ್ರದಾನೆಯಂ (ಅನಂಪು. ೬-೧೨).

[ ತಟ್ಕು + ಇಱು$_4$ ]

**ತಟ್ಕು, ತಕ್ಕು$_4$, ತಳಕು$_3$, ತಳುಕು$_3$, ತಳ್ಕು$_5$, ತಟಿಕು** (ನಾ). ೧. ಒಂದಕ್ಕೊಂದು ತಳುಕು ಹಾಕಿಕೊಂಡಿರುವುದು; ಹೆಣೆದುಕೊಂಡಿರು ವಿಕೆ ; ಹೆಣಿಕೆ ; ಜೋಡಣೆ : ಎಲೆವಳ್ಳಿಯ ತಟ್ಕಿನಿಂ ಮನಂಗೊಳಿಪ ಕೌಂಗಿನ ಮರಂಗಳೊಳಂ (ಕಾದಂಪೂ. ೯೭). ೨. ಅಪ್ಪುಗೆ ; ಆಲಿಂಗನ : ತೊಳಗುವ ಹಾರಮನಾಗಳ್ಪಳವಂತಿರೆ ನೆಲಕೆ ಬೀಟ್ಪಿನಂ ಪಿಡಿದಕ್ಷಾ ವಳಿಯಂ ಕೊರಲೊಳ್ಪಳದಾಂ ತಳೆದೆಂ ಮುನಿಪತಿಯ ತೋಳ ತಟ್ಕಿನ ಸುಖಮಂ (ಕಾದಂಪೂ. ೭೭೧); ಕಡಲೊಳ್ ನೇಸಱನಟ್ಟಿಲುಂ ಪೊಡವಿಯಂ ನುರ್ಗೊತ್ತಲುಂ ಕೊಂಕೆ ಘೀಳಿಡೆ ತಟ್ಕಿಂ ದೆಸೆಯಾನೆಯಂ ಮುಟಿಯಲುಂ . . . ಬಗೆದನಾಗಳ್ ದಪ್ಪದಿಂ ದಪ್ಪಗಂ (ಆದಿಪ್ರಕಾ. ೧೫೨). **ತಕ್ಕು$_4$ :** ೩. ಗಜಾರೋಹಣದ ಒಂದು ರೀತಿ (?) : ತಮ್ಮ ತಕ್ಕಿನ ಮೂಱುಂ ತಕ್ಕುಗಳುಮನಡರಿಯುಂ ತೊಡರಿಯುಂ ನುಡಿದಂತೆ ತಂತಮ್ಮಾನೆಯೊಳ್ಪನ ಮುಮಂ ಬಿನ್ನಣಮುಮಂ ಮೆಱೆದು (ಶಾಂತಿಪು. ೩-೨೭ ವ) : ತಕ್ಕು ತಗುಳ್ದು ಕಾಯ್ಪೊದವೆ . . . ಮೊಗಂಬೊಕ್ಕ ಗಜಂಗಳಂ ನಿಜಭುಜಾರ್ಗಳ ವಗ್ಗಳೆಯಾಗೆ ಸಾರ್ಚಿ (ಅನಂಪು. ೬-೧೨). **ತಳಕು$_3$ :** ೧. ಅದು ಕೇವಲ ಒಂದೆರಡು ದಿನಗಳ ಜೋಡಲ್ಲ; ದೇಹಗಳೆರಡರಲ್ಲಿಯೂ ಜೀವವಿರುವ ತನಕ ಒಂದಾಗಿರುವ ತಳಕನ್ನು ಹಾಕಬೇಕಾಗಿತ್ತು (ಚಂದುಟ. ೪೫). ೪. ಪರಸ್ಪರ ಸಂಬಂಧ : ಕೌಟುಂಬಿಕ ಸಂಬಂಧಗಳಿಗೂ ಕೌಟುಂಬಿಕ ಸುಖದುಃಖಗಳಿಗೂ ತಳಕು ಇರುವುದರಿಂದ (ಕುಟುಂಬ. ೧೫); ಇಂತಹ ಕ್ಷುದ್ರ ಜೀವನಕ್ಕೆ ಮತ್ತೆ ಎಂತೆಂತಹ ಆಶೆಗಳ ತಳಕನ್ನು ಹಾಕಿರುವೆ (ಅಂತರಾ. ೪೧). ೫. ಸ್ಪರ್ಧಿಗಳ ಜೋಡಂ,-ಜೊತೆ : ಎಂಟು ಹತ್ತು ತಳಕುಗಳ ಕುಸ್ತಿ ಮುಗಿಯಿತು (ಗ್ರಾಮಾಯ. ೨೬೧). ೬. "ಕೂಡಿಸುವುದು ; ಪೋಣಿಸಿ ಕಟ್ಟುವುದು" (ಜಾನಕೋ. ೬೫). **ತಳುಕು$_3$ :** ೧. ನಗುತ ಸಾಕೇಳೆಂದು ರಾಯನ ತೆಗೆದು ತಳ್ಕಿಸಿ ಕೈಯ ತಳುಕಿನೊಳಗಧರನು ನೃಪಸಭೆಗೆ ಬಿಜಯಂಗೈದನೊಲವಿನಲಿ (ಕುವ್ಯಾ.ಸ. ೬-೨೨); ಕಂಡು ಬಿಗಿಯಪ್ಪಿ ಕರದಿಂ ತಳುಕನಿಕ್ಕಿ (ಸೌಂದಪು. ೫-೫೦); ತಳುಕಿನ ಕನಕಲತೆಗಳಂತೆ ತೋಳ್ತೊಡೆ ಬಳಿಕೊಂದಱೊಂದಱೊಳ್ ತಳೆದು ಪುಳಕಿತಮಪ್ಪಂತೆ (ಮೋಹತ. ೨೭-೪೩). ೭. ಸಿಕ್ಕು ; ತೊಡಕಂ : ನಕಲಿಯಿದು ನಿಜವೆಂದು ಮೋಸ ಹೋದೀರಯ್ಯ ನೀವಿವರ ಬಲೆಯ ತಳುಕಿಗೆ ಬೀಳದಿರಿ (ಕೋಗಿಲೆ. ೭೧-೩೯). ೮. ಹೆಣಿಕೆಯ ತೋರಣ : ವರಚಿತ್ರಪತ್ರಂಗಳೆಸೆವ ಮಣಿಮಾಲೆಗಳು ತರದಿಂದ ಕ[ಟ್ಟ]ತಳುಕು ದಂಡಾವಳಿಗಳಂತಿವೇ ಸ್ಫುರಿಸಿಯೊಪ್ಪುತ್ತಿರ್ದವಾ ಮರುಳಕಂಕಣ ಮುಮಿರ್ದಲ್ಲಿ ಮೂಱು ಸುತ್ತು (ವೀಶ್ರೈಪು. ೮-೨೦-೪೭) ; ಸತ್ಯರಿಹ ಸದನಗಳು ಭಿತ್ತಿಯಿಲ್ಲವು ಪರುಷ ಮುತ್ತು ಬಿಗಿದಿಹ ತಳುಕು ಸುತ್ತಲೆಸೆ ದಿಹವು (ಶರಲೀ. ೩೦-೩). ೯. ಒಂದು ಬಗೆಯ ಸರ,-ಹಾರ : ತಳುಕು ಕಡಗ ಕಂಕಣ ಝಣಝಣಿಸಲು ತುಳುಕಿದರ್ ಗಂಧೋದಕವ (ಮೋಹತ. ೧೪-೩೦). **ತಳ್ಕು$_5$ :** ೧. ಅಲರ್ಗಳ ಗೊಂಚಲೆಱಗಿಸದ ಲತೆಲತೆಗಳಡರದ ತಳ್ಕಿನಿಂ ಚಿಗುರುದಿಮ್ಮಾವು (ಜ್ಞಮಿಥಾ. ೩-೩). ೮. ಸಸಿಗಲ್ಲ ಕೊತ್ತಳ ಗಳ ಗಣಿತದ ವೈಡೂರ್ಯದೆಸಕಮಾಂತಿರುವ ಕಿಱುವಾಗಿಲುಗಳಡಿಗಡಿಗೆ ವಸುರನ್ನ ತಿಂತಿಣಿಗಳಾಂತಿರುವ ತಳ್ಕುಗಳಲೆಸೆದುವಾ ಪಾಲಕಗಳು (ವಂಕಾರಾ. ೫-೨-೪). **ತಟಿಕು :** ೧. 'ತಟಿಕಿಕ್ಕು' ಪರಾ.

**ತಳಕುಹಾಕು, ತಳುಕುಹಾಕು** = ೧. ಸೇರಿಸಿ ಕಟ್ಟು: ಉಳಿದ ನಾಲ್ಕೆಂಟು ಕುದುರೆಗಳನ್ನು ತಳಕುಹಾಕಿ ಮುಂದೆ ಬಿಟ್ಟರು (ಮೇದಿಘು. ೧೨೭). ೨. ಒಂದಕ್ಕೊಂದು ಗಂಟುಹಾಕು ; ಸಂಬಂಧ ಕಲ್ಪಿಸು : ಕುಮಾರ ವ್ಯಾಸನ ಕಾಲದೊಡನೆ ಇವನ ಕಾಲವನ್ನು ತಳಕುಹಾಕಬೇಕಾಗಿಲ್ಲ (ಕಸಾಚ. ೨೩೪); ವಿಶ್ವಾಸಕ್ಕೂ ವ್ಯವಹಾರಕ್ಕೂ ತಳಕುಹಾಕಲು ಮನಸ್ಸಾಗ ಲಿಲ್ಲ (ಹಂಗೀತ. ೧೫೦) ; ನಿನ್ನ ಲಗ್ನಾನೂ ಅದನ್ನೂ ತಳಕುಹಾಕಿ ನಿಂತಾರ ಅವರು (ಸಮಜೀ. ೨೪೭) ; ಆ ಗುಣವನ್ನಿಲ್ಲಿ ತಳುಕುಹಾಕಿ ಸಮಾಧಾನಕ್ಕೆ ಬರುವುದು (ನನ್ನಜೊ. ೩೦). **ತಳುಕಾಗಿ ನಿಲ್ಲು**=ಒಗ್ಗಟ್ಟಾಗಿ ನಿಲ್ಲು; ಹೊಂದಿ ಕೊಂಡು ನಿಲ್ಲು ; ಒತ್ತಾಸೆಯಾಗಿ ನಿಲ್ಲು (?) : ೬೨ ವೃತ್ತಿಯ ಮಹಾ ಜನಂಗಳು ಹಿರಿಯ ಮಹಾ × × × ಲು ತಂವೊಳಡಂಬಟ್ಟುಯೆಂದಿಂಗೆಪೊ ತಳುಕಾಗಿ ನಿಂದರು (ಎಕ. VI, ತರೀಕೆ. ೫೫-೩೦ : 1291). **ತಳುಕಿನ ಸರ,**

**ತಳಿಕಿನ ಸರ** = ಒಂದು ಬಗೆಯ ಸರ : ಅವಳು ಹೊಸದಾಗಿ ಮಾಡಿಸಿದ ತಳುಕಿನ ಸರ ಚೆನ್ನಾಗಿದೆ (ರೂಢಿ); ತಳಿಕಿನ ಸರ, ಮುತ್ತಿನ ಸರ, ಅಡ್ಡೆಳಿಸರ ಮೊದಲಾದ ಹಾರಗಳನ್ನು . . . ಆ ವನದಲ್ಲಿರುವ ಬ್ರಾಹ್ಮಣರಿಗೆ ಕೊಟ್ಟು (ಕೈವಾಳ. ೨೦೦). [ ದೇ.॥ ತಮಿ. ತಟುಕು = ಅಪ್ಪಿಕೊಳ್ಳು ]

**ತಟಿಕ್ಕೆ, ತಕ್ಕೆ$_1$, ತರ್ಕೆ, ತಳಿಕೆ$_1$, ತಳ್ಕೆ, ತೆಕ್ಕೆ$_1$, ತರ್ಕೆ** (ನಾ). ೧.ಅಪ್ಪುಗೆ; ಆಲಿಂಗನ : "ತಟಿಕ್ಕೆಯೆಂದಾಲಿಂಗನಂ" (ಕಶಸಾ. ೨೦-೪೦೮) ; "ಅಪ್ಪುಗೆ ತಟಿಕ್ಕೆಗಂ ಪೆಸರು" (ಶಬ್ದಮಂ. ೭೬) ; ಕೂಟದೊಳುಣ್ಮಿದ ಬೆಚ್ಚ ತಟಿಕ್ಕೆಯೊಳ್ ಕೂಟ ಸುಖಂಗಳಂ ಪಡೆದನೇಂ ಚದುರಂ ಗಳ ಬದ್ದದಲ್ಲಟಂ (ಪಂಪಭಾ. ೩-೮೨) ; ನಾನೊಲ್ದ ತಂಗೆ ಕೆಡೆದೊಲ್ದಣ್ಣನೊಲ್ಮೆಯಾ ತಟಿಕ್ಕೆಯೊಳ್ ಪಟ್ಟು (ಅಂಶಿಗೂ. ೪-೫೯). 'ತಟಿಕ್ಕೆಗೆಯ್', ತಟಿಕ್ಕೆಗೊಳ್' ಪರಾ. **ತಕ್ಕೆ$_1$:** ೧.ಚೆನ್ನಮಲ್ಲಿಕಾರ್ಜುನ ಒಂದಿರುಳಗಲಿದಡೆ ತ[ಪಾಠಾಂ. ತೆ]ಕ್ಕೆ ಸಡಿಲಿದ ಜಕ್ಕವಕ್ಕಿಯಂತಿಾದೆನವ್ವಾ (ಮಹಾದೇ. ಬ. ೧೪೨-೩೨೩); ಜಕ್ಕವಕ್ಕಿಗಳೆಲ್ಲ ತಕ್ಕೆಯನುಳಿದು . . . ಪೋದವು ದಿಕ್ಕುದಿಕ್ಕಿಗೆ ತಮತಮಗಾಗ (ಅಂಜಜ. ೭-೧೯೩) ; ಆ ಮಹಾವಜ್ರಾಯುತ ಪ್ರೋದ್ದಾಮದಾಯಸ ಭೀಮತನು ನಿರ್ನಾಮವೆನೆ ನುಗ್ಗಾಗಿ ಬಿದ್ದುದು ನೃಪನ ತ[ಪಾಠಾಂ. ತೆ]ಕ್ಕೆಯಲಿ (ಕುಮ್ಮಾಗ. ೧೦-೪೯); ಚುಂಬನಕೇನಿಚ್ಚೆ ತಕ್ಕೆಗಾವುದು ಸವಿದಂಬುಲವೇನವಮಾಡುವುದು (ಭರಚ. ೧೦-೨೮) ; ಚೂತಮಾ ಮಲ್ಲಿಗೆಯನಪ್ಪಿದುದು ಬೇಗದೊಳ್ ಕುರುವಕಂ ಮಾಧವಿಯ ತಕ್ಕೆಗೊಳಗಾದುದು (ಜಬಪು. ೧೦-೨೩) ; ಸೊಕ್ಕು ಜವ್ವನೆಯ ತಕ್ಕೆಯ ಸವಿಯಂದದೆ ಸಕ್ಕರೆ ಚಿಲುಪಾಲಿನಂತೆ ಅಕ್ಕಱಿಂದಲಿ ಕೇಳುವರಿಗತಿ ಹರುಷವ ಮಿಕ್ಕೆಸಗುವುದೀ ಕಾವ್ಯ (ಕಂಸವಿ. ೦-೦೬). ೨. ಎರಡು ತೋಳುಗಳ ಹಿಡಿತ: ಇಕ್ಕಿದ ಹೆಜ್ಜೆಯ ತೆಗೆಯದು ಮೊನೆಗೆ ನಿಲ್ಲದು ತಕ್ಕೆಗೆ ಬಾರದು (ಸರ್ವವ. ೨೦೩-೯೨೪); ತಕ್ಕೆಗೆ ಸಿಕ್ಕಿದ ಚಾವಡಿಗಂಬ . . . ಎಂತಹ ಗರ್ವಿಷ್ಠನಾದರೂ ಬಗ್ಗಿ ಹೋಗಬೇಕಾದ ತಗ್ಗಿನ ಬಾಗಿಲು (ಪಳಮ. ೧). ೩. ಗುಂಪು ; ಸಮೂಹ: ಉನ್ನತ ಮಣಿರಥಪ್ರತತಿಯ ತಕ್ಕೆಗಳ್ಗವಧಿ ಮುನ್ನಿಲ್ಲ (ಜಬಪು. ೨೬-೭). ೪. ಒಂದೆಡೆ ಸೇರಂವಿಕೆ ; ಸೇರುವೆ (?) : ಒತ್ತುವ ಕೋಡ ಕಾಳೆ ಕುಣಿವೋಜೆಗೆ ಬಾಜಿಪ ಜುಂಜೆ . . . ಕಿಱುನಾಯ್ಗಳ ಪಿಂಡ ತಕ್ಕೆಮತ್ತೊತ್ತುವ ಗರ್ಜಿತಂ ಮೆಱೆವ ಬೆಟ್ಟದ ಬೇಡರ ಪಳ್ಳಿಪಳ್ಳಿಯೊಳ್ (ಸೂಕ್ತಿ ಸು. ೩.೨೦೦). **ತರ್ಕೆ:** ೧. ರಂಭೆಯೂರ್ವಸಿ ತಿಲೋತ್ತಮೆ ಮೇನಕಾಸ್ತ್ರೀಯರುಂ ಬಿಡದೆಯೋಲೈಸೆ ಸಕಲ ವೈಭವಗಳೊಳು ಕುಂಭಕುಚೆಯರ ತರ್ಕೆಯಿಂದ ಕೈಲಾಸದೊಳು ಸೈತಿರ್ಪನೆಂದನಾರ್ಯಂ (ಗುರುಬಾ. ೭-೭೦). **ತಳಿಕೆ$_1$:** ೧. 'ತಳಿಕೆಬೀಳು' ಪರಾ. **ತಳ್ಕೆ :** ೧. "ಆಲಿಂಗನಂ ತಳ್ಕೆಯೆನಿಪುದು" (ಕಶರ. ೪೩) ; ನೆನೆವೊಡೆ ನಿಳ್ಕದ ಈಕ್ಷಿಪೊಡೆ ಸಿಲ್ಕದ ಕೀರ್ತಿಪೊಡೊಲ್ದು ಶಕ್ಯಮೆಂದೆನಿಸದ ಕೂಡಲುಜ್ಜುಗಿಸೆ ತಳ್ಕೆಗೆ ಸಲ್ಲದ ದಿವ್ಯಲಿಂಗಮಂ (ವೃಷವಿ. ೨೩-೨೬) ; ಪ್ರಾಣಕಾಂತರ ತಳ್ಕೆ ಸಡಿಲಿ (ವಚಕಾ. ೭೩) ; ನೆಲಬಾನ ತಳ್ಕೆಯಲಿ ನೇಸರನು ಬಿಡುಗಣ್ಣನಾಗುತಿರಲು (ಭಾವಜೀ. ೧-೫) : ಇರುತಿಹುದು ಬರಿ ಮೂರು ದಿನದ ಬಾಳ್ಕೆ . . . ಮತ್ತೆ ಕಾದಿಹುದದೋ ! — ಚಿತೆಯ ತಳ್ಕೆ ! (ಕವಿಕಾ. ೫೪-೬). **ತೆಕ್ಕೆ$_1$:** ೧. ಫಲಿತ ಶಾಲೀವನದ ಮುತ್ತಿದ ಗಿಳಿಗಳೋ ತಾವರೆಯ ತೆಕ್ಕೆಯೊಳಿಳಿದ ಮಱಿದುಂಬಿಗಳೊ ವೃಷಸೇನನ ಶರಾವಳಿಯೊ (ಕುಮ್ಮಾಕ. ೨೦-೧೧): ಹರುಷದಲಿ ಮುಂಡಾಡಿ ತೆಕ್ಕೆಯಲಿರಿಸಿ ಮುದ್ದಿಪ ವರ ಜನನಿ ಜನಕರಿಗೆ . . . ಪರಮಾನಂದಗೊಡುತಿಹನು (ಸಾಳ್ವಭಾ. ೩೩-೧೧೪) ; ತಮ್ಮನಿಯರ ತೊಡರ್ದ ತೆಕ್ಕೆಯನೊದ್ದು . . . ಐತರಲು (ಜಬಪು. ೧೯-೮). ೨. ಕರ್ಮಕಾಂಡ ಯೋಗಂಗಳೆಲ್ಲವೂ ಭವದ ತೆಕ್ಕೆಗೆ ಒಳಗು (ಅವಜಂ. ೨೬೫ ೧೨೦೩) ; ಬಿಡದೆ ತೆಕ್ಕೆಯೊಳಲ್ಲಮನ ಬಯಲೊಡಲ ಬಂಧಿಸಲೆಂದು ಬಿಗಿಯಲು ಹಿಡಿಹಿಗ್ಗಿಲ್ಲದೊಡವರು ಬೆಱಗಾಗಿರ್ದರದ ಕಂಡು(ಪ್ರಭುಲೀ. ೧೩-೦೪) : ಅರರೆ ಸಿಂಹದ ತೋಳ ತೆಕ್ಕೆಯ ಕರಿಯ ಸೆಳೆವಂದದಲಿ . . . ಧರಣೀಪಾಲನ ತೆಗೆದು ಭೀಮನ ಬರಿಯನೆಚ್ಚನು (ಕುಮ್ಮಾಕ. ೧೪-೨) ; ಅವನ ತೆಕ್ಕೆಯಲಱಿಯದಕಟಾ ರವಿಕುಲೇಶನು ಸಿಲುಕೆ (ಕಾಶಿರಾ. ೬-೬೨) ; ನೆಲದ ಆಧಾರದಲಿ ನಿಂತು ಹರಿಯುವ ನೀರು ನೆಲದೊಡಲ ಕೊರೆದು ಮುಕ್ಕಿತು ಒಂದೆ ತೆಕ್ಕೆಯಲಿ ಇಕ್ಕೆಲದ ಬಾಳು–ಬದುಕು (ನೆಲಮು. ೧೪-೧೪). ೩. ಬರಸಿಡಿಲ ಬಳಗದಂತೆ ಕುಳಿಕಾಹಿಯ ಕಡುಪಿನಂತೆ ನೆಲಮುಕ್ಕನ ತೆಕ್ಕೆಯಂತೆ ಇರ್ದ ಅಸಂಖ್ಯಾತ ದೈತ್ಯನಾಯಕರ (ಜಗವಿ. ೧೫-೧೫ ವ) ; ನಿಪ್ಪಸರ ಕವಿಗಳ ತೆಕ್ಕೆಗಳಿಂ ತಿಱುಪಾಡೋದುತೆ (ತಿರುನಾ. ದೇ. ೧೧೧-೨೧): ವಾರಣಾವಳಿಗಳ ಪದಾತಿಯ ತೇರ ತೆಕ್ಕೆಯನಿಕ್ಕಿದನು ಪ್ರತ್ಯೇಕ ಸಾವಿರವ(ಕುಮ್ಮಾಶ. ೩-೫೬); ಮಿಕ್ಕು ಶತಸಾವಿರದ ಕಂಬದ ತೆಕ್ಕೆಗಳ ತನಿವೆಳಗಿನಲಿ ಕಣ್ಣಿಕ್ಕಲಸದಳವೆಂಬವೊಲು (ತೊರರಾ. ೫-೨-೬೦) ; ಎಷ್ಟು ಸಸಿಗಳನ್ನು ಬೆಳಸುತ್ತೀರೋ ಅಷ್ಟೆಲ್ಲಕ್ಕೂ ಒಂದೊಂದು ತೆಕ್ಕೆ ಕೆಲಸ ನಿಮಗೆ ಬೀಳುತ್ತದೆ (ಗಾಳಿಪ. ೦೧೫). ೫. ಸುತ್ತಿಕೊಂಡಿರುವಿಕೆ ; ಸಂರಳಿಯಾಗಿರುವಿಕೆ : ಭೀಮನ ಕಳಕಳಿಕೆ ಕಿವಿಯೊಡೆದು ತಿಳಿದುದು ನಿದ್ರೆ ಮುಱಿದಿಕ್ಕಿಯ ಮಹೋರಗನ ತೆಕ್ಕೆ ಸಡಲಿತು (ಕುಮ್ಮಾಅ. ೧೩-೩೩). ೬. (?) : ತನ್ನನ್ನು ಮಿಕ್ಕು ಬದುಕುವೆನೆಂಬ ಕಾಲನ ತೆಕ್ಕೆ ಕಂಟಕ ತನ್ನ ಧನುವಿಗೆನುತ್ತ ಬೊಬ್ಬಿಱಿದ (ನಿಭಾಗ. ೪-೧೨-೧೩). **ತರ್ಕೆ :** ೩. ವಾಜಿರಾಜಿಗಳ್ ತೆರೆಗಳ ತರ್ಕೆಯಂತೆ ಕವಿತಂದುವು (ಪಂರಾಮಾ. ೪-೫೫) ; "ಪರಂಪರೆ" (ಪಂರಾಮಾ. ಕೋಶ). ೭. (ಒಂದರೊಡನೊಂದು) ಸೇರಿರಂವಿಕೆ,-ಕೂಡಿರುವಿಕೆ : ಬಱಿದೆ ಬೆಱಗಾಗಿ ತುಱುಗೆಮೆಯ ತರ್ಕೆಯೊಳ್ ಬಂಬಳಿಪ ಕಣ್ಬನಿಗಳೊಸಱಿ ಮಸುಳನಾದ ದಿಟ್ಟಿಯಂ ಬಲ್ಪಿನಿಂ ನಿಲಿಸಿ (ವರ್ಧಪು. ೪-೬೨ ವ).

**ತೆಕ್ಕೆತೆಕ್ಕೆ** (ದ್ವಿರುಕ್ತಿ) : ಇರ್ವರುಮೋರೋರ್ವರೊಳ್ ತೆಕ್ಕೆತೆಕ್ಕೆಯಿಂ ಬಾಹ್ಯಾಭ್ಯಂತರ ಪರಿಗ್ರಹಂಗಳಂ ಪರಿಚ್ಛೇದದಿಂ ತೊಱೆದು (ಶಾಂತಿಪು. ೭-೭೦ ವ) ; ಅವನೀಶನಾಜ್ಞೆಯಿಂದಾ ನಂದನಕೆ ಹೋದ ಯುವತಿಯರ ವಿರಹದಿಂದಾ ತಂತಮ್ಮ ಭವನದಂಗಣದಗ್ರಶಾಲೆಯೊಳ್ಕೆತೆಕ್ಕೆ [ಪಾಠಾಂ. ತೆಟ್ಟೆತೆಟ್ಟೆ] ಯೊಳು ನಿಂದು (ಸಮ್ಯಕ್ತಾ. ೩-೨): ದಿಕ್ಕುದಿಕ್ಕಿನೊಳು ನಿಲಿಸಿದಳು ಖಾನರ ತೆಕ್ಕೆತೆಕ್ಕೆಯ ಪೌಜುಗಳನು (ಕುರಾಸಾಂ. ೪೩-೩೭). **ತೆಕ್ಕೆಗೊಂದಿಸು** = ಅಪ್ಪುಗೆಗೆ ಅಳವಡಿಸು ; ಅಪ್ಪಿಕೊಳ್ಳು : ಗಗನವಮಂ ತೆಕ್ಕೆಗೊಂದಿಸಿದರುಂಟೆ (ಜೈಮಿಭಾ. ೨೬-೨೦). **ತೆಕ್ಕೆಹಾಕು, ತೆಕ್ಕೆಹಾಕು** = ೧. ಅಗಡು ಪ್ರಾಣಿಯನ್ನು, ಪಳಗಿಸಿದ ಅಥವಾ ಸಾಧುವಾದ ಪ್ರಾಣಿಯೊಂದಿಗೆ ಕಟ್ಟು : (ಕ). ೨. (ಪ್ರಾಣಿಗಳ) ಹಗ್ಗಗಳನ್ನು ಸೇರಿಸಿ ಕಟ್ಟು : ಅವೆರಡಕ್ಕೂ ತೆಕ್ಕೆಹಾಕಿ ಕಟ್ಟದ್ದಿದ್ದರಿಂದ ಅವು ಒಂಟಿಗೆ ಒಂದೊಂದು ಪಕ್ಕದಲ್ಲಿ . . . ನೇತಾಡುತಿದ್ದವು (ವಚಭಾ. ೩೪೭). ೩. (ಹಾವುಗಳಂ) ಒಂದಕ್ಕೊಂದು ಕೂಡಿರು ; ಅಪ್ಪಿಕೊಂಡಿರು : ಹಾವುಗಳು ತೆಕ್ಕೆಹಾಕಿಕೊಂಡಿವೆ (ರೂಢಿ). [ <ತಟ್ಕು ]

**ತಟಿಕ್ಕೆಗೆಯ್, ತಳ್ಕೆಗೆಯ್, ತೆಕ್ಕೆಗೆಯ್, ತೆಕ್ಕೈಗೈ**(ಕ್ರಿ). ೧. ಅಪ್ಪಿಕೊಳ್ಳು; ತಬ್ಬಿಕೊಳ್ಳು ; ಆಲಿಂಗಿಸು : ತನ್ನ ಮನದೆಱಕದಿನಿಯಳಂ ಕಂಡು ನಸುನಕ್ಕು ಮುಟ್ಟಿ ಸಾರ್ದು ತಟಿಕ್ಕೆಗೆಯ್ದು ನುಣ್ಗಲ್ಲಮನಲುಗಿ (ರಾಮಾಶ್ವ. ೪೯-೧). **ತಳ್ಕೆಗೆಯ್ :** ತವಕದಿಂದಂ ತಳ್ಕೆಗೆಯ್ಯೆ ಬರಿಕೆಯ್ಯ ತೋಳ್ಗಳ ನೀಱ (ಜಬಪು. ೧೯-೩೭). ೨. ತೋಳುಗಳಲ್ಲಿ ಬಲವಾಗಿ ಹಿಡಿ; ತಬ್ಬಿಹಿಡಿ : ಪಿಡಿಯ ಕರಾಗ್ರಮಂ ಬಿಡಿಸುತೌಂಕೆ ಬಿದಿರ್ಚುವ ತಟಿಕ್ಕೆಗೆಯ್ಯೆ ಮೆಯ್ಗೊಡಪಿ ತೆರಳ್ಚುವ . . . ಬಿನ್ನಣವೊಪ್ಪೆ ಕಡಂಗಿ ಕಾದಿದರ್ (ಶಬಶಂ. ೪-೭೩). **ತೆಕ್ಕೆಗೆಯ್ :** ೧. ಚೆಂದುಟಿವಾಯನೀಂಟಿ ನಳಿತೋಳೆಡೆಯೊಳ್ ಸಲೆ ತೆಕ್ಕೆಗೆಯ್ದು (ಕಾವ್ಯಸಾ. ೫೭೪) ; ಕಲೆವಂತರಪಹರಿಸಿದರು ಮಾಗಿಯ ಬಟ್ಟಮೊಲೆವೆಣ್ಗಳ ತೆಕ್ಕೆಗೆಯ್ದು (ಮೋಹತ. ೪-೪೭). **ತೆಕ್ಕೈಗೈ :** 'ತೆಕ್ಕೈಗೈಸು' ಪರಾ. [ ತಟಿಕ್ಕೆ + ಕೆಯ್$_1$ ]

**ತಟಿಕ್ಕಿಗೊಳ್, ತಕ್ಕಿಗೊಳ್, ತೆಕ್ಕಿಗೊಳ್, ತೆಕ್ಕಿಗೊಳ್ಳು, ತೆರ್ಕೆಗೊಳ್** (ಕ್ರಿ). ೧=ತಟಿಕ್ಕಿಗೆಯ್ ೧: ಮುಳಿದು ವಿಯುಕ್ತ ವಲ್ಲಭಜನಂ ತಳುವಿಲ್ಲದೆ ತಟಿಕ್ಕಿಗೊಂಡುದು . . . ಏನಳವಿಗಳುಂಬಮೋ ಪುದಿದ ಮಾಗೆಯ ಶೀತ ವಿಜೃಂಭಪಾತನಂ (ಕುಸುಮಾ. ೭-೨೦). ೨. ಹಿಡಿ : ಇದಿರ್ವಂದರಸಿಯ ಸರಸಿಜ ಮೃದುಕರಮಂ ತಟಿಕ್ಕಿಗೊಂಡು ಪಕ್ಕಿಗೆ ವಂದು (ಚಿಕವಿ. ೩-೧೦೭). ೩. ಸೇರಿರಂ; ಜೋಡಣೆಯಾಗಿರಂ : ಫಣಿಗಣ ವಿವಿಧಾಲಂಕೃತಂ ತಟಿಕ್ಕಿಗೊಂಡಿರ್ದ ಪತತ್ರಂ ತನ್ನೊಳೊಪ್ಪಿರ್ಪಹಿಕುಲರಿಪುವಂ ಸಂತತಂ ಸದ್ವಿಹಂಗಾಧಿಪನಂ ಮಚ್ಚಿತ್ತದೊಳ್ ಭಾವಿಸಿದೆಂ (ದಶಕು. ೯-೮೯). **ತಕ್ಕಿಗೊಳ್:** ೧. ತಕ್ಕಿಗೊಂಡೆನ್ನ ಪೀಡಿಸಬೇಡ ಕಡು ಶೈತ್ಯವಕ್ಕಿಯೊಳಿರಿಸು (ಮೋಹತ. ೨೭-೫೯) ; ಕುವರ ಕಂಗೆಟ್ಟು ಬಿದ್ದಪೆನೆಂದು ತಕ್ಕಿಗೊಂಡವಳ ನುಣ್ಮೊಲೆಯ ಬಲ್ಪಿಡಿದ (ಮೋಹತ. ೩೧-೨೭). **ತೆಕ್ಕಿಗೊಳ್ :** ೧. ರಾಹು ತೆಕ್ಕಿಗೊಂಡವೊಲಳವಟ್ಟು ರಂಜಿಪುದು ಕೇಳ್ ಮುಡಿ ಪಂಕರುಹಾಕ್ಷಿ ಯೊರ್ವಳಾ (ಧರ್ಮಾಮೃ. ೭-೨೦೨) ; ಜಗವ ಮೋಹಿಸುತಿಹ ಕಾಮನ ತೆಕ್ಕಿಗೊಂಡಿರ್ದ ಕೋಮಲತರ ಬಾಹುಗಳಿಂದೆ (ಮೋಹತ. ೧೦-೨೬). **ತೆಕ್ಕಿಗೊಳ್ಳು :** ೧. ಪ್ರೇಮ ಪರವಶರಾಗಿ . . . ಪತಿಗಳನ್ನು ಮೇಲಿ ಮೇಲೆ ತೆಕ್ಕಿಗೊಳ್ಳುತ್ತಿದ್ದಾರೆ (ಶ್ರೀರಾಪ. ೯). ೪. ಇಟ್ಟಣಿಸು ; ಸಂದಣಿಸು:ಗುಜುಗುಜುಗುಟ್ಟುತಂ ಬೀದಿಬೀದಿಯೊಳ್ ಮನೆಮನೆಯೊಳಂ ತೆಕ್ಕಿತೆಕ್ಕಿಗೊಂಡೆಲ್ಲರುಂ ಘನತರದೆ ವಿಹ್ವಲಾನ್ವಿತರಾಗಿರಲ್ಕೆ (ಪಾಸೋಪು. ೪-೧೬೮) ; ಮುಂಚೂಣಿಯ ಒಂದೊಂದು ಗಾಡಿಯಲ್ಲಿಯೂ ಆರಾರು ಜನ ರುಗ್ಣ ಕೈದಿಗಳು ಇರುಕಿರುಕಿ ತೆಕ್ಕಿಗೊಂಡಿದ್ದರು (ಪುನರು. ೫೫೫). **ತೆರ್ಕೆಗೊಳ್ :** ೪. ಅಗೆ ಮೂಡುವಂದದಿಂ ತೆರ್ಕೆಗೊಂಡು ಕಿಱುಮನೆಯ ಸೆಲೆಗಳಿಡಿಕಿಱಿದಿರೆ (ವರ್ಧಪು. ೧೧-೩). [ ತಟಿಕ್ಕಿ + ಕೊಳ್$_1$ ]

**ತಟಿಕ್ಕಿಯ್ಸು** 'ತಟಿಕ್ಕೈಸು' ನೋ.

**ತಟಿಕ್ಕೈಸು, ತಕ್ಕಯಿಸು, ತಕ್ಕವಿಸು, ತಕ್ಕೆಯಸ್ಸು, ತಕ್ಕೈಸು, ತರ್ಕಯಿಸು, ತರ್ಕವಿಸು, ತರ್ಕೆಯಸ್ಸು, ತರ್ಕೈಸು, ತಳ್ಕಯಸ್ಸು, ತಳ್ಕವಿಸು, ತಳ್ಕೈಸು, ತಟ್ಕಯಿಸು, ತಟ್ಕಯಸ್ಸು, ತಟಿಕ್ಕಯಸ್ಸು, ತೆಕ್ಕಯಿಸು, ತೆಕ್ಕೆಯಸ್ಸು, ತೆರ್ಕಯಸ್ಸು** (ಕ್ರಿ). ೧. ಕೂಡಿಕೊಂಡಿರು ; ಒಳಗೊಳ್ಳು: ಆಯತ ಯದುವಂಶ ಕುಲಶ್ರೀಯಂ ತಟಿಕ್ಕೈಸಿದದಟರತಿರಥರವರತ್ಯಾಯತ ಭುಜಪರಿಘನಾರಾಯಣಬಲದೇವರೆಂಬರಂಬುಜವದನೇ (ಪಂಪಭಾ.೩-೫೬); ಬಾಳುಮತ್ತಪರಂ ಬೆರಸು ಮಿಂಚಂ ತಟಿಕ್ಕೈಸಿದ ಕಾರ ಕಾರ್ಮುಗಿ ಲಂತೆ ತಿಱ್ಱನೆಯ್ತರ್ಪ ದಮಿತಾರಿಯಂ ನೋಡಿ (ಶಾಂತಿಪು. ೪-೫೩ ವ) ; ಪದೆಪಂ ಕೆಯ್ತದೊಳುಂಟು ಮಾಡಿ ನಯಮಂ ವಾಗ್ವೃತ್ತಿಯೊಳ್ ತೋಱಿ . . . ಎಸಕದೊಳ್ ಮೆಲ್ಪಂ ಪಳಂಚಲ್ಪಿ ಕಣ್ಬದಿರೊಳ್ ಕಾಮಿನಿ ಕಾಮ ರಾಗರಸಮಂ ತಟಿಕ್ಕೈಸಿ ತಳ್ಪೊಯ್ದು ಮೇಳದೊಳಂ ಪೊಕ್ಕನಸುಂ ಮನಂ ಗೊಳಿಸಿದೊಳ್ ನಾನಾ ಪ್ರಕಾರಂಗಳಿಂ (ಸುಕುಮಾ. ೭-೧೧). ೨. ಅಪ್ಪು ; ಆಲಿಂಗಿಸು : ಎರಡು ಕೊಂಬುಗಳುಮಂ ತಟಿಕ್ಕೈಸಿಯಾದಮಾನುಂ ಬಿಗಿದಪ್ಪಿಕೊಂಡು ಸತ್ತಳ್ (ವಡ್ಡಾರಾ. ೩೫-೧೬) ; ಕೊಂತಿ ಬಂದು ಕರ್ಣನ ಕಳೇವರಮಂ ತಟಿಕ್ಕೈಸಿಕೊಂಡು ಪಾಂಡವರಯ್ವರುಮನಲ್ಲಿಗೆ ಬರಿಸಿ (ಪಂಪಭಾ. ೧೪-೮ ವ) ; ಕಾಲ ಮೇಲೆ ಮುಱಿಗ್ಗಿದ ವಿನಯಾಭಿರಾಮನಂ ತೆಗೆದು ತಟಿಕ್ಕೈಸಿ ಪರಸಿ (ಕಾದಂಉ. ೨೭೫); ಜನಾರ್ದನನಾ ಮಂದರಮಂ ತಟಿಕ್ಕೈಸಿದ ಭುಜಪರಿಘಂಗಳಿನೆನ್ನನೊಲ್ದು ತಟಿಕ್ಕೈಸುಗುಮೋ (ಜಗವಿ. ೫-೬೨); ಪಟಿಕ್ಕಿ ತಟಿಕ್ಕೈಸಿದಂ[ಪಾಠಾಂ. ಬಳ್ಕಿ ತಟಿಕ್ಕೈಸಿದಂ, ಪಟಿಕ್ಕೈಸಿದಂ]= ತಡಕೆಯ್ಯಂ ಮಾಡಿದಂ (ಶಮದ. ಪರಿ. ೧) ; ಪುಷ್ಪಕದಿಂ ನೆಲಕ್ಕಿಟಿದು ತನ್ನಿಪ್ಪತ್ತು ತೋಳ್ಗಳಿಂದಾ ಗಿರಿಯಂ ತಟಿಕ್ಕೈಸಿ ಅಳ್ಳಾಡಿಸೆ (ಧರ್ಮಪ. ೯-೩೮ ವ); ಗಟ್ಟನಟ್ಟಱಿಂ ಬಿಗಿಬಿಗಿದು ತಟಿಕ್ಕೈಸುತಂ(ಚಿಕವಿ. ೬-೧೫೬ ವ). ೩. ತಬ್ಬಿ ಹಿಡಿ ; ಇರುಕು : ಕರಿದಂತಂಗಳನಾಂತು ಪೀಲಿವೊಱೆಯಂ ತಟಿಕ್ಕೈಸಿ ಗಂಧೇಭ ಬಂಧುರ ಮುಕ್ತಾಫಳಭಾರಮಂ ತಳೆದು . . . ಬಂದರನೇಕರ್ ಬಟಿಸಂದು ಕಾಡೊಡೆಯನಂ ಕಾಂತಾರದೊಳ್ ಲುಬ್ಧಕರ್ (ಕಾದಂಪೂ. ೧೬೯). ೪. ತಾಕು ; ತಗುಲು ; ಮುಟ್ಟು : ಎರಡುಂ ವಿದ್ಯಾಧರ ಶ್ರೇಣಿಯೊಳೆಡೆಯೆಡೆಯೊಳ್ ಜೈನ ಚೈತ್ಯಾಳಿ ತಳ್ತಂಬರಮಂ ತಟಿಕ್ಕೈಸಿ ನಾನಾಮಣಿಕಿರಣಗಣಜ್ಯೋತಿಗಳ್ . . . ಬೆಳಗೆ (ಶಾಂತಿಪು. ೨-೧೧೭). ೫. ಅರಳಿಸು; ವಿಕಾಸಗೊಳ್ಳುವಂತೆ ಮಾಡು: ತ್ರಿಲೋಕೀ ದೀಪಂ ತಟಿಕ್ಕೈಸುಗಸ್ಮನ್ಮತಿ ಕುಮುದಿನಿಯಂ ನೇಮಿಚಂದ್ರಂ ಜಿನೇಂದ್ರಂ (ಲೀಲಾವ. ೧-೧). ೬. ಮಡಿಸು ; ಬಾಗಿಸು : ಗೆಂಟಾದುದೆ ಪೋದಪ್ಪುದಿ ನ್ನೆಚ್ಚಪೆನೆನುತೆ ನೃಪಂ ತೀವಿ ತೊಟ್ಟಾರೆ ತಟಿಕ್ಕೈಸಿದ ಮುಂಗಾಲ್ ಪೊಕ್ಕ ಪಿಂಗಾಲ್ ನೆಗೆದುಡುಗಿದೊಡಲ್ ಬಿಟ್ಟ ಕಣ್ ನೆಟ್ಟ ಕರ್ಣಂ ಪದವಿಟ್ಟೈ ದಾಜಿನೇಟಿಂ ಸರಳಿಸಿದುದು ಭೀತಾಂತರಂಗಂ ಕುರಂಗಂ (ಸೂಕ್ತಿಸು. ೩-೧೨೯). ೭.ಸಂತೈಸು; ಶಮನಗೊಳಿಸು; ಸಮಾಧಾನಪಡಿಸು; ತಲೆ ನೇವರಿಸು: ಅಟಲನೆರ್ದೆಯೊಳ್ ತಿಣ್ಣಂ ತಟಿಕ್ಕೈಸಿ ಪುತ್ರವಿಮೋಹದಿಂದೆಟಿವಿ ತನುವಂ . . . ಅಟುತುಂ (ಕಾವ್ಯಾವ. ೮೧೫). **ತಕ್ಕಯಿಸು :** ೨. ಮುಂದಿರ್ದ ವಾಗೀಶನಂ ತಕ್ಕಯಿಸಿ ನಲಿದು (ವಾಗೀರ. ದೇ. ೨೭೫-೧೪); ನಕ್ಕು ವಾಸುಗಿ ಭೀಮಸೇನನ ತಕ್ಕಯಿಸಿ ಕೈದಣಿಯೆ . . . ಮನೆಗೆ ನಡೆಯೆಂದು (ಸಂಭಪ. ೦೭-೨೩). **ತಕ್ಕವಿಸು:** ೨. ಪವನಸುತನೇ ಬಾ ಎನುತ ತಕ್ಕವಿಸಿದನು (ಕುವ್ಯಾಗ. ೧೧-೪೨). **ತಕ್ಕೆಯಸ್ಸು:** ೨. ಸಕ್ಕರೆಯ ಕೊಡನ ತುಂಬಿ ಹೋಱಿಗೆ ಸವಿದರೆ ರುಚಿಯುಂಟೆ ತಕ್ಕೆಯಿಸ್ಸು[ಪಾಠಾಂ.ಕೈಸಿ]ಭುಜ ತುಂಬಿ ಲಿಂಗಸ್ಪರ್ಶನವ ಮಾಡದೆ ಅಕ್ಕಟಾ ಸಂಸಾರ ವೃಥಾ ಹೋಯಿತ್ತಲ್ಲಾ (ಬಸವ. ೫೦೮) ; ಪೊಡವಡುತ ತಕ್ಕೆಯಸ್ಸು[ಪಾಠಾಂ. ತಕ್ಕೈಸು, ತರ್ಕೈಸು]ತಂ ಕೈವಿಡಿದು ಕುಣಿವುತ ತಣಿವುತಂ (ಬಸಪು. ೫೯-೨೪); ತವಕದಿಂದಿದಿರೆದ್ದು ಜನಕನನವನಿಪತಿ ತಕ್ಕೆಯಿಸ್ಸು[ಪಾಠಾಂ. ಕೈಸಿ] . . . ನಿಲಿಸಿದನು ಸಿಂಹಾಸನಾರ್ಧದಲಿ (ತೊರರಾ. ೧-೧೬-೦೭). **ತಕ್ಕೈಸು :** ೨. ಪರಸಿ ತಕ್ಕೈಸಿಕೊಂಡು ಮಹಾವಿಭೂತಿಯಿಂದರಮನೆಗೊಡಗೊಂಡು ಬಂದು (ಧರ್ಮಾಮೃ. ೦೩-೦೭೦) ; ತತ್ಪಿತೃವ್ಯಂ ಧರಾಧೀಶ್ವರನಾಶೀರ್ವಾಕ್ಸಮೇತಂ ತೆಗೆದು ಬಿಗಿದು ತಕ್ಕೈಸಿದಂ ಪ್ರೀತಿಯಿಂದಂ (ವರ್ಧಪು. ೧-೪೧) ; ತಕ್ಕೈಸಿ ಮುಂಡಾಡಿ ಸೊಕ್ಕೇಱಿ ನೋಡುತಂ (ಮಱಿರ. ದೇ. ೭೩-೫) ತೆಗೆದಾತನನು ತಕ್ಕೈಸಿದನು ಕಾರುಣ್ಯನಿಧಿ ನಗುತ (ಕುವ್ಯಾದ್ರೋ. ೧೫-೨). ೭. "ಆದೆಲ್ಲಾ ಅರ್ಧ ದಿನದಲ್ಲಿ ಸರಿಹೋಗೋದಲ್ಲ ಪುಟ್ರಂಗು—ಕಾಲಬೇಕು—ತಾಳಬೇಕು, ತಾಳ್ಮೆಬೇಕು" ಎಂದು ತಕ್ಕೈಸಿದೆ (ನೃದ್ಯವಿ. ೫೬) ; ಬಾಗಿ ಬಿನ್ನೈಸುತಿಹ ಪಣ್ಗೊನೆಗಳು! ತೂಗಿ ತಕ್ಕೈಸುತಿರಲುಯ್ಯಲೆಗಳು! (ಕವಿಶಾ. ೪೭-೬). ೮. ಅಪ್ಪಿಕೊಳ್ಳುವಂತೆ ಮಾಡು : ಪರನಾರಿಯರ ಸಂಗವಿಲ್ಲಿ ಉಕ್ಕು ಎಱೆದ ಸತಿಯರ ತಕ್ಕೈಸುವರಲ್ಲಿ (ಪುರಂದ. ೨-೩೯-೧); ನಡುಗುವರ್ಜುನದೇವನನು ತೆಗೆದಡಿ ಗಡಿಗೆ ತಕ್ಕೈಸಿ ಭೀತಿಯ ಬಿಡಿಸಿ . . . ನಡಸಿದನು ಕಾಳೆಗಕೆ (ಕುವ್ಯಾಭೀ. ೬-೪೮). **ತರ್ಕಯಿಸು :** ೨. ಅರ್ಕೇಂದು ಸಂಪದಂಗಳನಿರ್ಕೊಳ್ವ ಕರಂಗಳಿಂ ನಭೋವಲ್ಲಭೆಯಂ ತರ್ಕಯಿಸಿ ನಾಲ್ಕುದೆಸೆಯೊಳಮಿರ್ಕುಂ ವಿಂಶತಿ ಸಹಸ್ರ ಸೋಪಾನಂಗಳ್ (ಮಲ್ಲಿಪು.೧೪-೧೧೮); ಸೋಲಕಾರ್ತಿಯರ್ ಕಣ್ಸೋಲಮಂ ಕಾಣ್ಕೆಗೊಟ್ಟು . . . ರಾಗರಸದೊಳ್ಮುಟುಗುತ್ತಂ ತೇಪೆಕಾರ್ತಿಯರ್ ತೆಪ್ಪಂಬಿಡಿವಂತೆ ತಾಪದಿಂ ಮೃಣಾಳನಾಳದ ಪೊರಳಿಯಂ ಪೊರಳ್ದು ತರ್ಕಯಿಸಿಯುಂ (ಅರ್ಧನೇ. ೫-೨ ವ). **ತರ್ಕವಿಸು:** ೨. ತಲೆದಡವಿ ತರ್ಕವಿಸಿ ತಂಬುಲವಂ ಬಾಯ್ತುಂಬಲಿಕ್ಕಿಯಂಜದಿರೆಂದು (ಶಂಕಕಂ. ೭೧). ೭. ಇತ್ತಲು ರಾಮನಾ ಕುಂತಳಂಗಳಂ ತರ್ಕವಿಸಿ ಸಂತಾಪಮನಪ್ಪುಕೆಯ್ದು ಹಮ್ಮದಂಬೋಗೆ (ಪುಣ್ಯಾಸ್ರ. ೭-೩೧ ವ). **ತರ್ಕೆಯಸ್ಸು :** ೨. ಪೊಡೆವಟ್ಟ ನಿಜತನೂಜೆಯಂ ಕಲ್ಯಾಣಭೋಗಭಾಗಿಯಾಗೆಂದು ಪರಸಿ ತರ್ಕೆಯಿಸ್ಸಿ[ಪಾಠಾಂ. ಕೈಸಿ]ಕೊಂಡು (ಆದಿಪು. ೩-೪೭ ವ) ; ಅರಸಂ ಕರತಳತಾಡನ

ಪುರಸ್ಸರಂ ದೇವ ಬನ್ನಿಮೆಂದೊಲವಿಂದೊಡ್ಡಿರೆ ಕೈಯನೊಲ್ಲದೆನ್ನಯ ಕೊರಲಂ ತರ್ಕೆಯ್ಪ[ಪಾಠಾಂ. ತಟ್ಕೈಪ] ತನಯನೆಂದಾದಪನೋ (ಚಂದ್ರಪು. ೩-೪೬); ಮೃದುಮಧುರಾಂಚಿತೋಕ್ತಿಗಳಿಂದ ಬೋಧಿಸಿ ತರ್ಕೆಯ್ಸಿ [ಪಾಠಾಂ. ತಕ್ಕವಿಸಿ, ತಳ್ಕೈಸಿ] ತಾಂ ಕಂದನಂ ಹೊಡವಡಿಸಿ ಕೊಂಡು (ಬಸವು. ೪-೬೪). **ತರ್ಕೈಸು :** ೨. ಅಂಭಶ್ಶೀಕರಂಗಳ್ಪ್ರಸರಿಸೆ ವಿಚಲದ್ವೀಚಿಹಸ್ತಂಗಳಿಂ ಮೆಲ್ಲಗೆ ತರ್ಕೈಸಿತ್ತು ಪೂರ್ವಾಬ್ಧಿಯನಖಿಳ ನದೀ ಖ್ಯಾತ ಸೀತಾಪ್ರವಾಹಂ (ಮಲ್ಲಿಪು. ೨-೧೧); ಗೆಜ್ಜೆಗಳುಲಿಗೊದವಿದ ಕಂಕಣದುಲಿಗಳೆಸೆಯೆ ಬರ್ಪಾತ್ಮಜನಂ ಮುದದಿಪನೆನ್ನಂ ತರ್ಕೈಸಿದ ತೋಳಂ ತೆಗೆದದೆಂದು ತಟ್ಕೈಸುಗುಮೋ (ಅರ್ಧನೇ. ೧-೧೧೩); ಚಕ್ರಪಕ್ಷಿಯುಗಂಗಳ್ ತರ್ಕೈಸಲ್ ತವುವಾಗಳ್ ಬರ್ಕಟಬಯಲಾದುದು (ಗಿರಿಕ. ೫-೫); ಇಲ್ಲೀಗ ಕಂಡೆನಾದಡೆ ಚರಣದಲ್ಲಿ ದೊಪ್ಪನೆ ಬಿದ್ದು ಬಗಿದು ತರ್ಕೈಸಿ ಬಸಿಱಂ ಬಗಿದು ಹೊಕ್ಕು ಬೆರಸಿ ತಲ್ಲೀಯವಪ್ಪೆನು (ಸಿದ್ಧ ರಾ. ೨-೫೫). **೪.** ಪಟುಪಟಹರಟನಮಾಶಾತಟಮಂ ತರ್ಕೈಸೆ . . . ವಿಶಾಲ ಸ್ಫಟಿಕ ಶಿಳಾತಳಕೆ ವಿಜಯಿ ಬಿಜಯಂಗೆಯ್ದಂ (ವರ್ಧಪು. ೧೫-೬). **೯.** ಗುಂಪುಗೊಳ್ಳು; ಸಂದಣಿಸು: ತರ್ಕೈಸಿ ಸುರಿವ ತೆಱದಿಂದುರ್ಕಂಬುಗಳೆಱಗಿ ರೋಮರೋಮಕ್ಕೆ . . . ನಾಂಟಿದುವರಾತಿಭಟರವಯವಮಂ (ಜಗವಿ.೭-೪೧).

**ತಳ್ಕಯ್ಸು :** ೧. ಪರಿಪೂರ್ಣ್ನಿಂದು ಪ್ರಭಾ ವಿಭ್ರಮದೊಳಮುರ್ದ್ವಿ ಗಂಗಾಪಗಾಸ್ಫಾರ ರುಗುವಿಸ್ತರಮಂ ತಳ್ಕಯ್ಸು ದುಗ್ಧಾರ್ಣ್ಣವ ನವರುಚಿಯಂ ತಾಳ್ದಿ ನೀಳ್ದಪ್ಪುದಾದಂ . . . ವಿಯನ್ಮಂಡಪಾಗ್ರಂಬರೆಗಂ ಶ್ರೀ ವಿಷ್ಣುದಂಡಾಧಿಪ ವಿಪುಳಯಶಃಕಲ್ಪವಲ್ಲೀವಿಳಾಸಂ (ಎಕ. V, ಬೇಲೂರು. ೧೭-೩೧; 1136). **ತಳ್ಕವಿಸು :** ೨. ತೆಗೆದು ತಳ್ಕವಿಸಿದ ರಾಗಳಾತನಂ ರಘೂದ್ವಹಂ ಪಸರಿಸಿದಂ ಸ್ವಭಾವಹಂ (ಕುಮುರಾ. ೪-೯೮ ರಗಳೆ). **ತಳ್ಕೈಸು:** ೨. ಬಂಡಿಯೊಳು ಬರ್ದುಂಕಿ ಕುಳ್ಳಿರ್ದ ಮಗನಂ ಕಂಡೆತ್ತಿ ತಳ್ಕೈಸಿ (ನಂಬಿರ. ೨-೫೭); ಅಳ್ಕಿ ಪುಳಿಂದಂ ಕಾಣುತೆ ತಳ್ಕೈಸಿಯೆ ಕೊಂಡು ಶುನಕನೆರಡುಂ ಕಡಿಯಂ ಕಾಳ್ಕಿರ್ಚು ತಗುಳ್ದ ತೆಱದಿಂ . . . ನೊಂದು ಬೆಂದು ಬಳಲುತ್ತೆಂದಂ (ಗಿರಿಕ. ೧-೧೧೭); ಅಖಂಡಹರ್ಷದಿನೆತ್ತಿ ತಳ್ಕೈಸಿ ಮೊಲೆಯೂಡೆ (ಪದ್ಮರಾ. ೧-೯). **೬.** ಸುಜನನುತ ಚರಿತ್ರಂ ಭವಾಂಬುಧಿ ವಹಿತ್ರನೆಂದೆನಿಪ ಗೌರಾರ್ಯ ಚಿಚ್ಚಂದ್ರಮಂ ತಳ್ಕೈಸುಗೆಮ್ಮ ಮತ್ಕೃತ್ಪಲಿ ನಿಯಂ (ಪದ್ಮರಾ. ೧-೨೪). **ತಟ್ಕಯಿಸು:** ೨.ಬೀಯಗನನಟ್ಟಿಱಿಂ ತಟ್ಕಯಿ [ಪಾಠಾಂ. ಟ್ಕೈ]ಸಿ ತತ್ಕರ ಪ್ರಸಭಾಕೃಷ್ಟ ನಿಕಟ ವಿಷ್ಟರೋಪವಿಷ್ಟಂ (ವರ್ಧಪು. ೫-೪೫ ವ). **ತಟ್ಕಯ್ಸು :** ೨. ನಿಜಾವರಜನ ಕಳೇವರಮಂ ತಟ್ಕಯ್ಸಿ[ಪಾಠಾಂ. ಕೈಸಿ]ಕೊಂಡು (ನೇಮಿಪು. ೧೪-೯೮ ವ). **ತಟ್ಕೆಯ್ಸು :** ೨. ಆಭರಣಕ್ಕಾಭರಣಂ ಜಿತಸ್ಮರನ ರೂಪೆಂದೀಕ್ಷಿಸಲ್ ತನ್ನ ಸಾಸಿರ ಕಣ್ಣೆಯ್ದದೆ ಕೋಟಿ ಕಣ್ಗೆ ಬಯಸುತ್ತ್ಯಟ್ಕರ್ತು ತಟ್ಕೆಯ್ಸುತುದ್ಧರಿಸಿರ್ದಂ ಹರಿ ಕಾಂಕ್ಷಿಸುತ್ತೊಲವಿನಿಂ ಶ್ರೀಭವ್ಯರತ್ನಾಕರಂ (ಪುಷ್ಪ ಪು. ೧೧-೬೫). **ತೆಕ್ಕೆಯಿಸು :** ೯. ಎಕ್ಕೆ ಎಲಚಿಯು ಲಕ್ಕಿಗಿಡಗಳು ಸೊಕ್ಕಿ ಮೆರೆವಾ ಸೀಗೆ ಮರಗಳು . . . ತೆಕ್ಕೆಯಿಸಿತಾರಣ್ಯದಿ (ಗೋಹಾ ಡು. ೬). **ತೆಕ್ಕೆಯ್ಸು:** ೪. ಬಳಸುತ್ತಂ ಕೀರ್ತಿಸುತ್ತಂ ಸುಳಿದು ಸುಳಿದು ತೆಕ್ಕೆಯ್ಸಿರಲ್ (ಮೈಅರಿ. ೧೯೩೭, ೨೮-೨೭; 1148). **ತೆರ್ಕಯ್ಸು :** ೪. ಬಳಸುತ್ತುಂ ಕೀರ್ತಿಸುತ್ತುಂ ಸುಳಿದು ಸುಳಿದು ತೆರ್ಕ್ಕಯ್ಸಿರಲ್ ಕೂಡೆ ಶೇಷೋಜ್ಜ್ವಳ ಕಾಯಂ ತೀವಿದಾ ಪೇಳಿಗೆವೊಲಿರೆ ಸರೋಜಾತಜಾಂಡಂ . . . ವಿಷ್ಣು ಪೆತ್ತಂ ಬೆಡಂಗಂ (ಎಕ. V, ಹಾಸನ. ೫೩-೧೫; 1170). [ ತಟ್ಕಿ + – ಇಸು$_3$ ]

**ತಟ್ಗಿಯೂರ್** (ನಾ). ಒಂದು ಊರಿನ ಹೆಸರು : ಶ್ರೀ ಪುರಂಪ ಪ್ರಿಥಿವೀ ರಾಜ್ಯಗೆಯೆ ವ್ಯಾಳಕಟ್ಟಾಡರ ತಟ್ಗಿಯೂರಾಳ . . . ಪಣುಪುಲ್ಲು ಇದಕೆ ಸಾಕ್ಷಿ (ಎಕ. IV, ಗುಂಡ್ಲುಪೇ. ೮೭-೨; ಸು. 750).

[ ತಟಿ$_0$ + ಊರ್ ]

**ತಟ್ಗಿಸು**, ತಗಿಸು, ತಗ್ಗಿಸು, ತರ್ಗಿಸು, ತಳ್ಗಿಸು, ಸಗ್ಗಿಸು (ಕ್ರಿ). ೧. ತಗ್ಗುವಂತೆ ಮಾಡು ; ಕುಸಿಯಿಸು : ತಾಳಲಾಗದ ತೀವ್ರತರ ಕಷ್ಟಂಗಳಿರದೆ ತಟ್ಗಿಪುದು ತಾನವನ ಕೊರಲನ್ (ಬದ್ಮಪ್ರ. ೪೯-೧೦೭೦). **೨.** ಕೀಳು ಮಾಡು : ನಿಱಿವಿಡಿದುಟ್ಟ ಪಟ್ಟುಡೆಯಂದಿನ ತ್ರಿವಿಕ್ರಮ ಮೂರ್ತಿಯ ತೆಳ್ವಿನ ಪೊಗರ ನಿಗರದೊಳ್ಪುಡೆಯಂ ತಟ್ಗಿಸಿ ಕಟ್ಗಿಸಿ ಮುಟ್ಗಿಸೆ (ರಾಮಾಶ್ವ. ೧೩೯-೧೪). **೩.** ದಮನ ಮಾಡು ; ಹತ್ತಿಕ್ಕು ; ಶಮನಗೊಳಿಸು : ತನುಗುಣರಾಜಿಯಂ ಬಿಡದೆ ತಟ್ಗಿಸಿ ಪೆರ್ಚಿಸಿ ಸದ್ವಿವೇಕಮಂ ಘನಮೆನೆ ಪೂರ್ಣಸೌಖ್ಯದಿರವಂ ಪಡೆವಂತೆ . . . ಧರಣೀಶನೊಪ್ಪಿದಂ (ಉದ್ಭಟ. ೧೧-೨೦). **ತಗಿಸು :** ೧. ಈ ಸಮರವನ್ನು ಮುಗಿಸು ಸೊಕ್ಕಿದವರನು ತಗಿಸು (ಗೀವಿಂ. ೨೦-೧೨). **ತಗ್ಗಿಸು :** ೧. ಕವಿತಪ್ಪ ತುರಗದುರವಣೆಯನಂದೀಕ್ಷಿಸುತೆ . . . ತಿರುಗಿ ಭಟಲನೆ ಹೊಡೆದು ತಗ್ಗಿಸುತೆ ನುಗ್ಗಿಸುತೆ (ಇಹರ. ದೇ. ೪೨-೧೪); ಚರ್ಮರತ್ನದ ಬಲವಂ ತಗ್ಗಿಸುವೆನೊಂದಿರುಳ್ ನಿದ್ರೆಯ ಹಂಬಲನೊಲ್ಲದಿರ್ದೊಡೆನುತಗ್ಗಲಿಸಿ ದುರುಕ್ತಿಯನುಸಿರ್ದಂ (ದಶಕು. ೮-೧೮೨); ಕೆರಳಿದನು ಕಲಿಭೀಷ್ಮನರ್ಜುನ ನುರವಣೆಯ ಗೆಲುವರೆ ಮುರಾರಿಯ ಭರವಸವ ತಗ್ಗಿಸಿದಡಲ್ಲದೆ ಕಾದಲರಿ ದೆನುತ (ಕುವ್ಯಾಭೀ.೬-೨೩); ಮುರಿದೇಳ್ವ ಕೆಂದೂಳ್ಗಳಾಗ ತರಣಿ ಮಂಡಲವ ಮುಂಬಲಿದು ಮುಂಕೊಳುತಂದು ಕಿರಣದೇಳಿಗೆಯು ತಗ್ಗಿಸಿತು (ಕಂಸವಿ. ೧೭-೨೮); ಕ್ಷಣಕಾಲ ತಲೆ ತಗ್ಗಿಸಿಕೊಂಡೇ ಇದ್ದನು (ಜಂಗಾಳ್ಳ. ೬೮). **೩.** ತತ್ಕ್ಷಣದೊಳ್ ಮಸಗಿದ ಶೂಲೆಯನವ ತಗ್ಗಿಸುಗುಂ ಮುಟ್ಗಿಸುವ ತೆಱದಿ ನುದಕಂ ಶಿಖಿಯಂ (ಲೋಕೋಪ. ೯-೮); ರೂಪಿನಲಿ ಸೊಬಗಿನಲಿ ಶೌರ್ಯಾ ಟೋಪದಲಿ ಕುಂದಿಲ್ಲ ಮನ್ಮಥತಾಪವನು ತಗ್ಗಿಸಲು ತಕ್ಕವನಹನು (ತೊರಾರಾ. ೩-೪-೧೭); ಇನ್ನು ಮೇಲೆ ರೈತರಿಗೆ ಸರಾಗ ಮಾಡಿಕೊಟ್ಟರೆ ಅರಮನೆಯ ಕೆಲಸ ಕೆಟ್ಟು ಹೋಗುವದೆಂದು ಪರ್ಯಾಲೋಚನೆ ಮಾಡಿ ರೈತರನ್ನು ತಗ್ಗಿಸುವ ನಿಮಿತ್ತವಾಗಿಯೂ (ಚಾಮುವಂ. ೧೨೨). **೪.** ಕಡಮೆ ಮಾಡು; ಕುಂದಿಸು: ತರತರದೆ ಪಿಂಛಾತಪತ್ರಂ ಪಿರಿದು ತಮಮಂ ಮಾಡೆ ಶಸ್ತ್ರೋತ್ಕರ ಕಳಿತ ತೀವ್ರಾಂಶು ತಗ್ಗಿಸೆ ರವಿನಿವಹದಂತೆ . . . ತೋಱಿತ್ತು ಚತುರಂಗಂ (ಕುಮುರಾ. ೩-೨೮). **ತರ್ಗಿಸು :** ೩. ಸಿಡಿಲಂ ಜೇಱೀಳಿ ಹೊಯ್ವಂ ಬಿಡೆ ಬೆದರಿಸುವಂ ಸಿಂಗಮಂ ಕಾಳನಂ ಕಣ್ಗಿಡೆ ಬಾಹಾಗರ್ವ್ವದಿಂ ತರ್ಗ್ಗಿಸುವಂ . . . ಎಕ್ಕಲ ಕ್ಷೋಣಿಪಾಳಂ (ಎಕ. VIII, ಸೊರಬ. ೧೩೮-೩೧; 1145); ಆ ಕೊರ್ಬಂ ತರ್ಗಿಸುವೆನವರ್ಗಳಂ ಕರೆಯೆಂದಂ (ದಶಕು.೧೧-೧೨೨). **ತಳ್ಗಿಸು :** ೩. ದಿಗಧೀಶರ ಗಂಟಲನೊತ್ತಿ ಮೆಟ್ಟಿ ಭೀಕರ ಫಣಿಲೋಕವಂ ಹಿಳಿದು ನಾಕಮನೋಡಿಸಿ ನಿಂದ ವೀರರಂ ಧುರದೊಳಿ ತತ್ತಱಿಂದಱಿದು ತಳ್ಗಿಸುತಪ್ರತಿಮಪ್ರತಾಪಭಂಗುರಭುವನತ್ರಯಂ . . . ಜಿತಾರಿ ತಾರಕಂ (ಗಿರಿಕ. ೬-೫). **ಸಗ್ಗಿಸು :** ೫. ಸೋಲಿಸು ; ಮಣಿಯುವಂತೆ ಮಾಡು: ರಾಜಕುಮಾರನನ್ನು ಮೂರು ದಿನದಲ್ಲಿ ಹಾಕಿದ್ದನ್ನು ತಿನ್ನುವ ಸ್ಥಿತಿಗೆ ಸಗ್ಗಿಸಿದನು (ಸಣ್ಣಕ. VIII, ೮೭).

**ತಟ್ಗಿಸಿಕೊಳ್** = ಹತ್ತಿಕ್ಕಿಕೊಳ್ಳು ; ಉಪಶಮನ ಮಾಡಿಕೊಳ್ಳು : ಅಂತಸ್ತಾಪದಿಂದಾದ ಕೋಪಮಂ ತಟ್ಗಿಸಿಕೊಂಡು (ದಶಕು. ೪-೧೭ ವ).

[ ತಟ್ಗು + – ಇಸು$_3$ ]

**ತಟ್ಗು**, ತಗ್ಗು$_1$, ತರ್ಗು$_1$, ತಳ್ಗು, ತೆಗ್ಗು$_1$, ಸಗ್ಗು (ಕ್ರಿ). ೧. ಕುಗ್ಗು ; ಕುಸಿ ; ಕ್ಷೀಣವಾಗು : "ತಟ್ಗು – ಕ್ಷೀಣತ್ವೇ" (ಶಮಧಾ); "ತಟ್ಗುಬಟ್ಗಿನೆ ಕುಸಿವುದು" (ಸಂಜೀವ. ೭); ಉಡಿದಿರ್ದಚ್ಚುಱಿದೀಸು ತಟ್ಗಿದ ನೊಗಂ ಜೀಱಿಟ್ಟ ಚಕ್ರಂ ಸಿಡಿಲ್ ಪೊಡೆದಂತೊರ್ಮೆಯೆ ಸೂಸಿ ಪಾಱಿದ ಮಡಂ ನುರ್ಗಾದ ಕೀಲ್ . . . ಕಡಲಂ ಮುಟ್ಟೆ ತೆರಳ್ವ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ (ಪಂಪಭಾ. ೧೧-೯೧); ಅಂತಾ ಸಂಗ್ರಾಮದೊಳ್ ತನ್ನನುಜತನುಜಜಾಮಾತೃವರ್ಗಂ

ಪಡಲ್ಪಟ್ಟಂತಾಗಳ್ ಮೊಟ್ಟಿ ತಟ್ಟಿರ್ಪುದುಂ (ಶಾಂತಿಪು. ೫-೫೮); ಬಲ್ಲಿತು ಸುರಗುರುವಿಂ ಸುಂದರಂ ಶುಕ್ರನಿಂ ತಟ್ಟಿದುದಕ್ಕುಂ ಮಂದನಿಂ ಮಂದಿರ ಮತಿಬಳರಾದಂದವರ್ (ಜಾತತಿ. ೪-೧೨) ; ಜೀವದಯಾಪರಂ ಪರಮದೀಕ್ಷೆಯುದಂ ತಳೆಯಲ್ಕೆ ನೀವಿದಂ ದೇವಿಳೆಯುಂ ಸಮಂತಿಟೆಯುವಿಟ್ಟೊಡೆ ಶೇಷ ಫಣೌಘವಾತ್ಮಕಂಠಾವಧಿಯಾಗೆ ತಟ್ಟಿದಪುದಾ ಕಮಠಾಧಿಪ ಖರ್ಪರಂ ಸ್ವರಕ್ಷೇವಧಿಯಾಗೆ ಮಟ್ಟಿದಪುದೇನಿದು ಸಚ್ಚರಿತಾನುರೂಪಮೋ (ಚಂದ್ರಪು. ೨-೫೩). ೨. ಬಾಗಂ; ಬಗ್ಗು : ನೀಡಿ ಕರಾಗ್ರದೊಂದಳವಿಗೊಯ್ಯನೆ ಬಾರದೆ ಪೂದುಱುಂಗಲಿಂ ನಾಡೆ ವಿರಾಜಿಸಿರ್ಪ ಸೆಳಿಗೊಂಬೆಲರಿಂ ತೊನೆದೆಟ್ಟು ತಟ್ಟಿ ತೂಗಾಡಿದೊಡಂತದಂ ಪಿಡಿದುಕೊಂಡಲರಂ ನೆಱೆ ಕೊಯ್ದು ಕಾಂತೆ ಕೈಗೂಡಿಸಿತೆನ್ನ ವಾಂಛಿತಮನೀ ಮಳಯಾನಿಳನೆಂದು ಪೇೞ್ದಳ್ (ಕುಸುಮಾ. ೫-೧೧೧). **ತಗ್ಗು$_1$ :** ೧. ತನ್ನ ನಿಶಿತನಾರಾಚ ಪರಂಪರಾಭಿಘಾತದೊಳ್ ತಗ್ಗಿ ನುರ್ಗುನುಱಿಯಾಗಿ ಕೆಡೆದ ತೇರ ಪಲಗೆಗಳೊಳ್ ಮೆಯ್ಗುಗ್ಗರೆದನೆಗೆತ್ತು ಬೆದಂಕಿ ನೋಡಿಯುಂ (ಗದಾಯು. ೬-೨೮ ವ); ಕಡಂಗಿ ಘಟಾವಳಿ ತಾಗಿ ಮತ್ತೆ ನಿತ್ತರಿಸದೆ ಭೀತಿಯಿಂ ಪೆಳಱೆ ಬಾಯಿವಿಡೆ ಕಿಂಕರಯೂಥಮಗ್ಗಿ ತಗ್ಗಿರೆ . . . ಸಂಗರ ರಂಗಭೂಮಿಯೊಳ್ಪರಿದುದು ಭಾಪ್ಪು ಭಾಪ್ಪು ಮರಘು ಭಾಪ್ಪೆನಲಂಣನ ಗಂಧವಾರಣಂ (ಎಕ. VIII, ಸಾಗರ. ೦೧೯-೨೬ ; 1042) ; ಕೋಪಗಿಚ್ಚು ಭುಗಿಲೆಂದು ಜಪ ಜಾಱಿ ತಪ ತಗ್ಗಿ ಮತಿ ಗತವಾಗಿ (ಹಡಕಾ. ೬-೧); ವೀರಸೇನಾಪತಿಯ ಸನ್ನೆಗೆ ಭೂರಿಬಲ ಹಬ್ಬಿದುದು ದಿಕ್ಕುಗಳೋರೆ ಹಿಗ್ಗಿದವಮುಪ ತಗ್ಗಿದರಹಿಪ ಕೂರುಮರು (ಕುವ್ಯಾಭೀ. ೮-೧೧) ; ವಾಮನನೇಱಲುದಯಮಹಾದ್ರಿ ತಗ್ಗಿದುದಿಲ್ಲ ಪೂರ್ವದಲಿ (ತೊರರಾ. ೪-೧೨-೨೫) ; ಮಾಯದ ಸಂಸಾರ ಮಮಕಾರ ತಗ್ಗಿತು ಇನ್ನೇನಿನ್ನೇನೂ (ಪುರಂದ. ೨-೬೯-೧) ; ಆತನ ಕಾಂತಿಯು ಥಟಕ್ಕನೆ ತಗ್ಗುತ್ತದೆ (ಜ್ಯೋತಿರ್ವಿ. ೬೦). ೨. ತುಱುಗಿದ ಕಾಯ್ಗಳ ಭರದಿಂ ನೆಱೆ ತಗ್ಗಿ ವಿಲಂಬಿಸಿರ್ದ ಮಾದಲಂ (ಬಾಧಪು. ೧-೧೦೮) ; ಕವಿಯ್ಗಲೌಕುವರೌಕಿದರೆ ತಗ್ಗುವರು ತಗ್ಗಿದರೊಡನೊಡನೆ ಜಾಱುವರು ಜುಣುಗುವರ್ಯೆದೆ ತಿವಿದಾಡಿದರು ಸಬಳಿಗರು (ಕುವ್ಯಾಭೀ ೪-೪೩). ೩. ನೆಗ್ಗು; ನಗ್ಗು : ಘನಮಪ್ಪಾಸರೆ ಮೇಲೀ ಮುನಿಯುಂ ಕೊಂಡುಯ್ದು ನೆಟ್ಟನಪ್ಪಳಿಸುವೆನೋ ತನು ನೆಱೆ ತಗ್ಗಿಯುು ನುರ್ಗಪ್ಪಿನೆಗಂ ವೇಗಣ್ಗೆ ನೆಗಪಿ ನೆಲಕಿಕ್ಕುವೆನೋ (ಧರ್ಮಾಮೃ. ೮-೧೦೭) ; ಕಮಠನಪರಾಂಗಂ ತಗ್ಗೆ (ರೇವಣ. ೧೦-೫). ೪. ಶಾಂತವಾಗು ; ಉಪಶಮನವಾಗು ; ವಾಸಿಯಾಗು ; ಗುಣವಾಗು : ಮದೀಶ್ವರನ ದೇಹಕ್ಕೆ ಸಂಕಟವಾಯ್ತಲಾ ಈ ಹುಗುಲುಗಳು ನೆಗೆದು ಎಂದು ತಗ್ಗುವವಿವು (ಬಸಪು. ೧೩-೨೪) ; ಶಂಕರನ ಹೂಂಕರಣೆಯಲಿ ತಳಿತುರಿ ತಗ್ಗಿತಲ್ಲಲ್ಲಿ (ಕುವ್ಯಾಕ. ೬-೪೬) ; ಮನದ ಮೊಕ್ಕಳಮಾದ ಮುನಿಸು ನಸು ತಗ್ಗದೆ . . . ರಣಕ್ಕುಜ್ಜುಗವನೆ ಮಾಡಿಸಿದಂ (ಜಯುಕಾ. ೬-೧೧) ; ಬೆಳ್ಳಿಯ ಜ್ವರವು ತಗ್ಗಿ ಎದ್ದು ಓಡಾಡತೊಡಗಿದಳು (ಕಾಲೂರ. ೧೨ ಕಥಾಸಾರ). ೫. ಸೊರಗು; ಖಿನ್ನನಾಗು; ನಿರುತ್ಸಾಹಗೊಳ್ಳು: ಹಿಗ್ಗುವ ತಗ್ಗುವ ಮುಗ್ಗುವ ಕುಗ್ಗುವ ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ (ಪುರಂದ. ೧-೧೨೨ ಅನುಪಲ್ಲವಿ); ಸಿರಿಗುಬ್ಬನೆಡಱಿಗೆ ತಗ್ಗನಾತ್ಮಜ್ಞಾನಿ (ಭರಚ. ೬-೨೭) ; ಸುರಪತಿಗೆ ಸಕಲಸಿರಿಯಿತ್ತು ಗಿರಿಜೆಯು ತಮ್ಮನಂ ಕಾಯ್ದೆನೆನುತ ಲುಬ್ಬಿ ವರಮುನೀಶಂ ದಾಶರಥಿ ಜಾಮದಗ್ನಿಯರೊಳಿರದೆ ಕಡುನೊಂದು ವಡಬಾಗ್ನಿಯಿಂದಳ್ಕುತಂ ಪಿರಿದು ಭಂಗವನಾಂತೆನೆನುತಬ್ಧಿ ತಗ್ಗಿ ತಾಂ ಹೆಚ್ಚು ಕುಂದಿನೊಳೆಸೆದುದು (ಚಬಪು. ೨-೫). ೬. ದೈನ್ಯವನ್ನು ತಾಳು ; ವಿನಮ್ರನಾಗು : ಪಲ್ಗಿರಿದು ತಗ್ಗಿ ತಲೆಗರೆದು ಬೆರಳಂ ಕಚ್ಚಿ ಕಾಲ್ಗೆಱಗಿ ಕುಗ್ಗಿ ಕಿಂಕರತೆಯಿಂ ನೆಱೆ ಪೆಚ್ಚಿ (ಬಸರ. ೬-೨೭). ೭. ಮಣಿ ; ಸೋಲು; ವಶವರ್ತಿಯಾಗು : ಕಲ್ಲಿನಾಥನ ಭದ್ರಮದಕರಿ ಖುಲ್ಲ ಹುಲುಮಂಡಳಿಕನಾನೆಗದೇಕೆ ತಗ್ಗು[ಪಾಠಾಂ. ಕ್ಕು]ವುದು (ಬಸಪು. ೨೦-೪೦) ; ಈ ಬಾಣಗಳಿಂದ ಇವರು ತಗ್ಗುವರಲ್ಲ (ಸೌಗಂಧಿ. ೩೪೯-೨). **ತರ್ಗು$_1$ :** ೧. "ತರ್ಗು[ಪಾಠಾಂ. ಕುಟ್ಟು] ಆಕುಂಚನೇ" (ಶಮಧಾ. ಮ.) ; ನೆಲಂ ಮೊಟಿಗೆ ಕಂಪಿಸೆ ಬಾಯ್ವಿಡೆ ಬೆಟ್ಟು ಬೀಱೆ ಮಂದಿರಮುಡಿದಟ್ಟಿ ತರ್ಗೆ ನದಿಯಿಂ ಸ್ರವಣಂ ಪೊಱಪೊಣ್ಮೆ . . . ಘನಾಗಮದೊಳ್ ವಿನಿಂದಿತಂ (ಲೋಕೋಪ. ೪-೭೪) ; ಕುಸಿದು ಕುಸಿದಡಿ ಮಿಡುಕದೆ ಸುಗಿದಗಿದು ಮುರ್ಗಿ ತರ್ಗುವ ಪದದೊಳ್ (ಸುಕುಮಾ. ೫-೧೪); ಪಾಳಾಸಂ ಪಱಿಯೆ ಪೊಱಮಟ್ಟು ನೆರವಿಯನುರವಣಿಸಿ ಪಾಯ್ದು ಬೀದಿವರಿದಾಱಿಗೊಂಡು ಸಿಕ್ಕಿದ ರೂಪಿನ ತಲೆಯೊಳ್ ನಿಳಿಲ್ ನಿಕ್ಕಿಂದು ತರ್ಗಿ ನುರ್ಗಿ ಕರ್ಚಿ ಕೊಡಹುವ ನಚ್ಚಿನ ಗೋವಂ ದನಿದೋಱೆ (ಗಿರಿಕ. ೨-೧೦೫ ವ) ; ಧನುವಂ ಕೊರೆದೆತ್ತಿ ತನ್ಮೌರ್ವಿಯನಟನಿಗೆ ಹಸ್ತಾಗ್ರದಿಂದೆತ್ತಿ ಭೂಭೃತ್ತನಯಂ ಕಾಯ್ದಾನ ದಾರ್ದೇಱಿಸುವ ಸರಭಸಕ್ಕುರ್ವಿ ತರ್ಗಿತ್ತು (ಶಾಂತೀಶ್ವ. ೩-೯೫) ; ನಡೆವಾಗಳ್ ಧಾತ್ರಿ ತರ್ಗ[ಪಾಠಾಂ.ಗ್ಗ]ಲ್ ಕಡುಮುಳಿದಧಟಂ ಕೋಡಿಡಲ್ಪೆಟ್ಟು ಪಿಟ್ಟಾಗೊಡೆಯಲ್ . . . ರೊಂಕಿಡುತಂ ಕಾಡೆಮ್ಮೆವಿಂಡೊಳ್ ಮೆಱೆದುದು ಕಡುಪಿಂ ಸ್ಥೂಲಕಾಯಂ ಲುಲಾಯಂ (ತ್ರಿಪುವಿ. ೨೭-೭೪) ; ಕುಲಗಿರಿಗಳೊಲ್ ದಿಶಾಕರಿಗಳೊಲ್ ಬರ್ಪ ಭರಕಿಳೆ ತರ್ಗೆ . . . ನಡೆತಂದತ್ತು ಶುಂಡಾಲಸೈನ್ಯಂ (ಚಬಪು. ೪೭-೩೪). ೨. ಫಲಭರದೆ ತರ್ಗುಗುಂ ತರು (ಶಾಕುಂತ. ೭೪-೧೧೨). ೪. ಕಟ್ಟನೆ ಕಂದಿತ್ತತ್ತಮಿತ್ತಂ ಮಿಗೆ ಮಸಗುವ ಕೋಪಂ ಕರಂ ತರ್ಗಿ ಕುರ್ಗಿತ್ತೆನಿಪಂದಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೬೨) ; ತವೆ ದುಶ್ಶಾಸನಭೀತಿ ತರ್ಗೆ ಭರದಿಂದಂ ಭೀಷ್ಮಕರ್ಣರ್ದಯಂ ನವೆದಾಟಂಬುಗೆ . . . ಮಾಧವ ನಿಂದಿರ್ಮಾಡಿರಾಜನೇಂ ಮೆಱೆದನೋ ತಾಂ ಧರ್ಮರಾಜ ಖ್ಯಾತಿಯಂ (ಚಿಕವಿ. ೨-೮೭). **ತಳ್ಗು :** ೫. ಇರದಿಱಿಯೆ ಕಣ್ಗೆಟ್ಟು ತಳ್ಗುವರ್ ಮುಳ್ಗುವರ್ ಭರಿಕೈಯ ಪೆಟ್ಟನಿಂದಳ್ಕುವರ್ ಬಳ್ಕುವರ್ (ಚಬಪು.೨೮-೨೭). **ತೆಗ್ಗು$_1$:** ೧. ಅವನ ಸೊಕ್ಕು ತೆಗ್ಗಿತು (ರೂಢಿ). **ಸಗ್ಗು :** ೧. ಕಾಲಿಟ್ಟ ಒತ್ತಡಕ್ಕೆ ನೆಲ ಸಗ್ಗಿದ ಅನುಭವದ ಜೊತೆಗೆ ಕೆಳಗಣ ಮಂಜು ಬಿರಿದ ಸದ್ದು ಕೇಳಿ ಬಂದಿತ್ತು (ಏಳಜೀ. ೯೨). ೭. ಸಸಿನೆ ಸಗ್ಗದ ಸೌಧಮುಕ್ತಾಕಲಶಮಿದುವೊ . . . ರಸಿಕರಾಮೋದಗೊಳುವಮೃತಕಲಶವೊಯೆನಲ್ಮೆರೆದುದ್ಯೆಂದವ ಬಿಂಬವು (ವೆಂಕಾರಾ. ೫-೬-೦೪) ; ಮೆದುಮಾತಿಗೆ ಸಗ್ಗಲಿಲ್ಲ, ಬಿರುಸು ಮಾತನೇ ಆಡೋಣಂತೆ (ಚಕರಾ. ೩೬೮).

**ತಟ್ಟಿನಡೆ, ತಗ್ಗಿನಡೆ**=ಬಾಗಿ ನಡೆ; ವಿನಯದಿಂದ ವರ್ತಿಸು : ತಟ್ಟಿನಡೆದೊಡೆ ರುದ್ರನ್ ಒಲ್ಲದೆಯೆ ಮಾಣನ್ (ಅಶ್ವತ್ಥಾ. ೫೦-೯೯೯) ; ತಟ್ಟಿ ನಡೆವುದನ್ ಕಲ್ತಿಲ್ಲ ನೀನ್ (ಬಧ್ವಪ್ರ. ೧೮-೩೭೪) ; ಆದರೆ ತಗ್ಗಿ ನಡೆಯಬೇಕು (ಧೂರಾಚ. ೩೪).

[ **ದೇ.॥ ತಮಿ.** ತಾಟ್ ; **ಮಲ.** ತಾಟು, ತಾಟ್ಕ, ತಾಕ್ಕ, ತಾಕ್ಕು ; **ತುಳು.** ತಗ್ಗು ; **ಕೊಡ.** ತಾರ್ ; **ತೆಲು.** ತಗ್ಗು, ಸಗ್ಗು, ಸ್ರುಗ್ಗು ]

**ತಟ್ಟು** 'ತಟ್$_1$' ಪರಾ.

**ತಟ್ಟುಟ** 'ತಟತಟ' ನೋ.

**ತಟ್ಟುಟಗುದಿ** 'ತಟತಟಗುದಿ' ನೋ.

**ತಟ್ಟು** 'ತಟ್$_1$' ಪರಾ.

**ತಟ್ಟಲ್, ತಪ್ಪಲ್$_2$, ತಪ್ಪಲು$_1$, ತರ್ಪಲ್, ತಳ್ಪಲ್** (ನಾ). ಬೆಟ್ಟದ ಮಗ್ಗುಲು ; ಪರ್ವತದ ಕಿಬ್ಬಿ ; ಸಾನು ; ಪ್ರಸ್ಥ : " ಆ ನಗಕಟಕಂ ಪ್ರಸ್ಥಂ ಸಾನು ತಟಂ ಭೃಗು ನಿತಂಬಮಂತದು ತಟ್ಟಲ್ " (ವಸ್ತುಕೋ. ೨೮-೨) ; " ತಟ್ಟಲೆಂದು ಸಾನು " (ಕಶಸಾ. ೫-೬೮) ; ಸುಲಿಪಲ್ ತಟ್ಟಲ ತಾರಕಾವಯವಮಂ . . . ಪೊಲ್ತತ್ತು ತಳಪ್ರಹಾರಿಯ ಶಿರಂ ಹೇಮಾದ್ರಿಯಾಕಾರವಮಂ (ಕಾವ್ಯಸಾ. ೫೨೫ ಶೂದ್ರಕ) ; ಪರ್ವತದ ತಟ್ಟ[ಪಾಠಾಂ. ಪ್ಪ]ಲೊಳಾದಮಾನುಂ ಗುಂಡಿತಪ್ಪ ರಸದ ಬಾವಿಯಂ ಪೊಡೆನಾರ್ಪುದಂ

ಕಂಡು (ವಡ್ಡಾರಾ. ೧೮೭-೭) ; ಕಸವರವಮಂ ಕೆಯ್ಗೆ ಮಾಡಿ ಮೇರು ಪರ್ವತದ ತೆಂಕಣ ತಪ್ಪಲೊಳ್ . . . ಜಂಬೂವೃಕ್ಷದ ಕೆಲದೊಳಡಸಿ (ಪಂಪಭಾ. ೬-೩೦ ವ) ; ತಪ್ಪಲ ಫಲಾರುಣದರ್ಧ ತಟಾಕ ಸಂಕುಳಂ ತಿಂಗಳ ತೋಂಟದಂತೆ ಬಳೆದೊಪ್ಪುವ ನೇರೆಯ ಕೆಯ್ಗಳಚ್ಚವೆಲ್ದಿಂಗಳ ಕೆಯ್ಗಳಂತೆ ನಡೆ ನೋಟ್ಪರ ಕಣ್ಗೆ ಕರಂ ಮನೋಹರಂ (ಅರ್ಧನೇ. ೨-೭೦); ಮಂಜುವೆಟ್ಟ ನೆಯ್ದಿ ತಟ್ಟಲ ಬನದ ಚೆಲ್ವಂ ನೋಡಿ (ಕಬ್ಬಿಕಾ. ೧೬೦) ; ಸಿಂಧೂರವಿಲಿಪ್ತ ಮದಸಿಂಧುರಗಂಡಮಂಡಲದೊಂದು ಪಾಂಗಿನಿಂ ತೋರ್ಪ ತಪ್ಪಲಿಂ (ರಾಮಾಶ್ವ. ೭೨-೨೨). **ತಪ್ಪಲ್₂ :** ಆ ಚಂದ್ರಿಕೆಯೊಳ್ ನೃಪರೂಪ ಚೆಂದ್ರಂ ಕೇಳೀಶೈಲದ ತಪ್ಪಲೊಳ್ನಡಪಾಡುತಿರ್ಪುದುಂ (ಕಾದಂಬ. ೧೪೭) ; ಉತ್ತುಂಗ ಶಿಖರಿಯ ತಪ್ಪಲೊಳ್ ಬರ್ಪುದನಾ ವ್ಯಾಘ್ರಂ ಕಂಡು (ಪಂಚತಂ. ೧೧೧-೪) ; ತೊಱೆಗಳ ತೀರದೊಳ್ಗಿರಿಯ ತಪ್ಪಲೊಳಗ್ಗಳಮಪ್ಪ ಕೊಳ್ಳ ದೊಳ್ . . . ಮಾವಿನ ಫಲಂಗಳನಂದಱಸುತ್ತುಂ (ಧರ್ಮಾಮೃ. ೮-೨೦) ; ಅಬುಜಬಾಂಧವನಿಳಿದನಸ್ತಾಚಲದ ತಪ್ಪಲ ತಾವರೆಯ ಬನಕೆ (ಕುಮ್ಮಾವಿ. ೩-೭೮) ; ಹಿಪ್ಪೆಯಿಂಗುಳ ಮೊದಲಾದ ನಾನಾ ತರು ತಪ್ಪಲೊಳೆಸೆವುವಾ ಗಿರಿಯ (ಕಂನವಿ. ೨-೩೨). **ತಪ್ಪಲು₁ :** "ನಿತಂಬಃ, ಸ್ನುಃ, ಪ್ರಸ್ಥಃ, ಸಾನುಃ ಈ ೪ ಬೆಟ್ಟದ ತಪ್ಪಲಿನ ಪೆಸರು" (ನಾಚಿರಾ. ೧೦೪); ಅರಸ ಬಂದನು ಗಂಧಮಾದನ ಗಿರಿಯ ತಪ್ಪಲಿಗಗ್ಗಿಹೋತ್ರದ ಪರಮಋಷಿಗಳು ಮಡದಿ ಸಕಲನಿಯೋಗಿಜನ ಸಹಿತ (ಕುಮ್ಮಾಭ. ೯-೨೦) : ಬೆಟ್ಟದ ತುದಿಯಿಂದ ತಪ್ಪಲಿಗೆ ಉರುಳುವ ಹೆಬ್ಬಂಡೆಯಂತೆ (ಏಳಜೀ. ೨) : ದನಕರುಗಳು ಯಾವಾಗಲೂ ಮೇಯುತ್ತಿದ್ದ ತಪ್ಪಲಿಗೆ ಬಂದುವು (ರಕ್ತರೂ. ೪) ; ಹಿಮಾಲಯ ಪರ್ವತದ ತಪ್ಪಲಿನಲ್ಲಿ ನಿಡಿದುಗಾಲ ಕಠಿನ ತಪಸ್ಸು ಮಾಡಿದನು (ವ್ಯಾಸಜಿ. ೧೪೭). **ತರ್ಪಲ್ :** ಬೆಟ್ಟದ ತರ್ಪಲ ಕಣೆಯ ಬಟ್ಟೆಯಿಂ ಮಾಡ (ಸೌಇಇ. XI-i, ೬೫-೪೭ ; 1029) ; ಬೆಟ್ಟದ ತರ್ಪಲಿಂದುಲಿವ ಕೋಗಿಲೆಯುಂ (ಸೌಇಇ. XI-ii, ೧೭೮-೭ ; 1127). **ತಳ್ಪಲ್ :** ಪರಿವೊನಲಿಂ ಬಿಲಂಗಳಿನರಣ್ಯದಿನಲ್ಲಿಯ ತಳ್ಪಲೊಪ್ಪುಗುಂ (ಗಿರಿಕ. ೧-೭೦) : ಬೆಟ್ಟದ ತಳ್ಪಲ ಹಿಮದೊಳೆಸೆಯೆ ಮಾಳ್ಪುದು ತಪಮಂ (ಗಿರಿಕ. ೯-೬೫).

ತಪ್ಪತಪ್ಪಲ್ (ದ್ವಿರುಕ್ತಿ): ತಪ್ಪತಪ್ಪಲೊಳಲ್ಲಿಗಲ್ಲಿ ಮಂಜುಗಳೆಸೆವ ಕಪ್ಪ ಕಪ್ಪನೆಯ ಗಿರಿಗಳ ಪರ್ಬುಗೆಗಳಂತೆ (ಜೈಮಿಭಾ. ೨೮-೪೧). **ತಪ್ಪಲಸೀಮೆ**= ಪ್ರಸ್ಥಭೂಮಿಂ : (+).

[ ದೇ.॥ ತಮಿ. ತಾಟ್ಟು ; ಮಲ. ತಾಟ್ಟು, ತಾಟ್ಟಾರಮ್ = ಇಳಿಜಾರು ]

**ತಟ್ಟು₁, ತಬ್ಬು₁, ತರ್ಬು₁, ತಟ್ಟು₁** (ಕ್ರಿ). ೧. ಅಪ್ಪು ; ಆಲಿಂಗಿಸು ; ಅಪ್ಪಿಕೊಳ್ಳು ; ಬಿಗಿಯಾಗಿ ಹಿಡಿ : ತಂದು ಕೂಡಾತನನಾತಂಗೀವ ಮುಯ್ವಂ ನಿನಗೆ ಕೊಡುವೆನೇಟಕ್ಕ ಪೋಗೆಂಬುದುಂ ಭೋಂಕನೆ ಬಂದಂ ತಟ್ಟಿದಂ [ಪಾಠಾಂ. ದಂತಪ್ಪಿದಂ] ಚುಂಬಿಸಿದನೊಲಿದು ಕೇಳುತ್ತಲಿರ್ದಾತ್ಮ ನಾಥಂ (ಅನಂಪು. ೮-೧೩) ; ಪಾರಿವಮಂಚೆ ಕೊಂಚೆ ಗಿಳಿ ಸೋಗೆ ಕುಕಿಲ್ ತೊಱೆವಕ್ಕಿ ತಮ್ಮತಮ್ಮೊರಗೆ ತಪ್ಪಲುಂಬಿ[ಚ]ದನಿಗೆಯ್ದಪುವೆಂದೊಡ ನೆಟ್ಟಿ ಸುತ್ತಲುಂ ಭೋರೆನೆ ಕೂಡಿಕೊಂಡು ವಿಟತಾಡನ ತಾಳಲಯಕ್ಕೆ ಬರ್ಪಿನಂ ಚಾರುಚಕೋರನೇತ್ರೆಗಳನಿಸ್ವನಮಂ ಮೆಱೆದೊಲ್ದು ಕೂಡಿದಳ್ (ಸೂಕ್ತಿಸು. ೦೪-೫೦). **ತಬ್ಬು₁:** ೧. ಉಬ್ಬಿದನು ನಿನ್ನಾತನಾತನ ತಬ್ಬಿದನು [ಪಾಠಾಂ. ತುಬ್ಬಿನಲಿ] ಕುರುಬಲದ ಹರುಷದ ಜಬ್ಬುರಿಯ ಹುರಿಗೂಡಿ ತೋಱಿತು ಚಾರುಚತುರಂಗ (ಕುಮ್ಮಾಕ. ೨೭-೫೦) ; ತಬ್ಬಿಬ್ಬುಗೊಂಡು ತಮ್ಮೊಳ್ ತಾವೆ ಸಿಲ್ಕಿದಂ ತಬ್ಬಿಹಿಡಿ ಹೊಯ್ ಹೊಯ್ಯೆನುತ್ತೆ (ಚಿಬಪು. ೫೦-೧೫) ; ಅತನು ಪೂಸರಂಗಳನಿಸಲಾ ಉಬ್ಬೆಗೆ ಕೊಬ್ಬಿದ ಪೆಣ್ಣಂ ತಬ್ಬಿದೊ ಡದಱುಬ್ಬು ನಿಲ್ಕುಮಿಂತಿದು ಸುಖಮೇ (ಶಬ್ದಾನು. ೫೦ ಪ್ರಯೋ) ; ತಬ್ಬಿ ಅವಳ ಮುಂಗುರುಳನ್ನು ನೇವರಿಸಿದ (ಕಲಾಜ್ಯೋ. ೧೦೩). ೨. (ಹುಲ್ಲಿನ ಹೊರೆ, ಸೌದೆ ಮೊದಲಾದಂವುಗಳನ್ನು) ತಕ್ಕೆಯಲ್ಲಿ ಹಿಡಿ : ತಬ್ಬಿ ತಂದಡುಗಬ್ಬುಗಳಿಗುರಿ ಹಬ್ಬಿಸುತ (ಬಸಪು. ೧೬-೨೦). ೩. ಮುಂತ್ತು ; ಸುತ್ತುಗಟ್ಟು ; ಕವಿ ; ಆವರಿಸು ; ಆಕ್ರಮಣಮಾಡು : ಕೆದಱಿದವು ಕೆಂಗಿಡಿಗಳುರಿಯುಬ್ಬಿದುದು ಘುಳುಘುಳು ರಭಸ ಮಿಗೆ ಹೆಚ್ಚಿದುದು ತಬ್ಬಿದುದೀತನನು ತಡವರಿಸಿ ಗಗನದಲಿ (ಕುಮ್ಮಾಅ. ೨೦-೬೨) ; ಬಂದ ಪಗೆ ಪೌಜ ತಬ್ಬುವದೆಂದು ಬಿನ್ನಪವನಿಂದುಶೇಖರಗೆ ಕಳುಹಲು (ನವಮೋ. ೩೦-೫೫). ೪. ಮುಂಚ್ಚಿ ಹಿಡಿ ; ಬಿಗಿದಿಡಂ : ಇಬ್ಬರೂ ನಿಂತುಬಿಟ್ಟರು. ಬಾಯಿ ತಬ್ಬಿದಂತಾಗಿತ್ತು (ಕಮನೆ.೩೪). ೫. ಸಂಭೋಗಿಸು ; "ಒರಗು" (ಜಾನಕೋ. ೬೫) ; ಕೆಟ್ಟವಳು ಕೆಟ್ಟೆ ಬಿಮ್ಮನೆ ತಬ್ಬಿಕೊ (ಗಾದೆ). **ತರ್ಬು₁:** ೧. "ತರ್ಬು-ಆಶ್ಲೇಷೇ (ಆಲಿಂಗಿಸು)" (ಶಮಧಾ). **ತಟ್ಟು₁ :** ೧. ಅನೆ ಯೊಂದನ್ ತಟ್ಟಿ ಭೀಮಸೇನಂಗೆತ್ತು . . . ಬಿಟ್ಟ ಚಕ್ರವರ್ತಿಯ ಮುಡಿಯನೊದೆದ ಕಾಲೆಲ್ಲಿ? ಎಲ್ಲಿ ತೋಱಿಂದದಱ ಕಾಲ್ಮುಱಿದು (ಅಶ್ವತ್ಥಾ. ೪-೫೦). [ ದೇ.॥ ತಮಿ. ತಟುವು ]

**ತಟ್ಟು₂, ತಬ್ಬು₂, ತರ್ಬು₃, ತಳಪು₂** (ನಾ). ೧. ಒಂದಕ್ಕೊಂದು ಒತ್ತಾಗಿ ಹೆಣೆದುಕೊಂಡಿರುವಿಕೆ,-ಕೂಡಿಕೊಂಡಿರುವಿಕೆ:ಪುದಿದ ತಾವರೆವಳ್ಳಿಯ ತಟ್ಟಿನಿಂ ಪಸುರ್ಪಾಗೆ ನಿರಂತರಂ ಸೊಗಯಿಸಿರ್ಪುವು ಪೆರ್ಗೆಱೆಗಳ್ನಿರಂತರಂ (ಮಲ್ಲಿಪು.೨-೪೫): ತಳಿರ್ಗಳ ಕಂಪು . . . ಪೂತ ಪೂಗೊಳಗಳ ತೆಳ್ಪು ತೆಂಕಣೆಲ ರೊಳ್ಪು ಲತಾಳಿಯ ತಟ್ಟು ಕಾಮುಕರ್ಕಳಿಗಭಿಮಂದನಂ ಬಗೆದು ನೋಡಲು ಮಿಂತು ಮನೋನುಬಂಧನಂ (ಬಂಹರಿ. ೨-೫). ೨. ಅಪ್ಪುಗೆ; ತಬ್ಬಿ ಕೊಳ್ಳುವಿಕೆ; ಆಲಿಂಗನ: "ತಟ್ಟಿ[ಪಾಠಾಂ. ತಾಳ್ಪೆ]ನಲಳ್ಪಿಂಗೆ ನಾಮುಂ" (ಚಕುನಿ. ೫೭); ಭರತ ತ್ರಿಖಂಡದೊಳ್ಪಸರಿಸು ನಿನ್ನ ಗೋಸಣೆಯನಾಣೆಯನೀ ಖಚರೇಂದ್ರವಕ್ಷದೊಳ್ ವಸಿಯಿಸು ಲಕ್ಷ್ಮಿವೊಲ್ ವಿಜಯಲಕ್ಷ್ಮಿ ವೊಲೀತನ ತೋಳ ತಟ್ಟಿನೊಳ್ ಪೊಸಯಿಸು ನಲ್ಮೆಯಂ ದಿವಸಲಕ್ಷ್ಮಿಯ ನೇಕೆಯೊ ಬಂಜೆ ಮಾಡುವಯ್ (ಪಂರಾಮಾ. ೯-೧೭೭): ಪದಯಿಸೆ ಸೋಂಕಿ ಸಂಕೆಗಿಡೆ ಮೋಳಿಸಿ ಮೆಯ್ವಿಡೆ ತಳ್ತು ತೋಳ ತಟ್ಟಿದಿರ್ಗೊಳೆ ಮೆಲ್ಲನಪ್ಪಿ . . .ಅಲಂಪಿನುಬ್ಬಿದಿಗಮನಾ ಲತಾಂಗಿಗೆ ನೃಪಂ ಪಡೆದಂ ನವಸಂಪ್ರಯೋಗ ದೊಳ್ (ಕಾವ್ಯಾವ.೮೦೦); ನಡು ನಸು ಪೊಂಗಿ ಸುತ್ತಿಱಿದು ಪತ್ತಿದೆಸಟಿಕ್ಕೊನೆ ಬಿರ್ಚಿ ತಣ್ಣೆರಲ್ಗೆಡೆದೆಱೆವಾಗೆ ಪೊಕ್ಕು ಸುಟಿಯುತ್ತಿರೆ ತಟ್ಟು ಸಡಿಲ್ದಗಲ್ದ ರಲ್ವಿಡಿದುಡುಗಿರ್ದ ಕೇಸರದ ನುಣ್ಗೊನೆ ಸೂಸೆ ಮುರಲ್ದು ಚೆಲ್ವಿನೊಳ್ ಗಡಣಿಸಿದತ್ತು ಮುಂಬಗಲೊಳಂಬುರುಹಂ ಸರಸೀಸಮೂಹದೊಳ್ (ಚಂದ್ರಪು. ೮-೧೦೩). **ತಬ್ಬು₂:** ೩.(ಹುಲ್ಲಿನ ಹೊರೆ, ಸೌದೆ ಮೊದಲಾದು ವುಗಳನ್ನು ತೆಕ್ಕೆಯಲ್ಲಿ ಹಿಡಿಯುವ) ಒಂದು ಹಿಡಿತ ; ತಕ್ಕೆ : ಅವಳು ಒಂದು ತಬ್ಬು ಸೌದೆಯನ್ನು ತಂದು ಒಲೆಯ ಮುಂದೆ ಹಾಕಿದಳು (ಮಲೆನಾ. ೯೫). **ತರ್ಬು₃:** ೧. "ಪುಟ, ಲುಂಠ – ಸಂಶ್ಲೇಷಣೇ, ತರ್ಬಿನೊಳ್" (ಕಾಶಕ್ಕ. ೨೨೭). **ತಳಪು₂:** ೧. ಒಂದೊಂದು ಭಾವವಳವಡಲು ಸತಿಜನಕಂದು ಕೆಂದಾವರೆಯ ತಳಪುಗಳ ಸಾರರಸ ಸೂಸೆ ಮಂದ ಮಾರುತನು ಸೌಗಂಧ ಬಂಧುರವಿಡಿದು ಸಿಂಧುರಾಕೃತಿ ಗಮನದಿ (ಮರುಚ. ೪-೭೯).

ತಬ್ಬುಹಾಕು =ಅಪ್ಪಿಕೊಳ್ಳು; ತೆಕ್ಕೆಬೀಳಂ: ಚಿನ್ನಮ್ಮ ನಾಗಕ್ಕನನ್ನು ತೆಕ್ಕನೆ ತಬ್ಬುಹಾಕಿ ತನ್ನ ಮುಖವನ್ನು ಅವಳ ಎದೆಗೆ ಒತ್ತಿ, ಬಿಕ್ಕಿ ಬಿಕ್ಕಿ ಅಳತೊಡಗಿದಳು (ಮಲಿಮು. ೬೩೩). [ <ತಬ್ಬು₁ ]

**ತಟಿಕ್ಕೊಯ್, ತಳ್ಕೊಯ್₁** (ಕ್ರಿ). ೧. ಅಂಟಿಕೊಳ್ಳು ; ಅಂಟು ; ಹತ್ತಿರಂ : ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮಂ ತೊಯ್ದು ತಟಿಕ್ಕೊಯ್ದ ಜಡೆಯುಮಂ ಕಂಡು (ಪಂಪಭಾ. ೧-೧೦೫ ವ) ; ಎಳದಳಿರ ತುಱುಗಲೊಳ್ ನೆಱೆ ದಳದಳಿಪೆಳಮಾವಿನಳ್ಗೆಗೊಂಬಂ ತಟಿಕ್ಕೊಯ್ದೊಳಸಿ [ಟಿಲಿ]ದ ವಸಂತದೂತಿಯ ಮಿಳಿರ್ಪುಯ್ಯಲನಾಡುವಬಲೆ (ಕಾವ್ಯಾವ. ೨೪೨) ; ಚರಣಾಲಕ್ತಕಲಾಂಛನಂ ನಿಟಿಲದೊಳ್ . . . ಪುಷ್ಪರಜಃಪುಲೇಪ ಮುರದೊಳ್ ತಟಿಕ್ಕೊಯ್ಯೆ(ಕಾವ್ಯಸಾ. ೬೫೫). ೨. ಒಂದರೊಡನೊಂದಂ

ಸೇರು ; ಬೆರೆ: ಭೀಕರ ಶಾರ್ದೂಲ ಕುಲಂ ಕುರಂಗಕುಲದೊಳ್ ತಟಿಟ್ಪೊಯ್ದು ಬಂದಾಡೆ (ಆದಿಪು. ೯-೯೭); ಎಳನೀರುಂ ಶಶಿಕಾಂತ ಕಾಂತ ಜಲಮುಂ ತಟಿಟ್ಪೊಯ್ದು ಕೇಳೀವನಾವಳಿಗಂ ಶಾಳಿವನಾಳಿಗಂ ಪರಿಯೆ (ಶಾಂತಿಪು. ೨-೯೧); ಗುಣಮುಂ ರೂಪುಂ ವಿದ್ಯಾಗುಣಮುಂ ತಟಿಟ್ಪೊಯ್ದು ತನ್ನೊಳಿಸೆಯಲ್ (ಕಾದಂಪೂ. ೪೩೪). **ತಳ್ಪೊಯ್**$_1$ **:** ೧. ಪುಳ್ಳನನೆಸೆವ ಜಿನೇಂದ್ರಾಂಘ್ರಿ ಪಂಕೇಜ ಪೂಜೋತ್ಕರದೊಳ್ ತಳ್ಪೊಯ್ದಲಂಪುಳ್ಳನನನು ಕರಿಸಲ್ಮರ್ತ್ಯನಾವೊಂ ಸಮರ್ಥಂ (ಎಕ. II, ೩೪೫-೩೨ ; 1159).

[ ತಟ್$_1$ + ಪೊಯ್$_1$ ]

**ತಟ್ಬು** 'ತಟ್ಟು$_1$' ನೋ.

**ತಾ**$_1$ 'ತರ್' ಪರಾ.

**ತಾ**$_2$ 'ತಾನ್' ನೋ.

**ತಾಂ** 'ತಾನ್' ನೋ.

**ತಾಂಕು**$_1$, ತಾಂಗು$_1$, ತಾಕು$_1$, ತಾಗು$_1$ (ಕ್ರಿ). ತಾಪ$_1$ (ಭವಿಕ್ಕ). ೧. ಎದುರಿಸು ; ಮೇಲೆ ಬೀಳು ; ಆಕ್ರಮಣ ಮಾಡು : ನೂಂಕುವರ್ ತಾಂಕುವರ್ ಕುಟಿದಟಿಯ ಮಾಡಿ ಪೊಯ್ದಾಡುವರ್ . . . ಉಭಯ ಭಟರು (ಜಿಬಪು. ೨೪-೭). ೨. ಅಪ್ಪಳಿಸು ; ಹೊಡೆ ; ಬಡಿ ; ಡಿಕ್ಕಿ ಕೊಡು : ರಸೆಯಂ ತಾಂ ತಾಂಕಿ ಕಲ್ಪಾಂತದ ಬಟಸಿಡಿಲೆಯ್ತಂದು ಪೊಯ್ಯಲ್ ನೆಲಂ ಕಂಪಿಸುವಂತೆ (ಕಾದಂಪೂ. ೭೦೦). **ತಾಂಗು**$_1$**:** ೧. ಮತ್ಕರಿ ತಾಂಗಲ್ ತಾನೆ ಸಾಲ್ಗುಂ . . . ಎಂಬೊಂದು ರಣೋತ್ಸಾಹಂ ಮನಕ್ಕುಬ್ಬರಿಸೆ (ಆದಿಪು. ೧೪-೯೧) ; ಬಿಡು ತಂದುಗ್ರದ್ವಿಪಂ ಬಂದು ತಾಂಗುವುದೆಂಬಂದೆಳಮಾವಿನೊಳ್ ದ್ವಿಪಮ ಗೆತ್ತೀಂ ಸೊರ್ಕು ಸೈತಿರ್ಕುಮೇ (ಶಾಂತಿಪು. ೯-೧೧೨) ; ಕಟ್ಟಾಳ್ಗಳೆಟ್ಟಿಂದು ತೊಟ್ಟನೆ ತಾಂಗಲವರಂ ಕಂಡು (ನೇಮಿಪು. ೧೪-೮೪ ವ) ; ವಿಭೀಷಣನ ರಕ್ಕಸವಡೆಯದು ಪಗೆವಡೆಯಂ ಮುಂಗಡೆಯೊಳ್ ತಾಂಗೆ (ಅದ್ಭುತ. ೭೫-೬). ೨. "ತಾಂಗು—ಧಾರಣ, ಸಂಘಟ್ಟನಯೋಃ" (ಶಮಧಾ). ೩. ತಡೆದಂ ನಿಲ್ಲಿಸಂ ; ತಡೆಹಾಕಂ ; ತಡೆಹಿಡಿ : ನೀನೆನ್ನೊಡನಿರೆತ್ತಲುಂ ಪೋಗದಿರೆಂದು ತಾಂಗಿ (ವಡ್ಡಾರಾ. ೭೭-೩) ; ಅಂಗಪತಿ ನುಡಿದು ಕೊಲ್ಲದೆ ತಾಂ [ಪಾಠಾಂ. ಪಿಂ] ಗಿದನಂಬಿಕೆಗೆ ನುಡಿದ ನುಡಿ ನಿಲೆ ಮನದೊಳ್ (ಪಂಪಭಾ. ೧೧-೧೪೪); ಎಂದುದನೆಂದು ಕಾಲ್ವಿಡಿದಗಲ್ಕೆಗೆ ಬೆರ್ಚಿ ಲತಾಂಗಿ ತಾಂಗೆ ಮತ್ತೊಂದಿರುಳುಂ (ಮಲ್ಲಿಪು. ೩-೪೫) ; ಬಾಷ್ಪಜಲವೊತ್ತರಿಸೆ ಮೊದಲ್ ನಾಂದು ಬಿಣ್ಪುವೆತ್ತೆಮೆ ದೊಟಿಯಂ ಭರದಿಂ ತಾಂಗಿ (ವರ್ಧಪು. ೪-೮೫). ೪. ತಗುಲು; ಮುಟ್ಟು; ಸೋಕಂ;ಹಿಡಿ:ಆ ಬಾಳ್ ನಾಗವೇದಿಕೆಯಂ ತಾಂಗಿ ತೆತ್ತಿಸೆ ಮೇಗಂ ನೋಡಿ (ಪಂಚತಂ. ೧೯೫-೧೦) ; ಬಹು ರತ್ನಕಾಂತಿಗಳ್ ಪುದಿಯೆ ಲತಾಂಗಿ ತಾಂಗಿ ಲಲಿತಾಂಗುಳಿಯೊಳ್ ನಡೆ ನೋಡಿ (ಮಲ್ಲಿಪು. ೪-೭೪); ಪೆಗಲೊಳ್ ದಕ್ಷಿಣ ಹಸ್ತವೊಪ್ಪೆ ಸಸಿನಂ ವಾಮಂ ಕರಂ ತಾಂಗೆ[ಪಾಠಾಂ. ತಾಗೆ]ಗುಂಡಿಗೆಯಂ (ಅರ್ಧನೇ. ೧-೮೧). ೫. ಚುಚ್ಚು ; ನಾಟು ; ತಿವಿ: ಓವದೆ ತಾಂಗಿದ ನನೆಯ ಶರಂಗಳ ಗಟಿಗಳಿವೋ (ಜಯುಕಾ. ೪-೧೫).೬. ಸಹಿಸಂ ; ಸೈರಿಸು; ತಡೆದುಕೊಳ್ಳು; ತಾಳಿಕೊಳ್ಳು: "ತಾಂಗು–ಧಾರಣ, ಸಂಘಟ್ಟನಯೋಃ" (ಶಮಧಾ). ೭. ತಾಳಂ; ಹೊಂದು: ಕಟಂಗದು ಮೇಣ್ಪಾಸೆ ಮೊಲೆಯ ಮೊಗಮೆಂಳಗರ್ಪಂ ತಾಂಗದು ತೆಳ್ವಸಿಟಿನಿಸಂ ಪೊಂಗದು (ಅನಂಪು. ೪-೧೩೧). ೮. ಗಮನಿಸು; ತಿಳಿದುಕೊಳ್ಳು; ಗ್ರಹಿಸು: ವಿವಿಧಾತೋದ್ಯಲಯಾನುಬಂಧ ವಿಳಸಲ್ಲಾಸ್ಯಂ ತಗುಳ್ದಲ್ಲಿ ನಾಟ್ಯವಿದರ್ ತಾಂಗೆಯುಂ . . . ಇರ್ಮಡಿಸಿದಳ್ ನೃತ್ಯಶ್ರಮಸ್ವೇದವಮಂ (ಆದಿಪು. ೧೧-೧೯). ೯. ಆಧಾರ ಕೊಡಂ; ರಕ್ಷಿಸಂ; ಕಾಪಾಡಂ: ಮುನಿದು ಪೊಡವಿ ನುಂಗುವೊಡೆ ಮನೆ ತಾಂಗು[ಪಾಠಾಂ. ತಾಗು]ವುದೆ (ಹಡಕಾ. ೨-೩೧); ಅಂತು ದಾರ್ಶನಿಕರ್ ಮೆಯ್ಯುಂ ತಾಂಗುಗುಂ ಸಾಧನಂಗಳಿಂ ದುಃಖದುಯ್ಲಂ ದಾಂಟಲೆಂದೇ ಸ್ನೇಹದಿಂದಮಲ್ಲಮಂತದು (ಸೌನಂದ. ೧೪-೧೭); ತತ್ತರಿಸಿ ಬೀಳ್ವನಂ ತಾಂಗದಿರೆ ಸೌಮಿತ್ರಿ ಚ ರ ಣ ಘಾ ತ ಕೆ ಚಿರಂ ಪೊರ್ದುತಿರ್ದನೋ ಏನೋ ಪಂಚತ್ವಮಂ (ಶ್ರೀರಾಮಾ. ೬೧೮-೧೮೭). ೧೦. ತಂಗುಂವಂತೆ ಮಾಡು ; (ಮೇಯಲು) ಬಿಡು : ಪ ಸು ರ್ವು ಲ್ಲೊ ಳ್ ತಾಂಗಿ ಕಾಳಿಂದಿಯೊಳ್ ತಿಳಿನೀರೂಡಿ ಮುರಾರಿ ವತ್ಸಕುಲಮಂ ಕಾದಂ (ಜಗವಿ. ೩-೭೦). **ತಾಕು**$_1$**:** ೧. ಕಟಿತೊಟಿಯ ತಡಿಯಲಿ ವಿಹರಿಸುವ ಜೈನಮುನಿ ಕುಲವ ನೆಟಿ ತಾಕುತಿರೆ ಹೊಯ್ಲಿನ ಬಿಟುಸಿನಲಿ (ಬಸಪು. ೫೨-೧೧) ; ಏಕೆ ನಿಮಗೀ ಚಿಂತೆ ವೈರಿಯು ತಾಕುವನು ಕೊಡು ವೀಳೆಯುವ (ಕುವ್ಯಾದ್ರೋ. ೬೧೫. ಪರಿ. ೨೭೭) ; ಇವನ ಸಮೀಪ ತಾಕುವ ಭಟರ ನಿನ್ನಲಿ ಕಾಣೆ (ತೊರರಾ. ೭-೮-೯). ೪. ಹೊಗರು ಮೊಗಕೆ ಪೆಣ್ಗಳ ದಿಟ್ಟಿ ತಾಕದೊಲ್ತೆಗೆದ ಕತ್ತುರಿರೇಖೆಯಂತೆ (ಕಂನವಿ. ೯-೧೧೪) ; ಹಾಯುವವರಿಗೆ ಆ ಕಿಟ್ಟಿನ ಜಳವು ಸಹ ತಾಕುವುದಿಲ್ಲ (ಕನ್ನಜಾ. ೧೦). ೫. ಎಲವೊ ನಿನ್ನಂಬು ತಾಕಿದ ರಳುಕುವೆನೆ (ಕುವ್ಯಾದ್ರೋ. ೫-೫೭) ; ಕಾಲೊಳು ಮೂಡಿದ ದಸಿಮುಳ್ಳುಗಳು ತಾಕಿ ಸೀಳಿದ ಮೈಗಾಯದಿಂದ (ಕಂನವಿ. ೧೧-೫೦). ೧೧. ಬಾಧಿಸು; ನೋಯಿಂಸು ; ಹಿಂಸೆಮಾಡು : ಕಾಮನ ಬಲ್ಲೆಹದ ಬಲುಗಾಯ ತಾಕಿತು [ಪಾಠಾಂ. ತಾಗಿತು]ಬಲ್ಲೆ ನೀನೌಷಧಿಯ (ಕುವ್ಯಾವಿ. ೨-೧೯). ೧೨. ಸೇರಂ ; ಕೂಡು : ವಸುದೇವನ ರೂಪಿನ ಗಾಡಿಗೆಳಸಿ ತತ್ಕಾಮಿನಿಯರ್ ತಾಂಗಲ್ಕೆ ನೆರೆಯದಿರೆ (ಮಹಾನೇ. ೪-೫೨). **ತಾಗು**$_1$ **:** ೧. ಪರಿದೆಯ್ದೆ ತಾಗಿದಂ ಭಾಸುರತರ ರಘುಕುಲಲಲಾಮ ಲಕ್ಷ್ಮೀಧರನೊಳ್(ಕವಿರಾ.೨-೯೧); ಎಮ್ಮೂರ ಮಿನುಕಿ ಎಡೆಯೊಳ್ವಾಗಿ ತ[ಟ್ಟಿ]ಟಿದು ಸಗ್ಗಮೇಟಿದಂ (ಸೌಇಇ. IX-i, ೪-೮ : ೨ನೆಯ ಶತ); ತನ್ನ ಮಕ್ಕಳ ನೆಗಟ್ದಾ ಸಂಗ್ರಾಮದೊಳ್ ಸತ್ತುದುಮೆನೆ ಮನದೊಳ್ ತಾಳ್ದಿ ತಾಪಾಗಳ್ [ಪಾಠಾಂ. ಕಾಯ್ದಾಗಳ್] (ಪಂಪಭಾ.೧೨-೧೮) ; ಪೊಯ್ಕಲೋಡಿಪೋಗುವುದಲ್ಲದೆ ತಾಗಿ ತಳ್ತಿಟಿಯಲಟಿಯೆವು (ಪಂಚತಂ. ೨೦೭-೫). ೨. "ತಾ[ಪಾಠಾಂ. ತಾಂ]ಗೆಂದು ಸಂಘಟ್ಟನಾರ್ಥ" (ಕಬ್ಬಿಕೈ. ೫೭); ಕಲಿ ಮಾರ್ಕೊಳ್ಳದೆ ಕೊಟ್ಟು ಮೆಯ್ಯೊಳ್ ಸಿಡಿಲ್ ತಾಪಂತೆವೋಲ್ ತಾಗೆ (ಪಂಪಭಾ. ೧೦-೭೬); ಪೆಣ್ದುಂಬಿಗಳ ಬಳಗಮನೊಳಕೊಂಡ ಲತಾಮಂಟಪಂಗಳೊಳಂ ತಳರೆ ತಾಗುವ ತೆರೆದುಟುಗಲ ಲೆಪದಿಂ ಸೂಸಿ (ಕಾದಂಉ. ೫೨೬); ಗರ್ವಪರ್ವತಾರೂಢನಾಗಿ ಪರ್ವತಮಂ ತಾಗೆ (ಪಂಚತಂ. ೬೭-೧೦) ;ಕಲ್ಲಂ ತಾಗಿದ ಪುಳ್ಳಿಯಂತೆ ನುಚ್ಚುನುಟಿ ಮಾಡಿ (ಧರ್ಮಾಮೃ. ೭-೯೫) ; ಸಂಗನ ಶರಣರ ಕಂಡು ಉದಾಸೀನವ ಮಾಡಿದಡೆ ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ (ಬಸವ. ೦೯೪) ; ಆಗರದೊಳು ರಸದಾಳಿ ತೆಂಗಾಳಿಯಿಂ ತಾಗಲೊಂದಟಿೊಳೊಂದು ಹಳಚಿ ಮೇಗೊಲ್ಗಳೊಡೆದಿನಿರಸದ ಪರಿಯೊಳಿಕ್ಷುಸಾಗರ ತುಂಬಿದಂತಾಯ್ತು (ಮೋಹತ. ೨-೪೮). ೩. "ತಾಗಿದಂ ತಡೆದನೆನಲ್ಕೆ" (ಕರ್ಣಾನಿ. ೭೭) ; ಅಡವಿಯೊಳ್ ಕಳ್ಳರ್ ಬಟ್ಟೆಗಟ್ಟಿ ಹಾದಿಯನಿರುಳು ತಾಗಿದೊಡೆ (ವಡ್ಡಾರಾ. ೭೭-೧೩) ; ಪುಳಕಪ್ರೋದ್ಭೇದ ಘರ್ಮೋದಕ ವಿಸರಮನೊತ್ತಂಬದಿಂ ತಾಗೆಯುಂ (ಆದಿಪು. ೪-೨೧); ಪೋಗದಿರೆಂದು ತಾಗಿ ರಥಮಂ ಸೆಡೆದುಳ್ಕದೆ ಪತ್ತಿ ಮುತ್ತಿ (ಧರ್ಮಾಮೃ. ೧೩-೧೪೭). ೪. ಪರಸ್ತ್ರೀಯರಂ ಕೊಳಿಪಂ ಕೊಳ್ವನೆನಿಪ್ಪ ಪಾಪಿಯುಮತಿ ಕ್ರೂರಾತ್ಮನುಂ ಸಾಧುಸಂಕುಳಮಂ ಕಂಡೊಡೆ ಕಾಯ್ವನುಂ ಪಟಿವನುಂ . . . ಘುಳುಮ್ಮನಿಟಿಗುಂ ಶ್ವಭ್ರಾಂತಮಂ ತಾಪಿನಂ (ಆದಿಪು. ೫-೮೧); ಕೀರ್ತ್ಯಂಗನೆ . . . ಅನಿಲ ಮಾರ್ಗಂಬರಂ ಪರ್ಬಿದಳ್ ದಿಗ್ವನಿತಾಸಂದೋಹಮಂ ತಾಪಿನಮಡಿಯಿಡುವಳ್(ಗದಾಯು.೧೦-೧೧);ನಿರ್ದಯದಿಂ ಪೀಡಿಸಿ ಬಳ್ಕುವೋಪಿನೆಗಮೆಲ್ಲಂ ತಾಪಿನಂ ಮೇಗೆ ಮೂಗಿಯ ಮೂಗಂ ತಲೆವಾರ ಕೊಯ್ದು (ಸುಕುಮಾ. ೭-೨೯) ; ಅಡಿ ನೆಲನಂ ತಾಗದಂತೋವಿ ನಡೆನಡೆದು (ಸಿದ್ಧರಾ. ೧-೩೬) : ಪತಿ ಬಿಟುಸಿನಲಿ ಹೊಯ್ಲು ಹೊಡೆಗಳು ಸತಿಯ ಮೇಲಣುಮಾತ್ರದನಿತುಂ ತಾಗವೆಂತೆನಲು (ಬಸಪು. ೫೨-೯) ;

ವಸುಧೆಯುಮರರ ಶಾಪ ತಾಗಿರೆ (ಸಂಭಪ. ೫-೭೦). ೫. ಪಾಯ್ವ ಕೂರಂಬುಗಳಿಲ್ಲಿರೆ ತಾಗುಗುಮೆಂದು . . . ಅಡಂಗಿದುವು ತಾರಗೆಗಳ್ (ವರ್ಧಪು. ೮-೩೬) ; ಕೊರ್ಬಿ ಬೆಳೆದ ಪೆರ್ಬಿದಿರ ತುದಿ ತಾಗಿ ಪಱಿದ ಕಿಱು ಮುಗಿಲ್ಗಳಿಂದ (ಗಿರಿಕ. ೧-೧೨೮ ವ) ; ತಾಗಿದೆಳೆಮುಳ್ಳಿನಲಿ ಮದಗಜ ಸೀಗುರಿಸುವುದೇ (ಕುವ್ಯಾಅ. ೧೦-೫೧) ; ಕೂರಲಗು ಬಿಡದೊಡಲ ತಾಗಿತು ಬಿದ್ದುದುರದಲಿ ವೈಶ್ಯ ಮುನಿವರನ (ತೊರರಾ. ೨-೫-೧೨); ಬಾಣ ತಾಗಿದ ಹರಿಣಗಳೆಂಬವೊಲು ಪಂಚ ಬಾಣ ಥಟ್ಟುಗಿದು ಬಿದ್ದಿಹರು (ಮೋಹತ. ೨೪-೨೧). ೧೧. ಮಡದಿಮಕ್ಕಳ ಕಣ್ಣ ನೀರಿನ್ನಾರ ತಾಗುವುದು (ಕುವ್ಯಾಸ. ೬೭೩. ೧-೧೦೪). ೧೩. ಪೆಟ್ಟು ಹೊಂದು ; ಏಟು ತಿನ್ನು : ತಾಗಿದ ಮತ್ತೆ ಬಾಗುವರೆಂಬುದನೆಲ್ಲರೂ ಬಲ್ಲರು (ಮೋಳಿಮಾ. ೬೭-೨೭೧) : ತಲೆ ತಾಗಿದಲ್ಲದೆ ಬುದ್ಧಿ ಬಾರದು (ಗಾದೆ). ೧೪. ಹೊಯ್ದಾಡು ; ಜೋಲಿಹೊಡೆ ; ಮುಗ್ಗರಿಸು: ಕಣ್ಣೀರ ಪೂರದಗುರ್ವಿಂ ದೆಸೆಗಾಣದಂದೆಡಪುತಂ ತಾಗುತ್ತಂ (ಕಾದಂಪೂ. ೯೦೪) ; ಮುಂಗಾಣದೆಡಹುತ್ತ ತಾಗುತ್ತ ಬೀಳುತೇಳುತ್ತೊಱಲುತೊಡವರ್ಪ ಪರಿವಾರಮಂ ಕಂಡು (ಹಜಕಾ. ೯-೨೦). ೧೫. ದಟ್ಟವಾಗು ; ಸಂದಣಿಸು : ಬನ್ನಿ ಪಾದ್ರಿಯು ಬಾನೆ ತಿಂತ್ರಿಣಿ ಮತ್ತೆ ಬಿಲ್ವ ತಾಗಿ ಮೆರೆದವರಣ್ಯದಿ (ಗೋಹಾಡು. ೧-೪). ೧೬. ಉಂಟಾಗು; ಒದಗು: ತಾಗುವ ದಾಯಮಂ ತಡೆವ (ದಶಕು. ೮-೮೮) ; ರಾಜನ ದೂತರಿಗೂ ಅವನಿಗೂ ಯಾವುದೋ ಒಂದು ವಿಷಯದಲ್ಲಿ ಜಗಳ ತಾಗಿಬಂದಿತು (ದಕಜ. ೧೭). ೧೭. ಇಳಿದಂಕೊಳ್ ; ತಂಗು : ಜಗವಿದ್ದಲ್ಲಿ ತಾಗಬೇಕು (ಗಾದೆ).

**ತಾಕಗೊಡು** = ಮುಟ್ಟಗೊಡು ; ಸ್ಪರ್ಶಿಸಲು ಬಿಡು : (ಕ). **ತಾಕಲಾಟ**=ಘರ್ಷಣೆ: ತಿಕ್ಕಾಟ ತಾಕಲಾಟ ಮನುಷ್ಯನ ಜೀವನದುದ್ದಕ್ಕೂ ಸಾಗಬೇಕಾದುದೆ (ಗಾಳಿಗು. ೬೨) ; ಜೀವನವನ್ನು ಶಾಂತಿಯಿಂದ ಸಾಗಿಸುವ ಇಚ್ಛೆಯಿಂದ ಈ ತಾಕಲಾಟವನ್ನು ಕಂಡೂ ಕಾಣದಂತೆ ಉದಾಸೀನ ಮಾಡುತ್ತಾನೆ (ಶೀಪ್ರಶ್ನೆ. IV ಮುನ್ನುಡಿ) ; ತಲೆ ತುಂಬ ಭಾವನೆಗಳ ತಾಕಲಾಟ (ಶೀಮೋಡ. ೯೫) ; ಇಂಥ ಹುಚ್ಚುಗೊಂದಲದ ಮನಸ್ಥಿತಿಯಲ್ಲಿ ಎರಡು ವಿರುದ್ಧ ಭಾವನೆಗಳ ತೀಕ್ಷ್ಣ ತಾಕಲಾಟ ಸುರುವಾಗಿತ್ತು (ಮುಕ್ತಿ. ೩೯). **ತಾಕಲಾಡು** = ೧. ಒಂದರೊಡನೊಂದು ಘರ್ಷಿಸು ; ಒಂದುಕ್ಕೊಂದು ತಿಕ್ಕಾಡು : 'ದಾಹ'ದ ಕೊನೆಯಲ್ಲಿ ಸಂಕಲ್ಪ – ವಿಕಲ್ಪ ತಾಕಲಾಡಿವೆ (ನೆಲಮು. VIII ನಾಲ್ಕುಮಾತು) ; ಬಿರುಗಾಳಿಯ ವೇಗಕ್ಕೆ ಮೋಡಗಳು ತಾಕಲಾಡಿ ಮಾಡುವ ಗುಡುಗಿನ ಆರ್ಭಟವು ಆಟಂಬಾಂಬದ ಸಪ್ಪಳಕ್ಕಿಂತ ಸಾಸಿರಾರುಪಟ್ಟು ಮಿಗಿಲಾಗಿತ್ತು (ಜೀವಪ್ರ. ೧); ಕೌಟುಂಬಿಕ ಪ್ರೀತಿಯು ಅವನ ಈ ನವೀನ ವೃತ್ತಿಯೊಡನೆ ತಾಕಲಾಡಿತು (ಸಮಜೀ. ೬೬೪). ೨. ಹೊಯ್ದಾಡು : ಇದೇ ಚಿಂತೆಯಲ್ಲಿ ತಾಕಲಾಡುತ್ತಾ ಎದ್ದು ಹೊರಟ (ಮುರುಕು. ೧೫). **ತಾಗಲಿಕ್ಕು**=ನೋಯುವಂತೆ ಹೊಡೆ,–ಬಡಿ: ಪೂಸರಳಿಂದೆ ಶಿವನ ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯು ಕೊಟ್ಟ ಮನ್ಮಥ (ಮೋಹತ. ೫-೬೦). **ತಾಗಿಬಾಗು**=ಪೆಟ್ಟುತಿಂದು ಬಾಗು; ಅನುಭವದಿಂದ ಪಾಠಕಲಿ: ಅಂತು ತಾಗಿಬಾಗಿದಂತಾಗಿ ಗಂಧರ್ವಂ ಕೊಂತಿವೆರಸಱುವರುಮಂ ತನ್ನ ಬೀಡಿಂಗೊಡಗೊಂಡೊಯ್ದುತಿಪ್ರೀತಿಯಿಂ ಬಿರ್ದನಿಕ್ಕಿ (ಪಂಪಭಾ. ೩-೩೪ ವ) : ವಿನೀತನಾಗಿಯುಂ ತಾಗಿಬಾಗಿಯುಂ ನೋಡಿದೊಡರಸಂ ಕರುಣಿಸಿ (ಶಾಂತಿಪು. ೯-೮೩ ವ) ; ವಸುಭೂತಿ ಕೇಳ್ದು ತಾಗಿಬಾಗಿದನಂತೆ ಮುನ್ನಿನ ದರ್ಪಂಗೆಟ್ಟು . . . ಮನದೊಳ್ ನಿರ್ಮಳನಾಗಿ (ಧರ್ಮಾಮೃ. ೧-೨೦೬) ; ಹೋಗಲಿನ್ನಾ ಮಾತು ಖೂಳರು ತಾಗಿಬಾಗರು (ಕುವ್ಯಾದ್ರೋ. ೦-೧೦). [ದೇ.॥ ತಮಿ. ತಾಙ್ಕು, ತಾಕ್ಕು; ಮಲ. ತಾಕ್ಕು; ತುಳು. ತಾಕು, ತಾಗು ; ತೆಲು. ತಾಕು ]

**ತಾಂಕು$_{2}$, ತಾಂಗು$_{2}$, ತಾಕು$_{2}$, ತಾಗು$_{3}$** (ನಾ). ೧. ಮುಟ್ಟುವಿಕೆ ; ಸ್ಪರ್ಶ : ಸೊಗಸಿನ ಗೋಪುರಂಗಳು ಕಾಲುಗುರುದಾಂಕಿ[ಪಾಠಾಂ. ಕಾಲುಗರದಾಗಿ]ನಲಿ ಸಿಡಿಲೊಡದದ್ರಿಯಂದದಲಿ ಧೂಳಿಗೆದಱಿದವು (ತೊರರಾ. ೬-೧೦-೨೬). **ತಾಂಗು$_{2}$** : ೧. ಸೂಟ್ವಡೆದ ಕೂಟಂ ಪಲ್ಲಟಂ ಬಾಯ್ವಬಾಯ್ಮುಱುಕಂ ತಾಂಗಿಗಟಿಲ್ವ ನಾಣಿಲಿತನಂ (ಚಂದ್ರಪು. ೮-೬೮). ೨. ನೆಲೆ; ಆಧಾರ ; ಆಸರೆ : ಬೆಳಗುವ ಮಣಿಮುಕುರಂಗಳುಂ ಅವಕ್ಕೆ ತಾಂಗಾಗಿ [ಪಾಠಾಂ. ಪಾಂಗಾಗಿ]ಪಚ್ಚೆಯ . . . ನೆಲವಡಲಗೆಯ ಜಾಗಂಗಳುಂ (ಆದಿಪು. ೮-೧೫ ವ) ; ಪಂಪನದೇ ಆದ ಈ ಭಾವನೆಯ ತಾಂಗನ್ನು ಹಿಡಿದುಕೊಳ್ಳಬೇಕು (ನಾಡೋಜ. ೧೨೮). 'ಕೈತಾಂಗು' ಪರಾ. **ತಾಕು$_{2}$**: ೩. ಜಮೀನಿನ ಭಾಗ,–ತುಂಡು ; ಭೂಮಿಯ ಸೀಳು : ಹೆಗ್ಗಡೆ ಹಳಿಯ ತಾಕಿನ ಗದ್ದೆ ಹಂನ್ನೊಂದ ಖಂಡುಗ (ಎಕ. XIV, ಗುಂಡ್ಲುಪೇ. ೧೨೮-೮೦ ; 1410) ; ಅವರ ಒಂದು ತಾಕು ಗದ್ದೆ ಸ್ವಲ್ಪ ಹಳ್ಳದಲ್ಲಿದೆ (ನಮ್ಮೂರ. ೧೮) ; ಕೆರೆ ಹಿಂದೆ ನಿನ್ನದು ಭತ್ತದ ತಾಕು ಇದೆಯಲ್ಲ (ಚಂದತೋ. ೩೯) ; ಆರಿಸಿಕೊಂಡ ಜಮೀನನ್ನು ತಾಕುಗಳಾಗಿ ವಿಭಾಗಿಸಬೇಕು (ತರಬೆ. ೨). 'ಅಡ್ಡತಾಕು$_{2}$' ಪರಾ. ೪. ಗುರಿ: ಮನ್ಮಥನು ಆ ಕಮಲಾಕ್ಷಿಯೆರ್ದೆಯನೆಸುವಾಟಕೆ ತಾಕು ಮಾಡಿದನು (ಕುರಾಸಾಂ. ೨೨-೭) ; ರಾಖೇಂದುಮುಖಿಯರೊತ್ತುವ ಯಂತ್ರವಾರಿಗೆ ತಾಕುಮಾಳ್ಪನು ತನ್ನ ತನುವ (ಚಂಪ್ರಸಾಂ. ೩೦-೧೬). ೫. ಜಗಳ ; ಕಾದಾಟ : ಏಕಪತ್ನೀವ್ರತವಾದರೆ ಇಂದಿಗೆ ನೀರೆ ತಾಕು ಹೋಯ್ರ್ಗಾಟ ತೋರೆ (ಶ್ರೀಕೃಪಾ. ೮೩). ೬. ತಾಕಲಾಟ: ನಸುಜೋಲ್ದೆಳಗಿವಿಯನಲೆವ ಪಚ್ಚೆಯ ಮಾಂಗಾಯ ತಾಕಿನೊಳ್ ಮಸುಳಿಸುವೆರಡುಂ ಮೆಲ್ಗದಂಪುಗಳೊಳಿಟ್ಟ ಕತ್ತುರಿಯ ದಿಟ್ಟಿಬೊಟ್ಟುಂ (ಚಕವಂ. ೬೫). ೭. ಹೊಡೆತ ; ಪೆಟ್ಟು : ಭಾಕರತುರಗಖುರಂಗಳ ತಾಕಿನೊಳೊಡನೆಳ್ದ ಸಾಲಧೂಳಿವೊಲೆಸಗುಂ (ಚಂದ್ರಭು. ೨-೮೩). ೮. ಸೇರಿಕೊಂಡುದು ; ಲೀನವಾದುದು: ತಾಕು ಆದೆನು ಬೆಳಗಿದಡವಿಲಿ ಮೂಕತನ ಹೊಂದಿದುದು ಧೈರ್ಯಕೆ (ಜ್ಞಾನಸಿಂ. ೪೫-೩೮). ೯. [ಸಂಗೀತ] ಸ್ವರಮೇಳ : ನಂದಿ ಷಣ್ಮುಖರು ಮದ್ದಳೆ ಬಾರಿಸಿ . . . ಸಿದ್ಧಾದೇವಿ ತಾಕ ಕೇಳಿಸಿ . . . ಶಿವನನ್ನು ಒಲಿಸಿದರು (ಶರಜ. ೭೩). **ತಾಗು$_{3}$** : ೭. ನಡೆವಾಗ ನುಡಿವಾಗ ಲಸಿಕೆಗಳಲಿ ತಾಗುಗಳಲೆಡಹುಗಳಲೆಚ್ಚಱಿಕೆಯಲಿ . . . ರಘುಕುಲಸಾಗರನ ನೆನಹಲ್ಲದಿಲ್ಲನ್ಯತ್ರವೀ ಸತಿಗೆ (ತೊರರಾ. ೫-೩-೪೪). ೧೦. ಸಹವಾಸ ; ಜೊತೆ ; ಸಂಪರ್ಕ : ಅಂಕೆಗೆ ಝಂಕೆಗೆ ತಾಗುತೆಱಹಿಲ್ಲದಹಂಕಾರ ಮಮಕಾರಕೆಡೆಗೊಡದ (ಶಿವಗೀ. ೬೧೧) ; ಕಾಗೆಯ ಗುಂಪಿನೋಳ್ ಕೋಗಿಲೆ ಸಿಲುಕಿರ್ದ ಹಾಗೆ ದನುಜಸ್ತ್ರೀರ ತಾಗಿಲಿ ನೀಗಿಹಳು (ಹನುಮ. ೫೩-೪). ೧೧. ದೋಷ ; ಅಪರಾಧ : ಅಕ್ಕಱಿಂದಂ ಸಾಕಲಾಗಿ . . . ಮೇಲುತಾಗಂ ನೋಡದುಕ್ಕುಸೊಕ್ಕಿಂ ಬೆಳೆದು ಜವ್ವನಂಬಡೆದು ಜೂದುಂಗಾಱನಾದೆಯಲ್ಲ (ಸಮ್ಯಕಾ. ೧೦-೮) ; ತಪ್ಪಿಲ್ಲ ತಾಗಿಲ್ಲ ಜಿನಶರಣೀ ಕಾವ್ಯವೊಪ್ಪುತಿರಲಿ ಸರ್ವಕಾಲ (ಭರಜ. ೭-೬೬) ; ತಾಗಿಲ್ಲ ತಪ್ಪುತಡೆಯಿಲ್ಲ ಲಿಂಗಕ್ಕೆ ದೇಗುಲವೆ ಇಲ್ಲ (ಸರ್ವಜ್ಞ. ೧೫೭) ; ಅಪ್ಪ ನಮ್ಮವ್ವನ ತಪ್ಪೇನು ತಾಗೇನು ತಪ್ಪಿಲದವಳ ಹೊಡಿಬ್ಯಾಡಿ (ಜಗೀತೆ. ೧೧೦). ೧೨. ಅಡ್ಡಿ ; ಆತಂಕ : ತಾಗು ನಿರೋಧದ ಆಗುಹೋಗನಱಿಯದ ಶರಣನ ಚರಿತ್ರವ ನೋಡಿ ಬೆಱಗಾದೆನಯ್ಯಾ (ಬಸವ. ೯೦೨) ; ಆಗುಹೋಗಿಲ್ಲದನ ರಾಗ ಭೋಗಕೆ ತಂದು ತಾಗು ನಿರೋಧಕ್ಕೆ ಗುರಿಯ ಮಾಡಿ (ಶಿವಗೀ. ೬೩೮); ತಾಗು ನಿರೋಧ ಬಂದಲ್ಲಿ ಕಂದದೆ ಕುಂದದೆ ಎಂದಿನಂತಿರ್ದಲ್ಲಿ ಶಿವಲಿಂಗ ಪೂಜೆ (ಸರ್ವವ. ೬೨-೩೨೯). ೧೩. ಬಾಗುವಿಕೆ ; ಮಣಿಯುವಿಕೆ ; ನಮ್ರತೆ : (ಕ).

**ತಾಕುತಾಕು** (ದ್ವಿರುಕ್ತಿ) : ಬಿಂದಿಯ ತೆಗೆದು ಕೌಂಕುಳೊಳಿಟ್ಟು ನಿಟಿಲದೊಳೊಂದಿದ ತ್ರ್ಯಪುಂಡ್ರ ದ್ವಿಜರು ಬಂದಿದೆ ತಾಕುತಾಕಲಿ ತಿದ್ದಿ ಕಳುಹುವೊಡೆಂದಿಗುಂ ತೀರದೆಂಬಂತೆ (ಮೋಹತ. ೨೨-೫೦) ; ರಾಜಕಾರ್ಯದ ಸುದ್ದಿ ತಾಕುತಾಕಿನಲಿ ಮಹಾರಾಜ ನಿಮ್ಮಡಿಗೆ ಬಿನ್ನೈಪೆ (ಸೌಂದಕಾ. ೪-೦೧).

**ತಾಗುತಡ** = ಅಡ್ಡಿ ; ತೊಂದರೆ : ಯಿೂ ತಾವಿಗೆ ಒಳಗೆ ಬಂದು ಹೊರ ಗನ್ನರು ತಾಗು ತ[ಡ]ವ ಮಾಟದರೆ ನಾವು ಪರಿಹರಿಸಿ ಬಾಳಿಸಿ ಕೊಡುವೆವು (ಸೌಇಇ. IX-ii, ೪೯೦-೨೩ ; 1465). **ತಾಗುಬಾಗು** = ೧. ವಿನೋದ ಮತ್ತು ವಿನಯ (?) : ತಾಗುಬಾಗಿನ ಹವಣನಾತನ ಲಾಗ ನೋಡುವೆ ವೆನಲು ಕುರುಕುಲಸಾಗರಾಗ್ನಿಯ ಮನೆಗೆ ಬಂದನು ವಿದುರ ಹರಿ ಬೆಸಸೆ (ಕುವ್ಯಾಉ. ೮-೨೫); ಆಗುಹೋಗೆಂಬುದನು ತನುವಿನ ತಾಗುಬಾಗೆಂಬುದನು ಕಾಣದ . . . ಸಾಕ್ಷಿಯೊಳಿರ್ದಂ (ನಿಭಾಗ. ೫-೪-೩೩). ೨. ಆಗುಹೋಗು (?): ಈಗ ಕಲಿಯೊಳು ಬಂದು ಕಟ್ಟುವ ತಾಗುಬಾಗನು ತಿಳುಹಿ ಪೋಪೆವು (ಕಾಲಸಂ. ೩೮-೧೯) ; ಒಸೆದು ಮುಂದಣ ತಾಗುಬಾಗಿನ ಸ ಸಿ ನ ವ ನು ಹೇಳಿದನು (ತೊರಠಾ. ೩-೨-೪೯) ; ರಾಗಲೋಭದಿ ಮುಣಾಗಿ ಮುಂದಣ ತಾಗುಬಾಗುಗಳನಟಿಯೆ (ಹರಿಸಾಂ. ೫೫). [ <ತಾಂಕು₁ ]

**ತಾಂಗು₁** 'ತಾಂಕು₁' ನೋ.

**ತಾಂಗು₂** 'ತಾಂಕು₂' ನೋ.

**ತಾಂಗುಕಂಭ** (ನಾ). ಊರೆಗಂಬ; ಆಧಾರಸ್ತಂಭ: ಬಲ್ಬಿಲ್ಲದಾದ ಬೀಳ್ವೆಲ್ಗೆ ತಾಂಗುಕಂಭಂಬೊಲ್ (ಸೌನಂದ. ೧೪-೧೫).

[ ತಾಂಗು₂ (<ತಾಂಕು₂) + ಕಂಭ ]

**ತಾಂಟಿಸು**, ತಾಟಿಸು, ದಾಂಟಿಸು₂ (ಕ್ರಿ). ೧. ಎಳೆ ; ಸೆಳೆ; ಮಿಡಿ : ಬಿಲ್ಲ ನಾರಿಯಂ ತಾಂಟಿಸಿ ನೋಳ್ಪ ಬೇವಸದೊಳಿರ್ದುದು ಪಳ್ಳಿಯ ಭಿಲ್ಲಸಂಕುಳಂ (ದಶಕು. ೨-೧೨೦). ೨. ಗುಣಿಸು; ಗುಣಾಕಾರವಮಾಡು: ತೀವಿ ಪೊಯ್, ಪೆರ್ಚಿಸು . . . ತಾಂಟಿಸು . . . ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೧೧-೯). **ತಾಟಿಸು : ೨.** ಇಟು, ತಿವಿ, ತಾಟಿಸು (ವ್ಯವಹಾ. ಗುಣಿಸುವ ಭಾಷೆಗಳು). ೩. ಅಪ್ಪಳಿಸು; ಘಟ್ಟಿಸು: ಶಿಲೆಯೊಳ್ ತಾಟಿಸಿ ತನ್ನಯ ತಲೆಯಂ (ಆದಿಪು. ೫-೧೭); ಶಿಲೆಯೊಳ್ ತಲೆಯ ತಾಟಿಸಿ ಸತ್ತು ವರಾಹನಾದೊಂ (ಜಾವುಂಪು. ೩೭-೨೦): ಜಾತಿಸ್ಮರನಾಗಿ ಪಶ್ಚಾತ್ತಾಪದಿಂ ಪಿರಿದಪ್ಪ ಸಿಲೆಯಿಂ ತಲೆಯಂ ತಾಟಿಸಿ (ಪುಣ್ಯಾಸ್ರ. ೬-೬೩ ವ). ೪. ಹೊಡೆ ; ಬಡಿ ; ಬಾರಿಸು : ಭರದಿಂದಂ ದಂಡದೊಳ್ ತಾಟಿಸಿದೊಡೆ ವಿಜಯಾರ್ಧಾಚಳಂ ತೊಟ್ಟನಾಗಳ್ ಬಿರಿದತ್ತೆಂಬಂತುಂ (ಆದಿಪು. ೧೩-೫೭) ; ಪಲತೆಱದ ಪಱೆಗಳಂ ಪೊಯ್ಸಿಯುಂ ಶಂಖಂಗಳಂ ಪೂರೈಸಿಯುಂ ಭೇರಿಗಳಂ ತಾಟಿಸಿಯುಂ (ಗದಾಯು. ೭-೧ ವ); ಕರಯುಗದಿ ನೆರೆದು ಕಲ್ಲಂ ಪಿಡಿದೊಯ್ಯನೆ ಕಾ[ತಾ]ಟಿಸಿ ನೋಡಲೊಡಂ (ಸಮಪು. ೧ ಅನುಬಂಧ. ೩೫೮-೭) ; ಸೂಟಿಕೈಸುವ ನಿಸ್ಸಾಳದ ತಾಟಿಸುವ ತಂಬಟದ (ಕಬ್ಬಿ ಕಾ. ೨೫೦) ; ಪಿರಿದೊಱಲುತಲುತಂ ತಲೆಗಳಂ ತಾಟಿಸಿಕೊಳುತ (ಬಸವು. ೫೮-೧೫) ; ತಾಟಿಸಿದರೊಡನೊಡನೆ ಕುಲಗಿರಿ ದೂಟಿ ಬಿದ್ದವು (ಕುವ್ಯಾಭೀ. ೪-೨೫) ; ತಿಳಿವಿಂದಳಿಯದೀ ಯೋಗಾಂಗವಿಧಿಯಿಂ ತಲೆಯ ತಾಟಿಸಿಕೊಂಡರಹುದೇ (ಸದ್ಗುರು. ೬-೧೨) ; ಕೈಕಾಲ್ಗಳುಂ ಸರಿನಿಲ್ವಿಂ ನಿಲಲಾರದಂತೆ ನಡುಗಲ್ಕೋಷ್ಠಾಧರಂ ತಾಟಿಸಲ್ (ಮೈಸೂಮ. ೫-೧೮೨). ೫. ತಾಕಿಸು ; ಮುಟ್ಟಿಸು ; ಸೋಕಿಸು : ನವಕೋಟಿ ಮುನಿಗಳ ಮಲ್ಲಡಿಗೆ ತಾಟಿಸಿ ಹಣೆಯ (ನೇಮಿಸಂ. ೧-೨೦). ೬. ಹೊಡೆಯಿಸು ; ಬಡಿಯಿಸು : ಶರಧಿಯೇಳಂ ಕುಡಿವರಾಕಾಶವಮಂ ಭೂಮಿಯಂ ಪಿಡಿದು ತಾಟಿಸುವರು (ಗುರುಬಾ. ೨-೭೧) ; ತ್ರಾಣವಿದ್ದವನ ಸಂಗಡ ಹೋಗಿ ತಾಟಿಸಿಕೊಂಡ (ಗಾದೆ). ೭. ತಗುಲು ; ಮುಟ್ಟು : ಕಾಂತೆಯ ಸುಯ್ಯ ಗಂಧಕಿಂಪಿಡಿದಲರ್ಜೊಂಪ ತಾಟಿಪಳಿಮಾಲೆ (ಉದ್ಭಟ. ೯-೭೪). **ದಾಂಟಿಸು₂:** ೨. ಗುಣಿಸುತೂಹದಿಂ ದಾಂಟಿಸು . . . ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೧೧-೯). [ತಾಂಟು + – ಇಸು₃]

**ತಾಂಟು**, ತಾಟು₁, ದಾಂಟು₂ (ಕ್ರಿ). ೧. ತಾಗು ; ಬಡಿ : ರಘುರಾಮನ ಬಂಟರಂ ತಾಂಟಲ್ ಬಗೆವ ದಿಟ್ಟೆಯರಂ ಪುಟ್ಟಿಸಿದ ಗಾಂಪಿನ ಬಿದಿಯೆ (ರಾಮಾಶ್ವ. ೧೨೦-೨೨). ೨. [ಗಣಿತ] ಗುಣಾಕಾರ ಮಾಡು ; ಗುಣಿಸು. 'ತಾಂಟಿಸು' ಪರಾ. **ತಾಟು₁ :** ೧. "ತಾಟು = ಸಂಘಟ್ಟನೇ" (ಶಮದ): ತಾಟಲಾಟಿಸುತೆಂತುರ್ಕಿಂ ಪಿಂಚುಗುಂ ತಗರಂತೆ ನೀಂ ಕಾಮಭೋಗಕ್ಕಾಟ ಸುತಂ ಬ್ರಹ್ಮಚರ್ಯಮನಾಂತಪಯ್ (ಸೌನಂದ. ೧೧-೨೫). ೩. ತಗುಲು; ಸೋಕು : ಅದಿರ್ಗಂತಿಯಂ ತಾಟಿ ಮಾಲತಿಯಂ ಮುಟ್ಟಿ . . . ಬನಗಾಳಿ ತಣ್ಣನೆ ತೀಡುಗುಂ (ರಾಮಾಶ್ವ. ೫೪-೧). ೪. ತಡೆದು ನಿಲ್ಲು ; ಕುಂಠಿತವಾಗು: ತಾಟಿತಸು ಕಂಠದಲುಸುರ ಪರಿಪಾಟಿ ತಪ್ಪಿತು (ಕುವ್ಯಾಗ. ೭-೧೨). **ದಾಂಟು₂ :** ೨. ಬಳಸೊತ್ತು ಹತಂ ತೀವಿ ನೂಂಕು ಕೂಂಕು ದಾಂಟರು ಮತ್ತಾದರದೆ ಪೊಯಿ ಗುಣಿಸು ಪೆರ್ಚಿಸೆನಲಿವು ಗುಣಾಕಾರ ಭಾಷೆಗಳ್ (ವ್ಯವಹಾ. ೧೧-೧೨). [ ದೇ. ॥ ತುಳು. ತಾಂಟು ]

**ತಾಂಡ** (ನಾ). ಗುಂಪು ; ಸಮೂಹ : ಮುರಾರಿ ಮಾರನಾಗಿ ಗುದುರೆಯ ಪಾಯಿಸಿ ತಾಣ್ಡಯನಿಱಿದು (ಎಕ. III, ನಂಜನ. ೧೨೨-೧೫ ; 266 ? ಕೃಶಾ): ತಲೆಯಿಲ್ಲದ ಮೋಟನಾದ ಬ್ರಹ್ಮನ ಸತಿ ಮೂಕೊರತಿಯಾದಳೆಂದು ಮರುಳು ತಾಂಡಗಳು ನೋಡಿ ನಗುತ (ಭೈರಸೂ. ೩೮೯).

[ <ತಂಡ ]

**ತಾಂಡವ** (ನಾ). ೧. [ನಾಟ್ಯ] ಶಿವನ (ಮತ್ತು ಅವನ ಗಣಗಳ) ಉಗ್ರವಾದ ಒಂದು ಬಗೆಯ ನೃತ್ಯ : ತಾಂಡವಂ ಕುಣಿವ ಭೈರವ ಭುಜಾದಂಡಸಮ ಬಾಹುಶಾಖೆಯ ತಳಿರಿನುಯ್ಯಾಲೆಯಂ ಏರಿ (ಶ್ರೀರಾಮಾ. ೨೫೮-೭೯೯). ೨. [ನಾಟ್ಯ] ಶಿವನ ತಾಂಡವದ ಅಭಿನಯದ ರೀತಿಯನ್ನು ಅನುಕರಿಸುವ ಒಂದು ಬಗೆಯ ನೃತ್ಯ : "ಚತುರಂ ತಾಳವಿಭೇದ ತಾಂಡವ . . . ರೂಪಕಮೆನಿಕ್ಕುಂ" (ಮಂಗರಾ. ೨೪-೬) ; ತಾಂಡವವಮನಾಡಲುದ್ಯೋಗಂಗೆಯ್ದು (ಆದಿಪು. ೭-೧೧೪ ವ): ಪದ ವಿನ್ಯಾಸದಿನೆಯ್ದೆ ಕಂಪಿಸೆ . . . ಅಂಭೋಧಿ ಕಲಂಕಿದತ್ತೆನಿಸಿತ್ತೇನುಚ್ಚಂಡ ಮೋ ತಾಂಡವಂ (ಪುಷ್ಪಪು. ೧೨-೩೭). ೩. (ಆಲಂ) ದಿಕ್ಕೆಟ್ಟ ಕುಣಿತ : ನಾಳೆಯ ರಣಾಂಗಣದೊಳ್ ನಾಡೆ ನೋಡುವಿರ್ ಮರುಳ್ವಡೆಯೊಡಗೂಡೆ ತಾಂಡವಮನಾಡುವ ರಾವಣನಟ್ಟೆಯಾಟಮಂ (ಪಂರಾಮಾ. ೧೦-೩೩೩) ; ೪. ಒಬ್ಬ ಮುನಿಯ ಹೆಸರು : ನಿಮ್ಮಯ್ಯಂ ತಾಂಡವನನೇನೆಂದು ಕೊಂದನೊ ! (ರಾಮಾಶ್ವ. ೪೭-೨೭). [ ಸಂ. ]

**ತಾಂಡವಗೈ** (ಕ್ರಿ). ತಾಂಡವನೃತ್ಯವನ್ನು ಮಾಡು : ತಾಂಡವಗೈಯುವ ಭೈರವ ನಾನು . . . ವಿಲಯದ ವಿಪ್ಲವ ಮೂರ್ತಿಯು ನಾನು (ಪಾಂಚಜ. ೧೮-೧೫). [ ತಾಂಡವ + ಗೈ (<ಕೆಯ್₁) ]

**ತಾಂಡವನೃತ್ಯ** (ನಾ). = ತಾಂಡವ ೧ : ಶಿವನ ತಾಂಡವನೃತ್ಯದಲ್ಲಿ ವಿಶ್ವ ತಾಂಡವವನ್ನು ಕಾಣುತ್ತಾರೆ (ಭಾರದ. ೫೪೯) ; ಗಜಾನನನು ತಾಂಡವ ನೃತ್ಯಕ್ಕೆ ಮೊದಲಿಟ್ಟನು (ಶಾಂತಲಾ. ೨೫೪).

[ ತಾಂಡವ + ನೃತ್ಯ ]

**ತಾಂಡವಪ್ರೌಢಿ** (ನಾ). ತಾಂಡವನೃತ್ಯದಲ್ಲಿ ಪ್ರಾವೀಣ್ಯ,–ಪ್ರೌಢಿಮೆ : ದಿವಿಜರಾಜಂ ಸೂಸಿದಂ ಕಲ್ಪವಲ್ಲೀಪುಷ್ಪಾಂಜಳಿಯಂ ಸಭಾಸದರ್ಗೆ ತೋಱಲ್ ತಾಂಡವಪ್ರೌಢಿಯಂ (ಮಲ್ಲಿಪು. ೧೩-೩೪).

[ ತಾಂಡವ+ಪ್ರೌಢಿ ]

**ತಾಂಡವವಾಡು** (ಕ್ರಿ). ೧. ತಾಂಡವನೃತ್ಯವನ್ನು ಮಾಡು : ಶಿವನು . . . ಲೋಕದಲ್ಲಿ ಶಾಂತಿ ಸ್ಥಾಪಿಸಲು ತಾಂಡವವಾಡುತ್ತಾನೆ (ಭಾರದ. ೫೪೯). ೨. (ಆಲಂ) ಸ್ವಚ್ಛಂದವಾಗಿ ನಡೆ,– ಕಾಣು : ದೇಶದಲ್ಲಿ ಅರಾಜಕತೆ ಅಶಾಂತಿಗಳು ತಾಂಡವವಾಡತೊಡಗಿದವು (ಕೃದೇವ. ೬) ; ಸಾರ್ವಜನಿಕ ಕರ್ತವ್ಯವೊಂದನ್ನು ನೆರವೇರಿಸುತ್ತಿದ್ದೇವೆಂಬ ತೃಪ್ತಿಯ ಮನೋಭಾವನೆ ಅವರ ಮುಖದ ಮೇಲೆ ತಾಂಡವವಾಡುತ್ತಿತ್ತು (ಪುನರು. ೨೪). [ ತಾಂಡವ + ಆಡು₁ ]

**ತಾಂಡವಾಡು** (ಕ್ರಿ). = ತಾಂಡವವಾಡು ೨: ಪ್ರಕೃತಿಯ ರಮ್ಯತೆಯು ತಾಂಡವಾಡುತ್ತಿರುವ ಈ ಪ್ರದೇಶವು ಸಂನ್ಯಾಸಿಗಳ ಏಕಾಗ್ರಚಿತ್ತತೆಗೂ, ಅಧ್ಯಯನಕ್ಕೂ ಬಹು ಪ್ರಶಸ್ತವಾಗಿತ್ತು (ಭಾರದ. ೪೯೬) ; ದಾರಿದ್ರ್ಯದೇವತೆ ಆ ಮನೆಯಲ್ಲಿ ತಾಂಡವಾಡಹತ್ತಿದಳು (ಮುಗಿಮ. ೬).
[ < ತಾಂಡವವಾಡು ]

**ತಾಂಡವಾಳ** 'ತಂಡವಾಳ' ನೋ.

**ತಾಂಡವಿಸು** (ಕ್ರಿ). ನರ್ತಿಸು ; ಕುಣಿ ; ತೊನೆ : ದಂಡೆಯಲ್ಲಿ ಮುಡಿಸಿರುವ ಪತ್ರಮಂ ಕಂಡೋದಿಕೊಂಡು ಮಂಡೆಯಂ ಬಾಗಿ ಮಹೋಲ್ಲಾಸದಿಂ ತಾಂಡವಿಸುತ್ತಿರಲಾ ಸಮಯದೊಳ್ (ಸೌಗಂಧಿ. ೧೨೩-೯) ; ದರ್ಪದಿಂದ ಹೆಡೆ ಸೆಡೆಯುತ ತಾಂಡವಿಸಿತು ಸರ್ಪ (ಸೂರ್ಯಪಾ. ೨೯-೩೦).
[ ತಾಂಡವ + – ಇಸು$_3$ ]

**ತಾಂಡವೇಶ್ವರ** (ನಾ). ನೃತ್ಯವನ್ನು ಮಾಡುತ್ತಿರುವ ಶಿವ ; ನಟರಾಜ : ಜಾಲಂದ್ರ ಬಾಗಿಲೂ ಅದರ ಮೇಲೆ ಗಜಲಕ್ಷ್ಮಿ, ತಾಂಡವೇಶ್ವರ, ಬ್ರಹ್ಮ, ವಿಷ್ಣುಗಳೂ ಅದರ ಮೇಲಿನ ತೊಲೆಯಲ್ಲಿ ಮಾಣಿಕಣ್ಣನ ಶಾಸನವೂ ಕಂಡು ಬರುತ್ತವೆ (ಹೊಯ್ಸಾವಾ. ೭೪). [ ತಾಂಡವ + ಈಶ್ವರ ]

**ತಾಂಡಸ** 'ತಂಡಸ$_2$' ನೋ.

**ತಾಂಡೀರ** (ನಾ). ಒಂದು ಬಗೆಯ ಮರ: " ಉಗ್ರಕಾಂತಾ – ತಾಂಡೀರ " (ಓಷಧಿ. ೧೬). [ ? ]

**ತಾಂಡೆ** (ನಾ). ೧. ಹಟ್ಟಿ ; ಸಣ್ಣ ಹಳ್ಳಿ ; ಪಾಳ್ಯ : ಕಯಿವಣ ತಾಂಡೆಯ ಮಕ್ಕಿಯಲಿ ಮಾಡಿದ ಧರ್ಮದೊಳಗೆ (ಸೌಇಇ. IX-ii, ೪೧೯-೧೦; 1380); ಆ ದಿನ ರಾತ್ರಿ ಹಮ್ಮಾರ ಸರೋವರದ ಹತ್ತಿರ ವಸತಿ ಹಾಕಿದೆವು. ಅದೊಂದು ಸಣ್ಣ ತಾಂಡೆ (ಮೇದಿವು. ೧೮೬) ; ದಾರಿಯಲ್ಲಿ ಗಿರಿಜನರ ತಾಂಡೆಗಳು (ಸ್ಮೃತಿಚ. ೪೦) ; ಯಾರಿದ್ದಾರೆ ಈ ತಾಂಡೇದಾಗ (ಬಾಬಲ. ೦೧೯). ೨. ಲಂಬಾಣಿಗಳ ವಾಸಸ್ಥಾನ : ತಾಂಡೆಯಿಂದಲಿ ಬರುವ ಲಂಬಾಣಿ ಹೆಂಗಸರ . . . ಉಡುಪುತೊಡಪೇನು (ಭಾವಜೀ. ೩೦).
[ ← ಮರಾ. ತಾಂಡಾ ]

**ತಾಂತ$_1$** (ಗು). ೧. ಆಯಾಸ ಹೊಂದಿದ ; ದಣಿದ. ೨. ಚಟುವಟಿಕೆಯಿಲ್ಲದ ; ಬಳಲಿಕೆಯಿಂದ ಬಲಹೀನವಾದ. ೩. ಸೊರಗಿರುವ ; ಬಾಡಿಹೋಗಿರುವ. [ ಸಂ. ]

**ತಾಂತ$_2$** (ನಾ). ತಕಾರದಿಂದ ಮುಗಿಯುವ ಶಬ್ದ : ತಾಂತಕ್ಕೆ . . . ಒತ್ತು (ಶಮುಧಾ). [ ತ$_1$ + ಅಂತ$_2$ ]

**ತಾಂತ್ರಿಕ** (ಗು). ೧. ತಂತ್ರಶಾಸ್ತ್ರಕ್ಕೆ ಸಂಬಂಧಪಟ್ಟ : ತಾಂತ್ರಿಕ, ವೈದಿಕವೆಂಬೆರಡು ಪೂಜಾಭೇದಂಗಳಂ (ವಿವೇಕ. ೧೦೩). ೨. ವೈಜ್ಞಾನಿಕ ಪ್ರಯೋಗಗಳಿಗೆ ಸಂಬಂಧಿಸಿದ; ಯಾವುದಾದರೂ ಕಲೆ, ವಿಜ್ಞಾನ, ಕೈಗಾರಿಕೆ ಮೊದಲಾದುವುಗಳಿಗೆ ಸಂಬಂಧಿಸಿದ : ಜೀವನದ ಎಲ್ಲ ಕ್ಷೇತ್ರಗಳಲ್ಲೂ ವಿಜ್ಞಾನದ ಪ್ರಭಾವ ಬಿದ್ದು ಬಾಳು ತಾಂತ್ರಿಕ ತಳಹದಿಯ ಮೇಲೆ ಸಾಗುತ್ತಿದೆ (ಶಿಕ್ಷದ. ೪೬೮) ; ವ್ಯಕ್ತಿ ಕೊಡುವ ವಿವರಣೆಯಿಂದ ಆ ಅಂಶಗಳನ್ನು ನಿರ್ಧರಿಸುವುದು ಬಹು ಸಂಕೀರ್ಣವೂ ತಾಂತ್ರಿಕವೂ ಆದ ಕೌಶಲ್ಯ (ಶಿಕ್ಷದ. ೬೩೪). ೩. ಪಾರಿಭಾಷಿಕ ; ಯಾವುದಾದರೂ ಕ್ರಮ ನಿಯಮಗಳಿಗೆ ಸಂಬಂಧಿಸಿದ. (ನಾ). ೪. ತಂತ್ರಶಾಸ್ತ್ರವನ್ನು ಬಲ್ಲವನು ; ತಂತ್ರಶಾಸ್ತ್ರಜ್ಞ : ಗಾರುಡವಾದಿ ತಾಂತ್ರಿಕರೂ ತವೆ ನಿವೃತ್ಯಾದಿಗಳ ತತ್ವಂಗಳಲಿ ತಾವಿರುತಿಹರು ಶಾಕ್ತರು (ಗಗತಾ. ೮-೬೬) ; ತಾಂತ್ರಿಕರು, ಮಾಂತ್ರಿಕರು, ಜ್ಯೋತಿಷಿಗಳನ್ನು ಮತ್ತೆ ಮತ್ತೆ ಬರಮಾಡಿಕೊಂಡು . . . ಚರ್ಚಿಸುತ್ತಿದ್ದಳು (ಅಶ್ರುಮ. ೬೭) ; ವೈದಿಕ, ಆಗಮ, ತಂತ್ರಗಳಲ್ಲಿ ಪ್ರವೀಣನೇ 'ತಾಂತ್ರಿಕ'ನು (ತುಳುನಾ. ೧೪೩). ೫. ವಿದ್ವಾಂಸ; ಕೋವಿದ ; ಪರಿಣತ. [ ಸಂ. ]

**ತಾಂತ್ರಿಕಬೌದ್ಧಧರ್ಮ** (ನಾ). ಬೌದ್ಧಧರ್ಮದ ಒಂದು ಉಪಶಾಖೆ : ತಾಂತ್ರಿಕಬೌದ್ಧಧರ್ಮ ಪ್ರಚಾರಕ್ಕೆ ಬಂದುದೂ, ಪ್ರತಿಯೊಬ್ಬ ಬೋಧಿಸತ್ವನಿಗೂ ಹೆಂಡತಿಯುಂಟಾದುದು ಶಕ್ತಿಪಂಥದ ಪ್ರಭಾವದಿಂದಲೇ (ಭಾರದ. ೩೦೩). [ ತಾಂತ್ರಿಕ + ಬೌದ್ಧಧರ್ಮ ]

**ತಾಂತ್ರಿಕಮತ** (ನಾ). ತಂತ್ರಶಾಸ್ತ್ರವನ್ನು ಅನುಸರಿಸುವ ಮತ : ಪ್ರಾಚೀನಭಾರತದಲ್ಲಿ ಮೂರ್ತಿಶಿಲ್ಪವು ಬೆಳೆದು ಬರಲು ಅನೇಕ ಕಾರಣಗಳಿದ್ದವು . . . ತಾಂತ್ರಿಕಮತದ ಬೆಳವಣಿಗೆ ; ಧನಿಕರೂ ರಾಜರುಗಳೂ ಪ್ರತಿಮಾನಿರ್ಮಾಣಕ್ಕೆ ಇತ್ತ ಬೆಂಬಲ (ಭಾರದ. ೩೧೧).
[ ತಾಂತ್ರಿಕ + ಮತ ]

**ತಾಂತ್ರಿಕವಿಗ್ರಹ** (ನಾ). ತಾಂತ್ರಿಕ ಸಂಪ್ರದಾಯದಂತೆ ನಿರ್ಮಿಸಿದ ಪ್ರತಿಮೆ: ನೃತ್ಯಗಣಪತಿ, ಕುಬೇರನ ಪ್ರತಿಮೆಗಳಲ್ಲಿ ಹಾಸ್ಯವನ್ನೂ ತಾಂತ್ರಿಕ ವಿಗ್ರಹಗಳಲ್ಲಿ ವೀರವನ್ನೂ . . . ಶಿಲ್ಪಿ ಪ್ರತಿಪಾದಿಸುತ್ತಾನೆ (ಭಾರದ. ೩೨೦). [ ತಾಂತ್ರಿಕ + ವಿಗ್ರಹ ]

**ತಾಂತ್ರಿಕವಿಜ್ಞಾನ** (ನಾ). ಯಂತ್ರಶಾಸ್ತ್ರ ; ಔದ್ಯೋಗಿಕ ವಿಜ್ಞಾನ : ದ್ವಿಬಿಂದು ವರ್ಗೀಕರಣ ಪದ್ಧತಿಯಂತೆ . . . ಅನುವರ್ಗಸೂಚಿಯ ಶೀರ್ಷಿಕೆಗಳು ಮತ್ತು ಸಂಕೇತಲಿಪಿ ಇಂತಿದೆ: ೨ ಗ್ರಂಥಾಲಯ ವಿಜ್ಞಾನ . . . ತಾಂತ್ರಿಕವಿಜ್ಞಾನ (ಗ್ರಂಥಾಲ. ೩೦).
[ ತಾಂತ್ರಿಕ + ವಿಜ್ಞಾನ ]

**ತಾಂತ್ರಿಕಶಿಕ್ಷಣ** (ನಾ). (ಒಂದು ವೃತ್ತಿಗೆ ಸಂಬಂಧಿಸಿದ) ವಿಶಿಷ್ಟ ತಂತ್ರಗಳನ್ನು ತಿಳಿಸುವ ಶಿಕ್ಷಣ : "ತಾಂತ್ರಿಕ ಶಿಕ್ಷಣ; ಔದ್ಯೋಗಿಕ ಶಿಕ್ಷಣ" (Technical education. ಪತ್ರಿನಿ. ೮೧).
[ ತಾಂತ್ರಿಕ + ಶಿಕ್ಷಣ ]

**ತಾಂತ್ರಿಕಾಗಮ** (ನಾ). ಶೈವಾಗಮದ ಒಂದು ಪ್ರಭೇದ : ಶೈವಾಗಮದಲ್ಲಿ . . . ವಾತುಳಾಗಮ ಅಥವಾ ತಾಂತ್ರಿಕಾಗಮ ಮತ್ತು 'ವೀರಶೈವಾಗಮ' ಎಂದು ನಾಲ್ಕು ಒಳಭೇದಗಳಿವೆ (ಭಾರದ. ೭೪).
[ ತಾಂತ್ರಿಕ + ಆಗಮ ]

**ತಾಂದನಿತಾನೊ** 'ತಂದಾನತಾನ' ನೋ.

**ತಾಂದಿಕಲ್** (ನಾ). ಒಂದು ಸ್ಥಳದ ಹೆಸರು: ತಾನ್ದಿಕಲ್ಲ ತೊಱುಗೊಳೆ ತೊಱುವನಿಕ್ಕಿಸಿ ಸತ್ತ (ಎಕ. X, ಮುಳಬಾ. ೨೬೨-೧ ; 852?). 'ತನದೆಕಲ್' ಪರಾ. [ ? ]

**ತಾಂದ್ರಿಕಸನ್ನಿಪಾತ** (ನಾ). ಒಂದು ಬಗೆಯ ಸನ್ನಿಪಾತ: ಬಹಳವಾದ ತೂಕಡಿಕೆಯುಂಟಾಗಿ ಅಧಿಕವಾದ ಬಳಲಿಕೆಯಾಗಿ ವಿಶೇಷಜ್ವರವೂ ಉಂಟಾಗಿ ಕೆಮ್ಮು, ಬಾಯಾರಿಕೆಯು, ಮೈನೋವು, ನಾಲಗೆಯು ಕಪ್ಪಾಗಿ ಬಿರುಸುದೋರಿ ಮುಳ್ಳುಮುಳ್ಳಾಗಿಹುದು, ಅತಿಸಾರ, ಶ್ವಾಸ . . . ಉಂಟಾಗಿ ಕಿವಿ ಕೇಳಿಸದೆ ಕೊರಳಲ್ಲಿ ನೋವು ಮೈಯಲ್ಲಿ ತೀಟೆ ಮುಂತಾದ ಲಕ್ಷಣಗಳುಳ್ಳುದೆ ತಾಂದ್ರಿಕಸನ್ನಿಪಾತವೆಂದರಿವುದು (ಸಕವೈ. ೦೩೬).
[ ಸಂ. (ತಾಂದ್ರಿಕ + ಸನ್ನಿಪಾತ) ]

**ತಾಂಪೆ** (ನಾ). ಒಂದು ಊರಿನ ಹೆಸರು (?): ಕುನ್ದತೂರ ತುಱುಗೊಳೊ ಳಾನ್ನಿಱಿದು ಸತ್ತೊ ತಾಂಪೆಯ ಪಿಗಳಂ (ಎಕ.X, ಮುಳಬಾ. ೨೪೪-೪; ಸು. 890). [ ? ]

**ತಾಂಬಟಗಾರ**(ನಾ). ಕಂಚುಗಾರ: ಪಾತ್ರೆಗಳನ್ನು ಮಾರುವವರಿಗೆ ತಾಂಬಟಗಾರರೆನ್ನುವರು (ಕಥಾಗ. ೯೯). 'ತಂಬಟಿಗ' ಪರಾ.
[ ←ಮರಾ. ತಾಂಬಟಕರ್ ]

**ತಾಂಬರ** 'ತಾಂಬ್ರ' ನೋ.

**ತಾಂಬಸಿ** (ನಾ). ಒಂದು ಬಗೆಯ ಮರ ; ಚಿತ್ರೋಡಿ ಮರ ; ಉದುರೆ ಮರ : (೬). [ ? ]

**ತಾಂಬಾಣ,** ತಂಬಾಳ, ತಂಬಾಳೆ, ತಾಂಬಾಳ, ತಾಂಬಾಳೆ, ತಾಬಂಡಿ, ತಾಬಾಣ (ನಾ). ಹಿತ್ತಾಳೆ ಮೊದಲಾದ ಲೋಹದಿಂದ ತಯಾರಿಸಿದ ತಟ್ಟೆ : ಗೌಡ ಎಲೆ ಅಡಿಕೆಯ ತಾಂಬಾಣ ನನ್ನ ಮುಂದಿರಿಸಿದ (ಮ್ಯಾಲಿಮಾ. ೨೭). **ತಂಬಾಳ :** ಅರಮನೆಯ ಮರ್ಯಾದೆಯ ತಂಬಾಳ ಬಂದಿತು (ಸಪತಿ. ೩೫). **ತಂಬಾಳೆ :** ಮನೆಯ ಅನೇಕ ಭಾಗಗಳಲ್ಲಿ ನೀರು ಸೋರಿ ಸೋರಿ, ಅಲ್ಲಲ್ಲಿ ತಂಬಾಳೆ ಬೋಗುಣಿ ಮಡಿಕೆಗಳನ್ನಿಟ್ಟು ನೀರು ಹಿಡಿದು, ಅದು ಹರಿಯದಂತೆ ಮಾಡಬೇಕಾಗಿ ಬಂದಿತ್ತು (ಮಲಮ.೬೪೪). **ತಾಂಬಾಳ:** ಶ್ರೀಕೃಷ್ಣ ತುಂಬ ಗೌರವದಿಂದ ಹೊನ್ನ ತಾಂಬಾಳದಲಿ ನಾರದರ ಪಾದಗಳ ತನ್ನ ಕೈಯಿಂದಲೇ ತೊಳೆದು (ನವರಾ. III, ೨೯-೪): ಎರಡು ತಾಂಬಾಳದಲ್ಲಿ ಸುತ್ತುವೀಳ್ಯ . . . ಬೇಗನೆ ಅಣಿಮಾಡು (ಚಿಕರಾ. ೧೩೯). **ತಾಂಬಾಳೆ :** ಅವ್ವೋಯ್ಯನು ಬಿಸಿನೀರನ್ನೂ ಒಂದು ಅಗಲವಾದ ತಾಂಬಾಳೆಯನ್ನೂ ತಂದರು (ಚಿಂಗಾಳ್ಯ. ೧೨೫). **ತಾಬಂಡಿ :** ಪಕ್ಕದ ತಾಬಂಡಿಯಲ್ಲಿ ಅವಳು ಮಾಡಿದ ಬಿಸಿರೊಟ್ಟಿಗಳ ಸಾಲು (ಗಂಗಾಗೌ. ೧೨೦) ; “ಸಜ್ಜಕ – ಬಾನಿಗೆ” ಹಾಲು ಇಲ್ಲದೆ ಊಟದ ತಾಬಂಡಿಯನ್ನು ಬಸವಂತಿಯ ಮುಂದೆ ಇಡುತ್ತಿರಲಿಲ್ಲವೆಂದು ಗೋವಿಂದಭಟ್ಟನ ವರದಿ (ದೀಪಹ. II, ೧೪೬). **ತಾಬಾಣ :** ಸಲೆಮಂಚ ಸುಪ್ಪತ್ತಿಗಿ, ಗಿಂಡಿಬಟ್ಟಲು ತಳಿಗಿ ತಾಬಾಣ ತಂಗಿಗಿತ್ತ (ಕರ್ನಾಕ. ೨೮೨) ; ಸಂಧ್ಯಾವಂದನೆಗೆಂದು ಇರಿಸಿದ ತಾಬಾಣದಲ್ಲಿ ನೀರು ಸುರುವಿಬಿಡುತ್ತಾರೆ (ಸ್ಮೃತಿಚಿ. ೨೮) ; ಆಕೆ ಮೊದಲೇ ತಾಬಾಣದಲ್ಲಿ ತೆಗೆದಿಟ್ಟವುಗಳನ್ನು ಗಂಡನ ಎದುರಿಗಿಟ್ಟು ಒಳಗೆ ನಡೆದಳು (ಗುರುಪ್ರ. ೬೩). [ ←ಮರಾ. ತಾಮವಾಣ, ತಾಮ್ಹಣ, ತಾಮ್ಹನ ]

**ತಾಂಬಾಳ** ‘ತಾಂಬಾಣ’ ನೋ.

**ತಾಂಬಾಳೆ** ‘ತಾಂಬಾಣ’ ನೋ.

**ತಾಂಬುಲ** ‘ತಂಬುಲ’ ನೋ.

**ತಾಂಬುಳ** ‘ತಂಬುಲ’ ನೋ.

**ತಾಂಬೂಲ,** ತಾಂಬೂಳ (ನಾ). ೧. ಅಡಕೆ : “ತಾಂಬೂಲಂ, ಕ್ರಮುಕಂ – ಈ ೨ ತಂಬುಲಂ” (ಹಲಾಯು. ೯೦-೩೯೧). ೨. ವೀಳೆಯದೆಲೆ. ‘ತಾಂಬೂಲವಲ್ಲಿ’ ಪರಾ. ೩. ಅಡಕೆ, ಸುಣ್ಣ ಮುಂತಾದವುಗಳ ಸಹಿತವಾದ ವೀಳೆಯದೆಲೆ ; ವೀಳೆಯ : ಬಿಟ್ಟಪ್ಪನರಸ ಕೈಗುಡು ನೀಂ ಬೇಗಮೆನಿಪ್ಪ ತೆಱದೆ ತಾಂಬೂಲಮಿಳಿತಮುಂ ಕಾಂತೆ ನೀಡಿದಳ್ನಿಜ ಕರಮಂ (ಕಾದಂಉ. ೫೭) ; ಕೆಲರ್ವರ್ಕುಳದಿಂ ತಾಂಬೂಲದಿಂದಂ ಕೆಲರ್ ಕೆಲರೊಪ್ಪಿರ್ದ ಸುವರ್ಣಪುಷ್ಪಚಯದಿಂ . . . ಪೂಜಿಸಿ ಜಿನಾಧೀಶಾಂಘ್ರಿ ಪದ್ಮಂಗಳಂ (ಧರ್ಮಾಮ್ಮ. ೫-೨೩೨) ; ತ್ರಿಕರಣಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯಾ ನೀನು (ಮಹಾದೇ. ಬ. ೧೨-೯) : ಈ ದೇವಿಯ ಬಾಯ ಮಿಸುಪ ತಾಂಬೂಲದ ಕಂಪಂ ಕೊಡಿಸುವೆನು (ಜಯಸಾ. ೨-೧೬); ಊಟ ತೀರಿಸಿ, ತಾಂಬೂಲದ ತಟ್ಟೆಗೆ ಕೈಹಾಕುತ್ತೇವೆ (ರೂಪಸಂ. ೧೩). ೪. ತಾಂಬೂಲವನ್ನು ಸಿದ್ಧಪಡಿಸುವವನು : ಚೆನ್ನಾಗಿ ಹೊಲಿವುತಿಹ ಚಿಪ್ಪಿಗರು ಚಿತ್ರಕರು ತೇಲಿಗರು ತಾಂಬೂಲರು (ನವಮೋ. ೨-೪೭). **ತಾಂಬೂಳ:** ೩. ಅಗುರು ಧೂಪಾಮೋದದಿಂ ಸಾರತಾಂಬೂಳಾಸ್ವಾದದಿಂ . . . ರಯ್ಯಮೆನಿಸಿತ್ತುರ್ವೀಶಶಯ್ಯಾಗೃಹಂ (ಪುಷ್ಪಪು. ೯-೯೭).

**ತಾಂಬೂಲ ಕೊಡು** = ೧. ತಾಂಬೂಲವನ್ನು ನೀಡು : ಊಟವಾದ ಮೇಲೆ ತಾಂಬೂಲ ಕೊಟ್ಟರು (ರೂಢಿ). ೨. ಮರ್ಯಾದೆ ತೋರಿಸು : ಮನೆಗೆ ಹಿರಿಯರು ಬಂದರೆ ತಾಂಬೂಲ ಕೊಡುವುದು ಪದ್ಧತಿ (ರೂಢಿ). **ತಾಂಬೂಲ ಮಾಡು** = ವೀಳೆಯವನ್ನು ಸೇವಿಸು ; ತಾಂಬೂಲವನ್ನು ಹಾಕಿಕೊಳ್ಳು: ದೊರೆಗಳ ಸಭೆಯಲ್ಲಿಯೂ, ವಿದ್ವಜ್ಜನ ಮಧ್ಯದಲ್ಲಿಯೂ ತಾಂಬೂಲಮಾಡದೇ ಇರುವವನೇ ಎರಡುಕಾಲಿನ ಪಶುವೆನಿಸಿಕೊಂಬನು (ಸಕವ್ಯ. ೫೨). [ ಸಂ. ]

**ತಾಂಬೂಲಕರಂಕ** (ನಾ). ತಾಂಬೂಲವನ್ನು ಹಾಕಿಡುವ ಕರಂಡ,- ಸಂಪುಟ: ವಿರಾಮಸಮಯದೊಳ್ ತಾಂಬೂಲಕರಂಕವಾಹಿಕಾದ್ವಿತೀಯ ನುತ್ತುಂಗಸೌಧಶಿಖರನಿರ್ಯೂಹಪರ್ಯಂಕದೊಳ್ ಕುಳ್ಳಿರ್ದು (ಚಂದ್ರಪು. ೨-೨೬ ವ). [ ತಾಂಬೂಲ + ಕರಂಕ ]

**ತಾಂಬೂಲಕರಂಕವಾಹಕ** (ನಾ). ತಾಂಬೂಲದ ಕರಂಡವನ್ನು ಹಿಡಿದಿರುವ ಸೇವಕ ; ತಂಬುಲಿಗ : ತಾಂಬೂಲಕರಂಕವಾಹಕಪ್ರದೀಯಮಾನ ವೀಟಿಕಾಗ್ರಹಣಲೀಲಾಸಕೃತ್ಪ್ರಸಾರಿತ ವಾಮಪಾಣಿಪಲ್ಲವನುಂ (ಚಂದ್ರಪು. ೮-೮೨ ವ). [ ತಾಂಬೂಲಕರಂಕ + ವಾಹಕ ]

**ತಾಂಬೂಲಕರಂಕವಾಹಿನಿ** (ನಾ). ತಾಂಬೂಲದ ಕರಂಡವನ್ನು ಹಿಡಿದಿರುವ ದಾಸಿ : ಆಕೆಯ ಶೀಲಾಚಾರವಿನಯಮುಮಂ ಕಂಡು ತಾಂಬೂಲ ಕರಂಕವಾಹಿನಿಯುಂ ಮಾಡಿ (ಕಾದಂಪೂ. ೫೨೪). [ ಸಂ. ತಾಂಬೂಲಕರಂಕವಾಹಿನೀ ]

**ತಾಂಬೂಲದಾನ** (ನಾ). ತಾಂಬೂಲವನ್ನು ನೀಡುವುದು : ಸ್ವಹಸ್ತ ತಾಂಬೂಲದಾನದಿಂದಂ ಫಲಿತಮುಮಂ ಮಾಡಿ ತಮ್ಮ ತಮ್ಮ ಬೀಡುಗಳ್ಗವರಂ ಪೋಗಲ್ವೇಟ್ಟು (ಆದಿಪು. ೩-೩೨ ವ) : ಸುಶ್ರುತನಂ ತಾಂಬೂಲ ದಾನಪುರಸ್ಸರಂ ವಿಸರ್ಜಿಸಿ (ಚಂದ್ರಪು. ೩-೩೮ ವ). [ ತಾಂಬೂಲ + ದಾನ ]

**ತಾಂಬೂಲಧಾರಕ** (ನಾ). ತಾಂಬೂಲವನ್ನು ಸೇವಿಸುವವನು: ತತ್ಕಾಲದಲಿ ಭೋಗಿಸುವಂದವನು ಚಿತ್ತೈಸುವುದು ತಾಂಬೂಲಧಾರಕರು (ಶುವ್ವಾಉ. ೩-೫೮). [ ತಾಂಬೂಲ + ಧಾರಕ ]

**ತಾಂಬೂಲರಾಗ** (ನಾ). ತಾಂಬೂಲಸೇವನೆಯಿಂದ ಉಂಟಾದ ಕೆಂಬಣ್ಣ : ಕಜ್ಜಲರೇಖೆ ತನ್ನಧರದೊಳ್ ತಾಂಬೂಲರಾಗಂ ದೃಗಂತರದೊಳ್ . . . ತಳ್ತೊಯ್ಯೆ . . . ಭಾವಗಮ್ಮಮೆನಿಕುಂ ಶ್ರೀರೂಪಕಂದರ್ಪನಾ (ಕಾವ್ಯಸಾ. ೬೫೫) : ಸುಕರ್ಪೂರ ಪೂಗಸಂಭಾಗ ತಾಂಬೂಲರಾಗಪೂರಿತ ಗಂಧ ಕುಸುಮಂಗಳಿಂದಲ್ಲಿ ಭೋಗವೀವರು ಪಾರ್ವರಿಗೆ (ಮೋಹತ. ೨-೩೪). [ ತಾಂಬೂಲ + ರಾಗ ]

**ತಾಂಬೂಲವಲ್ಲಿ** (ನಾ). ವೀಳೆಯದೆಲೆಯ ಬಳ್ಳಿ: “ತಾಂಬೂಲವಲ್ಲೀ– ತಾಂಬೂಲೀ, ನಾಗವಲ್ಲೀ ವೀಳ್ಯದೆಲೇ ಬಳ್ಳೀ ಹೆಸರು” (ಸಿದ್ಧಾಂತಿ. ೧೪೦). [ ತಾಂಬೂಲ + ವಲ್ಲಿ₃ ]

**ತಾಂಬೂಲಸಂಗ್ರಹ** (ನಾ). ವೀಳೆಯವನ್ನು ಶೇಖರಿಸಿಡುವ ಚೀಲ ; ಹಡಪ ; ಸಂಚಿ : “ಬಿತ್ತರದ ತಾಂಬೂಲಸಂಗ್ರಹಂ ಹಡಪಮಕ್ಕು” (ಮಂಗರಾ. ೭೮-೪). [ ತಾಂಬೂಲ + ಸಂಗ್ರಹ ]

**ತಾಂಬೂಲಿ₁** (ನಾ). ವೀಳೆಯದೆಲೆ ಮತ್ತು ಅದರ ಬಳ್ಳಿ : “ತಾಂಬೂಲಿಯೆನೆ ನಾಗಲತೆಯಕ್ಕು” (ಮಂಗರಾ. ೩೭-೨೦). [ ಸಂ. ತಾಂಬೂಲೀ ]

**ತಾಂಬೂಲಿ₂** (ನಾ). ೧. ತಾಂಬೂಲವನ್ನು ಸಿದ್ಧಪಡಿಸುವ ಸೇವಕ. ೨. ವೀಳೆಯವನ್ನು ಮಾರೀವವನು. [ ಸಂ. ತಾಂಬೂಲಿನ್ ]

**ತಾಂಬೂಲಿಕ** (ನಾ). ೧. ತಾಂಬೂಲವನ್ನು ತಯಾರಿಸಿಕೊಡುವವನು,-ಸಜ್ಜುಗೊಳಿಸುವವನು. ೨. ವೀಳೆಯವನ್ನು ಮಾರುವವನು; ತಂಬುಲಿಗ. [ ಸಂ. ]

**ತಾಂಬೂಲಿಕಾನಿಕೇತನ** (ನಾ). ವೀಳೆಯವನ್ನು ಮಾರುವ ಸ್ಥಳ ; ತಾಂಬೂಲವನ್ನು ವಿಕ್ರಯಿಸುವ ಗೃಹ: ಅತಿ ಮಧುರಪೂಗಫಲಂಗಳೊಳಂ ಸರಸನಾಗವಲ್ಲೀದಳಂಗಳೊಳಮೆಸೆವ ತಾಂಬೂಲಿಕಾನಿಕೇತನಂಗಳೊಳ್ (ಪುಷ್ಪಪು. ೨-೮೦ ವ). [ ಸಂ. (ತಾಂಬೂಲಿಕಾ + ನಿಕೇತನ) ]

**ತಾಂಬೂಲಿಗ** (ನಾ). = ತಾಂಬೂಲಿಕ ೧ : ಗಂಧಿಗರ್ ಬಾಣಸರ್ ತಾಂಬೂಲಿಗರ್ . . . ಮುಖ್ಯರೊದಗಿ ಬರುತಿರ್ದರೀಂ ವರ್ಣಿಸುವೆನು (ಚಬಪು. ೪೭-೪೧). [ ತಾಂಬೂಲ + – ಇಗ ]

**ತಾಂಬೂಳ** 'ತಾಂಬೂಲ' ನೋ.

△**ತಾಂಬೂಟ** 'ತಂಬುಲ' ನೋ.

**ತಾಂಬೇಲಿ** 'ತಾಂಬೇಲು' ನೋ.

**ತಾಂಬೇಲು,** ತಾಂಬೇಲಿ, ತಾಬಿಲೆ (ನಾ). ಒಂದು ಬಗೆಯ ಆಮೆ: (ಶ). **ತಾಂಬೇಲಿ:** ರಕ್ಕೆಗಳಿರುವ ತಾಂಬೇಲಿ ಎಂದು ಅವನು ತಿಳುಕೊಂಡ ನೇನೋ ಅಂದನು (ಕಥಾಮಂ. IV, ೧೫). **ತಾಬಿಲೆ:** ಹಾಲಾಮೆ, ಮುರಿಕಿ ಆಮೆ, ತಾಬಿಲೆ (ನಮ್ಮನು. ೨೪೦).

[ ದೇ.॥ ತೆಲು. ತಾಬೇಲು, ತಾಮೇಲು ; ಕುವಿ. ತಾಂಬೇಲಿ ]

**ತಾಂಬೋಳಿ** (ನಾ). ವೀಳೆಯವನ್ನು ಮಾರುವವನು : ತಾಂಬೋಳಿಗಳು ಅಂದರೆ ಯೆಲೆಗಾರರು–ಇವರು . . . ವೀಳ್ಯದೆಲೆ, ಅಡಿಕೆ, ತಂಬಾಕ ಕೊಂಡು ಮಾರುತ್ತಾರೆ (ಕಥಾಗೆ. ೨೪೩).

[ ←ಮರಾ. ತಾಂಬೋಳೀ./ ಪ್ರಾ. ತಾಂಬೋಲಿಅ./ ಸಂ. ತಾಂಬೂಲಿಕ ]

**ತಾಂಬ್ರ,** ತಾಂಬರ (ನಾ). ೧. ಒಂದು ಬಗೆಯ ಲೋಹ ; ತಾಮ್ರ : ಮೂರುಸುತ್ತಿನ ಪರಿಧಿ ತಾಂಬ್ರದಿ ತೋರೆ (ಬಿಜ್ಜಪು. ೨೦-೨೦) ; ತಾಂಬ್ರ, ಹಿತ್ತಾಳಿ, ಸತ್ವ, ತವರು, ಸೀಸ ಮತ್ತು ಕಂಚು ಈ ಮಾಲಿನ . . . ಹಾಂಗು ತಾಂಬ್ರ ಹಿತ್ತಾಳಿಗಳ ತಗಡುಗಳನ್ನು ಮಡಕಿ ಹಾಕಿಸುವ ಕೂಲಿ (ಮುಂಬವ್ಯಾ. ೩೭ ಪ್ರಸ್ತಾವನೆ). ೨. ಕೆಂಪುಬಣ್ಣ ; ತಾಮ್ರದ ಬಣ್ಣ : ಅಂಬರವು ತಾಂಬ್ರಮಯವಾಗೆ (ವಿದಾಕ್ಕ. ೯೨-೧). **ತಾಂಬರ:** ೧. "ತಾಂಬರ (ತಾಂಬ್ರ) – ತಾಮ್ರ" (ಶದ್ಬಕೋ. ೧೭) ; ವರರತ್ನ ತವರ ತಾಂಬರ ಸೀಸ ಪೊನ್ ಬೆಳ್ಳಿ (ಸಾನಂಚ. ೩-೩೪). [ <ಸಂ. ತಾಮ್ರ ]

**ತಾಂಬ್ರಚೂಡ** (ನಾ). = ತಾಮ್ರಚೂಡ ೧ : ಅಂಬುಜದಳಕ್ಕೆ ಮರಿ ದುಂಬಿಗಳು ಎರಗಿದವು ತಾಂಬ್ರಚೂಡವು ಧ್ವನಿಮಾಡಿ ಕೂಗಿತು (ವಿದಾಕ್ಕ. ೯೨-೧) ; ಸೊಕ್ಕಿನ ತಗರು ತಾಂಬ್ರಚೂಡಂಗಳನು ಪಂಥದಿಂ ಕಾದಾಡಿಸು ವರು (ನವಮೋ. ೨-೪೯). [ <ಸಂ. ತಾಮ್ರಚೂಡ ]

**ತಾಂಬ್ರಪರ್ಣಿ** (ನಾ). =ತಾಮ್ರಪರ್ಣಿ ೧: ಪ್ರವಿಮಳ ಮುಕ್ತಾಫಳಮೆಸೆವ ವಾರ್ಧಿಗಂ ತಾಂಬ್ರಪರ್ಣ್ಣಿಗಂ ಪುಟ್ಟುವವೋಲ್ (ಎಇ. XIII, ೧೮-೬; 1204); ಮೆರೆವ ಪೂಷಾನಾಡಿ ಇದು ತಾ ಪರಿಯುತಿರುವಾ ತಾಂಬ್ರಪರ್ಣಿಯು (ಗಗಹಾ. ೯-೪೨). [ < ಸಂ. ತಾಮ್ರಪರ್ಣೀ ]

**ತಾಂಬ್ರಶಾಸನ** (ನಾ). ತಾಮ್ರಪಟಗಳ ಮೇಲೆ ಕೊರೆದಿರುವ ಶಾಸನ ; ತಾಮ್ರಶಾಸನ: ತಮ್ಮ ಸ್ವರುಚಿಯಿಂದ ಗುರುಭಕ್ತಿಯಿಂದ ಪೊಡಂಬಟ್ಟು ಬರಸಿಕೊಟ್ಟ ತಾಂಬ್ರಶಾಸನ (ಎಇ. XX, ೯೪-೩೭; 1556) ; ತಳವಾರ ಚಿಂಣಗೆ ಸಹ ತಾಕಿತಿ ಮಾಡಿಸಿ ದಯಮಾಡಿ ಬರಸಿಕೊಟ್ಟ ತಾಂಬ್ರಶಾಸನಾ (ಮೈಆರಿ. ೧೯೨೯, ೭-೨೫; 1673). [ ತಾಂಬ್ರ + ಶಾಸನ ]

**ತಾಕತು** 'ತಾಕತ್ತು' ನೋ.

**ತಾಕತ್ತು,** ತಾಕತು, ತಾಖತು, ತಾಖತ್ತು (ನಾ). ಬಲ; ಶಕ್ತಿ; ಸಾಮರ್ಥ್ಯ : ಆ ಪ್ರತಾಪ ನಿನಗಿಲ್ಲ ಬರಿಯ ತೂಕದಲ್ಲಿಲ್ಲ ತಾಕತ್ತು (ನಲಮು. ೬೫-೧೨) ; ಆವಳನ್ನು ನನ್ನ ಸೆರಗಿನಲ್ಲಿ ಮುಚ್ಚಿಕೊಂಡು ಅನ್ನ ಬಟ್ಟೆ ಕೊಡುವ ತಾಕತ್ತು ನನಗಿಲ್ಲ (ಮುಸಕೊ. ೧೧) ; ಅವಳ ಸಹವಾಸ ದಲ್ಲಿದ್ದಾಗ ತಲೆ ವಿಚಾರಮಾಡುವ ತಾಕತ್ತನ್ನೇ ಕಳೆದುಕೊಳ್ಳುತ್ತಿತ್ತು (ಮೂರುದಾ. ೨೮೩). **ತಾಕತು:** ಕಾಕುತಿ ದೊರೆಗಳ ತಾಕತು ಸಿರಿವಳಗಳು (ಲೋಕಗೀ. ೨೦೯). **ತಾಖತು;** ನಾರಪ್ಪನ ತಾಖತು ಗೊತ್ತಿಲ್ಲೇನು ನಿನಗೆ? (ಕನಕ. ೨೪). **ತಾಖತ್ತು:** ಅಮಾತ್ಯರಾಕ್ಷಸನು . . . . ಜೀವಂತನಾಗಿರುವ ವರೆಗೂ ಈ ಪಟ್ಟಣಕ್ಕೆ ಯಾರನ್ನೂ ಬರಗೊಡಿಸನು. ಇದರಲ್ಲಿ ತಾಖತ್ತೇನಿದೆ (ಮುದ್ರಾಮಂ. ೧೧೪) ; ತತಾಸ್ತು ಎನ್ನುವ ತಾಖತ್ತು ಆಕೆಯ ದೇವನಿಗೆ ಬರಲಿಲ್ಲ (ಬೆಂಗಬ. ೧೬೦).

[ ←ಅರ. ಹಿಂ. ತಾಕತ್; ಮರಾ. ತಾಕತ್, ತಾಕದ್ ]

**ತಾಕಲಾಟ** 'ತಾಂಕು$_1$' ಪರಾ.

**ತಾಕಲಾಡು** 'ತಾಂಕು$_1$' ಪರಾ.

**ತಾಕಿತಿ** 'ತಾಕೀತು' ನೋ.

**ತಾಕಿತ್ತು** 'ತಾಕೀತು' ನೋ.

**ತಾಕಿಸು,** ತಾಗಿಸು (ಕ್ರಿ). ೧. ತಾಗು; ಬಡಿ; ಸಂಘಟ್ಟಿಸು; ತಾಕಲಾಡಿಸು: ನೂಕಿಬದೊಬೊಬ್ಬರರ್ತಿಗೆ ಹರಿಗೆಯು ತಾಕಿಸುವರು ತಗರಂತೆ (ಭರಜ. ೨೩-೨೦). **ತಾಗಿಸು:** ೧. ಸಂಧಿಸುವ ಜೀವಡೆವ ಹೂಡುವ ತಾಗಿಸುವ . . . ಭೇದಿಸುವ ಸವು ಚಾಪಳವ ನುಡಿವ ಕವಿ ಯಾರೈ (ಕುವ್ಯಾಸ. ೧೦-೬೪) ; ದಂತಿಶಿರವ ವಿಭಾಗಿಸಿ ಕೂರ್ಗಣೆಯಿಂದೆ ತಾಗಿಸಿ ಜೋದರ ತಲೆಯ ನಾಗಸಕಾಗಿ ಸಾಗಿಸಿದನು (ಪೋಹತ. ೩೪-೭). ೨. ಮುಟ್ಟಿಸು; ತಲುಪಿಸು: ಚೂರಿಗೆ ನೀರು ತಾಗಿಸಿಕೊಂಡು, ಚೌಕಾಕಾರದಲ್ಲಿ ಸಣ್ಣ ಸಣ್ಣ ತುಂಡುಗಳಾಗಿ ಮಾಡಬೇಕು (ಅಡುಸಾ. ೧೦೧) ; ನಾಗಪಂಚಮಿ ದಿನ . . . ಬಹಳ ಸಂತೋಷಗೊಂಡವನಾಗಿ, ರಂಗದಲ್ಲೇ ಅವನನ್ನು ಹೋಗಿ ಅಪ್ಪಿ, ಐದು ರೂಪಾಯಿಯ ಬಹುಮಾನ ತಾಗಿಸಿದ್ದನು (ಕಲಕ. ೪೪). ೩. ಸೇರಿಸು; ಕೂಡಿಸು: ಜಡಜಡವನೆಳದಾಡಿ ಮನಮನವ ತಾಗಿಸುತ (ಮಲದೇ. ೪೭-೧).

[ ತಾಕು$_1$ (<ತಾಂಕು$_1$) + –ಇಸು$_3$ ]

**ತಾಕೀಜು** 'ತಾಕೀತು' ನೋ.

**ತಾಕೀತಿ** 'ತಾಕೀತು' ನೋ.

**ತಾಕೀತು,** ತಾಕಿತಿ, ತಾಕಿತ್ತು, ತಾಕೀಜು, ತಾಕೀತಿ, ತಾಕೀದ್, ತಾಕೀದಿ, ತಾಕೀದು (ನಾ). ೧. (ಅಧಿಕಾರಪೂರ್ವಕವಾಗಿ ಕೊಟ್ಟ) ಎಚ್ಚರಿಕೆ ; ಕಟ್ಟಳೆ ; ಕಟ್ಟಪ್ಪಣೆ ; ಸೂಚನೆ: ಬಾಗಿಲೂಳಿಗರಿಂಗೆ ತಾಕೀತಾಗಿ ಬಂತಾ ಸುತಗೆ ಲಿಂಗವನೀಗ ಕಟ್ಟದ ದಿವಸದಿಂದೋರ್ವರನು ಬಿಡದಂತೆ (ಬಿಜ್ಜಪು. ೮-೩೭) ; ಮನೆ ಹೊರ ಅಂಗಣದ ಹೂವು ಮುಟ್ಟಬೇಡಿ ಎಂದು ತಾಕೀತು ಮಾಡಿದ (ಗಿರಿಬಾ. ೬೫); 'ಮಾಸ್ತರರು' ಎಲ್ಲಾ ಮಕ್ಕಳಿಗೂ ಪತಂಗಗಳನ್ನು ಹಿಡಿದು ತರಲಿಕ್ಕೆ 'ತಾಕೀತು' ಮಾಡುತ್ತಿದ್ದರು (ಕಲಕ. ೨೩) ; ಇವಳನ್ನು ಬಿಟ್ಟು ನೀನು ಕದಲಬೇಡ ಎಂದು ತಾಕೀತು ಕೊಟ್ಟು ಹೋಗಿಬಿಟ್ಟಳು (ಎಡಹ. ೧೨೬). **ತಾಕಿತಿ :** ೧. ತಳವಾರ ಚಿಂಣಗೆ ಸಹ ತಾಕಿತಿ ಮಾಡಿಸಿ ದಯಮಾಡಿ ಬರಸಿಕೊಟ್ಟ ತಾಂಬ್ರಶಾಸನಾ (ಮೈಆರಿ. ೧೯೨೯, ೭-೨೫; 1673); ತಾಕಿತಿ ಮಾಡಿಸಿ ಯಿಾ ನಿರೂಪವನ್ನು ಶಾನಭಾಗರ ಕಡಿತಕ್ಕೆ ಬರಸಿ (ಮೈಆರಿ. ೧೯೩೦, ೪೪-೮; 1768). **ತಾಕಿತ್ತು :** ೧. ಅಮಲುದಾರ್ರು ಹರಕತ್ತು ಮಾಡಿದ್ದಕ್ಕೆ ದಿವಾನ ಪೂರ್ಣಯ್ಯನವರ ತಾಕಿತ್ತುತ್ತೆಗೆದು ಕೊಂಡು ಹೋಗಿ ಕೊಟ್ಟಲ್ಲಿ (ಎಕ. VII (S), ಚನ್ನಗಿ. ೮೫-೯ ; 1821) ; ಶ್ಯಾಮರಾಯ ತನ್ನನ್ನು ಕಂಡು ಹೋಗಲಿಕ್ಕೆ ತಾಕಿತ್ತು ಮಾಡಿದ (ದೀಪಹ. II, ೧೦). **ತಾಕೀಜು :** ೧. ಮತ್ತ ಕಳ್ಳರು ಕಾಕರು ಆಗಬಾರದಂತ ತಾಕೀಜು ಬ್ಯಾರೆ ಮಾಡ್ಯಾರ ನಾಯಕರು (ಜನನಾ. ೨೪). **ತಾಕೀತಿ :** ೧. ದೇವರುಗಳಿಗೆ ಪೂಜೆಯಂನು ಸಾಂಗವಾಗಿ ನಡಸಿ ಬಾಹಂಗೆ ತ್ಯಾಕೀತ್ತಿ ಮಾಡುವದು (ಎಕ. IX (S), ಬೆಂಗಳೂ. ೦೫೦-೫; 1700); ತಾಕೀತಿಯನ್ನು ಬರೆಸಿಕೊಟ್ಟು ಸರಾಗವಾಗಿ ನಡಸಿಕೊಂಡು ಬರುವುದು (ಮೈಆರಿ. ೧೯೩೪, ೧೭-೨೦; 1762); ತನ್ನ ಕಡೆಗೆ ಕೊಡುವಂತೆ ತಾಕೀತಿಗಳನ್ನು ಬರಸಿಕೊಂಡು (ಹೈದರ. ೭೪). ೨. ಅಧಿಕಾರಿಗೆ ಸರ್ಕಾರದಿಂದ ಬಂದ ಅಜ್ಞಾಪತ್ರ : ಆ ಗ್ರಾಮಗಳ ನಿರ್ಬಂಧಕವಾಗಿ ನಡೆಸುವ ಹಾಗೆ ತಾಕೀತಿ ಕಾಗದವ ಬರ್ಸಿ ಕಳುಹಬೇಕೆಂದು ಬರೆಸಿ (ಮೈಆರಿ. ೧೯೩೪, ೩೩-೭; ಸು. 1640). **ತಾಕೀದ್ :** ೧. ಆತ್ಮರಕ್ಷಣೆಯಲ್ಲಿ ನ್ಯಾಯಗಳಾದ ಹಕ್ಕುಗಳನ್ನು ಉಪಯೋಗಿಸುವಂತೆ ತಾಕೀದ್ ಮಾಡುವದು (ಗ್ರಾಮಾಕ. ೪ ಪೀಠಿಕೆ). **ತಾಕೀದಿ :** ೧. ಯಾವ ಕಡೆಲಾದರೂ ಯಿಾ ಕಳವು ಹಿಡಿದು ಹವುದು ಮಾಡಿರಿಯೆಂದು ರಾಜೇಶ್ರೀ ದಣಿಗಳು ತಾಕೀದಿ ಮಾಡಿ ಹೇಳಲಾಗಿ (ಎಕ. XI, ಮೊಳಕಾ. ೨೫-೯೪; 1665).

**ತಾಕೀದು :** ೧. ಹುಷಾರಿಯಿಂದ ಗಾಡಿ ಹೊಡೆಯಬೇಕೆಂದು ಆ ಆಳಿಗೆ ತಾಕೀದುಮಾಡಿ ಕೊನ್ಹೇರರಾಯರು ಕುಳಿತುಕೊಂಡರು (ಅನಂತ. ೬); ಆದರೆ ಆ ದೀಪ (ನಂದಾದೀಪ) ಹೋದದ್ದುಂಟಾದರೆ ನಿನ್ನ ತಲೆ ಹೊಡಿಸೇನೆಂದು ಕುರುಬನಿಗೆ ತಾಕೀದು ಮಾಡಿ (ಮುಂಬಯಿ. ೫-೧೭೫); ಮುನಷಿಯು ಆದರ ಮೇಲೊಂದು ತಾಕೀದು ಬರೆದು ವಿಮರ್ಶಾಧಿಕಾರಿಯ ಬಳಿಗೆ ಕಳುಹಿಸಿಕೊಟ್ಟನು (ವಾಗ್ಮೀವಿ. ೧೯೫). ೨. ಮೂರು ಸಾರೆ ದಂಡವಾಗಿತ್ತು. ಹುಕುಮು ತಾಕೀದಿಗಳಂತು ವಾರಕ್ಕೊಂದಾದರೂ ಇದ್ದೇ ಇರುತ್ತಿದ್ದವು (ಸ್ವೂಲವಿ. ೬೦). [ ←ಮರಾ. ತಾಕೀತ್, ತಾಕೀದ್; ಅರ. ಹಿಂ. ತಾಕೀದ್ ]

**ತಾಕೀದ್** 'ತಾಕೀತು' ನೋ.

**ತಾಕೀದಿ** 'ತಾಕೀತು' ನೋ.

**ತಾಕೀದು** 'ತಾಕೀತು' ನೋ.

**ತಾಕು$_1$** 'ತಾಂಕು$_1$' ನೋ.

**ತಾಕು$_2$** 'ತಾಂಕು$_2$' ನೋ.

**ತಾಕುಮೇಕು** (ನಾ). ಅಹಂಕಾರ; ದೊಡ್ಡಸ್ತಿಕೆ; ಮಾತ್ಸರ್ಯ(?): ತರುವಾಯ ಚಿತ್ರಹಳ್ಳಿ ನೀಲಯ್ಯನೆಂಬ ಗ್ರಾಮದ ಗೌಡನು, ತಾಕುಮೇಕಿನಿಂದ ಹೆಮ್ಮೆ ಮಾತನಾಡಲಾಗಿ (ಚಿತ್ರಪಾ. ೧೯).

[ ತಾಕು$_2$ (<ತಾಂಕು$_2$) + ಮೇಕು$_1$ ]

**ತಾಕೋಟೆ** (ನಾ). ಒಂದು ಬಗೆಯ ಸಸ್ಯ : ತಗಚೆ, ತಾಕೋಟೆ (ವ್ಯಜಿ. ೫೪-೧೦೯೫). [ ? ]

**ತಾಖತು** 'ತಾಕತ್ತು' ನೋ.

**ತಾಖತ್ತು** 'ತಾಕತ್ತು' ನೋ.

**ತಾಗರಚೆ** 'ತಾಗರತ್ತೆ' ನೋ.

**ತಾಗರತಿ** 'ತಾಗರತ್ತೆ' ನೋ.

**ತಾಗರತ್ತೆ,** ತಾಗರಚೆ, ತಾಗರತಿ (ನಾ). ಒಂದು ಸ್ಥಳದ ಹೆಸರು: ತಾಗರತ್ತೆ ಆ ಮಹಾಜನಕ್ಕೆ ಸಾಲೆ ಆಚನ್ದ್ರತಾರಕಂ (ಎಕ. VII, ಶಿಕಾರಿ. ೪೫-೧೨; 890). **ತಾಗರಚೆ :** ತಾಗರಚೆಯು ಪೂರೊಡೆಯ ಅರಸಿಮಯ್ಯನ ಮಗಂ (ಎಕ. VII, ಶಿಕಾರಿ. ೫೩-೨೦; 1027). **ತಾಗರತಿ :** ಕಯ್ಯೋಗೆ ವಡೆಯ ಬೆಳ್ಳಜ್ಜರ ದಸವರ್ಮ್ಮ ಗಾಯಿಗ ತಾಗರತಿಯ ಮಹಾಜನಕ್ಕೆ ಸುವರ್ಣ್ನದನಮಂಜಿಕ್ಕೊಟ್ಟು (ಎಕ. VIII, ಸೊರಬ. ೫೬೦-೧೧; 951). 'ತಗರ್ತಿ' ಪರಾ. [ ? ]

**ತಾಗಿಸು** 'ತಾಕಿಸು' ನೋ.

**ತಾಗು$_1$** 'ತಾಂಕು$_1$' ನೋ.

**ತಾಗು$_2$** (ಕ್ರಿ). ನೆಗೆ; ಹಾರು; ನೆಗೆದು ಆಚೆಗೆ ಹೋಗು : (+).

[ ದೇ.೫ ತಮಿ. ಮಲ. ತಾವು ]

**ತಾಗು$_3$** 'ತಾಂಕು$_2$' ನೋ.

**ತಾಗುಡಿ** (ನಾ). ಅಡಗಿಕೊಳ್ಳುವ ಸ್ಥಳ; ಅವಿತುಕೊಳ್ಳುವ ಜಾಗ: (+).

[ ? ]

**ತಾಗುಥಟ್ಟು$_1$** (ನಾ). ತಾಗುವ ಸೈನ್ಯ; ಎದುರಿಸುವ ಸೈನ್ಯ: ಆಗಲೀ ವೈಷ್ಣವಕೆ ನಮ್ಮಯ ತಾಗುಥಟ್ಟಿನ ರಕ್ಷೆ (ಕುವ್ಯಾಆ. ೦೪-೧೧); ತಾಗಿ ಮುಜಿದನೆ ಭೀಮನೀ ಮೇಲ್ಬೋಗಿನಾಹವವೇನು ರಾಯನ ತಾಗುಥಟ್ಟೇನಾಯ್ತು (ಕುವ್ಯಾಗ. ೪-೨೧).

[ ತಾಗು$_3$ (<ತಾಂಕು$_2$) + ಥಟ್ಟು$_2$ ]

**ತಾಗುಥಟ್ಟು$_2$** (ನಾ). ನಾಡಾಡಿತನ(?) : ತಾಗುಥಟ್ಟಿನ ಬಜಿಯ ಮಾತಿನ ಯೋಗಿಗಳೆ (ನಿಭಾಗ. ೩-೭-೧೭); ತೊಗಲೇಕಿನ್ನುಳಿದ ಮರ್ತ್ಯರ ತಾಗುಥಟ್ಟಿನ ಸುಖಿಗಳನು (ನಿಭಾಗ. ೪-೧೬-೨೪). [ ತಾಗು$_3$ (<ತಾಂಕು$_2$) + ಥಟ್ಟು ? ]

**ತಾಗುದಾಣ** (ನಾ). ತಂಗುವ ಸ್ಥಳ : ಅಂಬರವ ತಾಗುತ ತಳರ್ವ ತರಣಿಯ ಕುದುರೆಗಳಿಂಗಾಗಿಹುದದು ತಾಗುದಾ[ಪಾಠಾಂ. ತಾ]ಣ (ಕುರಾಸಾಂ. ೪-೦೩).

[ ತಾಗು$_3$ (<ತಾಂಕು$_2$) + ತಾಣ ]

**ತಾಗುವಾಯ್** (ನಾ). (ಮುಂಚೂಣಿಯ) ಕೈ ಕೈ ಯುದ್ಧ : ಚತುರಂಗ ಸೇನಾಸಮೇತಂ ತಾಗೆ ತಾಗುವಾಯೊಳಾ ಬಳಂಗಳುಂ . . . ಮಣ್ಮಾಟಿಯಾಗೆ (ನೇಮಿಪು. ೧೨-೬೬ ವ). [ ತಾಗು$_3$ (<ತಾಂಕು$_2$) + ವಾಯ್$_1$ ]

**ತಾಚಿ** 'ಚಾಚಿ' ನೋ.

**ತಾಚ್ಚ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀಪುರುಷ ತಾಚ್ಚನ್ (ಎಕ. X(8), ಬೌರಿಂಗ್. ೮೬-೧೭; ಸು. 820). [ ? ]

**ತಾಜ** 'ತಾಜಾ' ನೋ.

**ತಾಜಾ,** ತಾಜ (ಗು). ೧. ಹೊಚ್ಚ ಹೊಸದಾದ; ಈಗತಾನೆ ಮಾಡಿದ,-ನಡೆದ : ಮೈಸೂರಿನ ಒಡೆಯನನ್ನು ನಾಶ ಮಾಡುವುದಾಗಿ ಸಂಕಲ್ಪ ಮಾಡಿದ್ದಾಳೆಂದೂ ನಮಗೆ ತಾಜಾ ವರ್ತಮಾನವು ಬಂದಿದೆ (ಶ್ರೀರಾಯ. ೧೫೦); ಮಸಾಲೆಗಳಿಲ್ಲದ ತಾಜಾ, ಸಾದಾ ಮತ್ತು ಅಲ್ಪ ಆಹಾರವನ್ನೇ ಸೇವಿಸಬೇಕು (ಬ್ರಹ್ಮಜೀ. ೧೨೯). ೨. ಸೊಗಸಾದ; ರುಚಿಕರವಾದ: ಅಡಿಗೆಮನೆಯ ತುಂಬ ಕಾಫಿ, ತಾಜಾ ಬಿಸ್ಕತ್ತು, ತಿಂಡಿಯ ವಾಸನೆ ತುಂಬಿಕೊಂಡಿತ್ತು (ಮುಹಾತ್ಮ. ೯). **ತಾಜ :** ೧. ಸಿಂಧುಮಥನದಲು ದಿಸಿದೀ ಕುದುರೆ ತಾಜ ಬೆಳ್ದಿಂದೆನಲು (ತುರಂಗ. ೩-೨೦). (ನಾ). ೩. ಸೊಗಸಾದುದು: ಹಂಗಿಲ್ಲದ ಬಾಳ್ಕೆಯು ಬಲು ತಾಜ (ಕವಿಸೋ. ೮-೨).

**ತಾಜಾ ಮಾಡು** = ಉಬ್ಬಿಸು; ಪುಸಲಾಯಿಸು: ಈ ದಪೇದಾರನ್ನೇ ತಾಜಾಮಾಡಿ ಮಡಕ್ಕೋಬೇಕು (ಬಂಗಬ. ೨೫); ಬಹಳ ಅಕ್ಕರೆಯಿಂದ ಕಾಣುವಂತೆ ತಾಜಾಮಾಡಿ ಹ್ಯಾಗೋ ನನ್ನನ್ನು ಹಾಸಿಗೆಯಿಂದ ಎಬ್ಬಿಸಿಬಿಡುವಳು (ಸುಂದರಿ. ೯೫). [ ←ಪಾರ. ಹಿಂ. ಮರಾ. ತಾಜಾ ]

**ತಾಜಾಕಲಂ,** ತಾಜಾಕಲಮು (ನಾ). ಹೊಸವಿಷಯ; ಬಳಿಕ ಬರೆದುದು; "ಬರೆದವನು ಸಹಿ ಹಾಕಿದ ಮೇಲೆ ಕಾಗದ ಪತ್ರದ ಕೊನೆಯಲ್ಲಿ ಮತ್ತೆ ಸೇರಿಸಿದ ಪ್ರಕರಣ" (Post-script. ಇಂಕನಿ.). : ಕೆಳಗೆ 'ತಾಜಾಕಲಂ' ಎಂದು ಸುಂದರವ್ಮನ ಪರವಾಗಿ ಇನ್ನೊಂದು ವಾಕ್ಯವಿತ್ತು (ಬನಶಂ. ೨೨೮); ರಾಬರ್ಟ್‌ಅಬಕ್ರಂಬಿಸ್ಕೆ ತಾಜಾಕಲಂ (ರಾಜೇಂದ್ರ. ೫೪). **ತಾಜಾಕಲಮು :** ತಾಜಾಕಲಮು ಹಾಕಿ ಚಾಣಕ್ಯನು ಪತ್ರದಲ್ಲಿ ಬರೆಸಿದ್ದನು (ವೃಥವ. ೭೬). [ ತಾಜಾ + ಕಲಂ$_2$ ]

**ತಾಜಾಕಲಮು** 'ತಾಜಾಕಲಂ' ನೋ.

**ತಾಜಾಮಾಲು** (ನಾ). ಹೊಚ್ಚಹೊಸದಾದ ಮಾಲು,- ವಸ್ತು : ಶಿಂಹತ್ತಿ ಗಂಟ್ಟದೊಳಗೆ ಚರಕಿ ಹತ್ತಲಿಲ್ಲದ್ಧಾಗ ತಾಜಾಮಾಲೆಂದು ತಿಳಿಯುವರು (ಮುಂಬವ್ಯಾ. ೩೭). [ ತಾಜಾ + ಮಾಲು$_4$ ]

**ತಾಜಾಸನದು,** ತಾಜಾಸನ್ನದು (ನಾ). ಹೊಸ ಆಜ್ಞಾಪತ್ರ,-ಶಾಸನ : ವರುಷಂಪ್ರತಿಯಲ್ಲೂ ತಾಜಾಸನದಿನ ಉಜೂರಮಾಡದೆ ಈ ಸನದಿನ ನಕಲ ಲೆಖಕ್ಕೆ ಬರಶಿ ಅಸಲಸನದ ಹಿಂದಕ್ಕೆ ಕೊಡುವದು (ಮ್ಯಅರಿ. ೧೯೨೯, ೯೪-೪೦; 1813). **ತಾಜಾಸನ್ನದು :** ಹರಸಾಲು ತಾಜಾಸನ್ನದು ಉಜುರು ಯಿಡದೆ . . . ಸದ್ರೀ ದೇವಸ್ಥಾನಗಳು ಬ್ರಾಂಹರ ಉಪಜೀವನಕೆ ನಡೆಸಿಕೊಂಡು ಬರುವದು (ಎಕ. VI, ಕೊಪ್ಪ. ೪೮-೪೮; 1811).

[ ತಾಜಾ + ಸವದು ]

**ತಾಜಾಸನ್ನದು** 'ತಾಜಾಸನದು' ನೋ.

**ತಾಜಿಕ್** (ನಾ). ಇರಾನದೇಶದ ಒಂದು ಗುಂಪು ಮತ್ತು ಆ ಗುಂಪಿಗೆ ಸೇರಿದವನು : ಲಾಟಮಂಡಲವನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಬಂದಿದ್ದ ತಾಜಿಕ್(ಅರಬ್)ರನ್ನು ಬಗ್ಗುಬಡಿದು ಹಿಂದಕ್ಕೆ ಅಟ್ಟಿದನು (ಕರ್ನಾಅ. ೯೦). [ ←ಪಾರ. ಹಿಂ. ತಾಜಿಕ್ ]

**ತಾಜೀಂ,** ತವಜ್ಜೀಂ, ತಾಜೀಮು (ನಾ). ಗೌರವ; ಸನ್ಮಾನ; ಆದರಣೆ; ವಿನಯೋಪಚಾರ : ಒಬ್ಬರಿಗೂ ತಾಜೀಂ ತವಜ್ಜೀಂ ಪ್ರತಿಸಲಾಮ್ ಮಾಡ ಕೆಲಸವಿಲ್ಲ (ಜಾಮುಪಂ. ೧೬೭). **ತವಜ್ಜೀಂ :** ಪಾಂಡವರಾಳುತ್ತಿದ್ದ ಸಿಂಹಾಸನದ ಮೇಲೆ ಆರೋಹಣ ಮಾಡಿರುವುದರಿಂದ ಒಬ್ಬರಿಗೂ ತಾಜೀಂ, ತವಜ್ಜೀಂ, ಪ್ರತಿಸಲಾಂ ಮಾಡ ಕೆಲಸವಿಲ್ಲ (ಮಹಾಪಂ. I, ೧೪೪). **ತಾಜೀಮು :** ಕರಾಚೂರಿ ನಂಜರಾಜೈಯ್ಯ ಅರಶಿನವರು ತಾಜೀಮು ಸಹಾ ಕೊಟ್ಟು ಬಹು ಸನ್ಮಾನಾ ಮಾಡಿದರು (ಹೈದರ. ೧೦೧).
[ ←ಮರಾ. ತಾಜೀಮ್ ; ಅರ. ತಅಝೀಮ್ ]

**ತಾಜೀಮು** 'ತಾಜೀಂ' ನೋ.

**ತಾಟಂಕ** (ನಾ). ಕಿವಿಯ ಆಭರಣ ; ಓಲೆ : ಕೋಟೀರ ರತ್ನಾಂಶು ಶಿಖಾಶಿವಿಸ್ಫಾರಿತೋದ್ಯಚ್ಛಮರಜಪವನಾಂದೋಲ ತಾಟಂಕನಾಗಿರ್ದ ಶಚೀ ಸಂಯುಕ್ತಂ (ಜಗವಿ. ೧೩-೬೭) ; ತಾಟಂಕಗಳ್ಕಪೋಲಸ್ಥಲಮನಲೆಯೆ (ಉದ್ಭಟ. ೮-೧೫) ; ಸುಗುಣೆ ಕೇಳ್ ತಾಟಂಕ ಸೂಡಿದ ತವ ಕಿವಿಗೊಳನ ಕೋಡಿ ಬೀಳ್ವಂತೆ ತುಂಬಿಸುವೆನು (ಮೋಹತ. ೭-೨) ; ನೊಸಲಕ್ಷಿಯ ನುಜ್ವಲಮಾದ ರತ್ನತಾಟಂಕದೆ ಸರ್ಪಕುಂಡಲದಿನೊಪ್ಪುವ (ಉಮಾಶ. ೧೧). 'ಕರ್ಣತಾಟಂಕ' ಪರಾ. [ ಸಂ. ]

**ತಾಟಕ** (ನಾ). ಜನರನ್ನು ಹಿಂಸಿಸುವವನು ; ಧೂರ್ತ ; ಕಪಟಿ : ಹಸುವಂಗು ನೋಡಿದರೆ ತಾಟಕನಿವ (ಕನಕ. ೮೦-೭) ; ಆಟಪಾಟಗಳಿಗೆ ತಾಟಕಾರ್ಭಕರೊಳಗೆ ವೀಟನಿಂ ಪೋಗದಲೆ ಚೋಟು ಕೆಲಸಗಳ ಮಂದಿರದಿ ಮಾಡುತಲಿ ಚಂದದೊಳಗಿರುತಿಹೆನು (ಹಮುಚ. ೧೦೩) ; ತಾಟಕ ತಲೇ ಹತ್ತಲಿಲ್ಲ, ನಾಯಿಗೆ ಮದುವೆ ಆಗಲಿಲ್ಲ (ಗಾದೆ). [ ಸಂ. ]

**ತಾಟಕಿ,** ತಾಟಕೆ, ತ್ರಾಟಕಿ, ತ್ರಾಟಕೆ (ನಾ). ೧. ರಾಮನಿಂದ ಹತಳಾದ ಒಬ್ಬ ರಾಕ್ಷಸಿ : ತುಂಗಭುಜಬಲಸಹಿತಮದವಮಾತಂಗಕಂಠೀರವನು ರಾಮನ ಭಂಗದಲಿ ತಾಟಕಿಯ ಗೆಲಿದೊಲಿಸಿದನು ಜಯಪಥುವ (ತೊರರಾ. ೧-೧೧ ಸೂಚನೆ) ; ತಾಟಕಿ[ಪಾಠಾಂ. ಕೆ]ಯನೊರಸಿ ಮುನಿಸತಿಯಘವನು ಕಳೆದು . . . ರಾಘವಂ ಬಂದನು (ಜೈಮಿಭಾ. ೦೮-೨). ೨. (ಅಲಂ) ಗಯ್ಯಾಳಿ; ತಾಟಗಿತ್ತಿ ; ಜಗಳಗಂಟಿ ; ಧೂರ್ತೆ : ಕರಗಮುವಂ ಮೊಜನಂ ತಾನಿರದೀವರ್ಗಾರಿಗೆಂದು ಸಲೆ ತಾಟಕಿಯರ್ (ಸಮುಪ. ೫-೧೧೧); ಈಗಿನ ಕಾಲದ ತಾಟಕಿಯರು. ಇವರ ಮುಖಕ್ಕೆ ವಿದ್ಯೆ ಬೇರೆ (ಮಹಾಗ. ೭). **ತಾಟಕೆ :** ೨. ಕೌಂಕುಟ ಮೇಲೆ ತ್ರಿಶೂಲಾಕೃತಿ ಘಟಿಯಿಸಿ ನಿಲೆ ಕಳ್ಳೆಯವಳೆ ತಾಟ[ಪಾಠಾಂ. ಟ]ಕೆಯಕ್ಕುಂ (ಲೋಕೋಪ. ೧೧-೫೭). **ತ್ರಾಟಕಿ :** ೨. ಒಬ್ಬ ತ್ರಾಟಕಿಯ ಹಾಗೆ (ಇತಿಶ್ರೀ. ೧೪). **ತ್ರಾಟಕೆ :** ೨. ಅವಳು ನನಗೆ ತ್ರಾಟಕೆಯಂತೆ ಉಪದ್ರವ ಕೊಡುತ್ತಾಳೆ (ಮೋಹಿನೀ. ೧೫).
[ <ಸಂ. ತಾಟಕಾ ]

**ತಾಟಕಿತನ** (ನಾ). ಜಗಳಗಂಟಿತನ ; ತಾಟಕಿಯ ಸ್ವಭಾವ : ತಣಿನಂ ಕಾಣದ ತಾಣ ತಾಟಕಿತನಂ ತಾಂ[ಪಾಠಾಂ. ದಲ್ಲಿ ಕಪಟಂಗಳ್]ಮಾಟ್ಟರಿರ್ಪಲ್ಲಿ . . . ಇರ್ದೊಡೆ ಹಾನಿಯ್ಯೆ (ಸೋಮೇಶ. ೨೫). [ ತಾಟಕಿ + – ತನ ]

**ತಾಟಕೆ** (ನಾ). ೧. ರಾಮನಿಂದ ಕೊಲ್ಲಲ್ಪಟ್ಟ ಒಬ್ಬ ರಾಕ್ಷಸಿ ; ತಾಟಕಿ. ೨. (ಅಲಂ) ಬಜಾರಿ ; ಜಗಳಗಂಟಿ : ಕೌಂಕುಟ ಮೇಲೆ ತ್ರಿಶೂಲಾಕೃತಿ ಘಟಿಯಿಸಿ ನಿಲೆ ಕಳ್ಳೆಯವಳೆ ತಾಟ[ಪಾಠಾಂ. ಟಿ]ಕೆಯಕ್ಕುಂ (ಲೋಕೋಪ. ೧೧-೫೭) ; ತಾಟಕೆಯಂತೆ ವರ್ತಿಸುವ ಧೂಮಿನಿ (ದಶಕು. ೧೨-೮೪).
[ ಸಂ. ತಾಟಕಾ ]

**ತಾಟಗಿತ್ತಿ** (ನಾ). ಜಗಳಗಂಟಿ ; ಬಜಾರಿ ; "ಬೈಗಂಳದ ಹೆಂಗಸು ; ಗಯ್ಯಾಳಿ, ಚಂಡಿ" (Shruw: ಇಂಕನಿ.) ; ನಮ್ಮಾ ವ್ರತಂಗೆಡಿಸಿದೀ ತಾಟ[ಪಾಠಾಂ. ಟ]ಗಿತ್ತಿಗೆ ತಕ್ಕುದಂ ಮಾಡಿಸದೊಡೆ ನಾವೇತಜವರು (ಸಮ್ಮಳಾ. ೯-೩೮) ; ತಾಟಗಿತ್ತಿಯ ನೆರೆ ಹೊಲ್ಲ ಕಜ್ಜಿಯ ಕಾಟವೆ ಹೊಲ್ಲ (ಸರ್ವಜ್ಞ. ೧೧೫೪) ; ದಂಡಿಸಿ ಕೇಳಿಯಾ ತಾಟಗಿತ್ತಿಯನು (ಸಾರಂಗ. ೦೯) ; ತಾಟಗಿತ್ತಿಯು ಹೋಗಹೋಗುವಾಗ್ಗೆ . . . ನನ್ನನ್ನು ಹಂಗಿಸಿ ನಕ್ಕಳು (ಮೋಹಿನೀ. ೫೦) ; ಆ ತಾಟಗಿತ್ತಿಯ ರಂಪಗಳೇ ಇವೆಲ್ಲ (ಫಾಟೀಮು. ೧೩).
[ <ತಾಟಕಿ ]

**ತಾಟಗಿತ್ತಿತನ** (ನಾ). ಗಯ್ಯಾಳಿಯ ಸ್ವಭಾವ,– ನಡೆವಳಿಕೆ : (ಶ).
[ ತಾಟಗಿತ್ತಿ + – ತನ ]

**ತಾಟಡಿಕೆ** (ನಾ). ತಾಟಾಡಿಸುವ ದೊಡ್ಡ ಜಾತಿಯ ಅಡಕೆ (?): ಧರೆ ನಭಂಗಳನುಗಿದು ತಾಟಡಿಕೆಯೆಂದಾಡಲೆಳಸುವಂ ಸುಕುಮಾರನು (ಚಬಪು. ೩೮-೧೭). [ ತಾಟು$_1$ (<ತಾಂಟು) + ಅಡಿಕೆ (<ಅಡಕೆ$_1$) ]

**ತಾಟತೂಟಕ** (ನಾ). ನಟನೆ ; ಸೋಗು ; ತೋರಿಕೆ (?) : ಕೋಟಿಗಾದರು ಕೇಳು ಅಪರೋಕ್ಷಿಗಾದರೂ ಕೋಟಲೆಯೊಳಿರದೆ ಗತಿಯಿಲ್ಲ ತಾಟತೂಟಕ ಮಾಡಿ ಅವರಂತೆ ನುಡಿದು ಭವ ದಾಟಬೇಕೋ (ವಿದಾಕ್ಕ. ೪೮-೧೪).
[ ? ]

**ತಾಟಸ್ಥ್ಯ** (ನಾ). ೧. (ಹರಿಯುವ ನೀರಿಗೆ ಬೀಳದೆ) ದಡದ ಮೇಲೆ ನಿಂತಿರುವುದು ; ದಂಡೆಯ ಮೇಲಿರುವುದು. ೨. ಯಾವ ಪಕ್ಷಕ್ಕೂ ಸೇರದಿರುವಿಕೆ ; ತಟಸ್ಥವಾಗಿರುವುದು ; ಉದಾಸೀನತೆ ; ಉಪೇಕ್ಷೆ : ಆಸ್ಥೆಯನು ಕುಂದಿಸದ ತಾಟಸ್ಥ್ಯವೊಂದು ನಷ್ಟಲಾಭಂಗಳಲಿ ಲಘು ಹಾಸ್ಯ ನಯವೊಂದು ಸ್ವಸ್ಥಿಗಾವಶ್ಯಕವೊ (ಮಂಕುಕ. ೭೩೩). [ ಸಂ. ]

**ತಾಟಾಟ** (ನಾ). ೧. ಕಷ್ಟ ; ತೊಂದರೆ. ೨. ಕಷ್ಟದಲ್ಲಿ ಅಲೆದಾಡುವಿಕೆ : (ಶ). [ <ತಾಟಾಡು ]

**ತಾಟಾಡಿಸು** (ಕ್ರಿ). ೧. ತಾಕಲಾಡಿಸು; ಡಿಕ್ಕಿಹೊಡೆಸು : ಮೇರುಶೈಲಮಂ ದೂಟಾಡಿಸಿತು ರಾಶಿ ತಾರಾಗ್ರಹಂಗಳಂ ತಾಟಾಡಿಸಿತು ಹನುಮನಬ್ಬರಣೆ (ಜೈಮಿಭಾ. ೧೩-೪೩) ; ಅಡಕೆಯ ಬಾಗಿಸಿ, ಪನೆ ಇಬ್ಬಾಗಿಸಿ, ಬುಡ ದೂಟಾಡಿಸಿ, ತಲೆ ತಾಟಾಡಿಸಿ . . . ಬಂತೈ! ಬಂತೈ! (ಕವಪು. ೨೮-೫) ; ಭಾರತದಲ್ಲಿ ಬ್ರಿಟಿಷರು ಅಳರಸರ ತಲೆತಲೆ ತಾಟಾಡಿಸಿ, ಮಧ್ಯೆ ಪ್ರವೇಶಿಸಿ ಸಂಸ್ಥಾನಗಳನ್ನು ನುಂಗುತ್ತಿದ್ದರಂತೆ (ಒಡ್ಡಿಉ. ೦೦೩). ೨. ಅತ್ತಿತ್ತ ಚಲಿಸುವಂತೆ ಮಾಡು : (ಶ). [ ತಾಟಾಡು + – ಇಸು$_3$ ]

**ತಾಟಾಡು** (ಕ್ರಿ). ೧. ಒಂದಕ್ಕೊಂದು ತಗುಲು ; ಘರ್ಷಿಸು : ಪ್ರಭಂಜನಂ ತೀಡಿದುದು ತೀಡಲ್ಕನ್ನಳಿನ ನಳಿನ ಪುಂಜದೊಳ್ ತಾಟಾಡೆ ತುಪ್ಪುಳ ಜುಂಜುಜುಳಿಸಿದುವು (ಮದೇಪು. ೭-೩೭) ; ತಂಡ ತಂಡದೆ ಕೃಷ್ಣನಗರಿಯೊಳ್ ಚಲಿಸುವ ಮಂಡಳಿಕರ ಕಾಲ ಕಡಗ ಪೆಂಡೆಯ ತಾಟಾಡಿ ಸಿಡಿದ ರತ್ನಗಳ ಕೈದಂಡೆಯೊಳ್ ಸಿಕ್ಕಿ ಬಾಚುವರು (ಮೋಹತ. ೩-೭೦) ; ಪರ್ವತದೊಡನೆ ಪರ್ವತವು ತಾಟಾಡಿದಂತೆ (ಸೌಗಂಧಿ. ೩೫೨-೫). ೨. ಅತ್ತಿತ್ತ ಚಲಿಸು ; ಹೊಯ್ದಾಡು : ಹೀಗಾಡಿ ಹಾಗಾಡಿ ಈ ಕಡೆ ಆ ಕಡೆ ತಾಟಾಡಿ ಆ ನಾವೆಯು ಒಂದು ಎಡತಿಟ್ಟಿನ ತಡಿಗೆ ಬಂತು (ಪೀಟಿಮಾ. ೩೩).
[ ತಾಟು$_1$ (<ತಾಂಟು) + ಆಡು$_1$ ]

**ತಾಟಾಪೋಟಿ** 'ತಾಟುಪೋಟು' ನೋ.

**ತಾಟಿ$_1$** (ನಾ). ೧. ಚರ್ಮ : ರೋಮವೆಂದಡೆ ಕಾಯಿದ ಕರುಣದ ತೃಣ ದಂತಿಪ್ಪುದು ತ್ವಚವೆಂದಡೆ ಬಾಳ್ಕದ ತಾಟಿಯಂತಿಪ್ಪುದು ಮಾಂಸವೆಂದಡೆ ಕಾಮಿಖಣಿಯಂತಿಪ್ಪುದು (ಉದ್ಯೋಪ್ರ. ೫-೨೩-೧೫). ೨. ಸಿಪ್ಪೆ ; ತೊಗಟೆ: "ವಲ್ಕ, ವಲ್ಕಲ=ತಾಟಿ, ನಾರು" (ಗಂಗಾಮು. ೨೮೩). 'ತೋಟೆ' ಪರಾ.
[ ← ತೆಲು. ತಾಟ ]

**ತಾಟಿ$_2$** 'ತಾಳ್$_3$' ನೋ.

**ತಾಟಿ$_3$** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ: ನಿಂತುಕೊಂಡು ಪಾದಗಳ ಪಾರ್ಶ್ವಗಳ ಕೂಡುವುದರಿಂದ ತಾಟಿಯಂಬುದು (ಖಡ್ಗಟೀ. ೪-೩೯). [ ? ]

**ತಾಟಿಕೆ** 'ತಾಟಕಿ' ನೋ.

**ತಾಟಿತ** (ಗು). ಬಡಿಯಲ್ಪಟ್ಟ ; ಬಡಿದ : ಜಲಧಿತರಂಗತಾಟಿತ ಧರಾತಳ ಭಾರವಿದೆತ್ತ (ಆದಿಪು. ೪-೮೪) ; ಜಳಧಿತರಂಗತಾಟಿತ ಮಹೀಪತಿ ಚಕ್ರಧರಂ ತಪಂಬಡಲ್ (ಅಜಿಪು. ೧೧-೧) ; ದೆಸೆಯಂ ತೆಕ್ಕನೆ ತೀವೆ ತಾಟಿತ ಮಹಾಭೇರೀರವಂ (ಗದಾಯು. ೧೦-೩೨); ಅಪ್ರಮಿತ ಸುರಾಸುರೋರಗವಿಯಚ್ಚರ ರಾಜಕಿರೀಟತಾಟಿತಕ್ರಮಕಮಲದ್ವಯಾನತಮಧುಬ್ರತನೆಯ್ದಿದಂ(ಸುಕುಮಾ. ೪-೫೫) ; ಬಾಜಿಸುವ ಮುರಜಮನೆ ತಾಟಿತಕಟಿಸ್ವನಂ ಪೊಣ್ಮೆ (ಜಬಪು. ೧೦-೬೧). [ ಸಂ. ]

**ತಾಟಿನುಂಗು** (ನಾ). ತಾಳೆಯ ಜಾತಿಗೆ ಸೇರಿದ ಒಂದು ಬಗೆಯ ಮರ : ತಾಟಿನುಂಗು ಮರ, ತಾಳೆಮರ (ವೃಜಿಗಿ. ೧೩-೨೩೪) ; ಬೇಸಿಗೆಯಲ್ಲಿ ಮದರಾಸಿನಿಂದ ಬೆಂಗಳೂರಿಗೆ ಹೇರಳವಾಗಿ ತಾಟಿನುಂಗು ಬರುತ್ತವೆ (ರೂಢಿ). [ ←ತೆಲು. ತಾಟಿನುಂಗು ]

**ತಾಟಿಪೋಟಿ** 'ತಾಟುಪೋಟು' ನೋ.

**ತಾಟಿಬೆಲ್ಲ** 'ತಾಳೆಬೆಲ್ಲ' ನೋ.

**ತಾಟಿಮರ** 'ತಾಳೆಮರ' ನೋ.

**ತಾಟಿಲ್** (ನಾ). ತಾಳೆಗರಿ ಹೊದಿಸಿದ ಗುಡಿಸಲು : ತತ್ಕೀಲಾಲ ಕ್ರೀಡೆಯಿಂದೀಡಿಜಿದು ನಿಲಿಸಿ ತಾಟಲ್ಗಳಂ ಕಟ್ಟಿದೆತ್ತಂ ತೂಲಂಬೊಲ್ ಪಾಱಲೂದಿತ್ತು (ನಳಚಂ. ೫೬೧).

[ ತಾಟಿ₂ (<ತಾಳ್₃) + ಇಲ್₂./ತೆಲು. ತಾಟಲ್ಲು ]

**ತಾಟಿಸು** 'ತಾಂಟಿಸು' ನೋ.

**ತಾಟು₁** 'ತಾಂಟು' ನೋ.

**ತಾಟು₂** (ನಾ). ತಟ್ಟೆ; ಗಂಗಾಳ: ಬಟ್ಟಲು ತಾಟುಗಳೆರಡರ ತಿನಿಸನು ತಿಂದಿತು ಬಳಿ ಬಂದು ಕಾಕೆ (ಗಾಥಾಸ. ೨-೬೨) ; ಕಾಣಿಕೆಯೆಂದು ಹಣ ತುಂಬಿದ ತಾಟನ್ನು ಎದುರಿಗಿರಿಸಿದಾಗ (ಶರಜ. ೮೨೮) ; ತಾಟನಲ್ಲಿದ್ದ ಪೂರಿಯನ್ನು ಅಧಿಕಾರಿಗಳ ಎಲೆಯಲ್ಲಿ ಹಾಕಹೋದಳು (ಕಾವೇರಿ. ೧೨೩) ; ತಾಟು – ತಂಬಿಗೆ – ಥಾಲಿಗಳನ್ನು ಅಣಿಮಾಡಿದಳು (ಪ್ರೇಮುತ. ३).

[ <ತಟ್ಟೆ./ಮರಾ. ತಾಟ್ ]

**ತಾಟು₃** (ನಾ). ಭಾಗ ; ತಾಕು : ಭಟರಾಶಂಣರ ಗಡಿಂ × ತೆಂ × ತೆಂಕ ತಾಟನ ಚ × × ಮೂಕೆಜಿಯ ಮೂಡಣ ಬೇಲಿಂ (ಸೌಇಇ. IX-II, ೪೪೭-೩೭ : 1436). [ <ತಟ್ಟು₄ ]

**ತಾಟು₄** (ನಾ). ಇಳಿಜಾರಾದ ಚಾವಣಿಯ ಚೌಕಟ್ಟು : ಮಲ್ಲಾಡಿನಲ್ಲಿ ಮನೆಯ ಮೇಲೆ ಹಂಚಿನ ತಾಟು ಮಾಡುವರು (ಮುಂಬಯಿ. ೪-೧೧೭).

[ ← ಮರಾ. ತಾಟೀ, ಥಾಟ್ ]

**ತಾಟು₅** 'ಥಾಟು' ನೋ.

**ತಾಟು₆** 'ತಟ್ಟು₇' ನೋ.

**ತಾಟುಪೋಟು,ತಟವಟ,ತಾಟಾಪೋಟಿ, ತಾಟಿಪೋಟಿ, ತಾಟುಹೋಟು, ತಾಟೊಟು** (ನಾ). ಕಪಟ ; ಮೋಸ ; ಮಾಯೆ : ತಾಟುಪೋಟಿನ ಠೌಳಿಮಾತಿನ ಪಾಟಿಮಾಡುವ ಪರಮಪಾತಕರೇಟುಗಾಯಿಗಳಿರವರೆ ಶಿವ ಶರಣರಿಂಗಿತವ (ಶರಲೀ. ೬೦೦-೧೬) **ತಟವಟ :** ಟಕ್ಕುಟವಳಿ ತಟವಟ ವಟಮಟವ ಬಿಟ್ಟು (ಕತಸಾಂ. ೬೦-೫೩); ಮುಂ ತಮ್ಮಬ್ಬೆಯರ್ಗಂ ತಾಮುಂ ತಟವಟದಿಂದೆ ತಿಂದು ತೇಗಿದ ಕತದಿಂದಂ (ಚಿಕವಿ. ೬-೯೮) ; ಆ ರೈತರಿಗೆ ಸಲುವಂತ ಕೆಲವು ಹಣ ದವಸ ಧಾನ್ಯ ತಟವಟಮಾಡಿ ತಿಂದದರಿಂದ (ರಾಜೇಂದ್ರ. ೧೭) ; ದೇವರ ಕೋರ್ಟಿನಲ್ಲಿ ಈ ಸುಳ್ಳು ತಟವಟ ನಡೆಯಲಾರದು (ಸಣ್ಣಕ. VI, ೮). 'ಅಟಮಟ' ಪರಾ. **ತಾಟಾಪೋಟಿ :** ನಮ್ಮ ದಿನಗಳು, ಚಿತ್ರ, ಪತ್ರ, ಚಿಂದಿ ಪಂದಿ ತಾಟಾಪೋಟಿಗಳಿಂದ ತುಂಬಿವೆಯಲ್ಲಾ (ನಿಬಂಧ. II, ೧೩೩). **ತಾಟಿಪೋಟಿ :** ಇವರಿಬ್ಬರೂ ಸೇರಿ ಏನೋನೋ ತಾಟಿಪೋಟಿ ಮಾಡಿದರೆ ನಂಬದಿರಲು ಸಾಧ್ಯವೇ (ವಿಕಾಸ. ೨೮). **ತಾಟುಹೋಟು :** ತಾಟುಹೋಟಿನ ಹಿರಿಯ ನೀನಲಾ (ವೀಶೈಪು. ೪-೧೨-೩೬). **ತಾಟೊಟು :** ತಾಟೊಟು ತಗರುಬೊಗರು ಟಕ್ಕು ಟೌಳಿಯೆಸಗುವ ಕೋಟಲೆ ಸಾಕು (ಗೀತಗೋ. ೨೬-೪೬).

[ ದೇ.॥ ತಮಿ. ತಾಟ್ಟೋಟ್ಟು, ತಾಟೋಟ್ಟು; ತೆಲು. ತಾಟೋಟು, ಟಾಟೋಟು, ತಟಮಟ, ತಟವಟ ]

**ತಾಟುಹೋಟು** 'ತಾಟುಪೋಟು' ನೋ.

**ತಾಟೊಟು** 'ತಾಟುಪೋಟು' ನೋ.

**ತಾಡ** (ನಾ). ೧. ಒಂದು ಬಗೆಯ ಹುಲ್ಲು. 'ದೇವತಾಡ' ಪರಾ. ೨. ತಾಲವೃಕ್ಷ. ೩. ಹೊಡೆತ ; ಬಡಿತ ; ಏಟು. ೪. ಶಬ್ದ ; ಧ್ವನಿ : "ರವಂ ತಾ[ಪಾಠಾಂ. ತ್ರಾ]ಡಮುಕ್ಕು" (ಮಂಗರಾ. ೯೭-೧೬). [ ಸಂ. ]

**ತಾಡಂಕ** (ನಾ). = ತಾಟಂಕ. [ ಸಂ. ]

**ತಾಡಕ** (ನಾ). ೧. ಒಂದು ಬಗೆಯ ಹುಲ್ಲು; ದೇವದಾಳಿ : "ದೇವದಾಳಿ ತಾಡಕಮುಕ್ಕು" (ಮಂಗರಾ. ४೦-೩೦). ೨. ಚಾಟಿ ; ಚಬಕ : "ಚಬಕಃ- ತಾಡಕಂ" (ಕಾಶಕ್ಕ. ೩೨). ೩. ಹೊಡೆಯುವವನು. [ ಸಂ. ]

**ತಾಡಕಾಲು** (ನಾ). ಖಡ್ಗಯುದ್ಧದ ಒಂದು ವರಸೆ : ಭ್ರಮಣದಲ್ಲಿ ಮಧ್ಯದಲ್ಲಿ ಹಾರಿ ಎರಡು ಕಾಲ್ಗಳನ್ನು ತಾಡಿಸುವದೂ ಅವುದು ಅದರ ಹೆಸರು ತಾಡಕಾಲು ಎಂದು ನುಡಿಯಲ್ಪಡುವುದು (ಖಡ್ಗಟೀ. ೪-೨೯).

[ ತಾಡ + ಕಾಲು₁ (<ಕಾಲ್₁) ]

**ತಾಡಣ** (ನಾ). = ತಾಡನ ೨ : ಪಾದತಾಡಣದಿಂ ಮುಖಮಾರುತದಿಂ ಪುಷ್ಪಿಸುವ ಫಲಿಸುವ ತರುಗಳುಂ (ಸೌಗಂಧಿ. ೧೨-೦೮).

[ <ಪ್ರಾ. ತಾಡಣ./ಸಂ. ತಾಡನ ]

**ತಾಡನ** (ನಾ). ತಟ್ಟುವುದು ; ಹೊಡೆಯುವುದು : ಅರಸಂ ಕರತಳ ತಾಡನ ಪುರಸ್ಸರಂ ದೇವ ಬನ್ನಿಮೆಂದೊಲವಿಂದೊಡ್ಡಿರೆ ಕೈಯಂ (ಚಂದ್ರಪು. ३-೪೬); ಮಹಾಬಂಧದಲ್ಲಿರ್ದ ಯೋಗೀಶ್ವರಂ ಸುಭೂಮಿಯಲ್ಲಿ ಸಮವಾದ ಹಸ್ತದಲ್ಲಿರ್ದು ಮೆಲ್ಲನೆ ತಾಡನಂ ಮಾಡೂದು (ಶಿವಪ್ರ. ೫-೧೧); ದುಂಬಿಯೆ . . . ನಿನ್ನ ತಾಡನಗಳನಾನುವ ಹೂವಿವೆ ಬೇರೆಡೆ ಸಾರವುಗಳನು (ಇಂಜಾಪ. ೧೬೮-೨೯). [ ಸಂ. ]

**ತಾಡನಗೈ** (ಕ್ರಿ). ತಟ್ಟು ; ಬಡಿ : ಕಲಿಯ ತಾಣಗಳ ತುಡುಕಿ ತಾಡನಗೈದು ಜುಮ್ಮುದಟ್ಟಿಸಿ (ಕಂನವಿ. ೧೦-೪೫). [ ತಾಡನ + ಗೈ (<ಕೆಯ್₁) ]

**ತಾಡನಿ** (ನಾ). (ಕುದುರೆ, ಎತ್ತು ಮೊದಲಾದುವನ್ನು ಹೊಡೆಯುವ) ಚಬಕ ; ಚಾವಟಿ. [ ಸಂ. ತಾಡನೀ ]

**ತಾಡನೆ** (ನಾ). ತಟ್ಟುವುದು. 'ತಾಡನೆಗೈ' ಪರಾ. [ ಸಂ. ತಾಡನ ]

**ತಾಡನೆಗೈ** (ಕ್ರಿ). = ತಾಡನಗೈ : ತೊಳಪ ಕಂಕಣದ ಕೈಯಿಂದ ಘಲಿರೆನಿಸುತ ಬೆನ್ನ ನಸು ತಾಡನೆಗೈವ (ಕಂನವಿ. ೯-೧೨೪).

[ ತಾಡನೆ + ಗೈ (<ಕೆಯ್₁) ]

**ತಾಡಪತ್ರ** (ನಾ). ತಾಳೆಮರದ ಎಲೆ ; ತಾಳೆಗರಿ : ಬಹು ಪ್ರಾಚೀನಕಾಲದಿಂದಲೂ ಇರತಕ್ಕಂಥ ತಾಮ್ರಪತ್ರ . . . ತಾಡಪತ್ರ ಹಾಗೂ ಇತರ ದಾನಪತ್ರಗಳ ಮೇಲಿಂದಲೂ (ಗುರುದ. ४೧); ನಿನ್ನ ಚರ್ಮವೆ ತಾಡಪತ್ರವು ನಿನ್ನ ಅಸ್ಥಿಯೆ ಕಂಠಪತ್ರವು (ಕರುಶ್ಯಾ. ೮೬-೧). [ ತಾಡ + ಪತ್ರ ]

**ತಾಡಪತ್ರಿ** (ನಾ). ನೀರಿಳಿಯದಂತೆ ಟಾರು ಬಳಿದು ಸಿದ್ಧಪಡಿಸಿದ ಬಟ್ಟೆ; ಟಾರ್ಪಾಲು: ಬಾಲ್ಕನಿಯನ್ನು ಮುಚ್ಚಿದ್ದ ತಾಡಪತ್ರಿಯ ಪರದೆ . . . ಪಟಪಟನೆ ಹೊಡೆದುಕೊಳ್ಳುತ್ತಿತ್ತು (ವಾತ್ಸಲ್ಯ. ೧). [ ←ಮರಾ. ತಾಡಪತ್ರೀ ]

**ತಾಡವನ** (ನಾ). ತಾಲವೃಕ್ಷಗಳ ಗುಂಪು ; ತಾಳೆಮರಗಳ ಕಾಡು : ಇಲ್ಲಿಂದ ಸಮೀಪದಲ್ಲಿಯೇ ಒಂದು ತಾಡವನವಿದ್ದು, ಅಲ್ಲಿ ತಾಡದ ಹಣ್ಣುಗಳೂ, ಬೇರೆ ರುಚಿಕರ ಫಲಗಳೂ ಬಹಳ ಅಗುವುವು (ಭಾಮೃತ. ३೦೭). [ ತಾಡ + ವನ ]

**ತಾಡವಾಲೆ** 'ತಾಡವೋಲೆ' ನೋ.

**ತಾಡವೋಲೆ, ತಾಡವಾಲೆ, ತಾಡೋಲೆ** (ನಾ). (ಬರೆಯಲು ಉಪಯೋಗಿಸುತ್ತಿದ್ದ) ತಾಳೆಯ ಮರದ ಗರಿ,–ಎಲೆ: ಅವರು ಶೀರ ಪ್ರಾಚೀನಕಾಲದ ಹಸ್ತಲಿಖಿತ ತಾಡವೋಲೆಗಳನ್ನು ಸಂಗ್ರಹಿಸಿದ್ದಾರೆ (ರತ್ನಗೋ. ೨೫); ಹಳೆಯ ತಾಡವೋಲೆಯ ಗ್ರಂಥಗಳು ಕೈಬರೆಹದ ಪುಸ್ತಕಗಳು ಇವೇ ಮೊದಲಾದ ವಾಙ್ಮಯ ಸಾಮಗ್ರಿಗಳನ್ನೂ ಸಂಗ್ರಹಿಸಿ (ಮೂರುಲು. ೩ ಮುನ್ನುಡಿ). **ತಾಡವಾಲೆ:** ಅದರ ಬಳಿಯಲ್ಲಿ ಒಂದು ತಾಡವಾಲೆಯ ಪುಸ್ತಕವು ಉಚ್ಚಿ ಇಟ್ಟಿತ್ತು (ಮಾಧವ. I, ೧೫); ಅದರ ಚರಿತ್ರೆ, ಸಾಹಿತ್ಯಗಳ ಪರಿಚಯಕ್ಕಾಗಿ ಹಳೆಯ ತಾಡವಾಲೆಗಳನ್ನು ಹುಡುಕಿ ಅಲೆದಾಡಬೇಕಾಯಿತು (ಯಕ್ಷಬ. III ಮುನ್ನುಡಿ). **ತಾಡೋಲೆ:** ಧರೆಯೆ ತಾಡೋಲೆಯು ಮರಗಳೆ ಲೆಕ್ಕಣಿಕೆ ಹರಿಯುವ ನೀರ ಮಸಿಮಾಡಿ (ಸಿದ್ಧಪು. ೩-೪೫); ಅವನು ನನ್ನ ಮುಂದೆ ಒಗೆದು ಪ್ರದರ್ಶಿಸಿದ ತಾಡೋಲೆಯ ಗ್ರಂಥಗಳ ಸತ್ಕಾರ ಹೆಚ್ಚಿನದ್ದಾಗಿತ್ತು (ಕಂಬಹು. ೩೮); ತಾಡೋಲೆಗಳ ರಾಶಿಯು ಈ ಮಠಗಳಲ್ಲಿ ಈಗಲೂ ದೊರೆಯುವುದು (ಕನ್ನಜಾ. ೧೮೭).

[ ತಾಡ + ಓಲೆ ]

**ತಾಡಾಸನ** (ನಾ). ಒಂದು ಬಗೆಯ ಯೋಗಾಸನ: ಮುಖ್ಯವಾದ ಕೆಲವು ಆಸನಗಳು ಅಷ್ಟ ವಿನ್ಯಾಸಗಳು ೧. ಉತ್ತಾನಾಸನ . . . ೭೩. ತಾಡಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಭಾರದ. ೧೬೭).

[ ತಾಡ$_0$ + ಆಸನ ]

**ತಾಡಿ** 'ತಾಳ್$_2$' ನೋ.

**ತಾಡಿಕವಡೆ** (ನಾ). ಒಂದು ಬಗೆಯ ಸಸ್ಯ: "ಅಕ್ಷಃ – ತಾಡಿಕವಡೆ, ಚೆಂಡುಗ, ದೇವಸಾಸಿವೆ" (ಓಷಧಿ. ೧). [ ? ]

**ತಾಡಿತ** (ಗು). ೧. ಹೊಡೆದ; ಬಡಿದ: ಉತ್ಸುಕ ಭೂಪಾಲ ಭುಜಂಗ ತಾಡಿತ ಹಟಧ್ವಂಟಾರವಾವಿಷ್ಕೃತಾಧಿಕಸೌಭಾಗ್ಯಮದೇಂ ಬೆಡಂಗ ಮದುರ್ದೋ ಗಾಣಿಕ್ಯಸೌಧೋತ್ಕರಂ (ಚಂದ್ರಪು. ೧-೧೩೪); ಉದ್ಭಟ ಹೂಂಕೃತಿಯಂತೆ ತಾಡಿತ ಜ್ವಾಲತೆಯೊಂದು ಠಂಕೃತಿ ವಿಜೃಂಭಿಸೆ (ರಾಜಶೇ. ೬-೬೭). (ನಾ). ೨. (ಮಲ್ಲಯುದ್ಧದ) ಒಂದು ವರಸೆ (?): ಹೊಡೆತ ತಾಡಿತವು ಸಂಧಿತವು ಸಹ ಇವು ಯುದ್ಧದಲ್ಲಿ ಕೊಂಬುಗಳ ಯುದ್ಧದ ಭೇದಗಳು (ಸೌಗಂಧಿ. ೨೬೮-೫). [ ಸಂ. ]

**ತಾಡಿಸು** (ಕ್ರಿ). ಹೊಡೆ; ಬಡಿ; ಬಾರಿಸು: ಶಂಖಿಂಗಳಂ ಪೂರಿಸಿಯುಂ ಭೇರಿಯುಂ ತಾಡಿಸಿಯುಮೋಗೆಯ್ದಂ ಪೊಣಮಡದಿರೆ (ಪಂಪಭಾ. ೦೩-೭೭ವ); ಕುಲಿಶದಿಂ ತಾಡಿಸಿದ ಗಿರಿಯಂತುಟಾದಂ (ವೀರ್ಶಪು. ೩-೨೦-೦೦); ತಾಡಿಸುವ ಬಹು ವಿಧದ ವಾದ್ಯದ ಜೋಡಣೆಯ ಮಂಗಳತೆ ಮಟಿಯಲು (ನಿಭಾಗ. ೦೦-೨೩-೪೦); ಬುದ್ಧಿಗಲಿಸಿ ಕೇಳದಿರಲು ಗದ್ದಿಸಿ ತೆರೆಗೆಯ್ಯಿಂದ ತಾಡಿಸುವಂತೆ ಗುದ್ದಿತು ಜಲನಿಧಿ ತಟವ (ಮೋಹತ. ೨-೮); ಗುಲಾಮಳಂತೆ ಕಂಡು ತಾಡಿಸುವುದನ್ನು ಬಿಟ್ಟುಬಿಡು (ಪ್ರಗಂಬ. ೦೫೭).

[ ತಾಡನ + – ಇಸು$_3$ ]

**ತಾಡು** (ನಾ). ಹಗ್ಗ. [ ←ತೆಲು. ತಾಡು, ತ್ರಾಡು ]

**ತಾಡೆ$_1$** 'ತಾಳ್$_3$' ನೋ.

**ತಾಡೆ$_2$** (ನಾ). ಸಮಾನ; ಸಾಟಿ; ಸಾದೃಶ್ಯ: ಉಳಿದ ಮಾವು, ಸಂಪಿಗೆಗಳ 'ತಾಡೆ'ಗೆ ಇದು ಬರಲಿಕ್ಕಿಲ್ಲ ಸೌಂದರ್ಯಮಾನದಿಂದ (ಸುತ್ತುಮು. ೩೫).

[ ← ಪಾರ. ಮರಾ. ತಾಡಾ ]

**ತಾಡೋಲೆ** 'ತಾಡವೋಲೆ' ನೋ.

**ತಾಣ, ಟಾಣ, ಠಾಣ, ಠಾಣಾ, ಠಾಣೆ, ಠಾನೆ, ತಾನ$_1$** (ನಾ). ೧. ನೆಲೆ; ಬೀಡು; ಇಂಬು; ಆಶ್ರಯ; ಸ್ಥಳ: "ಇಕ್ಕೆ, ಇಂಬು, ಗೊತ್ತು, ನೆಲೆ, ತಾಣಂ . . . ಈ ೧೫ ಆಶ್ರಯಕ್ಕೆ ಪೆಸರ್" (ಕಶಸಾ. ೧೫-೨೧೦); "ತಾಣಮೆ ತಾಂ ಸ್ಥಾನಮುಕ್ಕುಂ" (ಕವಿಕಂ. ೧೨೮); ಅರಮನೆ ತಾಣದ ಭಾಗಮುಮಂ ಅಚ್ಚಕಮ್ಮೆತ್ತಿಯಿಕೆ ಕೊಟ್ಟಾರ್ಸೇನವರಸರುಂ (ಎಕ. VI, ಕೊಪ್ಪ. ೩೭-೯; ಸು. 675); ಪ್ರಣುತ ಪದಾಂತರೀಕರಣಮಂತದೆ ತಾಣದೊಳಾದೊಡಂ (ಕವಿರಾ. ೧-೧೨೨); ತಾನುಮಂತಃಪುರಪರಿವಾರಂ ಬೆರಸು ಬೇಂಟೆಗೆ ಪೊಱಮಟ್ಟು ಪರಿಯ ತಾಣಕ್ಕೆ ವಂದು (ಪಂಪಭಾ. ೫-೪೭ ವ); ಸರ್ವಸಿದ್ಧಿಗಳ ತಾಣಂ (ಹಡಕಾ. ೧-೭); ಸೌಖ್ಯದ ಗರುಡಿ ಸೊಂಪಿನ ಪದವಿ ಲೀಲೆಯ ತಾಣ (ಕುಮ್ವಾಅ. ೧೨-೪). **ಟಾಣ:** ೧. 'ಟಾಣದೀವಿಗೆ' ಪರಾ. ೨. ಒಂದು ಜಿಲ್ಲೆಯ ಮುಖ್ಯಸ್ಥಳ,– ಕೇಂದ್ರಸ್ಥಾನ: (ಕ). **ಠಾಣ:** ೧. ವರ್ಗದ್ವಿತೀಯಾಕ್ಷರಂಗಳ್ಗೆ . . . ಠಾವು, ಠಾಣಂ, ಠಕ್ಕಿಸಿದಂ (ಠೆಕ್ಕಿಸಿದಂ) (ಶಮದ. ೧೫ ಪ್ರಯೋ); ಪೊಡೆವಟ್ಟು ಬೇಡಿಕೊಂಡೆದ್ದು ಸಾಧನೆಗೆಯ್ಯ ತೊಡಗಿದ ಜಗಜಟ್ಟಿದೈತ್ಯ ಜಡಜಸಂಭವ ಮುಖ್ಯ ಸುರರಿಂಗೆ ಭೇದವ ಕೊಡದ ಮಾಯಾವಿ ಠಾಣವನು (ಮೋಹತ. ೧೧-೭೫); ಅದರ ಅರಮನೆ ಕಿವಿಯಾದರೆ ಮೂಗು ಮೊದಲಾದುವುಗಳೆಲ್ಲ ಸಾಮಂತ ಮನ್ನೆಯರ ಠಾಣಗಳಂತೆ (ನಡದಾ. I. ४೩೮). ೩. (ಕೋಟೆ, ಕಿಲ್ಲೆ, ಪಟ್ಟಣ ಮೊದಲಾದುವುಗಳಲ್ಲಿ ಅವುಗಳ) ರಕ್ಷಣೆಗಾಗಿ ಇಟ್ಟಿರುವ ಸೈನ್ಯ; ಕಾವಲುದಂಡು: 'ಠಾಣವಿಕ್ಕು' ಪರಾ. **ಠಾಣಾ:** ೪. ಸೇನಾಶಿಬಿರ; ಪಾಳೆಯ: (ಕ). ೫. ಪೋಲೀಸು ದಳದ ಕಚೇರಿ; ನಗರ ರಕ್ಷಕರ ನೆಲೆ; ಕೊತ್ವಾಲರ ಚಾವಡಿ: ಅವನ ಗೆಳೆಯ ಗುಣೇಂದ್ರ ಮುಂಬಯಿ ಟೌನಿನ ಠಾಣಾಇನಸ್ಪೆಕ್ಟರನಾಗಿ – ಬಂದ (ಪ್ರಣಸ. ೨೩); ಫೌಜದಾರರು ಇವನನ್ನು ಕಚೇರಿಯಲ್ಲಿ ಠಾಣಾ ಅಮಲ್ದಾರನೆಂದು ನಿಯಮಿಸಿದ್ದರು (ನಾಪೋಲೀ. ೧೫೦). ೬. ಪೌರಾಡಳಿತಕ್ಕೆ ಸಂಬಂಧಿಸಿದ ಕಚೇರಿ: (ಕ). **ಠಾಣೆ:** ೧. ಅಂತು ಅವಳಿಗಾದರೂ ಆ ಠಾಣೆಯನ್ನು ತತ್ಕಾಲಕ್ಕೆ ಬಿಡುವ ಮನಸ್ಸು ಬರಲಿಲ್ಲ (ಕನ್ನಾಬ. ೫೭). ೪. ಅಲ್ಲಲ್ಲಿ ಠಾಣೆಗಳೊಳಡಗಿರ್ದ ಯಾತು ಭಟರು ಪುಲಿಗಳಂತಿದಿರಾಂತು ಪೊಣರಲ್ (ಕೀಪರಾ. ೧೪-೨೨). ೫. ನಿನ್ನೆ ರಾತ್ರಿ ಕಳ್ಳರನ್ನು ಹಿಡಿಯುವುದಕ್ಕೆ ಹೋಗಿದ್ದ ಠಾಣೇದ ಗುರಿಕಾರನು ಊರಲ್ಲಿ ಕೋಟುಗಸ್ತಿ ತಿರುಗುತಿರುವಾಗ್ಗೆ (ಪೀಟಿಮಾ. ४४). ೭. ಊರಗಡಿಗಳಲ್ಲಿರುವ ಸುಂಕದ ಕಟ್ಟೆ: ಯಾ ಠಾಣೆಗಳಲ್ಲಿ ಯೆತ್ತುಗಳ ವರ್ಣ ವಯಸ ಬರಸಿ (ಎಕ. VII, ಶಿವಮೊ. ೨೮-೧೯; 1670). **ಠಾನೆ:** ೫. ಹರಿ ಠಾನೆಗೆ ಹೋಗಿ ಅದೇ ಕುಳಿತುಕೊಂಡಿದ್ದ (ಕೊತಕಾ. ೧೭). **ತಾನ$_1$:** ೧. "ತಾಣ (ತಾನ, ಠಾಣ) – ಸ್ಥಾನ = ಜಾಗ" (ತದ್ಭಕೋ. ೧೭). [ <ಪ್ರಾ. ಥಾಣ, ಠಾಣ./ಸಂ. ಸ್ಥಾನ ]

**ತಾಣಂದರ** 'ತಾಣಾಂತರ' ನೋ.

**ತಾಣಕ** 'ತಾನಕ' ನೋ.

**ತಾಣಗುಂದೂರ್, ತಾನಗುಂದೂರ್** (ನಾ). ಒಂದು ಊರಿನ ಹೆಸರು: ಶ್ರೀಮತ್ ಪೆರ್ಗ್ಗಡೆ ಪುಳಿಯ್ಯಮ್ಮ ತಾಣಗುನ್ದೂರ್ಕ್ಕೆರೆಯಂ ಕಟ್ಟಿಸಿ (ಎಕ. VII, ಶಿಕಾರಿ. ೧೯४-೧೦; 935); ಅಯ್ಯಯ್ಯ ತಾಣಗುನ್ದೂರ ಮಹ (ಮೈಆರಿ. ೧೯४೨, ೬೧-೭; 1002); ಶ್ರೀಮತು ತಾಣಗುಂದೂರ ಮೂವತ್ತಿಚ್ಛಾಸಿರದ ಮಗಂ ಸುರಲೋಕಪ್ರಾಪ್ತನಾದ (ಎಕ. VII(8), ಶಿಕಾರಿ. ೩३೦-೩; 1075). **ತಾನಗುಂದೂರ್:** ತಾನಗುನ್ದೂರ್‌ನ್ನಾಮ ಗ್ರಾಮಂ ಶ್ರೀಧರ ಚೌವೇರ ಪುತ್ರಸ್ಯ (ಇಆ. XVIII, ೩೭೭-೦೭; 8ನೆಯ ಶತ). 'ಟಾಣಗುಂದೂರ್' ಪರಾ. [ ? +ಊರ್ ]

**ತಾಣದೀವಿಗೆ, ಟಾಣದೀವಿಗೆ, ಟಾಣಾದೀವಿಗೆ, ಠಾಣದೀವಿಗೆ, ತಾಣಾದೀವಿಗೆ** (ನಾ). ಒಂದು ಸ್ಥಳದಲ್ಲೇ ಇಟ್ಟಿರುವ ದೀಪ,–ದೀಪದ ಕಂಬ: ತಾಣದೀವಿಗೆಗಳನವರ್ಗೀಗುಂ ಪ್ರದೀಪ ದೀಪಾಂಗಕುಜಂ (ಶಾಂತಿಪು. ೬-೦೦೭); ಜಲಜಲಿಸಿ ತೊಳಪ ತಾಣದೀವಿಗೆ[ಪಾಠಾಂ. ಆಸ್ಥಾನದೀಟಿಕೆ]ಗಳಿಂ ಕರಮೆಸೆವ ಕರುಮಾಡಮಂ ಪೊಕ್ಕು (ಲೀಲಾವ. ೬-೫೫ ವ);

ಸ್ಥಾನದೀಪಿಕಾ–ತಾಣದೀವಿಗೆ (ಶಮಪ. ೨೮೯ ಪ್ರಯೋ.) ; ಇಟ್ಟನೇಹಂ ತಾಣದೀವಿಗೆಯೊಳ್ (ರಾಮಾಶ್ವ. ೭-೨೫) ; ತನ್ನ ತಾಣದೀವಿಗೆ ತುಂಬ್ಯಾಳ (ಲೋಕಗೀ. ೩೫) ; ಮನೆಯೊಳಗೆ ತಾಣದೀವಿಗೆಯು ಕಾಯಕಕೆ (ಕನ್ನಜಾ ೨೯೮). **ಟಾಣದೀವಿಗೆ:** ಟಾ[ಪಾಠಾಂ. ರಾ]ಣದೀವಿಗೆ ಮಂಗಳಾರತಿ ಸಾಣಿಕಲ್ಲನುಲೇಪನದ . . . ಉಚಿತವಸ್ತುಶ್ರೇಣಿಯಿಂದೊಪ್ಪಿದುದು ವಾರವಿಳಾಸಿನೀಸದನ (ಬಸಪು. ೧೨-೧೦) ; ಜಾಣೆ ಕೊಂಡಳು ವೀಳೆಯವನು ಟಾಣದೀವಿಗೆ ಬೆಳಗಿರೆ ಬಂದು (ಧನ್ಯಚ. ೧೦೨). **ಟಾಣಾದೀವಿಗೆ:** ನಾಲ್ದೆಸೆಯೊಳುರೆ ಬೆಳಗುವ ವಸುಮಯದ ಟಾಣಾದೀವಿಗೆಗಳನು ತಂದಿರಿಸಿ (ನವಮೋ. ೧೯-೧೬). **ಠಾಣದೀವಿಗೆ:** ಇಂದ್ರಮಾಣಿಕಮಯ ಮಂಟಪದಿ ಚೆಂದಚೆಂದದ ಠಾಣದೀವಿಗೆ ಹೊಳೆಯುತ್ತ (ಪುರಂದ. ೩-೧೩೧-೧). **ತಾಣಾದೀವಿಗೆ:** ಶ್ರೀಸಿಕೇಸ್ವರದೇವರಿಗೆ ತಾಣಾದೀವಿಗೆ ಸಹಿತವಾಗಿ ಚಂದ್ರಾರ್ಕ್ಕವಖಂಡಿತ ದೀಪಂ ನಡವಂತಾಗಿ . . . ತಾಣಾದೀವಿಗೆ ಸಹಿತ ಮಾಡಿದ ಧರ್ಮ್ಮ (ಎಕ. XIV, ಶ್ರೀರಂಗ. ೨೫-೭ ; ?). [ ತಾಣ + ದೀವಿಗೆ ]

**ತಾಣಬಟ್ಟ** (ಗು). ೧. ಇದ್ದ ಜಾಗದಿಂದ ಹೊರದೂಡಿದ ; ಪದಚ್ಯುತಗೊಳಿಸಿದ : "ತಾಣಬಟ್ಟ (ತಾಣವಟ್ಟ)–ಸ್ಥಾನಭ್ರಷ್ಟ" (ತದ್ಭಕೋ. ೧೭); ಎರಡು ಪದಂಗಳಪಭ್ರಂಶಕ್ಕೆ . . . ಸ್ಥಾನಭ್ರಷ್ಟ–ತಾಣಬಟ್ಟ (ಶಮಪ. ೨೮೯ ಪ್ರಯೋ.).(ನಾ). ೨. ಜಾಗದಿಂದ ತಳ್ಳಿಸಿಕೊಂಡವನು; ಪದಚ್ಯುತಗೊಂಡವನು : ನೆಱೆ ಕೈವೀಸುತೆ ದೆಸೆದೆಸೆಯೆಱೆಯರನಾ ತಾಣಬಟ್ಟರಂ ಮಾಡುತೆ . . . ಬೊಬ್ಬಿಱಿವುತ್ತಿರ್ದಂ ರಣಾಗ್ರದೊಳ್ಗಜದನುಜಂ (ವೀರವಿ. ೫-೩೮). [ <ಸಂ. ಸ್ಥಾನಭ್ರಷ್ಟ ]

**ತಾಣಬೀಡು** (ನಾ). ಸೈನ್ಯದ ದಳಗಳು ಬಿಡಾರ ಹೂಡಿರುವ ಸ್ಥಳ : ತುಂಗಭದ್ರೆಯಾ ತಡಿಯೊಳ್ ತಾಣಬೀಡುಗಳಿಟ್ಟು (ಇಅ. XI, ೧೨೭-೮ ; 804). [ ತಾಣ + ಬೀಡು$_2$ ]

**ತಾಣವಿಡಿ** (ಕ್ರಿ). ಸ್ಥಾನವನ್ನು ಹಿಡಿ; ಸ್ಥಳವನ್ನು ಹಿಡಿ : ಶ್ರೀಪತಿಗೊಪ್ಪುವ ತಾಣವಿಡಿದು ಪುಷ್ಪಚಾಪನೋಲಗಶಾಲೆಯಂತೆ ರೂಪುವಿಡಿದ ಹೊನ್ನ ಪುತ್ತಳಿಗಳ ಕಾಂತಿ ವ್ಯಾಪಿಸಿದುವು (ಕಂವಿ. ೨೦-೨೫). [ ತಾಣ + ಪಿಡಿ$_1$ ]

**ತಾಣಾಂತರ,** ಟಾಣಾಂತರ, ಠಾಣಾಂತರ, ಠಾಣಾಂದರ, ತಾಣಂದರ (ನಾ). ೧. ಪಾಳೆಯಂ ; ಠಾಣ್ಯ : ಪೆಂಡತಿಯುಮಂ ಪಿಡಿದೊಡಗೊಂಡು ಪೋಗಿ ಧರ್ಮಾಧಿಕರಣದ ತಾಣಾಂತರದೊಳಿರಿಸಿದಂ (ಪಂಚತಂ. ೬೯-೨). **ಟಾಣಾಂತರ:** ೧. ಕಲ್ಕೆಱೆಯ ಟಾಣಾಂತರಕ್ಕೆ ನಡವ [ಪೆ]ರ್ಗ್ಗಡೆ ವಾಸುದೇವಯ್ಯನುಂ . . . ಕೊಟ್ಟದ್ದು (ಸೌಇಇ. XX, ೬೦-೧೯ ; 1088) ; ನೂಲಂಗೇರಿಯಿಂ ಟಾಣಾಂತರದ ಸುಂಕದ ಪೊಮ್ಮಣಯ್ಯನಾಯಕರು . . . ವರ್ಷಂಪ್ರತಿಗೆ ಬಿಟ್ಟ ಧರ್ಮ (ಎಕ. VII, ಶಿಕಾರಿ. ೨೬೭-೩೨ ; 1147). **ಠಾಣಾಂತರ:** ೧. ತಮ್ಮ ಬೆಸದಿಂ ತಂತಮ್ಮ ಠಾಣಾಂತರಂಗಳೊಳಿರ್ದಂಗಜ ತಂತ್ರದಂತೆಸೆವಿನಂ ಚಿಲ್ವಾದುವಿಮ್ಮಾವುಗಳ್ (ಆದಿಪು. ೧೧-೧೯೭) ; ನಿಮ್ಮಾಜ್ಞೆಯಂ ಮೀಱೆ ದೇವರ ಠಾಣಾಂತರಮಂ ತಿರಸ್ಕರಿಸಿ ನಾಡಂ ವಜ್ರವೀರಂ ಧುರೋದ್ಧುರಶೌರ್ಯಂ ಬಿಡೆ ಕಾಡಿ ಗೋಟಿಡಿಸಿದಂ (ಪಾರ್ಶ್ವಪು. ೨-೧೧) ; ಅಟವೀಮಧ್ಯದ ಸರೋವರದೊಳು ಠಾಣಾಂತರ ಮನಿರಿಸೆ (ಪುಣ್ಯಾಸ್ರ. ೧೧-೮ ವ). ೨. ಸ್ಥಳದಿಂದ ಸ್ಥಳಕ್ಕೆ ಬದಲಾಯಿಸುವಿಕೆ ; ಸ್ಥಳಪಲ್ಲಟ : ಹೋಹ ಬಟ್ಟೆಯಲೊಂದು ಮಾಯೆಯಿದ್ದುದ ಕಂಡೆ ಠಾಣಾಂತರ ಹೇಳಿತ್ತು ಠಾಣಾಂತರ ಹೇಳಿತ್ತು (ಅವಚಂ. ೫೬-೨೩೯). **ಠಾಣಾಂದರ:** ೧. ಶ್ರೀಮತು ಕೊಂಟಿಗೆ ಮುವತ್ತರ ಠಾಣಾಂ[ದ]ರದ ಸುಂಖವೆಗ್ಗ್ಗಡೆ ವೆಂಕಪ್ಪೆಯ (ಸೌಇಇ. XI-i, ೧೦೨-೨೨ ; 1072). **ತಾಣಂದರ:** ೨. "ತಾಣಂದರ–ಸ್ಥಾನಾಂತರ"(ತದ್ಭಕೋ. ೧೭); ಪಲವೆಡೆಯ ಕಡೆಯ ಬಾಡಗಳ ಬನಂಗಳೊಳ್ ತಾಣಂದರಮಾಗಿರ್ಪ ಕೆಂಗಣ್ಣಕ್ಕಿ (ಕಬ್ಬಿಕಾ. ೧೯೭). [ <ಸಂ. ಸ್ಥಾನಾಂತರ ]

**ತಾಣಾದೀವಿಗೆ** 'ತಾಣದೀವಿಗೆ' ನೋ.

**ತಾಣಿಕ** (ನಾ). ೧. ಸ್ಥಾನಿಕ. ೨. ಸ್ಥಾನಿಕನ ಅಧಿಕಾರ : ಈ ದೇವಾಲಯಕೆ ತಾಣಿಕದ ಹೊನ್ನು ಸಮ್ಯಭಾಗ ಈ ದೇವಾಲಯಕೆ ಬಿಡಿಸುವಂ[ತು] ಧಾರಾ ಪೂರ್ವ್ವಕಂ ಮಾಡಿಬಿಟ್ಟ ಧರ್ಮ್ಮ (ವ್ಯಾಅರಿ. ೧೯೨೯, ೫೦-೧೧ ; 1198). [ <ಸಂ. ಸ್ಥಾನಿಕ ]

**ತಾಣು** (ನಾ). ೧. ಶಿವ : ಕ್ಷೋಣಿಯೊಳು ನರರೂಪಧಾರಣ ತಾಣು[ಪಾಠಾಂ. ಸ್ಥಾಣು]ವಲ್ಲಾ ನೀವೆನುತ (ಬಸಪು. ೩೭-೬೦). ೨. ಗೂಟ : "ತಾಣ–ಸ್ಥಾಣು=ಶಿವ, ಗೂಟ" (ತದ್ಭಕೋ. ೧೭). [ <ಸಂ. ಸ್ಥಾಣು ]

**ತಾಣ್ಯ** 'ಟಾಣಯ' ನೋ.

**ತಾತ** (ನಾ). ೧. ತಂದೆ ; ಜನಕ : "ತಾತನೆನೆ ತಂದೆ" (ಮಂಗರಾ. ೯೦-೯); ಎಱಕೆಗಳಿಂದ ಮುಚ್ಚಿ ಮೋಹದೆ ತಾತಂ ಮಱುಗುತ್ತಿರ್ಪನಂ (ಕಾದಂಪೂ. ೦೮೩) ; ಕಂಡರಂದಸ್ತ್ರಿಪ್ರಾಸ್ತ್ರಿಯರೆಂಬ ಕಂಸಸತಿಯರ್ ವಿಖ್ಯಾತನಂ ತಾತನಂ (ಜಗವಿ. ೬-೩೮) ; ಓತು ತಾತಂ ಜಾತಸೂತಕಾತೀತಂಗೆ ಜಾತಕರ್ಮವನೊದವಿ (ಸಿದ್ಧರಾ. ೨-೯) ; ಭೂತಳದ ಮೇಲಾ ವಿರಿಂಚಿಯ ತಾತ ಹುಟ್ಟಿದ ಮಾಡಿ ನೆರಹಿದ ಪುಣ್ಯಫಲದಿಂದ (ಕುವ್ಯಾಅ. ೬೦೪. ೨೬-೮) ; ಎನ್ನ ತಾತನೆ ಎನ್ನ ಪೊರೆವನೆ ಎನ್ನಯ್ಯ (ಜೀವಂಸಾಂ. ೧೯-೩೦). ೨. ತಂದೆಯ ಅಥವಾ ತಂದೆ ತಾಯಿಯ ತಂದೆ; ಅಜ್ಜ; ಪಿತಾಮಹ, ಅಥವಾ ಮಾತಾಮಹ : ನರಸನಾಯಕನ ತಾತನಾದ ತಿಮ್ಮನೆಂಬಾತನು ತುಳುವ ದಂಡನಾಯಕರ ಪೈಕಿ ಬಹಳ ಪ್ರಸಿದ್ಧನಾಗಿದ್ದವನು (ಕ್ಕದೇವ. ೩); ಫಲಿತ ಶಿರದ ತಾತ, ರಾಯರು (ರಾಮಾನ. ೯೭). ೩. ಮುದುಕ; ವೃದ್ಧ : ಏತ ತಲೆ ತೂಗಿದರೆ ನೀರು ಬಂತು, ತಾತ ತಲೆತೂಗಿದರೆ ಪಗಡಿ ಬಿತ್ತು (ಗಾದೆ). ೪. ವಯೋವೃದ್ಧರ ವಿಷಯದಲ್ಲಿ ಗೌರವದಿಂದ ಬಳಸುವ ಮಾತು : ಆ ಮನೆ ತಾತ ಬಹಳ ಒಳ್ಳೆಯವರು (ರೂಢಿ). [ ಸಂ. ]

**ತಾತಪಾದ**(ನಾ). ಗೌರವದಿಂದ ತಂದೆಗೆ ಹೇಳುವ ಮಾತು: ಚರಿಸಲವ್ವಾನು ತಾತಪಾದ ರವಿಚಂದ್ರಮರ ಕಿರಣಗಳ್ಕೊಗಸಲ್ಲವೆಂತೆನುತ (ವೆಂಕಾರಾ. ೫-೩-೫೨). [ ತಾತ + ಪಾದ ]

**ತಾತಾನಿರಾ** (ನಾ). (?) : ಮುರಾರಿರಾಯನು ತಾತಾನಿರಾ ಮಾಡಲಾಗಿ (ಹೈದರ. ೭೦). [ ? ]

**ತಾತಿ$_1$** (ನಾ). ಮಗ : ಅರ್ಕನಿರೆ ವೃಶ್ಚಿಕದೊಳ್ ತಾತಿ (?) ಧನು ನೋಡೆ ಭಾವಿಪುದೀ ತೆಱನನೆಂದು ಪೇಟ್ದಂ (ಜಟ್ಟಮ. ೮-೧೯೩). [ ಸಂ. ]

**ತಾತಿ$_2$** 'ತಾಯಿತಿ' ನೋ.

**ತಾತಿಗಿಡ** (ನಾ). ಒಂದು ಬಗೆಯ ಸಸ್ಯ : ದೊಡ್ಡ ಮರಗಳ ಕೊಂಬೆಗಳನ್ನು ಫರನ್ಸ್ ಎಂಬ ಕ್ರಕಚ ಪತ್ರಗಳಿರುವ ತಾತೀಗಿಡಗಳು ಮುಚ್ಚಿಕೊಂಡಿರುತ್ತವೆ (ಭೂವಿವ. ೦೧೯). [ ತಾತಿ ? + ಗಿಡ (<ಗಿಡು) ]

**ತಾತಿಭೂತ** (ನಾ). ಒಂದು ಬಗೆಯ ಪಿಶಾಚಿ (?) : ಅವರು ಹೇಳಿದ ತಾತಿ[ಪಾಠಾಂ. ತು]ಭೂತದ ಕೋಟಲೆಗೊಳಗಾಗಿ (ಮುದಿಮಾ. ೩೪). [ ತಾತಿ? + ಭೂತ ]

**ತಾತಿವರ** (ನಾ). ಭೂತನಾಥ ; ಶಿವ : ಶ್ರೀರಮಣಂ ಪಯೋಜಭವ ತಾತಿವರಂ ನೆಱೆ ಕಾಣ್ಬೆವೆಂದೊಡಂ ದಾರಿಗೆ ರೂಪುದೋಱದಿರುತಿರ್ಪ ಮಹಾಪರಬೊಮ್ಮ (ಪಂಚಶ. ೬೫-೧). [ ತಾತಿ ? + ವರ್$_2$ ]

**ತಾತ್ಕಾಲಿಕ** (ಗು). ೧. ಆ ಕಾಲಕ್ಕೆ ಸಂಬಂಧಿಸಿದ; ತತ್ಕಾಲೀನ; ಕೂಡಲೆ ಜರುಗುವ; ತಡವಾಗದೆ ಸಂಭವಿಸುವ. ೨. ಅಲ್ಪಕಾಲಿಕ; ಹಂಗಾಮಿಯಾದ ; ಖಾಯಂ ಅಲ್ಲದ: ದಕ್ಷತೆ ಕುಂದಿದಾಗ ಆಗುವ ಪರಿಣಾಮ ತಾತ್ಕಾಲಿಕವಾಗಿರುತ್ತದೆ (ಶಿಕ್ಷದ. ೬೬೩); ಅಂಗ್ಲೇಯ ವೈದ್ಯರು ಕೂಡ ಚಿಕಿತ್ಸೆ ನಡೆಸಿದರು. ಅದರಿಂದ ತಾತ್ಕಾಲಿಕ ಗುಣವಾಯಿತು (ಪ್ರತಾಪ. ೧೭);

(ನಾ). ೩. ಪ್ರಕೃತಕ್ಕೆ ಸಂಬಂಧಿಸಿದುದು : ಶಿಲಾಶಾಸನಗಳ ಲಿಪಿಯೇ ತಾತ್ಕಾಲಿಕವಾಗಿ ಲಿಪಿಶಾಸ್ತ್ರಕಾರರಿಗೆ ಅರ್ಥವಾಗಿರುವ ಪ್ರಾಚೀನ ಲಿಪಿ (ದ್ರಾವಿವಿ. ೪೫). ೪. ಮಾಧುಕರ, ಅಸಂಕ್ಲುಪ್ತ, ಪ್ರಾಕ್ಪ್ರಣೀತ, ಅಯಾಚಿತ ಮತ್ತು ತಾತ್ಕಾಲಿಕವೆಂಬ ಐದು ವಿಧವಾದ ಭಿಕ್ಷೆಗಳಲ್ಲಿ ಒಂದು: ಮಾಧೂ[ಧು]ಕರ . . . ಅಯಾಚಿತ ತಾತ್ಕಾಲಿಕವೆಂಬ ಪಂಚವಿಧ ಭಿಕ್ಷಗಳನಾದೊಡಂ . . . ಭೋಜನಂಗೆಯ್ದು (ವಿವೇಕ. ೧೪೭). [ಸಂ.]

**ತಾತ್ತ್ವಿಕ**(ಗು). ೧. ತತ್ವಶಾಸ್ತ್ರಕ್ಕೆ ಸಂಬಂಧಪಟ್ಟ: ವಿಚಾರಪರ, ತಾತ್ತ್ವಿಕ, ಧಾರ್ಮಿಕ ಗ್ರಂಥಗಳು ರವೀಂದ್ರರನ್ನು ಸಾಹಿತ್ಯಲೋಕದ 'ಗುರುದೇವ' ನನ್ನಾಗಿ ಮಾಡಿವೆ (ಧರ್ಮಸಾ. ೮೧); ನೀವೆಂದು ಇಂಥ ತಾತ್ತ್ವಿಕ ವಿಚಾರಗಳನ್ನು ಚರ್ಚಿಸಬಹುದು (ಪುನರು. ೩೦೫); ಇಲ್ಲಿಯೇ ವೈದಿಕ ಹಾಗೂ ಜೈನಧರ್ಮದ ತಾತ್ತ್ವಿಕ ದೃಷ್ಟಿಯ ತಾರತಮ್ಯವು ಕಂಡು ಬರುವುದು (ಸಾಹಿಸ. ೧೪೪). ೨. ನಿಜವಾದ; ಸತ್ಯವಾದ. [ಸಂ.]

**ತಾತ್ಪರಿಯ** (ನಾ). ೧. ಗುರಿ; ಉದ್ದೇಶ: ಸಮರ ತಾತ್ಪರಿಯದಿಂ ನೆಗೆದಾಡಬಹುದು ತುರಿಯದೆ ಕೈದ ಕೊಳ್ಳೆನುತಲೀಶ್ವರ ಮುಂದುವರಿದೆಚ್ಚನು (ಪ್ರಭುಲಿ. ೩೯-೨೭): ಅರಿವೆರೆಯನಂ ಜೋಲ್ವ ಸಿರಿಬಾಳಮುಮನು ತಾತ್ಪರಿಯದಿಂ ಪಿಡಿದೆತ್ತಿ (ನವಮೋ. ೧೩-೨೪). ೨. ಇಚ್ಛೆ; ಅಪೇಕ್ಷೆ: ಜನಮತದೊಳ್ ಕರಂ ನಿನಗೆ ತಾತ್ಪರಿಯಂ [ಪಾಠಾಂ. ತಾತ್ಪರ್ಯಂ] ಮಿಗೆ (ನೇಮಿಪು. ೩-೫೨). [<ಸಂ. ತಾತ್ಪರ್ಯ]

**ತಾತ್ಪರಿಯವೆಱು** (ಕ್ರಿ). ಆಶಯವನ್ನು ತಿಳಿ; ಉದ್ದಿಷ್ಟ ಅಭಿಪ್ರಾಯವನ್ನು ತಿಳಿ: ಹೇಳು ಹಿರಣ್ಯಾಂಬರನ ತಾತ್ಪರಿಯವೆತ್ತಾಳುಗಳಡಿದಾವರೆಗೆ ಬೀಳುವ ಪುರುಷ ಪಟ್ಟದ ನಿನ್ನ ವಚನವ ಕೇಳುವೆ ಪರಮಸಂತಸದಿ (ಮೋಹತ. ೧-೩೭). [ತಾತ್ಪರಿಯ + ಪೆಱು₁]

**ತಾತ್ಪರಿಸು** (ಕ್ರಿ). ಅಭಿಪ್ರಾಯವಾಗು; ತಿಳಿ: ನೀನೆನ್ನೊಳಿಂತು ಕರುಣದಿಂ ದೊರೆಯೆ ತಾತ್ಪರಿಸಿತದು (ಮನೋವಿ. ೭-೪). [<ತಾತ್ಪರ್ಯ+ –ಇಸು₃]

**ತಾತ್ಪರ್ಯ** (ನಾ). ೧. ಆಶಯ; ಅಭಿಪ್ರಾಯ: ಮುಕ್ತಿಪದಮನೆಯ್ದುವಿನಂ ತಾತ್ಪರ್ಯಮಿದೆ ವರ್ಧಮಾನಾಚಾರ್ಯ . . . ಚರಣಂ ಶರಣಂ (ಸುಕುಮಾ. ೧-೨೭): ಇಂತು ತಾತ್ಪರ್ಯದಿಂದಂ ತತ್ವಜ್ಞರ್ ವಿಸ್ತರಿಸೆ (ಕಾವ್ಯಾವ. ೭೫೪); ಅತಿ ಖೂಳರಪ್ಪ ಮಹೀಸುರಾಳಿಗೆ ಹೋಲುವುದ ಹೊಂದುವುದೆ ಸಜ್ಜನ ಭಕ್ತಿ ತಾತ್ಪರ್ಯ (ಬಸಪು. ೩-೭೭); ಇಲ್ಲಿ ಕ್ರಮದಲ್ಲಿ ತಾತ್ಪರ್ಯವಿರುವುದಿಲ್ಲ (ಬ್ರಹ್ಮಭಾ. ೧೭); ಚಿಕ್ಕಂದಿನಲ್ಲಿ ಮಗುವಿನ ಮನಸ್ಸು ಸಂಸ್ಕಾರಕ್ಕೆ ತಕ್ಕದ್ದಾಗಿರುತ್ತದೆಂಬುದೇ ಇದರ ತಾತ್ಪರ್ಯವೆಂದು ಹೇಳಬಹುದು (ಬ್ರಾಹುಶಾ. ೩); ತಾತ್ಪರ್ಯವೆಂದರೆ ವಾಕ್ಯವನ್ನು ಹೇಳಿದವನ ಅಭಿಪ್ರಾಯ (ಹಿಂದಸಾ. ೧೪೫). ೨. ಗುರಿ; ಉದ್ದೇಶ: ದಕ್ಷಿಣಾಪಥದಿನೊರ್ವಳ್ಕನ್ನೆ ಚಂಡಾಲಿ ದರ್ಶನ ತಾತ್ಪರ್ಯದೆ ರಾಜಕೀರ ಸಹಿತಂ ಬಂದಿರ್ದಪಳ್ (ಕಾದಂಪೂ. ೨೪); ತಾನಾಗಿ ತಾತ್ಪರ್ಯದಿನೆಮಗಿದಿರಂ ಬಂದಪಂ ನಿರ್ವಿಕಲ್ಪಂ (ಸುಕುಮಾ. ೩-೯); ನಿನ್ನಯ ಮನದ ಹವಣಱಿಯಲೆಂದು ನುಡಿಯಿತ್ತಿಲ್ಲ ತಾತ್ಪರ್ಯವಾಗಿ ನುಡಿದೆವ್ಡೆ (ಹಡಶಾ. ೮-೨೫); ಕುಮತಿ ತಿಮಿರ ತಂಡವನು ಪರಿಹರಿಪುದೆಂದು ಬಾಣಾಖ್ಯ ತಾತ್ಪರ್ಯದಿಂದ ಬಿನ್ನವಿಸಲು (ನವಮೋ. ೨೮-೫೭). ೩. ಒಲವು; ಆಸಕ್ತಿ; ತತ್ಪರತೆ: ಶೌಚದೊಳಾಚಮನದೊಳು ತಾತ್ಪರ್ಯಮನುಳ್ಳಂ (ಪ್ರತಿಷ್ಠಾ. ೧-೨೦); ಧರ್ಮ್ಮಕಾರ್ಯ್ಯ ತಾತ್ಪರ್ಯ್ಯದೊಳಗ್ರಣಿಯೆಂಬುದು . . . ಮಾಚಬೋವನಂ ಭೂಭುವನಂ (ಎಕ. VI, ಚಿಕ್ಕಮ. ೧೪೭-೯೯; 1130): ಬಲ್ಲಾಳದೇವಂಗೆ ಸಂಗಡವೆಂತಪ್ಪೆಡೆಯಲ್ಲಿಯುಂ ಕುವರಲಕ್ಷ್ಮಂ ತಾನೆ ತಾತ್ಪರ್ಯದಿಂ ತೊಡರೆ (ಎಕ. V, ಬೇಲೂರು. ೧೦೨-೭೦; ಸು. 1220); ಶ್ರೀನಿವಾಸರಾಯರಲ್ಲಿ ಶಿವಣ್ಣನಿಗೆ ಬಹಳ ತಾತ್ಪರ್ಯವೆಂದು ಹಿಂದೆಯೇ ಹೇಳಿದೆ (ದೇವಮ. ೭೪). [ಸಂ.]

**ತಾತ್ಪರ್ಯಕಾರ್ಯ** (ನಾ). ಉದ್ದಿಷ್ಟವಾದ ಕಾರ್ಯ; ಇಚ್ಛಿಸಿದ ಕೆಲಸ: ಮಗನೆ ತಾತ್ಪರ್ಯಕಾರ್ಯಸಿದ್ಧಿಯಪ್ಪಂತು ರಾಜ್ಯದೊಳ್ಳಿಂದು . . . ಸುಖಮನನುಭವಿಸು (ಮಲ್ಲಿಪು. ೯-೯೦). [ತಾತ್ಪರ್ಯ + ಕಾರ್ಯ]

**ತಾತ್ಪರ್ಯಗೊಳ್ಳು** (ಕ್ರಿ). ಅಭಿಪ್ರಾಯವನ್ನು ಹೊಂದು: ಈ ತಾತ್ಪರ್ಯಗೊಂಡ ವೇದಭಾಗಗಳು ಋಗಾದಿ ನಾಲ್ಕು ವೇದಗಳಲ್ಲಿಯೂ ಪಠಿತವಾಗಿರುವುವು (ಭಾರದ. ೩೭೯).
[ತಾತ್ಪರ್ಯ + ಕೊಳ್ಳು₁ (<ಕೊಳ್₁)]

**ತಾತ್ಪರ್ಯಜ್ಞಾನ** (ನಾ). ಪದ ಪ್ರಯೋಗ ಮಾಡಿದವನ ಇಚ್ಛೆಯನ್ನು ತಿಳಿಯುವಿಕೆ; ಇಂಗಿತ ಜ್ಞಾನ: ಶಾಬ್ದಜ್ಞಾನಕ್ಕೆ ಕಾರಣಗಳು ಅನೇಕ. ಇವು ಆಸಕ್ತಿ, ಯೋಗ್ಯತೆ, ಆಕಾಂಕ್ಷೆ ಮತ್ತು ತಾತ್ಪರ್ಯಜ್ಞಾನ ಎಂಬುವು (ಭಾತತ್ತ್ವ. ೨೮೨). [ತಾತ್ಪರ್ಯ + ಜ್ಞಾನ]

**ತಾತ್ಪರ್ಯನಿರ್ಣಯ** (ನಾ). ಮುಖ್ಯಾಭಿಪ್ರಾಯದ ತೀರ್ಮಾನ,– ಸಿದ್ಧಾಂತ: ಐದು ಯೋಗದ ಸಾರಮಂ ಸಂಕ್ಷೇಪದಿಂದವೆ ಬೇರೆ ಬೇರಾಗುಸುರುವೆವು ತಾತ್ಪರ್ಯನಿರ್ಣಯವ (ಗಗತಾ. ೧೧-೧೯).
[ತಾತ್ಪರ್ಯ + ನಿರ್ಣಯ]

**ತಾತ್ಪರ್ಯಾರ್ಥ**(ನಾ). ಉದ್ದಿಷ್ಟವಾದ ಅರ್ಥ,–ಆಶಯ; ಮುಖ್ಯಾರ್ಥ: ಅವಱವಱ ಬಱಿಯೊಳ್ ವೃತ್ತಿಯ ವಿಸ್ತರಂ ವ್ಯಾಕುಲವಾದಪುದೆಂದಾ ಸೂತ್ರಕ್ಕೆ ತಾತ್ಪರ್ಯಾರ್ಥಂ ಪ್ರವರ್ತಿಸುತ್ತಮಿರೆ ವೃತ್ತಿಯಂ ಬರೆದೆಂ (ಶಮದ. ೬ ವೃತ್ತಿ). [ತಾತ್ಪರ್ಯ + ಅರ್ಥ]

**ತಾತ್ಪೂರ್ತಿಕ** (ಗು). ತಾತ್ಕಾಲಿಕ; ಸದ್ಯಕ್ಕೆ ಬೇಕಾದ; ಆ ಕಾಲಕ್ಕೆ ಸೀಮಿತವಾದ: ಆಧ್ಯಾತ್ಮಿಕ ಸತ್ಯವೆಂಬುದು ಕೇವಲ ತಾತ್ಪೂರ್ತಿಕವಾಗಿ ಆಕಲನ ಮಾಡಿಕೊಂಡು ಅನುಭವಿಸತಕ್ಕ . . . ವಿಷಯವಾಗಿರದೆ (ಮಹಾಯೋ. ೧೭೩); ತಾತ್ಪೂರ್ತಿಕ ಮಂತ್ರ ತಂತ್ರಗಳಲ್ಲಿ ಅವನಿಗೆ ಗತಿಯಿತ್ತು (ಸಮುಜೀ. ೧೨); ತಾತ್ಪೂರ್ತಿಕವಾಗಿ ನಾವು ಕವಿಚರಿತೆಯ ಗ್ರಹಿಕೆಯನ್ನು ಅನುಸರಿಸಿದ್ದೇವೆ (ಕಸಾಜ. ४೭); ನನಗೆ ಕೇವಲ ಅಡಚಣೆಯ ಬಗ್ಗೆ ತಾತ್ಪೂರ್ತಿಕವಾಗಿ ಅವರಿಂದ ನೆರವು ಬೇಕಾಗಿದ್ದಿತು (ಹೇಮಂತ. ೧೪೭); ನಾನು ಒಪ್ಪಿಸುವ ಕೆಲಸ ತಾತ್ಪೂರ್ತಿಕವಾದುದು (ಜಯಂತ. ೩೪೭). [?]

**ತಾತ್ವಿಕ** (ಗು). = ತಾತ್ತ್ವಿಕ ೧: ಆದಿಭೌತಿಕ, ಪ್ರಾರಂಭಿಕ, ತಾತ್ವಿಕ (Elementary. ಪಾರಿನಿ. ೩೭). [ಸಂ. ತಾತ್ತ್ವಿಕ]

**ತಾತ್ಸಾರ** (ನಾ). ತಿರಸ್ಕಾರ; ಉದಾಸೀನತೆ; ಅಗೌರವ: ತಾತ್ಸಾರದಿ ನುಡಿದಳು ನಿನ್ನ ಮರುಕವಾರಿಗೆ ಬೇಕು (ಗಡೇಶ. ೫೧-೧); ಆ ಮುದುಕನಿಗೆ ಮನುಷ್ಯರ ಮೇಲೆ ಅಷ್ಟೊಂದು ತಾತ್ಸಾರವೇ (ಕಂಬಹು. ೧೫); ಜಯೆ ಮಾತ್ರ ಮೊದಲಿನಿಂದಲೂ ತಾತ್ಸಾರದಿಂದಲೇ ಬೆಳೆಸಲ್ಪಟ್ಟವಳು (ದಕ್ಷಿನ.೩೨).

**ತಾತ್ಸಾರ ಮಾಡು**=ಕಡೆಗಣಿಸು; ಅಲಕ್ಷಿಸು; ಉದಾಸೀನ ಮಾಡು: ತಾತ್ಸಾರ ಮಾಡುವೆನೊ ಎನಗಿಂದ ನೀಚರಲಿ ಮತ್ಸರಿಪೆಯೆನ್ನ ಸಮಾನಿಕರ ಕೂಡ (ವಿದಾಕ್ಕ. ४೦-೧); ಎಷ್ಟು ಮಾತ್ರವೂ ತಾತ್ಸಾರಮಾಡಬೇಡ (ಮುಂಬಯಿ. ४-೩೯); ಅವರ ವಿಶ್ವಾಸವನ್ನು ನೀನು ತಾತ್ಸಾರವಮಾಡಬಾರದು (ವೀರಯೋ. ೩೮); ಇಷ್ಟು ದಿನ ತಾತ್ಸಾರ ಮಾಡಿ, ಅದನ್ನು ಮನದ ಮನೆಯಲ್ಲಿ ಸಾಕಿಕೊಂಡಿದ್ದಾಯಿತು (ಚಿತಂಬಾ. ೨೭).
[?./ತೆಲು. ತಾತ್ಸರ್ಯ, ತಾತ್ಸಾರ್ಯ]

**ತಾತ್ಸಾರಭಾವ** (ನಾ). ತಿರಸ್ಕಾರದ ಭಾವನೆ: ಅವನ ಮುಖದಲ್ಲಿ ಒಂದು ರೀತಿಯ ತಾತ್ಸಾರಭಾವ ಮೂಡಿದ್ದಿತು (ಅನಾಮಿ. ೫೨).
[ತಾತ್ಸಾರ + ಭಾವ₂]

**ತಾದರ್ಥ್ಯ** (ನಾ). ೧. ಅದೇ ಗುರಿಯಾಗಿರುವಿಕೆ,– ಉದ್ದೇಶವಾಗಿರುವಿಕೆ: ಅದಕ್ಕೋಸುಗರ (ತಾದರ್ಥ್ಯ, ಅಂತರ) (ನಾಚಿರಾ. ೩). ೨. ಅದೇ ಅರ್ಥವಾಗಿರುವಿಕೆ; ಸಮಾನವಾದ ಅರ್ಥವಾಗಿರುವಿಕೆ. [ಸಂ.]

**ತಾದಾತ್ಮ್ಯ** (ನಾ). ೧. ಅದೇ ಆಗಿರುವಿಕೆ; ಅಭೇದ; ಅಭಿನ್ನತೆ: ಇಂತು ತಾದಾತ್ಮ್ಯ ಮನೋಹರಂಗಳುಮಾಯತ್ತ ವಿರುದ್ಧಂಗಳುಮಪ್ಪ ವಿನೋದ ಪರಂಪರೆಗಳಿಂ ಕಾಲಮಂ ಸಲಿಸುತ್ತುಮಿರೆ (ಚಂದ್ರಪು. ೨-೧೭) : ತೆರೆಗೆ ಬರಲಿ ತಾದಾತ್ಮ್ಯ ಹೊಂದಿ ನಟ–ನಾಟ್ಯ ಜೀವಪಾಕ (ನೆಲಮು. ೪೯-೬); ಜೀವ ಬ್ರಹ್ಮರ ಸಂಬಂಧದಲ್ಲಿ "ತಾದಾತ್ಮ್ಯ" ಸಂಬಂಧವಿದೆಯೆಂಬ ಒಂದು ವಾದವಿದೆ (ಜೀವಾತ್ಮ. ೨೯೭). ೨. ಮಗ್ನತೆ ; ತಲ್ಲೀನತೆ : ಆ ಸನ್ನಿವೇಶ ದೊಡನೆ ವಿಷ್ಣು ಇದೊಂದು ತಾದಾತ್ಮ್ಯವನ್ನು ಹೊಂದಿದ್ದ (ಸಮಜೀ. ೧೦೭೪) ; ನನ್ನ ಲೋಕದಲ್ಲಿ ನನ್ನಷ್ಟೇ ತಾದಾತ್ಮ್ಯದಿಂದ ಬದುಕಬಲ್ಲ ವ್ಯಕ್ತಿಯಲ್ಲದಿದ್ದರೆ . . . ನನಗೆ ತಕ್ಕ ಸಹಚಾರಿಣಿ ಹೇಗಾಗಬಲ್ಲಳು ದೂರಸ. ೭೨). [ ಸಂ. ]

**ತಾದಾತ್ಮ್ಯಭಾವ** (ನಾ).=ತಾದಾತ್ಮ್ಯ ೧: ಚಿತ್‌ಶಕ್ತಿಯು ಪರಮಾತ್ಮನಲ್ಲಿ ತಾದಾತ್ಮ್ಯ ಭಾವದಿಂದ ಅಡಗಿದ್ದರೆ, ಮಾಯಾಶಕ್ತಿ . . . ಭೇದಬುದ್ಧಿಯನ್ನು ಹುಟ್ಟಿಸುತ್ತಲಿರುವುದು (ಶಕ್ತಿವಿ. ೨೭). [ ತಾದಾತ್ಮ್ಯ + ಭಾವ$_2$ ]

**ತಾದೃಶ** (ಗು). ಅಂತಹ; ಆ ರೀತಿಯ; ಆ ವಿಧವಾದ. [ ಸಂ. ]

**ತಾದ್ಧರ್ಮ್ಯ** (ನಾ). ಅದೇ ಧರ್ಮವನ್ನು ಹೊಂದಿರುವಿಕೆ ; ಅದೇ ಸ್ವಭಾವವಾಗಿರುವಿಕೆ ; ಸಮಾನತೆ ; ಸಾಮ್ಯ. [ ಸಂ. ]

**ತಾದ್ರೂಪ್ಯ** (ನಾ). ಅದೇ ರೂಪ ; ಸಮಾನಧರ್ಮ : ಕೆಲವು ಕಡೆ ತಾದ್ರೂಪ್ಯವು ( ಅದರಂತಿರುವುದು ) ಇರುತ್ತದೆ (ಕ್ಯಬಿಡಿ. ೨೭೩). 'ತಾದ್ರೂಪ್ಯರೂಪಕ' ಪರಾ. [ ಸಂ. ]

**ತಾದ್ರೂಪ್ಯರೂಪಕ** (ನಾ). [ ಕಾವ್ಯಮಿಾ ] ಒಂದು ಬಗೆಯ ರೂಪಕಾಲಂಕಾರ : ಉಪಮಾನೋಪಮೇಯಂಗಳನೊಂದುಗೊಳಿಸಿ ಪೇೞ್ವುದು ತಾದ್ರೂಪ್ಯರೂಪಕಂ (ಅಪ್ರತಿ. ೪೨-೩) ; ಕಿಡಿಸಲ್ ಪಂಕಜ ದುರ್ಕನೇಂ ನೆರೆಯದೋ ನೇತ್ರೋತ್ಪಲಾನಂದಮಂ ಪಡೆಯಲ್ ಸಾಲದೊ ಮನ್ಮಥಂಗೆ ಜಯಮಂ ಮೇಣೇಯದೋ ಸಾಲದೇಂ ಗಡಮಿಾ ಕಾಂತೆಯ ವಕ್ತ್ರಚಂದ್ರನೆಲೆ ತಾನೇನೆಂದು ಚಂದ್ರಂ ನಭಕ್ಕಡರ್ವಂ ಗೆಲ್ಲದೆ ತನ್ನೊಳುಳ್ಳಮೃತಮಂ ಬಿಂಬಾಧರಸ್ಥಾಮೃತಂ. ಇಲ್ಲಿ ಪ್ರಸಿದ್ಧ ಚಂದ್ರನಿಂದ ಆಗತಕ್ಕ ಕಾರ್ಯವೆಲ್ಲವೂ ತದ್ರೂಪನಾದ ವಕ್ತ್ರಚಂದ್ರನಿಂದ ಆಗುವುದೆಂದು ವರ್ಣಿತವಾಗಿರುವದರಿಂದ ಇದು ತಾದ್ರೂಪ್ಯರೂಪಕ (ಕ್ಯಬಿಡಿ. ೨೭೩). [ ತಾದ್ರೂಪ್ಯ + ರೂಪಕ ]

**ತಾನ್,ತಾ$_2$,ತಾಂ,ತಾನಂ** (ಸ). ಪ್ರಥಮ ಪುರುಷ ಏಕವಚನ ಆತ್ಮಾರ್ಥಕ ಸರ್ವನಾಮ. **P** ಕ್ರಮವಾಗಿ ಏಳು ವಿಭಕ್ತಿಗಳು– ತಾನ್, ತನ್ನಂ, ತನ್ನಿಂ, ತನಗೆ, ತನ್ನತ್ತಣಿಂ,ತನ್ನ, ತನ್ನೊಳ್; (ಬಹುವ) ತಾಮ್, ತಮ್ಮಂ, ತಮ್ಮಿಂ, ತಮಗೆ, ತವಗೆ, ತಮ್ಮತ್ತಣಿಂ, ತಮ್ಮ, ತಮ್ಮೊಳ್ : ತಾನಿನ್ತೆನ್ದು ಕಟ್ವಿಪ್ಪಿನುಳ್ ತೊೞಿದಾರಾಧನೆ ನೋನ್ತು . . . ಸ್ವಗಾಲಯಕ್ಕೇಱಿದಾರ್ (ಎಕ. II, ೭೬-೩ ; ಸು. 700) ; ಸಾಱುಗಾನೆಯುವರೆಲ್ಲರುಮಂ ನೃಪ[ತಾ] ನೆ ಮತ್ತೇಱು[ವಂ] ಪಣಿದೊಡಾನೆಯಂ (ಕವಿರಾ. ೧-೧೩೩); ಮೆಚ್ಚಿ ವಿನಾಯಕಂ ತಾನ್ನಿಮಿರ್ಚುಗೆ ಕಬ್ಬಮಂ ನಯದಿಂ (ಪಂಪಭಾ. ೧-೭) ; ನ್ರಿ(ನೃ)ಪಾಲಕ ಪ್ರಳಿ(ಳ)ಯ ಸಂಪಾದಕ್ಷ ಮೋಚ್ಚಣ್ಣಭೈರವಿ ತಾನಾಗಿಯುಂ (ಇಅ. XVIII, ೨೭೩-೧೫ : 1072) ; ತಾನೇನ ಬೇಡಿದೊಡಂ ಬೇಡಿದುದಂ ಕುಡುವುದು (ಧರ್ಮಾಮೃ. ೧-೧೨೬). **ತಾ$_2$ :** ಶೋಕಾಕ್ರಾಂತದಿಂದಂ ತನ್ನ ತಾ ಮಱಿದು (ಬಸಪು. ೪೫-೬) ; ತಾ ಬಲ್ಲೆನು ಮಹಾಹವದೊಳಗೆ ಪದ್ಮವ್ಯೂಹ ಭೇದನವ (ಕುಮಾದ್ರೋ. ೪-೩೫); ತಾ ಪಡೆದು ಬಂದುದಕೆ ಉಪಾಯವೇನು (ಪುರಂದ. ೪-೫೪ ಪಲ್ಲವಿ); ಅಲರು ತಾ ಹಾರೈಸಿ ಪೋಪುದೆ ತುಂಬಿಯಿದ್ದೆಡೆಗೆ (ನಳಚ. ೩-೩೨) : ತಾ ಕಳ್ಳ ಪರರ ನಂಬ (ಗಾದೆ) ; ತಾ ಬಲ ಜಗ ಬಲ (ಗಾದೆ). **ತಾಂ :** ತಾಂ ಸ್ಥಿರದರಳಿನ್ತು ಪೇಗುರಮ ಸುರಲೋಕ ವಿಭೂತಿ ಎಯ್ದಿದಾರ್ (ಎಕ. II, ೨೬-೨ ; 700) ; ಪೂರ್ವಕಾವ್ಯರಚನೆಗಳಂ ತಾಂ ಮೊದಲೊಳ್ ಕಲ್ತಂಗಲ್ಲದೆ ಪದದೊಳ್ ಜಾಣಂ ಬೆಡಂಗುಮಕ್ಕುಮೆ ಕೃತಿಯೊಳ್ (ಕವಿರಾ. ೧-೯) : ಕುರುಡಂ ಕಣ್ಬೆತ್ತವೋಲ್ ರಾಗದಿಂದೊಡೆಯ[ಂ ತಾಂ] ಬಗೆದುಳ್ಳ ಸಾರಧನಮಂ ಮುಂದಿಟ್ಟತಿಪ್ರೀತಿಯಂ ಪಡೆದಂ (ಪಂಪಭಾ. ೯-೫) ; ರಸೆಯಂ ತಾಂ ತಾಂಕಿ ಕಲ್ಪಾಂತದ ಬಱಸಿಡಿಲೆಯ್ತಂದು ಪೊಯ್ಕಲ್ (ಕಾದಂಪೂ. ೭೦೦); ತಾಂ ಗಡ ಮಧ್ಯಸ್ಥಂ ನುಡಿವಂ ಗಡ (ಗದಾಯು. ೭-೪೯); ಶ್ರೀಕಾಂತೆಯುಂ ಬಂದು ತಾಂ ಪರಮಾನಂದದೆ ಸೇಸೆಯಿಂ ಪರಸೆಯುಂ ತಾನಾಂತುಕೊಂಡು (ಗದಾಯು. ೯-೩೯) ; ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ಧರ್ಮಾಮೃ. ೨-೯೨). **ತಾನು :** ತನ್ನ ತಾನಱಿದೊಡೆ ನುಡಿಯಲ್ಲಿ ತತ್ತ್ವ ನೋಡಾ (ಅವಚಂ. ೨೧೧-೯೫೨) ; ಎತ್ತಲೊಲೆವುದು ಧರ್ಮಬಲ ತಾನತ್ತಲೊಲೆವುದು ದೈವ (ಕುಮಾದ್ರೋ. ೪-೨) : ತಾನು ಕೋಡಗ ಪರರನ್ನು ಅಣಕಿಸಿತು (ಗಾದೆ). **ತಾಮ್, ತಾವು** (ಬಹುವ): ನವಿಲೂರ ಸಂಘದ ಮಹಾನನ್ತಮತೀ ಖನ್ತಿಯಾರ್ . . . ಸುರಲೋಕಸೌಖ್ಯದೆಡೆಯಾನ್ತಾಮೆಯ್ದಿ (ಎಕ. II, ೯೮-೪; ಸು. 700) ; ತಾಮುಂ ಮನದುತ್ಸವದಿಂ ಕುಣಿವಂತನಿಲಾಹತ ಕೇತನಾಳಿ ಸೊಗಯಿಸಿ ತೋರ್ಕುಂ (ಕವಿರಾ. ೧-೯೭) ; ತಾಮೆ ಕನ್ನಡಿಸಿ [ಪಾಠಾಂ. ಕಾಮಮಂನ್ನಡಿಸಿ]ದಪ್ಪವು ಕನ್ನೆಯ ಕನ್ನೆವೇಟಮಂ (ಪಂಪಭಾ. ೪-೬೧) ; ಜಾಬಯ್ಯೆಗೆ ತಾಮಾದರ್ ತನಯರ್ (ಎಕ. II, ೧೩೯-೪ ; 950) ; ಅರ್ಕನಂದನನೊಡನಿಲ್ಲದೆ ತಾಮೆ ಬೇಱೆ ಕೂರಿದರೊಳರೇ (ಗದಾಯು. ೩-೬೫) : ತಾಮೆ ಜಗಕೆಲ್ಲಂ ದೇವರೆಂಬಂತೆ ತೀವುಗುಮುತ್ತಾನಿತಮಿಕ್ಷು ಯಂತ್ರ ನಿನದಂ (ಮಲ್ಲಿಪು. ೨-೪೪); ಮತ್ತಂ ತಾವು ಕೊಂಡುಪವಾಸಮಂ ಗುರುಗಳ್ಗೆ ಪ್ರಕಟಿಸಿದರ್ (ವಡ್ಡಾರಾ. ೭೯-೨೯) ; ಗುಣದೋಷಮಂ ನಿಕಷಮಿಟ್ಟು ಪರೀಕ್ಷಿಸಿ ನೋಡೆ ತಾವೆ ಪೇೞವೆ ಬುಧರಿರ್ದು ನೋೞ್ಪುದು ಪುರಾತನ ನೂತನ ಕಾವ್ಯರೇಖೆಯಂ (ಗದಾಯು. ೧-೪೭) ; ಇದಿರ ಗುಣವ ಬಲ್ಲೆವೆಂಬರು ತಮ್ಮ ಗುಣವ ತಾವಱಿಯರು(ಬಸವ. ೧೨೩) ; ನಾಗರಸರೂ ತಾವು ಏಕಸ್ಥರಾಗಿ ಕವಿಳಾಸಪುರದೊಳಗೆ (ಎಇ. XXI, ೧೪-೫೮ ; 1260) ; ಭಕ್ತರು ತಾವು ಸರ್ವರು ಸಂದಣಿಸಿ ನೋಡಲ್ಕೆ ಕೇಳಲ್ಕೆ (ಬಸಪು. ೩೬-೨೨); ತಾವು ಷಡುರಥರೊಬ್ಬ ಹಸುಳೆಯ ಹೇವವಿಲ್ಲದೆ ಕೊಂದರೋ ಸುಡಲಾವ ವೀರರು ಕೌರವಾದಿಗಳೆಂದುದಮರಗಣ (ಕುಮಾದ್ರೋ. ೭-೬೩).

**ತಮ್ಮತಮ್ಮ, ತಂತಮ್ಮ, ತಮತಮ, ತಮತಮ್ಮ** (ದ್ವಿರುಕ್ತಿ) : ತಳದೇ ನಿರ್ದರೋ ತಮ್ಮತಮ್ಮ ತಲೆಯೊಳಾಜ್ಞಾಜ್ಞೆಯಂ (ಕಾದಂಪೂ. ೨೩) ; ತಮ್ಮತಮ್ಮಲ್ಲಿ ಆಲೋಚಿಸಿ . . . ಅವರೊಡನೆ ಹೊರಟರು (ವಚಭಾ. ೧೫): ತಂತಮ್ಮ ಋಷಿಸಮುದಾಯಂ ಬೆರಸು ಸಿಂಧುವಿಷಯಕ್ಕೆ ಪೋದರ್ (ವಡ್ಡಾರಾ. ೮೮-೧೫); ಸಂತಸಂಬಡಿಸಿ ತಂತಮ್ಮ ನೆಲೆಗಳ್ಗೆ ಪೋಗಲ್‌ವೇೞ್ದಂ (ಆದಿಪು. ೧೩-೪೧ ವ) ; ತಂತಮ್ಮ ಕಂಬನಿಯಲೆಲ್ಲರೂ ಮುಳುಗಿದರೆ ಕೆಳೆಯ ಬೇಡುವ ಎದೆಗೆ ಯಾರು ಜೋಡು ? (ಉಯ್ಯಾಲೆ. ೩೭-೩) : ಕೆಲಸವಂ ಮಾಳ್ಪಾಳು ತಮತಮ ಕೆಲಸಗಳಿಗೇ ಕರ್ತರಲ್ಲದೆ ಫಲದ ಕರ್ತರೆ (ಬಸಪು. ೫೪-೧೯); ದುಗುಡದ ಮುಸುಡುಗಳುವೆರಸೆಯ್ದಿದರು ತಮತಮ್ಮ ಮನೆಗಳಿಗೆ (ಬಸಪು. ೩-೮೫). **ತಂತಾನೆ** = ತನ್ನಷ್ಟಕ್ಕೆ ತಾನೆ ; ಹೊರಗಿನ ಪ್ರೇರಣೆಯಿಲ್ಲದೆ : ತಂತಾನೆ ನೆಲದಾಳದಲ್ಲಿ ಹದಗೊಂಡ ಬೀಜದ ಮೊಳಕೆ ಮಣ್ಣ ಬಿರಿದೇಳುವುದು (ನೆಲಮು. ೬೮-೨) ; ಅವರೇ ಮಾತಾಡದಿರುವಾಗ ಮನೆಯವರೆಲ್ಲರೂ ತಂತಾನೆ ಮೂಕರಾಗಬೇಕಾಯಿತು (ಸ್ಮೃತಿಚಿ ೨೪೫). **ತನಗೆ ಮಾಡು** = ತನ್ನ ಕಡೆಗೆ ಸೇರಿಸಿಕೊಳ್ಳು ; ತನ್ನ ಪಕ್ಷಕ್ಕೆ ಬರುವಂತೆ ಮಾಡು : ದುರ್ಯೋಧನಂ ಕೃಷ್ಣನಂ ತನಗೆ ಮಾಡದನ್ನೆಗಂ ಮುನ್ನಮೆ ಪನ್ನಗಶಯನನಂ ನಮಗೆ ಮಾಡುವುದುತ್ತಮ ಪಕ್ಷಂ (ಪಂಪಭಾ. ೯-೧೦ ವ). **ತನತನಗೆ** = ೧. ತನ್ನಷ್ಟಕ್ಕೆ: ಅವನು ತನತನಗೆ

ಮಾತನಾಡಿಕೊಳ್ಳುತ್ತಿದ್ದ (ರೂಢಿ). ೨. ತಮತಮಗೆ; ತಮ್ಮಷ್ಟಕ್ಕೆ: ಬೆದಱಿ ಪುಲಿ ಬಾವಿಯೊಳು ಬಿರ್ದುದನಱಿದೊಡೆ . . . ಪಿಡಿದು ತೆಗೆವ ರಾರೆಂಬುದನೆನಿಸಿ ಜನಂ ತಗುಳ್ದು ತನತನಗೆಂಗುಂ (ಸುಕುಮಾ. ೭-೩೭); ಚೋದ್ಯಂಬಟ್ಟರಲ್ಲಲ್ಲಿ ತನತನಗೆ ಹರಿಹರಿದು ನೆರೆನೆರೆದು ನುಡಿನುಡಿದರು (ಸಿದ್ಧರಾ. ೨-೮); ಕಣ್ಣಪ್ಪನುಂ ಶಿವನುಂ ತನತನಗೆ ತಾವೊಬ್ಬರೊಬ್ಬರು . . . ನೋಡುತ್ತಿರ್ಪ ಸಮಯದಲಿ (ಬಸವು. ೧೮-೮೨); ಸುಭಟರು ತನ ತನಗೆ ತೊಲಗಿದರು (ಕುಮ್ಮಾಭೀ. ೨-೨೯). **ತನ್ನತನ=ತನ್ನದೇ ಆದುದು**; **ಸ್ವಂತಿಕೆ**: ನನ್ನ ಮನಸಿದು ತನ್ನತನವ ಕಾಣೆನಲ್ಲ ಎನುತಲಿರುವುದು (ವಿಜಯ. ೧೮-೩); ತಾನೆಲ್ಲಿ ತನ್ನತನವೆಂಬುದಾದರೂ ಎಲ್ಲಿ (ವೀರಬಂ. ೫೮). **ತನ್ನತಾನು = ತನ್ನಷ್ಟಕ್ಕೆ ತಾನು**: ಉನ್ನತಮಪ್ಪಾ ಗಜರತ್ನವೆಯ್ದಿತು ತನ್ನತಾನಾ ನೃಪನೆಡೆಗೆ (ಶ್ರೀಪಾಲ. ೧೩-೯); ಅದನು ಆನಂದರಸದ ಸುಧ್ಯಾನದೊಳಿಡೆ ತನ್ನತಾನೆ ಮೂಜಗವ ಹಬ್ಬುವುದು (ಭರತೇ. ೬೯-೧೦೯). **ತನ್ನಳ್ = ತನ್ನವಳು**: ಭೃಂಗಾಳಿಯಂ ಕಂಡು ತನ್ನಳ ನೀಲಾಳಕಮೆಂದು ನೇವರಿಸಲೊಲ್ವಂ (ವೃಷವಿ. ೨೯-೨೮). **ತಮತಮಗೆ, ತವತವಗೆ = ೧. ತಮ್ಮಷ್ಟಕ್ಕೆ ತಾವು**: ಜೀರ್ಕೊಳವೆಗಳಂ ತಮತಮಗೆ ತಳೆದುಕೊಂಡು ವಿವಿಧ ಗಂಧಜಲಂಗಳಿಂದೋರೋರ್ವರಂ ಸಿಂಪಿಸುವಾಗಳ್ (ಚಂದ್ರವು. ೭-೧೨೯); ಲೋಕಂ ತಮತಮಗೆ ಪಲವಂದದಿಂ ಕೀರ್ತಿಸುತಿರಲು (ಬಸವು. ೫೩-೭); ಹೊಡಿದರು ಹೊಗರಂಬುಗಳನುಬ್ಬೆದ್ದು ತಮತಮಗೆ (ಕುಮ್ಮಾದ್ರೋ. ೧-೭೮); ತವತವಗೆ ಸಿದ್ಧಕನ್ಯಾನಿವಹಂ ಸಂಧ್ಯಾರ್ಚನಕ್ಕೆ ಸೂಸಿದ ಕುಸುಮಾಳಿವೊಲೆಸೆಯೆ (ಕಾದಂಪೂ. ೨೭೬); ಕರ್ಮಮೆಂದು ಮಾತಿಂ ಮುನ್ನಂ ತವತವಗೆ ನುಡಿವರ್ (ಸಮಮ. ೨-೪); ಅನಿಬರು ತವ ತವಗೆ ನಾಚಿದರು ಕೋಳಾಹಳಕೆ ಪವನಜನ (ಕುಮ್ಮಾಕ. ೨೦-೧). ೨. ತಾವೇ; ಸ್ವತಃ: ಅಮರಾಂಗನೆಯರ್ ತಮತಮಗೆ ಗರ್ಭಶೋಧನಾ ವಿಧಿಯಂ ಮಾಡಿ ವಿವಿಧ ವಿನೋದಂಗಳಂ ಮೆಱೆಯುತಿರ್ಪನ್ನೆಗಂ (ಅಜಿಪು. ೩-೧೦ ವ). **ತಮ್ಮತನ = ಸ್ವಂತಿಕೆ**: "ತಮ್ಮತನ"ವನ್ನು ಮರೆತ ಕನ್ನಡಿತಿಯರು ನಿರುಪ ಯೋಗಿಗಳಾಗುತ್ತಾರೆ (ಕನ್ನನು. I, ೧೮). **ತಮ್ಮತಾವೆ=ತಮ್ಮಷ್ಟಕ್ಕೆ ತಾವು**: ಸ್ವರ್ಗಂಗಳೊಳ್ ಘಂಟಾಧ್ವನಿಗಳ್ ತಮ್ಮ ತಾವೆಯಾಗುವುದುಂ (ಪೂರ್ವಪು. ೪೨); ಜಯಜಯಯೆಂದು ಘೋಷವ ಮಾಡಿದರು ತಮ್ಮತಾವೆ (ಭರತೇ. ೫೬-೧೦). **ತಾನಾಗಿ = ಸ್ವತಃ**: ಈ ಕಟ್ಟುಪಾಡಿನಿಂದ ಅವನು ತಾನಾಗಿಯೇ ದಾರಿಗೆ ಬರುತ್ತಾನೆ (ರೂಢಿ). **ತಾನೆ = ೧. ಸ್ವತಃ**: ಮಹೀಕಾಂತೆಯಂ ರಕ್ಷಿಸಲ್ ತಾಂ ಜಲಜಾಕ್ಷಂ ತಾನೆ ಬಂದಂತೆ (ಎಕ. VII, ಶಿಕಾರಿ. ೫-೧೦; 1218). ೨. ಅಲ್ಲವೆ ಎಂಬ ಅರ್ಥದಲ್ಲಿ ಬರುವ ಅವಧಾರಣೆ: ನೀನು ನಮ್ಮೂರಿಗೆ ಬರುವೆ ತಾನೆ? (ರೂಢಿ). **ತಾವಾಗಿ=ಸ್ವತಃ**: ತಾವಾಗಿ ಮೆರೆವುವು ಸುಜನರ ಗುಣಗಳು ಅದಕೆ ಜಾಹೀರಾತು ಬೇಕೆ (ಇಂಜಾಪ. ೨೧೯-೮೩). [ **ದೇ.॥ ತಮಿ. ಮಲ.** ತಾನ್; **ತುಳು. ತೆಲು.** ತಾನು; **ಗೊಂಡಿ.** ತನಾ; **ಮಲ್ತೊ.** ತನ್, ತನಿ; **ಬ್ರಾಹೂಈ.** ತೇನ್ ]

**ತಾನ₁** 'ತಾಣ' ನೋ.

**ತಾನ₂** (ನಾ). ೧. ದಾರ; ಎಳೆ; ಸೂತ್ರ; ತಂತು. ೨. [ಸಂಗೀತ] ರಾಗ ಗಳನ್ನು ವಿಸ್ತಾರಗೊಳಿಸುವ ಕ್ರಮ; ಆಲೆಆಲೆಯಾಗಿ ಸ್ವರಗಳನ್ನು ನುಡಿಸುವಿಕೆ: ಅನುಕೃತ ಮಯೂರಕೇಕಾನಿನಾದ ಮೃದುಗಾನ ತಾನ ನಿಪುಣರ್ (ಜಗವಿ. ೩-೭೭); ಪಕ್ಕಾದ ನವೀನತಾನತತಿಯೊಪ್ಪಲ್ ಪಾಡಿದರ್ (ಉದ್ಭಟ. ೩-೩); ಬಂದ ತಾನವ ಬರಲೀಸದೆ ಹೊಸಹೊಸ ತೊಂದು ಪರಿಯ ತಾನಗಳಾ ತಂದು ತಂದು (ಭರತೇ. ೧೧-೧೮): ಶೋಭಿಸುವ ತಾನಂಗಳೊಳ್ ಸಕಲರಾಗಂಗಳಿಂದೊಸೆದು ತುಂಬುರ ನಾರದರ್ ಪಾಡುತಿರ್ದರ್ (ಜಬಪು. ೨-೨); ಮರ್ದಳೆಯ ತಾಳದ ಲಯಂ ಜತಿಗುಡೆ, ತಾನದೋಜೆಯೊಳ್ ತಾರ ಮಂದ್ರ ವಿಭೇದದಿಂ (ರಾಮಾಶ್ವ. ೨೩-೧೦); ತಾನ ಎಂದರೆ ನಾದತರಂಗ; ಅಲೆಗಳೋಪಾದಿಯಲ್ಲಿ ಸ್ವರಗಳು ರಂಜನೆಯುಂಟು ಮಾಡುವಂತೆ ನಾನಾ ರೀತಿಯಲ್ಲಿ ಮೇಳೈಸುವುದು (ಸಂಗೀಚಂ. ೮೮). ೩. (ಆಲಂ) ಬೇಸರ ತರುವ ಒಂದೇ ವಿಧವಾದ ಸ್ವರ; ಕೀಸರು. [ **ಸಂ.** ]

**ತಾನಕ, ತಾಣಕ** (ನಾ). ಶಸ್ತ್ರವಿದ್ಯೆಯ ಒಂದು ಪ್ರಭೇದ: "ತಾನಕಂ = ಶಸ್ತ್ರಸಾಧಕ ಸಂಧಾನಂ" (ಶಾಶಕ್ಕ. ೨೯೬); P ಕಾಶಕೃತ್ಸ್ನ ವ್ಯಾಕರಣದ ಪ್ರಕಾರ ಇದು ಸಂಸ್ಕೃತ ಪದ: ಮಲ್ಲತನವೊಲ್ಲದೆ ತಾ[ಪಾಠಾಂ. ದಾ] ನಕದೊಳ್ಪೊರಳ್ದೊ[ಪಾಠಾಂ. ದಟಿಸ್ಗ್ರೊ]ಡಂ (ಅನಂಪು. ೨-೨೭); ರಾಯ ಕರವಾಳುಜುವದೊಂದಿಗಳೆಂಬ ತಾನಕದಿಂದ ಕಾದಿದರು (ಸಾಳ್ವಭಾ. ೨೨-೭೦); ಇಬ್ಬರು ತಾನಕವಳಿಯದೆ ಕತ್ತಿಯೊಳೊಬ್ಬುದ್ದಿಗೊಂಡಡಗಿದರು (ನಾಗಕು. ೨೦-೦೨೭). **ತಾಣಕ**: ಮುಸುಂಕಿನೊಳ್ ಮಿಸುಗುವ ಸೊಗಸಂ ತಾಣಕ ದೊಳ್ಪಿಂದ ನೆಲೆಯಂದಮಂ (ಚಿಕಸ. ೩೪); ಮಲೆತಿದಿರಾಂತು ನಿಲ್ವ ಚಿಕದೇವನ ಚೆಲ್ವಿಕೆಗೊಂಡ ತಾಣಕಂ (ಚಿಕವಿ. ೪-೦೩೪). [ <**ಸಂ.** ಸ್ಥಾನಕ ]

**ತಾನಗುಂದೂರ್** 'ತಾಣಗುಂದೂರ್' ನೋ.

**ತಾನಪತಿ** (ನಾ). ಸ್ಥಾನದ ಒಡೆಯ; ಸ್ಥಾನಿಕ: ಗ್ರಾಮದ ೨೮ ಜನರಿಗೆ ತಾನಪತಿ (ಸ್ಥಾನಿಕ) ಗಳ ಕರ್ತವ್ಯಗಳನ್ನು ಕೊಟ್ಟನು (ತುಳುನಾ. ೧೨೮). [ ತಾನ₁ (<ತಾಣ) + ಪತಿ₂ ]

**ತಾನಬಾಜಿ** (ನಾ). ರೇಗುವುದು; ಗದರಿಸುವುದು: ಈಗ ನನ್ನ ಮೇಲೆಯೇ ಎಲ್ಲರೂ ತಾನಬಾಜಿಗೆ ಹೊರಟರು (ಮಾಮರಾ. ೧೯೬). [ ←**ಮರಾ.** ತಾನಬಾಜೀ ]

**ತಾನಮಾನ** (ನಾ). [ಸಂಗೀತ] ಸ್ವರವಿಸ್ತಾರ: ತಾನಮಾನದಿಂವನು ಲಾಲಿಸುತ್ತ (ಸೌಂದಪು. ೪-೦೦); ನವ ಭಾಗವತರೆ ಬಲ್ಲವರು ಅದರ ಆ ವಿಷಮ ತಾನಮಾನ (ಸೂರ್ಯಪಾ. ೫೨-೭). [ ತಾನ₂ + ಮಾನ ]

**ತಾನವರ್ಣ** (ನಾ). "ರಾಗದ ಪೂರ್ಣಚಿತ್ರವನ್ನು ತಾಳದ ಚೌಕಟ್ಟಿನಲ್ಲಿ ಸಾಹಿತ್ಯದೊಂದಿಗೆ ತಾನ ರೀತಿಯಲ್ಲಿ ತೋರಿಸುವ ರಚನೆಗೆ ತಾನವರ್ಣ ಎಂದು ಹೆಸರು" (ಸಂಗೀಚಂ. ೭೦): ಪಟ್ಟಣಂ ಸುಬ್ರಮ್ಮಣ್ಯ ಅಯ್ಯರ್ ಅವರು ಕೊಂಚ ವಯಸ್ಸಾದ ಮೇಲೆಯೇ ತಮ್ಮ ಕೀರ್ತನೆಗಳು, ತಾನವರ್ಣಗಳು . . . ಜಾವಳಿಗಳನ್ನು ರಚಿಸಿದರು (ಸಂಗೀತ. ೨೮). [ ತಾನ₂ + ವರ್ಣ ]

**ತಾನವಿತಾನ** (ನಾ). = ತಾನಮಾನ: ಆಗಳ್ ವಾಲ್ಮೀಕಿ ತಾನವಿತಾನವಿನಿದಂ ಕಱೆಯೆ (ರಾಮಾಶ್ವ. ೧೭೨-೨೭); ರೂಢಿಗೊಂಡ ಛಂದಸ್ಸಿನ ತಾನವಿತಾನ ಗಳಲ್ಲಿ ಸಹ ಅವರು ನವೀನ ಲಹರಿಗಳನ್ನೂ . . . ಗುರುತಿಸಿ (ನವ್ಯಕಾ. ೩೮). [ ತಾನ₂ + ವಿತಾನ ]

**ತಾನು** 'ತಾನ್' ನೋ.

**ತಾನೆ** 'ತಾನ್' ಪರಾ.

**ತಾನ್ಮೆ** (ನಾ). ಜಂಭ; ಅಹಂಕಾರ: ತಾನ್ಮೆಯಿಂದಳಿವೆಂದು ಬಲ್ಲ ನಿನಗಳಿವೆ (ಗಿಲಿವಿಂ. ೩೦-೯೩). [ ತಾನ್ + -ಮೆ₁ ]

**ತಾಪ₁** 'ತಾಂಕು₁' ಪರಾ.

**ತಾಪ₂** (ನಾ). ೧. ಬಿಸಿ; ಶಾಖ; ಕಾವು; ಉಷ್ಣತೆ: ಬಹು ತಾಪಕ್ಕೆ ಬಿಗುತರ್ಪ ವಿಷ್ಣು ಪಡೆವಂ ಮತ್ಸ್ಯಾವತಾರಕ್ಕೆ (ಪಂಚಾಮಾ. ೭-೯೮); ಆದುದರಿಂದ ನಾವು ತಾಪ (temperature) . . . ಮುಂತಾದ ಪದಗಳನ್ನು ಉಪಯೋಗಿಸಿರುವುದು ಸರ್ವಗ್ರಾಹ್ಯವಾದೀತೆಂದು ನಂಬಿದ್ದೇವೆ (ಭೌತವಿ. ೩೩೮). ೨. ಸಂಕಟ; ಕಷ್ಟ; ಕಾಟ: ತನಗಾದ ಮಾತಿನ ತಾಪವನ್ನು ನೋಡಿ . . . ಶಾಪವನ್ನು ಕೊಡುವಳು (ಕನ್ನಜಾ. ೧೦೨): ಕಂಡರೆ ಕೋಪ, ಕಾಣದಿದ್ದರೆ ತಾಪ (ಗಾದೆ). 'ತಾಪತ್ರಯ' ಪರಾ. ೩. ಕಾವಿನಿಂದಾಗುವ ಬೇನೆ,- ಸಂತಾಪ. [ **ಸಂ.** ]

**ತಾಪಕ** (ಗು). ೧. ತಾಪವನ್ನುಂಟುಮಾಡುವ. ೨. ಕಷ್ಟವನ್ನು ಕೊಡುವ; ನೋಯಿಸುವ. (ನಾ). ೩. ಕಾಯಿಸುವ ಸಾಧನ; ಬಿಸಿ ಮಾಡುವ ಸಲಕರಣೆ: ನೀರು ಕಾಯಿಸಲು ೫೦೦ ರಿಂದ ೧೦೦೦೦ ವಾಟ್‌ಗಳ ವರೆಗೆ ಶಕ್ತಿ ವ್ಯಯಮಾಡುವ ತಾಪಕಗಳು (Heaters) ಸಿಕ್ಕುತ್ತವೆ (ಭೌತವಿ. ೩೪೫). ೪. ಜ್ವರ. [ಸಂ.]

**ತಾಪಕಾರಿ** (ನಾ). ೧. ಬಿಸಿಯನ್ನುಂಟುಮಾಡುವುದಂ: ಬೇಸಗೆಯಲ್ಲಿ ಸೂರ್ಯ ಇಲ್ಲಿ ಅಷ್ಟು ತಾಪಕಾರಿಯಾಗಿಲ್ಲದಿರುವುದೂ . . . ಇದಕ್ಕೆ ಕಾರಣ (ಭೂವಿವ. ೧೬೨). ೨. ಸಂಕಟಗೊಳಿಸುವವನು: ದಂಡಧರನಂತೆ ಕುಜನ ತಾಪಕಾರಿಯುಂ (ರಾಜಶೇ. ೩-೯ ವ). [ಸಂ. ತಾಪಕಾರಿನ್]

**ತಾಪಗೊಳಿಸು** (ಕ್ರಿ). ಸಂಕಟಪಡಿಸು; ದುಃಖವನ್ನುಂಟುಮಾಡು: ರಾವಣ ಲೋಕವೆಲ್ಲವನು ತಾಪಗೊಳಿಸಲು (ಕೌಶಿರಾ. ೪೩-೪೭).
[ತಾಪ$_2$ + ಕೊಳ್$_1$ + – ಇಸು$_3$]

**ತಾಪಜ್ವರ** (ನಾ). ಉಷ್ಣದಿಂದ ಉಂಟಾಗುವ ಜ್ವರ: ಈ ಬೀಜದ ಒಳಗಿನ ತಿರುಳಂ ಅರೆದು . . . ನುಂಗಲು ಛಳಿ, ತಾಪಜ್ವರ ಸಹ ಮಾಣ್ಗುಂ (ವಿವ್ಯವಿ. ೧); ನೆಲ ಕೊಳವಳಿಕೆ ಸಹಮೂಲ, ಅತ್ತಿಕಾಯಿ ಈ ಎರಡರಲ್ಲಿಯೂ ರಸವನ್ನು ತೆಗೆದು . . . ಕಲ್ಲುಸಕ್ಕರೆ ಒಂದು ತೂಕ ಅರೆದು ಪುಡಿಮಾಡಿ ಹಾಕಿ ತೆಗೆದುಕೊಂಡಲ್ಲಿ ತಾಪಜ್ವರ ಮಾಣುವುದು (ಸಕವೈ. ೮೨).
[ತಾಪ$_2$ + ಜ್ವರ]

**ತಾಪಣೆ, ಥಾಪನೆ** (ನಾ). ೧. ಸ್ಥಾಪಿಸು , ನೆಲಗೂಳಿಸುವುದು; ಸ್ಥಾಪನೆ: ಸ್ಥಾಪನ – ತಾಪಣೆ (ಶಮುದ. ೨೫೭ ಪ್ರಯೋ); ಪಲ್ಲಣದ ಬಿಗುಹುಗಳ ತಾಪಣೆಯ ಲೀವೆಗಳನಳವಡಿಸಿ (ಚಬಪು. ೪೮-೫೦). **ಥಾಪನೆ:** ೨. (?): ವಾಮರಾಜಪ್ರಿಯ ತನೂಜಾತ ರೂಪುರೇಖೆ ಥಾಪನೆ ಬಯ್ಸಿಕೆ ತೊಡೆಮಡ ಕಯ್ದನಿಯೆಂಬ ಚಡಾಯತಿಕೆ ಗಾಯತಿಕೆವಡೆದಾರೂಢ ವಿದ್ಯಾವಿಳಾಸ(ಸೌಇಇ. IX-I,೩೪೩-೨೦; 1226); ವರ್ಗ ದ್ವಿತೀಯಾಕ್ಷರಂಗಳ್ಗೆ – ವಖ್ಯಾಣಂ . . . ಥಟ್ಟು, ಥಾಪನೆ, ಸತ್ಥಣೆ (ಶಮುದ. ೧೫ ಪ್ರಯೋ).
[<ಸಂ. ಸ್ಥಾಪನ]

**ತಾಪಣೆಗೂಡು** (ಕ್ರಿ). ಹೊಂದಿಸು; ನೆಲೆಗೊಳಿಸು: ಜೋಡು ಹಕ್ಕರಿಕೆ ಹಲ್ಲಣಮುರತಾಪಣೆಗೂಡಿದ ಕವಿಯ ಕೀಲುಗಳ ಜೋಡಿಸಿ ತುರಗವನೇಱ ರಾವುತರೊಡಗೂಡಿ ಬಂದರು (ಅಂಜಹ. ೬-೮೦).
[ತಾಪಣೆ + ಕೂಡು$_1$]

**ತಾಪತಿ,** ತಾಪತ್ತಿ, ತಾಪ್ತಿ, ತಾಬುತಿ, ತಾಬೂತು$_1$ (ನಾ). ಒಂದು ಬಗೆಯ ರೇಷ್ಮೆಬಟ್ಟೆ: ಕಾಶ್ಮೀರದಿಂ ನೂಂಪುವೆತ್ತ ತನು ತಾಪತಿಯ ಚಲ್ಲಣಂ ಪೊಂಬರಹ ಬಟ್ಟೆಯೊಲ್ಲಿ (ರಾಖಚ. ೬-೧೨); ಮೆಱೆವ ಹಸರು ಬುರುಸಾಲ ಲೋವೆಗೆ ಮುಚ್ಚಿ ಕರ ಚೆಲುವಾದ ತಾಪತಿಯ ಭರದಿಂದ ಮುಚ್ಚಿಸಿ (ಜ್ಞಾನಚ. ೧೧-೫೨); ತಾಪತಿಯ ಚಲ್ಲಣಮನುಟ್ಟು (ನವಮೋ. ೨೯-೧೭). **ತಾಪತ್ತಿ:** ಹಸರು ತಾಪತ್ತಿ ಸಕಲಾತಿಯ ಮಾಱುವ ರಸಿಕರೊಪ್ಪಿದರಂಗಡಿಯೊಳು (ಬಸಪ. ೧-೪೮). **ತಾಪ್ತಿ:** ಪಸುರು ತಾಪ್ತಿಯ ಹಲ್ಲಣಗಳಿಟ್ಟು ರಾಜಿಪವು ದಶಲಕ್ಷ ತುರಗಂ (ಪ್ರಭುಪು. ೬-೧೨೩). **ತಾಬುತಿ:** ಬಸುರಾದರ ತೊಡಬೇಕ ಹಸರ ತಾಬುತಿ ಕುಬಸ (ಗರತಿ. ೧೭). **ತಾಬೂತು$_1$:** "ತಾಬೂತು–ಕುತನಿ . . . ರೇಶಿಮೆಬಟ್ಟೆ" (ಜಾನಕೋ. ೬೬).
[←ಪಾರ. ತಾಫ್ತಾ; ಮರಾ. ತಾಪತಾ / ಇಂ. Taffeta]

**ತಾಪತ್ತಿ** 'ತಾಪತಿ' ನೋ.

**ತಾಪತ್ರಯ** (ನಾ). ೧. ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕ ಎಂಬ ಮೂರು ಬಗೆಯ ತೊಂದರೆಗಳು,–ದುಃಖಗಳು: ತಾಪತ್ರಯವ ಕಳೆದು ಪೂಜಿಸಿ ತಾಪತ್ರಯವ ಲಿಂಗನೊಲ್ಲ (ಬಸವ. ೧೮೪); ತಾಪತ್ರಯದ ಬೇಗೆ ಪಿರಿದಲ್ಲಿ (ಬಸರ. ೧-೭೦); ತನು ತಾಪತ್ರಯಕೆ ಗುರುಭಕ್ತಿಯುಕ್ತಿ ವಿಚಿತ್ರಮುಪವಿಸಲನಘರಾಗತ ಕಾರಣಂ (ಬಸಪು. ೩೯-೨೨); ಬಲಿದ ತಾಪತ್ರಯದ ಭವಗೋಟಲೆಯು ಜೀವಿಗೆ ಸುಪ್ರಬೋಧದ ಸುಳುವಿನಂತಿರೆ (ಕುವ್ಯಾದ್ರೌ. ೩-೪೬). ೨. (ಆಲಂ) ತೊಂದರೆ; ಅಡಚಣೆ; ಕಷ್ಟ: ಸಂಸಾರ ಅಂದ್ಮೇಲೆ ತರಲೆ ತಾಪತ್ರಯ ಇದ್ದೇ ಇರುತ್ತೆ (ಹೊಸಕ್ಷಿ. ೯೩); ಎಲ್ಲರಿಗೂ ಒಂದಲ್ಲ ಒಂದು ತಾಪತ್ರಯವಂತೆ (ಪದ್ಮಸ. ೧೦೭); ನಮ್ಮ ತಾಪತ್ರಯ ಇಷ್ಟಕ್ಕೇ ಮುಗಿದರೆ ನಮ್ಮ ಪುಣ್ಯ (ನಾಡಿಗೇ. ೮೨); ನಿನ್ನಂಥ ಉದಾರ ಮನಸ್ಸಿನವರಿಗೆ ಅನ್ನದ ತಾಪತ್ರಯ ಉಂಟಾಗಲಿಕ್ಕಿಲ್ಲ (ಮುಂಬಯಿ. ೪–೭೭). [ತಾಪ$_2$ + ತ್ರಯ]

**ತಾಪನ** (ನಾ). ೧. ಕಾಯಿಸುವಿಕೆ; ಬಿಸಿಮಾಡುವಿಕೆ. ೨. ಸೂರ್ಯ. ೩. [ಜೈನ] ನರಕ ಬಿಲಗಳಲ್ಲಿ ಒಂದು: ತಪ್ತ, ತಪಿತ, ತಪನ, ತಾಪನ . . . ಪ್ರಕೀರ್ಣಕ ವಿಕಲ್ಪದಿಂ ಪಂಚದಶಲಕ್ಷ ಬಿಲಂಗಳಪ್ಪುವು (ತತ್ತ್ವಪ್ರ. ೧೩೦). ೪. ಒಂದು ಬಗೆಯ ಕಲೆ; ರಸವಿದ್ಯೆ (?): ನದೀತರಣಂ ತಾಪನಮಿಂದ್ರಜಾಲಮೆಱಿಕಂ ಲೆಪ್ಪಂ (ಪುಷ್ಪಪು. ४-೫೯). [ಸಂ.]

**ತಾಪನಕ್ರಿಯೆ** (ನಾ). ಕಾಯಿಸುವಿಕೆ: ಪಿಂಡೀಬದ್ಧದಹನ ತಾಪನ[ಪಾಠಾಂ. ತಾಪನ ತಾಡನ]ಕ್ರಿಯೆಗಳಿಂ ಶುದ್ಧ ಲೋಹಮುಕ್ಕುಂ (ಜೀವಸಂ. ४-೯ ವ).
[ತಾಪನ + ಕ್ರಿಯೆ]

**ತಾಪಪಡು** (ಕ್ರಿ). ಕಷ್ಟಪಡು; ತೊಂದರೆಗೊಳಗಾಗು: ಹಾರಾಡಿ ರಾಮನಂಥವರು ಹಗಲಿನಲ್ಲಿ ನನಗಾಗಿ ವೇಷ ತೊಟ್ಟು, ಬಣ್ಣ ಬಳೆದು ಕೊಂಡು ತಾಪಪಟ್ಟುದುಂಟು (ಯಕ್ಷಬ. III ಮುನ್ನುಡಿ).
[ತಾಪ$_2$ + ಪಡು$_1$]

**ತಾಪಮಾನ** (ನಾ). ಕಾಖದ ಮಟ್ಟ: ಜ್ವರ ಬಂದಾಗ ತಂದೆಯವರು ತಾಪಮಾನ ನೋಡಲು ಎದೆಯ ಮೇಲೆ ಕೈಯಾಡಿಸಿದ್ದರು (ಎಡಹೆ. ೫೦).
[ತಾಪ$_2$ + ಮಾನ]

**ತಾಪಮಾಪಕ** (ನಾ). ಶಾಖದ ಮಟ್ಟವನ್ನು ಅಳೆಯುವ ಯಂತ್ರ,–ಸಾಧನ; ಉಷ್ಣಮಾಪಕ: ಆದುದರಿಂದ ನಾವು . . . ತಾಪಮಾಪಕ (Thermometer) ಮುಂತಾದ ಪದಗಳನ್ನು ಉಪಯೋಗಿಸಿರುವುದು (ಭೌತವಿ. ೨೩೪). [ತಾಪ$_2$ + ಮಾಪಕ]

**ತಾಪರಿಗೋಡೆ** (ನಾ). ತೆಳುವಾದ ಗೋಡೆ (?): ನಮ್ಮ ಅವರ ಕೋಣೆಯ ನಡುವಿರುವ ಹಲಗೆಯ ತಾಪರಿಗೋಡೆಯನ್ನು ಟಪಟಪ ಬಡಿಯುವನು (ಜೀನಬಾ. ೩೦೦). [ತಾಪರಿ$_0$ + ಗೋಡೆ]

**ತಾಪವಡೆ** (ಕ್ರಿ). ದುಃಖ ಹೊಂದು; ಕಷ್ಟಪಡು: ನಳನು ಕಾಡನು ಸೇರಿ ಕಡು ತಾಪವಡೆದರು ಪಡೆದನು ಮರಳಿ ರಾಜ್ಯವನು (ಇಂಚಾಪ. ೦೯೯-೮೫).
[ತಾಪ$_2$ + ಪಡೆ$_1$]

**ತಾಪಶಕ್ತಿ** (ನಾ). ಉಷ್ಣಶಕ್ತಿ; ಸುಡುವ ಶಕ್ತಿ: ತಾಪಶಕ್ತಿಯಿಂದ ಈ ಕೀಟಾಣುಗಳನ್ನು ನಾಶಪಡಿಸಿದರೆ ಕೊಳೆಯುವುದು ನಿಂತು ಹೋಗುತ್ತದೆ (ಜೀವಾತ್ಮ. ೨೨೩). [ತಾಪ$_2$ + ಶಕ್ತಿ]

**ತಾಪಸ** (ಗು). ೧. ತಪಸ್ಸಿಗೆ ಸಂಬಂಧಿಸಿದ; ತಪಸ್ಸು ಮಾಡುವ. (ನಾ). ೨. ತಪಸ್ಸನ್ನು ಆಚರಿಸುವವನು; ತಪಸ್ವಿ; ಮುನಿ: "ಪರಾಶರೀ . . . ತಪಸ್ವೀ, ಕರ್ಮಂದೀ, ತಾಪಸಃ–ಈ ೯ ತಪಸ್ವಿ" (ಹಲಾಯು. ೬೮–೨೫೫); ತಾಪಸನ ಶಾಪಮೆಂಬುದು ಪಾಪದ ರೂಪಱತುಮಱಿಯ ದಂತೇಕೆ ಮನಂಗಾಪಱಿದು ಬಂದು ಮುಟ್ಟಿದೆ (ಶಂಪಭಾ. ೨-೨೦); ಕೋಪಿಗಳಲ್ತೆ ತಾಪಸರ್ (ಕಾದಂಪೂ. ೬೫೨); ಸಹಸ್ರಜಟಿಯೆಂಬ ತಾಪಸಂ ತೋಱೆ (ಧರ್ಮಾಮೃ. ೨-೨೦೩); ನನೆಗೋಲನುಪಟಳದಲಿ ಭ್ರಾಂತಿ ಗೊಂಡಿರ್ದ . . . ತಾಪಸರೆಲೆವನೆಗಾತಿಯರನಪ್ಪಿದರು (ವೋಹತ. ೬-೧೫); ಎಳೆಹುಲ್ಲ ಸವಿದು ನೀರ್ಗುಡಿವ ತಾಪಸನನಂದಲರಂಬಿಗೆ ಗುರಿಮಾಡಿ ಎಳೆತಂದರಬಲೆಯರು (ಕಂನವಿ. ೯-೧೪೬). [ಸಂ.]

**ತಾಪಸಕುಮಾರ** (ನಾ). ತಪಸ್ವಿಯ ಮಗ ; ಮುನಿಪುತ್ರ : ಇವರ್ಗಂ ಪುಟ್ಟಿದೊಂ ಮೃಗಶೃಂಗನೆಂಬೊಂ ತಾಪಸಕುಮಾರಂ (ಶಾಂತಿಪು. ౭-೪೩ ವ).
[ ತಾಪಸ + ಕುಮಾರ ]

**ತಾಪಸತರು** (ನಾ). ಇಂಗುದೀ ಮರ ; ಗಾರೆಗಿಡ : "ಇಂಗುದೀ, ತಾಪಸತರುಃ–ಗಾರೇಗಿಡ, ಇಂಗಳದ ಗಿಡ" (ಸಿದ್ಧಾಂತಿ. ೧೦೭).
[ ತಾಪಸ + ತರು$_2$ ]

**ತಾಪಸನಿಕಾಯ** (ನಾ). ಮುನಿಗಳ ಸಮೂಹ ; ಋಷಿಗಳ ಗುಂಪು : ತಾಪಸಾಶ್ರಮದೊಳ್ ಮಿಥ್ಯಾತಪಶ್ಚರಣ ಪರಿಣತತಾಪಸನಿಕಾಯದೊಳ್ (ಶಾಂತಿಪು. ౭-೪೩ ವ). [ ತಾಪಸ + ನಿಕಾಯ ]

**ತಾಪಸಭೂಜ** (ನಾ). = ತಾಪಸತರು : "ಇಂಗುದಿ ತಾಪಸಭೂಜಮು ದಿಂಗಳುಂ" (ವಸ್ತುಕೋ. ೩೫-೧೭). [ ತಾಪಸ + ಭೂಜ ]

**ತಾಪಸರೂಪ** (ನಾ). = ತಾಪಸವೇಷ : ತಾಪಸರೂಪಂ ವಿಗತಾಲಾಪಂ . . . ಜಟಾಧರಂ ದಂಡಧರಂ (ಪಂರಾಮಾ. ೮-೫೭). [ ತಾಪಸ + ರೂಪ ]

**ತಾಪಸವೃಂದ** (ನಾ). = ತಾಪಸನಿಕಾಯ : ಬಳಿಕ ತಾಪಸವೃಂದವನು ಕಾರುಣ್ಯನಿಧಿ ಕಳುಹಿದ ತಪೋವನಕೆ (ಕುಮಾವ್ಯಾ. ೯-೮೦).
[ ತಾಪಸ + ವೃಂದ ]

**ತಾಪಸವೇಷ** (ನಾ). ಮುನಿಯ ವೇಷ ; ಋಷಿಯ ರೂಪ : ಅಡಗಿಸೀ ರಾಕ್ಷಸ ಕಳೇವರವ ಐದು ತಾಪಸವೇಷವನು (ತೊರರಾ. ೩-೮-೧೩) ; ಕಾನನಕೆ ತಾಪಸವೇಷದಿ ಪೋದರಾಗ (ಕಚಿಕಂ. ೧೩). [ತಾಪಸ + ವೇಷ]

**ತಾಪಸಾಚರಣ** (ನಾ). ತಪಸ್ವಿಗಳ ಆಚರಣೆ ; ತಪಸ್ಸು : ಬಾಲಕಾಲ ಪರಿಗೃಹೀತ ತಾಪಸಾಚರಣಂ ಮಿಥ್ಯಾಂಧಕಾರಾವಕುಂಠಿತ ಸಮ್ಯಗ್ದರ್ಶನ ನಾಗಿ (ಶಾಂತಿಪು. ౭-೪೩ ವ). [ ತಾಪಸ + ಆಚರಣ ]

**ತಾಪಸಾರಿ** (ನಾ). ತಪಸ್ವಿಗಳ ಹಗೆ ; ಋಷಿಗಳ ವೈರಿ ; ಕಾಮ : 'ತಾಪಸಾರಿವಿಜಯ' ಪರಾ. [ ತಾಪಸ + ಅರಿ$_6$ ]

**ತಾಪಸಾರಿವಿಜಯ** (ನಾ). ಕಾಮನನ್ನು ಜಯಿಸಿದವನು ; ಕಾಮಾರಿ ; ಶಿವ : ಶೃಂಗಾರಾಜಿತ ತಾಪಸಾರಿವಿಜಯಂ ಭೂಧಾರ ಚಕ್ರೇಶ್ವರಂ (ಹಮ್ಮೀರ. ೧-೪೫). [ ತಾಪಸಾರಿ + ವಿಜಯ ]

**ತಾಪಸಾಶ್ರಮ** (ನಾ). ಋಷಿಗಳ ವಾಸಸ್ಥಾನ ; ತಪೋವನ : ಐರಾವತೀ ತೀರದ ತಾಪಸಾಶ್ರಮದೊಳ್ ಮಿಥ್ಯಾತಪಶ್ಚರಣಪರಿಣತ ತಾಪಸ ನಿಕಾಯದೊಳ್ (ಶಾಂತಿಪು. ౭-೪೩ ವ). [ ತಾಪಸ + ಆಶ್ರಮ ]

**ತಾಪಸಿ** (ನಾ). ತಪಸ್ವಿನಿ : ಸಿಂಹದ ಮರಿಯನ್ನು ಎಳೆದಾಡುತ್ತಾ ಬಾಲಕನು ತಾಪಸಿಗಳೊಡನೆ ಬರುವನು (ಶಾಕುಂತ. ೧೦೪) [ ಸಂ. ತಾಪಸೀ ]

**ತಾಪಸಿಗ** (ನಾ). ತಪಸ್ವಿ ; ಋಷಿ ; ಮುನಿ : ಹಸನಾದ ನೆಲವೆ ಕಾಣಸದೆ ಇರಲು ತಾಪಸಿಗನು ಬಂದಿಲ್ಲಿ . . . ರಚಿಸಿದನು ತಪವನು (ತೀರ್ಥಮ. ೨೭೩). [ ತಾಪಸ + – ಇಗ ]

**ತಾಪಸೇಂದ್ರ** (ನಾ). ಶ್ರೇಷ್ಠನಾದ ತಪಸ್ವಿ ; ಮಹರ್ಷಿ : ತಾಪಸೇಂದ್ರನ ಶವವನೀಕ್ಷಿಸಿ ತಾಪಸೇಂದ್ರನು ಕೊಡುವ ಹರಕೆಯನೇಪರಿಯೊಳಾನೀಸಿ ಕೊಳ್ಳದೆ ಹೋಹುದನುಚಿತವು . . . ಎನುತ (ಬಸವು. ೩೨-೧೩).
[ ತಾಪಸ + ಇಂದ್ರ ]

**ತಾಪಸೋತ್ತಮ** (ನಾ). = ತಾಪಸೇಂದ್ರ : ನಯದೊಳಾ ತಾಪಸೋತ್ತಮ ನೊಡಂಬಡಿಸಿ (ಜೈಮಿಭಾ. ೨-೪೪) : ಸಿದ್ಧರು ಸಾಧ್ಯರು ವರ ತಾಪಸೋತ್ತಮರು . . . ಹಣೆಯೊಳು ಬರೆದುದನಳಿಸಲಶಕ್ತರು (ಇಂಜಾಪ. ೧೪೫-೧೨). [ ತಾಪಸ + ಉತ್ತಮ ]

**ತಾಪಹರ** (ನಾ). ೧. ತಾಪನಿವಾರಣೆ: ತಾಪಹರಕ್ಕೆ ಮಾಟ್ಟ ಶಿಶಿರಕ್ರಿಯೆಗಳ್ (ಶಾಂತೀಶ್ವ. ೧೦-೭೦). ೨. ತಾಪವನ್ನು ನಿವಾರಣೆ ಮಾಡುವವನು.
[ ತಾಪ$_1$ + ಹರ$_2$ ]

**ತಾಪಾಳ** 'ತಾಪಾಳು' ನೋ.

**ತಾಪಾಳು, ತಾಪಾಳ** (ನಾ). ಬಾಗಿಲಿನ ಅಗುಳಿ ; ತಾಳು: ತಿಮ್ಮಿ ತಾಪಾಳ ಹಾಕಿ, ಹಣತೆ ತುಂಬಿಸಿದಳು (ನನ್ನೂರು. ೨೨೪). **ತಾಪಾಳ :** ಆ ಹೆಂಗಸು ಥಟಕ್ಕಂತ ಮನೆಯೊಳಕ್ಕೆ ಹೋಗಿ ದಡಾರ್‍ರಂತ ಕದ ಹಾಕಿ ತಾಪಾಳ ಹಾಕಿಕೊಂಡು ಬಿಟ್ಟಳು (ಕಲನ. ೦೨೦). [ ದೇ.॥ ತಮಿ. ತಾಟ್‌ಪ್ಪಾಳ್ ]

**ತಾಪಾಳುಮರ** (ನಾ). ಬಾಗಿಲನ್ನು ತೆರೆಯದಂತೆ ತಡೆ ಹಾಕುವ ಅಗುಳಿ: ತಾಪಾಳು ಮರದ ಮೇಲೆ ಗೋಪಾಳದ ದಾಸಯ್ಯ ಕೂತಿದ್ದಾನೆ (ಗಾದೆ).
[ ತಾಪಾಳು + ಮರ$_1$ ]

**ತಾಪಿ** (ಗು). ೧. ಉಷ್ಣತೆಯ ತಾಪದಿಂದ ಬಳಲುತ್ತಿರುವ. ೨. ದೈಹಿಕ ಅಥವಾ ಮಾನಸಿಕ ರೋಗದಿಂದ ನರಳುತ್ತಿರುವ. ೩. ತಾಪವನ್ನುಂಟು ಮಾಡುವ. [ ಸಂ. ತಾಪಿನ್ ]

**ತಾಪಿಂಛ** (ನಾ). ಹೊಂಗೆಮರ; ತಮಾಲವೃಕ್ಷ: "ಕಾಲಸ್ಕಂಧಃ, ತಮಾಲಃ, ತಾಪಿಂಛಃ – ೩ ತಮಾಲವೃಕ್ಷದ ಹೆಸರುಗಳು" (ಸಿದ್ಧಾಂತಿ. ೧೧೧). [ಸಂ.]

**ತಾಪಿಚ್ಛ** (ನಾ). ೧.=ತಾಪಿಂಛ : "ಕಾಳಸ್ಕಂಧಂ ತಮಾಳಮೆನೆ ತಾಪಿಚ್ಛಂ" (ವಸ್ತುಕೋ. ೩೪-೮). ೨. ಒಂದು ಬಗೆಯ ಸಸ್ಯ ; ಕಾಗೆದೊಂಡೆ : "ತಾಪಿಚ್ಛಃ, ಕಾಕತುಂಡಿಕಾ–ಈ ೨ ಕಾಗೆದೊಂಡೆ" (ಪಲಾಯು. ೩೪-೫೦).
[ ಸಂ. ]

**ತಾಪಿತ** (ಗು). ೧. ಬಿಸಿ ಮಾಡಿದ; ಕಾಯಿಸಿದ. ೨. ತೊಂದರೆಗೊಳ ಗಾದ ; ಸಂಕಟಕ್ಕೆ ಈಡಾದ. [ ಸಂ. ]

**ತಾಪಿಸು** (ಕ್ರಿ). ೧. ಸುಡು ; ಬಿಸಿಯಾಗುವಂತೆ ಮಾಡು : ಗಿರಿಗಳ ತಾಪಿಸುವ ಬಿಸಿಲಾದಡೇಂ ಪರೋಪಕಾರದಿ ಚಂದ್ರಿಕೆಯನೊಂದಿಸುವ ಶಾಖೆಗಳ (ಬಸವು. ೧೦-೫೦) ; ತಾಪಿಸುತೆ ತಣಿಯಿಸುತೆ ಕುಲುಕಿಸುತೆ ಋತುವೈದ್ಯ ಭೂಪಟದಿ ಜೀವರಸಗಳ ಪಚಿಸುವಂತೆ (ಮಂಕುಕ.೧೫೯). ೨. ಸಂಕಟ ಪಡು; ತಾಪಕ್ಕೆ ಗುರಿಯಾಗು; ವ್ಯಥೆಪಡು: ನೇಹವಿರ್ಮಡಿಸಿ ಕಿವಿವೇಟವಗ್ಗಳಿಸಿ ವಿರಹಿಣಿಯಾಗಿ ತಾಪಿಸುತ್ತೆ (ಪದ್ಮರಾ. ೫-೨೭) ; ಓಪ ತುಷ್ಟಿಯ ಮಾಡ ಲೊಲ್ವಳು ತಾಪಿಸುವ ಜನನಿಕರಕಾಗಳು (ಕುಮಾವ್ಯಾ. ಆರಿಹ. ೩೩-೧೭) ; ಅಡಿಗಡಿಗೆ ಸುಯ್ಯು ಜ್ವರಮಿಡಿದು ತಾಪಿಸುವ. . .ಮಿಡುಕುತಿಹ ಗಳಗತ ಪ್ರಾಣೆಯರ್ (ಜಬವು. ೧೯-೩೦) ; ಮೈಗೆ ಬಿಸಿವರಿಯೆ ಪೊಜಮಟ್ಟು ತಾಪಿಸುತಿರ್ದುದಾ ಚಕ್ರವಾಕ (ನಂದಿವಾ. ೧೮-೨೫) ; ರತಿದೇವಿ ತಾಪಿಸುತೆ ಬರವರಲು (ನವಮೋ. ೮-೨೦). ೩. ಸಂಕಟಪಡುವಂತೆ ಮಾಡು ; ಬಾಧಿಸು : ತಾಪಿಸುವ ತಪನೆನಗೆಂದು ಕೆಡುವುದು ತಪಸಿಯೇ ಹೇಳಾ (ಬಸವು. ४೫-೩೭); ಕಲಿಭೀಮ ಬಿಲ್ಗೊಂಡು ರಿಪುಬಲವ ತಾಪಿಸುತ ಪೊಕ್ಕು ಸಂಹರಿಸುತಿರೆ (ತುರಂಗ. ೪೯-೪೦). ೪. ಸಿಟ್ಟಾಗು ; ರೇಗು ; ಉದ್ವೇಗ ಗೊಳ್ಳು : ಕೋಪಿಸುತೆ ಕೊಲುವೆನೀ ವೃದ್ಧಪಾರ್ವನನೆನುತೆ ತಾಪಿಸುತೆ ತೋಟಿಲಗನೆನುತೆ ಹತ್ತಿರೆ ಬರುತೆ (ನಂಬಿರ. ೭-೧೧೭). ೫. ರೇಗಿಸು ; ಕೆರಳಿಸು; ಮನಸ್ಸಿಗೆ ತಾಪವನ್ನುಂಟುಮಾಡು: ಎಲೆ ಪಾಪಿ . . . ಜಲವ ಬಿಟ್ಟು ಬಾರೆಂದೆನುತ ತಾಪಿಸಿದರು (ತುರಂಗ. ೭೫-೫).
[ತಾಪನ+–ಇಸು$_3$]

**ತಾಪು, ತಾಪ್ಪೆ, ತಾಹಿ, ತಾಹೆ** (ನಾ). ೧.ಕುಂಟಣಿಯ ಮನೆ; ಹಾದರ ಗಿತ್ತಿಯ ಮನೆ: (+). ೨. ಗೊತ್ತಾದ ಸ್ಥಾನ; ಸಂಕೇತಸ್ಥಳ: "ತಾಪು, ಕುರುಹುದಾಣ" (ಕಬ್ಬಿಗ. +. ೫೭.). **ತಾಪ್ಪೆ:** ೧. "ತಾಹೆಯೆಂದುಂ, ತಾಪೆ ಯೆಂದುಂ ಕುಂಟಣಿವನೆ" (ಕಶಸಾ. ೨೫-೫೦೭). ೨. "ಕುರುಹುದಾಣ, ಸಂಕೇತ ಸ್ಥಲ" (ಪ್ರಭಂ.). **ತಾಹಿ:** (+). **ತಾಹೆ :** ೧. ಮೇಲಿನ 'ತಾಪ್ಪೆ' ಉಲ್ಲೇಖಕ್ಕೆ ಕೊಟ್ಟಿರುವ 'ಕಶಸಾ' ಪ್ರಯೋಗವನ್ನು ನೋಡಿ. ೨. "ತಾಹೆಯ ಸಮ್ಮುದದೊಳಿರದೆ ಸಂಕೇತದ ಸದ್ಗೇಹಕ್ಕೆ ನಾಮ" (ಕವಿಕಂ. ೨೦೭). [ ದೇ.॥ ತಮಿ. ಮಲ. ತಾಪ್ಪು ; ತೆಲು. ತಾಪಿ ]

**ತಾಪೆ$_1$,** ತಾಫೆ (ನಾ). ೧. (ಸಂಗೀತಗಾರರ ಅಥವಾ ನರ್ತಕಿಯರ) ಗುಂಪು,–ಕೂಟ. 'ತಾಪೆಕಟ್ಟು' ಪರಾ. ೨. ಕುಣಿತ ; ನೃತ್ಯ : ತಾಪ ತ್ರಯದವನಿಗೆ ತಾಪೆ ಯಾಕೆ ? (ಗಾದೆ). **ತಾಫೆ : ೧.** ತಂಜಾವೂರಿನ ತಾಫೆ ಯವರು (ಕಾಮಿಕಾಂ. ೨೪೮). 'ತಾಫೆಕಟ್ಟು' ಪರಾ. ೨. "ಸೂಳೆಯರ ಕುಣಿತ – ತಾಫೆ " (Nautch. ಇಂಕನಿ.) ; ಸಂಗೀತ ತಾಫೆಯ ಅವಯವ – ಮಾತ್ರ ಅವಕಾಶ ಅಷ್ಟೆ (ಕಲನಿ. ೨೦೦).

[ ←ಮರಾ. ತಾಫಾ ; ಅರ. ತಾಇಫಾ. ]

**ತಾಪೆ$_2$** 'ತಾಪು' ನೋ.

**ತಾಪೆಕಟ್ಟು,** ತಾಫೆಕಟ್ಟು (ಕ್ರಿ). ಕುಣಿ; ನರ್ತಿಸು: ಸಾಕುಬಿಡು, ನೀನೇನು ತಾಪೆಕಟ್ಟಬೇಕಾಗಿದೆಯೇ (ಕೀಲುಗೊಂ. ೭೭). **ತಾಫೆಕಟ್ಟು:** ನೀಲಾಸಾನಿಯ ಮಗಳು ಕಮಲಾಸಾನಿಯು 'ತಾಫೆ'ಕಟ್ಟಿದಳು (ಮಂಜೂರ್ಡಿ. ೨೦೦) ; ಎಲ್ಲಿ ತಾಫೆಕಟ್ಟಬೇಕೋ ಪಾಪ (ಕಲಾಸಾ. ೭). [ ತಾಪೆ$_1$ + ಕಟ್ಟು$_1$ ]

**ತಾಪೇದಾರ** 'ತಾಬೇದಾರ' ನೋ.

**ತಾಪೇದಾರಿ** 'ತಾಬೇದಾರಿ' ನೋ.

**ತಾಪ್ತಿ** 'ತಾಪತಿ' ನೋ.

**ತಾಫೆ** 'ತಾಪೆ$_1$' ನೋ.

**ತಾಫೆಕಟ್ಟು** 'ತಾಪೆಕಟ್ಟು' ನೋ.

**ತಾಫೇದಾರಿ** 'ತಾಬೇದಾರಿ' ನೋ.

**ತಾಬ** 'ತಾಬೆ' ನೋ.

**ತಾಬಂಡಿ** 'ತಾಂಬಾಣ' ನೋ.

**ತಾಬಡತೋಬ,** ತಾಬಡತೋಬಡ (ಅ). ಕೂಡಲೇ ; ಆಗಿಂದಾಗ ; ತಕ್ಷಣ : ತಾಬಡತೋಬ (ಕೂಡಲೆ) ತಾಬಡತೋಬ ಕಳಿಸು (ಕೂಡಲೆ ಕಳಿಸು) (ಸುವರ್ಣ. ೩೨೮); ರತ್ನಾಳ ಕರಕೊಂಡು ಹೋಗಲಾಕ ತಾಬಡತೋಬ ಬರ್ರಿ (ಗ್ರಾಮಾಯ. ೭೨). **ತಾಬಡತೋಬಡ :** ತಾಬಡತೋಬಡ ಕೇಸು ಹಾಕಿಬಿಡುತ್ತಿದ್ದೆ (ಗಂಗಾಸಾ. ೧೩೨).

[ ←ಮರಾ. ತಾಬಡತೋಬ್ ; ಹಿಂ. ತಾಬಡ್‌ತೋಡ್ ]

**ತಾಬಡತೋಬಡ** 'ತಾಬಡತೋಬ' ನೋ.

**ತಾಬಾ** 'ತಾಬೆ' ನೋ.

**ತಾಬಾಣ** 'ತಾಂಬಾಣ' ನೋ.

**ತಾಬಿಲೆ** 'ತಾಂಬೇಲು' ನೋ.

**ತಾಬುತಿ** 'ತಾಪತಿ' ನೋ.

**ತಾಬುಲ್‌ಬಳೆ** (ನಾ). (ಸಾಣೆಹಿಡಿದು) ಹೊಳಪು ಕೊಟ್ಟ ಬಳೆ: ಆದರೂ ನರ್ಸಿಯ ಕೈಯ್ಯಲ್ಲಿ ಎರಡೆರಡು ಚಿನ್ನದ ತಾಬುಲ್ ಬಳೆ – ಹೇಗೆ ಬಂದವು (ಒಡ್ಡಿಉ. ೪೭). [ <ತಾಬೂಲು + ಬಳೆ$_3$ ]

**ತಾಬೂತ್,** ತಾಬೂತು$_2$ (ನಾ). (ಮೊಹರಂ ಹಬ್ಬದಲ್ಲಿ ಮೆರವಣಿಗೆ ಬರುವ) ಅಲಂಕೃತವಾದ ಪೆಟ್ಟಿಗೆ: ಮುಸಲ್ಮಾನ್ ಕುಶಲರು ಬಾಬೈಯನ ಹಬ್ಬದಲ್ಲಿ ಮೆರವಣಿಗೆಗೆ ತಯಾರ್ಮಾಡುವಂಥ 'ತಾಬೂತ್' ತರಹದ ಸುಂದರವಾದ ಒಳಗೂಡು (ಕಲನಿ. ೧೯೪). **ತಾಬೂತು$_2$ :** (+).

[ ←ಅರ. ಹಿಂ. ಮರಾ. ತಾಬೂತ್ ]

**ತಾಬೂತು$_1$** 'ತಾಪತಿ' ನೋ.

**ತಾಬೂತು$_2$** 'ತಾಬೂತ್' ನೋ.

**ತಾಬೂಲು** (ನಾ). (ಸಾಣೆ ಹಿಡಿದು) ಹೊಳಪು ಕೊಡುವಿಕೆ ; ಕಾಂತಿ ಕೊಡಿಸುವಿಕೆ : ಮೋಹನ ರಾಯ ಬಂದು ಈ ರತ್ನವನ್ನು ಮೆಲ್ಲನೆ ಕೆಸರಿನಿಂದೆತ್ತಿ ತೊಳೆದು, ಹಿಡಿದು, ತಾಬೂಲು ಕಡಿದು, ಲೋಕದ ಮುಂದೆ ಥಳಥಳಗೊಳಿಸಲು ಪೇಚಾಡುತ್ತಿದ್ದಾನೆ (ಹಿಂಕತ. ೪೭).

[ ←ತುಳು. ತಾಬುಲು ]

**ತಾಬೆ,** ತಾಬ, ತಾಬಾ (ನಾ). ಅಧೀನ ; ವಶ ; ಸ್ವಾಧೀನ : ಅರೆವಾಶಿ ಪೌಜನ್ನು ನಿಮ್ಮ ತಾಬೆಗೆ ಕೊಡುತ್ತೇವೆ (ರಾಜೇಂದ್ರ. ೨೩) ; ನಿಮ್ಮ ತಾಬೆ ಯಲ್ಲಿ ಯಾರಿದ್ದಾರೆ ? ಒಳಗುತ್ತಿಗೆಗಾದರೂ ಸರಿಯೆ (ಜಾರುದಾ. ೨೦೭) ; ಜಮೀನುಗಳನ್ನು ತಾಬೇದಲ್ಲಿ ತೆಗೆದುಕೊಂಡು ಸ್ವಂತ ಸಾಗುವಳಿ ನಡೆಸಿದ್ದಾನಂತೆ (ದೀಪಹ. II, ೧೦೩). **ತಾಬ:** ಮೇರಾಡಿಯ ಒಳಗೆ ತುಳುವ ಹೆಗ್ಗಡಿತಿ ತಾಬದ ಮೂಲದ ಬಾಳಿನ ವಿವರ (ಸೌಇಇ. IX-ii, ೪೨೪–೨೯ ; 1401). **ತಾಬಾ :** ಹೊಸ ಫೋನೊ ಅವರ ತಾಬಾಕ್ಕೇ ಕೊಟ್ಟು ಬಿಟ್ಟಿತ್ತು (ವೃನಿ. ೧೯೩) ; ಆಸ್ತಿಯನ್ನು ನಿಮ್ಮ ತಾಬಾಕ್ಕೆ ತೆಗೆದುಕೊಳ್ಳಬೇಕೋ ಬೇಡವೋ (ಜೇಟನಾ. ೩೪); ಅವರ ಸಂಸ್ಥಾನ ಸರಕಾರದ ತಾಬಾ ಆಗಿ ಎಷ್ಟೋ ವರ್ಷ ಆತು (ಭಾಗ್ಯಶ್ರೀ. ೭೦). [ ←ಹಿಂ. ತಾಬೇ ; ಅರ. ತಾಬಅ ]

**ತಾಬೆದಾರ** 'ತಾಬೇದಾರ' ನೋ.

**ತಾಬೆದಾರಿ** 'ತಾಬೇದಾರಿ' ನೋ.

**ತಾಬೇದಾರ,** ತಾಪೇದಾರ, ತಾಬೆದಾರ (ನಾ). ಯಾರನ್ನಾದರೂ ಅವಲಂಬಿಸಿದವನು ; ಅಧೀನನಾದವನು ; ಕೈಕೆಳಗಿನವನು ; ಸೇವಕ: "ಕೈಕೆಳಗಿನವನು, ತಾಬೇದಾರ " (Subordinate. ಇಂಕನಿ.); ಖೈದಿ ಅವರಿಗೆ ಬಹಳ ಸತಾಯಿಸಿ ಅವರ ತಾಬೇದಾರರ ರೂಬುರೂಬು ಬಹಳ ಅವಮಾನ ಕರವಾಗಿ ಹೀಯಾಳಿಸಿರಬೇಕು (ಕಲನಿ. ೧೧೫) ; ನಿಮ್ಮ ತಾಬೇದಾರ್ರೆಲ್ಲಾ ಇಲ್ಲೇ ಕಾಫೀ ಕುಡಿಯಬೇಕು (ನವನೀ. ೪೧). **ತಾಪೇದಾರ :** ಸ್ವಾಮಿಯವರ ಸೇವಕ! ತಾಪೇದಾರ! ಬಡವ! ಆದರೆ ಸುಳ್ಳು ಹೇಳೋ ಮನುಷ್ಯ ಅಲ್ಲ (ರಂಗಳ. ೫೦); ಶ್ರೀರಂಗರಾಯರು ದೊಡ್ಡ ಅಧಿಕಾರಿಗಳಾಗಿ, ನೂರಾರು ಜನ 'ತಾಪೇದಾರ'ರನ್ನು ಬೆದರಿಸಿ ಕೊಳ್ಳುತ್ತಿದ್ದರು (ಶನಿಸಂ. ೨೫೩). **ತಾಬೆದಾರ :** ಅವರು ಯಾವ ಆಫೀಸರವರಿಗೆ ತಾಬೆದಾರರಾಗಿರುವರೋ ಅವರುಗಳಿಂದ ದಾಖಿಲ್ ಮಾಡಲ್ಪಡುವುದು (ಗ್ರಾಮಾಕ. ೪೭).

[ ←ಅರ. ಹಿಂ. ತಾಬೇದಾರ್ ]

**ತಾಬೇದಾರಿ,** ತಾಪೇದಾರಿ, ತಾಫೇದಾರಿ, ತಾಬೆದಾರಿ (ನಾ). ಸೇವೆ ; ಚಾಕರಿ : ನೀವು ಪೂರ್ವದಿಂದಲೂ ನಮ್ಮ ತಾಬೇದಾರಿಯಲ್ಲಿಯೇ ಇದ್ದಿರಿ (ಚಾಮುವಂ. ೧೫೯) ; ನೀನು ದಳಪಾಯಿ ಆದಾಗ ನಿನ್ನ ತಾಬೇದಾರಿಗೆ ನನ್ನ ಸೇರಿಸಿಕೋ (ಚಂಗಾಳ್ವ. ೩೨೫). **ತಾಪೇದಾರಿ:** ನಾನು ತಾಪೇದಾರಿ ಮಾಡಿದ ಎಲ್ಲಾ ಅಮಲ್ದಾರರೂ . . . ಹಿಂದಿರುಗುತ್ತಿದ್ದರು (ಗರುಡಾ. ೮೯) ; ನಾನು ನೌಕರಿದ್ದೀನಿ ತಾಪೇದಾರಿ ಮಾಡೋವ (ಮೂಮನಿ. ೧೮೫). **ತಾಫೇದಾರಿ :** ಈ ಸರ್ಕಾರದ ತಾಫೇದಾರಿ ಮಾಡುವವರೆಗೂ, ಅವರು ಕೊಡುವ ಪೋಟಿಗೆ ಹಣಕ್ಕೆ ಸರಿತೂಗುವಷ್ಟಾದರೂ ಕೆಲಸ ಮಾಡದಿದ್ದರೆ ಹೇಗೆ (ಬಾಳಿವೃ. ೧೭೦). **ತಾಬೆದಾರಿ :** (ವ್ಯಾಗಜಿ. IV, ೭೮೬).

[ ←ಪಾರ. ಹಿಂ. ತಾಬೇದಾರೀ ]

**ತಾಮ್** 'ತಾನ್' ಪರಾ.

**ತಾಮರಮುಗೆ** (ನಾ). ಒಂದು ಊರಿನ ಹೆಸರು : ಅಜಿದೋಜಿ ನದೀ ದಕ್ಷಿಣ ತಟೇ ತಾಮರಮುಗೆ ಪಾನುಜ್ಜುಲ್ಕಿಯುಪಳ್ಳಿ (ಎಕ. X, ಕೋಲಾರ. ೬೩–೬೮ ; 767). [ ? ]

**ತಾಮರಸ** (ನಾ). ೧. ತಾವರೆ; ಕಮಲ : "ಸಹಸ್ರಪತ್ರಂ, ಶತಪತ್ರಂ . . . ತಾಮರಸಂ . . . ಪಂಕಜಂ–ಈ ೧೭ ತಾವರೆ " (ಹಲಾಯು. ೧೧೨–೫೬) ; ಮೇಳದವರಂತಿರೆ ಸಾರಿಕೆ ರಾಜಗೇಹದಂತಿರೆ ಕೊಳನಲ್ಲಿ ತಾಮರಸಂರಂತಿರೆ ತಾಮರಸಂಗಳೊಪ್ಪುಗುಂ (ಪಂಪಭಾ. ೫–೫೮) ; ಆ ಕುಂಡಮನೆ ಪದ್ಮಷಂಡ ಮಾಡಿಯಲ್ಲಿ ಸಹಸ್ರದಳ ಸುವರ್ಣ ತಾಮರಸಮುಮನದಱ ಕರ್ಣಿಕೆಯ ಮೇಲೆ ಸಿಂಹಾಸನಮುಮಂ ವಿಗುರ್ವಿಸಿ (ಪಂರಾಮಾ. ೧೬–೨೯ ವ) ; ಶ್ರೀ ಮಹಿಳಾನನ ಮಂಜುಳ ತಾಮರಸ ಪತಂಗ (ವಿಷ್ಣುಪು. ೪–೧). ೨. ಚಿನ್ನ ; ಬಂಗಾರ. ೩. ತಾಮ್ರ. [ ಸಂ. ]

**ತಾಮರಸನೇತ್ರ** (ನಾ). ಕಮಲದಂತೆ ಕಣ್ಣುಗಳುಳ್ಳವನು ; ವಿಷ್ಣು : ಗೋಕುಲಕೆ ಪೋಗಿ ನೀಲೋತ್ಪಲದಳಶ್ಯಾಮನಪ್ಪ ತಾಮರಸನೇತ್ರನಂ ನೋಡಿ (ಜಗವಿ. ೩-೨೩ ವ). [ ತಾಮರಸ + ನೇತ್ರ ]

**ತಾಮರಸಪ್ರಿಯ** (ನಾ).=ತಾಮರಸಬಾಂಧವ: ತಾಮರಸಪ್ರಿಯ ರವಿಸುತ ಸೋಮರ್ ಮೃತ್ಯುವಿನೊಳಕ್ಕೆ ಷಷ್ಠದೊಳಿರೆ ಸದ್ಯೋಮರಣಂ ಶಿಶುವಿಂಗೆ (ಜಾತತಿ. ೭-೩). [ ತಾಮರಸ + ಪ್ರಿಯ ]

**ತಾಮರಸಬಾಂಧವ** (ನಾ). ತಾವರೆ ಹೂವಿಗೆ ಪ್ರಿಯನಾದವನು ; ಸೂರ್ಯ : ತನುವಿದು ತಾಮರಸಬಾಂಧವನ ಬಾಳಿಕೆತನಕ[ಪಾಠಾಂ. ಗಕಟ]ಶಾಶ್ವತವೆ (ತೊರರಾ. ೩-೬-೫೪). [ ತಾಮರಸ + ಬಾಂಧವ ]

**ತಾಮರಸಮುಖಿ** (ನಾ). ಕಮಲದಂತೆ ಮುಖವುಳ್ಳವಳು : ತಾಮರಸ ಮುಖಿಯ ನಳಿತೋಳ್ . . . ಮಕರಧ್ವಜನ ಪಾಶಮೆನೆ ಸೊಗಯಿಸುಗುಂ (ಜಗವಿ. ೧೦-೩೨). [ಸಂ. ತಾಮರಸಮುಖೀ (ತಾಮರಸ + ಮುಖ + –)]

**ತಾಮರಸಸಖಿ** (ನಾ). = ತಾಮರಸಬಾಂಧವ : ತಿಮಿರವೆತ್ತಲು ತಾಮರಸ ಸಖನೆತ್ತಲು (ಪ್ರಭುಲೀ. ೭-೮೦). [ ಸಂ. (ತಾಮರಸ + ಸಖಿ + – ) ]

**ತಾಮರಸೋದ್ಭೂತ** (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ : ಪರಮಾರ್ಥಂ ನಿಮ್ಮ ಸಮ್ಯಕ್‌ಪರತರ ನಿಜಮಂ ಭಾವಿಸಲ್ ಬಣ್ಣಿಸಲ್ ತಾಮರಸೋದ್ಭೂತಂಗೆ ಶಕ್ರಂಗಸುರರಿಪುಗೆ ವೇದಕತರ್ಕಂ (ರಕ್ಷಾಶ. ೮೨). [ ತಾಮರಸ + ಉದ್ಭೂತ ]

**ತಾಮರೆ, ತಾವರೆ** (ನಾ). ೧. = ತಾಮರಸ ೧ : " ಕೆಸರ್ಮಲ್ಲಿಗೆ, ಸಿರಿಯ ಕರುಮಾಡಂ, ತಾಮರೆ[ಪಾಠಾಂ. ತಾವರೆ]ನೀರ್ವೂ – ಈ ೪ ಕಮಲಕ್ಕೆ ಪೆಸರ್ " (ಕಕಸಾ. ೮-೧೬೫) ; ಕೋಡಗವೇಟಿರ್ದ ಸೊರ್ಕಾನೆಯುಮಂ ಕಸಕುಪ್ಪೆಯೊಳ್ ತಾಮರೆ ಮೂಡಿದುದಂ . . . ಇಂತೀ ಪದಿನಾಱುಂ . . . ಕನಸುಗಳಂ ಕಂಡೆನೆಂದಂಜಿ (ವಡ್ಡಾರಾ. ೮೫-೨೯) ; ತಾಮರೆಗಂ ಚಂದ್ರಗಂ ತಾಮಸಮಂ ಕಳೆದು ಕಾಣ್ಕೆ ಮಾಟ್ಪಂತೆ (ಆದಿಪು. ೭-೯) ; ಶ್ರೀವನಿತೇಶನ ಪೊಕ್ಕುಳ ತಾಮರೆಯೊಳು ಪುಟ್ಟಿದಜನಿನೆಡವಱಿಯದೆ ಬಂದೀ ವಸುಧೆಯೊಳೇನೆಸೆದುದೋ ಪಾವನ ಚಾಳುಕ್ಯ ವಂಶಂ (ನಾಂದೇಡ್. ೩-೨ : 1047). ೨. ತಾವರೆಯ ಎಲೆಯ ಆಕಾರದಲ್ಲಿ ಚರ್ಮದ ಮೇಲೆ ಹರಡುವ ಒಂದು ಬಗೆಯ ಚರ್ಮರೋಗ ; ಹುಳುಕಡ್ಡಿ : (ಶಿ). **ತಾವರೆ:** ೧. " ಸಹಸ್ರಪತ್ರಂ, ಶತಪತ್ರಂ, ಅಂಬುಜಂ . . . ಪಂಕಜಂ–ಈ ೧೭ ತಾವರೆ " (ಹಲಾಯು. ೧೧೨-೫೭); ಮೊಗಮಂ ತಾವರೆ ಕಣ್ಣನುತ್ಪಳದಳಂ ಧಮ್ಮಿಲ್ಲಮಂ ಸೋಗೆ ಸೆಳ್ಳುಗುರಂ ಕೇದಗೆ . . . ಪೋಲ್ತುವು (ಆದಿಪು. ೬-೮೫) ; ಅರೆ ಸೀದುವು ತಾವರೆ ಖಗಮುರಿಬೆಂದುವು ಭೀಮ ಕೋಪಶಿಖಿ ಮುಟ್ಟೆ (ಗದಾಯು. ೭-೦೪) ; ಗಜದ ದಂತದಂತೆ ಬೆಂಕಿಯುಷ್ಣದಂತೆ ತಾವರೆಯ ಸೂರ್ಯನಂತೆ (ಧರ್ಮಾಮೃ. ೫-೧೨೫); ಸೂರ್ಯನುದಯ ತಾವರೆಗೆ ಜೀವಾಳ (ಬಸವ. ೩೭೭); ತಿಳಿನೀರಿಂ ತಾವರೆಯಿಂ ಕಳಹಂಸೆಯಿನೆಸೆವುದಲ್ಲಿ ಸರಸೀಷಂಡಂ (ಗಿರಿಕ. ೨-೪೪) ; ಶ್ರೀ ನೆಲಸಿರ್ಪ ತಾವರೆಯನಾಂತ ಸರೋವರದಂತೆ (ಸೂಕ್ತಿಸು. ೧-೧); ಪಂಕದೊಳಿದ್ದ ತಾವರೆಯಂದದಲಿ (ಬಸಪು. ೪೯-೩೦) ; ಪಲತಾವರೆಯ ಪೂಗಳನಾಯ್ದುಕೊಂಡಾ ಪರಮ ಜಿನಭವನವನು ಪೊಕ್ಕನು (ಸಾಳ್ವಭಾ. ೧೬-೪೦).

**ತಾವರೆಯ ಕಣ್ಣ** = ತಾವರೆಗಣ್ಣ : " ತಾವರೆಯ ಕಣ್ಣನೆಂದೊಡ ಮುಪೇಂದ್ರನ ನಾಮವು " (ಕಬ್ಬಿಕ್ಕೆ. ೭). **ತಾವರೆಯಣುಗ** = ತಾವರೆಯಲ್ಲಿ ಹುಟ್ಟಿದವನು ; ಬ್ರಹ್ಮ : " ಬದಿಯಲರಿಚಂ . . . ತಾವರೆಯಣುಗ ನಂಚೆದೇರನೆಂಬಿವು ಬ್ರಹ್ಮಗೆ ಒದವಿರ್ಪ ನಾಮು " (ಶಬ್ದಮಂ. ೯) ; " ವಾರಿಜ ಭವಂಗೆ ತಾವರೆಯಣುಗನೆಂದಕ್ಕುಂ " (ಕಕರ. ೪೫). **ತಾವರೆಯ ತನಯ** = ತಾವರೆಯಣುಗ : ಬಿರುದರ ವಿಗಡ ಮೂದಲೆಗಳ ಮಹಾಧ್ವನಿ ಬಗಿದುದ್ಭೆ ತಾವರೆಯ ತನಯನ ಕರ್ಣಕೋಟರವ (ಕುಮ್ವಾಭೀ. ೨-೪). **ತಾವರೆಯ ನಂಟ** = ಕಮಲದ ಮಿತ್ರ ; ಸೂರ್ಯ : ತಾವರೆಯ ನಂಟನಿರದೇ ವರುಣದಿಗುವಾರ್ಧಿಯೊಳು ನೆರೆದನು (ಸಾಳ್ವಭಾ. ೨೯-೪೦). **ತಾವರೆಯ ಪೊಕ್ಕುಳಿಗ**=ಹೊಕ್ಕುಳಲ್ಲಿ ತಾವರೆ ಉಳ್ಳವನು; ಪದ್ಮನಾಭ; ವಿಷ್ಣು : ಮಿಕ್ಕಮಾತೇನೆರಳೆರಳ್ಗೊಗಂ ತಾವರೆಯ ಪೊಕ್ಕುಳಿಗನುಂ ಪೊಣ್ಮಿದರ್ಪೊಣ್ಮೆ ವೆನ್ನಂಗದುಕ್ಕುವ [ ವೆ ] ವರಿಂದೆಂದನೀಶಂ (ಮದೇಪು. ೧೧-೩೦). **ತಾವರೆಯ ಮಿತ್ರ** = ತಾವರೆಯ ನಂಟ : ತಾವರೆಯ ಮಿತ್ರನ ಕರಗಿ ಕರುವಿನೊಳೆರೆದರೆಂದೆನೆ ಥಳಿಥಳಿಸಿ ತೊಳಗುವ ತನುಚ್ಛವಿಯ (ಕುಮ್ವಾಆ. ೩-೨೦) ; ನೈದಿಲ ತಾವರೆಯ ಮಿತ್ರರಿಗೆ ಮಂಡೆಯೊಳಿಟ್ಟೆನಂಜುಳಿಯ (ಕುಮ್ವಾಸ. ೧೫-೨೮). **ತಾವರೆವನೆಯಳ್** = ತಾವರೆಯನ್ನು ವಾಸಸ್ಥಾನವಾಗಿ ಉಳ್ಳವಳು ; ಲಕ್ಷ್ಮಿ : "ಸಿರಿಯರಸಿಯಕ್ಕು ತಾವರೆವನೆಯಳೆಂದು" (ಕಕರ. ೪೪). [ದೇ.॥ ತಮಿ. ತಾಮರೈ ; ಮಲ. ತಾಮರ ; ಕೊಡ. ತಾವರೆ ; ತುಳು. ತಾಮರೆ ; ತೆಲು. ತಾಮರ, ಪರ್ಜಿ. ತಾಮರ್ ; ಕುವಿ. ತಂಬೆರಿ./ಸಂ. ತಾಮರಸ]

**ತಾಮರೆಕಟ್ಟು** (ನಾ). ಒಂದು ಸ್ಥಳದ ಹೆಸರು : ಪಾಲ್ಪಡುವಿನುಳ್ಪಡುವಣ ಕೆಱೆಯುಳ್ ತಾಮರೆಕಟ್ಟನ್ನೆಗೆ ಮೂವತ್ತುಗೊಳಂ ಕಟನಿ ಕಲ್ನಾಡು ಸರ್ವಪರಿಹಾರ ಪ್ರಸಾದಂ ಗೆಯ್ದಾರ್ (ಎಕ. X, ಬೌರಿಂಗ್. ೧೩-೫ ; ಸು. 890). [ ತಾಮರೆ + ಕಟ್ಟು ? ]

**ತಾಮರೆಕೊಳ** 'ತಾವರೆಗೊಳ' ನೋ.

**ತಾಮರೆಗಣ್, ತಾವರೆಗಣ್, ತಾವರೆಗಣ್ಣು** (ನಾ). ಕಮಲದಂಥ ಕಣ್ಣು : ತಾಮರೆಗಣ್ ಮುಚ್ಚಿದೆಯಾ ? (ಮುಕ್ತಕಂ. ೫೮-೩). **ತಾವರೆಗಣ್ :** ತಾವರೆಗಣ್ಣ ನಗೆಗಣ್ಣ ಬೆಚ್ಚರಳೆಗಣ್ಣ . . . ಬಲ್ಗೊಗಸೆಗಣ್ಣಬಲೆಯರ್ (ಜಬಪು. ೩೭-೪೪) ; ತಾವರೆಗಣ್ಣಂ ತವಕದಿನೀಕ್ಷಿಸಿ ಭಾವೋದ್ಭವರೂಪನ ಕಡುಚೆಲ್ವಂ ಭಾವಕಿ ಪಿರಿದುಂ ಭಾವಿಸಿ (ಜಯುಕಾ. ೪-೨೩). **ತಾವರೆಗಣ್ಣು.** ಚೆನ್ನಾಗಿ ಮೆಱೆದಿಹ ತಾವರೆಗಣ್ಣಿನ ಹೆಣ್ಣುಗಳ್ಕೈದಿತೊಗ್ಗಿನಲಿ (ಕಂಸವಿ. ೯-೮೨). [ ತಾಮರೆ + ಕಣ್ ]

**ತಾಮರೆಗೆಱೆ, ತಾವರೆಕೆಱೆ, ತಾವರೆಗೆಱೆ**(ನಾ). ೧. ತಾವರೆ ಹೂಗಳಿಂದ ಕೂಡಿರುವ ಕೆರೆ : ಆದಿತ್ಯಂಗಿದಿರಂ ನೀರಂ ಸೂಸುವಾಗಳ್ ಬೆರಲಿಂದ ಮುರ್ಚಿ ನೀರ್ವರಸು ಸೂಸಿ ತಾಮರೆಗೆಱೆ[ಪಾಠಾಂ.ತಾಮರೆ]ಯೊಳುಂಗುರಂ ಬಿದ್ದತ್ತು (ವಡ್ಡಾರಾ. ೫-೪). **ತಾವರೆಕೆಱೆ:** ೨. ಒಂದು ಊರಿನ ಹೆಸರು : ತಾವರೆಕೆಱೆಯೊಳಗೆ ವಾಟಿಕೆ (?) ದೇವ ಭೋಗಮ್ (ಮೈಆರಿ. ೧೯೨೪, ೭೦-೫ ; ?). **ತಾವರೆಗೆಱೆ:** ೧. ಕಿಱಿದಂತರಂ ಬಂದೊಂದು ತಾವರೆಗೆಱೆಯ ಮೊದಲೊಳ್ ನಿಂದು (ಪಂಪಭಾ. ೨-೯೫ ವ); ಭಾವಕಿಯರ್ ತೊಡಗಿದರ್ . . . ಜಳಕೇಳಿಗೆ ಮಿಗೆ ತಾವರೆಗೆಱೆಯಚ್ಚ ತಿಳಿದ ತೀರದ ಜಲದೋಳ್ (ಹಮ್ಮಿರ. ೪-೨೨) ; ಅಲರ್ದ ತಾವರೆಗೆಱೆಗಳಿಂ . . . ಪೂದೋಂಟಂಗಳಿಂ . . . ಸೊಗಯಿಸುವುದಾ ವಿಷಯ (ಸಾಳ್ವಭಾ. ೧-೫೭) ; ೨. ದಕ್ಷಿಣ ದಿಶಾಭಾಗದ ತಾವರೆಗೆಱೆಯ ನಖರೇಶ್ವರ ದೇವರಾಚಾರ್ಯರ್ (ಇಆ. V, ೩೪೩-೨೭ ; 1093). [ ತಾಮರೆ + ಕೆಱೆ ]

**ತಾಮರೆಗೈ, ತಾವರೆಗೈ** (ನಾ). ತಾವರೆಯನ್ನು ಹೋಲುವ ಕೈ : ಜವನ ಪಟುಭಟರ ಹುಂಕೃತಿ ತವುವಿನೆಗಂ ತಡೆದು ತೋರ ತಾಮರೆಗೈಯಂ (ವಸ್ತುವಂ. ೧೫-೧೧೫). **ತಾವರೆಗೈ:** ತಾವರೆಗೈಗಳಿಂದಿಂದುಮಂಡಲ ಚೆಂಡ ಭಾವಜ ಪಿಡಿದಾಡುವಂತೆ (ಕಂಸವಿ. ೧೦-೮೨).

[ ತಾಮರೆ + ಕೈ (<ಕೆಯ್) ]

**ತಾಮರೆಗೊಳ, ತಾಮರೆಕೊಳ, ತಾವರೆಕೊಳ, ತಾವರೆಗೊಳ** (ನಾ). ೧. ತಾವರೆ ಹೂಗಳಿಂದ ಕೂಡಿದ ಸರೋವರ; ಕಮಲ ಸರೋವರ; ಪದ್ಮಾಕರ: ತಾಮರೆಗೊಳದ ತಡಿಯ ಮಱಿಯೊಳಿರ್ವರುಂ ಮಾಸೋಪವಾಸಂಗೆಯ್ದು (ವಡ್ಡಾರಾ. ೧೧೩-೧೮) ; ಸೊಗಯಿಪ ತಾಮರೆಗೊಳನಂ

ಪ್ರತ್ಯೂಷದೊಳ್ ಜಿನಾಂಬಿಕೆ ಕಂಡಳ್ (ಶಾಂತಿಪು. ೯–೨೦೫). **ತಾಮರೆಕೊಳ್:** ೨. ಒಂದು ಊರಿನ ಹೆಸರು: ಮಣಲಯ ಕೊಂಗಾಣಿ ಗಾವುಣ್ಡಂ ಮೂನೂಱುಂ ಮಾನಿಸರವರಸು ತಾಮರೆಕೊಳಾನ ಕೂಡಿ ಇಱಿಯೆ ಬನ್ದಡೆ (ಎಕ. IV, ಹೆಗ್ಗಡ. ೭೩–೧೨ ; 1007 ?). **ತಾವರೆಕೊಳ್:** ೧. ತಾವರೆ ಕೊ[ಪಾಠಾಂ.ಗೊ]ಳದ ತೋಟಿಯ ಹದಕೆ ಕಂಪಿಸಿ (ಕುವ್ಯಾಅ. ೧೧–೫) ; ಭಾವ ಬಾರೆಂದು ತಾವರೆಕೊಳಕೆಳಿದಳು (ಗುರುಭ. ೦–೧೧). **ತಾವರೆಗೊಳ್:** ೧. ಯೂಥಪತಿ ಸಮನ್ವಿತಯೂಥಂ ಸೊಗಯಿಪ ತಾವರೆಗೊಳನಂ ಪುಗುವಂತಿರೆ (ಶಾಂತಿಪು. ೧೦–೮೩); ಕೇಳೀಶೈಲದ ತಾವರೆಗೊಳದ ಹಿಮಗೃಹದೊಳಿರ್ದಪಳೆಂದು ಬಿನ್ನವಿಸೆ (ಕಾದಂಸಂ. ೨೦೯) ; ತದನಂತರಂ ವನಮಹತ್ತರನರಿ ಬರಿಸಿ ಮಾವಿಂಗಿದು ಮಲ್ಲಿಗೆಗಿದು ತಾವರೆಗೊಳಕಿದು ದಲೆಂದು ಪೆಸರ್ವೆಸರಿಂ ಭೂಷಾವಸನ ಕನಕಚಯಮನಿಳಾವಲ್ಲಭನಿತ್ತಂ (ಚಂದ್ರಪು. ೭–೧೫೦); ಪೆಂಪೊಗುವ ತಾವರೆಗೊಳಂಗಳ ತಂಪಿನೊಡವಿನ ವನದ ಸೊಗಸಿನ ಸೊಂಪು ಸೆಳೆದುದು (ಕುವ್ಯಾಅ. ೪–೩೭) ; ತಾವರೆಯುಂದದ ಹಸ್ತಪಾದಗಳಿಂದ . . . ತಾವರೆಗೊಳನೆದ್ದು ನರ್ತಿಸುವಂದದೊಳಾವಧುಗಳು ನಟಿಸಿದರು (ಭರಜ. ೦೩–೧೦೭) ; ಲಾವಣ್ಯಲಕ್ಷ್ಮಿ ನಲಿದು ಕ್ರೀಡಿಸುತಿಹ ತಾವರೆಗೊಳದಂದದಲಿ (ಕಂನವಿ. ೯–೧೦೯).

[ ತಾಮರೆ + ಕೊಳ್$_2$ ]

**ತಾಮಲಕಿ** (ನಾ). ನೆಲನೆಲ್ಲಿಗಿಡ : " ತಾಮಲಕಿ=ಭೂನೆಲ್ಲೀಗಿಡ " (ಗಂಗಾಮು. ೧೫೦). [ ಸಂ. ತಾಮಲಕೀ ]

**ತಾಮಸ** (ಗು). ೧. ಕತ್ತಲೆಗೆ ಸಂಬಂಧಪಟ್ಟ ; ಕತ್ತಲಿನಿಂದ ಕೂಡಿದ. ೨. ತಮೋಗುಣದಿಂದ ಕೂಡಿದ ; ತಮೋಗುಣ ಪ್ರಧಾನವಾದ: ನೀಲೋತ್ಪಲ ತಮಾಲ ನೀಲೋನ್ಮತ್ತಾದಿ ತಾಮಸಮಾದ . . . ನಾನಾವಿಧ ಪುಷ್ಪಂಗಳ (ವಿವೇಕ. ೧೧೫). (ನಾ). ೩. ಕತ್ತಲೆ : ಸಿರಿಯ ಮದವೆಂಬಧಿಕ ತಾಮಸ ದೊರಕಿದಕ್ಷಿಗೆ ನೀತಿಕಾಚಿಱ ಪರಮ ವಚನಾಂಜನದಿ ಪ್ರಜ್ವಲಿಸುವುದು ನಯವೆಂದು (ಕುವ್ಯಾಉ. ೯–೨). ೪. ಅಜ್ಞಾನ : ಮನದ ತಾಮಸ ಬಿಡದು ಮನದ ಕವಟ ಬಿಡದಯ್ಯ (ಬಸವ. ೨೮೧). ೫. ಅಜ್ಞಾನದಿಂದ ಕೂಡಿದುದು : ಶಿವನಂ ಪಾವಕನಂ ಪ್ರಶಂಸಿಪ ಪುರಾಣಂ ತಾಮಸಂ (ಸಾತ್ವಿವಿ. ೦೪). ೬. ಜಾಡ್ಯ ; ಜಡತೆ: ಜ್ವರದ ತಾಮಸಕ್ಕೆ ಕಣ್ಣನ್ನೇ ತೆರೆಯುಲಿಲ್ಲ (ಮೇದಿವು. ೧೪೪). ೭. ಹದಿನಾಲ್ಕು ಮನುಗಳಲ್ಲಿ ನಾಲ್ಕನೆಯವನು : ಸ್ವಾಯಂಭುವ . . . ತಾಮಸ . . . ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳೊಳಗೆ (ವಿವೇಕ. ೨೦೪). ೮. ತಡ ; ವಿಳಂಬ : ತಾಮಸಂ ಮಾಡಿದನು ಬಸವನು (ಬಸಪು. ೩೭–೧೭) ; ಆ ಮಂತ್ರಿಗಳ ಶಿರೋಮಣಿ ರಚಿಸಿದನಂದಾ ಮಂಟಪವ ರಚನೆಯೊಳು ಆ ಮಹೀಪತಿ ಪೇಳ್ದುದಕೆ ನೂರ್ಮಡಿಯಾಗಿ ತಾಮಸವಿಲ್ಲದಂದಿಂತು (ರಾಮವಿ. ೭–೨೦) ; ತಾಮಸವಿದೇಕೆ ನಾ ಬಂದನೋರ್ವನೆ . . . ಎಂದನಿಲಜಂ ಚೀರ್ದನು (ಜೈಮಿಭಾ. ೬–೫೨) ; ಇನ್ನು ಮೇಲೆ ತಾಮಸಮಾಡದೆ ನನ್ನನ್ನು ಸಂಹರಿಸುವುದಕ್ಕೆ ಯತ್ನಮಾಡಿರಿ (ಕ್ಷವಾಧೀ. ೦೭೯). ೯. ಆಸೆ; ಬಯಕೆ: "ತಮನಂ, ತಮನೀಯುಂ . . . ತಾಮಸಂ ಈ ೫ ಬಯಕೆ " (ಕಾಶಕ್ಕ. ೧೯೦). ೧೦. ತಮೋಗುಣದಿಂದ ಕೂಡಿದವನು; ಅಜ್ಞಾನಿ: ರಕ್ಕಸನೆನಿತು ಮೂರ್ಖನೊ ಶಿವ ಮಹಾದೇವನಿತು ತಾಮಸನೊ (ಕಾಶಿರಾ. ೦೪–೨೪); ತಮಸಿನೊಡನೆ ಕೂಡಿದಾತನು ಅವಾನನೊಬ್ಬನುಂಟು ಆತನು ತಾಮಸನೆಂದು ನೆನೆಯಲ್ಪಟ್ಟನು (ಕೈವಟೀ. ೨೮) ; ಜೀವರಾಶಿಗಳು . . . ಸಾತ್ವಿಕರು, ರಾಜಸರು, ತಾಮಸರೆಂಬ ಮೂರು ವಿಧರಾಗಿ ಭಾಗಿಸಲ್ಪಟ್ಟಿರುವರು (ಹಸಾರ. ೧–೪ ಟೀಕು) ; ಮುಮ್ಮೆಯ್ಯ ದೋಸದೆಸಕದುಪಟಳದ ತಾಮಸರ್ ಲೋಕಕಂಟಕರಾಗೆ ರಕ್ಕಸರೆನಿಸಿ . . . ತಿರೆಗೆ ಪೊಱೆಯಾದರ್ (ರಾಮಾಶ್ವ. ೦೧೯–೨೩) ; ಜೀವನು ತನ್ನನ್ನು ಸಾತ್ತ್ವಿಕ, ರಾಜಸ, ತಾಮಸನೆಂದು ಭಾವಿಸಿಕೊಳ್ಳುತ್ತಿರುವನು (ಶಕ್ತಿವಿ. ೪೮). ೧೧. ನೀಚ; ದುಷ್ಟಾತ್ಮ. ೧೨. ಗುಣತ್ರಯಗಳಲ್ಲಿ ಒಂದು ; ತಮೋಗುಣ: ತಿಳಿವಣವಿಲ್ಲದೆಳ್ತರದ ತಾಮಸ ಪಂಕದೊಳಾಳು (ಶಬಶಂ. ೪–೭೦) ; ಅರಿವುದಿನ್ನವೆ ರಾಜಸವು ಸಾತ್ವಿಕವು ತಾಮಸವು (ಗಗತಾ. ೨೦–೩೭). ೧೩. ಶಿವನ ಒಬ್ಬ ಅನುಚರ. ೧೪. [ತತ್ತ್ವಶಾ] ಅಹಂಕಾರ ತತ್ತ್ವದ ಒಂದು ವಿಧ: ತದನಂತರ ಮಹತ್ತತ್ತ್ವದ ದೆಶೆಯಿಂದ ವೈಕಾರಿಕ, ತೈಜಸ, ತಾಮಸವೆಂಬ ಮೂರು ವಿಧವಾದ ಅಹಂಕಾರ ತತ್ತ್ವವು ಹುಟ್ಟಿತು (ಹಸಾರ. ೩–೧ ಟೀಕು).

[ ಸಂ. ]

**ತಾಮಸಗಾರ** (ನಾ). ಆಲಸಿ ; ಜಡಸ್ವಭಾವದವನು; ಸೋಮಾರಿ: (ಶಿ).

[ ತಾಮಸ + – ಗಾರ (< –ಕಾಱ) ]

**ತಾಮಸಗಾರ್ತಿ** (ನಾ). ಆಲಸಿಯಾದವಳು; ಜಡಸ್ವಭಾವದವಳು: (ಶಿ).

[ ತಾಮಸಗಾರ + – ತಿ$_1$ (< – ಇತ್ತಿ) ]

**ತಾಮಸಗುಣ** (ನಾ). ತಮೋಗುಣ: ಅಪಲಾಪ ಅನೃತ . . . ಮುಂತಾದ ತಾಮಸಗುಣಗಳಿಂದಧೋಲೋಕವನಾಶ್ರಯಿಸಿ (ವಿವೇಕ. ೨೪೭) ; ನೇಮವಿಲ್ಲದ ಅಶನಮಾಡುವ ಸ್ವಾಮಿದ್ರೋಹಿಕೆ ಚೋರಹಂಕರ ಕಾಮುಕವು ಯಿಂತಿರಲು ತಾಮಸಗುಣವದುವೆಯೆಂದ (ಜ್ಞಾನಸಿಂ. ೩೦–೬).

[ ತಾಮಸ+ ಗುಣ ]

**ತಾಮಸದಾನ** (ನಾ). ಯೋಗ್ಯನಲ್ಲದವನಿಗೆ ಕೊಡುವ ದಾನ; ಅಪಾತ್ರದಾನ : ತವಕವೆಂದೇಕಾಗೆ ಬಳಗದ ಠವಣೆಯೆನಿಸುವ ಕಂಡ ನರರಿಗೆ ಕವರಿ ಕೊಡುವ ದಾನವದು ತಾಮಸದಾನ (ಜ್ಞಾನಸಿಂ. ೩೦–೨೪).

[ ತಾಮಸ + ದಾನ ]

**ತಾಮಸಪೂಜೆ** (ನಾ). ಪ್ರತಿಮೆಗಳನ್ನಿಟ್ಟು ಮಾಡುವ ಪೂಜೆ: ಲೋಹಾದಿ ಪ್ರತಿಮೆಗಳಾ ಫಣಿವೇಣಿ ಭಕ್ತಿಯೊಳರ್ಚಿಸಿ ಭಜಿಪುದು ವಿನುತ ತಾಮಸಪೂಜೆಯೆನಿಪುದೂ (ವೇದಾಂಪ. ೩–೭). [ ತಾಮಸ + ಪೂಜೆ$_2$ ]

**ತಾಮಸಯಜ್ಞ** (ನಾ). ಭಕ್ತಿಯಿಲ್ಲದೆ ನಡೆಸುವ ದೇವತಾಕಾರ್ಯ,–ಪೂಜೆ : ಚಿಂತೆ ಕಲೆಕರೆ ಬಹಳವಾಗಿಯೆ ಇಂತು ಮಾತ್ರವು ಭಕ್ತಿಯಿಲ್ದಿರೆ ಅಂತದಕೆ ನಾಮವದು ತಾಮಸಯಜ್ಞವದುಯೆಂದ (ಜ್ಞಾನಸಿಂ. ೩೦–೪೩).

[ ತಾಮಸ + ಯಜ್ಞ ]

**ತಾಮಸವೃತ್ತಿ** (ನಾ). ತಮೋಗುಣದಿಂದ ಕೂಡಿದ ವರ್ತನೆ : ಅವರ ವೇಷಭೂಷಣಗಳು, ದುಡುಕಿನ ಮಾತುಗಳು ಮತ್ತು ತಾಮಸವೃತ್ತಿಯು . . . ಅವರದಾಗಿತ್ತು (ಹೇಮಂತ. ೩೫೪). [ ತಾಮಸ + ವೃತ್ತಿ$_2$ ]

**ತಾಮಸಾರಿ** (ನಾ). ಕತ್ತಲೆಯ ಶತ್ರು ; ಸೂರ್ಯ : ಶ್ರೀಧರ್ಮನಾಥಗೆ ತಾಮಸಾರಿಯ ಪೀಠಶೋಭಿತ ಶಾಂತಿ ಜಿನಪತಿಗೆ (ಬಿಜ್ಜಪು. ೦೦೪–೦೦೫).

[ ತಾಮಸ + ಅರಿ$_6$ ]

**ತಾಮಸಿ$_1$** (ನಾ). ತಾಮಸ ಗುಣವುಳ್ಳವನು; ಅಜ್ಞಾನಿ: ವರ ನೀಡಿ ವ್ಯೋಮಕಾಂಬೊಡೆ ನಿನಗೆ ಸಂಸ್ಕಾರವಿರಬೇಕು ತಾಮಸಿಗೆ ವರವೆಲ್ಲಿ (ಮಂಕುಕ. ೭೭೭). [ ಸಂ. ತಾಮಸಿನ್ ]

**ತಾಮಸಿ$_2$** (ನಾ). ಇರುಳು ; ರಾತ್ರಿ : ತಾಮಸಿಯ ಕಾಳೆದೆಯೊಳನುರಾಗವು ದಿಸಿದೊಲು ತಿಂಗಳಿನ ಬೆಳಕಾಯ್ತು (ಗೋಕುನಿ. ೧–೧೧).

[ ಸಂ. ತಾಮಸೀ ]

**ತಾಮಸಿಕ** (ಗು). ೧. ತಮಸ್ಸಿಗೆ ಸಂಬಂಧಪಟ್ಟ. (ನಾ). ೨. ತಮಸ್ಸಿಗೆ ಸಂಬಂಧಪಟ್ಟುದು : ತಾಮಸಿಕವೂ ಅನುಚಿತವೂ ಆದ ಮಾರ್ಗವನ್ನು ಹಿಡಿದಿದ್ದ ಗೋರಕ್ಷ (ಶೂನ್ಯಕು. ೦೩೧) ; ಅದರಲ್ಲಿ ಹಲವು ಪ್ರಧಾನವಾಗಿ ಸಾತ್ವಿಕ ಮತ್ತ ಹಲವು ಪ್ರಧಾನವಾಗಿ ರಾಜಸಿಕ ಅಥವಾ ತಾಮಸಿಕ (ಸೌಂದಸ. ೧೧೧) ; ನಿಮೀಲಿತ-ಅರ್ಧ ತೆರೆದಿರುವ ಕಣ್ಣು. ತಾಮಸಿಕ ಸೂಚಿಸಲು (ಅಭಾನ್ಯ. ೯೨). [ ಸಂ. ]

**ತಾಮಸಿಕೆ** (ನಾ). ದುಷ್ಟತನ ; ಕ್ರೌರ್ಯ: ದಂತಿಯ ತಾಮಸಿಕೆ ಘನ ತೆಗೆಯಿ ತಮ್ಮನನೆನುತ ಕಳವಳಿಸೆ (ಕುಮಾ. ದ್ರೋ. ೩-೩೪). [ ತಾಮಸ + – ಇಕೆ ]

**ತಾಮಿಸು** (ಕ್ರಿ). (?) : ಇಷ್ಟು ತಾಮಸವಾದದ್ದು ದೋಸ್ತಾರರಾದಂಥವರು ಪೌಜುಗಳ ಕೂಡಿಸಿಕೊಂಡು ಪ್ರಯತ್ನ ಮಾಡಿದರೆ ಆಗುವಂಥಾ ಅನುಭವದ ಗುಣ ಹಲವು ತಾಮಸದಿಂದ ಬಾರದೆ ಇರಿಸುವದಕ್ಕಾಗಿ ತಾಮಿಸಬೇಕು ಯುಂಬದಾಗಿ ಅಲ್ಲದೆ ಮತ್ತೊಂದು ಬೇಕಾಗಿ ಅಲ್ಲವಷ್ಟೆ (ರಾಜೇಂದ್ರ. ೮೩). [ ? ]

**ತಾಮಿಸ್ರ** (ನಾ). ೧. ತಮಸ್ಸು ; ಅಜ್ಞಾನ: ತಾಮಸರ ಶಬ್ದಾದಿ ಮಾತ್ರಾ ಗುಣಗಳಿಗೆ ವಿಷಯಿಭೂತವಾದ ತಾಮಿಸ್ರ, ಅಂಧತಾಮಿಸ್ರ . . . ತಮಸ್ ಎಂಬ ಅಜ್ಞಾನವೃತ್ತಿಗಳಲ್ಲಿ ಪ್ರೇರಿಸುವನು (ಹಸಾರ. ೬-೧೧ ಟೀಕು) ; ಅಜ್ಞಾನವು ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ ಎಂದು ಐದು ವಿಧ (ಭಾತತ್ತ್ವ. ೩೨೪). ೨. ಕತ್ತಲೆ : "ಧ್ವಾಂತಂ, ಅಂಧಕಾರಂ . . . ತಾಮಿಸ್ರಂ, ತಮಿಸ್ರಂ, ಭೂಚ್ಛಾಯಂ – ಈ ೭ ಕತ್ತಲೆ" (ಹಲಾಯು. ೧೪–೧೧೧). ೩. ಕೃಷ್ಣಪಕ್ಷ. ೪. ಒಂದು ನರಕದ ಹೆಸರು : ತಾಮಿಸ್ರ . . . ಮಹಾಪದಾನುಗವೀಚಿಗಳೆಂಬೆಂಟು ರಾಜರಾಜನರಕಂಗಳು (ವಿವೇಕ. ೧೭೯). [ ಸಂ. ]

**ತಾಮ್ರ** (ನಾ). ೧. ಒಂದು ಬಗೆಯ ಕೆಂಪುಬಣ್ಣದ ಲೋಹ: "ತಾಮ್ರಂ, ಶುಲ್ಬಂ, ಉದುಂಬರಂ–ಈ ೩ ಕಿಸು" (ಹಲಾಯು. ೨೪–೧೬) ; ಪೊಲೆಯಂ ಪಡೆದ ಸುವರ್ಣಂ ಕಿಲುಂಬುಗೊಂಡಿರ್ದು ತಾಮ್ರ [ಪಾಠಾಂ. ತಾಂಬ್ರ] ಮಕ್ಕುಮೆ (ಸಮುಪ. ೧೫–೧೦) ; ತಾಮ್ರದಿಂ ವಿರಚಿಸಿದ ಕುಂಭಂಗಳಿಂ (ಆರಾಜ. ೬–೨೦) ; ತಾಮ್ರದ ಬಣ್ಣವು ನಸುಗೆಂಪು (ಮುಂಬಯಿ. ೪–೧೩೬). ೨. ಕೆಂಪುಬಣ್ಣ ; ತಾಮ್ರವರ್ಣ: "ಅರುಣಃ . . . ತಾಮ್ರಃ, ಲೋಹಿತಃ – ಈ ೭ ಕೆಂಪು" (ಹಲಾಯು. ೧೨೧–೪೮) ; "ಪಾಟಳಂ ಲೋಹಿತಂ ಶೋಣ ಮರುಣಂ ತಾಮ್ರಮೆನೆ ರಕ್ತಕಾಂತಿ" (ಮಂಗರಾ. ೧೩೦–೨೦). ೩. (ಕೆಂಪು ಕಲೆಗಳನ್ನುಳ್ಳ) ಒಂದು ಬಗೆಯ ಕುಷ್ಠರೋಗ. [ ಸಂ. ]

**ತಾಮ್ರಕ** (ನಾ). =ತಾಮ್ರ ೧. [ ಸಂ. ]

**ತಾಮ್ರಕರ್ಣಿ** (ನಾ). ಅಂಜನವೆಂಬ ಪಶ್ಚಿಮದಿಕ್ಕಿನ ದಿಗ್ಗಜದ ಹೆಂಡತಿ: "ಕಪಿಲೆ ಪಿಂಗಳೆ ಸುತಾಮ್ರಕರ್ಣಿ [ಪಾಠಾಂ. ಪರ್ಣಿ] ಪುರದಂತಿಯದು" (ಮಂಗರಾ. ೧೪–೨೦). 'ತಾಮ್ರಪರ್ಣಿ' ಪರಾ. [ ಸಂ. ತಾಮ್ರಕರ್ಣೀ ]

**ತಾಮ್ರಕಾರ** (ನಾ). "ತಾಮ್ರದ ಕೆಲಸದವನು ; ತಾಮ್ರಕಾರ" (Coppersmith. ಇಂಕನಿ.). [ ಸಂ. ]

**ತಾಮ್ರಕುಟ್ಟಕ** (ನಾ). = ತಾಮ್ರಕಾರ : (೩). [ ತಾಮ್ರ + ಕುಟ್ಟಕ ]

**ತಾಮ್ರಚೂಡ** (ನಾ). ೧. ಕೆಂಪುಬಣ್ಣದ ಕೊಟ್ಟನ್ನುಳ್ಳುದು ; ಹುಂಜ : "ಕೃಕವಾಕುಃ, ತಾಮ್ರಚೂಡಃ, ಕುಕ್ಕುಟಃ, ಚರಣಾಯುಧಃ-ಈ ೪ ಕೋಟಿ" (ಹಲಾಯು. ೪೧–೪೪); ವೇಳೆಯುನರಿದು ಧ್ವನಿದೋರುವ ತಾಮ್ರಚೂಡಂಗೆ ಅದಾವ ಜ್ಞಾನ (ಸರ್ವವ. ೧೩೪–೬೬೯) ; ಕೂಗಿದುದೇಕೀ ಕೃತಕ ತಾಮ್ರ ಚೂಡನಿದೇಕೆಂದಾರರಿವರಯ್ಯ ವಿಧಿವಿಳಸನಮಂ (ಯಶೋಚ. ೩-೨೫) ; ಕುಕೂಕೂಯೆಂದು ಭೂತಳದ ಜನರನೆಚ್ಚರಿಪಂತೆ ತಾಮ್ರಚೂಡಂ ಕೂಗಿದಂ ಮುದದೊಳು (ಪ್ರಾಭರಾ. ೬ ೩೨); ಒದೆದುದದ್ಗೇಹ ಪಾರಾವತದ್ಯ ನಿನದಮಂ ತಾಮ್ರಚೂಡವ್ರಜೋನ್ನಾದದ ಪೆರ್ಚಂ ಪೊಯ್ಕಳಿಧ್ವಾನಮನೆ ತುಳಿದು . . . ಸುತ್ತುತ್ತಿರ್ದತ್ತ ಭವಭವನಸಂಪೂರಿತಂ ಶಂಖನಾದಂ (ರಾಜಶೇ. ೧೨–೩). ೨. [ನಾಟ್ಯ] ಅಸಂಯುತ ಹಸ್ತಭೇದಗಳಲ್ಲಿ ಒಂದು: ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ – ೧ ಪತಾಕ . . . ೨೪ ತಾಮ್ರಚೂಡ (ಅಭಾನ್ಮ. ೪೪). ೧, ೨ : ಅಸಂಯುತ ಹಸ್ತಸಮುದಯದಂತೆ ಅತ್ಯಕಪಿತ್ಥಮುಮಂ ತಾಮ್ರಚೂಡಾವಲೀಢಮುಮಂ (ಚಂದ್ರಪು. ೫–೫೨ ವ). [ ಸಂ. ]

**ತಾಮ್ರಚೂಳ** (ನಾ). = ತಾಮ್ರಚೂಡ ೧: ಈ ತಾಮ್ರಚೂಳಂಗಳನಿತು ಪೋದೊರ್ಡಮಿವರ್ಕೆ ಶ್ರಮಮಾಗದು (ಶಾಂತಿಪು. ೯–೫೫ ವ). [ ಸಂ. ತಾಮ್ರಚೂಲ ]

**ತಾಮ್ರತುಂಡ** (ನಾ). ೧. ಕೆಂಪುಬಣ್ಣದ ಕೊಕ್ಕು, – ಚುಂಚು : ತಿಱಿದು ಕೊಳಲ್ಕೆ ಬಂದಪುವು ಕೆಂದಳಿರಂ ಗಿಳಿ ತಾಮ್ರತುಂಡದಿಂದಿಱಿದಪುದಾಮ್ರ ದೊಳ್ಮಿಡಿಗಳಂ (ಮಲ್ಲಿಪು. ೫–೩೩). ೨. ಗಿಣಿ ; ಶುಕ : ತೆಟ್ಟುಂದೆಱೆಯೆ ಗಳಪಿದತ್ತಾಮ್ರದೊಳ್ ತಾಮ್ರತುಂಡಂ (ಚಂದ್ರಪು. ೭–೪೭) ; ಪಸುರ್ವರಲ ಪಂಜರಂಗಳೊಳ್ಪೊರ್ಳೆವ ನಿಜ ತುಂಡ ಪ್ರತಿಬಿಂಬಮಂ ಬಿಂಬಫಳಂಗೆತ್ತು ತುಡುಂಕುವ ತಾಮ್ರತುಂಡಗಳುಂ (ರಾಜಶೇ. ೨–೧೩೬ ವ); ಇತ್ತಲಿದೆ ಕೊಳ್ ತಾಮ್ರತುಂಡನೇನನೋ ಗೊಣಗುತಿರ್ಕುಂ (ರಾಮಾಶ್ವ. ೨–೬). ೩. ಕೆಂಪು ಮುಖವುಳ್ಳವನು: ತಾಮ್ರತುಂಡಾಗ್ರೇಸರನಪ್ಪ ಅಮದಾನಗರದ ಭೈರೀ ನಿಜಾಮು ಪಾತುಶಾಹನನುಮತಿಯಿಂ . . . ತೆರಳ್ದ್ಯಿತಂದು (ಕಳನ್ನ. ೨–೮). ೪. ಕೋತಿ ; ಕಪಿ. [ ತಾಮ್ರ+ ತುಂಡ₂ ]

**ತಾಮ್ರಪಟ** (ನಾ). (ಅಕ್ಷರ, ಚಿತ್ರ ಮೊದಲಾದುವುಗಳನ್ನು ಕೊರೆಯಲು ಬಳಸುವ) ತಾಮ್ರದ ತಗಡು, –ಫಲಕ; ತಾಮ್ರಶಾಸನ: ಪ್ರತಿಯೊಬ್ಬ ಕನ್ನಡಿಗನೂ ಕನ್ನಡ ಸಂಶೋಧನ ಸಂಸ್ಥೆಗೆ ತನ್ನಲ್ಲಿದ್ದ ಹಳೆಯ . . . ತಾಮ್ರಪಟ ಮುಂತಾದುವುಗಳನ್ನು ಕೊಟ್ಟು ನೆರವಾಗಬೇಕು (ಮೂರುಉ. ೪ ಪೀಠಿಕೆ) ; ಅದರ ನಿಯಮಗಳನ್ನು ಮುಂದಿನ ರಾಜರ ತಿಳುವಳಿಕೆಗಾಗಿ ವಸ್ತ್ರಪಟದ ಮೇಲಾಗಲಿ ತಾಮ್ರಪಟದ ಮೇಲಾಗಲಿ ಬರೆಯಿಸಬೇಕು (ಕಶಾಅ. ೧೪). [ ತಾಮ್ರ + ಪಟ₃ ]

**ತಾಮ್ರಪಟ್ಟ** (ನಾ). = ತಾಮ್ರಪಟ : ಕೊರೆದ ಬರೆಹವಿರುವ ತಾಮ್ರ ಪಟ್ಟಗಳೂ ಸಿಕ್ಕಿವೆ (ಭಾರಪ. ೯); ಸಂಗೀತ ಕೃತಿಗಳು ತಾಮ್ರಪಟ್ಟಗಳ ಮೇಲೆ ಲಿಖಿತವಾಗಿದ್ದು . . . ತಿಳಿದುಬರುತ್ತದೆ (ಕನ್ನಸಂ. ೩೪). [ ತಾಮ್ರ + ಪಟ್ಟ ]

**ತಾಮ್ರಪಟ್ಟಿಕೆ** (ನಾ).=ತಾಮ್ರಪಟ: ಇವರ ತಾಮ್ರಪಟ್ಟಿಕೆಗಳ ಮೊಹರುಗಳ ಮೇಲೆ ಸಿಂಹಲಾಂಛನವಿರುತ್ತದೆ (ಕರ್ನಾಅ. ೮); ಶ್ರೀ ವಿಹಾರದಲ್ಲಿ ದೊರೆತ ತಾಮ್ರಪಟ್ಟಿಕೆ ಕ್ರಿ. ಪೂ. ೪೬ಕ್ಕೆ ಸೇರಿದ್ದು. ಅತಿ ಪ್ರಾಚೀನವಾದುದಾಗಿದೆ (ಕನ್ನಸಂ. ೩೪). [ ತಾಮ್ರ + ಪಟ್ಟಿಕೆ ]

**ತಾಮ್ರಪತ್ರ** (ನಾ). = ತಾಮ್ರಪಟ : ಹಿರೇ ಹಡಗಲಿಯಲ್ಲಿ ದೊರೆತ ತಾಮ್ರಪತ್ರಗಳಿಂದ ಆ ಭಾಗಕ್ಕೆ ಸಾತಾಹನಿರಟ ಎಂಬ ಹೆಸರಿತ್ತೆಂದು ತಿಳಿದು ಬರುತ್ತದೆ (ಕರ್ನಾಅ. ೩). [ ತಾಮ್ರ + ಪತ್ರ ]

**ತಾಮ್ರಪರ್ಣಿ** (ನಾ). ೧. ಮಲಯ ಪರ್ವತದಲ್ಲಿ ಹುಟ್ಟಲಾಗಿದೆ ಎಂದು ಹೇಳಲಾದ (ಮುತ್ತುಗಳಿಗೆ ಹೆಸರಾದ) ಒಂದು ನದಿ : ಸಾರತರ ತಾಮ್ರಪರ್ಣಿಯ ವಾರಿಯೊಳೆಳದಳಿಸಿ ಬಳೆದ ಶುಕ್ತಿಯ ಮುಕ್ತಾಸಾರ ಮನೀವ ಪಯೋನಿಧಿ (ಶಾಂತಿಪು. ೧೧–೧೩) ; ನೂತನ ಶುಕ್ತಿಜಕ್ಕೆ ತಾಯ್ವನೆ ಯೆನಿಸಲ್ ದೊರೆ ತಾಮ್ರಪರ್ಣಿ ತಾನೊಂದೆ ವಲಂ (ಕಾವ್ಯಾವ. ೪೮೭) ; ಕೃತಮಾಲಿನಿ ತಾಮ್ರಪರ್ಣಿಗಳೆಂಬೆರಡು ನದಿಗಳೀ ಮಲಯ ಪರ್ವತದಲ್ಲಿ ಪುಟ್ಟಿದವು (ವಿವೇಕ. ೧೯೩); ವಿಜೃಂಭಿಪ ತಾಮ್ರಪರ್ಣಿಯ ಸಿಂಪಿನಿಂ ಮುತ್ತು ಪೂರ್ವಾದ್ರಿಯಿಂ ರುಗರ್ಭುಗಿಪ ಬಾಲಾರ್ಕನುದಯಿಸಿದನೆಂದೆಂಬ ಬಗೆ ಬೇಡ (ಭಾವಚಿಂ. ೩–೫೭). ೨.=ತಾಮ್ರಕರ್ಣಿ: "ದ್ವಿಪೆಗಳಭ್ರಮು ಕಪಿಲೆ ಪಿಂಗಳೆ ಸುತಾಮ್ರಪರ್ಣಿ[ಪಾಠಾಂ. ತಾಮ್ರಕರ್ಣಿ]ಪುರದಂತಿಯದಂಜನಾಂಜನಾವತಿ ಸಿತದ್ವಿಪೆಯೆನಲು ಕ್ರಮದಿ ತಾಕನ್ನು" (ಮಂಗರಾ. ೧೪–೨೦).: ದಿಗ್ಗಜಗಳೆಂಟು . . . ಅನುಪಮೆ, ತಾಮ್ರಪರ್ಣಿಸುದಂತಿ . . . ಎಂಬ ತಮ್ಮತಮ್ಮ ಸ್ತ್ರೀ ಗಜಗಳೊಡಗೂಡಿ (ವಿವೇಕ. ೧೭೭). [ ಸಂ. ತಾಮ್ರಪರ್ಣೀ ]

**ತಾಮ್ರಪುಷ್ಪಿ** (ನಾ). ಒಂದು ಬಗೆಯ ಸಸ್ಯ : (ವೃಜಿಗಿ. ೭೪–೧೬೧೨). [ ಸಂ. ತಾಮ್ರಪುಷ್ಪೀ ]

**ತಾಮ್ರಫಲಕ** (ನಾ). = ತಾಮ್ರಪಟ : ಇವುಗಳಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ದೊರೆತವೆಂದರೆ ತಾಮ್ರಫಲಕಗಳು (ಭಾರಪ. ೧೬). [ ತಾಮ್ರ + ಫಲಕ ]

**ತಾಮ್ರಭಸ್ಮ** (ನಾ). ತಾಮ್ರದೊಡನೆ ಇತರ ಕೆಲವು ದ್ರವ್ಯಗಳನ್ನು ಸೇರಿಸಿ ತಯಾರಿಸಿದ ಬೂದಿ ; ತಾಮ್ರದ ಭಸ್ಮ : ಹಿಪ್ಪಲಿ ೧ ತೂಕ, ತಾಮ್ರಭಸ್ಮ ಗ ೨ ತೂಕ ಸಹ ಪ್ರತಿಪಾಕವಿಕ್ಕಿ ಸೇವಿಸೆ ಅಸ್ಥಿಗತಜ್ವರ ಮಂದಾಗ್ನಿ ಸಹ ಕೆಡುಗುಂ (ಸಕವೈ. ೦೦೮). [ ತಾಮ್ರ + ಭಸ್ಮ ]

**ತಾಮ್ರಮಯ** (ಗು). ತಾಮ್ರದಿಂದ ಮಾಡಿದ; ತಾಮ್ರದಿಂದ ತುಂಬಿದ: ಅಂತು ತಾಮ್ರಮಯ ಗುಹ್ಯಕ ಪ್ರತಿರೂಪಂ ಕಿಚ್ಚಿಂಗೆ ತೋಱಿದರಗು ಕರಗುವಂತೆ ಕರಗಿ ಪೊನಲ್ವರಿಯೆ (ಶಾಂತಿಪು. ೬-೨೯ ವ). [ ಸಂ. ]

**ತಾಮ್ರಮರ್ದಕ** (ನಾ). = ತಾಮ್ರಕಾರ : ಗಂದಿಗರು . . . ತಾಮ್ರಮರ್ದಕರು ಮಲ್ಲರು ಜಾಲಗಾರರು ಮೊದಲಾದ ಜಾತಿಯವರೂ ಅಲ್ಲಿ ವಾಸಿಸುತ್ತಿದ್ದರು (ಕರ್ನಾಜ. ೧೫೭). [ ತಾಮ್ರ + ಮರ್ದಕ ]

**ತಾಮ್ರಮರ್ದನ** (ನಾ).=ತಾಮ್ರಕಾರ : ವಸುವಿಭೇದಕ ತಾಮ್ರಮರ್ದನ ಮಸಗ ಮುಟ್ಟಿಗ . . . ಹರದರ ಕೇರಿ (ತೊರರಾ. ೫-೮-೫೨). [ ತಾಮ್ರ + ಮರ್ದನ ]

**ತಾಮ್ರಮುಖ**(ನಾ).೧. ಕೆಂಪುಮೂತಿಯುಳ್ಳುದು;ಗಿಣಿ; ಶುಕ: ಶೀತೋಪಚಾರಮಂ ಕರಮಾ ತಾಮ್ರಮುಖಂಗೆ ಮಾಡುತುಂ ರಂಜಿಸಿದಂ (ಉದ್ಭಟ. ೫-೧). ೨. ಕೆಂಪು ಮುಖದವನು; ಪರಂಗಿಯವನು: ತಾಮ್ರಮುಖ ಕಟ್ಟಿಕೊಂಡ ಇಕ್ಕೇರಿ ಸೊರಬ . . . ಮುಂತಾದ ಕೋಂಟೆಗಳಂ ಸಾಧಿಸಿ (ಕೆಳನೃ. ೬-೦೩). 'ತಾಮ್ರತುಂಡ' ಪರಾ. [ ತಾಮ್ರ + ಮುಖ ]

**ತಾಮ್ರಮುಖಿ** (ನಾ). ಕೆಂಬಣ್ಣದ ಮುಖವುಳ್ಳವನು; ಪರಂಗಿಯವನು: ಈ ತಾಮ್ರಮುಖಿಗಳ ಅಧಿಕಾರಿಗಳ ದುರ್ಮಾರ್ಗತನಗಳು ಅವರಲ್ಲಿಯೇ ಹುಟ್ಟಿ . . . ಅವರಲ್ಲಿಯೇ ಅಡಗಿ ಹೋಗುತ್ತಿದ್ದರೆ (ಅದೂಟ. ೭೩); ಸುರಪುರ ರಾಜ್ಯವು ಬ್ರಿಟಿಷರ ಪಾಲಾಗಿ ತಾಮ್ರಮುಖಿಯೋರ್ವನ ವಿಚಾರಣೆಗೊಳಪಟ್ಟಿತು (ಕಥವಿ. II, ೩೪೦). [ ಸಂ. ತಾಮ್ರಮುಖಿನ್ ]

**ತಾಮ್ರಲೋಚನ** (ನಾ). ೧. ಕೆಂಪಾದ ಕಣ್ಣು. ೨. ಕಣ್ಣು ಕೆಂಪಾದವನು; ಕೋಪಗೊಂಡವನು : ಕೌರವ ಕುಳಾಂತಕಂ ತರಳತಾಮ್ರಲೋಚನನಾದಂ (ಗದಾಯು. ೮-೫) ; ದೋಃಕಂಡೂಯನಮಂ ಕಟಿಲ್ವುಲಿಡೆಯಾಯ್ತೆನುತ್ತುಂ ಮುತ್ತರಳತಾಮ್ರಲೋಚನನಾದಂ (ಪಂರಾಮಾ. ೦೩-೩). [ ತಾಮ್ರ + ಲೋಚನ ]

**ತಾಮ್ರವಲ್ಲಿ** (ನಾ). ನೆಲನೆಲ್ಲಿ; ತಮಾಲಿಕೆ: "ತಮಾಲೀ, ಕಿಱುನೆಲ್ಲಿ, ತಾಮ್ರ(ಅಭ್ರ)ವಲ್ಲಿ" (ಒಷಧಿ. ೬೩). [ ಸಂ. ತಾಮ್ರವಲ್ಲೀ ]

**ತಾಮ್ರಶಾಸನ** (ನಾ). ತಾಮ್ರಪಟಗಳ ಮೇಲೆ ಕೊರೆದಿರುವ ಶಾಸನ : ಶ್ರೀವೀರಣ ಮಹಾಚಾರ್ಯೋರ್ ವ್ಯಲಿಖಿತ್ತಾಮ್ರಶಾಸನಂ (ಎಕ. XII, ಚಿಕ್ನಾ. ೩೯-೨೭೬; 1539); ತಾಮ್ರಶಾಸನಗಳೆಲ್ಲ ಸಾಮಾನ್ಯವಾಗಿ ದಾನ ಶಾಸನಗಳು (ಕಶಾಅ. ೪೧). 'ಶಿಲಾಶಾಸನ' ಪರಾ. [ತಾಮ್ರ + ಶಾಸನ]

**ತಾಮ್ರಶಿಖಿ** (ನಾ). ಒಂದು ಬಗೆಯ ಸಸ್ಯ : (ವೃಜಿಗಿ. ೩-೪೦). [ ? ]

**ತಾಮ್ರಶಿರ** (ನಾ). ಒಂದು ಬಗೆಯ ಹಾವು : ಆ ದೇಶದಲ್ಲಿ ತಾಮ್ರಶಿರ (Copper-head) ಎಂಬ ಇನ್ನೊಂದು ವಿಷವಿರುವ ಹಾವಿದೆ(ಬಾಲಕೃ. I,೧೮). [ ತಾಮ್ರ + ಶಿರ ]

**ತಾಮ್ರಾಕ್ಷ** (ನಾ). ೧. ಕೆಂಪು ಕಣ್ಣುಳ್ಳುದು ; ಕೋಗಿಲೆ. ೨. ಕಾಗೆ. ೩. ಕೆಂಪು ಕಣ್ಣುಳ್ಳವನು. [ ಸಂ. (ತಾಮ್ರ + ಅಕ್ಷಿ + – ) ]

**ತಾಮ್ರಾಧರೆ** (ನಾ). ಕೆಂಪು ಬಣ್ಣದ ತುಟಿಯುಳ್ಳವಳು ; ಸುಂದರಿ : ವಿರಾಜಿಸುತಿರ್ಪ ತಾಮ್ರಾಧರೆಯರ ಸೀಮಂತಮಣಿ ಸೀತಾರಮಣಿ (ಜೈಮಿಭಾ. ೧೮ ಸೂಚನೆ). [ಸಂ. ತಾಮ್ರಾಧರಾ (ತಾಮ್ರ + ಅಧರ + –)]

**ತಾಮ್ರಾಸ್ಯ** (ನಾ). = ತಾಮ್ರತುಂಡ ೨ : ನವಕಂಜಚ್ಛದ ತಳ್ಪದೊಳ್ಪಿಡದೆ ತತ್ತಾಮ್ರಾಸ್ಯನಂ . . . ಪಟ್ಟಿರಿಸಿ (ಉದ್ಭಟ. ೫-೨). [ ತಾಮ್ರ + ಆಸ್ಯ ]

**ತಾಯ್**, ತಾಯಿ (ನಾ). ೧. ಹಡೆದವಳು; ಮಾತೆ ; ಜನನಿ: "ಜನನಿ ಸವಿತ್ರಿ ಮಾತೃ ಸುಷು ತಾಯ್" (ವಸ್ತುಕೋ. ೫೪-೧೭) ; ತನ್ದೆಯ ತಾಯ್ವಿರಾ ಸನ್ನಾನಮ(ಂ)ನುಳಿದು ಬಿಸುಟೋಂ ಮಱುವಾರ್ತ್ತೆಗೊಳ್ಳ[ನ್] (ಸೌಇಇ. XI-1, ೧೧-೫ ; 865) ; ವೈರಾಗ್ಯಪರಾಯಣನಾಗಿ ತಾಯುಂ ತಂದೆಯುಮಂ ನಂಟರುಮಂ ಬಿಡಿಸಿ (ವಡ್ಡಾರಾ. ೬೨-೭) ; ಪಡೆದರ್ ತಾಯುಂ ತಂದೆಯುಮೊಡಲಂ ಪ್ರಾಣಮುಮಂ (ಪಂಪಭಾ. ೯-೮೦) : ಪರಸ್ತ್ರೀಯರಂ ತಾಯಂ ಕಾಣ್ಬಂತೆ ಕಾಣ್ಬುದು (ಧರ್ಮಾಮೃ. ೬-೦೪೩) ; ನೆಲದಲಿ ಮೂಡಿದ ಸ್ವಯಂಭುಲಿಂಗಕ್ಕೆ ನೆಲಂ ತಾಯಾಗಲಱಿಯದೆಂಬಂತೆ (ಬಸರ. ೨-೩) ; ಹೆತ್ತ ತಾಯಂ ಮಾಱಿ ತೊತ್ತ ಕೊಂಬರೆ (ಹಜಕಾ. ೮-೭೬) ; ಸಂಹರಿಸು ದೈತ್ಯನನೆಂದು ತಾಯ್ ಹರಸಿದಳು ನಂದನನ (ಕುವ್ಯಾ. ಆ. ೦೦-೨೬) ; ಅಮಲಸುಮತಿಯಂ ತಾಯೆನಗೆ ತಾಯೆ (ಜೈಮಿಭಾ. ೦-೪) ; ತಾವ್ ಮೊದಲು ಬದುಕಿ ತಾಯ್ ಮೊದಲು ಬದುಕಿ (ಹೊಂಗಳು. ೧೪-೭). ೨. ಸ್ತ್ರೀಯರನ್ನು ಗೌರವದಿಂದ ಸಂಬೋಧಿಸುವ ಒಂದು ಪದ : ಉಪಾಯವಾವುದೋ ಹೇಳಕಟ ತಾಯೆ (ಬಸಪು. ೪೫-೯); ನೀ ಮೈದುನಂಗೆ ಪೇಳ್ದೆನ್ನ ಬಿಡಿಸೌ ತಾಯೆ (ತುರಂಗ. ೨೪-೨೪); ಯಾರು ನಿಂದವರಲ್ಲಿ ತಾಯೆ (ಗದಿ. ೩೪-೧). ೩. ಹೆಣ್ಣುಮಕ್ಕಳನ್ನು ವಾತ್ಸಲ್ಯದಿಂದ ಸಂಬೋಧಿಸುವ ಒಂದು ಪದ : ಮನೆಯಿಂದಗಲದಿರು ತರುವಲಿಗಳೊಡನಾಡದಿರು ತಾಯೆ (ಬಸಪು. ೦೪-೨). **ತಾಯಿ:** ೧. "ಜನಯಿತ್ರೀ, ಪ್ರಸೂಃ, ಮಾತಾ, ಜನನೀ ಈ ೪ ತಾಯಿ" (ನಾಚರಾ. ೧೦೮) ; ಶ್ರೀ ಮಹಾದೇವಿರರಸಿ ಪೆರ್ಮ್ಮಾನಡಿಗಳ ಅರಸಿಯರ ತಾಯಿ (ಎಕ. XI, ಚಳ್ಳಕೆ. ೩೩-೫ ; 815) ; ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು ನೀನಲ್ಲದೆ ಮತ್ತಾರು ಇಲ್ಲವಯ್ಯಾ (ಬಸವ. ೪೭೯) ; ತಾಯಿಯುಳ್ಳೊಡೆ ದುರುಳಗರಳವನೇಕೆ ಸುತನಂ ಕುಡಿಯಲೀಸುವಳು (ಬಸಪು. ೦೩-೮) ; ತಾಯಿ ಕೞುಗಳ ಬಿಡದವೊಲು ನಿರ್ದಾಯದಲಿ ನಿಜಭಕ್ತಸಂಗದ ಮಾಯೆ ಬಿಡದೈ ನಿನ್ನನು (ಕುವ್ಯಾ.ಆ. ೦೪-೦೪) ; ಸತ್ಯವೇ ನಮ್ಮ ತಾಯಿ ತಂದೆ (ಗೋಹಾಡು. ೬೨): ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ (ಗಾದೆ). ೨. ತಾಯಿಯೆಂದಾನು ನುಡಿದೇನು ಪರಸ್ತ್ರೀಯ (ಸರ್ವಜ್ಞ. ೦೫) ; ಯಾರವ್ವ ನೀ ತಾಯಿ ? ಏತಕಿಂತೊಬ್ಬಳೇ ಕುಳಿತೆ ಕಾಡಿನಲಿ ? (ಹೊಂಗಳು. ೦೭-೦೩).

**ತಾಯಿಗಂಡ, ತಾಯಿಗ್ಗಂಡ** = ತಾಯಿಗೆ ದ್ರೋಹ ಬಗೆಯುವವನು ; ಮಾತೃದ್ರೋಹಿ ; ಪಾಪಿ : ಶಿವನೀನ್ಹೇಗಾದ್ಯೋ ತಾಯಿಗಂಡ ಹರ ನೀ ಹೇಗಾದ್ಯೋ (ಪುರಂದ. ೧-೦೮೭ ಪಲ್ಲವಿ) ; ಅವನೂ ಆಯಿತು; ಅವನಪ್ಪನೂ ಆಯಿತು . . . ತಾಯಿಗಂಡರು (ಸ್ವಪ್ನಹೊ. ೦೨೩) ; ಪಾತಾಳ ಕಂಡರು ಕೆಲ ತಾಯಿಗ್ಗಂಡರು (ನಾದಲೀ. ೪೧-೫); ಆ ತಾಯಿಗ್ಗಂಡ ಗುತ್ತಿ, ನಮ್ಮ ಮನೇ ಮೇಲೆ ಯಾವಾಗಲೂ ಕತ್ತಿ ಕಟ್ತೋಕೆ ಸಮಯ ಕಾಯ್ತಾ ಇರ್ತಾನಲ್ಲಾ (ಮಲೆಮ. ೫೩೦). **ತಾಯ್ನುವರ್** = ಹುಟ್ಟಿದ ನಾಡು ; ಜನ್ಮಭೂಮಿ : ಏಷಿಯದ ಸಾಮ್ರಾಜ್ಯಕೇಂದ್ರವೆ ಓ ಪರ್ಸ್ಯ ! ಐಶ್ವರ್ಯಭೂಮಿಯೇ, ಪೋರಾಳ ತಾಯ್‌ತವರೆ (ಪಾರಸಿ. ೧೧-೨೫). [ ದೇ.॥ ತಮಿ. ತಾಯ್ ; ಮಲ. ತುಳು. ತೆಲು. ತಾಯಿ ]

**ತಾಯುಂದೆ** (ನಾ). ಒಬ್ಬಾತನ ಹೆಸರು (?) : ಆಳುತಿಟ್ಟು ತಿಟಗಲೂರ ತಾಯನ್ದೆಯರ ಪೂರ್ವಜರ (ಮೈಆರಿ. ೦೯೦೯, ೦೨-೫ : 700). [ ? ]

**ತಾಯುಂದೆಕೆಱೆ³** (ನಾ). ಒಂದು ಕೆರೆಯಂ ಹೆಸರು (?): ಪಡುವಯ್ ಅಲೆ ತಾಯಂದೆಕೆಱೆಯೆ (ಮೈಆರಿ. ೦೯೦೪, ೦೩-೬೫ ; 806). [ ತಾಯುಂದೆ? + ಕೆಱೆ³ ]

**ತಾಯಚ್ಚು,** ತಾಯಿಅಚ್ಚು (ನಾ). ಮೊದಲನೆಯ ಅಚ್ಚು; ಮೂಲ ಅಚ್ಚು : ತಾಯಚ್ಚೊಂದನ್ನು ಚೆನ್ನಾಗಿ ತಯಾರು ಮಾಡಿದರೆ ಎಷ್ಟು ಸುಂದರಮೂರ್ತಿಗಳನ್ನಾದರೂ ಅಚ್ಚು ಮಾಡಬಹುದು (ರೂಢಿ). **ತಾಯಿಅಚ್ಚು :** ಎರಡನೆಯ ಅಚ್ಚು ಮೂಲಪ್ರತಿಯಾದ ಮಯಣದ ಅಚ್ಚಿನಂತೆಯೇ ಇರುವುದು ಇದಕ್ಕೆ 'ತಾಯಿ' (Mother) ಅಚ್ಚು ಎನ್ನುತ್ತಾರೆ (ಬಾಲಪ್ರ. III, ೧೪೧೬). [ ತಾಯಿ (<ತಾಯ್) + ಅಚ್ಚು$_3$ ]

**ತಾಯತ** 'ತಾಯಿತಿ' ನೋ.

**ತಾಯತಿ** 'ತಾಯಿತಿ' ನೋ.

**ತಾಯಾಳಿಕೆ** (ನಾ). "ಒಂದು ಕುಟುಂಬದಲ್ಲಿ ತಾಯಿಯೇ ಯಜಮಾನಿಕೆ ನಡೆಸುವ ಸಮಾಜ ಪದ್ಧತಿ; ತಾಯಾಳಿಕೆ ; ಮಾತೃಯಾಜಮಾನ್ಯ" (Matriarchy. ಇಂಕನಿ.): ದಕ್ಷಿಣ ಭಾರತದಲ್ಲಿ ತಾಯಾಳಿಕೆ (Matriarchy) ಅನುಷ್ಠಾನದಲ್ಲಿರುವುದು ಎಲ್ಲರಿಗೂ ತಿಳಿದ ವಿಷಯ (ಪ್ರವಾಇ. I, ೪೭ ಅಡಿಟಿ). [ ತಾಯ್ + ಆಳಿಕೆ (<ಆಳ್ಕೆ) ]

**ತಾಯಿ** 'ತಾಯ್' ನೋ.

**ತಾಯಿಅಚ್ಚು** 'ತಾಯಚ್ಚು' ನೋ.

**ತಾಯಿಗಂಪು** (ನಾ). ಮೂಲತಃ ಇರುವ ಸುವಾಸನೆ ; ಶ್ರೇಷ್ಠವಾದ ಸಂವಾಸನೆ : ಸೀಯನುಣ್ಬುವ ಕಬ್ಬು ಪಣ್ಗಳ ತಾಯಿಗಂಪಿನ್ನ ಮರುಗ ಹುಗಳ ತಳೆದ ತೆಱನಾಯ್ತು (ಸಾಳ್ಕಭಾ. ೩-೨೨). [ ತಾಯಿ (<ತಾಯ್) + ಕಂಪು ]

**ತಾಯಿಗ್ರಾಮ** (ನಾ). ಮುಖ್ಯವಾದ ಹಳ್ಳಿ,–ಗ್ರಾಮ : ಈ ತಾಯಿ ಗ್ರಾಮಗಳಿಗೆ ಸಲುವ ಉಪಗ್ರಾಮಗಳು ಹೊನ್ನಲಗೆರೆಯ ಉಪಗ್ರಾಮ (ಎಕ. XIV, ಮಂಡ್ಯ. ೦೩೩-೦೯ : 1622). [ ತಾಯಿ (<ತಾಯ್) + ಗ್ರಾಮ ]

**ತಾಯಿತ** 'ತಾಯಿತಿ' ನೋ.

**ತಾಯಿತನ** 'ತಾಯ್ತನ' ನೋ.

**ತಾಯಿತಿ,** ತಾತಿ$_2$, ತಾಯತ, ತಾಯತಿ, ತಾಯಿತ, ತಾಯಿತು, ತಾಯಿತ್ತು, ತಾಯ್ತಿ (ನಾ). ೧. ಕೈಗಾಗಲಿ, ಕೊರಳಿಗಾಗಲಿ ಕಟ್ಟಿಕೊಳ್ಳುವ ರಕ್ಷಾಮಂತ್ರವನ್ನು ಒಳಗೊಂಡ ತಾಮ್ರ ಅಥವಾ ಬೆಳ್ಳಿಯ ತೆಳುವಾದ ತಗಡಿನ ಸುರುಳಿ : ಮೈಮೇಲೆ ಧರಿಸಿಕೊಳ್ಳುವ ತಾಯಿತಿ, ಕಾಪು, ರಕ್ಷೆ, ಯಂತ್ರ" (Periapt. ಇಂಕನಿ.); ಮಹಾ ತೈಲಂಗಳು ತಾಯಿತಿಗಳು (ಸೌಗಂಧಿ. ೩೯-೩) ; ಚಿನ್ಹೆಗಳನ್ನು ಜನ ತಾಯಿತಿಗಳಾಗಿ ಕಟ್ಟುತ್ತಿದ್ದರು (ಸಾಕಾಪ್ರ. ೧೪೭) ; ಈ ಬರೆಹಗಳು ತಾಯಿತಿಗಳ ಮೇಲಿನ ಲಿಪಿಯನ್ನು ಹೋಲುತ್ತವೆ (ಭಾರಪ. ೧೦). **ತಾತಿ$_2$ :** ೧. ತಾಮ್ರಾದ ತಾತ್ಯೊಂಟು ನನ್ನ ತೋಳಲ್ಲಿ (ಹಳ್ಳಿಪಾ. ೧೨). ೨. ಒಂದು ಬಗೆಯ ಆಭರಣ ; ಪದಕದ ಸರ : ಝಣಝಣತ್ಕಾರಮಂ ಮಾಳ್ಪ ಕಿಂಕಿಣಿಗಳಂ ಘಂಟೆಗಳನೋರಂತೆ ತಾತಿ ಮೊದಲಾದವಂ ಕಟ್ಟಿ (ಪದ್ಮರಾ. ೩-೪೫) ; ಕಿಂಕಿಣಿಯ ಕಂಕಣದ ತಾತಿಯ ಘಂಟೆಗಳ ಝಣಝಣ ನಿನದವೆಸೆಯಲು (ಕುರಾಸಾಂ. ೭-೧೦೦) ; ಥಳಥಳಿಸುವ ಬಾಹುಲಿ ವಜ್ರವೈಡೂರ್ಯದಳೆದಿಹ ಹವಿಣ್ಮಾರ ತಾತಿ (ಕಂಸವಿ. ೨೩-೩೯) ; ಕಟ್ಟಿದನು ಮಣಿ ತಾತಿಯುಂಗುಲಕಿಟ್ಟ ಮುದ್ರಿಕೆಯ (ಶರಲೀ. ೨೨೯-೨) ; **ತಾಯತ:** ೧. ರೋಗರುಜಿನದ ಕಾರಣ ಹೇಳುವುದು ಮಂತ್ರ ತಾಯತ ಕೊಡುವುದು (ಕರ್ನಾಟ. ೨೫) ; ಒಂದು ತಾಯತ ನಿನ್ನ ಹತ್ತಿರ ಇದೆಯೆ (ಮಲನಾ. ೯೦). ೨. ಚರಣ ಪೆಂಡೆಯವಿಟ್ಟು ಮೆರೆವ ತಾಯತವಿಟ್ಟು (ಶರಲೀ. ೧೩೪-೫) ; ಹವಳ ಚೆಂಬಳ ಸರ ಮ್ಯಾಲೆ ಮುತ್ತಿನ ಸರ ತಾಯತ ನಡುವ ನ್ಯಾವಳ (ಲೋಕಗೀ. ೨೯). **ತಾಯತಿ :** ೧. ಯಂತ್ರದ ತಾಯತಿಗಳಂ ಮಡಗಿ (ಸೌಗಂಧಿ. ೧೬೬-೧೧) ; ಆ ಗುಪ್ತನಿಧಿ ಇರುವ ಸ್ಥಳವನ್ನು ತಿಳಿಸಲು ಒಂದು ನಕ್ಷೆ ಬರೆದು, ಈ ತಾಯತಿಯಲ್ಲಿ ಇರಿಸಿದ್ದೇನೆ (ರಾಜಿಕೊ ೧ದ. ೯೦): ಆದುದರಿಂದ ಈ ಮುದ್ರಿಕೆಗಳು 'ತಾಯತಿ' ಅಥವಾ 'ಯಂತ್ರ' (ಆಮ್ಯುಲೆಟ್ಸ್) ಎಂದು ನಿರ್ಧರಿಸಬೇಕಾಗಿದೆ (ಭಾರದ. ೧೭). **ತಾಯಿತ :** ೧. ಯಂತ್ರ ತಂತ್ರ ಮಂತ್ರ ತಾಯಿತ ಅಯ್ಯೊ, ಏನು ಮಾಡಿದರೂ 'ಬೆನ್ನು ಬಿಡುವಳೆ ಮೃತ್ಯು ವ್ಯರ್ಥ ಜೀವಾತ್ಮಾ!' (ಶರಜ. ೬೯೦) ; ಭಸ್ಮ, ಚೀಟು, ತಾಯಿತಗಳನ್ನೂ ಕೂಡ ಮಂತ್ರಿಸಿ ದೋಷಪರಿಹಾರಕ್ಕೆ ಕೊಡಬೇಕು (ರಕ್ತರೂ. ೧೯) ; 'ಶೆಲ್ಫಿ'ನ ಮೇಲೆ ಧೂಳಿ ಮುಸುಕಿದ ಬಾಟಲಿಗಳು ಮತ್ತು ಶೂನ್ಯಗರ್ಭ ತಾಯಿತಗಳು (ಕುರಿಹಿಂ. ೧೪೪). ೨. ಸರ ಮತ್ತು ಚಿಂತಾಕ ಸರಿಗೆ ತಾಯಿತ ಮುತ್ತು ಮೆರೆವ ಯೇಕಾವಳಿಯು (ಶ್ರೀಕೃಪಾ. ೧೨). **ತಾಯಿತು :** ೨. ಥಳಥಳಿಸುವ ಕೊರಳೊಳು ತ್ರಿವಳಿ ನ್ಯಾವಳಿ ತಾಯಿತು (ವಿದಾಕ್ಕ. ೭೧-೨). **ತಾಯಿತ್ತು :** ೨. ವೈರಾಗ್ಯವೆಂಬ ಒಪ್ಪುವ ಮೂಗುತಿ ತಾರತಮ್ಯ ಜ್ಞಾನ ತಾಯಿತ್ತು ಮುತ್ತು ಸರ ಕರುಣರಸವೆಂಬಂಥ ಕಟ್ಟಾಣಿ ಕಟ್ಟಿಕೊಂಡು (ಪುರಂದ. ೧-೩೪-೪). **ತಾಯ್ತಿ :** ೨. ಕೊರಳ ಸರಪಣಿ ತಾಯ್ತಿ ಬೆರಳ ಉಂಗುರ ಹೊನ್ನ ಉಡಿದಾರವಿಟ್ಟು (ಶರಲೀ. ೩೯೦-೪). [ ←ಹಿಂ. ಮರಾ. ತಾಈತ್ ; ಪಾರ. ಅರ.ತಾವೀಜ್ ]

**ತಾಯಿತು** 'ತಾಯಿತಿ' ನೋ.

**ತಾಯಿತ್ತು** 'ತಾಯಿತಿ' ನೋ.

**ತಾಯಿನಾಡು** 'ತಾಯ್ನಾಡು' ನೋ.

**ತಾಯಿನುಡಿ** 'ತಾಯ್ನುಡಿ' ನೋ.

**ತಾಯಿಬೇರು** 'ತಾಯ್ವೇರ್' ನೋ.

**ತಾಯಿಭಂಡ** (ನಾ). ಮೂಲಧನ : ದ್ಯಾವತಿಯ ಭಂಡಮೆ ತಾಯಿ[ಭ]ಂಡ ಮಾಗೆಯುಂ ಐಸಂಬರಮೆ ಅಮೌಲ್ಯವಸುಗಳಾಗೆಯುಂ ನಡೆದುಂ ನುಡಿದುಂ (ಕಇ. IV, ೩೩-೦೪: 1000?). [ತಾಯಿ (<ತಾಯ್)+ಭಂಡ$_1$ (<ಬಂಡ$_1$)]

**ತಾಯಿಮನೆ** 'ತಾಯ್ಮನೆ' ನೋ.

**ತಾಯಿಮಳಲು** 'ತಾಯ್ಮಣಲ್' ನೋ.

**ತಾಯಿಮಾತು** (ನಾ). ಮಾತೃಭಾಷೆ : ನಿಮ್ಮ ತಾಯಿಮಾತಿನಲ್ಲಿ ನಿಮಗೆ ಅಕ್ಕರೆಯೇ ಇಲ್ಲವಲ್ಲ (ಕಓಸಾ. ೬). [ ತಾಯಿ (<ತಾಯ್) + ಮಾತು$_1$ ]

**ತಾಯಿರೆಕ್ಕೆ** (ನಾ). ಗಿಡಮರಗಳ ಮೊದಲ ಟಿಸಿಲು,–ಕವಲು : ತಾಯಿ ರೆಕ್ಕೆ ಕಡಿಯ ಬೇಡ(ರೂಢಿ). [ತಾಯಿ (<ತಾಯ್) + ರೆಕ್ಕೆ (<ಎಱಂಕೆ)]

**ತಾಯಿಲಿ** (ನಾ). ತಾಯಿ ಇಲ್ಲದ ವ್ಯಕ್ತಿ ; ತಬ್ಬಲಿ : "ತಾಯಿಲಿ, ತಬ್ಬಲಿ, ದೇಸಿಗ, ದಿಕ್ಕೇಡಿ" (ಕಂನುಹು. ೮೫) : ಆವರ್ತಂ [ತಾಂ] ಗಳಿಬ್ಬಗಿಯಾಗೆ ತಾಯಿಲಿ (ಲೋಕೋಪ. ೧೧-೨೫). [ ತಾಯ್ + – ಇಲಿ$_3$ ]

**ತಾಯಿವನೆ** 'ತಾಯ್ವನೆ' ನೋ.

**ತಾಯಿವಳ** 'ತಾಯ್ವಳ್ಳ' ನೋ.

**ತಾಯಿವಳ್ಳ** 'ತಾಯ್ವಳ್ಳ' ನೋ.

**ತಾಯಿವೇರು** 'ತಾಯ್ವೇರ್' ನೋ.

**ತಾಯಿಳೆ** (ನಾ). = ತಾಯ್ನಾಡು : ಐಕ್ಯಮತ್ಯದಿಂ ಬಾಳುವುದೆ ತಾಯಿಳೆಯ ಹೆಬ್ಬಾಳಿಕೆಯ ಮರ್ಮ (ಹಬ್ಬೆರ. ೪೨-೮). [ ತಾಯ್ + ಇಳೆ ]

**ತಾಯಿಾಚಲು** (ನಾ). "(ಜೇನಂಹುಳಂ, ಮೊ. ಗಳಲ್ಲಿ) ಪೂರ್ಣ ವಿಕಾಸ ಹೊಂದಿದ, ಮರಿ ಹಾಕುವ ಹೆಣ್ಣು ; ತಾಯಿಾಚಲು" (Queen-Bee ಇಂಕನಿ.). [ ತಾಯ್ + ಈಚಲು$_2$ (<ಈಚಲ್$_2$) ]

**ತಾಯೂರ್** (ನಾ). ಒಂದು ಊರಿನ ಹೆಸರು : ತಾಯೂರ ಪಟಿಕೆಟಿ ಬಸವಯ್ಯ (ಎಕ. III, ನಂಜನ. ೯೭-೫ ; 898 ?) ; ತಾಯೂರ ಪಡುವಣ ದೆಸೆಯ ಕೊರಕೊರೆಯ ಪಳ್ಳ (ಎಕ. III, ನಂಜನ. ೧೩೯-೦೨ ; 915 ?) ; ಮೂಗೂರ ಸೀಮೆಯ ತಾಯೂರ ಸ್ಥಳದ ತಾಯೂರಗ್ರಾಮ (ಎಕ. III, ನಂಜನ. ೦೪೦-೧೦ : 1586). [ ತಾಯ್ + ಊರ್ ]

**ತಾಯೆಳೆ** (ನಾ). = ತಾಯಿಳೆ : ಬ್ರಹ್ಮಜ್ಞಾನದ ಕಾಯೆ ತಾಯೆಳೆಯು ಧರ್ಮಗ್ಲಾನಿಯಿಂ ಹಾನಿಯಿಂ (ಗಿರಿವಿಂ. ೫೨-೯). [ ತಾಯ್ + ಎಳೆ$_5$ ]

**ತಾಯ್ಗಂಡಿ** (ನಾ). ಮುಖ್ಯವಾದ ತೂಬು : ನಾಯ್ಕಣಿಗೆಱೆಯ ತಾಯ್ಗಣ್ಡಿ ಮುಕಡಲ್ (ಇಆ. XII, ೧೭-೪ ;739) ; ಅನ್ತೆ ಸಯ್ಕನೆ ಪೋವ ನಾಯ್ಕಣಿಗೆಱೆಯ ತಾಯ್ಗಂಡಿ (ಎಕ. XII, ಗುಬ್ಬಿ. ೬೧-೯೩; 812). 5
[ ತಾಯ್ + ಕಂಡಿ$_1$ ]

**ತಾಯ್ಗಣ** (ನಾ). ಕಣದ ಮಧ್ಯಭಾಗ ; ಮೇಟಿಯ ಸುತ್ತಣ ಭಾಗ : ತಾಯ್ಗಣದ ತುಂಬ ರಾಶಿಯಿದೆ (ರೂಢಿ).
[ ತಾಯ್ + ಕಣ$_1$ (<ಕಳ$_3$) ]

**ತಾಯ್ಗನಿ** (ನಾ). ಜನ್ಮಸ್ಥಳ ; ಆಕರ : ನಿನ್ನ ತಾಯ್ಗನಿ ಎಲ್ಲಿ ? ಅಗೆದ ಗುದ್ದಲಿ ಎಲ್ಲಿ? (ಗಿರಿವಿಂ. ೩೦-೭೩). [ ತಾಯ್ + ಗನಿ (<ಕಣಿ$_6$) ] 10

**ತಾಯ್ಗರು** (ನಾ). ೧. ನೆಲೆ ; ಮೂಲಸ್ಥಾನ ; ತಾಯ್ವನೆ : ನೆಟ್ಟನೆ ಪುನರ್ಜಾತಕ್ಷಯ ಶ್ರೀಗೆ ತಾ[ಯ್ಗ] [ಪಾಠಾಂ. ಯು]ರು ರತ್ನತ್ರಿತಯವಾವ ಭಾಸಿ ಬಹು ಬಂಧಚ್ಛೇದಿ ಸಂಸಾರ ಸಂಹರಣಂ (ಸುಕುಮಾ. ೧-೬) ; ಪುರುಷಕಾರದ ತಾಯ್ಗರು ಪೆಂಪಿನಾಗರಂ ಚಲದ ವಿನಾಯಕಂ (ಕಇ. IV, ೧೦-೩೫; 1121): ಸುರೇಶ್ವರಭವನಕ್ಕೆ ತಾನೆ ಪಡಿಚಂದಮಿದೆಂಬಿನಮಚ್ಚರಕ್ಕೆ ತಾಯ್ಗರು ಕರುಮಾಡಮೊಪ್ಪುವುದಲಂಕೃತ ಸಪ್ತತಳಂ ನಿರಾಕುಳಂ (ಪುಷ್ಪಪು. ೨-೯೨). ೨. ಆಕರ : ಸೊಗಯಿಸುವಚ್ಚ ಬೆಳ್ಳಗೆಯ ತಾಯ್ಗಱು [ರು] ಕಾಮನ ಕೀರ್ತಿ (ಲೀಲಾವ. ೭-೫೫) ; ಉತ್ತಮಗುಣ ತಾಯ್ಗರು ಕಡುಚೆಲುವಿನ ಚಿತ್ತರ ಸಲೆ ಸುಭಗತೆಯ ಪುತ್ಥಳಿ (ಶ್ರೀಪಾಲ. ೨-೭); ವಾದ್ಯರಭಸಂ ಲಯಾಂಬುದದ ಸಿಡಿಲ ನಿನದಕ್ಕೆ ತಾಯ್ಗರು[ಪಾಠಾ. ರ]ವೆನಿಸಿತೆನೆ (ಚಿಬಪು. ೩೮-೩೦). [ ತಾಯ್ + ಕರು$_3$ ] 15 20

**ತಾಯ್ಗರುಳು** (ನಾ). ತಾಯಿಯ ಅಂತಃಕರಣ,-ಮಮತೆ : ಅತ್ತಿಮಬ್ಬೆಯ ತಾಯ್ಗರುಳು ಕುದಿಯಿತು (ದಾನಚಿಂ. ೧೫೬).
[ ತಾಯ್ + ಕರುಳು (<ಕರುಳ್) ] 25

**ತಾಯ್ಗಾಡು** (ನಾ). ರಕ್ಷಣೆಯ ಸ್ಥಾನವಾದ ಕಾಡು; ಮೂಲಸ್ಥಾನವಾದ ಕಾಡು : ಮನಸಿಜನೆಂಬಾನೆಗೆ ತಾಯ್ಗಾಡೆನಿಪ್ಪ ಚೆಲ್ವಂ ತಳೆದುದ್ಯಾನವನದೊಳಗೆ ಪೊಕ್ಕಂ(ಮಲ್ಲಿಪು. ೬-೧) ; ಕುಸುಮೇಷುಗೆ ಬೀಡು ವೃಷದ್ವಿಪಕ್ಕೆ ತಾಯ್ಗಾಡು (ಪುಷ್ಪಪು. ೯-೧೮). [ ತಾಯ್ + ಕಾಡು$_2$ ]

**ತಾಯ್ಗಿರಿ** (ನಾ). ಬೆಟ್ಟಗಳಿಗೆ ತಾಯಿಯಂತೆ ಇರುವುದು ; ದೊಡ್ಡ ಬೆಟ್ಟ ; ಪ್ರಮುಖವಾದ ಪರ್ವತ: ಕುಳನಗಂಗಳ ಕುಲದೈವಮಧಿರಾಜಂ ತಾಯ್ಗಿರಿ ಮೇರು ಮಹೀಧರೇಂದ್ರಂ (ಶಾಂತಿಪು. ೦೦-೬೭). 30
[ ತಾಯ್ + ಗಿರಿ$_1$ ]

**ತಾಯ್ಗುಟಿ** (ನಾ). ಬುಡದ ಸುತ್ತಣ ಪಾತಿ : ಪೊದೆವೂಗಾವಿನ ನೆವದಿಂ ಕುಡಿವರಿದು ಕೊನರ್ತು ಪರ್ಬುವ ಜಗತೀಲತೆಯ ದಾಂಗುಡಿಯ ತಾಯ್ಗುಟಿಯೆನಿಪ್ಪ ಸುಟಿವೊರ್ಕುಟಿಂ (ಚಿಕವಂ. ೩೪-೧೪). 35
[ ತಾಯ್ + ಕುಟಿ$_2$ ]

**ತಾಯ್ತಿ** 'ತಾಯಿತಿ' ನೋ.

**ತಾಯ್ತನ, ತಾಯಿತನ** (ನಾ). ತಾಯಿಯಾಗಿರುವಿಕೆ ; ಮಾತೃತ್ವ : ಅವರಿಗೆ ತಾಯ್ತನ ಮತ್ತು ಮಕ್ಕಳ ಪೋಷಣೆ ವಿಚಾರವಾಗಿ ಸೂಕ್ತವಾದ ತಿಳುವಳಿಕೆ ಬೇಕು (ಗೃಹವಿ. ೯೬); ನಿಮ್ಮ ತಾಯ್ತನದ ತಂಪು ನಮ್ಮನ್ನು . . . ಅಲ್ಲಿಯೂ ಕಾಯುತ್ತಿರುತ್ತದೆ (ಸವತಿ. ೧೪೪). **ತಾಯಿತನ :** ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯಗೊಲಿದು ಸಲೆ ಮಾಱುವೋದೆನು ನಿನ್ನ ತಾಯಿತನವನೊಲ್ಲೆ ಹೋಗೇ (ಮಹಾದೇ. ಬ. ೪೪-೧೦೨) ; ಕೂಸಿಗೆ ಹಾಲುಹಣ್ಣುಗಳಿಲ್ಲವೆಂದು ಅವಳ ತಾಯಿತನ ವೇದನೆಯನ್ನು ಅನುಭವಿಸಿ (ರಂಗರೋ. ೧೧೧). [ ತಾಯ್ + – ತನ ] 40 45

**ತಾಯ್ದೊಟ್ಟಿಲ್** (ನಾ). ಮುಖ್ಯವಾದ ಆಧಾರ,-ಆಶ್ರಯ : ಜಗಕ್ಕೆ ತನ್ನುಂಗುಟಮೇ ತಾಯ್ದೊಟ್ಟಿಲಾದ ಗಿರಿಸುತೆಯಂ . . . ರನ್ನದೊಟ್ಟಿಲೊಳಗಿರಿಸುತ್ತುಂ (ಗಿರಿಕ. ೩-೬೬).
[ ತಾಯ್ + ತೊಟ್ಟಿಲ್$_1$ ]

5 **ತಾಯ್ನಾಡು, ತಾಯಿನಾಡು** (ನಾ). ಹುಟ್ಟಿದ ದೇಶ ; ಮಾತೃಭೂಮಿ: ಒಸಗೆಯ ತನ್ನಿರಿ ತಾಯ್ನಾಡಿರವಿಗೆ (ಕನ್ನಡಾ. ೧೧೪-೧೭). **ತಾಯಿನಾಡು :** ತಾಯಿನಾಡಿಗೆ ಜಯವೆನ್ನಿ (ರೂಢಿ). [ ತಾಯ್ + ನಾಡು ]

**ತಾಯ್ನುಡಿ, ತಾಯಿನುಡಿ** (ನಾ). ತಾಯಿಯಿಂದ ಕಲಿಯುವ ನುಡಿ ; ಮಾತೃಭಾಷೆ : ತಾಯ್ನುಡಿಗೆ ದುಡಿದು ಮಡಿ ಇಹಪರಗಳೆಲ್ಲ (ಕಪಪು. ೭-೧೪೩); ಐಕ್ಯದ ನಿಜಬೀಜ ತಾಯ್ನುಡಿಯೊಲವಿನೊಳಿಲ್ಲೇನು (ಕನ್ನಡಾ. ೯೪). **ತಾಯಿನುಡಿ:** ಪೊಲೆವಾಲಿನೊಡಗೂಡಿ ಬಂದ ನುಡಿ ತಾಯಿನುಡಿ (ಕೋಗಿಲೆ. ೪೦-೯). [ ತಾಯ್ + ನುಡಿ$_2$ ] 10

**ತಾಯ್ನೆಲ** (ನಾ). ಹುಟ್ಟಿದ ಭೂಮಿ ; ಜನ್ಮಭೂಮಿ : ಸುಗಿವ ಮಳೆ ಹಳೆಯುಗೆಯೊಳಡಗಿರ್ಪ ಬೇರ್ಗಳಿಂ ಚಿಗುರಿಸಿತು ತಾಯ್ನೆಲದ ಹಸುರುಡುಗೆಯೊಡಲಂ (ಕಾಲೂರ. ೪೫-೭೩). [ ತಾಯ್ + ನೆಲ$_1$ ] 15

**ತಾಯ್ಬೇರು** 'ತಾಯ್ವೇರ್' ನೋ.

**ತಾಯ್ಮಣಲ್, ತಾಯಿಮಳಲು, ತಾಯ್ಮಳಲ್, ತಾಯ್ಮಳಲು, ತಾಯ್ಮಟಲ್** (ನಾ). (ಜಲಾಶಯಗಳ) ತಳದಲ್ಲಿರುವ ಮರಳು ; ಅಡಿಮಳಲು : ಇಂಗಡಲ ತಾಯ್ಮಣಲ್ ಚೆಲ್ದಿಂಗಳ ಬಯಲಂತೆ ವಿಶದಮಾಗೆ (ವರ್ಧಪು. ೦೪-೩೩). **ತಾಯಿಮಳಲು :** ತಾಯಿಮಳಲನು ತಱಬಿದಬುಧಿಯ ದಾಯಿಗರು ತಾವಿವರೆನಲು (ಕುವ್ಯಾಸ. ೨-೧೩) ; ಪಡೆಯ ನಡೆಸುವ ತಾಯಿಮಳಲೊಳಗೆ (ಕಾಶಿರಾ. ೧೫-೪೨). **ತಾಯ್ಮಳಲ್ :** ತಾಯ್ಮಳಲ್ವರೆಗಂ ತುಳುಂಕುವೆಂ (ಮಹಾನೀ. ೭-೮೧) ; ಬಲವಾರಾಸಿಯಲಿ ತಾಯ್ಮಳಲ ಪೊಗೆದವು ಭೀಷ್ಮನಂಬುಗಳು (ಕುವ್ಯಾಭೀ. ೯-೦೦) ; ತಾಯ್ಮಳಲು ಬ್ಬುತಿರ್ದುದು ಶರಧಿಯಲಿ (ತೊರರಾ. ೪-೩-೯) ; ಅಬ್ಧಿಯಂತಿಂತಾಗಿ ತಾಯ್ಮಳಲ್ಗಡಿಗಾಣಲು (ಚಿಬಪು.೨೧-೫). **ತಾಯ್ಮಳಲು:** ದೆಸೆದೆಸೆಗೆ ಶರನಿಧಿಯ ತಾಯ್ಮಳಲು ಸೂಸಿತು (ಸಾಳ್ವಭಾ. ೨೫-೮). 'ತಾಯ್ಮಳಲುಗಾಣಿಸು' ಪರಾ. △ **ತಾಯ್ಮಟಲ್:** 'ತಾಯ್ಮಟಲ್ದೆಱಿ', 'ತಾಯ್ಮಟಲ್ದೋಱು' ಪರಾ. [ ತಾಯ್ + ಮಣಲ್ ] 20 25

30 **ತಾಯ್ಮನೆ** 'ತಾಯ್ವನೆ' ನೋ.

**ತಾಯ್ಮಳಲ್** 'ತಾಯ್ಮಣಲ್' ನೋ.

**ತಾಯ್ಮಳಲು** 'ತಾಯ್ಮಣಲ್' ನೋ.

**ತಾಯ್ಮಳಲುಗಾಣಿಸು** (ಕ್ರಿ). ೧. (ನದಿ ಮೊದಲಾದವುಗಳಲ್ಲಿ) ಅಡಿಯಲ್ಲಿರುವ ಮರಳು ಕಾಣುವಂತೆ ಮಾಡು ; ತಳದ ಮರಳನ್ನು ಕಾಣಿಸಂ : ಚವುಡಯ್ಯಗಂಜಿ ಜಲಂ ಮುರಿದು ವಿತಳಕ್ಕಿಳಿಯಿತೆನೆ ಬಿಮ್ಮಿಳಿದು ನೆಱೆ ಸರಿಯಲದು ತಾಯ್ಮಳಲುಗಾಣಿಸಲು (ಬಸಪು. ೩೫-೩೬). ೨. (ನದಿ ಮೊದಲಾದವುಗಳಲ್ಲಿ) ತಳ ಕಾಣು ; ಬತ್ತಿಹೋಗು : ಬಳಿಕ ಮೂಱು ದಿನಕ್ಕೆ ತೊಱೆ ತಾಯ್ಮಳಲುಗಾಣಿಸಲು (ಬಸಪು. ೫೦-೬೭) 35
[ ತಾಯ್ಮಳಲು (<ತಾಯ್ಮಣಲ್) + ಕಾಣಿಸು ]

40 △ **ತಾಯ್ಮಟಲ್** 'ತಾಯ್ಮಣಲ್' ನೋ.

**ತಾಯ್ಮಟಲ್ದೆಱಿ** (ಕ್ರಿ). = ತಾಯ್ಮಳಲುಗಾಣಿಸಂ : ವಾರಾಸಿಯಂ ತಾಯ್ಮಟಲ್ದೆಱಿವಂತೀಂಟುವೆನೋ (ಜಗವಿ. ೭-೩೫).
[ ತಾಯ್ಮಟಲ್ (<ತಾಯ್ಮಣಲ್) + ತೆಱಿ$_1$ ]

45 **ತಾಯ್ಮಟಲ್ದೋಱು** (ಕ್ರಿ). = ತಾಯ್ಮಳಲುಗಾಣಿಸಂ : ಕಾಲಾಳ್ಗಳಬ್ಬರಕ್ಕೆ ತಾಯ್ಮಟಲ್ದೋಱಿ ಮೇರೆದಪ್ಪಿದ ಮುನ್ನೀರೊಳ್ (ಕಬ್ಬಿಕಾ. ೨೮೮).
[ ತಾಯ್ಮಟಲ್ (<ತಾಯ್ಮಣಲ್) + ತೋಱು ]

**ತಾಯ್ವನೆ**, ತಾಯಿವಂನೆ, ತಾಯಿಂವನೆ, ತಾಯ್ಮನೆ (ನಾ). ೧. ತಾಯಿಯಂ ಮನೆ ; ತವರುಮನೆ : ಕಳುಹುವುದು ಸೌಭದ್ರೆಯನು ನಿಜಲಲನೆಯರ ನವರವರ ತಾಯ್ವನೆಗಳಿಗೆ (ಕುವ್ಯಾಅ. ೨-೩೨) ; ಅಂಗಭವನೇ ತನ್ನ ತಾಯ್ವನೆಗೆ ಕೇಡನೆಣಿಸುವನೆರ್ದೆಯೊಳು (ಜೆಬಪು. ೪೫-೧೪). ೨. ಆಶ್ರಯಂ; ನೆಲೆ; ಮೂಲಸ್ಥಾನ : "ಇಕ್ಕೆ, ಇಂಬು, ಗೊತ್ತು, ನೆಲೆ, ತಾಣಂ, ತಾಯ್ವನೆ . . . ಈ ೧೫ ಆಶ್ರಯಕ್ಕೆ ಪೆಸರ್" (ಕಶಸಾ. ೧೫-೨೧೦) ; ವಿನಯದ ನೆಲೆ ಧರ್ಮದ ತಾಯ್ವನೆ ಸತ್ಯದ ಜನ್ಮಭೂಮಿ (ಸೌಇಇ. IX-1, ೦೬೦-೦೯; 1091); ಸಿರಿಯ ತಾಯ್ವನೆ ರಾಮನ ಪೇರುರಂ (ಪಂರಾಮಾ. ೩-೩೫೪) ; ಬಗೆದಂತೆ ಮಾಳ್ಪ ಮೈಮೆಗೆ ಜಗದೊಳ್ ಜಿನಭಕ್ತಿ ತಾನೆ ತಾಯ್ವನೆಯಲ್ತೇ (ವರ್ಧಪು. ೧೨-೦೭) ; ತ್ಯಾಗಗುಣಕ್ಕೆ ತಾಯ್ವನೆ (ಎಇ. XXI, ೦೩-೩೨ ; 1260). **ತಾಯಿಮನೆ :** ೧. ನಂಬಿ ನೆನೆವರ ತಾಯಿಮನೆಯನು ನೆನೆದು ಸುಖಿಸುತ್ತ (ನಿಘಾಗ. ೪-೧೦-೧೫) ; ತಾಯಿಮನೆಯಿಂದ ಅತ್ತೆಯ ಮನೆಗೆ ಕಳುಹಿಸಲ್ಪಟ್ಟ ಹೆಣ್ಣಿನಂತೆ (ಸೌಗಂಧಿ. ೫೬೭-೭) ; ಮಲೆಯ ನಾಡೆನಗೆ ತಾಯಿಮನೆ (ಶ್ರೀರಾಮಾ. ೦೨೫-೮). ೨. ಸಾಯಕವ ಹಿಡಿ ಸಾಕು ಸೋಲದ ತಾಯಿಮನೆ ನಿನಗಿದಿರಲಿದೆ (ಕುವ್ಯಾಕ. ೪-೨). **ತಾಯಿವನೆ : ೨.** ಘೋರ ತರ ವನವಿದ್ದುದೊಂದತಿ ಕ್ರೂರಮೃಗಗಳ ತಾಯಿವನೆ (ಸಾಳ್ವಭಾ. ೦೬-೩). **ತಾಯ್ಮನೆ:** ೧. ತುಳುವರ ತಾಯ್ಮನೆಯುಳಿದರ ಕಾಯ್ಮನೆ (ಗಿಳಿವಿಂ. ೪೬-೨). ೨. ಅದು ವೇದಂಗಳ ತಾಯ್ಮನೆಯುದು ನಾನಾ ತರ್ಕದಿರ್ಕೆದಾಣಂ (ಎಇ. XVIII, ೦೯೧-೨೦ ; 1104) ; ಪುಸಿಯ ತಾಯ್ಮನೆ ಪಾಪದಾಗರಂ (ಧರ್ಮಾಮೃ. ೦೨-೭೭); ಅದು ಸತ್ಯದ ತಾಯ್ಮನೆ ಮಿಕ್ಕ ಹೆಮ್ಮೆಗಾಸ್ಪದ ಮೆನಿಸಿತ್ತು (ಕಇ. IV, ೧೧-೦೬ ; 1121) ; ಲೀಲೆಯ ತಾಣ ತಾಯ್ಮನೆ ಖೇಳಮೇಳವದ ಮದದ ಮಡು (ಕುವ್ಯಾಅ. ೦೨-೪).

[ ತಾಯ್+ಮನೆ ]

**ತಾಯ್ವಳ್ಳ**, ತಾಯಿವಳ, ತಾಯಿವಳ್ಳ (ನಾ). ಕೆರೆಕಟ್ಟೆಗಳಿಗೆ ನೀರನ್ನು ಒದಗಿಸುವ ಹಳ್ಳ; ಮುಖ್ಯವಾದಹಳ್ಳ: ಅಲ್ಲಿಂ ಬಡಗ ದೇವಣನ ಕೆಱೆಯ ತಾಯ್ವಳ್ಳ (ಎಕ. II, ೩೨೬-೭೮ ; 1181). **ತಾಯಿವಳ:** ಮಾಳಿಯ ಬೆಟ್ಟದಿಂ ಬಂದ ತಾಯಿವಳದಿಂ ತೆಂಕಲು (ಎಕ. XIV, ಎಳಂದೂ. ೦೮೭-೧೨ ; 1530). **ತಾಯಿವಳ್ಳ :** ಅಲ್ಲಿಂದ ಹಡುವಲು ಸವಣನ ಕೆಱೆಯ ತಾಯಿವಳ್ಳಂ ಮೇರೆ (ಎಕ. VII, ಶಿವಮೊ. ೫೭-೬೮ ; 1115) ; ನಾರಸಿಹ್ಮಪುರದ ಹೊಲ ಮೇರೆ ದಕ್ಷಿಣಕ್ಕೆ ಹೊನ್ನಸಮುದ್ರದ ಕೆಱೆ ಇಂದ ಬಂದ ತಾಯಿವಳ್ಳ ಮೇರೆ (ಎಕ. IX(8), ಬೆಂಗಳೂ. ೩೦-೦೪ ; 1532). [ ತಾಯ್ + ಪಳ್ಳ ]

**ತಾಯ್ವಾಲ್** (ನಾ). ತಾಯಿಯಂ ಹಾಲು : ಆರ್ ಕಾವರಂತಕರಾಜಂ ಬಲಗರ್ವಿತಂ ಮುಳಿದೊಡಂ ತಾಯ್ವಾಲೆ ನಂಜಾದೊಡಂ (ಶಾಂತಿಪು. ೬-೯೩).

[ ತಾಯ್ + ಪಾಲ್₁ ]

**ತಾಯ್ವಿಡಿ** (ನಾ). ತಾಯಿಯಾದ ಆನೆ : ತಾಯ್ವಿಡಿ [ಪಾಠಾಂ. ಯ್ದೊಡೆ]ಯ ಸೋಂಕಿ ನಿಂದು . . . ಕಳಭವ್ರಜವಿರ್ಪುದದೊಂದು ತಾಣದೊಳ್ (ಜಗವಿ. ೦೬-೧೧ ; ಸೂಕ್ತಿಸು. ೩-೬೦ ನೋ) ; ನುಸುಳ್ದೋಡಿ ಕಾಡಿ ಸಂಗಳಸಿ ತದೊಂದು ಪಲ್ಲಮಱಿ ತಾಯ್ವಿಡಿಗಂತುಮನಂತಸೌಖ್ಯಮಂ (ಚಂದ್ರಪು. ೫-೬೫) ; ಬಾಯ್ವಿಡುತ್ತೆದಿದ ಮಱಿಯಂ ತಾಯ್ವಿಡಿ ನಡೆ ನೋಡಿ ಬಾಡಿ (ರಾಜಶೇ. ೫-೪೦). [ ತಾಯ್ + ಪಿಡಿ₃ ]

**ತಾಯ್ವೀಡು** (ನಾ). = ತಾಯ್ವನೆ ೨ : ಸೊಬಗಿನ ಸಂತತಿಯ ತಾಯ್ವೀಡು ಲಕ್ಷ್ಮಿಯ ಸಂತಸದ ಬಾಳ್ವೀಡು (ಸಾಳ್ವಭಾ. ೨-೧) ; ಜಗದೊಳ್ ಜಾಣರ ಮೆಚ್ಚು ಸತ್ವವಿಸಮೂಹಕ್ಕೆಯ್ದೆ ತಾಯ್ವೀಡು (ನಾನಾರ. ೦೬೯).

[ ತಾಯ್ + ಬೀಡು₂ ]

**ತಾಯ್ವೆದೆ** (ನಾ). ಹದವಾದ ಬೆದೆ; ಫಲಪ್ರದವಾಗುವ ಬೆದೆ : 'ತಾಯ್ವೆದೆಗೂಡು' ಪರಾ. [ ತಾಯ್₁ + ಬೆದೆ₁ ]

**ತಾಯ್ವೆದೆಗೂಡು** (ಕ್ರಿ). (ನೆಲವು) ಬಿತ್ತನೆಗೆ ಹದವಾಗು ; ಒಳ್ಳೆಯ ಹದವನ್ನು ಹೊಂದು : ನೆಲನುಟ್ಟಿಂತೆವೊಲಾಗೆ . . . ತಾಯ್ವೆದೆಗೂಡೆ ಬಿತ್ತಿ ಪೆಣನಂ ಬೇಱೊಂದು ಶೌರ್ಯಾಂಕುರಂ ತಲೆದೋಱಿತ್ತು (ಪಂರಾಮಾ. ೧೧-೧೨೭). [ ತಾಯ್ವೆದೆ + ಕೂಡು₁ ]

**ತಾಯ್ವೇರ್**, ತಾಯಿಬೇರು, ತಾಯಿವೇರು, ತಾಯ್ಬೇರು (ನಾ). ೧. ಮುಖ್ಯವಾದ ಬೇರು; ಮಧ್ಯದ ಬೇರು: ಯುಕ್ತಿವಲ್ಲಿಗಳ ತಾಯ್ವೇರಂ ಛೇದಿಪ ಚಿಕದೇವೇಂದ್ರನ ವಾದದೊಳ್ (ಚಿಕವಿ. ೪-೧೧೨). **ತಾಯಿಬೇರು:** ದೂರ ದೂರ ಬೇರು ಚಾಚಿ ಟೊಂಗೆ, ಟಿಸಿಲು ಮನುಕುಲ ; ತಾಯಿಬೇರು ಕಾಯಬೇಕು ಹಣ್ಣಾಗಲಿ ಹಂಬಲ (ನೆಲಮು. ೨೫-೧೧) ; ತಾಯಿಬೇರನ್ನು ಕಡಿದು ಹಾಕಿದರೆ ಮರವು ತನಗೆ ತಾನೇ ಒಣಗಿಹೋಗುವುದು (ಕೃಮುಹ. ೩೭) ; ಸ್ವಾತಂತ್ರ್ಯವು ವಿಕಾಸಕ್ಕೆ ತಾಯಿಬೇರಿನಂತೆ (ಜೀವಾತ್ಮ. ೨೬೨). ೨. (ಅಲಂ) ಮೂಲ ; ಮುಖ್ಯ ಆಧಾರ : ವಿವೇಚನೆಯಿಲ್ಲದ ವಿದ್ಯಾಭ್ಯಾಸಪದ್ಧತಿಯು ನಮ್ಮ ಜನರನ್ನು ಅವರ ತಾಯಿಬೇರಿನಿಂದ ದೂರಮಾಡಿತು (ಸಂಗೀತ. VI, ಮುನ್ನುಡಿ) ; ಭಾರತೀಯ ಸಂಗೀತದ ತಾಯಿಬೇರು ವೇದಗಳಲ್ಲಿ (ಭಾರದ. ೫೩೬). **ತಾಯಿವೇರು :** ೧. ಪೆಂಪಿನಲಿ ಮಾಮೇರು ಸುಕೃತದ್ರುಮದ ತಾಯಿವೇರು (ಸೌಂದಪು. ೨-೮). **ತಾಯ್ಬೇರು :** ೧. ಒಂದಿರುಳಿನ ಒಡನಾಟದಿ ನೆಲದಾಳಕೆ ನೀರು ಚಿಗಿಯಿತು ತಾಯ್‌ಬೇರು (ನೆಲಮು. ೮-೩). [ ತಾಯ್ + ಬೇರ್ ]

**ತಾಯ್ವೊಲ** (ನಾ). ತಾಯ್ನೆಲ ; ಆಕರ ; ಮುಖ್ಯವಾದ ಕ್ಷೇತ್ರ : ಪೆಂಪಿಂಗಿಕ್ಕೆ ಚಾಗಕ್ಕೆ ತಾಯ್ವೊಲನಣ್ಮಿಗೆ ಮಾಂತನಕ್ಕೆ ಗುಱಿ (ಕೃಆಸಿ. VIII, ೦೧-೭೨ ; 1058). [ ತಾಯ್ + ಪೊಲ ]

**ತಾರ್** 'ತಾಱು₂' ನೋ.

**ತಾರ₁** (ನಾ). ತಾಮ್ರದ ಒಂದು ಚಿಕ್ಕ ನಾಣ್ಯ : ಹಣವ ಕೊಟ್ಟು ಹಾದರವ ಮಾಡುವುದಱಿಂದ ತಾರವ ಕೊಟ್ಟು ಸೂಳೆಗೆಯ್ಯಬಾರದೆ (ಬಸಹೆ.೧೨-೧೧೬); ಹತ್ತಿಯ ಭಂಡಿಗೆ ತಾರಂ ಮೂಱು (ಎಇ. XIII, ೨೨-೫೪ ; 1204); ತುಪ್ಪ ಕುಡುತೆ ೨ಕ್ಕೆ ತಾರ ೫ ತೋಯಿ ತಾ ೨ (ಸೌಇಎ. ೦೯೨೪, ಮಂಗಳೂರು. ೪೬೫-೩೩ ; 1312) ; ಆನೆಹಳ್ಳಿಯಿಂದ ತಾರ ಇನ್ನೂರ ಎಂಭತ್ತಾರ ಲೆಕ್ಕದಲ್ಲಿ ಗ ೨೦ (ಮೈಆರಿ. ೦೯೩೪, ೩೦-೨೦ ; 1457) ; ಆರಿಗಾದರೂ ಒಂದು ತಾರವನು ಕೊಡ ಲೋಭಿ (ಸರ್ವಜ್ಞ. ೬೮೭).

[ ದೇ.॥ ಮಲ. ತುಳು. ತಾರ ]

**ತಾರ₂** 'ತಾಱು₂' ನೋ.

**ತಾರ₃** (ಗು). ೧. ದೊಡ್ಡ ಧ್ವನಿಯುಳ್ಳ; ಎತ್ತರದ ಸ್ವರವುಳ್ಳ : ಇರ್ದಂತೆ ಚೀರ್ದೊರಲಿದನ್ ತಾರನಿಸ್ವನದಿ (ಶ್ರೀರಾಮಾ. ೨೫೪-೭೦೦) ; ತಾರಪಂಚಮದಾಗ ಕೋಗಿಲಾ ಕೂಗುತದೊ (ಗಂಗಾತ. ೭೭-೯). ೨. ಒಳ್ಳೆಯ; ಅತ್ಯುತ್ತಮವಾದ. (ನಾ). ೩. ದಾಟುವುದು. ೪. ತೇಲುವಿಕೆ. ೫. ಈಜುವುದು. ೬. ಇಳಿಯುವಿಕೆ. ೭. ಉಚ್ಚ ಶಬ್ದ ; ಎತ್ತರವಾದ ಧ್ವನಿ : " ಉದ್ದ ಧ್ವನಿ ತಾರ (ವ)ಮೆಂಬುದು " (ಹಲಾಯು. ೨೩-೦೩೯) ; " ತಾರಮೆನಲುಚ್ಚದಾ ಧ್ವನಿಯಕ್ಕು " (ಮಂಗರಾ. ೨೩-೩) ; ಸಂಕಟಕೆ ಬೀಡಾದ ದಟ್ಟಡವಿಯೊಡಲಿಂದ ತಾರದಲಿ ಕೂಗುವನು (ಭಾಸನಾ. ೦೨). ೮. ಬೆಳ್ಳಿ : " ರಜತಂ, ಕಳಧೌತಂ, ರೂಪ್ಯಂ, ತಾರಂ – ಈ ೪ ಬೆಳ್ಳಿ " (ಹಲಾಯು. ೨೮-೦೮) ; ತರದಿಂ ಚಾಷ ಮಯೂರ ತಾರ ತಿಳಗೋಕ್ಷೀರಾಬ್ಜ ನೀರೋಪಮಂ ದೊರೆಕೊಳ್ಗುಂ ಶಶಿಭಾನುಗಳ್ಗೆ . . . ಪರಿವೇಷಂ (ಲೋಕೋಪ. ೪-೨೯) ; ಹಲ ಮುಸಲಾಯುಧಂ ನಡೆವ ತಾರ ನಗೇಂದ್ರ ಮನೊಂದು ಕರ್ಮುಗಿಲ್ ಬಳಸಿದವೊಲ್ ವಿರಾಜಿಸೆ ವಿನೀಲಪಟಂ ನಡೆತಂದು (ಪಂರಾಮಾ. ೬-೭೬). ೯. ಕಣ್ಣಿನ ಗುಡ್ಡೆ ; ಕನೀನಿಕೆ : ಚಂದ್ರಾಪೀಡನನಪಾಂಗ ವಿಕ್ಷೇಪ ತರಳತರ ತಾರ ಶಾರೋದರ ನಯನಂ

ಗಳಿಂದಡಿಗಡಿಗೆ ನೋಡುತ್ತಮಿರ್ದು (ಕಾದಂಉ. ೫೦) ; ಪುಂಡರೀಕಾಕ್ಷ ವದನ ವಿನ್ಯಸ್ತ ತರಳ ತಾರ ನೇತ್ರರುಂ (ಜಗವಿ. ೩-೯೮ ವ). ೧೦. ನಕ್ಷತ್ರ; ತಾರೆ : ಶ್ರೀಯುಂ ಜಯಶ್ರೀಯುಮನನವರತಂ ಮಾಳ್ಕೆ ಚಂದ್ರಾರ್ಕ ತಾರಂಬರಂ (ಎಕ. VI, ಕಡೂರು. ೩೭-೨೫ ; 1187 ?) ; ಆಚಂದ್ರತಾರಾರ್ಕ ವಾಗಚಲಖ್ಯಾತಿಯಿಂ ತಾಳ್ದರ್ (ಸೋಮೇಶ. ೯೦) ; ಭೂಚಂದ್ರಾರ್ಕ ತಾರಂಬರಂ ಕಲಿ ಹರಿಶ್ಚಂದ್ರರಾಯಂ ಸತ್ಯವೆರಸಿ ಬಾಳಲಿ (ಹಚಕಾ. ೧೩-೧೪). ೧೧. ಶುದ್ಧವಾದ ಮುತ್ತು : ಸುರನದಿಯ ತಾರಹಾ × × ರದ ಸುರದಂತಿಯ ರಜತಗಿರಿಯ ಚಂದ್ರನ ಬೆಳ್ಪಿಂ ಪಿರಿದು (ಎಕ. II, ೭೧-೧೫; 1180). ೧೨. ಮುತ್ತಿನ ಸರ : "ಮುತ್ತಿನ ಹಾರದಲ್ಲಿಯುಂ ತಾರ ಎಂಬುದು" (ಹಲಾಯು. ೧೩೩-೦೨). 'ತಾರಹಾರ' ಪರಾ. ೧೩. ಮುತ್ತನ್ನು ಶುದ್ಧಮಾಡುವುದು,– ಶುಭ್ರಗೊಳಿಸುವುದು. ೧೪. ಮುತ್ತಿನ ಪಾರದರ್ಶಕತೆ,–ಸ್ವಚ್ಛತೆ. ೧೫. ಗಾಳಿ ; ವಾಯು. ೧೬. ನದಿ. ೧೭. ಆಕಾಶ; ಗಗನ. ೧೮. ಓಂಕಾರ ; ಪ್ರಣವ. ೧೯. ವಿಷ್ಣು. ೨೦. ಒಂದು ಪರ್ವತ ; ಬೆಳ್ಳಿಯ ಬೆಟ್ಟ : ಮೇರು ಪಡುವಣ್ಗೆ ಸೀತಾತೀರಂ ತೆಂಕಣ್ಗೆ ನೀಲಗಿರಿ ಬಡಗಣ್ಗಾ ತಾರಂ . . ತನಗೆ ಸೀಮೆಯೆನಿಕ್ಕುಂ (ಮಲ್ಲಿಪು. ೨-೧೨). ೨೧. ಒಬ್ಬ ರಾಕ್ಷಸನ ಹೆಸರು ; ತಾರಕಾಸುರ. ೨೨. ಶುಭ್ರವಾದುದು ; ಬಿಳಿ. ೨೩. ತಂತಿ; ಸರಿಗೆ. ೨೪. [ಸಂಗೀತ] ಮೂರು ಸ್ವರಸ್ಥಾಯಿಗಳಲ್ಲಿ ಕೊನೆಯದು : ಮಂದ್ರ ತಾರಗೀತೆಯ ಪವಣೊಪ್ಪೆ . . . ವೀಣೆಯಂ ಮಿಡಿದಳ್ (ಶಾಂತಿಪು. ೯-೦೮೭) ; ಕೋಗಿಲೆ ಗಿಳಿ ತುಂಬಿ ಮಹೀಶನ ಕಿವಿಗಾಗಳ್ ಕ್ರಮದಿತ್ತುವು ತಾರ ಮಧ್ಯ ಮಂದ್ರಸ್ವರದಿಂ (ಚಂದ್ರಪು. ೭-೮೨) ; ಯಥೋಚಿತ ತಾರ [ಪಾಠಾಂ. ತಾಳ, ರಾಗ] ಮಧುರ ಮಂದ್ರಂಗಳಿಂ ಹಾಡಿ ಭೂಪತಿಯ ದುಗುಡವನು ತೊಳೆದರು (ಹಚಕಾ. ೭-೪); ತಾನದೋಜೆಯೊಳ್ ತಾರ ಮಂದ್ರ ವಿಭೇದದಿಂ ಜೇಂಗೊಡಮಂ ಮುಸುಱಿ ಮೊರೆವ ಮಱಿದುಂಬಿಗಳ ಗಾನದಂತೆ (ರಾಮಾಶ್ವ. ೨೩-೧೦). 'ತಾರಸ್ವರ' ಪರಾ. "ಘನ ಬಿಳಿದುಂ ಗಿರಿ ನಭ ವಾಹಿನಿ ಮರುತಂ ದೈತ್ಯ ಗಾನಭೇದಂಗಳ್ ಲೋಚನಮಧ್ಯಂ ತಾರಕಿ ಮುತ್ತಿನೊಳುಂ ಹನ್ನೊಂದು ತಾರ ಶಬ್ದಂ ಜಗದೊಳ್" (ನಾನಾಕಂ. ೩೦); "ನಗ ಮರುತಂ ಋಕ್ಷ ಮುಕ್ತಾಫಲಂಗಳ್ ದೃಗುಮಧ್ಯಂ ದೈತ್ಯ ಸಂಗೀತಕ ನದಿ ನಭ ಶುಭ್ರಾದಿಗಳ್ ತಾರ ಶಬ್ದಂ" (ನಾನಾರ. ४೦). [ಸಂ.]

**ತಾರ₄** 'ತರ್' ಪರಾ.

**ತಾರಕ** (ನಾ). ೧. ದಾಟಿಸುವವನು ; ಸಂರಕ್ಷಿಸುವವನು ; ಕಷ್ಟದಿಂದ ಪಾರುಮಾಡುವವನು : ಭವಾಂಬುನಿಧಿತಾರಕಂ . . . ರಘುಪ್ರವರ ನರ್ಚಿಸಿದಂ (ಪಂರಾಮಾ. ೧೪-೩೦೭) ; ದಂಡಧರಬಾಧೆಯ ನಿವಾರಕನೆ ತಾರಕನೆ(ಪ್ರಾಂಡರಾ.೧೬-೧). ೨. ದಾಟಿಸುವುದು; ಸಂರಕ್ಷಿಸುವಂತಹುದು: ಹರನಧಿಕನಲ್ತೆ ತಾರಕದಕ್ಷರತ್ರಯಕೆ (ಪದ್ಮರಾ. ೧೧-೩); ಇದುವೆ ಪಂಚಾಕಾಶ ತಾರಕವಿದನು ದೇಶಿಕನಿಂದ ಬಲ್ಲವ . . . ಬ್ರಹ್ಮಪದವನೈದುವನು (ಗಗತಾ ೨೦-೨೧) ; ತಾರಕವಾದ ಕಾಶಿಯಿಂದ ಪ್ರತ್ಯೇಕಗಳಾಗಿರುವ ಲಿಂಗಗಳೆಲ್ಲವೂ . . . ಕಾಣಲ್ಪಡುವವು (ಅರ್ಕಮಾ. ೧೩೦); ಈ ತಾತ್ವಿಕ ಭೂಮಿಕೆ ಒಮ್ಮೆ ತಾರಕವಾಗುವಂತೆ ಬದಲಾದ ಪರಿಸ್ಥಿತಿಯಲ್ಲಿ ಮಾರಕವೂ ಆಗುತ್ತದೆ (ಕರ್ನಾಟ. ४೯೭). ೩. ಒಬ್ಬ ರಾಕ್ಷಸನ ಹೆಸರು : ಅಪ್ರತಿಮಪ್ರತಾಪ ಭಂಗುರ ಭುವನತ್ರಯಂ ನೆಗಳ್ದನಕ್ರಮಕಾರಿ ಜಿತಾರಿ ತಾರಕಂ (ಗಿರಿಕ. ೬-೫); ತಾರಕನಿಂದ ಭಂಗಂಬಟ್ಟ ದೇವೇಂದ್ರತ್ವವೇಕೆಮಗೆ (ಬಸಪು. ೦೭-೨೨) ; ತಾರಕನ ಕೈಟಭನ ಮಹಿಷನ ವೀರ ಜಂಭನ . . . ಆರುಭಟೆ ರಣದುಬ್ಬಟೆಯ ಜಜ್ಝರಿತನವಿವನೊಬ್ಬನಲಿ (ಕುಮಾರವ್ಯಾ. ೧೭-೩೭). ೪. ನಕ್ಷತ್ರ; ತಾರೆ: "ಭಂ, ನಕ್ಷತ್ರಂ, ತಾರಕಂ, ತಾರಕಾ, ಜ್ಯೋತಿಃ . . . ಉಡು,–ಈ ೯ ನಕ್ಷತ್ರದ ಪೆಸರ್" (ಹಲಾಯು. ೧೦-೫೧) ; ಮತ್ಕರ್ಣದೊಳ್ ತಾರಕೋಜ್ವಳಮಂ ರಂಜಿಪ ಪುಷ್ಪಮಂಜರಿಯನತ್ಯೌತ್ಸುಕ್ಯದಿಂದಿಕ್ಕಿದಂ (ಕಾದಂಪೂ. ೭೬೯) ; ಚಂದ್ರನ ಬೆಳಗಿನೊಳೇಂ ತಾರಕಕ್ಕುಂಟೆ ತೇಜಂ (ಅನಂಪು. ೦೩-೫೭). ೫. ಏರುದನಿ ; ಉಚ್ಚಧ್ವನಿ : ಪ್ರಪಂಚದ ಎಲ್ಲ ವಸ್ತುಗಳೂ ಒಂದು ಹೆಮ್ಮೇಳವಾಗಿ ತಾರಕದಲ್ಲಿ ಕೂಗಿದುವು (ಏಳಜೀ. ೧೮೨) ; ತಾರಕದ ಚೀತ್ಕಾರ (ಹೊಸಕ್ಷ. ೨೭೪). ೬. ಕಣ್ಣುಗುಡ್ಡೆ ; ಕನೀನಿಕೆ: ತಾರಕಮದು ನೆನೆಯಿಪುದು . . . ಆಳಿಶಿಶುವಂ (ರಾಜಶೇ. ೭-೫೦). ೭. ದೋಣಿ ; ತೆಪ್ಪ : ತಾರಕ[ಪಾಠಾಂ. ಕಾರ]ನುಂಗಿದ ಜಲವ ಬೇಱೆ ಶೋಧಿಸಲುಂಟೆ ಅಯ್ಯ (ಬಿಬ್ಬಬಾ. ೫೯-೨೩). ೮. ಹಡಗು. ೯. ಹಡಗು ನಡೆಸುವವನು ; ನಾವಿಕ. ೧೦. ಬೆಳ್ಳಿ. 'ತಾರಕಾದ್ರಿ' ಪರಾ. ೧೧. [ಜೈನ] ಪಿಶಾಚಿಗಳ ಹದಿನಾಲ್ಕು ವರ್ಗಗಳಲ್ಲಿ ಒಂದು : ಕುಂಭಂಡರುಂ . . . ಸಮ್ಮೋಹರುಂ ತಾರಕರುಂ . . . ತೂಷ್ಣೀಕರುಂ ಪವನರುಂ ಎಂದು ಪಿಶಾಚರ್ ಚತುರ್ದಶವಿಧಂ (ತತ್ತ್ವಪ್ರ. ೦೯೩). [ಸಂ.]

**ತಾರಕಂಠ** (ನಾ). ಉಚ್ಚಸ್ವರದ ಧ್ವನಿ ; ಏರುದನಿ : ತಾರಕಂಠದಲ್ಲಿ ಮಾತುಕತೆಯಾಡುತ್ತಿದ್ದ . . . ಕೆಂಪು ಮೋರೆಯ ಬೆಮರಿಡಿದ ಹೆಂಗಸರಿಂದ ಕುಳ್ಳೆಡೆಗಳೆಲ್ಲ ಭರ್ತಿಯಾಗಿದ್ದುವು (ಪುನರು. ४೫४). [ತಾರ₂ + ಕಂಠ]

**ತಾರಕಗಣ** (ನಾ). ನಕ್ಷತ್ರಗಳ ಗುಂಪು ; ತಾರೆಗಳ ಸಮೂಹ : ಸೂಸುವ ಶೀಕರಾಳಿ ತಾರಕಗಣದೊಳ್ ಸಮಂಬಡೆಯೆ ತೇಂಕುವ ಮೌಕ್ತಿಕ ರತ್ನ ಗರ್ಭಶುಕ್ತಿಕೆ ಪೆಟಿಯೊಳ್ ತಡಂಬಡೆಯೆ ಸುಧಾರ್ಣವಮೊಪ್ಪಿದುದು (ಜಗವಿ. ೦-೪೪). [ತಾರಕ + ಗಣ]

**ತಾರಕಜಿತ್ತು** (ನಾ). ತಾರಕನೆಂಬ ಅಸುರನನ್ನು ಜಯಿಸಿದವನು ; ಸ್ಕಂದ : ತಾರಕಜಿನ್ನಾಗೇಶ್ವರ ನೀರಜಭವ . . . ಆಱದು ನುತಿಸಲಶಕ್ಯಂ (ಹಮ್ಮೀರ. ೦-೨೮) [ಸಂ. ತಾರಕಜಿತ್]

**ತಾರಕಣೆ** 'ತಾರ್ಕಣೆ' ನೋ.

**ತಾರಕಮಂತ್ರ** (ನಾ). ೧. ಮೋಕ್ಷದಾಯಕವಾದ ಮಂತ್ರ: ಇದುವೆ ತಾರಕ ಮಂತ್ರ ಬ್ರಹ್ಮಾದ್ಯರಿಗಗೋಚರವೆನಿಸುತಿರ್ಪುದು (ಗಗತಾ. ೨೦-೯) ; ನಾಮ ಮೊಂದು ದೇಹಿಗಳ್ಗೆ ತಾರಕಮಂತ್ರಮಾಗಿರ್ಪನಂ ಪಟಿಯಲುಂಟೆ (ರಾಮಾಶ್ವ. ೨४-೨). ೨. ದಾಟಲು ಸಹಾಯ ಮಾಡುವಂತಹುದು : ಅದನ್ನು ಸಾಧಿಸಬೇಕಾದರೆ ಪ್ರೇಮವೊಂದೇ ತಾರಕಮಂತ್ರವಾಗಿರುವುದು (ಪ್ರಬಂಧ. ೮೫). [ತಾರಕ + ಮಂತ್ರ]

**ತಾರಕಮಥನ** (ನಾ). ತಾರಕಾಸುರನನ್ನು ನಾಶಮಾಡಿದವನು ; ಷಣ್ಮುಖ. [ತಾರಕ + ಮಥನ]

**ತಾರಕರಾಜ** (ನಾ). ನಕ್ಷತ್ರಗಳ ಒಡೆಯ ; ಚಂದ್ರ : ತೇಜದಿಂದಿನರಾಜ ತಾರಕರಾಜ . . . ಓಜೆಯೊಳು ಸುರರಾಜ (ಬಸಪು. ೯-೩೦). [ತಾರಕ + ರಾಜ]

**ತಾರಕರಿಪು** (ನಾ). ತಾರಕನೆಂಬ ರಾಕ್ಷಸನ ಶತ್ರು; ಷಣ್ಮುಖ: "ಷಡಾನನಂ ವಹ್ನಿಜಂ ತಾರಕರಿಪು ಸ್ವಾಮಿ ಕಾರ್ತಿಕೇಯಂ" (ಮುಂಗರಾ. ೫-೦೭). [ತಾರಕ + ರಿಪು]

**ತಾರಕಶಕ್ತಿ** (ನಾ). ರಕ್ಷಿಸುವ ಬಲ,–ಪರಾಕ್ರಮ : ಸಾಹಿತ್ಯವೊಂದೆಯೆ ನನ್ನ ಸಂಜೀವಿನಿ ಅದೇ ನನ್ನ ತಾರಕಶಕ್ತಿ (ಇಂಚಾಪ. ४೮-೨೭) ; ಉದಾತ್ತವಾದ ಆಲೋಚನೆ, ಆಚರಣೆ, ಜೀವನದರ್ಶನಗಳಿಂದ ಅದು ತಾರಕಶಕ್ತಿಯಾಗಬೇಕು (ಸುವರ್ಣ. ೨೦೯). [ತಾರಕ + ಶಕ್ತಿ]

**ತಾರಕಾಂಚಿತ** (ಗು). ೧. ಕಣ್ಣುಗುಡ್ಡೆಯುಳ್ಳ; ಕನೀನಿಕೆಯಿಂದ ಕೂಡಿದ. ೨. ತಾರಕನೆಂಬ ರಾಕ್ಷಸನನ್ನು ಒಳಗೊಂಡ. ೧, ೨ : ಧೀರದೈತ್ಯ ವಿಶೇಷದಂತತಿರಾಗಲೋಚನದಂತೆವೋಲ್ ತಾರಕಾಂಚಿತರಂಜಿತಂ (ಹಮ್ಮೀರ. ೨-೭೦). [ತಾರಕ + ಅಂಚಿತ₁]

**ತಾರಕಾಕ್ಷ** (ನಾ). ತಾರಕಾಸುರನ ಮಂಗ ; ತಾರಾಕ್ಷ : ತಾರಕಾಕ್ಷನ ಕುಂಭ ಕರ್ಣನ ಮುರ ಗುಹಾಸುರನ ಆರುಭಟೆ . . . ಇವನೊಬ್ಬನಲಿ(ಕುವ್ಯಾದ್ರೋ. ೧೭–೩೭). [ ಸಂ. ]

**ತಾರಕಾದ್ರಿ** (ನಾ). ಬೆಳ್ಳಿಯ ಬೆಟ್ಟ ; ಕೈಲಾಸ ಪರ್ವತ : ಮಿಸುಗುವ ತಾರಕಾದ್ರಿರುಚಿಯಿಂ . . . ಮಿಗಿಲಾಗಿ ಪರ್ವಿ ರಾಜಿಸುವುದು ಕೀರ್ತಿ (ಎಕ V, ಹಾಸನ. ೫೩–೫೦ ; 1170). [ ತಾರಕ + ಅದ್ರಿ ]

**ತಾರಕಾರಾತಿ** (ನಾ). = ತಾರಕರಿಪು : ಶ್ರೀ ತಾರಕಾರಾತಿತಾತಾ ಮದೀಶ ವಿಖ್ಯಾತಾಮಳಿನ ದಿವ್ಯ ಪೂತಾತ್ಮ (ವೀಶ್ವಪು. ೭–೨–೧) ; ದೈತ್ಯರ ಪುರವ ಪಾಳ್ಗೆಯ್ದು ತಾರಕಾರಾತಿಯೆಂಬಭಿಧಾನದಿಂದ ವೃಂದಾರಕರ ಪೊರೆದ ಕ್ರೌಂಚಾರಿ ರಕ್ಷಿಪುದೆನ್ನ (ಪ್ರಾರಾ. ೧–೧೩). [ ತಾರಕ + ಅರಾತಿ ]

**ತಾರಕಾರಿ** (ನಾ). ೧. = ತಾರಕರಿಪು : "ಗೌರೀಪುತ್ರಃ . . . ಸ್ವಾಮಿ, ತಾರಕಾರಿಃ, ಕುಮಾರಃ . . . –ಈ ೨೦ ಕಾರ್ತಿಕೇಯನ ಪೆಸರ್" (ಹಲಾಯು. ೫–೨೦) ; ಮುದದಿಂದ ಸಾದು ಕಸ್ತೂರಿಯನೀವುದು ದೇವ ಬೆನಕಂಗೆ ತಾರಕಾರಿಗೆ ಎನಗೆ ನೀವಿಂದು (ನಂಬಿರ. ೧೭–೯೦) ; ದಿನಕರ ಶಶಾಂಕಂ ತಾರಕಾರಿ ಗಜವದನ ವಾಸಿಷ್ಠ ಮನುಮುನಿ ನಿಕರವು ನೆರೆದು (ಹಡಕಾ. ೧೪–೬). ೨. ತಾರೆಗಳ ಶತ್ರು; ಸೂರ್ಯ. ೧, ೨: ಕಮಳಬಂಧುರಸಸ್ಮಿತ ವಕ್ತ್ರಭಾಸುರಂ ಬಹುಕರರಂಜಿತಂ . . . ತಾರಕಾರಿ ಮಿಗೆ ಮಾಡುಗೆ ಭವ್ಯತರಪ್ರಮೋದಮಂ (ರಾಜಶೇ. ೧–೮). [ ತಾರಕ + ಅರಿ₆ ]

**ತಾರಕಿ** 'ತಾರಗೆ' ನೋ.

**ತಾರಕಿತ** (ಗು). ನಕ್ಷತ್ರಗಳಿಂದ ತುಂಬಿರುವ ; ತಾರೆಗಳಿಂದ ಆವೃತ ವಾಗಿರುವ : ಸಭಾಂಗಣವೊಪ್ಪೆ ವೀರನಾರಾಯಣನಾ ತಾರಕಿತ ನಭದವೊಲ್ ಸೊಗಯಿಸುಗುಂ (ಕವಿರಾ. ೩೦–೧೮೦):ಸಕಳ ದಿಗಂತರಾಳನುಂ ಕುಸುಮಾಸಾರ ತಾರಕಿತ ಗಗನತಳ ವಿಲಸಿತನುಂ (ಸುಕುಮಾ. ೮–೯೯ ವ) ; ತಾರಕಿತಮುಮಿತರತ್ನಚ್ಛಾಯೆಯಿಂದಂಬರಂ ಮೇಚಕಿತಮೆನಿಸಿ ಬಂದಂ (ಮಲ್ಲಿಪು. ೯–೭೯) ; ಜಲಬಿಂದುಗಳಿಂ ದಿವದೊಳ್ ತಾರಕಿತಂ ಮಾಡುವುದು ನಭೋಭಾಗಮಂ ತದಂಭಃಪೂರಂ (ಚಂದ್ರಪು. ೧೦–೪೯). [ ಸಂ. ]

**ತಾರಕೆ** (ನಾ). ೧. ತಾರೆ ; ನಕ್ಷತ್ರ : "ಋಕ್ಷಮುಡು ತಾರಕೆ . . . ಎನೆ ನಕ್ಷತ್ರಮಕ್ಕು" (ಮಂಗರಾ. ೧೧–೫) ; ಬಿದಿರಿದುವು ಮುಕುಟ ತಾಗಿ ತಾರಕೆ ಗಳು . . . ಕೂಡಲಸಂಗಮದೇವನಿಂದು ನಾಟ್ಯವನಾಡೆ (ಬಸವ. ೫೪೦). ೨. ಕಣ್ಣಿನ ಗುಡ್ಡೆ ; ಪಾಪೆ : ಕಣ್ಣಿನ ತಾರಕೆ (Pupil) ಸಣ್ಣದಾಗಿ ರಬಹುದು (ಕಲರೋ. ೯೪). ೧, ೨: ಕಂಗಳ ಕಾಳಗ ನೋಟದ ಮಸಕ ಮಿಂಚಿನ ಗೊಂಚಲು ತಾಗಿದಂತಾದೆನವ್ವಾ ತಾರಕೆ ತಾರಕೆ ಸೂಸಿದಂತೆ (ತಳಿತಂತೆ) . . . ಅವ್ವಾ (ಸರ್ವವ. ೬೯–೩೭೭). [ ಸಂ. ತಾರಕಾ ]

**ತಾರಕೋತ್ಕರ** (ನಾ). ನಕ್ಷತ್ರಗಳ ಗುಂಪು,–ರಾಶಿ : ಸೊಗಯಿಪ ತಾರಕೋತ್ಕರದ ಮಧ್ಯದ ಶೀತಮರೀಚಿ ರೋಹಿಣೀಯುಗಮೆನೆ (ಚಂದ್ರಪು. ೭–೧೫೦). [ ತಾರಕ + ಉತ್ಕರ ]

**ತಾರಗಂಟು** (ನಾ). ಒಂದು ಬಗೆಯ ಗಂಟು: ಒಂದು ತಾರಗಂಟು ಒಂದು ಜಿಗುಳುಗಂಟು ಒಂದು ಕುಟುಹುಗಂಟು ಮೂಱಱ ಮುದ್ರೆಯ ಮಿಾಱ ಹಾಱುತ್ತು ಹಕ್ಕಿ (ಮನುಗುಂ. ೨೫೯–೫೦). [ ತಾರ? + ಗಂಟು ]

**ತಾರಗದ** 'ತಾರುಗದವು' ನೋ.

**ತಾರಗಬೀಱಗ** 'ತಾಱಗಬೀಱಗ' ನೋ.

**ತಾರಗಿರೀಂದ್ರ** (ನಾ). = ತಾರಾಗ : ತಾರಗಿರೀಂದ್ರದಗ್ರದೊಳೆ ಶಂಕರ ನೊರ್ಮೆ . . . ಒಪ್ಪಿರೆ (ವೃಷವಿ. ೫–೭೭). [ ತಾರ₃ + ಗಿರೀಂದ್ರ ]

**ತಾರಗೆ**, ತಾರಕಿ (ನಾ). ತಾರೆ ; ನಕ್ಷತ್ರ : "ಮಿಾನ್, ತಾರಗೆ, ಅಱಿಲ್ – ಈ ೩ ನಕ್ಷತ್ರಕ್ಕೆ ಪೆಸರ್" (ಕಶಸಾ. ೪–೪೩) ; ತಾರಗೆ ಗಳಿಗೆಗಳಂತಿರೆ ತಾರಾ ಪಥದೊಳ್ ನಿರಂತರಂ (ಆದಿಪು. ೬–೫೪) ; ಶಶಿನಾಯಕ ಮಣಿ ತಾರಗೆ ಪೊಸಮುತ್ತಿನ ಸೂ[ಸುವಂ] ಗಡಾ (ಸೌಇಇ. XX, ೪೯–೩೭ ; 1076 ?) ; ತಾರಗೆಯುಂ ತಮಮುಂ ಸೆಱಿಗೆ ತಂದವೊಲ್ (ಪಂಪಾಮಾ. ೦೪–೦೨೭) ; ಒರ್ವ ಚಂದ್ರಮನ ಕಾಂತಿ ಹಲವುಂ ತಾರಗೆಯ ಬೆಳಗನು ಹರಿಯಿಸುವ ತೆಱದಿ (ಸಮ್ಯಕಾ. ೦–೪೭); ವಿಮಲ ತಾರಗೆಯಂತೆ ಗೆಯ್ವೆ ಕಣ್ಣನ್ನೆ (ಗರಿ. ೨೯–೪). **ತಾರಕಿ:** ಅಂತರಂಗದ ಭುವನವ ಮೆಟ್ಟಿ ನೋಡುತಿಪ್ಪ ಬೆಡಗಿನ ತಾವರೆಯ ಮಧ್ಯದ ತಾರಕಿ [ಪಾಠಾಂ. ತಾರೆ]ಯನಾರೂ ಅಱಿಯರಲ್ಲಾ (ಅವಹಂ. ೧೭೮–೭೫೮) ; ತಾರಕಿಗಳರಸಂ . . . ಚೋರರನಾರೈವ ತಳಾಱ ಚಂದ್ರ ನುದಯಂಗೆಯ್ದಂ (ಸೂಕ್ತಿಸು. ೮–೨೩೮) ; ಸಿತಾಕ್ಷತಾವಳಿಯ ತಾರಕಿಗಳೆಸೆದ [ಪಾಠಾಂ. ತಾರಕಿತವಾದ]ಭ್ರುವೆನೆ ರಿಪುವಾರಣದ ಮಸ್ತಕದ ಮುತ್ತು ಗಳೋರಣೆಸಲೊಪ್ಪಿದುದು (ಕುವ್ಯಾದ್ರೋ. ೬–೪೩). [ <ಸಂ.ತಾರಕಾ ]

**ತಾರಗೆದಾಣ** (ನಾ). ನಕ್ಷತ್ರಗಳ ಆಶ್ರಯಸ್ಥಾನ ; ತಾರೆಗಳ ತಾಣ ; ಆಕಾಶ: ತಾರಗೆದಾಣದಂತೆ ಯತಿಸಂತತಿಯಂತಿರೆ . . . ಸಾರಸದೇಱುಗೆಯಿಂ ಸರಸಿ ಕಣ್ಗೆಸೆದಿರ್ದುದು (ದಶಕು. ೦೩–೩೦). [ ತಾರಗೆ + ತಾಣ ]

**ತಾರಗೆದುಱುಗಲ್** (ನಾ). ನಕ್ಷತ್ರಗಳ ಸಂದಣಿ,–ಗುಂಪು : ತಾರಗೆದುಱು ಗಲ್ ನವಸಂಧ್ಯಾರಾಗದೊಳೆಸೆವ ತೆಱದೆ ಪದನಖರುಚಿಗಳ್. . .ರಾರಾಜಿಸೆ (ಜಗವಿ. ೧–೫೪). [ ತಾರಗೆ + ತುಱುಗಲ್ (<ತುಱುಂಗಲ್) ]

**ತಾರಗೆಯಾಣ್ಮ** 'ತಾರಗೆಯಾಳ್ಮ' ನೋ.

**ತಾರಗೆಯಾಳ್ಮ**, ತಾರಗೆಯಾಣ್ಮ (ನಾ). = ತಾರಕರಾಜ : "ಇಂಗದಿರ ತಾರಗೆಯಾಳ್ಮ[ಪಾಠಾಂ. ಣ್ಮ] ನೀರಣುಗನು"(ಶಬ್ದಮಂ. ೦೭).**ತಾರಗೆಯಾಣ್ಮ:** "ತಾರಗೆಯಾಣ್ಮನೆಂದು ನಿಶಾಕರಂ" (ಕರ್ಣಾನಿ. ೭೪) ; "ತಾರಗೆಯಾಣ್ಮನೆನೆ ಚಂದಿರಂ" (ಕಶರ. ೪೪). [ ತಾರಗೆ + ಆಳ್ಮ ]

**ತಾರಗೆವಟ್ಟೆ** (ನಾ). ನಕ್ಷತ್ರಮಾರ್ಗ ; ಆಕಾಶ : "ತಾರಗೆವಟ್ಟೆಯೆನಲ್ಕೆ ಪುಷ್ಕರಂ" (ಕರ್ಣಾನಿ. ೩೪) ; ತಾರಗೆವಟ್ಟೆಯುಂ ದೆಸೆಗಳುಂ ನೆಲನಂ ಕಡಲುಂ ಬನಂಗಳುಂ ಕಾರಿರುಳ್ಗೆದೆ ನುಂಗಿದವೊಲಾದುದು (ಕಬ್ಬಿಕಾ. ೨೬೬); ಮರಕತ ದೊಂದು ಕಳಸದಿಂ ತಾರಗೆವಟ್ಟೆ ಮುಟ್ಟೆ ನಿಗುರ್ದು ಸೈಪಿನಾಗರುಂಬೋಲ್ . . . ದೇಗುಲಂ ಕಣ್ಗೆಡ್ಡಮಾಗಿ ರಂಜಿಕುಂ (ರಾಮಾಶ್ವ. ೫೪–೨೩). [ ತಾರಗೆ + ಬಟ್ಟೆ₁ ]

**ತಾರಗ್ರೀವ** (ನಾ). ಎತ್ತರವಾದ ಧ್ವನಿ ; ಉಚ್ಚಕಂಠ : ಮಾರೊರಲ್ದತ್ತು ತಾರಗ್ರೀವದಿಂ ಗುಹೆಯ ಗೋನಾಳಿ(ಶ್ರೀರಾಮಾ. ೨೪೦–೭೪). [ತಾರ₃+ಗ್ರೀವ]

**ತಾರಜ** (ನಾ). (?) : ಆದಿಯಲ್ಲಿ ಲಿಂಗಾರ್ಚನೆಯ ಮಾಡಿದ ತಾರಜ ತಂಡಜ ರೋಮಜರಿಗೆ ಪ್ರಳಯವಾಯಿತ್ತು (ಅಬಂಡೇ. ೭೧–೪೨). [ ? ]

**ತಾರಣ** (ನಾ). ೧. ದಾಟುವಿಕೆ. ೨. ದಾಟಿಸುವ ಸಾಧನ ; ದೋಣಿ ; ನಾವೆ : ಘೋರ ಭವಾಬ್ಧಿಗೆ ತಾರಣ ಘಾಳಿಗೆ ಮಾರಣ ನಿರ್ವಾಣ ಪದಕೆ ಕಾರಣ (ಭೈರವೇ. ೦–೩೭೫). ೩. ದಾಟಿಸುವಿಕೆ. ೪. ದಾಟಿಸುವವನು. ೫. ಕಷ್ಟದಿಂದ ಪಾರುಮಾಡುವುದು. ೬. ಕಷ್ಟದಿಂದ ಪಾರುಮಾಡು ವವನು. ೭. ಅರವತ್ತು ಸಂವತ್ಸರಗಳಲ್ಲಿ ಹದಿನೆಂಟನೆಯದು : ಮತ್ತಮಾ ವರುಷವೇ ಪ್ರಭವ, ವಿಭವ . . . ತಾರಣ . . . ಅಕ್ಷಯ ವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೦). ೮. ಅಡವು ; ಈಡು : ಬ್ಯಾಂಕಿಗೆ ತಕ್ಕ ತಾರಣ (ಅಡವು) ಕೊಟ್ಟು ಸಾಲ ದೊರಕಿಸುವುದು (ಬ್ಯಾಂಕೆಕ್ಕ. ೫೪). [ ಸಂ. ]

**ತಾರಣಿತ** (ಗು). (?) : ಕನೆಗೂಡಿ ಪರಿಮಳವ ನುಡಿದ ರಸಕೊಡ ಚಿಮ್ಮಲನುವಾದ ತಾರಣಿತ ಪಾಯಸವ ಚಿತ್ತಯಿಸಿ (ಲಿಂಗಪು. ೮–೩). [ ? ]

**ತಾರತಕ್ಕಡಿ** 'ತಾರಾತಿಗಡಿ' ನೋ.

**ತಾರತಕ್ಕಡಿಗ** (ನಾ).ಮೋಸಗಾರ ; ವಂಚಕ : ಆ ತಿರಿಕತನದ ತುಡುಗಣಿ ತಾರತಕ್ಕಡಿಗನಿಗೆ ರಾಜಗಾಂಭೀರ್ಯವೆಲ್ಲಿಂದ ಬರಬೇಕು? (ಮಂತ್ರಶ. ೦೫೦–೩). [ ತಾರತಕ್ಕಡಿ (<ತಾರಾತಿಗಡಿ) + – ಇಗ ]

**ತಾರತಮತೆ** (ನಾ). = ತಾರತಮ್ಯ : ತಾರತಮತೆಯ ಬಲ್ಲೆ ಪುರುಷರ ಚಾರು ಚರಿತವನಱಿವೆ (ಕುವ್ಯಾಕ. ೫-೨೨). [ <ಸಂ. ತರತಮತಾ ]

**ತಾರತಮ್ಯ** (ನಾ). ಹೆಚ್ಚು ಕಡಮೆ ; ಮೇಲು ಕೀಳು ; ನ್ಯೂನಾಧಿಕ್ಯ ; ತರತಮಭಾವ : ಆರು ಮೆಚ್ಚುವರಿದನು ಬಿಡು ಬಿಡು ತಾರತಮ್ಯವ ನಱಿಯ ಕೇಳ್ದ ಮಾತುಗಳನೆಂದ (ಕಾಶಿರಾ. ೩೭-೧೯) ; ಅವರವರ ತಾರತಮ್ಯವನಱಿದುತ್ಸವದಿಂದಂ ಬೀಳ್ಕೊಟ್ಟಂ (ವೀರವಿ. ೯-೭೬) ; ಧರ್ಮಗತಿಯ ತಾರತಮ್ಯವ ತಿಳಿವೊಡೆ ಪೆರ್ಮೆಯು ಬಿಟ್ಟು . . . ನೀ ನಡೆ ಮಿಥಿಲೆಗೆ (ಹದಿಬ. ೨-೪೯) ;ಆ ಪ್ರೇಮವೆಂಬ ಪುನೀತ ವಸ್ತುವಿಗೆ ಪಕ್ಷಪಾತವಿಲ್ಲ ತಾರತಮ್ಯವಿಲ್ಲ (ಸುಂದರಿ. ೧೪); ಬರುವವರ ತಾರತಮ್ಯ ನೋಡಿ ಅವರ ಸ್ವಾಗತ ಸಮಾರಂಭವು ಜರಗಬೇಡವೇ (ಗುರುಜಿ. ೪) ; ಸಂಸಾರದಲ್ಲಿ ಈ ತಾರತಮ್ಯವೇಕೆ? (ಬಂಕಿಮು. ೧೧೪). [ ಸಂ. ]

**ತಾರತಿಗಡಿ** 'ತಾರಾತಿಗಡಿ' ನೋ.

**ತಾರನಗ** (ನಾ). ಬೆಳ್ಳಿಯ ಬೆಟ್ಟ : ತಾರನಗಂಗಳಂ ಕವಲಿನೊಳ್ಕೆಲೆಯಿಂದೆ . . . ಪೋಲ್ವುದು . . . ಚಟ್ಟಲದೇವಿಯ ಸದ್ಮಶೋದ್ರುಮಂ (ಎಕ. VIII, ನಗರ. ೪೦-೩೩ ; 1077). [ ತಾರ್$_3$ + ನಗ$_3$ ]

**ತಾರಮಾರ** 'ತಾರಂಮಾರ್ಂ$_2$' ನೋ.

**ತಾರಯಿಸು**, ತಾರಯ್ಸು, ತಾರವಿಸು, ತಾರ್ಯೆಸು (ಕ್ರಿ). ೧. ದೊಡ್ಡ ಧ್ವನಿ ಮಾಡು. ೨. (ತಾರಸ್ವರದಲ್ಲಿ)ಹಾಡು: ಒಸೆದು ನೃಪಾಲನಾಡಿಸಿದ ಸೋಗೆಗಳಂತಿವು ಚಕ್ರಿ ಬೀಣೆ ಬಾಜಿಸೆ ಸುತಿಗೂಡಿ ತಾರಯಿಪ ತುಂಬಿಗಳಿಂತಿವು (ವರ್ಧಪು. ೫-೬೦) ; ತಾರ + ಇಸಿದಂ = ತಾರಯಿಸಿದಂ (ಶಮದ. ೫೪ ಪ್ರಯೋ). **ತಾರಯ್ಸು: ೨.** ತಾರಯ್ಸು [ಪಾಠಾಂ. ತಾರ್ಯೆಸು] ತ್ರಮುಬ್ಬುತ ಗೀತಜತಿಗಳಿಗೆ ಹಾಡುತುಂ (ಬಸಪು. ೧೭-೨೦). **ತಾರವಿಸು: ೨.** ಮಱಿ ದುಂಬಿಗಳ ನುಣ್ಚರಮಂ ಸೂೞಿಗೊಂಡಂತೆ ತಾರವಿಸುತಿರೆಯುಂ (ಶಾಂತೀಶ್ವ. ೭-೯೩ ವ) ; ಎಳಿ ಕಂಸಾಳಂಗಳಂ ಪಿಡಿದೋಳಿಯಿಂದಂ ತಾರವಿಸುತಿರಿ (ಬಸಪು. ೧೨-೪೪). **ತಾರ್ಯೆಸು: ೨.** ಬಂದು ತಾರ್ಯೆಸುತಿದೆ ಮಧುರ ಕಹಳೆ (ಅಷ್ಟಾಸ್ತೋ. ೬೬) ; ಅಳಿಗಳಾಣತಿಯಂ ಮಾಱಿಪ್ಪೆಡೆಯೊಳ್ ಕಿನ್ನರ ಕನ್ನೆಯರೊಡನೆಯೆ ತಾರ್ಯೆಸಿ ಚಿಹಣತನಮಂ ಸಲಿಕುಂ (ಚಂದ್ರಪು. ೧೧-೩೬) ; ಸಂತತವೊಪ್ಪುವ ಶರ್ವನ ಸಭೆಯೊಳ್ ಗಡಣದ ಕಿನ್ನರಿಯರ್ತಾರ್ಯೆಸಲ್ (ಭೃಂಗೀರ. ಹ. ೪೭೬-೧೧). [ ತಾರ್$_3$ + – ಇಸು$_3$ ]

**ತಾರಯ್ಸು** 'ತಾರಯಿಸು' ನೋ.

**ತಾರರಮಣ** (ನಾ). ನಕ್ಷತ್ರಗಳ ಒಡೆಯ ; ಚಂದ್ರ : ತಾರರಮಣನ ಸೋಲಿಪ ನಖದ ಕಾಂತಿ (ವಿದಾಕ್ಷ. ೧೧-೧). [ ತಾರ್$_3$ + ರಮಣ ]

**ತಾರವಿಸ** 'ತರವೀಸ' ನೋ.

**ತಾರವಿಸು** 'ತಾರಯಿಸು' ನೋ

**ತಾರಶೈಲ** (ನಾ). ಬೆಳ್ಳಿಯ ಬೆಟ್ಟ; ಕೈಲಾಸಪರ್ವತ: ರಣದೊಳ್ ರಾವಣನಂ ಜವಂಗೆ ಪೊಸತಿಕ್ಕಲ್ ತಾರಶೈಲಕ್ಕೆ ತೆಂಕಣದಂ ಕಂಕಣದಂತೆ ಕೈಗೆ ವರಿಸಲ್ ಭೂಚಕ್ರಮಂ ಚಕ್ರಮಂ (ಪಂರಾಮಾ. ೩-೧೬೦). [ ತಾರ್$_3$ + ಶೈಲ ]

**ತಾರಷಡ್ಜ** (ನಾ). [ಸಂಗೀತ] ತಾರಸ್ಥಾಯಿಯಲ್ಲಿ ಹಾಡುವ 'ಸ' ಎಂಬ ಸ್ವರ: ಇಂತಹ ಸ್ವರಕ್ಕೆ ತಾರಷಡ್ಜವೆಂದು (Octave=ಅಷ್ಟಮಸ್ವರ)ಪೆಸರು (ಭಾತವಿ. ೦೨೮); ಒಂದು ತಂತಿಯ ಉದ್ದವನ್ನು ಅರ್ಧಮಾಡಿ ಎಳೆತವನ್ನು ಮೊದಲಿನಂತೆಯೇ ಇಟ್ಟದ್ದರೆ ಬರುವ ಸ್ವರವು ತಾರಷಡ್ಜ (ಭಾತವಿ. ೧೪೩). [ ತಾರ್$_3$ + ಷಡ್ಜ ]

**ತಾರಸರ** (ನಾ).=ತಾರಸ್ವರ ೨: ತಾರಸರದಲಿ ಕೊರಲನೆತ್ತಿ ಹೇಳು (ವಿಸೀಗೀ. ೫೨-೦೧). [ ತಾರ್$_3$ + ಸರ$_3$ ]

**ತಾರಸಿ** (ನಾ). (ಗಾರೆ ಅಥವಾ ಸಿಮೆಂಟಿನಿಂದ ಮಾಡಿದ)ಮೇಲ್ಛಾವಣಿ; ಮಾಳಿಗೆ : ತಾರಸಿಯ ಎರಡು ಮಹಡಿಯ ಭವ್ಯ ಮನೆ (ಅನ್ನಪೂ. ೩೦) ; ತಾರಸಿಯನ್ನು ನೋಡುತ್ತಾ ಯೋಚಿಸುವಾಗ ಎಲ್ಲಾ ಯೋಚನೆಗಳೂ ಮನಸ್ಸಿನ ಮುಂದೆ ಹಾದುಹೋಗುತ್ತವೆ (ಕುಸುಸಂ. ೧೦). [ ←ಇಂ. Terrace ]

**ತಾರಸಿಯಕಾಯಿ** (ನಾ). ಒಂದು ಬಗೆಯ ಕಾಯಿ : "ಕಟಃ–ತಾರಸಿಯ ಕಾಯಿ, ಎಳ್ಳು" (ಒಷಧಿ. ೧೯). [ ತಾರಸಿ? + ಕಾಯಿ$_4$ (<ಕಾಯ್$_4$) ]

**ತಾರಸ್ಥಾಯಿ** (ನಾ). [ಸಂಗೀತ] "ಷಡ್ಜ ಸ್ವರದಿಂದ ಆರೋಹಣ ಕ್ರಮದಲ್ಲಿ ಬಂದು ಇನ್ನೂ ಮೇಲಿನ ಷಡ್ಜ ಸ್ವರವನ್ನು ಸೇರುವ ಸಪ್ತಸ್ವರ ಸಮುದಾಯ" (ಸಂಗೀಜಂ. ೧೮) ; ತಾರಸ್ಥಾಯಿಯ ಶಬ್ದಗಳು ಅಂತರ್ಗತವಾಗುವುದು ಸುಲಭ (ಭಾತವಿ. ೦೪೯) ; ಅವರು ತಾರಸ್ಥಾಯಿಯಲ್ಲಿ . . . ಹಾಡುತ್ತಿದ್ದ ಬೃಗಗಳು (ಭೀರ್ಕಾಗಳು) ಎಲ್ಲರ ಮನಸ್ಸನ್ನೂ ಸೂರೆಗೊಳ್ಳುತ್ತಿದ್ದುವು (ಸಂಗೀತ. ೨೬). [ ತಾರ್$_3$ + ಸ್ಥಾಯಿ ]

**ತಾರಸ್ವರ** (ನಾ). ೧. ಜೋರಾದ ಧ್ವನಿ : ಅವನು ತಾರಸ್ವರದಲ್ಲಿ ಮಾತು ಮುಂದುವರಿಸಿದನು (ಪುನರು. ೧೯೦). ೨. [ಸಂಗೀತ] ಏರಿದನಿ ; ಉಚ್ಚಸ್ವರ : ವರಮಂದ್ರ ಮಧ್ಯತಾರಸ್ವರದಿಂದಂ . . . ಪಾಡಿದಂ (ವೀರವಿ. ೬-೯೧) ; ಮಂದ್ರ ಮಧ್ಯಮತಾರಸ್ವರಗರ್ಭ ಮಧುರ ಸಂಗೀತ (ಯಾದವ. ೩-೧ ವ). [ತಾರ್$_3$ + ಸ್ವರ ]

**ತಾರಹಾರ** (ನಾ). ಮಂತ್ಮುಗಳನ್ನು ಪೋಣಿಸಿ ಮಾಡಿದ ಸರ,–ಹಾರ : ಎನಗಾಸೆದೋಱಿ ಬಿಸಸಿತಮೆನಿಸುವ ನಿಜತಾರಹಾರಲತೆಯಿಂದಂ ಹಂಸನ ಪೊಲ್ಮಾನಸಸಂಭವಮೆನಿಪ ಮದೀಯಾಭಿಮಾನಮಂ ಕಟ್ಟೊಯ್ದೌ (ಕಾದಂಪೂ. ೮೦೨); ತಾರಹಾರ ಶಂಖ ಶಶಾಂಕ ಶಾರದಾಭ್ರ ವಿಭ್ರಮಭ್ರಾಜಿತ ತ್ರಿಭುವನಾಂತರಾಳ ಪ್ರವರ್ತಿತ ಕೀರ್ತಿಗಳಂ . . . ಕಂಡು (ಸುಕುಮಾ. ೯-೧೦೮ ವ) ; ಮುಕ್ತಾಫಲ ತರಲತರತ್ತಾರಹಾರೇಂದು ಕುಂದೋಪಮ ಕೀರ್ತಿವ್ಯಾಪ್ತ (ಎಕ. II, ೭೪-೬೪ ; 1163) ; ನೀಂ ಮುಟ್ಟಲಂಜುವ ತಾ[ಪಾಠಾಂ. ತೋ]ರಹಾರಂ ಭಕ್ತರ ಕೊರಳ್ಗಳೊಳು (ಬಸರ. ೮-೮೩) ; ಮುಕ್ತಾಕುಂಡಳಂ ಗಂಡದೊಳ್ ಮಿಳಿರ್ದಾಡುತ್ತಿರೆ ತಾರಹಾರಕಿರಣಂ ಬೆಳ್ದಿಂಗಳಂ ಬೀಱೆ (ರಾಜಶೇ. ೧೪-೨) ; [ ತಾರ್$_3$ + ಹಾರ$_1$ ]

**ತಾರಾಕೂಟ** (ನಾ). ವಧೂವರರ ನಕ್ಷತ್ರಗಳ ಹೊಂದಾಣಿಕೆ,–ಸಂಬಂಧ; ದ್ವಾದಶಕೂಟಗಳಲ್ಲಿ ಒಂದು : ಇನ್ನು ಜಾತಕ ನೋಡಿ, ತಾರಾಕೂಟ ಲೆಕ್ಕಹಾಕಿ, ಗಂಟುಹಾಕಿಕೊಂಡ ಮದುವೆಯ ಗತಿ ಏನಾದೀತೋ ಎಂಬ ಭಯ (ಸ್ವಪ್ನಹೊ. ೨೩೨). 'ದಿನಕೂಟ' ಪರಾ. [ ಸಂ. (ತಾರಾ + ಕೂಟ) ]

**ತಾರಾಗ** (ನಾ). ಬೆಳ್ಳಿಯ ಬೆಟ್ಟ ; ರಜತಾದ್ರಿ : ಎಲೆ ತಾರಾಗಂ ಹರು ಕಣ್ಣಡೆ ಕರಗಿದುದು (ಕಾದಂಪೂ. ೬೩೪) ; ಮೂಂಗಲ್ಮತಾರಾಗತುಂಗತರ ಶೃಂಗಾನುಸಂಗಾಯತನ ಜಿತಾನಂಗ ಭವಭಂಗ (ಉದ್ಭದೇ. ೭-೪೪) ; ತಾರಾಗಮಂ ದಾಂಟಿ, ಋಷಭಾದ್ರಿಯಂ ನೋಡಿ, ಗುರುತಿಸಿದನಳಿದ ನೋಷಧಗಿರಿಯ ಮೇಘಾಚ್ಛನ್ನ ಜ್ಯೋತಿಃಶೃಂಗರಂಗದಲ್ಲಿ (ಶ್ರೀರಾಮಾ. ೭೨೫-೪೪೪). [ ತಾರ್$_3$ + ಅಗ$_2$ ]

**ತಾರಾಗಣ** (ನಾ). ೧. ತಾರೆಗಳ ಗುಂಪು; ನಕ್ಷತ್ರಗಳ ಸಮೂಹ: ತಾರಾಗಣಂಗಳ್ ನಿಂದ ನೆಲೆಯಿಂ ದೆಸೆಯಂ ಪೊಟ್ಟುಮನಱಿದು ತೆಂಕವೊಗದೆ ಪಯಣಂಬೋಗಿ (ಪಂಪಭಾ. ೩-೮ ವ) ; ಜಲದಾಧ್ವಂಬರಮೆತ್ತಿದಂಘ್ರಿಯ ನಖಾಂಶುಶ್ರೇಣಿ ತಾರಾಗಣಚ್ಛಲದಿಂದಿರ್ದಿಸಂ . . . ಬಲಿಯಂ ಮೆಟ್ಟಿ ರಸಾತಳಕ್ಕಿಟಿಪಿದ್ದೆ ನೀಂ (ಜಗವಿ. ೦-೫೯). ೨. ನಟನಟಿಯರ ಗುಂಪು : ಈ ಚಿತ್ರದಲ್ಲಿ ಪ್ರಸಿದ್ಧ ತಾರಾಗಣವಿದೆ (ರೂಢಿ). [ ಸಂ. (ತಾರಾ + ಗಣ) ]

**ತಾರಾಗಣವಿಮಾನ** (ನಾ). [ಜೈನ] ಒಂದು ಬಗೆಯ ಜ್ಯೋತಿರ್ವಿಮಾನ: ಸಾಸಿರದ ನೂಱಿಪ್ಪತ್ತೊಂದು ಯೋಜನಮಗಲದಿಂ ತಾರಾಗಣ ವಿಮಾನಂಗಳಿರ್ಕುಂ (ಸುಕುಮಾ. ೧೧-೫೯ ವ). [ತಾರಾಗಣ + ವಿಮಾನ]

**ತಾರಾಗರ್ಭ** (ನಾ). ಸೌರವ್ಯೂಹದಿಂದಾಚೆಗಿರುವ ನಕ್ಷತ್ರಪುಂಜಗಳಿಂದಾಗಲಿ. ಅನಿಲದ್ರವ್ಯ ಅಥವಾ ನಕ್ಷತ್ರದ್ರವ್ಯದಿಂದಾಗಲಿ ಆದ ಆಕಾಶದ ಕಾಂತಿಪ್ರದೇಶ; ಜ್ಯೋತಿಃಪಟಲ; ಜ್ಯೋತಿರ್ಮೇಘ: ಅಗ್ನಿಕುಂಡದುರಿ ದೇದೀಪ್ಯಮಾನಮಾದುದು . . . ರಾತ್ರಿಯಾಕಾಶದಲಿ ಕಾಣ್ಬೊಂದು ತಾರಾಗರ್ಭದಂತೆ (ಶ್ರೀರಾಮಾ. ೧೦-೨೭೫); ಮೃಗರಾಶಿ (Orion)ಯಲ್ಲಿರುವ ದೊಡ್ಡ ತಾರಾಗರ್ಭ(Nebula)ವನ್ನು ನೋಡಿದನು (ವಿಜ್ಞಾ.ಕ. ೫೬). [ಸಂ. (ತಾರಾ + ಗರ್ಭ)]

**ತಾರಾಗುಚ್ಛ** (ನಾ). ನಕ್ಷತ್ರಗಳ ಗುಂಪು: ಯೌಧಿಷ್ಠಿರ ತಾರೆಗಳಿಲ್ಲದ ತಾರಾಗುಚ್ಛಗಳಿಲ್ಲವೇ ಇಲ್ಲವೆಂದು ಹೇಳಬಹುದು (ಜಗತ್ತು. ೪೪).
[ಸಂ. (ತಾರಾ + ಗುಚ್ಛ)]

**ತಾರಾಚಲ,** ತಾರಾಚಳ (ನಾ). = ತಾರಾಗ: ಮುಂದಣ ತಾರಾಚಲಶಿಖರ ಮನೇಱಿದತ್ತು ಕಿನ್ನರಮಿಥುನಂ (ಕಾದಂಪೂ. ೬೨೨); ತಾರಾಚಲಂಗಳಂತೆ ದೆಸೆಯಂ ಧವಳಿಸುವ ದವಳಾರಂಗಳಿಂ (ಮಲ್ಲಿಪು. ೨-೫೪); ಘನ ತಾರಾಚಲರಾಜಂಗನುಗುಣರಚಿತಾಭ್ರತುಂಗಪಟಕುಟಿಯ ಮಹಾಕನಕದ ಕಂಬಂ ಬೋಲ್ತಿಗೆ ಮಿನುಗುಗುಂ (ಹಮ್ಮಿರ. ೧-೩೪). **ತಾರಾಚಳ:** ತುಹಿನಕರ ಸುರೇಭೇನ್ದ್ರ ನೀಹಾರ ತಾರಾಚಳ (ಸೌಇಇ. XX, ೨೦-೩೬; 1019); ತಾರಾಚಳದೊಡನೆ ರೋಹಣಂ ಪೋದರ್ುದೆನಲ್ ವಾರಣದೊಡನೆ ಖಗಪ್ರಭು . . . ಪೊಣರ್ದಂ (ಜಗವಿ. ೧೩-೧೦೦). [ತಾರ್<sub>3</sub> + ಅಚಲ]

**ತಾರಾಚಳ** 'ತಾರಾಚಲ' ನೋ.

**ತಾರಾಜು** (ನಾ). ನಾಶ; ಧ್ವಂಸ: ಬೆಂಗಳೂರು ಪ್ಯಾಟೆ ಹೊಕ್ಕು ಲೂಟಿಸುತ್ತಾ ಬಹಳ ಮುಗ್ಗಡೆಯಾದ್ದರಿಂದ ಬೆಂಗಳೂರು ಶೀಮೇನೆಲ್ಲಾ ತಾರಾಜುಮಾಡಿ ಕೋಟೆಗೆ ರಸ್ತು ಬಿಡದೆ (ಹೈದರ. ೬೬). [←ಪಾರ. ಹಿಂ. ತಾರಾಜ್]

**ತಾರಾಟ** (ನಾ). ಓಡಾಟ; ಪದೇ ಪದೇ ಬಂದು ಹೋಗುವಿಕೆ: ಏನೇ ಹುಡುಗಿ ತಾರಾಟ, ಶಾನುಭೋಗರ ಮನೆ ದೇವರೂಟ (ಗಾದೆ).
[<ತಾರಾಡು]

**ತಾರಾಡಿಸು** (ಕ್ರಿ). ತುಂಬ ಓಡಾಡಿಸು; ನಿಂತಲ್ಲಿ ನಿಲ್ಲದಂತೆ ಮಾಡು: ಹರಣಿ ಶಾಣಿ ಹಗ್ಗದ ಸರಪಣಿ ತಾರಾಡಿಸುವಂತೆಲೋ (ನಾಪದ. ೦೪೩); ಕರಿಪತಿ ಕಪಿಲೇಶ್ವರನನ್ನು ರೋಡಾಡಿಸಿ, ತಾರಾಡಿಸಿ ಬಂದ ದಾರಿಗೆ ಸುಂಕವಿಲ್ಲದ ಹಾಗೆ, ಹಿಮ್ಮೆಟ್ಟುವಂತೆ ರಾಮ ಕಾದಾಡಿದನು (ನಂಜುಂಡ. ೪೫).
[ತಾರಾಡು + -ಇಸು<sub>3</sub>]

**ತಾರಾಡು** (ಕ್ರಿ). ಓಡಾಡು; ಬಂದು ಹೋಗಿ ಮಾಡು; ಎಡೆತಾಕು: ನೂರಾಡಿ ಏನು ಫಲವು ತಾರಾಡುವಾಗ ಒಲವು (ಸಹೀಗೀ. ೨೦-೨); ಗೃಹಿಣಿಗೆ ಅಡಿಗೆಮನೆಗೂ ಉಗ್ರಾಣಕ್ಕೂ ತಾರಾಡುವುದರಲ್ಲಿ ವ್ಯರ್ಥವಾಗಿ ಕಾಲ, ಶಕ್ತಿ ಕಳೆದುಹೋಗುತ್ತದೆ (ಗೃಹವಿ. ೧೬೫); ಕಲ್ಲು ಮುಳ್ಳುಗಳು ಹೇರಳವಾಗಿ ಬೆಳೆದು ತಾರಾಡುವುದೇ ಬಹಳ ಕಷ್ಟವಾಗುತ್ತಿತ್ತು (ರಾಯಕ. ೯).

**ತಾರಾಡಿ ಹೋಗು** = ಕಷ್ಟಪಡು; ಹಿಂಸೆಗೊಳಗಾಗು: ನಾಗುವು ಈ ಎರಡು ಕಡೆಯ ಎಳೆತದಿಂದ ತಾರಾಡಿ ಹೋದಳು (ನಾಲ್ಕುಮು. ೮೦).
[<ತಾಱು<sub>5</sub> + ಆಡು<sub>1</sub>]

**ತಾರಾತಂಟಲು** (ನಾ). ತಂಟೆ; ತಕರಾರು: ಮೂರು ಹೊತ್ತೂ ತಾರಾತಂಟಲು, ತಗರುಬಗರು . . . ಮನೆಹಾಳುತನ ಇವೆಲ್ಲಾ ಕಲಿತುಕೊಂಡರೆ ದೇವರು ಹ್ಯಾಗಿರುತಾನೋ ಮನೇಲಿ? (ಶ್ರೀಕಥ. ೩೬).
[? + ತಂಟಲು]

**ತಾರಾತಿಕಡಿ** 'ತಾರಾತಿಗಡಿ' ನೋ.

**ತಾರಾತಿಗಡಿ,** ತಾರತಕ್ಕಡಿ, ತಾರತಿಗಡಿ, ತಾರಾತಿಕಡಿ (ನಾ). ಮೋಸ; ವಂಚನೆ; ಕಪಟೋಪಾಯ: ಏನಾದರೂ ತಾರಾತಿಗಡಿ ಮಾಡಿಯೇ ಬಗೆಹರಿಸಿ ಸಂಸಾರ ಸಾಗಿಸಬೇಕು (ಗಂಗಾಸಾ. ೪೭). **ತಾರತಕ್ಕಡಿ:** 'ತಾರತಕ್ಕಡಿಗ' ಪರಾ. **ತಾರತಿಗಡಿ:** "ತಾರತಿಗಡಿ-ವಂಚನೆ" (ಜಾನಕೋ. ೬೬). **ತಾರಾತಿಕಡಿ:** ಇನ್ಸ್‌ಪೆಕ್ಟರರು ಬಂದಾಗ . . . ಏನಾದರೂ ತಾರಾತಿಕಡಿ ಮಾಡಿದರಾಯಿತು (ಸ್ವಪ್ನಹೊ. ೬೬); ನನ್ನ ಕೈಕಾಲು ಗಟ್ಟಿಯಾಗಿರುವಷ್ಟು ದಿನ, ಏನಾದರೂ ತಾರಾತಿಕಡಿಮಾಡಿ ಬದುಕಿಯೇನು (ಚಿಗುಕ. ೬೨).
[? + ತಿಗಡಿ]

**ತಾರಾದ್ರಿ** (ನಾ). = ತಾರಾಗ: ಶಾರದಾಭ್ರ ತಾರಾದ್ರಿ ಪಯಃ ಕುಂದೇಂದು ಯಶೋಭಾಸುರನೆಂದು ಮನಂಗೊಂಡು (ಸುಕುಮಾ. ೦-೫೬); ತಾರಾದ್ರಿಯೊಳು ಮುನ್ನ ನಾವೆಂದು ಕಂಡುದಿಲ್ಲೀ ರೂಪನೆಂದು ನುಡಿದರು (ಭರತ. ೪೪-೭೮); ಇಂಗಡಲ ಮಧ್ಯದೊಳು ತಾರಾದ್ರಿ . . . ರಾಜಿಸುತಿರ್ಪುದು (ಪ್ರಾಥರಾ. ೦-೨೮). [ತಾರ್<sub>3</sub> + ಅದ್ರಿ]

**ತಾರಾಧಿನಾಯಕ** (ನಾ). = ತಾರಾಧಿಪ: ತಾರಾಧಿನಾಯಕಂ ನಿಲೆ ಹೋರೇಶಂಗುಪಚಯರ್ಕ್ಷದೊಳ್ . . . ಅರಿಷ್ಟಂ ಕೆಡುಗುಂ (ಜಾತತಿ. ೭-೭). [ಸಂ. (ತಾರಾ + ಅಧಿನಾಯಕ)]

**ತಾರಾಧಿಪ** (ನಾ). ನಕ್ಷತ್ರಗಳ ಪ್ರಭು; ತಾರೆಗಳ ಒಡೆಯ; ಚಂದ್ರ: ಸುತಾರೆಗೆ ತಾರಾಧಿಪನಂತೆ ವಿಸ್ತರಿಸಿದಂ ಪ್ರಾಣೇಶ್ವರಪ್ರೀತಿಯಂ (ಶಾಂತಿಪು. ೬-೨೩). [ಸಂ. (ತಾರಾ + ಅಧಿಪ)]

**ತಾರಾಧಿಪತಿ** (ನಾ). = ತಾರಾಧಿಪ: "ತಾರಾಧಿಪತಿ . . . ಅಬ್ಧಿನಂದನಂ ದ್ವಿಜರಾಜನೆನೆ ಸುಧಾಂಶುವೆನಿಕ್ಕುಂ" (ಮಂಗರಾ. ೧೧-೪); ತಾರಾ ಜಾನಕಿಯಂ ಪೋಗಿ ತಾರಾ ತರಳನೇತ್ರೆಯಂ ತಾರಾಧಿಪತಿ ತೇಜಸ್ವಿ ತಾರಾದಿವಿಜಯೋದಯಾ (ಕವಿರಾ. ೨-೧೨೮). [ಸಂ. (ತಾರಾ + ಅಧಿಪತಿ)]

**ತಾರಾಧೀಶ** (ನಾ). = ತಾರಾಧಿಪ: ಇದು ಚಿತ್ರಂ ನಿಜವಕ್ತ್ರಶೋಭೆ ತಾರಾಧೀಶನಂ ಗೆಲ್ದುದು (ಜಗವಿ. ೨-೬೨). [ಸಂ. (ತಾರಾ + ಅಧೀಶ)]

**ತಾರಾಧೀಶ್ವರ** (ನಾ). = ತಾರಾಧಿಪ: ತಾರಾಧೀಶ್ವರನುದಯದೆ ವಾರಾಸಿ ಕಡಂಗಿ ಪೆರ್ಚುವಂತೆ (ಧರ್ಮಾಮೃ.೧೪-೧೪೦). [ಸಂ. (ತಾರಾ + ಅಧೀಶ್ವರ)]

**ತಾರಾಧ್ವ** (ನಾ). ನಕ್ಷತ್ರಮಾರ್ಗ; ಆಕಾಶ: ಆ ಮಹಾರ್ಣವಂ . . . ತಾರಾಧ್ವದಂತೆ ದುರ್ಧರ ಗ್ರಹನಿರುದ್ಧಮುಂ ನಾಗಲೋಕದಂತನಿಮಿಷಪ್ರಕೀರ್ಣಕಮುಂ . . . ಎನಿಸಿದುದು (ಜಗವಿ. ೦-೪೪ ವ).
[ಸಂ. ತಾರಾಧ್ವನ್ (ತಾರಾ + ಅಧ್ವನ್)]

**ತಾರಾನಿಕರ** (ನಾ). = ತಾರಾನಿವಹ: ತಾರಾನಿಕರಾವೇಷ್ಟಿತ ತಾರಾಪತಿಯಂ . . . ಅನಂತವೀರ್ಯಂ ಕಂಡಂ (ಆದಿಪು. ೧೬-೪೭).
[ಸಂ. (ತಾರಾ + ನಿಕರ)]

**ತಾರಾನಿವಹ** (ನಾ). ನಕ್ಷತ್ರಗಳ ಗುಂಪು; ತಾರೆಗಳ ಸಮೂಹ: ಅಮಲ ತಾರಾನಿವಹದಲಿ ರೋಹಿಣಿಯವೋಲ್ . . . ಕಂಡನವ ಪಾಂಚಾಲನಂದನೆಯ (ಕುಮ್ವಾ.ವಿ. ೨-೫); ತಾರಾನಿವಹವ ನಡೆಯಿಪ ಪರಿವಹ ಪವನನ ಮಾರ್ಗವಿದು (ಶಾಕುಂತ. ೧೦೦-೧೬೯). [ಸಂ. (ತಾರಾ + ನಿವಹ)]

**ತಾರಾನೀಕ** (ನಾ). = ತಾರಾನಿವಹ: ತುಹಿನಕರ ಸುರೇಭೇನ್ದ್ರ ನೀಹಾರ ತಾರಾಚಳ ತಾರಾನೀಕ (ಸೌಇಇ. XX, ೨೦-೩೬; 1019).
[ಸಂ. (ತಾರಾ + ಅನೀಕ)]

**ತಾರಾನ್ವಯ** (ನಾ). ಉತ್ತಮವಂಶ (?): ನಿಯತಸಮಯಸಾರಾಸಾಧನೀಯಾದಿ ತಾರಾನ್ವಯ ಪರಮತಪೋನುಷ್ಠಾನನಿಷ್ಠಾರ್ಥಸಿದ್ಧಂ (ಕವಿರಾ. ೩-೨೦೫). [ಸಂ. (ತಾರಾ + ಅನ್ವಯ)]

**ತಾರಾಪತಿ** (ನಾ). = ತಾರಾಧಿಪ: ಧರಾಧಿಪಾ ನಿನ್ನನ್ನಂ ವಿತತ ಯಶನಿಲಯ ತಾರಾಪತಿ ದಿನಕರಸದೃಶತೇಜನೆಂಬುದುಮುಂಟೇ (ಕವಿರಾ. ೩-೮೪);

ತಾರಾನಿಕರಾವೇಷ್ಟಿತ ತಾರಾಪತಿಯುಂ . . . ಅನಂತವೀರ್ಯಂ ಕಂಡಂ (ಆದಿಪು. ೧೬-೪೬) ; ತಾರೆಗಳ ನಡುವಣ ತಾರಾಪತಿಯ ಕಳೆಯಂತೆ . . . ಸಕಲಸ್ತ್ರೀಯರ ನಡುವೆ ಗಿರಿರಾಜತನೂಜೆ ವಿರಾಜಿಸುತಿರ್ದು (ಗಿರಿಕ. ೪-೪೩ ವ). [ ಸಂ. (ತಾರಾ + ಪತಿ) ]

**ತಾರಾಪಥ** (ನಾ). ೧. ನಕ್ಷತ್ರಮಾರ್ಗ; ಆಕಾಶ: "ನಭಃ . . . ತಾರಾಪಥಃ, ಪುಷ್ಕರಂ . . . ದ್ಯುಃ-ಈ ೧೫ ಆಕಾಶಂ" (ಹಲಾಯು. ೨೨-೧೫೬) ; ತಾರಾಪಥಕ್ಕೆ ನೆಗೆದಂ ಸುರಗಜಸ್ಥಿತಂ (ನಂಬಿರ. ೧೯-೬೦). ೨. ತಾರಾ ಭಗವತಿಯ ಪಾದ. ೧, ೨ : ಗ್ರಹಗತಿಯಂ ಕಂಡು ತಥಾಗತಮತೋಪಾಸಕನಂತೆ ತಾರಾಪಥಕ್ಕೆಜಗಿ (ಸುಕುಮಾ. ೩-೬ ವ).
[ ಸಂ. (ತಾರಾ + ಪಥಿನ್ + -) ]

**ತಾರಾಪರಿಕರ** (ನಾ). = ತಾರಾನಿವಹ : ಸುತ್ತಿದ ತಾರಾಪರಿಕರಮೆನೆ ವಜ್ರಾವಳಿ ವಿರಚಿತ ಕೇಯೂರವಳಯಮೇಂ ತೊಳಗಿದುದೋ (ಚಂದ್ರಪು. ೬-೫೯). [ ಸಂ. (ತಾರಾ + ಪರಿಕರ) ]

**ತಾರಾಪುಂಜ** (ನಾ). ೧. ನಕ್ಷತ್ರಗಳ ಸಮೂಹ,-ಗುಂಪು : ನಕ್ಷತ್ರಪುಂಜ; ತಾರಾಪುಂಜ (Cluster of stars. ಪಾರಿನಿ. ೧೬). ೨. ಗಮನ ಸೆಳೆಯುವುದಕ್ಕಾಗಿ ಹಾಕುವ ಮೂರು ನಕ್ಷತ್ರ ಚಿಹ್ನೆ : (Asterism. ಪಾರಿನಿ. ೭).
[ ಸಂ. (ತಾರಾ + ಪುಂಜ) ]

**ತಾರಾಬಲ** (ನಾ). [ಜ್ಯೋತಿ] ಜನ್ಮನಕ್ಷತ್ರದಿಂದ ಇಷ್ಟಕಾಲದ ನಕ್ಷತ್ರದವರೆಗೆ (ಎರಡೂ ಸೇರಿ) ಲೆಕ್ಕಮಾಡಿ ೯ ರಿಂದ ಭಾಗಿಸಿದಾಗ ಶೇಷ ೨, ೪, ೬, ೯ ಉಳಿದರೆ ಬರುವ ಬಲ,-ಪ್ರಭಾವ,-ಫಲ : ಎಮ್ಮವರು ಬೆಸಗೊಂಡರೆ . . . ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯಾ (ಬಸವ. ೮೩) ; ಯಾದವ ನಾರಾಯಣನ ಅವತಾರಕ್ಕೆ ತಾರಾಬಲಂ ಅಯಿಶ್ವರ್ಯಕ್ಕೆಯಾದಿತ್ಯಬಲಂ (ಸೌಇಇ. XX, ೨೦೨-೦೦ ; 1244).
[ ಸಂ. (ತಾರಾ + ಬಲ) ]

**ತಾರಾಭಗವತಿ** (ನಾ). [ಬೌದ್ಧ] ಒಬ್ಬ ದೇವತೆಯ ಹೆಸರು: ತಾರಾಭಗವತಿಯ . . . ಬೌದ್ಧದೇವರ ಅಲ್ಲಿಯ ಸಮಸ್ತ ಪರಿವಾರದೇವರ ಅರ್ಚ್ಚನಪೂಜನಾನಿಮಿತ್ತಕ್ಕಂ (ಎಕ. VII, ಶಿಕಾರಿ. ೦೭೦-೦೫ ; 1065).
[ ಸಂ. ತಾರಾಭಗವತೀ (ತಾರಾ + ಭಗವತೀ) ]

**ತಾರಾಭ್ರಮಂಡಲ** (ನಾ). ನಿರ್ಮಲವಾದ ಆಕಾಶ : ದಶಗ್ರೀವಂ . . . ಬಂದೊಡ್ಡಿ ತಾರಾಭ್ರಮಂಡಲಮಂ ಮೂವಳಸಾಗೆ ಮುತ್ತೆ (ಪಂರಾಮಾ. ೦೩-೩೨). [ ತಾರ್‌₃ + ಅಭ್ರ + ಮಂಡಲ ]

**ತಾರಾಮಂಡಲ** (ನಾ). ೧. ನಕ್ಷತ್ರಗಳ ಸಮೂಹ : ಕೋಟಿ ಕೋಟಿ ತಾರಾಮಂಡಲಗಳಲ್ಲಿ ನಮ್ಮದು ಒಂದಂತೆ (ಮೂರುದಾ. ೨೦೭). ೨. ನಕ್ಷತ್ರಗಳಿಂದ ಕೂಡಿದ ಆಕಾಶಮಂಡಲ,-ನಭೋಮಂಡಲ : ತಮಂಧಮೆಂಬ ಕೊಪ್ಪರಿಗೆಯಲ್ಲಿ ತಾರಾಮಂಡಲದ ಉದಕವ ತುಂಬಿ ಮಹಾಂಧಕಾರದಿಂದ ಉರುಹಲಾಗಿ ದಾವಾನಳವದ್ದಿತ್ತು (ಪ್ರೋಳಿಮಾ. ೩೩೪-೭೮೭). ೩. ಒಂದು ಬಗೆಯ ಸುಡುಮದ್ದು : (೬). [ ಸಂ. (ತಾರಾ + ಮಂಡಲ) ]

**ತಾರಾಮಾರು** 'ತಾರಂಮಾರ್ರು' ನೋ.

**ತಾರಾಮಾರ್ಗ** (ನಾ). ೧. ನಕ್ಷತ್ರಮಾರ್ಗ; ಆಕಾಶ. ೨. ಒಂದು ಬಗೆಯ ಸೀರೆ ; ಆಕಾಶಬಣ್ಣದ ಸೀರೆ : ರಂಗು ತರಂಗ ತಾರಾಮಾರ್ಗ ಗುಜ್ಜರಿ ಸಿಂಗಳ ಗುಲುಗುಂಜಿ ಮಡಿಯು (ಅಮುಸಾಂ. ೪-೦೨).
[ ಸಂ. (ತಾರಾ + ಮಾರ್ಗ) ]

**ತಾರಾಮೂಲ** (ನಾ). ನಕ್ಷತ್ರದ್ರವ್ಯ; ಜ್ಯೋತಿರ್ಮೇಘ ; ನೀಹಾರಿಕೆ : ಬಹುದೂರದಲ್ಲಿ ಹೊಗೆಯ ಸುರುಳಿಯಂತೆ ಇತರ ಲೋಕಗಳು ಕಾಣುವುವು. ತಾರಾಮೂಲ(Nebula)ಗಳೆನ್ನಬಹುದು (ಬಾಲಪ್ರ. I, ೨೪೪).
[ ಸಂ. (ತಾರಾ + ಮೂಲ) ]

**ತಾರಾಮೃಗ** (ನಾ). ಮೃಗದ ಆಕೃತಿಯಲ್ಲಿರುವ ನಕ್ಷತ್ರ ; ಮೃಗಶಿರಾ ನಕ್ಷತ್ರ : ರುದ್ರನು ತಾರಾಮೃಗವನ್ನು ಅಟ್ಟಿಕೊಂಡು ಹೋದಂತೆ, ಜಿಂಕೆಯನ್ನು ಅಟ್ಟಿಕೊಂಡು ಹೋದನು (ವಚಥಾ. ४೦೬).
[ ಸಂ. (ತಾರಾ + ಮೃಗ) ]

**ತಾರಾಮೈತ್ರಿ** (ನಾ). ದರ್ಶನಮಾತ್ರದಿಂದಲೇ ಉಂಟಾಗುವ ಪ್ರೀತಿ ; ಕಣ್ಬೇಟ ; ಚಕ್ಷೂರಾಗ : ಎಲ್ಲಿಯಾದರೂ ಆನಂದಮಯವಾದ ಪ್ರೀತಿಯುಂಟಾದರೆ ಜನರು ಅದಕ್ಕೆ ತಾರಾಮೈತ್ರಿಯೆಂತಲೂ . . . ಅನ್ನುತ್ತಾರೆ (ಉರಾಜ. ೯४). [ ಸಂ. ತಾರಾಮೈತ್ರೀ (ತಾರಾ + ಮೈತ್ರೀ) ]

**ತಾರಾಯಂತ್ರ** (ನಾ). ವಿದ್ಯುತ್ತಿನ ತಂತಿಗಳ ಮೂಲಕ ಸಮಾಚಾರಗಳನ್ನು ದೂರಕ್ಕೆ ಕಳಿಸುವ ಯಂತ್ರ ; ಟೆಲಿಗ್ರಾಫ್ : ಇಂಗ್ಲೆಂಡದಿಂದ ಅಮೇರಿಕದವರೆಗೆ ತಾರಾಯಂತ್ರದ ತಂತಿಯನ್ನು ಈ ಮಹಾಸಾಗರದೊಳಗೆ ಹಾಕುವ (ಮುಂಬಯಿ. ೬-೬೦೩) ; ರೇಲು, ವಿಮಾನ, ತಾರಾಯಂತ್ರ ಆದಿಗಳ ಆವಿಷ್ಕಾರ ಇವು ದುರುಪಯೋಗ, ಸದುಪಯೋಗ ಎರಡೂ ಆದದ್ದುಂಟು (ಯಾತ್ರಿಕ. ೨೯) ; ತಾರಾಯಂತ್ರಗಳ, ಬಾನುಲಿಯ . . . ವರ್ತಮಾನ ವಿನ್ಯಾಸಗಳ ಸಂಕೀರ್ಣ ಸ್ಪರ್ಧೆ(ರಕ್ತರ್ಧ. ೧೫೬). [ <ತಾರ್‌₃ + ಯಂತ್ರ ]

**ತಾರಾಯುಗ್ಮ** (ನಾ). ಜೋಡಿ ನಕ್ಷತ್ರ : ಎರಡು ತಾರೆಗಳಿವೆ. ಬರಿಯ ಕಣ್ಣಿಗೆ ಎರಡೂ ಸೇರಿ ಒಂದೇ ಆಗಿ ಕಾಣುತ್ತವೆ. ಇಂಥ ತಾರೆಗಳಿಗೆ ತಾರಾಯುಗ್ಮಗಳೆಂದು ಹೆಸರು (ಜಗತ್ತು. ೬೩) ; ಇದು ಬಹು ಸುಂದರವಾದ ತಾರಾಯುಗ್ಮ (ನಕ್ಷತ್ರ. ೭೧). [ ಸಂ. (ತಾರಾ + ಯುಗ್ಮ) ]

**ತಾರಾರಾಜ** (ನಾ). ನಕ್ಷತ್ರಗಳ ಅರಸ; ಚಂದ್ರ : ತಾರಾರಾಜಕಲಾಪಚೂಡ ಕರುಣಾಪಾಂಗಂ ನಿರಂಗಂ ಮೃಡಂ . . . ಕೂರ್ತಿೀಗೆ ನಿರ್ವಿಘ್ನಮಂ (ಹಮ್ಮೀರ. ೦-೬೭). [ ಸಂ. (ತಾರಾ + ರಾಜನ್ + -) ]

**ತಾರಾವರ್ಗಾಂಕ** (ನಾ). ಕಾಂತಿಯ ಮೇರೆಗೆ ನಕ್ಷತ್ರಗಳಿಗೆ ಕೊಟ್ಟ ವರ್ಗಸಂಖ್ಯೆ : ಶೂನ್ಯವರ್ಗಾಂಕದ ತಾರೆಗಿಂತ ಎರಡೂವರೆಯಷ್ಟು ಕಾಂತಿಯ ತಾರಾವರ್ಗಾಂಕ-೧ ಆಗುತ್ತದೆ (ನಕ್ಷತ್ರ. ೧೩).
[ ಸಂ. (ತಾರಾ + ವರ್ಗಾಂಕ) ]

**ತಾರಾವಳಿ** (ನಾ). ೧. ನಕ್ಷತ್ರಗಳ ಸಾಲು, - ಗುಂಪು : ಗಗನತಳದೊಳ್ ಪೊಳೆವ ತಾರಾವಳಿಯಂತೆ ನೀಲದ ನೆಲಗಟ್ಟಿನೊಳ್ ಪೊರೆದ ಪೂವಲಿ (ಕಾದಂಪೂ. ೭೯) ; ತಾರಾವಳಿಯಲರ್ಚಲಾರ್ಕುಮೆ ಭಾವಿಸೆ ಹಿಮಕಿರಣನಂತೆವೋಲ್ ಕುಮುದಿನಿಯಂ (ಪುಷ್ಪಪು. ೩-೭४). ೨. ಒಂದು ಬಗೆಯ ಸೀರೆ : ಧಾವಳ್ಯ ದಿವ್ಯ ತಾರಾವಳಿಯ ಗಗನಮಾಲಾವಳಿಯ ವಿರುಪ ನೇತ್ರಾವಳಿಯ ಮುಖ್ಯ ನಾನಾವಿಧದ ಸೀರೆಗಳ . . . ಬೇಹಸಿತ ತೆಗೆದು (ನವಮೋ. ೧೭-೬೦). [ ಸಂ. ತಾರಾವಲಿ (ತಾರಾ + ಆವಲಿ) ]

**ತಾರಾವೀಧಿ** (ನಾ). = ತಾರಾಪಥ : ರಾಜವೀಧಿಯೊಳ್ ತಾರಾವೀಧಿಯಂ ಪುಗುವ ಚಂದ್ರನಂತೆ ಬರ್ಪ ಮನುಜೇಂದ್ರಚಂದ್ರನಂ ನೋಡಲೆಂದು ನೆರೆದು (ಮಲ್ಲಿಪು. ೯-೯). [ ಸಂ. (ತಾರಾ + ವೀಧಿ) ]

**ತಾರಾಸಂದೋಹ** (ನಾ). = ತಾರಾನಿವಹ : ತಾರಾಸಂದೋಹಮಧ್ಯಾಮೃತಕಿರಣನವೋಲ್ . . . ಎಸೆದನೊಲವಿನಂದುದ್ಭಟಕ್ಷೋಣಿಪಾಲಂ (ಉದ್ಭಟ. ೨-೭). [ ಸಂ. (ತಾರಾ + ಸಂದೋಹ) ]

**ತಾರಾಹಾರ** (ನಾ). = ತಾರಹಾರ: ಪಡೆಯಲಾಗವತಿತರಲತರತ್ತಾರಾಹಾರಂ ಜಿತನೀಹಾರಂ (ಆದಿಪು. ೧೨-೧೧೪) ; ಸೊಗಯಿಸಿದುದು ವಿಮಳತರಳ ತಾರಾಹಾರಂ (ಚಂದ್ರಪು. ೬-೫೪). [ ಸಂ. (ತಾರಾ + ಹಾರ) ]

**ತಾರಾಳಿ** (ನಾ). = ತಾರಾವಳಿ ೧ : ಶಶಿ ಸೂರ್ಯ ತಾರಾಳಿಗಳ್ ಕೈಕೆ ಭರತರಿಗಾಗಿ (ಶ್ರೀರಾಮಾ. ೨೭-೭೧೦).
[ ಸಂ. ತಾರಾಲಿ (ತಾರಾ + ಆಲಿ) ]

**ತಾರಿ₁** 'ತಾಚಿ' ನೋ.

**ತಾರಿ$_2$** (ನಾ). ೧. ನಾವೆ ; ದೋಣಿ : ಕರೆಯುತಿದೆ ಅಲ್ಲಿ ದೂರ, ಬೆಳು ದಿಂಗಳ ತಾರಿ, ಕನಸು ಹಾಯಿ ಹಾರಿ (ನಡಬಂ. ೨-೭) ; ತೆಪ್ಪವೊ ತಾರಿಯೊ ಹರಿಗೋಲೊ ಹಡಗವೊ ತೆರೆ – ತೊಡೆ – ತೊಟ್ಟಿಲನೇರೋಣ ಬಾ (ಸಖೀಗೀ. ೦-೦೫). ೨. (ಕರಾ) ನೀರಿನ ಹರಹನ್ನು ದಾಟುವ ಸ್ಥಳ ; "ನದಿ ದಾಟುವ ಸ್ಥಳ" (ಸಿರಿಕೋ. ೨೨೫) : ಎರಡು ಮೂರು ತಾರಿಗಳನ್ನು ದಾಟುವುದಲ್ಲವಾಗಿದ್ದರೆ, ಇನ್ನೆರಡು ಗಂಟೆಗಳಷ್ಟು ಮುಂಚೆ ಬರುತ್ತಿದ್ದೆ (ಜಾರುದಾ. ೨೬೦) ; ಕೋಡೀಬಾಗ ಸದಾಶಿವಗಡಗಳ ಹತ್ತಿರ ಈ ತಾರಿಯ ಅಗಲು ಕ್ತಿ ಮೈಲಿಗಿಂತ ಹೆಚ್ಚುಂಟು (ಕಾರವ. ೧೩).

[ <ಸಂ. ತರಿ, ತರೀ ]

**ತಾರಿಕಾಯಿ** 'ತಾಱಿಗಾಯ್' ನೋ.

**ತಾರಿಕೆ** (ನಾ). ಒಂದು ಬಗೆಯ ಸಸ್ಯ : ಮುಳ್ಳಿಕಾದಂಟು, ತಾರಿಕೆ (ಮೃಜಿಗ. ೫೨-೧೦೩೭). [ ? ]

**ತಾರಿಣಿ** (ನಾ). ೧. ಶಕ್ತಿದೇವತೆಯಾದ ದುರ್ಗೆ. ೨. ಬೌದ್ಧರ ಒಬ್ಬ ಶಕ್ತಿದೇವತೆ : (ಕಿ). [ ಸಂ. ತಾರಿಣೀ ]

**ತಾರಿಸು$_1$** 'ತಾಱಿಸು' ನೋ.

**ತಾರಿಸು$_2$** (ಕ್ರಿ). ಪಾರುಗಾಣಿಸು ; ದಾಟಿಸು ; ರಕ್ಷಿಸು : ತಾರಿಸೋ ಶ್ರೀ ಹರಿ ನಮ್ಮ ತಾರಿಸೋ (ಪುರಂದ. ೩-೬೯ ಪಲ್ಲವಿ) ; ಮಹಾರಾಜರಲ್ಲಿದ್ದ ನಿಮ್ಮ ಪ್ರೇಮವೇ ನಮ್ಮೆಲ್ಲರನ್ನು ತಾರಿಸಿತು (ಯದುರಾ. ೧೫೩) ; ಕ್ಷುದ್ರ ವಿಷಯ ಸುಖಕ್ಕಾಗಿ ಹುಟ್ಟಿಸಿದ ಈ ಸಂತತಿಯು ನಮ್ಮನ್ನು ಎಷ್ಟು ಮಾತ್ರ ತಾರಿಸೀತು (ಕೃವಸು. ೩೬೪). [ <ತಾರಣ + – ಇಸು$_3$ ]

**ತಾರಿಸೇವೆ** (ನಾ). ದೇವರಿಗೆ ಮಾಡುವ ಒಂದು ಬಗೆಯ ಕೈಂಕರ್ಯ ; ತೆಪ್ಪೋತ್ಸವ : ಸರ್ವವಾದ್ಯಗಳೆಸೆಯೆ ತಾರಿಸೇವೆಯ ಮಾಡಿ ಸ್ವಾಮಿ ವೀಳ್ಯಮಂತ್ರಾಕ್ಷತೆ ಕಾರುಣ್ಯದಲಿ ಬೆರಸಿ ಮಾರಜನಕಗೆ ಏಕಾಂತ ಸೇವೆಯ ಮಾಡಿ (ವಾದಿಕೀ. ೬೩-೧೩). [ ತಾರಿ$_2$ + ಸೇವೆ$_2$ ]

**ತಾರೀಕು** 'ತಾರೀಖು' ನೋ.

**ತಾರೀಖು,** ತಾರೀಕು (ನಾ). ತಿಂಗಳ ಪ್ರತಿದಿನ ; ದಿನಾಂಕ ; ತೇದಿ : ಭೂರಿಕಾರುಣ್ಯದಿಂದೊಂದೆ ತಾರೀಖಿನೊಳ್ಪ್ರಜೆಯ ವಾರಮಂ ಕರೆಬಿಟ್ಟು ಕಳಿಸಿರ್ದನೆಂಬುವೊಲ್ (ಸಿದ್ಧಕಾ. ೧೧-೯) ; ಚುನಾವಣೆಯ ತಾರೀಖು ಇನ್ನೂ ಒಂದು ವಾರವಿದ್ದುದರಿಂದ (ರಾಯಕ. ೯೦); ರುಜು ಹಾಕಿದಿರೋ? ಅದರ ಕೆಳಗೆ ತಾರೀಖೂ ಹಾಕಿ (ರಂಗವ. ೬೫) ; ಪಾವತಿ ಮಾಡಿದ ತಾರೀಖನ್ನು ಮಾತ್ರ ದಾಖಲ್ಮಾಡತಕ್ಕ ವಿಷಯದಲ್ಲಿ ಎಚ್ಚರಿಕೆಯುಳ್ಳವ ರಾಗಿರಬೇಕು (ಗ್ರಾಮಾಕ. ೭). **ತಾರೀಕು :** ಅಹಮ್ಮದಿ ದವಲತ್ತಿಗೆ ಶ್ರೇಯಸ್ಸು ಅಪೇಕ್ಷಿಸಿಕೊಂಡು ಸುಖದಲ್ಲಿಯಿರೋದು ತಾರೀಕು (ಎಕ. IX, ದೊಡ್ಡಬ. ೦೨-೭ ; ಸು. 1785).

[ ←ಅರ. ಪಾರ. ಹಿಂ. ಮರಾ. ತಾರೀಖ್ ]

**ತಾರೀಪು** 'ತಾರೀಫು' ನೋ.

**ತಾರೀಫ್** 'ತಾರೀಫು' ನೋ.

**ತಾರೀಫು,** ತಾರೀಪು, ತಾರೀಫ್ (ನಾ). ೧. ಹೊಗಳಿಕೆ ; ಮೆಚ್ಚಿಗೆ ; ಪ್ರಶಂಸೆ : ನಮ್ಮ ತಾರೀಫಿನಿಂದ ಸಾಹೇಬರ ಝಲ್ಲು ಬಿಟ್ಟಿತು (ದೀಪಹ. II, ೨೩೮) ; ಜಾಗೀರಿಯ ಕಣಜಗಳೆಲ್ಲ ತುಂಬಿ ತನ್ನ ಮೇಲ್ವಿಚಾರಣೆಯ ತಾರೀಫು ನಡೆದದ್ದು . . . ಒಂದೊಂದಾಗಿ ಕಣ್ಣ ಮುಂದೆ ಸರಿದವು (ಕಪ್ಪುಹು. ೩೦). **ತಾರೀಪು :** ೧. ಇದರ ತಾರೀಪು ಹತ್ತು ಪಾಲಲ್ಲು ಒಂದು ಪಾಲಾದರೂ ನಮ್ಮಿಂದ ಆಗದು (ರಾಜೇಂದ್ರ. ೯೯) ; ಅದರ ತಾರೀಪು ಏನು ಮಾಡುತ್ತೀ ಬಿಡು (ಮೂರುದಾ. ೪೯). ೨. ತಮಾಷೆ ; ಚೇಷ್ಟೆ : ಈ ಮಾಷ್ಟ್ರಿಗೆ ತಾರೀಪು ಅಂದರೆ, ತಾರೀಪು ! (ಮರಮ. ೫೫೭). **ತಾರೀಫ್ :** ೧. ಅನವಶ್ಯವಾದ ತಾರೀಫ್ ಯಾರಿಗೂ ಮಾಡಕೂಡದು (ರೂಢಿ).

**ತಾರೀಫು ಮಾಡು, ತಾರೀಪು ಮಾಡು, ತಾರೀಫ್ ಮಾಡು** = ೧. ಹೊಗಳು; ಪ್ರಶಂಸೆಮಾಡು; ಮೆಚ್ಚು : ಉಳಿದ ಸರ್ವಕಾಲ ಮೊಮ್ಮಗನ ಬಾಲ ಲೀಲಾವಿಲಾಸದ ತಾರೀಪು ಮಾಡುವುದರಲ್ಲಿ ಕಳೆಯುತ್ತಿದ್ದ (ದೀಪಹ. II, ೧೦); ಕೊಂಡುಕೊಂಡವನು ಅದನ್ನು ತಾರೀಪುಮಾಡುತ್ತ ತೆಗೆದುಕೊಂಡು ಹೋದನು (ದೇಶಾಂಕ. ४೮) ; ಅವ್ವ ತನ್ನ ಮೊಮ್ಮಗಳನ್ನು ತಾರೀಪು ಮಾಡುತ್ತಾಳೆ (ಹೊಸಕ್ಷಿ. ೨೦೯) ; ಈ ಅನಾರೋಗ್ಯ ವಾತಾವರಣದಲ್ಲಿದ್ದೂ ನಿನ್ನ ಶಾರೀರ ಶರೀರ ಎರಡನ್ನೂ ಚೆನ್ನಾಗಿಟ್ಟುಕೊಂಡಿದ್ದೀಯಲ್ಲಾ, ಅದಕ್ಕೆ ನಿನ್ನ ತಾರೀಫ್ ಮಾಡಬೇಕು (ಮಾಮನ. ೬೬) ; ನಿಮ್ಮ ಶಕ್ತಿ ತಾರೀಫ್ ಮಾಡಬೇಕಾದದ್ದೆ ! ನೀವು ಹೇಳಿದ ಎರಡು ಭವಿಷ್ಯಗಳೂ ಸರಿಹೋದು ವಲ್ಲ ! (ಕೃಷ್ಣಭೂ. ೩೩). ೨. ತಮಾಷೆ ಮಾಡು ; ಕುಚೇಷ್ಟೆ ಮಾಡು : "ಇವತ್ತು ಶೀನಪ್ಪ ಸೇರೆಗಾರರ ಆಸ್ತಿ, ಅಸ್ತಿಎರಡೂ ಪರಾಧೀನವಾಗುತ್ತದೆ" ಎಂದು ತಾರೀಪುಮಾಡುತ್ತ ತಿರುಗುವವರೇ ಎಲ್ಲರು (ಹಹಸ. ೨೪).

[ ←ಅರ. ತಾರೀಫ್ ; ಹಿಂ. ತಾರೀಫ್; ಮರಾ. ತಾರೀಫ್, ತಾರೀಪ್ ]

**ತಾರು$_1$** 'ತಾಱು$_1$' ನೋ.

**ತಾರು$_2$** (ಕ್ರಿ). ದಾಟು : ನದಿಯ ತಾಱ[ರಿ]ದೊಡಂ ಫಲ ತರುಗೆ ಪೋ ದೊಡಂ (ಅಟ್ಟಮು. ೩-೩). [ ಸಂ. ತಾರ=ದಾಟುವುದು ]

**ತಾರು$_3$** 'ತಾಳ್ಕು$_3$' ನೋ.

**ತಾರು$_4$** (ನಾ). ತಂತಿಯ ಸಮಾಚಾರ : ನಾನು ಮನೆ ತಲುಪಿದಾಗ ನನ್ನ ಮಾವನಿಂದ ತಾರು ಬಂದಿತ್ತು (ಗಾಳಿಗು. ೭೦) ; ವಿಷಾದವಾರ್ತೆಯ ತಾರು ಗಳ ಮೂಲಕ . . . ವ್ಯಾಪಕವಾಯಿತು (ಗುರುದ. ೧೩) ; ಅಪೂರ್ವನು ನಿರಾಶೆ, ಸಿಟ್ಟಿನಿಂದ ಕೇಂದ್ರ ಅಂಚೆಮನೆಗೆ ತಲುಪಿ ತಾಯಿಗೆ ತಾರು ಕಳಿಸಿ (ಭಾರತಿ. ೪) ; ಸೇವಕನನ್ನು ಕೂಗಿ ಅರ್ಜಂಟ್ ತಾರು ಕಳುಹಿಸಲು ಆಜ್ಞೆ ವಿಧಿಸಿದರು (ರತ್ನಗೂ. ೧೨).

**ತಾರುಮಾಡು** = ತಂತಿಕೊಡಂ: ಅವಳು ತೇರ್ಗಡೆಯಾದ ಸುದ್ದಿಯನ್ನು ತಾರುಮಾಡಿ ತಿಳಿಸಿದಳು (ರೂಢಿ). [ ←ಹಿಂ. ಮರಾ. ತಾರ್ ]

**ತಾರು$_5$** 'ಟಾರು' ನೋ.

**ತಾರುಂಬಳಿ** 'ತಾಱುಂಬಳಿ' ನೋ.

**ತಾರುಗದ** 'ತಾರಂಗದವು' ನೋ.

**ತಾರುಗದವು,** ತಾರಗದ, ತಾರುಗದ (ನಾ). ಅಗುಳಿಯನ್ನು ಉಳ್ಳ ಕದ; ಜೋಡುಕದ : ಜಹ್ವೆಯೇ ಬಾಗಿಲೆಂಟು ಕಂಡಿಗಳೇ ಗವಾಕ್ಷಂಗಳು . . . ತುಟಿಯೆರಡು ತಾರುಗದವುಗಳು (ವೀಶೈಪು. ೪-೨೦-೫೦). **ತಾರಗದ :** ಹದಿನಾಱು ವರ್ತನದ ಕೊಂಡಿ ಗುರು ಲಘುವೆಂಬ ತಾ[ಪಾಠಾಂ. ತೋ]ರಗದ ಅದಕ್ಕೆ ಅಗುಳಿ ದಿವರಾತ್ರಿ (ಮೋಹಿಮಾ. ೨೩೨-೭೮೪) ; ತಾರಗದವೆನೆ ತೋರತುಟಿಯಿದೆ (ಕರಿಕ. ೫೦-೭). **ತಾರುಗದ :** ಈ ಬಾಗಿಲಿಗೆ ಅಧರ ತಾರುಗದ ದಂತಂಗಳಗುಳಿ (ಅದವ. ೧೫-೩೩).

[ ತಾರು$_4$ (<ತಾಳ್$_3$) + ಕದವು$_1$ ]

**ತಾರುಗೂಡು** 'ತಾರ್ಗೂಡು' ನೋ.

**ತಾರುಣ್ಯ** (ನಾ). ಹರೆಯಂ ; ಪ್ರಾಯಂ ; ಯೌವನ : ಪೊಸವೆಳ್ದಿಂಗಳೆತ್ತೆನ್ನ ತಾರುಣ್ಯವಿಡಂಬಂ ತಾನಿದೆತ್ತೊತ್ತರಿಪ ವಿಧಿಯುಮೆತ್ತ (ಚಂದ್ರಪು. ೮-೭೮) ; ತಾರುಣ್ಯಕಡಿಯಿಡುವ ಕೌಮಾರಮೂರ್ತಿಯಾ ಬಾಲಋಷಿ ಕಾಡನೇರಿದನು ರಾಮಾಶ್ರಮಕೆ (ಶ್ರೀರಾಮಾ. ೧೬೧-೨೪೩) ; ತಾರುಣ್ಯದಲ್ಲಿ ಸಹಧರ್ಮಿಣಿಯ ಅನುರಾಗ (ಶಿಕ್ಷದ. ೮೦) ; ತಾರುಣ್ಯವೇ ರೂಪು ಕಾರುಣ್ಯವೇ ಗುಣ (ಗಾದೆ).

[ ಸಂ. ]

**ತಾರುಣ್ಯವತಿ** (ನಾ). ಜವ್ವನೆ ; ತರುಣಿ ; ಯುವತಿ : ಮನೋಹರ ಕ್ರೀಡಾಗಾರದ್ವಾರದೇಶದೊಳ್ ತಾರುಣ್ಯವತಿ . . . ಶರೀರದ ಸಹಜ

ಸುರಭಿಗಂಧಮಂ ಗಂಧವಹಂಗೊಚ್ಚತಂಗುಡುವಂತಿರೆ (ಚಂದ್ರಪು. ೮-೭೦ ವ); ಮತ್ತವೊರ್ವಳಗಣ್ಯಲಾವಣ್ಯ ತಾರುಣ್ಯವತಿ . . . ಕಣ್ಗೆ ತೋಱಿದಳ್ (ರಾಜಶೇ. ೧೧-೮೪ ವ); ಮೊದಲು ಮೊದಲು ಕುಸುಮ ನಸುನಾಚಿದಳು. ಎಷ್ಟಾದರೂ ಹೆಣ್ಣು! ಅದರಲ್ಲಿ ತಾರುಣ್ಯವತಿ! (ಬಾಗಿನ. ೭೧).
[ ಸಂ. ತಾರುಣ್ಯವತೀ ]

**ತಾರುತಟ್ಟು** 'ತಾಱುಂತಟ್ಟು' ನೋ.

**ತಾರುಮಾರು₁** 'ತಾಱುಮಾಱು' ನೋ,

**ತಾರುಮಾರು₂**, ತಾರಮಾರ, ತಾರಾಮಾರು (ಅ). ಕ್ರಮವಿಲ್ಲದೆ; ಅರ್ಥವಿಲ್ಲದೆ; ಅಕ್ರಮವಾಗಿ: ನನ್ನಹಾಗೆ ಅವನು ಕೂಡ ಉಣ್ಣುತ್ತಿದ್ದ, . . . ಚಂದ್ರನನ್ನು ತಾ ಎಂದು ತಾರುಮಾರು ತೊದಲುತ್ತಿದ್ದ (ನಡಬಂ. ೮೫-೪). **ತಾರಮಾರ:** ತಾರಮಾರ ಮನೆಯಲ್ಲೆಲ್ಲ ಅಲೆಯುತ್ತಿತ್ತು (ತಾವರೆ. ೧೪). **ತಾರಾಮಾರು:** ತನ್ನೆದುರಿಗಿದ್ದ ಶತ್ರುವನ್ನು ಆತ ತಾರಾಮಾರು ಛತ್ರಿಯಿಂದ ಹೊಡೆದ (ನಿಶಲು. ೧೫೨). [ <ತಾಱುಮಾಱು ]

**ತಾರುಯಂತ್ರ** (ನಾ). "ದೂರಲೇಖಕ (ಪಾರಿ); ತಾರುಯಂತ್ರ; ಟೆಲಿಗ್ರಾಫು" (Telegraph. ಪತ್ರಿನಿ. ೮೨). [ ತಾರು₃ + ಯಂತ್ರ ]

**ತಾರುಸುದ್ದಿ**(ನಾ). ತಂತಿಯ ಮೂಲಕ ಕಳಿಸುವ ಸುದ್ದಿ,-ಸಮಾಚಾರ: ತನ್ನ ಕಿಸೆಯಲ್ಲಿದ್ದ ತಾರುಸುದ್ದಿಯನ್ನು ಮೇಜಿನ ಮೇಲೆ ಒಗೆದು ಅದರ ಪರಿಣಾಮವನ್ನು ನಿರೀಕ್ಷಿಸುತ್ತ ಕುಳಿತ (ನಟಸಾ. ೩೭೩).
[ ತಾರು₃ + ಸುದ್ದಿ ]

**ತಾರೆ₁** 'ತಾಱು' ನೋ.

**ತಾರೆ₂** (ನಾ). ೧. ನಕ್ಷತ್ರ: "ವಿಬಾನದೊಳು ತಾರಗೆಯು ತಾರೆ [ಪಾಠಾಂ. ತಾರಕಿ]ಯಲ್ಲಿ" (ಶಬ್ದಮಂ. ೧೭); ಅಂಬರಂ ವಿನುತ ಹಿಮಾಂಶುವಿಲ್ಲದೊಡೆ ತಾರೆಗಳುಳ್ಳೊಡಮೆಂತು ರಂಜಿಕುಂ (ಬಾಧಪು. ೩-೫); ತೆರಳಿಸಿತು ಬಿಱುಗಾಳಿ ತಾರೆಯ ನೆರವಿಯನು (ಸಾಳ್ವಭಾ. ೧೭-೩೪); ತಾವರೆಯಲ್ಲಿ ತಾರೆ ಜನನಂ ಬಡೆದಂದು (ರಾಜಶೇ. ೭-೨೭); ಕಾರಿರುಳಾಗಸದಿ ತಾರೆ ನೂರಿದ್ದೇನು? ದಾರಿಗನ ಕಣ್ಗೆ ಬೇಕೊಂದು ಮನೆಬೆಳಕು (ಮಂಕುತಿ. ೪೨೪). ೨. ಕಣ್ಣುಗುಡ್ಡೆ; ಪಾಪೆ; ಕನೀನಿಕೆ: "ಕನೀನಿಕೆಯಂದಕ್ಷಿಮಧ್ಯಂ ತಾರೆಯೆನಲಾಲಿ" (ಮಂಗರಾ. ೯೩-೨); ಕನ್ನೆ ನುಡಿಯಲೊಡರಿಸಿ ನಿಷ್ಕಂಪವೆನಿಪ್ಪ ತಾರೆಗಳ್ವೆರಸೆವೆಯಿಕ್ಕದೆ ನೋಡುತಿರ್ದಳ್ (ಕಾದಂಬ. ೨೮೭). ೩. ಮುತ್ತು. ೪. ಮುತ್ತಿನ ಹಾರ: "ಮೌಕ್ತಿಕದ ಹಾರಮಂ ತಾರೆಯೆಂಬುದು" (ಮಂಗರಾ. ೧೩೯-೭). ೫. ಬೃಹಸ್ಪತಿಯ ಹೆಂಡತಿ: ಬಾನಗಲಂ ತೊಟಿಲ್ಲ ಚಂದವಂ ಕಡೆಗೆ ತಾರೆಯುಂ ಮಱುವುಗನೆ (ರಾಮಾಶ್ವ. ೫೭-೧೦). ೬. ವಾಲಿಯ ಹೆಂಡತಿ: ವಾಲಿ . . . ತನ್ನರಸಿ ತಾರೆಯನರಸಿದಂ (ಶ್ರೀರಾಮಾ. ೨೮೧-೯೮). ೭. ಗಾಳಿ; ವಾಯು. ೮. ಚಲನಚಿತ್ರದ ಅಥವಾ ನಾಟಕರಂಗದ ನಟ ಅಥವಾ ನಟಿ: ನಿಜವಾಗಿಯೂ ಅವಳು ಹಾಲಿವುಡ್ಡಿನ ತಾರೆಯ ಪರೀಕ್ಷೆಯನ್ನು ಕೊಡಲು ಯೋಗ್ಯಳಾದವಳು (ಮಹಾತ್ಮಾ. ೧೧೭). ೯. ಬೆಳ್ಳಿ: "ಮುತ್ತಿನೊಳ್ ರೌಪ್ಯದೊಳು ಋಕ್ಷದೊಳು ವಾತದೊಳು ಕಣ್ಣಾಲಿಗಳೊಳು ತಾರಾಖ್ಯವಕ್ಕುಂ" (ಮಂಗರಾ. ೧೫೦-೯೯).

**ತಾರೆಯ ತಿಂಗಳು** = ಶರದೃತು (?): ಕಾರು ತಿಂಗಳು ತಾರೆಯ ತಿಂಗಳಲ್ಲಿ ಆಣೆಯ ಕುಡಿ ಊರಾಣೆ (ಸೌಇಇ. ೧೯೩೦, ಕುಂದಾಪುರ. ೩೫೭-೧೩; 1379 ?). [ ಸಂ. ತಾರಾ ]

**ತಾರೆಕಾಯಿ** 'ತಾಱಿಗಾಯ್' ನೋ.

**ತಾರೆಣ್ಣೆ** 'ಟಾರೆಣ್ಣೆ' ನೋ.

**ತಾರೆಮರ** (ನಾ). ಒಂದು ಬಗೆಯ ಮರ; ತಾರಿ: ತಾವರೆ [ತಾರೆ] ಮರದ ಬದಣಿಕೆಯಂ ರೋಹಿಣಿನಕ್ಷತ್ರದಲ್ಲಿ ತಂದು ಮುಂಗೈಗೆ ಕಟ್ಟುವುದು (ಸಕವೈ. ೧೨೦). [ ತಾರೆ₁ (<ತಾಱ್) + ಮರ₁ ]

**ತಾರೆಲೆ** (ನಾ). ಒಂದು ಬಗೆಯ ಜಾನಪದ ಗೀತೆ: ಅತಿಗಭೀರಂ ಕಾವ್ಯಂ ನೀರಸರಱವಂತೇನಿದು ತಾರೆಲೆಯೇ ಬೀದಿವಾಡೆ (ಗಿರಿಕ. ೧-೩೦); ತಪ್ಪಳೆ ಗುಟ್ಟುತ ತಾರೆಲೆವಾಡುತ ಬಪ್ಪ ಗೋವಳರ ಮಧ್ಯದೊಳು ಒಪ್ಪದಿನಾ ಬಲಕೇಶವರೀರ್ವರು ಬರ್ಪ ಪಟ್ಟಣದ ದಾರಿಯೊಳು (ನೇಮಿಸಂ. ೧೭-೧೦೩).
[ ? ]

**ತಾರೇಯ** (ನಾ). ತಾರೆಯ ಮಗ; ಅಂಗದ: ತಾರೇಯನಾ ಪುರುಹೂತ ವೈರಿಯ ಕೂಡೆ ಕಾದುತ ಕಾತರಿಸದೊಡನೊಡನೆ ತಿವಿದನು ಮುಷ್ಟಿಯುದ್ಧದಲಿ (ಕಾಶಿರಾ. ೨೭-೩೯). [ ಸಂ. ]

**ತಾರೇಶ** (ನಾ). ನಕ್ಷತ್ರಗಳ ಒಡೆಯ; ಚಂದ್ರ: ತಾರೇಶಂ ನಿಲೆ ಮೇಷದೊಳ್ . . . ನಿರ್ಧನನೆನಿಕ್ಕುಂ (ಜಾತತಿ. ೨೦-೧); ತಾರೇಶ ತಾರ್ಕ್ಷ್ಯನಂಶುವಿಸಾರಿತಪಕ್ಷಂ ಬರಲ್ ನಭಶ್ಚಂದನ ಧಾತ್ರೀರುಹವಂ ಸುತ್ತಿದ ಕಾಳೋರಗನೋಡುವವೊಲೋಡಿಪೋದುದು ತಿಮಿರಂ (ಜಗವಿ. ೧೭-೧೦೭).
[ ಸಂ. (ತಾರಾ + ಈಶ) ]

**ತಾರೈಸು** 'ತಾರಯಿಸು' ನೋ.

**ತಾರ್ಕಣಸು** 'ತಾರ್ಕಣಿಸು' ನೋ.

**ತಾರ್ಕಣಿಸು**, ತಾರ್ಕಣಸು (ಕ್ರಿ). ಹೋಲಿಸಿ ಸರಿನೋಡು; ಪುಷ್ಟೀಕರಿಸು; ದೃಢಪಡಿಸು: ತರಹರಿಸಿ ತಾರ್ಕಣಿಸಿ ನೆನಹಂ ಹುರಿಗೊಳಿಸಿ (ಸದ್ಗುರು. ೨-೯); ಗ್ರಾಮವನು ತಾರ್ಕಣಿಸಿ ಕೊಟ್ಟು ಯಿ ಹಂನೆರಡು ಹೊಂನನೂ ಆಚಂದ್ರಾರ್ಕಸ್ಥಾಯಿಯಾಗಿ ಪಾಲಿಸಿದೆಉ (ಕಇ. I, ೫೮-೧೮; 1446); ಮಿಕ್ಕವರಂ ತಾರ್ಕಣಿಸಿ ಸಮರಕೇಳಿಗೆ ನೂರ್ಕಡಿಗಡಿದಂ ನೃಪಾಲಕಂ ರಿಪುಬಲವಮಂ (ಶಬ್ದಾನು. ೯೦ ವ್ಯಾಖ್ಯಾ). **ತಾರ್ಕಣಸು:** ಗ್ರಾಮನನು ತಾರ್ಕಣಸಿ ಕೊಟ್ಟು ಸಾನ್ನವನ್ನು ಬರಸಿಕೊಟ್ಟು (ಕಇ. I, ೫೯-೧೫; 1446). [ ತಾರ್ಕಣೆ + – ಇಸು₃ ]

**ತಾರ್ಕಣೆ**, ತಾರಕಣೆ, ತಾರ್ಕಣ್ಯ, ತಾರ್ಕಾಣೆ, ತಾರ್ಕಾಣೆ (ನಾ). ೧. ಸ್ವತಃ ನೋಡುವಿಕೆ; ವೈಯಕ್ತಿಕವಾದ ಪರಿಶೀಲನೆ: (ಕ). ೨. ಪ್ರತ್ಯಕ್ಷ ಪ್ರಮಾಣ; ನಿಶ್ಚಯ; ರುಜುವಾತು; ದೃಢೀಕರಣ: ಹಲವು ಪರಿಯ ಬಯಕೆ ತಾರ್ಕಣೆ[ಪಾಠಾಂ. ಣ್ಣೆ, ಣ್ಯ]ಯಾದಂತೆ (ಅನಕಂ. ೨೦-೮೧); ಈ ಭಾಷೆ ಮನ ತಾರ್ಕಣೆಯಾಗಿ ಹುಸಿಯಲ್ಲ (ಸಿದ್ಧೇಪ. ೭೩-೨೦೦); ಮೃಗಧರನಿಗೆ ಕಮಲಕೆ ವೈರವೆಂದೆಂಬ ಬಗೆ ತಾರ್ಕಣೆಯಾಯಿತು (ಜೀವಂಸಾ. ೧೭-೧೫); ನೆನಸಿಕೊ ನೀಲಕಂಠನ ವಧೂಟಿಯ ಮಾತ ಮನಸಿಗೆ ತಾರ್ಕಣೆಯಾಯ್ತು (ಮೋಹತ. ೨೭-೫೫). ೩. ಒಂದು ವಿಷಯವನ್ನು ಸಾಧಿಸಲು ಕೊಡುವ ದೃಷ್ಟಾಂತ,- ಉದಾಹರಣೆ: ಇದಕೆ ತಾರ್ಕಣೆಯಾವುದೆನೆ ನರಹರಿಯಂದುದುಭವಿಸಿದ ಮಾಸ ತಿಥಿ ಯು (ಕಂನವಿ. ೧-೧೯) [illegible] ಬಳ್ಳಿಯಿಂದ ಎಲ್ಲವೂ ಕೈಗೂಡುತ್ತದೆ ಎನ್ನುತಾರಲ್ಲಾ ಅದಕ್ಕೆ ತಾರ್ಕಣೆಯನ್ನು ಈಗ ನಮ್ಮ ಕಣ್ಣೆದಿರಿಗೆಯೇ ಕಂಡೆವು (ನಗಗ. ೨೦). ಸ್ವಾಮಿಯ ಸೇವೆ ಮಾಡಿದವರಲ್ಲೂ ನಂಬುಗೆ ತೋರಲಿಲ್ಲ. ಈ ದಿನ ತಾರ್ಕಣೆಯಾಯಿತು (ಹಂಗೀತ. ೩೭). ೪. ಹೊಂದಾಣಿಕೆ; ಸಂಯೋಗ: ಮನಮನ ತಾರ್ಕಣೆಯ ಕಂಡು ಅನುಭವಿಸಲು ನೆನಹೇ ಘನವಹುದಲ್ಲದೆ ಅದು ಹವಣದಲ್ಲಿ ನಿಲ್ಲುವುದೇ (ಮಹಾದೇ. ಬ. ೪೪-೧೦೨); ಎನಗೆ ಬೇರೇನಿನ್ನು ಬರಲೀ ವನಕೆ ನಿಮ್ಮಯ ಚಿತ್ತವರಿಯದೆ ಮನಕೆ ಮನ ತಾರ್ಕಣೆ ಗಡೇಸೇಸುಂಟು ಹೇಳುವುದು (ಕೋಗಯ. ೧೫-೧೫); ಅವಳ ಭಾವಜೀವನಕ್ಕೂ ಅವನ ಪಾಶವೀಜೀವನಕ್ಕೂ ಯಾವ ತಾರ್ಕಣೆಯೂ ಇರಲಿಲ್ಲ (ನಟಸಾ. ೬೪೨); ಶ್ಯಾಂಟನ ನಿಲುವಿಗೂ ಇದಕ್ಕೂ ಗಮನೀಯವಾದ ತಾರ್ಕಣೆ ಇದೆ (ತತ್ವಪ್ರಾ. ೨೦೬). **ತಾರಕಣೆ:** ೩. ಅದಕ್ಕೊಂದು ತಾರಕಣೆ ಕೊಡ್ತೀವಿ ಕೇಳಿ(ಹುಟ್ಟಹ.೭೩). **ತಾರ್ಕಣ್ಯ:** ೨.ಬೇರೆ ತಾರ್ಕಣ್ಯಗಳನ್ನು ಕೋರ್ಟಿಗೆ ಒದಗಿಸಿಕೊಡಲು ಸಿದ್ಧನಾಗಿದ್ದೇನೆ (ಮುಸುಗ.

೧೩೪) : ಏನೋ ಒಂದು ಕುಂಟುನೆಪ ಎತ್ತಿ ಬೇರೆ ಹೋಗುತ್ತೀಯೆ ಅಂದುಕೊಂಡೆ. ಆದೀಗ ತಾರ್ಕಣ್ಯಕ್ಕೆ ಬಂತು (ಮಹಾಗ. ೬೭) ; ಓದಿ ಓದಿ ಮರುಳಾದ ಕೂಚುಭಟ್ಟ ಅನ್ನೋ ಗಾದೆ ನಮ್ಮ ಮನೆಯಲ್ಲೇ ತಾರ್ಕಣ್ಯಕ್ಕೆ ಬರಬೇಕೇ (ತುರಾಯಿ. ೬೨). ೪. ಇಂದು ಹೇಳಿದ ಕಾಲಜ್ಞಾನವು ಮುಂದೆ ಜನರಿಗೆ ತಾರ್ಕಣ್ಯವಾಗದಿದ್ದರೆ ಇಂದುಧರನ ಶರಣಕೃತಿಗೆ ಕುಂದು ಬರದಿಹುದೆ (ಕಾಲಸಂ. ೧೮-೭) ; ಮನಕ್ಕೆ ಮನ ತಾರ್ಕಣ್ಯವಾಗದವರ ಸಂಗ ವೇತಟಿ ಸಂಗ (ಅಖಂಡೇ. ೧೨೯-೯೪). **ತಾರ್ಕಾಣೆ :** ೨. ತನ್ನಯ ತಾಯ ನುಡಿ ತಾರ್ಕಾಣೆ[ಪಾಠಾಂ. ಣೆ] ಯಾಯ್ತೆಂದಂಘ್ರಿಗಾನತನಾದನಾ ಹನುಮ (ತೊರರಾ. ೪-೧-೮) ; ಅವಳು ಹೇಳಿದ ಮಾತುಗಳು ಅಕ್ಷರಶಃ ನಿಜವಾದುವುಗಳೆಂದು ತಾರ್ಕಾಣೆಗೆ ಬಂದಿದ್ದಿತು (ಶ್ರೀರಾಯ. ೯೭). **ತಾರ್ಕಾಣೆ :** ೨. ಮೇಲಿನ 'ತಾರ್ಕಾಣೆ' ಉಲ್ಲೇಖಕ್ಕೆ ಕೊಟ್ಟಿರುವ 'ತೊರರಾ' ಪ್ರಯೋಗದ ಪಾಠಾಂತರವನ್ನು ನೋಡಿ. ೫. ಗಮನ ; ಲಕ್ಷ್ಯ : ಲಿಂಗಣ್ಣ ಕುಮುದೆಗೆ ಸಂತೋಷಕರವಾದ ವರ್ತಮಾನವನ್ನೇನೋ ಹೇಳಿದ್ದ. ಆದರೆ ಅದು ಅವಳ ತಾರ್ಕಾಣೆಗೆ ಬರಲಿಲ್ಲ (ಮಧುಸಂ. ೧೦೨). [ ದೇ.॥ ತಮಿ. ತಾಕ್ಕರ್ಣಿ=ರುಜುವಾತುಪಡಿಸು; ತುಳು. ತಾರ್ಕಣೆ; ತೆಲು. ತಾರ್ಕಾಣ, ತಾರಕಾಣ ]

**ತಾರ್ಕಣೆಗಾಣ್** (ಕ್ರಿ). ಸ್ವತಃ ಪರಿಶೀಲಿಸಿ ಕಾಣು ; ಪ್ರತ್ಯಕ್ಷವಾಗಿ ನೋಡು : ಹಲವು ಕಾಲದ ಅಗಲಿಕೆ ತಾರ್ಕಣೆಗಂಡಂತವ್ವಾ (ಸರ್ವವ. ೭೯-೩೭೭). [ ತಾರ್ಕಣೆ + ಕಾಣ್ ]

**ತಾರ್ಕಣೆಗೊಡು** (ಕ್ರಿ). ಪ್ರತ್ಯಕ್ಷ ಪ್ರಮಾಣವನ್ನು ತೋರಿಸು : ಮೃಡನೊಡನೆ ತಾರ್ಕಣೆಗೊಡುತ್ತ ಚೋಳಂ ತೋಱೆ ಕಂಡು ಚನ್ನಯ್ಯನಭವಂಗೆ ಕಡುಮುಳಿವುತಂ (ಚನ್ನರ. ೮೩-೨೩). [ ತಾರ್ಕಣೆ + ಕೊಡು$_1$ ]

**ತಾರ್ಕಣ್ಯ** 'ತಾರ್ಕಣೆ' ನೋ.

**ತಾರ್ಕಾಣ್** (ಕ್ರಿ). ತಾಳೆನೋಡು ; ಹೊಂದಾಣಿಕೆಯನ್ನು ಕಾಣು : ಅವಧಿಜ್ಞಾನಿಗಳ ಪೇಟ್ಕೆಯಿಂ ತಾರ್ಕಂಡುದನಿಂತೆಂದು ಪೇಟ್ದಂ (ವರ್ಧಪು. ೩-೭೦ ವ). [ <ತಾರ್ಕಣೆ + ಕಾಣ್ ]

**ತಾರ್ಕಾಣಿ** 'ತಾರ್ಕಣೆ' ನೋ.

**ತಾರ್ಕಾಣೆ** 'ತಾರ್ಕಣೆ' ನೋ.

**ತಾರ್ಕಿಕ** (ಗು). ೧. ತರ್ಕಶಾಸ್ತ್ರಕ್ಕೆ ಸಂಬಂಧಿಸಿದ : ಹಯಶಾಸ್ತ್ರಾದ್ವೈತ ಗಾಂಧರ್ವ ತಾರ್ಕಿಕವಿಂದ್ರಾಗಮ ವೈದ್ಯ ವಾದ್ಯ ಶಕುನೋದ್ಯದ್‌ಹೃದ್ಯ ವಿದ್ಯಾಕದಂಬಕನುಂ ಚಂದ್ರಕವೀಂದ್ರಂ (ಮದತಿ. ೧-೫೧). (ನಾ). ೨. ತರ್ಕಶಾಸ್ತ್ರವನ್ನು ತಿಳಿದವನು ; ತರ್ಕಶಾಸ್ತ್ರಜ್ಞ : "ಮೇಲಱಿದು ತರ್ಕಿಪಂ ವಾದಿ ತಾರ್ಕಿಕನಕ್ಕು" (ಮಂಗರಾ. ೧೦೭-೦೭); ತಾರ್ಕಿಕರೆರ್ದೆಗೊಂಡುದುಪನ್ಯಾಸಮಾ ಸಭಾಮಂಡಳದೊಳ್ (ಶಾಂತಿಪು. ೮-೧೪೯) : ತಾರ್ಕಿಕರ ಕಂಡು ಆಡುವೆ ಹಾಡುವೆ ಸಹಜಗುಣವೆನ್ನಲಿಲ್ಲಯ್ಯಾ (ಬಸವ. ೨೮೭); ಜರಿಜರಿದು ಕರಗುತ್ತ ಬೆಂದುದಾಗಳೆ ನೆರೆದ ತಾರ್ಕಿಕವೃಂದವುಂ (ಬಸಪು. ೫೪-೮೦) ; ಸರಸಕವಿಗಳು ತಾರ್ಕಿಕರು ವರಭರತನಿಪುಣರು ಗಾಯಕರು . . . ರಂಜಿಸಿತು (ಕುವ್ಯಾಉ. ೨-೨೭) ; ಇಂತಿರಲು ವಾದದಲಿ, ತಾರ್ಕಿಕರ ಮೋದದಲಿ . . . ಹೊತ್ತು ಕಳೆಯುವುದೇಕೆ (ಪಾಂಚಜ. ೪೪-೧೪) . ೩. ತರ್ಕಬದ್ಧವಾದಂದು : ಈ ರೀತಿಯ ತೀರ್ಮಾನ ತಾರ್ಕಿಕವಾಗಿ ಕಂಡುಬಂದರೂ ತಪ್ಪಾಗಿರುವುದು ಸ್ಪಷ್ಟಪಡುತ್ತದೆ (ಶಿಕ್ಷದ. ೫೪೨). [ ಸಂ. ]

**ತಾರ್ಕಿಕಚಕ್ರವರ್ತಿ** (ನಾ). ತಾರ್ಕಿಕರಲ್ಲಿ ಅಗ್ರಗಣ್ಯ, – ಶ್ರೇಷ್ಠ : ಆತ್ರೇಯ ಗೋತ್ರಪವಿತ್ರಚರ್ಚ್ಚಿತುದ್ರ್ದಸಪ್ರಮಾಣಸಿದ್ಧಾನ್ತಬ್ಯಾಖ್ಯಾತ ತ್ರ್ಯಾರ್ಕ್ಕಿಕ ಚಕ್ರವರ್ತ್ತಿ (ಸೌಇಇ. VI, ೫೭೦-೨೩ ; 1077). [ ತಾರ್ಕಿಕ + ಚಕ್ರವರ್ತಿ ]

**ತಾರ್ಕಿಕಶಾಸ್ತ್ರ** (ನಾ). = ತರ್ಕಶಾಸ್ತ್ರ : ಕಡಿದಾಡಿದರೆ ಫಲವೇನು ತಾರ್ಕಿಕಶಾಸ್ತ್ರಯುಕ್ತಿಯಲಿ (ಗಗತಾ. ೧೨-೮೭). [ ತಾರ್ಕಿಕ + ಶಾಸ್ತ್ರ ]

**ತಾರ್ಕಿಗ** (ನಾ). = ತಾರ್ಕಿಕ ೨ : ಜಟಾಧರ ದ್ವಿಜ ದಿಗಂಬರ ತಾರ್ಕಿಗ × ದಿಗಳ್ (ಸೌಇಇ. XX, ೦೦೧-೩೦ ; 1129). [ <ಸಂ. ತಾರ್ಕಿಕ ]

**ತಾರ್ಕ್ಷ್ಯ** (ನಾ). ೧. ಗರುಡ ; ವೈನತೇಯ : "ವಿಹಂಗರಾಜಃ, ಗರುಡಃ, ಗರುತ್ಮಾನ್, ತಾರ್ಕ್ಷ್ಯಃ . . . ಕಶ್ಯಪನಂದನಃ ಈ–೧೦ ಗರುಡನ ಪೆಸರ್" (ಹಲಾಯು.೭-೩೧) : ಪುಂಡರೀಕಾಕ್ಷಂ ತಾರ್ಕ್ಷ್ಯನಂ ಸ್ಮರಿಯಿಸೆ . . . ಬಂದಂ ವಿಹಂಗಾಧಿಪಂ (ಜಗವಿ. ೧೩-೩೭ ವ) ; ಅಕ್ಷಿಶ್ರುತಿಯಂ ಕಂಡ ತಾರ್ಕ್ಷ್ಯನಂತೆ ರೂಕ್ಷಭಾವಮನಪ್ಪುಕೆಯ್ದಂ (ಚಂದ್ರಪು. ೫-೪ ವ); ತಾರ್ಕ್ಷ್ಯನ ಸೆಜ್ಜೆಯೊಳಗಿಹ ದಂದಶೂಕನನರ್ಚಿಸುವರೊಲಿದು (ಕುವ್ಯಾಉ. ೪-೨೦). ೨. (ಉತ್ತಮ ಜಾತಿಯ) ಕುದುರೆ, – ಅಶ್ವ : "ಹರಿ ತುರಗಂ . . . ಹಯಂ ತಾರ್ಕ್ಷ್ಯಂ . . . ರಥ್ಯಮೆನೆ ಕುದುರೆಯಕ್ಕು" (ಮಂಗರಾ. ೮೧-೧೨). [ ಸಂ. ]

**ತಾರ್ಕ್ಷ್ಯಧ್ವಜ** (ನಾ). ಧ್ವಜದಲ್ಲಿ ಗರುಡನ ಚಿಹ್ನೆಯುಳ್ಳವನು; ವಿಷ್ಣು. [ ತಾರ್ಕ್ಷ್ಯ + ಧ್ವಜ ]

**ತಾರ್ಕ್ಷ್ಯರಥ** (ನಾ). ೧. ಗರುಡನನ್ನು ವಾಹನವನ್ನಾಗಿ ಉಳ್ಳವನು ; ವಿಷ್ಣು. ೨. (ಉತ್ತಮವಾದ) ಕುದುರೆಗಳನ್ನು ತನ್ನ ರಥಕ್ಕೆ ಹೂಡಿಕೊಂಡವನು. ೧, ೨ : ಬುಧಲೋಕಾಶ್ರಯನೆಂಬ ತಾರ್ಕ್ಷ್ಯರಥನೆಂಬಬ್ಜಾಯತಾಕ್ಷಂ ದಲೆಂಬ . . . ಪೆರ್ಮೆಯಿಂ ನೋಡೆ (ಎಕ V. ಅರಸೀ. ೩೮-೭ ; ಸು. 1200). [ ತಾರ್ಕ್ಷ್ಯ + ರಥ ]

**ತಾರ್ಕ್ಷ್ಯಶೈಲ** (ನಾ). (ವಿಷವನ್ನು ಪರಿಹಾರ ಮಾಡುವ) ಒಂದು ಬಗೆಯ ಅಂಜನ,–ರಸಾಂಜನ. [ ಸಂ. ]

**ತಾರ್ಕ್ಷ್ಯಸ್ಥ** (ನಾ). ಗರುಡನ ಮೇಲೆ ಕುಳಿತವನು ; ವಿಷ್ಣು : ಶಂಖಚಕ್ರೋರುತರಗದಾಪಾಣಿಯುಂ ತಾರ್ಕ್ಷ್ಯಸ್ಥನಂ ಏನೆಂದಪೆಂ ಪೀತವಾಸನಂ ಶಾಮನಂ (ಪದ್ಮರಾ. ೧೦-೧೨). [ ಸಂ. ]

**ತಾರ್ಗೂಡು,** ತಾರಂಗೂಡು (ಕ್ರಿ). ಒಟ್ಟುಗೂಡು ; ಸಂದಣಿಸು : ಕಾರ್ಗಾಲದಭ್ರಮಾಲೆಗಳಮರಸರಣಿಯೊಳ್ತಾರ್ಗೂಡುತೆತ್ತಲುಂ ನಿಬಿಡಮಪ್ಪಂದದಿಂ (ಜೈಮಿಭಾ. ೩-೪೦). **ತಾರುಗೂಡು :** ಉತ್ತರದ ಸಾಗರಂ ದಕ್ಷಿಣದ ವನನಿಧಿಗಳೊಂದೆಡೆಯ ತಾರುಗೂಡುವ ತೆರದೆ (ಘೋರಾಸು. ೭). [ ತಾಱು$_3$ + ಕೂಡು$_1$ ]

**ತಾರ್ಗೊಡು** (ಕ್ರಿ). ಶಕುನವನ್ನು ಸೂಚಿಸು : ಎಡದೊಳ್ಪಿಂಗಲಿ ಮಟ್ಟು ಮೇಲ್ವಱಿದುದಿಂಬಿಂದೊಂದೆ ತಾರ್ಗೊಟ್ಟು ಪೂಗಿಡುವಂ ಸಾರ್ದುದು (ಅನಂಪು. ೧೩-೭೩). [ ತಾಱ್$_2$ + ಕೊಡು$_1$ ]

**ತಾರ್ಗೊಳ್** (ಕ್ರಿ). ಗುಂಪುಗೂಡು ; ಜೊತೆಗೂಡು ; ಒಟ್ಟಾಗು : ಆರ್ಗೆ ಬೇಡಾ ಹೆಣ್ಣು ಯುವರಾಜಗಿರಲೆಂದು ತಾರ್ಗೊಂಡು ತಾವೆಣಿಸಿದರು (ಭರಚ. ೫೭-೧೩) ; ಸ್ವರ್ಗಪಥವ ಬಹುಪ್ರಜೆ ಗಳಿಸಿತು ಕೂಡೆ ತಾರ್ಗೊಂಡು ನೃಪನ ಕೀರ್ತಿಸಿತು (ಭರಚ. ೭೩-೧೩೧). [ ತಾಱು$_3$ + ಕೊಳ್$_1$ ]

**ತಾರ್ಣ** (ಗು). ಹುಲ್ಲಿನ ; ತೃಣದ : ಪೆರ್ಮುಲಿಗಳ್ ಪೊರಳ್ದು ಪೋದುದಂ ಪಿಸುಣ್ಪೇಟ್ವ ಜೀರ್ಣ ತಾರ್ಣ ಸ್ಥಳಿಗಳುಂ (ಚಂದ್ರಪು. ೫-೭೫ ವ). [ ಸಂ. ]

**ತಾರ್ತಮ್ಯ**(ನಾ).=ತಾರತಮ್ಯ : ತಾರ್ತಮ್ಯ ಸರಸೋಕ್ತಿ ವಿರಸ ಸಲ್ಲಾಪದಿಂ (ಪರಬು. ೧೨-೨೫). [ <ಸಂ. ತಾರತಮ್ಯ ]

**ತಾಮುರ್ಟು$_1$** (ಕ್ರಿ). ಬಿಸಿಯಾಗಿ ತಾಕು; ಉಷ್ಣವಾಗಿ ತಾಗು: ಕೊಳನಂ ಪುಗಿಸೆ ಮೆಯ್ಯ ಬೆಂಕಿಯುಂ ಚುಯ್ಯೆಂದು ನೊರೆಗಟ್ಟಿ ಬಿಸಿಯ ತೆರೆ ತಾಮುರ್ಟಿ [ಪಾಠಾಂ. ಕಾಯ್ಪು ಮುಟ್ಟೆ, ತನುಮುಟ್ಟೆ] ಸೆಕೆಯುಸಿರ್ ಭುಗಿಲನೊಗೆದುದು (ಗಿರಿಕ. ೪-೧೧೯ ವ) ; ಬಿಸಿಯ ತೆರೆ ತಾಮುರ್ಟೆ ನೊರೆಗಟ್ಟಿ ಕುಕ್ಕುಳಂಗುದಿವ ಬಿಸುನೀರೊಳ್ ನಿಲಲಾಱದೆ(ಗಿರಿಕ. ೯-೨೭ ವ). [ ತಾಱು$_1$ + ಮುಟ್ಟು$_1$ ]

**ತಾರ್ಮುಟ್ಟು₂** (ನಾ). ೧. ಸೋಂಕು ; ಸ್ಪರ್ಶ : ಕಟ್ಟಿದಿರೊಳ್ ತಾರ್ಮುಟ್ಟಾಗೆ . . . ಬರ್ಪ ಮನೆಯಾಣ್ಮನ ಸರಮಂ ಭೋಂಕೆನೆ ಸವಿಾಪದೊಳ್ ಕೇಳ್ದು (ಪಂಚತಂ. ೭೪-೧೧) ; ತೀಡಿತ್ತೊಂದೊಂದಱಿಂ ತಣ್ಗೆಱೆದುಱುಗಲ ತಾರ್ಮುಟ್ಟಿನೊಳ್ ಸಂದು ಸಂದೋಲಾಡುತ್ತುಂ . . . ಮಾತರಿಶ್ವಂ (ಲೀಲಾವ. ೬-೭೭) ; ಬಂಬಲ್ದೆರೆಯ ತಾರ್ಮುಟ್ಟಿಂ ಪುಟ್ಟಿದ ತಣ್ಗಾಳಿಯ ಸೋಂಕಿಂ (ಮಲ್ಲಿಪು. ೩-೧೦೦ ವ); ಬಾಳೆಯೆಲೆಯ ತಾಳ ವೃಂತದ ತಣ್ಣೆಲರ ತಾರ್ಮುಟ್ಟಿನೊಳಳವಿದಪ್ಪಿದಾಕುಳತೆಯಿಂ . . . ಕಳವಳಿಸಿ (ಚಂದ್ರಪು. ೫-೦೪ ವ); ಬೀಸುವ ಚೆಂದಳಿರ ತಣ್ಣೆಲರ ತಾರ್ಮುಟ್ಟಿನೊಳೆಂತಾನುಂ ತೆಪ್ಪತ್ರಳಾಗಿ (ಚಂದ್ರಭ್ಯ. ೫-೧೭ ವ). ೨. ಎದುರು ; ಸಮಕ್ಷ; ಮುಂಭಾಗ: ಅವು ತಾರ್ಮುಟ್ಟಿನೊಳೊರ್ಮೆ ಕಂಡು ಕಿಡಿಯಂ ಕೆಂಡಂಗಳಂ ಸೂಸೆ (ಅರ್ಧನೇ. ೪-೧೨೦) ; ವಿಕೃತವದನನಾಭೀಳರಕ್ತೇಕ್ಷಣಂ ಪೆರ್ಬುಲಿ ತಾರ್ಮುಟ್ಟಾದುದಂ [ಪಾಠಾಂ. ತಾಂ ಮುಂದಾದುದಂ] ಸಂಕಟದ ಸರಣಿಯೊಳ್ ಕಂಡು (ಸೂಕ್ತಿಸು. ೩-೬೨) ; ತಾಮುಮಾ ಕ್ರಮದೊಳೆ ಬರುತ್ತುಂ ತತ್ಪದಾರ್ಥದೊಳು ತಾರ್ಮುಟ್ಟಾಗೆ ಮರಳಲೆಡೆಯಿಲ್ಲದೆ ಮನಂಗುಂದೆ (ಮಹಾನೇ. ೪-೧೩೩ ವ). [ <ತರ್ + ಮುಟ್ಟು₂ ]

**ತಾರ್ಮುಟ್ಟು₃** (ನಾ). ಗಂಟು; ಸಂದಣಿ: ಸೋದರಿಯರು ಕೂರ್ಮೆಯಿಂ ಕಂಡರು ರಾಮನ ಪೆಣ್ಗಳ ತಾ[ಪಾಠಾಂ. ಕಾ]ರ್ಮುಟ್ಟಿನೊಳಗೆಯ್ತಂದು (ಕುರಾಸಾಂ. ೪೦-೮೭). [ ತಾಱು₃ + ಮುಟ್ಟು₂ ]

**ತಾರ್ಯ** (ಗು). ೧. ದಾಟಬಹುದಾದ. ೨. ಜಯಿಸಬಹುದಾದ. [ ಸಂ. ]

**ತಾರ್ವರಿ** (ಕ್ರಿ). ಶಕುನವನ್ನು ಸೂಚಿಸಿ ಹಾರು : ಪ(ಱ)ರಗಲ್ ಕೇಳ್ ತ್ವರಿತದೆ ತಾರ್ವರಿಯಲ್ ಪೋಪಾಗ(ಪಂದು)ವಾಯಸಂ ಯೆಡದೆಸೆಯೊಳ್ ಸರವಿಾಗೆ ಪೋಗೆ ಬೆಳೆಗುರ್ವರೆಯ(ಯಿ)ಂ ಬರ್ಪಲ್ಲಿ ಬಲನೊಳಧಿಕಂ ಬೆಳೆಗುಂ (ಜಟ್ಟಮ. ೯-೩೫). [ ತಾಱ್₂ + ಪರಿ₂ ]

**ತಾಲ**, ತಾಳ₂ (ನಾ). ೧. ಅಂಗೈ ; ಕರತಳ. 'ತಾಲಸಂಪುಟ' ಪರಾ. ೨. (ಹೆಬ್ಬೆರಳು ಮತ್ತು ನಡುಂಬೆರಳುಗಳಿಂದ ಅಳೆಯಲಾಗುವ) ಒಂದು ಚಿಕ್ಕ ಅಳತೆ,– ಪ್ರಮಾಣ ; ಗೇಣು : ಹನ್ನೆರಡು 'ಅಂಗುಲ'ಗಳನ್ನು ಹಾಕಿದರೆ ಒಂದು 'ತಾಲ' (ಭಾರದ. ೫೦೭). ೩. ಕೈತಟ್ಟುವಿಕೆ : ಚಪ್ಪಾಳೆ. ೪. ತಾಪಾಳ ; ಅಗುಂಳಿ. ೫. ಹಳದಿಯ ಬಣ್ಣದ ಗಂಧಕ ಮಿಶ್ರಿತವಾದ ಒಂದು ಬಗೆಯ ಖನಿಜ : (Arsenic. ಪಾರಿನಿ. ೬). ೬.ಒಂದು ಬಗೆಯ ಮರ; ತಾಳೆ; ಪನೆ: "ತೃಣರಾಜಃ, ತಲಃ, ತಾಲಃ– ಈ ೩ ತಾಱೆ" (ಹಲಾಯು. ೩೨-೩೯); ಅಲದಿಂ ಬೇಲದಿಂ ಸಾಲದಿಂ ತಾಲದಿಂ ಜಾಲದಿಂದಾ ಕಾಡೆಸೆದುದು (ನಂದಿಮಾ. ೧೩-೧೨) ; ತಮಾಲ ತಾಲ ಬಂಧುರ ಪನಸಾಮ್ರಮಾಧವಿ (ಶ್ರೀಮಹಾ. ೧-೪೭) ; ಮಧೂಕ ತಾಲ ತಕ್ಕೋಲ . . . ಸುಮನಸಭರಿತವಾಗಿ ಶೋಭಿಸುತ್ತಲಿತ್ತು (ಪುರಾವಿ. ೯೭). ೭. ಕಂಚು ಮುಂತಾದ ಲೋಹದಿಂದ ಮಾಡಿದ ಚಪ್ಪಟೆಯಾದ ಜತೆವಾದ್ಯ. ೮. [ಸಂಗೀತ] ಹಾಡುವಾಗ ಅಥವಾ ವಾದ್ಯವನ್ನು ಬಾರಿಸುವಾಗ ನಿಯತಕಾಲಕ್ಕೊಮ್ಮೆ ಕಾಲವನ್ನು ಅಳೆಯುವುದಕ್ಕಾಗಿ, ಕೈಗಳಿಂದ ಹಾಕುವ ಪೆಟ್ಟು,– ಏಟು : ಥಕ ಥೈಥೈ ಥಿಕಿ ತಟತೋಂ ಇದೇ ತಾಲ ಮಳೆಯದೋ (ಅರಳು. ೪೦೫-೯). ೯. [ಛಂದ] ಛಂದಸ್ಸಿನ ಒಂದು ಪ್ರಭೇದ. **ತಾಳ₂ :** ೨. "ತಾಳಮೆನೆ ಗೇಣನಿಕ್ಕುಂ" (ಮಂಗರಾ. ೯೬-೧೧) ; ಶಾಸ್ತ್ರ ರೀತ್ಯಾ ೧೧೮ ಅಂಗುಲವೆಂದರೂ ಒಂದೇ ಅಥವಾ ಒಂಬತ್ತು 'ತಾಳ'ವೆಂದರೂ ಒಂದೇ (ಭಾರದ. ೫೦೭). ೪. ಬಾಗಿಲ ತಾಳ ಭದ್ರವಾಗಿ ಹಾಕಿದೆಯೆ (ಮಲಿಮ. ೨೨೭). ೬. ಗುಗ್ಗುಳ ಹೊನ್ನೆ ಚೆನ್ನಗಿ ತಾಳ ಹಿಂತಾಳ (ತೊರರಾ. ೩-೧-೨೮) ; ಸಾಳ ರಸಾಳ ತಾಳತಿಲಕಾಮಳ ತಿಪ್ಪಲ (ಯಾದವ. ೧-೩೫). ೭. "ತಾಳಂ ವಾದ್ಯೋಪಕರಣವುಂ" (ಕಾಶಕೈ. ೨೬೦) ; ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶ ವೀಣಾ ಸ್ವರಂಗಳೆಸೆಯೆ (ವಡ್ಡಾರಾ. ೮೩-೨೮); ಕರಡೆಯ ತಾಳದ ಪಟಹದ ಮದ್ದಳೆಯ ಮಿಕ್ಕಾ ವಾದ್ಯಮುಮೊಳವೇ (ಗದಾಯು. ೩-೪೯) ; ಹಲಾಯುಧನು ತಾಳವಂ ಹೊಯ್ದನು (ಬಸವು. ೩೭-೪೪) ; ಅಗಸವನು ಅವನಿಯಂ ಕಿಳ್ತು ತಾಳವನೊತ್ತುವರ್ (ಜಬಪು. ೪೮-೪೩) ; ತಾಳ್ಯಾಕ ತಂತ್ಯಾಕ ರಾಗದ ಚಿಂತ್ಯಾಕ (ಗರಿ. ೧೨೨-೬). ೮. ಭೇತಾಳಂಗಳ್ . . , ತಾಳಲಯಕ್ರಮದೆ ಕುಣಿಯೆ ಭಯಮಯನಾದಂ (ಕವಿರಾ. ೩-೧೯೩); ತಾಳದ ಲಯಮಂ ನಿಱಿನೀಳಾಳಕ ಹಾರದ ಪೊದಟ್ಟು ಮುತ್ತಿಂಬವು ಮುಮ್ಮೋಳಿಸಿ ಕೈಕೊಂಡುವು ಲುಳಿತಾಳಕಿ ಕೈಕೊಂಡಳೆಂಬುದೊಂದಚ್ಚರಿಯೆ (ಆದಿಪು. ೯-೨೪) ; ತಾಳ ಪಶ್ಯಮನೂನಪತ್ರಂ ಪೊಟ್ಟವಣಿ ಸಾರಣಮಲರ್ದಿರಲು (ಬಸವು. ೧೯-೮): ಪಲತೆಱನ ತಾಳಗಳ ಜತಿಗಳನಳವಡಿಸಿ . . . ನುಡಿಸೆ (ಸಾಳ್ವಭಾ. ೧೮-೫೬): ಮೇಳ ಕೂಡಿಸದೆ ತಾಳ ಬಡಿದ ಹಾಗೆ (ಗಾದೆ). ೯. 'ತಾಳವೃತ್ತ' ಪರಾ. ೧೦. ಕಾಲದ ಒಂದು ಪ್ರಮಾಣ : "ಕ್ರಿಯಾಪ್ರಮಾಣವುಂ ತಾಳಮೆಂಬುದು" (ಹಲಾಯು ೧೭-೪೪) ; "ಹೊತ್ತು ಕ್ರಿಯಾಪ್ರಮಾಣಂ ತಾಳಮೆನಿಕು" (ಮಂಗರಾ. ೨೪-೬).

**ತಾಳಕ್ಕೆ ಸರಿಯಾಗಿ ಕುಣಿ**=ಹೇಳಿದಂತೆ ಕೇಳು: ಅವನು ನಿನಗೆ ಗೊತ್ತೇ ಇದೆ, ನಿನ್ನ ತಾಳಕ್ಕೆ ಸರಿಯಾಗಿ ಕುಣಿಯುತ್ತಾನೆ (ದ್ರೋಣಕನ್ಯ. ೨೨೪).

**ತಾಳದವಳ್**=ತಾಳವೆಂಬ ವಾದ್ಯವನ್ನು ಹಿಡಿದಿರುವವಳು: ತಾಳದವಳ್ ನೀನೀ ಘನತಾಳಂಗಳನೆಂತು ಪೊತ್ತು ತಲ್ಲಟಗೊಂಬೈ (ಚಳವಿ. ೬-೧೩೦). [ ಸಂ. ]

**ತಾಲಕ**, ತಾಳಕ (ನಾ). ೧. ಬಿಚ್ಚೋಲೆ ; ಕರ್ಣಪತ್ರ: (ಕ). ೨. ಅರಿದಾಳ; ಹರಿತಾಲ; **ತಾಳಕ:** ೧. ತಾಳಕಃ, ತಾಳಪತ್ರಂ (ಕರ್ಣಪತ್ರಂ) –ಈ ೨ ಕಿವಿಯೋಲೆ" (ಹಲಾಯು. ೯೦-೪೦೨) : "ತಾಳಕಂ ತಾಳಪತ್ರಂ ಕರ್ಣದೋಲೆ" (ಮಂಗರಾ. ೯೯-೨೩). ೨. ತಾಳಕದ ಸತ್ವವನು ಮೇಳಯಿಸಿ ರಸದೊಳಗೆ (ಸರ್ವಜ್ಞ. ೧೯೭೩) ; ತಾಳಕ ಮೂರು ವರಹ ತೂಕ, ಕಲ್ಲ ಸುಣ್ಣ ನಾಲ್ಕು ವರಹ ತೂಕ . . . ಸಣ್ಣನಾಗಿ ಅರೆದು (ಸಕಪ್ವ. ೬೩). ೩. ಒಂದು ಬಗೆಯ ಮರ ; ತಾಳೆ ; ಪನೆ : "ಖರತಳಂ– ತಾಳಕ" (ಓಷಧಿ. ೪೩) ; ತಾಳಕದ ಹಣ್ಣಂ ಮೊಲೆಹಾಲಲ್ಲಿ ತೇದು ನಸ್ಯ ಮಾಡೆ ಅರೆದಲೆಬೇನೆ ಮಾಣ್ಗುಂ (ವಿವ್ಯವಿ. ೬೨) ; ಹೇಮಮಾಕ್ಷಿಕ, ತಾಳಕ . . . ಪಾದರಸ ಇವಿಷ್ಟನು ಸಮಾಂಶವಾಗಿ ಎಮ್ಮೆಯ ಹಾಲಿಂದ ಮರ್ದಿಸಿ ಏಳುದಿನ ಮುಖಕ್ಕೆ ಲೇಪವಂ ಮಾಡಲು ಮುಖದ ಕಪ್ಪು ತಿಳಿವದು (ವೃದ್ಯಸಾ. II, ೧೪೭). [ ಸಂ. ]

**ತಾಲತರು**, ತಾಳತರು (ನಾ). ತಾಳೆಯ ಮರ : ಪಂಪಾಸರಸ್ತಟದಿ ಬಲ್ಪೆಳೆದ ತಾಲತರುವೊಂದೊಂದುಮವನೊಂದೆ ಬಾಣದಿಂ ಜಜ್ಜರಿತವಾಗಿ ಕೆಡೆವುವು (ಶ್ರೀರಾಮಾ. ೨೯೭-೩೩೫) ; ಉನ್ನತ ತಾಲತರುಗಳಿಂದಲೂ ಬಹುವಿಧ ವೃಕ್ಷ ಸಂಪತ್ತಿನಿಂದಲೂ . . . ಅಲಂಕೃತವಾಗಿದ್ದ ಆ ಸೌಧ ತುಂಬ ರಮಣೀಯವಾಗಿತ್ತು (ಪುನರು. ೨೦೦). **ತಾಳತರು :** ತಾಳತರು ವಿತತಿಯೊಳ್ ಬೇತಾಳಂಗಳ್ಮೊಱೆದು ತೆಱೆದು ಬಾಯ್ಗಳಂ (ಕವಿರಾ. ೩-೧೯೩) ; ತಾಳತರುವನು ಮುಱಿದು ಸಮರಾಭೀಳ ದುಂದುಭಿಯಟ್ಟೆಯನು ತುದಿಗಾಲಲೊದೆದು (ತೊರರಾ. ೪-೨ ಸೂಚನೆ). [ ತಾಲ + ತರು₂ ]

**ತಾಲಧ್ವಜ**, ತಾಳಧ್ವಜ (ನಾ). ೧. ತಾಳೆಯ ಮರದ ಚಿಹ್ನೆಯನ್ನು ಬಾವುಟದಲ್ಲಿ ಉಳ್ಳವನು ; ಬಲರಾಮ : "ಬಲದೇವಃ . . . ತಾಲಧ್ವಜಃ, ಏಕಕುಂಡಲಃ . . . ಹಲಾಯುಧಃ – ಈ ೧೮ ಬಲದೇವನ ಪೆಸರ್" (ಹಲಾಯು. ೬-೨೯) ; ತಾಲಧ್ವಜಂಗೆ ದಿವ್ಯವಿನೀಲಾಂಬರಮೇಕಕುಂಡಲಂ ಬಂದಪುದಾ ಶೈಲಾಗ್ರದೊಳಂತವಱಿಂ ನೀಲಾಂಬರನೇಕಕುಂಡಲಂ ತಾನಕ್ಕುಂ (ಜಗವಿ. ೮-೦೭). **ತಾಳಧ್ವಜ:** ೧. "ತಾಳಧ್ವಜಂ ರಾಮನೆನಲು ಬಲನಕ್ಕು"

(ಮಂಗರಾ. ೭-೨೦). ೨. ಭೀಷ್ಮ : ವಿಕ್ರಮಾರ್ಜುನನ ಭುಜಬಲಮುಮಂ ಕಂಡು ಕನಕತಾಳಧ್ವಜಂಗೆ ಪನ್ನಗಧ್ವಜನಿಂತೆಂದಂ (ಪಂಪಭಾ. ೧೧-೧೩ ವ): ಕನಕತಾಳಧ್ವಜನುಂ ದೇವವ್ರತಿಯುಂ . . . ಆಹವಭೀಷ್ಮನುಮೆನಿಸಿದ ಭೀಷ್ಮನ ಶರಶಯನದೊಳಂ . . . ಸುಯೋಧನಂ ಚಿಂತಾಕ್ರಾಂತನಾಗಿ (ಗದಾಯು. ೨-೧೦ ವ). [ ತಾಲ + ಧ್ವಜ ]

**ತಾಲನಂದನ** (ನಾ). ತಾಳೆಮರಗಳ ಗುಂಪು, – ತೋಪು : ತೀರ ಭಾಸುರ ತರ ತಾಲ[ಪಾಠಾಂ. ಳ]ನಂದನದಲಂಪು ಪುಳಿಲ್ಗಳಡರ್ಪು ಚೆಲ್ವ ಬಿತ್ತರಿಸೆ (ಶಬಶಂ. ೧-೩೪). [ ತಾಲ + ನಂದನ ]

**ತಾಲಪತ್ರ,** ತಾಳಪತ್ರ (ನಾ). ೧. ತಾಳೆಯ ಮರದ ಎಲೆ, – ಪತ್ರ. ೨. ಕಿವಿಯಲ್ಲಿ ಆಭರಣದಂತೆ ಧರಿಸುವ ತಾಳೆಗರಿಯ ಸುರುಳಿ; ಬಿಚ್ಚೋಲೆ. ೩. (ಬರೆಯಲು ಉಪಯೋಗಿಸುವ) ತಾಳೆಯ ಮರದ ಎಲೆ,– ಓಲೆಯ ಗರಿ ; ತಾಡೋಲೆ. **ತಾಳಪತ್ರ : ೨.** "ತಾಳಕಃ, ತಾಳಪತ್ರಂ (ಕರ್ಣಪತ್ರಂ)—ಈ ೨ ಕಿವಿಯೋಲೆ" (ಹಲಾಯು. ೯೧-೪೦೨): "ತಾಳಕಂ ತಾಳಪತ್ರಂ ಕರ್ಣದೋಲೆ" (ಮಂಗರಾ. ೯೯-೨೩). ೩. ತಾಳಪತ್ರ ಗಳಱುವವೇ ಲಿಪಿಯ (ಜೀವಂಧ. ೧-೨೦); ಕನ್ನಡನಾಡಿಗೆ ಕಾಗದ ಬರುವುದಕ್ಕೆ ಮುಂಚೆ ತಾಳಪತ್ರವೇ ಲೇಖ್ಯವಸ್ತು (ಕನ್ನಸಂ. ೪೪). [ ತಾಲ + ಪತ್ರ ]

**ತಾಲಪರ್ಣಿ** (ನಾ). ಒಂದು ಬಗೆಯ ಪರಿಮಳ ದ್ರವ್ಯ : "ತಾಲಪರ್ಣೀ . . . ಗಂಧಿನೀ – ಜಿ ಮುಲೆಯೆಂಬುವ ಗ್ರಂಥಿಕ ಜಿನಸು" (ಸಿದ್ಧಾಂತಿ. ೦೨೩). [ ಸಂ. ತಾಲಪರ್ಣೀ ]

**ತಾಲಪಾತ** (ನಾ). ೧. ತಾಲವೃಕ್ಷದ ಬೀಳುವಿಕೆ,– ಪತನ : (೬). ೨. ತಾಳಹಾಕುವಿಕೆ ; ತಾಳಬೀಳುವಿಕೆ. ೧, ೨: ಮಂತ್ರಮಾ ಮಹಾವನಂ . . . ತಾಲ[ಪಾಠಾಂ. ಳ]ಪಾತವಿಧಿಯಿಂತೆ ಶಮ್ಯಾರಮ್ಯಮುಂ ತಳೋಪ ಲಾತಮುಂ (ಚಂದ್ರಪ್ರ. ೫-೫೨ ವ). [ ತಾಲ + ಪಾತ ]

**ತಾಲಬದ್ಧ,** ತಾಳಬದ್ಧ (ಗುಂ). ೧. ತಾಳಕ್ಕೆ ಹೊಂದಿಕೊಂಡ,– ಅನು ಗುಣವಾದ. (ನಾ). ೨. ತಾಳಕ್ಕೆ ಹೊಂದಿಕೊಂಡುದು: ನೊಗದ ಒಂದು ಎಳೆತಕ್ಕೆ ಅಲುಗಿದ ಗೆಜ್ಜೆಗಳು ತಾಲಬದ್ಧವಾಗಿ ಲಯಬದ್ಧವಾಗಿ ರಾಗ ಗೂಡಿಸುತ್ತಿದ್ದವು (ಬಾಬಲ. ೦೩). **ತಾಳಬದ್ಧ : ೨.** ರಾಗತಾಳಬದ್ಧವಾದ ಪವಿತ್ರ ಸಂಗೀತದ ಮೊದಲ ರೂಪ ಕಂಡುಬರುವುದು ಜಯದೇವನ ಅಷ್ಟಪದಿಯಲ್ಲಿ (ಸಂಗೀಚಂ. ೬೫). [ ತಾಲ + ಬದ್ಧ ]

**ತಾಲಬದ್ಧತೆ** (ನಾ). ತಾಳಕ್ಕೆ ಅನುಗುಣವಾಗಿರುವುದು: ವಿವೇಕ ಮತ್ತು ವಾಸನೆಯ ತಾಲಬದ್ಧತೆಯಲ್ಲಿ ಜೀವನದ ಸುಸಂಗತವಾದ ಸಂಗೀತವು ಪ್ರಕಟವಾಗುವುದು (ಪ್ರಬಂಧ. ೧೧೮). [ ಸಂ. ತಾಲಬದ್ಧತಾ ]

**ತಾಲಮಧು** (ನಾ). ತಾಳೆಮರದಿಂದ ತಯಾರಿಸುವ ಮದ್ಯ,–ಹೆಂಡ : (೬). [ ತಾಲ + ಮಧು ]

**ತಾಲಮಾನ,** ತಾಳಮಾನ (ನಾ). ೧. [ಸಂಗೀತ] ಸಂಗೀತದಲ್ಲಿ ಕಾಲ ಗಣನೆ : ಕಾಲಮಾನದ ಹಾಗೆ ತಾಲಮಾನವ ಪಲ್ಲಟಿಸುತ್ತ ಹೆಜ್ಜೆಯ ಹಾಕುವೊಲು (ಸಖೀಗೀ. ೨೫-೩). (ನಾ). ೨. [ಶಿಲ್ಪಶಾ] ವಿಗ್ರಹದ ರಚನೆಯಲ್ಲಿ ಒಂದು ಅಳತೆ; ಹನ್ನೆರಡು ಅಂಗುಲದ ಅಳತೆ: ಆದರೂ ರೂವಾರಿಗಳು ತಾಲಮಾನ ವಿಗ್ರಹಲಕ್ಷಣ ಇತ್ಯಾದಿ ಅಂಶಗಳಲ್ಲಿ ತಮ್ಮಲ್ಲಿ ಪ್ರಚಾರವಾಗಿದ್ದ ಯಾವುದೋ ಶಿಲ್ಪಶಾಸ್ತ್ರವನ್ನನುಸರಿಸಿದ್ದಂತೆ ಕಂಡು ಬರುತ್ತದೆ (ಹೊಯ್ಸಳವಾ. ೦೩). **ತಾಳಮಾನ : ೧.** "ತಾಳಮಾನದೊಳು ರೂಪಕಮೆಂಬ ನಾಮಮುಮಕ್ಕುಂ" (ಮಂಗರಾ. ೧೫೩-೬೨) : ತಾಳಮಾನ ಸರಿಸವನಱಿಯೆ ಓಜೆ ಬಜಾವಣೆಯ ಲೆಕ್ಕವನಱಿಯೆ (ಬಸವ. ೯೯೪). [ಸಂ.]

**ತಾಲಮೂಲಿಕೆ** (ನಾ). ಒಂದು ಬಗೆಯ ಸಸ್ಯ ; ನೆಲದಾಳೆ: "ಮುಸಲೀ, ತಾಲಮೂಲಿಕಾ . . . ನೆಲತಾಳೇಗೆಡ್ಡೆಯನ್ನುವರು" (ಸಿದ್ಧಾಂತಿ. ೦೩೯). [ಸಂ. ತಾಲಮೂಲಿಕಾ ]

**ತಾಲವನ,** ತಾಳವನ (ನಾ) = ತಾಲನಂದನ: ನಮ್ಮಿ ನಾಡು "ತಾಲವನ" "ಶಾಯಕ" . . . ಎಂಬ ಹೆಸರುಗಳನ್ನು ಧರಿಸಿತ್ತು (ತುಳುನಾ. ೧೭). **ತಾಳವನ :** ತಾಳವನಂಗಳುಮಂ ಹಿಂತಾಳ ಕುಜಂಗಳುಮನೊಡನೆ ಕಿಟಿಕ್ಕೊಡೆ ದನುಜರ್ (ಪಂರಾಮಾ. ೧೧-೧೧೯) : ತಾಳವನಮಂ ಪೊಕ್ಕು ಪಕ್ವಫಲಮಂ ಕಂಡಟ್ಟಿವಟ್ಟು (ಜಗವಿ. ೪-೪೦ ವ). [ ತಾಲ + ವನ ]

**ತಾಲವೃಂತ,** ತಾಳವೃಂತ (ನಾ). ಬೀಸಣಿಗೆ: "ತಾಲವೃಂತಾಖ್ಯಮುದಕ್ಕುಂ ಪೇಟಿಲ್ ಬಿಜ್ಜಣಿಗೆಯಾಲವಟ್ಟಮುದೆಂದುಂ" (ಕವಿಕಂ. ೨೪೪) : ವಲ್ಲ ನವ ರೌಪ್ಯದಾ ತಾಲವೃಂತವನಭವಗೊಲಿದೀವುದು (ಗುರುಚಾ. ೭-೨೦); ಕೌಸುಮ ತಾಲವೃಂತಪವನವ್ಯಸ್ತಾಳಕಂ . . . ನವ್ಯಪುಷ್ಪಮನೋಜ್ಞಾಭರಣಂ ನಿದಾಘದೊಳೆ ಕಣ್ಗೆಂಬಾಯ್ತು ಕಾಂತಾಜನಂ (ರಾಜಶೇ. ೫-೪೭) : **ತಾಳ ವೃಂತ :** "ಬೀಸಣಿಗೆ ತಾಳವೃಂತಂ ವ್ಯಜನಮಕ್ಕು" (ಮಂಗರಾ. ೬೨-೨೦) ; ಜಾಲಪಾದನೆಂಬ ಶಿಷ್ಯಂ ತಾಳವೃಂತದಿಂ ಬೀಸುತ್ತಿರೆ (ಕಾದಂಪೂ. ೨೮೯). [ ಸಂ. ]

**ತಾಲವೃಂತಕ** (ನಾ). =ತಾಲವೃಂತ : "ವ್ಯಜನಂ, ತಾಲವೃಂತಕಂ – ಈ ೨ ಬೀಸಣಿಗೆ" (ಹಲಾಯು. ೫೨–೧೫೫). [ ಸಂ. ]

**ತಾಲವ್ಯ** (ನಾ). ೧. ಅಂಗುಳಿನ ಒಳಭಾಗ: ರವದ ರೌದ್ರಕೆ ಗುಹಾ ತಾಲವ್ಯದಿಂ ಭೀತಿ ಶಿಥಿಲಂ ಜಗುಳ್ದುವೆನೆ (ಶ್ರೀರಾಮಾ. ೨೮೦-೭೭). ೨. [ವ್ಯಾಕ] ನಾಲಗೆಯು ತಾಲುವಿಗೆ ತಗುಲಿ ಉಚ್ಚರಿಸಲ್ಪಡುವ ವರ್ಣ,–ಅಕ್ಷರ : ತಾಲವ್ಯ – ಇ ಈ (ಎ ಐ) ಚವರ್ಗ, ಯಶ (ಶ್ವಶಿಡಿ. ೫). [ ಸಂ. ]

**ತಾಲಾಂಕ** (ನಾ). ತಾಲವೃಕ್ಷದ ಚಿಹ್ನೆಯನ್ನು ಧ್ವಜದಲ್ಲಿ ಉಳ್ಳವನು ; ಬಲರಾಮ : "ಬಲಭದ್ರಃ . . . ರೌಹಿಣೇಯಃ, ತಾಲಾಂಕಃ . . . ಬಲಃ–೧೭ ಬಲರಾಮನ ಹೆಸರು" (ಸಿದ್ಧಾಂತಿ. ೦೬). [ ತಾಲ + ಅಂಕ$_2$ ]

**ತಾಲಿ$_1$,** ತಾಳಿ$_1$ (ನಾ). ೧. (ಮದುವೆಯಾದ ಸಂಕೇತವಾಗಿ) ಸ್ತ್ರೀಯರು ಕೊರಳಲ್ಲಿ ಧರಿಸುವ ಚಿನ್ನದ ಬಟ್ಟು ; ಮಾಂಗಲ್ಯ : ಕಾವ ಪಂಕಜೇಕ್ಷಣೆಯರ ಹೃದಯಾಬ್ಜದೊಳಗೆ ಕ್ಷಣ ಬಿಟ್ಟರೆಂದು ನೋಳ್ಪೊಡೈತಂದೊಲು ಗಿಣಿಯ ತಾಲಿಗಳೊಪ್ಪಿದುವು (ಕಂನವಿ. ೨೪-೩೫): ಮಕ್ಕಳು ಮನೆ ತುಂಬ . . . ಲಕ್ಷಣದ ತಾಲಿ ಕೊರಳ್ತುಂಬ ಉಳ್ಳಂಥ ಮುತ್ತೈದೆ (ಹಳ್ಳಿಯ. ೦೩೩). ೨. ಒಂದು ಬಗೆಯ ಆಭರಣ : ತಾಲಿ ಹೊನ್ನುಂಗುರದವನಿಗೆ ಮೋಹದ ಬೇಳುವೆಯನು ತಳಿದು(ಕಂನವಿ. ೨-೯೯): ಕರ್ಣಾಟಕದಲ್ಲಿ ಮಾಂಡಲಿಕರು ತಾಲಿ, ಚೌಕುಳಿ, ಹೊನ್ನಸರ . . . ಕಂಕಣ ಮೊದಲಾದ ತೊಡಿಗೆಗಳನ್ನಿಟ್ಟುಕೊಳ್ಳುತ್ತಿದ್ದರು (ಕರ್ಣಾಜ. ೦೭೦). 'ಕಾಶಿತಾಲಿ$_1$' ಪರಾ. **ತಾಳಿ$_1$ :** ೧. ತನ್ನ ವಧುವಿನ ತಾಳಿಯುಂ ಹಱಿದರಿಂತುಂಟೆ (ಒಲರ. ದೇ. ೧೯೩-೦೩) ; ಕೇಳಿಯ ವನಗಳಿದ್ದುವು ಪುರಲಕ್ಷ್ಮಿಯ ತಾಳಿಯ ಮರಕತದಂತೆ (ಮೋಹತ. ೨-೫೩) ; ಸೀರಣಿಗೆ ಕಿವಿಯೋಲೆ ತಾಳಿ ಮೂಗುತ್ತಿ (ಕಾಲೂರ. ೫೨-೭೮). ೨. ತಾಳಿ ಹೊನ್ನುಂಗುರದವ ಬರೆ ಮೋಹದ ಬೇಳುವೆಯನು ನೀ ತಳಿದು (ಕಂನವಿ. ೬-೦೫೬) ; ಕೆಂಕವಣೆ ತೆತ್ತಿಸಿದ ತಾಳಿ ಪದಕಂಗಳ್ (ಚಳವಿ. ೫-೧೦) ; ಅಪ್ಪದಳ ಹುವು ೪೮ ತಾಳಿ ೪೮ ಅರಳೆಲೆ ೪೮ (ಎಕ. XIV, ನಂಜನ. ೨೮೯-೫ನೇ ಕಲಂ ; 1847) ; ಎಲ್ಲಾರು ಕಟ್ಯಾರ ಹತ್ತು ಹೊನ್ನಿನ ತಾಳಿ ಬೀಗುತಿ ಕಟ್ಯಾಳ ಕೈಪಾಳಿ (ಲೋಕಗೀ. ೨೭). ೩. ದೇವತೆಯ ಅಥವಾ ಪ್ರಿಯರಾದವರ ಮೂರ್ತಿಯಿರುವ ಪದಕ, – ಬಿಲ್ಲೆ : ತಾಳಿಯ ಹಱಿದು ಬಿಸಾಟಿ ಇಂಥ ಕೀಳು ದೇವತೆಗಳ ಹೆಸರಲ್ಲಿ ಕಟ್ಟಿದ (ಪುರಂದ. ೪-೫೦ ಪಲ್ಲವಿ); ಹನ್ನೊಂದನೇ ದಿವಸ ಸತ್ತ ಮನುಷ್ಯನ ತಾಳಿಯನ್ನು ಮಾಡಿ ಮನೆಯ ದೇವರೊಳಗಿಟ್ಟು ಪೂಜಿಸುವರು (ಕಭಾಗೆ. ೦೦೩).

[ ದೇ.॥ ತಮಿ. ಮಲ. ತಾಲಿ ; ತುಳು. ತೆಲು. ತಾಲಿ, ತಾಳಿ ]

**ತಾಲಿ$_2$** 'ಥಾಲಿ' ನೋ.

**ತಾಲಿ$_3$**, ತಾಳಿ$_2$ (ನಾ). ೧. ತಾಳೆಮರ. ೨. ಬೆಟ್ಟದಾಳೆ. ೩. ತಾಳೆಯ ಮರದಿಂದ ತಯಾರಿಸಿದ ಹೆಂಡ: (ಕ). **ತಾಳಿ$_2$**: ೧. "ಕರತಾಳಿ ಹಿಂತಾಳಿ ತಾಳಿಯೆನಿಕ್ಕುಂ" (ಮಂಗರಾ. ೧೦೫-೦೫); ಲವಂಗ ಲುಂಗ ಲವಳೀ ಹಿಂತಾಳ ತಾಳೀ ತಮಾಳಲತಾ ಸುಂದರ ನಂದನಕ್ಕಳುರೆ ಮುಂ ತನ್ನರ್ಚಿಗಳ್ (ಪಂಪಭಾ. ೫-೮೭); ತಾಳಿ ಹೊಂದಾಳೆ . . . ಕಿಕ್ಕಿರಿಪ ಕಾನನದೊಳು (ನವಮೋ. ೮-೯). [ ಸಂ. ತಾಲೀ ]

**ತಾಲಿಕೆ** (ನಾ). ಪಟ್ಟಿ; ಯಾದಿ: ಗ್ರಾಹಕರ ಚಂದಾ ಧನಪ್ರಾಪ್ತಿಯ ತಾಲಿಕೆಯು ಸಂಗಡ, ಕಳೆದ ಮೂರುವರ್ಷಗಳ ಗಳಿಕೆ ಬಳಕೆಯು ಲೆಕ್ಕ ಪತ್ರವನ್ನು . . . ನೋಡುತ್ತ ಕುಳಿತುಬಿಟ್ಟನು (ಇಪ್ಪಳ. ೨೭೪); ಎಲ್ಲ ವಸ್ತು ಉಪಕರಣಗಳ ತಾಲಿಕೆಯನ್ನೂ ಮಾಡತೊಡಗಿದನು (ಇಪ್ಪಳ. ೪೨೧).
[ ←ಅರ. ಹಿಂ. ತಾಲಿಕಾ, ತಾಲೀಕಾ ]

**ತಾಲಿಮ್** 'ತಾಲೀಮಂ' ನೋ.

**ತಾಲೀಪಿಟ್ಟು** 'ಥಾಲೀಪಿಟ್ಟು' ನೋ.

**ತಾಲೀಮ** 'ತಾಲೀಮಂ' ನೋ.

**ತಾಲೀಮಖಾನೆ** (ನಾ). ವ್ಯಾಯಾಮ ಶಾಲೆ; ಗರುಡಿಮನೆ: ರಾಮಣ್ಣನ ಓಣಿಯವರು ತಾಲೀಮಖಾನೆ ಕಟ್ಟಿಸಿದರ ನಮ್ಮ ಓಣಿಯವರೇನು ಕಡಿಮೆ ಅಲ್ಲ (ಮನೆಬಿ. ೦೭). [ ←ಮರಾ. ತಾಲೀಮ್‌ಖಾನಾ ]

**ತಾಲೀಮು**, ತಾಲಿಮ್, ತಾಲೀಮ (ನಾ). ೧. ತರಬೇತಿ; ಅಭ್ಯಾಸ: ಸಮನಾಗಿ ತಾಲೀಮು ನಡೆದ ನಾಟಕಾಭಿನಯ (ಶಿದಾ ಉ. ೨೦೨); 'ಕಾಮರತಿ' ನೃತ್ಯದ ತಾಲೀಮಿನಲ್ಲಿ ಕಾಲೇಜು ಅಭ್ಯಾಸವನ್ನೇ ಮರೆತು ಬಿಟ್ಟ (ಕಲಾ ಜ್ಯೋ. ೬೮); ಮುಂದೊಂದು ತಂಬಿಗೆಯನ್ನಿಕ್ಕಿಕೊಂಡು ಮೊದಲು ತಾಲೀಮು ನಡೆಸಿದ (ಹುಚ್ಚುಹು. ೦೭). ೨. ವ್ಯಾಯಾಮ; ಕಸರತ್ತು: ನನಗೂ ಸ್ವಲ್ಪ ತಾಲೀಮು ಗೊತ್ತು (ಒಡ್ಡಉ. ೨೫). **ತಾಲಿಮ್**: ೩. ವ್ಯಾಯಾಮಶಾಲೆ; ಗರುಡಿ: ಉತ್ತರ ಹಿಂದೂಸ್ಥಾನದಲ್ಲಿ ಈ ಸ್ಥಳಗಳನ್ನು 'ತಾಲಿಮ್' ಎಂದು ಕರೆಯುತ್ತಾರೆ (ಕವಿಕೋ. I, ೩೭). **ತಾಲೀಮ**: ೧. ತಾಲೀಮ ಸುರು ಆಗಿತ್ತು (ಮಾವಿಕೋ. ೨೨). ೨. ಇದೇ ತಾಲೀಮನೇ ಕಲಿಸತಿರಬೇಕಾತು (ಬಿಟ್ಟಹೊ. ೪೦). [ ←ಅರ. ಹಿಂ. ಮರಾ. ತಾಲೀಮ್ ]

**ತಾಲು**, ತಾಳು$_4$ (ನಾ). ಅಂಗುಳು: "ತಾಲು, ಕಾಕುದಂ – ಈ ೨ ತಾಳುಗೆ" (ಹಲಾಯು. ೮೬-೩೭೭); ಮಧ್ಯಮಾ ಸಂಜ್ಞಿಕ ವಾಣಿಯೇ ಉರಸ್ಸು ಕಂಠ ತಾಲು . . . ಶಿರಸ್ಸೆಂಬ ಸ್ಥಾನಾಷ್ಟಕದಲ್ಲಿ (ವಿವೇಕ. ೧೭೦); ಓಷ್ಠ ತಾಲುದ್ವಯವು (ಬಾಹಬೀ. ೨-೩). **ತಾಳು$_4$**: "ತಾಳು (ಲು) ಕಕುದಾಖ್ಯಮೆನಲು ತಾಳಿಗೆಯೆನಿಕ್ಕು" (ಮಂಗರಾ. ೯೪-೪); ತಾಳು ಕಂಠ ಓಷ್ಠಪುಟಗಳೆಂಬ ಮೂರು ಸ್ಥಾನ (ಹಸಾರ. ೪೧೭). [ ಸಂ. ]

**ತಾಲುಕ** (ನಾ). ಅಂಗುಳು. [ ಸಂ. ]

**ತಾಲುಗೆ**, ತಾಳಿಕೆ$_2$, ತಾಳಿಗೆ, ತಾಳುಗೆ (ನಾ). ೧. = ತಾಲುಕ: "ತಾಲು, ಕಾಕುದಃ ಈ ೨ ತಾಲುಗೆ" (ನಾಚಿರಾ. ೧೨೨); ತಾಲುಗೆಯುಮೋಷ್ಠಮುಂ ನಾಸಿಕೆಯುಂ . . . ಅಕ್ಕರಮುದಯಿಪ ತಾಣಂ (ಶಮದ. ೩೦); ಜಿಹ್ವೆಯಿಂ ಮೇಲೆ ತಾಲುಗೆಯೆಂಬ ಪೆಸರಕ್ಕುಂ (ಅಶ್ವಶಾ. ೮೭-೫). **ತಾಳಿಕೆ$_2$**: ೨. ಗಂಟಲು; ಕಂಠ: ಇಭ ಲುಲಾಯ ಕುರಂಗ ಕರಡಿಗಳ ತಾಳಿಕೆ[ಪಾಠಾಂ.ಗೆ]ಯ ತಳಕಿಳಿಹುತಗಿವುತ (ಕೊರರಾ. ೩-೧೨-೦೬); ಬೆರದ ಕಣ್ಣೊ ತಾಳಿಕೆದೆರದು ವ್ಯೆಯಿಂ ಚರಿಪ (ಕರಿಕ. ೨೦-೨). **ತಾಳಿಗೆ**: ೧. "ತಾಳು(ಲು) ಕಕುದಾಖ್ಯಮೆನಲು ತಾಳಿಗೆಯೆನಿಕ್ಕು" (ಮಂಗರಾ. ೯೪-೪); ಬಿಲ್ಲ ಕೊಪ್ಪು ತಾಳಿಗೆಯಂ ಚುರ್ಚಿ ನೆತ್ತಿಯೊಳ್ ಮೂಡುವುದುಮಾ ನರಿ ಬಿಱುವರಿದು ಸತ್ತುದು (ಪಂಚತಂ. ೩೦೨-೧೪); ತಪನ ಪ್ರದ್ಯೋತ ಹತಿಯಿಂ ಬೆನ್ನೊಡೆದು ಬಾಯೊಱೆ ತಾಳಿ[ಪಾಠಾಂ. ಳು]ಗೆ ಬತ್ತಿ ನೆತ್ತಿ ಹೊತ್ತಿ (ಗಿರಿಕ. ೯-೨೭ ವ). ೨. "ತಾಳಿಗೆಯೆನೆ ಗಂಟಲು" (ಭಾರನಿ. ೦೯); ಮಾರಿಯ ತಾಳಿಗೆಗೆ ತುತ್ತಾದವೇ (ಕುಮ್ಮಾಭೀ. ೬-೦೨). **ತಾಳುಗೆ**: ೧. "ತಾಲು, ಕಾಕುದಂ – ಈ ೨ ತಾಳುಗೆ" (ಹಲಾಯು. ೮೬-೩೭೭); ಪಾತಾಳಗಣಂಗಳಿವೆತ್ತಂ ತಾಳುಗೆವರೆಗಂ ತೆಱೆದ ಬಾಯನನುಕರಿಸಿರ್ಕುಂ (ಆದಿಪು. ೧೨-೭೯); ಪೊಟ್ಟಗೊಡೆದ ತಾಳುಗೆಗಳ ರುಧಿರಜಲದೊಳ್ ಬೆರಸಿ ಪದಗೆಂಪನಾಳ್ದ ಜಾತ್ಯಶ್ವದ ಲಾಳಾಜಳದೊಳಂ (ಪಂಪಭಾ. ೧೦-೭೦ ವ); ಪಲ್ ತಾಳುಗೆಯುಂ ಪೊರ್ದದಂತೆ ಪುರ್ವು ಕಿವಿಯುಂ ಪೊರ್ದದಂತೆ (ಧರ್ಮಾಮೃ. ೩-೦೬೯); ಎತ್ತಲುಂ ತಳರದೆ ತಾಳುಗೆ ಪತ್ತಿ ಬತ್ತಿ ಬಾಯ್ಮಾಡಿ ನಾಲಗೆಗಿತ್ತುಕೊಳ ನಾಲಗೆಗಲಿಗಳುಮಂ (ಲೀಲಾವ. ೫-೧೦೪ ವ); ತಾಳುಗೆಯನುರ್ಚಿ ನೆತ್ತಿಯು ಗಾಳಂ ಗಗನದೊಳಿಟಲ್ವ ವಾರಿಯು ಬೀರರ್ ಪಾಟಿಯೊಳಿಸೆದರ್ (ಯಶೋಚ. ೦-೫೫). [ <ಸಂ. ತಾಲುಕ ]

**ತಾಲುಗ್ರಂಥಿ** (ನಾ). ಗಂಟಲಿನ ಎರಡು ಕಡೆಗಳಲ್ಲೂ ಇರುವ ಗ್ರಂಥಿ,– ಗಡ್ಡೆ: ತಾಲುಗ್ರಂಥಿ (Tonsils) ಗಳು ಬೀಗಿದರೆ ನೀರು ಸಹ ನುಂಗುವಾಗ ನೋವಾಗುವುದು (ಮನಮ. ೦೦೫). [ ತಾಲು + ಗ್ರಂಥಿ ]

**ತಾಲುಜಿಹ್ವ** (ನಾ). ೧. ಕಿರುನಾಲಿಗೆ. ೨. ಮೊಸಳೆ. [ ಸಂ. ]

**ತಾಲುಪಾಕ** (ನಾ). ಒಂದು ಬಗೆಯ ಗಂಟಲುರೋಗ: ಪಿತ್ತದಿಂದ ಕಟವಾಯಲ್ಲಿ ಬೊಕ್ಕೆಗಳುಂಟಾಗಿ ಕೀವು ಸುರಿವದು. ಅದನು ತಾಲುಪಾಕವೆಂಬ ತಾಲುರೋಗವೆಂದಱಿವುದು (ವೈದ್ಯಸಾ. II, ೦೦೫) 'ಅಸ್ಯಪಾಕ' ಪರಾ. [ ಸಂ. ]

**ತಾಲುಪುಪ್ಪುಟ** (ನಾ). ಒಂದು ಬಗೆಯ ಗಂಟಲುರೋಗ: ಎಲಚಿಹಣ್ಣಿನ ಹಾಗೆ ಬಾಯಲ್ಲಿ ಬಾತು ಉಂಟಾಗಿಹುದು ತಾಲುಪುಪ್ಪುಟ ಎಂಬ ತಾಲು ರೋಗ (ವೈದ್ಯಸಾ. II, ೦೦೫). [ ತಾಲು + ಪುಪ್ಪುಟ ]

**ತಾಲುರೋಗ**, ತಾಳುರೋಗ (ನಾ). ಗಂಟಲಿನ ವ್ಯಾಧಿ: ಕಟವಾಯ ಮೂಲದಲ್ಲಿ ಮಹಾವೇದನೆ ಉಂಟಾಗಿಹುದು . . . ವಾಯ ಬಿಡಲೀಸದು. ಈ ಪ್ರಕಾರದಲ್ಲಿ ಇದ್ದುದನು ಕಚ್ಛಪವೆಂಬ ತಾಲುರೋಗವೆಂದಱಿವುದು (ವೈದ್ಯಸಾ. II, ೦೦೫). **ತಾಳುರೋಗ**: ತುರಗಕೆ ತಾಳುರೋಗಂ ತೋರ್ಕುಂ (ಅಶ್ವಶಾ. ೦೪-೧). [ ತಾಲು + ರೋಗ ]

**ತಾಲುಶೋಫ** (ನಾ). ಗಂಟಲಿಗೆ ಬಾವು ಬರುವ ಒಂದು ಬಗೆಯ ವ್ಯಾಧಿ: ಕಟವಾಯಿ ಉರಿವಣ, ದಪ್ಪವಾಗಿ ಬಾತುಕೊಂಡಿಹಣ ಈ ರೀತಿಯಲ್ಲಿ ವಾತಪಿತ್ತಗಳಿಂದ ಉಂಟಾದುದನು ತಾಲುಶೋಫ ಎಂಬ ತಾಲು ರೋಗವೆಂದಱಿವುದು (ವೈದ್ಯಸಾ. II, ೦೦೫). [ ತಾಲು + ಶೋಫ ]

**ತಾಲೂಕ$_1$** 'ತಾಲ್ಲೂಕು' ನೋ.

**ತಾಲೂಕ$_2$** (ನಾ). ಒಂದು ಬಗೆಯ ಕಿವಿಯ ಆಭರಣ: ತೋಡೆ ವಜ್ರದ ಮುತ್ತಿನ ಟೀಕೆ . . . ಬೆಂಡೋಲೆ ತಾಲೂಕ ದ್ರಾಕ್ಷೆಗೊಂಚಲ (ಸಿದ್ಧಪು. ೦೯-೭೪). [ ←ಪಾರ. ತಲ್ಕ್ ]

**ತಾಲೂಕು** 'ತಾಲ್ಲೂಕು' ನೋ.

**ತಾಲೂಕುಕಚೇರಿ** (ನಾ). ತಾಲ್ಲೂಕಿನ ಆಡಳಿತವನ್ನು ನಿರ್ವಹಿಸುವ ಕಾರ್ಯಾಲಯ: ಅವರ ಹೆಸರು ಹೇಳಿದ್ದರ ಸಾಕು ತಾಲೂಕು ಕಚೇರ್ಯಾಗ ಬೇಕಾಧಂಗ ಕೆಲಸ (ವ್ಯನಿ. ೦೩).
[ ತಾಲೂಕು (<ತಾಲ್ಲೂಕು) + ಕಚೇರಿ ]

**ತಾಲೂಕುದಾರ** (ನಾ). ತಾಲ್ಲೂಕಿನ ಮುಖ್ಯ ಅಧಿಕಾರಿ: ಕೊಡಿಯಾಲದ ಶೀಮೆ ತಾಲೂಕುದಾರ ಸಾಹೇಬರ ಬಳಿಗೆ (ರಾಜೇಂದ್ರ. ೦೨೨); ಸಾವಿರಾರು ಜಹಗೀರದಾರರು, ತಾಲೂಕುದಾರರು . . . ದುರ್ದಶೆಗೀಡಾಗಿದ್ದರು (ಪ್ರಬಂಧ ೫೪).
[ ತಾಲೂಕು (<ತಾಲ್ಲೂಕು) + – ದಾರ$_4$ ]

**ತಾಲೋಕು** 'ತಾಲ್ಲೂಕು' ನೋ.

**ತಾಲ್ಲೂಕು,** ತಾಲೂಕ$_1$, ತಾಲೂಕು, ತಾಲೋಕು, ತಾಲ್ಲೋಕು (ನಾ). (ಅಮಲ್ದಾರರ ಅಥವಾ ತಹಸಿಲ್ದಾರರ ಆಡಳಿತಕ್ಕೆ ಒಳಪಟ್ಟಿರುವ) ಜಿಲ್ಲೆಯ ಒಂದು ಭಾಗ; ತಹಶೀಲು: ಉದ್ರೆಯ ಲಿಂಗಯ ತಾಲ್ಲೂಕು ದೊರೆಗಳ ದಂಡಿನಲ್ಲಿ (ಮೈಆರಿ. ೧೯೩೯, ೭೦-೬; 1817); ಕರ್ನಾಟಕದ ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನ ಮುಖ್ಯವಾದ ಸ್ಥಳ ನಿಟ್ಟೂರು (ನಿಟ್ಟೂಶಾಂ. ೨): ಈ ಸಂಬಳದ ತೆಖ್ಖೆಯು ತಾಲ್ಲೂಕಿನಲ್ಲಿ ತನಿಖೆ ಮಾಡಲ್ಪಟ್ಟು (ಗ್ರಾಮೂಕ. ೬). **ತಾಲೂಕ$_1$:** ಶಕವರುಶ ೧೭೭೦ನೆ . . . ಅಂಕೋಲಾ ತಾಲೂಕ ಮುನಸಿಪರು (ಬೊಂಕಶಾ. ೧೯೪೦, ಚುಮಟ. ೧೧೨-೨; 1771). **ತಾಲೂಕು:** ನೆಲಮಂಗಲ ತಾಲೂಕು ಪೈಕಿ (ಬೊಂಕಶಾ. ೧೯೪೦, ಸಿರಸಿ. ೨೬-೭; 1266); ಹುನಗುಂದ ತಾಲೂಕು ಆಧುನಿಕ ಸುಧಾರಣೆಗೆ ಬಹುದೂರದಲ್ಲಿರುವುದು (ಮೇದಿಮು. ೧). **ತಾಲೋಕು:** ೧. ಮೈಸೂರು ತಾಲೋಕು ಅಮಲದಾರನಿಗೆ ಸಹಾ . . . ಕೊಟ್ಟು (ಎಕ. III, ಮೈಸೂರು. ೦-೨೦; 1822). **ತಾಲ್ಲೋಕು:** ತಲಕಾಡು ತಾಲ್ಲೋಕಿಗೆ ಶೇರಿದ ಕೆಬ್ಬೆ ಹುಂಡಿ (ಎಕ. III, ತಿರುಮ. ೫೭-೩೩; 1855); ಗಡಿಪ್ರದೇಶಗಳ ತಾಲ್ಲೋಕುಗಳಿಗೆ ಬಂದು (ದಾಲತ್. ೪೦೮).

[ ←ಅರ. ತಅಲ್ಲುಕಹ್; ಹಿಂ. ತಾಲ್ಲೂಕಾ, ತಅಲ್ಲುಕಾ; ಮರಾ. ತಾಲುಕಾ, ತಾಲುಖಾ ]

**ತಾಲ್ಲೋಕು** 'ತಾಲ್ಲೂಕು' ನೋ.

**ತಾವ** (ನಾ). ಸುಡುವಿಕೆ: ಬೆಂಕೆಯೊಳೆ ತಾವಮಂ ಮಾಡಿ (ಲೋಕೋಪ. ೧೧-೨೯ ಟೀಕು). 'ತಾವಂಗೊಳ್' ಪರಾ.

[ <ಪ್ರಾ. ತಾವ. / ಸಂ. ತಾಪ ]

**ತಾವಂಗೊಳ್** (ಕ್ರಿ). ಸುಡಿಸಿಕೊಳ್ಳು: ಆ ಎಡೆಯಂ ತಾವಂಗೊಳೆಯುಂ . . . ಉಪಶಮಿಕುಂ (ಲೋಕೋಪ. ೧೧-೨೯). [ ತಾವ + ಕೊಳ್$_1$ ]

**ತಾವಕ** (ಗು). ನಿನ್ನ ಸಂಬಂಧವಾದ; ನಿನಗೆ ಸಂಬಂಧಪಟ್ಟ; ನಿನ್ನದಾದ: ಕೇಳು ನೃಪ ತಾವಕರ ಕೌಂತೇಯರ ಸಮಗ್ರಾಹವದ ವಿಸ್ತರ (ಕುವ್ಯಾಭೀ. ೫-೪); ತಾವಕನ ಸಾರಥಿಯ ರಥ ತುರಗಾವಳಿಯನಾಯುಧವ ಖಂಡಿಸೆ (ಕುವ್ಯಾಕ. ४-೮); ರಕ್ಷಿಪುದೈಯ್ಯ ತಾವಕಾಂಘ್ರಿಪ್ರೀತನಂ ಲೆಂಕನಂ (ವೀಶೈಪು. ೬-೧-೪೦). [ ಸಂ. ]

**ತಾವಕೀನ** (ಗು). = ತಾವಕ: ಆ ಪದಾರ್ಥಮುಂ ತಾವಕೀನಮಿನ್ನುತ್ತರ ಮಿಲ್ಲುತ್ತರೋತ್ತರಂ ಮಾಬ್ಬುದು (ಅನಂಪು. ೬-೩೦ ವ); ಮಂಜುಳವಾಣಿ ತಾವಕೀನಂ ಕತೆಯನೊಲಿದೀಂಟಿ ಕರ್ನಗಳ್ ತಣಿದಪವೆ (ವಂಕಾರಾ. ೩-೧-೨). [ ಸಂ ]

**ತಾವಜು** 'ತಾವುಜ' ನೋ.

**ತಾವಡ** (ನಾ). ತಾವರೆಮಣಿ, ರುದ್ರಾಕ್ಷಿ, ತಂಲಸೀಮಣಿ ಮುಂತಾದಂವು ಗಳಿಂದ ಮಾಡಿದ ಹಾರ, – ಮಾಲೆ: ಕಂದಿದ ವದನದ ಪರಿದೆಳೆವ ರುದ್ರಾಕ್ಷೆ ತಾವಡಗಳ . . . ಮಾನಸ ಬರೆ ಋಷಿ ಕಂಡ (ಸೊಬಸೋ. ೬-೨೪): ಚದುರನೌಡಲಕಾಯ ರುದ್ರಾಕ್ಷಿಯ ಮಾಡಿ ಬದನೆಕಾಯ ಲಿಂಗವನು ಮುದದಿಂ ಧರಿಸಿದಾ ಹಸ್ತ ತಾವಡವೆಂದು ಅದಟಿರೊಳು ಹಿಲದ ಕಾಯ (ನಿಜಶಾಂ. ೧೭-೯೮); ಮಂಜುಲ ತುಲಸಿಯ ದಂಡೆಯ ಕೊರಳ ತಾವಡದ ರಂಜಿಸುವ ಪದ್ಮಾಕ್ಷಗಳ . . . ತೇಜೋಮಯದ ಪುಂಜವೆನಿಪ ಮುರಮುನಿ ನಾರದಂ (ಜೈಮಿಭಾ. ೨೮-೯); ಕೊರಳ ರುದ್ರಾಕ್ಷಿಗಳ ತಾವಡ ಮೆರೆವ ಕಾಷಾಯಾಂಬರದಲಳವಟ್ಟ ಮೌನದಲಿ (ಅನಂರಾ. ೬-೧೮-೪೪). 'ಪಂಚತಾವಡ' ಪರಾ.

[ ದೇ.॥ ತಮಿ. ತಾವಟ, ತಾಬ್ವಟ; ಮಲ. ತಾವಟ, ತಾಬ್ವಟ, ತಾವಡ; ತೆಲು. ತಾವಡ, ತಾವಳ ]

**ತಾವಡಕೋಲು** 'ತಾವಡಗೋಲ್' ನೋ.

**ತಾವಡಗೋಲ್,** ತಾವಡಕೋಲು(ನಾ). (ಹಾರದಿಂದ ಅಲಂಕೃತವಾದ) ಒಂದು ಬಗೆಯ ಕೋಲು: ಪಿಡಿದ ತಾವಡಗೋಲ್ಗಳಿಂದತಿಮಲ್ಲರೆದ್ದರು ಸಾಧನೆಗೆ (ಭರಜ. ೬೩-೧೩). **ತಾವಡಕೋಲು:** ರತ್ನದ ತಾವಡಕೋಲ ಕೈವಿಡಿದು ತೀವಿದಾಭರಣಕಾಂತಿಯೊಳೆಯ್ದುತಿರ್ದರು ದೇವಕುಮಾರರಂದ ದೊಳು (ಭರಜ. ೨೭-೫೫). [ ತಾವಡ + ಕೋಲ್$_1$ ]

**ತಾವಡಹಾರ** (ನಾ). = ತಾವಡ: ವನಮಾಲಿಯ ಸಲುವಾಗಿಯು . . . ಮಲ್ಲಿಗೆಯ ಒಂದು ಗುತ್ತಾದ ತೋರ ತಾವಡಹಾರ ಸಿದ್ಧ (ಇಪ್ಪಕ. ४೦೭).

[ ತಾವಡ + ಹಾರ$_1$ ]

**ತಾವಡಿ** (ನಾ). ೧. ಅಲೆದಾಟ; ಸಂಚಾರ: ವಿರಹಿಗೆ ಭಾವಭವಂ ತಾವಡಿ ವೇಟ್ಟಂತೆ ಸುಳಿವುದುಪವನಪವನಂ (ಚಂದ್ರಪು. ೧೧-೬೨). ೨. ಆಯಾಸ: ದಣಿವು. 'ತಾವಡಿಗೊಳ್' ಪರಾ. [ ←ತಮಿ. ತಾವಟ ]

**ತಾವಡಿಗೊಳ್** (ಕ್ರಿ). ಆಯಾಸಪಡು; ದಣಿವು ಹೊಂದು: ಅಟಿಸಿ ಪರಿಪರಿದು ಕರಂ ತಾವಡಿಗೊಳ್ವೀ ಭೀಮನ ಜೇವಸಮಿದು ನಿನ್ನ ಮನ ಮನೊನಲಿಸಿತಿಲ್ಲಾ (ಪಂಪಭಾ. ೭-४೬). [ ತಾವಡಿ + ಕೊಳ್$_1$ ]

**ತಾವಡಿಸು** (ಕ್ರಿ). ಹಾರವನ್ನು ತಯಾರುಮಾಡು; ಮಾಲೆಯನ್ನು ರಚಿಸು: ತಾವರೆಯ ಮಣಿಯ ತಾವಡಿಸೂದಕ್ಕೆ ಠಾವ ಕಾಣದೆ ಡಾವರಿಸುತ್ತಿದ್ದೆ (ಗುಪ್ತಮಂ. ೬೪). [ ತಾವಡ + – ಇಸು$_3$ ]

**ತಾವಣಿ** (ನಾ). (?): ಉರದ ತಾವಣಿಯ ಕಿಂಕರನೊಬ್ಬ ಸಡಲಿಸೆ ಸರಿ ಬೆನ್ನನೌಂಕಿ ದಾಯೆಂದೂ ಧರೆಗೆ ಕಾಳಿದದೊಂದು ಲಾಗ ಲಾಗಿಸಿತಲ್ಲಿಗೆ ರಡಾಟು ಯೋಜನವಾಯ್ತು (ಭರಜ. ೨೯-४೩). [ ? ]

**ತಾವತಿಯಹುಲ್ಲು** 'ತಾವತಿಹುಲ್ಲಂ' ನೋ.

**ತಾವತಿಹುಲ್ಲು,** ತಾವತಿಯಹುಲ್ಲು (ನಾ). ಒಂದು ಬಗೆಯ ಹುಲ್ಲು: "ದೃಢಪತ್ರೀ, ದೃಢೇಕ್ಷುರಾ – ಈ ಯೆರಡುಂ ತಾವತಿಹುಲ್ಲು" (ಒಷಧಿ. ೬೯). **ತಾವತಿಯಹುಲ್ಲು:** "ದೃಢತೃಣಃ-ಮೊದೆ, ತಾವತಿಯ ಹುಲ್ಲು(ಒಷಧಿ. ೬೯).

[ ತಾವತಿ$_0$ + ಹುಲ್ಲು (<ಪುಲ್) ]

**ತಾವರೆ** 'ತಾಮರೆ' ನೋ.

**ತಾವರೆಕೆಚಿ** 'ತಾಮರೆಗೆಟಿ' ನೋ

**ತಾವರೆಕೇಸರ,** ತಾವರೆಯಕೇಸರ (ನಾ). ಒಂದು ಬಗೆಯ ಸಸ್ಯ: "ಪಂಚಕೇಸರಃ - ಸುರಹೊನ್ನೆ. ತಾವರೆಕೇಸರ" (ಒಷಧಿ. ೯೩). **ತಾವರೆಯ ಕೇಸರ:** "ಚಾಂಪೇಯಂ, ನಾಗಕೇಸರ, ತಾವರೆಯಕೇಸರ" (ಒಷಧಿ. ೫೭).

[ ತಾವರೆ (<ತಾಮರೆ) + ಕೇಸರ ]

**ತಾವರೆಕೊಳ** 'ತಾಮರೆಗೊಳ' ನೋ.

**ತಾವರೆಗಂದ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: "ತಾವರೆಗಂದು ಬಿದಿ ನಾಲ್ಮೊಗನೆನಲಜನೆಂಬ ಪೆಸರ್" (ಚತುನಿ. ೫); "ತಾವರೆಗಂದನು ತಾಂ ಬ್ರಹ್ಮಗೆಸೆವ ನಾಮಂ" (ಕಬ್ಬಿಕ್ಕ. ೯).

[ ತಾವರೆ (<ತಾಮರೆ) + ಕಂದ$_1$ ]

**ತಾವರೆಗಂಪು** (ನಾ). ಕಮಲದ ಪರಿಮಳ,–ಸುಗಂಧ: ಅಮಲಮುಖ ದಿಂದೆ ತಾವರೆಗಂಪನೆಸೆವ ಬಾಯ್ದೆರೆಟಿಯ ಸೊಗಸಿಂದೆ ಕರ್ಪೂರದ ಕಂಪಂ . . . ಒಡಲಿಂ ಬೆರಕೆಗಂಪನೊಂದಿ ಪರಿಮಳದ ಪುತ್ತಳಿಗಳೋಯೆನೆ ಘಟ್ಟವಳ್ಳಿಯರ್ ಮೆಟಿದರು (ಪದ್ಮರಾ. ೮-೮೦).

[ ತಾವರೆ (<ತಾಮರೆ) + ಕಂಪು ]

**ತಾವರೆಗಚ್ಚು** (ನಾ). ತಾವರೆಯ ತುತ್ತು,– ಕಬಳ: ಕೊಂಚೆಗಳೊಡಟಿ ಹಾಯ್ದುವು ಹಂಸೆ ತುಂಡದ ತುದಿಯ ತಾವರೆಗಚ್ಚಿನಲಿ ಬೆಚ್ಚಿದವು (ಕೊರರಾ. ४-೧೧-೯). [ ತಾವರೆ (<ತಾಮರೆ) + ಕಚ್ಚು$_4$ ]

**ತಾವರೆಗಣ್** 'ತಾವಂರೆಗಣ್' ನೋ.

**ತಾವರೆಗಣ್ಣ** (ನಾ). ಕಮಲದಂತೆ ಕಣ್ಣುಗಳುಳ್ಳವನು ; ವಿಷ್ಣು : "ಅರಲ್ದೊಡೆಯಂ . . . ತಾವರೆಗಣ್ಣಂ . . . ಕಾವನಯ್ಯಂ–ಈ ೧೨ ವಿಷ್ಣುಗೆ ಪೆಸರ್" (ಕಶಸಾ. ೧–೯) ; "ತಾವರೆಗಣ್ಣಂ ಕಾವನೈಯನುಂ ಕಾರೊಡಲಂ" (ಕವಿಕಂ. ೨೪) ; ತಾವರೆಗಣ್ಣನ ರಾಣಿಯೆಸೆವೋಲೆವಾಗ್ಮಂ (ಹಚಿಕಾ. ೦–೭) ; ತಾವರೆಗಣ್ಣನತ್ತೆಯ ತನಯನ ವೈರಿಯಪ್ಪನ ಮಾವನ ನಾದಿನಿಯ ಮಗನ ಮಕ್ಕಳುಂಡವನ ಪ್ರಭುವೆ (ಭಕ್ತಸ. ೧೫–೩) : ತಾವರೆಗಣ್ಣಾ! ಮಾಧವಾ! ಲೋಕನಾಥಾ! ನಿನ್ನನ್ನು ವಂದಿಸುತ್ತೇನೆ (ವ್ಯಾಸಭಿ. ೩೩೭).

[ ತಾವರೆ (<ತಾಮರೆ) + ಕಣ್ + – ಅ$_7$ ]

**ತಾವರೆಗಣ್ಣು** 'ತಾಮರೆಗಣ್' ನೋ.

**ತಾವರೆಗೆಡ್ಡೆ** (ನಾ). ಕಮಲದ ಗಡ್ಡೆ : ಕುಪ್ಪಟೆಯೊಳಗೆ ತಾವರೆಗೆಡ್ಡೆ ಹುಟ್ಟುವುದೇ (ಬಸಪು. ೩೦–೨೮). [ತಾವರೆ (<ತಾಮರೆ)+ಗೆಡ್ಡೆ (<ಗಡ್ಡೆ)]

**ತಾವರೆಗೆಣಸು** (ನಾ). = ತಾವರೆಗೆಡ್ಡೆ : "ಪದ್ಮಕಂದಃ–ತಾವರೆಗೆಣಸು" (ಒಷಧಿ. ೯೩); ನೈದಿಲೆಗೆಡ್ಡೆ, ತಾವರೆಗೆಣಸು, ಅಶ್ವಲಾಯನ ದರ್ಭೆ ಬೇರು . . . ಪಾಕದಲ್ಲಿಳಿಹಿ ಶರೀರಕ್ಕೆ ಲೇಪಿಸೆ . . . ಮೂರ್ಛೆ ಸಹ ಮಾಣುವುವು (ಸಕವೃ. ೮೫) : ತಾವರೆಗೆಣಸನೆ ಮೆಯ್ದು . . . ಮಲಗಿರುವ ಸಮಯದಲ್ಲಿ (ವಚಕಾ. ೧೦). [ ತಾವರೆ (<ತಾಮರೆ) + ಗೆಣಸು (<ಗೆಟಸು) ]

**ತಾವರೆಗೆಯ್ಯ**, ತಾವರೆಗೈಯಂ (ನಾ). ಕಮಲವನ್ನು ಕೈಯಲ್ಲಿ ಹಿಡಿದುಕೊಂಡಿರುವವನು; ಪದ್ಮಹಸ್ತ; ಸೂರ್ಯ: "ತಾವರೆಗೆ[ಪಾಠಾಂ. ಗ]ಯ್ಯ ತಾವರೆಗೆಳೆಯ ನೇಸಟಿಂದು ಬಾನ್ಮಣಿ" (ಕಬ್ಬಿಕೈ. ೪೪) ; "ರವಿಗೆ ತಾವರೆಗೆಳೆಯ ನೆಂದು ತಾವರೆಗೆಯ್ಯನೆಂದಕ್ಕು" (ಕಶರ. ೪೪). **ತಾವರೆಗೈಯ** : "ತಾವರೆಗೆಳೆಯಂ, ಪಗಲ ಬೊಜಂಗಂ . . . ತಾವರೆಗೈಯಂ, ಗರಂಗಳಾಣ್ಮಂ–ಈ ೧೧ ಸೂರ್ಯನ ಪೆಸರ್" (ಕಶಸಾ. ೩–೨೮).

[ ತಾವರೆ (<ತಾಮರೆ) + ಕೆಯ್$_2$ + – ಅ$_7$ ]

**ತಾವರೆಗೆಳೆಯ** (ನಾ). ಕಮಲಗಳ ಮಿತ್ರ; ಸೂರ್ಯ: "ತಾವರೆಗೆಳೆಯಂ, ಪಗಲ ಬೊಜಂಗಂ . . . ಗರಂಗಳಾಣ್ಮಂ–ಈ ೧೧ ಸೂರ್ಯನ ಪೆಸರ್" (ಕಶಸಾ. ೩–೨೮): "ಬೆಂಗದಿರಂ ನೆಟಿ ಪಗಲ ಬೊಜಂಗಂ . . . ಪಿಂಗದೆ ತಾಂ ನೇಸಟಿಂದು ತಾವರೆಗೆಳೆಯಂ" (ಕವಿಕಂ. ४೦).

**ತಾವರೆಗೆಳೆಯನನುಗ** = ಸೂರ್ಯನ ಮಗ ; ಕರ್ಣ : ತಾವರೆಗೆಳೆಯನಣುಗನು . . . ತೆಗೆದೆಸಲು ಬೆಟಗಾಯಿತ್ತು ಸುರಕಟಕ (ಕುವ್ಯಾಕ. ಓ೧೩. ೨೭–೪ ಅಡಿಟಿ.). [ ತಾವರೆ (<ತಾಮರೆ) + ಗೆಳೆಯ (<ಕೆಳೆಯ) ]

**ತಾವರೆಗೆಟಿ** 'ತಾಮರೆಗೆಟಿ' ನೋ.

**ತಾವರೆಗೈ** 'ತಾಮರೆಗೈ' ನೋ.

**ತಾವರೆಗೈಯ** 'ತಾವರೆಗೆಯ್ಯ' ನೋ.

**ತಾವರೆಗೊಳ** 'ತಾಮರೆಗೊಳ' ನೋ.

**ತಾವರೆಗೋಲ್**, ತಾವರೆಗೋಲು (ನಾ). ಕಮಲದ ಬಾಣ; ಮನ್ಮಥನ ಪಂಚಬಾಣಗಳಲ್ಲಿ ಒಂದು : ಗಾಡಿಕಾಟನ ತಾವರೆಗೋಲ್ಗೆ ಚಾಪವ ಮಾಡಿ ಪೂರಿತಗೆಯ್ವ ಕೆಟದಿ (ಮೋಹತ. ೧೭–೪೫). **ತಾವರೆಗೋಲು**: ತಾವರೆಗೋಲು ಕಂತುವಿನೆರಡಕ್ಷಿಯೊಳು ನೆಲಸಿದುವು (ಮೋಹತ. ೨೯–೫೦).

[ ತಾವರೆ (<ತಾಮರೆ) + ಕೋಲ್$_1$ ]

**ತಾವರೆಗೋಲು** 'ತಾವರೆಗೋಲ್' ನೋ.

**ತಾವರೆದಂಟು** (ನಾ). ಕಮಲದ ಕಾಂಡ ; ಮೃಣಾಳನಾಳ : ಕರಮೆಸೆದು ತೋಟಿದುದು ತಾವರೆದಂಟಿನ ಮಿಸುಪ ನೂಲ ಪೊಸ ಜನಿವಾರಂ (ಕಾದಂಪೂ. ೨೦೭). [ ತಾವರೆ (<ತಾಮರೆ) + ದಂಟು ]

**ತಾವರೆನಾಳ** (ನಾ). = ತಾವರೆದಂಟು: ತೋಳು ತಾವರೆನಾಳದಂತೆ ನವಿರು ಶೈವಲದಂತೆ ನಯನವು ಮೀನಂತೆ ಕಾಂತೆ ಸರೋವರದಂತೆ (ಇಂಜಾಪ. ೧೮೭–೨೫). [ ತಾವರೆ (<ತಾಮರೆ) + ನಾಳ$_1$ (= ನಾಲ$_1$) ]

**ತಾವರೆನೂಲ್** (ನಾ). ತಾವರೆಯ ನಾರು, – ಎಳೆ : ಪೂವಿನ ಬಿಲ್ಲ ಕೊಪ್ಪನೊದೆದೇಟಿಸಿ ತಾವರೆನೂಲ ನಾರಿಯಂ ಜೇವೊಡೆಗೆಯ್ದು (ಕಮದ. ೧೦೮ ಪ್ರಯೋ). [ ತಾವರೆ (<ತಾಮರೆ) + ನೂಲ್$_2$ ]

**ತಾವರೆಬಳ್ಳಿ** 'ತಾವರೆವಳ್ಳಿ' ನೋ.

**ತಾವರೆಬಿತ್ತ** 'ತಾವರೆಬಿತ್ತು' ನೋ.

**ತಾವರೆಬಿತ್ತು**,ತಾವರೆಬಿತ್ತ (ನಾ).ಒಂದು ಬಗೆಯ ಸಸ್ಯ: "ಗೋಲೋಟ್ಕಂ – ತಾವರೆಬಿತ್ತು" (ಒಷಧಿ. ೫೦). **ತಾವರೆಬಿತ್ತ** : "ಕದಳಿ – ಬಾಟಿ, ತಾವರೆಬಿತ್ತ" (ಒಷಧಿ. ೨೨). [ತಾವರೆ(<ತಾಮರೆ) + ಬಿತ್ತು$_2$(<ಬಿಟ್ಟು)]

**ತಾವರೆಮಣಿ** (ನಾ). (ಮಣಿಯಂತೆ ಉಪಯೋಗಿಸಲ್ಪಡುವ) ಕಮಲದ ಬೀಜ : "ದಿಂಬಃ – ತಾವರೆಮಣಿ" (ಒಷಧಿ. ೬೪); ರುದ್ರಾಕ್ಷಿಸರ, ತಾವರೆ ಮಣಿಗಳ ಸರ . . . ಸಕಲ ಪಾಪಗಳನ್ನೂ ನಿವಾರಣೆ ಮಾಡುವುವು (ಸಕವೃ. ೩೯). [ ತಾವರೆ (<ತಾಮರೆ) + ಮಣಿ$_3$ ]

**ತಾವರೆಮರ** (ನಾ). ಒಂದು ಬಗೆಯ ಮರ: ತಾವರೆ ಮರದ ಬದಣಿಕೆಯಂ ರೋಹಿಣಿ ನಕ್ಷತ್ರದಲ್ಲಿ ತಂದು ಮುಂಗೈಗೆ ಕಟ್ಟುವುದು (ಸಕವೃ. ೧೨೦). [ P ಇದು 'ತಾರೆಮರ'ದ ಅಪಲಿಖಿತವಿರಬಹುದು ]

**ತಾವರೆಮೊಗ** (ನಾ). ತಾವರೆಯಂತೆ ಸುಂದರವಾದ ಮುಖ : ಸಿರಿಮೊಗದವರು ತಾವರೆಮೊಗದವರ್ಮುದ್ದುಮೊಗದ ಮಿಗೆ ಚೆಲುವಿನ ಬಟ್ಟಮೊಗದವರು ನಲ್ವಗೆವೆತ್ತು ನಡೆದರೊಗ್ಗಿನಲಿ (ಮೋಹತ. ೨೪–೧೩) : ತಾವರೆಮೊಗ ಮೀನ್ ಕಣ್ಣು ನೀರಾನೆಗಳ್ಮೆವಿದ ನಡೆ . . . ಎನೆ ಭಾವಕಿ ಮೆಟಿದಳರ್ತಿಯಲಿ (ಕಂಪವಿ. ೫–೪೭). [ ತಾವರೆ (<ತಾಮರೆ) + ಮೊಗ ]

**ತಾವರೆಯಕೇಸರ** 'ತಾವರೆಕೇಸರ' ನೋ.

**ತಾವರೆಯಕ್ಕಿ** (ನಾ). ಕಮಲದ ಬೀಜ : ತಾವರೆಯಕ್ಕಿಯಂ ಕಟವೆಯಕ್ಕಿಯುಮಂ ಸಮನಾಗಿ ಕೂಡಿಕೊಂಡಾವಿನ ದುಗ್ಧದಿಂ ಪಥಿಸಿ (ಲೋಕೋಪ. ೮–೪). [ ತಾವರೆ (<ತಾಮರೆ) + ಅಕ್ಕಿ$_1$ ]

**ತಾವರೆಯರಲ್**, ತಾವರೆಯರಳ್ (ನಾ). ಕಮಲಪುಷ್ಪ : ದಿನಪಂಗೆ ಕೆಯ್ಮುಗಿವಂದದೆ ಮುಗಿದಿರ್ದುವಲರ್ದ ತಾವರೆಯರಲ್ಗಳ್ (ಅಜಿಪು. ೬–೩೮): ಇಂಗಡಲಿನಂದೊಗೆತಂದು ಮರಲ್ದರಲ್ದ ತಾವರೆಯರಲಲಿ ನಿಂದ ಸಿರಿ (ಚಂಪ್ರಪು. ೭–೬೯). **ತಾವರೆಯರಳ್** : ತಿಳಿದ ತಿಳಿಗೊಳದ ತಳಿತ ತಾವರೆಯರಳ ತಂಡುಲದ ರುಚಿಯ ಕಳಹಂಸೆ ಬಯಸುವಂತೆ (ಅದವ. ೧೬–೩೭).

[ ತಾವರೆ (<ತಾಮರೆ) + ಅರಲ್$_2$ (<ಅಲರ್$_2$) ]

**ತಾವರೆಯರಳ್** 'ತಾವರೆಯರಲ್' ನೋ.

**ತಾವರೆಯಹುಲ್ಲು** (ನಾ). ಒಂದು ಬಗೆಯ ಹುಲ್ಲು : "ಪಾನೀಯಂ – ತಾವರೆಯ ಹುಲ್ಲು" (ಒಷಧಿ. ೯೭).

[ ತಾವರೆ (<ತಾಮರೆ) + ಹುಲ್ಲು (<ಪುಲ್) ]

**ತಾವರೆಯೆಲೆವಳ್ಳಿ** (ನಾ). ಒಂದು ಬಗೆಯ ಸಸ್ಯ : "ಚಾರು – ನರುವಲು, ತಾವರೆಯೆಲೆವಳ್ಳಿ" (ಒಷಧಿ. ೫೭).

[ ತಾವರೆ (<ತಾಮರೆ) + ಎಲೆ$_1$ + ಬಳ್ಳಿ ]

**ತಾವರೆವಂಡು** (ನಾ). ತಾವರೆಹೂವಿನ ರಸ, – ಮಕರಂದ : ತಾವರೆ ಮಂಡಿನ ತನಿಸೊಕ್ಕಿಂ ಸೊಕ್ಕಿದ ಪೆಣ್ಣಂಚೆಗಳಿಂಚರಗಳೊಳಂ (ಕಾದಂಪೂ.೦೦೭).

[ ತಾವರೆ (<ತಾಮರೆ) + ಬಂಡು$_1$ ]

**ತಾವರೆವಗೆ** (ನಾ). ಕಮಲದ ಶತ್ರು ; ಚಂದ್ರ : ಮೂವಣ್ಣಕ್ಕೀಡಪ್ಪಂ ತಾವರೆವಗೆಯೊಂದೆ ದಿನದೊಳ್ (ವ್ಯಷವಿ. ४-೧೦೫).

[ ತಾವರೆ (<ತಾಮರೆ) + ಪಗೆ$_2$ ]

**ತಾವರೆವಗೆಯು** (ನಾ). = ತಾವರೆವಗೆ : "ತಾವರೆವಗೆಯಂ ಹಿಮಾಂಶು" (ಕರ್ಣನಿ. ४) ; "ತಾವರೆವಗೆಯ ಚಂದಿರಂ" (ಶಬ್ದಮಂ. ೧೭).

[ ತಾವರೆ (<ತಾಮರೆ) + ಪಗೆ$_2$ + – ಅ$_7$ ]

**ತಾವರೆವಜ್ಜೆ** (ನಾ). ಕಮಲದಂತಿರುವ ಪಾದ: ತಳಿರ್ವಜ್ಜೆಗಳ ತಾವರೆವಜ್ಜೆಗಳ ತಳತಳಿಸುವ ರನ್ನವಜ್ಜೆಗಳ ನಳಿನನೇತ್ರೆಯರ್ (ಕುರಾಸಾಂ. ೨೧-೪೩). [ ತಾವರೆ (<ತಾಮರೆ) + ವಜ್ಜೆ ]

**ತಾವರೆವನೆಯ** (ನಾ). ತಾವರೆಯೇ ಮನೆಯಾಗಿ ಉಳ್ಳವನು; ಬ್ರಹ್ಮ: "ಅರಲಿಚ . . . ತಾವರೆವನೆಯ ಬಿದಿಯು ಬೊಮ್ಮಂ ಪರಿಕಿಸೆ ಸಲೆ ಬೇದಬಿಜ್ಜೆಗನುಮೆನೆ ಧಾತ್ರಂ" (ಕವಿಕಂ. ೨೯). [ ತಾವರೆ (<ತಾಮರೆ) + ಮನೆ + – ಅ$_7$ ]

**ತಾವರೆವಸೆಯ** (ನಾ). ತಾವರೆಯನ್ನು ಪೀಠವನ್ನಾಗಿ ಉಳ್ಳವನು; ಬ್ರಹ್ಮ: "ಅಂಚೆದೇರಂ, ನುಡಿವೆಣ್ಣನಿಯಂ . . . ತಾವರೆವಸೆಯಂ – ಈರ ಬ್ರಹ್ಮಂಗೆ ಪೆಸರ್" (ಕಶಸಾ. ೨-೧೫). [ ತಾವರೆ (<ತಾಮರೆ) + ಪಸೆ$_3$ + – ಅ$_7$ ]

**ತಾವರೆವಳ್ಳಿ, ತಾವರೆಬಳ್ಳಿ** (ನಾ). ತಾವರೆಯ ಬಳ್ಳಿ,–ಲತೆ: ಪುದಿದ ತಾವರೆವಳ್ಳಿಯ ತಟ್ಟಿನಿಂ ಪಸುಪಾರ್ಗೆ ನಿರಂತರಂ ಸೊಗಯಿಸಿರ್ಪುವು ಪೆರ್ಗೞಿಗಳ್ನಿರಂತರಂ (ಮಲ್ಲಿಪು. ೨-೪೫). **ತಾವರೆಬಳ್ಳಿ:** "ತಂತುಲಂ– ತಾವರೆಬಳ್ಳಿ" (ಒಷಧಿ. ೬೫). [ ತಾವರೆ (<ತಾಮರೆ) + ಬಳ್ಳಿ ]

**ತಾವರೆವಿಂಡು** (ನಾ). ಕಮಲಗಳ ಸಮೂಹ,–ಗುಂಪು: ಅಳಿವಿಂಡ ತೊಟ್ಟಿಲಾಡುತಿದೆ ತಾವರೆವಿಂಡು (ಹಬ್ಬರ. ೫-೭೭). [ ತಾವರೆ (<ತಾಮರೆ) + ಪಿಂಡು$_2$ ]

**ತಾವರೆವೂ** (ನಾ). = ತಾವರೆಯರಲ್: ನನೆಯುಂಬುಂ ತಾವರೆವೂವಿನ ಕೈಪೊಡೆಯಿಂ ಮನೋಭವಂ ತೊಡೆವವೊಲ್ (ಮಲ್ಲಿಪು. ೪-೧೭). [ ತಾವರೆ (<ತಾಮರೆ) + ಪೂ$_2$ ]

**ತಾವರೆವೊಕ್ಕುಳ** (ನಾ). ಹೊಕ್ಕುಳಲ್ಲಿ ಕಮಲವುಳ್ಳವನು; ಪದ್ಮನಾಭ; ವಿಷ್ಣು: "ಮುನ್ನೀರ್ವಕ್ಕೆಗನಿಂಗಡಲ ಕುವರಿಯೞಿಯಂ ತಾವರೆ[ಪಾಠಾಂ. ನೀರ್ವೂ]ವೊಕ್ಕುಳನಲರ್ಗಣ್ಣಂ ಹರಿಯಕ್ಕುಂ" (ಚತುನಿ. ೭). [ ತಾವರೆ (<ತಾಮರೆ) + ಪೊಕ್ಕುೞ್ + – ಅ$_7$ ]

**ತಾವರೆಹಕ್ಕಿ** (ನಾ). ಹಂಸ: "ಪುಷ್ಕರಾಹ್ವಃ, ಸಾರಸಃ . . . ತಾವರೇಹಕ್ಕಿ. ಕೊಳದ ಹಕ್ಕಿ" (ಸಿದ್ಧಾಂತಿ. ೧೪೦). [ ತಾವರೆ (<ತಾಮರೆ) + ಹಕ್ಕಿ$_1$ (<ಪಕ್ಕಿ$_1$) ]

**ತಾವಳಿ** (ನಾ). = ತಾವಡ (?): ಪೊಳೆವ ಬೆರಳುಗಳಾಗ್ರ ಮಿನುಗುತಿಹ ತಾವಳಿಯ ಪೋಲ್ವ ಚೆಳ್ಳುಗುರ್ಗಳನು ತೋರು (ನವಮೋ. ೭-೧೭). [ ? ]

**ತಾವಾರ** 'ತಾಳ್ವಾರ' ನೋ.

**ತಾವಿ** (ನಾ). ಕುದುರೆಯ ಕಾಲಿಗೆ ತೊಡಿಸುವ (ಬೆಳ್ಳಿಯ ಅಥವಾ ಚಿನ್ನದ) ಬಳೆ: "ವಳಯಂ ತಾವಿ[ಪಾಠಾಂ. ಲೋವಿ]ವೆಸರಕ್ಕುಂ" (ಪಂಗರಾ. ೮೧-೧೫). [ ? ]

**ತಾವೀಜ** 'ತಾವುಜ' ನೋ.

**ತಾವು$_1$** (ಕ್ರಿ). ತಾಳು; ಸಹಿಸು (?): ಸಾವಿಂಗೆ ಸಮತಿಂಗೆ ಆವುದಂತರವಯ್ಯ ಸಾವು ತಾ ಸಮತೆಗಳವಲ್ಲ ಕೋಪವನು ತಾವುದೇ ಸಮತೆ (ಸರ್ವಜ್ಞ. ೫೧೧). [ ? ]

**ತಾವು$_2$, ಟಾವು.** ಠಾಉ, ಠಾವು, ಥಾವು (ನಾ). ಎಡೆ; ಸ್ಥಳ; ತಾಣ: ಪರಮಪುರುಷರು ರೂಪುದೋಱಿಸಿ ಸರಿವರಲ್ಲದೆಯೊಂದು ತಾ[ಪಾಠಾಂ.ಠಾ]ವಿನೊಳಿರರು (ಜೀವಂಜ. ೬-೨); ಯಾ ತಾವಿಗೆ ಒಳಗೆ ಬಂದು ಹೊರಗನ್ನರು ತಾಗುತಿ[ಡ]ವ ಮಾಡಿದರೆ (ಸೌಇಇ. IX–ii, ೪೬೦–೨೩; 1465); ಉಱುಗಿತು ಬ್ರಹ್ಮಾಂಡ ದಿಕ್ತಟ ಹಮ್ಮುಗೆ ಹಱಿದುದು ಹಲವು ತಾವಿನಲಿ (ಮೋಹತ. ೩೭–೪೮); ನಾಲಿಗೆಯ ತೆರ ಬಾಡ ಸವಿ ತಿಳಿಯದು; ಮೇಲು ಕಬ್ಬಿನ ತಾವ ಮೂಸಲರಿಯವು (ಕಎಪು. ४३–೭); ನೀರಿಲ್ಲದ ತಾವು ಊರು ಕಟ್ಟಿದ ಹಾಗೆ (ಗಾದ). **ಟಾವು:** ಭಕ್ತನಿರ್ದ ಟಾವೇ ದೇವಲೋಕ (ಬಸವ. ೧೩೯); ಹರಿಯನು ನೆನೆಯುತಲಿ ಮನದಿ ಧೈರ್ಯವ ಬಿಡದೆ ಇರುತಿಹ ಟಾವಿಗೆ ಜರುಗಿತು ಒಂಭತ್ತು ಸಂಧಿ (ಹಸುಚ. ೧೩೨); ಹರಣಂ ತಿಣ್ಣಮಾದರ್ಗೆ ದಾವುಂ ಪಾವುಂ ನೀರೊಂದು ಟಾವುಂ ಪೊತ್ತುವ ಕಿಚ್ಚಿನ ಬೇಹುಮೊಳವು (ರಾಮಾಶ್ವ. ४೧-೭). **ಠಾಉ:** ಆ ಬಾಳಿಂಗೆ ಬಂದ ತೋಟ ಮನೆಯೂ ಮನೆಯ ಠಾಊ (ಸೌಇಇ. IX–ii, ४೦೭–೨೭; 1364); ನಾಕು ಗಡಿಇಂದ ಒಳಗಣ ಗದೆ ಮುಡೆ ೯ ಗದೆ ಮನೆ ಮನೆ ಠಾ[ಉ] ಯಿದಱೊಳಗೆ ಯಿಸರಣನಾಯಕ ಬಿಟ ಧರ್ಮ (ಕಇ. I, ೫೦–೧೯; 1432 ?). **ಠಾವು:** ವ್ಯಾಪಾರಿಸುವುದಕ್ಕೆ ಯೋಗ್ಯವಲ್ಲದಂತಪ್ಪ ಠಾವಿನೊಳ್ ಅವನೋರ್ವಂ ವ್ಯವಹರಿಸಲಿಚ್ಛೈಸಿಹಂ (ಪಂಚತಂ. ೨೯-೧೦); ಕಂಡಕಂಡ ಠಾವಿನಲ್ಲಿ ಮನ ಬೆಂದೊಡೆ ಗಂಡ ಚೆನ್ನಮಲ್ಲಿಕಾರ್ಜುನಯ್ಯನೆಂತೊಲಿವನಯ್ಯ (ಮಹಾದೇ. ಬ. ೧೨೦–೨೮೧); ಗರ್ವದ ರೀತಿಗಿದು ಠಾವಲ್ಲೆನುತ ತೆಗೆದೆಚ್ಚನಾ ಪಾರ್ಥ (ಕುವ್ಯಾದ್ರೋ. ೩-೪೯); ಅನ್ಯವೆಣಸದಿರು ನಂಬಿದ ಠಾವಿಗೆ ಕೆಡುವೆ ನೀನೆಚ್ಚಱಿಕೆ (ಪುರಂದ. ೧-೧೬೦-೪); ನಮ್ಮ ಠಾವು ಸೇರುವ ಮುಂಚಿತವಾಗಿ ಆ ಮಹಾತ್ಮನನ್ನು ಕಂಡು (ಕೈಲಾಕ. ೧೭). **ಥಾವು:** ಕಲ್ಲಹಳ್ಳಿ ವೋಣಿ ಥಾವಿನಲಿ ಕಾರೆಮಾಳಕೆ ಯಿಶಾನ್ಯದಲಿ ಕಲು ೧ (ಮೈಅರಿ. ೧೯೪೦, ४೭–೧೫; 1669). [ <ಪ್ರಾ. ಠಾಯ. / ಮರಾ. ಠಾವ. / ತಮಿ. ತಾವು, ತಾಟ್ಟು; ತೆಲು. ತಾವು, ಠಾವು ]

**ತಾವು$_3$** (ನಾ). ಕಾಗದದ ಹಾಳೆ: ಆ ಯಂತ್ರದಿಂದ ಒಂದು ತಾಸಿನೊಳಗೆ ನಾಲ್ಕು ಸಾವಿರ ತಾವು ಎರಡೂ ಮೈ ಮುದ್ರಿಸೋಣವಾಗುತ್ತದೆ (ಮುಂಬಯಿ. ४-४९). [ ←ಹಿಂ. ಮರಾ. ತಾವ್ ]

**ತಾವುಗಾಣ್, ಠಾವುಗಾಣ್** (ಕ್ರಿ). ನೆಲೆಯನ್ನು ಹೊಂದು; ಆಧಾರವನ್ನು ಪಡೆ: ರಾವಣಾಗ್ರಜನಂದದರ್ಥವು ಕೆಲವು ನೆಲದೊಳಗೆ ತಾವುಗಾಣದೆ ಹೋಯ್ತು (ನಿಭಾಗ. ೧೧–೨೯–೭). **ಠಾವುಗಾಣ್:** ನಾಸ್ತಿಕರ ನಂಬುಗೆಯ ಠಾವುಗಾಣದ ತತ್ತ್ವ (ಕುವ್ಯಾಉ. ೩-೩೬). [ ತಾವು$_2$ + ಕಾಣ್ ]

**ತಾವುಜ, ತಾವಜು, ತಾವೀಜ** (ನಾ). ೧. ತಾಯಿತಿ; ಯಂತ್ರ: ತೋಳ ರಕ್ಷೆಗಳ ತಂದೆಗೆ ತೋಱಿ ತಂದೆಯ ತೋಳ ತಾವುಜವ ಬೇಡುವನು (ಭರಚ. ೨೬-೩೦). ೨. ಒಂದು ಬಗೆಯ ಆಭರಣ: ತಾವುಜ ಕಡುಕು ಪೆಂಡೆಯವೆತ್ತಿ ಕೊರಲೆಡೆಗಾವರಿಸಿದ ಯಜ್ಞಸೂತ್ರ (ಭರಚ. ४೯-೨೩). **ತಾವಜು:** ೧. ಪ್ರಾಣಸಂರಕ್ಷಣ ಮಾಡುವಂಥಾ ತಾವಜಿನ ಹಾಗೆ ತಿಳಿದು (ರಾಜೇಂದ್ರ. ೧೧೯). **ತಾವೀಜ:** ೨. ತುಂಬಿದ ಮೈಗೆ ಕೊರಳಲ್ಲಿ ಚಿನ್ನದ ತಾವೀಜ (ನದೀಪ. ೭೭). [ ←ಹಿಂ. ಮರಾ. ತಾವೀಜ್; ಅರ. ತಾಅವೀಜ್ ]

**ತಾವುಸ** (ನಾ). ಒಂದು ಬಗೆಯ ಜಾಯಿಲೆ,–ರೋಗ: ಸನ್ ೧೬೮೯ರಲ್ಲಿ "ತಾವುಸ" ಯೆಂಬ ಪಿಡುಗಿನಿಂದ ಪಟ್ಟಣದ ನಿವಾಸಿಗಳು ಲಕ್ಷಾವಧಿ ಜನರು ಸತ್ತದ್ದರಿಂದ ಔರಂಗಜೇಬನು . . . ಔರಂಗಾಬಾದಿಗೆ ಹೋದನು (ಕಥಾಗ. ೫४೦). [ ? ]

**ತಾವೂರಿಬಾವೂರಿ** (ನಾ). "ಕಳವಳ, ಅಸ್ವಾಸ್ಥ್ಯ" (ಗರತಿ. ಕೋಶ): ತಾಯಿ ಕಾಣದ ಜೀವ ತಾವೂರಿಬಾವೂರಿ ಭಾಳ ಬಿಸಲಾನ ಅವರೀಯ ಹುವಿನ್ಹಾಂಗ ಬಾಡತೀನಿ (ಗರತಿ. ೫೨); 'ತಾಯಿ ಕಾಣದ ಜೀವ ತಾವೂರಿ ಬಾವೂರಿ' ಎಂದೆನಲು ಕಂಬನಿ ಒಡೆಯುತಿರೆ (ಸವೀಗೀ. ೧४-೯). [ ?. / ಮರಾ. ತಾವರೇ = ಭ್ರಮೆ, ಹುಚ್ಚು, ಭಾವರಾ = ಹುಚ್ಚು ]

**ತಾಶಾವಗ** (?). (?): ಕುಂಪುರಿಯಿಂದ ಗ ೧ 'ಇ = ತಾಶಾವಗನಿಂದ ೧ 'ಇ = ವಟ್ಟನಲು ಕೂಡಿದ ಹೆಚ್ಚಿಗೆಯಿಂದ ಗ ೨ 'ಇ (ಎಕ. VII, ಶಿವಮೊ. ೨೯-೨೦; 1712). [ ? ]

**ತಾಶೆ** 'ತಾಸೆ' ನೋ.

**ತಾಶೆಬಜಂತ್ರಿ** 'ತಾಸೆಬಜಂತ್ರಿ' ನೋ.

**ತಾಸ** (ನಾ). ಒಂದು ಬಗೆಯ ಸಸ್ಯ : " ಕಷಃ – ಖಚೋರ, ತಾಸಂ, ಕಂಚು ? " (ಒಷಧಿ. ೧೯). [ ? ]

**ತಾಸಾ** 'ತಾಸೆ' ನೋ.

**ತಾಸಿಲ್ದಾರ** 'ತಹಸೀಲುದಾರ' ನೋ.

**ತಾಸೀಲು** 'ತಹಸೀಲು' ನೋ.

**ತಾಸೀಲುದಾರ** 'ತಹಸೀಲುದಾರ' ನೋ.

**ತಾಸು** (ನಾ). ೧. ಒಂದು ಗಂಟೆಯ ಕಾಲ, – ಅವಧಿ: ಹನ್ನೆರಡು ತಾಸಿಗೆ ಜಾಗಟೆಯಂ ಕುಟ್ಟಿಸಲು (ಶರಲೀ. ೧೯೮) ; ಇನ್ನು ಒಂದು ತಾಸಿನವರೆಗೆ ಅವ್ವನ ಲಕ್ಷ್ಯ ಇನ್ನೊಂದು ಕಡೆ ಹೋಗುವುದಿಲ್ಲ (ಗಂಮಾಯಿ. ೧೪). ೨. ಸಮಯ; ಗಂಟೆ: ಲೀಲೆ ಅವನ ಕೂಡ ತಾಸುಗಟ್ಲೆ ಹರಟೆ ಹೊಡೆಯುತ್ತ ಕೂಡುತ್ತಿದ್ದಳು (ಕುಂಕುಮ. ೬೦) ; ಸಣ್ಣ ಮುಳ್ಳು ತಾಸು ತೋರಿಸುತ್ತದೆ (ಮುಂಬಯಿ. ೩-೮೫) ; ತಾಸಿನ ಗೊತ್ತು ದಾಸಿಗೆ ತಿಳಿದೀತೇ ? (ಗಾದೆ). ೩. ಒಂದು ಬಗೆಯ ಅಳತೆ : ದುಂಡುಕಟ್ಟಿಗೆಯ ಘೇರ ಎಷ್ಟು ತಾಸು ಇದ್ದೀತು ಅದಕ್ಕೆ ಅದೇ ಸಂಖ್ಯೆಯಿಂದ ಗುಣಿಸಿ ಅದಕ್ಕೆ ಉದ್ದಿನ ಗಜಾದಿಂದ ಗುಣಿಸಬೇಕು (ಮುಂಬವ್ಯಾ. ೧೩೧). ೪. ಕಾಲವನ್ನು ತಿಳಿಸಲು ಬಡಿಯುವ ಗಂಟೆ. ೫. (ಆಲಂ) ಯೋಗಿಗಳಿಗೆ ಮಾತ್ರ ಕೇಳಿಬರುವ ಅನಾಹತ ನಾದ. ೪, ೫: ತಾಸು ಬಾರಿಸುತಿದೆ ಕೇಳಿ ಹರಿದಾಸರೆಲ್ಲಾ (ಪುರಂದ. ೧-೬೬-೧).

**ತಾಸಿನಬಟ್ಟಲು** = ಸಮಯವನ್ನು ಕಂಡುಹಿಡಿಯಲು ಉಪಯೋಗಿಸುತ್ತಿದ್ದ ಒಂದು ಬಗೆಯ ಲೋಹದ ಪಾತ್ರೆ ; ಗಳಿಗೆಬಟ್ಟಲು : ತಾಸಿನಬಟ್ಟಲು ನೀರ ಕುಡಿದರೆ ತಾಸಿಗೆ ಕೊಡತೀ ಪೆಟ್ಟು (ಗಾದೆ). **ತಾಸು ಬಡಿ** = ಗಂಟೆ ಹೊಡೆ : ತಾಸುಬಡಿದ ಕೂಡಲೆ ಮಕ್ಕಳೆಲ್ಲಾ ತರಗತಿಗೆ ನುಗ್ಗಿದರು (ರೂಢಿ). [ ←ಅರ. ಮರಾ. ತಾಸ್ ]

**ತಾಸೆ, ತಾಶೆ, ತಾಸಾ** (ನಾ). (ಕೊರಳಿಗೆ ನೇತುಹಾಕಿಕೊಂಡು), ಎರಡು ತೆಳ್ಳನೆಯ ಕುಡುಹುಗಳಿಂದ, ಬಾರಿಸುವ) ಒಂದು ಬಗೆಯ ಚರ್ಮವಾದ್ಯ : ಆ ಮದುವೆಯಲ್ಲಿ ತಾಸೆ ಏನು, ಬಜಂತ್ರಿ ಏನು, ಬ್ಯಾಂಡಿನ ಆರ್ಭಟವೇನು (ಸಮಜೀ. ೯೫೪). **ತಾಶೆ :** ತಾಶೆ ಕಹಳೆ ಇಂಥಾ ವಾದ್ಯಗಳ ಧ್ವನಿಯಾಯಿತೆಂದರೆ (ಮುಂಬಯಿ. ೫-೧೦೪). **ತಾಸಾ :** ಕಹಳೆ, ಭೂರ್ಗ, ತುತೂರಿ, ನೌಬತು, ತಾಸಾ, ಮರ್ಫ, ಭಜಾಭಜಂತ್ರಿ ವಗೈರೆ (ಗುರುಧ ೧೧): ವಿಜೃಂಭಣೆಯಿಂದ ನಡೆಯತಕ್ಕ ಆ ಪ್ರಸ್ತುತದ ಮೆರವಣಿಗೆ ಮುಂತಾದ್ದಕ್ಕೆ . . . ಕೊಂಬು, ತಮಟೆ, ತಾಸಾ, ಮರಫ, ಖಾಸಾ ಓಲಗದವರು . . . ಕಳುಹಿಸಬೇಕೆಂದು ಅಪ್ಪಣೆಯಾಯಿತು (ಮೂಪುರ. ೬೪).

**ತಾಸೆಯುವ** = ತಾಸೆಯನ್ನು ಬಾರಿಸುವವನು: ಅದಕ್ಕಾಗಿಯೇ ಅವರು ತಾಸೆಯವರನ್ನು, ಬ್ಯಾಂಡಿನವರನ್ನೂ ತರಿಸಿದ್ದು (ಸಮಜೀ. ೪೮).

[ ←ಅರ. ತಾಸ್ ; ಹಿಂ. ತಾಸಾ, ತಾಶಾ ; ಮರಾ. ತಾಸಾ, ತಾಸ್, ತಾಶಾ ]

**ತಾಸೆಬಜಂತ್ರಿ, ತಾಶೆಬಜಂತ್ರಿ** (ನಾ). ತಾಸೆ ಎಂಬ ಚರ್ಮವಾದ್ಯವೇ ಮೊದಲಾದ ಓಲಗದ ಮೇಳ : ಸ್ವಲ್ಪ ಬಡವರು ತಾಸೆಬಜಂತ್ರಿ ತರಿಸಿಯಾರು (ಸುತು ಮು. ೬೪) : ತಾಸೇಬಜಂತ್ರಿಯ ಮೊದಲನೇ ತಡಾಕಿ ಬಿದ್ದದ್ದು ಕೇಳಿದ ದಿನವೇ . . . ಸುರುವು ಮಾಡುತ್ತಿದ್ದರು (ದೀಪಹ. II, ೧೧೭). **ತಾಶೆಬಜಂತ್ರಿ :** ಚಲೋ ತಾಶೆಬಜಂತ್ರಿ ಹಚ್ಚಿ ಮದಿವೀ ಮಾಡಿಕೋತೀನಿ (ಜೂಜು. ೧೩). [ ತಾಸೆ + ಬಜಂತ್ರಿ ]

**ತಾಹ$_1$** 'ತರ್' ಪರಾ.

**ತಾಹ$_2$** (ನಾ). ಸಂಧಾನ; ಒಪ್ಪಂದ: ಕಟಿವರರುಗಳ ಬೀಳ್ಕೊಂಡು, ನಾಲ್ಕು ತಿಂಗಳ ಮೇಲೆ ಬರುವ ತಾಹಗಳ ಮಾಡಿ (ವಾಲಿಕಾ. ೫೩). [ <ತಹ$_2$ ]

**ತಾಹಿ** 'ತಾಪು' ನೋ.

**ತಾಹುಳಿ** (ನಾ). ಒಂದು ಬಗೆಯ ಸಸ್ಯ : " ಅತ್ಯಮ್ಲ–ತನೆಲಿ ? ಹುಳಿಗ, ತಾಹುಳಿ " (ಒಷಧಿ. ೩). [ ? ]

**ತಾಹೆ** 'ತಾಪು' ನೋ.

**ತಾಳ್$_1$**, ತಾಳು$_1$ (ಕ್ರಿ). ತಾಳ್ದು$_2$ (ಭೂತಕೃ), ತಾಳ್ವ (ಭವಿಕೃ). ೧. ಹೊಂದು; ಪಡೆ: ಪಟ್ಟಬದ್ಧೋತ್ಸವಮನತಿಶಯಂ ಮಾಡಿ ಸಾಮ್ರಾಜ್ಯದೀಕ್ಷಾಗುರು ತಾಳಲ್ ದೀಕ್ಷೆಯಂ (ಅಜಿಪು. ೬-೮೭) ; ನಿಮ್ಮ ರ್ಗಳವಪ್ಪ ಕೀರ್ತ್ತಿಯಂ ಭರತಚಮೂಪ ತಾಳ್ದು (ಎಕ. VI, ಚಿಕ್ಕಮ. ೧೬೦-೪೯ ; 1103); ಅತುಳ ವಿರತಿಯಂ ತಾಳ್ದನಂದೋಹಿಲಾಂಕಂ (ಉದ್ಭಟ. ೧೦-೪೬): ಮುಟಿವನಿಯಂ ಧರಾತಳದೊಳೊಂದೆರಡೆಂದೆಣಿಸಲ್ಕೆ ಶಕ್ತಿಯಂ ತಳೆದೊಡೆ ತಾಳಲಕ್ಕು (ಬಾಧಪು. ೧-೫೩) ; ಕೋಮಲವಾದ ನುಣ್ಪಂ ತಾಳ್ವ . . . ಬಿಲ್ವಪತ್ರೆಯನೆಯ್ದೆ ಕೊಯ್ದು (ಬಸಪು. ೪೩-೨೬) ; ಮದಮಾತಂಗಗಳಂ ಸೀಳ್ದು ತಾಳ್ದು ಜಗದ್ವಿಶ್ರುತವರ್ತಿ ಕೀರ್ತಿಯಂ (ರಾಜಶೇ. ೧-೧೨). ೨. ಧರಿಸು ; ತಳೆ : "ತಾಳ್–ಧಾರಣೇ" (ಶಮಧಾ) : ಹೃದಯದೊಳೆ ತಾಳ್ದ ಮಣಿಹಾರಂಬೋಲ್ (ಕವಿರಾ. ೧-೧೩) ; ಇರ್ವರುಂ ಗರ್ಭಮಂ ತಾಳ್ದರ್ (ಪಂಪಭಾ. ೧-೮೫ ವ) ; ಸಕಲ ವಸುಂಧರಾವಳಯಮುಂ ರತ್ನವಳಯಮುಮಂ ತಾಳ್ವಂತೆ ನಿಜ ಭುಜಾಗ್ರದೊಳ್ ತಾಳ್ದು (ಪಂಚತಂ. ೧೫-೧೫) ; ಭೂಪಾಲ ವೆಸರಂ ತಾಳ್ದ[ಪಾಠಾಂ. ತಳೆದ] ಪಂಕೇಜಸಖಕುಲದ ಪೀಳಿಗೆಯ ರಾಯರ್ಗೆ ವೀರಸಿರಿ ಸಲೆ ನಲಿದು ಕೈಗೆಯ್ದು (ಹಚಕಾ. ೧-೩೫) ; ಮಾಯಾರೂಪಮಂ ತಾಳ್ದು ಬರ್ಹಿಪಿಂಛಂಬಿಡಿದು (ಪದ್ಮರಾ. ೧೦-೧೬೪) ; ಮಸಗಿದ ಕಾಲರುದ್ರನ ರೂಪ ತಾಳ್ದನು ವೈರಿಸೇನೆಯಲಿ (ಕುವ್ಯಾದ್ರೋ. ೮-೨೬) ; ಧ್ಯಾನವನು ಮಾಡಿದೆನು ಮೌನವನು ತಾಳಿದೆ (ಪುರಂದ. ೨-೧೮-೩). ೩. ಸಹಿಸು ; ತಡೆದುಕೊಳ್ಳು; ಸಮಾಧಾನದಿಂದಿರು : ತನು ತಾಳಲಾಱದನ್ನೆಗಮೆನಸುಂ ನೀನದಱೊಳಾತ್ಮಶಕ್ತಿ ಕ್ಷಯಮಪ್ಪಿನೆಗಮಿರಲ್ಕಕ್ಕುಮೆ (ಅಜಿಪು. ೨-೫೯) ; ನಂಟರುಣ್ಣಲುಡಲುಂಟಾಗಿರ್ದುದಂ ತಾಳದಾ ಕಡುಪಾಪಿಷ್ಠನ . . . ನುಡಿಸಲ್ ಸಜ್ಜನರೊಲ್ವರೇ (ಸೋಮೇಶ. ೧೯) ; ಕಪಟಮಳಿಜಸಮೃಶಿಕ್ರೂರಮನ್ಯಾಯಮಿವು ತದ್ವಸುಮತೀಪತಿತೆ ತಾಳದೆ ಕಂಪಿಸುತ್ತಿರ್ಪಳೇನೆಂಬೆನಚ್ಚರಿಯನು (ಚೆಬಪು. ೩-೧೧) ; ಕುದ್ದಾಲಹತಿಯನುಱೆ ತಾಳ್ದಿಮ್ಮನಿನ್ನೆಗಂ ಮುದ್ದುಗೈದೀ ವಸುಧೆ ಬೆಳೆಯಿಸಿದಳ್ (ಜೈಮಿಭಾ. ೩-೩೧) ; ತಾಳಲಾರಳ್ ಬೆಳ್ಳಿ ಮನೆಗಾಯ್ತು ಮಯ್ಮೆ (ಕಾಲೂರ. ೧೪೩-೩೧೦). ೪. ಕಳೆದುಹೋಗು : ಮಗಧಭೂಪಾಲಕನ ಸಮರದೊಳ್ ದಿವಸವಿಪ್ಪತ್ತೇಳು ತಾಳಿದುದು (ತುರಂಗ. ೧೯-೧). ೫. ಸ್ವೀಕರಿಸು ; ತೆಗೆದುಕೊಳ್ಳು. ೬. ಈಡಾಗು ; ಒಳಗಾಗು : (ಶ). ೭. ಬಾಳಿಕೆ ಬರು ; ತಾಳಿಕೆ ಬರು : (ಶ). **ತಾಳು$_1$ :** ೧. ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದರೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು (ಮಹಾದೇ. ಬ. ೪೫-೧೦೬) ; ಕೋಪಮಂ ತಾಳುವರು (ಸಿದ್ಧರಾ. ೧-೨೦) : ದುಗುಡವ ತಾಳಲಾಗದು ಬೊಪ್ಪ (ಕುವ್ಯಾದ್ರೋ. ೪-೪೧) ; ದಾಳಿಂಬ ಖರ್ಜೂರ ದ್ರಾಕ್ಷಿ ಸೌರಭ್ಯವ ತಾಳಿದನೇಕ ಪೂದೋಟ ಕೇಳಿಯ ವನಗಳಿದ್ದುವು (ಮೋಹತ. ೨-೫೩) : ಆತ ತನ್ನ ವಿಷಯದಲ್ಲಿ ಹಲವಾರು ಬಾರಿ ಮರುಕವನ್ನು ತಾಳಿದ್ದುಂಟು (ಒಂಟದ. ೪). ೨. ಅನಾದಿ ಗಣೇಶ್ವರತ್ವಮಂ ತಾಳಿ ನಾನು ಮಾಯಾಕೋಳಾಹಳನಾಗಿ ಬಂದೆನೆಂದು (ಶೂನ್ಯಸಂ. ೬-೨) ; ಅಪ್ಪಣ್ಣ ಭಾಗವತನ ವೇಷವ ತಾಳಿ[ಪಾಠಾಂ. ರೂಪವು ತಾನಾಗಿ] ತುಪ್ಪದ ಬಿಂದಿಗೆ ತಂದ (ಪುರಂದ. ೨-೬೬-೪) ; ಹರಿಭಕ್ತಿ ಮನದಲಿ ತಾಳುವುದು ಹಿರಿದಾಗಿ (ಹರಿಸಾ. ೧೦೨); ನಾಲಿಗೆ ಕುಡುಹು ಶರೀರವೆ ವಾದ್ಯ ನಿರಾಳಾತ್ಮನೇ ವಾದ್ಯಕಾರ ತಾಳಿ ನುಡಿಸುತಿರ್ದು ಬಿಟ್ಟು ಹೋದರೆ ದೇಹ ಡೋಳಿನಂದದೊಳು ಬಿದ್ದಿಹುದು (ಭರಜ. ೧-೦೧೩). ೩. ಗುರು ಮುನಿದಡೆ ಒಂದು ದಿನ ತಾಳುವೆ ಲಿಂಗ ಮುನಿದಡೆ ದಿನವರೆ ತಾಳುವೆ ಜಂಗಮ

ಮುನಿದಡೆ ಕ್ಷಣಮಾತ್ರ ತಾಳಿದೆನಾದಡೆ ಎನ್ನ ಪ್ರಾಣದ ಹೋಕು (ಬಸವ. ೮೩೩); ಕಾಲಭುಜಗನು ಗರುಡನುಳಿವನು ತಾಳದಂದದಿ ಪಾಂಡವರು ನಿನ್ನೇಳಿಗೆಯ ಸೈರಿಸರು (ಕುವ್ಯಾ.ಉ. ೮-೨೯); ಕೇಳನೋ ಹರಿ ತಾಳನೋ ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ (ಪುರಂದ. ೪-೭೭ ಅನುಪಲ್ಲವಿ); ಅಗಲಕೆ ಭೂಮಂಡಲ ಕಿಱಿದುಬ್ಬಲು ಮಿಗೆ ತಾಳವಷ್ಟದಿಕ್ಕು (ಕಂನವಿ. ೬-೪); ಫಲವೆಂಬೆ ಬರಲಿ ಯುಗಯುಗವು ತಾಳಿ ಎದೆಗಡದೆ ಇರುವನಾತ (ಅರಳು. ೧೭೭-೫); ದಯಮಾಡಿ ತಾಳಿಕೊಂಡು ಮುಟ್ಟಿಸಿಕೊಳ್ಳಿರಿ (ಬಟ್ಟಿಹೊ. ೬೦); ತಾಳಿದವ ಬಾಳಿಯಾನು (ಗಾದೆ). ೭. ಸದರಿ ಮಾಲು ಘಟ್ಟಿಯಾಗಿದ್ದು ಬಹಳ ದಿವಸ ತಾಳುತ್ತದೆ (ಮುಂಬವ್ಯಾ. ೫೦೩). ೮. ತಡೆ; ನಿಧಾನಿಸಂ: ಎಮ್ಮ ಶಿವಲಿಂಗ ತಾಳಿಂತಲ್ಲ ಬಸವೇಶ . . . ಬಕ್ಕೆವಲಸಿನ ಪಣ್ಣದೆಮ್ಮ ಲಿಂಗಾಭೀಷ್ಟ (ಸಿಂಗಿರಾ. ೯-೧೭); ಕಾಲನ ದೂತರು ಕಾಲ್ಪಿಡಿದೆಳೆವಾಗ ತಾಳು ತಾಳೆಂದರೆ ತಾಳುವರೆ (ಪುರಂದ. ೧-೧೪-೨). ೯. ಒಗ್ಗು; ಹೊಂದಿಕೆಯಾಗಂ: ಈ ಮೇರೆಗೆ ತಾಳದಿದ್ದರೆ ದೇಹಾನುಗುಣ ವರಿತು ತೆಗೆದುಕೊಳ್ಳಲು . . . ಸೋಮರೋಗ ಮುಂತಾಗಿ ಪರಿಹಾರ ಮಕ್ಕುಂ (ಸಕವೈ. ೬೯೩). ೧೦. ಭಾರ ಹೊರಂ; ಹೊತ್ತುಕೊಳ್ಳು: ಉರ್ವರೆಗೆ ಕೆಡೆದುರುಳ್ವಮುನಿಪನನರಸಂ ತಾಳ್ದಿರ್ದನೊಂದು ಜಾವಂಬರೆಗಂ (ಧರ್ಮಾಮೃ. ೪-೧೭೦); ತಾಳುವಾಧಾರಕ್ಕೆ ಕರವನು ಮಾಲಿಯಾಂತನು (ಸಂಭಪ. ೫-೧೦೩); ಕಣ್ಣ ಹೊಳಹು ಪುಷ್ಪಾಂಜಲಿಯಾಗೆ ಕಲಶಕುಚಗಳ ತಾಳದೆ ನಲ್ಲನುರಮೆಂಬ ಲಲಿತರಂಗದೆ ನಟಿಸಿದಳು (ಕಂನವಿ. ೧೦-೪೮).

**ತಾಳಿಕೊಳ್** = ಸಹಿಸಿಕೊಳ್ಳು; ಸೈರಿಸಂ: ತಾಳಿಕೊಳ್ವಾನೆಚ್ಚ ಬಾಣವ ಬಲುಹ ನೋಡುವೆನು (ಕಾಶಿರಾ. ೨೭-೩೭); ಕಾಳರಕ್ಕಸಿ ಪೊಡೆದಳದ್ರಿಯಂ ಬರಸಿಡಿಲ್ಪೊಡೆವಂತೆ ಪ್ಲವಗಪತಿಯ ತಾಳಿಕೊಂಡಾ ಕೊಲೆಗೆ ಕಿನಿಸಾಳದೆ (ವೆಂಕಾರಾ. ೫-೩-೦೫).

[ ದೇ.॥ ತಮಿ. ತುಳು. ತಾಳು; ಕೊಡ. ತಾಳ್; ತೆಲು. ತಾಳು ]

**ತಾಳ್₂**, ತಾಳ್₁, ತಾಳು₂, ತಾಱ್₁, ತಾಱು (ನಾ). ೧. ಮರಗಿಡ ಗಳ ಕಾಂಡ,–ಕಾವು; ತೊಟ್ಟು: ಹಣ್ಣಿಗೆ ತಾಳಿಹ ದೃಷ್ಟದಥತಾಯಿತ್ತು (ಮೋಳಿಮಾ. ೧೦-೩೩); ತನ್ನ ತಾಳಂ ತಾನಱಿಯದೀ [ಪಾಠಾಂ.ತಾನಂತಱಿಯದಿರದೀ] ಕುಠಾರಮೆಂದೆನ್ನದೇಯುದಕೆ ಕಾವಂ ತನ್ನ ಕೊಂಬಿಂದ ಮುನ್ನ ಱಿಯದೇ ಕೊಡುವ ಮರದಂತೆ (ಸಮ್ಯಕ್ತಾ. ೧೦-೭೦). ೨. ಮುಳುಗುಂಬಿಕೆ; ಇಳಿಯಂಬುದು: (ಕ). **ತಾಳ್₁ :** ೩. ರಥದ ತಳಭಾಗ: (ಕ). **ತಾಳು₂:** ೧. ಮುಟ್ಟದರೆ ಮುನಿವನ ತಾಳನರ್ಚಿಸಿ ಎಳಿಯಂ ಕಟ್ಟಿಸಿ (ಸಕವೈ. ೨೯೮); ಅವುಗಳ ಎಲೆಯನ್ನು ಮುಟ್ಟಬೇಕಾದರೆ . . . ತಾಳು ಗಳನ್ನು ಹತ್ತಿಯೇ ನೋಡಬೇಕು (ಬಾಲಪ್ರ. I, ೮೦); ನಕ್ಷತ್ರಾಕಾರದ ಹೂವುಗಳೆಲ್ಲವೂ ಮರದ ತಾಳಿನಲ್ಲೇ ಅಡಗಿ ಹೋದವು (ಯೋಧಪು. ೪೭). ೪. ಬುಡ; ತಳ; ಬೊಡ್ಡೆ: ಪೂರ್ವಕ್ಕೆ ತಾಳಾಗಿ ಉತ್ತರಕ್ಕೆ ತಲೆಬಾಗಿ ಬಿದ್ದ ಮರನ ತಂದು (ಸರ್ವವ. ೧೦೫-೫೭೭); ನಾಲಗೆಯು ತಾಳಿನಲ್ಲಿ ಕಪ್ಪಾಗಿದ್ದು ತುದಿಯಲ್ಲಿ ನಿರ್ಮಲವಾಗಿ ಇದ್ದರೆ ವಾತಶ್ಲೇಷ್ಮ ವಿಕಾರ (ಸಕವೈ. ೦೪); ತಾಳಿನಿಂದ ಕೊಂಬೆಯವರೆಗೆ ಮುದುಕನ ಹಣೆಯಂತೆ ಸುಕ್ಕು ಕಟ್ಟಿಕೊಂಡು ಹೋಗುತ್ತದೆ (ನಿಬಂಧ. II, ೪೧೨); ತನ್ನ ಉದ್ದನೆಯ ಚಾಟಿಗೋಲಿನ ಮೇಲೆ ತುದಿಯಿಂದ ತಾಳಿನವರೆಗೆ ಕೈಯಾಡಿಸುತ್ತ (ಪುನರು. ೨೬೩). ೫. ಧಾನ್ಯ ತೆಗೆದ ತೆನೆ; ಹೊಟ್ಟು: ತಾಳು ಬಡಿದರೆ ಕಾಳು ಸಿಕ್ಕೀತೆ ? (ಗಾದೆ). 'ತಾಳುಕಂಪ್ಪೆ' ಪರಾ. ೬. ಭಾಗ; ಪಾಲು (?): ಕಡೆಯ ಬಲಕಿನ ತಾಳು ಎಡೆಯಾಯ್ತು, ಅರಸನಿಗೆ ಎಡಗಡೆಯ ತಾಳು ಪಶುಪಕ್ಷಿ ಜೀವನಕೆ ನಡುವಿನ ತಾಳು ರೈತನಿಗೆ! (ಕರಡ. ೮೦). △ **ತಾಱ್₁ :** ೪. ದೇವಶೈಲದ ತಾಱೊಳ್ ಪರಿಗೊಂಡ ಗಂಧನದಿಯಂ ಕಂಡಂ (ಲೀಲಾವ. ೮-೪೭). ೭. ಮರ; ಗಿಡ: "ತಾಱ್–ಒಂದು ಮರಂ, ಅಗುಟೀ, ಸೂರಣದ ದಂಟು" (ಶಮದ. ಪರಿ. ೧); ದಾಳಿಂಬದ ತಾಱ್ಗಳ್ ನಿಟ್ಟಪರ ದಿಟ್ಟಿಗಿಟ್ಟಳಮೆಸೆಗುಂ (ಶಬ್ದಾನು. ೧೯೩ ಪ್ರಯೋ). △ **ತಾಱು :** ೭. ತೆಂಗಿನ ಕೌಂಗಿನ ತಾಱುಗಳಿಂ ಮುಱಿದುದೊಂದು ಪೊಸ ಸಸಿದೋಂಟಂ (ಶಬ್ದಾನು. ೧೯೩ ಪ್ರಯೋ).

[ ದೇ.॥ ತಮಿ. ಮಲ. ತಾಳ್; ಕೊಡ. ತಳಿ; ತೆಲು. ತಾಲು ]

**ತಾಳ್₃**, ತಾಟ್ಕೆ, ತಾಡಿ, ತಾಡೆ₁, ತಾರು₃, ತಾಳು₃, ತಾಳ್ಕೆ, ತಾಱ್₂, ತಾಟಿ (ನಾ). ೧. ತಾಲವಮರ; ತಾಳೆಯಮರ: "ತಾಳ್(ತಾಳಿ)–ತಾಲ= ಒಂದು ಮರ" (ತದ್ಭಕೋ. ೧೭); ಒಟ್ಟಿದರು ತಾಳೇಳಬುದ್ದದಲಿಟ್ಟಣೆಸಿ ಹಳಿವರವನುರಿಗಳಲಿಟ್ಟು ಬೊಬ್ಬಿಱಿದಬ್ಬರಿಸಿದರು (ತೊರರಾ. ೫-೭-೯); ಉರಗನ ಬೆನ್ನ ಮೇಲೊಗೆದಿರ್ದ ತಾಳೇಳ ಸರಳಿಂದ ಕಡಿದ ರಾಘವನ (ಮೋಹತ. ೧೧-೧). ೨. ಅಗುಳಿ; ತಾಪಾಳಂ: ತಿವಿದರೆ ತಾಳೊಡೆವುದು ಪಡಿ ತೆಱೆವುದೆಂದವನೀಶ ಕುಟ್ಟಿ ತೋಱಿದನು (ಭರಡ. ೨೯-೬೦). **ತಾಟ್ಕೆ :** ೧. 'ತಾಟಿಬೆಲ್ಲ', 'ತಾಟಿಮರ' ಪರಾ. ೩. ತಾಳೆಯ ಮರದಿಂದ ತಯಾರಾಗುವ ಸಾರಾಯಿ,–ಹೆಂಡ: ನೊರೆವಾಲ ಚೆಲ್ಲಿ ತಾಟಿಯ ಬಯಸಿ (ಕವಿಜ. II, ೩೦೮ ಭಕ್ತಿಬಿನ್ನಹದ ರಗಳೆ). **ತಾಡಿ :** ೩. ಕಾನಡಾ ಜಿಲ್ಲೆಯವರು ತಾಡೀ ತೆಗೆಯುವ ಕೆಲಸವನ್ನೇ ಮಾಡುತ್ತಾರೆ(ಕಥಾಗ. ೧೭೭). **ತಾಡೆ₁:** ೧. ಬಿತ್ತುವ ಮುಡೆ ತಾಡೆ ಬಯಲು ಮುಗಿಚಿ ಬೆಂದು (ಸೌ೩೨. ಕಾರಕಳ್. ೪೭೮-೧೨; 1394). **ತಾರು₃ :** ೨. 'ತಾರಂಗದವು' ಪರಾ. **ತಾಳು₃:** ೧. "ತಾಳಂ ತಾಳಧ್ವಜಂ ಧ್ರುವಂ ಪತ್ರಿಯೆನೆ ತಾಳು" (ಮಂಗರಾ. ೩೪-೯). ೨. ಸೊಸೆ ಬೇಸರದಿಂದ ಕೋಣೆಯ ಒಳಗೆ ಹೋಗಿ ತಾಳು ಹಾಕಿ ಕೊಂಡಿದ್ದಾಳೆ (ಚಿಕರಾ. ೪೩). **ತಾಳ್ಕೆ :** ೧. "ತೃಣರಾಜಾಹ್ವಯಃ, ತಾಲಃ, ಈ ೨ ತಾಳೆಯ ಮರ" (ನಾಚಿರಾ. ೧೧೭); ಜಾಲ ಹಾಲೆ ತಾಳೆ. . .ಮುಂತಾದ ಹೆಮ್ಮರಗಳು ವತ್ತಾಗಿ ತೋರ್ದಪಾ ವನದಿ (ಸೌಗಂಪ. ೨-೩೪); ಅವನಿಗೆ ತಮ್ಮ ಆಸ್ತಿಯಲ್ಲಿದ್ದ ತಾಳೆಗಳನ್ನು ಗುತ್ತಿಗೆಗೆ ಕೊಟ್ಟು (ಒಡ್ಡಿಉ. ೪೭). △ **ತಾಱ್₂ :** ೧. ನೂರ್ವರುಂ ಪೊನ್ನ ತಾಱ್ಗಳ್ ಸೂಱೊಳ್ ಬೀಟ್ವಂತೆ ಬಿಟ್ಟರ್ (ಪಂಪಭಾ. ೧೧-೯೫); ಬೆಟ್ಟದ ತಾಱ್ಪುದಿದ ಬನಂ ಗಳಲ್ಲಿ ಬೀಡಂ ಬಿಟ್ಟಂ (ಕಬ್ಬಿಕಾ. ೨೩೭); ಅವಂ ತಾಂ ತಾನೆ ಭೇರರ್ತ ತಾಱ್ ನೆಲದೊಳ್ ಬಿಟ್ಟಪೊಲಾರ್ದು ಬಿಟ್ಟಂ (ಜಿಕವಿ. ೪-೧೪೫). ೨. "ತಾಱ್–ಒಂದು ಮರಂ, ಅಗುಟೀ, ಸೂರಣದ ದಂಟು" (ಶಮದ. ಪರಿ. ೧); "ತಾಱಿಂದು ಅಗುಟೀ" (ಕಶಸಾ. ೦೭-೩೦೩); ಒಲವಿಗಮುಂಟೋ ತಡವ ತಾಱೊಲವಿಗರ ಮೃದು ಕಣ್ಣೀರ್ ಸಾಕ್ಷಿದರ್ಕುಂ (ಕುಚಳ್. ೧-೮-೧). ೪. ತಾಳೆಗರಿ; ತಾಡೋಲೆ: ಬರೆದೋಲೆಗಳಂ ಕಿಡಿಸುವಂತು ತಾಱೊಳ ಪಗೆಯೇ (ಬಂಹರಿ. ೦-೧೧). △ **ತಾಟಿ :** ೧. ಭ್ರಾಂತೇಂ ಫಣಿನಿಳಯಂ ತಾಟಿಂ ತೆಂಗಿನ ಮರನನಿರ್ದದಱಿಂದಱುಗೆಯ್ಯಂತರದೊಳ್ ಬಡಗಲ್ ನಿರುತಂ ತೋಡುಗೆ ನಾಲ್ಕು ಪುರುಷದೊಳ್ ನೀರಕ್ಕುಂ (ಲೋಕೋಪ. ೫-೨೭); ತಾಳಫಳಂದಿಂಗೆಮ ಗೋಪಾಳರ್ ಖಳನಿಂದೆ ತಾಟನಿಟ್ಟಪೆನೆನುತುಂ (ಜಗವಿ ೫-೨೩).

**ತಾಱುದ್ದ**=ತಾಳೆಯ ಮರದಷ್ಟು ಎತ್ತರ,–ಉದ್ದ: ತಾಱುದ್ದಂಬರ ಮುತ್ತಲ್ಲೊಳಮಸ್ಕನ್ಧಿಂಧು ಕಾಟ್ಪುರಂಬರಿವಿನೆಗಂ ತಾಳುಂತಟ್ಟುಂ ಬೊಯ್ದರ್ (ಪಂರಾಮಾ. ೦೩-೬೪). ℙ ಈ ಶಬ್ದದ ನಿಷ್ಪತ್ತಿಯ ಬಗ್ಗೆ ಭಿನ್ನಾಭಿಪ್ರಾಯಗಳಿವೆ.

[ <ಸಂ. ತಾಲ./ತಮಿ. ತಾಳ್, ತಾಟ್; ಮಲ. ತಾಟ್; ತೆಲು. ತಾಳ ]

**ತಾಳ್₄**, ತಾಳ್ಗೆ₃ (ನಾ). ಗಂಟಲಂ: ತಾಱುವ ತಾಳ್ಗಳುಮುಗುರ್ವಿಸಲ್ ಕಾಡುಕೋಣನೆಯ್ದಿದುದಟಲಂ (ಜಗವಿ. ೦೭-೬೪). **ತಾಳ್ಗೆ₃ :** ನಿರ್ದ್ರವದ ತಾಳಿಯಲಿ . . . ಗೋಪಾಳಕರು ಬಂದೆಱಗಿ ಬಿನ್ನೈಸಿದರು ಭೀತಿಯಲಿ (ಜೀವಂಚ. ೬-೫). [ <ಸಂ. ತಾಲು ]

**ತಾಳ₁** 'ತಾಳ್₂' ನೋ.

**ತಾಳ₂** 'ತಾಲ' ನೋ.

**ತಾಳ₃** (ನಾ). ಹುಲ್ಲು ಕೀಳಲು ಉಪಯೋಗಿಸುವ ಸಾಧನ; ಕುಂಟೆಗೆ ಹಾಕುವ ಕಬ್ಬಿಣದ ಹಲ್ಲು: ಅವಕ್ಕೆ ಜೋಡಾಗಿ ಬೇಕಾಗುವ ಕುಡ, ಮುಂಜ, ತಾಳ ಮೊದಲಾದ ಲೋಹದ ಸಾಮಾನುಗಳೂ (ಕನ್ನಜಾ. ೦೩೦). [ ? ]

**ತಾಳಂಗುಟ್ಟು**, ತಾಳಗುಟ್ಟು (ಕ್ರಿ). ೧. ತಾಳಕುಟ್ಟು; ತಾಳಹಾಕು. ೨. ತಾಳದಂತೆ ಕುಟ್ಟು; ಒಂದಕ್ಕೊಂದಂ ಬಾರಿಸು,–ಅಪ್ಪಳಿಸು: ಚಂದ್ರಾರ್ಕಬಿಂಬಂಗಳಿಂ ಕೊಳೆ ತಾಳಂಗುಟ್ಟುವ . . . ಈಶಪ್ರಮಥಸಮಿತಿ ಬಂದತ್ತು (ಜಗವಿ. ೦೮–೧೧). **ತಾಳಗುಟ್ಟು**: ೨. ತಾಳಗುಟ್ಟುವರು ರವಿಶಶಿಗಳನು (ಸಿದ್ಧರಾ. ೧–೨೦). [ ತಾಳ₂ ( = ತಾಲ) + ಕುಟ್ಟು₁ ]

**ತಾಳಂದೋಱು** (ಕ್ರಿ). ತಾಳವನ್ನು ಸೂಚಿಸು; ತಾಳ ಹಾಕು: ಒಕ್ಕೈಯಿಂ ತಾಳಂದೋರ್ಪುದುಂ (ಅದ್ಭುತ. ೩೪–೫).

[ ತಾಳ₂ (=ತಾಲ) + ತೋಱು (<ತೋಱು) ]

**ತಾಳಕ** 'ತಾಲಕ' ನೋ.

**ತಾಳಕಂಗಣಿಗೆ** (ನಾ). ಒಂದು ಊರಿನ ಹೆಸರು (?): ಶ್ರೀಮಧುಸೂದನ ದೇವರ್ಗಂ ಅಲ್ಲಿಯ ಮಹಾಜನಂ ನಾಲ್ಕೂರ್ವರ್ಗಂ ತಾಳಕಂಗಣಿಗೆಯಂ ಪ್ರತಿಷ್ಠಂ ಮಾಡಿ (ಕಇಅ. ೮–೩–೨೮೫; 1062). [ ? ]

**ತಾಳಕೋಲು** (ನಾ). ಅಗುಳಿ ತೆಗೆಯುವ ಕೋಲು: ಪೂಜಿಸಲು ಬಂದ ಪಂಡಿತನು ಕದದಗುಳಿಯಂ ತಾಳಕೋಲಿಂದ ನೂಂಕಿ (ಸೋಮಚ. ೪–೩೮).

[ ತಾಳ₂ ( = ತಾಲ ) + ಕೋಲು₁ (<ಕೋಲ್₁) ]

**ತಾಳಗಣನೆ** (ನಾ). [ಸಂಗೀತ] ತಾಳವನ್ನು ಎಣಿಸುವಿಕೆ; ಸಂಗೀತದ ತಾಳಮಾನದ ಗಣನೆ: (೬). [ ತಾಳ₂ ( = ತಾಲ) + ಗಣನೆ ]

**ತಾಳಗತಿ** (ನಾ). [ಸಂಗೀತ] ತಾಳದ ಲಯ: ನಲಿನಲಿದು ಪುರವೀಧಿ ವೀಧಿಗಳೊಳಗೆ ಜತಿಗಳ ತಾಳಗತಿಗಳಿಗೆಳಸಿ ಕುಣಿದಾಡುವ (ಬಸಪು. ೫೨–೪೨).

[ ತಾಳ₂ ( = ತಾಲ ) + ಗತಿ ]

**ತಾಳಗತ್ತು**(ನಾ). ತಾಳದ ರೀತಿ,–ಕ್ರಮ: ಬಯಲಾಟದವರ ಹಿಮ್ಮೇಳದಿಂದ ದನಿ ತಾಳಗತ್ತಿನ್ಯಾಗ ಬರತದ ಕುಣಿವುತೀಗ (ಹಾಡುಪಾ. ೨೪–೪); ನಿನ್ನ ಸ್ವಚ್ಛಂದದುಸುರ ಕೇಳುತ್ತಲೆ ತಿಳಿಯುವುದು – ಹಾಡುಗಾರರ ತಾಳಗತ್ತಿನ ಮೇಳ (ಉಯ್ಯಾಲೆ. ೯೭–೧೦); ಅವನ ತಾಳಗತ್ತಿಗೆ ಸರಿಯಾಗಿ ಅವರು ಊದುತ್ತಿದ್ದರು (ಮೇದಿಮು. ೩೨). [ ತಾಳ₂ ( = ತಾಲ ) + ಗತ್ತು ]

**ತಾಳಗುಟ್ಟು** 'ತಾಳಂಗುಟ್ಟು' ನೋ.

**ತಾಳಗೆ₁** (ನಾ). ತಾಳೆಮರ: ವಕುಳಂ ದಾಳಿಂಬವಶ್ವಾದ ತಾಳಗೆ ನೇಱಲ್ಪನಸು . . . ಇವಱಿಂದ ರಂಜಿಸುವುದುದ್ಯಾನಂ (ಸೌಇಇ. IX–i, ೩೪೩–೪೦: 1226). [ <ಸಂ. ತಾಲಕ ]

**ತಾಳಗೆ₂** (ನಾ). ಒಂದು ಬಗೆಯ ಸೊಪ್ಪು: ತಾಳಗೆಯಂ ಬಿಸಿಮಾಡಿ ತಕ್ರಸಿಂಧುರುಹಮನಾವಗಂ ಕೊಟಗಿನೊಳ್ ಕುರು(ಱು)ವಾದೊಡೆ ಪೊಯ್ಕೆ ಪಿಂಗುಗುಂ (ಲೋಕೋಪ. ೯–೨೦೩). [ ? ]

**ತಾಳಗೆಡು** (ಕ್ರಿ). ಲಯತಪ್ಪು; ಕ್ರಮತಪ್ಪು; ಅಸ್ತವ್ಯಸ್ತವಾಗು; ಹತೋಟಿ ತಪ್ಪು; ಹದ ತಪ್ಪು: ಅವನ ವಿಚಾರಗಳು ತಾಳಗೆಟ್ಟವು ಅವು ಸುಲಭವಾಗಿ ಸಾಗದಾದವು (ಅಂಬಿಕೆ. ೮೦); ಕೈಯಲ್ಲಿ ದುಡ್ಡು ಬಂದಾಗ ತಾಳಗೆಟ್ಟು ಹಾಳುಮಾಡಿದರೆ (ಮುಂಬಯಿ. ೫–೨೪೮).

[ ತಾಳ₂ (=ತಾಲ) + ಕೆಡು₁ ]

**ತಾಳಗೇಡಿ** (ನಾ). ತಾಳವನ್ನು ಅರಿಯದವನು; ತಾಳತಪ್ಪುವವನು: ಅರಿಯದ ತಾಳಗೇಡಿಗೆ ಸಲ್ಲ ತಂಬೂರಿ (ಶರೀಫ. ೨೭–೨).

[ ತಾಳ₂ ( = ತಾಲ ) + ಕೇಡಿ₁ ]

**ತಾಳಗೊಟ್ಟಿ** (ನಾ). (?): ತತ್ಪುಬಳ ತಾಳಗೊಟ್ಟಿ[ಪಾಠಾಂ.ಟ್ಟಿ]ಯೆನುತ್ತಾದಂ ಋಷಿಯರೊಡನೆ ಜಡಮತಿಗಳ್ ಪೋರುತಿರ್ಪರ್ (ಸಮುಪ. ೦೪–೧೭).

[ ? ]

**ತಾಳಜತಿ** (ನಾ). [ಸಂಗೀತ] ತಾಳದ ಲಯ: ತಾಳಜತಿಗಮರಿಯರ ಗೇಯಕೆ ಕಾಲಗೆಜ್ಜೆಗಳುಲಿಯೆ ಕುಣಿದನು (ಸಾಳ್ವಭಾ. ೩೩–೦೦೭).

[ ತಾಳ₂ ( = ತಾಲ ) + ಜತಿ₁ ]

**ತಾಳಡಿ** (ನಾ). (?): ಅಂಬಾಡೀ ಮಾವೂ ಕಿರನೆಲ್ಲಿ ತಾಳಡಿಯ ಅಳಗಾರ ಚಲ್ವಯ್ಗೇ ಕುಯ್ದಾರೆ (ಹುಟ್ಟುಹ. ೮೦). [ ? ]

**ತಾಳತಂತ್ರ** (ನಾ). ಕೈಚಳಕ; ಕೈವಾಡ; ಮೋಸಗಾರಿಕೆ: ತಾಳತಂತ್ರದ ಲೆಕ್ಕಮಾಡಿ ನನಗೆ ಇಂತಿಷ್ಟು ಕೊಡೋದು ಅಂತ ಒಪ್ಪಂದ ಆಯ್ತು (ಮಲೆಮ. ೦೦೦). [ <ತಳತಂತ್ರ ]

**ತಾಳತಪ್ಪು**(ಕ್ರಿ). ಲಯ ತಪ್ಪು,–ಕೆಡು; ಹತೋಟಿ ತಪ್ಪು; ಹದ ತಪ್ಪು; ಹೆಚ್ಚು ಕಡಮೆಯಾಗು: ತಾಳತಪ್ಪಿ ಬಾಯರು ಆಡಿಬಿಟ್ಟರು (ಕನನಿ. ೨೨); ತಾಳ ತಪ್ಪಿದರೆ ಕುಣಿಯೋದು ತಪ್ಪುವುದಿಲ್ಲ (ಗಾದೆ).

[ ತಾಳ₂ ( = ತಾಲ ) + ತಪ್ಪು₁ ]

**ತಾಳತರು** 'ತಾಲತರು' ನೋ.

**ತಾಳತರ್ಜನ** (ನಾ). [ಸಂಗೀತ] ತಾಳವನ್ನು ಚೆನ್ನಾಗಿ ನಿರೂಪಿಸುವುದು: ರಾಗ ಸಂದರ್ಭದಲ್ಲಿ, ತಾಳತರ್ಜನದಲ್ಲಿ ಯತಿಯ ಆಯತಿಯಲ್ಲಿ (ಚಿಟ್ಟಿಅ. ೦೩–೦೦). [ ತಾಳ₂ ( = ತಾಲ ) + ತರ್ಜನ ]

**ತಾಳದ** 'ತಾಳಿದ' ನೋ.

**ತಾಳದಂಡ** (ನಾ). "ವಾದ್ಯಗಾರರ ಚಾಲಕನು ತಾಳ ಸೂಚಿಸಲು ಉಪಯೋಗಿಸುವ ದಂಡ; ತಾಳದಂಡ" (Baton. ಇಂಕನಿ.).

[ ತಾಳ₂ ( = ತಾಲ ) + ದಂಡ ]

**ತಾಳದಳ** (ನಾ). ತಾಳೆಯ ಗರಿ: ತಾಳದಳಾವಳೀಕಳಕಳಾನಿಳನುರ್ವಿಸಿ ತೀಡೆ ಪೇಱಿಮಿಾ ಗಾಳಿಯನಾದ ನಿಷ್ಠುರನಿನಾದವಿದಾವುದೆನಲ್ಕೆ (ಜಗವಿ. ೪–೩೯).

[ ಸಂ. ತಾಲದಲ ]

**ತಾಳಧರ** (ನಾ). ತಾಳವನ್ನು ಹಿಡಿದವನು; ತಾಳಹಾಕುವವನು; ಸಂಗೀತದಲ್ಲಿ ಕಾಲಗಣನೆ ಮಾಡುವವನು: "ಶಬ್ದಜ್ಞನೆಂದೆನಲ್ ತಾಳಧರನೆನಿಸಿಕ್ಕು" (ಮಂಗರಾ. ೦೦೦–೩): "ತಾಳಧರಂ ಸುರಪಾಶ ಶಕ್ತಿಕ್ರೌಂಚಾರಿ ವಿಶಾಖ ಶಬ್ದಂ" (ನಾನಾರ. ೩೯). [ ಸಂ. ತಾಲಧರ ]

**ತಾಳಧರಿ** (ನಾ). ತಾಳಹಾಕುವ ಹೆಂಗಸು: ತಾಳಧರಿ ನೀನಾಗು ಭೋಗಾಯಿ (ಬಸಪು. ೦೨–೪೨). [ ತಾಲಧರ + – ಇ₂ ]

**ತಾಳಧಾರಿ** (ನಾ). = ತಾಳಧರ: ಸಂಗೀತದ ಸಂಚು ತಾಳಧಾರಿಯ ಕಳವು . . . ಇಂತೀ ನಾನಾ ಗುಣಂಗಳ ಲಕ್ಷ್ಯಾಲಕ್ಷಿತವಂ ತಿಳಿದು (ಸರ್ವವ ೦೩೮–೭೮೩). [ ಸಂ. ತಾಲಧಾರಿನ್ ]

**ತಾಳಧಾರಿಗ** (ನಾ). = ತಾಳಧರ: ತಾಳಧಾರಿಗ ನಟುವಿಗ ಗಾಯಕರು ನೆಱೆ ಮೇಳವಡೆದ ವಾದ್ಯದವರು (ಕಂನವಿ. ೨೭–೨೭); ತಾಳಧಾರಿಗರು, ಮದ್ದಳಿಗರು . . . ಮುಟ್ಟಿಗರು ಇವರೆಲ್ಲರ ಮನೆಗಳು ಸಾಲು–ಸಾಲಾಗಿ ಒಪ್ಪುತ್ತಿದ್ದುವು (ಕರ್ನಾಜ. ೦೫೪). [ <ಸಂ. ತಾಲಧಾರಿಕ ]

**ತಾಳಧ್ವಜ** 'ತಾಲಧ್ವಜ' ನೋ.

**ತಾಳನಿರ್ಣಯ** (ನಾ). ತಾಳವನ್ನು ನಿರ್ಣಯಿಸುವುದು: ತಾಳನಿರ್ಣಯ, ವೇಗ, ಪದವಿನ್ಯಾಸ ಇವು ಕಥಕ್ ಪ್ರದರ್ಶನದ ನಿರ್ಣಯಾಂಶಗಳಾದವು (ಭಾರದ. ೫೫೪). [ ತಾಳ₂ ( = ತಾಲ ) + ನಿರ್ಣಯ ]

**ತಾಳನಿವರ್ತನ** (ನಾ). = ತಾಳನಿವರ್ತನೆ: ಅತಿ ಸುಕಂಠನುಂ ವಿಂಶತಿಯುತಿ ಪ್ರಗಲ್ಭನುಮಪ್ಪ ಮುಖ್ಯಗಾಯಕಂ ತಾಳನಿವರ್ತನಂ ಮಾಡಿ (ಮಲ್ಲಿಪು. ೮–೨೪). [ ತಾಳ₂ ( = ತಾಲ) + ನಿವರ್ತನ ]

**ತಾಳನಿವರ್ತನೆ** (ನಾ). ತಾಳದ ಪ್ರಯೋಗ ; ತಾಳ ಹಿಡಿಯುವಿಕೆ : ಆಗಳವಸರಮಱಿದು ತಾಳನಿವರ್ತನೆಗೆಯ್ದು ಬಂಚದಿಂಚರದೊಳುಪಾಶ್ರಯಂ ಬಡೆದು (ಮಲ್ಲಿಪು. ೧೩-೨೮). [ ತಾಳ್$_2$ ( = ತಾಲ ) + ನಿವರ್ತನೆ ]

**ತಾಳಪತ್ರ** 'ತಾಲಪತ್ರ' ನೋ.

**ತಾಳಪತ್ರಪಾಟನ** (ನಾ). ಒಂದು ನರಕದ ಹೆಸರು : ಲಾಂಗೂಲಕರ್ತನ, ತಾಳಪತ್ರಪಾಟನ . . . ಮೋಹಸಂಭ್ರಂಶವೆಂಬೈದು ಮಂತ್ರಿನರಕಂಗಳಿಂ (ವಿವೇಕ. ೧೮೧). [ ತಾಳಪತ್ರ ( = ತಾಲಪತ್ರ ) + ಪಾಟನ ]

**ತಾಳಬದ್ಧ** 'ತಾಲಬದ್ಧ' ನೋ.

**ತಾಳಭಂಜನ** (ನಾ). ತಾಳವೃಕ್ಷಗಳನ್ನು ನಾಶಮಾಡಿದವನು ; ಶ್ರೀರಾಮ ; P ಶ್ರೀರಾಮನು ಸುಗ್ರೀವನಿಗೆ ತನ್ನ ಪರಾಕ್ರಮವನ್ನು ತೋರಿಸಲು ಏಳು ತಾಳವೃಕ್ಷಗಳನ್ನು ಒಂದೇ ಬಾಣದಿಂದ ಕತ್ತರಿಸಿದನೆಂಬ ಕಾರಣದಿಂದ ಈ ಹೆಸರು ಬಂದಿದೆ: ತಾಳಭಂಜನನೊಡನೆ ಕದನವ ತಾಳಿದರೆ ಗೆಲುವಿಲ್ಲ (ಕೌಶಿರಾ. ೨೩ ಸೂಚನೆ).

[ ತಾಳ್$_2$ ( = ತಾಲ ) + ಭಂಜನ ]

**ತಾಳಮದ್ದಲೆ** 'ತಾಳಮದ್ದಳೆ' ನೋ.

**ತಾಳಮದ್ದಳೆ, ತಾಳಮದ್ದಲೆ** (ನಾ). ೧. ತಾಳ ಮತ್ತು ಮದ್ದಳೆ: ಪಲ್ಲಕ್ಕಿಸೇವೆ ತಾಳಮದ್ದಳೆಯ ಸೇವೆಗೆ (ಸೌಇಇ. IX-ii, ೬೬೨-೧೩ ; 1556); ಉತ್ಕಟ ತಾಳಮದ್ದಳೆಗಳೆಂಬ ಬಹುವಾದ್ಯದುಬ್ಬಟೆಯಖಿಳದೆಸೆಯೊಳಾವರಿಸಲ್ (ಚಿಬಪು. ೫-೭); ತಾಳಮದ್ದಳೆ ಮುಖವೀಣೆಯಾವುಜ ಗೀತದಾಳಾಪ (ಕಂನವಿ. ೮-೫೯). ೨. (ರಂಗಸ್ಥಳ, ವೇಷಭೂಷಣ ಮುಂತಾದ ಪರಿಕರಗಳಿಲ್ಲದೆ ನಿರ್ವಹಿಸುವ) ಒಂದು ಬಗೆಯ ಆಟ ; ಯಕ್ಷಗಾನದ ಭೇದ : ಒಂದು ಕಡೆಯಲಿ ತಾಳಮದ್ದಳೆಯೊಂದು ಕಡೆಯಲಿ . . . ಸಾರತರ ಸಂಗೀತ ಸಾಹಿತ್ಯ (ನಳಚ. ३-೫೨) : ಯಕ್ಷಗಾನ ಎಂಬುದು . . . ತಾಳಮದ್ದಳೆ, ಮೇಳ, ಪ್ರಸಂಗ ಎಂಬ ಹೆಸರುಗಳಿಂದ ನಮಗೆ ಪರಿಚಿತವಾಗಿದೆ (ಯಕ್ಷಗಾ. ೬೨). **ತಾಳಮದ್ದಲೆ : ೨.** ನಾಟಕ ಕೋಲಾಟ ತಾಳ ಮದ್ದಲೆ ಬಯಲಾಟ . . . ಕಲೆಗಳ ನೋಟದೊಳಾಸಕ್ತಿ ಬಹಳ (ಇಂಜಾಪ. ೯-३೫). [ ತಾಳ್$_2$ ( = ತಾಲ ) + ಮದ್ದಳೆ (<ಮದ್ದಲೆ) ]

**ತಾಳಮರ** (ನಾ). ತಾಳೆಯ ಮರ ; ಹನೆಮರ: ತಾಳಮರದ ಕೆಳಗೆ ಒಂದು ಹಾಲ ಹರವಿಯಿರ್ದೊಡೆ ಅದ ಹಾಲಹರವಿಯೆನ್ನರು ಸುರೆಯ ಹರವಿಯೆಂಬರು (ಬಸವ. ೯೦) ; ತಾಳಮರನ ಕೀಲುವಂಗೆ ಚೊಗಚೆಯ ಗಿಡವೇನು (ಸರ್ವಜ್ಞ. ೮೭-೪೮೫); ಕೀಳಿಸಿದನರಮನೆಯ ಹೇಮದ ತಾಳಮರ ಹದಿನಾಲ್ಕುಸದ್ವರಶಾಲೆಯಿದಿರಲಿ ತೋರಣಸ್ತಂಭಂಗಳಹವೆಂದು (ಕುವ್ಯಾಸ. ೫-೪೮) ; ತಾಳಮರನದು ಕಾಯ ಮಳೆಗಱಿದಳುಕಿ ಹೋದುದು (ಸಾಳ್ವಭಾ. ३३-೧೫). 'ತಾಳೆಮರ' ಪರಾ. [ ತಾಳ್$_2$ ( = ತಾಲ ) + ಮರ$_1$ ]

**ತಾಳಮಾನ** 'ತಾಲಮಾನ' ನೋ.

**ತಾಳಮೇಳ** (ನಾ). ೧. ತಾಳದ ಮೇಳ,–ಹೊಂದಾಣಿಕೆ : ಕೇಳನೋ ಹರಿ ತಾಳನೋ ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ (ಪುರಂದ. ४-೬೭ ಅನುಪಲ್ಲವಿ). ೨. ವಾದ್ಯವೃಂದ: ಅನೇಕ ಧ್ವಜಪತಾಕೆಗಳು, ಸಮಸ್ತ ವಿಧ ವಾದ್ಯ, ತಾಳಮೇಳಗಳೊಂದಿಗೆ . . . ನಮ್ಮ ಮನೆಯ ಮುಂದೆ ನಿಂತವು (ಪ್ರತಾಪ. ೧೬). ३. ಒಂದಕ್ಕೊಂದು ಸಂಬಂಧ ; ಹೊಂದಿಕೆ : ಆಕಾಶ, ಪಾತಾಳ–ಎರಡರಲ್ಲೂ ಇಲ್ಲ ತಾಳಮೇಳ (ನಲಮು. ೧೫-೭); ಒಂದಕ್ಕೊಂದು ತಾಳಮೇಳವಿಲ್ಲದ ಸುದ್ದಿ ಹೇಳಿ ಹೊರಟುಹೋದರು (ಮೂರುದಾ. ३४೭) ; ಇಲ್ಲಿ ಸೂತ್ರವೃತ್ತಿಗಳಿಗೆ ತಾಳಮೇಳವಾಗುವುದಿಲ್ಲ (ಶಮಪಾಂ. ೫३). ४. (ಆಲಂ) ಪ್ರೋತ್ಸಾಹ : ಈ ತಿಕ್ಕಾಟಕ್ಕೆ ಆಗಾಗ್ಗೆ ಬರುವ ಓಟಿನ ಗಲಾಟೆ ತಾಳಮೇಳ ಒದಗಿಸಿ ಕೊಡುತ್ತದೆ (ನನ್ನೂರು. ३೧೬).

[ ತಾಳ್$_2$ ( = ತಾಲ) + ಮೇಳ (= ಮೇಲ) ]

**ತಾಳರವ** (ನಾ). ತಾಳದಲ್ಲಿ ಹೊರಡುವ ಅಕ್ಷರ,–ಬೋಲು : "ಣುತ್ತಡಗ್ಗೆಥ್ಥಣಮ್ಮೆನೆ ತಾಳರವಮಕ್ಕು" (ಮಂಗರಾ. ३४-೮).

[ ತಾಳ್$_2$ (= ತಾಲ) + ರವ ]

**ತಾಳಲ** 'ತಾಳಿಲು' ನೋ.

**ತಾಳಲಕ್ಷ್ಮ** (ನಾ). ತಾಳದ ಲಾಂಛನವನ್ನುಳ್ಳವನು; ಬಲರಾಮ: ಬಲನೇಕ ಕುಂಡಲಂ ಕುರುಕುಲನೊಳ್ಳೊಡಲ್ಕೆ ತಾಳಲಕ್ಷ್ಮಂ ಬಂದಂ (ಗದಾಯು. ೭-೫೬).

[ ಸಂ. ತಾಲಲಕ್ಷ್ಮನ್ (ತಾಲ + ಲಕ್ಷ್ಮನ್) ]

**ತಾಳಲಗಾಯಿ** (ನಾ). ತಾಳಿಸಿದ ಕಾಯಿ ; ಎಣ್ಣೆಗಾಯಿ : ಹುಗ್ಗಿ ಹೂರಣಗಡುಬು ಮಗ್ಗಿ ತಾಳಲಗಾಯಿ (ಜಾನಗೀ. ೫೬).

[ ತಾಳಲ (<ತಾಳಿಲು) + ಕಾಯಿ$_4$ (<ಕಾಯ್$_4$) ]

**ತಾಳಲು** 'ತಾಳಿಲು' ನೋ.

**ತಾಳವಟ್ಟ** (ನಾ). ೧. ತಾಳೆಯ ಗರಿಯಿಂದ ಮಾಡಿದ ಬೀಸಣಿಗೆ : (ಕ). 'ತಾಲವೃಂತ' ಪರಾ. ೨. ಬೀಸಣಿಗೆಯಂತಿರುವ ಕಿವಿ; ಆನೆಯ ಕಿವಿ: ಲಳಿತವಿಷಾಣಕೋಟಿಗಳಿನೀಡಿಱಿದಾಗಳೆ ತಾಳವಟ್ಟಮಂ ಸೆಳೆದು ತುಡುಂಕಿ (ಚಂದ್ರಪು. ೫-೬೫); ಮೋದಿದ ತಾಳವಟ್ಟದೊಳ್ಪಂದ ಪೆಣಂ ಪೆಡಂಮುಗುಳೆ ಕಣ್ಣೆ ಜವನೇಱಿದೊಂದು ಜಕ್ಕಂದೊಳದಂತೆ (ಎಕ. VI. ತರೀಕೆ. ४೫-४೭; 1196); ನಡೆತರ್ಪ್ಪ ಮದದಾನೆ ಭೋಂಕನೆ ನಿಂದು ತಾಳವಟ್ಟಮಂ ತೂಗದೊಡಲನೊಲೆಯದೆ . . . ಕಂಡರಿಸಿದಂತೆ ನಟ್ಟು ನಿಂದು (ಬಾಹೂರ. ಹ. ३೦೯-३೩). ३. [ನಾಟ್ಯ] ನೃತ್ಯದ ಒಂದು ಬಗೆ : ಕಡುಜಾಣ್ಮೆಯಿಂ ತಾಳವಟ್ಟಮಂ ನುಡಿವ ಮೆಲ್ಲಡಿಗಳೊಡನೊಡನೆ ಡಿಳ್ಳಾಯದಿಂ ಡೆಂಡಣಿಸ ತೊಡಗಿತೇನೆಂಬೆ (ಸೌಂದಪು. ೮-೧೫); ಕರಿಪತಿಯನು ತಾಳವಟ್ಟದಿ ಕುಣಿಸುತ ನರನಾಥಸುತನೈದಿದನು (ನಾಗಕು. ೭-೭४).

[ <ಪ್ರಾ. ತಾಲವೇಂಟ./ಸಂ. ತಾಲವೃಂತ ]

**ತಾಳವನ** 'ತಾಲವನ' ನೋ.

**ತಾಳವರ್ಗ** (ನಾ). [ಸಂಗೀತ] ತಾಳದ ವರ್ಗೀಕರಣ : ಜಟಾ, ಘನ, ಕ್ರಮ ಮೊದಲಾದವು ಮುಂದಿನ ಪ್ರಬಂಧ, ತಾಳವರ್ಗಗಳಿಗೆ ಪೀಠಿಕೆಯನ್ನ ಬಹುದಾಗಿದೆ (ಭಾರದ. ೫३೬). [ ತಾಳ್$_2$ (= ತಾಲ) + ವರ್ಗ ]

**ತಾಳವಾದ್ಯ** (ನಾ). ತಾಳವನ್ನು ಸೂಚಿಸುವುದಕ್ಕಾಗಿ ಹಾಡಿನೊಂದಿಗೆ ಬಾರಿಸುವ ತಬಲ, ಮೃದಂಗ, ಘಟ ಮುಂತಾದ ವಾದ್ಯ : ಡೋಲಕ್ ಎಂಬ ವಾದ್ಯವೂ ಸಂಗೀತಕಚೇರಿಗಳಲ್ಲಿ ತಾಳವಾದ್ಯವಾಗಿ ಉಪಯೋಗದಲ್ಲಿದೆ (ಸಂಗೀಚಂ. ೧३३). [ ತಾಳ್$_2$ (= ತಾಲ) + ವಾದ್ಯ ]

**ತಾಳವಾದ್ಯಕಚೇರಿ** (ನಾ). ತಾಳವಾದ್ಯಗಳಿಂದ ಕೂಡಿದ ಕಚೇರಿ : ರಾಮನವಮಿಯ ಪ್ರಯುಕ್ತ ಇಂದು ತಾಳವಾದ್ಯಕಚೇರಿಯನ್ನು ಏರ್ಪಡಿಸಿದ್ದಾರೆ (ರೂಢಿ). [ ತಾಳವಾದ್ಯ + ಕಚೇರಿ ]

**ತಾಳವಾರ$_1$** 'ತಾಳ್ವಾರ' ನೋ.

**ತಾಳವಾರ$_2$** 'ತಳವಱ' ನೋ.

**ತಾಳವೃಂತ** 'ತಾಲವೃಂತ' ನೋ.

**ತಾಳವೃತ್ತ** (ನಾ). [ಛಂದ] ವೃತ್ತಗಳಲ್ಲಿ ಒಂದು ಬಗೆ : ದಂಡಕ ರಘಟೆ . . . ಗಣನಿಯಮ ಕಂದ ಶಂಖಾವೃತ್ತ ತಾಳವೃತ್ತಾದಿ ಜಾತಿಗಳುಂಟು [ಶಾಶಾಂ. ದಂಡಕಂಗಳ್ . . . ತಾಳವಾದಿ ದೇಶಭಾಷೆಗಳೊಳ್] ಪುಟ್ಟುವುವೆಲ್ಲಂ ಸರ್ವವಿಷಯ ಭಾಷಾಜಾತಿಗಳಕ್ಕುಂ (ಛಂದೋಂಬು. ೧-४೬ ವ). [ ತಾಳ್$_2$ (= ತಾಲ) + ವೃತ್ತ ]

**ತಾಳಸಂಪುಟ** (ನಾ). ಕರಸಂಪುಟ ; ಸೇರೆ : ತಾಳಸಂಪುಟಕ್ಕೆ ಬಾರದ ಘನವ ಅರ್ಪಿಸ ಹೋದರೆ ಅರ್ಪಣ ಮುನ್ನವೆ ಇಲ್ಲ (ಬಸವ. ४९३) ; ಅವುದು ಕಿಱಿದು ಅವುದು ಹಿರಿದೆಂಬೆನಯ್ಯಾ ತಾಳಸಂಪುಟಕ್ಕೆ ಬಾರದ ಘನವ (ಚನ್ನಪ. ಕ. ೧೦೧-३३೦). [ ತಾಳ್$_2$ (= ತಾಲ) + ಸಂಪುಟ ]

**ತಾಳಹಣ್ಣು** (ನಾ). ತಾಳೆಯ ಹಣ್ಣು : ಬೆರಳು ತಾಳಹಣ್ಣ ಹಿಸಿಕಿದಡೆ ಮೆಲಲುಂಟೆ (ಮಹಾದೇ. ಬ. ೧೦೦೦-೨೫೦). 'ತಾಳೆಹಣ್ಣು' ಪರಾ. [ ತಾಳ್$_2$ (= ತಾಲ) + ಹಣ್ಣು$_3$ (<ಪಣ್$_3$) ]

**ತಾಳಹಳವಿಗೆ** (ನಾ). ತಾಳೆಯ ಮರದ ಗುರುತುಳ್ಳ ಧ್ವಜ ; ಬಲರಾಮನ ಧ್ವಜ: ಕುರುಪತಿಯನವಗಡಿಸಿ ತಾಳಹಳವಿಗೆಯವನು ಯಾದವಜಾಲ ಸಹಿತೈತಂದು . . . ಅಟಿದನು ಕೃಷ್ಣನಭಿಮತವ (ಕುವ್ಯಾ.ಗ. ೬-೮). [ ತಾಳ್$_2$ (= ತಾಲ) + ಹಳವಿಗೆ (<ಪಟವಿಗೆ) ]

**ತಾಳಹಾಕು** (ಕ್ರಿ). ೧. ಅಗುಳಿ ಹಾಕಂ : ಬಾಗಿಲಿಗೆ ತಾಳಹಾಕಿದ್ದೇನೆಂದು ಧೈರ್ಯಗೊಂಡು ಮತ್ತೆ ನಿರ್ಲಕ್ಷವಾಗಿ ತನ್ನ ಕಾರ್ಯದಲ್ಲಿ ತೊಡಗಿದಳು (ಕಾನೂರು. ៩೦) ; ನಿಮ್ಮ ದಾರೀ ಕಾಯುತ್ತ ಬಾಗಿಲ ತಾಳಹಾಕಿಕೊಂಡು ಇಲ್ಲಿಯೇ ಕುಳಿತಿದ್ದೆವು (ಪರಿವ. ೨೩). ೨. [ಸಂಗೀತ] ತಾಳವನ್ನು ಹಾಕಂ ; ತಾಳಹಿಡಿ : ಪದಗಳನ್ನು ತನ್ನ ಕೊಳಲಲ್ಲಿ ನುಡಿಸತೊಡಗಿದ, ಬೇರೊಬ್ಬ ತರುಣ ತಾಳಹಾಕತೊಡಗಿದ (ಹಾಡುತ್ತ. ೯೨). ೩. (ಆಲಂ) ಹೂಂಗುಟ್ಟು ; ಅನುಸರಿಸು ; ಸಮ್ಮತಿಸು : ನಾನೇಕೆ . . . ಅವರು ಹೇಳಿದ್ದಕ್ಕೆ ತಾಳಹಾಕಿ ನನ್ನ ವಿಚಾರಸ್ವಾತಂತ್ರ್ಯವನ್ನು ಅದುಮಿಡಬೇಕು (ದೂರಸ. ೨೦೫) ; ಅದಕ್ಕೆ ಅವನ ಮನವೂ ತಾಳಹಾಕಿತು (ಹೇಮಂಕೊ. ೨) ; ವಸ್ತ್ರಾದಅಲ್ಲಿಸಾಹೇಬನು ಕೂಡ ಶಮಸುದ್ದೀನನ ಮಾತಿಗೆ ತಾಳಹಾಕತೊಡಗಿದ್ದರಿಂದ ಅದಕ್ಕೊಂದು ಸ್ವರೂಪ ಬರತೊಡಗಿತು (ಹಬ್ಬಿಬ. ೪೦). [ ತಾಳ್$_2$ (= ತಾಲ) + ಹಾಕು (<ಪಾಯ್ಸು$_1$) ]

**ತಾಳಹಿಡಿ** (ಕ್ರಿ). = ತಾಳಹಾಕು ೧ : ಅವನ ನಡುಗೆಗೆ ನನ್ನ ನಾಡಿಗಳು ತಾಳಹಿಡಿಯುವುವು, ಅವನ ಹೆಜ್ಜೆಗೆ ನನ್ನ ಪ್ರಾಣವು ಗೆಜ್ಜೆಹಾಕುವುದು (ಜಯಂಕ. ೩೫೭). [ತಾಳ್$_2$ (= ತಾಲ) + ಹಿಡಿ$_1$ (<ಪಿಡಿ$_1$) ]

**ತಾಳಹೀನ** (ನಾ). ತಾಳ ರಹಿತವಾಮದು ; ತಾಳವನ್ನು ಅನುಸರಿಸದಿರುವುದು : ತ್ರಿಪದಿಯನ್ನು ತಾಳಹೀನವೆಂದು ಹೇಳಿರುವ ಪೂರ್ವ ಲಾಕ್ಷಣಿಕರ ಉಕ್ತಿಗೆ . . . ಪ್ರಸ್ತಾರ ಹಾಕಿಯೇ ತೋರಿಸಿದ್ದಾರೆ (ಸಂಶೋಧ. IX, ಮುನ್ನುಡಿ) ; ತಾಳಹೀನವಾದ ಸಂಗೀತವೇ ಆಗಲೀ . . . ನೃತ್ಯವೇ ಆಗಲಿ, ಶೋಭಿಸುವುದಿಲ್ಲ (ಸಂಗೀಚಂ. ೨೯೩). [ ತಾಳ್$_2$ (= ತಾಲ) + ಹೀನ ]

**ತಾಳಿ$_1$** 'ತಾಲಿ$_1$' ನೋ.

**ತಾಳಿ$_2$** 'ತಾಲಿ$_3$' ನೋ.

**ತಾಳಿ$_3$** 'ತಾಳ್$_4$' ನೋ.

**ತಾಳಿ$_4$** (ನಾ). ಬೆರಣಿಯ ಒಟ್ಟಿಲಂ,-ರಾಶಿ ; ತಣ್ಣಾಳಿಯಿಂದವ ಳೊಡಲ್ಗಿಚ್ಚು ತಾಳಿಯ ಹಾಕಿ ಪೆರ್ವೊಟಿಗೊಂಡ ತೆಱದಿ ಧಡಾಳಿಸಿತುಷ್ಣ ಸಂಘಟಿಸಿ (ಮೋಹತ. ೨೭-೬೨); ಹೆಣವನ್ನು ದಕ್ಷಿಣಾಕ್ಕೆ ಕಾಲುಮಾಡಿ ತಾಳಿಯ ಮೇಲೆ ಮಲಗಿಸಿ (ಕಥಾಗ. ៩೦). [ ←ಮರಾ. ಥಾಳ್ ]

**ತಾಳಿ$_5$** (ನಾ). (?) : ಹುಲಿಮುಖದ ಹರಿಯುಗವ ಸುತ್ತಲು ನಿಲಿಸಿ ಬಾಂಧವ ತಾಳಿಗಳ ಕಂಗೊಳಿಪ ರಾಜಾಲಯದ ಬಲ್ಮೆಯ ನೋಡಿ (ಮೃರಾಕಾ. ೩-೩೦). 'ತಟಿ' ಪರಾ. [ ? ]

**ತಾಳಿಕಟ್ಟು** 'ತಾಳಿಗಟ್ಟು' ನೋ.

**ತಾಳಿಕೆ$_1$** (ನಾ). ೧. ಸಹನೆ ; ಸೈರಣೆ ; ತಾಳ್ಮೆ : ಬನ್ನಾಣದೊಳ್ ಬಿಂಕದೊಳ್ತಾಳಿಕೆಯೊಳುರುತರ ತ್ರಾಣದೊಳ್ . . . ಕಾಣೆನವರಿರ್ವರ್ಗೆ ಸಮರಾದ ಕಲಿಗಳಂ (ಜೈಮಿಭಾ. ೨೨-೦೨); ತಾಳದಲ್ಲಿ ಜಾಣನಾದರೆ ತಾಳಿಕೆಯಿದ್ದೀತೇ ? (ಗಾದೆ). ೨. ಬಾಳಿಕೆ ಬರುವುದಂ ; ಹೆಚ್ಚು ಕಾಲ ಉಳಿಯುವಿಕೆ : ತಾಳಿಕೆ ಬರುವಂಥ ಉಕ್ಕಾಗಿ ಬರುತಿರೆ ಮುಕ್ಕಾದ ಮೊನೆಯಾಗ ಮಸೆಯುತಿದೆ (ಸಹೀಗೀ. ೦೦-೧೯) ; ನೋಡುವವರಿಗಾದರೂ ತಾಳಿಕೆ ಬರುವಂತಿರಬೇಡವೇ (ಮರಳಿ. ೭೮) : ಅತ್ಯಂತ ತಾಳಿಕೆಯುಳ್ಳದ್ದಾಗುವಂತೆ ಆ ಚರ್ಮವನ್ನು ಹೊಸೆದನು (ಬಂಗಾಹ. ೨೦). ೩. ಧರಿಸುವುದು ; ಧಾರಣೆ : "ತ್ರಸ-ಧಾರಣೇ, ತಾಳಿಕೆಯೊಳ್" (ಕಾಶಕ್ಕ. ೨೭೯) ; ತಮಾಲ ತರುಗಳ ತಾಳಿಕೆಯ ತೋಳುಗಳ ನೆಗಹಿನ ಲಾಳಿಕಾಟರ ದೇವ (ತೊರರಾ. ៩-೨೦-೮೯). [ ತಾಳ್$_1$ + – ಇಕೆ ]

**ತಾಳಿಕೆ$_2$** 'ತಾಲುಗೆ' ನೋ.

**ತಾಳಿಕೆ$_3$** (ನಾ). ಹೊಂದಾಣಿಕೆ : ಹುಲ್ಲೆ ಹಾರಿದ್ದಕ್ಕೂ ಹುಲಿ ಅಡಗಿದ್ದಕ್ಕೂ ತಾಳಿಕೆ ಇಲ್ಲ (ಗಾದೆ). [ ತಾಳ್$_3$ + – ಇಕೆ ]

**ತಾಳಿಗಟ್ಟು, ತಾಳಿಕಟ್ಟು** (ಕ್ರಿ). ಮಂಗಳಸೂತ್ರವನ್ನು ಕಟ್ಟು : ಚಂದ್ರಾಭರಣಂ ಮನವೊಸೆದು ತಾಳಿಗಟ್ಟಿದನೆನೆ ಮೆಱೆದುದು ಕೊರಲೊಳೇಕಮುಖ ರುದ್ರಾಕ್ಷಂ (ಗಿರಿಕ. ೩-೮೬). **ತಾಳಿಕಟ್ಟು** : ತಾಳಿಕಟ್ಟೋಕೆ ಕೂಲೀನೆ ? (ರೂಢಿ). [ ತಾಳಿ$_1$ (<ತಾಲಿ$_1$) + ಕಟ್ಟು$_1$ ]

**ತಾಳಿಗೆ** 'ತಾಲುಗೆ' ನೋ.

**ತಾಳಿಗೆದೆರೆ** (ನಾ). ಅಂಗುಳಿನ ತೆರೆ,-ಗೆರೆ,-ಸುಕ್ಕು : ತಾಲುವಿಂದೆ ಕೆಳಗಣ (ಗುಂ)ನೆಲೆಯುಂ ತಾಳಿಗೆದೆರೆ ದ್ವಾತ್ರಿಂಶತಮಾಳಿರ್ಕುಂ ಕೂರ್ಮೆಯೆಂಬ ಪೆಸರಿಂ ತೋರ್ಕುಂ (ಅಶ್ವಶಾ. ៩-៥). [ ತಾಳಿಗೆ (<ತಾಲುಗೆ) + ತೆರೆ$_4$]

**ತಾಳಿಚೌಕುಳಿ** (ನಾ). ಒಂದು ಬಗೆಯ ಆಭರಣ: ತಾಳಿವಜ್ರ ತಾಳಿಚೌಕುಳಿ [ಪಾಠಾಂ. ಲಿ]ಮುತ್ತಿನ ಕುಂಡಲವಿಟ್ಟು (ವಾದಿಕೀ. ೪೦-೪) ; ವನಪಾಲಕರಿ ಗುಡುಗೊರೆ ತಾಳಿಚೌಕುಳಿಯಿತ್ತು ಹರುಷದಿ ಬೀಳುಕೊಟ್ಟನು (ಕೋಗಯು. ೩-೫೯) ; ನೀಲದೊಂಟಿಯು ತಾಳಿಚೌಕುಳಿ . . . ಕಾಲಸರಗಳು ಲೋಲ ಧರಿಸಿಯೆ ಮೆರೆದನು (ಗೋಹಾಡು. ೬).
[ ತಾಳಿ$_1$ (<ತಾಲಿ$_1$) + ಚೌಕುಳಿ (<ಚೌಕಳಿ) ]

**ತಾಳಿದ, ತಾಳದ** (ನಾ). ಒಂದು ಬಗೆಯ ತಾಳಿಸಿದ ವ್ಯಂಜನ ; ಪಲ್ಯ : ಬೆಲೆವೆಣ್ಗೆ ಬೇಟಮೇಂ ತಾಳಿದಮುಕ್ಕುಮೋ ಕಟಪೆಯೋಗರಮುಕ್ಕುಮೋ (ಲೀಲಾವ. ೨-೫೭) ; ಬಿಸಿಯುಸನ ತೊಯೆ ತುಪ್ಪಂ ತಾಳಿದ[ಪಾಠಾಂ. ಲ] ಪಳಿದ್ಯ ಕಜ್ಜಾಯ (ಸಮ್ಯಕ್ತ್ವ. ೪-೧೦) ; ಬಜ್ಜೆ ತಾಳಿದಗಳಂ ಕೆಲಬಲದಿ ಬಡಿಸುತಂ (ಲಂಗವು. ೮-೪). **ತಾಳದ** : ತಾಳದ ಸೀಕರಣೆ ಕಸರಿ ಪಚ್ಚಡಿಗಳು ಮೇಲಾದ ಷಡುರಸಗಳನು . . . ಲೋಲಾಕ್ಷಿಯರು ಬಡಿಸಿದರು (ಕಂಸವಿ. ೮-೮೫) ; ಈ ಜ್ವರಕ್ಕೆ ಎಳೆಯ ಬದನೆಕಾಯಿಯ ತಾಳದ, ಮಜ್ಜಿಗೆ ಅನ್ನ ಸಹ ಪಥ್ಯವನ್ನು ಕೊಡಿಸುವುದು (ಸಕವೈ. ៩೦) ; ಬಟ್ಟಲಲ್ಲಿ ಅನ್ನ, ತಾಳದ, ತಂಬುಳಿ, ಸಾರು . . . ಮೊದಲಾದುವು ಎಲ್ಲ ಕಂಡುವು (ಈಕಥ. ೧೨೪) ; ಸಮುದ್ರದ ನಳ್ಳಿಯ ಪಲ್ಯ, ಉಪ್ಪುಮೀನಿನ ತಾಳದ . . . ಈ ಭಕ್ಷ್ಯಗಳು ಮೇಜಿನ ಮೇಲಿದ್ದುವು (ಪುನರು. ೧೦೮).
[ <ತಾಳಿಸು ]

**ತಾಳಿಬೊಟ್ಟು** (ನಾ). ಮಾಂಗಲ್ಯ : (*).
[ ತಾಳಿ$_1$ (<ತಾಲಿ$_1$) + ಬೊಟ್ಟು$_2$ (<ಬಟ್ಟು$_1$) ]

**ತಾಳಿಮಿಕೆ** (ನಾ). ಸಹನೆ ; ತಾಳ್ಮೆ : ಸಂತರ ನೆರೆಯಲ್ಲಿ ತಾಳಿಮಿಕೆಯಲ್ಲಿ ನಡೆದು (ವಿಶಾಸು. ೭೪-೫). [ ತಾಳಿಮೆ (<ತಾಳ್ಮೆ) + – ಇಕೆ ]

**ತಾಳಿಮೆ** 'ತಾಳ್ಮೆ' ನೋ.

**ತಾಳಿಲ** 'ತಾಳಿಲು' ನೋ.

**ತಾಳಿಲು, ತಳಿಲು$_2$, ತಾಳಲ, ತಾಳಲು, ತಾಳಿಲ** (ನಾ). = ತಾಳಿದ : ಕಿಚ್ಚಡಿ ಬೋನವು ಪಚ್ಚಡಿ ತಾಳಿಲು ಹೆಚ್ಚಿನ ಪಳಿದೆಯು . . . ಕುಳಿತುಣಬನ್ನಿ (ಶರಲೀ. ៩೭-೧೭). **ತಳಿಲು$_2$** : ತರತರದ ಪಚ್ಚಡಿಗಳು ತಳಿಲು ಸೀಕರಣೆಯು ಉಕರಿದ ತುಪ್ಪದ ಅಪೂಪವೂ ಚಿತ್ರಾನ್ನ ದಧ್ಯನ್ನ (ವಾದಿಕೀ. ೬೩-೮). **ತಾಳಲ** : ಅವರೆಕಾಯ ತಾಳಲದ ಸವಿಯ ಬಯಸಿ ಲೇಸಾಗಿ ಬಂದೆವು (ಗುರುಚಾ. ೧೦-೯೨). **ತಾಳಲು** : ಪರಿಪರಿಯ ತಾಳಲುಪ್ಪಿನಕಾಯ್ ಪಳಿದ್ಯ (ಚಿಬಪು. ೫-೬೦). **ತಾಳಿಲ** : ಅಕ್ಕಿಯೋಗರ ಬಾಟ ತಾಳಿಲವದೇಂ

ಮನಂಗೊಂಡಿರೆ ಚಲ್ಲಕಾರ್ತಿಯರ್ ಬಡಿಸಿ (ಪುಣ್ಯಾಸ್ರ. ೩-೪೯) : ಮೂಱು ಬಗೆಯ ತಾಳಿಲಯೆರಡು . . . ಸಾಸವೆ (ಬೊಂಕಶಾ. ೧೯೪೦, ಕುಮಟ. ೦೦೩-೩೬ : 1476); ರಾಜಾನ್ನದ ಕೂಳಿಕ್ಕಿ ತೊಯೆ ತುಪ್ಪವೆಱೆದು ತಾಳಿಲ ವಿಡೆ (ನೇಮಿಸಂ. ೩೯-೦೪೩); ತಾಳಿಲ ಕೊಣಬು ಪುಡೆಯ ಮುಂತಾದ ಮೇಲೋಗರವನನುಮಾಳ್ಪುದು (ಸೂಪಶಾ. ೫-೩೬); ಕಲಸುಮೇಲೋಗರ ತಾಳಿಲ ಮುಂತಾದ ಪಂಚಭಕ್ಷಕ್ಕೆ ಅಕ್ಕಿ ಹಾನೆ ೨ (ಎಇ. VIII, ೦೩೨-೩೯ ; 1586). [ <ತಾಳಿಸು$_2$ + - ಇಲು$_2$ (<-ಇಲ್$_3$) ]

**ತಾಳಿವಜ್ರ** (ನಾ). ಒಂದು ಬಗೆಯ ಆಭರಣ : ತಾಳಿವಜ್ರ ತಾಳಿಚೌಕುಳಿ ಮುತ್ತಿನ ಕುಂಡಲವಿಟ್ಟು (ವಾದಿಕೀ. ४೦-೪).

[ ತಾಳಿ$_1$ (<ತಾಲಿ$_1$) + ವಜ್ರ ]

**ತಾಳಿಸಪತ್ರ** 'ತಾಳೀಸಪತ್ರೆ' ನೋ.

**ತಾಳಿಸಪತ್ರೆ** 'ತಾಳೀಸಪತ್ರೆ' ನೋ.

**ತಾಳಿಸು$_1$** (ಕ್ರಿ). ನಿಲ್ಲಿಸು; ತಡೆಹಿಡಿ : ಸೆರಗೊಡ್ಡಿ ಬೇಡುವೆ ತಾಳಿಸ್ಮಲ್ಲಯ್ಯ ಕುದುರೆಯ (ನಾಪದ. ೧೦೦). [ ತಾಳ್$_1$ + - ಇಸು$_3$ ]

**ತಾಳಿಸು$_2$** (ಕ್ರಿ). ತುಪ್ಪ ಅಥವಾ ಎಣ್ಣೆಯಲ್ಲಿ ಬೇಯಿಸು,-ಬಾಡಿಸು,-ಹುರಿ : ಕಾಯ್ದು ಕಾವಲಿಗಳೊಳ್ ಪೆರ್ಮರ[ಪಾಠಾಂ. ಮೊರ್ಮರ] ನಾಗೆ ತಾಳಿಸುವರುಂ (ಆದಿಪು. ೫-೮೫ ವ) ; ಮತ್ತಮಾವಿನ ಘೃತದಿಂದೆ ತಾಳಿಸಿ ರಸಾಯನಮಾಗಡುಗೆ (ಲೋಕೋಪ. ೮-೩೦) : ಮೇಳಿಸಿ ಜೀವಾವಳಿಗಳ ತಾಳಿಸುವರನಚ್ಚಗೆಂಡದೊಳ್ ಕಾವಲಿಯೊಳ್ ತಾಳಿಸುವರ್ (ಸುಕುಮಾ. ೧೧-೪೬) ; ಎಣ್ಣೆಯೆಱೆದು ತಾಳಿಸುವರುವಯ್ಯ (ಸಾನಂಚ. ೬-೧೬೧ ರಗಳೆ): ಭವ್ಯಕಲ್ಪದ್ರುಮಫಲಂಗಳನವ್ಯಯಾವೃತದಿಂದ ತಾಳಿಸಿ (ಬಸವು. ೮-೩೮) ; ಘಟ್ಟಿಮೆಣಸುಳ್ಳಿ ಮೊದಲಾದ ಸಂಭಾರಗಳನಿಟ್ಟು ತಾಳಿಸಿದ ಪುಡಿಗಳನದೞೊಳು[ಱಿ] ತುಂಬಲಿಟ್ಟು (ಸೂಪಶಾ. ४-೧೯) ; ಕುದಿವೆಣ್ಣೆ ಯಲಿ ಹಾಯ್ಕಿಸಿ ತಾಳಿಸೀ ಪಾಪಿಯನು (ಪ್ರಹ್ಲಾಚ. ೯-೫४).

[ ದೇ.॥ ತಮಿ. ಮಲ. ತಾಳಿತ್ತು, ತಾಳಿಪ್ಪು ; ತೆಲು. ತಾಳಿಂಚು ]

**ತಾಳಿಸು$_3$** (ಕ್ರಿ). ತಾಳೆ ನೋಡು ; ಹೋಲಿಸು : ನೀವು ಭಾರತೀಯರು ಕಾವ್ಯದಲ್ಲಿ ಓದಿದ್ದನ್ನು ಇಲ್ಲಿ ಖುದ್ದು ಕಾಣಲು, ತಾಳಿಸಿ ನೋಡಲು ಬರುತ್ತೀರಿ (ಹೊಸಕ್ಷಿ. ೨೦೨). [ ತಾಳ್ತೆ$_3$ + - ಇಸು$_3$ ]

**ತಾಳೀತರು** (ನಾ). = ತಾಳೆಮರ : ಪೇರೀಳೆ ತಾಳೀತರು ತೆಂಗುಂ ಕೌಂಗು . . . ಸಾಲ್ಗೊಂಡು ಕಣ್ಗೊಪ್ಪುತಿರ್ಕುಂ (ರಾಜಶೇ. ೨-೩೬).

[ ಸಂ. ತಾಲೀತರು (ತಾಲೀ + ತರು) ]

**ತಾಳೀಫಳ** (ನಾ). ತಾಳೆಮರದ ಹಣ್ಣು : ಶೋಣಾಂಶುಮನ್ಮಂಡಳಮಂ ತಾಳೀಫಳಂಗೆತ್ತಳಸಿ ತುಡುಕುಗುಂ ಬಾಲಶಾಖಾಚರಂಗಳ್ (ರಾಜಶೇ.೬-೨೦).

[ ಸಂ. ತಾಲೀಫಲ (ತಾಲೀ + ಫಲ) ]

**ತಾಳೀಸಪತ್ರ** 'ತಾಳೀಸಪತ್ರೆ' ನೋ.

**ತಾಳೀಸಪತ್ರೆ**, **ಚಾಳೀಸಪತ್ರೆ**, **ತಾಳಿಸಪತ್ರ**, **ತಾಳಿಸಪತ್ರೆ**, **ತಾಳೀಸಪತ್ರ**, **ತಾಳೀಶಪತ್ರೆ**, **ತಾಳೇಸಪತ್ರ**, **ತಾಳೇಸಪತ್ರೆ** (ನಾ). ಒಂದು ಬಗೆಯ ಔಷಧಿ ಸಸ್ಯ : " ಪತ್ರಕ, ಪತ್ರಕಾ - ಈ ಯೆರಡುಂ ತಾಳೀಸಪತ್ರೆ " (ಓಷಧಿ. ೯೦): ತಾಳೀಸಪತ್ರೆ, ಮೆಣಸು ಇಂತಿವೆರಡಂ ಸಮಭಾಗವಂ ಒಂದು ಭಾಗವೆಂದು ಯೋಚಿಸಿಕೊಂಡು (ವಿವೈವಿ. ೩೮). **ಚಾಳೀಸಪತ್ರೆ :** ಚಾಳೀಸ ಪತ್ರೆ ಗ ೧ ತೂಕ, ಮೆಣಸು ಗ ೧ ತೂಕ . . . ಇವೆಲ್ಲವಂ ಕೂಡಿ ಚೂರ್ಣವ ಮಾಡಿ (ವಿವೈವಿ. ೨೦೧). **ತಾಳಿಸಪತ್ರ :** " ಕಾಸಘ್ನಃ - ತಾಳಿಸಪತ್ರ, ತಾಱಿ " (ಓಷಧಿ. ೨೯). **ತಾಳಿಸಪತ್ರೆ :** ಗೊರಜಿ, ಚಂಚಲಿ, ಚರಿಜಲಿ, ತಾಳಿಸಪತ್ರೆ (ವೈಜಿಗಿ. ೩೭-೭೩೭). **ತಾಳೀಸಪತ್ರ :** "ತಾಳೀಸಕಂ, ತಾಳೀಸ ಪತ್ರಂ - ಈ ಯೆರಡುಂ ತಾಳೀಸಪತ್ರ" (ಓಷಧಿ. ೬೭): "ನೀಲಂ - ತಾಳೀಸ ಪತ್ರ, ಕಾಚಲವಣ " (ಓಷಧಿ. ೮೮). **ತಾಳೀಶಪತ್ರೆ :** (ವೈಜಿಗಿ. ೧-೧). **ತಾಳೇಸಪತ್ರ :** "ಕರಿಣಾ-ಚವ್ಯ, ಗಜಹಿಪ್ಪಲಿ, ಪರಿಪತ್ರ, ತಾಳೀಸಪತ್ರ, ಲವಂಗಪತ್ರ" (ಓಷಧಿ. ೨೪). **ತಾಳೇಸಪತ್ರೆ :** ಶುಂಠಿ, ಹಿಪ್ಪಲಿ, ತಾಳೀಸ ಪತ್ರೆ . . . ಲವಂಗ ಇವುಗಳನ್ನು ಸಮಾಂಶವಾಗಿ ಅರೆದು ಜೇನುತುಪ್ಪ ಗೂಡಿ ಸೇವಿಸೆ ಶ್ಲೇಷ್ಮಜ್ವರ ನಾಶವಾಗುವುದು (ಸಕವೈ. ೮೭).

[ ←ಹಿಂ. ತಾಲೀಶಪತ್ರ್ ; ಮರಾ. ತಾಲೀಸಪತ್ರ್ ]

**ತಾಳು$_1$** 'ತಾಳ್$_1$' ನೋ.

**ತಾಳು$_2$** 'ತಾಳ್$_2$' ನೋ.

**ತಾಳು$_3$** 'ತಾಳ್$_3$' ನೋ.

**ತಾಳು$_4$** 'ತಾಲು' ನೋ.

**ತಾಳುಂತಟ್ಟುಂ**, **ತಾಳುತಟ್ಟು** (ಅ). ದಿಕ್ಕಾಪಾಲಾಗುವಂತೆ : ದಂತಿ ಗಳೊಡ್ಡಿನ ಕಾಲ್ಗಾಪಾಂತೊಂದೞೊಳೊಂದು ಪೊಯ್ಯೆ ತಾಳುಂತಟ್ಟುಂ (ಮಹಾನೇ. ೧೨-೫೨). **ತಾಳುತಟ್ಟು :** ಪುಷ್ಪಶರ ಸಂತತಿಯಿಂ ಬಿಡದೆಚ್ಚು ತಾಳುತಟ್ಟಾಗೆ ತಗುಳ್ದು (ಧರ್ಮಾಮೃ. ೦೩-೦೦೫). [ <ತಾಱುಂತಟ್ಟು ]

**ತಾಳುಂತಟ್ಟುಂಬೊಯ್** (ಕ್ರಿ). ಸಿಕ್ಕಾಪಟ್ಟೆ ಹೊಡೆ, - ಬಡಿ : ತಾಳುಂ ತಟ್ಟುಂಬೊಯ್ದರ್ ಗೋಟಿಯಿಲರ್ (ಶಂರಾಮಾ. ೦೩-೬೪).

[ ತಾಳುಂತಟ್ಟುಂ + ಪೊಯ್$_1$ ]

**ತಾಳುಕುಪ್ಪೆ** (ನಾ). ಧಾನ್ಯಗಳಿಂದ ಬೇರೆಮಾಡಿದ ದಂಟುಗಳ ರಾಶಿ,-ಗುಂಪು : (+). [ ತಾಳು$_2$ (<ತಾಳ್$_2$) + ಕುಪ್ಪೆ$_1$ ]

**ತಾಳುಗೆ** 'ತಾಲುಗೆ' ನೋ.

**ತಾಳುತಟ್ಟು** 'ತಾಳುಂತಟ್ಟುಂ' ನೋ.

**ತಾಳುತಳ** (ನಾ). ಅಂಗುಳಿನ ಕೆಳಭಾಗ : ಕೋಮಳ ತಾಳು[ಪಾಠಾಂ. ಲು] ತಳಸಂಘಟ್ಟಮಾತ್ರ ಕ್ಷೋದನೀಯಮೋದಕಮುಮಂ (ಆದಿಪು. ೦೦-೩೬ ವ).

[ ತಾಳು$_4$ (=ತಾಲು) + ತಳ (=ತಲ) ]

**ತಾಳುತುದಿ** (ನಾ). ತಳದಿಂದ ತುದಿ; ಕೊನೆಮೊದಲು : ತಾಳುತುದಿಯಾಗಿ ವಿಚಾರಿಸಿ ನಿಶ್ಶಂಕೆಯಾಗುವಂತೆ ದೃಢಮಾಡಿಕೊಳ್ಳುವುದು (ಜಟ್ಟಿಉ. ೦೮೩-೦೯). [ ತಾಳು$_2$ (<ತಾಳ್$_2$) + ತುದಿ ]

**ತಾಳುಬೀಳು** 'ತಾಳೆಬೀಳು' ನೋ.

**ತಾಳುಮೆ** 'ತಾಳ್ಮೆ' ನೋ.

**ತಾಳುರೋಗ** 'ತಾಲುರೋಗ' ನೋ.

**ತಾಳುವಂಶ** (ನಾ). ಕುದುರೆಯ ತಾಲುಪ್ರದೇಶದಲ್ಲಿರುವ ಅಡ್ಡಗೆರೆ,-ರೇಖೆ : ಆ ತೆ(ಥೆ)ರೆಗಳ ಮೇಲ್‌ರೇಖೆಗೆ ಖ್ಯಾತಂ ತಾಂ ತಾಳುವಂಶ ಮೆಂಬಭಿಧಾನಂ (ಅಶ್ವಶಾ. ೯-೬). [ ತಾಳು$_4$ (= ತಾಲು) + ವಂಶ ]

**ತಾಳುವನ** (ನಾ). ತಾಳೆಯ ಮರಗಳ ಕಾಡು ; ತಾಲವನ : [ಉ]ದಯ ತಾಳುವನ ಬಡಗ ತಯಿಪಾಡಿಯ ಒಳಗೆ (ಸೌಇಇ. IX-II, ४೭೩-೨೭ ; 1487). [ ತಾಳು$_3$ (<ತಾಳ್$_3$) + ವನ ]

**ತಾಳುವಾರ** 'ತಾಳ್ವಾರ' ನೋ.

**ತಾಳ್ತೆ$_1$** 'ತಾಱು' ನೋ.

**ತಾಳ್ತೆ$_2$** 'ತಾಳ್$_3$' ನೋ.

**ತಾಳ್ತೆ$_3$** (ನಾ). ಹೊಂದಾವಣೆ ; ಮೇಳ ; ಹೊಂದಿಕೆ : ನಮ್ಮ ಇಂದ್ರಿಯಗಳ ಜ್ಞಾನಕ್ಕೂ ವಸ್ತುವಿನ ಯಥಾರ್ಥಸ್ವರೂಪಕ್ಕೂ ತಾಳೆ ತಪ್ಪಿದಾಗ ನಮ್ಮ ಜ್ಞಾನ ಸುಳ್ಳಾಗುತ್ತದೆ (ತತ್ತ್ವಪ್ರಾ. ೩೨೭).

**ತಾಳೆಮಾಡು** = ತಾಳೆನೋಡು : ಬ್ರಾಹ್ಮಿಲಿಪಿಯನ್ನು ಗ್ರೀಕ್ ಲಿಪಿಗಳೊಡನೆ ತಾಳೆಮಾಡಿ ನೋಡಿ (ದ್ರಾವಿವಿ. ೫೪). **ತಾಳೆಯಾಗು** = ಹೊಂದಾಣಿಕೆಯಾಗು; ಮೇಳವಾಗು : ನಕ್ಷೆಯ ಸರಹದ್ದು ಗುರುತಿಗೂ ಭೂಮಿಯ ಮೇಲೆ ಕಾಣುವ ಗುರುತಿಗೂ ತಾಳೆಯಾದ ಮೇಲೆ (ಭೂಮಿಅ. ೩೮). [ ←ಮರಾ. ತಾಳ್, ತಾಳಾ./ಸಂ. ತಾಲ ]

**ತಾಳೆಗರಿ** (ನಾ). = ತಾಲಪತ್ರ. ೩ : ಲಿಪಿಕಾರರು ತಾಳೆಗರಿಯ ಮೇಲೆ ಹಿಂದೆ ಬರೆಯುತ್ತಿದ್ದ ಕಾಲದಲ್ಲಿ ಕಬ್ಬಿಣದ ಕಡ್ಡಿಯನ್ನು . . . ಲೇಖಣಿಯಾಗಿ ಬಳಸುತ್ತಿದ್ದರು (ದ್ರಾವಿ. ೫೯) ; ನಮ್ಮೂರಿನಲ್ಲಿ ಎಲ್ಲಿ ನೋಡಿದರೂ ಲಿಪಿ, ಶಾಸನಗಳು, ತಾಳೆಗರಿಗಳು ಹೇರಳವಾಗಿ ಬಿದ್ದಿವೆ (ರಾಯುಕ. ೭). [ ತಾಳ್$_2$ (<ತಾಳ್$^3$) + ಗರಿ (<ಗಱಿ) ]

**ತಾಳೆಛತ್ರ** (ನಾ). ತಾಳೆಯ ಗರಿಗಳಿಂದ ಮಾಡಿದ ಕೊಡೆ : ಕೆಲವರ ಅಡಿಗೆ ಪಾತ್ರಗಳು, ಮಳೆಗೆ ಹಿಡಿಯುವ ತಾಳೆಛತ್ರಗಳು ಎಲ್ಲ ಇದ್ದ ಸ್ಥಳವನ್ನೆಲ್ಲ ಆಕ್ರಮಿಸಿದ್ದುವು (ರಕ್ತರೂ. ೫೯). [ ತಾಳ್$_2$ (<ತಾಳ್$^3$) + ಛತ್ರ$_2$ ]

**ತಾಳೆದನಿ** (ನಾ). ತಾಳೆಯ ಮರದೆಲೆಗಳ ಧ್ವನಿ,-ಶಬ್ದ : ಒಗೆದೊಂದು ತಾಳೆದನಿಗೇಳ್ದ ಗಜವ್ರಜದಂದವಾಗೆ (ಕಾದಂಪೂ. ೩೫). [ ತಾಳ್$_2$ (<ತಾಳ್$^3$) + ದನಿ$_2$ ]

**ತಾಳೆನೋಡು** (ಕ್ರಿ). ಪರಸ್ಪರ ಹೋಲಿಸಿ ನೋಡು,-ಹೊಂದಿಸಿ ನೋಡು : ಆಸ್ತಿವಂತ ತನ್ನ ಖಾತೆಯ ಲೆಕ್ಕವನ್ನು ತಾಳೆನೋಡುತ್ತಾನೆ (ನಿಬಂಧ. II, ೨೮೦); ಹಣವನ್ನು ಎಣಿಸಿ ಲೆಕ್ಕದ ಪ್ರಕಾರ ತಾಳೆನೋಡಿದಾಗ ಆನಂದನ ಎದೆ ಒಡೆಯಿತು (ಮರಳಿ. ೭೦) ; ಗಡಿಯಾರದ ಮುಳ್ಳು ತಾಳೆ ನೋಡಿಕೊಂಡು (ಡಂಗೂರ. ೮೨). [ ತಾಳ್$_3$ + ನೋಡು ]

**ತಾಳೆಬೀಳು, ತಾಳುಬೀಳು** (ಕ್ರಿ). ಮೇಳ ಹೊಂದು ; ಸರಿಹೋಗು : (೬). **ತಾಳುಬೀಳು :** ಅವರೊಂದು ಕನ್ನಡದ ಉಪನ್ಯಾಸವನ್ನು ಕೊಡುವುದಕ್ಕೂ ತಾತ್ಕಾಲಿಕವಾಗಿದ್ದ ಅವರ ನೌಕರಿ ಹೋಗುವುದಕ್ಕೂ ತಾಳುಬಿತ್ತು (ಕಯಾತ್ರ. ೪). [ ತಾಳ್$_3$ + ಬೀಳು$_1$ (<ಬೀೞ್$_1$) ]

**ತಾಳೆಬೆಲ್ಲ, ತಾಟಿಬೆಲ್ಲ** (ನಾ). ತಾಳೆಮರದ ರಸದಿಂದ ತಯಾರಿಸಿದ ಬೆಲ್ಲ : (೬). **ತಾಟಿಬೆಲ್ಲ :** (೬). [ ತಾಳ್$_2$ (<ತಾಳ್$^3$) + ಬೆಲ್ಲ ]

**ತಾಳೆಮರ, ತಾಟಿಮರ, ತಾಟಿವರ, ತಾಟ್ಮರ** (ನಾ). ತಾಳೆಯ ಮರ ; ತಾಳವರ: "ತೃಣರಾಜಾಹ್ವಯಃ ತಾಳಃ – ೨ ತಾಳೇಮರದ ಹೆಸರು" (ಸಿದ್ಧಾಂತಿ. ೧೩೩) ; ತಾಟಿನುಂಗು ಮರ, ತಾಳೆಮರ (ಮೈಜಿಗಿ. ೦೩-೨೩೪) ; ತಾಳೆಮರ ಉದ್ದವಾದರೆ ಕೋಲಿಗೆ ಬಂದದ್ದೇನು? (ಗಾದೆ). **ತಾಟಿಮರ :** ಉತ್ತಾರ ಕೊಟ್ಟದು ತಾಟಿಮರ ೫೦ಕೆ ಗ ೧ (ಎಕ. VIII, ತೀರ್ಥಹ. ೬-೦೫೫; 1723). △ **ತಾಟಿಮರ :** "ತೃಣರಾಜ, ತಾಲ" (ನಾಚಿರಾ. ೬) ; ಅದಱ ತದನನ್ತರ ಬೈಕೋಲ ತಾಟಿಮರ ಅದಱ ತದನಾನ್ತರ ಮಟ್ಟಱಿಯ ಕುರಿಚಿಗೊಣ್ಣ (ಸೌಇಇ. IX-1, ೪೦-೨೫ ; 11ನೆಯ ಶತ). △ **ತಾಟ್ಮರ :** [ನೀ]ಟ್ಟ ತಾಟ್ಮರದವೊಲಪ್ಪುಡಲ್ (ಪಂಪಭಾ. ೦೩-೭). [ತಾಳ್$_2$(<ತಾಳ್$^3$) + ಮರ$_1$]

**ತಾಳೆಯೋನ್** (ನಾ). ಒಬ್ಬಾತನ ಹೆಸರು (?) : ಪೆರಿಯವನ್ ಕೋಲ್ಲಳಾಂ[ತು] ಭಿಲ್ಲನ್ ಎಳಾ ಆಲಕ್ಕೊವಾಡಿ ತಾಳೆಯೋನ್ ಮಿಾ × ಣೆಯ್ಯ ಇಕ್ಕಿಸಿ ಸತ್ತಾನ್ (ಸೌಇಇ. IX-1, ೨-೦೦ ; ಸು. 9ನೆಯ ಶತ). [ ? ]

**ತಾಳೆಯೋಲೆ** 'ತಾಳೋಲೆ' ನೋ.

**ತಾಳೆಲೆ** (ನಾ). ತಾಳೆ ಮರದ ಎಲೆ : ಸಿಡಿಲಿನುಱುಬೆಯ ತಾಳೆಲೆಯೊಳು ಮಾಡಿದ ಕೊಡೆ ತಾಳಲಾವುದೇನು (ಕಂನವಿ. ೦೮-೦೫). [ ತಾಳ್$_2$ (<ತಾಳ್$^3$) + ಎಲೆ$_1$ ]

**ತಾಳೆವಾಲೆ** 'ತಾಳೋಲೆ' ನೋ.

**ತಾಳೆವೋಲೆ** 'ತಾಳೋಲೆ' ನೋ.

**ತಾಳೆಸೊಪ್ಪು** (ನಾ). ಒಂದು ಬಗೆಯ ಸಸ್ಯ : "ಇಂದಿರಾ–ತಾಳೆಸೊಪ್ಪು, ಹಾವುಮೆಕ್ಕೆ" (ಓಷಧಿ. ೦೩). [ ತಾಳೆ ? + ಸೊಪ್ಪು$_3$ ]

**ತಾಳೆಹಣ್ಣು, ತಾಟಿಪಣ್, ತಾಟಿವಣ್** (ನಾ). ತಾಳೆಯ ಹಣ್ಣು ; ತಾಳಹಣ್ಣು : ತಾಳೆಹಣ್ಣು ತಾನೇ ಬಿದ್ದರೂ ಬಾಳದ ಮುರವಗೆ ಬಾಯಿ ಮುಚ್ಚಿತು (ಗಾದೆ). △ **ತಾಟಿಪಣ್ :** ಚೆನ್ನರ ಸಂದ ಚೆನ್ನಪೊಂಗರ ತಲೆ ತಾಟಿಪಣ್ ಕೆದಱಿದಂತೆ ನಿರಂತರಮಾಜಿರಂಗದೊಳ್ ಪರೆದಿರೆ (ಪಂಪಭಾ. ೮-೦೦೬). △ **ತಾಟಿವಣ್ :** ಕಡಿದು . . . ತಾಟಿ[ಪಾಠಾಂ. ಟಿ]ವಣ್ಣ ಬಣ್ಣಕ್ಕೆಣೆಯಾದ ಚಂಚುಪುಟದಿಂದಮೆ (ಕಾದಂಪೂ. ೦೩೬). [ ತಾಳ್$_2$(<ತಾಳ್$^3$) + ಹಣ್ಣು$_3$(<ಪಣ್$_3$) ]

**ತಾಳೆಹಾಕು** (ಕ್ರಿ). = ತಾಳೆನೋಡು : ಹೀಗೆ ಅನೇಕ ವಿಷಯಗಳನ್ನು ತಾಳೆ ಹಾಕಿಕೊಂಡು ರಾಜರ ಮನಸ್ಸು ಶ್ರೀದೇವಿಯಲ್ಲಿ ಅನುರಕ್ತವಾಗಿರಬಹುದು (ಶ್ರೀರಾಯ. ೩೪) ; ಲೆಕ್ಕವನ್ನು ಮಾಡಿದ್ದು ಸರಿಯಾಗಿದೆಯೋ ಎಂದು ತಾಳೆ ಹಾಕಿ ನೋಡಬೇಕು (ಶಿಕ್ಷದ. ೩೩೫). [ ತಾಳ್$_3$ + ಹಾಕು(<ಪಾಯ್ಚು$_1$) ]

**ತಾಳೆಹೂ** 'ತಾಟಿ ಹೂ' ನೋ.

**ತಾಳೆಹೆಂಡ** (ನಾ). ತಾಳೆಮರದಿಂದ ತಯಾರಿಸಿದ ಹೆಂಡ : (೬). [ ತಾಳ್$_2$ (<ತಾಳ್$^3$) + ಹೆಂಡ ]

**ತಾಳೇಬಂದು** (ನಾ). ಜಮಾಖರ್ಚು ಪಟ್ಟಿ; ಆಯವ್ಯಯ ತಖ್ತೆ : ಆ ಕಂಪನಿಗಳ ಸಾಧಾರಣ ವಸ್ತುಸ್ಥಿತಿಯನ್ನು ಅವುಗಳ ತಾಳೇಬಂದುಗಳ (Balance sheets) ಪರಿಶೀಲನದ ಮೇಲಿಂದ ತಿಳಿದುಕೊಳ್ಳುವರು (ಬ್ಯಾಂಕಕ್ಕೆ. ೦೦೭) ; ಬೆಳಗಾವೀ ಜಿಲ್ಲೆಯ ದಪ್ತರಿನಲ್ಲಿ ಈಗಿನ ಲೆಕ್ಕದ ಪದ್ಧತಿಗೆ ಹೊಂದುವಂಥ ತಾಳೇಬಂದು . . . ದೊರಿಯುತ್ತದೆ (ಕಭಾಗ. ೩೯೦). [ ←ಮರಾ. ತಾಳೇಬಂದ್ ]

**ತಾಳೇಶಪತ್ರೆ** 'ತಾಳೀಸಪತ್ರೆ' ನೋ.

**ತಾಳೀಸಪತ್ರ** 'ತಾಳೀಸಪತ್ರೆ' ನೋ.

**ತಾಳೇಸಪತ್ರೆ** 'ತಾಳೀಸಪತ್ರೆ' ನೋ.

**ತಾಳೈಸು** (ಕ್ರಿ). ತಾಳವನ್ನು ಸೂಚಿಸು : ಕಡೆಗಂಗಳ ಕೊನೆಯೊಳು ತಾಳೈಸಲು[ಪಾಠಾಂ. ಕೊನೆಯೊಳ್ಮೇಳೈಸಲ್] (ಭೃಂಗೀರ. ಹ. ೪೬೮-೦೦). [ ತಾಳ್$_2$ (= ತಾಲ) + – ಇಸು$_3$ ]

**ತಾಳೋದ್ಘಾಟನಿ** (ನಾ). ಅಗುಳಿಯನ್ನು ಕಳಚುವುದು ; ಒಂದು ಕಳ್ಳವಿದ್ಯೆ : ತಾಳೋದ್ಘಾಟನಿ ವಿದ್ಯಾಮಂತ್ರ . . . ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳಾದಮಾನುಂ ಕುಶಲನಂತಪ್ಪ ಕಳ್ಳಂ (ವಡ್ಡಾರಾ. ೦೨೨.೦೭). [ ಸಂ. ತಾಲೋದ್ಘಾಟನೀ (ತಾಲ + ಉದ್ಘಾಟನೀ) ]

**ತಾಳೋಲೆ, ತಳಲೆ, ತಳಾಲೆ, ತಾಳೆಯೋಲೆ, ತಾಳೆವಾಲೆ, ತಾಳೆವೋಲೆ** (ನಾ). ೧. (ಮುತ್ತೈದೆತನದ ಸೂಚಕವಾಗಿ) ಸ್ತ್ರೀಯರು ಧರಿಸುವ ಕರ್ಣಾಭರಣ ; ತಾಳೆಗರಿಯಿಂದ ಮಾಡಿದ ಓಲೆ : ನಿಕ್ಕುವದಿಂ ತಾಳೋಲೆಯ ನಿಕ್ಕುವವರ್ಪಲರೊ ನೋಡ ಪೊನ್ನೋಲೆಯನಂತಿಕ್ಕುವ ವರ್ಪಲರೊ(ಧರ್ಮಾಮೃ. ೧-೨೦೦) ; ಪಾದಕ್ಕೆ ಎರಗಿ ಸೆರಗೊಡ್ಡಿ ಬೇಡುವೆ ತಾಳೋಲೆ ಗೈದೆತನಗಳ (ನಾಪದ. ೨೦೦). **ತಳಲೆ :** ೨. ತಾಳೆಗರಿ, ಅಡಕೆಯ ಹಾಳೆಮೊದಲಾದುವುಗಳಿಂದ ಮಾಡಿದ ಟೋಪಿ:ತಲೆಮೇಲೆ ಹಾಳೆಯ 'ತಳಲೆ' (ನಿಸದು. ೨೪). **ತಳಾಲೆ :** ೨. "ನೋಡಲ್ಲಿ, ನಿನ್ನ ತಳಾಲೆ ತೇಲಿ ಹೋಗ್ತಾ ಇದೆ." ತೇಲಿ ಹೋಗುತ್ತಿದ್ದ ತನ್ನ ಹಾಳೆಟೋಪಿಯನ್ನು ಹಿಡಿದೆತ್ತಿಕೊಳ್ಳಲೆಂದು ಪೀಂಚಲು ಒಂದು ಹಾಸುಬಂಡೆಗೆ ಹಾರಿ . . . ತಳಾಲೆಯನ್ನು ತಂದಳು (ಮಲೆಮ. ೦೭೦) ; ತಳಾಲೆ ತೆಗೆದುಬಿಡೆ; ನಿನ್ನ ಮುಖದ ಅಂದಾನೇ ಕೆಡಿಸ್ತದೆ (ಮಲೆಮ. ೭೭೩). **ತಾಳೆಯೋಲೆ :** (೬). **ತಾಳೆವಾಲೆ :** ೩. ತಾಳೆಮರದ ಗರಿ : ತಾಳೇಮರದ ಹೆಸರು . . . ಬಹುಮಂದಿ ತಾಳೇವಾಲೇ ಮರವೆನ್ನುವರು (ಸಿದ್ಧಾಂತಿ. ೦೩೩). **ತಾಳೆವೋಲೆ:** ೩. ತಾಳೆವೋಲೆಗಳಱಿವುವೆ ಲಿಪಿ ಭೇದವ (ಜಿನರಾ. ೬-೭೩). [ ತಾಳ್$_2$ (<ತಾಳ್$^3$) + ಓಲೆ ]

**ತಾಳ್ಕೆ** (ನಾ). = ತಾಳಿಕೆ$_1$ ೩ : "ಧರಣಂ, ಧಾರಣಂ . . . ಧಾರ್ಯಂ ಈ ೬ ತಾಳ್ಕೆ" (ಕಾಶಕ್ಕ. ೦೨೪). [ ತಾಳ್$^1$ + – ಕೆ ]

**ತಾಳ್ಮೆವಂತ** (ನಾ). ಸಹನೆಯಿಂದ ಕೂಡಿರುವಾತ; ತಾಳ್ಮೆಯುಳ್ಳವನು : "ವೃಷ್ಯಃ, ವೃಷ್ಯವಾನ್. . . ಮರ್ಷಾಣಃ, ಈ ೭ ಹುಸಿಗನುಂ, ತಾಳ್ಮೆವಂತನುಂ " (ಶಾಶಕ್ಯ. ೨೦೪). [ ತಾಳ್ಮೆ + – ವಂತ ]

**ತಾಳ್ಗೆಯ್** (ಕ್ರಿ). ಕಾಪಾಡಂ ; ಸಲಹು ; ರಕ್ಷಿಸು : ಕೆಳೆಗೊಳ್ಳ್ದಂ ನೆವಮಿಲ್ಲದೆಲ್ಲ ಜಗಮುಂ ತಾಳ್ಗೆಯ್ವುಗುಮಾ ದೈವಮುಂ ತಳೆರ್ವನ್ನಂ ಚಿಕದೇವರಾಯನ ದಯಾಂಕೂರಂ ಕಟಾಕ್ಷಾಂತದೊಳ್ (ಚಿಕವಿ. ೩-೧೦೬).

[ ತಾಳ್$_1$ + ಕೆಯ್$_1$ ]

**ತಾಳ್ದು**$_1$ (ಕ್ರಿ). ೧. ಹೊಂದು; ಪಡೆ : ಸಮಾಧಿಯೊಳೆ ಮುಡಿಪಿ ತಾಳ್ದಿದನ್ನಿತಮರೇನ್ದ್ರಭೋಗಮಂ (ಎಕ. III, ಮೈಸೂರು.೬-೩ ; ಸು. 750); ದಾನಾನುವೋದ ಪ್ರಭಾವದಿಂದುಪಶಮಭಾವಮಂ ತಾಳ್ದಿ (ಆದಿಪು. ೩-೨ ವ); ತಾನುಂ ತ್ರಿಖಂಡಮಂಡಲಾಧಿಪತ್ಯಮಂ ತಾಳ್ದಿ ಪೌದನಪುರಮಂ ಪೊಕ್ಕು (ಶಾಂತಿಪು. ೩-೬೪ ವ) ; ದಕ್ಷಿಣಬಾಹುದಂಡದೆ ಜಯಶ್ರೀಕಾಂತೆಯಂ ತಾಳ್ದಿ (ಗದಾಯು. ೯-೩೯) ; ಚರಿಯಿಪ ಖಗಮೃಗಕುಳಮಾ ಪರಮಮುನೀಶ್ವರತಪಃಪ್ರಭಾವದಿನತ್ಯಾದರಮಂ ತಾಳ್ದಿ ಪರಸ್ಪರ ವಿರೋಧಮಂ ಬಿಸುಟವು (ಸುಕುಮಾ.೮-೬೨); ಶಾಂತರಸಮಂ ಕಾರುಣ್ಯಮಂ ತಾಳ್ದಿ (ಪಂಪಾಮಾ.೧-೩). ೨. ಧರಿಸು ; ತಳೆ : "ತಾಳ್ದು–ಧಾರಣೇ " (ಶಮದಾ) ; ತದಾಜ್ಞೆಯಂ ನಿಜ ಕಿರೀಟದೊಳ್ ತಾಳ್ದಿದಂದದಿಂ ಸೊಗಯಿಸಿದರ್ (ಆದಿಪು. ೧೩-೭೯) ; ಇತ್ತ ಸರ್ವದಯಿತೆ ಗರ್ಭಮಂ ತಾಳ್ದಿ ಸಾಗರದತ್ತಂ ಕಂಡು (ಜಾವುಂಪು. ೧೧೧-೧೪); ಅಂಗನೋಚಿತ ರಸಾಲಂಕಾರವಮಂ ತಾಳ್ದದೊಪ್ಪಿದ ವಾಕ್ಸುಂದರಿ ಬಂದು ಸನ್ನಿಹಿತೆಯಕ್ಕೆನ್ನೀ ಮುಖಾಂಭೋಜದೊಳ್ (ಗದಾಯು. ೧-೭); ದಿವಮಂ ಮುಟ್ಟಿದ ಪೆಂಪು ಭೂವಲಯಮಂ ತಾಳ್ದಿರ್ದ ಧೈರ್ಯೋದಯಂ (ಮಲ್ಲಿಪು. ೧-೬೮) ; ವಿಜಯಶ್ರೀಯಂ ಭುಜದೊಳು ತಾಳ್ದಿದಜೇಯ (ಎಕ. VIII (೩), ಸೊರಬ, ೩೮೬-೩ ; 1201). ೩. ಸಹಿಸು ; ತಡೆದುಕೊಳ್ಳು ; ತಾಳಿಕೊಳ್ಳು : ಅರಿಗನಂ ಕಾಣುತ್ತೆ . . . ತಾಳ್ದಲರಿದೆಂದಿರ್ಕಜ್ಜೆಯಂ ಕಟ್ಟಿದರ್ (ಪಂಪಭಾ. ೪-೩೮); ದೇವಕೃತಂಗಳುಮಂ ಸ್ವಾಭಾವಿಕಮುಮನಜಿತ ನೀನೆ ತಾಳ್ದಿದೆ (ಅಜಿಪು. ೮-೧೭) ; ಇಂತೀ ಪದಿನಾಲ್ಕುಮನತ್ಯಂತಂ ದೃಢಹೃದಯನಾಗಿ ತಾಳ್ದಿರ್ದಂಗೋರಂತೆ ನಿರಂತರಸೌಖ್ಯಂ ಭ್ರಾಂತಿಲ್ಲದೆ ಕೂಡುಗಲ್ಲಿ ಸಂದೆಯಮುಂಟೇ (ಧರ್ಮಾಮ್ಯ. ೧-೮೨). ೪. ಕೈಕೊಳ್ಳು ; ತೆಗೆದುಕೊಳ್ಳು: ಮತ್ತೆಂತತಿಶಯದೆ ಮಹಾಪುರುಷವ್ರತಮಂ ತಾಳ್ದುವಳು ದಾರಚರಿತಕ್ರಮದಿಂ (ಕವಿರಾ. ೩-೧೬೨) ; ಮುನ್ನಿನ ರಾಜ್ಯಲೀಲೆಯಂ ನೆನೆಯದೆ ತಾಳ್ದಿದಂ ವಿಮಲವಾಹನಯೋಗಿ ತಪೋನಿಯೋಗಮಂ (ಅಜಿಪು. ೩-೨) ; ಸುಷೇಣರೆಂಬ ಮುನಿಮುಖ್ಯರಲ್ಲಿ ಜನದೀಕ್ಷೆಯಂ ತಾಳ್ದಿದಂ (ಸುಕುಮಾ ೧೧-೩೧). ೫. ಹಿಡಿದುಕೊಳ್ಳು ; ಹಿಡಿ : ಮಗುಳ್ವಾದಿನಲ್ಲಿಗೆ ಬರ್ಪುದುಂ ತನುವಿನೊಳ್ ಪ್ರಾಣಂಗಳಂ ದೇವಿ ತಾಳ್ದುಗುವೋ (ಕಾದಂಉ. ೩೭೮). ೬. ಹೊರು ; ಹೊತ್ತುಕೊಳ್ಳು: ಜಲಧಿತರಂಗತಾಟಿತ ಧರಾತಳಭಾರಮಿದೆತ್ತ ಬಾಲನೆತ್ತಳವಿನಿತುಂಟೆ ತಾಳ್ದಲಿದನೊಟ್ಟಜೆಯಿಂ ಕೊಳಲೇದು ವೈರಿಗಳ್ ತಳರ್ದಪರ್ (ಆದಿಪು. ೪-೮೪).

**ತಾಳ್ದುಕೊಳ್** = ಸಹಿಸಿಕೊಳ್ಳು ; ಸೈರಿಸು : ತಾಳ್ದುಕೊಳಲರಿದಪ್ಪ ಪತನಕ್ಕೆ ವಕ್ಕಪ್ಪ ಪಾಡಿಂದೆ ಉಬ್ಬಿಪಲ್ಯಮಾಜಿವು (ಬದ್ಧಶ್ರು. ೧೮-೧೧೫೩).

**ತಾಳ್ದು**$_2$ 'ತಾಳ್$_1$' ಪರಾ.

**ತಾಳ್ಮೆ**, ತಾಳಿಮೆ, ತಾಳುಮೆ (ನಾ). ೧. ಸಹನೆ ; ಸೈರಣೆ ; ತಾಳುವಿಕೆ : ತೊನೆಯಲ್ ತಾಳ್ಮೆಯನಾಂತವಂ ಬೆರೆತೊಡಂ ನಿರ್ಗರ್ವಿ (ಸೋಮೇಶ. ೩೨); ತಾಳ್ಮೆ ಇರಲಿ ಪ್ರಯತ್ನವನ್ನು ನಿಲ್ಲಿಸಬೇಡ (ಶಾಲಮು. ೨೨೨) ; ಜ್ವರದ ತಾಪದಿಂದ ಜರ್ಜರಿತನಾದ ಆನಂದ ತನ್ನೆಲ್ಲ ತಾಳ್ಮೆಯನ್ನು ಕಳೆದುಕೊಂಡಿದ್ದ (ಶೀಮೊಽಡ. ೧) ; ತಾಳ್ಮೆ ಇದ್ದ ಪುರುಷನಲ್ಲಿ ಬೀಳು ಇದ್ದರೆ ಬಾಳ್ಮಾನು (ಗಾದೆ). **ತಾಳಿಮೆ :** ೧. ತಾಳಿಮೆಗುಂಟೆ ಹಳವೆ (ಗಿರಿವಿಂ. ೩೦-೪೪). ೨. ಸಾವಕಾಶ ; ತಡ : ತಾಳಿಮೆಯ ಮಾಡದಿರೆಂದು ಆ ಕ್ಷಣ ಕಳ್ಳಿಬಡಿಗೆಯ ತಂದು (ಶಾರನಿ. ೩-೧೩). **ತಾಳುಮೆ :** ೧. ತಾಳುಮೆಯು ಶಮದಮವು ಸಹಜವು (ಜ್ಞಾನಸಿಂ. ೧೭-೩೧); ತವಕದಿಂ ಕೇಡು ತಾಳುಮೆಯುಳುಮೆಯಿದ ನರಿದು ಸವಿನಯದಿವೊಲಿಸಿಕೊಂಬೊದು (ನವಮೋ. ೯-೨೦) ; ಆತುರದಿನ್ ಅಡುಗೆ ಪಕ್ವಹುದೆ ? ತಾಳುಮೆಯೆ ಪರಿಪಾಕ (ಮಂಕುಕ. ೭೪೧).

[ ತಾಳ್$_1$ + – ಮೆ$_1$ ]

**ತಾಳ್ಮೆಗೆಡು** (ಕ್ರಿ). ಸೈರಣೆಯನ್ನು ಕಳೆದುಕೊಳ್ಳು; ತಾಳ್ಮೆ ಇಲ್ಲದಂತಾಗು: ಆಗ ಭೀಮನು ತಾಳ್ಮೆಗೆಟ್ಟು ಕೈ ಕೈ ಹಿಸಿಕಿಕೊಳ್ಳುತ್ತ . . . ಎಂದನು (ವಚಭಾ. ೨೪೮) ; ಅದುವರೆಗೂ ಮೌನವಾಗಿದ್ದ ಜೈಗೋಪಾಲ್ ತಾಳ್ಮೆಗೆಟ್ಟು ಗಡಬಡಿಸಿದ (ಅತ್ಯಾರ್ಜ. ೧೧೮) ; ಅವರು ಬಂದು ತಲುಪಿದುದೇ ತಾಳ್ಮೆಗೆಟ್ಟವರ ಹಾಗೆ (ಮೂರುದಾ. ೨೬೦). [ ತಾಳ್ಮೆ + ಕೆಡು$_1$ ]

**ತಾಳ್ಮೆತಪ್ಪು** (ಕ್ರಿ). = ತಾಳ್ಮೆಗೆಡು: ತಾಳ್ಮೆತಪ್ಪಿದರೆ ಅಪಯಶಸ್ಸು ಬರುತ್ತದೆ (ಭಾರದ. ೧೧೩). [ ತಾಳ್ಮೆ + ತಪ್ಪು$_1$ ]

**ತಾಳ್ಮೆವಂತ** (ನಾ). ತಾಳ್ಮೆಯುಳ್ಳವನು; ಸಹನೆ ಇರುವವನು: "ಕ್ಷಂಪನ್, ಕ್ಷಂಪಃ, ಕ್ಷಂಪಕಃ, ಈ ೩ ತಾಳ್ಮೆವಂತಂ " (ಶಾಶಕ್ಯ. ೨೩೮).

[ ತಾಳ್ಮೆ + – ವಂತ ]

**ತಾಳ್ವ** 'ತಾಳ್$_1$' ಪರಾ.

**ತಾಳ್ವಾರ**, ತಾಪಾರ, ತಾಳವಾರ$_1$, ತಾಳುವಾರ (ನಾ). ೧. ಮನೆಯ ಮುಂದಿನ ತಗ್ಗಾದ ಅಂಗಳ; ಇಳಂಕಲಾದ ಅಂಗಳ: (ಕ). **ತಾಪಾರ:** ೨. ಒಪ್ಪಾರು ಮನೆ ; ಒಪ್ಪಾರು ಗುಡಿಸಲು : ಕ್ರೈಸ್ತ ಪೂಜಾಗೃಹದ ಪಶ್ಚಿಮ ಪಾರ್ಶ್ವದಲ್ಲಿಯ ಹೊರಕೋಣೆ, ತಾಪಾರ (Ante-chapel. ಇಂಕಿನಿ); (ದನಕರುಗಳನ್ನು ಕಟ್ಟುವುದು, ವೊ. ಕ್ಕೆ ಉಪಯೋಗಿಸುವ) ಗುಡಿಸಿಲು ; ಜೋಪಡಿ ; ಕೊಟ್ಟಿಗೆ ; ಗಾಡಿಖಾನೆ ; ಸಾಮಾನನ್ನು ಶೇಖರಿಸಿಡುವ ಕರ್ಮಶಾಲೆಯಾಗಿ ಉಪಯೋಗಿಸುವ ಮನೆ; ಪಟ್ಟಡಿ; ತಾಪಾರ" (Shed. ಇಂಕಿನಿ.). **ತಾಳವಾರ**$_1$ : ೧. "ರಥ್ಯಾ, ಪ್ರತೋಲೀ, ವಿಶಿಖಾ ೩ ಊರೊಳೊಗಿರುವ ಮುಖ್ಯವಾದ ಚಾವಡಿ ಜಗಲಿ, ಬೀದೀಜಗಲಿ, ತಾಳವಾರ, ಕೈಸಾಲೆ, ಜಗಲಿ" (ಸಿದ್ಧಾಂತಿ. ೮೮). **ತಾಳುವಾರ :** ೨. ತಗಡು ಬಡಿದ ತಾಳುವಾರಂಗಳಿಂ (ಸೌಗಂಧಿ. ೧೩೧-೮).

[ ದೇ.॥ ತಮಿ. ಮಲ. ತಾಟ್ವಾರ ; ತೆಲು. ತಾಳ್ವಾರ, ತಾಳುವಾರ ]

**ತಾಳ್ವೆ** (ನಾ). = ತಾಳ್ಮೆ ೧: "ಕ್ಷಾಮಯಿಕಿ, ಕ್ಷಾಮ್ಯಣಂ, ಕ್ಷಾಮ್ಯಣೇಯಂ–ಈ ೩ ತಾಳ್ವೆ" (ಶಾಶಕ್ಯ. ೦೦೮). [ ತಾಳ್$_1$ + – ವೆ ]

**ತಾಜಿ**$_1$ 'ತಾಜು$_1$' ನೋ.

**ತಾಜಿ**$_2$, ತಾರ್, ತಾಜು$_4$ (ನಾ). ಒಳಿತು ಕೆಡಕುಗಳ ಸೂಚನೆ; ಶಕುನ: "ಶಕುನ ಶೋಷಣಗಳೊಳ್ ತಾಜಿನಿಕ್ಕುಂ " (ಶಬ್ದಮಂ. ೧೦೭); ನೇರ್ಗಳ್ ಸೀರ್ಗಳ್ ತಾರ್ಗಳ್ (ಶಮದ. ೪೧). **ತಾರ್ :** ತುರುವಿಂದು ಬಲವಂದು ತಾರ್ಗಳಂ ಬರೆಯುತಿರೆ (ಕಾಲೂರ. ೩೯-೯೮). **ತಾಜು**$_4$ : "ತಾಜು–ಶೋಷಣೇ, ಶಕುನೇ ಚ " (ಶಮದಾ) ; ಸರಾಗದಿನೊಲಿದು ದಂಪತಿ ತಾಜಿ [ಪಾಠಾಂ. ತರವ]ನಿತ್ತವು ಕರಿಯ ಹಕ್ಕಿಗಳು ಸುಳಿದವೆಡದಲಿ ಹಂಗ ಬಲದಲಿ (ತೊರರಾ. ೧-೬-೬).

**ತಾಜಿನಾಡು** (ನಾ). ಒಂದು ಸ್ಥಳದ ಹೆಸರು: ದಂಣಾಯಕರು ತಾಜಿನಾಡು ಹದಿನಾಡು ಕುನಾಡನು . . . ರಾಜ್ಯಂಗೆಯುತ್ತಮಿರಲು (ಎಕ. III, ತಿರುಮ. ೩೧-೩೦ ; 1196). [ ತಾಜಿ ? + ನಾಡು ]

**ತಾಜಿಲ್** (ನಾ). ೧. ಒಣಗಿರುವುದು ; ಶುಷ್ಕವಾದುದು ; ಸೊರಗಿ ಹೋಗಿರುವುದು: ತಾಜಿಲಾದುವು ತನು ಕೂಟ ನೀರ ದೆಸೆಯಿಲ್ಲದೊಡಲ್ಗಳ ನೆಂತು ತಾಳ್ದುವಂ (ಆದಿಪು. ೯-೮೯). ೨. ಕುರುಚಲು ಗಿಡಗಳ ಗುಂಪು ; ಪೊದರು : ಪೊಸಗಾರೊಳ್ತಾಜಿಲೊಳ್ ಕಣ್ಣರೆಮುಗುಟ್ದಿರೆ . . .

ನಿಂದುದು ವನಮಹಿಷೀವ್ರಂದಂ (ಮಲ್ಲಿಪು.೮-೯೯); ನಿಂದಿರ್ದುದೋರೊಂದೆಡೆಯೊಳ್ ತಾಱಲ್ಗಳೊತ್ತಂಬಿಡಿದು ಮೃಗವ್ಯಾಘ್ರೀವ್ರಂದವೋರಂದದಿಂದಂ (ಚಂದ್ರಪು. ೪-೪೭); ಸಿಂಹಿ ಕಿಶೋರಂ ನಡುಸೂಲೊಳ್ಸಿರ್ಕೆ ಕಣ್ಣಂ ತೆಱೆದಿಭಪತಿಯಂ ತಾಱಲೊಳ್ಕಂಡು ಕಾಯ್ಪಿಂ ನಡು ಪಾಯ್ದು (ಅನಂಪು. ೧೨-೬೨); ತಾಱಲೊಸರ್ದಾಣ ಮಹಾಗ್ರಹಂ ತೊಱೆ ಕೊಳಂ ಪುಲ್ವಟ್ಟೆಗಳ್ ಕಾಮುರ್ಕಂ (ಸೂಕ್ತಿಸು. ೩-೨). ೩. (ಕುರಂಚಲುಗಿಡಗಳಿಂದ ಕೂಡಿದ) ಪ್ರದೇಶ; ತಪ್ಪಲು; ಕಿಬ್ಬಿ: ಕರುಣಾಧ್ವನಿ ಪೊಂಪುಳಿಯಾದುದು ಗಿರಿಯ ಪಿರಿಯ ತಾಱಲೊಳಂಗಳ್ (ಶಾಂತಿಪು. ೯-೮೨); ಪೆಸರ್ವಡೆದುವು ಸೌಗಂಧಿಕಮೆಂದದಱ ತಾಱಲೊಳ್ ಕಿಸುಗಲ್ಗಳ್ (ಚಂದ್ರಪು. ೧೨-೯೯); ಆ ವರಾಹಸಂದೋಹವಿರ್ದ ಶಾಲೆ[ಲಿ]ಯ ತಾಱಲೊಳ್ (ಶಾಂತೀಶ್ವ. ೩-೮೭ ವ). [ ತಾಱು$_1$ + – ಅಲ್$_2$ ]

**ತಾಱಲ್ವಿಡಿ** (ಕ್ರಿ). ಪೊದೆಯನ್ನು ಹಿಡಿ; ಹೊದರನ್ನು ಸೇರು: ತಾಱಲ್ವಿಡಿದು ಗೋರಿವರಿದುಮೆನೆ ಕುನುಂಗಿ ಕೆಲ್ಲಯಿಸಿ ನೋಟ್ಟಿ ತರಳಲೋಚನದ ಸರಳಾಪಾಂಗಂ ಹರಿಣೀಭಾವಮಂ ಮನಂಗೊಳಿಸಿ (ಅನಂಪು. ೬-೧೬ ವ).

[ ತಾಱಲ್ + ಪಿಡಿ$_1$ ]

**ತಾಱವಱು** 'ತಾಱುಮಾಱು' ನೋ.

**ತಾಱಿ**, ತಾರಿ$_1$, ತಾರೆ$_1$, ತಾಱೆ$_1$ (ನಾ). ೧. ಒಂದು ಬಗೆಯ ಮರ; ವೈದ್ಯಶಾಸ್ತ್ರದಲ್ಲಿ ಪ್ರಸಿದ್ಧವಾದ ತಾರೆ, ಅಳಲೆ, ನೆಲ್ಲಿ ಎಂಬ ತ್ರಿಫಲಗಳಲ್ಲಿ ಒಂದು; ಕಲಿದ್ರುಮ; P ತಾರೆಮರದಲ್ಲಿ ಕಲಿಪುರುಷನು ವಾಸಿಸುತ್ತಿರುವನೆಂಬ ನಂಬುಗೆಯಿದೆ: "ತಾಱಿಯಲಿ ಭಂಡಿಯಲಿ . . . ಅಕ್ಷಮೆನಿಸಿಕ್ಕು" (ಮಂಗರಾ. ೧೪೩-೩೦); ತಾಱಿ ಹೊನ್ನೆ ಕುಟಜಂ . . . ಪನಸು ನಿಂಬಂ (ಕಾವ್ಯಸಾ. ೧೦೪೦ ಶೂದ್ರಕ): ತಾಱಿಯ ಕಳವಿನ ಮರಂಗಳು ಮೇರೆ (ಸೌಇಇ. IX-i, ೧೦೯-೪೩; 1057); ಪಾದರಿ ತಾಱಿ ತಂಡಸು . . . ಕವುಂಗಿವ್ಮಾವು (ಪಾರ್ಶ್ವಪು. ೧೨-೫೮); ತಾಱಿ ತೇಗು ತಱಿ ತಂಡಸಿ ಬೊಬ್ಬುಲಿ (ಪುಣ್ಯಾಸ್ರ. ೩-೭೪); ಕಡಪೊಡವೆಕ್ಕೆ ಕಕ್ಕೆ ತಱಿ ತಾಱಿ . . . ತಡಸೀಳೆ ಬಾಱೆ (ಧರ್ಮಪ. ೩-೪೭); ನೆಲ್ಲಿ ನೇಱಿಲು ತಱಿ ತಾಱಿ ಕಡವ ಕನ್ನೆಲ್ಲಿ ಹಲಸು (ಕುಠಾಸಾಂ. ೨೭-೫೫). ೨. (?) : ಮೂಡಣ ಪಳ್ಳ ಅದಱ ತೆಙ್ಕಣ ದೆಸೆ [ಮಣ್ಣಗೆಱೆ]ಗೂಟ್ಟಂ ತಾಱಿಯಂ ಕೊ[ತ್ರ್ಗು]ಗು ××× ವಿಯ ಕೆಱೆಗೊಟ್ಟಂ (ಸೌಇಇ. XI-i, ೯-೨೯; 862); ಬ್ರಹ್ಮದೇವಂಗೆ ಗದ್ದೆ ತಾಱಿಯಿಂದಿಬ್ಬಡಗಲು ನಟ್ಟ ಕಲ್ಲಿಂದ ಮೂಡಣ ನಿವೇಸನ (ಎಕ. XII, ತಿಪಟೂ. ೪೨-೪೦; 1229). **ತಾರಿ$_1$:** ೧. ತಾರಿ . . . ದೊಡ್ಡ ಮರ (ಕಭಾಗೆ. ೪೦). **ತಾರೆ$_1$:** ೧. "ವಿಭೀತಕಃ . . . ಭೂತಾವಾಸಃ, ಕಲಿದ್ರುಮಃ ೬ ತಾರೆಯ ಮರ" (ಸಿದ್ಧಾಂತಿ. ೧೧೧); ತಾರೆಯು ಸೀಗೆ ಬೇಲ ಬಗುನಿಯು (ನವಮೋ. ೮-೯); ಮುತ್ತುಗ ತಾರೆ ಮುಂತಾದ ಹೆಮ್ಮರಗಳು ವತ್ತಾಗಿ ತೋರ್ದವಾ ವನದಿ (ಸೌಗಂಧಿ. ೨-೩೪); ಸ್ವಲ್ಪ ಮುಂದೆ ಹೋಗಲು ಹಣ್ಣುಬಿಟ್ಟಿದ್ದ ಒಂದು ತಾರೆಯ ಮರ ಕಾಣಿಸಿತು (ವಚಭಾ. ೧೪೧). **ತಾಱೆ$_1$:** ೧. "ಕಲಿಃ, ಅಕ್ಷಃ, ವಿಭೀತಃ–ಈ ೩ ತಾಱೆ" (ಹಲಾಯು. ೧೦೦-೪೬೪); ಎರಟ್ಟಿ ಪುಣುಸೆವ ಮೂಡಾಯೋಡಿ ನೀರಿಱಿವೆ ತಾಱೆವಿ (ಎಕ. XVI, ಗುಬ್ಬಿ. ೬೫-೫೨; 733); ತಾಱೆಯ ಮಾವಿನ ಮುಳ್ಳರನ ಪಾಲ್ಮರಂಗಳ ಸುರಗೇಹಾವಳಿಯ ಮರಂ ಕರವಶುಭಾವಹ ಮಕ್ಕುಂ ಗೃಹಕ್ಕೆ ಗೃಹಶಲ್ಯಂಗಳ್ (ಲೋಕೋಪ. ೩-೯); ಉಜ್ವಲವಾಗಿ ತಾನುರಿವ ತಾಱೆಯ ತೆಂಗಿನೆಕ್ಕೆಯ ಮಾವಿನಿಂಧನಮಂ . . . ತರಿಸಿ (ಧರ್ಮಾಮೃ. ೯-೧೭೧); ಅರನೇಱಿಲ್ಪಾಱೆ ತುಂಬುರ್ತದುಕಳಿಲೆವಂ ನೆಲ್ಲಿ (ಗಿರಿಕ. ೧-೬೨); ತರತರದಿಂ ಶೋಭಿಸುವ ತಾಱೆಯಿಂದ . . . ಕಾನನಂ ಕಣ್ಗೆಸೆದುದು (ರಾಘಚ.೧೭-೫೪); ಗಂಧಕದ ತೈಲವನು ಕುಂದದಲೆ ರಸಕಿತ್ತು ಕಂದಿದ ತಾಱೆಯೊಡಗೂಡೆ ಹೇಮ ತಾ ಮುಂದೆ ಬಂದಕ್ಕು (ಸರ್ವಜ್ಞ.೧೯೩೬).

**ತಾಱೆಯಕಾಯಿ**, **ತಾರೆಯಕಾಯಿ** = ತಾಱೆಗಾಯ್: ದಿನವೆರಡಕ್ಕೆ ತಾಱೆಯ ಕಾಯ ಪ್ರಮಾಣಾಹಾರವಾಗಿ (ಪುಣ್ಯಾಸ್ರ. ೧೦-೬ ವ); "ಅಕ್ಷಫಲಃ – ತಾರೆಯಕಾಯಿ." (ಓಷಧಿ. ೬).

[ ದೇ.೫ ತಮಿ. ತಾನ್ರಿ, ತಾನಿ; ಮಲ. ತಾನ್ನಿ; ತುಳು. ದಾಂಡಿ; ತೆಲು. ತಾಡಿ, ತಾಂಡ್ರ ]

**ತಾಱೆಗಬೀಱೆಗ**, ತರಗಬರಗ, ತಱಬಱಿಕ, ತಾರಗಬೀರಗ (ನಾ). ಅಸ್ತವ್ಯಸ್ತವಾದುದು; ತಾರುಮಾರು: ಎಲ್ಲಂ ಬಱಿ ತಾಱೆಗಬೀಱೆಗ [ಪಾಠಾಂ. ತಾಱೆಗೆಬೀಱೆಗ]ವೆತ್ತಱತತ್ತಱವೆಕ್ಕಸಕ್ಕಮಸ್ತಂಬ್ಯಸ್ತಂ (ಗಿರಿಕ. ೧-೨೩). **ತರಗಬರಗ:** ತರಗಬರಗ ಎಕ್ಕಸಕ್ಕ ಅಸ್ತವ್ಯಸ್ತವಾಗುವುದು (ಸಾಹಿವಿ. ೮೦). **ತಱಬಱಿಕ:** ಅಱಿಯದ ಬಾಲಂ ಬೀದಿಯ ಹಱಿಮಣ್ಣಂ ಮಾಡಿದೊಂದು ಹಾಹೆಯ ತೆಱದಿಂ ತಱಬಱಿಕಂ ವಿಕಟಾಕೃತಿ ನೆಱೆ ನಿಷ್ಕಾರಣಿವೃತಹುಂಡಸಂಸ್ಥಾನಂಗಳ್ (ಶಾಂತೀಶ್ವ. ೯-೧೦೭). **ತಾರಗಬೀರಗ:** ತಮಿಳಿನಲ್ಲಿಯಂತೂ . . . ತುಂಬಾ ಅಸ್ತವ್ಯಸ್ತ 'ತಾರಗಬೀರಗ'ವಾದದ್ದು ಎಂದು ಅರ್ಥವಂತೆ (ಭಾಷಾಶಾ. ೮೬). [ ? ]

**ತಾಱೆಗಾಯ್**, ತಾರಿಕಾಯಿ, ತಾರೆಕಾಯಿ, ತಾಱೆಕಾಯಿ(ನಾ). ತಾರೆಯ ಮರದ ಕಾಯಿ: ರುದ್ರಾಕ್ಷಿಯಂ ತಾಱೆಗಾಯೆಂದು ಶುನಕನ ಕೊರಲೊಳು ಧೀರನಿವ ಕಟ್ಟಿದನು (ಪ್ರಭುಪು. ೩-೧೨೦). **ತಾರಿಕಾಯಿ:** ಅಳಲೆಕಾಯಿ, ತಾರಿಕಾಯಿ ಹಾಂಗು ಹತ್ತಿಯ ಕಾಳು, ಇವುಗಳ ಮಜೂರಿ (ಮುಂಬವ್ಯಾ. ೧೮ ಪ್ರಸ್ತಾವನೆ). **ತಾರೆಕಾಯಿ:** ಕೊತ್ತುಂಬರಿ, ಕೊಡಸಿಗೆಬೇರು . . . ತಾರೆಕಾಯಿ, ನೆಲ್ಲಿಚಟ್ಟು . . . ಸಮದಿಂ ಕಷಾಯ ಕಾಯಿಸಿ ಕೊಡಲು ವಾತಜ್ವರಂ ಮಾಣ್ಗುಂ (ಸಕಪ್ಪ. ೬೫); ತಿಗುಡೆ ನೀಲಿಬೇರು ಅಳಲೆಕಾಯಿ ತಾರೆಕಾಯಿ ನೆಲ್ಲಿಕಾಯಿ ಯಿಷ್ಟು ಸಮಾಂಶವಾಗಿ ಕೂಡಿ (ವಿಷಚಿ. ೨೦-೫). **ತಾಱೆಕಾಯಿ:** ಕಲ್ಕದ್ರವ್ಯ . . . ತಾಱೆಕಾಯಿ–ಇವಿಷ್ಟನ್ನೂ ಪ್ರತ್ಯೇಕ ಒಂದು ವರಹ ತೂಕವ ಸಣ್ಣನಾಗಿ ಕತ್ತರಿಸಿ ಚೂರ್ಣಿಸಿ (ವೈದ್ಯಸಾ. II, ೫೫).

[ ತಾಱೆ + ಕಾಯ್$_4$ ]

**ತಾಱಿಗೆ** (ನಾ). ಒಣಗುವಿಕೆ; ಬಾಡುವಿಕೆ: ಬೇಡಿಗೆ, ಮೂಡಿಗೆ, ತಾಱಿಗೆ, ಮಾಱಿಗೆ, ಪೊಲಿಗೆ (ಶಬ್ದಾನು. ೫೬೫ ಪ್ರಯೋ). [ <ತಾಱು$_1$ + – ಗೆ ]

**ತಾಱಿಸು**, ತಾರಿಸು$_1$ (ಕ್ರಿ). ೧. ಒಣಗಿಸು; ಬಾಡಿಸು: ಎಳೆಯ ಬಾಳೆಯ ಸುಳಿಯನನಲಜ್ವಲನದುಬ್ಬಟೆ ತಾಱಿಸಿ[ಪಾಠಾಂ. ಕಾರಿಸಿ]ದವೊಲು ಬಳಲಿದ ಬಲೆಯ ಕಂಡು (ನಳಚ. ೫-೨). **ತಾರಿಸು$_1$:** ೨. ಶಕ್ತಿಗುಂದುವಂತೆ ಮಾಡು; ಸಾರವಿಲ್ಲದಂತೆ ಮಾಡು: ಶೂರನಹ ವೈರಿಯನು ದೂರದಲೆ ತಾರಿಸುವ ಸಾರವಹ ನಿಮ್ಮ ಮಂತ್ರಗಳ ಕಂಡು (ದಿಲೀಚ. ೧-೫೦).

[ ತಾಱು$_1$ + – ಇಸು$_3$ ]

**ತಾಱು$_1$**, ತಾರು$_1$, ತಾಱ್$_1$ (ಕ್ರಿ). ೧. ಸೊರಗು; ಬಡಕಲಾಗು: ಭೀಮನಾರ್ದೊದೆದೀಡಾಡಿದೊಡೆ . . . ಪಾಱಿ ತಾಱಿದ ಪೇರಾನೆಯೊಡಲ್ಗಳಭ್ರತಳದೊಳ್ ಸಿಲ್ಕಿರ್ದುವು (ಪಂಪಭಾ. ೧೧-೬೭); ವ್ರತಮಂ ಪೇಱೆಸ್ಟೊಡೆ ನೋಂತು ತಾಱಿದೊಡಲುಂ ಚಕ್ರೇಶನಾಜ್ಞಾಧಿಪಂ ಸುತನಂ ಪೇಱೆಸ್ಟೊಡೆ ಚಕ್ರವರ್ತಿ ಕಟಕಕ್ಕಾರಾಧ್ಯೆಯಾಗಿರ್ದೆ (ಅಜಪು. ೧೨-೮); ಬ್ರಹ್ಮಚಾರಿಯ ತಾಱಿದೊಡಲುಮಂ ಒಳಗಡಂಗಿದ ಕಣ್ಣುಮಂ ಮಾಯಾಸಂಯಮುಮುಮಂ ಮನದೊಳ್ ಮೆಚ್ಚಿ (ಧರ್ಮಾಮೃ. ೬-೪೫); ಎನಿತಾನುಂ ಪಱಿಸಿ ಕಾಣದೆ ತನು ತಾಱೆ (ಅನಂಪು. ೧೧-೬೧); ಕಾಳಿಕೆಯ ಪೋಱೆಯ ತಾಱಿದೊಡಲುಗಳ . . . ದೇವರಿಂದ್ರನನಱಿಸಿ ಕಂಡರು (ಕುವ್ಯಾ.ಕ. ೬-೧೨). ೨. ಬತ್ತು; ಒಣಗು; ಬಾಡು: "ತಾಱು – ಶೋಷಣೇ, ಶಕುನೇ ಚ" (ಶಮಧಾ): ಮಾಸಿ ತಾಱಿದ ಕುರುಳ್ಗಳುಂ (ಗದಾಯು. ೯-೩); ತಾಱುವ ತಾಳ್ಗಳುಮುಗುರ್ವಿಸಲ್ ಕಾಡಕೋಣನೆಯ್ದಿದುದಱಿಲಂ (ಜಗವಿ. ೧೭-೬೮); ತಾಱಿತಂತಃಕರಣ ಕಾಮನ ಕೂರುಗಣೆ ಕಾಳಿಕ್ಕಿದವು (ಕುವ್ಯಾವಿ. ೨-೧೫).

೩. ಕುಗ್ಗು ; ಕುಂದು ; ಮ್ಲಾನವಾಗು: ತಾಱಿ ತಲ್ಲಣಿಸಿ ಬೀಳುತ ಕ್ಷುಧೆಯಡಸಿ ಬಾಯಾಱಿ (ಅಂಜನ ೯-೦೭೭) ; ತಾಱಿದಾನನದಿಳಿದ ಹುಬ್ಬಿನ . . . ವೃದ್ಧರನು ತೋಱಿದನು (ಕುಮಾ.ಅ. ೦೫-೧೦) ; ಭೋಗಿಗಳು ಬೀಗಿದರು ತಾಱಿದುದು ವಿಯೋಗಿವ್ರಾತವತಿಭಯದಲಿ (ಸೌಂದಪು. ೧೦-೭). ೪. ಕಡಮೆಯಾಗು ; ಕ್ಷೀಣಿಸು: ನೂಱು ಗಾವುದ ಮತ್ತೆ ಕ್ರಮದಿ ತಾಱಿ ತಗ್ಗಿತು ನೋಡೆ ಪಗಡೆಯ ಕಾಯಂತೆ ತೋಱುತಿದ್ದುದು ವೃಷಭಾದ್ರಿ (ಭರತ. ೩೭-೮೦) ; ಬರ್ದು ಕೆಲಸಾರ್ದುದು ಕೈಮೆ ಕಟಲ್ದುದುಬ್ಬರಂ ತಾಱಿತು (ಚಕವಿ. ೩-೨೦೯). ೫. ಬೇಯು ; ಬೆಂದುಹೋಗು (?) : ಸರಸ್ತಟಾಕದ ಶಫರಾಳಿ ಕುತ್ತೆಸರ ವಿಮಾನವೊಲಿರ್ದುದು ತಾಱಿ ತಳ್ತು ಪರ್ವಿದ ಪಟುವಗ್ನಿಯುಂಡುಱಿದ ಕಾಂಡವದಂತೆವೊಲಿರ್ದುದಾವಗಂ (ಚಂದ್ರಪು. ೯-೭೯). ೬. (?) : ಸರ್ವ ಸುರರಂದು ನಗಜಾಧಿಪಂಗಗಿದು ಸುಗಿದು ತಾಱುವರುಯೆಂದಱಿಯೆ ಪೋಕ್ಷಂ(ಸಾನಂಚ.೨-೪೯). ತಾರು₁: ೧. ಪರರ ಕಣ್ಣೆಂಜಲಿರದಿನಿತು ಮಿಗೆ ತಾಗೆ ತನು ತಾರುಗುವೆನುತ್ತೆ (ಕುಮಾಪು. ೪-೧೦೯); ಅವಳು ತುಂಬ ತಾರಿಹೋಗಿದ್ದಾಳೆ (ಪುನರು. ೪೦೦). ೨. ಕೆರೆಯ ಅಂಗಳದಂತೆ ತಾರಿವೆ ಹಸುಳೆಯಂಗಳು (ದ್ರಾಕ್ಷಿ ದಾ. ೫೮-೫). ೩. ಮಾರಿದಳಲಿನೆದೆಯಾರಿದೆ ಸೈಸದೆ ತಾರಿದೆ (ಇಂದ್ರಕೀ. ೯) : ಶೋಕದಿಂದ ಮನಸ್ಸು ತಾರಿದರೂ ಅವನು ಕರ್ತವ್ಯವನ್ನು ಬಿಟ್ಟು ಕದಲಲಿಲ್ಲ (ಭೀಷ್ಮಚ. ೨೪). ೪. ಮೂಡಿದರುಣಾಭ್ರದೋಲ್ ತೋರುತಿಹ ತಾರುತಿಹ ಭೀಕರದೊಳ್ಕಿದೆದಳವು (ಜಿನಮು. ೨೫-೪). ತಾಱ್₁ : (೬).

ತಾರಪೊಯ್, ತಾರಹೊಯ್=ಸದೆಬಡಿ : ಸಾರಥಿಯ ತಾರಪೊಯ್ದನು (ತುರಂಗ. ೫೭-೩೦) ; ತಾರಹೊಯ್ದನು ಕೆಡೆದವಾನೆಗಳು (ತುರಂಗ. ೫೦-೪). ತಾರಮುರಿ = ಭಂಗಿಸು ; ಭಗ್ನಗೊಳಿಸು : ಜೋನಗ ಬೇನಬೊಂಟರಂ ತಾರಮುರಿದವರನಪ್ಪಳಿಸಿ (ತುರಂಗ. ೧೯-೩೦).

[ ದೇ.ಜ ಮಲ. ತಾಱು; ತೆಲು. ತಾಱು, ತಾರು ]

ತಾಱು₂, ತಾರ್₂ (ನಾ). ಒಣಗಿದಂದಂ ; ಶುಷ್ಕವಾದಂದಂ: 'ತಾಱುಗುಂಡೆ' ಪರಾ. ತಾರ್₂: ಒಣಗಿ ತಾರವಾದ ಸಿಬಿರಿನ ಪೆಂಡಿಯನ್ನು ತೆಗೆದು (ದೀಪಹ. II, ೩).

ತಾರ ಗೋಟಡಿಕೆ = ಒಣಗಿ ಗಟ್ಟಿಯಾದ ಗೋಟಡಕೆ : (೬).

[ <ತಾಱು₁ ]

ತಾಱು₃(ನಾ).೧. ತೆಂಗು, ಅಡಕೆ, ಉತ್ತುತ್ತೆ, ಬಾಳೆ ಮೊದಲಾದುವುಗಳ ಗೊಂಚಲು,–ಗೊನೆ. ೨. ಗುಂಪು ; ಸಮೂಹ : ಚಂಪಕದ ಮಾಲೆಯನು ಮಾಱುವ ನೆವದಿ ಪಿಡಿಯಲಳಿಗಳು ಕಂಡು ತಾಱುಬೇಱಾಗಲೋಡಿದವು (ಅನಂಚ. ೦-೦೬೩) ; ಜಾಱಿದಂದದಿ ಸೂತ್ರಿಸಿದಂತೆ ನಡಸಿದರ್ತಾಱುಬೇಱಾಗದಂದದಲಿ (ಅನಂಚ. ೩-೭೬). 'ತಾಗರ್ೊಡಂ', 'ತಾಗೆರ್ೊಳ್' ಪರಾ. [ ದೇ.ಜ ತಮಿ. ತಾಱು ]

ತಾಱು₄ 'ತಾಱ್₂' ನೋ.

ತಾಱು₅ (ನಾ). ಅಸ್ತವ್ಯಸ್ತತೆ; ಗೊಂದಲ : 'ತಾಱುಂತಟ್ಟುಂ' ಪರಾ.

[ ? ]

ತಾಱು₆ (ನಾ). ಒಂದು ಬಗೆಯ ಭೂಮಿ : ಮೂಗಣ್ಣಾಗ ಭತ್ತಂ ಪೊಕುಳಿಮಕ್ಕಿಯ ಪಲಸಿನ ತಾಱಿನಿತ್ತರೆ (ಎಕ. VI, ಚಿಕ್ಕಮ. ೭೫-೯; 1060 ?); ತೋಟಿಗರಿತ್ತರ್ವರ್ಷಂಪ್ರತಿ ಕಂಡಗೆಯಂ ಸ್ಥಿರತರ ತಾಱಿಂಗೆ ರಂಗಭೋಗಕ್ಕೆಂದುಂ (ಕಇ. I, ೩೦-೩೩ ; 1222) ; ಮೂಡಲರಿಯ ತಾಱು ಹನ್ನೆರಡು (ಕಇ. III, ೬-೨೯ ; 1343); ತೆಂಗಿನ ತಾಱಿಂದ ಪಡುವ ಬಡಗ (ಸೌಇಇ. ೧೯೩೦, ಕುಂದಾಪುರ. ೫೩೭-೪೪ ; 1371) ; ಮೂಲದ ಜವಳಿಯ ತಾಱಗಡಿಯಿಂದಂ ಬಡಗಲು (ಸೌಇಇ. IX-ii, ೪೨೪-೪೫ ; 1436). 'ತಾಱುಂ ವಾರಿ' ಪರಾ. [ ? ]

ತಾಱುಂಗಾಮಲೆ (ನಾ). ಸೊರಗಿಸುವ ಕಾಮಾಲೆ ರೋಗ : ಸಂತಾಪವೆನಿಸುವುದುಗ್ರತಾಪವೆನಿಸುವುದು ತಾಱುಂಗಾಮಲೆ (ಸಾನಂಚ. ೫-೦೩).

[ ತಾಱು₁ + ಕಾಮಲೆ (<ಕಾಮಾಲೆ) ]

ತಾಱುಂಗೊಡು (ಕ್ರಿ). (?) : ಅಳ್ಳೆಗೊಂಬಿನೊಳ್ ತೆಱಿಂದಿಱಿದು ತಾಱುಂಗೊಟ್ಟು ನಿಡುಸರಮನಿಟ್ಟು . . . ತುಂಬಿ ತಿಳಿದು ಬಳೆದ ಬಂಡಂ ಗುಡುದುಂಬಿಯುಂ ತಾನುಮುಂಡು (ಲೀಲಾವ. ೧೧-೫೪ ವ).

[ ತಾಱು? + ಕೊಡು₁ ]

ತಾಱುಂತಟ್ಟು, ತಾರುತಟ್ಟು, ತಾಱುತಟ್ಟು, ತಾಱುಥಟ್ಟು, ಥಾಱುಥಟ್ಟು (ನಾ). ಗುಂಪು ; ಸಮೂಹ : ದಟ್ಟಣೆ : ಸೇನಾಭಟರ್ಭೋಂಕೆನೆ ತಾಱುಂತಟ್ಟುವೀಟಲ್ (ಶಾಂತೀಶ್ವ. ೩-೧೫) ; ಕೊಂಚವೆಟ್ಟಂ ತಟ್ಟುರ್ಚಿದಂತೆ ತಾಱುಂತಟ್ಟಾಗಿ ಕೆಡಪಿ ಮಟ್ಟಿಡುವುದುಂ (ಚಳವಂ. ೪೭-೭). ತಾರುತಟ್ಟು: ಆರಿಗಂ ಗೆಲಲಾರದಮರರ ತಾರುತಟ್ಟನೆ ಬಡಿದು (ರಾಮಾಸಂ. ೬-೯-೪೫) ; ಪಾಳೆಯ ಕಂಡ ಕಂಡ ಕಡೆಗೆ ತಾರುತಟ್ಟಾಗಿ ಚೆದುರಿ ಹೋಗುತ್ತದೆ (ಸಂಚುಂಡ. ೯೭) ; ತಲೆಕೆದರಿಕೊಂಡು ತಾರುತಟ್ಟಾಗಿ ಓಡಿಹೋದರಂ (ಕರ್ಣಾಜ. ೧೫೦). ತಾಱುತಟ್ಟು : ವನವ್ಯಾಗರಾಜಿಗಳ್ . . . ಮರೀಚಿಕಾಜಲಕ್ಕನುನಯದಿಂ ಕರಂ ಪರಿದು ಲಂಘಿಸಿ ತಮ್ಮೆರ್ದೆಯಾಱಿ ತಾಱುತಟ್ಟೆನಲಸುವಿಂದಗಲ್ದುವು (ದಶಕು. ೪-೨೩) ; ತಾಱುತ[ಪಾಠಾಂ. ಥ]ಟ್ಟನ ಹೆಣದ ಮೆದೆ ಹೇರಾಳ ರಂಜಿಸಿತು (ಕುಮಾದ್ರೋ. ೦೦-೬) ; ನಳನೃಪಾಲನ ಶರಹತಿಗೆ ನೆಱಿಮುಗ್ಗಿ ಕೆಡೆದುದು ತಾಱುತ[ಪಾಠಾಂ. ಥ]ಟ್ಟನಲಿ (ನಳಚ. ೯-೩೫) ; ಆ ಸೇನೆಯಂ ತಾಱುತಟ್ಟಾಗಿ ಕೆಡಹಿದರೊಂದು ನಿಮಿಷದೊಳ್ (ಜೈಮಿಭಾ. ೨೦-೪೪) ; ವೈರಿನೆಗಳ ಸೀಳಿ ತಲೆಯ ಕೆದಱಿಕೊಂಡು ತಾಱುತಟ್ಟಾಗಿಯೋಡಿದರು (ಕಂನವಿ. ೦೫-೯೬). ತಾಱುಥಟ್ಟು : ತೋಱಿ ಕಳೆವುದು ತಾವು ಹೇಳದ ತಾಱುಥಟ್ಟನ ಮಾತದಲ್ಲವನೆನಲಿಕಿಂತೆಂದ ತಾಱುಥಟ್ಟನು ಹೇಳ್ವ ನೀಱರು ತೋಱಿ ನುಡಿಯರು (ಸಂಭಪ. ೩-೮); ತಾಱುಥಟ್ಟಿಗೆ ಕೆಡೆದವಾನೆಗಳು (ಕುಮಾಭೀ. ೮-೪೮) ; ತನಿಚೂಣಿ ಮಸಗಿತು ತಾಱುಥಟ್ಟನಲಿ (ಕುಮಾಕ. ೨-೦೬) ; ಮಿಱಿದನು ಸುರರಾಜ ಜಿತುವಿನ ತಾಱುಥ[ಪಾಠಾಂ. ತ]ಟ್ಟನ ಕದನವನು (ತೊರರಾ. ೬-೪೩-೪೭) ; ಕಂಡರು ದೂರದಲಿ . . . ಖಗಕುಲವೇಱಿದೆಳೆಗೊಂಬುಗಳ ತಳಿರ್ಗಳ ತಾಱುಥಟ್ಟನ ಹಸುರೆಲೆಯ ತಂಪಿನ ಮಹಾವಟವ (ನಿಭಾಗ. ೪-೩-೨೫) ; ತುಱುಗಿದ ಹಯಂ ತಾಱುಥಟ್ಟಾಯ್ತು (ಚಬಸು. ೪೩-೨೭). ಥಾಱುಥಟ್ಟು : ಅಲರ್ಗಣ್ ಬೆಂಡೇಱಿ ರೋಮಾಂಚನದೊದವಿನಿತುಂ ಥಾಱುಥಟ್ಟಾಗೆ (ರಸರ. ೦-೦೭).

[ ತಾಱು₃ + ತಟ್ಟು₂ ]

ತಾಱುಂತಟ್ಟುಂ, ತಾಱುಂತಟ್ಟುಂ (ಅ). ಅವ್ಯವಸ್ಥೆಯಾಗಿ ; ಚಲ್ಲಾಪಿಲ್ಲಿಯಾಗಿ : ತಾಱುಂತಟ್ಟುಂ ಬಿರ್ದ ಕಾಮುಕಜನಕ್ಕೆ (ಲೀಲಾವ. ೩-೫೦) ; ಹುಲ್ಲೆಡೆ ಹೆಲ್ಲವಾಗಿ ತಾಱುಂತಟ್ಟುಂ ಬೀಱುತ್ತಿರೆ (ಕುಸುಮಾ. ೦೯-೨೯ ವ). ತಾಱುತಟ್ಟುಂ : ಬಗೆಗೆಟ್ಟು ತಾಱುತಟ್ಟುಂ ಪರಿದು (ಕುರಾಸಾಂ. ೩೮-೦೧೯). 'ತಟ್ಟುಂತಾಱುಂ' ಪರಾ.

[ ತಾಱು₅ + ತಟ್ಟು₂ ]

ತಾಱುಂತಟ್ಟುಗುತ್ತು (ಕ್ರಿ). ಗುಂಪುಗುಂಪಾಗಿ ಹೊಡೆ,–ಇಱಿ : ತಾಱುಂತಟ್ಟುಗುತ್ತುತ್ತೆ ಬಲ್ಮೆಯೊಳಡ್ಡಂ ಬರುತಿರ್ಪ ಕೊಂಕಣಿಗರಂ ಕೀನಾಶಲೋಕಕ್ಕೆ ನಿಶ್ಚಯದಿಂದೆಯ್ದಿಸುತುಂ (ಎಕ. VIII, ಸೊರಬ. ೦೫೨-೦೬ ; 1380). [ ತಾಱುಂತಟ್ಟು + ಕುತ್ತು₁ ]

ತಾಱುಂತೀರು (ನಾ). ಚಲ್ಲಾಪಿಲ್ಲಿ ; ಅಸ್ತವ್ಯಸ್ತತೆ : ಸರ್ವಾಂಗದೊಳೆಡೆದೆಱಪಿಲ್ಲದೆ ಕೊಂಡು ತೋಱುವ ಬಲ್ಲೇಱುಗಳ ನೆಱವಣಿಯಿಂ ತಾಱುಂತೀಱಾ[ರಾ]ಗಿ ಬೀಱ್ದ ಸತ್ತ ಕುದುರೆಗಳ ಬಳಗಂ (ಖಾರಪು. ೦೫-೧೦೯ ವ). [ ತಾಱು₅ + ತೀರು₂ ]

**ತಾಱುಂಬರಿ** 'ತಾಱುಂಬೞಿ' ನೋ.

**ತಾಱುಂಬಳಿ** 'ತಾಱುಂಬೞಿ' ನೋ.

**ತಾಱುಂಬೞಿ,** ತಾರುಂಬಳಿ, ತಾಱುಂಬರಿ, ತಾಱುಂಬಳಿ (ನಾ). ೧. ಅಸ್ತವ್ಯಸ್ತವಾದುದಂ : ಹಂತಿದಪ್ಪಿ ತಾಱುಂಬೞಿಯಿಂ ತೆರಳ್ದ ಕುರುಳ್ (ಚಂದ್ರಪ್ರ. ೮-೭೩). ೨. ಸುತ್ತುಮುತ್ತು ; ಎಲ್ಲಕಡೆ : ಅಳಿಗಳ ಬಳಗಂ ತಾಱುಂಬೞಿಯಿಂ ಬರುತಿರೆ (ಕುಸುಮಾ. ೫-೭೯). **ತಾರುಂಬಳಿ :** ೧. ಮನೆಯ ಒಡೆಯನು ಅಕಾಲಮರಣ ಹೊಂದಿದ ಕೂಡಲೆ ಉಳಿದವರತಾರುಂ ಬಳಿಯು ಎಷ್ಟು ಆಗುತ್ತದೆ (ಚರಸಂ. ೭೪): ತಾರುಂಬಳಿಯಿಂದ ದೊಮ್ಮಳಿ ಸುತ್ತ ಹೋಗಿ, ಕಯ್ದುಗಳ್ಗೆರಗುವರು (ಮಂತ್ರಶ. ೧೫೩-೧೪). **ತಾಱುಂಬರಿ:** ೧. ಕೊಳೆ ಸುಡು ತಾಱುಂಬರಿಯೆಂಬಿವು ಪದದ ಮೊದಲೊಳಿರಲಶುಭಕರಂ (ಕವಿಜ. ೩-೩೩). **ತಾಱುಂಬಳಿ:** ೧. ತಾಱುಂಬಳಿ[ಪಾಠಾಂ. ಟಿ] ಬಿಟ್ಟ ಚಂಚು ಬೆಮರಿಂ ಕಡೆಗೆನ್ನೆಗೆ ಬಾನಲಾದ ಬೊಟ್ಟು (ಶಮದ. ನ. ೧೮೩ ಪ್ರಯೋ).

[ ತಾಱು$_5$ + ಬೞಿ$_2$ ]

**ತಾಱುಂಬೞಿಗೊಳ್** (ಕ್ರಿ). ಹರಡು ; ವ್ಯಾಪಿಸು : ಹಂಸಮಂಡಳಿ ತಾಱುಂಬೞಿಗೊಳ್ವ ತಾವರೆಗೊಳಂ (ಅನಂಪು. ೧-೯೪).

[ ತಾಱುಂಬೞಿ + ಕೊಳ್$_1$ ]

**ತಾಱುಂಬೞಿಯಂ** (ಅ). ದಿಕ್ಕಾಪಾಲಾಗಿ ; ಎಲ್ಲಕಡೆಗೆ : ಅಲರ್ಗೆ ಫಲಕೆ ಪರಿದತ್ತಳವೆಂಡಿರ ನೆರವಿ ನಲಿದು ತಾಱುಂಬೞಿಯಂ (ಚಂದ್ರಪ್ರ. ೭-೯೮).

[ <ತಾಱುಂಬೞಿ ]

**ತಾಱುಕುಂಡೆ** 'ತಾಱುಗುಂಡೆ' ನೋ.

**ತಾಱುಗುಂಡೆ,** ತಾಱುಕುಂಡೆ (ನಾ). ಒಣಗಿದ ಕುಂಡೆ : ದುರುಳಕಾಲನ ಬಾಯನೊದೆದಾಕರಿಸಿ ತಾಟಿಸಿ ಅವಧಿ ವಿಧಿಗಳ ತಾಱು[ಪಾಠಾಂ. ಱ] ಗುಂಡೆಗಳ [ಪಾಠಾಂ. ಕುಂಡೆಗಳನುಱಿದೆ] (ಬಸಪು. ೪೭-೧). **ತಾಱುಕುಂಡೆ:** ತ್ರ್ಯಂಬಕರಂ ತಂದು ತಾಱುಕುಂಡೆಯ [ಪಾಠಾಂ. ಚಾಟುಗುಂಡಿಯನೆ] ಹಾಯಿಸಿ (ಸೋಮಚ. ೬-೪೩). [ ತಾಱು$_3$ + ಕುಂಡೆ$_1$ ]

**ತಾಱುತಟ್ಟು** 'ತಾಱುಂತಟ್ಟು' ನೋ.

**ತಾಱುತಟ್ಟುಂ** 'ತಾಱುಂತಟ್ಟುಂ' ನೋ.

**ತಾಱುಥಟ್ಟು** 'ತಾಱುಂತಟ್ಟು' ನೋ.

**ತಾಱುಮಾಱು,** ತಾರುಮಾರು$_1$, ತಾಱವಱು, ತಾಱುವಾಱು (ನಾ). ೧. ಚೆಲ್ಲಾಪಿಲ್ಲಿ ; ಅವ್ಯವಸ್ಥೆ ; ಅಸ್ತವ್ಯಸ್ತತೆ : ವಾರುವಗಳು . . . ಕೇರಿ ಕೇರಿಯೊಳು ತಮ್ಮಿಚ್ಚೆಯೊಳಗೆ ಸಲೆ ತಾಱುಮಾಱಾಗಿಯೋಡಿದವು (ಕಂನವಿ. ೧೫-೯೦). **ತಾರುಮಾರು$_1$ :** ೧. ತಾರುಮಾರಾಗಿ ತೂರುಬೀಳು ತಿರುವ ರಾಕ್ಷಸ ಸ್ತ್ರೀ ಪುರುಷರಂ ನೋಡಿ (ಸೌಗಂಧಿ. ೩೯೦-೧೯) ; ಮರಾಟೆ ಯವರಿಗೆ ದಿಕ್ಕು ತೋಚದಂತಾಗಿ ತಾರುಮಾರಾಗಿ ಪಲಾಯನ ಮಾಡಿದರು (ಒಡೆಕ. ೪೮) ; ಈಗ ಎಲ್ಲವೂ ತಾರುಮಾರಾಯಿತು (ಭಾರವೀ. ೭೩); ಕಲ್ಪವೃಕ್ಷಗಳ ಚಿಗುರು ಎಲೆಯ ತೂರಾಡು ತಾರುಮಾರು(ಕವೋಘ. ೧೬-೭೩). ೨. ಅಸಂಬದ್ಧತೆ ; ಅಸಾಂಗತ್ಯ : ಊರು ಹೆಸರು ಮುಂತಾದ್ದನ್ನು ವ್ಯತ್ಯಸ್ತಮಾಡಿ ತಾರುಮಾರಾಗಿ ಬರೆದರು (ಪುರಾವಿ. ೭). ೩. ಗಜಿಬಿಜಿ ; ಗೊಂದಲ: ತಾರುಮಾರು ಮಾಡುವವನನ್ನು ಯಾರು ತಾನೇ ನರಬ್ಬಾರು? (ಗಾದೆ). **ತಾಱವಱು :** ೧. "ತಾಱವಱಾದುದಸವಸಂ" (ವಸ್ತುಕೋ. ೧೦೬-೩೩); ತಾಱವಱಾಗೆ ಜಯಂ ಜೊಮ್ಮೇಱುವ ಟೆಂಟಣಿಸುವರಸನರಸನೆ ವಿರಸಂ(ಶಾಂತಿಪು. ೨-೯೦); ಭೀಕರ ಗದಾಘಾತದೊಳಂ ಜಾಱಿ ಪಱಿವಱಿದು ತಾಱವಱಾದ [ಪಾಠಾಂ. ತೂಱುಪಾಱಾದ] ಕಾಂಭೋಜಾವಳಿಗಳ ತುರುಷ್ಕ ತುರಂಗಮಂಗಳಡಿಯೊಳ್ (ಗದಾಯು. ೬-೨೮ ವ) ; ತಾಱ[ಪಾಠಾಂ. ತಾಱು]ವಱಾದ ಕೇಶಮನುಗುರ್ವೊರ್ನೆಯಿಂ ತೆಗೆದೊತ್ತಿ (ಲೀಲಾವ. ೫-೧೩೬) : ತಾಱವಱಾದ ಸೂಸುಗುರುಳಂ ತವೆ ತಿರ್ದುವ . . . ತೊಂಡೆವಾಯ್ಗೆ ನಱುದಂಬುಲಮಂ ಕುಡುಕಿಕ್ಕುವಂದವಂ ತೋಱಿ (ಧರ್ಮನಾ. ೩-೧೫೩). **ತಾಱುವಾಱು:** ೩. ಜೀವನುವೆಂಬತ್ತುನಾಲ್ಕುಲಕ್ಷ ಯೋನಿಮುಖದೊಳಗೊಂದಾ ಮನುಷ್ಯನದಱೊಳೆಂತಾನುತಾಱುವಾಱಾಗಿ ಬಂದಲ್ಲಿ (ಜೀವಸಂ. ೯-೯ ವ).

[ ದೇ.॥ ತಮಿ. ಮಲ. ತಾಱುಮಾಱು ; ತುಳು. ತಾರುಮಾರು ; ತೆಲು. ತಾಱುಮಾಱು ]

**ತಾಱುವಾರಿ** (ನಾ). ಒಂದು ಬಗೆಯ ಭೂಮಿ (?): ಅಕ್ಕಿ ಸಹ ಹನ್ನೆರಡು ಮುಡಿ ತಾಱುವಾರಿಯ ಬಗೆಯ ಬೆಟ್ಟನ ಒಳಗೆ ಆಱುಮುಡಿ (ಸೌಇಇ. IX-II, ೪೬೪-೨೦ ; 1472). 'ತಾಱು$_6$' ಪರಾ. [ ? ]

**ತಾಱುವಾಱು** 'ತಾಱುಮಾಱು' ನೋ.

**ತಾಱುಹಂಗ** (ನಾ). ಶಕುನದ ಪಕ್ಷಿ ; ಹಂಗ : ಕರಿಯ ಹಕ್ಕಿಯ ತಾಱುಹಂಗನ ವಾಮದುಡಿಕೆಗಳ ನರಿಗಳೊದಱಿದವಿದಿರಿನಲಿ (ಕುವ್ಯಾಸ. ೧೩-೨). [ ತಾಱು$_4$ (<ತಾಱ್$_2$)+ಹಂಗ ]

**ತಾಱಿ$^3_1$** 'ತಾಱಿ' ನೋ.

**ತಾಱಿ$^3_2$** (ನಾ). (?) : ಕವ್ಮೆಳಿಯ ತಾಱಿಯಗೊಡಲ ಮೂಡನ ಮೆಯ್ಯು ಕಂಬ ನೂಱುವತ್ತು (ಎಕ. VI, ಚಿಕ್ಕಮ. ೨೨-೪೫ ; 1178). [ ? ]

**ತಾಱಿಕಾಯಿ** 'ತಾಱುಗಾಯ್' ನೋ.

**ತಾಱಿಲೆ** (ನಾ). ಒಣಗಿದ ಎಲೆ ; ತರಗೆಲೆ : ಪಾದಪದಲಕ್ಷ್ಮಿ ಬೆದಱಿ ಸೂಱಿಗೊಟ್ಟಂದದೆ ಪರಳ್ಗಾಯಿ ಮುಂತಾದ ತಾಱಿಲೆ ನೆಲಕುದುಱಿದುವು (ವೋಹಚ. ೪-೪೩). [ ತಾಱು$_1$ + ಎಲೆ$_1$ ]

△ **ತಾಳ್$_1$** 'ತಾಳ್$^2$' ನೋ.

△ **ತಾಳ್$_2$** 'ತಾಳ್$^3$' ನೋ.

△ **ತಾಳಿ** 'ತಾಳ್$^3$' ನೋ.

**ತಾಳಕೆಱೆ** (ನಾ). ಒಂದು ಕೆರೆಯ ಹೆಸರು : ಅ ಕೆಱೆಗೆ ಐಯ್ಗ್ಣಾಡ್ಗ ಮಣ್ಣು ಕೊಟ್ಟೆಯ ತಾಳಕೆಱೆ ಅ ಕೆಱೆಗೆ ಐಯ್ಗ್ಣಾಡ್ಗ ಮಣ್ಣು (ಎಕ. XII, ಶಿರಾ. ೨೪-೪೮ ; 900). [ ತಾಳ ? + ಕೆಱೆ ]

△ **ತಾಳಿಪಣ್** 'ತಾಳೆಹಣ್ಣು' ನೋ.

△ **ತಾಳಿಮರ** 'ತಾಳೆಮರ' ನೋ.

**ತಾಳಿಲಿಯ** (ನಾ). ಒಬ್ಬಾತನ ಹೆಸರು : ವಾರಬದಿಗದಾಲನುಂ ತೆಳ್ಳನುಂ ತಾಳಿಲಿಯನುಂ ವೇಬಿಲನುಂ . . . ಇಲ್ಲಿಯ ಪುರದ ಒಕ್ಕಲಿವರು (ಎಕ.III ನಂಜನ. ೧೩೯-೬ ; 915 ?). [ ? ]

△ **ತಾಳಿವಣ್** 'ತಾಳೆಹಣ್ಣು' ನೋ.

**ತಾಳಿವಡುಗುಡ್ಡಿ** (ನಾ). ಒಬ್ಬಾತನ ಹೆಸರು : ಆತ್ರೇಯಗೋತ್ರ ಮೊಡೆಯ ತಾಳಿವಡುಗುಡ್ಡಿಗಳ ಮಗಂ ಪುಳ್ಳಿಯಯ್ಯ ಮಾಡಿಸಿದ ತೂಮ್ಬು (ಎಕ. X(೩), ಮಾಲೂರು. ೦೬೦-೩ ; ಸು. 10ನೆಯ ಶತ). [ ? ]

△ **ತಾಳು** 'ತಾಳ್$^2$' ನೋ.

**ತಾಳುಗಿ** (ನಾ). (?) : ಬೇರುಗಿ, ಬೇರುಗಿತಿ ; ತಾಳುಗಿ, ತಾಳುಗಿತಿ (ಶಬ್ದಾನು. ೧೯೩ ಪ್ರಯೋ). [ ತಾಳುಗ$_0$ + -ಇ$_2$ ]

**ತಾಳುಗಿತಿ** (ನಾ). (?) : ಬೇರುಗಿ, ಬೇರುಗಿತಿ; ತಾಳುಗಿ, ತಾಳುಗಿತಿ (ಶಬ್ದಾನು ೧೯೩ ಪ್ರಯೋ). [ ತಾಳುಗ$_0$ + -ಇತಿ$_1$ (< -ಇತ್ತಿ) ]

**ತಾಳಿ$^3$,** ತಾಳಿ$_1$ (ನಾ). ಕೇದಗೆ ; ತಾಳೆಗಿಡ : (೩). **ತಾಳಿ$_1$ :** "ಖರಃ - ತಾಳಿ" (ಒಷಧಿ. ೪೩) ; ಬಿದೆಕಾರು ವ್ಯೂ ಇ ತಿಳ ೨ ತಾಳೆ ಆ ಮರ ಬಿದೆಕಾರು (ಸೌಇಇ. ೧೯೩೦, ಮಂಗಳೂರು. ೩೩೪-೮ ; 1228) ; ತಾಳೆಯ ಹೂವಿನೆ ಸಲೊಯೆನೆ ಸುಲಿದಿಂಪುವಾಳೆಯ ಹಣ್ಣನಾ ರಾಯಾ ಲಾಲಿತ ಪ್ರತಿಮೆಯ ಭುಜ ಮುಟ್ಟ ಮೆದೆಗಟ್ಟೆ ಧಾಳಿಪಂತಭಿಷೇಕಗೈದಾ (ಭರಚ. ೦೬-೬೪).

[ ದೇ.॥ ತಮಿ. ತಾೞೈ ]

**ತಾಟಿಹೂ,** ತಾಳೆಹೂ (ನಾ). ಕೇದಗೆ ಹೂ: (ಳ). **ತಾಳೆಹೂ:** "ಕೇತಕಿ–ತಾಳೆಹೂ" (ಓಷಧಿ. ೪೦); ಕೇತಕೀಪುಷ್ಪ ಅಂದರೆ ತಾಳೆಹೂವನ್ನು ಧರಿಸಿದಲ್ಲಿ (ಸಕವ್ಯ. ೪೪); ತಾಳೆಹೂ ಗರುವಲಿಯ ಬೆನ್ನಟ್ಟಿ ಚುಚ್ಚುವುದು (ಕಾಲೂರ. ೦೦೩–೩೪೪); ತುರುಬು ಇಲ್ಲದವಳಿಗೆ ತಾಳೆ ಹೂವೇ ? (ಗಾದೆ).
[ ತಾಟಿ + ಹೂ (<ಪೂ) ]

**ತಾಟಿಱಿಯ** (ನಾ). ಒಬ್ಬಾತನ ಹೆಸರು: ವಿಕ್ರಮಾದಿತ್ಯರ್ಕೊಟ್ಟೊದು [ಪ]ನ್ನೆಸೆಲುಗ್ಗಾರು ತಾಟಿಱಿಯರ್ಗೆ ಎರೆಕಾಡು ಇಪ್ಪತ್ತೈಮತ್ತರು (ಸೌಇಇ. IX-i, ೪೭–೭; ಸು. ೧ನೆಯ ಶತ). [ ? ]

**ತಾಟ್ಟುವಾಯ** (ನಾ). ಒಬ್ಬಾತನ ಹೆಸರು: ಬೆಳ್ಗಲ್ಗೊಱಚು ಪಶ್ಚಿಮಾಯಾನ್ದಿಶಿ ಪೊನ್ನಕಿವಿ ತಾಟ್ಟುವಾಯರಾ ಕೆಱಿ (ಎಕ. IV, ನಾಗಮಂ. ೮೫–೩೩; 776). [ ? ]

**ತಾಟ್ನೆಲ್ಲ** (ನಾ). ಒಂದು ವಂಶದ ಹೆಸರು (?): ಪೊದಲ್ನಾಡಱುವತ್ತುಮನಾಳೆ ತಾಟ್ನೆಲ್ಲರ x x x ತಾಮನ್ದೆಯರಾ ಶ್ರೀ ಕಣ್ಣಯ್ಯ ತುಱುಗೊಣ್ಡಲ್ಲಿ . . . ಸತ್ತ (ಎಕ. X, ಶ್ರೀನಿವಾ. ೫೦–೭: 800 ?). [ ? ]

△ **ತಾಟ್ನರ** 'ತಾಳೆವ ರ' ನೋ.
ತ್ರಿ' ನೋ.

**ತ್ರಿ** (ನಾ). ಮೂರು ಎಂಬ ಸಂಖ್ಯೆ: "ತಿ–ತ್ರಿ=ಮೂರು" (ತದ್ಭಕೋ. ೦೭); ತಿಗೆ–ತ್ರಿಗುಣಂ–ತಿಗುಣಂ, ತ್ರಿಶರಂ–ತಿಸರಂ, ತ್ರಿಶೂಲಂ–ತಿಸುಳಂ (ಶಮದ. ೨೯೦ ಪ್ರಯೋ). [ <ಸಂ. ತ್ರಿ ]

**ತಿಂಕಚಿರ** (ನಾ). ಒಂದು ಮನೆತನದ ಹೆಸರು (?): ತಟಂಕಮಿದು ತಿಙ್ಕಚಿರ ನೆಱಿದಕಳೆತಿಯಾ ಆಕಳೆ ಸಮುದೊಯ ತಟಾಕ (ಎಕ. XVI, ಪಾವುಗ. ೦೨–೩; 754). [ ? ]

**ತಿಂಗಣೆ,** ತಿಂಗಿಣಿ (ನಾ). ತೊಟ್ಟಿಲ ಮೇಲಿನ ಅಥವಾ ಹಂದರ ಮೊದಲಾದುವುಗಳ ವಿತಾನದಲ್ಲಿ ಇಳಿಬಿಡುವ ಒಂದು ಅಲಂಕಾರದ ಗೊಂಡೆ–ಕುಚ್ಚು: ಇಂಗಡಲೆಂಬ ಸೆಜ್ಜೆವನೆಯೊಳ್ ತೆರೆದೊಟ್ಟಿಲ ಮೇಲೆ ಕೆಂಬರಲ್ದಿಂಗಣೆಗಟ್ಟಿದಂತುದಯಶೈಲಶಿಖಂಡದೊಳಿಂದುಮಂಡಲಂ (ಮಲ್ಲಿಪು. ೭–೨೯); ಮಾಣಿಕದ ತಿಂಗಣೆಯಂ ಮೊಣದೆ ಕಣ್ಬೆಳಗು ಬಳಸೆ ಮುತ್ತಿನ ಸುತ್ತಂ ಮಾಣಿಕದ ಮೇಲೆ ಮಕ್ಕಳ ಮಾಣಿಕಮಡಿಗಡಿಗೆ ತೊಟ್ಟಿಲೊಳ್ ಪುಟ್ಟಿಸುಗುಂ (ಅನಂಪು. ೬–೪); ಶಿಲ್ಪಿಗಳ ಕಲ್ಪಪತಿಯು ಅಭಿಷೇಕಮಂಡಪವನ್ನು ಸಮೆದಿದ್ದನೆಂದಮೇಲೆ ಕೇಳುವದೇನು ? ಮುತ್ತಿನ ಸೂಸಕ, ಮರಕತದ ತಿಂಗಣಿ . . . ರನ್ನದ ರಂಗವಲ್ಲಿ ! (ಸಾಹಿಸಂ. ೩೭). **ತಿಂಗಿಣಿ:** ಕೋದ ಮುತ್ತಿನ ಸೂಸಕದೊಳಂ ಚೆಂಬೊನ್ನ ತಿಂಗಿಣಿಯೊಳಂ ಚೀನದ ದೇವಾಂಗದ ನೇತ್ರದ ಮೇಲ್ಕಟ್ಟನೊಳಂ . . . ವಿಚಿತ್ರಾಂಶುಕ ವಿವಿಧ ಧ್ವಜಂಗಳೊಳಂ ಬಹು ವಿಧ ನೂತ್ನ ರತ್ನ ತೋರಣಂಗಳೊಳಂ ನೆಱಿದು (ಪುಷ್ಪಪು. ೮–೫೦ ವ). [ ? ]

**ತಿಂಗಣೆಗೆ** (ನಾ). = ತಿಂಗಣೆ: ಅದಲ್ಲದೆಯುಮಪವರ್ಗಲಕ್ಷ್ಮಿಯ ಲಾಸ್ಯ ಪೂಜಾಕುಸುಮಂಗಳಂತೆ ಮಧ್ಯರಂಗದೊಳೆಸೆವ ಪೊಸಮುತ್ತಿನ ಸೂಸಕದ ಪೊನ್ನ ತಿಂಗಣೆಗೆಯ ನೆಟಲ ತುಱುಗಲಿಂ ವಿರಾಜಿಸುವ ಪೂಜಾಗೃಹದಿಂ (ಮಲ್ಲಿಪು. ೨–೭೪). [ <ತಿಂಗಣೆ ]

**ತಿಂಗಣಮಾರ** (ನಾ). ಒಬ್ಬಾತನ ಹೆಸರು: ಕಕ್ಕರ ಮದಲೂರೆಱಿದು ತೊಱುಗೊಣ್ಡೊಡೆ ತಿಙ್ಗಣಮಾರ ಶ್ರೀಮೇಱಿ ತಿಙ್ಗಣೆಯೂರುಳ್ಳಗಿ . . . ಪಲರನೆಱಿದು ಸಗಮೇಱಿದನ್(ಎಕ. X, ಶಿಡ್ಲಘ. ೩೨–೪; ಸು. 870 ?). [?]

**ತಿಂಗಣೆಯೂರ್** (ನಾ). ಒಂದು ಊರಿನ ಹೆಸರು: ಕಕ್ಕರ ಮದಲೂರೆಱಿದು ತೊಱುಗೊಣ್ಡೊಡೆ ತಿಙ್ಗಣಮಾರ ಶ್ರೀಮೇಱಿ ತಿಙ್ಗಣೆಯೂರುಳ್ಳಗಿ . . . ಪಲರನೆಱಿದು ಸಗಮೇಱಿದನ್ (ಎಕ. X, ಶಿಡ್ಲಘ. ೩೨–೪; ಸು. 870 ?).
[ ತಿಂಗಣೆ + ಊರ್ ]

**ತಿಂಗಳ್,** ತಿಂಗಳು (ನಾ). ೧. ಚಂದ್ರ; ಪೆರೆ: "ಜೊನ್ನೊಡಲಂ . . . ಕಟ್ಟಿಲೆವಣಿ, ತಿಂಗಳ್–ಈ ೨೦ ಚಂದ್ರನ ಪೆಸರ್" (ಕಶಸಾ. ೩–೨೩); "ಮೃಗಾಂಕನೊಳ್ ತಿಂಗಳ್" (ಕರ್ಣಾನಿ. ೨೦); ನಗೆಯೆಂಬ ನೆವದೆ ಬೆಳಗೀ ಮೊಗಮೆಂಬೀ ನೆವದೆ ತಿಂಗಳೊಳಗೆಸೆದಾದಂ ಸೊಗಯಿಸಿ ತೋರ್ಕುಂ ಲೋಚನಯುಗಮೆಂಬೀ ನೆವದೆ ಲಕ್ಷ್ಮಮೆನೆ ತದ್ವ್ಯಾಜಂ (ಕವಿರಾ. ೩–೨೬); ತಿಂಗಳ ತಣ್ಣದಿರ್ಗಳೊಳ್[ಮಿರ್ಪಟಿಯದ] ಸಿರಿಕಂಡದಣ್ಪೆನೊಳವೆಡೆವಿಡದಾಲಿನೀರ್ವನಿಗಳಂ ಸಿಂಪಿಸುವ ನೀರ್ಜೊಂಪಂಗಳೊಳಂ (ಕಾದಂಬು. ೫೯೮); ತಿಂಗಳ ಬಿಂಬಮಂ ಹಿಳಿದು ಪಿಂಡೆ ಪಳಚ್ಚನೆ ಸೋರ್ವ ಸೋನೆಯಂತೆ . . . ಏಂ ಸೀಯನುಣ್ಮದುದೊ ಗೇಯದ ಮೆಲ್ಲುಲಿ (ವಿರೂಪಾ. ೭೫); ಎಳೆವಿಂಚಿನಂದದ ಬೊಂಬೆಯೊ ತಿಂಗಳ ತಿಳಿವೆಳಗಿನೊಳ್ಪಾದ ರೂಪೊ (ಭರತ. ೨–೭೭); ಅಂಗಜನ ಕಣೆಗಳಂ ಬೀಱಿ ನೋಟಂ ಮೊಗಂ ತಿಂಗಳಂ ವಿಡಾಱಿ (ಶಬಪು. ೫–೦೦). ೨. ಚಂದ್ರನ ಬೆಳಕು; ಇಂದು ಕಾಂತಿ: ತಂಗಾಳಿಯುಂ ತಿಂಗಳುಂ ಬನಮುಂ ಬೆಂಬಲವಾಗಿ ತೀರ್ಚವೆ ಗಡಂ ಕೊಂಡುಗ್ಗಿಯಂ ಸುಗ್ಗಿಯೊಳ್ (ಆಜಿಪು. ೬–೨೮); ತಿಂಗಳ ಸೊಂಪು ಗುಂಪುವಡೆದೆಣ್ದೆಸೆಗಂ ಪರಿಗೊಂಡುದೆಂಬಿನಂ (ಕಬ್ಬಿಕಾ. ೦೭); ತಿಂಗಳ ಸೊಂಪು ಪುಷ್ಪಬಾಣದ ಪೊದೆ ರಾಗದಾಗರಮನಂಗನ ಕೈಪಿಡಿ ನಲ್ಲಳೊಲ್ಮೆಯೆನ್ನದೆ ಪೆಱತೆಂಬುದೇ ಮಧುರ ಮಾಧವ ನಿನ್ನಯ ವಾಗ್ವಿಳಾಸಮಂ (ಧರ್ಮನಾ. ೧–೭೦); ಲವಲಿಯ ತನಿವಣ್ಣಗೆಣೆಯೆನೆ ತೋರ್ಪುದು ತಾನಿಂದು ತಿಂಗಳಾಭರಣ ವನದ ಚಕೋರದ ಸವಿದುತ್ತಿ ದಾವುದು ಹರಿಣವಿಲ್ಲದ ಶೀತಕಿರಣ (ಇಂಚಾಪ. ೦೭೯–೩೦). ೩. ಚಂದ್ರನು ಭೂಮಿಂಗೆ ಒಂದು ಸುತ್ತು ಬರುವ ಕಾಲದ ಅವಧಿ; ಸಾಮಾನ್ಯವಾಗಿ ಮೂವತ್ತು ದಿನಗಳು: ಉಗ್ರಸೇನ ಗುರುವಡಿಗಳ್ ಒನ್ದು ತಿಙ್ಗಳ್ ಸನ್ಯಾಸನಂ ನೋನ್ತು ಮುಡಿಪ್ಪಿದಾರ್ (ಎಕ. II, ೨೫–೨; ಸು. 700); ಇಂತು ವರ್ಷಾಕಾಲದ ನಾಲ್ಕು ತಿಂಗಳೊಳಂ ಮರ್ದನೂಡಿ (ವಡ್ಡಾರಾ. ೧೭೦–೨೭); ಅವಧಿಯನೊಂದು ತಿಂಗಳೆಡೆಯಿಟ್ಟು (ಆದಿಪು. ೦೨–೪೩); ಒಂದು ತಿಂಗಳ್‌ವಿಹರಣ ವಿಧಿಯಂ ಮಾಣ್ದು ಬಂದಜಿತನಾಥಂ ಧ್ಯಾನವಿಧಾನದಿಂ ಕರ್ಮಂಗಳಂ ಕಿಡಿಸಿದಂ (ಅಜಿಪು. ೮–೨೮ ವ); ಮತ್ತಮೊಂದೆರಡು ತಿಂಗಳ್ ವಿಶೇಷವಾಗಿ ನೋಂತು ಕೊಟ್ಟಪೆಂ (ಧರ್ಮಾಮೃ. ೧–೧೮೨); ತಿಂಗಳೇಳಱ ಗರ್ಭದಲಿ ರಘುಪುಂಗವನನಗಲಿದಳು (ತೊರರಾ. ೦೩–೮). **ತಿಂಗಳು:** ೧. ತಿಂಗಳ ಸೂಡಿದ ಅಭವನು ಭವಭಂಗಿತರಿಗಾರಿಗೂ ಗೋಚರಿಸನು ನೋಡಾ (ಸಿದ್ಧೇವ. ೧೨೨–೩೭೭); ತಿಂಗಳುಮೊಡನುರ್ಕುವ ಬೆಳ್ದಿಂಗಳುಂ (ಚಳವಿ. ೬–೨೫); ತೊಳೆದ ಬಾನೊಳಗೊಂಟಿಮೋಡದ ನೆಲೆಗೆ ನುಸುಳಿದ ತಿಂಗಳು (ಇಂಗೀತ. ೦೨–೯); ಮುಳುಗುವ ನೇಸರೊ ಮೂಡುವ ತಿಂಗಳೊ (ಅನಿಕೇ. ೩೦–೦೩). ೨. ತಿಂಗಳಿಗೆ ತಂಪಿಹುದೆ ಸಾಗರಕೆ ಸೊಂಪಿಹುದೆ (ಗೀವಿಂ. ೨೨–೩೪). 'ಬೆಳುದಿಂಗಳು' ಪರಾ. ೩. ಕೇತು ವಿಲಗ್ನದೊಳಿರೆ ಪುಟ್ಟಿದ ಮನುಜ ನೊಂದು ತಿಂಗಳು ಬಾಳ್ಗುಂ (ಜಾತತಿ. ೬–೦೦); ಒಂದು ತಿಂಗಳು ಪಲವು ಮನ್ನಣೆಯಿಂದ ಮನ್ನಿಸಿ ತನ್ನ ಸೇನಾವ್ಯಂದವನು (ಕುವ್ಯಾಸ. ೩–೨೩); ನರಪತಿವೊಂದು ತಿಂಗಳು ವನದೊಳಗೆ ವಿಹರಿಸಿ (ಜೀವಂಸಾಂ. ೦೮–೭೨); ಮೇಲ ತಿಂಗಳು ನಾಲ್ಕುಱಿನೆಕೆಯ ಕಾಲ ಸವೆದುದು (ತೊರರಾ. ೪–೭–೫); ನಿದ್ದೆಯ ಕಾಣದೆ ತಿಂಗಳಾರಾಗಿತ್ತು (ಇಂಚಾಪ. ೪೫–೦೩).

**ತಿಂಗತಿಂಗಳು,** ತಿಂಗಳ್ತಿಂಗಳು, ತಿಂಗಳ್ದಿಂಗಳ್ (ದ್ವಿರುಕ್ತಿ): ಅವುಗಳಿಗೆ (ತೆಂಗು) ತಿಂಗತಿಂಗಳಿಗೆ ಹೊಸ ಹೂವು ಬಿಟ್ಟು ಇಪ್ಪತ್ತು ಇಪ್ಪತ್ತೈದು ಕಾಯಿ ಆಗುತ್ತವೆ (ಮುಂಬಯಿ. ೨–೫೦); ಧಾರಾಪೂರ್ವಕಂ ಮಾಡಿ ಗುಡಿಕಲ್ಲ ೨೪೮ ಸ್ಥಳದ ಹೆಜ್ಜುಂಕದಲ್ಲಿ ತಿಂಗಳ್‌ತಿಂಗಳಿಗೆ ಕೊಟ್ಟ ಗದ್ಯಾಣ ೧ (ಸೌಇಇ. IX-i. ೨೭೯–೨೦; 1186); ಮುದ್ರಾಪ್ರವಣದ ಸುಂಕದೊಳಗೆ ತಿಂಗಳ್ದಿಂಗಳ್ಗೆ ಹತ್ತು ಹತ್ತು ದ್ರವ್ಯಮಂ ಬಿಟ್ಟಂ (ಎಇ. XXVIII, ೫–೫೭;

1082). **ತಿಂಗಳಂ ಸೂಡಿದವ** = ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಚಂದ್ರಶೇಖರ ; ಶಿವ : ತಿಂಗಳಂ ಸೂಡಿದವನ ಸರ್ವೋತ್ತುಂಗವಾಹನ ವಿಶ್ವೇಶ್ವರನ ಗಣಪುಂಗವರ್ಗೇಱುವ ಮಹಾಸಿಂಹಾಸನಂ ಬಸವ (ಬಸಪು. ೧-೩೩). **ತಿಂಗಳ ಜೂಟ** = ತಿಂಗಳಂ ಸೂಡಿದವ : ತಿಂಗಳ ಜೂಟಗೆ ಸುರಸತಿಯರು ತಂದ ಮಂಗಳಜಲಕುಂಭದಂತೆ (ಮೋಹತ. ೨೮-೩೦). **ತಿಂಗಳಣುಗ** = ಚಂದ್ರನ ಮಗ ; ಬುಧ : "ತಿಂಗಳಣುಗನೆನೆ ಬುಧನೆನಿಕ್ಕು" (ಶಶರ. ೪೬). **ತಿಂಗಳ ಧರ** = ತಿಂಗಳಂ ಸೂಡಿದವ : ತಿಂಗಳಧರನ ಪೂಜಿಸು ಮನವೆ (ಸಿದ್ಧವ. ಕ. ೯೮-೩೨೮): ತಿಂಗಳಧರ ಧವಳಾಂಗ ಗಂಗಾಧರ (ಸೌಂದಕಾ.೧-೧೦). **ತಿಂಗಳ ಪಕ್ಷ**= ತಿಂಗಳಲ್ಲಿಯ ಹದಿನೈದು ದಿವಸ: ತಿಂಗಳ ಪಕ್ಷಗಳನ್ನು ಹೇಳದೆ ವರ್ಷಋತು ಎಂಟನೆಯ ಪಕ್ಷ ಎಂದು ಮೊದಲಾಗಿ ಋತುಪಕ್ಷಗಳನ್ನು ಹೇಳಿದೆ (ಕರ್ಣಾಅ. ೮). **ತಿಂಗಳ ಬೆಳಕು, ತಿಂಗಳ ಬೆಳಗು** = ಚಂದ್ರನ ಬೆಳಕು; ಬೆಳುದಿಂಗಳು : ಶರಣನೆಂದು ವಚನಂಗಳ ಹಾಡಿದರೆ ತಿಂಗಳ ಬೆಳಕಿನ ಸಿರಿಯಂ ಕಂಡು ನಾಯಿ ಹರುಷಂಗೊಂಡು ಬಳ್ಳಿಟ್ಟು ಬೊಗುಳಿದಂತಾಯಿತು (ಘನವ. ೩೬) : ತಳತಳಿಸಿ ಬೆಳಪ ತಿಂಗಳಬೆಳಗಂ ಕವರ್ವಂತೆ ಮೆಱೆವ ಮೆಯ್ವೆಳಗಿಂ (ಕಬ್ಬಿಕಾ. ೬೩) ; ತಿಂಗಳ ಬೆಳಗಿನ ದಾರೆಯ ಸಂಗಡಮನೆ ಮೆಱೆಯುತಿರ್ಪ ಗಂಜಿಯನಾಗಳ್ ತೆಂಗಿನ ಶಿಳಿವಟ್ಟಲೊಳಾತಂಗೆಱೆದಳ್ (ದಶಕು. ೧೨-೧೨೫). **ತಿಂಗಳ ಮಾವ** = ಚಂದ್ರನಿಗೆ ಅಕ್ಕರೆಯಿಂದ ಸಂಬೋಧಿಸುವ ಹೆಸರು : ಅಂಗನೆ ರೂಪಿಂದ ತಿಂಗಳಮಾವನ ತಂಗಿ (ಅಂಜನ. ४-೯) : ತಿಂಗಳಮಾವನು ಬಾನಿನಂಗಳದೊಳು ಮೂಡಿ ಬಂದಿರುವನು ಹೇಗೆ (ಚಂದ್ರವೀ. ೧೬೬-೬೦). 'ಚಂದಮಾಮ' ಪರಾ. **ತಿಂಗಳ ಲೇಖೆ** = ಚಂದ್ರನ ಕಲೆ : ತಿಂಗಳ ಲೇಖೆಯಂ ಬಿಡದೆ ಗೂಡಿದವಂಗೆ ಮಹೇಶ್ವರಂಗೆ . . . ಸುಧೂಪಮಂ ಮಿಗೆ ಸಮರ್ಪಿಸಿದಂ (ಉದ್ಭಟ. ೧೧-೮೫). **ತಿಂಗಳುಗಟ್ಟಳೆ, ತಿಂಗಳುಗಟ್ಟಲೆ, ತಿಂಗಳುಗಟ್ಲೆ** = ೧. ಹಲವು ತಿಂಗಳುಗಳ ವರೆಗೆ: ತಿಂಗಳುಗಟ್ಟಳೆ ಉಪದೇಶ ಮಾಡಿದರೂ ಅವನು ಸಿಗರೇಟಿನ ಚಟವನ್ನು ಬಿಡಲಿಲ್ಲ (ರೂಢಿ) ; ತಿಂಗಳುಗಟ್ಟಲೆಯಾದರೂ ಮಲೇರಿಯಾ ಜ್ವರ ಗುಣವಾಗುವುದಿಲ್ಲ (ರೂಢಿ). ೨. ಪ್ರತಿ ತಿಂಗಳು : ಸಂಬಳದಲ್ಲಿ ಐವತ್ತು ರೂಪಾಯಿ ತಿಂಗಳುಗಟ್ಲೆ ಕೂಡಿಸಿ ಸಾಲಾ ಹರಿಸಬೇಕೆಂದು ಆಲೋಚನೆ ಮಾಡಿದ್ದೇನೆ (ಕಥಾಮಂ. IV, ೫). **ತಿಂಗಳು ತುಂಬು** = (ಗರ್ಭಿಣಿಗೆ) ನವಮಾಸ ತುಂಬು : ಆಕೆಗೆ ತಿಂಗಳು ತುಂಬಿದೆ (ರೂಢಿ). **ತಿಂಗಳುವಾರು** = ತಿಂಗಳುಗಳ ಮೇರೆಗೆ ; ತಿಂಗಳಿಗೆ ಇಂತಿಷ್ಟು ಎಂದು : ಆಯಾ ತರಗತಿಗಳಿಗೆ ಪಠ್ಯವಸ್ತುವನ್ನು ತಿಂಗಳುವಾರು ಹಂಚಿಕೊಂಡು ವರ್ಷಾಂತ್ಯದಲ್ಲಿ ಪೂರೈಸಿದರೆ ಉಪಾಧ್ಯಾಯರ ಕೆಲಸ ಮುಗಿಯಿತು (ಶಿಕ್ಷಣ. ೧೨೮). **ತಿಂಗಳೊಪ್ಪತ್ತು** = ಸುಮಾರು ಒಂದು ತಿಂಗಳು ; ಹೆಚ್ಚುಕಡಮೆ ಒಂದು ತಿಂಗಳು : ಮತ್ತೆ ತಿಂಗಳೊಪ್ಪತ್ತು ಕಳೆಯುವುದರೊಳಗಾಗಿ ಫಲಿತಾಂಶ ಹೊರಬಿತ್ತು (ಭೀಮಕಾ. ೧೮). [ ದೇ.॥ ತಮಿ. ಮಲ. ತಿಙ್ಙಳ್ ; ತುಳು. ತಿಂಗೊಳು; ಕೊಡ. ತಿಂಗ ; ಕುಇ. ತಿಂಗಳ್ ]

**ತಿಂಗಳರೆ** (ನಾ). ಚಂದ್ರನ ಅರ್ಧಭಾಗ ; ಅರ್ಧಚಂದ್ರ : ಹೊನ್ನ ಬಣ್ಣದ ಮೈವೆಳಗು . . . ಚಿನ್ನಮಾಣಿಕದುಟಿ ಬಗಸೆಗ[ಣ್] ತಿಂಗಳರೆ ನೊಸಲು (ಸಾಳ್ವಭಾ. ೪-೬). [ ತಿಂಗಳ್ + ಅರೆ$_3$ ]

**ತಿಂಗಳವರೆ** (ನಾ). ಬಿತ್ತಿದ ಒಂದು ತಿಂಗಳಿಗೆ ಕಾಯಿಬಿಡುವ ಒಂದು ಬಗೆಯ ಅವರೆ : ತಿಂಗಳವರೇ, ಕೋತಂಬರಿ, ಹಸೀಮೆಣಸಿನಕಾಯಿ ತಕ್ಕೊಂಡು ಬಾ (ರಕ್ತಾಕ್ಷಿ. ೨೦). [ ತಿಂಗಳು (<ತಿಂಗಳ್) + ಅವರೆ$_1$ ]

**ತಿಂಗಳಿಗೆ** (ನಾ). ಹಣೆಗೆ ಹಚ್ಚಿಕೊಳ್ಳುವ ಬೊಟ್ಟು; ತಿಲಕ : "ತಿಂಗಳಿಗೆಯೆಂದು ತಿಲಕಂ" (ಕಶಸಾ. ೬೩-೪೧೨); "ಜಾಱೆಯ ತಿಂ[ಪಾಠಾಂ. ದಿಂ]ಗಳಿಗೆಯೆನಲ್ ನೇರಬೊಟ್ಟಿಗೆ ಪೆಸರ್" (ಕಬ್ಬಿಕ್ಕೈ. ೨೬). [ ? ]

**ತಿಂಗಳು** 'ತಿಂಗಳ್' ನೋ.

**ತಿಂಗಳುಬೆಳಕು** (ನಾ). ಚಂದ್ರನ ಪ್ರಕಾಶ ; ಬೆಳುದಿಂಗಳು : ತಿಂಗಳು ಬೆಳಕಿನ ಇರುಳಿನಲಂದು ಅಮ್ಮನು ಕೆಲಸದೊಳಿರುತಿರೆ ಕಂಡು (ಕಪಪು. ೩-೧೦) ; ತಿಂಗಳುಬೆಳಕೆಂದರೆ, ಪ್ರಾತಃಕಾಲದ ಬ್ರಾಹ್ಮೀಮುಹೂರ್ತದಲ್ಲಿಯೂ ಭೂದೇವಿಗೆ ಕ್ಷೀರಾಭಿಷೇಕವನ್ನೆಸಗುವಂತಿತ್ತು (ನಾಡೋಜ.೩೮೪). [ ತಿಂಗಳು (<ತಿಂಗಳ್) + ಬೆಳಕು$_2$ (<ಬೆಳಗು$_2$)]

**ತಿಂಗಳೋಡು** (ನಾ). (ಕರಾ)ಸೌರಮಾನ ತಿಂಗಳ ಮೊದಲನೆಯ ದಿನ : ಈವತ್ತು ತಿಂಗಳೋಡು, ಹಣ ಯಾರಿಗೂ ಕೊಡಬೇಡ (ರೂಢಿ). [ ತಿಂಗಳು (<ತಿಂಗಳ್) + ಓಡು ?. / ತುಳು. ತಿಂಗೊಡೆ]

**ತಿಂಗಳ್ಗಲ್** (ನಾ). ಚಂದ್ರಕಾಂತ ಶಿಲೆ : ಗಲ್ಗಲನೆ ಕರಗುವಾಲಿಯಕಲ್ಗಳ ವೋಲ್ ಕರಗಿ ಪರಿವ ಜೊನ್ನದ ತಿಂಗಳ್ಗಲ್ಗಳೊಸರದೆನೆ ಕಳೆದೈಕಿಲ್ಗೊಳನೆನೆ ಕುಳಿರ್ದುದಾ ಜಳಂ ತಿಳಿಗೊಳದಾ (ಅರ್ಧನೇ. ೫-೧೦೯) [ ತಿಂಗಳ್ + ಕಲ್$_3$ ]

**ತಿಂಗಳ್ವಕ್ಕಿ** (ನಾ). ಬೆಳುದಿಂಗಳನ್ನೇ ಆಹಾರವಾಗಿ ಉಪಯೋಗಿಸಿಕೊಳ್ಳುವುದೆಂದು ಭಾವಿಸಲಾದ ಒಂದು ಬಗೆಯ ಪಕ್ಷಿ; ಜೊನ್ನವಕ್ಕಿ; ಚಕೋರಪಕ್ಷಿ : ತಿಂಗಳ್ವಕ್ಕಿ, ತೇನೆ, ತನ್ನಣೆವಕ್ಕಿಯಂ ಕರೆದು ಕೂಗುತ್ತೆ (ಶ್ರೀರಾಮಾ. ೨೬೧-೯೦೦). [ ತಿಂಗಳ್ + ಪಕ್ಕಿ$_1$ ]

**ತಿಂಗಿಣಿ** 'ತಿಂಗಣಿ' ನೋ.

**ತಿಂಗುೞ್** (ನಾ). ೧. ಆಹಾರಕ್ಕಾಗಿ ಸಾಕಿರುವ ಕುರಿ. ೨. ತಿನಿಸು ; ಆಹಾರ : "ಆಮಿಷಂ – ಆಹಾರಂ (ತಿಂಗುೞ್)" (ನೀತಿವಾ. ೨೮-೫೫) ; ತನುವಂ ನಂಬಿರ್ದು ಕಟ್ಟಿಂ ಜವಂಗೆನ್ನಂ ತಿಂಗುೞ್ ಮಾಡದೀಗಳೆ ಜಿನಶ್ರೀದೀಕ್ಷೆಯಂ ತಾಳ್ದುವೆಂ (ಧರ್ಮಾಮ್ಯ. ೧೦-೨೮೬) ; ಸವಿಗಂಡರಸಿ ಬಾಣಸಿನ ಮನೆಯೊಳ್ ಕಟ್ಟಿದ ಪೋಂತಂ ತಿಂಗುೞ್ಮಾಡಿದಳದಂ (ಯಶೋಚ. ೩-೬೮). [ ತಿನ್ + ಕುೞ್$_3$ ]

**ತಿಂಗುೞ್ದಿನ್** (ಕ್ರಿ). ಆಹಾರವನ್ನು ತಿನ್ನು,–ಉಣ್ಣು : ದೂಱಲಱಿಯೆನು ಸುಭಟರಿಗೆ ಮನ ಬೇಱೆ ನುಡಿ ಬೇಱಾಯ್ತು ಸಮರದೊಳೇಱ ತಿಂಗುೞ್ದಿಂದು ದಣಿದುದು ನಮ್ಮ ಬಲವೆಂದ (ಕುಮ್ವಾಭೀ. ೭-೮). [ ತಿಂಗುೞ್ + ತಿನ್ ]

**ತಿಂಟೆ** 'ತಿಟ್ಟು$_3$' ನೋ.

**ತಿಂಡಿ** (ನಾ). ೧. ತಿನಿಸು ; ಆಹಾರ ; ಖಾದ್ಯ : ತೆಮ್ಮಲಿನ ತಿಂಡಿಗಳ್ ಹಸುರೆಲೆಯ ತಟ್ಟೆ (ಕಾಲೂರ. ೬೩-೧೧೬) ; ತಿವಾರಿ ತಿಂಡಿಯನ್ನು ಅಣಿ ಮಾಡುವ ಕೆಲಸದಲ್ಲಿ ತೊಡಗಿದ (ಭಾರತಿ. ೬) ; ಹಸುಬೆಯಲ್ಲಿದ್ದ ತಿಂಡಿಯ ಗಂಟು ದಾರಿಯುದ್ದಕ್ಕೂ ಅವನಿಗೆ ಜ್ಞಾಪಕ ಬರುತ್ತಿತ್ತು (ಕಳಹು. ४) ; ನಿಮಗೋಸುಗವಾಗಿಯೇ ತಿಂಡಿಗಳನ್ನು ತಯಾರಿಸಹೇಳಿದೆ (ಕಾಲಯಾ. ೧೧). ೨. (ಉಕ) ತುರಿಕೆ ; ನವೆ ; ತೀಟೆ : ಕ್ಯಾಪಿಟಲ್ಲು ಏನು ? ಆಟಮ್ಮು ಬಾಂಬು, ತಲೆ ತುಂಬ ತಿಂಡಿ, ಹೇನು! (ಸೂರ್ಯಪಾ. ೫೨-೨); ಸಹನೆ ಸಹಾನುಭೂತಿಗಳನ್ನು ಕಂಡರೆ ಮೈಯೆಲ್ಲ ಕೆರೆಯುವಷ್ಟು ತಿಂಡಿಯೇಳುತ್ತಿತ್ತು (ಕಾಲಜ.೫೦) ; ಜನರು ತಮ್ಮ ನಾಲಗೆಯ ತಿಂಡಿಯನ್ನು ಹೀಗೇಕೆ ತೀರಿಸಿಕೊಳ್ಳಬೇಕೋ (ಮೂರುದಾ. ೧೩೦). ೩. (ಆಲಂ) ಸೊಕ್ಕು ; ಗರ್ವ : ನಿನಗೆ ತಿಂಡಿ ಜಾಸ್ತಿಯಾಗಿದೆ (ರೂಢಿ).

**ತಿಂಡಿತಿನಿಸು** = ಆಹಾರ; ಖಾದ್ಯ: ತಿನ್ನಲು ತಿಂಡಿತಿನಿಸು, ಕುಡಿಯಲು ಎಳನೀರು (ಕೀಮೋಢ. ೫೦). **ತಿಂಡಿತೀರ್ಥ**=ಆಹಾರ ಮತ್ತು ಪಾನೀಯ: ತಿಂಡಿತೀರ್ಥ ಆಟಪಾಟಾದಿಗಳಿಗೆ ಬೇಕಾದ ಸಮಸ್ತ ವಸ್ತುಗಳೂ ಇಲ್ಲಿ ಸಿದ್ಧವಾಗಿವೆ (ಜೀವಾತ್ಮ. ೨೦೨) ; ಸಂತೋಷದಿಂದಲೇ ಗೋದಮ್ಮ ತಿಂಡಿತೀರ್ಥ ಬೇಗನೆ ಒದಗಿಸಿಕೊಟ್ಟು ಜೋಯಿಸರಲ್ಲಿಗೆ ಕಳುಹಿಕೊಟ್ಟಳು (ತ್ಯಾಗವು. ೭). [ ದೇ.॥ ತಮಿ. ತಿಣ್ಟಿ ; ಕೊಡ. ತೆಲು. ತಿಂಡಿ ]

**ತಿಂಡಿಪೋತ,** ತಿಂಡಿಹೋತ (ನಾ). ಆಹಾರವನ್ನು ಹೋತದಂತೆ ತಿನ್ನು ವವನು ; ಅತಿಯಾಗಿ ತಿನ್ನುವವನು; ಹೊಟ್ಟೆಬಾಕ: ಕೆಲಸಕ್ಕೆ ಬಾರದ ತಿಂಡಿಪೋತ ಎನಿಸಿಕೊಂಡನು (ಹಿರ್ಯಾಕೀ. ೩೧) ; ಅಧ್ಯಾಪಕರು ನಮ್ಮನ್ನು ತಿಂಡಿಪೋತರು ಎನ್ನಬಹುದು (ಅಲಮ. ೧೦೪) ; ತಿಂಡಿಪೋತ ನಂಜೇಲಿಂಗ ಭಟ್ಟನ ಕಥೆಯನ್ನು ಹೇಳಿದೆ (ಇಬದು. ೮). **ತಿಂಡಿಹೋತ :** (ಕ).
[ ತಿಂಡಿ + ಪೋತ$_1$ (<ಪೋಂತು)./ತಮಿ. ತಿಣ್ಣಿಪೋತ್ತು ; ತೆಲು. ತಿಂಡಿಪೋತು ]

**ತಿಂಡಿಪೋತತನ,** ತಿಂಡಿಹೋತತನ (ನಾ). ಅತಿಯಾಗಿ ತಿನ್ನುವ ಸ್ವಭಾವ; ಹೊಟ್ಟೆಬಾಕತನ: ಅವನ ತಿಂಡಿಪೋತತನವನ್ನು ನೋಡಿದರೆ ಜುಗುಪ್ಸೆಯಾಗುತ್ತದೆ (ರೂಢಿ). **ತಿಂಡಿಹೋತತನ :** (ಕ).
[ ತಿಂಡಿಪೋತ + – ತನ ]

**ತಿಂಡಿಬಾಕ** (ನಾ). = ತಿಂಡಿಪೋತ : (ಕ). [ ತಿಂಡಿ + – ಬಾಕ ]

**ತಿಂಡಿಶ** (ನಾ). ಒಂದು ಬಗೆಯ ಶಾಕ,–ಸಸ್ಯ : ಸವತೆ, ತಿಂಡಿಶ . . . ಇವು ಕಫವಾತಕರ (ಅಷ್ಟಾಂಗ. ೧೩೭). [ ? ]

**ತಿಂಡಿಹೋತ** 'ತಿಂಡಿಪೋತ' ನೋ.

**ತಿಂಡಿಹೋತತನ** 'ತಿಂಡಿಪೋತತನ' ನೋ.

**ತಿಂಡುಕ** (ನಾ). ಒಂದು ಬಗೆಯ ಗಿಡ ; ತೂಬರೆ ಗಿಡ : ಕುಪರಥ, ಓಗೆ, ತುಮಕಿ, ತಿಂಡುಕ, ಹೋಳಿತುಮ್ರಿ, ಬಂಧ (ವೃಜೀಗಿ. ೩೦-೬೦೩).
[ <ಸಂ. ತಿಂದುಕ ]

**ತಿಂಡೆ** 'ತಿಟ್ಟು$_3$' ನೋ.

**ತಿಂತಿ** 'ತೀಂಟೆ$_1$' ನೋ.

**ತಿಂತಿಡಿ** (ನಾ). ಹುಣಿಸೆಮರ. [ ಸಂ. ತಿಂತಿಡೀ ]

**ತಿಂತಿಡಿಕ** (ನಾ). = ತಿಂತಿಡಿ. [ ಸಂ. ತಿಂತಿಡಿಕಾ ]

**ತಿಂತಿಡೀಕ** (ನಾ). ೧. = ತಿಂತಿಡಿ. ೨. ಮುಖ್ಯವಾಗಿ ಹುಣಿಸೆಹಣ್ಣಿನಿಂದ ತಯಾರಿಸಿದ, ಹುಳಿಯಾದ ಗೊಜ್ಜು ಅಥವಾ ಸಾಂಬಾರು.
[ ಸಂ. ತಿಂತಿಡೀಕಾ ]

**ತಿಂತಿಣಿ$_1$,** ತಿಂಥಿಣಿ (ನಾ). ಗುಂಪು; ಗೊಂದಣಿ; ಸಮೂಹ: "ಬಂಬಲ್, ತುಱುಗಲ್, ಒಟ್ಟಜೆ, ತಿಂತಿಣಿ . . . ಗೊಂದಣಿ–ಈ ೪೦ ಸಮೂಹಂ" (ಕಶಸಾ. ೧೧–೨೨೨); "ಗೊಂದಣಿ ತೆರಳ್ಕೆ . . . ತಿಂತಿಣಿ . . . ತೊಂಬೆಯೆನೆ ಶ್ರೇಣಿಕಾಖ್ಯಂ" (ಶಬ್ದಮಂ. ೩೩) ; ರವಿಕಿರಣಾಳಿಗಳ್ ಧ್ವಜಪಟಾಳಿಯ ತಿಂತಿಣಿಯಿಂದಮುರ್ಚಲಾಱವೆ (ಪಂಪಭಾ. ೧೦–೩೦) ; ತಱಗೆಲೆ ಬಳ್ಳಿಯಂಬಿವಱ ತಿಂತಿಣಿಯೊಳ್ಪುರಗಾತಿವೇಗದಿಂದಱಿಯಲೆ ಬಂದುದಿಲ್ಲ ಪಥಮುಂ (ಕಾದಂಪೂ. ೬೨೭) ; ಗಣ ತಿಂತಿಣಿಯೊಳಗಿರಿಸೆನ್ನನು ಲಿಂಗವೇ (ಬಸವ. ೩೬೭) ; ಅಂತವರನೊತ್ತಿಟ್ಟ ಮನೆಯನೇಪೊಗಳ್ವೆನದು ತಿಂತಿಣಿಯ ಸೂನೆಗಾಱರ ನಿಳಯ ರಕ್ಕಸಿಯ ಮಾಡ ಹಾವಿನ ಹೇಳಿಗೆ (ಹಚಕಾ. ೧೨–೨) ; ಛತ್ರಚಾಮರದ ತಿಂತಿಣಿ (ದಕಳು. ೮–೨) ; ಸಂಪಗೆಯರಳ ಪರಿಮಳ ಪಥ್ಯವೇ ತುಂಬಿಗಳ ತಿಂತಿಣಿಗೆ (ಕುವ್ಯಾದ್ರೂ. ೪–೪೩). **ತಿಂಥಿಣಿ:** ಪುಣ್ಣ ತಿಂಥಿಣಿಗಳಿನಂದಗುರ್ವುವೆರಸಾಡಿದುವೊಂದೆರಡಾನೆಯಟ್ಟೆಗಳ್ (ಜಜಭಾ. ೬೦–೫೬) ; ಚೆನ್ನಮಲ್ಲಿಕಾರ್ಜುನ ಜಂಗಮದ ತಿಂಥಿಣಿಯಲ್ಲಿ ಓಲಾಡುವೆ (ಮಹಾದೇ. ಬ. ೬೪–೦೬೪) ; ನರ್ತಕರ ವರ್ತಕರ ಮೊತ್ತದೊತ್ತರದ ತಿಂಥಿಣಿಯನೊತ್ತರಿಸಿ ಇಟ್ಟಣಿಸಿದ ಕಟ್ಟಣಕದಾಸ್ಥಾನದೊಳು (ಬಸರ. ೬–೨೬) ; ಕಂತುಹರನವರೊಡನೆ ಹರಹರ ಮಂತಣದಿ ತಿಂಥಿಣಿಯೊಳತಿ ನಿಶ್ಚಿಂತನು (ಸಾನಂಚ. ೭–೬೬). P ಇದು 'ತಿಣಿ'ಯ ದ್ವಿರುಕ್ತಿಯಿರಬಹುದು. [ <ತಿಣ್$_2$ ]

**ತಿಂತಿಣಿ$_2$** (ನಾ). = ತಿಂತಿಡಿ : "ತಿಂತಿಣಿ – ತಿಂತ್ರಿಣಿ – ಹುಣಸೆಮರ" (ಶದ್ವಕೋ. ೩೦). [ <ಪ್ರಾ. ತಿಂತಿಣೀ./ಸಂ. ತಿಂತ್ರಿಣೀ ]

**ತಿಂತಿಣಿಗೊಳ್** (ಕ್ರಿ). ಗುಂಪು ಸೇರು ; ಒಟ್ಟುಗೂಡು ; ದಟ್ಟಯಿಸು : ದಿತಿಸುತನ ಸೇನಾನೀಕವಡಿಗಡಿಗೆ ಉಲಿದು ತಿಂತಿಣಿ[ಪಾಠಾಂ. ಟಿಂಟಣಿ]ಗೊಂಡು ಸಿಂಹದ ಮೆಳೆಯ ನರಿಗಳು ಕೆಣಕುವಂದದಿ ತಲೆಯ ಬರಹವ ತೊಡೆಯ ಹಳಚಿದರಾಗ ಹರಿಯೊಡನೆ (ಸಂಭಪು. ೮–೧೦೯); ತಿಂತಿಣಿಗೊಂಡೆಸೆವೈವತ್ತಾಱು ಜನಾಂತಂ ನೆಲಸಿಹುವು (ಜಯುಕಾ. ೦–೩೩).
[ ತಿಂತಿಣಿ$_1$ + ಕೊಳ್$_1$ ]

**ತಿಂತಿಣಿವಡೆ** (ಕ್ರಿ). = ತಿಂತಿಣಿಸು : ಪಲವುಂ ಪರಿಯ ಪಕ್ಕಿಗಳ ವೆರ್ಚಿದ ಸರಂಗಳಿಂ ಹರಣಂಬಡೆದಂತೆ ಪರಿವಡೆದು ತಿಂತಿಣಿವಡೆದ ಪೇರಡವಿಯೊಳ್ (ಕಬ್ಬಿಕಾ. ೨೦೭). [ ತಿಂತಿಣಿ$_1$ + ಪಡೆ$_1$ ]

**ತಿಂತಿಣಿವಣ್** (ನಾ). ಒತ್ತೊತ್ತಾಗಿ ಸೇರಿರುವ ಹಣ್ಣು ; ಗೊಂಚಲು ಗೊಂಚಲಾದ ಹಣ್ಣು : ತಿಂತಿಣಿವಣ್ಣನಾಂತ ಕದಳಂ ಪದವಣ್ಬುದಿದೀಳೆ (ಜಗವಿ. ೨–೦೫); ನೆಲಕ್ಕೆ ಜೋಲ್ವ ತಿಂತಿಣಿವಣ್ಣನಾಂತ ಸಣ್ಣಗೊಂಬಿಂದಿಂಬುವಡೆದ ದಾಳಿಂಬಂಗಳೊಳಂ (ಕಬ್ಬಿಕಾ. ೩೦) ; ನಾಡೆ ಕೊರ್ವಿ ತಿಂತಿಣಿವಣ್ಗಳಾಂತ ಕದಳಂ (ಜಬಪು. ೧೧–೨೨). [ ತಿಂತಿಣಿ$_1$ + ಪಣ್$_3$ ]

**ತಿಂತಿಣಿವರಿ** (ಕ್ರಿ). ಗುಂಪಾಗು ; ಕಿಕ್ಕಿರಿ : ಜನಪದಂ ಧಗೆಯ ಹೆಬ್ಬಾವಂತೆ ಹೊರಟು ತಿಂತಿಣಿವರಿದು ಬಂತು (ಗೂಲ್ಹೋಥಾ. ೧೧–೨೭೪).
[ ತಿಂತಿಣಿ$_1$ + ಪರಿ$_2$ ]

**ತಿಂತಿಣಿಸು** (ಕ್ರಿ). ಗುಂಪಾಗು ; ಕಿಕ್ಕಿರಿ ; ಒತ್ತೊತ್ತಾಗಿ ಸೇರು ; ಸಮೂಹವಾಗು : ತಿಂತಿಣಿಪ ನಿಳಯದಿಂ . . . ಒಪ್ಪವುದಿಳೆಯೊಳೋಷಧಿ ಪ್ರಸ್ಥಪುರಂ (ಗಿರಿಕ. ೨–೧೧೧) : ದಿಶಾಚತುಷ್ಟಯಂ ಪ್ರಣಿಹಿತಿಹೇತಿ ತಿಂತಿಣಿಸಿದಂತೊಡವಂದುದು ಪಣ್ಣಿದಾನೆ (ಅನಂಪು. ೧೧–೬೪) : ತಿಂತಿಣಿಸಿ ಗಗನದೊಳ್ತುಂಬಿಗಳ್ಕಾರಮುಗಿಲಂತೆ ನವಪಾರಿಜಾತದ ಕುಸುಮ ಪರಿಮಳಕೆ ಸಂತತಂ ಮುಸುಕಲ್ (ಜೈಮಿಭಾ. ೩೩–೨೦). [ ತಿಂತಿಣಿ$_1$ + – ಇಸು$_3$ ]

**ತಿಂತೆ** 'ತೀಂಟೆ$_1$' ನೋ.

**ತಿಂತ್ರಿಣಿ** (ನಾ). ಹುಣಿಸೆಮರ ; ತಿಂತಿಣಿ : ಘನಸಾರ ಖರ್ಜೂರ ಕರ್ಪೂರ ಚೂತ ಪನಸು ತಿಂತ್ರಿಣಿ ಬಿಲ್ವ ಪಾಟಲಾಶೋಕ ಜನನುತ ಮಂದಾರ (ಸೌಗಂಧಿ. ೭–೪೪) ; ತಿಂತ್ರಿಣೀವೃಕ್ಷದ ಪೊಸಫಲದೊಳ್ಪಾರವಂ ಕಂಡ ಕಾಲಕ್ಕೆ (ಪಂಚತ. ೯೩–೫೩). [ ಸಂ. ತಿಂತ್ರಿಣೀ ]

**ತಿಂಥಿಣಿ** 'ತಿಂತಿಣಿ$_1$' ನೋ.

**ತಿಂದುಕ** (ನಾ). ತೂಬರೆಗಿಡ ಮತ್ತು ಅದರ ಕಾಯಿ : "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಶಿತಸಾರಕಃ–೪ ತುಂಬರಗಿಡ, ತೂಬರೇಗಿಡ. ಇದನ್ನು ಜಗಳದ ಮರವೆಂದು ಕೆಲವರನ್ನುವರು" (ಸಿದ್ಧಾಂತಿ. ೧೧೭) ; ತಿಂದುಕ ಪೀನಫಲಂಗಳ್ . . . ತಿಂದು (ಕಾವ್ಯಾವ. ೫೨೭) ; ನಾನಾ ಬಗೆಯ ನಾರುಬೇರುಗಳೂ . . . ಹಣ್ಣುಹಂಪಲುಗಳೂ ಬೆಳೆಯುತ್ತವೆ. ಉದಾಹರಣೆಗೆ ಅಮ್ರ . . . ತಿಂದುಕ, ಉದುಂಬರ (ಪ್ರವಾಇ. I, ೨೦೫).
[ ಸಂ. ]

**ತಿಂಪು** 'ತಿಣ್ಪು' ನೋ.

**ತಿಂಪುಗೆಡು** (ಕ್ರಿ). ಗೌರವವನ್ನು ಕಳೆದುಕೊಳ್ಳು ; ಹಗುರವಾಗು ; ಅವಮಾನ ಹೊಂದು : ಖಳನ ದೆಸೆಯಿಂ ತಿಂಪುಗೆಟ್ಟೆವು ಹೇಳಲೇನದನು (ನಿಭಾಗ. ೭–೮–೨೭). [ ತಿಂಪು (<ತಿಣ್ಪು) + ಕೆಡು$_1$ ]

**ತಿಂಬ** 'ತಿನ್' ಪರಾ.

**ತಿಂಬಂಡ,** ತಿಂಬಡ (ನಾ). ತಿನ್ನುವ ಪದಾರ್ಥ; ತಿನಿಸು ; ತಿಂಡಿ : ಅಜ್ಜರ್ಕಳ ಮನೆಯಿಂದಂ ಪೂಸಲುಮುಡಲುಂ ತುಡಲುಂ ಪೂವುಂ ತಂಬುಲಮುಂ ತಿಂಬಂ[ಪಾಠಾಂ. ಬ, ಬಿ]ಡಂಗಳುಂ ಬಂದುವು (ವಡ್ಡಾರಾ. ೦೦೬–೨೦). **ತಿಂಬಡ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತಿನ್ + ಬಂಡ$_2$./ತಮಿ. ತಿನ್ಪಣ್ಡ ; ತೆಲು. ತಿನುಬಂಡ ]

**ತಿಂಬಡ** 'ತಿಂಬಂಡ' ನೋ.

**ತಿಂಬಿಸು** (ಕ್ರಿ). ತುಂಬಿಸು; ಭರ್ತಿಮಾಡು: ಜಳಜಾತಿಕಾವಳಿಯುಮನಳುಂಬಮಾಗೆ ತಿಂಬಿಸಿಯುಂ (ಪುಷ್ಪಪು. ೭-೬೯ ವ). [ ತಿಂಬು$_1$ + – ಇಸು$_3$ ]

**ತಿಂಬು$_1$** (ಕ್ರಿ). ೧. ತುಂಬು ; ವ್ಯಾಪಿಸು : ಕೆಂಬಣ್ಣದ ಕುದುರೆಗಳೊಳೊಡಂಬಡೆ ನಿಜರಜತರಥಮುಗುರ್ವುರ್ವರೆಯಂ ತಿಂಬೆ[ಪಾಠಾಂ.ತುಂಬೆ]ಕಳಶಧ್ವಜಂ ಮಿಳಿರ್ದಂಬರಮಂ ಬಳಸೆ ನಿಂದನಾತಂ ದ್ರೋಣಂ (ಪಂಪಭಾ. ೧೦-೫೪) ; ನಗದ ಮಾರ್ದನಿ ಕಿವಿಗಂ ತಿಂಬಿ (ಶಾಂತಿಪು. ೨-೧೦೩) ; ಸೋವಡಿಂ ಸೋರ್ಕಿಸುತುಂ ಕರೇಣುಕುಳಮಂ ಸಾರ್ದಾರ್ದು ಸಾವೋದ ಪಲ್ಲವಮಂ ಮೇವುತೆ ತಿಂ[ಪಾಠಾಂ. ತೀಂ]ಬ ತುಂಬಿಗಳನುದ್ಧದ್ಗಲ್ಲದಿಂದಗ್ರ ಪಲ್ಲವದೊಳ್ ಸೋವುತೆ ಸೋರ್ವ ದಾನಜಲದಿಂದಂ ಸಲ್ಲಕೀಕಾನನೋದ್ಭವಮಂ ಮಾಡುತುಮಾಡುತಿರ್ದುವಗದೊಳ್ ಕೋಡಿಟ್ಟು ಕಾಡಾನೆಗಳ್(ಲೀಲಾವ.೮-೩); ನೀಲದುನ್ನುಖಮಯೂಖಸಂಕುಳಂ ಕೊಡಂಕೆಯೊಳ್ ತಿಂಬಿತೆಂಬಂತೆ (ಚಂದ್ರಪು. ೬-೬೩ ವ) ; ತಿಂಬಿ ಗಟಪುವ ಗಿಳಿಗಳೊಡನೆಳಸಿ ಮಾತಾಡಿ (ಪುಷ್ಪಪು. ೨-೪೪) ; ಲೊಕ್ಕಿಯ ಕಷಾಯಮುಂ ಕೆ(ಕು)ಡಿಸುಗುಮುಷ್ಣಾಂಬುವೆ ಮೇಣಾ ಮಧುವಿಂ ತಿಂಬಿದ ವಿಷಮಂ(ಖಮದ.೨-೧೪೩). ೨. ತುಂಬಿಸಂ ; ಭರ್ತಿಮಾಡು : "ತಿಂಬು-ಪೂರಣೇ" (ಶಮಧಾ) ; ರುಚಿವೆತ್ತಿರ್ದ ಪಾನಮಿದು ಮಜ್ಜಿಗೆ ತಾನಿದು ಶಿಖರಿಣಿಯೆನುತುಂ ತಿಂಬಿದಿಂಬಿ ತಂದೆಱೆದರಬಲೆಯರ್ ಸಿರ್ಪುಗಳಿಂ (ಸುಕುಮಾ. ೧೧-೩೦) ; ದೆಸೆಯಂ ಪೊಂಬಣ್ಣದಿಂ ತಿಂಬುವ ಕಳಮವನಂ (ಎಕ. XI, ದಾವಣ. ೩೫-೩೫ ; ಸು. 1160) ; ಬಳಸಿದಗಟನೊಗುಮಿಗೆ ತಿಂಬಿ ತುಂಬುವರಿಯಿಸಿಯುಂ (ಚಂದ್ರಪು. ೮-೪೩ ವ) ; ಅಂಬರಮೆಯ್ದೆ ತಿಂಬಲಿಕ್ಕಿದ ಕಡೆಮುತ್ತಿನೋಳಿಯೆನೆ ಕಣ್ಗೊಳಿಸಿರ್ದುವು ತಳ್ತು ತಾರೆಗಳ್ (ಕುಸುಮಾ. ೪-೪೦) ; ವರ್ಣಮಾಲಿಕೆಯೆಂಬಳ್ ಬಹು ರತ್ನಪ್ರಾಂಶುಪ್ರಸರದಿಂ ಪಲತೆಱದ ವರ್ಣಪೂರಂಗಳಂ ಪರಿಪೂರ್ಣಮಾಗಿ ಬೆಡಂಗುವಡೆಯೆ ತಿಂಬಿಯುಂ (ಶಾಂತೀಶ್. ೧೩-೨೨೯ ವ). 'ತುಂಬು$_1$' ಪರಾ.

△ **ತಿಂಬು$_2$** (ಕ್ರಿ). ತಿನ್ನು ; ಭಕ್ಷಿಸು : ಮಣ್ಣು ತಿಂಬುವದಱಿಂದ ಪಾಂಡು ರೋಗ ಹುಟ್ಟುವದು (ವೈದ್ಯಸಾ. I, ೩೩೩) ; ಅಶನವಾದರೆ ತಿಂಬುತಿಹನು ಮೂರು ಪಂಚೇರ (ಜ್ಞಾನಸಿಂ. ೨-೧೧); ಬುತ್ತಿ ತಿಂಬುವಗೆ ಲತ್ತೆಯುಂಬುವಗಾದೆ (ಮಹಾವಿ. ೪-೯೪). [ <ತಿನ್ ]

**ತಿಂಬೊಡೆ** (ನಾ). [ಸಂಗೀತ] ಹಾಡುವ ಒಂದು ಕ್ರಮ (?) : ಮಿಕ್ಕ ತಿಂಬೊಡೆ ತ್ರಿವಳಿಗಳೆಂದೆಂಬ ಸೂಳುಕ್ರಮದಿಂದ ಪಾಡಿದರು (ತರ್ಕಕಾ. ೭-೫೭). [ ? ]

**ತಿಕ, ತಿಗ, ತೀಗ** (ನಾ). ೧. ಕುಂಡೆ ; ಗುದ ; ಪೃಷ್ಠಪ್ರದೇಶ ; ಆಸನ ; ಅಂಡು: ಘಟ ದೀಪಾಂತರವಾರುತವಾವಿಂದ ಬಂದಿತ್ತೊಂದು ವಿಕಟಾಂಗದ ಕುದುರೆ ಬಾಯಿಗೆ ಹಲ್ಲಣ ತಿಕಕ್ಕೆ ಕಡಿವಾಣ ಹಲ್ಲಿಗೆ ಹಕ್ಕರಿಕೆ (ಸುಂಕಬಂ.೬೪); ಆಸನದ ಪೊಱಗೆ ಪೃಷ್ಠಮದೀಸನಿಪಾ ಪೆಸರದಕ್ಕುಮದಱಿಂ ನಡುವಣ ದೇಶದ ನಿಟ್ಟೆಲುವಿಂಗಂ ಆಸರಿಸುಗು ಮಲಕುಟಂ ತಿಕಂ ತಾಮೆಂದುಂ (ಅಶ್ವಶಾ. ೯-೪೪); ಕುಕುಂದರೌ– ಕುಕುಂದರವೆಂಬ ಪೆಸರ್ವಡೆದಿರುವವು–ಅವು ತಿಕಕ್ಕೆ ಸಮೀಪವರ್ತಿ ಕೂಪಂಗಳು (ಬಾಹಟೀ. ೨-೪-೨೪ ವ) ; ಉದ್ಯೋಗವಿಲ್ಲದ ಬಡಗಿ ಮಕ್ಕಳ ತಿಕ ಕೆತ್ತಿದ (ಗಾದೆ); ತೆಂಗಿನಮರ ಏರುವವನ ತಿಕ ಎಲ್ಲಿ ತನಕ ಹಿಡಿದಾನು? (ಗಾದೆ). ೨. ಮೂರರ ಗುಂಪು : "ತಿಗ(ತಿಕ)– ತ್ರಿಕ = ಮುಕ್ಕೂಟ" (ತದ್ಭಕೋ. ೧೭). ತಿಗ : ೧. "ತ್ರಿಕ – ತಿಗ" (ಶಮದ. ೨೯೦ ಪ್ರಯೋ) ; ತಿಗವೆತ್ತಿ ಕರದೆ ತೊಡೆಗಳನಗಲಿಸಿ (ಮನ್ನವಿ. ೧೪-೪) ; ತುದಿವೆರಳ ಬೊಬ್ಬೆಗಳ ತಿಗ[ಪಾಠಾಂ. ಹರೆ]ಗಳ ತದಹದಬ್ಬರ ವಱೆಯಲೀತನನಿದಿರುಗೊಂಡಪ್ಪಿದರು (ತೊರರಾ.೫-೯-೭). ೨. "ತಿಗ(ತಿಕ)– ತ್ರಿಕ– ಮುಕ್ಕೂಟ" (ತದ ಕೋ. ೧೭). ೩. ಬೆನ್ನೆಲುಂಬಿನ ಕೆಳಭಾಗ ; ಕಟಿಪ್ರದೇಶ : ಅಂತು ಶಿವಂಗೆ ದೂರವಾದೆನೆಂಬ ಕೋಪದಿಂ ತಿಗದೊಳಿಕ್ಕಿರ್ದ ನಂಜನೆಂಜಲಿಪ ಕುಡುಗೋಲಂ ತೆಗೆದುಕೊಂಡು (ತ್ರಿಪುವಿ. ೧೪-೨೫ ವ). ೪. ಪಗಡೆಯಾಟದಲ್ಲಿ ಮೂರರ ಸಂಕೇತವುಳ್ಳ ಒಂದು ಗರ,–ಮೂರರ ಗರ : ಬಿಡು ತಿಗ ದುಗ ಪಂಚಿಯನೊಡ್ಡಡಸಿದ ಚಾರಿಯನೆ ಪೊಯ್ದು ಗುಣಿಸು. . . ಎನಿಪ್ಪ ನುಡಿ ನೆಗಟಿಲ್ಲೆತ್ತವಾಡಿದರ್ ದಂಪತಿಗಳ್ (ಉದ್ಭಟ. ೧೧-೦೫); ದುಗನ ಹಾಯಿಕು ತನಗೆ ಹಾಯಿಕು ತಿಗನವೆಂ[ಪಾಠಾಂ. ಹಾಯ್ಕಿತ್ತಿಗನವೆಂ]ಬಬ್ಬರದ ಹಾಸಂಗಿಗಳ ಬೊಬ್ಬೆಯ (ಕುಮ್ಯಾಸ. ೧೩-೫೦) ; ಎಸೆವ ದಾಯವನೆಸೆವ, ದುಗ ಬೀಳ್ಕೆ, ತಿಗ ಬೀಳ್ಕೆ ! (ಹಬ್ಬರ. ೪-೫೭). ತೀಗ : ೨. ದುಗಂ, ದೂಗಂ ; ತಿಗಂ, ತೀಗಂ (ಶಬ್ದಾನು. ೩೭೮ ಪ್ರಯೋ). 'ಇರ್ತಿಗ' ಪರಾ. [ <ಸಂ. ತ್ರಿಕ ]

**ತಿಕಟ** 'ತಿಗಟ' ನೋ.

**ತಿಕಟಂ** 'ತಿಗಟಂ' ನೋ.

**ತಿಕಡಿ, ತಿಗಟಿ, ತಿಗಟೆ** (ನಾ). ೧. ತ್ರಿಕೋಣಾಕೃತಿ ; ತ್ರಿಭುಜ : (ಹ). ೨. (ಬ್ರಿಟಿಷರ ಆಳಿಕೆಯಲ್ಲಿ) ಜೈಲಿನಲ್ಲಿ ಅಪರಾಧಿಗಳ ಬೆನ್ನ ಮೇಲೆ ಏಟು ಕೊಡುವಾಗ ಉಪಯೋಗಿಸುತ್ತಿದ್ದ ತ್ರಿಭುಜವುಳ್ಳ ಒಂದು ಸಾಧನ : ನಾಲ್ವರು ವಿದ್ಯಾರ್ಥಿಗಳಿಗೆ 'ತಿಕಡಿ'ಯ ಮೇಲೆ ಹನ್ನೆರಡು ಏಟು ಕೊಡಬೇಕೆಂಬ ಕ್ರೂರ ಆಜ್ಞೆ ವಿಧಿಸಿಹೋದರು (ಆಗಸ್ಟ್. ೮೦) : 'ತಿಕಡಿ' ಯನ್ನು ಹೊತ್ತುಕೊಂಡು ಬರಲು ಅತ್ತ ಕೆಲವರು ಹೋಗುತ್ತಲೂ ಇತ್ತ ಹೊಡೆಯುವ ಬಾರಕೋಲು ಸಿದ್ಧವಾಯಿತು (ಆಗಸ್ಟ್. ೮೦). ೩. ಗಾಡಿ ಹೊಡೆಯುವವನು ಕುಳಿತುಕೊಳ್ಳುವುದಕ್ಕಾಗಿ ಗಾಡಿಯ ಮುಂಭಾಗದಲ್ಲಿ ಅಳವಡಿಸಿದ ತ್ರಿಕೋಣಾಕಾರದ ರಚನೆ ; ಕತ್ತರಿ : ಬಂಡಿಗಾರ ಮತ್ತೆ ತಿಕಡಿಯ ಮೇಲೆ ಕುಳಿತುಕೊಂಡು ಜೋರಾಗಿ ಗಾಡಿ ಓಡಿಸಿದನು (ಪುನರು. ೫೭೨). ೪. ಕಲ್ಲಂಕೆಲಸದವನ ಸಮತಲರೇಖೆಯನ್ನು ಪರೀಕ್ಷಿಸುವ ಒಂದು ಸಲಕರಣೆ ; ಕಲ್ಲಂಕಂಟಿಗನ ಮಟ್ಟ ಕೋಲು; ಮೂಲೆಮಟ್ಟ: (ಹ). ೫. ಕ್ರೈಸ್ತಮತದವರಲ್ಲಿ ಕೆಥೋಲಿಕ್ ಪಂಗಡದವರು ತಮ್ಮ ಧರ್ಮದ ಸಂಕೇತವಾಗಿ ಧರಿಸಿಕೊಳ್ಳುವ ಅಡ್ಡಪಟ್ಟಿ ; ಕ್ರಾಸು : ಮಹಾರಷ್ಯದ ರಾಜಾಧಿರಾಜ ರಝಾರನು ವಜ್ರ ಖಚಿತವಾದ ತಿಕಡಿಯನ್ನೂ ಒಂದು ಲಕ್ಷ ಫ್ರಾಂಕುಗಳ ದ್ರವ್ಯನಿಧಿಯನ್ನೂ ಕೊಟ್ಟನು (ವಿಕಾಸ. ೫೪) ; ಕ್ರೈಸ್ತರು ಆರಾಧಿಸುವ ವಿಗ್ರಹವನ್ನಾಗಲಿ, ಕ್ರಾಸುಗಳೆಂಬ ತಿಕಡಿಗಳನ್ನಾಗಲಿ, ಮಹಮ್ಮದೀಯರು ನಾಶಪಡಿಸಲಾಗದು (ಪ್ರಗಂಬ. ೧೯೯). ೬. ದಾರ ಅಥವಾ ಹಗ್ಗವನ್ನು ಹುರಿಮಾಡುವಾಗ ಬಳಸುವ ಒಂದು ಕವೆಗೋಲು : (ಹ). ತಿಗಟಿ : ೧. ಅರ್ಜುನನು ಬಾಣದ ತಿಗಟಿ ಕಟ್ಟಿಕೊಟ್ಟು ತಲೆದಿಂಬು ಮಾಡಿದನು (ಸುವರ್ಣ. ೪೭). ೪. ನಾನು ಒಂದು ದಿವಸ ಹೊಸಮನೆಯನ್ನು ಕಟ್ಟುವ ಕೆಲಸ ನೋಡಲಿಕ್ಕೆ ಹೋದಾಗ ನನ್ನ ತಿಗಟಿಯನ್ನು ಮನೆಯಲ್ಲಿ ಮರೆತು ಹೋಗಿದ್ದೆನು (ಮುಂಬಯಿ. ೪-೧೦೬); ಬಾವಿಯ ಸಮೀಪದಲ್ಲಿ ಎತ್ತರ ಮಾಡಿಹೋಗುತ್ತ ಹೋಗುತ್ತ ತಿಗಟಿಯಿಂದ ತೂಗಿ ಸ್ವಲ್ಪಸ್ವಲ್ಪ ಇಳಿಸುತ್ತ ನೀರಿನ ಕಾವಲಿಯನ್ನು ಚೆನ್ನಾಗಿ ಮಾಡಿಬಿಟ್ಟರೆ (ಕೃಷಿಪ್ರ. ೧೦೦). ತಿಗಟೆ : ೭. ಪೃಷ್ಠಭಾಗ ; ಗುದ ; ಆಸನ : "ಗುದ ತಿಗಟೆ" (ಬಾಹಟೀ. ೨-೫-೮೨ ವ).

**ತಿಕಡಿಹಿಡಿಸು** = ಹಿಂಸೆಕೊಡು : ಹೆಣ್ಣಿಗೆ ತಿಕಡಿಹಿಡಿಸಿ ಒಲ್ಲೆ ಅನ್ನು ಬಾವಿಗೆ ಬೀಳುತ್ತೇನೆ ಅನ್ನು ಅಂತ ಹೇಳಿಕೊಟ್ಟು, ಮಾನನಷ್ಟ ಮಾಡುತ್ತಾರೆ (ಚೆಂಗೂಲಿ. ೧೭೦).

[ ←ಹಿಂ. ಟಿಕಠೀ. / ಪ್ರಾ. ತಿಕಠ್ಠ. / ಸಂ. ತ್ರಿಕಾಷ್ಠ ]

**ತಿಕಾಳಿ** (ನಾ). ಚೀಲದ ಬಂಡಕ್ಕೆ ಹೊಲಿದ ವಸ್ತ್ರದ ತುಂಡು: (ಸ್ಕ್ಯಾಂಡರ್). [ ? ]

**ತಿಕೀಟು** 'ಟಿಕೀಟು' ನೋ.

**ತಿಕ್ಕ** (ಗು). = ತೀಕ್ಷ್ಣ ೧ : " ತೀಕ್ಷ್ಣ – ತಿಕ್ಕ " (ಶಮದ. ೨೭೦ ಪ್ರಯೋ) ; " ತಿಕ್ಕಂ ತೀಕ್ಷ್ಣದ ನಾಮದೊಳ್ " (ಕರ್ಣಾನಿ. ೬೨) ; " ತೀಕ್ಷ್ಣ – ತಿಕ್ಕ " (ಶಬ್ದಾನು. ೧೬೦ಪ್ರಯೋ); " ತಿಕ್ಕನೆ[ಪಾಠಾಂ. ಮುರ್ಕನೆ] ತೀಕ್ಷ್ಣಂ "(ಕವಿಕಂ. ೩೪). [ <ಪ್ರಾ. ತಿಕ್ಖ./ಸಂ. ತೀಕ್ಷ್ಣ ]

**ತಿಕ್ಕಲಾಟ** (ನಾ). ತಬ್ಬಿಬ್ಬಾದ ನಡವಳಿಕೆ ; ಭ್ರಮೆಗೊಂಡಿರುವಿಕೆ : (ಕ). [ ತಿಕ್ಕಲು$_1$ + ಆಟ ]

**ತಿಕ್ಕಲು$_1$** (ನಾ). ಹುಚ್ಚು ; ಚಿತ್ತವಿಭ್ರಮ ; ಭ್ರಮೆ : ಇಂತಹ ಕಲ್ಪನೆಯ ಪ್ರಾಬಲ್ಯವೇ ಮೆದುಳಿನಲ್ಲಿ ವಿಕಾರವನ್ನುಂಟುಮಾಡಿ ಮನಬಂದಂತೆ, ತಿಕ್ಕಲು ಮಾತುಗಳನ್ನಾಡಿಸುವುದು ಅಸಂಭವವೇನೂ ಅಲ್ಲ. ಇದೇ ದೆವ್ವ (ಜೀವಾತ್ಮ. ೨೩೦). 'ತಿಕ್ಕಲಾಟ' ಪರಾ.

ತಿಕ್ಕಲುತಿರುಗು = ಹುಚ್ಚು ಕೆರಳಂ ; ಚಿತ್ತಭ್ರಮೆಯುಂಟಾಗು : ಅವತ್ತು ಆದೇನು ತಿಕ್ಕಲುತಿರುಗಿತ್ತೋ ಏನೋ (ಉಮಾಶಿ. ೮೩).

[ದೇ.॥ ತಮಿ. ತಿಕ್ಕಿಪ್ಪು, ತಿಯಕ್ಕ ; ತೆಲು. ತಿಕ್ಕ ]

**ತಿಕ್ಕಲು$_2$**(ನಾ). ಉಗ್ಗುವಿಕೆ; ಬಿಕ್ಕುವಿಕೆ; ಗುಕ್ಕುವಿಕೆ; ಮಾತನಾಡುವಾಗ ತಡವರಿಸುವಿಕೆ : (ಕ). 'ಬಿಕ್ಕಲು' ಪರಾ.

[ ದೇ.॥ ತಮಿ. ಮಲ. ತಿಕ್ಕು ]

**ತಿಕ್ಕಾಟ** (ನಾ). ೧. ಉಜ್ಜುವಿಕೆ ; ಅರೆಯುವಿಕೆ; ಘರ್ಷಣೆ; ತಾಕಲಾಟ: ಅದೊಂದು ನನ್ನ ಪ್ರಕೃತಿಯ ಪೇಚಾಟ; ತಿಳುವಳಿಕೆಯ ತಿಕ್ಕಾಟ (ವೃದ್ಧರಾ. ೧೦ ಮುನ್ನುಡಿ) : ಉತ್ಪತ್ತಿಯಾಗುವ ಶಕ್ತಿಯಲ್ಲಿ ಕೊಂಚ ಭಾಗವು ಚಲಿಸುವ ಯಂತ್ರಭಾಗಗಳಲ್ಲಿ ತಿಕ್ಕಾಟದಿಂದ ನಷ್ಟವಾಗಿ (ಶಿಲ್ಪಸಾ. ೨೨೦) ; ನೆಕ್ಲ ದೋವ್‌ನ ಹೃದಯದಲ್ಲಿ ಎರಡು ಭಾವನೆಗಳು ಮೂಡಿ ಪರಸ್ಪರ ತಿಕ್ಕಾಟ ಪ್ರಾರಂಭವಾಗಿತ್ತು (ಪುನರು. ೮೧) ; ಸಕಲಧರ್ಮಗಳ ತೌವರೂರಾದ ಭಾರತ ವಂತೂ ಭಿನ್ನಭಿನ್ನ ಧರ್ಮಗಳ ತಿಕ್ಕಾಟದ ಒಡಕುಮನೆಯಾಗಿದೆ (ಧರ್ಮಸಾ. ೨). ೨. ವಿವಾದ; ಜಗಳ ; ಕಲಹ ; ಹೋರಾಟ: ಮೇ ತಿಂಗಳಲ್ಲಿ ಮತ್ತೊಂದು ತಿಕ್ಕಾಟ ನಡೆದು ನಾಲ್ಕು ಮಂದಿಯ ಬಲಿದಾನ ವಾಯಿತು (ಅಕ್ಬರ್. ೧೪೩) ; ಜೀವನದ ತಿಕ್ಕಾಟ ಮುಕ್ಕಾಟಗಳಲ್ಲಿ ಮಾನವನಿಗೆ ಶೃಂಗಾರವು ಸಿಂಪಿನಲ್ಲಿದ್ದ ಮುತ್ತಿನಂತೆ (ಕನ್ನಜಾ. ೯೧) ; ಮನೆಯಲ್ಲಿ ಇಷ್ಟು ತಿಕ್ಕಾಟ ನಡೆದೂ ಕೂಡ ಬಾಬಣ್ಣ ದೀಪಾವಳಿಗೆ ಅಕ್ಕನನ್ನು ಕರೆದು ಕೊಂಡೇ ಬಂದ (ಅಶೋಕ. ೧೦೩) [ ತಿಕ್ಕು + ಆಟ ]

**ತಿಕ್ಕಾಡು** (ಕ್ರಿ). ಉಜ್ಜು ; ಘರ್ಷಿಸು : ಮರಗಳು ಒಂದಕ್ಕೊಂದು ತಿಕ್ಕಾಡುತ್ತಿವೆ (ರೂಢಿ). [ ತಿಕ್ಕು + ಆಡು$_1$ ]

**ತಿಕ್ಕಿಸು** (ಕ್ರಿ). ಉಜ್ಜಿಸು : ಮುಸುರೆ ಪಾತ್ರೆಯನ್ನು ಚೆನ್ನಾಗಿ ತಿಕ್ಕಿಸು (ರೂಢಿ). [ ತಿಕ್ಕು + –ಇಸು$_3$ ]

**ತಿಕ್ಕು** (ಕ್ರಿ). ೧. ಒರೆ ; ತೇಯು : ಎಕ್ಕತೂಳದ ಭಟತತಿಯ ಚಕ್ಕಟು ತಿಗುಣಿಯ ತಿಕ್ಕುವಂದದಿ ನೆಲಕಿಕ್ಕಿದನರಿಗಳಿಗೆಯೊಳು (ನೇಮಿಸಂ. ೨೯-೩೧); ಹಕ್ಕಿಗಳರಸನು ಮೋರನ ನೆಲಕಿಕ್ಕಿ ತಿಕ್ಕಿತು ಕೂಗಿ ಬೊಬ್ಬಿಡಲು (ಮೋಹತ. ೩೮-೨೯). ೨. ಉಜ್ಜು ; ಒರಸು: ಅಡಿಗಡಿಗೆ ಮೂತ್ರಿಸುಗುಂ ಮೈಮುರಿವುದುಂ ಬೆಚ್ಚುಗುಂ ಮುಖವ ತಿಕ್ಕಿಕೊಂಡಟುಗುಂ (ಬಾಲಚಿ. ೧೨೫-೧೨) ; ಗಟ್ಟಿಗೋದುವೆಯ ನಾಲ್ಕಳೃವ ನನೆಹಿ . . . ಬಿಸಿಲೊಳಗೊಣಗಲಿಟ್ಟೊಂದು ಬಳ್ಳಮಪ್ಪನ್ನೆವರ ಚೆನ್ನಾಗಿಯೆ ತಿಕ್ಕಿ ಗಟ್ಟಿಗೆಯ್ದು (ಸೂಪಶಾ. ೧-೯) ; ಆಗಳೆ ಕಣ್ಣ ತಿಕ್ಕುತೊಯ್ಯನೆಯೆವೆವೊಂದೆರಳ್ಳುಱಿಯೆ (ಭರಜ. ೯-೬೩) ; ಬರ್ದಿಲದ ಪೆರ್ಗಚ್ಚಲಾವು ತಿಕ್ಕುವುದು ಬಾಸ್ ಬೆನ್ನ (ಕಾಲೂರ. ೩೭-೪೦). ೩. (ಉಜ್ಜಿ) ಶುಚಿಮಾಡಂ ; ಬೆಳಗು ; ತೊಳೆ : ಮುಸುರೆ ತಿಕ್ಕುವವಳು ನಾಲ್ಕುದಿನಗಳಿಂದ ಬರಲಿಲ್ಲ (ರೂಢಿ). ೪. ತೀಡು ; ಸಯ್ಯು ಮಾಡು ; ಮಾಲೀಸಂ ಮಾಡು : ಅಂಬಲೀ ಕುಡಿಯುವವನಿಗೆ ವಿಶಾಸೆ ತಿಕ್ಕುವವನೊಬ್ಬ (ಗಾದೆ). ೫. ಉಜ್ಜಿ ತೆಗೆ ; ಒರಸಿ ತೆಗೆ ; ಅಳಿಸು : ಕಡುತದಲ್ಲು ಮಧ್ಯ ಮೂರು ಪಂಕ್ತಿ ತಿಕ್ಕಿ ಬರದು ಇದ್ದದ್ದನ್ನು ಮಹಾರಾಜರ ಕಡೆಯವರು ತಿಳಿದು (ರಾಜೇಂದ್ರ. ೬೩). ೬. (ಆಲಂ) ನಾಶಮಾಡು : ಇದಿರಾದರೆ ತಿಕ್ಕುವೆನುಯಿಂದ್ರಾದಿ ದಿಕ್ಪಾಲತತಿಗಳಂ (ತುರಂಗ. ೩-೩೮).

ತಿಕ್ಕಿ ತೀಡು = ನಯಮಾಡು : ನಿನ್ನ ಗಾನದ ಬೆಳಕು ನೆಲಬಾನುಗಳ ತಿಕ್ಕಿ ತೀಡುತಿದೆ (ನೆಲಮು. ೪೧–೨೧). ತಿಕ್ಕಿಮುಕ್ಕು=೧. ಬಹಳ ತೊಂದರೆ ಕೊಡು ; ನಿರಂತರವಾಗಿ ಕಾಡು ; ಎಡೆಬಿಡದೆ ಕಷ್ಟಕೊಡು : ನನ್ನ ತಂದೆ ಜೀವಿಸಿದಷ್ಟು ಕಾಲವೆಲ್ಲ ಸ್ವಂತಕ್ಕೆ ಪಟ್ಟ ಪಾಡು, ಮನೆ ಮಂದಿಗೆಲ್ಲ ಕೊಟ್ಟ ಕಷ್ಟ ತಿಕ್ಕಿಮುಕ್ಕಿದಂತಾಗಿತ್ತು (ಸ್ಮೃತಿಚಿ. ೩೦೮) ; ಸಾವು ಒಮ್ಮೆ ಬಂದು ಮನೆಯಲ್ಲಿ ಕಾಲಿಕ್ಕಿತೆಂದರೆ ತಿರುಗೂಮುರುಗೂ ಆ ಮನೆಯನ್ನೇ ತಿಕ್ಕಿಮುಕ್ಕುತ್ತದೆ (ಮೊಪಾಸಾ. ೧೮). ೨. ಹೇಳ ಹೆಸರಿಲ್ಲದಂತೆ ನಾಶ ಮಾಡು,–ಧ್ವಂಸಮಾಡು ; ನಿರ್ನಾಮಮಾಡು : ಸುರನರೋರಗರೆಂಬ ಬಹಳ ನಿಶಾಟರ ತಿಕ್ಕಿಮುಕ್ಕುವರು (ಮೋಹತ. ೩೩-೦೮) ; ಉಕ್ಕಿದ ಕಡುಗೆಂಪದಿ ಕೋಲ್ಗಳ ತಿಕ್ಕಿಮುಕ್ಕಿದ ಮುರಹರಾಗ್ರಜನ ಟಕ್ಕಿಸಿ ಹೋದಡೆ ಬಿಡೆನೆಂದು (ಮೋಹತ. ೩೯-೯) ; ಉಳಿದ ಹುಲುದಿವಿಜ ಮನು ಮುನಿಜನರ ತಿಕ್ಕಿಮುಕ್ಕದೆ ಬಿಡುವನೇ (ನವಮೋ. ೨೪-೭೯) ; ರಿಪುವನು ತಿಕ್ಕಿಮುಕ್ಕುವೆನೆನುತ ರಥವನೇರಿದನು (ರಾಮಾಸಂ. ೬-೯-೨೭).

[ ದೇ.॥ ಮಲ. ತಿಕ್ಕು, ತಿರಕ್ಕು ; ತುಳು. ತಿಕ್ಕು, ತಿಕ್ಕ್ ]

**ತಿಕ್ಕುಮುಕ್ಕಾಟ** (ನಾ). ಘರ್ಷಣೆ ; ತಿಕ್ಕಾಟ : ಒತ್ತಾಯದ ಪ್ರಕಾರ ಜನರ ಭಾಷೆಯು ಬೇರೆ ಭಾಷೆಗಳ ತಿಕ್ಕುಮುಕ್ಕಾಟದಲ್ಲಿ ಸಿಕ್ಕುವುದು (ವಿಶಾಪುಂ. ೧೮) : ಪೌರ್ವಾತ್ಯ ಸಂಸ್ಕೃತಿಗೂ ಪಾಶ್ಚಾತ್ಯ ಸಂಸ್ಕೃತಿಗೂ ತಿಕ್ಕುಮುಕ್ಕಾಟ ಬಂದಿದೆ (ಸಾಹಿಸಂ. ೨೦೦). [ ತಿಕ್ಕು + ಮುಕ್ಕು$_1$ + ಆಟ ]

**ತಿಕ್ಕುವರಿ** (ಕ್ರಿ). ತಿಕ್ಕುತ್ತ ಮುಂದಕ್ಕೆ ಸಾಗು ; ನಾಶಮಾಡುತ್ತ ಮುಂದೆ ಹೋಗು : ಎಕ್ಕತುಳದಲಿ ರಕ್ಕಸರ ಸಲೆ ಕಕ್ಕುಲತೆಯೆನೆ ತಿಕ್ಕುವರಿದಸು ಜಾಜಿ ನೆಲಪರಿತು (ಮೂಲರಾ. ೩-೦೮).

[ ತಿಕ್ಕು + ಪರಿ$_2$ ]

**ತಿಕ್ತ** (ಗು). ೧. ಕಹಿಯಾದ. ೨. ಹರಿತವಾದ ; ಚೂಪಾದ. ೩.(ಆಲಂ) ಮನಸ್ಸನ್ನು ನೋಯಿಸುವ ; ಅಪ್ರಿಯವಾದ : ನೆನಪಿದೆಯೆ, ಜೀವಿತೇಶ್ವರಿ, ಸ್ವಯಂವರದ ಆ ತಿಕ್ತಕಥೆ ? (ಶ್ರೀರಾಮಾ. ೨೧೩-೬೬). ೪. (ಆಲಂ) ಉಗ್ರವಾದ ; ಕಠಿನವಾದ : "ಕಹಿ, ಕಟು, ತಿಕ್ತ, ಮನಸ್ಸಿಗೆ ಹಿತವಲ್ಲದ; ಮನಸ್ಸು ಕೊರೆಯುವ; ವ್ಯಥೆತುಂಬಿರುವ ; ಕಠೋರ, ಉಗ್ರ; ನಿಷ್ಠುರ; ಮನೋವೇಧಕ" (Bitter. ಇಂಕನಿ.) ; ಎನ್ನ ತಾಯ್ಮಾಧುರ ವಾತ್ಸಲ್ಯದಾ ತಿಕ್ತಕರ್ತವ್ಯಮಂ ಮಾಣ್ದೆಂತುಟಿರಲಿ ? (ಶ್ರೀರಾಮಾ. ೧೦೯-೨೪೮). (ನಾ). ೫. ಆರು ವಿಧವಾದ ರಸ (ರುಚಿ)ಗಳಲ್ಲೊಂದಾದ ಕಹಿ : "ತುವರಂ ತಿಕ್ತಂ ಮಧುರಂ ಲವಣಂ ಕಟು ಕಾರಮೆಂದು ರಸಮಾಱು ತೆಱಂ" (ವಸ್ತುಕೋ. ೯೪-೧೩) ; " ತಿಕ್ತಮೆನೆ ಕಹಿಯಕ್ಕು " (ಮಂಗರಾ. ೬೫-೫); ತಿಕ್ತ ಕಟು ಕಷಾಯಾಮ್ಲಮಧುರ ಭೇದದಿಂ ರಸ ನಾಮಂ ಪಂಚವಿಧ ಮಕ್ಕುಂ (ಅಜಿಪು. ೧೧-೨ ವ) : ರಸಪಂಚಕನಾಮಕರ್ಮೋದಯಂ ದೇಹಕ್ಕೆ ತಿಕ್ತಕಟುಕ ಕಷಾಯಾಮ್ಲಮಧುರನಾಮೋಪೇತ ಪಂಚರಸಮಂ ಮಾಳ್ಕುಂ (ತತ್ತ್ವಪ್ರ. ೨೯೬) ; ಜೈನರು ರಸಗಳನ್ನು ಐದೆಂದು ಪರಿಗಣಿಸುತ್ತಾರೆ: ಮಧುರವಾಮ್ಲಂ ಕಟುಕ ಲವಣ ತಿಕ್ತಂ ಕಷಾಯೊದವಿದಿಂತಾಱನಿಪ ರುಚಿಕರಂಗಳು ಸಹಿತ (ಲಶಿಚಂ. ೩೯-೨೯). ೬. ಸುಗಂಧ ; ಒಳ್ಳೆಯ ವಾಸನೆ; ಸೌರಭ್ಯ: "ಕಟು, ತಿಕ್ತ, ಕಷಾಯಮೆಂಬಿವು ಸೌರಭ್ಯದಲ್ಲಿಯುಂ . . . ವರ್ತಿಸುಗುಂ " (ಹಲಾಯು. ೧೩೫-೨೭). [ ಸಂ. ]

**ತಿಕ್ತಕ** (ಗು). ೧. ಕಹಿಯಾದ. (ನಾ). ೨. "ಕಹಿಪಡವಲ ; ಪಡುವಲ ಬಳ್ಳಿ" (ಗಂಗಾವು. ೧೫೨). ೩. ಕಗ್ಗಲಿಮರ ; ಖದಿರ. ೪. ಇಂಗುಂದೀ

**ತಿಕ್ತಕೆ** (ನಾ). ಒಂದುಂ ಬಗೆಯು ಗಿಡ: "ತಿಕ್ತಕಿ[ಕೆ]ಯೆನಲ್ ಕಾರೆಯಕ್ಕು" (ಮಂಗರಾ. ೪೨-೩೭). [ ಸಂ. ತಿಕ್ತಕ ]

**ತಿಕ್ತಪರ್ವ** (ನಾ). ಒಂದುಂ ಬಗೆಯು ಬಳ್ಳಿ : "ತಿಕ್ತಪರ್ವಾ-ಚಕ್ರವರ್ತಿ ಸೊಪ್ಪು, ಅಮೃತಬಳ್ಳಿ, ಯಷ್ಟಿಮಧುಕ" (ರುದ್ರನಿ. ೨೫೯).
[ ಸಂ. ತಿಕ್ತಪರ್ವನ್ ]

**ತಿಕ್ತಶಾಕ** (ನಾ). ೧. ಕಹಿಯಾದ ಕಾಯಿಪಲ್ಯ ; ಕಹಿ ಹಸುರುವಾಣ್ಯೆ-ತರಕಾರಿ; "ಕಹಿಪಲ್ಲ್ಯ" (ಗಂಗಾಮ. ೧೫೨). ೨. ಬಸಲೆಗಿಡ: "ವರುಣಃ, ವರಣಃ, ಸೇತುಃ, ತಿಕ್ತಶಾಕಃ, ಕುಮಾರಕಃ- ಶಿ ವಸಲೇಗಿಡ; ಮೆದವಸಲೇ ಗಿಡ ; ಉಲಿವಿರಿವಸಲೆ" (ಸಿದ್ಧಾಂತಿ. ೧೦೩). [ ತಿಕ್ತ + ಶಾಕ$_1$ ]

**ತಿಕ್ತಾಲಾಬು** (ನಾ). ಒಂದುಂ ಬಗೆಯು ಸಸ್ಯ ; ಕಹಿಸೋರೆ : ತಿಕ್ತಾಲಾಬು ಭಾಜನಗತದುಗ್ಧದವೋಲು ಮಿಥ್ಯಾತ್ವಾನಂತಾನುಬಂಧಿ ಉದಯವಶದಿಂ ವಿಪರೀತಾಭಿನಿವೇಶರೂಪಕ್ಕುಮತಿ ಕುಶ್ರುತವಿಭಂಗಮೆಂಬ ಜ್ಞಾನತ್ರಯಂ (ಪಸಾರ. ೫೭೭). [ ತಿಕ್ತ + ಅಲಾಬು ]

**ತಿಕ್ತೆ** (ನಾ). ಒಂದುಂ ಬಗೆಯು ಸಸ್ಯ; ಕಟುಕರೋಹಿಣಿ: "ತಿಕ್ತಾ-ಕಟುಕ ರೋಹಿಣಿ ; ಗಂಡಲೀ" (ರುದ್ರನಿ. ೨೫೯). [ ಸಂ. ತಿಕ್ತಾ ]

**ತಿಗ** 'ತಿಕ' ನೋ.

**ತಿಗಟ,** ತಿಕಟ, ತಿಗಡ$_2$, ತಿಗುಡ, ತಿಡ್ಡ, ತ್ರಿಗುಟ (ನಾ). ಉದ್ದ ; ಮುಂದೆ ಮತ್ತು ಹಿಂದೆ: ಅಡ್ಡಮುಂ ತಿಗಟಮುಂ ತಾಱುಂತಟ್ಟುಮಿದಿರುಂ ಬಟಿಯುಂ ಬಿಟ್ಟುಂ ಬಟಲದೆ (ಲೀಲಾವ. ೭-೫೫ ವ); ಹರನ ಮುಂದಡ್ಡಮುಂ ತಿಗಟಮುಂ ಪರಿದಾಡಿ (ಅನಾರ. ದೇ. ೧೮೪-೨೩). 'ತಿಗಟಂ' ಪರಾ. **ತಿಕಟ:** 'ತಿಕಟಂ' ಪರಾ. **ತಿಗಡ$_2$ :** 'ತಿಗಡಂ' ಪರಾ. **ತಿಗುಡ :** 'ತಿಗುಡಂ' ಪರಾ. **ತಿಡ್ಡ :** "ಸೊಟ್ಟ, ಅಂಕು, ಡೊಂಕು, ಒಂಕು, ಕೊಂಕು, ಕುಡು, ಅಡ್ಡ, ತಿಡ್ಡ" (ಕೆಂನುಹು. ೯೧); ಅಂತಿದಿರುಂ ಬಟಿಯುಂ ಪಾಸುಂ ಪೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂ ತಿಡ್ಡ[ಪಾಠಾಂ. ತಿಗಟ] ಮುಂ ಪರಿದು (ಗದಾಯು. ೬-೨೮ ವ). '**ಅಡ್ಡತಿಡ್ಡ$_1$**' ಪರಾ. **ತ್ರಿಗುಟ :** ಪುಟಪೇಳುತಡ್ಡಮುಂ ತ್ರಿಗುಟಮಂ ಪರಿದಾಡಿ ನ ಟ ನ ಂ ತಿ ರು ಗ್ಗ ಡಿ ಸಿ ಕುಣಿಕುಣಿದು ಕೊಂಡಾಡಿ (ಪುಷ್ಪರ. ಹ. ೫೨೩-೧). [ ? ]

**ತಿಗಟಂ,** ತಿಕಟಂ. ತಿಗಡಂ, ತಿಗುಡಂ, ತ್ರಿಕಟಂ (ಅ). ಉದ್ದವಾಗಿ ; ಮುಂದಕ್ಕೆ ಮತ್ತು ಹಿಂದಕ್ಕೆ : ಫೊಳ್ಳನೆ ಸಭೆ ನಗೆ ಪಲ್ಲಂ ಕಿರಿವುತೆ ಅಡ್ಡಂ ತಿಗಟಂ ವಿಸಟಂಬರುತಂ (ಭೃಂಗೀರ. ಹ. ೪೭೩-೮). **ತಿಕಟಂ :** ಮುಂದಕ್ಕುಬಾಬೆಂದೋಡಿ ನಿಲುತ್ತಂ ಹಿಂದಕ್ಕೆಯ್ತಂದರ್ತಿಗೆ ನಿಲುತಂ ನಡುವಡ್ಡಂ ತಿಕಟಂ [ಪಾಠಾಂ. ತಿಗಟ, ತಿಗಟಂ, ತಿಗಡ, ತಿಗಡಂ, ತಿಗುಡಂ] ಪರಿದಾಡುತೆ (ತಿರುನಾ. ಹ. ೧೦೭-೨೦). **ತಿಗಡಂ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ತಿಗುಡಂ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ತ್ರಿಕಟಂ :** ತೂಗಾಡುತೆ ಮಡಕೆಗಳಂ ಬಾಜಿಸಿ . . . ಅಡ್ಡಂ ತ್ರಿಕಟಂ ಬಲಿವುತೆ ಬಾಜಿಸಿ (ಕುಂಬಜ. ಹ. ೨೫೫-೧೩). [ <ತಿಗಟ ]

**ತಿಗಟಿ** 'ತಿಕಡಿ' ನೋ.

**ತಿಗಟು** 'ತಿಗುಡು$_1$' ನೋ.

**ತಿಗಟೆ** 'ತಿಕಡಿ' ನೋ.

**ತಿಗಡ$_1$** 'ತಿಗುಳ' ನೋ.

**ತಿಗಡ$_2$** 'ತಿಗಟ' ನೋ.

**ತಿಗಡಂ** 'ತಿಗಟಂ' ನೋ.

**ತಿಗಡಿ** (ನಾ). ವಂಚನೆ ; ಮೋಸ ; ಕಪಟ : (ಕ). 'ತಾರಾತಿಗಡಿ', 'ತಿಗಡಿಬಿಗಡಿ' ಪರಾ.
[ ←ಹಿಂ. ತಿಕಡಮ್ ; ಮರಾ. ತಿಗಡೂ-ಷ್ಟ್ಯಾವಿನ ಮಾಲು ]

**ತಿಗಡಿಬಿಗಡಿ** (ನಾ). ೧. (ಮಾತಿನಲ್ಲಿ) ಅಸಂಗತತೆ ; ಅಸಂಬದ್ಧತೆ: (ಸ್ಕಾಂಡರ್). ೨. ಮೋಸ ; ವಂಚನೆ ; "ಠಕ್ಕತನ" (ಜಾನಕೋ. ೬೭). **ತಿಗಡಿಬಿಗಡಿ ಮಾತಾಡು** = ಅಸಂಬದ್ಧವಾಗಿ ನುಡಿ : (ಸ್ಕಾಂಡರ್).
[ ←ತುಳು. ತಿಗಡಿಬಿಗಡಿ ]

**ತಿಗಡು$_1$** (ಕ್ರಿ). ಹೊಡೆ; ಬಡಿ: ತಿಗಡ[ಪಾಠಾಂ. ಗಿದ]ಲೊದಱುವ ಪರಿಗೆಗಳ ಗೌಱಿಗಿವ ಹೆಗ್ಗಹಳೆಗಳ . . . ಮಹಾಧ್ವನಿ ಬಗಿದುದ್ಯೆ ತಾವರೆಯ ತನಯನ ಕರ್ಣಕೋಟರವ (ಕುಮಾವ್ಯಾಭೀ. ೨-೪). [ <ತೀಡು$_2$ ? ]

**ತಿಗಡು$_2$** 'ತಿಗುಡು$_1$' ನೋ.

**ತಿಗಡು$_3$** 'ತಿಗಡೆ$_2$' ನೋ.

**ತಿಗಡೆ$_1$** 'ತಿಗುಡು$_1$' ನೋ.

**ತಿಗಡೆ$_2$,** ತಿಗಡು$_3$, ತಿಗುಡು$_2$, ತಿಗುಡೆ (ನಾ). ೧. ಔಷಧಿಗೆ ಉಪಯೋಗವಾಗುವ ಒಂದು ಬಗೆಯ ಬಳ್ಳಿ ಮತ್ತು ಅದರ ಗಡ್ಡೆ ; ರೇಚನಿ : "ಕಟುಕಿ ತಿಗಡೆ" (ಅಕಾನಿ. ೬-೩೫); "ಕುಂಭಧಾತ್ರೀ-ತಿಗಡೆ-ಕುಪ್ಪಸಗಣಿಕೆ, ನೆಲಗಡವು" (ಒಷಧಿ. ೩೭) ; ತಿಗಡೆ ಶುಂಠಿ ಶಿವೆ ಬೆಲ್ಲಮೆಂಬ ಮದ್ದುಗಳ . . . ತಿಂಗೆ ಮಾಡುಗುವುದಾರ್ಗಮಧಿಕಂ ವಿರೇಕಮಂ (ಲೋಕೋಪ. ೯-೩೫); ತಿಗಡೆ ಧಾತಕಿಯೆಲೆ ಹಿಂಗು ಬೀರಕಯುಗ (ಸಾಳ್ವಸಾಂ. ೦೨). ೨. ಒಂದು ಬಗೆಯ ಮರ : ತಿಗಡೆ ಪಥ್ಯೋರ್ವೀರುಹಾಶೋಕೆ ಪಾದರಿ ನೇಱಿಲ್ ಕುಶೆ ಕಾಶೆಯೆಂಬಿವಱೊಳಾದಂದಂತದರ್ಕತ್ತಲುತ್ತರದೊಳ್ ಹಸ್ತಯುಗಕ್ಕೆ ಪಂಚಪುರುಷಂ ಗುಣ್ಪಾದೊಡಕ್ಕುಂ ಜಳಂ (ಲೋಕೋಪ. ೫-೨೮). **ತಿಗಡು$_3$:** ೧. "ಐರಾವತೀ-ಕಲ್ಲತಿ, ತಿಗಡು, ಭೇಳ" (ಒಷಧಿ. ೧೮). **ತಿಗುಡು$_2$ :** ೧. ಪಟಗಣಿ, ಸೊನೆಪಟ್ಟ, ತಿಗುಡು (ಮೃಜಿಗಿ. ೫೮-೧೧೭೮). **ತಿಗುಡೆ:** ೧. ಇಂಗಿನೆಲೆ ಮುಸ್ತೆಯುಳಿಲೆ ಲವಂಗಂ ಬಜೆ . . . ತಿಗುಡೆ ವಿಳಂಗಂ ಪಿಪ್ಪಲಿಯೆ ಮರಿಚ ಸೈಂಧವಲವಣಂ (ಅಶ್ವಶಾ. ೭-೪೪) ; ತಿಗುಡೆ ನೀಲಿಬೇರು ಅಳಲೆಕಾಯಿ ತಾರೆಕಾಯಿ ನೆಲ್ಲಿಕಾಯಿ ಯಿಷ್ಟು ಸಮಾಂಶವಾಗಿ ಕೂಡಿ ಅರ[ದು]ದಂ ಕೊಡಲು ವಿರೇಚನವಹುದು (ವಿಷಚಿ. ೨೦-೪). ೨. "ಭೂರಿಫೇನ-ಸಮುಗಾ ? ತಿಗುಡು" (ಒಷಧಿ. ೧೧೨).
[ ದೇ.॥ ತುಳು. ತಿಗಡಿ ; ತೆಲು. ತೆಗಡ./ಸಂ. ತ್ರಿಕಟ ]

**ತಿಗಡೆಹಿಪ್ಪಲಿ** (ನಾ). ಒಂದು ಬಗೆಯ ಔಷಧ ದ್ರವ್ಯ: "ಮಹಾಶ್ಯಾಮಃ-ಹೊನ್ನಾವರೆ, ತಿಗಡೇಹಿಪ್ಪಲಿ" (ಒಷಧಿ. ೧೧೮).
[ ತಿಗಡೆ$_1$ (<ತಿಗುಡು$_1$) + ಹಿಪ್ಪಲಿ ]

**ತಿಗಣೆ** 'ತಗುಣೆ' ನೋ.

**ತಿಗಣೆ** 'ತಗುಣೆ' ನೋ.

**ತಿಗಮರಿ** 'ತಿಗಮಾರಿ' ನೋ.

**ತಿಗಮಾರಿ,** ತಿಗಮರಿ (ನಾ). [ನಾಟ್ಯ]ನೂರೆಂಟು ಕರಣಗಳಲ್ಲಿ ಒಂದು ಬಗೆ ; ಸೊಂಟದ ಚಲನವಲನಗಳ ಮೂಲಕ ಮಾಡುವ ಒಂದು ಬಗೆಯ ಅಭಿನಯ : ಮತ್ತಂ ದಿಂಡು ಮುಂಡಾಸಮಂ . . . ತಿಗಮಾರಿ ಮೊಳೆಯುಂ ಮುರಿವ ನಡುವಂ ಮೊಸಳಿವರಿ ಜಲಶಯನ ಚ್ಯುತಂ ಮತ್ಸ್ಯ ಪುಟಂ ಲಂಕಾದಹನಮೆಂಬ ಪಲವುಂ ತೆಱದ ಕರಣಂಗಳಿಂ (ಧರ್ಮಪ. ೨-೨೭ ವ). **ತಿಗಮರಿ :** ಹೊಱವೊಳೆ ಒಳವೊಳೆ ತಿಗಮರಿ ಜಲಶಯ ಮೆಱೆವ ಲಂಕಾದಹನಾದಿ ನೂಱೆಂಟು ಕರಣಗಳನು ಕ್ರಮದಿಂದಲಾ ನಾರೀಮಣಿಗಳು ತೋಱೆ (ಜ್ಞಾನಸ. ४೧-೦೫೩). [ ? ]

**ತಿಗರಿ** 'ತಿಗುರಿ' ನೋ.

**ತಿಗಲು** (ನಾ). ಕಷ್ಟ ; ತೊಂದರೆ : ಈ ಉಂಗುರದಿಂದ ಆಗುವ ಕೇಡನ್ನು ತಪ್ಪಿಸಿಕೊಳ್ಳುವುದಕ್ಕೆ ಹೋಗಿ, ಮತ್ತೊಂದು ತಿಗಲಿಗೆ ಖಂಡಿತಾ ಸಿಕ್ಕಿ ಕೊಳ್ಳುತ್ತೇನೆ (ಮಲಮು. ೭೪೪). [ ? ]

**ತಿಗಳ** 'ತಿಗುಳ' ನೋ.

**ತಿಗಳಾಣ್ಯ** 'ತಿಗುಳಾಣ್ಯ' ನೋ.

**ತಿಗಳಾರಿ** (ನಾ). ತಮಿಳು ಲಿಪಿ : ತಿಗಳಾರಿ, ಗ್ರಂಥಲಿಪಿ, ನಾಗರಿ ಲಿಪಿಗಳನ್ನುಳಿದು, ಕನ್ನಡಅಕ್ಷರವಿರುವ ಓಲೆಗಳನ್ನೆಲ್ಲ ತಿರುವಿಹಾಕಿದೆ (ಯಕ್ಷಬ. V ಮುನ್ನುಡಿ). [ <ತಿಗುಳ ]

**ತಿಗಳ** 'ತೇವುಳು' ನೋ.

**ತಿಗಳಿತ್ತಿ** 'ತಿಗುಳಿತ್ತಿ' ನೋ.

**ತಿಗಳು** 'ತಿಗಂಡು$_1$' ನೋ.

**ತಿಗುಂಡ** (ನಾ). ೧. ಮೂರು ಅಗ್ನಿಕುಂಡ. ೨. ನೀರಿನ ಮೂರು ಹೊಂಡ,–ಜಲಾಶಯ : "ತಿಗುಡಂ – ತ್ರಿಕುಂಡಂ" (ಶಬ್ದಾನು. ೩೭೬ ಪ್ರಯೋ). [ <ಸಂ. ತ್ರಿಕುಂಡ ]

**ತಿಗುಡ** 'ತಿಗಟ' ನೋ.

**ತಿಗುಡಂ** 'ತಿಗಟಂ' ನೋ.

**ತಿಗುಡು$_1$**, ತಿಗಟು, ತಿಗಡು$_2$, ತಿಗಡೆ$_1$, ತಿಗಳು, ದಿಗುಡು (ನಾ). ಮರ ಮೊದಲಾದ ವನಸ್ಪತಿಯ ಸಿಪ್ಪೆ ; ತೊಗಟೆ ; ಚಕ್ಕೆ : "ತ್ವಗ್ವಲ್ಕಲಂ ವಲ್ಕಮೆನೆ ಮರದ ತಿಗುಡಕ್ಕು" (ಮಂಗರಾ. ೩೨–೩) ; ನೆಗಟ್ದಿರ್ದು ಪಾಲ್ಮರಂಗಳ ತಿಗುಳ್ಗಳಿಕ್ಕಿದ ಕಷಾಯಜಳದಿಂದಿಂದ್ರಂ ವಿಗತಕಷಾಯಂಗೆ . . . ಮಾಡಿದಂ ಮಜ್ಜನಮಂ (ಅಜಿಪು. ೪–೬೯); ಒರ್ಮರದ ತಿಗುಡು ಮತ್ತೊಂದು ಮರನನೇಂ ಪತ್ತುಗುಮೇ (ಪಂಪಭಾ. ೧೪–೧೭) ; ಮಿಕ್ಕಾದ ಹೊರಗಣ ಹೊರೆಯ ತಿಗುಡಂ ಕೆತ್ತಿ ಕಂಬವ ಶುದ್ಧೈಸಿ (ಸರ್ವಪ. ೧೧೯–೬೦೭) ; ಪರಿವತಿಸಾರಂ ಪಿರಿದಾಗಿರೆ ಹೂಲಿಯ ಬೇರ ತಿಗುಡನೆಮ್ಮೆಯ ಮೊಸರೊಳ್ ಬೆರಸಿಟ್ಟು ಸೈಂಧವಂ ಕೂಡಿರೆ ಮೆಲುವುದು (ಕಲ್ಯಾಕಾ. ೪–೦೫) ; ಈ ಬೇರಿನ ತಿಗುಡಂ ಮೊಲೆಹಾಲಲ್ಲಿ ತೇದು ಹಚ್ಚಲು ತಿಮಿರಗಣ್ಣು ಮಾಣ್ಗುಂ (ವಿವ್ಯವಿ. ೧). **ತಿಗಟು :** ತೋರ ಹುಸಿಗಲ ತಿಗಟು ಬಜೆ ವಿಳಂಗಸಾರ ಭದ್ರಮುಸ್ತೆ ಇವಂ . . . ಪೂಸುವುದು (ಬಾಲಚಿ. ೧೨೯–೧೨). **ತಿಗಡು$_2$ :** ಸಾವೆಪೆಂದು ಕಾಯುಮಂ ತಿಗಡುಮಂ [ಪಾಠಾಂ. ಪಣ್ಣುಮಂ ಕಾಯುಮಂ] ತಿಂದು (ಧರ್ಮಾಮೃ. ೧೨–೨೦೪) ; ಮರ ತಿಗಡು ಹಗಿನ ಮೊದಲಾದವಜಲ್ಲಿಯ ಗಂಧವನಱಿವುದು ಆಚಾರಲಿಂಗ ದಲ್ಲಿಯ ಗುರುಲಿಂಗ (ಅದಪ. ೫–೧೨) ; ಕಾಚತೊಂಡೆಯ ಬೇರು . . . ವೊಳಗದ ಬೇರಿನ ತಿಗಡು, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ . . . ನಸ್ಯಮಾಡಲು ಹದಿನಾಲ್ಕು ಬಗೆ ವೊಲನಾಗರ ವ್ಯಾಧಿ ಗುಣವಹುದು (ವಿವ್ಯವಿ. ೯೯). **ತಿಗಡೆ$_1$ :** [ಎಲೆಯಡಿಕೆ ಸುಣ್ಣದಿಂ ಪಲ್ ಕಱೆಯಪ್ಪುದು] ಅಣಿಲೆ ತಿಗಡೆಯಿಂ ಬಸಿಱೊಡೆವುದು (ಧರ್ಮಾಮೃ. ೯–೧೦೮). **ತಿಗಳು :** ಎಲವದ ಹಗಿನು, ಬೆಲ್ಲವತ್ತದ ಹಣ್ಣಿನ ತಿಗಳು . . . ಇವಂ ಸಮಾನಂಗೊಂಡು ನಸುಬಿಸಿಯಂ ಮಾಡಿ (ವಿವ್ಯವಿ. ೩೩). **ದಿಗುಡು :** "ದಿಗುಡು = ತಿಗುಡು, ಮರದ ತೋಟಿ" (ಗಂಗಾಪು. ೧೬೬).

**ತಿಗುಡು$_2$** 'ತಿಗಡೆ$_2$' ನೋ.

**ತಿಗುಡೆ** 'ತಿಗಡೆ$_2$' ನೋ.

**ತಿಗುಣ** (ನಾ). ೧. ಮೂರರಷ್ಟು ; ಮುಮ್ಮಡಿ : "ತಿಗುಣ–ತ್ರಿಗುಣ= ಮುಮ್ಮಡಿ" (ತದ್ಭಕೋ. ೧೭) : ಪೂರ್ವಪದಂ ತದ್ಭವ ಮಾದುದರ್ಕೆ . . . ತ್ರಿಗುಣ-ತಿಗುಣ (ಶಮದ. ೨೪೯ ಪ್ರಯೋ); ಹೊಗಳಲನುಪಮ ಸೈನ್ಯವಿಂತೀ ದುಗುಣವಂಥಾಸುರನ ಸೇನೆಗೆ ತಿ[ಪಾಠಾಂ. ತ್ರಿ]ಗುಣವಿದು ರಾವಣನ ಮೋಹರಕೆನುತ (ಕುವ್ಯಾವಿ. ೬–೭೧). ೨. ಮೂರುಸಲ ; ಮೂರು ಬಾರಿ : ಅಂತಿದಿರುಂ ಬಟಿಯುಂ ಪಾಸುಂ ಪೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂ ತಿಗಟ[ಪಾಠಾಂ. ತಿಡ್ಡ]ಮುಂ ಪರಿದು(ಗದಾಯು. ೬–೨೮ ವ) ; ದುಗುಣ ತಿಗುಣಂ ಪ[ಪಾಠಾಂ. ತಿ]ಱಿದು ದೆಸೆವಲಿಗೆಯ್ವ (ಅನಂಪು. ೧೪–೭ ವ). [ <ಪ್ರಾ. ತಿಉಣ./ಸಂ. ತ್ರಿಗುಣ ]

**ತಿಗುಣಂಗೊಳ್** (ಕ್ರಿ). ಮೂರುಪಾಲಷ್ಟು ಆಗು ; ಮುಮ್ಮಡಿಯಾಗು: ತಕ್ಕು ತಗುಳ್ದು ಕಾಯ್ದೊಪ್ಪದವೆ ಕೋಟ್ಕಳ ತಳ್ಕಿಱಿಯಿಂದೆ ಕೆಂಡಮಲ್ಲೊಕ್ಕಿರೆ ತೇಂತೇನಮವತಂ ಬಿಗುಣಂ ತಿಗುಣಂಗೊಳಲ್ ಪೊಗಂಬೊಕ್ಕ ಗಜಂಗಳಂ . . . ಪಿಂಗಿಪಂ (ಅನಂಪು. ೬–೧೨). [ ತಿಗುಣ + ಕೊಳ್$_1$ ]

**ತಿಗುಣಿಸು** (ಕ್ರಿ). ಮೂರರಷ್ಟು ಮಾಡು ; ತ್ರಿಗುಣಿಸು : ಸಂಗಳಿಸಿದ ಪುಣ್ಯಪ್ರಭಾವವಮಂ ತಿ[ಪಾಠಾಂ. ತ್ರಿ]ಗುಣಿಪವೋಲ್ (ಚಂದ್ರಪು. ೯–೫೩).
[ ತಿಗುಣ + – ಇಸು$_3$ ]

**ತಿಗುಣೆ** 'ತಗುಣೆ' ನೋ.

**ತಿಗುರಿ**, ತಿಗರಿ, ತಿಹುರಿ (ನಾ). ಕುಂಬಾರನ ಚಕ್ರ ; ಕುಲಾಲ ಚಕ್ರ : "ಚಕ್ರಮೆನೆ ತಿಗುರಿ" (ಮಂಗರಾ. ೧೦೩–೮) ; "ತಿಗುರಿಯೆಂದು ಕುಲಾಲ ಚಕ್ರಂ" (ಕಶಸಾ. ೩೦–೬೩೩); "ತಿಗುರಿಯೆ ಕುಲಾಲಚಕ್ರಂ" (ಕವಿಕಂ. ೨೪೯); ಅದು ತಿಗುರಿಯಂದದಿಂ ತಿರಿದುದು (ಪಂಪಭಾ. ೪–೧೦೭) ; ಕಳಕಳರವದಿಂ ಬ[ದಿ]ದಿರುಂ ಬಟಿಯುಂ ಪಾಸುಂ ಪೊಕ್ಕುಂ ತಿಗುರಿಯುಂ ಬುಗುರಿಯುಂ ಜಾತಿಯುಂ ಭೀತಿಯುಂ ಆಗೆ ಪರಿವಾಗಳ್ (ಧರ್ಮಾಮೃ. ೬–೧೦೪); ಉಂತೆ ಜಗಂಗಳಂ ತಿಗುರಿಗಂ ತರುತಿರ್ಪ ಮನೋಜನೀ ವಸಂತಂ ತಲೆದೋಱಿತು (ಚಂದ್ರಪು. ೭–೪೯) ; ಕುಂಬಾಱರ ತಿಗುರಿಯೊಳಿಟ್ಟಂಬಿನೊಳಂ ತಿರಿಪೆ (ಖಮುದ. ೨–೧೯೦) ; ಕೋಲಿಂದಾಡುವ ತಿಗುರಿಯವೋಲಂತಿರೆ (ಕಾವ್ಯಸಾ. ೧೧೦೩) ; ಅರ್ಜುನನ ತೇರಿರದೆ ತಿಱ್ಱನೆ ತಿಗುರಿಯಂತೆ ತಿರುಗಿತದನೇ ನೆಂಬೆನದ್ಭುತವನು (ಜೈಮಿಭಾ. ೧೩–೫). **ತಿಗರಿ :** ಕುಲಾಲನು ತಿಗರಿಗೆ ಮಣ್ಣು ಮಾಡಿ ಕೋಲಿನಿಂದ ತಿರುಹೆ ಮನದಲ್ಲಿ ನೆನೆದು ಕೈಯಲ್ಲಿ ಹಿಡಿದಲ್ಲಿ ಹಲವು ರೂಪಿನ ಭಾಂಡಗಳಾಗುವ ಹಾಗೆ (ಮೋಳಿಮಾ. ೧೨೦–೪೭೪ ಅರ್ಥ) ; ವೇಗದಿಂದ ತಿರುಗುವುದೊಂದು ತಿಗರಿಯ ದಂಡಿಯ ಮೇಲೆ ನಾವು ಏನನ್ನಾದರೂ ಇಟ್ಟರೆ, ಅದು ಹೊರಗೆ ಚಿಮ್ಮಲ್ಪಡುತ್ತದೆ (ಜ್ಯೋತಿಶಾ. ೫೨); ತಿಗರಿ ತಿರುಗಿಸುತ್ತ ಗಡಗಿಯನ್ನು ನಗುನಗುತ್ತ ಮೂಡಿಸುತ್ತಿದ್ದ ಮಲ್ಲಪ್ಪ ಇವನೇ ಏನು? (ರಾಜಾದೇ. ೯೪) ; ಅದನ್ನು ಕುಂಬಾರನು ತಿಗರಿಯ ಮೇಲೆ ಹಾಕಿ, ಪಾತ್ರೆಗಳನ್ನು ಮಾಡಿ ಆವಿಗೆಯೊಳಗೆ ಸುಡುತ್ತಾನೆ (ಮುಂಬಯಿ. ೧–೯). **ತಿಹುರಿ :** ಭರದಿ ತೆಱಂದಿರಿವಾ ತಿಹುರಿಯ ಮೇಲಿರದಿಟ್ಟು ಕುಂಬಱಗೋಲಾ ಪರಿಯೆಸೆ ಗಜವೆಡೆಯಾದಶ್ವನ ಮೇಲೆ ಪಿರಿದೊಪ್ಪಿದನು ವಾಹಕನು (ಶ್ರೀಪಾಲ. ೧–೧೨).
[ದೇ.॥ ತಮಿ. ತಿಕಿರಿ; ತುಳು. ತಗೊರಿ]

**ತಿಗುರಿಕ್ಕು** (ಕ್ರಿ). ಪರಿಮಳದ್ರವ್ಯವನ್ನು ಲೇಪಿಸು ; ಪರಿಮಳವಸ್ತುವನ್ನು ತೀಡು : ಗಂಧಕತ್ತುರಿಯಿಂದೆ ತಿಗುರಿಕ್ಕಿ ಪಾವುಡೆಯಿಂದೊರಸಿದರು ಸೌಖ್ಯದಲಿ (ಪೋಹಚ. ೨೬–೩); ತಿಗುರಿಕ್ಕಿ ಭೂಷಣಗೆಯ್ಯಲೆಳಸೆ (ಪಂಕಾರಾ. ೧–೨೧–೩೦) ; ಮುದದಿ ಕುಂಕುಮರಸವ ಹದಮಾಡಿ ಹಸ್ತದೊಳ್ಪಟ್ಟಲಂ ಪಿಡಿದು ಬೇಗ ಪದ ಮಸ್ತಕಾದಿ ಸಂಹನನದೊಳ್ತಿಗುರಿಕ್ಕಿ ಮದವಳಿಗರಂ ಮಾಡಿ (ಸಿದ್ಧಕಾ. ೧೧–೧೧). [ ತಿಗುರು$_2$ (<ತಿವಿರ್$_2$) + ಇಕ್ಕು ]

**ತಿಗುರಿಡು** (ಕ್ರಿ). = ತಿಗುರಿಕ್ಕು : ಪರಿಮಳಿಪ ಕುಂಕುಮಂದ ತಿಗುರಿಟ್ಟ ಮಾಂಗಲ್ಯ ವಿರಚನೆ (ರೇವಣ. ೯೫–೩೦).
[ ತಿಗುರು$_2$ (<ತಿವಿರ್$_2$) + ಇಡು$_1$ ]

**ತಿಗುರಿದಿರುಗಿಸು** (ಕ್ರಿ). ಕುಂಬಾರನ ಚಕ್ರವನ್ನು ತಿರುಗಿಸುವಂತೆ ತಿರುಗಿಸು : ವಿಲಯಾನಿಲನ ಯಿಮ್ಮಡಿಗೆ ಪೆರ್ಚಿ ಮೊರೆದೆದ್ದು ಸುತ್ತಿ ವಿಯತ್ತಳವ ತಿಗುರಿದಿರುಗಿಸುತೆ ತಾರಾಳಿಯುದುರೆ (ನವಮೋ. ೬–೬).
[ ತಿಗುರಿ + ತಿರುಗಿಸು ]

**ತಿಗುರಿದಿರುಪು** (ಕ್ರಿ). = ತಿಗುರಿದಿರುಗಿಸು : ಅನಂತಾಖ್ಯಮೆಂದು ಭೂಮಿಯಂ ತಿಗುರಿದಿರುಪಿಯುಂ (ಜಗವಿ. ೯–೫೩ ವ).
[ ತಿಗುರಿ + ತಿರುಪು$_1$ (<ತಿರಿಪು$_1$) ]

**ತಿಗುರಿಸು** (ಕ್ರಿ). ೧. (ಸುಗಂಧದ್ರವ್ಯವನ್ನು) ಪೂಸು,– ಅನುಲೇಪಿಸು,– ಹಚ್ಚು : ಗೋರೋಚನಾದಿ ಗಂಧಂಗಳಿನಾ ಪೊಗರೊಗುವರಲ್ದ ಪೊಸಮಲ್ಲಿಗೆ ಸೌಸವಮುಳ್ಳ ತನುಗೆ ಮಿಗೆ ತಿಗುರಿಸಿದರ್ (ವಿಷ್ಣುಪು. ೫-೮-೫೭). ೨. (ಸುಗಂಧದ್ರವ್ಯವನ್ನು) ಪೂಸುವಂತೆ ಮಾಡು,– ಹಚ್ಚುವಂತೆ ಮಾಡು : ಅವನ ಕರಾಬ್ಜದ ಪರಿಮಳವನು ನಿನ್ನ ಜವಳಿ ಮೊಲೆಗಳ ಮಧ್ಯದಲ್ಲಿ ತವೆ ತಿಗುರಿಸಿಕೊಂಡು (ಕಂಸವಿ. ೬-೧೩೪).

[ ತಿಗುರು$_2$ (< ತಿಮಿರ್$_2$) + – ಇಸು$_3$ ]

**ತಿಗುರು$_1$** 'ತಿಮಿರ್$_1$' ನೋ.

**ತಿಗುರು$_2$** 'ತಿಮಿರ್$_2$' ನೋ.

**ತಿಗುರೇಚಿಸು** (ಕ್ರಿ). (ಸುಗಂಧದ್ರವ್ಯವನ್ನು) ಪೂಸು,–ಲೇಪಿಸು : ಮುಸೆಗಣೆಯ ಬತ್ತಳಿಕೆ ತಿಗು[ಪಾಠಾಂ.ಮಿ]ರೇಚಿಸಿದ ಮೈ ಕತ್ತುರಿಯ ತಿಲಕದ ನೊಸಲಿನಾತನ ನೋಡು ಗರುಡಿಯ ಜಾಣ ದ್ರೋಣನನು (ಕುಮಾವ್ಯಾಭೀ. ೩-೮). [ ತಿಗುರು$_2$ (< ತಿಮಿರ್$_2$) + ಏಚಿಸು ]

**ತಿಗುಳ, ತಿಗಡ$_1$, ತಿಗಳ** (ನಾ). ತಮಿಳು ಮಾತನಾಡುವವನು ; ಅರವ : "ತಿಗುಳ ದ್ರಾವಿಡನಕ್ಕು" (ಮಂಗರಾ. ೧೧೨-೭) ; "ತಿಗುಳನೆನೆ ದ್ರವಿಡ" (ಕಶರ. ೪೬) ; ತಳಕಾಡಂ ಕೊಂಡ ಗಂಡಂ ತಿಗುಳರ ಪಡೆಯಂ ಕೂಡೆ ಬೆಂಕೊಂಡ ಗಂಡಂ (ಎಕ. XII, ಗುಬ್ಬಿ. ೩೪-೧೪ : 1134) ; ಕಾವೇರಿಯ ಕಾಲನಾ ತಿಗುಳ[ಪಾಠಾಂ. ಟ]ನೇಂ ಕಡಗೊಂಡನೊ ಬಡ್ಡಿಗೊಂಡನೋ (ಶಮುದ. ಮ. ೧೭೮ ಪ್ರಯೋ): ಕನಡಿಗಳಿಗೆ ಗ ೧೦ ತಿಗುಳರು ತೆರುವ ಗ ೬೫ (ಎಕ. XV, ಬೇಲೂರು. ೨೪೮-೭೦; 1278); ನಿರುಪಮ ವೀರರೊದಗಿತು ತಿಗುಳ ರಾವುತರು (ಕುಮಾವ್ಯಾಭೀ. ೪-೬೫) ; ನಗೆಮೊಗದರಸಗೆ ಕೈಮುಗಿದೊಲಿದನು ತಿಗುಳರರಸನೊಂದು ಕಡೆಗೆ (ಭರಜ. ೨೨-೧೪) ; ಕತ್ತಲೆಮನೆಯ ಹೊಕ್ಕುಚಿಯದ ತಿಗುಳಗೆ ಮತ್ತೆ ಕೊಡಾ ವೀಳೆಯವನು (ನಾಗಕು. ೧೬-೨೦); ಕಾಳಕೂಟದ ವಿಷವು ಚೇಳು ನಂಬಿದ ಹಗೆಯು ಹಾಳೂರ ಚುಚಿ ನಸುಗುನ್ನಿ ತಿಗುಳರ ಗಾಳಿ ಬೇಡೆಂದ (ಸರ್ವಜ್ಞ. ೧೩೮೫). **ತಿಗಡ$_1$** : ಎಲೆದೋಟಗಳನ್ನು ಬಹುಶಃ ತಿಗಡರೇ ಮಾಡುತ್ತಾರೆ (ಮುಂಬಯಿ. ೫-೧೯೪). **ತಿಗಳ** : ಬಟಕಳದೊಳಗೆ ಮುಂಡವಳಿಯ ಗ್ರಾಮದ[ತಿಗ]ಳ ನಾಗಮನೆಯ ಪಾಮುನ ಉಪಾಧ್ಯಾಯರ ಮಗ (ಕಇ. I, ೫೮-೮ : 1446) ; ತಿಗಳರುಡುಗೆಯುಟ್ಟು ಸೊಗಸು ಚೆಪ್ಪಗಳಿಟ್ಟು ಅಗಿಲು ಚಂದನ ಗಂಧ ಧರಿಸಿ . . . ಸೊಗಸುದೋರಿ ನಗುತ ಬಂದಳು ರಾಜನಾಸ್ಥಾನಕೆ (ಸೌಂದಕಾ. ೩-೨೫).

**ತಿಗುಳಮಾರಿ**=ತಮಿಳರಿಗೆ ಮೃತ್ಯುದೇವತೆಯಂತಿರುವವನು; ಇಜುವ ಬೆಡಂಗ ಸತ್ಯಾಶ್ರಯನ ಒಂದು ಬಿರುದು : ತಿಗುಟ(ಳ)ಮಾರಿ ಶ್ರೀಮತ್ ಸತ್ಯಾಶ್ರಯದೇವ(ಂ) (ಎಇ. XVI, ೭೪-೪ : 1007).

[ ದೇ.॥ ತಮಿ. ತಿಕಳ ; ತೆಲು. ತಿಗುಳ ]

**ತಿಗುಳನಾಡು** (ನಾ). ತಮಿಳುದೇಶ : ತಿಗುಳನಾಡ ಸೆಟಿಯಂ ತಾನೊಂದಿದತಿದುಃಖದೊಳೆ ಬಂದು ನಿಲಲಿನ್ನರಿದೆಂದು (ಧರ್ಮಾಮೃ. ೧-೧೬೭) ; ತೆಲುಗಾಣೆಯ ತೇರಬೀದಿ ತಿಗುಳನಾಡು ತಿಳಿದೆಡೆಯಾಡುವ ದಾರಿ (ಕುರಾಸಾಂ. ೫-೪೭). [ ತಿಗುಳ + ನಾಡು ]

**ತಿಗುಳಾಣ್ಯ, ತಿಗಳಾಣ್ಯ** (ನಾ). ತಮಿಳುನಾಡು,—ದೇಶ : ಅಗಲ ದಾರ್ಯಾಖಂಡದೊಳಗುಳ್ಳ ನೃಪರೊಳು ತಿಗುಳಾಣ್ಯದರಸನ ನೋಡು (ಭರಜ. ೫೩-೧೧೫) ; ಸಂಭ್ರಮದಿ ತಿಗುಳಾಣ್ಯದಿಂ ಬಂದ ವೀರೇಶನೆಂಬವರಿಗೊಲಿದು ಅಂಬಕವನಿತ್ತಾ ತ್ರಿಯಂಬಕ ಸಿದ್ಧೇಶ ಶರಣಾಗು (ಮುಡಿಕಾ. IV, ೧೦೧೫ ಸಿದ್ಧೇಶ್ವರ ತ್ರಿವಿಧಿ). **ತಿಗಳಾಣ್ಯ**: ಚತುರ್ದಿಕ್ಕು ಐವತ್ತಾರು ದೇಶದಲ್ಲೂ ಹೆರೋಗಟಾ ಮಾರೋಪೇಟೆ ತಿಗಳಾಂಣ್ಯಾ ಮಗಳಾಂಣ್ಯಲ್ಲಿ ನೆಟ್ಟ ಕಲ್ಲು ಬಿಟ್ಟ ಬಸವಿ (ಎಕ. XVI, ಗುಬ್ಬಿ. ೭೩-೬೫ ; ಸು. 1672). 'ತೆಲುಗಾಣೆಯ' ಪರಾ. [ < ತಿಗುಳ ]

**ತಿಗುಳಿ** (ನಾ). ಒಂದು ಬಗೆಯ ಸೀರೆ : ದಂಡಾವಳಿಯ ಚಾಪಗಂಟಿಯು ಬೊಂಬೆಗಣ್ಣ ಚಿತ್ರಾವಳಿಯು ಸರಹುವ್ವು ಪೊಪ್ಪುಳಿಯು ತಿಗುಳಿ ರಾಗಾವಳಿಯು . . . ನೇತ್ರಾವಳಿಯು ಮುಖ್ಯ ನಾನಾವಿಧದ ಸೀರೆಗಳ (ನವಮೋ. ೧೭-೬೦). [ ? ]

**ತಿಗುಳಿತ್ತಿ, ತಿಗಳಿತ್ತಿ** (ನಾ). ತಮಿಳರವಳು; ಅರವ ಹೆಂಗಸು: ತಿಗುಳಿತ್ತಿಯರು . . . ಆಲಿಂಗನ ಮೊದಲಾದ ರತಿಯಲ್ಲಿ ಬಂಧಂಗಳಲ್ಲಿಯು ಪ್ರೀತಿಯುಳ್ಳವರು (ಸೌಗಂಧಿ. ೪೯೫-೧೮). **ತಿಗಳಿತ್ತಿ**: ತಿಗಳಿತ್ತಿ ಬಾಯಿ ಕೆಣಕಬೇಡ, ಬಗುಳೋ ನಾಯಿ ಬಡಿಯಬೇಡ (ಗಾದ).

[ ತಿಗುಳ + – ಇತ್ತಿ ]

**ತಿಗುಳು** (ನಾ). ತಮಿಳರ ಮಾತು ; ತಮಿಳು ಭಾಷೆ ; ನಾಗರ ಕಂನಡ ತಿಗುಳಾರ್ಯ್ಯವನೋದಿಸುವ ಬಾಲಶಿಕ್ಷೆ ಉಪಾಧ್ಯರ ಜೀವಿತಕ್ಕೆ ೧ಕ್ಕೆ ಗದ್ಯಾಣಂ ಆಱು (ಎಕ. III, ತಿರುಮ. ೩೭-೩೪; 1290) ; ಆದು ತಿಗುಳಿನೊಳು ಪುಳಿಚ್ಚಾತ ಬದನೆಗಾಯೆ ದು ಪೆಸರನೊಲವಿಂ ಕರೆವುದು (ಸೂಪಶಾ. ೪-೧೫); ಪಾರಸಿಯಾಂಧ್ರ ಮರಹಾಟ ಕರ್ಣಾಟ ಹಳೆಗನ್ನಡ ತಾನಲ್ಲ ತಿಗುಳು ಸಕ್ಕಜ ನಾಗರದ ಲಿಪಿಯು ಈ ನರರ ಲಿಖಿತದೊಳಗೊಂದಕ್ಕೆ ಸಮನಿಸದು (ಚೋರಬ. ೩-೨೯). [ ತಿಗುಳ + – ಉ$_4$ ]

**ತಿಗ್ಮ** (ಗು). ೧. ಉಷ್ಣವಾದ; ಬಿಸಿಯಾದ; ತೀಕ್ಷ್ಣ; ಪ್ರಖರ: 'ತಿಗ್ಮಕರ' ಪರಾ. ೨. ಹರಿತವಾದ; ನಿಶಿತವಾದ; ಚೂಪಾದ: 'ತಿಗ್ಮಾರಿ' ಪರಾ. ೩. ಉಗ್ರವಾದ ; ಕ್ರೂರವಾದ. (ನಾ). ೪. ಉಷ್ಣತೆ : "ತೀವ್ರಂ, ತಿಗ್ಮಂ, ಖರಂ . . . ಪಟು–ಈ ೭ ಉಷ್ಣರಶ್ಮಿ" (ಹಲಾಯು. ೮-೪೧). ೫. ಸೂರ್ಯ. [ ಸಂ. ]

**ತಿಗ್ಮಕರ** (ನಾ). ೧. ಉಷ್ಣವಾದ ಕಿರಣ. ೨. ಉಷ್ಣವಾದ ಕಿರಣಗಳನ್ನುಳ್ಳವನು; ಪ್ರಖರಕಿರಣ ; ಸೂರ್ಯ : ತಿಗ್ಮಕರನುದಯದೊಳ್ ಪುತ್ರನಂ ಪೆತ್ತಳ್ (ಆದಿಪು. ೭-೩೬) ; ಅಶೇಷವುಂ ಬೆಳಗೆ ತಿಗ್ಮಕರಂ ದೆಸೆಗಾಣದಿರ್ಪ ಕೌಶಿಕನಯನಂಗಳಂ . . . ಏಕೆಯೊ ಮಾಡಿದನಬ್ಜವಿಷರಂ (ಪಂರಾಮಾ. ೧-೩೦). [ ತಿಗ್ಮ + ಕರ$_3$ ]

**ತಿಗ್ಮತೆ** (ನಾ). ೧. ಉಷ್ಣತೆ; ಪ್ರಖರತೆ: ಚಂಡಕರದ್ಯುತಿ ಪುಗದು ಪೊಕ್ಕೊಡಂ ತಿಗ್ಮತೆಯಂ ಬಿಡುವುದದು ಮತ್ಪ್ರತಾಪದಿನಲ್ತೆ (ಚಂದ್ರಪು. ೫-೭೨). ೨. ಹರಿತವಾಗಿರುವಿಕೆ ; ಮೊನಚಾಗಿರುವಿಕೆ. ೩. ಕ್ರೂರತೆ.

[ ಸಂ. ತಿಗ್ಮತಾ ]

**ತಿಗ್ಮಪ್ರಭೆ** (ನಾ). ಪ್ರಖರವಾದ ಕಾಂತಿ ; ತೀಕ್ಷ್ಣವಾದ ಪ್ರಕಾಶ,– ಹೊಳಪು : ಅಭಿಷೇಕವೃಷ್ಟಿಸೂಚಕಮುಭಯಪ್ರತಿಸೂರ್ಯಬಿಂಬಮೊಗೆದುವು ತಿಗ್ಮಪ್ರಭೆ ಪಾರ್ಶ್ವದೊಳೆಸೆದಿರ್ದುವು ಶುಭಾಸನಂ ಸಿಂಹಪೀಠದೆರಡುಂ ಕೆಲದೊಳ್ (ಮಲ್ಲಿಪು. ೧೨-೧೧೨). [ ತಿಗ್ಮ + ಪ್ರಭೆ ]

**ತಿಗ್ಮಮರೀಚಿ** (ನಾ). ೧. ತೀಕ್ಷ್ಣವಾದ ಪ್ರಭೆ. ೨.=ತಿಗ್ಮಕರ ೨ : ಕುಮುದವನಲರ್ಚಿ ಹಿಮರುಚಿಗೆ ಮಹೋತ್ಸವಮಿತ್ತುದಬ್ಜಮಂ ಕೊರಗಿಸಿ ತಿಗ್ಮಮರೀಚಿಯನದು ಮುಸುಳಿಸಿತು (ರಾಜಶೇ. ೯-೨೦).

[ ತಿಗ್ಮ + ಮರೀಚಿ ]

**ತಿಗ್ಮರುಕ್ಕಾಂತಿ** (ನಾ). ಸೂರ್ಯನ ಬೆಳಕು,–ಪ್ರಭೆ : ಆ ತಿಗ್ಮರುಕ್ಕಾಂತಿ ತೀವಿದುದೆತ್ತಲ್ ಬಹುತೇಜದಿಂ (ವಿಷ್ಣುಪು. ೮-೮೪).

[ ಸಂ. (ತಿಗ್ಮರುಚ್ + ಕಾಂತಿ) ]

**ತಿಗ್ಮರುಚ್ಮಾಲಿ** (ನಾ). ಉಷ್ಣವಾದ ಕಿರಣಗಳ ಮಾಲೆಯುಳ್ಳವನು ; ಸೂರ್ಯ : ಅನುಂ ಕಾಯೆನೆಂದಾದವೆ ಕರುಣಿಸಿದಂತೆಯ್ದೆ ಸಂಕೋಚಿಸಿ ತ್ರೊಯ್ಯನೆ ಸುತ್ತಂ ಸೂಸಿದೀಶಾನನ ಜಡೆಗಳವೊಲ್ಕಾಯ್ದು ಪೊನ್ನೀರ್ಗ ವಿಲ್ಗೆಂಪಿನ ಪೆಂಪಂ ಸಿಂಪಿಸುತ್ತಿರ್ದ ಹಿಮರುಚಿಗಳಂ ತಿಗ್ಮರುಚ್ಮಾಲಿಬಿಂಬಂ (ಕಾದಂಊ. ೩೭೪). [ ಸಂ. ತಿಗ್ಮರುಚ್ಮಾಲಿನ್ ]

**ತಿಗ್ಮರುಚಿ** (ನಾ).=ತಿಗ್ಮಕರ ೨: ಉದಯಗಿರಿಶೇಖರನಾದ ತಿಗ್ಮರುಚಿಮರೀಚಿ ನಿಕುರುಂಬಚುಂಬಿತಾಂಭೋಜವನಲಕ್ಷ್ಮಿಯೊಡನೆ ಲಬ್ಧಪ್ರಬೋಧೆಯಾಗೆ (ಸುಕುಮಾ. ೯-೧೧೫ ವ). [ ತಿಗ್ಮ + ರುಚಿ ]

**ತಿಗ್ಮರೋಚಿ** (ನಾ). = ತಿಗ್ಮಕರ ೨ : ಇಭ್ಯಕುಲಾಂಬರ ತಿಗ್ಮರೋಚಿಯಂ ತನಯುನನಂದೆ ಪೆತ್ತವೊಲದೇನನುರಾಗಮನಪ್ಪುಕೆಯ್ದಳೊ (ಸುಕುಮಾ. ೧೦-೪). [ ತಿಗ್ಮ + ರೋಚಿ ]

**ತಿಗ್ಮಾಂಶು** (ನಾ). = ತಿಗ್ಮಕರ ೨ : "ತರಣಿ . . . ತಿಗ್ಮಾಂಶು ಮಾರ್ತಾಂಡ ನಕ್ಕುಂ" (ಮಂಗರಾ. ೧೧-೧) ; ಪ್ರತಾಪನಿಲಯಂ ತಿಗ್ಮಾಂಶುವಿಂ ಸತ್ಕಲಾ ಚತುರಂ ಚಂದ್ರುನಿನಾದಪಂ ನಿನಗೆ ನೇತ್ರಾನಂದನಂ ನಂದನಂ (ಪಂರಾಮಾ. ೩-೯೧). [ ತಿಗ್ಮ + ಅಂಶು ]

**ತಿಗ್ಮಾರಿ** (ನಾ). ತೀಕ್ಷ್ಣವಾದ ಚಕ್ರವನ್ನುಳ್ಳವನು; ವಿಷ್ಣು : ಪುರುಷೋತ್ತ ಮಂಗೆ ಜಗದಾತ್ಮಕಂಗೆ ತಿಗ್ಮಾರಿಗೆ ನಮಿಸುವೆಂ (ವಿಷ್ಣುಪು. ೫-೧೭೫).

[ ಸಂ. ತಿಗ್ಮಾರಿನ್ ]

**ತಿಚುಕ** (ನಾ). ಒಂದು ಬಗೆಯ ಹಕ್ಕಿ : ಚಿಲಿಮಿಲಿಗ ಕೆಂಬೂತ ತಿಚುಕ ಮರಕುಟಕ ಕಬ್ಬಕ್ಕಿಗಳು ಮುಂತಾದ ಪ್ರಾಣಿಗಳನುರಿದಗ್ನಿ ದಹಿಸಿತು (ತುರಂಗ. ೧೭-೩೭).' ಕೀಚಕ್ಕಿ' ಪರಾ. [ ? ]

**ತಿಚೆ** (ನಾ). ಮೂರು ಋಕ್ಕುಗಳು : ಕೊಡೆ ಗುಡಿ ತೋರಣಂ . . . ತಿಚೆ ಮಂಗಳಗೀತನಾದಮೆಲ್ಲೆಡೆಗಳೊಳಲ್ಲಿಗಲ್ಲಿಗಧಿಕಂ ಪಡೆದತ್ತು ಜನಾನು ರಾಗಮಂ (ಕಾವ್ಯಾವ. ೭೩೨). [ <ಸಂ. ತೃಚ ]

**ತಿಜಣೆಯೂರ್** (ನಾ). ಒಂದು ಊರಿನ ಹೆಸರು : ಕನ್ನಳ್ಳಿಯ ರಾಜಿಗ ದೊಳ್ × × ಚ್ಚನ್ ಕವಿತ್ತೂರನ್ ಪಸುವಳಿ ಧನುವೆಟ್ಟಿ ಕೊನ್ದು ಬಿಟ್ಟಾರ್ ಅವರ್ಗ್ಗೆ ಕೊಟ್ಟೊದು ತಿಜಣೆಯೂರ ನೀಡು (ಎಕ. IX(s), ಹೊಸಕೋ. ೧೭೯-೪ ; ಸು. 900). [ ತಿಜಣ್$_8$ + ಊರ್ ]

**ತಿಜೂರಿ** 'ತಿಜೋರಿ' ನೋ.

**ತಿಜೂರಿವರ್ಗ** (ನಾ). ಶ್ರೀಮಂತರ ವರ್ಗ ; ಧನಿಕರ ಪಂಗಡ : ತಿಜೂರಿ ವರ್ಗವಿರುವ ತನಕ ಮಜೂರಿಯ ದುಃಖ ತಪ್ಪಿದ್ದಲ್ಲ (ಸಮಜೀ. ೯೮೫).

[ ತಿಜೂರಿ (<ತಿಜೋರಿ) + ವರ್ಗ ]

**ತಿಜೋರಿ, ತಿಜೂರಿ** (ನಾ). ೧. ಬೆಳ್ಳಿ, ಬಂಗಾರ, ಹಣ ಮೊದಲಾದ ಅಮೂಲ್ಯ ವಸ್ತುಗಳನ್ನಿಡುವ ಭದ್ರವಾದ ಕಬ್ಬಿಣದ ಪೆಟ್ಟಿಗೆ,-ಬೀರು : ಎಲ್ಲವನು ಎಣಿಸಿಟ್ಟ ಬೆಳ್ಳಿಯ ತಿಜೋರಿ (ನಲಪು. ೭೫-೪) ; ಈ ವಾರದೊಳಗಾಗಿ ರಕಮು ಬಡ್ಡಿ ಸಹಿತ ನನ್ನ ತಿಜೋರಿ ಸೇರಬೇಕು (ಹೊಸಬಿ. ೫೧) ; ಗುಮಾಸ್ತ ಅವರ ಎದುರಲ್ಲೇ ಇದ್ದ ದಪ್ಪಬಾಗಿಲಿನ ಭದ್ರಬೀಗದ ತಿಜೋರಿಯ ಬಾಗಿಲನ್ನು ತೆಗೆದ (ರಕ್ತರೂ. ೧೧೭) ; ನಾವು ಮುತ್ತು ರತ್ನಗಳನ್ನು ತಿಜೋರಿಯಲ್ಲಿ ಇಡುತ್ತಿದ್ದಂತೆ ಆಗ ಚಹದ ಪುಡಿಕೆಗಳನ್ನು ಭದ್ರವಾಗಿ ಇಡುತ್ತಿದ್ದರಂತೆ ! (ಪತ್ರಿಕಾ. ೧೩). **ತಿಜೂರಿ:** ೧. ತಿಜೂರಿಯೊಳಗಿನವು ಬೆಳ್ಳಿ ಬಂಗಾರ ಎಲ್ಲಾ ಒಯ್ದು ನಿಮ್ಮ ರಂಭಾಗೆ ಕೊಡಿರಿ (ಇತಿಶ್ರೀ. ೬೯). ೨. ಭಂಡಾರ ; ಬೊಕ್ಕಸ ; ಖಜಾನೆ: ಸರಕಾರದ ತಿಜೂರಿಯನ್ನು ತುಂಬಲು ಮತ್ತೆ ಬೇರೆ ಕಂದಾಯವನ್ನು ಕೊಡಬೇಕೋ (ಸಮಜೀ. ೩೩೭).

[ ←ಹಿಂ. ಮರಾ. ತಿಜೋರೀ. / ಇಂ. Treasury ]

**ತಿಟಿತಿಟಿ, ತಿಟಿಮಿಟಿ** (ನಾ). (ಉಕ) ಬಹಳ ಬಿಗಿಯಾದುದು ; ಹತ್ತೆ ಯಾದುದು : ಮಟಮಟ ಮಧ್ಯಾಹ್ನ ತಿಟಿತಿಟಿ ಕುಪ್ಪಸ (ಗರತಿ. ೬೪). **ತಿಟಿಮಿಟಿ:** ಗುಲಾಬಿಬಣ್ಣದ ಜರದ ಕಡ್ಡಿಯ ರವಕೆ ತಿಟಿಮಿಟಿಯಾಗಿ ಅಂಟಿಕೊಂಡಿದ್ದರಿಂದ (ಮತ್ತಮ. ೧೪) ; ಹೂವಿನ ಟೊಪ್ಪಿಗೆಯನ್ನು ಹಾಕಿ ಕೊಂಡು ತಿಟಿಮಿಟಿಯಾದ ಚಲ್ಲಣ ಧರಿಸಿದ ಹುಸೇನಿಯು . . . ಒಮ್ಮೆ ಗಟ್ಟಿಯಾಗಿ ಚೀಕರಿಸಿದನು (ರಂಗರೋ. ೧೪೦). [ ? ]

**ತಿಟಿಮಿಟಿ** 'ತಿಟಿತಿಟಿ' ನೋ.

**ತಿಟುವಟ** (ನಾ).ವಹಿವಾಟು (?) : ತೀರಿಲ್ಲ ತಿಟುವಟವಿಲ್ಲ ಜಂಭ ಮಾತ್ರ ತೊಂಬೇ ಅಷ್ಟು (ಗಾದ). [ ? ]

**ತಿಟ್ಟ$_1$** 'ತಿಟ್ಟು$_3$' ನೋ.

**ತಿಟ್ಟ$_2$** (ನಾ). ೧. ಕುಂಚದಿಂದ ಬರೆದ ಚಿತ್ರ,-ನಕ್ಷೆ,-ಭಾವಚಿತ್ರ : "ತಿಟ್ಟಮನೆ ತೀಡುವುದು" (ಕವಿಕಂ. ೨೩೧) ; ತದೀಯ ಸಿತಕೇತು ಪಟಂ ಬರೆದಿಟ್ಟ ತಿಟ್ಟದೊಪ್ಪುವ ಪಟದಂತೆ ನಿಶ್ಚಳಿತಮಾದುದು ವೇಗ ಮರುತ್ಪ್ರ ಯೋಗದಿಂ (ಶಾಂತಿಪು. ೪-೬೦) ; ತಿಟ್ಟವ ಲಕ್ಕಿಸುವುದು ಲೆಕ್ಕಣಿಕೆಯಲ್ಲವೆ ಆ ತಿಟ್ಟ ಲೆಕ್ಕಣಿಕೆಯ ಲಕ್ಕಿಸಬಹುದೇ (ಮೋಳಿಮಾ. ೧೨೭-೪೯೪) ; ಇದು ನವಯೌವನರಸಚಿತ್ರದ ತಿಟ್ಟಂ . . . ಎಂಬಂದದಿನೆಸೆದುದು ನಿಸದಮವಳ ಕೊಡಗೂಸುತನಂ (ವರ್ಧಪು. ೯-೨೦) ; ಭಾರತಿ ಮನದಟಿಸ್ತಿಯಿಂ ಬರೆದ ತಿಟ್ಟಮೆನಲ್ ಪಟಚಿತ್ರವೊಂದು ಚಿತ್ರತೆವಡೆದಿರ್ದುದು (ಕುಸುಮಾ. ೧೨-೭೭); ಬಳಿಕಂಗೋದ್ಭವನಾ ತಿಟ್ಟಮುನತಿಚತುರುಂ ಬಿನ್ನಣಿಸುತೆ ಬರೆದಂ (ಜಯಂಕಾ. ೩-೧೩) ; ಪಟ್ಟಣವಾಸಿಗರೂರುಗರೊಡನೊಂದು ಬಟ್ಟೆಯೊಳಗೆ ಹೋಗುವಾಗ ಸಟ್ವಾಟವಾಡುತ ಹೋಹಂತೆ ಪೋಹದ ತಿಟ್ಟವಿಹುದು (ಭರತೇ. ೫-೧೦೦). ೨. ಪಡಿಯಚ್ಚಿನ ಗೊಂಬೆ, - ಪುತ್ತಳಿ, - ಸಾಲಭಂಜಿಕೆ: ಮೃತ್ತಿಕೆಯ ತಿಟ್ಟದಿಂದ ಮಯಣದ ಕರುವಿಟ್ಟು ಆ ಘಟವ ಲಕ್ಕಿಸಲಿಕ್ಕಾಗಿ . . . ಮಧ್ಯದಲ್ಲಿ ನಿಂದ ತಿಟ್ಟದಂತೆ (ಮೋಳಿಮಾ. ೨೮೩-೫೫) ; ತಳಿರ್ಗಯ್ಯೊಳರರೆ ರಂಜಿಸುವ ಪೂಚೆಂಡಿನಿಂ ಸಿಂಗರಕ್ಕಿಟ್ಟ ತಿಟ್ಟವೊ ಯಿದೆನಿಸಿ (ಪದ್ಮರಾ. ೫-೪೨). [ ದೇ.॥ ತೆಲು. ತಿಟ್ಟ ]

**ತಿಟ್ಟ$_3$** (ನಾ). ೧. ನಿಯಮ ; ಕಟ್ಟಳೆ ; ನಿಬಂಧನೆ ; ಕಟ್ಟುಪಾಡು : ಈ ಬೀದಿಗೀತನಿಟ್ಟುದೆ ತಿಟ್ಟಂ (ಚಕವಿ. ೬-೧೨೫). ೨. ದೃಢನಿಶ್ಚಯ ; ದೃಢ ನಿರ್ಧಾರ : ನಿಮ್ಮನುಭವ ನಿಮ್ಮ ತಿಟ್ಟವೆಂಬುದು ಪರಬೊಮ್ಮವ ತುಡುಕಿ ತೂಗುತಿದೆ (ಭರತೇ. ೭೦-೫೯) ; ಕಟ್ಟದಿರೊಲು ಕಣ್ಗೆಸೆಯಲವನ ನೋಡಿ ತಿಟ್ಟವ ನೆನೆದು ತಾನಿಂತು (ನಾಗಕು. ೩೨-೧೧೧). ೩. ಏರ್ಪಾಡು; ವ್ಯವಸ್ಥೆ ; ಅಚ್ಚುಕಟ್ಟು ; ಓರಣ : ನಿಷ್ಕಾವಿಧಿಗೆ ತಿಟ್ಟವಾಗಿಟ್ಟ ದಾರಿ (ಪದ್ಮರಾ. ೬-೮೫) ; ನಿಮ್ಮ ತಂಗಿಯದೇನ ಮಾಡಿದಳಿನಿತೆಲ್ಲ ನಮ್ಮ ಸೋದರನ ತಿಟ್ಟಗಳು ಹವ್ಮನಾಡಿದಿರಿ ಸಾಕೆಂದು ರಾಣಿಯರಾಡಿ ತವ್ವೊ ಳಿಷ್ಟರ್ತಿ ಮಾಡಿದರು (ಭರತೇ. ೩೭-೪೫). ೪. ಹಂಚಿಕೆ ; ಉಪಾಯ ; ತಂತ್ರ : ಖಳರೆನಿಸುವಾ ಹುಲಿಯ ಭೃತ್ಯರು ಒಳಗೆ ತಾವೊಡಗೂಡಿ ಬಂದಾಗಳೆ ನರಿಯ ಕೆಡಿಸುವರೆ ತಿಟ್ಟವನೊಡ್ಡಿದರು (ತಿಮ್ಮಶಾಂ. ೪-೨೫). 'ದಿಟ್ಟ$_2$' ಪರಾ. [ ದೇ.॥ ತಮಿ. ಮಲ. ತಿಟ್ಟ ]

**ತಿಟ್ಟನೆ** (ಅ). ರಭಸವಾಗಿ; ವೇಗವಾಗಿ: "ತಿಟ್ಟನೆ ಬಟ್ಟನೆಯೆಂಬಿವಟಿೞೊಳ್ ಭ್ರಮಾರ್ಥಂ" (ಶಮುದ. ೩೦೭) ; ಘೋರಸಂಸಾರಮಹೋಗ್ರಾರಣ್ಯದೊಳ್ ತಿಟ್ಟನೆ ತಿರಿದು ಕರಂ ಸೇದೆಗೆಟ್ಟಿರ್ದುರ (ಸುಕುಮಾ. ೧೨-೩) ; ಅಟ್ಟುಂಬುದಕ್ಕೆ ನೆಲಹೊಲನ ಕಾಣದೆ ತಿಟ್ಟನೆ ತಿರುಗಿ (ಮೋಳಿಮಾ. ೦೪೧-೭೭೯) ; ಮರುದ್ವಿ ಮಾನಪ್ರಕರಂ ತಿಟ್ಟನೆ ತಿರಿಯೆ (ಜಗವಿ. ೧೨-೪೫) ; ದೂರಿಸುತೆ ವ್ಯವಹಾರ ದಿಂದೆ ತಿಟ್ಟನೆ ತಿರುಗಿ (ಪಿಂಡೋರ. ಹ. ೫೦೪-೦೯) ; ಸುರಗಿರಿಯ ಬಿಲ್ಲಾಗಿ ಮಾಡಿ ನೆಲನಂ ತಾಳಿದುರಗನಂ ತಿರುವಾಗಿ ಬಲಿದು ಕಮಲಾಕ್ಷನಂ ಶರವಾಗಿ ತೊಟ್ಟು ತಿಟ್ಟನೆ ತಿರುಗುವಾ ಪುರವನಿಸುವಂದು ಸಂಧಾನಿಸಿ (ಸೌಂದಪು. ೬-೩೦). 'ತಿಜ್ಜನೆ' ಪರಾ. [ ? + - ಅನ್ಕೆ ]

**ತಿಟ್ಟಮಿಡು** 'ತಿಟ್ಟವಿಡು' ನೋ.

**ತಿಟ್ಟವಡು** (ಕ್ರಿ). ಓರಣವಾಗು; ಅಚ್ಚುಕಟ್ಟಾಗು : ಬಟ್ಟ ಹೊಂಬರಿವಾಣ ದಂಚಿನೊಳಗೆ ಸಾಲುಬಟ್ಟಲು ಕೆಲವು ಬಟ್ಟಲೊಳು ಇಟ್ಟ ಮಾಣಿಕದ ಸೋಟಿಗೆಗಳೆಸೆಯೆ ತಿಟ್ಟವಟ್ಟು ತಿಂತಿಣಿಯೊಳೊಪ್ಪಿದನು (ಭರತೇ. ೪-೬೩).

[ ತಿಟ್ಟ$_3$ + ಪಡು$_1$ ]

ತಿಟ್ಟವಣೆ (ನಾ). ಹಂಚಿಕೆ ; ಉಪಾಯ (?) : ಧೃಷ್ಟದನುಜರ ಕೊಲುವರೆ ಉದು [ಒಂದು] ತಿಟ್ಟವಣೆಯು ಮನದೊಳಗೆ ಯೋಚಿಸುತ ಕಮಲಭವಾ (ದೇವೀಪು. ೧-೬೫). [ ತಿಟ್ಟು₃ + -ಅಣೆ₄ ]

ತಿಟ್ಟವಿಕ್ಕು (ಕ್ರಿ). ಚಿತ್ರಬರೆ ; ಚಿತ್ರಿಸು : ತಿಟ್ಟವಿಕ್ಕಲು ತಿದ್ದಲರಿದೆನಿಸುವ ವೈಯ ಕಟ್ಟಾಯವೇಱುವ ಪ್ರಾಯ ಕಟ್ಟಾಣಿ ಹೆಂಗಳೆಸೆದರು (ಭರಚ. ೧೨-೫೯). [ ತಿಟ್ಟ₂ + ಇಕ್ಕು ]

ತಿಟ್ಟವಿಡು, ತಿಟ್ಟಮಿಡು (ಕ್ರಿ). ೧. = ತಿಟ್ಟವಿಕ್ಕು : “ ತಿಟ್ಟವಿಡು– (ತಿಟ್ಟ + ಇಡು) ಚಿತ್ರಪ್ರಾರಂಭೇ ” (ಶಮುಧಾ) ; ಅಪಗತ ಪಾಕಸತ್ತ್ವಮುಪಸಾರಿತಮಾರುತಮಾಗಿ ತಿಟ್ಟವಿಟ್ಟುಪವನದಂತುಟಾದುದು ಬನಂ ಜನಚಂದ್ರ ತಪಃಪ್ರಭಾವದಿಂ (ಶಾಂತಿಪು. ೧೧-೧೦೭) ; ನಗೆಮೊಗವನು ತಿಟ್ಟವಿಡುತಿರಲಾ ಕಾವ ನಗುತ ತನ್ನಿಕ್ಷುಚಾಪವನು ಬಿಗೆ ಜೇವಡೆಗೆಯ್ದು ಬಗೆಗೆ ಲೆಕ್ಕಣಿಕೆಯು ಬೆಗಡುಗೊಂಡೀಡಾಡಿದಳು (ಅಂಜಚ. ೬-೧೧) ; ಪಳಿಕಿನ ವಿಶಾಲಪಟ್ಟದ ಮೇಲೆ ನೂಲುವೊಯ್ದು ತಿಟ್ಟವಿಟ್ಟಕ್ಕೆಗೆಯ್ದು (ಪುಷ್ಪಪು. ೧೪-೨೯ ವ) ; ಚಿಟ್ಟೆ ನೀ ನೆನವೊಳೆನ್ನೆಳವೆಯನಳುಂಬಂ ತಿಟ್ಟವಿಡೆ ಕಣ್ಮಲೆವುದೆಮ್ಮಯ ಕುಟುಂಬಂ (ಗಿರಿವಿಂ. ೧-೮). ೨. ಬೊಂಬೆಯನ್ನು ತಯಾರಿಸು ; ಗೊಂಬೆಯನ್ನು ಮಾಡು : ನೆಟ್ಟನೆ ಮೂಱು ಲೋಕದೊಳುಳ್ಳ ರೂಪಿನಿಂ ತಿಟ್ಟವಿಟ್ಟನೊ ಬಿದಿಯೆನಿಸಿ ಕಟ್ಟಾಣಿಮುತ್ತು ವಿಶಾಲಲೋಚನೆಯೆಂಬ ಪಟ್ಟದರಾಣಿಯಾ ನೃಪಗೆ (ನಾಗಕು. ೨-೪೮) ; ತಿಟ್ಟವಿಟ್ಟ ಪಾಪೆಯೆನೆ ಮೂಗುವಟ್ಟಿರ್ಪರ್ (ರಾಮಾಶ್ವ. ೧೧-೧೯). ೩. ಚಿತ್ರದಂತೆ ಮೂಡು,–ಸ್ಪಷ್ಟವಾಗು : ಬಳಿಕ ಮಾಯಾಂಗನೆಯ ಮನಸಿಗೆ ತಿಳಿವು ತಿಣ್ಣನೆ ತಿಟ್ಟವಿಟ್ಟತು (ಪ್ರಭುಲೀ. ೬-೮). ತಿಟ್ಟಮಿಡು : ೧. ಬರೆಯಲೆಂದು ಬಟ್ಟಗೆವಲಗೆಯಂ ತರಿಸಿ ತಿಟ್ಟಮಿಟ್ಟು ಬರೆವನ್ನೆಗಂ(ಆದಿಪು. ೪-೬೩ವ); ಇದರಂದಕ್ಕಬ್ಬಜಂ ಕೂಡ ಬಟ್ಟಗೆಯಂ ತಿಟ್ಟಮಿಡಲ್ಕಿದೇನ್ನೆರೆವ (ಎಕ. V, ಅರಕ. ೯೯-೮ ; 1079) ; ಬಟ್ಟಗೆವಲಗೆಯೊಳಾಗಳೆ ದಿಟ್ಟಿಗೆ ನೇರ್ಪಟ್ಟು ತೋಱೆ ನೆಟ್ಟನೆ ಭೂಪಂ ತಿಟ್ಟಮಿಡಲ್ ಬಗೆವುದು . . . ಅಂತು ಸಂಸಾರವೈಚಿತ್ರ್ಯಂ ತನ್ನ ಚಿತ್ತಭಿತ್ತಿಯೊಳ್ ತಿಟ್ಟಮಿಟ್ಟಂತು ನಿಲೆ (ಪಾರ್ಶ್ವಪು. ೪-೭೦ ವ). [ ತಿಟ್ಟ₂ + ಇಡು₁ ]

ತಿಟ್ಟು₁ (ಕ್ರಿ). ೧. ತೆಗಳು ; ಬಯ್ಯು ; ನಿಂದಿಸು : “ ತಿಟ್ಟು–ಭರ್ತ್ಸನೇ (ಬಯ್ಯು), ಉನ್ನತಭೂಮೌ ಚ ” (ಶಮುಧಾ) ; ಸಂತರ್ ತಮ್ಮಂ ಖಳರ್ ಮನವಂದಂತು ತಿಟ್ಟೆ ಮೂಗುವಟ್ಟಂತಿರ್ಪರ್ (ನೀತಿಮಂ. I, ೧೮೫) ; ಘಟ್ಟಗರಾಗಿಹ ತಿಟ್ಟದ ರಿಪುಗಳ ದಟ್ಟಿಸಿ ಕೊಲ್ಲುವ ಪಟ್ಟದ ಕತ್ತಿಯನೊಪ್ಪಿಸಿ ಕೊಳ್ಳೀಗ (ಹಮಚ. ೪೬) ; ಆ ಬ್ರಹ್ಮನ ತಿಟ್ಟೆ . . . ಸಿಗ್ಗಿನೊಳೆ ಸಾವತ್ತಲ್ಪನಂ ಮಾಡುವಂ (ಸಂಸಪ. ೦೫-೦೩) ; ನನ್ನ ತಿಟ್ಟಿ ನುಡಿದ ನುಡಿಯಾಗಳುಂ ನನ್ನ ಯೆರ್ದೆಯೊಳಗೆ ನೆಲೆಗೊಂಡಿರ್ಪುದು (ಸೌನಂದ. ೭-೧೮). ೨. ಕಡೆಗಣಿಸು ; ಕೀಳುಮಾಡು ; ಮೀರು : ಘನತೇಜಂ ತಿಟ್ಟೆ ತಿಗ್ಮಾಂಶುವಂ (ಪುಷ್ಪಪು. ೪-೮೦).

[ದೇ.II ತಮಿ. ತೆಲು. ತಿಟ್ಟು ]

ತಿಟ್ಟು₂ (ನಾ). ಬಯ್ಗುಳು ; ತೆಗಳಿಕೆ ; ನಿಂದೆ : “ ತಿಟ್ಟು–ಬೈಗುಳ್ ” (ಶಮದ. ಪರಿ. ೨) : “ ತಿಟ್ಟೆನೆ ಬೈಗುಳೊಳ್ ” (ಕರ್ಣಾನಿ. ೨೯) ; “ ತಿಟ್ಟೆನೆ ತಾಂ ಬೈಗುಳಕ್ಕು ” (ಕವಿಕಂ. ೦೩೨). [ < ತಿಟ್ಟು₁./ತಮಿ. ತಿಟ್ಟ ]

ತಿಟ್ಟು₃, ಚಿಟ್ಟೆ₃, ತಿಂಟೆ, ತಿಂಡೆ, ತಿಟ್ಟ₁, ತಿಟ್ಟೆ, ತೀಂಟ್ಕೆ, ದಿಂಟೆ, ದಿಂಡೆ₁, ದಿಡ್ಡೆ₁, ದೀಂಟ, ದೀಂಟೆ (ನಾ). ೧. ಎತ್ತರವಾದ ಪ್ರದೇಶ ; ತೆವರು ; ದಿಬ್ಬ ; ದಿಣ್ಣೆ ; ಉನ್ನತಭೂಮಿ : ಸರಸಿಯ ನಡುವಣ ತಿಟ್ಟಿನ ಕಳಹಂಸನ ಕೆಲದೊಳ್ ಬೆಳೆದೊಱಗಿದ ಬೆಳದಾವರೆಯಂತೆ (ಜಯಕಾ. ೧೧-೩೫) ; ಭರದಿಂದಾ ಕೊಂಡದ ತಿಟ್ಟಿಗೆ ಬಂದು (ನೇಮಿಸಂ. ೮-೦೦೧); ಅವನ ಕೈಕಾಲು ಬಿಗಿದು ಕಟ್ಟಿ ಹರಿವ ಹೊಳೆಯೊಳ್ ಬಿಡಿಸಲ್ದಾ ದೈವವಶದಿನವನುರುಳ್ದೊಂದು ಮಳಲ ತಿಟ್ಟಿಗೆ ಸೇರಲು (ಸಮನಕಾ. ೫೦-೦೫); ಸೈನ್ಯ ಬರುವ ದಾರಿಯಲ್ಲಿ ಪಳ್ಳ ತಿಟ್ಟುಗಳ ಸರಿಮಾಡಿ (ಸೌಗಂಧಿ. ೫೦-೦೫) ; ತೊಟ್ಟಿಲ ಹೊತ್ಕೊಂಡು ತೌರ ಬಣ್ಣ ಉಟ್ಕೊಂಡು . . . ತೌರೂರ ತಿಟ್ಟತ್ತಿ ನಿಂದು ನೋಡ್ಯಾಳೋ (ಹಳ್ಳಿಪ. ೯೨). ೨. ದಡ ; ತೀರ ; ಅಂಚು : ನದಿಯೆರಡು ತಿಟ್ಟೊರಸಿರಲ್ (ಭೃರವೇ. ೩-೦೯೩). ೩. ಸಮೂಹ ; ರಾಶಿ : ಮೇಲ್ಕಟ್ಟುಗಳ ತಿಟ್ಟುಗಳ ಬಹು ಚಿತ್ರಪತ್ರದಿಂದ (ಷಡಲ. ೭-೭). ಚಿಟ್ಟೆ₃ : ೪. (ಎತ್ತರವಾದ) ಜಗಲಿ,–ಕಟ್ಟೆ : ಊಟವಾದ ಮೇಲೆ ಒಬ್ಬೊಬ್ಬರಾಗಿ ಅಗ್ರಹಾರದ ಬ್ರಾಹ್ಮಣರು ಮನೆಯ ಚಿಟ್ಟೆಯ ಮೇಲೆ ನೆರೆಯುತ್ತಾರೆ (ಸಂಸ್ಕಾರ. ೩) : ನೀವು ಹಾಳೆಗಳನ್ನೆಲ್ಲಾ ಕಟ್ಟಿ, ಕೊಟ್ಟಿಗೆ ಚಿಟ್ಟೆಯ ಮೇಲೆ ಸೇರಿಸಿಡಿ (ದಾಳಿವೃ. ೦೭೩). ತಿಂಟೆ : ೧. ಪರಿವ ಬಱವೊನಲ್ಗಳುಮಂ ಮಣಲ ತಿಂಟೆಯ ನುಣ್ಪುಮಂ ದರಿಯ ನೆಟಿಲ ತಣ್ಪುಮಂ . . . ಅರ್ತಿಯೊಳ್ ನೋಡುತ್ತಂ ಬರೆ (ಬಂಹರಿ. ೩-೮ ವ) ; ಆ ನೀರ ತಡಿಯೊಳು ಸಣ್ಣವುಪ್ಪ ಮಣಲ ತಿಂಟೆಯೊಳಂದಡಿವಜ್ಜೆಯಂ ಕಂಡಿದು ವಿಪರೀತಮೆಂದು (ಬಂಹರಿ. ೩-೮ ವ) ; ಮಳಲ ತಿಂಟೆಯೊಳು ನಳಿನಮಂದಿರದೊಳು ಪೊಳೆವ ಲತಾಭವನದೊಳು (ಅಂಜಚ. ೦೫-೦೧). ೪. ಜೂದಿನ ತಿಂ[ಪಾಠಾಂ. ತೀಂ] ಟೆಯೆ ನೆಲಸಿರ್ಪ ತಾಣಂ (ಪಾರ್ಶ್ವಪು. ೩-೭೧) ; ಜೂಜಿನ ತಿಂಟೆಗೆ ಪೋಗಿ ಪ್ರಧಾನರಪ್ಪ ನಾನಾ ಮಂಡಳಿಕ ಸಾಮಂತರೊಡನೆ ಜೂಜಾಡಿ (ಪುಣ್ಯಾಸ್ರ. ೭-೫೬ ವ). ತಿಂಡೆ : ೧. ಸೀಯಮಂಗಲದ ಪೊಲ ಮೇರೆ ಇಸಾನದ ದೆಸ ನಡುಗಲ್ಲೆ ಅಮ್ಬಲ ತಿಣ್ಡೆ ಯಿನ್ತೆಂಕಾಯ್ ವೇರೊಟ್ಟೆಯೆ (ಎಕ. X(8), ಚಿಕ್ಕಬ. ೦೦೭-೬೬ ; 850). ತಿಟ್ಟ₁ : ೧. ಬೆಟ್ಟದಿಂದುಬ್ಬಿ ಭೂಮಿಗೆ ಸಿಂಧುನದಿ ಬೀಳ್ವ ತಿಟ್ಟದೊಳ್ಕಳಗೆ ಪ್ರತಿಮೆಯು ಬಿಟ್ಟ ಜಡೆಯ ಮೇಲೆ ಬೀಳ್ವ ಗಂಗಾಂಬುವನಿಟ್ಟಿಸಿದನು ನರನಾಥ (ಭರಚ. ೩೬-೪೮). ೫. ಎತ್ತರವಾದ ಪೀಠ,–ಆಸನ : ನಟ್ಟನಡುವಗಲ ಮಾರ್ತಾಂಡನೇಱಿದ ರಥದ ತಿಟ್ಟವೋ ಭೂಮಂಡಲದ ನಡುವೆ ಪೊಳೆವ ಪೊಂಬೆಟ್ಟವೋ (ಚಬಪು. ೩೭-೩೩). ೬. ಮೇಲುಭಾಗ : ಮುಂಗಾರ ಸಿಡಿಲ ಮೊಟಗಂ ಕೇಳ್ದು ಸುರುಂಟು ವಣಂಬೆಯ ತಿಟ್ಟದಂತೆ (ರಾಮಾಶ್ವ. ೩೫-೫). ತಿಟ್ಟೆ : ೧. ಈ ಚತುಸ್ಸೀಮೆಯ ಪೊಳಗೆ ಉಳಂಥಾ ಬೆಟ್ಟು ತಿಟ್ಟೆ ಹಕ್ಕಲು ಹಡಲು ಹೊಲನು . . . ನಡದು ಬಹುದು (ಸೌಇಇ. IX-ii, ೪೧೭-೯ ; 1377) ; ನುಣ್ಮಳಲ್ದಿಟ್ಟೆ ಪೊಱವಾಱ ಬಟ್ಟ ಪೊಱವಾಱಗಳ ಲಲನೆಯರ್ . . . ಬರುತಿರ್ದರು (ಚಬಪು. ೩೭-೪೨) ; ಹೊನಲೊಳು ಪರಿತಂದು ಮಳಲ ತಿಟ್ಟೆಯೊಳು ನಿಂದಾಗ (ಜ್ಞಾನಚ. ೦೭-೭). ೪. ಜೂದಿನ ತಿಟ್ಟೆಯಲ್ಲಿ ಬೆಲೆವೆಣ್ಗಳ ಕೇರಿಗಳಲ್ಲಿ ನಿಚ್ಚಲುಂ . . . ಸಮಾಚರಿಸುತ್ತ ಮಿರ್ದನತ್ಯಾದರದಿಂದೆನಲ್ ಖಳನವಂ (ಪುಣ್ಯಾಸ್ರ. ೪-೩೭) ; ನಿನಗೆ ದಣುವಾಗುತ್ತಿದೆ. ಇಲ್ಲಿ ತಿಟ್ಟೆಯ ಮೇಲೆ ಕುಳಿತುಕೊ (ನಿಷ್ಕಾಮ. ೮೭). ೭. (?) : ಕೋಗಿಲೆಯೆ ಬಾಗಿ [ಲ್ಗಾ]ಪಿನರಂತೆ ಪುಗಿಲ್ಪುಗಿಲೆನೆ ಉಯ್ಯಲು ಹೆಬ್ಬೆಯಾಡುವರಂತೆ ತಿಟ್ಟೆಯೊಳಾಡೆ ಹಿಂದೋಳಂ ಮಹದಾನಿಯ ಕೀರ್ತಿಯಂತೆಲ್ಲಾ ದೆಸೆಯೊಳ ಮೆಸೆಯೆ ಬಂದ ಸುಗ್ಗಿಯೊಳ್ (ಬಂಹರಿ. ೫-೫ ವ). ತೀಂಟ್ಕೆ : ೪. ಮೇಲಿನ‘ತಿಂಟೆ’ ಉಲ್ಲೇಖದ ‘ಪಾರ್ಶ್ವಪು’ ಪ್ರಯೋಗದ ಪಾಠಾಂತರವನ್ನು ನೋಡಿ. ದಿಂಟೆ : ೧. ದಿಂಟೆಗಳೊಳಂ ದೇಗುಲಂಗಳೊಳಂ ವಿಹಾರಂಗಳೊಳಂ ಇರ್ದು (ವಡ್ಡಾರಾ. ೧೨೩-೨೫): ತೊಱೆಯೆರಡುತಡಿಯ ಬಿಳಿಯ ಮಳಲ ದಿಂಟೆಯಂತೆ (ಧರ್ಮಾಮೃ. ೦೩-೧೮೭) ; ನುಣ್ಮಣಲ ದಿಂಟೆಯೊಳು ತಳಿರ ಹಸೆಯಂ ಹಾಸಿ (ಚನ್ನರ. ೮೨-೩) ; ಇಂತೀರೋಡು ಗೋಂಟಿಯ ಸನಿಯದ ದಿಂಟೆಯೊಳ್ (ಚಿಕವಿ. ೫-೩೪). ದಿಂಡೆ₁ : ೧. ಪಡುವಯ್ನಡದು . . . ತೆಂಕೈ ದಿಣ್ಡೆಯಿನ್ ಪಡುವಯ್ನೋಡಿ ಪೋದ ಒಟ್ಟೆ (ಎಕ. X(8), ಚಿಕ್ಕಬ. ೬೭-೦೮ ; ಸು. 850); ಖಂಡೆಯವನು ಜಡಿದು

. . . ತುಂಡಿಸಿ ಬೇತಾಳಶಿರವ ದಿಂಡೆಯು ಮರಕೆ ಕಟ್ಟಲು(ಹಮುಜ. ೩-೭೬). ೪. ಬೀದಿವೀದಿಗಳೊಳ್ ಜೂಜಿನ ದಿಂಡೆಯೊಳ್ . . . ಅವಿನೀತರ್ ನೀತಿಗೆಟ್ಟಾಡುವರ್ (ಸುಕುಮಾ. ೨-೭). **ದಿಡ್ಡೆ$_1$ :** ೧. ಬಂದೊಂದು ದಿಡ್ಡೆಯನೇಱಿ ತಾವೆಲ್ಲರು ನಿಂದು ನೋಡಿದರು ಪಾಳಯವ (ನಾಗಕು. ೧೬-೩೨). **ದೀಂಟು :** ೧. ದೀಂಟು [ಪಾಠಾಂ. ಟೆ] ಗುಳಿಗಳನಱಿಯು ದೇಳುತ್ತೆ ಬೀಳುತ್ತೆ . . . ಅಂಬಿಕಾಭವನಮಂ ಸಾರ್ದನು (ಜೈಮಿಭಾ. ೩೦-೫೪). **ದೀಂಟೆ :** ೧. ತೊಱೆಯು ಮಣಲ ದೀಂಟೆಗಳ ನುಣ್ಪುಮಂ (ಬಂಹರಿ. ೨-೪೨ ವ). ೪. ಕೇಸರಿಯ ದಾಡೆಯು ಜೂದಿನ ದೀಂಟೆ [ಪಾಠಾಂ. ದಿಂಟೆ] ಪೀಲಿಯಂ ಪೊದೆಸಿದ ಪಂದರಾಳಿಯಲರಾನೆಯು ಮುತ್ತಿನ ರಾಸಿ (ಅರ್ಧನೇ. ೩-೫೦).

[ ದೇ.॥ ತಮಿ. ತಿಟ್ಟು, ತಿಟ್ಟೈ ; ಮಲ. ತಿಟ್ಟು, ತಿಟ್ಟ ; ತುಳು. ತಿಟ್ಟೆ, ಚಿಟ್ಟೆ ; ತೆಲು. ತಿಟ್ಟ ]

**ತಿಟ್ಟುವಾಯ್** (ನಾ). ತೆಗಳುವ ಬಾಯಿ ; ಪರದೂಷಣೆಯಲ್ಲಿ ಆಸಕ್ತಿಯುಳ್ಳ ಬಾಯಿ : ತಿಟ್ಟುವಾಯು ಅಶ್ಲೀಲನೂ, ಕಯ್ಗಿನಿಸಿನ ಶಸ್ತ್ರಾಡಂಬರನೂ—ಆವುದಕ್ಕೂ ಹೇಸದ ಪಿಶಾಚವತಾರನೇ ಆಗಿರು (ಬಟ್ಟಅ. ೧೭೫-೩). [ ತಿಟ್ಟು$_1$ + ಬಾಯ್ ]

**ತಿಟ್ಟೆ** 'ತಿಟ್ಟು$_3$' ನೋ.

**ತಿಡ್ಡ** 'ತಿಗಟ' ನೋ.

**ತಿಣ** (ನಾ). ಹುಲ್ಲು ; ತೃಣ : "ತೃಣ—ತಿಣ" (ಶಮದ. ೨೬೮ಪ್ರಯೋ) : "ತಿಣವೆಂದು ತೃಣ" (ಕಶಸಾ. ೩೦-೬೬೮) ; "ತೃಣ—ತಿಣ" (ಶಬ್ದಾನು. ೧೫೮ ಪ್ರಯೋ). 'ತಿಣಂಗಿಱು' ಪರಾ. [ <ಸಂ. ತೃಣ ]

**ತಿಣಂಗಿಱು** (ಕ್ರಿ). ಹುಲ್ಲಿಗೆ ಸಮವಾಗಿ ಭಾವಿಸು ; ಅತಿ ನಿಕೃಷ್ಟವಾಗಿ ಕಾಣು : ನಿಸದದಿಂದವನಂ ತಿಣಂಗೆತ್ತು ಬಿಟ್ಟು (ಪಾಸೋಪು. ೯-೧೬೯).

[ ತಿಣ + ಗಿಱು ]

**ತಿಣಕು** 'ತಿಣುಕು$_1$' ನೋ.

**ತಿಣಾತುರ್ಯ** (ನಾ). ಆಹಾರದಲ್ಲಿ ಆಸಕ್ತಿ (?) : ಹಸಿವು ತೃಷೆವೆಸನಂಗಳಲ್ಲಿ ಅಲಕ್ಷಿತನಾಗಿ ಪಾಶಬದ್ಧವಿರಹಿತನಾಗಿ ಗುಣಾವಗುಣವ ವಿಚಾರಿಸದೆ ತಿಣಾತುರ್ಯ ಮುಕ್ತಾತುರ್ಯ ಸ್ವಯಿಶ್ವಾತುರ್ಯವೆಂಬ ವುಂಬರಾವಿನಲ್ಲಿ ಬದ್ಧನಾಗದೆ ಸ್ತುತಿಗೆ ನಿಲ್ಲದೆ ನಿಂದೆಗೋಡದೆ ಉಭಯವನೇನೆಂದು ಅಱಿಯದೆ (ಪದಗೋ. ೧೦೨-೦೨೫). [ ? ]

**ತಿಣಿ$_1$** (ಕ್ರಿ). ೧. ಒಟ್ಟಿಗೆ ಸೇರು ; ಒಂದುಗೂಡು ; ಬೆರೆ ; ಗುಂಪುಗೂಡು : "ತಿಣಿ—ಸಂಕೀರ್ಣೇ (ಬೆರಸು)" (ಶಮಧಾ). ೨. ಚಿಂತೆಗೊಳಗಾಗು ; ಕಳವಳಿಸು (?) : ದಣಂದಣರನೆ ಪೊಯ್ವ ಮಹಾನಿಸ್ಸಾಣದ ಬಲ್ದನಿಯಂ ಕೇಳ್ದು ಎಣಿಸಿದರೆರ್ದೆಗೆಟ್ಟರ್ ಭಯಯುಕ್ತರ್ ಪೆಣನಾದರ್ ಪೆಂಪಳಿದರ್ ಜಗುಳ್ದರ್ ತಿಣಿದರ್ ತಕ್ಕಳಿದರ್ ಪರಪೃಥಿವೀಪಾಲಕಬಲದವರು (ಜಯುಕಾ. ೭-೧). ೩. (?) : ತಣಿಪಾಶೆ ಮಾತನಾಡುತ ಮಣಿವರು ಮೊದಲೊಳಗೆ ಬರಲು ವೈದ್ಯನ ಜನರುಂ ತಿಣಿವರು . . . ತಣಿಯಾಗಲು ನೋಡರವನ ಧನಭಯದಿಂದಂ (ನೀತಿಸಾ. ೮೪೨).

[ ದೇ.॥ ತಮಿ. ತಿಣಿ, ತಿಳೈ ]

**ತಿಣಿ$_2$** (ನಾ). ಗುಂಪು ; ಸಮೂಹ : ಬಡವ ಬಲ್ಲಿದ ಬುಧ ಯಾಚಕರೆನ್ನದೆ ತಡಗ ತಡಗ ಜವುಳಿಗಳ ತೊಡವು ಪೆಟ್ಟಿಗೆ ಪೆಟ್ಟಿಗೆಗಳ ತಿಣಿಯಿತ್ತು ಒಡನೆ ಶರ್ಕರೆಯ ತಿದ್ದಿಸಿದ (ಜ್ಞಾನಜ. ೩೭-೦೩೮). 'ತಿಂತಿಣಿ$_1$' ಪರಾ.

[ <ತಿಣಿ$_1$ ]

**ತಿಣಿಕಿಸು** (ಕ್ರಿ). ಒದ್ದಾಡುವಂತೆ ಮಾಡು ; ಕಷ್ಟಪಡಿಸು ; ಬಳಲಿಸು : ಟಿಪ್ಪುವನು ತಿಣಿಕಿಸುತ ಕಾದಾಡತೊಡಗಿದರು (ವಿಜದ. ೭೩).

[ ತಿಣಿಕು$_1$ (<ತಿಣುಕು$_1$) + – ಇಸು$_3$ ]

**ತಿಣಿಕು$_1$** 'ತಿಣುಕು$_1$' ನೋ.

**ತಿಣಿಕು$_2$** 'ತಿಣುಕು$_2$' ನೋ.

**ತಿಣಿವು** (ನಾ). (?) : ಕಾಲ್ಗಳ ಕಯ್ಗಳ ತುರಗದ ಕಾಲ್ಗಳ ತಿಣಿವುಗಳೊಳಲ್ಲಿ ಬಂಚಿಸುತಟಿಗುಂ ಗೆಲ್ಗುವೆನೆ ನೆಗಟ್ದು ಮಾರ್ಗ್ಗದೆ ಗೆಲ್ಗುವೆ ಪಿಣದಲ್ಲಿ ಕೀರ್ತ್ತಿನಾರಾಯಣನಂ (ಎಕ. II, ೧೩೩-೧೪೭ ; 982). [ ? ]

**ತಿಣುಕಾಟ** (ನಾ). ತಿಣುಕುವಿಕೆ ; ಒದ್ದಾಟ ; ಕಷ್ಟಪಡುವುದು : (*).

[ ತಿಣುಕು$_1$ + ಆಟ ]

**ತಿಣುಕಾಡು** (ಕ್ರಿ). ಬಹಳ ಕಷ್ಟಪಡು,–ಒದ್ದಾಡು : ಆಮೇಲೆ ಕರ್ಣನ ಕವಚವನ್ನು ಸೀಳಿ ಹೊಗಳುಗೊಂಡ ಸೂರ್ಯಕುಮಾರನೂ ತಿಣುಕಾಡುವಂತೆ ಬಾಣಪ್ರಯೋಗವನ್ನು ಮಾಡಿದನು (ವ್ಯಾಸಜ. ೩೯೨).

[ ತಿಣುಕು$_1$ + ಆಡು$_1$ ]

**ತಿಣುಕು$_1$, ತಿಣಕು, ತಿಣಿಕು$_1$** (ಕ್ರಿ). ೧. ಭಾರವನ್ನಾಗಲಿ, ನೋವನ್ನಾಗಲಿ ತಾಳಲಾರದೆ ಒದ್ದಾಡು,– ಆಯಾಸಪಡು ; ಮುಲುಕು : ಕಣ್ ತುಮುಟಿ ಪೆರ್ಬೆಡೆಯಿಂ ಮಣಿ ಸೂಸೆ ಬೇಸಱಿಂ ತಿಣುಕಿದನಾನಲುವ್ಮಳಿಸಿ ಶೇಷನಶೇಷ ಮಹೀವಿಭಾಗಮಂ (ಪಂಪಭಾ. ೯-೯೯) ; ತಿಣು [ಪಾಠಾಂ. ಣಿ] ಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ (ಕುವ್ಯಾಅ. ೧-೧೭) ; ಅನಿಲಜ . . . ಬೊಬ್ಬಿಱಿದು ತಿವಿದನು ತಿಣುಕಲ ಸುರೇಂದ್ರ (ತೊರರಾ. ೬-೨೭-೩೯) ; ಧರಣಿಯ ಹೊರೆಯೊಳು ತಿಣುಕುವ ಫಣಿ ಮೇಲೆ ಹಾಯಾಗಿ ಹರಿ ಮಲಗಿಹನು (ಇಂಚಾಪ. ೧೦೪-೭). ೨. ಅಪಾನವಾಯುವನ್ನು ಬಿಡು ; ಹೂಸು ; ಹುರಿಕೆಬಿಡು : "ತಿಣುಕು (ತಿಣಕು)—ಅಪಾನವಾಯೌ" (ಶಮಧಾ). **ತಿಣಕು :** ೧. ಮಲಗಿರುವ ಹಾವನ್ನು ಕೆಣಕಬೇಡ ಕಚ್ಚಿ ವಿಷ ಕಾರಿದರೆ ತಿಣಕಬೇಡ (ನಾದಲೀ. ೬೫-೧೨) ; ರಾಯರ ಹೆಂಡತಿ ಹೆತ್ತರೆ ಊರೆಲ್ಲ ತಿಣಕಬೇಕೋ ? (ಗಾದೆ). **ತಿಣಿಕು$_1$ :** ೧. ಎಲ್ಲಿ ಇಣಿಕಿದರೂ, ತಿಣಿಕಿ ನೋಡಿದರು ತನ್ನನಗಲಲೆಡೆಯಿಲ್ಲ ಎಂದರಿದು . . . ನಿಶ್ಚಿಂತ ನಿವಾಸಿಯಾಗಿದ್ದುದೇ ಶರಣನ ಸುಜ್ಞಾನ (ಮೋಳಿಮಾ. ೪ ಪ್ರಸ್ತಾವನೆ).

[ ದೇ.॥ ತುಳು. ತೀಂಕು ; ತೆಲು. ತಿನುಕು ; ಮಲ್ತೊ. ತಿಂಕ್ ]

**ತಿಣುಕು$_2$, ತಿಣಿಕು$_2$** (ನಾ). ಅತಿಕಷ್ಟ ; ತೊಂದರೆ ; ಹೆಣಗಾಟ : ಗೆಡೆವಚ್ಚುಗೊಂಡು ಪಾಂಡವರನಕಾರಣಂ ಕೆಣಕಿದೀ ಪೊಸ ಪೊಟ್ಟಿಱೊಳಾದ ಕಿಚ್ಚು ಕೌರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳ ಸಯ್ಪು ಪೋಕುಮೇ (ಪಂಪಭಾ. ೨-೮೭) ; ಜೂದಾಡಿ ಸೋಲ್ತು ನನ್ನಿಗೆ ಮೇದಿನಿಯಂ ಕೊಟ್ಟು ಪಾಂಡುನಂದನರೀಗಳ್ ಪೋದೊಡಮೇನ್ ತಿಣುಕಾಗದೆ ಪೋದುವುದೇ ನಮ್ಮ ನೃಪತಿಗವು ತವುದಲೆಯೊಳ್ (ಪಂಪಭಾ. ೭-೧೮). **ತಿಣಿಕು$_2$ :** ಉತ್ತರಭರತದೊಳಾದಾಪತ್ತಂ ನೀನಱಿಯೆಯಕ್ಕುಮನಿತುಂ ಬಲಮಂ ಮುತ್ತಿ ಚಿಲಾಕಾವರ್ತರ್ ಸುತ್ತಲುಮೋಸಾಡಿ ಪಿರಿದು ತಿಣಿಕಂ ತಂದರ್ (ಆದಿಪು. ೧೪-೭೦). [ <ತಿಣುಕು$_1$ ]

**ತಿಣುಱು** (ಕ್ರಿ). ಕಟ್ಟು ; ನಿಲ್ಲು ; ತಡೆ : ಮೂಱು ಝಾವದ ಶೂಲೆಗೆ ಹೊಟ್ಟೆ ಬಾವುದು ನಿಲಲಾಱದೆ ನಡುಗುವುದು. ಮಿಱಿದರೆ ಬೀಳುವುದು ಮೂತ್ರ ತಿಣುಱುವುದು (ಅಶ್ವವೈ. ೧೧-೨೫ ಟೀಕು) : ಕೆಡವಡೆ ಮೇಳ್ವಡಂ ಪಡುವಡಂ ಭರಣಂ ತಿಣುಱುತ್ತಮಿಪ್ಪಡಂ ಚರಣವನಾವಗಂ ಬಡಿವಡಂ ಪೆರತೆನಿತು ಶೂಲೆ ತೋಱಿತೆಂದಱಿ (ಅಶ್ವವೈ. ೧೧-೯೭).

[ ದೇ.॥ ತಮಿ. ತಿಣಱು ]

**ತಿಣ್ಣ** (ನಾ). ೧. ಒಜ್ಜೆ ; ಹೊರೆ ; ಭಾರ : "ಬಿಣ್ಪೆಂದುಂ ತಿಣ್ಣಮೆಂದುಂ ಭಾರಂ" (ಕಶಸಾ. ೨೭-೫೭೭) ; "ಭಾರಮದು ತಿಣ್ಣ ಬಿಣ್ಪುಂ" (ಕವಿಕಂ. ೨೨೫); ತೊಡೆಯ ಬಿಣ್ಪು ಪದಾಂಬುರುಹಕ್ಕೆ ತಿಣ್ಣಮೇಂ (ಪಂಪಭಾ. ೩-೪೬); ಮೇದಿನಿಯು ತಿಣ್ಣವನಿಳುಹಲೋಸುಗರ ಆಹವದೊಳರ್ಜುನನ ರಥದೊಳು

ವಾಹಕನು ತಾನಾಗಿ (ಕುವ್ಯಾಭೀ. ೩-೯೩) ; ಭೂಮಿಯ ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ (ತೊರರಾ. ೬-೨-೨೦) ; ಸಣ್ಣವನೆನಬೇಡ ಹರಿ ತನ್ನ ಪೆತ್ತವಳಣ್ಣನ ಮಡುಹಿ ಮೇದಿನಿಯ ತಿಣ್ಣವನಿಳುಹಿದ (ಮೋಹತ. ೧೨-೧೭) ; ಪೆಣ್ಣೆವದಿಂ ಪಾತಕದಿನಿತೊಂದು ತಿಣ್ಣಮಂ ಪೊಱುವೊಡೆಂದೇಂ ಬಿದಿ ಮಾಡಿದನೇ (ರಾಮಾಶ್ವ. ೧೩-೨೬). ೨. ದೊಡ್ಡದಂ ; ಸ್ಥೂಲವಾದಂದು ; ದಪ್ಪವಾದುದು ; ತೋರವಾದುದು : ಸಣ್ಣಂ ನಡು ತಿಣ್ಣಂ ಮೊಲೆ . . . ಬಣ್ಣಿಸಲರಿದಬ್ಜಜಂಗಮಾಕೆಯ ರೂಪಂ (ಕಾವ್ಯಸಾ. ೨೮೧ ಶೂದ್ರಕ) ; ತಿಣ್ಣವಾದಾನೆಸಮ್ಮದ ಹೊದಿಕೆಯಿಂ . . . ವಿಶ್ವನಾಥು ಪ್ರಸನ್ನನಾದಂ (ಪದ್ಮರಾ. ೭-೩೫). ೩. ಅಧಿಕವಾದುದು ; ಹೆಚ್ಚಾದುದು ; ಆಧಿಕ್ಯ : ಬಿಱುವಿಸಿಲುಂ ಸುಡುತಿರೆ ನೀರಡಿಕೆ ತಿಣ್ಣಮಾದತ್ತಾಗಳ್ (ಕಾದಂಪೂ. ೧೯೭) ; ನಿಮಗಂ ಪುಣ್ಣ ಬೇನೆ ತಿಣ್ಣಮದಱಿಂ ಮೇಲೆ ಕ್ಷುಧಾಪೀಡೆಯಾದುದಪ್ಪೊಡೆ ಶರೀರಮಂ ಸಂಹರಿಸಲ್ಬಾರದು (ಪಂಚತಂ. ೧೪೪-೬) ; ನಿನ್ನ ಗುರು ಹೇಳನೇ ತನ್ನ ಸುತರಳಲ ತಿಣ್ಣಮಂ (ಹಚಿಕಾ. ೮-೯) ; ಮುಚ್ಚುಮಱೆಯೇಕಣ್ಣ ತಿಣ್ಣದ ಕಿಚ್ಚುದೋಱಿದೆ ನಮಗೆ (ತೊರರಾ. ೬-೨-೩೨) ; ದುಃಖಿದ ತಿಣ್ಣವೆನ ಗಾಯಿತು (ನಿಘಾಗ. ೭-೪-೪). ೪. ತುಂಬಿದುದು ; ಪೂರ್ಣವಾದುದು ; ಮುಂದಣಕ್ಕೊಪ್ಪುವ ಪಳದಿಯ ಬಣ್ಣಂ ಸಂದಿರ್ಪುದು ಕರ್ಣಿಕೆಯದು ತಿಣ್ಣಂ (ಹಾಲಾಸ್ಯ. ೧-೧-೨೦ ರಗಳೆ). ೫. ಶ್ರೇಷ್ಠವಾದುದು ; ಹಿರಿಮೆ ; ದೊಡ್ಡತನ : ತಿಣ್ಣವೆನಿಸುವ ಭಕ್ತಿ ಕಣ್ದೆಱೆದ ಪರಿಯೊಳಿರೆ (ಕಾರಿರ. ದೇ. ೨೮೯-೨೨) ; ನೇರಿಳೆರಸದಿಂದ ತಿಣ್ಣವೆಂದೆನಿಸಿದ ನಿನ್ನಂಗರಾಗಶೇಷವನು ತಳೆದ ಆ ಗೋದೆಯ ಕೂಲದೊಳು (ಗಾಥಾಸ. ೯೮-೯೯). ೬. ಗಟ್ಟಿ ; ಬಿರುಸಾದುದು ; ದೃಢವಾದುದು : ಕೊಂಬಿಱಿಪಿದ ಮರದಿಂದಗ್ಗಳಂ ತಿಣ್ಣಮಾದಂ (ಶಮದ. ೨೪೨ ಪ್ರಯೋ). ೭. ಕಷ್ಟ ; ಕಠಿನವಾದುದು ; ಪ್ರಯಾಸಕರವಾದುದಂ : ಆಣ್ಣನಾಜ್ಞಾಭಂಗಕಿದು ತಾ ತಿಣ್ಣವೀ ದೇವಿಯರ ನುಡಿ (ತೊರರಾ. ೩-೯-೦೩) ; ಸಣ್ಣನಡುವಿನ ಚೆಲ್ವಿನತ್ತಿಗೆಯ ಪಂಗಿದಿರ್ನಡೆದು ಮನ್ಮಥಯುದ್ಧಕೆ ತಿಣ್ಣವೆನ್ನದೆ ನಿಂದಳ್ (ಭಾವಚಂ. ೬-೨೪) ; ಲಜ್ಜಿಸುವ ತಿಣ್ಣಮಂ ಬಿಡಿಸಿ . . . ಪ್ರಚ್ಛನ್ನ ಸಂಭೋಗಿಗಳ್ ಕಣ್ಗೆಸೆದರು (ಚಿಬಪು. ೧೦-೫೯) ; ಹೀಗೆ ಮೂರುವಿಧದ ಮುನಿಪಿಗಳನ್ನು ಅವರ ಯೋಗ್ಯತಾನುಸಾರವಾದ ಸಂಬಳವನ್ನು ಕೊಡುವುದು ತಿಣ್ಣವಾಗಿತ್ತು (ಮುಸುಗ. ೩೫). ೮. ಪ್ರಬಲನಾದವನು ; ಬಲಿಷ್ಠ ; ಶಕ್ತಿಸಂಪನ್ನ : ಕಣ್ಣಿತ್ತು ನುತಿಗೈದು ಕಣ್ಣ ಪಡೆದು ಮತ್ತಾ ಕಣ್ಣಿತ್ತು ಬಳಿಕದ ಪಡೆದು ಕಣ್ಣ ಮೂಗಳವ ಮುಕ್ಕಣ್ಣನಿಂ ಪಡೆದನು ತಿಣ್ಣನೀತನಿಗೆ ತೋಡಹುದೆ (ಭೈರವೇ. ೪-೭೫).

[ ದೇ.॥ ತಮಿ. ತಿಣ್ಣ ; ಮಲ. ತಿಣ್ಣ, ತಿಣ್. / ಪ್ರಾ. ತಿಣ್ಹ. / ಸಂ.ತೀಕ್ಷ್ಣ ]

**ತಿಣ್ಣಂ** (ಅ). ೧. ಹೆಚ್ಚಾಗಿ ; ಅಧಿಕವಾಗಿ ; ವಿಶೇಷವಾಗಿ : ಮುನ್ನಂ ರಘುಕುಲದಹನೋಗ್ರೇಷುವಿಂ ಕಾಯ್ದು ತಿಣ್ಣಂ ಕುದಿಗೊಂಡಟ್ಟಿತ್ತು (ಎಕ. X, ಮುಳಬಾ. ೩೪-೧೩ : ಸು. ೩೪೦) ; ಎಣ್ಣೆಯಂ ತಿಣ್ಣಮೆಱೆಯದಿರ್ (ವಡ್ಡಾರಾ. ೭೭-೬) : ನಿಜವಿಜಯಸಿಂಧುರಮುಮಂ ತಿಣ್ಣಂ ನೂಂಕಲುಮಪುಂಕಲುಂ ಬೆಸಸಿ (ಆದಿಪು. ೧೪-೯೮ ವ) ; ಪೊಱಮುಯ್ವಂತಾಗೆ ತಿಣ್ಣಂ ತೆಗೆನೆಱೆದಿಸೆ . . . ಖಚರಪತಿ ಭರಂಗೆಯ್ದು ಕೆಯ್ವೋಗದೆಚ್ಚಂ (ಶಾಂತಿಪು. ೪-೪೨) ; ಕಣ್ಣಂ ರಸನೆಯನೆರ್ದೆಯಂ ತಿಣ್ಣಂ ದಣಿಯಿಸುವ ಪಲವು ಪೂವಿಂ ಕಾಯಿಂ ಪಣ್ಣಿಂದೆಸೆವಿಮ್ಮಾವಿರೆ ಪಣ್ಣುವಿನಂ ಬಾರ್ತೆಯಿಲ್ಲದೀ ನೇಱಿಲೊಳೇಂ (ಶಬ್ದಾನು. ೬೭೪ ವ್ಯಾಖ್ಯಾ). ೨. ದಟ್ಟವಾಗಿ ; ನಿಬಿಡವಾಗಿ: ಪಡಿಗಳನಮರ್ಚಿ ಬಿಲ್ಲುಂ ಕುದುರೆಯುಂ ಕಾಲಾಳುಂ ನಾಯ್ಗಳುಮಂ ತಿಣ್ಣಮಿರಿಸಿ (ಪಂಪಭಾ. ೫-೪೭ ವ) ; ಸ್ನೇಹಾಭ್ಯಂಗಮುಸುಳ್ಳ ಮೆಯ್ಯನೆ ರಜಂ ತಿಣ್ಣಂ ತಗುಳ್ವಂತೆ (ಜೀವಸಂ. ೧೪೦-೧೮) ; ತಿಣ್ಣಮೆನಲಂಶುಪರಿಯಲ್ಪನ್ನಿಸಿದೆಳೆಸಂಜೆಗೆಂಪದಂಟರಲೆಸೆವಕ್ಷುಣ್ಣರುಚಿವಡೆದುದುಗಳೆನೆ ಪೆಣ್ಣುಗುರ್ಗಳೆವೆಸೆದುವಾಂತು ಲಾಕ್ಷಾರಸಮಂ (ಉದ್ಭಟ. ೫-೩೩). ೩. ರಭಸವಾಗಿ ; ತೀವ್ರವಾಗಿ ; ವೇಗವಾಗಿ : ಅನಿಬರುಂ ಬಾಳ್ಗಿ[ಟ್ಟು] ಮೇಲ್ವಾಯ್ವೊಡರ್ಬಿಸೆ ತಿಣ್ಣಂ ತೆಗೆದರ್ಧಚಂದ್ರಶರದಿಂ ಸೂಟ್‌ಸೂಟಿಳೆ ಚ್ಚಾಗಳ್ (ಪಂಪಭಾ. ೧೨-೧೪೫). ೪. ಸ್ಥಿರವಾಗಿ ; ಚಾಂಚಲ್ಯವಿಲ್ಲದೆ : ಚಂಚಲನಾಗದೆ ತಿಣ್ಣಂ ನಡೆವವನೆ ತಾಂ ತಪೋಧನನಕ್ಕುಂ (ಧರ್ಮಾಮೃ. ೭-೪೪) ; ಅಣ್ಣನ ಮಾತಂ ಮನದೊಳ್ ತಿಣ್ಣಂ ತಳೆದು (ಯಶೋಚ. ೧-೫೦). ೫. ಗಟ್ಟಿಯಾಗಿ ; ಬಿಗಿಯಾಗಿ ; ಭದ್ರವಾಗಿ : ಕಣ್ಣಂ ತಿಣ್ಣಂ ಮುಚ್ಚಿ ಕೊಂಡಿರ್ಪ ಕಾರಣಮಾವುದು (ಪಂಚತಂ. ೧೭೩-೧೭).

**ತಿಣ್ಣಮಾಗು** = ೧. ಭಾರವಾಗಂ: ನಿನಗೆ ನೀರ್ತೀವಿರ್ದ ಪೊಂಗಳಸವಿದು ತಿಣ್ಣಮಾಗದು (ಜೈಮಿಭಾ. ೩೪-೨). ೨. ಅತಿಶಯವಾಗು ; ಹೆಚ್ಚಾಗು : ವಿಷಮವಿಷಸದೃಶವಿಷಯಾಮಿಷಕಾಂಕ್ಷೆಯೆ ತಿಣ್ಣಮಾಗೆ ಮತಿಗೆಟ್ಟು (ಸುಕುಮಾ. ೮-೩೬) ; ಆಕೆಯ ಮೇಲೆ ಮೋಹಮುಂ ಸ್ನೇಹಮುಂ ತಿಣ್ಣಮಾಗೆ (ಧರ್ಮಾಮೃ. ೨-೧೧೨) ; ಪಸಿವು ನೀರಟ್ಕೆಯುಂ ತಿಣ್ಣಮಾಗಲ್ (ನೇಮಿಪು. ೧೩-೫೫ ವ). ೩. ಸಾಂದ್ರವಾಗು ; ನಿಬಿಡವಾಗು : ತಾಳುಂತಟ್ಟುಂ ಪೊಯ್ಕೆ ಕಡಿಖಂಡಮಾದ ಮೆಯ್ಯುಂ . . . ದೆಸೆದೆಸೆಗೆ ತಿಣ್ಣಮಾಗೆ ಸೂಸುವ ಕಣ್ಣಾಲಿಗಳುಂ (ಪಂರಾಮಾ. ೧೩-೫೪ ವ) ; ಮಂಗಳವಾಡದ ಮಹಾಶಿವಲಿಂಗ ದಂಘ್ರಿಗಳೊಳಂ . . . ನುಣ್ಣೆಸಳ್ಗಳು ತಿಣ್ಣಮಾಗಿ ತೀವಿರೆ (ಬಸರ. ೬-೮೫).

[ <ತಿಣ್ಣ ]

**ತಿಣ್ಣಂಬೆಱು** (ಕ್ರಿ). ಆಧಿಕ್ಯವನ್ನು ಹೊಂದು ; ಹೆಚ್ಚಾಗಂ : ಪೆಣ್ಣಂಚೆಯೆಱಂಕೆಯ ಪೊಯಿಲಿಂದಂ ತಿಣ್ಣಂಬೆತ್ತುಣ್ಮುವ ನೀರ್ವನಿಯಿಂ ಬಣ್ಣಂಬಡೆಯೆ . . . ಸುಳಿಗೆಲರಾ ಬನದೊಳ್ (ಉದ್ಭದೇ. ೨-೨೦).

[ ತಿಣ್ಣ + ಪೆಱು$_1$ ]

**ತಿಣ್ಣಗೆಡಿಸು** (ಕ್ರಿ). ೧. ಭಾರವನ್ನು ತಗ್ಗಿಸು ; ಹೊರೆಯಿಳಿಸಂ : ಭೂಮಿಯ ತಿಣ್ಣಗೆಡಿಸಿದನಸುರಮರ್ದನನು (ನಿಘಾಗ. ೧೧-೧-೭). ೨. ದೃಢತೆಯನ್ನು ಕೆಡಿಸು ; ಚಂಚಲಗೊಳಿಸು : ಭರದಿ ತೊಲಗಿಸಿ ಲಜ್ಜೆ ತಿಣ್ಣಗೆಡಿಸುತಮವನನುಱೆ ಕಲೆಯ ತೋಱಿಯಾಲಿಂಗಿಸುವ ಬಾಲೆಯುಂ ತರವಱಿದು ಚದುರನೊಂದುವ ತೆಱಂಗಂಡು ನಡೆಯರ್ ಮುಂದಕಲ್ಲಿಂದವು (ಚತುಪು. ೧-೭-೩೭). [ ತಿಣ್ಣಗೆಡು + – ಇಸು$_3$ ]

**ತಿಣ್ಣಗೆಡು** (ಕ್ರಿ). ೧. ಭಾರ ಕುಗ್ಗು ; ಭಾರವಿಲ್ಲದಾಗು ; ತೂಕ ಕಳೆದು ಕೊಳ್ಳು. 'ತಿಣ್ಣಗೆಡಿಸು' ಪರಾ. ೨. (ಆಲಂ) ಶಕ್ತಿಗುಂದು ; ದುರ್ಬಲವಾಗು; ಕ್ಷೀಣಿಸಂ: ಬಣ್ಣವಳಿದಮರ್ದುಣಿಸನುಳಿದು ಜಾಣ್ನುಡಿಯೊಡಹಿ ತಿಣ್ಣಗೆಟ್ಟು (ಉದ್ಭದೇ. ೪-೪೦) ; ಕಣ್ಣೀರ್ಗಳಂ ಸುರಿವುತಂ ದಂಪತಿಗಳು ಬೆಳರ್ವಣ್ಣಮೆಯ್ಯನ ನೆನೆವುತಾಲೋಚನಂಗೈದು ತಿಣ್ಣಗೆಟ್ಟಿರುವ ಸಮಯದೊಳು (ಪ್ರಭುಪು. ೩-೧೧೨). [ತಿಣ್ಣ + ಕೆಡು$_1$]

**ತಿಣ್ಣಗೊಂಬು** (ನಾ). ದಟ್ಟವಾದ ಕೊಂಬೆ : ತಿಣ್ಣಗೊಂಬಿನೊಳ್ ಬಣ್ಣವಳಿಯದ ಪಣ್ಣಂ ತಿಂದು ತಣ್ಣನೆ ತಣಿದು (ಗಿರಿಕ. ೧-೧೨೮ ವ).

[ ತಿಣ್ಣ + ಕೊಂಬು$_1$ ]

**ತಿಣ್ಣಜವ್ವನ** (ನಾ). ೧. ತುಂಬುಜವ್ವನ ; ಪೂರ್ಣಯೌವನ ; ತುಂಬಿದ ಪ್ರಾಯ : ತಿಣ್ಣಜವ್ವನದ ಚಿಂಚಿತಿಯರ ಮೆಯ್ ಕಾರ್ಬಣ್ಣದ ಚೆಲ್ವ ನೋಳ್ಪರಿಗೆ ಹುಣ್ಣಮೆಯಾಳ್ದ ತನ್ನೆಸಕವನವರೆಸಳ್ಗಣ್ಣೊಳು ಸಾರ್ಚಿ ದಂತಿಹುದು (ಮೋಹತ. ೧೯-೬೨). ೨. ತೋರವಾದ ಮೊಲೆ ; ತುಂಬು ಸ್ತನ : ಚಿತ್ರ ಪೆಣ್ಣ ಕಂಡಿನಿತು ಭ್ರಾಮಿಸಿದೆ ತಿಣ್ಣಜವ್ವನವೆತ್ತ ಕೆಳದಿ ಕೇಳ್ ನಿಮ್ಮನು ಕಣ್ಣಾಱೆ ಕಂಡರಿನ್ನೆಂತೋ (ಮೋಹತ. ೩೦-೨೪).

[ ತಿಣ್ಣ + ಜವ್ವನ ]

**ತಿಣ್ಣನೆ** (ಅ). ೧. ಚೆನ್ನಾಗಿ ; ಹೆಚ್ಚಾಗಿ ; ವಿಶೇಷವಾಗಿ ; ಅಧಿಕವಾಗಿ : ಬಳಿಕ ಮಾಯಾಂಗನೆಯ ಮನಸಿಗೆ ತಿಳಿವು ತಿಣ್ಣನೆ ತಿಟ್ಟವಿಟ್ಟತು (ಪ್ರಭುಲೀ. ೬-೮). ೨. ರಭಸವಾಗಿ ; ತ್ವರೆಯಾಗಿ ; ಕೂಡಲೆ : ಮುದದಿನುಣ್ಬರ ಬಾಯೊಳ್ ತಿಣ್ಣನೆ ಕಿರ್ಚಂ ಪುಡಿಯಂ ಮಣ್ಣಂ ಪೊಯ್ದಂತು ಮಾಡಿದ್ದೈ ದೂರ್ತಿಂದಂ (ಧರ್ಮಾಮೃ. ೯-೧೩೬) : ಉಣ್ಣದರೂರೊಳಗಣ ದೇವಿಯರಂ ನುಣ್ಣಿಸಿದಸಿಧಾರಾಪೂರ್ವಕದಿಂ ತಿಣ್ಣನೆ ಕೈಗೂಡಿಸಿ ಭೂತಮುಮಂ ಬಿರ್ದುವೊಲೆಯ್ದಿಸುವೆಂ (ಜಯನೃ. ೬-೯). ೩. ಬಿಗಿಯಾಗಿ ; ಗಟ್ಟಿಯಾಗಿ; ದೃಢವಾಗಿ : ನಿನ್ನ ಮೋಹವು ಎಂಬ ಉನ್ನತದ ಪಾಶದಲಿ ತಿಣ್ಣನೇ ಬಿಗಿದಿರ್ಪ ನುಸುಳುವರಾರು (ಸುಸಾರ. ೧೫-೩). [ ತಿಣ್ಣ + – ಅನೆ₁ ]

**ತಿಣ್ಣಮಾತು** (ನಾ). ತೀಕ್ಷ್ಣವಾದ ಮಾತು ; ಕಠೋರವಾದ ನುಡಿ ; ಉಗ್ರವಚನ : ಕಣ್ಣೊಳುಉರಿಯ ಸೂಸುತಣ್ಣನಾಡಿದ ಕಡುತಿಣ್ಣಮಾತಿಗೆ ನಸುನಗುತ (ತ್ರಿಪುಸಾಂ. ೧೨-೧೩೦). [ ತಿಣ್ಣ + ಮಾತು₁ ]

**ತಿಣ್ಣಮಿಡು** (ಕ್ರಿ). ಬಲವಾಗಿ ಹೊಡೆ : ಅವನ ವರೂಥಮನೆ ತಿಣ್ಣಮಿಟ್ಟೊಡೆ (ಪಂಪಭಾ. ೧೨-೧೮೯). [ ತಿಣ್ಣಂ + ಇಡು₁ ]

**ತಿಣ್ಣಮೊಲೆ** (ನಾ). ೧. ದೊಡ್ಡ ಮೊಲೆ ; ಪೀನಕುಚ ; ಗುರುಕುಚ : ತಿಣ್ಣಮೊಲೆಗಳ್ಪೊದಳೆ ಬೆನ್ನ ಸೋರ್ಮುಡಿಯಲೆಯೆ (ಜೈಮಿಭಾ. ೮-೧೮). ೨. ಬಿಗಿಯಾದ ಮೊಲೆ ; ಬಿಗಿಯುಂವ ಕುಚ : ತಿಣ್ಣಮೊಲೆ ಬಿಣ್ಪಡರೆ ಕಾಲ್ಮಂದಗತಿಗಲಸೆ (ಜೈಮಿಭಾ. ೧೮--೩೪). [ ತಿಣ್ಣ + ಮೊಲೆ₁ ]

**ತಿಣ್ಣಪಡೆ** (ಕ್ರಿ). ಅತಿಶಯುವನ್ನು ಹೊಂದು ; ಆಧಿಕ್ಯವನ್ನು ಪಡೆ : ತಿಣ್ಣಪಡೆದ ಪವಳದ ಪಸರಗಳಾಗ ಕಣ್ಣ ಕೊಕ್ಕರಿಸುತೊಪ್ಪಿದುವು (ಕಂನವಿ. ೬-೬೭) ; ಕಣ್ಣಿನೊಳಗೆ ಖಾನ ಕನಸಿನೊಳಗೆ ಖಾನ ಬಣ್ಣಿಸೆ ಮನದೊಳು ಖಾನ ತಿಣ್ಣಪಡೆದ ಖಾನನ ಸುದ್ದಿ ಜಪವಾಗಿ ಬಣ್ಣಗೆಟ್ಟುದು ಲೋಕವೆಲ್ಲ (ಕಂನವಿ. ೧೧-೫೪). [ ತಿಣ್ಣ + ಪಡೆ₁ ]

**ತಿಣ್ಣಬಲೆ** (ನಾ). ಮೃಗಗಳನ್ನು ಹಿಡಿಯಲು ಬಳಸುವ ಒಂದು ಬಗೆಯ ಭಾರವಾದ ಬಲೆ: ತಿಣ್ಣಬಲೆ ಜೋಡುಬಲೆ ಹೊಸೆದಿಕ್ಕಣ್ಣಿಬಲೆ ಪೊಟಿಗಳು ವಿಂಧ್ಯಕನ ಕೂಡೆ (ಸಾಳ್ವಭಾ. ೫-೧೮). [ ತಿಣ್ಣ + ಬಲೆ₁ ]

**ತಿಣ್ಣಬೆಳಗು** (ನಾ). ದಟ್ಟವಾದ ಬೆಳಕು ; ಹೆಚ್ಚಾದ ಬೆಳಕು : ಬಂದುಗೆಯ ಬಣ್ಣದ ತಿಣ್ಣಬೆಳಗುಂ ಕಣ್ಣ ಬೆಳಗುಂ ತಪ್ಪೊಳಿರ್ಪುಡಿಸೆ (ಗಿರಿಕ. ೭-೧೧ ವ). [ ತಿಣ್ಣ + ಬೆಳಗು₂ ]

**ತಿಣ್ಣಸಂಕಲೆ** (ನಾ). ೧. ಭಾರವಾದ ಸಂಕೋಲೆ ; ಹೊರೆಯಾದ ಬೇಡಿ. ೨. (ಅಲಂ) ಅತಿ ನಿರ್ಬಂಧ ; ಕಟ್ಟೊತ್ತಾಯ : ಕಣ್ಮಲೆವರೆ ಕಷ್ಟ ದೊಳ್ಪೊಡರ್ದು ಶಿಷ್ಯತೆಯಿಂ ಕಲೆಗಲ್ವ ತಿಣ್ಣಸಂಕಲೆಗೆ ಬೆಮರ್ತು ಸುಯ್ವರದೆ ! (ಸಂಸಪ. ೫-೭). [ ತಿಣ್ಣ + ಸಂಕಲೆ ]

**ತಿಣ್ಣಿ** (ನಾ). ಒಂದು ಊರಿನ ಹೆಸರು : ತೆಂಕನೋಡಿ ಕಿಟರ ತಿಂಣಿ ಪೆಣ್ಣಿಗಗಾಲನಿ ಎರಟ್ಟೆಸಾಱ್ಬಾರಿ ಭೂಮಿನ್ದ ಪೇರೊಟ್ಬಿಯ ತುಟ್ಟಲೆ ಎರಪಡಿಯೆ (ಎಕ. III, ನಂಜನ. ೧೨೨-೧೮ : ಕೃಶಾ). [ ? ]

**ತಿಣ್ಣಿತು** (ಗು). ೧. ಭಾರವಾದ. ೨. ದೊಡ್ಡದಾದ. (ನಾ). ೩. ದೊಡ್ಡದು: ತಿಣ್ಣಿತಾದುವು ಮೊಲೆ ಮುಡಿ ಪೊಱಮಾರ್ಗಳು ನುಣ್ಣಿತಾದುವು ಕದಪುಗಳು (ನಾಗಕು. ೫-೩೬). [ <ತಿಣ್ಣ ]

**ತಿಣ್ಣಿಸು, ತಿಣ್ಣೈಸು** (ಕ್ರಿ). ೧. ಹೆಚ್ಚಾಗು ; ಉಲ್ಬಣಿಸು : ಸಣ್ಣವನು ಸಲೆ ಮಕ್ಕಳಾಟದಿ ಮಣ್ಣನೊಯ್ಯೆ ರಸಾತಲಕೆ ಕಡು ತಿಣ್ಣಿಸಲ್ಕಮರರಿಗೆ ಭಯ (ಪ್ರಹ್ಲಾದ. ೧೫-೬೫). ೨. ತುಂಬು ; ವ್ಯಾಪಿಸು : ನಯನದಿ ತಿಣ್ಣಿಸಿದವಶ್ರುಗಳು (ಜರಾಮಾ. ೬೭-೩೮) ; ಕಣ್ಣು ಮನ ಕೊಂಬನಿತು ಅವನಿಯ ತಿಣ್ಣಿಸಿಹ ಬಲ (ಜರಾಮಾ. ೨೨೦-೬). **ತಿಣ್ಣೈಸು** : ೩. ದಪ್ಪವಾಗು ; ದೊಡ್ಡದಾಗು : ಗುಣವತಿಯ ತೆಳ್ವಟ್ಟ [ ತೆಳ್ವೊಟ್ಟೆ ] ನವಮಾಸಂಬರಂ ತಿಣ್ಣೈಸಿರಲ್ (ಮದೀಪು. ೩-೮). [ ತಿಣ್ಣ + – ಇಸು₃ ]

**ತಿಣ್ಣೈಸು** 'ತಿಣ್ಣಿಸು' ನೋ.

**ತಿಣ್ಪು, ತಿಂಪು** (ನಾ). ೧. ಭಾರ ; ಹೊರೆ : ಬಲ್ಮೊಲೆಯ ತಿಣ್ಪಂಗೆ ನಡು ಬಳ್ಕೆ (ರಾಮಾಶ್ವ. ೯-೧೦). ೨. ದೊಡ್ಡದಾಗಿರುವಿಕೆ ; ದೊಡ್ಡದು : ಕಡೆದು ಮಾಡಿದುವೆನಿಪ ಪೊಱಮಾಱ ತಿಣ್ಪಿನಿಂ (ಅಜಿಪು. ೪-೭) : ಬಟ್ಟ ಎರ್ದೆವೊಲೆಯೇಂ ತಿಣ್ಪೊ ಕಾಯ್ಪುವನ ಬಿಸುಪಿಗೇಂ ಬಿರ್ದಾಗಿ ತಂದಿತ್ತ ಕಟ್ಟಳೆಯ ಮೊಗೆಯೇ? (ಕಾಲೂರ. ೧೨೭-೨೭೦). ೩. ಹೆಚ್ಚಳ; ಅತಿಶಯ; ಹಿರಿಮೆ ; ಮಹತ್ವ: ದಿಟ್ಟತೆಮಳ್ವನ್ನೆಗಂ ನುಣ್ಪಂ ತಿಣ್ಪುಮನೊಳಕೊಂಡು . . . ಮಾಡಿದ ವಾಹಳಿಗಳ್ ಮನೋಹರಂ (ಶಾಂತಿಪು ೯-೧೯೩ ವ) : ಸಿಂಪಿಣಿಯ ತಣ್ಪಿನಿಂ ಪೂವಲಿಯ ತಿಣ್ಪಿನಿಂ ಮನಂಗೊಳಿಸುವ ಭವನಾಂಗಣ ದೊಳ್ (ಕಾದಂಸಂ. ೪೬೨); ಮೃಗರಾಜನ ಶಕ್ತಿತ್ರಯದ ಗುಣ್ಪುಮಂ ಬಾಹುಬಲದ ತಿಣ್ಪುಮನಱಿದಂ ಬಗೆಯೊಳ್ (ಪಂಚತಂ. ೯೬-೯) ; ಪರವೆ ಕೇಕಿಗಳ ತಾಂಡವಮಂ ನುಣ್ಬರದ ತಿಣ್ಪು ಘನಘೋಷಗಭೀರಂ (ಕಾವ್ಯಾವ. ೭೪). ೪. ದೃಢತೆ ; ಸ್ಥೈರ್ಯ : ಕುಲಗಿರಿಗಳ ಬಿಣ್ಪುಮಂ ಧರಾತಳದ ತಿಣ್ಪುಮಂ . . . ಅವರವರ ದೆಸೆಗಳಿಂ ತೆಗೆದೊಂದು ಮಾಡಿ (ಪಂಪಭಾ. ೧-೧೩೯ ವ) : ಎಳೆಯೊಳು ಸಾದೃಶ್ಯಮುಪ್ಪಂದೆಱಿಗವಿಭುಗೆ ಬಿಣ್ಪಂಗೆ ಗುಣ್ಪಂಗೆ ತಿಣ್ಪಂಗೆಳೆ ಪಾರಾವಾರಮಿಂದ್ರಾಚಳಂ (ಎಇ. XVI, ೬೦-೧೪ ; 1081) : ಕನಕಾದ್ರೀಂದ್ರುಕ್ಕಮಂಭೋನಿಧಿಗಮವನಿಗಂ ಪೆಂಪಿನೊಳ್ಗುಣ್ಪಿನೊಳ್ತಿಣ್ಪಿನೊಳಿಂತುಂ ತಾನೆ ಪೋ ಪಾಸಟಿ (ಎಕ. VIII, ತೀರ್ಥಹ. ೧೯೨-೭ : 1103). **ತಿಂಪು**: ೩. 'ತಿಂಪುಗೆಡು' ಪರಾ.

[ <ತಿಣ್ಣ + – ಪು₂ ]

**ತಿತಯ** (ನಾ). ಮೂರರ ಸಮುದಾಯ ; ಮೂರು : ತದ್ಧಿತೇ– ತಿತಯಂ, ತ್ರಿತಯಂ (ಶಬ್ದಾನು. ೩೭೬ ಪ್ರಯೋ). [ <ಸಂ. ತ್ರಿತಯ ]

**ತಿತವು** (ನಾ). ಒಂದರಿ ; ಜರಡಿ ; ಸಾರಣಿಗೆ. [ <ಸಂ. ತಿತಉ ]

**ತಿತಿ₁** (ನಾ). ಸ್ಥಿತಿ : ಉತ್ಪತ್ತಿ ತಿತಿ ಲಯರಹಿತನೆನಿಪ . . . ಶ್ರೀ ಗುರುವೆ (ಬಸಪು. ೭-೧೩); ಸ್ಥಾನ–ತಾಣ ; ಸ್ಥಿತಿ–ತಿತಿ (ಶಬ್ದಾನು. ೧೪೯ ಪ್ರಯೋ).

[ <ಸಂ. ಸ್ಥಿತಿ ]

**ತಿತಿ₂** (ನಾ). = ತಿಥಿ : "ತಿತಿ – ೧. ಸ್ಥಿತಿ, ೨. ತಿಥಿ" (ತದ್ಭಕೋ. ೧೭)

[ <ಸಂ. ತಿಥಿ ]

**ತಿತಿಕ್ಷಾನ್ವಿತ** (ಗು). ೧. ಸಹನೆಯಿಂದ ಕೂಡಿದ ; ಸೈರಣೆಯುಳ್ಳ. (ನಾ). ೨. ತಾಳ್ಮೆಯುಳ್ಳವನು; ಸಹನೆಯಿಂದ ಕೂಡಿದವನು: ಮುನಿದೊಡನೆ ಕೆಳರ್ದು ನುಡಿದನುಜನಂ . . . ತಿತಿಕ್ಷಾನ್ವಿತನನಾಕುಳಂ ನುಡಿಗುಮೆಸೆಯೆ ದಶನದ್ಯುತಿಗಳ್ (ಶಾಂತಿಪು. ೩-೯೦) : ಗುಣಿ ತಿತಿಕ್ಷಾನ್ವಿತ ನಿರ್ಮಲಚರಿತ ನೆರೆದಸನಱಿಯಂ . . . ಎನಿಪನಪ್ಪುದು ಕೆಳೆಯಂ (ಪಂಚತಂ. ೨೯೬-೨).

[ ಸಂ. (ತಿತಿಕ್ಷಾ + ಅನ್ವಿತ) ]

**ತಿತಿಕ್ಷು** (ನಾ). ಸಹನೆಯುಳ್ಳವನು ; ತಾಳ್ಮೆಯುಳ್ಳವನು : ತಿತಿಕ್ಷು ಎಂದರೆ ಸಹನಶೀಲನಾಗಬೇಕು (ಭಾತತ್ತ್ವ. ೫೦೬). [ ಸಂ. ]

**ತಿತಿಕ್ಷೆ₁** (ನಾ). ತಾಳ್ಮೆ ; ಸೈರಣೆ; ಸಹನೆ : "ಕ್ಷಾಂತಿ ತಿತಿಕ್ಷೆ ಸಹಿಷ್ಣುತೆಯು" (ವಸ್ತುಕೋ. ೧೧೨-೮) ; ಪ್ರಾರಬ್ಧಸಿದ್ಧಮಾದ ತಾಪತ್ರಯ ಶೀತೋಷ್ಣಾದಿ ದುಃಖಂಗಳಂ ಸೈರಿಪುದೆ ತಿತಿಕ್ಷೆಯಕ್ಕುಂ (ವಿವೇಕ. ೧೫) ; ಶಾಂತಿಯಿಂ ಸುಖ ದುಃಖವುಭಯವನಿಂತು ಸೈರಿಸುವುದೆ ತಿತಿಕ್ಷೆಯು (ಗಗಹಾ. ೩-೨೫) ; ನನಗಿರಲಿ ಆ ಶಿಕ್ಷೆ ! ಶಿಕ್ಷೆಯೆಂದರಿಯದಿರ್ ಶಿಕ್ಷೆಯಲ್ತು, ತಿತಿಕ್ಷೆ (ಶ್ರೀರಾಮಾ. ೭೭೮-೨೮೪). [ ಸಂ. ತಿತಿಕ್ಷಾ ]

**ತಿತಿಕ್ಷೆ₂** (ನಾ). ಕುದುರೆಸವಾರಿಯಲ್ಲಿ ಒಂದು ಬಗೆ (?) : ದಾರೆ ಗತಿ ಲಯ ಪೊಯ್ದು ಕಾಯೆಕ್ಷಂ ತಿತಿಕ್ಷೆ ಪಿತನೆರಿತುರ(ಗ?) ಸಮಾನಂ . . . ಎಂಬ ಭೇದಂಗಳಿಂದಶ್ವಮನೇಜಲು ರೇಚಿಗನೃಪತಿ ತಾನೆ ಬಲ್ಲಂ (ಮದತಿ. ೧-೨೧). [ ? ]

**ತಿತಿಯ** (ಗು). ಮೂರನೆಯ : ತಿತಿಯಂ, ತೃತೀಯಂ; ಚೌತಂ, ಚತುರ್ಥಮಿತಿ (ಶಬ್ದಾನು. ೩೭೭ ವ್ಯಾಖ್ಯಾ). [ <ಸಂ. ತೃತೀಯ ]

**ತಿತ್ತರಬಿತ್ತರಿ** (ನಾ). "ಗಜಿಬಿಜಿ" (ಜಾನಕೋ. ೬೭). [ ? ]

**ತಿತ್ತಿ** 'ತಿದಿ' ನೋ.

**ತಿತ್ತಿರ** (ನಾ). ಒಂದು ಬಗೆಯ ಹಕ್ಕಿ ; ತಿತ್ತಿರಿಹಕ್ಕಿ ; ಕವುಜಗ : ಅವನ ಪಂಡಿತಭಾವವನ್ನು ಪ್ರಕಾಶಪಡಿಸುವುದಕ್ಕಾಗಿ ಗೋವು . . . ಜಿಂಕೆ, ತಿತ್ತಿರ, ದೇವತೆ, ನಾಗರಾಜ, ತಪಸ್ವಿ, ಬ್ರಾಹ್ಮಣ ಬಾಲಕರು ಎಂಬ ಹದಿನಾಲ್ಕು ವಿಷಯಗಳನ್ನು ಅವನ ಬಳಿ ತಂದರು (ಬುದ್ಧ ಪ. ೪೦). [ ಸಂ. ]

**ತಿತ್ತಿರವಕ್ಕಿ** (ನಾ). = ತಿತ್ತಿರ : "ತಿತ್ತಿರಃ–ತಿತ್ತಿರವಕ್ಕಿ" (ನಾಚಿರಾ. ೧೧೫).
[ ತಿತ್ತಿರ + ಪಕ್ಕಿ$_1$ ]

**ತಿತ್ತಿರಿ**, ತುತ್ತೂರಿ, ತುತ್ತಾರಿ, ತುತ್ತುರಿ, ತುತ್ತೂರಿ (ನಾ). ೧. ಉದ್ದವಾದ ಒಂದು ಬಗೆಯ ಊದುವ ವಾದ್ಯ ; ತೂರ್ಯ : ಬಿರುದಿನ ಕಹಳೆ ತಿತ್ತಿರಿಗಳಲ್ಲಲ್ಲಿ (ಇಹರ. ದೇ. ೩೭–೨೨); ಎಡವಿಡದೆ ಚೀಱಿದವು ಕೋಟಿ ಹೆಗ್ಗಾಳೆಗಳು ಚಿನ್ನತಿತ್ತಿರಿ ಬೊಂಬುಳಿ (ಹಚಕಾ. ೩–೧೯) ; ಕಹಳೆಯ ಗೌಱುಗಳ ತಿತ್ತಿರಿಯ ಚಿನ್ನದ ಚೀಱುಗಳ ನಿಡುಗೊಂಬುಗಳ ಚೆಂಬಕನ ನಿರ್ಘೋಷ ಡೋಱುಗಳಿದುವು (ಕುವ್ಯಾ.ಕ. ೨೧–೭) ; ಹತ್ತು ದಮುಗ ಹತ್ತು ಡೋಳು ಕಹಳೆ ಹತ್ತು ಹತ್ತು ತಿತ್ತಿರಿಯೊಂದು ಭೇರಿ (ಕುರಾಸಾಂ. ೪೧–೬೭); ಬೊಂಬುಳಿ ಪಟಹ ಮೃದಂಗ ತಿತ್ತಿರಿ ಕಾಳೆ ಬೆಂಬಳಿಯೊಳು ಗಳಬಳಿಸೆ (ಭರತ. ೪೦–೩೦). **ತುತೂರಿ:** ೧. ಕಹಳಾ ಭೇರಿ ನಗಾರಿ ತಮ್ಮಟೆ ತುತೂರೀ ಮೌರಿ ನೌಫೂರಿಗಳ್ (ಬೀಳವಂ. ೨–೨೭೧) ; ಕವಿತೆ ಜೀವನ ಸಮರ ಯೋಧರ ತುತೂರಿ (ಗಿಳಿವಿಂ. ೨೧–೯) ; ತುತೂರಿಯೂದಿದರೆ ತುಬಟ ಬಂದೀತೆ ? (ಗಾದೆ) ; ತುತೂರಿಗೆ ಮುತ್ತು ಕೊಟ್ಟ ಹಾಗೆ (ಗಾದೆ). **ತುತ್ತಾರಿ:** ೧. ಆ ಕಾಲದಲ್ಲಿ ಕೆಲವರು . . . ಹೆಗ್ಗಾಳ ತುತ್ತಾರಿ ಮೊದಲಾದ ವಾದ್ಯಗಳನ್ನು ಮಾಡುತ್ತಲಿರುವವರೂ (ಕೃವಾಸ. ೮೦). **ತುತ್ತುರಿ:** ೧. ಅರೆಚ್ಚರಕೀ ತುತ್ತುರಿ ಬಾನೊಳು ಮೊಳಗುತಿದೆ (ಗಡೀಶ. ೨೪–೩) ; ವಿಪ್ಲವಮೂರ್ತಿಯ ಕಳ್ಳೊಳಸಂಚನು ತುತ್ತುರಿಯೂದುತ ನೀ ಬಾರ ! (ಪಾಂಚಜ. ೨೪–೨೩). ೨. ಗಲಾಟೆ; ಗದ್ದಲ: ತುತ್ತುರಿ ಜಂಗುಳಿ ದೈವಗಳನೆಲ್ಲವ ಹಿಂಡುಮಾಡಿ ಕಾವ(ಮ?) ನಮ್ಮ ಶಂಭು ತೆಲುಗೇಶ್ವರನ ಮನೆಯ ಗೋವಾಳನೀತ (ಸರ್ವವ. ೮೭–೪೮೪). **ತುತ್ತೂರಿ :** ೧. ತಂಬಟೆ ಹಱೆ ಚಂಬಕ ಮವುರಿ ತುತ್ತೂರಿ ಮುಂಬರಿದೆಸೆವ ನಾನಾವಾದ್ಯಗಳಾಡಂಬರ (ಕಂಸವಿ. ೩–೩೪) ; ತಂಬೂರಿ ತುತ್ತೂರಿಗಳ್ (ವರ್ಷಪ. ೩–೩೦) ; ದಾಸಯ್ಯನು ಒಂದು ತುತ್ತೂರಿ ಊದಿ ಬವನಾಸಿ ತುಂಬ ಭತ್ತ ತುಂಬಿಕೊಂಡು ಹೋಗುತ್ತಿದ್ದನು (ಹುಟ್ಟಿಹ. ೬೪).

[ ದೇ.॥ ತಮಿ. ತುತ್ತಾರಿ, ತುತ್ತಿರಿ ; ಮಲ. ತುತ್ತಾರಿ;
ತುಳು. ತಿತ್ತಿರಿ, ತುತ್ತಾರಿ, ತುತ್ತೂರಿ; ತೆಲು. ತುತಾರ./
ಮರಾ. ತುತಾರೀ. / ಸಂ. ತೂರೀ, ತೂರ ]

**ತಿತ್ತಿರಿ$_2$** (ನಾ). = ತಿತ್ತಿರ : "ಕ್ರಕರ ಕಪಿಂಜಳ ತಿತ್ತಿರಿ ಚಕೋರ ಹಾರೀತ ಕುರವ . . . ಶಾರಿಕಾದಿಗಳ್ ವಿಹಗಜಾತಿಯಕ್ಕುಂ" (ವಸ್ತುಕೋ. ೪೩–೨೧); ಕ್ರೌಂಚ ಶಿಖಿ ತಿತ್ತಿರಿ ಕಪೋತಾದಿ ಪಕ್ಷಿಗಳನು ಕೊಲುತೆ ಬಹ ಬೇಡರ್ಗೆ ಸಿಕ್ಕದೋಡಿದುದೊಂದೆರಳೆ (ಜೈಮಿಭಾ. ೨೮–೫೨); ಕಂಕಂ ತೊಂಡಿಗಂ ಸೋರೆ ತಿತ್ತಿರಿ ಕೋಕಂ ಪಿಕಳಂ ಬಕಂ ಶಿಖಿ ಶುಕಂ . . . ಚಿಲುಕೂಲಿ ರತ್ನಖಗ ವಿರ್ಕಂ ತದ್ವನಾಗೌಘದೊಳ್ (ರಾಜಶೇ. ೫–೫೯); ಗೌಜು ತಿತ್ತಿರಿ ಘೂಕಂ ಶಿಖಿ (ಯಾದವ. ೪–೫೩). [ ಸಂ. ]

**ತಿತ್ತಿರಿ$_3$** (ನಾ). ಒಂದು ಬಗೆಯ ಮರ : ಗಿರಿಕರ್ಣಿಕಾ ತಿತ್ತಿರಿಯೆಂಬ ವೃಕ್ಷಗಳು ಫಲವಾಗದೆಯಿರುವ ಮರಗಳು (ಸೌಗಂಧಿ. ೪೨೭–೧೧).
[ ? ]

**ತಿತ್ತಿರಿಗಾಳೆ** (ನಾ). ಒಂದು ಬಗೆಯ ಕಹಳೆ : ಕರ್ಣಮಂ ತೆಱೆದು ತಿತ್ತಿರಿಗಾಳೆಯನಾಲಿಸುತ್ತೆ ಪಿಂಡೊಡೆಯದೆ ಕೂಡಿ ಬರ್ಪ ಪಲವಾಕಳನೀಕ್ಷಿಸಿದಂ ನರಾಧಿಪಂ (ಲೀಲಾವ ೫–೧೦೩) ; ಬೊಂಬುಳಿಯಟ್ಟುಂಗಾಳೆಯ ತಿತ್ತಿರಿಗಾಳೆಗಳ ಕೋಳಾಹಳಮೆತ್ತಂ ತೀವುತ್ತಿರೆ (ಕುಮುರಾ. ೮–೩೭) ; ಲೋಲ ಕರ್ಣವನೆತ್ತಿ ತಿತ್ತಿರಿಗಾಳೆಗಳ ನಿಂದಾಲಿಸುತ . . . ಕಱುಗೂಡಿ ಗೋವನ ಗಾಳಿಗೈತಹ ಗೋವುಗಳ ಸುಕುಮಾರನೀಕ್ಷಿಸಿದ (ಜೀವಂಚ. ೬–೨೬).
[ತಿತ್ತಿರಿ$_1$ + ಕಾಳೆ (<ಕಹಳೆ)]

**ತಿತ್ತಿರಿವಕ್ಕಿ** (ನಾ). = ತಿತ್ತಿರ : "ತಿತ್ತಿರಃ – ತಿತ್ತಿರಿವಕ್ಕಿ" (ನಾಚಿರಾ. ೧೧೫).
[ ತಿತ್ತಿರಿ$_2$ + ಪಕ್ಕಿ$_1$ ]

**ತಿಥಿ** (ನಾ). ೧. ಚಾಂದ್ರಮಾನದ ಒಂದು ದಿವಸ: "ಪಾಡಿವಮಾದಿಯೆನೆ ತಿಥಿ ಪಕ್ಷಸ್ಥಿತಿಯೊಳ್ ಪದಿನಯ್ದಕ್ಕುಂ" (ವಸ್ತುಕೋ. ೦೬–೭); "ನಾಡಿಯಱುವತ್ತಕ್ಕೆ ಒಂದು ತಿಥಿಯಕ್ಕು" (ಮುಂಗರಾ. ೨೦–೯) ; ಇಪ್ಪತ್ತನಾಲ್ಕು ತಿಥಿಯಿಂದ ಮೆಗ್ಗಳ . . . ನಿಮ್ಮ ಮಾಣದೆ ನೆನೆವಂಗೆ (ಬಸವ. ೬೧೧) ; ಅಖಂಡಜ್ಞಾನ ಸತ್ಕ್ರಿಯಾಚಾರಮಯವಾದ ಶರಣಂಗೆ ವಾರ ತಿಥಿ ಲಗ್ನ ವಿಘ್ನಂಗಳಿಲ್ಲ (ಅಖಂಡೇ.೩೧೨–೧೧೨); ಮಾಸಕೆ ಪಕ್ಷವೆರಡು ತಿಥಿ ಮೂವತ್ತುಂ (ಭಾಸ್ಕರ. ೫೨–೨). ೨. ಪಿತೃಗಳು ಗತಿಸಿದ ದಿನ ಮತ್ತು ಆ ದಿನದಲ್ಲಿ ಪ್ರತಿವರುಷವೂ ಆಚರಿಸುವ ಶ್ರಾದ್ಧ ; ಪಿತೃಕಾರ್ಯ ; ತದ್ದಿನ : ತಿಥಿ ಮೇಲೆ ತಿಥಿ ಬರಲೊ ಗೋವಿಂದ (ಗಾದೆ).

**ತಿಥಿಮಾಡು**=೧. ಶ್ರಾದ್ಧಮಾಡು. ೨. ಕಷ್ಟಕೊಡು; ಹಿಂಸೆಪಡಿಸು: ಇವತ್ತು ನಿನ್ನ ತಿಥಿಮಾಡಿಬಿಡುತ್ತೇನೆ (ರೂಢಿ). [ ಸಂ. ]

**ತಿದಂಡಿ** (ನಾ). (ವಾಗ್ದಂಡ, ಮನೋದಂಡ ಮತ್ತು ಕಾಯದಂಡ ಸೂಚಕವಾದ) ತ್ರಿದಂಡವನ್ನು ಹಿಡಿಯುವ ಸಂನ್ಯಾಸಿ,–ಯತಿ : ತಿದಂಡಿ, ತ್ರಿದಂಡಿ; ತಿಗುಂಡಂ, ತ್ರಿಕುಂಡಂ (ಶಬ್ದಾನು. ೩೭೬ ಪ್ರಯೋ).
[ <ಸಂ. ತ್ರಿದಂಡಿನ್ ]

**ತಿದಿ**, ತಿತ್ತಿ (ನಾ). ೧. ಬೆಂಕಿಗೆ ಅಥವಾ ಊದುವ ವಾದ್ಯಗಳಿಗೆ ಗಾಳಿಯನ್ನೂದುವ ಚರ್ಮದ ಸಲಕರಣೆ : "ದೃತಿ ಎಂಬುದು ತಿದಿ" (ಹಲಾಯು. ೧೨೬–೭೯); ಉಸಿರೊತ್ತಿಂ ತಿದಿಯಂತಿರೊತ್ತಿದ ಬಸಿಱ್ ಪೋತಂದ ಕಣ್ ಬಿಟ್ಟ ಬಾಯ್ (ಪಂಪಭಾ. ೧೨–೧೫೧) ; ತನ್ಮುಖಯುಗದಿಂದರುಣಜಳಮುಣ್ಮೆ ತಿದಿಗಳನಿರದೊತ್ತುವ ಕಮ್ಮಱಂ ಬೊಲಿರ್ದಂ ಭೀಮಂ (ನೇಮಿಪು. ೧೨–೧೫೪) ; ವಿಶ್ವಾಸಭಂಗಂ ತಿದಿಗಳೊಳ್ ನಿಂದಿಸುವುದು ಯುದ್ಧದೊಳ್ . . . ಅರ್ಥವಾದಂ ಸ್ತೋತ್ರದೊಳಲ್ಲದೆ ತನ್ನೊಳಿಲ್ಲೆನಿಸಿರ್ಪುದು (ದಶಕು. ೧–೨೨ ವ) ; ಆಕೆಯು ತಿದಿ ಉಬ್ಬಿದಂತೆ ಉಬ್ಬಿರುತ್ತಾಳೆ (ಮೋಹಿನೀ. ೨೯). ೨. ಚರ್ಮ; ತೊಗಲು: ತಿದಿಯುಗಿದು ಕೊಟ್ಟೆನೊಡವುಟ್ಟಿದ ಕಪಟಮನಮರಪತಿಗೆ (ಪಂಪಭಾ. ೧೨–೧೦೯) ; ಕಳ್ಳರ ಕೊಲ್ಲು ತಿವಿ ತಿದಿಯನುಗಿಯೆಂಬ ಕಳಕಳರವದ ಘಲ್ಲಣೆಯ ಭಟರ ತಿಂತಿಣಿಯೊಳು (ಹಚಕಾ. ೦೩–೫) ; ಅಡಿಯಿಂದೆಂ ತಿದಿಯುಗಿಯುತ್ತಿರೆಯುಂ ನಡೆಯಿಱಿದೆರ್ದೆಯಂ ಬಗಿಯುತ್ತಿರೆಯುಂ (ಬಂಹರಿ. ೧೧–೯ ರಗಳೆ); ಅಹಿತರ ತಿದಿಯ ಸುಲಿವೆವು ಬೆಸಸು ನೇಮವನು (ಕುವ್ಯಾಉ. ೨–೪೩) ; ಎಲವೊ ಕವಿ ಕವಿ ಕೊಲ್ಲು ತಿದಿಯನು ಸುಲಿಯೊ (ನಿಘಾಗ. ೭–೪–೩೬). ೩. ನೀರು, ಎಣ್ಣೆ ಮೊದಲಾದುವನ್ನು ತುಂಬುವ ಚರ್ಮದ ಚೀಲ ; ಪಕಾಲಿ : ಡವಿಗೆಯಯೆರಡೂ ತಿದಿಗಳನ್ನು ಇಬ್ಬಿಬ್ಬರು ಬೋಯಿಗಳು ಪಲ್ಲಕ್ಕಿಗಳಂತೆ ಹೊರುವರು (ಕಥಾಗ. ೫೭). **ತಿತ್ತಿ :** ೧. ತಿತ್ತಿಗಳ್ ಮೊರೆಯುತ್ತೇನು ಸಿರಿಕ್ಕವೇ (ಸೋಮೇಶ. ೧೮); ತುತ್ತು ತುತ್ತಿಗೆ ಹೊಟ್ಟೆ ತಿತ್ತಿಯಂತಾಗುವದು ತುತ್ತ ಅರಗಳಿಗೆ ತಡೆದಿಹರೆ ಹೆಡೆಹಾವು ಹುತ್ತಬಿಟ್ಟಂತೆ (ಸರ್ವಜ್ಞ. ೨೦೦೪). ೨. ತಿತ್ತಿಯ ಹಿಡಿದ ಮಾದಿಗನಿಗೆ ಹೊತ್ತಿಹ ಮೂಗಿನ ನಾತ ನಿಶ್ಚಯ ಉಂಟೇ ಇತ್ತಣವರಿಗಲ್ಲದೆ (ಮೋಳಿಮಾ. ೪೭–೧೯೩). ೩. ತಿತ್ತಿ ಸಿದ್ಧಿಗೆ

ತೊಗಲ್ವೇರಿನೊಳಗೆ ಬಂದತ್ತು ಗಂಗಾಸಾಗರವು (ಕುರಾಸಾಂ. ೧೯-೧೧); ನೀರಿನ ತಿತ್ತಿಯನ್ನು ತಂದಳು (ದಾಲತ್. ೫೫೭). ೪. ಚೀಲ ; ಮೂಡೆ: ದಿವಿಜರಂ ಮೇಲಕಡರದಂತಿಱಿದಿಱಿದು ನೂಂಕುವರ್ ಹಾಯ್ಕುವರುವುರಿವ ಮದ್ದಿನ ತಿತ್ತಿಯಂ (ಜಬಪು. ೪೨-೪೩). ೫. ಒಂದು ಬಗೆಯ ವಾದ್ಯ : ರಾಗಗಳ ವೇದ್ಯಗಾಣಿಸಿದರು ತಿತ್ತಿ ದಂಡಿಗೆ ಶ್ರುತಿ ಹೃದ್ಯವಾಗಿರೆ ಹೊಸತೆನಿಸಿ (ಭರಜಿ. ೧೨-೪೦). [ <ಸಂ. ದೃತಿ ]

**ತಿದಿಯುಗಿ** (ಕ್ರಿ). ತೊಗಲನ್ನು ಉಚ್ಚು ; ಚರ್ಮವನ್ನು ಸುಲಿ : ಅಂತು ತನ್ನ ಸಹಜ ಕವಚಮಂ ನೆತ್ತರ್ ಪನಪನ ಪರಿಯೆ ತಿದಿಯುಗಿವಂತುಗಿದು ಕೊಟ್ಟೊಡೆ (ಪಂಪಭಾ. ೧-೧೦೨ ವ); ಆಪಾದಮಸ್ತಕಂಬರಂ ವ್ಯತ್ತಿಸಿ ಪತ್ತಿ ತಿದಿಯುಗಿಯು[ಪಾಠಾಂ. ಗುರೊ]ತ್ತೆ ಕೇಸುರಿಯ ಬಣ್ಣವಾಗೆ ಕರವೆ ಕರಗಿಸಿದ ಕಾಳಾಯಸರಸಮನೊಟ್ಟಯಿಸಿ (ಅಜಿಪು. ೧೧-೧೦ ವ); ಕತ್ತರಿಯಿಂದರಿವ ಕಾವಲೆಯೊಳಿಕ್ಕಿ ಕರಿವ ತಿದಿಯುಗಿವ . . . ತತ್ತಱದಱವ ಪಲತೆಱದ ದಂಡನೆಗಳುಂ (ವರ್ಧಪು. ೧೧-೪೭ ವ); ತಿದಿಯುಗಿದು ಕೆದಱ ಕೊಳಗುಂದಿನೆಣ್ಣೆಯೊಳರ್ದಿ ತೆಗೆದು (ಶಾಸ್ತ್ರಟೀ. ೩-೩೭). [ತಿದಿ + ಉಗಿ$_1$]

**ತಿದಿಯುಸಿರ್** (ನಾ). ಚರ್ಮದ ಚೀಲದಿಂದ ಹೊರಹೊಮ್ಮುವ ಗಾಳಿ: ಮೆಯ್ಯಿದಿ ನೀಳ್ದ ಸುಯ್ಯಿದಿಯುಸಿರ್ವಿರಹಜ್ವರದೇಟ್ಗೆ ಕಿಚ್ಚು (ಶೃಂಗಾರ. ೪-೫೪); ಉದಯಿಸೆ ಕೋಪವಹ್ನಿಯುರಿಗಣ್ಣಳಗುರ್ವಿಸಿ ನಾಸಿಕಾಗ್ರದಿಂ ತಿದಿಯುಸಿರಂತೆ ತೀಕ್ಷ್ಣಮುಸಿರುಣ್ಮೆ (ಪುಹಾನೇ. ೩-೧೪೦).
[ ತಿದಿ + ಉಸಿರ್$_2$ ]

**ತಿದಿಯೂದು** (ಕ್ರಿ). ೧. ತಿದಿಯನ್ನು ಒತ್ತಿ ಗಾಳಿ ಬರುವಂತೆ ಮಾಡು; ತಿದಿಯನ್ನು ಒತ್ತು. ೨. (ಆಲಂ) ಪ್ರೋತ್ಸಾಹಿಸು ; ಪುಷ್ಟಿಕೊಡು : ಭಾವ ಕೃಷ್ಣರಾಯ ಈ ಯೋಚನೆಗೆ ಪುಟಕೊಟ್ಟ. ಅರ್ಧಾಂಗಿ ತಿದಿಯೂದಿದಳು (ಕುರುಕಾ. ೧೫೨). ೩. (ಆಲಂ) ಜೋರಾಗಿ ಅಳು; ಸದ್ದುಮಾಡುತ್ತಾ ಅಳು: ನಿನಗೇನಾಯಿತು ತಿದಿಯೂದಲಿಕ್ಕೆ (ರೂಢಿ).
[ ತಿದಿ + ಊದು$_1$ ]

**ತಿದಿಯೊತ್ತು** (ಕ್ರಿ).=ತಿದಿಯೂದು ೧: ಆಸ್ಯದಿನುಗುವ ರಕ್ತಮುರಿಯೆನೆ ತಿದಿಯೊತ್ತುವ ಕಮ್ಮಱಂಬೊಲಿರ್ದಂ ಭೀಮಂ (ಭಾಷಾಭೂ. ೧೮೭ ಉದಾ); ಸೈನಿಕನೊಬ್ಬ . . . ಸಾವೋವರ್ (ಬೆಂಕಿಗೂಡಿನ ವ್ಯವಸ್ಥೆಯಿರುವ ರಷ್ಯಾದೇಶದ ಟೀಪಾತ್ರೆ) ನಳಿಕೆಯನ್ನೊಂದು ಕಾಲಿನಲ್ಲಿ ತಿದಿಯೊತ್ತುತ್ತ ನಿಂತಿದ್ದನು (ಪುನರು. ೫೦೧). [ ತಿದಿ + ಒತ್ತು$_1$ ]

**ತಿದ್ಗಡಿ** (ನಾ). (ಮನಸ್ಸನ್ನು) ತಿರುಗಿಸುವಿಕೆ; ತಿದ್ದುವಿಕೆ. 'ತಿದ್ಗಡಿಗ್ಯೆ' ಪರಾ. [ P ಇದು 'ತಿದ್ದುಗಡೆ' ಎಂಬ ಶಬ್ದವನ್ನು ಛಂದಸ್ಸಿಗಾಗಿ ಬದಲಾಯಿಸಿದ ರೂಪವಿರಬಹುದು ]

**ತಿದ್ಗಡಿಗ್ಯೆ** (ಕ್ರಿ). (ಮನಸ್ಸನ್ನು) ತಿರುಗಿಸು ; ತಿದ್ದು : ಮೆಲ್ಲನುಪ ಯುಕ್ತಿಯುಲಿ ಗುಣವತಿಗೆಲ್ಲ ತಿದ್ಗಡಿಗ್ಯೆದು ಸುತ ಗಳದಲ್ಲಿ ಲಿಂಗವ ಕಟ್ಟಿಸಿ ದರಿನ್ನಾಯ್ತು ಕಲ್ಯಾಣ (ಬಿಜ್ಜಪು. ೯೩-೯).
[ ತಿದ್ಗಡಿ + ಗ್ಯೆ (<ಕೆಯ್$_1$) ]

**ತಿದ್ದಾಣಿಕೆ** (ನಾ). ತಿದ್ದುವಿಕೆ ; ಸರಿಪಡಿಸುವಿಕೆ : ಆದರೆ ಆ ತಿದ್ದಾಣಿಕೆಯಿಂದ ಮೂಲಕೃತಿ ವಿಕಾರಗೊಳ್ಳಬಾರದು (ಸಾಹಿಪ್ರ. ೧೨). 'ಸಾಕಾಣಿಕೆ', 'ಹೊಂದಾಣಿಕೆ' ಪರಾ. P ಇದು ಬಹುಶಃ 'ತಿದ್ದುವಣಿಕೆ' ಆಗಿರಬಹುದು.
[ ತಿದ್ದು$_1$ (<ತಿರ್ದು$_1$) + – ಅಣ + – ಇಕೆ ]

**ತಿದ್ದಿಕೆ** (ನಾ). ಒಪ್ಪಗೊಳಿಸುವಿಕೆ ; ಸರಿಪಡಿಸುವಿಕೆ ; ತಿದ್ದುವಿಕೆ : (ಟಿ).
[ ತಿದ್ದು$_1$ (<ತಿರ್ದು$_1$) + – ಇಕೆ ]

**ತಿದ್ದಿಸು** 'ತಿರ್ದಿಸು' ನೋ.

**ತಿದ್ದು$_1$** 'ತಿರ್ದು$_1$' ನೋ.

**ತಿದ್ದು$_2$** 'ತಿರ್ದು$_2$' ನೋ.

**ತಿದ್ದುಗಡೆ** (ನಾ). (ಮನಸ್ಸನ್ನು) ತಿದ್ದುವಿಕೆ. 'ತಿದ್ಗಡಿ' ಪರಾ.
[ <ತಿರ್ದು$_1$ ]

**ತಿದ್ದುಗಾರ** (ನಾ). ಸರಿಪಡಿಸುವವನು; ಪರಿಷ್ಕರಿಸುವವನು; ತಿದ್ದುಪಡಿ ಮಾಡುವವನು : ಮೂಲಕ್ಕೆ ಸರಿಯಾಗಿ ನಕಲನ್ನು ತಿದ್ದುವ ಕೆಲವರು ಸಂನ್ಯಾಸಿಗಳೂ ಇದ್ದರು ; ಅವರನ್ನು ತಿದ್ದುಗಾರರೆಂದು (Correctors) ಕರೆಯುತ್ತಿದ್ದರು (ಕನ್ನಸಂ. ೨೧).
[ ತಿದ್ದು$_2$ (<ತಿರ್ದು$_2$) + – ಕಾರ$_1$ (< – ಕಾಱ) ]

**ತಿದ್ದುಪಡಿ** (ನಾ). ಸುಧಾರಣೆ; ತಿದ್ದುಪಾಟು; ಸರಿಪಡಿಸುವಿಕೆ : ನಿಮ್ಮ ತಿದ್ದುಪಡಿಯು ಮೂಲಕ್ಕೆ ಸಂಪೂರ್ಣವಾಗಿ ವ್ಯತಿರಿಕ್ತವಾಗುವುದಲ್ಲ ! (ನಡದಾ. I, ೫೭೫); ಹಲವು ಪ್ರತ್ಯಂತರಗಳು ಕಾಲಕ್ರಮದಲ್ಲಿ ಲಿಖಿತವಾಗುವಾಗ ತಿದ್ದುಪಡಿಗಳೂ ಹೊಸಪಾಠಗಳೂ ಸ್ವೀಕೃತವಾಗಿ ಮೊದಲು ಬರೆದಿದ್ದುವು ತ್ಯಾಜ್ಯವಾಗುತ್ತವೆ (ಕನ್ನಸಂ. ೬೫); ಭಾಷಾಂತರಕಾರ್ಯವು ಪೂರ್ತಿಯಾಗುವಷ್ಟರಲ್ಲಿ ಭಾರತದ ಸಂವಿಧಾನವು ತಿದ್ದುಪಡಿಯಾಯಿತು (ಭಾಧಾನ. ೩೬೩೬). [ ತಿದ್ದು$_2$ (<ತಿರ್ದು$_2$) + – ಪಡಿ$_3$ ]

**ತಿದ್ದುಪಡೆ** (ನಾ). ತಿದ್ದುಪಾಟು ; ಸರಿಪಡಿಸುವಿಕೆ: ಬರೆದ ಮುಖವನ್ನೇ ಮತ್ತೆ ಬರೆಯಲಾಗಿತ್ತು. ಒಂದರಕ್ಕಿಂತ ಒಂದು ತಿದ್ದುಪಡೆಯಾಗಿದ್ದವು (ರಂಗರೂ. ೧೦೭); ಅವನ್ನೆಲ್ಲಾ ನಾಶಮಾಡಬೇಕೆಂಬುದೇ ನನ್ನ ವಿಚಾರದ ತಿದ್ದುಪಡೆ (ಅಮುಗಾಂ. ೧೩); ತಿದ್ದುಪಡೆಯು ಅವಶ್ಯವೆಂದು ರತ್ನಾಕರ ವರ್ಣಿಯ ಅಭಿಪ್ರಾಯವಾಗಿದೆ (ನವ್ಯಕಾ. ೧೦೫).
[ ತಿದ್ದು$_2$ (<ತಿರ್ದು$_2$) + – ಪಡೆ$_6$ ]

**ತಿದ್ದುಪಾಟು**(ನಾ). ೧.=ತಿದ್ದುಪಡಿ: ಭಕ್ತರಿಗೆ ಧರ್ಮೋಪದೇಶ ಮಾಡುತ್ತ ವೀರಶೈವರ ಆಚಾರ, ವಿಚಾರ, ನಡೆನುಡಿಗಳನ್ನು ತಿದ್ದುಪಾಟು ಮಾಡುತ್ತಿದ್ದರಿ (ಗುರುದ. ೧೯) ; ವಿಲಾಯಿತಿ ಮೊದಲಾದ ತಿದ್ದುಪಾಟುಳ ದೇಶಗಳಲ್ಲಿ ತಾವ್ಪುದ ತಗಡುಗಳನ್ನು ಮನೆಗಳ ಮೇಲೆಯೂ ಹೊಚ್ಚುತ್ತಾರೆ (ಮುಂಬಯಿ. ೪-೦೩೭) ; ಪ್ರಚಲಿತವಿದ್ದ ಲಕ್ಷಣಗಳಲ್ಲಿ ಅಗತ್ಯವಿದ್ದ ತಿದ್ದುಪಾಟುಗಳನ್ನು ಮಾಡಿದನು (ತತ್ವಪ್ರಾ. ೨೪೩). ೨. ಪಳಗಿಸುವಿಕೆ.
[ ತಿದ್ದು$_2$ (<ತಿರ್ದು$_2$) + – ಪಾಟು$_2$ ]

**ತಿದ್ದೋಲೆ** (ನಾ). ಒಪ್ಪೋಲೆ ; ಶುದ್ಧಿಪತ್ರ : ತಿದ್ದೋಲೆ ; ಶುದ್ಧಿಪತ್ರ (Corrigendum. ಇಂಕನಿ.). [ ತಿದ್ದು$_2$ (<ತಿರ್ದು$_2$) + ಓಲೆ ]

**ತಿನ್**, ತಿನು, ತಿನ್ನು (ಕ್ರಿ). ತಿಂಬ (ವರ್ತಕೃ). ೧. (ಆಹಾರವನ್ನು) ಸೇವಿಸು; ಭುಂಜಿಸು; ಭಕ್ಷಿಸು; ಉಣ್ಣು: "ತಿನ್ – ಖಾದನೇ" (ಶಮಧಾ) ; ಗೃಹ ಕೋಕಿಲಂಗಳೊಂದೊಂದಂ ಒಂದೊಂದು ಕಾದಿ ತಿನೆ (ಜಾವುಂಪು. ೨೦-೧೨) ; ಪಕ್ಕಿಗಳಲ್ಲಿ ತಿಂದುಟಿದ ನೆಲ್ಲಳ ನುಚ್ಚುಗಳಂ ಫಲಂಗಳಂ ಪಕ್ಕದೊಳಿರ್ದ ಗೂಡುಗಳಿನಾಯ್ದೆನಗಿಕ್ಕುವನಟ್ಟಿಱಿಂದೆ (ಕಾದಂಪೂ. ೧೩೭) ; ತಿಂಬರನಲ್ಲದೆ ಕುಱ ಮಚ್ಚದು (ಅಜಿಪು. ೨-೬೪) ; ಅದಱನೆನಗಂ ಕೊಲ್ವುದುಂ ತಿಂಬುದುಂ ಧರ್ಮಮಲ್ಲದೆ ಪೆಱತು ಧರ್ಮಮಾವುದುಮಿಲ್ಲ (ಪಂಚತಂ. ೬೧-೧೩) ; ಪಟ್ಟಿರ್ದ ನಾಯ ನಡುವಂ ಮೆಟ್ಟಿ ಕನಲ್ದೊಡನೆ ಮೇಲೆ ಪಾಯ್ದದು ತಿನೆ (ಧರ್ಮಾಮೃ. ೨-೫೭) ; ಹೊಲಸು ತಿಂಬುವನೇ ಹೊಲೆಯ (ಬಸವ. ೫೯೦) ; ತಿರುಳನು ತಿಂಬಾಸೆ ನಿನಗಿಹುದಾದರೆ ಚಿಪ್ಪನು ಒಡೆಯಲೆ ಬೇಕು (ಇಂಚಾಪ. ೨೦೭-೬೮). ೨. ಕೊಲ್ಲು ; ನಾಶಮಾಡು: ನಿಮ್ಮ ಮೂವತ್ತಿರ್ವರುಮಂ ರಾಕ್ಷಸಂ ನುಂಗಿ ತಿಂಬುದಂ ಕನಸುಗಂಡು ಪೇಟ್ಟುಂ (ವಡ್ಡಾರಾ. ೧೧೦-೧೦) ; ನಿಮ್ಮ ಕುಲಂಗಳಾಂತು ಮಾರ್ಮಲೆವನನಟ್ಟಿ ತಿಂಬುವೆ (ಪಂಪಭಾ.೧೦-೨೧); ತಮ್ಮ ಬುದ್ಧಿ ತಮ್ಮನೆ ತಿಂದಿತ್ತು ನಿಮ್ಮನೆತ್ತ ಬಲ್ಲರು (ಅವಚಂ. ೭೩-೩೨೪) ; ಡೊಂಬಿಗರ ಡಾವರಿಗರಿವದಿರ ತಿಂಬೆನೀಗಳೆ ತರುಣಿ ಕೇಳೆನುತಂಬುಜಾಕ್ಷಿಯ ಸಂತವಿಟ್ಟನು

(ಕುವ್ಯಾಸ. ೧೫-೩೫). ೩. ಕುಟುಂಕು; ಕಚ್ಚು; ಕಡಿ: ತೇಟಿನ್ಹಿಂದ ಮಗುವಿನಂತೆ (ಧರ್ಮಾಮೃ. ೧೪-೪೪); ಹಾವು ತಿಂದವರ ನುಡಿಸಬಹುದು . . . ಸಿರಿಗರ ಹೊಡೆದವರ ನುಡಿಸಲುಬಾರದು ನೋಡಯ್ಯಾ (ಬಸವ. ೧೩೨); ಸೊಸೆಗೆ ಪಲ್ಲ ತಿನುತೆ (ಲೀಲಾವ. ೫-೧೩೪); ಮರದ ಕೊಂಬೆಯಿಂ ಬಿದ್ದನೋ ಫಣಿ ತಿಂದುದೊ (ಹದಶಾ. ೧೨-೧೫); ಅವನಂ ತಿಂಬುದುಮಾ ತಿಂದ ಫಣಿಯದಾಗಳೆ ಸಾಯ್ಗುಂ (ಜಮಿದ. ೧೭-೧೭೧). ೪. ದುರುಪಯೋಗ ಮಾಡು; ಅಪವ್ಯಯಮಾಡು; ಪೋಲುಮಾಡು: ಈ ವರ್ ರ್ ಸೂಳೆಯರ್ಗೆ ಧನವೆಲ್ಲಮಂ ತಿಂದು ನಿರ್ಧನನಾಗಿ (ಪುಣ್ಯಾಸ್ರ. ೨-೨೦ ವ); ಬಿರುದ ಹೊಗಳಿಸಿಕೊಂಡು ದಾತಾರರ ಹಣವ ಸಲೆ ತಿಂದು ಹೆಚ್ಚಿದ ಹಿರಿಯ ಡೊಳ್ಳಿನ ರಾವುತರ ಕೆಡಹಿದನು (ಕುವ್ಯಾದ್ರೋ. ೧೦-೧೮). ೫. ಅನುಭವಿಸು: ದುಷ್ಟನೊರ್ವ್ವನದಱ ಫಲವಂ ತವೆ ತಿವ್ಪುವಂ (ಎಕ. VIII, ನಗರ. ೬೦-೧೩; 820); ಕೂರ್ಗಣೆಯಿಂದೆಚ್ಚು ಬ ಱಿ ಗಾ ಯ ಗಾ ಣೆ ಸಿ ದ ರು ತಿನ್ನೆನುತೆ (ಮೋಹತ. ೫-೧೨). ೬. ನವೆಯಾಗು; ತಿನಿಸುಂಟಾಗು: ನಸುಗುನ್ನಿ ಮುಟ್ಟಿದಂತಿರೆ ಬಸವಲ್ಲದೆ ತಿಂಬ ಮೆಯ್ಯ ತಿನಿಸಿಂಗಂ ಸೈರಿಸಲಾಱದೆ (ಧರ್ಮಾಮೃ. ೧-೧೬೫); ಅಂಗೈ ತಿಂದುದೆನ್ನ ಕಂಗಳು ಕೆತ್ತುತಿಹುವಯ್ಯಾ ಬಂದಹರಯ್ಯಾ ಪುರಾತರೆನ್ನ ಮನೆಗೆ (ಬಸವ. ೩೭೧). ತಿನು: ೧. ಎಡಗೆಯ್ಯೊಳೆ ತೋಡಿ ಬೆಣ್ಣೆಯಂ ತಿನುತಿರೆ ಗೋಪಿ ಕಂಡು (ಜ ಗ ವಿ. ೩-೫೧); ಪೊಡವಿಗೆ ಪೊಱಮಟ್ಟು ಕಳಿವಣ್ಗಳ ತಿನ ತೊಡಗಿದರೇನ ಹೇಳುವೆನು (ಮೋಹತ. ೧೯-೫೪). ತಿನ್ನು: ೧. ಅವಱ ತತ್ತಿಗಳನಾ . . . ಪಾವು ಪಲಕಾಲಂ ತಿನ್ನುತ್ತಿರೆ (ಪಂಚತಂ. ೮೨-೫); ಒಂದಿಷ್ಟು ಅನ್ನ ತಿಂದು ಕಾಲೇಜಿನ ಕಡೆಗೆ ಹೊರಟೆ (ಅಲಹೂ. ೫೪); ಹನುಮಂತರಾಯ ಹಗ್ಗ ತಿನ್ನುವಾಗ ಪೂಜಾರಿ ಶಾವಿಗೆ ಬೇಡಿದ (ಗಾದೆ). ೫. ಕೂರ್ಗಣೆಯ ಗಾಯವ ತಿನ್ನು ಹೋಗೆಂದು ಹೊಡೆದನಂಬುಗಳ (ಮೋಹತ. ೩೮-೭).'ನೋವುತಿನ್ನು','ಪೆಟ್ಟುತಿನ್ನು' ಪರಾ. ೭. (ಆಲಂ) ಲಂಚ ತೆಗೆದುಕೊಳ್ಳು: ಅವನು ಚೆನ್ನಾಗಿ ತಿಂದೇ ಕೆಲಸ ಮಾಡಿಕೊಡೋದು (ರೂಢಿ). 'ಹಣತಿನ್ನು' ಪರಾ.

ತಿಂದು ತೇಗು=೧. ಹೊಟ್ಟೆ ತುಂಬಿ ತೇಗು; ಸಂತೋಷಪಡು: ಅಕ್ಕನ ಮನೆಯೊಳು ನಲಿದೆವು ನಕ್ಕೆವು ನಾವುಂಡು ತಿಂದುತೇಗಿದೆವು (ಇಂಚಾಪ. ೧೩-೫೧). ೨. ನಾಶಮಾಡು; ಹಾಳುಮಾಡು: ತಿಂದು ತೇಗಿದತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ (ಗಿರಿಕ. ೮-೪೭). ತಿಂದು ಹಾಕು=೧. ನಾಶಮಾಡು: ಶತ್ರುವನ್ನೂ ವ್ಯಾಧಿಯನ್ನೂ ಎಳೆಯ ತನದಲ್ಲೇ ನಿಗ್ರಹಿಸದೆ ಹೋದರೆ . . . ನಮ್ಮನ್ನೇ ತಿಂದುಹಾಕುತ್ತವೆ (ಚಿಕ್ಕದೇ. ೮೨). ೨. ಅಪಹರಿಸು; ಸ್ವಾಹಾಮಾಡು: ಇನ್ನೊಬ್ಬರ ಹಣವನ್ನು ತಿಂದುಹಾಕುವುದರಲ್ಲಿ ಅವನು ನಿಸ್ಸೀಮ (ರೂಢಿ). ತಿಂದೋಡಿ= ತಿಂದು ತಿರುಗುವವಳು; ಉಂಡಾಡಿ: ತಿಂದೋಡಿ ನಿನ ಗಂಡ ತಿಂದೇನು ಮಾಡೆಂದ ತಿಂದೇಳು ಮನಿಯ ತಿರುಗೆಂದಾ ಉಟಸೀರಿ ಉಂಗುಟಕ ಹಾಕಿ ಹರಿಯೆಂದ (ಗರತಿ. ೬೨). ತಿಂಬುಂಬ ಸಮಯ = ಮಾಂಸಾಹಾರವನ್ನು ತಿನ್ನುವ ಜಾತಿ: ತಿಂಬುಂಬ ಸಮಯಯವೆಮ್ಮದು (ಸಮ್ಯಕ್ತಾ. ೯-೧೭).

[ ದೇ.॥ ತಮಿ. ತಿನ್; ಮಲ. ತಿನ್ನು; ತುಳು. ತಿನ್; ಕೊಡ. ತಿನ್ನ್; ತೆಲು. ತಿನು; ಕೊಲಾ. ನಾಯ್ಕಿ. ಪರ್ಜಿ ತಿನ್. ]

ತಿನಸಿಗ 'ತಿನಿಸಂಗ' ನೋ.

ತಿನಸು 'ತಿನಿಸು₂' ನೋ.

ತಿನಸುಗೂಳಿ (ನಾ). ಮಿತಿಮೀರಿ ತಿನ್ನುವವಳು: ತಿನಸುಗೂಳಿಯ ಬಾಳು ಕನಸಿನಲಿ ಉಂಡಂತೆ ತೊನಸಿ ಮುದಿವೆತ್ತ ಹರಿತಿಂದು ಹುಳಗಳನು ಜನಿಸಿ ಬಿಟ್ಟಂತೆ (ಸರ್ವಜ್ಞ. ೧೮೫೭).

[ ತಿನಸು (<ತಿನಿಸು₂) + ಕೂಳ್ (<ಕೂಟು₁) + - ಇ₂ ]

ತಿನಸುಬಕ್ಕ 'ತಿನಿಸುಬಕ್ಕ' ನೋ.

ತಿನಾಳಿ 'ತಿನ್ನಾಳಿ' ನೋ.

ತಿನಿ₁, ತೀನಿ, ತೀನೆ (ನಾ). ೧. ಆಹಾರ; ತಿನಿಸು; ಊಟ: ಸದನಾಂತರದೊಳುತ್ಕೃಷ್ಟತಿನಿಯಂ ತಿನುತ (ಶಂಕದಾ. ೮-೧೭). ತೀನಿ: ೧. " ಭಕ್ಷಿತಂ, ಭಕ್ಷಣಂ, ಭಕ್ಷಣೀಯಂ, ಭಕ್ಷ್ಯಂ-ಈ ೪ ತೀನಿ" (ಕಾಶಕ್ಕ. ೨೫೩); ಭೂತದ ಹೆಣನ ತೀನಿಗೆ ತವಕಿಸುವ ವೇತಾಳಸಂತತಿಯ (ಕುವ್ಯಾಗ. ೩-೦೨); ತನ್ನ ವಿನೋದಕ್ಕಾಗಿ ಸಾಕುವ ಹುಲಿಗೆ ತನ್ನ ರೈತರ ದನ ತೀನಿ (ಸಣ್ಣಕ. IV, ೬೫); ಅಂಗಡಿಗೆ ಕೈಹಾಕಿ ತೀನಿಯ ದಿನಸುಗಳನ್ನು ಬೊಗಸೆ ಬೊಗಸೆಯಾಗಿ ಹಂಚುತ್ತಿದ್ದನು (ಕಥವಿ. II, ೩೦೪); ಹೀಗೆಲ್ಲ ತೀನಿ ಕೊಟ್ಟರೆ ತಾನೆ ಹೋರಿಗೆ ಕಸುವು ಬರೋದು (ಬೆಳುಮು. ೧೬೭); ತಿಂದವನ ತೀನಿ ಹೆಚ್ಚು, ಮಿಂದವನ ಕೊಳೆ ಹೆಚ್ಚು (ಗಾದೆ). ೨. ತಿನ್ನುವಿಕೆ; ಭಕ್ಷಣ: " ಭಕ್ಷಣೇ-ತೀನಿಯೊಳ್ " (ಕಾಶಕ್ಕ. ೨೭); ಗಂಡನಿಗೆ ಗಳಿಕೆ ತೋರಿಸಬೇಡ, ಮಕ್ಕಳಿಗೆ ತೀನಿ ಕಲಿಸಬೇಡ (ಗಾದೆ). ೩. ನವೆ; ತುರಿಕೆ: ಗುದ ತೀನಿ ತಿಂಬುದು . . . ಇದು ಶ್ಲೇಷ್ಮ ಮೂಲವ್ಯಾಧಿಯ ಲಕ್ಷಣ (ವಿವೈವಿ. ೧೪೦). ತೀನೆ: ೧. ತನ್ನ ಮಗನು ತೀನೆ ಹಾಕಿಕೊಂಡು ತಿನ್ನುತ್ತಿದ್ದ ಬೆಳ್ಳೀ ಬಟ್ಟಲನ್ನು ಸುಮತಿಯು ದೃಷ್ಟಿಸಿ ನೋಡಲು (ಸುಮಚ. ೧೧); ಬೇಕಾದ ತೀನೆಯನ್ನು ಕೊಂಡು ಕೊಳ್ಳಲು ಅಂಗಡಿಯೆಲ್ಲಾ ಮುಚ್ಚಿರುತ್ತಾರೆ (ಪೀಟಿಮಾ. ೪೪). ೩. ಆನೆ ಮದದಿಂದೊಮ್ಮೆ ತೀನೆಯನು ಕಳೆಯಲ್ಕೆ ತಾನೊರಸೆ (ದಿಲೀಚ. ೨-೩೭). [<ತಿನ್./ತಮಿ. ತೀನಿ; ಮಲ. ತೀನ್; ತುಳು. ತೀನಿ, ತೀನು]

-ತಿನಿ₂ (ಪ್ರ). ತಿನ್ನುವ ವ್ಯಕ್ತಿ ಎಂಬರ್ಥದಲ್ಲಿ ಸೇರುವ ತದ್ಧಿತಪ್ರತ್ಯಯ: ಉಣ್ಬ, ಕುಟ್ಟುವ, ಕೊಲ್ವ, ಕೊಳ್ವ, ತಿನ್ಬ ಎಂಬೀ ಉತ್ತರಪದಗಳಿಗೆ ಕ್ರಮವಾಗಿ ಉಣಿ . . . ತಿನಿ ಎಂಬ ಆದೇಶಗಳು ಬರುವುವು ಉದಾ :- ಅಲರುಣಿ . . . ಅಡದಿನಿ (ಕೈಪಿಡಿ. ೨೭). 'ಪಿಱಿತಿನಿ' ಪರಾ.

[ ತಿನ್ + - ಇ₃ ]

ತಿನಿಕೆ (ನಾ). ಒಂದು ಬಗೆಯ ವನಸ್ಪತಿ; " ಯವನಾಲ, ತಕ್ಷುಪತ್ರ " (ಪಂಡಿತ. ೨೫೭). [ ? ]

ತಿನಿಶ (ನಾ). ಒಂದು ಬಗೆಯ ಸಸ್ಯ; ನೇಮ್ಮಿಗಿಡ; ಹುಲಿಗಿಲಮರ: " ತಿನಿಶಂ ನೇಮಿ ತಾಂ ರಥದ್ರುಮುಮಕ್ಕುಂ " (ವಸ್ತುಕೋ. ೩೫-೧೫); "ತಿನಿಶಃ, ಸ್ಯಂದನಃ . . . ಚಿತ್ರಕೃತ್-೨ ಹುಲಿಗೇ ಮರದ ಹೆಸರುಗಳು; ಹುಲಿಗಲಿ, ನೆಮ್ಮಿ, ಹೊಂಗೆ" (ಸಿದ್ಧಾಂತಿ. ೦೦೩). [ ಸಂ. ]

ತಿನಿಸು₁, ತಿನ್ನಿಸು (ಕ್ರಿ). ಉಣಿಸು; ತಿನ್ನುವಂತೆ ಮಾಡು: ರಿಪುಗಳ ಕಡಿದು ತಿನಿಸುವೆನಿದಕೆ ಸಂಶಯವೇಕೆ (ಕುವ್ಯಾಅ. ಓರಿಇ. ೨೫-೧೩); ಪಾಂಡವರ ಮನೆಯೊಳಗೆ ಕುದುರೆಗಳ ತಾ ತೊಳೆದು ಪುಂಡರೀಕಾಕ್ಷ ಹುಲ್ಲನು ತಿನಿಸಿದಾ (ಪುರಂದ. ೦-೧೪೭-೩); ತನಿರಸ ತೀವಿದ ಪಣ್ಗಳ ತಿನಿಸಿ ಓವಿದ ಕರ್ತನ ತೋಱಿ (ಮೋಹತ. ೯-೨೪). ತಿನ್ನಿಸು: ಒಂದು ಜೋಳದ ಭಕ್ಕರಿಯನ್ನು ಅಭಿಮಂತ್ರಿಸಿ, ಈ ಪದವನ್ನು ಪಾಡಿ ಪರಮಾತ್ಮನಿಗರ್ಪಿಸಿ ಆಚಾರ್ಯರಿಗೆ ತಿನ್ನಿಸಿದರು (ಜಗದಾ. ೦೫೦); ಅವರು ಅವನಿಗೆ ಗೋಮಾಂಸವನ್ನು ತಿನ್ನಿಸಿ . . . ಕರೆದುಕೊಂಡು ಹೋದರಂತೆ (ಚಂಗಾಳ್ಳ. ೨೭).

[ ತಿನ್ + - ಇಸು₃ ]

ತಿನಿಸು₂, ತಿನಸು (ನಾ). ೧. ತಿನ್ನುವ ಆಹಾರಪದಾರ್ಥ; ತಿಂಡಿ; ಉಣಿಸು: ನಿಮ್ಮಡಿ ಬೆಸಸಿಮೆನ್ನ ಭರ್ತಾರಿಯು ಮಾವಿನ ಪಣ್ಣನೇಕೆ ಬಯಸಿದಳಿನಿತಾನುಂ ವಸ್ತುನಿಕರಮಿರ್ದುಂ ತಿನಿಸಂ (ಧರ್ಮಾಮೃ. ೮-೪೫); ಪುರದಲಿ ಸತ್ತ ಹೆಣಗಳ ತುಱುಗಿದರು ತಿನಿಸಿಂಗೆ ಹಸಿವಿಗೆ ನೆಱೆಯದಾದುದು (ತೊರರಾ. ೬-೨೭-೫೭); ಸುತ್ತಲೂ ಸೊಗಸಾದ ನೋಟ ನೋಡುತ್ತ ತಿನಿಸನ್ನು ತಿಂದೆವು (ಕಪವು. ೨-೪೦). ೨. ನವೆ; ತುರಿಕೆ: ನಸುಗುನ್ನಿ ಮುಟ್ಟಿದಂತಿರೆ ಬಸವಲ್ಲದೆ ತಿಂಬ ಮೆಯ್ಯ ತಿನಿಸಿಂಗಂ ಸೈರಿಸ

ಲಾಜಿದೆ (ಧರ್ಮಾಮೃ. ೧-೧೬೫); ಆಗಳೆ ಕರ್ದಮ(ಮಂ)ದಿಂ ಪೂಸಲ್ ಕಳೆಗುಂ ಸಂದೇಹವೇಕೆ ತುಱುಚೆಯ ತಿನಿಸಂ (ಐಮದ. ૩-೧೦೦). **ತಿನಸು:** "ಕಂಡೂತಿಃ, ಕಂಡೂಯಾ, ಕಂಡೂಃ, ಕಂಡೂಯನಂ, ಖರ್ಜೂಃ-ಈ ೫ ತಿನಸು" (ಹಲಾಯು. ೯೯-೪೪೯); "ತಿಂಡಿ, ತಿನಸು, ತೀಟೆ, ತುರುಸು, ನಸೆ, ತೀನಿ" (ಕಂನುಹು. ೮೫). [ <ತಿನ್ ]

**ತಿನಿಸುಗ,** ತಿನಸಿಗ (ನಾ). ತಿಂಡಿಪೋತ ; ತಿನ್ನುವವನು ; ಭಕ್ಷಕ: "ಅದನ್, ಅದಃ, ಅದಕಃ-ಈ ೩ ತಿನಿಸುಗಂ" (ಕಾಶಕ್ಕ. ೧೬૩). **ತಿನಸಿಗ:** ಬೆಕ್ಕಿನ ಜಾತಿಯ ತಿನಸಿಗರು ಹಡೆದ ಬದುಕನೇ ತಿನುವವರು (ಮುಕ್ತಕಂ. ೬೬-೪). [ ತಿನಿಸು$_2$ + - ಇಗ ]

**ತಿನಿಸುಗಾತಿ** (ನಾ). ಮಿತಿಮೀರಿ ತಿನ್ನುವವಳು: ಆ ತಿನಿಸುಗಾತಿ ಹೆಂಗಸನ್ನು ನೋಡಿದರೆ ನಗುಬರುತ್ತದೆ (ರೂಢಿ). [ ತಿನಿಸು$_2$ + - ಕಾತಿ$_5$ ]

**ತಿನಿಸುಬಕ್ಕ,** ತಿನಸುಬಕ್ಕ (ನಾ). ೧. ಹೊಟ್ಟೆಬಾಕ ; ತಿಂಡಿಪೋತ ; ಮಿತಿಮೀರಿ ತಿನ್ನುವವನು : ಅವನೊಬ್ಬ ತಿನಿಸುಬಕ್ಕ (ರೂಢಿ). (ಗು). ೨. ಮಿತಿಮೀರಿ ತಿನ್ನುವ : ಇವು ಬಹಳ ತಿನಿಸುಬಕ್ಕ ಪ್ರಾಣಿಗಳು (ಮುಂಬಯಿ. ೩-೮೪). **ತಿನಸುಬಕ್ಕ:** ೨. ಅದರ ಜಾತಿಯು ಬಹು ತಿನಸುಬಕ್ಕಾಗಿಯೂ ಮೂಢವಾಗಿಯೂ ಇರುವದು (ಮುಂಬಯಿ. ೫-೧೬). [ ತಿನಿಸು$_2$ + - ಬಕ್ಕ$_2$ (< - ಬಾಕ) ]

**ತಿನಿಹಿ,** ತಿನುಹಿ (ನಾ). ತಿನ್ನುವ ಸ್ವಭಾವವುಳ್ಳದು: 'ಹೆಣದಿನಿಹಿ' ಪರಾ. **ತಿನುಹಿ:** 'ಹೆಣದಿನಂಹಿ' ಪರಾ. [ ತಿನಿಹು + - ಇ$_3$ ]

**ತಿನಿಹು** (ನಾ). ತಿನ್ನುವಿಕೆ : ಹೆಣನ ತಿನಿಹಿ[ಪಾಠಾಂ. ತೀನಿ]ಗೆ ತವಕಿಸುವ ವೇತಾಳ ಸಂತತಿಯ (ಕುವ್ಯಾಗ. ೩-೧૩). [ ತಿನಿ + - ಹು$_2$ ]

**ತಿನು** 'ತಿನ್' ನೋ.

**ತಿನುಹಿ** 'ತಿನಿಹಿ' ನೋ.

**ತಿನ್ನ** (ನಾ). ತಿನ್ನಲಾಗದುದು ; ಉಚ್ಚಿಷ್ಟ ; ಎಂಜಲು: "ಎವುಟಿಂದುಂ, ತಿನ್ನಮೆಂದುಂ, ಪತ್ತಳೆಯೆಂದುಂ ಎಂಜಲ್" (ಕಶಸಾ. ૩೫-೫೦೮). [ <ತಿನ್ ]

**ತಿನ್ನಬಾಕ** (ನಾ). = ತಿನಿಸುಬಕ್ಕ : ತೆಲಗರು ಕಸುವುಳ್ಳವರು . . . ಒಳ್ಳೆ ತಿನ್ನಬಾಕರು (ಕಥಾಗ. ೮೫). [ <ತಿನ್ನು + - ಬಾಕ ]

**ತಿನ್ನಾಸಕ** (ನಾ). ತಿನ್ನುವುದರಲ್ಲಿ ಹೆಚ್ಚು ಆಸೆಯುಳ್ಳವನು ; ತಿನ್ನಾಳಿ ; ತಿಂಡಿಪೋತ: ಕೈಕಾಲು ಸಣ್ಣ ಹೊಟ್ಟೆ ಡುಮ್ಮ ; ಬಹು ತಿನ್ನಾಸಕ (ಮೇದಿಪು. ೪) ; ನೀವು ತಿನ್ನಲಿಕ್ಕೆ ತರತೀರಿಲ್ಲೊ ? ತಿನ್ನಾಸಕ ತರತದೇಳು (ಆಮುನಿ. ૩೫); ವಸುಭೂತಿ ಬ್ರಾಹ್ಮಣವರ್ಯನಲ್ಲ, ತಿನ್ನಾಸಕನೂ ಹಣಲೋಭಿಯೂ ಆದ ಸಾಧಾರಣ ವೈದಿಕ (ತವನಿ. ೮೯). [ <ತಿನ್ ]

**ತಿನ್ನಾಸಕತನ** (ನಾ). ತಿನ್ನುವುದರಲ್ಲೇ ಆಸಕ್ತಿಯಿರುವಿಕೆ ; ಅತಿಯಾಗಿ ತಿನ್ನುವ ಸ್ವಭಾವ : ನಾಡಿನಲ್ಲಿ ಬೇರೆ ಬೇರೆ ಭಾಗಗಳಿಗೆ ಹೋಗಿ ನೋಡಿದರೂ ಅಲ್ಲಿಯ ವೈಚಿತ್ರ್ಯಗಳಂತೆ ತಿನ್ನಾಸಕತನದ ಕತೆಗಳೂ ಸಿಕ್ಕುವವು (ಶ್ರೀರಂಗ. ૩೬). [ ತಿನ್ನಾಸಕ + - ತನ ]

**ತಿನ್ನಾಸಕಿ** (ನಾ). ತಿನ್ನುವುದರಲ್ಲಿ ಬಹಳ ಆಸಕ್ತಿಯುಳ್ಳವಳು ; ಹೊಟ್ಟೆಬಾಕಿ : ನೀನು ಬಲು ತಿನ್ನಾಸಕಿ (ಬೀರಬ. ೮೬). [ ತಿನ್ನಾಸಕ + - ಇ$_2$ ]

**ತಿನ್ನಾಳಿ,** ತಿನಾಳಿ, ತೀನಾಳಿ (ನಾ). = ತಿನ್ನಾಸಕ : "ಭಕ್ಷಕಃ, ಘಸ್ಮರಃ, ಅದ್ಮರಃ-ಈ ೩ ತಿನ್ನಾಳಿ" (ಹಲಾಯು. ೫೮-೧೯೫). **ತಿನಾಳಿ:** ಕೊಟ್ಟಣಿಗನೆನಲ್ಕೆ ಜಗದಿ ತಿ[ಪಾಠಾಂ. ತೀ]ನಾಳಿವೆಸರ್" (ಕವಿಕಂ. ೧೫೬) ; ಮಹಾರಾಜರನ್ನು . . . ತಿನಾಳಿಯೆಂದು ಬಯ್ಯುವೇ (ವಿಗಡ. ೪೧-೨೪). **ತೀನಾಳಿ:** "ತೀ[ಪಾಠಾಂ. ತಿ]ನಾಳಿಯೊಳಗೇವೇಟ್ವೆ ಕೊಟ್ಟಣಿಗ" (ಶಬ್ದಮಂ. ೪೯); ಕೌಂಟ್ಸ್‌ರವರು ತೀನಾಳಿ ಹುಡುಗರಿಗೆ ಆದರ್ಶ ಉಪಾಧ್ಯಾಯರು (ಹುಮುಖ. ೩೪). [ ತಿನ್ + - ಆಳಿ$_3$ ]

**ತಿನ್ನಿಸು** 'ತಿನಿಸು$_1$' ನೋ.

**ತಿನ್ನು** 'ತಿನ್' ನೋ.

**ತಿಪರ** (ನಾ). ಒಂದು ಬಗೆಯ ಆಭರಣ (?) : ಅಪರಂಜಿ ಚಿನ್ನಾಕೆ ತಿಪರಾವ ತಿರುವ್ಯಾರೆ ಸಕಲಸಂಪನ್ನರ ಮಗಳು ನೀಲವ್ವಾಗೆ ತಿಪರವ ತಿರುವ್ಯಾರೆ ಬಸವಣ್ಣ (ಗೌರಪ. ೧). [Pಇದು ತಿರುಪು ಇರಬಹುದೆ ? ]

**ತಿಪಲಾಟ** (ನಾ). ಕಷ್ಟ ; "ಪೇಚಾಟ ; ತೊಂದರೆ" (ಜಾನಕೋ. ೬೬). [ ತಿಪಲು$_0$ (<ತಿಪ್ಪಲು) + ಆಟ ]

**ತಿಪುರ,** ತಿವುರ, ತಿಹುರ (ನಾ). = ತ್ರಿಪುರ : ಹರನಾಜ್ಞೆಯಿಂದಿಂದ್ರನತುಳ ಸನ್ನಾಹದಿಂದಿರದೆ ತಿ[ಪಾಠಾಂ. ತ್ರಿ]ಪುರಕೆ ಲಗ್ಗೆಯಂ ಬಿಡಲ್ (ಜೈಪು. ೪૩ ಸೂಚನೆ). **ತಿವುರ:** 'ತಿವುರಾಂತಕ' ಪರಾ. **ತಿಹುರ:** ತಿಹುರಮನುರಿಪಲ್ ತ್ರಿವಿಲೋಚನನಾ ದ್ರುಹಿಣ ಚತುರ್ಭುಜರಾದಿಯ ಸುರಬಲಸಹಿತಂ ದಿವ್ಯ ವರೂಥಮನಡರ್ದೆಯ್ದುವ ತೆಱದಿಂ (ಜಯಕಾ. ೬-૩೩). [ <ಪ್ರಾ. ತಿಉರ. / ಸಂ. ತ್ರಿಪುರ ]

**ತಿಪುರಾಂತಕ,** ತಿವುರಾಂತಕ, ತಿಹುರಾಂತಕ (ನಾ). ತ್ರಿಪುರಗಳನ್ನು ನಾಶಮಾಡಿದವನು ; ಶಿವ : ಪೂರ್ವಪದಂ ತದ್ಭವವಾದುದರ್ಕೆ . . . ತ್ರಿಪುರಾಂತಕ - ತಿಪು [ಪಾಠಾಂ. ವು] ರಾಂತಕ (ಶಮದ. ૩೮೯ ಪ್ರಯೋ). **ತಿವುರಾಂತಕ:** ಪೂರ್ವಪದಂ ತದ್ಭವವಮಾದುದರ್ಕೆ-ಗ್ರಾಮರಸ - ಗಾವರಸ . . . ತ್ರಿಪುರಾಂತಕ-ತಿವುರಾಂತಕ (ಶಮದ. ૩೮೯ ಪ್ರಯೋ). **ತಿಹುರಾಂತಕ:** ತಿಹುರಾಂತಕಂ (ಶಬ್ದಾನು. ૩೯೬ ಪ್ರಯೋ). [ <ಸಂ. ತ್ರಿಪುರಾಂತಕ ]

**ತಿಪ್ಪ** (ನಾ). ಬೂದಿರಾಶಿಯ ಮೇಲಿರುವವನು ; ಶ್ಮಶಾನವಾಸಿ ; ಶಿವ: 'ತಿಪ್ಪಯ್ಯ' ಪರಾ. [ ತಿಪ್ಪೆ + - ಅ$_7$ ]

**ತಿಪ್ಪಗ** (ನಾ). (?) : ತಿಪ್ಪಗನು ಸುಂಕವನು ಕಟ್ಟಿಯೆ ತಪ್ಪುದಲೆ ಮಾಡುತ್ತಲಿರಲಿಕೆವೊಪ್ಪುವದೆ ತಿಪ್ಪಗನು ಬೇಟಿ$^3$ ಸುಂಕದವ ಬೇಟಿ$^3$ (ಜ್ಞಾನಸಿಂ. ೮-೧೩೦). [Pಇದು 'ತಪ್ಪುಕ = ತಪ್ಪುಮಾಡುವವನು' ಎಂಬುದರ ಅಪಲಿಖಿತವಿರಬಹುದು ]

**ತಿಪ್ಪಣ** (ನಾ). ೧. (?) : ನೆಟ್ಟಗೆಳೆ ಮೂಱು ತಿಪ್ಪಣದ ಮಣೆ ಒಂದು ಮಣೆಯಲ್ಲಿ ಕುಳಿತು ಅಣಲ ಸಂಚವ ತಿಂದಿತ್ತು (ಮನುಗುಂ. ૩೬೯-೮೫) ; ಸಂಚಿತ ಕರ್ಮವನನುಭವಿಸುತ್ತಿಹುದೆಂಬುದೀಗ ತಿಪ್ಪಣದ ಮಣೆ . . . ಎಂಬ ಶಬ್ದಕ್ಕರ್ಥ (ಮನುಗುಂ. ೯೯). ೨. ದ್ರವಪದಾರ್ಥವನ್ನು ತುಂಬುವ ಪಾತ್ರೆ (?): ಅಪ್ಪವಾಸವ ತುಂಬುವ ತಿಪ್ಪಣದಂತೆ ತುಂಬುವಲ್ಲಿ ಕಟ್ಟೆಲ್ಲ (ಮಹಿಮಿಂ. ೯೪-೭೦). [ ? ]

**ತಿಪ್ಪಣ್ಣ** (ನಾ). ಒಬ್ಬಾತನ ಹೆಸರು : ಬರೆದಂ ದ್ವಿಜಪಾದಪಂಕಜಭ್ರಮರ ಬಲದೇವಯ್ಯನು ಮೂಂಕಿಯಯ್ಯನ ಮಗ ತಿಪ್ಪಣ್ಣ ಬರೆದ ಮಂಗಳಂ (ಎಕ. XI, ದಾವಣ. ૩೦-೩૩ ; 1046). [ ತಿಪ್ಪ + ಅಣ್ಣ$_1$ ]

**ತಿಪ್ಪಯ್ಯ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ತಿಪ್ಪಯ್ಯ ಬರೆದಂ (ಎಕ. XI, ದಾವಣ. ೧೬-૩૩ ; 889); ತಿಪ್ಪಯ್ಯನೆಂಬಾ ಪದಿನೇೞ್ಬಾನಿಸಂ (ಎಕ. V, ಅರಕ. ೬೧-೬ ; 920). [ ತಿಪ್ಪ + ಅಯ್ಯ$_1$ ]

**ತಿಪ್ಪರದಂಡ** (ನಾ). ಆಡಿಸುವ ದೊಣ್ಣೆ ; ತಿರುಗಿಸುವ ದೊಣ್ಣೆ (?) : ಅಪ್ಪಪ್ಪಾ ಈತನೇ ಬಲುದೈವ ತಪ್ಪುಹೊರಿಸಿ ಪಾರಿಗೆವರ ತಿಪ್ಪಾ [ಪ್ಪ] ರದಂಡವಾಡಿಸುವ (ವಿಶೋೀಸು. ૩೩-೪). [<ತಿರಿಪ್ಪು$_2$ ? + ದಂಡ ]

**ತಿಪ್ಪರಲಾಗ** (ನಾ). ೧. ತಿರಂಗಿಕೊಂಡು ಹಾಕುವ ಲಾಗ; ಅಂತರಲಾಗ; ದೊಂಬರ ಲಾಗ. ೨. (ಆಲಂ) ಹೆಣಗಾಟ ; ಪ್ರಯತ್ನ : ವಾದದ ಆವೇಶದಲ್ಲಿ ತನ್ನ ಗುರು ವಸಂತರಾಯನ ವಿಚಾರಸರಣಿಯನ್ನು . . . ಬರೀ ಬುದ್ಧಿಶಕ್ತಿಯ ತಿಪ್ಪರಲಾಗವೆಂದೂ ಕರೆದ(ದೂರಸ.೪೪); ವೀರ್ಯವೇ ನಿಷ್ಠೆಯಿಂದ ಸಾಕಾರವಾಗುತ್ತದೆ, ಹಠದ ತಿಪ್ಪರಲಾಗವಲ್ಲ (ನೆಲಮು. VII, ನಾಲ್ಕುಮಾತು).

**ತಿಪ್ಪರಲಾಗ ಹಾಕು** = ೧. ಓಲಾಡು: ಮನಸ್ಸು ತಿಪ್ಪರಲಾಗ ಹಾಕಿತು (ಹೊಸಕ್ಷಿ. ೮೪). ೨. ಕಷ್ಟಪಡು ; ಪ್ರಯತ್ನಿಸು : ಹಾಂಗ ಮಾಡಲಿಕ್ಕೆ ಬರೂದುಲ್ಲೋ ಆಚಾರಿ ; ನಾನು ಭಾಳ ತಿಪ್ಪರಲಾಗಾ ಹಾಕಿದೆ (ತಿಡುಗು. ೭೪). **ತಿಪ್ಪರಲಾಗ ಹೊಡೆ** = ೧.=ತಿಪ್ಪರಲಾಗ ಹಾಕು ೨ : ತಿಪ್ಪರಲಾಗ ಹೊಡೆದರೂ ಅದು ತಪ್ಪುವ ಹಾಗಿರಲಿಲ್ಲ(ಸಮಜೀ. ೧೨೩೪). ೨. ತೇರ್ಗಡೆ ಹೊಂದದಿರು: ರಾಜುವು ಮೂರುರೂಪಾಯಿಯ ಪರೀಕ್ಷೆಯಲ್ಲಿ ಮೂರು ಸಲ ತಿಪ್ಪರಲಾಗ ಹೊಡೆದಿದ್ದ (ಎಡಹ. ೧೭). 'ತಿಪ್ಪು' ಪರಾ.

[ <ತಿರಿಪ್ಪು₂ ? + ಲಾಗ ]

**ತಿಪ್ಪಲ್** (ನಾ). (?) : ಯಾರು ತಿಪ್ಪಲ್ ಬಗೆವರವರೆ ಗೌರಿಯುನು ಪುತ್ರಿಯನು ಕುಸುಮಕುಮಾರಿಯನು ಕನಸಿನಲಿ ಕಂಡವ ಜೀವರಲ್ತೇ ಕರಂ (ವಿವೇಥ. ೮-೫೪). [ ? ]

**ತಿಪ್ಪಲಾಟ** (ನಾ). (ಬುಗುರಿಯಂತೆ) ತಿರುಗುವಿಕೆ ; ಸುತ್ತಾಟ (?) : ಇಂತೊಸೆದ ಬೆಳಕಿನಲಿ ಕೆಲವು ಇದ್ದಲ್ಲೆ ತಿಪ್ಪಲಾಟದಲಿ ತೊಡಗಿವೆ (ಸುನೀತ. ೮೧-೪). 'ತಿಪ್ಪರಲಾಗ' ಪರಾ. [ <ತಿಪ್ಪು + ಆಟ ]

**ತಿಪ್ಪಲಿ** 'ಹಿಪ್ಪಲಿ' ನೋ.

**ತಿಪ್ಪಲು** (ನಾ). ಪೀಕಲಾಟ ; ತೊಂದರೆ ; ಕಷ್ಟ : "ತಿಪ್ಪಲು, ಪಿಪ್ಪಲು ಪಾಟ–ಕಷ್ಟ" (ಗಂಗಾಮ. ೧೫೨). 'ಚಿಪ್ಪಳು' ಪರಾ. [ ? ]

**ತಿಪ್ಪಲುಗಾರ** (ನಾ). ಅಧಿಕಾರ ನಡೆಸುವವನು; ದಬ್ಬಾಳಿಕೆ ನಡೆಸುವವನು : ಆ ಕಾಲದಲ್ಲಿ ಅರಸರು ತಿಪ್ಪಲುಗಾರರು (ಜುಲುಮೆಯಿಂದ ಆಳುವವರು) (ಅಕ್ಷರ. ೧೩೨). [ ತಿಪ್ಪಲು + – ಕಾರ$_1$ (< – ಕಾರ) ]

**ತಿಪ್ಪು** 'ತಿರಿಪ್ಪು$_1$' ನೋ.

**ತಿಪ್ಪುಳ್** 'ತುಪ್ಪುೞ್' ನೋ.

**ತಿಪ್ಪುಳ** 'ತುಪ್ಪುೞ್' ನೋ.

**ತಿಪ್ಪುಳು** 'ತುಪ್ಪುೞ್' ನೋ.

**ತಿಪ್ಪುೞ್** 'ತುಪ್ಪುೞ್' ನೋ.

**ತಿಪ್ಪೂರ್** (ನಾ). ಒಂದು ಊರಿನ ಹೆಸರು : ತಿಪ್ಪೂರ ಕಾಡಸ್ವಾಮಿಗಳ್ಗೆ ಬ್ರಹ್ಮಾದೆಯ ಕ್ರಮದೆನ ಮೆಲೂರ ಕೆಱೆ ಕೀೞಗೆ ಪಡಿಕಂಡುಗಂ ವ್ರಿಹಿ ಭೂಮಿ ದತ್ತವ್ಕ (ಇಅ. V, ೧೩೭-೧೩ ; 454 ಕ್ರಿಶ). 'ತಿಪ್ಪೆಯೂರ್' ಪರಾ. [ ? + ಊರ್ ]

**ತಿಪ್ಪೆ, ತಿರ್ಪೆ** (ನಾ). ೧. ಕಸದ ಗುಡ್ಡೆ ; ರಾಶಿ : ತಿಪ್ಪೆ ಮೇಲೆ ಮಲಗಿ ಉಪ್ಪರಿಗೆ ಕನಸು ಕಂಡ ಹಾಗೆ (ಗಾದೆ). ೨. ಕಸಕಡ್ಡಿಗಳನ್ನು ಹಾಕುವ ಸ್ಥಳ : ವಾರಿಜಷಂಡಮಂ ಪಡೆದು ಪೊರ್ದುವವೊಲ್ ಕಳಹಂಸೆ ತಿಪ್ಪೆಯಂ ಪೊರ್ದುಗುಮೆ (ಧರ್ಮಾಮೃ. ೪-೨೦೦) ; ತಿಪ್ಪೆಯ ತಪ್ಪಲಲ್ಲಿ ಬಿದ್ದಿರ್ದ ತಂಡುಲವ ಕಟ್ಟಿಕೊಂಡು (ಶೂನ್ಯಸಂ. ೨೨೫-೧೩) ; ಹತ್ತು ಸಾವಿರ ಹೊನ್ನು ತಿಪ್ಪೆಯಲಿ ಹೂಳಿಟ್ಟು ಮತ್ತೆ ಉಪ್ಪಿಲ್ಲದೆ ಉಂಡೆಯಲ್ಲೊ ಪ್ರಾಣಿ (ಪುರಂದ. ೧-೮೭-೨) ; ಏಳುನೆಲೆಯುಪ್ಪರಿಗೆಯೆತ್ತೀ ಕೀಳುದಿಪ್ಪೆಯದೆತ್ತ (ಸಾಳ್ವಭಾ. ೦೭-೩೪); ಶ್ವಾನ ತಿಪ್ಪೆಯ ಮೇಲೆ ಮಲಗಿರಲು . . . ಏನೋ ವಾಸನೆ ಬೀಸಲದು ಹಾರಿ ದುಮುಕುವುದು (ಮಂಕುತ. ೯೦೫) ; ಕೋಳಿ ಕಾಲಿಗೆ ಗೆಜ್ಜೆ ಕಟ್ಟಿದರೂ ತಿಪ್ಪೆ ಕೆರೆಯದೆ ಇದ್ದೀತೇ (ಗಾದೆ).

△ **ತಿರ್ಪೆ** : 'ತಿರ್ಪೆಸುಂಕ' ಪರಾ.

**ತಿಪ್ಪೆಕೆದರು** = ಹಳೆಯ ಸಂಗತಿಗಳನ್ನು ಬಯಲಿಗೆಳೆ : ಅವನನ್ನು ರೇಗಿಸಿ ರೇಗಿಸಿ ತಿಪ್ಪೆಕೆದರಿದರು (ರೂಢಿ). **ತಿಪ್ಪೆಗುಂಡಿ, ತಿಪ್ಪೆಯಗುಂಡಿ**= ಕಸಕಡ್ಡಿಗಳನ್ನು ಹಾಕುವ ಗುಂಡಿ: ವ್ಯವಸಾಯವೇ ಮುಖ್ಯವಾಗಿದ್ದುದರಿಂದ ತಿಪ್ಪೇಗುಂಡಿಗಳು ಊರಿಗೆ ಸಮೀಪವಾಗಿದ್ದುವು (ಹುಟ್ಟಿಹ. ೫) ; ವಿಷಯ ಕೂಪವೆಂಬ ತಿಪ್ಪೆಯ ಗುಂಡಿಯ ನೀರ ಕುಡಿದು (ಸಿದ್ಧೇವ. ೪೨-೧೧೭). **ತಿಪ್ಪೆಸಾರಿಸು** = ೧. ತಿಪ್ಪೆಮುಚ್ಚಿ ಮೇಲೆ ಅಲಂಕಾರಮಾಡು. ೨. ವಿಷಯವನ್ನು ಮರೆಮಾಚು ; ಲೋಪದೋಷಗಳನ್ನು ಮುಚ್ಚಿಡು : ಮಾಲಿಕೆಗಳ ಶಕ್ತಿಯೂ ಅಪಾರವೆಂದೇ ಹೇಳಬೇಕು, ಎಂದು ತಿಪ್ಪೆಸಾರಿಸುವ ಮಾತನ್ನಾಡಿದನು (ಬೆನ್ನಬೀ. ೧೮೩).

[ ದೇ.॥ ತಮಿ. ತಿಪ್ಪೈ ; ತುಳು. ತಿಪ್ಪೆ ; ತೆಲು. ತಿಪ್ಪ ]

**ತಿಪ್ಪೆಯೂರ್** (ನಾ). ಒಂದು ಊರಿನ ಹೆಸರು: ಕನಕಸೇನ ಭಟ್ಟಾರರ್ಗ್ಗೆ ತಿಪ್ಪೆಯೂರೊಳಾದ ಅಟ್ಟದೆಱೆಯುಂ ಕುಱುದೆಱೆಯುಮುಟ್ಟಸಾಮನ್ತದೆಱೆಯೆಲ್ಲವಮ್ಬಿಟ್ಟನ್ (ಎಕ. III, ಮಳವ. ೩೦-೧೦ ; 909).

[ ತಿಪ್ಪೆ + ಊರ್ ]

**ತಿಪ್ಪೆವಳ್ಳ** (ನಾ). ತಿಪ್ಪೆಗುಂಡಿ : ಬಾವಿಯುನಱಸಿ ಬನ್ನಂಬಟ್ಟು ಬಾಯೊಣಗಿ ಬಸಗೆಟ್ಟು ಅಲ್ಲಿರ್ಪ ತಿಪ್ಪೆವಳ್ಳದೊಳ್ಪಾವಸೆಗಟ್ಟಿ . . . ಪೊಲಸುಗಂಪಿಡುವ ನೀರನೆ ಕುಡಿದು (ಚಿಕವಂ. ೫೭-೧). [ ತಿಪ್ಪೆ + ಪಳ್ಳ ]

**ತಿಪ್ಪೆಸುಂಕ, ತಿರ್ಪೆಸುಂಕ** (ನಾ). ತಿಪ್ಪೆಗಳ ಮೇಲಿನ ತೆರಿಗೆ; ಕಂದಾಯ: ತೇಜ ಸಾಮ್ಯಗಾಣಾಯಿಯುಂ ಪಡಿಯದೆ ತಿಪ್ಪೆಸುಂಕ ಮನೆದೆಱೆ (ಬೊಂಕಶಾ. ೧೯೩೭, ಸಿಂದಗಿ. ೪೨-೪೩ ; 1097) ; ತಿಪ್ಪೆಸುಂಕ ಗಾಡಿಯ ಸುಂಕಂ ಒಂದು ಗಾಣಂ ಇನ್ತಿನಿತು ಕೆಱೆಯ ಭಣ್ಡಂಗೆ ಬಿಟ್ಟ ಧರ್ಮ್ಮ (ಎಕ. XI, ದಾವಣ. ೧೩೯-೫೨ ; 1106) ; ಹೇಱಿನಲು ಎಲೆ ೧೦೦ ನ್ಯಾಯದಲು ಮುದ್ರಾಪಣ ತಿಪ್ಪೆಸುಂಕ ರಾಶಿಯ ದೇವಗೋಳಗ ೨ ಗಾಣದಲೆಣ್ಣೆ ಸೊಳಸಿಗೆ (ಸೌಇಇ. IX i. ೨೩೩-೬೨ ; 1139). △ **ತಿರ್ಪೆಸುಂಕ** : ಬೋವಕ್ಕಳ್ ತಂದು ಮಾಱುವ ಬಾಡುಕಾಯಿಗೆ ತಿರ್ಪೆಸುಂಕವ ಕೊಟ್ಟರ್ (ಮುಂಬರಾ. X, ೨೦೦-೬೩ ; 1229). [ ತಿಪ್ಪೆ + ಸುಂಕ ]

**ತಿಪ್ಪೆಹೊಳು** (ನಾ). ತಿಪ್ಪೆಯಲ್ಲಿ ಮುಚ್ಚುವಂತೆ ರಾಶಿ ಹಾಕಿದ ಕಸಕಡ್ಡಿ ಮುಂತಾದುವು : ಬಾದು ವರುಷದ ತಿಪ್ಪೆಹೊಳಿನೊಂದು ವರುಷಕೆ ವ್ಯತ್ಯಿಕೆಯು (ಬಿಜ್ಜಪು. ೯೮-೩೪). [ ತಿಪ್ಪೆ + ಹೊಳು (<ಪೂೞ್) ]

**ತಿಪ್ಪೇಱು** (ನಾ). ಒಂದು ಸ್ಥಳದ ಹೆಸರು : ತಿಪ್ಪೇಱುಮ್ ಅಭ್ರುಮ್ ಲಿಹಮ್ ಅತಿಶಯವಾನ್ (ಮ್ಯಅರಿ. ೧೯೨೧, ೧೦-೭೭ ; 967). [ ? ]

**ತಿಬು** 'ತಿಬ್ಬ₂' ನೋ.

**ತಿಬ್ಬ$_1$, ತಿಬ್ಬರ, ತೀವರ** (ಗು). ೧. ಚುರುಕಾದ ; ಶೀಘ್ರವಾದ : "ತೀವ್ರಕ್ಕೆ ತಿಬ್ಬಮೆಂಬರು ಕವಿಗಳ್" (ಕವಿಕಂ. ೨೦೦) ; ತೀವ್ರ–ತಿಬ್ಬ ; ನೇತ್ರ–ನೆತ್ತ (ಶಮತ. ೨೬೧ ಪ್ರಯೋ). ೨. ತೀಕ್ಷ್ಣವಾದ : ಮನದರ್ತ್ತಿ ಪೋಪಿನಂ ಮೇರುನಗದಕೃತ್ರಿಮ ಜಿನಾಲಯಂಗಳನಿಂತನವರತಂ ನೋಡುವ ಭಾವನೆ ಪೋಗದು ತಿಬ್ಬಮಿನ್ನುಮದು ಕಾರಣದಿಂ (ಧರ್ಮಾಮೃ. ೫-೧೨೨) ; ತಿಬ್ಬಮೊಗಂ ಬಯಂಬಡಿಪ ತೇಜಮನುಳ್ಳ ದೃಢಾಂಗಂ (ಹಾಲಾಸ್ಯ. ೧-೧೩-೪೭). (ನಾ). ೨. ಅತಿಶಯವಾದದು; ಶ್ರೇಷ್ಠವಾದುದು; ಅಧಿಕವಾದುದು: ಕುಲಜನೀತನೆ ಪಂಡಿತನೀತನುಜ್ವಲಯಶೋಧಿಕನೀತನೆ ತಿಬ್ಬಮೆಂದಲಸಿ ಪೇಟ್ವೆ (ಕವಿರಾ. ೧-೧೩೯) ; ಜಿನವಚನಮೆ ತಿಬ್ಬಮೆಂದು ನಂಬಿದ ಫಲ (ಧರ್ಮಾಮೃ. ೨-೧೫೧) ; ಅಧರವ ಸವಿದನು ತಿಬ್ಬದ ಸುಸಿಲೊಳು ಕೃಷ್ಣ (ವರ್ಧಜ. ೫-೮೩). ೪. ಬೇಗ ; ಜಾಗ್ರತೆ : ಪಡಿಹಾರಿಗಳ ತಿಬ್ಬದಿಂ ಕರೆದು (ಅರಾಜ. ೧೩-೭೭). **ತಿಬ್ಬರ:** ೪. "ತಿಬ್ಬರಂ ತೀವ್ರನಾಮಂ" (ಕರ್ಣಾನಿ.೫೨). **ತೀವರ :** ೪. ದೇವತೆಗಳು ಕಾದಲರಿದು ನಾವು ಕೆಡಲು ಬೇಡ ಇದ್ದ ಮರುಳ ಕೂಡಿ ತೀವರದೊಳು ತಿರುಗೆಂದ (ಹರಿಸಾಂ. ೩-೬೭) ; ಹರಿಯ ಗತಿ ಹರಿಗೆ ನಿಜವೆಂದು ತಿಳಿದು ತೀವರದಿಂದ ಒಡಂಬಡುವದು ಜನರು (ತೀರ್ಥಮ. ೨೦೭) ; ತೀವರದಿಂದ ವರವನುಗಿದು ಸ್ಥಾವರಕೆ ಸಮಮಾಡುವೆ (ಶ್ರೀಕೃಪಾ. ೭೦). [ ಪ್ರಾ. ತಿವ್ವ./ಸಂ. ತೀವ್ರ ]

**ತಿಬ್ಬ₂, ತಿಬು** (ನಾ). ಒಂದು ಬಗೆಯ ಹೂವು : "ದಿವ್ಯಂ – ಬರ್ಬರ ಚಂದನ, ತಿಬ್ಬ" (ಓಷಧಿ. ೬೫). **ತಿಬು :** "ದಿವ್ಯಪುಷ್ಪ – ಕಣಿಗಲು,ತಿಬು, ಅತ್ತಿ" (ಓಷಧಿ. ೬೫). [ <ಸಂ. ದಿವ್ಯ? ]

ತಿಬ್ಬ$_3$ 'ತಿಬ್ಬಂ' ನೋ.

**ತಿಬ್ಬಂ, ತಿಬ್ಬ$_3$** (ಅ). ಬೇಗನೆ ; ಶೀಘ್ರವಾಗಿ : ತಿಬ್ಬಂ ನುಡಿದಂ–ತಿಬ್ಬನುಡಿದಂ (ಶಬ್ದಾನು. ೫೯೩ ಪ್ರಯೋ). ಅದಱಿಂ ಮುಂಚಿ ಪಳಂಚಿ ಪಾಱಿದುದು ತಿಬ್ಬಂ ಬಾಣಮನ್ನಂ (ಶಬಶಂ. ೪–೯೦). **ತಿಬ್ಬ$_3$ :** ಮೇಲಿನ 'ಶಬ್ದಾನು' ಪ್ರಯೋಗವನ್ನು ನೋಡಿ. [ <ತಿಬ್ಬ$_1$ ]

**ತಿಬ್ಬಂಮಾಡು** (ಕ್ರಿ). ೧. ವೇಗಗೊಳಿಸು. ೨. ದೃಢಪಡಿಸು ; ನಿಜಗೊಳಿಸು (?) : ಕೆಲರ್ ವಿಟ್ಟುಗಾಡಿಯುಂ ಬರ್ದುಂಕಲಾಗದೆಂಬ ಮಾತಂ ತಿಬ್ಬಂಮಾಡಿ ಸೌಜನ್ಯಕಂದಾಂಕುರನ ಶರಕ್ಕಳ್ಕಿ ಬೆಳ್ಕೆತ್ತೊರ್ಱೆಡೆಯುಂ . . . ಬಿಟ್ಟರ್ (ಶಾಂತಿಪು. ೪–೩೦ ವ); ಮನವಮಂ ತಿಬ್ಬಂ ಮಾಡಿ (ಧರ್ಮಾಮೃ. ೩–೨೦) ; ತಿಬ್ಬಂ ಮಾಡಿದಂ = ತಿಬ್ಬವೆಹಗಹುದಹಗೆ ಮಾಡಿದಂ (ಶಮದ. ೧೯೪ ಪ್ರಯೋ). [ ತಿಬ್ಬ$_1$ + ಮಾಡು$_1$ ]

**ತಿಬ್ಬಯಲು** (ನಾ). ಒಂದು ಸ್ಥಳದ ಹೆಸರು (?) : ಹಿರಿಯ ಕೆಱೆಯ ತಿಬ್ಬಯಲಲು ಬಟ್ಟಿಗ ಗಟ್ಟವೊಂದುವೂರಿನ್ದ ಹಡುವಣ ಹೊಲದಲ್ಲಿ ಬೆದ್ದಲೆ ೪೨ (ಎಕ. V, ಹಾಸನ. ೫೮–೪೮ ; 1174).

[ ತಿಬ್ಬ? + ಬಯಲು (<ಬಯಲ್) ]

**ತಿಬ್ಬರ** 'ತಿಬ್ಬ$_1$' ನೋ.

**ತಿಬ್ಬಳಿ** (ನಾ). ಬುದ್ಧಿ ; ಎಚ್ಚರ ; ಜ್ಞಾನ : ತಿಬ್ಬಳಿಯಡಂಗಿ ಬಿಳ್ದಾ ವೀರಭಟವಿತತಿ ಸಿಬ್ಬದಿಗೊಳುತ್ತ ಸಿಡಿಮಿಡಿಗೊಂಬ ನೃಪಸಮಿತಿ (ಸಮ್ಯಕೌ. ೮–೬೩) : ಏನೋ ಎಲಾ ತಿಬ್ಬಳಿ ಇಲ್ಲದೆ ಮಾತನಾಡುತ್ತೀರಿ (ಕಥಾಮಂ. IV, ೧೮).

**ತಿಬ್ಬಿ** (ಗು). ಯುನಾನಿ ಚಿಕಿತ್ಸೆಗೆ ಸಂಬಂಧಿಸಿದ : 'ತಿಬ್ಬಿವೈದ್ಯ' ಪರಾ. [ ←ಅರ. ತಿಬ್ಬೀ ]

**ತಿಬ್ಬಿವೈದ್ಯ** (ನಾ). ಯುನಾನಿ ವೈದ್ಯ ; ಹಕೀಮ : ಆಯುರ್ವೇದ ಪಂಡಿತರನ್ನನುಸರಿಸುವಂತೆ ತಿಬ್ಬಿವೈದ್ಯರನ್ನು ಅಪೇಕ್ಷಿಸುವುದಾಗಲಿ ಹಿಂದುಗಳಿಗೆ ಎಂದೂ ಕಷ್ಟವೆಂದೆನಿಸಿರಲಾರದು (ಭಾರದ. ೪೦೮).

[ ತಿಬ್ಬಿ + ವೈದ್ಯ ]

**ತಿಬ್ಬು** 'ತಿರುವು$_3$' ನೋ.

**ತಿಮರು$_1$** 'ತಿಮಿರ$_1$' ನೋ.

**ತಿಮರು$_2$** (ನಾ). (?) : ಬಿತ್ತುವ ಮಾ ೩ ಪಣುವು ತಿಮರು ಬಿತ್ತುವ ಮು ೩ (ಸೌಇಂ. ೧೯೨೯, ಮಂಗಳೂರು. ೪೬೫–೧೩ ; 1312). [ ? ]

**ತಿಮರೆ** (ನಾ). ಒಂದು ಬಗೆಯ ಸೊಪ್ಪು ; ಒಂದೆಲಗ ; ಇಲಿಕಿವಿಸೊಪ್ಪು : ಇಗೋ ತಿಮರೆ. ತಂಬ್ಳಿ ಮಾಡು ನೋಡೋಣ (ಬಾಳಿ. ೧೦೭).

[ ? ]

**ತಿಮಿ** (ನಾ). ೧. ಮೀನು ; ಮತ್ಸ್ಯ : "ಮೀನಂ ಶಫರಂ ತಿಮಿ ಪಾಠೀನಂ ಝಷವನಿಮಿಷಂ ವಿಸಾರಂ ಮತ್ಸ್ಯಂ ಮೀನವೆಸರ್" (ವಸ್ತುಕೋ. ೨೨–೫); "ಮೀನಂ ಝಷಂ ತಿಮಿ ವಿಸಾರಮಾ ಶಿಲ್ಕಿ . . . ವೈಸಾರಿಣಂ ಮತ್ಸ್ಯಮೆನೆ ಮೀನ್ಗೆ ನಾಮಂ" (ಮಂಗರಾ. ೧೨೦–೬). ೨. ದೊಡ್ಡ ಗಾತ್ರದ ಮೀನು : "ರೀರಲ್ಲಃ, ತಿಮಿಃ, ತಿಮಿಂಗಿಳಃ (ತಿಮಿಂಗಿಳಗಿಳಃ) –ಈ ೪ ಒಂದೊಂದಕ್ಕೆ ಹಿರಿಯವಪ್ಪ ಮೀನ್" (ಹಲಾಯು. ೧೧೯–೩೮) ; ಜಳಧಿಯೊಳ್ ತಿಮಿ ತಿಮಿಂಗಿಳಗಿಳ ಮಕರ ಪ್ರಕರ ಶಂಕ ಸಂಭವಮಕ್ಕುಂ (ಕಾವ್ಯಾವ. ೮೮೩) ; ಕಿರುಮೀನ್ಗೆ ಕೆರೆ ಕೊಳಂ ಪೊಳೆ ಸಾಲ್ಗುಮಾ ತಿಮಿಗೆ ವೇಳ್ಕುಂ ಜಲಕ್ರೀಡೆಗಾರುಂದ್ರಸಾಗರಸಲಿಲವಿಸ್ತಾರ (ಶ್ರೀರಾಮಾ. ೪–೯೫) ; ತಿಮಿಯಂ ತಿಮಿಂಗಿಳನಡಂಗುವಿನಂ ತವೆ ನುಂಗೆ ಆ ತಿಮಿಂಗಿಳನುಮನೀ ತಿಮಿಂಗಿಳಗಿಳಂ ತವೆ ನುಂಗಿದೆನೊಂದೆ ತುತ್ತಿನೊಳ್ (ಮಂತ್ರಶ. ೫೬–೧೬) ; ಸಮುದ್ರದಡದಲ್ಲಿ ತಿಮಿಜಾತಿಗೆ ಸೇರಿದ ಪ್ರಾಣಿಗಳೂ ಇವೆ (ಪ್ರವಾಇ. I, ೫೬). [ ಸಂ. ]

**ತಿಮಿಂಗಿಲ, ತಿಮಿಂಗಿಳ** (ನಾ). 'ತಿಮಿ' ಎಂಬ ಮೀನುಗಳನ್ನು ನುಂಗುವ ಬಹಳ ದೊಡ್ಡ ಗಾತ್ರದ ಒಂದು ಬಗೆಯ ಮೀನು : ತಿಮಿಂಗಿಲ ಮತ್ಸ್ಯ ಕಚ್ಛಪ ಕರಿ ಮಕರಗಳಡಸಿ ತುಂಬಿದ ಹಗೆಯೆನಿಸಿ . . . ಮೆಱೆದುದರರೆ ಪಶ್ಚಿಮವನನಿಧಿ (ಸೋಮಜ. ೧–೬೦) ; ಮಿಗೆ ತಿಮಿಂಗಿಲ ನೊಡನೆ ಹುಲುಮೀನುಗಳು ಮಾಡುವುದೇನು (ಕುಮಾರ್ದ್ಯೂ. ೩–೪೨); ಅಡಿಯೆ ಮೇಲಾದವೋಲೋಕರಿಪುದದ್ರಿಸಮ ಊರ್ಮಿಮಾಲಾ ಭಯಂಕರ ಸಮುದ್ರಂ, ತಿಮಿಂಗಿಲಂ ತೃಣದ ಕಣವಾಯಿತೆಂಬಂತೆ (ಶ್ರೀರಾಮಾ. ೧೬೫–೧೬೦); ಇದು ತಿಮಿಂಗಿಲ ಮೊಸಳೆ ಮೀನಂಗಳ ಬಾಳ ಕೊಳಗುಳದಾಕರ! (ಮಾನಸ. ೪೧–೩). **ತಿಮಿಂಗಿಳ :** "ರೀರಲ್ಲಃ, ತಿಮಿಃ, ತಿಮಿಂಗಿಳಃ (ತಿಮಿಂಗಿಳಗಿಳಃ)–ಈ ೪ ಒಂದೊಂದಕ್ಕೆ ಹಿರಿಯವಪ್ಪ ಮೀನ್" (ಹಲಾಯು. ೧೧೯–೩೮) ; ಬಾಳೆಗಳಂ ತಿಮಿ ನುಂಗೆ, ನುಂಗಿದಾಗಳೆ ತಿಮಿಯಂ ತಿಮಿಂಗಿಳ ನಡಂಗುವಿನಂ ತವೆ ನುಂಗೆ (ಕಾವ್ಯಾವ. ೮೮೪). [ ಸಂ. ]

**ತಿಮಿಂಗಿಲಗಿಲ, ತಿಮಿಂಗಿಳಗಿಳ** (ನಾ). 'ತಿಮಿಂಗಿಲ' ಎಂಬ ಮೀನುಗಳನ್ನು ನುಂಗುವ ಅತಿ ದೊಡ್ಡ ಗಾತ್ರದ ಒಂದು ಬಗೆಯ ಮೀನು: ಅದಕ್ಕೆ ಮೊದಲು ನಾನು ತಿಮಿಂಗಿಲಗಿಲವಾಗಿದ್ದೆನು (ಮಂತ್ರಶ. ೫೬–೧೯). **ತಿಮಿಂಗಿಳಗಿಳ:** "ರೀರಲ್ಲಃ, ತಿಮಿಃ, ತಿಮಿಂಗಿಳಃ (ತಿಮಿಂಗಿಳಗಿಳಃ) – ಈ ೪ ಒಂದೊಂದಕ್ಕೆ ಹಿರಿಯವಪ್ಪ ಮೀನ್" (ಹಲಾಯು. ೧೧೯–೩೮) ; ತಿಮಿಯಂ ತಿಮಿಂಗಿಳನಡಂಗುವಿನಂ ತವೆ ನುಂಗೆ ತತ್ತಿಮಿಂಗಿಳಮುಮನಾ ತಿಮಿಂಗಿಳಗಿಳಂ ತವೆ ನಂಗಿದುದೊಂದು ತಾಣದೊಳ್ (ಕಾವ್ಯಾವ. ೮೮೪). [ ಸಂ. ]

**ತಿಮಿಂಗಿಲನ್ಯಾಯ** (ನಾ). ದೊಡ್ಡದು ಚಿಕ್ಕದನ್ನು ತಿಂದು ಜೀವಿಸುವ ನ್ಯಾಯ : ಈ ತಿಮಿಂಗಿಲನ್ಯಾಯದಿಂದ ಸ್ವಾತಂತ್ರ್ಯ ಸಿದ್ಧಿಯಾದೀತೆ (ಹಾಡುಹು. ೬೮). [ ತಿಮಿಂಗಿಲ + ನ್ಯಾಯ ]

**ತಿಮಿಂಗಿಲರಾಶಿ** (ನಾ). ಒಂದು ನಕ್ಷತ್ರ ಪುಂಜದ ಹೆಸರು : ಅಗ್ನಿಕುಂಡ ಶಿಲ್ಪಶಾಲೆಗಳ ಮೇಲಕ್ಕೆ ಅಂದರೆ ಉತ್ತರ ವಾಯವ್ಯಗಳಿಗೆ ಹಬ್ಬಿ ತಿಮಿಂಗಿಲರಾಶಿ ವ್ಯಾಪಿಸಿದೆ (ನಕ್ಷತ್ರ. ೩೦). P ಇದು ಇಂಗ್ಲಿಷಿನ 'Cetus' ಎಂಬುದರ ಕನ್ನಡ ಅನುವಾದ. [ ತಿಮಿಂಗಿಲ + ರಾಶಿ ]

**ತಿಮಿಂಗಿಳ** 'ತಿಮಿಂಗಿಲ' ನೋ.

**ತಿಮಿಂಗಿಳಗಿಳ** 'ತಿಮಿಂಗಿಲಗಿಲ' ನೋ.

**ತಿಮಿತ** (ಗು). ಅಲುಗಾಡದ ; ಅಚಲವಾದ ; ಸ್ಥಿರವಾದ : "ಸ್ತಿಮಿತಂ ತಿಮಿತಂ" (ವಸ್ತುಕೋ. ೧೦೬–೫೧) ; ತಿಮಿತ ಕಪೋಲಾವಳಗ್ನಾಳಕಂ ಯೌವತಮಾದಂ ಕಣ್ಗೆವಂದಿರ್ದುದು ಕೃತಸಲಿಲಕ್ರೀಡಮಸ್ತೋಷ್ಣಪೀಡಂ (ಚಂದ್ರಪು. ೭–೧೪೯). [ ಸಂ. ]

**ತಿಮಿತ್ತಿಳಿಕ** (ನಾ). ಕಾಡಿಗೆಯ ತಿಲಕ (?) : ಅದಲ್ಲದೆಯುಂ ತಿಮಿತ್ತಿಳಿಕಮೆಂಬುದು ಪಸುಗೂಸಿಂಗೆ ಮಸಿಯೆಂಬುದು ಹುರಿಯೋಡಿಂಗೆ (ಅನಂಪು. ೨–೨೮ ವ).

[ P ಇದು 'ತಿಮಿರ್ತಿಲಕ' ಎಂಬುದರ ಅಪಲಿಖಿತವಿರಬಹುದು ]

**ತಿಮಿರ್$_1$, ತಿಗಂರು$_1$, ತಿಮಿರು$_1$, ತಿವುರು$_1$** (ಕ್ರಿ). ೧. (ಚರ್ಮವನ್ನು) ತಿಕ್ಕಿ ಶುಭ್ರಗೊಳಿಸು ; ಚೊಕ್ಕಟಗೊಳಿಸು: "ತಿಮಿರ್–ತ್ವಙ್ಮಲ ವಿಸರ್ಜನೇ" (ಶಮಧಾ). ೨. ಗಂಧ ಮೊದಲಾದುವನ್ನು ಲೇಪಿಸು,-ಉಜ್ಜು,-ಪೂಸು: ಬಱಿಯುಂ ಯಕ್ಷಕರ್ದಮದ ಕೆಯ್ಗಟ್ಟಿಯೊಳ್ ಕೆಯ್ಯಂ ತಿಮಿರ್ದು ತಂಬುಲಮಂ ಕೊಂಡು (ಪಂಪಭಾ. ೩–೭೯ ವ) ; ಕೈಘಟ್ಟಿಯೊಳಂಗೆಯ್ಯಂ ತಿಮಿರ್ದು (ಸುಕುಮಾ. ೧೧–೩೦) ; ಅಗ್ರಪಲ್ಲವದ ಚಪ್ಪರಣೆಗಳಿಂ ಬೆಪ್ಪಳಿಸಿ ನೆಗೆದು ತಿಮಿರ್ದ ಕುಂಕುಮದಿಂ (ಅನಂಪು. ೨–೨೯ ವ) : ಬಾರೆಯ್ ನೀರೆಱೆವೆಂ ಮೀಯಿಸುವೆಂ ಪೂಸುವೆಂ ಬಾವನ್ನದಿಂ ತಿಮಿರ್ವೆಂ ತಿಲಕಮನಿಡುವೆಂ ತನಿವಣ್ಗಳಂ ತಿನಲೀವೆಂ, ನಿನ್ನನಗಲದಾವಗಂ ಸೇವಿಸುವೆಂ (ರಾಮಾಶ್ವ. ೬೧–೧೬).

ಕರ್ನಾಟಕ ಸರ್ಕಾರದ ಉದಾರ ಧನಸಹಾಯದಿಂದ ಕನ್ನಡಿಗರ ಬಹುದಿನಗಳ ಬೇಡಿಕೆಯಾಗಿದ್ದ ಕನ್ನಡ ನಿಘಂಟಿನ ಎಂಟು ಸಂಪುಟಗಳು ಈಗ ಪುನರ್ಮುದ್ರಣಗೊಂಡು ನಿಮ್ಮ ಕೈಸೇರುತ್ತಿವೆ.

ಸಮಸ್ತ ಕನ್ನಡಿಗರಿಗೆ ಈ ಸಂಪುಟಗಳನ್ನು ಒಪ್ಪಿಸಲು ನೆರವು ನೀಡಿದ ಕರ್ನಾಟಕ ಸರ್ಕಾರವನ್ನು ನಾನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಡಾ. ನಲ್ಲೂರು ಪ್ರಸಾದ್ ಆರ್. ಕೆ.
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು

ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ನಾಲ್ಕನೆಯ ಸಂಪುಟ

ತಿಮಿರ್$_2$–ನಾಭಿ

"ಶಬ್ದಪಾರಮಾರ್ಗಮಶಕ್ಯಂ"

–ಕೇಶಿರಾಜ

ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : ಬೆಂಗಳೂರು – ೧೮

೧೯೭೯

ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ನಾಲ್ಕನೆಯ ಸಂಪುಟ

"ಶಬ್ದಪಾರಮಾರ್ಗಮಶಕ್ಯಂ"
–ಕೇಶಿರಾಜ

ಪ್ರೊ. ಜಿ. ವೆಂಕಟಸುಬ್ಬಯ್ಯ
ಪ್ರಧಾನ ಸಂಪಾದಕ

ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : : ಬೆಂಗಳೂರು–೧೮

೧೯೭೯

KANNADA NIGHANTU - VOL-IV
Second Edition : 2010
Published by : Kannada Sahitya Parishat
Pampa Mahakavi Road, Chamarajapet, Bangalore - 560 018
Pages : X+3483 to 4490 Price : Rs. 350=00

ಎರಡನೆಯ ಮುದ್ರಣ – ೨೦೧೦
ಪ್ರತಿಗಳು : ೨೦೦೦
ಬೆಲೆ : ಮುನ್ನೂರು ಐವತ್ತು ರೂಪಾಯಿಗಳು




ಮುದ್ರಣ: **ರಾಜಾ ಪ್ರಿಂಟರ್ಸ್**
ನಂ.೫೯, ೪ನೆ ಕ್ರಾಸ್, ಲಾಲ್‌ಬಾಗ್ ರಸ್ತೆ
ಕೆ.ಎಸ್. ಗಾರ್ಡನ್, ಗಂಗಾಧರಪ್ಪ ಬ್ಲಾಕ್
ಬೆಂಗಳೂರು– ೫೬೦ ೦೨೭.

# ಕನ್ನಡ ನಿಘಂಟು ಸಂಪಾದಕ ಸಮಿತಿ

(೧೯೭೯ನೆಯ ಆಗಸ್ಟ್ ತಿಂಗಳಿನಲ್ಲಿ ಇದ್ದಂತೆ)

**ಅಧ್ಯಕ್ಷರು**

ಪ್ರೊ. ಎಂ. ಮರಿಯಪ್ಪಭಟ್ಟ, ಎಂ.ಎ., ಎಲ್.ಟಿ.

**ಉಪಾಧ್ಯಕ್ಷರು ಮತ್ತು ಪ್ರಧಾನ ಸಂಪಾದಕರು**

ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.

**ಸದಸ್ಯರು**

ಪ್ರೊ. ಸ. ಸ. ಮಾಳವಾಡ, ಎಂ.ಎ.
ಪ್ರೊ. ಡಿ. ಜವರೇಗೌಡ, ಎಂ.ಎ.
ಡಾ. ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ.
ಡಾ. ಸಿದ್ಧಯ್ಯಪುರಾಣಿಕ, ಬಿ.ಎ., ಎಲ್.ಎಲ್.ಬಿ.
ಡಾ. ಜಿ.ಎಸ್. ಗಾಯಿ, ಎಂ.ಎ., ಪಿಎಚ್.ಡಿ.
ಡಾ. ಹಾ. ಮಾ. ನಾಯಕ, ಎಂ.ಎ., ಪಿಎಚ್.ಡಿ.
ಡಾ. ಜಿ.ಎಸ್. ಶಿವರುದ್ರಪ್ಪ, ಎಂ.ಎ., ಪಿಎಚ್.ಡಿ
ಶ್ರೀ ವಿ. ಬಿ. ನಾಯಕ, ಎಂ.ಎ., ಎಲ್.ಎಲ್.ಬಿ.
ಶ್ರೀ ಬಸವರಾಜ ಕಟ್ಟೀಮನಿ
ಡಾ. ಎಂ. ಚಿದಾನಂದಮೂರ್ತಿ, ಎಂ.ಎ., ಪಿಎಚ್.ಡಿ.
ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ, ಎಂ.ಎ., ಪಿಎಚ್.ಡಿ.

**ಪರಿಷತ್ತಿನ ಅಧ್ಯಕ್ಷರು**

ಶ್ರೀ ಹಂಪ. ನಾಗರಾಜಯ್ಯ, ಎಂ.ಎ.

**ಪರಿಷತ್ತಿನ ಕಾರ್ಯದರ್ಶಿಗಳು**

ಶ್ರೀ. ಡಿ. ಲಿಂಗಯ್ಯ, ಎಂ.ಎ.

**ಪರಿಷತ್ತಿನ ಕೋಶಾಧಿಕಾರಿಗಳು**

ಶ್ರೀ ಎಂ. ಪಿ. ದೇವರಾಜ್, ಬಿ.ಕಾಂ., ಬಿ.ಎಲ್.

# ಸಂಪಾದಕ ವರ್ಗ

ಪ್ರಧಾನ ಸಂಪಾದಕರು

**ಪ್ರೊ. ಜಿ. ವೆಂಕಟಸುಬ್ಬಯ್ಯ,** ಎಂ. ಎ., ಬಿ.ಟಿ.

**ಉಪಸಂಪಾದಕರು**

ಶ್ರೀ ಹೀ. ಚಿ. ಶಾಂತವೀರಯ್ಯ, ಎಂ.ಎ., ಬಿ.ಇಡಿ.
ಶ್ರೀ ಆರ್. ವಿ. ಕುಲಕರ್ಣಿ, ಎಂ.ಎ.,ಬಿ.ಇಡಿ.
ಶ್ರೀ ಟಿ. ಆರ್. ಮಹದೇವಯ್ಯ, ಎಂ. ಎ.

**ಸಹಾಯಕ ಸಂಪಾದಕರು**

ವಿದ್ವಾನ್ ಎಚ್. ವಿ. ನಾರಾಯಣಶಾಸ್ತ್ರೀ
ಶ್ರೀಮತಿ ಮಂಜುಳಾರಾವ್, ಎಂ.ಎ.
ಶ್ರೀಮತಿ ಎಂ. ಎನ್. ಜಾನಕಮ್ಮ, ಎಂ.ಎ.
ಶ್ರೀಮತಿ ಬಿ. ಶಕುಂತಲ, ಎಂ.ಎ.
ಶ್ರೀಮತಿ ಉಮಾದೇವಿ, ಎಂ.ಎ
ಶ್ರೀಮತಿ ವಿಜಯಲಕ್ಷ್ಮಿ, ಎಂ.ಎ
ಶ್ರೀಮತಿ ಎಂ.ಎಸ್. ಸುಜಯ, ಎಂ.ಎ
ಶ್ರೀ ಬಿ. ಆರ್. ಬಸವರಾಜ, ಎಂ.ಎ.

**ಕಚೇರಿಯ ಸಿಬ್ಬಂದಿವರ್ಗ**

ಬೆರಳಚ್ಚುಗಾರ್ತಿಯರು : ಶ್ರೀಮತಿ ಎ. ನೇತ್ರಾವತಿಬಾಯಿ, ಶ್ರೀಮತಿ ಸಿ. ಎನ್. ವಿಜಯಲಕ್ಷ್ಮಿ

ಪಟ್ಟಿಕೆ ವಿಂಗಡಣೆಕಾರರು : ಶ್ರೀ ಎನ್. ಎಸ್. ರಾಮಸ್ವಾಮಿ ಅಯ್ಯರ್, ಎಂ.ಎ., ಬಿ.ಟಿ.

ಸೇವಕರು : ರಾಘವೇಂದ್ರ, ಮಾದಪ್ಪ, ಶಂಕರಪ್ಪ, ರೇವಯ್ಯ, ವಿ. ಸತ್ಯನಾರಾಯಣ

# ಅಧ್ಯಕ್ಷರ ನುಡಿ

'ನಿಘಂಟು ಎಂದರೆ ಕನ್ನಡ ಸಾಹಿತ್ಯ ಪರಿಷತ್ತಿನ ಬೃಹನ್ನಿಘಂಟು' ಎಂದೇ ಖ್ಯಾತವಾಗಿರುವ ಈ ಮಹಾನಿಘಂಟಿನ ಎಂಟು ಸಂಪುಟಗಳನ್ನು ಅದು ಪ್ರಕಟವಾದ ೧೫ ವರ್ಷಗಳ ನಂತರ ಮತ್ತಷ್ಟು ಸುಂದರವಾಗಿ ಮರುಮುದ್ರಣಗೊಳಿಸಿ ಕನ್ನಡ ಕುಲಕೋಟಿಗೆ ಅರ್ಪಿಸಲು ನನಗೆ ಸಂತೋಷವೆನಿಸುತ್ತದೆ. ಕನ್ನಡ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ಪಡೆದುಕೊಂಡಿರುವುದು ಅದರ ಸಂಪನ್ನತೆ ಮತ್ತು ಅರ್ಹತೆಗಳಿಂದಾಗಿಯೇ ಎಂಬುದನ್ನು ಲೋಕದೆದುರು ಬಿಚ್ಚಿತೋರಿಸುವ ಸಾಧನಗಳಲ್ಲಿ ಮುಖ್ಯವಾದದ್ದು ಈ ಬೃಹತ್ ನಿಘಂಟು. ಕನ್ನಡದ ಸಮಸ್ತ ಜ್ಞಾನವನ್ನೂ ತನ್ನೊಳಗೆ ಐಕ್ಯಗೊಳಿಸಿಕೊಂಡಿರುವ ಈ ನಿಘಂಟಿನ ವಿವಿಧ ಸಂಪುಟಗಳಲ್ಲಿ ಶಬ್ದವೊಂದರ ಅರ್ಥ, ವಿವರಣೆ, ಉದಾಹರಣೆ ಒಮ್ಮೊಮ್ಮೆ ಅರ್ಧಪುಟವನ್ನು ದಾಟಿ ಒಂದು ಪುಟವನ್ನು ಆವರಿಸಿಕೊಂಡಿರುವುದುಂಟು.

ಕ್ರಿ.ಶ.೪೫೦ರ ಹಲ್ಮಿಡಿಶಾಸನದಿಂದ ಪ್ರಾರಂಭವಾಗಿ ಈ ಸಂಪುಟ ಯೋಜನೆ ಅನುಷ್ಠಾನಗೊಂಡ ೧೯೯೫ರವರೆಗೆ ಕನ್ನಡದಲ್ಲಿ ಪ್ರಕಟವಾದ ಎಲ್ಲ ಬಗೆಯ ಸಾಹಿತ್ಯ ಪ್ರಕಾರಗಳಿಂದಲೂ ಉಲ್ಲೇಖಗಳನ್ನು ನೀಡಲಾಗಿರುವುದು, ಕೆಲವೊಮ್ಮೆ ಒಂದೇ ಶಬ್ದಕ್ಕೆ ಬೇರೆ ಬೇರೆ ಅರ್ಥಗಳು ಪ್ರಾಪ್ತವಾಗುವ ಸಂದರ್ಭಗಳನ್ನು ಜೊತೆಗಿರಿಸಿ ಕೊಟ್ಟಿರುವುದು, ಪ್ರತಿಯೊಂದು ಶಬ್ದವನ್ನೂ ನಾಮಪದ ಅಥವಾ ಕ್ರಿಯಾಪದವೆಂದು ಖಚಿತವಾಗಿ ವಿಂಗಡಿಸಿಕೊಂಡಿರುವುದು, ಅರ್ಥ ಸ್ಪಷ್ಟೀಕರಣಕ್ಕೆಂದು ಉದಾಹರಣೆಯಾಗಿ ಕೊಟ್ಟಿರುವ ವಾಕ್ಯ ಅಥವಾ ವಾಕ್ಯತುಂಡುಗಳೇ ಮೂಲಕಾವ್ಯವನ್ನು ಓದಬೇಕೆನ್ನುವ ಆಸಕ್ತಿಯನ್ನು ಹುಟ್ಟಿಸುವುದು – ಈ ಎಲ್ಲ ಅಂಶಗಳು ಇದರ ಅಪೂರ್ವತೆಯನ್ನು ಎತ್ತಿ ಹಿಡಿಯುವ ಸಾಕ್ಷಿಕಲ್ಲುಗಳಾಗಿವೆ. ನಿಘಂಟು ಎನ್ನುವುದೇ ತುಂಬ ವೈಜ್ಞಾನಿಕವಾದ, ಒಂದು ಭಾಷೆಯ ಸೃಜನ ಸಾಹಿತ್ಯದಷ್ಟೇ ಪ್ರಮುಖವಾದ, ಭಾಷೆಯಲ್ಲಿರುವ ಶಬ್ದಗಳನ್ನು ಶುದ್ಧವಾಗಿ ಉಚ್ಚರಿಸಬೇಕೆಂದು ತಿಳಿಸಿಕೊಡುವ ರಚನೆಯಾಗಿರುವುದರಿಂದ ಜ್ಞಾನೇಂದ್ರಿಯಗಳೆಲ್ಲದರ ಎಚ್ಚರದ ದುಡಿಮೆಯನ್ನು ಬಯಸುತ್ತದೆ. ಕನ್ನಡದ ಅಭಿಮಾನವನ್ನು ಮೈತುಂಬಿಕೊಂಡ ಘನ ವಿದ್ವಾಂಸರ ಸತತ ಪರಿಶ್ರಮದಿಂದ ಈ ಯೋಜನೆ ಶಿಸ್ತುಬದ್ಧವಾಗಿ ಯಶಕಂಡಿದೆ. ಮೊದಲ ಮುದ್ರಣದ ೧೦,೦೦೦ ಪ್ರತಿಗಳು ಕೆಲವೇ ವರ್ಷಗಳಲ್ಲಿ ಕನ್ನಡಿಗರ ಮನೆಯ ಕಪಾಟುಗಳನ್ನು, ಗ್ರಂಥಭಂಡಾರಗಳನ್ನು, ಶಾಲೆಕಾಲೇಜುಗಳನ್ನು ಅಲಂಕರಿಸಿದ್ದರಿಂದ ಕನ್ನಡ ಸಾಹಿತ್ಯ ಪರಿಷತ್ತು ಧನ್ಯತಾಭಾವವನ್ನು ತಳೆಯುವಂತಾಯಿತು. ಆದರೆ ನಿಘಂಟುವಿನ ಉಪಯುಕ್ತತೆಯನ್ನು ತಡವಾಗಿ ಅರ್ಥಮಾಡಿಕೊಂಡವರು ಅಂದಿನಿಂದ ಇಂದಿನವರೆಗೆ ಸಾಹಿತ್ಯ ಪರಿಷತ್ತಿಗೆ ದೂರವಾಣಿ ಕರೆ ಮಾಡಿ, ಮಾರಾಟ ವಿಭಾಗದಲ್ಲಿ ವಿಚಾರಿಸಿ, ಪುಸ್ತಕ ಮಳಿಗೆಗಳಲ್ಲಿ ಹುಡುಕಾಡಿ ಸಿಗದೆ ನಿರಾಶರಾಗಿದ್ದಾರೆ. ಮರುಪ್ರಕಟಿಸುವಂತೆ ಒತ್ತಾಯ ಮಾಡಿದ್ದಾರೆ.

ಎಂಟು ಸಂಪುಟಗಳಲ್ಲಿ, ಒಂಬತ್ತು ಸಾವಿರಕ್ಕಿಂತಲೂ ಅಧಿಕ ಪುಟಗಳ ವಿಸ್ತಾರದಲ್ಲಿ ಹರಡಿಕೊಂಡಿರುವ, ಎಲ್ಲರ ಮನೆಯನ್ನೂ ಬೆಳಗಬೇಕಾಗಿರುವ ಈ ನಿಘಂಟನ್ನು ಮುದ್ರಿಸುವುದಾಗಲೀ, ಮುದ್ರಿತ ಪ್ರತಿಗಳನ್ನು ಒಂದೆಡೆ ಜೋಡಿಸಿಡುವುದಾಗಲೀ, ಮಾರಾಟದ ವ್ಯವಸ್ಥೆ ಮಾಡುವುದಾಗಲೀ, ಹೆಚ್ಚಿನ ಪ್ರಮಾಣದಲ್ಲಿ ಒಂದು

ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವುದಾಗಲೀ ಅಷ್ಟೊಂದು ಸುಲಭವಾದ ಕೆಲಸವಲ್ಲ. ಈ ಅಸಾಧ್ಯವನ್ನು ಸಾಧ್ಯವಾಗಿಸುವ ಧೈರ್ಯೋತ್ಸಾಹಗಳು ಪರಿಷತ್ತಿನೊಡಲಲ್ಲಿ ಚಿಮ್ಮುವುದಕ್ಕೆ ಕರ್ನಾಟಕ ರಾಜ್ಯ ಸರ್ಕಾರ ಕಾರಣವಾಯಿತೆಂದರೆ ಅದನ್ನು ಯಾರೂ ಅತಿಶಯೋಕ್ತಿಯೆಂದು ಭಾವಿಸಬೇಕಾಗಿಲ್ಲ. ಕರ್ನಾಟಕ ರಾಜ್ಯ ಸರ್ಕಾರ ಕನ್ನಡ ಸಾಹಿತ್ಯ ಪರಿಷತ್ತಿನ ಮಾತುಗಳನ್ನು ಪ್ರೀತಿಯಿಂದ ಆಲಿಸುತ್ತಿರುವುದು, ಕನ್ನಡ ಸಾಹಿತ್ಯ ಪರಿಷತ್ತನ್ನು ಕನ್ನಡದ ಸಾರ್ವಭೌಮ ಪ್ರತಿನಿಧಿಯೆಂದೇ ಭಾವಿಸುತ್ತಿರುವುದು ಕನ್ನಡದ ಭಾಗ್ಯವೆಂದೇ ಹೇಳಬೇಕು. ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಹಲವು ಒತ್ತಡಗಳ ನಡುವೆಯೂ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳಲ್ಲಿ ಅತ್ಯಂತ ಪ್ರೀತಿಯಿಂದ ಭಾಗವಹಿಸುತ್ತಿರುವುದು, ಸಮಾರಂಭಗಳಲ್ಲಿ ಕೊಟ್ಟ ಆಶ್ವಾಸನೆಗಳನ್ನು ಅತಿಶೀಘ್ರವಾಗಿ ಅನುಷ್ಠಾನಗೊಳಿಸುತ್ತಿರುವುದು, ಪರಿಷತ್ತಿನ ಎಲ್ಲಾ ಯೋಜನೆಗಳಿಗೂ ಹಸಿರು ನಿಶಾನೆ ತೋರುತ್ತಿರುವುದು, ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳು ಮುಖ್ಯಮಂತ್ರಿ – ಕನ್ನಡ ಸಂಸ್ಕೃತಿ ಮಂತ್ರಿಗಳ ಕಚೇರಿಯ ಹೊರಗೆ ಕಡತಗಳೊಂದಿಗೆ ಗಂಟೆಗಟ್ಟಲೆ ಕಾಯುತ್ತಿದ್ದುದನ್ನು ತಪ್ಪಿಸಿರುವುದು, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಿಂದ ತಾಲ್ಲೂಕು ಸಮ್ಮೇಳನಗಳವರೆಗೆ ಎಲ್ಲವೂ ಅದ್ದೂರಿಯಾಗಿ ನಡೆಯಲು ಬೇಕಾದಷ್ಟು ಪ್ರಮಾಣದಲ್ಲಿ ಹಣ ಬಿಡುಗಡೆ ಮಾಡುತ್ತಿರುವುದು – ಇಂಥವನ್ನೆಲ್ಲಾ ಕಂಡಾಗ ಪರಿಷತ್ತಿನ ಅಧ್ಯಕ್ಷನಾಗಿ ನನಗೆ ಮನಸ್ಸು ತುಂಬಿ ಬರುತ್ತದೆ. ಆರುಕೋಟಿ ಕನ್ನಡಿಗರ ಪರವಾಗಿ ಅವರಿಗೆ ಕೃತಜ್ಞತಾ ಕುಸುಮಗಳನ್ನು ಅರ್ಪಿಸಬೇಕೆನ್ನಿಸುತ್ತದೆ. 'ಕನ್ನಡದ ಮುಖ್ಯಮಂತ್ರಿ' 'ಕನ್ನಡಿಗರ ಮುಖ್ಯಮಂತ್ರಿ' ಎಂದು ಅಭಿಮಾನದಿಂದ ನುಡಿಯಬೇಕೆನ್ನಿಸುತ್ತದೆ. ಸನ್ಮಾನ್ಯ ಮುಖ್ಯಮಂತ್ರಿಗಳ ಕನ್ನಡದ ಮೇಲಿನ, ಕನ್ನಡ ಸಾಹಿತ್ಯ ಪರಿಷತ್ತಿನ ಬಗೆಗಿನ ಈ ಅಖಂಡ ಪ್ರೀತಿ ಹೀಗೇ ಮುಂದುವರಿಯಲೆಂದು ಆಶಿಸುತ್ತೇನೆ.

ಕರ್ನಾಟಕ ಸರ್ಕಾರ ನಿಘಂಟು ಯೋಜನೆಯ ಮಹತ್ವವನ್ನು ಮನಗಂಡು ಒಂದು ಕೋಟಿ ರೂಪಾಯಿಗಳನ್ನು ಸಾಹಿತ್ಯ ಪರಿಷತ್ತಿಗೆ ಉದಾರವಾಗಿ ನೀಡಿದೆ. ಸರ್ಕಾರ ಹಣ ನೀಡಿರುವುದು ಪರಿಷತ್ತಿಗಾದರೂ ಇದು ಜನತೆಯ ಹಣ ಮತ್ತು ಇದರ ಅಂತಿಮ ಫಲಾನುಭವಿಗಳೂ ಜನತೆಯೇ. ಈ ಎಚ್ಚರವನ್ನಿರಿಸಿಕೊಂಡೇ ಸಾಹಿತ್ಯ ಪರಿಷತ್ತು ಬಹುಬೇಡಿಕೆಯ ಬೃಹನ್ನಿಘಂಟಿನ ಎಂಟು ಸಂಪುಟಗಳನ್ನು ಪುನರ್ಮುದ್ರಣಗೊಳಿಸುತ್ತಿದೆ. ಸರ್ಕಾರದ ಉದಾರ ಆರ್ಥಿಕ ನೆರವಿನ ಪರಿಣಾಮವಾಗಿ ನಿಘಂಟಿನ ಬೆಲೆಯನ್ನು ಸಾಮಾನ್ಯರೂ ಕೊಳ್ಳಲು ಮನಸ್ಸು ಮಾಡುವಂತೆ ಕಡಿಮೆಗೊಳಿಸಲಾಗಿದೆ. ಭಾಷೆ ಮತ್ತು ಸಾಹಿತ್ಯಾಭಿಮಾನದ ಸಂಕೇತವೆಂಬಂತೆ ಈ ಯೋಜನೆಯ ಯಶಸ್ಸಿನಲ್ಲಿ ಪ್ರಮುಖ ಪಾತ್ರ ನಿರ್ವಹಿಸಿರುವ ರಾಜ್ಯ ಸರ್ಕಾರವನ್ನು ಹಾಗೂ ಕನ್ನಡ ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಜಯರಾಮರಾಜೇ ಅರಸ್ ಮತ್ತು ನಿರ್ದೇಶಕರಾದ ಶ್ರೀ ಮನು ಬಳಿಗಾರ್ ಅವರುಗಳನ್ನು ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ. ನಿಘಂಟು ಯೋಜನೆ ಪ್ರಾರಂಭವಾದಾಗ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣರಿಂದ ಮೊದಲಗೊಂಡು ಮುಕ್ತಾಯವಾದಾಗ ಅಧ್ಯಕ್ಷರಾಗಿದ್ದ ಡಾ. ಸಾ.ಶಿ. ಮರುಳಯ್ಯನವರವರೆಗೆ ಇದನ್ನು ಆಸಕ್ತಿಯಿಂದ ಮುನ್ನಡೆಸಿಕೊಂಡು ಬಂದ ಎಲ್ಲ ಅಧ್ಯಕ್ಷರುಗಳಿಗೂ ನಿಘಂಟು ಸಮಿತಿಯ ಅಧ್ಯಕ್ಷರು, ಸದಸ್ಯರುಗಳು, ಸಂಪಾದಕರು, ಸಿಬ್ಬಂದಿ ವರ್ಗದವರಿಗೂ ಅಂದವಾಗಿ ಮುದ್ರಿಸಿಕೊಟ್ಟ ರಾಜಾ ಪ್ರಿಂಟರ್ಸ್‌ನವರಿಗೂ ಮತ್ತು ಅವರ ಸಿಬ್ಬಂದಿ ವರ್ಗದವರಿಗೂ ಕನ್ನಡ ಸಾಹಿತ್ಯ ಪರಿಷತ್ತು ತುಂಬಾ ಆಭಾರಿಯಾಗಿದೆ. ಮರುಮುದ್ರಣದ ಈ ನಿಘಂಟಿನ ಸಂಪುಟಗಳನ್ನು ಕನ್ನಡ ಜನತೆ ಪ್ರೀತಿ ವಿಶ್ವಾಸಗಳಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಬೆಂಗಳೂರು
೫-೬-೨೦೧೦

**ಡಾ. ನಲ್ಲೂರು ಪ್ರಸಾದ್ ಆರ್.ಕೆ.**
ಅಧ್ಯಕ್ಷರು

# ಅರಿಕೆ

ಕನ್ನಡ–ಕನ್ನಡ ನಿಘಂಟಿನ ಮೂರನೇ ಸಂಪುಟ ೧೯೭೭ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವದ ಶುಭಸಂದರ್ಭದಲ್ಲಿ ಬಿಡುಗಡೆಯಾಯಿತು. ಅದಾದ ಎರಡು ವರ್ಷಗಳ ತರುವಾಯ, ಈಗ, ನಾಲ್ಕನೇ ಸಂಪುಟ ರಾಜ್ಯೋತ್ಸವದ ಮಂಗಳಮುಹೂರ್ತದಲ್ಲಿ ಬಿಡುಗಡೆಯಾಗುತ್ತಿದೆ. ನಿಘಂಟಿನ ಪ್ರಧಾನ ಸಂಪಾದಕರಾದ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರ ಅವಿರತಶ್ರಮ, ದಕ್ಷತೆ ಇವುಗಳನ್ನು ಈ ಸಂದರ್ಭದಲ್ಲಿ ವಿಶೇಷವಾಗಿ ನೆನೆಸಿಕೊಳ್ಳಬೇಕು. ನಿಘಂಟು ಕಛೇರಿಯ ಸಮರ್ಥ ಸಿಬ್ಬಂದಿವರ್ಗದ ಕಾರ್ಯತತ್ಪರತೆ, ಹಾಗೂ ಸರ್ಕಾರಿ ಮುದ್ರಣಾಲಯದವರ ಸಹಕಾರ, ಇವುಗಳೆಲ್ಲದರ ಪ್ರತಿಫಲವಾಗಿ ಈ ನಾಲ್ಕನೇ ಸಂಪುಟ ಅತಿಕ್ಷಿಪ್ರವಾದ ಅವಧಿಯಲ್ಲಿ ಅಚ್ಚಾಗಿ ಹೊರಬರಲು ಸಾಧ್ಯವಾಗಿದೆ. ಅದಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ಈ ಎಲ್ಲ ಮಹನೀಯರಿಗೂ ಹೃತ್ಪೂರ್ವಕ ಕೃತಜ್ಞತೆಗಳನ್ನು ತಿಳಿಸುತ್ತದೆ.

ಪ್ರಧಾನ ಸಂಪಾದಕರಾದ ಪ್ರೊ. ಜಿ. ವೆಂಕಟಸುಬ್ಬಯ್ಯನವರು ೧೯೭೮ರ ರಾಜ್ಯೋತ್ಸವದ ವೇಳೆಗೆ ಈ ನಾಲ್ಕನೇ ಸಂಪುಟವನ್ನು ತಂದೇತೀರಬೇಕೆಂದು ದೃಢಸಂಕಲ್ಪ ಮಾಡಿದರು. ಈ ಸಂಪುಟದ ಮುದ್ರಣಕಾರ್ಯವನ್ನು ಸರ್ಕಾರಿ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಬಿ. ಎನ್. ರಾಮಮೂರ್ತಿ ಅವರು ವಹಿಸಿಕೊಂಡರು. ಅವರ ನಿರ್ದೇಶನವನ್ನೆಲ್ಲಾ ಕಾರ್ಯಗತಗೊಳಿಸಿ, ಉಪನಿರ್ದೇಶಕರಾದ ಶ್ರೀ ಎಂ. ಎಸ್. ಹಿರಿಯಣ್ಣಯ್ಯನವರು ಮತ್ತು ಅವರ ಸಿಬ್ಬಂದಿ ವರ್ಗದವರು ವಿಶೇಷವಾಗಿ ಆಸಕ್ತಿವಹಿಸಿ ತ್ವರಿತಗತಿಯಲ್ಲಿ ಮುದ್ರಿಸಿಕೊಟ್ಟರು. ಅವರ ವೈಯಕ್ತಿಕ ಆಸಕ್ತಿ ಮತ್ತು ಉತ್ಸಾಹಗಳ ಕಾರಣದಿಂದಾಗಿ ಈ ಸಂಪುಟ ರಾಜ್ಯೋತ್ಸವ ಸಮಯದಲ್ಲಿ ಬಿಡುಗಡೆಗೆ ಅಣಿಗೊಳ್ಳಲು ಸಾಧ್ಯವಾಗಿದೆ. ಈ ಮೂವರು ಮಹನೀಯರಿಗೆ ಪರಿಷತ್ತಿನ ಪರವಾಗಿ ಹಾಗೂ ವೈಯಕ್ತಿಕವಾಗಿ ವಂದನೆಗಳನ್ನು ಸಲ್ಲಿಸುತ್ತೇನೆ.

ಸರ್ಕಾರದ ನೆರವು ಇಲ್ಲದಿದ್ದರೆ ಈ ನಿಘಂಟು ಕನಸಿನ ಗಂಟಾಗುತ್ತಿತ್ತು. ಸರ್ಕಾರದ ಉದಾರ ಸಹಾಯದಿಂದ ಇದು ಇಷ್ಟುಬೇಗ, ಇಷ್ಟು ಅಚ್ಚುಕಟ್ಟಾಗಿ ಕನ್ನಡಿಗರ ಕೈಸೇರುವಂತಾಗಿದೆ. ಅದಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ಎಲ್ಲಾ ಕನ್ನಡಿಗರ ಪರವಾಗಿ ರಾಜ್ಯಸರ್ಕಾರಕ್ಕೆ ತನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಕರ್ನಾಟಕದ ರಾಜ್ಯಸರ್ಕಾರಕ್ಕೂ ಪರಿಷತ್ತಿಗೂ ಆದ ಒಪ್ಪಂದದ ಪ್ರಕಾರ ೧೯೭೭ರ ಮಾರ್ಚಿ ತಿಂಗಳ ಕಡೆಯಲ್ಲಿ ಇಡೀ ನಿಘಂಟಿನ ಕಾರ್ಯ ಮುಗಿಯಬೇಕಾಗಿತ್ತು. ನಿಘಂಟು ರಚನೆಯ ಕಾರ್ಯ ಆರಂಭವಾದಾಗ ಕಾಗದದ ಅಭಾವ, ಮುದ್ರಣ ಸೌಕರ್ಯದ ಕೊರತೆ, ಸಮರ್ಥ ಸಿಬ್ಬಂದಿ ಸಕಾಲದಲ್ಲಿ ಒದಗದಿದ್ದುದು–ಹೀಗೆ ಹಲವು ತೊಡಕುಗಳು ಕಂಡುಬಂದು ನಿಘಂಟನ್ನು ಸಂಪೂರ್ಣವಾಗಿ ಮುದ್ರಿಸುವುದು ವಿಳಂಬವಾಯಿತು. ಈ ಸಂಗತಿಯನ್ನು ಹಿಂದಿನ ಸಂಪುಟಗಳ ಅರಿಕೆಯಲ್ಲಿ ನಿರೂಪಿಸಲಾಗಿದೆ. ಈಗ ಈ ತೊಡಕುಗಳಲ್ಲಿ ಬಹುಪಾಲು ನಿವಾರಣೆಯಾಗಿದೆ.

ಈ ಸಂದರ್ಭದಲ್ಲಿ ಒಂದು ಮುಖ್ಯ ಸಂಗತಿಯನ್ನು ನೆನಪಿಡಬೇಕಾದುದು ಅಗತ್ಯ. ನಿಘಂಟಿನ ಕಾರ್ಯ ಅವಸರದ ಕೆಲಸವಲ್ಲ. ಅದರಲ್ಲಿಯೂ ಈಗ ಸಿದ್ಧಪಡಿಸುತ್ತಿರುವ ನಿಘಂಟಿನ ಸ್ವರೂಪದ ಸಂಕೀರ್ಣತೆಯನ್ನು ಗಮನಿಸಿದರೆ ವೇಗವನ್ನು ಎಷ್ಟೇ ಅಪೇಕ್ಷಿಸಿದರೂ ಆ ಬಯಕೆಯನ್ನು ಕಾರ್ಯಗತಗೊಳಿಸಲು ಅಷ್ಟು ಸಾಧ್ಯವಾಗುವುದಿಲ್ಲ.

ಎರಡನೆಯದಾಗಿ, ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ ಈ ನಿಘಂಟು ಭಾರತೀಯ ಭಾಷೆಗಳಲ್ಲಿಯೇ ವಿಶಿಷ್ಟ ಸ್ವರೂಪದ್ದಾಗಿದೆ. ಚರಿತ್ರಾರ್ಹ ಆಧಾರಗಳಿಂದ ಆಧುನಿಕ ವೈಜ್ಞಾನಿಕ ಪದ್ಧತಿಗಳನ್ನು ಅಳವಡಿಸಿಕೊಂಡು, ಶಾಸ್ತ್ರೀಯವಾಗಿ ಸಿದ್ಧವಾಗುತ್ತಿರುವ ಈ ನಿಘಂಟನ್ನು ಕನ್ನಡೇತರ ವಿದ್ವಾಂಸರೂ ಕೂಡ ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ. ಇದು ಕನ್ನಡದೇಶಕ್ಕೂ ಭಾಷೆಗೂ ಗೌರವವನ್ನು ಸಂಪಾದಿಸಿಕೊಡುವ ಅನನ್ಯಕೃತಿಯಾಗಿದೆ. ಆದ್ದರಿಂದ ಆತುರಪಡಿಸಿ ಇದರ ಅಚ್ಚುಕಟ್ಟುತನವನ್ನು ಸಡಿಲಿಸುವುದು ಸಾಧುವಾಗುವುದಿಲ್ಲ. ಹಾಗೆಂದು ಅನಾವಶ್ಯಕವಾಗಿ ನಿಧಾನವನ್ನು ಆಶ್ರಯಿಸುತ್ತಿಲ್ಲ. ನಿಘಂಟು ಸಂಪಾದಕ ಸಮಿತಿಯವರಿಗೂ ಈ ಕಾರ್ಯವನ್ನು ಎಷ್ಟು ಬೇಗ ಪೂರೈಸಲು ಸಾಧ್ಯವೋ ಅಷ್ಟು ಬೇಗ ಮುಗಿಸುವ ಅಪೇಕ್ಷೆಯಿದೆ.

ಈ ನಿಘಂಟಿನ ಮಹತ್ವವನ್ನು ಮನಗಂಡ ನಮ್ಮ ಸರ್ಕಾರದವರು ಪ್ರಾರಂಭದಲ್ಲಿ ಈ ಯೋಜನೆಗೆ ಮಂಜೂರುಮಾಡಿದ ಹಣ ಸಾಲದೆ ಬಂದಾಗಲೆಲ್ಲಾ ಮತ್ತೆ ಮತ್ತೆ ಮರುಪರಿಶೀಲನೆಮಾಡಿ ಅಗತ್ಯವಾದ ಹಣವನ್ನು ಉದಾರವಾಗಿ ಪೂರೈಸುತ್ತಾ ಬಂದಿದ್ದಾರೆ. ಈ ನಿಘಂಟಿನ ಕಾರ್ಯ ಪೂರೈಸಲು ಅಂಗೀಕೃತವಾಗಿದ್ದ ಅವಧಿಯನ್ನು ಕೂಡ ಅನಿವಾರ್ಯವಾಗಿ ವಿಸ್ತರಿಸಲು ಸರಕಾರ ತನ್ನ ಅಂಗೀಕಾರವನ್ನು ನೀಡುತ್ತಾ ಬಂದಿದೆ. ಈ ನಿಘಂಟಿನ ಕಾರ್ಯ ೧೯೮೨ರ ಮಾರ್ಚಿ ತಿಂಗಳ ವೇಳೆಗೆ ಪೂರೈಸುವ ನಿರೀಕ್ಷೆಯಿದೆ.

ಈ ವರ್ಷದ ರಾಜ್ಯೋತ್ಸವ ಅಪೂರ್ವವಾದ ಸಂದರ್ಭವಾಗಿದೆ. ಈ ರಾಜ್ಯೋತ್ಸವದ ದಿನದಿಂದ ಕನ್ನಡಭಾಷೆಯನ್ನು ರಾಜ್ಯಮಟ್ಟದ ಆಡಳಿತಭಾಷೆಯನ್ನಾಗಿ ಸರ್ಕಾರ ಅಂಗೀಕರಿಸಿರುವುದನ್ನು ಕರ್ನಾಟಕ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಡಿ. ದೇವರಾಜ ಅರಸು ಅವರು ಘೋಷಿಸಿದ್ದಾರೆ. ಇಷ್ಟು ಮಹತ್ವದ ಶುಭ ಸಮಯದಲ್ಲಿ ನಿಘಂಟಿನ ನಾಲ್ಕನೇ ಸಂಪುಟ ಬಿಡುಗಡೆ ಆಗುತ್ತಿರುವುದು ಸಂತೋಷದ ವಿಷಯವಾಗಿದೆ. ಈ ನಿಘಂಟನ್ನು ಎಂದಿನಂತೆ ಕನ್ನಡಿಗರು, ಅದರಲ್ಲಿಯೂ ವಿದ್ವಾಂಸರು ಆದರದಿಂದ ಬರಮಾಡಿಕೊಂಡು ಇದರ ಪೂರ್ಣ ಪ್ರಯೋಜನವನ್ನು ಪಡೆಯಬೇಕೆಂದು ಕೋರುತ್ತೇನೆ.

ಬೆಂಗಳೂರು–೧೮
೩೧–೧೦–೧೯೭೮

ಹಂಪ. ನಾಗರಾಜಯ್ಯ
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು

# ಮುನ್ನುಡಿ

೧೯೭೮ನೇ ಇಸವಿ ಸೆಪ್ಟಂಬರ್ ತಿಂಗಳಲ್ಲಿ ನಡೆದ ಕನ್ನಡ-ಕನ್ನಡ ನಿಘಂಟಿನ ಸಂಪಾದಕ ಸಮಿತಿಯ ಸಭೆಯಲ್ಲಿ ನಾಲ್ಕನೇ ಸಂಪುಟವನ್ನು ೧೯೭೯ನೇ ಇಸವಿಯಲ್ಲಿ ನೆರವೇರುವ ರಾಜ್ಯೋತ್ಸವ ಸಮಯದಲ್ಲಿ ಬಿಡುಗಡೆ ಮಾಡಬೇಕೆಂದು ತೀರ್ಮಾನವನ್ನು ಕೈಗೊಳ್ಳಲಾಯಿತು. ಕಳೆದ ಮೂರನೇ ಸಂಪುಟವು ಪ್ರಕಟವಾದ ಎರಡು ವರ್ಷಗಳ ತರುವಾಯ ಸಾವಿರ ಪುಟಗಳ ನಾಲ್ಕನೇ ಸಂಪುಟವು ಪ್ರಕಟವಾಗುತ್ತಿರುವುದು ನನಗೆ ತುಂಬ ಸಂತೋಷವನ್ನು ಉಂಟುಮಾಡಿದೆ. ಇಷ್ಟು ಶೀಘ್ರವಾಗಿ ನಾಲ್ಕನೇ ಸಂಪುಟವನ್ನು ಪ್ರಕಟಪಡಿಸುವುದು ಬಹು ಪ್ರಯಾಸದ ಕಾರ್ಯವಾದರೂ ಈ ತೀರ್ಮಾನವನ್ನು ಕೈಗೊಂಡು ಪ್ರತಿ ತಿಂಗಳು ನಡೆಯುತ್ತಿದ್ದ ಸಂಪಾದಕ ಸಮಿತಿಯ ಸಭೆಗಳಲ್ಲಿ ಆ ಸಂಪುಟಕ್ಕೆ ಬೇಕಾದಷ್ಟು ಸಾಮಗ್ರಿಯನ್ನು ಪರಿಶೀಲಿಸಲು ಸಹಾಯಮಾಡಿದ ನಿಘಂಟು ಸಂಪಾದಕ ಸಮಿತಿಯ ಸದಸ್ಯರೆಲ್ಲರಿಗೂ ನಾನು ನನ್ನ ಗೌರವವನ್ನು ಸಮರ್ಪಿಸುತ್ತೇನೆ.

ಈ ಸಂಪುಟದಲ್ಲಿ ತಿಮಿರ್$_2$ ಎಂಬ ಶಬ್ದದಿಂದ ನಾಭಿ ಎಂಬ ಶಬ್ದದವರೆಗೆ ನಿಘಂಟು ಮುಂದುವರಿದಿದೆ. ಈ ಸಂಪುಟವು ಸಿದ್ಧವಾಗುತ್ತಿದ್ದಾಗ ಹಿಂದಿನ ಸಂಪುಟಗಳಿಗಿಂತ ಹೆಚ್ಚಾಗಿ ಆಕರಗ್ರಂಥಗಳನ್ನು ಉಪಯೋಗಿಸಿಕೊಳ್ಳಲಾಗಿದ್ದು ಆ ಆಕರಗ್ರಂಥಗಳ ಸಂಕ್ಷಿಪ್ತಸೂಚಿಯನ್ನು ಈಗ ಪ್ರತ್ಯೇಕವಾಗಿ, ಅನುಬಂಧ III ರಲ್ಲಿ ಸೇರಿಸಲಾಗಿದೆ. ಪಾರಿಭಾಷಿಕ ಶಬ್ದಗಳ ಪಟ್ಟಿಯನ್ನು ಸಿದ್ಧಪಡಿಸಲಾಗುತ್ತಿದೆ. ಮೂರನೇ ಸಂಪುಟದಲ್ಲಿ ಸೂಚಿಸಿದ್ದಂತೆ ಅದನ್ನು ಕೊನೆಯ ಸಂಪುಟದಲ್ಲಿ ಅನುಬಂಧವನ್ನಾಗಿ ಕೊಡಲಾಗುವುದು.

ನಿಘಂಟು ಕಾರ್ಯಕ್ಕೆ ಮುಕ್ತಾಯವೆಂಬುದು ಭಾಷೆ ಇರುವತನಕ ಸಲ್ಲದ ಮಾತು. ಭಾಷೆ ಬೆಳೆಯುತ್ತಲೇ ಇರುತ್ತದೆ. ಹೊಸ ಶಬ್ದಗಳು ಸೃಷ್ಟಿಯಾಗುತ್ತಲೇ ಇರುತ್ತವೆ. ಆದುದರಿಂದ ಹೊಸ ಶಬ್ದಗಳ ಪಟ್ಟಿಯನ್ನು ಸಿದ್ಧಪಡಿಸುತ್ತಲೇ ಇರಬೇಕು. ಜೊತೆಗೆ ಅಭ್ಯಾಸವು ಮುಂದುವರಿದಂತೆಲ್ಲ ಹಿಂದಿನ ಸಂಪುಟಗಳಲ್ಲಿ ಬಿಟ್ಟು ಹೋಗಿರುವ ಶಬ್ದಗಳೂ ಸಿಕ್ಕುತ್ತವೆ. ಅವುಗಳನ್ನೂ ಜೊತೆಗೂಡಿಸಬೇಕು. ಈ ಎಲ್ಲ ಕಾರ್ಯಗಳನ್ನೂ ಈಗ ಮುಂದುವರಿಸಲಾಗುತ್ತಿದೆ. ಸಾಹಿತ್ಯದಲ್ಲಿಯೂ ಭಾಷಾಶಾಸ್ತ್ರದಲ್ಲಿಯೂ ವಿದ್ವಾಂಸರಾದ ಮಹನೀಯರು ಈ ನಾಲ್ಕನೇ ಸಂಪುಟವನ್ನು ಪರಿಶೀಲನೆ ಮಾಡಿ ಪ್ರಮಾದವಶದಿಂದ ಸೇರಿರಬಹುದಾದ ತಪ್ಪುಗಳನ್ನು ಸರಿಪಡಿಸಲು ನಮಗೆ ಸಹಾಯಮಾಡಬೇಕಾಗಿ ಕೋರುತ್ತೇನೆ.

ಕರ್ನಾಟಕ ರಾಜ್ಯದ ಸರ್ಕಾರಿ ಮುದ್ರಣಾಲಯದ ಮಾನ್ಯ ನಿರ್ದೇಶಕರೂ ನನ್ನ ಪರಮಮಿತ್ರರೂ ಆಗಿರುವ ಶ್ರೀ ಬಿ. ಎನ್. ರಾಮಮೂರ್ತಿ ಅವರು ಈ ಸಂಪುಟದ ಮುದ್ರಣ ಕಾರ್ಯದಲ್ಲಿ ತೋರಿಸಿದ ಆಸಕ್ತಿಯೂ ವಹಿಸಿದ ಶ್ರಮವೂ ನಮಗೆ ತುಂಬ ನೆರವು ನೀಡಿದವು. ಆ ಮುದ್ರಣಾಲಯದ ಸಿಬ್ಬಂದಿವರ್ಗದವರು ತುಂಬ ಆತ್ಮೀಯತೆಯಿಂದ ದುಡಿದರು. ಅವರೆಲ್ಲರಿಗೂ ಸಾಮೂಹಿಕವಾಗಿ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಹಂಪ. ನಾಗರಾಜಯ್ಯನವರು ನಾಲ್ಕನೇ ಸಂಪುಟದ ಮುದ್ರಣವನ್ನು ಪ್ರಾರಂಭಿಸಿದ ಕಾಲದಿಂದ ಅದು ಪ್ರಕಟವಾಗುವವರೆಗೂ ಸಂಪೂರ್ಣ ಆಸಕ್ತಿಯನ್ನು ವಹಿಸಿ ನನಗೆ ಬೇಕಾದ ಎಲ್ಲಾ ಸಹಾಯಗಳನ್ನು ನೀಡಿ ನೆರವಾದರು. ಅವರ ಆತ್ಮೀಯತೆಗೆ ನಾನು ಮಾರು ಹೋಗಿದ್ದೇನೆ. ಅವರಿಗೆ ಕೃತಜ್ಞತೆ ಅರ್ಪಿಸುವುದು ನನಗೆ ಆನಂದದ ವಿಷಯ.

ಈ ಸಲದ ಮುದ್ರಣ ಕಾರ್ಯದಲ್ಲಿ ಕರಡನ್ನು ತಿದ್ದುವ ಕೆಲಸ ಸಂಪಾದಕವರ್ಗದ ಮೇಲೆ ಅಧಿಕವಾಗಿ ಬಿದ್ದಿತು. ನನ್ನ ಆರೋಗ್ಯದ ಸ್ಥಿತಿಯು ಸೂಕ್ಷ್ಮವಾದುದರ ಪರಿಣಾಮವಾಗಿ ನಾನು ಆ ಕಡೆ ಹೆಚ್ಚು ಕೆಲಸ ಮಾಡಲಾಗಲಿಲ್ಲ. ನಿಘಂಟಿನ ಉಪಸಂಪಾದಕರುಗಳಾದ ಶ್ರೀ ಹೀ. ಚಿ. ಶಾಂತವೀರಯ್ಯ, ಶ್ರೀ ಆರ್. ವಿ. ಕುಲಕರ್ಣಿ. ಶ್ರೀ ಟಿ. ಆರ್. ಮಹದೇವಯ್ಯ-ಈ ಮೂವರೂ ಅದರ ಸಂಪೂರ್ಣ ಭಾರವನ್ನು ಹೊತ್ತು ನನ್ನ ಕೆಲಸವನ್ನು ಹಗುರ ಮಾಡಿದ್ದಾರೆ. ಎಲ್ಲ ಸಹಾಯಕ ಸಂಪಾದಕರೂ ನಿರ್ವಂಚನೆಯಿಂದ, ಬಿಡುವಿಲ್ಲದೆ, ಈ ಕಾರ್ಯದಲ್ಲಿ ನೆರವು ನೀಡಿದ್ದಾರೆ. ಇವರೆಲ್ಲರಿಗೂ ಮತ್ತು ನಿಘಂಟಿನ ಇತರ ಸಿಬ್ಬಂದಿವರ್ಗದವರಿಗೂ ನಾನು ನನ್ನ ವಂದನೆಗಳನ್ನು ಅರ್ಪಿಸುತ್ತೇನೆ. ಇವರೆಲ್ಲರ ಆತ್ಮೀಯವಾದ ವಿಶ್ವಾಸದಿಂದ ಇಂದಿನ ನನ್ನ ದೇಹಸ್ಥಿತಿಯಲ್ಲಿ ನಾನು ಈ ಕೆಲಸವನ್ನು ಮುಂದುವರಿಸುತ್ತಿರುವುದು ಸಾಧ್ಯವಾಗಿದೆ.

ಕನ್ನಡ ನಿಘಂಟಿನ ಈ ಮಹಾಕಾರ್ಯದಲ್ಲಿ ನಮ್ಮ ಸರ್ಕಾರದವರು ತೋರಿಸುತ್ತಿರುವ ವಿಶಾಲದೃಷ್ಟಿಯನ್ನೂ ನೀಡುತ್ತಿರುವ ಅಪಾರ ಧನಸಹಾಯವನ್ನೂ ಕುರಿತು ವಿದ್ವಾಂಸರೆಲ್ಲ ಮೆಚ್ಚಿಗೆಯನ್ನು ತೋರಿಸಿದ್ದಾರೆ. ಶತಮಾನಕ್ಕೊಮ್ಮೆ ಕೈಗೊಳ್ಳಬಹುದಾದ ಇಂಥ ಮಹಾಕಾರ್ಯಗಳ ಬಗ್ಗೆ ಸರ್ಕಾರದ ಈ ನಿಲುಮೆಯನ್ನು ಕನ್ನಡಿಗರೆಲ್ಲ ಪ್ರೀತಿ ವಿಶ್ವಾಸಗಳಿಂದ ಸ್ವಾಗತಿಸಿರುವುದಲ್ಲದೆ ಮನಸಾರ ಕೊಂಡಾಡಿದ್ದಾರೆ.

ಈ ಎಲ್ಲ ಅನುಕೂಲಗಳೂ ಒದಗಿರುವುದರಿಂದ ಐದನೇ ಸಂಪುಟವನ್ನು ಅದಷ್ಟುಬೇಗ, ೧೯೮೦ರ ವೇಳೆಗೆ ಸಂಪೂರ್ಣವಾಗಿ ಸಿದ್ಧಪಡಿಸಲು ಸಾಧ್ಯವಾಗುತ್ತದೆಂದು ನಂಬಿದ್ದೇನೆ.

ನಿಘಂಟು ಸಿದ್ಧವಾದ ಮೇಲೆ ಅದರ ಪ್ರಯೋಜನವನ್ನು ಎಷ್ಟು ಹೆಚ್ಚು ಜನ ಪಡೆದರೆ ನಿಘಂಟು ಸಿದ್ಧಪಡಿಸಿದವರಿಗೆ ಅಷ್ಟೂ ಸಂತೋಷ ಸಮಾಧಾನಗಳು ಉಂಟಾಗುತ್ತವೆ. ನಿಘಂಟಿನ ಇಂಥ ಪ್ರಯೋಜನ ಅಧಿಕಗೊಳ್ಳಲೆಂದು ಆಶಿಸುತ್ತೇನೆ.

ಬೆಂಗಳೂರು
ದಿನಾಂಕ : ೩೧-೧೦-೧೯೭೯

ಜಿ. ವೆಂಕಟಸುಬ್ಬಯ್ಯ
ಪ್ರಧಾನ ಸಂಪಾದಕ.

# ಸಂಕ್ಷಿಪ್ತ ಸೂಚಿ

## ಅನುಬಂಧ III

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿವರಗಳು |
|---|---|---|---|---|---|
| ೧ | **ಕಜಕ.** | ಕರ್ನಾಟಕ ಜನಪದ ಕಲೆಗಳು | ಸಂ. ಗೊ.ರು. ಚನ್ನಬಸಪ್ಪ | ೧೯೭೭ | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರ |
| ೨ | **ಕಜಕಾ.** | ಕರ್ನಾಟಕ ಜನಪದ ಕಾವ್ಯಗಳು | ಡಿ. ಲಿಂಗಯ್ಯ | ೧೯೭೬ | ದಿನಕರ ಪ್ರಕಾಶನ, ಬೆಂಗಳೂರು |
| ೩ | **ಕರ್ನಾಸಂ.** | ಕರ್ನಾಟಕ ಸಂಸ್ಕೃತಿಯ ಸಂಶೋಧನೆ | ಕಪಟರಾಳ ಕೃಷ್ಣರಾಯ | ೧೯೭೦ | ನಿರ್ದೇಶಕರು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ |
| ೪ | **ಕಾವೇಮ.** | ಕಾವೇರಿ ಮಹಾತ್ಮೆ | ಕವಿರಂಗ | ಸು. ೧೭೩೦ | ಹಸ್ತಪ್ರತಿ ಕೆ. ೫೭೫, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ |
| ೫ | **ಕಾಶೀಮ.** | ಕಾಶೀಮಹಿಮಾರ್ಥದರ್ಪಣ | ಕಳಲೆನಂಜರಾಜ | ೧೭೪೦ | ಹಸ್ತಪ್ರತಿ ಕೆ. ೧೮೬, ೧೮೭ ,, |
| ೬ | **ಕೊಳಲು.** | ಕೊಳಲು | ಕುವೆಂಪು | ೧೯೭೦ | ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು-೨ |
| ೭ | **ಗುರುಚ.** | ಗುರುದತ್ತ ಚರಿತ್ರೆ | ದೇವರಸ ಪಂಡಿತ | ೧೬೫೦ | ಹಸ್ತಪ್ರತಿ ಕೆ.ಬಿ. ೨೫೪, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ |
| ೮ | **ಗೋವೈದ್ಯ.** | ಗೋವೈದ್ಯ | ? | ? | ,, ಕೆ. ೨೧೨/೩ ,, |
| ೯ | **ಜ್ಞಾಪಕ.** | ಜ್ಞಾಪಕ ಚಿತ್ರಶಾಲೆ ಸಂಪುಟ I, II ಮತ್ತು III | ಡಿ.ವಿ.ಜಿ. | ೧೯೬೯ | ಕಾವ್ಯಾಲಯ, ಮೈಸೂರು |
| ೧೦ | **ಚತುಪ್ರ.** | ಚತುರ್ದಂಡಿ ಪ್ರಕಾಶಿಕಾ | ಮೂಲ : ವೆಂಕಟಮುಖಿ ಅನು : ಪ್ರೊ. ರಾ. ಸತ್ಯನಾರಾಯಣ | ೧೯೭೮ | ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ |
| ೧೧ | **ಚಾಮುಂಡಾ.** | ಶ್ರೀ ಚಾಮುಂಡಾ ಲಘುನಿಘಂಟು | — | — | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮ |
| ೧೨ | **ಜಲಶಿ** | ಜಲಶಿಲ್ಪಿ | ? | ? | ಹಸ್ತಪ್ರತಿ ಕೆ. ೨೮೩/೩, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ |
| ೧೩ | **ಜ್ಯೋತಿಸಂ.** | ಜ್ಯೋತಿಷ್ಯ ಸಂಗ್ರಹ | ? | ? | ,, ಕೆ. ೪೧೧/೧ ,, |
| ೧೪ | **ದೀದಕಾ.** | ದೀಪದ ಕಲಿಯರ ಕಾವ್ಯ | ಚನ್ನಮಲ್ಲೇಶ | ೧೭೦೦ | ? |
| ೧೫ | **ದೀಪಧಾ.** | ದೀಪಧಾರಿ | ಚೆನ್ನವೀರ ಕಣವಿ | ೧೯೬೫ | ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು-೫ |
| ೧೬ | **ದೇವಪು.** | ದೇವಾಂಗ ದಾಸಿಮಯ್ಯನ ಪುರಾಣ | ? | ? | ಹಸ್ತಪ್ರತಿ ಕೆ.ಎ. ೩೧೯, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ |
| ೧೭ | **ನಂಶತ.** | ನಂಜುಂಡಶತಕ | ಕಬ್ಬನಿ | ಸು. ೧೮೦೦ | ,, ಕೆ.ಬಿ. ೧೩, ,, |
| ೧೮ | **ನಕ್ಷಚೂ.** | ನಕ್ಷತ್ರಚೂಡಾಮಣಿ | ? | ? | ,, ಕೆ.ಬಿ. ೨೪೭, ,, |
| ೧೯ | **ನನ್ನಚ.** | ನನ್ನಯ್ಯಗಳ ಚರಿತ್ರೆ | ಕವಿ ಮಾದಣ್ಣ | ೧೬೫೦ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವದ್ಯಾನಿಲಯ |
| ೨೦ | **ನಾಗಷ.** | ನಾಗಕುಮಾರ ಷಟ್ಪದಿ | ಬೊಮ್ಮಣಕವಿ | ೧೮ನೆಯ ಶತ | ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ |
| ೨೧ | **ನೋಂಪಿಕ.** | ನೋಂಪಿಯ ಕಥೆಗಳು | ? | ? | ಹಸ್ತಪ್ರತಿ ಕೆ. ೨೩/೨, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ |
| ೨೨ | **ಪಂಚಲೀ.** | ಪಂಚವಿಂಶತಿಲೀಲೆ | ಲಿಂಗರಾಜ | ೧೮೫೦ | ,, ಕೆ.ಬಿ. ೨೦೩, ,, |
| ೨೩ | **ಪಕ್ಷಿ.** | ಪಕ್ಷಿಗಳು | ಶ್ರೀ. ಜಿ.ವಿ.ಬಿ. ನಾಯ್ಡು ಮತ್ತು ಶ್ರೀಮತಿ ಚಂದ್ರಾ ಬಿ. ನಾಯ್ಡು | ೧೯೭೦ | ನಿರ್ದೇಶಕರು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ |
| ೨೪ | **ಪಕ್ಷಿಕಾ.** | ಪಕ್ಷಿಕಾಶಿ | ಕುವೆಂಪು | ೧೯೪೬ | ಕಾವ್ಯಾಲಯ, ಮೈಸೂರು |
| ೨೫ | **ಪರಪ್ರ.** | ಪರಮಾತ್ಮಪ್ರಕಾಶ | ಯೋಗೇಂದ್ರದೇವ ಟೀಕೆ—ಬಾಲಚಂದ್ರದೇವ | ? | ಹಸ್ತಪ್ರತಿ, ಕೆ.ಎ. ೩೩೨, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ |
| ೨೬ | **ಪುರಂದ. ಧಾ** | ಶ್ರೀ ಪುರಂದರದಾಸರ ಸಾಹಿತ್ಯ I, II, III, IV ಮತ್ತು V | ಸಂ. ಬೆಟಗೇರಿ ಕೃಷ್ಣಶರ್ಮಾ ಮತ್ತು ಹುಚ್ಚರಾವ ಬಿ. ಬೆಂಗೇರಿ | ೧೯೬೫ | ಪುರಂದರದಾಸರ ಆರನೇ ಶತಮಾನೋತ್ಸವ ಸಮಿತಿ, ಧಾರವಾಡ |
| ೨೭ | **ಪ್ರಕರ್ಣಾ.** | ಪ್ರಬುದ್ಧ ಕರ್ಣಾಟಕ | ತ್ರೈಮಾಸಿಕ ಪತ್ರಿಕೆ | — | ಮೈಸೂರುವಿಶ್ವವಿದ್ಯಾನಿಲಯ, ಮೈಸೂರು |
| ೨೮ | **ಬೊಜೋಗಿ.** | ಬೊಮ್ಮನಹಳ್ಳಿಯ ಕಿಂದರಿಜೋಗಿ | ಕುವೆಂಪು | ೧೯೬೧ ಎರಡನೆಯ (ಮುದ್ರಣ) | ಉದಯರವಿ, ವಾಣೀವಿಲಾಸಪುರಂ, ಮೈಸೂರು |

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿವರಗಳು |
|---|---|---|---|---|---|
| ೨೯ | **ಬೋರೆದೇ.** | ಬೋರೇದೇವರು | ಡಿ. ಲಿಂಗಯ್ಯ | ೧೯೭೬ | ದಿನಕರ ಪ್ರಕಾಶನ, ಬೆಂಗಳೂರು |
| ೩೦ | **ಭೂರಚೆ.** | ಭೂವಿವರಣೆ ಭಾಗ I, II | ಕೆ. ಶ್ರೀನರಸಿಂಹಯ್ಯ | ೧೯೩೦ | ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ಸರ್ಕಾರ |
| ೩೧ | **ಭೈರಪು.** | ಭೈರವೇಶ್ವರ ಪುರಾಣ | ಸಿದ ಲಿಂಗ ಶಿವಯೋಗಿ | ಸು. ೧೬೦೦ | ಹಸ್ತಪ್ರತಿ ಕೆ.ಎ. ೨೫೪, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ |
| ೩೨ | **ಮದಚ.** | ಮದಕರಿನಾಯಕನ ಚರಿತ್ರೆ | ? | ೧೮ನೆಯ ಶತ | ,, ಕೆ.ಬಿ. ೪೮೨ ,, |
| ೩೩ | **ಮಹಾಣ.** | ಮಹಾಬ್ರಾಹ್ಮಣ | ದೇವುಡು | ೧೯೭೬ (ಐದನೆಯ ಮುದ್ರಣ) | ಆನಂದ ಬ್ರದರ್ಸ್, ಬೆಂಗಳೂರು–೨ |
| ೩೪ | **ಮೂಕಜ್ಜಿ.** | ಮೂಕಜ್ಜಿಯ ಕನಸುಗಳು | ಡಾ. ಶಿವರಾಮ ಕಾರಂತ | ೧೯೭೮ (ಮೂರನೆಯ ಮುದ್ರಣ) | ರಾಜಲಕ್ಷ್ಮಿ ಪ್ರಕಾಶನ, ಬಳೇಪೇಟೆ ಚೌಕ, ಬೆಂಗಳೂರು |
| ೩೫ | **ವರ್ಧಮಾ.** | ವರ್ಧಮಾನ ಪುರಾಣಂ | ಎರಡನೇ ನಾಗವರ್ಮ<br>ಸಂ. ಬಿ. ಎಸ್. ಸಣ್ಣಯ್ಯ | ೧೦೪೨ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ |
| ೩೬ | **ಶರೀಫ.** | ಶರೀಫರ ಜನಪ್ರಿಯ ಪದಗಳು | ಸಂ. ಡಾ. ಡಿ. ಎಸ್. ಕರ್ಕಿ ಮತ್ತು ಶ್ರೀ ತಲ್ಲೂರ ರಾಯನಗೌಡರು | ೧೯೬೩ | ಶ್ರೀ ಶರೀಫ ಸಾಹಿತ್ಯ ಸಮಿತಿ, ಶಿಶುವಿನಾಳ ಧಾರವಾಡ |
| ೩೭ | **ಶಾಸಗಿ.** | ಶಾಸನಗಳಲ್ಲಿ ಗಿಡಮರಗಳು | ಡಾ. ಬಿ. ಜಿ. ಎಲ್. ಸ್ವಾಮಿ | ೧೯೭೫ | ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ |
| ೩೮ | **ಶಿವಸಂ.** | ಶಿವಶರಣ ಸಂಪುಟ | ಸಂ. ಎಚ್. ದೇವೀರಪ್ಪ | ೧೯೭೩ | ,, |
| ೩೯ | **ಷಡಕಂ.** | ಷಡಕ್ಷರ ಕಂದ | ಕೊಂಡುಗೂಳಿ ಕೇಶಿರಾಜ | ೧೧೬೦ | ಹಸ್ತಪ್ರತಿ ಕೆ.ಬಿ. ೮೭/೩, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ |
| ೪೦ | **ಸಸ್ಯನಿ.** | ಸಸ್ಯಗಳ ನಿಘಂಟು | ಹೆಚ್. ಕೆ. ಮಲ್ಲಿಕಾರ್ಜುನಪ್ಪ | ೧೯೭೩ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ |
| ೪೧ | **ಹಸುಹೊ.** | ಹಸುರು ಹೊನ್ನು | ಡಾ. ಬಿ. ಜಿ. ಎಲ್. ಸ್ವಾಮಿ | ೧೯೭೬ | ಕಾವ್ಯಾಲಯ, ಮೈಸೂರು |

# ಸಂಕೇತಗಳು

## ಅನುಬಂಧ III

[ ಚಿತ್ರಶಾ ] ... ಚಿತ್ರಶಾಸ್ತ್ರ

[ ತರ್ಕಶಾ ] ... ತರ್ಕಶಾಸ್ತ್ರ

[ ಭಾಷಾಶಾ ] ... ಭಾಷಾಶಾಸ್ತ್ರ

[ ಭೌತವಿ ] ... ಭೌತವಿಜ್ಞಾನ

[ ಯೋಗ ] ... ಯೋಗಶಾಸ್ತ್ರ

[ ವಾಸ್ತು ] ... ವಾಸ್ತುಶಿಲ್ಪ

[ ಸಾಮುದ್ರಿ ] ... ಸಾಮುದ್ರಿಕಶಾಸ್ತ್ರ

ತಿಗುರು$_1$: ೨. ಉಳ್ಳಿಯ ಸಿಪ್ಪೆ ಬೇವಿನೆಲೆ ತಗರ ಕೋಡು ಮೈಯ ತಿಗುರಿದ ತಿಗುರು ಬಿಳಿಯ ಸಾಸವೆ . . . ಇವಂ ಸಮಂಗೊಂಡು ಧೂಪವಿಕ್ಕುವುದು (ಬಾಲಚಿ. ೧೩೦-೫) ; ಪಂಕರುಹದಳನೇತ್ರೆಯರು ಕಾಂತೆಯ ಹೊರೆಗೆ ನಡೆತಂದೆಸೆವ ಕುಂಕುಮರಜದೊಳವಯವವ ಉರುತರದೆ ತಾಂ ತಿಗುರುತತಿ ವಿಸ್ತರದಿ ಮಜ್ಜನವೆಸಗಿ (ಜೀವಂಚ. ೮-೨) ; ಎನಗೆ ಬಂದೆಡಱೀ ವಿರಾಟನ ವನಿತೆಯರುಗಳ ಮುಡಿಯ ಕಟ್ಟುವ ತನುವ ತಿಗುರುವ ಕಾಲಸೊತ್ತುವ ಕೆಲಸದುತ್ಸಾಹ (ಕುವ್ಯಾವಿ. ೩-೬೦) ; ನವದುಕೂಲವನಲ್ಲದುಡದ ಮೃಗಮದಕುಂಕುಮವನಲ್ಲದಂಗದೊಳು ತಿಗುರದ ಸು ವಾ ಸ ನೆ ಯೊ ಳು . . . ಒಪ್ಪುವ ಲತಾಂಗಿಯರು ನಡೆತಂದರು (ಸೌಂದಪು. ೭-೩೬) ; ಶ್ರೀಗಂಧ ಚೀನಿಕರ್ಪೂರ ಇವೆಲ್ಲವಂ ಹಸಿ ಹಾಲಲ್ಲಿ ಅರೆದು ಮೈಯ್ಯಂ ತಿಗುರೆ ತದ್ವರ್ತಿಕರಕುಮಾಣ್ಗುಂ (ವಿಶ್ವವಿ. ೯೨) ; ಘುಸೃಣಪಂಕವನಾ ಕುವರಿಗೆ ತಿಗುರಿದರಾಳಿಯರು (ಶ್ರೀಪಾಲ. ೧೧-೩೪) ; ಪರಿಮಳವನು ತಿಗುರುವ ಹೆಂಗಳೊಡನೈತಂದರರ್ತಿಯಲಿ (ಕಂನವಿ. ೯-೭೯). ತಿಮಿರು$_1$: ೨. "ಉದ್ವರ್ತನಂ, ಉನ್ಮರ್ದನಂ, ಸೋತ್ಸಾದನಂ, ಭುರಿತಂ—ಈ ೪ ತಿಮಿರುವುದು" (ಹಲಾಯು. ೧೨೧-೪೬) ; ಲಲಿತಾಂಗಕೆ ನವಚಂದನಪಂಕವನೊಲವಿಂ ತಿಮಿರಿ (ಜಯಕಾ. ೫-೪) ; ಸುಮನಸುಗಂಧಕದಂಬದ ಕಂಪನು ತಿಮಿರಿ ತೆಗೆಯಲಾಗಿ (ಭರಚ. ೦-೩೬). ತಿವುರು$_1$: ೨. ದಿನ ಚತುರ್ಥಿಯ ಕಳೆದು ಮೃದು ಚಂದನವ ತನುವಿಗೆ ತಿವುರಿ (ಮದೇಪು. ೦೩-೪).

[ ದೇ.॥ ತಮಿ. ತಿಮಿರ್, ತುವರ್ ; ಮಲ. ತಿಮಿರ್, ತುವರ ]

ತಿಮಿರ್$_2$, ತಿಗುರಂ$_2$, ತಿವಿರ್, ತಿವುರ್, ತಿವುರು$_2$ (ನಾ). ೧. ಸಂಗಂಧ ವಸ್ತು ; ಲೇಪನ ವಸ್ತು ; ಪರಿಮಳ ದ್ರವ್ಯ ; ಅಣ್ಪು : ಪೂಸಿದದೊಂದು ಕುಂಕುಮಮೆ ತಾಂ ತಿಮಿರಾಗೆ (ಧರ್ಮಾಮೃ. ೪-೦೪೪); ಎಱಸಿದ ತಿಮಿರೊಳುಮಿಟ್ಟ ತಿಲಕದೊಳಂ ಕಟ್ಟಿದ ದಂಡೆಯೊಳಂ (ಅನಂಪು. ೦೧-೮೨ ವ) ; ನಿಜ ಮಕಾರದ ವಕಾರಕ್ಕೆ—ತಾಮರೆ, ತಾವರೆ; ಸಾಮಂತಂ, ಸಾವಂತಂ; ತಿಮಿರ್, ತಿವಿರ್ ; ತೆಮರ್, ತೆವರ್ (ಶಮದ. ೧೦೪ ಪ್ರಯೋ). ತಿಗುರು$_2$: ೧. ವೀರಪಟ್ಟೆಯ ಕಟ್ಟಿ ತಿಗುರನೇಱಸಿಕೊಂಬೆ (ಬಸವ. ೭೦೧) ; ಶಂಬರಸ ದರಿದಾಳದ ಪಸುರ ತಿಗುರೊಳಂ (ಜಗವಿ.೪-೮೦ ವ) ; ತಿಗುರ ಗೆಲಿದಳು ತಿಲಕವನು (ಕುವ್ಯಾಅ. ೮-೩) ; ಸಿಂಗರಿಸಿದ ಸಿರಿಗಂದದ ತಿಗುರು (ಗೀತಗೋ. ೦೩-೩); ಘುಮುಘುಮು ಅಗುರು ಗಂಧದ ತಿಗುರು (ಹಾದುಪಾ. ೪೪-೦೫). ತಿವಿರ್ : ೧. ಮೇಲಿನ 'ಶಮದ' ಪ್ರಯೋಗವನ್ನು ನೋಡಿ. ತಿವಿರು: ೧. ಮುಂಬಯಿಸಿ ಕೈಗೈದ ಸೊಬಗಿನ ಕೆಂಬಲರ ಮೈವಚ್ಚಿ ಕೆಂಬಲು ತುಂಬುಗುಂಕುಮ ತಿವಿರು ಚೆಂದುಟಿಯುಟ್ಟರುಣವಸನ (ಸಾಳ್ವಭಾ. ೩-೩೪). ತಿವುರ್: ೧. ಎಲೆಲೆ ತಿವುರಾಗಿ ಸಿತಭಸಿತಮಿರೆ ದೇಹದೊಳ್ (ಪೊನೆರ. ೦೪೧-೮) ; ಪ್ರಲಂಬ ಪಲ್ಲವಂಗಳನಿರಿಸಿದ ನಾನಾವರ್ಣದ ತಿವುರ್ಗಳ ನೊಸಲೊಳೆಸೆವ ಕುಂಕುಮದ . . . ಕಾಂತಿಗಳಿಂ (ಮಹಾನೇ. ೧೨-೪೬ ವ). ೨. ವಿಷವನ್ನು ಹೋಗಲಾಡಿಸುವ ಒಂದು ವಿಧವಾದ ಲೇಪ : ಕಾಡವರೆ ಮಣಲು ಸುಣ್ಣಮಿಮೀಡಿತ ವಜ್ರೋಪಮಾನ ತಿವುರೆನಿಸಿರ್ಕುಂ ಮಾಡಿದ ಸುಣ್ಣದೊಳಂ ಮಳಲೂಡಿರೆ ರವಿದುಗ್ಧಮಿಮೆಱ ತಿವುರೆ ವಿಷಘ್ನಂ (ಖಮದ. ೧೬-೨೬). ತಿವುರು$_2$: ೧. ತಿವುರಿನ ಹೊಂಬಳೆಗಳ ಭಾಳದ ಚಂದ್ರದ ಚಿತ್ರದ ಮೊಗರಂಬದ . . . ಕರಿಘಟೆ ನೆರೆದುವು (ವೀರೇಚ. ೨-೨೮).

[ <ತಿಮಿರ್$_1$ ]

ತಿಮಿರ$_1$, ತಿಮರು$_1$, ತಿಮಿರು$_2$, ತಿಮುರು (ನಾ). ೧. ತೀಟೆ ; ತುರಿಕೆ ; ನವೆ : "ಆ ಮೆಯ್ಯ ತಿಮಿರ ಕಂಡೂ ಖರ್ಜುಮೆನಿಸಿಕ್ಕು" (ಮಂಗರಾ. ೦೧೩-೧) ; ನಿಮ್ಮಯ ಭುಜದ ತಿಮಿರವು ಶೂನ್ಯವಹುದೆಂದ (ಸಂಭಪ. ೭-೨೭) ; ಮೈಯ ಸರ್ವ ತಿಮಿರ ಮಾಣ್ಗುಂ (ವಿಶ್ವವಿ. ೬೯) ; ತೋಳ ತಿಮಿರವದುಳ್ಳೊಡೆಮ್ಮೊಳು ಕಾಳಗವ ಮಾಡಲ್ಲದಿದ್ದರೆ ಹೇಳಿದಾ ಕಪ್ಪವನು ತೆತ್ತೀ ತಲೆಯನುಳುಹಿಕೊಳು (ಸಾಳ್ವಭಾ. ೦೯-೧೦) ; ಶರೀರ ಬಹು ತಿಮಿರವಾಗಿರ್ದಪುದು ಬೆನ್ನೀರ ತ್ವರಿತದೊಳಗೆತ್ತೆನಲು (ಪ್ರಭುಪು. ೯-೧೦೨). ತಿಮರು$_1$ : ೧. ಕಜ್ಜಿ ತಿಮರು ಇಸಬು ಗಜಕರ್ಣ ಇಂಥ ರೋಗಗಳು ಆಗುವವು (ಕೃಷಿಪ್ರ. ೨೬೯) ; ತಿಮರು ತುರಿಸಿದರೆ ಅರಸಿನ ಹಾಗೆ (ಗಾದೆ). ತಿಮಿರು$_2$: ೨. ಸೊಕ್ಕು; ಪೊಗರು; ಗರ್ವ; ಅಹಂಕಾರ: ತಾನು ಕಲಿತುದನ್ನು 'ತೋರಿಸಿಕೊಳ್ಳಬೇಕು' ಎಂಬ ತಿಮಿರು ತೀರಿ . . . 'ತಿಳಿಸಿಕೊಡಬೇಕು' ಎಂಬ ವಿವೇಕ ಉದಯಿಸಿದಾಗ (ರಾಮರಾ. ೮೦). ತಿಮುರು: ೨. ಒಬ್ಬೊಬ್ಬರಿಗೆ ತಿಮುರು ಇಳಿಸಿಬಿಟ್ಟೇನು, ತಿಮುರು (ದಾಕೂಟ. ೮೨). ೩. ಸೊಕ್ಕಿದವನು ; ಬಲಿಷ್ಠನಾದವನು : ಒಳ್ಳೇ ತಿಮುರಾಗಿದ್ದ ಮಗ, ಬಲಿಷ್ಠಳಾದ ಮಗಳು, ಆನೆಯಂಥ ಎರಡು ಎತ್ತುಗಳು (ಜೆಳುಮು. ೫೯).

[ ದೇ.॥ ತಮಿ. ಮಲ. ತಿಮಿರ್; ತೆಲು. ತಿಮ್ಮುರಿ, ತಿಮಿರಿ, ತಿಮುರು ]

ತಿಮಿರ$_2$ (ನಾ). ೧. ಕತ್ತಲೆ ; ಅಂಧಕಾರ : "ತಿಮಿರಂ ಸಂತಮಸಂ ಧ್ವಾಂತಮಂಧಕಾರಂ ತಮಂ ತಮಿಸ್ರಮದಕ್ಕುಂ" (ಪಸುಕೋ. ೧೧-೬೩) ; "ತಿಮಿರಮುಮನಿಚ್ಛಾಯೆಯುಂಧಕಾರಂ . . . ಧ್ವಾಂತಮುಮರ್ದ ಕತ್ತಲೆಯೆನಿಕು" (ಮಂಗರಾ. ೨೦-೮) ; ಭವರೋಗವೆಂಬ ತಿಮಿರ ಹರಿಯದನ್ನಕ್ಕ ಕೂಡಲಸಂಗಯ್ಯನೆತ್ತ ನೀನೆತ್ತ ಮರುಳೆ (ಬಸವ. ೦೩೦) ; ತರಣಿಪ್ರಭನರ್ಭಕನೀ ತರುಣಿಯ ಹೃತ್ತಿಮಿರಮಂ ನಿರಾಕರಿಸಿ ಬಹಿಷ್ಕರಿಸಿದನೆನಲೆಸೆಗುಂ ಕುಚಭರ ಚೂಚುಕಯುಗಳ ಕಾಳಿಮಂ ದೇವಕಿಯಾ (ಜಗವಿ. ೨-೯೨) ; ಏಳು ಜನ್ಮದಿಂ ಮಾಡಿರ್ದ ಪಾತಕವು ತರಣಿಯುದಯದ ಮುಂದೆ ನಿಂದ ತಿಮಿರದ ತೆಱದೆ ಹರೆಯುತಿಹುದು (ಹಚಕಾ. ೦೪-೩೨); ಆರು ಕಂಡರು ತಿಮಿರಜನಿತ ವಿಕಾರವನು ಹೇಳಿಗೆಯ ಮುಚ್ಚುಳ ಜಾಱಸಿದ ಫಣಿಯಂತೆ ಭುಲ್ಲವಿಸಿತ್ತು ಕುರುಸೇನೆ (ಕುವ್ಯಾಕ. ೨೩-೩೮); ಹರಿಗಿರಿ... ಕರಿಗಳೆನ್ನಿಂದಂ ದಲ್ ಕರಿದಾದವನಗೆ ನೋಳ್ಪೊಡೆ ಸರಿಯಿಲ್ಲೆಂಬಂತೆ ಘೋರ ತಿಮಿರಂ ಮೆಱೆಗುಂ (ಹಮ್ಮೀರ. ೨-೧೦೧); ತಿಮಿರಕ್ಕೆ ರವಿ ದಸ್ಯು, ಜ್ಞಾನಮಜ್ಞಾನಕ್ಕೆ ದಸ್ಯು (ಶ್ರೀರಾಮಾ. ೦೮೬-೨೪೮). ೨. ಕಣ್ಣಿನ ಒಂದು ರೋಗ ; ಕುರುಡುತನದ ರೋಗ : ಅಂಜನಂಗಳಿಂದಮದೆಂತು ಪರಿಹರಿಸಲರಿದೆನಿಪ್ಪುದು ಪರಮೈಶ್ವರ್ಯ ಪ್ರಭೂತ ತಿಮಿರಾಂಧತ್ವಂ (ಕಾದಂಪೂ. ೫೩೦) ; ಗುರುಗುಂಜೆಯ ಬೇರಂ ಕೊಂಡರೆ ದಾಡಿನ ಮೂತ್ರದಿಂದಮೆಚ್ಚುಗೆ ಜಳದಿಂದರೆದೆಚ್ಚುಗೆ ಮುಸ್ತೆಯನಂತರಿದೆನಿಪಾಸನ್ನ ತಿಮಿರಮಿಮೆಱ ಕಿಡುಗುಂ (ಲೋಕೋಪ. ೯-೭೧) ; ಅಲಿನೊಂದುದೊ ಕಣ್ಣು ಬೇನೆಯೊ ಮೈಲಗೆಯೊ ಹೂ ಹುಟ್ಟಿದುದೊ . . . ತಿಮಿರವೊ ಟೊಳ್ಳೆ ಪೋದಪುದೋ (ಬಸಪು. ೧೮-೬೬); ಇಂತೀ ದೋಷತ್ರಯದಿಂದಂ ತಿಮಿರಂ ಕಾಮ ಪುಷ್ಪಪಟಲಾದಿಗಳುಂ ಭ್ರಾಂತಿಲ್ಲದಕ್ಕುಮಱ ಕಡೆಗಂ ತುರಗವಿಲೋಚನಾದಿಯೊಳೆ (ಅಶ್ವಶಾ. ೧೫-೧೧); ತಿಮಿರವೆಂಬ ಕಣ್ಣುಬೇನೆ ಇರುವಾತನಿಗೆ ಕೂದಲಗಂಟು ಕಾಣುವಂತೆ (ತತ್ತ್ವಪ್ರಾ. ೧೮೪). ೩. ತಮೋಗುಣ. ೪. ದುಃಖ; ಶೋಕ. ೫. ರಾಹು. ೬. ದಡ್ಡತನ; ತಿಳಿಗೇಡಿತನ. ೭. ಠಕ್ಕತನ ; ಕುಟಿಲತಂತ್ರ ; ಕುಯುಕ್ತಿ. ೮. ತಪ್ಪು ; ದೋಷ. ೯. ಕುರುಡುತನ; ಅಂಧತ್ವ. 'ತಿಮಿರಾಕ್ಷ' ಪರಾ. "ಕತ್ತಲೆ ಶೋಕ ರಾಹು ಗುಣಸತ್ವರಜಸ್ತಮ ಮೂಢ ದೋಷಮುಂ ಕೃತ್ರಿಮವೆಂಬಿವುಂ ತಿಮಿರ ಶಬ್ದ" (ನಾನಾರ. ೧೩). [ಸಂ.]

ತಿಮಿರಗಣ್ಣು (ನಾ). ೧. ಕುರುಡಾದ ಕಣ್ಣು; ದೃಷ್ಟಿಹೀನವಾದ ಕಣ್ಣು. ೨. = ತಿಮಿರ ರೋಗ : ಅಂಕೋಲೆಯ . . . ಬೇರಿನ ತಿಗುಡಂ ಮೊಲೆಹಾಲಲ್ಲಿ ತೇದು ಹಚ್ಚಲು ತಿಮಿರಗಣ್ಣು ಮಾಣ್ಗುಂ (ವಿಶ್ವವಿ. ೧) : ತಿಮಿರಗಣ್ಣು, ನೀರುಗಣ್ಣು, ಜಾರುಗಣ್ಣು...ಕೊಳೆಗಣ್ಣು (ಶುಕಸ. ೩೨೮).

[ ತಿಮಿರ$_2$ + ಕಣ್ಣು (<ಕಣ್) ]

**ತಿಮಿರಪಟಲ** (ನಾ). ಕತ್ತಲೆಯ ರಾಶಿ : ಉದಯಗಿರಿಶಿಖರಕ್ಕೆ ರಾಗದಿಂ ಬಂದನಂಬುಜಮಿತ್ರನೆಂದೆನಿಪನಪವಿತ್ರತಿಮಿರಪಟಲಾಮಿತ್ರನು (ಹಜಕಾ. ೧೩-೧೧). [ ತಿಮಿರ್$_2$ + ಪಟಲ$_2$ ]

**ತಿಮಿರಪೂಗ** (ನಾ). = ತಿಮಿರಪಟಲ : ಖರಿಯ ಮೃದುಸರೋಜಂ ಬಿಂಕವಂ ಬಿಟ್ಟು ರಾಜಂ ಜರಿಯೆ ತಿಮಿರಪೂಗಂ ಜಾಱೆ ಜಾರಾನುರಾಗಂ ಸರಿಯೆ (ರಾಜಶೇ. ೦೨-೨೯). [ ತಿಮಿರ್$_2$ + ಪೂಗ ]

**ತಿಮಿರರೋಗ** (ನಾ). ಕಣ್ಣಿನ ಒಂದು ರೋಗ ; ಕುರುಡುತನವನ್ನುಂಟು ಮಾಡುವ ರೋಗ : ಕುಂಕುಮದ ಹೂವನ್ನು ತಿಲಕವಾಗಿ ಧರಿಸಿದರೆ . . . ತಿಮಿರರೋಗ, ಮೂಗಿನ ರೋಗ, ಶಿರೋರೋಗ ಮೊದಲಾದುವುಗಳನ್ನು ಕೆಡಿಸಿ . . . ಕಿವಿಯಲ್ಲಿ ಹುಟ್ಟಿದ ರೋಗಂಗಳಂ ಹಾಳುಮಾಡುವುದು (ಸಕವೈ. ೪೨). [ ತಿಮಿರ್$_2$ + ರೋಗ ]

**ತಿಮಿರವಾತ** (ನಾ). ವಾತರೋಗಗಳಲ್ಲಿ ಒಂದು ಬಗೆ : ಏಳು ಸೇರೆ ಉದ್ದಿನ ಹಿಟ್ಟು, ಏಳು ಸೇರೆ ಹುರುಳಿಯ ಹಿಟ್ಟು, ಅಂಗುರದ ಹಿಟ್ಟು ಏಳು ಸೇರೆ, ಎಳ್ಳುಹಿಟ್ಟು ಏಳು ಸೇರೆ, ಈ ನಾಲ್ಕು ಬಗೆ ಹಿಟ್ಟನ್ನು . . . ಕಲಸಿ ಕೊಂಡರೆ ರಕ್ತ ಹೋಗುವುದು, ತಿಮಿರವಾತ, ಏಳುವಾಗ ನೋವು, ಸಂದು ವಾತಶೂಲೆ . . . ಎಲುಬಿನೊಳಗೆ ಹರಿವ ಬೇನೆ ಇವು ಎಲ್ಲವೂ ಮಾಣ್ಗು (ವಿವೈವಿ. ೦೨೬). [ ತಿಮಿರ್$_1$ + ವಾತ ]

**ತಿಮಿರಾಕ್ಷ** (ನಾ). ಕುರುಡ ; ದೃಷ್ಟಿಹೀನ : ಉದಯಸ್ಥಂ ದಿನನಾಥನಾಗೆ ವಿಕಲಾಕ್ಷಂ . . . ಮೇಘಲಗ್ನಕ್ಕೆ ಪೂರ್ದಿದೊಡಾಢ್ಯಂ ತಿಮಿರಾಕ್ಷಂ (ಜಾತಕ. ೧೮-೧); ಕೋಪಶಿಖಿತಿಮಿರಾಕ್ಷನಾ ಜಮದಗ್ನಿಮುನಿಪನ ನುಡಿಯನನುಕರಿಸಿ ರಕ್ಷಿಸಿದ ರೇಣುಕೆಯನು (ಕುವ್ಯಾಸ. ೧೪-೦೦೪).
[ ಸಂ. (ತಿಮಿರ + ಅಕ್ಷಿ + –) ]

**ತಿಮಿರಾಪಹ** (ಗು). ಕುರುಡುತನವನ್ನು ಕಳೆಯಲು ಬಲ್ಲ ; ಅಂಧತ್ವವನ್ನು ಹೋಗಲಾಡಿಸ ಬಲ್ಲ : ಇದು ತಿಮಿರಾಪಹಾಂಜನಮುಲೂಕಕುಲಕ್ಕಿದು ಪುಂಶ್ಚಲೀರತಕ್ಕಿದಿತ ತಮಾಲವಂಡಪಮಿದು (ಚಂದ್ರಪು. ೮-೦೯).
[ ಸಂ. ]

**ತಿಮಿರಾರಿ** (ನಾ). ಕತ್ತಲೆಯ ಶತ್ರು ; ಸೂರ್ಯ : ತಿಮಿರಾರಿ ಮೈ ದೋರಿದನು (ಶ್ರೀರಾಮಾ. ೪೫-೪೮೭). [ ತಿಮಿರ್$_2$ + ಅರಿ$_6$ ]

**ತಿಮಿರಾಸ್ತ್ರ** (ನಾ). ಕತ್ತಲೆಯನ್ನುಂಟುಮಾಡುವ ಬಾಣ : ತಿಮಿರಾಸ್ತ್ರ ದಿನಿಸೆ ಕರ್ಣಂ … ಕಮಲಪ್ರಿಯಬಾಣದಿನೆಚ್ಚು ಮರೆಂದ್ರಾತ್ಮಜನದಂ ವಿಭೇದಿಸಿ ಕಳೆದಂ (ಬಂಹರಿ. ೦೨-೩೭) ; ಹಗಲನೊಂದೇ ತುತ್ತು ಮಾಡಿದ ವಿಗಡ ತಿಮಿರಾಸ್ತ್ರದಲಿ ತಿಮಿರವ ತೆಗೆಸಿದನು ಸೂರ್ಯಾಸ್ತ್ರದಲಿ ಬೆಟಗಾಗೆ ಸುರನಿಕರ (ಕುವ್ಯಾಆ. ೭-೪೪). [ ತಿಮಿರ್$_2$ + ಅಸ್ತ್ರ ]

**ತಿಮಿರು$_1$** ‘ತಿಮಿರ್$_1$’ ನೋ.

**ತಿಮಿರು$_2$** ‘ತಿಮಿರ್$_1$’ ನೋ.

**ತಿಮಿಸರಟ** (ನಾ). “ಪಳೆಯುಳಿಕೆಯಾಗಿ ದೊರೆಯುವ ಹಲ್ಲಿಯ ವರ್ಗದ (ಪ್ರಾಣಿ) : ತಿಮಿಸರಟ” (Ceteosaur. ಇಂಕನಿ).
[ ತಿಮಿ + ಸರಟ ]

**ತಿಮಿಳ, ತಿಮುಳ, ತಿವುಳ** (ನಾ). ತಮಿಳ ; ಅರವ. ‘ತಿಮಿಳವಡೆ’ ಪರಾ. ತಿಮುಟ : ‘ತಿಮುಟನಾಡು’ ಪರಾ. **ತಿವುಳ** : ಸಾಮನ್ತ ಗರುಡಂ ತಿವುಳಬಳಜಳಧಿಮಥನಮನ್ದರೋದ್ಭವ ಜಯಾಂಗನಾಲಿಂಗಿತ ವಿಶಾಳಭುಜದಣ್ಡಂ (ಎಕ. VII, ಶಿಕಾರಿ. ೩೦-೦೬ ; 1081) ; ಏಗೊಳಿಸಿ ತಿವುಳನಂ ಗಂಡುದೊತ್ತಾಳ್ದನ್ (ಮೈಆರಿ. ೦೯೨೯, ೬೫-೦೮; 1081) ; ತಿವುಳದೇಶದವರೆಲ್ಲರುಮಂ ಕಾಣಲಾಗದು (ಧರ್ಮಾವ್ಯ.೯-೮೯) ; ಇವನು ಕನ್ನಡಿಗನವನು ಕೇರಳನಂ ಮತ್ತಿವನು ಕೊಂಕಣನಿವ ತಿವುಳ (ನೇಮಿಸಂ. ೨೩-೨೫೭). [ <ತಮಿಳ ]

**ತಿಮಿಳವಡೆ** (ನಾ). ತಮಿಳರ ಸೈನ್ಯ : ಪಾಂಡ್ಯಾದಿಗಳು ಕಾದಿ ಗೆಲ್ದಂ ನರಸಿಂಹ್ವಂ ಚೂಣಿಯಾಳೊಳಾ ತಿಮಿಳವಡೆ ಪಡಲ್ವಟ್ಟಡಳ್ಳಾಡೆ (ಎಕ. XVI, ಚಿಕ್ಕನಾ. ೭೦-೬; 1286). [ ತಿಮಿಳ + ಪಡೆ$_2$ ]

**ತಿಮಿಾನ** (ನಾ). ೧. ದೊಡ್ಡ ತಿಮಿಂಗಿಲ. ೨. [ಜ್ಯೋತಿ] ಒಂದು ನಕ್ಷತ್ರ ರಾಶಿ ; ಮತ್ಸ್ಯರಾಶಿ ; ಮೀನರಾಶಿ. ೧, ೨ : ದ್ರೋಣಂ ತಿಮೀನಂ ಗಳೆಂದೊಪ್ಪುತಕಳಂಕಮೆನೆ ಧನುಷ್ಕೋಟಿಯಿಂ ಬೆರೆದತುಳವೃಷಕ ನೆಲೆವನೆಯಿದೆನಿಸಿ (ಶ್ರೀರಾಮ. ೩-೨೯). [ ತಿಮಿ+ಇನ$_2$ ]

**ತಿಮುರು** ‘ತಿಮಿರ್$_1$’ ನೋ.

**ತಿಮುಟ** ‘ತಿಮಿಳ’ ನೋ.

**ತಿಮುಟನಾಡು, ತಿವುಟ್ನಾಡು** (ನಾ). ತಮಿಳುದೇಶ; ತಮಿಳರ ಪ್ರದೇಶ: ಇತ್ತ ತಿಮುಟನಾಟ್ಗೆ [ ಪಾಠಾಂ. ದ್ರವಿಳನಾಳ್ಕೆ, ದ್ರವಿಳನಾಡಿಂಗೆ ] ಪೋದ ಋಷಿಸಮುದಾಯಮೆಲ್ಲಂ ಪನ್ನೆರಡು ವರುಷಂಬರೆಗಂ ಸುಖ ದೊಳಿರ್ದು (ವಡ್ಡಾರಾ. ೯೦-೦೪). **ತಿವುಟ್ನಾಡು** : ಕದಂಬಳಿಗೆ ನಾಡು ಸಾಯಿರಮುಂ ತಿವುಟ್ನಾಡೊಳಯ್ದು ನಾಡುಮಂ (ಎಕ. XI, ಹೊಳಲ್ಕೆ. ೩೩-೦೦ ; 966). [ ತಿಮುಟ (<ತಿಮಿಳ) + ನಾಡು ]

**ತಿಮೊಗ** (ನಾ). ಮೂರು ಮುಖವುಳ್ಳವನು ; ದತ್ತಾತ್ರೇಯ : ತಿಮೊಗಂ_ತ್ರಿಮುಖಂ (ಶಬ್ದಾನು. ೩೭೭ ಪ್ರಯೋ). [ <ಸಂ. ತ್ರಿಮುಖ ]

**ತಿಮ್ಮ, ತಿಮ್ಮಣ್ಣ** (ನಾ). ಕಪಿ ; ಕೋತಿ ; ಮಂಗ : ಇತ್ತಲಿತ್ತಲು ನಿನಗೆ ಮಿತ್ತುವು ಹತ್ತಿರೈದಿತು ತಿಮ್ಮ ನೀನಿನ್ನೆತ್ತಲಡಗುವೆಯೆನ್ನುತಂಬುಗಳಿಂದೆ ಬಿಡದಿಸಲು (ರಾಮಾಸಂ. ೫-೩-೫೩). **ತಿಮ್ಮಣ್ಣ** : ಗೇರ್ ಗೇರ್ ತಿಮ್ಮಣ್ಣ (ರೂಢಿ). [ ದೇ.॥ ತಮಿ. ತಿಮ್ಮಣ್ = ಗಂಡು ಮಂಗ ; ತೆಲು. ತಿಮ್ಮ ]

**ತಿಮ್ಮಣ್ಣ** ‘ತಿಮ್ಮ’ ನೋ.

**ತಿಮ್ಮಪ್ಪ** (ನಾ). ತಿರುಮಲೆಯ (ವೆಂಕಟೇಶ)ದೇವರು,_ಒಡೆಯ : ದಾಸನೆಂದರೆ ಬಿಡ ಗಟ್ಟಿ ನಮ್ಮ ಕೇಸಕ್ಕ ತಿಮ್ಮಪ್ಪಶೆಟ್ಟಿ (ಪುರಂದ. ೧-೬೭-೯).
[ <ತಿರುಮಲೆ + ಅಪ್ಪ$_1$ ]

**ತಿರ** (ಗು). ೧. ಸ್ಥಿರವಾದ ; ಶಾಶ್ವತವಾದ ; ನಿತ್ಯವಾದ : “ಸಲೆ ತಿರ ಮೆನ್ನಲ್ ನಿಲ್ಲದೆ ತಾಂ ಸುಸ್ಥಿರಾರ್ಥಮಕ್ಕುಮಮೋಘಂ” (ಕವಿಕಂ. ೨೦೩); ನರನೆಚ್ಚೊಡೆ ಪಱಿದು ಕರಂ ಕರವಾಳೊಡನಮರೆ ಕಾಸಿ ಬೆಚ್ಚಂತೆ ವಸುಂಧರೆಯೊಳ್ ಬಿಟ್ಟಿರ್ದುದದೇಂ ತಿರವೋ ಪೂಣಿಸಿದ ಮುಷ್ಟಿ ಭೂರಿಶ್ರವನಾ (ಪಂಪಭಾ. ೧೧-೦೪೧) ; ಈತನ ಸತಿಯ ಕಿವಿಯೋಲೆಗಳು ತಿರವಲ್ಲೆಂದನಸುರಾರಿ [ಪಾಠಾಂ. ಭೂಪನ ಸತಿಯ ಕಿವಿಯೊಳಗೋಲೆಯು ಸ್ಥಿರವಱವೆ ತಾನೆಂದ] (ಕುವ್ಯಾಉ. ೯-೩೭) ; ಸಿರಿಯುಂ ಬಂದರೆ ಲೇಸು ತಿರದ ಜವ್ವನ ಲೇಸು (ಸರ್ವಜ್ಞ. ೦೨೯). (ನಾ). ೨. ಸ್ಥೈರ್ಯ : ತಿರದಿಂದಂ ತಿಳಿದೆತ್ತಿ ಕಾದುವುದು (ಕಬ್ಬಿಕಾ. ೦೫೯). ೩. ಶಿವ : “ಗೊರವಂ … ತಿರ ಗೊಂದೆವೞವಿಗೆಯು … ಮಾದೇವ ಗನಹನಿಂಗಳಕಣ್ಣ ಕಿಡಿಗಣ್ಣನು” (ಕಬ್ಬಿಕೈ. ೪). [ <ಸಂ. ಸ್ಥಿರ ]

**ತಿರಗಂಟಿ** (ನಾ). ತೇರು ಅಥವಾ ಮದುವೆಯ ಮೆರವಣಿಗೆಯಂ ಒಂದು ಗುರಿಮುಟ್ಟಿ ತಿರುಗುವುದು : (ಕ). [ ? ]

**ತಿರಗಾಸು** ‘ತಿರಂಗಾಸ್’ ನೋ.

**ತಿರಜೀವಿ** (ನಾ). ಚಿರಂಜೀವಿ : ನಿಶ್ಚಲನಾಗಿ ತಿ[ ಪಾಠಾಂ.ಸ್ಥಿ ]ರಜೀವಿ ಯಾಗಿ ಜಟಿಯಾಗಿ . . . ಪರಮಯೋಗೀಂದ್ರನೆನೆ ಹೇಮಕೂಟಾಚಲಂ ಕಣ್ಗೆಸೆದುದು (ಜಬಪು. ೩೪-೦೪). [ ತಿರ + ಜೀವಿ$_1$ ]

**ತಿರನೆಳಲ್** (ನಾ). ಸ್ಥಿರವಾದ ನೆರಳು ; ಶಾಶ್ವತವಾದ ಛಾಯೆ : ಹರಿದಶ್ವನ ತುರಗಂಗಳ ತಿರನೆಳಲೊ ಭೂಮಿದೇವಿ ಪೊದೆದತಿಹರಿದಂಬರ ಮೆಂಬಂತಿರೆ ಪಸುರಾದುದು ಶಾಳೀಕ್ಷೇತ್ರವೆಸೆಗುಮಿಳೆಗತಿಭಾಗ್ಯಂ (ಹಮ್ಮಿರ. ೧-೫೦). [ ತಿರ + ನೆಳಲ್ (<ನೆಟಲ್$_1$) ]

**ತಿರಮುಂಡಗವುಂಡ** (ನಾ). ಒಬ್ಬಾತನ ಹೆಸರಂ: ಕುನ್ದತೂರ ತೋರ ಟೆವಿನೊಳ್ ×× ಸಳಗ ತಿರಮುಣ್ಡಗವುಣ್ಡರ ಮುದ್ದಯಂ ಕಾದಿ ಸ್ವರ್ಗಸ್ಥ ನಾದ (ಎಕ. X, ಮುಳಬಾ. ೨೬೩-೬ ; ಸು. ೪೦೦).

[ ತಿರಮುಂಡ$_0$ + ಗವುಂಡ (<ಗಾಮುಂಡ ]

**ತಿರವಿ** (ನಾ). (?) : ತಳಗು ಕಲೆ ಕಚರಿ ಜರ್ಝರೆ ಪುಳಕಂ ತಿಳಿಗಾರೆ ತಿರವಿ ವರ್ಣಮಣಂ ಸಂಗಳಿಸದೆ ಪಳುಕಿನ ಕುಟ್ಟಿಮತಳಮದು ತಳತಳಿಸಿ ತೊಳಗುವುದು ತನಿವೆಳಗಿಂ (ಕುಸುಮಾ. ೧-೦೦೫). [ ? ]

**ತಿರಶ್ಚೀನ** (ನಾ). ೧. ಅಡ್ಡಡ್ಡವಾಗಿರುವುದು. ೨. [ನಾಟ್ಯ] "ಜಂಘೆಯ ಹೊರಪಾರ್ಶ್ವವನ್ನು ನೆಲಕ್ಕೆ ತಾಕಿಸುವುದು" (ಲಾಸ್ಯರಂ. ೨೬೪ ಗದ್ಯಾನುವಾದ) : ಮುಂದಕ್ಕೆ ನೀಡೆ ನಿಸ್ಸೃತಂ ಚಂದದಿ ಪೆಱಗೆಯ್ದು ಧರೆಯನೊಂದೆ ಪರಾವೃತಮೊಂದಿ ಬಹಿಃಪಾರ್ಶ್ವಂ ಧರೆಯಿಂದೆನಿಸುವ ಜಂಘೆಯೇ ತಿರಶ್ಚೀನಾಖ್ಯಂ (ಲಾಸ್ಯರಂ. ೨-೦೪೭). ೩. ಅಂಗಾಲಿನ ಆರು ನ್ಯಾಸಗಳಲ್ಲಿ ಒಂದು : ಪತಿತಾಗ್ರಮುಂಚ್ಛ್ರಿತಾಗ್ರಂ ನುತಭೂಮಿವಿಲಗ್ನಮೊಳ್ಪ ವೆತ್ತುದ್ವೃತ್ತಂ ಅತಿಶಯಕುಂಚನ್ಮಧ್ಯಂ ಸತಿಯೆ ತಿರಶ್ಚೀನವಾಱು ಪದತಳಭೇದಂ (ಲಾಸ್ಯರಂ. ೩-೧೨೦). [ ಸಂ. ]

**ತಿರಸಟ, ತಿರಸಷ್ಟ** (ನಾ). ೧. ಸಿಡಿಮಿಡಿಯ ಸ್ವಭಾವದವನು ; ಸಿಡುಕ : 'ತಿರಸಟ' ಎಂದರೆ ಸಿಡುಕಿನವನು (ಕರ್ನಾಟ. ೩೩). ತಿರಸಷ್ಟ : ೧. ನೀ ಎಷ್ಟು ತಿರಸಷ್ಟ ಇದ್ದರೂ ತುಡುಗಿಲೆ ಕಳವು ಮಾಡಲಾರಿ, ಹೇಳಿಕೇಳಿ ಕಿಸೆ ಕತ್ತರಿಸುವ ವಸ್ತಾದ ನೀ (ಧನಂಜ. ೩೯). (ಗು). ೨. ಒರಟಾದ ; ವಕ್ರವಾದ ; ಸಿಡುಕಿನ : ಇನ್ನೊಮ್ಮೆ ಆ ತಿರಸಷ್ಟ ಹೆಣ್ಣುಮಂಗಳ್ನ ಇಲ್ಲಿ ಒಳಗೆ ಬಿಡಬ್ಯಾಡ (ಸಮುಜೀ. ೨೦೭). [ ← ಮರಾ. ತಿರಸಟ ]

**ತಿರಸಷ್ಟ** 'ತಿರಸಟ' ನೋ.

**ತಿರಸೆ** 'ತೇರಸಿ' ನೋ.

**ತಿರಸ್ಕರ** (ಗು). ೧. ಕೆಳಗೆ ತಳ್ಳುವ. ೨. ಧಿಕ್ಕರಿಸುವ ; ಮೀಱುವ ; ಅತಿಕ್ರಮಿಸುವ : ಭೀಮವಿಕ್ರಮ ಸಿಂಧುರಮನಭಿರಾಮದಾನಗಜೇಶನಂ ಸುತ್ರಾಮದಂತಾವಳ ತಿರಸ್ಕರ ದಂತಿಯಂ ತನ್ನಿ (ಬಸವು. ೫೯-೩೦).

[ ಸಂ. ]

**ತಿರಸ್ಕರಣ** (ನಾ). ಕಡೆಗಣಿಸುವಿಕೆ ; ಅವಹೇಳನ ; ಅಪಮಾನಗೊಳಿಸುವಿಕೆ ; ತಾತ್ಸಾರ : ಎನ್ನೊಡನೇಕೆ ನಿನ್ನ ಮತಿ ನಿನ್ನ ಮದಾಂಧತೆ ... ನಿನ್ನ ಬಗೆ ನಿನ್ನ ತಿರಸ್ಕರಣಂ ಬೃಹಸ್ಪತೀ (ಗಿರಿಕ. ೬-೩೭). [ ಸಂ. ]

**ತಿರಸ್ಕರಣಿ** (ನಾ). ತೆರೆ ; ಪರದೆ : ತೆರೆಯ ಮಱೆಯಲಿ ಸಮರ್ಪಿಸಿದ ಧೂಪಾರತಿಯುನಿರಿಸಲ್ಕದಂಗಾರ ಸಂಸ್ಪರ್ಶನದಿ ತಿರಸ್ಕರಣಿ ಬೇವುತ್ತಿರಲ್ಕೆ (ರಾಘವ. ೧೪-೫೯) ; ತಿರಸ್ಕರಣಿಯು ನಿಶ್ಶಬ್ದವಾಗಿ ಮುಂದೆ ಸರಿದು ... ಒಂದು ಕೋಣೆಯನ್ನು ಮಾಡಿತು (ನಡದಾ. II, ೦೪೭೫).

[ ಸಂ. ತಿರಸ್ಕರಣೀ ]

**ತಿರಸ್ಕರಿಣಿ** (ನಾ). ೧. ತೆರೆ ; ಪರದೆ. ೨. ಅದೃಶ್ಯತೆಯನ್ನುಂಟು ಮಾಡುವ ಮಾಯಾಶಕ್ತಿಯುಳ್ಳ ಮೇಲ್ಮುಸುಕು : ಎಲಾ ತಿರಸ್ಕರಿಣೀ ಗರ್ವಿತನೆ, ನನ್ನ ಅಸ್ತ್ರವು ನಿನ್ನನ್ನು ಕಾಣುವುದು (ಶಾಕುಂತ. ೯೬-೨೦). ತಿರಸ್ಕರಿಣೀ ವಿದ್ಯೆ = ಇತರರ ಕಣ್ಣಿಗೆ ಬೀಳದಂತೆ ಮರೆಯಾಗ ಬಹುದಾದ ಒಂದು ವಿದ್ಯೆ ; ಅದೃಶ್ಯವಾಗುವ ವಿದ್ಯೆ : ಈ ಉದ್ಯಾನ ಪಾಲಿನಿಯರ ಪಾರ್ಶ್ವದಲ್ಲಿ ತಿರಸ್ಕರಿಣೀವಿದ್ಯೆಯಿಂದ ಒಬ್ಬರಿಗೂ ಕಾಣಿಸದಂತೆ ಇದ್ದುಕೊಂಡು ನೋಡುವೆನು (ಶಾಕುಂತ. ೭೯-೦೦). [ ಸಂ. ತಿರಸ್ಕರಿಣೀ ]

**ತಿರಸ್ಕರಿಣಿಕೆ** (ನಾ). = ತಿರಸ್ಕರಣಿ : "ತಿರಸ್ಕರಿಣಿಕಾಖ್ಯೆ ಜವನಿಕೆಯಕ್ಕುಂ" (ವಸ್ತುಕೋ. ೪೯-೨೩). [ ಸಂ. ತಿರಸ್ಕರಿಣಿಕಾ ]

**ತಿರಸ್ಕರಿಸು** (ಕ್ರಿ). ಕಡೆಗಣಿಸು ; ಧಿಕ್ಕರಿಸು ; ಅವಹೇಳನಮಾಡು : ಮಹಾಋಷಿಯರಂ ನಿಮಗೆ ಪೞಿಯಲುಂ ಬಯ್ಯಲುಂ ತಿರಸ್ಕರಿಸಿ ನುಡಿಯಲುಮಕ್ಕುಮೆ (ವಡ್ಡಾರಾ. ೮-೦೩) ; ತಥಾಗತಮತಮಂ ತಿರಸ್ಕರಿಸಿ ತನ್ನೊಳಕಶಕ್ಯಾನುಷ್ಠಾನಕ್ಕೆ ಪೊಣರ್ದ ಲೋಕಾಯತಶಾಕ್ಯಮತಾವಲಂಬಿಯನವಿಲಂಬಿತಂ ಗೆಲ್ದು (ಶಾಂತಿಪು. ೮-೦೪೭ವ) ; ಮತಿಗೆಟ್ಟು ಬಾಯ್ಗೆ ವಂದಂತೆ ತಿರಸ್ಕರಿಸುವುದು ಪುರುಷಾಕಾರಮೆ ಗುರುವಂ (ಸುಕುಮಾ. ೨-೬೭). [ ತಿರಸ್ಕರಣ + – ಇಸು$_3$ ]

**ತಿರಸ್ಕಾರ** (ನಾ). = ತಿರಸ್ಕರಣ : ಅವರ ರೀತಿ ಅನೇಕ ಶಿಕ್ಷಕರಲ್ಲಿ ತಿರಸ್ಕಾರವನ್ನೇ ತಂದಿತು (ರಂಗರೋ. ೫೨) ; ಪ್ರಾಚೀನ ಸಂಪ್ರದಾಯ ಪಾಲಿಸಿದ ಭಾರತೀಯರಿಗೆ ಸಮಾಜದಲ್ಲಿ ತಿರಸ್ಕಾರ, ಸರ್ಕಾರದಲ್ಲಿ ನಕಾರ, ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಧಿಕ್ಕಾರ (ಪುರಸ್ಕಾರ. ೦೦೫ ಟೀಕೆ) ; ನಮಸ್ಕಾರ ಇದ್ದಲ್ಲಿ ತಿರಸ್ಕಾರ ಇದ್ದೀತು (ಗಾದೆ). [ ಸಂ. ]

**ತಿರಸ್ಕೃತ** (ಗು). ೧. ಧಿಕ್ಕಾರಕ್ಕೊಳಗಾದ; ಹೀಯಾಳಿಕೆಗೆ ಗುರಿಯಾದ: ಸಿಂಗರಿಸಿ ಬಂದಡರ್ದಂ ಜಯರವದೊಳಾ ಸುಧನ್ವಂ ತಿರಸ್ಕೃತ ಕುಸುಮ ಧನ್ವನು (ಜೈಮಿಭಾ. ೦೨-೪). ೨. ಮರೆಮಾಡಿದ ; ಮುಚ್ಚಿದ. ೩. ನಿರಾಕರಿಸಿದ; ಅಸ್ವೀಕೃತ. (ನಾ). ೪. ಧಿಕ್ಕಾರಕೊಳ್ಳಗಾದುದು; ಹೀಯಾಳಿಕೆಗೆ ಗುರಿಯಾದುದು : ೧೯ನೆಯ ಶತಮಾನದ ಅಂತ್ಯದೊಳಗೆ ಭಾರತೀಯ ಸಂಸ್ಕೃತಿ ಪೂರ್ಣವಾಗಿ ತಿರಸ್ಕೃತವಾದ ವಿಷಯವಾಯಿತು (ಪುರಸ್ಕಾರ. ೦೦೫ ಟೀಕೆ). [ ಸಂ. ]

**ತಿರಸ್ಕೃತಿ** (ನಾ). = ತಿರಸ್ಕರಣ : ತನಗೆ ಪೇಳ್ದುದನಾಲಿಸಿದನಾ ತ್ರಿಕೂಟ ಲಂಕಾಧಿಪಂ ಕಟುತಿರಸ್ಕೃತಿ ಗದೆಯ ಘಾತಕ್ಕೆ ಕಣ್ಮುಚ್ಚಿದನ್ (ಶ್ರೀರಾಮಾ. ೪೯೪-೨೩೦). [ ಸಂ. ]

**ತಿರಸ್ಕೃತೆ** (ನಾ). ನಿಂದೆಗೊಳಗಾದವಳು ; ತಿರಸ್ಕರಿಸಲ್ಪಟ್ಟವಳು : ಕೈಕೆಯುಂ ನರ ತಿರಸ್ಕೃತೆ ವಿಕೃತ ಮಂಥರಾದಾಸಿಯುಂ . . . ಪ್ರೀತಿಸುತೆ (ಶ್ರೀರಾಮಾ. ೨೪-೬೩೩). [ ಸಂ. ತಿರಸ್ಕೃತಾ ]

**ತಿರಾಯುತ, ತಿರ್ಯಾಹಿತ** (ನಾ). ಮಧ್ಯಸ್ಥ ; ತೀರ್ಪುಗಾರ; "ಹಿರಿಯ, ತೀರ್ಪುಕೊಡುವವ, ನ್ಯಾಯಾಧೀಶ" (ಜಾನಕೋ. ೬೬). ತಿರ್ಯಾಹಿತ: ನಿಮ್ಮ ತಾಯಿಯ ಸುಖದುಃಖಗಳ ದೃಷ್ಟಾರರು ನೀವಾಗುತ್ತಿದ್ದರೆ ನಾನು ತಿರ್ಯಾಹಿತ ಯಾಕೆ ನಿಮ್ಮೆದುರಿಗೆ ಉಪಸ್ಥಿತ ಆಗುತ್ತಿದ್ದೆ (ರಕ್ತಧ್ವ. ೨೦೩) ; ತಿರ್ಯಾಹಿತರ ಹಾಗ ಮಾತಾಡಬ್ಯಾಡ (ರಕ್ತಧ್ವ. ೨೨೭),

[ ←ಮರಾ. ತಿರಾಯತ, ತಿರ್ಹಾಈತ ]

**ತಿರಿ$_1$** (ಕ್ರಿ). ೧. ತಿರುಗು ; ಸಂಚರಿಸು ; ಸುತ್ತು : ಕೆಲವು ಕಾಲದಿಂ ಬೞಿಕ್ಕೆ ಸತ್ತು ತಾನುಂ ಮಕ್ಕಳುಂ ಸಂಸಾರದೊಳ್ ತಿರಿಯು [ಪಾಠಾಂ. ರುಗು] ತ್ತಿರ್ದರ್ (ವಡ್ಡಾರಾ. ೮-೨೨) ; ಜಯಾಸ್ತ್ರಮನುರ್ಚಿಕೊಂಡು ಭೋಂಕನೆ ದೊಣೆಯಿಂ ಶರಾಸನದೊಳಂತದನಾಗಡೆ ಪೂಡಿ ಧಾತ್ರಿ ತಿಟ್ಟನೆ ತಿರಿವನ್ನೆಗಂ ತೆಗೆದು (ಪಂಪಭಾ. ೦೨-೦೬೮) : ಎನಿತಂ ಸಂಸಾರದೊಳಗೆ ತಿಟ್ಟನೆ ತಿರಿವೆ (ಅಜಿತಪು. ೨-೭೧) ; ಗಾಣದೆತ್ತು ಮೆಟ್ಟಿದುದನೆ ಮೆಟ್ಟಿ ಕೂಡೆ ತಿರಿವಂದದೊಳೀ ತ್ರಿಜಗಂಗಳೊಳ್ತೊೞಲ್ದುದು (ಸಮಪು. ೦೫-೯೯) ; ವಿಪಿನಾಂತರದೊಳಗೆ ತೊಳಲಿದೆವು ತಿರಿದೆವು ಹೊರೆದೆವೊಡಲುಗಳ (ಕುಮಾವ್ಯಾ. ೦೭-೮). ೨. ತಿರುಪೆ ಎತ್ತು ; ಭಿಕ್ಷೆ ಬೇಡು ; ಯಾಚಿಸು : ತಾವಿರ್ವರುಂ ತಿರಿದು ತಂ [ಪಾಠಾಂ. ತಿರಿತಂ] ದಿಕ್ಕಿದೆಂಜಲೆವುಟುಮಂ ತಿಂದು (ಆದಿಪು. ೩-೩೪ವ) ; ತಾಂ ತಿರಿವ ಗೊರವಿ ಬೆನಕನುಮಂ ತಿರಿಯಿಪಳೆಂಬ ತೆಱದೆ (ಶಾಂತಿಪು. ೮-೦೩೧) ; ತಿರಿಯಲ್ಪಂದವರಂ ಕೂಟನಡಿಮೆಂಬಂತೆ (ಧರ್ಮಾಮೃ. ೭-೯೭) ; ಹರ ತನ್ನ ಭಕ್ತರ ತಿರಿವಂತೆ ಮಾಡುವ (ದೇದಾಪ. ೪೬-೯೦) ; ತಿರಿವ ಹಾರುವರೊಡನೆ ಭೂಮಿಪಾಶ್ವರರಿಗೆತ್ತಣ ಮೈತ್ರಿ (ಕುಮಾವ್ಯಾ.೬-೩೧) ; ಕಣ್ಣು ಮೂಱುಳ್ಳವಗೆ ತಿರಿದುಂಬ ಚಿಂತೆ (ಪುರಂದ. ೧-೦೭೪-೧) ; ಕೊಟ್ಟು ಕೆಟ್ಟವನಿಲ್ಲ ತಿರಿದು ಬದುಕಿದವನಿಲ್ಲ (ಗಾದೆ) ; ತಿರಿಕೊಂಡು ಉಂಡರೂ ಕರಕೊಂಡು ಉಣ್ಣು (ಗಾದೆ).

೨. ಹೊಸೆ ; ತಿರುಗಿಸು. 'ತಿರಿಚಂ' ಪರಾ. ೪. (?) : ತಿರಿವುದ ದೊಂದು ಚಕ್ರದೊಳೆ ನಿಂದು ದಿವಾಕರನೆ ಮತ್ತ್ರಱುದು ಕಳೆವೊಡಂತದ ನಾವೆಡೆಯಿಂದರವೆಯಾಗಿ ನೆಲಸಿ ಕೆಲಕಾಲದಿಂ ಪೊರೆದಿರದಱದ ಬಟಾಕ ತಾ ನೆಲದೊಳ್ (ಕವಿರಾ. ೨-೧೪೪).

**ತಿರಿದಾಡು**=ಸಂತ್ರ್ಯಾಡಂ ; ಅಲೆದಾಡು : ಕೈರವವಾರಿಜಂಗಳಲರಂ ತಿರಿದಾಡುವ ಭೃಂಗಮಾಲೆಯಂ ಬಾರಿಸಿ (ವರ್ಧಪು. ೧-೪೦). **ತಿರಿದುಣ್**= ಭಿಕ್ಷೆಬೇಡಿ ತಿನ್ನು ; ಯಾಚಿಸಿ ಹೊಟ್ಟೆಹೊರೆ : ತಿರಿದುಂಡಂದಲ್ಲದೆ ಮೆಯ್ಯಾಣೆಯದು ಸಂದೆಯಮಿನ್ನೇಕೆ (ಧರ್ಮಾಮೃ. ೧೩-೯೬) ; ತಿರಿದುಂಬ ಮಾರಯ್ಯ ಬೀರಯ್ಯ...ಕೇತಯ್ಯಗಳೆಂಬ ನೂಱು ಮಡಕೆಗೆ . . . ದೇವ ಶರಣೆಂಬುದೊಂದು ದಡಿ ಸಾಲದೆ (ಬಸವ. ೫೫೨) ; ಪರಿಪರಿಯಲಿ ಹಿರಿಯರ ದೂಷಿಸುವವ ತಿರಿದುಂಬುವುದೆ ಸಾಕ್ಷಿ (ಪುರಂದ. ೨-೧೬-೭) ; ಹಂಚನೆ ಹಿಡಿದು ತಿರಿದುಂಬ ಜ್ಞಾನಿ ತಾ ಹಂಚುಹಱಿಯಹನು (ಸರ್ವಜ್ಞ. ೩೪೪) ; ಹರಸೋದು ತಪ್ಪೋದಿಲ್ಲ ತಿರಿದುಂಬುವದು ಹೋಗೋದಿಲ್ಲ (ಗಾದೆ). **ತಿರಿದುಣಿಸು**=ತಿರಿಯುವಂತೆ ಮಾಡು ; ಭಿಕ್ಷೆಬೇಡಿಸು : ಈಶಾನ್ಯನ ನಿಳೆಯೊಳು ತಿರಿದುಣಿಸಿದನದಟಂದ (ತ್ರಿಪುಸಾಂ.೬-೬೬).

[ ದೇ. ॥ ತಮಿ. ಮಲ. ತುಳು. ತೆಲು. ತಿರಿ ]

**ತಿರಿ**$_2$ 'ತಿಱಿ' ನೋ.

**ತಿರಿ**$_3$ (ನಾ). ೧. ಹೊಸೆದುದು ; ಹುರಿಮಾಡಿದುದು : ಜಟಾ, ಸಟಾ . . . ೨ ವ್ರತನಿಯಮವುಳ್ಳವರ ಜಡೆಗಳ ಹೆಸರು, ಮಣುಕು ಕೂದಲು, ಜಡೆತಿರಿಗಳು (ಸಿದ್ಧಾಂತಿ.೧೬೧). ೨. (ಕರಾ) ಕಾಳಂ, ಬತ್ತ ಮುಂತಾದುವನ್ನು ರಕ್ಷಿಸಿ ಇಡಲು ಹುಲ್ಲಿನಿಂದ ಹೊಸೆದು ಮಾಡಿದ ಸಾಧನ : ಕೊಯಿಲು ಮುಗಿಯಿತು ; ಬತ್ತ ಚಾವಡಿಯಲ್ಲಿ ರಾಶಿಗೊಂಡಿತು ; ತಿರಿಯ ಕೆಲಸ ವಾಯಿತು (ನಂಬಿನಾ. ೫೯). 'ತಿರಿವಂನೆ' ಪರಾ. [ <ತಿರಿ$_1$ ]

△ **ತಿರಿಂಪು** 'ತಿರಿಪು$_1$' ನೋ.

**ತಿರಿಕ**$_1$, ತಿರಂಕ (ನಾ). ೧. ತಿರಂಗಂವವನು ; ಅಲೆದಾಡುವವನು ; ಸುತ್ತುವವನು : ತ್ರಿಜಗದ ತಿರಿಕಂ ವಿದ್ಯಾಭಿಜಾತಗಂಧಂ (ಶಾಂತಿಪು.೮-೨೪) ; ಸತ್ತು ತಿರಿಕರೊಳ್ ತಿರಿಯದೆ (ಧರ್ಮಾಮೃ. ೦೪-೩೩) ; ತಿರ್ಯಗ್ಗತಿಯೊಳ್ ತಿರಿಕರ್ಗೆ ಮಿಥ್ಯಾದೃಷ್ಟ್ಯಾದಿ ಸಂಯತಾಸಂಯತ ಗುಣಸ್ಥಾನಂಬರಂ ಸಾಮಾನ್ಯೋಕ್ತಭಾವಂ (ತತ್ತ್ವಪ್ರ. ೯೬). ೨. ಭಿಕ್ಷುಕ ; ತಿರುಪೆ ಎತ್ತುವವನು : ಸಂದ ತಿರಿಕಂಗೆ ತೊವೆ ತುಪ್ಪಂ ದೊರೆಕೊಳಲುಣ್ಮೆ ನಲಿವ ತೆಱದಿಂ . . . ರೌರವದಿಂದಂ ಬಂದಂಗೆ ಮೋಹಮಕ್ಕುಂ ಸಿರಿಯೊಳ್ (ಧರ್ಮಾಮೃ. ೯-೩೦) : ಮಸಣದ ದೇವನು ಮಾರಿಯ ದೇವನು . . . ತಿರಿ [ ಪಾಠಾಂ. ರು] ಕ ಗೊರವನೆಂದು ಅಲ್ಲಲ್ಲಿ ಒಂದೊಂದನಾಡುತ್ತಿಪ್ಪರಯ್ಯ (ಅವಚಂ.೧೨೦-೫೪೫) ; ಹೊನ್ನರಾಶಿಯ ಪುರದೊಳಿಹ ಬಡವರಿಗೆ ತಿರಿಕರಿಗೆರೆವರ್ಗೆ ವೆಚ್ಚಿಸು ಹೋಗು (ಭರಚ. ೪-೬) ; ತಿರಿಕನನು ಕರತಂದು ಧರಣಿಯ ಚರಿತದೊಳಗಿರಿಸಿದರೆ ಮರ್ಕಟ ಸೆರೆಯ ಸೇವಿಸಿದಂತೆ (ಬಿಜ್ಜಪು. ೬೨-೫೪) ; ಬೇಡುವೊಡೇಂ ತಿರಿಕನೆ (ರಾಮಾಶ್ವ. ೧೬೭-೫). **ತಿರುಕ** : ೨. ತಂಗಿಯು ತಿರುಕಗಿತ್ತಿರೆ ಮಱಿದು (ಕುವ್ಯಾಅ. ಓ೦೩. ೩೩-೬೮) ; ತಿರುಕನೆಂದರು ಬಿಡೆ ತಿಳಿದು ತಾಯ ಕೊರಳ ತೞಿಕನೆಂದರು ನಿನ್ನ ನಾ ಬಿಡೆನೋ (ಪುರಂದ. ೧-೨೩-೨) ; ತಿರುಕನೋರ್ವನೂರ ಮುಂದೆ ಮುಱುಕುಧರ್ಮಶಾಲೆಯಲ್ಲಿ ಒಱಗಿ ಇರಲು ಅಲ್ಲೆ ಒಂದು ಕನಸ ಕಂಡನು (ಕನಕ. ೨೧೩-೦) ; ಒಂದು ದುಡ್ಡು ಇತ್ತು, ಅದನ್ನು ಇಂದು ಒಬ್ಬ ಕುರುಡ ತಿರುಕನಿಗೆ ಕೊಟ್ಟನು (ಮುಂಬಯಿ. ೪-೩).

**ತಿರುಕಮುರುವ**=ದಡ್ಡನಾದ ಭಿಕ್ಷುಕ ; ಹೆಡ್ಡಭಿಕ್ಷುಕ : ತಾರೇ ಬಡ್ಡಿ ನೀರಾ ಎಂದರೆ ತರುವೆನು ನಿಲ್ಲೋ ತಿರುಕಮುರುವ (ಗಾದೆ).

[ ತಿರಿ$_1$ + – ಕ$_3$ ]

**ತಿರಿಕ**$_2$ 'ತಿರಿಯಂಕ್ಕ' ನೋ.

**ತಿರಿಕಣ್ಣು** (ನಾ). ತಿರುಗಣೆ (?) : ಹರಿತೆಗೆಯೊ ಸೂಜಿಯೊ ಕೊಳವಿಗೆಯೊ ಚವುಕುಳಿಯೊ ಅರನೋ ಪಟ್ಟಣೆಯೊ ಭಿತ್ತಿಯೊರವೆಯೊ ವುರುವೊ ತಿರಿಕಣ್ಣೊ ಸವುರವೊ ಕೊನಿವಾರವೊ ರಟ್ಟಗೆಯೊ ನಾಳವೊ ಪನ್ನಾಳವೊ (ಕುಮುರಾ. ೧೩-೨೯). [ ? ]

**ತಿರಿಕತ್ವ** (ನಾ). = ತಿರ್ಯಗ್ಗತಿ : ನರಕದೊಳು ದುಃಖಮುಗ್ರಂ ತಿರಿಕತ್ವದೊಳಂತೆ ನರರೊಳಂ ದೇವರೊಳಂ (ಪರಮಾ. ೨೬-೬೮).

[ <ಸಂ. ತಿರ್ಯಕ್ತ್ವ ]

**ತಿರಿಕಲ್ಲಾಟ** 'ತಿಱಿಕಲ್ಲಾಟ'ನೋ.

**ತಿರಿಕಲ್ಲು** 'ತಿಱಿಕಲ್'ನೋ.

**ತಿರಿಕವ್ರಾತ** (ನಾ). ತಿರ್ಯಗ್ಗತಿಯಲ್ಲಿರುವ ಪ್ರಾಣಿವರ್ಗದ ಗುಂಪು : ನರಿ ನಾಯ್ . . . ಕಾಡೆಮ್ಮೆ ಕಾಟ್ಕ್ಯೋಟಿಯೆಂಬೀ ತಿರಿಕವ್ರಾತಂಗಳೊಳ್ ಸಂಭವಿಸಿ ದುರಿತದಿಂ ದುಃಖಮಂ ಪೇಟಲಾಱಿಂ (ಧರ್ಮಾಮೃ. ೧೩-೧೫೬).

[ತಿರಿಕ$_2$ (<ತಿರಿಯಕ್ಕು) + ವ್ರಾತ]

**ತಿರಿಕುಳಿ**, ತಿರಂಕುಳಿ (ನಾ). ೧. ತಿರುಪೆ ಬೇಡುವ ವ್ಯಕ್ತಿ ; ಭಿಕ್ಷುಕ : ತಿರಿಕುಳಿಗಳ ಬರವಂ ಬಯಸಿಯುಂ ಪೆಱರಂ ಬಯಸದರುಂ ... ಎನಿಸಿರ್ಪರ್ (ಚಿಕವಿ. ೩-೧೪೩) ; ಬೇಳ್ಪ ತಿರಿಕುಳಿಯಲ್ಲದರ ಚೆಲ್ಲವೆತ್ತನೆಂ (ಸಂಕಪ. ೨೪-೦೦). ೨. ದರಿದ್ರ ; ಬಡವ ; ಭಿಕಾರಿ : ಮುನ್ನೋಡಲೊಂದು ಗೆಯ್ಮೆಯ ನೋಂಪಿಯೆಸಕಮೊಡರ್ಚೆ ತಿರಿಕುಳಿಯೊಳಮರವೆಂಡಿರ ಭೋಗಮನುಣ್ಗುಂ (ರಾಮಾಶ್ವ. ೬೪-೧೩). **ತಿರುಕುಳಿ** : ೧. ತಿರುಕುಳಿಗೆ ಮಾನವೆತ್ತಣದು ತೆಗೆ ತಲೆಮಾಲೆಗೊರಲಂಗೆ ಮಹಿಮೆಯಲ್ಲಿಯದು (ಚಬಪು. ೧೮-೦೦) ; ನನ್ನದು ತಿರುಕುಳಿ ಬಾಳು (ಅನಾಥ. ೧೬೪). ೨. ನೀವರಸುಗಳು ತಿರುಕುಳಿಗಳಾವು (ಕುವ್ಯಾವಿ. ೮-೨೯). ೩. ತುಚ್ಛನಾದವನು ; ಕ್ಷುದ್ರ ; ಹೀನ : ತಿರುಕುಳಿ ಸಿರಂಗರಾಯಂ . . . ನೆರಪಿದ ಪಡೆ ತಾನೇಂ ಪಡಿಬರಿಸುಗುಮೋದೇವ ರಡಿಯು ಪಟಿಯರ ಪಡೆಯೊಳ್ (ಚಿಕವಿ. ೫-೬೪). 'ತಿಱಿಕುಳಿ' ಪರಾ.

[ತಿರಿ$_1$ + – ಕುಳಿ$_3$]

**ತಿರಿಕೂಳು** 'ತಿರಿಕೂಟ್' ನೋ.

**ತಿರಿಕೂಟ್**, ತಿರಿಕೂಳು, ತಿರಿಗೂಳು (ನಾ). ತಿರಿದು ತಂದ ಅನ್ನ ; ಭಿಕ್ಷಾನ್ನ : ಹರಿಕೀರ್ತನೆಯಂ ಸ್ವರರಾಗತಾಳಲಯಮೂರ್ಛನಾದಿ ವಿಧಿಯಿಂ ಪಾಡುತೆ ದೈವನಸ್ಸಭರಂ ತಿರಿಕೂಟಿಂ ಜೀವಿಸುತಿರ್ದಂ (ಅದ್ಭುತ. ೧೬-೧೬). **ತಿರಿಕೂಳು** : ಆ ತಿರಿಕೂಳ ತೆಲುಂಗರೊಡೆಯನಿಗೆ ಉತ್ತರ ವೇನು (ಮಂತ್ರಶ. ೧೯-೧೩). **ತಿರಿಗೂಳು** : ಇಱಿದರೆಯು ಏಱಿಲ್ಲ ಹಱಿದರೆಯು ಸೀಳಿಲ್ಲ ತಿರಿಗೂಳ ಕೊಂಡು ಋಣವಿಲ್ಲ (ಸರ್ವಜ್ಞ. ೨೦೩೦).

[ತಿರಿ$_1$ + ಕೂಟ್$_1$]

**ತಿರಿಕೆ**, ತಿರುಕೆ (ನಾ). ಭಿಕ್ಷೆಗೆಂದು ತಿರಂಗುವಿಕೆ ; ಭಿಕ್ಷಾಟನೆ : "ಭಿಕ್ಷಾ ...ಭೈಕ್ಷಂ-ಈ ೬ ತಿರಿಕೆ" (ಕಾಶಕ್ಕ. ೧೧೬) ; ಕೆಡುವುದೇ ಉದರಾರ್ಥಮಾಗಲು ಬಿಡದೆ ತಿರಿಕೆಗೆ ಹೋಗೆನೆನುವುದು ಮೃಡನಡಿಗಳಂ ನೆನೆವುದರಿದೇ ಕೇರಿಕೇರಿಯಲಿ (ಬಸಪು. ೪೩-೫೯) ; ತಮ್ಮ ನಿನ್ನಯ ತಿರಿಕೆಗಾ ಪಂಜುವೆವುಯೆಂದರೆ ಮರುತಸುತ ತಾನುಂಬ ಪರಿಯೆಂತೆಂದು ಬೆಸಗೊಂಡ (ಕುವ್ಯಾಅ. ಓ೦೩. ೨೩-೨೦) ; ತಿರಿಕೆಯ ಕೂಳು ತಿಂದು ಹರಕೆಯ ಕೋಣನಾದ (ಗಾದೆ). **ತಿರುಕೆ** : ಇವರು ಬ್ರಾಹ್ಮಣರ ವೇಷವನ್ನು ಹಾಕಿಕೊಂಡು ತಿರುಕೆಯಿಂದ ಜೀವನ ಮಾಡುತ್ತಾ ಇದ್ದರು (ನೀತಿಚಂ. I. ೧೮). [ತಿರಿ$_1$ + – ಕೆ]

**ತಿರಿಕೊರೆ** ' ತಿರಿಕೊಟಿ³' ನೋ.

**ತಿರಿಕೊಟಿ³, ತಿರಿಕೊರೆ** (ನಾ). ಭಿಕ್ಷೆ ಬೇಡಲು ತಿರುಗುವಿಕೆ ; ಬದುಕಿಗೆ ಯಾಚಿಸುವಿಕೆ. ' ತಿರಿಕೊಟಿಗೊಳ್ ' ಪರಾ. **ತಿರಿಕೊರೆ** : ತಿರಿಕೊರೆ ಕಬ್ಬಿಗಂ ಪಣಮನಾರ್ಜಿಸಲಾರನ್ (ಸಂಕಪ. ೧೩-೦). ' ತಿಱಿಕೊಟಿ³' ಪರಾ. [ ತಿರಿ$_1$ + ಕೊಟಿ³$_6$ ]

**ತಿರಿಕೊೞ್ಗೊಳ್** (ಕ್ರಿ). ಭಿಕ್ಷೆ ಬೇಡಂ; ಯಾಚಿಸಿ ಪಡೆದಂಕೊಳ್ಳು: ಅರಿದಾದಂ ಕನ್ನಡದೊಳ್ತಿರಿಕೊೞ್ಗೊಂಡೞಿಯೆ ಪೇೞ್ವೆನೆಂಬುದಿದಾರ್ಗಂ (ಕವಿರಾ. ೧-೪೨). [ ತಿರಿಕೊೞ್$^3$ + ಕೊಳ್$_1$ ]

**ತಿರಿಕೋಪಸರ್ಗ** (ನಾ). [ಜೈನ] ಪಶು, ಪಕ್ಷಿ ಮೊದಲಾದುವುಗಳಿಂದ ತಪಸ್ವಿಗಳಿಗೆ ಉಂಟಾಗುವ ಉಪದ್ರವ,—ತೊಂದರೆ: ಸೈರಿಸಲುವಾಗದ ತಿರಿಕೋಪಸರ್ಗಮನವಂತಿ ಸುಕುಮಾರಸ್ವಾಮಿ ಮೂಱು ದಿವಸಮಿರುಳುಂ ಪಗಲುಂ ಸೈರಿಸಿ (ವಡ್ಡಾರಾ. ೩೦-೧೮); ನಿಷ್ಪಂದಶರೀರನಾಗಿ ಮುನಿ ಸೈರಿಸಿದಂ ತಿರಿಕೋಪಸರ್ಗಮಂ (ಸುಕುಮಾ. ೧೨-೪೦).

[ <ಸಂ. ತಿರ್ಯಗುಪಸರ್ಗ ]

**ತಿರಿಗಂಚಿ** (ನಾ). ಒಂದು ಸ್ಥಳದ ಹೆಸರು: ಕಚ್ಚವಿಯ ಗಳಿಯೊಳ್ ಬಿಟ್ಟ ಮತ್ತರ್ಪ್ಪದಿನಯ್ದು ರಟ್ಟಹಳ್ಳಿ ೭೦ ಬಳಿಯು ತಿರಿಗಂಚಿ ೧ (ಎಕ. VII, ಶಿಕಾರಿ. ೧೫೦-೬೩; 1047). [ ? ]

**ತಿರಿಗಟ್ಟು** (ಕ್ರಿ). ಸುತ್ತಿಕೊಳ್ಳು; ಸಿಕ್ಕಾಗು: ತನ್ನ ರಕ್ತದ ಕೆಸರಲ್ಲಿ, ಕಣ್ಣು ತುಟಿ ಮೆತ್ತಿಕೊಂಡು, ತಲೆಗೂದಲು ತಿರಿಗಟ್ಟಿ ನರಳುತ್ತ ಬಿದ್ದಿರುವ ಕೌರವ ಸಾರ್ವಭೌಮನನ್ನು ನೋಡಿ ಕಲ್ಲು ಕರಗೀತು (ಅಗ್ನಿಹ. ೩೦).

[ ತಿರಿ$_3$ + ಕಟ್ಟು$_1$ ]

**ತಿರಿಗುತ್ತ** (ನಾ). ಭಿಕ್ಷೆ ಬೇಡುವ ಕಷ್ಟ; ಭಿಕ್ಷಾಟನೆಯ ದುಃಖ (?): ಸಂಸಾರದೊಳಾದ ಬಡತನದ ಕುತ್ತದ ತಿರಿಗುತ್ತದ ರಾಜಬಾಧೆಯು ...ಕಂಡು (ಧರ್ಮಾಮೃ. ೬-೧೬೫). [ ತಿರಿ$_1$ + ಕುತ್ತ ]

**ತಿರಿಗೂಳು** ‘ ತಿರಿಕೂೞ್ ’ ನೋ.

**ತಿರಿಗೊಂಬು** (ನಾ). ಬಾಗಿದ ಕೋಡು; ತಿರುಗಿಕೊಂಡ ಕೋಡು: ಮುದ್ದಿ ಮಣ್ಣನು ತಂದು ತಿದ್ದಿ ಬಸವನ ಮಾಡಿ ಮುದ್ದುಮುಖ ಚೆಲುವ ತಿರಿಗೊಂಬು ನಂ ಬಸವ ಗದ್ದುಗೆ ಮ್ಯಾಗ ಮಲಗ್ಯಾನ (ಲೋಕಗೀ. ೧೯೬).

[ ತಿರಿ$_1$ + ಕೊಂಬು$_1$ ]

**ತಿರಿಚು, ತಿರುಚು$_1$** (ಕ್ರಿ). ತಿರುಗಿಸು; ತಿರುವು: ತುಂದಶೂಲೆಯು ಕೆರಳಿಯಲಗ ತಿರಿಚಿದವೊಲಾಗೆ (ಪ್ರಭುಪು. ೫-೮೩); ಶತ್ರುಗಳ ಮೇಲೆ ಮೀಸೆಯಂ ತಿರಿಚುವ ವೀರನಂದದಿ ಚಾಣಕ್ಯನು ಬಿಚ್ಚಿರುವ ತನ್ನ ಜುಟ್ಟಂ ಕೈಯಿಂದ ನೇವರಿಸುತ್ತ ತೆರಳುತ್ತಿರಲು (ಮುದ್ರಾಮಂ. ೩೫); ರಿಪ್ಪನ ಹೃದಯ ತಿರಿಚಿದಂತಾಗಿ ಕಾಲುಗಳು ಒಂದಕ್ಕೊಂದು ಹೊಡೆಯುವಂತೆ ನಡುಗಿದವು (ಯೋಧಪು. ೮೨). **ತಿರುಚು$_1$** : ಸೆರಗಿನ ತುದಿಯನ್ನು ತಿರುಚೀ ತಿರುಚಿದಳು ಸೀತೆ (ಮಾಮನ. ೨).

**ತಿರಿಚುಮುರಿಚು** = ವಕ್ರವಾಗಿರುವುದು: ವೇರದುಖೋವ ತಿರಿಚು ಮುರಿಚುಗತ್ತಿನಿಂದ ಆ ಕೋಟಡಿಯ ಹಿಂದಿನ ಬಾಗಿಲಿಂದ ಒಳಗೆ ಪ್ರವೇಶಿಸಿದಳು (ಪುನರು. ೨೩೯). **ತಿರುಚಿಕೊಳ್ಳು** = ಸಂರಂಭಿಯಾಗು; ನುಲಿದುಕೊಳ್ಳು: ದೋರ್ದಿಯಂತೆ (ತೆಂಗಿನ ನಾರಿನ ಹಗ್ಗದಂತೆ) ಯಾಕೆ ತಿರುಚಿಕೊಂಡು ಸುತ್ತುತ್ತಿದ್ದೀಯೆ? (ದಾದಾನ. ೪).

[ ತಿರಿ$_1$ + – ಚು$_1$ ]

**ತಿರಿಚೆ** (ನಾ). ೧. (ಆನೆಗೆ ಕಟ್ಟುವ) ಹೊಸೆದ ಹಗ್ಗ: ಜೊತ್ತಿಗೆ ಜಾನು ವಂಕಣ ತಿರಿಚೆ ತೊಡರುರಘಂಟೆಗಳ...ವಿಲಾಸದಿನೆಸೆದುದಾ ದಂತಿ (ಕೂರರಾ. ೬-೨೯-೧೬). ೨. ಪಿಚಕಾರಿಯಿಂದ ನೀರನ್ನು ಹೊರಪಡಿಸಲು ಒತ್ತುವ ಸಾಧನ: ನಿಖಿಳರಾಣಿಯರನಂದವನೀಶನು ಅಟ್ಟಿ ಹಿಡಿದಂಡೆಯಿಂ ಹೊಯ್ದು ತಿರಿಚೆಯನೊತ್ತೆ ಹೆಟ್ಟುಗೆಯರೆಲ್ಲ ಮೂದಲಿಸಿ ಮುಮ್ಮೊಳಿಗೊಂಡು ನೆಟ್ಟೋಟದಿಂದೋಡುವವನಿಪನ ತಮ್ಮಾಣೆಯಿಟ್ಟು ನಿಲಿಸಿದರಾಗಳು (ಹದಿಕಾ. ೩-೫೦). [ <ತಿರಿಚು ]

**ತಿರಿತರ್$_1$**, ತಿರಿತರಂ (ಕ್ರಿ). ೧. ಅಲೆದಾಡಂ; ಸುತ್ತು; ತಿರುಗು: ತಿರಿತರ್ಕುಮುಮುಳಜಳನಿಧಿಪರಿಖಾವೃತಭೂಮಿಭಾಗಮಂ (ಕವಿರಾ. ೩-೫೫); ಕಟಲ್ದೆರ್ದೆಗೆಟ್ಟರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರಿಂ ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೋ (ಪಂಪಭಾ. ೮-೮೫); ಉಸಿರ ಗಾಳಿಯೊಳ್ ತಿರಿತಂದರ್ ತಱಗೆಲೆವೊಲಮರರಂಬರತಳದೊಳ್ (ಶಾಂತಿಪು.೧೦-೪೩); ಭವಾಂಬುನಿಧಿಯೊಳ್ ತಿರಿತಪ್ಪುವು ಜೀವರಾಶಿಗಳ್ (ಸುಕುಮಾ. ೫-೩೨); ಪರದೇಸಿತನದಲಿಯಿದು ತಿರಿತಂದು ಹನುಮಂತದೇವರ ಗುಡಿಗೆ ಕಟು ಪಂಜರವ ಮಾಡಿಸಿ (ಎಕ. VII, ಚನ್ನಗಿ. ೦೭-೬; 1120?). ೨. ಭಿಕ್ಷೆ ಬೇಡು: ಪವನಸುತ . . . ಬಹುಭಿಕ್ಷಭಕ್ಷ್ಯವನವರ ನಾಲ್ವರ ಸರಿಯ ಭಿಕ್ಷವನೊಬ್ಬ ತಿರಿತಹನು (ಕುಮಾವ್ಯಾ. ಆ. ಓರಿ೩. ೨೩-೧೩). **ತಿರಿತರು** : ೨. ಹೇಳಿ ಕೇಳಿ ತಿರಿತಂದು ತಿನ್ನೊ. ಜಂಗಮ ನೀನು (ಜನಜೀ. ೧೫).

[ ತಿರಿ$_1$ + ತರ್ ]

**ತಿರಿತರ್$_2$** ‘ತಿೞಿತರ್’ ನೋ.

**ತಿರಿತರಿಸು** ‘ತಿೞಿತರಿಸು’ ನೋ.

**ತಿರಿತರು** ‘ತಿರಿತರ್’ ನೋ.

**ತಿರಿತಿನ್** (ಕ್ರಿ). ತಿರಿದು ತಿನ್ನು; ಭಿಕ್ಷೆಬೇಡಿ ತಿನ್ನು: ಕುಪ್ರತರ್ಕಿಗ ನಾವನಾದೊಡೆ . . . ತಿರಿತಿಂಬಪ್ರಸಿದ್ಧನಶುದ್ಧನಲ್ಲದೆ ಭಕ್ತನೆಂತಹನು (ಬಸಪು. ೪೩-೬೨). [ ತಿರಿ$_1$ + ತಿನ್ ]

**ತಿರಿದಾನ** (ನಾ). ಮುಸುಕು; ಆಚ್ಛಾದನ: ಪೊಂಬಾಟಿಯ ತಿರಿದಾನದಿಂ ಪಾದರಿಯ ಪರ್ಯಂಕದಿಂ . . . ಶಿಶಿರೋಪಚಾರಮಂ ಮಾಡುತ್ತುಮಿರೆ (ದಶಕು. ೬-೧೦೭ವ). [ < ಸಂ. ತಿರೋಧಾನ ]

**ತಿರಿನಾಳ್** ‘ತಿರುನಾಳ್’ ನೋ.

**ತಿರಿಪ** (ನಾ). ಒಂದು ಬಗೆಯ ಬತ್ತ: “ ತಿರಿಪಃ — ತಿರಿಪ, ರಾಜಾನ್ನ” (ಓಷಧಿ. ೭೮). [ ? ]

**ತಿರಿಪು$_1$**, ತಿಪ್ಪು$_2$, ತಿರಿಂಪು, ತಿರಿಪ್ಪು$_2$, ತಿರಿವು$_1$, ತಿರಿಹಂ, ತಿರುಂಪು$_1$, ತಿರುಪು$_1$, ತಿರುಪ್ಪು$_2$, ತಿರುವು$_1$, ತಿರುಹು$_1$ (ಕ್ರಿ). ೧. ಸುತ್ತು ತಿರುಗಿಸು; ಚಕ್ರಾಕಾರವಾಗಿ ಸುತ್ತಿಸು: ತಿರಿಪಿ [ಪಾಠಾಂ. ರುಪೆ] ಕರ ಚಕ್ರಮಂ ದನುಜರ ತಲೆಗಳನಸುರವೈರಿ ಮುಳಿದಿಡೆ . . . ನೆಲಕೆ ಬೀೞ್ವವೆ ತಲೆಗಳ್ (ಪಂಪಭಾ. ೬-೬೫); ಕರ್ಪೂರದ ಪರಲ್ಗೆ ಬಿರ್ದರಲ್ಗೆ . . . ದರ್ಪಕಂ ತಿರಿಪುವ ಚಕ್ರದಂತೆ ತಿರಿಯುತ್ತಿರೆ ಮೇಲೆ ಮದಾಳಿಮಾಲೆಗಳ್ (ಅರ್ಧನೇ. ೨-೩೭); ತಿರಿವ ಕುಲಾಲಚಕ್ರಮೆನೆ ಭೂವಳಯಂ ತಿರಿವನ್ನಮಸ್ತ್ರಮಂ ತಿರಿಪಿದಂ (ಜಗವಿ. ೦೨-೩೨); ಕಣ್ಮುಸುಕಿ, ತಿರಿಪಿ ನಿಮ್ಮ ನಡುಬೀಡಿನಿನ್, ಪೊಱವೀಡ ಮುಂದಿ ಇರ್ದ್ದೆಡೆಗಳೊಳೆ ಬಿಟ್ಟೆನ್ (ಅಶ್ವತ್ಥಾ. ೩-೪೪). ೨. ಅಲೆಯುವಂತೆ ಮಾಡು; ಸುತ್ತಾಡಿಸು: ಶಾರ್ದೂಲಾಭೀಲವನಂಗಳೊಳ್ ತಿರಿಪಿದೀಯುರ್ಕೊಂದೆ ಲೆಕ್ಕಂಗೊಳಲ್ (ಪಂಪಭಾ. ೯-೨೨); ಕೌಂತೇಯರಂ ಮಚ್ಚರದಿಂ ಕಾಂತಾರದೊಳ್ ತಿೞ್ಚನೆ ತಿರಿಪಿದ ಸೊರ್ಕೀಗಳೇನಾದುದು (ಗದಾಯು. ೭-೧೪). ೩. ಹೊರಳಿಸು; ಬೇರೆ ಕಡೆಗೆ ತಿರುಗಿಸು: ಅರಸು ಮಾನೆಯುಂ ತಿರಿಪುವರಿಚ್ಚೆ ಎಂಬ ಲೋಕಗಾದೆಯೇಕೆ ಪುಸಿಯಕ್ಕು (ಪಂಚತಂ. ೯೫-೭); ಮೋಕ್ಷಸುಖಕ್ಕೆ ಚಿತ್ತಮಂ ತಿರಿಪುತುಮಿರ್ದ ಜೈನಮುನಿ ಪುಂಗವರಿಂ ಮಿಗಿಲಾರೊ (ಧರ್ಮಾಮೃ. ೧೨-೫೦). ೪. ನುಲಿ; ತಿರುಗಿಸು: ಕಟ್ಟಿದ ನೂಲ ತೊಂಗಲಂ ತಿರಿಪುವ ಕೆಯ್ತದೊಂದು ನೆವದಿಂ ಲಲಿತಾಂಗಿಯ ಶಂಕೆಯುಂ ಭಯಂ ಬೆರಸಿದ ನಾಣುಮಂ ಕ್ರಮದೆ ಪಿಂಗಿಸು (ಪಂಪಭಾ. ೩-೭೭); ಅವಂ ತಿರಿಪಿದಂ ನಿಜ ನಿಷ್ಠುರ ಕಾಷ್ಠದಂಡಮಂ (ಚಂದ್ರಪು. ೫-೭೪). **ತಿಪ್ಪು$_2$** : ೫. ಹಿಮ್ಮೆಟ್ಟು; ಹಿಂದಿರುಗು: ಮದಾನ್ಧಸಿನ್ಧುರಂ ತೆಗೆಯಲ್ ಜೈಮಿನಿ ತಿಪ್ಪಿಕೊಣ್ಡು ಪರಿಯಲ್ (ಎಕ. II, ೭೯-೪೨; 1100). **Δತಿರಿಂಪು** : ೧. ಮತ್ತೋರ್ವಂ ... ಮುಂಗೆಯ್ಯ ಕಂಕಣಮಂ ತಿರಿಂಪಿ ನೂಂಕುತುಂ ಜಾೞುವರ್ಝುಳವಟ್ಟಿಗೆಯನೇೞ್ ಸಾರ್ಚುತ್ತುಮೆಟ್ಟಿ (ಅನಂಪು. ೦೩-೭೯ ವ). **ತಿರಿಪ್ಪು$_2$** : ೧. ಧರೆಯುಂ ದಿಕ್ತಟಮುಂ ವಿಯತ್ತಟಲಮುಂ

ಧಾರಾಕರೋತ್ಪಾತದಿಂ ತಿರಿಗುತ್ತಿರ್ಪನೆಗಂ ತಿರಿಪ್ಪಿ ಮಧು ಕೋಪಾಟೋಪದಿಂದಿಟ್ಟೊಡೆ (ಅನಂಪು. ೧೪-೧೯). ತಿರಿವು₁ : ೩. ದನಗಾಹಿಯು ಹುಲ್ಲುಗಾವಲಿನಿಂದ ದನಗಳನ್ನು ಊರ ಕಡೆಗೆ ತಿರಿವಿದನು (ರೂಢಿ). ತಿರಿಹು : ೧. ಏಕನಿಷ್ಠೆಯಿಂದ ತಿರಿಹಿ ಮುರಿಹಿ ಹಿಳಿದು ಹಿಂಡಿ (ತಿರುತೊಂ. ದೇ. ೨೩೩-೧೧). ೭. ಗೊಟಾಯಿಸು; ತೊಳಸು: ಅದಱೊಳಗೆ ಮೊಸರ ಸಂಭಾರಮಂ [ಮಿಗೆ] ತಳಿದು ಹದನಱಿದದಂ ತಿರಿಹಿ ತಿರಿಹಿ ಪಾಕವ ಮಾಡಿ (ಸೂಪಶಾ. ೪-೮೧). ೭. ಮಗುಚಿ ಹಾಕು; ಬುಡಮೇಲು ಮಾಡು: ಸಂಪಳೆಯನು ... ಎಱೆದು ಬೆಂದ ಬಳಿಕಂತದಂ ತಿರಿಹಿ ದೋಸೆಯ ಬೇಯಿಸುವುದು (ಸೂಪಶಾ. ೧-೭೪). △ ತಿರುಂಪು₁ : ೮. ತೊಡಿಸು; ಅಳವಡಿಸು: ಉರಗಕಂಕಣಮಂ ಕಳೆದು ರತ್ನಕಂಕಣಮಂ ತಿರುಂಪಿ (ಗಿರಿಕ. ೧೦-೭೦ ವ); ಬಾಹುಪೂರಯುಮಂ ತೋಳ್ಗೆ ಕೈಕೊಳಿಸಿ ಕಂಕಣಮಂ ತಿರುಂಪಿ (ಬಸರ. ೮-೨೦). ತಿರುಪು₁: ೧. "ತಿರುಪು–ಭ್ರಮಣೇ" (ಶಮಂ). ಅಲರಂಬಿಂದುಱದೆನ್ನ ಮೆಲ್ಲೆರ್ದೆಯನಿಂ[ತುರ್ಚಿ]ತ್ತಿದೆಂಬಂತೆ ನೆಯ್ದಿಲ ಕಾವಂ ತಿರುಪುತ್ತುಂ (ಪಂಪಭಾ. ೩-೫೫); ತೋರಹತ್ತದೊಳಂ ತಿವಿದು ತಿರುಪುವ ಮಲ್ಲರ ನೆರವಿಗಳೊಳಂ (ಗಿರಿಕ. ೨-೧೦೫ ವ); ರಾಕ್ಷಸ ಕಾಳಗತ್ತಿಯ ತಿರುಪಿಯಿಡಲು (ಸಂಭಪ. ೭-೪೨); ಅಲಗಿಕ್ಕಿ ತಿರುಪಿದವೊಲಾಯ್ತೊಡಲೊಳು (ಜೈಮಿಭಾ. ೧೯-೧೪). ೩. ಬಾಣಮಂ ತಿರುಪಿ ತಿರ್ದುವ... ವನೇಚರರಿಂ ಬಗೆಗೊಂಡುಬಾ ವನಂ (ಜಗವಿ. ೧೭-೦೭). ೪. ತಿರುಚು ಮಾಸೆ ಕೊಂಕಿದ ಸಟಂ (ಪಂಪಭಾ. ೧೨-೭); ಮುಗ್ಧೆ ... ಮಸಗಿದ ಲಜ್ಜೆಯಿಂದೆಱಗಿದಳ್ ಕರದಿಂ ತಿರುಪುತ್ತೆ ಹಾರಮಂ (ಶಬಶಂ. ೧-೪೦). ತಿರುಪ್ಪು : ೧. ದೇಶದೇಹವನಂತೆ ತನ್ನ ಸಂದೇಹಮಂ ಕೊರೆದಳ್, ತಿರುಪ್ಪಿ ಕೊರೆದಳ್, ಮರಳಿ ಮರಳಿ! (ಶ್ರೀರಾಮಾ. ೨೬೯-೦೬೦). ತಿರುವು₁ : ೧. ಮಹಾಸಿಂಹಂಗಳನೆರಡುಂ ಕೈಯೊಳ್ತಿರುವುತೆ (ವೀರವಿ. ೮-೩೯); ಕಂಕಣ ಕೈಯ ತಿರುವುತ ಬಾರೆ (ಪುರಂದ. ೧-೨೦೨-೯). ೭. ಭಂಗಾರ ಅಳದೀರ ಬಾಯ್ಮೇಲೆ ಹೊಯ್ದಾರ ... ಹುಟ್ಟಿದಾ ಮನೇ ತಿರುವೀರ (ಹಳ್ಳಿಬಾ. ೨೩). ೯. (ಒರಳಂಕಲ್ಲಿಗೆ ಅಕ್ಕಿ, ಬೇಳೆ, ಕಾರ ಮುಂತಾದುವನ್ನು ಹಾಕಿ) ರುಬ್ಬು; ನುರಿಸು: ಈ ತಿರುಳನ್ನು ನೀರಿನಲ್ಲಿ ಹಾಕಿ ಚೆನ್ನಾಗಿ ತಿರುವಿ... ತಿನ್ನುತ್ತಾರೆ (ಪ್ರಬಾಇ. II, ೨೦). ತಿರುಹು₁ : ೧. ನೆತ್ತಿಯಲ್ಲಿ ಅಲಗ ತಿರುಹುವಂತಪ್ಪ ವೇದನೆಯಹುದೆನಗೆ (ಬಸವ. ೩೦೩); ಹೊರಜ ಹೊಸೆವ ತಿರುಹುವ ಮುರುಹುವೆಳೆವ ... ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೮-೨೯). ೨. ತುರಗವನು ಬೋಳಯಿಸಿ ವಾಘೆಯ ತಿರುಹಿ (ಕುಮಾರವ್ಯಾಭೀ. ೩-೨); ತುಱುಗಳ ತಿರುಹಿ ಕೊಂಡೊಯ್ಯುವಾ ಬೇಡರ ತುಱುಗಾಹಿಗಳು ಕಂಡು (ಜೀವಂಸಾಂ. ೮-೨೪); ನಮ್ಮನು ಕರಕರಿಸಬೇಡೆಳಿಯಂದವ ತಿರುಹಿದನು ಮುಖವ (ತೊರರಾ. ೬-೧೨-೦೭). ೪. ಕುಸುಮ ಮಾಲೆಯ ತಿರುಹುತೆತ್ತಿದ ಮುಸುಡಿನರೆನೋಟದಲಿ...ನೋಡುತಿರ್ದಳು ಸೀತೆ ರಘುಪತಿಯ (ತೊರರಾ. ೧-೧೫-೩೯); ತಿಬ್ಬನೆ ತಿರುಹುವೆ ಧರಣಿಯ (ಮೋಹಕ. ೦೨-೧೧).

ತಿರಿತಿರಿಹು (ದ್ವಿರುಕ್ತಿ) : ಕರ್ಬೊನ್ನ ಸಲಗೆಯೊಳು ಕೆಂಪೊಗೆವಂತೆ ಕೆಂಡದೊಳು ತಿರಿತಿರಿಹಿ ಕಾಸಿ (ಸೂಪಶಾ. ೪-೮೬). ತಿರುವಿಹಾಕು = ೧. ಮಗುಚಿಹಾಕು: ಕಾವಲಿಯ ಮೇಲಿರುವ ದೋಸೆಯನ್ನು ತಿರುವಿಹಾಕು (ರೂಢಿ). ೨. ಪರಿಶೀಲಿಸು: ಕೆಲವು ಕಾಗದಪತ್ರಗಳನ್ನೊಮ್ಮೆ ತಿರುವಿಹಾಕಿ ... ಖೈದಿಗಳನ್ನು ಒಳಗೆ ಕರೆತರಬಹುದೆಂದು ಅಧ್ಯಕ್ಷರು ಆಜ್ಞೆ ಮಾಡಿದರು (ಪುನರು. ೩೩). ೩. ಮನನಮಾಡು; ಚಿಂತನೆಮಾಡು: ಅವಳು ಹೇಳಿದುದನ್ನು ಅವನು ಮನಸಿನಲ್ಲೇ ತಿರುವಿಹಾಕುತ್ತಿದ್ದ (ದೂರಸ. ೯೩). ೪. ಪುನರಾವರ್ತನೆಮಾಡು: ಪರೀಕ್ಷೆ ಹತ್ತಿರ ಬಂತು. ಎಲ್ಲ ಪಾಠಗಳನಗ್ಗೂ ತಿರುವಿಹಾಕಬೇಕು (ರೂಢಿ).

[ತಿರಿ₁ + -ಪು₁./ ತಮಿ. ತಿರುಪ್ಪು, ತಿರುಮ್ಬು; ಮಲ. ತಿರಿ, ತಿರಿಪ್ಪು, ತಿರುಮ್ಬು; ತುಳು. ತಿರ್ಪು; ಕೊಡ. ತಿರ್; ತೆಲು. ತ್ರಿಪ್ಪು; ಕೊಲಾ. ತಿಪ್ಪ್; ನಾಯ್ಕಿ. ತಿಪ್]

ತಿರಿಪು₂, ತಿರಿವು₂, ತಿರುಂಪು₂, ತಿರಂಪು₂, ತಿರುವು₂, ತಿರುಹು₂ (ನಾ). ೧. ಸುತ್ತು ತಿರುಗುವಿಕೆ; ಆವರ್ತನೆ: ಮಹೇಶ್ವರನ ತಿರುಪಿನೊಳುರು ಭುಜೋದ್ಭೂತ ವಾಯುವಿಂದ ಚೇಗೆಯಾದುವು ಚರಾಚರವೀಶನಂಗದೊಳು (ಚಬಪು. ೦೨-೨೦). ೨. [ಸಂಗೀತ] ಒಂದು ಬಗೆಯ ಗಮಕ; ಧ್ವನಿಯ ಭೇದ: ವಳಿ ವಿಳಾಸಂಬಡೆಯೆ ವಹಣಿ ಬಹಳಂಬಡೆಯೆ ತಿರಿಪು ಕೊಮ್ಮೆವಡೆಯೆ ... ಪಾಡುತ್ತಿರೆಯುಂ (ಶಾಂತೀಶ್ವ. ೧೭-೬೭ ವ). ತಿರಿವು₂ : ೩. ಅಲೆದಾಡಿಸುವಿಕೆ; ಸುತ್ತಾಡಿಸುವಿಕೆ; ತಿರುಗಾಡಿಸುವಿಕೆ: ಕರ್ಮವೆ ಕಡುಬಲ್ಲಿತ್ತದಱ ತಿರಿವದೇಂ ಬಹುವಿಧವೋ (ಆದಿಪು. ೫-೯೭). △ ತಿರುಂಪು₂: ೪. [ನಾಟ್ಯ] ವೃತ್ತಾಕಾರವಾಗಿ ತಿರುಗುವ ಒಂದು ಭಂಗಿ: ಪಯ ಪಾಡು ನಿಚ್ಚವಣೆ ಚಾಳಿಯುಮುಲ್ಲಾಸಂ ತಿರುಂಪು ತಡವಿತ್ತಡಮುನ್ನಯನ ವಿಶೇಷಂ ಡಿಳ್ಳಾಯಿಯ ಲುಳಿ ಪುದಿದುಸುರಮೆಸೆವಿನಂ ನರ್ತಿಸಿದಳ್ (ಧರ್ಮಪ. ೨-೨೭). ತಿರುಪು₂ : ೨. ಕಾಕು ಖಚರಂ ಗಮಕಂ ತಿರುಪಿಂಪು ... ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸವಂ (ಜಗವಿ. ೫-೩); ವಳಿ ವಕ್ರತೆಯನೀವ ವಹಣಿ ತರಂಗಿಸುವ ತಿರುಪು ಸುಳಿಗೊಳ್ವ ಹೆಂಪು ಇಂಪಂ ಕಱೆವ ಸುಧಾರಸಗಾನಂ (ಗಿರಿಕ. ೨-೦೦೫ ವ). ೪. ಬೆಡಗು ಬಿನ್ನಣ ರಾಮಣೀಯತೆ ರೇಖೆಯಂತರಕರಣ ತಿರುಪಿನಲಿ ... ಮಾಯಾದೇವಿ ಮೋಹಿಸಿ ಪಾತ್ರವಾಡಿದಳು (ಪ್ರಭುಲೀ. ೪-೫೭); ತಿರುಪು ಗತ್ತರಿ ಲವಣಿ ಲಾಗು ಮುಖಚಾರಿ ... ಬಿಂಕ ಬಿನ್ನಣದ ಗರುವಿಕೆಯ ಪಾತ್ರದೊಳು ನಿಲಲು (ಗುಭಜ. ೨-೨೯); ಲವಣಿಯಡವು ತಿರುಪು ಕೈಮುಱೆ ಕಳಾಸ ಕೂಟಮಾನಂಗಳಂ ಸಂಗಳಿಸಿ ... ಚತುರಜನ ಮೆಚ್ಚುವಂತೆ ತೋರ್ಪ ನರ್ತಕಿಯರಿಂ (ರಾಜಶೇ. ೫-೧೯ ವ). ೫. ಮಲಸೂತ್ರ; ಮರಸಂತ್ರ್ಯ: ಕೊಪ್ಪು ತಂದೀವಿ ಭರಣೀನು ತಂದೀವಿ ಕೊಪ್ಪಿಗೆ ತಿರುಪ ಮರೆತೇ ಬಂದ್ವಿ (ನಾಪದ. ೦೦೭); ತಿಳಿದವ ತಿರುಪಿನಂತಿರಬೇಕು (ಗಾದೆ). 'ತಿರುಪು ಹೂ' ಪರಾ. ೬. ಬಾಗು; ತಿರುಗು: ವಿಷ್ಣು-ಕಾಮರ ಸಂವಾದದಲ್ಲಿ ನಯವು ಕಡಿಮೆಯಾಗಿದೆ, ವಿಸಂಗತಿಯೂ ತೋರಿದೆ. ಆದರೂ ಕೊನೆಗೆ ಅದು ಪಡೆದ ತಿರುಪು ಮೆಚ್ಚುವಂತಿದೆ (ಕಸಾಜ. ೦೭೩); ಅಂಗದನೆದೆಯಲ್ಲಿ ಆವೇಶಗೊಂಡ ಹುರುಪಿನ ತಿರುಪನ್ನು ನಿರೂಪಿಸಲಳವಲ್ಲ (ಪಾರ್ತಿಸು. ೯೮). ೭. ತಿರುಗಾಟ; ಸುತ್ತಾಟ: ಉರಗನರಸಿಯ ಕಂಡು ತನ್ನಯ ತಿರುಪ ಮಾಣದೆ ಸೋತು ವೀರ್ಯವ ಸುರಿಸಲು (ಸಂಭಪ. ೨೭-೩). ೮. ಖಡ್ಗಯುದ್ಧದ ಒಂದು ವರಸೆ: ಮಿಱುಗು ತಳಸಂಚದೊಳು ಮೊನೆಯನು ತೋಱೆ ತಿರುಪಿನೊಳಣೆದು ಕಳಚುವರೇಱುಗಾಣದೆ ಮಧ್ಯಸಂಚಕೆ ಸಿಲುಕಿ ಕೈಮಾಡಿ (ಕುಮಾರವ್ಯಾಭೀ. ೪-೨೨). ೯. ಒಂದು ಬಗೆಯ ತೆರಿಗೆ (?): ನಲ್ಲೇರು ನಲ್ಲೆಮ್ಮೆ ಹೊಡಕೆ ತಿರುಪು ಮಗ್ಗ ... ಮುಂತಾಗಿ ಯೇನುಳ ಸರ್ವ್ವಸ್ವಾಮ್ಯವನೂ ನೀಉ ಆಗುಮಾಡಿಕೊಂಡು (ಸೌಇಇ. XI–11, ೪೪೧-೨೫; 1419). ತಿರುವು₂ : ೪. ಮೈಯ ನುಲಿವು, ಹೆಜ್ಜೆಯ ಲಘುವು, ಕೈಯ ತಿರುವು ... ಮನಸ್ಸನ್ನು ಮುತ್ತುತ್ತಿದ್ದಿತು (ಸವತಿ. ೫). ೬. ಆ ತಿರುವಿನಲ್ಲಿ ಮರದ ಮರೆಯಲ್ಲಿ ಅನತಿದೂರ ಕೆಳಗೆ ಹರಿಯುತ್ತಿತ್ತು ಝರಿ (ಸಿಡಿಲು. ೮೫); ಆದರ ತಿರುವೊಂದರಲ್ಲಿ ಎರಡು ಕಾರುಗಳು ಒಂದಕ್ಕೊಂದು ಡಿಕ್ಕಿಹೊಡೆದು (ಗೋಪುರ. ೮೫). ತಿರುಹು₂ : ೧. ಕುಱಿಯ ನೇಱಿ ಬರುತಿರಲಂ ನಡುಪಥದಿ ಸಂಧಿಸಿ ತಿರುಹ ಮುರುಹಲು ತೆಱವ ಕಾಣದೆ ಹರಣ ಹವ್ವನೆ ಹಾಱೆ (ಸಾಳ್ವಭಾ. ೦೭-೭೮). ೪. ಮುರುಹು ತಿರುಹು ಚಾರಿ ಕೈಲಾಗು ನೇವಣೆ ಕರಣ ಭ್ರಮಂಗಳನಱೆದು ತರುಣಿ ರಂಗಸ್ಥಲದಿ ನರ್ತಿಸಿದಳು (ಜೀವಂಸಾಂ. ೯-೯೨).

ತಿರುಪಿನ ಚೆಂಬು=ತಿರುಗಣಿ ಚೆಂಬು; ರೈಲುಚೆಂಬು: ರೈಲಿಗೆ ಹೊರಡುವಾಗ ಮರೆಯದಂತೆ ತಿರುಪಿನ ಚೆಂಬು ತೆಗೆದುಕೊಂಡು ಹೋಗು (ರೂಢಿ). ತಿರುಪಿನ ಬಿಲ್ಲೆ=ಹೂವಿನ ಆಕಾರದ, ತಿರುಪು ಇರುವ ಆಭರಣ: ಅವಳು ತುರುಬಿಗೆ ತಿರುಪಿನ ಬಿಲ್ಲೆಯನ್ನು ಹಾಕಿಕೊಂಡಿದ್ದಾಳೆ (ರೂಢಿ). ತಿರುಪು ಹಾಕು=ಹೆಣೆದುಕೊಳ್ಳು; ಹೊಸೆದುಕೊಳ್ಳು: ಅನತಿದೂರದಲ್ಲಿ ತಿರುಪು ಹಾಕಿದ, ಹಗ್ಗಗಳಂತೆ ಸುತ್ತಿದ . . . ಎರಡು ಕೇರೆಹಾವುಗಳ ದೃಶ್ಯ ಕಾಣಿಸಿತು (ಸ್ವಪ್ನಹೊ. ೨೩೭).

[ <ತಿರಿಪ್ಪು$_1$./ತಮಿ. ತಿರಿಪು, ತಿರುವು, ತಿರುಪ್ಪ, ತಿರುಪ್ಪಿ; ಮಲ. ತಿರಿಪ್ಪು,ತಿರಿವು ; ತುಳು. ತಿರುಂಪು, ತಿರ್ಪು ]

**ತಿರಿಪೆ** 'ತಿರುಪ' ನೋ.

**ತಿರಿಪ್ಪು** 'ತಿರಿಪ್ಪು$_1$' ನೋ.

**ತಿರಿಭುವನ** (ನಾ). ಮೂರುಂ ಲೋಕ: ಅಕ್ರಮವ ತಿರಿಭುವನ ವಿದ್ಯಾ ಚಕ್ರವರ್ತಿಗಳೆಂದು ನೀವೀ ವಿಕ್ರಮದ ಮಾತಿನಲಿ ಮೇಗರ ಮಣಿವ ಭಟರುಗಳೆ (ಕುಮಾ.ವಿ. ೮-೪೧). [ < ಸಂ. ತ್ರಿಭುವನ ]

**ತಿರಿಮನೆ** (ನಾ). (ಕರಾ) ಭತ್ತ ಮುಂತಾದುವನ್ನು ರಕ್ಷಿಸಿ ಇಡಲು ಹುಲ್ಲಿನಿಂದ ಹೊಸೆದು ಮಾಡಿದ ಗೋಪುರಾಕಾರದ ಸಾಧನ.

[ ತಿರಿ$_3$ + ಮನೆ ]

**ತಿರಿಮುರಿ, ತಿರಿಮುರಿವು** (ನಾ). ೧. ತಿರಂಗ ಮುರುಂಗು; ಅಂಕುಡೊಂಕಾಗಿರುವುದು: ತಮ್ಮ ಕುದುರೆಯ ಚದುರಿನಿಂದ ಕುಣಿಸುತೆಯ್ದುವರು ಅಡ್ಡವಡ್ಡಕೆ ತೆಗೆವರು ತಿರಿಮುರಿಯೆನಲಡ್ಡ ಹರಿವ ಹೊಳೆಯಂತೆ (ಭರತೇ. ೨೩-೨೮). ತಿರಿಮುರಿವು: ೨. ಮಲ್ಲಯುದ್ಧದ ಒಂದು ವರಸೆ: ತಿರಿಮುರಿವುಗಳ ಇಕ್ಕಿದರು ಗಳಹತ್ತದಲಿ ಸಲೆ ಮಿಕ್ಕು ಸತ್ರಾಣದಲಿ ಮುಂಡಿಗಳ ಮಿಗೆ ಸರಿಪೊಕ್ಕು ಹಿಡಿದರು (ಕುಮಾ.ಸ. ೨-೯೭). [ತಿರಿ$_3$ + ಮುರಿ$_3$]

**ತಿರಿಮುರಿವು** 'ತಿರಿಮುರಿ' ನೋ.

**ತಿರಿಯಂಚ** (ನಾ). ತಿರ್ಯಗ್ಗತಿಯಲ್ಲಿರುವ ಪಶು, ಪಕ್ಷಿ ಮೊದಲಾದ ಪ್ರಾಣಿವರ್ಗ: ನಾರಕ ನರ ಸುರ ತಿರಿಯಂಚಗತಿ [ಪಾಠಾಂ. ಯಗ್ಗತಿ] ಯೆಂಬ ಚಾರು ಹೆಸರುಗಳ ಪಡೆದು (ತ್ರಿಪುಸಾಂ. ೫೪): ಪರಿವ್ರಾಜಕವಾದದಿ ಸೋಲ್ತು ಸತ್ತಲ್ಲಿಯೇ ತಿರಿಯಂಚವಾಗಿ (ಶಾಂತೀಶ. ೧-೯೯): ತಿರಿಯಂಚಗಳು ಮನವುಳ್ಳುವಿಲ್ಲದುವೆಂದು ಎರಡಂಗವಾದುವು (ಭರತೇ. ೬೭-೧೦೩).

[ < ಸಂ. ತಿರ್ಯಂಚ್ ]

**ತಿರಿಯಕ್ಕು, ತಿರಿಕ್ಕ** (ನಾ). ೧. ಜೀವನಂ ಅನುಭವಿಸುವ ನಾಲ್ಕುಗತಿಗಳಲ್ಲಿ ಒಂದು; ತಿರ್ಯಗ್ಗತಿ: ಪಾಪಿಗಳು ಉರುಳುವರು ತಿರಿಯಕ್ಕುಗಳಲಿ (ನಿಭಾಗ. ೫-೧೦-೧). ತಿರಿಕ್ಕ: ೧. ತಿರಿಕದೊಳು ಕೆಲರ್ಗೆ ಜಾತಿಸ್ಮರಣಂ ಕೆಲರ್ಗೆ ಧರ್ಮಶ್ರವಣಂ ಕೆಲರ್ಗೆ ಜಿನಮಹಿಮಾದರ್ಶನಮುಂ (ತಸೂವೃ.೧೩). ೨. = ತಿರಿಯಂಚ: ಪಂಚತ್ವಮನ್ನೆದಿದ ವಜ್ರಜಂಘಂಗಂ ಶ್ರೀಮತಿಗಮಾ ತಿರಿಕಂ [ಪಾಠಾಂ. ತಿರಿಯಂಚಂ]ಗಳ್ಗಂ ... ಉತ್ತರಕುರುವೆಂಬುತ್ತಮಭೋಗಭೂಮಿಯೆ ಜನ್ಮಭೂಮಿಯಾದುದು (ಆದಿಪು.೫-೨೭ ವ); ತಿರಿಕನಾರಕಮಾನವಾಮರಲೋಕದೊಳ್ ನೆಲೆಗೊಂಡು ವಿಸ್ತರಿಸದೆಲ್ಲಿಯುಂ (ಧರ್ಮಾಮೃ. ೧-೬೫); ಓರ್ವನೆ ನರಕದೊಳಿರ್ದುಂದೊರ್ವನೆ ತಿರಿಕಂಗಳಾಗಿ [ಪಾಠಾಂ. ತಿರಿಯಂಚನಾಗಿ, ತಿರ್ಯಂಚನಾಗಿ] ತಿರಿತರುತಿರ್ದುಂದು (ಜೀವಸಂ. ೪೩-೧); ಸಮ್ಯಗ್ದರ್ಶನಂ ತನ್ನೊಳುಳ್ಳ ಕೃತಾರ್ಥಂ ನರಕಂಬುಗಂ ತಿರಿಕನಾಗಂ (ಅನಂಪು. ೩-೫೯). [<ಸಂ. ತಿರ್ಯಕ್]

**ತಿರಿಯಜ್ಮುಖ** (ನಾ). [ ನಾಟ್ಯ ] ದೇಶೀಯ ಭೌಮಚಾರಿಗಳಲ್ಲಿ ಒಂದು; ವರ್ಧಮಾನಸ್ಥಾನಕದಲ್ಲಿ ನಿಂತುಕೊಂಡು ಬಲಕ್ಕೂ ಎಡಕ್ಕೂ ದ್ರುತಕ್ಕನುಗುಣವಾಗಿ ಜಾಗ್ರತೆ ಚಲಿಸುವುದು: ಉರು ವರ್ಧಮಾನವುಂ ಪಡೆದೆರಡುಂ ಪದಮೆಯ್ದೆ ನಿಂದು ಬಲನೆಡನಿಂದಂ ತ್ವರಿತದಿ ಚರಿಸಲ್ ಮತ್ತಂ ತಿರಿಯಜ್ಮುಖಚಾರಿಯೆಂಬ ಪೆಸರಂ ಪಡೆಗುಂ (ಲಾಸ್ಯರಂ. ೬-೬೩).

[ <ಸಂ. ತಿರ್ಯಜ್ಮುಖ ]

**ತಿರಿವು$_1$** 'ತಿರಿಪ್ಪು$_1$' ನೋ.

**ತಿರಿವು$_2$** 'ತಿರಿಪ್ಪು$_2$' ನೋ.

**ತಿರಿವೈಸಣಿ** (ನಾ). (?): ಶ್ರೀಮಹ ಅಯ್ಯಪರಸನಾ ತಿರಿವೈಸಣಿರ ಮೇಲಿಂಗನಿಗೆ ಹೊಲಗಂದೆಯ ಅಳಿಪಿದವರಿಗೆ ... ಪಾಪಕೆ ಹೋಹರು (ಎಕ. XI, ಹೊಳಲ್ಕೆ. ೧೩೩-೩ ; ?). [ ? ]

**ತಿರಿಸುತ್ತು** (ನಾ). ಸುತ್ತಿಕೊಂಡುದಂ; ತಿರಿಚಿಕೊಂಡುದಂ: ಜನ್ನಿವಾರಮಂ ಮೇಲಿತ್ತಿ ತಿರಿಸುತ್ತು [ ಪಾಠಾಂ. ತಲೆಸುತ್ತು ]ಮಂ ತೆಗೆದು ಸಿಡಿಲಿಸಿ ಧೋತ್ರಮಂ ಚೆನ್ನಾಗಿಯಾಪೋಷಣಮನೆತ್ತಿ ಕುಳ್ಳಿರ್ದು (ಸಮ್ಯಕೌ. ೭-೨೩).

[ ತಿರಿ$_3$ + ಸುತ್ತು$_2$ ]

**ತಿರಿಹು** 'ತಿರಿಪ್ಪು$_1$' ನೋ.

**ತಿರೀಟ** (ನಾ). ೧. ಕಿರೀಟ; ಮುಂಕುಟ: ಪೊಸತಲರ್ದಲರಂ ತಾಮೆ ಸಾಲ್ವನ್ನೆಗಂ ಸೂಸಿದುವೇಕಾಯ್ತಾ ತಿರೀಟಕ್ಕವನತಿಯೆನೆ ದೇವೋತ್ತಮಾಂಗಂಗಳುಂ ಬಾಗಿದುವು (ಆದಿಪು. ೭-೩೮); ಛತ್ರತ್ರಯಾಯುತವಿನಮಿತ ಸುತ್ರಾಮ ತಿರೀಟಮಣಿಗಣಾರ್ಚಿತ ಪದ (ಜಿನಾಲಿ. ೮). ೨. ಲೋಧ್ರದ ಗಿಡ. [ಸಂ.]

**ತಿರು$_1$** 'ತಿರುಂಪು$_3$' ನೋ.

**ತಿರು$_2$** (ಗು). ಪೂಜ್ಯವಾದ; ಪವಿತ್ರವಾದ. 'ತಿರುನಕ್ಷತ್ರ' ಪರಾ.

[ <ಸಂ. ಶ್ರೀ./ತಮಿ. ತಿರು ]

**Δತಿರುಂಗಿಸು** 'ತಿರಂಗಿಸು' ನೋ.

**Δತಿರುಂಗು** 'ತಿರಂಗು' ನೋ.

**Δತಿರುಂಪು$_1$** 'ತಿರಿಪ್ಪು$_1$' ನೋ.

**Δತಿರುಂಪು$_2$** 'ತಿರಿಪ್ಪು$_2$' ನೋ.

**ತಿರುಕ** 'ತಿರಿಕ$_1$' ನೋ.

**ತಿರುಕಣಾಮಡೆ** (ನಾ). ಅಕ್ಕಿ, ತುಂಪ್ಪ, ಸಕ್ಕರೆ ಹಾಗು ಬಾಳೆ ಹಣ್ಣು ಮುಂತಾದುವುಗಳಿಂದ ಮಾಡುವ ಒಂದು ಬಗೆಯ ಸಿಹಿ ಖಾದ್ಯ: ನಯಿವೇದ್ಯಕೆ ಹರಿವಾಣ ಯಿಪ್ಪತ್ತಾರೂ ಅಪಪಡಿ ಹರಿವಾಣವೊಂದು ತಿರುಕಣಾಮಡೆ [೧] ೧ಕೆ ಯಿರಡರ ಲೆಖದಲೂ ದೇವರ ನಯಿವೇದ್ಯ ನಡವ ಹಾಗೆ ಕಟ್ಟಳೆಯ ಮಾಡಿದ (ಸೌಇಇ. IX-ii, ೪೬೨-೩ ; 1467).

[←ತಮಿ. ತಿರುಕ್ಕಣ್ಣಾಮಟ್ಟೆ]

**ತಿರುಕತನ** (ನಾ) ತಿರುಪೆ; ಯಾಚಕವೃತ್ತಿ: ಹೋಗಲಾಡಿಸಿಕೊಂಡು ತಿರುಕತನವನ್ನು ನೀಗಲಾಡಿಸುತ ಮನೆಮುರುಕುತನವನ್ನು (ಗರಿ. ೪೧-೭).

[ತಿರುಕ (<ತಿರಿಕ$_1$) + -ತನ]

**ತಿರುಕಿ** (ನಾ). ತಿರುಪೆಯವಳು: (ಕಿ). [ತಿರುಕ (< ತಿರಿಕ$_1$) + -ಇ$_2$ ]

**ತಿರುಕು** (ನಾ). ತಿರುಪೆ; ಭಿಕ್ಷಾನ್ನ: ಸಾರ್ವಭೂಪಾಲನ ಸೂನು ಎನಿಸಿದವಗೆ ಸೂಜಿಗೊಳಿನ ತಿರುಕೆ (ಪುರಂದ. ೧-೫೫-೨).

[ತಿರುಕ (<ತಿರಿಕ$_1$) + -ಉ$_4$]

**ತಿರುಕುಳಿ** 'ತಿರಿಕುಳಿ' ನೋ.

**ತಿರುಕುಳಿಗ** (ನಾ). ಭಿಕ್ಷುಕ: ದೆಸೆಯನುಟ್ಟ ಬಾಂಬಟ್ಟೆಗೊಡಲಿನೊಳಿರುಳಾಳ್ದನಂ ತಳೆದ ... ತಿರುಕುಳಿಗನರವಿಣ್ಣನು (ನಂದಿಮಾ. ೨೧-೫೪).

[ ತಿರುಕುಳಿ (< ತಿರಿಕುಳಿ) + -ಗ$_2$ ]

**ತಿರುಕುಳಿದಾಸ** (ನಾ). ಭಿಕ್ಷೆ ಬೇಡುವ ದಾಸ; ಭಕ್ತ: ×× ವನಾಥದೇವರಿಗೆ ತಿರುಕುಳಿದಾಸರ ನಂದಾವಗ (ಎಕ. XIV, ನಾಗಮಂ. ೧೩೭-೮; ?).

[ ತಿರುಕುಳಿ (< ತಿರಿಕುಳಿ) + ದಾಸ ]

**ತಿರುಕೆ** 'ತಿರಿಕೆ' ನೋ.

**ತಿರುಕೋಲು** 'ತಿರಂಗೋಲು' ನೋ.

**ತಿರುಗ** 'ತಿರುಗಿ' ನೋ.

**ತಿರುಗಣಿ** 'ತಿರುಗಣೆ' ನೋ.

**ತಿರುಗಣಿತಂಬಿಗೆ** (ನಾ). ತಿರುಪಿನ ಚೆಂಬು; ಸುತ್ತುಗಳನ್ನುಳ್ಳ ಮುಚ್ಚಳದ ಚೆಂಬು; ರೈಲುಚೆಂಬು: ಏನಾರ ಫರಾಳ ತಂದು ಬಿಡ್ರಿ ಸಾಕು ... ಶೇಷಣ್ಣ ತಿರುಗಣಿತಂಬಿಗೆ ತೆಗೆದುಕೊಂಡು ಹೋದ (ವೃನಿ. ೨).
[ತಿರುಗಣಿ (< ತಿರುಗಣೆ) + ತಂಬಿಗೆ (< ತಂಬುಗೆ)]

**ತಿರುಗಣಿಮಡು** 'ತಿರುಗಣೆಮಡು' ನೋ.

**ತಿರುಗಣೆ,** ತಿರಗಣೆ, ತಿರಂಗಾಣೆ, ತಿರುಗುಣಿ (ನಾ). ೧. ತಿರುಗುವಿಕೆ; ಸುತ್ತಾಟ: ಸುಳಿಯ ತಿರುಗಣೆಗೆ ಸಿಲುಕಿ ಮಡುವಿನ ಆಳಕ್ಕೆ ಇಳಿದಳು (ಹುಲಿಹಾ. ೫೪). ೨. ಬಾಗು; ತಿರುವು: ಒಂದು ದೃಷ್ಟಿಯಿಂದ ಈ ತಿರುಗಣೆಯು ಮನೋರಂಜಕವಾಗಿದೆ (ಸಾಸಮಾ. ೭೦); ರಸ್ತೆ ದಾಟಿ ತಿರುಗಣೆಯ ಬಳಿ ಬಂದೊಡನೆ ಆ ನರಹರಿಯು ಜ್ಞಾಪಕಕ್ಕೆ ಬಂದ (ಸಾಹೇಬ್. ೬೬). ೩. ತಿರುಪು; ಮಲಸೂತ್ರ: ಸಡಲಿದ ತಿರುಗಣೆಯ ತಿಳಿಯದವಳ ಬಲದ ಕಿವಿಯ ಗಿಳಿಯ ವಾಲೆ ಜಗುಳುವೊಡನೆ ಹೊಳೆಯ ಗುಳುಗುಳುರೆದುದು (ಗೀವಿಂ. ೬೬-೨೪); ಈ ಸೂಜಿಯನ್ನು ನಾದ ಸಂಪುಟವೆಂಬ ಭಾಗದಲ್ಲಿರುವ ಸನ್ನೆಯ ಕೆಳತುದಿಗೆ ಒಂದು ತಿರುಗಣೆಯಿಂದ ಜೋಡಿಸಿರುತ್ತಾರೆ (ವಿಜ್ಞಾವಿ. ೪); ನೀರನ್ನು ಹಾಕಿಡುವ ಪಾತ್ರೆಗೆ ತಿರುಗಣೆ ಯಿದ್ದರೆ ಚೆನ್ನಾಗಿರುತ್ತದೆ (ಅಡುಸಾ. ೦೪). **ತಿರುಗಣಿ:** ೩. ರೈಲು ತಂಬಿ ಗೆಯ ತಿರುಗಣಿ ತೆಗೆದು ತಂದೆಗೆ ನೀರು ಕೊಟ್ಟಳು (ಬದುಜ. ೦೮). ೪. ಸುಳಿ; ಆವರ್ತ: ತಿರುಗಣಿಯಲ್ಲಿ ಸಿಕ್ಕಿರುವಂತೆ ಎಲ್ಲಿ ಸಾಗಿರುವೆವೋ ಏನೋ? (ಚಲುನಿ. ೧೦೫); ತಾಯಿ–ತಂಗಿ ತಿರುಗಣಿಯಲ್ಲಿ ಸಿಕ್ಕುಬಿಟ್ಟಿದ್ದರು, ತಂದೆ ನಡುನೀರನ್ನು ಮುಟ್ಟಿದಾಗ ಕೈಸಾಗದೆ ದುರ್ಬಲರಾಗಿ ಅಲ್ಲಿಯೇ ದೈವದ ಮೇಲೆ ಭಾರಹಾಕಿ ಉಳಿದುಬಿಟ್ಟರು (ಹೊಸಕ್ಷ. ೨೦೭); ಈ ಸಂಸಾರದ ತಿರುಗಣಿಯಲ್ಲಿ ಸಾಕಷ್ಟು ತಿರುಗಿ ದಣಿದದ್ದಾಯಿತು (ಹಬ್ಬಿಬ. ೩೭). ೫. ವ್ಯಾಯಾಮದಲ್ಲಿ ಬಳಸುವ ಒಂದು ಬಗೆಯ ಸಾಧನ: ಮಟ್ಟಿಯ ಬಲಭಾಗದಲ್ಲಿ ಗದೆ, ಡಂಬಲ್, ಲಾಠಿ, ದೊಣ್ಣೆ, ತಿರುಗಣಿ, ಗರ್ದನ್‌ಪಟ್ಟು, ಗುಂಡು ಇತ್ಯಾದಿ ವ್ಯಾಯಾಮ ಸಾಧನಗಳು (ಭೀಮಕಾ. ೨೦). **ತಿರುಗಾಣಿ:** ೩. ಮಧ್ಯದಲ್ಲಿ ತಿರುಗಾಣಿಯ (pivot) ಮೇಲೆ ನಿಂತಿರುವ ಮರದ ತೊಲೆಯ ಒಂದು ಕೊನೆಗೆ ಆಡುಬೆಣೆಯನ್ನು ಜೋಡಿಸಿದೆ (ಶಿಲ್ಪನಾ. ೨೦೪). **ತಿರುಗುಣಿ:** ೪. ಪಚ್ಚೆಯದ ಕಡಗವಂ ತಿರುಗುಣಿಯ ಮಡುವಿಗಿಟ್ಟು (ವಡಸಂ. ೦೯೯-೫೮); ವಿಚಾರವಿಪ್ಲವದ ತಿರುಗುಣಿಯಲ್ಲಿ ಸಿಕ್ಕು ದಿಕ್ಕುತೋಚದಂತಾಗಿತ್ತು (ವೃನಿ. ೩೩೯). ೬. ಒಂದು ಬಗೆಯ ಆಯುಧ: ಹಾರೆ ಬಿರಿಕೊಡಡು ಪೆಟಲ ತಿರುಗು [ಪಾಠಾಂ. ಗ]ಣಿ ಬೀಸು ವಲೆ ತಳಿಯಮರದ ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಪ್ಪಿತು (ಸಮ್ಯಕೌ. ೮-೨೮); ಬಲಿವ ಪೆಟಲ ಬೆಣೆ ಡೆಂಕಣಿಗೈ ಪಂದಿದಲೆ ತಿರುಗುಣಿ ಭೀಮಗದೆಯ ಬಲಿದು ಕೆತ್ತುವ ಬಡಗಿಗಳಿಂದಾ ದುರ್ಗ ಸಲೆ ಮೆಚಿದುದು (ಕುರಾಸಾಂ. ೩೭-೫೮); ಗುಂಡು ಪೆಟಲ ತಿರುಗುಣಿ ... ಬಿಲ್ಲಂಬು ಗರಗಸ (ಜಂಪ್ರಸಾಂ. ೮-೧೧).

**ತಿರುಗಣೆಯ ಮಡು = ತಿರಂಗಣೆಮಡು:** ತಿರುಗಣೆಯ ಮಡುವಿನಲ್ಲಿ ಸಿಕ್ಕು ಬೊಗರಿಯಂತೆ ಗಿರಿಗಿರಿ ತಿರುಗಿದಂತೆ ಅವಳಿಗೆ ಭಾಸವಾಯಿತು (ಹೊಸಕ್ಷ. ೧೮೩).
[ತಿರುಗು$_1$ + – ಅಣ್ಕೆ/ತಮಿ. ತಿರುಕಣಿ, ತಿರುಕಾಣಿ; ಮಲ. ತಿರುಗಣಿ; ತುಳು. ತಿರುಗಣೆ, ತಿರ್ಗಣೆ, ತಿಂರ್ಗಣೆ]

**ತಿರುಗಣೆಕೀಲು** (ನಾ). ತಿರುಗುವ ಕೀಲು; ಸುತ್ತುವ ಕೀಲು: ಕಾಲಿನ ಇತರ ಭಾಗಗಳು ತಿರುಗಣೆಕೀಲುಗಳಿಂದ ಕೂಡಿವೆ (ಕೀಟಬಿ. ೧೬).
[ತಿರುಗಣೆ + ಕೀಲು (< ಕೀಲ್)]

**ತಿರುಗಣೆಚೂರಿ** (ನಾ). ಸೀಸದ ಕಡ್ಡಿಯನ್ನು ಒಳಗಿಟ್ಟು ತಿರುಗಿಸಿ ದಂತೆಲ್ಲ ಹೆರೆಯುವ ಸಾಧನ: ಇದು ಪೆನ್ಸಿಲು ಕೊಯ್ಯುವ ತಿರುಗಣೆ ಚೂರಿ (ಪ್ರಾಡಪ್ರ. ೦೩). [ತಿರುಗಣೆ + ಚೂರಿ]

**ತಿರುಗಣೆಮಡು,** ತಿರಂಗಣೆಮಡು, ತಿರುಗುಣಿಮಡು (ನಾ). ನೀರಿನ ಸುಳಿಗಳುಳ್ಳ ಆಳವಾದ ಪ್ರದೇಶ: ಇವನು ಬಿದ್ದದ್ದು ತಿರುಗಣೆಮಡು ವಿಗೆ (ಹೇಮಕೂ. ೬೯). **ತಿರಂಗಣೆಮಡು:** ಅವನು ಸೆಳವಿಗೆ ಸಿಕ್ಕಿ ಹರಿದು ಹೋಗಿ ತಿರುಗಣೀ ಮಡುವಿಗೆ ಬಿದ್ದು (ಮುಂಬಯಿ. ೪-೩೪); ತಿರುಗಣಿ ಮಡುವಿನಲ್ಲಿ ಸಿಕ್ಕ ನಾವಿನಂತೆ ಚಕ್ಕರ ಹೊಡೆಯಹತ್ತಿತು (ನಾಕಥ. ೫೦). **ತಿರುಗುಣಿಮಡು:** "ಚಕ್ರ = ತಿರುಗುಣಿಮಡು" (ಗಂಗಾಮು. ೧೨೭).
[ತಿರುಗಣೆ + ಮಡು$_2$]

**ತಿರುಗಮುರುಗ** 'ತಿರುಗುಮುರುಗು$_2$' ನೋ.

**ತಿರುಗಾಟ** (ನಾ). ಅಲೆದಾಟ; ಸುತ್ತಾಡುವಿಕೆ; ತಿರುಗುವಿಕೆ: ಹೋದ ಕೆಲಸ ಎಲ್ಲ ಆಯಿತೇ? ... ಇನ್ನೂ ಉಳಿದಿದೆಯೆ ತಿರುಗಾಟ? (ವಾತ್ಸಲ್ಯ. ೩೩೦): ಮಗ ಮನೆಗೆ ಬಾರದೆ ಎಲ್ಲಿ ತಿರುಗಾಟಕ್ಕೆ ಹೋಗಿದ್ದನೋ (ಮುಂಗಾಮು. ೪೯); ಅವರು ಇಂಥ ತಿರುಗಾಟಗಳಿಗೆ ಆಳಲ್ಲ (ಒಂಟಿದ. ೪೭).
[ತಿರುಗು$_1$ + ಆಟ]

**ತಿರುಗಾಡು** (ಕ್ರಿ). ಅಲೆದಾಡು; ಸಂಚರಿಸು; ಸುತ್ತಾಡು: ಸುಮ್ಮನೆ ತಿರುಗಾಡಿ ಹೊತ್ತುಗಳೆಯಲಾರೆ (ಮುಂಬಯಿ. ೪-೫೭); ಉಂಡು ತಿರುಗಾಡಿ ಕಾಲ ಕಳೆದ (ತ್ಯಾಗಮು. ೭೦); ನೇಮ ಹೆಚ್ಚಿ ಹೋಮ ವಿಪಾರಿ ಶ್ವಾನನ ಹಾಗೆ ತಿರುಗಾಡುವದಾಯಿತು (ಗಾದೆ). [ತಿರುಗು$_1$ + ಆಡು$_1$]

**ತಿರುಗಾಣಿ** 'ತಿರುಗಣೆ' ನೋ.

**ತಿರುಗಾಸ್,** ತಿರಗಾಸು, ತಿರ್ಗಾಸು (ನಾ). (ಕರಾ) ರಸ್ತೆಯ ತಿರುವು: ಕೆಲವು ಸಾರಿ ತಿರುಗಾಸ್‌ಗಳಲ್ಲಿ ಬಸ್ಸು ಓರೆಯಾದಾಗ ನನ್ನ ಭಾರ ಪಕ್ಕದವರ ಮೇಲೆ ಬೀಳುತ್ತಿತ್ತು (ಪಂಚಭ. ೭೦). **ತಿರಗಾಸು:** ಮೋಟಾರುಕಾರು ವೇಗವಾಗಿ ಓಡುತ್ತ ಆ ತಿರಗಾಸನ್ನು ಒಂದು ನಿಮಿಷದೊಳಗೆ ದಾಟಿಕೊಂಡು ...ಬಹಳ ದೂರವಾಯಿತು (ಮ್ಯಜಲ. ೧೩೦). **ತಿರ್ಗಾಸು:** ತಿರ್ಗಾಸುಗಳು ಹಲವಾರು ಸಿಕ್ಕುತ್ತಿದ್ದವು (ಪರಾವ. ೧೫೦). [← ತುಳು. ತಿರ್ಗಾಸ್]

**ತಿರುಗಿ,** ತಿರಂಗ (ಅ). ೧. ಮತ್ತೆ; ಇನ್ನೊಮ್ಮೆ; ಪುನಃ: ತಿರುಗಿ ಭೀಮ ನನೆಚ್ಚನು (ಕುಮ್ಯಾದ್ರೋ. ೦೮-೫೭); ತಿರುಗಿ ನೀವಿನ್ನೆನ್ನ ದೆಸೆಗುಬ್ಬರದ ಚಿಂತೆಯ ತಾಳದಿರಿ (ಕೊರಾ. ೩-೪-೪); ಇಂತು ಜೂಜೊಳು ಸೋತು ತಿರುಗಿನ್ನೆಂತು ರಾಜ್ಯದಿ ನಿಲುವಿರಿ (ನಳಚ. ೪-೪೦). ೨. ಪ್ರತಿಫಲವಾಗಿ: ತಿರುಗಿ ಬಯಸದನ ಶಿವಪೂಜೆ ಶಿವನಿಂದ ಹಿರಿದೆಂದು ಅಜಗು (ಸರ್ವಜ್ಞ. ೨೬೩). **ತಿರುಗ:** ೧. ಬಾಣಮನೊಂದನಿವಗಂ ತೊಡಲು ತಿರುಗ ಗತಿ ಬೇರಿಲ್ಲ ನರನಿಗಂ ಮರಣವಾಗಲಿಕ್ಕೆ (ತುರಂಗ. ೫೭-೫೦); ಕೆಟ್ಟು ನೆಂಟರ ಸೇರ ಬೇಡ, ಕೊಟ್ಟ ಧರ್ಮ ತಿರುಗ ಕೇಳಬೇಡ (ಗಾದೆ).

**ತಿರುತಿರುಗಿ** (ದ್ವಿರುಕ್ತಿ): ಸೋಲ್ದೆ ಜಗಿ ತಿರುತಿರುಗಿ ಬರುತಿರ್ಪ ತಂಬಿ ಗಳ ಸಾಲ್ (ಜೈಮಿಭಾ. ೩-೭). [< ತಿರುಗು$_1$]

**ತಿರುಗಿಮುರುಗಿ** 'ತಿರಂಗಮುರಂಗು$_2$' ನೋ.

**ತಿರುಗಿಸು,** ತಿರಂಗಿಸು (ಕ್ರಿ). ೧. ಸುತ್ತುವಂತೆ ಮಾಡು; ಸುತ್ತಿಸು; ಅಲೆಸು: ತನ್ನ ವಿನೋದಕ್ಕೆ ತಾನೇ ತಿರುಗಿಸಿದನನಂತಭವದುಃಖಂಗಳಲ್ಲಿ ಇಂತೆನ್ನ ಚೆನ್ನಮಲ್ಲಿಕಾರ್ಜುನದೇವನೆಂಬ ಪರಶಿವನು (ಮಹಾದೇ.ಬ. ೩-೪); ಇತ್ತ ಬಲದಲಿ ಬಲಕೆ ಮೊಗವಿಡಲತ್ತಲೆಡದಲಿ ಮಾರ್ಗಳಲ್ಲಿಂದತ್ತ ತಿರುಗಿಸಿ ಬಳಲಿಸಿದನಸುರಾರಿ ದಿಗ್ಗಜವ (ಕುಮ್ಯಾದ್ರೋ. ೩-೫೩). ೨. ಚಕ್ರಾಕಾರ ವಾಗಿ ಸುತ್ತಿಸು: ನೋಟ ವಿಷಯದಿಂದೊಳಗಾದ ಪುರುಷರ ಕೋಟಲೆ ಗೊಳಿಸಿ ಸುತ್ತಿಸುತೆ ಆಟವಿದೆಂಬಂತೆ ತಿರುಗಿಸುತಿರ್ದರು ಚಾಟಳದುಯ್ಯಾಲೆ ಗಳನು (ಮೋಹತ. ೦೪-೮೯); ಕರ್ಣಜಂ ಬಳಿಕ ನಸುನಗೆಯೊಳಿಡಗೈಯ

ಕೋದಂಡವಂ ತಿರುಗಿಸುತ್ತಿಂತೆಂದನು (ಜೈಮಿಭಾ. ೧೨-೦೬). ೩. ಬದಲಿಸು; ಬೇರೆ ಕಡೆಗೆ ಹೊರಳಿಸು : ಜನರ ತಾಮಸ, ಮೂಢಪದ್ಧತಿಗಳನ್ನು ಸಾತ್ವಿಕಭಕ್ತಿಗೆ ತಿರುಗಿಸುವ ಕಾರ್ಯವನ್ನು ಇವರು ಹೆಚ್ಚಾಗಿ ಮಾಡಿರಬೇಕೆನ್ನಿಸುತ್ತದೆ (ಜಗದಾ. ೧೧೬) ; ನಾವು ಮೊದಲು ಆಡಿದ ಮಾತು ತಿರುಗಿಸಲಿಕ್ಕೆ ಏನೇನು ಹಿಂದೆ ಮುಂದೆ ನೋಡುವದಿಲ್ಲ (ಮುಂಬಯಿ. ೩-೦೩); ಯಾವ ಆಕಾರಕ್ಕಾದರೂ ತಿರುಗಿಸಬಹುದು (ಹಣಪ್ರ. ೦೬). ೪. ಮಗುಚು; ಬುಡಮೇಲು ಮಾಡು : ಉಂಡೆಯಂ ಕೊಯಿದು ಮುಖವ ಮೇಲಾಗಿ ತಿರುಗಿಸಿಕೊಂಡು (ಸೂಪಶಾ. ೧-೪೮); ಚಪ್ಪಟೆಯಾದ ಸೌಟಿನಿಂದ ಬಾಣಲೆಗೆ ಹಾಕಿದ ಪೂರಿಯನ್ನು ತಿರುಗಿಸುತ್ತಿರಬೇಕು (ಅಡುಸಾ. ೧೧೬). △ ತಿರುಂಗಿಸು : ೩. ಹರಿಣಾಕ್ಷಿ ... ತಿರುಂಗಿಸಿದಾಸ್ಯಪದ್ಮಮಂ ಪಿಡಿದತಿಕಷ್ಟದಿಂ ನೆಗಪಿಯುಂ ನೆರೆ ಚುಂಬಿಸದಾದೆ ನಾನದಂ (ಶಾಕುಂತ. ೪೩-೭೬). [ ತಿರುಗು$_1$ + – ಇಸು$_3$ ]

**ತಿರುಗು$_1$**, ತಿರುಂಗು (ಕ್ರಿ). ೧. ಸುತ್ತು ; ಅಲೆದಾಡು ; ಓಡಾಡು : ಸುಟ್ಟುರೆಯ ತಱಗೆಲೆಯಂತೆ ಶಿಱ್ಱನೆ ತಿರುಗಿ ಬೀೞ್ವಲ್ಲಿ (ಕಾದಂಪೂ. ೦೮೬) ; ತಿಟ್ಟನೆ ತಿರುಗುವ ಗಾಣದೆತ್ತಿನಂತೆ (ಬಸವ. ೩೮೦); ಶೋಕಾತುರದೊಳೊಂದೆಡೆಯೊಳುಂ ಕಾಲ್ ನಿಲ್ಲದೆ ಭ್ರಮೆಗೊಂಡು ತಿರುಗುತ್ತ (ಬಸಪು. ೪೩-೩೪) ; ಕಾಡಿನಲಿ ತಿರುಗುವಗೆ ಕನಕಭೂಷಣವೇಕೆ (ಪುರಂದ. ೨-೬೨-೧) ; ಪಡೆ ತಿರುಗುವುದು ದುರ್ಗದಲಿ (ಕಂನವಿ. ೧೧-೧೪೧) ; ಮೂಡ ಪಡವಲ್ ತಿರುಗು, ಬಡಗ ತೆಂಕಲು ತಿರುಗು (ಹೊಂಗಳು. ೦೩-೦೩) ; ಗಂಡಸು ಕೂತು ಕೆಟ್ಟ, ಹೆಂಗಸು ತಿರುಗಿ ಕೆಟ್ಟಳು (ರೂಢಿ). ೨. ಹಿಂದಕ್ಕೆ ಹೋಗು ; ಹಿಂಜರಿ ; ಹಿಮ್ಮೆಟ್ಟು : ದೊರೆಯುಳಿದನೇ ಸ್ವಾಮಿದ್ರೋಹರು ತಿರುಗಿ (ಕುವ್ಯಾದ್ರೋ. ೦೭-೩೯) ; ಅಸಿತಧ್ವಜಂ ಬವರದೊಳ್ಮುರಿದು ಭಂಗಿತವಾಗಿ ತಿರುಗಿದಂ ತನ್ನ ಪಟ್ಟಣಕೆ (ಜೈಮಿಭಾ. ೮-೪೯). ೩. ಹೊರಳು : ಅಟ್ಟಿದೊಡೆ ತಿರುಗಿ ಮುರಿಮುರಿದೊಟ್ಟೈಸುತೆ ಕೊಂಕಿ ... ಓಡಿತೆಸೆವ ಮಸಕದ ಶಶಕಂ (ಗಿರಿಕ.೧-೮೬); ಕೊಂಚ ದೂರ ಹೋಗಿ ಬಲಕ್ಕೆ ತಿರುಗಬೇಕು (ರೂಢಿ). ೪. ಹೊರಳಿಸು ; ತಿರುಗಿಸು : ಭೀಮಗಜ ಕಟ್ಟಿದುದು ಬೀದಿಗಳ ತಿರುಗಲಾಪರೆ ಸಮಯವಿದು (ಕುವ್ಯಾದ್ರೋ. ೩-೧): ತನ್ನಿರವ ಸುಜ್ಞಾನದೃಷ್ಟಿಯೊಳು ತಿರುಗಿ ನಿಟ್ಟಿಸಬೇಕು ಮುಕ್ಕಣ್ಣನಲ್ಲದೆಲ್ಲರಿಗೆ ಬಹುದೆ ಸುಖಸಿದ್ಧಿ (ಭರಜ.೩-೭೭). ೫. ಗಿರಕಿ ಹೊಡೆ; ಚಕ್ರಾಕಾರವಾಗಿ ಸುತ್ತು : ಇಟ್ಟಿಯ ಹಣ್ಣ ನರಿ ತಿಂದು ಸೃಷ್ಟಿ ತಿರುಗಿತ್ತೆಂಬಂತೆ (ಬಸವ. ೩೭೮). ೬. ಕಳೆ : ಮೇದಿನಿಯುಲೊಂದಬುದ ತಿರುಗಲು ಸುರರಿಗೊಂದು ದಿನ (ಸಂಭಪ. ೪-೯).
△ ತಿರುಂಗು : ೩. 'ತಿರುಂಗಿಸು' ಪರಾ.

ತಿರುತಿರುಗು (ದ್ವಿರುಕ್ತಿ) : ನರನ ರಥ ಸುಳಿಗಾಳಿಯಂತಿರೆ ತಿರುತಿರುಗಿದುದು ವಿಶ್ವತೋಮುಖದಿ (ಕುವ್ಯಾದ್ರೋ. ೧೪-೨೬). **ತಿರುಗದ ದಾರಿ** = ಹಿಂದಕ್ಕೆ ಬರದ ದಾರಿ; ಯಮಲೋಕದ ಹಾದಿ: ವಾರಿಜಗಂಧಿ ನಿನ್ನಯ ಕಾಂತ ತಿರುಗದ ದಾರಿಯ ಹೋದಾತ ಬಹನೆ (ಮೋಹತ.೯-೧೮). **ತಿರುಗದ ಹಾದಿಯ ಹತ್ತು** = ಸತ್ತುಹೋಗು : ಕಾದಿ ... ತಿರುಗದ ಹಾದಿಯ ಹತ್ತಿದರ್ (ಮೋಹತ. ೧೨-೩೮). **ತಿರುಗಿ ನೋಡು** = ಗಮನಕೊಡು ; ಲಕ್ಷಿಸು : ಆ ಕಡೆ ನಾನು ತಿರುಗಿ ನೋಡಲೂ ಇಲ್ಲ (ಪುನರು. ೦೯೨). **ತಿರುಗಿ ಬರು** = ಬಳಸಿಬರು; ಸುತ್ತಿಬರು : ತಿರುಗಿ ಬಾಹನೊ ಧರೆಯನೆಲ್ಲವನುರಿವ ಬೇಗೆಯೊಳೆಯ್ದ ಬೇವನೊ (ಬಸಪು. ೬೦-೩೮). **ತಿರುಗಿ ಬೀಳು**=ಎದುರು ಬೀಳು; ಪ್ರತಿಭಟಿಸು : ಸುಂದರಾಂಗನ ದುರ್ವರ್ತನವೆಲ್ಲ ಪ್ರಜೆಗಳಿಗೆ ತಿಳಿಯಲು ಅವರು ತಿರುಗಿ ಬಿದ್ದು...ಸತ್ಯವಿಕ್ರಮನನ್ನು ಬಿಡಿಸಿಬಿಟ್ಟರು (ಕವಿಕ. ೪೩). **ತಿರುಗಿ ಹೊಡು** = ತಿರುಗಿಬೀಳು : ಆದರೆ ಕೆಲಸ ಬಿದ್ದಾಗ ಅವರೊಡನೆ ಸ್ನೇಹ ಬೆಳಸುತ್ತಿದ್ದನು. ತಕ್ಷಣ ತಿರುಗಿ ಹೊಡುತ್ತಿದ್ದನು (ಹಿಂಮುಸ. ೭೮). **ತಿರುತಿರುಗಿ ಅನ್ನು** = ಪ್ರತಿಯಾಗಿ ಹೇಳು ; ಎದುರುತ್ತರ ಕೊಡು : ದೊಡ್ಡವರ ಮಾತಿಗೆ ತಿರುತಿರುಗಿ ಅನ್ನಬಾರದು (ರೂಢಿ).

[ ದೇ. ‖ ತುಳು. ತಿರ್ಗುನೆ, ತಿಂರ್ಗುನೆ ; ತೆಲು. ತಿರುಗು ]

**ತಿರುಗು$_2$** (ನಾ). ೧. ಸುತ್ತುವಿಕೆ ; ಚಕ್ರಾಕಾರವಾಗಿ ಚಲಿಸುವಿಕೆ. 'ತಲೆ ತಿರುಗು$_2$' ಪರಾ. ೨. ತಲೆಕೆಳಗಾಗುವಿಕೆ. 'ತಿರುಗು ಮುರುಗು$_1$' ಪರಾ. [ < ತಿರುಗು$_1$ ]

**ತಿರುಗುಣಿ** 'ತಿರುಗಣೆ' ನೋ.

**ತಿರುಗುಣೆಮಡು** 'ತಿರುಗಣೆಮಡು' ನೋ.

**ತಿರುಗುತ್ತ** (ನಾ). (ದನಗಳಿಗೆ ಬರುವ) ತಿರುಗಿ ತಿರುಗಿ ಬೀಳುವ ಒಂದು ಬಗೆಯ ರೋಗ ; ತಲೆದೂಗ ರೋಗ : ಎಡದತ್ತ ತಿರಿಗಿ ತೊಟ್ಟನೆ ಕೆಡೆವೊಡೆ ಬಲದೊಳ್ ... ಮೂಗಿನ ಸೆರೆಯಂ ಬಿಡುವುದು ತಿರುಗುತ್ತದವಕಮಂ ಪಿಂಗಿಸುಗುಂ (ಲೋಕೋಪ. ೯-೨೦೦). [ ತಿರುಗು$_1$ + ಕುತ್ತ ]

**ತಿರುಗುಪ್ಪು** (ನಾ). ೧. ತಿಳ್ಳಿ ಮೊದಲಾದ ಆಟಗಳಲ್ಲಿ ಮಾಡುವ ಪ್ರತಿಧಾಳಿ : ಈ ಸರತಿ ರಾಮನ ಕಡೆಯವರು ಬಹಳೇ ಜಾಗ್ರತೆಯಿಂದ ಆಟವನ್ನು ಆಡಿದ್ದರಿಂದ ತಿರುಗುಪ್ಪಾಗಿ ತಿರುಗಿ ಎರಡನೆಯ ಮನೆಯವರೆಗೆ ಉಪ್ಪು ಏರಿ ಬಂದಿತ್ತು (ನಿರಾಭ. ೯೬). ೨. (ಆಲಂ) ತಿರುಗಿ ಬೀಳುವಿಕೆ ; ತಿರುಮಂತ್ರ : ತನ್ನ ಶಿಷ್ಯನೇ ತನಗೆ ತಿರುಗುಪ್ಪು ಕೊಟ್ಟನು (ಶರಪ. ೩೪೯); ನೀನು ಭಾಗೀರಥಿಗೆ ಮಾಡಿದ ಮೋಸವೇ ಈಗ ತಿರುಗುಪ್ಪು ಹೊಡಿದೆ (ಭಾರತಿ. ೦೯೦) ; ರಾಯರ ಮೇಲೆಯೆ ಖಟ್ಲೆಯು ತಿರುಗುಪ್ಪಾಗಿ, ಐನೂರು ರೂಪಾಯಿ ದಂಡ, ಆರುತಿಂಗಳ ಸಶ್ರಮ ಶಿಕ್ಷೆಯಾಯಿತು (ಹೂಬಿಸಿ. ೬೨). [ ತಿರುಗು$_1$ + ಉಪ್ಪು$_2$ ]

**ತಿರುಗುಮುರುಗು$_1$** (ನಾ) . ಹಿಂದುಮುಂದಾಗುವಿಕೆ : ನಡು ಸಣ್ಣದಾದರೆ ಮನ ದೊಡ್ಡದಾದರೆ ಕಾಂತೆ ಮೆಚ್ಚಾಗುವೆ ನೀನು ನಡು ಮನಗಳ ಗಾತ್ರ ತಿರುಗುಮುರುಗಾದರೆ ಮತ್ತೆ ನಾ ಹೇಳುವುದೇನು (ಇಂಜಾಪ. ೦೦೬-೦೭) ; ನುಲೋ ಎಂಬ ಪರ್ವತದ ಮೇಲೆ ತಿರುಗುಮುರುಗು ಪಾದಗಳುಳ್ಳ ಎಂಟು ಬೆರಳುಳ್ಳ ಜನರಿದ್ದಾರೆ (ಪ್ರವಾಇ. I, ೨೮). [ತಿರುಗು$_2$ + ಮುರುಗು ]

**ತಿರುಗುಮುರುಗು$_2$**, ತಿರುಗಮುರುಗ, ತಿರುಗಿಮುರುಗಿ (ಅ). ಮತ್ತೆ ಮತ್ತೆ ; ಪುನಃ ಪುನಃ : ಅವರು ಅದೇ ಮಾತನ್ನು ತಿರುಗೂಮುರುಗೂ ಆಡುತ್ತ ಹೊರಬಿದ್ದರು (ಮೊಪಾಸಾ. ೦೩). **ತಿರುಗಮುರುಗ** : ತಿರುಗ ಮುರುಗ ಮತ್ತೆ ಅದೇ ಇದ್ದಕಿದ್ದ ಹಾಗೆ ಇದೆ (ಹೃದಸ. ೩೬-೧). **ತಿರುಗಿ ಮುರುಗಿ** : ಆ ರಭಸಕಸುರವಳಗಳ್ ... ಕಂಗೆಟ್ಟು ದೆಸೆಗೆಟ್ಟು ಸುಳಿಸುತ್ತಿದುವು ಮರಳಿ ತಿರ್ರನೆ ತಿರುಗಿಮುರುಗಿ (ಶ್ರೀರಾಮಾ. ೬೩೩-೦೦೦). [ < ತಿರುಗುಮುರುಗು$_1$ ]

**ತಿರುಗುಹ** (ನಾ). (ಸಾಲ ಮುಂತಾದುವನ್ನು) ಹಿಂದಿರುಗಿಸುವಿಕೆ,– ಮರಳಿ ಕೊಡುವಿಕೆ ; "ನಿಷ್ಕೃತಿ" (ನಾಚಿರಾ. ೬). [ ತಿರುಗು$_1$ + – ಹ$_2$ ]

**ತಿರುಗುಳಿ** (ನಾ). "ತಿರುಪು ಮೊಳೆಯನ್ನು ತಿರಂಗಿಸಿ ಬಿಗಿಸುವ ಸಲಕರಣೆ : ತಿರುಪುಳಿ, ತಿರುಗುಳಿ" (Screw-driver. ಇಂಕನಿ). [ ತಿರುಗು$_1$ + ಉಳಿ$_5$ ]

**ತಿರುಗೊಂಬು** (ನಾ). ತಿರುಚಿಕೊಂಡಿರುವ ಕೊಂಬು; ಹೊಸೆದುಕೊಂಡಿರುವ ಕೊಂಬು : ಕಾಳ್ಕೋಣ ಕಡವೆ ಸಾರಗ ಜಿಂಕೆಗಳ ಕವಲ್ಗೊಂಬುಗಳ್ ತಿರುಗೊಂಬುಗಳ್ ನೀಳ್ದ ಕೊಂಬುಗಳ್ (ಶ್ರೀರಾಮಾ. ೪೩೩-೨೭೨). [ < ತಿರಿ$_1$ + ಕೊಂಬು$_1$ ]

**ತಿರುಗೋಲು**, ತಿರುಕೋಲು (ನಾ). ೧. ವೃತ್ತಾಕಾರವಾಗಿ ಸುತ್ತುವ ಕೋಲು : ಇದರ ನಡುವೆ ಒಂದು (Rotor) ತಿರುಗೋಲು ಚಲಿಸುವುದು (ಬಾಲಪ್ರ. II, ೬೩೨). **ತಿರುಕೋಲು** : ೨. ಸುತ್ತಿ ಆಡುವ ಕೋಲಾಟ ; ಜಡೆಕೋಲಾಟ : ಸುರದಂತಿಯುರುದಂತಮಂ ಮುಱಿದು ತಿರುಕೋಲನಾಡುವರು (ಗುರುಜಾ.೨-೬೧)..[ < ತಿರುಗು$_1$ + ಕೋಲು$_1$ ( <ಕೋಲ್$_1$)]

**ತಿರುಚು₁** ' ತಿರಿಚು ' ನೋ.

**ತಿರುಚು₂** (ನಾ). ೧. ನುಲಿದುಕೊಂಡಿರುವಿಕೆ ; ಹೊಸೆದುಕೊಂಡಿರುವಿಕೆ : ಪೆರ್ನರದ ತಿರುಚಿನಿಂ (ಪರಶು. ೨೮-೨೮). ೨. ಸುರುಳಿ : ಮೇಸನ್ ಎಂಬುವವರಿಗೆ ಆಫ್ಘಾನಿಸ್ಥಾನದ ಸ್ತೂಪಗಳಲ್ಲಿ ದೊರೆತ ತಿರುಚುಗಳು. ದಾರ ಬಿಗಿದಿರುವ ಈ ತಿರುಚುಗಳಲ್ಲಿ ಬರೆಹವಿದೆ (ಭಾರಪ.೧೩).
[ <ತಿರುಚು₁ ]

**ತಿರುಚೂರ್ಣ** (ನಾ). ಶ್ರೀವೈಷ್ಣವರು ನಾಮದ ಮಧ್ಯರೇಖೆಗೆ ಉಪಯೋಗಿಸುವ ಕೇಸರಿಬಣ್ಣದ ಹುಡಿ : ಮುಟ್ಟಬೇಡ ... ತಿರುಮಣಿ ತಿರುಚೂರ್ಣ ಶೃಂಗಾರ ಧರಿಸುವರ (ಕನಕ. ೮೫-೨) ; ಹರಿದಾಸರುಗಳು ... ತಿರುನಾಮ ತಿರುಚೂರ್ಣಗಳ ಪಣೆಯೊಳಗಿಟ್ಟು ತಿರಿಗಿ ಹರಿಯ ಧ್ಯಾನಿಪರು (ಕುಂನವಿ. ೫-೫೭) ; ತಿರುಮಣ್ ಶ್ರೀಚೂರ್ಣ (ತಿರುಚೂರ್ಣ) ಇವುಗಳನ್ನು ಧರಿಸಿದಲ್ಲಿ ... ದೇಹಕ್ಕೆ ಕಾಂತಿಯನ್ನುಂಟುಮಾಡಿ ಸಕಲ ದೋಷಂಗಳನ್ನೂ ಹೋಗಲಾಡಿಸುವುದು (ಸಕವ್ರ. ೪೧).
[ ←ತಮಿ. ತಿರುಚ್ಚೂರಣ ; ತೆಲು. ತಿರುಚೂರ್ಣ ]

**ತಿರುಚೊಂ** (?). (?) : ಬೆಳಱೂರು ಎಣ್ಬತ್ತು ಗದ್ಯಾಣ ಪೊನ್ನುಂ ಎಣ್ಬುನೂಱು ಬತ್ತಮುಮವ್ ತಿರುಚೊಂ (ಇಆ. VI, ೧೦೩-೧೪ ; 887 ?).
[ ? ]

**ತಿರುಣಾಳು** ' ತಿರುನಾಳ್ ' ನೋ.

**ತಿರುಣೆ** (ನಾ). ೧. ಕುಂಬಾರನ ಚಕ್ರ : ಅನುವಿನಿಂ ಕುಂಬಱಂ ಪಿಡಿದ ದಂಡದಿನಚೇತನಮಾದ ಚಕ್ರಮಂ ತಿರುಪಲಾ ತಿರುಣೆ ತಿರ್ರನೆ ತಿರುಗುವಂತೆ (ಪಾಸೋವು. ೯-೪೩). ೨. ಮಲ್ಲಯುದ್ಧದ ಒಂದು ವರಸೆ : ತಿರುಣೆ ಕುಳಾಡೆ ಬಾಹುಗೆಣೆ ಸಂದ ಸುಭಾಹುಡೆ ... ಕತ್ತರೆಗಳೆನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಪುವಿ.೨೬-೧೮). [ < ತಿರುಗಣೆ ]

**ತಿರುತುಳಸಿ** (ನಾ). ತುಳಸಿಯಲ್ಲಿ ಒಂದು ಬಗೆ ; ಶ್ರೀತುಳಸಿ : ತಿರುಪತೀ ಹಾದೀಲಿ ತಿರುತುಳಸಿಮರ ಹುಟ್ಟಿ ಬೇಲೂರ್ಗೆ ಬೇರು ಹರಿದಾವೊ. ತಿಮ್ಮಪ್ನ ಕಲ್ಯಾಣಕ್ಕೆ ಮುಗ್ಗು ಸುರಿದಾವೊ (ಹಳ್ಳಿಯ. ೨೨).
[ ತಿರು₂ + ತುಳಸಿ (= ತುಲಸಿ) ]

**ತಿರುದಳ** (ನಾ). ಮೂರು ಎಸಳುಗಳುಳ್ಳ ಪತ್ರೆ ; ಬಿಲ್ವ : ೪೪ ತಿರುದಳದ ಹುವು ೧೪೪ ಭಂಡಿ ಚಕ್ರಕ್ಕೆ ಅಷ್ಟದಳ ಹುವು (ಎಕ. XIV, ನಂಜನ. ೨೮೯-೫ನೇ ಕಲಂ ; 1847). [ <ಸಂ. ತ್ರಿದಲ ]

**ತಿರುನಕ್ಷತ್ರ** (ನಾ). ಮಹಾತ್ಮರು ಹುಟ್ಟಿದ ನಕ್ಷತ್ರವು ಬರುವ ದಿನ; ಜಯಂತಿ : ಈ ದಿನ ರಾಮಾನುಜ ತಿರುನಕ್ಷತ್ರ (ಈಜಕ. ೯೦).
[ ತಿರು₂ + ನಕ್ಷತ್ರ ]

**ತಿರುನಱುಂಗೊಂಡೆ** (ನಾ). ಒಂದು ಊರಿನ ಹೆಸರು : ಪಞ್ಚಮಹಾಪಾತಕದ ಫಲ (೦) ಮಿನೆಬರ್ಗ್ಗಮಪ್ಪುದು ತಿರುನಱುಂಗೊಣ್ಡೆಯ ಕಟಿಪ್ಪಳ್ಳಿ ಬಟಿ (ಸಾಇಇ. IX-i, ೧೯-೧೩ ; 9ನೆಯ ಶತ). [ ? ]

**ತಿರುನಾಮ** (ನಾ). ಶ್ರೀವೈಷ್ಣವರು ಧರಿಸುವ ನಾಮ : ಹರಿದಾಸರುಗಳು ತಿರುನಾಮ ತಿರುಚೂರ್ಣಗಳ ಪಣೆಯೊಳಗಿಟ್ಟು ತಿರಿಗಿ ಹರಿಯ ಧ್ಯಾನಿಪರು (ಕುಂನವಿ. ೫-೫೭).

**ತಿರುನಾಮ ಹಾಕು** = ಮೋಸಮಾಡು : ನಾಲ್ಕು ದಿವಸ ಕಾಲ ವಿಳಂಬವಾದರೂ ನಾವೇನು ತಿರುನಾಮ ಹಾಕಿ ನಿಮ್ಮ ಹಣ ನುಂಗುವುದಿಲ್ಲ (ಕಾವೇರಿ. ೫೦). [← ತಮಿ. ತೆಲು. ತಿರುನಾಮ]

**ತಿರುನಾಮಧಾರಿ** (ನಾ). ತಿರುನಾಮವನ್ನು ಧರಿಸಿದವನು ; ಶ್ರೀವೈಷ್ಣವ : ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ ಜನ್ಮಸಾರ್ಥಕವಿಲ್ಲದವರೆಲ್ಲ ಭಾಗವತರೆ (ಕನಕ. ೦೨೬ ಪಲ್ಲವಿ).
[ತಿರುನಾಮ + – ಧಾರಿ]

**ತಿರುನಾಳ್**, ತಿರಿನಾಳ್, ತಿರುಣಾಳು, ತಿರುನಾಳು (ನಾ). ಹಬ್ಬದ ದಿನ ; ಪರ್ವದಿನ : ದಿನವು ಬೇಱಿಲ್ಲ ತಿರುನಾಳೆ ದಿನಮಾ ಪುರಕೆ (ತಿರುರ. ದೇ. ೩-೧೪) ; ತಿರುನಾಳೆಂಬುದು ತನಗಂ ನಿರುತಂ ತಾಯ್ತಂದೆ ಬಂಧು ಗತಿಮತಿಯೆನುತಂ ... ಜಾನಿಸುತಿರ್ಪಂ (ತ್ರಿಪುವಿ. ೫೭-೭). **ತಿರಿನಾಳ್** : ಹರನ ಭಕ್ತರ್ಗೆ ಹರುಷಂ ಬಪ್ಪ ಮಾಳ್ಕೆಯಿಂ ತಿರಿನಾಳ್ಬರಲು ಪುರವನರ್ತಿಯಿಂ ಕಯ್ಗೆಯ್ದು (ಮಱರ. ದೇ. ೭೧-೦೩). **ತಿರುಣಾಳು** : ವೇದಗಿರಿಪೆರುಮಾಳಿಗೆ ತಿರುಣಾಳನು ಸಾಗಿಸಿ ಪೂಜೆಯನು ಮಾಡಿಸೂದು (ಸಾಇಇ. IX-ii, ೫೨೬-೧ ; 1529). **ತಿರುನಾಳು** : ತಿರುವಧ್ಯಾನ ತಿರುನಾಳು ತಿರುವಿಶಾಖ ನಿತ್ಯಸಮಾರಾಧನೆ ನೈಮಿತ್ತಿಕಸಮಾರಾಧನೆ ನಡೆವಂತಾಗಿ (ಎಕ.XIV, ಶ್ರೀರಂಗ. ೮೭-೧೬ ; 1370); ನಂಮ ಸ್ಥಾನದಿಂದ ಬಂದ ತಿರುನಾಳ ಕಾಣಿಕೆ (ಸಾಇಎ. ೧೯೩೪ , ಪುಂಗನೂರು. ೧೫೬-೦೪ ; 1419) ; ಕರಿರಾಜ ತಿರುನಾಳು ಭಾಸುರವಿಡಿದಿಹ ಪಿರಿಯ ಸಂಕ್ರಮ ತಿರುನಾಳು ವರರಥಸಪ್ತಮಿಯುತ್ಸವ ತಿರುನಾಳು ಮೆಱೆದವು ರಂಗೇಶಗಾಗ (ಕುಂನವಿ. ೭-೧೦೯).
[ ← ತಮಿ. ತಿರುನಾಳ್ ; ತೆಲು. ತಿರುನಾಳ್ಳು ]

**ತಿರುನಾಳು** 'ತಿರುನಾಳ್' ನೋ.

**ತಿರುನೀರು** ' ತಿರುನೀಱು ' ನೋ.

**ತಿರುನೀಱು**, ತಿರುನೀರು (ನಾ). ಪವಿತ್ರವಾದ ಬೂದಿ; ಭಸ್ಮ ; ವಿಭೂತಿ: ನೀವು ಮಂತ್ರಿಸೆನುತ್ತ ತಿರುನೀಱೋವಿ ಮಂತ್ರಿಸಿ ಹಾಯ್ಕಲು (ಬಸಪು. ೫೦-೨೮). **ತಿರುನೀರು** : " ತಿರುನೀರು–ವಿಭೂತಿ (ಈ ಮಾತು ತಮಿಳುನಾಡಿನಲ್ಲಿ ರೂಢಿಯಲ್ಲಿದೆ) " (ಶರಸಾ. ೨೪-೮).
[ ←ತಮಿ. ತಿರುನೀಱು; ತೆಲು. ತಿರುನೀಱು, ತಿರುನೀರು, ತಿರ್ನೀರು ]

**ತಿರುಪ**, ತಿರಿಪೆ, ತಿರುಪೆ (ನಾ). ೧. ಅಲೆತ ; ಭಿಕ್ಷಕ್ಕಾಗಿ ಸುತ್ತುವಿಕೆ. ೨. ಭಿಕ್ಷೆ ; ಯಾಚನೆ : ತಿರುಪಕ್ಕೆ ಬಂದಿರೋ ಹಾಗಿದೆ (ಉಡುಗೊ. ೫೮) ; ತಿರುಪದ ಪುಟ್ಟಿಯಲ್ಲಿ ಶನೀಶ್ವರ ಕೂತ (ಗಾದೆ). **ತಿರಿಪೆ** : ೩. ಭಿಕ್ಷೆ ಎತ್ತಿದ ಆಹಾರ ಅಥವಾ ಧಾನ್ಯ : ಬಡವರಲ್ಲಿ ಅನೇಕರು ತಿರಿಪೆ ತಿಂದೇ ಬದುಕುತ್ತಾರೆ (ರೂಢಿ). **ತಿರುಪೆ** : ೨. ಅಕ್ಕರವು ಲೇಖಕ್ಕೆ ತರ್ಕ ತಾ ವಾದಕ್ಕೆ ಮಿಕ್ಕ ಓದುಗಳು ತಿರುಪೆಗೆ (ಸರ್ವಜ್ಞ. ೪೬೧) ; ನಾಲ್ಕು ಜನ ಸರೀಕರಲ್ಲಿ ತಿರುಪೆಗೆ ಕೈಯೊಡ್ಡಿದೆ (ಕಾಮಿಕಾಂ. ೨೦೭) ; ತಿರುಪೆಗೆ ಹೊರಟ ಮರಂತಿತ್ತು (ದೀಪದ. ೨೨). ೩. ನಿನ್ನನ್ನು ನಂಬಿದರೆ ತಿರುಪೆಯೂ ಹುಟ್ಟಲೊಲ್ಲದು ಕೇಳೊ ಹರಿಯೆ (ಪುರಂದ. ೪-೮೭-೩).

ತಿರುಪವೆತ್ತು, ತಿರುಪೆಎತ್ತು=ಭಿಕ್ಷೆಬೇಡು: ನಿನ್ನಂತಹ ಮಗನನ್ನು ಹೆತ್ತು ಅವರು ಗೋಳಿಡುತ್ತ ತಿರುಪವೆತ್ತಿ ಹೊಟ್ಟೆ ಹೊರೆಯುತ್ತ ಭೂಮಿಯ ಮೇಲೆ ಇರಬೇಕಾಗುವುದಲ್ಲ (ಭೀಷ್ಮಜ. ೧೫೫) ; ತಿರುಪೆ ಎತ್ತಬಹುದಿತ್ತು (ಮುಂಗಾಮು. ೧೮). [ದೇ.॥ ತುಳು. ತಿರುಪ, ತಿರುಪೆ ; ತೆಲು. ತಿರಿಪ]

**ತಿರುಪಕೂಡೆ** (ನಾ). ಮಡಿಬಟ್ಟೆಗಳನ್ನು ಇಡುವುದಕ್ಕಾಗಿ ಶ್ರೀವೈಷ್ಣವರು ಬಳಸುವ ಓಲೆಗರಿಯ ಬುಟ್ಟಿ, – ಗೂಡೆ : ಮೊದಲ ರಾತ್ರಿಯೇ ತಿರುಪಕೂಡೆಗೆ ಮಡಿಬಟ್ಟೆಯನ್ನು ಹಾಕಿಟ್ಟು ಬೆಳಗಾದ ಒಡನೆಯೇ ಅದನ್ನು ಹೆಗಲಿಗೆ ಹಾಕಿಕೊಂಡು ನದಿಗೆ ಸ್ನಾನಕ್ಕೆ ಹೋಗುತ್ತಿದ್ದರು (ನಮ್ಮೂರ. ೦೨೪) ; ಜೋಡಿದಾರರು, ಓಲೆಗರಿ ಪುಸ್ತಕಗಳೂ ತಿರುಪಕೂಡೆಗಳೂ ನಾಮದ ಗೆಡ್ಡೆಗಳೂ ತುಂಬಿದ್ದ ಒಂದು ಕೊಠಡಿಯನ್ನು ಧೂಳು ಹೊಡೆಸಿ ಅವರಿಗಾಗಿ ಸಿದ್ಧಮಾಡಿದ್ದರು (ವೈಸರ್ವೆ. ೨೦) : ಪಾರುಪತ್ತೇಗಾರರು ಸ್ನಾನ ಮಾಡಿ ಹೆಗಲಿನ ಮೇಲೆ ತಿರುಪಕೂಡೆಯನ್ನೂ ತಲೆಯ ಮೇಲೆ ಒಗೆದ ಪಂಚೆಗಳನ್ನೂ ಬಲಗೈಯಲ್ಲಿ ಚೊಂಬಿನಲ್ಲಿ ತೀರ್ಥವನ್ನೂ ತೆಗೆದುಕೊಂಡು (ಗರುದಾ. ೦೬೭).
[ ←ತಮಿ. ತಿರುಪ್ಪರ್ಕೂಟ್ಟೈ ; ತೆಲು. ತಿರಿಪಗೂಡ, ತಿರಿಪುಗೂಡ]

**ತಿರುಪಣಿ₁** ' ತಿರುಪುಳಿ ' ನೋ.

**ತಿರುಪಣೆ₂, ತಿರುಪ್ಪಣ್ಣಿ** (ನಾ). ೧. ದೇವಾಲಯದ ಸೇವೆ ; ದೇವಸ್ಥಾನದ ಕೆಲಸ. ೨. ದೇವಾಲಯದ ಜೀರ್ಣೋದ್ಧಾರ : ಯಿಪ್ಪುಸ್ವಾಸ್ಥ್ಯವನು ಗುರುಮೂರ್ತಿ ತ್ರಿಯಂಬಕಲಿಂಗಗೆ ಅಂಗಭೋಗ ರಂಗಭೋಗ ತಿರುಪಣಿ ಕೆಱೆ ಕಾಲುವೆಗೆ ಯಿಪ್ಪಕೆ ಶಲವಾಗಿ ಸಮರ್ಪಿಸ್ತನು (ಎಕ. XIV, ಗುಂಡ್ಲುಪೇ. ೧೨೮-೦೦೬ ; 1510) : ತೇರು ತಿರುನಾಳು ತಿರುಪಣಿ ಮಾಸೋತ್ಸವ (ಎಕ. IX, ಚನ್ನಪ. ೫೭-೦೨ ; 1534). ೩. ದೇವಾಲಯದಿಂದ ಬರುವ ವರಮಾನ : ತಿರುಪಣಿಗೆ ಸಮರ್ಪಿಸ್ತ ರಾಯದುರ್ಗದ ಸೀಮೆಗೆ ಸಲ್ಲುವ [ಬ್ರ]ಹ್ಮಸಮುದ್ರದ ಗ್ರಾಮು (ಸೌಇಇ. IV, ೨೫೫-೦೩ , 1518). **ತಿರುಪ್ಪಣ್ಣಿ** : ೨. ಯೇಳು ನಿಲೆಯ ಗೋಪುರದ ತಿರುಪ್ಪಣ್ಣಿಗೆ ಕಲ್ಲು ಹಚ್ಚಿಸಿದ ಗ ೭೨೫೦ (ಸೌಇಇ. IX-ii. ೫೫೦-೪ : 1532). [ ←ತಮಿ. ತಿರುಪ್ಪಣಿ ]

**ತಿರುಪತಿ** (ನಾ). ೧. ದೇವಾಲಯ : ತಿರುಪತಿ ನೂಱೆಂಟರೊಳಂ ಪರಮಾತ್ಮನ ದಿವ್ಯಮೂರ್ತಿಗಳ್ ಸ್ಫುರಿಕುಂ (ದಿವ್ಯಕ. ೬-೪೪). ೨. ದಕ್ಷಿಣ ಭಾರತದ ಆಂಧ್ರಪ್ರದೇಶದಲ್ಲಿರುವ ಒಂದು ಪ್ರಸಿದ್ಧ ಹಿಂದೂ ಯಾತ್ರಾಸ್ಥಳ ; ವೆಂಕಟೇಶ್ವರಸ್ವಾಮಿಯು ನೆಲಸಿರುವ ಬೆಟ್ಟ : ತಿರುಪತಿ ವೇಂಕಟರಮಣ ನಿನಗೇತಕೆ ಬಾರದು ಕರುಣ (ಪುರಂದ. ೧-೬೬ ಪಲ್ಲವಿ) ; ತಿರುಪತಿ ಕರೆವುದು ಶ್ರೀಶೈಲವನಗೊ ಉಡುಪಿಗೆ ಕಿವಿಗೊಡೆ ಗೋಕರ್ಣ (ಅರಳು. ೩೦೪-೦೩) ; ತಿರುಪತಿ ಕ್ಷೌರಿಕರು ತಲೆ ಬೋಳಿಸಿದ ಹಾಗೆ (ಗಾದೆ).

**ತಿರುಪತಿ ಆಗು**=ನಷ್ಟಹೊಂದು ; ಕಳೆದುಕೊಳ್ಳು ; ಮೋಸ ಹೋಗು: ನನಗೆ ಒಂಬತ್ತಾಣೆ ತಿರುಪತಿ ಆದುದರ ವಿನಾ ಇನ್ನಾವ ಒಳ್ಳೆಯ ಪರಿಣಾಮವೂ ಉಂಟಾಗಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ (ನಾಡಿಗೇ. ೨೮೫). **ತಿರುಪತಿಕ್ಷೌರ** = ಅರ್ಧಂಬರ್ಧ ಮಾಡಿ ನಿಲ್ಲಿಸಿದ ಕೆಲಸ ; ಅಪೂರ್ಣವಾದ ಕೆಲಸ : ಮಾಡೋ ಕೆಲಸ ಸರಿಯಾಗಿ ಮಾಡು , ತಿರುಪತಿ ಕ್ಷೌರ ಮಾಡಬೇಡ (ರೂಢಿ).

[ ← ತಮಿ. ತಿರುಪ್ಪತಿ; ತುಳು. ತೆಲು. ತಿರುಪತಿ ]

**ತಿರುಪಳಿ** ' ತಿರುಪುಳಿ ' ನೋ.

**ತಿರುಪಾಟ₁** (ನಾ). ಸುತ್ತು ತಿರುಗಿಸುವಿಕೆ : ರಂಗುರಂಗಿನಾ ಸೀರೆ, ಕಣ್ಣ ತಿರುಪಾಟವಾಡೆ ಮಧುವು (ಕಮೀಘ. ೨೦-೦೦).

[ ತಿರುಪು₁ (<ತಿರಿಪು₁)+ ಆಟ ]

**ತಿರುಪಾಟ₂** ' ತಿರುಪಾಟು ' ನೋ.

**ತಿರುಪಾಟು, ತಿರುಪಾಟ₂, ತಿರುಪಾಟ್ಟು, ತಿರುಪಾಡು** (ನಾ). ಶಿವನನ್ನು ಕುರಿತು ಮಾಡುವ ಸ್ತೋತ್ರ ; ತೇವಾರ : ನಂಬ್ಯಣ್ಣನುಸುರ್ದುರುತರಮೆನಿಪ್ಪ ತಿರುಪಾಟುಗಳ ಪಾಡುತ್ತಿರಲ್ (ಆರಾಜ. ೬-೩) : ಶ್ರೀಗಿರಿಜಾರಮಣಿಗೆ ನಲಿದಾನತನಾಗಿ ಪಾಡಿದ ನಂಬಿ ತಿರುಪಾಟ (ತ್ರಿಷಷ್ಟಿ. ೯೭-೦೭); ಸೌಂದರಂ ಪ್ರೇಮದಿಂ ವಾಲ್ಮೀಕನಾಥನಲ್ಲಿಗೆ ಬಂದು ತಿರುಪಾಟ ಪಾಡುವಲ್ಲಿ (ಚೀರಮ. ೦೦-೪); ಇರ್ವರಂದು ತಿರುಪಾಟುಗಳ ಪಾಡಲ್ (ಪಾಸೋಪು. ೭-೦೦೦). **ತಿರುಪಾಟ₂** : ಭಕ್ತರ ಚರಿತೆಗಳನಾನಂದದಿಂ ತಿರುಪಾಟ ರೀತಿಯೊಳೊಂದಿ ಪಾಡುತ (ಬಸಪು. ೨೭-೭೦) ; ಬಾಗಿಲ ತೆಗಸಿ ಲಿಂಗವ ಪೂಜಿಸಿ, ತಿರುಪಾಟವಂ ಪಾಡಿ (ಭೈರಸೂ. ೨೨೦). **ತಿರುಪಾಟ್ಟು** : ಪುರಾಣ ನಿತ್ಯಹೋಮ ವೇದ ಪಾರಯಣ ಶ್ರೀತಿರುಪಾಟ್ಟುಯಿಪ್ಪು ಶ್ರೀಕಾರ್ಯ್ಯಕೆಲು ಕೂಡಿ ಮಾಡಿದ ಕಡಕಟ್ಟು (ಮೈಆರಿ. ೧೯೩೮, ೭೩-೦೦ ; 1381). **ತಿರುಪಾಡು** : ಶಂಕರನಂ ಕರೆಯೆ ಕರೆವ ತಿರುಪಾಡಿನ ನಾದಕ್ಕೆ ನಾಗಕುಲವೆಲ್ಲಂ ಮಱೆದು ತಲೆದೂಗಿ (ವಾಗೀರ.ದೇ. ೨೬೬-೦೯) ; ತಾಳವನಿತ್ತು ತಿರುಪಾಡ ಪಾಡೆಂದು ಬೆಸಸಿ (ಸೌಂದಪು. ೬-೪೪); ಹಂಪೆಯ ತೇರಿನ ತಿರುಪಾಡು ಪಂಪಾದೇವಿಯು ವಿರೂಪಾಕ್ಷನನ್ನು ಒಲಿದು ಒಲಿಸಿಕೊಂಡ ಆ ಸುಮನೋಹರ ನಿತ್ಯಕಲ್ಯಾಣ (ತುಂಗಭ. ೬೯). [ ← ತಮಿ. ತಿರುಪ್ಪಾಟ್ಟು ]

**ತಿರುಪಾಟ್ಟು** ' ತಿರುಪಾಟು ' ನೋ.

**ತಿರುಪಾಡು** ' ತಿರುಪಾಟು ' ನೋ.

**ತಿರುಪು₁** ' ತಿರಿಪು₁ ' ನೋ.

**ತಿರುಪು₂** ' ತಿರಿಪು₂ ' ನೋ.

**ತಿರುಪುಗೊಳು** (ಕ್ರಿ). ತಿರುಗುವ ಒಂದು ಭಂಗಿಯನ್ನು ಹೊಂದು : ನಡೆದು ನಡೆದು ಲಾಗಿನಲೋಲಾಡುತೆ ತಡೆದು ತಡೆದು ತೂಗುತೆ ಲೋಲಾಡುತೆ ತಿರುಪುಗೊಳುತೆ ಕಾಳಾಸದಿ ನಿಲುತಂ [ಪಾಠಾಂ. ಪಿರಿದುಂ ನೆಗೆದಾಕಾಶದಿ ನಿಲುತಂ] (ಭೃಂಗೀರ. ಹ. ೪೬೮-೦೫) ; ಸುಟಿಯೊಳಾವರ್ತ ತಿರುಪುಗೊಂಡು ನಾಟ್ಯವ ಪಟುಗೊಳಿಸಿದರೇವೇಳ್ವೆ (ಕಂನವಿ. ೨೦-೦೦೪).

[ತಿರುಪು₂ (< ತಿರಿಪು₂) + ಕೊಳು (< ಕೊಳ್₁)]

**ತಿರುಪುಟ್ಟಿ** (ನಾ). ಶ್ರೀವೈಷ್ಣವರು ಮಡಿಬಟ್ಟೆ, ಜಪಸರ, ಸಾಲಿಗ್ರಾಮ ಮೊದಲಾದುವುಗಳನ್ನು ಇಡುವ ಪೆಟ್ಟಿಗೆ ಅಥವಾ ಬುಟ್ಟಿ : ಇವನ ತಿರುಮಣ್ಣಡಲು ಅವನ ತಿರುಪುಟ್ಟಿ; ಬೇಹಾರವೆಷ್ಟಿರಲಿ ಬಂದಿಲ್ಲ ಬಿಟ್ಟಿ (ಗಣೇಶ. ೬೯-೧). [ ←ತಮಿ. ತಿರುಪ್ಪುಟ್ಟಿಲ್ ]

**ತಿರುಪುನಿಚ್ಚಣಿಕೆ** (ನಾ). ಚಕ್ರಾಕಾರವಾಗಿ ಇರುವ ಸೋಪಾನ : ಕತ್ತಲೆ ಗೂಡಿನಂತಿದ್ದ ಭಯಾನಕವಾದೊಂದು ಆಕೃತಿ, ಪಾತಾಳದಿಂದ ಸ್ವರ್ಗದ ವರೆಗೆ ಬೆಳೆದು ನಿಂತ ತಿರುಪುನಿಚ್ಚಣಿಕೆ ... ಆ ಚಿತ್ರಶತಕ್ಕೆ ಏಕಸೂತ್ರವಾಗಿತ್ತು (ಧರ್ಮಸಿ. ೧೮). [ ತಿರುಪು₂ (<ತಿರಿಪು₂) + ನಿಚ್ಚಣಿಕೆ ]

**ತಿರುಪುಹೂ** (ನಾ). (ಹೆಂಗಸರು) ತುರುಬು ಅಥವಾ ಜಡೆಗೆ ತಿರುಗಿಸಿ ಕೊಳ್ಳುವ ಒಂದು ಬಗೆಯ ಚಿನ್ನದ ಹೂವು ; ಜಡೆಯ ಬಿಲ್ಲೆ ; ಜಡೆಹೂವು : (೬).

[ತಿರುಪು₂(<ತಿರಿಪು₂)+ಹೂ₂(<ಪೂ₂)./ ತೆಲು. ತಿರುಗುಡುಪುವ್ವು]

**ತಿರುಪುಳಿ, ತಿರುಪಣೆ₁, ತಿರುಪಳಿ** (ನಾ). ೧. "ತಿರುಪುಮೊಳೆಯನ್ನು ತಿರುಗಿಸಿ ಬಿಗಿಸುವ ಸಲಕರಣೆ: ತಿರುಪುಳಿ, ತಿರುಗುಳಿ" (Screw-driver. ಇಂಕನಿ). **ತಿರುಪಣೆ₁** : ೨. ತಿರುಪುಗಳಿಂದ ಕೂಡಿರುವುದು ; ಸಂತ್ರಾಗಳನ್ನುಳ್ಳುದು : ಯುಗದ ಜುಗದ ತಿರುಪಣೆಯ ದಾರಿಯನ್ನು ಸಾವಕಾಶ ಹತ್ತಿ (ಅರಳು. ೨೦೭-೪). **ತಿರುಪಳಿ** : ೩. ತಿರುಪು ; ಮಲಸೂತ್ರ : ಹಾಕಿರುವ ತಿರುಪಳಿ ಎಲ್ಲಿಯೊ ಸಡಿಲಾದ ಹಾಗಿದೆ (ಉದುಗೊ. ೦೨೪). [ತಿರುಪು₂ (<ತಿರಿಪು₂) + ಉಳಿ₆./ತಮಿ. ತಿರುಪ್ಪುಳಿ; ತುಳು. ತಿರ್ಪುಳಿ, ತಿಪ್ಪಿಳಿ ]

**ತಿರುಪೆ** ' ತಿರುಪ ' ನೋ.

**ತಿರುಪೆಕೂಳು** (ನಾ). ತಿರಿದು ತಂದ ಆಹಾರ ; ಭಿಕ್ಷಾನ್ನ : ಹರಿವಾಣದೊಳಗಮೃತಾನ್ನವು ಇರುತಿರೆ ತಿರುಪೆಕೂಳನು ತಿನ್ನಲ್ಯಾಕಯ್ಯ (ಕನಕ. ೦೬೩-೨). [ ತಿರುಪೆ (<ತಿರುಪ) + ಕೂಳು₂ (<ಕೂೞ್₁) ]

**ತಿರುಪೆಗಾರ** (ನಾ). ತಿರುಕ ; ಭಿಕ್ಷುಕ : (೬).

[ ತಿರುಪೆ (<ತಿರುಪ) + – ಕಾರ₁ (< – ಕಾಱ) ]

**ತಿರುಪೆಗಾರ್ತಿ** (ನಾ). ತಿರುಕಿ ; ಭಿಕ್ಷುಕಿ : (೬).

[ ತಿರುಪೆಗಾರ + – ತಿ₁ ( < – ಇತ್ತಿ ) ]

**ತಿರುಪೆರಿಭಟ್ಟ** (ನಾ). ಒಬ್ಬಾತನ ಹೆಸರು : ತಿರುಪೆರಿಭಟ್ಟರ್ಗ್ಗೆ ಸೆಟ್ಟಿ ಕೊಟ್ಟ ಸರ್ಬ್ಬಪದ ಪರಿಹಾರ (ಎಕ. X (೬), ಬಾಗೇಪ. ೦೦೨-೦ ; ಸು. 10 ನೆಯ ಶತ). [ ತಿರುಪೆರಿ ? + ಭಟ್ಟ ]

**ತಿರುಪ್ಪಣ್ಣಿ** ' ತಿರುಪಣೆ₂ ' ನೋ.

**ತಿರುಪ್ಪಾಯಿ** (ನಾ). ತಮಿಳುಭಾಷೆಯಲ್ಲಿರುವ ಒಂದು ಧಾರ್ಮಿಕ ಗ್ರಂಥದ ಭಾಗ ; ಆಂಡಾಳ್ ಬರೆದಿರುವ ನಾಲಾಯಿರ ಪ್ರಬಂಧದ

ಒಂದಂ ಭಾಗ : ವೇದಪಾರಾಯಣ ತಿರುಪ್ಪಾಯಿ ಶ್ರೀಕಾರಕ್ಕೆ ಊರ ಮೂಡಣ ಮಾಯಣ್ಣನ ಭೂಮಿಯೊಳಗೆ ಇರ್ಕ್ಕಣ್ಡುಗ ಗದ್ದೆ ಹೊಲ ತೋಟ ಸಹ . . . ಧಾರಾಪೂರ್ವಕವಾಗಿ ಕೊಟ್ಟರು (ಮೈಆರಿ. ೧೯೩೮, ೫೬-೨ ; 1330). [ ← ತಮಿ. ತಿರುಪ್ಪಾವೈ ]

**ತಿರುಪ್ಪು** ‘ ತಿರಿಪು$_1$ ’ ನೋ.

**ತಿರುಪ್ರಬಂಧ** (ನಾ). ವಿಷ್ಣುವಿನ ಪಾರಮ್ಯವನ್ನು ಕುರಿತ ಹಾಡು : ವಾಸುದೇವನ ತಿರುವಡಿಗಳನ್ನು ನುತಿಸಿ ಪೂಜಿಸಿ ತಿರುಪ್ರಬಂಧಾದಿಗಳ ಪಾರಾಯಣವ ಮಾಡುತಲಿ (ಗಗತಾ. ೧೯-೪೯). [ ತಿರು$_2$ + ಪ್ರಬಂಧ ]

**ತಿರುಬೊಬ್ಬೆ** (ನಾ). ಇನ್ನೊಬ್ಬರ ಮೇಲೆ ತಿರುಗಿಸಿ ಮಾಡುವ ಗದ್ದಲ, -ಕೂಗಾಟ : ಅಂದರೆ ಇದು ಕಳ್ಳನ ತಿರುಬೊಬ್ಬೆ (ಸ್ಕ್ರತಿಚ. ೨೪೨).

[ < ತಿರುಗು$_1$ + ಬೊಬ್ಬೆ$_1$ ]

**ತಿರುಬೋಕಿ** (ನಾ). ೧. ತಿರುಕನ ಓಡು ; ಭಿಕ್ಷಾಪಾತ್ರೆ : (೬). ೨. ತಿರುಕ ; ಭಿಕ್ಷುಕ. ೩. ದರಿದ್ರ ; ಬಡವ : ತಿರುಬೋಕಿಗಳನ್ನು ಕಟ್ಟಿಕೊಂಡು ನಾಟಕ ಮಾಡು (ನಟಸಾ. ೭೪). [ < ತಿರಿ$_1$ + ಬೋಕಿ ]

**ತಿರುಮಂತ್ರ** (ನಾ). ೧. ಪವಿತ್ರವಾದ ಮಂತ್ರ : ಮುಟ್ಟಬೇಡ ಮುಟ್ಟಬೇಡ . . . ತಿರುಮಂತ್ರ ತೀರ್ಥಪ್ರಸಾದಕೊಳಗಾದವರ (ಕನಕ. ೮೫-೨). ೨. (ಆಲಂ) ಪ್ರತಿಯಾಗಿ ಹೇಳುವ ಮಂತ್ರ ; ತಿರುಗುಬಾಣ : ಸ್ವಾತಂತ್ರ್ಯದ ಚಳುವಳಿ ತೀವ್ರವಾಯಿತು. ತಿರುಮಂತ್ರಕ್ಕೆ ಗುರುವೇ ತಲೆಬಾಗಿದನು (ಭಾರದ. ೪೨೮).

**ತಿರುಮಂತ್ರ ಹಾಕು** = ಎದುರಿಸು ; ಪ್ರತಿಭಟಿಸು ; ಪ್ರತೀಕಾರ ಮಾಡು: ಎಷ್ಟೋ ಜನರಿಗೆ ನೀನು ತಿರುಮಂತ್ರ ಹಾಕಿದ (ಮುಂಗಾಮು. ೫); ಅಪ್ಪಣ್ಣ ಗುರುವಿಗೆ ತಿರುಮಂತ್ರ ಹಾಕಬೇಡ (ವೈದ್ಯವಿ. ೦೦೩). **ತಿರುಮಂತ್ರ ಹೇಳು** = ತಿರುಮಂತ್ರ ಹಾಕಂ : ಗುರುವಿಗೆ ತಿರುಮಂತ್ರ ಹೇಳಿದ ಹಾಗೆ (ನೀತಿಚಿಂ. VI, ೨೨); ಈ ಅಸಭ್ಯರೇ ಕಬ್ಬಿಣವನ್ನು ಮಾಡುವುದನ್ನು ಕಲಿತು ಯಜಮಾನರಿಗೆ ತಿರುಮಂತ್ರ ಹೇಳಿದರು (ಶಿಲ್ಪನಾ. ೬೭).

[ತಿರು$_2$ + ಮಂತ್ರ./ತಮಿ. ತಿರುಮನ್ತಿರ ; ತೆಲು. ತಿರುಮಂತ್ರ]

**ತಿರುಮಣ್**, ತಿರುಮಣ್ಣು (ನಾ). ಶ್ರೀವೈಷ್ಣವರು ಹಣೆಯ ಮೇಲೆ ಧರಿಸುವ ತಿರುಚೂರ್ಣದ ಅಕ್ಕಪಕ್ಕದಲ್ಲಿ ನಾಮ್ವ ಹಾಕಿಕೊಳ್ಳಲು ಉಪಯೋಗಿಸುವ ಪವಿತ್ರವಾದ ಬಿಳಿಯ ಪುಡಿ. ತಿರುಮಣ್ ಶ್ರೀಚೂರ್ಣ (ತಿರುಚೂರ್ಣ) ಇವುಗಳನ್ನು ಧರಿಸಿದಲ್ಲಿ . . . ಸಕಲದೋಷಂಗಳನ್ನೂ ಹೋಗಲಾಡಿಸುವುದು (ಸಕವೈ. ೪೦). **ತಿರುಮಣ್ಣು**: ಶರಣರ ಮೊಗಮೊತ್ತೆ ಹರಿಯ ಚರಣಮುದಚ್ಚುವಡೆದು ತಿರುಮಣ್ಣಿಟ್ಟುಕ್ಕುಂ (ಮೈಸೂಮು. ೨-೩೭).

[← ತಮಿ. ತಿರುಮಣ್ ; ತೆಲು. ತಿರುಮನ್ನು]

**ತಿರುಮಣಿ** (ನಾ). = ತಿರುಮಣ್ : ನೋಟಕಾಶ್ಚರ್ಯವಾದ ನಗೆಮುಖ ನೊಸಲೊಳಗೆ ತಿರುಮಣಿಯ ಕಂಡೆನು (ಪುರಂದ. ೧-೧೧೯-೧) ; ತಿರುಮಣಿ ತಿಲುಕವ ತಿದ್ದಿ (ಗೀತಗೋ. ೭-೧) : ತಿರುಮಣಿಯನಿಡದ ಮೋರೆಯು ಸ್ಮಶಾನಕೆ ಸರಿಯು (ಶಿರುಶ. ೭-೦೩).

[ <ತಿರುಮಣ್. / ತೆಲು. ತಿರುಮಣಿ ]

**ತಿರುಮಣ್ಣು** ‘ತಿರುಮಣ್’ ನೋ.

**ತಿರುಮಲೆ** (ನಾ). ಪವಿತ್ರವಾದ ಬೆಟ್ಟ ; ತಿರುಪತಿ : ಶ್ರೀನಿವಾಸನು ಕೂಡ ತಿರುಮಲೆಗೆ ನೆಲೆ ನಿಂತ ಮಣ್ಣಲ್ಲ ಈ ಭೂಮಿದೇವನೊಲುಮೆ (ಅರಳು. ೧೪೧-೨೪) ; ತೀಟೆಗೆ ಮಕ್ಕಳ ಹೆತ್ತು ತಿರುಮಲೆದೇವರ ಹೆಸರಿಟ್ಟ ಹಾಗೆ (ಗಾದ). [←ತಮಿ. ತಿರುಮಲೈ ; ತೆಲು. ತಿರುಮಲ]

**ತಿರುಮಾಲೆ** (ನಾ). ೧. ದೇವತಾಮೂರ್ತಿಗಳಿಗೆ ಹಾಕುವ ಹೂವಿನ ಹಾರ : ತಿರುಮಾಲೆ ಜೋಡು ೪ (ಸೌಇಇ. IX-ii, ೪೮೯-೩೯ ; 1513) ; ತಿರುಮಲೇಶ್ವರ ಲಿಂಗಕೆ ತಿರುಮಾಲೆ ಜೋಡು ೧೦ (ಸೌಇಇ. IX-ii, ೫೫೦-೫ : 1532). ೨. ಭಕ್ತರಿಗೆ ಪ್ರಸಾದರೂಪವಾಗಿ ಕೊಡುವ ದೇವರ ವಿಗ್ರಹದ ಮೇಲಿನ ಹಾರ : ಪರಕಾಲಸ್ವಾಮಿಗಳವರಿಗೆ ಮೊದಲು ತೀರ್ಥ ತಿರುಮಾಲೆ ವರಶೆ ವಿನಿಯೋಗ ಶ್ರೀಶಟಗೋಪ ಮುಂತಾದ ಸಕಲ ಮರಿಯಾದೆಗಳಂನ್ನು ಪ್ರಥಮತಾ ಕೊಡುವಂತೆ (ಮೈಆರಿ. ೧೯೩೮, ೧೯-೭ ; 1811).

[ ←ತಮಿ. ತಿರುಮಾಲೈ ; ತೆಲು. ತಿರುಮಾಲ ]

**ತಿರುಮಾಳಿಗೆ** (ನಾ). ೧. ದೇವಸ್ಥಾನದ ಪ್ರಾಕಾರದ ಸುತ್ತಲೂ ಇರುವ ಮನೆಗಳ ಸಾಲು. ೨. ದೇವರ ಮನೆ ; ದೇವರ ವಿಗ್ರಹವಿರುವ ಕಿರುಮನೆ. ೩. ಗೌರವಸ್ಥರ ಮನೆ : ತಿರುಮಾಳಿಗೆ ಹರಿದಾಸರು ಅಟ್ಟವಣೆ ಗಂಡು ಹೆಣ್ಣು ಎಲ್ಲರಿಗೂ ಇದು ದೊಡ್ಡ ಉತ್ಸವವಾಗಿದ್ದಿರಬೇಕು (ಗರುದಾ. ೧೫೪).

[ ←ತಮಿ. ತಿರುಮಾಳಿಕೈ ; ತೆಲು. ತಿರುಮಾಳಿಗ ]

**ತಿರುಮೀಸೆ** (ನಾ). ತಿರಿಚಿದ ಮೀಸೆ ; ಹುರಿಮಾಡಿದ ಮೀಸೆ : ಹೊಂಬಣ್ಣ ತಿರುಮೀಸೆಯುಬ್ಬುರಕೆ ಮಣ್ಣಕ್ಕಿ ಸವುತೆಯನು ಮೆಲುವ ನಾಲಗೆಗೆ ಸುಣ್ಣವನು ತೀಡಿ ! (ಕಎಪು. ೪-೫). [ <ತಿರಿ$_1$ + ಮೀಸೆ ]

**ತಿರುಮು** (ನಾ). ಜ್ಞಾನ ; ಪ್ರಜ್ಞೆ : ಅಳತೆ ಮೀರಿ ಒಂದು ಚಿಮಿಟಿ ನಸ್ಯವನ್ನು, ಅವರು ನನ್ನ ಮುಂದೆ ಬಿಡಿಸಿ ಹಿಡಿದ ಬಾಳೆಪೊಟ್ಟಣದಿಂದ ಎತ್ತಿ, ಮೂಗಿಗೆ ಏರಿಸಿದೆ. ಏರಿಸಿದ್ದೇ ತಡ ತಿರುಮೇ ಹೋಯಿತು (ಚಿಟ್ಟಜೀ. ೧೦). [ ? ]

**ತಿರುಮುಡಿ** (ನಾ). ಹಿಂದಲೆಯಲ್ಲಿ ಬಿಟ್ಟ ಮುಡಿ, — ಶಿಖೆ : ನಾಡೊಳಗೆ ಸಾಮ್ರಾಜ್ಯಮುಮನೀಡಾಡಿ ತಿರುಮುಡಿಯಂ ಧರಿಸಿ ರತಿ ಮೂಡೆ ಶಿವನಂ ಮೆಚ್ಚಿಸಿದ ಕಲಿಪಾಲನಾಳಾನು (ಬಸಪು. ೨೭-೬೮).

[ ← ತೆಲು. ತಿರುಮುಡಿ ]

**ತಿರುಮುರಿ** ‘ತಿರುವುಮುರುವು’ ನೋ.

**ತಿರುಮುರುವು** ‘ತಿರುವುಮುರುವು’ ನೋ.

**ತಿರುಮುರುಹು** ‘ತಿರುವುಮುರುವು’ ನೋ.

**ತಿರುಮೂರ್ತಿ** (ನಾ). ಪವಿತ್ರವಾದ ಶರೀರವುಳ್ಳವನು : ತಿರುಮೂರ್ತಿ ಮಾಡು ನನ್ನನ್ನು ನಿನ್ನ ಚಿನ್ಮೋದ ಬೋಧ ಬಿತ್ತಿ (ಹೃದಸ. ೩-೭).

[ ತಿರು$_2$ + ಮೂರ್ತಿ ]

**ತಿರುರಾಜ್ಯ** (ನಾ). ಶುಭಕರವಾದ ರಾಜ್ಯ : ಶ್ರೀಮದುರಾಳಕ್ಕಳವರ ತಿರುರಾಜ್ಯದಲ್ (ಎಕ. IX, ಹೊಸಕೋ. ೦೩-೨ : 900 ?).

[ ತಿರು$_2$ + ರಾಜ್ಯ ]

**ತಿರುವ** (ನಾ). ಒಂದು ಬಗೆಯ ಔಷಧದ್ರವ್ಯ : ಜಂಬೆ, ತಿರುವ, ಪಿಲ್ವ, ಇರುಳ್ (ಮೈಜಿಗಿ. ೭೯-೦೬೧೮). [ ? ]

**ತಿರುವಂದಿಕಾಪು** (ನಾ). ದೇವತಾಪೂಜೆಯ ಕೊನೆಯಲ್ಲಿ ದೃಷ್ಟಿದೋಷ ನಿವಾರಣಾರ್ಥವಾಗಿ ಮಾಡುವ ಕ್ರಿಯೆ : ತಿರುವಂದಿಕಾಪು ತಿರುನಾಳು ವೈಗಾಶಿ x x x ಲೂ ನಡೆವಂಥಾ ತಿರುನಾಳಿಗೆ (ಸೌಇಇ. IX-i, ೪೮೯-೪೦ ; 1513). [ ←ತಮಿ. ತಿರುವನ್ತಿಕ್ಕಾಪ್ಪು ]

**ತಿರುವಡಿ** (ನಾ). ಪವಿತ್ರವಾದ ಪಾದ ; ಪೂಜ್ಯವಾದ ಪಾದ : ಚೊಕ್ಕಪ್ಪೆರುಮಾಳು ದೇವರ ಮುಂನಿನ ತಿರುವಡಿಯಾದ್ಪಡಳರಿಗೆ ಮೂಡಲು . . . ಕಲ್ಲು ನೆಟ್ಟು ಕೊಟ್ಟ ಗದ್ದೆ (ಎಕ. XII, ತುಮಕೂ. ೦೭-೨೦ ; 1287) ; ನಮಗೆ ನಿಂಮ ಚೆಂನ್ನಾದ ತಿರುವಡಿ ಪದವ ಕೊಡಿ (ಮೈಆರಿ. ೧೯೩೩, ೫೩-೩ ; 1593) ; ಬುದ್ಧನ ತಿರುವಡಿಗೆ ಶರಣೆಂದು ಬಂದ ಅಶೋಕನಾದರೂ ತನ್ನ ಶಾಸನದಲ್ಲಿ ಹೇಳಿದ ಮಾತು ಹೊಸದೇನಲ್ಲ (ರಾಮರಾ. ೬೩).

[ ←ತಮಿ. ತಿರುವಟಿ ; ತೆಲು. ತಿರುವಡಿ ]

**ತಿರುವತ್ತಿಸಾಮು** (ನಾ). ಧನುರ್ಮಾಸದಲ್ಲಿ ದೇವರಿಗೆ ಅರ್ಪಿಸುವ ಒಂದು ಬಗೆಯ ನೈವೇದ್ಯ: ಏಕಾಂತ ಅವಸರ ನೈವೇದ್ಯ ಕಟ್ಟಳೆ ತಿರುವತ್ತಿಸಾಮು ಹರಿವಾಣ ೨ಕಂ ಸಂಣಕ್ಕಿ (ಸೌಇಇ. IX-ii, ೫೬೩-೪ ; 1529). [ < ತಿರುವದಿ + ಸಾಮು ? ]

**ತಿರುವದಿ** (ನಾ). ಧನುರ್ಮಾಸದಲ್ಲಿ ಆರ್ದ್ರಾನಕ್ಷತ್ರದ ದಿನ ಶಿವಾಲಯಂಗಳಲ್ಲಿ ಮಾಡುವ ಉತ್ಸವ : ಶ್ರೀಮತು ದುಗಂಣದೇವರು ತಿರುವದಿಯ ಮೊದಲೀಸ್ವರಮೊ[ ಡೆ ]ಯನಾಯನಾರುಗೆ ಆಸ್ಥಾನಿಕರಿಗೆ ಕೊಟ್ಟ ಸಂಸ್ಥೆ (ಸೌಇಇ. IX-ii, ೪೦೩-೬ ; 1370). [ ←ತಮಿ. ತಿರುವಾತಿರೈ ]

**ತಿರುವಧ್ಯಾನ** (ನಾ). ಪವಿತ್ರಗ್ರಂಥಗಳ ಚಿಂತನೆ : ತಿಂಮರಾಜಯ್ಯನವರು ಮಾಡಿಸಿದ ಪುಲ್ಲಿವೇಟು ತಿರುವಧ್ಯಾನ ತಿರುನಾಳ ಚೆರಪು ದಿನ ೧೦ (ಸೌಇಇ. IV, ೨೭೫-೪ ; 1560). [ ←ತಮಿ. ತಿರುವತ್ತಿಯಯಿಯನ ]

**ತಿರುವಮುದು** (ನಾ). ದೇವರಿಗೆ ಅರ್ಪಿಸುವ ಅನ್ನದ ನೈವೇದ್ಯ; ಅಮೃತಪಡಿ : ಕೆಱೆಗೆ ಬಿತ್ತುವಟ್ಟಮು ದೇವರ್ಗೆ ತಿರು[ವ] ಮುದಿಙ್ಗೆ ಬಿಟ್ಟ ಭೂಮಿಯುಮಂ ಕಲ್ನಟ್ಟಿ ಕೊಡುವುದಕ್ಕೆ . . . ಒಡೆಯಾರ್ ಧಾರಾವರ್ಪಕಂ ಈವನು (ಮೈಆರಿ. ೧೯೪೬, ೨೮-೭ ; 1032). [ ← ತಮಿ. ತಿರುವಮುತು ]

**ತಿರುವಯ್ಯ** (ನಾ). ಒಬ್ಬಾತನ ಹೆಸರು : ತಿರುವಯ್ಯನ ಮಗಂ ಚನ್ದ್ರಸೇಕರಂ ಮ್ಮಣ್ಣಗಲ್ಲ ಕೆಱೆಗೆ ಬಿತ್ತುಕಟ್ಟು ಬಿಟ್ಟಂ (ಎಕ. X, ಮುಳಬಾ. ೧೯೮-೨; ಸು. 950). [ ತಿರು$_2$ + ಅಯ್ಯ$_1$ ]

**ತಿರುವರಿಯಾಟ** (ನಾ). ದೇವರಿಗೆ ತೊಡಿಸುವ ಬಟ್ಟೆ: ಶ್ರೀ ಆದಿಗುಂಜಿಯ ನಾರಸಿಂಹ್ವದೇವರ ತಿರುವರಿಯಾಟ ಅಂಗರಂಗಬೋ ××× ಲಂಬಲರ ಗ್ರಾಮ (ಎಕ. XIV, ತಿರುಮ. ೧೪೮-೮; 1556). [ ← ತಮಿ. ತಿರುಪ್ಪರಿವಟ್ಟ ; ತೆಲು. ತಿರುಪಾವಡ ]

**ತಿರುವಳಿ** (ನಾ). ಒಂದು ಬಗೆಯ ವನಸ್ಪತಿ : "ಗ್ರಂಥಿಲಃ—ಹಲು ಮಾಣಿಕ, ತಿರುವಳಿ, ವಿಟಂಕ" (ಓಷಧಿ. ೪೭). [ ? ]

**ತಿರುವಳೆಯಾಟ** (ನಾ). ದೇವರ ಲೀಲೆಗಳನ್ನು ಪ್ರದರ್ಶಿಸುವ ಒಂದು ಬಗೆಯ ಉತ್ಸವ: ದೇವಸ್ಥಾನಕ್ಕೆ ಉಭಯ ಕಟ್ಟಳೆ ಮೊದಲಾಗಿ ತಿರುವಳೆಯಾಟಕಂ ಕಟ್ಟಳೆಯ ಮಾಡೆ ಚಿತ್ತಯಿಸ್ತ ಶೀಮೆಗಳು ಪೊಂದರಲೂ ಕಡಿಮೆಯಿಲ್ಲದ ಹಾಗೆ ನಡಸೂದು (ಸೌಇಇ. IX-ii, ೫೨೬-೨; 1529). [ ←ತಮಿ. ತಿರುವಿಳೈಯಾಟಲ್ ]

**ತಿರುವಾಯ್** (ನಾ). ಬಿಲ್ಲಿನ ಹಗ್ಗದ ಮಧ್ಯಭಾಗ ; ಹೆದೆಯ ಬಾಯಿ: ಬಿಲ್ಗಳನೇಱಿಸಿ ತಿರುವಾಯೊಳಂಬನಿಟ್ಟಿಸಲೆಂದು ತೆಗೆದಿಸುವನ್ನೆಗಂ (ಪದ್ಮರಾ. ೯೬-೬); ಅಂಬಂ ತಿರುವಾಯ್ಗೆ ತಂದಱಿವರೇ ತಾಮಿರ್ವರುಂ ಕಯ್ದುವಂ ಬಿಸುಟರ್ (ಗದಾಯು. ೨-೧೧); ಖೇಚರಬಲಂ ಪೆಳಱಿತ್ತು ಕರುತ್ತು ದಿವ್ಯಚಾಪದ ತಿರುವಾಯ್ಗೆ ದಿವ್ಯಶರಮಂ ತರೆ ದೋರ್ಬಲಶಾಲಿ ಲಕ್ಷ್ಮಣಂ (ಪಂರಾಮಾ. ೫-೧೦೨) ; ತಿರುವಾಯನೊದೆದುಬ್ಬಿನಲಿ ಬೊಬ್ಬಿಱಿದಂಬು ಸುರಪನ ವನವ ಮುತ್ತಿತು (ಕುವ್ಯಾಆ. ೨೦-೨೬); ಬಿಲ್ಗೆ ಕೊಪ್ಪನೇಱಿಸಿ ತಿರುವಾಯ್ಗೆ ಕಣೆಯಂ ಪೂಡಿ ತೇರನೇಱಿ . . . ಪಗೆಯೊಳೆತ್ತಿ ನಡೆದಂ (ರಾಮಾಶ್ವ. ೯೦-೧೬). [ತಿರು$_1$ (< ತಿರುವು$_3$)+ಬಾಯ್]

**ತಿರುವಾಯ್ಗೊಳಿಸು** (ಕ್ರಿ). ಹೆದೆಯೇರಿಸು : ಬಿಲುದುಡುಕಿ ಬಲುಸರಳ ತಿರುವಾಯ್ಗೊಳಿಸಿ ಮಲೆತನು ಮಾರ್ಬಲಕೆ (ಕುವ್ಯಾದ್ರೋ. ೧೮-೬೪). [ ತಿರುವಾಯ್ + ಕೊಳ್$_1$ + – ಇಸು$_3$ ]

**ತಿರುವಾಯ್ಪೊಣರ್ಚು** (ಕ್ರಿ). ಹೆದೆಗೆ ಬಾಣವನ್ನು ಹೂಡು : ದೋಣೆಗಳಿನುರ್ಚುವ ತಿರುವಾಯ್ಪೊಣರ್ಚೆ ತೆಗೆನೆಱೆವ ಬೇಗಮಂ ಕಾಣದೆ ಕೂರ್ಗಣೆಗಳ ಪಂದರನೆ ನಭೋಂಗಣದೊಳ್ ಕಂಡತ್ತು ದೇವಗಣಮಿನಸುತನಾ (ಪಂಪಭಾ. ೧೨-೧೮೪). [ ತಿರುವಾಯ್ + ಪೊಣರ್ಚು ]

**ತಿರುವಾಸಿಲು** (ನಾ). ದೇವತಾಮೂರ್ತಿಯನ್ನು ತರುವ ಗರ್ಭಗುಡಿಯ ಮುಂಭಾಗದ ಬಾಗಿಲು; ಶ್ರೀದ್ವಾರ : ಬೆಳಯೂ ಸೋಮೆಯ ದೇವರ ಸೇವೆ ತಿರುವಾಸಿಲ ಮಂಟಪವನೂ ಲ್ಲಾಕವಾಗಿ ಮಾಡಿಸಿ (ಎಕ. X(s), ಮೂಲೂರು. ೦೪೭-೦೨; 1498). [←ತಮಿ. ತಿರುವಾಚಲ್ ]

**ತಿರುವಿಡು** (ಕ್ರಿ). = ತಿರುವಾಯ್ಗೊಳಿಸು : ಬಳಿಕ ತಿರುವಿಟ್ಟಾಗಲಸ್ತ್ರವ ಸೆಳೆದು ಬಿಲುವಿದ್ಯಾಚಮತ್ಕೃತಿಯುಳವ ತೋಱಿದಡೆ (ಕುವ್ಯಾದ್ರೋ. ೯-೯). [ ತಿರು$_1$ (< ತಿರುವು$_3$) + ಇಡು$_1$ ]

**ತಿರುವಿಸು, ತಿರುಹಿಸು** (ಕ್ರಿ). ಬೇರೆ ಕಡೆಗೆ ತಿರುಗಿಸು,–ಹೊರಳಿಸು : ಮನುಷ್ಯ ಕಾಲವನ್ನತಿಕ್ರಮಿಸಬಲ್ಲನೆಂದರೆ ಅದೊಂದು ಕಲ್ಪನೆಯೆಂದು ಈಗ ಜನರು ಮೊಗ ತಿರುವಿಸುವರು (ಕಾಲಯಾ. ೪). **ತಿರುಹಿಸು** : ಪಾರ್ಥನ ಸೂನು ರಣದಲಿ ಬೀದಿವರಿದನು ಗದೆಯ ತಿರುಹಿಸುತ (ಕುವ್ಯಾದ್ರೋ. ಓರಿಇ. ಪರಿ. ೨೮೧). [ ತಿರುವು$_1$ (<ತಿರಿಪು$_1$) + –ಇಸು$_3$ ]

**ತಿರುವೀಥಿ** (ನಾ). ದೇವರ ಉತ್ಸವದ ಬೀದಿ; ರಥದ ಬೀದಿ: ಕೆಲಂಬರು ಬಂಡಿಯ ಮುಂಕಣಿಯಂ ಪಿಡಿದು ಪುರದ ತಿರುವೀಥಿಯೊಳು ನಡೆತಪ್ಪಾಗಳು (ನಂಬಿರ. ೨-೧೯). [← ತಮಿ. ತಿರುವೀತಿ ; ತೆಲು. ತಿರುವೀಥಿ ]

**ತಿರುವು$_1$** 'ತಿರಿಪು$_1$' ನೋ.

**ತಿರುವು$_2$** 'ತಿರಿಪು$_2$' ನೋ.

**ತಿರುವು$_3$, ತಿಬ್ಬು, ತಿರು$_1$, ತಿರ್ಪು, ತಿರ್ಬು, ತೆಬ್ಬು$_2$, ತೆರ್ಬು** (ನಾ). ಬಿಲ್ಲಿನ ಹಗ್ಗ ; ಹೆದೆ : ''ನಯದಿಂ ತಿರುವದುವೆ ತಿರ್ಬು ಹೆದೆ ನಾರಿಯು ಮೌರ್ವಿಯು ಪೆಸರಕ್ಕುಂ'' (ಕವಿಕಂ. ೮೦); ಮತ್ತೊರ್ವರ್ಕಳ್ ಕರ್ವಿನ ಬಿಲ್ಲ ತಿರುವಿಂ ಬರ್ದುಂಕಿ ಬರ್ಪಲರಂಬು ಬರ್ಪಂತೆ ಬಂದು (ಪಂಪಭಾ. ೪-೩೭ವ) : ತಿರುವಂ ಮುಪ್ಪುರಿಗೊಂಡು ಮಿಳ್ಳಿಸುವ ಮಿಂಚಂ ಮಾಡಿ . . . ಬೆಂಕೊಂಡತ್ತು ಮೇಘಾಗಮಂ (ಕಾದಂಬ. ೫೩೦) ; ಮಲ್ಲಿಗೆಯ ತಿಸರಮಂ ತೊಟ್ಟು ತಾವರೆಯ ನೂಲ ತಿರುವಂ ತೀಡೆ (ಅರ್ಧನೇ. ೫-೫೫ ವ) : ಬಿಗಿದ ತಿರುವಿನ ಬೆರಳ ಕೋಲುಗಳ . . . ಬೆನ್ನಲಿವ ಬತ್ತಳಿಕೆಗಳಲ್ಲೈದಿತ್ತು ಬಿಲ್ಲಾಳುಭಯಸೇನೆಯಲಿ (ಕುವ್ಯಾಭೀ. ೪-೧೧) ; ತಿರುವಿನೊಳ್ ನನೆಗಣೆದೊಟ್ಟು (ಸೌಂದಪು. ೦೭-೪೩) ; ತಿರುವಿಗಂಬನು ಹೂಡಿ (ಸಾಳ್ವಭಾ. ೧೮-೭೦) ; ತುಂಬಿಗಳ ಪೊಸ ತಿರುವನಳವಡಿಸಿ (ಚಬಪು. ೩೫-೬) ; ಬಿಲ್ಲ ತಿರುವಿಂದ ಜೀವಮನುಣಲ್ ಬರ್ಪ ಕೋಲ್ಗಳ್ (ಪಾರಸಿ. ೧೭-೪೦೧). **ತಿಬ್ಬು**: "ತಿರುವೆಂದುಂ ತಿಬ್ಬೆಂದುಂ ಬಿಲ್ಲ ನಾರಿ" (ಕಶಸಾ. ೫೨-೧೧೫) ; ಕರಿಗಳ ಹೊದಟಿ ಮೆದೆಗೆಡಹಿ ತಿಬ್ಬ [ಪಾಠಾಂ.ತೆಬ್ಬ] ನೊದೆದುಱಿ ಬಳಿಕ ಗಱಿ ಮೊಱೆದಬ್ಬರಿಸಿ . . . ಮಸಗಿದವು ಫಲುಗುಣನ ಶರಜಾಲ (ಕುವ್ಯಾವಿ. ೭-೩೬) : ಕಬ್ಬಿನ ಬಿಲ್ಲಲರ್ವಕ್ಕಿಯ ತಿಬ್ಬಂ ಬಲಿದ ತನು ಪೂಸರಂಗಳನಿಸಲು (ಶಬ್ದಾನು. ೫೦ ಪ್ರಯೋ) ; ಕೋಪದಿಂ ಧನುವಂ ಕೊಂಡು ಸಿಡಿಲಂ ಸರಂಗೊಳಿಸಿದಂತೆ ತಿಬ್ಬಿನಬ್ಬರಂ ಸೈನ್ಯಕಲಕಲಮಂ ನುಂಗಿ ದಿಗಂತಮಂ ಸೀಡಿರಿವುತ್ತಿರೆ (ಸಕವ್ಯ. ೨ ಪ್ರಸ್ತಾವನೆ) ; ತಿಬ್ಬನೊದರಿಸಿ ಮುನಿದು ನಾರಾಯಣಾಸ್ತ್ರಮನ್ನುಬ್ಬಿದರೆ ಹರಿ ಕರುಣಿಸಲು (ತುರಂಗ. ೬೯-೫೧). **ತಿರು$_1$** : "ತಿರುವೆಂದುಂ ತಿಬ್ಬೆಂದುಂ ಬಿಲ್ಲ ನಾರಿ'' (ಕಶಸಾ. ೫೨-೧೧೫) ; ಅಲರಂಬು ಕರ್ಬುವಿಲ್ ಕೋಮಲ ಸರಸಿಜನಾಳತಂತು ತಿರು ತ್ರಿಲೋಕಮಂ ಕಂತು ಬಸಕೆ ಬರಿಸುವನೆಂತುಂ (ಕವಿರಾ. ೨೨-೧೨೦) ; ಉನ್ಮತ್ತಭೃಂಗವ್ರಜಂ ತಿರು ತಳ್ತೊಪ್ಪುವ ನುಣ್ದಳಿ ದೋರ್ಣೆ ಲತಾಂತಶ್ರೇಣಿ ಬಾಣೌಘವಾಗಿ ರತೀಶಂ ಪರಿಪಂಥಿರೂಪದಿಸು ತಿರ್ಪಂ (ಶಾಂತೀಶ್ವ. ೧೩-೧೩೧). **ತಿರ್ಪು** : ''ತಿರು ತಿರ್ಪು ಹೆದೆಯೆನೆ ಬಿಲ್ಲ ನಾರಿ'' (ಶಬ್ದಮಂ. ೪೪). **ತಿರ್ಬು** : ''ತಿರುವದುವೆ ತಿರ್ಬು ಹೆದೆ ನಾರಿಯು ಮೌರ್ವಿಯು ಪೆಸರಕ್ಕುಂ'' (ಕವಿಕಂ. ೮೦). **ತೆಬ್ಬು$_2$**: ಅರಿ ಮಿಡಿದನು ತೆಬ್ಬಿನಸ್ತ್ರವ ತೂಗಿ ತುಳುಕಿದನಂಬಿನಂಬುಧಿಯ (ಕುವ್ಯಾಶ. ೩-೫೨) ; ಬಿಲುಗಳ ತೆಬ್ಬುಗಳನಾರ್ವೈದು ಉಳಿವಡೆದೆಬ್ಬಿಸಿದರಂಬುಗಳ

ಲಂಬರ ತುಂಬಲಗಲದಲಿ (ತೊರಠಾ. ೬-೯೩-೦೫) ; ಕಬ್ಬಿನ ಬಿಲ್ಲಿಗಂಗಜನೆಳೆ ದುಂಬಿಯ ತೆಬ್ಬನೇಱಿಸಿ ಜೀವಡೆದು . . . ಎಚ್ಚನವರನು (ಕುರಾಸಾಂ. ೧೭-೯೫) ; ತೆಬ್ಬನೊದರಿಸಿ ಪಾರ್ಥ . . . ಅರಿಗಳಂ ಗೆದ್ದ ಪರಿ ಇದೆ (ತುರಂಗ. ೬೯-೩೫); ತೆಬ್ಬನ್ನೇರಿಸಿ ಗುರಿಯಿಟ್ಟು ಹೂಡಿದನು (ಫ್ರಾರ್ತಿಸು. ೯೦).

**ತೆರ್ಬು :** ಪುರ್ಬು, ತೆರ್ಬು, ಕೊರ್ಬು (ಶಬ್ದಾನು. ೮೦ ವ್ಯಾಖ್ಯಾ).

ತೆಬ್ಬಿನ ಧ್ವನಿ = ಹೆದೆಯ ಟಂಕಾರ: ಬ್ರಹ್ಮಾಂಡವು ಗುಮ್ಮಿಡುವ ಹಾಗೆ ತನ್ನ ಬಿಲ್ಲಿನ ತೆಬ್ಬಿನ ಧ್ವನಿಯನ್ನು ಮಾಡಿದನು (ಮುಂಬಯಿ. ೬-೩೯೮).

[ ದೇ.॥ ತುಳು. ತಿರು, ತೆಬ್ಬು ]

**ತಿರುವುಗಿವಿ** (ನಾ). ತಿರುಗಿಸಿದ ಕಿವಿ ; ಹೊರಳಿಸಿದ ಕಿವಿ : ತಿರುವುಗಿವಿಯ ಮಾಡಿ ಆವು ನಿಂತವಕ್ಕ ನಿಂತಲ್ಲೇನ (ಹಾಡುಪಾ. ೨೮-೩).

[ ತಿರುವು$_1$ (<ತಿರಿವು$_1$) + ಕಿವಿ$_3$ ]

**ತಿರುವುಮುರುವು,** ತಿರುಮುರಿ, ತಿರುಮುರುವು, ತಿರುಮುರುಹು, ತಿರುಹುಮುರುಹು (ನಾ). ೧. ಹಿಂದುಮುಂದಾಗಿರುವುದು ; ತಿರಿಚಿಕೊಂಡುದು : ಅವಳ ಜಡೆ ತಿರುವುಮುರುವಾಗಿದೆ (ರೂಢಿ). ೨. ತಲೆಕೆಳಗು ; ಅಡಿಮೇಲು : ಒಬ್ಬರ ದುಡಿತದಲ್ಲಿ ಸಾವಿರ ಜನ ಕುಳಿತು ತಿನ್ನುವುದು ಜೀವನ ಅಲ್ಲ. ಅದು ಜೀವನದ ತಿರುವುಮುರುವು (ಮಣ್ಣುಮ. ೫೫) ; ಬಂಡವಾಳವೆಂದು ಧನವು ವ್ಯವಹರಿಸಲು ತೊಡಗಿದಾಗ, ಸರಕು ಮತ್ತು ಹಣ ಇವುಗಳ ಸಂಬಂಧ ತಿರುವುಮುರುವಾಗಿ ಬಿಡುತ್ತದೆ (ಮಾವಾದ. ೧೧೮). **ತಿರುಮುರಿ :** ೧. ತಿರುಮುರಿಯ ಕೊಂಬುಗಳುಳ್ಳ ಒಂದು ಜಾತಿಯ ಜಿಂಕೆ (Addax.ಇಂಕೆನಿ).**ತಿರುಮುರುವು:** ೩. ಹಿಂದಿರುಗಿಸುವಿಕೆ : ನಗು ಕಾಟ ಆಳುವು ಹಿರಿದಾಟ ಕುಡಿನೋಟ ಮೋಸ ನುಸುಳಾಟ ತಿರುಮುರುವು (ಗರಿ. ೧೦೮-೨) ; ಕಣ್ಣುಕಣ್ಣು ತಿರುಮುರುವು ನೋಟ ನೋಡುವನ ಗೊಂಬೆಯಹುದು (ಮುಕ್ತಕಂ. ೧೩-೫). **ತಿರುಮುರುಹು :** ೨. ಸಂಚನೆಯ ತಿರುಮುರುಹು ಮೋಹದದಂಚಿಗೆಯ ವೆಡೆಯಲ್ಲಿ . . . ನಡೆತಂದ (ಕೃಷ್ಣಾಕ. ೬-೨೦). **ತಿರುಹುಮುರುಹು : ೪.** ವಂಲ್ಲಯಂದ್ದದ ಒಂದು ವರಸೆ : ತಿರುಹುಮುರುಹಿನಲೌಕುವಳ್ಳಿಯ ಭರದ ಬವರದ ಬಿನ್ನಣಿಗರಚ್ಚರಿಯ ಸಮರೋಚಿತವ ಮೆಱಿದರು (ತೊರಠಾ. ೪-೪-೨೨). **೫.** [ನಾಟ್ಯ] ವೃತ್ತಾಕಾರವಾಗಿ ಚಲಿಸುವ ಒಂದು ನೃತ್ಯಭಂಗಿ. **೨, ೫ :** ತಿರುಹುಮುರುಹುಂಟು ನೃತ್ಯದೊಳು.... ಗುಣವಿರಹಿತತ್ವಂ ಬಿಂದುಗಳೆಯದೆಳವುತ್ತುಗಳ ಪರಿವಿಡಿಯೊಳುಂಟಲ್ಲದಾ ದೇಶದೊಳಗಿಲ್ಲ (ಸೌಂದಪು. ೨-೭). [ತಿರುವು$_2$(<ತಿರಿವು$_2$) + ಮುರುವು]

**ತಿರುವುವೊಯ್, ತಿರುವೊಯ್** (ಕ್ರಿ). ಜ್ಯಾರವ ಮಾಡು ; ಜೇವೊಡೆ ; ಧನುಷ್ಟಂಕಾರಮಾಡು : ನನೆವಿಲ್ಲಂ ಬಿಟ್ಟು ವಿದ್ಯುಲ್ಲತೆಯ ತಿರುವುವೊಯ್ವಿಂದ್ರಕೋದಂಡಮಂ ಕೊಂಡು ನಿಜಾಗ್ರಸ್ಕಂಧದೊಳ್ ಕೇದಗೆಯೆಸೆವರಲೆಂದೆಂಬ ಕೂರಂಬು ತೀವಿ (ಜಗವಿ. ೪-೨೧). **ತಿರುವೊಯ್ :** ಮದನಂ ತಿರುವೊಯ್ದು ಕರ್ಬುವಿಲ್ಲಂ ಪಿಡಿಯಲ್ (ದಶಕು. ೪-೧೨೭) ; ವಿರಹಿಯ ಹೃದಯಸ್ಥ ವಿರಹವಹ್ನಿಗೆ ಕಯ್ಯಂ ಸ್ಮರನೊಡ್ಡಿ ಕಾಸಿ ಬಿಲ್ಲಂ ತಿರುವೊಯ್ದು ಸುತಿರ್ಪನಸಿತ ಶರರುಹ ಶರದಿಂ (ರಾಜಶೇ. ೯-೨೧). [ತಿರುವು$_3$+ಪೊಯ್$_1$]

**ತಿರುವೂರ್** (ನಾ). ಒಂದು ಊರಿನ ಹೆಸರು : ಚೋಟ ಧನಞ್ಜಯನ ಆಳು ಆದಿತ್ಯಕುಮಾರನ್ ತಿರುವೂರ ಕಾಳೆಗದುಳಿಱಿದು ಸುರಲೋಕಂ ಪೋದನ್ (ಎಕ. XII, ಮದ್ದಗಿ. ೧೧೧-೨ ; 750 ?). [ ತಿರು$_2$+ಊರ್ ]

**ತಿರುವೆ** (ನಾ). ಕಂಠಪಾಠಮಾಡುವುದು ; ಒರಲುಸಂತೆ ಹೇಳುವುದು : ಮತ್ತಮಾ ಕಾಲದೋಳ್ಪೂರ್ವರು ನಡೆಯುವ ನಡತೆಯೆಂತೆಂದೊಡೆ ಕೆಲರು ಮಕ್ಕಳನೆಬ್ಬಿಸಧ್ಯಯನ ತಿರುವೆಯಂ ಕೆಲವರಂಬುಜನೇತ್ರನಾಸ್ತೋತ್ರಪಾಠಮಂ . . . ಮಾಡಿಸುತ್ತಿರುವರಾಗ (ಅರ್ಜಾವಿ. ೩೦-೪೧).

[ ←ತಮಿ. ತಿರುಪ್ಪೈ ]

**ತಿರುವೆಂಗಡಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮಜ್ಜಿಲ ಸಿಙ್ಗ ಪರಾಕ್ರಮನ ಮಗಂ ತಿರುವೆಙ್ಗಡಯ್ಯ ಎರೆಡಿಯೂರ ಪೆಟ್ಟುಡುಗೊಳೊಳಾನ್ನಿಱಿದು ಸತ್ತನ್ (ಎಕ. X, ಮುಳಬಾ. ೧೧೮-೩; ಸು. 950).

[ < ತಿರುವೆಂಗಳ + ಅಯ್ಯ$_1$ ]

**ತಿರುವೆಂಗಳ** (ನಾ). ತಿರುಪತಿಯ ವೆಂಕಟೇಶ್ವರ ದೇವರು : ಕೊಂಮನಹಳ್ಳಿ ತಿರುವೆಂಗಳದೇವನಾಥಗೆ ಕೊಟ್ಟ ಮಾನ್ಯಹೊಲ ಆಱು ಕೊಳಗ (ಮೈಅರಿ. ೧೯೩೦, ೧೧-೩; 1645) ; ಚೆಲುವ ತಿರುವೆಂಗಳ ವಿಜಯವಿಠಲ ವೆಂಕಟ ನೆಲೆಯಾಗಿ ಇಪ್ಪ ಶುದ್ಧಭಕ್ತರ ವಶನಾಗಿ (ತೀರ್ಥಮ. ೮೦).

[ ← ತಮಿ. ತಿರುವೇಙ್ಕಟ ]

**ತಿರುವೆಂಗಳೇಶ** (ನಾ).=ತಿರುವೆಂಗಳ: ಅಜರಾಮರಣಸಿದ್ಧಿ ತ್ರಿಜಗದೋಳ್ ಪ್ರಸಿದ್ಧಿ ವಿಜಯವಿಠ್ಠಲ ಶ್ರೀನಿವಾಸನ ತಿರುವೆಂಗಳೇಶನ (ವಿದಾಕ್ಕ. ೩೦-೩).

[ ತಿರುವೆಂಗಳ + ಈಶ ]

**ತಿರುವೆಟ್ಟ** (ನಾ). ಪವಿತ್ರವಾದ ಬೆಟ್ಟ : ವಾಯುವ್ಯಕ್ಕೆ ಬಸುರಿಯ ಕೊಳ . . . ಈಶಾನ್ಯಕ್ಕೆ ತಿರುವೆಟ್ಟ ಇನ್ತೀ ಚತುರಾಶ್ರಯ ಸೀಮೆ (ಕಇ. I, ೧೭-೪೩; 1056). [ ತಿರು$_2$ + ಬೆಟ್ಟ (<ಬೆಟ್ಟು$_2$) ]

**ತಿರುವೆಡೆ** (ನಾ). ಧನುರ್ಮಾಸದಲ್ಲಿ ದೇವರಿಗೆ ಅರ್ಪಿಸುವ ನೈವೇದ್ಯ : ಧನುಪರ್ವ ತಿರುವೆಡೆ (ಎಕ. XV, ಬೇಲೂರು. ೨೪೮-೧; 1297). 'ತಿರುವತ್ತಿಸಾವಂ' ಪರಾ. [ ತಿರು$_2$ + ಎಡೆ$_4$ ]

**ತಿರುವೆಳಕು** (ನಾ). ದೇವಾಲಯದಲ್ಲಿ ಹಚ್ಚುವ ಮಂಗಳದೀಪ ; ನಂದಾದೀಪ : ಪಲ್ಲಕ್ಕಿಸೇವೆಗೆ ಬಿಜಯ ಮಾಡುಸೂ × ಸಂಬಂಧ ತಿರುವೆಳಕು ಪಂಜಿಗೆ (ಸೌಇ. IX-ii, ೫೬೨-೩; 1259).

[ ←ತಮಿ. ತಿರುವಿಳಕ್ಕು ; ತೆಲು. ತಿರುವಿಳಕ, ತಿರ್ವಿಳಕ ]

**ತಿರುವೇರಿಸು** (ಕ್ರಿ). ಬಿಲ್ಲಿನ ಹೆದೆಯನ್ನು ಏರಿಸು : ಎನ್ನೀ ತಿರುವೇರಿಸಿದ ಶರಾಸನೆಮಿರದಾದತ್ತಿತರಕಾರ್ಯದೊಳಗಾಸಕ್ತಂ (ಶಾಕುಂತ. ೯೮-೧೬೩) ; ಅನುಗಾಲ ಬಿಲ್ಲಿಗೆ ತಿರುವೇರಿಸಿಟ್ಟರೆ ಮುರಿಯದೆ ಉಳಿವುದೆ ಧನುವು (ಇಂಜಾಪ. ೧೧೧-೩೭).

[ ತಿರುವು$_3$ + ಏರಿಸು (<ಏಱಿಸು) ]

**ತಿರುವೊಡೆ** (ನಾ). ಬಿಲ್ಲುಗಾರನು ಬಿಲ್ಲಿನ ಹೆದೆ ತಾಗದಂತೆ ಎಡದ ಮುಂಗೈಗೆ ಕಟ್ಟುವ ಚರ್ಮದ ಪಟ್ಟಿ ; ಕೈಪೊಡೆ ; ಗೋಧೆ : ವರ ರಥವ ಬಲಗೊಂಡು ಕವಚವ ಬರಿಗೆ ಬಿಗಿದನು ಕೈಗೆ ವಜ್ರದ ತಿರುವೊಡೆಯನವಚಿದನು ರಥವೇಱಿದನು ಕಲಿಪಾರ್ಥ (ಕುಮಾವ್ಯದ್ರೋ. ೯-೩೭) ; ಕರದ ತಿರುವೊಡೆ ಜೋಡುಸೀಸಕ . . . ಪೆಂಡೆಯಂಗಳ ಬೆನ್ನ ಹೊದೆಗಳಲಿ ನೆರೆದುದತಿದಲ (ಕಾಶಿರಾ. ೨೧-೭). 'ಕೈಪೊಡೆ' ಪರಾ.

[ ತಿರು$_1$ (< ತಿರುವು$_3$) + ಪೊಡೆ$_2$ ]

**ತಿರುವೊಯ್** 'ತಿರುವುವೊಯ್' ನೋ.

**ತಿರುವೊಯ್ಲು** (ನಾ). ಹೆದೆಯ ಹೊಡೆತ.-ಪೆಟ್ಟು : ಮರಕತ ಕಂಕಣಮೆಸೆದುವು ತಿರುವೊಯ್ಲಿಂ ಕರ್ಪುವೆತ್ತ ತತ್ಕರಯುಗದೊಳ್ (ಚಂದ್ರಪ್ರ. ೬-೬೦) ; ತಿರುವೊಯ್ಲಿಂದಾದ ದಡ್ಡುಬ್ಬರಿಸಿ ಮೆಱೆವ ಮುಂಗೆಯ್ಗಳಿಂ ವನ್ಯಮಾತಂಗರದಾಘಾತಕ್ಷತಂ...ಕಾನನಕುಬ್ಬರಮಾಗಲ್ (ಶಾಂತೀಶ್ವ. ೩-೭೫). [ ತಿರು$_1$ (< ತಿರುವು$_3$) + ಪೊಯ್ಲು ]

**ತಿರುಸು** (ಗು). ವಕ್ರವಾದ ; ಓರೆಯಾದ. 'ತಿರುಸುಗಣ್ಣು' ಪರಾ.

[ <ತಿರಿಚು ? ]

**ತಿರುಸುಗಣ್ಣು** (ನಾ). ಮೆಳ್ಳೆಗಣ್ಣು ; ಮಾಲುಗಣ್ಣು ; ಒರಚುಗಣ್ಣು : ದೃಷ್ಟಿದೋಷವು ಹುಬ್ಬುಗಂಟಿಕ್ಕುವುದನ್ನು ತಿರುಸುಗಣ್ಣನ್ನು ಉಂಟುಮಾಡಬಹುದು (ನಿಮ್ಮದ್ಕ. ೪೧).

[ ತಿರುಸು + ಕಣ್ಣು (<ಕಣ್) ]

**ತಿರುಹಾಡು** (ನಾ). ಎಲ್ಲವೂ ಶ್ರೇಷ್ಠವೆಂದು ಹೇಳುವ ಹಾಡು; ಸ್ತುತಿಪಾಠ : ಭೀಮವಿಕ್ರಮವಲ್ಲ ! ಹಾಹಾದಿ ಹೂಹುಗಳ ಸ್ತೋಮ ವಿದು–ತಿರುಹಾಡು ಸಾಕು ! ದೊರೆಮಾಡುಗಳ ಸೀಮೆಗಳ ಸಮ್ರಾಟನಾಗಿ ಆಳುವವರಿಗೆ ಏನಾದರೇನು ನನಗೆ ? (ಗರಿ. ೦೨-೨). 'ತಿರುಪಾಟು' ಪರಾ. [ ತಿರು₂+ಹಾಡು₂ (<ಪಾಡು₂) ]

**ತಿರುಹಿಸು** 'ತಿರುವಿಸು' ನೋ.

**ತಿರುಹು₁** 'ತಿರಿಪು₁' ನೋ.

**ತಿರುಹು₂** 'ತಿರಿಪು₂' ನೋ.

**ತಿರುಹುಮುರುಹು** 'ತಿರುವುಮುರುವು' ನೋ.

**ತಿರುಳ್**, ತಿರುಳು, ತಿಳಲು, ತಿಳಿಲು (ನಾ). ೧. ಹಣ್ಣು, ಕಾಯಿ ಮುಂತಾದುವುಗಳ ಒಳಭಾಗ: ಬಾಟಿಯ ದಿಂಡಿನ ತಿರುಳೊಳ್ ಮಾತ್ಸ್ಯಾಕ್ಷಿ ಮೂಲಮುಂ ಸುಣ್ಣಮುಮಂ ಬೆರಸಿ ಹದಮಱಿದು ಕುದಿಯಿಸೆ (ಲೋಕೋಪ. ೮-೦೯); ಳಕಾರಕ್ಕೆ . . . ಕುರುಳ್, ತಿರುಳ್, ಮುಗುಳ್ (ಶಮದ. ೪೮ ಪ್ರಯೋ.). ೨. ಹುರುಳು; ಸಾರ; ಸತ್ತ್ವ; ಕೆಚ್ಚು: ಸದಭಿಸ್ತುತಮಪ್ಪೊಕ್ಕುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೧-೩೭); ಕಾರಿರುಳ ತಿರುಳ ಬಣ್ಣಂ ಕೊರಿದುಮನೆ ತೊಳಪ ದಾಡೆ ಮಿಳಿರ್ಪುರಿಗೇಸಂ ಪೇರೊಡಲೆಸೆದಿರೆ ಪುಟ್ಟಿದಂ . . . ಘಟೋತ್ಕಚಂ (ಪಂಪಭಾ. ೩-೨೦); ಎಲ್ಲಾ ಧರ್ಮದ ತಿರುಳಂ ಕೇಳ್ವುದು (ಪಂಚತಂ. ೬೬-೮); ತಿಳಿವೊಡಿದಲ್ತೆ ತತ್ತ್ವದ ತಿರುಳ್ (ದಶಕು. ೮-೯೭). **ತಿರುಳು**: ೧. ತೆಂಗಿನಕಾಯ ತಿರುಳುಂ ನಾರುಂ . . . ಕೆಯ್ಯೊಳು ಸಸಿಯುಂ ಪುಲ್ಲುಂ ಬೆರಸಿರ್ದೊಡಂ ಮುಖ್ಯಮಪ್ಪುದನೆ ಪೆಸರ್ಗೊಳುವಂತೆ (ಧರ್ಮಾಮೃ. ೯-೦೦೭ ಅಡಿಟಿ); ಹಸುವಿನ ಹಾಲಿನಲ್ಲಿ ಬೆಲ್ಲವತ್ತದ ತಿರುಳನಿಕ್ಕಿ ಕಾಯಿಸಿ (ಸಕವ್ಯ. ೬); ತಿರುಳು ತಿಂದರೂ ಮರುಳು ಹೋಗಲಿಲ್ಲ (ಗಾದೆ). ೨. ಕಡೆದ ತಾರೆಗಳ ತಿರುಳ ಚಂದದೋಗರದೊಳಗೆ ಚಂದ್ರಿಕೆಯ ಹೊಸ ಹಳುಕಿನಂದದೆಮ್ಮೆಯ ಮೊಸರು (ಸಿದ್ಧರಾ. ೨-೩೩); ಕುಲಿಶದ ತಿರುಳ ಮಸೆದಂತೆ . . . ಅಹಿತರಿಱಿದಾಡಿದರು (ಕುಮಾ.ಭೀ. ೪-೨೦); ಇದು ಪರಮಾರ್ಥ ಹಿತೋಪದೇಶದ ತಿರುಳಿದನು ಸತಿಯರೋದು ವುದು (ಹದಿಬ. ೦-೬೦); ಏಷ್ಮದ ತಿರುಳಿಲ್ಲ ಪೋಯ್ತು (ಪಾರಸಿ. ೦-೦೯). **ತಿಳಲು**: ೧. ನಾರಿವಾಳದ ಕಾಯೊಳಗಣ ತಿಳಲು ಒಡೆ [ಪಾಠಾಂ. ತಿರುಳ ನೊಡೆ]ಯದೆ ಮೆಲಬಲ್ಲಡೆ ಬೆಡಗು (ಅವಚಂ. ೦೨೩-೫೭೨); ಇದ ರೊಳಗಿನ ತಿಳಲು ಬಲು ರುಚಿಕರವು (ಮುಂಬಯಿ. ೪-೭೦). ೨. ಸುರರ ಬನದ ಹೂವುತನದ ತಿಳಲು, ಮನದ ಅರಿವಿದು (ನಾದಲೀ. ೨೨-೦೬). **ತಿಳಿಲು**: 'ತಿಳಿಲುಮಾತಂ' ಪರಾ.

**ತಿರುಳ ಕನ್ನಡ = ತಿರುಳ್ಗನ್ನಡ**: ರಾಜದ್ರಾಜಕಮೆನಿಸಿದ ಸಾ ಜ ದ ಪುಲಿಗೆಱೆಯ ತಿರುಳ ಕನ್ನಡದೊಳ್ (ಪಂಪಭಾ. ೦೪-೫೮); ಆ ತಿರುಳ ಕನ್ನಡಂ ಮಧುರಮ್ಯೋತ್ಪನ್ನಂ ಸಂಸ್ಕೃತಮೆನೆ ಸಂಪನ್ನಂ ನೆಗಟ್ದು ಭಯಕವಿತೆಯೊಳ್ ಕವಿ ರನ್ನಂ (ಗದಾಯು. ೧-೪೨). **ತಿರುಳಾಯ್ಕೆ**= ಉತ್ತಮವಾದ ಆಯ್ಕೆ : ಪೊಳ್ಳುಸೆಯಿಂದವನ್ ತಿರುಳಾಯ್ಕೆಯಾಯ್ದು ಆ ಬೀಯೋಪಿಯುದ ಬಯಲ ತಣ್ಪೊಳಿ ಆ ಸೋಪಸಿನ ದಡದಲ್ಲಿ ಚಳಿಗಾಲ ವನ್ ನೂಂಕಿ ಬಿಡಿಸುವನ್ (ಪಾರಸಿ. ೩೦-೬೯೦). [ ದೇ.॥ ತುಳು. ತಿರ್ಲ್ ]

**ತಿರುಳಳಿ** (ಕ್ರಿ). ನಿಸ್ಸಾರವಾಗಂ; ಸತ್ತ್ವಹೀನವಾಗಂ : ತಿರುಳಳಿದ ಕಾವನ ಸೊಗಕ್ಕಲೆವ ಬಗೆಯಂ ಮಾಣ (ಸಾನಂದ. ೫-೨೩).
[ತಿರುಳ್ + ಅಳಿ₁ (< ಅೞಿ₁) ]

**ತಿರುಳಿ₁**, ತಿರುಳಿಗೆ (ನಾ). ಒಂದು ಬಗೆಯ ಔಷಧಿ ಸಸ್ಯ; P ಕಣ್ಣನ್ನು ತಂಪುಗೊಳಿಸಲು ಇದರ ರಸವನ್ನು ಉಪಯೋಗಿಸುತ್ತಾರೆ: "ತಿರುಳಿ–ಗ್ರುಸ್ಥಿಲ, ಕ್ರಕರ, ಕರೀರ" (ನಾಚಿರಾ. ೬): "ಕರೀರಃ –ಮೊಳಕೆ, ಆಗಸೆ, ಕಳಿಲೆ, ತಿರುಳಿ" (ಒಷಧಿ. ೨೦); ಕೆಂಗಂ ತಿರುಳಿ ತಗ್ಗಿ ತುಗ್ಗಿಲು ತುಂಬುರ ಬಿಡೆ ತೊಟ್ಟೆ . . . ಚೆಲುವ ಭೂಜಂಗಳಿಂದ ಮಿಗೆ ಕಾನನಂ ಕಣ್ಗೆಸೆದುದು (ಹಡಕಾ. ೫-೦೬). **ತಿರುಳಿಗೆ**: ಕಿ(ತಿ)ರುಳಿಗೆ ಕಾಗೆದೊಂಡೆ...ರಜಮನಟ್ಟು ಕಟ್ಟೆ ಕಳೆದಿಕ್ಕುಗುಮಾವಗಮಸ್ಥಿವೃದ್ಧಿಯಂ (ಲೋಕೋಪ. ೯-೦೨೯). [?]

**ತಿರುಳಿ₂** 'ತೆರಳಿ₂' ನೋ.

**ತಿರುಳಿಗ** (ನಾ). (?) : ಬಿಟ್ಟ ಗದೆ ಕಂಮ್ಮಂ ೫೦೦ ತಿರುಳಿಗ ಕಂಮ್ಮಂ ೫೨ ಎಳ×× ×ಕ×××ಕಮ್ಮ ೨೫ (ಎಕ. VII, ಶಿವಮೊ.೦೦೭-೨೦; 1173). [?]

**ತಿರುಳಿಗೆ** 'ತಿರುಳಿ₁' ನೋ.

**ತಿರುಳು** 'ತಿರುಳ್' ನೋ.

**ತಿರುಳುಣಿಸು** (ನಾ). ಪೌಷ್ಟಿಕ ಆಹಾರ; ಸತ್ತ್ವಾಂಶಗಳುಳ್ಳ ತಿನಿಸು: ಪೌಷ್ಟಿಕ ವಾದ ಅಥವಾ ಕಸುವನ್ನು ಕೊಟ್ಟು ಮೈ ಬೆಳೆಗೆ ಮಾಡುವ ತಿನಿಸು. ಇವಕ್ಕೆ ತಿರುಳುಣಿಸು (Concentrated food) ಎನ್ನಬಹುದು (ಗೋಗ್ರಾ.ಸ. ೩೪).
[ ತಿರುಳು (< ತಿರುಳ್) + ಉಣಿಸು₂ ]

**ತಿರುಳುದೋಱು** (ಕ್ರಿ). ತಿರುಳು ಉಂಟಾಗಿದೆಯೆಂದು ಕಾಣಿಸು:ತಿರುಳು ದೋರ್ವ ಮಿಡಿಗಾಯಿ ಕೋಮಳಂ ಶಲಾಟುಗಳೊಣಗುದೋರ್ವಕಾಯಿ ಮಾನಂಗಳಕ್ಕು (ಮಂಗರಾ. ೩೩-೭). [ತಿರುಳು (< ತಿರುಳ್) + ತೋಱು]

**ತಿರುಳೆತ್ತು** (ಕ್ರಿ). ಸಾರವನ್ನು ತೆಗೆ– ಸಂಗ್ರಹಿಸು : ಸಾರಶಶಿಬಿಂಬ ದೊಟ್ಟಿಲ ತೆಗೆದು ತಿರುಳೆತ್ತಿ ಕೋರೈಸಿ ಪುಟವಿಟ್ಟ ಪುಣ್ಯದೊಬ್ಬುಳಿಯೊ (ಸಿದ್ಧರಾ. ೧-೦೪). [ ತಿರುಳ್ + ಎತ್ತು₁ ]

**ತಿರುಳೆಲೆ** (ನಾ). ಮಧ್ಯಭಾಗದ ಎಲೆ; ಸುಳಿಯೆಲೆ: ಬಾಟಿಯ ತಿರುಳೆಲೆಯ ಬಿಜ್ಜಣಿಗೆಗಳೊಳಂ . . . ಸಂತಾಪಮಂ ಸಂತಯಿಸಲಾಱದೆ (ಕಾದಂಬ. ೭೭೩); ಎಳವಾಟಿಯ ತಿರುಳೆಲೆಯ ತೆರಸುತ್ತಿನೊಳಮಸೆವ ಪಸುರ್ವಂದರೊಳಗೆ (ಲೀಲಾವ. ೧೦-೫೦ ವ). [ ತಿರುಳ್ + ಎಲೆ₁ ]

**ತಿರುಳ್ಗನ್ನಡ** (ನಾ). ಸತ್ತ್ವಶಾಲಿಯಾದ ಕನ್ನಡ ಭಾಷೆ; ಸಾರವತ್ತಾದ ಕರ್ಣಾಟಕ ಭಾಷೆ: ತಿರುಳ್ಗನ್ನಡದ ಬೆಳ್ನುಡಿಯೊಳೆ ಪುರುಳೊಂದೆ ಪೇಟ್ವುದು (ರಾಮಾಶ್ವ. ೬-೦೨). [ ತಿರುಳ್ + ಕನ್ನಡ₁ ]

**ತಿರುಳ್ಗಾಣ್ಕೆ** (ನಾ). ಸತ್ತ್ವವನ್ನು ಕಾಣುವಿಕೆ; ಸಾರಗ್ರಹಣ : ಇದು ಬರಿ ಬುದ್ಧಿಯ ತಿರುಳ್ಗಾಣ್ಕೆಯನ್ನಾಗಲೀ . . . ಐಂದ್ರಿಯಕ ಪ್ರಜ್ಞೆಯ ಅನಿಸಿಕೆಗಳನ್ನಾಗಲಿ ನಿರೂಪಿಸುವ ಹವಣಿಕೆಯಲ್ಲಿ ನಿಂತುಬಿಡಬಾರದು (ನವ್ಯಕಾ. ೫೦). [ ತಿರುಳ್ + ಕಾಣ್ಕೆ ]

**ತಿರುಳ್ನುಡಿ** (ನಾ). ಸಾರವತ್ತಾದ ಮಾತು; ಕೆಚ್ಚುಳ್ಳ ನುಡಿ : ತಿರುಳ್ನುಡಿಯೂ ಸಂಯಮವೂ ಇಂಥ ಭಾಷೆಯಲ್ಲಿ ಸಹ ತುಂಬಿರುವುದ ರಿಂದ ಈ ಶೈಲಿಯಲ್ಲಿ ಒಂದು ಹೊಸ ಕಾ ಂ ತಿ ಯ ನ್ನೂ ಕಳೆಯನ್ನೂ ಕಾಣಬಹುದು (ನವ್ಯಕಾ. ೩೭). [ ತಿರುಳ್ + ನುಡಿ₂ ]

**ತಿರೆ** (ನಾ). ನೆಲ; ಭೂಮಿ: "ಎಳೆ, ಪೊಡವಿ, ತಿರೆ, ದರೆ, ರನ್ನವಸಿಱಳ್, ಬೂವಿ, ಬುವಿ–ಈ ೭ ಭೂಮಿ" (ಕಶಸಾ. ೦೦-೨೦೦); ತಿರೆಯಂ ಪದದೆತ್ತಿ ದೈತ್ಯನಂ ಪೊಳಕಿ ಬಲೀಂದ್ರನಂ ತಗುಳ್ದು ಮಟ್ಟಿಸಿ (ಚಕವಿ. ೫-೦೪೫); ತಿರೆಯೊಳ್ ಪೆಱರ ಸಿರ್ಕಿನೊಳ್ ಮಱುಕಮುಳ್ಳರೊಳ್ ನಿನ್ನನ್ನರೊಳರೇ ? (ರಾಮಾಶ್ವ. ೧-೦೪): ಕತ್ತಲಂಜುತೋಡುತಿಹುದು, ಬೆಳಕು ತಿರೆಯ ತುಂಬುತಿಹುದು (ಮಾಂದಳಿ. ೯-೬). [ < ಸಂ. ಸ್ಥಿರಾ ]

**ತಿರೆಮಗಳ್** (ನಾ). ಭೂಮಿಯ ಮಗಳು; ಸೀತೆ: ತಿ ರೆ ಮ ಗ ಳ ಚೆಲುವಲರ ಬಂಡಿಡಿದ ಬಟ್ಟಲಂ ಪೀರ್ದನೆರ್ದೆತುಟಿಯಿಂದೆ ತಣಿವಿನಂ ತನ್ನಾತ್ಮತೃಷ್ಣೆ (ಶ್ರೀರಾಮಾ. ೫೫-೨೭). [ ತಿರೆ + ಮಗಳ್ ]

**ತಿರೆಹರವು** (ನಾ). ಭೂಮಿಯ ಹರವು; ಭೂವಿಸ್ತಾರ: ಹೊಟ್ಟೆ ನೋವಿಳಿಯುತಿರೆ ರಟ್ಟೆ ನೋವೆನ್ನುವುದು ಮುಟ್ಟಸವೆ ತಿರೆಹರವು ? (ಮಂಕುಕ. ೩೫೯). [ ತಿರೆ + ಹರವು₂ (<ಪರೆಪು₂) ]

**ತಿರೋಧಾನ** (ನಾ). ೧. ಅಡಗಿಸಿಡುವುದು; ಮುಚ್ಚಿಡುವುದು: "ವ್ಯವಧಾನಂ, ತಿರೋಧಾನಂ, ಅಂತರ್ಧಿಃ, ಅಪವಾರಣಂ—ಈ ೪ ಅಪವಾರಣಂ" (ಹಲಾಯು. ೧೧೯-೩೪). ೨. ಮರೆಯಾಗುವಿಕೆ; ಕಾಣದಾಗುವಿಕೆ; ಅಂತರ್ಧಾನ: ಆಗಳ್ ತಿರೋಧಾನಮಂ ಶ್ರೀನಾಥಂ ಪದೆದೆಯ್ದಿದಂ (ವಿಷ್ಣು.ಪು. ೪-೧೧೪). ೩. ಮರೆಮಾಡುವುದು; ತೆರೆಹಾಕುವುದು: ತಿರೋಧಾನೋತ್ತಾನಾಂಬರಮದೆನೆ ತದ್ವಪ್ರಮೆಸೆಗುಂ (ಚಂದ್ರಪ್ರ. ೧೧-೭೪). ೪. ನೆವ; ನೆಪ: "ವ್ಯವಧಾನಮುಪವಾರಣಂ ತಿರೋಧಾನಮೆನೆ ನೆವನಕ್ಕು" (ಮಂಗರಾ. ೦೨೯-೦೩). ೫. ಐದು ವಿಧವಾದ ಕೃತ್ಯಗಳಲ್ಲಿ ಒಂದು; ಬಂಧ: ಪರಮೇಶ್ವರನು . . . ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹಗಳೆಂಬ ಪಂಚಕೃತ್ಯಗಳನ್ನು . . . ನೆರವೇರಿಸುತ್ತ ಭಕ್ತಾನುಗ್ರಹಮಾಡುತ್ತಾನೆಂಬುದು ಶೈವಾಗಮದ ಸಿದ್ಧಾಂತ (ಭಾರದ. ೭೫). 'ತಿರೋಧಾನಮೂರ್ತಿ' ಪರಾ. [ಸಂ.]

**ತಿರೋಧಾನತೆ** (ನಾ). = ತಿರೋಧಾನ ೧: ಏತಕೀ ನರನಾಟಕದ ಮಾಯಾತಿರೋಧಾನತೆಯು (ತೊರರಾ. ೭-೪-೪೦). [ಸಂ. ತಿರೋಧಾನತಾ]

**ತಿರೋಧಾನಪಾಶ** (ನಾ). ಐದು ವಿಧವಾದ ಪಾಶಗಳಲ್ಲಿ ಒಂದು: ಪಾಶಪದಾರ್ಥವು . . . ಮಲಪಾಶ ಮಾಯಾಪಾಶ ಕರ್ಮಪಾಶ ಬಿಂದುಪಾಶ ತಿರೋಧಾನಪಾಶವೆಂದು ಪಂಚಪ್ರಕಾರವಾಗಿರ್ಪುದು (ವಿವೇಕ. ೦೬೫). 'ಪಂಚಪಾಶ' ಪರಾ. [ತಿರೋಧಾನ + ಪಾಶ]

**ತಿರೋಧಾನಮೂರ್ತಿ** (ನಾ). ಐದು ವಿಧವಾದ ಶಿವನ ಮೂರ್ತಿಗಳಲ್ಲಿ ಒಂದು; ಪ್ರಳಯಕಾಲದಲ್ಲಿ ಜ್ಞಾನ ಹಾಗೂ ಕ್ರಿಯಾ ಶಕ್ತಿಗಳನ್ನು ಅಡಗಿಸಿಕೊಳ್ಳುವ ಮೂರ್ತಿ: ಶಿವಮೂರ್ತಿಗಳಲ್ಲಿ ಸೃಷ್ಟಿಮೂರ್ತಿ, ಸ್ಥಿತಿಮೂರ್ತಿ, ಸಂಹಾರಮೂರ್ತಿ, ತಿರೋಧಾನಮೂರ್ತಿ, ಅನುಗ್ರಹಮೂರ್ತಿಗಳೆಂದು ಐದು ವಿಧ (ಭಾರದ. ೭೯).
[ತಿರೋಧಾನ + ಮೂರ್ತಿ]

**ತಿರೋಧಾನಶಕ್ತಿ** (ನಾ). ಪುರುಷನ ಜ್ಞಾನ ಹಾಗೂ ಕ್ರಿಯಾಶಕ್ತಿಗಳನ್ನು ತನ್ನಲ್ಲಿ ಅಡಗಿಸಿಕೊಳ್ಳುವ ಶಕ್ತಿ: ಈಶ್ವರನಲ್ಲಿ ರಾಗತತ್ತ್ವವನೇಳಿಪುದು ತಿರೋಧಾನಶಕ್ತಿ (ವೀಶೈಪು. ೬-೬-೩೬); ಷಡ್ವಿಧಾವಸ್ಥೆಯನ್ನುಳ್ಳ ಜೀವರು ಆಹಾರ ವ್ಯವಹಾರ ವಿಷಯ ಜ್ಞಾನಯುಕ್ತರಾಗಿ ಈಶ್ವರನ ತಿರೋಧಾನಶಕ್ತಿಯಲ್ಲಿ ಶಿಕ್ಷೆಗೊಳಗಾಗಿರ್ಪರು (ವಚಸಂ. ೫೩೬-೦೩ ಟೀಕು); ವಿಮರ್ಶರೂಪವಾದ ಅಹಂ ಎಂಬ ಸ್ವರೂಪದಲ್ಲಿ . . . ಪರಾವಾಕ್ ಶಕ್ತಿಮಯವಾದ ಚಿತ್‌ಶಕ್ತಿಯೇ ತಿರೋಧಾನಶಕ್ತಿ (ಭಾತತ್ತ್ವ. ೬೮೬). [ತಿರೋಧಾನ + ಶಕ್ತಿ]

**ತಿರೋಧಾನಿಸು** (ಕ್ರಿ). ಅಡಗಿಸಿಡು; ಮುಚ್ಚಿಡು: ಭಾನುವಿಗೆ ದುರ್ದಿವಸವಾದಭ್ರದೊಲು ತಿರೋಧಾನಿಸಿರ್ಪಾವರಣಶಕ್ತಿಯಿಂ ಮುಚಿಗೊಂಡು (ಕೈಕವ. ೫-೬೩-೧). [ತಿರೋಧಾನ + –ಇಸು$_3$]

**ತಿರೋಧಾಯಿಕ** (ನಾ). ಸುಖವನ್ನುಂಟುಮಾಡುವುದು: ತಿರೋಧಾಯಿಕ (ಭೋಗವನ್ನುಂಟುಮಾಡುವುದು), ಬಿಂದು (ಮೋಕ್ಷವನ್ನು ಕೊಡುವ ಈಶ್ವರತತ್ತ್ವ—ಮೋಕ್ಷವನ್ನು ಕೊಡುವುದು ಈಶ್ವರನಧೀನವೆಂಬುದೂ ಒಂದು ಪಾಶವೆ) ಇವು ಪಂಚಪಾಶಗಳು (ಅಮೃತ. ೩-೧೫೦ ಟೀಕು). [ಸಂ.]

**ತಿರೋಭಾವ** (ನಾ). ೧. ಮರೆಯಾಗುವಿಕೆ; ಕಾಣದಾಗುವಿಕೆ: ಆಯಾ ಪಶುಗಳ ಭೋಗಾದೃಷ್ಟ ತೀರಿದ ಬಳಿಕ ಕಾರ್ಯಮಿಲ್ಲಾಗಿ ಅದು ತೋಱದಿರ್ಪುದೇ ತಿರೋಭಾವಮಕ್ಕುಂ (ವಿವೇಕ. ೦೬೬). ೨. = ತಿರೋಧಾನಪಾಶ: ಶುದ್ಧಾಶುದ್ಧವೆಂಬ ಎರಡು ವಿಧ ಸೃಷ್ಟಿಗಳಲ್ಲೂ ಸೃಷ್ಟಿ, ಸ್ಥಿತಿ, ಸಂಹಾರ, ಅನುಗ್ರಹ, ತಿರೋಭಾವವೆಂದು ಐದುವಿಧ ವ್ಯಾಪಾರಗಳಿರುವುವು . . . ತಿರೋಭಾವವೆಂದರೆ ಬಂಧ (ಹಿಂದಸಾ. ೩೧೧). [ಸಂ.]

**ತಿರೋಹಿತ** (ನಾ). ೧. ಮರೆಯಾದವನು; ಮಾಯವಾದವನು: ತಿರೋಹಿತನಾಗಿ ಪುರಂದರನು ಪೋದನಿತ್ತ ತಪದೊಳ್ ನರನಿಂತೊಂದಿನಿಲೆ (ಪಂಪಭಾ. ೮-೯); ಪುರಾರಿಯ ಪದಯುಗಕೆ ಗುರುತನುಜ ಮೈಯಿಕ್ಕಿದನು ಬೀಳ್ಕೊಂಡನು ತಿರೋಹಿತನಾದನೀಶ್ವರನೀತನನು ಕಳುಹಿ (ಕುಮ್ವ್ಯಾ.ಗ. ೯-೨೫). ೨. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು; ಒಂದು ಪದಾರ್ಥವನ್ನು ಪ್ರಬಲವಾದ ಇನ್ನೊಂದು ಪದಾರ್ಥವು ಅಡಗಿಸಿತೆಂದು ವರ್ಣಿಸುವುದು: ಒಂದು ಗುಣದತಿಶಯಂ ತಿರೋಹಿಸೆ ತಿರೋಹಿತಂ ತಾನಕ್ಕುಂ . . . ಉದಾ:– ಕಾಳಿಂದಿಯ ಸಿತಜಲದೊಳ ಗೋಲಾಡುವ ಕೃಷ್ಣನಂ ಸವರ್ಣತೆಯಿಂ ಗೋಪಾಲಕುಮಾರರ್ ನೋಡಿಯುಮಾಲೋಲಮನಸ್ಕರಱಿಯದಾಕುಲಮುತ್ತರ್ (ಕಾವ್ಯಾವ. ೭೩೭).
[ಸಂ.]

**ತಿರೋಹಿತವೇಷ** (ನಾ). ಬೇರೆ ವೇಷವನ್ನು ತೊಟ್ಟವನು; ಛದ್ಮವೇಷವನ್ನು ಧರಿಸಿದವನು: ವಸುದೇವನಾದೇಶದಿಂ ದ್ವಾದಶದಿನಕ್ಕೆ ನಾಮಕರಣೋತ್ಸವಮಂ ಮಾಡಲೆಂದು ಗಾರ್ಗ್ಯನೆಂಬ ಪುರೋಹಿತಂ ತಿರೋಹಿತವೇಷನಾಗಿ ಬಂದು (ಜಗವಿ. ೩-೨೬ ವ). [ತಿರೋಹಿತ + ವೇಷ]

**ತಿರೋಹಿಸು** (ಕ್ರಿ). ಅಡಗು; ಮುಚ್ಚು: ಕ್ರಿಯೆಯುಂ ಪ್ರತಿಷೇಧಂಗೆಯ್ಯೆ ನಿಯತಫಳವ್ಯಕ್ತಿಯುದು . . . ಒಂದಂ ಗುಣದತಿಶಯಂ ತಿರೋಹಿಸೆ ತಿರೋಹಿತಂ ತಾನಕ್ಕುಂ (ಕಾವ್ಯಾವ. ೭೩೭). [<ತಿರೋಹಿತ + –ಇಸು$_3$]

**ತಿರ್ಗಾಸು** 'ತಿರಂಗಾಸ್' ನೋ.

**ತಿರ್ದಿಸು, ತಿದ್ದಿಸು** (ಕ್ರಿ). ೧. ಸರಿಪಡಿಸು; ನೇರಗೊಳಿಸು: ರಸಿಕರಿನೆಯ್ದೆ ತಿರ್ದಿಸಿದೊಡಲ್ಲದೆ ನಿಲ್ಲದು ಚಿತ್ರಮಂತೆ ತಿರ್ದಿಸುವುದೆನಲ್ ನಯಂ (ಜಗವಿ.೧-೧೫); ಕವಿಗಳಿಂ ತನ್ನ ಕೃತಿಯಂ ನಾಡೆ ತಿರ್ದಿಸಿದೊಡೆ (ಅರಾಚ. ೧-೪೭). ೨. ತರಬೇತಿಗೊಳಿಸು; ಸಾಧುಮಾಡು; ಪಳಗಿಸು: ಮೊದಲೊಳಭಿನವತುರಂಗಮನೊದವಿದ ಸಹಣಿಗಳನೈದೆ ತಿರ್ದಿಸಿ ಬಸಮಾಡುದನಱಿದೇಱುವುದು (ರಾಜಶೇ. ೧೩-೫). ತಿದ್ದಿಸು: ೧. ಉಗುರ ತಿದ್ದಿಸುವದು ಮುಗುಳನಗೆ ನಗಿಸುವದು...ಬೋನದ ಬಗೆಯ ನೋಡೆಂದ (ಸರ್ವಜ್ಞ. ೧೯೮೭). ೩. ಅಕ್ಷರಗಳನ್ನು ಬರೆದು ಕೊಟ್ಟಂತೆಯೇ ಅದರ ಮೇಲೆ ಮತ್ತೆ ಮತ್ತೆ ಬರೆಸು,—ತೀಡಿಸು: ಉಪಾಧ್ಯಾಯರು ಮಕ್ಕಳಿಗೆ ಅಕ್ಷರ ತಿದ್ದಿಸುತ್ತಾ ಇದ್ದಾರೆ (ರೂಢಿ). ೪. ಹಂಚು; ವಿತರಣೆಮಾಡು: ಬಡವ ಬಲ್ಲಿದ ಬುಧ ಯಾಚಕರೆನ್ನದೆ...ಪೆಟ್ಟಿಗೆ ಪೆಟ್ಟಿಗೆಗಳ ತಣಿಯತ್ತ್ತುಒಡನೆ ಶರ್ಕರೆಯ ತಿದ್ದಿಸಿದ (ಜ್ಞಾನಚ. ೩೭-೧೩೮); ಪ್ರತಿ ಗೃಹಂ ತಪ್ಪದೆ ಸಕ್ಕರೆಯಂ ತಿದ್ದಿಸಿ (ಕಳನ್ನ. ೧೦-೭೧). [ತಿರ್ದು$_1$ + –ಇಸು$_3$]

**ತಿರ್ದು$_1$, ತಿದ್ದು$_1$, ತಿಟ್ದು** (ಕ್ರಿ). ೧. ಸರಿಪಡಿಸು; ನೇರವಮಾಡು; ಸರಿಮಾಡು: "ತಿರ್ದು—ಋಜೂಕರಣೇ (ನೆಟ್ಟಗೆ ಮಾಡು)" (ಶಮಧಾ); ಕಟಿದ ನೀರ್ಗೆ ಬಂದವುದೆ ಬಟಿಕ ಜರೆಗಂ ತಿರ್ದಲ್ (ಅಜಿಪು. ೨-೫೯); ವನರುಹಭವನೆನಿಸಿದ ದಂಡನಾಯಕಂ ಕೇಶಿ ತಿರ್ದೆ ಪೇಟ್ದಂ ಕವಿರನ್ನಂ (ಗದಾಯು. ೧-೫೧); ನಾಯ ಬಾಲಮಂ ಕಾಸಿ ತಿರ್ದಿದೊಡಂ ಕೊಂಕು ಮಾಣದು (ಪಂಚತಂ. ೧೧೫-೨); ಕರಮಿಂಬಾಗಿರೆ ತಿರ್ದಿಬೈತಲೆಯಂ (ಸಮುಪ. ೬-೩೭); ಪರರು ಕೈಯಿಕ್ಕದಂತೆ ಸಸಿನೆ ಮಾಡುವುದು ತಿರ್ದುವುದು (ಹಡಕಾ. ೧-೨೦); ನುಡಿ ತಪ್ಪಿದೊಡೆ ತಿರ್ದುವುದೆನ್ನಯ ಸಂಗಡಿಗರು ಸಲೆ ಬಲ್ಲವರು (ಮೋಹತ. ೦-೧೯); ಬುಧರೆಲ್ಲರೊಲ್ದು ಕೈಕೊಳ್ಗೆ ತಿರ್ದುಗೆ ಕೃತಿಯೊಳಧಿಕದೋಷಂಗಳೇನಾನುಮುಳ್ಳೊಡೆ (ಶ್ರೀರಾಮ. ೨-೧೧). ೨. ಹಸನುಮಾಡು; ಸುಧಾರಣೆಮಾಡು; ಶುದ್ಧಪಡಿಸು: ಬಗೆದರ್ಥಮನಱಿಪದೆ ಮೆಲ್ಲಗೆ ತಿರ್ದುವ ಬಗೆಯನದಱ ನೆಪದಿಂ ಪೆಱತಂ ನಿಗದಿಸುವುದು (ಕವಿರಾ. ೩-೦೩೨). ೩. ಪಳಗಿಸು; ದಾರಿಗೆ ತರು: ವಿರಾಟನಂ ಕಂಡೆಂತಪ್ಪ ದುಷ್ಟಾಶ್ವಂಗಳುಮನೇಱಲುಂ ತಿರ್ದಲುಂ ಬಲ್ಲೆನೆಂದು ಪೇಟ್ದಾಳಾಗಿ ತಂತ್ರಪಾಳವೆಸರೊಳ್ ಮಾಸಾದಿಯಾಗಿರ್ದಂ (ಪಂಪಭಾ. ೮-೫೪ ವ); ಮೂವತ್ತಿ ವರ್ ಅರ್

ನಯಕಾರರೀತನ ಗಜವ್ರಾತಂಗಳಂ ತಿರ್ದುವರ್ (ಶಾಂತಿಪು. ೫-೧೧೩) ; ಅವರ್ಕೆ ಪುಟ್ಟಿದ ಪೋರಿಗಳಂ ತಿರ್ದಿಯಾರಂಬಂಗೆಯ್ವು (ಪಂಚತಂ. ೧೮೬-೮) ; ವಿರೂಪಾಕ್ಷನಡರೆ ಬೊಮ್ಮಂ ತಿರ್ದಿ ತೋರ್ಪ ಪಟ್ಟದ ದಂತಿಯೆಂದೆನಲ್ ಕನಕಾಚಲಂ ಮೆಱೆದುದು (ಜಬಪು. ೨-೮) . ೪. ಒಪ್ಪಗೊಳಿಸು ; ಓರಣಗೊಳಿಸು ; ಅಂದಗೊಳಿಸು : ಲೋಚು ದೋಷವೆಂಬೊಡೆ ತಿರ್ದಿದ ಪುರ್ವಿನವರಂ ತಿರ್ದಿದ ಮೀಸೆಯವರಂ ಕಾಣಲಾಗದು (ಧರ್ಮಾಮೃ. ೯-೮೯) ; ಕಚಭರವುನತಿಭರದಿಂ ತಿರ್ದುತ್ತಮಿರ್ದರ್ (ಗಿರಿಕ. ೧೦-೧೬) ; ಮೃಗತೃಷ್ಣಾಭೋಗವುಂ ತಿರ್ದಿದ ನಿಡುಮುಡುವೆಂದೆಯ್ದುವಾಭೀಳ ಕಾಳೋರಗನಂ ನೇವಾಳಮೆಂದೆತ್ತುವ (ಚಂದ್ರನಾ. ೬) ; ಗಳಕರ್ಣ ಭೂಷಣಂಗಳ ತಿರ್ದುತುಸಿರ ಬಿಡದೊಳಗೊಳಗೆ ನಲ್ಲನಂ ಪಲ್ಲುಗುರ್ಗಳ ಚುಱುಕುಗಳನಱಿದು ಬೈವುತಂ (ಜಬಪು. ೯-೧೬). ೫. ಅಣಿಗೊಳಿಸು ; ಸಿದ್ಧಗೊಳಿಸು : ಕರಗಮನೆತ್ತು ಶೀತಳಿಕೆ ಕಾಲ್ದೊಳೆ ಮಾಲಿನಿ ತಿರ್ದು ಬೋನಮಂ ತರಳಿಕೆ (ಅನಂಪು ೪-೮೫). ೬. ಮಾರ್ಗದರ್ಶನ ಮಾಡು: ಗೌಳ ನೀಂ ಸಂತೈಸು ಗಾಯಕರ ತಿರ್ದು ಪಾಂಚಾಳ ನೀಂ ಚಿಟ್ಟಿಗಳ ಗುರ್ಜರನೆ ಕಾದಿರ್ಪುದರವುನೆಯೊಳೊಳವಾಗಿಲಂ (ಭಾವಚಿಂ. ೫-೨೮). ೭. ಸರಿಯಾಗು; ಅನುಕೂಲವಾಗು : ಅದುಂ ಸುಕೃತಾನುರೂಪವುದು ನಮ್ಮ ಮನೋರಥ ದಂತೆ ತಿರ್ದಿ ಬರ್ಪುದೆ (ಅನಂಪು. ೧೨-೬೫). ೮. (ಶುಭವನ್ನು) ಸೂಚಿಸು ; (ಶುಭದ)ಸೂಚನೆ ಕೊಡು : ಬಿಡೆ ತಿರ್ದಿದ ಶಕುನದ ನಯದಡಿವಿಡಿದು ಪುರೋಹಿತಂ ನೃಪಂಗೀ ನುಡಿಯಂ ನುಡಿದಂ (ಆದಿಪು. ೫-೬);ಶಕುನಂಗಳೆಲ್ಲಮುತ್ತರೋತ್ತರಂ ತಿರ್ದುವಿನಮುತ್ತರಾಭಿಮುಖರಾಗಿ ಪಯಣಂಬೋಗಿ (ಪಂಪಭಾ.೩-೩೩ ವ) ; ತಿರ್ದಿದ ದೆವಸಂ ಮಾಣ್ದಿರ್ದು ಬಱಿಕ್ಕವಾ ತಿರ್ದನೆ ತಿರ್ದೆಂದು ಪಯಣಂಬೋಪಾತಂಗೆ ಪೊರ್ದಿದು ಲಾಭಂ ಬುಧಬಂಧು (ಲೋಕೋಪ. ೧೨-೮). ೯. (ಕಲಹ, ಜಗಳ ಮುಂತಾದುವನ್ನು) ನಿವಾರಿಸಂ ; ಬಗೆಹರಿಸಂ ; ತೀರಿಸಂ ; ಕಳೆ: ಬಂಧುಗಳಂ ಬರಿಸಿ ನಿಮ್ಮಿರ್ವರೊಳಗಾರನೀ ಕನ್ನೆಯೊಲ್ದಪಳೋ ಕೈಕೊಳ್ವು ದೆಂದು ತಿರ್ದಿ ಕಳೆಯೆ (ಚಾವುಂಪು. ೧೧೭-೯) ; ಧರ್ಮಾಧಿಕರಣರ್ ನಡೆಯಿಂ ನಿಮ್ಮಿರ್ವರ ಬವರವುಂ ತಿರ್ದುವವೆಂದು ವಟವೃಕ್ಷದ ಸಮೀಪಕ್ಕೆ ವಂದು (ಪಂಚತಂ. ೧೭೬-೨). ೧೦. ನಿವಾರಣೆಯಾಗು; ಪರಿಹಾರವಾಗು: ಇತ್ತ ಗಾಂಧಾರಿಯುಂ ಕುಬೇರಕಾಂತಂಗೆ ತನ್ನಳಿಪಂ ಪ್ರಕಟಂ ಮಾಡೆ ಕುಬೇರ ಕಾಂತಂ ನಾಂ ನಪುಂಸಕನೆನೆ ವಿರಕ್ತೆಯಾಗಿರ್ಪನಂ ರತಿಷೇಣಂ ಬರೆ ನಿಮ್ಮ ಮುನ್ನಿನೌಷಧಪ್ರಯೋಗದೊಳ್ ತಿರ್ದಿತ್ತೆಂದು ನಿಜವಾಸಕ್ಕೆ ಪೋದರ್ (ಚಾವುಂಪು. ೯೩-೧೯). ೧೧. (ನೀರನ್ನು) ಎರೆ ; ಬಿಡು ; ಹಾಯಿಸು : ಕುಚಾಂತರದೊಳ್ ಕೊಳಗೊಂಡು ಮೋಹವಲ್ಲಿಗೆ ಬಿದಿ ತಿರ್ದಿ ಸುತ್ತಿಸಿದ ನೀರ್ಗಣೆಯಾದುದು ಬಾಷ್ಪಮೋಪಳಾ (ಶಾಂತಿಪು. ೮-೭೨) ; ಬಿಂಬಾಧರ ಕಾಂತಿಯಿಂ ಕಂತುರಾಗರಸದ ಪೊನಲಂ ತಿರ್ದುವಂತೆ (ಮಲ್ಲಿಪು. ೪-೬೨). ೧೨. ತೋಡು ; ಅಗೆ : ಮೊಗೆಯಲ್ ಕೊಡಗೊಂಡು ತಿರ್ದಿ ಬಚ್ಚಲ ನೆಲೆದೋಂಟದೊಳ್ ಪರಿಯಿಸಲ್ (ಅಜಿಪು. ೬-೪೫) ; ಅಮೃತಾರ್ಣವವುನೆ ಮೇರುವಿನ ಮೇಖಳಾವನಕೆ ತಿರ್ದಿ ಪರಿಯಿಸಲ್ (ಪುಷ್ಪಪು. ೧೧-೯).

ತಿದ್ದು₁ : ೧. ಕೃತಿಯುಂ ಕಿಡೆನುಡಿವರಲ್ಲದೇಂ ಜಡರೊಡಂಬಡಲ್ತಿದ್ದಿ ನುಡಿಯ ಬಲ್ಲರೆ ಕವಿಪೋಲ್ (ಧರ್ಮಾಮೃ. ೧-೪೮); ಲೋಕದ ಡೊಂಕ ನೀವೇಕೆ ತಿದ್ದುವಿರಿ (ಬಸವ. ೧೨೪) ; ಸುಜನರ್ಕಳೀ ಶತಕದೊಳ್ ತಪ್ಪಿರ್ದೊಡಂ ತಿದ್ದಿ ತೋರ್ಪುದು (ಸೋಮೇಶ. ೨); ಇದರಿದರಿದು ತಿದ್ದು ಪೊಡೆ ಹರನೆ ಬಲ್ಲಂ ನಮ್ಮ ವಶವಲ್ಲ ತಿದ್ದುವೊಡೆ (ತಿರುರ. ದೇ. ೧೯-೭); ದೇಸದೊಳಗೆ ಸಮಯ ಸಂಹಾಜವಾದರೆ ಅವರ ಮುಂದಿಟ್ಟು ತಿದುಹುದು ಅವರು ತಿದ್ದಿದ ಹಾಗೆ ನಡೆಉದು (ಎಕ. XII, ಶಿರಾ. ೭೬-೧೯ ; 1379); ಕಾರಣಿಕನೆನೆ ಪರೀಕ್ಷಕನೆನಲು ಸರ್ವರ ವಿಚಾರವಂ ತಿದ್ದುವವ ನೆನಿಕು (ಮುಂಗರಾ. ೭೨-೨೩); ಗರಿಯು ತಿದ್ದೆ ಬೆಡಗಿ ಶಕಿಯು ಕೊರಲ ಕೊಂಕಿದೆ (ಮೂಂದಳಿ. ೧೦-೧). ೨. ನೀತಿಸ್ಖಲಿತ ಜಡರನು ತಿದ್ದಿ ತಿಳುಹುವ ಸುಲಭತನದಲಿ ದೇವಮುನಿ ನಿನಗಾರು ಸರಿಯೆಂದ (ಕುವ್ಯಾಸ. ೧-೮೪). ೩. ಮುದಿಗುದುರೆ ತಿದ್ದೆ[ಪಾಠಾಂ. ತಿರ್ದೆ] ಬಡವಾದುದೆಂಬ ತೆಱದಿಂ (ಸಮಪ. ೧೩-೬೧); ಅ ಡ ವಿ ೕ ಸಿ ಂ ಗ ವ ತಿದ್ದಲಕ್ಕು (ಸೋಮೇಶ. ೪೯). ೪. ಜವನುಂ ತಂನಯ ಗಂಡುಲಚ್ಚಣಮೆನಿಪ್ಪಾ ಮೀಸೆಯುಂ ತಿದ್ದಲಂಜು ವಿನಂ(ಎಕ.V, ಹಾಸನ. ೫೩-೧೩; 1170); ಕುಂಕುಮ ಕಸ್ತೂರಿ ಕರಿನಾಮ ತಿದ್ದಿ (ಪುರಂದ. ೧-೧೪೦-೩); ಸಿರಿನೊಸಲೊಳು ಕಸ್ತುರಿಯ ತಿದ್ದುತ ಹೆಂಗಳರಸಿಯ ರೆಸೆದರರ್ತಿಯಲಿ (ಕಂನವಿ. ೨೪-೪೬). ೫. ಬಿಲುಗಣೆಗಳನು ತಿದ್ದಿದನು ಫಲುಗುಣ ಹೊಡಿದನು ರಥವ (ಕುವ್ಯಾಆ. ೨೦-೧೮). ೯. ಮದ್ದು ಮಂತ್ರವು ವಾದ ತಿದ್ದುವವು ಕುತ್ತಗಳ (ಸರ್ವಜ್ಞ. ೨೪೭). ೧೦. ತಿದ್ದಿ ಹೋಹುದು ನಿನ್ನ ಪಾಪಕೆ ಮದ್ದು ತಾನೊಂದಿಹುದು (ಸಂಭಪ. ೩-೩೪), ೧೧. ಅಖಂಡಮಂಡಲವೆಂಬ ಭಾವಿ ಪವನವೆ ಱಾಟಾಳ ಸುಷುಮ್ನಾನಾಳ ದಿಂದವೆ ಉದಕವ ತಿದ್ದಿ (ಅವಚಂ. ೦೮೦-೮೧೨) ; ದಯವನತ್ತಲು ತಿದ್ದಿ ನಮ್ಮನು ಭಯವುಹಾಬ್ಧಿಯೊಳದ್ದಿ . . . ನಯವ ನೀಪೊಡ್ಡುವರೆ (ಕುವ್ಯಾಭೀ. ೧-೨೪); ಎದ್ದು ಬಳಿಕವನಸುರನಕ್ಷಿಗೆ ತಿದ್ದಿದನು ಹೊಂಗಲಶ ವಾರಿಯನುದ್ದಿದನು ಛಾಯದಲಿ ಶುಕ್ರಾಚಾರ್ಯನೌಷಧಿಯ (ತೊರರಾ. ೬-೨೪-೨೦); ಆರಂಭಕೃಷಿಯನು ಮಾಳ್ಪರು ಗದ್ದೆಗೆ ನೀರ ಹರಿಯೆ ತಿದ್ದನಲು ನಾರ ಹಂಗಡವ ಮಾಡೆನಲಾಗಿ ಪಾಪದ ಬೇರ ಕೀಳುವ ಕೃಷ್ಣ ಜಯುತು (ಮೋಹತ. ೪೧-೨೦): ಕೀಳೇರಿಯಲ್ಲಿ ಅಚ್ಚುಕಟ್ಟನೂ ಕಟ್ಟಿ ತಿದ್ದಿದ ಗದ್ದೆವೊಳಗೆ ದೇವರ ಭಂಡಾರಕೆ ಎರಡು ಭಾಗೆ (ಎಕ. X(ಶ). ಕೋಲಾರ. ೩೦೦-೮; 17ನೆಯ ಶತ). ೧೨. ಮೂಢರಂದದೊಳೂರ ಗುದ್ದಲಿಯನು ಕೊಂಡು ನಾಡ ಕಾಲುವೆಯ ತಿದ್ದುವರೆ (ಮೋಹತ. ೬-೮). ೧೩. (ತಿವಿದು) ಸಾಯಿಸು ; ಕೊಲ್ಲು : ವೈಮಾರಿಗಳ ಮುಕ್ಕುಱಿಕಿದಿ ವದಿರ ತಿದ್ದಿ ಬಹೆನಿದೆಯೆನುತ ತೆಗೆದೆಚ್ಚ (ಕುವ್ಯಾದ್ರೋ. ೨-೪೪). ೧೪. ಬರೆ ; ರೇಖಿಸು ; ಚಿತ್ರಿಸು : ಬರೆಯಬಾರದ ತಿದ್ದಬಾರದ ಕಡೆದರೆ ದೊರೆಯಬಾರದ ರೂಪಿನಭವಾ (ಭರತ. ೪-೧೨೩). ೧೫. ಅಕ್ಷರಗಳನ್ನು ಬರೆದುಕೊಟ್ಟಂತೆಯೇ ಅದರ ಮೇಲೆ ಮತ್ತೆ ಮತ್ತೆ ಬರೆ: ಮಕ್ಕಳು ತಿದ್ದಿದಷ್ಟೂ ಅಕ್ಷರ ಚನ್ನಾಗುತ್ತದೆ (ರೂಢಿ). ೧೬. (ಬರಹ ಮೊದ ಲಾದುವನ್ನು) ವ್ಯತ್ಯಾಸ ಮಾಡು; ಬದಲಾಯಿಸು : ಕೆಲಬಲದ ಮಾಮರದೊಳಿಪ್ಪ ನಿರ್ಯಾಸವುಂ ತೆಗೆದು ಕಿಱುಬೆರಳುಗುಗುರ್ನೆಯಿಂದೆ ತಿದ್ದಿ ಬರೆದು (ಜೈಮಿಭಾ. ೩೦-೨೯): ಆ ಲೇಖನವನ್ನು ಅವರು ತಮ್ಮ ಇಷ್ಟಕ್ಕನುಸಾರವಾಗಿ ತಿದ್ದಿದರು (ರೂಢಿ). ೧೭. ಕಂಡರಿಸು ; ಕೆತ್ತು : ಕೊರೆ : ಚಿಕ್ಕಸುಣಗಿಲ ಗುಡ್ಡದ ಮೇಲೆ ವಾಮನಮುದ್ರೆ ತಿದ್ದಿಯಿರುವ ಹುಟ್ಟುಗಲ್ಲು (ಎಕ. XIV, ಮೈಸೂರು. ೧೧೫-೩೫೮ ; 1674) ; ಶುದ್ಧ ಸ್ಫಟಿಕದ ಶಿಲೆಯೊಳು ತಿದ್ದಿದ ಜಿನಬಿಂಬದಂತೆ (ಭವ್ಯಾಮೃ. ೩೮). ೧೮. (ಸಾಲ) ತೀರಿಸಂ ; ಮುಗಿಸು : ಎಂದು ಕೊಟ್ಟೆಹೆನಿನ್ನು ಸಾಲವನೆಂದು ತಿದ್ದುವೆವಕ್ಕಟಕಟ (ಬಸಪು. ೪೨-೦೩) ; ಆಗಲೀ ಸಾಲಗೆಯ ಸಾಲವನೀಗ ಕೈಯಲಿ ತಿದ್ದಿ ಕೊಡುವರೆ (ಕುವ್ಯಾಕ. ೨-೧೯); ಇಂತಪ್ಪ ಋಣಂಗಳ ತಿದ್ದಿ ಸಿರಿವಂತನಾಗಿ ಭವರಾಜನ ಬಲವ ಗೆದ್ದೆ (ಭನವ. ೪೩-೩೮) : ಕೊಂಡ ಸಾಲಗಳನ್ನು ತಿದ್ದದಾತನೆ ಹೊಲೆಯ (ಪುರಂದ. ೧-೧೭೮-೫) ; ಏಸು ಜನ್ಮದಿ ನಿನ್ನ ರಿಣವ ತಿದ್ದುವೆನೆಂದಾ ಸುಗುಣೆಯ ನಪ್ಪಿದಳು (ಮೋಹತ. ೩೦-೩೯) ; ದ್ರವ್ಯವಿದ್ದವನು ತಿಂದು ಸಾಯಲಿಲ್ಲ, ಸಾಲಾ ಮಾಡಿದವ ತಿದ್ದಿ ಸಾಯಲಿಲ್ಲ (ಗಾದೆ). ೧೯. ತೀರು ; ಮುಗಿ : ತಿದ್ದಿತೆಮ್ಮಯ ದೆಸೆ ದಶಾನನನುದ್ಧರುಟಾತನದಿಂದ ನಾವ್ ಬಂದಿದ್ದ ಹದನಿದು ಜೀಯ ರಕ್ಷಿಸಬೇಕು ನೀವೆಂದ (ತೊರರಾ. ೧-೮-೫೮) ; ತಿದ್ದಿತೇ

ಭವದೀಯ ಕರ್ಣದ ಹೊದ್ದಿಗೆಯ ಸೌಭಾಗ್ಯಮಿಂದ್ರನ ಗದ್ದುಗೆಯು ನಡರಿದನೆ ಪಿತನೆನುತೆಱಗಿದನು ವದಕೆ (ತೊರರಾ. ೨-೬-೨೫). ೨೦. (ಭಾರವನ್ನು) ಇಳಿಸು; ಕಡಮೆ ಮಾಡು: ನೆಲನ ತಿಣ್ಣನೆ ತಿರ್ದ ಲೋಸುಗ ಸುಳಿದನಱಿಯಾ ಕೃಷ್ಣನು (ಕುವ್ಯಾದ್ರೋ. ೨-೬೨); ಭೂಮಿಯ ತಿಣ್ಣವನು ತಿರ್ದಲಿಕೆ ಹರಿ ನರನಾಗಿ ರೂಹಿಸಿದ (ತೊರರಾ. ೬-೨-೨೦). ೨೧. ಸಮಾಧಾನ ಪಡಿಸು; ಸಾಂತ್ವನ ನೀಡು: ಮುಳಿಸ ತಿರ್ದಿ ತೋಱಿ ನಿರೂಪಿಸಿದ ಪ್ರಸ್ತಾವದ ವಚನ (ಚೂನ್ನಸಂ. ೧೧೯-೧೧); ಕೇಳಿಯವರ ಸಂವಾದವ ತಿರ್ದಲು ಕಾಳಿ ನಿರ್ವಾಣಾಕೃತಿಯ ತಾಳಿ ಬಂದಿದಿರಾಗಿ ನಿಲಲಚ್ಯುತ ನೋಡಿ ಹೊಳಿದ ದ್ರಿಗ್ಮುಗಳವನು (ಮೋಹತ. ೩೮-೨೪). ೨೨. ಹಂಚು; ವಿತರಣೆ ಮಾಡು: ವರಿಷವೊಂದಕ್ಕೆ ತಿರ್ದುವ ಸಮುದಾಯ ಗದ್ಯಾಣ ೧೮೦ ಸಮುದಾಯ (ಸೌಇಇ. IX-i, ೩೯೫-೨೦; 1261); ಪರಿವಾರಕುಚಿತವನೆತ್ತು ಪರಿಸೆಯ ತಿರ್ದಿರ್ಪೆಯೆಂದು ಭರತೇಶ ನೇಮವನಿತ್ತ (ಭರಣ. ೬೩-೧೧೮); ಧಾನ್ಯಗಳ ಬಿತ್ತಿ ಬೆಳೆದುಂ ಕೊಯ್ದು ತುಳಿಸಿಯಲ್ಲವ ರಾಶಿಯಾ ಮಾಡ್ಯಾಯಗಳ ತಿರ್ದಿ ರಾಯರಿಗೆ ಸರಿಭಾಗ ಗೂಡೆಯಿಂದಳೆದಿತ್ತು (ನವಮೋ. ೨-೯೨). Δ ತಿಱ್ದು: ೧. ಹೊಸಕೆರೆಯ ಕಟ್ಟಿಸಿ ತೂಬನಿಕ್ಕಿಸಿ ಭೂಮಿಯಂ ತಿಱ್ದಿ ಸೋಮೇಶ್ವರದೇವರ ದೇಗುಲವ ಅಳಿವಂ ಸೋದಿಸಿ (ಎಕ. X, ಚಿಂತಾಮ.೩೦-೧೦; 1047); (ಎಇ. V, ೨೦೭-೧೦: 1047 ನೋ).

ತಿರ್ದಿ ಕೊಳ್, ತಿರ್ದಿಕೊಳ್ಳು = ೧. (ಶಕುನವನ್ನು) ನೋಡಿಕೊಳ್ಳು; ಗಮನಿಸು: ಆವ ಶಕುನವ ತಿರ್ದಿಕೊಂಡೆಲೆ ಭಾವ ಬಂದೆಯೊ ಅಲ್ಲದಿರ್ದೊಡದಾವ ಮೋಹನವಶ್ಯವಿದ್ಯೆಯ ಕಲಿತೆಯೊ (ಪ್ರಭುಲೀ. ೫-೩೯). ೨. ಸರಿಪಡಿಸು; ಸುಧಾರಿಸು: ರಾಯರು ಎತ್ತಿ ತೋರಿಸುವ ತಪ್ಪುಗಳನ್ನು ಹೋಟೇಲಿನವರು ಸಹ ತಿರ್ದಿಕೊಳ್ಳುವುದಕ್ಕೆ ಸಾಧ್ಯವಿಲ್ಲದಂತಾಗಿದೆ (ರಾಯಕ. ೯೮). ತಿರ್ದಿ ತೀಡು = ೧. ಪರಿಷ್ಕಾರಮಾಡು; ಸುಧಾರಣೆ ಮಾಡು: ತಿರ್ದಿ ತೀಡಿ ಗೊಂಬಿ ಹಾಂಗ ಮಾಡಿ (ಜಾನಗೀ. ೯೫). ೨. ಪರಿಷ್ಕಾರವಾಗು; ಸುಧಾರಣೆಯಾಗು: ನವಜನಾಂಗ ಮೂಡಿ ಮೊಳಗಿ ಬದುಕು ತಿರ್ದಿ ತೀಡಿವೆ (ನಲಮು. ೨೪-೧೦). ತಿದ್ದುಮಿದ್ದು = ಸರಿಪಡಿಸಿ ನಯಗೊಳಿಸು; ಸಂಸ್ಕರಿಸು; ಮಾರ್ಪಾಡುಗೊಳಿಸು: ನಮ್ಮನ್ನು ತಿದ್ದುಮಿದ್ದಲು ತಿಂಮತನ ತನ್ನ ವರ್ಗದೊಡನೆ ಟಿಸಿಲೊಡೆದ ಹಲವು ಟೊಂಗೆಗಳಲ್ಲಿ ಕುಳಿತು ಅಣಕಿಸಲೆಂದೇ ನನ್ನ ಅವಸರದ ಆಶಯ (ತಿಂಮತ. ೧೨೯); ಪರಮಾತ್ಮನ ಗುಪ್ತಹಸ್ತವು, ಕಾಣದಂತೆ ವ್ಯಕ್ತಿಯನ್ನು ತಿದ್ದುಮಿದ್ದುವ ಕೆಲಸವು ಆರಂಭಗೊಳ್ಳುತ್ತದೆ (ದಾಳಿಬ. ೫೦). ತಿರ್ದಾನೆಮಲ್ಲ = ಒಂದು ಬಿರುದು: ರಾಜಮನೋಜಂ ದ್ರೋಹಚಲಿಕ್ಕಂ ಕೊಮಾರವಿಳಾಸಂ ತಿಱ್ದಾನೆಮಲ್ಲ ನೊಟವ್ಪರ ಭೀಮಂ (ಸೌಇಇ. IX-i, ೩೦-೩೦; 965).

[ದೇ. # ತಮಿ. ತಿರುತ್ತು, ತಿರುನ್ನು; ಮಲ. ತಿರುತ್ತು; ತುಳು. ತಿರ್ದು, ತಿದ್ದು; ಕೊಡ. ತಿದ್ದ್; ತೆಲು. ದಿದ್ದು]

ತಿರ್ದು₂, ತಿದ್ದು₂ (ನಾ). ೧. ಸರಿಪಡಿಸುವಿಕೆ; ನೇರಮಾಡುವಿಕೆ: ವಿಚಾರಮಱಿಯದೆ ತಿರ್ದುವ ತಿರ್ದುಂ (ಧರ್ಮಾಮೃ. ೧೧-೪೨); ಪೂಗಳ್, ಓದುಗಳ್, ವೋಡುಗಳ್, ತಿರ್ದುಗಳ್ (ಶಬ್ದಾನು. ೫೪೯ ಪ್ರಯೋ). ೨. ಸರಿಯಾದುದು; ಯೋಗ್ಯವಾದುದು; ಉಚಿತವಾದುದು. 'ತಿರ್ದುವರ್' ಪರಾ. ೩. ಶಕುನ: ತಿರ್ದಿದ ದವಸಂ ಮಾಣ್ದಿರ್ದು ಬೞಿಕ್ಕಮಾ ತಿರ್ದನೆ ತಿರ್ದೆಂದು ಪಯಣಂಬೋಪಾತಂಗೆ ಪೊರ್ದದು ಲಾಭಂ (ಲೋಕೋಪ. ೧೨-೮); ಅನುಕೂಲಪವನನುಂ ಹಸ್ತಿನಿಕಾಯದ ಶೋಭನಾವಯವಸೂಚನಮುಂ ಸುನಯದ ಶಕುನನಿಕಾಯಸ್ವನಮುಂ ದಂಷ್ಟ್ರಿಗಳ ತಿರ್ದುಮೊದವಿಸೆ ಮುಂದಮಂ (ಮಹಾನೇ. ೧೨-೧೩). ತಿದ್ದು₂: ೧. 'ತಿದ್ದುಪಡಿ', 'ತಿದ್ದುಪಾಟು' ಪರಾ. ೩. ಹರಣ

ಭಾರದ್ವಾಜನುಡಿಕೆಯ ಸರಟ ನಕುಲನ ತಿದ್ದುಗಳ [ಪಾಠಾಂ. ತಿರಿದುಗಳ] ಕುಕ್ಕುರನ ತಾಳಿನ ಶಕುನವನು ಕೈಕೊಳುತ ನಡೆತಂದ (ಕುವ್ಯಾಆ. ೪-೩೩).

[<ತಿರ್ದು₁./ ತಮಿ. ತಿರುತ್ತ, ತಿರುತ್ತಲ್; ಮಲ. ತಿರುತ್ತು; ತುಳು. ತಿರ್ದು, ತಿದ್ದಿಗೆ; ತೆಲು. ದಿದ್ದು]

ತಿರ್ದುಂಬೋರಿ (ನಾ). ಪಳಗಿಸಬೇಕಾದ ಹೋರಿ: "ದಮ್ಯಃ, ವತ್ಸತರಃ- ಈ ೨ ತಿರ್ದುಂಬೋರಿ" (ಹಲಾಯು. ೪೪-೧೧೯).

[ತಿರ್ದು₁ + ಪೋರಿ₂]

ತಿರ್ದುವಡು (ಕ್ರಿ). ತಿದ್ದಿಕೊಳ್ಳು; ಸಾವರಿಸಿಕೊಳ್ಳು: ಸೇನಾಪತಿಗಳು (ತಿರ್ದುವಟ್ಟು, ಕತ್ತು ಬಾಗುವರು) (ಬಿಟ್ಟಿಅ. ೬೮-೨೩).

[ತಿರ್ದು₂ + ಪಡು₁]

ತಿರ್ದುವರ್ (ಕ್ರಿ). ಉಚಿತವಾಗು; ಯೋಗ್ಯವಾಗು: ಪೇೞ್ದಪಂ ಚರಿತ ಪುರಾಣಮಂ ಬೞಿದೆ ಪೇೞ್ದಪನೆಂದೊಡೆ ತಿರ್ದುವಪ್ಪುದೇ (ಅನಂಪು. ೧-೩೭).

[ತಿರ್ದು₂ + ಬರ್₁]

ತಿರ್ದುಹ (ನಾ). ಸರಿಪಡಿಸುವಿಕೆ; ನೇರಗೊಳಿಸುವಿಕೆ: ನಾಯ ಬಾಲಮಂ ಕಾಸಿ ತಿರ್ದುಹವುಂ . . . ಮೂರ್ಖನಂ ಬುದ್ಧಿವಂತನೋಲೈಸುಹವುಂ ಇವೞೋಪಾದಿ (ಪಂಚತಂ. ೦೩೬-೯).

[ತಿರ್ದು₁ + -ಹ₂]

ತಿರ್ಪಡ (ನಾ). ಒಂದು ಊರಿನ ಹೆಸರು: ಚನ್ದ್ರಾರ್ಕ್ಕಂ ತಿರ್ಪ್ಪಡ ಊರಾನೆ ಯಿದಿ ದೇಸತ್ತಮ್ಮನಟಿತ್ತಾಪ ಎಯಿದವೊನ್ (ಎಕ. IV, ಹೆಗ್ಗಡ. ೮೬-೫; ಸು. 915). [ ? ]

ತಿರ್ಪು 'ತಿರಂಪು₃' ನೋ.

Δ ತಿರ್ಪೆ 'ತಿಪ್ಪೆ' ನೋ.

Δ ತಿರ್ಪೆಸುಂಕ 'ತಿಪ್ಪೆಸುಂಕ' ನೋ.

ತಿರ್ಬು 'ತಿರುಂಪು₃' ನೋ.

ತಿರ್ಬೂರ್ (ನಾ). ಒಂದು ಊರಿನ ಹೆಸರು: ತಿರ್ಬೂರ ಮಾರಗವುಣ್ಡ ಕೆಱಿಗೂಡಲ ದೋರಗವುಣ್ಡ (ಮ್ಯಆರಿ. ೧೯೧೯, ೧೦-೭೪; 900).

[ ? + ಊರ್ ]

ತಿರ್ಮರಿ (ನಾ). ಒಂದು ಊರಿನ ಹೆಸರು: ಶ್ರೀಯುಂಬಾಟಕ ತಿರ್ಮ್ಮರಿ ... ಪ್ರಭೃತಿ ದಶಗ್ರಾಮಂ (ಇಆ. XIX, ೧೮-೧೪; 602). [ ? ]

ತಿರ್ಯಂಚ (ನಾ). ೧.=ತಿರ್ಯಗ್ಗತಿ: ಜೀವನಿಗೆ ನರಕ, ತಿರ್ಯಂಚ, ಮನುಷ್ಯ, ದೇವ ಎಂಬ ನಾಲ್ಕು ಗತಿಗಳಿರುತ್ತವೆ (ಜೈನಪ. ೨೯೫). ೨. ತಿರ್ಯಗ್ಗತಿಯಲ್ಲಿರುವ ಜೀವ: ತಿರ್ಯಂಚರುಂ ಮನುಷ್ಯರುಮೆಂದಿ ವರ್ಗಳ ರಸ ರುಧಿರ ವರ್ಣ ಗಂಧ ಮೊದಲಾದುವಂ ನೋಡಿ . . . ಶುಭಾಶುಭಂಗಳಂ ಪೇೞ್ವುದಂಗನಿಮಿತ್ತಮೆಂಬುದು (ಪಸಾರ. ೩೮೭).

[ಸಂ. ತಿರ್ಯಂಚ್]

ತಿರ್ಯಕ್ಕು (ಗು). ೧. ಅಡ್ಡವಾಗಿ ತಿರಗುವ; ಓರೆಯಾಗಿ ಚಲಿಸುವ; ವಕ್ರವಾಗಿ ನಡೆಯುವ. (ನಾ). ೨. ಪಶು, ಪಕ್ಷಿ ಮೊದಲಾದ ಪ್ರಾಣಿವರ್ಗ: ನಿರುತ ನೀ ಕೇಳುವರೆ ತಿರ್ಯಕ್ ನರ ಸುರಾದಿಗಳೆಂಬ ಸಚರಾಚರವಿದಾನಲ್ಲದೆ ವಿಚಾರಿಸಲನ್ಯವಿಲ್ಲೆಂದ (ಕುವ್ಯಾಭೀ. ೩-೫೭); ಈ ರೀತಿ ಬೇರೆ ಬೇರೆ ಪ್ರವೃತ್ತಿಗಳಿಂದ ದೇವ, ಮನುಷ್ಯ, ತಿರ್ಯಕ್, ನರಕ—ಈ ಲೋಕಗಳಲ್ಲಿ ಪುನಃ ಪುನಃ ಸಂಸಾರಬಂಧ ಬರುವುದು (ಹಿಂದಸಾ. ೦೨೩). ೩. [ನಾಟ್ಯ] ನೃತ್ಯದಲ್ಲಿ ಪಕ್ಕಕ್ಕೆ ತೋಳನ್ನು ನೀಡುವುದು; ಹದಿನಾರು ಬಗೆಯ ತೋಳಿನ ಅಭಿನಯ ಭೇದಗಳಲ್ಲಿ ಒಂದು: ಬರಿಯಲ್ಲಿರ್ದುಂ ಕೆಲನಂ ಸರಿಸದೆ ತೋಱಲ್ಕೆ ತಿರ್ಯಗೆನಿಕ್ಕುಂ (ಲಾಸ್ಯರಂ. ೨-೦೨೪). ೪. [ಕಾಮಶಾ] ಚುಂಬನದಲ್ಲಿ ಒಂದು ವಿಧ: ರಸನಾಗ್ರದಿಂ ಕೋಮಲೆ ವಲ್ಲಭನಧರವೀಂಟೆ ತಿರ್ಯಗ [ಪಾಠಾಂ. ಗ] (ಮೆ) ನಿಕ್ಕುಂ (ಮನ್ಮವಿ. ೧೨-೦೨); ಇದುವೆ ತಿರ್ಯಕ್ ಪ್ರಕಾರಂ (ಜನವ. ೯-೪೨). [ಸಂ. ತಿರ್ಯಂಚ್]

**ತಿರ್ಯಕ್ಕುಂಚಿತ** (ನಾ). [ನಾಟ್ಯ] ದೇಶೀಯಂ ಭೌಮಚಾರಿಗಳಲ್ಲಿ ಒಂದು ; "ಒಂದು ಕಾಲನ್ನು ಕುಂಚಿತವಾಡಿ ಅನೇಕಾವರ್ತಿ ಜಾಗ್ರತೆ ನೆಲದ ಮೇಲೆ ಅಡ್ಡಲಾಗಿ ಇರಿಸುವುದು" (ಲಾಸ್ಯರಂ. ೩.೨೨ ಗದ್ಯಾನುವಾದ) : ರಥಚಕ್ರ...ತಿರ್ಯಕ್ಕುಂಚಿತ, ಮದಾಲಸ...ಸಮಸ್ಖಲಿತ ಈ ಮೂವತ್ತೈದು ದೇಶೀಯ ಸಂಬಂಧದ ಭೌಮಚಾರಿಗಳು (ಲಾಸ್ಯರಂ. ೬-೧೭ ವ). [ ಸಂ. ]

**ತಿರ್ಯಕ್ಪುಂಡ್ರ** (ನಾ). ಹಣೆಯ ಮೇಲೆ ಶೈವರು ಅಡ್ಡಲಾಗಿ ಧರಿಸುವ ವಿಭೂತಿಪಟ್ಟೆ. [ ಸಂ. ]

**ತಿರ್ಯಕ್ಪ್ರಾಣಿ** (ನಾ). ಪಶು, ಪಕ್ಷಿ ಮುಂತಾದ ಜೀವಿ : ಮಾನುಷೋತ್ತರ ಪರ್ವತದ ಹೊರಗೆ ತಿರ್ಯಕ್‌ಪ್ರಾಣಿಗಳಿರುತ್ತವೆ (ಜೈನಪ. ೪೪೯). [ ಸಂ. ]

**ತಿರ್ಯಗುನ್ನತ** (ನಾ). [ನಾಟ್ಯ] ನೃತ್ಯದ ಒಂದು ಭಂಗಿ ; ಮುಖವನ್ನು ಅಡ್ಡಲಾಗಿ ಮಾಡಿ ಮೇಲಕ್ಕೆತ್ತುವುದು : ಚದುರೆ ಪರಾವೃತ್ತೋತ್ಕ್ಷಿಪ್ತದಧೋಮುಖಮೊಳ್ಪವೆತ್ತ ಲೋಲಿತಮಾದಂ ವಿದಿತವಹ ತಿರ್ಯಗುನ್ನತಮುದಧಸ್ಕಂಧಾನತಂ ಸಮಾರಾತ್ರಿಕಗಳ್ (ಲಾಸ್ಯರಂ. ೧-೭೭) [ ಸಂ. ]

**ತಿರ್ಯಗ್ಗತಿ** (ನಾ). [ಜೈನ] ದೇವ, ಮನುಷ್ಯ, ತಿರ್ಯಕ್ ಮತ್ತು ನಾರಕ ಎಂಬ ಚತುರ್ಗತಿಗಳಲ್ಲಿ ಒಂದು : ತತ್ಪ್ರಾಯೋಗ್ಯಾನುಪೂರ್ವತಿರ್ಯಗ್ಗತಿ ತತ್ಪ್ರಾಯೋಗ್ಯಾನುಪೂರ್ವೇಕೇಂದ್ರಿಯ ... ಸೂಕ್ಷ್ಮಂಗಳೆಂಬ ಪದಿನಾಱು ಪ್ರಕೃತಿಗಳುಮಂ ನಿರವಶೇಷಂ ಕಿಡಿಸಿ (ಆದಿಪು. ೧೦-೦೪ ವ) ; ನೀನತಿಲೋಭದೊಳಾರ್ತಧ್ಯಾನದೊಳ್ ಸತ್ತು ತಿರ್ಯಗ್ಗತಿಯೊಳ್ ಪುಟ್ಟಿ ನವೆದಪ್ಪೆ (ಚಾವುಂಪು. ೧೪-೨೧); ಯಶೋಧರನು ಚಂದ್ರಮತಿಯುಂತಿರ್ಬರ್ ಗೂಡಿನ ಕೋಟಿಗಳಾದರ್ ನೋಡೈ ಮತ್ತೊಮ್ಮೆ ಬಟಲಿ ತಿರ್ಯಗ್ಗತಿಯೊಳ್ (ಯಶೋಚ. ೪-೩೩). [ ಸಂ. ]

**ತಿರ್ಯಗ್ಜಂತು** (ನಾ). ಪಶು, ಪಕ್ಷಿ ಮೊದಲಾದ ಪ್ರಾಣಿ. [ ಸಂ. ]

**ತಿರ್ಯಗ್ಜಾತಿ** (ನಾ). ಪಶು, ಪಕ್ಷಿ, ಪ್ರಾಣಿಗಳ ಜಾತಿ : ಪಕ್ಷಿ ಚತುಷ್ಪದ ಸರೀಸೃಪಾದಿ ತಿರ್ಯಗ್ಜಾತಿಗಳುಂ (ಆದಿಪು. ೧೬-೪೦ ವ) ; ತಿರ್ಯಗ್ಜಾತಿಯೋಳ್ ಚಾತುರ್ಯಮಿದೇಂ (ಕಾದಂಪೂ. ೫೯). [ ಸಂ. ]

**ತಿರ್ಯಗ್ಜೀವ** (ನಾ). = ತಿರ್ಯಗ್ಜಂತು : ತಿರ್ಯಗ್ಜೀವಂಗಳಪ್ಪ ಚೇತನಾಚೇತನವಸ್ತುಗಳೆಲ್ಲಂ ನಪುಂಸಕಮೆ (ಶಮದ. ೬. ೯೦ ಪ್ರಯೋ). [ ಸಂ. ]

**ತಿರ್ಯಗ್ಡೀನ** (ನಾ). ಅಡ್ಡವಾಗಿ ಹಾರುವುದು ; ಓರೆಯಾಗಿ ಹಾರಾಡುವುದು : ಉಡ್ಡೀನ ಸಂಡೀನ ತಿರ್ಯಗ್ಡೀನೋಡ್ಡೀನಾವಡೀನ ಪ್ರಕೃತಿ ಗರುಡನೇಂ ವಿಸ್ಮಯಂ ಸೌಭವೇಗಂ (ಜಗವಿ. ೧೮-೯೪). [ ಸಂ. ]

**ತಿರ್ಯಗ್ಯೋನಿ** (ನಾ). ಪ್ರಾಣಿಜನ್ಮವನ್ನು ಹೊಂದಿರುವುದು : ಶ್ಲೇಷ್ಮಕರ್ಮದಿಂ ಭೀಕರತೆವೆತ್ತುದಾ ವಿಕೃತ ತಿರ್ಯಗ್ಯೋನಿ (ಶ್ರೀರಾಮಾ.೨೭೪-೪೦). [ ಸಂ. ]

**ತಿರ್ಯಗ್ಲೋಕ** (ನಾ). ಭೂಲೋಕ : ಅಧೋಲೋಕ ತಿರ್ಯಗ್ಲೋಕಂಗಳರ್ದ ಸ್ವರೂಪಮುಂ ಪ್ರಮಾಣಮುಮನೋದಿ (ವಡ್ಡಾರಾ. ೨೮-೧೧) ; ಆ ಸಂಖ್ಯೆಯೊಳಾತ್ತ ತ್ಪರ್ಯಂಗೆಯ್ವನ್ನವೆಂಬಗ್ಗಳಿಕೆಯಿನೆಸೆದತ್ತೇಕರಜ್ಜು ಪ್ರಮಾಣಂ ತಿರ್ಯಗ್ಲೋಕಂ ಸ್ವಯಂಭೂರಮಣ ಜಳಧಿಪರ್ಯಂತಮುಂ ತಾಗುವನ್ನಂ (ಆದಿಪು. ೧-೪೮) ; ನಾಡೆ ಸೊಗಯಿಸುವುದು ತಿರ್ಯಗ್ಲೋಕಮೇಕರಜ್ಜು ವಿಶಾಲಂ (ಚಂದ್ರಪು. ೦-೬೦). [ ಸಂ. ]

**ತಿರ್ಯಗ್ವಣಿಜ್ಯೆ** (ನಾ). ೧. ಪ್ರಾಣಿಗಳ ಮಾರಾಟ. ೨. [ಜೈನ] ನಾಲ್ಕು ರೀತಿಯ ಪಾಪೋಪದೇಶಗಳಲ್ಲಿ ಒಂದು ; ಪ್ರಾಣಿಗಳನ್ನು ಕೊಂಡು ಲಾಭಕ್ಕೆ ಮಾರೆಂದು ಸಲಹೆ ಮಾಡುವುದು : ಗೋಮಹಿಷ್ಯಾದಿಗಳಂ ಇಲ್ಲಿ ಕೊಂಡು ಪೆಱವೂರಿಂಗೆ ಮಾಱಿದೊಡೆ ಪಿರಿದರ್ಥಲಾಭಮಕ್ಕುಮೆಂದು ಉಪದೇಶಂಗೆಯ್ವುದು ತಿರ್ಯಗ್ವಣಿಜ್ಯೆ (ತತ್ತ್ವಪ್ರ. ೨೭೭). [ ಸಂ. ತಿರ್ಯಗ್ವಣಿಜ್ಯಾ ]

**ತಿರ್ಯಗ್ವರ್ತಿತ** (ಗು). ಅಡ್ಡಲಾಗಿ ಹೋದ ; ಓರೆಯಾಗಿ ಹೋದ : ಮನವನೊಲಿಸೆ ತಿರ್ಯಗ್ವರ್ತಿತಸ್ಮೇರತಾರಂ ಜನಪತಿಸುತನಾಗಳ್ ಕಾಂತೆಯಂ ನೋಡಿದಂ (ಚಂದ್ರಪು. ೬-೭೫). [ ಸಂ. ]

**ತಿರ್ಯಗ್ವಳಿತ** (ಗು). ಪಕ್ಕಕ್ಕೆ ಅಥವಾ ಅಡ್ಡವಾಗಿ ಬಾಗಿಸಿದ : ಶ್ರೀಕಮಳಲೋಚನಂ ... ತಿರ್ಯಗ್ವಳಿತ ವ್ಯಾಕುಂಚಿತಕಂಠನೂದುತ್ತಿರ್ದಂ ಕೊಟಿಲಂ (ಜಗವಿ. ೫-೧). [ ಸಂ. ತಿರ್ಯಗ್ವಲಿತ ]

**ತಿರ್ಯಙ್ಮುಖ** (ನಾ). [ನಾಟ್ಯ] ದೇಶೀಯಂ ಭೌಮಚಾರಿಗಳಲ್ಲಿ ಒಂದು; "ವರ್ಧಮಾನಸ್ಥಾನಕದಲ್ಲಿ ನಿಂತುಕೊಂಡು ಬಲಕ್ಕೂ ಎಡಕ್ಕೂ ದಂತ್ರತಕ್ಕನುಗುಣವಾಗಿ ಜಾಗ್ರತೆ ಚಲಿಸುವುದು" (ಲಾಸ್ಯರಂ. ೩.೨೦ ಗದ್ಯಾನುವಾದ): ಎಸೆವ ರಥಚಕ್ರವೊಳ್ಪಿಂ ಮಿಸುಪ ಪರಾವೃತ್ತತಲಮುದುಂ ನೂಪುರಮುಂ ಸಸಿಮುಖ ತಿರ್ಯಙ್ಮುಖಮುಂ ಪಸರಿಸುವ ಮರಾಳಮೆಯ್ದೆ ಕರಿಹಸ್ತಾಖ್ಯಂ (ಲಾಸ್ಯರಂ. ೬-೮). [ ಸಂ. ]

**ತಿರ್ಯಾಹಿತ** 'ತಿರಾಯಂತ' ನೋ.

**ತಿರ್ರನೆ** 'ತಿಱ್ಱನೆ' ನೋ.

**ತಿಲ, ತಿಳ** (ನಾ). ೧. ಎಳ್ಳಿನ ಕಾಳು ; ಎಳ್ಳು : "ತಿಲಮೆನಲ್ಕೆಳ್ಳು" (ಮಂಗರಾ. ೧೧೦-೫) ; ತಿಲಮುಗಸೆ ವಿಳಂಗಂ ಸಿಂಧು ಲವಣಮಿವನರೆದು (ಲೋಕೋಪ. ೬-೩೨); ಶಿಲೆಯ ಮಱೆಯ ಹೇಮದಂತೆ ತಿಲದ ಮಱೆಯ ತೈಲದಂತೆ (ಮಹಾದೇ.ಬ. ೯-೨) ; ನರಕಪಾಲದ ಪಾತ್ರೆಗಳ ತಿಲದೊರಳೆಗಳ ಕೇಶೌಘ ದರ್ಭಾಂಕುರದಲಾಹವಯಜ್ಞದೀಕ್ಷಿತನಹೆನು ತಾನೆಂದ (ಕುವ್ಯಾಉ. ೧೦-೧೯). ೨. ಉದ್ದಳತೆಯ ಒಂದು ಪ್ರಮಾಣ ; ಎಂಟು ಕೂದಲಿನ ತುದಿಯಷ್ಟು ಅಳತೆ (?): "ಕರಿಯೆಂಟು ಕೂದಲ ಮೊನೆಯು ಕರಿ (ಕೂದಲ್)ಯ ಮೊನೆಗೆ ನೋಡೆ ತಿಲವೊಂದಕ್ಕುಂ" (ವ್ಯವಹಾ.ಅನುಬಂಧ ೧, ೭-೨) : ಮೂಱು ತಿಲಕೊಂದು ಯವೆಯೆನಿಪಂದಾ ಯವೆ ಮೂಱು ಸೇರಿಸಲದಂಗುಲವ ನಾಲ್ಕು ಕೂಡಲು ಮುಷ್ಟಿ (ಭಾಸ್ಕರ. ೫೨-೯). ತಿಳ : ೧. "ತಿಲಂ = ತಿಳಂ" (ಶಮದ. ೧೬ ಪ್ರಯೋ): ಫಳಪಾಕವಿರಾಮಂಗಳಪ್ಪ ... ತಿಳಾ [ ಪಾಠಾಂ. ಲಾ ] ತಸೀಕುಸುಂಭಾದಿ ದೀಪ್ಯೌಷಧಿಗಳುಂ (ಆದಿಪು. ೮-೬೧ ವ) ; ತಿಳಮುಂ ಪರಿಕಿಸಿ ವಾಸಿಸು (ಲೋಕೋಪ. ೭-೨೨) ; ಉರ್ವೀವಲಯಕ್ಕಾಶ್ಚರ್ಯಮಪ್ಪಂದದಿನನುದಿನಮೆಂದಾಗಿಯುಂ ಮುನ್ನಿನಂತಾ ತಿಳಮಾ ಕಾಯೊಳ್ ಕ್ರಮಂದಪ್ಪದೆ ನೆಲಸುವವೊಲ್ ದುರ್ಲಭಂ ಮರ್ತ್ಯಜನ್ಮಂ (ಸುಕುಮಾ. ೫-೩೪).

**ತಿಲಕಾಷ್ಠಮಹಿಷಬಂಧನ** = ೧. ಎಳ್ಳಿನ ಕೊದಳಿಗಳನ್ನು ಎಮ್ಮೆ ಕಟ್ಟುವ ಹಗ್ಗದಿಂದ ಕಟ್ಟಿದ ಹೊರೆ. ೨. ಹುರುಳಿಲ್ಲದ ಆಡಂಬರ. **ತಿಲಮಾತ್ರ** = ಎಳ್ಳುಕಾಳಿನಷ್ಟು ; ತೀರಸ್ವಲ್ಪ : ತಿಲಮಾತ್ರವೊ ಎಂಬಾ ಪ್ರಿಯಗಾತ್ರದಿ (ಕೋಗಿಲೆ. ೫೭-೫) ; ಕೆಲವು ಪಾಶ್ಚಾತ್ಯ ರಾಷ್ಟ್ರಗಳು ಅದಕ್ಕೆ ತಿಲಮಾತ್ರವೂ ಗೌರವವನ್ನು ಕೊಡುತ್ತಿರಲಿಲ್ಲ (ಜಗಸಂ. ೩೩). **ತಿಲಾಂಶ** = ಎಳ್ಳಿನಷ್ಟು ; ಲೇಶಮಾತ್ರ ; ಅಲ್ಪಪ್ರಮಾಣ : ರಿಪುಕೌಂತೇಯರಿಗೆ ಕೊಡಬೇಡವಿನ್ನು ತಿಲಾಂಶ ಭೂತಳವ (ಕುವ್ಯಾಅ. ೨೧-೬೫) ; ಹೆಂಡದಿಂದ ಹೆಣಕ್ಕೆ ತಿಲಾಂಶವೂ ಉದ್ರೇಕವಾಗುವುದಿಲ್ಲ (ಜೀವಾತ್ಮ. ೬೦). **ತಿಲಾರ್ಪಣೆ ಮಾಡು** = ತಿಲಾಂಜಲಿಕೊಡು ; ಕೈಬಿಡು : ತಂದೆಯಂತೂ ಸಾಂಸಾರಿಕ ಜೀವನಕ್ಕೆ ಎಂದೋ ತಿಲಾರ್ಪಣೆಮಾಡಿದ್ದರು (ಹೊಸಕ್ಷಿ. ೧೯೬). [ ಸಂ. ]

**ತಿಲಂಗ್** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ವಿರಾಗವು ರಕ್ತದ ಒತ್ತಡವನ್ನೂ ತಿಲಂಗ್, ಬಿಲಾವಲ್, ಮುಲ್ತಾನಿ, ರಾಮಕಲಿ ರಾಗಗಳು ಕ್ಷಯರೋಗವನ್ನೂ ... ಗುಣಪಡಿಸುವುವೆಂಬ ಭಾವನೆ ಉತ್ತರ ಭಾರತದಲ್ಲಿದೆ (ಭಾರದ. ೫೪೪). [ ←ಮರಾ. ತಿಲಂಗ್ ]

**ತಿಲಕ,** ತಿಳಕ (ನಾ). ೧. ಸುಂದರವಾದ ಹೂವುಗಳನ್ನು ಬಿಡುವ ಒಂದು ಬಗೆಯ ಮರ : "ತಿಲಕಂ ಕ್ಷುರಕಾಖ್ಯಂ" (ವಸ್ತುಕೋ. ೩೩-೨); ಕಮಲತಿಲಕ ಚಂಪಕ ಪಾಟಲಿ ... ಮಲ್ಲಿಕಾದ್ಯನೇಕ ಸುರಭಿಕುಸುಮಂಗಳಂ ಸಜ್ಜುಕಮಪ್ಪವಂ ಪುಟ್ಟಿಯೊಳ್ ತೀವಿಕೊಂಡು (ಪಂಚತಂ. ೧೧೭-೫); ತಿಲಕ ತರುವಿಂ ನಿಶಾಚರಬಲವಂ ಬಿಡೆ ಪೊಯ್ದು ಕೊಂದು (ಪಂರಾಮಾ.೧೧-೧೨೧); ಪೂತುದು ಪಕ್ಷ್ಮಳೇಕ್ಷಣಾಲೋಕದಿನುದ್ಯಾನದ್ರುಮೈಕತಿಲಕಂ ತಿಲಕಂ (ಜಗವಿ. ೧೪-೩೧); ತಿಲಕಂ ಕಾಣಲೊಡಂ ಭೂತಿಲಕನನೊಲವಿಂದಮಲರ್ದುದಂತುಟೆ ವಸುಧಾತಲದೊಳ್ ಸ್ವಪಕ್ಷದರ್ಶನ ವಿಲಾಸಮೊದವಿಸದೆ ಮುದಮನಾರ್ಗಂ ಮನದೊಳ್ (ಚಂದ್ರಪ್ರ. ೨-೯೩); ತಿಲಕವಶೋಕೆ ಚಂಪಕ ಪೂಗ ಪುನ್ನಾಗ ನೆಲ್ಲಿ ನೇಱಿಲು ... ಕದಳಿಗಳಲ್ಲಿ ನೋಡಿವೆ (ತೊರರಾ. ೩-೧-೨೯); ಸಾಳ ರಸಾಳ ತಾಳ ತಿಲಕಾಮಳ ಪಿಪ್ಪಲ (ಯಾದವ. ೦-೩೫). ೨. ಮೈ ಮೇಲಿನ ಚಿಕ್ಕ ಮಚ್ಚೆ ; ಮತ್ತಿ : ವಾಮದೊಳತೊಡೆಯಲ್ಲಿ ಅತಿತಿಲಕ ವಿಹುದೆಂದು ನುಡಿಯಲು (ಪ್ರಾಥರಾ. ೮-೬೪). ೩. ಹಣೆಯ ಮೇಲೆ ಇಟ್ಟುಕೊಳ್ಳುವ ಕಸ್ತೂರಿ, ಕುಂಕುಮ ಮೊದಲಾದುವುಗಳ ಬೊಟ್ಟು : "ತಿಂಗಳಿಗೆಯೆಂದು ತಿಲಕಂ" (ಕಶಸಾ. ೬೩-೪೦೨); ತಿಲಕಾಕಾರ ದಿನಿರ್ಕೆ ನಿನ್ನ ನೊಸಲೊಳ್ ಸಾಮ್ರಾಜ್ಯಪಟ್ಟಂ (ಪಂರಾಮಾ. ೬-೮೦); ಮನ ವೊಲಿದುಡಿಸಿ ತೊಡಿಸಿ ತಿಲಕಂಗಳನನುಗ್ಗೈದಾದರವೆರಸಿ ... ಎಬಿಗಿವುದು (ಹರಿಬ. ೮-೧೦). ೪. ಶ್ರೇಷ್ಠವಾದುದು ; ಭೂಷಣವಾದುದು : ಪೇಟ್ಟಂ ಮನವೊಸೆದು ಪುರಾಣತಿಲಕಮಂ ಕವಿತಿಲಕಂ (ಅಜಿಪು. ೦-೭೯). ೫. ಶ್ರೇಷ್ಠನಾದ ವ್ಯಕ್ತಿ ; ಅಲಂಕಾರಪ್ರಾಯನಾದವನು : ಕುಲಕ್ಕೆ ತಿಲಕ ನಮ್ಮ ಮಾದಾರ ಚನ್ನಯ್ಯ ನಿಮ್ಮಿಂದಧಿಕ (ಬಸವ. ೭೩೦); ಎಮ್ಮಾರಾಧ್ಯ ವರ ಮುನಿತಿಲಕ ವೇದವ್ಯಾಸ ದೇವರು (ಕುವ್ಯಾಗ. ೪-೪). ೬. ಒಂದು ಬಗೆಯ ಕುದುರೆ ; ಹಣೆ ಬೆಳ್ಳಗಿರುವ ಕುದುರೆ : "ತುರುಗವರ್ಣಂ ಬಿಳಿಯದಾಗೆ ಕರ್ಕನೆನಿಕ್ಕು ... ಭಾಳ ಬೆಳ್ಪಾಗೆ ತಿಲಕಂ" (ಮಂಗರಾ. ೮೨-೧೫); ಅಳಿರಿಯೆಲೆಯಂತೆ ನೊಸಲೊಳ್ ತೊಳಗುವ ಬೆಳ್ಪಸೆದು ತೋರ್ಪೊಡಂತದು ತಿಲಕಂ (ಅಶ್ವಶಾ. ೨-೧೨). ೭. ಹೊಟ್ಟೆಯಲ್ಲಿರುವ ನೀರಿನ ಚೀಲ : "ತಿಲಕಂ, ಕ್ಲೋಮ — ಹೊಟ್ಟೆಯ ಬಲದ ಅಳ್ಳೆಯೊಳಗಿರುವ ನೀರು ಚೀಲದ ಹೆಸರುಗಳು" (ಸಿದ್ಧಾಂತಿ. ೧೬೩). ೮. =ತಿಲಕಿತ ೩. 'ತಿಳಕೆ' ಪರಾ. ೯. [ಛಂದ] ಒಂದು ವೃತ್ತದ ಹೆಸರು : ವ್ಯೋಮಂ ಹರಿಯಿಂದೇ ಮಾರಹರಂ ತಾವಾಗೆ ಸತೀನಾಮಂ ತಿಲಕಂ (ಛಂದೋಂಬು. ೨-೭೦). **ತಿಳಕ** : ೧. "ನಂದ್ಯಾವರ್ತಃ ... ತಿಳಕಃ, ಪದ್ಮಃ, ಸ್ಯಂದನಃ, ಮೋಕ್ಷಃ— ಎಂಬಿವು ಮರಂಗಳುಮಪ್ಪುವು" (ಹಲಾಯು. ೧೩೫-೨೬); ತಿಳಕಾಮ್ರಾತ (ಪ)ಕ ಬೆಲ್ಲ (ಪ)ವತ್ತ ಸಿರಿಸಾಂಕೋಲಾಖ್ಯ ಭಲ್ಲಾತಕಾಮಳಕಾದ್ಯಂಘ್ರಿಪ ಮೂಳಮಂ ಬಳಸಿ ಪುತ್ತಾದಂದು (ಲೋಕೋಪ. ೫-೨೭); ತಿಳಕಂ ತಾಳಂ ತಮಾಳಂ ... ವನದೊಳೊದವಿ ಚೆಲ್ವಾದುದೆತ್ತಂ (ಶಾಂತೀಶ್ವ. ೦೫-೯೯); ತಿಳಕ ಬಕುಳಾದಿ ತರುನಿವಹದಾರವೆಗಳೊಳ್ ... ಪೂಗೊಯ್ಯಲೆಂದಬಲೆಯರ್ನೆರೆದು (ರಾಜಶೇ. ೧೦-೫೨ ರಗಳೆ). ೩. "ತಿಳಕಂ ... ಲಲಾಟಿಕಾ— ಈ ೬ ಬೊಟ್ಟು" (ಹಲಾಯು. ೮೯-೩೮೭); ತಿಳಕಮದಿಲ್ಲದ ಬೆಳ್ದಿಂಗಳೊಳಗೆ ನಿಂದಿರದಿರಬಲೆ (ಗಿರಿಕ. ೬-೧೨೬); ತಿಳಕಮನಿಟ್ಟು ... ಮಂಜುಳ ಕಟಸೂತ್ರಮಂ ತುಡಿಸಿ ಕೆಯ್ಗೆಯ್ದು ಕಣ್ಗೆಸೆದಂ ಜಿನಾರ್ಭಕಂ (ಪುಷ್ಪಪು. ೧೧-೬೩). ೧, ೩ : ಮತ್ತಮದು ... ಕಾಮಿನೀಜನದಂತೆ ಮೃಗಮದ ಪರಿಮಳಾಮೋದಿತಮುಂ ಕೃಷ್ಣಾಗರು ತಿಳಕ ಭೂಷಿತಮುಂ ವಿರಹಿಜನದಂತೆ ವಿವಿಧಪಲ್ಲವಾನಿಲವೀಜ್ಯಮಾನಮುಂ ಮದನಾಕ್ರಾಂತಮುಂ (ಕಾದಂಪೂ. ೦೦೦); ತಿಳಕಂ ವರವನಲಕ್ಷ್ಮೀತಿಳಕಂ ದತ್ತ ಪ್ರಿಯಾಸಮನ್ವಿತ ಜನ ಸತ್ಪುಳಕಂ (ವರ್ಧಪು. ೨-೮). ೫. ತಿಳಕಂ ವಶ್ಯಮೆ ಜಡಜನವೊಳಗೆ ಱಿಯದು (ಆದಿಪು. ೧೧-೬೦); ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ... ಅಭಿವೃದ್ಧಿಗೆ ಸಲುತ್ತಮಿರೆ (ಎಇ. XX, ೬-೩; 1012).

ತಿಲಕಪ್ರಾಯ = ತಿಲಕದಂತೆ ಇರುವವನು ; ಭೂಷಣವಾದವನು : ಭಾರತಜನನಿಗೆ ತಿಲಕಪ್ರಾಯನೇ ನಿರಂತರ ಹಿತ ಗಣಿಸಿದನೇ (ಕರ್ನಾಕ.೩೯೦).

[ಸಂ.]

**ತಿಲಕಗುದುರೆ** (ನಾ). = ತಿಲಕ ೬ : ಹೊಳೆವ ಹೇಮದ ರಥಕೆ ಹೂಡಿದ ತಿಲಕಗುದುರೆಯ ನೆಗಹಿ ... ದ್ರೋಣ ಹೊಕ್ಕನು ಕಾಳೆಗದ ಕಳನ (ಕುವ್ಯಾದ್ರೋ. ೨-೨೦). [ತಿಲಕ + ಕುದುರೆ]

**ತಿಲಕರೇಖೆ** (ನಾ). ಮಚ್ಚೆಯ ಗೆರೆ : ಹೊಕ್ಕಳ ಕೆಳಗೆ ತಿಲಕರೇಖೆ ಆಗಲಿ ಬಿಂದುವಾಗಲಿ ಮತ್ತಿ ಆಗಲಿಯಿರಲು ಶುಭ (ಸಾಮುಲ. ೧೪೧-೬).

[ತಿಲಕ + ರೇಖೆ]

**ತಿಲಕಾಲಕ** (ನಾ). ಶರೀರದಲ್ಲಿಯ ಕಪ್ಪುಮಚ್ಚೆ,—ಚುಕ್ಕೆ : ಹುಟ್ಟು ಮಚ್ಚೆ : ಸಂಗಾತಿ : "ಜಟುಲಃ, ಕಾಲಕಃ, ಪಿಪ್ಲುಃ, ತಿಲಕಃ, ತಿಲಕಾಲಕಃ— ೫ ತಿಲಕಾಕಾರಗಳಾದ ಕರೀಮಚ್ಚೆಗಳ ಹೆಸರುಗಳು, ಸಂಗೋತೀಮಚ್ಚೆ, ಹುಟ್ಟುಮಚ್ಚೆ" (ಸಿದ್ಧಾಂತಿ. ೦೩೯). [ತಿಲ + ಕಾಲಕ]

**ತಿಲಕಿತ** (ಗು). ೧. ತಿಲಕವುಳ್ಳ. ೨. ತಿಲಕಪ್ರಾಯನಾದ : ತಿಲಕಿತ ಭುವನಂಗೆನ್ನಯ ಬೆಳಗಂ ಸಲೆ ಮಾಟಿಪ್ಪೆನೆಂದು. .. ಮಂಗಳ ಧವಳಚ್ಛತ್ರಮೆಸೆದು ತೋಱಿದತ್ತು (ಕಾದಂಬ. ೪೨೭). (ನಾ). ೩. ಆನೆಯ ಮಂದದ ಸಪ್ತಾವಸ್ಥೆಗಳಲ್ಲಿ ಒಂದು: ಸಂಚಿತ ತಿಲಕಿತ ಅರ್ಧಕಪೋಳಿತ ಅತಿವರ್ತಿತ ಅಧೋನಿಬಂಧಿನಿ ಕ್ರೋಧಿನಿ ಗಂಧಚಾರಿಣಿಯೆಂಬ ಸಪ್ತಾವಸ್ಥೆಯ ಮದದಿಂ ... ಬರ್ಪ ಮತ್ತಗಜಮಂ ಭೋಂಕನೆ ಕಂಡು (ಸಂಬಿರ. ೨-೨೦). [ಸಂ.]

**ತಿಲಕಿಸು, ತಿಳಕಿಸು** (ಕ್ರಿ). ೧. (ತಿಲಕವಿಡುವಂತೆ) ಗುರುತಿಸು; ರೇಖಿಸು : ಲಲನಾಜನಕ್ಕೆ ತಾನೀ ಲಲನೆ ದಿಟಂ ತಿಲಕಮೆಂದು ವರ್ಣಿಸುತೊಲವಿಂ ತಿಲಕಿಸುವ ತೆಱದಿನೊರ್ವಳ್ ತಿಲಕಮನಿಟ್ಟಳ್ ತನೂದರಿಯ ಪೆಱೆನೊಸಲೊಳ್ (ಶಾಂತೀಶ್ವ. ೪-೨೪೨). ೨. ತಿಲಕದಂತೆ ಕಪ್ಪಾದ ಮದಜಲವು ಹೊಮ್ಮು ; ಮದವೇರು : ತಿಲಕಿಸೆ ಮದನದ್ವಿರದಂ ತಿಲಕಮನೀ ಕನ್ನೆಗಿಡುವೆನೆನುತುಮದೊರ್ವಳ್ ತಿಲಕಮನಿಡೆ (ಜಗವಿ. ೧೦-೧೩೬). **ತಿಳಕಿಸು** : ೧. ಗೌತಮ ಸುಧರ್ಮ ಜಂಬೂಗಣಭೃತ್ತಿಳಕರ ಚಳನನಖದ್ಯುತಿ ತಿಳಕಿಸುಗೋರಂತೆ ಭವ್ಯಭಾಳಸ್ಥಳಮಂ (ಧರ್ಮನಾ. ೦-೧೭). ೨. ಇಲ್ಲಿಂ ಮುನ್ನಮೆ ತಿಳಕಿಸದಿರ್ಕುಮೆ ಮನೋಜ ವಿಜಯ ಗಜೇಂದ್ರಂ (ಮಲ್ಲಿಪು. ೫-೧೭). [ತಿಲಕ + – ಇಸು₃]

**ತಿಲಕುಸುಮ** (ನಾ). ಎಳ್ಳಿನ ಹೂವು : ತಿಲಕುಸುಮಘ್ರಾಣಿಯರ್ಸಂಪಗೆಯ ನನೆಗಳಂ ಜಲಜಾತಗಂಧಿಯರ್ಮಾಲತಿಯ ನನೆಗಳಂ ... ತಿಱಿದರಿನಿ ಗಂಪಮರ್ದ ಸಕಲ ಪುಷ್ಪಂಗಳಂ (ಉದ್ಭಟ. ೯-೫೨). [ತಿಲ + ಕುಸುಮ]

**ತಿಲಕುಸುಮನಾಸಿಕ** (ನಾ). ಎಳ್ಳಿನ ಹೂವಿನಂತಿರುವ ಮೂಗು : ತಿಲಕುಸುಮನಾಸಿಕದ ತೆಳುರ್ವಸುರು ಸುಳಿನಾಭಿ ಕಲಶಕುಚದಿಂದಲೆಸೆವಾ ನಳಿನಸಾಯಕನರಸಿಯಳ ಚಲುವ ಬಣ್ಣಿಪರು (ನವಮೋ. ೯-೪).

[ತಿಲಕುಸುಮ + ನಾಸಿಕ]

**ತಿಲಕೋಪಶೋಭಿ** (ಗು). ೧. ತಿಲಕದ ಮರಗಳಿಂದ ಶೋಭಿಸುವ. ೨. ಹಣೆಬೊಟ್ಟಿನಿಂದ ಶೋಭಿಸುವ. ೧, ೨ : ಅಲಕಾಳಿರುಚಿರಮಾವನವಲಯಮುಂ ತಿಲಕೋಪಶೋಭಿ ಸರದಚ್ಛವಿಮುಂಜುಲವಿಂದುಕಾಂತರುಚಿರೋಜ್ಜ್ವಲಾಧರಸ್ಥಾನಮಾಸ್ಯಮೆನೆ ನೆಲಸಿರಿಯಾ (ರಾಜಶೇ. ೨-೭೯).

[ಸಂ. ತಿಲಕೋಪಶೋಭಿನ್]

**ತಿಲಗಾತಕ** (ನಾ). ಎಣ್ಣೆ ತೆಗೆಯುವವನು ; ಗಾಣಿಗ : ಗಂದಿಗ ಬೋಗಾರ ತಿಲಗಾತಕ ನಾಯಿಂದರ ತಾಮ್ರಮರ್ದಕರ ಮುಂದೊಪ್ಪುತಿಹ ಮಲ್ಲ ಜಾಲಗಾಱರ ಗೃಹ ಚೆಂದದಿಂದೊಪ್ಪಿದುವು (ಕಂಸವಿ. ೬-೫೪).

[ <ಸಂ. ತಿಲಘಾತಕ ]

**ತಿಲಘಾತ** (ನಾ). = ತಿಲಗಾತಕ (?) : ರಾಮನಿಂತೀಶಪೂಜಾತಿಶಯಮುಮಂ ಮಾಡಿ ಬಳಿಕಯೋಧ್ಯೆಯ ಪೊಕ್ಕ ಭೂತಳದ ಗುಪ್ತಚರರಿಂದೋರ್ವ ತಿಲಘಾತ ವಾರ್ತೆಯಂ ಕೇಳ್ದು (ವೀಶ್ಮಪು. ೩-೧೧-೬೦). [ < ತಿಲಘಾತಕ ]

**ತಿಲಘಾತಕ** (ನಾ). = ತಿಲಗಾತಕ. [ ತಿಲ + ಘಾತಕ ]

**ತಿಲಜ, ತಿಳಜ** (ನಾ). ಎಳ್ಳಿನಿಂದ ತೆಗೆದ ಎಣ್ಣೆ ; ಎಳ್ಳೆಣ್ಣೆ : ತಿಲ [ ಪಾಠಾಂ. ಳ ] ಜಾಭ್ಯಂಗಮನಳ್ಕೞಿಂ ರಚಿಸಿ ಮಂದೋಷ್ಣಾಂಬುವಿಂ ಮಜ್ಜನಂಗೊಳಿಸುತ್ತ (ವೃಷವಿ. ೯-೧೧೧). ತಿಳಜ : ಗುರುಮಧ್ಯಪಲ್ಲ ನಿಟಲಂ ರೋಮಾನ್ವಿತಂ ಜಂಘೆಗಳ್ತಿಳಜಾಮೋದಮಿದಾಗೆ ಶಂಕಿನಿಯವಳ್ (ಮದಶಿ. ೨-೨). [ ಸಂ. ]

**ತಿಲತಂಡುಲಕ** (ನಾ). ೧. ಎಳ್ಳು ಮತ್ತು ಅಕ್ಕಿ ಕೂಡಿದಂತೆ, ಬೆರೆತ ಪದಾರ್ಥಗಳು ಬೇರೆಬೇರೆಯಾಗಿ ಕಾಣುವಿಕೆ. ೨. [ ಕಾಮಂಶಾ ] ಸ್ಪೃಷ್ಟಕ, ವಿದ್ಧಕ, ಉದ್‌ಘೃಷ್ಟಕ, ಪೀಡಿತಕ, ಲತಾವೇಷ್ಟಿತಕ, ವೃಕ್ಷಾಧಿರೂಢಕ, ತಿಲತಂಡುಲಕ, ಕ್ಷೀರನೀರಕ, ಊರೂಪಗೂಹನ, ಜಘನೋಪಗೂಹನ, ಸ್ತನಾಲಿಂಗನ ಮತ್ತು ಲಲಾಟಿಕ ಎಂಬ ಆಲಿಂಗನದ ಹನ್ನೆರಡು ಪ್ರಕಾರಗಳಲ್ಲಿ ಒಂದು ; ತೊಡೆ ಮತ್ತು ತೋಳುಗಳು ಕೂಡಿದ್ದರೂ ತಿಲ ಹಾಗೂ ತಂಡುಲದಂತೆ ಬೇರೆ ಬೇರೆಯಾಗಿರುವುದು : ಕಟಿಯೊಳಿಟ್ಟಿರ್ದ ಕರದ್ವಯಮಂ ತೆಗೆದೊಡ ನೋರೊರ್ಮೆಯಿಡುತ್ತಿರೆಯದುವೆ ತಳ್ಕೆ ತಿಲತಂಡುಲಕಂ (ಮನ್ಮವಿ. ೧೧-೦೩). [ ಸಂ. ]

**ತಿಲತಂಡುಲಿತ** (ನಾ). = ತಿಲತಂಡುಲಕ : ತಿಲತಂಡುಲಿತ ಪಾಲು ಜಲ ವಲ್ಲಿವೇಷ್ಟಾದಿಲಲಿತಾಲಿಂಗನ ಭ್ರಾಂತಾಂತ್ವರಿತ (ಭ್ರರಸೂ. ೨೯೬). [ ಸಂ. ]

**ತಿಲತೈಲ, ತಿಳತೈಳ** (ನಾ). ಎಳ್ಳೆಣ್ಣೆ: ತಿಲತೈಲದೊಳದ ಮಂದಾನಲನಿಂದ ಟ್ಟಟಿಪಿ (ಲೋಕೋಪ. ೭-೨೦). ತಿಳತೈಳ : ತಿಳತೈಳದೊಳುತ್ತರಣೆಯ ಫಳಮಂ ... ಅಟ್ಟು(ಲೋಕೋಪ. ೯-೫೯). [ ತಿಲ + ತೈಲ ]

**ತಿಲಪರ್ಣಿ** (ನಾ). ಕೆಂಪು ಗಂಧದ ಮರ ; ರಕ್ತಚಂದನ ; ಕೆಂಪುಚಂದನ : "ತಿಲಪರ್ಣೀ, ಪತ್ರಾಂಗಂ, ರಂಜನಃ, ರಕ್ತಚಂದನಂ, ಕುಚಂದನಂ-೫ ಕೆಂಪುಬಣ್ಣದ ಚಂದನದ ವೃಕ್ಷದ ಹೆಸರುಗಳು" (ಸಿದ್ಧಾಂತಿ. ೧೮೧).
[ ಸಂ. ತಿಲಪರ್ಣೀ ]

**ತಿಲಪಿಂಜ** (ನಾ). ಗೊಡ್ಡೆಳ್ಳು ; ಜಳ್ಳೆಳ್ಳು : "ತಿಲಪಿಂಜಃ , ತಿಲಪೇಜಃ-ಈ ೨ ನ್ನು ನಿಷ್ಫಲೇತಿಲೇ-ಜಳ್ಳು ಎಳ್ಳು ... ಕಾಡೆಳ್ಳು ಎಂಬುವರು" (ಸಿದ್ಧಾಂತಿ. ೨೩೯). [ ಸಂ. ]

**ತಿಲಪುಷ್ಪ** (ನಾ). = ತಿಲಕುಸುಮ: ಸುಲಿಪಲ್ಕೆಂಬವಳಂಬೊಲೊಪ್ಪುವಧರಂ ಭೃಂಗಾಳಕಂ ನುಣ್ಣೊಸಲ್ತಿಲಪುಷ್ಪೋಪಮನಾಸಿಕಂ ನಗೆಮೊಗಂ (ರಾಜಶೇ. ೩-೧೭). [ ತಿಲ + ಪುಷ್ಪ ]

**ತಿಲಪೇಜ** (ನಾ). = ತಿಲಪಿಂಜ : "ತಿಲಪಿಂಜಃ, ತಿಲಪೇಜಃ-ಈ ೨ನ್ನು ನಿಷ್ಫಲೇ ತಿಲೇ-ಜಳ್ಳುಎಳ್ಳು ... ಕಾಡೆಳ್ಳು ಎಂಬುವರು" (ಸಿದ್ಧಾಂತಿ. ೨೩೯).
[ ಸಂ. ]

**ತಿಲಬಲಿ** (ನಾ). ಎಳ್ಳುಸಹಿತವಾದ ಬಲಿ: ಗುರುಗೆ ತನ್ನ ಜಗೆ ತಿಲಬಲಿಯ ನೀಯಲುಂ...ಗರಿ ಮಿಂಚೆ ರೆಂಕೆಗೆದರಿದನಂತರಿಕ್ಷಕ್ಕೆ (ಶ್ರೀ ಮಾ. ೩೯೩-೮೪೪).
[ ತಿಲ+ಬಲಿ$_3$ ]

**ತಿಲಮು** (ನಾ). ಒಬ್ಬಾತನ ಹೆಸರು (?) : ಬಾಣರಸದ ××× ಸೇನೆಯಂ ತಿಲಮುನಿಱಿಯೆ ದುಗಿಚೀರಕ್ಕನಟ್ಟಿ ಸತ್ತನ್ (ಎಕ. X, ಚಿಂತಾಮ. ೧೨೪-೪ ; ಸು. 890). [ ? ]

**ತಿಲಯಂತ್ರ** (ನಾ). ಎಣ್ಣೆ ತೆಗೆಯುವ ಯಂತ್ರ; ಗಾಣ : "ಗಾಣಃ -ತಿಲ ಯಂತ್ರಂ" (ಶಾಶಕ್ಕ. ೩೪); "ತಿಲಯಂತ್ರ-ಗಾಣ" (ಗಂಗಾಮ. ೧೫೩).
[ ತಿಲ + ಯಂತ್ರ ]

**ತಿಲಯಂತ್ರಪೇಷಣ** (ನಾ). ೧. ಎಣ್ಣೆ ತೆಗೆಯುವ ಗಾಣಕ್ಕೆ ಹಾಕಿ ಅರೆಯುವುದು. ೨. ಒಂದು ವಿಧವಾದ ನರಕ: ಮತ್ತಂ ತಿಲಯಂತ್ರ ಪೇಷಣಂ ... ಇಕ್ಷುಯಂತ್ರ ಸಮ್ಮರ್ದನವೆಂಬೆಯದು ಮಂತ್ರಿನರಕಂಗಳಿಂ ಸಹಿತಮಾಗಿ ತ್ರಿಕೋಣಪಾತವೆಂಬರಸುನರಕವಿಹುದು (ವಿವೇಕ. ೦೮೦).
[ ತಿಲಯಂತ್ರ + ಪೇಷಣ ]

**ತಿಲವಿಘಾತಕ** (ನಾ). = ತಿಲಗಾತಕ : ತಿಲವಿಘಾತಕ ಕಾಳಸಿಗ ತಂಬುಲಿಗ ಜಂಗಮ ಜೋಗಿಗಳ ಜಂಗುಳಿಗಗೇರಿಗಳೊಳಗೆ ರಘಾಡಿಸಿದನು ಶಿವಾಳಿಗಳ (ತೊರರಾ. ೫-೮-೫೩). [ ತಿಲ + ವಿಘಾತಕ ]

**ತಿಲವಿಷ್ಟ** (ನಾ). ಎಳ್ಳಿನ ಹಿಂಡಿ,-ಚರಟ : ತಿಲವಿಷ್ಟ, ಗಾಣದ ಹಿಂಡಿ ಳ ಪಡಿಯನ್ನು ಪುಡಿಮಾಡಿ ಶೋಧಿಸಿಕೊಂಡು ... ಸೇವಿಸೆ (ಸಕವೈ. ೨೩೫).
[ ತಿಲ + ವಿಷ್ಟ ]

**ತಿಲಸ್ಮಾತಿ** (ನಾ). ಜಾದೂವಿದ್ಯೆ ; ಇಂದ್ರಜಾಲ ; ಮಾಯಾವಿದ್ಯೆ: ನನ್ನ ದುರಾಶೆಯಿಂದ ನನ್ನ ಅಮೂಲ್ಯ ತಿಲಸ್ಮಾತಿ ಕಳೆಕೊಂಡೆ (ಮಾಂಗಲ್ಯ. ೫೦).
[ ← ಅರ. ತಿರಸ್ಮಾತ್ ; ಹಿಂ. ತಿಲಸ್ಮಾತೀ, ತಿಲಸ್ಮಾತ್, ತಿಲಿಸ್ಮಾತ್, ತಿಲಿಸ್ಮಾತೀ ]

**ತಿಲಾಂಜಲಿ** (ನಾ). ೧. ಎಳ್ಳುನೀರು ಬಿಡುವುದು ; ಪಿತೃಗಳಿಗೆ ತರ್ಪಣ ಕೊಡುವುದು. ೨. (ಅಲಂ) ಬಿಟ್ಟುಬಿಡುವುದು; ತ್ಯಾಗ : ನಮ್ಮ ಸಂಸ್ಕೃತಿಯು ತನ್ನೊಳಗಿನ ದಿವ್ಯನೂತನ ಸೃಜನಶಕ್ತಿಗೆ ತಿಲಾಂಜಲಿಯನ್ನಿತ್ತಿದ್ದುದು ಬೆಳಕಿಗೆ ಬರುತ್ತದೆ(ಕರ್ನಾಟ. ೫೪೮); ಕೆಲವು ದಿನಗಳ ಹಿಂದೆ ತನ್ನ ಮೇಲೆ ತಾನೇ ಹೊರಿಸಿಕೊಂಡಿದ್ದ ನೈತಿಕನಿರ್ಬಂಧಗಳಿಗೆ ತಿಲಾಂಜಲಿಯಿತ್ತನು (ಪುನರು. ೬೩); ಇಲ್ಲವಾದರೆ ಇಂದೇ ಈ ಅವ್ಯವಹಾರಕ್ಕೆ ತಿಲಾಂಜಲಿ (ರಕ್ತಧ್ವ. ೧೮೩).

**ತಿಲಾಂಜಲಿ ಕೊಡು** = ಮರೆತುಬಿಡು ; ಕೈಬಿಡು : ಅವರು ತಮ್ಮ ಆಕಾಂಕ್ಷೆಗೇ ತಿಲಾಂಜಲಿಕೊಟ್ಟುಬಿಟ್ಟರು(ರೂಢಿ). **ತಿಲಾಂಜಲಿ ಬಿಡು**=ತಿಲಾಂಜಲಿ ಕೊಡು : ಪೌರಸತ್ವಾತ್ಮಕತತ್ವಕ್ಕೆ ತಿಲಾಂಜಲಿ ಬಿಟ್ಟಂತೆಯೇ (ಶಿಕ್ಷದ. ೧೭೩). [ ತಿಲ + ಅಂಜಲಿ ]

**ತಿಲಾಂಬು** (ನಾ). = ತಿಲಾಂಜಲಿ ೧ : ಕುಂಬಿನಿಯೊಳೆಮ್ಮ ಕುಲದ ತಿಲಾಂಬುವ ಮುಂದಕಟ ಕುಡುವನಾವನೆನುತ್ತುಂ ನಾಂ ಬಿಡೆ ಪುತ್ರವಿಹೀನಂ ಕಂಬನಿದೊಳೆದುಳಿದ ಜಲವ ಪಿತೃಗಳ್ ಪೀರ್ವರ್ (ಶಾಕುಂತ. ೯೪-೧೫೬).
[ತಿಲ + ಅಂಬು$_3$]

**ತಿಲಾನ** (ನಾ). (?) : ಸಕತಿಯಿಂದೆ ತಿಲಾನವೆಂಬೀ ವಾಜದಿ ಭಕುತವತ್ಸಲ ತಾನೆ ಪೇಳ್ದ (ಕೃಷ್ಣಗೋ. ೫-೭೦). [ ? ]

**ತಿಲಾಸ್ಥಿ** (ನಾ). ಎಳ್ಳಿನ ಆಕಾರದಲ್ಲಿರುವ ಎಲುಬು ; ಸಣ್ಣ ಎಲುಬು : "ಎಳ್ಳಿನಾಕಾರದ ಎಲುಬು ; ತಿಲಾಸ್ಥಿ" (Sesamoid. ಇಂಕನಿ).
[ತಿಲ + ಅಸ್ಥಿ]

**ತಿಲಿಗರುದಲಿ ?** (ನಾ). (?) : ಆ ಮಹಾಜನಂಗಳ ಸಂನಿಧಾನದಲು ಆ ಊರ ಸನಗಸರ ××× ಬಿಟ್ಟ ಬಳಿಸಿದ್ದು ಗ ೧ ತಿಲಿಗರುದಲಿಯ ನಂದದೀವಿಗೆಂದು ಹಾಡ ××× ಪಣ್ಣ ಸೌಡಿ ಗ ೧ (ಕಕುಲ. ೪-೨೦ ; 12ನೆಯ ಶತ). [?]

**ತಿಲಿತ್ಸ** (ನಾ). ದೊಡ್ಡಹಾವು ; ಹೆಬ್ಬಾವು ; ಅಜಗರ : "ತಿಲಿತ್ಸ-ಒಂದು ತರದ ಹಾವು" (ಗಂಗಾಮ. ೧೫೩). [ ಸಂ. ]

**ತಿಲು** (ನಾ). ತೆಲುಗುಭಾಷೆ : ನಿಜಾಂಕಮಾಲೆಯಂ ಮಾನವಮನ್ಮಥಂ ಬರೆದನಾದರದಿಂ ವಿಟಚಕ್ರವರ್ತಿ ಧಾತ್ರೀನುತಮಾಗಿ ತಿಲು ತಿವುಳ ಕಂನಡ ನಾಗರದಕ್ಕರಂಗಳ (ಸೌಇಇ. XI-i. ೧೧೮-೪೨ ; 1057).
[P ಇದು 'ತೆಲುಗು' ಎಂಬುದರ ಅಪಲಿಖಿತವಿರಬಹುದು]

**ತಿಲುವನಿ** (ನಾ). ಒಂದು ಬಗೆಯ ಸಸ್ಯ: "ಬೇಳ ಪುಂಗಳಿ ತಿಲುವನಿ [ಪಾಠಾಂ. ತಿಳುವನಿ, ತಿಲುವಗ, ತಲುವರಿ]ಯೆನಿಕ್ಕು" (ಮಂಗರಾ. ೪೦-೩೦). 'ತಿಲೋಣಿ' ಪರಾ. [ ? ]

**ತಿಲೋಣಿ** (ನಾ). ಒಂದು ಬಗೆಯ ಸಸ್ಯ: ತಿಲೋಣಿ, ಶ್ರೀಕಲ, ಸೂರ್ಯಾವರ್ತ, ನಿರಿಡಿಬಿತ್ತ (ವ್ಮೃಜಿಗಿ. ೪೦-೮೨೦). [ ? ]

**ತಿಲೋತ್ತಮೆ** (ನಾ). ಒಬ್ಬ ಅಪ್ಸರೆಯ ಹೆಸರು . **P** ಪ್ರಕೃತಿಯ ಸರ್ವ ಸೌಂದರ್ಯದಲ್ಲಿಯೂ ತಿಲಾಂಶದಷ್ಟನ್ನು ತೆಗೆದು ರೂಪಿಸಿದ ಅಪ್ಸರೆಯಾದಂದರಿಂದ, ಎಲ್ಲ ಅಪ್ಸರೆಯರಿಗಿಂತಲೂ ಎಳ್ಳಿನಷ್ಟಾದರೂ ಹೆಚ್ಚು ಚೆಲುವುಳ್ಳವಳಾದ್ದರಿಂದ ಈ ಹೆಸರು ಬಂದಿತೆಂದು ಹೇಳುತ್ತಾರೆ: "ಘೃತಾಚೀ, ಮೇನಕಾ, ರಂಭಾ, ಊರ್ವಶೀ, ತಿಲೋತ್ತಮಾ, ಸುಕೇಶೀ, ಮಂಜುಘೋಷಾ—ಇವರು ಮೊದಲಾದವರ್ ಅಚ್ಚರಸಿಯರ್" (ಹಲಾಯು. ೧೫-೮೮) ; ರಂಭಾತಿಲೋತ್ತಮೋರ್ವಶೀಸುಕೇಶಿಯೆಂಬ ಕೇಶಿಯುಮಂ (ಜಗವಿ. ೩-೨೨ವ) ; ತಿಲೋತ್ತಮೆ ಮಂಜುಘೋಷೆಯೆಂಬೀ ನೆಗಟ್ದಗ್ಗದಚ್ಚರಿಯರಚ್ಚರಿಯಪ್ಪ ವಿಳಾಸಮಂ ನಿಜಭ್ರೂಸಟನೈಕದೇಶಮೆ ತಱುಂಬಿದುದೆಂಬ ಸರೂಪವಿಭ್ರಮಶ್ರೀ ನಿಜವಾಗೆ (ಪುಷ್ಪಪು. ೨-೭೭).

[ ಸಂ. ತಿಲೋತ್ತಮಾ (ತಿಲ + ಉತ್ತಮ + –) ]

**ತಿಲೋದಕ** (ನಾ). = ತಿಲಾಂಜಲಿ ೧: "ಪ್ರೇತತರ್ಪಣಮನೆ ನಿವಾಪ ಮೆಂದೆನೆ ಕರ್ಮದಾ ತಿಲೋದಕಮಕ್ಕು" (ಮಂಗರಾ. ೧೧೭-೪); ತಾಯಿಗೆ ವಾಸೋದಕ ತಿಲೋದಕಗಳನ್ನು ಕೊಡಲು ತಾನು ಅನರ್ಹನೆಂದು ಪ್ರಭುವು ನಿಶ್ಚಯಿಸಿಬಿಟ್ಟರು (ಶಾಂತಲಾ. ೧೭೦).

**ತಿಲೋದಕ ಕೊಡು**=೧. ತರ್ಪಣಕೊಡು. ೨. ತೊರೆ; ಆಸೆಬಿಡು: ಹಾಗಾದರೆ ಕೀರ್ತಿಗೆ ತಿಲೋದಕ ಕೊಡುವೆಯಾ ? (ರೂಪಸ. ೭). **ತಿಲೋದಕವನ್ನು ಬಿಡು** = ತರ್ಪಣವನ್ನು ಬಿಡು: ನನ್ನಲ್ಲಿ ಆ ರಾಜಕುಟಿಗೆ ದಯೆಯುಂಟಾಗುವಂತೆ ಯತ್ನಿಸಿರಿ; ಇಲ್ಲದ ಪಕ್ಷದಲ್ಲಿ, ಅವಶ್ಯವಾಗಿ ನನಗೆ ತಿಲೋದಕವನ್ನು ಬಿಡಿ (ಶಾಕುಂತ. ೩೬-೭). [ ತಿಲ + ಉದಕ$_2$ ]

**ತಿಲೌದನ** (ನಾ). ತುಪ್ಪ, ಎಳ್ಳು, ಅನ್ನ ಮುಂತಾದುವುಗಳನ್ನು ಬೆರಸಿ ಮಾಡಿದ ಒಂದು ಬಗೆಯ ಆಹಾರಪದಾರ್ಥ; "ಎಳ್ಳುಹುಗ್ಗಿ" (ನಾಚಿರಾ. ೬). [ ತಿಲ + ಓದನ ]

**ತಿಲ್ಯ** (ನಾ). ಎಳ್ಳು ಬೆಳೆಯುವ ಭೂಮಿ: "ತಿಲ್ಯಂ, ತೈಲೀನಂ- ೨ ಎಳ್ಳು ಬೆಳೆಯುವ ಭೂಮಿಯ ಹೆಸರುಗಳು" (ಸಿದ್ಧಾಂತಿ. ೨೩೭). [ಸಂ.]

**ತಿಲ್ಲ** (ನಾ). ಒಂದು ಬಗೆಯ ಸಸ್ಯ: ತಿಲ್ಲ, ಹಾರೋಗಿಡ (ಮೃಜಿಗಿ ೩೭-೭೦೩). [ ? ]

**ತಿಲ್ಲವೆಡಂಗ** (ನಾ). ಒಂದು ಬಿರುದು; **P** ಚಿದಂಬರತೀರ್ಥಕ್ಷೇತ್ರದ ತಿಲ್ಲೈಗೆ ಬೆಡಗನ್ನು ತಂದವನು: ತಿಲ್ಲವೆಡಂಗಂ ಗಿರಿಜಾವಲ್ಲಭಪದ ಕಮಳಭೃಂಗನವನಿತ[ರಿ]ಪುಭೂವಲ್ಲಭವಿದಳನಪಟುವೆನೆ ... ಪೆಸರ್ವ್ವಡೆದ (ಸೌಇಇ. IX-i, ೨೫೪-೨೮; 1148).

[ ತಿಲ್ಲ$_0$ ( **P** ← ತಮಿ. ತಿಲ್ಲೈ ) + ಬೆಡಂಗ ]

**ತಿಲ್ಲಾಣ** 'ತಿಲ್ಲಾನ' ನೋ.

**ತಿಲ್ಲಾಣಿಸು** (ಕ್ರಿ). ೧. ತಿಲ್ಲಾನದಂತೆ ಇಂಪಾಗಿ ವಿಧವಿಧವಾಗಿ ಸ್ವರವನ್ನು ಕೂಡಿಸು. ೨. ಸುಖಿಪಡು; ಸಂತೋಷಿಸು: ತಲ್ಲಣಿಸಿತು ಹರಣ ತಿಲ್ಲಾಣಿಸಿತವನೆದೆಯಂತಃಕರಣ (ದ್ವಾಪಾಷ್ಪ. ೨೫-೬).

[ ತಿಲ್ಲಾಣ ( < ತಿಲ್ಲಾನ ) + – ಇಸು$_3$ ]

**ತಿಲ್ಲಾನ, ತಿಲ್ಲಾಣ** (ನಾ). ೧. [ಸಂಗೀತ] ಒಂದು ಬಗೆಯ ಸಂಗೀತ ಕೃತಿ; (ಅರ್ಥಕೊಡದ) ಧ್ವನಿಗಳ ಬಹು ಇಂಪಾದ ಹೊಂದಾಣಿಕೆ: ತಾನವರ್ಣಗಳಾಗಲಿ ದಾಸರ ತಿಲ್ಲಾನಗಳಾಗಲಿ ಈಗ ಉಪಲಬ್ಧವಿಲ್ಲ (ಕಭವಿ. I, ೩೦೭); ತಿಲ್ಲಾನ – ಉತ್ತರಾದಿ ಸಂಗೀತದ 'ತರಾನ' ಎಂಬ ರಚನೆಯ ಅನುಕರಣವೇ ಈ ರಚನೆ. ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳುಂಟು. ಪಲ್ಲವಿ ಮತ್ತು ಅನುಪಲ್ಲವಿಗಳ ಸಾಹಿತ್ಯ 'ಕೊನೆಗೋಲು' ಅಥವಾ ಮೃದಂಗ ಜತಿಗಳಿಂದ ಕೂಡಿರುತ್ತದೆ ... ನರ್ತನಕ್ಕೆ ಮಿಾಸಲಾದ ರಚನೆಯಿದು (ಸಂಗೀಜಿಂ. ೭೪); ಮಹಾವೈದ್ಯನಾಥ ಅಯ್ಯರ್ ಅವರು ರಚಿಸಿರುವ 'ಗೌರೀ ನಾಯಕ' ತಿಲ್ಲಾನವು ಮಹತ್ತರ ಕೃತಿ (ಸಂಗೀತ. ೧೪). ೨. [ನಾಟ್ಯ] ಒಂದು ಬಗೆಯ ನರ್ತನ: ತಿಲ್ಲಾನದಲ್ಲಿ ಆಕರ್ಷಕವಾದ ಭಂಗಿಗಳೂ . . . ವೈವಿಧ್ಯವೂ ಇರುವುದರಿಂದ ತುಂಬಾ ಪ್ರೇಕ್ಷಣೀಯವಾಗಿರುತ್ತದೆ (ಅಭಾನ್ಯ. ೫೩); ತಿಲ್ಲಾನ: — ಪ್ರದರ್ಶನದ ಮುಕ್ತಾಯಾಂಶ ಪದವಿನ್ಯಾಸಗಳಿಂದಲೂ ಭಂಗಿಗಳಿಂದಲೂ ರಮ್ಯವಾದ ರಚನಾವಿಶೇಷ (ಭಾರದ. ೫೫೫). **ತಿಲ್ಲಾಣ**: ೧. ಕೈಯ ತಾರತಮ್ಯಕ್ಕೆ ತೊದಲುನುಡಿಯ ತಿಲ್ಲಾಣ(ಉದ್ಯಾಲಿ. ೧೧೯-೫).

**ತಿಲ್ಲಾನತಿಗುಳು** = ಅರ್ಥವಾಗದ ತಮಿಳುಭಾಷೆ: ನಾನಿರುವಾಗ ನಿಮ್ಮ ತಿಲ್ಲಾನತಿಗುಳಲ್ಲಿ ಮಾತಾಡಕೂಡದು (ಮಂತ್ರಶ. ೩೬-೧೧).

[ ದೇ. ॥ ತಮಿ. ತಿಲ್ಲಾನಾ ; ತುಳು. ತಿಲ್ಲಾಣ, ತಿಲಾಣ]

**ತಿಲ್ಲಿ** (ನಾ). ಎಳ್ಳು. 'ತಿಲ್ಲಿಎಣ್ಣೆ' ಪರಾ. [ < ಸಂ. ತಿಲ ]

**ತಿಲ್ಲಿಎಣ್ಣೆ** (ನಾ). ಎಳ್ಳೆಣ್ಣೆ: ಕೆಂಪು ಶೀಷೆಗೆ ಅಗಸೀಎಣ್ಣೆಯನ್ನು ಹಸುರು ಶೀಷೆಗೆ ತಿಲ್ಲಿಎಣ್ಣೆಯನ್ನು ಹಾಕಬೇಕು (ಬಚಿಕ. ೮). [ ತಿಲ್ಲಿ + ಎಣ್ಣೆ ]

**ತಿಲ್ವ** (ನಾ). ಒಂದು ಬಗೆಯ ಸಸ್ಯ; "ಲೋಧ್ರ, ರಕ್ತಲೋಧ್ರ" (ಪಂಡಿತ. ೨೯೯). [ ಸಂ. ]

**ತಿವಂಚ** (ನಾ). ಐದೈದರ ಮೂರು ಗರ: ಚೌಕ ದುಗ ನಟ್ಟ ಭದ್ರ ತಿವಂಚದೊಬ್ಬೌಕ...ಇನಿತುಮಂ ಬೇಗದಿಂ ಹಾಯಿಕು (ಕುರಾಚ. ೧೩-೫೯).

[ < ಸಂ. ತ್ರಿಪಂಚ ]

**ತಿವಟ** (ನಾ). ಒಂದು ಬಗೆಯ ವಸ್ತ್ರ: ಕುಡುಗುಂ ಚಿತ್ರಾವಟಿ ಪಟಿಯ ಡವಟ್ಟೆ ಸುವರ್ಣಚೇಲಮುಂ ತಿವಟಂ ಪೂವಡೆ ಕರ್ಮಂ ನೆರೆವಂ ಮಣಲೆಡೆಯುಂ ರತ್ನಂಗವಸನಮುಂ ವಸನಾಂಗಂ (ಶಾಂತಿಪು. ೬-೧೦೧). [?]

**ತಿವಟಿಗೆ** 'ತಿವದಿಗೆ' ನೋ.

**ತಿವಡಿ** (ನಾ). (?) : ಹೊಚ್ಚು ತಿವಡಿ ವಿಷಮಗಳೆಂಬ ಚೌಕಳಾಸಚ್ಚಿತಾಭ್ಯಂಗಿ ನಾಟ್ಯಗಳು (ದೇವಾಂಪು. ೫-೦೩೯). [ ? ]

**ತಿವದಿ, ತಿವಿದಿ, ತಿವುಡೆ$_1$, ತ್ರಿಪುಡೆ, ತ್ರಿವದಿ, ತ್ರಿವಿಧಿ, ತ್ರಿವುಡೆ$_2$** (ನಾ). [ಛಂದ] ಮೂರು ಪಾದಗಳುಳ್ಳ ಅಂಶಗಣಬದ್ಧವಾದ ಒಂದು ಪದ್ಯಜಾತಿ; ತ್ರಿಪದಿ: "ತ್ರಿಪದಿಯೆನೆ ತಿವದಿಯಕ್ಕುಂ" (ಮಂಗರಾ. ೬೨-೨೦): ಅಕ್ಕರಂ ಚವುಪದಿ ಮತ್ತಂ ದಲ್ ಗೀತಿಕೆ ತಿವ [ಪಾಠಾಂ. ವಿ] ದಿಗಳೆಂದಂಬೆತ್ತ ಸೆಯೆ ಪೇಟ್ದೊಡದು ಚತ್ತಾಣಂ (ಕವಿರಾ. ೧-೩೫) ; ಮದನವತಿಯಕ್ಕರಂ ಚೌಪದಿ ಗೀತಿಕೆಯೊಳೆ ತಿವದಿಯುತ್ಸಾಹಂ (ಛಂದೋಂಬು. ೧-೪೭) ; ಡೊಂಬಿಯ ತಂಬಟೆಗರ್ ಪಾಡುವ ತಿವದಿಯನಿರ್ಮಡಿಸಿ ಪಟ್ಟದಿಯಾದುದು (ಚಿಳವಿ. ೬-೧೫೪ ವ). **ತಿವಿದಿ**: ಮೇಲಿನ 'ಕವಿರಾ' ಪ್ರಯೋಗದ ಪಾಠಾಂತರವನ್ನು ನೋಡಿ. **ತಿವುಡೆ$_1$**: ತ್ರಿಪದಿಗೆ ತಿವದಿ, ತಿವುಡೆ, ತ್ರಿವುಡೆ, ತ್ರಿಪದಿಕಾ ಎಂಬ ಹೆಸರುಗಳೂ ಬಳಸಲ್ಪಟ್ಟವೆ (ಛಂದೋವಿ. ೮೮) ; ಕ್ರಿ.ಶ. ೧೧೭೦ನೆಯ ಕಾಲದ ಕವಿ ನೇಮಿಚಂದ್ರನು ಒನಕೆವಾಡನ್ನು "ತಿವುಡೆ" ಎಂದು ಕರೆದಿದ್ದಾನೆ (ಸಂಶೋಧ. ೧೪೦). **ತ್ರಿಪುಡೆ**: ತ್ರಿಪುಡೆಯು ಹೊಸಗನ್ನಡ ಕವನಗಳಲ್ಲಿ ಆದಿಪ್ರಾಸವನ್ನು ಕಳೆದುಕೊಂಡು ಆಗಾಗ ಬಳಕೆಯಾಗುತ್ತದೆ (ಛಂದೋವಿ. ೨೭೩) ; ಈ ಬಗ್ಗೆ ತ್ರಿಪುಡೆ ಎಂಬ ಹೆಸರುವಾಸಿಯಾದ ತಾಳಕ್ಕೆ ಒಡಗೂಡಿರುವುದರಿಂದ ತ್ರಿಪುಡೆ ಎಂಬ ಹೆಸರಾದ ಛಂದಸ್ಸಿನ ... ಉದಾಹರಣೆಯ ಸಾಂಪ್ರದಾಯಿಕ ಬೆಂಬಲವೂ ಬೇಕಾದಷ್ಟಿವೆ (ಗೋಲ್ಲೊಥಾ. X, ಮುನ್ನುಡಿ). 'ತ್ರಿಪುಡೆ' ಪರಾ. **ತ್ರಿವದಿ**: ತ್ರಿವದಿ ಎಂಟುಂ ದಿಗ್ದಂತಿಗಳ್ ಕಂಟೀರವಕದಿರ್ವನ್ನೆ ಟ್ಯೆಂಟೆಣಿಪಹಿತರ್ ತಲೆದೋಱಿರ್ (ಎಕ. VI, ಚಿಕ್ಕಮು. ೯೪-೧೯ : ಸು. 1060 ? ). **ತ್ರಿವಿಧಿ**: ತ್ರಿಪದಿಗೆ ತಿವಿದಿ, ತ್ರಿವಿಧಿ, ತಿವುಡೆ—ಎಂಬ ಹೆಸರುಗಳೂ ಕಾಣಿಸಿವೆ (ಸಂಶೋಧ. ೧೪೫) : 'ತ್ರಿವಿಧಿ' ಎಂಬುದು ಮಹಾದೇವಿಯಕ್ಕನ "ಯೋಗಾಂಗತ್ರಿವಿಧಿ"ಯೆಂಬಲ್ಲಿ ಕಾಣುತ್ತದೆ (ಸಂಶೋಧ. ೧೪೫). **ತ್ರಿವುಡೆ$_2$**: ಪ್ರಾಸಗಳು ಮೂಱಾಗಿ ಲೇಸಿನಿಂ

ಬರುತಿರಲು ಮಾಸದೆ ಮಾತ್ರೆಗಳ ತ್ರಿವುಡೆ ತಾನೊಗೆಗುಂ (ಛಂದಸ್ಸಾ. ೫-೧೩) ; ತ್ರಿಪದಿಗೆ ತಿವದಿ, ತಿವುಡೆ, ತ್ರಿವುಡೆ, ತ್ರಿಪದಿಕಾ ಎಂಬ ಹೆಸರುಗಳೂ ಬಳಸಲ್ಪಟ್ಟಿವೆ (ಛಂದೋವಿ. ೮೮). [ <ಸಂ. ತ್ರಿಪದೀ ]

**ತಿವದಿಗೆ, ತಿವಟಿಗೆ, ತಿವಿಗೆ, ತಿವುಟಿಗೆ, ತೀವಟಿಗೆ, ತೆವಟಿಗೆ, ತೇವಟಿಗೆ, ತೌಂಟಿಗೆ, ತೌಟಿಗೆ**(ನಾ). ಮೂರು ಕಾಲಿನ ಮಣೆ, - ಪೀಠ; ಮುಕ್ಕಾಲು ಮಣೆ ; ಅಡ್ಡಣಿಗೆ : "ತಿವದಿಗೆ (ತಿವಟಿಗೆ)–ತ್ರಿಪದಿಕಾ" (ತದ್ಭಕೋ. ೧೭). **ತಿವಟಿಗೆ** : ಒಂದು ಕಟ್ಟಿಗೆಯ ತಿವಟಿಗೆಯ ಮೇಲೆ ಪ್ರಕ್ಷೇಪಕಯಂತ್ರವನ್ನು ಇಟ್ಟು (ಮುಂಬಯಿ. ೫-೨೨). **ತಿವಿಗೆ** : ಲಂಕರೊಕ್ಕಲಲ್ಲಿ ಆಱು ತಿಂಗಳ್ಗೆ ಮಣೆ ತಿವಿಗೆ ಮರವಿಯೆಂಬಿವೊಂದಕ್ಕಂ (ಎಇ. XIX, ೩೩-೨೮ ; 1135). **ತಿವುಟಿಗೆ** : 'ತಿವುಟಿಗೆಬುಲ್ಲು' ಪರಾ. **ತೀವಟಿಗೆ** : ಗ್ರೀಸ್ ದೇಶದ ಅರಿಸ್ಟಾಟಲನೆಂಬ ತತ್ವಜ್ಞಾನಿಯು ತಮಗೆ ತಾವೇ ನಡೆಯುವಂಥ ತ್ರಿಪಾದಗಳನ್ನು (ತೀವಟಿಗೆಗಳನ್ನು) ತನ್ನದೊಂದು ಗ್ರಂಥದಲ್ಲಿ ವರ್ಣಿಸಿದ್ದಾನೆ (ಮುಂಬಯಿ. ೬-೨೮). **ತೆವಟಿಗೆ** : ಅಡ್ಡಣಿಗೆ ಬೆಳ್ಳಿಯಲಿ ಕೆಲಬರು ದೊಡ್ಡ ಸುವರ್ಣದ ತೆವಟಿಗೆಗಳಲ್ಲಿ ಅಡ್ಡಮಡಿಯನು ಸಿಕ್ಕಿ ಭರದ ಸೆಳ್ಳುಗುರಲೆಣ್ಣೆಯನೂ ಅಡ್ಡಹೋದರೆ ಮೇಲೆ ಚಿಮ್ಮುತ (ರೇವಕಾ. ೨-೨೦) ; ತೆವಟಿಗೆಯ ಮೇಲೆ ತಣಿಗೆ ಇಟ್ಟು ಬಡಿಸು (ರೂಢಿ). **ತೇವಟಿಗೆ** : ಮೂರು ಕಾಲಿನ ತೇವಟಿಗೆಯನ್ನೂ (ತ್ರಿವಟಗೆ) ಅದರ ಮೇಲೆ ಚಿನ್ನದ ತಟ್ಟೆಯನ್ನೂ ಇಟ್ಟುಕೊಂಡು ಊಟ ಮಾಡುತ್ತಾರೆ (ಪ್ರವಾಇ. I, ೩೦). **ತೌಂಟಿಗೆ** : ಮುಂದೆ ತೌಂಟಿಗೆ ಇಟ್ಟುಕೊಂಡು ಅದರ ಮೇಲೆ ಪುಸ್ತಕ ಇಟ್ಟುಕೊಂಡರೆ ಸರಿಯಾಗ್ತದೆ (ಜಂಗಾಳ್ಕ. ೨೫೩). **ತೌಟಿಗೆ** : ಕುರ್ಚಿಯ ಬದಿಯಲ್ಲಿದ್ದ ತೌಟಿಗೆಯ ಮೇಲೆ ನೀರಿನ ಹೂಜೆಯಿತ್ತು (ಪುನರು. ೩೪೫). [< ಸಂ. ತ್ರಿಪದಿಕಾ]

**ತಿವದೆ** (ನಾ). [ಛಂದ] ಮೂರು ಪಾದಗಳುಳ್ಳ ಪದ್ಯ ; ತ್ರಿಪದಿ : ತ್ರಿಪದಾ–ತಿವದೆ (ಶಮದ. ೨೫೮ ಪ್ರಯೋ). [<ಸಂ. ತ್ರಿಪದಾ]

**ತಿವರಿಸು** (ಕ್ರಿ). ತೀವ್ರಗೊಳಿಸು ; ಅಧಿಕಗೊಳಿಸು (?) : ಒಗು ಮಿಗೆಯುರವಣೆಗುಬ್ಬರಿಸುವ ಸುಯ್ಯ ತೆಗೆಬಗೆಯೊಳು ತಿವರಿಪುದು (ಚಕವಿ. ೬-೬೮ ಸಾಂಗತ್ಯ). [< ತೀವ್ರ ? + – ಇಸು$_3$]

**ತಿವಳಿ$_1$** (ನಾ). ೧. ಸ್ತ್ರೀಯ ಹೊಕ್ಕುಳಿನ ಮೇಲುಭಾಗದಲ್ಲಿ ಅಡ್ಡಲಾಗಿರುವ ಮೂರು ಮಡಿಕೆಗಳು : ಮಸುಳೆ ತಿವಳಿ ಕರ್ಪಂ ಬಾಸೆ ಪೆತ್ತೊಪ್ಪೆ ... ಪೆರ್ಚಿತ್ತು ಗರ್ಭಂ (ಚಂದ್ರಪು. ೩-೮೫) : ತಿವ[ಳಿಯೊ]ಳೊಳುಪು ನಿಜಂ ತೆಳುಪು (ಬಂಹರಿ. ೭-೨೯) ; ತೆಳ್ವಸಿಱಿಳೆಸೆವ ತಿವಳಿಗಳ್ (ಕಬ್ಬಿಕಾ. ೭೬) ; ಸುರನರನಾಗಲೋಕದಿ ನರ್ತಿಸುವ ಸೌಂದರವೆಣ್ಣು ಬಾಣನಂದನೆಯ ಸರಿಯಿಲ್ಲವೆಂದು ಮೂವೆರಲಿಂದೆ ರತಿರಾಜ ಬರೆದಂತೆ ತಿವಳಿ ರಾಜಿಸಿತು (ಮೋಹತ. ೨೩-೨೦). ೨. ಕಾಡಿನಲ್ಲಿ ಆನೆ ಮುಂತಾದ ಪ್ರಾಣಿಗಳು ಸಂಚರಿಸುವಾಗ ತಮ್ಮ ದಾರಿಯಲ್ಲಿ ಬಿಟ್ಟು ಹೋಗುವ ಮೂರು ಬಗೆಯ ಗುರುತುಗಳು : ಸೊವಡಿಂಗೇವಯ್ಸಿ ಪುಲ್ವಟ್ಟೆಯ ತಿವಳಿಯನಾರಯ್ದು ಘರ್ಮದ್ರವಂ ಮೆಯ್ನವಿರುಂ ಮೆಯ್ವೆರ್ಚೆ...ಮರವಾಯ್ದತ್ತು ಮತ್ತದ್ವಿಪೇಂದ್ರಂ(ಮಲ್ಲಿಪು. ೧೦-೯೦) ; ತಿವಳಿಯೊಳ್ ವಿಡುಕಾಱಿದ ಮಣ್ಣಿಂದಿಕ್ಕಿದ ಲಂಡದ ಬೆಂಕೆಯಿಂ ಕವಿವ ... ಬಟ್ಟೆಯೊಳೊಕ್ಕ ಪಲ್ಲವನಿಕಾಯದಿನಂದಱಿದಂ ಕಾಡಾನೆಗಳಾಗಡೆ ಪೋದುದಂ (ಕಾವ್ಯಾವ. ೬೨೬); ತಿವಳಿವಿಡಿದುಗ್ರೇಭಂ ಪೋದತ್ತು (ಚಂದ್ರಪು. ೯-೧೦೨) ; "ಹೆಜ್ಜೆಯ ಗುರುತಂ" (ಪ್ರಭಣ್ಣ). [< ಸಂ. ತ್ರಿವಲಿ]

**ತಿವಳಿ$_2$, ತಿವಳೆ, ತಿವಿಳಿ, ತ್ರಿವಳೆ** (ನಾ). ಒಂದು ಬಗೆಯ ವಾದ್ಯ : ಪಳವದ ತಿವಳಿಯ ಜುಂಕದ ಮೊಳಸಿನ ಜೇಕಿರದ ಸಿವಿಱ ಸಿಪ್ಪಿನ ಲಯದಿಂದೆಳಲದೆ ಕುಣಿದರ್ ಕೆಲಬರ್ (ಅಜಿಪು. ೫-೩೨); ಈಶಾನ ಈಶ್ವರಮುಡಿಯಾರ್ಗೆ ಕೊಟ್ಟ ತಿವಳಿ ೧ ದಟ್ಟ ೨ ಖಣ್ಡಿಕೆ ೩ ಫಲ ೬ (ಮ್ಯಆರಿ. ೧೯೪೬, ೨೮-೧೪ : 1032). ತಿವಳೆ. ತಿವಿಳಿ. ತ್ರಿವಳೆ.

**ತಿವಳೆಪಱೆಘೋಷಣ, ತಿವಿಳಿಪಱೆಘೋಷಣ, ತ್ರಿವಳೆಪಱೆಘೋಷಣ** = ತಿವಳಿಯೇ ಮೊದಲಾದ ವಾದ್ಯಗಳ ಮರ್ಯಾದೆಯುಳ್ಳವನು ; ಒಂದು ಬಿರುದು : ತಿವಳೆಪಱೆಘೋಷಣ ಪರಬ ××× ಮಾದಿ ಸಮಸ್ತಪ್ರಶಸ್ತಿಸಹಿತಂ (ಸೌಇಇ. XX, ೩೩-೧೦ ; 1048) ; ತಿವಿಳಿ ಪಱೆಘೋಷಣಂ ಲತ್ತಲೂರ ಪುರವರಮೇಶ್ವರಂ (ಎಇ. VII, ೨೦೬-೦೩ : 866) ; ತ್ರಿವಳೆ ಪಱೆಘೋಷಣ ರಣರಂಗಭೀಷಣ ರಟ್ಟವಂಶೋದ್ಭವಂ (ಸೌಇಇ. XI-i ; ೭೪-೯ : 1041) ; P ತಿವಳಿಯೇ ಮೊದಲಾದ ಮಹಾವಾದ್ಯಗಳ ಮರ್ಯಾದೆಯುಳ್ಳವನು ಎಂಬರ್ಥದ ಬಿರುದಾವಳಿಯಲ್ಲಿ ತಿವಳೆ, ತಿವಿಳಿ, ತ್ರಿವಳೆ ಶಬ್ದಗಳು ಪ್ರಯೋಗವಾಗಿವೆ.

[ <ಸಂ. ತ್ರಿವಲೀ ]

**ತಿವಳಿವಟ್ಟ** (ನಾ). (?) : ಪೊಯ್ವ ತಾಳವಟ್ಟದೊಳಂ ತಿವಳಿವಟ್ಟವಾದ ತೇರ ತೆಕ್ಕೆಗಳ್ ಕಲ್ಲಗಾಣದ ಕಣೆಯ ಬಾಯ್ಗೆ ಬಿಟ್ಟ ಕಳಿಕೆಯ ಬೆಂಡಿನಂತೆ ನುರ್ಗುನುಱಿಯಾಗಿರ್ದುವು (ಅನಂಪು. ೦೪-೭ವ). [?]

**ತಿವಳೆ** 'ತಿವಳಿ$_2$' ನೋ.

**ತಿವಾಶಿ** 'ತಿವಾಸಿ' ನೋ.

**ತಿವಾಸಿ, ತಿವಾಶಿ** (ನಾ). ೧. ರತ್ನಗಂಬಳಿ; ಕಸೂತಿ ಹಾಕಿದ ಮೇಲ್ಹಾಸು: ಮುಹೂರ್ತಕ್ಕೆ ಮೊದಲೇ ಆಮಂತ್ರಿತ ಸ್ತ್ರೀಪುರುಷವೃಂದವು ಬಂದು ತಿವಾಸಿಗಳ ಮೇಲೆ ಮಂಡಿಸಿತ್ತು (ವಿಧಿವ್ಯ. ೦೭೦). ೨. ಒರಗುದಿಂಬು ; ಲೋಡು : ಎರಡು ಸಿಂಹಾಸನಗಳ ಮೇಲೂ ಸುವರ್ಣಖಚಿತವಾದ ತಿವಾಸಿಗಳು (ದೇವೀಚಾ. ೦೪೫) ; ಕಣ್ಣಮ್ಮನನ್ನು ರತ್ನಕಂಬಳಿ ತಿವಾಸಿಗಳಿಂದ ಅಲಂಕೃತವಾಗಿದ್ದ ಕೋಣೆಯೊಂದರಲ್ಲಿ ಕುಳ್ಳಿರಿಸಿ (ರೂಲೇಖಾ. ೪೩) ; ತಿವಾಸಿ ಯಾತಕ್ಕೆ ತಿಪ್ಪೇ ಮೇಲಣವಗೆ? (ಗಾದೆ). **ತಿವಾಶಿ** : ೧. ಫಲಹಾರಾನಂತರ ಸುಸಜ್ಜಿತವಾದ ಹಜಾರದಲ್ಲಿ ಫಕೀರನು ತಿವಾಶಿಯ ಮೇಲೆ ಸುಖಾಸನದಲ್ಲಿ ಬಂದು ಕುಳಿತನು (ದೌಲತ್. ೭).

[←ಪಾರ. ತಿವಾಸೀ ; ಮರಾ. ತಿವಾಸೀ, ತಿವಾಶಾ, ತಿವಾಶೀ, ತಿವಾಸಾ ]

**ತಿವಿ$_1$** (ಕ್ರಿ). ೧. ಮುಷ್ಟಿಯಿಂದ ಹೊಡೆ, –ಪ್ರಹಾರಮಾಡು ; ಗುದ್ದು : "ತಿವಿ–ಮುಷ್ಟಿಪ್ರಹರಣೇ" (ಶಮಧಾ) ; ನೆಲದಿಂದುರ್ಬಿ ಬಂದಾಕಾಶಕ್ಕೆ ನೆಗಪಿದೊನ ಸ್ಕಂಧಮಂ ತಿವಿದೊಂ (ವಡ್ಡಾರಾ. ೫೦-೨೮) ; ತೊಡರೆ ತಡಂಗಾಲ್ ಪೊಯ್ದೊಡೆ ಕೆಡೆದುಂ ತಿವಿದೊಡೆ ಸುರುಳ್ದು ... ಬಿಟ್ಟುವು (ಪಂಪಭಾ. ೧೦-೬೮) ; ಓರೋರ್ವರಂ ತಿವಿಯೆ ನೆಗ್ಗಿರ್ದ ಕದಪಿಂದೆ (ಕಾದಂಉ. ೨೭೦) ; ಪಿತ್ತಾಧಿಕನಂತೆ ಬೀಸೆನುತ್ತುಂ [ಬಿಕ್ಕಿಗನಂತೆ ತಿವಿಯೆನುತ್ತುಂ ] (ಧರ್ಮಾಮೃ. ೨-೭೧). ೨. ಇರಿ ; ಚುಚ್ಚು : ತಿವಿದು ಸತ್ತಂ ಕಡುಗಲಿತನದಿ (ಸೌಇಇ. XI–i, ೮೦-೦೪ ; 1049) ; ತಂಬುಲದಂತೆ ಪಲ್ಲ ಪತ್ತಿ ತಿವಿದರ್ (ಧರ್ಮಾಮೃ. ೩-೭೩) ; ಜೋಡಿಯಿಂ ಕವಿದು ಹೊಕ್ಕು ಹಂದಿಯ ತಿವಿದರು (ಹಚಕಾ. ೬-೧೧); ಪಂದಿ ಪೊಱಮಟ್ಟುದಿದೆ ತಿವಿಯೆಂದೆನುತುಂ ಮುಸುಱೆ (ಉದ್ಭಟ. ೨-೭೮) ; ಪ್ರಳಯದಿನದಲ್ಲಿ ತಿವಿವ ಸಿಡಿಲವ್ವಳಿಸುವಂತಿರೆ ರೌದ್ರರವ ಘುಳುಘುಳಿಸಿ ತಲ್ಲಣಿಸಿತ್ತು ಕೌರವರಾಯ ಪರಿವಾರ (ಕುವ್ಯಾದ್ರೋ. ೮-೪೦) ; ಬಾಗಿಲ ತಿವಿದು ನೂಂಕುವ ದಂತಿಶಿರವ ವಿಭಾಗಿಸಿ ಕರ್ೂಗಣೆಯಿಂದೆ ತಾಗಿಸಿ . . . ಸಾಗಿಸಿದನು (ಮೋಹತ. ೩೪-೭) ; ಕಟ್ಟಿ ಕೆಡಹಿ ಕಾಲಾಳ್ಗಳನುಱೆ ಬೆನ್ನಟ್ಟಿ ತಿವಿದರುರವಣಿಸಿ (ಕಂನವಿ. ೩-೭೦) ; ಪೆಚ್ಚಾದ ನನ್ನ ಮೋರೆಯ ತಿವಿದು ನೋಡಿ (ಕೋಗಿಲೆ. ೨-೪೦) ; ಅನಂತರ ತಾಯಿಯನ್ನು ತಿವಿದು "ಹೋಗೋಣವ್ವ" ಎಂದಳು (ದೂಬಿಟ್ಟ. ೧೨). ೩. ಹಬ್ಬು ; ಚಾಚು ; ವ್ಯಾಪಿಸು : ಪೂರ್ಣಶಶಿಮಂಡಲದವೊಲು ತನು ಕಾಂತಿ ತಿವಿದುದು ನಿಖಿಳ ದಿಗುತಟಕೆ (ಕುವ್ಯಾಕ. ೮-೦೯). ೪. ಓಡಿಸು ; ಹರಿಸು ; ಮುನ್ನುಗ್ಗಿಸು : ಕರಿಘಟೆಗಳೇಱಿದವು ಕುದುರೆಗಳುರವಣಿಸಿದವು ತೇರ ತಿವಿದರು ಹೊಂತಕಾಱಿಗಳು (ಕುವ್ಯಾಕ. ೦೦-೯).

೫. (ಬೇಟೆ) ನಾಯಿಯ ಕೋರೆಗಳ ಪೆಟ್ಟಿಯನ್ನು ಬಿಚ್ಚು: "ತಿವಿಯೆಂದು ಹಾಸಂ ಕಟಲ್ಬುವುದು" (ಕಕಶಾ. ೬-೧೧೯); "ತಿವಿಯೆನೆ ಹಾಸುಗಳೆಯ [ವು] ದು" (ಶಬ್ದಮಂ. ೩೨). ೬. [ಗಣಿತ] ಗಣಿಸು: ತಿವಿ, ಪೊಯ್, ಪೆರ್ಚಿಸು, ನೂಂಕು, ಅರಂಕು, ಕುಂಕು, ಕುಸಿ ... ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೧೧-೮).

ತಿವಿದಾಟ = ಪರಸ್ಪರ ಇರಿದಾಡುವಿಕೆ: "ಅಡುಪಾಡೆನೆ ತಿವಿದಾಟದ ನುಡಿ" (ಭಾರನಿ. ೬೪). ತಿವಿದಾಡು = ಚಾಚಿಕೊಳ್ಳು: ಅಶ್ವಮೇಧದ ಬೇಳುವೆಯ ಸಂಭ್ರಮದ ಧಾಳಾಧೂಳಿಯಲಿ ತಿವಿದಾಡಿದವು ಜಿಹ್ವೆಗಳಾ ಹುತವಹನ (ತೊರರಾ. ೧-೭-೪೮). ತಿವಿದುಕೊಳ್ = ಅಂಟಿಕೊಳ್ಳು; ಹೊಂದಿಕೊಳ್ಳು: ಬಾಡಿಗೆಯ ಮನೆಗೆ ತಿವಿದುಕೊಳ್ಳ ಚಿತ್ರದ ಕೋಟಿಗೆ ವ್ಯಯಾಂಪ... ಕಟ್ಟಿಗೆಗ್ಗ ರೀತೆ (ಧರ್ಮಾಮ್ಮ. ೯-೧೬೨). [ದೇ.೫ ತೆಲು. ತಿವಿಯು]

**ತಿವಿ₂** (ನಾ). ಹೊಡೆತ; ತಿವಿತ: ತಿವಿವ ತಿವಿಗಳ್ಗೆ ದನಿದೋಱಿ ಭಟರ ಕಾಯಂ ... ಪೊಯ್ದಾಡಿದರ್ ಮಹಾಸಂಗರದೊಳು (ಚಬಪು. ೧೬-೩೮); ಅಸಿಯಿಂದ ಕರದಿಂದ ತಿವಿಯಿಂದ ಹೊಯ್ದೊರಸಿತೇನೆಂಬೆನು (ತುರಂಗ. ೫೬-೪೮); ದ್ರುಪದಸುತೆಯು ಕಂಡು ದೂರದಿ ತಿವಿಗಳನ್ನು ಕೇಳುತಿರಲು (ಜಾವಿಷ. ೨೬).
[ < ತಿವಿ₁ ]

**ತಿವಿಗತ್ತಿ** (ನಾ). (ಬಂದೂಕಿನ ತುದಿಗೆ) ಇರಿಯುವುದಕ್ಕಾಗಿ ಸಿಕ್ಕಿಸಿದ ಕತ್ತಿ,–ಖಡ್ಗ: ತಿವಿಗತ್ತಿಯ ಬಂದೂಕು ಹಿಡಿದುಕೊಂಡು ಪಹರೆ ಮಾಡುವ ಪೋಲೀಸರು ... ಕಲ್ಲುಹೊಡೆಯುವ ಕೈದಿಗಳು (ಮಣ್ಣುಹೆ. ೧೫).
[ ತಿವಿ₁ + ಕತ್ತಿ ]

**ತಿವಿಗುಳು** (ನಾ). ಹೊಡೆತ; ಪ್ರಹಾರ; ತಿವಿತ: ರವಿಯ ಕೈ ಕತ್ತಲೆಯ ಹೊರಳಿಯ ತಿವಿಗುಳಿಗೆ ತೆರಳುವುದೆ (ಕುವ್ಯಾಕ. ೧೦-೬೬); ಸಿಡಿಲ ತಿವಿಗುಳ ತಾಯಿಮನೆಯೋ ಪವನಜನ ಬಲುಘಾಯವೋ (ಕುವ್ಯಾಕ. ೦೯-೪೪); ತೋಳ ನೆಗಹಿನ ತಿರುಹುದಿವಿಗುಳ ತೀವ್ರತೆಯಲಬ್ಬರಿಸುತಿರ್ದುದಜಾಂಡ ಮಂಡಲ (ತೊರರಾ. ೪-೩-೧೦). [ ತಿವಿ₁ + ? ]

**ತಿವಿಗೆ** 'ಶಿವದಿಗೆ' ನೋ.

**ತಿವಿಗೋಲು** (ನಾ). ಚುಚ್ಚುವ ಕೋಲು; ಇರಿಯುವ ಕೋಲು: "ಪ್ರಾಜನಂ, ತೋದನಂ, ತೋತ್ರಂ–೩ ತಿವಿಗೋಲು" (ಸಿದ್ಧಾಂಶಿ. ೨೩೮).
[ ತಿವಿ₁ + ಕೋಲು₁ ( < ಕೋಲ್₁ ) ]

**ತಿವಿಟಿಕೆಬುಲ್ಲು** 'ತಿವುಟಿಗೆಬುಲ್ಲು' ನೋ.

**ತಿವಿತ** (ನಾ). ಚುಚ್ಚುವಿಕೆ; ಇರಿಯುವಿಕೆ: ಕರ್ಣನ ಈಟಿಗಳ ತಿವಿತಗಳಿಂದ (ಕೃವಾಕ. ೭೦); ಅದರ ಕೊಂಬುಗಳ ತುದಿಗಳು, ಎದುರು ಬರುವ ಶತ್ರುಗಳನ್ನು ಒಂದೇ ತಿವಿತಕ್ಕೆ ಸೀಳಿಬಿಡುವಷ್ಟು ಹದನಾಗಿದ್ದವು (ಜಂಗಾಹೆ. ೩೦).
[ ತಿವಿ₁ + – ತ₂ ]

**ತಿವಿದಿ** 'ಶಿವದಿ' ನೋ.

**ತಿವಿನುಡಿ** (ನಾ). ಚುಚ್ಚುಮಾತು; ಮರ್ಮಭೇದಕವಾದ ಮಾತು. 'ತಿವಿನುಡಿಗಾರ' ಪರಾ. [ ತಿವಿ₁ + ನುಡಿ₂ ]

**ತಿವಿನುಡಿಗಾರ** (ನಾ). ಚುಚ್ಚುಮಾತನಾಡುವವನು; ಮರ್ಮಭೇದಕ: ಅರುಂತದಃ, ಮರ್ಮಸ್ಪೃಕ್–೨ ಮರ್ಮವನ್ನು ಭೇದಿಸಿ ಹೃದಯವ್ಯಥೆಯನ್ನುಂಟುಮಾಡುವ, ಹಂಗಣೆ ಮುಂತಾದ ಮಾತುಗಳ ಹೆಸರುಗಳು, ಗುಟ್ಟನ್ನು ಎತ್ತಿ ಆಡುವಿಕೆ ಮೊದಲಾದದ್ದು, ತಿವಿನುಡಿಗಾರ (ಸಿದ್ಧಾಂಶಿ. ೨೯೭).
[ ತಿವಿನುಡಿ + – ಗಾರ ( < – ಕಾಱ ) ]

**ತಿವಿರ್** 'ತಿಮಿರ್₂' ನೋ.

**ತಿವಿರು** 'ತಿಮಿರ್₂' ನೋ.

**ತಿವಿಸು** (ಕ್ರಿ). ಚುಚ್ಚುವಂತೆ ಮಾಡು; ಇರಿಯುವಂತೆ ಮಾಡು. 'ತಲೆದಿವಿಸು' ಪರಾ.

ತಿವಿಸಿಕೊಳ್ = ಚುಚ್ಚಿಸಿಕೊಳ್ಳು: ಕಣ್ಣುಬೇನೆಗಾಱದೆ ತಲೆಯಂ ತಿವಿಸಿಕೊಂಡರೆಂಬಂತೆ ಪಱಮೆಗಾಱದೆ ಪೂಗಿಡುಗಡಿದರೆಂಬಂತೆ (ಲೀಲಾವ. ೧೪-೯೭ ವ). [ ತಿವಿ₁ + – ಇಸು₃ ]

**ತಿವಿಳಿ** 'ತಿವಳ್ಳಿ' ನೋ.

**ತಿವುಟಿಗೆ** 'ಶಿವದಿಗೆ' ನೋ.

**ತಿವುಟಿಗೆಬುಲ್ಲು, ತಿವಿಟಿಕೆಬುಲ್ಲು, ತಿವುಟಿಗೆಹುಲ್ಲು, ತೆವಟಿಗೆಬುಲ್ಲು** (ನಾ). ತೆವಟಿಗೆ ಆಕಾರದಲ್ಲಿ ತೆನೆಬಿಡುವ ಒಂದು ಬಗೆಯ ಹುಲ್ಲು: "ಮಧೂಲಕಃ–ತಿವುಟಿಗೆಬುಲ್ಲು" (ಓಷಧಿ. ೧೧೪). ತಿವಿಟಿಕೆಬುಲ್ಲು: "ನೃಪಘೋಂಟಕಾರಿ–ತಿವಿಟಿಕೆಬುಲ್ಲು" (ಓಷಧಿ. ೮೯). ತಿವುಟಿಗೆಹುಲ್ಲು: "ಮಂಡಿಕಃ – ತಿವುಟಿಗೆಹುಲ್ಲು" (ಓಷಧಿ. ೧೧೪). ತೆವಟಿಗೆಬುಲ್ಲು: "ಶಬಲಃ–ಕ್ಷವ, ತೆವಟಿಗೆಬುಲ್ಲು" (ಓಷಧಿ. ೧೫೯).
[ ತಿವುಟಿಗೆ ( < ತಿವದಿಗೆ ) + ಪುಲ್ಲು ( < ಪುಲ್ ) ]

**ತಿವುಟಿಗೆಹುಲ್ಲು** 'ತಿವುಟಿಗೆಬುಲ್ಲು' ನೋ.

**ತಿವುಡು₁** 'ತೀಡು₂' ನೋ.

**ತಿವುಡು₂** 'ತವುಡು' ನೋ.

**ತಿವುಡುಗಳೆ** (ಕ್ರಿ). ಹೊಟ್ಟನ್ನು ತೆಗೆದುಹಾಕು: ಕಱವೆಯ ಕೂಟ್ಟುಗವುಗಿಸುವ ತಿಳಿದುಪ್ಪಂ ತಿವುಡುಗಳೆದ ಪೊಂಬೆಸಱ ... ಸವಿಯಿನೊದವಿದ ತೊವೆಯಂ (ಧರ್ಮಾಮ್ಮ. ೦-೧೪೯); ಪಱಗಱವೆಯ ಕೂಟು ತಿವುಡುಗಳೆದ ತೊವರಿಯ ತೊವೆ (ಕಾವ್ಯಾವ. ೨೪೧). [ತಿವುಡು₂ ( < ತವುಡು) + ಕಳೆ₁]

**ತಿವುಡೆ₁** 'ತಿವದಿ' ನೋ.

**ತಿವುಡೆ₂** 'ತ್ರಿಪುಡ' ನೋ.

**ತಿವುರ್** 'ತಿಮಿರ್₂' ನೋ.

**ತಿವುರ** 'ತ್ರಿಪುರ' ನೋ.

**ತಿವುರಾಂತಕ** 'ತ್ರಿಪುರಾಂತಕ' ನೋ.

**ತಿವುರಿ** (ನಾ). ಒಂದು ಬಗೆಯ ಡೇರೆ (?): ತಿವುರಿ ಗುಡಿ ಗೂಡಾರಂ ರಚಂಪಾಳಿ ... ಮೊಗಸಾಲೆಯೆಂಬಿವಱ ಪಸುರಿಂ ಕರ್ಪಿಂ ಕೆಂಪಿಂ ಬಸಂತನ ಬೀಡಿನಿಂತವಱ ಪೊಱವೀಡೆತ್ತಂ ಮಾಡಿತ್ತು ಕಣ್ಗನುರಾಗಮಂ (ಅನಂಪು. ೧೩-೭೩); ಬೀಗಿ ಪಟಪಟನೆ ಬೆಳೆದ ಬಾಟಿಯ ತಿವುರಿಯೊಳಂ ... ಬಿಟ್ಟ ಬೀಡು ಬರೆದಂತೆ ಕಂಡರಿಸಿದಂತೆ ಕಣ್ಗೆಸೆದಿರ್ದುದು (ಕಬ್ಬಿಗಕಾ. ೨೩೮); ತಿವುರಿ ಗುಡಿಯು ಗೂಡಾರ ಚಾಪಾಳಿಕೆಯ ನಿವಹ ... ಜಂಪೆಯ ಮಂಡಪವು ಕವಿನುತ ಬಾಗಿಲ್ವಾಡದ ಮೊಗಸಾಲೆಯವಿರಳಮಾದುವು (ಅನಂಚ. ೨೨-೬೦).
[ ? ]

**ತಿವುರು₁** 'ತಿಮಿರ್₁' ನೋ.

**ತಿವುರು₂** 'ತಿಮಿರ್₂' ನೋ.

**ತಿವುರೇಱು** (ಕ್ರಿ). ಲೇಪಿಸಿದ ಸುಗಂಧದ್ರವ್ಯ ಮೇಲೇಳು: ಅನುರಾಗವಿಮ್ಮಡಿಸಿ ತಿಳಿದು ಮುಖಿಪಿದಿರಾಗಿ ಪುಳಕದ ತಿವುರೇಱಿ ಪರಿಮಳದಂಕದ ಸರಸಗಾಳಿಗಕ್ಕಂ ಮೃದುವಾಸಿಕ್ಕಿದ ಕಳನಾಗೆ (ನಂಬಿರ. ೧೦-೧೦೪).
[ ತಿವುರು₂ ( < ತಿಮಿರ್₂ ) + ಏಱು₁ ( < ಏಱ್₁ ) ]

**ತಿವುಳ** 'ತಿಮಿಳ' ನೋ.

**ತಿವುಳೈಲ** (ನಾ). ತಮಿಳು ದೇಶ (?): ಕೊಂಕಣಮೆಟ್ಟಿದ್ದಿಯಿಕ್ಕಿ ಬೆಂಗಿ ಬೆಱಗಾಗೆ ತಿವುಳೈಲನಳ್ಕೆ ... ಭೀಷಣಮತಿರೌದ್ರಮದ್ಭುತಮಗುರ್ವಿನ ತೇಜದಳುರ್ಕೆ ಧಲ್ಲನ (ಸೌಇಇ. XI-i, ೫೨-೯; 1007).
[P ಇದು 'ತಿವುಳ್ನಲ' ಎಂಬುದರ ಅಪಲಿಖಿತವಿರಬಹುದು]

**ತಿವುಟ್ನಾಡು** 'ತಿಮಂಳನಾಡು' ನೋ.

**ತಿಶ್ರ** 'ತಿಸರ₃' ನೋ.

**ತಿಷ್ಠಿಸು** (ಕ್ರಿ). ತಳವೂರು; ಭದ್ರವಾಗಿ ನಿಲ್ಲು: (೬). [ತಿಷ್ಠ + – ಇಸು₃]

**ತಿಷ್ಠೆ** (ನಾ). ನಿಲ್ಲುವಿಕೆ.

**ತಿಷ್ಠೆಊರು** = ನೆಲೆಯಾಗಿ ನಿಲ್ಲು : ಇಲ್ಲೇ ಭದ್ರವಾಗಿ ತಿಷ್ಠೆಊರಿದರು (ಕಾಮಿಕಾಂ. ೨೩೦). **ತಿಷ್ಠೆಹಾಕು**=ತಂಗು; ನಿಲ್ಲು; ಬಿಡಾರ ಮಾಡು : (ಸ).

[P ಇದು ಷ್ಠಾ (ತಿಷ್ಠ್) ಎಂಬ ಸಂಸ್ಕೃತ ಧಾತುವಿನಿಂದ ರೂಪುಗೊಂಡಿದೆ]

**ತಿಷ್ಯ** (ನಾ). ೧. ಇಪ್ಪತ್ತೇಳುಂ ನಕ್ಷತ್ರಗಳಲ್ಲಿ ಎಂಟನೆಯದಂ; ಪುಷ್ಯ ನಕ್ಷತ್ರ : "ಪುಷ್ಯಃ, ತಿಷ್ಯಃ-ಈ ೨ ಪುಷ್ಯನಕ್ಷತ್ರದ ಪೆಸರ್" (ಹಲಾಯು. ೧೧-೫೦). ೨. ಪುಷ್ಯಮಾಸ. ೩. ಕಲಿಯುಗ : "ಕಲಿಃ-ತಿಷ್ಯಯುಗವುಂ, ಪಾಪವುಂ, ತಿಳಿಯುಂ" (ಕಾಶಕ್ಯ. ೨೬೩). [ಸಂ.]

**ತಿಷ್ಯಫಲ** (ನಾ). ನೆಲ್ಲಿಗಿಡ : "ತಿಷ್ಯಫಲಾ, ಆಮಲಕೀ, ಅಮೃತಾ, ವಯಸ್ಥಾ-೪ ನೆಲ್ಲೀಮರ" (ಸಿದ್ಧಾಂತಿ. ೧೦೯). [ಸಂ. ತಿಷ್ಯಫಲಾ]

**ತಿಸರ$_1$** (ನಾ). ಮೂರೆಳೆಯ ಸರ, – ಹಾರ. ಪಂಚರತುನದೊಳೆ ನೆಜಿದ ಪಸರದಿಂ ತೋರಣಂಗಳೊಳೆ ತೊಡರ್ದ ತಿಸರದಿಂ (ಪಂಪಭಾ.೩-೨೨); ಸಿರಿ ಕಂಡದಣ್ಪು ಮುತ್ತಿನ ತಿಸರಂ ಮೃಣಾಳಿಕೆಯ ಮುದ್ರಿಕೆ ಪೂವಿನ ಪೊಂದು ಗಂಕಣಂ (ಪಂರಾಮಾ. ೩-೧೦೬); ಸತಿಯ ಕುಚಯುಗಮಧ್ಯಂ ತಿಸರಕ್ಕೆಡೆಗುಡ ದೆಂದಾ ಆಸಿಯುಳ್ಗೆ ಸವೆಕ್ಕಸರಮನಿಕ್ಕಿದಳೊರ್ವಳ್ (ಜಗವಿ. ೧೦-೧೧೪); ಎರ್ದೆವತ್ತಿದ ಮಲ್ಲಿಗೆಯ ತಿಸರವೇಂ ಸೊಗಯಿಸಿತೊ (ಕಬ್ಬಿಕಾ. ೧೪೦).

[< ಸಂ. ತ್ರಿಸರ]

**ತಿಸರ$_2$** (ನಾ). ಮೂರು ಬಾಣ: ತ್ರಿಶರ—ತಿಸರ; ತ್ರಿಶೂಲ—ತಿಸುಳ (ಶಮುದ. ೨೯೦ ಪ್ರಯೋ). [< ಸಂ.ತ್ರಿಶರ]

**ತಿಸರ$_3$, ತಿಶ್ರ, ತಿಸರು, ತಿಸ್ರ** (ನಾ). ೧. ತಿಕ್ಕಾಟ; ಜಗಳ; ಕಲಹ; ಮನಸ್ತಾಪ : ರಾತ್ರಿಯೆಲ್ಲ ಗಂಡಹೆಂಡಿರ ತಿಸರ (ಅವತಂ. ೦೩೦). **ತಿಶ್ರ** : ೧. ಸಂಸಾರದಲ್ಲಿ ಏನು ತಿಶ್ರ ಬಂದಿತ್ತೊ (ಕಲಸಿ. ೨೪೭). ೨. ಗೊಂದಲ; ತೊಂದರೆ; ಕಷ್ಟ : ಈ ಚಿಲ್ಲರೆ ನಾಣ್ಯದ ಎಣಿಕೆ ಮುಗಿಯದು, ಲೆಕ್ಕ ಸರಿಬೀಳದು, ಈ ತಿಶ್ರದಲ್ಲಿ ಬೆಳಗಾಯಿತು (ಆದೂಟ. ೧೧). **ತಿಸರು** : ೧. ಮೊದಲಿನಲ್ಲಿ ಸ್ವಲ್ಪ ತೊಂದರೆ ತಿಸರುಗಳಿದ್ದರೂ ಮುಕ್ತಾಯದಲ್ಲಿ ಸುಖ ಸಂತೋಷಗಳೇ ತುಂಬಿದ್ದುವು (ರಂಗಕ. ೯೧). **ತಿಸ್ರ** : ೧. ಯುವಕ ಮಕ್ಕಳೊಡನೆ ಒಂದೇ ಮನೆಯಲ್ಲಿರುವಾಗ, ತಿಸ್ರವು ಅನಿವಾರ್ಯ (ಮನೋನಂ. ೨೪೦). [?]

**ತಿಸರಿ** (ನಾ). ಒಂದು ಬಗೆಯ ತಂತಿವಾದ್ಯ: ಬಾಜಿಪ ಬೀಣೆಯುಂ ತಿಸರಿಯುಂ [ಪಾಠಾಂ. ತಿಸರವುಂ] ಕೊಳ್ಳೆಂದು ಬಲ್ಲಂಗಿವಂ ಕುಡಿಂ (ಆಜಿಪು. ೬-೧೦೮); ವೀಣೆಯ ಕೆಳೆಯ ಕಳೆಯೊಲ್ದಳವೇಱ ಲುಳಿಯ ಪಿರಿಯ ದನಿಯೊಳ್ತಿಸರಿಯ ಸುಸರತನಮುಂ ಮುಹರಿಯ ಮಧುರತೆಯುಂ ಬೀಣೆಯ ಬಹುಳಿಕೆಯುಂ ಎಸೆಯೆ (ವರ್ಧಪು. ೯-೪೩ ವ); ಬಾಜಿಸುವಮರರಮಣಿಯರ್ಕಳ ತಿಸರಿಯ ಕಿನ್ನರಿವೀಣೆಯ ನವವಿಧದ ರವಂ (ಅನಂಪು. ೪-೮೭); ವಿಪಂಚಿಕೆ ... ತಿಸರಿ ... ರಾಗವಾಲಿನೀ, ಕಾಲಕೀಯೆಂಬ ಮೂವತ್ತು ಮೂಱು ತಂತ್ರೀ ವಾದ್ಯಂಗಳಲ್ಲಿ (ವಿವೇಕ. ೨೩೭). [?]

**ತಿಸರು** 'ತಿಸರ$_3$' ನೋ.

**ತಿಸು** (ನಾ). ಒಂದು ಅನುಕರಣ ಶಬ್ದ. 'ತಿಸುಗುಟ್ಟು' ಪರಾ.

**ತಿಸುಗುಟ್ಟು** (ಕ್ರಿ). ಗೊಣಗೊಣ ಶಬ್ದ ಮಾಡು ; ಗೊಣಗಾಡು : (ಸ).

[ತಿಸು + ಕುಟ್ಟು$_1$]

**ತಿಸುಳ** (ನಾ). ಮೂರು ಮೊನೆಯನ್ನುಳ್ಳ ಒಂದು ಬಗೆಯ ಆಯುಧ ; ತ್ರಿಶೂಲ : "ತಿಸುಳಮೆನಲ್ ತ್ರಿಶೂಲಂ" (ಕರ್ಣಾನಿ. ೬೧); ತಿಸುಳದೊಳು ಚ್ಚಳಿಪ ಪೊಸನೆತ್ತರೆ ಕೆಂದಳಿರಾಗೆ (ಪಂಪಭಾ.೧-೭); ಬಂದುಗೆಗಳ ತಿಸುಳದ ಮೊಲ್ಲೆಯಿಟ್ಟಿಗಳ ಕಾಮಿನಿಯರ್ (ಗಿರಿಕ. ೭-೫೩); ಬಿಸುಪಪುರ್ದ ನೊಸಲ ಕಣ್ಣುಂ ತಿಸುಳಂಗಳನಾಂತ ಕೈಗಳುಂ ನೋಟ್ಪರನಂಜಿಸೆ (ಕಬ್ಬಿಕಾ. ೨೫೫); ನೋಡುತ ತಿಸುಳಮಂ ತಿರುಪುತೆ (ಚಿಬಪು. ೧೯-೩೪). [< ಸಂ. ತ್ರಿಶೂಲ]

**ತಿಸುಳಪಾಣಿ** (ನಾ). ಕೈಯಲ್ಲಿ ತ್ರಿಶೂಲವುಳ್ಳ ವ್ಯಕ್ತಿ : ಒಂದಂಚಿನಲ್ಲಿ ತಿಸುಳಪಾಣಿಯಾಗಿ ನಿಂತು, ಸುತ್ತ ತನ್ನ ಬೆದಕುಗಣ್ಣುಗಳಿಂದ ಅಭೀಕ್ಷಿಸು ತ್ತಿರುವಳು (ನಡದಾ. I, ೪೪೯). [< ಸಂ. ತ್ರಿಶೂಲಪಾಣಿ]

**ತಿಸುಳಿ$_1$** (ನಾ). ತ್ರಿಶೂಲವನ್ನು ಹಿಡಿದವನು ; ಶಿವ : "ಗಿರೀಶಂ ತಿಸುಳಿ" (ಕರ್ಣಾನಿ. ४೮); ಗಂಡುತನವುಂ ಮೆಱೆ ತಿಸುಳಿಯೊಳಿಜಿಗು ಪಿರಿಯವರ್ಗಳೆ ಯೊಡೆಯಾ(ಕಬ್ಬಿಕಾ. ೨೩೦); ನಿಸಿಗಡೆಯೊಳಿದ್ದರಸು ಕನಸಾದ ಹದೆಯ ದೊಳ್ ತಿಸುಳಿಯಾಡಿದ ನುಡಿಯ ಮನದೆಗೊಂಡಾಗ (ಚೀರಮ. ೯-೧೧); ತಿಸುಳಿಯೊಳ್ ಬಿನ್ನವಿಸುತಿರ್ದರಾ ಬೇಹಿಗಳ್ ಲೀಲೆಯಿಂದೋಲಗದೊಳು (ನಂದಿಮಾ. ೫-४೮); ಕೆದರ್ದ ಕಪರ್ದದಿಂ ತಿಸುಳಿ ಮುಪ್ಪೊಳಲೆಂದು ಕನಲ್ದು ಪಾಯ್ದಿನಂ (ಗೀತಗೋ. ೩೩-೫४); ತಿಸುಳಿ ಪಣೆಗಣ್ಣುರಿಯುನುರ್ವಿಸೆ (ಕಮಮಾ. ೧೫-४೩). 'ತ್ರಿಸೂಲಿ' ಪರಾ [< ಸಂ. ತ್ರಿಶೂಲಿನ್]

**ತಿಸುಳಿ$_2$** (ನಾ). ಮೂರು ಶೂಲಗಳು ಒಟ್ಟಿಗೆ ಇರುವ ಆಯುಧ. 'ತಿಸುಳಿಗೆಯ್ಯ' ಪರಾ. [< ಸಂ. ತ್ರಿಶೂಲೀ]

**ತಿಸುಳಿಗೆಯ್ಯ** (ನಾ). ತ್ರಿಶೂಲವನ್ನು ಹಿಡಿದವನು ; ಶಿವ : ತಪಮನಾ ಚರಿಸುತಿರಲೊಡಂ ಕೆಲವಾನುಂ ದಿನಕ್ಕೆ ತಿಸುಳಿಗೆಯ್ಯಂ ಮೆಯ್ದೋಱದಂ (ರಾಮಾಶ್ವ. ೧೩೭-೧೨). [ತಿಸುಳಿ$_2$ + ಕೆಯ್$_2$ + – ಅ$_7$]

**ತಿಸುಳಿಗೆಳೆಯ** (ನಾ). ಶಿವನ ಸ್ನೇಹಿತ ; ಕುಬೇರ : "ಪೊನ್ನೆಱೆಯ ತಿಸುಳಿ ಗೆಳೆಯಂ ಕಿನ್ನರಪತಿ" (ಕರ್ಣಾನಿ. ೧). [ತಿಸುಳಿ$_1$ + ಕೆಳೆಯ]

**ತಿಸುಳಿಯಣುಗ** (ನಾ). ೧. ಶಿವನ ಮಗ ; ಷಣ್ಮುಖ. ೨. ಶಿವಭಕ್ತ : ಪಾವಕಂ ತಿಸುಳಿಯಣುಗನ ಪಾದಕೆಱಗಿ (ಗುರುಚಾ. ೧೧-೩४).

[ತಿಸುಳಿ$_1$ + ಅಣುಗ (< ಅಣುಂಗ)]

**ತಿಸ್ರ** 'ತಿಸರ$_3$' ನೋ.

**ತಿಹುರ** 'ತಿಪುರ' ನೋ.

**ತಿಹುರಾಂತಕ** 'ತಿಪುರಾಂತಕ' ನೋ.

**ತಿಹುರಿ** 'ತಿಗುರಿ' ನೋ.

**ತಿಳ** 'ತಿಲ' ನೋ.

**ತಿಳಕ** 'ತಿಲಕ' ನೋ.

**ತಿಳಕಿಸು** 'ತಿಲಕಿಸು' ನೋ.

**ತಿಳಕೆ** (ನಾ). ಆನೆಯ ಸಪ್ತಮದಾವಸ್ಥೆಗಳಲ್ಲಿ ಒಂದು ; ತಿಲಕಿತ : ನವ ಯೌವನಲಕ್ಷ್ಮಿಯೊಳಾಗೆ ವಿವಾಹಂ ತಿಳಕಮಿಟ್ಟವೋಲ್ ತಿಳಕೆಯದೊಪ್ಪುವ ಕತ್ತುರಿಯುಂ ತೊಡೆದಂತೆವೊಲರ್ಧಕಪೋಳ ಪುಟ್ಟಿದುದು ಗಜಪತಿಯೊಳ್ (ಪಾರ್ಶ್ವಪು. ४-೧೧೭). [ಸಂ. ತಿಲಕ]

**ತಿಳಜ** 'ತಿಲಜ' ನೋ.

**ತಿಳತೈಳ** 'ತಿಲತೈಲ' ನೋ.

**ತಿಳಲು** 'ತಿರುಳ್' ನೋ.

**ತಿಳಿ$_1$** (ಕ್ರಿ). ೧. ನಿರ್ಮಲವಾಗು ; ಶುದ್ಧವಾಗು ; ಸ್ವಚ್ಛವಾಗು : ದೆಸೆಗಳ್ ವಿಳಾಸಮಾದುವು ಕೆಸಱುಂ ಪಿಂಗಿತ್ತು ಧರಣಿ ತಿಳಿದುವು ಕೊಳಗಳ್ (ಕವಿರಾ. ೨-೬೧); ಬಚ್ಚಲ ನೀರು ತಿಳಿದಲ್ಲಿ ಫಲವೇನು (ಬಸವ. ೧೨೦); ತಿಳಿದ ತಡಿದಡಿಯ ಮಡಿಗಳ ಜಳದೊಳ್ ರಂಜಿಸುವ ಧಾನ್ಯಮಂಜರಿಯ ನೆಟಲ್ ಪೊಳೆಯೆ (ಚಂದ್ರಪು. ೧-೯೨); ತಿಳಿದುದು ನೀರ್ಗಳಂತೆ ಗಗನಂ (ಅನಂಪು. ೧೧-೭); ಪಾವಸೆ ಕಿಡಲೊಡಂ ನೀರ್ತಿಳಿದುದು (ಶಮುದ. ೨४೭ ಪ್ರಯೋ); ನೀರ್ ತಿಳಿದುದು ಪೂಗೊಳದೊಳ್ ದಾಂಗುಡಿ ತೋಱದುದು ಲತಾಳಿಯೊಳು (ಜಯಸೇ. ೧೧-४); ತಿಳಿಯ ಕಾಸಿದ ತುಪ್ಪವಳಿದು ಹಾಲ ಪ್ಪುದೆ (ಸರ್ವಜ್ಞ. ೩೫೮). ೨. ಶುಭ್ರವಾಗಿ ಪ್ರಕಾಶಿಸು,–ಹೊಳೆ : ಸಳ್ಳು ಗುರ್ಗಳ ತೆಳ್ಪನೆ ತಿಳಿದ ಕಾಂತಿ ಕುಸುಮಿಸುವಿನೆಗಂ (ಅನಂಪು. ೬-೬४); ತಿಳಿದ ಜೊನ್ನಕೆ ಜೊನ್ನವಕ್ಕಿಗಳೆಳಸುವಂತೆಳಸುವುದೆ ಕೆರಳದೆ ರಾತ್ರಿಜಾಗರನು

(ಸಾಳ್ವಭಾ. ೧-೪೨) ; ಭಸಿತಲೇಖೆ ಬೆಳ್ವಕ್ಕದ ಬಿದಿಗೆಯ ಚಂದವನೊಂದಂದದ ತಿಳಿದ ಕಳೆಯನಿಳಿಕೆಯ್ಕೆ (ರಾಮಾಶ್ವ. ೦೩೯-೧೧) ; ತಿಳಿದು ನೀಳ್ದುವು ದಿಶಾಳಿ (ಶ್ರೀರಾಮಾ. ೫೪೨-೫೦). ೩. ಕೋಪವನ್ನುಳಿ ; ಪ್ರಸನ್ನವಾಗು ; ಸಮಾಧಾನಗೊಳ್ಳು : ಮುಳಿದಿರೆ ಪಾದಪಂಕಜಮನಾಂ ತಲೆಯೊಳ್ ನಿಲೆ ತಾಳ್ದಿನಲ್ಲಳೇ ತಿಳಿಯೆನೆ ನಲ್ಲಳೆನ್ನ ಪೆಸರಲ್ತೆಮಗಾ ಪೆಸರಾಕೆಯಂಳ್ದೊಡಂ ತಿಳಿಪೆನೆ ಮತ್ತಮಾ ಪೆಸರ್ಗೆ ನೀನಿರೆ ನೋಂತವಳಾವಳೆಂಬುದುಂ ತಿಳಿದವುರ್ದಪ್ಪಿದಂದಂ (ಆದಿಪು. ೪-೧೦) ; ಮುನಿಸಿನೊಳಾದಮೋವಯಿಸಿ...ಬಯ್ದುನುವಿಸಿ ಕಾಡಿ ನೋಡಿ ತಿಳಿದಟ್ಟುಜನಿಟ್ಟುಳಿಗೊಂಡಲಂಪುಗಳ್ ಕನಸಿನೊಳಂ ಪಳಂಚಲೆವು[ವೆ]ನ್ನೆದೆಯೊಳ್ (ಪಂಪಭಾ. ೪-೧೦೬) : ಕಿನಿಸಿ ಕಡುಪಿನಿಂದಂ ನಡುಗಿದಪುದು ತಿಳಿಯದೆಂತುಮಾರ್ತಿಳುಪಿದೊಡಂ (ಕಾದಂಬ. ೬೬) ; ಮುಳಿದಾಗಡೆ ಕೂರ್ಪ್ಪವರೊಳ್ತಿಳಿವುದು ತಿಳಿವುದು ಗಡೆನ್ದು ಸಾಱುವ ತೆಱದಿಂ ಗಳಪುವ ಗಿಳಿವಿಂಡಿನ ಕಳಕಳಂ (ಮ್ಯಆರಿ. ೧೯೨೮, ೧೧-೪೬ ; 1189) : ಬಱಿದೆ ಮುಳಿದು ತಿಳಿಪೆ ತಿಳಿದು ನೆರೆವ ಬೇಡವೆಂಡಿರಿಂ (ಕಬ್ಬಿಗಕಾ. ೨೧೮) ; ಬಲುಮುನಿಸು ನಿಮ್ಮಿಂದವಲ್ಲದೆ ತಿಳಿಯದೆನುತಂ (ಬಸಪು. ೪೬-೪೬) ; ತರುಣಿ ಕರ ಬಡವಾದೆಯಿನ್ನೂ ತಿಳಿಯದೇ ಮುನಿಸು (ಭಾಶಿರಾ. ೧೦-೬೫). ೪. ಅರಿ; ಕಲಿ ; ಗ್ರಹಿಸು ; ವಿಷಯವನ್ನು ಗೊತ್ತುಮಾಡಿಕೊಳ್ಳು,—ಸಂಗ್ರಹಿಸು : ಏದೊರೆತು ತಾನೆಮ್ಮಯ್ಯನೈಶ್ವರ್ಯಮಿಂತಿವನೆಲ್ಲಂ ತಿಳಿವಂತುಟಾಗಿ ಬೆಸಸಿಂ (ಪಂಪಭಾ. ೬-೧೫) ; ನೀಂ ತಿಳಿದಿರ್ದುಂ ಮದ್ವೃತ್ತಾಂತಮನೇನೆಂದು ಕೆಳೆಯ ಬೆಸಗೊಂಡಪೆ (ಕಾದಂಪೂ. ೮೪೪) ; ಜಿನೇಂದ್ರಧರ್ಮಮಂ ಸಾರಮೆನಿಪ್ಪುದಂ ತಿಳಿದು ನಂಬಿದರನ್ನರನೇಕೆ ಪೊರ್ದುವರ್ (ಧರ್ಮಾಮೃ. ೧-೦೭೯) ; ಬೆಳೆದ ಭೂಮಿಯಲೊಂದು ಪ್ರಳಯದ ಕಸ ಹುಟ್ಟಿ ತಿಳಿಯಲೀಯದು ಎಚ್ಚಱಲೀಯದು (ಬಸವ. ೫೦) ; ಆ ಶಬ್ದಶಾಸ್ತ್ರ ವ್ಯವಹಾರಮಂ ತಿಳಿಯಲ್ಕೆ ಅಕ್ಷರಸಂಜ್ಞಾಸ್ವರೂಪಂ . . . ಪೇಟಲ್ಪಡುಗುಂ (ಶಮದ. ೧ ವೃತ್ತಿ) ; ಕಳುಹಲತ್ತಲು ಹೋಗಿ ಸಾತ್ಯಕಿ ತಿಳಿದು ಮರಳಿದುದಿಲ್ಲ ಫಲುಗುಣನಳಿದನೋ ಮೇಣು ಳಿದನೋ (ಕುಮಾರವ್ಯಾ. ೧೨-೨). ೫. ಗೊತ್ತಾಗು ; ಸ್ಪಷ್ಟವಾಗು : ಅಪಡಕ್ಷೀಣಃ . . . ಮಾರನೆಯವನು ಮೊದಲಾಗಿ ಯಾರಿಗೂ ತಿಳಿಯದಂತೆ ನಡೆದ ಇಬ್ಬರ ಏಕಾಂತ ವಿಚಾರಕ್ಕೆ ಹೆಸರು (ಸಿದ್ಧಾಂತಿ. ೨೧೮) ; ನೀನು ಹೇಳಿದ್ದು ನನಗೆ ತಿಳಿಯಲಿಲ್ಲ (ರೂಢಿ). ೬. ವಿಚಾರಮಾಡು ; ಯೋಚಿಸು : ಆ ಸುಜ್ಞಾನದೃಷ್ಟಿಯಿಂ ತಿಳಿದು ನೋಡಿ . . . ಪ್ರಭುದೇವರು ನಿರೂಪಿಸುತಿರ್ದರು (ಶೂನ್ಯಸಂ. ೪-೦೯) ; ತಿಳಿವೊಡೆ ಶಶಿ ರವಿ ರವಿ ಶಶಿ (ಗಿರಿಕ. ೯-೭೪) ; ಎಮ್ಮ ಶರಣರ್ಗೆ ಸಂಸಾರಸಂಗಂ ತಿಳಿಯೆ ಬಂಧವಲ್ಲಲ್ತು (ಪದ್ಮರಾ. ೩-೮) ; ತಿಳಿಯಲೆಮ್ಮೈವರಿಗೆ ಜೀವನದುಳಿವು ನಿನ್ನದು (ಕುಮಾರವ್ಯಾ. ೯-೪೮) ; ನಿನ್ನೊಳಗೆ ನೀನೇ ತಿಳಿದು ನೋಡು (ಪುರಂದ. ೧-೮೨-೨೮) ; ತಪ್ಪದಾರದು ತಿಳಿದು ನೋಡೆ ತಪ್ಪದಾರದು (ಗೀತಗೋ. ೬೦-೬). ೭. ಭಾವಿಸು ; ಬಗೆ : ವಿನೀತನಂ ದೂರದಿಂ ನೋಡಿ ಪಾತಕನಿವನೆಂದು ತಿಳಿದು ಪೋಗಳೆಂದಿರೆ ನಂಬದಿರ್ (ಕಾದಂಪೂ. ೫೪೯) ; ಬರೆದಿಹ ಲಿಪಿಯನೆತ್ತಿ ವಾಚಿಸಿಕೊಂಡು ತರಳಾಕ್ಷಿ ತಾನದಕೆ ಮತ್ತೊಂದಭಿಪ್ರಾಯಮಂ ತಿಳಿದಳು (ಜೈಮಿಭಾ. ೩೦-೨೬) ; ಅವನಂ ಪುಲ್ಲಂ ತಿಳಿದಂ (ಶಬ್ದಾನು. ೨೧೯ ಪ್ರಯೋ) ; ನನ್ನನ್ನು ಕಳ್ಳನೆಂದು ತಿಳಿದೆಯಾ ? (ರೂಢಿ). ೮. (ನಿದ್ರೆಯಿಂದ ಅಥವಾ ಮೂರ್ಛೆಯಿಂದ) ಎಚ್ಚರವಾಗು ; ಎಚ್ಚರಹೊಂದು : ಸುಗ್ಗವ್ವೆ ಕಡುಸುಖದ ಸೊಗಸಿನ ಜೊಮ್ಮು ತಿಳಿದು ಪ್ರೈಮುರಿದೆದ್ದಳು (ಸಿದ್ಧರಾ. ೧-೬೦) : ತಿಳಿದುದು ರ್ಸೊವ್ಮಿನುಮ್ಮೋಹ (ಕುಮಾರವ್ಯಾ. ೦೭-೧೩). ೯. (ಸೊಕರ್ಕ್ಕು, ಅಮಲು) ಇಳಿ : ಸಿರಿಯೆಂಬ ಸೊರ್ಕು ತಿಳಿಯದು ಪರಿಣಾಮದಿನಂಜನಂಗಳಿಂದಂ (ಕಾದಂಪೂ. ೫೩೦) ; ಕಳ್ಳಂ ಕುಡಿದಂ ತಿಳಿದಂ ದೊಳ್ಳಿತು ಹೊಲ್ಲೆಂದುಮಱಿವಂ (ಸಮುಪ. ೪-೧೫೨) ; ಮರುಳಾಗಿರ್ದನ ಮರುಳ್ತನಂ ತಿಳಿದವೋಲೋಸರಿಸಿರೆ ಮಿಥ್ಯಾತ್ವಂ (ವರ್ಧಪು. ೧೨-೩) ; ಅವಧರಿಸು ಧೃತರಾಷ್ಟ್ರನೃಪ ನಿನ್ನವಗೆ ತಿಳಿದುದು ಸೊಕ್ಕು (ಕುಮಾರವ್ಯಾ. ಕ. ೨೦-೧). ೧೦. (ಬರ) ಹಿಂಗು ; ಇಲ್ಲದಂತಾಗು : ಧರಾಜನದ ಕಣ್ಣ ಬಱ ತಿಳಿದವು (ಸಿದ್ಧರಾ. ೬-೪೫). ೧೧. ಕಾಣು; ನೋಡು: ದೇವರ್ಕಳಂ ತುಂಬಿಯಂ ತಿಳಿಯಲ್ ಸ್ವಪ್ನದಿ ಲೇಸಲ್ತೆ (ಸೋಮೇಶ. ೬೯). ೧೨. ಅನುಭವಿಸು : ಮನವರಿಯದ ಪಾಪವಿಲ್ಲ, ತನು ತಿಳಿಯದ ನೋವಿಲ್ಲ (ಗಾದೆ).

[ದೇ. ॥ ತಮಿ. ತೆಳಿ, ತೆಳ್, ತಳಿ ; ಮಲ. ತೆಳಿಯು ; ತುಳು. ತೆಲಿ, ಸಲಿ ; ಕೊಡ. ತೇಳಿ ; ತೆಲು. ತೆಲಿ]

**ತಿಳಿ₂** (ನಾ). ೧. ಸ್ವಚ್ಛತೆ; ನೈರ್ಮಲ್ಯ; ಪರಿಶುದ್ಧತೆ: "ತಿಳಿ–ನೈರ್ಮಲ್ಯೇ, ಜ್ಞಾನ, ಪ್ರಸನ್ನಭಾವಯೋಃ (ಒಲಿ), ಕಾಂಜಿಕೇ ಚ (ಗಂಜಿ)" (ಶಮಧಾ). ೨. ಗಂಜಿ, ಮಜ್ಜಿಗೆ, ಸಾರು, ಹೆಂಡ ಮೊದಲಾದಂವುಗಳ ನೀರಾದ ಭಾಗ,—ಮಂದವಲ್ಲದ ಭಾಗ : ಒಡೆವ ಸಮಯದೊಳು ಹಾಲೊಳಗೆ ಸುಣ್ಣದ ತಿಳಿಯ ಬಿಡಲು ಚುಮ್ಮನೆ ತಿಳಿವುದದು (ಸೂಪಶಾ. ೨-೫) ; ಬಡಿಸಿದರ್ ಮಂದನೆ ಮಜ್ಜಿಗೆ ಕಲಬರ್ಗೆ ನಿಡಿವೆತ್ತ ತಿಳಿ ಕಲಬರ್ಗೆ (ಮೋಹತ. ೧೪-೧೫) ; ಕೆಟ್ಟ ಹಾಲಿಂದ ಹುಳಿಯಿಟ್ಟರ್ದ ತಿಳಿ ಲೇಸು (ಸರ್ವಜ್ಞ. ೧೦೦೦) ; ಮೇಲಿನ ಕೆನೆಯನ್ನೆಲ್ಲಾ ಚೆಲ್ಲಿಬಿಟ್ಟು ಉಳಿದ ತಿಳಿಗೆ ಈ ಔಷಧಿ ಹಾಕಿ ಕುಡಿ (ವೈಸರ್ವ. ೭೬) 'ತಿಳಿಸುಣ್ಣ' ಪರಾ. ೩. ತಿಳಿಯಾಗಿರುವುದು ; ಲಘುವಾಗಿರುವುದು ; ಮಂದವಲ್ಲದುದು. 'ತಿಳಿನಿದ್ರೆ', 'ತಿಳಿನೀಲಿ' ಪರಾ. ೪. ಪ್ರಸನ್ನತೆ ; ಕೋಪ ಇಳಿಯುವಿಕೆ. ೫. ತಿಳಿವಳಿಕೆ ; ಜ್ಞಾನ : "ನಿರ್ಮಲ ಚಷಕ ಜ್ಞಾನ ಪ್ರಸನ್ನತ್ವಗಳೊಳುಂ ತಿಳಿಯೆಂದೆನಿಕ್ಕು" (ಶಬ್ದಮಂ. ೧೧೪) ; ಈ ಬಾಳ್ವೆಯೆಂಬ ಮುಗಿಲಲ್ಲಿ ತಿಳಿಯೆಂಬ ಹೊತ್ತು ಮೂಡಲಿ (ಕಗದ್ಯ. ೪೩). 'ತಿಳಿಗೇಡಿ', 'ತಿಳಿವುಟ್ಟು' ಪರಾ. (ಗು). ೬. ಸ್ವಚ್ಛವಾದ ; ಪರಿಶುದ್ಧವಾದ : ಸಂಗಮೇಶ್ವರಂಗೆ ಹೊಸ ಪುಷ್ಪಮಂ ತಿಳಿಯಗ್ಘವಣಿಯಂ ತಂದು ಓಜೆಯಿಂ ಪೂಜೆಗೈದು (ಬಸರ. ೨-೬೭). 'ತೆಳ್' ಪರಾ.

**ತಿಳಿಯಾಗು** = ೧. ಸ್ವಚ್ಛವಾಗು ; ನಿರ್ಮಲವಾಗು : ಬಾವಿ ನೀರು ತಿಳಿಯಾಗಿದೆ (ರೂಢಿ). ೨. ನೀರಾಗು : ಸಟ್ಟುಗದಿ ತೊಳಸಿ ಮಂದಮಂದನೆ ಘಟ್ಟಿಯಾಗುತಿಹ ಸಮಯದೊಳಗೊಂದಿನಿಸ ತೆಗೆತೆಗೆದು ತಿಳಿಯಾಗುವಾಹದಂ ಬಂದಾಗಲಿಳುಹಿ (ಸೂಪಶಾ. ೧-೪೧). ೩. ಶಾಂತವಾಗು ; ಸಮಾಧಾನ ಸ್ಥಿತಿಗೆ ಬರು : ಮನೆಯಲ್ಲಿ ನೆಲಸಿದ ಕಾತರತೆಯ ವಾತಾವರಣ ಮೆಲ್ಲನೆ ತಿಳಿಯಾಗುತ್ತಿದ್ದಂತೆ ಒಬ್ಬೊಬ್ಬರೇ ಚೇತರಿಸಹತ್ತಿದರು (ಮೂರುದಾ. ೨೭೩). ೪. ಸ್ಪಷ್ಟವಾಗು ; ಸರಳವಾಗು : ಗೀತೆಯು ಜೀವನ ಸಾರಸರ್ವಸ್ವವನ್ನು ತಿಳಿಯಾಗಿ ಸುಲಭವಾಗಿ ಹೇಳುವುದು (ಧರ್ಮಸಾ. ೧೧೧).
[ <ತಿಳಿ₁. / ತಮಿ. ಮಲ. ತೆಳಿ, ತೆಳಿವು ; ತುಳು.ತಿಳಿ,ತೆಲಿ, ತೆಳಿ, ಸೆಲಿ, ಸೆಳಿ ]

**ತಿಳಿ₃** (ನಾ). ಪಾನಪಾತ್ರೆ ; ಚಷಕ : "ನಿರ್ಮಲ ಚಷಕ ಜ್ಞಾನ ಪ್ರಸನ್ನತ್ವಗಳೊಳು ತಿಳಿಯೆಂದೆನಿಕ್ಕು" (ಶಬ್ದಮಂ. ೧೧೪) ; ಎಳಿ ಮಕ್ಕಳೆ ತುಂಬಿಸೀ ತಿಳಿಗೆ ತೀವೆ ಮದಿರೆ ಬತ್ತದ ಮುನ್ನ ಬಾಳ ತಿಳಿಯೆಡೆಯಿಂ (ಗೀವಿಂ. ೧೧೬-೨) ; ಹಿಂದಣನುತಾಪ ಮುಂದಣ ಭಯವ ಮರಸಿ ಇಂದನೊಸೆಯಿಪ ತಿಳಿಯ ತುಂಬು ನನ್ನರಸಿ (ಗೀವಿಂ. ೧೧೪-೧೫).

[ ? . / ತೆಲು. ತೆಲೆ, ತೆಲಿಯ = ತಟ್ಟೆ . /ಸಂ. ಸ್ಥಾಲೀ ]

**ತಿಳಿಗಂಪು** (ನಾ). ಶುದ್ಧವಾದ ಪರಿಮಳ ; ಸುವಾಸನೆ : ಕತ್ತುರಿಗಂಪು ಸಿರಿಕಂಡದ ತಿಳಿಗಂಪು ಪೊಂಬಾಳೆ ಕರ್ಪುರಗಂಪುಗಳೆ ಸುಯ್ಯೊಳುಣ್ಮುವ ಬೆಮರ್ಗಳೊಳ್ ಮೆಯ್ಗಳೊಳ್ ಸಲೆ ಸಾಮಜಗಮನೆಯರ್ (ಚಿಬಪು. ೩೭-೪೭). 'ನಱುಗಂಪು' ಪರಾ. [ ತಿಳಿ₂ + ಕಂಪು ]

**ತಿಳಿಗಚ್ಚು** (ನಾ). ತೆಳ್ಳಗಿರುವ ಗಾರೆ ; ಗಾರೆಯ ತಿಳಿ : "ಗೋಡೆಯ ಮೇಲ್ಮೈಗೆ ಬಳಿಯುವುದಕ್ಕೂ ಶಿಲ್ಪಾಲಂಕಾರ ಕೆಲಸಕ್ಕೂ ಉಪಯೋಗಿಸುವ ಹಲವು ಬಗೆಯ ಗಾರೆ ಅಥವಾ ಸಿಮೆಂಟು : ತಿಳಿಗಚ್ಚು" (Stucco. ಇಂಕನಿ). [ ತಿಳಿ$_2$ + ಗಚ್ಚು$_2$ ]

**ತಿಳಿಗಣ್ಣು** (ನಾ). ತಿಳಿವಳಿಕೆಯಿಂದ ಕೂಡಿರುವ ದೃಷ್ಟಿ ; ಜ್ಞಾನದೃಷ್ಟಿ : ತಿಳಿಗಣ್ಣಿಗೆ ಎಲ್ಲ ಜೀವನವು ರಸಮಯವಾದ ನಾಟಕವಾಗಿ ಅನುಭವಕ್ಕೆ ಬರುವದು (ಸಾಹಿವಿ. ೧೪೪); ತಿಳಿಗಣ್ಣಿನಿಂದ ಎಲ್ಲವನ್ನು ತಿಳಿದವರಾದ ಶರಣರು (ಶರಡ. ೭೨೯). [ತಿಳಿ$_2$ + ಕಣ್ಣು (< ಕಣ್)]

**ತಿಳಿಗನ್ನಡ** (ನಾ). ಶುದ್ಧವಾದ ಕನ್ನಡ: ಇವರು 'ಜ್ಯೋತಿಶಾಸ್ತ್ರ', 'ಪ್ರಾಕೃತಿಕ ಭೂಗೋಲ', 'ಉಪನ್ಯಾಸವಿದ್ಯೆ' ಎಂಬ ಶಾಸ್ತ್ರೀಯಗ್ರಂಥಗಳನ್ನು ತಿಳಿಗನ್ನಡದಲ್ಲಿ ಬರೆದರು (ಕಗದ್ಯ. II, ೧೨); ತಿಳಿಗನ್ನಡದ ನುಡಿಗಳಲ್ಲಿಯೇ ವಿರಚಿತವಾದ ಪದ್ಯಗಳು ಓದಲು ಇಂಪಾಗಿವೆ (ಕಾಲೂರ. ೧೩ ಮುನ್ನುಡಿ). [ ತಿಳಿ$_2$ + ಕನ್ನಡ$_1$ ]

**ತಿಳಿಗಳ್** (ನಾ). ಚೊಕ್ಕವಾದ ಮದ್ಯ ; ಬೆರಕೆಯಿಲ್ಲದ ಹೆಂಡ,–ಕಳ್ಳು : ತಿಳಿಗಳ್ಳೆಱೆಯಲ್ ಕುಡಿಯಳ್ಳೆ ಓಟ್ಗಲಾಗಳೆ ಕುಡಿದು (ದಶಕು. ೮-೨೧೫). [ ತಿಳಿ$_2$ + ಕಳ್$_3$ ]

**ತಿಳಿಗಾಸು** (ಕ್ರಿ). ಶುದ್ಧವಾಗುವವರೆಗೆ ಕಾಯಿಸು ; ತಿಳಿಯಾಗುವಂತೆ ಕಾಯಿಸು : ಕಾರ್ಬೊನ್ನ ತಿಳಿಗಾಸುತ್ತೆ ಜಲದೊಳದ್ದುವ ತೆರದಿ ಚುಯಿ ಚರ್ರೆಂದೆನುತೆ (ನವಮೋ. ೬-೫೯). [ ತಿಳಿ$_2$ + ಕಾಸು$_1$ ]

**ತಿಳಿಗೇಡಿ** (ನಾ). ಅರಿವಿಲ್ಲದವನು ; ಬುದ್ಧಿಗೇಡಿ ; ಅವಿವೇಕಿ : ಜಡರು ನಿನ್ನವೊಲಾರು ಪೊಡವಿಲಿ ಗೆಡಹದಿರು ತಿಳಿಗೇಡಿ ನೀ ಹೋಗೆಂದ ದಶಕಂಠ (ಕಾಶಿರಾ. ೨೪-೨೯) ; ತಿಳಿಗೇಡಿ ಕಂದನು ಕೇಳದಲೆ ಬೆಟ್ಟದ ಕೊಳ್ಳ ಕಮರಿಯೆಡೆ ಹೊರಳಿದನು (ಸಿದ್ಧಪು. ೫-೭೧) ; ಈ ಜನರು ಎಂಥಾ ತಿಳಿಗೇಡಿಗಳು (ಮುಂಬಯಿ. ೪-೨೧). [ತಿಳಿ$_2$ + ಕೇಡಿ$_1$]

**ತಿಳಿಗೇಡಿತನ** (ನಾ). ಮೂರ್ಖತನ ; ಅವಿವೇಕ : ಕೈಯಲ್ಲಿ ಹಿಡಿಯ ಬಹುದಾದುದಕ್ಕೆ ತಲೆಯನ್ನು ಕೊಡುವುದು ತಿಳಿಗೇಡಿತನ (ದಾಬುತ್ತಿ. ೦೮); ಪತಂಗವು ತಿಳಿಗೇಡಿತನದಿಂದಲೇ ದೀಪದ ಮೇಲೆ ಬಿದ್ದು ಸುಟ್ಟುಕೊಂಡು ಸಾಯುವುದು (ಬೃಹ್ಮಜೀ. ೩೦). [ ತಿಳಿಗೇಡಿ + – ತನ ]

**ತಿಳಿಗೈ** (ಕ್ರಿ). ಚೊಕ್ಕಗೊಳಿಸು; ಶುದ್ಧಗೊಳಿಸು ; ಸ್ವಚ್ಛಮಾಡು: ಅನಂತು ಅದನ್ನು ಮರಳಿ ತಿಳಿಗೈಯಲು ಎಷ್ಟೊಂದು ಯತ್ನಿಸಿದರೂ ಸಾಧ್ಯವಾಗಲಿಲ್ಲ (ಒಡ್ಡಿಉ. ೧೦೫). [ ತಿಳಿ$_2$ + ಗೈ (< ಕೆಯ್$_1$) ]

**ತಿಳಿಗೊಳ** (ನಾ). ಚೊಕ್ಕವಾದ ನೀರುಳ್ಳ ಸರೋವರ; ಶುದ್ಧವಾದ ನೀರಿನ ಕೊಳ : ತಿಳಿಗೊಳನಂ ಪೋಲ್ತಿರ್ದುಂ ತಿಳಿಯದಿದೇನೆಂಬುದುಂ (ಕವಿರಾ. ೧-೮೯) ; ಸುಭದ್ರೆ ... ಅಲರಿಂ ತುಂಬಿಗಳಿಂ ತಣ್ಣೆಲರಿಂ ತುಂಬಿದ ತಿಳಿಗೊಳದಿನೆಸೆವ ಬನಮಂ ಪೊಕ್ಕಳ್ (ಪಂಪಭಾ. ೫-೨) ; ತಿಳಿದ ತಿಳಿಗೊಳದ ತಳಿತ ತಾವರೆಯರಳ ತಂಡುಲದ ರುಚಿಯ ಕಳಹಂಸೆ ಬಯಸುವಂತೆ (ಆದವ. ೧೬–೩೬) ; ತೊಳತೊಳಗಿ ಹೊಳೆವ ತಿಳಿಗೊಳನ ತಡಿವಿಡಿದು (ಹಚಕಾ. ೩-೪೪) ; ಲಲಿತ ತನುಕಾಂತಿಗಳ ಮೊಗೆದರು ತಿಳಿಗೊಳನ ಜಲವೆಂದು (ಕುವ್ಯಾಅ. ೦೦-೨೮) ; ತಿಳಿಗೊಳಂಗಳೊಳಲರ್ದ ಪೊಚ್ಚ ಪೊಂದಾವರೆ (ಜೈಮಿಭಾ. ೩-೮): ಸ್ಫಟಿಕಶಿಲೆಗಳಿಂ ಕಟ್ಟಿರುವ ಮೆಟ್ಟಿಕೆಗಳನ್ನೊಳಕೊಂಡ ತಿಳಿಗೊಳಂ (ಸೌಗಂಧಿ. ೪-೦೭). [ ತಿಳಿ$_2$ + ಕೊಳ$_2$ ]

**ತಿಳಿಗೊಳು, ತಿಳಿಗೊಳ್ಳು** (ಕ್ರಿ). ೧. ಸ್ವಚ್ಛವಾಗು ; ಶುದ್ಧವಾಗು ; ತಿಳಿಯಾಗು : ಮಳೆಗಾಲದೊಳು ನೀರು ಕದಡಿತೆಂದಳಲೇಕೆ ತಿಳಿಗೊಳುವುದು ನೀರು ಮುಂದೆ (ಇಂಜಾಪ. ೨೦೦-೮೮). **ತಿಳಿಗೊಳ್ಳು** : ೨. ಅರಿತುಕೊಳ್ಳು; ಅರ್ಥಮಾಡಿಕೊಳ್ಳು : ತನ್ನನೆ ತಾನೇ ತಿಳಿಗೊಂಡಂತೆ ಶಿವನ ಶಕ್ತಿಯೇ ಎಳಿಗೊಂಡಂತೆ (ಸೂರ್ಯಪಾ. ೩೨-೯). [ ತಿಳಿ$_2$ + ಕೊಳು (<ಕೊಳ್$_1$) ]

**ತಿಳಿಗೊಳ್ಳು** 'ತಿಳಿಗೊಳು' ನೋ.

**ತಿಳಿಜಲ** (ನಾ). ಶುಚಿಯಾದ ನೀರು : ತೆರೆ ಪರಂಪರೆ ತೊರೆದು ಹರಿಯುವ ಹೊನಲಿಗೆಲ್ಲಿದೆ ಜೀವನ? ನೊರೆಯ ಸರಿಸುತ ಬದಿಗೆ ತಿಳಿಜಲವೀಂಟೆ ಸ್ಫೂರ್ತಿಯ ಕೇತನ (ನೆಲಮು. ೫೩-೧೮). [ ತಿಳಿ$_2$ + ಜಲ$_2$ ]

**ತಿಳಿಜೊನ್ನ** (ನಾ). ಸ್ವಚ್ಛವಾದ ಬೆಳದಿಂಗಳು : ಸಡಗರದಿಂ ಪಗಲೆಂಬಂ ತೊಪ್ಪಂಬಡೆದಿಳೆಯಂ ತೀವಿತು ತಿಳಿಜೊನ್ನಂ (ಜಯುಕಾ. ೧೪-೧೫); ತಿಳಿಜೊನ್ನದ ನಟ್ಟನಡುವೆ ಸಂಪೂರ್ಣೇಂದು ಥಳಿಥಳಿಸುವ ಮಾಳ್ಕೆಯೊಳ್ಪ (ಕುರಾಸಾಂ. ೫-೨೦) ; ತನ್ನ ಮಹಾಮನೆಯ ಪ್ರಾಂಗಣದಲ್ಲಿ ಮಂಡಿಸಿ ಹುಣ್ಣಿಮೆಯ ತಿಳಿಜೊನ್ನದ ಸವಿಸೋಂಕಿನ ಸುಖವನ್ನು ಅರ್ಧನಾರೀಶ್ವರನಿಗೆ ಅರ್ಪಿಸುತ್ತಿದ್ದಾರೆ (ತುಂಗಭ. ೮೩). [ ತಿಳಿ$_2$ + ಜೊನ್ನ ]

**ತಿಳಿತಳ** (ನಾ). ತಂಪು : ಈ ಮಂತ್ರಮನುಚ್ಚರಿಸುತ್ತೆ ಮುಚ್ಚಿದ ಕಣ್ ಚಂದ್ರಕರಸ್ಪರ್ಶದಿಂದೆ ತಿಳಿತಳಮಪ್ಪುದುಂ (ಚಿಕವಿ. ೬-೨೦೫ ವ). [ ? ]

**ತಿಳಿದುಪ್ಪ** (ನಾ). ಕರಗಿದ ತುಪ್ಪ ; ದ್ರವವಾದ ತುಪ್ಪ : ಶ್ರಾವಕರಪ್ಪ ವರ್ನೆರೆದು ನಿಶ್ಚಯದಿಂ ಮುನಿಗಳ್ಗೆ ಕೂರ್ತು ನಾನಾವಿಧ ಭಕ್ಷ್ಯದಿಂ ಪಲವು ಬಾಡುಗಳಿಂ ತಿಳಿದುಪ್ಪದಿಂ ಸಮಂತಾವಗಮಿಾವರೊಳ್ಪುಣಿಸಂ (ಧರ್ಮಾಮೃ. ೪-೦೦೦) ; ಗಟ್ಟಿದುಪ್ಪಕ್ಕೆ ತಿಳಿದುಪ್ಪಕ್ಕೆ ಭೇದವುಂಟೇ ಅಯ್ಯ (ಮಹಾದೇ.ಬ. ೭೩-೧೮೦) ; ಎಳೆಮಿಂಚನೆಱೆವಂತೆ ತಿಳಿದುಪ್ಪವೆಱೆದಳು (ಭರಜ. ೦೦-೨೯) ; ಆವರೆ ತಂದವರಟ್ಟು ಅವರಿಕ್ಕಿ ಇವರುಣಲು ಆವರೆ ತಿಳಿದುಪ್ಪವೆಱೆದಿಹರೆ ಇವರಿಂಗೆ ಆವರೆ ತಾಯ್ತಂದೆ (ಸರ್ವಜ್ಞ. ೬೦೧). [ ತಿಳಿ$_2$ + ತುಪ್ಪ ]

**ತಿಳಿನಗೆ** (ನಾ). ಶುಭ್ರವಾದ ನಗೆ ; ಕಪಟವಿಲ್ಲದ ನಗೆ : ಮುಖದಲ್ಲಿ ಯಾವಾಗಲೂ ತೇಲಾಡುತ್ತಿದ್ದ ತಿಳಿನಗೆಯು ಜಾರಿ ಮ್ಲಾನತೆಯು ನೆಲಸಿತ್ತು (ಚಿತಸ. ೦೭೧). [ ತಿಳಿ$_2$ + ನಗೆ ]

**ತಿಳಿನಿದ್ರೆ** (ನಾ). ತೆಳುವಾದ ನಿದ್ರೆ ; ಗಾಢವಲ್ಲದ ನಿದ್ರೆ ; ಲಘುವಾದ ನಿದ್ರೆ : (+). [ ತಿಳಿ$_2$ + ನಿದ್ರೆ ]

**ತಿಳಿನೀರ್, ತಿಳಿನೀರು** (ನಾ). ೧. = ತಿಳಿಜಲ : ಆ ಮರಕತವರ್ಣಂ ಕರಿಕರ ಪರಿಘದಿನೊಡನೊಡನೆ ತುಳುಕಿದಂ ತಿಳಿನೀರಂ (ಆದಿಪು. ೦೪-೦೦೭) ; ತಿಳಿನೀರ ತುಂತುರ್ವನಿಗಳಂ ಪೊರೆದೆಳವಾೞಿಯ ಸುೞಿಯ ಬಿಜ್ಜಣಿಗೆಗಳಿನಡಿಗಡಿಗೆ ಬೀಸಿಯುಂ (ಕಾದಂಪೂ. ೮೫೫) ; ಅಂತು ರಾಗರಸದಿಂ ಪೊಂಗಿ ತಡೆದು ತಿಳಿನೀರನುಂಡುದೆಂಬ ನಾಟ್ನುಡಿಯಂತೆ (ಧರ್ಮಾಮೃ. ೬-೮೨) ; ತಿಳಿನೀರಿಂದಂ ತೆಂಗಂ ಬಳೆಯಿಸೆ ನದನದಿಯಿನೊಸರ್ವ ತಿಳಿನೀರಿಂದಂ ಬಳೆಯಿಸೆ ತೆಂಗೊಪ್ಪಿದವವಿರಳಮೊಂದಱ ಕಡವನೊಂದು ನೀಗುವ ತೆಱದಿಂ (ಪಾರ್ಶ್ವಪು. ೯-೦೦). **ತಿಳಿನೀರು** : ೧. ಪೊಱವಾಱ ಪುಳಿನದ ತನುಚ್ಛವಿಯ ತಿಳಿನೀರ ಮೆಱೆವ ಮಧ್ಯದ ಮೃಣಾಳದ ಬಗೆಯ ಭೇದಮಂ ಕುಱುಪಿಡು ವೊಡರಿದೆನಲ್ಸರಸಿಯೊಳ್ತರಳೆಯರ ಜಲಕೇಳಿ ಕಣ್ಗೆಸೆದುದು (ಜೈಮಿಭಾ. ೩೦-೬) ; ಕೆಂದಾವರೆಯ ಪೊಟ್ಟಣದೊಳು ತಿಳಿನೀರ ತಂದು ರಂಗೇಶನ ಮೇಲೆ . . . ಬಂಧುರದಿಂದ ಸೂಸಿದರು (ಕಂನವಿ. ೨೫-೦೨೦) : ತಿಳಿನೀರುಗಳಿಂದ ಕರಚರಣಂಗಳಂ ತೊಳದು (ಸೌಗಂಧಿ. ೦೯೫-೦೯) ; ತೆಂಗಿನಕಾಯ ತಿಳಿನೀರ ತಕ್ಕೊಂಡು ಬಂಗಾರ ಮಾರಿ ತೊಳದೇನ (ಗರತಿ. ೮೬). ೨. ಮೊಸರು, ತುಪ್ಪ, ಗಂಜಿ ಮುಂತಾದುವುಗಳ ಮೇಲಿನ ತಿಳಿ,— ಮಂದವಲ್ಲದ ಭಾಗ : ಅಂಬಿಲದ ತಿಳಿನೀರಿನಲ್ಲಿ ಅರಿಸಿನವನ್ನರೆದು ಪಾನ ಮಾಡಿಸಲು ಶೀತಜ್ವರ ಕೆಡುವುದು (ಸಕವೈ. ೬೩) : ಮಸ್ತು=ಮೊಸರಿನ ಮೇಲಿನ ತಿಳಿನೀರು (ಗಂಗಾಮ. ೨೫೨). [ ತಿಳಿ$_2$ + ನೀರ್$_1$ ]

**ತಿಳಿನೀರು** 'ತಿಳಿನೀರ್' ನೋ.

**ತಿಳಿನೀಲಿ** (ನಾ). ತೆಳುವಾದ ನೀಲಿಬಣ್ಣ : ತಿಳಿನೀಲಿ ಬಾನೊಳು ಬೆಳ್ಳನೆ ಮುಗಿಲೊಂದು ಮೆಲ್ಲನೆ ತೇಲುತಲಿಹುದು (ಇಂಜಾಪ. ೯೬-೭೦). [ ತಿಳಿ$_2$ + ನೀಲಿ ]

**ತಿಳಿನುಡಿ** (ನಾ). ಸ್ವಚ್ಛವಾದ ಭಾಷೆ ; ಸರಳವಾದ ನುಡಿ : ಕನ್ನಡ ಶಬ್ದಸಂಪತ್ತನ್ನುಳಿಸಿ ಕನ್ನಡಿಗರ ತಿಳಿನುಡಿಯಾಗಿ ಬೆಳೆಯಿಸಲು ಈ ಕೃತಿಯು ಸಹಾಯಕವಾಗಬಹುದು (ಕಾಲೂರ. ೦೦ ಮುನ್ನುಡಿ). [ ತಿಳಿ$_2$+ನುಡಿ$_2$ ]

**ತಿಳಿಪು$_1$**, ತಿಳಿಹು, ತಿಳುಪು$_1$, ತಿಳುಹು$_1$ (ಕ್ರಿ). ೧. ಶುಭ್ರವಾಗು ; ತಿಳಿಯಾಗು : ತಿಳಿಪುವೊಡೆ ವೊಗ್ಗೆ ಮುದ್ದುಂ ಕಳಂಕಮುಂ ತಿಳಿಯದಿರ್ಪ ದೆಸೆಗಳುಮಂ ನೀರ್ಗಳುಮಂ ತಿಳಿಪಿದ ಸರಮುಂ ತಿಳಿಪಿದುದೆ ಕಳಂಕಗತಿಯ ನವ್ಯುತದ್ಯುತಿಯಂ (ಲೀಲಾವ. ೧೪-೫೦). ೨. ಸಮಾಧಾನ ಪಡಿಸು ; ಸಾಂತ್ವನಗೊಳಿಸು ; ಶಾಂತಗೊಳಿಸು : "ತಿಳಿಪು–ಕ್ರೋಧೋತ್ಸರ್ಜನೇ (ಕೋಪವನ್ನು ಬಿಡಿಸು)" (ಶಮಧಾ) ; ತಿಳಿಪಲಡಿಗೆಱಗಿದೋಪನ ತಳಂಗಳಾ ತೀಟದಿಂ ಪದಂಗಳೊಳೊಗೆದಾ ಪುಳಕಚಯಂಗಳ್ ಕಳಿದುವು ಮುಳಿಸಂ (ಕವಿರಾ. ೩-೦೧೯) ; ಪುರುಡಿಸಿ ಮುಳಿದಿರ್ದ ಮಹಾದೇವಿಯಂ ತಿಳಿಪಲೆಂದು ಕಾಲ್ಗೆಱಗೆ (ಜಾವುಂಪು. ೮೫-೦೩); ವನಿತೆಯರೊಲವಿನ ಕಲಹದ ಮುನಿಸುಗಳಂ ತಿಳಿಪುವೆಡೆಯೊಳತಿಚತುರಂ (ಕಾದಂಪೂ. ೫೬) ; ಇಂತಪ್ಪವಸ್ಥೆಯಿಂದಿವಳಿಂ ತಿರೆಯುಂ ದುರ್ವಿದಗ್ಧವೆನ್ನ ಮನಂ ಮತ್ತೆಂತುಂ ನಂಬಿದುದಿಲ್ಲಾನಿಂ ತಿಳಿಪೆಂ[ ಪೆಂ ] ನಿಪುಣವಚನದಿಂ ಕಾಮಿನಿಯಂ (ಕಾದಂಉ. ೨೪೨) ; ಮುಕುಂದಂ ತದಿಂದುವದನೆಯಂ ಪೆಱವೊಳ್ನುಡಿಗಳಿಂ ತಿಳಿಪಿ (ನೇಮಿಪು. ೮-೩೮ಪ) ; ಬಱಿದೆ ಮುಳಿದು ತಿಳಿಪೆ ತಿಳಿದು ನೆರೆವ ಬೇಡವೆಂಡಿರಿಂ (ಕಬ್ಬಿಕಾ. ೨೦೮) ; ನುಡಿಯಲಿಲ್ಲದಹಂಗೆ ಹದುಳಿಸಿ ಕಡೆಯೊಳಾಂ ತಿಳಿಪಿ [ಪಾಠಾಂ. ತಿಳುಹಿ]ದಪೆನೆಲೆ ನೀ ನಿದ್ರೆಗೆಯ್ಯುತಿರು (ಬಸಪು. ೪೭–೨೨) ; ಮುನಿದೊಡೆ ಕಡುತವಕದಿಂ ತಿಳಿಪುವಂ (ಜಬಪು. ೧೦–೨೯). ೩. ಸಂತುಷ್ಟಿಪಡಿಸು ; ತೃಪ್ತಿಗೊಳಿಸು ; ಮುದಗೊಳಿಸು : "ಪ್ರಸಾದಃ, ಪ್ರಣಯಃ– ಈ ೨ ತಿಳಿ(ಪು)ಹುವುದು" (ಹಲಾಯು. ೧೨೭–೮೮) ; ಜಲನಿಧಿಯಂ ಮಂಗಿಲ್ವನಿ ಗಳಿಂದಮಗುರ್ವಿಸುವಂತೆ ನಿಮ್ಮನಾಂ ತಿಳಿಪಿದಪೆ ಗಡ (ಕಾದಂಉ. ೪೮೬) ; ಅಗಜೆಯಂ ತಿಳಿಪಿದಮರಗುಂಡದ ಮಲ್ಲಿನಾಥ ಶರಣಾ (ಭಾವಚಿಂ. ೨–೧). ೪. ತಿಳಿಸು ; ಸ್ಪಷ್ಟಪಡಿಸು ; ವಿಶದೀಕರಿಸು : ಅವರಂ ತಿಳಿಪಲಾಱದೆ ಮತ್ತೆ ಪೂರ್ವವಿದೇಹಕ್ಕೆ ಪೋಗಿ ... ಭಟಾರರ್ಗೆ ಪೇಟ್ದು (ವಡ್ಡಾರಾ. ೦೦೪–೨೦) ; ಉಳ್ಳೋದುಗಳೊಳಗೆನಿತಱುವುಳ್ಳರ್ಗಂ ತಿಳಿಪಲರಿಯದೆನಿ ಪೆಡೆಗಳುಮಂ ತಳ್ಳಗಿರೆ ತಿಳಿಪುಗುಂ (ಪಂಪಥಾ. ೨–೩೫); ಸ್ಥಾವರಾದ್ಯನ್ಯಲಿಂಗದ ಭಜನೆಯ ಮುನ್ನಮೇ ಬಿಡಿಸಿ ಷಟ್ಸ್ಥಳಮಾರ್ಗಮಂ ತಿಳಿಪಿ (ಜಬಪು.೧-೦೩). ೫. ಕಲಿಸು ; ಹೇಳಿಕೊಡು ; ಶಿಕ್ಷಣಕ್ಕೊಳಪಡಿಸು : ಇವರಂ ನೀತಿ ವಿದರಪ್ಪಂತು ತಿಳಿಪುವಂದು ಮುದುಗುದುರೆಯಂ ತಿರ್ದುವಂತಕ್ಕುಂ (ಪಂಚತಂ. ೧೭–೧೦); ಇದು ಶಬ್ದಾಗಮನಿರ್ಣಯಂ . . . ಇಂತಿದು ಮರ್ಮಂ ಕಲೆಗಾಗಮಾನ್ವಯಮಿದೆಂಬಾವಾಮ್ನಾಯದಿಂ ದಾರಕ ತ್ರಿದಶ ಪ್ರಶ್ನಕರಾಗೆ ತಾಂ ತಿಳಿಪುವಂ ತ್ರಿಜ್ಞಾನರತ್ನಾಕರಂ (ಅನಂಪು. ೬–೧೦) ; ಮತ್ಸ್ಯಭೂವರ ಕುಮಾರಿಗಂ ತಿಳಿಪುತಿರ್ದನು ನೃತ್ಯಮನಾ ಕಿರೀಟಿ (ಪಂಜಶ. ೬೮–೦೮). ೬. ಜ್ಞಾಪಕಮಾಡು ; ನೆನಪಿಗೆ ತರು : "ಜ್ಞಾಪಯತಿ=ತಿಳಿಪಿದಪಂ" (ಶಾಶಕ್ಕ. ೦೪೨). **ತಿಳಿಹು** : ೪. ಮಂಗಳೋದಯಲಿಂಗಕರತಳಸಂಗತ ಸ್ಥಿತಿಯಂ ತಿಳಿಹಿಯಾಸಂಗದುಃಪ್ರಾಪಂಚಿಕಾಶಾಬಂಧವಂ ಪಱಿದು (ಬಸಪು. ೪೯–೩೩). **ತಿಳುಪು$_1$** : ೨. ಕಿನಿಸಿ ಕಡುಪಿನಿಂದಂ ನದುಗಿದಪುದು ತಿಳಿಯದೆಂತುಮಾರ್ತಿಳು [ ಪಾಠಾಂ. ಳಿ ] ಪಿದೊಡಂ ( ಕಾ ದ ಂ ಉ. ೬೬) ; ಅಂಗಜಾತನ ಮಡುಹಿದನೆಂದು ಪಾರ್ವತಿ ಸಂಗಕೇಱದಿರಲು ತಿಳುಪಿ ಹೊಂಗೊಡದೊಳು ನೀರ ಹೊತ್ತ ಧೂರ್ಜಟಿಯಂತೆ ತೇಂಗಾಯ ಮರ ಗಳೊಪ್ಪಿದುವು (ಮೋಹತ. ೨೪–೪೨). ೪. ನಿರ್ಮಳದ ಧರ್ಮಸ್ಥಿತಿರಹಸ್ಯವ ತಿಳುಪಿದವರಾರೆನುತ ತಲೆದೂಗಿದನು ಮುರವೈರಿ (ಕುವ್ಯಾಕ. ೦೭–೦೨). **ತಿಳುಹು$_1$** : ೨. ದೇವಪ್ರಸರವನು ತಿಳುಹಿದನು ಕಾರುಣ್ಯದಲಿ ಕಾಮಾರಿ (ಕುವ್ಯಾಕ. ೬–೫೦) ; ಕುಳಿರುವೆಟ್ಟನ ಕುವರಿಯ ಶ್ರೀಪದಯುಗನಳಿನ ಸುಗಂಧವಿದ್ದೆಡೆಗೆ ಅಳಿ ಬಂದೆಱಗುವಂತೆಱಗಲ್ಕೆ ತೆಗೆದಪ್ಪಿ ತಿಳುಹಿದಳವಳ ದುಕ್ಕವನು (ಮೋಹತ. ೮–೪೬). ೩. ಲಲನೆಯಂ ... ತಿಳುಹಿ ಮಱುಹಾದಲ್ಲಿ ಜಾಣ್ಮೆಯನಲರಿಸುತ್ತೊಯ್ಯಾರದಲಿ ಸುಳಿಸುಳಿದು (ಬಸಪು. ೪೨–೦೬) ; ವೇದ ವ್ಯಾಸದೇವರು ... ಕಾಲಜ್ಞಾನವಾದುದನು ತಿಳುಹಲೋಸುಗ ತಮ್ಮಯಾ ಶ್ರಮ ನೆಲೆಯ ಠಾವಿಂದಾಗ ಬಂದರು (ಸಂಥಪ. ೩–೨) ; ತಿಳುಹಿ ಹೋದರು ಮುನಿಗಳೀತನ ತಿಳಿವು ತೊಟ್ಟುದು ಮಱವೆಯನು (ಕುವ್ಯಾದ್ರೋ. ೧೮–೬೪).

[ ತಿಳಿ$_1$ + – ಪು$_1$ ]

**ತಿಳಿಪು$_2$**, ತಿಳುಪು$_2$, ತಿಳುಹು$_2$ (ನಾ). ೧. ಗಟ್ಟಿಯಲ್ಲದುದು ; ನೀರಾ ದುದು : ತಿಳಿ [ಪಾಠಾಂ. ಳು] ಪಿನಂಬಿಲಕುಪ್ಪು ನೀರುಳ್ಳಿ ಹಸಿಯಲ್ಲಗಳನು ಸೋದಿಸಿ ಹಾಕಿ (ಸೂಪಶಾ. ೩–೩೩). **ತಿಳುಪು$_2$** : ೨. ತೆಳುವು ; ತೆಳುವಾ ದುದು. 'ತಿಳಂಪೇಱು' ಪರಾ. **ತಿಳುಹು$_2$** : ೩. ಸ್ವಚ್ಛತೆ ; ಶುಚಿತ್ವ : ನೀರ ದಾರಿಯಲ್ಲಿ ನೀರ ತಿಳುಹ ನೋಡಿ (ಶಿವಗೀ. ೦೪೬–೬೪೮). ೪. ಜ್ಞಾನ ; ತಿಳಿವಳಿಕೆ : ನಡವಳಿಯಲಧಮನೆ ನೀನು ಶಿವಪೂಜಾಪ್ರಸಿದ್ಧನಲ ತಿಳುಹಿ [ಪಾಠಾಂ. ತಿಳಿವಿ]ನಲಿ ಬಱಡನೆ ಬಹುಶ್ರುತಿಗಳು ಮುಖೋದ್ಗತ ನಿನಗೆ (ತೊರರಾ. ೬–೨–೨೪). [ <ತಿಳಿಪು$_1$ ]

**ತಿಳಿಬಗೆ** (ನಾ). ಶುದ್ಧವಾದ ಅಂತಃಕರಣ ; ನಿಷ್ಕಪಟವಾದ ಮನಸ್ಸು : ಕಾವ ತಿಳಿಬಗೆಯಿಂ್ರ್ಪ ನಾಡ ಹೆಣ್ಣೆಲ್ಲಿ (ಕಾಲೂರ. ೨೭–೦೫).

[ ತಿಳಿ$_2$ + ಬಗೆ$_3$ ]

**ತಿಳಿಬಣ್ಣ** (ನಾ). ತೆಳುವಾದ ಬಣ್ಣ ; ನಸುಬಣ್ಣ : "ಹೂಬಣ್ಣ ತಿಳಿ ಬಣ್ಣ" (ಗಂಗಾಮ. ೩೫೦). [ ತಿಳಿ$_2$ + ಬಣ್ಣ ]

**ತಿಳಿಬೆಳಕು** 'ತಿಳಿವೆಳಗು' ನೋ.

**ತಿಳಿಬೆಳಗು** 'ತಿಳಿವೆಳಗು' ನೋ.

**ತಿಳಿಬೆಳುದಿಂಗಳು** (ನಾ). ಶುಭ್ರವಾದ ಬೆಳುದಿಂಗಳು ; ಶುಭ್ರ ಜ್ಯೋತ್ಸ್ನೆ : ನೀನು ಚೆಲುವೆಯರರಸಿ ತಿಳಿಬೆಳುದಿಂಗಳ ತಿರುಳ ಪುತ್ಥಳಿ ! (ಕುಂಗಧ. ೮೫). [ ತಿಳಿ$_2$ + ಬೆಳುದಿಂಗಳು (<ಬೆಳ್ದಿಂಗಳ್) ]

**ತಿಳಿಮಜ್ಜಿಗೆ** (ನಾ). ನೀರಾದ ಮಜ್ಜಿಗೆ : ಪಾತ್ರೆಯಲ್ಲಿ ತಿಳಿಮಜ್ಜಿಗೆ ಇದೆ (ರೂಢಿ). [ ತಿಳಿ$_2$ + ಮಜ್ಜಿಗೆ ]

**ತಿಳಿಮಣ್ಣು** (ನಾ). ಸೂಸಂಮಣ್ಣು ; ರೇವೆಮಣ್ಣು ; ಮೆಂಕ್ಕಲು : ಜಗವೆಲ್ಲ ತೊಯ್ದು ಹೋಗಿದೆ, ತಿಳಿಮಣ್ಣು ತೇಲಿಹೋಗಿದೆ (ನಲವಾ. ೦೬–೨೨).

[ ತಿಳಿ$_2$ + ಮಣ್ಣು (< ಮಣ್) ]

**ತಿಳಿಮುತ್ತು** (ನಾ). ಶುಭ್ರವಾದ ಮುತ್ತು ; ಚೊಕ್ಕವಾದ ಮುತ್ತು : ತಳತಳಿಪ ವಜ್ರಗಳ ಗಣಗಳಿಂದೆಸೆವ ತಿಳಿಮುತ್ತುಗಳ ನಗೆಯ ಬೆಳಕಿಂದ ಹೊಳೆವ (ಕಎಪು. ೪೭–೫). [ ತಿಳಿ$_2$ + ಮುತ್ತು$_5$ ]

**ತಿಳಿಮೆ** (ನಾ). ೧. ಸ್ವಚ್ಛವಾಗಿರುವಿಕೆ ; ಶುದ್ಧವಾಗಿರುವಿಕೆ : ಮಣಿಗೆ ಯೊಳು ಮದವಳಿದು ಋಣಗಳಿಲ್ಲವ ನೆನೆದು ತಿಳಿಮೆಯೊಳು ಹರಿವೆನ್ನ ಚೇತನದ ಜತೆಗೆ (ಮಲೆದೇ. ೨೦–೪). ೨. ತಿಳಿವಳಿಕೆ ; ಅರಿವು ; ಜ್ಞಾನ : ಕ್ಲಾಂತಿಯೇಂ ನಿನ್ನ ಕಡುಸಂತಸದ ತಿಳಿಮೆಗಿನ್ನೆಂತು ನಿನ್ನಯ ಬಳಿಗೆ ತನ್ನ ನೆಳಲಂ ಚಿಂತೆ ಸಾರ್ಚಿತು (ಗಿಳಿವಿಂ. ೭–೯೨). [ ತಿಳಿ$_2$ + – ಮೆ$_1$ ]

**ತಿಳಿಮೆಗೊಳ್ಳು** (ಕ್ರಿ). ಸ್ವಚ್ಛವಾಗು ; ಶುದ್ಧವಾಗು : ಆ ಕಾರಣದಿಂದಲೇ ವಿಷಯೋದ್ಭವವಾದ ಜುಗುಪ್ಸೆಯೂ ಕಾವ್ಯದಲ್ಲಿ ತಿಳಿಮೆಗೊಂಡು ಭೋಗ್ಯ ರಸ ಪದವಿಗೇರುತ್ತದೆ (ಕಾವ್ಯಕು. ೩).

[ ತಿಳಿಮೆ + ಕೊಳ್ಳು$_1$ (< ಕೊಳ್$_1$) ]

**ತಿಳಿಮೆಯುಡಿಕೆ** (ನಾ). ಜ್ಞಾನದ ದಾಹ ; ಅರಿವಿನ ಆಸೆ : ಆ ಕ್ವಚಿದ್ದರ್ಶನ ದೊಳಹುದೆಲ್ಲ ಚೇತನಕು ರಸದ ನೀರಡಿಕೆ ಅದರಿನೀ ದುಃಖಶಮದೈವ ನಮನಂ, ಅದರಿನೀ ತಿಳಿಮೆಯುಡಿಕೆ (ಮಲೆದೇ. ೨೩–೧೦). 'ನೀರಡಿಕೆ$_1$' ಪರಾ. [ < ತಿಳಿಮೆ ]

**ತಿಳಿಯಿಡು** (ಕ್ರಿ). ಶುದ್ಧಗೊಳಿಸು ; ಹಸನುಗೊಳಿಸು : ಪೂಗೊಳನಂ ತಿಳಿಯಿಟ್ಟು ನೀರ್ವಕ್ಕಿಗಳಂ ನೆಲೆವೆರ್ಚಿಸುತ್ತುಂ (ಗಿರಿಕ. ೭-೪೨ ವ).
[ ತಿಳಿ$_2$ + ಇಡು$_1$ ]

**ತಿಳಿಯೆಣ್ಣೆ** (ನಾ). ಅಪ್ಪಟವಾದ ಎಣ್ಣೆ ; ಶುದ್ಧವಾದ ಎಣ್ಣೆ : ನೇಜಲ ವಣ್ಣಂ ತಿಳಿಯೆಣ್ಣೆಯೊಳ್ ಬಯಸಿ ತೊಯ್ದಂತಪ್ಪ ನುಣ್ಣಪುರ್ (ಕಾವ್ಯಾವ. ೨೦೬). [ ತಿಳಿ$_2$ + ಎಣ್ಣೆ ]

**ತಿಳಿರಕುತ** (ನಾ). ಶುದ್ಧವಾದ ರಕ್ತ ; ಹೊಸರಕ್ತ : ಎಲೆ ಮರುಳೆ ನಿನ್ನೊಡಲ ಸೀಳಿಯೆ ತಿಳಿರಕುತದಲಿ ತಾಯ ತುರುಬನು ನಾದಿಸುವೆನೆಂದ (ಕುಮಾರವ್ಯಾ. ೫-೪೪). [ತಿಳಿ$_2$ + ರಕುತ]

**ತಿಳಿರಸ** (ನಾ). ಶುದ್ಧವಾದ ದ್ರವ ; ನಿರ್ಮಲವಾದ ರಸ : ಎಳನೀರ್ಗಳ ತನಿಗರ್ಬಿನ ತಿಳಿರಸದ ... ಬಹುವಿಧದ ಪಾನಂಗಳನಲ್ಲಲ್ಲಿಟ್ಟಿವರಾ ಪ್ರಪಾ ಪಾಲಿಕೆಯರ್ (ವೃಷವಿ. ೪-೨೯). [ ತಿಳಿ$_2$ + ರಸ ]

**ತಿಳಿಲು** ' ತಿರುಳ್ ' ನೋ.

**ತಿಳಿಲುಮಾತು** (ನಾ). ಸಾರವತ್ತಾದ ನುಡಿ ; ತಿರುಳುನುಡಿ : ತಿಳಿಲು ಮಾತಿಲಿ ಬಳಿಗರೆದು ... ತಕ್ಕೈಸಿ (ವಿಸೋಸು. ೧೯-೫).
[ ತಿಳಿಲು (< ತಿರುಳ್) + ಮಾತು$_1$ ]

**ತಿಳಿವಟ್ಟಲ್** (ನಾ). ಮದ್ಯವನ್ನು ಕುಡಿಯಲು ಬಳಸುವ ಬಟ್ಟಲು ; ಪಾನಪಾತ್ರೆ ; ಚಷಕ : " ಗರ್ಹಕಃ, ಅನುತರ್ಷಃ, ಚಷಕಃ, ಸರಕಃ— ಈ ೪ ತಿಳಿವಟ್ಟಲ್ " (ಹಲಾಯು. ೫೪-೧೭೨) ; ಸೊಗಯಿಪ ಘಂಟೆಯುಸ್ತಣಗೆ ಯಾರುತಿ...ತಿಳಿವಟ್ಟಲೆಸಪ್ಪ ಚಂದನಂ (ಸೌಇಇ. IV, ೨೬೦-೭೫ ; 1199) ; ಕಡುವುಟಿಗಳ್ಗಳೊಂದು ತಿಳಿವಟ್ಟಲನಿಟ್ಟೆಟಿಯಲ್ಕೆ (ದಶಕು. ೮-೨೦೪).
[ತಿಳಿ$_2$ + ಬಟ್ಟಲ್]

**ತಿಳಿವಡೆ** (ಕ್ರಿ). ಶುಭ್ರತೆಯನ್ನು ಹೊಂದು ; ಶುದ್ಧವಾಗು : ಮುಂದೆ, ಲೌಕಿಕರಸದಿಂದತ್ತ ಸರಿದು ಅಲೌಕಿಕವೆನ್ನಿಸುವ ಮಹಾಬಲನಈ ಸ್ಥಾಯಿಯೇ ಕ್ರಮೇಣ ತಿಳಿವಡೆಯುತ್ತಾ ಹೋಗಿ ಕಡೆಗೆ ತೀರ್ಥಂಕರಭವದಲ್ಲಿ ಅಲೌಕಿಕ ರಸವೆನ್ನಿಸುವುದು (ನಾಡೋಜ. ೩೬೮). [ ತಿಳಿ$_2$ + ಪಡೆ$_1$ ]

**ತಿಳಿವಳಿಕಸ್ತ**, ತಿಳುವಳಿಕಸ್ತ (ನಾ). ವ್ಯವಹಾರಜ್ಞಾನವನ್ನು ಹೊಂದಿರುವ ವನು ; ಬುದ್ಧಿವಂತ : ಅವನೇನು ಅಂಥ ತಿಳಿವಳಿಕಸ್ತನಲ್ಲ (ರೂಢಿ). **ತಿಳುವಳಿಕಸ್ತ :** ವೆನೀಸ್‌ನಗರದ ಮರ್ಯಾದಸ್ತರೂ, ತಿಳುವಳಿಕಸ್ತರೂ ಆದ ನಿಕೊಲೊಪೋಲೊ ... ಕಾನಸ್ಟಾಂಟಿನೋಪಲಿಗೆ ಹೋದರು (ಪ್ರವಾಇ. II, ೪) ; ಓದುಬರಹ ಕಲಿತು ತಿಳುವಳಿಕಸ್ತನಾದರೆ, ನಿನ್ನ ಬಾಳು ಎಷ್ಟು ಚೆನ್ನಾಗಿ ಆಗ್ತದೋ ನೀನೇ ನೋಡುವಂತೆ (ನಮ್ಮಳಿ. ೩೫).
[ತಿಳಿವಳಿಕೆ + — ಸ್ತ]

**ತಿಳಿವಳಿಕೆ**, **ತಿಳುವಳಿಕೆ** (ನಾ). ೧. ಅರಿವು ; ಜ್ಞಾನ : ಅಱಿತದ = ತಿಳಿ ವಳಿಕೆಯ (ಶಮುದ. ೧೯೭ ಟೀಕೆ) ; ಚಲೋ ತಿಳಿವಳಿಕೆ ಇರಬೇಕು (ಮುಂಬಯಿ. ೪-೭೪) ; ಎಲ್ಲಿಹುದು ತಿಳಿವಳಿಕೆ ಜೀವನದ ಸಲುವಳಿಕೆ (ನಾದಲೀ. ೬೩-೬). **೨.** ವಿವೇಕ ; ವಿವೇಚನಾಜ್ಞಾನ : ಆ ತಿಳಿವಳಿಕೆ ಅವರಿಗಿಲ್ಲಿಯದು (ಅಶ್ರಮ. ೫೮). ೩. ತಿಳಿಯಬೇಕಾದುದು; ಸೂಚನೆ : ವಿದ್ಯಾರ್ಥಿಗಳ ತಿಳಿವಳಿಕೆಗಾಗಿ ಇದನ್ನು ಪ್ರಕಟಿಸಲಾಗಿದೆ (ರೂಢಿ). **ತಿಳುವಳಿಕೆ : ೧.** ತಿಳು ವಳಿಕೆಗೆ ಸಹಾದೇವ ಸತ್ಯಕ್ಕೆ ಹರಿಶ್ಚಂದ್ರ ಚೆಲ್ವಿಗೆ ಮನ್ಮಥ (ಮ್ಯಾಆರಿ. ೦೯೩೫, ೨೮-೬ ; 1751) ; ಹಳೆಯ ದೇವಾಲಯಗಳೂ ಶಿಲ್ಪಗಳೂ ... ಅಜ್ಞಜನರ ತಿಳುವಳಿಕೆಯ ಅಭಾವದ ಮೂಲಕವಾಗಿಯೂ ನಾಶವಾಗುತ್ತ ಬಂದಿವೆ (ಮೂರುಉ. ೩ ಮುನ್ನುಡಿ). [ ತಿಳಿ$_2$ + — ವಳಿ$_1$ + — ಕೆ ]

**ತಿಳವಳ್ಳಿ** (ನಾ). ಒಂದಂ ಊರಿನ ಹೆಸರಂ ; P ಧಾರವಾಡ ಜಿಲ್ಲೆಯ ಹಾನಗಲ್ ತಾಲ್ಲೂಕಿನ ಈಗಿನ ತಿಳವಳ್ಳಿ : ಶ್ರೀಮದಗ್ರಹಾರಂ ತಿಳಿ ವಳ್ಳಿಯ ಸಕಲ ಸಾಸಿರ್ವ್ವರ ಬೆಸದಿ...ಪಣಮಂ ಬಿಟ್ಟರ್ (ಕಇ. II, ೮-೧೧ ; 1072) ; ತಿಳಿವಳ್ಳಿಯುತ್ತುಮಸೆಟ್ಟಿ ಕಂಚಯನ ಮಲ್ಲಿಸೆಟ್ಟಿ ... ಇಂತಿನಿಬರು ಏರ್ದ್ದು ಮೂಲಸ್ಥಾನದೇವರ್ಗ್ಗೆ ಬಿಟ್ಟ ಧರ್ಮ್ಮ (ಕಇ. I, ೧೯-೧೨; 1108).
[ ? + ಪಳ್ಳಿ$_1$ ]

**ತಿಳಿವಿಕೆ**, ತಿಳುವಿಕೆ (ನಾ). ಜ್ಞಾನ ; ಅರಿವು : ತತ್ವವಿದ್ಯೆಯ ತಿಳಿವಿಕೆಯ ಹುಸಿಯೆಂದು ಕಂಡಡೆ ಹಾನಿಯೇ ತನಗೆ (ನಿಭಾಗ. ೫-೧-೧೩೪). **ತಿಳುವಿಕೆ :** ತಿಳುವಿಕಿಲ್ಲದೆ ನೆಲೆಯುಯಿಲ್ಲದೆ ತಿರುಗುವರು (ಜ್ಞಾನಸಿಂ. ೨೨-೩೧).
[ ತಿಳಿವು + — ಇಕೆ]

**ತಿಳಿವಿಗ** (ನಾ). ಅರಿವಿರುವವನಂ ; ತಿಳಿವಳಿಕೆಯಂಳ್ಳವನಂ ; ಜ್ಞಾನಿ : ಪಾದರಸ ಕರತಳದಲಿರುತದನಂಟದಂದದಿ ತಿಳಿವಿಗರು ಸಂಸ್ಕೃತಿಯಲಿರೆ ನಿರ್ಲೇಪರು (ಗಗತಾ. ೧೫-೨೫). [ ತಿಳಿವು + — ಇಗ ]

**ತಿಳಿವು**, ತಿಳಂವು (ನಾ). ೧. ಸಮಾಧಾನಗೊಳ್ಳುವಿಕೆ ; ಸಾಂತ್ವನ ಪಡೆ ಯಂಂವಿಕೆ ; ಮುಳಿಸು ತಿಳಿಯುಂವಿಕೆ ; ಕೋಪ ಕಡಿಮೆಯಾಗುವಿಕೆ : " ಪ್ರಣಯಂ ಪ್ರಸಾದವೆನೆ ತಿಳಿವಕ್ಕು " (ಮುಂಗರಾ. ೧೩೪-೩೩) ; ಆಕೆಯ ತಿಳಿವಾಕೆಯ ಮುಳಿಸಾಕೆಯ ಕೂಟಮೆ ದಲಿರ್ದುದರಸನ ಮನದೊಳ್ (ಕಾದಂಉ. ೭೭೨). **೨.** ಅರಿವು ; ಬುದ್ಧಿ ; ಜ್ಞಾನ ; ತಿಳಿವಳಿಕೆ : ತಿಳಿವಿಲ್ಲದೆ ಶಶಿಕಾಂತದ ಕಳಶಮನೇಕಾಂತೆ ಕಾಂತೆ ನಿನ್ನ ಮುಖೇಂದೂಜ್ವಳ ಕೌಮುದಿಯಿಂದೊಸರ್ದಪುದಿಳಿಪಿಳಿಪೆಂದೊರ್ವ ಮುಗ್ಧೆಯಂ ಸಖಿ ನುಡಿ ದಳ್ (ಗಿರಿಕ. ೪-೦೨೪) ; ಮುಸುಡ ತಿರುಹಿತು ತಿಳಿವು (ಕುಮಾಸ. ೦೩-೪೪) ; ತಿಳಿವೆ ಶರೀರ ತಿಳಿವೆ ರೂಪು ಬೆಳಗೆ ಮೈಯೊಳಗೆ ತಾನಾಗಿರುತಿಹುದು (ಭರತ. ೧-೧೦೯) ; ಬೇರೆ ಏತಕು ಮಣಿಯೆ ನಾ ಇಗೊ ಬಂತು ತಿಳಿವಿನ ಗಳಿಗೆ (ಅರಳು. ೧೪-೩) ; ಜೀವನದಲ್ಲಿ ನಮ್ಮ ತಿಳಿವನ್ನು ಮರೆಯಿಸಿ ಸರಿಯುವ ಗಳಿಗೆಗಳಿಗೂ ಕಡಿಮೆಯಿಲ್ಲ (ಬಾಳ್ವೆಬೆ. ೧೨). **ತಿಳುವು : ೨.** "ಮನು— ಅವಬೋಧನೇ, ತಿಳುವಿನೊಳ್" (ಕಾಶಕ್ಕ. ೨೪೧) ; ದೇವ ಬೆಳಗಿನ ಬೆಳಗೆ ದೇವ ತಿಳುವಿನ ತಿಳುವೆ (ಕಲಿಕಾ. ದೇ. ೨೯೮-೧೪). [ ತಿಳಿ$_1$ + — ವು ]

**ತಿಳಿವುಟ್ಟು** (ಕ್ರಿ). ಅರಿವುಂಟಾಗು ; ಬುದ್ಧಿಬರಂ ; ಜ್ಞಾನೋದಯಂ ವಾಗು : ನಯದಿಂದಂ ತಿಳಿವುಟ್ಟರಲ್ಕೆನಗೆ ಪೇಟಿಲ್ಕೇಳ್ದು ಚಂಡಾಲಜಾತಿ ಯೊಳೀ ವಾಕ್ಯಮುಮಿಮಾ ವಿವೇಕಮುಮದೆಂತಾದತ್ತೊ ಪೇಟೆಂದು (ಕಾದಂಉ. ೭೫೬). [ ತಿಳಿ$_2$ + ಪುಟ್ಟು$_1$ ]

**ತಿಳಿವೆಳಕು** 'ತಿಳಿವೆಳಗು' ನೋ.

**ತಿಳಿವೆಳಗು**, ತಿಳಿಬೆಳಕಂ, ತಿಳಿಬೆಳಗು, ತಿಳಿವೆಳಕು (ನಾ). ನಿರ್ಮಲವಾದ ಪ್ರಕಾಶ ; ಸ್ವಚ್ಛವಾದ ಹೊಳಪು : ಅಕ್ಕ ನೀನೇಳೇಳು ನೇಸಱ ತಿಳಿವೆಳ ಗುಕ್ಕುತಲಿದೆ ಮೂಡಲಾಗಿ (ಶ್ರೀಪಾಲ. ೨-೨೯) : ಎಳೆ ಮಿಂಚಿನಂದದ ಬೊಂಬೆಯೊ ತಿಂಗಳ ತಿಳಿವೆಳಗಿನೊಳಾದ ರೂಪೋ (ಭರತ.೨-೭೭); ತಿಳಿವೆಳ ಗಿನ ತಳ್ವೆಳಗಿನ ... ಬೆಳಸಿನ ಸಿರಿಯೆನೆ ತೊಳತೊಳ ತೊಳಗಿದುದು ಮೂರ್ತಿ ಚಂದ್ರಪ್ರಭನಾ (ಶಜ್ಞಾನು. ೧೪೦ ವ್ಯಾಖ್ಯಾ). **ತಿಳಿಬೆಳಕು :** ಅಶಾಂತಿಯೆಲ್ಲಾ ಅಳಿದು ಶಾಂತಿಯ ತಿಳಿಬೆಳಕು ದೇಶವನ್ನೆಲ್ಲಾ ತುಂಬಲಿ (ಅಮಗಾಂ. ೮). **ತಿಳಿಬೆಳಗು :** ತನುವಿನಲ್ಲಿ ಹುಸಿ ತುಂಬಿದ ಕತ್ತಲೆಯ ಕಣ್ಣಿಗೆ ಸತ್ಯದ ತಿಳಿ ಬೆಳಗು ಕಾಣುವುದು ಅಸಾಧ್ಯವೆಂದೇ ಹೇಳಬೇಕು(ಮೋಳಿಮಾ. ೦ ಪ್ರಸ್ತಾವನೆ). **ತಿಳಿವೆಳಕು :** ತಿಳಿವೆಳಕು ರೂಪಾನ ಮುಖವಡರಿ ಒಂದು ಅಭೂತಪೂರ್ವ ಶೋಭೆಯನ್ನು ತಂದಿದೆ (ಜಯಂತ. ೫೦). [ ತಿಳಿ$_2$ + ಬೆಳಗು$_2$ ]

**ತಿಳಿವೊನಲ್** (ನಾ). ನಿರ್ಮಲವಾದ ಹೊಳೆ : ಅಪ್ ತೇಜಗಳು ಬೆರೆದ ತಿಳಿ ವೊನಲನನುಕರಿಸಿ ನನ್ನೊಳಗು ಬಾಹ್ಯಾಂತರ್ಯಭೇದವಳಿಯೆ (ಮಲೆದೇ. ೨೭-೫). [ ತಿಳಿ$_2$ + ಪೊನಲ್ ]

**ತಿಳಿಸಾರು** (ನಾ). ತೆಳ್ಳಗಿರುವ ಸಾರು : ನಮ್ಮ ಯಜಮಾನ್ರಿಗೆ ಅದರ ತಿಳಿಸಾರು ಮಾಡಿದ್ರೆ ತುಂಬ ಹಿಡಿಸುತ್ತೆ (ರೂಪಸಂ. ೧೨).
[ ತಿಳಿ$_2$ + ಸಾರು$_3$ (<ಸಾಱು$_2$) ]

**ತಿಳಿಸು** (ಕ್ರಿ). ಸ್ಪಷ್ಟಪಡಿಸು ; ಅರಿಯುಂವಂತೆ ಮಾಡಂ : ಶಿಕ್ಷಕನು ಹುಡುಗರಿಗೆ ಚೆನ್ನಾಗಿ ತಿಳಿಸಿಕೊಡಬೇಕು (ಮುಂಬಯಿ. ೪-೮೪): ದಯವಿಟ್ಟು ತಿಳಿಸೋಣವಾಗಲಿ (ಜಂಗಾಳ್ಕ. ೧೪೧).

**ತಿಳಿಸಿಕೊಳ್ಳು** = ಶುದ್ಧವಾಡಿಕೊಳ್ಳು ; ಹಸನುವಾಡಿಕೊಳ್ಳು : ಕೆಟ್ಟೆಣೆಸದಿನ್ನು ಮನವಂ ತಿಳಿಸಿಕೊಳ್ಳಯ್ಯ (ಹಜ್ಜಿರ. ೨೦-೦೨).

[ ತಿಳಿ$_1$ + – ಇಸು$_3$ ]

**ತಿಳಿಸುಣ್ಣ** (ನಾ). ೧. ಸುಣ್ಣ ಅರಳಿದ ಬಳಿಕ ಅದರ ಮೇಲೆ ನಿಲ್ಲುವ ನೀರು ; ಸುಣ್ಣದ ನೀರು : (*). ೨. ಕೆನೆಸುಣ್ಣ : (*).

[ ತಿಳಿ$_2$ + ಸುಣ್ಣ ]

**ತಿಳಿಹು** 'ತಿಳಿಪು$_1$' ನೋ.

**ತಿಳಿಹೇಳು** (ಕ್ರಿ). ಸ್ಪಷ್ಟವಾಗುವಂತೆ ಹೇಳು; ತಿಳಿಸಿ ಹೇಳಂ: ಬೇರೆ ಬೇರೆ ವಿಷಯಗಳ ಮೇಲೆಯೂ ವಿವರವಾಗಿ ತಿಳಿಹೇಳಿ ಅವರೆಲ್ಲರಲ್ಲಿಯೂ ಆ ವಿಷಯಗಳನ್ನು ತಿಳಿದುಕೊಳ್ಳುವ ಲವಲವಿಕೆ ಹುಟ್ಟಿಸಿದ್ದರು (ಪ್ರಬಂಧ. ೯೪).

[ ತಿಳಿ$_1$ + ಹೇಳು (<ಪೇೞ್) ]

**ತಿಳಿಹೊಳೆ** (ನಾ). = ತಿಳಿವೊನಲ್: ಪರಮಶಾಂತಿಯ ಪಡೆದಿಹೆ ; ಪಡೆಯದಿರಲಿಂತೆಂತು ಹರಿವುದು ರಾಗ ತಿಳಿಹೊಳೆಯಂದದೆ? (ಇಂಗೀತ. ೧೪-೦೫). [ ತಿಳಿ$_2$ + ಹೊಳೆ$_4$ (<ಪೊೞೆ$_1$) ]

**ತಿಳುಪು$_1$** 'ತಿಳಿಪು$_1$' ನೋ.

**ತಿಳುಪು$_2$** 'ತಿಳಿಪು$_2$' ನೋ.

**ತಿಳುಪೇಱು** (ಕ್ರಿ). ತೆಳುವಾಗು; ತೆಳ್ಳಗಾಗಂ; ಕೃಶವಾಗಂ : ಬಿಳುಪೇಱಿತು ಮೊಗ ತಿಳುಪೇಱಿತು ಕೆನ್ನೆ ಹೊಳಪೇಱಿತು ಕುಡಿನೋಟ (ಜೀವಂಸಾಂ. ೪-೭೦). 'ತೆಳುಪೇಱು' ಪರಾ.

[ ತಿಳುಪು$_2$ (<ತಿಳಿಪು$_2$) + ಏಱು$_1$ (<ಏಱ್$_1$) ]

**ತಿಳುವಳಿಕಸ್ತ** 'ತಿಳಿವಳಿಕಸ್ತ' ನೋ.

**ತಿಳುವಳಿಕೆ** 'ತಿಳಿವಳಿಕೆ' ನೋ.

**ತಿಳುವಿಕೆ** 'ತಿಳಿವಿಕೆ' ನೋ.

**ತಿಳುವು** 'ತಿಳಿವು' ನೋ.

**ತಿಳುಹಿಸು** (ಕ್ರಿ). ೧. ಶಮನಗೊಳಿಸು ; ಶಾಂತಗೊಳಿಸು; ಸಾಂತ್ವನಗೊಳಿಸು; ಸಮಾಧಾನಗೊಳಿಸಂ : ಈ ಗಣಿಯು ಸಂಗೀತ ಸಾಹಿತ್ಯವ ಬಲ್ಲುದು . . . ಅಂತಃಪುರಸ್ತ್ರೀಯರುಗಳ ಕೋಪವ ತಿಳುಹಿಸಿ ಅನುಗೊಳಿಸಬಲ್ಲುದು (ವಚಕಾ. ೧). ೨. ತಿಳಿಸು ; ಅರುಹು.

[ ತಿಳುಹು$_1$ (<ತಿಳಿಪು$_1$) + – ಇಸು$_3$ ]

**ತಿಳುಹು$_1$** 'ತಿಳಿಪು$_1$' ನೋ.

**ತಿಳುಹು$_2$** 'ತಿಳಿಪು$_2$' ನೋ.

**ತಿಳ್ಳಿ** (ನಾ). (ಉಕ) ಒಂದು ಬಗೆಯಂ ಆಟ ; ಉಪ್ಪಾರಪಟ್ಟೆ : ಪ್ರಳಯ ಜಯಿಸಿ ತಾನೀಸಿಯೇ ಬರಲೀ ಆಡುತಿರಲು ತಿಳ್ಳೀ ಇಗೋ ಓಡಿ ಬಂದಿತಿಲ್ಲಿ (ಅರಳು. ೧೫೩-೪) ; ಸಂಜೆಯಲ್ಲಿ ಮಾಡುವ ವ್ಯಾಯಾಮದಲ್ಲಿ ತಿಳ್ಳಿ, ಓಡುವುದು, ಖೋಖೋ ಮೊದಲಾದವುಗಳೂ ಬರುತ್ತವೆ (ಬ್ರಹ್ಮಚೀ. ೨೦೦) ; "ಹುಡುತುತ್ತು" "ತಿಳ್ಳಿ" ಮುಂತಾದ ಆಟಗಳನ್ನು ಆಡುತ್ತಿರುವರು (ನಿರಾಥ. ೯೫).

**ತಿಳ್ಳಿಯಾಡು** = ಉಪ್ಪಾರಪಟ್ಟೆಯಾಟ ಆಡು : ಅವನ ಅಂತರ್ಯದ ಭೋರ್ಗರೆವ ಕಡಲಿನ ಭಾವನೆಗಳ ಅಲೆಗಳ ಮೇಲೂ ಆಕೆಯ ಮಂಗಲ ಮೂರ್ತಿ 'ತಿಳ್ಳಿ'ಯಾಡುತ್ತಿದೆ (ಬನಸಿ. ೨) ; ಗಾಳಿಯೊಡನೆ ತಿಳ್ಳಿಯಾಡು ತಾಡಂತದರ ಓಟಾ (ನಾದಲೀ. ೮೫-೧). **ತಿಳ್ಳಿಹಾದಾಡು**=ತಿಳ್ಳಿಯಾಡು : ಖೋ ಆಡಲಿಕ್ಕೂ ತಿಳ್ಳಿ ಹಾದಾಡಲಿಕ್ಕೂ ಹೆಚ್ಚು ಮಂದಿ ಬೇಕು (ಮುಂಬಯಿ. ೦-೨೬). [ ? ]

**ತಿಱು, ತಿರಿ$_2$** (ಕ್ರಿ). ೧. (ಹೂವು, ಹಣ್ಣು ಮೊದಲಾದುವನ್ನು) ಕೊಯ್ಯು; ಬಿಡಿಸು ; ಆರಿಸು ; ಎತ್ತು : "ತಿಱಿದುದೆನಲ್ ತಾಂ ಕೊಯ್ದುದು" (ಶಬ್ದಾನು. ೧೦೬) ; ಮುಳಿದು ತನಗರ್ಘ್ಯಮೆತ್ತಿದ ತಳಿಗೆಯೊಳಿಡೆ ತಿಱಿದ ತೆಱದೆ ತಲೆ ಪಱಿದಾಗಳ್ (ಪಂಪಭಾ. ೬-೬೪) ; ಬದರಿಯ ಬನ್ನಿಯ ರಥ ಚಕ್ರದೆಲೆಗಳಂ ತಿಱಿದು ತಲೆಯೊಳಿಟ್ಟಾತಂಗಭ್ಯುದಯಮುಂ...ಸುಖಮುಂ ಕೂಡಿಬಕ್ಕುಮೆಂಬರ್ ಮೂಢರ್ (ಸಮುಪ. ೦೨-೬); ಕುಸುಮನಿಕಾಯಮಂ ತಿಱಿವ ಕೈತವದಿಂದೆ (ಉದ್ಭಟ. ೭-೨೨); ಪಣ್ಣಂ ತಿಱಿದಿಟ್ಟೆಯಿಂದೆ ಕುಡುತುಂ (ಕಬ್ಬಿಕಾ. ೦೫೬) ; ಕುಸುಮತತಿಯಂ ತಿಱಿದುಕೊಂಡು ತಾಂ ಬರುತ್ತಿರೆ (ಬಸವು. ೧೦-೯); ಕುಸುಮಮಾಳಿಯಂ ತಿಱಿದು ತನ್ನಮನೆ (ಪದ್ಮರಾ. ೮-೫೩); ನಳನಳಿಪ ಗಜಪುಷ್ಪಮಾಲಿಕೆಯ ತಿಱಿದು ತುಳಸಿಯ ದಳವನಘಶತಹರವ ನೆಡೆಗೆಡೆಗಿಱುಕಿ ವೈರಿಯ ಧುರವ ಜಯಿಸೆಂದಿಕ್ಕಿದನು ಕೊರಳಲಿ (ತೊರರಾ. ೪-೯-೨) ; ತಿಱಿದ ಚೆಂದಳಿರ್ಗಳಂತೊಪ್ಪುವಧರಂಗಳಿಂ...ಸುರವನಿತೆಯರ್ ಕಂಗೆಸೆದರ್ (ಜೆಬಪು. ೧೯-೪೪). 'ಪೂದಿಱಿ' ಪರಾ. ೨. ಎಸೆ ; ಬಿಸಾಡು. 'ತಿಱಿಕಲ್'ಪರಾ. **ತಿರಿ$_2$** : ೧. ಹಲವಾರು ತೋಟದೊಳಸವಸದೊಳು ನುಗ್ಗಿ ಹೂಗಳ ತಿರಿದೆನು ಹಿಗ್ಗಿ (ಇಂಚಾಪ. ೮೦-೮೮). ೨. 'ತಿರಿಕಲ್ಲಂ' ಪರಾ.

[ ದೇ. ॥ ತಮಿ. ಮಲ. ತೆಱು ; ತೆಲು. ತೆಗು, ತ್ರೆಗು, ತ್ರೆಯ್ಯು ]

**ತಿಱಿಕಲ್, ತಿರಿಕಲ್ಲಂ, ತಿಱಿಕಲ್ಲು** (ನಾ). (ಆಟವಾಡುವಾಗ) ಮೇಲಕ್ಕೆ ಹಾರಿಸಿ ಕೈಯೊಡ್ಡಿ ಹಿಡಿದುಕೊಳ್ಳುವ ಸಣ್ಣಕಲ್ಲು ; ಅಣ್ಣೆಕಲ್ಲು : "ತಿಱಿಕಲ್ಲೆಂದು ಅಣ್ಣೆಕಲ್" (ಕಶಸಾ. ೨೭-೫೫೨) ; "ತಿಱಿಕಲ್ [ಪಾಠಾಂ. ತಿಱಗಲ್, ತಿಱುಕಲ್] ಎನಲ್ಕೆ ಶಾಸಣ್ಣೆಕಲ್ಲಕ್ಕು" (ಕಬ್ಬಿಕ್ಕ.೫೯); ವಾಮೇತರಾಯತಹಸ್ತಾಗ್ರದೊಳಾಂತು ತಾಳ್ದಿದುದಱಂ ಬಾಳತ್ವದೊಳ್ ಕೋಟಿ ಕಾಂತಿತಮಾ ಕಲ್ ತಿಱಿಕಲ್ ತ್ರಿಪೃಷ್ಠಮಹಿಪಂಗಕ್ಕುಂ ಪೆಱಂಗಕ್ಕುಮೇ (ಶಾಂತಿಪು. ೫-೨೬) ; ಮಿಱುಗುವ ನೀಲದ ಬಟ್ಟಂ ತಿಱಿಕಲ್ಗಳನಾಡುವಂತೆ ಕಣ್ಗೆಸೆದಿರ್ದಳ್ (ಕಾದಂಉ. ೨೬); ತದ್ಗೃಹದೇವತಾಜನಂ ಸೊಗಯಿಸುವಿಂದ್ರನೀಲಮಣಿಯಂ ತಿಱಿಕಲ್ಗಳನಾಡುವಂತೆವೋಲ್ (ಸಂರಾಮಾ. ೩-೭೭) ; ತಿಱಿಕಲ್ಲಾದುವು ವಿಷ್ಣುಭೂಭುಜಭುಜಶ್ರೀಗಾವಗಂ ಪೆಂಪಿನೊಳ್ಳೆಱದಾ ಸಹ್ಯನಗೇಂದ್ರು ನೀಳ××× ಗಳ್ ಪೆಱತೇನಾ ಭುಜಲಕ್ಷ್ಮಿಗೀ ನೆಗಳ್ದ ಪಾನಂಗಲ್ (ಎಕ. V, ಬೇಲೂರು. ೦೭-೭; 1136). **ತಿರಿಕಲ್ಲು**: 'ತಿರಿಕಲ್ಲಾಟ' ಪರಾ. **ತಿಱಿಕಲ್ಲು**: ಕುಳಿಲ್ಸೆಂಡು ಬಟ್ಟು ತಿಱಿಕಲ್ಲಟ್ಟುಂಗರೆ ಹೊಣೆಗುಂಡೆಂಬಿವನಾ ಮುಂರಹರನಲ್ಲಲ್ಲಿಗಾಡುತುಂ ಬರಲಿದಿರೊಳ್ (ಜಗವಿ. ೪-೪೪) ; ಸಪ್ತ ಕುಲಪರ್ವತಂಗಳನೊರ್ಮೆ ಬಾಚಿಯುಂಗೈಯೊಳಾಂತು ಓರಂತೆ ತಿಱಿಕಲ್ಲನಾಡುತ (ವೀಶೈಪು. ೩-೨೦-೪೪) ; ಚಂಡಪ್ರತಾಪಿಯ ಜಯವಧು ತಿಱಿಕಲ್ಲ ಕೊಂಡಾಡುವಂತೆ ಚಿಮ್ಮಿದನು (ಮೋಹತ. ೩೪-೯) ; ಅಖಿಳ ಕುಲಗಿರಿಗಳಂ ತಿಱಿಕಲ್ಲನಾಡಿ ಸಾರಿಪ ವಸುಂಧರೆಯನಾಕಾಶಮಂ ಪಿಡಿದು ತಾಳವ ಪೊಯ್ವ ...ಮಹಾಪ್ರಮಥವರರೊಪ್ಪುತಿರ್ದರು (ಸಿದ್ಧೇಪು. ೧-೩೪). 'ಅಣ್ಣೆಕಲ್$_1$' ಪರಾ. [ತಿಱು + ಕಲ್$_3$]

**ತಿಱಿಕಲ್ಲಾಟ, ತಿರಿಕಲ್ಲಾಟ** (ನಾ). ಕಲ್ಲುಗಳನ್ನು ಎಸೆದು ಹಿಡಿಯುವ ಆಟ ; ಅಣ್ಣೆಕಲ್ಲಾಟ : ಮತ್ತಮವರ ಪಸುಳೆಗಳ್ ಪಕ್ಕಿಯ ಸಿಡಿದಲೆಯೊಳ್ ತಿಱಿಕಲ್ಲಾಟಮಂ . . . ಕಲ್ವರ್ (ಚಕವಂ. ೮-೧೨) ; ಪಂದಲೆಯ ತಿಱಿಕಲ್ಲಾಟದಿಂ ಮರುಳ್ಪಡೆಗೆ ನಲವೆರ್ಚಿಸುತುಂ (ರಾಮಾಶ್ವ. ೪೯-೦೯). **ತಿರಿಕಲ್ಲಾಟ**: ಕವಣೆ ತಿರಿಕಲ್ಲಾಟ ಹಗ್ಗಕೆ ಸೆಳೆದರೋ ಹೆಬ್ಬಾವನು (ಕಪಪು. ೬-೦೫೨). [ ತಿಱಿಕಲ್ + ಆಟ ]

**ತಿಱಿಕಲ್ಲಾಡು** (ಕ್ರಿ). ಕಲ್ಲುಗಳನ್ನು ಮೇಲೆ ಎಸೆದು ಹಿಡಿ; ಅಣ್ಣೆಕಲ್ಲಾಡಂ : ತಿಱಿಕಲ್ಲಾಡುವ ಬೊಟ್ಟುವೋರಿಸುವ ಸೆಂಡಂ ಪೊಯ್ವ ... ನಾನಾಕ್ರೀಡೆಯಿಂದಿರ್ವರುಂ ತಱಿಸಂದು (ಸುಕುಮಾ. ೨-೬) ; ತಿಱಿಕಲ್ಲಾಡುವೆನೋ ಕುಲಾದ್ರಿಚಯಮಂ (ಜಗವಿ. ೭-೩೫); ಕೋಡೆಯೊಳ್ಕೋಡೊತ್ತುತುಂ

ದಂತಿಗಳನೆ ತಿಱಿಕಲ್ಲಾಡುವಂತಂಬರಕ್ಕೀಡಾಡುತ್ತುಂ ತುಂಗಶೈಳಂಗಳನೆ ... ಎಯ್ದುಂದುದು ಪವನಜವಂ ರುಂದ್ರಗಂಧದ್ವಿಪೇಂದ್ರಂ (ಪಾರ್ಶ್ವಪು. ೯-೦೩೭): ಆಲಿವರಲಂ ಪೊಯ್ದಣ್ಣೆಕಲ್ಲಾಡಲುಂ ತಿಱಿಕಲ್ಲಾಡಲದೇಂ ತಗುಳ್ದಪೊ ಮನಸ್ಸಂಪ್ರೀತಿಯಿಂ ಚಾತಕಂ (ಅನಂಪು. ೯-೯) ; ತಲೆಗಳ ತಱಿದು ತಿಱಿಕಲ್ಲಾಡುತಿರ್ದನು ವೀರವಿಹಗೇಂದ್ರ (ತೊರರಾ.೩-೧೦-೦೪): ಗಿರಿಗಳಂ ಕಿತ್ತು ತಿಱಿಕಲ್ಲಾಡುವ ಕಾಲವೇಘದ ಸಿಡಿಲ ತೊಡಿಗೆಯಂ ಸಲೆ ತೊಡುವ ... ಕಾಲರಾಕ್ಷಸರ್ವೈದಿ ಸಂದಣಿಸಿ ನಿಂದಿರ್ದರ್ (ಜಿಬಪು. ೨೩-೦೫).

[ತಿಱಿಕಲ್ + ಆಡು$_1$]

**ತಿಱಿಕಲ್ಲು** ‘ತಿಱಿಕಲ್’ ನೋ.

**ತಿಱಿಕುಳಿ** (ನಾ). = ತಿಱಿಕೊಱಿ : “ತಿಱಿಕುಳಿ [ಪಾಠಾಂ. ತಿಱಿಕೊಱಿ] ಯೆನಲ್ಕೆಯಾಯ್ಕುಳಿಯಕ್ಕು” (ಶಬ್ದಮಂ. ೫೪). ‘ತಿರಿಕಂಳಿ’ ಪರಾ.

[ತಿಱಿ + – ಕುಳಿ$_3$]

**ತಿಱಿಕೊಱಿ** (ನಾ). (ಗದ್ದೆ ಮುಂತಾದ ಕಡೆ ಕಾಳನ್ನು) ಆಯ್ದು ಕೊಂಡು ಜೀವಿಸುವವನು ; ಆಯ್ಕುಳಿ : “ತಿಱಿಕೊಱಿ = ಆಯ್ಕುಳಿ” (ಶಮದ. ಪರಿ. ೨). [ತಿಱಿ + ಕೊಱಿ$_6$]

**ತಿಱಿಕೊಱಿಗೊಳ್** (ಕ್ರಿ). ಆಯ್ದುಕೊಳ್ಳು ; ಆರಿಸಿಕೊಳ್ಳು : ಕೊಲ್ಲುಂ ಕುಱಿಯಂ ಕೊಲ್ವಂತಿರೆ ತಿಱಿಕೊಱಿಗೊಂಡು ಜಗಜ್ಜನಂಗಳಂ ಯಮರಾಜಂ (ಅಜಿಪು. ೧೦-೨೮). [ತಿಱಿಕೊಱಿ + ಕೊಳ್$_1$]

**ತಿಱಿಗದಿರ್** (ನಾ). ಆಯ್ದುಕಿರಣ,—ರಶ್ಮಿ : ತಿಱಿಗದಿರಂ ಮಱಿವಕ್ಕಿಗೆ ನೂಂಕಿ ತನಿಗದಿರನಿನಿಯಂಗೆ ನೀಡಿ (ಅನಂಪು. ೭-೮೦ ವ). [ತಿಱಿ+ಕದಿರ್$_1$]

**ತಿಱಿಚು** (ಕ್ರಿ). ವಿಭಾಗಿಸು ; ಭಾಗವಮಾಡು (?) : ಮೂಱಱವೊಳ ದಸವಂದದ ಮರ್ಯಾದೆಯಲೂ ಕಟುಗೊಡಿಗೆಯನೂ ತಿಱಿಚಿ ಆ ಕಟುಗೊಡಗೆಯ ಗದೆಗೆ ಉತ್ತಮ ಮಧ್ಯಮ ಕನಿಷ್ಠವಾಗಿ ತ್ರಿಸ್ತಾನದಲೂ ಸಿಲಾಸ್ತಾಪನವನು ಮಾಡಿಸಿ ಕೊಡುವೆವು (ಎಕ. X, ಮುಳಬಾ. ೧೭೨-೧೦ ; 1496). [ತಿಱಿ + – ಚು$_1$]

**ತಿಱಿತರ್**, ತಿರಿತರ್$_2$ (ಕ್ರಿ). (ಹೂವು, ಹಣ್ಣು, ಕಾಯಿ ಮುಂತಾದುವನ್ನು) ಕೊಯ್ದು ತರು ; ಕಿತ್ತು ತರು : ಕಂಪುಳ್ಳ ಸಂಪಗೆಯ ಪೂಗಳಂ ತಿಱಿತಂದು ಹೆಂಪಿನಿಂ ಶಶಿಧರನ ಸಿರಿಮುಡಿಗೆ ಬೇಕೆಂದು (ಬಸರ. ೧-೨೭) ; ತಳಿರ ತಿಱಿತಂದಂದು ಮನೆ ಮಾಡಿದರು ಭೂಸುರತತಿಗೆ (ಕುಮ್ಮಾಅ. ೦೨೩. ೯-೫). **ತಿರಿತರ್$_2$**. ‘ತಿರಿತರಿಸು’ ಪರಾ. [ತಿಱಿ + ತರ್]

**ತಿಱಿತರಿಸು**, ತಿರಿತರಿಸು (ಕ್ರಿ). ಕೊಯ್ದು ತರಿಸು; ಕಿತ್ತು ತರಿಸು : ಎಳವುಲ್ಲಳಂ ತಿಱಿತರಿಸಿ ಮುಂದಿಟ್ಟನು (ಜೈಮಿಭಾ. ೨೯-೪೭). **ತಿರಿತರಿಸು** : ತಣ್ಣೆಳಲಿನತರುವಮೂಲಕ್ಕೆ ತುರಂಗವನ್ನು ನೀರು ಕುಡಿಸಿ ಕಟ್ಟಿ, ಎಳಹುಲ್ಲನ್ನು ತಿರಿತರಿಸಿ ಅದರ ಮುಂದಿಟ್ಟು (ಬಿದುರ. ೦೬೮).

[ತಿಱಿತರ್ + – ಇಸು$_3$]

**ತಿಱಿಸೇವಗೆ** (ನಾ). ಒಂದು ಬಗೆಯ ಸೇವಗೆ; “ಕತ್ತರಿಸಿ ಚೂರುಮಾಡಿದ ಸೇವಗೆ” (ಸಿದ್ಧರಾ. ಕೋಶ): ಬಳ್ಳಿಯಲ್ಲಿ ತಿಱಿಸೇವಗೆಯ ರಾಶಿಗಳ ಮಾಡಿ ಹಳ್ಳಿಕಾರ್ತಿಯರಲ್ಲದರಸುಮಕ್ಕಳು ಮಾಡಿದರು ಪರಡಿ ಸರವಳಿಗೆಯ (ಸಿದ್ಧರಾ. ೮-೫೦). [ತಿಱಿ + ಸೇವಗೆ (< ಸೇವಿಗೆ)]

**ತಿಱು** (ಕ್ರಿ). ೧. ಕೊಡು ; ನೀಡು : ಮಾನ್ಯಕಾಱವರ್ೂಱು ಶ್ರಾಹೆಗೆ ಪರಿಯರ ಗದ್ಯಾಣವನ್ನಿಱುವರ್ (ಸೌಇಇ. IX – I, ೭೭-೨೯; 992): ಹೊಲಗೇರಿಯ ಪಡುವಣ ಕರುವಗೆಯ್ಯಂದಂ ತೆಂಕಲಾಱುಮತ್ತರು ಕೆಯಿಂಗವಱವಣಮಯ್ದು ಗದ್ಯಾಣವಂ ತಿಱುವರು (ಸೌಇಇ. XI-i, ೫೦-೨೦ ; 1005). ೨. ಸಲ್ಲಿಸು ; ಸಂದಾಯಮಾಡು : “ತಿಱು – (ದ್ರವ್ಯ) ವಿನಿಮಯೇ” (ಶಮಧಾ). ‘ತೆಱು$_1$’ ಪರಾ.

[ದೇ. ೩ ತಮಿ. ಇಱು ; ಮಲ. ಇಱ = ಕಾಣಿಕೆ]

**ತಿಱುಕೆ** (ನಾ). ಕೊಡುಂವಿಕೆ ; ತೆರಂವಿಕೆ : ಕಿಱುಕೆ, ತಿಱುಕೆ, ಪೊಱುಕೆ (ಶಬ್ದಾನು. ೫೫೭ ಪ್ರಯೋ). [ತಿಱು + – ಕೆ]

**ತಿಱುಗೆ** (ನಾ). ಒಂದು ಬಗೆಯ ತೆರಿಗೆ (?) : ಉಂಬರವಾಣಿಯ ತಿಱುಗೆಯು ಹಿರಿಯ ಕೋಲಲು ಹಂನೆರಡು ಮತ್ತರು (ಕಇ. II, ೨೬-೭೪ ; 1174) : ಹಾರಣೆದಂಳ ದೋಷದಿಂ ಪಾದ ತಿಱುಗೆಯಂ ಕೊಂಬುದಿಲ್ಲೆಂದು ಒಂದು ಹೊಂನ ಪಾದಪೂಜೆಯಂ ಕೊಂಡು (ಕಕುಲ. ೬-೭೪ ; 1218).

[ತಿಱು + – ಗೆ]

**ತಿಱುನಂದೀಶ್ವರ** (ನಾ). [ಜೈನ] ಒಂದು ಹಬ್ಬ ; ನಂದೀಶ್ವರ ದಷ್ಟಮಿ ; P ಜ್ಯೇಷ್ಠ, ಆಷಾಢ ಮತ್ತು ಫಾಲ್ಗುಣ ಮಾಸಗಳಲ್ಲಿ ಅಷ್ಟಮಿಯಿಂದ ಹುಣ್ಣಿಮೆಯವರೆಗೆ ಎಂಟು ದಿನಗಳು ಜೈನರು ಆಚರಿಸುವ ಒಂದು ವ್ರತ,—ಹಬ್ಬ. ಇದನ್ನು ‘ಅಷ್ಟಾಹ್ನಿಕ’ ಎಂದೂ ಕರೆಯುತ್ತಾರೆ : ತಿಱುನಂದೀಶ್ವರದಂದು ದಾನಮಾಡಿಯುಂ ಪೊಯ್ಸಳನ ಗುರುಗಳ್ಮುಳ್ಳೂರ ಶ್ರೀಗುಣಸೇನಪಂಡಿತದೇವರ್ಗೆ ಧಾರಾಪೂರ್ವಕದಿಂ ಸ್ಥಾನಮಂ ಕೊಟ್ಟರ್ (ಎಕ. VI, ಮೂಡಿಗೆ. ೦೩-೨೮; 1063). ‘ನಂದೀಶ್ವರ’ ಪರಾ. [P ಇದು ‘ತಿರುನಕ್ಷತ್ರ’ ‘ತಿರುನಾಮ’ ಮುಂತಾದ ಶಬ್ದಗಳಂತೆ, ತಮಿಳು ಪದಗಳ ಹೋಲಿಕೆಯ ಮೇಲೆ ರೂಪಿಸಿಕೊಂಡಿರುವ ಒಂದು ಶಬ್ದವಿರಬಹುದು.]

**ತಿಱುನೀರಿಕ್ಕು** (ಕ್ರಿ). (?) : ಮಂಡಲಮಿನ್ನುಂ ತಿಱುನೀರಿಕ್ಕು [ಪಾಠಾಂ. ಕಿಱುನೀರುಕ್ಕು] ವುದೆನಿಸಿದ ತಱಸಲವಿನ ಚಲದ ಬಲದ ಕಲಿನರಸಿಂಹಂ (ಪಂಪಭಾ. ೧-೩೩) ; “ತರ್ಪಣೋದಕವನ್ನು ಕೊಡು” (ಪಂಪದೀ. ೧೬).

[P ಇಲ್ಲಿ ಪಾಠಾಂತರವೇ ಹೆಚ್ಚು ಗ್ರಾಹ್ಯವೆಂದು ತೋರುತ್ತದೆ]

**ತಿಱುವಂಗಡಿ** (ನಾ). = ತಿರುಮಾಳಿಗೆ : ವಿದ್ಯಾರ್ಥಿತಪೋಧನರಾಹಾರ ದಾನಕ್ಕಮೆನ್ದು ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಉತ್ತಮದ ಬಳಕ್ಕೆ ತಿಱುವಂಗಡಿ ೧ ಮತ್ತಮಂಗಡಿಗಳೊಳ್ಪಣ ೧ . . . ಕೊಟ್ಟರ್ (ಎಇ. V, ೩೪೩-೩೦ ; 1093). [< ತಿರು$_2$ + ಅಂಗಡಿ (<ಅಂಗಾಡಿ)]

**ತಿಱುವಂತ** (ನಾ). ಒಬ್ಬಾತನ ಹೆಸರು : ಪತ್ತುಗದ್ಯಾಣ ಪೊನ್ನುಂ ಇಟ್ಟಾಱು ಭತ್ರವುಂ ತಿಱುವನ್ತಗೆ ಕಾದಿಯಣ್ಣಂ ಕೊಟ್ಟಂ (ಎಕ. IX, ಮುಳಬಾ. ೨೧೮-೩೪ ; 1000). [<ತಿರು$_2$ + – ವಂತ]

**ತಿಬ್ಬಂದಿರಿ** (ಕ್ರಿ). ವೇಗವಾಗಿ ತಿರುಗು ; ಭರದಿಂದ ಸುತ್ತು : ಜಳಧಿಯ ನೀರ್ತುಳುಂಕಿದವು ಧಾತ್ರಿ ತಿಬ್ಬಂದಿರಿದತ್ತು ದಿಗ್ಗಜಂ ಮದವೆತ್ತಿ ಕಟ್ಟಿದುದು (ಮಹಾನೇ. ೧೦-೦೨೯). [< ತಿಬ್ಬನೆ + ತಿರಿ$_1$]

**ತಿಬ್ಬಗೆ** (ಅ). ತಿರುಗುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಅಸುರಂ ಗದೆಯಂ ತಿಬ್ಬಗೆ ತಿರುಪಿದೊಡೊಡನೆ ತಿರುಗುಗುಂ ಭೂಚಕ್ರಂ (ಜಗವಿ. ೯-೬೩). [ತಿಬ್$_0$ + – ಅಗೆ$_8$]

**ತಿಬ್ಬನೆ**, ತಿರ್ರನೆ (ಅ). ೧. = ತಿಬ್ಬಗೆ : ಬಾಣಗಳ್ಪಂದರಿಗಳನೆತ್ತಿ ತಿಬ್ಬನುದ್ದದೊಳು ತಿರುಗಿಸಿ (ಜಂಪ್ರಸಾಂ. ೮-೫೨). **ತಿರ್ರನೆ** : ೨. ಶೀಘ್ರವಾಗಿ; ವೇಗವಾಗಿ : “ತಿರ್ರನೆನೆ ತಿಬ್ಬಮೆನೆ ಶೀಘ್ರವಾಚಿಯಕ್ಕು” (ಕಶರ. ೯೫).

**ತಿಬ್ಬನೆತಿರಿ**=ಗಿರ್ರನೆ ಸುತ್ತು,—ಅಲೆ: ಆ ಗಾಲಿಯುಂ ಪದಿನಯ್ದುದಿವಸಂ ಬರೆಗಂ ತನಗೆ ತಾನೆಯಂತರಿಕ್ಷದೊಳ್ ನೆಲನಂ ಮುಟ್ಟದೆ ತಿಬ್ಬನೆ ತಿರಿಯುತ್ತಿರ್ದುದಂ ಕಂಡು (ವಡ್ಡಾರಾ. ೦೪೭-೦೫) ; ತಿರಿಪಿದೊಡದನೆಳೆ ತಿಬ್ಬನೆ ತಿರಿದುದು ತಿರುವಾಯೊಳಿಡೆ ಸುರರ್ ಮೊಱೆಯಿಟ್ಟರ್ (ಪಂಪಭಾ. ೧೩-೮೯೨) ; ಕುಧರ್ಮೋಪದೇಶದಿಂ ಸಂಸಾರಚಕ್ರದೊಳ್ ತಿಬ್ಬನೆ ತಿರಿದು (ಶಾಪುಂಪು. ೫೦-೨೮) ; ಸಂಸಾರದೊಳಗೆ ತಿಬ್ಬನೆ ತಿರಿವಯ್ (ಅಜಿಪು. ೨-೬೦) ; ಕರಟದ ಕದಿರಂತೆ ತಿರ್ಯಗ್ಗ್ಯತಿಯೊಳ್ ತಿಬ್ಬನೆ ತಿರಿದುಂ (ಧರ್ಮಾಮೃ. ೬-೦೭೫). **ತಿಬ್ಬನೆ ತಿರಿಪು, ತಿಬ್ಬನೆ ತಿರುಹು** = ಗಿರ್ರನೆ ಸುತ್ತುವಂತೆ ಮಾಡು ; ಅಲೆಯುಂವಂತೆ ಮಾಡು : ಕೌಂತೇಯರಂ ಮಚ್ಚರದಿಂ ಕಾಂತಾರದೊಳ್ತಿಬ್ಬನೆ

ತಿರಿಪಿದ ಸೊರ್ಕಿಗಳೇನಾದುದು (ಗದಾಯು. ೭-೧೪) : ತಿಱ್ಱನೆ ತಿರಿಪಿದವಂ ಸುತ್ತಿಪಂ ಮುತ್ತಿಪಂ ಸಂಗರದೊಳ್ (ಎಕ. VIII, ಸಾಗರ. ೧೦೯-೨೫; 1042); ಗಱ್ಱನೆ ಪರಿತಂದು ಮಾಣದಚ್ಚುಳಿಕೋಲಿಂ ತಿಱ್ಱನೆ ತಿರಿಪಿ ದುರಾತ್ಮರ್ ...ಬಡಿದರ್ (ಧರ್ಮಾಮೃ. ೩-೧೯೧) : ಸಱ್ಱನೆ ಸೀಳ್ವ ದಿಗ್ಗಜದ ಮಂಡೆಯ ಮೆಟ್ಟಿ ಸುಱ್ಱನೆ ಸುರಿವೆನೇಳ್ಗಡಲ ತಿಱ್ಱನೆ ತಿರುಹುವೆ ಧರಣಿಯ (ಮೋಹತ. ೧೨-೧೧). ತಿಱ್ಱನೆ ತಿರುಗು, ತಿರ್ರನೆ ತಿರುಗು=ತಿಱ್ಱನೆ ತಿರಿ : ಆನುಂ ತೊಡೆ ಯೆಡೆಯೊಳಿರ್ದೊಡಸಂದು ಸುಟ್ಟುರೆಯ ತಱಗೆಲೆಯಂತೆ ತಿಱ್ಱನೆ ತಿರುಗಿ ಬೀಳ್ವಲ್ಲಿ (ಕಾದಂಪೂ. ೧೮೫) ; ಕರಟದ ಕದಿರಂತೆ ತಿಱ್ಱನೆ ತಿರುಗುತ್ತುಂ (ಧರ್ಮಾಮೃ. ೨-೧೦೨): ಮಿಸುಗುವ ಡಮರುಗ ಢಂ ಢಂ ಡಣಲೆನೆ ಕಿಸುಳದಿ ಹರಿಯುವ ತಾರಂ ತಿಱ್ಱನೆ ತಿರುಗಂತ್ತಿರೆ (ಕುಂಬರ. ಹ. ೨೫೪-೭); ಕರಹತಿಗೆ ಧಡಧಡಿಸಿ ತಿಱ್ಱನೆ ತಿರುಗಿ ಬೀಳುತ (ಕುಮಾ.ದ್ರೋ. ೬-೫೯) ; ನಭೋಗೃದಲಿ ರಥದ ಗಾಲಿ ತಿಱ್ಱನೆ ತಿರುಗುತಿರ್ದವು (ತೊರರಾ. ೩-೬-೧೩) ; ದೈತ್ಯ ಪೀತಾಂ ಬರನ ಮೊಮ್ಮನನೆಚ್ಚು ಕೆಡಹಿದ ಭೂತಲ ತಿಱ್ಱನೆ ತಿರುಗೆ (ಮೋಹತ. ೩೫-೪೬) ; ಶನಿಗ್ರಹಕ್ಕೆ...ತನ್ನ ಅಕ್ಷದ ಮೇಲೆ ತಾನೊಂದು ಬಾರಿ ತಿರ್ರನೆ ತಿರುಗುವುದಕ್ಕೆ ಕೇವಲ ೧೧ ಗಂಟೆಗಳಾದರೆ ಸಾಕು (ಆಕಾಶ. ೨೪). ತಿಱ್ಱನೆಯ್ತರ್=ವೇಗವಾಗಿ ಬರು : ಚತುರಂಗಂ ಚತುರಂಗಸೈನ್ಯದೊಳಡು [ರ್ತು೦] ತಿಱ್ಱನೆಯ್ತಂದು ತಾಗಿ ತಡಂಮೆಟ್ಟದೆ ಕಾದೆ (ಪಂಪಭಾ. ೧೧-೭) : ಮಿಂಚಂ ತಟ್ಟೈಸಿದ ಕಾರ ಕಾರ್ಮುಗಿಲಂತೆ ತಿಱ್ಱನೆಯ್ತರ್ಪ ದಮಿತಾರಿಯಂ ನೋಡಿ (ಶಾಂತಿಪು. ೪-೫೨ವ). [ತಿಱ್$_0$ + – ಅನೆ$_1$]

**ತಿಟ್ಟಿಗಲೂರ್** (ನಾ). ಒಂದು ಊರಿನ ಹೆಸರು : ಬಿನಯಾದಿತ್ಯರಸರ್ ಕೊಱುಕುನ್ನಾಡ್ಕೆ ಮೂನೂಱು ಆಳುತ್ತಿಟ್ಟು ತಿಟ್ಟಿಗಲೂರ ತಾಯನ್ದೆಯರ ಪೂರ್ವ್ವಜರಾ ಪಡದೊದು ಉತ್ತಮಮಪ್ಪೆ ಎಮ್ಬಾ ಕಟಿನಿ (ಎಕ. XI (೩). ಹೊಳಲ್ಕೆ. ೧೯೧-೪ ; 800). [ ? + ಊರ್]

**ತಿಟ್ಟಿಮ್ಮ** (ನಾ). ಒಬ್ಬಾತನ ಹೆಸರು : ಸಡಗರರ ತಿಟ್ಟಿಮ್ಮಂ ವಿಕ್ರಮ ಮೆಂಬ ವರ್ಷದೊ[ಳ್] ಗೋಶಹಶ್ರಮಿಟ್ಟೊ[ಂ] ಪೂದಾರುಂ ಬೆಳಿ ವತ್ತರುಂಗೊಟ್ಟೊ[ನ್] (ಸೌಇಇ. XX, ೦೬-೩ ; 930). [ ? + ಅಮ್ಮ$_1$ ]

Δ ತಿಟ್ಟು 'ತಿರ್ದು$_1$' ನೋ.

**ತೀಂಗಿಡಿಸು** (ಕ್ರಿ). ನವೆಯನ್ನು ನಿವಾರಿಸು, – ಕಳೆ : ಕೋಡನಿಟ್ಟು ತೀಂಗಿಡಿಪುವ ಕರ್ಣತಾಳದೆಲರಿಂ ಬೆಮರಾಱಿಪ ಕೆಯ್ಯುಮೊಪ್ಪೆ ಬಲ್ಪಿಡಿಪಿಡಿ ದಿರ್ದುದಂಗಜನ ಕಯ್ಪಿಡಿಯಂ ಪಿಡಿಯಂ ಮತಂಗಜಂ (ಪುಷ್ಪಪು. ೫-೮೧).
[ ತೀನ್ + ಕಿಡಿಸು (<ಕೆಡಿಸು$_1$) ]

**ತೀಂಟು, ತೀಟು, ತೀಡು$_1$** (ಕ್ರಿ). ೧. ಮುಟ್ಟು ; ತಾಕು ; ತಗಲು : ಉಚ್ಚಳಚ್ಚೀಕರತತಿ ನಭವಂ ತೀಂಟುವನ್ನಂ . . . ಶೋಭಿಸುವುದು ಮಣಿ ಮಾಲಾಂಶುಭದ್ರಂ ಸಮುದ್ರಂ (ಕುಸುಮಾ. ೧-೨೨). ತೀಟು : ೧. ಆರು ಮಾಟುವರೆನ್ನ ತೋಟಿಯನಿಂತು ಕಾಣದ ಕೈಯಲಿ ? ಆರು ತೀಟು ವರೆನ್ನ ಬಾಗಿಲನಿಂತು ಕೇಳದ ಕರೆಯಲಿ ? (ಕವಿಕ. ೮೮-೭). ತೀಡು$_1$ : ೧. ಗಾಡಿ ಒಂದು ಸಾರಿ ಬಲವಾಗಿ 'ಜಟಕ' ಹಾಕಿದಾಗ ನಾಗವೇಣಿಯ ಮೂಗು ಶಂಕರನ ಹೆಗಲಿಗೆ ತೀಡಿತು (ಗಿರಿಬಾ. ೨೩). ೨. (ಗಾಳಿಯಂತೆ) ಬೀಸು; ಸುಳಿ : "ತೀಡು– ವಾಯುಸ್ಪರ್ಶನೇ" (ಶಮಧಾ) ; ಹರಿಚಂದನ ಕಾಳಾಗರು ಮಲಯಜ ತುರುಷ್ಕಾದಿಗಳ ಕಂಪು ಬಂದು ತೀಡಿದೊಡೆ (ವರ್ಧ.ರಾ. ೫೫-೩) ; ನೀಂ ಮೆಲ್ಲಮೆಲ್ಲನೆ ಮಂದಾನಿಳ ತೀಡು ಕೋಗಿಲೆ ಸರಂದೋಱು (ಆದಿಪು. ೧೨-೪೪) ; ಭ್ರಮರರವಂಗಳೊಳ್ ಬೆರಸಿ ಮಾರುತನೊಯ್ಯನೆ ಬಂದು ತೀಡಿದತ್ತು (ಕಾದಂಪೂ. ೬೩೩) : ತೀಡಿತ್ತು ಬಂದು ಮಂದಸಮೀರಂ (ಪಂರಾಮಾ. ೦೬-೮೩) : ಲೋಭದ ಗಾಳಿ ತೀಡದು ಮೋಹಕೆ ತೆಱಪಿಲ್ಲ (ಬಸರ. ೮-೫೩) : ತಾವರೆಯ ತನಿ ಪರಿಮಳದ ಪಿಸರದ ಹೆಸರದಲಿ ತೀಡಿದುದು ತಂಗಾಳಿ (ತೊರರಾ. ೨-೭-೩);

ಪರಿಪರಿ ಕಜ್ಜಾಯಗಳ ಪರಿಮಳದಿಂಪು ಬೀದಿಯೊಳೆಡೆಯಾಡುತಿಪ್ಪರ ಮುಖಾಬ್ಜಕೆ ತೀಡುತಿಹುದು (ಕಂನವಿ. ೬-೫೦).
[ ದೇ.॥ ತಮಿ. ತೀಣ್ಡು ; ಮಲ. ತೀಣ್ಡು ; ಕೊಡ. ತೀಂಡ್ ]

**ತೀಂಟೆ$_1$, ತಿಂತಿ, ತಿಂತೆ, ತೀಂತೆ, ತೀಟ್ಟ, ತೀಟೆ** (ನಾ). ೧. ನವೆ ; ಕೆಡಿತ; ತಿಮಿರು; ತುರಿಕೆ : "ಕಂಡೂಃ–ತೀಂಟೆ" (ಕಾಶಕ್ಕ. ೨೫); ಮದಕರಿ ತೀಂಟೆಗೊಲ್ದೊರಸೆ ಭೂರುಹಕಂಧರದೊಳ್ ಜಗಿಲ್ತು ಪತ್ತಿದ ಮದ ಸೌರಭಕ್ಕೆ ಸುಳಿಗೊಳ್ಳಳಿಮಾಲೆ (ಕುಸುಮಾ. ೧೪-೧೨೦); ಸುರಾಸುರಾವಳಿಗಳ ಮಹಾಗರ್ವವೆಂಬ ತೀಂಟೆಯ ತೀರ್ಚುವಾ . . . ನೆವದೊಳ್ (ವೀಶೈಪು. ೨-೩-೫); ಪುಲ್ಲಂ ಮೇಯಲೆಳಸಿ ಬಂದು ಮೆಯ್ಯ ತೀಂಟೆ [ಪಾಠಾಂ. ತಿಂಟೆ, ತಿಂತಿ ]ಗೆ ಪುಲಿ ಪೊರಳ್ದು ಪೋದ ತಾಣದೊಳ್ ನಿಂದು . . . ಹಮ್ಮದಂಬೋದ ಹರಿಣಂಗಳಿಂ (ರಾಜಶೇ. ೫-೫೫ವ). ೨. ಚಾಪಲ್ಯ; ತೀವ್ರವಾದ ಆಸೆ,—ಅಪೇಕ್ಷೆ : ಪುಲಿಯಂ ತೊಟ್ಟನೆ ಕಂಡು . . . ಪಾಯ್ದು ಪೊಯ್ದು ಕೋಡಿಟ್ಟು ಜಲ್ಲಿಸಿ ಬಿಸುಟ್ಟು ನೊಸಲ ತೀಂಟೆ ತೀರದೆ ಕೊಣಕಿಟ್ಟು (ಗಿರಿಕ. ೦-೧೨೮ವ) ; ಖಡ್ಗವಾಯ್ದಣಿಯ ನಿಜಭುಜದ ತೀಂಟೆ ಹರೆಯೆ ಹಗೆಗಳ ಕೊಂದು (ಹಡಕಾ. ೦೦-೦೪). 'ನಾಲಗೆದೀಂಟೆ' ಪರಾ. ತಿಂತಿ : ೧. ಮೆಯ್ಯೊಳೋರಂತಮರ್ದ ಕುಷ್ಠಾಮಯದ ತಿಂತಿಯಂ ತುಱಿಸುತ (ಪದ್ಮರಾ. ೪-೬೪). ತಿಂತೆ : ೩. (ಅಲಂ) ನಾಲಗೆಯ ತುರಿಕೆ ; ಬೇರೆಯವರನ್ನು ನಿಂದಿಸಬೇಕೆಂಬ ಲವಲವಿಕೆ, – ಆತುರ : ಜಗಳವ ಹತ್ತಿಸುವೆನೆಂದು ಚಿಂತಿಸುವ ಮನ ಕೊಂಡಯಕ್ಕೆಳಸಿ ಗದಗದನೆ ತಿಂತೆ [ಪಾಠಾಂ. ತಿ] ಮಸಗುವ ಬಾಯಿ (ಸೋಮಮಡ. ೦-೨೯) ; ಬಾಯಿ ತಿಂತೆ [ಪಾಠಾಂ. ತಿ] ಪರೆವಂತೆ ಪೊಗಳುತೆ ನೇಹದಿಂ ನೋಡು ತಿರ್ಪಾಗಳ್ (ಪದ್ಮರಾ. ೩-೬೨). ತೀಂತೆ : ೨. 'ನಾಲಗೆತೀಂತೆ' ಪರಾ. ತೀಟ್ಟ : ೧. ಆ ಕುಣಿಕೆಯ ತೀಟದಿಂದೊಮ್ಮೆ ಆಶ್ರಮದ ಪರಿಸರದಲ್ಲಿ ಅಲೆಯುತ್ತಿದ್ದನು (ನಾಡೋಜ. ೪). ತೀಟೆ : ೧. ಮೇಣೊಂದನೊಂದೊದೆದು ಹಿಂದಣ ಖುರಂಗಳಿಂ ಮಾಣದಡಿಗಡಿಗೆ ಕಂದದ ತೀಟೆಗಳ ತೀಡಿ . . . ಬಿಱುಗೊಂಡವು (ಜೈಮಿಭಾ. ೨೫-೮) ; ಪೀಠ ಮೂಢಗೆ ಹೊಲ್ಲ ಕೀಟ ನಿದ್ದೆಗೆ ಹೊಲ್ಲ ತೀಟೆಯದು ಹೊಲ್ಲ ಕಜ್ಜಿಯ (ಸರ್ವಜ್ಞ. ೮೨೦): ಕೂರ್ಮಾವತಾರ ಮಾಡಿದ ಸ್ವಾಮಿಯು ಬೆನ್ನಿನ ತೀಟೆಯ ನಿವಾರಿಸುವನ: (ಶೇಷಧ. ೫೫-೩೨); ಮಂಡೆಯ ತೀಟೆ, ಸೀನು . . . ಇವು ಜ್ವರ ಬಿಡುವವನ ಲಕ್ಷಣ (ವೈದ್ಯಸಾ. I, ೪೯). ೨. ಭಕ್ತರಿಗೆನ್ನ ಕೈಗಳ ತೀಟೆ ಹೋಗಲ್ಕೆ ತೊತ್ತುಗೆಲಸಂಗೆಯ್ಯಲನುವಾಯಿತ್ತೆನುತ (ಬಸಪು. ೨೦-೭) ; ತೋಳ ತೀಟೆ ಯನವನ ನೆತ್ತಿಯ ಮೇಲೆ ಕಳೆವೆನು (ಕುಮಾ.ಭೀ. ೧-೬೦) ; ನಿನ್ನ ಯುದ್ಧದ ತೀಟೆಯನ್ನು ತೀರಿಸಿಬಿಡುತ್ತೇನೆ (ವಡಭಾ. ೩೧೭). ೪. ಬೆದೆ ; ನಸೆ : ಆ ತೀಟೆ ತೀರಿಸಿಕೊಳ್ಳುವ ಅಭಿಲಾಷೆಯಿಂದ ಅವನು ಪಾತರ ಪಾಱಿಯನ್ನು ಸಂಧಿಸಬಹುದಾಗಿತ್ತು (ದೀಪಹ. II, ೧೯೨) : ತೀಟೆಗೆ ಮಕ್ಕಳ ಹೆತ್ತು ತಿರುಮಲದೇವರ ಹೆಸರಿಟ್ಟ ಹಾಗೆ (ಗಾದ). ೫. ಕೀಟಲೆ ; ಚೇಷ್ಟೆ ; ತಂಟತನ: ನನ್ನ ತಮ್ಮ ತೀಟೆಯವ (ಚಂಗೂಲಿ. ೧೪೦). ೬. ಕೋಟಲೆ; ತೊಂದರೆ ; ಪೀಡೆ : ಇನ್ನೊಂದು ವರ್ಷದ ತನಕ ತೀಟೆ . . . ತಪ್ಪಿತು (ನನ್ನೂರು. ೧೪೮). ೭. ಅಗತ್ಯ ; ಆವಶ್ಯಕತೆ : ಅಲ್ಲಿಗೆ ಬರೋಕೆ ನನಗೇನು ತೀಟೇನೆ ? (ಮುನಿಮಾ. ೮೧) ; ತೀಟೆಯಾದರೆ ತಾನೇ ಬರುತ್ತಾನೆ (ರೂಢಿ).
[ ದೇ.॥ ತೆಲು. ತೀಟ, ತೀಂಟ ]

**ತೀಂಟೆ$_2$** 'ತಿಟ್ಟು$_3$' ನೋ.

**ತೀಂಟೆತ್ತು** (ಕ್ರಿ). ನವೆಯುಂಟಾಗು ; ತುರಿಕೆಯಾಗು : ಪಿರಿದುಂ ತೀಂಟೆತ್ತಿ ಗಂಡಸ್ಥಳಮನನುದಿನಂ ಕಾಡ ಸೊಕ್ಕಾನೆಗಳ್ಬಂದೊರಸಲ್ (ಕಾದಂಪೂ. ೨೨೨).
[ ತೀಂಟೆ$_1$ + ಎತ್ತು$_1$ ]

**ತೀಂತೆ** 'ತೀಂಟೆ$_1$' ನೋ.

**ತೀಂತೇರಾ** 'ತೀನತೇರ' ನೋ.

**ತೀಕು** 'ದೇಕು' ನೋ.

**ತೀಕ್ಷ್ಣ** (ಗು). ೧. ಚೂಪಾದ; ಹರಿತವಾದ: ಸುರಶರಾಸನದಂತೆ ನಿರ್ಗುಣರುಂ ತೀಕ್ಷ್ಣಕೌಕ್ಷೇಯದಂತೆ ನಿಸ್ತ್ರಿಂಶಭಾವರುಂ (ಸುಕುಮಾ. ೨-೩೫); ಉತ್ಖಾತ ತೀಕ್ಷ್ಣಕೌಕ್ಷೇಯಕಸನಾಥಶಯನ ಪಾರ್ಶ್ವಭಿತ್ತಿಭಾಗಮುಂ (ಚಂದ್ರಪ್ರ. ೩-೯೭ ವ). ೨. ಬಿಸಿಯಾದ; ಉಷ್ಣವಾದ. 'ತೀಕ್ಷ್ಣಾಂಶು' ಪರಾ. ೩. ಕ್ರೂರವಾದ; ನಿರ್ದಯವಾದ: ಅನ್ನೆಗಮಿತ್ತ ವಿಭೀಷಣಾದೇಶದಿಂಬಂದ ತೀಕ್ಷ್ಣಪುರುಷರ್ ಪುರಮಂ ಪೊಕ್ಕು (ಪಂರಾಮಾ. ೩-೨೭ವ); ತನ್ನಂ ಕೊಲಲರಸನಟ್ಟಿದ ತೀಕ್ಷ್ಣಪುರುಷಂ ಬಂದು (ಪಂರಾಮಾ. ೧೦-೯೩ ವ). ೪. ಕಟುವಾದ; ಖಾರವಾದ. ೫. ಬಲವುಳ್ಳ; ಶಕ್ತಿಯುಳ್ಳ. ೬. ತವಕಿಸುವ; ಆತುರವುಳ್ಳ. (ನಾ). ೭. ಹರಿತವಾದುದುಂ; ಚುರುಕು: "ತಿಕ್ಕನೆ ತೀಕ್ಷ್ಣಂ" (ಕವಿಕಂ. ೫೪); ಅವನ ಕಣ್ಣು ಹದ್ದಿನ ಕಣ್ಣಿನ ಹಾಗೆ ಬಲು ತೀಕ್ಷ್ಣ (ಮುಂಬಯಿ. ೪-೪೩); ಅವಳ ಬುದ್ಧಿ ತೀಕ್ಷ್ಣ (ಮಲೆನಾ. ೧೫). ೮. ಉಷ್ಣತೆ; ಬಿಸಿ: "ತಿಗ್ಮಂ, ತೀಕ್ಷ್ಣಂ, ಖರಂ-ಈ ೩ ಬಿಸಿಯ ಹೆಸರು" (ಸಿದ್ಧಾಂತಿ. ೩೩) ೯. ಕಠಿನವಾದುದು; ನಿಷ್ಠುರವಾದುದು: "ತೀಕ್ಷ್ಣಂ ಪರುಷಾಹ್ವಯಂ" (ನಾನಾರ. ೧೨೦). ೧೦. ತೀವ್ರತೆ. ೧೧. ಉಗ್ರತೆ. ೧೨. ಆಯುಧ. ೧೩. ವಿಷ; ನಂಜು: "ಬ್ರಹ್ಮಪುತ್ರಃ ... ತೀಕ್ಷ್ಣಃ-ಈ ೭ ವಿಷಂ" (ಹಲಾಯು. ೦೦೬-೨೪); "ರಸಂ ತೀಕ್ಷ್ಣಪ್ರದೀಪನಮದೋರಂತೆ ವಿಷಮಕ್ಕು" (ಮಂಗರಾ. ೦೧೯-೫). ೧೪. ಕಬ್ಬಿಣ; ಉಕ್ಕು: "ಶಸ್ತ್ರಂ, ತೀಕ್ಷ್ಣಂ, ಅಯಃ, ಪಾರಸವಂ-ಈ ೪ ಉಕ್ಕು" (ಹಲಾಯು. ೨೮-೦೭). ೧೫. ಕಾಳಗ; ಯುದ್ಧ. [ಸಂ.]

**ತೀಕ್ಷ್ಣಗಂಧಕ** (ನಾ). ಒಂದು ಬಗೆಯ ಮರ; ನುಗ್ಗೆ: "ಶೋಭಾಂಜನಃ, ಶಿಗ್ರುಃ, ತೀಕ್ಷ್ಣಗಂಧಕಃ...ನುಗ್ಗೆಮರದ ಹೆಸರು" (ಸಿದ್ಧಾಂತಿ. ೦೦೫). [ಸಂ.]

**ತೀಕ್ಷ್ಣಗು** (ನಾ). ಬಿಸಿಯಾದ ಕಿರಣಗಳುಳ್ಳವನಂ; ಸೂರ್ಯ: ಏಟನೆಯ ಗೇಹಂ ಕನ್ನೆಯಾದಂಶು . . . ತೀಕ್ಷ್ಣಗು ಲಗ್ನಸ್ಥಿತನಾಗೆ ಪೆಣ್ಣ ಕತದಿಂ ಸಾಯ್ಗುಂ ನಿಜಾವಾಸದೊಳ್ (ಜಾತತಿ. ೨೩-೮). 'ತೀಕ್ಷ್ಣಗುಜ' ಪರಾ. [ಸಂ. (ತೀಕ್ಷ್ಣ + ಗೋ + –)]

**ತೀಕ್ಷ್ಣಗುಜ** (ನಾ). ಸೂರ್ಯನ ಮಗ; ಶನಿ: ಪಗಲೊಳ್ ತಂದೆ ದಿವಾಕರಂ ಜನನಿ ಶುಕ್ರಂ ರಾತ್ರಿಯೊಳ್ ತಂದೆ ತೀಕ್ಷ್ಣಗುಜಂ ಮಾತೃ ಸುಧಾಮರೀಚಿ (ಜಾತತಿ. ೩-೬). [ಸಂ.]

**ತೀಕ್ಷ್ಣಗೊಳಿಸು** (ಕ್ರಿ). ಉಜ್ವಲವಾಗುವಂತೆ ಮಾಡು; ಹರಿತಗೊಳಿಸು: ಯಾವುದರ ಮೇಲೆ ಗಮನವಿಡಬೇಕೋ ಆದರ ಹೊಳಪು, ಬಣ್ಣ, ಆಕಾರ, ಶಬ್ದ ಮುಂತಾದ ಗುಣಗಳನ್ನು ತೀಕ್ಷ್ಣಗೊಳಿಸುವುದರಿಂದ ಮಕ್ಕಳ ಅವಧಾನ ಅದರ ಕಡೆ ಚೆನ್ನಾಗಿ ಬೀಳುತ್ತದೆ (ಶಿಕ್ಷದ. ೪೭೮).

[ತೀಕ್ಷ್ಣ + ಕೊಳ್$_1$ + – ಇಸು$_3$]

**ತೀಕ್ಷ್ಣತೆ** (ನಾ). ಚುರುಕು: ಗಮನ ವಿಸ್ತರಿಸುವ ಪರಿಮಾಣಕ್ಕೆ ವಿಲೋಮವಾಗಿ ಅದರ ತೀವ್ರತೆ ತೀಕ್ಷ್ಣತೆಗಳು ಕಡಿಮೆಯಾಗುತ್ತವೆ (ಶಿಕ್ಷದ. ೩೦೪); ಸಹಜವಾದ ದೃಷ್ಟಿಯ ತೀಕ್ಷ್ಣತೆ ಎಂದರೆ . . . ಓದುವ ಚಾರ್ಟಿನ ಸಾಲನ್ನು ಗುರುತಿಸುವ ಶಕ್ತಿ (ನಿಮ್ಮದೃ. ೬೩). [ಸಂ. ತೀಕ್ಷ್ಣತಾ]

**ತೀಕ್ಷ್ಣಧಾರೆ** (ನಾ). ಹರಿತವಾದ ಅಲಗುಳ್ಳ ಕತ್ತಿ: ಸಾಲದೀವಿಗೆಗಳನು ಶಸ್ತ್ರಜ್ವಾಲೆ ಮಿಕ್ಕವು ತೀಕ್ಷ್ಣಧಾರಾಭೀಳವಿಕ್ರಮವಿಸ್ಫುಲಿಂಗಿತವಾದವಡಿಗಡಿಗೆ (ಕುಮಾವ್ಯಾ. ೮-೬). [ಸಂ. ತೀಕ್ಷ್ಣಧಾರಾ]

**ತೀಕ್ಷ್ಣಬುದ್ಧಿ** (ನಾ). ೧. ಚುರುಕಾದ ಬುದ್ಧಿ; ಹರಿತವಾದ ಬುದ್ಧಿ: ವಿಜ್ಞಾನಿಗಳಲ್ಲಿ ವಿಚಾರಪರತೆ, ತೀಕ್ಷ್ಣಬುದ್ಧಿ . . . ಇಂತಹ ಹಲವು ಉತ್ತಮಗುಣಗಳಿದ್ದರೂ (ಮುಕ್ಕಾರ. ೨೭ ಪೀಠಿಕೆ). ೨. ಚುರುಕಾದ ಬುದ್ಧಿಯುಳ್ಳವನು. [ತೀಕ್ಷ್ಣ + ಬುದ್ಧಿ]

**ತೀಕ್ಷ್ಣಮತಿ** (ನಾ). ೧. ಚುರುಕಾದ ಬುದ್ಧಿ: ಈ ಸಣ್ಣ ವಿಷಯ ನಿನ್ನ ತೀಕ್ಷ್ಣಮತಿಗೆ ಹೊಳೆಯಲಿಲ್ಲವೆ? (ರೂಢಿ). ೨. ಚುರುಕಾದ ಬುದ್ಧಿಯುಳ್ಳವನು: ನೆಕ್ಲದೋವ್ ತೀಕ್ಷ್ಣಮತಿಯೆಂದು ಗಣ್ಯನಾಗಿದ್ದುದರಿಂದ . . . ಅವಳ ಆಪ್ತವರ್ಗದಲ್ಲೊಬ್ಬನಾಗಿದ್ದನು (ಪುನರು. ೧೨೦): ಪ್ರತಿಯೊಂದು ಹೊಸಗ್ರಂಥವನ್ನು ತೀಕ್ಷ್ಣಮತಿಯಾಗಿ ತೀವ್ರಗತಿಯಿಂದ ಅವಲೋಕಿಸಬೇಕು (ಗ್ರಂಥಾಲ ೬೯). [ತೀಕ್ಷ್ಣ + ಮತಿ]

**ತೀಕ್ಷ್ಣಾಂಶು** (ನಾ). = ತೀಕ್ಷ್ಣಗು: ತೀಕ್ಷ್ಣಾಂಶುವಿಂ ಸೌಮ್ಯನಿಂ ತ್ವರಿತಂ ಶುಕ್ರನೆ ಮಿಕ್ಕು ಪೋಗೆ ಪಟುಗಳ್ ಕೊಳ್ಗುಂ ಧರಾಚಕ್ರದೊಳ್ (ಜಟ್ಟಮ. ೭-೦೨೪). [ತೀಕ್ಷ್ಣ + ಅಂಶು]

**ತೀಕ್ಷ್ಣಾಗ್ನಿ** (ನಾ). ಜಠರಾಗ್ನಿಯ ನಾಲ್ಕು ಸ್ಥಿತಿಗಳಲ್ಲಿ ಒಂದು; ಪಿತ್ತಾಗ್ನಿಯಿಂದ ಉಂಟಾಗುವ ಉಷ್ಣ: ತೀವ್ರವಾದ ಜಠರಾಗ್ನಿ ವಿಷಮಾಗ್ನಿಯಲ್ಲಿ ವಾತಹರ ಚಿಕಿತ್ಸೆಯನ್ನೂ, ತೀಕ್ಷ್ಣಾಗ್ನಿಯಲ್ಲಿ ಪಿತ್ತಶಮನ ಕ್ರಿಯೆಯನ್ನೂ ಮಾಡುವುದು (ಸಕವೈ. ೦೬). [ತೀಕ್ಷ್ಣ + ಅಗ್ನಿ]

**ತೀಕ್ಷ್ಣಾಪಾಂಗ** (ನಾ). ಮೊನಚಾದ ಕಟಾಕ್ಷ: ತಿಮಿರಚಿಕುರಂ ತೀಕ್ಷ್ಣಾಪಾಂಗಂ ಘನಂ ಜಘನಸ್ಥಳಂ ಕಮಳಚರಣಂ ಕಣ್ಗೊಪ್ಪಿತಾ ಧರಾಧಿಪಕಾಂತೆಯಾ (ರಾಜಶೇ. ೩-೧೮). [ತೀಕ್ಷ್ಣ + ಅಪಾಂಗ]

**ತೀಕ್ಷ್ಣೀಕರಣ** (ನಾ). ಹರಿತಗೊಳಿಸುವಿಕೆ: "ತಿತಿಕ್ಷ—ಶಾತನೇ, ಕ್ರಮಾಯಾಂಚ, ತೀಕ್ಷ್ಣೀಕರಣದೊಳಂ, ತಾಳ್ಮೆಯೊಳಂ, ದೀಪ್ತಿಯೊಳಂ" (ಶಾಶಕ್ಕ. ೯೭). [ಸಂ.]

**ತೀಕ್ಷ್ಣೀಕರಿಸು** (ಕ್ರಿ). ತೀಕ್ಷ್ಣಗೊಳ್ಳುವಂತೆ ಮಾಡು: "ತಿತಿಕ್ಷತೇ-ತೀಕ್ಷ್ಣೀಕರಿಸಿದಪಂ" (ಶಾಶಕ್ಕ. ೯೭). [ತೀಕ್ಷ್ಣೀಕರಣ + – ಇಸು$_3$]

**ತೀಕ್ಷ್ಣೋಪಾಯ** (ನಾ). ಪ್ರಬಲವಾದ ಉಪಾಯ; ಉಗ್ರವಾದ ಉಪಾಯ; ಕಟುವಾದ ಉಪಾಯ: (೬).

[ತೀಕ್ಷ್ಣ + ಉಪಾಯ]

**ತೀಕ್ಷ್ಣೌಷಧ** (ನಾ). ಕಟುವಾದ ಔಷಧ; ಕಹಿಯಾದ ಮದ್ದು: ಕೊಲುತಿರ್ಪಯ್ಯಗಳೋದು ಬೇನೆಯುಳಿವಾ ತೀಕ್ಷ್ಣೌಷಧಂ...ಮುಂ ಪಲಕಷ್ಟಂ ಕಡೆಗೊಳ್ಳಿತ್ತೈ (ಸೋಮೇಶ.೯೬). [ತೀಕ್ಷ್ಣ + ಔಷಧ]

**ತೀಗ** 'ತಿಕ' ನೋ.

**ತೀಟ$_1$** (ನಾ). ೧. ಮೃದುವಾದ ಸ್ಪರ್ಶ,—ಸೋಂಕು: ತಿಳಿಪಲಡಿಗೆಟಗಿದೋಪನ ತಳಂಗಳಾ ತೀಟದಿಂ ಪದಂಗಳೊಳೊಗೆದಾ ಪುಳಕಚಯಂಗಳ್ ಕಳೆದುವು ಮುಳಿಸಂ ನಲ್ಲಳ್ (ಕವಿರಾ. ೩-೦೦೮); ಅಲರ್ದಲರ್ಗಣ್ಗಳ್ ನೋಟದೆ ಸುಲಲಿತ ತನು ಶಿಶುವ ಮೈಯ್ಯ ತೀಟದೆ ತನಗಗ್ಗಲಿಸಿದಲಂಪಂ ಕುಡೆ (ಆದಿಪು. ೭-೪೭). ೨. (ಗಾಳಿ) ತೀಡುವಿಕೆ; ಬೀಸುವಿಕೆ: "ತೀಟವೆಂದುಂ ತೀಡೆಂದುಂ ತೀಡುವುದೆಂದುಂ ಊದುವುದೆಂದುಂ ವಾಯು ಸಂಚಾರಂ" (ಶಶಸಾ. ೩೧-೬೬೧); ಒದವಿ ಬಸಂತದೊಳ್ಪಯಸಿದಂದದ ತೆಂಬೆಲರೊಂದು ತೀಟವಿಲ್ಲದ ಸಹಕಾರವಲ್ಲರಿಯ ತೋರ್ಕೆಗವೊಪ್ಪುವ ಭೃಂಗಸಂಗವಿಲ್ಲದ ನವಪದ್ಮಿನೀಮುಕುಳದಿಕ್ಕೆಗಮನೆ ನೆಟಿಯಾಗಿ ಶೋಭೆವೆತ್ತುದೊ ಪರಿಶೋಭೆವೆತ್ತಿರೆ ವಿಲಾಸದ ವಿಭ್ರಮದೇಟ್ಗೆ ಕನ್ನೆಯಾ (ಸುಕುಮಾ. ೫-೬೦); ದಿನಕರನ ಹಯಂ ಗಗನಾಧ್ವಖೇದಮಂ ಪಟಯಿಗೆಗಳ ತಣ್ಣಲರ ತೀಟದಿಂ ತೊಲಗಿಸುಗುಂ (ಪಂರಾಮಾ. ೧-೦೦೬); ತೆಂಕಣಗಾಳಿಯ ತೀಟದಿ ವನತರುಸಂಕುಳ ಚಿಗುರೇಳುವಂತೆ (ಭರತೇ. ೫೩-೮೧); ಮರಗಳ ದಟ್ಟೈಸುವಿಕೆಯಿಂದ ತಂಗಾಳಿಯ ತೀಟಕ್ಕೆ ಅಡಚಣೆಯಾಗಿದ್ದರೂ ಅದರ ಕುಳಿರ್ಪು ಎಲ್ಲ ಕಡೆಯೂ ಹಸರಿಸಿತ್ತು (ಕಾನೂರು. ೪೨). ೩. ಚೇಷ್ಟೆ; ವಿನೋದ: ನಾಟಕಸತಿಯರಲ್ಲವೆ ನೀನು ತಾನೆಂದು ಚಾಟಾಗಿ ನುಡಿದರೆ ನೃಪಗೆ ತೀಟವೇಳುತಿದೆ ಸುಮ್ಮನೆ ನೋಡುತಿಹವಿವರಾಟವನೆಂದೆಣಿಸಿದರು (ಭರತೇ. ೦೪-೯೦). [<ತೀಡು$_1$]

**ತೀಟ್ಟೆ₂** 'ತೀಂಟ್ಟೆ₁' ನೋ.

**ತೀಟಕಸಂದಿ** 'ತೀಟಕಸಿಂಧ' ನೋ.

**ತೀಟಕಸಂಧಿ** 'ತೀಟಕಸಿಂಧ' ನೋ.

**ತೀಟಕಸಿಂಧ,** ತೀಟಕಸಂದಿ, ತೀಟಕಸಂಧಿ (ನಾ). ತುರುಚೆಯ ಬಳ್ಳಿ; ನಸುಗುನ್ನಿಗಿಡ: ತೀಟಕಸಿಂಧ ಬೇರಿನ ನಾರು ಒಂದು ಹಿಡಿ...ಕುಡಿಯಲು ಬಹುಮೂತ್ರ ನಿಲ್ಲುವುದು (ಸಕವೈ. ಪರಿ. ೫೦೦). **ತೀಟಕಸಂಧಿ:** ತೀಟಕ ಸಂದಿಬೇರು, ಬೆಲ್ಲವತ್ತ್ರದ ಬೇರು ಇವುಗಳನ್ನು ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಸದ್ಯದಲ್ಲಿ ಬರುವ ಜ್ವರಂ ಗುಣಮಕ್ಕುಂ (ಸಕವೈ. ೧೦೦). ತೀಟಕಸಂಧಿ : "ಯಾಸಃ, ಯಾವಾಸಃ...೧೦ ತೀಟಕಸಂಧಿ ಹೆಸರುಗಳು" (ಸಿದ್ಧಾಂತಿ. ೦೦೬) ; ತೀಟಕಸಂಧಿಬೇರು, ಕಕ್ಕೇಪಟ್ಟೆ ಇವುಗಳ ಕಷಾಯವನ್ನು ಹಾಕಿ ತೆಗೆದುಕೊಳ್ಳಲು ವಾತಶ್ಲೇಷ್ಮ ಜ್ವರಪರಿಹಾರವಾಗುವುದು (ಸಕವೈ. ೯೬).
[ ← ತೆಲು. ತೀಟಕಸಿಂದ ]

**ತೀಟಕೋಗಿಲ** (ನಾ). = ತೀಟಕಸಿಂಧ : ತೀಟಕೋಗಿಲಬೇರು, ತಳಸಿಂಗ ... ಧಾನ್ಯ ಪುಟವಿಟ್ಟು ಪ್ರಾತಃಕಾಲದಲ್ಲಿ ಒಂದು ದುಡ್ಡು ತೂಕ ಸೇವಿಸಿದರೆ (ಸಕವೈ. ಪರಿ. ೬೫೩). [← ತೆಲು. ತೀಟಕೋವಿಲ]

**ತೀಟು** 'ತೀಂಟು' ನೋ.

**ತೀಟೆ** 'ತೀಂಟ್ಟೆ₁' ನೋ.

**ತೀಟೆಗಾರ** (ನಾ). ೧. ಚಾಪಲ್ಯವುಳ್ಳವನು. 'ಬಾಯಿತೀಟೆಗಾರ' ಪರಾ. ೨. ಕುಚೇಷ್ಟೆ ಮಾಡುವವನು ; ಕೀಟಲೆ ಮಾಡುವವನು.
[ತೀಟೆ (< ತೀಂಟೆ₁) + - ಗಾರ (< - ಕಾಱ)]

**ತೀಟೆಜಗಳ** (ನಾ). ೧. ಕೀಟಲೆ ಜಗಳ. ೨. ಕೆಲಸಕ್ಕೆ ಬಾರದ ಜಗಳ ; ವ್ಯರ್ಥವಾದ ಜಗಳ : (+).
[ತೀಟೆ (< ತೀಂಟೆ₁) + ಜಗಳ (< ಜಗಟ)]

**ತೀಡಿಸು** (ಕ್ರಿ). ಉಜ್ಜಿಸು ; ತಿಕ್ಕಿಸು ; ನೀವಿಸು : ನೋವು ಹೊರಟು ಹೋದ ನಂತರ ಕೈಕಾಲುಗಳನ್ನು ಚಲಿಸಬೇಕು, ಮಾಂಸಖಂಡಗಳನ್ನು ತೀಡಿಸಬೇಕು (ಕಲರೋ. ೯೮). [ತೀಡು₂ + -ಇಸು₃]

**ತೀಡು₁** 'ತೀಂಟು' ನೋ.

**ತೀಡು₂, ತಿವುಡು₁** (ಕ್ರಿ). ೧. ಮಸೆ ; ಉಜ್ಜು ; ತಿಕ್ಕು ; ಹರಿತಮಾಡು : "ಧಾವನಂ ತೀಡುವುದೆನಿಕ್ಕುಂ" (ಮಂಗರಾ. ೧೦೦೦-೨೫) ; ದಾಡೆಗಳನಱು ಯೊಳಿಂಬಿಂ ತೀಡುತ್ತುಂ ತೀವ್ರಮಾಗೆ ಬಂಡಿಯ ಬರವಂ ನೋಡುತ್ತಿರ್ದಾ ಬಕನಂ ... ಕಂಡು ಮುಳಿದಂ ಭೀಮಂ (ಪಂಪಭಾ. ೩-೨೮) ; ತೀಡುತ್ತೆ ಕಲ್ಲಿಂದುರುದಂಷ್ಟ್ರಾಗ್ರಂಗಳಂ ಭೂಮಿಯನಿರದೆ ಬೆರಂಟುತ್ತೆ ಮುಂಗಾಲ್ಗ ಳಿಂದಂ (ಗಿರಿಕ. ೧-೧೧೫) ; ಕುಸುಮಶರಾಸ್ತ್ರಮಂ ಸಸಿಯ ಸಾಣೆಯೊಳೀ ಮಧುವೆಂಬ ಕಮ್ಮಱಂ ಮಸೆಯಲೆವೇಡಿ ತೀಡಿದನೋ (ಪಾರ್ಶ್ವಪು. ೯-೯೮) ; ಮುಮ್ಮೊನೆಯ ಸೂನಗೆಯ ಹೊಗರುಗಳ ತೀಡಿದರು (ಕುಮಾಲ್ಯಾಭೀ. ೪-೯೦) ; ಗಂಡ ಹೆಂಡಿರ ಜಗಳಾ ಗಂಧ ತೀಡಿದಾಂಗ (ಗರತಿ. ೭೬) ; ಚೌಕಟ್ಟಿನ ಮೇಲೆ ನೀರು ಹಚ್ಚಿ ಸಣ್ಣ ಹಲಗೆಯ ತುಂಡಿನಿಂದ ಅದನ್ನು ತೀಡುತ್ತಿದ್ದನು (ಕಪವು. ೪-೧೩). ೨. ಅನುಲೇಪನಮಾಡು ; ಲೇಪಿಸು ; ಸವರು ; ಬಳಿ : ನಲ್ಲರ ಶಿಖೆಗಾಗ ಪೂಮಾಲೆಗಳ ಸುತ್ತಿ ಮೆಲ್ಲದೆಗನುಲೇಪನವ ಸೆಳ್ಳು ಗುರೊಳು ತೀಡಿ (ಕಂನವಿ. ೨೫-೧೩೫) ; ಸವುತೆಯನು ಮೆಲುವ ನಾಲಗೆಗೆ ಸುಣ್ಣವನು ತೀಡಿ (ಕಏವು. ೪೨-೫). ೩. ರೇಖಿಸು; ಬರೆ : ವಿಶಾಲಫಾಲದಲ್ಲಿ ಗೀರುಚಂದನರೇಖೆ ತೀಡಿಕೊಂಡು (ದೀಪಹ. II, ೮೯). ೪. ನೇವರಿಸು; ನೀವು: ಆತನ ಸರಳ ಸಾರವಂ ಸಾಲ್ಕೆಂಟು ಕೂರಂಬಿನಿಂ ಕಡಿದು ನಾರಿಯಂ ತೀಡುತೆ (ಜೈಬವು. ೫೦-೩೪) ; ತೀಡಿದಂ ತಿರುವನೇಱಿಸಿ ಮಿಡಿದು ಚಾಪವಮಂ ತಾಗಿದಂ (ಜೈಮಿಥಾ. ೧೨-೪೬) ; ಪಿಡಿದೆತ್ತಿ ತಲೆಯ ಕೂರಲ ತೀಡಿ ಕೈಗಳಿಂ (ಕಾಲೂರ. ೧೭೩-೩೮೬). ೫. ಒತ್ತು; ಅದುಮು : (+). ೬. ಹೊಡೆ ; ಬಡಿ ; ಥಳಿಸು : ಕುದುರೆ ಲಗಾಮು ಜಗ್ಗಿಸಿ, ಚಾಟಿ ಯಿಂದ ತೀಡಿ ... ಕುಳಿತುಕೊಂಡನು (ಪುನರು. ೫೫೮); ಕೆನ್ನೆಗೆ ತೀಡಿ ಕೊಡೆ ದಿದ್ದರೆ ಹೇಗೆ (ಹುಚ್ಚುಹು. ೧೮) ; ಅವನಿಗೆ ನಾಲ್ಕು ತೀಡು, ಆಗ ತಾನೇ ದಾರಿಗೆ ಬರುತ್ತಾನೆ (ರೂಢಿ). ೭. ಆರಿಸು ; ನಂದಿಸು : ಅಂತು ನೋಡೆ ನೋಡೆ ಗಾಳಿ ತೀಡಿದ ದೀಪ ರೂಪದಂದದಿಂ ಶಾರದನೀರದಾಕಾರದಂದ ದಿಂದದೃಶ್ಯಾಕಾರನಾಗಿ(ಸುಕುಮಾ. ೧೦-೮೨) ; ಸಿಡಿಲಂ ದುರ್ಗುವ ಶೇಷ ನಂ ತುಡುವ ಕಲ್ಪಾಂತಾಗ್ನಿಯಂ ತೀಡಿ ಬೊಟ್ಟಿಡುವ...ಗಣಾಧಿನಾಥರೊಡ ನೇಳ್ತಂದರ್ (ಶಬಶಂ. ೩-೦೯). ೮. ಉಂಟಾಗು ; ವ್ಯಕ್ತವಾಗು ; ಪ್ರಕಟ ವಾಗು : ಎಮಗೀ ಕೂಸಂ ಕಾಣಲೊಡವಂತಿಸ್ನೇಹಂ ಮನಕ್ಕೆ ತೀಡಿದಪುದು (ಸುಕುಮಾ. ೬-೪) ; ಪದಾರ್ಥನಿಶ್ಚಯಂ ತನ್ನ ಮನಕ್ಕೆ ತೀಡೆ ಖಳಸಂಸರಣಕ್ಕೆ ವಿರಕ್ತಿಯಾಗಿ ... ತಾಳ್ದಿದಳಂದು ದೀಕ್ಷೆಯಂ (ಸುಕುಮಾ. ೮-೪೦). ೯. (ಉಕ) ಬರೆದುದರ ಮೇಲೆ ಬರೆ ; ತಿದ್ದು : ಮರುದಿನದಿಂದರವಾ ಬಾಯರು ಕಾಗದದ ಮೇಲೆ ಎ.ಬಿ.ಸಿ.ಡಿ. ತೀಡ ಹತ್ತಿದರು (ಸವುಜೀ. ೨೨೪) ; ಅ ದಿಂದ ಜ್ಞದ ವರೆಗಿನ ಅಕ್ಷರಗಳನ್ನು ತೀಡ ಹಚ್ಚಿದರು (ಸ್ವಾತಿಚ. ೦೨೦). ೧೦. ಸರಿಪಡಿಸು ; ಪರಿಷ್ಕರಿಸು : ಆಗಾಗ ಇದನ್ನು ತಿದ್ದಿ, ತೀಡಿ ... ಆಶೀರ್ವದಿಸಿದ್ದಾರೆ (ಸೌಂದಸ. ii, ಮೊದಲ ಮಾತು). ೧೧. ಉಂಟುಂ ಮಾಡು ; ಉಂಟಾಗಿಸು : ಕೂಡಿ ವಿಪಿನದ ಬಟ್ಟೆ ಸುಖವನೆ ತೀಡುತಿರಲ್ (ಪ್ರಭುಲೀ. ೧೪-೬) ; ಸೂಡುವರ್ ಜಂತ್ರಮಂ ನೀರ್ ಸೂಸಲಾಡುವರ್ ತೀಡುವರ್ ನಗೆಯನಗಜೆಗೆ (ಜೈಬವು. ೪೫-೫೯). ೧೨. ಹೊರಹೊಮ್ಮು ; ಹೊರಸೂಸು : ವಿಭೂಷಣಂಗಳೊಳ್ ತೀಡುವ ರಶ್ಮಿಗಳ್ ಮುಸುಳ್ದುವು (ಆದಿಪು. ೩-೩) ; ಮಣಿಮಯದ ಕಳಶದ ಝಾಡಿವೆಳಗಿನ ಹೇಮರಸದಲಿ ತೀಡಿ ತೊಳಗುವ ಸುಧೆಯ ಸೊಂಪಿನ ಸೂಸಕಂಗಳಲಿ (ತೊರರಾ. ೫-೨-೨೫) ; ರಸೋಕ್ತಿಗಳನಾಡುತ್ತ ತೀಡುತ್ತ ಬೆಳ್ನಗೆಯ ಬೆಡಗುಗಳನು (ಜೈಮಿಥಾ. ೩೦-೦೮) ; ಕಂಗೊಳಿಸುವ ದಿವ್ಯಕಾಂತಿಯ ತೀಡುತ ಬಂಗಾರಚೌಕಿಯೊಪ್ಪಿ ದುದು (ಕಂನವಿ. ೬-೩೮). ೧೩. ಇಚ್ಛಿಸು; ಬಯಸು : ಆಡುವರಂ ಕಂಡಾ ಡುವ ಪಾಡುವರಂ ಕಂಡು ಪಾಡುವಂದಾನಂದಕ್ರೀಡೆಗೆ ಮಘವನ ಬಗೆಯುಂ ತೀಡಿದುದೇಂ ಪಿರಿದೊ ಜಿನನ ಪುಣ್ಯಾತಿಶಯಂ (ಪುಷ್ಪಪು. ೧೨-೨೩). ೧೪. ಘರ್ಷಿಸು ; ತಾಕು : ಒಂದು ನುಡಿ, ಒಂದು ಕಿಡಿ–ಕೊನೆಗೆ ಕಾಟ್ಚಿಚ್ಚು : ಬೀಕರಿರ್ವರ್ ತೀಡೆ, ಬಿದಿರ ಮೆಳೆಗಿಚ್ಚು (ಅಶ್ವತ್ಥಾ. ೪೩-೮೫೫). **ತಿವುಡು₁:** ೪. ಚಿಂದಿಯ ಮುರುಹಟ್ಟು ಧೋತ್ರವ ತಿವುಡುತ ಕುಂದು ಪೆಚ್ಚರಿದು ಬಯಿವುತಲಿ ಸಂದ ಜಗಳ ಕಾಳಗದಂತೆ ಕೈಮುಟ್ಟಿ ಕೊಂಡಾಡುವರು ದಿಂಡಿ ಯರು (ತರ್ಕಶಾ. ೧-೯೭).

ತೀಡಿ ತಿದ್ದು = ರೂಪುಕೊಡು ; ನಯಗೊಳಿಸು: ಸುಳಿಗಾಳಿಯು ಸುಳಿದು ಹೊಗಂಪಿನೊಡನೆ ತೀಡಿ ತಿದ್ದುವುದು (ಕನ್ನಜಾ. ೦೪೦).

[ದೇ. II ತಮಿ. ತೀಟ್ಟು, ತೀಜ್ಜು ; ತುಳು. ತೀಂಟು, ತೀಡು; ತೆಲು. ತೀಡು ; ನಾಯ್ಕಿ. ಧೀಟ್]

**ತೀಡು₃** (ನಾ). = ತೀಂಟ್ಟೆ₁ ೧ : ಎನ್ನ ದೋರ್ದ್ವಯದ ತೀಡಂ ರೂಢಿಪಂ ಸಂಗರಾವನಿಯೊಳ್ ಬೇಗದೊಳೀಗಳೆಂದು ಬಗೆದಂ (ಕುಸುಮಾ. ೧೧-೧೩).
[< ತೀಡು₁]

**ತೀಡ** 'ತೀರ್' ಪರಾ.

**ತೀದು** 'ತೀರ್' ಪರಾ.

**ತೀನ್** (ನಾ). ೧. ತಿನಿಸು; ಆಹಾರ : ಈತನಂ ವಾಸುಗಿ ಗರುಡನ ತೀಂಗೊಡ್ಡಿದಂ (ಕಾವ್ಯಾವ. ೮೦೪). ೨. ಕೆರೆತ ; ನವೆ : ಅಂತುಮಿಾ ತೋಳ ತೀನ್ ಕರಗಲ್ಕಾರ್ತಪುದಿಲ್ಲ (ಪಂಪಭಾ.೧೨-೧೩೩); ತೀನೆರ್ದೊಡರ್ದೆ ಕರಟಮನಾನೆಗಳೊಱೆದುಗುವ ಪಾಲ್ ಜಗಿಲ್ತಿರೆ (ಲೀಲಾವ. ೮-೪೫) ; ಸೊರ್ಕಿದಾನೆಯ ಕಟಿಯೊಳ್ ನೆಲೆಸಿದ ತೀನಂ [ಪಾಠಾಂ. ತಿಮರಂ]

ತುರಿಸಿಯೆ ತೊಲಗಿಸಿದವು ನಖಮುಖಂಗಳಿಂ ಸಿಂಹಂಗಳ್ (ಪಾರ್ಶ್ವಪು. ೧೫-೯೯). ೩. ನಸೆ ; ಬೆದೆ. 'ತೀನ್ಮಸಗು' ಪರಾ. [< ತಿನ್]

**ತೀನತೇರ**, ತೀಂತೇರಾ, ತೀನುತೇರಾ (ನಾ). ಚಲ್ಲಾಪಿಲ್ಲಿ; ದಿಕ್ಕಾಪಾಲು; ಮೂರಾಬಟ್ಟೆ: ಈ ಕಾಲದಲ್ಲಿ ಚೀಣಾರಾಜ್ಯದ ಸ್ಥಿತಿಯು ಬಹಳ ಗಲಭೆಯಾಗಿ ತೀನತೇರವಾಗಿತ್ತು (ಕಾಂಪೂಜ. ೮). **ತೀಂತೇರಾ** :(ಕ್ರಿ). **ತೀನುತೇರಾ** : ಅಲ್ಲಿ ರೈತರು ಹಲಾಕಾಗಿ ತೀನುತೇರಾ ಆಗಿಹೋದರು. ಗ್ರಾಮಗಳಲ್ಲಿ ದೀಪ ಉರಿಯಲಿಲ್ಲಾ. ಹಾಳುಬಿದ್ದು ಹೋಯಿತು (ರಾಜೇಂದ್ರ. ೨೨೯). [ ← ಮರಾ. ತೀನ್‌ತೇರಾ ; ಹಿಂ. ತೀನ್‌ತೇರಹ್ ]

**ತೀನಾಳಿ** 'ತಿನ್ನಾಳಿ' ನೋ.

**ತೀನಿ** 'ತಿನ್ನಿ$_1$' ನೋ.

**ತೀನಿಗ** (ನಾ). = ತಿನ್ನಾಳಿ: "ಗ್ರಸಕಃ, ಗ್ರಸಮಾನಃ – ಈ ೨ ತೀನಿಗಂ" (ಕಾಶಕ್ಕ.೧೨೨). [ತೀನಿ (<ತಿನಿ$_1$) +–ಗ$_2$]

**ತೀನು** (ನಾ). ಬೇಲಿ ಅಥವಾ ತಡಿಕೆಗೆ ಆಧಾರವಾಗಿ ಕೊಡುವ ಕಂಬ, — ದಸಿ : ಆಳು ಬೇಲಿ ಕಟ್ಟಲು ತೀನು ನೆಡುತ್ತಿದ್ದಾನೆ (ರೂಢಿ). [?]

**ತೀನುತೇರಾ** 'ತೀನತೇರ' ನೋ.

**ತೀನೆ** 'ತಿನ್ನಿ$_1$' ನೋ.

**ತೀನ್ಮಸಗು** (ಕ್ರಿ). ನಸೆ ಹೆಚ್ಚು ; ಕಾಮಾತುರ ಹೆಚ್ಚು : ಮೈ ಪಟು ಪಟುಯಾಗಿ ತೀನ್ಮಸಗಿ ಸೋಲಮಗುಂದಲೆಯಾಗಿ ಕೂಡುವಟ್ಟಿಟು ಮಿಗೆ (ಸೂಕ್ತಿಸು. ೦೪-೩೩). [ ತೀನ್ + ಮಸಗು$_1$ ]

**ತೀನ್ಮಸೆ**, ತೀಮ್ಮಸೆ (ಕ್ರಿ). ನವೆ ಹೆಚ್ಚಾಗು ; ತಂಠಿಕೆ ಉಂಟಾಗು : ಮೆಯ್ಯ ತೀನ್ಮಸೆದೊಡೆ ಕೋಡೊಳಿಟ್ಟೊರಸಿ ನೀರ್ಗೆಳಸಿದೊಡೆ ತಂದು ನೀರನೂಡಿಸಿ (ಚಂದ್ರಪು. ೫-೬೪). **ತೀಮ್ಮಸೆ** : ತೀಮ್ಮಸಪ ರಸನೆ ಯೆಸಕಮುದೆಮ್ಮೊಡನೇಕಿನಿತು ಬಿಡಿಮಿದೇತಟಿ ಬಿಂಕಂ (ವೃಷವಿ. ೪೦-೪೪). [ ತೀನ್ + ಮಸೆ$_1$ ]

**ತೀಬನು** (ನಾ). ಒಂದಂ ಬಗೆಯ ಔಷಧಿದ್ರವ್ಯ : ಅಜಮೋದ, ತೀಬನು, ಕೊಡಸಿಗನ ತಿಗಡು... ಇಷ್ಟನ್ನೂ ಸಮಾನವಾಗಿ ಚೂರ್ಣವ ಮಾಡಿ (ವಿವೈವಿ. ೩೩). [?]

**ತೀಬು** (ನಾ). ಲವಂಗ : "ಲವಿ ಲವಂಗಂ ದೇವಕುಸುಮಮೆನೆ ತೀಬು" (ಮಂಗರಾ. ೪೩-೪೦). 'ತಿಬ್ಬ$_2$' ಪರಾ. [ ? ]

**ತೀಬ್ರಕರ** (ನಾ). ೧. ಅಧಿಕವಾದ ಕಾಂತಿಯುಳ್ಳವನು. ೨. ಸೂರ್ಯ. ೧, ೨ : ಜಿತಪಂಚೇಷುತ್ವದಿಂದೀಶ್ವರನೆನಿಸಿಯುಮುದ್ಯತ್ಸುಧಾಕಾಂತ ನತ್ಯೂರ್ಜಿತತೇಜೋಲಕ್ಷ್ಮಿಯಿಂ ತೀಬ್ರಕರನೆನಿಸಿಯುಂ ದೃಶ್ಯರೂಪಂ (ಎಕ. V, ಹಾಸನ. ೦೫೦-೮ ; 1147). [< ಸಂ. ತೀವ್ರಕರ]

**ತೀಬ್ರಕಿರಣ** (ನಾ). = ತೀಬ್ರಕರ ೨ : ವಿಜಯಲಕ್ಷ್ಮೀಕಾನ್ತನಹಿತಕೃತಾನ್ತ ರಿಪುಸುದತೀವದನಕುವಳಯ ತೀಬ್ರಕಿರಣಂ (ಎಕ. XI, ಚಿತ್ರದು.೦೩-೧೪ ; 1224?). [< ಸಂ. ತೀವ್ರಕಿರಣ]

**ತೀಬ್ರತೇಜ** (ನಾ). ಅಧಿಕವಾದ ತೇಜಸ್ಸುಳ್ಳವನು : ಆ ಬ್ರಹ್ಮನೊತ್ತಿಂಬರ್ ಭಸಿತಸಂಪತ್ತಿಗರ್ ತೀಬ್ರತೇಜರ್(ಚಬಪು.೨೯-೨೦). [<ಸಂ. ತೀವ್ರತೇಜಸ್]

**ತೀಬ್ರಪಾತ** (ನಾ). ಉಗ್ರವಾದ ದಾಳಿ : ತನ್ನಯ ತೀಬ್ರಪಾತದಿಂದಿ ಟ್ಟೊರಸಲ್ಕೆ ಬರ್ಪನಿನನೆಂಬಿನಿತುಮ್ಮಳಮಾಗೆ (ಶಾಂತೀಶ್ವ. ೧೧-೯೦). [< ಸಂ. ತೀವ್ರಪಾತ]

**ತೀಬ್ರಪ್ರತಾಪ** (ನಾ). ಉಗ್ರವಾದ ಪರಾಕ್ರಮ ; ಅತಿಯಾದ ಶೌರ್ಯ : ಮೆಯ್ಗಲಿ ಬಲ್ಲಾಳನೃಪಂಗಂ ಅಂಗಜಜಯೋತ್ತುಂಗ ಧ್ವಜಾಕಾರ ಪದ್ಮಲ ಮಾದೇವಿಗಂ ಅಗ್ರಸೂನು ನರಸಿಂಹೋರ್ವ್ವೀಶ್ವರಂ ಪುಟ್ಟಿದಂ ದೆಸೆಯಂ ತಳ್ಪೊಯ್ಯೆ ಕೀರ್ತ್ತಿಪ್ರಸರದೊಡನೆ ಕಾಲ್ಗೂಡಿ ತೀಬ್ರಪ್ರತಾಪಂ (ಎಕ. V, ಚನ್ನರಾ. ೨೦೩ ; 1223). [ < ಸಂ. ತೀವ್ರಪ್ರತಾಪ ]

**ತೀಬ್ರರುಗ್ಮಂಡಳ** (ನಾ). ಸೂರ್ಯಮಂಡಲ; ರವಿಮಂಡಲ: ಉದ್ಧತರ ನೆತ್ತಿಯುಬತ್ತಿಮೊಲಾಯ್ತು ತೀಬ್ರರುಗ್ಮಂಡಳಮುಂ ದಿಟಂ ಮಿಗುವ ತೇಜದ ದಳ್ಳುರಿ (ಎಕ. V, ಅರಸೀ. ೧೨೭-೨೫ ; 1182). [ < ಸಂ. ತೀವ್ರರುಙ್ಮಂಡಲ ]

**ತೀಮ್ಮಸೆ** 'ತೀನ್ಮಸೆ' ನೋ.

**ತೀಯ** (ನಾ). ಬಯಕೆ ; ಬೆದೆ. 'ತೀಯಕಾರ್ತಿ' ಪರಾ. [ ← ತೆಲು. ತೀಯ ]

**ತೀಯಕಾರ್ತಿ** (ನಾ). ತೀಟೆಯುಳ್ಳವಳು ; ಬೆದೆಕಾರ್ತಿ: ತೀಯ [ಪಾಠಾಂ. ಅತಿಯ, ತಿಯ, ತಿಯ್ಯ]ಕಾರ್ತಿಯತರ್ಾಯಿಲ್ಲದ ಕೂಸಿನಂತೆ ಬಾಯಂ ಬಿಡೆಯುಂ (ಅರ್ಧನೇ. ೫-೨ ವ). [ ತೀಯ + – ಕಾಱ + – ತಿ$_1$ (< – ಇತ್ತಿ ) ]

**ತೀಯಾಟ** (ನಾ). ತಿಕ್ಕಾಟ ; ಎಳೆದಾಟ ; ಜಗಳ : ತೀಯಾಟವೂ ಇದ್ದೇ ಇರುವುದು (ಪಾಳಗಾ. ೨೩) ; ಬದೋಡೆ ಸರ್ಕಾರಕ್ಕೂ ನಮ್ಮ ಅಂಗಡಿಗೂ ಮೊದಲಿನಿಂದಲೂ ಇರತಕ್ಕ ತೀಯಾಟ ತಿಳಿದೇ ಇದೆಯಷ್ಟೆ (ಅದೂಟ. ೬). [ ತೀಯು$_0$ (←ಪ್ರತೆಲು. ತೀಯು) + ಆಟ ]

**ತೀರ್**, ತೀರು$_1$ (ಕ್ರಿ). ತೀದ, ತೀರ್ದ (ಭೂತಕೃ), ತೀದು, ತೀರ್ದು (ಭೂತನ್ಯೂ). ೧. ಮುಗಿ ; ಪೂರೈಕೆಯಾಗು : ಪರಮ ಜಿನಾಭಿಷೇಕ ವಿಧಿ ತೀರದು ಕೂಪಜಲಂಗಳಿಂ . . . ಇಲ್ಲಿಗೆ ಮೇಟ್ಟುದಗಾಧ ದುಗ್ಧ ಸಾಗರಜಲಂ (ಅಜಪು. ೪-೪೫) ; ಎನ್ನ ಯಜ್ಞಂ ತೀರ್ವನ್ನೆಗಂ ಋಷಿಯರೀ ಪೊಲಲೊಳಿರವೇಡಮೆಂದು ಘೋಷಣೆ ನೆಗಟ್ಟುದುಂ (ಧರ್ಮಾಮೃ. ೯-೦೫೪) ; ಚಿತ್ರಮನಿತ್ಯನಾಟಕದ ಜೋಹಂ ತೀರ್ದುದಿಂ ಸಾಲದೇ (ಅನಂಪು. ೩-೭೭) ; ಹೋದುದೊಂದಮ್ಮೆತ್ತು ಲೋಕಕೆ ತೀದುದಿಲ್ಲಾಯುಷ್ಯ (ಕುವ್ಯಾಭೀ. ೭-೪೭). ೨. ನಿಶ್ಶೇಷವಾಗು ; ಉಳಿಯದಂತಾಗು : ಎನಿತು ಭುಜಂಗಳಂ ತಳೆದನಿಂದ್ರನನಿತ್ತು ಘಟಂಗಳಂ ಸಮಂತನಿಮಿಷಕೋಟಿ ನೀಡಿದುದನಿತ್ತಮೃತಾಬ್ಧಿಯ ವಾರಿ ತೀರ್ದುಮೆಂದನುಮಿಸಲಾವನುಂ ನೆಱಯನೆಂಬಿನಮದ್ಭುತಮಾದ ಜನ್ಮಮಜ್ಜನದೊಳೆ (ವರ್ಧಪು. ೦೪-೩೫) . ಬಂದು ಬಂದು ಮಿಗೆ ಪೀರುತಮಿರ್ಪ ಚಕೋರಪಕ್ಷಿಜಾಲಂಗಳಿನೊಮೆ; ತೀರ್ಗುಮಿರದೀ ಶಶಿಚಂದ್ರಿಕೆಯೆಂದು (ಕುಸುಮಾ. ೦೦-೭) ; ಸಂಚಿತಸಲಿಲಂ ತೀರ್ದುದು (ಉದ್ಭಟ. ೪-೩೨) ; ಮತ್ಕಾವ್ಯರಚನೆ ಸ್ವಾದು ರಸಾಯನ ತವ ಕರ್ಣಯುಗಳಕ್ಕೆ ತೀದರೆ ಮಗುಳೆ ತುಂಬಿಸದೆ (ಮೋಹತ. ೩೦-೨) ; ಆದಡೇನಾ ಸರಳು ಹೋದರೆ ತೀದುದೆ ತನ್ನಧಟು (ಕೋಗಯ. ೦೦-೬೩). ೩. ಕೊರೆಯಾಗು ; ಕ್ಷೀಣವಾಗು ; ಕ್ಷಯಿಸು : "ತೀರ್ದುದು ಬೀತುದು ಸವೆದುದೆನಲ್ ಕ್ಷಯಮನ್ನೆದಿತೆಂದಱಿಗೆ ಬುಧರ್" (ಭಾರನಿ ೪೨) ; ವನರುಹಗರ್ಭನೆಂಬವನ ಮುನ್ನಿನ ಗೆಯ್ದ ತಪಂ ತಿಲೋತ್ತಮಾಂಗನೆ ಯಿನದಂತುಟಾದುದೆನೆ ಮತ್ತಿನ ಬೞಿತು ತಪಂಗಳೆಮ್ಮ ಪೂರ್ವಿನ ಕಡೆಯೊಂದು ಜರ್ವಿನೊಳೆ ತೀರ್ವುವು (ಪಂಪಭಾ. ೭-೮೧); ತೀದುದೆಮ್ಮಯ ಸೇನೆ ನಸುಸೊಪ್ಪಾದುದಿಲ್ಲರಿಸೇನೆ (ಕುವ್ಯಾಭೀ. ೭-೨೨); ಒದಿದರೆ ವಾಕ್ಪದವು ಸಾರವನಾದರಿಸೆ ಮತಸಿದ್ಧಿ ಕೇಳಲು ತೀದುದಾತನ ಕರ್ಮಬಂಧನ ತಾವ ಭವಭಯವು (ಕೌಶಿರಾ. ೧-೧೨) ; ತೋದುದಂಬರತಳಂ ವಿಷದ ಲೋಳೆ ಗಳಿಂದೆ ತೀದುದಮರರ ಹರುಷ (ಚಬಪು. ೪೨-೨೩). ೪. ಸಾಯಂ ; ಮರಣವನ್ನು ಹೊಂದು : ದಶರಥನ ಬಲ್ಲೈ ಕೇಳಿ ಪೂರ್ವದಲ್ಲಿ ತೀದನಾತನು ಬಳಿಕ ಭರತಂಗಾದುದೀ ಧರೆ ವನಪರಿಭ್ರಮಣೋದಯವು ನಮಗಾಯ್ತು (ತೊರರಾ. ೩-೧-೩೭) ; ಶಿವಯೋಗನಿಜಸಮಾಧಿಯಲಿ ನಿಂದು ಲೀಲೆಯಿಂದಿರಲಾಗಲಲ್ಲಿರ್ಪ ಭಕ್ತಜನಜಾಲಮಿಾತಂ ತೀರ್ದನೆಂದು ತೆಗೆಯಲ್ಕೆ (ಚಬಪು. ೬೩-೩೭). ೫. ನಿವಾರಣೆಯಾಗು ; ಕಳೆ : ಕಿಚ್ಚಿನೊಳಾದ ವೇದನೆಯುಂ ಮನದೊಳಾದ ಸಂಕ್ಲೇಶಮುಂ ತೀರ್ದತ್ತಿದು

(ಧರ್ಮಾಮೃ. ೧೨-೫೭) ; ಮೋಹಮುಂ ಗರ್ವಮುಂ ತಲ್ಲಣಮುಂ ತೀರ್ಗುಂ (ಪಂಪಾಶ. ೪೫) ; ತೀರ್ದುದು ಹೃದಯಕಲಂಕಂ ಸಾರ್ದುದು ಪುಣ್ಯಾನುಬಂಧಂ (ಅನಂಪು. ೩-೬೪) ; ತೀರದುದೆಮಗೆ ವನಪ್ರವಾಸದ ಖೇದ (ಕುವ್ಯಾ.ಅ. ೧೦-೨೮). ೬. (ಕಾಯಿಲೆ, ಬೇನೆ, ಹುಣ್ಣು ಮೊದಲಾದುವು) ವಾಸಿಯಾಗು ; ಗುಣವಾಗು : ಬೆಜ್ಜಯಿಲ್ಲದ ಬೇನೆಯಂತೆ ತೀರಲಱಿಯದು (ಪಂಚತಂ. ೮೭-೨) ; ಶುಂಠಿ, ಹಿಪ್ಪಲಿಮೂಲ, ಅಮರದವಳ್ಳಿ ಇವಂ ಕಷಾಯವಿಟ್ಟು ಕುಡಿಯೆ ವಾತಜ್ವರಂ ತೀರ್ಗುಂ (ಸಕವೈ. ೬೭) ; ತೀರದಿಲ್ಲವು ಬೇನೆ (ಜ್ಞಾನಸಿಂ. ೧-೨). ೭. ಸಾಧ್ಯವಾಗು ; ಶಕ್ಯವಾಗು : ಜವಂಗಿಡದೆ ಮುಟ್ಟೆ ಬರ್ಪ ಜವನಂ ಜವಂಗುಂದಿಸಲ್ ಜವಂಗೆ ಜವನಾಗಲಿಂ ಪೆಱರ್ಗೆ ತೀರ್ಗುಮೇ (ಆದಿಪು. ೧೩-೮೮) ; ಅಂತವರಾಗಿ ಪುಟ್ಟಲೇನಾಗಿಯುಮೇನೊ ತೀರ್ದಪು [ದೆ] ತೀರದೊಡಂ ಮಱಿದುಂಬಿಯಾಗಿ ...ಪುಟ್ಟುವುದು (ಶಂಪಭಾ. ೪-೨೯) ; ತ್ರಿದಶನದೀಸುತನಿಂ ತೀರದ ಕಜ್ಜಂ ...ದ್ರೋಣಪುತ್ರನಿಂ ತೀರ್ದಪುದೇ (ಗದಾಯು. ೩-೬೦) ; ಅಪ್ರತಿಮಪರಾಕ್ರಮನಪ್ಪ ನಿಮಗೆ ತೀರದ ಕಜ್ಜಮಾವುದಾನುಮಿಲ್ಲ (ಪಂಚತಂ. ೩೪-೧೯) ; ಶರ್ವಾಣಿಯ ಸೌಂದರ್ಯಮನೊರ್ವಂ ಬಣ್ಣಿಸುವೆನೆಂಬವಂ ಗಾಂಪಂ ... ಸಾಸಿರ್ವರ್ ಫಣಿರಾಜರಾದೊಡಂ ತೀರ್ದಪುದೇ(ಗಿರಿಕ. ೪-೧೧) ; ಜಿನಗುಣಮೆಲ್ಲಮಂ ಕೊಱತೆಯಿಲ್ಲದೆ ಪೇಳ್ದಪೆನೆಂಬಿದುದ್ಧವಾಗ್ಮನಿತೆಗೆ ತೀರದು (ಶಾಧಪು. ೧-೫೪) ; ನಿರ್ಮಲ ಶಿವನವನ ನಿರ್ಮಾಲ್ಯಮಿಕ್ಕಿಸಲ್...ನಿರ್ಮಲರ್ಗಲ್ಲದುಳಿದರ್ಗೆ ತೀರ್ಗುಮೆ (ಪದ್ಮರಾ. ೧೧-೨೫೮). ೮. ಕೈಗೂಡು ; ಫಲಿಸು ; ಈಡೇರು : ಬಯಕೆ ತೀರದ ಕಾರಣದಿಂ (ಕವಿರಾ. ೧-೧೪೫) ; ಪಗೆ ತೀರ್ಗುಂ ಬಗೆ ತೀರ್ಗುಮಾ ಕುರುಕುಳ ಪ್ರಖ್ಯಾತನಂ ಕಾದಿ (ಪಂಪಭಾ. ೮-೧೦೩) ; ತನ್ನ ಬಯಕೆ ತೀರ್ದುದೆಂದು ಪೆರ್ಚಿ (ಧರ್ಮಾಮೃ. ೬-೪೭): ಕಡುಗಟ್ಟಲೆಯೊಳ್ ... ಪೊಱಮಟ್ಟಡಿಯಿಡಲಣ್ಮದೆ ಮಱುಗುವ ಮಡದಿಗೆ ಬಗೆ ತೀರೆ ಮಿಂಚು ಮಿಂಚಿದುದಾಗಳ್(ರಸರ. ೧-೯೧). ೯. ಸಾಕಾಗು ; ತೃಪ್ತಿಯಾಗು ; ಸಮಾಧಾನವಾಗು: ನುಡಿಯಲ್ ಬಾರದು ತೀರದು ನುಡಿಯುದೊಡೆ (ಅನಂಪು. ೧೧-೩೦). ೧೦. (ಕಾಲದಂತೆ) ಕಳೆದುಹೋಗು ; ಮುಗಿದು ಹೋಗು ; ವೇದಮಾರ್ಗದೊಳೊಂದು ದಿನ ಪರಿ ತೀರದು ಹೋದುದು (ಸಂಭಪ. ४-೯). ೧೧. (ಜಗಳ, ವಾಗ್ವಾದ, ಸಮಸ್ಯೆ ಮೊದಲಾದಂವುಗಳು) ತೀರ್ಮಾನವಾಗು ; ಒಗೆಹರಿ : ನಿನತೊಂದೊಲೆಗೆ ತೀರ್ವುದೊಂದು ಮನೆವಾರ್ತೆಗಿದೇನರಸ ಬಳೆಯೆ ನುಡಿದಪೆ (ಆದಿಪು. ೧೪-೩೦) ; ನಮ್ಮ ಜಗಳ ತೀರಿತು (ರೂಢಿ). ೧೨. ಹೊಳಪಾಗು ; ನಯಗೊಳ್ಳು (?). 'ತೀರಿಸು' ಪರಾ.

ತೀರು$_1$ : ೧. ಸಮಸಪ್ತಕರ ಬಲ ನಿಜಪಾಳೆಯಕೆ ತಿರುಗಿದುದು ತೀರಿತು ತರಣಿಯಾಟೋಪ (ಕುಮ್ಯಾದ್ರೋ. ೮-೧) ; ಮಿಂಡಗಾಱಿಕೆಯಲ್ಲಿ ಗಳಿಸಿದ ಸೌಖ್ಯವನುಂಡಲ್ಲದೆ ತೀರದೆಂದ (ಮೋಹತ. ೩೫-೬೪) ; ರಾಜಪುತ್ರಿಗೆ ತನಗೆ ಸೆರೆ ತೀರುವುದೆಂದು ಎಷ್ಟೋ ಸಂತೋಷವಾದರೂ (ಪಂಚಾಮೃ.೬) : ಊರು ಸೇರಿದ ಮೇಲೆ ದಾರಿ ತೀರಿತು(ಗಾದೆ). ೨. ತೀರಿತಾತನ ಶಕ್ತಿ (ಕುಮ್ಯಾದ್ರೋ. ೩-೬೩) : ತೀರೆ ಕೈದುಗಳಿಳಿದು ಬೊಬ್ಬೆಯ ತೋಱಿ ಕಡಿಗೊರಳಿನಲಿ ಕೋಪಿಸಿ ತೇರಿನಗ್ರವ ಪಿಡಿದು ತಿರುಹಿಟ್ಟುದು ಕಬಂಧಕವು (ತೊರರಾ. ೩-೭-೨೫) ; ತೀರಿದ ಅಡಿಗೆ ತಿರುಗಿ ಬಯಸಿದರೆ ಬಂದೀತೇ ? (ಗಾದೆ). ೩. ತೀರಿದುದು ತನುದೊಬ್ಬುಳಿತ ಚಂದ್ರನ ತಾರಕಿಯ ಪೈವೆಳಗು ಮಸುಳಿದವು (ತೊರರಾ. ೧-೧೪-೧). ೪. ಮಾರಹರ ನಿಮಗುಚಿತವೇ ಮತ್ತಾರಿಗಾಱದೆ ಕುಂಟಿದೇವತೆ ಸೇರಿ ಮನೆಯವರ್ಗಾಪನೆನ್ನದೆ ಸೂನು ತೀರಿದಡೆ (ಬಸವು. ೪೮-೧೮) ; ತಂದೆ ತೀರ್ದ ಬಳಿಕ ನೀನೆ ತಂದೆ (ತೊರರಾ. ೨-೬-೨೮). ೫. ಕ್ರೂರದಂತ ತ್ರಿತಯಪೂಜಿಲು ಭಾರವದು ಪಲ್ಮಾಲ್ಕು ನಟ್ಟಡೆ ತೀರಗೆಂತಾ ಮಂತ್ರತಂತ್ರೌಷಧವಿಧಿಗಳಿಂದ (ಬಸವು. ४೬-೩೨) ; ವಿಶ್ವಾಸವುಳ್ಳೊಡೆ ಸಕಲ ಪಾತಕವು ತೀರುವುದಲೆ (ಸಂಭಪ. ೩-೩೬) ; ತೀರಿತು ಹೃದಯದ ತಾಪ (ಮೋಹತ. ೨೮-೩) : ತನ್ನ ಕೊರಗು ತೀರುವುದು ಕಷ್ಟವೇ ? (ಬೆತಂಬಾ. ೧೬). ೮. ತನ್ನ ಆಕಾಂಕ್ಷೆ ತೀರುವುದಕ್ಕೊಂದು ದಾರಿಯಿದೆ (ಬೆತಂಬಾ. ೩೫). ೧೦. ಆಯುಷ್ಯ ತೀರಿದಲ್ಲದೆ ಮರಣವಿಲ್ಲ (ಬಸವ. ೬೮೯). ೧೧. ಸಂದೇಹ ತೀರಿತು (ಬೆತಂಬಾ. ೩೪). ೧೨. (ಋಣ, ಹಂಗು, ಸಾಲ, ಮುಂತಾದಂವು) ಸಂದಾಯವಾಗು ; ಸಲ್ಲು : ಮುಯ್ಯಕ್ಕೆ ಮುಯ್ಯಿ ತೀರಿತು (ಪುರಂದ. ೧-೬೫ ಪಲ್ಲವಿ) ; ಅವರ ಹಂಗೂ ತೀರದು (ಮೂರುಉ. ೭, ಮುನ್ನುಡಿ).

ತೀರಿಕೊಳ್ಳು=ಸಾಯು ; ಮರಣವನ್ನು ಹೊಂದು : ಒಬ್ಬ ಬಡ ರೈತ . . . ಅರ್ಬುದರೋಗದಿಂದ ತೀರಿಕೊಂಡ (ಚಿಕಿತ್ಸ. ೫೦) ; ಅವರು ತೀರಿಕೊಂಡಾಗಿನಿಂದ ಇಂಥ ಕೆಲಸ-ಕಾರ್ಯಗಳ ಬಗ್ಗೆ ಜನರು ನಿನ್ನನ್ನೇ ಕೇಳುತ್ತಿರುವುದು ತಪ್ಪಲ್ಲ (ಭಾರತಿ.೧).

[ ದೇ.॥ ತಮಿ. ತೀರ್ ; ಮಲ. ತುಳು. ತೆಲು. ತೀರು./ಸಂ. ತೀರ್ ]

ತೀರ$_1$, ತೀರಾ (ಗು). ಬಹಳ ; ತುಂಬ ; ಸಂಪೂರ್ಣ : ಈಗ ಅವನು ಹಾಗೆಲ್ಲ ಮಾಡುವುದಿಲ್ಲ. ಆಗ ತೀರ ಚಿಕ್ಕವನಿದ್ದ (ಭಾರತಿ. ३) : ಆಂಡಯ್ಯನು ನುತಿಸಿದ ಕವಿಗಳಲ್ಲಿ ಅವನಿಗೆ ತೀರ ಸಮೀಪದವನಾದ ಜನ್ನ (ಸಾಹಿಸ. ೦೫೦) ; ಈ ಎರಡು ತೆರನಾದ ಕಂಪನಗಳ ಸ್ವಭಾವವು ಪರಸ್ಪರ ತೀರ ಭಿನ್ನವಾಗಿರುತ್ತದೆ (ಜೀವಾತ್ಮ. ೧೧೦).ತೀರಾ : ಹೊಱಸವಿ ಒಳಸವಿ ತೀರಾ ಸವಿ ... ತೀರಾ ಸವಿಯಿಂದ ರುದ್ರಸತ್ತ (ವಚಶಾ. II, ೨೫೦) : ಪ್ರಾಚೀನ ಕನ್ನಡ ಗ್ರಂಥಗಳಿಂದ ಆಯ್ದುಕೊಂಡ ಪದ್ಯಗಳು ತೀರಾಕಡಿಮೆ (ಕಎಪು. I, ಪೀಠಿಕೆ). [ < ತೀರ್ ]

ತೀರ$_2$ (ಅ). ಬಹಳವಾಗಿ ; ಅತಿಯಾಗಿ ; ಸಂಪೂರ್ಣವಾಗಿ : ಕೊಳುಗುಳದೊಳಗೈನೂಱಕ್ಷೋಹಿಣಿ ಬಲವನೊಬ್ಬನೇ ತೀರ [ಪಾಠಾಂ. ತಿರಿ] ಕೊಂದ (ಕುರಾಸಾಂ. ६-३६); ತೀರ ಜಗ್ಗಿದರೆ ಅಧಿಕಾರದ ಹಗ್ಗವೇ ಹರಿವುದೆಂದು ಅದಕ್ಕೆ ಗೊತ್ತಿತ್ತು (ಎಕ್ಕಸಾ. ೩೬). [ < ತೀರ$_1$./ತಮಿ. ತೀರ ]

ತೀರ$_3$ (ನಾ). ದಡ ; ದಂಡೆ ; ಕರೆ : "ತೀರಮೊಂದು ತಟಂ" (ಕಕಸಾ.೮-೧೪೨); ತಣ್ಪುವೆತ್ತಿರ್ಪ ತೀರ ಜಲಂಗಳೊಳಮೆಡವಿಡದಿಡಿದ ತವಪಾಲವೀಥಿಯೊಳೊಗೆವ ಕತ್ತಲೆಯಿಂ (ಕಾದಂಪೂ. ೧೧೭); ತೊಱೆಗಳ ತೀರದೊಳ್ಗರಿಯ ತಪ್ಪಲೊಳಗ್ಗಳಮಪ್ಪ ಕೊಳ್ಳದೊಳ್... ಮಱುಗಿ ತೊಱಲ್ದು (ಧರ್ಮಾಮೃ. ೮-೨೦); ಎಱಗದ ತೀರಭೂರುಹಮನೆಯ್ದೆ ಮೊದಲ್ಗಿಡೆ ಕೀಳ್ದು ಬೆಂಗೆ ಬಿಟ್ಟೊಱಗಿದ ಮಂಜುಳಪ್ರಕರಮಂ ಪರಿವರ್ಧಿಪ ಸಿಂಧುತೋಯದಂತೆ (ಕೃಷ್ಣಪು. ೦೩-೬); ನಗುತನಿಲಶರದಿಂದೂದಿದನು ಜಲನಿಧಿಯ ತೆಂಕಣತೀರಕಾಖಳನ (ತೊರರಾ. ೧-೧೧-೨೧); ತೀರಕ್ಕೆ ಬಂದ ಮೇಲೆ ತೆರೆಯ ಭಯವೆ ? (ಗಾದೆ). [ ಸಂ. ]

ತೀರಂಬಿಡಿ (ಕ್ರಿ). ದಡವನ್ನು ಹೊಂದಿಕೊಳ್ಳು ; ತೀರವನ್ನು ಅನುಸರಿಸು : ಅಂತಾ ಪ್ರಭಾಸಾಮರಸಂ ನಿಜವಿಜಯಯಶಃಪ್ರಭಾಸಮೂಹದಿಂದಂ ಪುದಿದು ಸಿಂಧುನದೀತೀರಂಬಿಡಿದು ಬರ್ಪಲ್ಲಿ (ಆದಿಪು. ೧೩-೪೫); ದೂತಂ ಜೀಮೂತನಾದನೆಂಬಂ ಕೂಪಾರ ತೀರಂಬಿಡಿದು ನಡೆತರ್ಪ ಕಾಳಿಯಸರ್ಪದರ್ಪದಳನನದಿರದಿದಿರೊಳ್ ಕಂಡು (ಜಗವಿ. ೯-೫೩ವ).

[ತೀರ$_3$ + ಪಿಡಿ$_1$]

ತೀರದಾಣ (ನಾ). ತಪ್ಪಲು ಪ್ರದೇಶ (?): ಗಿರಿತಲದಾ ಮೇಲತಿ ××× ಸ್ಥಲಮಾನ್ ತೀರದಾಣವಮಾ ಕೆಳಗೆ ನೆಲದಿ ಮಾನದಾ ಸದ್ಧಮದಾಗೇಟಿ ಸಸಾನದಿ ಪತಾನ್ (ಎಕ. II, ೨೯-೩; 700). [ತೀರ$_3$ + ತಾಣ]

ತೀರವೆ (ನಾ). ೧. ತೀರದೆ ಇರುವಿಕೆ ; ಅಪೂರ್ಣತೆ ; ಕೊರತೆ : ಅಮೆಗೆ—ತೀರವೆ, ಅಟ್ಟಿಮೆ (ಶಮದ. ೨೦೦ ಪ್ರಯೋ). ೨. (ಪ್ರಯಾಣದಲ್ಲಿ) ತಡೆದಿರುವಿಕೆ ; ಮುಂದುವರೆಯದಿರುವಿಕೆ : ಆಲೋಕನಾ

ಮಾತ್ರದಿಂ ಮಱಿದು ಪಾಂಥಶ್ರೇಣಿ ನೀರಟ್ಟಿಯುಂ ಶ್ರಮಮುಂ ತೀರಮೆಯಂ ಪ್ರಪಾಂಗನೆಯರಂ ಕಣ್ಣಾಪ್ಪುದಾ ದೇಶದೊಳ್ (ಶಂರಾಮಾ. ೧-೧೦೩); ಜಾನಪದಾಂಗನಾಜನದ ಗಾಡಿಗೆ ಸೋಲ್ತಳಿನೀನಿನಾದಮಂ ಜಾನಿಸಿ ಕೇಳ್ದು . . . ಉದ್ಯಾನದೊಳಾಡೆ ತೀರಮೆಯುಮಂ ಪಥಿಕರ್ ಮಱಿದಿಲ್ಲೆನಲ್ ಪರಿಮ್ಲಾನತೆ ಸೈತು ಬಟ್ಟೆ ನಡೆಯಲ್ಬಡೆಯರ್ ವಿಷಯಾಂತರಾಳದೊಳ್ (ಮಲ್ಲಿಪು. ೩-೨೮): ಬಾಟೆಯಾಳಿಯರನೇಱಿಲ ಮಾವಿನಪಣ್ಗಳಂ ಮನಂ ನಿಲೆ ಸವಿದಲ್ಲಿ ತೀರಮೆಯುಮಂ ಮಱಿದಿರ್ಪುದು ಪಾಂಥಸಂಕುಳಂ (ಪುಷ್ಪಪು. ೩-೪೭). [ ತೀರ್ + – ಅಮೆ₂ ]

**ತೀರರುಹ** (ಗು). ದಡದಲ್ಲಿ ಬೆಳೆದಿರುವ ; ದಂಡೆಯ ಮೇಲಿರುವ: ತೀರರುಹ ಫಲಪುಷ್ಪನವ್ಯಕಿಸಲಯರಮ್ಯಗುಲ್ಮತರುಪಂಕ್ತಿಮಾಲಾಸಹ್ಯ ಜಾತೆಯಂ ದರ್ಶಿಸಿದೊಡನೆ (ಶ್ರೀರಾಮಾ. ೯೭-೫೨೩). [ಸಂ.]

**ತೀರಸ್ಥ** (ಗು). ದಡದಲ್ಲಿರುವ: ತೀರಸ್ಥಲವಂಗಚೂತಲವಲೀಪುಷ್ಪಾಸ ವಾಸ್ವಾದಿತೋದಯುತೋನ್ಮಾದೆಯ . . . ಪೋಲ್ವೆಗಿಲ್ಲ ತೊಱೆಗಳ್ ವಿಶ್ವಂಭರಾಭಾಗದೊಳ್ (ಆದಿಪು. ೧-೫೪). [ ಸಂ. ]

**ತೀರಾ** 'ತೀರ್₁' ನೋ.

**ತೀರಿ** (ನಾ). ೧. ಅಂಬು ; ಸರಳು , ಬಾಣ : "ತೀರೀ, ತದ್ಬಳ, ದಂಡಾಸನಃ –ಇವು ಮೊದಲಾದುವು ಅಂಬಿನ ಭೇದಂಗಳ್" (ಹಲಾಯು. ೭೭-೩೧೩). ೨. ಒಂದು ಬಗೆಯ ಬಿಲ್ಲು : "ದಂಡಾಸನಂ ತೀರಿ ತದ್ಬಳಮೆಂದು ಬಿಲ್ಲಭೇದಂ ಗಳಕ್ಕು" (ಮಂಗರಾ. ೮೭-೩೩); P ಮಂಗರಾಜನು .ಬಾಣ' ಎಂಬುದಕ್ಕೆ 'ಬಿಲ್ಲು' ಎಂದು ಹೇಳಿರುವಂತೆ ಕಾಣುತ್ತದೆ. [ ಸಂ. ]

**ತೀರಿಕೆ** (ನಾ). ತೀರಿಸುವಿಕೆ : " ತೀರಂ, ತೀರಣಂ, ತೀರಣೀಯಂ—ಈ ೩ ತೀರಿಕೆ " (ಕಾಶಕ್ಕ. ೨೪೮). [ ತೀರ್ + – ಇಕೆ ]

**ತೀರಿಕ್ಕೆ**, ತೀರಿಗೆ (ನಾ). ಒಂದು ಬಗೆಯ ಬಾಣ : ಕುದುರೆಯ ಮೇಲೆ ಬಿಲ್ಬರಸು ಸೂಲಿಗೆ ತೀರಿಕೆ ಭಿಣ್ಡಿವಾಳಮೆತ್ತಿದ ಕರವಾಳಿಮಾಟಿಡುವ ಕರ್ಕ್ಕಡೆ . . . ಎಂತು ಲಕ್ಷ್ಮಣನೊಳಾಂತು ಬರ್ದುಂಕುವರನ್ನಭೂಭುಜರ್ (ಎಕ. VII, ಶಿಕಾರಿ. ೦೩೭–೨೮ ; 1068). **ತೀರಿಗೆ:** ಕುದುರೆಯ ಮೇಲೆ ಬಿಲ್ಬರಶು ತೀರಿಗೆ ಸೂಲಿಗೆ ಪಿಂಡಿವಾಳವೆತ್ತಿದ ಕರವಾಳ (ಎಕ. XV, ೩೪೦–೦೩ ; 1071). [ < ತೀರಿ./ಸಂ. ತೀರಿಕಾ ]

**ತೀರಿಗೆ** 'ತೀರಿಕ್ಕೆ' ನೋ.

**ತೀರಿಚು** 'ತೀರ್ಚು' ನೋ.

**ತೀರಿತ** (ಗು). ತೀರ್ಮಾನವಾದ; ಮುಗಿದ; ನಿರ್ಣಯಿಂತವಾದ. [ ಸಂ. ]

**ತೀರಿಸು** (ಕ್ರಿ). ೧. ಮುಗಿಸು ; ಪೂರ್ಣಮಾಡು : ದಣಿ ವ್ಯಾಗ ಸೇಡು ತೀರಿಸಿಕೊಣ್ಣಾಕ ನಿನಗೊಂದು ಅಪರೂಪ ಪರಸಂಗ ಒದಗಿ ಬಂದರ ಹ್ಯಾಗಲೇ (ಮೇದಿಮು. ೧೩); ಆರಿ ದೂರಕೆ ಅಲೆದ ಕಡಲಿನ ನೀರೆ ಕಡಲನೆ ಕೂಡಿತು, ಬೇರೆ ! ಹಾ ! ಹಾ ! ಎಂದು ಡೊಂಬನು ತೀರಿಸದೆ ಕಣ್ಮುಚ್ಚಿದ (ಕಿವಿಪು. ೪೧-೩೭); ತನ್ನ ಕೆಲಸವನ್ನು ಮಾಡಿ ತೀರಿಸಿದ್ದನು(ರೂಢಿ). ೨. ನಾಶಮಾಡು ; ಕೊನೆಗಾಣಿಸು : ತೀರಿಸುವೆನೀ ರಕ್ಕಸರ ರಣ ಹೋರಟೆಯನೆನುತ...ತಿರುಹಿಟ್ಟನು ನಭಸ್ಥಳಕೆ (ತೊರರಾ. ೭-೩೦-೧೭). ೩. ಕೊಲ್ಲು ; ಸಾಯಿಸು : ಕೌರವನ ಋಣ ಹಿಂಗೆ ಸುಭಟಕೋಟಿಯನು ತೀರಿಸಿಯೆ ಪತಿಯುವಸರಕ್ಕೆ ಶರೀರವನು ನೂಕುವೆನು (ಕುವ್ಯಾಉ. ೧೧-೨೦): ಈಗಲೆ ಇವರನ್ನೂ ನಿನ್ನನ್ನೂ ತೀರಿಸಿಬಿಡುತ್ತೇನೆ (ವಚಥಾ. ೩೮). ೪. ನಿವಾರಿಸು ; ಪರಿಹರಿಸು : ತಾರಕನಿಂದೆ ನೊಂದಮರರು ತಮ್ಮ ಸಂಸಾರದುಃಖವ ತನಗುಸಿರೆ ತೀರಿಸಲಱಿಯದಾನೈತಂದೆ ಶ್ರೀ ವೀರ ನಾರಾಯಣ ಪೊರೆಯೆಂದ (ವೀಾಹತ. ೫-೦೫); ಹೆತ್ತ ತಾಯಿಯ ಸಂಕಟ ವನ್ನು ತೀರಿಸುವವರ್ಯಾರು (ಮನೋಣಂ. ೦೪೨). ೫. ಈಡೇರಿಸು ; ಕೈಗೂಡಿಸು : ಬಂದು ಕಾದಿಹ ದ್ವಿಜರನುಮತವ ತೀರಿಸದೆ ನಿಜಲೋಭಿ ಶತವೆಂಬಂದದಿ ಸಾಲ್ಗಟ್ಟಿ ಕುಜವಿರ್ದುದಾ ಬನಬನದಿ (ವೀಾಹತ. ೨೪-೪೮). ೬. ಬಗೆಹರಿಸು ; ತೀರ್ಮಾನಮಾಡು : ಅವರಿಬ್ಬರೂ ಬಂದು ನಮ್ಮ ದಿಷ್ಟು ವ್ಯಾಜ್ಯ ತೀರಿಸು ಎಂದು ನನ್ನ ಬೇಡಿಕೊಂಡರು (ಮುಂಬಯಿ. ೪-೮೮). ೭. (ಋಣ, ಉಪಕಾರ ಮೊದಲಾದುವನ್ನು) ಕೊಟ್ಟು ಮುಟ್ಟಿಸು ; ಮರಳಿ ಸಲ್ಲಿಸು ; ಸಂದಾಯಮಾಡು : ಉಂಡು ತೀರಿಸಬೇಕು ತಾ ಮುಂಕೊಂಡು ಮಾಡಿದ ಪುಣ್ಯ ಪಾಪದ ತಂಡವನು ತೆರಹರಣವಿಲ್ಲದೆ (ಕುವ್ಯಾಉ. ೩-೦೨೦); ಎನ್ನ ಪೀಡಿಸಿ ಪರಮಭುಂಡನ ಮಾಡಿ ನಿನ್ನ ಮುಯ್ಯಕೆ ಮುಯ್ಯ ತೀರಿಸಿಕೊಂಡಯ್ಯ (ಪುರಂದ ೧-೬೫-೨). ೮. ದಾಟು ; ಕ್ರಮಿಸು : ದೂರೀಕೃತಮಾರ್ಗವನಂತರಿಕ್ಷದ ತೀರಿಸಿಯಾಕ್ಷಣದಲ್ಲಿ ದ್ವಾರಕಿ ಬಹಿರ್ಭಾಗದೊಳಿಳಿದಾಗ (ವೀಾಹತ. ೩೦-೦೩). ೯. ಮೆರುಗುಕೊಡು ; ನಯಗೊಳಿಸು (?) : ಕಾರ್ಗಾಲದ ಕುಡುಮಿಂಚಿನ ತಿರುಳಂ ತೀರಿಸಿ ತಿರ್ದಿದ ರೂಪೆನೆ ಪೊಸಮುತ್ತಿಂ ಕಡೆದಾ ಪರಿಜಿನೆ .... ಕರಮೆಸೆದಂ ಭೂಪತಿ ಪುರಸತಿಯರ ಕಣ್ಗಳ ಕದಿರಿಂದ (ಜಯಕಾ. ೧೦-೫೭). [ತೀರ್ + – ಇಸು₃]

**ತೀರು₁** 'ತೀರ್' ನೋ.

**ತೀರು₂** (ನಾ). ೧. ತೀರ್ಮಾನ; ತೀರ್ಪು : (ಕ). ೨. ಅಂತ್ಯ; ಸಮಾಪ್ತಿ; ಮುಕ್ತಾಯ : ಆ ಮಹಾನಾಟ್ಯದೇರಂ ತೀರಂ . . . ಭಾವಿಸಿ (ಗಜೇಶ. ೨೩-೬೦೦). ೩. ರೀತಿ ; ಕ್ರಮ : ಮಾರುತ ಸುತನ ಶರೀರವ ಕಾಣದ ತೀರಿ ನೊಳಸ್ತದ ಕೂರಲಗುಗಳಂ ಭೋರನೆ ಸುರಿಯಲು (ಹನುಮ. ೬೨) ; ನಳಿ ನಾಳಿಗಳಿಗೆ ಘೋಷಿಸಿ ಪೇಳ್ವ ತೀರಿನಿಂ ಷಟ್ಚರಣಾನೀಕ ಜೇಂಕರಿಸುತ್ತೆ ಜಲಜಾತಗಳಿಗೆರಗಲು (ನವಮೋ.೧೧-೪೨); ದೊಡ್ಡ ಮಳೆ ಬಂದರೆ ಹಾಗಲ್ಲ ; ಅದರ ರೀತಿ ಬೇರೆ ... ಎಷ್ಟಾದರೂ ಅದರದು ದೊಡ್ಡ ತೀರು (ಬಾಲಪ್ರ. II, ೧೧೬೫). ೪. ಹಿಂತಿರುಗಿಸುವಿಕೆ ; ಸಂದಾಯಮಾಡುವಿಕೆ. 'ತೀರು ವಳಿ' ಪರಾ. ೫. ಒಪ್ಪ ; ಮೆರುಗು : (ಕ). [ < ತೀರ್ ]

**ತೀರು₃** (ನಾ). ೧. ಅಂಬು ; ಸರಳು ; ಬಾಣ : ಸಾಣೆಯೊಳ್ ತೀಡಿದ ಮಾರನ ತೀರಿನಂತಿರುವ ಕೊರೆನೋಟ (ಸಾಗಂಧಿ. ೨೨೪-೬) ; ಬೆಳ್ಳಿ ಮೇಲೆ ಚಿಂನದ ಮುಲಾಂ ಕಮಾನು ೧ ತೀರು ೧ (ಎಕ. XIV, ನಂಜನ. ೨೯೨- ಪುಟ. ೦೪೦ ; 1847). ೨. ತೊಲೆ ; ಅನಿಕೆ : ಛಾವಣಿಗೆ ಹಾಕಿರುವುದು ತೆಂಗಿನ ತೀರು (ರೂಢಿ). ೩. ಗುಡಿಸಲು ; ಚಪ್ಪರ : ತೀರಿಲ್ಲ ತಿಟುವಟವಿಲ್ಲ ಜಾಭ ಮಾತ್ರತೊಂಬೆಯಪ್ಪು (ಗಾದೆ). [ < ಸಂ. ತೀರ ]

**ತೀರುಕಣೆ** 'ತೀರ್ಕಣೆ' ನೋ.

**ತೀರುಗಡೆ** 'ತೀರ್ಗಡೆ' ನೋ.

**ತೀರುಗಾಲ** (ನಾ). ಅಂತ್ಯಕಾಲ ; ಸಾಯುವ ಹೊತ್ತು ; ಕೊನೆಗಾಲ : ಬಲ ಬಿಟ್ಟು ಹೊಡೆದು ಕರ್ಣನನ್ನು ಕೊಲ್ಲು . . . ಅವನಿಗೆ ತೀರುಗಾಲ ಬಂದಿದೆ (ವಚಥಾ. ೨೮೪). [ತೀರು₁ ( < ತೀರ್) + ಕಾಲ]

**ತೀರುತ**, ತೀಟ್ಥ (ನಾ). ೧. = ತೀರ್ಥ ೧ : ಅಲ್ಲ ಜಲಮುಯುವಿದುವೆ ತೀರು [ಪಾಠಾಂ. ೦]ತ (ನಿಭಾಗ. ೧೦-೬೫-೧೪). Δ **ತೀಟ್ಥ** : ೨. = ತೀರ್ಥ ೩: ಸ್ವಸ್ತಿಶ್ರೀ ಜಮ್ಬು ನಾಯ್ಗಿರ್ ತೀಟ್ಥದೊಳ್ನೋನ್ತು ಮುಡಿಪ್ಪಿದರ್ (ಎಕ. II, ೧೮ ; 700); ಶ್ರೀಮದ್ ಬೆಟ್ಟದ×ಪೊ×ನ ಮಗ್ಗ ವೈಜಬ್ಬೆ [ಕ]ಬ್ಬಪ್ಪು ತೀಟ್ಥದೊಳ ನೊನ್ತು ಸಂನ್ಯಸನಂ (ಎಕ. II, ೬೮-೩ ; 10ನೆಯ ಶತ ?). [< ಸಂ. ತೀರ್ಥ ]

**ತೀರುಪಡಿ** 'ತೀರ್ಪಡಿ' ನೋ.

**ತೀರುವಳಿ** (ನಾ). ೧. ತೀರಿಸುವಿಕೆ ; ಸಂದಾಯಮಾಡುವಿಕೆ : ವೇದ ರೂಪವಾದ ಸಾಲದ ತೀರುವಳಿಯ ಕ್ರಮವು ಹೀಗೆ (ನೀಗಟ್ಟು. ೭೭) ೨. ಇತ್ಯರ್ಥಪಡಿಸುವಿಕೆ : " ತೀರುವಳಿ ; ತೀರ್ವೆ " Settlement (ಪತ್ರಿಸಿ. ೭೪). [ ತೀರು₂ + – ವಳಿ₁ ]

**ತೀರುವೆ** 'ತೀರ್ವೆ' ನೋ.

**ತೀರೆ** (ನಾ). ೧. ಒಂದು ಬಗೆಯ ಹುಳು; ಜಂತುಹುಳು: ಸಾಂಟೊನಿನ್, ಜಠರಕ್ರಿಮಿನಾಶಿನಿ, ತೀರೆಹುಳುವಿನ ಮದ್ದು (ಮೈಜಿಗಿ. ೯-೦೫೫). ೨. ಜಂತು ಹುಳುವಿನಿಂದುಂಟಾಗುವ ಒಂದು ಬಗೆಯ ರೋಗ: (+). [?]

**ತೀರ್ಕಡೆ** 'ತೀರ್ಗಡೆ' ನೋ.

**ತೀರ್ಕಣಿಸು, ತೀರ್ಗಣಿಸು** (ಕ್ರಿ). ೧. ಕೊನೆಗೊಳಿಸು; ನಾಶಗೊಳಿಸು: ಪ್ರಕಟಿತ ರಜಸ್ತಮೋಗುಣ ತೀರ್ಕಣಿಸಿ ಸಾತ್ವಿಕಫಲ ರೂಪಾದುದೆನುತ ಅಕಳಂಕಸಿತಹವ್ಯರ್ಮೆಸೆದುದು (ಮೋಹತ. ೩-೬೭). ೨. ನಿವಾರಿಸು; ಪರಿಹರಿಸು: ಹಲವು ದಾಯದಲಿ ಬುದ್ಧಿಯ ಪೇಳಿ ಮದನವ್ಯಾಕುಲವ ತೀರ್ಕಣಿಸಿ (ಮೋಹತ. ೩೯-೭); ತೀರ್ಕಣಿಸು ದುಃಖವು ಶಿವನ ಮರೆ ಯೊಕ್ಕು (ನವಮೋ. ೭-೩೭). ೩. ದಾಟು; ಕ್ರಮಿಸು: ಆಕಾಶಪಥವ ತೀರ್ಕಣಿಸಿ ಗೋಕರ್ಣರಿಪು ವೈನತೇಯ ಬಂದನು (ಮೋಹತ. ೪೨-೦೩). ೪. ಇಲ್ಲವಾಗು; ಅಂತ್ಯವಾಗು; ನಾಶವಾಗು: ಉಂಟಾದ ಧೈರ್ಯ ತೀರ್ಕಣಿಸಿತು (ಮೋಹತ. ೨೮-೦೨); ಬೋಧಾರುಹನಾದ ಪರಮೇಶ ನಿಮ್ಮೊಳು ಭೇದವಿಲ್ಲೆಂದು ಸೂಚಿಸಲು ರೋದನ ತೀರ್ಕಣಿಸಿತು (ಮೋಹತ. ೪೦-೯೨). **ತೀರ್ಗಣಿಸು:** ೫. ರಚಿಸು; ನಿರ್ಮಿಸು: ಸೌರಭ ಸದ್ಮವೆಂದೆನಿಪ ಕೇರ್ಗಳಿಂ ಪುಂಡ್ರೇಕ್ಷುದಂಡದಿ ತೀ [ಪಾಠಾಂ. ಕೇ] ರ್ಗಣಿಸಿ ದೊಳ್ಪಪ್ಪರಂಗಳಿಂದಾರ್ಗೆ ಬಣ್ಣಿಸಲರಿದೆನಿಸಿ ಮೆಱೆದಿಹವು ಪ್ರಪಾಶಾಲೆ (ಮದೇಪು. ೨-೦೨). [ತೀರ್ಕಣೆ + - ಇಸು₃]

**ತೀರ್ಕಣೆ, ತೀರುಕಣೆ** (ನಾ). ೧. ಅಂತ್ಯ; ಮುಕ್ತಾಯ; ಕೊನೆ: ಯಜ್ಞದ ತೀರ್ಕಣೆ ಅವಭೃತವೆಂಬುದು (ಹಲಾಯು.೬೯-೨೬೩): ವಿವಾದ ಸಮಾಪ್ತಿಃ = ತೋಟಿಯ ತೀರ್ಕಣೆ (ನೀತಿವಾ. ೨೭-೨೦). ೨. ನೆರವೇರಿಕೆ: ಕಾರ್ಯಸಿದ್ಧಿಶ್ಚೇತಿ = ಕಾರ್ಯದ ತೀರ್ಕಣೆಯು (ನೀತಿವಾ. ೯-೨೫). ೩. ತೀರ್ಮಾನ; ತೀರ್ಪು: ಸುವ್ಯಕ್ತವೂ ಆವಶ್ಯಕವೂ ತಪ್ಪದುದೂ ಸುಲಭವೂ ಎಂದು ಭಾಸವಾಗುವ ತೀರ್ಕಣೆಯನ್ನು ಬಾಯ್ದುಡುಕಿ (ಮಂತ್ರಶ. ೬೨-೨೨). **ತೀರುಕಣೆ:** ೩. ನಿಮ್ಮ ಬಗೆಯು ದ್ರೋಹಿ ದುರಾತ್ಮರಿಗೆ ತಕ್ಕುಮೆಗಿಡದ ಒಂದೇ ದಣ್ಣನೆ ಎಂದು ತರಿಸಂದು ತೀರುಕಣೆ[ಣೆ]ಗೊಟ್ಟರುವರು (ಜಿಟ್ಟಅ. ೨೦೪-೨೩). ೪. ವ್ಯಯ; ಖರ್ಚು: "ಅರ್ಥದ ತೀರುಕಣೆ[ಣೆ] ಅರ್ಥಾಪಗಮ, ವ್ಯಯ, ವೆಚ್ಚ" (ನಾಜಿರಾ. +). [ತೀರ್ಕೆ + - ಅಣೆ₄]

**ತೀರ್ಕಣೆಗೆಯ್** (ಕ್ರಿ). (ಅಲಂ) ರಕ್ಷಣೆಮಾಡು; ಕಾಪಾಡು (?): ನಕ್ರ ಕಂಟಕವನುತ್ತರಿಸಿ ಗಜೇಂದ್ರನ ವಕ್ತ್ರವ ತೀರ್ಕಣೆಗೆಯ್ದ ಚಕ್ರಪಾಣಿಯ ಕೂರ್ತು ಕೃತಿವೇಳು (ಮೋಹತ. ೨೭-೦). [ತೀರ್ಕಣೆ + ಕೆಯ್₁]

**ತೀರ್ಕೆ** (ನಾ). ಇತ್ಯರ್ಥ; ನಿರ್ಣಯ; ತೀರ್ಮಾನ. 'ತೀರ್ಕಣೆ' ಪರಾ. [ತೀರ್ + - ಕೆ]

**ತೀರ್ಗಡೆ, ತೀರುಗಡೆ, ತೀರ್ಕಡೆ** (ನಾ). ೧. ತೀರಿಸುವಿಕೆ; ಪೂರೈಕೆ: ತನ್ನ ಪ್ರಜೆಗಳ ಕಾರ್ಯಗಳನುರೆ ಮುನ್ನ ತೀರ್ಗಡೆ ಮಾಡಿ (ರಘುವಂ. ೧೫೪-೨೪). **ತೀರುಗಡೆ:** ೨. ಸಲ್ಲುವಿಕೆ; ಸಂದಾಯವಾಗುವಿಕೆ: ಆತ್ಮಸಖಿಯೆ ನಿನಗೇನನಿತ್ತೊಡೆ ನಿನ್ನ ರಿಣ ತೀರುಗಡೆಯಪ್ಪುದೇ (ನವಮೋ. ೨೭-೫೫). **ತೀರ್ಕಡೆ:** ೩. ಮುಕ್ತಾಯ; ಅಂತ್ಯ; ಕೊನೆ: ತೀರ್ಕಡೆಯೋಳ್ ಬಳಿಕ್ಕಮಾ ತತ್ತ್ವಮಸೀತಿ ವಾಕ್ಯಪದಮಪ್ಪುದು (ಶತಕ. ೧-೪೯). [ತೀರು₁ (<ತೀರ್) + ಕಡೆ₃]

**ತೀರ್ಗಣಿಸು** 'ತೀರ್ಕಣಿಸು' ನೋ.

**ತೀರ್ಚಿಸು** (ಕ್ರಿ). ಮುಗಿಸು; ಕೊಲ್ಲಿಸು; ನಾಶಗೊಳಿಸು: ಷಡಾನನನಿಂ ತಾರಕಾಸುರನಂ ತೀರ್ಚಿಸಿ . . . ವರಮಂ ಕರುಣಿಸುತಿರ್ದಂ (ಗಿರಿಕ. ೩ ಕಥಾಗರ್ಭ). [ತೀರ್ಚು + - ಇಸು₃]

**ತೀರ್ಚು, ತೀರಿಚು, ತೀಟ್ಚು** (ಕ್ರಿ). ೧. ಮುಗಿಸು; ಪೂರೈಸು: ತೀರ್ಚಿ ಸಂಧ್ಯಾನಿಯಮಂಗಳನೆಯ್ದೆ ಭಸ್ಮಶಯ್ಯಾತಳದೊಳ್ ಬಿಸುಸುಯ್ದು ಮೆಯ್ಯ ನಿಕ್ಕಿದಳಾಗಳ್ (ಕಾದಂಪೂ. ೯೬೯); ಮಜ್ಜನ ಭೋಜನಾದಿ ದಿವಸವ್ಯಾಪಾರ ಮಂ ತೀರ್ಚಿ (ಮಲ್ಲಿಪು. ೪-೯೬೪). ೨. ಕೊಲ್ಲು; ಸಾಯಿಸು: ಕುರು ನಂದನರಂ ಕೊಂದೆಂ ಕುರುಶಾಬಾನುಜನ ನೆತ್ತರಂ ಕುಡಿದೆಂ ಪೂಣ್ದಿರಡಂ ತೀರ್ಚಿದೆನಿರ್ದಪುವೆರಡುಮವಂ ತೀರ್ಚಿ ತೀರ್ಚದಿರ್ಪೆನೆ ಪಗೆಯಂ (ಗದಾಯು. ೦-೬೯); ನೀಂ ಪಂಪೆಗೆ ಬಂದು ಮದ್ಗುರುವಿನುದ್ಯದ್ಯಾಗಮಂ ನುರ್ಗುವಾ ದನುಜಾಧೀಶನನೊಲ್ದು ತೀರ್ಚಿ ಮಖಮಂ ರಕ್ಷಿಪ್ಪುದು(ಉದ್ಭಟ. ೨-೨೭); ಶರಭತ್ವದಿಂದಮೆ ತೀರ್ಚಿ ತತ್ ಸಿಂಹಮಂ (ಭಾವಚಂ. ೩-೦೪); ಸೀಳುವೆಂ ಪುಲಿಯೊಡಲ ತೀರ್ಚುವೆಂ ಪಗೆಯಂ (ಕಾಲೂರ. ೮೪-೦೫೯). ೩. ನಾಶಮಾಡಿಸು; ಕೊಲ್ಲಿಸು: ಸ್ಕಂದನಿಂ ತಾರಕಾಸುರನಂ ತೀರ್ಚಿ ಸಮಸ್ತಲೋಕಜನತಾಸಂತುಷ್ಟಿಯಂ ಮಾಡಿ (ಗಿರಿಕ. ೧೦-೧೧೦). ೪. ಕೊನೆಗಾಣಿಸು; ಇಲ್ಲದಂತೆ ಮಾಡು: ಲೋಭತ್ವದ ಬೇರಂ ಕಿಳ್ತು ಮಾತ್ಸರ್ಯಮನುಡುಗಿ ಮದಾಲೇಪಮಂ ತೀರ್ಚಿ (ರಕ್ಷಾಶ. ೭೯). ೫. ನಿವಾರಿಸು; ಪರಿಹರಿಸು; ಕಳೆ: "ಪರಿಹರಿಪುದಕೆ ತೀರ್ಚೆನಿಕ್ಕುಂ" (ಕಶರ. ೪೭); ಉಳ್ಳಿಯಿಂ ಕಿನ್ನರಯ್ಯಗಾದ ಮುಳಿಸುಮಂ ಉಳ್ಳಿಯಿಂದವೆ ತೀರ್ಚಿ ಕಳೆವುದು ನಿರೋಧವಂ (ಬಸರ. ೦೦-೯೪); ಅಜ್ಞಾನತಿಮಿರವಂ ತೀರ್ಚಿ (ಭಾವಚಂ. ೩-೩೩), ಒಲಿದೆನಗೆ ಕ್ಷುತ್ಪಿಪಾಸೆಗಳ ತೀರ್ಚದರಿಲ್ಲ (ವೆಂಕಾರಾ. ೫-೦-೫೫). ೬. (ಖಾಯಿಲೆ, ಬೇನೆ, ಹುಣ್ಣು ಮೊದಲಾದುವು) ವಾಸಿಯಾಗು; ಗುಣವಾಗು: ಎಕ್ಕೆ ಸಾಸಿವೆ ಹರಿದ್ರಾ ದ್ವಂದ್ವಮಿವ ಪೇಟ್ದ ಮದ್ದುಗಳಂ ಪುತ್ರಿನ ಮಣ್ಣುಮಂ ಕದಡಿ ಕಾಸಿಟ್ಟೆಯ್ದೆ ಪೊಯ್ಯಾವ ಬಾವುಗಳುಂ ತೀರ್ಚುಗುಂ (ಲೋಕೋಪ. ೯-೨೪೦). ೭. (ಖಾಯಿಲೆ ಮೊದಲಾದುವನ್ನು) ವಾಸಿಮಾಡು; ಗುಣಪಡಿಸು: ಗುರುಭಕ್ತಿ ಭೇಷಜನಾಗಿ ರುಜೆಯಂ ತೀರ್ಚುವುದು (ಬಸಪು. ೩೯-೨೪). ೮. ಈಡೇರಿಸು; ಕೈಗೂಡಿಸು; ಪೂರ್ಣಗೊಳಿಸು: ನೀನಿದರ್ಕೇ ನುಮಂ ಬಗೆಯಲ್ವೇಡ ನಿನ್ನ ಬಗೆಯಂ ಬಗೆದಂತೆ ತೀರ್ಚುವೆಂ (ಪಂಪಭಾ. ೪-೬೯ ವ); ನಾಥ ನೀಂ ಕರುಣದಿನೊರ್ಮೆ ಕಣ್ದೆಱೆದು ತೀರ್ಚು ಮದೀಯ ಮನೋರಥಂಗಳಂ (ಕಾದಂಪೂ. ೯೨೪); ನಿಮ್ಮ ಸ್ವಾರ್ಥಮೆಲ್ಲಮಂ ತೀರ್ಚಿ ಕೊಳ್ವಿಂ (ಪಂಚತಂ. ೦೦೩-೬); ಎನ್ನ ಬಂಧುಗಳ್ಗಕ್ಕೆ ಗಂಡಂಗಕ್ಕೆ ಪೇಟ್ಕೊಡ ಮುವರೀ ಬಯಕೆಯಂ ತೀರ್ಚುವರಲ್ಲಂ (ಧರ್ಮಾಮ್ಮ. ೮-೦೨). ೨, ೮: ಪಗೆಗೊಂಡ ತುಂಬಿಯಂ ನಸುನಗುವವೊಲುಳ್ಳಲರ್ದು ಪೊಂಗಿ ಕಂಪಾದುದೆನಲ್ ಸೊಗಯಿಸಿ ಕಾಮನ ಪಗೆಯಂ ಬಗೆಯಂ ತೀರ್ಚಿದವು ಸುಗ್ಗಿಯೊಳ್ ಸಂಪಗೆಗಳ್ (ಮಲ್ಲಿಪು. ೫-೦೮). ೯. ಜರುಗಿಸು; ಮಾಡು; ನಡೆಸು: ಬಂದ ಮುರರಿರ್ವರವನತರೆಂದರ್ ಭೂಪೇಂದ್ರ ಬೆಸಸು ಬೆಸಸೆಮ್ಮಂ ನೀನೆಂದುದನೆ ಬಯಸಿ ತೀರ್ಚಲ್ ಬಂದೆವು ಜಾತೋಪಕಾರ ವಿಕ್ರಯಮತಿಯಿಂ (ಶಾಂತಿಪು. ೯-೭೦); ತನ್ನರಸಿಯು ಕೆಯ್ಯೊಳ್ ನಂಬಿಯಣ್ಣನಂ ಕೊಟ್ಟು . . . ಜಾತಕರ್ಮಮಂ ನೆನೆದು ತೀರ್ಚಿ [ಪಾಠಾಂ. ನಿಮಿರ್ಚಿಸಿ] (ನಂಬಿರ. ೨-೯೭); ಹರುಷಂಬೊತ್ತು ಲಿಂಗಸ್ಪರುಶನದ ನಿಯಮಂಗಳಂ ತೀರ್ಚಿ (ಬಸಪು. ೭೦-೩೩): ದೇವಂಗೆ ಸರ್ವಮಂಗಳಕಾರ್ಯಮಂ ತೀರ್ಚಿ (ಲಶಿಚಂ. ೩೭-೪೭). ೧೦. ವ್ಯಯಮಾಡು; ಕಳೆದುಬಿಡು; ನೀಗು: ತನ್ನ ಸಹಾಯನಪ್ಪ ವಿಪ್ರನ ಕೈಯೊಳ್ ವಸ್ತುವಂ ಕೊಟ್ಟು ಪೋಪುದುಮಾತ ನದೆಲ್ಲಮಂ ಸ್ತ್ರೀ ದ್ಯೂತ ವ್ಯಸನದಿಂ ತೀರ್ಚಿ (ಮಹಾನೇ. ೩-೦೪೭ವ). ೧೧. ದಾಟು; ಕ್ರಮಿಸು: ಆ ತ್ರಿದಿವದಾಯುರಬ್ಧಿಯನಾ ತ್ರಿದಶಂ ತೀರ್ಚಿ (ಶಬ್ದಾನು. ೧೨೭ ಪ್ರಯೋ). ೧೨. ನಿರ್ಮಿಸು; ರಚಿಸು: ಈಕ್ಷಣಾಂಶು ಮಂಡಳಿಸಿದುದಿಂದುರಶ್ಮಿಯೊಳಿ ತೀರ್ಚಿ ತೊಡರ್ಚಿದ ಕೀಟ ನೇಣವೋಲ್ (ಪಂರಾಮಾ. ೪-೦೦೩). ೧೩. ಕಳಚು; ಬೇರೆಮಾಡು: ತಿಲರಸವಾರಿಯ ಭೇದದಂತೆ ಮಣಿಯೊಳಗಿರ್ದ ಸೂತ್ರದಂತೆ ಅಂಗವ ತೀರ್ಚಿ ಪಾಯಿದು ನಿಂದ ಅಹಿಯ ಅಂಗದಂತೆ (ಸರ್ವವ. ೭೭-೩೭೦). **ತೀರಿಚು:** ೨. ತೀರದೀತನ

ಸಮರ ಗರುಡನ ತೀರಿಚಿದಡದಲ್ಲದೆ (ನಿಭಾಗ. ೧೦-೭೦-೪೦). △ ತೀಟ್ಚು : ೧೨. ವಿಶ್ವಕರ್ಮ್ಮರ್ಮ್ ಮುದದಿಮ್ ಮೇಣಿನ್ನಿದರ್ಮ್ ತೀಟ್ಚಿದನೊ (ಎಇ. XVIII, ೨೦೭-೧ ; ?). [ ತೀರ್ + – ಚು$_1$ ]

**ತೀರ್ಣ** (ಗುಂ). ೧. ದಾಟಿದ; ಹಾದುಹೋದ. ೨. ತೇಲಿದ. ೩. ಹರಡಿದ. ೪. ಮೀರಿದ ; ಅತಿಕ್ರಮಿಸಿದ. ೫. ಪೂರ್ಣಗೊಂಡ ; ಈಡೇರಿದ : ತನ್ನಾಸೆ ಏನೊಂದು ಮಿಲ್ಲದೆಯೆ ಸಲಿಸಿದೀ ಶುಭಮತಿ ವಿಭೀಷಣೌದಾರ್ಯದಿಂ ಕ್ಷಾತ್ರದಿಂ, ನಾನಿಂದು ತೀರ್ಣಪ್ರತಿಜ್ಞನೆಂ (ಶ್ರೀರಾಮಾ. ೮೪೩-೪೨೫). (ನಾ). ೬. ತೀರ್ಮಾನವಾದುದುದಂ; ನಿರ್ಣಯಿಸಿದುದಂ : ವಿಧಾನಮಂಡಲದಿಂದ ... ಈ ಸಂವಿಧಾನವು ಆರಂಭವಾಗುವುದಕ್ಕೆ ಮುಂಚಿತವಾಗಿ ತೀರ್ಣವಾಗಿದ್ದ ಅಥವಾ ರಚಿತವಾಗಿದ್ದ ... ವಿಧಿಗಳು (ಭಾಧಾನ. ೭). [ ಸಂ. ]

**ತೀರ್ಥ** (ನಾ). ೧. ಪವಿತ್ರವಾದ ಜಲ, – ನೀರಂ : ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ (ಕನಕ. ೦೨೬ ಪಲ್ಲವಿ) ; ನೀಂ ಗೈದ ಕುಕೃತಮಂ ತವಿಸುವೆನು, ಕೇಳ್, ವಿಪಿನಾಶ್ರಮದ ತಪೋಜೀವನದ ಸುಕೃತ ತೀರ್ಥದಲಿ (ಶ್ರೀರಾಮಾ. ೧೧೦-೨೭೭); ಶಂಖದಿಂದ ಬಿದ್ದರೆ ತೀರ್ಥ (ಗಾದೆ). ೨. ಅಭಿಷೇಕಮಾಡಿದ ಪವಿತ್ರವಾದ ನೀರು : ಹರಿವಾಣದಲ್ಲಿ ತೀರ್ಥ ಇದ್ದರೆ ಕೊಡಿ (ಪದ್ಮಸ. ೨೩೦); ಗಿಂಡಿಯಲ್ಲಿ ತೀರ್ಥವನ್ನು ತುಂಬಿಕೊಂಡು (ಒಡಕ. ೧೬); ತೀರ್ಥಕ್ಕಿಂತ ಶ್ರೇಷ್ಠವಿಲ್ಲ, ಪಾರ್ಥಗಿಂತ ದೊರೆಯಿಲ್ಲ (ಗಾದೆ). ೩. (ಕೊಳ, ನದಿ ಮೊದಲಾದ ಜಲಪ್ರದೇಶವಿರುವ) ಪವಿತ್ರಕ್ಷೇತ್ರ ; ಪುಣ್ಯಸ್ಥಳ: ಗ್ರಾಮ ನಗರ ಖೇಡ ಖರ್ವಡ ತೀರ್ಥ ಪುಣ್ಯಾರಣ್ಯಂಗಳಂ ತೊಟಿಲ್ದು ವಿಹಾರಿಸುತ್ತುಮುತ್ತರಮಧುರೆಗೆ ವಂದು (ಶಾಂತಿಪು. ೭-೫೯ವ); ಕೈಲಾಸವಿದ್ದಲ್ಲಿ ಅಷ್ಟಷಷ್ಟಿತೀರ್ಥಂಗಳಿಪ್ಪುವು (ಅವಜಂ. ೦೬೨-೭೩೫); ಸತ್ಯರಾನುಡಿ ತೀರ್ಥ (ಸರ್ವಜ್ಞ. ೪೦೦); ನಾನು ಶಕ್ರಾವತಾರತೀರ್ಥದಲ್ಲಿ ವಾಸಮಾಡತಕ್ಕ ಅಂಬಿಗನು (ಶಾಕುಂತ.೭೫-೯); ಕಾಶಿಯಲಿ ನೀನರಿವೆ ಯಾತ್ರೆಯೋ ತೀರ್ಥಕಿಂ ಶ್ರೇಷ್ಠವೆಂದು (ಪಾಂಚಜ. ೪೫-೯). ೪. ಶಾಸ್ತ್ರ ; ದರ್ಶನ. ೫. ಸ್ನಾನಘಟ್ಟ ; ನೀರಿಗೆ ಇಳಿಯುವ ಮೆಟ್ಟಿಲುದಾರಿ ; ಸೋಪಾನಮಾರ್ಗ. ೬. ದಾನವನ್ನು ತೆಗೆದುಕೊಳ್ಳಲು ಯೋಗ್ಯನಾದವನು ; ಸತ್ಪಾತ್ರ. ೭. ಒಳ್ಳೆಯ ವಂಶಕ್ಕೆ ಸೇರಿದವನು ; ಸದ್ವಂಶಸ್ಥ ; ಬ್ರಾಹ್ಮಣ. ೮. ರಾಜನ ಹದಿನೆಂಟು ಜನ ಮಂತ್ರಿಪ್ರಧಾನರು. 'ಅಷ್ಟಾದಶತೀರ್ಥ' ಪರಾ. ೯. ಮುನಿ ; ಯತಿ. ೧೦. ಪಂಡಿತ ; ವಿದ್ವಾಂಸ. ೧೧. ಜಿನ ; ಅರ್ಹಂತ. ೧೨. ಪತಿವ್ರತೆಯಾದ ಹೆಂಗಸು. ೧೩. ಧರ್ಮಗುರು ; ಆಚಾರ್ಯ. ೧೪. ಸ್ತ್ರೀಯ ಗುಹ್ಯಾಂಗ ; ಭಗ ; ಯೋನಿ. ೧೫. ಧ್ವಜ ; ಪತಾಕೆ. ೧೬. ನದಿ. ೧೭. ಬಾವಿ ; ಕೂಪ. ೧೮. ಕೆರೆ. "ಕಾಂತೆಯರ ಯೋನಿಯೊಳು ನದಿ ಬಾವಿ ಕೆಱೆಗಳೊಳು ಮಂತ್ರಿ ಮೊದಲಾದ ಪದಿನೆಣ್ಬರ್ ಪ್ರಧಾನರೊಳು ಸಂತ ಪಡುದರ್ಶನಂಗಳೊಳು ತೀರ್ಥಕ್ಷೇತ್ರದೊಳು ತೀರ್ಥಾರ್ಥವಕ್ಕುಂ" (ಮಂಗರಾ. ೦೫೪-೬೮) ; "ಜಿನ ವಿದ್ವಾಂಸ ಪತಿವ್ರತಾಪಗೆಗೆ ಪಶಾಕಾವಮ್ನಾಯ ಸತ್ಪಾತ್ರ ದರ್ಶನ ಸೋಪಾನ ತಟಾಕ ಮಂತ್ರಿ ಮೊದಲಾದಷ್ಟಾದಶಾಮಾತ್ಯರು ಮುನಿ ಕೂಪಂ ಭಗ ಪುಣ್ಯತೀರ್ಥಮಿನಿತುಂ ತೀರ್ಥಾಭಿಧಾನಂ"(ನಾನಾರ .೪೮). ೧೯. ಯತಿಗಳ ಹೆಸರಿನೊಡನೆ ಸೇರಿಸುವ ಒಂದು ಪೂಜ್ಯವಾಚಕ ಪದ: ಈಗಿನ ಶೃಂಗೇರಿ ಸ್ವಾಮಿಗಳು ಅಭಿನವ ವಿದ್ಯಾತೀರ್ಥರು (ರೂಢಿ). ೨೦. ನೀರು; ಜಲ. ೨೧. ಅಗ್ನಿ ; ಬೆಂಕಿ. ೨೨. [ಜೈನ] ಜಿನನ ಚರಿತ್ರೆ : ತೀರ್ಥವೆಂಬುದು ಜಿನಪತಿಚರಿತಂ (ಚಾವುಂಪು.೬).

**ತೀರ್ಥಪ್ರಸಾದ** = ದೇವರಿಗೆ ಅಭಿಷೇಕಮಾಡಿದ ನೀರಂ ಮತ್ತು ಅರ್ಪಿಸಿದ ನೈವೇದ್ಯ: ಮಠದಲ್ಲಿ ತೀರ್ಥಪ್ರಸಾದವಾಗಿ ಊಟದ ಸಿದ್ಧತೆ ನಡೆದಿದೆ (ಹೊಸಕ್ಷ. ೨೦೩). [ಸಂ.]

**ತೀರ್ಥಂಕರ** (ನಾ). [ಜೈನ] ಅರ್ಹಂತ ; ಜಿನ: ಜಿನನಿಗೆ ... ಜಿನೇಶ್ವರ, ತೀರ್ಥಂಕರ ... ವೀತರಾಗ, ಪರಮಾತ್ಮಾ ಮೊದಲಾದ ಹೆಸರುಗಳುಂಟು (ಭಾತತ್ತ್ವ. ೨೨೭) ; ಜೈನರೂ ತಮ್ಮ ಬಸದಿಗಳಲ್ಲಿ ತೀರ್ಥಂಕರರನ್ನು ಪೂಜಿಸುವಂತೆ ... ರಚಿಸಿಕೊಂಡರು (ಸಾಹಿಸ. ೧೩೪) ; ತೀರ್ಥಂಕರರೆಂದರೆ ಪ್ರವಚನಶಾಸ್ತ್ರಪ್ರವರ್ತಕರು (ಹಿಂದಶಾ.೭೨). [ಸಂ.]

**ತೀರ್ಥಕ** (ಗು). ೧. ಪವಿತ್ರವಾದ. (ನಾ). ೨. ತಪಸ್ವಿ. ೩. ಧರ್ಮಪ್ರವರ್ತಕ : ಪ್ರತಿ ತೀರ್ಥಕರರ ಅನುಯಾಯಿಗಳೂ ತೀರ್ಥಕರೆನಿಸಿಕೊಳ್ಳುತ್ತಾರೆ (ತೀರ್ಥಕ. ೨೦); ತೀರ್ಥದಲ್ಲಿ ಹುಟ್ಟಿದವನು ತೀರ್ಥಕ (ತೀರ್ಥಕ. ೮೦). [ಸಂ.]

**ತೀರ್ಥಕರ** (ನಾ). = ತೀರ್ಥಂಕರ : ತೀರ್ಥಕರ ಪ್ರತಿಕೃತಿಗಳಂ ಪಂಚರತ್ನಮಯಂಗಳಂ ಮಾಡಿಸಿ (ಆದಿಪು. ೦೬-೧ವ) ; ಅವಿವೆನ್ನದೆ ರೂಢಿಯ ತಾಣಮುಮೆಲ್ಲಮಂ ತೀರ್ಥಕರರ ಕೇವಳಿಗಳ ಮುನ್ನ ವಿಹಾರಿಸಿದೆಡೆಗಳಿವೆಲ್ಲಮೆಂದು ನಂಬುವುದು ಬೇಱೆ ಪೆಸರಿಟ್ಟಡಮೇಂ (ಸಮುಪ. ೨-೭೫) ; ಅತ್ಯಂತ ಭಕ್ತಿಯಿಂ ಪದಸತ್ಕಂತದೊಳೆಯ್ದೆ ತಾಳ್ದಿದಂ ತೀರ್ಥಕರಸ್ತುತ್ಯೋದ್ಯಮಮಂ (ಚಂದ್ರಪು. ೭-೬); ನಿರವದ್ಯಾಚರಣಕ್ಕೆ ತೀರ್ಥಕರನಿಪ್ಪಂತಿಪ್ಪನಂ ಬೊಪ್ಪನಂ ಧರೆ ಬಣ್ಣಿಪ್ಪುದು (ಎಕ. VIII, ಸೊರಬ. ೦೪೦-೩೮ ; 1198) ; ತೀರ್ಥವನ್ನು ಮಾಡಿದವನು ತೀರ್ಥಕರ (ತೀರ್ಥಕ. ೮೦). [ಸಂ.]

**ತೀರ್ಥಕರಚಕ್ರ** (ನಾ). [ಜೈನ] ಜಿನಾರ್ಚನೆಯ ಮಂತ್ರ : ಈ ಮಂತ್ರದಿಂ ಜಿನಾರ್ಚನಮಂ ಮಾಟ್ಪುದು ತೀರ್ಥಕರಚಕ್ರಮೆಂಬುದಿದಱ ಪೆಸರು (ಪ್ರತಿಷ್ಠಾ. ೧೦-೪೫). [ ತೀರ್ಥಕರ + ಚಕ್ರ$_1$ ]

**ತೀರ್ಥಕರತ್ವ** (ನಾ). [ಜೈನ] ತೀರ್ಥಂಕರ ಪದವಿ : ಭಾಸುರದೇವಕೋಟಿವಿಭುವಪ್ಪ ಮಹರ್ಧಿಕನಪ್ಪ ವಾಸವಂಗಾಸನಕಂಪಮಂ ಪಡೆದು ತೀರ್ಥಕರತ್ವಮನಿತ್ತಂ (ಆದಿಪು. ೧೬-೮೦) ; ಸಕಲೋರ್ವೀತಲ ಚಕ್ರವರ್ತಿಪದಮಂ ಕೈಕೊಂಡದಂ ಬಿಟ್ಟು ತೀರ್ಥಕರತ್ವಂಬಡೆದಿರ್ಪುದುಂ (ಪಂರಾಮಾ. ೧೬-೭೪). [ ಸಂ. ]

**ತೀರ್ಥಕ್ಷೇತ್ರ** (ನಾ.) ಪುಣ್ಯಕ್ಷೇತ್ರ ; ಪವಿತ್ರಸ್ಥಳ : ಎಮಗೆ ತೀರ್ಥಕ್ಷೇತ್ರಯಾತ್ರಾವ್ಯವಸಿತಕೆ ಮನವಾದುದು (ಕುಮ್ಯಾಗ. ೬-೯); ತನ್ನ ದಾರಿಯುದ್ದಕ್ಕೂ ಅನೇಕ ಜನಜಂತುಗಳನ್ನು ತೃಪ್ತಿಪಡಿಸಿ . . . ತೀರ್ಥಕ್ಷೇತ್ರಗಳನ್ನು ಸೃಷ್ಟಿಸಿ (ಶೂನ್ಯಕು. ೧೦೫). [ ತೀರ್ಥ + ಕ್ಷೇತ್ರ ]

**ತೀರ್ಥಗೊಳ** (ನಾ.) ಪವಿತ್ರವಾದ ಕೊಳ ; ತೀರ್ಥ ಸರೋವರ : ಕಾಪಾಲಿ ತ್ರಿಣಯನ ತೀರ್ಥಗೊಳದೆ ಪಂಚರೂಪಿನಾವಲುಗಳೊಪ್ಪುವುವು (ಕಂನವಿ. ೨-೧೦೯). [ ತೀರ್ಥ + ಕೊಳ$_2$ ]

**ತೀರ್ಥಜಲ, ತೀರ್ಥಜಳ** (ನಾ). ೧. ಪುಣ್ಯಕ್ಷೇತ್ರದ ಜಲ,—ನೀರು ; ಪವಿತ್ರವಾದ ಜಲ. ೨. ಪುಣ್ಯಪುರುಷರ ಪಾದಗಳನ್ನು ತೊಳೆದ ನೀರು ; ಮಹಾತ್ಮರ ಪಾದೋದಕ : ಸತಿಯುಂ ಪತಿಯುಂ ಯತಿಪದಶತದಳಮಂ ತೊಳೆದು ತೀರ್ಥಜಲಮಂ ತಳೆದುಂ (ವೃಷವಿ. ೧೪-೫೩). ತೀರ್ಥಜಳ : ೧. ತೀರ್ಥಜಳಂಗಳಂ ತರಿಸಿ ನಿರ್ಮಳಭರ್ಮಘಟಂಗಳಿಂದಮಾ ತೀರ್ಥಕರಂಗೆ ಸಂಗಳಿಸಿ ಮಂಗಳಮಜ್ಜನಮಂ (ವರ್ಧಪು. ೦೪-೧೦೧); ತೀರ್ಥಜಳಂ [ಪಾಠಾಂ. ನಂ] ಗಳಿನೆ(ಸ)ಗೆ ಚತುರ್ಥಸ್ನಾನಮಂ (ಪಾರ್ಶ್ವಪು. ೧೩-೦೩೨). ೨. ಭದ್ರಾಸನದೊಳ್ ಭರದಿಂ ಕುಳ್ಳಿರಿಸುತ್ತುಂ ಚರಣಂದೊಳೆಯುತ್ತೆ ತೀರ್ಥಜಳಮಂ ತಳೆದರ್ (ಗಿರಿಕ. ೪-೩೯). [ತೀರ್ಥ + ಜಲ$_2$ ]

**ತೀರ್ಥಜಳ** 'ತೀರ್ಥಜಲ' ನೋ.

**ತೀರ್ಥನಾಥ** (ನಾ). = ತೀರ್ಥಂಕರ : ತೀರ್ಥನಾಥಸಮುದಾಯದ ಶಾಸನದೇವಿಯರ್ಕಳಿರ್ಪತ್ತುನಾಲ್ವರ್ (ಅಜಿಪು. ೦-೬) : ಜವ್ವನದ ಜಸೆಗದೇಂ ಬಂದನೋ ಪಾರಿಜಾತಾಂಕುರಮಿಂದ್ರೋದ್ಯಾನದೊಳ್ ಬಳ್ವಳಮೆ ಬಳೆದು ಕೈವಂದವೊಲ್ ತೀರ್ಥನಾಥಂ (ಅನಂಪು. ೬-೨೦). [ ತೀರ್ಥ + ನಾಥ ]

**ತೀರ್ಥಪಾದ** (ನಾ). ೧. ಪೂಜ್ಯವಾದ ಪಾದ ; ಪವಿತ್ರವಾದ ಪಾದ : ಭೃಗುವೈತಂದು ಲಕ್ಷ್ಮೀಧರನ ವಕ್ಷಸ್ಥಳವನೊದೆಯಲು . . . ಮೆಟ್ಟಿದನು ತೀರ್ಥಪಾದವ ಧರೆಯೊಳಗೆ ಬುಧರಿಂದಧಿಕವಹ ತೀರ್ಥವಿಲ್ಲೆಂದ (ಕುಮ್ಯಾ.ಉ. ೪-೬೨). ೨. ಪವಿತ್ರವಾದ ಪಾದಗಳನ್ನುಳ್ಳವನು ; ಪೂಜ್ಯನಾದವನು. ೩. ಕಾಲಿನಲ್ಲಿ ಗಂಗೆಯನ್ನು ಹೊಂದಿರುವವನು ; ಹರಿ ; ವಿಷ್ಣು. [ ತೀರ್ಥ + ಪಾದ ]

**ತೀರ್ಥಪ್ರವರ್ತಕ** (ನಾ). = ತೀರ್ಥಂಕರ : ಈ ಭವಕ್ಕೆಂಟನೆಯ ಭವದೊಳ್ ಭರತದೊಳ್ ನೀನಾದಿತೀರ್ಥಪ್ರವರ್ತಕನಾದಂದೀ ಶ್ರೀಮತಿ . . . ಶ್ರೇಯಾಂಸನಕ್ಕುಂ (ಆದಿಪು. ೫-೧೩ ವ). [ ತೀರ್ಥ + ಪ್ರವರ್ತಕ ]

**ತೀರ್ಥಮಸ್ತಕ** (ನಾ). ತಲೆಯಲ್ಲಿ ಗಂಗೆಯನ್ನುಳ್ಳವನು ; ಶಿವ ; ಈಶ್ವರ : ಶಬರವೇಷದೊಳೊಂದು ಹಂದಿಯಂ ತೀರ್ಥಮಸ್ತಕನೆಚ್ಚ (ಗುರುಚಾ. ೪-೨೫). [ ತೀರ್ಥ + ಮಸ್ತಕ ]

**ತೀರ್ಥಮೃತ್ತಿಕೆ** (ನಾ). ಪವಿತ್ರವಾದ ಮಣ್ಣು : ಅಷ್ಟರಲ್ಲಿ ನಾನೂ ಕೂಡ ಶಕುಂತಳೆಗೋಸ್ಕರ ಗೋರೋಚನ, ತೀರ್ಥಮೃತ್ತಿಕೆ, ದೂರ್ವಾಕಿಸಲಯಗಳ ಮಂಗಳಾನುಲೇಪಗಳನ್ನು ಮಾಡುವೆನು (ಶಾಕುಂತ. ೪೯). [ ತೀರ್ಥ + ಮೃತ್ತಿಕೆ ]

**ತೀರ್ಥಯಾತ್ರೆ** (ನಾ). ಪುಣ್ಯಕ್ಷೇತ್ರಗಳಿಗೆ ಹೋಗಿ ಬರುವಿಕೆ ; ಪವಿತ್ರ ಸ್ಥಳಗಳ ದರ್ಶನಕ್ಕಾಗಿ ಮಾಡುವ ಯಾತ್ರೆ, – ಪ್ರಯಾಣ : ಸಂಪ್ರೀತಿಯಿಂದಿವರಾದರರಸಿಯರ್ನೀನೆಂದು ತೀರ್ಥಯಾತ್ರೆಗೆ ಬಂದಿರೆ (ಜೈಮಿಭಾ. ೧೭-೪೯); ಭ್ರಾಂತಿವಿಡಿದೇ ತೀರ್ಥಯಾತ್ರೆಗಳಂತವಿಲ್ಲದೆ ತಿರುತಿರುಗಿ ಬೇಸತ್ತು (ಗಗತಾ.೯-೪೪) ; ಪರಮಾತ್ಮನ ಸಾಕ್ಷಾತ್ಕಾರಪ್ರಯತ್ನಕ್ಕಿಂತ ಮಿಗಿಲಾದ ತೀರ್ಥಯಾತ್ರೆಯಿಲ್ಲ (ಭಾರದ.೨೧೮) ; ಒಬ್ಬ ಸನ್ಯಾಸಿಯು ತೀರ್ಥಯಾತ್ರೆಗಾಗಿ ದೇಶಾಟನ ಮಾಡುತ್ತಿರುವಾಗ (ಮುಂಬಯಿ. ೪-೧೫೦). [ ತೀರ್ಥ + ಯಾತ್ರೆ ]

**ತೀರ್ಥಯಾನ** (ನಾ). = ತೀರ್ಥಯಾತ್ರೆ : ಪ್ರವಚನಪರಿಪಠನಕ್ಷಮತೆ ವಾಣಿಯಂ ತೀರ್ಥಯಾನದಕ್ಷತೆ ಪದಮಂ ಕಿವಿಯಂ ಜಿನವರಚರಿತ ಶ್ರವಣಪಟುತೆ ಪಿಂಗದನ್ನಮಾರ್ಜಿಪೆಂ (ಚಂದ್ರಪು. ೪-೧೭). [ ತೀರ್ಥ+ಯಾನ ]

**ತೀರ್ಥರೂಪ** (ನಾ). ೧. ತಂದೆ : ನಮ್ಮ ತೀರ್ಥರೂಪರು ಮನೆಯಲ್ಲಿ ಇಲ್ಲ (ರೂಢಿ). ೨. ಪೂಜ್ಯವ್ಯಕ್ತಿ ; ಸತ್ಪಾತ್ರ : ತೀರ್ಥರೂಪ, ತೀರ್ಥಸ್ವರೂಪ... ಮೊದಲಾದ ಶಬ್ದಗಳನ್ನು... ಪತ್ರಸ್ವೀಕರಿಸತಕ್ಕವರ ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯ ಉಂಟು (ಮುಂಬಯಿ. ೪-೮೪). [ ತೀರ್ಥ + ರೂಪ ]

**ತೀರ್ಥರೂಪು** (ನಾ). = ತೀರ್ಥರೂಪ ೧ : ನಾನಾಗಲೀ, ನಮ್ಮ ತೀರ್ಥರೂಪುಗಳಾಗಲೀ, ಅಷ್ಟೇಕೆ ನಮ್ಮ ವಂಶದಲ್ಲಿ ನನಗೆ ತಿಳಿದ ಮಟ್ಟಿಗೆ ಯಾರಿಗೂ ಇಂತಹ ಕೃಪಣಬುದ್ಧಿ ಇರಲಿಲ್ಲ (ಹೇಮುಕೂ. ೧೩). [ <ತೀರ್ಥರೂಪ ]

**ತೀರ್ಥವಿಧಿ** (ನಾ). ಕ್ಷೇತ್ರಸ್ಥಳಗಳಲ್ಲಿ ಮಾಡಬೇಕಾದ ಧಾರ್ಮಿಕ ಕರ್ಮ : ಅವರ ತಾತ ರಾಮೇಶ್ವರಕ್ಕೆ ಹೋಗಿ ತೀರ್ಥವಿಧಿಗಳನ್ನು ಪೂರೈಸಿ ಬಂದರು (ರೂಢಿ). [ ತೀರ್ಥ + ವಿಧಿ ]

**ತೀರ್ಥಶ್ರಾದ್ಧ** (ನಾ.) ಪುಣ್ಯಕ್ಷೇತ್ರಗಳಲ್ಲಿ ಮಾಡಲಾಗುವ ಒಂದು ಬಗೆಯ ಶ್ರಾದ್ಧ, – ತಿಥಿ : ಕಲಿಮಿತ್ರನು ಮಾಡತಕ್ಕ ತೀರ್ಥಶ್ರಾದ್ಧ ಮೊದಲಾದ ಸತ್ಕರ್ಮಕ್ಕೆ ಭೋಕ್ತೃವಾದನು (ಅರ್ಕಮಾ.೧೪೬). [ ತೀರ್ಥ + ಶ್ರಾದ್ಧ]

**ತೀರ್ಥಸ್ನಾನ** (ನಾ). ಪವಿತ್ರಜಲದಲ್ಲಿ ಮೈತೊಳೆಯುವುದು : ತೀರ್ಥಸ್ನಾನಾನಂತರ ದೇವರ ಸೇವೆ ಮಾಡುವುದು ಪುಣ್ಯಕರ (ರೂಢಿ). [ ತೀರ್ಥ + ಸ್ನಾನ ]

**ತೀರ್ಥಸ್ವರೂಪ** (ನಾ). =ತೀರ್ಥರೂಪ ೨ : ಅರ್ಥವನ್ನು ತೀರ್ಥಸ್ವರೂಪರಾದ ಉದಾತ್ತಜೀವಿಗಳಿಗೆ ವಿನಿಯೋಗಿಸಬೇಕು ಎಂದು ಕೌಟಿಲ್ಯನು ವಿಧಿಸಿರುವನು (ಭಾರದ ೩೫೮). [ ತೀರ್ಥ + ಸ್ವರೂಪ]

**ತೀರ್ಥಾಂಗಿ** (ನಾ). ಪವಿತ್ರವಾದ ದೇಹವುಳ್ಳವನು ; ಪುನೀತ : ಪಾವನ ಪ್ರಸಾದ ತೀರ್ಥಾಂಗಿಯುಪ್ಪಮಳಸದ್ಭಕ್ತನಂ ಬಿತ್ತರಿಸಿದಂ (ವೀಶೈಪು. ೧-೨ ಸೂಚನೆ). [ಸಂ. ತೀರ್ಥಾಂಗಿನ್]

**ತೀರ್ಥಾಂಬು** (ನಾ). =ತೀರ್ಥಜಲ ೧: ಪದೆದರ್ಹದ್ಬಿಂಬಮಂ ಪೂಜಿಸಿದನಮಲತೀರ್ಥಾಂಬುವಿಂ (ಚಂದ್ರಪು. ೮-೧೦೬). [ ತೀರ್ಥ + ಅಂಬು₃ ]

**ತೀರ್ಥಾಖ್ಯಾನ** (ನಾ). ಧರ್ಮವನ್ನು ಕುರಿತ ವಿವರಣೆ; ತತ್ವಜಿಜ್ಞಾಸೆ : ತೀರ್ಥಾಖ್ಯಾನವೆಂಬುದು ದುರಿತವಿನಾಶಕಾಂಕ್ಷಿಗಳ್ ಸಂಸಾರಸಮುದ್ರಮನೀಸಲೆಂದು ಜಿನಪತಿಮುಖಕಮಲವಿನಿರ್ಗತಧರ್ಮಸಂತತಿ ಪ್ರಕಟೀಕರಣಂಗೆಯ್ವುದು (ಚಾವುಂಪು. ೧೨). [ ತೀರ್ಥ + ಆಖ್ಯಾನ ]

**ತೀರ್ಥಾಧಿನಾಥ** (ನಾ). = ತೀರ್ಥಂಕರ : ಯೌವನಪ್ರಾಪ್ತನಾಗಿ ಕುಮಾರಕಾಲದೊಳಿಪ್ಪತಯ್ಸಾಸಿರವರ್ಷಂ ನೆಱೆಯೆ ಪದಿನಾಱನೆಯ ತೀರ್ಥಾಧಿನಾಥನಪ್ಪುರ್ವರಾಸ್ಯತಿಲಕಂ (ಶಾಂತಿಪು. ೧೧-೯೪ವ). [ ತೀರ್ಥ + ಅಧಿನಾಥ ]

**ತೀರ್ಥಾಭಿರತಿ** (ನಾ). ತೀರ್ಥಯಾತ್ರೆಯಲ್ಲಿ ಆಸಕ್ತಿ, – ಪ್ರೀತಿ : ಸೌಮನಸ್ಯನುರಾಗಹರದ ಮಹಾಮಹಿಮ ತೀರ್ಥಾಭಿರತಿಯಲಿ ಗೋಮಹಿಷ ಧನವಸ್ತ್ರದಿಂ ದ್ವಿಜವರರನರ್ಚಿಸಿದ (ಕುಮ್ಯಾ.ಗ. ೬-೧೦). [ ತೀರ್ಥ + ಅಭಿರತಿ ]

**ತೀರ್ಥೇಶ** (ನಾ). = ತೀರ್ಥಂಕರ : ಪಗೆವಂಗಂ ಕೆಳೆಯಂಗಮಾದ್ರ್ರಮತಿಯಂ ತ್ವನ್ಮೂರ್ತಿ ತೀರ್ಥೇಶ ಮಾಡುಗುಮಾಳೋಚಿಸೆ ನಿನ್ನ ತತ್ತ್ವಮ[ವಿ]ಸಂವಾದಂ ದುರಾಪಂ ಗುಣಾಬ್ಧಿಗಭೀರಂ (ಶಾಂತಿಪು. ೮-೧೫೮). [ ತೀರ್ಥ + ಈಶ ]

**ತೀರ್ಥೇಶ್ವರ** (ನಾ). = ತೀರ್ಥಂಕರ : ಬಂದಂ ಲೋಕನಾಥಂ ಸ್ವಯಂಪ್ರಭತೀರ್ಥೇಶ್ವರನಾ ನೃಪೇಶ್ವರನ ರಾಜ್ಯಂ ಪೂಜ್ಯಮಪ್ಪನ್ನೆಗಂ (ಶಾಂತಿಪು.೦-೮೦); ಬಟ್ಟಿಕ್ಕಂತೆ ಬೀಟ್ಟೊಂಡು ತೀರ್ಥೇಶ್ವರನಂ ಪೋದಂ ಶಚೀಲೋಚನಚಪಳಚಕೋರೀಶರಶ್ಚಂದ್ರನಿಂದ್ರಂ (ಪುಷ್ಪಪು. ೧೩-೧೧೫). [ತೀರ್ಥ + ಈಶ್ವರ]

**ತೀರ್ಥೋದಕ** (ನಾ). = ತೀರ್ಥಜಲ ೧ : ಅಗಣ್ಯಪುಣ್ಯತೀರ್ಥೋದಕಂಗಳಂ ಮಿಂದು (ಪಂಪಭಾ. ೧೦-೪೬ವ) ; ಪುಣ್ಯವತಿ ವಸಂತಸಮಯದ ಸಹಕಾರಲತೆಯಂತೆ ಪುಷ ವತಿಯಾಗಿ ತೀರ್ಥೋದಕಂಗಳಿಂ ಪವಿತ್ರೀಕೃತಗಾತ್ರೆಯಾಗಿ (ಸುಕುಮಾ. ೯-೧೦೩ವ). [ ತೀರ್ಥ + ಉದಕ₂ ]

**ತೀರ್ಥೋಪವಾಸ** (ನಾ). ಪುಣ್ಯಕ್ಷೇತ್ರದಲ್ಲಿ ಮಾಡುವ ಉಪವಾಸ ; ಕ್ಷೇತ್ರೋಪವಾಸ : ಅಂತಲ್ಲಿಯ ಚೈತ್ಯಾಲಯಂಗಳಂ ವಂದಿಸಿ ತದ್ವಾಸರದೊಳ್ ತೀರ್ಥೋಪವಾಸಂಗೆಯ್ದು (ಸುಕುಮಾ. ೪-೨೧ವ). [ ತೀರ್ಥ + ಉಪವಾಸ ]

**ತೀರ್ದ** ‘ ತೀರ್ ’ ಪರಾ.

**ತೀರ್ದು** ‘ ತೀರ್ ’ ಪರಾ.

**ತೀರ್ಪಡಿ, ತೀರುಪಡಿ** (ನಾ). ೧. ಬಿಡುವು; ಅವಕಾಶ. ೨. ಇತ್ಯರ್ಥ; ನಿರ್ಣಯ : (+). ೩. ಮುಗಿದು ಹೋಗಿರುವಿಕೆ : ಮನೆಯಲ್ಲಿ ಅಕ್ಕಿ ತೀರ್ಪಡಿಯಾಗಿದೆ (ರೂಢಿ). **ತೀರುಪಡಿ** : (+). [ ತೀರ್ + – ಪಡಿ₃ ]

**ತೀರ್ಪಱು** (ಕ್ರಿ). ಪೂರ್ಣವಾಗಿ ಈಡೇರು : ಅವರಿವರೆನ್ನದೆ ಮೊಗನೋಡದೆ ಕೊಟ್ಟು ಎರೆವಣ್ಣೆ [ಟ್ಟೆ] ಯ ತೀರ್ಪಱಿದುಂ ವಿತರಣಸುರಗಿರಿ ಮನೆಮನೆದಪ್ಪದೆ ಬಂದಿರೆ (ಕುಮುಂರಾ. ೪-೫೭). [ ತೀರ್₁ + ಪಱು₁ ]

**ತೀರ್ಪು** (ನಾ). ತೀರ್ಮಾನ ; ನಿರ್ಣಯ ; ಅಂದು ನ್ಯಾಯಾಧೀಶರು ತೀರ್ಪು ಹೇಳುವವರಿದ್ದರು (ಸ್ಕೂಲಮಿ. ೨೨೨) ; ವಿಚಾರಣಾಸಮಿತಿಯವರು ಕೊಟ್ಟಿರುವ ತೀರ್ಪನ್ನು ಜಾರಿಗೆ ತರಕೂಡದೆಂದು ಈಗಲೇ ಅವರಿಗೆ ಬರೆದು ಕಳುಹಿಸುತ್ತೇನೆ (ಪ್ರತಾಪ. ೬೪).

**ತೀರ್ಪುಕೊಡು**=ತೀರ್ಮಾನ ಮಾಡು ; ನಿರ್ಣಯ ಕೊಡು ; ತೀರ್ಮಾನಿಸು : ಅನ್ಯಾಯವಾದ ತೀರ್ಪುಕೊಟ್ಟುದರ ಮೂಲಕವಾಗಿ ಗುರುಗಳು ನನಗೆ ಯೋಗ್ಯವಾದ ಶಿಕ್ಷೆಯನ್ನು ಕೊಟ್ಟರು (ಮುಂಬಯಿ. ೪-೮೮); ಕೂಲಂಕಷವಾಗಿ ವಿಚಾರಿಸಿ ನ್ಯಾಯಬದ್ಧವಾದ ತೀರ್ಪುಕೊಡುತ್ತೇವೆ (ಪ್ರತಾಪ. ೬೪). [ ತೀರ್ + -ಪು$_1$./ತುಳು. ತೀರ್ಪು ]

**ತೀರ್ಪುಗಾರ** (ನಾ). ತೀರ್ಪನ್ನು ಕೊಡುವವನು ; "ನ್ಯಾಯಾಧೀಶ ; ನ್ಯಾಯಾಧಿಪತಿ ; ತೀರ್ಪುಗಾರ" (Judge ಪತ್ರಿನಿ. ೪೮).
[ ತೀರ್ಪು + - ಗಾರ (< - ಕಾಱ) ]

**ತೀರ್ಮಾನ** (ನಾ). = ತೀರ್ಪು : " ತೀರ್ಪು, ತೀರ್ಮಾನ, ಗೊತ್ತು, ಗೊತ್ತುವಳಿ, ಠರಾವು " (ಕಂನುಡು. ೮೫) ; ಇಬ್ಬರೂ ಕೊನೇ ತೀರ್ಮಾನ ಹೇಳಿಬಿಟ್ಟರು (ದಾನಚಿಂ. ೮೫) ; ಈಚೆಗೆ ನಡೆದ ಸಂಶೋಧನೆಯ ಫಲವಾಗಿ ಕೈಗೊಂಡ ತೀರ್ಮಾನ (ದ್ರಾವಿವಿ. ೧೦೧) ; ಪಂಚಾಯಿತರ ತೀರ್ಮಾನಗಳು ನಿಷ್ಪಕ್ಷಪಾತವಾಗಿರುತ್ತಿದ್ದವು (ಕಳಹು. ೯೪).
[ ದೇ. ॥ ತಮಿ. ತೀರ್ಮಾನ ; ಮಲ. ತುಳು. ತೀರುಮಾನ ]

**ತೀರ್ಮಾನಿಸು** (ಕ್ರಿ). ನಿರ್ಧರಿಸು ; ಒಂದು ನಿರ್ಣಯಕ್ಕೆ ಬರು ; ಗೊತ್ತುಮಾಡಿಕೊಳ್ಳು : ಅದನ್ನು ದಿನವೂ ಮಾಡಿಯೇ ತೀರಬೇಕು ಎಂದು ತೀರ್ಮಾನಿಸಿದೆ (ಶಾಲಿಮ. ೬೪) ; ಧರ್ಮಗುಂಬಕ್ಕೆ ದಿನವೂ ಕಳುಹಿಸಿ ವಿದ್ಯಾಭ್ಯಾಸ ಮಾಡಿಸಬೇಕೆಂದು ತೀರ್ಮಾನಿಸಿದ್ದೇನೆ (ಜಂಗಾಳ್ಮ. ೪) ; ನಾನೇ ನಮ್ಮ ಗ್ರಾಮಕ್ಕೆ ಹೋಗಿ ಜನರನ್ನು ಕರೆದುಕೊಂಡು ಬರುವುದು ಎಂದು ತೀರ್ಮಾನಿಸಿದೆ (ಪ್ರತಾಪ. ೪೯) ; ಇವಳಿಗೆ ತಲೆ ಕೆಟ್ಟಿದೆ ಎಂದೂ ಅವರು ತೀರ್ಮಾನಿಸಿದರು (ಹಳ್ಳಿಹಾ. ೦೧೯). [ ತೀರ್ಮಾನ + - ಇಸು$_3$ ]

**ತೀರ್ವೆ, ತೀರುವೆ** (ನಾ). ೧. ಮುಟ್ಟಿಸುವಿಕೆ ; ಸಲ್ಲಿಸುವಿಕೆ. ಸಾಲವನ್ನು ತೀರ್ವೆಮಾಡು (ರೂಢಿ). ೨. ನಿರ್ಣಯ; ತೀರ್ಮಾನ : ಭೂಕಂದಾಯದ ಸಲುವಾಗಿ ತೀರ್ವೆ ಮಾಡುವಲ್ಲಿ (ಭಾಧಾನ. ೨೬೮). ೩. ತೆರಿಗೆ ; ಸುಂಕ ; ಕಂದಾಯ : ಭಾವೀಕೇರಿಯಲ್ಲಿ ಮಾಮಲೇದಾರರು ಅಡ್ನಾಡಿ ಜನರಿಗೆ ತೀರ್ವೆ ಕೊಡಲು ನಾನಾ ರೀತಿಯಿಂದ ಬೋಧಿಸಿದರು (ಕರವೀ. ೬೯) ; ಆದರೆ ಶ್ಯಾನಭಾಗರು ಹಿಂದಿನ ತೀರ್ವೆಯನ್ನೆಲ್ಲ ಕೊಡಬೇಕು ಅನ್ನುತ್ತಿದ್ದಾರೆ (ಜಿಟ್ನಜೀ. ೯೬) ; ಯಾರದಾದರೂ ಒಬ್ಬರದು ಸರಕಾರಿ ರಿಕಾರ್ಡು ಪ್ರಕಾರ ಯಾರಾದಾದರೂ ಒಬ್ಬರ ತೀರ್ವೆ ತರುವ ಸ್ಥಳವೆಂಬುದು ನಿರ್ವಿವಾದವಷ್ಟೆ (ಮಣ್ಣನಂ. ೮). **ತೀರುವೆ** : ೧. ಆಹಾರಸಾಮಗ್ರಿಯನ್ನು ಕೊಳ್ಳಲು ನೇಮಕಗೊಂಡಿದ್ದ ಖೈದಿ ಆ ಸಾಲ ತೀರುವೆಗಾಗಿ ದಿನಭತ್ಯದಿಂದಲೇ ಹಣ ಮುರಿದು ಕೊಡುತ್ತಿದ್ದನೆಂತಲೂ . . . ವಿವರಿಸಿದನು (ಪುನರು. ೫೦೬) : ಈ ಎಲ್ಲ ಸಾಲಗಳ ಷರತ್ತುಗಳೂ ಒಂದೇ ಆಗಿವೆ. ಬಡ್ಡಿ ಇರುವುದಿಲ್ಲ ; ತೀರುವೆಯ ಕಾಲಾವಧಿ ೫೦ ವರ್ಷಗಳು (ಅಂತಸಂ. ೦೩೦).
[ ತೀರ್ + - ವೆ. /ತಮಿ. ತೀರ್ವೈ ; ತುಳು. ತೀರ್ವೆ ;
ತೆಲು. ತೀರುವ, ತೀರ್ವ ]

**ತೀವಟಿಗೆ** 'ತಿವದಿಗೆ' ನೋ.

**ತೀವರ** 'ತಿಬ್ಬು$_1$' ನೋ.

**ತೀವರಿಸು** (ಕ್ರಿ). ಅವಸರ ಮಾಡು : ಆ ವೀರಭದ್ರನಾಲಯುವ ಸರ್ಪಂ ಪೊಕ್ಕು ದೇವರೊಳು ವ್ಯಾಪಿಸುತ್ತಿರೆ ಪೂಜಕಂ ಕಂಡು ತೀವರಿಸಿ ಕಲ್ಲೊಳಿಡೆ (ಗುರುಜಾ. ೦೦-೨೯). [ ತೀವರ (< ತಿಬ್ಬು$_1$) + - ಇಸು$_3$ ]

**ತೀವಿಸು** (ಕ್ರಿ). ೧. ಗಿಡಿ ; ತುಂಬು : ತೊಟ್ಟನೆ ಪ ಱ ಸೀ ರೆ ಗ ಳಂ ಬೆಟ್ಟಾಗಿರೆ ಗುಹೆಯ ಬಾ ಗಿ ಲೊ ಳ್ ತೀವಿಸಿದಂ (ಧರ್ಮಾಮೃ. ೯-೧೬೨). ೨. ನುಗ್ಗಿಸು ; ಹಾಯಿಸು : ಈ ಮತ್ತಗಜವನ್ನು ಮಲ್ಲಗಾಳೆಗದ ರಂಗ ದ್ವಾರದೆಡೆಯೊಳು ತೀವಿಸಿ ಬಲಕೃಷ್ಣರೀರ್ವರೂ . . . ಬಂದವರು (ಕಗವಿ. ೭೪ ವಿಷ್ಣುಪು). [ ತೀವು + - ಇಸು$_3$ ]

**ತೀವು** (ಕ್ರಿ). ೧. ತುಂಬು ; ಭರ್ತಿಮಾಡು : " ತೀವು—ಪೂರಣೇ " (ಶಮಧಾ); ಬಂಡಿಗಳೊಳ್ ಪಱ್ತಿಯುಂ ಧಾನ್ಯಮಂ ತೀವಿಕೊಂಡು ಪೊಱಲ್ಗೆ ಮಾಱಲೆಂದು ಪೋಪನ್ನೆಗಂ (ವಡ್ಡಾರಾ. ೭೬-೧೨) ; ನೀರಟ್ಟೆ ಪೋಪಿನಂ ನೀರಂ ಕುಡಿದು ಪದ್ಮಪತ್ರಪುಟಂಗಳಿಂ ತಮ್ಮಣ್ಣಂಗೆ ನೀರಂ ತೀವಿಕೊಂಡು (ಪಂಪಭಾ. ೮-೩೯ವ) ; ತಾಪಸರ್ತೀವುವ ಕಮಂಡಲುಗಳಿನುಣ್ಮುವ ಕಳಕಳ ಧ್ವನಿಗಳೊಳ್ (ಕಾದಂಪೂ. ೧೧೨); ಕೆಱೆಯನೊಡೆದು ತೊಱೆಯಂ ತೀವುವ ಮನೆಯನಟ್ಟಿದು ಬೇಲಿಯನಿಕ್ಕುವ ... ಎಗ್ಗನಂ ಪೋಲ್ವೆ ನೀ (ಧರ್ಮಾಮೃ. ೩-೨೧) : ಗುರುಪದಾಬ್ಜದೊಳ್ವೆಸರಾಂತು ತೀವಿದೆರ್ದೆಯ ಕಳಂಕನಳಿವೆನೆಂದೊಗೆದನೋಯೆಸಲಬ್ಜನುದಯವಾದು (ಷಡ್ಕರಾ. ೬-೯೮) ; ಶಾರ್ಙ್ಗದಲಿ ಶರವ ತೀವಿ ತೊಟ್ಟನಿಬರ ... ಎಚ್ಚಳು (ನಿಭಾಗ.೦೦-೭೦-೨). ೨. ತುಂಬಿರು; ಭರ್ತಿಯಾಗಿರು : ತಂಗೆ ನೀ ಬಸಿಱು ತೀವೆ ಬಡ್ಡಿಸದಿರ್ (ವಡ್ಡಾರಾ.೭೭-೫); ತೀವಿದ ನರೆಯುಂ ಡೊಳ್ಳುಂ ದೇವವ್ರತನೆನಿಸಿ ನೆಗಟ್ದಿ ಯಶಮುಂ ಬೆರಸಿ (ಪಂಪಭಾ. ೬-೪೮); ಸೋರ್ವ ಸಹಕಾರದೆ ತೀವಿದ ಬಾವಿ ಕಾಮದೇವನ ರಸಕೂಪದಂತೆ ... ಕಣ್ಗೆಸೆಗುಂ ಸಹಕಾರನಂದನಂ (ಅಜಿಪು. ೨-೧೩) ; ತೀವಿದ ತನ್ನ ಯೌವನದ ಸೊರ್ಕಿನೊಳುರ್ಕಿ (ಮಲ್ಲಿಪು. ೬-೭೭) ; ನರಕಪಾಲದೊಳು ತೀವಿದ ಹಸಿಯ ಗೋಮಾಂಸವ ಮೆಲುತ (ಹಚಕಾ.೦೦-೩೦); ಅನಿಲ ತನಯನ ಬೆರಳ ಸನ್ನೆಗೆ ತೀವಿದಂಬಿನ ತೇರ ಚಾಚಿದರು (ಕುವ್ಯಾದ್ರೋ. ೧೨-೫) : ತನಿರಸ ತೀವಿದ ಪಣ್ಗಳ ತಿನಿಸಿ (ಮೋಹತ. ೯-೨೪ ); ಅವಗಂ ಸರಸಕರುಣಾಮೃತದ ಕಳೆಗಳಿಂ ತೀವಿದೆಳನಗೆಯ ಬೆಳುದಿಂಗಳಂ ಪಸರಿಸುವ ದೇವಪುರ ಲಕ್ಷ್ಮೀರಮಣನಾಸ್ಯಚಂದ್ರನಾನಂದಮಂ ನಮಗೀಯಲಿ (ಜೈಮಿಭಾ. ೧-೧). ೩. ಇಡಂಗು ; ವ್ಯಾಪಿಸು ; ಪಸರಿಸು : ತೆಗೆದೆಚ್ಚರ್ಜುನನಂಬು ತೀವೆ ತುದಿಯಿಂ ಬಾಲಂಬರಂ ಪಂದಿ ಸೌಳಗೆವೋಪಂತಿರೆ ನೋಡ ಸಂಬಳಿಗೆವೋಯ್ತೆಂಬನ್ನೆಗಂ (ಪಂಪಭಾ. ೮-೧೬) ; ರೌದ್ರಾರಾವಂ...ಬನವನಿತುಂ ತೀವುವಿನಂ ಪೊಣ್ಮಿದಪುದು (ಪಂಚತಂ. ೩೬-೧೨) ; ಉಘೇ ಚಾಂಗು ಭಲಾ ಎಂಬ ಹೊಗೆ ಗಗನವ ತೀವೆ (ಬಸವ. ೬೮೩) : ಚಂಡಕರನರುಣಕಿರಣವು ಹೊಗುವ ಠಾವೆಲ್ಲವಂ ತೀವಿತವನ ಸತ್ಯ (ಹಚಕಾ. ೩-೮) ; ಜಸವೆತ್ತೆಸಗುವ ಗುರುವರನ ವಾರತೆ ದಿಗಂತಂಗಳೊಳ್ತೀವೆ (ಷಡ್ಕರಾ. ೯-೪) ; ಕಾಬೆರ್ಳಗೆ ಕಮರುಗಂಧ ಹತ್ತು ದಿಕ್ಕನು ತೀವಿತು (ಕಾಶಿರಾ. ೧೯-೩೭) ; ಶ್ರಮಗಳ ಗಾವಳಿಯನು ಪಱದಪೆನೆಂದು ನಱುಗಂಪು ತೀವಿದ ಪಾಟಲಿಯಿಹವು (ಕಂನವಿ. ೭-೫೩). ೪. ಮೇರೆ ಮೀರಿ ಹರಿ ; ತುಂಬಿ ಹೊರಸೂಸು : ತೊಱೆ ತೀವುಗುಮಿದೊಂದು ಸಾಭಿಜ್ಞಾನಂ (ವಡ್ಡಾರಾ. ೧೦೦-೧೩); ಅಮೃತದ ತೊಱೆಯುಬ್ಬರಮಾಗಲ್ ತೀವಿ ಬಂದುದು (ಧರ್ಮಾಮೃ. ೫-೬೦) ; ತೀವಿ ಬರೆ ಛೋಂಕನಾನದಿ ರಾವಣನತಿಸಂಭ್ರಮಾಕುಲಂ...ವಿಸ್ಮಿತನಾದಂ (ಪಂರಾಮಾ. ೦೦-೧೮೦); ಓವಿ ಸಾಗಿಸಿ ಬೆಳೆಯಿಸುವಳಲ್ಲಿ ಭಕ್ತಿಯಂ ತೀವಿ ತುಳುಕಾಡೆ ಮುಚ್ಚುವಳಲ್ಲಿ ಭಕ್ತಿಯಂ (ಕಾರಿರ. ದೇ. ೨೮೨-೧೦) ; ಇಕೆರ್ಳೆಡಿಯಿಂ ತೀವಿ ನಾಲ್ದೆಸೆಗಂ ಸೂಸಿ (ಶಮದ. ೬೬ ಪ್ರಯೋ). ೫. (ಕಾಲ) ಮುಗಿ ; ಪೂರ್ಣವಾಗು ; ಪೂರೈಸು : ಕಾಂತೆಗೆ ಪೊಱ್ತು ತೀವಿದುದು (ಜಾತತಿ. ೩-೧೮) ; ಮೂವತ್ತು ದಿವಾರಾತ್ರಂ ತೀವಿದೊಡದು ಮಾಸವು (ವಸ್ತುಕೋ. ೧೬-೧೦) ; ತೀವಿದುದು ಶಪನಶತಮಿಂ ತೀವಿದುದದಱೊಡನೆ ಚೈದ್ಯ ನಿನ್ನಾಯುಷ್ಯಂ (ಜಗವಿ. ೦೭-೫೦) ; ಕೆಲವು ದಿನಕ್ಕೆ ಗರ್ಭಮುದಯಿಸಿ ನವಮಾಸಂ ತೀವಿ ಕನ್ಯಾರತ್ನಮಂ ಪಡೆದು (ಗಿರಿಕ. ೧, ಕಥಾಗರ್ಭ) ; ತೀವಿದವು ನವಮಾಸ . . . ಗಾಂಡೀವಿ ಜನಿಸಿದನೊಡನೆ (ಕುವ್ಯಾಆ. ೪-೬೧) ; ಕಾವನ ಕೆಯ್ಯ ರಕ್ಕಸರಾಯನಾಯುಷ್ಯ ತೀವಂತೆ ಮಾಡಿದ ಮುನಿಪ (ಮೋಹತ. ೧೨-೨೬). ೬. ಸುತ್ತುಗಟ್ಟು ; ಸುತ್ತುವರಿ ; ಆವರಿಸು : ದಿಕ್ತಟಮಂ ಶರವ್ಯಂದದೆ ತೀವುತೆ ಸೃಗಾಲರಥಿ ಬರ್ಪಿನೆಗಂ (ಜಗವಿ. ೮-೭೦) ; ಎತ್ತಲು ತೀವಿದರು ಸೃಂಜಯರು(ಕುವ್ಯಾಭೀ. ೮-೩೨) ; ತತ್ಸೈನ್ಯವರಮನೆಯ ತೀವಿ ಬಳಸಿದೆ

ತಕ್ಕುಪಾಯವ ನೀವು ಕಾಣಲು ಬೇಕು (ಜೀವಂಜ. ೪-೭); ಕೋವಿದ ಕೋವುಲಾಂಗಿಯರುಂ ದೇವಕಿಯಾತ್ಮಸಂಭವನೆಡಬಲದಲಿ ತೀವಿರ್ದರೇನ ಬಣ್ಣಿಪೆನು (ಮೋಹತ. ೪-೪). ೭. ಸೇರು; ಕೂಡು: ದಿವಿಜಪಾವಕಂ ಸುರಪಪಾವಕಂ ತೀವಿ ಬಂದು ಪದೆದಾವ ಮೆಯ್ಯೊಳವುದಾವಗಂ ನೆಲೆಸಿ ನಿಲ್ವಿನಂ (ಛಂದೋಂಬು. ೨-೧೮೦). ೮. ಹೊರಿಸು; ಆರೋಪಿಸು: ಈತನಿಗೆ ನಿಂದೆಯನು ತೀವಬೇಕೆಂದಾಗ ವಿಪ್ರರು ಕಪಟದ ಗೋವ ನಿರ್ಮಿಸಿದರು (ಕಂನವಿ. ೫-೦೭). ೯. ಹರಡು; ಪ್ರಸಾರವಮಾಡು: ಪೊಱಮಡಲ್ ಬಗೆಗೊಂಡು ಇಳೆಗೆ ಶಿವಭಕ್ತಿಯಂ ತೀವಲ್ ವಂನಂಗೊಂಡು (ಬಸರ. ೧-೧೨೪). ೧೦. ಒದಗಿ ಬರು; ಕೂಡಿ ಬರು: ತಿರುಗಿ ತೀವಿತು ಲಾಸ್ಯ ಮಧುಕೇಶ್ವರನ ಸಮ್ಮುಖದಿಂದಲಿ (ಪ್ರಭುಲೀ. ೭-೩೫); ಆವ ಜನ್ಮದ ಸುಕೃತಫಲವಿದು ತೀವಿತೋ ಫಲುಗುಣಗೆನುತ್ತವೆ ದೇವತತಿ ಕೊಂಡಾಡುತಿರ್ದುದು (ಕುಮಾ್ಯಾ. ೦೨೩. ೭-೧೦೭); ದೇವ ತವ ದರ್ಶನದ ಮಾತ್ರದಿ ತೀವಿದುದು ಸಾಮ್ರಾಜ್ಯಸುಖ (ಅನಂರಾ. ೪-೧-೩೪). ೧೧. ಪರಿಪೂರ್ಣವಾಗು; ಸಂಪೂರ್ಣವಾಗು: ನೀಂ ಕೇಳ್ದೀ ಮಹಾಪ್ರಶ್ನೆ ಶಕ್ರಗುರುಗಂ ಓವೊ ತಿಳಿಸಲ್ ತೀರ್ಗುಮೇಯಂತುಟಾದೊಡಂ ತೀವಿ ನಿಶ್ಚೈಸಿ ಪೇಳ್ವೆಂ (ಪದ್ಮರಾ. ೧೦-೯).

ತೀವಿರ್‌= ತುಂಬಿರು; ವ್ಯಾಪಿಸಿರು; ಭರ್ತಿಯಾಗು: ತೀವಿರ್ಪಶ್ವಾವಳಿಯ ಗಜಾವಳಿಯ ನರಾವಳಿಗಳ...ದೂಸಿಗವಸರಂ (ಗಿರಿಕ. ೨-೯೪); ಆತ್ಮಂಗಾವುದು ಕುಱುಪೆಂದೊಡಂಗಿಯುಂಗದೊಳೆಲ್ಲಂ ತೀವಿರ್ಪಂ (ಯಶೋಚ. ೪-೦೭); ಜೀವನದ ಮೂಲ ಮೇಲಿಹುದು ಪರವೋರ್ಧ್ವದಲಿ ತೀವಿರ್ಪುದದು ಕೆಳಗೆ ನಮ್ಮ ಲೋಕದಲಿ, ಸಾವದರ ಕಡ್ಡಿಯೆಲೆ (ಮಂಕುಕ. ೫೭೦).

ತೀವ್ರ (ಗು). ೧. ಹರಿತವಾದ; ಚೂಪಾದ. ೨. ನಿಷ್ಠುರವಾದ. ೩. ಉಗ್ರವಾದ; ತೀಕ್ಷ್ಣವಾದ; ಕಟುವಾದ: "ತೀವ್ರಕ್ಕೆ ತಿಬ್ಬಮೆಂಬರು ಕವಿಗಳ್" (ಕವಿಕಂ. ೨೦೦); ಎನ್ನಯ ತೀವ್ರಶಾಪ ವಾಜ್ಮಹಿಮೆಯಿನಾತನಂದು ಕಡಿದಿಕ್ಕಿದ ಪೆರ್ಮರನಂತೆವೋಲ್ ... ಕೆಡೆದು ಪೊಂದಿದನಾಯಿಳೆಯಲ್ಲಚೇತನಂ (ಕಾದಂಬು. ೫೭೭); ಸುಣ್ಣದಂತೆ ತೀವ್ರವಪ್ಪ ಕತ್ತರಿಪಾಟಿಯಂತೆ ಸಾರಲರಿದಪ್ಪ (ಧರ್ಮಾಮೃ. ೩-೧೯೭). ೪. ಅತಿಯಾದ; ಆಳವಾದ. ಚತುರ್ವೇದಪಾಠ ತೀವ್ರವಾದಡೇನು (ಬಸವ.೫೮೭); ಶಕುಂತಲೆಯಲ್ಲಿ ಭಾವ ತೀವ್ರ; ಮಾತು ಮಿತ (ಧರ್ಮಸಾ. ೭೮). ೫. ಉಷ್ಣವಾದ; ಬಿಸುಪಾದ: 'ತೀವ್ರಕಿರಣ' ಪರಾ. ೬. ವೇಗವಾದ; ತ್ವರಿತವಾದ. 'ತೀವ್ರಗತಿ' ಪರಾ. ೭. ಬಿರುಸಾದ; ಒರಟಾದ. ೮. ಉದ್ರೇಕವುಳ್ಳ; ದುಡುಂಕಿನ ಸ್ವಭಾವದ. 'ತೀವ್ರಗಾಮಿ' ಪರಾ. (ನಾ). ೯. ತೀಕ್ಷ್ಣವಾದುದು; ಹರಿತವಾದುದು: ದಾಡೆಗಳನಱೆಯೊಳಿಂಬಿಂ ತೀಡುತ್ತುಂ ತೀವ್ರಮಾಗೆ (ಪಂಪಭಾ. ೩-೨೮). ೧೦. ಕ್ರೂರವ್ಯಕ್ತಿ: ಶ್ರೀಯುಕ್ತಂ ವಿಜಿಗೀಷು ಚಂಡಕರತೇಜಂ ತೀವ್ರನಕ್ಕುಂ (ಲೋಕೋಪ. ೧೧-೪೦). ೧೧. ಬೇಗ; ಶೀಘ್ರ: ತೀವ್ರವೇ ನಿಂಗಪ್ಪನೂ ಅವನ ಮಕ್ಕಳೂ ವಿಪತ್ತಿನಿಂದ ಮುಕ್ತರಾದರು (ಮುಂಬಯಿ. ೪-೭೮). ೧೨. ವೇಗವಾದುದು; ತ್ವರಿತವಾದುದು: ಆ ಹರಿಣನಿಂ ಮರುತನಿಂ ಸರಳಧಿಕ ತೀವ್ರವು (ಹಜಕಾ. ೬-೩೩); ಮಾನವನ ಯೋನಿಯಲ್ಲಿ ವಿಕಾಸವು ಬಹಳ ತೀವ್ರ (ಜೀವಾತ್ಮ. ೨೭೮). [ಸಂ.]

ತೀವ್ರಕಿರಣ (ನಾ). ಉಷ್ಣವಾದ ಕಿರಣಗಳನ್ನು ಉಳ್ಳವನು; ಸೂರ್ಯ: ಶರಧಿಯನುರ್ಚಿ ಪಿಂಗಿದುದು ಭೋಂಕನೆ ಕಟ್ಟಿಲೆ ದಿವ್ಯಬಾಣಮಂ ತರೆತಿರುವಿಂಗೆ ತೀವ್ರಕಿರಣಂ ತಲೆದೋಱೆದಂ (ಪಂರಾಮಾ. ೧೪-೦೭೨).

[ತೀವ್ರ + ಕಿರಣ₁]

ತೀವ್ರಗತಿ (ನಾ). ಚುರುಕಾದ ಗಮನ; ಶೀಘ್ರವಾದ ಗತಿ: ತೀವ್ರಗತಿಯ ಸಂಭಾಷಣೆಯ ಶೈಲಿ ಒಂದನೆಯ ಮತ್ತು ಎರಡನೆಯ ಶೂನ್ಯಸಂಪಾದನೆಗಳಲ್ಲಿ ಕಂಡುಬರುವುದಿಲ್ಲ (ಶೂನ್ಯಸ. ೯೭); ಪ್ರತಿಯೊಂದು ಹೊಸಗ್ರಂಥವನ್ನು ತೀಕ್ಷ್ಣಮತಿಯಾಗಿ ತೀವ್ರಗತಿಯಿಂದ ಅವಲೋಕಿಸಬೇಕು (ಗ್ರಂಥಾಲ. ೬೯). [ತೀವ್ರ + ಗತಿ]

ತೀವ್ರಗಮನ (ನಾ). ೧. =ತೀವ್ರಗತಿ: "ಗಾಢಂ = ತೀವ್ರಗಮನಂ" (ಕಾಶಕ. ೨೭). ೨. ಹೆಚ್ಚಿನ ಲಕ್ಷ್ಯ: ಆ ಕಡೆ ತೀವ್ರಗಮನ ಕೊಡಲಾಗುತ್ತಿದೆ (ರೂಢಿ). [ತೀವ್ರ + ಗಮನ₂]

ತೀವ್ರಗಾಮಿ (ಗು). ೧. ದುಡುಂಕಿನ; ರಭಸದ; ಅತಿವೇಗದ: ಕಾರ್ಯದರ್ಶಿ ಪ್ರಗತಿಪರ, ತೀವ್ರಗಾಮಿ ಅಭಿಪ್ರಾಯವುಳ್ಳವನು (ಪುನರು. ೨೮). (ನಾ). ೨. ತೀಕ್ಷ್ಣವಾಗಿ ಮುನ್ನುಗ್ಗುವವನು; ಉಗ್ರಗಾಮಿ: ತೀವ್ರಗಾಮಿ ತಂಡುಲಧ್ವಂಸಿಯಾದ ಕೇಶವನಿಗೂ ಸಹ ಭೀಮು ಸ್ವಾವಲಂಬನದ ಪಾಠವನ್ನು ಕಲಿಸುತ್ತಾನೆ (ಸಮಜೀ. ೧೧ ಪೀಠಿಕೆ). [ಸಂ. ತೀವ್ರಗಾಮಿನ್]

ತೀವ್ರಗೊಳ್, ತೀವ್ರಗೊಳ್ಳು (ಕ್ರಿ). ೧. ಹರಿತವಾಗು; ಚುರುಕಾಗು; ತೀಕ್ಷ್ಣಗೊಳ್ಳು. 'ತೀವ್ರಗೊಳಿಸು' ಪರಾ. ತೀವ್ರಗೊಳ್ಳು: ೨. ಉಲ್ಬಣವಾಗು: ರೋಗ ಬಹಳ ತೀವ್ರಗೊಂಡಿದೆ (ರೂಢಿ). ೩. ಪ್ರಖರವಾಗು: ಚುನಾವಣೆ ಹತ್ತಿರ ಬಂದಂತೆಲ್ಲಾ ಪ್ರಚಾರ ತೀವ್ರಗೊಳ್ಳುತ್ತದೆ (ರೂಢಿ). [ತೀವ್ರ + ಕೊಳ್₁]

ತೀವ್ರಗೊಳಿಸು (ಕ್ರಿ). ಹರಿತಗೊಳಿಸು; ಚುರುಕಾಗಿಸು; ತೀಕ್ಷ್ಣಗೊಳಿಸು: ಇದೇ ಸೋಮವು ಬುದ್ಧಿಯನ್ನೂ ಸಹ ಆಕರ್ಷಕವಾಗಿ ತೀವ್ರಗೊಳಿಸುತ್ತದೆ (ಋಕ್ಸಾರ. ೪೫). [ತೀವ್ರಗೊಳ್ + -ಇಸು₃]

ತೀವ್ರಗೊಳ್ಳು 'ತೀವ್ರಗೊಳ್' ನೋ.

ತೀವ್ರತೆ (ನಾ). ೧. ಪ್ರಖರತೆ; ಪ್ರಚಂಡತೆ; ಉಗ್ರತೆ: ಪ್ರಳಯರುದ್ರನ ಕಾಯ್ಪು ವಡಬಾನಳನ ತೀವ್ರತೆ ಸಿಡಿಲ ಕಡುಪಗ್ಗಳದಿನೊಡಗೂಡಿರ್ದ ಪುಲಿಯೊಡಲಿಟ್ಟುದೋಯೆನಿಸಿ (ಸಾಳ್ವಭಾ. ೫-೩೦); ಗಮನ ವಿಸ್ತರಿಸುವ ಕ್ಷೇತ್ರದ ಪರಿಮಾಣಕ್ಕೆ ವಿಲೋಮವಾಗಿ ಅದರ ತೀವ್ರತೆ ತೀಕ್ಷ್ಣತೆಗಳು ಕಡಿಮೆಯಾಗುತ್ತವೆ (ಶಿಕ್ಷದ. ೩೦೪). ೨. ವೇಗ; ಶೀಘ್ರತೆ; ರಭಸ: ಶಿಕ್ಷಣವೃತ್ತಿಯಲ್ಲಿ ... ಇತರೆಲ್ಲ ವೃತ್ತಿಗಳಿಗಿಂತಲೂ ಹೆಚ್ಚು ತೀವ್ರತೆಯನ್ನು ಇಲ್ಲಿ ಕಾಣಬಹುದು (ಶಿಕ್ಷದ. ೬೬೩); ತಲೆಗೆ ಬೆಂಕಿ ಹಿಡಿದರೆ ನೀರಿನಲ್ಲಿ ಧುಮುಕುವದರಲ್ಲಿರುವ ತೀವ್ರತೆಯಂತೆ ದುಃಖನಿವೃತ್ತಿಯಲ್ಲಿ ತೀವ್ರತೆಯಿರಬೇಕು (ಭಾರದ. ೨೩೭). ೩. ಹೆಚ್ಚಳ; ಆಧಿಕ್ಯ: ತನ್ನ ಮುನ್ನಿನ ನಿರ್ಬುದ್ಧಿಯುಮಂ ಮಿಥ್ಯಾತ್ವದ ತೀವ್ರತೆಯುಮಂ ವಾತ್ಸಲ್ಯರತ್ನಾಕರನ ಮಾಡಿದುಪಕಾರಮುಮಂನೆನೆದು ವಿಸ್ಮಯಂಬಟ್ಟು ಶುದ್ಧಹೃದಯನಂಮಾಗಿ (ಧರ್ಮಾಮೃ. ೭-೨೩೯). [ಸಂ. ತೀವ್ರತಾ]

ತೀವ್ರಪಾತ (ನಾ). ತೀವ್ರವಾಗಿ ಎರಗುವಿಕೆ; ಉಗ್ರವಾದ ದಾಳಿ: ಕ್ಷತ್ರತೇಜದ ತೀವ್ರಪಾತ ನಿಮಿತ್ತ ನಿಮಗಂಜನು ಸುರೇಶ್ವರ ಸತ್ಯ ಕೆಡುಪೊಡೆ ಸಾರೆಯದೆಲಾ ಕೌರವನ ನಗರ (ಕುಮಾ್ಯಾ. ೦೭-೦೯).

[ತೀವ್ರ + ಪಾತ₁]

ತೀವ್ರಮದಿರೆ (ನಾ). [ನಾಟ್ಯ] ನೃತ್ಯದ ದೃಷ್ಟಿಭೇದಗಳಲ್ಲಿ ಒಂದು; "ಹೊರಕ್ಕೆ ಕಾಣದಂತೆ ಅಲಿಗಳನ್ನು ಸ್ವಲ್ಪ ಒಳಕ್ಕೆ ಮಾಡಿ ಕೆಳಗಡೆ ನೋಡಿ ರೆಪ್ಪೆಗಳನ್ನು ಬಡಿಯಂದೇ ಇರುವುದು ಅಥವಾ ರೆಪ್ಪೆಗಳನ್ನು ಬಡಿಯುತ್ತಲೇ ಇರುವುದು" (ಲಾಸ್ಯರಂ. ೨೭೦ ಗದ್ಯಾನುವಾದ): ತೀವ್ರಮದಿರೆ–ಕೆಳಗುಂ ನೋಡುತ್ತುಂದಿನಿತೊಳಗೊಂದಿದ ತಾರೆ ಪಾಯ್ಕುಲೊಂದದಯೆವೆಗಳ್ ಎಳೆಯುಳೆ ತೆಱೆಯದ ಎವೆ ಸಂಚಲ ತೀವ್ರದ ಮದಿರೆಯೆನಿಪುದಿಳೆಯೊಳ್ (ಲಾಸ್ಯರಂ. ೩-೪೦). [?]

ತೀವ್ರಾಂಶು (ನಾ). ತೀಕ್ಷ್ಣವಾದ ಕಿರಣಗಳುಳ್ಳವನಂ; ಸೂರ್ಯ: ವಿಧುವಿಂದಂ ವಿಬುಧೋತ್ಕರ ಪ್ರಿಯಕರಂ ತೀವ್ರಾಂಶುವಿಂದಂ ಪ್ರತಾಪಧನಂ (ಪುಷ್ಪಪು. ೩-೦೨೨). [ತೀವ್ರ + ಅಂಶು]

**ತೀವ್ರಾಸಕ್ತಿ** (ನಾ). ಅಧಿಕವಾದ ಆಸಕ್ತಿ ; ಹೆಚ್ಚಾದ ಆಸಕ್ತಿ : ಫೋಟೋವನ್ನು ಲಕೋಟೆಯಿಂದ ತುಸು ಹೊರಗೆಳೆದು ತೀವ್ರಾಸಕ್ತಿಯಿಂದ ನೋಡುತ್ತಿದ್ದಳು (ಪುನರು. ೩೨೩). [ತೀವ್ರ + ಆಸಕ್ತಿ]

**ತೀವ್ರಾಸ್ತ್ರ** (ನಾ). ಉಗ್ರವಾದ ಆಯುಧ ; ಭಯಂಕರವಾದ ಅಸ್ತ್ರ: ತುರಾಷಾಟ್ ತೀವ್ರಾಸ್ತ್ರ = ಇಂದ್ರನ ಹದವಾದ ವಜ್ರಾಯುಧ (ನಾನಾರ. ೧೨೦ ಟೀಕು). [ತೀವ್ರ + ಅಸ್ತ್ರ]

**ತೀಱು** (ಕ್ರಿ). ನುಂಗು ; ಕಬಳಿಸು : "ತೀಱು–ಕಬಳನೇ (ನುಂಗು)" (ಶಮಧಾ). [ದೇ.; ತಮಿ. ಮಲ. ತೀಱ್ಱು]

△ **ತೀಟ್ಚು** 'ತೀರ್ಚು' ನೋ.

△ **ತೀಟ್ಛು** 'ತೀರುತ' ನೋ.

**ತುಂಗ$_1$**, ತುಂಗೆ$_1$ (ನಾ). = ತುಂಗಗಡ್ಡೆ : (ಶ).

**ತುಂಗೆ$_1$**. 'ತುಂಗೆಮುಸ್ತೆ' ಪರಾ. [←ತೆಲು. ತುಂಗ]

**ತುಂಗ$_2$** (ಗು). ೧. ಎತ್ತರವಾದ ; ಉನ್ನತವಾದ : ತುಂಗಗಿರಿಶಿಖರದಿಂದಂ ಲಂಗಿಸಿ ಶೂದ್ರಕನ ಪೊಳೆವ ಸುರಿಗೆಯ ಮೊನೆಯೊಳ್ ... ಪಾಯ್ದು ಬರ್ದುದು ಸಿಂಗಂ (ಕಾವ್ಯಸಾ. ೧೧೧೪ ಶೂದ್ರಕ) ; ತುಂಗವನ್ಯಮತಂಗಜದಂತಾಘಾತನಿಪಾತಿತ ಸಲ್ಲಕೀಭಂಗಮಂ (ಪಂಪಭಾ. ೧–೧೧೫); ತುಂಗತರಂಗಂ ಸುಟಿವ ತುರಂಗಂ ನೊರೆವಿಂಡು ನೃಪರ ಬೆಳ್ಗೊಡೆಯಾಗಲ್ (ಪುಷ್ಪಪು. ೨–೬೮) ; ರಾಮಸೀತಾಪುಣ್ಯಸಂಗಮಂಗಲ ತುಂಗಶೃಂಗವನರಂಗಮಂ ಚರಿಸಲ್ಕಾನುತ್ಕಂಠಿತಂ (ಶ್ರೀರಾಮಾ. ೧೨೫-೬). ೨. ಹೆಚ್ಚಾದ ; ಅತಿಶಯವಾದ ; ಶ್ರೇಷ್ಠತೆಯಿಂದ ಕೂಡಿದ : ತುಂಗಬಲ ಕಲಿ ನೀಲನುರು ಸಮರಾಂಗಣದೊಳಹಿತ ಪ್ರಹಸ್ತನ ನುಂಗಿ (ತೊರರಾ. ೬–೧೯–೬೯) ; ಮದನನಜವಾಸಿಷ್ಠ ತುಂಗಹರಿಗಳ ಜಱುವ ಸತ್ಕೇಂದ್ರಚೋಳಂಗೆ ಸತಿಯಪ್ಯ್ರತಮತಿಯಾದಳು (ಛಾವಜಂ. ೨–೧೭). ೩. ದೊಡ್ಡ ; ತೋರ ; ದಪ್ಪ. (ನಾ). ೪. ಸುರಗಿ ಮರ : "ಪುನ್ನಾಗಃ, ಪುರುಷಃ, ತುಂಗಃ, ಕೇಸರಃ, ದೇವವಲ್ಲಭಃ– ಇ ಸುರಗೀಮರ" (ಸಿದ್ಧಾಂತಿ. ೧೦೩). [ಸಂ.]

**ತುಂಗಗಡ್ಡೆ**, ತುಂಗೆಗಡ್ಡೆ (ನಾ). ದುಂಡಾದ, ಮಣಿಗಳಂತಿರುವ ಗಡ್ಡೆಗಳನ್ನು ಬಿಡುವ ಒಂದು ಬಗೆಯ ಹುಲ್ಲು; ಕೊನ್ನಾರಿಗಡ್ಡೆಯ ಜಾತಿಗೆ ಸೇರಿದ ಒಂದು ಬಗೆಯ ಗಡ್ಡೆ ; ತುಂಗಮುಸ್ತೆ : (ಶ). **ತುಂಗೆಗಡ್ಡೆ** : "ಕುಟನ್ನಟಂ, ದಾಶಪುರಂ, ವಾನೇಯಂ, ಪರಿಪೇಲವಂ, ಪ್ಲವಂ, ಗೋಪುರಂ, ಗೋನರ್ದಂ, ಕೈವರ್ತಿಮುಸ್ತಕಂ ೮ ತುಂಗಮುಸ್ತಕದ ಹೆಸರುಗಳು, ತುಂಗೆಗಡ್ಡೆಗಳು, ಗೇಕಿನಗಡ್ಡೆಯೆಂತಲೂ ಅನ್ನುವರು" (ಸಿದ್ಧಾಂತಿ. ೧೨೫). [ತುಂಗ$_1$ + ಗಡ್ಡೆ]

**ತುಂಗಘೋಣ** (ನಾ). ೧. ಉದ್ದವಾದ ಮೂಗು; ನೀಳವಾದ ಮೂಗು. ೨. ನೀಳವಾದ ಮೂಗುಳ್ಳವನು; ನಿಡುಮೂಗಿ : ಕುವಲಯನಯನಂ ತುಂಗಘೋಣಂ . . . ನೃಪಸುತಂ ನೋಡೆ ಕಣ್ಗೆಡ್ಡಮಾದಂ (ಪುಷ್ಪಪು. ೪–೬೮). [ತುಂಗ$_2$ + ಘೋಣ]

**ತುಂಗತನ** (ನಾ). ದೊಡ್ಡತನ ; ಹಿರಿಮೆ : ಮಂಗಳಪುರುಷನೆಂದು ಅನ್ಯರಿಂದ ತುಂಗತನದಲಿ ಪೊಗಳಿಸಿಕೊಂಡು (ವಿಶಾಸು. ೮೭–೧). [ತುಂಗ$_2$ + – ತನ]

**ತುಂಗತೆ** (ನಾ). ೧. ಹಿರಿಮೆ ; ಆಧಿಕ್ಯ ; ಶ್ರೇಷ್ಠತೆ: ತುಂಗತೆಯುಂ ಕನಕಾಂಶು ಪಿಶಂಗತೆಯಿಂದಱಿಯಲಾದುದಿಲ್ಲ (ಅಜಿಪು. ೪–೪೯) ; ತುಂಗತೆಯುಂ ಸಿಂಹಾಸನಸಂಗತಿಯುಂ ಕಣ್ಗೆವರೆ (ವರ್ಧಪು. ೪–೨೮). ೨. ದಪ್ಪವಾಗಿರುವುದು : ಘನಜಘನಂಗಳುನ್ನತಿ ಕುಚಂಗಳ ತುಂಗತೆ ಚೆಲ್ವನಾಳ್ದ ಕಣ್ಗೊನೆಯ ವಿಳಾಸಂ (ರಾಜಶೇ. ೦೨–೯೧). [ಸಂ. ತುಂಗತಾ]

**ತುಂಗತೆವೆಱು** (ಕ್ರಿ). ಶ್ರೇಷ್ಠತೆಯನ್ನು ಪಡೆ : ತುಂಗತೆವೆತ್ತ ಚಿತ್ರಮಯ ಕೂಟ ಕಲಾಪದ ಬಳ್ಳಿಮಾಡಂಗಳ (ಶಾಂತೀಶ್ವ. ೨–೧೨೫): ಈ ಲೋಕ ತುಂಗತೆವೆತ್ತಿರ್ಪುದು ಗಡ (ಶತಸಾಂ. ೨–೧೦). [ತುಂಗತೆ + ಪೆಱು$_1$]

**ತುಂಗನಾಸ** (ನಾ). = ತುಂಗಘೋಣ ೨: ತುಂಗನಾಸಂ ... ತೆತ್ತಿಗನೆನಿಕ್ಕುಂ ತೌಲಗೇಹೋದ್ಭವಂ (ಜಾತತಿ. ೧೭–೭). [ಸಂ. (ತುಂಗ + ನಾಸಾ + –)]

**ತುಂಗಭದ್ರ** (ನಾ). ೧. ಹೆಚ್ಚಾದ ಮಂಗಳ, — ಶುಭ. ೨. ಮದವೇರಿದ ಆನೆ. [ತುಂಗ$_2$ + ಭದ್ರ]

**ತುಂಗಭದ್ರೆ** (ನಾ). ಕನ್ನಡನಾಡಿನಲ್ಲಿಯ ಒಂದು ನದಿ : ಗಂಗೆ ತುಂಗಭದ್ರೆಗಳೊಪ್ಪವಡೆದು ಮಹಿಮೆಯೊಳಿಸೆವ ತೆಱದಿ (ಹಡಕಾ. ೨–೫) ; ಮೈಸೂರಿನ ವಾಯವ್ಯದಲ್ಲಿ ಹುಟ್ಟುವ ತುಂಗ, ಭದ್ರಾ ಈ ಎರಡು ನದಿಗಳೂ ಕೂಡ್ಲಿ ಎಂಬ ಊರ ಬಳಿ ಸಂಯುಕ್ತವಾಗಿ ತುಂಗಭದ್ರಾ ಎಂಬ ಹೆಸರನ್ನು ಹೊಂದುತ್ತವೆ (ಭೂಗೋಳ. ೮೮): ತುಂಗಭದ್ರೆಗೆ ಮಂಗ ಹೋದರೆ ಭಂಗ ಪಡೋದು ತಪ್ಪೀತೆ ? (ಗಾದೆ). [ಸಂ. ತುಂಗಭದ್ರಾ]

**ತುಂಗಮಹಿಮೆ** (ನಾ). ಹೆಚ್ಚಾದ ಪ್ರಭಾವ ; ಮಿಗಿಲಾದ ಮಹಿಮೆ : ತುಂಗಮಹಿಮಾಧಿಕಂ ಸಕಲದೇಶಿಕನಿಕರಪುಂಗವಂ (ವೀಶೈಪು. ೬–೧–೫); ತುಂಗಮಹಿಮೆವೆತ್ತು ದೋಷವಳಿದು ಮುನಿಪುಂಗವನೊರ್ವನೆಸೆದನು (ಹದಿಬ. ೨–೩೦). [ತುಂಗ$_2$ + ಮಹಿಮೆ]

**ತುಂಗಮುಸ್ತೆ**, ತುಂಗೆಮುಸ್ತೆ (ನಾ). = ತುಂಗಗಡ್ಡೆ : "ಕುರುವಿಂದಃ, ಮೇಘನಾಮಾ . . . ಉದ್ದಾವೆ ತುಂಗಮುಸ್ತೆ, ಭದ್ರಮುಸ್ತೇ ಹೆಸರು" (ಸಿದ್ಧಾಂತಿ. ೧೩೧): ಕರ್ಕಾಟಕಶೃಂಗಿ, ಮರದರಿಸಿನ, ನೆಲಗುಳ್ಳ, ರಾಮಗುಳ್ಳ, ತುಂಗಮುಸ್ತೆ, ಅಗುಳುಶುಂಠಿ . . . ಇವಂ ಕಷಾಯುವಿಟ್ಟು ಕೊಡಲು ವಾತಜ್ವರ ನಿಲ್ಲುವುದು (ಸಕವೈ. ೬೯). **ತುಂಗೆಮುಸ್ತೆ** : (ಶ). [ತುಂಗ$_1$ + ಮುಸ್ತೆ]

**ತುಂಗವಂಶ** (ನಾ). ೧. ಎತ್ತರವಾದ ಬಿದಿರು. ೨. ಶ್ರೇಷ್ಠವಾದ ಕುಲ. ೧, ೨: ಇಭಖಡ್ಗಿವ್ರಾತ ನಾನಾಹರಿಮಯಕಟಕಭ್ರಾಜಿತಂ ತುಂಗವಂಶಪ್ರಭವಂ . . . ಚಕ್ರಾಧೀಶನೊಳ್ ಮಚ್ಚರಿಪಪೊಲೆಸದಿರ್ದತ್ತು ರೌಪ್ಯಾಚಲೇಂದ್ರಂ (ಆದಿಪು. ೧೩–೪೬). [ತುಂಗ$_2$ + ವಂಶ]

**ತುಂಗವಿಕ್ರಮ** (ಗು). ೧. ಅತಿಶಯವಾದ ಪರಾಕ್ರಮವುಳ್ಳ ; ಬಹಳ ಶಕ್ತಿಯುಳ್ಳ : ತುಂಗವಿಕ್ರಮ ಕರಿಯ ಭಂಟ ನೃಪಗೆ (ಕರಿಕ. ೦೫–೯). (ನಾ). ೨. ಅತಿಶಯವಾದ ಶಕ್ತಿಯುಳ್ಳವನು ; ಪ್ರಬಲ ವ್ಯಕ್ತಿ : ತುಂಗವಿಕ್ರಮನೀ ಸಮಸ್ತಜನಂಗಳೊಡನೆ ಸುತೀರ್ಥಯಾತ್ರಾಸಂಗತಿಯಲೇ ಬಳಸಿದನು ಭೂಮಿಪ್ರದಕ್ಷಿಣವ (ಕುಮ್ಮಾಗ. ೬–೧೧): ತುಂಗವಿಕ್ರಮದನುಜರಬ್ಬರವ ಕೇಳಿ ಬಾಣಂಗಳಿಂದೆಸೆದವರ ಶಿರಗಳಂ ಕತ್ತರಿಸೆ (ಪ್ರೌಢರಾ. ೧೧–೫೮). [ತುಂಗ$_2$ + ವಿಕ್ರಮ]

**ತುಂಗಾಕಾರ** (ನಾ). ಮಹತ್ತರವಾದ ಆಕಾರ,—ರೂಪ: ದೂರದೊಳೀಕ್ಷಿಸಿ ತುಂಗಾಕಾರದೊಳೊಂದಿದ ಋಜುತ್ವಮಂ ಪದೆದೇಳಿಸಿತು . . . ಶುಕಶಾಬಂ (ಶಂರಾಮಾ. ೭–೧೬೯). [ತುಂಗ$_2$+ಆಕಾರ$_2$]

**ತುಂಗಾಕೃತಿ** (ನಾ). ಎತ್ತರವಾದ ಆಕಾರ ; ಬೃಹದಾಕಾರ : ಅತಿತುಂಗಾಕೃತಿಯಾದೊಡಾಗದದಱಿನೊಳ್ ಸೌಂದರ್ಯಮೌನ್ನತ್ಯ ಮುಂ (ಎಕ. II, ೨೩೪–೧೭ ; 1180). [ತುಂಗ$_2$+ಆಕೃತಿ]

**ತುಂಗಿ** (ನಾ). ಒಂದು ಬಗೆಯ ಗಿಡ ; ನಾರಂಬೇಳೆ ಗಿಡ ; ಅಜಗಂಧಿಕೆ : ಹೊಂಗಿಯುಂ ತುಂಗಿಯುಂ . . . ಕಾಡೆಸೆದುದು (ನಂದಿವಾ. ೧೩–೦೨) ; ತುಂಗೀಗಿಡಗಳಂ ಲಾವಂಚವಂ ತಗರವಂ ಸಹಾ ಚೂರ್ಣವಂ ಮಾಡಿ (ಸೌಗಂಧಿ. ೪೩೫–೨). [ಸಂ. ತುಂಗೀ]

**ತುಂಗಿಮ** (ನಾ). ಎತ್ತರ ; ಔನ್ನತ್ಯ : ಅಮರಗಣಸೇವ್ಯತಿತುಂಗಿಮಶಿಖರಭ್ರಾಜಿ...ಮಂದರಾಚಲಂ ರಂಜಿಸುಗುಂ (ಎಕ. XI, ದಾವಣ. ೪೮–೮ ; 1164). [ಸಂ. ತುಂಗಿಮನ್]

**ತುಂಗೆ$_1$** 'ತುಂಗ$_1$' ನೋ.

**ತುಂಗೆ$_2$** (ನಾ). ಕನ್ನಡನಾಡಿನಲ್ಲಿ ಹುಟ್ಟಿ ಹರಿಯುವ ಒಂದು ನದಿ : ಅಂದು ತುಂಗೆಯಾ ತಡಿಯಲಾ ಗುರನಂದನರ ನೆಟಿ ನುಂಗಿ ರಾಕ್ಷಸವೃಂದ ಗೂಡಿದನಾ ಸುದಾಸನ ಸುತನು (ಕುವ್ಯಾ.ಅ. ಓರಿ೩. ೨೫-೨೨).

[ ಸಂ. ತುಂಗಾ ]

**ತುಂಗೆಗಡ್ಡೆ** 'ತುಂಗಗಡ್ಡೆ' ನೋ.

**ತುಂಗೆಮುಸ್ತೆ** 'ತುಂಗಮುಸ್ತೆ' ನೋ.

**ತುಂಗೆಹುಲ್ಲು** (ನಾ). ತುಂಗಮುಸ್ತೆಯ ಹುಲ್ಲು : (ಕ).

[ ತುಂಗೆ$_1$ (<ತುಂಗ$_1$) + ಹುಲ್ಲು (<ಪುಲ್) ]

**ತುಂಟ** (ನಾ). ೧. ಕೀಟಲೆ ಮಾಡುವವನು; ತಂಟೆಕೋರ. ೨. ನೀಚ; ದುಷ್ಟ ; ಧೂರ್ತ : ಎನ್ನೊ[ಡೆ] ಹಿತಾನೀಕಕ್ಕೆ ಪುಲ್ಲಯ್ಕೆ ತುಂಟರ ಮುಂಬರ್ಪ್ಪವ (ಸೌಇಇ. XI–1, ೪೧-೩೨ ; 969); ಪೊಡವಿವಿಶ್ರುತನುದಯಿಸುವನುಗ್ಗಡದ ಬಂಟನು ತುಂಟನಪ್ರತಿ ವೀರ್ಯನವನೆಂದು (ಸಾಳ್ವಭಾ. ೨೦-೯೩) ; ತುಂಟರನು ಮರ್ದಿಸಿದ ಕದನ ಕಲಿಭೇರುಂಡ (ಬೀಳವಂ. ೧-೪) ; ತುಂಟನ ಕೈಯಲ್ಲಿ ಗಂಟು ಕೊಟ್ಟರೆ ಬಂಟ ನಂತಿರುವನು (ಗಾದೆ); ತುಂಟನಿಗೆ ನಂಟರೆಲ್ಲ ಬಂಟರ ಹಾಗೆ (ಗಾದೆ). ೩. ಪೋಲಿ ; ಪೋಕರಿ : ಹೆಂಗಳೆಯರು ಸ್ವಾವಲಂಬಿಗಳಾಗಿ ಆರ್ಥಿಕ ಸ್ವಾತಂತ್ರ್ಯ ಪಡೆದ ಬಳಿಕ ಗಂಡನೆಂಬ ತುಂಟನ ಕಾಟದಲ್ಲಿ ಏಕೆ ಸಿಲುಕಬೇಕು (ಯಕ್ಷಪ್ರ. ೧೫೬) ; ತಾವು ತಪ್ಪುಗಾರರಾದರೂ ಒಪ್ಪದೆ ಕುಳಿತುಕೊಂಡ ಹಳ್ಳಿಯ ತುಂಟರ ನೆರವಿ (ಗ್ರಾಳಗು. ೩). ೪. ಕುತ್ಸಿತವಾದ ಕೆಲಸ ಮಾಡುವವನು ; ಪಾಪಿ : ತುಂಟನವೋಲ್ಬೆಚ್ಚಡಿಗಳನಿಡುತಂ ಪೆಳವನವೋಲ್ಮೊಳಕಾಲಿಕ್ಕುತ್ತಂ (ಶೃಂಗೀರ.ಹ. ೪೭೪-೧). (ಗು). ೫. ಕುಚೋದ್ಯದ ; ಚೇಷ್ಟೆಯಿಂದ ಕೂಡಿದ. 'ತುಂಟನೋಟ' ಪರಾ. ೬. ದುಷ್ಟತನದಿಂದ ಕೂಡಿದ. ತುಂಟಕುದುರೆ ಪರಾ.

[ ದೇ.॥ ತಮಿ. ತುಣ್ಟ ; ಮಲ. ತುಣ್ಡ ; ತುಳು. ತೆಲು. ತುಂಟ ]

**ತುಂಟಕ** (ನಾ). = ತುಂಟ$_1$. 'ತುಂಟಕತನ' ಪರಾ. [ <ತುಂಟ ]

**ತುಂಟಕತನ** (ನಾ). = ತುಂಟತನ ೧ : ನೀನು ಆಡುವುದು ತುಂಟಕತನದ ಮಾತು (ಮುಂಬಯಿ. ೩-೮೨). [ ತುಂಟಕ + – ತನ ]

**ತುಂಟಕುದುರೆ** (ನಾ). ಪಳಗದ ಕುದುರೆ ; ಸಾಧುವಲ್ಲದ ಕುದುರೆ : ತುಂಟ ಕುದುರೆಗೆ ಗಂಟುಲಗಾಮು (ಗಾದೆ). [ತುಂಟ + ಕುದುರೆ]

**ತುಂಟಗಜ** (ನಾ). ಪಳಗದ ಆನೆ ; ಉಪದ್ರವಕಾರಿಯಾದ ಆನೆ: ಆ ತುಂಟಗಜವಂ ಹಿಡಿದು ತಾರದಿದ್ದರೆ ನನಗೆ ನಿದ್ರಾಹಾರ ರುಚಿಸದು (ಸೌಗಂಧಿ. ೨೪೫-೧೫). [ ತುಂಟ + ಗಜ ]

**ತುಂಟತನ** (ನಾ). ೧. ಕುಚೇಷ್ಟೆ ; ಕೀಟಲೆ ; ತಂಟೆ ; ಗುರುದೈವದ ಹೊರೆ ತುಂಟತನದಿ ಹುಸಿದಾ ಹುಸಿ ತನಗೇಳೆಂಟು ದಿವಸದೊಳಗೆ ಕಂಟಕಮಂ ಮಾಳ್ಪುದು (ಜಯಕಾ. ೧೦-೧೦) : ತುಂಟತನಗಳ ಬಲಿಸೋದು ರೊಕ್ಕ (ಪುರಂದ. ೨-೪೮-೨). ೨. ದುಷ್ಟತನ : ಕಾಕಾಸುರನ ತುಂಟತನವನ್ನು ಕೇಳಿ ರಾಮನು ಕೋಪದಿಂದ ಹತ್ತಿರಿದ್ದ ಒಂದು ದರ್ಭೆಯನ್ನು ತೆಗೆದು ಮಂತ್ರಿಸಿ ಆ ರಾಕ್ಷಸನ ಮೇಲೆ ಬಿಟ್ಟನು (ನೀತಿಚಿಂ. VIII, ೧೧). [ ತುಂಟ + – ತನ ]

**ತುಂಟನಗೆ** (ನಾ). ಕುಚೋದ್ಯದ ನಗು ; ಚೇಷ್ಟೆಯ ನಗು : ಮಾತಿನಲ್ಲಿ ತುಂಟನಗೆ ಲಾಸ್ಯವಾಡುತ್ತಿತ್ತು (ಮರಳಿ. ೪೬). [ ತುಂಟ + ನಗೆ ]

**ತುಂಟನೋಟ** (ನಾ). ಕುಚೋದ್ಯದ ದೃಷ್ಟಿ ; ಚೇಷ್ಟೆಯ ನೋಟ : ಅವನು ತುಂಟನೋಟ ಬೀರುತ್ತ ನಿಂತಿದ್ದನು (ರೂಢಿ). [ತುಂಟ + ನೋಟ]

**ತುಂಟಲ್** (ನಾ). ಬಿದಿರು : ಶಿಲೆಯೊಳ್ ನೀರೇಜಮೇಂ ನಾಂಟುವುದೆ ಮಳಲೊಳೀ ಗಾಣವಂ ಪೊಯ್ಯೆ ತೈಲಂ ತಲೆದೋಱಲ್ ಬಲ್ಲುದೇ ನೀರ್ಗಡೆಯೆ ಪಡೆವಿರೇ ಬೆಣ್ಣೆಯಂ ತುಂಟಲುಂ [ಪಾಠಾಂ. ಕುಟ್ಟಲುಯ್] ತಂಡುಲಮಂ ತಾನೀವುದೇ (ಮುಱಾನೇ. ೧೬-೭೩). [ ←ತಮಿ. ತುಣ್ಟಲ್ ]

**ತುಂಟಾಟ** (ನಾ). = ತುಂಟತನ$_1$ ೧ : ತುಂಟಜನರೊಡನೆ ಸೇರಿ ತುಂಟಾಟಗಳನ್ನು ಆಡಿಕೊಂಡು ಇರುವರೆಂದು ತಿಳಿದು (ಚಾಮುವಂ. ೯೭) : ಅತ್ಯಂತ ಕ್ಷುಲ್ಲಕವಾದ ಈ ಸಿಟ್ಟು ... ಹೋಗುವುದಿಲ್ಲ ಎಂದು ತುಂಟಾಟ ಮಾಡಿದರೆ, ನಾಲ್ಕು ಪೆಟ್ಟು ಕೊಟ್ಟರೆ ಹೇಳದೇ ಕೇಳದೇ ಓಡಿಹೋಗುತ್ತದೆ (ಬಿತಂಬಾ. ೨೬) ; ಮಕ್ಕಳ ಸ್ವಾಭಾವಿಕ ಆಸಕ್ತಿಗಳಿಗೆ ಅಡ್ಡಿ ಬಂದು ಮೊಂಡಾಟ ಮಾಡುವುದು ತುಂಟಾಟ ಮಾಡುವುದು ಮೊದಲಾದವು ಆರಂಭವಾಗುತ್ತವೆ (ಶಿಕ್ಷದ. ೬೫೬). [ ತುಂಟು + ಆಟ ]

**ತುಂಟಿ** (ನಾ). ೧. ಕೀಟಲೆ ಮಾಡುವವಳು : ಶುದ್ಧ ತುಂಟಿ, ಅವಳನ್ನು ಸೇರಿಸಬೇಡಿ (ರೂಢಿ). ೨. ಕೆಟ್ಟವಳು; ದುಷ್ಟೆ: ಸುಡುಗೀ ಸುಂದರಿ ತುಂಟಿ ತುಡುಗುಣಿ ನಿನ್ನುರದೆಡೆಯ ತೋಱುಗೆ (ಅಂಜಿಜ. ೯-೩೧). [ತುಂಟ + – ಇ$_2$]

**ತುಂಟು** (ನಾ). = ತುಂಟತನ ೧ : ಮುತ್ತಮ್ಮಗೀಗೀಗ ಮುದಿಕಳೆ ಬಂದರು . . . ನಗೆಯೊಳು ತುಂಟುಂಟು ಕಣ್ಣೊಳು ಕೊಂಕುಂಟು (ಇಂಚಾಪ.೧೯೬-೬೭).

[ ತುಂಟ + – ಉ$_4$ ]

**ತುಂಟುಗಾತಿ** (ನಾ). = ತುಂಟಿ ೧ : ಎಲ್ಲೆ... ತಂಟೆಗಳಂ ಮಾಡುವ ತುಂಟುಗಾತಿಯರೆ (ಸೌಗಂಧಿ. ೫೦೪-೧೦). [ ತುಂಟು + – ಕಾತಿ$_5$ ]

**ತುಂಟೆ** (ನಾ). = ತುಂಟಿ ೨ : ಮನೆಯ ಗೊಂಟಿನೊಳವಳ ಕೆಡಹಿ ನಡುವಿರುಳೊಳು ತುಂಟೆ [ಪಾಠಾಂ. ಟ] ಮನೆಯ ಪೊಱಮಟ್ಟು (ಪ್ರಭಂಜ. ೩-೧೧೭) : ಸಿತಗೆ . . . ಚದುರೆ . . . ತುಂಟೆ (ಶಬ್ದಾನು. ೧೯೭ ಪ್ರಯೋ).

[ ತುಂಟ + – ಎ$_2$ ]

**ತುಂಡ$_1$** 'ತೊಂಡ$_2$' ನೋ.

**ತುಂಡ$_2$** (ನಾ). ೧. ಆನನ ; ಮುಖ : "ವದನಮಾನನಮಾಸ್ಯಂ ಮುಖಂ ತುಂಡಂ ಲಪನಂ ವಕ್ತ್ರಂ ಮೊಗಕ್ಕೆ ನಾಮಂ" (ವಸ್ತುಕೋ. ೬೯-೧೫) ; "ವದನಂ...ಲಪನಮಾ ತುಂಡಮಾಸ್ಯಂ ಮೋಱು" (ಮಂಗರಾ. ೯೩-೧); ತುಂಡದೊಳಗಟ್ಟಹಾಸಂ ನಿವಿರೆ (ಸಿದ್ಧಪು. ೨೦-೬೪). ೨. ಹಕ್ಕಿಗಳ ಕೊಕ್ಕು : ಚಂಚು: " ಚಂಚೂಃ, ತುಂಡಃ, ತ್ರೋಟಿಃ – ಈ ೩ ಹಕ್ಕಿಯ ಮುಖಂ" (ಹಲಾಯು. ೪೦-೮೭) ; ವಿನತಾಪುತ್ರನ ವಜ್ರತುಂಡಹತಿಗಂ ಮೆಯ್ಯಾಂತು ... ಶಂಖಚೂಡನನಾನಂದದೆ ಕಾದ ಪೆಂಪೆಸೆಯೆ ನಾಗಾನಂದಮಂ ಮಾಡಿದಂ (ಪಂಪಭಾ. ೪-೨೬) ; ಸಿಂಹಾರಿಯಂ ತುಂಡದೊಳ್ ಪಿಡಿದು ಪಾಱುತ್ತು ಭೇರುಂಡನಾಗಳ್ (ಜಗವಿ. ೧೬-೦೪) : ಚರಿಸುತಾಕಾಶದೊಳು ಪಕ್ಷಿ ತುಂಡದೊಳು ಮಾಂಸವ ಕಚ್ಚಿ ಪಾಱುತಿರಲು (ಲಕಿಜಂ. ೩೯-೭೨) ; ಹಂಸ ತುಂಡದ ತುದಿಯ ತಾವರೆಗಚ್ಚಿನಲಿ ಬೆಚ್ಚಿದವು (ಕೊರರಾ. ೪-೦೦-೯). ೩. ಮೂತಿ ; ಮುಸುಡಿ : ಬಲನ ನೇಗಿಲ ಪೋಲ್ವ ತುಂಡ . . . ಮೆಱೆವ ಸೂಕರ ನಿರಲು ಕಂಡರಂತಾ ಬೇಡರು (ಹದಶಾ. ೬-೪) ; ಚಂಡವಿಕ್ರಮ ವಿಹಗೇಶನೆಂದೆನಿಸುವ ಗಂಡಭೇರುಂಡನ ತೆಱದೆ ತುಂಡಗಳೆರಡಾಗಲೊಡಲೊಂದು ನಮ್ಮಿತ್ತಂಡಕೆ ಭೇದವೆಲ್ಲಿಯದು (ಮೋಹತ. ೩೧-೪೨). ೪. ಆನೆಯ ಸೊಂಡಿಲು : ಬಳಿಕ ವಾರಕಭಕ್ತರು . . . ಪೋಗಿ ಗಜತುಂಡಮಂ ಖಂಡಿಸಿ (ಪುರಾವಿ. ೭೮). ೫. ಬಾಣ ಮೊದಲಾದ ಆಯುಧಗಳ ತುದಿ. ೬. ತಲೆ ; ಶಿರಸ್ಸು : "ತುಂಡಮೆನೆ ಮುಂಡಮಕ್ಕು" (ಮಂಗರಾ. ೧೧೭-೬). ೭. ಬಾಯಿ. [ ಸಂ. ]

**ತುಂಡಂಗಿ$_1$** (ನಾ). ತೋಳುಗಳಿಲ್ಲದ ಅಂಗಿ : ಮೈಗೆ ಕೈಗಳಿಲ್ಲದ ತುಂಡಂಗಿ. ಅದರ ಮೇಲೆ ದಪ್ಪನಾದ ಹಳೆ ದುಪ್ಪಟಿ (ನಿಷ್ಕಾಮ. ೨೯) ; ತುಂಬಿದ ಸಂತೇಲಿ ನನ್ನ ತುಂಡಂಗಿ ಮಗನ್ನ ಕಂಡ್ರಾ ಅಂದಳಂತೆ (ಹುಟ್ಟಿಹ. ೧೧೩). [ ತುಂಡು$_1$ + ಅಂಗಿ$_2$ ]

**ತುಂಡಂಗಿ$_2$** 'ತೊಂಡಂಗಿ' ನೋ.

**ತುಂಡಕೇರಿ** (ನಾ). = ತುಂಡಿಕೇರಿ. [ ಸಂ. ತುಂಡಕೇರೀ ]

**ತುಂಡತನ** 'ತೊಂಡತನ' ನೋ.

**ತುಂಡಮಾಣಿಕ** (ನಾ). ಕೆಂಪುಬಣ್ಣದ ಕೊಕ್ಕುಳ್ಳ ಹಕ್ಕಿ; ಗಿಳಿ; ಶುಕ: ಮಂಡಳಿಸಿದ ಪುಷ್ಪರಥ...ಚೈತ್ರಸೂತ ತುಂಡಮಾಣಿಕ ವಾಜಿ ಕುಣಿಯಲ್ಕೆ ಕುಸುಮಕೋದಂಡ ಬಂದಡರ್ದನಲ್ಲಿಯಲಿ (ಮೋಹತ. ೬-೧೩). [ ತುಂಡ₂ + ಮಾಣಿಕ ]

**ತುಂಡರಸ, ತುಂಡರಸು** (ನಾ). ಪಾಳೆಯಗಾರ; ಮಾಂಡಲಿಕ: ಅಲ್ಲಲ್ಲಿ ತುಂಡರಸರ ಉಪಟಳ ಬಹಳ (ಬಾಲಪ್ರ. II, ೯೫೦); ಒಂದು ಕಾಫಿತೋಟ ವೆಂದರೆ ಒಂದು ತುಂಡರಸನ ರಾಜ್ಯವೆಂದೇ ಹೇಳಬಹುದು (ರಕ್ತರೂ. ೬೪). **ತುಂಡರಸು**: ಮೂರನೆಯ ಗೋವಿಂದನು ರಾಯಭಾರಿಯನ್ನು ಕಳುಹಿದುದು ... ತುಂಡರಸುಗಳಾಗಿರಬಹುದಾದ ಮೂಡಣ ಚಾಳುಕ್ಯರಾಜರಲ್ಲಿ ಗಾಗಿರಲಾರದು (ನಾಡೂಜ. ೩೪). [ ತುಂಡು₁ + ಅರಸ₁ ]

**ತುಂಡರಸು** 'ತುಂಡರಸ' ನೋ.

**ತುಂಡರಿಸು** (ಕ್ರಿ). ತುಂಡುಮಾಡು; ಭಾಗಮಾಡು; ಕತ್ತರಿಸು: ತುಂಡರಿಸಿ ಹುಲಿಯೊಡಲ ಸುಂಟಿಗೆಯು ನೋಳ್ಪಂ (ಕಾಲೂರ. ೮೪-೧೬೦); ಕೈಗೊಡಲಿಯಿಂದಿಕ್ಕಿದೆನ್; ತುಂಡರಿಸಿ ಕೆಡೆದುದಿಳೆಗೆ (ಚಂದ್ರಸ. ೫೯-೧೯); ಹಾವುಗಳನ್ನು ಸಿಕ್ಕಿದಲ್ಲಿ ತುಂಡರಿಸಲು ರಾಜನು ಏರ್ಪಾಡು ಮಾಡಿದನು (ಮುಡಿಸ. ೪೨). [ < ತುಂಡು₁ + –ಇಸು₃ ]

**ತುಂಡಾಂಡಿ** 'ತುಂಡಾಡಿ' ನೋ.

**ತುಂಡಾಡಿ, ತುಂಡಾಂಡಿ** (ನಾ). ೧. ದಷ್ಟಪುಷ್ಟವಾಗಿರುವವನು; ದಾಂಡಿಗ; ಧಡಿಯ: ತುಂಡಾಡಿಗಳು ಊರಿನಲ್ಲಿರುವವರ ಪೈಕಿಯಲ್ಲಾ ಹೆಚ್ಚು ಶಕ್ತರಾದವರು (ಗರುಡಾ. ೫೯). ೨. ಕೆಲಸಕ್ಕೆ ಬಾರದವನು; ಪೋಲಿ; ಪೋಕರಿ: ದೇವರ ದರ್ಶನಕ್ಕೆ ಬರಿಗೈಯನ ತುಂಡಾಡಿಗಳಾಗಿ ಹೋದರೆ ಪೂಜಾರಿಗಳು ಪ್ರಸಾದ ಕೊಟ್ಟಾರೆ? (ಶ್ರೀರಾಯ. ೩). **ತುಂಡಾಂಡಿ**: ೧. ಅನೇಕ ಜನ ತುಂಡಾಂಡಿಗಳು ನನ್ನನ್ನು ಹಿಡಿಯುವುದಕ್ಕೆ ಬಂದರು (ಮುಕುಗ. ೧೪೭). ೨. ತುಂಡಾಂಡಿಯಾಗಿ ಸಿಳ್ಳು ಹಾಕುತ್ತ ಚಪ್ಪಾಳೆ ಬಡಿಯುತ್ತಾ ಮಲಗಿದ್ದನು (ಪುಟ್ಟರ. ೬೪). [ ತುಂಡು₂ (<ತೊಂಡು₁) + –ಆಡಿ₁ ]

**ತುಂಡಾಡಿಗ** (ನಾ). = ತುಂಡಾಡಿ ೧: ಆ ಗುಂಪಿನಲ್ಲಿ ನೆಕ್ಲುದೋವ್ ... ವಿಕಾರಾಕೃತಿಯ ತುಂಡಾಡಿಗನನ್ನೂ ಗಮನಿಸಿದನು (ಪುನರು. ೫೦೬). [ ತುಂಡು₂ ( < ತೊಂಡು₁ ) + –ಆಡಿಗ ]

**ತುಂಡಿ₁** (ನಾ). ಕೆಟ್ಟವಳು; ದುಷ್ಟೆ: ಖಂಡಗ ತಿನ್ನಂದ್ರು ಇಳ್ಳಿಂಡ್ಲ ತಿನ್ನಂಥ ತುಂಡಿನ ತಂದ್ಕೂಡೊ ನಮ ಜೀವ ಹೋದಾವೊ ಕೈಲಾಸಕ (ಮಲ್ಲಿಗೆ. ೨೭). [ ತುಂಡ₁ ( < ತೊಂಡ₂ ) + –ಇ₂ ]

**ತುಂಡಿ₂** (ನಾ). ೧. ಕೊಕ್ಕು. ೨. ಬಾಯಿ. ೩. ಹೊಕ್ಕುಳಂ; ನಾಭಿ. ೪. ಚಾಚಿಕೊಂಡಿರುವ ಹೊಕ್ಕುಳಂ; ಎದ್ದು ಕಾಣುವ ಹೊಕ್ಕುಳಂ: "ತುಂಡಿ[ನಾಕಾಂ.ದಿ]ಯೆನೆ ಬುಗುಡುಹೊಕ್ಕುಳುಮೆನಿಕ್ಕು" (ಮಂಗರಾ. ೧೦೪-೫). [ ಸಂ. ]

**ತುಂಡಿಕ** (ಗು). ೧. ಸೊಂಡಿಲುಳ್ಳ. ೨. ಮೂತಿಯುಳ್ಳ. [ ಸಂ. ]

**ತುಂಡಿಕೆ** (ನಾ). ತೊಂಡೆಗಿಡ; ಬಿಂಬದ ಬಳ್ಳಿ: "ಓಪ್ಪಿ ತುಂಡಿಕೆ ಬಿಂಬಿ ತೊಂಡೆಯಕ್ಕುಂ" (ಮಂಗರಾ. ೩೮-೨೫). [ ಸಂ. ತುಂಡಿಕಾ ]

**ತುಂಡಿಕೇರಿ** (ನಾ). ೧. ಹತ್ತಿಗಿಡ: "ತುಂಡಿಕೇರೀ, ಸಮುದ್ರಾಂತಾ, ಕಾರ್ಪಾಸೀ, ಬದರಾ ಈ ೪ ಹತ್ತೀಗಿಡದ ಹೆಸರು" (ಸಿದ್ಧಾಂತಿ. ೧೨೦). ೨. ತೊಂಡೆಬಳ್ಳಿ: "ತುಂಡಿಕೇರೀ, ರಕ್ತಫಲಾ, ಬಿಂಬಿಕಾ, ಪೀಲುಪರ್ಣೀ ೪ ತೊಂಡೇಗಿಡದ ಹೆಸರು, ಕೆಂಪು ತೊಂಡೇಗಿಡ" (ಸಿದ್ಧಾಂತಿ. ೦೨೬). ೩. ಒಂದು ಬಗೆಯ ಗಂಟಲುರೋಗ: ಉರಿ, ನೋವು, ಬಾವುಗಳಿಂದ ಕೂಡಿ ಇದ್ದರೆ ತುಂಡಿಕೇರಿ ಎಂಬ ತಾಲುರೋಗವೆಂದಱಿವುದು (ವೈದ್ಯಸಾ. II, ೧೧೪). [ ಸಂ. ತುಂಡಿಕೇರೀ ]

**ತುಂಡಿಕೇಶಿ** (ನಾ). ತೊಂಡೆಬಳ್ಳಿ: "ತುಂಡಿಕೇಶಿ=ತೊಂಡೀಬಳ್ಳಿ" (ಗಂಗಾಮು. ೧೫೪). [ ಸಂ. ತುಂಡಿಕೇಶೀ ]

**ತುಂಡಿಕ್ಕು** (ಕ್ರಿ). ಸೊಂಡಿಲನ್ನು ನೀಡು (?): ತಾರಾಮಂಡಲಕೆ ತುಂಡಿಕ್ಕುವಂತೆ ಬಲ ಭೂರಿ ಸೂರ್ಯಸಮಾನದೇಳ್ಗೆಯಲಿ (ಸೌಂದಕಾ. ೫-೦೫). [ ತುಂಡ₂ + ಇಕ್ಕು ]

**ತುಂಡಿಗೆ** (ನಾ). = ತುಂಡಿ₂ ೩: ಖಂಡ ಕರುಳೆಲು ಕೊವಲ್ಗರ ತುಂಡಿಗೆ ಮಿದುಳಡಗು ತೊರಳೆ ನೆಣವಸೆ ನೆತ್ತರ್ಗೊಂಡ ಕಾಳಿಜಿಗಳಿಂ (ಕಳಸ್ನ. ೨-೪೬). [ < ಸಂ. ತುಂಡಿಕಾ ]

**ತುಂಡಿಭ** (ನಾ). = ತುಂದಿಲ. [ ಸಂ. ]

**ತುಂಡಿಲ** (ನಾ). = ತುಂದಿಲ. [ ಸಂ. ]

**ತುಂಡಿಸು₁** (ಕ್ರಿ). ೧. = ತುಂಡರಿಸು: ನಟ್ಟಡವಿಯೊಳಗೆ ಮುಳಿಸಿಂ ಮುಂಟ್ಟುವ ನಾಯ್ಗಳನೆ ತುಂಡಿಸಲ್ಕೆಂದು (ಗಿರಿಕ. ೧-೧೦೩); ನೋಟವು ನಿಕ್ಕಡಿ ಮಾಡುವಂತೆ ಕಂಡ ಸುಖಮಂ ತುಂಡಿಸುವಂತಿತ್ತಿದ ಜವನಿಕೆಯಂ ಭೋಂಕನೆ ಸಡಿಲ್ಚಿ (ಸಂಚಿರ. ೧೨-೫೭); ಅಂಬಿನಿಂದಾ ಹಣ್ಣನೆಚ್ಚು ತುಂಡಿಸಿದ ನೇನೆಂಬೆನವನ ಚಮತ್ಕೃತಿಯಾ (ಭರಜ. ೩೦-೭೭); ಖಂಡೆಯಗಳ ಪೆಟ್ಟಿನೊಳಗೆ ಗುರಾಣಿಗಳ್ತುಂಡಿಸಿ ತಲೆ ಸೀಳಾಗಿ ಖಂಡಿಸಿ (ಕಂಸವಿ. ೦೪-೬೪); ನಾಶಮಾಡಿ ಈಷಣಂಗಳನು ಕ್ಲೇಶ ತುಂಡಿಸಿ ಹಾಕಿದರಿಗೆ (ಜಿದಾವ.೦೬೨-೦೩). ೨. ಖಂಡಿಸು: ಪರಮತಮಂ ತುಂಡಿಸಿ ಕರಕರನೆ ಜಯವ ಪಡೆದ ನಿಲ್ಲಿ ಲಕ್ಷ್ಮಣಮುನಿಪಂ (ಮೈಸೂಮ. ೨-೬೯). [ ತುಂಡು₁ + –ಇಸು₃ ]

**ತುಂಡಿಸು₂** (ಕ್ರಿ). ಕೊಕ್ಕಿನಿಂದ ಕುಕ್ಕು,–ಕುಟುಕು: ಹೆಚ್ಚದ ಹೆಟೆ ಗಿಳಿ ತುಂಡಿಸದಾಲದ ಪಣ್...ಎನೆಯುನಿದುಟಿ ಸೊಗಯಿಸಿತು (ಜಯುಕಾ. ೩-೧೧). [ ತುಂಡ₂ + –ಇಸು₃ ]

**ತುಂಡು₁** (ನಾ). ೧. ಚೂರು; ಹೋಳು; ತುಣುಕು; ಭಾಗ: "ತುಂಡಿನಲ್ಲಿ ಕಂಡಿಕೆಯೆಂಬುದಕ್ಕು" (ಕಬ್ಬಿಕ್ಕೆ. ೬೩); ಈರಾಬು ತುಂಡಹ ಬಿಳಿಯಲೆಯು ತಂದಿಟ್ಟಣಿಸಿದರಬಲೆಯರು (ಅಂಜಜ. ೮-೪೯); ಬಾಳೆಯ ಕಾಯ ತುಂಡಿನೊಳು ಸಕ್ಕರೆ ಹುರಿದ ಮೆಣಸು ಹುರಿದೆಳ್ಳು ತುಪ್ಪದೊಳಗಿಕ್ಕಿ (ಸೂಪಶಾ. ೪-೮೭); ಶರ್ಮವಿಲ್ಲದ ಗಂಡು ಕರಿಯ ಒನಕೆಯ ತುಂಡು (ಕನಕ. ೫೦-೨). ೨. (ದಂಡಿನಲ್ಲಿ) ಒಂದು ದಳ; ತುಕಡಿ: ಮುಂದಿನ ತುಂಡು ಮಾತ್ರ ಮುಂದೆ ಸಾಗಿತು. ನಾವು ಅಲ್ಲೆ ಬಿದ್ದುಕೊಂಡೆವು (ಮೇದಿಮು. ೧೯೨). ೩. ಬಟ್ಟೆಯ ಸಣ್ಣ ಭಾಗ; ಚೂರುಬಟ್ಟೆ: ತುಂಡಿಲ್ಲ ದವನಿಗೆ ತುಂಟನ ಭಯವೇಕೆ? (ಗಾದೆ): ನನ್ನ ಗೆಳೆಯ ಮನೆಯೊಳಗೆ ಯಾವಾಗಲೂ ಒಂದು ತುಂಡು ಕಟ್ಟಿಕೊಂಡು ಇರುತ್ತಾನೆ (ರೂಢಿ). ೪. ಹೊಲ, ಗದ್ದೆ ಮೊದಲಾದಂವುಗಳ ಭಾಗ,–ಸೀಳು: ಅವರಿಗೆ ಕೆರೆ ಹಿಂದೆ ಎರಡು ತುಂಡು ಗದ್ದೆ ಇದೆ (ರೂಢಿ). ೫. ಮಾಂಸ: ಮುಖಂಡರಿಗೆಲ್ಲಾ ಚೆನ್ನಾಗಿ ತುಂಡು ಕಡುಬು ಕಳ್ಳುಗಳ ಹಬ್ಬ ಮಾಡಿಸಿ ಬಾಯಿಗೆ ಬೀಗಮುದ್ರೆ ಮಾಡಿ ಕಳುಹಿಸಿದ್ದನು (ಮಲಮು. ೦೨).

**ತುಂಡಾಗು** = ಹೋಳಾಗು; ಭಾಗವಾಗು; ಕತ್ತರಿಸಿಹೋಗು: ದ್ವಿಜರಾಜಂಗೆಣೆಮಂದು ಚಕ್ರಹತಿಯಿಂ ಸ್ವರ್ಭಾನು ತುಂಡಾಗನೇ (ಸೋಮೇಶ. ೪೫); ಬಲರಾಮನ ಕೆಯ್ಯ ಕಾರ್ಮುಕ ಕೆಡೆದುದು ತುಂಡಾಗಿ ನೆಲಕೆ (ಮೋಹತ. ೩೮-೫೮). **ತುಂಡುಮಾಡು** = ಚೂರುಮಾಡು; ಭಾಗಮಾಡು: "ಖಂಡಿಸು=ತುಂಡುಮಾಡು" (ಗಂಗಾಮು. ೦೦೭); ತರಕಾರಿ ಮತ್ತು ಮಾಂಸಗಳನ್ನು ತುಂಡುಮಾಡಲು ಹಾಗೂ ಮೀನು ತೊಳೆಯಲು ಹಲಿಗೆಗಳು ಬೇಕಾಗುವುವು (ಅಡುಶಾ ೩೪); ತುಂಡು ಮಾಡಿದರೂ ನೀರು ಒಂದಾಗದೆ ಇರದು (ಗಾದೆ).

[ ದೇ.॥ ತಮಿ. ತುಣ್ಣು; ಮಲ. ತುಣ್ಣು; ತುಳು. ತುಂಡು; [illegible]. ತುಂಡ್; ತೆಲು. ತುಂಡು ]

**ತುಂಡು$_2$** 'ತೊಂಡು$_1$' ನೋ.

**ತುಂಡು$_3$** (ನಾ). ಒಂದು ಬಗೆಯ ಮರ: ತುಂಡು, ದೇವದಾರ — ಎತ್ತರವಾಗಿ ಬೆಳೆಯುತ್ತದೆ. ತೊಲೆ ನಸುಗೆಂಪು, ಹಗುರು (ಕಭಾಗೆ. ೪೦).
[ ? ]

**ತುಂಡುಕೊಡಲಿ** (ನಾ). ಸಣ್ಣಕಾವುಳ್ಳ ಕೊಡಲಿ; ಕೈಗೊಡಲಿ: ಅಗಲವಾದ ಅಲಗಿನ ತುಂಡುಕೊಡಲಿ; ಕಟುಕನ ಕಡಿಗತ್ತಿ; ಮಚ್ಚುಕತ್ತಿ (Chopper. ಇಂಕನಿ). [ ತುಂಡು$_1$ + ಕೊಡಲಿ ]

**ತುಂಡುಗ** (ನಾ). ಮಲೆತವನು; ಹಗೆ: ಗಂಡುಗಲಿ ರವಿತನಯ ಮಿಟ್ಟಿಯಂ ಕೊಂಡೆಸಲ್ ತುಂಡುಗರು ಮುರಿದೋಡಿ ಬೀಳುತ್ತ ಕರದ ಕೋದಂಡಮಂ ಬೀಸಾಕಿ (ತುರಂಗ. ೬೯-೧೦).
[ ತುಂಡು$_2$ (<ತೊಂಡು$_1$) + -ಗ$_2$ ]

**ತುಂಡುಗಂಬಳಿ** (ನಾ). ಕಂಬಳಿಯ ಒಂದು ಭಾಗ, – ಸೀಳು: ಮಂಡೆ ಬೋಳಿಸಿಕೊಂಡು ತುಂಡುಗಂಬಳಿ ಹೊದ್ದು ಹಿಂಡನಗಲಿದ ಮದಗಜ ದಂತಿಹರ ಕಂಡು ನಂಬುವುದು (ಸರ್ವಜ್ಞ. ಬ. ೯೩೮).
[ ತುಂಡು$_1$ + ಕಂಬಳಿ ]

**ತುಂಡುಗಡಿ** (ಕ್ರಿ). ೧. ಹೋಳಾಗುವಂತೆ ಕತ್ತರಿಸು, – ಭಾಗಮಾಡು. ೨. ಕತ್ತರಿಸಿಹೋಗು; ಭಂಗವಾಗು; ನಿಂತುಹೋಗು: ತುಂಡುಗಡಿದಿದ್ದ ವಿನೋದವಿಚಾರವನ್ನು ಪ್ರಸ್ತಾಪಿಸಿ ಗಂಡನ ಮನಸ್ಸನ್ನು ರಮಿಸಲೆಳಸಿದಳು (ಮಲಮ. ೪೭೪). [ ತುಂಡು$_1$ + ಕಡಿ$_2$ ]

**ತುಂಡುಗಿಡಿ** (ನಾ). ಸಣ್ಣ ಕಿಡಿ; ಸ್ಫುಲಿಂಗ; ಅಗ್ನಿಕಣ: ತುಂಡುಗಿಡಿಗಳ ತೂಱುಗಿಡಿಗಳ ಗುಂಡುಗಿಡಿಗಳ ಘಾಡಣೆಯ ಕಿಡಿ ಚಂಡಿಯಾಯ್ತು ಚತುರ್ವದನನಿರ್ಮಿತ ಮಹಾಭವನ (ತೊರರಾ. ೫-೮-೮೩).
[ ತುಂಡು$_1$ + ಕಿಡಿ ]

**ತುಂಡುಗೂದಲು** (ನಾ). ಮೋಟಾದ ಕೂದಲು; ಮೊಂಡುಕೂದಲು: ಆ ತುಂಡುಗೂದಲಿನ ಹೆಂಗಸರಿಗೆ ತಮ್ಮ ವಿಚಾರವೆಲ್ಲ ಗೊತ್ತು (ಪುನರು. ೩೩೦). [ ತುಂಡು$_1$ + ಕೂದಲು (<ಕೊಂದಲ್) ]

**ತುಂಡುಗೆಯ್**, ತುಂಡುಗೈ (ಕ್ರಿ). ತುಂಡುಮಾಡು; ಚೂರುಮಾಡು: ಹವಣಱಿದು ಮಾಂಸಮಂ ತುಂಡುಗೆಯ್ದು ಪೂಪ್ಪಡಿದವಱಲ್ಲಿ ವಲ್ಲೂರ ಮೆನಿಸಿಕ್ಕು (ಮಂಗರಾ. ೬೫-೩). **ತುಂಡುಗೈ**: ಬಾಲವನಕಾಲದಲಿ ಖಂಡಿಸಿದೆ – ಕಾಲನೇ ಲೀಲೆಯಾ ಚಾಮರವ ತುಂಡುಗೈದೆ (ಕಎಪು. ೪೨-೨).
[ ತುಂಡು$_1$ + ಕೆಯ್$_1$ ]

**ತುಂಡುಗೈ** 'ತುಂಡುಗೆಯ್' ನೋ.

**ತುಂಡುತನ** 'ತೊಂಡುತನ' ನೋ.

**ತುಂಡುದೇವರು** (ನಾ). ಕೆಟ್ಟ ದೇವರು; ಕಿರುಕುಳ ದೈವ; ಕ್ಷುದ್ರ ದೇವತೆ: ತುಂಡುದೇವರಿಗೆ ಪುಂಡುಪೂಜಾರಿ (ಗಾದೆ).
[ ತುಂಡು$_2$ (<ತೊಂಡು$_1$) + ದೇವರು (<ದೇವರ್) ]

**ತುಂಡುದೊರೆ** (ನಾ). ಸಣ್ಣರಾಜ; ಪಾಳೆಯಗಾರ: (೬).
[ ತುಂಡು$_1$ + ದೊರೆ$_3$ ]

**ತುಂಡುಪಂಚೆ** (ನಾ). ೧. ಮೋಟಾದ ಪಂಚೆ: ಕುಳ್ಳಾಗಿರುವವರಿಗೆ ಉಡುವುದಕ್ಕೆ ತುಂಡುಪಂಚೆಯೇ ಸರಿ (ರೂಢಿ). ೨. ಸ್ನಾನದ ಪಂಚೆ; ಪಾಣಿಪಂಚೆ: ಅವರಾಗಲೇ ತುಂಡುಪಂಚೆಯುಟ್ಟು ನೀರಿಗೆ ಇಳಿದಿದ್ದಾರೆ (ರೂಢಿ). [ ತುಂಡು$_1$ + ಪಂಚೆ ]

**ತುಂಡುಪದ** (ನಾ). ಚಿಕ್ಕಹಾಡು; ಸಣ್ಣಗೀತೆ; ಕುರುಂಕುಪದ: ಇಂಥ ದೇಶಿಗಳೊಳಗೆ ನಮ್ಮ ಯಕ್ಷಗಾನ-ತುಂಡುಪದ-ಜೋಗುಳ ಮೊದಲಾದ ಹಾಡುಗಳೂ ಸೇರುತ್ತಿವೆ ಎನ್ನಬೇಕು (ನಾಡೋಜ. ೨೩೦).
[ ತುಂಡು$_1$ + ಪದ$_2$ ]

**ತುಂಡುಮನ್ನೆಯ** (ನಾ). ಕೆಟ್ಟವನಾದ ಸಾಮಂತ; ದುಷ್ಟ ಸಾಮಂತ: ಮತ್ತಂ ಕೆಲಂಬರ್ ತುಂಡುಮನ್ನೆಯರುಮೊಂದಾಗಿ ಪುಂಡೆದ್ದು ದಾಳಿವಱು ದಾರುಮಂ ಬಗೆಯದೆ ರಾಜ್ಯಮಂ ಬಾಧಿಸುತ್ತುಮಿರಲು (ಕಳಸ್ನ. ೧-೬೦೫).
[ ತುಂಡು$_2$ (< ತೊಂಡು$_1$) + ಮನ್ನೆಯ ]

**ತುಂಡುಮೂಳ** (ನಾ). ಅಲ್ಪನಾದ ವ್ಯಕ್ತಿ; ತುಚ್ಛವ್ಯಕ್ತಿ: ಕಂಡ ಕಂಡೂರುಗಳ ತಿರುಗುತ ಕಂಡಕಂಡರ ಮನೆಗೆ ಹೊಕ್ಕರೆ ತುಂಡುಮೂಳನು ಆಗಿ ಸುಮ್ಮನೆ ಕೆಟ್ಟೆನಕಟಕಟ (ಸುಸಾರ. ೧೦೦-೧).
[ ತುಂಡು$_2$ (< ತೊಂಡು$_1$) + ಮೂಳ (< ಮೂಱ) ]

**ತುಂಡುಲಂಗ** (ನಾ). ಮೋಟಾದ ಲಂಗ: ಪಾಶ್ಚಿಮಾತ್ಯಸ್ತ್ರೀಯರು ಹೆಚ್ಚಾಗಿ ತುಂಡುಲಂಗ ಧರಿಸುತ್ತಾರೆ (ರೂಢಿ). [ ತುಂಡು$_1$ + ಲಂಗ ]

**ತುಂಡುವಕೀಲ** (ನಾ). ವಕೀಲನಾಗಿ ವೃತ್ತಿ ನಡೆಸಲು ತಕ್ಕ ಅರ್ಹತೆಯಿಲ್ಲದಿದ್ದರೂ ವಕೀಲನಂತೆ ವ್ಯವಹರಿಸುವವನು; ಪುಟಲಾಯರು: ಕಾನೂನುಗಳ ಅಲ್ಪ ಸ್ವಲ್ಪ ಪರಿಚಯ ಪಡೆದ ಆತನು ಹಳ್ಳಿಯ ಮಟ್ಟಿಗೆ ಒಬ್ಬ ತುಂಡುವಕೀಲನೇ ಆಗಿದ್ದನು (ಕುರುಕಾ. ೧೪೦).
[ ತುಂಡು$_1$ + ವಕೀಲ ]

**ತುಂಡುವಡೆ** (ಕ್ರಿ). ಭಾಗವಾಗು; ಬೇರ್ಪಡು; ಪ್ರತ್ಯೇಕವಾಗು: ಬಂಗಾಳಿಗಳು ವಾಸಮಾಡುತ್ತಿರುವ ಪ್ರಾಂತವು ಬಹುಕಾಲದಿಂದ ಭರತಖಂಡದ ಮಿಕ್ಕ ಪ್ರದೇಶದಿಂದ ತುಂಡುವಡೆದು ಬೇರೆಯಾಗಿದೆ (ನಿಬಂಧ. II. ೧೪೦). [ ತುಂಡು$_1$ + ಪಡೆ$_1$ ]

**ತುಂಡುಸೀರೆ** (ನಾ). ೧. ಸೀರೆಯ ಚೂರು: ಉಪಯೋಗಕ್ಕೆ ಬರುತ್ತದೆ ಎಂದು ಹೆಂಗಸರು ತುಂಡುಸೀರೆಯನ್ನೂ ಬಿಡದೆ ಎತ್ತಿಡುವುದುಂಟು (ರೂಢಿ). ೨. ಕಿರಿಗೆ: ಕುಳ್ಳಗಿರುವುದರಿಂದ ಇವಳಿಗೆ ತುಂಡುಸೀರೆಯೇ ಸಾಕು (ರೂಢಿ). [ ತುಂಡು$_1$ + ಸೀರೆ$_2$ ]

**ತುಂತಕ** (ನಾ). ತೊಂದರೆ; ವ್ಯಥೆ; ನೋವು: ಈ ಮಹಾಪರೂತದುಳ್ ಅಕ್ಷಯಕೀರ್ತಿ ತುನ್ತಕದ ವಾರ್ಧಿಯ ಮೇಲದು ನೋನ್ತು ಭಕ್ತಿಯಿಮ್ ಅಕ್ಷಿಮಣಿಕ್ಕೆ ರಮ್ಯಸುರಲೋಕಸುಕಕ್ಕೆ ಭಾಗಿ ಆ × × × (ಎಕ. II ೨೦-೩; 700). [ ? ]

**ತುಂತುಗೆಯ್** (ಕ್ರಿ). ತಂತ್ರಮಾಡು: ಅಬ್ಬೆ ತಿಳಿದೊಡೆ ತಾನಲಸದೆಳ್ಳೊಂದೋದನಮನಿಕ್ಕಿ ತುಂತುಗೆಯ್ದೂಡುವಂ ಮ ನ ದ ಣ ವಿ ನಿ ಂ (ಅರಾಜ. ೧೧-೨೮). [ ತುಂತು$_0$ (< ತುತ್ತು$_2$) + ಕೆಯ್$_1$ ]

**ತುಂತುಣಿ**, ತಂಣ್ತುಣಿ (ನಾ). ಒಂದು ಬಗೆಯ ತಂತಿವಾದ್ಯ: ಎಲ್ಲವ್ವ ದೇವತೆಯ ಭಕ್ತರು ... ಚೌಡಕಿ, ತುಂತುಣಿ, ಸೂರು, ಗೆಜ್ಜೆ, ತಾಳ ಮೊದಲಾದುವುಗಳ ಸಂಗಜೋಡಣೆ ಹಾಡಿ ವರುಷದಲ್ಲೆಲ್ಲ ಕಾಣಿಯುವರು (ಕನ್ನಜಾ. ೩೦); ಸಖ್ಯಾ ತುಂತುಣಿಯ ಟಿಂವ್ ಟಿಂವ್ ಮಾಡಿದ (ದೀಪಹ. II, ೩೮೮). **ತುಣ್ತುಣಿ**: ಈಗಿನ ಲಾವಣಿಕಾರರು ದಪ್ಪ ಹಾಗು ತುಣ್ತುಣಿಗಳನ್ನು ಜೋಡಣೆಮಾಡಿ ಹಾಡುತ್ತಾರೆ (ಕನ್ನಜಾ. ೯೩).
[← ಮರಾ. ತುಣ್‌ತುಣೇ]

**ತುಂತುರು** 'ತುಂತುಱ್' ನೋ.

**ತುಂತುರುಮಳೆ** (ನಾ). ಸಣ್ಣಸಣ್ಣ ಹನಿಗಳಿಂದ ಕೂಡಿದ ಮಳೆ; ಸೋನೆಮಳೆ; ತೂಪರು: ತುಂತುರುಮಳೆಯಿಂದ ತೂಬಿನ ಕೆರೆ ತುಂಬೀತೆ? (ಗಾದೆ). [ತುಂತುರು (< ತುಂತುಱ್)+ಮಳೆ (< ಮೞೆ)]

**ತುಂತುರುಹನಿ** 'ತುಂತುರ್ವನಿ' ನೋ.

**ತುಂತುರ್ಗಿಡಿ** (ನಾ). ಸಣ್ಣಸಣ್ಣ ಬೆಂಕಿಯ ಕಣ: ಹೊಗೆಯ ಹೊರಳಿಯ ಬಾಯ ಧಾರೆಯಲಗಿವ ತುಂತುರ್ಗಿಡಿಯ ಮುಮ್ಮೊನೆ ನೆಗೆವ ದಳ್ಳುರಿ ಮಸಗೆ (ಕಾಶಿರಾ. ೨೦-೬೦). [ತುಂತುಱ್ + ಕಿಡಿ]

**ತುಂತುರ್ಪನಿ** 'ತುಂತುರ್ವನಿ' ನೋ.

**ತುಂತುರ್ವನಿ, ತುಂತುರುಹನಿ, ತುಂತುರ್ಪನಿ** (ನಾ). ಬಹಳ ಸಣ್ಣ ಹನಿ ; ಶೀಕರ ; ಸೋನೆ : "ಪೃಷತ್, ಪೃಷತಃ—ಈ ೨ ತುಂತುರ್ವ [ಪಾಠಾಂ. ರ್ಬ]ನಿ" (ಹಲಾಯು. ೧೧೨-೫೫) ; ತಿಳಿನೀರ ತುಂತುರ್ವನಿಗಳಿಂ ಪೊರೆದೆಳೆವಾಟೆಯ ಸುಟಿಯ ಬಿಜ್ಜಣಿಗೆಗಳಿಂ ಅಡಿಗಡಿಗೆ ಬೀಸಿಯುಂ (ಕಾದಂಪೂ. ೮೫೫); ಒಡನಾಡಿಗಳಡಿಗಡಿಗೆ ತಳಿವ ಪನ್ನೀರ ತುಂತುರ್ವನಿಗಳಿಂ (ಶಬ್ದಕಾ. ೩೦೫); ಜಡಿವ ತುಂತುರ್ವನಿಗಳನು ಬಿರುಗಾಳಿ ಮೊಗೆವವೊಲನಿತು ಸೆಲ್ಲೆಹ ಶರವಳೆಯ ಗದೆಯಿಂದ ಘಟ್ಟಿಸಿದ (ಕುವ್ಯಾಗ. ೧-೫೫) ; ಸುಖಜಲ ಕ್ರೀಡೆಯೊಳ್ಚೆಲ್ವ ತಿಳಿನೀರ ತುಂತುರ್ವನಿಗಳೆಸೆದಿರ್ದುವು (ಜೈಮಿಭಾ. ೩೦-೧೧). **ತುಂತುರುಹನಿ :** ಅವರ ಹಣೆ ಮತ್ತು ಮೂಗಿನ ಮೇಲೆ ಕಾಣುತ್ತಿದ್ದ ಸೆಕೆಯ ನೀರಿನ ತುಂತುರುಹನಿಗಳು ಅವರ ಮುಖದ ಸೌಂದರ್ಯಕ್ಕೆ ಕಳೆ ಗೂಡಿಸುತ್ತಿದ್ದವು (ಶ್ರೀವಿದ್ಯಾ. ೭೬); ಬೆಳಗಾಗ ತುಂತುರುಹನಿ ಉದುರುತ್ತಿತ್ತು (ಪುನರು. ೨೬೮). **ತುಂತುರ್ಪನಿ :** ಮಂಜಿನ ತುಂತುರ್ಪ [ಪಾಠಾಂ. ರ್ವ]ನಿಯೊಳ್ಪೊದೆದ್ದಲರ್ದ ಚೆನ್ನೆಯ್ದಲ್ಗಳ್ (ಕಾದಂಉ. ೪೨೮) ; ಕೂರ್ಪನಲ್ಲನ ತನುವಿನೊಳು ತುಂತುರ್ಪನಿಗಳುಗೆ ತೂಪಿಱುವರೇ (ಬಸವು. ೧೩-೨೦).

[ತುಂತುಱ್+ಪನಿ₂]

**ತುಂತುಱ್, ತುಂತುರಂ, ತುಂತುಱು** (ನಾ). ಸಣ್ಣಹನಿ,—ತೊಟ್ಟು ; ಹುಂಡು ; ಶೀಕರ : "ತುಂತುಱನಲ್ಕೆ ಸೀಕರಂ" (ಕರ್ಣಾನಿ. ೫೯) ; ಅಲ್ಲಲ್ಲಿಗೆ ನಾಂದೆಱಕೆಗಳಂ ಬಿದಿರೆ ಕೆದಱುವ ತುಂತುಱಿಂ (ಕಾದಂಉ. ೨೦೬) ; ಹರಿಭೇದಂಗೆಯ್ಯೆ ಬಿದರ್ಪೀಪನ ಪಡಿಮೊಗದೊಳ್ ತುಂತುಱಿಂ ತೂಱಿ (ಲೀಲಾವ. ೮-೨೦) ; ನೊರೆಯಿಂ ಬುದ್ಬುದದಿಂ ... ತುಂತುಱಿಂ (ಗಿರಿಕ. ೧-೪೭) ; ಕುಡಿಪಾಲವುಪ್ಪಳಿಸಲೊಗೆದ ತುಂತುಱ್ ಜಗಕೆ ಕಡೆಗಾಲವಂ ಮಾಡಲು (ಚಬಪು. ೨೦-೫). 'ತುಂತುರ್ವನಿ' ಪರಾ. **ತುಂತುರು :** ಕಾಂತಿ ಪ್ರಜ್ವಲಮಾಗೆ ಪರುಷದ ತುಂತುರೆರಗಿದ ಲೋಹಮೆನೆ (ಗಗತಾ. ೧೩-೪೨). 'ತುಂತುರಂಮಳೆ', 'ತುಂತುರುಹನಿ' ಪರಾ. **ತುಂತುಱು :** ಊಕೆಯ ಮಾಡುವಾತನ ಕೈಯ ಕುಂಚಿಕೆಯ ತುಂತುಱು ನುಂಗಿತ್ತು, ನೆಯ್ಯಣ್ಣನ ಕಣ್ಣ ಕಯ್ಯಲಳಿಗೆ ನುಂಗಿತ್ತು (ಗುಪ್ತಮಂ. ೧೮೩-೪) ; ಸಿರಿ ಪುಲ್ಲಗ್ರದ ತುಂತುಱೈ (ಸೋಮೇಶ. ೯೦) ; ಅಲರ್ಗಳ ಬಿಱುವಳೆಯೆಸಳ್ಗಳ ಸೋನೆ ಪರಾಗಪರಿಮಳದ ತುಂತುಱುಗಳ್ (ಗಿರಿಕ. ೩-೬೧) ; ತಿಳಿಗೊಳನುಱುಬು ದೆಱೆಗಳ ತಿವಿಗುಳಿನ ತುಂತುಱು ತುಷಾರದಲಿ (ಕುವ್ಯಾಅ. ೧೦-೩) ; ಪೊಳೆವ ತುಂತುಱಿನ ಸೀರ್ಪನಿಗಳಿಂ...ಆ ಕಡಲ್ಕಣ್ಗೆಸೆದುದು (ಜೈಮಿಭಾ. ೬-೩) ; ನೆಗೆವ ತುಂತುಱುಗಳಿಂದೇಳ್ವ ಬೆಳ್ನೊರೆಗಳಿಂ (ನಂದಿಮಾ. ೨-೪).

**ತುಂತುಱು** 'ತುಂತುಱ್' ನೋ.

**ತುಂದ** (ನಾ). ೧. ಹೊಟ್ಟೆ ; ಉದರ : "ಜಠರಃ, ಉದರಃ, ತುಂದಃ, ಕುಕ್ಷಿಃ, ಗರ್ಭಃ— ಈ ೫ ಹೊಟ್ಟೆ" (ಹಲಾಯು. ೮೫-೩೬೧); ಬೆಂದ ತುಂದವ ಹೊರೆಯಲೆಂದಾಸೆಯಿಂದೆ ಪರಿತಂದು (ಸಿದ್ಧೇಪು. ೨೨-೧೬೩) ; ಗಿರಿವೈರಿ ನನ್ನ ತಂದೆಯ ಕೊಂದ ಕೊಲೆಯನತಿಹರನ ತುಂದವ ಪೊಕ್ಕರೇ ಬಿಡುವೆನೇ ಯೆಂದು ಕರಶಾಖೆಯಿಂದೆ ವಿಶಾಸೆಯ ತಿರ್ದಿಕೊಳುತೆ (ಪ್ರಭುಪು. ೬-೨೯). ೨. ಬೊಜ್ಜುಹೊಟ್ಟೆ ; ಡೊಳ್ಳುಹೊಟ್ಟೆ. [ಸಂ.]

**ತುಂದವಡೆ** (ಕ್ರಿ). ಗರ್ಭಸ್ಥವಾಗಂ ; ಹೊಟ್ಟೆಯಲ್ಲಿರು : ಕಡಲ ದಾಂಟಿ ಬಂದು ಕೊಱಡನೆಡಹಿ ಬಿದ್ದನಂತೆ ತುಂದವಡೆದು ಬಳಲಿ ಯೋನಿ ಹಲವಱಿಂದಲೆ (ವೃಷಗೀ. ೩೫). [ತುಂದ + ಪಡೆ₁]

**ತುಂದಶೂಲೆ** (ನಾ). ಹೊಟ್ಟೆನೋವು : ತುಂದಶೂಲೆಯು ಕೆರಳಿಯಲಗ ತಿರಿಚಿದವೊಲಾಗೆ (ಪ್ರಭುಪು. ೫-೮೩). [ತುಂದ + ಶೂಲೆ]

**ತುಂದಿ** (ನಾ). ದೊಡ್ಡಹೊಕ್ಕುಳುಳ್ಳವನು ; ಉಬ್ಬಿದ ಹೊಕ್ಕುಳುಳ್ಳವನು : "ತುಂದಿಯೆಂಬವಂ ಬಗುಡಂ" (ಹಲಾಯು. ೧೦೦-೪೫೬).

[ಸಂ. ತುಂದಿನ್]

**ತುಂದಿಕ** (ನಾ). = ತುಂದಿಲ ೩ : "ತುಂದಿಲಃ, ತುಂದಿಕಃ [ಪಾಠಾಂ. ತುಂದಿಭಃ], ತುಂದೀ, ಬೃಹತ್ಕುಕ್ಷಿಃ, ಪಿಚಂಡಿಲಃ—೫ ದೊಡ್ಡಹೊಟ್ಟೆಯುಳ್ಳವನು" (ಸಿದ್ಧಾಂತಿ. ೧೫೭). [ಸಂ.]

**ತುಂದಿಭ** (ನಾ). = ತುಂದಿಲ. [ಸಂ.]

**ತುಂದಿಲ, ತುಂದಿಳ** (ಗು). ೧. ದೊಡ್ಡ ಹೊಟ್ಟೆಯುಳ್ಳ. ೨. (ಆಲಂ) ಹೆಚ್ಚಾದ ; ತುಂಬಿದ ; ಅತಿಶಯವಾದ : ಪಟಹ ನಿಸ್ಸಾಣ ಡಿಂಡಿಮ ಗೋಮುಖಂಗಳಿಂದ ತುಂದಿಲ ಧ್ವನಿಯುಳ್ಳ ಕರಡೆ ವಿರಣ ಡೋಳ್ಗಳಿಂದ ಲೋಲೈಸುತ್ತ ... ಪಾಡಿದರ್ ಮಂಗಳವನು (ಚತುಪು. ೧-೯-೪೪). (ನಾ). ೩. ದೊಡ್ಡಹೊಟ್ಟೆಯುಳ್ಳವನು ; ಡೊಳ್ಳುಹೊಟ್ಟೆಯವನು : "ತುಂದಿಲಃ, ತುಂದಿಭಃ, ತುಂದೀ, ಬೃಹತ್ಕುಕ್ಷಿಃ, ಪಿಚಂಡಿಲಃ—೫ ದೊಡ್ಡಹೊಟ್ಟೆಯುಳ್ಳವನು" (ಸಿದ್ಧಾಂತಿ. ೧೫೭). ೪. ತುಂಬಿದಂದಂ ; ಪರಿಪೂರ್ಣ : ನನ್ನ ಹೃದಯವಾನಂದತುಂದಿಲವು (ಅರಳು. ೧೯೦-೧೧). 'ಆನಂದ ತುಂದಿಲ' ಪರಾ. ೫. ದೊಡ್ಡಹೊಕ್ಕುಳುಳ್ಳವನಂ. **ತುಂದಿಳ :** ೨. ಚತುರಂಗಬಲಂಬೆರಸಿ...ಬರ್ಪಂತು ಕೂಚಿರ್ಪಾಳ ತುಂದಿಳ [ಪಾಠಾಂ. ತುಂದಿಲ, ದೀಕ್ಷಾಳ] ಜರತ್ಸಾಮಂತಸಂದೋಹಕ್ಕಪ್ಪಯಿಸಿ ಶುಭದಿನಮುಹೂರ್ತದೊಳ್ ಪ್ರಯಾಣಭೇರಿಯಂ ಪೊಯಿಸಿ ಪೊಱಮಟ್ಟಾಗಳ್ (ಆದಿಪು. ೪-೯೧ವ) ; ೩. "ಪಿಚಂಡಿಳಃ, ಬೃಹತ್ಕುಕ್ಷಿಃ, ತುಂದಿಳಃ, ಉದರಿಳಃ—ಈ ೪ ಹೊಟ್ಟೆಗಂ" (ಹಲಾಯು. ೯೯-೪೫೪). 'ತುಂಡಿಲ' ಪರಾ. [ಸಂ.]

**ತುಂದಿಲೋದರ** (ಗು). ೧. ಬೊಜ್ಜುಳ್ಳ : ತುಂದಿಲೋದರ ಭೈರವಾಕಾರ ದಾನವಂ ಬಂದು (ವೆಂಕಾರಾ. ೧-೧೨-೨೨). (ನಾ). ೨. ಬೊಜ್ಜುಹೊಟೆಯುಳ್ಳವನಂ ; ದಪ್ಪವಾದ ಹೊಟ್ಟೆಯವನಂ. [ತುಂದಿಲ + ಉದರ

**ತುಂದಿಳ** 'ತುಂದಿಲ' ನೋ.

**ತುಂಬ₁** (ನಾ). ಹೆಚ್ಚಳ ; ಅತಿಶಯ ; ಸಮೃದ್ಧಿ : ಬಿಳಿಯ ಕಂಜದ ಬಣ್ಣಮುಮೊಂದಳುಂಬಮುಂ ತುಂಬಮುಮಾಗೆ ತಿಂಬಿದುದು (ಲೀಲಾವ. ೫-೬೨); ಪೊಗಟೆಗಳುಂಬಮುಂ ತುಂಬಮುಮಾದ ಮಜ್ಜನಮಂಡಪದ ತೋರಣದ್ವಾರೋಪಕಂಠದೊಳ್ ನಿಂದು (ಅನಂಪು. ೫-೫೩ ವ). [ತುಂಬು₁+–ಅ₆]

**ತುಂಬ₂, ತುಂಬಾ** (ಅ). ಬಹಳವಾಗಿ ; ಹೆಚ್ಚಾಗಿ ; ಅಧಿಕವಾಗಿ ; ಸಂಪೂರ್ಣವಾಗಿ : ತೋಳುಗಳಿಗೆ ತೋಳಬಂದಿ ಕೆನ್ನೆ ತುಂಬ ಮುತ್ತು (ನಾದಲೀ. ೫೯-೦೬) ; ಪೆಟ್ಟಿಗೆ ತುಂಬ ಹಣವಿದ್ದರೂ ಕಟ್ಟಿಗೆ ಹೊರ್ತು ಗತಿಯಿಲ್ಲ (ಗಾದೆ). **ತುಂಬಾ :** ನಿನಗೆ ಹಿತವಾಗಬೇಕೆಂದು ತುಂಬಾ ಅಪೇಕ್ಷಿಸುತ್ತೇನೆ (ಮುಂಬಯಿ.. ೪-೩೯) ; ನನಗೆ ತುಂಬಾ ಸಂತೋಷವಾಗಿದೆ (ರಾಯಕ. ೮೧) ; ಬಾಯಿ ತುಂಬಾ ಮಾತು, ಹೊಟ್ಟೆ ತುಂಬಾ ಊಟ (ಗಾದೆ) ಇವತ್ತು ಸಾರು ತುಂಬಾ ಚೆನ್ನಾಗಿತ್ತು (ರೂಢಿ).

ತುಂತುಂಬಾ (ದ್ವಿರುಕ್ತಿ) : ದೇವರು ನಿಮಗೆ ಏನನ್ನು ಕೊಡದಿದ್ದರೂ ಈ ವಿನಯಸಂಪತ್ತಿಯನ್ನು ತುಂತುಂಬಾ ಕೊಟ್ಟಿರುವನು (ಜಯಂತ. ೧೪).

[ < ತುಂಬು₁ ]

**ತುಂಬ₃** (ನಾ). ಕುಂಬಳಕಾಯಿ : "ತುಂಬ = ಕರೇಕುಂಬಳಕಾಯಿ" (ಗಂಗಾಮ. ೧೫೪). [ಸಂ.]

**ತುಂಬಕ** (ನಾ). ೧. = ತುಂಬಕಿ. ೨. ದೋಷಪೂರ್ಣವಾಗಿ ಹಾಡುವವನಂ : ತುಂಭ[ಬ]ಕ –ಗಲ್ಲ ಉಬ್ಬಿಸಿ ಹಾಡುವವನು (ಸಂಗೀಚಂ. ೧೦೩).

[ಸಂ.]

**ತುಂಬಕಿ** (ನಾ). [ಸಂಗೀತ] ಹಾಡುವಾಗ ಸಂಭವಿಸಬಹುದಾದ ಒಂದು ದೋಷ ; ಸೋರೆಬುರುಡೆಯಂತೆ ಕೆನ್ನೆಯನ್ನು ಉಬ್ಬಿಸಿಕೊಂಡು ಹಾಡುವುದು ; ಫೂತ್ಕಾರದೋಷ : ಅಕಬಳಮನವ್ಯವಸ್ಥಿತಮುಕಾಕಿ ಸಂದಿಷ್ಟ ತುಂಬಕೀರಹಿತಂ ಗಾಯಕಗಣಕಂಠರವಂ ಶ್ರಾವಕಮಧುರಸ್ನಿಗ್ಧ ಮೆಸೆದುದಾಸ್ಥಾಯಿಕೆಯೊಳ್ (ಆದಿಪು. ೫-೧೧). [ಸಂ. ತುಂಬಕೀ]

**ತುಂಬಕುಂಟೆ** (ನಾ). ಒಂದು ಪ್ರದೇಶದ ಹೆಸರು : ತೆಂಙ್ಕಣದೆಸೆ ಗುಡ್ಡೆಗಲ್ಲು ತುಮ್ಬಕುಣ್ಟೆ ರೇವುಕುಣ್ಟೆ ಪಾಮ್ಬುಳಕುಣ್ಟೆ (ಎಕ. XII, ಶಿರಾ. ೩೮-೩೫ ; 878). [ ತುಂಬ$_0$ + ಕುಂಟೆ$_3$ ]

**ತುಂಬಡ** (ನಾ). ಒಂದು ಬಗೆಯ ವಿಷ (?) : ಚೋಳ ತುಂಬಡ ಕನಕ ಮಿಹಿರ ತಪನ ಕ್ಷೇಡ ತಾಳುಜಂತ್ರಿಕಪತನಫಲಕುಟಜ ಪ್ರಕ್ಷಲಕಧೂಳ ಮಾರಾಷ್ಟ ನಂಜಂ ತರಿಸಿ ಹಿಂಡಿದಂ ಭಾಳನೇತ್ರಂ ಬಸವನು (ಲಿಂಗಪು. ೩೩-೧೦). [ ? ]

**ತುಂಬಡವಿ** (ನಾ). ತುಂಬಿದ ಕಾಡು ; ದಟ್ಟವಾದ ಕಾಡು : ತುಂಬಡವಿ ಕಳಕಳಿಸಿ ಮೆರೆಯುತಿದೆ ದೀವಿಗೆಯೊಡಲಂ ಮುಚ್ಚಿ ಸಿಂಗರಿಸಿ (ಶ್ರೀರಾಮಾ. ೧೬೬ ೩೭). [ ತುಂಬು$_2$ + ಅಡವಿ ]

**ತುಂಬಡಿ** 'ತುಮ್ಮಡಿ' ನೋ.

**ತುಂಬರ** (ನಾ). = ತುಂಬುರಂ$_2$ : "ತಿಂದುಕಃ ...ತುಂಬರಗಿಡ" (ಸಿದ್ಧಾಂತಿ. ೧೦೬). [ ಸಂ. ]

**ತುಂಬಾ** 'ತುಂಬ$_2$' ನೋ.

**ತುಂಬಿ$_1$**, ತುಂಬೆ$_1$, ದುಂಬಿ, ದುಂಬೆ$_1$ (ನಾ). ಭ್ರಮರ ; ಅಳಿ ; ಮಧುಕರ : "ಮಧುಕರಃ, ಮಧುಪಃ, ಮಧುವ್ರತಃ, ಶಿಲೀಮುಖಃ, ಭ್ರಮರ, ಭೃಂಗಃ . . . ದ್ವಿರೇಫಃ— ಈ ೧೩ ತುಂಬಿ" (ಹಲಾಯು. ೪೩-೧೦೧) ; ಕಂಪಿಂಗೆಱಗಿದ ತುಂಬಿಯ ಸಮೂಹಮಂ ಮೇಗೆ ಸುಟ್ಟುವುದಂ ಕಂಡು (ವಡ್ಡಾರಾ. ೩೦-೫) ; ಮದಗಜಗಂಡಸ್ಥಳಗಳೊಳೆಱಗಿ ಮೊರೆವ ತುಂಬಿಯ ಬಂಬಲ್ಗಳೆ ವಿಮುಖೀಭೂತಂಗಳಾದುವು (ಪಂಪಭಾ. ೪-೪೯ ವ) ; ನಿಮ್ಮ ಚರಣಕಮಲದಲಾನು ತುಂಬಿ (ಬಸವ. ೪೯೩) ; ಕಾಳಕೂಟದ ಕಮಲ ತುಂಬಿಗೆ ಪಥ್ಯವಲ್ಲೆಂದ (ಕುಮಾವ್ಯಾ. ೯-೪೨) ; ಅಲರ ಪರಿಮಳದೆಡೆಗೆ ತುಂಬಿಗಳೊಲಿದು ಪೋಪಂದದಲಿ ಲೋಕದೊಳಲರು ವಿಕಸಿತವಾಗಿ ಹೋಹುದೇ ತುಂಬಿಯಿದ್ದೆಡೆಗೆ (ನಳಚ. ೩-೩೨) ; ಕರಿಕಪೋಲದ ಮದ ಸೊಗಡೆಂದು ತುಂಬಿಯ ನೆರವಿಗೆ ಪರಿಮಳವೀವ ಅರಳುಮಲ್ಲಿಗೆಗೊಂಚಲೆನೆ ಗಜಕರ್ಣದೆ ಮೆಱೆದುವು ಮುತ್ತಿನ ಕುಚ್ಚು (ಕಂಸವಿ. ೨೩-೯೯). **ತುಂಬೆ$_1$** : ಸರಸವಾದ ಗಾನವಂ ಮಾಡುತ್ತಲಿರುವ ತುಂಬೆಗಳಿಂ ತುಂಬಿ (ಸೌಗಂಧಿ. ೩೩೮-೮) ; ನಿಂಬೆಗಿಂ ಹುಳಿಯಿಲ್ಲ ತುಂಬೆಗಿಂ ಕರಿದಿಲ್ಲ ನಂಬಿಗೆಯಿಂದಧಿಕ ಗುಣವಿಲ್ಲ (ಸರ್ವಜ್ಞ. ೨೩೫) ; ಮರಿದುಂಬೆ ಚೊಕ್ಕ ಕೆಂದಾವರೆಗೆ ಕವಿವಂತೆ ಸರಳು ಸರ್ವಾಂಗಕಂ ಪೊಕ್ಕಿರ್ದುದು (ತುರಂಗ. ೫೦-೩೩). **ದುಂಬಿ** : "ಭ್ರಮರ—ದುಂಬಿ, ಗರುಗ" (ಓಷಧ. ೧೧೦) ; ಅಲಗೊಂಚಲ್ಗೆಱಪುಂಜ ದುಂಬಿಗಳ ಶುಂಭದ್ವಾನದಿಂ ... ಎಸೆದುದಾವ್ರುವ್ರಾತಮಾ ಚೈತ್ರದೊಳ್ (ಉದ್ಭಟ. ೯-೮) ; ಮಲ್ಲಿಗೆಯಲರ್ದಡೆವಿಡಿಯೆ ಬಂದೆಱಗುವ ಜಲ್ಲಿದುಂಬಿಗೆ ಬೆರ್ಚಿ ನಿಂದು ಸೊಲ್ಲಿಪ ಪೂವಮಾಲೆಗಾರ್ತಿ (ಮೋಹತ. ೩-೧೭). **ದುಂಬೆ$_1$** : "ಮಧುವ್ರತಃ, ಮಧುಕರಃ, ... ಬಂಭರಃ ೧೫ ತುಂಬಿಯ ಹೆಸರುಗಳು. ತುಂಬೆಹುಳ, ದುಂಬೆ, ಕಚ್ಚುವ ಜೀರಜಿಂಬೆ, ಭೃಂಗ" (ಸಿದ್ಧಾಂತಿ. ೧೪೨).

[ದೇ.॥ ತಮಿ. ತುಮ್ಪಿ ; ಮಲ. ತುಮ್ಪಿ ; ಕೊಡ. ತುಳು. ತುಂಬಿ ; ತೆಲು. ತುಮ್ಮೆದ ; ಪರ್ಜಿ. ದುಂಬ]

**ತುಂಬಿ$_2$** 'ತುಂಬೆ$_2$' ನೋ.

**ತುಂಬಿ$_3$** (ನಾ). ೧. ಉದ್ದನೆಯ ಸೋರೆಕಾಯಿ ; ಸಿಹಿಸೋರೆ : "ಅಲಾಬು ತುಂಬೀನಾಮಂ" (ವಸ್ತುಕೋ. ೩೬-೨೧). ೨. ಒಂದು ಬಗೆಯ ಗಿಡ ; ಕೋಕಿಲಾಕ್ಷ. ೩. ತಂಬೂರಿ ಅಥವಾ ವೀಣೆಯ ಬುರುಡೆ : ಚಂದ್ರಬಿಂಬಮಂ ತುಂಬಿ ಮಾಡಿ ಬಿಸತಂತುಸಿಂಜಿನಿಯಂ ತಂತಿ ಮಾಡಿ ಇಕ್ಷುಚಾಪದಂಡಮಂ ದಂಡಿಗೆ ಮಾಡಿ . . . ಬೀಣೆಯಂ ಬಾಜಿಸುವ ರತಿಯಂತಿರ್ದಳಂ . . . ಕಂಡು (ಅರ್ಧನೇ. ೬-೧೭ ವ). [ಸಂ. ತುಂಬಿ, ತುಂಬೀ./ತಮಿ. ತುಮ್ಪಿ ; ಮಲ. ತುಮ್ಪ ; ತೆಲು. ತುಂಬಿ, ತುಂಬ, ತುಮ್ಮಿ]

**ತುಂಬಿ$_4$** (ನಾ). ಒಂದು ಬಗೆಯ ಆಭರಣ : ಕಿವಿಯೊಳೊಪ್ಪುವ ಚೌಕುಳಿ ತುಂಬಿಯು ತಾಲಿ ತವೆ ಗಂಟೆ ಸರಪಣಿಯಿಂದ ಸುವಿಲಾಸದೆ ಚಿತ್ರವಿಡಿದೈತಹನಾರೆ (ಕಂಸವಿ. ೨೫-೬೬). 'ಚಳತುಂಬು' ನೋ. [?]

**ತುಂಬಿ$_5$** (ನಾ). (?) : "ಅಲಸ್ವಜೆ—ನೆಲಗುಳ್ಳ, ಅಲಮೂಲ—ತುಂಬಿ, ಅಲ್ಪಫಲ -ಕಿರುಗುಳ್ಳ, ನಾಯಿನೇರಿಲು" (ಅಕಾನಿ.೨-೧೬). [?]

**ತುಂಬಿಕೆ** (ನಾ). ತುಂಬಿಕೊಂಡಿರುವುದು ; ಸಂಗ್ರಹಿಸಿರುವುದು : ತುಂಬಿಕೆಯೊಳಿಂಬುಗೊಂಡ ತುಂಬುನೀರಂ ಪೂತ್ಕರಿಸಿದವುವೆಂಬಂತಿರೆ ಎಡೆವಿಡದೆ ಬಲ್ಸರಿ ಸುರಿಯೆ ಮುಟಿಗಾಲಂ ಚೆಲ್ವಾಯ್ತು (ರಾಮಾಶ್ವ.೩-೧೦).

[ ತುಂಬು$_2$ + - ಇಕೆ ]

**ತುಂಬಿಗುರುಳ್**, ತುಂಬಿಗುರುಳು, ದುಂಬಿಗುರುಳು (ನಾ). ತುಂಬಿಯಂತೆ ಕಪ್ಪಾದ ಕೂದಲು ; ಕಪ್ಪುಗೂದಲು: ಮೆಱೆಹರ್ ... ನಿಡುಗುರುಳುರುಳಿಗುರುಳ್ ತುಂಬಗುರುಳ ಗೋಪಸ್ತ್ರೀಯರ್ (ಜಗವಿ. ೪-೧೨೫); ತುಱುಗಿ ತುಂಬಿಗುರುಳ ಬಂಬಲಿದೆ ಕಪೋಲರಂಗದೊಳ್ (ಲೀಲಾವ. ೬-೨೩) ; ಮಧ್ಯಪದಲೋಪಕ್ಕೆ ... ತೊಂಗಲ್ಗುರುಳ್, ತುಂಬಿಗುರುಳ್ (ಶಮದ. ೧೬೮ ಪ್ರಯೋ) ; ತುಂಬಿಗುರುಳ ತುಱುಬಿಕ್ಕಿ ದಾದಿಯರು ನಿತಂಬಿನಿಯೊಡನೆ ಪೇಳಿದರು (ಪ್ರೋಹತ. ೯-೧೬) ; ತುಂಬಿಗುರುಳಬಲೆ ಪೇಳು (ಜಿಬಪು. ೧೦-೫೫). **ತುಂಬಿಗುರುಳು** : ತುಂಬುದಿಂಗಳ ಮೊಗ ತುಱುಗೆವೆಯಲರ್ಗಣ್ ತುಂಬಿಗುರುಳು (ಶ್ರೀಪಾಲ. ೩-೨೪). **ದುಂಬಿಗುರುಳು** : ಶ್ರೀಮಂತೆ ಸೋಫಿಯಾಮ್ಯಾಸಿಲ್ಕೋಸಾ ದುಂಬಿಗುರುಳ . . . ಉದ್ದವಾದ ತೆಳ್ಳನೆಯ ಹೆಂಗಸು (ಪುನರು. ೧೨೨). [ತುಂಬಿ$_1$ + ಕುರುಳ್$_1$]

**ತುಂಬಿಗುರುಳು** 'ತುಂಬಿಗುರುಳ್' ನೋ.

**ತುಂಬಿಗುರುಳೆ** (ನಾ). ತುಂಬಿಯಂತೆ ಕಪ್ಪಾದ ಕೂದಲುಳ್ಳವಳು ; ನೀಲಕೇಶಿ ; ಸುಂದರಿ : ತುಂಬಿಗುರುಳೆಯರೇಕೆ ಬಾರರೆಮ್ಮಂ ಬೇಗ ವಂಬಿಕೇಶಂಗೊಯ್ವೆಡೆಂದಿದಂ ಬಱುಸಿ ಬಾಯಂ ಬಿಟ್ಟುಕೊಂಡಿರ್ಪವೋಲ್ ಬಿರಿದ ತಾವರೆಗಳಂ . . . ಕೊಂಡೊಯ್ವುದು (ಪದ್ಮರಾ. ೮-೫೭).

[ತುಂಬಿಗುರುಳ್ + - ಎ$_2$]

**ತುಂಬಿತುರುಬು** (ನಾ). ತುಂಬಿಯಂತೆ ಕಪ್ಪಾದ ತುರುಬು, - ಗಂಟು : ತಂದೇನಿ ನಿನಗೆಂದ ತುಂಬಿತುರುಬಿನವಳ ಕಾಮಕಸ್ತೂರಿಯ ತೆನಿಯೊಂದ (ಮಾತೃಗೀತಾ. ೩೬-೨). [ ತುಂಬಿ$_1$ + ತುರುಬು$_2$ (< ತುಱುಂಬು$_2$) ]

**ತುಂಬಿಬಾಳು** (ನಾ). ತುಂಬಿಯಂತಿರುವ ಜೀವನ ; ದುಂಬಿಯಂತೆ ಅನೇಕ ಕಡೆಗಳಿಂದ ರಸವನ್ನು ಸಂಗ್ರಹಿಸುವುದು : ಈ ತುಂಬಿಬಾಳು ಇರುವ ತನಕ ತುಂತುಂಬಿ ಕುಡಿಯಬೇಕು (ಮುಕ್ತಕಂ. ೨೯-೮).

[ತುಂಬಿ$_1$ + ಬಾಳು$_2$ (<ಬಾಳ್$_2$)]

**ತುಂಬಿಮೊರೆ** (ನಾ). ತುಂಬಿಯ ಧ್ವನಿ ; ಗುಂಜಾರವ : ತುಂಬಿಮೊರೆ ತುಂಬಿ ಝೇಂಕರಿಸಿತೋಂಕಾರವಂ (ಶ್ರೀರಾಮಾ. ೩೬-೨೫೭).

[ ತುಂಬಿ$_1$ + ಮೊರೆ$_2$ ]

**ತುಂಬಿವಾಡು** (ನಾ). = ತುಂಬಿಮೊರೆ : ತುಂಬಿವಾಡ ನೊಲವಿಂ ಕೇಳ್ವಂದದಿಂ ನಿಂದು (ಚಿಬ್ರೈಕಾ. ೬೯). [ ತುಂಬಿ$_1$ + ಪಾಡು$_2$ ]

**ತುಂಬಿವಿಂಡು**, ತುಂಬೆವಿಂಡು (ನಾ). ದುಂಬಿಗಳ ಗುಂಪು ; ಅಳಿಗಳ ತಂಡ ; ಭ್ರಮರಸಮೂಹ : ನೋಡುವ ಪಾರ್ವತಿ ಮುದಮಂ ಕೊಡುತ್ತಿರೆ ತುಂಬಿವಿಂಡು ಪಾಡುತ್ತಿರೆ (ಗಿರಿಕ. ೪-೩೨); ತುಂಬಿವಿಂಡಿನಂತೆ ಪಾಡಿ ಚಕ್ಕವಕ್ಕಿಯಂತೆ ಕೂಡಿ (ಚಿಬ್ರೈಕಾ. ೩೪೪) ; ತಾವರೆಗೆ ತುಂಬಿವಿಂಡೆಱಗಿದುದು ಕೊರಗಿದುವು ನೈದಿಲೆಗಳು (ಜೈಮಿಭಾ. ೨೬-೨೪) ; ಮದಂಗಳಿಗಂಗೈಸುವ ತುಂಬಿವಿಂಡ ಹಿಂಗದೆ ಕರ್ಣತಾಳದಲಿ ಸೋವುತ

ಮಾತಂಗ ನೀರ್ಗೈದುವುವು (ಕಂನವಿ. ೨-೫೭). **ತುಂಬಿವಿಂಡು** : ಝೇಂಕರಿಸಿ ತುಂಬಿವಿಂಡೆಯ್ದು ಮುಸುಬಲು (ವೀಶೈವು. ೩-೧೭-೬).

[ತುಂಬಿ$_1$ + ಪಿಂಡು$_2$]

**ತುಂಬಿವೆಣ್** (ನಾ). ಹೆಣ್ಣುದುಂಬಿ ; ಭ್ರಮರಿ : (೬).

[ತುಂಬಿ$_1$ + ಪೆಣ್]

**ತುಂಬಿವೆದೆ** (ನಾ). ದುಂಬಿಗಳಿಂದಾದ ಹೆದೆ ; (ಮನ್ಮಥನ ಬಿಲ್ಲಿನ) ಹೆದೆ ; ☞ ಮನ್ಮಥನಿಗೆ ಕಬ್ಬಿನ ಬಿಲ್ಲುಂ, ಅದಕ್ಕೆ ದುಂಬಿಗಳ ಸಾಲೇ ಹೆದೆ ಎಂಬುದುಂ ಕವಿಸಮಯಂ : ಕಬ್ಬುವಿಲ್ತುಂಬಿವೆದೆ ಪೂಸರ ಲ್ಪೂಣ್ದಿಸಲ್ ನಿಬ್ಬರವಿಂದೆಂದು ಮದನಂ…ಸಾಹಸದೊಳಳವಡಿಸಿಕೊಂಡು (ಕ್ರಿಮಿಥಾ. ೬-೧೭). [ತುಂಬಿ$_1$ + ಪೆದೆ]

**ತುಂಬಿಸು** (ಕ್ರಿ). ೧. ತುಂಬುವಂತೆ ಮಾಡು; ಭರ್ತಿಮಾಡು : ಭಕ್ತಪುತತಿಗಳ ಚರಣಂಗಳಂ ತೊಳೆದು ಅವರ ತತ್ಪಾದಾಂಬುಗಳನಭಿನವಕಳಶವಿಸರದೊಳು ತುಂಬಿಸಿ (ಬಸವು. ೪೬-೫೩); ಸುಗುಂಣೆ ಕೇಳ್ ತಾಟಂಕ ಸೂಡಿದ ತವಕಿವಿಗೊಳನ ಕೋಡಿಬೀಳ್ವಂತೆ ತುಂಬಿಸುವೆನು ಕಡುರುಚಿಮಾಡಿ ಮೋಹನ ತರಂಗಿಣಿಯ (ಮೋಹತ. ೭-೨); ಅಂಬರವನಂಬಿನಿಂ ತುಂಬಿಸಿದರು (ಕ್ರಿಮಿಥಾ. ೪-೨೧); ಮುಖದ ಮೇಲೆ ದೀಪದ ಬೆಳಕು ಬಿದ್ದು ಕಾಂತಿಯಿಂದ ತುಂಬಿಸಿತ್ತು (ಹಂಗಾಳ್ಕ. ೧೪೭). ೨. ಪರಿಪೂರ್ಣವಾಗುವಂತೆ ಮಾಡು ; ಸಫಲಗೊಳಿಸು : ಕೃಪೆಯನು ಬಿಂಬಿಸಿ, ಬಾಳನು ತುಂಬಿಸಿ, ತೋಟದೊಳರಳಿದ ಹೂ ತಾನಾದುದು ಶ್ರೀಮದ್ಭಗವದ್ಗೀತೆ (ಅನಿಕೇ. ೩೨-೧೪). ೩. ಹೋದುದನ್ನು ಸರಿಪಡಿಸಿಕೊಳ್ಳು ; ನಷ್ಟವನ್ನು ಸರಿಗಟ್ಟು : ಆದರೇನು ? ನಾವು ವೆಚ್ಚ ತುಂಬಿಸಿಕೊಳ್ಳುತ್ತೇವೆ (ಸ್ವತಿಚಿ. ೨೦೫). ೪. ಹಸು, ಎಮ್ಮೆ ಮೊದಲಾದ ಹೆಣ್ಣುಪ್ರಾಣಿಗಳಿಗೆ ಗರ್ಭಧಾರಣೆ ಮಾಡಿಸಂ ; ಹೋರಿಕೊಡಿಸು ; ಗೂಳಿಹಾರಿಸಂ ; ಕಟ್ಟಿಸಂ; ಜೋಡಿಯಾಗಿಸು (ಕರಾ) : ಈ ಹಿಂಡಿಯು ಬಹಳ ಉಷ್ಣವಿರುವುದರಿಂದ ಗಬ್ಬಿದ್ದ ದನಗಳಿಗೆ ಮತ್ತು ಅದೇ ತುಂಬಿಸಿದ ದನಗಳಿಗೆ ಕೊಡುವುದು ಒಳ್ಳೆಯದಲ್ಲ (ಗೋಗ್ರಾಸ. ೮೦). ೫. (ಆಲಂ) ಹೋಗಲಾಡಿಸು ; ಕಳೆ ; ನಿವಾರಿಸಂ : ಸತಿಯ ದುಗುಡವೆನಿಪ್ಪ ಕತ್ತಲೆಯಾ ತುಂಬಿಸುವ ಮಣಿಜ್ಯೋತಿ ಬಂದಪುದೆಂಬವೊಲು ಮಣಿಭೂಷಣದ್ಯುತಿ ಮುಂಬರಿವುತಿರೆ ಬಂದನಾಕೆಯ ಹರಣ ಬಂದಂತೆ (ಸಾಳ್ವಭಾ. ೩-೧೭). [ತುಂಬು$_2$ + – ಇಸು$_3$]

**ತುಂಬೀಫಲ** (ನಾ). = ತುಂಬಿ$_3$ ೧ : ಮಣ್ಣೊಳ್ ಮೆತ್ತಿದ ತುಂಬೀಫಲಂ ನೀರೊಳಿಕ್ಕಿದಾಗಳಟ್ಟು ಅಡಿಯೊಳಿರ್ದ ಮಣ್ ಕರಗೆ (ಜೀವಸಂ. ೦೮೮-೯ ವ).

[ಸಂ.]

**ತುಂಬು$_1$** (ಕ್ರಿ). ೧. ಭರ್ತಿಯಾಗು; ಪೂರ್ಣವಾಗು: "ತುಂಬು-ಪೂರಣೇ, ವೃಂತ (ಹೂವಿನ ಕಾವು), ಜಲಪ್ರಣಾಲ್ಯೋಃ (ತೂಬು)" (ಶಮಧಾ) ; ಗಗನದ ಮೇಘಂಗಳು ಸುರಿದಲ್ಲಿ ಒಂದು ಹಿರಿಯ ಕೆಚಿ ತುಂಬಿತ್ತು (ಅವಹಂ. ೦೧೯-೪೯೪) ; ಎಲ್ಲ ಪುರಾತನರು ಕರೆದು ಭಕ್ತಿಭಿಕ್ಷೆಯನಿಕ್ಕಿದಡೆ ಎನ್ನ ಪಾತ್ರೆ ತುಂಬಿತ್ತು (ಬಸವ. ೩೪೯) : ಭಾಂಡ ತುಂಬಿತು ಮತ್ತೆ (ಕುವ್ಯಾಅ. ಓರಿ೩. ೧೭-೪೦) : ಮಂಜು ಸುರಿಯಲೊಡನೆ ಕೆಚಿ ತುಂಬುವುದೆ (ನಳಚ. ೨-೧೯). ೨. ಆವರಿಸಲ್ಪಡು ; ಆವೃತವಾಗು : ಎಳಮಾವು ಕೆಂದಳಿರ ಪೂವಿನ ಬಿಣ್ಪೊಚಿಯಿಂ ಬಬಲ್ದು ತುಂಬಿಗಳಿನೆ ತುಂಬಿ ಕೋಗಿಲೆಯ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆಪೋಲ್ (ಪಂಪಭಾ. ೧-೮) ; ಮನೆಯೊಳಗೆ ರಜ ತುಂಬಿ ತನುವಿನೊಳಗೆ ಹುಸಿ ತುಂಬಿ (ಬಸವ. ೯೭). ೩. ಹರಡು ; ವ್ಯಾಪಿಸಂ : ವರಕಪೀಂದ್ರನ ರಭಸವೇ ತುಂಬಿತು ಜಗತ್ರಯವ (ಕುವ್ಯಾದ್ರೋ. ೧೨-೪) ; ಸವೆಯುದ ಕರ್ಗತ್ತಲೆಯು ತುಂಬಿದಳು ಹುಣ್ಣಿವೆಯ ಬೆಳ್ದಿಂಗಳ ಕಿಡಿಸಿ (ಮೋಹತ. ೨೯-೮). ೪. ಕಾಲ ಕಳೆದುಹೋಗು ; ಅವಧಿಯು ಮುಗಿ ; ಗಡುವು ಪೂರ್ಣವಾಗು,—ಪೂರೈಸಂ : ಪಾಂಡವರು ಬಂಧು ದ್ರೋಹಿಗಳು ತಮ್ಮವಧಿ ತುಂಬಲು ಕೇಡ ತಹರು (ಕುವ್ಯಾಅ. ೧೭-೧೭) ತುಂಬಿದವು ನವಮಾಸ (ತೊರಂ. ೧-೮-೪); ತುಂಬಲು ನವಮಾಸ ಶುಭವಾದ ನರಸಿಂಹಗಿಂಬಾದ ವರಜಯಂತಿಯಲಿ ಕುಂಭಿನಿಗಧಿಕ ಶೂರನ ಕುವರನ ಗುರುವಂಬೆ ಪಡೆದಳು (ಕಂನವಿ. ೪-೬೨). ೫. ಸೂಸು ; ತುಳುಕು: ಅಂಬೆ ಕಣ್ಣ ನೀರಂ ತುಂಬೆ (ಪಂಪಭಾ. ೧-೭೭ ವ) ; ಕಂಗಳು ತುಂಬಿದ ಬಳಿಕ ನೋಡಲಿಲ್ಲ (ಬಸವ. ೮೫೨); ಕೊಂಡು ಕೊನೆವುತ್ತಿರ್ಪ ತಾಯ್ಪುಂದೆಗಳಂ ಕಂಡು ಕಂಡ ನೆರವಿಯೆಲ್ಲಂ ಘುಳುಘುಳನೆ ಕಣ್ಣ ನೀರಂ ತುಂಬುತ್ತಿರಲ್ (ನಂಬಿರ. ೨-೬೧); ತುಂಬಿದನು ಕಂಬನಿಯನಾತ್ಮನಿತಂಬಿನಿಯ ಮೊಗ ನೋಡಿ (ತೊರಂ. ೨-೪-೧೮). ೬. ಒದಗಿಸು ; ಉಂಟುಮಾಡು : ಅಂಬುಜನೇತ್ರೆಯ ಪೊಂಬಾಳೆದೊಡೆಗಳು ತುಂಬಿದುವು ಕಣ್ಗೆ ಕೌತುಕವ (ಕಂನವಿ. ೯-೨೦). ೭. ದಪ್ಪವಾಗು ; ಪುಷ್ಟವಾಗು : ಮಗು ಮೈಕೈ ತುಂಬಿಕೊಂಡು ಚೆನ್ನಾಗಿದೆ (ರೂಢಿ). ೮. ಗರ್ಭ ಕೂಡು ; ಗರ್ಭ ನಿಲ್ಲು: ಪುಳುಂಬಮುವನೆಸೆತಾಗೆ ಗಬ್ಬವು ತುಂಬಿದೆರಲೆಯನೊಡಲ ಶಿಶು ವುಚ್ಚಳಿಸಿ ಬಿರ್ದು ನಿಲೆ (ಸಾಳ್ವಭಾ. ೫-೨೮). ೯. (ದೈವ, ಭೂತಗಳ ವಿಷಯದಲ್ಲಿ) ಆವೇಶ ಉಂಟಾಗು : ಅವನ ಮೇಲೆ ದೇವರು ತುಂಬಿ ಬಂದಿದೆ (ರೂಢಿ). ೧೦. ರಚಿಸು ; ಮಾಡು ; ಹಾಕು : ಕಂಭಕ್ಕಿದಿರಾಗಿ ತುಂಬಿರಿ ಹಸೆಗೊಳ ಕಂಭದಲ್ಲಾವೆ ಅರಗಿಣಿ (ಹಳ್ಳಿಬಾ. ೫೮). ೧೧. ಹಣ ಪಾವತಿ ಮಾಡು ; ಹಣ ಕಟ್ಟು: ಸಾಲದ ಹಣ ತುಂಬಬೇಕೆಂದು ನೋಟೀಸು ಬಂದಿದೆ (ರೂಢಿ). ೧೨. (ಆಲಂ) ನಂದಿಸು ; ಆರಿಸು ; ನಿವಾರಿಸು : ಚಾವೇಯ ಹಾಸೀತೆ ದೀಪವ ತುಂಬೈತೆ ನೀಲವೆ ತೋಳಾಗೆ ಮಲಗ್ಯೆತೆ (ನಾಪದ. ೯೫) : ಒಬ್ಬರ ಕೊರತೆಯನೊಬ್ಬರು ತುಂಬಿದರಿಬ್ಬರಿಗೂ ಸುಖವುಂಟು (ಇಂಚಾಪ. ೨೦೦-೪೯). ೧೩. (ಆಲಂ) ಮುಗಿದುಹೋಗಂ : ಕುಂಕುಮ ತುಂಬಿದೆ. ಅಂಗಡಿಯಿಂದ ತರಬೇಕು (ರೂಢಿ). 'ಹೆಚ್ಚು$_1$' ಪರಾ.

**ತುಂಬಿಕೊಡು**=ಕೊರತೆಯನ್ನು ಹೋಗಲಾಡಿಸು : ತಮ್ಮಿಂದಾದ ನಷ್ಟವನ್ನು ತುಂಬಿಕೊಡಲು ಅವರು ತಯಾರಿದ್ದರು (ರೂಢಿ). **ತುಂಬಿಗರೆ**= (ತುಂಬಿಯಂತೆ ಇಂಪಾಗಿ)ಧ್ವನಿಮಾಡಂ: ಪಂಬಲಿಸುತ ಪಾಲ್ಮೊಲೆವೊಡು ತಳೆವೆಟ್ಟು ಚುಂಬಿಸುತವೆ ಮೊಗ ನೋಡಿ ತುಂಬಿಗರೆವ ತೊಟ್ಟಿಲ ಹಸುಳೆಯ ನೆತ್ತದಂಬುಜಮುಖಿಯ ಬಾಳೇನೊ (ಶ್ರೀಪಾಲ. ೨-೩೫) ; ಭರದಿಂದಂಬೆಗಾಲಿಡುತೊಯ್ಯನೆ ತುಂಬಿಗರೆವುತ ದಾದಿಯ ಕೈಯ ಬೆರಳ ಪಿಡಿದು ತರ್ಳನಡೆಯನು ನಡೆವೆನ್ನ ತರುಣನನೆಂದಿಗೀಕ್ಷಿಪೆನೊ (ಜಂಪ್ರಸಾಂ. ೩-೧೦೬). **ತುಂಬಿಡು**=೧. ಭರ್ತಿಮಾಡಿ ಇಡಂ : ಮೊನ್ನೆ ಬೇಸಿಗೆಯಲ್ಲಿ ಲಟ್ಟಿಸಿದ ಹಪ್ಪಳ, ಇಟ್ಟ ಸಂಡಿಗೆ, ತುಂಬಿಟ್ಟ ಉಪ್ಪಿನಕಾಯಿ ಭರಣಿ ಎಲ್ಲ ತೆರೆದಿಡು (ನೆಲಮು. ೧೭-೮) ; ಹಾಲ್ಜೇನನ್ನೇ ತನ್ನ ಮೈಯಲ್ಲಿ ತುಂಬಿಟ್ಟುಕೊಂಡು ಬೆಳೆದಳು ಅವಳು (ಹೊಸಕ್ಷಿ. ೩).೨. ಮೀಸಲಾಗಿಡು : ಹೊರಗೆ ಹೋಗಿದ್ದ ಮಗನಿಗೆಂದು ತಿಂಡಿಯನ್ನು ತುಂಬಿಟ್ಟಿದ್ದರು (ರೂಢಿ). **ತುಂಬಿ ತುಳುಕು** = ಭರ್ತಿಯಾಗಿ ಹೊರಚೆಲ್ಲುವಂತಿರಂ ; ಸಂಪೂರ್ಣವಾಗಿ ತುಂಬಿರಂ : ದೇವ ಸಂಗನಬಸವ ತುಂಬಿ ತುಳುಕದ ಬಸವ (ಬಸರ. ೯-೮೮); ನಿಮಗೆಲ್ಲ ರಕ್ತ ತುಂಬಿ ತುಳುಕುತ್ತದೆ (ಕಾಲೂರ. ೧೫ ಕಥಾಸಾರ). **ತುಂಬಿದ ಕೊಡ** = ೧. ಭರ್ತಿಯಾದ ಕೊಡ : ಎದುರಿನಿಂದ ಹೆಂಗಸೊಬ್ಬಳು ತುಂಬಿದ ಕೊಡವನ್ನು ಹೊತ್ತು ತರುತ್ತಿದ್ದುದನ್ನು ಕಂಡು ಸಂತುಷ್ಟರಾದರು (ರೂಢಿ). ೨. ಸದ್ಗುಣ, ಧನ ಮೊದಲಾದಂವುಗಳಿಂದ ತುಂಬಿದ ವ್ಯಕ್ತಿ; ಗಂಭೀರತೆಯಿಂದ ಕೂಡಿದ ವ್ಯಕ್ತಿ : ತುಂಬಿದ ಕೊಡ ತುಳುಕುವುದಿಲ್ಲ (ಗಾದೆ) ; ಅವರು ತುಂಬಿದ ಕೊಡ (ರೂಢಿ). **ತುಂಬಿದ ಸಂಸಾರ** = ಹೆಚ್ಚು ಮಕ್ಕಳಿಂದ ಕೂಡಿದ ಕುಟುಂಬ; ಸಮೃದ್ಧ ಸಂಸಾರ: ಅವರದು ತುಂಬಿದ ಸಂಸಾರ (ರೂಢಿ). **ತುಂಬಿ ಬರು**=೧. ಕೂಡಿಕೊಳ್ಳು: ಮೊಘಲ್ ಕಲೆಯಲ್ಲಿ ಅಷ್ಟೊಂದು ಸೊಬಗು, ವೈಭವ ತುಂಬಿ ಬರಲು ಇವರುಗಳು ಬಹುಮಟ್ಟಿಗೆ

ಕಾರಣರಾದರು (ಭಾರದ. ೫೨೮). ೨. ನಷ್ಟ ಪರಿಹಾರವಾಗು ; ಸರಿದೂಗು : ನುಡಿಯಂತೆ ನಡೆಯುದಿದ್ದರೆ ನಡೆಯಂತೆ ನುಡಿಯುದಿದ್ದರೆ ದಿವ್ಯ ಜೀವನದಲ್ಲಿ ಅದೊಂದು ದೊಡ್ಡ ಕುಂದು, ತುಂಬಿಬಾರದ ಕೊರತೆ (ಮೋಳಿಮಾ. ೬ ಪ್ರಸ್ತಾವನೆ) ; ಅವನ ಕಾಲಿನ ಕುಂಟುತನದ ಊನವು ಅವನ ಪ್ರಸಂಗಾವಧಾನದ ಚತುರತೆಯಲ್ಲಿ ತುಂಬಿ ಬಂದಿತ್ತು (ಕಂಬಹು. ೧೩). ತುಂಬಿರು = ಭರ್ತಿಯಾಗಿರು ; ಹರಡಿರು : ವಂದಿತಾಮಳಮಕುಟ ವರ್ಧನರಿಂದ ತುಂಬಿಹುದೆಂಟುಯೋಜನದಂದವದು (ಸಂಭಪ. ೫-೮೬) ; ಆದಱಿನಾ ತಱುವಾಯ ಮನೆಯೊಳು ಗದೆ ಶರಾಸನ ಖಡ್ಗ ಮುದ್ಗರವಧಟು ಚಕ್ರ ತ್ರಿಶೂಲ ತುಂಬಿರೆ (ಕುವ್ಯಾಆ. ೧೦೯. ೩೨-೩೨).

[ದೇ. ॥ ತುಳು. ತುಂಬು ; ಕೊಡ. ದುಂಬ್]

**ತುಂಬು₂** (ನಾ). ಸಂಪೂರ್ಣವಾಗಿರುವಿಕೆ ; ಪೂರ್ಣತೆ ; ಅತಿಶಯ ; ಬಾಹುಳ್ಯ : ಆವ ತುಂಬಿಹುದಿಲ್ಲಿ ಎರೆವವರಿಗೆರೆವಷ್ಟನೀವ ಮನ ತುಂಬು ವಷ್ಟರಿವ ಎದೆ ತುಂಬುವಷ್ಟೊಲವ ಪಡೆಯೆ ಜೀವ ? (ಮುಲದೇ. ೩೦-೯).

[ <ತುಂಬು₁ ]

**ತುಂಬು₃** 'ತೂಂಬು' ನೋ.

**ತುಂಬು₄**, ತುಂಬೆ₃ (ನಾ). ೧. ಹಣ್ಣು, ಕಾಯಿ, ಹೂವು ಮೊದಲಾದುವುಗಳ ತೊಟ್ಟು,—ನಾಳ ; ವೃಂತ ; ತೊಡಂಬೆ : "ತುಂಬು— ಪೂರಣೇ, ವೃಂತ (ಹೂವಿನ ಕಾವು), ಜಲಪ್ರಣಾಲ್ಯೋಃ (ತೂಬು)" (ಶಮುಧಾ) ; "ತೊಟ್ಟು ತುಂಬೆನೆ ವೃಂತನಾಮವೆಂದೇ ತಿಳಿವುದು" (ಶಬ್ದಮಂ. ೨೩); ಉದುರಿಹೋದ ಹೂವಿನ ತುಂಬಿನತ್ತ ಲಲಿತಾ ತದೇಕ ಚಿತ್ತದಿಂದ ನಿಟ್ಟಿಸತೊಡಗಿದಳು (ಕನಸಿ. ೧); ಕಿತ್ತಳೇಹಣ್ಣು ಬುಡದಲ್ಲಿಯೂ ತುಂಬಿನಲ್ಲಿಯೂ ತುಸು ಕುಗ್ಗಿರುವಂತೆ ಪೃಥ್ವಿಯಾದರೂ ಉತ್ತರ ದಕ್ಷಿಣ ಧ್ರುವಗಳೆಡೆಗೆ ಸ್ವಲ್ಪ ಕುಗ್ಗಿಯದೆ (ಮುಂಬಯಿ. ೪-೬೪); ಮೆಣಸಿನಕಾಯಿಯ ತುಂಬು ಮುರಿದು ಅವನ್ನಾದರೂ ತಾಟನ ಬದಿಗಿರಿಸಿದಳು (ರಕ್ತಧ್ವ. ೨೨೦). ೨. ಒಂದು ಬಗೆಯ ಆಭರಣ. 'ಚಳತುಂಬು' ಪರಾ. ತುಂಬೆ₃ : ೧. "ತುಂಬೆಯೆನೆ ತೊಟ್ಟು" (ಕಕರ. ೪೭).

[ ದೇ. ॥ ತಮಿ. ಮಲ. ತುಮ್ಪು = ತುದಿ, ಅಂಚು ]

**ತುಂಬುಕಣ್ಣು** 'ತುಂಬುಗಣ್ಣು' ನೋ.

**ತುಂಬುಗ** (ನಾ). ಭರ್ತಿಮಾಡುವವನು ; ತುಂಬುವವನು : "ಪ್ರಾಯುನ್, ಪ್ರಾಪಕಃ, ಪ್ರಾತಾ ಈ ಮೂರು ತುಂಬುಗ" (ಕಾಶಕ್ಕ. ೦೬೭).

[ ತುಂಬು₂ + –ಗ₂ ]

**ತುಂಬುಗಣ** (ನಾ). (ಧಾನ್ಯಗಳನ್ನು) ರಾಶಿ ಹಾಕಿರುವ ಕಣ : ಇವೊತ್ತು ತುಂಬುಗಣದ ಪೂಜೆ ಇದೆ (ರೂಢಿ). [ ತುಂಬು₂ + ಕಣ₁ (<ಕಳ₃)]

**ತುಂಬುಗಣ್ಣು**, ತುಂಬುಕಣ್ಣು (ನಾ). ೧. ಅಗಲವಾದ ಕಣ್ಣು ; ದೊಡ್ಡಕಣ್ಣು : ತುಂಬುಗಣ್ಣಲ್ಲಿ ನೋಡಿದಳು (ವೃದ್ಧವಿ. ೦೨೫) ; ತನ್ನ ತುಂಬುಗಣ್ಣುಗಳನ್ನು ಹೊರಹೊರಳಿಸಿ ನೋಡುತ್ತ ಮೆರವಣಿಗೆಯ ಹಿಂದೆ ಸಾಗಿದಳು (ಫಲಸಂ. ೮೫). **ತುಂಬುಕಣ್ಣು : ೨.** (ಕಣ್ಣೀರು) ತುಂಬಿದ ಕಣ್ಣು : ಪಾಳುರಾಜಧಾನಿಯನ್ನು ತುಂಬುಕಣ್ಣಿನಿಂದ ನೋಡಿ ... ನಿಟ್ಟುಸಿರಿಟ್ಟು ಪಂಡಿತನನ್ನು ಹಿಂಬಾಲಿಸಿದ (ಚಿದೇವ. ೩).

[ ತುಂಬು₂ + ಕಣ್ಣು (< ಕಣ್) ]

**ತುಂಬುಗಲ್ಲ** (ನಾ). ತುಂಬಿಕೊಂಡಿರುವ ಗಲ್ಲ ; ದುಂಡನೆಯ ಕೆನ್ನೆ : ಮೊದಲಿನ ತುಂಬುಗಲ್ಲದ ನಗುಮುಖದ ರಮಾ ಎಲ್ಲಿ, ಒಣಗಿದ ಕೃಶಳಾದ ಅಳುಮುಖದ ನೀನೆಲ್ಲಿ ? (ಕುಂಕುಮ. ೫೫). [ ತುಂಬು₂ + ಗಲ್ಲ₁ ]

**ತುಂಬುಗಾಂಭೀರ್ಯ** (ನಾ). ಅಧಿಕವಾದ ಹಿರಿಮೆ ; ದೊಡ್ಡತನ : ತುಂಬುಗಾಂಭೀರ್ಯದಲಿ ಸತ್ಯವನೆ ಎತ್ತಿ ನಿಲಿಸುವನು ಪ್ರಜೆಯ ತಂದೆ (ಹೊಂಗಳು. ೬-೮). [ ತುಂಬು₂ + ಗಾಂಭೀರ್ಯ ]

**ತುಂಬುಗಾಯಿ** (ನಾ). ಬದನೆಕಾಯಿ ಮೊದಲಾದ ಇಡಿಕಾಯಿಯೊಳಗೆ ಸಂಭಾರವನ್ನು ತುಂಬಿ ಬೇಯಿಸಿ ಮಾಡಿದ ಪಲ್ಯ : "ತುಂಬುಗಾಯಿ— ಇಡಿಗಾಯಿಪಲ್ಲೆ ; ಬದನೇಕಾಯಿಯ ಪಲ್ಲೆ" (ಜಾನಕೋ. ೬೭); ಅವಳು ಬದನೆಯ ತುಂಬುಗಾಯಿ ಮಾಡುವುದರಲ್ಲಿ ಎತ್ತಿದ ಕೈ (ರೂಢಿ).

[ ತುಂಬು₂ + ಕಾಯಿ₄ (< ಕಾಯ್₄) ]

**ತುಂಬುಗುಂಕುಮ** (ನಾ). ಹಣೆಯಲ್ಲಿ ಇಟ್ಟುಕೊಂಡಿರುವ ಅಗಲವಾದ ಕುಂಕುಮ: ಮುಂಬಯಸಿ ಕೈಗೈದ ಸೊಬಗಿನ ಕೆಂಬಲರ ಮೈವಚ್ಚೆ ಕೆಂಬಲು ತುಂಬುಗುಂಕುಮ ತಿವಿರು ಚೆಂದುಟಿಯುಟ್ಟರುಣವಸನ (ಸಾಳ್ವಭಾ. ೩-೩೪).

[ ತುಂಬು₂ + ಕುಂಕುಮ ]

**ತುಂಬುಗೂದಲು** (ನಾ.) ದಟ್ಟವಾದ ಕೂದಲು: ಇವನು ತುಂಬುಗೂದಲಿನ ಕುಮಾರನಂತೆ ಕಣ್ಣಿಗೆ ಮುದ್ದಾಗಿ ... ಸುಳಿಯುತ್ತಾನೆ (ಭಾರದ. ೨೮).

[ತುಂಬು₂ + ಕೂದಲು (<ಕೂಂದಲ್)]

**ತುಂಬುಗೆ** (ನಾ). ತುಂಬುವಿಕೆ ; ಭರ್ತಿಯಾಗುವಿಕೆ : "ಪೂರ್ತಿಃ, ಪೂರ್ತಂ ... ಈ ೧೦ ತುಂಬುಗೆ" (ಕಾಶಕ್ಕ. ೦೬೩). [ತುಂಬು₂ + –ಗೆ]

**ತುಂಬುಗೆಡು** (ಕ್ರಿ). ತುಂಬದೆ ಇರು ; ಪೂರ್ಣತೆಯಿಲ್ಲದಿರು : ತುಂಬು ಗೆಟ್ಟ ಅರೆಯಾದ ಬರಿದುವೋದ ಬಟ್ಟಲ್ಗಳನ್ನು ... ಭರಿಸುತ್ತಿರುವರು (ಬಿಟ್ಟಅ. ೮೩-೧೦). [ತುಂಬು₂ + ಕೆಡು₁]

**ತುಂಬುಗೆನ್ನೆ** (ನಾ). = ತುಂಬುಗಲ್ಲ : ತುಂಬುಗೆನ್ನೆ ; ನೀಳವಾದ ಮಾಟವಾದ ಮೂಗು (ಕಳಹು. ೨). [ತುಂಬು₂ + ಕೆನ್ನೆ]

**ತುಂಬುಗೆಯ್** (ನಾ). ಪುಷ್ಟವಾದ ತೋಳು, – ಬಾಹು, – ಭುಜ : ತನ್ನುಳ್ಳ ಬಲ್ಪನಿತಱೊಳಂ ಮುಂತಣ್ಗೆ ನಿಂತಂ ತುಂಬುಗೆಯ್ಯಿಕ್ಕುವಿನಂ (ಚಿಕವಂ. ೦೬೪-೦೪). [ತುಂಬು₂ + ಕೆಯ್₂]

**ತುಂಬುಗೊಳ್ಳು** (ಕ್ರಿ). ಭರ್ತಿಯಾಗು; ಅಧಿಕಗೊಳ್ಳು; ಅತಿಶಯವಾಗು: ಮಾನುವ ಮನವು ಹರುಷಪಡಲಿ ಎಂಬ ಬಯಕೆ ತುಂಬುಗೊಂಡು ಆಸೆ ಬಲಿತು ಕನಸ ಕಲಿತು (ಮೂರ್ತಿಕಾ. ೦೬-೦೩). [ತುಂಬು₂ + ಕೊಳ್ಳು₁ (<ಕೊಳ್₁)]

**ತುಂಬುಗೋಡಿ** (ನಾ.) ೧. ತುಂಬಿ ಹರಿಯುವ ಕೋಡಿ: ಕೆರೆಯಲ್ಲಿ ತುಂಬುಗೋಡಿ ಹರಿಯುತ್ತಿದೆ (ರೂಢಿ). ೨. (ಆಲಂ) ಅತ್ಯಧಿಕ ; ಅತಿಶಯ : ಬೊಕ್ಕಸ ಭಂಡಾರಗಳ ತುಂಬುಗೋಡಿಯ ಮಹಾನಿಧಿಯದನ್ನು ಪರಿಪಾಲಿಸಿಕೊಳ್ಳಬೇಕೆಂಬ ಆ ಬೆಳ್ಪಳಿಯ ಅರಿವು ನಿನಗೆ ನಿಶ್ಚಯವಾಗಿ ಇಲ್ಲ (ಮಂತ್ರಶ. ೦೦೨-೨೫). [ತುಂಬು₂ + ಕೋಡಿ₁]

**ತುಂಬುಚೀಲ** (ನಾ). ತುಂಬಿರುವ ಚೀಲ ; ಭರ್ತಿಯಾಗಿರುವ ಚೀಲ : ಎದ್ದುಹೋಗಿ ಪೆಟ್ಟಿಗೆದೆರೆದು ನಾಲ್ಕು ತುಂಬುಚೀಲಗಳನ್ನು ಅವರತ್ತಣ್ಗೆ ... ಬಿಸಾಡುವನು (ಬಿಟ್ಟಅ. ೫೪-೦೮). [ತುಂಬು₂ + ಚೀಲ]

**ತುಂಬುಚ್ಚು** 'ತೂಂಬುಚ್ಚು' ನೋ.

**ತುಂಬುಜವ್ವನ** (ನಾ). ತುಂಬಿದ ಹರಯ ; ಪೂರ್ಣವಾದ ಯೌವನ,– ತಾರುಣ್ಯ : ತುಂಬುಜವ್ವನದ ನಿತಂಬಿನಿಯರ ಕುಂಭಕುಚದಿಱುಂಬಿ ನೊಳೆಂಬುಪಡೆದು (ರಾಜಶೇ. ೨-೮೨) ; ಅವನು ತುಂಬುಜವ್ವನವನ್ನು ಧರಿಸಿದನು (ಮಱಿಸ. ೬೪). [ತುಂಬು₂ + ಜವ್ವನ]

**ತುಂಬುಜವ್ವನೆ** (ನಾ). ೧. ತುಂಬು ಹರೆಯದ ಹೆಂಗಸು; ನವತರುಣಿ ; ಯುವತಿ : ನನೆಯುಂಬುವಿಡಿದಂಜಿಸುವ ಬೆಡಗಿನ ತುಂಬುಜವ್ವನೆ ನಾಲ್ಕು ನೀರನು ಮಿಂದಳೊಲವಿಂದ (ಸಾಳ್ವಭಾ. ೦೩-೩೪). ೨. ತುಂಬಿದ ಎದೆಯುಳ್ಳವಳು. 'ಕಕ್ಕಸಜವ್ವನೆ' ನೋ. [ತುಂಬುಜವ್ವನ + –ಎ₂]

**ತುಂಬುಜೀವನ** (ನಾ). ಪರಿಪೂರ್ಣವಾದ ಜೀವನ ; ತೃಪ್ತಿಯ ಬಾಳು: ತುಂಬುಜೀವನದ ತುಂಬನುಭಾವದ ಬಿಂಬಾಧರೆ ಶಿವಶಾಂಭವಿಯ ಮಗಳು (ಸಿದ್ಧಪು. ೨-೯೮) ; ಇದು ತುಂಬುಜೀವನದ ಭಾವಾನುಭಾವಗಳ ಪರಿಪಕ್ವತೆಯ ಫಲ (ಸಾಹಿಸ. ೩೪) ; ವೇದಕಾಲದ ತುಂಬುಜೀವನದಲ್ಲಿ ಬ್ರಹ್ಮ

ವಾದಿನಿಯರಾದ ಮಹಿಳೆಯರು ತಮ್ಮ ಭಾವನೆಗಳನ್ನು ಸಾಹಿತ್ಯದ ಮೂಲಕ ವ್ಯಕ್ತಗೊಳಿಸಿದರು (ಕರ್ನಾಕ. ೩೯). [ತುಂಬು$_2$ + ಜೀವನ]

**ತುಂಬುಣ್ಣು** (ಕ್ರಿ). ಚೆನ್ನಾಗಿ ಊಟಮಾಡು; ಹೊಟ್ಟೆತುಂಬ ತಿನ್ನು: ಉಂಬ ಬಾಯ್ ತಾನಾಗಿ ಉಂಡೆಲ್ಲರಂ ತಣಿಪಿ ತುಂಬುಂಡು [ಪಾಠಾಂ. ಬಲದು] ಪಲವು ಕದಳಿಗಳೆಲ್ಲ ದಣಿದವೆಂದೆಂಬುದಂ ಮಾಡಿ ತೋಱಿದ ಮಹಾಪ್ರಭುವರನ (ಲಶಿಚಿಂ. ೩೨-೩೩). [ತುಂಬು$_2$ + ಉಣ್ಣು (<ಉಣ್)]

**ತುಂಬುದಣ್ಗದಿರ** (ನಾ). ಪೂರ್ಣಚಂದ್ರ; ಹುಣ್ಣಿಮೆಚಂದ್ರ: ನುಣ್ಗುರುಳ ನೀಱಿಗೆ ಬೆಡಂಗಮರ್ದೆಸೆವ ತುಂಬುದಣ್ಗದಿರನಂದದ ಮೊಗದ ಚೆಲ್ವಿಗೆ ... ಪೆಣ್ಗಳರಸಿಗೆ ಗರ್ಭಚಿಹ್ನಮಂಕುರಿಸಿದುದದಂ ಪೊಗಳ್ವ ಕವಿ ಯಾವನೋ (ಪದ್ಮರಾ. ೨-೩೮). [ತುಂಬು$_2$ + ತಣ್ಗದಿರ]

**ತುಂಬುದಿಂಗಳು** (ನಾ). =ತುಂಬುದಣ್ಗದಿರ: ತುಂಬುದಿಂಗಳ ಮೊಗ ತುಱು ಗೆವೆಯಲರ್ಗಣ್ ತುಂಬಿಗುರುಳು (ಶ್ರೀಪಾಲ. ೩-೨೪); ತುಂಬುದಿಂಗಳು ಮೊಗದ ನಸುನಗೆಯೆಂಬ ಬಾಂದೊಱೆದೆರೆವೊಯಿದು ... ಅಂಬುವೆಱೆ ವರು ಪಥಿಕರಿಗೆ (ಸಾಳ್ವಭಾ. ೦-೬೨); ತುಂಬುದಿಂಗಳ ಕನಕಬಿಂಬಕ್ಕೆ ಪೊನ್ ತನಂ ಬಾಡಿ, ಮೂಡಿದುದು ಬೆಳ್ಳಿಯತನಂ (ಶ್ರೀರಾಮಾ. ೪೮೦-೧೬೩).
[ತುಂಬು$_2$ + ತಿಂಗಳು (<ತಿಂಗಳ್)]

**ತುಂಬುದೆರೆ** (ನಾ). ಸಂಪೂರ್ಣವಾಗಿ ಮುಚ್ಚಿರುವ ತೆರೆ, – ಪರದೆ: ಚಂದ್ರಗಾವಿಯ ಮೇಲ್ಕಟ್ಟಿನೊಳುವಣ್ಣದ ತುಂಬುದೆರೆಯು... ಮುಚದೆ ಸೆಳೆದಪ್ಪೊ ಮೋಹನರೂಪ (ಕಂನವಿ. ೯-೧೮೮). [ತುಂಬು$_2$ + ತೆರೆ$_4$]

**ತುಂಬುನಂಬಿಗೆ** (ನಾ). ಪೂರ್ತಿನಂಬಿಕೆ; ಸಂಪೂರ್ಣವಿಶ್ವಾಸ: ತಂದೆ ಬಂದೆವಿದೊ ತುಂಬುನಂಬಿಗೆಯ ಹಡಗದಲ್ಲಿ ಕುಳಿತು (ನೆಲಮು. ೩೬-೦೫).
[ತುಂಬು$_2$ + ನಂಬಿಗೆ (<ನಂಬುಗೆ)]

**ತುಂಬುನಗೆ** (ನಾ). ಪೂರ್ಣವಾದ ನಗೆ: ಆಗಸದ ಗಂಟುಮೋರೆಯಲಿ ಹೊಂಬಿಸಿಲ ತುಂಬುನಗೆ ಹರಿಸಿ ಹರಿದಿಹುದು ನೀರು (ನೆಲಮು. ೦೫-೦೩): ಸವಿಹಸಿವೆ ಕಂಬನಿಯುಂ ತುಂಬುನಗೆಯೊಮ್ಮೆ (ಕಾಲೂರ. ೩೧-೨೬).
[ತುಂಬು$_2$ + ನಗೆ]

**ತುಂಬುನೀರು** (ನಾ). ಅಣೆಕಟ್ಟು ಮೊದಲಾದ ಜಲಾಶಯಗಳು ಭರ್ತಿ ಯಾದಾಗ ಇರುವ ನೀರು: ಮುಂದುಗಡೆಯ ಕೊಳದ (Forebay) ತುಂಬುನೀರಿನ ಮಟ್ಟ ೧೬೪೦ ಅಡಿ (ಶಿಲ್ಪನಾ. ೨೪೬).
[ತುಂಬು$_2$ + ನೀರು$_1$ (<ನೀರ್$_1$)]

**ತುಂಬುನೊಸಲ್** (ನಾ). ವಿಸ್ತಾರವಾದ ಹಣೆ; ವಿಶಾಲವಾದ ಹಣೆ: ಸುಱಿಗುರುಳ ತುಂಬುನೊಸಲ ಅಸಿಯ ಬೊಟ್ಟಿನ ನೀಳ್ದ ಪುರ್ವಿನ ... ವಿದ್ಯಾಧರವಾರನಾರೀಕದಂಬಂ (ಧರ್ಮಾಮೃ. ೮-೧೯೬).
[ತುಂಬು$_2$ + ನೊಸಲ್]

**ತುಂಬುಪಾಂಡಿತ್ಯ** (ನಾ). ಸಂಪೂರ್ಣವಾದ ವಿದ್ವತ್ತು: ತುಂಬುಪಾಂಡಿತ್ಯ, ಕವಿಸಹಜವಾದ ಕೋಮಲಹೃದಯ (ಕನ್ನಸು. I, ೦೨); ಉಪನ್ಯಾಸಕರ ತುಂಬು ಪಾಂಡಿತ್ಯವು ಕೇಳುವವರನ್ನು ಆಶ್ಚರ್ಯಪಡಿಸಿತು (ರೂಢಿ).
[ತುಂಬು$_2$ + ಪಾಂಡಿತ್ಯ]

**ತುಂಬುಪೆರೆ** 'ತುಂಬುವೆಱೆ' ನೋ.

**ತುಂಬುಬಸಿರ್** (ನಾ). ಹೆರಿಗೆಕಾಲ ಸಮೀಪಿಸಿರುವ ಗರ್ಭ; ಪೂರ್ಣ ಗರ್ಭ: ದಶರಥಸತಿಯರಿಂತು ತುಂಬುಬಸಿರಿಂದೆಸೆಯೆ ನಲಿದತ್ತಯೋಧ್ಯೆ (ಶ್ರೀರಾಮಾ. ೧೫-೩೯೨). [ತುಂಬು$_2$ + ಬಸಿರ್ (<ಬಸಿಱ್)]

**ತುಂಬುಬಸಿರಿ** (ನಾ). ಹೆರಿಗೆಯ ಕಾಲ ಸಮೀಪಿಸಿರುವ ಗರ್ಭಿಣಿ; ನವಮಾಸ ತುಂಬಿರುವ ಬಸಿರಿ; ಪೂರ್ಣಗರ್ಭಿಣಿ: ತುಂಬು ಬಸಿರಿಯರು, ಹಾಲುಮಕ್ಕಳು ಸತ್ತ ಲೆಕ್ಕವ ದೇವರೆ ಬಲ್ಲ (ಇಂಗೀತ.೩೩-೨೦).
[ತುಂಬುಬಸಿರ್ + -ಇ$_3$]

**ತುಂಬುಬಾಳ್** (ನಾ). = ತುಂಬುಜೀವನ: ನೆಗೆಯುತಿದೆ ಮತ್ತೊಮ್ಮೆ ನಮಗದೋ ತುಂಬುಬಾಳ್ ಬೀರಿ ಹಿರಿಯ ಬೆಳಕೊಂದು ಸಿರಿ ಸಾರಿ (ಹೊಂಗಳು. ೩೩-೧೧). [ತುಂಬು$_2$ + ಬಾಳ್$_2$ (<ಬಾೞ್$_2$)]

**ತುಂಬುಬಿಂಬ** (ನಾ). ಸಂಪೂರ್ಣವಾಗಿರುವ ಮಂಡಲ, – ಆಕಾರ, – ಸ್ವರೂಪ: ತುಂಬುಬಿಂಬಂ ತೋರಿದುದು ಪಾಡಿವದ ಪೆರೆಗೆ (ಶ್ರೀರಾಮಾ. ೬೩೯-೨೬೬). [ತುಂಬು$_2$ + ಬಿಂಬ]

**ತುಂಬುಬೆಳೆ** (ನಾ). ಅಧಿಕವಾದ ಬೆಳೆ; ಹೆಚ್ಚಾದ ಬೆಳಸು: ಬಯಲಲಿ ಪಚ್ಚೆಯ ಪಯಿರಿನ ತುಂಬುಬೆಳೆ (ಹೊಂಗಳು. ೦೦-೧೧). [ತುಂಬು$_2$ + ಬೆಳೆ$_2$]

**ತುಂಬುಮೊಲೆ** (ನಾ). (ಹಾಲಿನಿಂದ) ತುಂಬಿಕೊಂಡಿರುವ ಕುಚ, – ಸ್ತನ: ತಾಯಿ ಚೊಚ್ಚಲಮಗುವ ನಲ್ಮೆಯಲಿ ಹೆತ್ತು, ತುಂಬುಮೊಲೆಯನು ಕೊಟ್ಟು, ಕೆನ್ನೆಯಲಿ ಮುತ್ತಿಟ್ಟು (ಪಾಂಚಜ. ೨೯-೯). [ತುಂಬು$_2$ + ಮೊಲೆ$_1$]

**ತುಂಬುಯೌವನ** (ನಾ). = ತುಂಬುಜವ್ವನ: ಕೆಲವರು ತುಂಬುಯೌವನ ದಲ್ಲಿ ಸಾಯುತ್ತಾರೆ (ವಚಭಾ. ೩೪೩). [ತುಂಬು$_2$ + ಯೌವನ]

**ತುಂಬುರ್**, ತುಮುರಿ, ತುಮ್ರಿ$_1$ (ನಾ). = ತುಂಬುರು$_2$: ಅರನೇಱಿಲ್ ತಾಱೆ ತುಂಬುರ್ ತದುಕಳಿಲೆ ಲವಂ ನೆಲ್ಲಿ ಬಿಲ್ವಾರ್ಜುನಂ ... ತಱಿಯ ದಿಂದೊಪ್ಪುತಿರ್ದತ್ತರಣ್ಯಂ (ಗಿರಿಕ. ೦-೬೨). **ತುಮುರಿ**: ತುಮುರಿಯ ಕೊಳ್ಳಿ ಯಂತೆ ಉರಿವಾತ ಭಕ್ತನೆ (ಸರ್ವವ. ೧೮೫-೮೫೦). **ತುಮ್ರಿ$_1$**: ಕಣ್ತುಮ್ರಿ, ತುಮ್ರಿ (ಮೃಜಿಗಿ. ೩೦-೫೯೮). 'ಕಣ್ತುಮ್ರಿ' ಪರಾ.
[< ಸಂ. ತುಂಬುರು./ತಮಿ. ತುಮ್ಪಿ, ತುಮ್ಪಿಲಿ; ತೆಲು. ತುಬಿಕಿ. ತುಮಿಕಿ, ತುಮ್ಮಿಕಿ; ಕೊಲಾ. ನಾಯ್ಕಿ. ತುಮ್ಕಿ; ಪರ್ಜಿ. ತುಂಬ್ರಿ]

**ತುಂಬುರ$_1$**, ತಂಬುರಿ (ನಾ). [ಸಂಗೀತ] ಒಂದು ಬಗೆಯ ವೀಣೆ: ತುಂಬುರವಿಡಿದು ಗಾನಾಮೃತವನು ಕಿವಿಗಿಂಬಾಗಿ ಸವಿದೋಱುತ (ಕಂನವಿ. ೮-೩೩); ಬಾಲಶಾರದೆಗಳೆನಲು ತುಂಬುರವನಾಂತು ಲೋಲಾಕ್ಷಿ ಯರಿರ್ವರಾಗ ... ಪಾಡಿದರೊಲಿದು (ಕಂನವಿ. ೮-೬೫). **ತುಂಬುರಿ**: ಸುರ ಮುನಿಯ ತುಂಬುರಿಯೊ, ನಂದಿಯ ಮೃದಂಗವೊ (ದುಂಬಿನಾ. ೧).
[< ಸಂ. ತುಂಬರೀ]

**ತುಂಬುರ$_2$** (ನಾ). = ತುಂಬುರು$_3$: ತೌಂಬುರವೀಣೆಯ ತುಂಬುರರಿಂ ಕಿನ್ನರ ವೀಣೆಯ ಕಿಂಪುರುಷರಿಂದಂ ... ಒಪ್ಪಿದತ್ತು ಮಹಾಲಿಂಗದಾಸ್ಥಾನಂ (ಹಮ್ಮೀರ. ೮-೪೦ವ); ವಿಷ್ಣುದೂತರಾ ತುಂಬುರನಂ ಕಯ್ವಿಡಿದು ಕರದುಯ್ಯೆ (ಅದ್ಭುತ. ೨೦-೧೧). [ಸಂ.]

**ತುಂಬುರ$_3$** (ನಾ). = ತುಂಬುರು$_2$: "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಸಿತಸಾರಕಃ – ಈ ೪ ತುಂಬುರ" (ನಾಚಿರಾ. ೦೦೬); ಮಾಳಿಕಬ್ಬರಸಿ ತುಂಬುರ ಬೆಳದ ಬೋಗಿನಲು ಎಡೆಯೂರ ಪೊಲದೊಳ್ ಬಿಟ್ಟ ಮತ್ತ ರ್ಪ್ಪನ್ನೆರಡು (ಎಕ. XI, ಮೊಳಕಾ. ೪೦-೬; 987); ತಾಳಫಲಂಗಳೊಂದು ರುಚಿ ತುಂಬುರಪಣ್ಣೊಳಗುಂಟೆ ಲೋಕದೊಳ್ (ಧರ್ಮಾಮೃ. ೪-೦೨೬): ಬಸುರಿ ಬಿಳುನೆತ್ತಿ ತುಂಬುರ ಬಿಕ್ಕಿ ನೆಲ್ಲ ಚಂದಣವತ್ತಿ ... ಕಣ್ಗೆಸೆದುದು (ಸಿಂಗಿರಾ. ೩೦-೯). [ಸಂ.]

**ತುಂಬುರಕಾಯಿ** (ನಾ.) ತುಂಬುರುಮರದ ಕಾಯಿ: "ತಿಂದುಫಲಃ– ತುಂಬುರಕಾಯಿ" (ಓಷಧಿ. ೬೯). [ತುಂಬುರ$_3$ + ಕಾಯಿ$_4$ (<ಕಾಯ್$_4$)]

**ತುಂಬುರಕೊಳ್ಳಿ** 'ತುಂಬುರಗೊಳ್ಳಿ' ನೋ.

**ತುಂಬುರಗುತ್ತಿ** (ನಾ). ತುಂಬುರಗಿಡದ ಪೊದರು, — ಮೆಳೆ: ಹಡಿಲ ಬೆಂಚೆಯ ಮುಂದಣ ಕೆಱೆಯ ತೆವರ ತುಂಬುರಗುತ್ತಿ ಮೇಳೆಗಳೊಳಗಣ ತೆಂಕಣದಿಕ್ಕಿನ ಕಲ್ಲವೊಂದು (ಎಕ. XII, ತುಮಕೂ. ೧೧-೬೨; 1426).
[ತುಂಬುರ$_3$ + ಗುತ್ತಿ$_1$]

**ತುಂಬುರಗೊಳ್ಳಿ**, ತುಂಬುರಕೊಳ್ಳಿ (ನಾ). = ತುಂಬುರುಗೊಳ್ಳಿ: ತುಂಬುರಗೊಳ್ಳಿಯಂದದಿ ಛಿಟಛಿಟಲೆಂದು ಕಣ್ಗಳ ಸೋಗೆಯೊಳು ಒಂದಿದ

ಕಂಪಿನಿಂದಾ ಚಕ್ರಪತಿಯಿಂತೆಂದು ಬೆಟ್ಟೆಯನಾಡಿದನು (ನೇಮಿಸಂ. ೨೬-೨೦) ; ಹಲ್ಲ ಕಡಿದು ಕಣ್ಣು ಕೆಂಪೇಱಿ ತುಂಬುರಗೊಳ್ಳಿಯಂತುರಿ ಛಿಟಿಛಿಟಿಸಿ (ಭರತ. ೨೪-೪೫). **ತುಂಬುರಕೊಳ್ಳಿ :** ಚರವಚನಮನಾಲಿಸಿ ತುಂಬುರ ಕೊಳ್ಳಿಯ ತೆಱದಿನಂಬರಕ್ಕೆ ಸಿಡಿಲ್ದು (ಪಂರಾಮಾ. ೪-೩೯) ; ಕೋಪಾಗ್ನಿ ಭೋಂಕನುಣ್ಮೆ ತುಂಬುರಕೊಳ್ಳಿಯ ತೆಱದಿಂದಂಬರವಂ ಮುಟ್ಟೆ (ನೇಮಿಪು. ೧೧-೧೯) ; ರಜಕನಂಬರಂಬರಂ ತುಂಬುರಕೊಳ್ಳಿಯಂತೆ ಸಿಡಿದಿಂತಪ್ಪ ಸಿತಗನನೆಲ್ಲಿಯುಂ ಕಾಣೆಂ . . . ಅತ್ತ ಸಾರೆಂದು ಮುಂದೀಡಾಡಿ (ಅರ್ಧನೇ. ೮-೭೭ವ). [ತುಂಬುರ$_3$+ಕೊಳ್ಳಿ$_1$]

**ತುಂಬುರವೀಣೆ** (ನಾ). ಒಂದುಂ ಬಗೆಯ ವೀಣೆ : ರುದ್ರವೀಣೆ ತುಂಬುರ ವೀಣೆ . . . ಮೊದಲಾದ ತಂತಿ ಕಟ್ಟ ನುಡಿವ ವಾದ್ಯವನಱಿವುದು ಪ್ರಸಾದ ಲಿಂಗದಲ್ಲಿಯು ಗುರುಲಿಂಗ (ಆದವ. ೬-೧೨) : ಕೋಣನಿದಿರಲಿ ಪಾಡಿ ತುಂಬುರವೀಣೆಯಂ ಝೇಗೈದ ಪರಿ (ಗಗತಾ. ೦೨-೮೪); ವಾಸುಗಿಯು ನಾಗಸರವೀಣೆ ತುಂಬುರವೀಣೆಯಾ ಸುನಾರದವೀಣೆ (ನವಮೋ. ೧೭-೪೨). [ತುಂಬುರ$_2$ + ವೀಣೆ]

**ತುಂಬುರಿ** 'ತುಂಬುರು$_1$' ನೋ.

**ತುಂಬುರು$_1$** (ನಾ). ಒಂದು ಬಗೆಯ ಧಾನ್ಯ ; ಲವಣ ಪಂಚಕಮಿಂಗು ಪಿಪ್ಪಲಿ ಶುಂಠಿ ತುಂಬುರುಧಾನ್ಯಕಂ ಶಿವೆ ದುರಾಲಭೆ ಪಾಥೆ ಚಿತ್ರಕಮೋವ ಮೆಂಬಿವನೆಲ್ಲಮಂ ಸವನೆ ಕೊಂಡು (ಲೋಕೋಪ. ೯-೨೨೯) ; ತುಂಬುರು ಪೆರ್ಚಲ್ ಜೋಳವಳುಂಬಂ (ಜಟ್ಟಮು. ೪-೦೨).

[ <ಸಂ. ತುಂಬುರೀ ]

**ತುಂಬುರು$_2$** (ನಾ). ಬಿಗಿಯಾದ ಅಂಟುಳ್ಳ ಹಣ್ಣುಗಳನ್ನೂ ಬೀಡಿ ಕಟ್ಟಲು ಉಪಯೋಗಿಸುವ ಎಲೆಗಳನ್ನೂ ಬಿಡುವ ಮರ ; ತಿಂದುಕ; ☞ ಕೆಲವು ಕೋಶಗಳಲ್ಲಿ ತಿಂದುಕ ಮತ್ತು ತುಂಬುರು ಬೇರೆ ಬೇರೆ ಎಂದು ಹೇಳಿದೆ: "ತುಂಬುರು ತಿಂದುಕಮೆನಿಪ್ಪುದಕ್ಕುಂ ಪೆಸರಿಂ" (ವಸ್ತುಕೋ. ೩೪-೦೦) ; ಗುಳವತ್ತಿ ತುಂಬುರು ನಗರೆ ಮುಂತಾದ ಪಣ್ಣಳ ತಂದರಾಳ್ದನ ಬಳಿಗೆ (ಮೋಹತ. ೧೯-೫೭). 'ತುಂಬುರುಗೊಳ್ಳಿ' ಪರಾ.

[ ಸಂ. ]

**ತುಂಬುರು$_3$** (ನಾ). ಒಬ್ಬ ಗಂಧರ್ವನ ಹೆಸರು : ಪುಷ್ಪಕೇತುಪರ್ವತ ದಲ್ಲಿ ನಾರದ ತುಂಬುರು . . . ದೇವಮುನಿಗಳ ದಿವ್ಯಾಲಯಂಗಳುಂ (ವಿವೇಕ. ೨೦೭); ತುಂಬುರು ನಾರದರು ಪಾಡುತಿಹರೋ ದೇವ (ಪುರಂದ. ೨-೭೭-೧).

[ ಸಂ. ]

**ತುಂಬುರುಕೊಳ್ಳಿ** 'ತುಂಬುರುಗೊಳ್ಳಿ' ನೋ.

**ತುಂಬುರುಗೊಳ್ಳಿ, ತುಂಬುರುಕೊಳ್ಳಿ** (ನಾ). ತೊಪರೆಗಿಡದ ಸೌದೆಯಿಂದಾದ ಕೊಳ್ಳಿ ; ☞ ತೊಬರದ ಮರ ಚೆನ್ನಾಗಿ ಉರಿಯುವುದಿಲ್ಲ. ಒಲೆಗೆ ಹಾಕಿದರೆ ಸಶಬ್ದವಾಗಿ ಕಿಡಿ ಹಾರುತ್ತದೆ : ಬಲಿ ತನ್ನುನೀಂದ್ರರ ವಚನಕ್ಕೆ ತುಂಬುರುಗೊಳ್ಳಿಯಂತೆ ಸಿಡಿಲ್ದು (ಧರ್ಮಾಮೃ. ೯-೬೩); ಒಮ್ಮೆ ತುಂಬುರುಗೊಳ್ಳಿಯೆನೆ ಚಿಮ್ಮಿ . . . ಹರಿತಂದುದಾ ಗಾಳಿ (ಶ್ರೀರಾಮಾ. ೨೪೨-೪೦೦). **ತುಂಬುರುಕೊಳ್ಳಿ:** ಹಿಡಿಂಬನಾಡಂಬರಂಗೆಯ್ದು ತುಂಬುರು ಕೊಳ್ಳಿಯಂತಂಬರಂಬರಂ ಸಿಡಿಲ್ದು (ಪಂಪಭಾ. ೩-೧೭ ವ).

[ ತುಂಬುರು$_2$ + ಕೊಳ್ಳಿ$_1$ ]

**ತುಂಬುರುಸು** (ನಾ). ಒಂದು ಬಗೆಯ ಮರ : ಮಲ್ಲಾಳಿ, ಅ ಬ ನಾ ಸಿ, ತುಂಬುರುಸು (ಮ್ಯಾಡಿಗಿ. ೩೦-೬೦೦). [ ? ]

**ತುಂಬುವರಯ** (ನಾ). = ತುಂಬುಜವ್ವನ : ನಿನ್ನ ತುಂಬುವರಯದ ಗಂಡ ದೋಳ್ಗಳ ತಳ್ತಪ್ಪುಗೆಯಲ್ಲಿ . . . ಕರ್ಕಶಾಹಂಕಾರವನ್ನೊಡೆದು ಮಣ್ಣಾಳಿ ಗಿಳಿಹಿ ಬಾಗಿಸಿಕೊ ! (ಬಟ್ಟಿಲ. ೮೭-೨).

[ ತುಂಬು$_2$ + ಹರಯ (< ಪರಯ) ]

**ತುಂಬುವರಿಯಿಸು** (ಕ್ರಿ). ಭರ್ತಿಯಾಗಿ ಹರಿಯುವಂತೆ ಮಾಡು : ಚಂದ್ರ ಕಾಂತದ ನೆಗೆದ ಮುಗಿಲಟ್ಟಣೆಗಳಂ ಮೆಟ್ಟಿ ಬಡಹವನೊಡರ್ಚಿ ಬಳಸಿದ ಗಟಿನೊಗುವಿಗೆ ತಿಂಬಿ ತುಂಬುವರಿಯಿಸಿಯುಂ (ಚಂದ್ರಪು. ೮-೪೩ವ).

[ ತುಂಬು$_2$ + ಪರಿಯಿಸು ]

**ತುಂಬುವಾಳೆಗಾಯ್** (ನಾ). ಬಾಳೆಯಕಾಯಿಯಿಂದ ಮಾಡುವ ಒಂದು ಬಗೆಯ ಪಲ್ಯ: ಪಿರಿದಾಗಿ ಬಲಿದ ಬಾಳೆಯಕಾಯಿಗಳನು ತಂದು . . . ಪೊಗ್ಗರಣೆಮಾಡಿ ಹೂವಿಂದ ಪೊರೆಯಿಟ್ಟು ಮಡಕೆಯೊಳಿರಿಸಲದು ತುಂಬು ವಾಳೆಗಾಯ್ಸರಾದವು [ ಪಾಠಾಂ. ಬಾಳೆಯಕಾಯಿವೆಸರಾದುದು ] (ಸೂಪಶಾ. ೪-೭೪). [ತುಂಬು$_2$ + ಬಾಳೆ$_1$ (<ಬಾೞೆ) + ಕಾಯ್$_4$]

**ತುಂಬುವೆರೆ** 'ತುಂಬುವೆೞೆ' ನೋ.

**ತುಂಬುವೆೞೆ, ತುಂಬುಪೆರೆ, ತುಂಬುವೆರೆ, ತುಂಬುಹೆರೆ** (ನಾ). ತುಂಬಿದ ಚಂದ್ರ ; ಪೂರ್ಣಚಂದ್ರ : ಆ ತುಂಬುವೆೞೆಯ ತಿಳಿವೆಳಗು ವಿರಹಿವ್ರಜಕೆ ಮಾತೇನವಸ್ಥೆಯಂ ಮಾಡುತಿರಲು (ಸಮ್ಯಕ್ತ್ವ. ೦-೪೧); ಕಱೆಯೆಂಬ ನುಡಿ ತುಱುಗಾರ್ತಿಯರೊಳು ತುಂಬುವೆೞೆಯೊಳು (ಕುರಾಸಾಂ. ೨-೬೫); ತುಂಬುವೆೞೆಯಂ ಪೊಱಪೊಣ್ಮುವ ಜೊನ್ನದಂತೆ (ರಾಜಶೇ. ೧-೮೪); ಬೆಳ್ವಕ್ಕದ ತುಂಬುವೆೞೆಗಳನೊಟ್ಟಿಸಿ . . . ಸಮೆದುದೆಂಬಂತಿರೆ (ರಾಮಾಶ್ವ. ೫೨-೧೭). **ತುಂಬುಪೆರೆ:** ತುಂಬುಪೆರೆಯನು ಕಂಡು ಕಡಲುಬ್ಬಿ ಹರಿವಂತೆ (ಮಲೆದೇ. ೪೫-೦): ಸುಗ್ಗಿಯಲಿ ತುಂಬುಪೆರೆ ತೆಂಗಾಳಿ ಹೂಗಣೆಯರೊಡ್ಡಿ ದುರುಳಿಗೆ ಸಿಲುಕಿ ಅಳುಕದೆ ಇಹರು ಉಂಟೇ ? (ಚಂದ್ರಸ. ೮೭-೧೭). **ತುಂಬುವೆರೆ:** ತುಂಬುವೆರೆ ಮೋರೆಯಂ ಮೆಚ್ಚಿ ಬಂದಿಹ ಕೆಚ್ಚು ಕುಂಬಿಡುವುದನೆ (ಕಾಲೂರ. ೦೪೯-೩೨೫) ; ಕಡಲಾಳವನುಗಿದುಬಂದ ತುಂಬುವೆರೆ ತಾನು ! (ಚಿಂತನ ೨-೫). **ತುಂಬುಹೆರೆ :** ಎಳೆಯ ಹೆರೆಯೊಳೆ ತೊಳಗಿ ತುಂಬುಹೆರೆಯಾಗಿ . . . ಒಂದು ದಿವ್ಯ ಮಣಿ ಬೆಳಕು, ಮೂಡಿ (ಹೊಂಗಳು. ೩೪-೨೦). [ತುಂಬು$_2$ + ಪೆೞೆ]

**ತುಂಬುವೇಱು** (ನಾ). (ಬಂಡಿಯಲ್ಲಿ) ತುಂಬಿರುವ ಹೇರು,– ಹೊರೆ : ಸಂಬುಕ ಪಡಗು ಜೋಗುಗಳಿಗೆ ಸುಂಕವ ಕೊಂಬ ರಾಜೇಂದ್ರನಿದಿರೊಳು ತುಂಬುವೇಱಿಗೆ ಸುಂಕವ ಕೊಂಬ ನೃಪರಾಡಂಬರ ನೆರೆಯಲಾರ್ತಪುದೆ (ಕುರಾಸಾಂ. ೧೦-೨೦). [ತುಂಬು$_2$ + ಪೇಱು$_3$]

**ತುಂಬುಸಭೆ** (ನಾ). ಜನರಿಂದ ತುಂಬಿರುವ ಸಭೆ : ನಿನ್ನ ಮೇಲೊಂದು ಪದ್ಯವ ಬರೆದು, ಕನ್ನಡಿ ಕಟ್ಟುಹಾಕಿ ತುಂಬುಸಭೆಯೊಳು ಮಾನಪತ್ರ ಸಲಿಸುವೆವು (ನೆಲಮು. ೨೭-೧೯). [ತುಂಬು$_2$ + ಸಭೆ]

**ತುಂಬುಹೆರೆ** 'ತುಂಬುವೆೞೆ' ನೋ.

**ತುಂಬುಱು** (ನಾ). ಒಂದು ಬಗೆಯ ಹುಳು : ಸ್ಪರ್ಶರಸಗಂಧಂಗಳೆಂಬೀ ಮೂಱನಱಿವ . . . ಬೆದೆವುಱು ತುಂಬುಱು ಮೊದಲಾದವಱೊಳಂ (ಪಸಾರ. ೯೫-೦೮). [ತುಂಬು$_0$ + ಪುಱು]

**ತುಂಬೆ$_1$** 'ತುಂಬಿ$_1$' ನೋ.

**ತುಂಬೆ$_2$, ತುಂಬಿ$_2$** (ನಾ). ಬಿಳಿಯ ಸಣ್ಣ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ಮತ್ತು ಅದರ ಹೂವು : "ಅತಿಚ್ಛತ್ರ = ತುಂಬೆಯ ಗಿಡ" (ಅಕಾನಿ. ೧-೨೭); ತಿಲತೈಲಮಂಬಿಲಂ ತುಂಬೆ ಲೊಕ್ಕಿ ಸೊರೆ ಸುಣ್ಣಮೆರ್ಕೆ ಯೆಲೆ ಸಾಸಿವೆ ತಂಬುಲದೆಲೆಯುವನಿಕ್ಕುಗೆ ಗೋಕುಲಕ್ಕೆ ರುಜೆ ತೀರ್ಗುಂ (ಲೋಕೋಪ. ೯-೨೦೮) ; ತುಂಬೆ ಲೊಕ್ಕಿ ಸಹ (ಸಾಇಎ. ೦೯೨೯, ಮಂಗಳೂರು. ೪೬೯-೦೭ ; 1870) ; ಜಾಜಿ ಬಕುಳಂ ತುಂಬೆ . . . ಇವು ಶುಭ್ರಪುಷ್ಪಂಗಳೊಳು ಫಲಾಧಿಕಮಪ್ಪವು (ವೀಕ್ಷ್ಮಪು. ೭-೧೧-೧೭) : ಭ್ರಮರ ನೆರೆದೊಂದಾಗಿ ತುಂಬೆ [ಪಾಠಾಂ.ಬಿ]ಯ ಹೂವ ನೆಱೆ ಬಿಟ್ಟು ನಿಮಿರ್ದ ಪಾದರಿವೂಗೆಱಗಿದಂತೆ (ಸಾಳ್ವಭಾ. ೪-೧೮) ; ತುಂಬೆ ಹೂವಿನ ಪೂಜೆ (ಮ್ಯಆರಿ. ೦೯೩೯, ೩೩-೦೨ ; 1560). **ತುಂಬಿ$_2$:** ಪಲ್ಲವಿಪ ಕಕ್ಕೆ ಬಿಳಿಯೆಕ್ಕೆಗಳ ಮೊತ್ತಮಂ ರುದ್ರ

ಜಟೆಯಂ ತುಂಬಿ [ಪಾಠಾಂ.ಬೆ] ಯಂ ಕಂಚಿವಾಳಮಂ ಭದ್ರಮುಖಿ ಮೊದಲಾದ ನವಪತ್ರಜಾಲಮಂ ಕಂಡು (ಪುಷ್ಪರ. ಹ. ೫೩೩-೫) : ಲೋಲತರ ಕಿರುಕಸಾಲೆಯ ಪುಂಡಿ ತುಂಬಿ ಬಸಳೆಯ ಭಂಗಿಸೊಪ್ಪುಗಳನು (ಮಹಾವಿ. ೧೧-೩೫). [ದೇ.॥ ತಮಿ. ತುಮ್ಪೈ ; ಮಲ. ತುಮ್ಪ ; ತುಳು. ತುಂಬೆ, ತುಂಬಿ ; ತೆಲು. ತುಮ್ಮಿ]

**ತುಂಬೆ₄** 'ತುಂಬು₄' ನೋ.

**ತುಂಬೆಗಿಡ** (ನಾ). = ತುಂಬೆ₂ : "ದ್ರೋಣಃ – ಕರೀಕಾಗಿ, ನಾಗಳೆ, ತುಂಬೇಗಿಡ" (ಸಿದ್ಧಾಂತಿ. ೩೩೨) ; ಯಾವ ಕೈಗಳ ಸ್ಪರ್ಶದಿಂದ ತುಂಬೆಗಿಡವೂ ತಾಳೆಯಂತೆ ಬಾನಿನೆತ್ತರ ಬೆಳೆಯಬಹುದೋ (ಅರರೋ.೨).

[ತುಂಬೆ₂ + ಗಿಡ (< ಗಿಡು)]

**ತುಂಬೆದೆ** (ನಾ). ತುಂಬಿದ ಎದೆ : ಹರಿಯುತ್ತಿರುವಳು ಕನ್ನಡತಾಯಿಯ ತುಂಬೆದೆ ಸೂಸಿದ ಸುಕುಮಾರಿ ! (ಅಗ್ನಿಹಂ. ೩೨-೨).

[ತುಂಬು₂ + ಎದೆ (<ಎರ್ದೆ)]

**ತುಂಬೆಪಾದಿ** (ನಾ). ಒಂದು ಊರಿನ ಹೆಸರು : ತುಮ್ಬೆಪಾದಿಯೊಳ್ಕಾದಿ ಕಾಳೆಗಮಿಮ್ಮಟ್ಟಿದೊಡೆ ಆನೆಯೊಳಾನ್ತಿಱಿದು ಸತ್ತೊಡೆ (ಎಕ. IX, ಬೆಂಗಳೂ. ೮೩-೪ : ಸು. 890). 'ತುಂಬೆವಾಡಿ' ಪರಾ. [ ? ]

**ತುಂಬೆಮರ** (ನಾ). ಒಂದು ಬಗೆಯ ಮರ : ಬಿಳೀಜಾಲಿ, ತೊಪ್ಪಾಲೆ, ಸಾರಾಯಿಬೇಲ, ತುಂಬೆಮರ (ವೃಕ್ಷಗಿ. ೦-೦೭). [ತುಂಬೆ₀ + ಮರ₁]

**ತುಂಬೆವಾಡಿ** (ನಾ). ಒಂದು ಊರಿನ ಹೆಸರು : ಬಿದಿರೂರಲು ಬೂತುಗನಂ ತುಮ್ಬೆವಾಡಿಯ ಗಡ್ಡಯ್ಯನ ಮಗಂ ಪೊನ್ನಿಗಂ ಕಾದಿ ಸತ್ತು ಸ್ವರ್ಗ್ಗದಲಿಟ್ಟಂ (ಎಕ. XII, ಮದ್ದಗಿ. ೨೭-೦೮ : ಸು. 950). [ತುಂಬೆ₀ + ಪಾಡಿ₁]

**ತುಂಬೆವಿಂಡು** 'ತುಂಬಿವಿಂಡು' ನೋ.

**ತುಂಬೆಹುಳ** (ನಾ). ಅಳಿ ; ತುಂಬಿ : " ಮಧುವ್ರತಃ ... ರೋಲಂಬಃ, ಬಂಭರಃ ಈ ೧೫ ತುಂಬಿಯ ಹೆಸರುಗಳಂ. ತುಂಬೆಹುಳ" (ಸಿದ್ಧಾಂತಿ. ೦೪೨).

[ತುಂಬೆ₁ (<ತುಂಬಿ₁) + ಹುಳ (<ಪುೞು)]

**ತುಂಬೊಲುಮೆ** (ನಾ). ಹೆಚ್ಚಾದ ಪ್ರೀತಿ ; ಅಧಿಕವಾದ ಅಕ್ಕರೆ : ಮರದೊಳಿಂತೋ ಅಂತೆ ತುಂಬೊಲುಮೆ ಸಂತನೆಡೆ ನಿಶ್ಶಂಕೆಯೊಳು ನೆರೆವ ಹಕ್ಕಿಗಳ ತೆರದಿ (ಮಲೆದೇ. ೪೫-೧). [ತುಂಬು₂ + ಒಲುಮೆ (<ಒಲ್ಮೆ)]

**ತುಕಡಾ** 'ತುಕಡಿ₂' ನೋ.

**ತುಕಡಿ₁** (ನಾ). (ಕರಾ) ಗೋದಿಯ ಹಿಟ್ಟಿನಿಂದ ಕರಿದಂ ಮಾಡುವ ಒಂದಂ ಬಗೆಯ ತಿಂಡಿ ; ಶಂಕರಪೋಳಿ. [← ತುಳು. ತುಕುಡಿ]

**ತುಕಡಿ₂**, ತುಕಡಾ, ತುಕ್ಕಡ, ತುಕ್ಕಡಿ (ನಾ). ೧. ತುಂಡು ; ಚೂರು ; ತುಣುಕು : ಅವನ ಮೈಮೇಲಿನ ಅರಿವೆಯ ತುಕಡಿಯನ್ನು ಹರಿದುಕೊಂಡು ಅದರಿಂದ ಅವನ ಮುಖವನ್ನು ಒರೆಸಿದನು (ಬಂಗಾಹ. ೬೪) : ಆ ಕೋಳಿಯ ಕೊಂದು ತುಕಡಿಯ ಮಾಡಿ ರುಚಿಯನು ನೋಡಿ (ತುಷದ. ೫೩). ೨. ರೊಟ್ಟಿ. ಚಪಾತಿ : 'ತುಕಡಿಮುರಕ' ಪರಾ. ೩. ಸೈನ್ಯದ ಒಂದು ಭಾಗ ; ಒಬ್ಬ ಅಧಿಕಾರಿಯ ಹತೋಟಿಗೆ ಒಳಪಟ್ಟ ಸೇನಾ ವಿಭಾಗ : ಭಾರಿಯಾದ ಒಂದು ದಂಡಿನ ತುಕಡಿಯು ಈ ಊರಲ್ಲಿ ಠಾಣ್ಯ ಹಾಕಿಕೊಂಡು ಇರುತ್ತಿತ್ತು (ಮುಸುಗ. ೯); ನಿಯಾರ್ಕಸನು ಅಲೆಕ್ಸಾಂಡರನ ಒಂದು ತುಕಡಿ ಸೈನ್ಯವನ್ನು ತೆಗೆದುಕೊಂಡು ... ಕಾರ್ಮೇನಿಯ ಮುಟ್ಟಿದನು (ಪ್ರವಾಇ. I, ೭೩). ೪. ದೇಶದ ಒಂದಂ ಭಾಗ: ಪ್ರಾಂತ; ಜಿಲ್ಲೆ: ಪ್ರತಿ ತಾಲ್ಲೂಕಿಗೂ ಒಬ್ಬೊಬ್ಬ ಆಮಿಲರನ್ನು ನೇಮಿಸಿದರು. ಅವರೆಲ್ಲಾ ಆಯಾ ತುಕಡಿ (ಡಿಸ್ಟ್ರಿಕ್ಟು) ಸುಬೇದಾರರುಗಳ ಅಧಿಕಾರಕ್ಕೆ ಒಳಪಟ್ಟಿದ್ದರು (ಮಹಾವಂ. II, ೩೨). **ತುಕಡಾ :** ೧. ಇದ್ದಲಿನ ತುಕಡಾಗಳು, ಒಂದು ಬೆಂಕಿಕಡ್ಡಿಯ ಪೆಟ್ಟಿಗೆ ಎಲ್ಲಾ ಹೊರಗೆ ಬರುತ್ತವೆ (ಸಾಹೇಬ್. ೨೦). **ತುಕ್ಕಡ :** ೧. ಮುಸಲ್ಮಾನರು ರಾಜಧಾನಿಗೆ ಮುತ್ತಿಗೆ ಹಾಕಿ ತಮ್ಮೆಲ್ಲರನ್ನೂ ತುಕ್ಕಡ ತುಕ್ಕಡ ಮಾಡಿಬಿಡುವರೆಂದುಕೊಂಡಳು (ಬಂಕಿಮ. ೩೦೪). **ತುಕ್ಕಡಿ :** ೩. ಅದು ಹೆಚ್ಚುಕಡಿಮೆ ಯುದ್ಧಕಾಲದ ತಮ್ಮದೊಂದು ತುಕ್ಕಡಿಯನ್ನೇ ಹೋಲುತ್ತದೆ (ಹೇಮಕೂ.೧೭); ಕಾಮನಾಯಕ ಎಂಬಾತನು...ಹದಿನಾರು ಮದದ ಆನೆಗಳ ತುಕ್ಕಡಿಗೂ ಅಧಿಪತಿಯಾಗಿದ್ದನು (ರಾವಿಜ. ೦೫೩). ೫. ಊರಂ, ಪಟ್ಟಣ ಮೊದಲಾದುವುಗಳ ಒಳವಿಭಾಗ ; ಮೊಹಲ್ಲ ; ಹರವು : ಯಾವ ಗ್ರಾಮವನ್ನಾದರೂ ತುಕ್ಕಡಿಗಳನ್ನಾಗಿ ವಿಭಾಗಿಸಿ ಅಂಥ ಪ್ರತಿ ಒಂದು ತುಕ್ಕಡಿಗೂ ಬೇರೆಬೇರೆ ಗ್ರಾಮಕೋರ್ಟನ್ನು ಸ್ಥಾಪಿಸಬಹುದು (ಗ್ರಾಮಾಕ. ೦೫). ೬. ಗುಂಪು ; ವಿಭಾಗ ; ಬಣ : ನಮ್ಮಲ್ಲಿಯ ನಾಲ್ವತ್ತು ಆಳುಗಳು ನಾಲ್ಕು ತುಕ್ಕಡಿಗಳಾಗಿ ಕೆಲವರು ಸಾಮಾನು ಚೊಕ್ಕಟವಾಗಿಸಿದರು (ರಕ್ತಧ್ವ. ೨೬೦).

[← ಮರಾ. ತುಕಡಾ ; ಹಿಂ. ಟುಕಡೀ, ಟುಕಡಾ]

**ತುಕಡಿಮುರಕ** (ನಾ). ೧. ಬರೀ ಚಪಾತಿ ತಿನ್ನುವವನಂ; ಉಂಡಾಡಿ ಭಟ್ಟ. ೨. (ಅಲಂ) ಶಕ್ತಿಹೀನ : ಇವರೇನು ತುಕಡಿಮುರಕ ಹಾರವರೆಂದು ಯವನರು ತಿಳಿದಿರಬಹುದು (ಮಾಧವ. ೫).

[ತುಕಡಿ₂ + ಮುರಕ (< ಮುರಿಕ)]

**ತುಕಲಿ** (ನಾ). ಒಂದು ಬಗೆಯ ಗಿಡ : (+). [ ? ]

**ತುಕ್ಕಡ** ' ತುಕಡಿ₂' ನೋ.

**ತುಕ್ಕಡಿ** ' ತುಕಡಿ₂' ನೋ.

**ತುಕ್ಕಡಿದಾರ** (ನಾ). ಜಿಲ್ಲೆಯ ಅಧಿಕಾರಿ ; ಜಿಲ್ಲೆಯ ಆಡಳಿತ ನಡಸುವವನು: ತುಕ್ಕಡಿಯಲ್ಲಿ ತುಕ್ಕಡಿದಾರ ಸೇರಿ ತುಕ್ಕಡಿಯೆಲ್ಲ ಸುಡಿಸಿದ (ಗಾದ).

[ತುಕ್ಕಡಿ (<ತುಕಡಿ₂) + – ದಾರ₄]

**ತುಕ್ಕಡಿಸು** (ಕ್ರಿ). ತುಂಡರಿಸಂ ; ಚೂರಂಚೂರಂ ಮಾಡಂ ; ಭಾಗ ಮಾಡು : ಅವಟಿಡಂಗುಗಳ ತುಕ್ಕಡಿಸಿ ಬಗೆಯಱಿದು ಭಾಗೆಯಂ ಮಾಳ್ಪ ದೀವದ ಖಗಮೃಗಾವಳಿಯನು ಹಕ್ಕೆಗೆಯ್ದಿ ಸುವ...ಬೇಡರ ಬಿಂದವೊಪ್ಪಿತು (ಸಮ್ಮುಕಾ. ೧೦-೨೭). [ತುಕ್ಕಡಿ (< ತುಕಡಿ₂) + – ಇಸು₃]

**ತುಕ್ಕಿಡಿ** (ನಾ). ( ? ) : ಎಚ್ಚಡ್ಡಾಯುಧಮಂ ಕಿಟ್ಟಿಚ್ಚರಿಯೆನೆ ನೂಂಕೆ ತುರಗಮಂ ತುಕ್ಕಿಡಿಗಳ್ ಪಚ್ಚವಳದೆಡೆಗಳಂ ಮುನ್ನೆಚ್ಚ ಸರಲ್ ತಾಗೆ ಪಱಿದುವುಱ ಚೆಚ್ಚಱಿದಿಂ (ಚಂದ್ರಪು. ೧೦-೭೯). [ ? ]

**ತುಕ್ಕಿಸು** (ಕ್ರಿ). ತಿರಂಗಿಸು ; ಅಲೆದಾಡಿಸಂ ; ಅಲೆಯುವಂತೆ ಮಾಡು : ಸರ್ವಜೀವಿಗಳೊಳೇತಕ್ಕೆ ಎನ್ನೊಬ್ಬನ ತುಕ್ಕಿಸುವಿಯೊ ಬಕ್ಕದಾಸನೊ ನಾನು (ವಿದಾಕ್ಕ. ೦೫೭). [ತುಕ್ಕು₁ + – ಇಸು₃]

**ತುಕ್ಕು₁** (ಕ್ರಿ). ೧. ಗುಂಪುಗೂಡಂ ; ಕಿಕ್ಕಿರಿ ; ಒಟ್ಟುಸೇರಂ : (+). ೨. ಮೇಲೆ ಬೀಳಂ ; ಆವರಿಸಂ ; ಮುತ್ತು : ಅಕ್ಕಱಿಂದವರ ಪರತನು ಪರಿಮಳಂಗಳ್ಗೆ ತುಕ್ಕುವೆಳದುಂಬಿಗಳ ಬಳಗಂಗಳೆಂಬಂತೆ (ಜೈಮಿಭಾ. ೨೮-೪೩) ; ಅಡವಿಗಿಡವ ತುಕ್ಕಿ ಅಗಳಿ ತರುವದಲ್ಲ (ವಿಸ್ತೋಸು. ೫೫-೨) ; ಎಕ್ಕಲಗಳಂ ತುಕ್ಕಿ ಮುಕ್ಕುಳಿಸಿ (ಪರಶು. ೩೦-೫). ೩. ಸಂತ್ತು ; ತಿರುಗು ; ಅಲೆದಾಡು ; ಎಡೆತಾಕಂ : ವೃಥಾ ಭವಂಗಳ ತುಕ್ಕುತೆನ್ನ ಮಹತ್ವವೆಲ್ಲವ ಮುಕ್ಕುಗಳೆದೆನಲಾ (ಸದ್ಗುರು. ೩-೩೦) ; ಅಕ್ಕ ನೀನೆನೆ ಗೋಸುಗ ಮೂಜಗವನು ತುಕ್ಕಬೇಹುದು ರಾತ್ರಿಯಲಿ (ವೋಹತ. ೨೮-೩೪) ; ಪಾಂಡವರ ಕಾಣೆ ರಾಜ್ಯಮಂ ತುಕ್ಕಿದೆವು ಭೂಪತಿಯ ಕುರುಹಿಲ್ಲ (ತುರಂಗ. ೩೭-೪) ; ಲೆಕ್ಕವಿಲ್ಲದೆ ದೇಶ ತುಕ್ಕಿದರೆ ಫಲವೇನು (ಜಗದಾ. ೩೦೫).

**ತುಕ್ಕು₂** (ನಾ). ಕಬ್ಬಿಣಕ್ಕೆ ಹತ್ತುವ ಕಿಟ್ಟ ; ಜಂಗಂ : ಧಾತುಗಳ ಆಮ್ಲಜ ವಿಕಾರಗಳಿಗೆ ಕನ್ನಡದಲ್ಲಿ ಭಸ್ಮ, ಜಂಗು, ಖತಿ, ತುಕ್ಕು ಎಂಬ ಹೆಸರುಗಳನ್ನು ಕೊಡುವರು (ಮುಂಬಯಿ. ೬-೩೨) : ಆಗ ಕಬ್ಬಿಣವಾಗಿ ಉಳಿಯುವ ಬದಲು, ಕಬ್ಬಿಣದ ತುಕ್ಕು ಉಂಟಾಗುವುದು (ಬಾಲಪ್ರ. I, ೪೫೩).

[ದೇ. ; ತಮಿ. ತುಕ್ಕು, ತುಪ್ಪು ; ಮಲ. ತುರುಮ್ಬು, ತುರುವು ; ತುಳು. ತುರ್ಕ್ ; ತೆಲು. ತುಪ್ಪು, ತ್ರುಪ್ಪು]

**ತುಕ್ಕುಗೊಳ್** (ಕ್ರಿ). ಜಂಗು ತಿನ್ನು ; ತುಕ್ಕುಹಿಡಿ : ಮಸೆದ ಕೆಯ್ದುಗಳ್ ತುಕ್ಕು(ಳ್ಳ)ಗೊಳ್ಳೊಡಂ (ಜಟ್ಟಮ. ೨-೧). [ ತುಕ್ಕು$_2$ + ಕೊಳ್$_1$ ]

**ತುಕ್ಕುಹಿಡಿ** (ಕ್ರಿ). ೧. = ತುಕ್ಕುಗೊಳ್ : ಕಬ್ಬಿಣಕ್ಕೆ ತುಕ್ಕುಹಿಡಿಯುವುದು (ಮುಂಬಯಿ. ೪-೧೪೯) ; ಅಲ್ಯೂಮಿನಿಯಮ್ಮಿನ ಪ್ರಯೋಜನಗಳು ಹಲವು. ಅದು ಹಗುರವಾಗಿರುತ್ತದೆ. ತುಕ್ಕುಹಿಡಿಯುವುದಿಲ್ಲ (ಅಡುಸಾ. ೪೨) : ತುಕ್ಕುಹಿಡಿದ ಖಡ್ಗ ಮಿಕ್ಕಿದವನಿಗೂ ಆಗದು (ಗಾದೆ). ೨. (ಆಲಂ) ದೋಷಗ್ರಸ್ತವಾಗು ; ಮಂಕಾಗು ; ಹೀನವಾಗು ; ಹಿರಿಯರ ತುಕ್ಕು ಹಿಡಿದ ದೃಷ್ಟಿಗೆ ಕಿರಿಯರ ಪ್ರೇಮವು ಅರ್ಥವಾಗುವುದಿಲ್ಲ (ದೂರಸ. ೧೬೮) ; ಮೇಧಾಶಕ್ತಿಗೆ ತುಕ್ಕುಹಿಡಿಯುವ ಸ್ಥಿತಿ ಒದಗಿತು (ಶಾಮಿಶಾಂ. ೩) ; ಈ ರೀತಿಯಲ್ಲಿ ಮಕ್ಕಳ ಶಿಕ್ಷಣದ ಅಮೂಲ್ಯಸಾಧನವೊಂದು ತುಕ್ಕುಹಿಡಿದು ನಶಿಸಿ ಹೋಗುತ್ತಿರುವುದು (ಸಮಾಲೋ. ೧೧೯).

[ ತುಕ್ಕು$_2$ + ಹಿಡಿ$_1$ (< ಪಿಡಿ$_1$) ]

**ತುಗಚು** (ಕ್ರಿ). ಪೀಡಿಸುವವರನ್ನು ತೊಲಗಿಸಲು, ಇಷ್ಟವಿಲ್ಲದಿದ್ದರೂ ಕೊಡು : ಒಂದು ಎಳನೀರು ಬುರುಡೆ, ಒಂದು ಪಾವಲಿ ತುಗಚಿದ (ಅದೂಟ. ೪೪). [ ? ]

**ತುಗಿ** (ನಾ). ಒಂದು ಬಗೆಯ ಮರ : ಸುಜ್ಜಲು . . . ಬೀಳ್ಕಂಬಿ, ತುಗಿ (ಮೃಡಿಗಿ. -೪-೬೨). [ ? ]

**ತುಗಿಲ** 'ತುಗ್ಗಿಲ್' ನೋ.

**ತುಗ್ಗಲಿ** 'ತುಗ್ಗಿಲ್' ನೋ.

**ತುಗ್ಗಿಲ್, ತಗ್ಗಿಲು, ತುಗಿಲ, ತುಗ್ಗಲಿ, ತುಗ್ಗಿಲು** (ನಾ). ಒಂದು ಬಗೆಯ ಮರ : "ಅಗ್ನಿಯೆನೆ ತುಗ್ಗಿಲಕ್ಕುಂ" (ಮಂಗರಾ. ೩೬-೧೮) ; ಕೊಗ್ಗಿ ವರಲಕ್ಷ್ಮಿ ಪುನರ್ನವಿಯೆಂಬ ಮೂಱುಮಂ ಬೆರಸಿರೆ ಕಲ್ಲೊಳಿಟ್ಟರೆದು ತುಗ್ಗಿಲಣಂಬೆಯುಮಂ . . . ಈಂಟೆ ವಿಷಂ ಕಿಡುಗುಂ (ಖಮದ. ೦೩-೦೮). **ತಗ್ಗಿಲು :** ತಂಡಸ ತಡಸ ತ[ ಪಾಠಾಂ. ತು ]ಗ್ಗಿಲು ತದಿಕು ತಪಸಿಗಳ . . . ವನಭೂಜಾಳಿಯಲಿ ಹೊಳಿದರಕಂಪನನಸಮರಣರಥವ (ತೊರರಾ. ೬-೧೮-೦೮). **ತುಗಿಲ :** ಮೂಡಲು ತುಗಿಲಮರದ ಮೇಲು ಗಡೆಯ ಬೆಟ್ಟದ ಬಂಡೆ ಮೇರೆ (ಸೌಇಇ. IX — ii, ೫೩೫-೨೯ ; 1531). **ತುಗ್ಗಲಿ :** ಜಾಲಿ ಜಾನೆಯು ಬೋರೆ ತರೆಯು ತುಗ್ಗಲಿಯುಯುಂ ಕೋಲೆಯುಂ (ನವಮೋ. ೮-೯). **ತುಗ್ಗಿಲು :** ಬಡಗಣ ತೆವರ ಮೇಲಣ ತುಗ್ಗಿಲ ಮರದಲ್ಲಿ ನಟ್ಟ ಕಲ್ಲು (ಮೈಆರಿ. ೦೯೪೦, ೪೮-೦೬೮ ; 1335) : ಯೀಶಾನ್ಯದಲ್ಲು ಮಾತ್ರವೇ ತುಗ್ಗಿಲು ಹುತ್ತಹಾರೆ ಗ್ರಾಮಕೆ ಮೂಡಲು (ಎಕ. XI, ಹೊಳಲ್ಕೆ. ೯೪-೦೦೬ ; 1511). [ ? ]

**ತುಗ್ಗಿಲು** ' ತುಗ್ಗಿಲ್ ' ನೋ.

**ತುಚ್ಚ** (ಗು). = ತುಚ್ಛ : ತುಥ್ಯ – ತುಚ್ಚ (ಶಮದ. ೨೫೬ ಪ್ರಯೋ).

[ <ಸಂ. ತುಚ್ಛ]

**ತುಚ್ಚತನ** (ನಾ). ನೀಚತನ ; ಅಲ್ಪತನ : ಎನಗೆ ನಟವೃತ್ತಿ ಕರಂ ತುಚ್ಚತನವೆನ್ನದಾಡಿದನಚ್ಚರಿಯೆನೆ ವಜ್ರಿ (ಪುಷ್ಪಪು. ೦೨-೫೨).

[ತುಚ್ಚ + – ತನ]

**ತುಚ್ಚಂಗೆಱೆ** (ನಾ). ಒಂದು ಊರಿನ ಹೆಸರು : ತುಚ್ಚಂಗೆಱೆಯ ಹೊಲ್ಲಿಸೆಟ್ಟಿ . . . ಚವುಣ್ಡಯ್ಯಸೆಟ್ಟಿಯಿನ್ತಿನಿಬರುಂ ತಂಬುಲಿಗಸಾಸಿರ್ವ್ವರುಂ (ಸೌಇಇ. XI — ii, ೦೪೮-೦೯ ; 1099). [ ? + ಕೆಱೆ ]

**ತುಚ್ಛ** (ಗು). ೧. ಜೊಳ್ಳಾದ ; ಬರಿದಾದ ; ಶೂನ್ಯವಾದ. ೨. ಅಲ್ಪವಾದ ; ಸಣ್ಣ ; ಚಿಕ್ಕ. ೩. ಕೆಳದರ್ಜೆಯ ; ತಿರಸ್ಕಾರಕ್ಕೆ ಯೋಗ್ಯವಾದ ; ನೀಚವಾದ ; ಕ್ಷುಲ್ಲಕವಾದ : ತುಚ್ಛಮಾತು ಆಡುವವನು ಹುಚ್ಚನಿಂದ ಕಡೆ (ಗಾದೆ). (ನಾ). ೪. ಬರಿದಾದುದು ; ಖಾಲಿ ; ಶೂನ್ಯ : ವಂಧ್ಯಾಪುತ್ರ ಶಶವಿಷಾಣಾದಿಗಳೇ ಅಸತ್ತಾದ ತುಚ್ಛವೆಂದು ತಿಳಿಯಲಪ್ಪುದು (ವಿವೇಕ. ೨೦) : ತುಚ್ಛ (ಶೂನ್ಯ) ದಿಂದ ಮುಚ್ಚಿದ ಅದು ತಪಸ್ಸಿನ ಮಹಿಮೆಯಿಂದ ಆವಿರ್ಭಾವವಾಯಿತು (ಭಾರದ. ೨೭). ೫. ಕಡಮೆಯಾದುದು ; ಕೀಳು ; ಹೀನ : ವ್ಯೋಮಯಾನಂ ತುಚ್ಛಮೆನೆಯುಂ ಗ್ರಾಮಯಾನಮುತುಚ್ಛಮೆನೆಯುಂ (ಶಾಂತಿಪು. ೧೨-೨೩೮) ; ಹಿಂದೆ ಲಂಕೆಯ ಸುಟ್ಟ ಕೋಡಗ ಬಂದ ಕಪಿಭಟರೊಳಗೆ ತುಚ್ಛವು (ಕಾಶಿರಾ. ೧೫-೨೮) ; ಎಷ್ಟು ಹೇಳಲಿ ಬಹಳ ತುಚ್ಛವನೆ ಮಾಡುವರು (ಪುರಂದ. ೧-೦೪೮-೩). ೬. ಅಲ್ಪವ್ಯಕ್ತಿ ; ಕೀಳುಮನುಷ್ಯ : ತುಚ್ಛನ ಸಂಗಡ ಬಾಳೋದಕ್ಕಿಂತ ಹುಚ್ಚನ ಸಂಗಡ ಬಾಳೋದು ವಾಸಿ (ಗಾದೆ). [ ಸಂ. ]

**ತುಚ್ಛಾಜಿ** (ನಾ). ಕೀಳಂಮಟ್ಟದ ಕಾಳಗ ; ಹುಲುಗಾಳಗ : ತುಚ್ಛಾಜಿ ಲಜ್ಜಾಸ್ಮಿತನಾಂತಂ ಚೋಳಗೌಳಾಸುರಸಮರಜಯಶ್ರೀಸಮಾಲಿಂಗಿತಾಂಗಂ (ಎಕ. V, ಬೇಲೂರು. ೦೭-೪ ; 1136 ). [ ತುಚ್ಛ + ಆಜಿ$_1$ ]

**ತುಚ್ಛಿಸು** (ಕ್ರಿ). ಕಡೆಗಣಿಸು ; ತಿರಸ್ಕರಿಸು : ವಂಶಕೆ ಈತನೊಬ್ಬನಾದರು ನಮಗೆ ಶಿಷ್ಯನಾಗಿರಲೆಂದು ಪೇಳೆ ಗಂಗಾದೇವಿ ತುಚ್ಛಿಸಿದ ಮಾತನೆಂದು ಮೀರಿದನು ತಾನುಯಿನ್ನಿಹುದಿಲ್ಲವೆಂದಾಡಿ ಸಾರಿದಳು (ತುರಂಗ. ೯-೩೨).

[ ತುಚ್ಛ + – ಇಸು$_3$ ]

**ತುಚ್ಛೀಕರಿಸು** (ಕ್ರಿ). = ತುಚ್ಛಿಸು : ನೀನು ಚೌಡಪ್ಪನವರನ್ನು ಹಾಗೆ ತುಚ್ಛೀಕರಿಸಬಾರದು (ಹಳ್ಳಿಹಾ. ೦೦೫). [ ತುಚ್ಛೀಕರಣ$_0$ + – ಇಸು$_3$ ]

**ತುಜಾವಂತು** (ನಾ). [ಸಂಗೀತ] ಒಂದು ರಾಗದ ಹೆಸರು : ರಾಗ ತುಜಾವಂತು ಅಷ್ಟತಾಳ (ದೇವೀಪ್ರ. ೦೮). [ ? ]

**ತುಟಾಗ್ರತೆ** (ನಾ). ಕೊರತೆ ; ಅಭಾವ : ಕೆಲವು ಹಳ್ಳಿಗಳಲ್ಲಿ ನೀರಿನ ತುಟಾಗ್ರತೆ ವಿಪರೀತವಾಗುತ್ತಿತ್ತು (ಮಣ್ಣಮ. ೦೦೩) ; ಎಲ್ಲೆಲ್ಲಿಯೂ ಕಾಳಿನ ತುಟಾಗ್ರತೆ (ಗಾಳಿಗು. ೨೨) ; ಅಲ್ಲಿ ನೀರಿನ ತುಟಾಗ್ರತೆ ಎನಿಸ ತೊಡಗಿತು (ಸ್ಮೃತಿಚಿ. ೨೬೮). [ <ತುಟ್ಟಗ್ರ ]

**ತುಟಾಯಿಸು** (ಕ್ರಿ). ಬೇರೆಯಾಗು ; ಭಾಗವಾಗು ; ಪಾಲಾಗು : ಅಲ್ಲಿ ಜೀವನಕ್ಕೆ ಸಾಲದೆ ತುಟಾಯಿಸಿ ಕೋಲಾರಕ್ಕೆ ಬಂದನು (ಮಹಾವಂ. I, ೦೬೬) ; ಕೆಲವು ದಿವಸದ ಮ್ಯಾಲೆ ಯಿ ವಂಶದ ಜನರ ಪೈಕಿ ತುಟಾಯಿಸಿ ಅಲ್ಲಿಂದಾ ಹೊರಟು (ಹೈದರ. ೨೯).

[ ತುಟಾ$_0$ (ℙ ← ಮರಾ. ತುಟಣೇ) + – ಇಸು$_3$ ]

**ತುಟಾರ, ತುಠಾರ** (ನಾ). ೧. ವಿಚಾರಮಾಡದಿರುವಿಕೆ ; ದುಡುಕು ; ಅವಿವೇಕ ; ಉದ್ಧಟತನ : ತುಟಿಮೀರಿದ ಹಲ್ಲು, ತುಟಾರದ ಮಾತು ಸರಿಮಾಡಲಾಗದು (ಗಾದೆ). ೨. ದುಡುಕಿ ಕೆಲಸ ಮಾಡುವವನು ; ಅವಿವೇಕಿ ; ಉದ್ಧಟ : ಆ ತುಟಾರ [ಪಾಠಾಂ. ತುಠಾರ, ತವಕಿಗ]ನ ಕಂಡು ನಿಮ್ಮಯ ತಾತ ಸೈರಿಸುವನೆ (ತೊರರಾ. ೩೦--೯). 'ದೊಠಾರ' ಪರಾ. **ತುಠಾರ :** ೧. ಎಲವೊ ರಕ್ಕಸ ನಾವು ರಣಕತಿಬಲರೊ ದುರ್ಬಲರೋ ತುಠಾರದಿನಿಳಿಕೆಗಂಡೆಯಲಾ ಮೃಗಾಧಮ (ತೊರರಾ. ೬-೨೨-೦೩).

[← ತೆಲು. ತುಟಾರ]

**ತುಟಾರಿಸು, ತುಠಾರಿಸು** (ಕ್ರಿ). ದುಡುಕಿ ಮಾತನಾಡು ; ವಿಚಾರ ಮಾಡದೆ ಹರಟು : ಎಲವೊ ಫಡ ಮಾವನ ತುಟಾರಿಸಿ [ಪಾಠಾಂ. ತುಠಾರಿಸಿ, ದೊಠಾರಿಸಿ, ವಿಭಾಡಿಸಿ] ಗಳಹುವೀ ನಾಲಗೆಯ ಕೀಳುವೆ (ಕುಮಾವ್ಯ.ದ್ರೋ. ೦೫-೦೦) ; ಪಾಂಡವರ ತೊಡಕಿನ್ನು ಲೇಸಲ್ಲ ಸಂಧಿಯ ಮಾಡಿಕೊಳಿ ಎಂದರೆನ್ನನು ತುಟಾರಿಸಿದನ್ಯೆ ಪಾಪಿ (ತುರಂಗ. ೪೮-೬). **ತುಠಾರಿಸು :** ಸಹಜವೇನ್ನುಡಿದಡೆ ತುಠಾರಿಸಿಯಹಿತರಾ ಕೌರವರು ನಿನಗೆ (ಗಿಳಿವಿಂ. ೯೯-೦೬). ' ದೊಠಾರಿಸು ' ಪರಾ.

[ತುಟಾರ + – ಇಸು$_3$./ತೆಲು. ತುಟಾರಿಂಚು]

**ತುಟಿ** (ನಾ). ಬಾಯ್ದೆರೆ ; ಅಧರ ; ಓಷ್ಠ : "ಅಧರಃ, ದಂತಚ್ಛದಃ, ಓಷ್ಠಃ, ದಂತವಾಸಃ—ಈ ೪ ತುಟಿ" (ಹಲಾಯು. ೮೬-೩೭೦) ; ಪಶ್ಚಿಮ ಪದ್ಮಾಸನದಲ್ಲಿ ಕುಳಿತು ನೆಟ್ಟೆಲುವ ಮುಚ್ಚಿದು ತುಟಿ ಮಿಡುಕದೆ ಅಟ್ಟೆಯಾಡಿತ್ತಲ್ಲಾ (ಬಸವ. ೮೦೪) ; ತುಟಿ ವಿದ್ರುಮಮಂ ಸುಧಾಂಶುವಂ ನಿರ್ಮಳವಕ್ತ್ರಬಿಂಬಮಿರದೇಳಿಸೆ (ಉದ್ಭಟ. ೨-೧೦೫) : ಶಶಿಕಳೆಗೆ ಸದರವೆ ರಾಹು ರಚಿಸಿದ ತುಟಿಯ ತೋಟಿಯದು (ಕುವ್ಯಾಸ. ೧೪-೧೧೦) ; ಕೂಡೆ ಕದಪು ತುಟಿ ನಿಟಿಲವ ಚುಂಬಿಸಿ (ಕಂಸವಿ. ೯-೧೯೨) ; ನಗೆಯ ಚೆಲುವ ತುಟಿಯು ಚಾಚಿ (ಅನಿಕೇ. ೧೮-೨) ; ತುಟಿಗೆ ತುಪ್ಪವಿಲ್ಲ, ಕಟಿಗೆ ಪಂಚಾರ್ತಿ ಬಯಸಿದ ಹಾಗೆ (ಗಾದೆ).

ತುಟಿ ಎರಡು ಮಾಡು=ಬಾಯಿಬಿಡು ; ಮಾತನಾಡು : ಧರ್ಮಪತ್ನಿ ತುಟಿ ಎರಡು ಮಾಡದೆ ಪಣತಿಯಲ್ಲಿ ತುಪ್ಪ ಸುರುವಿದಳು (ಹಬ್ಬಿಬ. ೬೭) ; ಇನ್ನು ಯಾವ ವಿಷಯದಲ್ಲೂ ತುಟಿ ಎರಡು ಮಾಡುವ ಹಾಗಿಲ್ಲ (ಸುಪಸಂ. ೦೫). **ತುಟಿಗಟ್ಟ**=ತುದಿಯವರೆಗೆ : ವಿಷಯ ತುಟಿಗಟ್ಟಕ್ಕೆ ಬಂದು ವಿಷಮಾವಸ್ಥೆಗೆ ಇಳಿಯುವಂತಿದ್ದಾಗ ಹಣವನ್ನು ಹಿಂದಿರುಗಿಸುವುದು ಮೊದಲಾಯಿತು (ರಂಗನಾ. ೨೪). **ತುಟಿಪಿಟಿಕ್ಕೆನ್ನು**=ತಂಟೆ ಎರಡುಮಾಡಂ : ನೀನು ಇದೆಲ್ಲವನ್ನೂ ಕಣ್ಣಾರ ನೋಡುತ್ತಿದ್ದರೂ ತುಟಿಪಿಟಿಕ್ಕೆನ್ನದೆ ಕುಳಿತಿದ್ದೀಯೆ ? (ವಚಭಾ. ೭೦) ; ಯಾರೂ ತುಟಿಪಿಟಿಕ್ಕೆನ್ನುವುದಿಲ್ಲ (ಪ್ರವಾಇ. II, ೨೮೩). **ತುಟಿಮಾರಿದ ಹಲ್ಲು, ತುಟಿಮಾಜಿದ್ದಲ್ಲು** = ತಂಟಿಯನ್ನು ಮೀರಿ ಮುಂದಕ್ಕೆ ಚಾಚಿಕೊಂಡಿರುವ ಹಲ್ಲು ; ಉಬ್ಬುಹಲ್ಲು : ನುಂಗಲಾಗದ ತುತ್ತೂ ತುಟಿಮಾರಿದ ಹಲ್ಲೂ ಒಂದೇ ಸಮ (ಗಾದೆ) ; ತುಟಿ ಮಾಜಿದ್ದಲ್ಲಿನಂತ ದೂತ ಎಂದಿಗು ಬೇಡ (ಕನಕ. ೧೯೦-೪). **ತುಟಿಯ ಭಾಷೆ** = (ಮೂಕರಿಗೆ) ತಮ್ಮ ಆಶಯವನ್ನು ತಿಳಿಸುವಾಗ ಮಾಡುವ ತುಟಿಯ ಅಲುಗಾಟದ ಪ್ರಯೋಗ: ''ತುಟಿಗಳ ನಿಶ್ಶಬ್ದ ಚಲನೆಯಿಂದ, ಮೂಕರು ಮಾತನಾಡುವ, ಮೂಕರೊಂದಿಗೆ ಮಾತನಾಡುವ, ಮಾತನಾಡಿದ್ದನ್ನು ಅರ್ಥಮಾಡಿಕೊಳ್ಳುವ ಭಾಷೆ : ತುಟಿಯ ಭಾಷೆ; ಮೂಕರ ಭಾಷೆ'' (Lip_Language. ಇಂಕನಿ). **ತುಟಿಹೊಲಿದುಕೊಳ್ಳು** = ಮಾತನಾಡದೆ ಇರು : ಮಾತಿಗೆ ಬೆಲೆಯಿಲ್ಲನಾದಾಗ ತುಟಿಹೊಲಿದುಕೊಂಡಿರುವುದೇ ವಾಸಿ (ರೂಢಿ).

[ ದೇ.॥ ತಮಿ. ತುಟ ; ಮಲ. ಚೊಡಿ ; ತುಳು. ತುಡಿ, ದುಡಿ ; ಗೊಂಡಿ. ಟೊಟ ]

**ತುಟಿಕಚ್ಚು** 'ತಂಟಿಗಚ್ಚು' ನೋ.

**ತುಟಿಕಡಿ** (ಕ್ರಿ). ೧. ತುಟಿಯನ್ನು ಹಲ್ಲಿನಿಂದ ಕಚ್ಚು. ೨. ತುಟಿಯನ್ನು ಕಚ್ಚಿಕೊಳ್ಳುವುದರ ಮೂಲಕ ದುಃಖ, ನಾಚಿಕೆ ಮೊದಲಾದ ಭಾವವನ್ನು ಸೂಚಿಸು: ತುಟಿಕಡಿದು ಅಧೋಮುಖಿಯಾದಳು (ಜಯಂತ. ೧೨೨).
[ ತುಟಿ + ಕಡಿ$_1$ ]

**ತುಟಿಗಚ್ಚು**, ತುಟಿಕಚ್ಚು (ಕ್ರಿ). = ತುಟಿಕಡಿ ೨ : ''ಏನೂ ಇಲ್ಲ ಸುಮ್ಮನೆ'' ಎಂದು ತುಟಿಗಚ್ಚಿದಳು ಪ್ರಮೀಲ (ಮರಳಿ. ೮೧). **ತುಟಿ ಕಚ್ಚು** : ಎವೆ ಬಡಿಸಿ ಕೆಡವು, ಬಿರಿಗಣ್ಣು ಬ್ಯಾಡ, ತುಟಿಕಚ್ಚಿ ಹಿಡಿಯದಿರು ಬಿಕ್ಕ (ನಾದಲೀ. ೫೮-೨೨) ; ಕಣ್ಮುಚ್ಚಿ ತುಟಿಕಚ್ಚಿ ಶೋಕವನದುಮಿಟ್ಟು ಹೋದೆನು (ಇಂಜಾಪ. ೩೦-೩೮). [ತುಟಿ + ಕಚ್ಚು$_1$ (<ಕರ್ಚು$_1$)]

**ತುಟಿಗೊಂಕು** (ನಾ). ತುಟಿಯನ್ನು ಕೊಂಕಿಸುವುದು : ಆಗಾಗ್ಗೆ ಒಂದು ಕಣ್ಣಿನ ಮಿಂಚೊ, ಒಂದು ಮುಗುಳುನಗೆಯ ತುಟಿಗೊಂಕಿನ ಹೊಂಚೊ . . . ಇಣಿಕಿ (ಮಲಮ. ೨೫೯). [ ತುಟಿ + ಕೊಂಕು$_2$ ]

**ತುಟಿತ** (ನಾ). [ಜೈನ] ಒಂದು ಬಹು ದೊಡ್ಡ ಕಾಲಪರಿಮಾಣ : ಅತನಿಂ ಬಳಿಯುಮೆನಿತಾನುಂ ಕಾಲದಿಂ . . . ತುಟಿತಾ [ ಪಾಠಾಂ. ಕಾ ] ಬ್ದಪ್ರಮಿತಜೀವಿತನುಮಾಗಿ (ಆದಿಪು. ೬-೫೬ ವ). [ <ಸಂ. ತ್ರುಟಿತ ]

**ತುಟಿತೆರೆ** 'ತಂಟಿದೆರೆ' ನೋ.

**ತುಟಿದೆರೆ**, ತುಂಟಿತೆರೆ (ಕ್ರಿ). ೧. ತುಟಿಯನ್ನು ಬಿಚ್ಚು ; ಬಾಯಿಬಿಡು. ೨. ಮಾತನಾಡು : ಇಬ್ಬರೂ ಮೈಯೆಲ್ಲ ಕಿವಿಯಾಗಿ ಕೇಳುತ್ತಿದ್ದರೂ ತುಟಿದೆರೆಯಲಿಲ್ಲ (ಪುನರು. ೩೦೦). **ತುಟಿತೆರೆ** : ೨. ಈವರೆಗೆ ತುಟಿತೆರೆಯದಿದ್ದ ವೀರಣ್ಣ ಈಗ ನಡುವೆ ಬಾಯಿ ಹಾಕಿದ (ಹಾಹುತ್. ೯೫) ; ಪೂವಮ್ಮನೂ ತುಟಿತೆರೆಯಲಿಲ್ಲ (ನಡೆದಾ. II, ೧೧೨೮).
[ತುಟಿ + ತೆರೆ$_1$ (<ತೆಱ$_1$)]

**ತುಟಿಬಿಚ್ಚು** (ಕ್ರಿ). = ತಂಟಿದೆರೆ ೧ : ತುಟಿಬಿಚ್ಚಿ ಪೇಳು ಮೇಲ್ಗತಿಯ (ಮೋಹತ. ೨೨-೧); ಮಾಸ್ಲೋವ ತುಟಿಬಿಚ್ಚಲಿಲ್ಲ (ಪುನರು. ४०).
[ ತುಟಿ + ಬಿಚ್ಚು$_1$ ]

**ತುಟಿಬೆರಳು** 'ತಂಟಿವೆರಳು' ನೋ.

**ತುಟಿಮುತ್ತು**(ನಾ). ೧. ತಂಟಿಗೆ ಕೊಡುವ ಮುತ್ತು; ಅಧರಚುಂಬನ. ೨. (ಅಲಂ) ಪ್ರೀತಿಗೆ ಪಾತ್ರ : ನಿರ್ಭಯದ ನಿಃಸೀಮದಲಿ ನೀ ನಮ್ಮ ತುಟಿಮುತ್ತಾದವ (ಹಾಡುಪಾ. ೫೬-೧೦). [ ತುಟಿ + ಮುತ್ತು$_4$ ]

**ತುಟಿರಂಗು** (ನಾ). ಅಲಂಕಾರಕ್ಕಾಗಿ ತುಟಿಗೆ ಬಳಿದುಕೊಳ್ಳುವ ಬಣ್ಣ : ಕಾಂತಿಯಿಂದ ಚೆನ್ನಾಗಿ ಕಾಣಿಸಲು ಹುಡಿ, ತುಟಿರಂಗು (ಲಿಪ್‌ಸ್ಟಿಕ್), ಕುಸುಂಬೆ (ರೂಜ್), ಉಗುರುಮೆರುಗುಗಳು (ಕವಿಕೋ. I, ೩೩).
[ ತುಟಿ + ರಂಗು ]

**ತುಟಿವೆರಳು**, ತಂಟಿಬೆರಳು (ನಾ). ಎಚ್ಚರಿಕೆಯನ್ನು ಸೂಚಿಸಲು ತಂಟಿಯ ಮೇಲಿಟ್ಟ ಬೆರಳು ; ಮೌನವಾಗಿರಲು ಸೂಚಿಸುವ ಬೆರಳು : ತೋಳ್ವೊಯ್ಲು ತುಟಿವೆರಳ ಬೊಬ್ಬೆಗಳ . . . ಸಂಭ್ರಮವನಿರದೆ ಪಡೆಯೆರಡೀಕ್ಷಿಸುತ್ತಿರ್ದುವು (ಜಬಪು. ೨೬-೧೬). **ತುಟಿಬೆರಳು** : ಸದ್ದಿರದೆ ತುಟಿಬೆರಳಿನೊಳು ಸುಳಿವ ಮಾರುತದ (ಮಲದೇ. ೩೪-೩).
[ ತುಟಿ + ಬೆರಳು (< ಬೆರಲ್) ]

**ತುಟಿಸನ್ನೆ**(ನಾ). ತುಟಿಯ ಅಲುಗಾಟದಿಂದಲೇ ಇಂಗಿತವನ್ನು ತಿಳಿಯಪಡಿಸುವುದು : ಮನ್ನಗೆ ತುಟಿಸನ್ನೆ ಕೆಪ್ಪಗೆ ಕೈಸನ್ನೆ ಹಡ್ಡಗೆ ಬಡಿಗೆಯ ಸನ್ನೆ (ಇಂಜಾಪ. ೯೦-೩೬). [ ತುಟಿ + ಸನ್ನೆ$_2$ ]

**ತುಟಿಸು** (ಕ್ರಿ). ನಂಡಿ; ಹೇಳಂ : ಜಗದೊಳಗೆ ಕೌತುಕ ವಿಚಿತ್ರವೇನೆಂಬೆನುಟಿ ತುಟಿಸಬಾರದು ಸೂಂಟಸಲು ಬಾರದಮ್ಮಮ್ಮ (ನಾಚರ. ೧೭೭-೧೯).
[ ತುಟಿ + – ಇಸು$_3$ ]

**ತುಟುಕರಿಸು** (ಕ್ರಿ). ೧. ಹಾತೊರೆ ; ಅಪೇಕ್ಷಿಸು ; ಕಾತರಿಸು : ನಟಣೆಯೊಳಗೈದುವರನೀಕ್ಷಿಸಿ ತುಟುಕರಿಸುತಿಹವಕ್ಷಿಯುಗವಮನಿಪರಿಗೊಲವಿಂದ (ಜನಭಾ. ೧೯-೨೪). ೨. ತಳಮಳಿಸಂ ; ಕ್ಷೋಭೆಗೊಳ್ಳು : ಅರುಹನೇ ಗತಿಯೆಂದು ಮನ ತುಟುಕರಿಸುತ್ತೈದಿದರಾ ವಿರಾಟನ ಚರರು (ಜನಭಾ. ೫೮-೨೮). [ <ತುಡಿ + – ಇಸು$_3$ ]

**ತುಟುಕು$_1$** 'ತಟಕು$_1$' ನೋ.

**ತುಟುಕು$_2$** 'ತಟಕು$_2$' ನೋ.

**ತುಟುಕುಹನಿ** 'ತಟಕುಹನಿ' ನೋ.

**ತುಟ್ಟ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು : ಬಲ್ಲಿಗಿ, ಬಿಂದಿಗೆ, (ದೊಡ್ಡ, ಸಣ್ಣ) ತುಟ್ಟ, ದಾಸಾಲ (ನಮ್ಮನು. ೨೩೮).
[ ← ತಮಿ. ತುಟ್ಟಲಿ ]

**ತುಟ್ಟಗ್ರ** (ನಾ). ತೊಂದರೆಯ ಕಾಲ; ದುರ್ಭಿಕ್ಷ : "ತುಟ್ಟಗ್ರ–ಅಡಚಣೆ ಕಾಲ" (ಜಾನಕೋ. ೬೬). 'ತಂಟಾಗ್ರುತೆ' ಪರಾ. [ <ತುಟ್ಟಿ$_1$ ]

**ತುಟ್ಟಿ$_1$** (ನಾ). ೧. ಧಾರಣೆ ಹೆಚ್ಚಾಗಿರುವಿಕೆ ; ದುಬಾರಿ : ನೂರಿಪ್ಪತ್ತು ರೂಪಾಯಿಗಳಲ್ಲಿ ಈ ಎಲ್ಲ ಖರ್ಚುಗಳೂ ನಡೆಯಬೇಕು . . . ತುಟ್ಟಿಯ ಕಾಲ. ಕಾಳು, ಕಡ್ಡಿ, ಸೌದೆ, ಹಾಲು, ಬಟ್ಟೆ ಎಲ್ಲವೂ ತುಟ್ಟಿ (ಜನಿವಾ. ೬);

ಹೂವುಗಳನ್ನು ತುಟ್ಟಿ ಮಾಡಿದ ಹಿಮಂತರುತುವಿಗೆ ದೋಷ ಕೊಡಿರಿ (ಮೋಹಿನೀ. ೨೦). ೨. ಅಭಾವ : ಗೋವಿಂದಭಟ್ಟನ ಉತಾವಿಳತನ ಅವನಲ್ಲಿ ಔಷಧಕ್ಕೂ ತುಟ್ಟಿ (ದೀಪಹ. II, ೦೬೯). ೩. (?) : ತುಟ್ಟಿಯ ದಿನಮಂ ಪಣದಿಂದೊಟ್ಟಿಜೆಯಿಂದಿರ್ದು ದ್ವಿಗುಣಿಸಿ (ವ್ಯವಹಾ. ಉಪಮಾನ).

**ತುಟ್ಟಿಯಾಗು** = ೧. (ವ್ಯಾಪಾರದ ಸರಕಂ) ಹೆಚ್ಚು ಬೆಲೆಯುಳ್ಳುದಾಗಂ ; ಅಧಿಕವೌಲ್ಯವುಳ್ಳದಾಗು ; ದಂಬಾರಿಯಾಗಂ : ದೇಶದೊಳಗೆ ದುರ್ಭಿಕ್ಷ ಬಿದ್ದು ಕಾಳು ಬಹಳ ತುಟ್ಟಿಯಾದವು (ಮುಂಬಯಿ. ೪-೭೫); ಚಹವು ಆಗಿನ್ನೂ ತುಟ್ಟಿಯಾಗಿದ್ದಿತು (ಪತ್ರಿಕಾ. ೧೩). ೨. ಹೀನವಾಗು ; ಬೆಲೆಯಿಲ್ಲವಾಗು : ನಾನಿಂದು ಒಂದು ತುಪ್ಪದ ಬಟ್ಟಲಿನಷ್ಟು ಅನ್ನಕ್ಕೆ ತುಟ್ಟಿಯಾದೆನಲ್ಲವೆ ? (ಸ್ಮೃತಿಚಿ. ೦೩೦).

**ತುಟ್ಟಿ₂** (ನಾ). ತೃಪ್ತಿ ; ಸಂತೋಷ ; ಆನಂದ ; ತಣಿವು : ಶರಣಸಂಗಂ ತನಗೆ ಪರಮತುಟ್ಟಿಯನೀಯೆ (ಜೊಮ್ಮರ. ೦೦೦-೧೨); ತುಟ್ಟಿ ಸವ್ಮೋಹ ಸಮುದ್ರಕೆ ಹೊಂಬೆಟ್ಟದೊಟ್ಟಿ ಸೇತುವೆಗಟ್ಟಿದಂತೆ (ಭರಚ. ೦೩-೪೨). 'ತಂಟ್ಟಿವಡೆ' ಪರಾ. [ < ಪ್ರಾ. ತುಟ. /ಸಂ. ತುಷ್ಟಿ ]

**ತುಟ್ಟಿ₃** (ನಾ). ಒಂದಂ ಬಗೆಯ ತರಕಾರಿ ಸೊಪ್ಪು : ಸೊಪ್ಪುಗಳು : ಅಗಸೆ . . . ನಾರೋಬೇಡ, ತುಟ್ಟಿ, ಕೊತ್ತನಗೊರಜಿ, ಕೊತ್ತಂಬರಿ (ನಮ್ಮನು. ೨೩೭). [ ? ]

**ತುಟ್ಟಿಭತ್ತೆ** 'ತಂಟ್ಟಿಭತ್ಯ' ನೋ.

**ತುಟ್ಟಿಭತ್ಯ, ತಂಟ್ಟಿಭತ್ತೆ** (ನಾ). ಪದಾರ್ಥಗಳ ಬೆಲೆ ಏರಿಕೆಯಂನ್ನು ಸರಿಗಟ್ಟಲು ನೌಕರರಿಗೆ ಸಂಬಳದ ಮೇಲೆ ಕೊಡುವ ಹೆಚ್ಚಿಗೆ ಮೊಬಲಗು, —ಹಣ : ರೈಲ್ವೆಯಲ್ಲಿ ಹದಿನೈದುರೂಪಾಯಿ ತುಟ್ಟಿಭತ್ಯ ಕೊಡುತ್ತಿದ್ದರು (ಸರ್ವಮಂ. ೨೬೮). **ತುಟ್ಟಿಭತ್ತೆ** : ಆ ಕಾರಕೂನರಿಬ್ಬರೂ ತುಟ್ಟಿಭತ್ತೆಯ ಆಸೆಗಾಗಿ ಭೂಲೋಕಕ್ಕೆ ಓಡಿಹೋದರು (ಹನ್ನೊಂದ. ೦೪೩). [ ತುಟ್ಟಿ + ಭತ್ಯ ( < ಭತ್ಯಾದಾಯ) ]

**ತುಟ್ಟಿವಡೆ** (ಕ್ರಿ). ತೃಪ್ತಿಯನ್ನು ಹೊಂದಂ ; ಸಂತೋಷವನ್ನು ಪಡೆ : ಜಟ್ಟಿಗರ ಡೊಕ್ಕರಂ ಗಳಹತ್ತಂ ಮೊದಲೆನಿಸಿದ ಪಲವುಂ ಪಟ್ಟುಗಳಂ ಕಿರಿದು ಪೊಳ್ತು ನಿಟ್ಟಿಸಿ ತುಟ್ಟಿವಡೆದು (ಮರಾಜ. ೦೦-೪೯ ವ).
[ ತುಟ್ಟಿ₂ + ಪಡೆ₁ ]

**ತುಟ್ಟಿಸು** (ಕ್ರಿ). ೧. ಶಕ್ತಿಗುಂದಂ ; ಬಲಹೀನವಾಗು ; ಕಂಗ್ದು : "ತುಟ್ಟಿಸು—ಶಕ್ತಿಕ್ಷಯೇ" (ಶಮದಾ); ಪೊಯ್ಮುತಂ ತುಡುಕಿ ತುಟ್ಟಿಸಿ ಕತ್ತರಿವಾಣಿಯಲ್ಲಿ ಕೆಯ್ದುಡುಕಿದವೊಲ್ ಬೆರಲ್ಪಟ್ಟಿರ್ದುವು (ಅರ್ಧನೇ. ೮-೦೧೯); ತುಟ್ಟಿಸಿದ ಹರುಷದಲಿ (ತೊರರಾ. ೬-೦೫-೩); ಕಿಸುಕುಳದ ಹುಳುವಾಗಿ ಮತಿ ತುಟ್ಟಿಸಿ ವಿನಿರ್ಗಮನವಾಗಿ . . . ಮೂರ್ಛಿತನಹನು (ನಿಭಾಗ. ೩-೦೪-೨೮); ನಮಗೆ ತ್ರಾಣಗಳ್ ತುಟ್ಟಿಸಿತು ನಾಳೆ ಮಧ್ಯಾಹ್ನಕ್ಕೆ ಜೀವವಂ ಬಿಟ್ಟಪೆನು (ತುರಂಗ. ೭೯-೦೫). ೨. ಕಡಮೆಯಾಗು ; ಕುಂದು : ನಿಜಹರುಷ ತುಟ್ಟಿಸಲ್ಕೆದಿ ನೋಡಿದನಾಗ ಕೆಲಬಲನ (ಮೃರಾಕಾ. ೨-೭೪). ೩. ನಾಶವಾಗು : ತುಟ್ಟಿಸಲಿ ಧನ ಮಾನಗರ್ವದ ಬೆಟ್ಟ ಮುರಿಯಲಿ (ಕುವ್ಯಾಸ. ೦೪-೮೫); ಕೆಟ್ಟು ನುಡಿದರೆ ತನ್ನನೇನೆಂದಟ್ಟಿದರು ನಿನ್ನುವನು ತನುವಿದು ತುಟ್ಟಿಸದ ಮುನ್ನಿದ್ದುದನು ಹೇಳಯ್ಯ ತನಗೆ (ತೊರರಾ. ೨-೫-೪). ೪. ಅವಹೇಳನ ಮಾಡು ; ಕಡೆಗಣಿಸು : ಎಲ್ಲವರು ತುಟ್ಟಿಸುತಲಿಹಿರಿ ನಾವೆಂದುದಂ (ತುರಂಗ. ೪೦-೦೫); ಕುರುನೃಪತಿ ಮಾತೆಯಂ ತುಟ್ಟಿಸಲ್ ಗಾಂಧಾರಿ ತೆರಳಿದಳ್ (ತುರಂಗ. ೪೦-೨೪). ೫. ತಗ್ಗಿಸು ; ಶಾಂತಗೊಳಿಸು; ಸಮಾಧಾನಮಾಡು: ದುಷ್ಟದುರ್ಜನನಿವಂಗಳಲದಿರಿ ಬಹಳ ಪಾಪಿಷ್ಠ ಗುರುಗೋತ್ರಘಾತಕನೆಂದು ಶೋಕವಂ ತುಟ್ಟಿಸಿಯೆ ಮುಂದಕಂ ತೆರಳಿದರು (ತುರಂಗ. ೯೫-೦೫). ೬. ಸಿಲುಕಂ ; ಬೀಳು : ತೋಹಿನಲಿ ತುಟ್ಟಿಸಿದ ಮೃಗದವೊಲೂಹೆಯಳಿದುದು (ಕುವ್ಯಾಸ. ೦೪-೨೩).

೭. ಬಳುಕು ; ಕಂಪಿಸು : ಮಣಿಮುದ್ರಿಕೆಯ ನೂಪುರದ ತುಟ್ಟಿಸುವ ಬಡನಡುವಿನ ... ದೃಷ್ಟಿಮೋಹನಮೂರ್ತಿಯೆಸೆದಳು ಮೊಸರ ಕಡೆವುತ್ತ (ನಿಭಾಗ. ೧೦-೯-೦೬). ೮. ಬೀಳಂ ; ಕುಸಿ : ದುಷ್ಟನೃಪಕುಲಭಾರದಲಿ ಕಂಗೆಟ್ಟು ಕುಸಿದು ರಸಾತಳಕೆ ಧರೆ ತುಟ್ಟಿಸುತ (ನಿಭಾಗ. ೧೦-೩೧-೦೦).
[ ತುಟ್ಟಿ₁ ? + – ಇಸು₃ ]

**ತುಟ್ಟು** (ಕ್ರಿ). ೧. ನಿರ್ದೇಶಿಸು ; ಗಂರಿಯಿಂಡು : ಬಟ್ಟಲ್ಲಿ ಬೀಡ ಬಿಡದೆ ಬೇಗದೊಳು ತಾವು ತುಟ್ಟಿದ ಪೊಳಲ ಗಡಿಯಲಿ ಬಿಟ್ಟರಲಾ ವಾರ್ತೆ ಗಡಿಯ ನಾಯಕರಿಂದ ಮುಟ್ಟಿದುದಾ ನೃಪವರಗೆ (ರಾಮವಿ. ೯-೩೦). ೨. ಪಣತೊಡಂ ; ಪ್ರತಿಜ್ಞೆಮಾಡಂ : ಕಟ್ಟುವೆ ಲಂಕೆಯ ಪಟ್ಟವ ನಿನಗೆಂದು ತುಟ್ಟಿ ನುಡಿದ ಮನಮುಟ್ಟಿ (ರಾಮವಿ. ೦೩-೭೩). [< ತೊಡು₁]

**ತುಟ್ಟೈಸು** (ಕ್ರಿ). ತುದಿಗೆ ಬರಂ : ನಿಟ್ಟುಸುರ್ಸೂಸೆ ಕಂಗಳು ಪೈಸರಿಸೆ ಜೀವ ತುಟ್ಟೈಸಿ (ಲಕ್ಷ್ಮಭಾ. ೨೭-೦೪). [ < ತುಟಿ + – ಇಸು₃ ]

**ತುಟ್ಯಂಗ** (ನಾ). [ಜೈನ] ಒಂದಂ ದೊಡ್ಡ ಕಾಲಪರಿಮಾಣ : ಕಮಲಾಂಗಂ ಕಮಲಂ ತುಟ್ಯಂಗಂ ತುಟಿಕಂ ಅಟಟಾಂಗಂ ಅಟಟಂ ಅಮಮಾಂಗಂ ಅಮಮಂ (ಪಸಾರ. ೦೩೮-೫). [< ಸಂ. ತ್ರುಟಿತಾಂಗ]

**ತುತಾರ** 'ತುಟಾರ' ನೋ.

**ತುತಾರಿ** (ನಾ). ದುಡಂಕುಸ್ವಭಾವದ ಹೆಂಗಸು : ಘೋರಕರ್ಮಾಚಾರಿ ವಂಶಕುಠಾರಿ ಬಹಳ ತುತಾರಿ ದಿವಿಜರ ಮಾರಿ ಜನಿಸಿದಳಾ ಬಳಿಕ ಶೂರ್ಪನಖೀ (ಅನಂರಾ. ೦-೭-೦೨). [ ತುತಾರ ( < ತುಟಾರ) + – ಇ₂ ]

**ತುತಾರಿಸು** 'ತುಟಾರಿಸು' ನೋ.

**ತುಡಕಿ** 'ತುಡಿಕೆ' ನೋ.

**ತುಡರು** 'ತೊಡರ್₁' ನೋ.

**ತುಡಿ, ದುಡಿ₂** (ಕ್ರಿ). ೧. ಮಿಡಿ ; ಸ್ಪಂದಿಸಂ : ಸಾವಿತ್ರಿಗೆ . . . ನಾರದನು ಹೇಳಿದ್ದ ಮಾತೇ ಮನಸ್ಸಿನಲ್ಲಿ ತುಡಿಯುತ್ತಿತ್ತು (ವಚಭಾ. ೦೬೯); ಯಾವುದೋ ಆಶಂಕೆ ತುಡಿಯುತ್ತಲೇ ಇತ್ತು (ಮುಣ್ಣುಹ. ೦೭೮); ಕನ್ನಡಸಂಸ್ಕೃತಿಯ ಪ್ರತೀಕ ಒಂದೇ ! ಇಲ್ಲಿ ತುಡಿಯುತ್ತಿರುವ ಹೃದಯ ಒಂದೇ ! (ಕರ್ನಾಕ. ೩೩೭). ೨. ತವಕಿಸು ; ಹಾತೊರೆ ; ಆತುರಪಡಂ : ನಾರಣಪ್ಪನ ಮನಸ್ಸು ಆ ಹತಭಾಗ್ಯರಿಗೆ ನೆರವಾಗಲು ಸದಾ ತುಡಿಯುತ್ತಿರುವುದು (ಅನಾಥ. ೩೭) ; ಇಡೀ ಮಾನವಪ್ರಕೃತಿಯೇ ಸೌಂದರ್ಯದತ್ತ ತುಡಿಯುತ್ತಿದೆ (ಕಾವ್ಯಕು. ೦೩೩). ೩. ನೋಯಂ ; ವ್ಯಥೆಪಡು ; ತಳಮಳಿಸಂ : ನಿಸರ್ಗದ ಪಶುಪಕ್ಷಿಗಳಿಗೆ ಇರುವ ಸ್ವಾತಂತ್ರ್ಯ ತಮಗೆ ಇಲ್ಲವಲ್ಲಾ ಎಂದು ಮನಸ್ಸು ತುಡಿಯುತ್ತಿತ್ತು (ರಾಜ್ಯೋದ. ೦೭೨) ; ಮುದವಾರಲು, ಅಳಲೇರಲು, ಭಯ ಮಸಗಲು —ತುಡಿದು, ಮನ ದೇವಗೆ ಮೊರೆಯಿಡುವುದು (ಮೊಂದಳಿ. ೨೦-೨). ೪. ಅಲ್ಲೋಲಕಲ್ಲೋಲವಾಗು; ಹೊಯ್ದಾಡು ; ಕ್ಷೋಭೆಗೊಳ್ಳು: ಅವ ತವಕದಲೇನೊ ಬಾನಂಚುಗಳ ತಬ್ಬಿ ತುಡಿವೀ ಅಧೀರಜಲ (ನವ್ಯಧ್ವ. ೦-೫). ೫. ಮಿಂನಂಗು ; ಹೊಳೆ : ಶಿವಜಟೆಯ ತುಳುಕಿ ತುಡಿವ ತಾರೆಯ ಬೆಳಕಿಗೀ ಬೆಳಕೆ ಚರಿತಾರ್ಥ (ಮಲಿದೇ. ೨೩-೫). **ದುಡಿ₂** : ೧. ಇನಿಯಂ ಬಂದು ನಿಂದು ರಾಧೇ ಎನಲೇಪರಿ ದುಮುದುಮಂ ದುಡಿಯುವ ಹೃದಯವ ತಡೆವೆನೆ (ಗೋಕುನಿ. ೨೩-೪).

**ತುಡಿದುಕೊಳ್ಳು** = ಆತುರಪಡಂ ; ಕುತೂಹಲಗೊಳ್ಳು : ಅವನೊಂದಿಗೆ ಮಾತನಾಡತೊಡಗಿದಂತೆಲ್ಲ ನನ್ನ ಹೃದಯವು ತುಡಿದುಕೊಳ್ಳ ತೊಡಗಿತು (ಏಳಕ. ೮೭); ದೂರದಲ್ಲಿ ಅವನನ್ನು ಕಂಡೊಡನೆಯೇ ಮನಸ್ಸು ತುಡಿದುಕೊಳ್ಳುತ್ತಿತ್ತು (ಅಲಹೂ. ೫೭).
[ ದೇ.೩ ತಮಿ. ತುಟ ; ಮಲ. ತುಡಿ ]

**ತುಡಿಕಿ** 'ತುಡಿಕೆ' ನೋ.

**ತುಡಿಕೆ**, ತಂಡಕೆ, ತಂಡಿಕಿ, ತುಡುಕೆ, ತೊಡಿಕೆ (ನಾ). ೧. ತೋಟದ ಒಂದು ಭಾಗ : ದೇವರ್ಗ್ಗೆ ಮಾನ್ಯಂ ತುಡಿಕೆ ೧ (ಸೌಇಇ.IX-i, ೧೫೮-೫೬; 1092); ತೆಂಕಲು ತುಡಿಕೆಯು ಮುನ್ನಣ ಬಟ್ಟೆ ನೀರೊತ್ತಿಂಗೆ ದೇವಣ ಭಟ್ಟರು ಕೊಟ್ಟ ಬೆದ್ದಲೆ (ಎಕ. V, ಹಾಸನ. ೧೦೬-೪೯; 1123) ; ತೋಟ ತುಡಿಕೆ ಮುಂತಾಗಿ ಅಗಾಮಿಯಾಗಿ . . . ಸರ್ವಸ್ವಾಮ್ಯವನು ಆಗುಮಾಡಿ ಕೊಂಡು (ಎಕ. IX, ಬೆಂಗಳೂ. ೧೨೭-೩೨ ; 1431) ; ಅವರ ತೋಟ ತುಡಿಕೆಗಳು ಹಣ್ಣು ಹಂಪಲುಗಳಿಂದ ತುಂಬಿ ತುಳುಕಲಿ (ಹುಟ್ಟಿಹ. ೦೬೦). ೨. ಹಣ್ಣುಗಳನ್ನು ಸಂಗ್ರಹಿಸಿ ಇಡುವ ಮನೆ ; ಫಲಸಂಗ್ರಹಾಲಯ : (೬). ೩. ಅಡಕೆಯ ಫಸಲನ್ನು ಸುಲಿದು ಬೇಯಿಸಿ ರೇಖೆ ಮಾಡುವ ಸ್ಥಳ. **ತುಡಕೆ** : ೧. ಗದೆ ಬೆದಲು ತೋಟ ತುಡಕೆ (ಮ್ಯಆರಿ. ೦೯೩೦, ೩೮-೦೩ ; 1512). **ತುಡಿಕಿ** : ೧. ಗ್ರಾಮಕ್ಕೆ ಸಲುವ ಗದ್ದೆ ಬೆದ್ದಲು ತೋಟ ತುಡಿಕಿ ಆಡುಮನೆವಣ (ಎಕ. XIV, ಚಾಮರಾ. ೨೬೬-೮ ; ?). **ತುಡುಕೆ** : ೧. ಊರಿಂ ತೆಂಕದೆಸೆವಂದದ ತುಡುಕೆ ಯೊಳಗಣ ತುಡುಕೆ ಒಂದು (ಹೈಆಸಿ. ೮-೩೩; 1088) ; ಊರಡೆದಡದ ಬಡಗಣ ಮೂಡಣ ಗೋಟನಲ್ಲಿ ಬ್ರಹ್ಮದೇವಪಟ್ಟವರ್ಧ್ಧನರು ಕೊಟ್ಟ ತೆಂಕವಾಗಿಲ ತುಡುಕೆಯೊಂದು (ಸೌಇಇ. IX-i, ೩೩೩-೫೨ ; 1225). **ತೊಡಿಕೆ** : ೧. ಅಯ್ಮದೇವಪರವಿಟ್ಟ ತೊಡಿಕೆ ಅಟುವಿಟ್ಟೊರ್ (ಮ್ಯಆರಿ. ೦೯೩೪, ೪೨-೫ ; 10ನೆಯ ಶತ?). [←ತಮಿ. ತುಟವ್ವೆ=ತೋಟ ]

**ತುಡಿಗೆ** 'ತೊಡುಗೆ' ನೋ.

**ತುಡಿತ**, ದುಡಿತ$_2$ (ನಾ). ೧. ಮಿಡಿತ; ಸ್ಪಂದನ : ಪ್ರಭುಗಳ ಉಕ್ತಿ ಯನ್ನು ಕೇಳಿದಾಗ ಚೆಂಗುಮಣಿಯ ಎದೆಯ ತುಡಿತ ನಿಧಾನವಾಯಿತು (ಹುಲಿಪಾ. ೦೫೯). ೨. ಅತ್ಯಾಸಕ್ತಿ ; ಆತುರ; ಲವಲವಿಕೆ ; ತವಕ : ಶ್ರೀವಿರೂಪಾಕ್ಷನ ಪಂಪಾಪುರಕ್ಕೆ ಹೋಗಬೇಕೆಂಬ ತುಡಿತ ದಿನದಿನಕ್ಕೂ ಬಲಿಯುತ್ತಿದೆ (ತುಂಗಭ. ೦೩): ಎದೆಭಾರ ಎಷ್ಟೋ ಇಳಿಯುತ್ತದೆ ; ತನ್ನೊಳಗಿನ ತುಡಿತ ಹಿಡಿತಕ್ಕೆ ಬರುತ್ತದೆ (ಬನಸಿ. ೦೫೦) ; ನವೋದಯ ಕವಿಗಳಲ್ಲಿ ನೂತನಚೈತನ್ಯವನ್ನು ತುಂಬಿದುದು ಬಂಧನದಲ್ಲಿ ಸಿಲುಕಿದ ಭರತಮಾತೆಯ ಬಿಡುಗಡೆಯ ತುಡಿತ (ಸೌಂದಸ. ೩೬೩). **ದುಡಿತ$_2$**: ೩. ಬೊಕ್ಕೆಯಿಂದುಂಟಾಗುವ ನೋವು : "ಅಯಾಮ = ನೋವು, ಆಕ್ಷೇಪಕ = ದುಡು [ ಡಿ ] ತ, ಸ್ತಂಬಾ = ಬಿಗಿಯೂದು" (ಬಾಹಟೀ. ೨-೪).

[ ತುಡಿ + – ತ$_2$ ]

**ತುಡಿಸು** 'ತೊಡಿಸು' ನೋ.

**ತುಡು$_1$** 'ತೊಡು$_1$' ನೋ.

**ತುಡು$_2$** 'ತೊಡು$_2$' ನೋ.

**ತುಡು$_3$** (ನಾ). ಒಂದು ಬಗೆಯ ಮರ : ಅರುಟಾಳಂ ಹಾರಿವಾಳಂ ತುಡು ತಡಸೊಡವಂ ಲೊಕ್ಕಿ (೧೨೪. ೦-೬೨). [ ? ]

**ತುಡುಂಕು$_1$** 'ತೊಡಂಕು$_1$' ನೋ.

**ತುಡುಂಕು$_2$** 'ತುಂಡುಕಂ$_3$' ನೋ.

△ **ತುಡುಂಗುಣಿ** 'ತುಡಂಗುಣಿ' ನೋ.

**ತುಡುಕಿಸು** (ಕ್ರಿ). ಧರಿಸುವಂತೆ ಮಾಡು ; ಹಿಡಿಯುವಂತೆ ಮಾಡು: ಹರಿಯ ಚಕ್ರವ ತುಡುಕಿಸುವೆ ವಾನರಪತಾಕನ ರಥವ ಹಿಂದಕೆ ಮುರಿ ಯಲಿಸುವೆನು (ಕುಮ್ವಾಭೀ. ೦-೪೦).

[ ತುಡುಕು$_1$ (<ತೊಡಂಕು$_1$) + –ಇಸು$_3$ ]

**ತುಡುಕು$_1$** 'ತೊಡಂಕು$_1$' ನೋ.

**ತುಡುಕು$_2$** 'ತೊಡಂಕು$_3$' ನೋ.

**ತುಡುಕು$_3$**, ತುಡುಂಕು$_2$ (ನಾ). ವಾದ್ಯವಾದನದಲ್ಲಿ ಒಂದು ಪ್ರಕಾರ: ಜತಿ ಜೋಕೆ ತುಡುಕು . . . ಬೆಡಂಗಿನಿತುಂ ಸಂಗತಿವಡೆಯೆ ವಾದನ ಕಳಾವತಿ ಬಾಜಿಸುತಿರ್ದಳ್ (ಶಾಂತೀಶ್ವ. ೦೩-೨೨೭) ; ಆ ಸಮಯದೊಳ್: ಮದ್ದಳಿಗಂ ಮದ್ದಳೆಯುಂ . . . ಚಮತ್ಕಾರ ತುಡುಕು ರಿಗ್ಗವಣೆ ಪಹರಣೆ ಗಳೆಂಬ ನಾನಾಶಬ್ದಂಗಳಂ ಬಾಜಿಸಿ (ಧರ್ಮಪ. ೨-೨೩ ವ) ; ಪಲತೆಱದ ತಾಳಗಳ ಜತಿಗಳನೆಳವಡಿಸಿ ತುಡುಕ [ ಕು ] ಗಳ ಕತ್ತರಗಳನು ಮೂದೆಱ ನಾದ ಲಯದಲಿ ಕುಡುಪಡರೆ ನುಡಿಸೆ (ಸಾಳ್ವಭಾ. ೦೮-೫೭); ತುಡುಕು ಪಹರಣೆ . . . ತೋಱ ನುಡಿಸಿದ ಮಾರ್ದಂಗಿಕನು (ಗೋಮಟೀ. ೭-೦೭). **ತುಡುಂಕು$_2$** : ಕವುತಂದೆಂಕಾರಂ ಮಲಪವದೆ ತುಡುಂಕೊತ್ತು ಜೋಕೆ ಯಂತರಿ ಜತಿ ರಿಗ್ಗವಣ ಪಹರಣೆಯೆನಿಪ್ಪೀ ಪ್ರಬಂಧಮಂ (?) ಶ್ರೋತ್ರ ಬಂಧವೆನೆ ಬಾಜಿಸಿದರ್ (ಪಾರ್ಶ್ವಪು. ೦೨-೨೦). [Pಭರತಕೋಶದಲ್ಲಿ 'ತುಡುಕಾ' ಎಂಬ ಶಬ್ದಕ್ಕೆ 'ವಾದ್ಯಪ್ರಬಂಧ' ಎಂದು ಹೇಳಿದೆ.]

**ತುಡುಕುಗಾಯ** (ನಾ). ಬಿಗಿಯಾದ ಹಿಡಿತದಿಂದ ಉಂಟಾಗುವ ಗಾಯ : ಜಾಡಿಸುವ ಮಣಿಮಯದ ಗದೆಯಲಿ ತೋಡುವೊಯ್ಲಿನ ತುಡುಕುಗಾಯದ ನೀಡುಮೊನೆಗಳ ವಿಗಡನಿಕ್ಕಿದನದಟರಕ್ಕಸರ (ಕುಮ್ವಾಅ. ೦೦-೫೨). [ ತುಡುಕು$_1$ (<ತೊಡಂಕು$_1$) + ಗಾಯ ]

**ತುಡುಕುಗುದುರೆ** (ನಾ). ಮುನ್ನುಗ್ಗುವ ಕುದುರೆ : ಕಡಿದು ಬಿಸುಟನು ತಲೆವರಿಗೆಗಳಲಡಿಸಿದಾ ಪಯದಳವನೊಗ್ಗಿನ ತುಡುಕುಗುದುರೆಯ ಖುರವ ತಱಿದನು (ಕುಮ್ವಾಕ. ೨-೪೫). [ತುಡುಕು$_1$ (<ತೊಡಂಕು$_1$) + ಕುದುರೆ]

**ತುಡುಕುವೆಳಗು** (ನಾ). ಬೆರೆತುಕೊಂಡ ಬೆಳಕು ; ಅಧಿಕವಾದ ಪ್ರಕಾಶ : ಜಡಿವ ಕೈದೀವಿಗೆಯ ಸಾಲಿನ ತುಡುಕುವೆಳಗಿನ ವಂದಿಜನದುಗ್ಗಡದ ರಾಜಕುಮಾರಕರು ನಡೆತಂದರೊಲವಿನಲಿ (ತೊರರಾ. ೧-೧೬-೪೦).

[ ತುಡುಕು$_1$ (<ತೊಡಂಕು$_1$) + ಬೆಳಗು$_2$ ]

**ತುಡುಕೆ** 'ತುಡಿಕೆ' ನೋ.

**ತುಡುಕೆವಟ್ಟು**, ತುಳುಂಕೆವಟ್ಟು (ನಾ). ಒಂದು ಪ್ರದೇಶದ ಹೆಸರು : ದೇವರ ಮೂಡಣದೆಸೆಯಲ್ ಪಳಕೆಯಿ ಮತ್ತರು ೪ ತುಡುಕೆವಟ್ಟನಲ್ಲಿ ಅಱುವಣದೇ ತುಣ್ಬದು ಮಣಲಕೆಯಿ ಮತ್ತ ೭ (ಸೌಇಇ. IX-i, ೦೨೦-೦೫ ; 1058). **ತುಳುಂಕೆವಟ್ಟು** : ದುದ್ದಿಮಯ್ಯನ ಮಗಂ ಪದ್ಮ ನಾಭನೊಱಿಯ ಹತ್ತಿರಲೀಶ್ವರಯ್ಯನ ಮರ್ಕ್ಕಿಯಿಂ ಪಡುವಲು ಕೊಟ್ಟ ತುಳುಕೆವಟ್ಟನ ಮರ್ಕ್ಕಿ ಕಮ್ಮ ೪೫ (ಸೌಇಇ. IX-i, ೦೬೫-೫೯ ; 1099). [ ? ]

**ತುಡುಗ** (ನಾ). ಕಳ್ಳ ; ಚೋರ; ತಸ್ಕರ : ಕೂಗಿಯಾಡುವಾನು ಬರಿದೆ ತುಡುಗನು (ಚದಾವ. ೦೪೮-೯) ; ಯಾರಿಗೂ ಕಾಣದಂತೆ ಕಳವು ಮಾಡುವ ಚತುರ ತುಡುಗನಂತೆ (ಗಾಳಿಗು. ೨೭) ; ನಿಮ್ಮ ಹುಡುಗರು ಕೆಲವರು ತುಡುಗರು ಅಷ್ಟೆ (ಬೆಳುಮು. ೨೦೨). [ತುಡುಗು + – ಅ$_7$]

**ತುಡುಗತನ** (ನಾ). ಕಳ್ಳತನ ; ಚೌರ್ಯ : ಆಗ ತುಡುಗತನ ತನ್ನ ತಾನೇ ಹೊರಬೀಳುತ್ತದೆ (ರಂಗರೊ. ೦೨). [ <ತುಡುಗು + – ತನ ]

**ತುಡುಗದನ** (ನಾ). = ತುಡುಗುಣಿದನ : ಬೇಸಿಗೆಯಲ್ಲಿ ತುಡುಗದನಗಳು ತೋಟಕ್ಕೆ ಬಾರದಂತೆ ಮಾಡುವುದೇ ಕಷ್ಟ (ರೂಢಿ).

[ <ತುಡುಗು+ದನ ]

**ತುಡುಗಾಡು** (ಕ್ರಿ). ಕಳ್ಳತನ ಮಾಡು ; ಕದಿ : ತುಡುಗಾಡುವ ಬಸವ ನಾರಂಬಿಗನ ಕಯ್ಯೊಳ್ . . . ಸಿಕ್ಕುವಂತೆ (ಧರ್ಮಾಮ್ಮ. ೦೩-೦೮೫).

[ ತುಡುಗು + ಆಡು$_1$ ]

**ತುಡುಗಿ** (ನಾ). ಕಳ್ಳಿ : ಅವಳೇನು ಬೀದಿಯ ಮೇಲಿನ ತುಡುಗಿಯೆ (ಸ್ವತಿಚಿ. ೨೯೭). [ ತುಡುಗ + –ಇ$_2$ ]

**ತುಡುಗು** (ನಾ). ಕಳ್ಳತನ ; ಚೌರ್ಯ : ಮೊನ್ನಿನ ದಿನ ನಮ್ಮ ಗಣಿಯಲ್ಲಿ ಇಂಥದೇ ಒಂದು ತುಡುಗು ಸಂಭವಿಸಿತ್ತು (ರಂಗರೊ. ೦೦) ; ತುಡುಗಿನಿಂದ ... ಕಳ್ಳಗಂಟು ಮಾಡಿಕೊಂಡಿದ್ದಳು (ಹೊಸಕ್ಷ. ೦೮೪) ; ವಿಸ್ಮಯಕಾರಕ ತುಡುಗುಗಳಲ್ಲಿ ಪ್ಯೂತ್ವಾನ ಕೈಚಳಕವಿದ್ದೇ ಇದೆ (ದೋರಾಕ. ೦೦).

**ತುಡುಗುಮಾಡು** = ಕಳವು ಮಾಡು ; ಕದಿ : ತುಡುಗುಮಾಡಬಾರದೆಂದು ಸಾಲೆಯ ಅಯ್ಯನವರು ಹೇಳಿದ್ದನ್ನು ಮರೆತೆಯೇ ? (ಮುಂಬಯಿ. ೨-೩೬) : ಅವುಗಳು ಸಿಕ್ಕ ಪದಾರ್ಥಗಳನ್ನು ತಿಂದು ಹಾಕುತ್ತಿದ್ದವು. ತುಡುಗುಮಾಡಿ ಒಯ್ಯುತ್ತಿದ್ದವು (ಮೊಪಾಸಾ. ೨೩) : ತುಡುಗುಮಾಡಿ ಗಂಡಸು ಕೆಟ್ಟ, ಹಾದರಮಾಡಿ ಹೆಂಗಸು ಕೆಟ್ಟಳು (ಗಾದೆ).

[ದೇ.॥ ತಮಿ. ತಿರುಟು, ತಿರುಟ್ಟು ; ಮಲ. ತಿರಿಡ=ಕಳ್ಳ]

**ತುಡುಗುಗೊಳ್** (ಕ್ರಿ). = ತಂಡುಗಾಡು : ಮ ಹಾ ಮಾ ಯಾ ವಿ ಯ ತುಡುಗುಗೊಂಡ ತೊಟ್ಟಿನಂತೆ (ಧರ್ಮಾಮೃ. ೬-೧೦೫) ; ತುಡುಗುಗೊಂಡು ಕುಡಿಯದಿರ್ (ಅದ್ಯುತ. ೩೦-೧೮). [ತುಡುಗು + ಕೊಳ್$_1$]

**ತುಡುಗುಣ್** (ಕ್ರಿ). ಕದ್ದು ತಿನ್ನು : ತುಡುಗುಣ್ಬ ತೊಟ್ಟಿನಂತೆ ಕೊಲ್ಲದ ವ್ರತಕ್ಕಲಸಿ ನಡುಗದೆ (ಧರ್ಮಾಮೃ. ೦೪-೮೪). [ತುಡುಗು+ಉಣ್]

**ತುಡುಗುಣಿ**, ತಂಡುಂಗುಣಿ (ನಾ) ೧. ಕಳವಿನಿಂದಲೇ ಜೀವಿಸುವ ವ್ಯಕ್ತಿ ; ಕಳ್ಳತನದಿಂದ ಹೊಟ್ಟೆ ಹೊರೆಯುವ ವ್ಯಕ್ತಿ : ತುಡುಗುಣಿ ಗೊರವರ ಮೆಚ್ಚಂ ಪೊಡವಿಗೆ ಶಿವಸಕ್ತಿ ತಾನೆ ನೈಷ್ಠಿಕಮುನಿಪಾ (ಎಕ. XII, ಚಿಕ್ಕನಾ. ೩೦-೨೯: 1149); ಮನೆಮನೆದಪ್ಪದೆ ತಿರುಗುವ ತುಡುಗುಣಿಯಂತೆ ಕಾಡಲಾಗದು ಭಕ್ತನ (ಅವಜಂ. ೦೦೩-೪೬೮) ; ತು ಡು ಗು ಣಿ ಯೆ ನಿನಗುಂಟು ವೀರ್ಯದ ಕಡುಹು (ನಿಘಾಗ. ೯-೧೦-೪೬); ಊ ರೂ ರು ಗಳ ಹೊಕ್ಕ ತುಡುಗುಣಿ ತುರುಕಮಾರ್ಬಲವ ಕಡುತವಕದೆ ಮುತ್ತಿಕೊಂಡು (ಕಂನವಿ. ೦೩-೫೨). △ **ತುಡುಂಗುಣಿ :** ಆನೆ ತುಡುಂಗುಣಿಯಾದೊಡೆ ಭೂನಾಥಂ ಜಾರನಾದೊಡಂ...ಏ ನೆಂ ದೆ ನ ಬ ಹು ದು ನೀತಿ ತಾಂ ಭೂತಳದೊಳ್ (ನೀತಿಸಾಂ. ೫೪೯). ; ೨. ಕದ್ದು ತಿನ್ನುವ ನಾಯಿ : “ತುಡುಂ ಗುಣಿಯೆ ಹಾಟ್ಕನೆಯ ಹಾಟನಕ್ಕುಂ” (ಸಂಜೀವ. ೬).

**ತುಡುಗುಣಿಯಾಗು**= ಕಳ್ಳಬುದ್ಧಿಯಿಂದ ಕೂಡಿರಂ : ಸಾರಮೇಯ ಶಿಶುವಂ ಕಂಡು ಪ್ರೀತಿವಟ್ಟು ನಡಪುತ್ತಿರ್ಪುದುಮದು ಗ ಂ ಡು ನೆ ರೆ ದು ಕೊಂಡು ತುಡುಗುಣಿಯಾಗಿ ಭಾಂಡಸಂಕರಂಗೆಯ್ಯುತ್ತಿರ್ಪುದುಂ (ಪಂಚತಂ. ೨೬೦-೧೯). [ತುಡುಗು + -ಉಣಿ]

**ತುಡುಗುಣಿಕ** (ನಾ). = ತುಡುಗುಣಿ ೧ : ಕೊಡಗೂಸು ತೊತ್ತು ಸಯ್ಯುಮಿ ತುಡುಗುಣಿಕ ಕುಷ್ಠಾಂಗಿ ರಂಡೆ (ಶಾಸ್ತ್ರಟೀ. ೫೧-೩೬).

[ತುಡುಗುಣಿ + -ಕ$_3$]

**ತುಡುಗುಣಿಗೆಯ್ತ** (ನಾ). ೧. ಕಳ್ಳತನದ ಕೆಲಸ. ೨. ಕಳ್ಳತನದಲ್ಲಿ ಕೂಡುವುದು ; ಚೋರಸುರತ : ನಾಣಿಲಿ ಮಾಣಲಾಗದೇ ತುಡುಗುಣಿಗೆಯ್ತಮಂ (ರಸರ. ೩-೧೬೨). [ತುಡುಗುಣಿ + ಕೆಯ್ತ$_1$]

**ತುಡುಗುಣಿತನ** (ನಾ). ೧. ಕಳ್ಳತನ : ಕದ್ದು ತಿಂದರೆ ಕೈಹಿಡಿದೊಮ್ಮೆ ಬಡಿದು ತುಡುಗುಣಿತನವ ಬಿಡಿಸಯ್ಯಾ (ಬಸವ. ೪೩೩). ೨. ಕಪಟವೃತ್ತಿ ; ಮೋಸ ; ವಂಚನೆ : ಎನ್ನ ಸೀಮೆಯುಂ ತುಡುಗುಣಿತನದಿ ಹೊಕ್ಕ ತುಂಟ ಬಂಟಕೆಯುಮಂ ಬಿಡಿಸಿದೊಡೆ (ಸಮ್ಯಕ್ತ್ವ. ೨-೭) ; ಸಾಂಬಳ್ಳಿಯ ಭೂಪ ತುಡುಗುಣಿತನದಲಾಲಂಬಾಡಿಯ ಕೊಂಡ ಕಡೆಗೆ ಠಾಣೆಯವಿಕ್ಕಿದನು (ಕಂನವಿ. ೦೭-೨೨). [ತುಡುಗುಣಿ + -ತನ]

**ತುಡುಗುಣಿತೊಟ್ಟು** (ನಾ). ಕಳ್ಳತನ ಮಾಡುವ ತೊತ್ತು : ಗರ್ದಭ ನೆರ್ದೆಯುಮಂ ಕಿವಿಯುಮಂ ತಿಂದು ತುಡುಗುಣಿತೊಟ್ಟಿನಂತೆ ಬಾಯಂ ತೊಡೆದುಕೊಂಡು ತಾನಲ್ಲದಂತಿರ್ಪುದುಂ (ಪಂಚತಂ. ೨೮೪-೨೨).

[ತುಡುಗುಣಿ + ತೊಟ್ಟು]

**ತುಡುಗುಣಿದನ** (ನಾ). ಹೊಲ, ಗದ್ದೆ, ತೋಟಗಳಿಗೆ ನುಗ್ಗಿ, ಕದ್ದು ಮೇಯುವ ಸ್ವಭಾವವುಳ್ಳ ಪಶು ; ಕಳ್ಳಹಸು ; ತೊಂಡುದನ : ಹಂದಿ ಹರಿದಾಡುವಂತೆ ತುಡುಗುಣಿದನ ತಿರುಗುವಂತೆ (ಉದ್ಯೋಪ್ರ. ೧೧-೨೯-೧೯). [ತುಡುಗುಣಿ + ದನ]

**ತುಡುಗುಣಿನಾಯ್**, ತಂಡುಗುಣಿನಾಯಿ (ನಾ). ಕದ್ದು ತಿನ್ನುವ ನಾಯಿ : “ಹಾಟ್ಕನೆಹಾಟಂ=ತುಡುಗುಣಿನಾಯ್” (ಶಮದ. ಪರಿ. ೧) ; ತುಡುಗುಣಿ ನಾಯ್ ಮನೆಯವರ ಕಯ್ಯೊಳ್ ... ಸಿಕ್ಕುವಂತೆ (ಧರ್ಮಾಮೃ. ೧೩-೧೮೫); ಒಡೆಯರ ಕಣ್ತಪ್ಪುವುದನೆ ತುಡುಗುಣಿನಾಯಳಿಪಿ ನೋಡುವಂತೆ (ಪಾರ್ಶ್ವಪು. ೩-೫೯); ತುಡುಗುಣಿನಾಯನು ಹಿಡಿತಂದು ಸಾಕಿದರೆ ತನ್ನೊಡೆಯಂಗೆ ಬಗುಳುವಂತೆ (ಬಸವ. ೫೮೬). **ತುಡುಗುಣಿನಾಯಿ :** ತುಡುಗುಣಿ ನಾಯಿಗೆ ಮಡಕೇ ಮೇಲೆ ಕಣ್ಣು (ರೂಢಿ). [ತುಡುಗುಣಿ + ನಾಯ್]

**ತುಡುಗುಣಿನಾಯಿ** ‘ತುಡುಗುಣಿನಾಯ್’ ನೋ.

**ತುಡುಗುತಿನ್**, ತುಡಂಗುತಿನ್ನು (ಕ್ರಿ). ಕದ್ದು ತಿನ್ನು : ನನ್ನದೊಂದಾಕಳು ಒಕ್ಕಲಿಗನ ಹೊಲದಲ್ಲಿ ತುಡುಗುತಿಂಬುವದಕ್ಕೆ ಹೋಗಲದ ಮನೆಗೆ ಹೊಡತರುವಲ್ಲಿ (ಭೃರಸೂ. ೧೮೯). **ತುಡುಗುತಿನ್ನು :** ಲಕ್ಷ್ಮೀ ತುಡುಗು ತಿನ್ನುತ್ತಾಳೆ (ಸ್ತ್ರೀತಿಜಿ. ೫೯). [ತುಡುಗು + ತಿನ್ನು (<ತಿನ್)]

**ತುಡುಗುತಿನ್ನು** ‘ತಂಡುಗುತಿನ್’ ನೋ.

**ತುಡುಗುತೀನಿ** (ನಾ). ಕದ್ದ ತಿನಿಸಂ : ಅಡಕವಿಲ್ಲದ ಹೆಣ್ಣ ನಡತೆ ತಪ್ಪಿದ ಹೆಣ್ಣ ತುಡುಗುತೀನಿಯ ತಿಂಬ ಹೆಣ್ಣ (ಪೂಜ್ಯಜ. ೮-೪೦).

[ತುಡುಗು + ತೀನಿ (<ತಿನಿ$_1$)]

**ತುಡುಗುನಾಯ್** (ನಾ). ಕಳ್ಳತನ ಮಾಡುವ ನಾಯಿ : ಒಡೆಯರಿಲ್ಲದ ಮನೆಯ ಹೊಕ್ಕಾ ತುಡುಗುನಾಯ್ ತುಡುಗೊಳಲು ವೀರವೆ (ಕೌಶಿರಾ. ೧೦-೬೯). ‘ತುಡುಗುಣಿನಾಯ್’ ಪರಾ. [ತುಡುಗು + ನಾಯ್]

**ತುಡುಗುಪಶು** (ನಾ). = ತಂಡುಗುಣಿದನ : ಸಡಿಲು ಬಿಟ್ಟಡೆ ಮನಂ ಮನುಜನಂ ಮೂಜಗದೆ ತುಡುಗುಪಶುವಿನ ಕೊರಳ ಗುದ್ದಿಯಂತೆಳದಾಡಿ ಕೆಡಿಸುವದು (ಮಲ್ಲಜ. ೦೩-೯). [ತುಡುಗು + ಪಶು]

**ತುಡುಗುಮೇಯಿಸು** (ಕ್ರಿ). ಕದ್ದು ಮೇಯಿಸು : ಊರ ತುಂಟ ತರುಣರು ತಮ್ಮ ದನಕರುಗಳನ್ನು ಇನ್ನೊಬ್ಬರ ಬಣಬೆಗೆ ನೂಕಿ ತುಡುಗುಮೇಯಿಸಲು ಮರೆಯಲಿಲ್ಲ (ಜಯಂತ. ೨೬೩). [ತುಡುಗು + ಮೇಯಿಸು]

**ತುಡುಗುವ್ಯಾಪಾರ** (ನಾ). ಕಳ್ಳವ್ಯಾಪಾರ : ಅರ್ಥದಾಸೆಗಾಗಿ ಬಡ್ಡಿಯ ತೆಗೆದುಕೊಂಡು ಬಡವರ ಬಂಧನಕಿಕ್ಕಿ ತುಡುಗುವ್ಯಾಪಾರವ ಮಾಡಿ (ವಚಸಂ. ೩೨೨-೦೦೦). [ತುಡುಗು + ವ್ಯಾಪಾರ]

**ತುಡುಗೆ** ‘ತೊಡಂಗೆ’ ನೋ.

**ತುಡುಗೊಳ್** (ಕ್ರಿ). ಕಳ್ಳತನ ಮಾಡು : ಒಡೆಯರಿಲ್ಲದ ಮನೆಯ ಹೊಕ್ಕಾ ತುಡುಗುನಾಯ್ ತುಡುಗೊಳಲು ವೀರವೆ (ಕೌಶಿರಾ. ೧೦-೬೯).

[<ತುಡುಗು + ಕೊಳ್$_1$]

**ತುಡುಜೊಡರ್** (ನಾ). ಹತ್ತಿಸಿರುವ ಸೊಡರು ; ಉರಿಯುತ್ತಿರುವ ದೀಪ : ತುಡುಜೊಡರಜುಗೆಯೆಂಬಿವು ಪಡೆಯವು ಬಿಂದುವನುದಂತ ವೃತ್ತಿಯನಾಳ್ದುಂ (ಶಮದ. ೧೬೦). [ತುಡು$_1$ (<ತೊಡು$_1$)+ಸೊಡರ್]

**ತುಡುತಿನ್** (ಕ್ರಿ). ಕದ್ದು ತಿನ್ನು : ಬಿಡದೆ ಕಳವಿಂದೆ ಲೋಗರ ಮನೆಗಳಂ ಪೊಕ್ಕು ತುಡು[ಪಾಠಾಂ. ಡಿ] ತಿಂದವನ ಭೋಜನಕ್ಕೆ ಮೃಷ್ಟಾನ್ನಮಾದೊಡೆ ಕೆಲಬಲಂಗಳಂ ನೋಡುವನೆ (ಜೈಮಿಭಾ. ೬-೫೩); ತುಡುತಿಂದವಳಿವಳೆನುತ ದೂಟಿಕ್ಕುವರು (ಕೃಷ್ಣಗೋ. ೨-೫); ಕೆನೆಕೆನೆವೊಸರನು ದಿನ ತುಡುತಿಂಬನು (ಪ್ರಸಭಾ. ೦೭-೨೧). [< ತುಡುಗು + ತಿನ್]

**ತುಡುತಿನಿ** (ಗು). ಕದ್ದು ತಿನ್ನುವ : ಯಮನ ಭಟರು ತುಡುತಿನಿ ನಾಯ ಬಡಿವುದಕೆ ಕೋಟಿಮಡಿಯೆನೆ ಬಡಿವರು (ವೀಶೈಪು. ೭-೦೩-೪೬).

[<ತುಡುಗು + - ತಿನಿ$_2$]

**ತುಡುಪು** (ನಾ). ೧. ದೋಣಿ, ಹಡಗು ಮೊದಲಾದುವನ್ನು ನಡೆಸಲು ಉಪಯೋಗಿಸುವ ಹುಟ್ಟು : (ಕ್ರಿ). ೨. ಮರದ ಸವುಟು : (ಕ್ರಿ).

[ದೇ.॥ ತಮಿ. ತುಟುಪ್ಪು ; ಮಲ. ತುಡುಪ್ಪ]

**ತುಡುಬು** 'ತಂಡಂವಂ' ನೋ.

**ತುಡುಬೆ**, ತಂಡಂವೆ (ನಾ). ಒಂದು ಬಗೆಯ ಜೇನುಹುಳು : ನಿನ್ನ ಈ ರೂಪವು ಹೆಜ್ಜೇನು ಕಣ್ಣಿಗೆ ದನಿ ತುಡುಬೆಯ ಜೇನು ಕಿವಿಗೆ (ಚಂದ್ರವೀ. ೧೭೪-೯೩); ಮಲೆನಾಡಿನಲ್ಲಿ ತುಡುಬೇಯ ಜೇನುತುಪ್ಪ ನನಗೆಂದು ತಾಯಿ ಕಳುಹೀದ (ಹಳ್ಳಿಯು. ೯೬). **ತುಡುವೆ** : ಅವಳು ಕಚ್ಚಿಸಿಕೊಂಡೂ ಹೆದರದೆ ಹುತ್ತದಲ್ಲಿದ್ದ ತುಡುವೆ ಜೇನನ್ನು ಕಿತ್ತುಕೊಟ್ಟಿದ್ದಳು (ಮಲಮ. ೧೭೬); ದುಂಬಿ, ಹಸುರುದುಂಬಿ, ತುಡುವೆ, ತೊರಿಗ (ನಮ್ಮನು. ೨೪೦). [ ? ]

**ತುಡುವು**, ತುಡಂಬು (ನಾ). ಒಂದು ಬಗೆಯ ವಾದ್ಯ : ಗಿಡಬಿಡಿ ನುಡಿಯಲೊದಱ ಕಾಳೆ ರಣಭೇರಿ ಬಿಡದೆ ಮೊಳಗೆ ತುಡುವುಗಳ ಗಡಣದ ಗರ್ಜಿತ ಮಸಗೆ ನಿಂದನು ರಾವಂ ಪಡೆಗಿದಿರಾಗಿ (ಕುರಾಸಾಂ. ೪೩-೫೯); ಢಕ್ಕೆ ನಾಟ್ಯಾನಕ ಚಂಪೆ ಕಿಂಕಿಣಿ ಡೌಡೆ ಕುಕ್ಕುರು ತುಡುವು ರಿಂಚಿಯವ . . . ಕೇಳಿಸಿದರು (ಭರತ. ೦೨-೪೦); ಎಲ್ಲಿ ನೋಡಲು ವಾದ್ಯಗಳ ಘಲ್ಲಣೆ ತುಡುವುಗಳಬ್ಬರ ಮೊಱೆದುವಲ್ಲಲ್ಲಿ (ಕಂನವಿ. ೦೭-೪೩); ತುಡಂವುಗಳ್ ದುಂದುಭಿಯು ತೂರ್ಯತ್ರಯಂಗಳಿಂದ್ವೆತಂದು (ಪರಶು. ೮-೨೦). **ತುಡುಬು** : ತುಡುಬು ಬಡಿಯುದೆ ದನಿಯ ಕೊಡುವುದೇನೊ (ದಾಸಪ. ೬). [ ದೇ.॥ ತಮಿ. ತುಟುಮ್ಮು ; ತೆಲು. ತುಡುಮು ]

**ತುಡುರು** 'ತೊಡರ್$_1$' ನೋ.

**ತುಡುವೆ** 'ತುಡಂಬೆ' ನೋ.

**ತುಡುವೊಗು** (ಕ್ರಿ). ತುಡಂಗಿನಿಂದ ಹೊಗು ; ಕಳ್ಳತನದಿಂದ ಪ್ರವೇಶಿಸು : ಕೊಂಕಣದಂತೆಯಲ್ಲಿ ತುಡುವೊಕ್ಕ ತುರುಂಕರ ನೂಂಕಿ . . . ನೀನಪರಶಂಕರನಂತೆಡೆಗೊಂಡೆ ಮಾಧವಾ (ಗಿಳಿವಿಂ. ೫೨-೬).
[ <ತುಡುಗು + ಪೊಗು (<ಪುಗು)]

**ತುಡುಸೆಂಡು** (ನಾ). ಹಿಡಿದುಕೊಳ್ಳುವ ಚೆಂಡು : ತುಡುಸೆಂಡೆಂದು ಮಾರ್ತಂಡಮಂಡಳಕ್ಕೆ ಶುಂಡಾದಂಡವನೆತ್ತಿ . . . ಆಕಾಶವಂ ಬೆರಂಟುವುದು (ಪುಣ್ಯಾಸ್ರ. ೬-೫೦ ವ). [ < ತುಡುಂಕು$_1$ + ಸೆಂಡು ]

**ತುಡೆಚುಳ್ಳಿ** (ನಾ). ಒಂದು ಬಗೆಯ ಮರ ; "ರಬ್ಬರವೃಕ್ಷ" (ಪಂಡಿತ. ೨೨೭) : ಹೊಳೆಚುಳ್ಳಿ, ಮುಳ್ಳಿಚುಳ್ಳಿ, ಹರಿಕುಶ, ತುಡೆಚುಳ್ಳಿ (ಮೃಜಿಗಿ. ೨-೨೪). [ತುಡೆ$_0$ + ಚುಳ್ಳಿ$_1$]

**ತುಡೆಮದರಂಗಿ** (ನಾ). ಒಂದು ಬಗೆಯ ಗಿಡ ; "ವರಂಣ" (ಪಂಡಿತ. ೨೪೪) : ಆದಿರಾಜ . . . ತುಡೆಮದರಂಗಿ, ಹೊನ್ನೆಲೆನಗೆ (ಮೃಜಿಗಿ. ೨೫-೪೬೬). [ತುಡೆ$_0$ + ಮದರಂಗಿ]

**ತುಡ್ಡಿಲ** (ನಾ). (?) : ಅಮ್ಮಗೌಡ ಎಬ್ಬಾಗಿಲ ಸ್ಥಾನೀಕತನ ಮುಕ್ಯವಾಗಿ ನಡ್ಸಿ ತುಡ್ಡಿಲ ಸಮುಟ ತುಪ್ಪಿ ಏನಾದಡೆ ಅಲ್ಲಿ (ಎಕ. XIV, ತಿರುಮ. ೦೪೫-೩ ; 1090). [ ? ]

**ತುಣಗೆಣಸು** (ನಾ). ಒಂದು ಬಗೆಯ ಗೆಣಸು : ತೂನಗೆಣಸು, ಮುಡಿಗೆಣಸು, ನೂರೆಲೆಗೆಣಸು, ತುಣಗೆಣಸು, ದಂಡಾಲು (ಮೃಜಿಗಿ. ೩೦-೫೯೨).
[ ತುಣ$_0$ + ಗೆಣಸು (<ಗೆಟಸು) ]

**ತುಣವ** (ನಾ). ಒಂದು ಬಗೆಯ ವಾದ್ಯ : ಪಟುಪಟಹತುಣವಭಂಭಾಮರ್ದಳೆ ಝಲ್ಲರಿಮುಕುಂದತಾಳಕಾಹಳಶಂಖವಂಶವೀಣಾಸ್ವರಂಗಳೆಸೆಯೆ (ವರ್ಧ್ಮಾರಾ. ೮೩-೨೮). [ < ಪ್ರಾ. ತುಣಯ ]

**ತುಣಿ** (ನಾ). ಒಂದು ಬಗೆಯ ಮರ; ನಂದಿಮರ. [ ಸಂ. ]

**ತುಣುಕು**, ತನಕು, ತುನುಕು (ನಾ). ತುಂಡು ; ಚೂರು; ಖಂಡ ; ಶಕಲ : ರೊಟ್ಟಿಯ ತುಣುಕೊಂದು ಕೈಯೊಳಗಿದ್ದರೆ ನಾಯಿಗಳಾರೇಳು ಬಹವು (ಇಂಪಾಪ. ೦೯೬-೬೮); ಬೆರಳು ಮೂಡಿಸುವಾಗ ಅಲ್ಲಿ ಒಂದು ದಾರದ ತುಣುಕು ಬಿದ್ದಿರಬೇಕು (ಕೃತಕ್ಕೆ. ೦೭೮); ಕನ್ನಡ ಕಾಲದಲ್ಲಿ ನಾಯಿಯು ಬೊಗಳಬಾರದೆಂದು ಅದಕ್ಕೊಂದು ರೊಟ್ಟಿಯ ತುಣುಕನ್ನು ಚೆಲ್ಲಿ (ಯಕ್ಷಪ್ರ. ೩೬). **ತುನಕು** : ಮುನಿಸಿನಿಂ ಪರಶುವಂ ಬೀಸಲ್ಕೆ ಬಾಹುಗಳ್ ತುನಕಾಗಿ ನೆಲಕುದುರ್ದವು (ಪರಶು. ೨೮-೪). **ತುನುಕು** : ಕನಕವನು ಪಂಚಾಳಗೆ ಕೊಡೆ ತುನುಕು ತುನುಕನು ಮಾಡಿ ಕಡಿದೇ ಜಿನಿಸುಜಿನಿಸಿನ ವಡವೆ ಮಾಡಿದ (ಜ್ಞಾನಸಿಂ. ೬-೮).

ತುಣುಕುಬಿಣುಕು= (ಹಾಡಿನಲ್ಲಿ) ಕೆಲವೊಂದು ಭಾಗ: ಭತ್ತಕುಟ್ಟುವಾಗ, ಹೆಣ್ಣುಮಕ್ಕಳು, ಕಲಹುಂಕಾರಸಹಿತವಾಗಿ ಗಮಕದ ತುಣುಕುಬಿಣುಕಿನಿಂದ ಹಿತವಾಗಿ ... ಪದ್ಯ ಹೇಳುತ್ತಿದ್ದರಂತೆ (ಮಸಾಹಿ. ೦೨). ತುಣುಕುಮಿಣುಕು = ಅತ್ಯಲ್ಪ ; ಅಲ್ಪಸ್ವಲ್ಪ : ಅವನ ವಿಷಯವಾಗಿ ಪ್ರಸಿದ್ಧಮಾಡಿದ ತುಣುಕುಮಿಣುಕು ಮಾಹಿತಿಯಿಂದಲೇ ನಮ್ಮ ದಾಹವನ್ನು ಹಿಂಗಿಸಿಕೊಳ್ಳಬೇಕಾಗುವುದು (ಪ್ರಬಂಧ. ೦೦೦).
[ ದೇ.॥ ತಮಿ. ತುಣುಕ್ಕು, ತುಣುಕ್ಕೈ, ತುಣಿಕ್ಕೈ ; ತೆಲು. ತುನುಕ, ತುನಕ, ತುನ್ಕ ; ನಾಯ್ಕಿ. ತುನ್ಕ್ ]

**ತುಣ್ಣೆ** 'ತುಣ್ಣೆ' ನೋ.

**ತುಣ್ಣೆ**, ತಂಣ್ಣೆ (ನಾ). ಗಂಡಸಿನ ಜನನೇಂದ್ರಿಯ ; ಶಿಶ್ನ : ಅವನ ಬಾಯಿಗೆ ಸುರಾಪಾನ ಕತ್ತೆ ತುಂಣೆ (ಸೌಇಇ. IX-ii, ೫೦೩-೫೫ ; 1521). **ತುಣ್ಣೆ** : ಕತ್ತೆ ತುಂಣೆಯ ತಾನು ತಂನ ಹೆಂಡತಿಯುಂ ತಾಯಿ ತಂದೆಯು ತಿಂದವರು (ಸೌಇಇ. IX-i, ೩೬೬-೨೩ ; 1225) : ಇದಕೆ ಅಣಿಪಿದವನು ಕತ್ತೆಯ ತುಂಣೆಯನು ಕಲುಪ್ಪನು ತಿಂದ ನಾಯಿದರ ಕಸಿಗೆ ಆಸೆ ಮಡಿದವ (ಮೈಆರಿ. ೦೯೩೦, ೨೩-೦೩ ; 1519).
[ದೇ. ॥ ತಮಿ. ಚುಣ್ಣಿ ; ಮಲ. ಕುಣ್ಣೆ, ಚುಣ್ಣಿ ; ತುಳು. ತುಣ್ಣೆ ; ತೆಲು. ಚುಲ್ಲಿ, ಚುಲ್ಲ]

**ತುಣ್ತುಣಿ** 'ತುಂತುಣಿ' ನೋ.

**ತುತಿ** (ನಾ). ಹೊಗಳಿಕೆ ; ಪ್ರಶಂಸೆ ; ಸ್ತೋತ್ರ : ಸ್ತುತಿ—ತುತಿ (ಶಮದ. ೨೭೨ ಪ್ರಯೋ) : ಪುಷ್ಪಸರನ ರಾಣಿಗೆ ಮೆಯ್ಯೊಡವನುವೊಪ್ಪಿಸಿ ತುತಿಯ ಮಾಡಿದರು (ಮೋಹತ. ೦೭-೪೩) ; ಮುರಹರನ ಸನಿಯದಲಿ ಪಾರ್ಥನು . . . ಉರುತರದ ತುತಿಯಿಂದ ಪೊಗಳುತ (ಕೋಗಯ. ೨೭-೯೦).
[ <ಸಂ. ಸ್ತುತಿ ]

**ತುತಿಗೆಯ್ಯು** (ಕ್ರಿ). = ತುತಿಸಂ : ತ್ರಿಣಯನ ಸಭಾಂಗಣದೊಳು ಭಕ್ತಿ ರಕ್ತಿಯಿಂ ತುತಿಗೆಯ್ಯುತ್ತಿಯಿಂದ (ನಂದಿಮಾ. ೫-೩೬).
[ ತುತಿ + ಗೆಯ್ಯು (<ಕೆಯ್$_1$) ]

**ತುತಿಯಿಸು** 'ತುತಿಸು' ನೋ.

**ತುತಿಸು**, ತಂತಿಯಿಸಂ (ಕ್ರಿ). ಹೊಗಳಂ ; ಸ್ತೋತ್ರಮಾಡಂ ; ಪ್ರಶಂಸಿಸಂ : ತುತಿಸುವ ಪುಣ್ಯಪಾಠಕರೊಳೊಪ್ಪುತಂ (ನಂಬಿರ. ೩-೬೬) : ತ್ರಿಕರಣಂಗಳಿಂ ನಂಬಿ ದೃಢಭಕ್ತಿಯಿಂ ತಾಂ ತುತಿಸುತ (ಪದ್ಮರಾ. ೦೦-೬೪) ; ಮುನಿಪನ ಚರಣಗಳನು ತುತಿಸಿದನು (ಚಂಪ್ರಸಾಂ. ೬-೪೭) ; ಬಗೆವಗೆಯೊಳ್ ತುತಿಸುತುಮಡಿಗೆಱಗಿದಂ (ರಾಮಾಶ್ವ. ೬೨-೦೪). **ತುತಿಯಿಸು** : ತುತಿಯಿಸಿ ಪೊಡೆವಟ್ಟು (ಪಂಚತಂ. ೨೭೨-೨೨) ; ದುರ್ಜನರಂ ದೂಷಿಸಿ ನೀತಿನಿಪುಣರೆನಿಸುವ ಸಜ್ಜನರಂ ಪ್ರೀತಿ ಮಿಗಲು ತುತಿಯಿಸಿ (ಜಯಕಾ. ೧-೨೩).
[ ತುತಿ + – ಇಸು$_3$ ]

**ತುತೂರಿ** 'ತಿತ್ತಿರಿ$_1$' ನೋ.

**ತುತ್ತ**, ತಂತ್ತಿ$_2$, ತುತ್ತು$_3$, ತಂತ್ತೆ (ನಾ). ಒಂದು ಬಗೆಯ ರಾಸಾಯನಿಕ ವಸ್ತು ; ಮೈಲುತುತ್ತ ; ಗಂಧಕಾವಮ್ಲ : "ತುತ್ತಂ—ಪಾಷಾಣಭೇದಂ" (ಕಾಶಕ್ಕ. ೨೦೨) ; "ಮಯೂರಗ್ರೀವಃ—ತುತ್ತ" (ಒಷಧಿ. ೦೨೨) : ತುತ್ತವನ್ನು ಕರಿಹುರಳಿಯ ರಸದಿಂದ ಕುಡಿಯಲು ಗರ್ಭನಾಶ (ವಿವೈವಿ. ೦೦೯). **ತುತ್ತಿ$_2$** : "ಕೂಪಾರೋದಿತಂ ತುತ್ತಿ [ಪಾಠಾಂ. ತೆ]" (ಮಂಗರಾ ೪೩-೪೨). **ತುತ್ತು$_3$** : (೬). **ತುತ್ತೆ** : (೬). [ < ಸಂ. ತುತ್ಥ ]

**ತುತ್ತರಾಟು** (ನಾ). ಅಭದ್ರವಾಗಿರುವುದು ; ಅಸ್ಥಿರವಾಗಿರುವುದು : ತಾನು ತುತ್ತರಾಟನ ಮೇಲೆ ಕೂತಿದ್ದ ಬಂಡೆಯಿಂದ ಉರುಳುವುದನ್ನು ಹೇಗೋ ತಡೆದುಕೊಂಡು (ಮಲಮ. ೨೦೨). [?]

**ತುತ್ತಲ್** (ನಾ). ಪ್ರಾಕಾರ; ಸುತ್ತುಗೋಡೆ: ಬಟಲ್ದ ಮದಿಲಂ ಮಣ್ಗೊಂಡ ತುತ್ತಲ್ಗಳಿಟ್ಟೆಡೆಯಂ ಬಿಟ್ಟಚಿಡೇಗುಲಂಗಳೆಡೆಯಂ ಕಾದಿರ್ಪ ಪಾಣ್ಬರ್ಕಳುಂ (ಸೂಕ್ತಿಸು. ೮-೦೩೫). [←ತಮಿ. ಚುಟ್ಟು]

**ತುತ್ತಾರಿ** 'ತಿತ್ತಿರಿ$_1$' ನೋ.

**ತುತ್ತಿ$_1$** (ನಾ). ಒಂದು ಬಗೆಯ ಗಿಡ : "ತುತ್ತ–ತುತ್ತಿ, ತುರುವೆ" (ಒಷಧಿ. ೭೦); ಶ್ರೀಮುದ್ರೆಗಿಡ, ತುತ್ತಿ, ಕಿಸಂಗಿ, ತುರುಬೀಗಿಡ, ಗಿಡುತಿಂಗಿ (ಮೃಜಿಗಿ. ೧-೬). [ದೇ.॥ ತಮಿ. ಮಲ. ತೆಲು. ತುತ್ತಿ]

**ತುತ್ತಿ$_2$** 'ತಂತ್ರ' ನೋ.

**ತುತ್ತಿಕ್ಕು** (ಕ್ರಿ). ಆಹಾರವನ್ನು ಕೊಡು ; ಅನ್ನ ಹಾಕು : ಜೈನರ ತತಿಯ ನೀರ್ಕೆದುವಾಸರಂ ತುತ್ತಿಕ್ಕದರಿದಿಜಿದೆ (ಮದೇಪು. ೨೫-೬). [ತುತ್ತು$_2$ + ಇಕ್ಕು]

**ತುತ್ತಿಡು** (ಕ್ರಿ). ೧. ತುತ್ತುಮಾಡಿ ನುಂಗು; ಕಬಳಿಸು; ತಿನ್ನು; ಉಣ್ಣು : ತುತ್ತಿಡದ ಮುನ್ನ ಪ್ರಾಣ್ಯಂಗಮಂ ಕಂಡೊಡಾ ಅಶನಮಂ ಬಿಟ್ಟು ಮತ್ತೊಂದಶನಮನುಣ್ಗೆ (ಪಸಾರ. ೩೩೩) ; ಭವಿಯ ಮನೆಯಲ್ಲಿ ಹೊಕ್ಕು ತುತ್ತಿಡುವ ನರಕಿ ಜೀವಿಗಳಿಗೊಲಿವನೇ ನಮ್ಮ ಶಂಭುಜಕ್ಕೇಶ್ವರ (ಗಣಭಾ. ೦೬೦-೫). ೨. ತಂತ್ರ ನೀಡು ; ಉಣಿಸು ; ಹರಿಸರಿದು ತು [ಪಾಠಾಂ. ಸು] ತ್ತಿಟ್ಟ ಕುಣಿವುತಿರ್ಪರ್ ಕೆಲರು (ಬಸರ. ೭-೦೬೦) ; ದಾನಂ ದ್ರವ್ಯವೆಂಬ ಬೀಜವ ನಾತ್ಮಗಂ ತುತ್ತಿಡಲುವಾ ಧರ್ಮವೆಂಬ ಬೆಳೆಯುಂಬುದಕೆ ಸತ್ತು ಮಗುಳ್ದುಂ ದೇಹವೆತ್ತಿ ಬಂದು (ಪ್ರಭುಪು. ೭-೨೦೧). ೩.(ಅಲಂ) ನಾಶಮಾಡು ; ಪರಾಜಯಗೊಳಿಸು ; ಅಡಗಿಸು : ಅವಷ್ಟಂಭದಿಂ ತೂಗಿದ ಬಾಳ್...ಉಗ್ಗಡದ ಬಿರುದರಂ ತೂಗಿ ತುತ್ತಿಟ್ಟುದೇಂ (ಎಕ. VI, ತರೀಕೆ. ೪೫-೪೦; 1196). [ತುತ್ತು$_2$ + ಇಡು$_1$]

**ತುತ್ತಿದ** (ನಾ). ಜಾಣ ; ಪ್ರೌಢ : "ಬಿತ್ತಗಂ=ತುತ್ತಿದಂ" (ಶಮುದ. ಪರಿ. ೨); "ಬಿತ್ತಗನೆನಲ್ ತುತ್ತಿದು ಪ್ರೌಢನುಂ" (ಕಬ್ಬಿಕ್ಕೆ. ೮೦). [?]

**ತುತ್ತಿಸು** (ಕ್ರಿ). ೧. ನುಂಗು ; ಕಬಳಿಸು : ಬಳಿಕ ತುತ್ತಿಸಿದ ರಾಹು ತೊಲಗಿದ ಶಶಿವೊಲಿರ್ದನವನು (ಜೈಮಿಭಾ. ೨೮-೩೪). ೨. ಊಟ ಮಾಡಿಸು ; ಉಣಿಸು ; ತಿನ್ನಿಸು : ಕಜ್ಜಾಯ ತುಪ್ಪ ಸಕ್ಕರೆಯ ಕೊಜ್ಜೆಯರಿಗೆ ಮೆಲ್ಲಿಸುತೆ ಮಿಕ್ಕುದ ಬಾಗಿಲಜ್ಜಿಯರಿಗೆ ತುತ್ತಿಸಿದ (ಮೋಹತ. ೧೮-೧೯) ; ಮಾರೀಚನಂ ಮಾರಿಗೆ ತುತ್ತಿಸಿ (ರಾಮಾಶ್ವ. ೧೨೦-೨). [ತುತ್ತು$_1$ + – ಇಸು$_3$]

**ತುತ್ತು$_1$** (ಕ್ರಿ). ೧. ತಿನ್ನು ; ನುಂಗು ; ಕಬಳಿಸು : "ತುತ್ತು–ಕಬಲನೇ" (ಶಮುಧಾ) ; ಅಂತು ತನ್ನ ತಂದ ಬಂಡಿಯ ಕೂಟಿಲ್ಲಮಂ ಪತ್ತೆಂಟು ತುತ್ತಿನೊಳೆ ಸಮೆಯೆ ತುತ್ತುವುದಂ ಕಂಡು (ಪಂಪಭಾ. ೩-೨೯ವ) ; ಪಗೆಯ ಬೆನ್ನಂ ಪತ್ತುವೆನೊ ದಿಶಾಗಜಂಗಳಂ ತುತ್ತುವೆನೋ (ಗದಾಯು. ೬-೦೮) ; ತವೆ ದಿಕ್ಕುಂಡಾಲಮಂ ತುತ್ತುವ ದಶದಿಶೆಯಂ ಸುತ್ತುವಾಕಾಶಮಂ ಮುತ್ತುವ ... ಅಗುರ್ವಂ ತೋಱುದಪ್ಪೆಂ (ಜಗವಿ. ೦೩-೩೮) ; ಕೋಟಿ ಮುಖದಲಿ ನೀಡಿದೆಲ್ಲವನು ತುಂಬಿ ತುತ್ತಿದ ಹೊಟ್ಟೆ (ಪ್ರಭುಲೀ. ೨೩-೨೭). ೨. (ಅಲಂ) ನಾಶಮಾಡು : ಅಡಗಿಸು ; ಪರಾಜಯಗೊಳಿಸು : ಧಾಳಿಯಿಟ್ಟಂ ಪರಿಯಿಟ್ಟಂ ಮುತ್ತಿದಂ ತೋಟ್ಟುಳಿದುಳಿದನಡಂಗೊತ್ತಿದಂ ತುತ್ತಿದಂ (ಎಕ. VII, ಶಿಕಾರಿ. ೧೧೧-೧೨ ; ಸು. 1070) ; ಧುರದೊಳ್ ಬಂದಿದಿರೊಡ್ಡೆ ಕಂಸಹರನೊಡ್ಡಂ ತುತ್ತುವೆಂ ತುತ್ತುವೆಂ (ಜಗವಿ. ೬-೩೭) ; ಹತ್ತಿದರಂದು ಕಾಲವರಾ ದುರ್ಗವ ತುತ್ತುವಂತೇನ ಬಣ್ಣಿಪೆನು (ಕುರಾಸಾಂ. ೩೯-೦೫) ; ಮೃಡಲೋಚನಂಗಳಿಂದೊಗೆದ ಹರುಷಾಶ್ರುಜಲಂ...ತು [ಪಾಠಾಂ. ಕು]ತ್ತಿದುದು ಸಕಲಲೋಕಂಗಳಂ ತಿಂಗಳಂ ಪೊತ್ತವಂ ಬೆಱಗಾಗಲು (ಚೆಬಪು. ೧೬-೨೯); ಸಾವಿನ ನೋವಿಗೆ ಕಲಮಲವೆದ್ದು ನೆಲವನ್ನೆಲ್ಲಾ ತುತ್ತುವೆನೆಂದು ಗದರುತ್ತಿಹುದು (ಗರಿ. ೬೧-೧೧). [ದೇ.॥ ತಮಿ. ತುಟ್ಟು]

**ತುತ್ತು$_2$** (ನಾ). ೧. ಒಂದು ಸಲಕ್ಕೆ ನುಂಗುವಷ್ಟು ಆಹಾರ ; ಕವಳ ; ಗ್ರಾಸ : "ಗ್ರಾಸಂ ಕಬಳಂ ತುತ್ತು" (ವಸ್ತುಕೋ. ೯೩-೮) : "ಕಬಳಮಾಹುತಿಯೆನಲ್ ತುತ್ತೆನಿಕ್ಕುಂ" (ಮಂಗರಾ. ೬೫-೭) ; ತನ್ನ ಕೆಯ್ಯ ತುತ್ತನರಸಂ ವಿಷಮಿಶ್ರಮೆಂದಱಿಯದೆ ಕೊಟ್ಟಂ (ವಡ್ಡಾರಾ. ೦೯೦-೨) ; ಅಂತು ತನ್ನ ತಂದ ಬಂಡಿಯ ಕೂಟಿಲ್ಲಮಂ ಪತ್ತೆಂಟು ತುತ್ತಿನೊಳೆ ಸಮೆಯೆ ತುತ್ತುವುದಂ ಕಂಡು (ಪಂಪಭಾ. ೩-೨೯ ವ) ; ತುತ್ತಿಗೊಮ್ಮೆ ಶಿವಶರಣೆನುತ್ತಿರಬೇಕು (ಬಸವ. ೭೮೭) ; ಚಿತ್ರವಲರಿಸಿ ತೋರ ತೋರದ ತುತ್ತುಗಳ ನೊಡನೊಡನೆ ತಾ ಮಾಡುತ್ತ (ಬಸಪು. ೮-೦೫); ಹಾಗೆಯೇ ಮಲಗಬಾರದು...ಎರಡು ತುತ್ತಾದರೂ ಉಂಡು ಬಾ (ತ್ಯಾಗಮು.೯೦); ಕೈಗೆ ಬಂದ ತುತ್ತು ಬಾಯಿಗಿಲ್ಲ (ಗಾದೆ). ೨. ಆಹಾರ; ಊಟ : ಹೊತ್ತು ಹೋಗದ ಮುನ್ನ ತನುವಿನ ತುತ್ತ ನೀಡುವೆ ಗುರುವಿಗೆ (ಪ್ರಭುಲೀ. ೨೩-೪೭): ಹೊತ್ತಿ ಹೊಗೆವ ಪರಾಕ್ರಮವಾಗ್ನಿಯ ತುತ್ತು ಪದ್ಮವ್ಯೂಹ (ಕುಮ್ಯಾದ್ರೋ. ೪-೪೫) ; ಜನಕ್ಕೆ ದುಡಿಮೆಯೂ ಇದೆ. ಹಾಗೇ ತುತ್ತು, ಅಭಿವೃದ್ಧಿಗೆ ಅವಕಾಶ ಎರಡೂ ಬೇಕಾದಷ್ಟಿದೆ (ಮುನಿಮಾ. ೨೩). ೩. ಸಾಧ್ಯವಾದುದು ; ದಕ್ಕುವ ವಸ್ತು : ಅಣಕವಾಡು ಎಲ್ಲರ ತುತ್ತು ಅಲ್ಲ ; ಸಾಮಾನ್ಯರ ತುತ್ತೂ ಅಲ್ಲ (ನಿರಾಭ. ೧೨ ಮುನ್ನುಡಿ). ೪. (ಅಲಂ) ಅನುಭವ: ದುಃಖ, ನಿರಾಶೆ, ಸೋಲು, ಕಷ್ಟ-ಇವು ನಮ್ಮ ಬಾಳಿನ ನಿತ್ಯದ ತುತ್ತುಗಳಾದವು (ಮುಂಗಾಮು. ೧೭).

**ತುತ್ತಾಗು** = ೧. ಆಹಾರವಾಗು ; ಬಲಿಯಾಗು : ಇಲ್ಲಿ ಕಾಳೋರಗಂಗಳ್ಗೆ ತುತ್ತಾದಂ (ರಾಮಾಶ್ವ. ೦೧೬-೨೮). ೨. ಈಡಾಗು ; ವಶವಾಗು ; ಅಧೀನವಾಗು : 'ರಾಮಾನುಜನ್' ಅಲ್ಲಿಯೇ ಕ್ಷಯರೋಗಕ್ಕೆ ತುತ್ತಾದುದರಿಂದ, ಆತನ ಸೇವೆ ... ಸಹನಿಯ ಪಾಲಿಗೆ ಬಿತ್ತು (ಸಸ್ಮಕ. ೦೩೦). **ತುತ್ತಿನ ಚೀಲ**=ಹೊಟ್ಟೆ; ಉದರ: ಸಾಲವನು ಮಾಡುವದು ಹೇಲ ತಾ ಬಳಿಸುವದು ಕಾಲಿನ ಕೆಳಗೆ ಹಾಕುವುದು ತುತ್ತಿನ ಚೀಲ ನೋಡಯ್ಯ (ಸರ್ವಜ್ಞ. ೧೯೮೨); ಬರಿದೋ ಬರಿದು ಬಡವರ ಬಗ್ಗರ ತುತ್ತಿನ ಚೀಲ (ಗರಿ. ೬೦-೦೭) ; ತೋಟದಲ್ಲಿ ದುಡಿದು ಸಿಗುವ ಕೂಲಿಯಿಂದ ಈ ದಂಪತಿಗಳು ತಮ್ಮ ತುತ್ತಿನ ಚೀಲಗಳನ್ನು ತುಂಬಿಸಿಕೊಳ್ಳುತ್ತಿದ್ದರು (ನವನೀ. ೨೦). **ತುತ್ತು ಹಾಕು**=೧. ಊಟಕ್ಕೆ ಹಾಕು. ೨. ತುತ್ತು ಮಾಡಿ ಕೈಗೆ ಹಾಕು : ಮದುಮಕ್ಕಳಾಟವೆಂದು ಅಡಿಕೆ ಹಿಡಿಯುವುದು, ತುತ್ತು ಹಾಕುವುದು ಮುಂತಾದ ವಿನೋದ ಪ್ರಸಂಗಗಳು (ಸ್ಮೃತಿಚಿ. ೨೫). [<ತುತ್ತು$_1$./ತಮಿ. ತುಟ್ಟು]

**ತುತ್ತು$_3$** 'ತುತ್ತ' ನೋ.

**ತುತ್ತುಗೂಳ್** (ನಾ). ನುಂಗುವ ಅನ್ನ ; ತಿನ್ನುವ ಆಹಾರ : ನಿನ್ನ ಮೆಯ್ಯಿದನೆಂತು ಪೇಳೆ ಕಾಂತಾರರಾಕ್ಷಸಿಗೆ ತುತ್ತುಗೂಳ್ ಕೊಡಲಿ ? (ಶ್ರೀರಾಮಾ. ೭೯-೫೦). [ತುತ್ತು$_1$ + ಕೂಳ್ (<ಕೂಟ್$_1$)]

**ತುತ್ತುಗೆಯ್ಯು** (ಕ್ರಿ). ಊಟ ಮಾಡು ; ಆಹಾರವನ್ನು ಸ್ವೀಕರಿಸು ; ಭುಂಜಿಸು : ಸವಿಯೂಟಕ್ಕೆ ಮನವಿಟ್ಟು ತುತ್ತುಗೆಯ್ಯುತ್ತಿರ್ದ ಲೋಚನ ನಿಮಾಲನಾಗಿ (ವೀಶೈಪು. ೩-೪-೨೦). [ತುತ್ತು$_2$ + ಗೆಯ್ಯು (<ಕೆಯ್$_1$)]

**ತುತ್ತುಗೊಳ್, ತಂತ್ರುಗೊಳ್ಳು** (ಕ್ರಿ). ೧. =ತುತ್ತುಗೆಯ್ಯು : ತುತ್ತುಗೊಂಬುದೆನುತ್ತ ಕೈವೀಸಿದಳು ಕಿಲಬಲಕೆ (ನಿಭಾಗ. ೫-೬-೩೨) ; ಪಣ್ಣಿಡಿದ ಬಿತ್ತರದ ಪೊಲಗಳನ್ ರೌದ್ರದಂಷ್ಟ್ರಂಗಳಿನ್ ತುತ್ತುಗೊಂಡಟ್ಟಾಡೆ (ಬದ್ರಪ್ರ.೨೦-೪೨೫). ೨. (ಅಲಂ)ನಾಶಮಾಡು; ಧ್ವಂಸಗೊಳಿಸು: ನಾಡ ಪಡೆಯಂ ತುತ್ತುಗೊಂಬ ಲಂಬೋದರಿಯನುಳಿದಸುರಿಯರ ಕೃತ್ಯವ ನೋಡಿ (ಜೈಮಿಭಾ. ೦೭-೪೪). **ತುತ್ತುಗೊಳ್ಳು** : ೨. ತುತ್ತಿನ ಚೀಲದಲ್ಲಿ ವಿಶ್ವವನ್ನೇ ತುತ್ತುಗೊಳ್ಳಲು ಹೊಂಚುತ್ತಿರುವ ಬಡಬಗ್ಗರ ಹಸಿವೆಯ ಭೀಷಣ ಗರ್ಜನೆಯಿದೆ (ಸಮಾಲೋ. ೨೮). [ತುತ್ತು$_2$ + ಕೊಳ್$_1$]

**ತುತ್ತುಗೊಳ್ಳು** 'ತುತ್ತುಗೊಳ್' ನೋ.

**ತುತ್ತುರಿ** 'ತಿತ್ತಿರಿ$_1$' ನೋ.

**ತುತ್ತುಱಿಂ** (ಅ). ಅತಿಶಯಂವಾಗಿ ; ವಿಶೇಷವಾಗಿ : ತೆಱೆಯೆ ವಿಮಾನ ವರ್ಗಧರರೀ ಪ್ರಕರಂ ನವಸಾರಸೌರಭಂ ಪೊಱಮಡೆ ಚೀನದೊಳ್ಗುಡಿಗಳಗ್ರ ವಿಯತ್ತಳದಲ್ಲಿ ತುತ್ತುಱಿಂದುಱುಗೆ (ಮಹಾನೇ. ೨-೪೭). [< ತುಱುಗು$_1$]

**ತುತ್ತೂರಿ** 'ತಿತ್ತಿರಿ$_1$' ನೋ.

**ತುತ್ತೆ** 'ತುತ್ತ' ನೋ.

**ತುತ್ಥ** (ನಾ). ೧. ಮೈಲುತುತ್ತ ; ಗಂಧಕಾಮ್ಲ : ತಾಳಕ, ತುತ್ಥ ... ಇವಿಷ್ಟನು ಸಮಾಂಶವಾಗಿ ಎಮ್ಮೆಯ ಹಾಲಿಂದ ಮರ್ದಿಸಿ ಏಳುದಿನ ಮುಖಕ್ಕೆ ಲೇಪವಂ ಮಾಡಲು ಮುಖದ ಕಪ್ಪು ತಿಳಿವದು (ವೈದ್ಯಸಾ. II, ೦೪೭). ೨. ಕಲ್ಲು ; ಶಿಲೆ. [ಸಂ.]

**ತುತ್ಥೆ** (ನಾ). ೧. ನೀಲಿಗಿಡ. ೨. ಸಣ್ಣ ಏಲಕ್ಕಿ. [ಸಂ. ತುತ್ಥಾ]

**ತುತ್ಯ** (ನಾ). = ತಂತ್ಥ೧: ನೆಲದೊಳಗೆ ಸಂಬಳಕಾರ, ತುತ್ಯ... ಮುಂತಾದ ವಿಷರೂಪ ಕ್ಷಾರಾದಿಗಳಿರುತ್ತವೆ (ಮುಂಬಯಿ. ೫-೦೫೭) ; ಉಪ್ಪು, ಸೈಂಧವ ಲವಣ, ಸೋರುಪ್ಪು, ನವಸಾಗರ, ತುತ್ಯ ಇವೆಲ್ಲ ಲವಣಜಾತಿಗಳಿವೆ (ಮುಂಬಯಿ. ೬-೩೭).

[← ಮರಾ. ತುತಿಯಾ ; ಹಿಂ. ತೂತಿಯಾ./ಸಂ. ತುತ್ಥಕ]

**ತುದಾ** (ಅ). ಅಥವಾ ; ಇಲ್ಲವೆ : ಎರಡು ಗಳಿಗೆ ತುದಾ ಮೂರು ಗಳಿಗೆ ಇವರನ್ನ ನಾ ತಡೀತೀನಿ (ಜಿಕರಾ. ೪೭೦). [?]

**ತುದಿ** (ನಾ). ೧. ಅಗ್ರ ; ಮೇಲ್ಭಾಗ ; ಶಿಖರ : "ಶಿಖರಮೆನಲಗ್ರಮೆನೆ ತುದಿಯೆನಿಕ್ಕುಂ" (ಮಂಗರಾ. ೩೨-೨) ; ಗಿಡುಗಂ ತಂದತ್ತೊ ಮೇಣ್ ಪೆರ್ಮರನ ತುದಿಯಿನೇಱೆ ಬಿರ್ದುದೊ (ಕಾದಂಪೂ. ೨೦೦) ; ಕೊರ್ಬಿ ಬೆಳೆದ ಪೆರ್ಬಿದಿರ ತುದಿ ತಾಗಿ ತಱಿದ ಕಿಱುಮುಗಿಲ್ಗಳಿಂದವನೀತಳಕ್ಕಾಲಿಕಲ್ಲೊಕ್ಕು ಚೆಲ್ಲಿದಂತಿರ್ಪ ಮುಕ್ತಾಫಲಗಳಂ ವಂಶತಂಡುಲಂ ಗೆತ್ತು (ಗಿರಿಕ. ೧-೦೨೮ ವ); ನಡುಗುವ ತನುವಲ್ಲಿಯ ತುದಿಯಿಂ ಪೊಡೆಗೊಡನುದಿರ್ವಲರಂದದಲಿ (ಶಂಶವಿ. ೦೦-೩೭). ೨. ಕಡೆ ; ಅಂತ್ಯ ; ಕೊನೆ : "ಅಂತ್ಯಮಂತಿಮಮಗ್ರ್ಯಮಗ್ರಿಮಂ ತುದಿಯಕ್ಕು" (ಮಂಗರಾ. ೦೩೫-೩೭) ; ನಿಲಿಸಿ ಲಘುಪದಮನದ ನಗ್ಗಲಿಸಿರೆ ಮತ್ತೊತ್ತಿ ಬರ್ಪ ಪದವಂ ತುದಿಯೊಳ್ ನಿಲೆ...ಅಸುಖಕರಂ (ಕವಿರಾ. ೨-೬) ; ಕೈದವವಿಲ್ಲದೆ ನಲ್ಮೆಯಿಂ ನಾಲಗೆಯ ತುದಿಗೆ ತಂದು ನುಡಿದಳ್ (ಪಂಪಭಾ. ೧೦-೪೫ ವ) ; ಸಮ್ಯಕ್ತ್ವಮಾರ್ಗಮಂ...ಕೈಕೊಳ್ ನಿನಗದು ತುದಿಯೊಳ್ ಮಾಡುಗುಮನಂತಮುಕ್ತಿಶ್ರೀಯಂ (ಸುಕುಮಾ. ೫-೩೮) ; ಹುಬ್ಬುಗಳನುಱೆ ಬಿಗಿದೌಡನೊಡೆಯೊತ್ತಿ ಬೆರಳ ತುದಿಯಲಿ ಬೊಬ್ಬಿಱಿದು ಹರಿಶರಕೆ ಕೈನೀಡಿದನು (ಕುಮಾರವ್ಯಾ. ೧೯-೦೩); ತುದಿಯಲ್ಲಿ ಕಾಣುವುದು ಮದುವೆ ಗುಣ (ಗಾದೆ). ೩. ಕೊನೆಯ ಮಟ್ಟ ; ಪರಾಕಾಷ್ಠೆ : ಅಂತು ಕೈತವವಿಲ್ಲದೆ ವಿಧೇಯತ್ವದ ತುದಿಯನೆಯ್ದೆ (ಶಾಂತಿಪು. ೧೦-೫೫ ವ). ೪. ಗುರಿ; ಉದ್ದೇಶ : ಕಜ್ಜದ ತುದಿಯನಱಿಯದೆ ನುಡಿವುದಿದು ನಿನಗೆ ಹಿರಿಯತನವೇ (ಬಸವಪು. ೨೮-೩೪).

ತುಟ್ಟ ತುದಿ, ತುತ್ತ ತುದಿ (ದ್ವಿರುಕ್ತಿ)=೧. ಕೊಟ್ಟಕೊನೆ ; ಕಟ್ಟಕಡೆ : ಮಾರ್ಕೆಟಿನ ತುಟ್ಟ ತುದಿಗೆ ಬಂದರು (ಹೂಬಿಸಿ. ೩) ; ಅಂತರಿಕ್ಷದ ತುಟ್ಟ ತುದಿಗೆ ಕೂಡ ಹಾರಿ (ಜ್ಯೋತಿರ್ವಿ. ೪). ೨. ಬಹಳ ಎತ್ತರ : ಮರದ ತುತ್ತ ತುದಿಯೊಳಿರ್ದೆಟಿಲ್ವ ಗುಂಡಿಗೆಯಂ ಕಂಡು (ವಡ್ಡಾರಾ. ೬೧-೦೨) ; ತುತ್ತ ತುದಿಯ ಮೇಲೆ ನಿಂದು ನೋಡುವವನ್ನಕ್ಕ ನಾನೆತ್ತ ಹೋದೆನೆಂದಱಿಯೆ ನಯ್ಯಾ (ಲಿಂಗವ. ೮೩-೯೫). ೩. ತೀರ ಕೊನೆ ; ಅಂತಿಮಾವಸ್ಥೆ : ಪತಿಭವದೊಂದು ತುತ್ತ ತುದಿ ಕೃಷ್ಣೆಯ ಬನ್ನದೊಳಾಗೆ (ಪಂಪಭಾ. ೮-೮೩); ಸಕಲೇಂದ್ರಿಯಂಗಳ ಸಂತೋಷದ ತುತ್ತತುದಿಯನೆಯ್ದಿಸುವುದು ಕಾಮವೆಂಬುದು ತಾತ್ಪರ್ಯಂ (ನೀತಿವಾ. ೩-೦); ತುದಿ ಮೊದಲೆಂಬ ದಕಾರಕ್ಕುದಯಿಸುಗುಂ ದ್ವಿತ್ವವೃತ್ತಿಯಿಂದೆ ತಕಾರಂ ... ತುತ್ತತುದಿ, ಮೊತ್ತಮೊದಲ್ (ಶಮದ. ೦೯೮ಪ್ರಯೋ.). ೪. ಶ್ರೇಷ್ಠತೆ; ಸರ್ವೋಚ್ಚತೆ : ಆ ನೃಪನುದಾತ್ತ ಗುಣಗಣರ ತುತ್ತ ತುದಿಯೊಳನೂನಂ (ಶಾಂತಿಪು. ೧-೬೦). **ತುದಿಗೆ ಬರು** = ತುದಿಗೆಯ್ದು ೧: ಎಲ್ಲಾ ತುದಿಗೆ ಬಂತಲ್ಲ, ಇನ್ನೇನು? (ರೂಢಿ). **ತುದಿಗೆಯ್ದು** = ೧. ಕೊನೆಮುಟ್ಟು; ಸಮಾಪ್ತವಾಗು : ತುದಿಗೆಯ್ದ [ಪಾಠಾಂ. ಗೈದ] ದುದಂ ಫಲಮಿಲ್ಲದುದಂ...ಕಾರ್ಯಮನುದಾರಮತಿ ನೆಗಳ್ದಪನೇ (ರಾಜಶೇ. ೧೩-೧೨). ೨. ಅತ್ಯಧಿಕವಾಗು : ಭೀತಿಗದ್ಗದಕಂಠಂ ತುದಿಗೆಯ್ದೆ ಬಿನ್ನವಿಸಿದಂ ವಾಕ್ಯೋವಿದಂ ಸೌವಿದಂ (ಶಾಂತಿಪು. ೩-೬೫). **ತುದಿಗೇಱು** = ತುದಿಗೆಯ್ದು ೨ : ತ್ವರಿತಂ ತುದಿಗೇಱೆ ಮತ್ತೆ ಮತ್ತೆ ಮಾನಂ ಸುಖದಱಲು ಪತ್ತಿ (ನಂಬಿರ. ೧೪-೫೫). **ತುದಿಬುಡವಾಗು** = ಆದ್ಯಂತವೂ ತಿಳಿದುಬರು; ಸಂಪೂರ್ಣ ಅರಿವಾಗು: ಇದೇ ರೀತಿಯ ಇನ್ನೂ ಅನೇಕ ಪ್ರದರ್ಶನ ವಸ್ತುಗಳು ಇದ್ದುವು. ಅದರ ವಿವರ ಹೇಳಿದರೆ ತುದಿಬುಡವಾಗದು (ಪ್ರವಾಸಿ. ೪೭). **ತುದಿಹಾಕು** = (ಜಡೆಬಿಚ್ಚಿ ಹೋಗದಂತೆ) ತುದಿಗೆ ದಾರ ಮೊದಲಾದುವನಂ ಕಟ್ಟು : ಮಂದಾ ತನ್ನ ಕೋಣೆಯಲ್ಲಿ ಕುಳಿತು ಹೆಳಲು ಹಾಕಿಕೊಂಡು ಕೂದಲಿಗೆ ತುದಿಹಾಕಿ ಹೆಣೆದುಕೊಳ್ಳುತ್ತಿದ್ದಳು (ಇಪ್ಪಕ. ೨೪೭).

[ದೇ.॥ ತಮಿ. ತುತಿ ; ಮಲ. ತುಞ್ಞ, ತುಮ್ಬು ; ತುಳು. ತುದಿ ; ತೆಲು. ತುದಿ, ತುದ, ಸುದ]

**ತುದಿಕಂಬಿ** (ನಾ). (ಹೆಗಲಿನಲ್ಲಿ ಹೊರುವ) ಅಡ್ಡೆಯ ತುದಿ : ಸಂಗಶರಣನುತೆ ಹೆಗಲೊಳಗಿಕ್ಕಿ ತುದಿಕಂಬಿಯೊಳು ಕರಂಡಗೆಯನೊಲಿದಳವಡಿಸಿ (ಬಸರ. ೩-೧೧). [ತುದಿ + ಕಂಬಿ$_1$]

**ತುದಿಕರ** (ನಾ). (ಆನೆಯ) ಸೊಂಡಿಲಿನ ಕೊನೆ,—ಅಗ್ರಭಾಗ; ಪುಷ್ಕರ: ತುದಿಕರದೊಳಿಳಲುವ ತಲೆಗಳಂಘ್ರಿಯೊಳೊರೆದ ನೆಣನಡಗಿನ ಮಹಾಗಜ ಮೊಗೆದುದರಿಬಲವ (ಕುಮಾರವ್ಯಾ. ೩-೨೯). [ತುದಿ + ಕರ$_2$]

**ತುದಿಕಳಿ** (ಕ್ರಿ). ಕೊನೆಗೆ ಬರು, – ಸಾಗು. 'ತುದಿಕಳಿಸು' ಪರಾ.

[ತುದಿ + ಕಳಿ$_1$ (< ಕಱಿ$_1$)]

**ತುದಿಕಳಿಸು** (ಕ್ರಿ). ತುದಿಗೆ ಬರಂ ; ಕೊನೆಗೆ ನಿಲ್ಲಂ : ತುದಿಕಳಿಸಿ ಬಂದಿದ್ದ ಕಣ್ಣೀರ ತಳಿಯಿಂದ ಕಣ್ಣಂಜಲು ಮಾಡಿ ಮಸಣದೊಳೆ (ಸಹೀಗೀ. ೧೦-೮೩): ಭೂತಜಾತದ ವೇದ ತುದಿಕಳಿಸಿ ನಾಲಗೆಗೆ ಇಮ್ಮು ಚಿಮ್ಮುಲಿ (ಉಯ್ಯಾಲೆ. ೦೫-೧೨). [ತುದಿಕಳಿ + – ಇಸು$_3$]

**ತುದಿಕಾಲ್** 'ತುದಿಗಾಲ್' ನೋ.

**ತುದಿಕುಂಡೆ** 'ತುದಿಗುಂಡೆ' ನೋ.

**ತುದಿಕೆಯ್** 'ತುದಿಗೆಯ್' ನೋ.

**ತುದಿಕೊಳಿಸು** 'ತುದಿಗೊಳಿಸು' ನೋ.

**ತುದಿಕೋಡು** 'ತುದಿಗೋಡು' ನೋ.

**ತುದಿಖುರ** (ನಾ). ಗೊರಸಿನ ತುದಿ; ಖುರಾಗ್ರ : ಬಾಯ ಲೋಳೆಗಳಿಳಿಯೆ ಮೈಹಳುವಾಯಿ ಮಿಗೆ ತುದಿಖುರವನೂಱೆ...ವಾನಾಯುಜದ ಸಾಲೆಸೆದುದು (ಕುಮಾರವ್ಯಾ. ೦೭-೯). [ತುದಿ + ಖುರ]

**ತುದಿಗಟ್ಟೆ** (ನಾ). ಕಟ್ಟೆಯ ಅಂಚು,—ತುದಿ ; ಜಗುಲಿಯ ಕೊನೆಯ ಭಾಗ : ವದನೆ ಯೋಗಿಗೆ ಹೊಲ್ಲ ಬದನೆ ರೋಗಿಗೆ ಹೊಲ್ಲ ಕದನವದು ಹೊಲ್ಲ ನೆರೆಯಲಿ ನಿದ್ದೆಗೆ ತುದಿಗಟ್ಟೆ ಹೊಲ್ಲ (ಸರ್ವಜ್ಞ. ೦೨೯೩) ; ಹಡೆದವ್ವ ನಿದ್ದಾಗ ನಡುಮನೆ ನನಗಿತ್ತು ಕಡಗದ ಕೈಯ ಸೊಸೆ ಬಂದು ನಡೆದಾಗ ತುದಿಗಟ್ಟೆ ನನಗೆ ಎರವಾಯ್ತು (ಹಳ್ಳಿಯ. ೦೫೯). [ತುದಿ + ಕಟ್ಟೆ$_1$]

**ತುದಿಗಡೆ** (ನಾ). ಕೊನೆಯ ಭಾಗ ; ಅಗ್ರಪ್ರದೇಶ : ಮೈದೋಱಿದವು ಹೃತ್ತಿಮಿರ ತವಕದಲಿ ಪೊಡರ್ವ ಪೀನಪಯೋಧರದ ತುದಿಗಡೆಯು ಲಕ್ಕುಡಿಸಿದವು ಗತಿ ಬೆಳ್ಪಡಸಿದವು ಮುಖಮಂಡಲಗಳಾ ಮಾನಿನೀತ್ರಯದ (ತೊರರಾ. ೧-೮-೩). [ತುದಿ + ಕಡೆ$_2$]

**ತುದಿಗಾಣಿಸು** (ಕ್ರಿ). ಕಡೆಗಾಣಿಸು ; ಕೊನೆಮುಟ್ಟಿಸು : ಅದಱಿಂದಲಿದು ಸಾಮಾನ್ಯವಲ್ಲೆಂಬುದ ತುದಿಗಾಣಿಸಿ ನೋಡಿ ಕಡೆಗೆ (ಅಂಜಿಚ. ೦-೧೦೦). [ ತುದಿ + ಕಾಣಿಸು ]

**ತುದಿಗಾಲ್**, ತುದಿಕಾಲ್, ತುದಿಗಾಲು (ನಾ). ಕಾಲಿನ ತುದಿ ; ಪಾದಾಗ್ರ : ತುದಿಗಾಲಂ ಧರೆಗೂಱಿ . . . ಕಂಕೆಲ್ಲಿಭೂಜದ ಪುಷ್ಪಸ್ತಬಕಂಗಳಂ . . . ತಾಂ ಕುಯ್ದಳ್ (ತ್ರಿಪುವಿ.೨೪-೩೬) ; ತುದಿಗಾಲ್ಗಳಿಂದೆ ನಿಂದು ಬಣ್ಣವಳಿಯದ ಪೂಗಳಂ ಕೊಯ್ದು (ಜೈಮಿಭಾ. ೮-೦೮). **ತುದಿಕಾಲ್** : "ಪಾದಾಗ್ರಂ, ಪ್ರಪದಂ – ಈ ೨ ತುದಿಕಾಲ್" (ಹಲಾಯು. ೮೭-೩೭೫). **ತುದಿಗಾಲು** : ತುದಿಗಾಲುಗಳ ಹೊರಿಗೆಯು ತಪದ ನಿಱಿಗೆಯು . . . ಹೊಸತಪಸಿ ತೊಡಗಿದನು ಬಲುತಪವ (ಕುವ್ಯಾಅ. ೪-೪೩) ; ಓರುಗುಡಿಸಿದುದವನಿ ರಾಜಕುಮಾರಕಂಠೀರವನು ತುದಿಗಾಲೂಱಿ ನಿಂದಾ ದೆಸೆಗೆ (ಶಿಭಾಗ. ೪-೭-೩೧) ; ಕಾಮದೇವನ ಪೂಜೆಗಾಗಿ ತುದಿಗಾಲಲ್ಲಿ ನಿಂತು ಚೂತಾಂಕುರವನ್ನು ಕೊಯ್ಯುವೆನು (ಶಾಕುಂತ.೮೦-೭) ; ತುದಿಗಾಲೊಳೆಲ್ಲರು ನಿಂತಿರುವೆವು ನಾವು ಅಲ್ಲಿಗೆ ಹೋಗುವೆವೆಂದು (ಇಂಜಾಪ. ೨೦೯-೮೧).

ತುದಿಗಾಲಿನಲ್ಲಿ ನಿಲ್ಲು = ಆತುರಪಡಂ; ತವಕಿಸು : ದಮಯಂತಿ ಅತ್ತೆ ಮನೆಗೆ ಹೊರಡಲು ತುದಿಗಾಲಿನಲ್ಲಿ ನಿಂತಿದ್ದಳು (ದೂಬಿಟ್ಟ. ೫೫). [ತುದಿ + ಕಾಲ್$_1$]

**ತುದಿಗಾಲು** 'ತಂದಿಗಾಲ್' ನೋ.

**ತುದಿಗಿವಿ** (ನಾ). ಕಿವಿಯಂ ಕೊನೆ, — ತಂದಿ : ತುದಿಗಿವಿ ಮೊದಲ್ಗಣ್ಣು . . . ನಿಜಾಸನದೊಳ್ ಸುಟಿ ಪುಟ್ಟೆ ಕಷ್ಟಮಕ್ಕುಂ (ಮಂಗರಾ. ೮೩-೦೯). [ತುದಿ + ಕಿವಿ$_3$]

**ತುದಿಗುಂಡು** (ನಾ). ಬೆಟ್ಟದ ತುದಿಯಲ್ಲಿರುವ ಕಲ್ಲು ; ಕೋಡುಗಲ್ಲಂ ; ಶೃಂಗ : ಕೂಟಃ, ಶಿಖರಂ, ಶೃಂಗಂ ೩ ಪರ್ವತಶಿಖರದ ಹೆಸರು, ಬೆಟ್ಟದ ತುದಿಗುಂಡು (ಸಿದ್ಧಾಂತಿ.೯೪). [ ತುದಿ + ಗುಂಡು ]

**ತುದಿಗುಂಡೆ**, ತುದಿಕುಂಡೆ (ನಾ). ಪಿರ್ರೆಯು ತುದಿ ; ಕೂರುವ ಭಾಗ : "ಆ ಕಟಿಶೀರ್ಷಮೆನಲುವಾ ತುದಿಗುಂಡೆಯೆನಿಸಿಕ್ಕು" (ಮಂಗರಾ. ೯೮-೧೭). **ತುದಿಕುಂಡೆ** : "ಕಟಃ, ಕಟಿಶೀರ್ಷಕಃ – ಈ ೨ ತುದಿಕುಂಡೆ" (ಹಲಾಯು. ೮೭-೩೭). [ ತುದಿ + ಕುಂಡೆ$_1$ ]

**ತುದಿಗೆಯ್**, ತುದಿಕೆಯ್, ತುದಿಗೈ (ನಾ). ೧. ಕೈಯ ತುದಿ; ಹಸ್ತಾಗ್ರ : (+). **ತುದಿಕೆಯ್** : ೨. ಆನೆಯ ಸೊಂಡಿಲಿನ ತುದಿ: "ಕರಿಹಸ್ತಾಗ್ರ, ಪುಷ್ಕರ – ಆನೆಯ ತುದಿಕೆಯ್" (ನಾಚಿರಾ.೩). **ತುದಿಗೈ** : ೨. "ಕರಾಗ್ರಂ, ಪುಷ್ಕರಂ–ಈ ೨ ತುದಿಗೈ" (ಹಲಾಯು. ೩೭-೭೭). [ ತುದಿ + ಕೆಯ್$_2$ ]

**ತುದಿಗೈ** 'ತುದಿಗೆಯ್' ನೋ.

**ತುದಿಗೊಂಬು** (ನಾ). ೧. ಕೊಂಬೆಯ ತಂದಿ ; ಶಾಖಾಗ್ರ : ಮದಕರಿಗಳ ಮದಜಳದೊಳ್ ನಿಮಿರ್ದಿರ್ದ ಮರದ ತುದಿಗೊಂಬುಗಳೊಳ್ ಪೊಳೆವುವು . . . ಕುಸುಮಾವಳಿಗಳ್ (ಕಾದಂಪೂ. ೯೪) ; ಅದಟಿ ಶಿಖರಮಂ ಮೆಟ್ಟಿ ಮರದ ತುದಿಗೊಂಬಿಂಗೆ ಪಾಯ್ದು (ಪಂಚತಂ. ೨೮೦-೯) : ಮರದ ತುದಿಗೊಂಬಿನಲಿ ತೋಱುವ ವರತಳಿರ ನೆಲೆನಿಕರವೊಂದೊಂದಱಲಿ ಥಿದ್ರವ ಮಾಡಲೆಸುವುದು (ಸಂಭಪ. ೦೮-೯). ೨. ಪ್ರಾಣಿಗಳ ಕೋಡಿನ ತಂದಿ ; ಶೃಂಗಾಗ್ರ : ಅಗುಬ್ಬ ತುದಿಗೊಂಬಿನೊಳ್ಮೆಲ್ಲಗೆ ಪೊತ್ತಭಿಷೇಕಮೃತ್ತಿಕೆಯ ನೊಡಸಂದತ್ತಗಲದಿನಿಸುಂ ತಪೋವನಮೃಗಮಾ ಮುನಿವರನೊಳಾದ ಪರಿಚಯದಿಂದಂ (ಕಾದಂಪೂ. ೨೦೭). [ ತುದಿ + ಕೊಂಬು$_1$ ]

**ತುದಿಗೊನೆ** (ನಾ). ತುದಿಯಲ್ಲಿರುವ ಗೊಂಚಲು, —ಗೊನೆ : ಕಡೆದವು ಕದಳಿಗಳು ಗೊನೆಸಹಿತ . . . ತುದಿಗೊನೆಯ ಚೆಂದೆಂಗು ಖರ್ಜೂರದಲಿ ಕಾಣೆನು ಹುರುಳ (ಕುವ್ಯಾಅ.೦೮-೩೭). [ತುದಿ + ಕೊನೆ$_3$ (<ಗೊಲೆ$_2$)]

**ತುದಿಗೊಳಿಸು**, ತಂದಿಕೊಳಿಸು (ಕ್ರಿ). ತುದಿಯನ್ನು ತಾಕಿಸು, —ಊರು, —ಮೆಟ್ಟು : ತುದಿಗೊಳಿಸಿದಂಘ್ರಿಯಿಂದೆತ್ತಿದ ಭುಜದಿಂ ನಿಮಿರ್ದ ದೇಹದಿಂ (ಶಬಶಂ. ೨-೮೦). **ತುದಿಕೊಳಿಸು** : ತುದಿಕೊಳಿಸಿರ್ದ ವಾಮಚರಣಂ ಮಣಿಯಂ ಬಲದಂಘ್ರಿ ಮೆಟ್ಟೆ . . . ಉಯ್ಯಲೇಱಿದಳಮೃತಾಂಶುವಕ್ತ್ರೆ (ಅನಂಪು. ೮-೪). [ತುದಿ+ಕೊಳ್$_1$+–ಇಸು$_3$]

**ತುದಿಗೋಟೆ** (ನಾ). ಕೋಟೆಯ ತಂದಿ ; ದುರ್ಗದ ಮೇಲ್ಭಾಗ : ದಾಟುವೆನು ಕಡಲೇಳನವನಿಯ ಮಿಾಟಿ ಸಪ್ತರಸಾತಳದ ತುದಿಗೋಟೆ ಗಿಳಿವೆನು (ತೊರರಾ. ೪-೧೨-೩೦). [ ತುದಿ + ಕೋಟೆ$_1$ (<ಕೋಂಟೆ) ]

**ತುದಿಗೋಡು**, ತಂದಿಕೋಡಂ (ನಾ). = ತುದಿಗೊಂಬು ೧ : ಮರದ ತುದಿಗೋಡುಗಳೊಳುಲಿವ ಪಕ್ಕಿಗಳುಮಂ (ಕಾದಂಉ. ೨೬೭) ; ಪಕ್ಕಿಗಳ್ ಮರಂಗಳ ತುದಿಗೋಡ ಮೇಲೆ ದನಿಗೆಯ್ಯುತುಮಿರ್ದುವು ಮುಂಬಗಲ್ವರಂ (ಜಗವಿ. ೦೪-೧೦) ; ಮರದ ತುದಿಗೋಡುಗಳ್ ಕೊಳೆ ಧರೆಗಲ್ಲುಗುತಿರ್ಪ ತರಳತಾರೆಗಳನಿಕುಂ ಖರಸೂಕರದಂಷ್ಟ್ರಾಹತಿಪರಿಸ್ಫುಟದ್ವೇಣುಮುಕ್ತ ಮುಕ್ತಾನಿಕರಂ (ಚಂದ್ರಪು. ೫-೪೮) ; ತುದಿಗೋಡಂ ಮೆಟ್ಟಿ ಕೊಂಬಂ ಪಿಡಿದು ಜಡಿದು ತೂಗಾಡಿ . . . ಕುಳ್ಳಿರ್ದುದು ಕೋಡಂ (ಸೂಕ್ತಿಸು. ೩-೦೯೫). **ತುದಿಕೋಡು** : ಬೇರಿಂ ತುದಿಕೋಡಂ ಮುಟ್ಟೆ ಕಾಯ್ಪೇಱಿದ ಪಲಸು ಪುರೋದ್ಯಾನದೊಳ್ ಕುಂದವೆಂದುಂ (ಸೂಕ್ತಿಸು. ೪-೩೮). [ ತುದಿ + ಕೋಡು$_5$ ]

**ತುದಿನಾಲಗೆ**, ತಂದಿನಾಲಿಗೆ (ನಾ). ನಾಲಗೆಯ ತಂದಿ ; ಜಿಹ್ವಾಗ್ರ : ಅಂತು ಕುಡಿಯೆ ಕಕ್ಕರಗೆಯ್ತುದಿಂ ತುದಿನಾಲಗೆಯೊಳ್ ತೊದಳ್ವೆರಸು ನುಡಿವ ನುಡಿಗಳುಂ (ಪಂಪಭಾ. ೪-೮೮ವ) ; ಉಗಿದಡಾಯ್ದದ ಮೊನೆಯು ತುದಿನಾಲಗೆಗಳಲಿ ಮಾತಾಡಬಲ್ಲರೆ ಸೊಗಸುವೆವು ನಾವು (ಕುವ್ಯಾಕ. ೦೦-೪೫) ; ತುದಿನಾಲಗೆಗೆ ನರಸುಕ್ಕನಿಕ್ಕಿದಳು (ತೊರರಾ. ೨-೨-೩೮) ; ನಾರಣಪ್ಪನ ಭಾರತದಲ್ಲಿ ಪ್ರತಿಯೊಂದು ಪದ್ಯವೂ ಈತೆಯ ತುದಿನಾಲಗೆಯಲ್ಲಿದೆ (ದೂರಸ. ೬೫). **ತುದಿನಾಲಿಗೆ** : ಹೃದಯಂದ ಕತ್ತರಿ ತುದಿ [ಪಾಕಾಂ. ಕುಡಿ] ನಾಲಿ[ಪಾಕಾಂ. ಲ]ಗೆಯ ಬೆಲ್ಲೇಂ ಬೊ (ಬಸವ. ೨೬೯). [ ತುದಿ + ನಾಲಗೆ ]

**ತುದಿನಾಲಿಗೆ** 'ತಂದಿನಾಲಗೆ' ನೋ.

**ತುದಿನೆಲೆ** (ನಾ). ಕೊನೆಯಂ ಅಂತಸ್ತು ; ಉಪ್ಪರಿಗೆಯಂ ಮೇಲುಭಾಗ: ಹಂಸದ ಗಿಳಿಯ ಕೋಗಿಲೆಯ ಕರ್ಕಶಕೆ ನಿಲಲಱಿಯದುಪ್ಪರಿಗೆದುದಿನೆಲೆಯ ಚಂದ್ರಶಾಲೆಗೆ ಬಂದಳಂಬುಜಾಕ್ಷಿ (ಜೈಮಿಭಾ. ೩೦-೩೭). [ ತುದಿ + ನೆಲೆ ]

**ತುದಿಪದ** (ನಾ). ಕೊನೆಯಂ ಮೆಟ್ಟ ; ಮೇಲ್ಮಟ್ಟದ ಘನತೆ ; ಪರಮಪದ : ಭಕ್ತರ ಕುಲಂಗಳನಹಗೆಯಿಹಗೆಂದಱಸದದು ತುದಿಪದವಲಾ (ಬಸಪು. ೪-೭೩). [ತುದಿ + ಪದ$_2$]

**ತುದಿಪದವಿ** (ನಾ). = ತುದಿಪದ : ನಮಃಶಿವಾಯಯೆನಿಪ್ಪ ನುಡಿಯಂ ಮಱೆಯದಿರು ತುದಿಪದವಿ ನಿನಗೆನುತ (ಬಸಪು. ೨೪-೦೯). [ತುದಿ+ಪದವಿ]

**ತುದಿಬಾಲ** 'ತಂದಿವಾಲ' ನೋ.

**ತುದಿಮಿಾಸೆ** (ನಾ). ಮಿಾಸೆಯಂ ಕೊನೆ : ಬೆರಳ ತುದಿಮಿಾಸೆಯಲಿ ರಾಘವ ತಿರುವಿ ಭಕುತನ ಮುಖವ ನೋಡಲು (ಕೌಶಿರಾ. ೩೨-೩೩). [ತುದಿ+ಮಿಾಸೆ]

**ತುದಿಮುಟ್ಟ** (ಅ). ಕೊನೆಯಂವರೆಗೆ ; ಸಂಪೂರ್ಣವಾಗಿ : ಕೈಕೊಂಡ ಕೆಲಸವನ್ನು ತುದಿಮುಟ್ಟ ನಿರ್ವಹಿಸಬೇಕು (ರೂಢಿ). 'ತುದಿಮುಟ್ಟೆ' ಪರಾ. [ತುದಿ + ಮುಟ್ಟ]

**ತುದಿಮುಟ್ಟಿಸು** (ಕ್ರಿ). (ಹಿಡಿದ ಕೆಲಸವನ್ನು) ನೆರವೇರಿಸು ; ಗುರಿಮುಟ್ಟಿಸು ; ಪೂರೈಸು : ಇವೆಲ್ಲವಂ ತುದಿಮುಟ್ಟಿಸುವ ಭಾಷೆ (ಬಸಪು. ೬-೭) ; ಜನರು ಸರಕಾರವನು ಜಗ್ಗಿ ಬುಡಮೇಲುಗೈದರು ಚಳುವಳಿ ತುದಿಮುಟ್ಟಿಸಿದರು (ಇಂಜಾಪ. ೩೯-೮೧). [ತುದಿಮುಟ್ಟು + –ಇಸು$_3$]

**ತುದಿಮುಟ್ಟು** (ಕ್ರಿ). ಕೊನೆಗಾಣು ; ಮುಗಿ ; ಪರಿಸಮಾಪ್ತಿಯಾಗು : ನನ್ನ ವಿದ್ಯಾಭ್ಯಾಸ ತುದಿಮುಟ್ಟಿತು (ರೂಢಿ). 'ತುದಿಮುಟ್ಟಿಸು' ಪರಾ. [ತುದಿ + ಮುಟ್ಟು$_1$]

**ತುದಿಮುಟ್ಟೆ** (ಅ). ತುದಿಯವರೆಗೆ ; ಕೊನೆಯವರೆಗೆ : ಬೇರಿಂ ತುದಿ ಮುಟ್ಟೆ ಕಾಯ್ತು ಪಲಸೆಂಬಿವು ಕುಂದವು ನಂದನಂಗಳೊಳ್ (ಜಗವಿ. ೨-೧೫). 'ತುದಿಮುಟ್ಟ' ಪರಾ. [ತುದಿ + ಮುಟ್ಟೆ]

**ತುದಿಮುಱಿ** (ಕ್ರಿ). ಕೊನೆ ಮುರಿದುಹೋಗು, — ಕ್ಷತವಾಗು : ಪೊಸಗಂಧವಕ್ಷತೆ ತುದಿಮುಱಿದವೆಂದೊ (ಬಸವು. ೪೭-೧೪).
[ತುದಿ + ಮುಱಿ$_1$]

**ತುದಿಮೂಗು** (ನಾ). ಮೂಗಿನ ತುದಿ ; ನಾಸಾಗ್ರ : ತುದಿಮೂಗು ತುದಿಗಿವಿ ಮೊದಲ್ಗಣ್ಣಿ ಕಣ್ಣಡಿಗಳೊಳು . . . ಸುಟಿ ಪುಟ್ಟೆ ಕಪ್ಪುಮಕ್ಕುಂ (ಮಂಗರಾ. ೮೩-೧೯) ; ಏನೆಲವೊ ತುದಿಮೂಗಿನಲಿ ಬಿಳುಪೇನು (ಕುಮಾವ್ಯಾ. ೫-೮). [ತುದಿ + ಮೂಗು$_1$]

**ತುದಿಮೊದಲ್**, ತುದಿಮೊದಲು (ನಾ). ೧. ಮೂಲ ; ಪ್ರಾರಂಭ ; ಮೊತ್ತಮೊದಲು. ೨. ಕೊನೆ ಮತ್ತು ಬುಡ ; ಆದಿ ಮತ್ತು ಅಂತ್ಯ : ತುದಿಮೊದಲಪ್ಪುದಿಂಪಡರೆ ಕೂಡುವ ಕೂಟದೊಳ್ (ಅರ್ಧನೇ. ೬-೬). **ತುದಿಮೊದಲು** : ೨. ನಿಮ್ಮ ಭಕ್ತಿಯ ತುದಿಮೊದಲಿದೆಂದೊಮ್ಮೆಯುಂ ಸಲೆ ತೋಱದಾರಿಗೆ (ಬಸವು. ೦-೫೮) ; ವಿಧಿಯಿಂದೆ ಶುಕ್ರದೇವರು ತನಗಱುಹಿದ ಹದಿನಾಱುಶತವಿದ್ಯವನು ತುದಿಮೊದಲಿಂದೆ ವಿಸ್ತರಿಸಿದ ಕೌಟಿಲ್ಯನಿಧಿ ಶಂಬರಾಸುರ ಖಳನು (ಮೋಹತ. ೧೧-೬೯) ; ತನ್ನೊಳಗೆ ತಾನೆ ವಿಸ್ಮಿತನಾಗಿ ಪಾರ್ಥನದಱುನ್ನತಿಯ ತುದಿಮೊದಲನಱುಹೆನಲ್ (ಜೈಮಿಭಾ. ೧೦-೨೨) ; ಅವನ ರಗಳೆಗೆ ತುದಿಮೊದಲೇ ಇಲ್ಲ (ರೂಢಿ).
[ತುದಿ + ಮೊದಲ್]

**ತುದಿಮೊದಲು** 'ತುದಿಮೊದಲ್' ನೋ.

**ತುದಿಮೊನೆ** (ನಾ). ತುದಿಯ ಹರಿತವಾದ ಭಾಗ; ನಿಶಿತಾಗ್ರ : ದಿನಪಕೋಟಿಯ ರಶ್ಮಿಯನು ತುದಿಮೊನೆಯೊಳುಗುಳುವ ಬಾಯಿಧಾರೆಯ ತನಿಯುರಿಯ ತೆಕ್ಕೆಯಲಿ ಥಳಥಳಿಸುವ ಮಹಾಂಕುಶವ (ಕುಮಾವ್ಯಾದ್ರೋ. ೩-೫೫). [ತುದಿ + ಮೊನೆ$_1$]

**ತುದಿಮೊಲೆ** (ನಾ). ಮೊಲೆಯ ತುದಿ ; ಕುಚಾಗ್ರ ; ಚೂಚುಕ : ಕುರವಕಕೆ ತುದಿಮೊಲೆಯ ಸೋಂಕಿನಲಿ ಹೂದೋಱದವು ಕಣ್ನೀರೆಯಲಿ ತಿಲಕವ ಕದುಕಿದವು (ಕುಮಾವ್ಯಾಆ. ೧೮-೧೩); ಈ ಕೋತಿಯಂ ತನ್ನ ತುದಿಮೊಲೆಗಳಿಂದಪ್ಪಳಿಸಿ ನರನ ಸೈನ್ಯಮಂ ಸದೆದು ಕೆಡಪುವೆನು (ಜೈಮಿಭಾ. ೧೬-೩೫).
[ತುದಿ + ಮೊಲೆ$_1$]

**ತುದಿಯಂಬು** (ನಾ). ಬಾಣದ ತುದಿ ; ಬಾಣಾಗ್ರ : ಕೈನೀಡಿದನು ತುದಿಯಂಬಿನಲಿ ತುಱುಗಿದ ಕಿಡಿಯ ಬಿಱುಕೇಸುರಿಯ ಧಾಳಿಗಳ . . . ನಾರಾಯಣಮಹಾಶರಕೆ (ಕುಮಾವ್ಯಾದ್ರೋ. ೧೯-೧೪). [ತುದಿ + ಅಂಬು$_2$]

**ತುದಿಯೆಯ್ದು** (ಕ್ರಿ). ೧. ತುದಿಮುಟ್ಟು; ಪೂರ್ಣವಾಗು. ೨. ಈಡೇರು; ನೆರವೇರು : ತುದಿಯೆಯ್ದುತ್ತಿನಗೆನ್ನ ಪುಣ್ಯಕ್ಕೆ ನಿನಗಂ ಪುಣ್ಯೋದಯಂ ಸಾರ್ಚಿ ಬಂದುದು (ಆದಿಪು. ೪-೧೮). [ತುದಿ + ಎಯ್ದು]

**ತುದಿಮರ** (ನಾ). ಮರದ ತುದಿ : ಮೊದಲ ಬಲುಹನು ಕಂಡೆನಿನ್ನೀ ತುದಿಮರನ ತನಿಗೆಚ್ಚು ನಮ್ಮನು ಬೆದಱಸುವುದೋ ಶಿವಶಿವಾ ತಪ್ಪೇನು ತಪ್ಪೇನು (ಕುಮಾವ್ಯಾಕ. ೨೦-೧೮). [ತುದಿ + ಮರ$_1$]

**ತುದಿವರಂ** (ಅ). ತುದಿಯವರೆಗೆ ; ಕೊನೆಯವರೆಗೆ : ಮೊದಲಿಂದೆ ತುದಿವರಂ ಬೇಱೊಂದು ರೀತಿಯಾಗದೆ (ಪದ್ಮರಾ. ೮-೨೯) ; ಬೇರ್ವರಿಸಿ ತುದಿವರಂ ಕಾಯ್ತು ಪನಸಂಗಳ್ . . . ನಾಡೆ ಸಾರ್ವಕಾಲಂ ಕುಂದವು (ಜಿಬವು. ೧೦-೨೨). [ತುದಿ + - ವರಂ]

**ತುದಿವಲಗೆ** (ನಾ). ಧ್ವಜದ ಮೇಲಿರುವ, ಲಾಂಛನವನ್ನಿಡುವ ಹಲಗೆ,- ಫಲಕ,-ಚೌಕಟ್ಟು : ನವಹೇಮದಂಡದ ಹಳವಿಗೆಯ ತುದಿವಲಗೆಯಲಿ ಹಾಯ್ಕಿದರು ಪನ್ನಗನ (ಕುಮಾವ್ಯಾದ್ರೋ. ೧೦-೪೦). [ತುದಿ + ಪಲಗೆ]

**ತುದಿವಾಲ**, ತುದಿಬಾಲ (ನಾ). ಬಾಲದ ತುದಿ, — ಕೊನೆ : ತುಱುಕಿದನು ತುದಿವಾಲದಗ್ನಿಯನು . . . ಭದ್ರಭವನದಲಿ (ತೊರರಾ. ೫-೮-೩೬) ; ಪುದಿದಿರ್ಪುದು ತೇಟಿಗ್ಗೆ ವಿಷಂ ತುದಿವಾಲದೊಳ್ (ಚಿಕವಿ. ೪-೩೬). **ತುದಿಬಾಲ** : ಹುಲಿಯ ತುದಿಬಾಲವು ಕಪ್ಪಿರುತ್ತದೆ (ಮುಂಬಯಿ. ೪-೩೬).
[ತುದಿ + ಬಾಲ$_1$]

**ತುದಿವೆರಳು** (ನಾ). ಬೆರಳಿನ ತುದಿ; ಬೆಟ್ಟಿನ ಕೊನೆ : ಹರಹರ ಮಹಾದೇವಾ ಎನುತ ತುದಿವೆರಳಲಾಲಿಯ ನೀರ ಮಿಡಿದಳಲಿದನು ಕಲಿ ಭೀಮ (ಕುಮಾವ್ಯಾಕ. ೧೨-೯) ; ಅಲ್ಲಾಡಿದನು ತುದಿವೆರಳನು (ತೊರರಾ. ೪-೪-೩೩) ; ತುದಿವೆರಳೊಳು ಜಪಸರವ ನೂಂಕುತ ಪಂಚಪದವ ಜಪಿಸಿದ ರೊಪ್ಪದೊಳು (ಭರತೇ. ೧೮-೧೪೦). [ತುದಿ + ಬೆರಳು (< ಬೆರಲ್) ]

**ತುದಿಸೆಱಗು** (ನಾ). ಸೆರಗಿನ ಕೊನೆ,—ತುದಿ : ಕಂಡಳವನಂಗದೊಳಿಸೆವ ರುಚಿರಕಂಚುಕದ ತುದಿಸೆಱಗಿನೊಳ್ಕಟ್ಟಿಕೊಂಡಿರ್ದ ಪತ್ರಿಕೆಯನು (ಜೈಮಿಭಾ. ೩೦-೨೪). [ತುದಿ + ಸೆಱಗು (<ಸೆಱಂಗು) ]

**ತುಸಕು** 'ತುಣುಕು' ನೋ.

**ತುನಿ$_1$** (ಕ್ರಿ). (?) : ಗಿಂಡಿಯಲ್ಲುದಕವಂ ಕಯ್ಕೊತ್ತಿ ಕಯ್ಕೊತ್ತಿ ಬೇರ್ಗರೆಯಲ್ ಕಣ್ ತುನಿದಿಂಟೆ ತೇಗಿ ನಿಮಿಷಂ ಸಂತೈಸಿಕೊಂಡಿರ್ದು . . . ಏಂ ಸುಖಂಬಡೆದರೋ ಕಯ್ಗುಟ್ಟಿಕೊಂಡೆಲ್ಲರು (ನಳಚ. ೪೬೮).
[P ಇದು 'ಕುನಿ' ಎಂಬುದರ ಅಪಲಿಖಿತವಿರಬಹುದೆ ? ]

**ತುನಿ$_2$** (ನಾ). ಒಂದು ಬಗೆಯ ವಾಯುರೋಗ : ಪಕ್ವಾಶಯದಿಂದ ಕೆಳಕ್ಕಾಗಿ ಅಪಾನಪ್ರದೇಶ, ಗುಹ್ಯಪ್ರದೇಶಕ್ಕಾಗಿ ಕೀಳು ಮುಂತಾಗಿ ತೀವ್ರವಾದ ವೇದನೆಯುಂಟಾಗಿ ಚರಿಸುವಂಥಾ ವಾಯು ತುನಿಯೆನಿಸಿಕೊಂಬುದು (ವೈದ್ಯಸಾ. I, ೩೨೫). [ಸಂ.]

**ತುನುಕು** 'ತಣುಕು' ನೋ.

**ತುನ್ನ** (ಗು). ೧. ನೋವುಗೊಂಡ ; ಗಾಸಿಗೊಂಡ. ೨. ಪೀಡೆಗೊಂಡ ; ತೊಂದರೆಗೊಳಗಾದ. ೩. ಕತ್ತರಿಸಿಹೋದ. (ನಾ). ೪. ನೋವು ; ಬಾಧೆ : "ಪೀಡಿತಂ ತುನ್ನಮನೆ ನೋವಕ್ಕು" (ಮಂಗರಾ. ೧೩೨-೨೬). ೫. ಒಂದು ಬಗೆಯ ಮರ ; ನಂದಿಮರ : "ತುನ್ನಃ, ಕುಬೇರಃ . . . ನಂದಿವೃಕ್ಷಃ—೬ ನಂದೀ ಎಂಬುವ ಮರದ ಹೆಸರು" (ಸಿದ್ಧಾಂಶಿ. ೧೨೪). [ಸಂ.]

**ತುನ್ನವಾಯ** (ನಾ). ಹೊಲಿಗೆ ಕೆಲಸದಿಂದ ಜೀವನ ಮಾಡುವವನು; ಚಿಪ್ಪಿಗ ; ಸಿಂಪಿಗ ; ದರ್ಜಿ : "ತುನ್ನವಾಯಃ, ಸೌಚಿಕಃ—ಈ ೨ ಚಿಪ್ಪಿಗಂ" (ಹಲಾಯು. ೯೭-೪೩೬) ; "ಚಿಪ್ಪಿಗನು ಚೀಳಿಕಂ ಸೂಚಿಕಂ ತುನ್ನವಾಯನೆನಿಕ್ಕು" (ಮಂಗರಾ. ೧೧೧-೩). [ಸಂ.]

**ತುಪಟ** 'ತುಪ್ಪುಟ' ನೋ.

**ತುಪರ** 'ತೂಪರ' ನೋ.

**ತುಪಾಕ** 'ತುಪಾಕಿ' ನೋ.

**ತುಪಾಕಸೇನೆ** (ನಾ). ಬಂದೂಕಿನಿಂದ ಯುದ್ಧಮಾಡುವ ಸೈನ್ಯ : ಭಾಮನಾಯಕನ ಸಹಾಯಕ್ಕೆ ಶ್ರೀರಂಗಪಟ್ಟಣದಿಂದ ತುಪಾಕಸೇನೆಯು ...ಬರುವಂತಿಲ್ಲ (ಸುಗುಗಂ. ೧೨೪-೫). [ತುಪಾಕ (<ತುಪಾಕಿ) + ಸೇನೆ]

**ತುಪಾಕಿ**, ತುಪಾಕ, ತುಬಾಕಿ (ನಾ). ೧. ಗುಂಡುಗಳನ್ನಿಟ್ಟು ಮದ್ದು ತುಂಬಿ ಪ್ರಯೋಗಿಸುವ ಒಂದು ಬಗೆಯ ಆಯುಧ ; ಕೋವಿ ; ಬಂದೂಕು: ಹೊಗೆಯಂತೆ ಪೆಟಲು ತುಪಾಕಿಯು ಬಲಗೊಡಿ ಧಿಗಿಧಿಗಿನಿದಿಂಗೆ ಬಂದು ನಗೆಮೊಗದರಸಗೆ ಕೈಮುಗಿದೊಲಿದನು (ಭರತೇ. ೨೨-೧೯) ;

ಎಡೆವಿಡದಿಡುವ ತುಪಾಕಿಯು ಗುಂಡಿನ ಕಡುಹಿಂದ . . . ಕೂಡಿದ ರಿಪುಬಲ ಕಡಿಖಂಡವಡೆದುದೇವೇಳ್ವೆ (ಕಂನವಿ. ೩-೭೬) ; ನಮ್ಮಲ್ಲಿದ್ದ ತುಪಾಕಿಗಳನ್ನು ಅವರ ಮೇಲೆ ಪ್ರಯೋಗಿಸಿದೆವು (ಪ್ರತಾಪ. ೩೦): ತುಪಾಕಿ ಹೊಟ್ಟೇಲಿ ಫಿರಂಗಿ ಹುಟ್ಟಿದ ಹಾಗೆ (ಗಾದೆ). **ತುಪಾಕ:** ೧. ಪೇರಡಿ ಬಡಿಗೋಲ್ತುಪಾಕಮಿಡುಗಲ್ಲೆರೆ ಪೆರ್ಬಲೆ ಕೂಳಿ ಗಾಳಂ . . . ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದಿದರ್ (ರಾಜಶೇ. ೫-೫೨) ; ಧಮ ಧಮಧ್ವಾನಮಾದಂ ತುಪಾಕಂಗಳವೀಗಳ್ . . . ಸಾರ್ತರ್ಪಿನಂ (ಚಿಕವಿ. ೬-೨೬೨) ; ಮಿಂಟೆ ಪೇರಡಿ ತುಪಾಕಂ . . . ಕೊಂಡೊಡನಾ ಲುಬ್ಧಕಸಂಚಯಂ ನಡೆದುದು (ಯಾದಚಂ. ೪-೫೧). ೨. ಕೋವಿ ಹಿಡಿದಂ ಯುದ್ಧ ಮಾಡುವ ಸೈನಿಕ : ಹಲ್ಲಣಗಳನ್ನಾಳಬಲ್ಲ ಬಿಲ್ಲಾಳ್ಗಳ ತುಪಾಕರ ಪಡೆಗಳನ್ನೂ . . . ಅಲ್ಲಿಗೆ ಕಳಿಹಿರಿ (ಚಿಟ್ಟಿಅ. ೪೫-೪). **ತುಬಾಕಿ:** ೧. ತುಬಾಕಿಯಲ್ಲಿ ಮದ್ದು ತುಂಬಿ . . . ಹೊಂಚು ಹಾಕಿ ಕುಳಿತುಕೊಂಡನು (ಚಿಟ್ಟಿಹೊ. ೨೪); ತುಬಾಕಿಗಳು ಹಾರಿದವು (ಫಲಸಂ. ೮೦); ರಾಯಚೂರುಯುದ್ಧ ನಡೆಯುವ ತನಕ ತುಬಾಕಿಯಂಥ ಮದ್ದಿನ ಆಯುಧ ದಕ್ಷಿಣದೇಶದವರಿಗೆ ಗೊತ್ತಿರಲಿಲ್ಲ (ನಂಜುಂಡ. ೨೮).

**ತುಪಾಕಿಯವರು, ತುಪಾಕದವರ್** = ಕೋವಿ ಹಿಡಿದಂ ಯುದ್ಧ ಮಾಡುವ ಸೈನಿಕರು: ಚಕ್ಕಮುಕ್ಕಿ ಕಲ್ಲಿನ ತುಪಾಕಿಯವರು ತಮ್ಮ ಆಯುಧ ಸಲಕರಣ ಸಮೇತ ತೆರಳಲಿ (ಪೇಟಿಮಾ. ೨) ; ಅಲ್ಲಿ ತುಪಾಕದ ವರ್ಗಂ ಪೇಟದೆ ನಿಟ್ಟೋಟದಿಂ ತಿರುಚನಾಪಳ್ಳಿಯಂ ಸಾರ್ವುದುಂ (ಅಪ್ರತಿ. ೧೪೫-೨೨). 'ತೋಪು₃' ಪರಾ.

[← ಹಿಂ. ತುರ್ಕಿ. ತುಪಕ್ ; ಮರಾ. ತುಬಕ್]

**ತುಪಾಕಿಗುಂಡು** (ನಾ). ತುಪಾಕಿಗೆ ಹಾಕಿ ಉಡಾಯಿಸುವ ಗುಂಡು : ಬಹು ಜನರು ಹತರಾಗುವಂತೆ ಮಾಡಿರುವ ತೊಳ್ಳುಗುಂಡುಗಳನ್ನೂ ತುಪಾಕಿಗುಂಡುಗಳನ್ನೂ ಇರಿಸುವುದಕ್ಕೆ . . . ಉಗ್ರಾಣಗಳನ್ನು ಮಾಡಿಸಿದರು (ಚಾಮುವಂ. ೬೯). [ತುಪಾಕಿ + ಗುಂಡು]

**ತುಪಾನು** 'ತಂಫಾನು' ನೋ.

**ತುಪ್ಪ** (ನಾ). ೧. ಬೆಣ್ಣೆಯನ್ನು ಕಾಯಿಸಿ ತೆಗೆದ ಸಾರ, –ಸತ್ತ್ವ ; ಘೃತ ; ಆಜ್ಯ : "ಸರ್ಪಿಃ, ಘೃತಂ, ಆಜ್ಯಂ, ಅಘಾರಃ — ಈ ೪ ತುಪ್ಪ" (ಹಲಾಯು. ೪೭-೦೨೦) ; ತುಪ್ಪಮಂ ಕೊಟ್ಟು ನೀರಂ ಕೊಳ್ವ... ಗಾವಿಲನಂತಾಗಿ (ಧರ್ಮಾಮೃ. ೦೪-೦೦೭) ; ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಎನ್ನ ಬಾಳುವೆ (ಬಸವ. ೩೫) ; ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ ವಿಟ್ಠಲನಾಮ ತುಪ್ಪವ ಕಲಸಿ ಬಾಯಿ ಚಪ್ಪರಿಸಿರೊ (ಪುರಂದ. ೨-೯೭ ಪಲ್ಲವಿ) ; ತುಪ್ಪ ಸಕ್ಕರೆ ಪಾಲ ಸವಿವ ಮನುಜರ ತಂದೊಪ್ಪಿಸುವುದು ದೊಡ್ಡಿತಲ್ಲ (ಕಂನವಿ. ೦೦-೮೪): ತುಪ್ಪದ ಆಶೆಗೆ ಎಂಜಲು ತಿಂದ (ಗಾದೆ.) ೨. ತುಪ್ಪವನ್ನು ಹೋಲುವ ಜಿಡ್ಡುಗುಣವನ್ನು ಹೊಂದಿರುವ ವಸ್ತುವಿಶೇಷ ; ಸಸ್ಯದ ಕೊಬ್ಬು ; ವನಸ್ಪತಿಯ ಕೊಬ್ಬು. ೧, ೨ : ತುಪ್ಪಮೆಂಬ ಪೆಸರಾವಿನ ತುಪ್ಪಕ್ಕಂ ಗೇರತುಪ್ಪಕಮುಂಟಪ್ಪೊಡಂ ತುಪ್ಪದಂತಿನಿದಕ್ಕುಮೇ (ಧರ್ಮಾಮೃ. ೦-೧೯೩). ೩. ಪ್ರಾಣಿಗಳ ಕೊಬ್ಬು: ಉಡುವಿನ ತುಪ್ಪ ಲೇಪನ ಮಾಡಿದರೆ ಮೂಳೆ ಕೂಡಿಕೊಳ್ಳುತ್ತದೆ (ರೂಢಿ). ೪. ಬಟ್ಟಿ ಇಳಿಸಿದ ದ್ರವ ; ಅರ್ಕ ; ಹಸಿಶುಂಠಿಯ ಒಂದು ಕೊಳಗದಲ್ಲಿ ರಸ . . . ಕಾಸಿ ಹದದಲ್ಲಿ ಇಳುಹಿಕೊಂಡು ಉದಯಕಾಲದಲ್ಲಿ ನಾಲ್ಕುವರಹ ತೂಕ ತುಪ್ಪವ ಸೇವಿಸಲು ಶೋಭೆ, ಕಾಸ, ಅಗ್ನಿಮಾಂದ್ಯ, ಪಾಂಡು, ಇವಿಷ್ಟೂ ಪರಿಹರವಹವು (ವೈದ್ಯಸಾ. I, ೩೫೮). ೫. [ವೈದ್ಯಶಾ] ಬೇರೆ ಬೇರೆ ಬಗೆಯ ಔಷಧಿದ್ರವ್ಯಗಳನ್ನು ಸೇರಿಸಿ ತುಂಪ್ಪದಲ್ಲಿ ಪಾಕಮಾಡಿ ತಯಾರಿಸಿದ ಔಷಧ ; ಘೃತ: ಅಶ್ವಗಂಧಿಯ ತುಪ್ಪವು ಆರೋಗ್ಯಕ್ಕೆ ಒಳ್ಳೆಯದು (ರೂಢಿ).

**ತುಪ್ಪದ ದೋಸೆ**=ತುಪ್ಪ ಹಚ್ಚಿ ತಯಾರಿಸುವ ದೋಸೆ: ಈ ತುವ್ವೊತ್ತು ಸಂಜೆ, ಹೋಟಲಲ್ಲಿ ತುಪ್ಪದ ದೋಸೆ, ಕಾಫಿ ಕೊಡಿಸು (ರೂಢಿ). **ತುಪ್ಪದನ್ನ** = ತಂಪ್ಪದ ಒಗ್ಗರಣೆ ಮತ್ತು ಹಪ್ಪಳ, ತೆಂಗಿನ ತುರಿ ಮುಂತಾದಂವನ್ನು ಹಾಕಿ ಮಾಡುವ ಒಂದು ಬಗೆಯ ಕಲಸನ್ನ : ತುಪ್ಪದನ್ನ ಉಣ್ಣೋಕೆ ಕೊಚ್ಚೆನೀರಲ್ಲಿ ಕೈ ತೊಳೆಸಿದ (ಗಾದೆ).

[ < ಪ್ರಾ. ತುಪ್ಪ./ತಮಿ. ತುಪ್ಪ, ತುಪ್ಪಕ, ತುಪ್ಪು./ ಮರಾ. ತುಪ್, ತೂಪ್]

**ತುಪ್ಪಕೀರೆ** 'ತಂಪ್ಪಗೀರೆ' ನೋ.

**ತುಪ್ಪಗಾಯ್** (ನಾ). ಬದನೆಕಾಯಿಗೆ ತುಂಪ್ಪ ಮೊದಲಾದುವನ್ನು ಸೇರಿಸಿ ಮಾಡುವ ಒಂದು ಬಗೆಯ ವ್ಯಂಜನಪದಾರ್ಥ : ಬಟ್ಟ ಬದನೆಯ ಕಾಯ ನಸುನೀರ ತಿಳಿದುಪ್ಪವಿಟ್ಟು . . . ತುಪ್ಪಮಂ ಬಿಟ್ಟು ಪೊಡ್ಡಣಿಗೆಗೊಡೆ ತುಪ್ಪಗಾಯಾಯಿತು (ಸೂಪಶಾ. ೪-೧೩).

[ತುಪ್ಪ + ಕಾಯ್₄]

**ತುಪ್ಪಗಾರಿಗೆ** (ನಾ). ತುಪ್ಪದಲ್ಲಿ ಕರಿದ ಗಾರಿಗೆ : ಕಾಯ್ದ ತುಪ್ಪದಲ್ಲಿ ಹಾಕಿ ಗಾರಿಗೆಯನ್ನು ತಯಾರಿಸುವುದು. ಇದರ ಹೆಸರು ತುಪ್ಪಗಾರಿಗೆ (ಸೂಪಶಾ. ೧-೨೪ ಟೀಕೆ). [ತುಪ್ಪ + ಗಾರಿಗೆ₁]

**ತುಪ್ಪಗೀರೆ, ತುಪ್ಪಕೀರೆ** (ನಾ). ಆಹಾರಕ್ಕಾಗಿ ಮತ್ತು ಔಷಧಕ್ಕಾಗಿ ಉಪಯೋಗಿಸುವ ಒಂದು ಬಗೆಯ ತರಕಾರಿ ಗಿಡ ; ಹರಿತ ಮಂಜರಿ : ತುಪ್ಪಗೀರೆಸೊಪ್ಪಿನ ರಸದಲ್ಲಿ . . . ಪಾಕವ ಮಾಡಿ ಹದದಲ್ಲಿ ಇಳುಹಿ ಆ ತೈಲದಲ್ಲಿ ವಸ್ತಿಯ ಕಟ್ಟಲು ಗುಲ್ಮ, ಮಹೋದರಗಳು ಪರಿಹರ (ವೈದ್ಯಸಾ. I, ೨೦೪). **ತುಪ್ಪಕೀರೆ:** "ಮಾರುತಘ್ನಃ—ತುಪ್ಪಕೀರೆ" (ಓಷಧಿ. ೧೨೫) ; ನಾಗರ ತುಪ್ಪಕೀರೆ ಲಶುನಂ ರಸರಾಮಠಮೆಂಬಿವೆಲ್ಲಮಂ ರಾಗದೊಳೊಂದುಗೂಡಿ...ಕೊಳಲ್ (ಖಮದ. ೭-೫): ತುಪ್ಪಕೀರೆ ಬೇರನಾದರು ತುಲಶಿ ಬೇರನಾದರು. . .ಅರದು ಕುಡಿಯ ಕೊಡಿಸಲು ದುಷ್ಟಕೀಟ ಹರವಹುದು (ವಿಷಚಿ. ೨೨-೪). [ತುಪ್ಪ + ಕೀರೆ]

**ತುಪ್ಪಗೆಣಸು** (ನಾ). ಒಂದು ಬಗೆಯ ಗೆಣಸು : (+).

[ತುಪ್ಪ + ಗೆಣಸು (<ಗೆಬಸು)]

**ತುಪ್ಪಗೊಡ** (ನಾ). ತುಪ್ಪ ತುಂಬಿದ ಕೊಡ : ತುಪ್ಪಗೊಡಂಗಳಿಂ ಧರಣಿಯೊಟ್ಟಜೆಯಿಂ . . . ಒಪ್ಪಿದುದಂದನೂನವಿಭವಂಬಡೆದಾ ವರ ಯಜ್ಞಮಂಟಪಂ (ಉದ್ಭಟ. ೪-೪೮). [ತುಪ್ಪ + ಕೊಡ₄]

**ತುಪ್ಪಟ** 'ತುಪ್ಪಟ್' ನೋ.

**ತುಪ್ಪಟಮಣ್** (ನಾ). ಒಂದು ಬಗೆಯ ಸುಗಂಧದ್ರವ್ಯ : "ಹನುಃ, ಹಟ್ಟವಿಲಾಸಿನಿ ಇವು ತುಪ್ಪಟಮಣ್ಣೆಂಬ ಗಂಧದ್ರವ್ಯಂ" (ನಾಚಿರಾ. ೦೦೦).

[ತುಪ್ಪಟ? + ಮಣ್]

**ತುಪ್ಪಡರ್** (ಕ್ರಿ). =ತುಪ್ಪೇಱು ೧ : ದಿನಪತಿ ಮಾಸಿದಡ್ನಣದ ಕನ್ನಡಿಯಂತೆಪೊಲ್ದಿರ್ದನಭ್ರದೊಳ್ ದಿನಕರರಶ್ಮಿ ತುಪ್ಪಡರ್ದ ಶಸ್ತ್ರದ ಮಾಟ್ಕೆ ಪೊಲಾದುದು . . . ತತ್ತುಮುಳಯುದ್ಧ ಸಮುದ್ಧತಧೂಳಿಜಾಲದೊಳ್ (ಸೂಕ್ತಿಸು. ೦೮-೫೨). [ತುಪ್ಪ + ಅಡರ್]

**ತುಪ್ಪದೆಱೆ³** (ನಾ). ತುಂಪ್ಪದ ಮೇಲಿನ ತೆರಿಗೆ,—ಸುಂಕ : ರವಿ ಕಯ್ಯಂ ಕಾಲಂ ಕಟ್ಟಿ ತುಪ್ಪದೆಱೆಯಂ ಬಿಟ್ಟೊಮ್ (ಎಇ. VII, ೩೦೭-೨೦; 866); ಮಹಾಜನದ ಕಾಲಂ ಕಟ್ಟಿ ತುಪ್ಪದೆಱೆಯಂ ಸಭೋಗಸಾಧಕವಾಗಿ ಬಿಟ್ಟರ್ (ಎಇ. VI, ೦೦೪-೨೭ ; ಸು. 866 ?); ತುಪ್ಪದ[ಱೆ]ನುಬು ದೋಣ್ (ಸೌಇಇ. XI-i, ೦೨-೦೩ ; 867): ಪೆರ್ಮ್ಮಾಡಿಯುಂ ಪ್ರಭ ಕಾಲಯ್ಯನುಮಿಟ್ಟು ತುಪ್ಪದೆಱೆಯನೆಲ್ಲಂ ಕಾಲಕಯ್ಯಂಟು ಮಹಾಜನದ ಕಯ್ಯೊಳ್ಪಾರೆಯನೆಱೆದುಕೊಟ್ಟನು (ಎಕ. XV, ಹೊಳೆನ. ೦೦೯-೦೦; 871).

[ತುಪ್ಪ + ತೆಱೆ₃]

**ತುಪ್ಪದೇವದಾರು** (ನಾ). ಒಂದು ಬಗೆಯ ಮರ : "ಅಮರದಾಮ– ತುಪ್ಪದೇವದಾರು" (ಒಷಧಿ. ೮); ತುಪ್ಪದೇವದಾರು, ಅಳಲೆಕಾಯಿ . . . ಸೇವಿಸಲು ಕಲ್ಲುಕಟ್ಟು, ಮೂತ್ರಕೃಚ್ಛ್ರ...ಗುಣಮಕ್ಕುಂ (ಸಕವೈ. ೩೮೧).
[ತುಪ್ಪ + ದೇವದಾರು]

**ತುಪ್ಪನ್ನ** (ನಾ). ತುಪ್ಪದಲ್ಲಿ ಕಲಸಿದ ಅನ್ನ : ನನ್ನ ತಮ್ಮನಿಗೆ ತುಪ್ಪನ್ನ ಕಂಡರೆ ಇಷ್ಟ (ರೂಢಿ). 'ತುಪ್ಪೋಗರ' ಪರಾ. [ತುಪ್ಪ + ಅನ್ನ$_3$]

**ತುಪ್ಪಹೀರೆ, ತುಪ್ಪೀರೆ** (ನಾ). ಒಂದು ಬಗೆಯ ತರಕಾರಿ ಬಳ್ಳಿ ಮತ್ತು ಅದರ ಕಾಯಿ : "ಗಾಂಗೇರುಕೀ, ನಾಗಬಲಾ, ಝಷಾ, ಹ್ರಸ್ವ ಗವೇಧುಕಾ ೪ ಹೀರೆಗಿಡದ ಹೆಸರು. ಇವು ಹೀರೆ, ತುಪ್ಪಹೀರೆ, ಕಾಡುಹೀರೆ ಇವುಗಳೆಲ್ಲಕ್ಕೂ ಹೆಸರುಗಳು" (ಸಿದ್ಧಾಂತ. ೧೨೦); ಕಾಯಿಗಳು : ಅಗಸೆ . . . ಹೀರೆ, ತುಪ್ಪಹೀರೆ (ನಮ್ಮನು. ೨೩೭). **ತುಪ್ಪೀರೆ :** ತುಪ್ಪೀರೆಕಾಯಿ ಬಂದಾವಂತ ಪ್ಯಾಟ್ಯಾಗ (ಗಂಮೂಯಿ. ೧೫೧).
[ತುಪ್ಪ + ಹೀರೆ$_1$ (<ಪೀರೆ)]

**ತುಪ್ಪಹೊಂಗೆ** (ನಾ). ಒಂದು ಬಗೆಯ ಮರ : "ಘೃತಪರ್ಣಕಃ— ತುಪ್ಪಹೊಂಗೆ" (ಒಷಧಿ. ೫೨). [ತುಪ್ಪ + ಹೊಂಗೆ$_1$]

**ತುಪ್ಪಳ** 'ತುಪ್ಪುಳ್' ನೋ.

**ತುಪ್ಪಳತಿಗಣೆ** (ನಾ). ಮೈಮೇಲೆ ಹಿಟ್ಟಿನಂಥ ಬಿಳಿಯ ಪುಡಿಯುಳ್ಳ ಒಂದು ಬಗೆಯ ಹುಳು, — ಕೀಟ : ತುಪ್ಪಳತಿಗಣೆ, ಸಸ್ಯಹೇನು (Mealy Bugs, Aphids). ಸಂಘಜೀವಿ ಕೀಟಗಳು ವಿವರವಾದ ಗೂಡುಗಳನ್ನು ಕಟ್ಟುತ್ತವೆ (ಕೀಟಬಿ. ೨೨).
[ತುಪ್ಪಳ (<ತುಪ್ಪುಳ್) + ತಿಗಣೆ (<ತಗುಣೆ)]

**ತುಪ್ಪಳು** 'ತುಪ್ಪುಳ್' ನೋ.

**ತುಪ್ಪುಳ್** 'ತುಪ್ಪುಳ್' ನೋ.

**ತುಪ್ಪೀರೆ** 'ತುಪ್ಪಹೀರೆ' ನೋ.

**ತುಪ್ಪು** (ಕ್ರಿ). ಉಗುಳು; ಉಗಿ : ಗಂಟಲ ಹತ್ತಿರದ ವರೆಗೆ ಹೋಗಿರುವ ಕಾಫಿಯನ್ನು ಹಿಂದಕ್ಕೆ ತುಪ್ಪಿ ಎದ್ದು ಕೂರಲು ಪ್ರಯತ್ನಪಟ್ಟಳು (ಗಂಗಾಳ.೨೯); ತೊಯ್ದಿದ್ದ ಚೌರಿಮೀಸೆಗಳನ್ನು ನೀವಿಕೊಳ್ಳುತ್ತಾ ಗಂಟಲು ಕ್ಯಾಕರಿಸಿ ಅಂಗಳಕ್ಕೆ ತುಪ್ಪಿ (ಮಲೆಮ. ೧೪); ಬಾಯಲ್ಲಿನ ಉಗುಳನ್ನು ತುಪ್ಪಿದ (ಸಂಸ್ಕಾರ. ೫೮).
[ದೇ.॥ ತಮಿ. ಮಲ. ತುಪ್ಪು; ಕೊಡ. ತುಪ್ಪ್, ತುಪ್ಪಿ; ತೆಲು. ತುಪ್ಪು ತುಪುಕ್ಕು ; ಕುಇ. ಸೂಪ ; ಕುವಿ. ಹೂಪಲಿ ; ಕುರುಖ್. ತುಪ್ಪ್‌ನಾ ; ಮಲ್ತೊ. ತುಪೆ]

**ತುಪ್ಪುಳ್** 'ತುಪ್ಪುಳ್' ನೋ.

**ತುಪ್ಪುಳಂಚು** (ನಾ). ತುಪ್ಪಟದಿಂದ ಮಾಡಿರುವ ಅಂಚು ; ಉಣ್ಣೆಯ ಅರಗು : ಎಲ್ಲರೂ ನಾಗರಿಕರೀತಿಯಲ್ಲಿ ಜಾಕೀಟುಗಳನ್ನೂ, ತುಪ್ಪಳಂಚಿನ ಮೇಲಂಗಿಗಳನ್ನೂ ಧರಿಸಿದ್ದರು (ಪುನರು ೫೦೯).
[ತುಪ್ಪುಳ್ (<ತುಪ್ಪುಳ್) + ಅಂಚು$_2$]

**ತುಪ್ಪುಳಾಸನ** (ನಾ). ತುಪ್ಪಳದಿಂದ ನಿರ್ಮಿಸಿದ ತಲ್ಪ : ಶೀಘ್ರದೊಳು . . . ಮಲಗಿಸಿ ತುಪ್ಪುಳಾಸನದಿ (ಬಿಜ್ಜಪು. ೩೦-೧೪).
[ತುಪ್ಪುಳ್ (< ತುಪ್ಪುಳ್) + ಆಸನ]

**ತುಪ್ಪುಳು** 'ತುಪ್ಪುಳ್' ನೋ.

**ತುಪ್ಪುಳುಗೂದಲು** (ನಾ). ತುಪ್ಪಟದಂತೆ ನವಿರಾಗಿರುವ ಕೂದಲು : ತುಟಿಯ ಮೇಲುಭಾಗದಲ್ಲಿ ತುಪ್ಪುಳುಗೂದಲ ಕರಿಯ ಗೆರೆಗಳು ಮೊಳೆಯ ತೊಡಗಿ ಮುಖಕ್ಕೊಂದು ಮುಗ್ಧ ಮನೋಹರತೆಯನ್ನುಂಟುಮಾಡಿದ್ದುವು (ಮಲೆಮ. ೯೪).
[ತುಪ್ಪುಳು (< ತುಪ್ಪುಳ್) + ಕೂದಲು (< ಕೂಂದಲ್)]

**ತುಪ್ಪುಳುಮೀಸೆ** (ನಾ). ತುಪ್ಪಟದಂತೆ ನವಿರಾಗಿರುವ ಮೀಸೆ, ಚಿಗುರು ಮೀಸೆ : ಬೆಳೆವ ತುಪ್ಪುಳುಮೀಸೆ ಹಳಹಳನೆ ನಳನಳಿಸೆ (ಇಹರ. ದೀ. ೩೨-೧೨); ಮುಪ್ಪಾದ ನರರೊಮ್ಮೆ ಕೊಂಡರಾ ಕ್ಷಣದೊಳು ತುಪ್ಪುಳು ಮೀಸೆಯ ಮಾಡಿ ದಪ್ಪವೇರಿಸುವ ಶಕ್ತಿಯ ಧರಿಸಿದ ಹೆರೆದುಪ್ಪವ ನೆರೆದಳು ಪತಿಗೆ (ಭರಚ. ೦೦-೩೩); ಇನ್‌ಸ್ಪೆಕ್ಟರ ಸಹಾಯಾಧಿಕಾರಿ ತುಪ್ಪುಳುಮೀಸೆಯ, ಸುಂದರ ತರುಣ (ಪುನರು. ೨೩೦).
[ತುಪ್ಪುಳು (< ತುಪ್ಪುಳ್) + ಮೀಸೆ]

**ತುಪ್ಪುಳ್, ತಿಪ್ಪುಳ್, ತಿಪ್ಪುಳ, ತಿಪ್ಪುಳಂ, ತಿಪ್ಪುಳ್, ತುಪಟ, ತುಪ್ಪಟ, ತುಪ್ಪಳ, ತುಪ್ಪಳು, ತುಪ್ಪಟ್, ತುಪ್ಪುಳ್, ತುಪ್ಪುಳು, ತುಪ್ಪುಟು, ತುಂಬಟ** (ನಾ). ೧. (ಕುರಿ, ಮೊಲ ಮೊದಲಾದ ಪ್ರಾಣಿಗಳ) ಮೃದುವಾದ ಹಾಗು ಗುಂಗುರುಗುಂಗುರಾದ ಮೈ ಗೂದಲು,—ರೋಮ ; ಉಣ್ಣೆ : ನಖದ ಮಾಂಸದಂತೆ [ ಪೂವಿನ ಕಂಪಿನಂತೆ ] ತುಪ್ಪುಟ ಬಣ್ಣದಂತೆ (ಧರ್ಮಾಮೃ. ೫-೧೨೫). ೨. ಹಕ್ಕಿಗಳ ಪುಕ್ಕ ; ಗರಿ : "ತುಪ್ಪುಳ್ = ಪಕ್ಕಿಯ ರೋಮಮಂ" (ಶಮದ. ಪರಿ. ೧); "ತುಪ್ಪುಳಿನೆ ಖಗದ ರೋಮಮಂ" (ಸಂಜೀವ. ೫); ಮನಹನುರಾಗದಿಂ ನೆಗೆದು ನೀಡಿದ ಕಂಠಮರಲ್ದ ತುಪ್ಪುಳ್ . . . ರಂಜಿಸಿತ್ತೆನೆ (ಜಗವಿ. ೪-೧೭); ಪೆಱೆಯಂಚೆಯ ತುಪ್ಪುಳ್ಗಳೊ . . . ಜೊನ್ನದ ಪೊನಲೋ (ಚಿಕವಿ. ೬-೨೬). **ತಿಪ್ಪುಳ್ :** ೨. ನಲವಿಂದೆ ತಿಪ್ಪುಳ್ಗರ್ಚ ಸಂದುಗಾಣದೆ ತೆರೆಯೊಳಿಟ್ಟು ಕಡುಮೋಹದಿಂದ ಕಂದರ್ಪಕೇಳಿಯನನಾರತಂ ಬಿಡದೆ ಯಾನಂದದಿಂದೆಸಗುತಿಹ ಜಕ್ಕವಕ್ಕಿಗಳಿಂದೆ (ಸಿದ್ಧೇಪು. ೨-೭). 'ಅಂಚೆ ದಿಪ್ಪುಳ್' ಪರಾ. **ತಿಪ್ಪುಳ:** ೨. ಮರಗಳ ದಟ್ಟೈಸುವಿಕೆಯಿಂದ ತಂಗಾಳಿಯ ತೀಟಕ್ಕೆ ಅಡಚಣೆಯಾಗಿದ್ದರೂ ಅದರ ಕುಳಿರ್ಪು ಎಲ್ಲಕಡೆಯೂ ಹಸರಿಸಿತ್ತು ; ಹುಂಜನ ಬೆಚ್ಚನೆಯ ತಿಪ್ಪುಳದ ಒಳಗೂ ನುಗ್ಗಿಹೋಗಿತ್ತು (ಕಾನೂರು. ೪೨). **ತಿಪ್ಪುಳು :** ೨. ಒಂದು ಕಡೆ ತಿಪ್ಪುಳು ಉದುರಿದ್ದು ಕಾಣಿಸಿತು (ಮಲೆಮ. ೧೪೭). **ತಿಪ್ಪುಟ್ :** ೨. "ತಿಪ್ಪುಟೆಂದು ಗಱಿ" (ಕಶಸಾ. ೬-೧೦೨) ; "ಗಱಿ ತಿಪ್ಪುಟ್" (ಕರ್ಣಾನಿ. ೩೭); "ಪಕ್ಕಿಗಳ ಗಱಿಯೆ ತಿಪ್ಪುಟ್" (ಕವಿಕಂ. ೬೩) **ತುಪಟ :** ೧. ಕುರಿಯ ತುಪಟದಿಂದ ಯಾವಾಗಲೂ ಕದರಿನಲ್ಲಿ ನೂಲುತ್ತಿರುತ್ತಾನೆ (ಬೈಸರ್ವ. ೪೫) ; ತುಪಟದ ಕಾಲುಚೀಲಗಳನ್ನು ಹಾಕಿಕೊಂಡು (ಟಾಕಶ. ೩೦) ; ತುತೂರೀ ಊದಿದರೆ ತುಪಟ ಬಂದೀತೇ ? (ಗಾದೆ). **ತುಪ್ಪಟ :** ೧. ಕುರಿಯ ಬೆನ್ನಿನ ಚರ್ಮದಿಂದ ಬೆಳೆದ ತುಪ್ಪಟದಿಂದ ಕತ್ತರಿಸಲ್ಪಡುವ ಕೂದಲೇ ಉಣ್ಣೆ (ಗೃಹವಿ. ೩೮) : ಎಲ್ಲಾ ಕಡೆಗಳಲ್ಲಿಯೂ ವೃದ್ಧರಂಕುಮೃಗದ ತುಪ್ಪಟದ ಬಣ್ಣವುಳ್ಳ ಬಿಳುಪು ಕ್ರಮಕ್ರಮವಾಗಿ ಹರಡುತ್ತಿತ್ತು (ಸೌಂದಸ. ೦೪೫). ೨. "ಗರುತ್, ಗರಿ ಈ ೨ ಹಕ್ಕಿಯ ತುಪ್ಪಟಂ" (ಕಾಕಶ. ೭೪). **ತುಪ್ಪಳ :** ೨. "ತುಪ್ಪಳಮೆನಲ್ ಪಕ್ಷಿರೋಮಮಂ" (ಕಶರ. ೪೭) ; ಅಂಚೆಯ ತುಪ್ಪಳಕ್ಕಿಂತ ನವುರಾದ ಆಕಾಶ ವರ್ಣದ ಕಿಂಕಾಬುವಸ್ತ್ರ (ಸುವಸಂ. ೪); ಅಲ್ಲಲ್ಲಿ ಉದುರಿದ್ದ ಹಕ್ಕಿಗಳ ತುಪ್ಪಳ ವನ್ನು ಆರಿಸಿ ತಂದು ಒಳಗೆ ಹರಡಿ ಹಾಸಿಗೆಯಂತೆ ಮಾಡಿತು (ಕಪಪು. VII, ೫೪). **ತುಪ್ಪಳು :** ೨. ಗಿಣಿಯ ತುಪ್ಪಳು ನೋಡಲು ಬಹಳ ಚೆನ್ನಾಗಿರುತ್ತದೆ (ರೂಢಿ). **ತುಪ್ಪಟ್ :** ೨. ಕೆದಱುತುಂ ತುಪ್ಪಟ್ಗಳಂ . . . ಏನೊಪ್ಪಿರ್ದುವೋ ಕೇಕಿಗಳ್ (ಉದ್ಭಟ. ೯-೧೪೧). **ತುಪ್ಪುಳ್ :** ೨. "ತುಪ್ಪುಳೆನಲ್ ಖಗದ ರೋಮಮೆಂದಱಿಗೆ ಬುಧರ್" (ಭಾರನಿ. ೯); ಹಂಸೆಯ ತುಪ್ಪುಳಹಾಸಿನ ಮೇಲೆ ಬಿಜಯಂಗೆಯ್ಸಿ (ನಂಬಿರ. ೨-೬೮). **ತುಪ್ಪುಳು :** ೨. ಪಕ್ಷಿ ಮುಱಿಗಳನಿಕ್ಕುತ್ತ ಕಂಡೆ ತುಪ್ಪುಳು ಬಾರದು (ಅವಚಂ. ೧೭೦-೭೬೮) : ಅರೆಮುಗಿದ ಲೋಚನದ ಸಂಪುಟವರಳಿ ಚಲಿಸುದ ಚಂಚುಪುಟದುಪ್ಪರಿಸಿದಂಘ್ರಿಯ ಕೆದಱಿದೆಱಕೆಯ ಬಿರಿತ ತುಪ್ಪುಳಿನ... ಸುರಿವ ನೆತ್ತರ ಪತಿಯ ಸುತ್ತಲು ತಿರುಗಿ ಚೀಱುವ ವಿಹಗಸತಿಯನು

ಕಂಡನಾ ಮುನಿಪ (ತೊರರಾ. ೧-೨-೧೪); ಗಲ್ಲದಲ್ಲಿ ತುಪ್ಪುಳಿದ್ದು ಉಗ್ಗಿ ಹಿಗ್ಗಿ ನನೆಯುತಿರುವಿ (ಹಾಡುಪಾ. ೨೯-೫). **ತುಪ್ಪುಟಿ : ೧.** ಮೊಲದ ತುಪ್ಪುಟಿ—ಶಶೋರ್ಣ (ನಾಚರಾ. ೬). **೨.** "ತುಪ್ಪುಟಿಂದು ಪಕ್ಕಿಯು ರೋಮಂ" (ಕಶಸಾ. ೬-೧೦೩): ಅಪಾರತನೂರುಹವ್ರಜಂ ಮಿಂಚುವ ತುಪ್ಪುಟಿಯಾಗೆ (ಉದ್ಭಟ. ೫-೧೦೫). **ತುಬಟ : ೧.** ಕುರಿಗಳ ಸಂತಾನ ಬೆಳೆಯಿತು. ಒಳ್ಳೆ ತಳಿ. ಅವುಗಳ ತುಬಟವಾದರೂ ಬಹಳ ನಯವೂ, ಉಣ್ಣೆ ಬಟ್ಟೆಬರೆಗಳ ಕೈಗಾರಿಕೆಗೆ ಬಹಳ ಉಪಯೋಗಕರವೂ ಆದದ್ದು (ಗಂಪ್ರ. ೦೦೩).

**ತುಪ್ಪುಳ್ದೂರಾಗು**= ತುಪ್ಪುಳದಂತೆ ಹಗುರವಾಗಿ ತೂರಿಹೋಗು : ಹಿಂದಕ್ಕೆ ಬೀಳುತ್ತಿದ್ದು, ಮೆಯ್ವುಳಿಯು ಉಳಿಯು ಬಿನ್ನಣದಿಂದ ತುಪ್ಪುಳ್ದೂರಾಗಿ ನಿಕ್ಕುಳಿಸಿ ನಿಂತು...ಪುದಿಗೆ ಒರಗಿಸಿ ನಿಲಿಸಿ (ಮಂತ್ರಶ. ೩೦-೪).

[ ದೇ.೫ ತಮಿ. ತೂವಲ್, ತೂವಿ ; ಮಲ. ತೂವಲ್, ತೊಪ್ಪಲ್, ತೊಪ್ಪ, ಚೊಪ್ಪ ; ತುಳು. ತುಯಿ, ಸುಯಿ ; ಕೊಡ. ತೊಪ್ಪಿಟ ; ತೆಲು. ತುಪ್ಪುಡು, ತ್ರುಪ್ಪುಡು]

**ತುಪ್ಪುಟಿ** 'ತುಪ್ಪುಟಿ' ನೋ.

**ತುಪ್ಪೂರು** (ನಾ). ಒಂದು ಊರಿನ ಹೆಸರು : ಇರ್ವರುಂ ತುಪ್ಪೂರಾಳ ಅರಸರಾನನುಮತಪ್ಪಡಿಸಿ (ಮೈಅರಿ, ೧೯೨೫. ೧೦೬-೨೭ ; ?).

[ ತುಪ್ಪ + ಊರು3 (<ಊರ್) ]

**ತುಪ್ಪೆ** 'ತೊಂಬೆ2' ನೋ.

**ತುಪ್ಪೆನ್** (ಕ್ರಿ). ಉಗುಳು ; ಕಾರು ; ಕಕ್ಕು : ಸುರರುಂ ದೈತ್ಯರುಮು ಬ್ಧಿಯಂ ಕಡೆವುತಿರ್ಪ್ಪಂದುಗ್ರಶೇಷಾಹಿ ಭೀಕರಕೋಪಾಗ್ರುಹಿ ಕಾಳಕೂಟ ವಿಷಮಂ ತುಪ್ಪೆಂದಡೆ (ಕಇಆ. ೯೭ -೪-೫೭ ; 12ನೆಯ ಶತ).

[ ತುಪ್ಪು + ಎನ್1 ]

**ತುಪ್ಪೇಱು** (ಕ್ರಿ). ೧. ತುಪ್ಪದಿಂದ ಲೇಪನ ಹೊಂದು, -ಜಿಡ್ಡಾಗು : ತುಪ್ಪೇಱಿದ ದರ್ಪಣದೊಳ್ ಪಜ್ಜಳಿಸಲಾರ್ಪುದೇ ಪ್ರತಿಬಿಂಬಂ (ಯಶೋಚ. ೦-೬೭). **೨.** (ಆಲಂ) ಕುಗ್ಗು ; ಕಮ್ಮಿಯಾಗು: ಇನಿತು ಸುಡುನುಡಿಯೇಕೆ ತುಪ್ಪೇಱಿದೊಲವಿಂಗೆ ತಪ್ಪು ಕರಸಾಣೆ ಮತ್ತೆ ಪೊಸತಪ್ಪುದನಱಿಯೆ (ಅನಂಪು. ೮-೧೭ ವ). [ ತುಪ್ಪ + ಏಱು1 (< ಏಱ್1) ]

**ತುಪ್ಪೊಡೆ** (ನಾ). ತುಪ್ಪದಲ್ಲಿ ಕರಿದ ವಡೆ : ಮಾಡಿದ ಪುಳ್ಗಿ ಕಜ್ಜ ತೊಗೆ ತುಪ್ಪೊಡೆ . . . ಮೊದಲಾದವೆಲ್ಲವುಂ ಜೋಡಿಸಿ ತೋರ್ಪವಿಂತಿವರ ಭೋಜನಕಾರ್ ಗುಱಿಯ್ಯೆ ಮದೀಶ್ವರಾ (ಹಾಲಾಸ್ಯ. ೧-೮೮೫).

[ ತುಪ್ಪ + ಒಡೆ3 (< ವಡೆ2) ]

**ತುಪ್ಪೋಗರ** (ನಾ). ತುಪ್ಪದಲ್ಲಿ ಕಲಸಿದ ಅನ್ನ : ಉತ್ತರಾನಕ್ಷತ್ರದಲ್ಲಿ ಜ್ವರ ಬರಲು ಏಳುದಿವಸ ಕಾಡುವುದು. ಆ ನಕ್ಷತ್ರಾಧಿದೈವವಾದ ಭಗದೇವತೆಗೆ ತುಪ್ಪೋಗರವ ಬಲಿಯು ಹಾಕಿಸುವುದು (ವೈದ್ಯಸಾ. I, ೦೩೨).

[ ತುಪ್ಪ + ಓಗರ ]

**ತುಫಾನ್** 'ತುಫಾನು' ನೋ.

**ತುಫಾನಿ** 'ತುಫಾನು' ನೋ.

**ತುಫಾನು, ತುಪಾನು, ತುಫಾನ್, ತುಫಾನಿ, ತೂಫಾನು** (ನಾ). **೧.** ಬಿರುಗಾಳಿ ; ಚಂಡಮಾರುತ : ಕಾನಡಾಜಿಲ್ಲೆಯ ಸಮುದ್ರತೀರದಲ್ಲಿ ಬಹುತರ ತುಫಾನುಗಳಾಗುವುದಿಲ್ಲ (ಕಭಾಗ. ೦೨); ಸಮುದ್ರದಲ್ಲಿ (ಉಬ್ಬರ) ತುಫಾನು ಏಕೆ ನಿಲ್ಲಲಿಲ್ಲ (ಕಮುಕ. ೦೬೩); ಈ ತುಫಾನಿನಲ್ಲಿ ಎಷ್ಟೋ ಹಡಗುಗಳು ಮುಳುಗಲಿವೆ (ಕೈಲಾಕ. ೭೦). **೨.** ದೂರಂ ; ಅಪವಾದ ; ದೂಷಣೆ: ತುಫಾನು ಬಂದರೂ ಬರಬಹುದು (ದಾಲತ್. ೩೦೨). **ತುಪಾನು : ೨.** ಇಂತಹ ತುಪಾನು ಮಾಡುತ್ತಲೇ ಇರುತ್ತಾಳೆ (ದಾಲತ್. ೧೩೫); ತುಪಾನು ಬಂದ ಮೇಲೆ ತಬ್ಬಿಕೊಂಡರೆ ಆದೀತೆ ? (ಗಾದೆ). **ತುಫಾನ್: ೧.** ಲಕ್ಷದ್ವೀಪದ ಕಡೆಗೆ ಹೋಗುತ್ತಿರುವಾಗ ದೊಡ್ಡದಾಗಿ ತುಫಾನ್ ಗಾಳಿ ಎದ್ದು ಹಡಗು ಮುಳುಗಿಹೋಗುವ ಸಮಯವಾಯಿತು (ಪೇಟಿಪಾ. ೩೩). **ತುಫಾನಿ : ೨.** ನಿನ್ನ ಮ್ಯಾಗ ಏನ ತುಫಾನಿ ಹೊರಸ್ಯಾಳು (ನಡದಾ. I, ೨೧೮); ನನ್ನ ಮ್ಯಾಲೇ ತುಫಾನಿ ಹೊರಸತೀರಲ್ಲ ? (ಗ್ರಾಮಾಯ. ೩೩). **ತೂಫಾನು : ೧.** ಇವತ್ತು ಹೋಗುವುದು ಬೇಡ, ತೂಫಾನು ಉಂಟು (ಹೊಸಕ್ಕ. ೫೭)

[ ← ಮರಾ. ತುಫಾನ್ ; ಅರ. ಹಿಂ. ತೂಫಾನ್ ]

**ತುಬಟ** 'ತುಪ್ಪುಟಿ' ನೋ.

**ತುಬಾಕಿ** 'ತುಪಾಕಿ' ನೋ.

**ತುಬ್ಬರಿಕೆ** (ನಾ). ಕಳವನ್ನು ಪತ್ತೆ ಹಚ್ಚುವಿಕೆ ; ಅಪರಾಧಿಗಳನ್ನು ಕಂಡುಹಿಡಿಯುವಿಕೆ : ತುಬ್ಬರಿಕೆಯ ಖಾತೆಗೆ ಸೇರಿ, ಯಾವುದೊಂದು ರಹಸ್ಯವಾಯ ತುಬ್ಬನ್ನು ಭೇದಿಸುತ್ತಾ (ಕಾಬಝಾ. ೩೦).

[ ತುಬ್ಬು1 + ಅರಿಕೆ (< ಅಱಿಕೆ) ]

**ತುಬ್ಬರಿವಿಕೆ** (ನಾ). = ತುಬ್ಬರಿಕೆ: ರಾತ್ರಿ ೧೦ ಘಂಟೆಯಿಂದ ಈಗ ೨ ಘಂಟೆಯವರೆಗೆ ನಡೆದ ತುಬ್ಬರಿವಿಕೆಯಲ್ಲಿ ಅವನು ಯಶಸ್ವಿಯೇ ಆಗಿದ್ದನು (ಕಾಬಝಾ. ೩೦). [ ತುಬ್ಬು1 + ಅರಿವು (< ಅಱಿವು) + - ಇಕೆ ]

**ತುಬ್ಬಿಸು** (ಕ್ರಿ). ೧. ಪತ್ತೆಮಾಡಿಕೊಡು ; ಹುಡುಕಿಕೊಡು : ಗಬ್ಬಿತನದೊಳಾತ ಹೊಕ್ಕಿರ್ದುದ ಕಂಡು ತುಬ್ಬಿಸಿಕೊಟ್ಟವರಾವು (ಪೋಹತ. ೩೬-೧೭). **೨.** ಹರಡು ; ಪ್ರಕಟಪಡಿಸು : ನಿನಗೊಂದು ಲಂಚವನೀವೆ ತುಬ್ಬಿಸದಿರೀ ಮಾತ ಭಕ್ತರೊಳಗೆ (ಪ್ರಭುಪು. ೮-೯೭).

[ ತುಬ್ಬು1 + - ಇಸು3 ]

**ತುಬ್ಬು1, ತೆಬ್ಬು1** (ಕ್ರಿ). ೧. ಕಳ್ಳನನ್ನು ಪತ್ತೆಹಚ್ಚು,—ತೋರಿಸು,—ಶೋಧಿಸು : "ತುಬ್ಬು–ಚೋರಸೂಚನೇ (ಕಳ್ಳನನ್ನು ತೋರಿಸು), ತಲ್ಲಂಚೇ ಚ (ಸಿಕ್ಕಿಬಿಡು)" (ಶಮಧಾ). **೨.** ಹೊರಗೆಡಹು ; ಬಯಲು ಮಾಡು ; ಪ್ರಕಟಿಸು ; ತಿಳಿಸು : ನಾಲಗೆ ಕುಲಮಂ ತುಬ್ಬುವವೊಲುಱದೆ ನೀಂ ಕೆಡೆನುಡಿವೈ (ಪಂಪಭಾ. ೧೦-೨೦); ತುಬ್ಬಿಕೊಟ್ಟುದವಿದ್ಯೆಯ ಸುಧೆಗೊಬ್ಬುಗಳ ಗಂಡಿಗರ ಗಾಢದ ಗರ್ಭವನು ಹೊಳ್ಳಿಸಿತು ಗರಳಗ್ರೀವ ನುಪದೇಶ (ಕುವ್ಯಾಕ. ೬-೩೦). **೩.** ಹೊರಬೀಳು ; ಬಯಲಾಗು : ಪುಡುಕೆಯ ಮೊಲನಂತೆ ತುಬ್ಬು [ಪಾಠಾಂ. ಕುಂಬು] ತಿರ್ಪರ್ ಪಗೆವರ್ (ಜಾಪುಂಪು. ೪); ಸಾಕಿನ್ನು ಹೇಳದೊಡೆ ಮಾಣಲಂತಸ್ಥಮದು ತಾನೆ ತುಬ್ಬುವುದೆಂದು ನಗುತಿರ್ದರು (ಜೈಮಿಭಾ. ೩೦-೩೦). **೪.** ಹರಡು ; ವ್ಯಾಪಿಸು : ಸರ್ಬಜನರಿಗೆ ವಿರೋಧ ತುಬ್ಬದೆ ಬಿಡದು (ಅಂಜಜ. ೪-೮೨); ತುಬ್ಬುವುದೊ ತಾ ಬಂದ ಬರವಿದು (ಕುವ್ಯಾವಿ. ೩-೩೯) ; ಸಂಜೆಗೆಂಪಾದುದು ದಿಶಾವಳಿಯ ತು [ಪಾಠಾಂ. ತ] ಬ್ಬಿದಲಗಿನ ಬೆಳಗಿನಲಿ (ತೊರರಾ. ೬-೨೫-೦೦); ನಾಳೆ ತುಬ್ಬುವುದು ಈ ಸುದ್ದಿ (ಚಂದ್ರಹಾ. ೩-೩೯). **೫.** ತಳ್ಳು ; ನೂಕು : ನರಕದತ್ತಲು ತುಬ್ಬ ಹೇಳೋ ಖಳರನು (ಕೌಶಿರಾ. ೨೦-೪೪) ; ಉಬ್ಬಿದಳು ಹರುಷದಲಿ ದುರಿತವನೆಬ್ಬಿದಳು ಕಳವಳದ ಹಸರವ ತುಬ್ಬಿದಳು (ನಿಭಾಗ. ೮-೧೫-೭); ಅಬ್ಬರಿಸಿ ತೋಳ್ಗಳಲಿ ನಭವನು ಗಬ್ಬರಿಸುತ್ತೈತರಲು ಚಕ್ರವ ತುಬ್ಬಿದನು ತುದಿವೆರಳ ಸನ್ನೆಯಲಿ (ನಿಭಾಗ. ೦೦-೬೯-೦೭). **೬.** ಉತ್ಸಾಹಿಸು: ಬೀಕಲಿನ ಭಟರುಬ್ಬಿದರೆ ಸುವ್ಯಾಕುಲರು ತುಬ್ಬಿದರೆ ತಪ್ಪೇನೀ ಕಳಂಬವ ಕಾಯ್ದುಕೊಳ್ಳೆನುತೆಚ್ಚನಾ ಪಾರ್ಥ (ಕುವ್ಯಾಕ. ೨-೫೨). **೭.** ಅಪಹರಿಸಂ : ರಾಜದ್ರವ್ಯವನು ಬಯಸಿ ತುಬ್ಬಿದರೆ . . . ಕಾಲಿಗೆ ಕಬ್ಬುನದ ಕಡೆಯುವನು ತೊಡಿಸುವರು (ನಿಭಾಗ. ೦೦-೩೭-೫). **ತೆಬ್ಬು1: ೪.** ಕೋಪದಿಂದುಬ್ಬಿ ಕೊಬ್ಬಿಱಿದು ಕುಬುಬುಬುಬೆಂದು ಕೂಗಿಟ್ಟಡೊಡನಂಬರಂ ಕೂಗಲು ತೆಬ್ಬುತೆಸ್ಸೆಸೆಯ ಮೂಲೆಯ ಕರ್ಣ ಕೋಟರಗಳಾರ್ಭಟದೆ ಕಿವುಡುವಡೆದವು (ಲಶಿಚಂ. ೧೮-೨೯) : ಅಬ್ಬರಕೆ

ಹಿಂಡೊಡೆದು ಹಾಯ್ದುವು ಸೂಸಿದವು ದೆಸೆಗೆ ಕೆಬ್ಬಿದವು . . . ವೇಡೆಯು ವರಿಗೆ ಹಬ್ಬವಾಯ್ತು (ಕುವ್ಯಾಅ. ೦೩-೨೫). ೮. ತೂರು ; ಎಸೆ : ತೆ [ಪಾಠಾಂ. ತು] ಬ್ಬಿ ತುಳುಕುವ ಕಣೆಯ ಕಣೆಯಲಿ ಹಬ್ಬಿ ಹರೆದುದು ತೋರದಲಿ ಬಲಿದುಬ್ಬುಗವಳದ ಕಣ್ಣುಗಳು ಕರ್ಣಾವಸಾನದಲಿ (ಕುವ್ಯಾಕ. ೨೬-೫೦). [ದೇ.॥ ತಮಿ. ತುರುವು]

**ತುಬ್ಬು₂** 'ತೊಬ್ಬು' ನೋ.

**ತುಬ್ಬು₃** (ನಾ). ೧. ಕಳ್ಳತನ ಮೊದಲಾದ ಅಪರಾಧವನ್ನು ಕಂಡು ಹಿಡಿಯುವಿಕೆ,–ಅಪರಾಧದ ಪತ್ತೆ : ಕಳವುಗಳು ನಿಲ್ಲಲಿಲ್ಲ. ಒಂದಾದರೂ ತುಬ್ಬು ಆಗಲಿಲ್ಲ (ವಾಗ್ವೇವಿ. ೧೪೦) ; ಆದರೂ ಕಳ್ಳರ ತುಬ್ಬು ಆಗಲಿಲ್ಲ (ಈಕಥೆ. ೦೦೨). ೨. ಬೇಹುಗಾರಿಕೆ ; ಗೂಢಚರ್ಯೆ : ಪೋಲೀಸರು ಇತ್ತೀಚಿಗೆ ನಡೆದ ಕೊಲೆಯ ಬಗ್ಗೆ ತುಬ್ಬು ನಡೆಸುತ್ತಿದ್ದಾರೆ (ರೂಢಿ). ೩. ಪ್ರೋತ್ಸಾಹ : ಉಬ್ಬಿದನು ನಿನ್ನಾತನಾತನ ತುಬ್ಬಿನಲಿ (ಕುವ್ಯಾಕ. ೨೬-೫೦).

**ತುಬ್ಬಾಗು**=ಗೊತ್ತಾಗು ; ಪತ್ತೆಯಾಗು : ವಿದ್ಯುನ್ಮಾಲಿವೆಸರ ರಕ್ಕಸನ ಪೆರ್ವಡೆ ತುಬ್ಬಾದತ್ತು (ರಾಮಾಶ್ವ. ೧೦೦-೦೬) ; ಇಷ್ಟು ದಿನಗಳ ಅಭಾವದ ಹೊಲಬು ತುಬ್ಬಾಗಿ (ವೀರಬಂ. ೩೯) ; ತೋಟದ ಏಲಕ್ಕಿ ಕದ್ದುಹೋದದ್ದು ಮಾತ್ರ ತುಬ್ಬಾಗದೆ ಉಳಿಯಿತು (ಕುಡಿಕೂ. ೦೪೦) ; ತುಬ್ಬಾಗದ ಕಳವು ಮಬ್ಬಾದ ಮೇಲೆ ಸಿಕ್ಕೀತೆ ? (ಗಾದೆ). **ತುಬ್ಬಿನವದಿರು** = ಗೂಢಚರ್ಯೆ ಮಾಡುವವರು ; ಗೂಢಚಾರರು : ಉಬ್ಬಿದನಲ್ಲೆ ಮಧುರವಚನದ ಹಬ್ಬದಲಿ ನಿನ್ನಾತನಿತ್ತಲು ತುಬ್ಬಿನವದಿರು ತಂದು ಬಿಸುಟರು ನಿಮ್ಮ ಪಾಳಯದ ಸರ್ವವೃತ್ತಾಂತವನು (ಕುವ್ಯಾಶ. ೧-೨೮). **ತುಬ್ಬುಮಾಡು** = ಪತ್ತೆಮಾಡು; ಕಂಡುಹಿಡಿ : ಹುಲಿಯ ಹೆಜ್ಜೆಗಳ ಜಾಡನ್ನು ಹಿಡಿದು ಹುಲಿ ಹೋದ ದಾರಿಯನ್ನು ತುಬ್ಬುಮಾಡಿದ (ಹುಲಿಹಾ. ೦೮) ; ನೋಡಿ ತುಬ್ಬುಮಾಡ ಬೇಕಾದವನು ನೀನು (ಕುಡಿಕೂ.೨೬೪). **ತುಬ್ಬುಹಚ್ಚು** = ತುಬ್ಬುಮಾಡು : ಸರಲಾಕ್ಷರಾಯರು ಅಪರಾಧಿಗಳ ತುಬ್ಬುಹಚ್ಚುವುದರಲ್ಲಿ ಒಳ್ಳೇನಿಪುಣರೂ, ದಕ್ಷರೂ ಆಗಿರುವರು (ತೊಳೆಮು. ೨೫೦).

[<ತುಬ್ಬು₁./ತಮಿ. ತುಪ್ಪು ; ಮಲ. ತುನ್ಪು ; ತುಳು. ತುಬ್ಬು]

**ತುಬ್ಬುಕಾಐ**, ತುಬ್ಬುಗಾರ (ನಾ). ರಹಸ್ಯಗಳನ್ನು ಪತ್ತೆಹಚ್ಚು ವವನು; ಪತ್ತೇದಾರ ; ಗೂಢಚಾರ : ಆಕರಿಸಿ ಬೆಸಗೊಂಡು ಬಿಟ್ಟರನೇಕ ನೃಪರನು ಬೇಹು ಹರಿದುದು ನಾಕುಮುಯ್ಯಲಿ ತುಬ್ಬುಕಾಐರಿಗಿತ್ತು ಬಹುಧನವ (ತೊರರಾ. ೪-೯-೦೦). **ತುಬ್ಬುಗಾರ** : ತುಬ್ಬುಗಾರರ ಶೋಧಕ್ಕೆ ತುಬ್ಬುಗಾರರನ್ನು ನಿಯಮಿಸುವ ಸಮಯ ಬಂದಿದೆ (ಕೃತಕ್ಕ. ೦೩೦) ; ನರಸಿಂಗರಾಯರಂತಹ ಚಾಣಾಕ್ಷ ತುಬ್ಬುಗಾರ ಮಂಕು ಹಿಡಿದು ಕುಳಿತಿರುವಾಗ ನನ್ನಂತಹವನಿಂದ ಏನು ತಾನೇ ಆದೀತು ? (ಕರ್ಣಪಿ. ೮೩). [ತುಬ್ಬು₃ + – ಕಾಐ]

**ತುಬ್ಬುಗಾರ** 'ತುಬ್ಬುಕಾಐ' ನೋ.

**ತುಬ್ಬುಗಾರಿಕೆ** (ನಾ). ಬೇಹುಗಾರಿಕೆ ; ಗೂಢಚರ್ಯೆ : ತುಬ್ಬುಗಾರಿಕೆಯ ಸನ್ನಿವೇಶಗಳಲ್ಲಿ ಅವನ ಮತವನ್ನು ವಿಚಾರಿಸುತಲಿದ್ದರು (ಕೃತಕ್ಕ. ೮೨).

[ತುಬ್ಬುಗಾರ (<ತುಬ್ಬುಕಾಐ) + – ಇಕೆ]

**ತುಬ್ಬುಗೊಡು** (ಕ್ರಿ). ಗುರುತುಮಾಡಿ ತೋರು : ಉಬ್ಬಿ ರಣದೇವತೆಗೆ ಮಿಕ್ಕಿನ ಕರ್ಬುರರ ತೋಱಿಸಲಿಕಸುರನ ತುಬ್ಬುಗೊಟ್ಟನು ತೋಟಿ ನಿಂದುದು ತಾಮಸೀಚರನ (ತೊರರಾ. ೬-೩೯-೨೩).

[ತುಬ್ಬು₁ + ಕೊಡು₁]

**ತುಮಕಿ** (ನಾ). ಒಂದು ಬಗೆಯ ಮರ ; ತಿಂದುಕ : ಕುಷರಥ, ಓಗೆ, ತುಮಕಿ, ತಿಂಡುಕ,ಹೊಳೆತುಮ್ರಿ, ಬಂಧ (ವೃಜಿಗಿ. ೩೦-೬೦೩).

[← ತೆಲು. ತುಮಿಕಿ, ತುಮ್ಮಿಕಿ, ತ್ರುಮ್ಮಿಕಿ]

**ತುಮರಿ** 'ತುಂಬುರ್' ನೋ.

**ತುಮರು** 'ತುಮುರು' ನೋ.

**ತುಮಾನ್** (ನಾ). ಸಡಿಲವಾದ ಹಾಗು ನೀಳವಾದ ಚಲ್ಲಣ : ಅವನ ತುಮಾನ್, ಅವನ ಶೇರವಾನ್, ಅವನ ಮುಂದೀಲ ಮುಂತಾದವುಗಳನ್ನು ನೋಡಲಾಗಿ ಅವನು ಒಳ್ಳೇ ಮನೆತನಸ್ಥನಾಗಿ ತೋರಿದನು (ತೊಳೆಮು.೨೮೪).

[← ಮರಾ. ತುಮಾನ್ ; ಪಾರ. ತುಂಬಾನ್]

**ತುಮಿಸು** (ಕ್ರಿ). (?) : ಮೇಲ್ವಲ ಮುಚ್ಚಿ ತುಮಿಸಿ ತಳವೆಳಗಾಗುವಂತೆಸಗೆ (ಜಿನಮು. ೦೭-೦೪). [? + – ಇಸು₃]

**ತುಮುಕು₁** (ಕ್ರಿ). "ತುಳುಕು" (ಜಾನಕೋ. ೬೬): ಕೆರೆ ತುಂಬಿ ತುಮುಕುತ್ತಿದೆ (ರೂಢಿ). [← ತುಳು. ತುಮುಕು,ತಿಮುಕು,ದಿಮುಕು]

**ತುಮುಕು₂** 'ಟುಮುಕು' ನೋ.

**ತುಮುರು**, ತುಮುರು (ನಾ). ೧. ಚೂರು ; ಭಾಗ ; ಖಂಡ : ಹುರಿದ ಬಡಗಸಂಡಗೆಯ ತುಮುರಿತ್ತು ಬಿಳಿಯುಪ್ಪುಳ್ಳಿಯಿಕ್ಕಿ (ಸೂಪಶಾ. ೩-೦೭); ಸಬಳಚಕ್ರಮಾಕ್ಷಣಂ ತುಮುರಾದುವು (ಜಿಬಪು. ೪೪-೦೩) ; ತುಮುರೆದ್ದೊಡೆದ ನಿಸ್ಸಾಳೆಗಳ ವಾದ್ಯದ ಗಡಣದಿಂದಲಿ ರೂಢಿ ಮಿಗೆ ರಂಜಿಸಿತು ರಣಭೂಮಿ (ಪ್ರಹ್ಲಾಜ. ೦೫-೫೩); ಹಡಗನು ಕೇಲಿಸಿ, ತುಮುರನು ತೇಲಿಸಿ, ದಡದಲಿ ಝಾಡಿಸಿ...ಬರುತಿದೆ (ಕಎಪು. ೨೭-೩). ೨. (ಕರಾ) ತಾಳೆಗರಿ ಛತ್ರಿಯ ಬಿದಿರಿನ ಕೀಲುಕಡ್ಡಿ : ಸ್ವತಃ ಐತಾಳರು ಹಿಡಿದ ಕಾಲುಕೊಡೆ, ಮದುವೆಯ ಮನೆಯನ್ನು ಏರುವಾಗ ತುಮುರು ಮಾತ್ರ ಉಳಿದಿತ್ತು (ಮರಮು. ೩). **ತುಮುರು** : ೧. ಆ ಸಂಘಟ್ಟನದಲ್ಲಿ ಅವರಿಬ್ಬರ ಭರ್ಜಿಗಳೂ ತುಮರು ತುಮರಾಗಿ ಒಡೆದುಹೋದವು (ಭಾರವೀ. ೦೨೪).

**ತುಮುರು ತುಮುರು**, ತುತ್ತುಮುರು, ತುಮುರ್ತುಮುರು (ದ್ವಿರುಕ್ತಿ): ಅವರು ಎಸೆದ ಆಯುಧಗಳಂ ತಮ್ಮ ಬಾಣಗಳಿಂ ತುಮುರುತುಮುರಾಗಿ ಮಾಡುತ (ಸೌಗಂಧಿ. ೨೯೬-೦೫) ; ಸೂತನಂ ರಥ ರಥಾಂಗಂಗಳಂ ತುಮುರು ತುಮುರಾಗಿಸಿದರು (ಶೇಷರಾ. ೦೭೫-೩೫) ; ಆ ಕುಲಿಶದೇಹಿಯುನು ಶರಹತಿ ತಾಕೆ ತುತ್ತುಮುರಾಗಿ ಬೀಳಲನೇಕ ನಿಶಿತಾಯುಧಂಗಳಿಂದಬ್ಬರಿಸಿ ಘಾತಿಸಲು (ಅನಂರಾ. ೪-೫-೯) ; ಅರ್ಜುನನು ಹತ್ತು ಬಾಣಗಳನ್ನು ಪ್ರಯೋಗಿಸಿ ಆದರ ತಲೆಯನ್ನು ತುತ್ತುಮುರು ಮಾಡಿದನು (ಕೃವಾಅ. ೨೪೯) ; ಅವನ ತೇರ್ತುಮುರ್ತುಮುರಾಗಲೆಚ್ಚು ವಸುಮತಿಗೆ ಕೆನ್ನೀರ್ ತುಳ್ಕಿ ತುಳ್ಕಿದಂ (ಜಿಬಪು. ೪೯-೪೦); ಪುಷ್ಪಾಸ್ತ್ರದಿಂದಂ ರತಿಕಾಂತಂ ರೋಷವಾಂತೆನ್ನೆರ್ದೆ ತುಮುರ್ತುಮುರಪ್ಪಂತೆ ಪೊಯ್ದಪ್ಪಂ (ದಮುಸ್ಕ.೦-೦೨೪). **ತುಮುರುಮಾಡು** = ಚೂರು ಮಾಡು; ತುಂಡುಮಾಡು: ಅವು ಕಾಣದ ರೀತಿಗೆ, ಆ ಸರ್ಪಗಳಂ ಹಿಡಿದು ತುಮುರುಮಾಡಿ (ಕೃವಾಅ. ೫೬).

[ದೇ.॥ ತುಳು. ತಿಬುರು ; ತೆಲು. ತುಮುರು]

**ತುಮುಲ**, ತುಮುಳ (ಗು). ೧. ಗಡಿಬಿಡಿಯಿಂದ ಕೂಡಿದ ; ದೊಂಬಿಯಿಂದ ಕೂಡಿದ; ಗಲಾಟೆಯುಳ್ಳ: ಆಶ್ರಮದ್ರುಮಶಿಖರನೀಡ ನಿಕಟಾಭಿಮುಖ ಕಲಕಲ ತುಮುಲ ಪಕ್ಷಿಗಾನಂ (ಶ್ರೀರಾಮಾ. ೦೭೬-೫). ೨. ತೀಕ್ಷ್ಣವಾದ ; ಘೋರವಾದ : ತುಂಬೆಪಾಡಿಯಲ್ಲಿ ಇವೆರಡು ಪಕ್ಷದವರಿಗೂ ತುಮುಲವಾದ ಯುದ್ಧವಾಯಿತು (ಕರ್ಣಾಅ.೦೮೩). (ನಾ). ೩. ಗೊಂದಲ; ಗಲಿಬಿಲಿ; ಗಲಭೆ; ಹುಯಿಲು : ಎಲ್ಲಾ ಕಲೆಗಳೂ ಕ್ಷಣಿಕವಾದ ತುಮುಲಗಳನ್ನು ಹಿಡಿದಿಡಲು ಯತ್ನಿಸದೆ...ಸಾರ್ವಕಾಲಿಕವಾದ ಭಾವಗಳನ್ನೇ ಅಭಿವ್ಯಕ್ತಿಗೊಳಿಸಲು ಹೊರಟಿದ್ದು ಒಂದು ವಿಶೇಷ (ಸೌಂದಸ. ೦೩೩) ; ಆಕೆಯ ಮಾನಸದಲ್ಲಾವುದೋ ಭಯಂಕರ ತುಮುಲವೊಂದು ನಡೆಯುತ್ತಿದೆ (ಬಾಣಅ. ೨೦): ಪ್ರಶ್ನೋತ್ತರಗಳ ತುಮುಲ ಮನದಲ್ಲಿ ಭರದಿಂದ ಸಾಗುತ್ತಿದ್ದಿತು (ತ್ಯಾಗಮ.೦೨೫). ೪. ಗುಂಪುಗೂಡಿ ನಡೆಸುವ ಕಾಳಗ; ದೊಂಬಿಯಿಂದ್ಧ : "ತುಮುಲ, ರಣಸಂಕುಲಂ–೨ ಸೇನೆಗಳೂ ದೊಂಬಿಯಾಗಿ ಸೇರಿ ಹರಡುವ

ದ್ವಂದ್ವಯುದ್ಧದ ಹೆಸರು" (ಸಿದ್ಧಾಂ.ತಿ. ೨೩೦). **ತುಮುಳ** : ೧. 'ತುಮುಳ ಕೇಳಿ' ಪರಾ. [ಸಂ.]

**ತುಮುಲಕಾಳಗ** (ನಾ). = ತುಮುಲ ೪ : ಕುದುರೆ ಕುದುರೆಯೊಳ್ಕಿಟ್ಟಿ ಅತಿತುಮುಲಕಾಳಗ ಪೆಟ್ಟಿ (ಎಕ. VIII, ಸೊರಬ. ೧೦-೫ ; ಸು.800).
[ ತುಮುಲ + ಕಾಳಗ (< ಕಾಳೆಗ) ]

**ತುಮುಲಕೇಳಿ**, ತುಮುಳಕೇಳಿ (ನಾ). ಗಲಭೆಯಿಂದ ಕೂಡಿರುವ ಸಾಮೂಹಿಕ ಕ್ರೀಡೆ, – ಆಟ : ಅನಂತರಂ ತುಮುಲಕೇಳಿಯಿಂದೋರೊರ್ವರಂ ತುಳುಂಕಾಡುವಾಗಳ್ (ಚಂದ್ರಪು. ೬-೧೪೨ ವ). **ತುಮುಳಕೇಳಿ** : ಲಲಿತ ಲತಾಂಗಿಯರ್ ತುಮುಳಕೇಳಿಯ ವಾರಿವಿಹಾರದೊಳ್ ... ಒಡ್ಡಿದರ್ ಪೊದಟ್ಟಲರ್ಗಣೆಗೊಡ್ಡಿದಡ್ಡಣಮಿದೆಂಬಿನಮುಬ್ಬ ವಿಚಿತ್ರಪತ್ರಮಂ (ಶಾಂತಿಪು. ೮-೩೮) ; ಶಾತಕುಂಭಕುಂಭಂಗಳಿಂ ಜಂಭಾರಿ ಶಂಭುಗಭಿಷವಮಂ ತುಮುಳಕೇಳಿಯಿನೊಡರ್ಚಿದಾಗಳ್ (ಚಂದ್ರಪು. ೧೨-೧೨೦ ವ).
[ತುಮುಲ + ಕೇಳಿ₂ (= ಕೇಲಿ)]

**ತುಮುಲಯುದ್ಧ**, ತುಮುಳಯುದ್ಧ (ನಾ). = ತುಮುಲ ೪ : ತುಮುಲಯುದ್ಧದೊಳ್ ಪಟುಭಟರಂ ನೂಂಕುವ ಸಮರಂಗಾಜಿನ ಮಾಂಕರಣೆಯೆ ಗಂಡುತನದ ತಿರುಳೆನವೇಟ್ಟುಂ (ಶಬ್ದಾನು. ೩೮೪ ವ್ಯಾಖ್ಯಾ); ತುಮುಲಯುದ್ಧದಲ್ಲಿ ಪಾಂಡವರ ಕೈ ಮೇಲಾಯಿತು (ವಚಭಾ.೧೬೨): ಇಬ್ಬರಿಗೂ ತುಮುಲಯುದ್ಧವಾಯಿತು (ಶ್ರೀರಾಯ. ೨೦೪). **ತುಮುಳಯುದ್ಧ** : ತುಮುಳಯುದ್ಧದೊಳಿಂತೆ ನಿರಂತರಂ ತೆಮುಟ್ಟು (ನೇಮಿಪು. ೧೨-೨) ; ಅನಿಮಿಷಮಾರ್ಗದೊಳ್ ನೆರೆದ ದೇವಗಣಂ ಪೊಗೆಗೊಂಡ ಚಿತ್ರಮಂ ನೆನೆಯಿಸಿದತ್ತು ತತ್ತುಮುಳಯುದ್ಧಸಮುದ್ಧತಧೂಳಿಜಾಲದೊಳ್ (ಸೂಕ್ತಿಸು. ೧೮-೫೨). [ತುಮುಲ + ಯುದ್ಧ]

**ತುಮುಲರಂಗ** (ನಾ). ಕ್ಷೋಭೆಯ ರಂಗ, – ಪ್ರದೇಶ; ಘರ್ಷಣೆಯ ಸ್ಥಳ: ಅವನ ಹೃದಯ ಮಿಶ್ರಭಾವಗಳ ತುಮುಲರಂಗವಾಗಿತ್ತು (ಪುನರು. ೧೮೫);
[ತುಮುಲ + ರಂಗ]

**ತುಮುಳ್** (ನಾ). ದೊಂಬಿಯುದ್ಧ (?) : ಅಂತು ಮುಂಬಗಲ್ವರಂ ತುಮುಟಿ[ಳ್] ಕಾದುವ ಸಮ[ರಭರಂ] ಮನೋರಾಗಮಂ ಮಾಡೆಯುಂ (ಪಂಪಭಾ. ೧೩-೭೭ವ) ; "ತುಮುಟಿ ಕಾದುವ = ತುಮುಲ ಯುದ್ಧವನ್ನು ಮಾಡುವ? " (ಪಂಪದೀ. ೫೨೩). [?]

**ತುಮುಳ** 'ತುಮುಲ' ನೋ.

**ತುಮುಳಕೇಳಿ** 'ತುಮುಲಕೇಳಿ' ನೋ.

**ತುಮುಳಯುದ್ಧ** 'ತುಮುಲಯುದ್ಧ' ನೋ.

**ತುಮುಟಿಚ್** (ಕ್ರಿ). ೧. (ಕಣ್ಣು) ಅರ್ಧ ಮುಚ್ಚು : ನೊರೆವಲ್ಲಂ ಮೇದೆರಟ್ಟಿಣ್ ತುಮುಟಿ ಕುಡಿದು ಪೂರಾಂಬುಮಂ (ಚಂದ್ರಪು. ೪-೪೮) ; ನೀಟ್ಟಿ ಕಣ್ ತುಮುಟಿ ಚಂದ್ರಿಕೆಯುಂ ಪದೆಪಿಂದಮಿಂಟಿ . . . ದಂಪತಿ ಚಕೋರಚಯಂ ನಲಿದು (ಕುಸುಮಾ. ೪-೫೫) ; ಶಿಥಿಲದ್ವಿತ್ವಕ್ಕೆ —ತುಮುಟ್ದಂ, ನುಸುಟ್ದಂ (ಶಮದ. ೩೭ ಪ್ರಯೋ); ತೀವಿದ ಕೀಲಾಲಾಂಬುಮಂ ಕಣ್ಣುಮುಟಿ ಪದೆಪಿನಿಂದೀಂಟಿ (ರಸರ. ೨-೧೨೪). ೨. ಅಡಗು ; ನಾಶವಾಗು : ಅಮುಟ್ದ[ತ್ರ]ತ್ಯುಗ್ರತೇಜಪ್ರಸರಮರಿಬಳಧ್ವಾನ್ತಸಿಣ್ಣ ಪ್ರಕಾಣ್ಣಂ ತಿಮುಟ್ದತ್ತು (ಸೌಇಇ. XI-i, ೭೮-೭೦; 1045). ೩. ಅಡಗಿಸಿಕೊಳ್ಳು; ಮುಚ್ಚಿಟ್ಟುಕೊಳ್ಳು : ತುಮುಟಲ್ಕೈರಾವತಂ ದರ್ಪಮನೆರ್ದೆಯೊಡೆಯಲ್ಪುಂಡರೀಕಂ (ಲೀಲಾವ. ೬-೪). ೪. (?) : ಧಾತ್ರಿಯ ಬಿಣ್ಪೆ ನಗೆಂದಿನಂದವಲ್ಲಣಕಮಿದೆಂದು ಕಣ್ ತುಮುಟಿ (ಪಂಪಭಾ. ೯-೯೯); "ಕಣ್ಣುಮುಟಿ=ಕಣ್ಣು ಹೊರಕ್ಕೆ ಬರಲು" (ಪಂಪದೀ. ೩೩೮) ; "ವಿಕಾರವಾಗು" (ಪಂಪನಿ.) ; ಕೂರ್ಮಶಿರಂ ಪೊಱಪಾಯ್ದು ಕಣ್ಮುಮುಟ್ದೊಡೆ ವನಿತಾಗೆ ತನ್ನ ಭರದಿಂ ತಳರ್ದತ್ತು ನರೇಂದ್ರಸೈನಿಕಂ (ಮಲ್ಲಿಪು. ೮-೦೪೦) : ಪೆರ್ವುಲಿ ಪಾಯೆ ಕಯ್ದು ಕೆಯ್ಯದೆ ಕೆಲಸಾರ್ದು ಮೆಯ್ವೊಣರ್ದು ಬಂಚಿಸಿ ಗಂಟಲನೊತ್ತಿ ಕಿರ್ಬಸಿರ್ತಿದಿಯಪೊಲಾಗೆ ಕಣ್ಮುಮುಟಿ [ಪಾಠಾಂ. ಕಣ್ಣುಗುಳೆ] ಬಿರ್ದು ಮಸುಂಬಿ ಜವಂಗೆ ಬಿರ್ದನಿಕ್ಕಿದಂ . . . ಶಬರಂ (ಮಲ್ಲಿಪು. ೧೦-೭೩) ; ಕಣ್ಗಳ್ ತುಮುಟ್ಟ ಸಱುಯಿದಱುಂಚೊಳ್, ಸಂಕಲೆ ಬಿಗಿದಾನಾವಗಮಿರ್ದುಂ ಅರುಂ ಕಱುಬದ ಕಾಪನ್ ನಿಲ್ವೆನ್ (ಬದ್ಧಪ್ರ. ೯-೧೮೦) : "ತೇಲುಮೇಲಾಗಂ ; ವಿಕಾರಗೊಳ್ಳು" (ಬದ್ಧಪ್ರ. ಕೋಶ).

**ತುಮ್ಮಡಿ**, ತುಂಬಡಿ (ನಾ). (ಉಕ) ಶರೀರದಿಂದ ರಕ್ತ ತೆಗೆಯುವ ಒಂದು ಬಗೆಯ ಸಾಧನ : ನಾದಿಗರ ಬಳಿಯಲ್ಲಿ ರಕ್ತ ತೆಗೆಯುವ ತುಮ್ಮಡಿ ಇರುತ್ತದೆ (ಮುಂಬಯಿ. ೫-೭೭) ; ಈ ಗೊಲ್ಲರಲ್ಲಿ ಕೆಲವರು ... ತುಮ್ಮಡೀ ಹಚ್ಚಿ ರಕ್ತ ತೆಗಿಯುವದರಲ್ಲಿಯೂ ಕುಶಲರಿರುತ್ತಾರೆ (ಕಥಾಗ. ೧೭೩). **ತುಂಬಡಿ** : ಹೊಟ್ಟೆಯೊಳಗಿನ ಹವೆಯು ತುಂಬಡಿಯೊಳಗಿನ ನಿರ್ವಾತಸ್ಥಲವನ್ನು ತುಂಬಲಿಕ್ಕೆ ಯತ್ನೈಸುವದರಿಂದ (ಮುಂಬಯಿ. ೫-೭೭).
[←ಮರಾ. ತುಮಡೀ, ತುಂಬಡೀ ]

**ತುಮ್ಮಲಿ** (ನಾ). ಒಂದು ಸ್ಥಳದ ಹೆಸರು : ಮಹಾರಾಜರ್ ತುಮ್ಮಲಿ ತೊಱುಪಾ ಸರ್ವಪರಿಹಾರಂಗೊಟ್ಟರ್ (ಎಕ. X, ಬಾಗೇಪ. ೬೨-೧೦ ; ಸು. 900?). [ ? ]

**ತುಮ್ಮೆಗೂರ್** (ನಾ). ಒಂದು ಊರಿನ ಹೆಸರು; ಈಗಿನ ತುಮಕೂರು: ತುಮ್ಮೆಗೂರ ಕೆಱೆಯ ಪೊಳೆದೊ × × ಱೆಣ್ಬರ ಬೆಸದೊಳೆ (ಎಕ. XII, ತುಮಕೂ. ೫-೨ ; 955). [ ? + ಊರ್ ]

**ತುಮ್ರಿ₁** 'ತುಂಬುರ್' ನೋ.

**ತುಮ್ರಿ₂** 'ಠುಮರಿ' ನೋ.

**ತುಯ್₁** (ಕ್ರಿ). ಒದ್ದೆಯಾಗು ; ಹಸಿಯಾಗು ; ತೊಯ್ಯು : "ತೊಯ್ (ತುಯ್) – ಸಾರ್ದ್ರತ್ವೇ" (ಶಮಧಾ). 'ತೋ₁' ಪರಾ.
[ ದೇ.॥ ತಮಿ. ತುವ್ವೆ ; ಮಲ. ತುವೆ ]

**ತುಯ್₂**, ತುಯಿ, ತುಯ್ಯು, ತೂಯ್ (ಕ್ರಿ). ತುಯ್ದು, ತೂದು (ಭೂತನ್ಯೂ). ೧. ಎಳೆ ; ಸೆಳೆ ; ಜಗ್ಗು : ವಲ್ಗನವಾಡುವ ಬಲ್ಗಳ ಪೆದೆಗೆ ಸರಲ್ಗಳ ಸಾರ್ಚಿ ತುಯ್ದೆಸೆವ (ಚಂಪ್ರಸಾಂ. ೮-೪೨) ; ದೊರೆಗಳು ಸೇನೆವೆರಸಿ ಸನ್ಮತಿಯ ತುಯ್ದಿದ್ದಾ ನಯದಿಂದ ತಪೆನೆಂದು ನುಡಿದು (ಭರಜ. ೫೭-೨೨) ; ಪರಿಮಳೋದಕವ ಜಳಯಂತ್ರದಿಂ ತೂದೆಸೆಯಲ್ (ಪ್ರಭುಪು.೪-೧೦೦) ; ತೆಂಕಣ ಬಿಱುಗಾಳಿಗಳೊಳ್ ತುಯ್ದು, ನರೆಗಡಲನ್ ತಾನ್ ದಾಂಟಿದಪನ್ (ಅಂತಿಗೊ.೧೭-೩೧೨). **ತುಯಿ** : ೧. ಪಾಳೆಯಗಾರನು . . . ಹೆದೆಗೆ ಅಂಬನ್ನೇರಿಸಿ ಆನೆಯ ಹಣೆಗೆ ಗುರಿಗಟ್ಟಿ ಎಡಗಯ್ಯಿಂದ ತುಯಿದು (ಎಳೆದು) ಬಿಟ್ಟನು (ಕವೀರ. ೧೩೭). **ತುಯ್ಯು**: ೧. ಮನಸ್ಸನ್ನು ಯಾವೆಡೆಗೋ ತುಯ್ಯುವ ಆ ವಿಕನಾದ (ರೂಪಸ. ೧); ಆಚೆ ದಡದೆಡೆ ಸದಾ ತುಯ್ಯುತಿರಲಿ (ಚಂಡಮ. ೫೭-೧೨). ೨. ತುಡಿ ; ಮಿಡಿ ; ಸ್ಪಂದಿಸು : ನಮ್ಮ ಭಾರತೀಯ ಹೃದಯವೂ ತುಯ್ಯುತ್ತದೆ (ನಿಬಂಧ. II, ೧೦೭). **ತೂಯ್**: ೧. ಆಡ ಮೇಯಿಸುವ ಮಕ್ಕಳುಗಳೆಲ್ಲರು ಬಂದು ಕೂಡಿ ತೂಯ್ದೊಡೆ ಬಾರದಿರಲು (ನೇಮಿಸಂ. ೧೦-೨೩೨) ; ಪದೆದು ತೂಯ್ವಾಗ ನೂಱಿಸೆವಾಗ ಸಾಸಿರ (ಚಂಪ್ರಸಾಂ. ೧೧-೭೦) ; ನಮ್ಮೆತ್ತು ಮುಂದೆ ಮೂರ್ಚೆಜ್ಜೆ ತೂಯೊಲ್ಲೊ (ಹಳ್ಳಿಬಾ. ೩೩).

ತುಯ್ದಾಡು=ಎಳೆದಾಡು; ಜಗ್ಗಾಡು: ನೆಂಟರ ಮೇರೆಯನ್ನು ಮೀರಿ ಮಿತ್ರಮಂಡಲಿಯವರೆಗೂ ಈ ವಿಚಾರ ತುಯ್ದಾಡಿತ್ತು (ಶ್ರೀಕೃಪ್ರ. ೨೪೦). ತುಯ್ದೊಗೆ=ಎಳೆದು ಬಿಸಾಡು : ತಲೆವೊಯ್ದನ್ ಒಂದನ್ ತುಯ್ದೊಗೆದನ್ ಒಂದನ್ (ಅಶ್ವತ್ಥಾ. ೧೨-೩೫೭). ತೂದು ಹಿಡಿ=ಎಳೆದು ಹಿಡಿ : ಕುದುರೆಯ ಲಗಾಮನ್ನು ತೂದು ಹಿಡಿದರು (ಚಂಗಾಳ್ಕ. ೪೮).
[ ದೇ.॥ ತೆಲು. ದುಯ್ಯು, ದೂಯು ]

**ತುಯಿ** 'ತುಯ್$_{2}$' ನೋ.

**ತುಯಿತ** 'ತುಯ್ತು' ನೋ.

**ತುಯ್ತು,** ತುಯಿಂತ (ನಾ). ಎಳೆತ ; ಸೆಳೆತ ; ಎಳೆದಾಟ ; ಜಗ್ಗಾಟ : ಅದರ ತುಯ್ತುವನ್ನು ನಾನು ಬಲ್ಲೆ (ಈಜಕೆ. ೩೪) : ಆನಂದದೀ ತುಯ್ತು ಕನುವಾಗುವಾ ಮತಿಗೆ ಇಂಥ ನಡೆಯೇ ಸಹಜ (ಗಡೀಶ. ೮೫-೨೦) ; ಇಂಥ ತುಯ್ತುಗಳ ಆಯುಕಟ್ಟಿಗೆ ಸಿಕ್ಕಿದ ಜೀವಾತ್ಮಸಂಸ್ಥೆ ಕಾವ್ಯಕ್ಕೂ ಕಲೆಗೂ ಮಾತೃಕೆಯಾಗುತ್ತದೆ (ಕಾವ್ಯಕು. ೧). **ತುಯಿತ :** ಎಂಥ ವಿದ್ವಾಂಸನಾದರೂ ಇಂದ್ರಿಯಗಳ ತುಯಿತಕ್ಕೆ ಸಿಕ್ಕುವವನೇ (ಬಂಕಿಮು. ೨೬೭); ಎಲ್ಲಿಯೂ ಈ ಜೇಡನ ನೂಲಿನ ಮೇಲೆ ಸ್ವಲ್ಪವೂ ತುಯಿತವಿಲ್ಲ (ನಿಬಂಧ. II, ೩೫೮).
[ ತುಯ್$_{2}$ + – ತ$_{2}$ ]

**ತುಯ್ಯ** (ನಾ). ಒಂದು ಬಗೆಯ ಹಕ್ಕಿ : ಗಿಡುಗ ಸಾಳುವ ತು [ಪಾಠಾಂ. ಕು] ಯ್ಯ ಓರಣ ... ಹಕ್ಕಿಗಳನವರು ಹಿಡಿದು (ಸಾಳ್ವಭಾ. ೫-೨೦). [?]

**ತುಯ್ಯಲ್,** ತುಯ್ಯಲು (ನಾ). ಹಾಲು, ಸಕ್ಕರೆ ಮೊದಲಾದ ಪದಾರ್ಥಗಳಿಂದ ತಯಾರಿಸುವ ಒಂದು ಬಗೆಯ ಸಿಹಿ ಪದಾರ್ಥ ; ಪಾಯಸ: "ಕ್ಷೈರೇಯಂ ತುಯ್ಯಲ್" (ವಸ್ತುಕೋ. ೬೩-೧೦) : "ಕ್ಷೈರೇಯಂ, ಪಾಯಸಂ, ಪರಮಾನ್ನಂ–ಈ ೩ ತುಯ್ಯಲ್" (ಹಲಾಯು. ೫೩-೧೬೫) ; ಪೊನ್ನ ತಳಿಗೆಯೊಳ್ ನಾಯ್ ತುಯ್ಯಲನುಣ್ಬುದಂ ಕಂಡು (ವಡ್ಡಾರಾ. ೮೬-೨೭) : ತವುಡಂ ತಿಂದು ತುಯ್ಯಲನುಂಡೆನೆಂಬಂತೆ (ಧರ್ಮಾಮೃ. ೧೩-೧೮೦); ಕಾಟಿಬ್ಬಿಕ್ಕಿಗೂಡುವವೊಲ್ತುಯ್ಯಲಂ (ಅನಂಪು. ೧-೬೦) ; ಅಣ್ಣೆವಾಲಿಂ ಬೆರಸಿದ ಸಕ್ಕರೆಯ ತುಯ್ಯಲಿಕ್ಕಿದರರೆಬರ್ (ನಳಚಂ. ೪೪೧). **ತುಯ್ಯಲು :** ತುಯ್ಯಲಾದಡೆ ಉಂಬೆ ಹುಯ್ಯಲಾದಡೆ ಓಡುವೆ (ಬಸವ. ೧೨೦); ತುಯ್ಯಲು ತುಪ್ಪವ ಬಡಿಸಿ ಬಳಿಕ ನಮ್ಮ ಕೈಯ ಪರಿಯನೀಕ್ಷಿಸದೆ ... ಉಸುರುವರೇ ಬಲುಗೈಯರಿಗಾಗದ ಬೆಸನ (ನೇಮಿಸಂ. ೨೩-೨೭೦) : ತುಯ್ಯಲನು ತನ್ನಂಗಿತನ್ನಯ ಕೈಯಲೇ ಬಡಿಸಿದಳು (ನಿಘಾಗ. ೦೦-೧೫-೪೭) ; ಹುಯ್ಯಲಿನ್ನಿಲ್ಲ ಸಂತಸವೆಂದು ನಲಿದುದು ತುಯ್ಯಲನುಂಡಂತೆ ಕಟಕ (ಭರಚ. ೫೦-೦೨೩); ತುಯ್ಯಲೂಟಕೆ ಲೇಸು ಬಯ್ಯದ ಸೊಸೆ ಲೇಸು ಅಯ್ಯ ಬಾರೆಂಬ ಮಗ ಲೇಸು ಧರ್ಮವದು ಕೈಯಾರ ಲೇಸು (ಸರ್ವಜ್ಞ. ೬೨೭).

**ತುಯ್ಯಲಚಂದಯ್ಯ** (ನಾ). ಒಬ್ಬಾತನ ಹೆಸರು : ಉಬ್ಬಿ ಕಾಮಾಇ ಸೆಟ್ಟಿಯ ತಮ್ಮಂ ತುಯ್ಯಲಚನ್ದಯ್ಯಂ ಪ್ರಸ(ಶ)ಸ್ತಿಯಂ ಬರೆಯಿ [ಸಿ] ದಂ (ಎಇ. XIX, ೨೯೦-೩೫ ; 963). 'ತುಯ್ಯಲಬೇಗೂರ್' ಪರಾ.
[ <ತುಯ್ಯಲ್ ? + ಚಂದಯ್ಯ ]

**ತುಯ್ಯಲಬೇಗೂರ್** (ನಾ). ಒಂದು ಊರಿನ ಹೆಸರು : ಆ ನಾಗರಖಂಡದೊಳಗಣ ತುಯ್ಯಲಬೇಗೂರ ಗೌಂಡನ ವಂಶಾವತಾರವೆಂತೆಂದಡೆ (ಕಇ. IV, ೨೨-೦೩ ; 1024). [ <ಗುಯ್ಯಲ್ ? + ಬೇಗೂರ್ ]

**ತುಯ್ಯಲು** 'ತುಯ್ಯಲ್' ನೋ.

**ತುಯ್ಯಲುಗೆಯಿ** (ನಾ). ನೀರಾವರಿಭೂಮಿ ; ಗದ್ದೆ : ಎಲವಸೆಗೆಱೆಯ ಕೆಳಗೆ ತುಯ್ಯಲುಗೆಯಿ ಮತ್ತರು ನಾಲ್ಕು ಕಂಭ ನಾನುಱಯ್ವತ್ತು (ಸೌಇಇ. IX-1, ೩೨೯-೬೩; 1209). [P ಇದು 'ಗುಯ್ಯಲುಗೆಯಿ' ಇರಬಹುದು]

**ತುಯ್ಯಾಟ** (ನಾ). ಎಳೆದಾಟ ; ಸೆಳೆದಾಟ ; ತುಯ್ತು : ಇಬ್ಬರ ತುಯ್ಯಾಟವನ್ನೂ, ವಿಚಾರದ ಅರಿವಿಲ್ಲದೆ ನೋಡುತ್ತಾ ನಿಂತಿದ್ದ ಕಿಟ್ಟಯ್ಯ (ನಿಶಉ. ೧೨೭) ; ಈ ತುಯ್ಯಾಟದಲ್ಲಿ ಅವಳು ಬಂದಾಗ ... ತನ್ನ ಪಾಡಿಗೆ ತಾನು ಇದ್ದನು (ಘಾಟೀಮು. ೯೯). [ ತುಯ್ಯು (<ತುಯ್$_{2}$) + ಆಟ ]

**ತುಯ್ಯು** 'ತುಯ್$_{2}$' ನೋ.

**ತುಯ್ಲಾಟ** (ನಾ). = ತುಯ್ಯಾಟ : ಈ ಯೋಚನೆಗಳ ತುಯ್ಲಾಟದೊಡನೆ ಶೇಷ, ಸುಬ್ರಾಯರೊಂದಿಗೆ ಹೊಸನಗರ ತಲುಪಿದ್ದನು (ಬಾಳಿವೃ. ೦೯೯).
[ ತುಯ್ಲು + ಆಟ ]

**ತುಯ್ಲು** (ನಾ). = ತುಯ್ತು. 'ತುಯ್ಲಾಟ' ಪರಾ.
[ ತುಯ್$_{2}$ + – ಅಲು (< – ಅಲ್$_{2}$) ]

**ತುರ$_{1}$** (ನಾ). ಕುದುರೆ ; ಅಶ್ವ : ತೆಱಗೆ ತಪ್ಪದು ಒಂದು ಕಾಲಕೆ ಬರೆದ ಲಿಪಿಗಳು ಇರುವ ತನಕವು ತುರದ ಬಾಲಕೆ ತೆಱಗೆ ಮಾಳ್ಪರು (ಕಾಲಸಂ. ೨೩-೩) : ಯಾವತ್ತು ಬಲಜಲಧಿಯಿಂದ್ಯೈದಿದಂ ಕರಿಘಟೆ ತುರಂಗಳಿಂ ತೇರ್ಗಳಿಂದ (ಹುರಂಗ. ೮೦-೨೪). 'ತುರಗ' ಪರಾ.
[ <ಪ್ರಾ. ತುರಯ. / ಹಿಂ. ತುರ, ತುರಾ. / ಸಂ. ತುರಗ ]

**ತುರ$_{2}$** (ನಾ). ವೇಗ : "ತುರ – ತ್ವರಣೇ, ತವಕದೊಳ್" (ಕಾಶಕ್ಕ. ೦೭೭).
[ ಸಂ. ]

**ತುರಂಗ$_{1}$** (ನಾ). ೧. ಕುದುರೆ; ಅಶ್ವ : ಭಾಸುರ ತುರಂಗಮನೇಱದನೊಲ್ದು ಭೂಭುಜಂ (ಹಮ್ಮಿರ. ೩-೩೭) : ಕಟ್ಟಾಯದಿಂ ಬಱವೋಪ ರಾಮನಧ್ವರ ತುರಂಗಮಂ ತಡೆದು ನಡೆಗಿಡಿಪಯ್ (ರಾಮೂಶ್ವ. ೧೩೮-೨) ; ತುರಂಗಕ್ಕೂ ಕುರಂಗಕ್ಕೂ ಸಮವೇ ? (ಗಾದೆ). ೨. =ತುರಂಗಪ್ರಾಸ : ಹರಿ ಕರಿ ವೃಷಭ ತುರಂಗಂ ಶರಭಮುಜಂಗಳುಮೆನಿಪ್ಪ ಷಟ್ಪ್ರಾಸಕ್ಕಂ ತರುಣಿ ನಿಜದೀರ್ಘ ಬಿಂದುವಿನಿರದೊತ್ತುಂ ವ್ಯಂಜನಂ ವಿಸರ್ಗದಿ ಬರ್ಕುಂ (ಛಂದೋಂಬು. ೬. ೦-೪೨). ೩. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ. ೪. [ಕಾವ್ಯಮೀ] ಒಂದು ಬಗೆಯ ಚಿತ್ರಕಾವ್ಯ; ಕುದುರೆಯ ಆಕಾರದಲ್ಲಿರುವ ಪದ್ಯಬಂಧ : ಶರಶೂಲಚಾಪಚಕ್ರಾಸಿರೂಪಮಿಭರಥ ತುರಂಗಪದಗತಪಾಠಂ ... ಸರ್ವತೋಭದ್ರಂಗಳ್ (ಕಾವ್ಯಾವ. ೫೬೯). [ಸಂ.]

**ತುರಂಗ$_{2}$** (ನಾ). ಸೆರೆಮನೆ ; ಕಾರಾಗೃಹ : ಇನ್ನೊಮ್ಮೆ ಹೀಗೆ ಮಾಡಿದೆಯೆಂದರೆ ತುರಂಗಕ್ಕೆ ಕಳಿಸುತ್ತೇನೆಂದು ನಾನವನಿಗೆ ಒಳ್ಳೇ ಹೆದರಿಕೆ ಹಾಕಿದ್ದೇನೆ (ಸ್ಮೃತಿಚಿ. ೨೮೫) : ಎಷ್ಟೋ ಜನ ತುಡುಗರನ್ನು ಹಿಡಿದು ತುರಂಗಕ್ಕೆ ಕಾಣಿಸಿರುವೆನು (ಕಳ್ಳಕಾ. ೩).
[ ←ಮರಾ. ತುರಂಗ, ತುರುಂಗ. / ಇಂ. Tronk. / ಪೋರ್ಚ್. ಡಚ್. Tronco. / ಮಲ. ತುರುಙ್ ; ತುಳು. ತುರುಂಗು ]

**ತುರಂಗತಾನಕ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ : ಮುಂದುಗಡೆಯಲ್ಲಿ ಬಲದ ಪಾದವನ್ನು ಚಾಚಿ ಪಾರ್ಶ್ವಗಳಲ್ಲಿ ಆ ಬಲಪಾದದ ಹೆಜ್ಜೆಯ ನಿಕ್ಕುವುದೂ ಮುಂದುಗಡೆಯಲ್ಲಿ ಗತಿಯೂ ಆವದು ಅದು ತುರಂಗತಾನಕ ಯೆಂದು ನುಡಿಯಲ್ಪಡುವುದು (ಖಡ್ಗಟೀ. ೫-೦೪). [ತುರಂಗ$_{1}$ + ತಾನಕ]

**ತುರಂಗತ್ವ** (ನಾ). ಕುದುರೆಯ ಸ್ವರೂಪ,–ಆಕಾರ : ತುರಂಗತ್ವಮೆನಗೆ ಮೂಡಿದೊಡಮೆನ್ನ ಕೆಳೆಯನೊಡಗೂಡಿ ಕಾಲಮಂ ಕಳಿಪುವಂತು ನಿನ್ನ ದಿವ್ಯಚಕ್ಷುಗಳಿಂ ನೋಡಿ ಬೆಸಸೆಂಬುದುಂ (ಕಾದಂಉ. ೬೦೭). [ಸಂ.]

**ತುರಂಗದಳ** (ನಾ). ಕುದುರೆಯ ಸೈನ್ಯ : ತುರಗಂ ನೂಱನಿತುಂ ತುರಂಗದಳಮೊಂದೊಂದರ್ಕೆ ನೂಱಾಳ್ ತಗುಳ್ದಿರೆ ಬಲ್ಲರ್ ನಡೆ ನೋಡಿ ಕೂಡೆ ಪಡೆದತ್ತಕ್ಷೋಹಿಣೀಸಂಖ್ಯೆಯಂ (ಪಂಪಭಾ. ೯-೯೫).
[ತುರಂಗ$_{1}$ + ದಳ$_{2}$(= ದಲ)]

**ತುರಂಗಪ್ರಾಸ** (ನಾ). [ಛಂದ] ಆರು ಬಗೆಯ ಪ್ರಾಸಗಳಲ್ಲಿ ಒಂದು ; ಪ್ರತಿ ಪಾದದ ಮೊದಲೆರಡು ಸ್ವರಗಳ ನಡುವೆ ಒಂದೇ ವಿಧದ ಸಂಯುಕ್ತವ್ಯಂಜನಗಳು ಬರುವ ಪ್ರಾಸ : ತುರಂಗಪ್ರಾಸಕ್ಕೆ ಲಕ್ಷಣಂ ಮತ್ತಚಕೋರಲೋಚನೆ ಚಿತ್ತಜರಾಜಧಾನಿ ಇದು ಲಕ್ಷಣದಲ್ಲಿ ಭಗಣಂ (ಛಂದೋಂಬು. ೬. ೧-೪೩ ಅಡಿಟಿ). [ ತುರಂಗ$_{1}$ + ಪ್ರಾಸ ]

**ತುರಂಗಮ** (ನಾ). ೧.=ತುರಂಗ$_{1}$ ೧: ಮದಗಜಬೃಂಹಿತಧ್ವನಿ ತುರಂಗಮ ಹೇಷಿತಘೋಷನಾದಮೊರ್ಮೊದಲೆ ಪಯೋಧಿಮಂಥನಮಹಾರವಮಂ ಗೆಲೆ (ಪಂಪಭಾ. ೩-೩೮) ; ಇಕ್ಕುವುದೆಲ್ಲಮಂ ತುರಂಗಮಕೆಂದುಂ (ಲೋಕೋಪ. ೯-೨೨೦) : ಮೇಲು ಸುಯಿಧಾನದ ತುರಂಗಮಜಾಲಸಹಿತಗಲದಲಿ ... ಅಟಿಸಿದನು ನೃಪನ (ಕುವ್ಯಾಗ. ೨-೦). ೨. [ಛಂದ] ಒಂದು ವೃತ್ತದ

ಹೆಸರು : ಪಾವಕಂ ತ್ರಿದಶಪಾವಕಂ...ನೆಲಸಿ ನಿಲ್ವಿನಂ ದೇವದೇವಕೃತಮಿಾ ವಿಧಾನದೊಳಿಳಾವಿನೂತಯತಿ ರಂಧ್ರದೊಳ್ ಭಾವಿಸುತ್ತುಮಿರೆ ಭಾವಿಸಿಂತಿ ದನೆ ಪೀವರಸ್ತನೆ ತು[ಪಾಠಾಂ. ತ] ರಂಗಮಂ (ಛಂದೋಂಬು. ೨-೧೮೦). [ಸಂ.]

**ತುರಂಗಮುದಟ** (ನಾ). = ತುರಂಗದಳ : ದನುಜಬಳಜಳಧಿ ಬಾಡಬಾನಲನ ಬಾಣಂಗಳೌರ್ವಶಿಖಿಯಂತೆ ತುರಂಗಮುದಟತರಂಗಿತಾರ್ಣವಮನಟ್ಟಾ ಡಿಸೆಯುಂ (ಜಗವಿ. ೭-೮೪ ವ). [ ತುರಂಗಮ + ದಟ ]

**ತುರಂಗವಕ್ತ್ರ** (ನಾ). = ತುರಂಗವದನ : (+). [ ತುರಂಗ$_1$ + ವಕ್ತ್ರ ]

**ತುರಂಗವದನ** (ನಾ). ೧. ಕುದುರೆಯ ಮುಖದಂತೆ ಮುಖವುಳ್ಳವನು; ವಿಷ್ಣುವಿನ ಒಂದು ಅವತಾರ ; ಹಯಗ್ರೀವ : ಮಾತಂಗವರದ ವಿಹಂಗ ಗಮನ ಭುಜಂಗಶಯನ ತುರಂಗವದನ (ವಿದಾಕ್ಷ. ೪೭-೧). ೨. ಕುದುರೆ ಯಂತೆ ಮುಖವೂ ಮನುಷ್ಯನಂತೆ ಉಳಿದ ಅಂಗಗಳೂ ಉಳ್ಳ ಒಂದು ದೇವತಾವರ್ಗಕ್ಕೆ ಸೇರಿದವನು ; ಕಿನ್ನರ : "ಕಿನ್ನರಃ, ಕಿಂಪುರುಷಃ, ತುರಂಗವದನಃ, ಮಯುಃ-ಳ ಕಿನ್ನರರ ಹೆಸರುಗಳು" (ಸಿದ್ಧಾಂತಿ. ೨೬). [ ತುರಂಗ$_1$ + ವದನ ]

**ತುರಂಗವದನೆ** (ನಾ). ಕಿನ್ನರಸ್ತ್ರೀ ; ಕಿನ್ನರಿ : ಗುರುಕುಚಭರಕ್ಕೆ ಮನದೊಳ್ ಕರಮೆ ಕನಲ್ವರ್ ತುರಂಗವದನೆಯರದಟಿನೊಳ್ (ಚಂದ್ರಪು. ೧೦-೩೭). [ ಸಂ. ತುರಂಗವದನಾ ]

**ತುರಂಗವಾಹಳಿ** (ನಾ). ಕುದುರೆಗಳ ಸಾಲು: ಸುಟಿವ ತುರಂಗವಾಹಳಿಯ ಪೂವಲಿಯೊಳ್ ಪೊರೆದಂಕದಾನೆಯುಗ್ಗಟಿಯ ಮದಾಂಬುಕರ್ದಮ ದೊಳರ್ದು ... ತೀಡುವುದು ತತ್ಪುರಬಾಹಿರ ಮಂದಮಾರುತಂ (ಅನಂಪು. ೩-೧೬) [ ತುರಂಗ$_1$ + ವಾಹಳಿ ]

**ತುರಂಗಸಂಗರ** (ನಾ). ಕುದುರೆಯ ದಳದ ಯುದ್ಧ ; ಅಶ್ವಸೈನ್ಯದ ಕದನ : ಭಯಂಕರಮಾಯ್ತು ತುರಂಗಸಂಗರಂ (ಪಂರಾಮಾ. ೧೩-೬೩). [ ತುರಂಗ$_1$ + ಸಂಗರ ]

**ತುರಂಗಸಾಧನ** (ನಾ). ಕುದುರೆಯ ದಳ ; ಅಶ್ವಸೈನ್ಯ : ಪದಿನೆಂಟು ಕೋಟಿವರೆಗಂ ತಳರ್ದತ್ತು ತುರಂಗಸಾಧನಂ (ಆದಿಪು. ೧೧-೩೦). [ ತುರಂಗ$_1$ + ಸಾಧನ ]

**ತುರಂಗಿ$_1$** (ನಾ). ಕುದುರೆಯ ಸವಾರ ; ಅಶ್ವಾರೋಹಿಯಾದ ಸೈನಿಕ : ಓರ್ವರೊರ್ವರಂ ಪೊಯ್ದರ್ ಮಾಮಸಕದೆ ಪಣೆದಂಬೊಯ್ವಂತಸಿಯಂ ಪಿಂಗದೆ ತುರಂಗಿಗಳ್ ಸಂಗರದೊಳ್ (ಚಂದ್ರಪು. ೧೦-೮೧); ಮುತ್ತಿನ ಸತ್ತಿಗೆ ಮೊತ್ತಂಬೆತ್ತಿರೆ ಸುತ್ತಿ ತುರಂಗಿಗಳೊತ್ತರಿಸುತ್ತಿರೆ (ರಾಜಶೇ. ೯-೪೦ ರಗಳೆ). [ ಸಂ. ತುರಂಗಿನ್ ]

**ತುರಂಗಿ$_2$** (ನಾ). ೧. = ತುರಗಿ. ೨. [ಸಂಗೀತ] ಒಂದು ರಾಗದ ಹೆಸರು: ತುರಂಗಿ [ಪಾಠಾಂ. ತರಂಗಿಣಿ] ಗಾಂಧಾರಿ...ವಸಂತ ಬಂಗಾಳಮೆಂಬಿಪ್ಪತ್ತೆರಡು ರಾಗಂಗಳು ಕ್ರಿಯಾಂಗದಿಂದ ಪುಟ್ಟಿದವು (ವಿವೇಕ. ೩೩೪). [ಸಂ. ತುರಂಗೀ]

**ತುರಂಜಿ, ತೋರಂಜಿ** (ನಾ). ೧. ಈಳೆ ಜಾತಿಗೆ ಸೇರಿದ ಮರ; ಚಕ್ಕೋತ, ಹೇರಳೆ ಅಥವಾ ನಿಂಬೆ. ೨. ಮಾದಲ ; "ಮಾತುಲುಂಗ" (ಪಂಡಿತ. ೨೪೧). ೩. ಸೊಗಸಾದುದು; ಶ್ರೇಷ್ಠವಾದುದು: (+). **ತೋರಂಜಿ:** (+). [ ← ಪಾರ. ಹಿಂ. ಮರಾ. ತುರಂಜ್./ಕೊಂಕಣಿ. ತೋರಂಜ./ತಮಿ. ತುರಿಞ್ಜಿ ]

**ತುರಂತ** (ನಾ). ವೇಗ ; ಶೀಘ್ರತೆ : ಈ ಸಂದರ್ಭದಲ್ಲಿ ತುರಂತವಾಗಿ ಜನ ರನ್ನು ಒಂದುಗೂಡಿಸುವುದು ದುಷ್ಕೃತವಾಗಬಹುದು (ಝೂರಾಹಿ. ೨೦೧). 'ತುರಿತ$_4$' ಪರಾ. [ ← ಹಿಂ. ಮರಾ. ತುರಂತ್ ]

**ತುರಃಕ** 'ತುರುಕ' ನೋ.

**ತುರಕ** (ನಾ). ೧. ತುರ್ಕಿದೇಶದವನು. ೨. ಮುಸಲ್ಮಾನ ; ತುರುಕ. 'ತುರಕವಿಗ್ರಯಂ' ಪರಾ. [ ಸಂ. ]

**ತುರಕಬೇವು** (ನಾ). = ತುರುಕಬೇವು : ನಮ್ಮ ಹೊಲದ ಬದುವಿನಲ್ಲಿ ಒಂದು ತುರಕಬೇವಿನ ಮರವಿದೆ (ರೂಢಿ). [ ತುರಕ + ಬೇವು ]

**ತುರಕವಿಗ್ರಯ** (ನಾ). ಮುಸಲ್ಮಾನರೊಂದಿಗೆ ಮಾಡುವ ಕಾಳಗ, ಹೋರಾಟ : ಹೊಯಿಸಣಶ್ರೀವೀರಬಲ್ಲಾಳ ದೇವರ್ಸರು ಸುಖರಾಜ್ಯಂ ಗೆಯುತ್ತಮಿರೆ ತುರಕವಿಗ್ರಯಾದಲ್ಲಿ ... ವೀರಬಲ್ಲಾಳರಾಯ ಪಟ್ಟಣ ಪ್ರವೇಶ ಮಾಡು ವವಸರದಲ್ಲಿ (ಎಕ. VII, ಶಿವಮೊ. ೬೮-೧ ; 1318). [ P ಇದು 'ತುರಕವಿಗ್ರಹ'ದ ಅಪಲಿಖಿತವಿರಬಹುದೆ ? ]

**ತುರಕಿ** 'ತುರ್ಕಿ' ನೋ.

**ತುರಗ** (ನಾ). ೧. ಕುದುರೆ ; ಅಶ್ವ : "ತುರಗಂ ಯಯು ಸಪ್ತಿ ಹಯಂ ತುರಂಗಮಂ ವಾಜಿ ... ತುರಂಗಮಮೆನೆ ಕುದಿರೆ" (ವಸ್ತುಕೋ. ೮೫-೨೨) ; ಕರಿತುರಗರಥಪದಾತಿಯ ಚರಣಾಸಂಘಾತಜಾತರಜಮಾಜಸ್ರಂ ನೆರೆದಂಬರ ಕೊಗೆಯಲ್ (ಪಂಪಭಾ. ೧೦-೬೮) ; ತುರಗಮಯಂ ನೆಲಂ ಚಮರಜಾಲ ಮಯಂ ದಿನಂ ... ಮದಗಂಧಮಯಂ ಸಮೀರಣಂ (ಕಾದಂಪೂ. ೬೦೧). ೨. = ತುರಂಗಪ್ರಾಸ ; ಹರಿ ... ತುರಗಂ ಶರಭಭುಜಂಗಳುಮೆನಿಪ್ಪ ಷಟ್ಪ್ರಾಸಕ್ಕಂ ತರುಣಿ ನಿಜದೀರ್ಘ ಬಿಂದುವಿನಿರದೊತ್ತುಂ ವ್ಯಂಜನಂ ವಿಸರ್ಗಂ ಬಕ್ಕುಂ (ಕವಿಜ. ೨-೨). ೩. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : ವಿಶ್ರುಮಣಂ ತುರಗವ್ರಾತ ಗಜವ್ರಜದೊಳ್ ಬರೆ (ಛಂದೋಂಬು. ೨-೧೮೫) ; ತುರಗ ಹಯಂ ಏಟಿಜ ಸಾವಮಂ (ವ್ಯವಹಾ. ೯-೭) ; ತಾನೆಳೆಯೂರ ಮೂಜುಸಾಸಿರಮೆನೆ ಮತ್ತೆ ಬಾಣ ತುರಗೇಂದ್ರಿಯ ಖಂಡುಗದ (ಭಾಸ್ಕರ. ೩೦-೧).

**ತುರಗಗೊಳ್ಪಾಗಿ** = (?) : ಶ್ರೀಮತ್ ನಗರಮಪ್ಪ ವಯಚಯನ್ ತುರಗಗೊಳ್ಪಾಗಿ ದುಗ್ಗದರಸನುಂ ತೊಡಳ್ದು ವೇಳೆಯುವನಾಳು × ಪಟು ಯುತ್ತುಂ ಬಪ್ಪುದಂ (ಸೌಇಇ. IX-1, ೨೨-೪ ; 923). **ತುರಗರೇವಂತ** = ಕುದುರೆಯ ಸವಾರಿಯಲ್ಲಿ ರೇವಂತನಂತೆ ಪ್ರಸಿದ್ಧನಾದವನು; ಒಂದು ಬಿರುದು : ಕಲಿಗಳಾಭರಣನಣ್ಣನಸಿಂಗಂ ತುರಗರೇವಂತಂ (ಎಕ. XI, ಚಿತ್ರದು. ೪೭-೧೬ ; 1067) ; ಮಣಲರ ಭೀಮಂ ತುರಗರೇವನ್ತಂ ಪರಬಳ ಕ್ರಿ ತಾನ್ತಂ (ಸೌಇಇ. XX, ೪೭-೨೨; 1074); ವಿಬುಧ ವರದಾಯಕಂ ಸುಜನ ಪ್ರಸನ್ನಂ ಗೋತ್ರಪವಿತ್ರಂ ವರಾಂಗನಾಪುತ್ರಂ ತುರಗರೇವನ್ತಂ ವೈರಿ ಕೃತಾಂತಂ (ಕಇಇ. ೫೭-೪೪-೧೦; 1197). **ತುರಗವೆಡಂಗ** = ಕುದುರೆಸವಾರಿ ಯಲ್ಲಿ ಪ್ರವೀಣ ; ಒಂದು ಬಿರುದು : ಬಾಲಿವಂಶೋದ್ಭವಂ ಶ್ರೀಮತ್ತು ರಗವೆಡಂಗಂ ಕಾಳೆಗಕೆ ನಡವುತ್ತು (ಎಇ. XIII, ೧೮೭-೨ ; ಸು. 875) ; ಸಮಧಿಗತಪಂಚಮಹಾಶಬ್ದ ಮಹಾಸಮನ್ತ ತುರಗವೆ[ಡೆ]ಜ್ಗಬಿಳಿ ಯಂಬಿನಾತನಾಹವಸೂದ್ರಕಂ (ಸೌಇಇ. IX-I, ೬೪-೩ ; 944). [ಸಂ.]

**ತುರಗಗಳ** (ನಾ). ಕುದುರೆಯ ಕತ್ತಿನಂತೆ ನೀಳವಾದ ಕತ್ತುಳ್ಳವನು : ತುರಗಗಳಂ ಕಾನನಮಲಯರುಹಗತಂ ... ಕರ್ಕಟಾದಿಮದ್ರೇಕ್ಕಾಣಂ (ಜಾತತಿ. ೧೯-೧೦). [ ತುರಗ + ಗಳ$_2$ ( = ಗಲ) ]

**ತುರಗಚಯ** (ನಾ). ಕುದುರೆಗಳ ಸಮೂಹ : ತುರಗಚಯಂಗಳಂತಿರೆ ತರಂಗಚಯಂ ... ರಾಜಗೇಹದಂತಿರೆ ಕೊಳನಲ್ಲಿ ತಾಮರಸರಂತಿರೆ ತಾಮ ರಸಂಗಳೊಪ್ಪುಗುಂ (ಪಂಪಭಾ. ೫-೫೮). [ತುರಗ + ಚಯ]

**ತುರಗಘಟ್ಟು** (ನಾ). ಕುದುರೆಗಳ ಸೈನ್ಯ ; ಅಶ್ವದಳ : ಅಗಣಿತ ತುರಗ ಘಟ್ಟುಗಳೈದೆ ಕವಿದುವು ಚತುರಗತಿಗಳಲಿ (ಕೌಶಿರಾ. ೨೧-೫). [ತುರಗ + ಘಟ್ಟು$_2$]

**ತುರಗದಳ** (ನಾ). = ತುರಗದಟಿ : ರಾವಣನು ಮರುಳುಗೊಂಡನು ತುರಗದಳವನು ನೆರಹಿ ತಾನಿವ ನೆಚ್ಚಿ ಕೆಟ್ಟನು (ಕೌಶಿರಾ. ೨೦-೨೫) ; ತುರಗ ದಳವ ಕೂಡಿ ಕೊಟ್ಟು ಕರ್ಣಾಟವನಿರದೆ ಸಾಧಿಸು ಹೋಗೆಂದ (ಕಂನವಿ. ೧೧-೮).) [ ತುರಗ + ದಳ$_2$ (= ದಲ) ]

**ತುರಗದಟಿ** (ನಾ). ಚತುರಂಗಬಲದಲ್ಲಿ ಒಂದು ಅಂಗ ; ಕುದುರೆಗಳ ಸೈನ್ಯ; ಅಶ್ವದಳ: ಮಾಪಾತಕಂ, ತುರಗದಟಿಂ, ಮಂಗಳಾರತಿ (ಭಾಷಾಭೂ. ೬-೧೩೨ ಪ್ರಯೋ) ; ಆಟಿಜನಂ, ತುರಗದಟಿಂ (ಶಮದ. ೧೭೪ ಪ್ರಯೋ).
[ತುರಗ + ದಟಿ]

**ತುರಗಮನೆ** (ನಾ). (ಚದುರಂಗದ ಆಟದಲ್ಲಿ) ಕುದುರೆ ನಿಲ್ಲುವ ಮನೆ : ಉಕ್ಕುವಾ ತುರಗಮನೆಯಿಂದಾಳುಮಂ ನೂಂಕೆ ದಕ್ಕಿತರಸಿನ ಹಿಂದೆ ಬಂದಾನೆ (ಜಬಪು. ೧೦-೪೬). [ತುರಗ + ಮನೆ]

**ತುರಗಮೇಧ** (ನಾ). ಅಶ್ವಮೇಧಯಾಗ : ತರುಣ ಕೇಳ್ಳೆ ತುರಗ ಮೇಧಾಧ್ವರದ ಮೇಲಾರೈಕೆ ನಡೆದುದು (ತೊರಾ. ೧-೭-೨೪) ; ಅವನಾದಿಯೊಳ್ತುರಗಮೇಧಂಗಳೇಳಂ ಮಾಡಿ ನರ್ಮದಾತಟಕೆ ಬಂದು (ಜೈಮಿಭಾ. ೨೫-೭). [ತುರಗ + ಮೇಧ]

**ತುರಗರತ್ನ** (ನಾ). [ಜೈನ] ಏಳು ಜೀವರತ್ನಗಳಲ್ಲಿ ಒಂದು ; ಶ್ರೇಷ್ಠವಾದ ಕುದುರೆ : ದ್ವಾದಶಯೋಜನೋಲ್ಲಂಘನ ರಂಹೋನಿವಾಸಭೂಮಿಯುಮಪ್ಪ ಪವನಂಜಯಮೆಂಬ ತುರಗರತ್ನಮುಂ (ಆದಿಪು. ೧೧-೩ ವ).
[ತುರಗ + ರತ್ನ]

**ತುರಗರಶ್ಮಿ** (ನಾ). ಕುದುರೆಗೆ ಕಟ್ಟಿರುವ ಲಗಾಮು : ಪಿಡಿ ತುರಗರಶ್ಮಿಯ ನಿನಿತು ದೃಢಮುಷ್ಟಿಯಿಂ (ಶ್ರೀರಾಮಾ. ೮೦೭-೧೮೪).
[ತುರಗ + ರಶ್ಮಿ]

**ತುರಗಾಟ** (ನಾ). ಮಕ್ಕಳು ಆಡುವ ಒಂದು ಬಗೆಯ ಆಟ : ಸುಳಿದಾಟ ಚಿಣಿಕೋಲು ಕುಣಿಗಳು ತುರಗಾಟ (ವಿಸೂತ್ರೇಸು. ೧೯-೩). 'ತುರಿಗೆ' ಪರಾ.
[ತುರಗ ? + ಆಟ]

**ತುರಗಾರೂಢ** (ನಾ). ಕುದುರೆಯನ್ನು ಹತ್ತಿರುವವನು; ಅಶ್ವಾರೋಹಿ : ತುರಗಾರೂಢನೀ ಬರ್ಪನಸ್ಮದ್ಧರಣೀಶಂ (ಶಾಂತಿಪು. ೫-೩೯).
[ತುರಗ + ಆರೂಢ]

**ತುರಗಾರೋಹ** (ನಾ). ಕುದುರೆಯನ್ನು ಹತ್ತುವುದು ; ಕುದುರೆ ಸವಾರಿ : ಮುಂತೆ ತುರಗಾರೋಹಮಂ ಕಲಿಸಿ ವಿಸ್ತರಂ ಮತ್ತಂ ಗಜಾರೋಹಣಾದ್ಯಖಿಳವಿದ್ಯೆಯಂ ಪುತ್ರಂಗೆ ಮಾಡಿಸಿ (ನಂಬಿರ. ೩-೪೫).
[ತುರಗ + ಆರೋಹ]

**ತುರಗಾರೋಹಣ** (ನಾ). = ತುರಗಾರೋಹ : ತುರಗಾರೋಹಣದಿಂದಮೊರ್ಮೆ ಗಜಶಿಕ್ಷಾಲೀಲೆಯಿಂದೊರ್ಮೆ ... ಪೊಳ್ತುಗಳೆಮಂ ಶ್ರೀಗೋಮಿನೀವಲ್ಲಭಂ (ಚಂದ್ರಪು. ೪-೨೮). [ತುರಗ + ಆರೋಹಣ]

**ತುರಗಾಸ್ಯ** (ನಾ). ೧. = ತುರಂಗವದನ. ೨. [ಜ್ಯೋತಿ] ಕುದುರೆಯ ಮುಖದಂತೆ ಇರುವ ನಕ್ಷತ್ರ ; ಅಶ್ವಿನಿ : ತುರಗಕ್ಕೆ ನೆಗಟ್ಟಿ ಪಕ್ಷಿಗೆ ... ಕರಮೊಳ್ಳಿತು ಪತ್ತುವರಂ ತುರಗಾಕ್ಷಂ[ಸ್ಯಂ] ಕಜೆಯೆ ನೆಚೆಯೆ (ಜಟ್ಟಮ. ೮-೩೭). [ತುರಗ + ಆಸ್ಯ]

**ತುರಗಿ** (ನಾ). ಹೆಣ್ಣು ಕುದುರೆ : ಗುರುಗುಂಜೆಯ ಬೇಳೆಯಂ ... ತುರಗಿಯ ಕೊರಲೊಳ್ ಕಟ್ಟಿದೊಡೆ ಮಾಸನಿಕ್ಕುಗುಮನಿಶಂ (ಲೋಕೋಪ. ೯-೧೯೨) ; ಸಮವೃತ್ತಮರುಣಚವಿಯುಂ ಸಮನಿಸೆ ತಾಂ ತುರಗಿ ನೋಡಲುತ್ತಮಮಕ್ಕುಂ (ಅಶ್ವಶಾ. ೧-೩೯). [ಸಂ. ತುರಗೀ]

**ತುರಚಿ** 'ತುಱುಚಿ' ನೋ.

**ತುರಚಿಅವರೆ** (ನಾ). ಒಂದು ಬಗೆಯ ಬಳ್ಳಿ ; ನಸುಗುನ್ನಿ : ನಸುಗುನ್ನಿ, ನಾಯಿಸೊಂಕುಬಳ್ಳಿ, ತುರಚಿಅವರೆ (ಮೃಜಿಗಿ. ೫೫-೧೦೦೪).
[ತುರಚಿ (< ತುಱುಚಿ) + ಅವರೆ$_1$]

**ತುರಚಿಬಳ್ಳಿ** (ನಾ).= ತುರಚಿಅವರೆ : ಅಂಟುಸುರುಸುರಿಗೆಬಳ್ಳಿ, ತುರಚಿಬಳ್ಳಿ, ಚೇಳುರಿಗಿಡ (ಮೃಜಿಗಿ. ೭೫-೧೫೩೨).
[ತುರಚಿ (< ತುಱುಚಿ) + ಬಳ್ಳಿ]

**ತುರಚೆ** 'ತುಱುಚೆ' ನೋ.

**ತುರನ** (ನಾ). "ನಿರಂಕುಶಾಧಿಕಾರಿ" (ಅಂತಿಗೊ. ಕೋಶ) : ತುರನರಾ ಜಾತಿಯಾದು ಒಲ್ದುದಟಿಲಾಭಮನ್ (ಅಂತಿಗೊ. ೪೬-೯೭೨).
[ ← ಇಂ. Tyrant ]

**ತುರವ** (ನಾ). ಒಂದು ಬಗೆಯ ವಾದ್ಯ : ವೇದಗಳ ಕಾಲದಲ್ಲಿ ಉಪಯೋಗದಲ್ಲಿದ್ದ ಬಕುರ, ನಾಡಿ, ತುರವ...ಮೊದಲಾದ ವಾದ್ಯಗಳ ರೂಪರಚನೆಗಳನ್ನೂ ... ಶಿಲ್ಪಕಲಾಭಿತ್ತಿಗಳಿಂದ ನಾವು ಗ್ರಹಿಸಬಹುದು (ಸಂಗೀದಂ. ೧೯೫). 'ತುರಿ$_4$' ಪರಾ.
[ ?. /ಮರಾ. ತುರ, ತುರೇ./ಪ್ರಾ. ತೂರ./ತಮಿ. ತುರ ]

**ತುರಸು** (ಕ್ರಿ). ( ? ) : ಅರಸು ಪರಶಗಳೇನು ಪ್ರಯೋಜನ ತುರಸಿ ಹೋಹವು ತುಟ್ಟಿಮನಸಿನ ಕೇಳು ಸಜ್ಜನವೇ ಮನಸು ನಿಂದಡೆ ಮೋಹ ನಿಲ್ಲುವುದು (ಉದ್ಯೋಪ್ರ. ೧-೪-೨೨). [ ? ]

**ತುರಾ**, ತುರಾಯ, ತುರಾಯಿ, ತೂರಾಯ, ತೂರಾಯಿ (ನಾ). ೧. ಪೇಟ, ಟೋಪಿ, ಕಿರೀಟ ಮುಂತಾದುವುಗಳಿಗೆ ಸಿಕ್ಕಿಸುವ ಹೂವಿನ ಅಥವಾ ಮುತ್ತಿನ ಆಭರಣ, -ಅಲಂಕಾರದ ಕುಚ್ಚು. ೨. ಲಾವಣಿಗಳಲ್ಲಿ ಒಂದು ಪ್ರಕಾರ ; ಪ್ರಕೃತಿಗಿಂತ ಪುರುಷನೇ ಹೆಚ್ಚು ಎಂಬ ತತ್ತ್ವದಿಂದ ರೂಪುಗೊಂಡ, ಹೆಣ್ಣಿಗಿಂತ ಗಂಡೇ ಹೆಚ್ಚು ಎಂಬ ಅಭಿಪ್ರಾಯವನ್ನು ಸಮರ್ಥಿಸುವ ಲಾವಣಿ : ಈ ಜಾತಿಯ ಹಾಡುಗಳಲ್ಲಿ 'ತುರಾ', 'ಕಲ್ಗಿ' (ಕಲ್ಕಿ) ಎಂಬವು ಮುಖ್ಯವಾದ ಪ್ರಭೇದಗಳು (ಕರ್ನಾಸಂ. ೨೩) ; ಈ ಲಾವಣಿಗಳು ವಿಶೇಷವಾಗಿ 'ತುರಾ' ಮತ್ತು 'ಕಲ್ಕಿ'ಗಳೆಂಬ ಲಾವಣಿಕಾರರ ಸಂವಾದಗಳಾಗಿ ಬಳಕೆಯಲ್ಲಿ ಬಂದಿವೆ (ಕನ್ನಜಾ. ೯೦) ; ತಗೋ ಷುರು ಆಯ್ತು ವಾಗ್ವಾದ. 'ತುರಾ' ನೇ ಎಚ್ಚೊಂತ ಅವ್ರು ಕಲ್ಕಿ ತುರಾನ ನುಂಗ್ಬುಡ್ತು ಅಂತ ರಂಗಸಾಮಪ್ಪ (ದೆಯ್ಯಮ. ೨೨). 'ಕಲ್ಗಿ' ಪರಾ. **ತುರಾಯ** : ೧. "ಶೇಖರಃ = ತುರಾಯಂ" (ಶಾಶಕ್ಕ. ೯೧) ; ರತ್ನ ತುರಾಯ ಸಹಿತಂ ಮುತ್ತಿನ ಸತ್ತಿಗೆಯ ಘಂಟೆ ನೃಪವರಗಿತ್ತಂ (ಬೀಳವಂ. ೭-೯೫) ; ಸುತ್ತಿದನು ಚಿಮ್ಮುರಿಯ ಸತ್ಯಪಾಲಕ ಬಸವ ಮತ್ತದರ ಮೇಲಿಟ್ಟ ಮುತ್ತಿನ ತುರಾಯ (ಶರಲೀ. ೧೩೩-೨). ೩. ಒಂದು ವಿಶೇಷ ರೀತಿಯ ಹೂದಂಡೆ,-ಪುಷ್ಪಗುಚ್ಛ : ಅತಿಥಿಗಳಿಗೆ ಹಾರ ತುರಾಯಗಳನ್ನು ಅರ್ಪಿಸಲಾಯಿತು (ರೂಢಿ). ೪. ಕೆಲವು ಬಗೆಯ ಹೂವು, ತರಕಾರಿಗಳ, ಕುಚ್ಚಿನಂತಿರುವ ತುದಿ,-ಅಗ್ರ : (ಶಿ). **ತುರಾಯಿ** : ೧. ನವರತ್ನಖಚಿತದ ಸಿರಪೇಷ್ ತುರಾಯಿ ಕಲ್ಲಿಯನು ಸರಸಿಜಮುಖಿಯೊರ್ವೆ ಪಿಡಿದು ನಿಂದಿರ್ದಳು (ಕಂನವಿ. ೨೪-೩೯) ; ಮುತ್ತಿನ ತುರಾಯಿಗಳು ಮುದದಿಂದ ಧರಿಸಿ (ಯನಳ. ೫೪). ೨. ಕಲ್ಗಿ, ತುರಾಯಿ ಎರಡು ಪಕ್ಷಗಳ ಮೇಳಗಳನ್ನು ಕರೆಯುಸುವದಪರೂಪ (ದಾಸಹು. ೫೨) ; ಲಾವಣಿಗಳಲ್ಲಿ ಎರಡು ವಿಧ. ಗಂಡಿನ ಪಕ್ಷಕ್ಕೆ ನಿಂತು ಹಾಡುವ ಲಾವಣಿ ; ಹೆಣ್ಣಿನ ಪಕ್ಷಕ್ಕೆ ನಿಂತು ಹಾಡುವ ಲಾವಣಿ...ತುರಾಯಿ ಕಲ್ಗಿ ಎಂಬ ಬೇರೆ ಹೆಸರುಗಳೂ ಉಂಟು (ಸುವರ್ಣ. ೪೦). ೩. ರಾಯರಿಗೆ ಹಾರ, ತುರಾಯಿ ಅರ್ಪಿಸಬೇಕಾಗಿತ್ತು (ರಾಯುಕ. ೮೩). ೪. ನವಿಲು, ಕೋಳಿ ಮೊದಲಾದ ಹಕ್ಕಿಗಳ ಜುಟ್ಟು,—ಕೊಟ್ಟು : ಹುಂಜದ ತುರಾಯಿ ಬಲು ಮೋಜು (ನವ್ಯಧ್ವ. ೮೯) ; ಜುಟ್ಲೀ ಎಂಬ ಪಾರಿವಾಳಗಳಿಗೆ ತುರಾಯಿ ಇರುತ್ತದೆ (ಮುಂಬಯಿ. ೩-೧೦೪); **ತೂರಾಯ** : ೧. ಮುತ್ತಿನ ತೂರಾಯ ಕೆತ್ತ್ಯಾನೆ ಬಾವಿಲಿ ಕಡುಕು (ಸೌಂದಕಾ. ೩-೧೦೫) ; ಮುತ್ತೀನ ತೂರಾಯ ಹಿಡ್ಕೊಂಡು ರಾಮಣ್ಣ ಧೊರ್ಗಾಳಿಗುಲೂಪೆ ಕಳಿಸಾನು (ಹುಟ್ಟಿಹ. ೨೭). **ತೂರಾಯಿ** : ೧. ವಾರೆ ತೂರಾಯಿಗಳ ಸಿಕ್ಕಿಸಿ (ಜ್ಞಾನಸಿಂ. ೧-೩೫) ಹೊಳೆವ ಯಂತ್ರಗಳು ಮುಂದಲೆಗೆ ಕಟ್ಟಿ ಥಳಥಳಿಸುವ ಪಿಂಥ ತೂರಾಯಿಗಳನಿಟ್ಟು ಸುಳಿನಾಭಿಯಲ್ಲಿ ಕಟ್ಟಿದಳ್ಳೊನ್ನಘಂಟೆ (ಶ್ರೀಕೃಪಾ. ೫೫).

ತುರಾಯದ ಹಕ್ಕಿ = ಒಂದು ಬಗೆಯ ಚುಂಗುಳ್ಳ ಹಕ್ಕಿ; ಕುಕ್ಕುಟಿ : ಭೃಂಗ = ೧. ಗುಂಗೀಹುಳ. ೨. ತುರಾಯದ ಹಕ್ಕಿ" (ಗಂಗಾಮ. ೨೪೪). [ಅರ. ತುರ್ರ್ರಾ = ಜೋಲಾಡುವ ಮುಂಗುರುಳು, ಅಲಕ ; ಮರಾ. ತುರಾ ; ಹಿಂ. ತುರೀ./ತಮಿ. ತುರಾಯ್ ; ಮಲ. ತುರ ; ತುಳು. ತುರಾಯಿ; ತೆಲು. ತುರಾ, ತುರಾಯಿ ]

**ತುರಾಮ್ಮ** (ನಾ). ಒಬ್ಬಾತನ ಹೆಸರು : ಗೋಸಾಸಿಯ ಹೆಣ್ಣತಿ ಪೊನ್ನಟ್ಟೆ ಮಗಂ ತುರಾಅಮ್ಮ ತುರಾಮ್ಮನ ಪೆಣ್ಣತಿ ಮಾಳಕ್ಕ (ಮೈಆರಿ. ೧೯೨೯. ೭೯-೨; 964). [ ? + ಅಮ್ಮ$_1$ ]

**ತುರಾಯ** 'ತುರಾ' ನೋ.

**ತುರಾಯಿ** 'ತುರಾ' ನೋ.

**ತುರಾಯಿಮರ** (ನಾ). ಒತ್ತಾದ ಎಲೆಗಳನ್ನುಳ್ಳ ಒಂದು ಬಗೆಯ ಮರ : (ಕ). [ತುರಾಯಿ (< ತುರಾ) + ಮರ$_1$]

**ತುರಾಷಾಟ್ಖಡ್ಗ** (ನಾ). ಇಂದ್ರನ ಕತ್ತಿ ; ವಜ್ರಾಯುಧ : ತುರಾಷಾಟ್ಖಡ್ಗೋಪಮಮಪ್ಪ ತೀಕ್ಷ್ಣತರಚಕ್ರಂ ಸಾರ್ಗುಮಿನ್ನಾತನಂ (ಚಂದ್ರಪು. ೫-೩೫). [ ಸಂ. (ತುರಾಸಾಹ್ + ಖಡ್ಗ) ]

**ತುರಿ$_1$** 'ತುರುವು$_1$' ನೋ.

**ತುರಿ$_2$** 'ತುರುವು$_2$' ನೋ.

**ತುರಿ$_3$** 'ತುಱು' ನೋ.

**ತುರಿ$_4$** (ನಾ). = ತೂರ್ಯ$_2$: (ಕ). 'ತುರವ' ಪರಾ. [< ಪ್ರಾ. ತುರಿಅ./ಸಂ. ತೂರ್ಯ ]

**ತುರಿ$_5$** (ನಾ). ೧. ನೆಯ್ಗೆಯವನ ಮಗ್ಗದ ಕೋಲು ; ನೆಯ್ಗೆಯ ಎಳೆಗಳುಳ್ಳ ಮಗ್ಗದ ಕೋಲು; ಮಗ್ಗದಲ್ಲಿರುವ ಹಾಸುಹೊಕ್ಕುದಾರಗಳ ಸುಕ್ಕುಗಳನ್ನು ಸರಿಪಡಿಸಿ ಪ್ರತ್ಯೇಕಗೊಳಿಸುವ ಒಂದು ತಂತುಮಯ ದಂಡ. ೨. ಲಾಳಿ : "ತುರೀ—ಲಾಳಿಯುಂ, ಕಜ್ಜಿಯುಂ" (ಕಾಶಕ್ಕ. ೧೭೮). [ ಸಂ. ತುರೀ ]

**ತುರಿಕಡ್ಡಿ** (ನಾ). ಒಂದು ಬಗೆಯ ಹುಲ್ಲು : ಜೇನುಕಡ್ಡಿ, ತುರಿಕಡ್ಡಿ (ಮೈಜಿ. ೧೩-೨೩೫). [ ತುರಿ ? + ಕಡ್ಡಿ ]

**ತುರಿಕೆ** 'ತುಱಿಕೆ' ನೋ.

**ತುರಿಗಜ್ಜಿ** (ನಾ). ತುರಿಕೆಯುಂಟುಮಾಡುವ ಕಜ್ಜಿ; ನವೆಯುಳ್ಳ ಕಜ್ಜಿ: ಕಣಜದಂತೆ ಮೈಯೆಲ್ಲ ಕೋಪ ಹರಿದು ... ತುರಿಗಜ್ಜಿಯಾಗಿ ಇನ್ನಷ್ಟು ಮತ್ತಷ್ಟು ಕೋಪ (ಹೊಸಕ್ಕ. ೨೨೦) ; ಹೆಗ್ಗಡೆ ಇನ್ನು ಕಜ್ಜಿ ತುರಿಸಿ ಮುಗಿಸಿರಲಿಲ್ಲ. ತುರಿಗಜ್ಜಿಯ ಹಣೆಯ ಬರಹವೆ ಹಾಗೆ (ಮಲೆಮ. ೩೮೫). [ತುರಿ$_3$ (< ತುಱು) + ಕಜ್ಜಿ]

**ತುರಿಗೆ** (ನಾ). ಒಂದು ಬಗೆಯ ಆಟ : ಕವಿಲು ಗಜಲು ಬೈತು ತುರಿಗೆ ಆಂದೋಳಿತ [ ಪಾಠಾಂ. ತುತುಕಿ ಆರಭಿ] ಮೊದಲಾದ ಆಟಗಳಿಂ ... ಮೆಚ್ಚನಚ್ಚೊತ್ತಿರ್ದಳ್ (ವಿರೂಪಾ. ೯೦). 'ತುರಗಾಟ' ಪರಾ. [ ? ]

**ತುರಿಚೆ** 'ತುಱುಚೆ' ನೋ.

**ತುರಿತ$_1$** (ನಾ). ತುರಿ ; ಕೆರೆತ ; ಕಡಿಯುವಿಕೆ ; ನವೆ : ಆಯ್ಯಪ್ಪಾ ಮೈಯಲ್ಲಾ ತುರಿತ (ರೂಢಿ). [ ತುರಿ$_3$ ( < ತುಱು) + - ತ$_2$ ]

**ತುರಿತ$_2$**, ತುರುತು, ತುರ್ತ$_1$, ತುರ್ತು (ನಾ). ೧. ಜಾಗ್ರತೆ ; ಬೇಗ ; ಶೀಘ್ರತೆ ; ತ್ವರೆ ; ಆತುರ : "ತು [ಪಾಠಾಂ. ತ್ವ, ದು] ರಿತದಲಿ ದಿಟದಲಿ ಅಂಜಸಾಹ್ವಯಮೆನಿಕುಂ" (ಮಂಗರಾ. ೧೫೬-೭೩); ತುರಿತದಿನನಂತವೀರ್ಯರ್ಗಂ ಬೆರಸು ನೃಪಾಸನ್ನವರ್ತಿಗಳ್ ಕರ್ಪೂರಾಗುರುಮಳಯರುಹವಿಮಿಶ್ರಿತ ಕರಕಾಂಭಸ್ಸೇಕಪೂರ್ವಕಂ ಬೀಸುವುದುಂ (ಶಾಂತಿಪು. ೨-೨೪) ; ಕಣೆಗಳಂ ತುರಿತದಿಂ ತೆಗೆದೆಸುತ (ತುರಂಗ. ೭೦-೨೭) ; ಬರಲೊಡನೆ ಸುರಭಿಸಮಯಂ ತುರಿತದಿನೈತರ್ಪುವಲ್ತೆ ದಾಂಗುಡಿಗಳ್ ಮಾಮರದೊಳ್ (ಧನ್ಯಾಲೋ. ೨೪೫). **ತುರುತು :** ೧. ತನ್ನ ತುರುತನ್ನು ತಾನೇ ತಡೆದುಕೊಂಡಳು (ಕಲ್ಯಾಣ. ೨೨೦) ; ಕೆಲಸದ ತುರುತಿನಲ್ಲಿ ಅವಳನ್ನು ಕಂಡು ಮಾತನಾಡಿಸದಾದಾಗ (ಬಣ್ಣಮಾ. ೧೧). ೨. ಅತ್ಯಗತ್ಯವಾದುದು ; ಕೂಡಲೆ ಗಮನ ಕೊಡಬೇಕಾದುದು ; ಜರೂರು : ಈ ತುರುತಿನಲ್ಲಿ ಬೇಕು ಅಂದರೆ ಯಾರು ತಾನೇ ಹಣ ಒದಗಿಸುತ್ತಾರೆ (ವಾರಳಿ. ೧೫೦). **ತುರ್ತ$_1$:** ೩. ಸದ್ಯ; ತತ್ಕಾಲ : ತುರ್ತಕ್ಕೆ ನಮ್ಮ ಕಡಿಗೆ ಇರುವ ಆಸಾಮಿಗಳೊಳಗೆ ಯಾರಿಗೆ ನಾವು ಸರಾಫರೆಂದು ಎಣಿಸುತ್ತೇವೆ (ಮುಂಬಯ್ವಾ. ೨೨ ಪ್ರಸ್ತಾವನೆ). **ತುರ್ತು :** ೨. ತುರ್ತಾದ ವರ್ತಮಾನ ಬಂದಿದೆ (ಯೋಧಪು. ೨೦) ; ವ್ಯವಹಾರದೊಳು ಯೋಜಿಸೆರಡನು ಕೂಡಿಡು ತುರ್ತಿಗೆ ನಾಲ್ಕನೆಯದನು (ಇಂಚಾಪ. ೨೦೦-೪೩). (ಗು). ೪. ಕೂಡಲೆ ಗಮನಕೊಡಬೇಕಾದ ; ಅತ್ಯಗತ್ಯವಾದ ; ವಿಳಂಬಕ್ಕೆ ಯೋಗ್ಯವಲ್ಲದ : ಯಾವ ತರಹದ ತುರ್ತು ಕೆಲಸವಿಲ್ಲದಿದ್ದರೆ ಕಾಲುನಡೆಯಿಂದಲೇ ... ನಡೆದು ಮನೆ ಕಾಣುತ್ತಿದ್ದರು (ಕಂಬಹು. ೨೭) ; ಕೂಡಲೇ ಹೋಗಿ ಅಧಿಕಾರ ವಹಿಸಿಕೊಳ್ಳಬೇಕೆಂದೂ ತುರ್ತು ಆಜ್ಞೆ ಮಾಡಿದ್ದಾರೆ (ರಂಗಕ. ೯). [ < ಸಂ. ತ್ವರಿತ. / ತುಳು. ತುರಿತ, ತುರ್ತ, ತುರ್ತು; ತೆಲು. ತುರಿತ, ತುಱುತು ]

**ತುರಿಪ**, ತುರಿಹ (ನಾ). = ತುರಿತ$_2$ ೧. ಇರ್ವರುಮೊಟ್ಟೈಯನೇಱಿ ತುರಿಪದಿಂ ಕತಿಪಯದಿವಸಗಳಿಂ ವೇಣೂತಟಮನೆಯ್ದಿ (ಪದ್ಮಾರಾ. ೧೩೦-೧೫); ಕೆಂದಳಿರ ಪಾಸುಗಳಿಂ ಕುಳಿರ್ವಾಲಿನೀರ್ಗಳಿಂ ತುರಿಪದೆ ಸೂಸುತುಂ ಕೆಳದಿಯರ್ ನದಿಪುತ್ರಿರೆ (ಪಂಪಭಾ. ೫-೮) ; ಅರೆಗಟ್ಟಿ ತುರಿಪದಿಂ ಪರಿತರೆ... ನೋಡಿದರ್ ಪೆಟಿಳೊರ್ವಳ್ (ಶಾಂತಿಪು. ೬-೧೦) ; ತುರಿಪದೆ ನಡೆತಂದಳ್ಕಾಮ ಯೋಗಿನೀವಿಭ್ರಮದಿಂ (ಕಾದಂಪೂ.೪೮೦); ಚೇಟಿಯರ್ ತುರಿಪದಿಂ ಪ್ರಿಯನಿಂ ಬರೆ ಕಂಡು (ಶೃಂಗಾರ. ೩-೬೪); ತುರಿಪದೆ ಕಾದಿ ಗೆಲ್ದು ಹಯಮಂ (ರಾಮಾಶ್ವ. ೧೧೧-೧೭). **ತುರಿಹ :** "ತುರಿಹಂ ... ಬೇಗಂ — ಈ ೮ ಶೀಘ್ರಂ" (ಕಕಸಾ. ೧೨-೨೨೯) ; "ತುರಿಹ ಬೇಗಂ ... ಶೀಘ್ರಾರ್ಥಂ" (ಕವಿಕಂ. ೧೧೧) ; ಅತ್ವಕ್ಕುತ್ವಂ — ಅಂಗುಷ್ಠ – ಉಂಗುಟ ; ತ್ವರಿತ—ತುರಿಹ (ಶಮಂದ. ೨೭೯ ಪ್ರಯೋ) ; ಜಗದಂತರಿಯಾಮಿ ಮುಂಗೆಲಸಕ್ಕೆ ತುರಿಹದಿಂದವಳ ಪ್ರೇರಕನಾಗಿ (ಮೋಹತ. ೨೯-೪೦) ; ವಸ್ತುವಿನ ಘನತೆಯೇನದ ನಾನು ತುರಿಹದಿ ಮುಂದೆ ತಂದನುಬಂಧಿಸುವೆನೆಂದು ನುಡಿದ (ಭರಚ. ೩೩-೪೫). [ <ಸಂ. ತ್ವರಿತ ? ]

**ತುರಿಪಂ** (ಅ). ಬೇಗನೆ ; ಶೀಘ್ರವಾಗಿ : ಹರೆಯದಿನಗ್ಗಳಂ ಹಣದ ಮೋಗಣ ಮೋಹಮಿವಳ್ಗೆ ಬಟ್ಟಿನಂ ತುರಿಪಮೆಯರ್ಥಮಂ ಕ್ರಮದಿನಾ ಮುದುಪಂ ಗಡ ಕೊಟ್ಟನೊತ್ತೆಯಂ (ಸೂಕ್ತಿಸು. ೮-೪೨೨). [ <ತುರಿಪ ]

**ತುರಿಪಂಗೆಯ್** (ಕ್ರಿ). ಆತುರಪಡು ; ತವಕಿಸು : ನೀಮೇಕೆ ತುರಿಪಂಗೆಯ್ವಿರೆಮ್ಮರಸಿಯಂ ಪ್ರಾರ್ಥಿಸಿ ಪೊಡೆವಟ್ಟು ಬೇಡಿಕೊಂಡು ವಿಧಿಪೂರ್ವಕಂ ಮದುವೆ ನಿಲ್ವುದು (ಪಂರಾಮಾ. ೮-೬೧ ವ) ; ಅನುಷ್ಠಾನಂಗಳ್ಗೆ ಪೇಟ್ದ ಪ್ರಮಾಣದ ಕಡೆಯೊಳು ತುರಿಪಂಗೆಯ್ಯದೆ ನಿಜನಿರಂಜನನಿತ್ಯಾನಂದಾತ್ಮ ಸ್ವರೂಪಮಂ ಧರ್ಮಶುಕ್ಲಧ್ಯಾನದಿಂ ಭಾವಿಸುವುದು (ಪಸಾರ. ೩೪೧). [ತುರಿಪ+ಕೆಯ್$_1$]

**ತುರಿಪಕಾಱ** (ನಾ). ಆತುರಪಡುವವನು ; ತವಕಿಸುವವನು ; ರಭಸಗೊಳ್ಳುವವನು; ದುಡುಕುವವನು: ಗೆಲ್ಲಕಾಱಂ ಪರವಾದಿವ್ರಾತದೊಳ್ ಬಿತ್ತರಿಪ ತುರಿ[ ಪಾಠಾಂ. ಱಿ ]ಪಕಾಱಂ ಮಹಾಧರ್ಮದೊಳ್...ನೇಮಿಚಂದ್ರಂ (ಅರ್ಧನೇ. ೧-೩೭) ; ರಾಭಸಿಕಾನಾಂ = ತುರಿಪಕಾಱರ್ಗೆ (ನೀತಿವಾ. ೯-೧೧೭). [ತುರಿಪ + – ಕಾಱ]

**ತುರಿಪವಯಣ** (ನಾ). ಬೇಗನೆ ಮಾಡುವ ಪ್ರಯಾಣ ; ಆತುರದ ಪ್ರಯಾಣ. 'ತುರಿಪವಯಣವರ್' ಪರಾ. [ತುರಿಪ + ಪಯಣ$_1$ ]

**ತುರಿಪವಯಣವರ್** (ಕ್ರಿ). ಬೇಗಬೇಗನೆ ಪ್ರಯಾಣ ಮಾಡಿಕೊಂಡು ಬರು : ಅರಿಕುಠಾರದಿಂದ ತಳರ್ದು, ತುರಿಪವಯಣವಂದು (ಮಂತ್ರಶ. ೧೧೧-೧) [ ತುರಿಪವಯಣ + ಬರ್$_1$ ]

**ತುರಿಬೀಳ್ಬಳ್ಳಿ** (ನಾ). ಒಂದು ಬಗೆಯ ಬಳ್ಳಿ : (ವ್ಯಜಿಗಿ. ೫೫-೧೦೦೨). [ ? + ಬಳ್ಳಿ ]

**ತುರಿಮಣೆ** 'ತುರುವುಮಣೆ' ನೋ.

**ತುರಿಮುಳ್ಳುಮೀನು** (ನಾ). ಒಂದು ಬಗೆಯ ಮೀನು : "ಸಹಸ್ರದಂಷ್ಟ್ರಃ, ಪಾಠೀನಃ – ೨ ಸಾವಿರ ಕೋರೆಗಳುಳ್ಳ ಮೀನಿನ ಹೆಸರುಗಳು, ಅಂದರೆ ತುರಿಮುಳ್ಳುಮೀನು" (ಸಿದ್ಧಾಂತಿ. ೮೧).
[ತುರಿ$_3$ (<ತುಱಿ)+ಮುಳ್ಳು (<ಮುಳ್)+ ಮೀನು$_2$ (<ಮೀನ್$_3$)]

**ತುರಿಯು$_1$** (ನಾ). = ತುರಿತ$_2$ ೧ : ಮಾಯಾಸ್ವರೂಪವನು ನೆನೆದಾಕ್ಷಣಂ ಮುಂದೆ ನಿಲಲು ತುರಿಯದಿಂ ತೂರ್ಯತ್ರಯವ ನಟಿಸಿ (ಲಶಿಚಂ. ೨೯-೩೮) : ತುರಿಯದೆ ಕೈದ ಕೊಳ್ಳೆನುತಲೀಶ್ವರ ಮುಂದುವರಿದೆಚ್ಚನಾಗ ಬಾಣದಲಿ (ಮೋಹತ. ೩೯-೨೭) ; ತುರಿಯದಿಂದೆಯ್ದಿಯವರಂ ಕೊಂದು ಮುಪ್ಪೊಳಲ ದಹಿಸಿ (ಪಾಸೋಪು. ೧೦-೩೪). 'ತುರಿತ$_2$' ಪರಾ.
[ < ಪ್ರಾ. ತುರಿಅ./ಸಂ. ತ್ವರಿತ ]

**ತುರಿಯು$_2$** (ನಾ). = ತುರೀಯ ೪: ನಾನು ತುರಿಯ ತುರಿಯಾತೀತವಪ್ಪ ಸತ್ತುಚಿತ್ತಾನಂದ ನಿತ್ಯಪರಿಪೂರ್ಣವೆ ತನ್ನಿರವೆಂದು ತಿಳಿಯೆ (ವಚಸಂ. ೦೬೭-೧೦೫) : ಏನೇನರಿಯನು ತುರಿಯಯರಡೆಂಬೊಂದರಿಯ ಮಾನಮೂರುತಿ ಆವವರಿಯ (ಚಿದಾವ. ೮೩-೦೩). [ < ಸಂ. ತುರೀಯ ]

**ತುರಿಯಾತೀತ** (ನಾ). ೧. ಮೋಕ್ಷಕ್ಕೆ ಕಾರಣವಾದ ಏಳು ಭೂಮಿಕೆಗಳಲ್ಲಿ ಕೊನೆಯದು, —ಏಳನೆಯದು : ತುದಿಯ ತುರಿಯಾತೀತವೇ ಏಳನೆಯ ಭೂಮಿಕೆಯು (ಅಮೃತ. ೬-೭). ೨. ಪರಮಾತ್ಮ: ತುರಿಯಾತೀತನ ಗುರು ತರಿವರಾರೆಂದ (ಗಗತಾ. ೦೩-೧). [<ಸಂ. ತುರೀಯಾತೀತ]

**ತುರಿಯಾವಸ್ಥೆ** (ನಾ). ಮೋಕ್ಷವನ್ನು ಪಡೆಯುವ ಸ್ಥಿತಿ ; ಜೀವನ್ಮುಕ್ತಿ : ನಾದಬಿಂದುಕಳೆ ಕಲಾನ್ವಿತ ನಾಲ್ಕಱ ಮಧ್ಯದಲ್ಲಿರ್ಪ ತುರಿಯಾವಸ್ಥೆ (ವಚಸಂ. ೫೬೨-೧೮ ಟೀಕು). [ < ಸಂ. ತುರೀಯಾವಸ್ಥಾ ]

**ತುರಿಸು** 'ತುಱಿಸು' ನೋ.

**ತುರಿಹ** 'ತುರಿಪ' ನೋ.

**ತುರೀಯ** (ಗು). ೧. ನಾಲ್ಕನೆಯ ; ಚತುರ್ಥ : ಗಾಯತ್ರಿಯ ತುರೀಯ (ನಾಲ್ಕನೇ) ಪಾದಪ್ರಶಂಸೆ ಉಪನಿಷತ್ತಿನ ವೈಶಿಷ್ಟ್ಯ (ಋಕ್ಸಾರ. ೮೫ ಟೀಕೆ). (ನಾ). ೨. ನಾಲ್ಕನೆಯದು. ೩. ನಾಲ್ಕನೆಯ ಒಂದು ಭಾಗ. ೪. =ತುರೀಯಾವಸ್ಥೆ ೨ : ತುರೀಯದ ಮೋಹ ಬೆರಸಿದಾಗವೇ ಆ ತುರೀಯ ನಷ್ಟ (ಮೋಳಿಮಾ. ೭೨-೨೮೨) ; ಎನ್ನ ಕಂಗಳೊಳರೂಹಿಂಗೆ ಆನು ಬೇಟ ಗೊಂಡು ಬಳಲುವಂತೆ ಹಿಡಿದು ನೆರೆಯಲಿಲ್ಲಯ್ಯ ತುರೀಯದ [ಪಾಠಾಂ. ತುರ್ಯದ, ತೂರ್ಯದ] ತವಕವನೇನೆಂಬೆನಯ್ಯ (ಅವಚಂ. ೦೩೨-೬೦೧) ; ತುರೀಯಪರಮಾನಂದನು ... ಕೂಡಲಸಂಗಯ್ಯನು (ಬಸವ. ೯೫೪) ; ಜನಕಜಾರಮಣ ಧೀರೋದಾತ್ತವಕ್ಷವಾರ್ಧಿಯ ನೀಲನಾವೆಯೊಳ್ ತೇಲಿದನು ಶಾಂತಿಯ ತುರೀಯಕೆ (ಶ್ರೀರಾಮಾ. ೦೬೪-೩೪೭) ; ಉಪನಿಷತ್ತುಗಳು ತುರೀಯ ಎಂಬ ನಾಲ್ಕನೆಯ ಅವಸ್ಥೆಯನ್ನು ಜೀವನಿಗೆ ಹೇಳುವುವು (ಭಾತತ್ತ್ವ. ೬೪); ತುರೀಯಾವಸ್ಥೆಯೇ ಮುಕ್ತ್ಯವಸ್ಥೆ. ಅಲ್ಲಿ ತುರೀಯನೆಂಬ ಪರಮಾತ್ಮಪ್ರಾಪ್ತಿಯಾಗುವುದು (ಹಿಂದಸಾ. ೨೮೮). ೫. [ಜ್ಯೋತಿ] ಲಗ್ನದಲ್ಲಿ ನಾಲ್ಕನೆಯ ಸ್ಥಾನ, – ಚತುರ್ಥ ಕೇಂದ್ರ : ಸಿತನಸ್ತದೊಳಿರೆ ರಜನೀಪತಿ ಪತ್ತಱೊಳೊಂದಿ ನಿಲೆ ಶುಭೇತರರೊಡಗೂಡೆ ತುರೀಯ [ಪಾಠಾಂ. ತೂರ್ಯದೊಳಾ] ಲಗ್ನೋದ್ಗತಮನುಜಂ ಸ್ವಕುಲನಾಶಕಂ ತಾನೆನಿಕುಂ (ಜಾತತಿ. ೨೧-೯). ೬. (?) : ನಿಷ್ಠೆಯ ಹರಿದು ಭಕ್ತಿ ಎಂಬ ತುರೀಯದಲ್ಲಿ ಸಿಕ್ಕಿ ಸಾಯಲಿಲ್ಲದ ವಿರಕ್ತಿಯ ಕಟ್ಟಿಕೊಂಡು ಮಾಡುವ ಸದಾನಂದನ ಇರವು (ಮೋಳಿಮಾ. ೩೭-೦೫೩). [ಸಂ.]

**ತುರೀಯವರ್ಣ** (ನಾ). ಚತುರ್ವರ್ಣಗಳಲ್ಲಿ ಕೊನೆಯದು ; ಚತುರ್ಥ ವರ್ಣ ; ಶೂದ್ರಜಾತಿ : (೬). [ತುರೀಯ + ವರ್ಣ]

**ತುರೀಯವೃತ್ತಿ** (ನಾ). [ಯೋಗ] ಪ್ರಾಣಾಯಾಮದ ನಾಲ್ಕು ಭೇದಗಳಲ್ಲಿ ಒಂದು : ಪ್ರಾಣಾಯಾಮವು ಬಾಹ್ಯವೃತ್ತಿ, ಅಭ್ಯಂತರವೃತ್ತಿ, ಸ್ತಂಭವೃತ್ತಿ ಮತ್ತು ತುರೀಯವೃತ್ತಿಯೆಂದು ನಾಲ್ಕು ವಿಧ ... ಬಾಹ್ಯವಾದ ದೇಶವನ್ನೂ ಅಭ್ಯಂತರವಾದ ಹೃದಯಪ್ರದೇಶವನ್ನೂ ಸೂಕ್ಷ್ಮವಾಗಿ ಪರ್ಯಾಲೋಚನೆ ಮಾಡುವವನಿಗೆ ತುರೀಯವೃತ್ತಿ ಸಂಭವಿಸುವುದು (ಭಾತತ್ತ್ವ. ೩೩೯). [ತುರೀಯ + ವೃತ್ತಿ$_2$]

**ತುರೀಯಾನುಭವ** (ನಾ). ಬ್ರಹ್ಮಸಾಕ್ಷಾತ್ಕಾರ ; ಆತ್ಮೈಕ್ಯಾನುಭವ : ಗುರುಕೃಪೆಯಿಂದ ಪಡೆದ ತುರೀಯಾನುಭವವು ಅವುಗಳಲ್ಲಿ ಮೂಡಿವೆ (ಕಸಾಚ. ೩೧೯). [ತುರೀಯ + ಅನುಭವ]

**ತುರೀಯಾವಸ್ಥೆ** (ನಾ). ೧. ನಾಲ್ಕನೆಯ ಅವಸ್ಥೆ : ಕಂದರ್ಪಾವಸ್ಥೆಯ ತುರೀಯಾವಸ್ಥೆಯಿಂ ಪರ್ಯಾಕುಲಜೀವಿತೆಯಾಗಿ ಕನ್ನೆ ಮೂರ್ಛಾಪ್ರಪನ್ನೆಯಪ್ಪುದುಂ (ಜಗವಿ. ೧೧-೫೩ವ). ೨. ಆತ್ಮನ ನಾಲ್ಕನೆಯ ಸ್ಥಿತಿ ; ಮೋಕ್ಷ : ಆದರೆ ಅವರಿಗೇನು ಗೊತ್ತು—ಅದು ತುರೀಯಾವಸ್ಥೆಯ ಪರ ಜಂಗಮ ಲೀಲೆಯ ನಾಂದಿಯೆಂದು ? (ಶರಚ. ೮೧೯) ; ತುರೀಯಾವಸ್ಥೆಯೆ ಮುಕ್ತ್ಯಾವಸ್ಥೆ. ಅಲ್ಲಿ ತುರೀಯನೆಂಬ ಪರಮಾತ್ಮ ಪ್ರಾಪ್ತಿಯಾಗುವುದು (ಹಿಂದಸಾ. ೨೮೮); ಯೋಗಿಗೆ ತನ್ನ ತುರೀಯಾವಸ್ಥೆಯಲ್ಲಿ ಈ ಸ್ಥಿತಿ ಮತ್ತು ಈ ದರ್ಶನ ಲಭಿಸುತ್ತದೆ (ಈಚಕೆ. ೮). [ತುರೀಯ + ಅವಸ್ಥೆ]

**ತುರೀಯೋಪಾಂತ್ಯ** (ನಾ). ಮೋಕ್ಷದ ಸಾಮೀಪ್ಯ ; ಬ್ರಹ್ಮಾನಂದಕ್ಕೆ ಸನ್ನಿಹಿತವಾದ ಮಟ್ಟ : ತುರೀಯೋಪಾಂತ್ಯದೊಳು ವಿಹರಿಸುತಲಿರುವ ಯಾತ್ರಿಕರ ಕಾಣಾತ್ತ (ಮಲಿದೇ. ೪೭-೬) ; ಕವಿ ಪಡೆಯುವ ಈ ಸಾಮರಸ್ಯಾನುಭವ ತುರೀಯೋಪಾಂತ್ಯ ಸ್ಥಿತಿ. ತುರೀಯದಲ್ಲಿ ಯೋಗಿಯ ಅನುಭವ ಅಲ್ಲಿ ವಿಷಯ ಆತ್ಮಗಳ ಸಂಪೂರ್ಣ ಸಾಮರಸ್ಯ (ಸೌಂದಸ. ೦೬).
[ತುರೀಯ + ಉಪಾಂತ್ಯ]

**ತುರೀರ** (ನಾ).(?): ಬಿಜ್ಜಯನು ಬಡಿದು ತುರೀರರು ಮೊಟ್ಟೆಯ ಹುಱಿಸಲ್ಕೆ (ಇಎ. ೦೯೪೭, ಹಾನಗಲ್. ೦೯೯-೩೦ ; 1322). [?]

**ತುರು** 'ತುಱು' ನೋ.

**ತುರುಕ, ತುರಃಕ, ತುರುಕು$_2$** (ಗು) ೧. ಬೇರೆ ದೇಶದ ; ವಿದೇಶದ. 'ತುರುಕ ಬೇವು' ಪರಾ. (ನಾ). ೨. ಒಂದು ದೇಶ ; ತುರ್ಕಿಸ್ಥಾನ : ಅರಸುಮಕ್ಕಳು ಪರಮಮಗಧೆಯ ಗೌಡ ಗುರ್ಜರ ತುರುಕದೇಶದ ಪ್ರಭೃತಿ ಭೂಪರು ನೆರೆದು ಬಂದಲ್ಲಿ (ಜ್ಞಾನಚಂ.೧-೧೧); ಸಿಂಧುಜನಂ ತುರುಕವನಿಯು ಆಂಧ್ರ...ಮೊದಲಾದ ಚಪ್ಪನ್ನದೇಶಕೆ ದರ್ಪಣವೆಂದೆನಿಸಿಪ್ಪುದು ತ್ರೈಲಿಂಗ ದೇಶ (ಭ್ರರವೇ.೧-೫೭). ೩. ತುರುಕದೇಶದವನು; ತುರ್ಕಿಸ್ಥಾನದವನು: ತುರುಕ ಬರ್ಬರ ಪಾರಸೀಕರ ತುರಗವೈಸಾವಿರಸಹಿತ ಮೋಹರಿಸಿ ನಿಂದನು ಶಕುನಿ (ಕುವ್ಯಾಗ. ೧-೪). ೪. ಮುಸಲ್ಮಾನ; ಮುಹಮ್ಮದೀಯ: ತುರುಕ ದಂಡಿಗೆ ಕಾಲುವಟ್ಟೆಯಾದದು ಕರ್ಣಾಟ (ಕುರಾಸಾಂ. ೩೬-೭೭); ಒಡ ನಿಕ್ಕೇರಿಯ ಸೆಳೆದಾಗ ತುರುಕರ ಪಡೆ ನಡೆದುದು ಕನ್ನಡಕೆ (ಕಂನವಿ. ೦೦ ಸೂಚನೆ) ; ಭಾರತೀಯರು ಇಸ್ಲಾಂಮತಾವಲಂಬಿಗಳನ್ನು ಕುರಿತು ಮಾತನಾಡುವಾಗ ಅವರನ್ನು ತುರುಕರು ಎಂದು ಕರೆಯುವುದುಂಟು (ಭಾರದ. ೪೦೫) ; ತಿರಿತಿರಿಗಿ ಗೋಕರ್ಣಕ್ಕೆ ಹೋಗಿ ತುರುಕನಿಂದ ದೆಬ್ಬೆ ತಿಂದ (ಗಾದೆ). ೫. ಒಂದು ಬಗೆಯ ಪರಿಮಳದ್ರವ್ಯ ; ಲೋಬಾನ : "ಕಪಿಲಃ–ಕಪಿ, ತುರುಕ, ತುತ್ಥ" (ಓಷಧಿ. ೨೦). 'ತುರುಸಿ' ಪರಾ.

**ತುರಃಕ** : ೨. ಪಾಂಡ್ಯ ಲಾಳ ನೇಪಾಳ ತುರಃಕ ಬಬ್ಬರಿಗ . . . ಸಿಂಧು

ವಿಷಯಾಧಿಪರಾಳ್ವಿಸಗೆಯ್ಯೆ (ಕಇ. I, ೩೦-೧೬; 1222); **ತುರುಕ್ಕ$_2$ :** ೨. ಅಂಗ ವಂಗ ಕಳಿಂಗ ಕಾಶ್ಮೀರ ಗುಜ್ಜರ ತುರುಕು ನೇಪಾಳ (ಜಿನಮು. ೫೦-೭೧). [< ಪ್ರಾ. ತುರುಕ್ಕ./ಸಂ. ತುರುಷ್ಕ]

**ತುರುಕಬೇವು** (ನಾ). (ವಿದೇಶೀಯವಾದ) ಒಂದು ಬಗೆಯ ಬೇವಿನ ಮರ ; ಮಹಾನಿಂಬ : ಸಾಸುವೆ . . . ತುರುಕಬೇವಿನ ಬೀಜ ಈ ಔಷಧಿಗಳ ಪ್ರತ್ಯೇಕ ಎರಡು ವರಹ ತೂಕವ ಚೂರ್ಣಿಸಿ (ವೈದ್ಯಸಾ. I, ೩೯೩); ರಾಸ್ನೆ, ತುರುಕಬೇವು, ಚಂಗಲಕೋಷ್ಠ . . . ಪ್ರಾತಃಕಾಲದಲ್ಲಿ ಗ ೪ ತೂಕವಂ ಸೇವಿಸುವುದು (ಸಕಪ್ಪ. ೨೧೮).

[ ತುರುಕ + ಬೇವು. / ತಮಿ. ತುರುಕ್ಕವೇಮ್ಪು ]

**ತುರುಕರಾಡ್ಬಲ** (ನಾ). ಮುಸಲ್ಮಾನ ದೊರೆಯ ಸೈನ್ಯ ; ತುರುಷ್ಕ ಸೇನೆ : ತುರುಕರಾಡ್ಬಲ ವಾರ್ಧಿಬಾಡಬ ದ್ರಾವಿಡಧರಣೀಶ ತಿಮಿರ ಮಾರ್ತಂಡ (ಕಂನವಿ. ೮-೬೬). [< ಸಂ. ತುರುಷ್ಕರಾಡ್ಬಲ]

**ತುರುಕರು** 'ತುಱುಕಱು' ನೋ.

**ತುರುಕಸಿಂಗಾಡಿ** (ನಾ). ತುರುಕಯೋಧರು ಉಪಯೋಗಿಸುತ್ತಿದ್ದ ಬಿಲ್ಲು : ತುರುಕಸಿಂಗಾಡಿ ಬೇಡೆಯ ಲಾಳಿಕೋಲ ನಿಷ್ಠುರವಾಕ್ಯದಾಳ್ಗಳೊಗ್ಗಿನೊಳು ಚುರುಚುರನೆಯ್ದು ಕೈಮುಗಿದು ಗಡ್ಡದ ದೊಡ್ಡ ತುರುಕರರಸು ತೊಲಗಿದನು (ಭರಜ. ೨೨-೩೬). [ ತುರುಕ + ಸಿಂಗಾಡಿ ]

**ತುರುಕಳ್ಳಿ** (ನಾ). (ವಿದೇಶೀಯವಾದ) ಒಂದು ಬಗೆಯ ಕಳ್ಳಿಗಿಡ : ತೋಟದ ಬೇಲೀಲೆಲ್ಲಾ ತುರುಕಳ್ಳಿ ಬೆಳೆದಿದೆ (ರೂಢಿ). [<ತುರುಕ+ಕಳ್ಳಿ]

**ತುರುಕಾಣಿಕೆ** (ನಾ). ಒಂದು ಬಗೆಯ ಕಾಣಿಕೆ (?) : ಸಕಲ ಸುವರ್ಣಾದಾಯ ಭತ್ತಾದಾಯ ತುರುಕಾಣಿಕೆ . . . ಯಿವು ಮೊದಲಾದವೆಲ್ಲಾ . . . ಧಾರೆಯನೆರದು ಕೊಟ್ಟ ಅಗ್ರಹಾರ (ಎಕ. X, ಕೋಲಾರ. ೨೪೭-೨೬; 1637?). [ ತುರು$_2$ ? + ಕಾಣಿಕೆ (< ಕಾಣ್ಕೆ) ]

**ತುರುಕಾಣ್ಯ** (ನಾ). ತುರುಕರ ದೇಶ ; ಮುಸಲ್ಮಾನರ ದೇಶ : ತುರುಕಾಣ್ಯ ಮೊದಲಾದ ದೇಶದೊಳ್ವಿಹರಿಸಿ ಸುರಿದರಾತ್ಮಾಮೃತರಸವ (ಭರಜ. ೮೦-೬೯); ರಾಮಸಮುದ್ರವ ಬಟ ಅಗ್ರಹಾರವಾಗಿ ಕೊಟ್ಟದು ತುರುಕಾಣ್ಯದ ದೊರೆಗಳು (ಎಕ. X, ಕೋಲಾರ. ೧೪೭-೧೩; 1558); ತುರುಕಾಣ್ಯದೊಳಗನಾವೃಷ್ಟಿದೋಷಂ ಬಂದು ಪಸರಿಸೆ (ಜಿಬಪು. ೦-೧೯). ℙ ಸಂಸ್ಕೃತದ 'ಆಜ್ಞಾ' ಶಬ್ದದಿಂದ ಬಹುಶಃ ವ್ಯುತ್ಪನ್ನವಾದ 'ಆಣೆಯ' ಎಂಬ ಶಬ್ದದೊಡಗೂಡಿ ಕನ್ನಡದಲ್ಲಿ ತಿಗುಳಾಣ್ಯ, ತುರುಕಾಣ್ಯ, ತೆಲುಂಗಾಣೆಯ, ಮುಂತಾದ ಪದಗಳು ರೂಪಗೊಂಡಿರಬಹುದೆ ? [ ತುರುಕ + ಆಣ್ಯ$_0$ ( ℙ ← ತೆಲು. ಆಣೆ = ದೇಶ) ]

**ತುರುಕಾಯ** (ನಾ). ತುರುಕರ ಆಕ್ರಮಣ (?) : ಶ್ರೀ ವೀರಬಲ್ಲಾಳದೇವರಸರು ರಾಜ್ಯಂಗೆಯ್ಯುತ್ತಿರ್ದ್ದಲ್ಲಿ ತುರುಕಾಯಾವಾಗಿದಲು (ಮೈಅರಿ. ೧೯೩೬, ೧೧-೨; 1310). [ ತುರುಕ + ? ]

**ತುರುಕಾರ** 'ತುಱುಗಾಱ' ನೋ.

**ತುರುಕಾಳು** (ನಾ). ತುರುಕಸೈನಿಕ,—ಭಟ : ಓರಿದಗುರ್ವಿಸಿ ಪುರಿಯನು ಕಾದಿರೆ ಬಂದು ತುರುಕಾಳು ಲಗ್ಗೆಮಾಡಿದರು (ಕಂನವಿ. ೧೧-೩೯).

[ ತುರುಕ + ಆಳು$_3$ (< ಆಳ್$_3$) ]

**ತುರುಕಿತಿ** (ನಾ). ತುರುಕಜಾತಿಯ ಹೆಂಗಸು : "ಯವಾನೀ – ತುರುಕಿತಿ" (ಕಾಶಕ್ಕ. ೧೬೩). [ ತುರುಕ + – ಇತಿ$_1$ (< – ಇತ್ತಿ) ]

**ತುರುಕಿಸು** (ಕ್ರಿ). ಒತ್ತಿ ಒಳಸೇರಿಸು ; ಗಿಡಿ : ಕರಿಯನು ಮರದ ಚಿಕ್ಕ ಚಕ್ರವೊಂದನ್ನು ಬಿದಿರಿನ ಸೀಳಿನೆಡೆಗೆ ತುರುಕಿಸಿ (ಮುಂಗಾಮು. ೧೧೮) ; ಹತ್ತು ರೂಪಾಯಿನ ಐದು ನೋಟನ್ನು ಒಳ ತುರುಕಿಸುತ್ತಾ ಮಾಸ್ತರು ಮೇರಿಯ ಮನೆಯತ್ತ ಕಾಲುಕಿತ್ತರು (ಕಾವೇರಿ. ೧೬೨).

[ ತುರುಕು$_1$ (< ತುಱುಕು$_1$) + – ಇಸು$_3$ ]

**ತುರುಕು$_1$** 'ತುಱುಕು$_1$' ನೋ.

**ತುರುಕು$_2$** 'ತುರುಕ' ನೋ.

**ತುರುಕುಡಿ** (ನಾ). ಒಂದು ಬಗೆಯ ಗಿಡ : "ಕಲಾರು–ಚೆಂಗಣಿಗಲು, ಬಿಳಿಯ ನೈದಿಲು, ಈಚಲು, ತುರುಕುಡಿ ?" (ಒಷಧಿ. ೨೨). [ ? ]

**ತುರುಕುಮಲ್ಲಿಗೆ** (ನಾ). (ವಿದೇಶೀಯವಾದ) ಒಂದು ಬಗೆಯ ಮಲ್ಲಿಗೆ ಗಿಡ ಮತ್ತು ಅದರ ಹೂವು : ಕೆಂಪುಕಾಸಿಕಣಿಗಲು, ತುರುಕುಮಲ್ಲಿಗೆ, ಗಣೇಶನ ಹೂ (ಮೈಜಿಗಿ. ೭೬-೧೫೧).

[ ತುರುಕು$_2$ (<ತುರುಕ) + ಮಲ್ಲಿಗೆ. ]

**ತುರುಕುಹರಳು** (ನಾ). ಒಂದು ಬಗೆಯ ಹರಳುಗಿಡ ; ಮರ ಔಡಲು; ಕಾಡು ಹರಳುಗಿಡ : ದೊಡ್ಡ ಹರಳು, ಬೆಟ್ಟಹರಳು, ತುರುಕುಹರಳು (ಮೈಜಿಗಿ. ೪೭-೯೪೩).

[ ತುರುಕು$_2$ (< ತುರುಕ) + ಹರಳು (< ಪರಲ್) ]

**ತುರುಕುಹೆಸರು** (ನಾ). (ವಿದೇಶೀಯವಾದ) ಒಂದು ಬಗೆಯ ಹೆಸರು ಕಾಳು ; ಕಾಡುಹೆಸರು : ತುರುಕುಹೆಸರು, ಮಡಕಿ (ಮೈಜಿಗಿ. ೬೦-೧೨೨೨).

[ ತುರುಕು$_2$ (< ತುರುಕ) + ಹೆಸರು$_2$ (<ಪೆಸಱ್) ]

**ತುರುಗ** (ನಾ). ಕುದುರೆ ; ಅಶ್ವ : ತುರುಗ ಗೋವಾ ಮಹಿಷ ಶುನಕಂಗಳಂ ತಿಂದು ನರಮಾಂಸವಂ ಭಕ್ಷಿಸುತ್ತ (ವೀಶೈಪು. ೨-೬-೪೦) ; ಮೆಟ್ಟು ಇಲ್ಲದ ಪಾದ ಅಟ್ಟಲೋಪದ ತುರುಗ ಕಟ್ಟ ಕೆಡಹದ ಕಲಿತನವು ಚಂದನವ ಸುಟ್ಟು ಬಡಿದಂತೆ (ಸರ್ವಜ್ಞ. ೬೫೫). [ < ಸಂ. ತುರಗ ]

**ತುರುಗಲು** 'ತುಱುಂಗಲ್' ನೋ.

**ತುರುಗಾಡು** 'ತುಱುಗಾಡು' ನೋ.

**ತುರುಗಾಲು** (ನಾ). (ಕರಾ) ಕುಕ್ಕರಗಾಲು : ಅತ್ತೆಯು ಮಣೆಯ ಮೇಲೆ ತುರುಗಾಲಲ್ಲಿ ಕುಳಿತ ಅವನ ಮುಂದಕ್ಕೆ ವೀಳ್ಯದ ತಬುಕನ್ನು ತಂದಿರಿಸಿದಳು (ಕುಡಿಕೊ. ೪೭). [ ? + ಕಾಲು$_1$ (< ಕಾಲ್$_1$) ]

**ತುರುಗಾಳೆಗ** (ನಾ). ಗೋವುಗಳ ಸಂರಕ್ಷಣೆಗಾಗಿ ಮಾಡುವ ಕಾಳಗ : ಬಂಕಯ್ಯ ತುರುಗಾಳೆಗದಲ್ಲಿ ವೀರಸ್ವರ್ಗ ಪಡೆದುದರಿಂದ, ನಾಗಪಯ್ಯ... ಮುತ್ತಣ್ಣನನ್ನು ಅರಮನೆಯ ತಳವಾರಿಕೆಯ ಊಳಿಗಕ್ಕೆ ಸೇರಿಸಿಕೊಂಡ (ಜನಜೀ. ೯೧). [ ತುರು (< ತುಱು) + ಕಾಳೆಗ ]

**ತುರುಗು$_1$** 'ತುಱುಕು$_1$' ನೋ.

**ತುರುಗು$_2$** 'ತುಱುಗು$_2$' ನೋ.

**ತುರುಗುಗೊಂದಲು** 'ತುಱುಗುಗೊಂದಲ್' ನೋ.

**ತುರುಗೆವೆ** 'ತುಱುಗೆವೆ' ನೋ.

**ತುರುಗೋಳು** 'ತುಱುಗೋಳ್' ನೋ.

**ತುರುಚ** 'ತುಱುಚೆ' ನೋ.

**ತುರುಚಿ** 'ತುಱುಚೆ' ನೋ.

**ತುರುಚು** (ಕ್ರಿ). ಚುಚ್ಚು ; ತಿವಿ. 'ತುರುಚುಗಬ್ಬ', 'ತುರುಚುಮಾತು' ಪರಾ. [< ತುಱಿಸು]

**ತುರುಚುಗಬ್ಬ** (ನಾ). (ವಿಡಂಬನೆಯಿಂದ) ಮನಸ್ಸನ್ನು ಚುಚ್ಚುವಂಥ ಕಾವ್ಯ : ಇದೇ ವಿಡಂಬನೆ, 'ತುರುಚುಗಬ್ಬ' (ಗೊತ್ತುಗು. ೪೩).

[ತುರುಚು + ಕಬ್ಬ$_1$]

**ತುರುಚುಮಾತು** (ನಾ). (ವಿಡಂಬನೆಯಿಂದ) ಮನಸ್ಸನ್ನು ಚುಚ್ಚುವ ಮಾತು : ಮಕ್ಕಳನ್ನು ಹುಟ್ಟುಹೆಸರನ್ನು ಬಿಟ್ಟು ಹಿಯ್ಯಾಳಿಕೆಯ ನೀಚ ಹೆಸರುಗಳಿಂದ ಕರೆಯುವುದು, ತುರುಚುಮಾತುಗಳನ್ನಾಡುವುದು (ಶಿಕ್ಷದ. ೬೭೨). [ತುರುಚು + ಮಾತು$_1$]

**ತುರುಚೆ** 'ತುಱುಚೆ' ನೋ.

**ತುರುತು** 'ತುರಿತ$_2$' ನೋ.

**ತುರುತುರನೆ** (ಅ). ಬೇಗಬೇಗನೆ : ವ್ರತಭ್ರಷ್ಟರನಿಟ್ಟೊರಸುವ ಸುಟ್ಟು ತುರುತುರನೆ ತೂಱುವೆ (ಸರ್ವವ. ೧೮೭-೮೭೦). [ತುರುತುರು + – ಅನೆ$_1$]

**ತುರುತುರು** (ಅ). ಬೇಗಬೇಗ ; ಶೀಘ್ರವಾಗಿ : ತುಂಗಕ್ಕ ಮುಖ್ಯ ರಸ್ತೆಯನ್ನು ಸೇರಿ ತುರುತುರು ನಡೆಯಹತ್ತಿದಳು (ಮೂರುದಾ. ೧೩೭).

**ತುರುತ್ತಿ** (ನಾ). (ಕರಾ) ನಡುಗಡ್ಡೆ ; ಚಿಕ್ಕದ್ವೀಪ.
[ದೇ.॥ ತಮಿ. ಮಲ. ತುರುತ್ತಿ]

**ತುರುಪಟ್ಟಿ** 'ತುಱುಪಟ್ಟಿ' ನೋ.

**ತುರುಪಿಸು** (ಕ್ರಿ). (ಉಕ) ಹೊಲಿ ; ಟಾಕಿ ಹಾಕು : ಅಂಗಿ ಹರಿದು ಹೋಗಿದೆ, ಸ್ವಲ್ಪ ತುರುಪಿಸಿಕೊಂಡು ಬಾ (ರೂಢಿ).
[ತುರುಪು$_0$ (P ← ಮರಾ. ತುರಪ) + – ಇಸು$_3$]

**ತುರುಪು$_1$**, ತುರುಫ್ (ನಾ). ೧. ಗುಂಪು ; ಸಮೂಹ. ೨. ದಂಡು ; ಸೈನ್ಯ : ತುರುಪಿನ ಸರದಾರರು . . . ಪಿರಿಯಾಪಟ್ಟಣಕ್ಕೆ ಬಂದು ಇದ್ದರು (ರಾಜೇಂದ್ರ. ೧೦೮) ; ಇತ್ತರದಿ ಸಾಲ್ಗೊಂಡು ತುರುಪಿರಲಿ (ಕೃಷ್ಣವಿ. ೩-೩) ; ವೇಗದಿಂ ಘಾಳಿಯಂ ಜೈಸಿರುವ ಕುದುರೆಗಳ ಬೇಗದಿಂ ದೇರಿರುವ ತುರುಪಿನ ಸವಾರರಂ (ಅರ್ಜುವಿ. ೨೪-೪೮). **ತುರುಫ್** : ೨. 'ತುರುಫ್‌ಸವಾರ' ಪರಾ. [← ಇಂ. Troop]

**ತುರುಪು$_2$**, ತುರುಫು, ತುರ್ಪು$_1$ (ನಾ). ಇಸ್ಪೀಟು ಆಟದಲ್ಲಿ ಇತರ ಮೂರು ಬಣ್ಣದ ಎಲೆಗಳಿಗಿಂತ ಸದ್ಯಕ್ಕೆ ಹೆಚ್ಚು ಪ್ರಾಧಾನ್ಯ ಪಡೆದಿರುವ ಎಲೆ ; ಹುಕುಮು : (+). **ತುರುಫು** : ಮೊದಲೇ ತುರುಫು ಆಡಿ ಬಿಟ್ಟರೆ ಆಟ ಕೆಟ್ಟುಹೋಗುತ್ತದೆ (ಕಾಮಿಕಾಂ. ೧೦೨). **ತುರ್ಪು$_1$** : 'ತುರ್ಪುಹೊಡು' ಪರಾ. [← ಇಂ. Trump]

**ತುರುಫ್** 'ತುರುಪು'$_1$ ನೋ.

**ತುರುಫ್‌ಸವಾರ** (ನಾ). ಕುದುರೆ ಸವಾರ ; ಅಶ್ವಾರೋಹಿ : ಒಂದು ಕಾಗದವು ಅಪ್ಪಣೆಯಾಗಿ ತುರುಫ್‌ಸವಾರನ ಕೈಲಿಕೊಟ್ಟು . . . ಕಳುಹಿಸಿ (ಮಹಾವಂ. II, ೧೨೦). [ತುರುಫ್ (<ತುರುಪು$_1$) + ಸವಾರ]

**ತುರುಫು** 'ತುರುಪು$_2$' ನೋ.

**ತುರುಬಿ** 'ತುಱುವೆ' ನೋ.

**ತುರುಬಿಕ್ಕು** 'ತುಱುಬಿಕ್ಕು' ನೋ.

**ತುರುಬು$_1$** 'ತುಱುಂಬು$_1$' ನೋ.

**ತುರುಬು$_2$** 'ತುಱುಂಬು$_2$' ನೋ.

**ತುರುಬುಕಟ್ಟು** (ಕ್ರಿ). ಮುಡಿಯನ್ನು ಹೆಣೆದು ಕಟ್ಟು : ಪಕ್ಕದ ಮನೆ ಯಾಕೆಗೆ ತುರುಬುಕಟ್ಟಿ ಬರುತ್ತೇನೆಂದು ಹೇಳಿ ಹೊರಡುತ್ತಿರುವುದನ್ನು ಕಂಡು ರಾಯರು . . . ತುರುಬುಕಟ್ಟೋದರಲ್ಲಿ ಇವಳು ಮೊದಲನೆಯವಳಂತೆ ಈ ಊರಿಗೆ ಎಂದು ಪತ್ನಿಯನ್ನು ಪ್ರಶಂಸಿಸಿ (ರಾಯಕ. ೧೦೯).
[ತುರುಬು$_2$ (< ತುಱುಂಬು$_2$) + ಕಟ್ಟು$_1$]

**ತುರುಬೆ** 'ತುಱುವೆ' ನೋ.

**ತುರುಮಂದೆ** 'ತುಱುಮಂದೆ' ನೋ.

**ತುರುಮರಿಗಡ್ಡೆ** (ನಾ). ಹಳದಿ ಬಣ್ಣದ ಹೂವುಗಳನ್ನು ಬಿಡುವ ರುಚಿಕರವಾದ ಗಡ್ಡೆಯುಳ್ಳ ಒಂದು ಬಗೆಯ ಗಿಡ : (+). [ತುರುಮರಿ$_0$+ಗಡ್ಡೆ]

**ತುರುಮರಿಯಲಬು** (ನಾ). ಒಂದು ಬಗೆಯ ಗಿಡ : (+).
[ತುರುಮರಿ$_0$ + ಅಲಬು$_2$]

**ತುರುಮಿಂಡಿ** 'ತುಱುಮಿಂಡಿ' ನೋ.

**ತುರುಮೆ** 'ತುಱುವೆ' ನೋ.

**ತುರುಮೇವು** (ನಾ). ದನಕರುಗಳ ಆಹಾರ ; ಹುಲ್ಲು : ನಡೆವುದು ಪಳ್ಳಿ . . . ತುರುಮೇವು ವಿಾಸಲ ಸಿರಿಯ ತಪ್ಪಲಿಗೆ (ಶ್ರೀರಾಮಾ. ೭೧೩-೧೧೩).
[ತುರು (<ತುಱು) + ಮೇವು (< ಮೇಪು)]

**ತುರುವಲು** (ನಾ). = ತುರುವು$_2$ ೧: ತೆಂಗಾಯ ತುರುವಲಂ [ಪಾಠಾಂ. ಕುಸುರುವೆ] ತೆಗೆದು ಮತ್ತಾ ವಿದಳಹುಗ್ಗಿಯೆಂದೊಲಿದು ಹೆಸರಂ ಕರೆವುದು (ಸೂಪಶಾ. ೩-೪) ; ಸಕ್ಕರೆಯನು ಇತ್ತು ತೆಂಗಾಯ ತುರು [ಪಾಠಾಂ. ರಿ] ವಲನಿಕ್ಕಿ ತುಪ್ಪದೊಳುವೊತ್ತಿ ತಾಳಿಸಿ (ಸೂಪಶಾ. ೪-೮೦).
[ತುರುವು$_2$ + – ಅಲು (< – ಅಲ್$_2$). / ತಮಿ. ತುರುವಲ್]

**ತುರುವಳ** 'ತುಱುವಾಳ' ನೋ.

**ತುರುವಳ್ತಿ** 'ತುಱುವಳ್ತಿ' ನೋ.

**ತುರುವಿಂಡು** 'ತುಱುವಿಂಡು' ನೋ.

**ತುರುವು$_1$**, ತುರಿ$_1$ (ಕ್ರಿ). ೧. ಟೊಳ್ಳುಮಾಡು ; ಕೊರೆದು ತೆಗೆ; ತೂತುಮಾಡು : (+). ೨. (ತೆಂಗಿನಕಾಯಿ ಮೊದಲಾದುವನ್ನು) ಹೆರೆ,–ಕೆರೆ : ತೆಂಗಿನಕಾಯನ್ನು ಚೆನ್ನಾಗಿ ತುರುವಿ ಆಮೇಲೆ ಕರಟವನ್ನು ಬಿಸಾಡು (ರೂಢಿ). 'ತುರುವುಮಣೆ' ಪರಾ. **ತುರಿ$_1$** : ೨. ತುರಿದ ತೆಂಗಿನಕಾಯಿಹಾಲೆಮ್ಮೆವಾಲುಮಂ ಸರಿಗೂಡಿ (ಸೂಪಶಾ. ೪-೭); ಗೆಡ್ಡೆಗಳನ್ನು . . . ತುರಿಮಣೆಯಲ್ಲಿ ತುರಿಯಬೇಕು (ಅಡುಸಾ. ೧೧೨) ; 'ಇನ್ನು ನಮಗೊಬ್ಬ ಮಗನೂ ಆಯಿತಲ್ಲ' ಎಂದರು ಅತ್ತೆ ಹೆರೆಮಣೆಯಲ್ಲಿ ಕಾಯಿ ತುರಿಯುತ್ತ (ಹೊಸಕ್ಕ. ೭೭). ೩. ತುಂಡರಿಸು ; ಕೊಲ್ಲು : ಕರಿಕನಾಡ ಬಿದಿರ್ಕಲ್ಲಾಳ್ದ ಕುಕ್ಕರ ಪಾಳಿಕ್ಕಾಱ ನಾಡಿಯರ್ ತುರಿದು (ಎಕ.IX, ಬೆಂಗಳೂ. ೩೬-೩ ;ಸು.750).
[ದೇ.॥ ತಮಿ. ತುರುವು, ತುರ; ಮಲ ತುರ; ತುಳು. ತುರುವು, ತುರಿ; ತೆಲು. ತುರ್ಮು, ತುಱುಮು ; ಕುರುಖ್. ತೂರ್ನಾ ; ಮಲ್ತೊ. ತೂರೆ]

**ತುರುವು$_2$**, ತುರಿ$_2$, ತುರುವೆ$_1$ (ನಾ). ೧. ತೆಂಗಿನಕಾಯಿ ಮೊದಲಾದುವನ್ನು ಹೆರೆಯುವುದರಿಂದ ಉಂಟಾಗುವ ಸಣ್ಣ ಸಣ್ಣ ಚೂರು ; ಸೂಸಲು; ಹೆರಕಲು : ಪಲ್ಯಕ್ಕೆ ತುಂಬ ಕಾಯಿ ತುರುವಿಲ್ಲದಿದ್ದರೆ ರುಚಿ ಬರುವುದಿಲ್ಲ (ರೂಢಿ). ೨. ರಂಧ್ರ; ತೂತು : ಕತ್ತೆಯಲಿ ಗುಣವಿಲ್ಲ ಕತ್ತಿಗೆ ದಯವಿಲ್ಲ ಬತ್ತಿದ ಕೆಱೆಗೆ ತುರುವಿಲ್ಲ (ಸರ್ವಜ್ಞ. ೧೮೭೩). **ತುರಿ$_2$** : ೧. ಬಾಳೆಯಕಾಯಿಗಳನ್ನು ತುಂದೆರಡಾಗಿ ಸೀಳಿ...ಆ ಕಾಯತಿರುಳುಮಂ ತೆಗೆದುಕೊಂಡು ತುರಿಯುಮಂ ಮಾಡಿ (ಸೂಪಶಾ. ೪-೬೩); ಕಗ್ಗಂಬಳದ ತುರಿ ೧ ಹಲ, ಏಲಕ್ಕಿ ಅರೆಹಲ . . . ಇವನ್ನೆಲ್ಲ ಚೂರ್ಣಂ ಮಾಡಿ (ಸಕವೈ. ೨೫೦). **ತುರುವೆ$_1$** : ೧. ಕಡಲೆ ಹೆಸಱುದ್ದು ತೆಂಗಿನ ತುರುವೆ [ಪಾಠಾಂ. ರಿಯು] ಮೆತ್ತನೆಯ ಸೊಜ್ಜಿಗೆಯು ಕೂಳು (ಸೂಪಶಾ. ೪-೨೦).
[< ತುರುವು$_1$./ತಮಿ. ತುರುವು; ಮಲ. ತುರುವು, ತುರ]

**ತುರುವುಮಣೆ, ತುರಿಮಣೆ** (ನಾ). ಕೊಬ್ಬರಿ ಮೊದಲಾದ ಪದಾರ್ಥಗಳನ್ನು ಹೆರೆಯುವುದಕ್ಕೆ ಉಪಯೋಗಿಸುವ ಸಣ್ಣ ಸಣ್ಣ ಹಲ್ಲುಗಳುಳ್ಳ ಸಾಧನ : ತುರುವುಮಣೆ ತಂದುಕೊಡು (ರೂಢಿ). **ತುರಿಮಣೆ** : ಗೆಡ್ಡೆಗಳನ್ನು ತೊಳೆದು, ಸಿಪ್ಪೆ ತೆಗೆದು ತರಕಾರಿ ತುರಿಯುವ ತುರಿಮಣೆಯಲ್ಲಿ ತುರಿಯಬೇಕು (ಅಡುಸಾ. ೧೧೨); ಲಾಂಟಾನಕಡ್ಡಿ ತುರಿಮಣೆಯಂತೆ ಮೈಮೇಲೆ ಸವರಿ ಬಟ್ಟೆ ಹರಿದು (ನಡದಾ, II, ೧೨೩೪).
[ತುರುವು$_1$ + ಮಣೆ]

**ತುರುವೆ$_1$** 'ತುರುವು$_2$' ನೋ.

**ತುರುವೆ$_2$** 'ತುಱುವೆ' ನೋ.

**ತುರುಷ್ಕ** (ನಾ). ೧. = ತುರುಕ ೨ : ವಂಗ ತುರುಷ್ಕ ಚೇರ ಮಾಗಧ (ಸಾಇಇ. XI-ii, ೧೫೦-೮; 1102); ಬರ್ಬರ ಪಾರಸೀಕ ಪಾರಿಯಾತ್ರ ಹಮ್ಮಿರ ಡೊಕ್ಕಾರ ತುರುಷ್ಕ ಮರುಪ್ರಭೃತಿ ಭೂಪಾಲಕರಿಂ ಭಯಾನಕ ರಸಮುಂ . . . ನೆಗಟುತ್ತುಮಿರೆಯಿರೆ (ಜಗವಿ. ೨-೩೪ವ) ; ತುರುಷ್ಕ ಸರಸಿಜವನಕುಂಜರ ಪರಾಕು (ಯಾದಚಂ. ೩-೦ವ). ೨. ತುರುಕರ ದೇಶದಲ್ಲಿ ಸಿಕ್ಕುವ ಅಂದುಕವೆಂಬ ಮೇಣದಿಂದ ಮಾಡುವ ಒಂದು

ಬಗೆಯ ಸುಗಂಧವಸ್ತು; ಯುವನಧೂಪ ; ಪಿಂಡಕ : ಹರಿಚಂದನ ಕಾಳಾಗರು ಮಲಯಜ ತುರುಷ್ಕಾದಿಗಳ ಕಂಪು ಬಂದು ಶೀಡಿದೊಡೆ (ವಡ್ಡಾರಾ. ೫೫-೩). [ಸಂ.]

**ತುರುಷ್ಕಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು : ಕರ್ಣಾಟ ಗೌಳ, ದೇಶಗೌಳ, ತುರುಷ್ಕಗೌಳ . . . ಎಂಬೇಳುಂ ಉಪಾಂಗಗೌಳ ರಾಗಂಗಳು (ವಿವೇಕ. ೨೩೪). [< ಸಂ. ತುರುಷ್ಕಗೌಡ]

**ತುರುಷ್ಕತೋಡಿ** (ನಾ). [ಸಂಗೀತ] ಒಂದು ರಾಗದ ಹೆಸರು : ಛಾಯಾತೋಡಿ ತುರುಷ್ಕತೋಡಿಯೆಂಬೆರಡುಂ ಉಪಾಂಗತೋಡಿರಾಗಂ ಗಳು (ವಿವೇಕ. ೨೩೪). [ ಸಂ. ತುರುಷ್ಕತೋಡೀ]

**ತುರುಷ್ಕಬಲ** (ನಾ). ತುರುಕರ ಸೈನ್ಯ : ಈ ಕರಾಳ ಕರವಾಳವನ್ನು ಸ್ವೀಕರಿಸಿ ಶ್ರೀರಂಗವನ್ನಾಕ್ರಮಿಸಿರುವ ತುರುಷ್ಕಬಲ ಮುರಿದು . . . ಜಯಪತಾಕೆಯುನ್ನೇರಿಸು (ಅನ್ನಾವ. ೯೦). [ತುರುಷ್ಕ + ಬಲ$_2$]

**ತುರುಸಿ** (ನಾ). ಮುಸಲ್ಮಾನ ; ಮಹಮದೀಯ. 'ತುರುಸಿದಳ', 'ತುರುಕ' ಪರಾ. [< ಸಂ. ತುರುಷ್ಕ]

**ತುರುಸಿದಳ** (ನಾ). = ತುರುಷ್ಕಬಲ : ಕಲುಣನಾಯಕ ಆ [ತ] (ತ) ನ (ತ)ಮ್ಮಂದಿರು ಭಯರುನಾಯಕ ತುಮ್ಮಣನಾಯಕ ಯಿ ಮೂವರು ತುರುಸಿದಳದ ಕೂಡೆ ಕಾದಿ (ಶಇ.I,೬೬-೧೪ ; 1481).

[ತುರುಸಿ + ದಳ$_2$ (= ದಲ)]

**ತುರುಸು** 'ದುರುಸು$_1$' ನೋ.

**ತುರುಹಟ್ಟಿ** 'ತುರುಪಟ್ಟಿ' ನೋ.

**ತುರುಹರಿ** 'ತುರುಹರಿ$_1$' ನೋ.

**ತುರ್ಕಿ**, ತುರಕಿ (ನಾ). ೧. ಭಾರತದ ಪಶ್ಚಿಮದಲ್ಲಿರುವ ಏಷ್ಯಾಖಂಡಕ್ಕೆ ಸೇರಿದ ಒಂದು ರಾಷ್ಟ್ರ : ಏಷ್ಯಾದ ದೊಡ್ಡ ಚಕ್ರಾಧಿಪತ್ಯವಾಗಿದ್ದ ತುರ್ಕಿ ಯಲ್ಲಿ . . . ಪುಸ್ತಕಭಂಡಾರಗಳನ್ನು ನೆಲಸಮಮಾಡಿದರು (ಪ್ರವಾಇ. II, ೧). **ತುರಕಿ** : ೨. ತುರ್ಕೀದೇಶಕ್ಕೆ ಸಂಬಂಧಿಸಿದುದು. ೩. ತುರ್ಕೀದೇಶದ ಕುದುರೆ : (+).

[ ←ಪಾರ. ಮರಾ. ತುರ್ಕ್ ; ಹಿಂ. ತುರಕೀ, ತುರ್ಕೀ. / ಇಂ. Turkey ]

**ತುರ್ತ$_1$** 'ತುರಿತ$_2$' ನೋ.

**ತುರ್ತ$_2$** (ಅ). ಕೂಡಲೆ ; ತಕ್ಷಣದಲ್ಲಿ : ಇವರಿಗೂ ತುರ್ತ ಅದೇ ಒಳ್ಳೆ ಯದೆನಿಸಿತು (ಮೂರುದಾ. ೫) ; ಗಂಗೊಳ್ಳಿಯವರು ತಮ್ಮ ಓದನು ತುರ್ತ ನಿಲ್ಲಿಸಿ ಇವರ ಕಡೆ ಲಕ್ಷ್ಯ ಕೊಡಹತ್ತಿದರು (ಅಜೋಲೀ. ೧೫೬).

[ < ತುರಿತ$_2$ ]

**ತುರ್ತು** 'ತುರಿತ$_2$' ನೋ.

**ತುರ್ತುಪರಿಸ್ಥಿತಿ** (ನಾ). ಯುದ್ಧಕಾಲದಲ್ಲಿ ಅಥವಾ ಅದೇ ರೀತಿಯ ಕ್ಷೋಭೆಯ ಕಾಲದಲ್ಲಿ ದೇಶದಲ್ಲಿ ಉಂಟಾಗುವ ವಿಷಮಸನ್ನಿವೇಶ ಗಳಲ್ಲಿ ಸರ್ಕಾರವು ಅಧಿಕಾರಯುತವಾಗಿ ಘೋಷಿಸುವ ವಿಶೇಷ ಪರಿಸ್ಥಿತಿ ; ಜರೂರು ಪರಿಸ್ಥಿತಿ. P ತುರ್ತುಪರಿಸ್ಥಿತಿಯನ್ನು ಘೋಷಿಸಿದಾಗ ಸರ್ಕಾರದವರು ರಾಷ್ಟ್ರಸಂರಕ್ಷಣೆಗಾಗಿ ಕೆಲವು ವಿಶೇಷ ಕಾನೂನುಗಳನ್ನು ಮಾಡಬಹುದು : ಹೀಗೆಯೇ ಗಲಭೆಗಳಾಗುತ್ತಿದ್ದರೆ ಸರ್ಕಾರದವರು ತುರ್ತುಪರಿಸ್ಥಿತಿಯನ್ನು ಘೋಷಿಸುತ್ತಾರೆ (ರೂಢಿ).

[ ತುರ್ತು (< ತುರಿತ$_2$ ) + ಪರಿಸ್ಥಿತಿ ]

**ತುರ್ತುಸಭೆ** (ನಾ). ಸಂಘ, ಸಂಸ್ಥೆ ಮೊದಲಾದ ಕಡೆಗಳಲ್ಲಿ ಸದಸ್ಯರು ವಿಶೇಷ ಪರಿಸ್ಥಿತಿಯೊದಗಿದಾಗ ಸೇರುವಿಕೆ ; ಅವಸರದ ಸಭೆ, - ಅಧಿವೇಶನ : ಇದು ತುರ್ತುಸಭೆಯಲ್ಲಿ ಅಂಗೀಕೃತವಾಯಿತು (ರೂಢಿ).

[ ತುರ್ತು (< ತುರಿತ$_2$) + ಸಭೆ ]

**ತುರ್ಪು$_1$** 'ತುರುಪು$_2$ ' ನೋ.

**ತುರ್ಪು$_2$** (ನಾ). ತೋರಿಕೆ ; ಪ್ರದರ್ಶನ (?) : ಮನದ ತೊಡರ್ಪು ಲೋಚನದಡರ್ಪಲರಂಬಿನ ಕೂರ್ಪು ಸರ್ವಮೋಹನರಸದಿರ್ಪು ಬೇಟದ ಪೊಡರ್ಪಭಿಮಾನದ ನಟ್ಟ ತುರ್ಪು ಕಾಮನ ಕರವಾಳ ಕೂರ್ಪು ವಿರಹಾಹಿಯ ಕೊಳ್ಪ ಪಸುರ್ಪು ಜೀಯ ಭಾವೆನಿಸಿದುದಂಗಹಾರಕರಣಾಭಿನಯಂಗಳ ನೇರ್ಪು ನೀಱೆಯಾ (ಮಲ್ಲಿಪು. ೮-೫೬).

[ P ಇದು 'ತೋರ್ಪು' ಎಂಬುದರ ಅಪಲಿಖಿತವಿರಬಹುದೆ ? ]

**ತುರ್ಪುಹೂಡು** (ಕ್ರಿ). ೧. ಇಸ್ಪೀಟಾಟದಲ್ಲಿ ತುರುಪು ಎಲೆಯನ್ನು ಒಡ್ಡು. ೨. (ಆಲಂ) ಗೆಲ್ಲುವ ಉಪಾಯವನ್ನು ಮಾಡು : ಜಾತಿ ಜಾತಿಗಳ ತುರ್ಪುಹೂಡಿ ಇಲೆಕ್ಶನ್ ಮುಗಿಯಿತು (ದೀಜ್ಯೋತಿ. ೬೦).

[ ತುರ್ಪು$_1$ (< ತುರುಪು$_2$) + ಹೂಡು$_1$ (< ಪೂಡು) ]

**ತುರ್ಯ** (ಗು). ೧. [ವೇದಾಂತ] ಚೈತನ್ಯದ ನಾಲ್ಕನೆಯ ಸ್ಥಿತಿ ಯಲ್ಲಿರುವ ; ಪರಮಾತ್ಮಸ್ವರೂಪನಾದ : ಅಗ್ಗದ ತುರ್ಯಶಿವನನು ಪಾರ್ಥ ಚಿಂತಿಸಿದ (ಕುವ್ಯಾಅ.೫-೬). ೨. [ಜ್ಯೋತಿ] ಜನ್ಮಲಗ್ನದಿಂದ ನಾಲ್ಕನೆಯದಾದ : ಗ್ರಹಂ . . . ತುರ್ಯಾಷ್ಟಮಸ್ಥಾನದೊಳ್ ಗ್ರಹದಿಂ ಕೂಡೆ ಪರಸ್ಪರಂ ಸ್ವಗುಣದಿಂದಾಳ್ದುಂ ಚತುರ್ಥಾಂಶಮಂ (ಜಾತತಿ. ೯-೯).

[ಸಂ.]

**ತುರ್ಯಗೆ** (ನಾ). [ತತ್ತ್ವಶಾ] ಶಾಕ್ತಮತದಲ್ಲಿ ಮೋಕ್ಷಸಾಧನವೆಂದು ಹೇಳಿರುವ ಏಳು ಜ್ಞಾನಭೂಮಿಕೆಗಳಲ್ಲಿ ಕೊನೆಯದು : ಅನುಭವ ದಿಂದ ತಿಳಿಯತಕ್ಕ ಭೂಮಿಕೆಗಳು ಜ್ಞಾನಭೂಮಿಕೆಗಳು. ಅವುಗಳು "ವಿವಿದಿಷಾ" . . . "ತುರ್ಯಗಾ" ಎಂದೇಳು (ಭಾರದ. ೨೨೬). 'ಜ್ಞಾನ ಭೂಮಿಕೆ' ಪರಾ. [ ಸಂ. ತುರ್ಯಗಾ ]

**ತುರ್ಯರ್ಕ್ಷ** (ನಾ). [ಜ್ಯೋತಿ] ನಾಲ್ಕನೆಯ ಸ್ಥಾನ, -ಮನೆ : ಲಗ್ನಕ್ಕೆ ತೃತೀಯಂದೊಳ್ ಖಳನವಂ ತುರ್ಯರ್ಕ್ಷದೊಳ್ ಪಂಡಿತಂ (ಜಾತತಿ.೧೮-೧೦).

[ ತುರ್ಯ + ಋಕ್ಷ ]

**ತುರ್ಯಾತೀತ** (ನಾ). ಜೀವನ್ಮುಕ್ತ ; ಅವಧೂತ : ಇದುವೆ ತುರ್ಯಾತೀತ ಆಶ್ರಮಯಿದುವೆ ಶುದ್ಧಪರಮಹಂಸೆಂಬದುವೆ ಆಶ್ರಮಯಿದುವೆತಾನ ವಧೂತಆಶ್ರಮವು (ಜ್ಞಾನಸಿಂ. ೪೨-೧೨೫). [ ತುರ್ಯ + ಅತೀತ ]

**ತುರ್ಯಾರೂಢ** (ನಾ). ಪರಬ್ರಹ್ಮಾವಸ್ಥೆಯನ್ನು ಪಡೆದಿರುವವನು ; ಜೀವನ್ಮುಕ್ತ : ಪರಮತತ್ತ್ವರಹಸ್ಯವನು ವಿಸ್ತರಿಸಿ ತುರ್ಯಾರೂಢ ರಾಗಿಯೆ ಚರಿಸುತಿಹ ಗಗನಾರ್ಯರಿಗೆ ನಾ ನಿರುತವಂದಿಸುವೆ (ಗಗತಾ.೦-೧).

[ ತುರ್ಯ + ಆರೂಢ ]

**ತುರ್ಯಾಶ್ರಮ** (ನಾ). ನಾಲ್ಕನೆಯ ಆಶ್ರಮ ; ಸಂನ್ಯಾಸ : ನೇಮದಿ ತುರ್ಯಾಶ್ರಮ ಬಲಿದೆ (ಪ್ರಸತೀ. ೩-೧). [ ತುರ್ಯ + ಆಶ್ರಮ ]

**ತುರ್ವ** (ನಾ). ಒಂದು ಪ್ರದೇಶದ ಹೆಸರು (?) : ಪ್ರಿಯಾತ್ಮಜೆ ಯೆಜಗ [ಜ್ಞ ] × × [ ವ ]ಕ್ಷಸ್ಥಳನಿವಾಸಿ ಶ್ರೀರೇವ[ ಕ್ಕೆ ] × [ ಮ್ಮ ]ಟಿ ಎಡದೊಱೆ [ ತುಜ್ಜನಾಳ್ದು ] (ಸೌಇಇ. IX-1, ೬-೧೪ ; 837). [ ? ]

**ತುಲ**, ತುಳ (ನಾ). ೧. ತಕ್ಕಡಿ ; ತ್ರಾಸು. **ತುಳ** : ೨. ಹೋಲಿಕೆ ; ಸಾದೃಶ್ಯ : "ತುಳ (ತೋಲ) – ತುಲ (ಲಾ) = ಸಾಮ್ಯ" (ತದ್ಭಕೋ.೧೮).

[ ಸಂ. ]

**ತುಲನ** (ನಾ). ೧. ತಕ್ಕಡಿಯಲ್ಲಿ ತೂಗುವುದು ; ತೂಕ ಮಾಡುವುದು : "ತೂಗು–ತುಲನೇ" (ಶಮಧಾ). ೨. ತೂಕ : "ತುಲಿಃ, ತುಲುಃ, ತುಲನಂ . . . ತುಲಿತಂ, ಈ ೬ ತೂಕಂ" (ಕಾಶಕ್ತ. ೧೧೩). ೩. ಮೇಲಕ್ಕೆ ಎತ್ತು ವುದು,-ಏರಿಸುವುದು. ೪. ಹೋಲಿಸುವುದು; ತಾಳಿನೋಡುವುದು.

**ತುಲನಮಾಡು** = ಹೋಲಿಸು ; ತಾಳೆನೋಡು ; ತಾರತಮ್ಯವನ್ನು ಕಂಡುಹಿಡಿ : ನನ್ನ ಯೋಗ್ಯತೆಯೇನು ಅವನ ಯೋಗ್ಯತೆಯೇನು ತಾವೇ ತುಲನಮಾಡಿ. (ರೂಢಿ). [ ಸಂ. ]

**ತುಲನಾತ್ಮಕ** (ಗು). ಒಂದಕ್ಕೊಂದನ್ನು ಸರಿದೂಗಿಸಿ ನೋಡುವ, —ಹೋಲಿಸಿ ನೋಡುವ: ತುಲನಾತ್ಮಕ ದೃಷ್ಟಿಯಿಂದ ಸಹ ನೋಡಿದಾಗ ಈ ಪಾತ್ರವರ್ಗದ ಮೇಲೆ ಹೆಚ್ಚಿನ ಬೆಳಕು ಬೀಳಬಹುದು (ಸಮಜೀ. ೩೦ ಪೀಠಿಕೆ); ಹೋಲಿಕೆ ಎಲ್ಲೆಲ್ಲಿ ಕಾಣುವುದೆಂಬ ವಿಷಯವಾಗಿ ತುಲನಾತ್ಮಕ ವಾದ ವ್ಯಾಸಂಗವನ್ನು ನಡೆಸುತ್ತಿದ್ದೇವೆಯಷ್ಟೆ (ಶಮಪಾಂ. ೮೮); ಸಮಾನಾಂತರವಾದ ಮತ್ತು ಪ್ರತಿಕ್ರಿಯಾವಾದಗಳ ತುಲನಾತ್ಮಕ ವಿವೇಚನೆಯಿಂದ ಸಿದ್ಧವಾದ ವಿಷಯಗಳಿಷ್ಟು (ಜೀವಾತ್ಮ. ೧೦೮). [ಸಂ.]

**ತುಲನೆ** (ನಾ). **ಹೋಲಿಕೆ**: ಸ್ವಾಮಿದಾಸರು ಆಕೆಗೆ ರಕ್ಷಾಕವಚವಾಗಿ ನಿಲ್ಲುತ್ತಾರೆ. ಈ ತುಲನೆ ವಿಚಾರಣೀಯವಾಗಿದೆ (ಸಮಜೀ. ೨೪ ಪೀಠಿಕೆ).

**ತುಲನೆ ಮಾಡು**=ಹೋಲಿಸು; ತುಲನಮಾಡು: ಇವರನ್ನು ತುಲನೆ ಮಾಡುವಾಗ ಕೆಲವು ಕ್ಷಣ ಮಾನವಮಟ್ಟಕ್ಕೆ ಇವರನ್ನು ತಂದುಕೊಳ್ಳಬೇಕು (ವಾಲ್ಮೀಕಿ. ೩೩); ಚೆಂದುಟಿಗಳನ್ನು ಕಾಮನ ಬಿಲ್ಲಿನೊಂದಿಗೆ ತುಲನೆ ಮಾಡಿದೆ (ಸೀತಾರ. ೮). [ಸಂ. ತುಲನಾ]

**ತುಲಸಿ, ತುಳಸಿ** (ನಾ). ಪವಿತ್ರವಾದುದೆಂದು ಪೂಜಿಸುವ, ಒಂದು ಬಗೆಯ ಗಿಡ ಮತ್ತು ಅದರ ದಳ: ತುಲಸಿಯ ಲುಂಗಕಷಾಯದ ಜಲದೊಳ್ . . . ಕಟುವೆಯ ಸಮನಿಸು ತಾಂ ಮೊಸರೊಳೆ ಮೇಣ್ ಕಲಸಿದೊಡೆ ಪಲವು ದೆವಸಂ ನಿಲ್ಕುಂ (ಲೋಕೋಪ. ೮-೩); ಖರಮರೀಚಿಯ ಜಳಕೆ ಬಾಡಿದ ತರುಣತುಲಸಿಯ ದಂಡೆಯೊಪ್ಪುವ ಗರುವದೇವನ ಬರವ ಕಂಡನು ಬಾಗಿಲಲಿ ವಿದುರ (ಕುಮ್ಮಾಉ. ೮-೭); ಕೊರಳ ತುಲಸಿಯ ದಂಡೆ ಬಾಡದು (ಜೈಮಿಭಾ. ೧೧-೨೨); ತುಲಸೀ ಎಲೆಯನ್ನೂ ಕಕ್ಕೆ ಪತ್ರೆಯನ್ನೂ ಹೊಸಕಿದರೇನೇ ಅವುಗಳ ಸ್ವಭಾವಗುಣವಾದ ವಾಸನೆಯನ್ನು ಹೊರಗೆಡಹುತ್ತವೆ (ಕೊನಪ್ಪ. ೪-೭). **ತುಳಸಿ**: "ತುಳಸಿಯದು ಸುರಸಿ ಬಹುಮಂಜರಿಯೆನಿಕ್ಕು" (ಮಂಗರಾ. ೩೯-೨೭); ಬಳಸಿ ಪಚ್ಚೆಯ ಕೋಟೆಯಂತಿರೆ ತುಳಸಿ ಬೆಳೆದಿರೆ ಮನೆಯ ಚೌಕದಿ (ಕಾಶಿರಾ. ೧೧-೩೮); ಒಲ್ಲನೋ ಹರಿ ಕೊಳ್ಳನೋ ಎಲ್ಲ ಸಾಧನವಿದ್ದು ತುಳಸಿ ಇಲ್ಲದ ಪೂಜೆ (ಪುರಂದ. ೨-೭೯ ಅನುಪಲ್ಲವಿ); ತುಳಸಿ:—ಈ ಎಲೆಯ ರಸ, ಮೆಣಸು ೫, ಬೆಳ್ಳುಳ್ಳಿ ೫ ಸಹ ಅರೆದು ಕುಡಿಯೆ ಛಳಿಜ್ವರ ಮಾಣ್ಗುಂ (ವಿಮ್ಮವಿ. ೫); ಪಾರ್ಥನೀಕ್ಷಿಸಿದ ವಿಶ್ವಶರೀರಿಗೆ ಜೋಡೆಲೆ ತುಳಸಿಯನಿತೆ ತೊಲೆಯೆ (ಗೀವಿಂ. ೪೧-೭).

**ತುಳಸಿಯ ಕಟ್ಟೆ** = ತುಳಸಿಕಟ್ಟೆ: ಸಂಪ್ರದಾಯವಂತರು ಮನೆಯೆದಿರು ತುಳಸಿಯ ಕಟ್ಟೆಗಳನ್ನು ರಚಿಸುತ್ತಾರೆ (ಭಾಹಬ್ಬ. ೧೫೭). [ಸಂ. ತುಲಸೀ]

**ತುಲಸಿಕಟ್ಟೆ, ತುಳಸಿಕಟ್ಟೆ** (ನಾ). ತುಲಸಿಗಿಡದ ಸುತ್ತಲೂ ಕಟ್ಟಿರುವ ಕಟ್ಟೆ; ಬೃಂದಾವನ: ಕಾರ್ತಿಕಶುದ್ಧದ್ವಾದಶಿಯಂದು ತುಲಸೀ ಕಟ್ಟೆಯ ಮೇಲೆ ಕಬ್ಬಿನ ಹಂದರ ಹಾಕಿ . . . ಸಿಂಗರಿಸುವರು (ಭಾಹಬ್ಬ. ೧೫೭). **ತುಳಸಿಕಟ್ಟೆ**: ಮನೆಯ ಮುಂದೆ ಅಥವಾ ತುಳಸೀಕಟ್ಟೆಯ ನೆರೆಯಲ್ಲಿ ಚೆನ್ನಾಗಿ ನೆಲವನ್ನು ಸಾರಿಸಿ ರಂಗವಲ್ಲಿಯನ್ನು ಹಾಕುತ್ತಾರೆ (ಭಾಹಬ್ಬ. ೧೭೨). [ತುಲಸಿ + ಕಟ್ಟೆ$_1$]

**ತುಲಸಿಪೂಜೆ, ತುಳಸಿಪೂಜೆ** (ನಾ). ೧. ಸಾಮಾನ್ಯವಾಗಿ ಸಂಪ್ರದಾಯಸ್ಥೆಯರಾದ ಹೆಂಗಸರು ಪ್ರತಿನಿತ್ಯವೂ ತುಲಸಿಗಿಡಕ್ಕೆ ಮಾಡುವ ಪೂಜೆ. ೨. ಉತ್ಥಾನದ್ವಾದಶಿಯಂದು ತುಳಸಿಗಿಡಕ್ಕೆ ಮಾಡುವ ಶಾಸ್ತ್ರೋಕ್ತವಾದ ಪೂಜೆ: (೩). **ತುಳಸಿಪೂಜೆ**: ೧. ಪ್ರತಿದಿನ ಅವಳು ತುಳಸಿಪೂಜೆ ಮಾಡುತ್ತಾಳೆ (ರೂಢಿ). [ತುಲಸಿ + ಪೂಜೈ]

**ತುಲಸಿಮಾಲೆ, ತುಳಸಿಮಾಲೆ** (ನಾ). ತುಲಸಿದಳಗಳಿಂದ ಕಟ್ಟಿರುವ ಸರ,—ಹಾರ: ತುಲಸಿಮಾಲೆಯ ಧರಿಸಿದವಗೇಕೆ ಜಪ್ಪಾಜಿ (ಪುರಂದ. ೧-೧೦೦ -೨). **ತುಳಸಿಮಾಲೆ**: ತುಳಸಿಮಾಲೆಯ ಹಾಕುವುದಕ್ಕೆ ಅರಸನಾಗಿ ನಾಚುತಿದ್ದೆ ಸರಸಿಜಾಕ್ಷ ಪುರಂದರವಿಠಲನು ತುಳಸಿಮಾಲೆ ಹಾಕಿಸಿದನು (ಪುರಂದ. ೧-೯೫-೩). [ತುಲಸಿ + ಮಾಲೆ]

**ತುಲಸೀದ್ವಾದಶಿ** (ನಾ). ಕಾರ್ತೀಕ ಮಾಸದ ಶುಕ್ಲಪಕ್ಷದ ಹನ್ನೆರಡನೆಯ ದಿನ ಮತ್ತು ಅಂದು ಆಚರಿಸುವ ಹಬ್ಬ; ಉತ್ಥಾನದ್ವಾದಶಿ. [ಸಂ. ತುಲಸೀದ್ವಾದಶೀ]

**ತುಲಸೀಮಣಿ, ತುಳಸೀಮಣಿ** (ನಾ). ತುಳಸಿಯ ಬೇರು ಮತ್ತು ಕಾಂಡಗಳಿಂದ ಮಾಡಿರುವ ಮಣಿ. ▶ ತುಲಸೀಮಣಿಯ ಸರವನ್ನು ವಿಷ್ಣುಭಕ್ತರು ಕೊರಳಲ್ಲಿ ಧರಿಸುವುದುಂಟು: ತುಲಸೀಮಣಿ, ಸ್ಫಟಿಕಮಣಿಮಾಲೆಗಳು (ಸಕಮ್ಮ. ೩೯). **ತುಳಸೀಮಣಿ**. ಸಕಲವಾದ ಪಾಪಗಳನ್ನು ಹೋಗಲಾಡಿಸುವ ಆಯುಧವಾಗಿರುವುದೇ ತುಳಸೀಮಣಿಯ ಗುಣ (ಸಕಮ್ಮ. ೩೯); ಈ ತುಳಸೀಮಣಿ ಕಂಠಾಭರಣವಾಗುವುದಾದರೆ? (ಹೇಮುಕೊ. ೨); ತುಳಸೀಮಣಿಗಳು ಪ್ರತ್ಯಕ್ಷವಾದವು (ಸಾಹಿಜೀ. ೭೪). [ಸಂ.]

**ತುಲಸೀವಿವಾಹ, ತುಳಸೀವಿವಾಹ** (ನಾ). ವಿಷ್ಣುಭಕ್ತರು ಆಚರಿಸುವ ಒಂದು ಉತ್ಸವ; ಶ್ರೀ ವಿಷ್ಣುವಿಗೂ ತುಲಸಿಗೂ ಪ್ರತಿಮಾರೂಪವಾಗಿ ಮಾಡುವ ಮದುವೆಯ ಹಬ್ಬ; ತುಲಸೀಕಲ್ಯಾಣ: ಕಾರ್ತಿಕಶುದ್ಧದ್ವಾದಶಿಯ ತಿಥಿಗೆ 'ತುಲಸೀವಿವಾಹ'ದ ವ್ರತಾಚರಣೆ ನಡೆಯುವುದು (ಭಾಹಬ್ಬ. ೧೫೫). **ತುಳಸೀವಿವಾಹ**: ಪುರೋಹಿತರು ವಿವಾಹಮಂತ್ರಗಳನ್ನು ಹೇಳುತ್ತ ತುಳಸೀವಿವಾಹವನ್ನು ನೆರವೇರಿಸುತ್ತಾರೆ (ಭಾಹಬ್ಬ. ೧೫೭). [ಸಂ.]

**ತುಲಸೀವೃಂದಾವನ** (ನಾ). = ತುಲಸಿಕಟ್ಟೆ. [ಸಂ.]

**ತುಲಾಕೋಟಿ** (ನಾ). ೧. ತಕ್ಕಡಿಯ ಕೋಲಿನ ತುದಿ: ಜನಂ ಕೇವಲ ವಿಪುಲತುಲಾಕೋಟಿಯಿಂ ತೂಗೆ ತನ್ನಂ (ಪಂಪಾರಾಮಾ. ೧-೪೨). ೨. ಕಾಲ್ಕಡಗ; ನೂಪುರ: "ತುಲಾಕೋಟಿ ನೂಪುರಮೆನಿಕ್ಕು" (ಮಂಗರಾ. ೧೦೦-೩೦): "ಪಾದಾಂಗದಂ, ತುಲಾಕೋಟಿಃ, ಮಂಜೀರಃ, ನೂಪುರಃ, ಹಂಸಕಃ, ಪಾದಕಟಕಃ ೭ ಅಂದಿಗೆ" (ಸಿದ್ಧಾಂತಿ. ೧೭೫). ೩. [ಗಣಿತ] ಒಂದು ಸಂಖ್ಯೆ; ಅರ್ಬುದ. [ಸಂ.]

**ತುಲಾದಂಡ** (ನಾ). ೧. ತಕ್ಕಡಿಯ ಕೋಲು; ದಂಡಿಗೆ. ೨. ತಕ್ಕಡಿ: ತೂಗಲ್ದಿರೆಗೆ ತುಲಾದಂಡಮಲ್ತೆ ಮದ್ಭುಜಂ (ಆದಿಪು. ೧೪-೮೧); ನಮ್ಮ ನಮ್ಮ ಸಾಮರ್ಥ್ಯಗಳ ತೂಕಕ್ಕೆ ನಮ್ಮ ನಮ್ಮ ತೋಳುಗಳೇ ತುಲಾದಂಡಗಳಾಗಿ ಹೋಗಲಿ (ಶಕಾರ. ೨೦೬). [ಸಂ.]

**ತುಲಾಪುರುಷ, ತುಳಾಪುರುಷ** (ನಾ). ೧. ಷೋಡಶ ಮಹಾದಾನಗಳಲ್ಲಿ ಒಂದು; ತನ್ನ ದೇಹವು ತೂಗುವಷ್ಟು ಚಿನ್ನ ಮೊದಲಾದುವನ್ನು ದಾನಮಾಡುವುದು: ಆಗ ರಾಮಭೋಜರಾಯನು ಬ್ರಾಹ್ಮಣರಿಗೆ "ತುಲಾಪುರುಷ" ದಾನಗಳನ್ನೂ, ಹಾಗೆಯೇ "ತುಲಾಭಾರ" ಗಳನ್ನೂ ತೂಗಿಸಿಕೊಟ್ಟನು (ತುಳುನಾ. ೧೮); ಷೋಡಶ ಮಹಾದಾನಗಳನ್ನು ಮಾಡಬೇಕೆಂದು ನಿಶ್ಚಯಿಸಿ . . . ಎಲ್ಲವನ್ನೂ ಮಾಡಿದರು. ಅವು ಯಾವುವೆಂದರೆ (೧) ತುಲಾಪುರುಷದಾನ (೨) ಹಿರಣ್ಯಗರ್ಭದಾನ (ಜಾಮವಂ. ೯೭). ೨. ತುಲಾಪುರುಷದಾನವನ್ನು ಮಾಡಿದವನು: ಬೃಹದಾಕಾರದ ಚಿನ್ನದ ಗೋವನ್ನು . . . ದಾನವಾಗಿ ಕೊಡಲಾಯಿತು. ಇದಾದ ಮೇಲೆ ಪ್ರಭು ತುಲಾಪುರುಷರೂ ಆದರು (ಶಾಂತಲಾ. ೨೩೭). **ತುಳಾಪುರುಷ**: ೧. ತುಳಾಪುರುಷಕ್ಕೆಂದು ಹಿರಣ್ಯಗರ್ಭಮಿರಲೆಂದುತ್ತುಂಗ ದೇವಾಲಯೋತ್ಕರಮಂ ಮಾಡಿಸಲೆಂದು ಸಂದ ಪರರಾಷ್ಟ್ರಂಗಳ್ಗೆ (ಎಕ. VI, ತರೀಕೆ. ೪೫-೨೮; 1196). ೩. ತನ್ನ ತೂಕದ ಚಿನ್ನವನ್ನು ದಾನಮಾಡುವ ವ್ರತ: ಪುರುಷೋತ್ತಮನ ತಂಗೆಯುಂ ತಾನುಂ ತುಳಾಪುರುಷಮನಿರ್ದು ಲೋಕಕ್ಕೆಲ್ಲಂ ಬಿಯಮಂ ಮೆರೆದು (ಪಂಪಭಾ. ೧೪-೨೦ ವ); ಶ್ರೀಮತ್ ಪ್ರತಾಪಚಕ್ರವರ್ತ್ತಿ ಜಗದೇಕಮಲ್ಲದೇವರು ತುಳಾಪುರುಷಮನೇಱಿ (ಸೌಇಇ. XV, ೩೦-೩೯; 1146). [ಸಂ.]

**ತುಲಾಭಾರ** (ನಾ). ೧. = ತುಲಾಪುರುಷ ೧: ಆಗ ರಾಮಭೋಜ ರಾಯನು ಬ್ರಾಹ್ಮಣರಿಗೆ "ತುಲಾಪುರುಷ" ದಾನಗಳನ್ನೂ, ಹಾಗೆಯೇ "ತುಲಾಭಾರ" ಗಳನ್ನೂ ತೂಗಿಸಿ ಕೊಟ್ಟನು (ತುಳುನಾ. ೧೮); ಕಪ್ಪೆಯ ತುಲಾಭಾರ ಕೊಟ್ಟ ಹಾಗೆ (ಗಾದೆ). ೨. ಹಿಂದಕ್ಕೂ ಮುಂದಕ್ಕೂ ಚಲಿಸುವಿಕೆ; ತೂಗುವಿಕೆ: ತಕ್ಕಡಿಯನೊಮ್ಮೆ ತೆಂಕಣ್ಗೊಮ್ಮೆ ಬಡಗಣ್ಗೆ ತೂಗಿದುವೆನಲ್ ತುಲಾಭಾರವಂ, ತೊನೆದುದಯ್ ಬೃಹದ್ ಪೃಥಿವಿ! (ಶ್ರೀರಾಮಾ. ೮೦೪-೮೩). [ಸಂ.]

**ತುಲಾಮಾನವಿಶುದ್ಧಿ, ತುಳಾಮಾನವಿಶುದ್ಧಿ** (ನಾ). ತೂಕ ಮತ್ತು ಅಳತೆಗಳನ್ನು ಸರಿಯಾಗಿಟ್ಟಿರುವಿಕೆ: ವರ್ಣಾಶ್ರಮವ್ಯವಸ್ಥೆಗಳಂ ಸ್ವಸ್ಥಂ ಮಾಡಿಯುಂ ತುಲಾ [ ಪಾಠಾಂ. ಳಾ ] ಮಾನವಿಶುದ್ಧಿಯಂ ವಿಚಾರಿಸಿಯುಂ (ಚಂದ್ರಪ್ರ. ೨-೬೦ ವ). **ತುಳಾಮಾನವಿಶುದ್ಧಿ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ತುಲಾಮಾಸ** (ನಾ). ಸೂರ್ಯನು ತುಲಾರಾಶಿಯಲ್ಲಿರುವ ತಿಂಗಳು; ಸೌರಮಾನದ ಏಳನೆಯ ತಿಂಗಳು; **P** ಅಕ್ಟೋಬರ್ ತಿಂಗಳ ಮಧ್ಯದಿಂದ ನವೆಂಬರ್ ತಿಂಗಳ ಮಧ್ಯದವರೆಗಿನ ಭಾಗ: ತುಲಾ ಮಾಸದಲ್ಲಿ ಕಾವೇರೀನದಿಯಲ್ಲಿ ಸ್ನಾನಮಾಡುವುದು ಪುಣ್ಯಪ್ರದವೆಂದು ಹೇಳುತ್ತಾರೆ (ರೂಢಿ). [ಸಂ.]

**ತುಲಾಯನ** (ನಾ). ಸೂರ್ಯನು ತುಲಾರಾಶಿಯನ್ನು ಪ್ರವೇಶ ಮಾಡುವ ಕಾಲ; ತುಲಾಸಂಕ್ರಮಣ; **P** ಇದು ಅಕ್ಟೋಬರ್ ತಿಂಗಳ ಮಧ್ಯದಲ್ಲಿ ಸಂಭವಿಸುತ್ತದೆ. [ಸಂ.]

**ತುಲಾಯೋಗ** (ನಾ). ಬಿಂಬಾಗಮದ ಹದಿನೈದು ಭೇದಗಳಲ್ಲಿ ಒಂದು: ಚತುರ್ಮುಖತಂತ್ರ . . . ತುಲಾಯೋಗ ಕುಟ್ಟಿಮತಂತ್ರ ಸರ್ವಶೇಖರ ಮಹಾವಿದ್ಯೆ ಮಹಾಸಾರವೆಂದು ಬಿಂಬಾಗಮದ ಹದಿನೈದು ಭೇದಂಗಳು (ವಿವೇಕ. ೬೦). [ಸಂ.]

**ತುಲಾವೃತ್ತ** (ನಾ). ಬಿಂಬಾಗಮದ ಹದಿನೈದು ಭೇದಗಳಲ್ಲಿ ಒಂದು: ತುಲಾವೃತ್ತ ತುಲಾಯೋಗ ಕುಟ್ಟಿಮತಂತ್ರ . . . ಮಹಾಸಾರವೆಂದು ಬಿಂಬಾಗಮದ ಹದಿನೈದು ಭೇದಂಗಳು (ವಿವೇಕ. ೬೦). [ಸಂ.]

**ತುಲಾಪ್ಪಿ** (ನಾ). ಮೂವತ್ತು ಮೂರು ತಂತೀವಾದ್ಯಗಳಲ್ಲಿ ಒಂದು: ವಿಪಂಚಿಕೆ . . . ತುಲಾಪ್ಪಿ ಕಾಲಕೀಯೆಂಬ ಮೂವತ್ತಮೂರು ತಂತ್ರೀ ವಾದ್ಯಂಗಳಲ್ಲಿ (ವಿವೇಕ. ೨೩೬). [?]

**ತುಲಾಸಂಕ್ರಮಣ** (ನಾ). = ತುಲಾಯನ: ತುಲಾಸಂಕ್ರಮಣದಂದು ತಲಕಾವೇರಿಯಲ್ಲಿ ಪುಣ್ಯಸ್ನಾನ ಮಾಡಬೇಕು (ರೂಢಿ). **P** ತುಲಾ ಸಂಕ್ರಮಣಕಾಲದಲ್ಲಿ ಕಾವೇರೀನದಿಯು ತಲಕಾವೇರಿ ಎಂಬ ಸ್ಥಳದಲ್ಲಿ ಉದ್ಭವವಾಗುವುದೆಂಬ ನಂಬಿಕೆಯಿದೆ. [ಸಂ.]

**ತುಲಾಸೂತ್ರ** (ನಾ). ತಕ್ಕಡಿಯನ್ನು ಹಿಡಿದುಕೊಳ್ಳಲು ದಂಡಿಗೆಗೆ ಮಧ್ಯದಲ್ಲಿ ಕಟ್ಟಿರುವ ಹುರಿ, – ದಾರ. [ಸಂ.]

**ತುಲಾಸ್ನಾನ** (ನಾ). ಸೂರ್ಯನು ತುಲಾರಾಶಿಯಲ್ಲಿರುವಾಗ ಪುಣ್ಯ ತೀರ್ಥಗಳಲ್ಲಿ ಮಾಡುವ ಸ್ನಾನ: ಆ ದಿನ ಕೃಷ್ಣವೇಣಿ, ರಂಗಸ್ವಾಮಿಯರು ತುಲಾಸ್ನಾನಕ್ಕೆಂದು ಕಾರಿನಲ್ಲಿ ಪಶ್ಚಿಮವಾಹಿನಿಗೆ ಬಂದಿದ್ದರು (ಊರುಕೆ. ೫೯). [ಸಂ.]

**ತುಲಿತ** (ಗು). ೧. ಹೋಲಿಸಿದ; ತಾಳೆ ನೋಡಿದ. (ನಾ). ೨. ತೂಕ: "ತುಲಿಃ . . . ತುಲಿತಂ, ಈ ೬ ತೂಕಂ" (ಶಾಕಕ್ಕ. ೧೦೩). [ಸಂ.]

△ **ತುಲು** 'ತುಳು' ನೋ.

**ತುಲೆ** (ನಾ). ೧. ಪದಾರ್ಥಗಳನ್ನು ತೂಗುವ ಸಾಧನ; ತಕ್ಕಡಿ; ತ್ರಾಸು; ಚಿಂತಾಲು: "ತುಲಾ–ತ್ರಾಸು, ಚಿಂತಾಲು, ತಕ್ಕಡಿ, ತೂಗುಕೋಲು" (ಸಿದ್ಧಾಂತಿ. ೨೫೬); ಇದು ಮಹಾಜನರ ತುಲೆ, ದೊಡ್ಡವರ ತೂಗುಕಲ್ಲು (ಪಾಪಾಕ. ೪೦); ಬೆಲೆಯ ತುಲೆಯ ತಳಿಗೆಯಲ್ಲಿ ಎಡೆ–ಪ್ರಸಾದ ತೂಗುತಿಹುದು (ಮೂರ್ತಿಕಾ. ೨೫-೧೨). ೨. ತಕ್ಕಡಿಯ ಸಹಾಯದಿಂದ ಕಂಡುಹಿಡಿಯುವ ವಸ್ತುವಿನ ತೂಕ. ೩. ಚಿನ್ನ, ಬೆಳ್ಳಿ ಮೊದಲಾದ ಲೋಹಗಳ ತೂಕದಲ್ಲಿ ಒಂದು ಪ್ರಮಾಣ; ನೂರು ಪಲಗಳಷ್ಟು ತೂಕ. ೪. = ತುಲಾಪುರುಷ ೧. ೫. ತೂಕ ಮಾಡುವಿಕೆ; ತೂಗುವಿಕೆ. ೬. ಹೋಲಿಕೆ; ಸಾಮ್ಯ; ಸಾದೃಶ್ಯ. ೭. ತುಲಾದಂಡ; ದಂಡಿಗೆ. ೮. ಒಂದು ರೂಪಾಯಿಯಷ್ಟು ತೂಕ; ಒಂದು ತೊಲ. ೯. ಒಂದು ಬಗೆಯ ಪಾತ್ರೆ. ೧೦. ಮನೆಯ ಚಾವಣಿಗೆ ಹಾಕುವ ತೊಲೆ. ೧೧. ದಿವ್ಯಗಳಲ್ಲಿ ಒಂದು; **P** ಹಿಂದಿನ ಕಾಲದಲ್ಲಿ ಸಾಕ್ಷಿಗಳಿಲ್ಲದ, ಆದರೆ ಪ್ರಬಲವಾದ ಸಂಶಯಕ್ಕೆ ಒಳಗಾದ ಒಬ್ಬನ ಅಪರಾಧವನ್ನು ಪತ್ತೆಹಚ್ಚಲು ಮಾಡುತ್ತಿದ್ದ ಒಂದು ಪರೀಕ್ಷೆ; ಆರೋಪಿಯನ್ನು ತಕ್ಕಡಿಯಲ್ಲಿ ತೂಗಿ ಮಾಡುವ ಒಂದು ವಿಶೇಷ ರೀತಿಯ ನ್ಯಾಯ ನಿರ್ಣಯ. 'ದಿಬ್ಯ' ಪರಾ. ೧೨. [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಏಳನೆಯದು; ತುಲಾರಾಶಿ: "ವಣಿಕ್, ತುಲಾ, ತೌಲೀ, ಜೂಕಃ, ತುಲಾಧಿಪಃ ಈ ೫ ತುಲಾಕೆ ಹೆಸರು" (ಭಾಸ್ಕರ. ೬೬-೬); ಮತ್ತಮಾ ಖಗೋಳದಲ್ಲಿ ಮೇಷ . . . ತುಲೆ ವೃಶ್ಚಿಕ ಧನುಸ್ಸು ಮಕರ ಕುಂಭ ಮೀನವೆಂಬ ಪನ್ನೆರಡು ರಾಶಿಗಳು (ವಿವೇಕ. ೨೫೮). [ಸಂ. ತುಲಾ]

**ತುಲ್ಯ** (ಗು). ಸಮಾನವಾದ; ಸದೃಶವಾದ; ಹೋಲುವ. [ಸಂ.]

**ತುಲ್ಯತೆ** (ನಾ). ಸಮಾನತೆ; ಸಾದೃಶ್ಯ: "ಸಮತ್ವ, ತುಲ್ಯತೆ" (Equality. ಪಾರಿಶಿ. ೩೬). [ಸಂ. ತುಲ್ಯತಾ]

**ತುಲ್ಯಪಾನ** (ನಾ). ಒಟ್ಟಿಗೆ ಸೇರಿ ಕುಡಿಯುವಿಕೆ: "ಸಪೀತಿಃ, ತುಲ್ಯಪಾನಂ – ಕೂಡೆ ಪಾನಮಾಡುವಿಕೆ" (ಸಿದ್ಧಾಂತಿ. ೨೪೯).

[ ತುಲ್ಯ + ಪಾನ₂ ]

**ತುಲ್ಯಯೋಗಿತಾಲಂಕಾರ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು; ಕೇವಲ ವರ್ಣ್ಯ ಮತ್ತು ಕೇವಲ ಅವರ್ಣ್ಯಗಳಿಗೆ ಒಂದು ಸಮಾನಧರ್ಮವಿರುವ ಅಲಂಕಾರ: ಪ್ರಸ್ತುತದಿಂದಾಗಲಿ ಅಥವಾ ಅಪ್ರಸ್ತುತದಿಂದಾಗಲಿ ಗುಣರೂಪವಾದ ಧರ್ಮೈಕ್ಯ ಮತ್ತೆ ಕ್ರಿಯಾ ರೂಪವಾದ ಧರ್ಮೈಕ್ಯ ಪೇಳಲ್ ತುಲ್ಯಯೋಗಿತಾಲಂಕಾರವೆನಿಪುದು (ಕುವಲ. ೩೪); ಮಡದೀ ವರ್ಣ್ಯಂಗಳ್ಗಾದೊಡಮಿತರಂಗಳ್ಗೆಯಾದೊಡಂ ಧರ್ಮೈಕ್ಯಂ ನಿಡಿದುಂ ಸ್ಫುರಿಸಲ್ಕೇಳ್ಕಡುಬೆಡಗಿನ ಕಣೆ ತುಲ್ಯಯೋಗಿತಾಲಂಕಾರಂ (ನರಪ. ೩೬-೭೮). [ಸಂ.]

**ತುಲ್ಲು** (ನಾ). ಹೆಂಗಸಿನ ಗುಹ್ಯೇಂದ್ರಿಯ; ಯೋನಿ.

[ < ಪ್ರಾ. ತುಲ್ಲ ]

**ತುವಗಾಮುಂಡ** (ನಾ). ಒಬ್ಬಾತನ ಹೆಸರು: ತುವಗಾಮುಣ್ಡ ಸತ್ತ (ಎಕ. IX, ಹೊಸಕೋ. ೧೩-೭: ಸು. 900). [ ತುವ್ವ + ಗಾಮುಂಡ ]

**ತುವರ** (ನಾ). ೧. ಆರು ಬಗೆಯ ರಸಗಳಲ್ಲಿ ಒಂದು; ಒಗರು; ಒಗಚು; ಕಷಾಯ: "ತುವರಮೆನಲೊಗರಕ್ಕು" (ಮಂಗರಾ. ೬೫-೫); ತುವರಂ ತಿಕ್ತಂ ಮಧುರಂ ಲವಣಂ ಕಟು ಕಾರಮೆಂದು ರಸಮಾಱು ತೆಱಂ (ವಸ್ತುಕೋ. ೯೪-೧೫). ೨. ಯೌವನಕ್ಕೆ ಬಂದಿದ್ದರೂ ಗಡ್ಡ, ಮೀಸೆ ಬೆಳೆಯದವನು; ಶ್ಮಶ್ರುಹೀನ. [ಸಂ.]

**ತುವರಮಣ್ಣು, ತೊವರಮಣ್ಣು** (ನಾ). ಸಂವಾಸನೆಯ ಮಣ್ಣು: "ಕಾಸಮೃತ್ತಿಕಾ—ತುವರಮಣ್ಣು" (ಒಷಧಿ. ೩೨); "ವೃತ್ತಾಳಕಂ-ತುವರಮಣ್ಣು" (ಒಷಧಿ. ೧೫೮). **ತೊವರಮಣ್ಣು**: "ತುವರೀ—ತೊಗರಿ, ತೊವರಮಣ್ಣು, ಕೆಂಬಟಿಕೆ" (ಒಷಧಿ. ೭೦).

[ < ತುವರಿ + ಮಣ್ಣು (< ಮಣ್) ]

**ತುವರಿ** (ನಾ). ೧. ಒಂದು ಬಗೆಯ ದ್ವಿದಳಧಾನ್ಯ ; ತೊಗರಿ : "ಆಢಕೀ, ತುವರೀ— ಈ ೨ ತೊಗರಿ" (ಹಲಾಯು. ೯೬-೪೩೦): ಒಡೆಯನೊರ್ವಂ ಜೂಜನಾಡಿ ರತ್ನಂಗಳಂ ಬಿಡೆ ಮೂಗಳವ ಸೋತನೆಂದು ಬಾಧಿಸುತಿರಲು ನಡುಬೀದಿಯೊಳು ರಾಸಿಯಾದ ತುವರಿಯ ರತ್ನಗಳ ಮಾಡಿಕೊಟ್ಟು ಬಸವಂ ಬಿಡಿಸಿಕೊಂಡಂ (ಗುರುಚಾ. ೮-೩೩). ೨. ಸುವಾಸನೆಯುಳ್ಳ ನೆಲ ; ಸುಗಂಧಯುಕ್ತವಾದ ಮಣ್ಣು. ೩. ಪಟಿಕ.
[ ಸಂ. ತುವರೀ ]

**ತುವರಿಕೆ** (ನಾ).=ತುವರಿ. [ಸಂ. ತುವರಿಕಾ]

**ತುಶಿತ** (ನಾ). ೧. ದೇವತೆಗಳಲ್ಲಿ ಒಂದು ಭೇದ. ೨. ಆ ದೇವತೆಗಳು ವಾಸಿಸುವ ಲೋಕ ; ಸ್ವರ್ಗಲೋಕದ ಒಂದು ಭಾಗ : ಅನಾಥಪಿಂಡಿಕನು . . . ತನ್ನ ಕಳೇಬರವನ್ನು ಕಳಚಿ ಹಾಕಿ, ತುಶಿತವೆಂಬ ಸ್ವರ್ಗದಲ್ಲಿ ದೇವತೆಯಾಗಿ ಹುಟ್ಟಿದನು (ಹತ್ತುಮ. ೧೬೩). [<ಸಂ. ತುಷಿತ]

**ತುಷ** (ನಾ). ೧. ಬತ್ತ ಮೊದಲಾದ ಧಾನ್ಯಗಳ ಮೇಲಿನ ಸಿಪ್ಪೆ ; ತವುಡು ; ಹೊಟ್ಟು ; ಉಮ್ಮಿ : ತುಷವ ಕಳದು ತಂಡುಲವನಡಬೇಕು (ಬಲೀಶ್ವ.೦೪೮) ; ಅಕ್ಕಿಯಿಲ್ಲದ ತುಷಕ್ಕೆ ಅಗ್ಗವಣಿಯನೆಱೆದಡೆ ಅದೆಂದಿಂಗೆ ಬೆಳೆದು ಫಲವಪ್ಪುದಯ್ಯಾ (ಮಹಾದೇ. ಕ. ೩೪-೬೩) ; ಕುಮಾರಿಲಭಟ್ಟರು . . . ದೇಹಾಂತಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿ ತುಷದ ಚಿತಿಯನ್ನೇರಿದ್ದರು (ಭಜ್ಯೋತಿ. ೩೪). ೨. ಒಂದು ಬಗೆಯ ಮರ; ತಾರೆ ; ಕಲಿದ್ರುಮ. ೩. (ಅಲಂ) ಹೊದಿಕೆ ; ಆಚ್ಛಾದನೆ ; ಆವರಣ : ಜಗತ್ತೆಂಬ ಜಂತ್ರದ ಹಾಹೆಗೆ ಅಜ್ಞಾನವೆಂಬ ತುಷವ ತೊಡಿಸಿ ಅಹಂ ಮಮತೆಯೆಂಬ ಸೊಕ್ಕನಿಕ್ಕಿ . . . ವಿನೋದಿಸಿದೆಯಯ್ಯಾ (ಬಸವ. ಕ. ೯೬೮). [ ಸಂ. ]

**ತುಷಗಳೆ** (ಕ್ರಿ). ಹೊಟ್ಟನ್ನು ತೆಗೆ ; ತವುಡನ್ನು ತೆಗೆದು ಹಾಕು : ತುಷಗಳೆದಕ್ಕಿಯ ತಳಿಸುವಂತಾತ್ಮನ ವಿಷಯಗಳೆದು ನೋಳ್ಪರೆಲ್ಲ (ಭರಜ. ೫೪-೨೦). [ತುಷ+ಕಳೆ$_1$]

**ತುಷಪರ್ಣ** (ನಾ). ಮೊಳಕೆಗೆ ಆವರಣವಾಗಿರುವ ಎಲೆ; ಮೊಳಕೆಯನ್ನು ಮುಚ್ಚಿಕೊಂಡಿರುವ ಬೀಜದ ಎರಡು ದಳ : ಸಸಿ ಬಲಿದು ಹೊಸಸುಳಿ ತೋಱಿದಲ್ಲಿಯಲ್ಲದೆ ಆ ತುಷಪರ್ಣ ಬಿಡದು (ಮೋಳಿಮಾ. ೦೪೦-೪೪೦). [ತುಷ + ಪರ್ಣ]

**ತುಷಪರ್ಣಿ** (ನಾ). ಒಂದು ಬಗೆಯ ಮರ ; ಕಿರುಗೋಣಿ : "ತುಷಪರ್ಣಿ ಕಿಱುಗೋಣಿ" (ಮಂಗರಾ. ೪೫-೪೭). [ಸಂ. ತುಷಪರ್ಣೀ ]

**ತುಷಮುಷ** (ಗು). ತೂಕವಿಲ್ಲದ ; ಕ್ಷುಲ್ಲಕವಾದ : ತುಷಮುಷಬೋಧೆಗೇಳ್ದಪ್ಪಾಜಿಯೊಳು ಮನೋಲಷಿತದೀಕ್ಷೆಯನಾಂಪೊಡಾವು ವೃಷಭೇಂದ್ರ ಹಂಸೇಂದ್ರ ಮೊದಲಾದ ಸುತರ ಪೌರುಷವಡೆದೆವೆಯೆಂದರಳಲಿ (ಭರಜ. ೭೯-೫೩) [ತುಷ + ಮುಷ]

**ತುಷಮೇಘ** (ನಾ). ಆವರಣವಾಗಿರುವ ಮೋಡ : ತುಷಮೇಘಮಂ ಮುರಿದು ನಿಂತುರಿವ ಮಾರ್ತಾಂಡನೇಳಿಗೆಯಂತೆ ಜೀವನ್ಮುಕ್ತನೈ (ಗಗತಾ. ೦೩-೪೩). [ತುಷ + ಮೇಘ]

**ತುಷಾಗ್ನಿ** (ನಾ). ೧. ಬತ್ತದ ಹೊಟ್ಟಿಗೆ ಹತ್ತಿಸಿರುವ ಬೆಂಕಿ. 'ಕುಕೂಲ' ಪರಾ. ೨. ಒಂದು ಬಗೆಯ ಕಠಿನವಾದ ಪ್ರಾಯಶ್ಚಿತ್ತ. P ಮಹತ್ತರವಾದ ಪಾಪವನ್ನು ಮಾಡಿದವರು, ಅದರ ಪರಿಹಾರಕ್ಕಾಗಿ ಹೊಟ್ಟಿನ ರಾಶಿಗೆ ಬೆಂಕಿ ಇಟ್ಟು ಅದರ ಮಧ್ಯೆ ಕುಳಿತುಕೊಂಡು ಮರಣವನ್ನು ಹೊಂದುತ್ತಿದ್ದರು ಎಂಬ ನಂಬಿಕೆಯಿದೆ. ೩. ಒಂದು ನರಕದ ಹೆಸರು: ತುಷಾಗ್ನಿ ಕ್ರಿಮಿಸಂಘ...ದುರ್ಗಂಧವಾಸಗಳೆಂಬೈದು ಮುಂತ್ರಿ ನರಕಂಗಳಿಂದೊಡಗೂಡಿ (ವಿವೇಕ. ೧೮೦). [ ತುಷ + ಅಗ್ನಿ ]

**ತುಷಾನಲ** (ನಾ). = ತುಷಾಗ್ನಿ : (*). [ತುಷ + ಅನಲ ]

**ತುಷಾರ** (ಗು). ೧. ತಂಪಾದ ; ಶೀತಲವಾದ. 'ತುಷಾರಕರ' ಪರಾ. (ನಾ). ೨. ಹಿಮ ; ಮಂಜು. ೩. ಹಿಮದ ತುಂತುರು ; ಮಂಜಿನ ಕಣ ; ಇಬ್ಬನಿ : ಸುರಿವ ತುಷಾರದೊಳ್ಬೆರೆದರಲ್ವ ಸಿತಾಂಬುಜದಿವ್ಯಗಂಧದೊಳ್ ಪೊರೆದು...ಪರೆದೆಸೆಗಿತ್ತು...ನಿಶಾಸಮೀರಣಂ (ಕಾದಂಪೂ. ೨೮೩); ಆ ನೀರು ಸಾರವ ಕೊಟ್ಟು ದ್ರವ್ಯಕ್ಕೆ ಮತ್ತೆ ತುಷಾರವಾಗಿ ಸಾರವನೆಯ್ದಿದಂತೆ (ಮೋಳಿಮಾ. ೧೨೦-೪೭೧) ; ತುಷಾರಕಣಕೋಟಿಯುಂಶಕೆ ಸಾಟಿಯಲ್ಲು ಗಡ ನಿಮ್ಮಳಿವು (ಭಾವಚಿಂ. ೯-೩); ಮೇಣಸುರಾಮರಾಕಾರದಿಂ ಪ್ರವಹಿಸಿತೊ ಶೀಕರತುಷಾರದೋಲೆಂಬಂತೆ ಬಿಳಿಮಂಜು...ಮುಚ್ಚಿ ಮುಸುಕಿದುದು (ಶ್ರೀರಾಮಾ. ೦೯೯-೦೩೩). ೪. ಮಂಜುಗಡ್ಡೆ ; ಹಿಮದ ಗಡ್ಡೆ. ೫. ತುಂತುರುಹನಿ ; ಶೀಕರ : ಆ ಹಣ್ಣನೊಡದು ನೋಡಲಾಗಿ ರಸವಿಲ್ಲದೆ ತುಷಾರ ಹಾಱಿತ್ತು (ಮೋಳಿಮಾ. ೧೮೧-೬೮೦) ; ಧರಣಿ ನೆನೆದುದು ಗಂಧರಸಕತ್ತುರಿಯ ಪನ್ನೀರುಗಳ ಹೊನಲೊಡೆವೆರಸಿ ದೆಸೆ ಕಂಪಿಟ್ಟುದಂಬುಧಿ ನವತುಷಾರದಲಿ ತರಣಿ ಪರಿಮಳಿಸಿದನು ಪವನನ ಸುರಭಿತನವಚ್ಚರಿಯೆ (ಕುವ್ಯಾವಿ. ೦೦-೮೩). ೬. ಕರ್ಪೂರ. 'ತುಷಾರೋಪಳ' ಪರಾ. [ ಸಂ. ]

**ತುಷಾರಕರ** (ನಾ). ತಂಪಾದ ಕಿರಣವುಳ್ಳವನು ; ಚಂದ್ರ : ತುಷಾರಕರನಿಂದೇಕಾದಶದ್ರುವ್ಯ ಧರ್ಮತನೂಜಾಸ್ತದೊಳಿಂದ್ರಮಂತ್ರಿ ಶುಭದಂ (ಜಾತತಿ. ೦೦-೧೧). [ ಸಂ. ]

**ತುಷಾರಪುಂಜ** (ನಾ). ಮಂಜಿನ ಗುಂಪು : ಹಿಮರಾಶಿ : ಪುದಿದ ತುಷಾರಪುಂಜದೊಳಗಿರ್ಪ ಹಿಮಾದ್ರಿವೊಲ್ ... ಒಪ್ಪಿದನಿಂದ್ರವಂದಿತಂ (ಪುಷ್ಪಪು. ೧೦-೩೯). [ ತುಷಾರ + ಪುಂಜ$_4$ ]

**ತುಷಾರರುಚಿ** (ನಾ). ಹಿಮಕಿರಣ ; ಚಂದ್ರ : ಮಿತ್ರಕ್ಷೇತ್ರದೊಳುತ್ಪಲಮಿತ್ರಂ ನಿಲೆ ತತ್ತುಷಾರರುಚಿಯುಂ ... ಶತಪತ್ರಸಖಾದಿಗ್ರಹಂಗಳೀಕ್ಷಿಸೆ ಶುಭದಂ (ಜಾತತಿ. ೨೦-೦೪). [ ತುಷಾರ + ರುಚಿ ]

**ತುಷಾರವರ್ಷ** (ನಾ). ತುಂತುರು ಮಳೆ : ತಣ್ಗಾಳಿಯ ಸೋಂಕಿಂ ವಿರಳಮಾಗಿ ಸೂಸುವ ತುಷಾರವರ್ಷದೊಳಂ (ಮಲ್ಲಿಪು. ೩-೧೦೧).
[ ತುಷಾರ + ವರ್ಷ ]

**ತುಷಾರಸ್ನಾನ** (ನಾ). ಯಂತ್ರಸಹಾಯದಿಂದ (ನೀರಿನ) ಸಣ್ಣ ಸಣ್ಣ ಹನಿಗಳು ಮೈಮೇಲೆ ಬೀಳುವಂತೆ ಅಳವಡಿಸಿ ಮಾಡುವ ಸ್ನಾನ: ನಮಗೆಲ್ಲರಿಗೂ ಡಿ.ಡಿ.ಟಿ. ತುಷಾರಸ್ನಾನವಾಯಿತು (ಅಪೂಪ. ೩೦೯).
[ ತುಷಾರ + ಸ್ನಾನ ]

**ತುಷಾರಾಂಶು** (ನಾ). = ತುಷಾರರುಚಿ. 'ತುಷಾರಾಂಶುಜ' ಪರಾ.
[ ತುಷಾರ + ಅಂಶು ]

**ತುಷಾರಾಂಶುಜ** (ನಾ). ಚಂದ್ರನ ಮಗ ; ಬುಧ : ಪತಿ ... ತುಷಾರಾಂಶುಜನಥರ್ವವೇದಕ್ಕಕ್ಕುಂ (ಜಾತತಿ. ೨-೪). [ ಸಂ. ]

**ತುಷಾರಾದ್ರಿ** (ನಾ). ಹಿಮದಿಂದ ಕೂಡಿದ ಪರ್ವತ ; ಹಿಮಾಲಯ ; ಹಿಮವಂತ. 'ತುಷಾರಾದ್ರಿತನುಜೆ' ಪರಾ. [ ತುಷಾರ + ಅದ್ರಿ ]

**ತುಷಾರಾದ್ರಿತನುಜೆ** (ನಾ). ಹಿಮವಂತನ ಮಗಳು ; ಪಾರ್ವತಿ : (*).
[ ತುಷಾರಾದ್ರಿ + ತನುಜೆ ]

**ತುಷಾರೋಪಳ** (ನಾ). ಕರ್ಪೂರದ ಹಳುಕು,-ಚೂರು : ತುರುಷ್ಕತುಷಾರೋಪಳಕಾಳಾಗುರುತಕ್ಕೋಳಲವಂಗಪ್ರಮುಖಸುರಭಿಪರಿಕರಯುತಮುಂ (ಪುಷ್ಪಪು. ೦೦-೪೫). [ ತುಷಾರ + ಉಪಳ ( =ಉಪಲ) ]

**ತುಷಿತ** (ನಾ). ೧. ದೇವತೆಗಳಲ್ಲಿ ಒಂದು ಗುಂಪು ; ಒಂದು ದೇವಗಣ: "ಆದಿತ್ಯಾಃ ...ತುಷಿತಾಃ, ಭಾಸ್ವರಾಃ, ಅನಿಲಾಃ...ಗಣದೇವತೆಗಳ ಹೆಸರುಗಳು" (ಸಿದ್ಧಾಂತಿ. ೦೪). ೨. [ಜೈನ] ಲೋಕಾಂತಿಕ ದೇವತೆಗಳ ಎಂಟು ವರ್ಗಗಳಲ್ಲಿ ಒಂದು : ಬ್ರಹ್ಮಕಲ್ಪಾಂತವಾಸಿಗಳುಮಪ್ಪ

ಸಾರಸ್ವತಾದಿತ್ಯವಹ್ನ್ಯರುಣಗರ್ದತೋಯ ತುಷಿತಾವ್ಯಾಬಾಧಾರಿಷ್ಟರೆಂಬೆಣ್ಬರುಂ ಲೋಕಾಂತಿಕದೇವರ್ ಬಂದು (ಆದಿಪು. ೯-೬೦ವ).

[ ಸಂ. ]

**ತುಷೋದಕ** (ನಾ). ಅಕ್ಕಿಯನ್ನು ತೊಳೆದ ನೀರು; ಕಲಗಚ್ಚು: "ಅಭಿಷವಂ, ಅವಂತಿ, ಸೋಮಂ, ತುಷೋದಕಂ, ಶುಕ್ಲಂ — ಈ ೫ ಅಕ್ಕಿಗಚ್ಚು" (ಹಲಾಯು. ೫೩-೧೬೩).

[ ತುಷ + ಉದಕ$_2$ ]

**ತುಷ್ಟ** (ಗು). ೧. ಸಂತೋಷಗೊಂಡ ; ತೃಪ್ತಿಹೊಂದಿದ. (ನಾ). ೨. ಸಂತೋಷಗೊಂಡವನು ; ತೃಪ್ತ : ತುಷ್ಟನಾದಂ ಪರಮಜಿನಮತಾಂಭೋಜಿನೀರಾಜಹಂಸಂ (ಸುಕುಮಾ. ೩-೪೮); ತುಷ್ಟನಾದನು ನೃಪತಿಕೃತಪರಿಶಿಷ್ಟಪಾಲನು (ಕುವ್ಯಾವಿ. ೧-೦೦) ; ಮಧುರವಾದ ಮುಗುಳ್ನಗೆಯೊಂದಿಗೆ ಅವನನ್ನು ಬಹಳ ತುಷ್ಟನನ್ನಾಗಿ ಮಾಡಿದಳು (ಮೃಜಲ. ೮೬). ೩. = ತುಷ್ಟಿ ೧ : ತಮ್ಮ ವೃತ್ತಾಂತವೆಲ್ಲಮಂ ಪೇಳ್ದು ನಮಗೆ ತುಷ್ಟಮಂ ಮಾಳ್ಪುದು (ಕಗವಿ. ೦೫೧-೯). [ ಸಂ. ]

**ತುಷ್ಟಿ** (ನಾ). ೧. ಸಂತೋಷ ; ತೃಪ್ತಿ ; ತಣಿವು : ಅಕ್ಕುಂ ಧೃತಿ ತುಷ್ಟಿ ಪುಷ್ಟಿ ವಿಭವಂ ... ಭದ್ರಂ ಶುಭಂ ಮಂಗಳಂ (ಪಂಪಭಾ. ೧೪-೬೫) ; ಪರಿಣಾಮ ಗರ್ಭತುಷ್ಟಿಯಂತೆಯುಂ ... ಮಹತ್ತ್ವಮಂ ಪಡೆದೆಯೆಂದಮರಸಮುದಯಂ ಸ್ತುತಿಗೆಯ್ದು ಪೋಗೆ (ಜಗವಿ. ೨-೯೬ ವ) ; ಈ ಸಂಗ್ರಾಮಮುಖದಲಿ ಬಿಲ್ಲ ಹಬ್ಬದ ತುಷ್ಟಿ ನಿನಗೇಕೆಂದನಾ ಕರ್ಣ (ಕುವ್ಯಾದ್ರೋ. ೧೩-೬೩); ತುಷ್ಟಿಯಿಲ್ಲದ ನೃಪ ದರಿದ್ರನು (ನಿಭಾಗ. ೨-೧-೩೭); ವಿಪರ್ಯಯಗಳುಐದು, ತುಷ್ಟಿಗಳು ಒಂಬತ್ತು (ಹಿಂದಸಾ. ೫೭). P"ಸಾಂಖ್ಯರ ಪ್ರಕಾರ ಒಂಬತ್ತು ಬಗೆಯ ತುಷ್ಟಿಗಳಿವೆ : ಪ್ರಕೃತ್ಯಾಖ್ಯ ತುಷ್ಟಿ (ಎಂಟು ಬಗೆಯ ಪ್ರಕೃತಿತತ್ತ್ವದಲ್ಲಿ ಮನಸ್ಸನ್ನು ಲಯಗೊಳಿಸಿ ಧ್ಯಾನ ಮಾಡುತ್ತ ತಾನು ವಿಮುಕ್ತನೆಂದು ಸಂತಸಪಡುವಿಕೆ), ಉಪಾದಾನಾಖ್ಯ ತುಷ್ಟಿ (ಸಂನ್ಯಾಸವೇಷಸ್ವೀಕಾರ ಮಾತ್ರದಿಂದಲೇ ಮುಕ್ತನೆಂದು ಭಾವನೆ), ಕಾಲಾಖ್ಯತುಷ್ಟಿ (ಮುಕ್ತಿ ಕೈಗೂಡುವ ಕಾಲ ಬಂದರೆ ತಾನಾಗಿಯೇ ಸಿದ್ಧಿಸುವುದು ; ಧ್ಯಾನಾದಿಗಳಿಂದ ಫಲವೇನೆಂದು ತೂಷ್ಣೀಕತೆಯನ್ನು ವಹಿಸುವಿಕೆ), ಭಾಗಾಖ್ಯತುಷ್ಟಿ (ಪೂರ್ವಜನ್ಮ ಸುಕೃತವಿಶೇಷಗಳು ಫಲಿಸಿ ಅದೃಷ್ಟವಿಶೇಷದಿಂದ ಮುಕ್ತಿ ಲಭಿಸುವುದಾದರೆ ಶ್ರಮವೇಕೆಂಬ ಭಾವನೆ)—ಈ ನಾಲ್ಕೂ ಆಧ್ಯಾತ್ಮಿಕಗಳು. ಸುಕಾರತುಷ್ಟಿ (ದ್ರವ್ಯಾರ್ಜನೆಯಲ್ಲಿ ವಿರಕ್ತನಾಗುವಿಕೆ), ಸುಪಾರತುಷ್ಟಿ (ಸಂಪಾದಿಸಿದ ದ್ರವ್ಯ ಕಾಪಾಡದೆ ಅಸಡ್ಡೆ), ಸುನೇತ್ರ (ದ್ರವ್ಯನಾಶವಾದರೆ ವ್ಯಥೆಪಡದಿರುವಿಕೆ), ಮರೀಚಕ ತುಷ್ಟಿ (ಒಮ್ಮೆ ಅನುಭವಿಸಿದ ವಸ್ತುವಿನಲ್ಲಿ ಮರಳಿ ಇಚ್ಛೆಯಿಲ್ಲದಿರುವಿಕೆ), ಉತ್ತಮಾಂಭ ತುಷ್ಟಿ (ಯಾವ ವಸ್ತುವನ್ನಾದರೂ ಅನುಭವಿಸಬೇಕೆಂಬ ಇಚ್ಛೆಯೇ ಆತ್ಯಂತಿಕವಾಗಿ ಹುಟ್ಟದಿರುವಿಕೆ). (ವಿಷ್ಣುಪು-೧-೫-ಪುನಾಚೂ. ೨೬೭)" (ಶ್ರೀವತ್ಸ ನಿಘಂಟು. ೧೮೪). 'ನವತುಷ್ಟಿ' ಪರಾ. ೨. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಅಮೃತ ಮಾನದ ಪೂಷ ತುಷ್ಟಿ ಪುಷ್ಟಿ...ಕಾಮದಾಯಿನಿಯೆಂಬ ಷೋಡಶಕಲೆಗಳಿಂ ಭರಿತನಾಗಿ (ವಿವೇಕ. ೨೬೭). ೩. ಲಾಭ (?) : ತುಷ್ಟಿಗೈದಿರ್ದ ಹೊನ್ನಂ ತುಷ್ಟಿಯುನೈದಲ್ ಮಿಶ್ರವರ್ಣಾದಿ ನೂತ್ನಾನಷ್ಟಿಗೈದಿರ್ದ ಪೊನ್ನಂ ನೆಟ್ಟನೆ ತೆಗೆಯಲ್ಕೆ ಬಕ್ಕು ನಷ್ಟದ ಬಣ್ಣಂ (ವ್ಯವಹಾ. ೪೬-೨೨). 'ತುಷ್ಟೆ' ಪರಾ. [ ಸಂ. ]

**ತುಷ್ಟಿಕರ** (ನಾ). ಸಂತೋಷವನ್ನು ಉಂಟುಮಾಡುವುದು ; ತೃಪ್ತಿಯನ್ನು ಕೊಡುವುದು : ಗ್ರಹಮಿರೆ ಪರಿವೇಷದೊಳಾ ಗ್ರಹಮಂ ಕ್ರೂರಗ್ರಹಂ ನಿರೀಕ್ಷಿಸುವೊಡರಿಷ್ಟಹರಂ ತುಷ್ಟಿಕರಮಭೀಷ್ಟಹೇತು ಜನ್ಮಾವಸರದೊಳ್ (ಜಾತತಿ. ೭-೧೯). [ ಸಂ. ]

**ತುಷ್ಟಿಗೊಳಿಸು** (ಕ್ರಿ). ಸಂತೋಷಪಡಿಸು ; ತೃಪ್ತಿಪಡಿಸು : ಹುಟ್ಟಿದ ತಪ್ಪಿಗೆ ...ಎಷ್ಟು ಜನರನ್ನು ತುಷ್ಟಿಗೊಳಿಸಬೇಕು (ಕಲ್ಲೋಲ. ೮-೧೬).

[ ತುಷ್ಟಿ + ಕೊಳ್$_1$ + – ಇಸು$_3$ ]

**ತುಷ್ಟಿದಾನ** (ನಾ). ಪುತ್ರೋತ್ಸವ, ಯುದ್ಧಜಯ ಮೊದಲಾದ ಸಂತೋಷದ ಸಂಗತಿಗಳನ್ನು ತಿಳಿಸಿದವರಿಗೆ ಕೊಡುವ ಬಹುಮಾನ ; ಪಸಾಯದಾನ; ಪೂರ್ಣ ಪಾತ್ರ : ಆತಂಗೊಸೆದು ತುಷ್ಟಿದಾನಂಗೊಟ್ಟಂ (ಪದ್ಮರಾ. ೧೪೭-೯) ; ಋಷಿನಿವೇದಕಂಗೆ ತುಷ್ಟಿದಾನಂಗೊಟ್ಟು ಭೇರಿಯಂ ಪೊಯ್ಸಿ (ಶಾಂತಿಪು. ೯-೨೪ ವ) ; ಅಂತು ಋಷಿನಿವೇದಕಂಗಂಗಚಿತ್ತಮಂ ತುಷ್ಟಿದಾನಮನಿತ್ತು (ಸುಕುಮಾ. ೮-೪೭ ವ). [ ತುಷ್ಟಿ + ದಾನ ]

**ತುಷ್ಟಿಬಡಿಸು** ' ತುಷ್ಟಿವಡಿಸು ' ನೋ.

**ತುಷ್ಟಿಬಡು** ' ತುಷ್ಟಿವಡು ' ನೋ.

**ತುಷ್ಟಿವಡಿಸು**, ತುಷ್ಟಿಬಡಿಸು (ಕ್ರಿ). ಸಂತೋಷವನ್ನುಂಟುಮಾಡು; ತೃಪ್ತಿಪಡಿಸು : ನದೀಜಳಮಂ ನಿರ್ಮಳಮಂ ಮಾಡಿ ಮೃಗಪಕ್ಷಿಕುಳಮಂ ಮಿಗೆ ತುಷ್ಟಿವಡಿಸುತ್ತುಂ (ಗಿರಿಕ. ೭-೪೨ ವ); ಸನ್ನುತಿಗಳಿಂ ತುಷ್ಟಿವಡಿಸಿಯಾ ಭಕ್ತರ್ಗೆ ತನ್ನ ಭಾಷೆಯನುಸಿರ್ದಂ (ಪದ್ಮರಾ. ೪-೧೮) ; ಅಖಿಳವಸ್ತುವ ಕೊಟ್ಟು ಮಿಗೆ ತುಷ್ಟಿವಡಿಸಿ ಸರ್ವರನು ಬೀಳ್ಕೊಟ್ಟನು (ಸೌಂದಪು. ೬-೧೮); ಪತಿಯೊಳು . . . ಕನಲದೆ ತುಷ್ಟಿವಡಿಪುದೊಲವಱಿತು (ಹದಿಬ. ೩-೧೮). **ತುಷ್ಟಿಬಡಿಸು** : ಉಡುಗೊಱೆಗಳಿಂ ತುಷ್ಟಿಬಡಿಸಿದ ಪೊಡವಿಪಾಲಕ ಋಷಿಗಳಷ್ಟಾಶೀತಿಸಾವಿರವ (ಕುವ್ಯಾಅ. ೧೬-೬); ನಿಗ್ರಹವಡಿಸದೆ ಪ್ರಜೆ ಪರಿವಾರವ ವೆಗ್ಗಳದಿಂ ತುಷ್ಟಿಬಡಿಸು (ಮೋಹತ. ೦೩-೦೧).

[ ತುಷ್ಟಿವಡು + – ಇಸು$_3$ ]

**ತುಷ್ಟಿವಡು**, ತುಷ್ಟಿಬಡು (ಕ್ರಿ). ತೃಪ್ತಿಹೊಂದು ; ಸಂತೋಷಪಡು : ಮೊದಲ ಕವೀಂದ್ರರೊಲ್ದೊರೆದ ಸತ್ಕೃತಿಸಂಚಯಮಿಾ ಧರಿತ್ರಿಯೊಳ್ ಪುದಿದಿರೆ ನೋಡಿ ತುಷ್ಟಿ [ ಪಾಠಾಂ. ತೃಪ್ತಿ ]ವಡಲೊಲ್ಲದೆ ಕಬ್ಬಿಗರೇಕೆ ಕಬ್ಬಮಂ ಗದಿಪರೊ (ರಾಜಶೇ. ೧-೩೫). **ತುಷ್ಟಿಬಡು** : ಕಾಂತೆಯುರಿಕ್ಕಲವನು ತುಷ್ಟಿಬಡದಿರೆ ಸಂತಸದಲಿ ಜೀವಂಧರನು ತನ್ನಯ ಹಸ್ತದಿಂದ ಗಲಿನೊಳಿರ್ದ ದಿವ್ಯಾನ್ನವನೀಯಲು (ಜೀವಂಸಾಂ. ೭-೨೫). [ತುಷ್ಟಿ+ಪಡು$_1$]

**ತುಷ್ಟಿವಡೆ** (ಕ್ರಿ). ತೃಪ್ತಿಯನ್ನುಂಟುಮಾಡು : ವಿಘ್ನಕಾರಿದ್ವಿಷದ್ಗಣದಿಂ ಭೂತಗಣಕ್ಕೆ ತುಷ್ಟಿ [ಪಾಠಾಂ. ತೃಪ್ತಿ]ವಡೆದಪ್ಪಂ (ಜಗವಿ. ೦೭-೦೦).

[ ತುಷ್ಟಿ + ಪಡೆ$_1$ ]

**ತುಷ್ಟಿಸು** (ಕ್ರಿ). = ತುಷ್ಟಿವಡು : ಧರ್ಮಪುತ್ರನ ಘಾತಿಯನು ಘಟ್ಟಿಸಿದರೇ ತುಷ್ಟಿ [ ಪಾಠಾಂ. ಟ್ಟಿ ] ಸಿದನೇ ನೃಪತಿ (ಕುವ್ಯಾಕ. ೨-೩೫); ಕಷ್ಟದನುಭವಮಾಹ ನಡತೆಯೊಳಿಷ್ಟವಾಗುವದಾವ ತೆರದೊಳು ತುಷ್ಟಿಸಲು ಮನದೊಳಗೆ ನಿಮ್ಮಕ್ಕರವನಾಕ್ಷಣದಿ (ಜಿನಸಾ. ೬). [ ತುಷ್ಟಿ+–ಇಸು$_3$ ]

**ತುಷ್ಟೆ** (ನಾ). ಲಾಭ (?) : ಹದುರಿಗೆಯಲ್ಲು ನಷ್ಟ ತುಷ್ಟೆಗೆ ಆವರ ಕಾಲದ ××× ಆರು ಹಿಡಿಯ ಸಲ್ಲವೆನ್ದು ಪಾಲಿಸಿ (ಎಕ. VI, ಕೊಪ್ಪ. ೪೯-೨೫; 1392).

[ <ಸಂ. ತುಷ್ಟಿ ? ]

**ತುಸ$_1$** (ನಾ). ತವುಡು ; ಹೊಟ್ಟು ; ಉಮ್ಮಿ : "ತುಸ – ತುಷ = ಧಾನ್ಯದ ಸಿಪ್ಪೆ" (ತದ್ಭಕೋ. ೧೮); ತುಸ [ ಪಾಠಾಂ. ಸು ] ಮೊದಲು ಚತುರಾಸ್ಯಪರ್ಯಂತೆಸೆವುದೇ ಭುವನದಲಿ ಜೀವಪ್ರಸರ (ಕುವ್ಯಾಸ. ೧೪-೧೨೮).

[<ಪ್ರಾ. ತುಸ./ಸಂ.ತುಷ]

**ತುಸ$_2$** (ನಾ). = ತುಸ್ತು ೧. 'ಕೋಲ್ದುಸ' ಪರಾ. [ < ತುಸ್ತು ]

**ತುಸ$_3$**, ತುಸು$_1$ (ಗು). ೧. ಅಲ್ಪವಾದ ; ಸ್ವಲ್ಪವಾದ : ಇವರ ನಾವು ಇನ್ನೂ ಆ ಸಂಗನ ಡೋಣಿಯಿಂದ ತುಸ ದೂರದಲ್ಲೇ ಹೋಗುತ್ತಿತ್ತು (ಇಂದುಮು. ೬೭). (ನಾ). ೨. ಅಲ್ಪ; ಕೊಂಚ : ದೇವ ನಿಮ್ಮಡಿಯುಂಘ್ರಿಕಮಲವನಾವ ನೆನೆದವಂಗೆ ತುಸ [ಪಾಠಾಂ. ಸು]ವಲ್ಲಾ

ವಿರಿಂಚಾದ್ಯಮರಪದ (ಕುಮ್ಯಾಸ. ೧೦-೧೯). **ತುಸು₁**: ೨. ಹಣ ಬ್ಯಾಂಕಿನಲ್ಲಿಡುವ ಬದಲು ನಾನು ನನ್ನ ಮಕ್ಕಳ ದೇಹದಲ್ಲಿ ತುಸು ರಕ್ತವನ್ನು ತುಂಬುವುದಕ್ಕೆ ಯತ್ನಿಸುತ್ತೇನೆ (ಮಹಾತ್ಮಾ. ೨೦); ಆವನು ತುಸು ಆಲೋಚನೆ ಮಾಡಿದ (ಹಾಹುತ್. ೯೭). [ ? ]

**ತುಸ್₄** 'ತಂಸಂ' ನೋ.

**ತುಸಂ,** ತುಸ್₄, ತುಸ್ಸು₂ (ಅ). ಸ್ವಲ್ಪವೇ ; ಕೊಂಚಮಟ್ಟಿಗೆ: ಕಾಲವಕ್ಕಿಗೆ ತುಸಮೆ ಹಾರಲಿಡೆ ದಾರಿ (ಗೀವಿಂ. ೧೦೭-೬). **ತುಸ್₄** : ಕನ್ನಡಿಯ ಮುಂಗಡೆ ತುಸ ನಿಲುವೆ (ಗಣೇಶ. ೪೯-೪); ತಂದೆ ತುಸ ಸಿಡುಕಾಡೆ ಮಿಡುಕಾಡಿ ... ತಾಯ ಬೆಂಬಳಿವಿಡಿಯುತ (ಭಾವಜೀ. ೩-೩೭). **ತುಸು₂** : ಅದು ಹೀಗೆ ಏಕೆ ಮತ್ತು ಹೇಗೆ ಮಾನ್ಯವಾಗಬಹುದೆಂಬುದನ್ನು ತುಸು ವಿಸ್ತರಿಸುವೆವು (ಗೀತಾಸಂ. ೧೪); ಹುಸಿನಗುತ ಬಂದೇವ ನಸುನಗುತ ಬಾಳೋಣ ತುಸು ನಗುತ ತೆರಳೋಣ (ಗರಿ. ೧೦೩-೧೦); ಅವಳ ಕೊರಳು ತುಸು ಕೊಂಕಾಯಿತು (ಬಾಣಅ. ೩೩).

**ತುಸಮಾತ್ರ, ತುಸುಮಾತ್ರ** = ಅತ್ಯಲ್ಪ ; ಲೇಶಮಾತ್ರ : ನಾ ಕೊಟ್ಟ ವರದೊಳು ತುಸಮಾತ್ರ ತಪ್ಪದು ಕೇಳಾಯತಾಕ್ಷಿ (ಮೋಹತ. ೪-೨೪) ; ಕೈದುಡುಕಿ ತುಸು [ ಪಾಠಾಂ. ಸ ] ಮಾತ್ರಮೆನೆ ಫಲುಗುಣನ ತುರಗಂಗಳಂ ತಂದು ನಿಮಿಷದೊಳ್ ನಿಲಿಸಿದರ್ (ಜೈಮಿಭಾ. ೨೭-೫): [ < ತುಸ್₃ ]

**ತುಸಪುಸ** (ನಾ). (ಗೊಂದಲ, ಗಡಿಬಿಡಿ, ಬೇಸರಗಳನ್ನು ಸೂಚಿಸುವ) ಒಂದು ಅನುಕರಣ ಶಬ್ದ : ಬೆಳಗ್ಗಿಂದ ಬೆಳಗಿನವರೆಗೂ ಕದನ ಕಾದಾಟ ನೋಡಿ ನೋಡಿ ನನಗೂನೂ ಒಳಗೊಳಗೇ ತುಸಪುಸ ಪ್ರಾರಂಭವಾಯಿತು (ಚಂಗೂಲಿ. ೨೪).

**ತುಸಮುಸ** (ನಾ). (?) : ತುಸಮುಸವೆಂಬೀ ಶಬ್ದವನುಸುರುತ ಶಿವಭೂತಿ ಮುನಿಪನೇಕಾಗ್ರತೆಯಿಂ (ಭವ್ಯಾಮೃ. ೩೩). 'ತುಷಮುಷ' ಪರಾ. [?]

**ತುಸವ** (ನಾ). ಒಬ್ಬಾತನ ಹೆಸರು (?) : ಪೂರುಟ ಗೋಸಾಸಿಗರಾ ಮಱು ಧರ್ಮ್ಮ ತುಸವನಿನ್ ಪಡೆದು (ಇಆ. VIII, ೨೯೫-೪; 706). [ ? ]

**ತುಸು₁** 'ತಂಸ್₃' ನೋ.

**ತುಸು₂** 'ತಂಸಂ' ನೋ.

**ತುಸ್ತ** (ನಾ). ೧. ಸುಟ್ಟ ಅಥವಾ ಹುರಿದ ಮಾಂಸ ; ಸುಂಟಗೆ. ೨. ಸುಟ್ಟ ಅಥವಾ ಹುರಿದ ಮಾಂಸದ ಕರಿಕಾದ ಮೇಲ್ಪದರ. ೩. ಹಣ್ಣಿನ ತೊಗಟೆ. 'ಬುಸ್ತ' ಪರಾ. [ < ಸಂ. ಚುಸ್ತ ]

**ತುಹಿನ** (ಗು). ೧. ತಂಪಾದ ; ಶೀತಲವಾದ. 'ತುಹಿನಕಿರಣ' ಪರಾ. (ನಾ). ೨. ಮಂಜು ; ಹಿಮ : ಸರಸಮೃಣಾಳಿಕೆಯಂ ಮೃದುತರ ತುಹಿನಂ ಕೊರಗಿಪಂತೆ ಶಾಂತಿರಸಕ್ಕಾಗರಮೆನಿಪ ತಪಮೆ ನಿನ್ನಂ ಕೊರಗಿಸುತಿರೆ (ಕಾದಂಉ. ೩೩೩). ೩. ಬೆಳುದಿಂಗಳು ; ಚಂದ್ರಿಕೆ : ತುಹಿನ ಸದೃಶಕಾಂತಿಯಿಂದ ಶೋಭಾಯುಮಾನವಾದುದಾಗಿ (ಜ್ಯೋತಿರ್ವಿ. ೨೦೦). ೪. ಕರ್ಪೂರ : "ಪ್ರಾಲೇಯಮೆನಲು ಘನಸಾರಮೆನೆ ಪಚ್ಚೆ ಹಿಮವಾಳುಕಂ ಚೇನಿ ತುಹಿನಂ ಪನ್ನೆಯಕ್ಕು" (ಮಂಗರಾ. ೯೯-೨೨). [ಸಂ.]

**ತುಹಿನಕಣ** (ನಾ). ಮಂಜಿನ ಸಣ್ಣ ಹನಿ ; ಹಿಮಬಿಂದು : ಚಂದ್ರಿಕೆಯಂ ಸೇವಿಸಿದ ಚಕೋರಕ್ಕೆ ಬಾಚಿತ್ತಿಯೇ ತುಹಿನಕಣಂ (ಪಂರಾಮಾ. ೧೦-೪೦). [ ತುಹಿನ + ಕಣ₃ ]

**ತುಹಿನಕರ** (ನಾ). = ತುಷಾರಕರ: ದಿಗ್ನಾಯಕಚೂಡಾಮಣಿ ಲಗ್ನೋದಯ ಶಿಖರನೊಪ್ಪಿದಂ ತುಹಿನಕರಂ (ಅಜಿಪು. ೬-೪೧) ; ಇವರೆನ್ನ ಪುಣ್ಯಕೀರ್ತಿ ಪ್ರಭಾವನಧಿವರ್ಧನತುಹಿನಕರರೂಪರು (ಸಿದ್ಧರಾ. ೦-೨). [ ಸಂ. ]

**ತುಹಿನಕಿರಣ** (ನಾ). = ತುಷಾರಕರ : ಬೆಳಗುವ ಪಳಿಕಿನ ಸಱಯೊಂದು ... ತುಹಿನಕಿರಣಮಂಡಲದೊಳಗಣ ಹರಿಣಂಬೊಲೊಪ್ಪಿ ತೋಱತ್ತಾಗಳ್ (ಕಾವ್ಯಸಾ. ೧೦೩೦ ಕೊದ್ರಳ). [ ತುಹಿನ + ಕಿರಣ₁ ]

**ತುಹಿನಕ್ಷೋಣೀಧ್ರ** (ನಾ). = ತುಷಾರಾದ್ರಿ: ಎಲೆ ಇದಲ್ತೆ ತುಹಿನಕ್ಷೋಣೀಧ್ರು ದುತ್ತುಂಗಸಾನುಗಳ್ (ಶಮದ. ೫೬ ಪ್ರಯೋ). [ ತುಹಿನ + ಕ್ಷೋಣೀಧ್ರ ]

**ತುಹಿನಕ್ಷ್ಮಾಧರ** (ನಾ). = ತುಷಾರಾದ್ರಿ : ತುಹಿನಕ್ಷ್ಮಾಧರ ಜಾತಾಲೋಲೇಕ್ಷಣ ... ಜಯ ಸೂಕ್ಷ್ಮಾಕಾರಾ (ಉದ್ಭದೇ. ೩-೩). [ ತುಹಿನ + ಕ್ಷ್ಮಾಧರ ]

**ತುಹಿನಗಿರಿ** (ನಾ). = ತುಷಾರಾದ್ರಿ : ಬಳಸಿರ್ದಭ್ರಾಳಿಯಿಂದಂ ತುಹಿನಗಿರಿ ಶಿಲಾಪಟ್ಟಮೆಂಬಂತೆ ಚೆಲ್ವಾದ ಲತಾಂತಂ (ಕಾದಂಪೂ. ೭೯); ಹೊಳೆಹೊಳೆವ ಕೋಕನದಪಂಕ್ತಿಗಳ ಬಣ್ಣಮುಜ್ವಲದಿಂದ್ರಚಾಪದಾಕಾರಮಂ ಸಂತತಂ ಪಳಿವಂತೆ ಕೊಳದೊಳಿರಾಜಿಸಿತು ತುಹಿನಗಿರಿರಾಜನಂದನೆಯ ಕಣ್ಗೆ (ಜೈಮಿಭಾ. ೦೫-೧೦). [ ತುಹಿನ + ಗಿರಿ₁ ]

**ತುಹಿನಗು** (ನಾ). = ತುಷಾರಕರ : ಅತಿಬಳ ತುಹಿನಗು ನಿರ್ಘೃರತತಿಯೆನಿಸಿದ ಮದ್ಗಿರೀಂದ್ರಮಂ ಚಂಡಕರದ್ಯುತಿ ಪುಗದು (ಚಂದ್ರಪು. ೫-೭೨). 'ತೀಕ್ಷ್ಣಗು' ನೋ. [ ಸಂ. ]

**ತುಹಿನತೆ** (ನಾ). ತಂಪು ; ಚಳಿ ; ಶೈತ್ಯ : ಅದಱ ಗೌರವದ ಶುದ್ಧತೆಯ ತುಹಿನತೆಯ ಸವಿಗಂಪಿನ ಉರವಣೆಯು ಸೊಗಸಿಂಗೆ ಕಣ್ಮನಂ ದಣಿದು (ಸಿದ್ಧರಾ. ೬-೫೬). [ ಸಂ. ತುಹಿನತಾ ]

**ತುಹಿನದೀಧಿತಿ** (ನಾ). = ತುಹಿನಪ್ರದ್ಯೋತ : ಶರತ್ತುಹಿನದೀಧಿತಿಬಿಂಬ ವಿಡಂಬ ಕೀರ್ತಿ (ಎಕ. V, ಅರಸೀ. ೦೦೩-೪ ; ಸು. 1100). [ತುಹಿನ + ದೀಧಿತಿ]

**ತುಹಿನಪವನ** (ನಾ). ತಂಪಾದ ಗಾಳಿ ; ತಂಗಾಳಿ : ನಿಜಕಾಂತಿತೋಕ್ತ ಲಕ್ಷ್ಮತ್ಯಧಿಕವಿಕಸನಶ್ರೀಯನಾದೇಯಕಾಯಂ ತನುಜಾತಂ ಸ್ವರ್ಣನಾಭಂ ತುಹಿನಪವನ ಸಂಸ್ಪರ್ಶದಂತೀಯೆ... ಅರಸುಗೆಯುತ್ತಿರ್ದನಾ ಪದ್ಮನಾಭಂ (ಚಂದ್ರಪು. ೨-೬೬). [ ತುಹಿನ + ಪವನ ]

**ತುಹಿನಪ್ರದ್ಯೋತ** (ನಾ). ತಂಪಾದ ಬೆಳಕನ್ನುಳ್ಳವನು ; ಚಂದ್ರ : ತುಹಿನಪ್ರದ್ಯೋತನುಂ ಶುಕ್ರನುಮೊಡನಿರೆ ಜಾಮಿತ್ರದೊಳ್ ಪುಣ್ಯಕಾಂತಾರಹಿತಂ ಮೇಣ್ ಪುತ್ರಹೀನಂ (ಜಾತತಿ. ೨೦-೮). [ತುಹಿನ + ಪ್ರದ್ಯೋತ]

**ತುಹಿನಬಿಂದು** (ನಾ). = ತುಹಿನಕಣ : ಹಿಮಸಿಕ್ತಪತ್ರದಿಂ ಬಿಳ್ದುವು ತುಹಿನಬಿಂದು ತೋರಮಳೆಹನಿಗಳೋಲ್ (ಶ್ರೀರಾಮಾ. ೨೦೦-೧೭೭). [ತುಹಿನ + ಬಿಂದು]

**ತುಹಿನಭೂಮಿಧ್ರ** (ನಾ). = ತುಷಾರಾದ್ರಿ: ತುಹಿನಭೂಮಿಧ್ರಕ್ಕೆ ಸಾರ್ದಂ ಹರಪ್ರಿಯಂ (ಚಂದ್ರಪು. ೯-೬೭). [ ತುಹಿನ + ಭೂಮಿಧ್ರ ]

**ತುಹಿನಮಹೀಧರ** (ನಾ). = ತುಷಾರಾದ್ರಿ: ಕನಕಶಾಂತಿಕುಮಾರಂ...ಒಂದು ದಿವಸಂ ಕ್ರೀಡಾನಿಮಿತ್ತಂ ತುಹಿನಮಹೀಧರಕ್ಕೆ ಪೋಗಿ (ಶಾಂತಿಪು.೯-೧೭ ವ). [ ತುಹಿನ + ಮಹೀಧರ ]

**ತುಹಿನರ್ತು** (ನಾ). ಹೇಮಂತ ಋತು ; ಚಳಿಗಾಲ : ಹಬ್ಬಿ ತುಂತುರ್ ಮಂಜು, ಮರ್ಬಾಯ್ತು, ತುಹಿನರ್ತುಸಂಧ್ಯೆ ! (ಶ್ರೀರಾಮಾ. ೨೦೫-೨೪೬). [ ತುಹಿನ + ಋತು ]

**ತುಹಿನಶಿಖರಿ** (ನಾ). = ತುಷಾರಾದ್ರಿ : ಮೇಘಾವಳಿ ಕಱಗುಂ ತುಹಿನಶಿಖರಿಯಿಂ [ಪಾಠಾಂ. ಕಿರಣದಿಂ] ಗಂಗೆವರಂ (ಜಟ್ಟಿಮು. ೮-೨). [ ತುಹಿನ + ಶಿಖರಿ ]

**ತುಹಿನಾಂಶು** (ನಾ). = ತುಹಿನಕರ. 'ತುಹಿನಾಂಶುಬಿಂಬ' ಪರಾ. [ ತುಹಿನ + ಅಂಶು ]

**ತುಹಿನಾಂಶುಬಿಂಬ** (ನಾ). = ತುಹಿನಾಂಶುಮಂಡಳ : ಪೆಱದೆಗೆವ ತಮಂ ತಟ್ಟಿಮೆದುಱುಗಲೆನಲ್ಪೂರ್ವದಿಗ್ವಧೂವದನಂ ಕಣ್ಗೆಱದಪೊಲದೇಂ ಬೆಳರ್ತುದೊ ಕೆಱಡೆ ತುಹಿನಾಂಶುಬಿಂಬಮುದಯಿಪ ಪದದೊಳ್ (ಮಲ್ಲಿಪು. ೭-೨೭). [ ತುಹಿನಾಂಶು + ಬಿಂಬ ]

**ತುಹಿನಾಂಶುಮಂಡಳ** (ನಾ). ಚಂದ್ರಮಂಡಲ; ಚಂದ್ರಬಿಂಬ : ನಭೋವಧು ಸೂಡಿ ಬಿಸುಟ್ಟ ಮಾಲ್ಯಮಂಡಳದವೊಲಿರ್ದುದಸ್ತಗಿರಿಮಸ್ತಕದೊಳ್ ತುಹಿನಾಂಶುಮಂಡಳಂ (ಜಗವಿ. ೧೭-೧೩೫).

[ ತುಹಿನಾಂಶು + ಮಂಡಳ ( = ಮಂಡಲ) ]

**ತುಹಿನಾಂಸು** (ನಾ). = ತುಹಿನಕರ : ಗುಣಾರ್ನ[ವ]ತುಹಿನಾಂಸು ಶೋಭನನುದಾರದ ತಾಯ್ಮನೆ (ಸೌಇಇ. XX, ೭೭-೨೪ : 1118).

[ P ಇದು 'ತುಹಿನಾಂಶು' ಎಂಬುದರ ಅಪಲಿಖಿತ ]

**ತುಹಿನಾಗಜೆ** (ನಾ). ಹಿಮವಂತನ ಮಗಳು ; ಪಾರ್ವತಿ : ತುಹಿನಾಗಜಾರ್ಧಾಂಗ ... ಎಮ್ಮಯ ಕೃತಿಯ ಭೂಗಗನದಿಗ್ವರಿತವಾಗಿ ಪಸರಿಸುವಿನಂ ಸಾಗಿಸುವುದಳ್ಕಱಿಂದೆ (ಭಾವಚಿಂ. ೧-೧). [ ಸಂ. ತುಹಿನಾಗಜಾ ]

**ತುಹಿನಾಚಲ,** ತುಹಿನಾಚಳ (ನಾ). = ತುಷಾರಾದ್ರಿ : ಕನಕನಿಭಪ್ರಭಾಂಘ್ರಿಯುಗನಂ ತುಹಿನಾಚಲವರ್ಣಮಧ್ಯದೇಹನಂ ... ಕಂಡು (ಪಂಚತಂ. ೦೬೦-೧): ನಿಜಶರೀರವಮಂ ಕೆಡಹಿ ತುಹಿನಾಚಲದೊಳು ಸಜ್ಜನರ ಗತಿವಡೆವೆಂ (ಜೈಮಿಭಾ. ೨೪-೭೬). **ತುಹಿನಾಚಳ** : ಇತ್ತ ಸೇನಾನಿಯುತ್ತರಭರತದ ಪಶ್ಚಿಮಖಂಡಮಂ ಬಾಯ್ಕೋಳಿಸಿ ಬಂದು ವಿಜಯಕಟಕಂ ಬಿಡಿದು ತುಹಿನಾಚಳ ಸಿಂಧೂಪ್ರಾಂತದೊಳ್ ಬಿಟ್ಟರೆ (ಶಾಂತಿಪು. ೧೧-೫೭ ವ) ; ಸುಂದರ ತುಹಿನಾಚಳ ಸಂಕ್ರಂದನಗಜ ... ಯಶೋಭಾಸುರನೆಂದು ಮನಂಗೊಂಡು (ಸುಕುಮಾ. ೧-೫೬). [ತುಹಿನ + ಅಚಲ]

**ತುಹಿನಾಚಳ** 'ತುಹಿನಾಚಲ' ನೋ.

**ತುಹಿನಾದ್ರಿ** (ನಾ). = ತುಷಾರಾದ್ರಿ : ಭದ್ರಾಸನವಮಂ ಭುಜವಿಜಯದ್ರವಿಣಂಗವನಿಪತಿಗೆ ಕೊಟ್ಟಱಗೆ ಯಶೋಭದ್ರೈಕತಿರಸ್ಕೃತ ತುಹಿನಾದ್ರಿ ಜಗದ್ಬಂಧುಸಿಂಧುದೇವಿಯನರಸಂ ಪೋಗವೇಟ್ಟು (ಶಾಂತಿಪು. ೧೧-೫೭).

[ ತುಹಿನ + ಅದ್ರಿ ]

**ತುಹಿನಾದ್ರೀಂದ್ರ** (ನಾ). ಶ್ರೇಷ್ಠವಾದ ಹಿಮಾದ್ರಿ: ಬಹುತಾಪಕ್ಕೆ ಬಿಗುರ್ತು ವಿಷ್ಣುಪದವಂ ಮತ್ತಾಶ್ಯವತಾರಕ್ಕಿನಂ ತುಹಿನಾದ್ರೀಂದ್ರಮನೊತ್ತುಗೊಂಡು ನಡೆವಂ (ಪಂಪರಾಮಾ. ೭-೮೧). [ ತುಹಿನ + ಅದ್ರಿ + ಇಂದ್ರ ]

**ತುಹಿನೋದ್ಗತಿ** (ನಾ). ತಂಪಿನ ಏಳಿಗೆ ; ಹೆಚ್ಚು ತಂಪು; ಶೈತ್ಯಾತಿಶಯಂ : ಸುತರಿಲ್ಲದ ಸಿರಿ ತುಹಿನೋದ್ಗತಿಯಿಲ್ಲದ ವಾರಿ ... ಮೆಱೆದಪುದೇ (ಚಂದ್ರಪು. ೩-೪೩). [ ತುಹಿನ + ಉದ್ಗತಿ ]

**ತುಳ** 'ತುಲ' ನೋ.

**ತುಳಕಲು** 'ತುಱಿಕಲ್' ನೋ.

**ತುಳವೇಂದ್ರ** (ನಾ). ತುಳುವದೇಶದ ರಾಜ,–ಒಡೆಯಂ : ತದ್ವಂಶೇ ದೇವಕೀ ಜಾನಿರ್ದಿದೀಪೇ ತಿಂಮಭೂಪತಿಃ ಯಶಸ್ವೀತುಳವೇಂದ್ರೇಷು ಯದೋಃ ಕೃಷ್ಣ ಇವಾನ್ವಯೇ (ಎಕ. VII, ಶಿವಮೊ. ೧-೧೩ ; 1518).

[ತುಳವ$_0$ (< ತುಳು) + ಇಂದ್ರ]

**ತುಳಸಿ** 'ತುಲಸಿ' ನೋ.

**ತುಳಸಿಕಟ್ಟೆ** 'ತುಲಸಿಕಟ್ಟೆ' ನೋ.

**ತುಳಸಿದಳ** (ನಾ). ತುಳಸಿಯ ಕುಂಡಿ,– ಎಲೆ : ಹಸೆಯ ಮಗುವನು ಮೊನ್ನೆ ಬಂದವರು ನೋಡಿ... ಹಸಿ ತುಳಸಿದಳ ನೀರ ಒಣಬಾಯೊಳೂಡಿ (ಕಪಪು. ೪೪-೨). [ ತುಳಸಿ ( = ತುಲಸಿ) + ದಳ$_2$ ( = ದಲ) ]

**ತುಳಸಿಪೂಜೆ** 'ತುಲಸಿಪೂಜೆ' ನೋ.

**ತುಳಸಿಮಾಲೆ** 'ತುಲಸಿಮಾಲೆ' ನೋ.

**ತುಳಸೀಪತ್ರ** (ನಾ). ತುಳಸಿಯ ದಳ, - ಎಲೆ: ತುಳಸೀಪತ್ರ ಸಂದೋಹದಿಂ ಮಾಧವಪಾದಾಂಭೋಜವಮಂ ಪೂಜಿಸಿ (ಯಾದಚಂ. ೧೫-೨೯); ತುಳಸೀಪತ್ರ-ಧಾರ್ಮಿಕ ದೃಷ್ಟಿಯಿಂದ ಬಹಳ ಮಹತ್ತ್ವವುಳ್ಳುದಾಗಿದೆ (ಭಾಹಬ್ಬ. ೦೫೭).

[ ಸಂ. ತುಲಸೀಪತ್ರ ]

**ತುಳಸೀಮಣಿ** 'ತುಲಸೀಮಣಿ' ನೋ.

**ತುಳಸೀಮಾಲೆ** (ನಾ). = ತುಲಸಿಮಾಲೆ : ಸಾಲ ಕೆಂಜೆಡೆ ವೀಣೆ ತುಳಸೀಮಾಲೆಯೊಪ್ಪುವ ಮುನಿವರೇಣ್ಯನು ಶೂಲಿ ಕಳುಹಲು ಬಂದ ನಾರದ (ಕೌಶಿರಾ. ೨೪-೮). [ ಸಂ. ತುಲಸೀಮಾಲಾ ]

**ತುಳಸೀವಿವಾಹ** 'ತುಲಸೀ ವಿವಾಹ' ನೋ.

**ತುಳಾಡಿ** (ನಾ). ಜಟ್ಟಿಕಾಳಗದ ಒಂದು ವರಸೆ: ಠಡಕಿ ಕಕ್ಕವಡಂ ಮುಹಡಂ ತುಳಾಡಿ [ಪಾಠಾಂ. ಡೆ] ಸಂದಸುವಿಡಿವಟ್ಟಸಂ ಗುಣವಳುಂಬುಗೆ ... ಎನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣವೊಪ್ಪೆ ಕಾದಿದರ್ (ಚಂದ್ರಪು. ೫-೭೮) ; ಚಡಿಕೆ ತುಳಾಡಿ ಪೊಟ್ಟುಮುಡುಹಂ ಮುಹಡಂ ದಣಾವಟ್ಟಿ ಪಟ್ಟಸಂ ಎಂದು ಮಲ್ಲಮಾತಂ ಮಾಡಿ (ಅನಂಪು. ೨-೨೭). [ ? ]

**ತುಳಾಧರ** (ನಾ). ೧. ತಕ್ಕಡಿಯನ್ನು ಹಿಡಿದುಕೊಂಡಿರುವವನು : ಬಂಡಂಗಳ ಬೆಲೆಯಂ ಚಿಂತಿಸುವಂ ತುಳಾಧರಂ ತೌಳಿನಿಳಯದಾದಿತ್ಯಂಶಂ (ಜಾತತಿ. ೧೯-೧೯). ೨. ವ್ಯಾಪಾರಿ ; ಬಣಜಿಗ. [ ಸಂ. ತುಲಾಧರ ]

**ತುಳಾಪುರುಷ** 'ತುಲಾಪುರುಷ' ನೋ.

**ತುಳಾಮಾನವಿಶುದ್ಧಿ** 'ತುಲಾಮಾನವಿಶುದ್ಧಿ' ನೋ.

**ತುಳಿ$_1$** 'ತುಱಿ$_1$' ನೋ.

**ತುಳಿ$_2$** 'ತುಱಿ$_2$' ನೋ.

**ತುಳಿ$_3$** (ನಾ). ತುಪ್ಪಟ (?) : ಹಂಸೆಯ ತುಳಿಯ ಮೇಲ್ವಾಸಿನಲಿ ಪವಡಿಸುವೀಕೆ ಇಂದೀಗ ... ಕಲುನೆಲದೊಳೂಱಗಿದಳು (ಕುವ್ಯಾಆ. ೯-೩೦).

[ < ಸಂ. ತೂಲ ?]

**ತುಳಿತ** (ನಾ). ಕಾಲಿನಿಂದ ಮೆಟ್ಟುವಿಕೆ: ಆ ಭಸ್ಮವು ಪರಮೇಶ್ವರನ ಪಾದಗಳ ತುಳಿತದಿಂದ ಎದ್ದು ... ಆ ಪರಶಿವನ ಶರೀರವಂ ವ್ಯಾಪಿಸಿ (ಸೌಗಂಧಿ. ೩೯೧-೧೮). [ ತುಳಿ$_1$ (< ತುಱಿ$_1$) + - ತ$_2$ ]

**ತುಳಿಯಾಳು** (ನಾ). ಶೂರನಾದ ಯೋಧ : ಕಾದುತಲಿಹ ತು [ಪಾಠಾಂ. ಕ[ಳಿಯಾಳು ದೊರೆಕುಮಾರಕರ ಚಲವನಱಿತು ದಳಪತಿ ನಂಜರಾಜೇಂದ್ರ ಸಲೆ ಮನ್ನೆಯರೊಳಿಂತೆಂದ (ಕಂಠವಿ. ೧೮-೧೪೧).

[P ಇದು 'ತುಳಿಲಾಳು' ಎಂಬುದರ ಅಪಲಿಖಿತವಿರಬಹುದು.]

**ತುಳಿಯಿಸು** 'ತುಱಿಯಿಸು' ನೋ.

**ತುಳಿಲ್$_1$** 'ತುಱಿಲ್$_1$' ನೋ.

**ತುಳಿಲ್$_2$** 'ತುಱಿಲ್$_2$' ನೋ.

**ತುಳಿಲಾಳ್** 'ತುಱಿಲಾಳ್$_2$' ನೋ.

**ತುಳಿಲಾಳು$_1$** 'ತುಱಿಲಾಳ್$_1$' ನೋ.

**ತುಳಿಲಾಳು$_2$** 'ತುಱಿಲಾಳ್$_2$' ನೋ.

**ತುಳಿಲು$_1$** 'ತುಱಿಲ್$_1$' ನೋ.

**ತುಳಿಲು$_2$** 'ತುಱಿಲ್$_2$' ನೋ.

**ತುಳಿಲುಗೆಯ್** 'ತುಱಿಲ್ಗೆಯ್' ನೋ.

**ತುಳಿಲುಗೆಯಿ** 'ತುಱಿಲ್ಗೆಯ್' ನೋ.

**ತುಳಿಲ್ಗಾಣ್ಕೆ** (ನಾ). ಪ್ರಾಣಾರ್ಪಣಪೂರ್ವಕವಾಗಿ ಒಪ್ಪಿಸುವ ಕಾಣಿಕೆ ; ಭಕ್ತಿಯಿಂದ ಕೊಡುವ ಕಾಣಿಕೆ : ಮರದ ತುದಿಹರೆಯ ಮೇಲಿರ್ದು ಕವಿಯಾದನ್, ಕಟೀರದಿಂ ಪೊಣ್ಮುತಿರ್ದೊಂದೊಂದು ರವಕೆ ರೋಮಾಂಚನವೆ ತನ್ನ ಭಕ್ತಿಯ ತುಳಿಲ್‌ಗಾಣ್ಕೆಯಪ್ಪಂತೆವೋಲ್ (ಶ್ರೀರಾಮಾ. ೪೭೮-೧೧೨). [ ತುಳಿಲ್$_1$ (< ತುಱಿಲ್$_1$) + ಕಾಣ್ಕೆ ]

**ತುಳಿಲ್ಗುಂದು** (ಕ್ರಿ). ಶಕ್ತಿಗುಂದು; ಬಲಹೀನವಾಗು : ಕಣ್ಗೆಟ್ಟು ಕಾಲ್ಗಾಣದಾದನಾ ಕಾಳ್ಗಿಚ್ಚುಕಳ್ಕುತೆ ತುಳಿಲ್ಗುಂದಿ ನಾಲ್ಮೊಗಂ (ಭಾವಚಿಂ. ೩-೨೩).

[ ತುಳಿಲ್$_2$ (< ತುಱಿಲ್$_2$) + ಕುಂದು$_1$ ]

**ತುಳಿಲ್ಗೆಯ್** 'ತುಱಿಲ್ಗೆಯ್' ನೋ.

**ತುಳಿಲ್ಗೆ೧** 'ತಂಟಿಲ್ಗೆಯ್' ನೋ.

**ತುಳಿಲ್ಗೊಳ್** 'ತುಟಿಲ್ಗೊಳಂ' ನೋ.

**ತುಳಿವೆಡೆ** (ನಾ). ಒಂದು ಬಗೆಯ ವಸ್ತ್ರ (?) : ಮೆಟ್ಟುವೆಡೆಗಳೊಳೆಲ್ಲಂ ಪಾಸಿ ಕಾರೋಹಣದ ಕಕ್ಕರವಟಿಯಿಗೆಯ ಚಿತ್ರಾವಟಿಯ ಪಳಿವೆಡೆಯ ತುಳಿವೆ [ಪಾಠಾಂ. ಲೆ] ಡೆಯ ನೆಳಲಪಾಣೆಯ ಬಣ್ಣದ ಕಣದ ಬಣ್ಣ ವಣ್ಣಿಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪-೩೪ ವ). [?]

**ತುಳಿಸು** 'ತುಟಿಯಿಸು' ನೋ.

**ತುಳು,** ತುಲು, ತುಳುವ$_1$, ತುಟುವ (ನಾ). ೧. ಕನ್ನಡನಾಡಿನ ಪಶ್ಚಿಮಕರಾವಳಿಯ ಒಂದು ಪ್ರದೇಶ : ಅಂಧ್ರ ದ್ರಾವಿಡ ಹೈವ ತುಳು ಮಲೆಯ ಕಲರ ಕಲಾಮೂಲ (ಎಕ. VII, ಶಿವಮೊ. ೬೯-೩೦ ; ಸು. 1154 ?). ೨. ತುಳು ದೇಶದ ಭಾಷೆ ; ದ್ರಾವಿಡಭಾಷೆಗಳಲ್ಲಿ ಒಂದು : ತುಳು ಭಾಷೆಯನ್ನು ಆಡುವ ಪ್ರದೇಶ ಮೊದಲು ಮದರಾಸು ಪ್ರಾಂತ್ಯಕ್ಕೆ ಸೇರಿತ್ತು (ದ್ರಾವಿವಿ. ೧೪೧). △ **ತುಲು :** ೩. ತುಳು ದೇಶದವನು : ತೆಲುಗರು ತೆರುವ ಗ ೩೨ ಪ ೫ ತುಲು ಮಳೆಯಾಲರು ತೆರುವ ಗ ೩೨ ಪ ೫ (ಎಕ. XV, ಬೇಲೂರು. ೨೪೮-೬೩ ; 1278). **ತುಳುವ$_1$ :** ೧. ದ್ವಾರಾವತೀ ಪುರವರಾಧೀಸ್ವರಂ ತುಳುವಬಳಜಳಧಿ ಬಡಬಾನಳಂ (ಮೈಆರಿ. ೧೯೨೮, ೯-೨೦ ; 1133) ; ಉಲಿವ ಗೆಜ್ಜೆಯ ಚೆಲ್ಲಣದ ಹೊಂಬಳಿದ ಹರಿಗೆಯ ಹೊಳೆವ ಕಡಿತಲೆಗಳ ವಿಲಾಸದೊಳಂದು ಹೊಕ್ಕುದು ತುಳುವಪಡೆ ಕಡುಗಿ (ಕುವ್ಯಾಭೀ. ೪-೩೩) ; ಈ ಗ್ರೀಕ್‌ಪ್ರಹಸನದ ದೃಶ್ಯ ತುಳುವದೇಶದ ಸಮುದ್ರತೀರದ್ದೇ ಇರಬೇಕೆಂದೂ . . . ವಿದ್ವಾಂಸರೂ ಊಹಿಸಿದ್ದಾರೆ (ದ್ರಾವಿವಿ. ೭೮). ೩. "ತುಳುಂಪಂ ತುಳುವನಕ್ಕು" (ಮಂಗರಾ. ೧೧೨-೭) ; ಅಯ್ಯಯ್ಯ ಎಂಚ ಪೊರ್ಲಾಂಡೆಂದು ತುಳುವರು ಮೆಯ್ಯುಬ್ಬಿ ಕೇಳ ಬೇಕಣ್ಣ (ಭರಜ. ೧-೭). △ **ತುಟುವ :** ೩. ಬಟಿಕೇಶ್ವರನರಸಮುಖರ್ ತುಟಿಲಾಳ್ಗಳ್ ದೊರೆಗಳೆನಿಸಿ ತೊಲಗಿದರ್ಯೆವರ್ ತುಟುವರ್ (ಜಕವಿ. ೨-೧೪).

[ದೇ.II ತಮಿ. ತುಳು. ತುಳು, ತುಳುವ ; ಮಲ. ತೆಲು. ತುಳು]

**ತುಳುಂಕಾಡು,** ತುಳುಂಕಾಡು, ತುಳ್ಕಾಡು (ಕ್ರಿ). ೧. (ನೀರಂ ಮೊದಲಾದುವು) ಹೊರಹೊಮ್ಮು, – ಉಕ್ಕಿ ಹರಿ, – ಹೊರಸೂಸು : ವಜ್ರವೈಡೂರ್ಯಶಿಲಾಪಟ್ಟಕಂಗಳವಿರಳದೀಧಿತಿಯೆ ಕೊಳಂಗಟ್ಟಿ ತುಳುಂಕಾಡುವಂತೆ ತಿಳಿದೊಪ್ಪುವ ಸರೋವರದ ತಡಿಗಳೊಳ್ (ಜಗವಿ. ೧೬-೩೪ ವ); ನೆರೆದ ಪುರಜನದ ಸಂಭ್ರಮಂಗಳಿನಾ ಪುರದ ಕ್ಷೋಭಂ . . . ತೆಕ್ಕನೆ ತೀವಿ ತುಳುಂಕಾಡುತಿರ್ದುದು (ಅನಂಪು. ೯-೫೯ ವ). ೨. ಕದಡು ; ಕ್ಷೋಭೆಗೊಳ್ಳು ; ಅಲ್ಲೋಲಕಲ್ಲೋಲವಾಗು : ಮರುತ್ತರಂಗಿಣಿ ಮಟಿಲ್ಗೋಜಿಲ್ ತುಳುಂಕಾಡೆ (ದಶಕು. ೩-೫). ೩. (ನೀರನ್ನು) ಚಿಮುಕಿಸು,– ಎರಚು : ಅನಂತರಂ ತುಮುಲಕೇಳಿಯಿಂದೋರೊರ್ವರಂ ತುಳುಂಕಾಡುವಾಗಳ್ (ಚಂದ್ರಪು. ೭-೧೪೨ ವ). ೪. ಮಂಳುಗಿ ಏಳು ; ಓಲಾಡು : ಕೊಳಂಗಳೊಳ್ ತುಳುಂಕಾಡುವ ಬಾಳೆ . . . ನೋಡುವರಟ್ಟಿಯನುಂಟುಮಾಡುಗುಂ (ಶಬ್ದಾನು. ೯೬ ಪ್ರಯೋ). **ತುಳುಕಾಡು :** ೧. ನಿಜ ತುಂಬಿದ ಭಕ್ತಿ ತುಳುಕಾಡದವರ ಸಂಗವೇನು ಬಾತೆ (ಬಸವ. ೬೩೪) ; ದರಹಸಿತ ಸಿತಕಾಂತಿ ಮುಖಪಂಕೇರುಹದೊಳು ತುಳುಕಾಡೆ (ಬಸಪು. ೫೨-೩೯) ; ಕರುಣರಸ ತುಳುಕಾಡೆ ಕಪಿಕುಂಜರನ ಕಂಜದಳಾಯತಾಕ್ಷನು ಬರಸೆಳೆದು ಬಿಗಿಯಪ್ಪಿದನು (ತೊರರಾ. ೪-೭-೪) ; ತುಳುಕಾಡಿತಾ ನಾಡ ಸಿರಿ (ಜೈಮಿಭಾ. ೨೯-೧೨) ; ತುಳುಕ್ಕಾಡತಾವ ತೂಕಡಿಕೆ (ಗಂಗಾತ. ೭೦-೩) ; ಆವೇಶ ತುಳುಕಾಡುತ್ತದೆ (ಶಿಕ್ಷದ. ೧೧೩). ೨. ಅಬುಜಭವಾಂಡಘಟ ಬಿರಿಯೆ ವನಧಿಗಳು ತುಳುಕಾಡೆ . . . ಬೊಬ್ಬಿಟಿದುಬ್ಬಿದನು ರಘುಜ (ತೊರರಾ. ೩-೬-೭). ೪. ಯಶೋದೆ-ರಾಗರಸಾಬ್ಧಿಯೊಳ್ತುಳುಕಾಡೆ . . . ಮುರಾರಿ ಕೈಪಜಿಗಾಡಿದಂ (ಜಗವಿ. ೩-೫೭). **ತುಳ್ಕಾಡು :** ೨. ಮೌರ್ವೀಲತಾಸ್ಫಾಲನಂಗೆಯ್ಯೆ . . . ವ್ಯೋಮಗಂಗಾಸಲಿಲಂ ತುಳ್ಕಾಡೆ (ಜಗವಿ. ೮-೫೦) ; ಬಹುಚರಣದಾಟಕೆ ನೆಲ ನಡುಗುತಿರೆ ವಾರಿನಿಧಿ ಬೆಂಬಳಿಯಲುಜಿ ತುಳ್ಕಾಡಿ ತಾಂಡವವಾಡಿದನು ಸುರಪ (ಸಾಳ್ವಭಾ. ೩೩-೧೦೪). ೩. ನವನಾಳಿಕೇರರಸಪೂರಮಂ ತುಳ್ಕಾಡಿ . . . ಪೊಟ್ಟುಗಳೆವುದು ನೃಪನ ಪೆಂಡವಾಸಂ (ಪುಷ್ಪಪು. ೨-೪೪). [ತುಳುಂಕು$_1$ + ಆಡು$_1$]

**ತುಳುಂಕು$_1$,** ತುಳುಕು, ತುಳ್ಕು (ಕ್ರಿ). ೧. ತುಂಬಿ ಹೊರಸೂಸು – ಹೊರಹೊಮ್ಮು : ತಮ್ಮಣ್ಣನ ಬಿನ್ನನಾದ ಮೊಗಮುಮಂ ಕಂಡು ಕಣ್ಗಳಿಂ ನೆತ್ತರ್ ತುಳುಂಕೆ (ಪಂಪಭಾ. ೭-೫ ವ) ; ಸ್ಮರರಾಗಾಮೃತಮಂ ತುಳುಂಕಿ (ಅರ್ಧನೇ. ೨-೭೮) ; ದರಹಾಸಂ ಮುಖದಿಂ ತುಳುಂಕುತಿರೆ (ಕುಸುಮಾ. ೧೨-೬೧) ; ಗಾನರಸವಾರ್ಧಿಯನ್ಯೆದೆ ತುಳುಂಕುವಾ ಲಸದ್ವೇಣು ವಿಂಚರಗಳನೆ ಪೊಣ್ಮಿಪ ಮೋಹನರೂಪದಂಗನಾಶ್ರೇಣಿ ವಿರಾಜಿಕುಂ (ಉದ್ಭಟ. ೧-೭೪) ; ಪೊಣ್ಮುವ ಸುಖಬಾಷ್ಪಂ ತುಳುಂಕೆ ಪೇಳ್ವುದು ಕೃತಿಯಂ (ರಾಜಶೇ. ೧-೫೨). ೨. ಕದಡು ; ಕ್ಷೋಭೆಗೊಳ್ಳು : ಜಳಧಿಯ ನೀರ್ ತುಳುಂಕಿದವು ಧಾತ್ರಿ ತಿಟ್ಟಂದಿಟಿದತ್ತು (ಮಹಾನೇ. ೧೦-೧೨೯). ೩. ಕ್ಷೋಭೆಗೊಳಿಸು ; ಕದಡುವಂತೆ ಮಾಡು : ಗಂಗೆಯ ನೀರಂ ತೋಳೊಳ್ ತುಳುಂಕಿ ಮಗುಟ್ದು ಬಂದಂಗೆ ವಿಪದ ಲಡ್ಡುಗೆಯನಿಕ್ಕಿಯುಂ (ಪಂಪಭಾ. ೨-೩೨ ವ). ೪. ಚಿಮುಕಿಸು ; ಎರಚು ; ಸಿಂಪಡಿಸು : "ತುಳುಕು, ತುಳುಂಕು – ಸೇಚನೇ" (ಶಮುಧಾ) ; ವಾರಸ್ತ್ರೀಜನವಿದಿರೊಳ್ ತುಳುಂಕೆ ನೀರಂ ನೀರಧುಸ್ತನತಟದೊಳ್ ಕೃತೋಪಹಾರಂ ಹಾರಶ್ರೀಗೆಣೆಯೆನಿಸಿತ್ತು ವಾಃಕಣೌಘಂ (ಕಾವ್ಯಾವ. ೫-೪೮) ; ನಾಡೆ ಮುಳುಂಗಿ ಮೂಡಿದರದುಂಬಿ ತುಳುಂಕಿದರಂಬುವಂ (ಹಮ್ಮೀರ. ೪-೨೭). ೫. ಚೆಲ್ಲು ; ಒಗೆ ; ಬಿಸುಡು ; ಹೊರಹಾಕು : ಮುಗಿಲ ನೀರಂ ನಚ್ಚಿ ಡೊಣಿಯ ನೀರಂ ತುಳುಂಕಿದ ಕೋಡಗದಂದಂ ನಿನಗಕ್ಕುಂ (ಪಂಚತಂ. ೬೮-೮). **ತುಳುಕು :** ೧. ಅನುರಾಗರಸಂ ಕಟಾಕ್ಷದಿಂ ತುಳ್ಕೆ ಕುಚಾಗ್ರದಿಂ ತುಳುಕೆ ಹಾರಮರೀಚಿ (ಜಗವಿ. ೧೪-೧೦೩); ವೀರಭಕ್ತನ ಪದನಿಹತಿಗೆ ಶಿರೋರುಗಂಗಾವಾರಿ ತುಳುಕಿಯಪಾರ ಪಾದೋದಕವೆನಿಸಿ (ಬಸಪು. ೧೮-೪೮); ಹೃದಯಶಿಖಿಯುಜಿ ತಳಿತು ಲೋಚನ ವಾರಿ ತುಳುಕಿತು ಪವನಜಾದಿಗಳ (ಕುವ್ಯಾದ್ರೋ. ೭-೮) ; ಸಲೆ ಮೋಹರಸ ವಧಿಕ ಭಕ್ತಿರಸವೊಡವೆರದು ತುಳುಕಲ್ (ಜಬಪು. ೬-೪) ; ಅಶ್ರು ನಯನದೊಳ್ತುಳುಕೆ (ಜೈಮಿಭಾ ೧೮-೫೨) ; ಲಾಲಾಜಲಂ ತುಳುಕಲ್ ಬರ್ಪತೊದಲ್ ಮನಂಗೊಳಿಸಲ್ (ಶಾಕುಂತ. ೧೦೫-೧೮೦) ; ತುಂಬಿದ ಕೊಡ ತುಳುಕುವುದಿಲ್ಲ (ಗಾದ). ೨. ಧರೆಯೊರ್ಗುಡಿಸಲಿ ಶರನಿಧಿ ತುಳುಕಲಿ (ದೀಕ್ಷಾಬೋ. ೯೧-೧೫) ; ವಿಕಲ್ಪಬಿಂದುಗೆ . . . ತುಳುಂಕಿದಂ, ತುಳುಕಿದಂ (ಶಮದ. ೩೬ ಪ್ರಯೋ) ; ನೆಳಲು ಸುಳಿಯಲು ದಂತಿಯೆಂದಪ್ಪಳಿಸೆ ವಾಸುಕಿ ನೊಂದನಬುಧಿ ತುಳುಕಿದವು (ಕುವ್ಯಾದ್ರೋ. ೩-೧೪) ; ಜಲಚರಗಳಟ್ಟುಳಿಗೆ ತುಳುಕಿ ಮೇಲಕೇಳ್ವ ಬಲುಸೀರ್ಪನಿಗಳ ಮೊತ್ತದಿಂದಂಬುಧಿಯಳವಟ್ಟು ಮೆಟಿದುದಲ್ಲಿಯಲಿ (ಕಂನವಿ. ೪-೨೩). ೪. ಭರದಿಂದಂ ತುಳುಕಿದ ನೀರುರದೊಳ್ ಹಾರಾಂಶುರುಚಿಯನಿರ್ಕುಟಿಗೊಳೆ (ಆದಿಪು. ೧೪-೧೦೮) ; ಕರತಳವಾರಿ ತಳ್ದು . . . ತನೂದರಿಯರಲಂಪಿನಿಂ ತುಳುಕೆ ಕೃಷ್ಣನ ಮೇಲೆ (ಜಗವಿ. ೧೪-೯೮). ೫. ನಿನ್ನ ರಕುತಪ ತುಳುಕುವೆನು ಹಿಂದಿಕ್ಕಿಕೊಂಬನ ತೋಟು ತೋಟಿಸುತ...ಕೈಮಾಡಿದನು (ಕುವ್ಯಾಕ. ೧೨-೨೪) ; ಮಳೆಯ ಮುಗಿಲ ನೋಡಿ ಮನೆಯೊಳಗಿರ್ದುದಕವ ತುಳುಕುವ ಕಡು ಹೆಡ್ಡರಂತೆ (ನೇಮಿಸಂ. ೩೪-೩೨). ೬. (ಬಾಣ ಮೊದಲಾದ ಆಯುಧಗಳನ್ನು ಎದುರಾಳಿಯ ಮೇಲೆ) ಎಸೆ,—ಪ್ರಯೋಗಿಸು : ಶರಾಳಿಯ ತುಳುಕಿ ಹೊಕ್ಕನು ಸತ್ಯಜಿತು (ಕುವ್ಯಾದ್ರೋ. ೨-೪೩) ; ತುಳುಕಿ

ದನೂನ ಶರಜಾಲಮಂ ಕರಿತುರಗರಥ ಪದಾತಿಗಳ ಸಂದಣಿ ದಣಿಯಲು (ಜೈಮಿಭಾ. ೯-೪೩); ಬಿಲ್ಗೊಂಡು ದಿವ್ಯಾಸ್ತ್ರಮಂ ತುಳುಂಕಿದನು ಝೇಂಕರಿಸುತ (ತುರಂಗ. ೩೫-೨೮). ೭. ಸೇರಿಸು ; ಹೂಡು ; ಸಂಧಾನಮಾಡು : ಸೆಳೆದನಿಷುಧಿಯಲಂಬ ತಿರುವಿಗೆ ತುಳುಂಕಿ ಕೋಲನು ಕೋಡಕೈಯಿಂದಳವಿಗೊಯ್ಯನೆ ನಿಲುಕಿದನು ನಿಗುರಿದ ಶರೀರದಲಿ (ತೊರಬಾ. ೩-೮-೬೯).

**ತುಳ್ಕು** : ೧. "ಸೂಸಿದುದೆನೆ ತುಳ್ಕಿತೆಂಬುದು" (ರನ್ನಕಂ. ೭) ; ಚಾರು ವೀರಭಟಕೋಟಿಗೆ ರಾಗರಸಂ ಪೊದಬ್ದು ತುಳ್ಕುತ್ತಿರೆ ಬಂದು ಮುತ್ತಿ ವೊಗೆದಂ ವಿಭು ಗೋಕುಲಮಂ ವಿರಾಟನಾ (ಪಂಪಭಾ. ೮-೯೨) ; ತುಳ್ಕೆ ದರಸ್ಮಿತಂ ವದನದಿಂದನುರಾಗರಸಂ ಕಟಾಕ್ಷದಿಂ ತುಳ್ಕೆ (ಜಗವಿ. ೦೪-೦೦೩); ಕಂಗೊಳಿಸಿತ್ತಾ ತುಂಗಭದ್ರೆ ತುಳ್ಕುತೆ ಸೊಗಸಂ (ಉದ್ಭಟ. ೩-೮೨). ೨. ನೆಲನಂ ನುಂಗಲುಮಂಬುಧಿ ಜಲಮಂ ತವೆ ತುಳ್ಕಲುಂ . . . ಒಡರ್ಚಿದಂ ಚಕ್ರಧರಂ (ಕಾವ್ಯಾವ. ೦೦೮) ; ಕಡಲೇಳುಂ ಕದಡೆಳ್ದು ತುಳ್ಕೆ (ರಾಜಶೇ. ೬-೧೧). ೪. ಸವತಿಯ ಮೇಲೆ ಮುಂ ತುಳುಂಕಿ ತನ್ನಯ ಮೇಲಧಿಪಂ ಬಟಿಕ್ಕೆ ತುಳ್ಕುವ ವಿಮಲಾಂಬುಗಳ್ ತನಗೆ ಮನ್ಮಥನಂಬುಗಳಂತಿರೆ (ಜಗವಿ. ೦೪-೧೦೦) ; ಕೊಳ್ಕೊಳ್ಕೆಂದೊಡನೊಡನೆಯೆ ತುಳ್ಕುವ ಯುವತಿಯರ ಕರಪರಿಚ್ಯುತ ಸಲಿಲಂಗಳ್ಕೊಳೆ (ಶಮದ. ೨೩೦ ಪ್ರಯೋ). ೫. ಸರೋವರಾಂಬುವನಿತಂ ತವೆ ತುಳ್ಕೆ ರಸಾತಳಂಬರಂ ಬೆದಕಿಯುಮೆಂತುಮಪ್ಪಳಿಸಿ ಕೊಂದಪೆಂ (ಪಂಪಭಾ. ೧೩-೮೦) ; ಬೇಸಱಿಂದೊಳ್ ತುಳ್ಕಿದ ಕೊರ್ಮೆಯ ಕಣ್ಣನೀರ್ಗಳಂ (ಶೃಂಗಾರ. ೩-೫೮) ; ತುಳ್ಕುತಿರ್ಪುದಂ ನೆತ್ತರೆಲ್ಲರಂ ಕರೆಗೆ (ಕಾಲೂರ. ೦೬೦-೩೫೫). ೬. ಇಂತಿರದೆ ಮೊದಲಿಸಿ ಸಮ್ಮುಖವಾಗಿ ತುಳ್ಕಿದರ್ ಶರವರುಷಮಂ (ಜಿಬಪು. ೨೪-೦೭). ೮. ಹುಟ್ಟು ; ಮೂಡು ; ಉಂಟಾಗು : ಮದಕರಿಕುಳಮೋವದೆ ಬಳ್ಳಿವಾಯ್ದುಗಱಿ ತುಳ್ಕಿದ ಗಿರಿ ಪರಿವಂತೆ ಪರಿದು ಮರವಾಯ್ದಿರ್ಕುಂ (ಶಾಂತಿಪು. ೯-೧೪೦) ; ವಸುಮತಿಗೆ ಕೆನ್ನೀರ್ತುಳ್ಕೆ ತುಳ್ಕಿದಂ ಕೈಗೆಡದೆ ಸಾಯಕ ಸಮುದ್ರಮಂ ಶಾರ್ಙ್ಗಿ ಬಳಿಕ (ಜಿಬಪು. ೪೯-೪೧).

[ದೇ.॥ ತಮಿ. ತುಳಙ್ಕು, ತುಳಕ್ಕು, ತುಳುಮ್ಬು ; ಮಲ. ತುಳುಮ್ಬು; ತೆಲು. ತೊಲುಕು, ತೊನಕು ; ಪರ್ಜಿ. ತೊಲ್ಕ್]

**ತುಳುಂಕು$_2$**, ತುಳುಂಕು$_2$ (ನಾ). ಹೊರಸೂಸುವಿಕೆ ; ಹೊರಹೊಮ್ಮುವಿಕೆ. 'ತುಳುಂಕುಗುಟ್ಟು' ಪರಾ. **ತುಳುಕು$_2$**. 'ದೊಂಬಿದುಳಂಕು' ಪರಾ.

[<ತುಳುಂಕು$_1$. / ತಮಿ. ತುಳಕ್ಕು ; ಮಲ. ತುಳಣ್ಣ]

**ತುಳುಂಕುಗುಟ್ಟು** (ಕ್ರಿ). ಅತಿಶಯವಾಗಿ ತುಳುಂಕು ; ಹೆಚ್ಚಾಗಿ ಹೊರಸೂಸು : ಆಕೆಗಳಂಗೋಪಾಂಗದೊಳಿಂತು ನಾಟ್ಯರಸಮೆ ತೀವಿ ತುಳುಂಕುಗುಟ್ಟಿ . . . ಆತ್ಯಾಶ್ಚರ್ಯಮಂ ಮಾಡಿದಾಗಳ್ (ಆದಿಪು. ೭-೧೨೫ ವ).

[ತುಳುಂಕು$_2$ + ಕುಟ್ಟು$_1$]

**ತುಳುಂಕುದುಂಬು** (ಕ್ರಿ). ಹೊರಚೆಲ್ಲುವಂತೆ ಭರ್ತಿಮಾಡು ; ತುಳುಂಕುವಷ್ಟು ತುಂಬು : ನಿನ್ನ ಬಟ್ಟಲನ್ನು ತುಳುಂಕುದುಂಬಿ ಜನ್ಮ ಸಾರ್ಥಕ ಮಾಡಿಕೊಳ್ಳುವೆನು (ಬಟ್ಟಅ. ೯೮-೧). [ತುಳುಂಕು$_1$ + ತುಂಬು$_1$]

**ತುಳುಕಾಡು** 'ತುಳುಂಕಾಡು' ನೋ.

**ತುಳುಕಿಸು** (ಕ್ರಿ). ಹೊರಸೂಸು; ಹೊರಚೆಲ್ಲು : ಮುಗುಳುನಗೆ ತುಳುಕಿಸುತ್ತ ಕುಳಿತಿದ್ದಳು ಬಾಲಿ (ಮಣ್ಣುಹ. ೯೫).

[ತುಳುಕು$_1$ (<ತುಳುಂಕು$_1$) + - ಇಸು$_3$]

**ತುಳುಕು$_1$** 'ತುಳುಂಕು$_1$' ನೋ.

**ತುಳುಕು$_2$** 'ತುಳುಂಕು$_2$' ನೋ.

**ತುಳುಕುನೀರಾಡು** (ಕ್ರಿ). ನೀರನ್ನು ಚಿಮುಕಿಸಿ ಆಟವಾಡು, -ಕ್ರೀಡಿಸು: ಧೊಮ್ಮಳಿಸಿ ತುಳುಕುನೀರಾಡಿದಂ (ಸುಳುವಾ. ೯-೪೩).

[ತುಳುಕು$_1$ (<ತುಳುಂಕು$_1$) + ನೀರ್$_1$ + ಆಡು$_1$]

**ತುಳುಕುವರಿಗೆ** (ನಾ). ಒಂದು ಬಗೆಯ ಗುರಾಣಿ (?) : ತುಳುಕುವರಿಗೆಯ ಗುಳವ ವಜ್ರದ [ದಿ] ನಲಗ ಮುಱಿಯೊಡೆಯೆಚ್ಚು ಜೋದರ ತಲೆಗಳನು ತುಂಡಿಸಿದನಿಭವನು ಹೊಕ್ಕು ಬೀದಿಯಲಿ (ಕುಮಾವ್ಯಾದ್ರೋ. ಓರಿಇ. ಪರಿ. ೨೮೯).

[ತುಳುಕು ? + ಪರಿಗೆ$_3$]

**ತುಳುಕೆವಟ್ಟು** 'ತುಡುಕೆವಟ್ಟು' ನೋ.

**ತುಳುಗತ್ತಿ**, ತುಳುವಕತ್ತಿ (ನಾ). ಈಳಿಗೆ ; ಮೆಟ್ಟುಗತ್ತಿ ; "ಈಲಿ, ಕರವಾಲಿಕೆ" (ನಾಚಿರಾ. ೬). **ತುಳುವಕತ್ತಿ** : "ಈಳೀ, ಕರವಾಳಿಕಾ, ೨ ತುಳುವಕತ್ತಿ . . . ಈಳಿಗೆಕತ್ತಿ" (ಸಿದ್ಧಾಂತಿ. ೨೨೮). [ತುಳು ? + ಕತ್ತಿ]

**ತುಳುನಾಡು** (ನಾ). = ತುಳು ೧ : ತುಳುನಾಡ ಸತ್ತ ಮನೆಯಂತೆ ಪಟಯಿಸುವರ್ . . . ಪಾವಿನಂತೆ ಪೊರಳ್ವರ್ (ಧರ್ಮಾಮೃ. ೩-೮೦) ; ಈ ತುರವರ ನಾಡೇ ನಮ್ಮ ತುಳುನಾಡೆಂದು ನಿರ್ಧರಿಸಲು ಅನೇಕ ಕಾರಣಗಳುಂಟು (ತುಳುನಾ. ೧೩). [ತುಳು+ನಾಡು]

**ತುಳುವ$_1$** 'ತುಳು' ನೋ.

**ತುಳುವ$_2$** (ನಾ). (ಕರಾ) ೧. ಮೃದುವಾದುದು; ಮೆದುವಾದುದು. 'ತುಳುವಗಾಯ್' ಪರಾ. ೨. ಒಂದು ಬಗೆಯ ಹಲಸಿನ ಹಣ್ಣು ; ಬಹಳ ಮೃದುವಾದ ಹಲಸು. [←ತುಳು. ತುಳುವೆ]

**ತುಳುವಕತ್ತಿ** 'ತುಳುಗತ್ತಿ' ನೋ.

**ತುಳುವಗಾಯ್** (ನಾ). (ಹೀರೆಯ ಕಾಯಿಯಿಂದ ಮಾಡುವ) ಒಂದು ಬಗೆಯ ಖಾದ್ಯ : ಕೆಲವ ನವಜಿಹ್ವೆಯ ಸೊದೆಯ ಕೆಲವ ತುಳುವಗಾಯುಂ ಕೆಲವ ಶೂಲ್ಯಕವನು . . . ಮಾಡಿ ಹಲವು ಚಂದದೊಳು ಹೀರೆಯ ಕಾಯ ಪಾಕಮಂ ಹಿರಿದಾಗಿ ಹಸವಮಾಳ್ಪುದು (ಸೂಪಶಾ. ೫-೭).

[ತುಳುವ$_2$ + ಕಾಯ್$_4$]

**ತುಳುವಬದನೆಕಾಯ್** (ನಾ). ಬದನೆಕಾಯಿಯಿಂದ ಮಾಡುವ ಒಂದು ಬಗೆಯ ಖಾದ್ಯ : ಹದನಾದ ಬದನೆಯ ಕಾಯ ಹೊದಟಿ ವಗ್ಗರಣೆಯಂ ಮಾಡಿ ಪರಿಮಳಿಸಿಕ್ಕಲದು ತುಳುವಬದನೆಕಾಯ್ಸೊಸರಾದುದು (ಸೂಪಶಾ. ೪-೭). [ತುಳುವ$_2$ + ಬದನೆಕಾಯ್]

**ತುಳ್ಕಾಡು** 'ತುಳುಂಕಾಡು' ನೋ.

**ತುಳ್ಕು** 'ತುಳುಂಕು$_1$' ನೋ.

**ತುಳ್ಕುವೊಳೆ** (ನಾ). ತುಂಬಿ ತುಳುಂಕಾಡುತ್ತಿರುವ ಹೊಳೆ, -ನದಿ : ಮುಸಗಿತು ತುಂಬಿ ತುಳ್ಕುವೊಳೆ ಕಾರ್ವಗಲಪ್ಪಳಿಪಂತೆ (ಚಿಕವಿ. ೨-೧೦೭).

[ತುಳ್ಕು (<ತುಳುಂಕು$_1$) + ಪೊಳೆ$_3$ (<ಪೊಱೆ$_1$)]

**ತುಳ್ದಿಲ್ಲಾಲ್** 'ತುಟ್ದಿಲ್ಲಾಲ್' ನೋ.

**ತುಳ್ಳಾಡು** (ಕ್ರಿ). ೧. ಹೊರಳಾಡು ; ಉರುಳಾಡು. ೨. ಜಿಗಿದಾಡು ; ನೆಗೆದಾಡು ; ಕುಣಿದಾಡು : ತುಳ್ಳಾಡಿ ತುಳ್ಳಾಡಿ ಮುಳ್ಳಿನ ಮೇಲೆ ಬಿದ್ದ (ಗಾದ). [ತುಳ್ಳು + ಆಡು$_1$]

**ತುಳ್ಳು** (ಕ್ರಿ). ೧. ಉರುಳು ; ಹೊರಳು. ೨. ಜಿಗಿ ; ನೆಗೆ ; ಹಾರು ; ಕುಣಿ. 'ತುಳ್ಳಾಡು' ಪರಾ.

[ದೇ. ॥ ತಮಿ. ಮಲ. ತುಳು. ತೆಲು. ತುಳ್ಳು ; ಕೊಡ. ತುಳ್ಳ್]

**ತುಱಿ**, ತುರಿ$_3$ (ನಾ). ೧. ಕಡಿತ ; ಕೆರೆತ ; ನವೆ ; ತಿಂಡಿ (ಉಕ). 'ತುಱಿಸು' ಪರಾ. ೨. ಒಂದು ಬಗೆಯ ಚರ್ಮರೋಗ: "ಕಂಡೂಃ, ಖರ್ಜೂಃ, ಕಂಡೂಯಾ ಈ ೩ ತುಱಿ" (ನಾಚಿರಾ. ೧೨೦) ; ಕೆರಕಂ ತುಱಿಯಿಂ ತೀವಿದ ಕರಚರಣಂ ಬೋಟಮುಂಡೆ ಕಾಗ್ಗಿದ ದೇಹಂ (ಧರ್ಮಾಮೃ. ೭-೨೨೪) ; ತುಱಿಯ ಮೇಲೆ ಉಗುರನಿಕ್ಕಿದರೆ ಹಿತವಾಗಿಹುದು (ಸಿದ್ಧೇವ. ೧೧-೦೦೨) ; ಆ ರೂಪಂ ಪಲ್ಲಟಿಸಿ ಕೆರಕುಂ ತುಱಿಯುಂ . . . ಗುಂಡವೇಷಂ ತನಗಮರೆ (ಬಂಹರಿ. ೯-೩೦ ವ). ೩. ಕಾಮಾಸಕ್ತಿ ; ವಿಷಯಾಭಿಲಾಷೆ ; ಕಾಮುಲಂಪಟತೆ. 'ತುಱಿಪ' ಪರಾ. **ತುರಿ$_3$** :

೨. ಮೈಯೆಲ್ಲಾ ತುರಿ, ಕಜ್ಜಿ ತುಂಬಿತ್ತು (ನೀತಿಚಿಂ. I, ೨೮) ; ತುರಿಯಿದ್ದವಗೆ ನಾಚಿಕೆಯಿಲ್ಲ, ಮರೆಯಿದ್ದವಗೆ ಮಂದತ್ವವಿಲ್ಲ (ಗಾದೆ).
[ದೇ. ॥ ತಮಿ. ತುರುತ್ತೈ, ಚೊಱಿ; ಮಲ. ಚೊಱಿ ; ತೆಲು. ದುರದ]

**ತುಱಿಕೆ, ತುರಿಕೆ** (ನಾ). ೧. = ತುಱಿ ೨ : (೬). **ತುರಿಕೆ :** ೧. ತುರಿಕೆಯಾದವನೆಯೆ ತುರಿಸಿಕೊಳ್ಳುವನಲ್ಲೆ, ತುರಿಯಿಲ್ಲದವಗೇಕೆ ಚಿಂತೆ (ಇಂಚಾಪ. ೧೮೭-೨೩). ೨. ಒಂದು ಬಗೆಯ ಗಿಡ : ತುರಿಕೆ, ಸುರುಸುರಿಕೆ (ಮೈಜಿಗಿ. ೩೯-೭೭೦). ‘ ತುಱುಚಿ ’ ಪರಾ. [ ತುಱಿ + –ಕೆ ]

**ತುಱಿಗ** (ನಾ). ತುರಿರೋಗದಿಂದ ಪೀಡಿತನಾದ ವ್ಯಕ್ತಿ : ತುಱಿಗರ ತೊನ್ನರ . . . ಮುಟ್ಟಲಕ್ಕುಮೊ ಸೂಳೆಯರಂ (ಧ್ಯಾವಕಾ. ೧೨೨-೫).
[ ತುಱಿ + – ಗ$_2$ ]

**ತುಱಿಚ** ‘ ತುಱುಚಿ ’ ನೋ.

**ತುಱಿಚೆ** ‘ ತುಱುಚಿ ’ ನೋ.

**ತುಱಿಪ** (ನಾ). ಕಾಮಾತುರತೆ ; ಬೆದೆ. ‘ ತುಱಿಪಗಾಱ ’ ಪರಾ.
[ ತುಱಿ + – ಪ$_2$ ]

**ತುಱಿಪಗಾರ್ತಿ** (ನಾ). ಕಾಮಾತುರೆ ; ಕಾಮುಕಿ : ಮಾನವಮದನನಂ ಕಂಡು ಕೈಗೞಿಯೆ ಕಣ್ಗೊಲ್ತು ಕಾಮಕಾತರೆಯಾಗಿ ತುಱಿಪಗಾರ್ತಿ ಕೂರ್ತುರ್ ನಿತ್ತರಿಸಲಾಱದೆ...ಮೇಲ್ವಾಯ್ದು (ಲೀಲಾವ. ೧೪-೧೦೪ ವ).
[ ತುಱಿಪಗಾಱ + – ತಿ$_1$ (< – ಇತ್ತಿ) ]

**ತುಱಿಪಗಾಱ** (ನಾ). ಕಾಮಾಸಕ್ತನಾದವನು ; ವಿಷಯಲಂಪಟ. ‘ ತುಱಿಪಗಾರ್ತಿ ’ ಪರಾ. [ ತುಱಿಪ + –ಕಾಱ ]

**ತುಱಿಸು, ತುರಿಸು** (ಕ್ರಿ). ೧. ಮೈಯಲ್ಲಿ ಕಡಿತ ಹೋಗುವಂತೆ ಕೆರೆ : “ತುಱಿಸು–ಕಂಡೂತಿಕರ್ಷಣೇ ” (ಶಮಧಾ) : ಪಲ್ಲಂ ಸುಲಿಪೊಡಂ ಕಿವಿ ಕಿೞಂಬೊಡೆ ತುಱಿಸುವೊಡಂ ಪುಲ್ಲಿಂದೆನಿತುಂ ಪ್ರಯೋಜನಮುಂಟು (ಪಂಚತಂ. ೩೪-೧೪) : ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುಱಿಸುವಂತೆ (ಬಸವ. ೬೬೦); ಹೆಡತಲೆಯ ತುಱಿಸುವರೆ ಹಾವಿನ ಹೆಡೆಯೊಳಕಟಾ(ಕುಮಾ.ಸ. ೧೪-೩೭); ಇನಿಸು ತಲೆಯ ತುಱಿಸುವೊಡೆ ಹೊತ್ತುಂ ಕನಸಿನಲ್ಲಿ ಕಾಣೆ (ಸಮ್ಯಕೌ. ೫-೧೯). ೨. ತಿವಿ; ಚುಚ್ಚು: ಆಪೋಪಳನರಸಂ ಮಕರಂದನಂ ತುಱಿಸಿ ತೋಱುತ್ತುಂ ಪೋಪಾಗಳ್ (ಲೀಲಾವ. ೨-೩೭ ವ). **ತುರಿಸು :** ೧. ಕುಸುಮೆಯನ್ನು ಕಾಣದೆ ತಲೆ ತುರಿಸುತ್ತ ಬಾಗಿಲಲ್ಲಿ ನಿಂತಿದ್ದಾರೆ (ಪಹಾರ.೨೩ ).

**ತುಱಿಸಿಕೊಳು, ತುರಿಸಿಕೊಳ್ಳು** = ಕೆರೆದುಕೊಳ್ಳು: ಇಱಿಸಿಕೊಳುತಂ ತುಱಿಸಿಕೊಳುತ . ಕೊಱಿಯಿಸಿಕೊಳುತೆ...ತೆರಳುತುರುಳುತುಂ (ಸಾನಂದ. ೪-೨೦೦); ತುಱಿಸಿಕೊಳುತಿದ್ದೆ ಸೆಯ ಬದಿಗಳ ಹೊಱಗನಾಲಿಸುತ...ಇರ್ದನಾ ಹನುಮ (ತೊರರಾ. ೫-೫-೨): ತುರಿಕೆಯಾದವನೆಯೆ ತುರಿಸಿಕೊಳ್ಳುವನಲ್ಲೆ, ತುರಿಯಿಲ್ಲದವಗೇಕೆ ಚಿಂತೆ (ಇಂಚಾಪ. ೧೮೭-೨೩) : ಕೊಳ್ಳಿಯಿಂದ ತಲೆ ತುರಿಸಿಕೊಂಡ ಹಾಗೆ (ಗಾದೆ). [ತುಱಿ + – ಸು$_1$]

**ತುಱಿಹಿಡಿ** (ಕ್ರಿ). ತುರಿಯುಂಟಾಗು; ತುರಿಯೆಂಬ ಚರ್ಮರೋಗ ಉಂಟು : “ಪ್ರಸರ, ವಿಸರ್ಪಣ—ಚಿಬ್ಬು, ತುಱಿಹಿಡಿವುದು” (ನಾಚಿರಾ. ೯).
[ತುಱಿ + ಹಿಡಿ$_1$ (< ಪಿಡಿ$_1$)]

**ತುಱು, ತುರುಂ, ತೊಱು** (ನಾ). ೧. ಹಸು; ದನ; ಆವು; ಗೋವು : “ ತುಱುಗಳೆನಲ್ಕಾಕಳೆಂದು ತಿಳಿಗೆ ” (ಧಾರನಿ. ೪೭). ‘ತುಱುಗಾಱ’ ಪರಾ. ೨. ದನಗಳ ಗುಂಪು ; ದನಗಳ ಮಂದೆ ; ಗೋಸಂಪತ್ತು : “ಗೋಧನಂ ತುಱುವೆನಿಕ್ಕು” (ಮಂಗರಾ. ೫೭-೧೦); ಕೊತ್ತಮಜ್ಜಿಗಲಮನಿಱಿದು ತುಱುವಂ ಕೊಂಡು ಪೋಗುತ್ತಿರೆ (ಎಕ. IV, ಹೆಗ್ಗಡ. ೦೦೩-೭ ; ಸು. 910) ; ಗೋಗ್ರಹಣದೊಳ್ ತನಗಾಗಿ ಕಾದಿ ತುಱುವಂ ಮಗುೞ್ಚಿದುದುಮಂ ನೆನೆದು (ಪಂಪಭಾ. ೧೨-೧೭ ವ); ಪಾದಿರಾಜನತಿಕೋಪದಿನ[ಿ]ರ[ದೆ] ಬೆನತೂರ ತುಱುವಂ [ತಱಿ]ಸಿದನನ್ದಣ್ಣೆಗೆಱಿಗೆ ತ[ಱಿ]ಸಲನಿನ್ದಂ (ಸೌಇಇ. XI-i, ೮೦-೦೦ ; 1049) ; ಗೋವರ್ಧನಗಿರಿಯೆತ್ತಿ ತುಱುವ ಕಾದಂತೆ (ಮೋಹತ. ೪೦-೫೦); ಗೋವಳಂ ತುಱುಗಳಂ ಮನೆಯಂ ಪುಗಿಸಿದಂ (ಶಬ್ದಾನು. ೨೦೫ ಪ್ರಯೋ). **ತುರು :** ೧. ಕೆಚ್ಚಲ ಕರುವನು ನೆಕ್ಕುವ ತುರುವೋ (ಅನಿಕೇ. ೩೦-೦೨) : ಹಟ್ಟಿಯಲ್ಲಿ ತುಂಬಿದ ತುರುಗಳ ಆರೈಕೆಯನ್ನೂ ಅವಳೇ ನೋಡಿಕೊಳ್ಳುತ್ತಿದ್ದಳು (ಹಾಹುತ್ರ. ೬೬). ೨. ಶತ್ರುಗಳು ಮುರಿದೋಡಿದರು ತುರು ಮರಳಿತು (ಕಸಾಚ. ೬೭). **ತೊಱು :** ೨. ಕೇಸರಿ ತೊಱುವಾಳ್ವನಾ ಮಗನ್ ಆಲನ ತೊಱು ಇಕ್ಕಿಸಿ ಬಿಟ್ಟಾನ್ (ಎಕ.X (೩), ಮಾಲೂರು. ೧೫೬-೬; 8ನೆಯ ಶತ); ಶ್ರೀ [ಮಾ]ವಲಿಪಣರಸರ್ × × ಮಗ ಗ × × × ಮುಣ್ಡನು ತೊಱುವ ಕೊಳ್ವಾ ... ಆಯಿಕುಳ ಗ ಟಾನಿ ಕೊಟ್ಟದು (ಸೌಇಇ. IX–i, ೦೦-೫: 9ನೆಯ ಶತ); ತೊಱುಗೊಳೆ ತೊಱುವಂ ಪರಿಯಲೀಯದೆ (ಮೈಎಕಿ. ೧೯೩೨, ೧೯೬-೭; 9ನೆಯ ಶತ).

ತುರುವಿನ ಮಾಳ=ದನಗಳು ಮೇಯುವ ಮೈದಾನ; ಹುಲ್ಲುಗಾವಲು ; ಗೋಮಾಳ: ವಾಯುವ್ಯದಲ್ಲಿ ಒಂದು ಮೈಲಿ ದೂರದಲ್ಲಿ ಗಿರಿಜಾಪುರದ ಕಡೆಗೆ “ತುರುವಿನ ಮಾಳ” ಇದೆ (ಹೊಯ್ಸಳವಾ. ೨೩೪). **ತುಱುಕಱು, ತುರುಕರು**=ದನಕರು : ತುಱುಕಱು ಕಱಿದರೆ ಉಣಬಹುದಣ್ಣ ತುಱುಕಱು ಕಱಿದರೆ ಅತಿ ಪುಣ್ಯವಯ್ಯ (ಪುರಂದ. ೧-೧೭೯ ಪಲ್ಲವಿ): ತುಱುಕಱುವು ಇರದೂರು ನರಕಭಾಜನಮಕ್ಕು ತುಱುಕಱುಂಟಾದರುಣಲುಂಟು ಜಗಕೆಲ್ಲ ತುಱುಕಱುವೆ ದೈವ (ಸರ್ವಜ್ಞ. ೧೩೬೫) ; ಒಯ್ಯ ಹುಲಿಯಂ ಕಂಡು ತುರುಕರುಗಳೋಡುತಿವೆ (ಕಾಲೂರ. ೯೦-೭೪). **ತುಱುವನಿಕ್ಕಿಸು, ತೊಱುವನಿಕ್ಕಿಸು** = ಅಪಹಾರವಾದ ಗೋವುಗಳನ್ನು ಮರಳಿಸು : ಮಱ್ಱಿಯರ ಬೂವಯ್ಯನ ಮಗಂ ಬಿದಿಯಾಯ್ತು ತುಱುವನಿಕ್ಕಿಸಿ ಕಾದಿ ಸತ್ತ (ಎಕ. II, ೩೯೪-೯ ; ಸು. 894) ; ಕುಸುಮ್ಪುರಿ ತೊಱುವನಿಕ್ಕಿಸಿ ಸತ್ತ (ಎಕ. XVI, ಚಿಕ್ಕನಾ. ೭೨-೫ ; ?) ; ಅಣಿಲೆಯರ ಮಗ ನೆಲ್ಮಲ್ಲ ಅಣ್ಣಮ್ಮರ್ನಱಿಯ ತೊಱುವನಿಕ್ಕಿಸಿ ಸಗ್ಗಿಯಾದಂ (ಎಕ. IX, ಹೊಸಕೋ. ೧೦೦-೬ ; ಸು. 906). **ತುಱುವನಿಕ್ಕು**=ತುಱುವನಿಕ್ಕಿಸು : ಗೋತ್ರಪವಿತ್ರ ಬಮ್ಮಿಸೆಟ್ಟಿಯ ಸ × × × ಗೆಱಿಯ ತುಱುವನಿಕ್ಕಿ (ಎಕ. XVI, ಚಿಕ್ಕನಾ. ೭೫-೩೨ ; ?). **ತುಱುವಿಗೆ ಹೋಗು** = ತುಱುವನಿಕ್ಕಿಸು : ರಾಮಗಉಡನ ಮಗ ಬೊಂಮಂಣ್ಣನು ತುಱುವಿಗೆ ಹೋದಗ (ಎಕ. IX (೩), ಚನ್ನಪ. ೨೯೪-೩ ; 16ನೆಯ ಶತ). **ತುಱುವಿನ ಮಂದೆ** = ದನಗಳ ಹಿಂಡು, — ಗುಂಪು : “ವ್ರಜಃ, ಗೋಕುಲಂ, ಗೋಷ್ಠಂ—ಈ ೩ ತುಱುವಿನ ಮಂದೆ” (ಹಲಾಯು. ೪೪-೦೦೭).
[ದೇ.॥ ತಮಿ. ತುಱು, ತೊಱು ಮಲ; ತುಱು ; ತೆಲು. ತೊರ್ರು]

△ **ತುಱುಂಕು** ‘ತುಱುಕು$_1$’ ನೋ.

**ತುಱುಂಗಲ್, ತುರಂಗಲು, ತುಱುಗಲ್, ತುಱುಗಲು** (ನಾ). ಗುಂಪು; ಸಂದಣಿ ; ಸಮೂಹ : ಆತಂಗೆ ತುಱುಂಗಲುಂ ಬಂಬಲುಮಾಗಿ ಬೀಸುವ ಚಾಮರದ ಪೊಳೆವುಗಳ್ ದೆಸೆದೆಸೆಗೆಸೆವಂತೆ ಪಸರಿಸಿ (ಆದಿಪು. ೦೦-೫ ವ ); ವಿದ್ಯಾಧರವಧೂಜನದ ಸೋಮರ್ಮುಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಱಿಯ ತುಱುಂಗಲುಮಂ...ನೋಡುತ್ತೆ (ಪಂಚಾಮಾ. ೨-೧೩ವ); ಪರಾಗಮಂ ಪಸರಿಸುವ ಸರಸೀರುಹದೆಸಳ ತುಱುಂಗಲ ಸಿಂಹಾಸನದೊಳ್ ಸುರತರುವಂ ಮಲಂಗಿ (ಗಿರಿಕ. ೭-೦೦ ವ) ; ಎಳನೀರ್ಗಾಯ ತುಱುಂಗಲಿಂ ತೊನೆವ ತೆಂಗಿಂ ತೋರವಣ್ಣೊಂಗಲಿಂ .... ಪೂತಿರ್ದ ನಾನಾಲತಾನಿಳಯಾ ನೀಕದಿನಾತನೊಳ್ ಪಡೆದುದತ್ಯಾನಂದಮಂ ನಂದನಂ (ಮಹಾನೇ. ೪-೨೩). **ತುರುಗಲು :** ಒಗೆಮುಗಿಲ ತುರುಗಲನು ಕಳೆದು ತನ್ನೆಳನಗೆಯ ಮೊಗ ಮಾಡವನು ತೊಡಿಪನಾವ ಭಾನು ? (ಭಾರಂಗ. ೦೨-೫); ಎನ್ನ ಬಗೆ ... ಮಾಮರದೆಲೆಯ ತುರುಗಲೊಳು ತಂಗುವುದು ತವರ ಕಂಡಂತೆ (ಮಲಿದೇ. ೪೨-೬). **ತುಱುಗಲ್ :** ಗುಡಿಯ ತೋರಣಂಗಳುಮಂ ತುಱುಗಲುಂ

ಬಂಬಲುವಾಗೆ ಕಟ್ಟಿಸಿ (ಪಂಪಭಾ. ೪-೫೪) ; ತಂಬೆಲರ ಪೊಯ್ಲಿನಿಂ ತಣ್ಪು ವಡೆಯಲೆಂದು ನೆಱೆಪಿದಂತಿರ್ದ ನೀರ್ಗಾಯ ತುಱುಗಲಿಂದೆಱಗಿದ ನಾಳಿಕೇರಭೂರುಹಂಗಳುಂ (ಚಂದ್ರಪ್ರ. ೧-೧೦೫ ವ) ; ಎಱಪ ಶರಧರದ ತುಱುಗಲ್ಕಱೆವ ಘನೋಪಳಕದಂಬಮುಡುಗಣಮೆನೆ (ರಾಜಶೇ. ೧-೧೨೦). 'ಎಮೆದುಱುಂಗಲ್' ಪರಾ. **ತುಱುಗಲು :** "ಬಂಬಲ್ ತುಱುಗಲು ಪೊತ್ತಂ ಗಡಣವೊಟ್ಟಿಲೊಟ್ಟಜೆ ... ಸಂದಣೆ ಜಾಳಿಗೆಯುಮೆನೆ ಶ್ರೇಣಿ ಕಾಳ್ಕಂ" (ಕಬ್ಬಿಕೈ. ೧೬) ; ಕರಗಿದಳು ಗಾಂಧಾರಿ ಕಂಬನಿದುಱುಗಲಲಿ (ಕುವ್ಯಾಸ. ೧೨-೫೫) ; ಅಱಸಿದೆವವ್ವ ಲತಾಮಂಟಪಗಳ ಮಱೆಯೊಳು ನಾಗವಲ್ಲಿಗಳ ತುಱುಗಲೊಳು (ಕುರಾಸಾಂ. ೩೨-೩೩).

[ತುಱುಂಗು (< ತುಱುಕು₁) + – ಅಲ್₂]

△ **ತುಱುಂಗು** 'ತುಱುಕು₁' ನೋ.

**ತುಱುಂಗೋಳ್** 'ತುಱುಂಗೋಳ್' ನೋ.

**ತುಱುಂದಪೊಟಲ್** (ನಾ). ಒಂದು ಊರಿನ ಹೆಸರು : ಮಾಚಿಗಂ ಗುತ್ತಿಯ ಗಂಗನ ಬೆಸದೊಳ್ ತುಱುನ್ದಪೊಟಲ ಕಾಳೆಗದೊಳ್ ನೊಳಂಬಾಧಿರಾಜ ರಾಜನೊಳ್ ಕಾದಿ ಸತ್ತಂ (ಎಕ. IV, ಹೆಗ್ಗಡ. ೧೧೦-೧೨; ಸು. 900).

[ತುಱುಂದ₀ + ಪೊಟಲ್₂]

**ತುಱುಂಬು₁**, ತುರುಂಬು₁, ತುಱುಬು₁ (ಕ್ರಿ). ೧. ಹೂವನ್ನು ಮುಂಡಿ,– ಸೂಡು : ರತಿಗೆ ಮುಡಿಯಲ್ಕೆ ಮದನಂಗೆ ತುಱುಂಬಲ್ಕಿರ್ದುದೆಂದು ... ಇರುವಂತಿಯಂತೆ ನೋಂತಲರೊಳವೇ (ಆದಿಪು. ೧೧-೧೧೧) ; ತುಱುಂಬಿದ ನವಮಾಲಿಕಾಕುಸುಮವಿಕ್ಕಿದ ಮುತ್ತಿನ ಲಂಬಣಂ ... ಅಮರಲ್ಕೆಸೆದಂ ನೃಪರೂಪಚಂದ್ರಮಂ (ಕಾದಂಪೂ. ೫೮೨); ಜಾದಿಯ ಪೂವಂ ಬಿಟ್ಟು ಬೇವಿನ ಪೂವಂ ತುಱುಂಬುವಂತೆ (ಧರ್ಮಾಮೃ. ೧೦-೧೬೨) ; ಸಜ್ಜಕಮಂ ತುಱುಂಬಿ ಪೊಲೆಗಳ್ಗೆ ಕರಂಟಮನಿಕ್ಕಿ ... ವೃದ್ಧವಾರಯೋಷಿಜ್ಜನವೊಪ್ಪಿತಲ್ಲಿ (ಉದ್ಭಟ. ೧೦-೭೧). ೨. ಮುಂಡಿಸು : ಸಹಚರಿಯರ್ಬಂದು ಸೇವಂತಿಗೆಯ ಪನಿನೀರಂ ಮಜ್ಜನಕ್ಕಿಱಿದು ಪರಾಗದಂಗರಾಗಮನಮರ್ಚಿ ತಾವರೆಯ ನೂಲ ದುಕೂಲಮನುಡಿಸಿ ಕದಂಬಕುಸುಮಮಂ ಸಿರಿಮುಡಿಯೊಳ್ ತುಱುಂಬಿ (ಗಿರಿಕ. ೫-೭೬ ವ). ೩. ತುಂಬು; ಸಂದಣಿಸು; ಕೂಡು: ಹೊಂಬಾಟೆ ತುಱುಂಬಿದೀಳೆ ಬನದೊಳ್ ಪೆಣ್ಡುಂಬಿ ನಿಂದಂಬುಜಂ ... ರಮ್ಯಂ ಪುರೋದ್ಯಾನದೊಳ್ (ಅನಂಪು. ೦-೯೩) ; ಕುಂಭಿಣಿ ಬೆಸಲಾದುದೆಂಬಂತೆ ಜನರು ತುಱುಂಬಿತು ಹೊನ್ನಗಸೆಯೊಳು (ಮೋಹತ. ೪೧-೩೮). **ತುರುಬು₁:** ೨. ಪ್ರಸೂನಮಂ ತಿರಿತಂದು...ರುಕ್ಮಿಣಿ ಸತ್ಯಭಾಮೆಯರಿಗಂ ಮುಡಿಸಿ ವುಳಿದ ಗೋಪಾಲವಧುಗಳಿಗೆ ಕರೆಕರೆದಿತ್ತು...ಮಸ್ತಕದಿ ತುರುಬಿ (ನವಮೋ. ೧೦-೭೧). **ತುಱುಬು₁ :** ೧. ನವಪ್ರಸೂನಮಂ ಮಗಮಗಿಪಂದದಿಂ ತುಱುಬಿ ಬಂದಳ್ (ನಳಚಂ. ೭೪೪) ; ಅವಿರಳಾಮೋದ ಜಾತಿಯ ನಲ್ಲದುಳಿದ ಕುಸುಮವನು ತುಱುಬದ ... ಲತಾಂಗಿಯರು (ಸೌಂದಪು. ೭-೨೬). ೨. ಇರವಂತಿಯಂ ತಂದು ಸಿರಿಮುಡಿಯೊಳಗೆ ತುಱುಬಿ ಬೆರಸಿಯುವಱಿಡೆಗೆಡೆಗೆ ಸೇವಂತಿಗಳ ತುಱುಬಿ (ಪುಷ್ಪರ.ಹ. ೫೨೬-೧೬); **ಪೊಸ** ಕುಸುಮಂಗಳಂ ತುಱುಬಿದರು ಸತಿಗಾ ಪುಣ್ಯವನಿತೆಯರು (ಬಸಪು. ೪-೩೪). ೪. ಮುಡಿಗಟ್ಟು ; ಕೂದಲನ್ನು ಗಂಟುಕಟ್ಟು ; **ತುರುಬು ಕಟ್ಟು:** ಹೆಳಲು ಕಟ್ಟು : ಮತ್ತವೊರ್ವಳಟ್ಟಸದ ಜಗದಿಟ್ಟೆ ಸೋರ್ಮುಡಿಯಂ ತುಱುಬಿ ಕಟಿಲಂ ಕಟಿಲ್ಚಿ ... ನೀರನಿಟೆದಳ್ (ರಾಮಾಶ್ವ. ೧೨೩-೧೬).

[ದೇ.॥ ತಮಿ. ತುಱುಮ್ಬು, ತುಱುಮು ; ಮಲ. ತುಱು ; ತೆಲು. ತುಱುಮು, ತುರುಮು]

**ತುಱುಂಬು₂**, ತುರುಬು₂, ತುಱುಬು₂ (ನಾ). ೧. ಕೂದಲಿನ ಮುಂಡಿ,– ಗಂಟು : ತೋರಮಲ್ಲಿಗೆಯ ತುಱುಂಬು ರಾಹು ತವೆ ನುಂಗಿದ ಚಂದ್ರನ ನೊಯ್ಯನೊಯ್ಯನುದುಗುಟ್ಟುವೊಲೊಪ್ಪಿರಲ್ (ಪಂಪಭಾ. ೭-೮೭) ; ನಱುಗಂಪುವೊಱೆದ ಜಾದಿಯ ತುಱುಂಬು ಕಣ್ಗೊಳಿಸೆ ಶೂದ್ರಕಂ ಕರಮೆಸೆದಂ (ಕಾದಂಪೂ. ೩೨); ಭಯದಿಂದೋಡುತ್ತಿರೆ ಕಾಡೊಳೊಂದು ಮರದ ಕೊಂಕುಗೊಂಬಾತನ ತುಱುಂಬಂ ಪಿಡಿದು ತಡೆಯೆ (ಧರ್ಮಾಮೃ. ೨-೫೬) ; ಬಂಬಳಬಾಡಿದ ದೇಹ ಕಟ್ಟಳಿದ ತುಱುಂಬು ಕಂದಿದ ಮೊಗ (ಭರತ. ೭೧-೭೯). ೨. ಗುಂಪು ; ಸಮೂಹ : ಪರ್ವಿ ಪಸರಿಸಿದ ಪೊಂಬಾಟೆಯ ಕಂಬಂಗಳ ತು [ಪಾಠಾಂ. ತ]ಱುಂಬಿನೊಳ್ ಬಳ್ಳಳ ಬೆಳೆದ ಮೃದ್ವೀಕಾಲತೆಯ ಕಾಯ ಮಾನಂ (ಅನಂಪು. ೭-೧೧೪). **ತುರುಬು₂ :** ೧. ಹುರುಮಂಜಿಮುತ್ತುಗಳ ತುರುಬಿಂಗೆ ಕೊರಳಿಂಗೆ ಮೆರೆವ ಹಾರಂಗೈದು (ವಂಶಾರಾ. ೫-೬-೦೭) ; ತುರುಬಿನ ಸುತ್ತಲೂ ಮಲ್ಲಿಗೆಯ ದಂಡೆ ಕಟ್ಟಿಕೊಂಡಿದ್ದಳು (ಆಪನಾ. ೨೪೮) ; ಅತ್ತೆ ತುರುಬು ಮಾವಗೆ ದಾನ (ಗಾದೆ). **ತುಱುಬು₂ :** ೧. "ತುಱುಬು ಹಿಣಿಲು ಪಾಶಂ" (ಮಂಗರಾ. ೯೪-೬); ತಳ್ಪತಳದೊಳ್ ಬಳಿಕಾತನ ತುಱುಬಂ ತಿರ್ದುತ್ತಂ ಪೊನಸಿದ ಪತಿತಮನೆ ಕಂಡು (ಪುಣ್ಯಾಸ್ರ. ೧೧-೧೦) ; ವಾಮಹಸ್ತವ ತುಱುಬಿನೊಳಿಟ್ಟು (ಮೋಹತ. ೦೬-೩೭) ; ಮುಡಿದ ಪೂವಿನ ತುಱುಬು ವ್ಯಡಗಂಧಗಜದಿಱುಬು (ಚಬಪು. ೩೭-೨೨).

ತುತ್ತುಱುಂಬು, ತುತ್ತುಱುಬು (ದ್ವಿರುಕ್ತಿ) : ತುತ್ತುಱುಂಬಾಗಿಯಗಳಿಗೆ ಬಿಳ್ದು ಕೋಟೆಯಂ ಹತ್ತಲೆಂದಂಗವಿಸುವಾ ಹರಿಗೆಯಾಳ್ಗಳ್ (ಸಮ್ಯಕೌ. ೮-೩೬) ; ಕಾಳೋರಗನ ಹುತ್ತನೊಳಹೊಕ್ಕ ವಾಳ್ಕೆಯೊಳ್ಕಾಳಗತ್ತಲೆ ತುತ್ತುಱುಂಬಾಗಿ ತುಂಬಿದಾಭೀಳಮಪ್ಪಾರಣ್ಯಮಧ್ಯದೊಳ್ದಬ್ಬುದಲೆಗೊಂಡು ದಾರಿಯ ತಪ್ಪಿದ (ಸಮ್ಯಕೌ. ೧೧-೩೭) ; ಅಳಿಯಂದಿರಿಂದಾಪ್ತರಿಂದ . . . ತುಳಿಲಾಳ್ಗಳ ತುತ್ತುಱುಬಿಂ ಸಭೆ ಕಣ್ಗೆ ತಳೆದುದು ಗಾಡಿಗಮಕವ (ರಾಮವಿ. ೧೦-೭೭); ಕುತ್ತುಱು ಮೆಳೆವಱೆಗಳೊಳು ತುತ್ತುಱುಬಾಗಿ ನಿಂದರು ಬೆಟ್ಟಬೆಟ್ಟಗಳೊತ್ತಿನೊಳಗೆ ಕಾಲವರು (ಕುರಾಸಾಂ. ೩೯-೮).

[ < ತುಱುಂಬು₁ /ತುಳು. ತುರುಟು ]

**ತುಱುಂಬುಗೊಳಿಸು** (ಕ್ರಿ). ತುಂಬುವಂತೆ ಮಾಡು ; ಭರ್ತಿ ಮಾಡು : ಅರಿಬಳಪ್ರಹರಣನಿವಾರಂಗಳಪ್ಪಾಳ್ವಱೆಯ ತುಱುಗಲಂ ತುಱುಂಬುಗೊಳಿಸಿಯುಂ (ಪುಷ್ಪಪು.೭-೭೯ ವ). [ ತುಱುಂಬು₂ + ಕೊಳ್₁ + –ಇಸು₃ ]

**ತುಱುಕಾರ್ತಿ** 'ತುಱುಗಾರ್ತಿ' ನೋ.

**ತುಱುಕಾಱ** 'ತುಱುಗಾಱ' ನೋ.

**ತುಱುಕು₁**, ತುರುಕು₁,ತುರುಗು₁, ತುಱುಂಕು,ತುಱುಂಗು, ತುಱುಗು ೧. (ಕ್ರಿ.) ಒತ್ತಿ ತುರುಬು; ಗಿಡಿ; ಅಡಕು; ಬಲವಂತದಿಂದ ಒಳಕ್ಕೆ ಸೇರಿಸು: "ತುಱುಕು–ಗಾಢಪ್ರವೇಶೇ" (ಶಮಧಾ) ; **ಪೊಱ**ಗೊಂದು ಹಡಗೆ ಮಣ್ಣಂ ನೆಱೆ ಶೌಚಂಗೆಯ್ವರೊಳಗೆ ಪಲತೆಱದಡಗಂ ತುಱುಕುವರ್ (ಸಮಪ.೦೪–೦೫೦). **ತುರುಕು₁:** ೧. ಕೋಣೆಯಲ್ಲಿ ಬಾಗಿಲ ಸಂದಿನಿಂದ ನನಗೊಂದು ಕಾಗದ ತುರುಕಿತ್ತು (ಅಲಹೂ. ೧೫೨); ಕೆಲವರು ಓದಿದರೂ ಅವುಗಳನ್ನು ಎಲ್ಲಿಯೋ ಪೆಟ್ಟಿಗೆಯಲ್ಲಿ ತುರುಕಿಬಿಡುತ್ತಿದ್ದರು (ರಂಗಕ. ೪೭). **ತುರುಗು₁ :** ೨. ದಟ್ಟೈಸು ; ಸಂದಣಿಸು ; ಇಟ್ಟಣಿಸು : ತಾರಕೆ ಮಿರುಗೆ ಆಗಸ ತುರುಗೆ ಹುಲ್ಲಲ್ಲೊರಗುವಳು (ಹಾಡುಪಾ. ೦೯-೦೭). ೩. ಹೆಚ್ಚಾಗು ; ಅಧಿಕವಾಗು ; ಅತಿಶಯವಾಗು ; ತುಂಬಿರು : ವೃಕೋದರನಿಗೆ ಸಹೋದರನ ಮರಣದಿಂದ ಒಡಲೊಳಗೆ ಅಳಲು ತುರುಗಿತು (ಬಿದುರಿ. ೧೧೧). ೪. ಸಂಗ್ರಹಿಸು ; ಒಟ್ಟುಮಾಡು : ತಂದನೊಬ್ಬಂ ಪೇಳ್ದ ಬೆಲೆಗೊಟ್ಟು ನವಿರುಡೆಯನೆಂದಿನಂತುರಲ ಬಡವಂ ತುರುಗಿ ತಂದಂ (ಕಾಲೂರ. ೭೮-೦೪೪). ೫. ಎದುರಿಸು ; ಕಾದು : ಇದಿರಿಸುವ ಗಂಡರುಳ್ಳ ತಾನೊಬ್ಬನೇ ತುರುಗುವೆನೆಂದು ಮುಂಬರಿದು ಬರುವ ವೀರರನ್ನು ... ದಿಂಡುಗೆಡವಿದನು (ಕವೀರ.೩೧). △ **ತುಱುಂಕು :** ೧. ಮೆಯ್ಯಂ ಕಿಱುಕಿಱಿದಾಗಿ ಕತ್ತರಿಸಿ ಬಾಯೊಳ್ತುಱುಂಕಿಯುಂ (ಧರ್ಮಾಮೃ. ೩-೭೩). △ **ತುಱುಂಗು :** ೨. ಪರಿವ ಕರೆಕರೆವ ಸೂಱಾಯ್ತುರ ಸೂಱುಗಳೊಳ್ತುಱುಂಗಿದಚ್ಚಾಳಾ

ಯ್ತ್ರ ಕಳಕಳರವದಿಂ ಭೋರ್ಗರೆದುಲಿವಂಬುಧಿಯಾನಂತದೇಂ ಮುಗುಳಿಸಿತೋ (ಸುಕುಮಾ. ೧೧-೨೫). ೩. ತನಿವಣ್ಣಳ ಸಂತತಿಯಿಂ ತುಱುಂಗಿ ನೆಱೆ ಕಣ್ಗತಿಶಯಮಾಗಿರ್ದುದಲ್ಲಿ ನಾರಂಗಕುಜಂ (ಶಾಂತೀಶ್ವ. ೧೧-೯೮).

**ತುಱುಗು₁ :** ೧. ಕಂಪುಳ್ಳ ಸೇವಂತಿಯಂ ತಂದು ತುಱುಗೆಂಬ ಜಾದಿಯಂ ಮೊಲ್ಲೆಯಂ ಬೆರಸಿ ನೀಡೆಮಗೆಂಬ...ಶರಣರಂ ನೋಡುತಂ (ಬಸರ. ೭-೪೦); ಮುಱಿದು ಮಾರನನು ಭೀಮನಹಿತರ ತುಱುಬಿದನು ಹೊಕ್ಕೆಱಗಿದನು ತುಱುಗಿದನು ಭಟರ ಭದ್ರವಿಮಾನದಲಿ (ಕುವ್ಯಾಅ. ೨೨-೨೯); ಕೆಱೆದಿನೊಳಗೆ ನೋಡೆ ನಿಯಮಾಸಾರಂಬೊಲು ತೆಱಗೆ ಪ್ರಾಭೃತದಂತೆ ತುಱುಗಿ ಭೂಪತಿ ಹೇಳಿದಧ್ಯಾತ್ಮಸಾರದ ತೆಱದೊಳಧ್ಯಯನ ಮಾಡಿದರು (ಭರಜ. ೧೯-೦೩೭). ೨. ತಾಪಸಕನ್ನೆಯರ್ ನಡಪಿದೆಳಲತೆಗಳೊಳೆಱಗಿ ತುಱುಗಿ ವಾಮವೇದಧ್ವನಿಯೊಳ್ ಮೊರೆವ ದುಂಬಿಗಳುಮಂ (ಪಂಪಭಾ. ೦-೧೧೫ ವ); ಆಗಸಂ ಹೂತಂತೆ ಪುಷ್ಪಕಂಗಳು ತುಱುಗೆ (ಇಹರ.ದೇ.೪೭-೧೭); ದಂತಿಘಟೆಗಳು ತುಱುಗಿದವು ... ಚೂಣಿಯ ನೃಪರ ಜೋಕೆಯಲಿ (ಕುವ್ಯಾದ್ರೋ.೧-೧೪೭); ನೆಱುಗಂಪ ಸವಿಯಲೆಂದೆಲರ ಬೆಂಬಳಿವಿಡಿದು ತುಱುಗಿ ಬಂಬಲು ಮಾಲೆಗೊಂಡು...ಎಱಪಳಿಗಳೋಲೈಪ ಪರಿವಾರವೆನೆ (ಭಿಕ್ಷಾಚ. ೧-೨೪); ಸಿಂಹಾಸನದ ಸುತ್ತಲುಂ ತುಱುಗಿದ ಸುರವ್ರಜದ ಮಧ್ಯದೊಳ್ ಮೆಱೆವವಂ ಕುಱಿಯೊ...ನೀಂ ಪೇಳೆಂದನು (ಜಬವು. ೦೭-೫). ೩. ಮೊದಲೊಳ್ ಮಾದುಪಳದ ಕಾಯ್ ತುಱುಗಿರ್ಕುಂ (ಲೋಕೋಪ. ೭-೩೪); ಸುಲಲಿತಮಾಗಿ ನೀಳ್ದ ತುಱುಗಿರ್ದಮೊಗಳ್ ತಮಮಂ ಬೆಳರ್ಪ ಕಣ್ಮಲರ್ಗಣಿ ಯಂದಮಂ ನೆಱೆಯೆ ಪೋಲ್ತಿರೆ (ಧರ್ಮಾಮೃ. ೭-೧೯೭); ಅಂತು ನಿಧಾನಕ್ಕೆಱಗುವ ದೀಪವರ್ತಿಯಂತೆಱಗಿ ತುಱುಗಿದರ್ಚನೆಗಳಿಂದರ್ಚಿಸಿ ಗುರುಭಕ್ತಿ ಪೂರ್ವಕಂ ಬಂದಿಸಿ (ಅರ್ಧನೇ. ೧-೯೧ವ); ತುಱುಗಿದ ಕಾಯಿ ಪಣ್ಣಳ ಸಾಲ ವೃಕ್ಷವ ಮುಱಿದು (ಮೋಹತ. ೪-೩೭); ಫಲವೃಕ್ಷಂಗಳೆತ್ತಂ ತುಱುಗಿ ಬೆಳೆದಿರೆ (ರಾಮಾಶ್ವ. ೪೩-೦೩). ೪. ತುಂಬಿಕೊಳ್ಳು; ಅಡಕಿಕೊಳ್ಳು : ಬಾಯೊಳು ತುಱುಗಿದೆಲೆ ಬಾಯೊಳಗೆ ಮಡಿದೆಲೆ ಕೈಯೊಳಂಗನೆಯ ಸ್ಥಿರದೊಳೆವೆಯಿಕ್ಕದೆ ನಿರೀಕ್ಷಿಸುತರಸನೊರ್ವನು ... ಇರ್ದನು ಲಲಿತಭಿತ್ತಿಯ ಚಿತ್ರದಂದದಲಿ (ಜೀವಂಚ. ೮-೫೩). ೭. ಮುಚ್ಚು; ಕವಿ; ಆಚ್ಛಾದಿಸಂ : "ತುಱುಗು-ಸಂಚ್ಛನ್ನೇ (ಕವಿದುಕೊಳ್ಳು)" (ಶಮಧಾ); ತುಱುಗಿದ ಮುಗಿಲಾ ಮುಂಗಿಲಿಂದೆಱಗುವ ಮಱೆ (ಆದಿಪು. ೭-೬೨); ಎಱಗುವ ನರೇಂದ್ರನಿಕರದ ಮಿಱುಗುವ ಮಣಿಮೌಳಿ ಮಂಜುಳ ಪ್ರಭೆ ತನ್ನೊಳೆ ತುಱುಗೆ (ಕಾದಂಪೂ. ೪೭೯); ತುಱುಗಿರ್ದ ನೀಲಮೇಘದ ತುಱುಗಲ್ ನೆಱೆ ಪಿಂಗಿ ಪೋಗೆ (ಜಗವಿ. ೪-೫೯); ಕೆಱುವೊನೆಯ ಮುಗುಳಂಬುಗಳ ಸೈಗಱೆದನಭಿಮನ್ಯುವಿನ ಮೆಯ್ಯಲಿ ತುಱುಗಿದವು ಮಱಿದುಂಬಿ ಕೆಂದಾವರೆಗೆ ಕವಿವಂತೆ (ಕುವ್ಯಾದ್ರೋ. ೫-೩೪); ಧುರದೊಳು ತುಱುಗಿರ್ದ ಕೃತಕಾಂಧಕಾರವಿಸ್ತರವ ನಿರ್ಮೂಲನಗೆಯ್ವುದಕೆ ವರಮಣಿಗೆಯಿಂದೆ ತೆಗೆದೆಚ್ಚ ಕೃಷ್ಣ (ಮೋಹತ. ೪೦-೪೩). ೮. ಹರಡು; ವ್ಯಾಪಿಸು : ಪೊಸ ಮಸೆಯಂಬಸದಳಮೊಡನೆಱಗಿ ತುಱುಗಿ ಪಾಯ್ವುವು ಕೆಲವುಂ (ಶಾಂತಿಪು. ೫-೬೦); ತುಱುಗಿದ ತನುತಾಪದಿಂದೆ ಪಕ್ಕೆಯ ತಳಿರ್ತಱಗೆಲೆಯಾಗಿ ತೋಱುಸಲು (ಮೋಹತ. ೨೮-೦೭); ಮಣಿಕೋಟಿರಾಂಶು ಮೆತ್ತಂ ತುಱುಗೆ...ಕನಕಕಲಸತ್ಪೀಠದೊಳ್ ಭೂಪನಿರ್ದಂ (ರಾಜಶೇ. ೫-೦೭). ೯. ಜೋಡಿಸು; ಹೊಂದಿಸಂ; ಕುಂದಣಗೊಳಿಸು: ತರತರದಿಂ ತುಱುಗಿದ ವಿವಿಧ ರತ್ನಮಯಮಪ್ಪ ಪೊನ್ನ ಕುಱಿವಟ್ಟುಗಳಿಂ ನಿರುಪಮ ಕನಕಸರೋಜಾಕರಮಲರ್ದಂತಿರ್ದುದನ್ನವಾಸವಿಲಾಸಂ (ಸು ಕು ಮಾ. ೧೧-೨೭). ೧೦. ತಾಗು; ತಗುಲು; ಅಂಟಂ: ತುರಗದ ವ್ಯಾಧಿನಿದಾನ ವನಱಿಯದ ವೈದ್ಯನನೆ ಶಿಕ್ಷೆಗೆಯ್ಯದ ನೃಪಗಂ ತುಱುಗುವುದಶ್ವೇತಿ ಪಾತಕಮಱಿದವನಂ ತಡೆಯುಲಶ್ವಮೇಧದ ಫಲಮುಂ (ಅಶ್ವಶಾ. ೧೧-೫).

ತುರುತುರುಗು (ದ್ವಿರುಕ್ತಿ) : ನೀನುಳಿವೆ ಎಂದಿನೊಲು ಎಲ್ಲೆಡೆಗೆ ತುರುತುರುಗಿ ಗಾಳಿಯೊಲು ಜನುಗಾಗಿ ಜೀವನಕೆ ಉಸಿರಾಗಿ (ಬಾಸಿಗ. ೨೭-೯). [ದೇ. ‖ ತಮಿ. ಮಲ. ತುಱು ; ತೆಲು. ತುರುಗು, ತುಱುಗು]

**ತುಱುಕು₂** (ನಾ). (?) : ಇಱಿದುದಕದಂತೆ ಹಾಲಿನ ನೆಱುಸೋನೆಯು ಲುಂಡ ಬಣ್ಣದರಲ್ಗಳ ಸೊನೆಯಿಂ ತುಱುಕಿನ ಜೋಲುವ ತಿಳಿಗಳ ನೆಱಗಿದರಾ ಜನಮನಳುರೆ ಹೊಸ ರಸವಣಿಗರ್ (?) (ಸೂಕ್ತಿಸು. ೧೩-೧೯).

[ ? ]

**ತುಱುಗಲ್** 'ತಂಱುಂಗಲ್' ನೋ.

**ತುಱುಗಲು** 'ತಂಱುಂಗಲ್' ನೋ.

**ತುಱುಗಲೂರ್** (ನಾ). ಒಂದು ಊರಿನ ಹೆಸರು : ಈಶ್ವರಶರ್ಮ ಣಾಖ್ಯಾಯ ತುಱುಗಲೂರ್ ವಸ್ತವ್ಯಾ (ಮೈಆರಿ. ೧೯೧೪, ೧೦-೮;728).

[ ? + ಊರ್]

**ತುಱುಗಲ್ಗೊನೆ** (ನಾ). ದಟ್ಟವಾಗಿ ಕಾಯಿ ಅಥವಾ ಹಣ್ಣುಗಳನ್ನು ಒಳಗೊಂಡಿರುವ ಗೊನೆ. 'ತುಱುಗಲ್ಗೊನೆವಣ್' ಪರಾ.

[ ತುಱುಗಲ್ ( < ತುಱುಂಗಲ್) + ಕೊನೆ₃ ( < ಗೊಲೆ₂) ]

**ತುಱುಗಲ್ಗೊನೆವಣ್** (ಕ್ರಿ). ದಟ್ಟವಾದ ಕಾಯಿ, ಹಣ್ಣುಗಳಿಂದ ತುಂಬಿದ ಗೊನೆಯನ್ನು ಬಿಡು; ಫಲಿಸು : ತೊರೆದುದೊ ಕಾಮಧೇನು ತುಱುಗಲ್ಗೊನೆವಣ್ಣಿದೊ ಕಲ್ಪವೃಕ್ಷಂ (ಗದಾಯು. ೧೦-೨೨ ಅಡಿಟಿ).

[ ತುಱುಗಲ್ಗೊನೆ + ಪಣ್₂ ]

**ತುಱುಗಲ್ಗೊಳ್** (ಕ್ರಿ). ಗುಂಪುಗೂಡು ; ಒಟ್ಟಾಗು : ಪೊಕ್ಕು ಕೇದಗೆಯ ಪೂಗೊಯ್ಯಲ್ಕೆ ಘರ್ಮಾಂಬುಗಳ್ ತುಱುಗಲ್ಗೊಂಡವು ತಱಗೆ ಬಲ್ಲಿಕೆ ಬಿಸಿಲ್ ಪೂದೋಂಟದೊಳ್ (ಸೂಕ್ತಿಸು. ೧೧-೬೦).

[ ತುಱುಗಲ್ ( < ತುಱುಂಗಲ್) + ಕೊಳ್₁ ]

**ತುಱುಗಳವು** (ನಾ). ಹಸುಗಳ ಅಪಹಾರ ; ಗೋಗ್ರಹಣ : ತುಱುಗಳವೊ[ ಪಾಠಾ. ಗೊಳೊ]ಳ್ ಪೆಣ್ಬುಯ್ಯಲೊಳ್...ತಱಸಂದು ಗಂಡುತನವನೆ ನೆಱಪದವಂ ಗಂಡನಲ್ಲನೆಂತುಂ ಷಂಡಂ (ಗದಾಯು. ೨-೨೪).

[ತುಱು + ಕಳವು]

**ತುಱುಗಾ**, ತುಱುಗಾಯ್ (ಕ್ರಿ). ದನಕರುಗಳನ್ನು ಕಾಯು,— ಮೇಯಿಸು : ತುಱುಗಾವ ಗೋವರಂ ಮತ್ತಱೆಯ ಕಬ್ಬಿಲರನೆಯ್ದೆ ಬೆಸಗೊಳುತಂ (ಧರ್ಮಾಮೃ.೮-೨೩). ತುಱುಗಾವ ಕಿಱುಕುಳದ ಕೆಳೆಯರುಮಂ ನೋಡುತ್ತುಂ (ಕಬ್ಬಿಕಾ.೨೩೪); ಆರ ಬಸುಱಲಿ ಬಂದು ... ಆರ ಹೆಂಡಿರ ಕೊಂಡು ಕಱು ತುಱುಗಾದು ಕಳವಿನಲಿ ವೀರದೈತ್ಯನ ಸದೆಬಡಿದು ಕುರುವೀರವಂಶದ ರಾಯರೆಮ್ಮೊಳು ವೈರಬಂಧವ ಬಿತ್ತಿ ಕೊಂಡವ ಕೃಷ್ಣ ನೀನೆಂದ (ಕುವ್ಯಾಗ.೮-೩೮); ತುಱುಗಾವ ಪಳ್ಳಿಯಂ ಬಿಟ್ಟು ಬಳಿಕೆರವಿಲ್ಲದೆ ಹೊದ್ದಿ ಪಾಂಡವರನು (ಜೈಮಿಭಾ. ೬-೪೭). **ತುಱುಗಾಯ್**: ಮಾಯುದೀ ಮಗ ಹೊಲದೊಳಗೆ ತುಱುಗಾವುತಿರಲೊಂದು ಬಾಯ ಬಿಡುತಿದಿರಾದ ಕತ್ತೆಯ ಸಾಯ ಬಡಿದನು (ಸಾಳ್ವಭಾ.೨೨-೧೫).

**ತುಱುಗಾವ** = ದನಕಾಯುವವನು ; ದನಗಾಹಿ : ತುಱುಗಳು ತುಱುಗಾವರನು ನೆಱದಾಡುವರ್ಬಕರ ಎಱಗಿ ನೋಡುವ ತನ್ನನು ... ಕಾಣುತವೆ ವೈಮಱದಳಂಗನೆ (ನಿಭಾಗ. ೦೦-೮-೫೮). [ತುಱು+ಕಾ₁]

**ತುಱುಗಾಡು**, ತುರುಂಗಾಡು (ನಾ). ದನಕರುಗಳು ಮೇಯುವ ಕಾಡು ; ಹುಲ್ಲುಗಾವಲು ; ಗೋಮಾಳ : ತುಱುಗಾಡು, ಕುಱುಗಂಟು, ಕುಡುಗೋಲ್ (ಶಬ್ದಾನು. ೮೭ ಪ್ರಯೋ). **ತುರುಗಾಡು** : "ಆಶಿತಂ [ಗವೀನಂ] – ತುರುಗಾಡು" (ಅಕಾನಿ. ೩-೭). [ತುಱು + ಕಾಡು₂]

**ತುಱುಗಾಯ್** 'ತಂಱುಗಾ' ನೋ.

**ತುಱುಗಾಯಿ** 'ತಂಱುಗಾಹಿ' ನೋ.

**ತುಱುಗಾರ್ತಿ, ತಂಱುಕಾರ್ತಿ** (ನಾ). ಗೊಲ್ಲರವಳು ; ಗೊಲ್ಲಿತಿ ; ಗೋಪಿ : "ತುಱುಗಾರ್ತಿ [ ಪಾಠಾಂ. ವಳ್ತಿ] ಯೆಂದು ಗೋಪಿ" (ಕಶಸಾ. ೬-೧೨೬) ; "ತುಱುಗಾರ್ತಿಯರೆನಲು ಗೋಪಿಯರ್" (ಕವಿಕಂ. ೮೫) ; ಮನೆ ನಿನಗೆ ನಂದಗೋಪಾಲನ ಮನೆ ತುಱುಗಾರ್ತಿ ನಿನಗೆ ಮನೆವೆಂಡತಿ (ಪಂಪಭಾ. ೬-೫೩) ; ತನ್ನ ಪೆಂಡತಿಯಪ್ಪ ನಂದೆಯೆಂಬ ತುಱುಗಾರ್ತಿಯುಂ ಕರೆದು... ಪಾಷಾಣನಂ ಕೊಟ್ಟು (ಧರ್ಮಾಮೃ. ೧೦-೧೫೦) ; ಕಱುವಂ ಬಿಡು... ಮುಱುವಂ ಸುರಿಯೆಂಬ ಸರವು ತುಱುಗಾರ್ತಿಯರೊಳ್ (ಲೀಲಾವ. ೫-೧೨೦) ; ಕಱಿಯೆಂಬ ನುಡಿ ತುಱುಗಾರ್ತಿಯರೊಳು (ಕುರಾಸಾಂ. ೨-೬೮). **ತುಱುಕಾರ್ತಿ** : ತುಱುಕಾರ್ತಿಯರ್ ಕಿಱಿದು ತಂದು ಪಾಱುತನಕ್ಕೆ ಪರಪೆ ಪರೆದು ಕೊರಗಿರ್ದ ಕಱಿಯ ನೆಯ್ದಿಲ್ಗಳಿಂ ... ಮನೋಹರಮಾದ ಮಾಧವೀಮಂಟಪದ ಮೊಗಸಾಲೆಯೊಳ್ ಕುಳ್ಳಿರ್ದು (ಲೀಲಾವ. ೫-೫೯ವ).

[ ತುಱುಗಾಱ + – ತಿ$_1$ (< – ಇತ್ತಿ) ]

**ತುಱುಗಾಹಿ, ತುಱುಗಾಯಿ** (ನಾ). ದನಕರುಗಳನ್ನು ಕಾಯುವವನು ; ಗೊಲ್ಲ : ತುಱುಗಾಹಿ ಕಾಜಿನ ಮಣಿಯ ಬಲ್ಲನು ಗಡ (ಕುವ್ಯಾಕ. ೯-೧೪) ; ತುಱುಗಳ ತಿರುಹಿಕೊಂಡೆಯ್ದುವ ಬೇಡರ ತುಱುಗಾಹಿಗಳು ಕಂಡು ನಡುಗಿ (ಜೀವಂಸಾಂ. ೮-೨೩) ; ಈತನೇ ತುಱುಗಾಹಿ ಮಾರಣ್ಣನೆಂಬಾತನು (ಜಬಪು. ೫೬-೬೦) ; ಸಲಹುವನೆ ಮನೆಯ ತುಱುಗಾಹಿ ಸ್ತ್ರೀಯರಿಗೆ ಒಲಿಯುವನೆ ಯೋಗಿ (ಸರ್ವಜ್ಞ. ೫೦೯). **ತುಱುಗಾಯಿ** : ಇಂದು ತುಱುಗಾಯಿ[ಪಾಠಾಂ. ಹಿ]ಯುಂ ಬಂದಿಱಿಯದವನೆಸಗೆ ಸಂದ ಪಗೆ (ಜೈಮಿಭಾ. ೭-೩೦). [ ತುಱು + ಕಾಹಿ ]

**ತುಱುಗಾಱ, ತುರುಕಾರ, ತುಱುಕಾಱ** (ನಾ). ದನಕರುಗಳನ್ನು ಕಾಯುವವನು ; ಗೊಲ್ಲ ; ಗೋಪಾಲ : ಒರ್ವರಿನೊರ್ವರೆ ಮಿಕ್ಕು ಪಾರ್ದು ಸಾರ್ದಿಸೆ ತುಱುಗಾಱರಂದಿನಿಸು ಬಲ್ವಲನಾದುದದೊಂದು ಕಾಳೆಗಂ (ಪಂಪಭಾ. ೮-೯೩): ಆ ಶಿಶುವನೆತ್ತಿಕೊಂಡು ಬಂದು ಗೋವಿಂದನೆಂಬ ತುಱುಗಾಱಂಗೆ ಕುಡುವುದುಂ (ಧರ್ಮಾಮೃ. ೧೦-೦೫೦) : ಏಱಿದರು ಭಂಡಿಗಳನಾ ತುಱುಗಾಱರಾ ಸ್ತ್ರೀಬಾಲವೃದ್ಧರು (ನಿಭಾಗ. ೧೦-೧೧-೧೧). **ತುರುಕಾರ** : ಹಿಂದೆ ಕುಳಿತು ತೇರೆಸಗು ಎಂದು ಅಪ್ಪಣೆಮಾಡುವವನು ಅಂಬಿಗ, ಯುದ್ಧರಂಗದಲ್ಲಿ ಮುಂದೆ ಸಮಾನನಾಗಿ ಬಂದಿರುವವನು ತುರುಕಾರ (ಭಾಮುತ. ೨೪). **ತುಱುಕಾಱ** : "ಗೋಪಾನ್, ಗೋವಿಾ, ಗೋಸ್ವಾವಿಾ—ಈ ೩ ತುಱುಕಾಱರ್" (ಹಲಾಯು. ೪೪-೧೦೭) ; ಪಚ್ಚೆ ಪಸಿಯ ತುಱುಕಾಱಂಗಗ್ಗಳಿಕೆಯನೆ ಮಾಡಿ ನೀನುಂ ಪಱಿಯುಂ ಕಟ್ಟಿದೆಯೊ ಭೂಪರಿನಿಬರ ಕೊರಲೊಳ್ (ಪಂಪಭಾ. ೬-೪೬). [ ತುಱು + – ಕಾಱ ]

**ತುಱುಗಾಱಪಳ್ಳಿ** (ನಾ). ಗೋವಳರ ಗ್ರಾಮ ; ಗೊಲ್ಲರ ಹಳ್ಳಿ : ಪಕ್ಕಣಗಳಲಿ ತುಱುಗಾಱ[ಪಾಠಾಂ. ವ] ಪಳ್ಳಿಯಲಿ . . . ಅಱಿಸಿದರಾ ನಿಶಾಚರನ (ತೊರರಾ. ೪-೧೧-೧೫). [ ತುಱುಗಾಱ + ಪಳ್ಳಿ$_1$ ]

**ತುಱುಗು$_1$** 'ತುಱುಕು$_1$' ನೋ.

**ತುಱುಗು$_2$, ತುರುಗು$_2$** (ನಾ). ಸಂದಣಿ ; ದಟ್ಟಣೆ : ಸಪ್ತಮುಖದಿಂದೆ ವಿಷೋನ್ನತಿಯಿಂದೆ ಭೋಗದೊಳ್ ತುಱುಗಿರವಿಂದೆ ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೭೪೭ ಶೂದ್ರಕ): ಮೆಱೆವ ದೇಹಪ್ರಭೆಗಳಲಿ ಮಿಱುಮಿಱುಪ ದಿವ್ಯಾಭರಣಕಿರಣದ ತುಱುಗಿನಲಿ ಒಪ್ಪಿದರಿಂದ್ರತೇಜದಲಿ (ಸಂಭಪ. ೩೩-೫೬). **ತುರುಗು$_2$** : "ತಿಂತಿಣಿ, ಕಿಕ್ಕಿರಿ, ತುರುಗು, ಬಂಬಲು, ಜಂಗುಳಿ, ಹಿಂಡು, ಗುಂಪು...ಮಂದಿ" (ಕಂನುಹು. ೮೫). [ <ತುಱುಕು$_1$./ಮಲ. ತುಱುಕು ]

**ತುಱುಗುಗೂಂದಲ್, ತುರುಗುಂಗೂದಲು** (ನಾ). ದಟ್ಟವಾಗಿರುವ ಕೂದಲು; ತುಂಬುಗೂದಲು : ತುಱುಗುಗೂಂದಲ್ ಕೊಕ್ಕರಿಸೆ ಕೊನೆವಾಲವಿನಿಸುಂ ನಿಮಿರ್ದು ಸಂಚಳಿಸೆ (ರಾಮಾಶ್ವ. ೧೩೨-೯). **ತುರುಗುಂಗೂದಲು** : ಇದೀ ಶ್ಮಶ್ರುಸಂಕಟವಾದರೋ, ವಿಪರೀತವಾಗಿ, ಕರಿಯ ಚಾಮರದ ಚವುರಿಯ ತುರುಗುಂಗೂದಲಂತೆ...ರೂಕ್ಷತೆಯ ಕಡು ಗಪ್ಪಾಗಿ ಗೋಳಾಡುತ್ತಿರುವುದು (ಮಂತ್ರಶ. ೯೩-೦೮).

[ತುಱುಗು$_1$ (<ತುಱುಕು$_1$) + ಕೂಂದಲ್]

**ತುಱುಗೆವೆ, ತುರುಗೆವೆ, ತಂಱುಗೆವೆ** (ನಾ). ದಟ್ಟವಾದ ಕೂದಲುಳ್ಳ ರೆಪ್ಪೆ ; ಒತ್ತಾದ ಕೂದಲುಳ್ಳ ರೆಪ್ಪೆ: ತುಱುಗೆವೆ ನೀಳ್ದ ಪುರ್ವು ನಿಡು ಗಣ್ (ಪಂಪಭಾ. ೧-೧೦೮) ; ಘನಸ್ತನಂ ತುಱುಗೆವೆ ಕೋಮಲಾಂಗಮಳ ವಟ್ಟ ಕುರುಳ್...ರಮಣೀಯಮಾಗೆ (ಧರ್ಮಾಮೃ. ೪-೧೪೨); ತುಱುಗೆವೆಯ ತೆರ್ಕೆಯೊಳ್ ಬಂಬಲಿಪ ಕಣ್ಬನಿಗಳೊಸರೆ (ವರ್ಧಪು. ೪-೩೧ವ). **ತುರುಗೆವೆ** : ತುರುಗೆವೆ ನಿಡುಹುಬ್ಬು ಡಾಳಿಪ ಕದಪು...ಅಂಚೆಯ ನಡೆ ನುಡಿಯ ಜಾಣೆಯರು (ಸೌಂದಕಾ. ೩-೭೬). **ತುಱುಗೆವೆ** : ತುಱುಗೆವೆ ನಿಂದು ನೋಡೆ ಕಡೆಗಣ್ಣದಿಗೊರ್ಳ್ವಳಿಪಾಡೆ ಪೊಕ್ಕು ಸೈಪೆಱಗಿದಿಗೊರ್ಳ್ವ ಸೋಂಕು. . . ಅಲ್ಲಿಯದಿಗೊಂಡುದು ಕೂಟದ ಕಾಯ್ಪುಮೋಪರಾ (ಅರ್ಧನೇ. ೨-೩೬): ತುಱುಗೆವೆಯ ನಿಟ್ಟೆಸಳುಗಂಗಳ . . . ನೀಱೆಯರ್ಳ್ಕಿದಿ ತೊಗ್ಗಿನಲಿ (ಕುವ್ಯಾಅ. ೧೩-೩೦); ತುಱುಗೆವೆಯ ನಿಡುಗಂಗಳಿನ ಕಡೆಸೆಱಗನ ಮರಿಸುತ...ಬಂದಳು ರಾಮನಿದ್ದೆಡೆಗೆ (ತೊರರಾ.೩-೪-೮): ಪಾಮರಿಯರ ಕುಡುಪುರ್ವಿನ ಕೊನೆಮುಟ್ಟಿದ ತುಱುಗೆವೆಗಳ ನಡುವೆ ಕರಿಯಾಲಿಗಳೆಸೆದುವು (ಜಯುಕಾ. ೧-೪೦). [ತುಱುಗು$_1$ (<ತುಱುಕು$_1$) + ಎವೆ]

**ತುಱುಗೆವೆಗಣ್, ತುಱುಂಗೆವೆಗಣ್, ತುಱುಗೆವೆಗಣ್ಣು** (ನಾ). ದಟ್ಟವಾದ ಕೂದಲುಳ್ಳ ರೆಪ್ಪೆಯಿಂದ ಕೂಡಿದ ಕಣ್ಣು : ಭವನಾಂತರಮುಂ ನೆಱೆ ಧವಳಿಸುತಿರ್ದಪುದೀ ತುಱುಗೆವೆಗಣ್ಬೆಳಗು ಪುಂಡರೀಕೇಕ್ಷಣನಾ (ಕಾದಂಪೂ. ೪೨೦): ಪುಂಡರೀಕದಳಧವಳವಿಲೋಚನೆಯರಾ . . . ತಮ್ಮ ನಿಡಿಯ ಬಿಳಿಯ ತುಱುಗೆವೆಗಣ್ಗಳಿಂ ಕಣ್ಬೇಟಂಗೊಳಿಸಿಯುಂ (ಸುಕುಮಾ. ೧೦-೦೨೭ವ) ; ನಳಿನದೆಸಱೊಳ್ ಮುಸುಱಿ ಮುತ್ತಿದ ಮತ್ತಮಧುಕರಕುಳಮುಂ ಕೆಲಕ್ಕೆ ತೊಲಗಿಸುವಂತೆ ತಳ್ತ ತುಱುಗೆವೆಗಣ್ಗಳಿಂ ತೆಗೆದು (ಲೀಲಾವ. ೩-೬೫): ಕಾವನ ತೋಳಂ ಬಿಡದಪ್ಪಿದುಮಂದಾಕೆಯ ಕೊಡಕೆವರಂ ನಿಮಿರ್ದು ಪೊಳೆವ ತುಱುಗೆವೆಗಣ್ಗಳ್ (ಕಬ್ಬಿಕಾ. ೩೨೮). **ತುಱುಗೆವೆಗಣ್** : ನಿಡಿಯ ಬಳ್ಳಿಯ ತುಱುಗೆವೆಗಣ್ಗಳಂ ಕೆನ್ನೆಯನೆಯ್ದುವ ಪುರ್ವುಗಳಂ . . . ಪಡೆದ ಕಾಮದೇವತ್ವಮನವಗಯಿಸುವಂತಿರ್ದ ರೂಪಿನ ಬಾಲಕನಂ . . . ಎತ್ತಿ ಕೊಂಡಿಂದ್ರುನ ದೇವಿ ಬಂದಳ್ (ಶಾಂತಿಪು. ೧೦-೯); ತುಱುಗೆವೆಗಣ್ಣ ಕಾಂತಿ ಮರಗಟ್ಟಲೆಯಂ ಬೆದಱಿಟ್ಟೆ (ಜಗವಿ. ೧೬-೨೫): ತುಱುಗೆವೆಗ [ ಪಾಠಾಂ. ನಿಡಿಯಲರ್ಗ ]ಣ್ಬೊಣರು . . . ಕಡುಚೆಲ್ವಂ ನೆನೆಯಿಸುತೊಪ್ಪಿದುವು (ಜಯುಕಾ. ೨-೪೩). **ತುಱುಗೆವೆಗಣ್ಣು** : ತುಱುಗೆವೆಗಣ್ಣ ಕಟಾಕ್ಷ ಕೆಂಬಲ್ಗಳ ಮಿಱುಗುವ ತೊಂಡೆವಣ್ದುಟಿಯ ಬೆಱಗಿಂದೆ ಮಾತನಾಡಿದಳು (ಮೋಹತ. ೧೬-೨೪) ; ತುಱುಗೆವೆಗಣ್ಣ ನೋಟಮೆಸೆದುದು (ಚೆಬಪು. ೪-೧೧)

[ತುಱುಗೆವೆ+ಕಣ್]

**ತುಱುಗೆವೆ** 'ತುಱುಗೆವೆಂ' ನೋ.

**ತುಱುಗೆವೆಗಣ್** 'ತುಱುಗೆವೆಗಣ್' ನೋ.

**ತುಱುಗೆವೆಗಣ್ಣು** 'ತುಱುಗೆವೆಂಗಣ್' ನೋ.

**ತುಱುಗೊಳ್$_1$, ತೊಱುಗೊಳ್$_1$** (ಕ್ರಿ). ದನಕರುಗಳನ್ನು ಅಪಹರಿಸು; ಹಸುಗಳನ್ನು ಹಿಡಿ; ಗೋಗ್ರಹಣಮಾಡು; ದನಗಳನ್ನು ಅಪಹರಿಸಲು ಯುದ್ಧಮಾಡು : ನೆಲ್ಲಿಗೆಱೆಯ ತುಱುಗೊಣ್ಡಲ್ಲಿ ತುಱುವನಿಕ್ಕಿಸಿ ರೊಸಗರಲಯುನ್ ಪೊಸಮೆಣ್ಣೆ ಸಗಮೋಱಿದನ್ (ಎಕ. IX (8), ಹೊಸಕೋ. ೯-೩; 875); ಚಿಃ ತುಱುಗೊಳೆ ಬಾಱೆಮೆಂದು ತುಱುಗೋಳೊಳೆ ಸಾವುದು ಸೈಪಿದೆಂದು ಪಾಯ್ದಱೆಕೆಯ ಗೋವರಣ್ಮೆ ಬರೆ (ಪಂಪಭಾ. ೮-೯೫); ಮಾರಪ್ಪರ ಪರಿವರಿವರಿದಿಱಿಯಲಾಱದೆ ಕಳ್ದು

ತುಱುಗೊಣ್ಡು (ಎಕ, IV. ಹುಣಸೂ. ೧೧-೬; 1020?); ಸುಶರ್ಮ್ಮನೃಪಂ ವೀತಾಂಕುಶಂ ತುಱುಗೊಳಲ್ ಪೊಱಮಟ್ಟಂ (ಕಾವ್ಯಾವ. ೧೨೨); ಪಱಿಯೆ ಧರೆ ತುಱುಗೊಳಲ್ ಬಂದಱಿವುದೆ ರಣದೊಳ್ ಕನಿಷ್ಠವಿದೆ ಚಿಃ ಕಷ್ಟಂ (ನೇಮಿಪು. ೧೦-೧೫೭). **ತೊಱುಗೊಳ್$_1$** : ಸೋವಣವ್ಯೊಂಕ್ಯವುವಿ ಕುಣಮ್ಮನನ್ನು ತೊಱುಗೊಳ್ವಲ್ಲಿ ಪಲರುಮನೋಡಿಸಿ (ಎಕ. X, ಕೋಲಾರ. ೨೩೨-೩; ಸು. 750). [ತುಱು + ಕೊಳ್$_1$]

**ತುಱುಗೊಳ್$_2$** 'ತಂಱುಗೋಳ್' ನೋ.

**ತುಱುಗೋಳ್**, ತಂರಂಗೋಳಂ, ತಂಱಂಂಗೊಳ್, ತಂಱಂಗೊಳ್$_2$, ತೊಱುಕೊಲ್, ತೊಱುಕೊಳ, ತೊಱುಕ್ಕೊಳ್, ತೊಱುಂಗೊಳ್$_2$, ತೊಱಂಗೊಳ, ತೊಱುಗೊಳ್ಳ, ತೊಱುಗೋಳ್ (ನಾ). ಶತ್ರುಗಳು ದನಗಳನ್ನು ಹಿಡಿದುಕೊಂಡಾಗ ಅವುಗಳ ರಕ್ಷಣಾರ್ಥವಾಗಿ ಮಾಡುವ ಕದನ; ಗೋಗ್ರಹಣಕಾಲದಲ್ಲಿ ಅವುಗಳನ್ನು ರಕ್ಷಿಸಲು ಮಾಡುವ ಯುದ್ಧ : ತುಱುಗೋಳೊಳ್ ಸಾವುದು ಸೈಪಿದೆಂದು ಪಾಯ್ದುಱಿಕೆಯು ಗೋವರಣ್ಣ ಬರೆ (ಪಂಪಭಾ. ೮-೯೫); ತುಱುಗೋಳೊಳ್ ಸತ್ತೊಡೆ ಪುಣ್ಯಮಕ್ಕು (ಚಾವುಂಪು. ೨೭೫). 'ತುಱುವರಿಗಾಳಗ' ಪರಾ. **ತುರುಗೋಳು** : ಈ ವೀರಗಲ್ಲಿನಲ್ಲಿ . . . ಕನ್ನೆಯುನು ಕಾತಿಕವಳ್ಳಿಯ ತುರುಗೋಳಿನಲ್ಲಿ ಕಾದಿ ಸತ್ತನೆಂದು ಹೇಳಿದೆ (ಶಾಪಮಂ. ೫೪೨ ಸೂಚನೆ). **ತುಱುಂಗೊಳ್** : ಸಿನ್ದವ್ಮನಾಡ ಬವರದೊಳು ಕೆಲ್ಲಂಗೆಱೆಯ ತುಱುಂಗೊಳೊಳ್ ××× ಸತ್ತ (ಎಕ. V, ಅರಸೀ. ೯೯-೬ ; ಸು. 890). **ತುಱುಗೊಳ್$_2$** : ಗಂಗಮಹಾನಾಗರಾ ಮಗನ್ಮಾದೆಯನ್ನಿರಟ್ಟ ತುಱು ಗೊಳೊಳ್ ಕಾದಿ ತುಱುವನಿಕ್ಕಿಸಿ ಸುರಲೋಕದ ಭೋಗಿ ಆದನ್ (ಎಕ. IX, ಹೊಸಕೋ. ೮೪-೩ ; 720) ; ಕುಗ್ಗಲ್ಲಗಾವುಣ್ಡ ತಮುತ್ತಿಬ್ಬೊರ್ ತುಱುಗೊಳೋಳ್ಕಾದಿ ಸತ್ತರ್ (ಎಕ. IV, ಹುಣಸೂ. ೯೨-೮ ; ಸು. 920); ಕಾಡಿಗಾವುಣ್ಡ ತನ್ನೂರ ತುಱುಗೊಳೊಳ್ ತುಱುವ × ಕ್ಷಿಸಿ ಕಾದಿ ಸತ್ತ (ಎಕ. IV. ಗುಂಡ್ಲುಪೇ. ೧೪-೪ ; 995 ?). **ತೊಱುಕೊಲ್** : ತೊಱು ಕೊಲ್ವಳಿ ಪೆರಿಯವನ್ ಕೋಲ್ಗಳಾಂ[ತು] ಭಿಳ್ದನ್ (ಸೌಇಇ. IX-i, ೨-೮ ; 9ನೆಯ ಶತ). **ತೊಱುಕೊಳ** : ಸ್ವಸ್ತಿಶ್ರೀ ತೊನ್ದಗೊಲೆ ಉಕ ×× ತೊಱು ಕೊಳ × ಸತ್ತೋನ್ (ಎಕ. X, ಚಿಂತಾಮ. ೧೦೫-೩; ?). **ತೊಱುಕ್ಕೊಳ್** : ತೊಱುಕ್ಕೊಳುಳ್ವಟಿಾನ್ (ಎಕ. X(8), ಮಾಲೂರು. ೧೧೯-೧; 8ನೆಯ ಶತ). **ತೊಱುಗೊಳ್$_2$** : ಎಱೆಯಮ್ಮಂ[ನಿ]ವುದಿ ತೊಱುಗೊಳೊಳ್ಕಾದಿ ಸತ್ತೋನ್ (ಸೌಇಇ. XI-i, ೧೯-೩ ; 883) ; ಮದಲೂರ ಕುಪ್ಪ ನ್ತೊಱುಗೊಳೊಳಿಱಿದು ಸತ್ತು ಸಗ್ಗಿಯಾದನ್ (ಎಕ. X, ಕೋಲಾರ. ೧೮೨-೨ ; 1000 ?). **ತೊಱುಗೊಳ** : ××× ಮೇರು ತೊಱುಗೊಳ ಕಟ್ಟತ್ತೊಡೆ ಮೆಚ್ಚಿ ಕಲ್ನಾಡೊಂದಂ ಕೊಟ್ಟಂ (ಸೌಇಇ. IX-ii, ೭೦೬-೧; ಸು. 8ನೆಯ ಶತ). **ತೊಱುಗೊಳ್ಳ** : ಸಿಂಗಪ್ಪ ದುಗ್ಗಯ್ಯ ಸಾನ್ತನೊರ ತೊಱು ಗೊಳ್ಳ ಧಾಳಿ ಕಳ್ಳರೊಳ್ತಳ್ತಿಱಿದು ಅಟ್ಟಿ ಸತ್ತಂ (ಎಕ. IX (8), ಕಾನಕಾ. ೪೮-೧೫ ; 900). **ತೊಱುಗೋಳ್** : ಶ್ರೀ ಹೆಮ್ಮಯನ ಮಗ ಸಾನ್ತಂ ತೊಱುಗೋಳೊ ಕಾದಿ ಸತ್ತು ಸಗ್ಗಿಯದಂ (ಎಕ. IX (8), ಹೊಸಕೋ. ೧೯೫-೪ ; ಸು. 1000). [ ತುಱು + ಕೋಳ್ ]

**ತುಱುಘಟಿ** (ನಾ). ಒಂದು ಪ್ರದೇಶದ ಹೆಸರು (?) : ಆ ದೇವರ ಅಂಗರಂಗಭೋಗಕ್ಕಂ...ನೈವೇದ್ಯಕ್ಕಂ ತಂಮ ಪ್ರವಿಷ್ಟದ ತುಱುಘಟಿಯ ಮೂಡಣ ಬೆಂಚೆ ಯಿಶಾನ್ಯದಲ್ಲಿ ... ಧಾರಾಪೂರ್ಬ್ಬಕಮ್ಮಾಡಿಕೊಟ್ಟ ಮತ್ತರಾಱು (ಸೌಇಇ. IX-i, ೨೯೫-೧೮ ; 1172). [?]

**ತುಱುಚ$_1$** 'ತುಱುಂಚಿ' ನೋ.

**ತುಱುಚ$_2$** (ನಾ). ತುರಿಯೆಂಬ ಚರ್ಮರೋಗವುಳ್ಳವನು : ಸಾವಂ ಬಯಸುವ ತೊನ್ನರುಂ ತುಱುಚರುಂ ಮಹಾರೋಗಾವಿಳರುಂ ಬಂದಾ ಮರನ ಫಲಮುಂ ಮೆಲೆ ನಿರೋಗಿಗಳಾಗಿ (ಧರ್ಮಪ. ೭-೪ ವ).

[ ತುಱುಚಿ + -ಅ$_7$ ]

**ತುಱುಚಿ** 'ತುಱುಚಿ' ನೋ.

**ತುಱುಚಿ**, ಚುಱುಚಿ, ತುರಚಿ, ತುರಚೆ, ತುರಿಚೆ, ತುರುಂಚ, ತುರುಂಚಿ, ತುರುಂಚೆ, ತುಱಿಚ, ತುಱಿಚೆ, ತುಱುಚ$_1$, ತುಱುಂಚಿ, ತುಱುಜೆ (ನಾ). ೧. ಶರೀರಕ್ಕೆ ತಗುಲಿದರೆ ನವೆಯುಂಟುಮಾಡುವ ಒಂದು ಬಗೆಯ ಗಿಡ; ತುರಿಕೆಗಿಡ ; ಉರಿಸಣಿಕೆ (ಕರಾ) : "ದುಸ್ಪರ್ಶಮೆನೆ ತುಱುಚಿಯಕ್ಕುಂ" (ಮಂಗರಾ. ೪೪-೪೪) ; ಹೆಗ್ಗುಱುಟಿಗೆಯುಂ ತುಱುಚಿಯ ನೊಗ್ಗಿರೆ ತಾಂ ಕೈಪೆಸೋರೆಯ ಬೇಗರ್ಳೊಳೆಲ್ಲಂತಗ್ಗಳ ಮೂಸುರ್ಟ್ವ ರೆಗಂ ತೆಗ್ಗಿಲ್ಲದೆ ರಚಿಸಿ (ಖಮುದ. ೦೬-೦೪೫); ವನಜವನದಲಿ ತುಱುಚಿ ಕಬ್ಬಿನ ಬನದಿ ಕಡಸಿಗೆ ಚೂತಮುಯ ಕಾನನದಿ ಬೊಬ್ಬುಲಿ ಭೀಮಸೇನನ ಇರವು ತಮ್ಮೊಳಗೆ (ಕುಮ್ಮಾಅ. ೮-೫) : ತೊಳಚಿದೋಂಟದೊಳ್ ತುಱುಚಿ ಪುಟ್ಟುವಂತಿರೆ (ರಾಘೂಶ್ಮ. ೨೭-೭). **ಚುಱುಚಿ** : ೧. ಹಾಳೂರ ಚುಱುಚಿ ನಸುಗುನ್ನಿ ತಿಗುಳರ ಗಾಳಿ ಬೇಡೆಂದ (ಸರ್ವಜ್ಞ. ೦೩೮೫). **ತುರಚಿ** : ೧. 'ತುರಚಿಬಳ್ಳಿ' ಪರಾ. **ತುರಚೆ** : ೧. ತುರಚೆಯ ಜಾತಿಯ ಗಿಡ (Archangel. ಇಂಕನಿ). **ತುರಿಚೆ** : ೧. ಧರಣಿಪತಿಯುಹ ನಳನ ಸಭೆ ಯುಲಿ ತುರಿಚೆ ಮಕ್ಕಣದಂತೆ ದುರ್ಮತಿ ದುರುಳ ಪುಷ್ಕರನೆಂಬ ದಾಯಿಗ ... ಇರುತಿಹಂ (ಅಂಬಿಕಾ. ೩-೫೯) ; ಅವನ ಸಹವಾಸ ಅಂದರೆ ತುರಿಚೆ ಮುಟ್ಟಿದ ಹಾಗೆ (ರೂಢಿ). **ತುರುಚ**: ೧. ತುರುಚನ ಬೇರು, ನೀಲಿಬೇರು ಇವು ಪ್ರತ್ಯೇಕ ಹತ್ತು ಹಲಗಳನ್ನಿಡಿದು (ಸಕವ್ಯ. ೭೦). **ತುರುಚಿ** : ೧. ಬಂಜರು ನೆಲದಲ್ಲಿ ಯಥೇಚ್ಛವಾಗಿ ಬೆಳೆಯುವ ಕುಟುಕುಗೂದಲು ಗಳಿಂದ ಕೂಡಿದ, ಕೆಲವು ಜಾತಿಯ ತುರುಚಿಯ, ಚುರುಚುರುಕನ, —ಗಿಡ (Nettle. ಇಂಕನಿ) ; ತೋಟಕ್ಕೆ ಕರೆದುಕೊಂಡು ಹೋಗುವುದು ಅಲ್ಲಿ ಬೇಕೆಂದು ನೆಪ ತೆಗೆದು ಜಗಳವಾಡಿ ತುರುಚಿ ಮುಟ್ಟಿಸುವುದು (ಕಳಹು. ೧೦). **ತುರುಚೆ** : ೧. ಮಳೆಗಾಲದಲ್ಲಿ ಆ ಪ್ರದೇಶ ಜಿಗಣೆ, ಚಿತ್ತದ ಬೀಳಲು, ತುರುಚೆಗಿಡಗಳಿಂದ ಪ್ರವೇಶಕ್ಕೆ ಅಸಾಧ್ಯವಾಗುತ್ತಿತ್ತು (ಕುಡಿಕೂ. ೧೦೪); ಆ ನೋಟದಿಂದಾಗಿ ತುರುಚೆಯನ್ನೊರಸಿದಂತಾಯಿತು (ನಾಡೋಜ. ೦೯೭) ; ರಾಣಿ...ಅಸೂಯೆ ಸಂಶಯವೆಂಬ ತುರುಚೆಯ ಗಿಡಕ್ಕೆ ನೀರೆರೆದು ಪೋಷಿಸಿರಬೇಕು (ಜಾಹುತ್ತ. ೦೯). **ತುಱಿಚ** : ೧. ತಳವಲು ತುಂಬೆ ನೆಲ್ಲಿ ತುಱಿಚ ಕಿಱುನೆಲ್ಲಿ (ಖಮುದ. ೫-೮೯). **ತುಱಿಚೆ**: ೧. "ಮರ್ಕಟಿಯೆನಿಕು ಕಪಿಕಚ್ಛು ದುರಾಲಭೆ ತುಱಿಚಿ" (ಪಸ್ತುಕೋ. ೩೭-೨೦). ೨. ಒಂದು ಬಗೆಯ ಚರ್ಮ ರೋಗ ; ತುರಿ ರೋಗ : ಹಱುವಾಯ ತುಱಿ[ಪಾಕಾಂ. ಱು]ಚೆಗಳ ಬತ್ತಲೆಯ ಬಾಳ್ವಿಣಂ ಗಳು ಸುತ್ತ ಮುತ್ತಿರಲು (ಪಾಗೀರ. ದೇ. ೨೫೪-೨೭). **ತುಱುಚ$_1$** : ೧. "ಮರ್ಕಟಃ –ಎಕ್ಕೆ, ತುಱುಚ, ಹಿಪ್ಪಲಿ, ಕೋಡಗ" (ಓಷಧಿ. ೦೦೫); ಮೆಣಸು ... ಆಷಾಢಿ, ಸಹದೇವಿ, ತುಱುಚ, ನೀಲಿ, ರುದ್ರಜಡೆ, ಇವ ಸಮಾನಂ ಗೊಂಡು ಸಹದೇವಿರಸದಲ್ಲಿ ಲೇಪವಂ ಮಾಡಿದುದು ಜ್ವರ ಹರ (ವಿಷ್ಯವಿ. ೦೮೩) : ಹಂಬಿನ ತುಱುಚನಾ ಬೇರು ಸಸಿಗುಪ್ಪೆ . . . ಹತ್ತಿ ಹರಳ ರಸಮಂ ಪೂರೈಸಿ ಕಾಸಿ (ಸೂಪಶಾ. ೨-೦೯) ; ತುಱುಚನ ಬೇರು, ಪರ್ಪಾಟಕ, ಅಮರ ದವಳ್ಳಿ, ಶುಂಠಿ ಇವಿಷ್ಟನು ... ಕಷಾಯವ ಕಾಸಿ (ವೈದ್ಯಸಾ. I, ೩೭೩) : ತುಱುಚನ ಗಿಡು ಸೋಂಕಿದಂತೆ ಬಿಱುಬುಗೊಂಬಳು ಬೆದಱುವಳು (ಹದಿಬ. ೭-೨೭). **ತುಱುಚಿ** : ೧. "ದುರಾಲಭಾ – ತುಱುಚಿ" (ಬಾಹಟೀ. ೨-೨-೮ವ) ; ಹಸಿದಡುಣಬಹುದೇ ನಸುಗುನ್ನಿ ತುಱುಚಿ [ಪಾಕಾಂ. ಱಿಚೆ] ಯನು (ಅವಚಂ. ೭೦-೩೧೫); ಹಿತ್ತಲ ತುಱುಚಿಯ ತಂದು ಪನ್ನೀರನೆಱೆದರೆ ಒತ್ತಿದವರ ಹಱಿಕೊಂಡು ತಿಂಬೋದು ಬಿಡಬಲ್ಲುದೆ (ಪುರಂದ. ೫-೫೭-೩). **ತುಱುಜೆ** : ೧. "ಕುಚ್ಛಭಃ –ತು(ಱು)ರುಜೆ" (ಓಷಧಿ. ೨೦); ಕಬ್ಬುನದ

ಬಡಿಗೆಗಳ ನಸುಗುನ್ನಿದುಱುಜೆ [ಪಾಠಾಂ. ತುಱುಚೆ]ಯ ಪುಡಿಯ ತೀವಿದ ತಿತ್ತಿಗಳ ... ಹರಹಿನಲೆಸೆದುದಾ ದುರ್ಗ (ತೊರರಾ. ೬-೭-೧೧).

[<ತುೞು./ತೆಲು. ತುರುಜೆ = ಮಂಗರವಳ್ಳಿ]

**ತುಱುಜೆ** 'ತುಱುಚೆ' ನೋ.

**ತುಱುತುಱು** (ನಾ). ಒಂದು ಅನುಕರಣ ಶಬ್ದ. 'ತುಱುತುಱುತಿನ್' ಪರಾ.

**ತುಱುತುಱುತಿನ್**, ದುಱುದುಱುದಿನ್ (ಕ್ರಿ). ಬಹಳ ನವೆಯುಂಟಾಗು, –ಕಡಿತವುಂಟಾಗು ; "ಚುರುಂಚುರುಂ ಉರಿ" (ಪ್ರಭಣ್ಣ) : ಮಿಱುಗುವ ದಾಡೆಯಿಂದಣೆದು ಪೆರ್ದರಿಯಂ ಕರದಿಂದಮೊತ್ತುತುಂ ತುಱುತುಱುತಿಂಬ ಕಂದರಮನೊತ್ತರಗೊಂಡು ಮಹಾಮಹೀಜದೊಳ್ ತಱತಱನಾಗಿ ಮಾಱೊರಸುತುಂ ... ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೧೧೧೨). **ದುಱುದುಱುದಿನ್** : ಉದಯಿಸುಗುಂ ಶೂಲಂ ವಾತದಿನುರಿಪಂ ಪಿತ್ತದೇಟ್ಗೆಯಿಂ ದುಱುದುಱುದಿಂಬುದು ಕಫದಿನಾ ತ್ರಿದೋಷದ ಪುದುವಿಂದಾಮಿಶ್ರಮಾಗಿ ತೋರ್ಕುಂ ತವ್ರೊಳ್ (ಲೋಕೋಪ. ೯-೩). [ತುಱುತುಱು + ತಿನ್]

**ತುಱುನೆಲೆ** (ನಾ). ದನಕರುಗಳನ್ನು ಕಟ್ಟುವ ಅಥವಾ ಕೂಡುವ ಸ್ಥಳ ; **ಕೊಟ್ಟಿಗೆ** : ಮಾನವಮದನನುಂ ಮಕರಂದನುಮಾ ತುಱುಪಟ್ಟಿಯ ತುಱುನೆಲೆಯೊಳ್ ನಿಂದು ನೋಡುತ್ತುಮಿರೆ (ಲೀಲಾವ. ೫-೧೦೦).

[ತುಱು + ನೆಲೆ]

**ತುಱುಪಟ್ಟಿ**, ತುರುಪಟ್ಟಿ, ತುರುಹಟ್ಟಿ, ತುಱುವಟ್ಟಿ, ತುಱುಹಟ್ಟಿ (ನಾ). ೧. ದನಕರುಗಳ ಹಟ್ಟಿ ; ದನಕರುಗಳನ್ನು ಕಟ್ಟಿಹಾಕುವ ಸ್ಥಳ ; **ಕೊಟ್ಟಿಗೆ** ; **ಗೋಸ್ಥಾನ** : "ಗೋಷ್ಠಂ, ಗೋಸ್ಥಾನಕಂ, ಈ ೨ ತುಱುಪಟ್ಟಿಯ ಹೆಸರು" (ನಾಚಿರಾ. ೧೦೩) ; ಗೋಟ್ಟೀ–ತುಱುಪಟ್ಟಿ [ಪಾಠಾಂ. ಳ್ಳಿ] ಯೊಳ್ (ವಡ್ಡಾರಾ. ೧೮೦-೫) ; ತುಱುಗಿದ ತುರಗಗಳೆಂದೆಂಬ ಪಶುಗಳ ಮುಱಿದಿಕ್ಕಿ ರಣವೆಂದೆಂಬ ತುಱುಪಟ್ಟಿ[ಪಾಠಾಂ. ಟ್ಟೆ]ಯೊಳು ರಾಮನೆಂದೆಂಬ ಪೆರ್ಬುಲಿ ಬಿಱುವರಿದುದು (ಕುರಾಸಾಂ. ೨೦-೬೫). ೨. **ಗೊಲ್ಲರು ವಾಸಿಸುವ ಹಳ್ಳಿ** ; **ಗೊಲ್ಲರ ದೊಡ್ಡಿ** : ತುಱುಗಾರ್ತಿಯಂ ಕರೆದು ಪುತ್ರಲಾಭಮಾದುದೆಂದು ಮಗನಂ ಕೊಟ್ಟು ತುಱುಪಟ್ಟಿಯೊಳೊ ಸಗೆಯಂ ಮಾಡಿ (ಧರ್ಮಾಮೃ. ೧೦-೧೫೦) ; ಅಲ್ಲಿಗೆ ಸಮಿಪಪದೊಳೊಂದು ತುಱುಪಟ್ಟಿಗೆಲ್ಲಂ ಪ್ರಧಾನ ನಂದಗೋವನೆಂಬಂ (ಬಂಹರಿ. ೬-೫ವ) ; ಗಂಗಾ ತೀರದ ತುಱುಪಟ್ಟಿ[ಟ್ಟಿ]ಯೊಳಗೆ ವೃಷಭಂಗಳಾಗಿ ಸಂಜನಿಸಿ (ನೇಮಿಸಂ. ೬-೨೨) ; ಸಂತತಾಶ್ರಮ ತಪೋವನಗಳು ತುಱುಪಟ್ಟಿ ಮುಂತಾದುವು ಘೋಷಾಕರವು (ಶಾಂತೀಚ. ೮-೬೨); ಸಲೆ ಪೆಂಪೊಗೆದ ಡಂಗುರ ಸಾಱಿಸಲು ತುಱುಪಟ್ಟಿಯಲಿ (ಸಾಳ್ವಭಾ. ೨೨-೨೫). ೩. (ಆಲಂ) ಹಳ್ಳಿಯ ಜನ : ಅನ್ನೆಗಮಾ ತುಱುಪಟ್ಟಿಯುಮಲ್ಲಿಂದೆರ್ದು ನಾಡೆ ಗೆಂಟುಪೋದತ್ತು (ವಡ್ಡಾರಾ. ೧೦೩-೨೩). **ತುರುಪಟ್ಟಿ** : ೧. ಅಮೃತಶಿಲೆಯ ಗೋಶಾಲೆ ತಂತುಕಾರಸಹಸ್ರಜಾಲಮೈರೂಪ್ಮದಿಂ . . . ಖಿನ್ನಮಿದೆ ಪಾಳೂರ ತುರುಪಟ್ಟಿಯೋಲ್ (ಶ್ರೀರಾಮಾ. ೮೫೦-೧೧). **ತುರುಹಟ್ಟಿ**. ೧. ಒಮ್ಮೆ ನಮ್ಮ ತುರುಹಟ್ಟಿಗೆ ಹುಲಿ ನುಗ್ಗಿತ್ತು (ರೂಢಿ). **ತುಱುವಟ್ಟಿ** : ೧. ಸುರಧೇನುಸಂಚಯಂ ಸರ್ಪಭೂಷಣನ ತುಱುವಟ್ಟಿಯೆನೆ ಚೆನ್ನಾದುದರಸು ತನಮಂದೀಶನ (ಚಬಪು. ೨೯-೯೨) ; ತುಱುವಟ್ಟಿಯಿಂದ ತೊಪ್ಪಿಂದ ತಣ್ಣೆಳಲಿಂದ ಕೆಱೆ ಕಟ್ಟೆಯಿಂದ (ನಂದಿಮಾ. ೧೫-೧೬). **ತುಱುಹಟ್ಟಿ** : ೧. ಗೋಷ್ಠಾಧ್ಯಕ್ಷ, ಗೋವಿಂದ–ತುಱುಹಟ್ಟಿಯ ಅದ್ದಿಕದವನು(ನಾಚಿರಾ. ೬). ೨. ನಾಡೊಳಗೆ ತುಱುಹಟ್ಟಿಯಲಿ ಹೊಲನಾಡಿ ಹೆಚ್ಚಿದ ಗೋಕದಂಬವ ನೋಡುವುದು ನೆವ (ಕುವ್ಯಾಆ. ೧೭-೨೦). 'ಕಱುಹಟ್ಟಿ' ಪರಾ.

[ತುಱು + ಪಟ್ಟಿ$_1$]

**ತುಱುಪರಿ** 'ತುಱುವರಿ' ನೋ.

**ತುಱುಪರಿಗ** (ನಾ). = ತುಱುಂಗೋಳ್(?) : ಅಂತಾತನನುಜ ದೇಕರಸ ತುಱುಪರಿಗವೆಂಬ ಪುಯ್ಯಲ ನೆಱೆಯಾಲಿಸಿ ಕೇಳ್ದು (ಎಕ. XII, ಚಿಕ್ಕನಾ. ೧೮-೨೬ ; 1215 ?). [ P ಇದು 'ತುಱುಪರಿಗಂ' ಎಂಬುದರ ಅಪಲಿಖಿತ ವಿರಬಹುದು]

**ತುಱುಪಳ್ಳಿ** 'ತುಱುವಳ್ಳಿ' ನೋ.

**ತುಱುಪಳ್ಳಿಕಾಱ** (ನಾ). ಗೊಲ್ಲರ ಹಳ್ಳಿಯವನು ; ಗೊಲ್ಲ; ಗೋವಳಿಗ : ಧರಣಿಪಾಲರ ಮಧ್ಯದಲಿ ಭಾಸ್ಕರನು ಗಡ ತುಱುಪಳ್ಳಿಕಾಱರ ಪುರದ ಭಾಸ್ಕರನೀತನಲ್ಲಾ (ಕುವ್ಯಾಸ. ೮-೧೭).

[ತುಱುಪಳ್ಳಿ (<ತುಱುವಳ್ಳಿ) + – ಕಾಱ]

**ತುಱುಬಿಕ್ಕು**, ತುರುಬಿಕ್ಕು (ಕ್ರಿ). ತುರುಬನ್ನು ಹಾಕು ; ಕೂದಲನ್ನು ಗಂಟುಕಟ್ಟು : ತುಂಬಿಗುರುಳ ತುಱುಬಿಕ್ಕಿ ದಾದಿಯರು ನಿತಂಬಿನಿ ಯೊಡನೆ ಪೇಳಿದರು (ಮೋಹತ. ೯-೧೬). **ತುರುಬಿಕ್ಕು** : ಉಳ್ಳಲರ ಹೂವೀಡ ತುರುಬಿಕ್ಕಿ ಮುಡಿಸಿ (ಕಾಲೂರ. ೦೮೩-೪೦೪).

[ತುಱುಬು$_2$(<ತುಱುಂಬು$_2$) + ಇಕ್ಕು]

**ತುಱುಬು$_1$** 'ತುಱುಂಬು$_1$' ನೋ.

**ತುಱುಬು$_2$** 'ತುಱುಂಬು$_2$' ನೋ.

**ತುಱುಮಂದೆ**, ತುರುಮಂದೆ (ನಾ). ೧. ದನಗಳ ಹಿಂಡು, –ಗುಂಪು : "ತುಱುಮಂದೆಯಕ್ಕತಿ ಗೋವ್ರಷಂ" (ಮಂಗರಾ. ೫೬-೧೦) ; "ತುಱು ಹಿಂಡು ತುಱುಮಂದೆಯಕ್ಕು ಗೋಸಮುದಾಯವು" (ಶಬ್ದಮಂ. ೩೪) : ನಾನಾರೆಂಬುದ ತಾನಱಿತು ತಿಳಿದಲ್ಲಿ ತುಱುಮಂದೆಯೊಳಗಾಯಿತ್ತು (ತುಱುಂಗಾ. ೪-೬) ; ಈಗಳೊ ನೀನ್, ನಿನ್ನಯ್ಯನವೆ ತುಱುಮಂದೆಗಳ್ ವೇಣ್ ತುಱುಪಟ್ಟಿಗಳ ಬಱಿಯ ... ಪುಲ್ಗಾವಲೆಡೆಗೊರ್ವಳೇ ಚೆಚ್ಚರಂ ಬೋಗು (ಬದ್ಮಪ್ರ. ೩೪-೬೪೨). ೨. **ಗೋವುಗಳಂ ಇರುವ ನೆಲೆ** ; **ಕೊಟ್ಟಿಗೆ** ; **ಗೋಸ್ಥಾನ** ; **ಗೋಕುಲ** : (+). **ತುರುಮಂದೆ** : ೧. "ತುರುವಿಂಡೆನಲು ತುರುಮಂದೆಯೆನಲು ಗೋಸಮುದಾಯಮಕ್ಕು" (ಕಶರ. ೪೭) ; ತುರುಮಂದೆಯಲ್ಲಿ ಇರುವ ಪದ್ಧತಿಯಾಗಿದ್ದುದರಿಂದ (ನಮ್ಮೂರ. ೭೭). [ತುಱು + ಮಂದೆ]

**ತುಱುವಿಂಡಿ**, ತರಿವಿಂಡಿ, ತಱಿವಿಂಡಿ, ತಱುವಿಂಡಿ, ತುರುವಿಂಡಿ (ನಾ). ೧. **ಹೊಸಪ್ರಾಯದವಳಂ** ; **ಮೈನೆರೆದ ಹೆಣ್ಣು** ; ನವ ಯೌವನವತಿ : "ತುಱುವಿಂಡಿಯೆನೆ ನೆಱೆದ ಪೆಣ್ಣಕ್ಕು" (ಶಬ್ದಮಂ. ೭೪) : ಪಾಡಿದರ್ ತುಱುವಿಂಡಿಯರಮ್ಯತೋಪಮಾನಗಾನಮನೊಲವಿಂ (ಉದ್ಭಟ. ೨-೦೦೪). ೨. ಮಂಟ್ಟಾದವಳಂ : "ತುಱುವಿಂಡಿಯಾರಯ್ಯೆ ಪುಷ್ಪವತಿಯಾದವಳ್" (ಕಬ್ಬಿಕ್ಕೆ. ೨೬). **ತರಿವಿಂಡಿ** : ೧. ತರಿವಿಂಡಿ ಯರ್ನಡೆದರೊಡಲಳವಿನಿಂ ಮಲೆಯ ಬೆರವ ಪೊರೆಯಂ ಪೊತ್ತು (ಕಾಲೂರ ೦೩೪-೨೬೧). **ತಱಿವಿಂಡಿ** : ೧. ತುಱುಗಿದಾಭರಣಗಳೋರೆಕೋರೆಯ ತಿದ್ದಿತ [ಪಾಠಾಂ. ಸ]ಱಿವಿಂಡಿಯನುವಾದಳಾಗ (ಭರಚ. ೦೦-೬೩) ; ರಣಕೆ ಪೋಪವಸರದೊಳ್ ತಱಿವಿಂಡಿಯುಪ್ಪ ತನ್ನಯ ಮಡದಿಯನಿಕ್ಷುಮತಿಯಂ ಕಂಡು (ರಾಮಾಶ್ವ. ೧೫೦-೨೬). ೨. "ತಱಿ[ಪಾಠಾಂ. ತುಱು]ವಿಂಡಿ ಯೆಂದು ಪುಷ್ಪಿತೆಯಾದ ಕಾಂತೆ" (ಕಶಸಾ. ೬೨-೩೭೨) ; "ತಱಿ [ಪಾಠಾಂ. ತುಱು]ವಿಂಡಿಯೆನಲು ಪುಷ್ಪಿತೆ" (ಕವಿಕಂ. ೧೬೪). **ತಱುವಿಂಡಿ** : ೨. "ತಱುವಿಂಡಿ–ರಜಸ್ವಲೆ, ಮುಟ್ಟಾದ ಹೆಂಗಸು, ಪುಷ್ಪಿತೆ" (ಪ್ರಭಣ್ಣ). **ತುರುವಿಂಡಿ**:೧."ತುರುವಿಂಡಿಯೆಂದೆನಲ್ ಪ್ರಥಮಋತುವಾದ ಕಾಮಿನಿ" (ಕಶರ. ೪೭): "ತಱುವಿಂಡಿ–ತುರುವಿಂಡಿ=ಬೆಳೆದ ಹುಡಿಗೆ, ಹೆಣ್ಣಾದವಳು" (ಜಾನಕೋ. ೬೭). 'ಸಱಿವಿಂಡಿ' ಪರಾ. [<ತುಱುಗು$_1$ + ವಿಂಡಿ]

**ತುಱುಯ್ಯಾಲು** 'ತುಱುಹಂಯಾಲು' ನೋ.

**ತುಱುವಟ್ಟಿ** 'ತುಱುಪಟ್ಟಿ' ನೋ.

**ತುಱುವರಿ**, ತುಱುಪರಿ, ತುಱುಹರಿ$_2$ (ನಾ). = ತುಱುಗೋಳ್ : ಮಾದೆಯ ಹರಿಹರಂಗಳು ಸಂಕರಸೆಟ್ಟಿಯ ಹಳ್ಳಿಯ ತುಱುವರಿಯಲು ಹರಿದು ಸ್ವರ್ಗಸ್ತನಾದನು (ಮ್ಯಆರ್. ೧೯೩೮, ೪-೪; 1291). **ತುಱುಪರಿ :** ಬೆಳ್ಳತ್ತೂರ್ಗದ ಗಾವುಣ್ಡಂ ತುಱುಪರಿಯಲಿ ಸತ್ತಂ (ಎಕ. XII, ತಿಪಟೂ. ೧೧-೩; ಸು. 930); ಗನಪಳ್ಳಿಯ ಎಱ×ಸಂದಂ ಕಾಸನರ ಭೀಮಂ ಉರಟಿವಿನೊಳ್ ತುಱುಪರಿಯೆ ಮಾಣ್ಚಿ...ಸುರಲೋಕಕ್ಕೆ ಸಂದನ್ (ಎಕ. VIII(s), ಸೊರಬ. ೫೭೫-೩; 981). **ತುಱುಹರಿ$_2$** : ಶ್ರೀಮತ್ಕದಂಬರ ಸಾಸ್ತಯ ದೇವ ಗುಡುವೆಯನಿಱಿದು ತುಱುಹರಿಯೆ ಕಾದಿಸಿ ತುಱುವಿಂಗಡ್ಡಂ ಬನ್ದು (ಎಕ. VIII, ಸೊರಬ. ೬೦-೧೭; 1032) ; ತುಱುಹರಿಯಲು ಕಾದಿಸಿದವರು ...ಸುರಲೋಕಪ್ರಾಪ್ತವಾದರು (ಎಕ. XVI, ಚಿಕ್ಕನಾ. ೬೦-೩; 1123) ; ಮತ್ತಿಗಟ್ಟದ ಮುದ್ದಗ × × × ಗಜಕ್ಕಗವುಣ್ಡಂಗಂ ಪುಟ್ಟಿ × ಮಾರಗವುಡ ತುಱುಹರಿಯಲು...ಸುರಲೋಕಪ್ರಾಪ್ತನಾದಂ (ಎಕ. XII, ತಿಪಟೂ. ೩೯-೮; 1291). [ ತುಱು + ಪರಿ$_3$ ]

**ತುಱುವರಿಗಾಳಗ** (ನಾ). ಹಸುಗಳನ್ನು ಅಪಹರಿಸಲುವಾಗ ಮಾಡುವ ಯುದ್ಧ; ಗೋಗ್ರಹಣನಿಮಿತ್ತವಾದ ಕಾಳಗ,-ಯುದ್ಧ : ತುಱುವರಿ [ಪಾಠಾಂ. ಬರೆ, ಹರಿ] ಗಾಳಗದೊಳೊಡೆಮುರಿದು ಗೋವರು ಧೂಳಿಗೋಟೆಯ ಕೊಂಡರಮರರ ರಾಜಧಾನಿಗಳ (ಕುವ್ಯಾವಿ. ೫-೩). 'ತುಱುಗೋಳ್' ಪರಾ. [ ತುಱುವರಿ + ಕಾಳಗ ( <ಕಾಳೆಗ) ]

**ತುಱುವಳ** 'ತುಱುವಾಳ' ನೋ.

**ತುಱುವಳ್ತಿ**, ತುರುವಳ್ತಿ (ನಾ). ಗೊಲ್ಲರ ಹೆಂಗಸು; ಗೊಲ್ಲಿತಿ; ಗೋಪಿ: "ತುಱುವಳ್ತಿಯರು ಗೊಲ್ಲತಿಯರೆನಲ್ ಗೋಪಿಯರು" (ಶಬ್ದಮಂ. ೩೪). **ತುರುವಳ್ತಿ :** "ತುರುವಳ್ತಿಯೆನೆ ಗೋಪತರುಣಿ" (ಕಶರ. ೪೭).

[ ತುಱುವಳ (<ತುಱುವಾಳ) + -ತಿ$_1$ (< - ಇತ್ತಿ) ]

**ತುಱುವಳ್ಳಿ**, ತುಱುಪಳ್ಳಿ (ನಾ). = ತುಱುಪಟ್ಟಿ ೨ : "ಘೋಷ ತುಱುವಳ್ಳಿಯು ತಾಂ" (ಕವಿಕಂ. ೮೫). **ತುಱುಪಳ್ಳಿ:** ತುಱುಪಳ್ಳಿಯ ಗೋವುಳಿಗರೊಳ್ಪೋಟಿಗೆಯ್ದುಱಿದಾಡುವ ಬೀಡಿನೆರ್ಮೆಗಳಂ ಪಿಡಿದಂತರಸ ಗೊರ್ಪಿಸುವುದುಂ (ಸುಕುಮಾ. ೭-೩೫ ವ) : ತುಱುಪಳ್ಳಿಗಳ ನೋಡಿ ವನಾಳಿದಪ್ಪದೆ ಬೇಟೆಯಾಡಿ ಸಮಸ್ತದಳಸಹಿತ ... ನೃಪ ಬಿಡಿಸಿದನು ಪಾಳೆಯವ (ಕುವ್ಯಾಅ. ೭೭೩. ೧೯-೧). [ತುಱು + ಪಳ್ಳಿ$_1$]

**ತುಱುವಟ್ತಿ** (ನಾ). (?) : ಕರಪುರನ್ ಬನ್ದು ಬಲ್ಲದಾ ತೊಱುಗೊಳೆ ಊರಾ ತೊಱುವಳ್ಳ ಉವಟನ್ ತುಱುವಟ್ತಿ ಇದಿರೆ ನಡದಿಱಿದು ಬಿಟ್ರೋನ್ (ಎಕ. X, ಮುಳಬಾ. ೯೨-೭; ಸು. 780). [ ? ]

**ತುಱುವಾಳ**, ತುರುವಳ, ತುಱುವಳ, ತೊಱುವಳ್ಳ, ತೊಱುವಾಳ (ನಾ). ದನವನ್ನು ಕಾಯುವವನು; ಗೊಲ್ಲ; ಗೋವಳ : "ಗೋಪತಿ ಗೋಮಿಯೆನಲು ತುಱುವಾಳನಕ್ಕು" (ಮಂಗರಾ. ೫೭-೧೦). **ತುರುವಳ:** "ತುರುವಳರೆನಲ್ಕೆ ಗೋಪರುಂ" (ಕಶರ.೪೭). **ತುಱುವಳ:** "ತುಱುವಳನೆಂದು ಗೋಪಾಳಂ" (ಕಶಸಾ. ೭-೧೨೬) : "ತುಱುವಳರೆನೆ ಗೋಪಾಲರ್" (ಕವಿಕಂ. ೮೫) ; ನರಸಿಂಹಸೆಟ್ಟಿ ಕೊಟ್ಟ ಗ ೨ ತುಱುವಳ ಮಾಳಗತಿ ಕೊಟ್ಟ ಗ ೧ (ಎಕ. VI, ತರೀಕೆ. ೮೭-೧೧; 1239) ; ಪಳ್ಳಿಯ ತುಱುವಳನಂತಿರೆ ಹಸುವ ನೇನೆಂದು ಕಟ್ಟಿದಯ್ (ರಾಮಾಶ್ವ. ೧೫೩-೨೦). **ತೊಱುವಳ್ಳ** : ಕರಪುರನ್ ಬನ್ದು ಬತದಾ ತೊಱುಗೊಳೆ ಊರಾ ತೊಱುವಳ್ಳ ಉವಟನ್ ತುಱುವಟ್ತಿ ಇದಿರೆ ನಡದಿಱಿದು ಬಿಟ್ರೋನ್ (ಎಕ. X, ಮುಳಬಾ. ೯೨-೬; ಸು. 780). **ತೊಱುವಾಳ್ಳ** : ಸೆಬ್ಬೆಣ್ನಾಡ ಮಾಜನ ಮೂವತ್ತೀರ್ಚ್ಛರ ಅಳ್ತೊಡುಗೆಯನ್ ಕೇಸರಿ ತೊಱುವಾಳ್ಳನಾ ಮಗನ್ ಆಲನ ತೊಱು ಇಕ್ಕಿಸಿ ಬಿಟ್ರಾನ್ (ಎಕ. X (s), ಮಾಲೂರು. ೧೫೭-೬ ; 8ನೆಯ ಶತ). [ತುಱು + - ವಾಳ$_1$]

**ತುಱುವಿಂಡು**, ತುರುವಿಂಡು (ನಾ). ದನಗಳ ಮಂದೆ ; ದನಕರುಗಳ ಸಮೂಹ : ಮೇವ ತುಱುವಿಂಡಿನೊಳು ದಾರಿಯೊಳು ಸುತ್ತಿ ಸುಳಿದಱಿಸಿದಂ ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿಕಾರ್ಜುನನನು (ಸಿದ್ಧರಾ. ೨-೩೬) ; ತುಱುವಿಂಡನೊತ್ತಟ್ಟೆನೊಳ್ಪಿಟ್ಟು ... ಐತಂದರ್ (ಶ್ರೀರಾಮ. ೪-೧೪). **ತುರುವಿಂಡು :** "ತುರುವಿಂಡೆನಲು ತುರುಮಂದೆಯೆನಲು ಗೋಸಮುದಾಯಮಕ್ಕು" (ಕಶರ. ೪೭) ; ವರುಣನು ಒಂದು ಹೋರಿಯನ್ನು ಕಳುಹಿಸಿದನು ... ಅದರ ಸಾಧು ಸ್ವಭಾವವನ್ನು ನೋಡಿ ಚಕ್ರವರ್ತಿಯು ಅದನ್ನು ತನ್ನ ತುರುವಿಂಡಿನಲ್ಲಿ ಸೇರಿಸಿಕೊಂಡನು (ಮಹಿಸ. ೯೫).

[ತುಱು + ಪಿಂಡು$_2$]

**ತುಱುವಿಡು** (ಕ್ರಿ). (ಅಪಹಾರವಾದ) ದನಗಳನ್ನು ಮರಳಿಸು,-ಕಾಪಾಡು (?) : ತುಱುಕೊಳೆ ಪಳ್ಳಿ ಅರಕ್ಕಮನ್ ತುಱುವಿಟ್ಟು ಪಿಟ್ಟಂ (ಎಕ. X, ಮುಳಬಾ. ೨೭೫-೨ ; ಸು. 860). [ತುಱು + ಬಿಡು$_1$]

**ತುಱುವೆ**, ತುರುಬಿ, ತುರುಬೆ, ತುರುಂಬೆಂ, ತುರುವೆ$_2$ (ನಾ). ೧. ಒಂದು ಬಗೆಯ ಹೂವಿನ ಗಿಡ : ತುಱುವೆಯ ಬೇರನಿಕ್ಕಿ ... ಘೃತಮಂ ಬೆರಸಿಟ್ಟು (ಲೋಕೋಪ. ೮-೧೦) ; ಪೊಂಗಳನೆ ಗೋಪಿಯರ್ ಕೆದಱಿದವೋಲ್ ತುಱುವೆಯ ನೆಗ್ಗಿಲ ಪೂಗಳ್ ತುಱುಪಟ್ಟಿಯ ಪೊಱಗೆ ತುಱುಗಿ ಕರಮೆಸೆದಿರ್ಕುಂ (ಲೀಲಾವ. ೫-೧೧೫) ; ತುಱುವೆಯ ಕಾಯ್ಗಳುಮಂ ಮುಂಗುಱುವಳ್ಳಿಯನಿಡಿದ ಚೂರ್ಣಮಂ ಶರ್ಕರೆಯಿಂ ನೆಱೆ ತಿಂದು ಬಿಸಿಯ ನೀರಂ ಕಿಱಿದುಗೊಳಲ್ಕಱಿಯದುಱುಗುಮೇ ಕೆಯ್ಮಸಕಂ (ಖಮದ. ೧೪-೪೨); ತುಱುವೆಯ ಬೇರು ಮಾದಲದ ಕಡ್ಡಿಗಳನು ಇಟ್ಟು ತೊಳಸಿದೊಡೆ (ಸೂಪಶಾ. ೨-೩). ತುಱುವೆ :—ಈ ಬೇರಂ ನರಮೂತ್ರದಿಂದ ಅರೆದು ತೆಗೆದುಕೊಳ್ಳೆ ಬಾಣಂತಿಸನ್ನಿ ಹರ (ವಿಷ್ಯವಿ. ೪). ೨. ಒಂದು ಬಗೆಯ ಹಕ್ಕಿ : ಲಾವುಗೆ ಹರಡೆ ಗೌಜು ಟಿಟ್ಟಿಭ ಕುಕಿಲ ತುಱುವೆ ಕಳ[ ಪಾಠಾಂ. ತುರುವೆಗಣ್ಣಂ ] ಹಂಸೆ ಶುಕ ಪಾರಿವದ ದನಿಗಳಿಂದೊದಱಿ ತಾವ್ ಕರೆವುತಿರಲು (ಸೋಮಚ. ಪರಿ. ೨೧೪) ; (ಹಚಕಾ. ೫-೪೨ ನೋ). **ತುರುಬಿ :** ೧. ಶ್ರೀಮುದ್ರೆಗಿಡ... ತುರುಬೀಗಿಡ, ಗಿಡುತಿಂಗಿ (ಮ್ಯಜಿಗಿ. ೦-೬). **ತುರುಬೆ :** ೧. ಬೇವಿನ ಸೊಪ್ಪಿನ ಕಿಚ್ಚುಮಾಡಿ ಅದರಲ್ಲಿ ತುರುಬೆ, ತುಂಬೆ, ಗಣಜಲಿ, ಹೆಬ್ಬೇವು ಮೊದಲಾದ ತಪ್ಪಲುಗಳನ್ನು ಚೆಲ್ಲಿ (ಕನ್ನಜಾ. ೧೬೭); ನಮ್ಮ ಹುಡುಗಿ ಮಾಘಗೌರೀಪೂಜೆಗೆ ತುರುಬೆ ಹೂವು ಕೊಯ್ದುಕೊಂಡು ಬರಲು ಹೋಗಿದ್ದಾಳೆ (ರೂಢಿ). **ತುರುಮೆ :** ೧. "ತುತ್ತ-ತುತ್ತಿ, ತುರುಮೆ" (ಓಷಧಿ. ೭೦). **ತುರುವೆ$_2$ :** ೧. "ಭೂರಿಬಲಾ-ತುರುವೆ" (ಓಷಧಿ. ೦೧೨) ; ಮೂಲಿಕಾ ಪ್ರಯೋಗ . . . ತುರುವೆಯ ಬಡಗ ಹರಿದ ಬೇರಂ ತಂದು ಕಿವಿಗೆ ಕಟ್ಟಲು ಛಳಿ ಬಿಡುವುದು (ಸಕವೈ ೭೫).

**ತುಱುಸೆಱೆ** (ನಾ). ಹಸುಗಳನ್ನು ಸೆರೆ ಹಿಡಿಯುವುದು ; ಗೋಗ್ರಹಣ : ಅರಿ ವಿರಾಟನ ಪುರಕೆ ಹಾಯಿದು ತುಱುಸೆಱೆಯ ತೆಗೆಸುವೆವು (ಕುವ್ಯಾವಿ. ೪-೧೯) : ಸಂಗಂಣ್ಣನು ಮೂಗೂರಿಂಗೆ ಹಳ್ಳಿಹಿರಿಉರ ಸಮಸ್ತ ಪ್ರಜೆಗಉಡುಗಳ ತುಱುಸೆಱೆಯನಿಱಿದು ಕೊಂಡು ಹೋದಲ್ಲಿ (ಎಕ. XIV, ತಿರುಮ. ೨೨೩-೪ ; ?). [ತುಱು+ಸೆಱೆ$_2$]

**ತುಱುಸೆಱೆಗೊಳ್** (ಕ್ರಿ). ಹಸುಗಳನ್ನು ಸೆರೆಹಿಡಿ : ಅರಮನೆಯ ಸೀಮೆಯೊಳ್ ದಾಟಿಟ್ಟು ತುಱುಸೆಱೆಗೊಂಡುದಱಿಂದಂದಿಗೆವರ್ಪ ಧನ ಧಾನ್ಯಂಗಳಡಂಗಿ (ಚಿಕವಂ. ೪೫-೧೧). [ತುಱುಸೆಱೆ + ಕೊಳ್$_1$]

**ತುಱುಸೆಱೆವಿಡಿ** (ಕ್ರಿ). ಹಸುಗಳನ್ನು ಸೆರೆಹಿಡಿಯುವ ಹಾಗೆ ಗುಂಪುಗುಂಪಾಗಿ ಹಿಡಿ : ಒಱಲ್ದೆಱಗುವ ಪಱಮೆವಱಗಳಂ ತುಱುಸೆಱೆವಿಡಿವ ನಱುಗಂಪಿನ ಸೊಂಪುಗಳ್ಗಿಂಬಾದ ಪೊಂಬಾಱೆಗಳಿಂ ಬಳ್ಕುವಡಕೆಯ ಸಾಲಳೊಳಂ (ಕಬ್ಬಿಕಾ. ೩೦). [ತುಱುಸೆಱೆ + ಪಿಡಿ$_1$]

**ತುಱುಹಟ್ಟಿ** 'ತುಱುಪಟ್ಟಿ' ನೋ.

**ತುಱುಹತಿ** (ನಾ). = ತುಱುಗೋಳ್(?) : ಕಲೋಜ ಪೆಗಡೆ ಕೀರ್ತ್ಯೆಯ [೦] ಗಳು... ತುಱುವ ಕೊಂಡು ಹೋಹಂದು ಆವರ ಕೂಡೆ ಕಾದಿ ತುಱುಹತಿಯು ಸತ್ತು ಸ್ವರ್ಗಬಡದರು (ಕಇ. IV, ೩೫-೭; ?). [P ಇದು 'ತುಱುಹರಿ' ಎಂಬುದರ ಅಪಲಿಖಿತವಿರಬಹುದು]

**ತುಱುಹರಗೋಳು** (ನಾ). = ತುಱುಗೋಳ್ : ಶ್ರೀಮಾದಿ ಆಬಲದಲ ಸ್ಥಲದ ಚಿಕಾನ್ಮಾ ತುಱುಹರಗೋಳುಗಳಲ್ಯಾದಿ ಸತ್ತಂ (ಮೈಆರಿ. ೧೯೩೨, ೫೪-೯ ; ೨ನಯ ಶತ). [<ತುಱುಹರಿ + ಕೋಳ್ಳು$_2$ (<ಕೋಳ್)]

**ತುಱುಹರಿ$_1$**, ತುರುಹರಿ (ಕ್ರಿ). ಗೋವುಗಳನ್ನು ಹಿಡಿದುಕೊಂಡು ಹೋಗು : ಖೂಟೆಯ ಕೆಱೆಯ ತುಱುಹರಿವಲ್ಲಿ ಕಾದಿ ತುಱುವಂ ಮಗುರ್ಚಿ ತಾಂ ಸುರಲೋಕಪ್ರಾಪ್ತನಾದ (ಎಕ. V, ಹಾಸನ. ೧೦೮-೯ ; 1147). **ತುರುಹರಿ:** ರಾಕ್ಷಸರ್ತುರುಹರಿದು ತಮ್ಮ ಹಗೆಯರ ಗುರುವಿನಾ ಮಗನಿಲ್ಲಿ ಗೈತರಲುಬಹುದೇ ದುರುಳನಿವನೆಂದಾತನಂ ಕೊಂದುಹಾಕಿರಲ್ (ತುರಂಗ. ೮-೧೨). [ ತುಱು + ಹರ್ಿ$_2$ (<ಪರ್ಿ$_2$)]

**ತುಱುಹರ್ಿ$_2$** 'ತುಱುಂಪರಿ' ನೋ.

**ತುಱುಹುಯಲು**, ತುಱುಯ್ಯಲು (ನಾ). ೧ = ತುರುಗಾಳಿಗ : ರಾಮಯನು ತುಱುಹುಯಲಲಿ ಸುರಲೋಕವ ಸಂದೊಡೆ (ಮೈಆರಿ. ೧೯೨೮, ೧೨-೩ : ?). **ತುಱುಯ್ಯಲು :** ೨. ಹಸುಗಳ ಕೂಗು : ಆವರ ಮಗನ ಮಗಂ ಜಕ್ಕ ಪೆಣ್ಣೆರುಡೆಯುಟ್ಟುವ ಪುಯ್ಯಲು ತುಱುಯ್ಯಲುವ ಕೇಳ್ದು ತಾಗಿ ಕಾದಿ ... ಸತ್ತಂ (ಎಕ. XII, ಶಿರಾ. ೪೩-೩ : ಸು. 1000). [ ತುಱು + ಹುಯಲು (<ಪೊಯ್ಲು )]

**ತುಟಿ$_1$**, ತುಳಿ$_1$ (ಕ್ರಿ). ೧. ಕಾಲಿನಿಂದ ಮೆಟ್ಟು,-ಅಮುಂಕು,-ಘಟ್ಟಿಸು : "ತುಟಿ-ಪಾದಸಂಘಟ್ಟನೇ" (ಶಮಧಾ) ; ತುಱು ಪರಿವಾಗಳಮ್ಮ ಪೆಣನಂ ತುಟಿದುಂ ಪರಿಗುಂ ದಲ್ (ಪಂಪಭಾ. ೮-೯೫) ; ಈ ಧೂರ್ತನನಾ ಗಜಂ ತುಟಿವುದಕ್ಕೇ ಪಚ್ಚದೇ ಮಂತಣಂ (ಧರ್ಮಾಮೃ. ೧೩-೭೪) ; ಗಂಧಗಜೋತ್ತಮಂ ತುಟಿದು ಕಿಟ್ಟೀಡಾಡುಗಾನಂದಚಂದ್ರವಿರುದ್ಧಸ್ಥಿತಿಯಂ ವಿಶುದ್ಧಜಿನಧರ್ಮದ್ರೋಹಪಂಕೇಜಮಂ (ಅರ್ಥನೇ. ೦-೮). ೨. ನಾಶ ಮಾಡಂ ; ಸೋಲಿಸಂ ; ಹಾಳುಮಾಡು : ರಿಪುಸೇನೆಯಂ ತುಟಿದು ತೊಟ್ಟುಟಿವಾಡುವೆಂ (ಪಂಪಭಾ. ೦೩-೪೪) : ಬಡವಂ ಬಾಟ್ಗಿಂಗುವೊ ...ಪೆಣ್ಬಡೆಯೆಂಗುವೊ ತುಟಿದು ಪರಿಗುವುಮಂತಕರಾಜಂ (ಅಜಿಪು. ೧೦-೨೩) : ಮನವಮಂ ಕಟ್ಟಿ ಗುಣಂಗಳಿಂ ತುಟಿದು ಪಂಚಾಚಾರದಿಂ ಪಂಚ ಬಾಣನ ಬಾಹಾಬಲವಮಂ (ಪಂರಾಮಾ. ೦-೩). ೩. ಹತ್ತಿಕ್ಕು ; ಅದುಮಿಡು ; ತಲೆ ಎತ್ತದಂತೆ ಮಾಡು : ತೊಲಗಾ ಕಾಮವಂ ತುಟಿದು ಕೋಪವಂ...ಎಮ್ಮನಾಳ್ಗೆ ನಳಿನಾಕ್ಷಚರಿತ್ರದ ಚೈತ್ರಭೇರಿಗಳ್ (ಚಿಕವಿ. ೦-೯). ೪. ನೋಯಿಸು ; ಪೀಡಿಸು ; ಕಾಡಿಸು : "ತುಟಿದಂ...ಘಾಸಿ ಮಾಡಿದಂ" (ಶಮದ. ಪರಿ. ೧) ; "ಘಾಸಿಯೊಳ್ ಪದದೆ ಮರ್ದಿಸು ವಲ್ಲಿಯುಂ ತುಟಿವೆಸರ್" (ಸಂಜೀವ. ೧೨) ; ಗಂಡರಳ್ಕಿರ್ದೆಗಳಂ ತುಟಿ ಪೋಜೆಯನುಂಟುಮಾಡುವಂದದೆ...ಸೂಸಿದುದು ಸೇಸೆಯನಾ ಪುರಾಂಗನಾ ಜನಂ (ಪಂಪಭಾ. ೪-೩೫). ೫. ಕಿವುಚು ; ಜಜ್ಜು ; ಹಿಂಡಂ ; ಅರೆ : "ಕಿಮುಟ್ಚಿನಲ್ ತುಟಿವುದು" (ಸಂಜೀವ. ೬) ; ಗುರುಗುಂಜಿಯೆಲೆಯೊಳಲ್ಲದೊಡರಪಿಚ್ಚಗೆಯುರಲೊಳೆಳ್ಳುಮಂ ಬೆಲ್ಲಮುಮಂ ಬೆರಸಿ ತುಟಿದಿಟ್ಟದಂ ತಿನೆ ವರಾಂಗಿ ಲತೆಯಂತೆ ಪುಷ್ಪವತಿಯಾಗಿರ್ಕುಂ (ಲೋಕೋಪ. ೯-೧೭೪) ; ತಿಲತೈಲ ಸೈಂಧವಂ ಪಿಪ್ಪಲಿ ಮರಿಚಂ ವಿಶ್ವಮೆಂಬಿವಂ ಸಮನಾಗಲ್ತುಟಿದು ಮೆಲುತ್ತಿರೆ ತೊಲಗುಗುಮಲಸಂದೆಯ ಸೊರ್ಕು (ಖಮದ. ೨-೦೭೮) : ಒರ್ಪಲಮುಪ್ಪಂ ತ್ರಿಕಟುಕಮೊರ್ಪಲಮುಂ ಬೇವಿನೆಲೆಯುಮಂ...ತುಟಿದು ಸಮರ್ಪಿಸುವುದು (ಅಶ್ವಶಾ. ೭-೩೪). **ತುಳಿ$_1$ :** ೧. ಭಾಳಲೋಚನಾಗ್ನಿಯಿಂ ಪಂಚಶರನನುರಿದು ನಿಲೆ ಪರಿತಂದು ಪದತಳದಿಂ ತುಳಿದು ಸ್ಮರಭಸ್ಮಾವಯವನಾಗಿ (ಗಿರಿಕ. ೨ ಕಥಾಗರ್ಭ) ; ಕೊಂಡು ಬಂದಾ ದೈತ್ಯಗಣವನು ದಿಂಡುಗೆಡಹಿಯು ತುಳಿಯೆ (ಸಂಭಪು. ೭-೩೮) ; ದಿಕ್ಕರಿ ನಡುಗೆ ಚೌಕದ ಕಳನ ತುಳಿದುದು ಸುಪ್ರತೀಕಗಜ (ಕುಮಾವ್ಯದ್ರೋ. ೩-೦೦); ಮೈಂದನ ಸದೆದ ನೀಲನ ತುಳಿದ . . . ಗದೆಯಲಪ್ಪಳಿಸಿದ ಗವಾಕ್ಷನ (ಕೌಶಿರಾ. ೨೫-೨೨); ಹಾವಿನ ಹೆಡೆಯಂ ತುಳಿವರೇನೆ ಅಂಜಿಕಿಲ್ಲವೆ (ಪುರಂದ. ೨-೭೩-೮); ತ್ರಿವಿಕ್ರಮನು ಬಲಿಯ ತಲೆಯ ಮೇಲೆ ಪಾದ ವನ್ನಿಟ್ಟು ಅವನನ್ನು ಪಾತಾಳಕ್ಕೆ ತುಳಿದು ಅಲ್ಲಿಯೇ ಆಳಿಕೊಂಡಿರುವಂತೆ ಅಪ್ಪಣೆ ಮಾಡಿದನು (ನೀತಿಚಿಂ. XV, ೨೯). ೨. ಕೌರವಸೇನೆಯಂ ತುಳಿದು ಗೆಲ್ದಾ ಗಣ್ದರುಂ . . . ವೀತಮತ್ಸರದಿಂ ಭಾವಿಸುವಾಗಳೀ ಸಮರ ಕೊಳ್ಗಣ್ದಂಬರಂ ಗಣ್ದರೇ (ಸೌಇಇ. XI – i, ೫೨-೦೨; 1008); ಕದನದೊಳಾಂತರಂ ತುಳಿದು ಕೊಲ್ವೆಡೆಯೊಳು ಲಯಕಾಲಕಾಲನೆಂಬುದು (ಎಇ. XVI, ೩೩-೦೭; 1102). ೩. ಆಗ ಇತರರ ಹಕ್ಕುಬಾಧ್ಯತೆಗಳನ್ನು ತುಳಿಯಲೂ ಹಿಂಜರಿಯರು (ಶಿಕ್ಷದ. ೦೦೦). ೪. ಸುಲಿದು ವಿಪ್ರನಿಕಾಯ ವಾದದ ತುಳಿದು ದೇಶಾಂತರವ ಮಾಡಿಯೆ . . . ಬಂದು ಕಂಡನು ಜಗದ ವಲ್ಲಭನ (ಸಂಭಪು. ೨೬-೭೦). ೫. ಕಗ್ಗಲಿಯ ತೊಪ್ಪಲನು ತುಳಿದು ರಸವ ಹಿಂಡಿಕೊಂಡು ಅದಂ ಮೈಗೆ ತೊಡೆವುದು (ಅಶ್ವಟೀ.೬೯-೦). ೬. ಹಾದಿಯಲ್ಲಿ ನಡೆ,-ಸಾಗು : ಎಷ್ಟು ತುಳಿದರೂ ದಾರಿ ಮುಗಿಯಲೊಲ್ಲದು (ರೂಢಿ).

**ತುಳಿತುಳಿ** (ದ್ವಿರುಕ್ತಿ) : ಮದವಲರ್ದ ತನುವಂ ಕುಸುರಿದಱಿದುಱಿ ಕಲ್ಲೊರಳೊಳಿಕ್ಕಿ ತುಳಿತುಳಿದು ತಾಂ ಹರಿವ ತೊಱೆಯಲಿ ಕಲಸ ಬಗೆವನು (ಬಸವಪು. ೪೫-೨೮); ರಣವ ಶೋಧಿಸಲೆಂದು ಕಳನೊಳು ಪೆಣನ ತುಳಿತುಳಿದಱಿಸ ಕುರುಧಾರುಣಿಯ ಪತಿಯನು ಕಂಡು ನೆಱಿ ಮಱುಗಿದಳು ಗಾಂಧಾರಿ (ಕುಮಾವ್ಯಗ. ೦೨ ಸೂಚನೆ); ಸಲೆ ಸೇರಿಸಿದೇಣಿಗಳ ಮೇಲೆ ಸುಭಟರು . . . ಅಲಗಿನ ಗಾಯವನೆಣಿಸದೆ ಹೆಣಗಳ ತುಳಿತುಳಿದೊಡನೇಱಿದರು (ಕಂನವಿ. ೧೪-೪೭). **ತುಳಿದ ಹಾದಿ**=೧. ಜನರಂ ನಡೆದಾಡಿರುವ ದಾರಿ ; ಸಿದ್ಧವಾದ ಮಾರ್ಗ. ೨. ಸಂಪ್ರದಾಯಂ ; ಪರಿಚಿತವಾದ ಕ್ರಮಂ; ಪದ್ಧತಿ : ಮಾಡಿರುವ ಪ್ರಯತ್ನವು ಮುಂದೆ ಸತ್ಯಾನ್ವೇಷಣ ಮಾಡುವವರಿಗೆ ತಳಹದಿ ಅಥವಾ ತುಳಿದ ಹಾದಿ ಆಗದೆ? (ಸಂಕೋಧ. IV, ಅರಿಕೆ). **ತುಳಿದಾಡು**=ತುಳಿ; ಮೆಟ್ಟು : ವಿಗಡಕರಿ ತುಳಿದಾಡಿತಿದಿರಿದಿರಾದ ಪಟುಭಟರ (ಕುಮಾವ್ಯದ್ರೋ. ೩-೦೭). **ತುಳಿಮಣ್ಣು**=(ಗೋಡೆ ಮೊದಲಾದುವನ್ನು ಕಟ್ಟಲು) ಚೆನ್ನಾಗಿ ತುಳಿದಂ ಹದ ಮಾಡಿದ ಮಣ್ಣು : ತುಳಿಮಣ್ಣು ಚೆನ್ನಾಗಿದ್ದಷ್ಟೂ ಗೋಡೆ ಬಿಗಿಯಾಗುತ್ತದೆ (ರೂಢಿ). ತುಟಿದಿಕ್ಕು = ಅದುಮು ; ಹತ್ತಿಕ್ಕು : ಸ್ಯೂಸ್ ದೇವನೆಂದುಂ, ಎನ್ನೆರ್ದೆಯ ಬಯಕೆಯನ್ ತುಟಿದಿಕ್ಕಲೆಂದು, ತನ್ನಯಾ ಬಲ್ಮೆಯನ್ ಒತ್ತದಿರ್ಕೆಂದುಂ (ಬದ್ಧಪ್ರ. ೨೮-೫೯೩).

[ದೇ.॥ ತಮಿ. ತೊಟ್ಟೈ ; ಮಲ. ತೊಟಿ]

**ತುಟಿ$_2$**, ತುಳಿ$_2$ (ನಾ). ಮೆಟ್ಟುವಿಕೆ ; ತುಳಿತ : ಆ ಖಳನ ತುಟಿಯು [ಪಾಠಾಂ. ವು] ಮಂ ಸೋಂಕುಮನಾರವಧರಿಪರ್ (ಆದಿಪು. ೪-೭೭). **ತುಳಿ$_2$ :** ಸುಮಮುಕರಂದದಿಂದೆ ಕಪಿ ಕೈದೊಳೆದಾ ದ್ರುಮಪತ್ರಪಾತ್ರಿಯಂ ಸಮೆದದಱಲ್ಲಿ ತುಂಬಿ ತುಳಿವೊಂದದ ಪೂಗಳನ್ನೆದೆ ತುಂಬಿಕೊಂಡು..ಬಂದು ಸಂಯಮಿಗಳ ಮುಂದೆ ನಿಂದೆಱಗಿ ಕಾಣ್ಕೆಯನಿತ್ತುದು (ರಾಜಶೇ.೧-೧೨೭). 'ಕಾಲ್ತುಳಿ$_2$' ಪರಾ. [< ತುಟಿ$_1$]

**ತುಟಿಕಲ್**, ತುಳಕಲು, ತುಟಿಕಲ (ನಾ). ೧. ತುಳಿತಕ್ಕೆ ಸಿಕ್ಕಿದುದಂ. ೨. ಬಾಡಿದುದು ; ಸೊಪ್ಪಾದುದು ; ರಸಹೀನವಾದುದಂ : "ತುಟಿಕಲ್ (ತಟಿಕಲ್, ತಟಕಲ್) = ಸೊಪ್ಪಾದುದು'' (ಶಮದ. ಪರಿ.೦); ತುಟಿಕಲದುಗೆಗಳೊಳೀಂ ಪಟಗಟಪೆಯ ಕೂಟ್ ತಿಪ್ಪುದುಗಳೆದ ತೊವರಿಯ

ತೊವೆ ಕಾಯ್ದೀಪಿದ ತುಪ್ಪಂ ಕೋಡುವ ಕಟಲಲ್ಲದೆ ದಿವ್ಯಭೋಜನಂ ಪೆಱತುಂಟೇ (ಕಾವ್ಯಾವ. ೨೪೧). **ತುಳಕಲು** : ೩. ತುಳಿತ; ಮೆಟ್ಟುವಿಕೆ : ಕುದುರೆ, ಎತ್ತು, ಮನುಷ್ಯರು ಇವರ ತುಳಕಲಿನಿಂದ ತಮಗೆ ತಾವೇ ಬಿದ್ದ ಮಾರ್ಗಗಳಿಂದಲೇ ಯಾವತ್ತು ವ್ಯವಹಾರ ನಡೆಯುತ್ತಿತ್ತು (ಕಥಾಗ. ೨೯೪).

**ತುಟಿಕಲ** : ೨. "ತುಟಿಕಲಮೆನೆ ಸೊಪ್ಪಾದುದು" (ಕರ್ಣಾನಿ. ೮೨).

[ತುಟಿ$_1$ + – ಕಲ್$_4$]

**ತುಟಿಕಲ** 'ತುಂಟಿಕಲ್' ನೋ.

**ತುಟಿಯಿಸು**, ತುಳಿಯಿಸು, ತುಳಿಸು, ತುಟಿಸು (ಕ್ರಿ). ೧. ಕಾಲಿನಿಂದ ತುಳಿಯಂವಂತೆ ಮಾಡು; ಮೆಟ್ಟಿಸು : ಲೀಲಾಕಮಲಾಕರಾನೀಕರಕ್ತ ಕಮಳಂಗಳನಾಸ್ಮಾನುಶೋಣಿತಶೋಣರಿಪುನೃಪಶಿರಂಗಳಿಂದೆ ತುಟಿಯಿಸಿ ಯುಂ (ಆದಿಪು. ೮-೧೦೨). ೨. (ಅರೆದು) ಕೂಡಿಸು ; ವಿಶ್ರುಮಾಡು : ಕ್ರಿಯೆಯಿಂ ಬೀಜಂಗಳನಲ್ಲಿಯೇ ಮಣ್ಣೊಳ್ ಬಿತ್ತಿ ತಳಿಗೆ ತುಟಿಯಿಸಿ ಪಾಲ್ ಪಂದಿಯ ನೆಣಗಳುಮೆಂಬಿವನನುನಯದೆ ಮೊದಲ್ಗೆಱೆಯೆ ಸದ್ಯಫಲದೊಳ್ ನೆಟಿಗುಂ (ಲೋಕೋಪ. ೬-೨೪). **ತುಳಿಯಿಸು** : ೧. ಎತ್ತುಗಳಿಂದ ರಾಗಿಯನ್ನು ತುಳಿಯಿಸಿದರು (ರೂಢಿ). ೩. ನಾಶಪಡಿಸು : ಸಿದ್ಧಪದವುಂ ಕೆಯ್ಕೊಳ್ಳುದರ್ಕಡ್ಡಮೊಡ್ಡಣಮೊಡ್ಡಿರ್ದಘ ಸೈನ್ಯಮಂ ತುಟಿಯಿಸಲ್ (ಶಾಂತಿಪು.೦-೭). **ತುಳಿಸು** : ೧. ಎಲವೊ ಸಂಶಯ ಬೇಡ ಗಜದಲ್ಲಿ ತುಳಿಸು ತಂಗಿಯ ಮಕ್ಕಳನು (ನಿಘಾಗ. ೧೦-೩೧-೩೨); ರಾಗಿ ತುಳಿಸುವುದಕ್ಕೆ ನಿಮ್ಮ ಎತ್ತುಗಳನ್ನೂ ಸ್ವಲ್ಪ ಕೊಟ್ಟರಿ (ರೂಢಿ). **ತುಟಿಸು**: ೧. ಸಿಂಧುರದಿಂ ನುಗ್ಗಾಗೆ ಕಾಲ್ಕೆಲ್ಮು ಮುಱಿಯೆ ತುಟಿಸಿ... ದಂಡಿಸುವ ನರಕಜಗರ್ಗೋವೋ ಮಯ್ಯೊಡ್ಡಲಾಟಿಂ (ಧರ್ಮಾಮೃ. ೧೩-೧೫೭).

[ತುಟಿ$_1$ +– ಇಸು$_3$]

**ತುಟಿಲ್**$_1$, ತುಳಿಲ್$_1$, ತುಳಿಲು$_1$ (ನಾ). ೧. ಎರಗುವಿಕೆ ; ಮಣಿಯಂವುದು ; ನಮಸ್ಕಾರ; ಪ್ರಣಾಮ : "ತುಟಿಲ್ ಪ್ರಣಾಮದೊಳ್" (ಕರ್ಣಾನಿ. ೩೭); "ತುಟಿಲೆಂದು ಪೊಟ್ಟಿಂದು ಕುಂಬೆಂದು ಯಱಗೆಂದು ಬಟಿಕ ಮಣಿಯೆನೆ ನಮಸ್ಕಾರಕ್ಕೆ ಪೆಸರಕ್ಕುಂ" (ಶಬ್ದಿಕ್ಕೆ. ೩೩) : ಬ್ರಹ್ಮಋಷಿಯರೆಲ್ಲರುಮಂ ತುಟಿಲ ಪರಕೆಯ ಸಮಾನ ಪ್ರತಿಪತ್ತಿಯಿಂ ಕಿಱಿವಿರಿಯರಱಿದು ಪೊಡೆವಟ್ಟು (ಪಂಪಭಾ. ೬-೩೩ವ) ; ಉಮಾಂಘ್ರಿಗೊಳ್ಳಿನಿಂ ತುಟಿಲನೊಡರ್ಚಲ್ (ವೀರವಿ. ೦-೭೦); ಬೀಗುತ್ತುಂ ಶರಣೆಂದು ಮಾಟ್ಪ ತುಟಿಲೇಂ ಬೇರೋರ್ವರಂ ಸೇರ್ವುದೇ (ಮೈಸೂಮ. ೦-೧). ೨. ಆಳಂತನ; ದಾಸ್ಯ; ಸೇವೆ. 'ತುಟಿಲ$_1$' ಪರಾ. **ತುಳಿಲ್**$_1$ : ೧. "ನತಿಃ—ತುಳಿಲ್" (ಶಾಶಕ್ಕ. ೪೦): ತು [ಪಾಠಾಂ. ತ]ಳಿಲಾಂತು ಬಂದು ನಿರ್ಮಳನದ್ವಿತೀಯನಚಳಪರಂಜ್ಯೋತಿರಾಕಾರ ನ ಳಿ ನ ಜಾ ಂ ಡ ಗಳ ತನ್ನೊಳು ಪೆತ್ತಮೂರ್ತಿ ಕಂಗೊಳಿಪ ಸೋಮೇಶನಾಲಯಕೆ (ಭೈರವೇ. ೪-೦೦) : ನಾಗನಾಥಂಗೆ ಸಲುಗೆಯಿಂ ತುಳಿಲೆಸಗಿ (ಸಿದ್ಧೇಪು. ೭-೪೯) ; ಬೆನ್ನ ಬಿಸಿಲೇ ಕಾಣ್ಕೆ ಗೆಯ್ಮೆಯೊಡೆಯನ ತುಳಿಲ್ (ಕಾಲೂರ. ೨೯-೨೧). **ತುಳಿಲು**$_1$ : ೧. ಮನೆಯ ಮೂಲೆಮೂಲೆಗೂ ತುಳಿಲೆಂದು, ಮಗಳನ್ನು ಕಾಪಾಡಿರೆಂದು ಕೋರಿ ಪತಿಯೊಡನೆ ತವರಿಗೆ ಹೋಗುತ್ತಾಳೆ (ಶರಷ. ೨೧). ೨. 'ತುಳಿಲಾಳು$_1$' ಪರಾ.

[ದೇ.॥ ತಮಿ. ತೊಱು=ಪೂಜಿಸು ; ಮಲ. ತೊಟು = ನಮಸ್ಕರಿಸು; ತುಳು. ತುರ್ಲಿ; ತೆಲು. ದೋಯಿಲಿ]

**ತುಟಿಲ್**$_2$, ತುಳಿಲ್$_2$, ತುಳಿಲು$_2$ (ನಾ). ಶಕ್ತಿ ; ಸಾಹಸ; ಪರಾಕ್ರಮ: "ತುಟಿಲ್=ಪೊಡವಡಿಕೆ ; ವೀರಂ" (ಶಮದ. ಪರಿ. ೧); "ತುಟಿಲೆಂದು ಶೌರ್ಯದೊಳ್" (ಕರ್ಣಾನಿ.೩೭); "ತುಟಿಲೆನಲ್ ಪೊಡವಡಿಕೆಗಂ ವೀರಕಂ ಪೆಸರ್" (ಸಂಜೀವ. ೦೦). 'ತುಟಿಲಾಳ್$_2$' ಪರಾ. **ತುಳಿಲ್**$_2$ : ತುಳಿಲಾಂತರಳಿದರುಳಿಯದೆ ಬಳಿಯಂ ನೆಱೆ ಕಾಣದಲ್ಲಿ ದಳದುಳದಿಂದಂ (ಹಮ್ಮೀರ. ೩-೫೩). **ತುಳಿಲು**$_2$: ಕರಚಮತ್ಕಾರಕ್ಕೆ ಚಮತ್ಕಾರಮಾರ್ಬಟೆಗೆ ಯರ್ಬಟೆ ತುಳಿಲ್ಗೆ ತುಳಿಲು ... ಸರಿಯಾಗೆ ನಂದೀಶ ಶುಂಭಾಸುರರ್ ಮಹಾಧುರದೊಳೆಚ್ಚಾಡಿದರ್ (ಚೆಬಪು. ೨೬-೨೫).

ತುಟಿಲ್ಗೆ ವಸಂತ=ಒಂದಂ ಬಿರಂದಂ: ಮಾನಸೂರರಳಿ ಕಯ್ಪ ಮಗನನ್ನು ಛಳಕಯ್ಪ ತುಟಿಲ್ಗೆ ವಸನ್ತನ್ ಗಣ್ಡಪದಿಚನ್ದನ್ ... ಕುದುರೆಇನ್ದಿಟಿದು ನಡದಿಱಿದೊಟ್ಟಿಕೆಯ್ದು ಬಿಟ್ಟರ್ (ಎಕ. X, ಶ್ರೀನಿಪಾ. ೫-೫; ಸು. 780).

[ದೇ.॥ ತಮಿ. ತುಣಿವು; ಮಲ. ತುನಿ=ಸಾಹಸಮಾಡು]

**ತುಟಿಲ**$_1$ (ನಾ). ೧. ಸೇವೆಯಿಂದ ಜೀವಿಸುವವನು ; ಭೃತ್ಯ ; ದಾಸ : ಆಟಿಪಿ ಕಿಱಿದಕ್ಕೆ ಕೆಮ್ಮನೆ ಗಳಗಳಿಸುತ್ತೇಳಿದರ್ಕಳೊಳ್ ಬಿಡದೆ ತಗುಟ್ಟಿಟಿ ಪಟಿಯಾಡುವ[ನೆಂತುಂ] ತುಟಿಯ[ಲ]ಕ್ಕುಂ ತುಟಿಲಸಂದನಕ್ಕುಮೆ ಧರೆಯೊಳ್ (ಬಂಪಹ. ೧೧-೧೦೫). ೨. ಪಂಚಮವರ್ಗಕ್ಕೆ ಸೇರಿದವನಂ ; ಅಂತ್ಯಜ : "ತುಟಿಲನೆನಲ್ಕೆ ಪಂಚಮನೊಳ್" (ಕರ್ಣಾನಿ. ೮೩).

[ತುಟಿಲ್$_1$ + – ಅ$_7$]

**ತುಟಿಲ**$_2$ (ನಾ). ವೀರ; ಶೂರ; ಪರಾಕ್ರಮಶಾಲಿ : "ಕರಮೊಲ್ದನೊಳಂ ಸುವೀರನೊಳ್ ತುಟಿಲನೆನಲ್ಕೆ" (ಕರ್ಣಾನಿ. ೮೩). [ತುಟಿಲ್$_2$ + – ಅ$_7$]

**ತುಟಿಲಸಂದ**$_1$ 'ತುಟಿಲ್ವಲ್$_1$' ಪರಾ.

**ತುಟಿಲಸಂದ**$_2$ 'ತುಟಿಲ್ವಲ್$_2$' ಪರಾ.

**ತುಟಿಲಾಳ್**$_1$, ತುಳಿಲಾಳಂ$_1$ (ನಾ). ಆಳು; ಸೇವಕ; ದಾಸ : ಆದೊಡೆ ಪೆಣ್ಗಳ್ ಮೇಣ್ ತುಟಿಲಾಳ್ಗಳ್ ಅವನ ಜಸಮಂ ಪಾಡುವಪೆಡೆಯೊಳ್ ನಿರ್ಬಂಧಮಿಲ್ಲಂ (ಅದ್ಭುತ. ೨೨-೨೨). **ತುಳಿಲಾಳು**$_1$ : ದಳಪತಿ ಮನ್ನೆಯ ಮಾಂಡಲಿಕರು ನೆಱೆ ತುಳಿಲಾಳು ರಾಯರಾವುತರು...ಒಪ್ಪಿದರು (ಕಂನವಿ. ೮-೨೮) ; ರಾಷ್ಟ್ರಕೂಟಸಿಂಹಾಸನಕ್ಕೆ ತುಳಿಲಾಳಾಗಿ ಬದ್ಧಗನು ಚಾಳುಕ್ಯ ಭೀಮನನ್ನು ಗೆದ್ದನೆಂಬುದರಿಂದ (ನಾಡೋಜ. ೩೨೭). [ತುಟಿಲ್$_1$+ಆಳ್$_3$]

**ತುಟಿಲಾಳ್**$_2$, ತುಳಿಲಾಳ್, ತುಳಿಲಾಳು$_2$ (ನಾ). ಪರಾಕ್ರಮ ಉಳ್ಳವನು ; ಶೂರ ; ವೀರ : "ತುಟಿಲಾಳ್ ಪರಾಕ್ರಮಮುಳ್ಳಂ" (ಶಶಸಾ. ೧೪-೨೩೪); "ತುಟಿಲಾಳಿ ಧೀರನೊಳ್" (ಕರ್ಣಾನಿ.೩೦); ವದ್ದೆಗನ ಕೋಣೆಯ ಗಂಗನ ಮೊತ್ತಮೆಲ್ಲಮಂ ಬೆದಱುವಿನಂ ತೆರಳ್ಚಿ ಪಲರುಂ ತುಟಿಲಾಳ್ಗಳನಿಕ್ಕಿ (ಎಕ. II, ೧೩೯-೦೨ ; 940) ; ಪಸಾಯ್ತರ ಬಟಿಸಲ್ವ ತುಟಿಲಾಳ್ಗಳಡ್ಡಣದೊಳೆಡ್ಡಮಾಗೆ (ಶಬ್ದಿಕಾ. ೪೪) ; ಕೊಳನಂ ನಿಸ್ಸಾರಮೆಂದು ಪುರುಳ್ಗಿಂದಿ ದಾಣ್ಮನಂ ತೊಱೆದು ಪೋಪ ತುಟಿಲಾಳ್ಗಳಂತಿರೆ ನೀರ್ವಕ್ಕಿಗಳ್ ದೆಸೆದೆಸೆಗೆ ಪೋದುವು (ರಾಮಾಶ್ವ. ೫೦-೩೩). **ತುಳಿಲಾಳ್**: "ತುಳಿಲಾಳೆನೆ ಪರಾಕ್ರಮಿಗೆ ...ಅಭಿಧಾನವು" (ಕಕರ. ೪೭); ತುಳಿಲಾಳ್ಗಳು ತನ್ನಾ ನೂರ್ವರು ಸುತರೆಳಸಿ ಬಳಸಿ ಬಂದನಾಗ (ನೇಮಿಸಂ. ೨೫-೦೬೪) ; ತಳುವದೆ ಜೀವಿತಗೊಂಬ ತುಳಿಲಾಳ್ಗಳಲ್ಲದೆ ರಾಮನ ಮೆಯ್ಗಾವಲೊಳಗಿಲ್ಲ ಲೆಕ್ಕದಾಳುಗಳು (ಕುರಾಸಾಂ. ೯-೧೮) ; ಬಿರುದಿನ ಬೆನ್ನ ಝಲ್ಲಿಯು ತುಳಿಲಾಳ್ಗಳ ನೆರವಿ ಮಧ್ಯದೆ ಬಹನಾರೆ (ಕಂನವಿ. ೨೫-೪೭). **ತುಳಿಲಾಳು**$_2$: ತುಳಿಲಾಳಿಗೆ ಕೈವಶವಾದ ಸುದತಿಯರಳಿವಿಟರಿಗೆ ಮೋಹಿಸುವರೆ (ನೇಮಿಸಂ. ೦೦-೧೪೪) ; ನಳಿನನಾಭನ ಸುತನಂತೆ ತುಳಿಲಾಳಿನಂತೆ ... ಸಲೆ ಭೂಜವೆಸೆಯೆ (ಭೈರವೇ. ೧-೫೩) ; ಹೈದರನು ಮತ್ತೆ ಒಂದು ಲಕ್ಷ ತುಳಿಲಾಳುಗಳನ್ನು ಕೂಡಿಕೊಂಡು ದುರ್ಗದ ಮೇಲೆ ಧಾಳಿಮಾಡಿದನು (ಕವೀರ. ೦೨೫).

[ತುಟಿಲ್$_2$ + ಆಳ್$_3$]

**ತುಟಿಲಾಳಾಯ್ತು** (ನಾ). ವೀರರ ಧರ್ಮ ; ವೀರವೃತ್ತಿ ( ? ) : ಅಂತು ಮೂದಲಿಸದೆ ಇಱಿವುದು ತುಟಿಲಾಳಾಯ್ತುಮಲ್ಲೆಂದು ಮುಟ್ಟಿ ಮೂದಲಿಸಿ (ಗದಾಯು. ೮-೨೫ ವ).

[ P ಇದು 'ತುಳಿಲಾಳ + ಆಯತ' ಎಂದು ಭಿನ್ನಪದವಾಗಿರಬಹುದೆ ? ]

**ತುಱಿಲಾಳ್ತನ** (ನಾ). ಶೌರ್ಯ ; ಪರಾಕ್ರಮಂ : ಪೆಣ್ಣುಡೆಯುಟ್ಟರೆ ಪುತ್ತ್ರ ನೇಱಿ ಕೊಲ್ಲದ ತುಱಿಲಾಳ್ತನಕ್ಕೆ ಸಮನಾವನೊ ಸಾಹಸಭೀಮಭೂಪ ನೊಳ್ (ಗದಾಯು. ೧-೨೨) ; ಚಾಳುಕ್ಯರಾಜ್ಯಕ್ಕೆ ಕಾರಣಮಾದಳ್ ತುಱಿ ಲಾಳ್ತನಕ್ಕೆ ನೆಱೆದಾಳ್ (ಎಇ. XV, ೩೪೦-೯ ; 1071): ತುಱಿಲಾಳ್ತನಕ್ಕಮಂ ನೀರಿಱಿವಂತಳವಱಿದು ಸೂಸೆ ಕಣ್ಣೀರ್ತೆರಿಂದಿಱಿದಂ (ಪಂರಾಮಾ. ೪-೭೦).

[ ತುಱಿಲಾಳ್$_2$ + – ತನ ]

**ತುಱಿಲ್ಗೆಯ್**, ತುಳಿಲುಗೆಯ್, ತುಳಿಲುಗೆಯಿ, ತುಳಿಲ್ಗೆಯ್, ತುಳಿಲ್ಗೈ (ಕ್ರಿ). ವಂದಿಸು ; ನಮಸ್ಕರಿಸು : "ತುಱಿಲ್ಗೆಯ್ – ನಮಸ್ಕಾರೇ" (ಶಮಧಾ) : "ಬಾಗೆಱಗು ಮೊಟ್ಟು ತುಱಿಲ್ಗೆಯ್ಕನ್ನಲ್ ಬಿಡದದುವೆ ವಂದನಾರ್ಥದಿ ತೊಡರ್ಗುಂ" (ಕವಿಕಂ. ೧೮೯) ; ತಾಯುಂ ಕಂಡು ತುಱಿ ಲ್ಗೆಯ್ದು ಪಂಡಿತರಾಗಿ ಬಂದುದಂ ಪೇೞ್ದು (ವಡ್ಡಾರಾ. ೪-೨೨) ; ಜನಕನುಂ ವಿದೇಹಿಯುಂ ದಶರಥಂಗಮಪರಾಜಿತಾಮಹಾದೇವಿಗಂ ತುಱಿಲ್ಗೆಯ್ವುದುಂ (ಪಂರಾಮಾ. ೭-೪೮ವ): ನಂಜುಗೊರಲನ ಗಾಡಿಯಂ ನೋಡಿ ಬಗೆಯೊಳಚ್ಚರಿ ವಡುತಂ ಬಂದು ತುಱಿಲ್ಗೆಯ್ದು ಕೈಗಳಂ ಮುಗಿದು (ಕಬ್ಬಿಕಾ. ೧೬೮) ; ನಿಜರಾಜಮಂದಿರಮಂ ಪೊಕ್ಕು ತಾಯ್ಗೆ ತುಱಿಲ್ಗೆಯ್ದು ತನ್ನ ಬಱಿ ಯೊಳ್ಬಂದ ವಿದ್ಯಾಧರರ್ಗೆಲ್ಲಮುಡಲುಂ ತೊಡಲುಂ ಕೊಡಿಸಿ (ಪುಣ್ಯಾಸ್ರ. ೧-೮೮ವ): ಎನ್ನ ಬಿನ್ನಪಂ ಪಾಪೆಯಂ ತುಱಿಲ್ಗೆಯ್ದಂತಿರೆ ಪೊಚ್ಚಱಿದಾಯ್ತು (ರಾಮಾಶ್ವ. ೩೭-೨೪). **ತುಳಿಲುಗೆಯ್** : ಬಳಿಕ ತುಳಿಲುಗೆಯ್ದಂತೆಂದನು (ನೇಮಿಸಂ. ೭-೦೦) ; **ತುಳಿಲುಗೆಯಿ** : ವಸುದೇವ ... ಮುನಿಪಗೆ ತುಳಿಲು ಗೆಯಿದೆಯಿ[ಪಾಠಂ. ಗೈದೈ]ತಂದು ನಿಜಮಂದಿರದೊಳಿರೆ (ಸಾಳ್ವಭಾ. ೦೯-೫೩). **ತುಳಿಲ್ಗೆಯ್** : ಸಗ್ಗಿಗರೆಱಿಯಗೆ ತುಳಿಲ್ಗೆಯ್ವ (ತ್ರಿಭುತಿ. ೨೪-೧); ಬಾಗಿಲ್ಗಾಪಿನ ಪಡಿಯರತಿಯರು ಬಾಗಿ ತುಳಿಲ್ಗೆಯ್ವಾಗ ಒಡತಿಯ ಮುಖವನ್ನು ನೋಡುತ್ತಿದ್ದರು (ಸವತಿ. ೨೦೦). **ತುಳಿಲ್ಗೈ** : ಯತಿ ನಿಶ್ಚಳಾನಂದವಮುಯನಡಿದಾವರೆಗೆ ತುಳಿಲ್ಗೈದು ಕೃಪೆಯಿಂದೆ ಬಿಜಯಂಗೈ ವುದೆಂದು ಬಿನ್ನವಿಸೆ (ಸಿದ್ಧೇಪು. ೧೭-೩೧) ; ಕಾಲನಂ ಕಂಡು...ತುಳಿಲ್ಗೈದನು (ರುಕ್ಮಾಂಗ. ೮-೪). [ತುಱಿಲ್$_1$ + ಕೆಯ್$_1$]

**ತುಱಿಲ್ಗೊಳು**, ತುಳಿಲ್ಗೊಳ್ (ಕ್ರಿ). ೧. ನಮಸ್ಕರಿಸು ; ವಂದಿಸು : ಕಾಣ್ಕೆಯನಿಕ್ಕು ಚೋಳ ಮಲೆಯಾಳ ತುಱಿಲ್ಗೊಳು (ಉದ್ಭಟ. ೨-೨೦). **ತುಳಿಲ್ಗೊಳ್** : ೨. ನಮಸ್ಕಾರವನ್ನು ಕೈಗೊಳ್ಳು ; ವಂದನೆಯನ್ನು ಸ್ವೀಕರಿಸು : ಪಲಗಣ್ಣಮುಖದಮರ್ದನುಂಬರಿಂ ತುಳಿಲ್ಗೊಂಬ ಗೊಂದೆ ವಳವಿಗ ಗೊರವನೇ (ನವಮೋ. ೩೨-೦).

[ ತುಱಿಲ್$_1$ + ಕೊಳು (<ಕೊಳ್$_1$) ]

**ತುಱಿಲ್ಪಾಡು** (ನಾ). ಶೌರ್ಯವನ್ನು ಕುರಿತು ಹಾಡುವ ಹಾಡು ; ವೀರಗೀತೆ : ಶ್ರೀರಘುಪ್ರವರನಡಿಯ ತುಱಿಲ್ಪಾಡಿನ ಬೀಣೆಯ ಜವಳಿ ಮದ್ದಳೆಯ ... ಮೇಳದವರ್ (ರಾಮಾಶ್ವ. ೭೮-೧೮).

[ತುಱಿಲ್$_2$ + ಪಾಡು$_2$ ]

**ತುಱಿಲ್ಸಂದ$_1$** 'ತುಱಿಲ್ಸಲ್$_1$' ಪರಾ.

**ತುಱಿಲ್ಸಂದ$_2$** 'ತುಱಿಲ್ಸಲ್$_2$' ಪರಾ.

**ತುಱಿಲ್ಸಲ್$_1$** (ಕ್ರಿ). ಸೇವೆಗೆ ಸೇರು ; ಊಳಿಗದಲ್ಲಿ ಪ್ರವರ್ತಿಸು ; ದಾಸನಾಗು.

**ತುಱಿಲ್ಸಂದ$_1$**, **ತುಱಿಲಸಂದ$_1$** = ೧. ಸೇವಕ ; ದಾಸ. ೨. ಪಂಚಮುವರ್ಗಕ್ಕೆ ಸೇರಿದವನು ; ಅಂತ್ಯಜ. "ತುಱಿಲ್ಸಂದಂ = ವೀರಂ ; ಪಂಚಮಂ" (ಶಮದ. ಪರಿ. ೧) ; "ತುಱಿಲಸಂದಂ ಪಂಚಮಂಗೆ ವೀರಂಗೆ ಪೆಸರ್" (ಸಂಜೀವ. ೧೧). [ತುಱಿಲ್$_1$ + ಸಲ್$_1$]

**ತುಱಿಲ್ಸಲ್$_2$** (ಕ್ರಿ). ಪರಾಕ್ರಮದಿಂದ ಪ್ರಸಿದ್ಧನಾಗು ; ಬಲದಿಂದ ಹೆಸರುವಾಸಿಯಾಗು ; ಶೂರನೆನಿಸು.

**ತುಱಿಲ್ಸಂದ$_2$**, **ತುಱಿಲಸಂದ$_2$**=ಶೂರ; ಪರಾಕ್ರಮಿ; ಶೂರನಾದ ಯೋಧ : "ತುಱಿಲ್ಸಂದಂ = ವೀರಂ ; ಪಂಚಮಂ" (ಶಮದ. ಪರಿ. ೧) ; ನೀಮುವಿಂತಿನಿತರ್ದೆಗೆಟ್ಟರಿಂ ತುಱಿಲಸಂದರನಾರುಮನೆಂತು ನಂಬುವರ್ (ಪಂಪಭಾ. ೧೦-೧೧೯) ; ಕೆಲರ್ ತುಱಿಲಸಂದರಱಿಯೆ ನೊಂದರ್ (ಪಂಚತಂ. ೨೦೬-೧೯) ; ಕೆಲಬರಂ ಕಡೆವಾಯೊಳವುಂಕಿ ಕೊಂದುದುಳ್ಕೆಱಿಯದೆ ನಿಂದರಂ ತುಱಿಲಸಂದರನಾ ವನಕೇಳಿವಾರಣಂ (ಚಂದ್ರಪ್ರ. ೧೦-೯೭) ; ಪರಧನಮಂ ಕರವೊಪ್ಪುವ ಪರವನಿತಾಜನಮನಳಿಪಿ ಕಳಲುಂ ಕೊಳಲುಂ ದೊರೆಗಾಗದೆಂಬ ಶೌಚದಭರಮುಂ ತಾಳ್ದಿದನೆ ತುಱಿಲಸಂದಂ ಜಗದೊಳ್ (ಬಂಹರಿ. ೧೦-೧೦೦).

**ತುಱಿಲ ಸಂದಿಕೆ** = ಯುದ್ಧದಲ್ಲಿ ತೋರುವ ಪರಾಕ್ರಮ, – ಶೌರ್ಯ : ನೇಸಱೆನೊಳದಂದೆನ್ನಂ ಸಾಸಿಸುವಂ ಸುರಪಸೂನುವಲ್ಲದೊಡಱಿವಂ ಭಾಸುರ ವಸುವೊಕ್ಕಿಂತಿದೆ ಲೇಸೆಂದುೞಿದಿರೆಲೆ ತುಱಿಲಸಂದಿಕೆಯುೞಿಗುಂ (ನೇಮಿಪು. ೧೨-೭೩) ; ಕೆಲರ್ ತುಱಿಲಸಂದಿಕೆಯು ಪಸುಗೆಗಳಂ ಮುನ್ನಱಿ ಯದೆ ನೆಗಟ್ಟು (ಬಂಹರಿ. ೧೧-೮೦ವ). [ ತುಱಿಲ್$_2$ + ಸಲ್$_1$ ]

**ತುಱಿವು** (ನಾ) ತುಳಿತ ; ಮೆಟ್ಟುವಿಕೆ : ಆ ಖಳನ ತುಱಿವು [ಪಾಠಂ. ಯು] ಮಂ ಸೋಂಕುಮನಾರವಧರಿಪರ್ (ಆದಿಪು. ೪-೭೭).

[ತುಱಿ$_1$ + – ವು]

**ತುಱಿಸು** 'ತುಱಿಯಿಸು' ನೋ.

**ತುಱಿಹ** (ನಾ). ಹಿಂಡುವುದು ; ರಸ ತೆಗೆಯುವುದಂ ; ಅರೆಯುವುದು : "ಸುತ್ಯಾ, ಅಭಿಷವಃ, ಸವನಂ–ಯಜ್ಞಾರ್ಥವಾಗಿ ಸೋಮವ ತುಱಿಹ" (ನಾಚಿರಾ. ೬). [ತುಱಿ$_1$ + – ಹ$_2$]

△ **ತುಟುವ** 'ತುಳಂ' ನೋ.

**ತುಟ್ಟಿಲ್** (ನಾ). ಒಂದು ಬಗೆಯ ಮರ ; ಚುಜ್ಜಲುಮರ ( ? ) : ತಸ್ಯ ಸೀಮಾನ್ತರಂ ಕೊಳ್ಳಿನ ತೊಱಪೆ ಪೆರಿಪ್ಪೆವ ಪಾಣ್ಡರ್ಕ ತುಟ್ಟಿಲುಂ ದೇವಸಾಲೆಯುಂ (ಎಕ. XVI, ಗುಬ್ಬಿ. ೭೫-೫೦ ; 733) ; ದಕ್ಷಿಣಸ್ಯನ್ದಿಶಿ ಪಡುವ ನೋಡಿ ಪೋದ ಪೇಱಿೂಱೆಪ್ಪೆಯೆ ಅನ್ತೆ ತುಟ್ಟಿಲ ಪೇಱಿೂಱೆಪ್ಪೆಯೆ (ಎಕ. XVI, ತಿಪಟೂ. ೦೪೦-೭೮ ; 900). [ ? ]

**ತುಟ್ಟಿಲ್ಕಾಲ್**, ತುಳ್ದಿಲ್ಕಾಲ್ (ನಾ). ಒಂದು ಸ್ಥಳದ ಹೆಸರು : ತಸ್ಯ ಸೀಮಾನ್ತರಂ ಪೂರ್ವ್ವಸ್ಯಾನ್ದಿಶಿ ತುಟ್ಟಿಲ್ಕಾಲೆ ಅನ್ತೆ ಬನ್ದು ಕಳರಾ ಬಾಯ್ಕಾಲುಳ್ ಕೂಡಿ ... ಅನ್ತೆ ಬನ್ದು ತೊಱೆಯುಳ್ ಕೂಡಿತ್ತು ... ಅನ್ತೆ ಬನ್ದು ಬೆಟ್ಟದಾ ಮೂಡಾಯ್ ಪೊರೆವ ಬನ್ದು ತುಟ್ಟಿಲ್ಕಾಲೊಳ್ಕೂಡಿತ್ತು (ಮೈಆರಿ. ೦೯೩೭, ೫೩-೨೪ ; 700 ?). **ತುಳ್ದಿಲ್ಕಾಲ್** : ಅರಸರಾನ ನುಮತಪ್ಪಡಿಸಿ ಪೊಯ್ದುದು ತುಳ್ದಿಲ್ಕಾಲ್ಕಿಲ್ಲಿಪುಸೂರ್ ಱಡಿಯುಕ್ಕ (ಮೈಆರಿ. ೦೯೨೫, ೦೦೭-೨೮ ; ?). [ತುಟ್ಟಿಲ್ ? + ಕಾಲ್$_2$]

**ತೂ** (ನಾ). (ಅವಹೇಳನ, ಅಸಹ್ಯಗಳನ್ನು ಸೂಚಿಸುವ) ಒಂದು ಅನುಕರಣ ಶಬ್ದ : ತೂ ನಿನ್ನ ಯೋಗ್ಯತೆಗೆ ಇಷ್ಟು ಬೆಂಕಿ ಹಾಕು (ರೂಢಿ). **ತೂತೂ** (ದ್ವಿರುಕ್ತಿ) : ಶಿವನ ತನುವಂ ನೋಡಿ ತೂತೂ ಎಂದು ತೂಪಿಱಿದ ಯುವತಿಯುಂ ಕಂಡು (ಬಸಪು. ೦೩-೨೦). 'ಥೂ' ಪರಾ.

**ತೂಂಕಂಗೊಳ್** (ಕ್ರಿ). ತೂಗಿಬೀಳು; ಮೂರ್ಛೆಹೋಗು : ವಿಷವಿಷಮ ಕನತ್ಕಿಂಜಲ್ಕಮನುತ್ಪಲಮೊಂದಂ ಜನಪತಿ ಕಂಪುಗೊಂಡು ತೂಂಕಂ ಗೊಂಡಂ (ಶಾಂತಿಪು. ೭-೯೨). [< ತೂಂಕು$_2$ + ಕೊಳ್$_1$]

**ತೂಂಕಡ** 'ತೂಂಕಡು' ನೋ.

**ತೂಂಕಡಂಗಾಣ್** (ಕ್ರಿ). ತೂಕಡಿಸು ; ಜೂಗರಿಸು : ಹಂಸೆಗಳಿರಡೆಮೆ ಯೊಂದಾಗಲೀಯಳ್ ನವಿಲ್ವಾಣತಿಯಂ ಕಣ್ಮುಚ್ಚಲೀಯಳ್ ಗಱಪುವ ಗಿಳಿಯಂ ತೂಂಕಡಂಗಾ [ಪಾಠಂ. ಕಾ]ಣ ಲೀಯಳ್ (ಅರ್ಧನೇ. ೩-೦೦೭).

[< ತೂಂಕಡು + ಕಾಣ್]

**ತೂಂಕಡಿಕೆ,** ತೂಕಡಿಕೆ, ತೂಗಡಿಕೆ (ನಾ). = ತೂಂಕಡು ೧ : ಜೃಂಭ ಮತಿ ಜಡಶ್ವಾಸಂ ದೃವಿಣಾಳನಂ ತೂಂಕಡಿಕೆಯಿವನುಭಾವಂಗಳ್ (ರಸರ. ೪-೧೨೮). **ತೂಕಡಿಕೆ :** ಬರಬರ ಭಕ್ತಿಯರೆಯಾಯಿತ್ತು ಕಾಣಿರಣ್ಣಾ ಮೊದಲ ದಿನ ಹಣೆ ಮುಟ್ಟಿ ಮಱುದಿನ ಕೈಯ ಮುಟ್ಟಿ ಮೂಱನೆಂಬ ದಿನಕ್ಕೆ ತೂ[ಪಾಠಾಂ. ಮಾ]ಕಡಿಕೆ ಕಾಣಿರಣ್ಣಾ (ಬಸವ. ೨೨೦) ; ಸೆಜ್ಜೆವನೆಯೊಳಗೆ ಮೃದುವೆನಿಪ ತಳ್ಪದ ಮೇಲೆ ಸಜ್ಜನಂ ನೆಲಸಿ ತೂಕಡಿಕೆ ಮನವಂ ಜೋಲೆ (ಬಸರ. ೯-೧೩೦) ; ಕಣ್ಣೆವೆಗಳಲಿ ನಸು ತೂಕಡಿಕೆ ತೋಱದೊಡೆ ವ್ಯೈಗೆದಱುವನು (ಕುವ್ಯಾಅ. ೯-೮); ತುಳುಕ್ಯಾಡತಾವ ತೂಕಡಿಕೆ (ಗಂಗಾತ. ೭೦-೩) : ತನಗೆ ತೂಕಡಿಕೆ ಬಂದಾಗ ಅಲ್ಲಿ ಕೊಂಚ ಹೊತ್ತು ಕುಳಿತುಕೊಂಡ (ಪಶಾಕ್ಷಿ. ೧೨೦). **ತೂಗಡಿಕೆ :** "ಜೃಂಭಣಂ–ತೂಗಡಿಕೆ" (ಕಾಶಕ್ಕ. ೭೭) ; ಸುಂದರಿಯರೇ ನಿಮಗೆ ತೂಗಡಿಕೆಯೇ (ಮಲೆನಾ. ೭೦).

[ತೂಂಕಡು + – ಇಕೆ]

**ತೂಂಕಡಿಕೆಗಣ್** (ನಾ). ತೂಕಡಿಸುವ ಕಣ್ಣು ; ನಿದ್ದೆಗಣ್ಣು : ಕಳ್ಳನೆಂದು ತೂಂಕಡಿಕೆಗಣ್ಣಿಂದಾಕೆಯ ಮುಂದಲೆಯನಡಸಿ ಪಿಡಿದು (ಧರ್ಮಾಮೃ. ೨-೪೭).

[ತೂಂಕಡಿಕೆ + ಕಣ್]

**ತೂಂಕಡಿಸು,** ತೂಕಡಿಸು (ಕ್ರಿ). ೧. ನಿದ್ರೆಯ ಭಾರದಿಂದ ತಲೆಯನ್ನು ತೂಗಾಡಿಸು ; ನಿದ್ರೆಯಿಂದ ಜೋಲು ; ಜೂಗರಿಸು : ತೂಂಕಡಿಸಿಯು ಮಲಸಿಯುಮಿಾಗಳು ಜಡತ್ವವಾಯ್ತೆಂದು ಮನಮನಱಿಗಬಲೆಯರ(ಂ) (ಮದತಿ. ೧೦-೩೭) ; ಬಡವಪ್ಪೊಡೆ ... ತೂಂಕಡಿಪ್ಪೊಡೆ ಪಶುಗಳ್ಗೆಲ್ಲಂ ಕೊಡುವುದು ಬೇವಿನ ಕಷಾಯಮಂ (ಲೋಕೋಪ. ೯-೨೦೭) ; ತೂಂಕಡಿಪ್ಪವರ ನೊಪ್ಪುವ ಪಾಸಿನ ಮೇಲೆ ನೂಂಕಿದಂತಾದುದು (ಪಾರ್ಶ್ವಪು. ೩-೧೦೩) : ತನು ಬಡವಪ್ಪ ತೂಂಕಡಿಸುವಾಗುಳಿ ಪುಟ್ಟ ... ಪೊಂಗಿ ಬಸಿಱ್ ಬಿಗಿದನ್ನಗರ್ಭಿಣೀಜನದ ವಿಕಾರದಮಾ ಸತಿಯೊಳಾಗವೆ (ಪುಷ್ಪಪು. ೯-೧೧೭) : ನಿದ್ದೆಯ ಬಿಣ್ಪಿಂ ತೂಂಕಡಿಪ ನಿನತೊಂದು ಗುಣಂ ಹೀನಂ (ರಾಮಾಶ್ವ. ೯೩-೧೧). ೨. ನಿದ್ರೆಮಾಡಂ : ಲೋಕಪಾಲನಿರುಳ್ ತೂಂಕಡಿಸುವಾಗಳ್ (ಶಾಂತಿಪು. ೮೫-೬) ; ತೂಂಕಡಿಪ ವನ್ಯಮೃಗಂಗಳ ಮಗ್ಗುಲೊಳ್ ತೆಱಂದಿರಿದು ಹಿಮಾಂಶುರಶ್ಮಿಗಳಿನುಜ್ವಳಿಸಿದುಟಜಾಂಗಣಗಳೊಳ್ ಪರೆದೆಸಗಿತ್ತತಿಪ್ರಮುದಕಾರಣನಂದು ನಿಶಾಸಮಿಾರಣಂ (ಕಾದಂಪೂ. ೨೮೩) ; ಚೇರಮನಲ್ಲಿ ತೂಂಕಡಿಸೆ ಕನಸಿನೊಳಗೆಲ್ಲಮಂ ಪುರಹರನೊಡಂಬಡಿಸೆ (ನಂಬಿರ. ೧೭-೧೧) ; ಆತನೊಂದು ಲತಾಭವನದೊಳ್ ಮಱಿದು ತೂಂಕಡಿಸೆ (ಪುಣ್ಯಾಸ್ರ. ೧-೯೦ವ). ೩. (ಆಲಂ) ಕಾರ್ಯಂಗತವಾಗದಿರು ; ಆಚರಣೆಗೆ ಬಾರದಿರು : ನಿಯಮ ನಿಬಂಧನೆಗಳ ಕಟ್ಟುಪಾಡು ನಿಶ್ಚಯವಾಗಿ ತೂಂಕಡಿಸುತ್ತಿರುವುವು (ಬಿಟ್ಟಿಆ. ೩೪-೧೭). **ತೂಕಡಿಸು :** ೧. ಕೋಕನದಷಂಡತಟದೊಳ್ ತೂಕಡಿಸುವ ಹಂಸನಂತಿರೆ (ದಶಕು. ೦೪-೧೩) ; ಕೃತವರ್ಮನೊಲಿದಾಗುಳಿಸಿ ತೂಕಡಿಸಿದನು ತೆಗೆದುದು ನಿದ್ರೆ ತನುಮನವ (ಕುವ್ಯಾಗ. ೯-೩); ಭಂಗಿಯ ತಿಂದಂತೆ ತೂಕಡಿಸುತ ಮತ್ತೆ ಕಂಗಳ ಮುಚ್ಚಿ ತೆಱೆವುತ ಬಿಂಗಿಯಂತಾಡುವ ಕಂಥೆಯ ಜೋಗಿಣಿಯಂಗದಾಟವೆ ನಮ್ಮ ನೃತ್ಯ (ಭರತ. ೦೪-೫೨); ಕಿರಣಸಿಂಗ ತೂಕಡಿಸುತ್ತಿದ್ದ (ದೇವಸಾ. ೫೦); ತೂಕಡಿಸುತ್ತಿದ್ದವನಿಗೆ ಹಾಸಿಗೆ ಹಾಸಿ ಕೊಟ್ಟಂತೆ (ಗಾದೆ). ೪. (ಆಲಂ) (ಹೂವನ್ನು) ಬಾಡಿಸು ; ಮುಂಚ್ಚಿಕೊಳ್ಳುವಂತೆ ಮಾಡು: ನಗಿಸಿಯೆ ಕುಮುದಿನಿಯ ತೂಕಡಿಸಿ ಕಮಲಿನಿಯ ... ಸಂಧ್ಯಾಮುಡದಿಯೊಪ್ಪಿದಳು (ಜೀವಂಚ. ೪-೦೭). [ತೂಂಕಡು + – ಇಸು₃]

**ತೂಂಕಡು,** ತೂಂಕಡ, ತೂಕಡು (ನಾ). ೧. ನಿದ್ರೆಯ ಜೊಂಪು ; ತೂಕಡಿಕೆ; ಮಂಪರಂ : ತುಂಗಭದ್ರನೆಂಬ ಪೊಡಂಗಾಱಂ ಸೊರ್ಕಿ ತೂಂಕಡಿಂದಿರುಳ್ ಕಟ್ಟಿದ್ದಿಂಗಳ್ ಕಡುಗತ್ತಲೆಯೊಳ್ ಬಂದು (ವಡ್ಡಾರಾ. ೧೪೭-೨೨). ೨. ನಿದ್ರೆ: ಆ ತೂಂಕಡಿನೊಳ್ ಪರವಶತೆ ಬೆರಸಿತರಸನೊಳಾಗಳ್ (ಲೀಲಾವ. ೩-೫೩); ಪದೆದಿರ್ದ ವನವಿಹಂಗಂಗಳಂ ಕೊಂಬುವೆರಸಿ ತೂಗಿ ತೂಂಕಡನೊಡರ್ಚಿಯುಂ (ಚಂದ್ರಪು. ೮-೪ವ) ; ಪತತ್ರಿಗಳೊಳಿರ್ಪಾ ತೂಂಕಡಂ ನೂಕುತುಂ ತಣ್ಣನೆ ತೀಡಿತ್ತೆನಸುಂ ಪ್ರಭಾತಸಮಯಪ್ರೋದ್ಭೂತಶೀತಾನಿಲಂ (ಕುಸುಮಾ. ೧-೫೨). **ತೂಂಕಡ :** ೨. ತೂಂಕಡದ ಮೆಯ್ಯಲಸಿನಿಂದೇಳಲೊಲ್ಲದೆ (ಮಂತ್ರಶ. ೧೩೯-೪). **ತೂಕಡು :** ೨. ಪುರ್ಬಿನ ಕುಡಿವೆರಸು ತೂಕಡನೊಳಕೊಂಡ ಜಾಡ್ಯಮುಂ ಸೊಕ್ಕು ಮುಕ್ಕುಳಿಸಿದಂತಿರ್ದಿರವುಂ ... ದೊರೆಕೊಳ್ಳುಮೆಂದು ಭಾವಿಸಿ (ಕಾದಂಪೂ. ೭೫೯).

[ದೇ. ॥ ತಮಿ. ತೂಙ್ಕಲ್ ; ಮಲ. ತೂಙ್ಙಲ್ ; ತುಳು. ತೂಗಡಿ]

**ತೂಂಕಡುಗೆಡು** (ಕ್ರಿ). ನಿದ್ರೆ ತಿಳಿ ; ಎಚ್ಚರವಾಗು : ಅಗಳಾತನುಂ ನೇಸರ್ಮೂಡುವಾಗಳ್ ತೂಂಕಡುಗೆಟ್ಟು ದೆಸೆಗಳಂ ನೋೞ್ಪಂ (ವಡ್ಡಾರಾ. ೫೪-೦೯). [ತೂಂಕಡು + ಕೆಡು₁]

**ತೂಂಕಿಡು** (ಕ್ರಿ). ಇಡಿ ; ತುಂಬು ; ತುರುಕು (?) : ಧರೆಗಂ ಪ್ಯೋಮಕ್ಕಮೆಂಟುಂ ದೆಸೆಗಮಡಸಿ ತೂಂಕಿಟ್ಟವೋಲ್ ಭೂತಸೈನ್ಯಂ ಬರೆ (ಜಗವಿ. ೧೪-೦೯). [P ಇದು 'ತೂಂತಿಡು' ಎಂಬುದರ ಅಪಲಿಖಿತವಿರಬಹುದು]

**ತೂಂಕು₁,** ಜೂಗು, ತೂಕು₁, ತೂಗು₁ (ಕ್ರಿ). ತೂಂಪ, ತೂಂಬ, ತೂಪ (ಭವಿಕ್ರ). ೧. ತಕ್ಕಡಿ ಮೊದಲಾದ ಸಾಧನಗಳಿಂದ ಭಾರವನ್ನು ಕಂಡುಹಿಡಿ, -ತೂಕಮಾಡಂ, -ತೋಲನಮಾಡು: ತೂಂಕಿ ನೋಡಿದರ್ ದಿಟ್ಟದೊಲೆಯೊಳೊರ್ವರನೊರ್ವರ್ (ಜಗವಿ. ೯-೭೧); ನಿತ್ಯಬಿಂದುಗೆ–ಬೆಡಂಗು, ಕಡಂಗು ... ಕೂಂಕಿದಂ, ತೂಂಕಿದಂ (ಶಮದ. ೩೭ ಪ್ರಯೋ). ೨. ತೂಗಾಡಿಸಂ ; ಅಲ್ಲಾಡಿಸಂ ; ಅಲುಗಾಡುವಂತೆ ಮಾಡಂ : ತಮ್ಮ ಗದೆಗಳ ನಾಗಳ್ ಕಿಱಿಕಿಱಿದೆ ತಿರುಪಿ ಮೂಣದೆ ಕಿಱಿಕಿಱಿದನೆ ತೂಂಕಿ ತೂಂಕಿ ನೂಂಕಿದರೆನಸುಂ (ಗದಾಯು. ೮-೭): ಅವಷ್ಟಂಭದಿಂ ತೂಗಿದ ಬಾಳ್ಪಳ್ವತ್ತು ಬಾಳ್ವುಗ್ಗಡದ ಬಿರುದರಂ ತೂಗಿ ತುತ್ತಿಟ್ಟುದೇಂ ತಾಳ್ದಿದನೋ ವಿಕ್ರಾಂತಮಂ ಯಾದವಕುಳತಿಳಕಂ ವೀರಬಲ್ಲಾಳದೇವಂ (ಎಕ. IV, ತರೀಕೆ. ೪೫-೪೦; 1196). ೩. ನೇತಾಡಂ; ಜೋಲು; ಇಳಿಬೀಳು : ಫಲದ ಬಿಣ್ಪಿಂ ತೂಂಬವೋಲ್ ಜೋಲ್ದಿಳಾಂತರಮಂ ತಳ್ತು ವಿರಾಜಿಸಿತ್ತಭಿನತೋದ್ಯನ್ನಾತುಳುಂಗವ್ರಜಂ (ಕುಸುಮಾ. ೯-೩೦) : ತೂಂ [ಪಾಠಾಂ. ತೂ] ಪೆಳಗಾಯ್ಗಳೆಂಬ ಕುಂಡಲಮುಮರ್ದಾಡೆ ನಂದನಮೆ ನಂದನಮಾದುದು ಚೈತ್ರರಾಜನಾ (ವೃಷವಿ. ೪-೫೭). **ಜೂಗು :** ೪. ತೊನೆ ; ಒಲೆ ; ತೂಗಾಡು : ಬಳಲುತ್ತ ತೊಳಲುತ್ತಿರ್ಪ ಭವರೋಗದಲ್ಲಿ ಜೂಗುತ್ತಿರ್ಪ ಬಂಧನದ ಈ ದಂದುಗವಿನ್ನೆಂದಿಗೆ ಪೋಪುದು (ವಚಶಾ. II, ೦೫೩). **ತೂಕು₁:** ೪. ಬೀಳುವಂಬಿನ ಹೊಯ್ವ ಖಡ್ಗದ ತೂಳುವಾನೆಯ ತೂಕಿ ತಾಗುವ ಶೂಲಿಗೆಯ ... ಧಾಳಾಧೂಳಿ ಮಸಗಿತು (ಕುವ್ಯಾಕ. ೧೦-೯). ೫. ತೂಕವನ್ನು ತೋರಂ : ಏನದಕೆ ಸುರಪತಿಯ ದಂತಿ ಸಮಾನವೆಂಬರದಷ್ಟದಿಕ್ಕುಗಳಾನೆಗಳ ಪಡಿಕಟ್ಟು ತೂಗಲು ತೂಕುವವು [ಪಾಠಾಂ. ತೂಕಕವು] ಕಿಱಿದು (ತೊರರಾ. ೬-೩೨-೦೪). ೬. ಸಮಾನವಾಗೆಣಿಸು : ಮಂದರಾಚಲದಿಂದ ತೂಕಿಯೆ ವರಪಿನಾಕವ ಕೊಟ್ಟನಾ ಶಿವನು (ಸಂಭಪ. ೨೪-೧೭). **ತೂಗು₁ :** ೧. ಧರೆಯಱಿಯಲೊಡಂ ತೂಗಲ್ ಧರೆಗೆ ತುಲಾದಂಡಮಲ್ತೆ ಮದ್ಭುಜದಂಡಂ (ಆದಿಪು. ೧೪-೮೧); ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ (ಬಸವ. ೪೪೦) ; ದೇವದ್ರುಮುಮಂ ಲಕ್ಷ್ಮಾದೇವಿಯುಮಂ ಕಮಳಸಂಭವಂ ತೂಗಿದೊಡಾ ದೇವದ್ರುಮಕ್ಕೆ ಲಕ್ಷ್ಮಾದೇವಿ ದಶಾಫಲದ ಬಿಣ್ಪಿನಿಂ ಘನವಾದಳು (ಸೌಇಇ. IX-1, ೨೭೩-೫೭; 1179) ; ಓರಂತೆ ಮರಕಾಲರು ಹಡಗಿನ ವ್ಯವಹಾರದಿ ಗಳಿಸಿದ ಹಣವ ಭಾರಸಂಖ್ಯೆಯಲಿ ತೂಗುವರು (ಮೋಹತ. ೩-೨೯) ; ವರುಣಗಿರಿ ಪೂರ್ವಾದ್ರಿಗಳ ಹೆಚ್ಚು ಕುಂದುಮಂ ಸರಸಿಜಭವಂ ನೋಳ್ಪೆನೆಂದು ತೂಗಲ್ (ಜಬಪು. ೯-೦೭) ; ಶಶಿ ರವಿ ತ್ರಾಸಲೀ ಪುರವ ಸಗ್ಗವನೊಲ್ದು ಬಿಸರುಹಾಸನ ತೂಗುತಿರಲು

(ಕಂನವಿ. ೫-೪). ೨. ಮೆಯ್ಯುಂ ತೂಗುತ್ತುಂ ಉನ್ಮತ್ತ ಚೇಷ್ಟೆಯಿಂದೆರೆಯಂ ತಿಂದ ಮೀನಂತೆ ಪೊಳೆಯುತ್ತುಂ (ಧರ್ಮಾಮೃ. ೫-೧೩೭ ವ) ; ನಿಮ್ಮನ್ವಯವ ಸಂಹರಿಸಿದಿರಿ ಸಾಕೆಂದು ಸಂಜಯ ತೂಗಿದನು ಶಿರವ (ಕುಮ್ಯಾಕ. ೧-೧೫). ೪. "ತೊನೆ, ಒಲೆ, ತೂಗು, ಸೆಡೆವು, ಅಲ್ಲಾಡು, ನಡುಕಂ– ಈ ೭ ಕಂಪನಂ" (ಕಶಸಾ. ೩೧-೬೫೦) : ತೂಗಿ ಪಣ್ಗೊಲೆಯಿಂ ಬಳ್ಕುವ ಕೌಂಗು (ಆದಿಪು. ೧-೬೭) : ತನು ಪುಳಕಾಳಿಭಾರದೊಳೆ ತಾಂ ತೂಗುತ್ತಿರಲ್ (ಕುಸುಮಾ. ೬-೮೮) ; ತಿಂದು ತೇಗಿ ತೂಗಿ ಕೆಲೆಕೆಲೆದು . . . ನಲಿದಾಡುವ ಭಲ್ಲೂಕ ನಿಕಾಯದಿಂ (ಗಿರಿಕ. ೧-೦೨೮ ವ) ; ನಸುಗೆಂಪಿನಿಂ ಬೀಗಿ ಬಾಗಿ ತೂಗುವ ... ತೆನೆಗಳಂ ತಿಱಿತಿಱಿದು ತಂದು ತಂದು (ಸಿದ್ಧರಾ. ೨-೨೯) ; ಚಾರಿಗಳು ಬಲವೆರಡಱೊಳಗೊಯ್ಯಾರದಲಿ ತೂಗಿದವು (ಕುಮ್ಯಾದ್ರೋ. ೧-೫೦) : ಎಡಗೆಯ್ಯ ಮುಷ್ಟಿಯಂ ತಾಣದೊಳಗೆ ಕೆಯ್ಯಡಗಿ ತೂಗುವ ಪಾದದ್ವಯದಿ ಪೊಡವಿ ತಲ್ಲಣಿಪಂತೆ ಖಳರಾಯ ಗರ್ಜಿಸಿ ಮೃಡತಪಧ್ವಂಸಿಯ ತಿವಿದ (ಮೋಹತ. ೧೨-೮೭) : ನೆಳಲ ಚಪ್ಪರದಲ್ಲಿ ಹಣ್ಣುಗಳೂ ಅಡಕೆಯ ಗೊಂಚಲುಗಳೂ ತೂಗುತ್ತಿದ್ದುವು (ಕಾಲೂರ. ೧೩ ಕಥಾಸಾರ). ೭. ನೇತು ಹಾಕು ; ಇಳಿಬಿಡಂ : ಭಾಳಾಕ್ಷನ ರೂಹು ನಿನಗೇಕೆನುತ ನಾರಿಕೇಳಫಲವ ಕಟ್ಟಿ ತೂಗಿ . . . ಹೋಳ ಮಾಡಿದರು ಜೂದಿನಲಿ (ಮೋಹತ. ೨೦-೨೨). ೮. ತೊಟ್ಟಿಲು, ಉಯ್ಯಾಲೆ ಮೊದಲಾದಂವುಗಳನ್ನು ಆ ಕಡೆಯಿಂದ ಈ ಕಡೆಗೆ ಚಲಿಸಂವಂತೆ ಮಾಡಂ ; ಜೀಕು : ಇದು ಲೀಲಾಂದೋಳ ಮಂದೋಳದ ದನಿ ನೆಱಿಗೊಳ್ವನ್ನೆಗಂ ಪಾಡಲೆಂದೇಱಿದಳಂ ತೂಗುತ್ತು ಮಿರ್ದನ್ನಯ ಪರಿಜು (ಆದಿಪು. ೪-೯); ಉನ್ಮದದಂತಿದಂತಯುಗದೊಳ್ತಂ ನತ್ತ್ರಿಯಿಂ ಕಟ್ಟಿದುಯ್ಯಲನಾನಂದದೊಳೇಱಿ ದಿಗ್ವನಿತೆಯತ್ತೂರ್ಗಲ್ಕೆ (ಎಕ. VIII. ಸಾಗರ. ೧೦೯-೪೦; 1042) ; ಪಾಡುತೆ ತೂಗಿದರಖಿಳಪ್ರಪಂಚ ಪಾಡಿಪ ಶಿಶುವಂ (ಗಿರಿಕ. ೩-೬೭); ಮಣಿಲೇಖೆ ಸುತವಮಾಲೆಯರಿಗೆ ಪುಟ್ಟಿದ ಕಂದನ ತೊಪಲ್ಲಿ (ಜೀರಮ. ೮-೨೦) ; ತೂಗಿರೆ ರಂಗನ ತೂಗಿರೆ ಕೃಷ್ಣನ ತೂಗಿರೆ ಅಚ್ಯುತಾನಂತನ (ಪುರಂದ. ೨-೧೩೬ ಪಲ್ಲವಿ). ೯. ಉಯ್ಯಲಾಡು ; ಜೀಕಿಕೊಳ್ಳು : ಬಾಗಿಲ ಮುಂದಣ ನವಿಲುಯ್ಯಲನೇಱಿ ತೂಗುತಿರ್ಪೆಳ ವೆಣ್ಣುಗಳ ಸೋಗೆಗಣ್ಮಱಿಮಿನು ಸುಳಿದಾಡುವ ಜನಸಾಗರದೊಳಗೊಪ್ಪುತಿಹುವು (ಕಂನವಿ. ೭-೯). ೧೦. ಜಗ್ಗು ; ಸೆಳೆ : ತೂಗಿ ಕಿವಿವರೆಗುಗಿದು ಯಂತ್ರವ ತಾಗಿಸಿದನಂಬಿನಲಿ (ಕುಮ್ಯಾಆ. ೧೫-೨೯) ; ಪಾರ್ಥ ಸಾಕೆನ್ನೇಳು ಬಾಣವ ತೂಗು ಮಾತಾಡಿಸು ಮಹಾಧನುವ (ಕುಮ್ಯಾಭೀ. ೩-೨೪). ೧೧. ಎಸೆ; ಬೀಸಂ; ಹೊಡೆ: ತರಳಾಪಾಂಗಂಗಳೊಳ್ ಮಚ್ಚರಿಪಲರ್ಗಣೆಯಂ ಕಟ್ಟಿ ತೂಪಂದದಿಂ ಚಾಮರಮಂ ವಕ್ಷೋಜಪೀಠಸ್ಥಿತ ಮದನನೃಪಂಗೆತ್ತು ವಂತೆ (ಲೀಲಾವ ೭-೧೪). ೧೨. ಹೋಲಿಸು ; ತಾಳೆನೋಡು : ಪಾವಿನ ನಂಜುಮನವರುಮನೋವಿನಿಸಂ ತೂಗಿ ನೋಡೆ (ಧರ್ಮಾಮೃ. ೨-೧೦೬) ; ನಿಮ್ಮಾರುಭಟೆಯನು ನಮ್ಮ ಬಾಹುವಿಕಾರ ಬಲವನು ತೂಗಿಯೆನುತೆಚ್ಚನು ಧನಂಜಯನ (ಕುಮ್ಯಾಕ. ೨೦-೨೭) ; ಭೂಗಗನಪಾತಾಳ ದರಮನೆಗಳಿದಱೊಡನೆ ತೂಗೆ ಸರಿಬಾರವು (ಚಬಪು. ೫-೫೨) ; ರಾಘವಾನು ಜಂಗೆ ಕೆಲಬಲನ ವನಂಗಳಂ ತೋಱಿ ಅಂದಿನ ದಂಡಕೆಗೊರೆಯಾಗದೆಂದು ತೂಗಿ ಬಣ್ಣಿಪಳ್ (ರಾಮಾಶ್ವ. ೩೩-೧೨). ೧೩. ಪರೀಕ್ಷಿಸಂ ; ವಿಮರ್ಶಿಸಂ ; ಯೋಗ್ಯತೆಯಂನ್ನು ನಿಷ್ಕರ್ಷಿಸಂ : ಕರದಿಂ ಸರಲಂ ಕಣ್ಣಿಂದ ರಾತಿಯಂ ತೂಗಿದೂಗಿ (ಶಾಂತಿಪು. ೪-೫) ; ದಂಡುವೇಟ್ಬುರಸಿನಂತೆ ತೂಗಿ ಬಿಡುವ ನಾಯಕನಂತೆ ಕಲಹಂ ಮಾಟ್ಪ ಕೊಂಡೆಯನಂತೆ ಲೇಸಲ್ಲದ ಸುಖಕ್ಕೆ ಪಾಯಿಸಿ ನೋಯಿಸುವಿಂದ್ರಿಯಂಗಳುಮಂ (ಧರ್ಮಾಮೃ. ೯-೨೩) ; ದೂರಕೆ ದಿಟ್ಟಿಯ ಪಸರಿಸಿ ಕೊರಲೆತ್ತಿ ದಾರಿದಾರಿಯ ತೂಗಿ ನೋಳ್ಪ (ಭರತ. ೩-೩೬) : ತೂಗಬೇಕು ಮನದೊಳಗೆ ತೂಕವುಳ್ಳವರ ಮಾತು ಹಿಡಿದು (ನಿಲಮು. ೪೯-೯) : ಗದ್ಯವನ್ನೋ ಪದ್ಯವನ್ನೋ ಓದಿ, ಆನಂದಿಸಿ ಅದರ ಬೆಲೆಯನ್ನು ತೂಗಿದ ಮೇಲೆ ಅದರಲ್ಲಿರುವ ಉದಾತ್ತ ಧ್ಯೇಯಗಳನ್ನೂ ಕೌಶಲ್ಯವನ್ನೂ ಅನುಭವಿಸುವ ಶಕ್ತಿಯುಂಟುಮಾಡುವುದು (ಶಿಕ್ಷದ. ೨೩೯). ೧೪. ಸಾಧ್ಯವಾಗು : ಕಾಳಗಂ ತೂಗದಿವರೊಡನೆಮ್ಮ ವರ್ಗನುತಿ ನೋಟಕರ್ ನುಡಿವುತಿರೆ (ಚಬಪು. ೪೨-೧೬). ೧೫. ನಿಲುಕಂ ; ಮುಟ್ಟು ; ಹಿಡಿತಕ್ಕೆ ಬರಂ : ನಮ್ಮ ಸಾಮಾನ್ಯ ವ್ಯವಹಾರದಲ್ಲಿಯೇ ಎಷ್ಟೋ ಮಾತು ತಲೆಗೆ ತೂಗದೆ ಹೋಗುವಾಗ, ಶಾಂತಿಯ ನೆಲೆಯು...ಅಳತೆಗೆ ಸಿಕ್ಕದಿರುವುದು ಆಶ್ಚರ್ಯವಲ್ಲ (ಸಾಹಿವಿ. ೧೩೭). ೧೬. ಸಾಟಿಯಾಗು ; ಸಮಾನವಾಗಂ : ರಮಾದಿ ಸಮಸ್ತ ಪ್ರಪಂಚದ ಸುಖವು ಒಟ್ಟುಗೂಡಿದರೂ ಪರಮಾತ್ಮನ ಸುಖಾನಂದದ ಒಂದಂಶಕ್ಕೂ ತೂಗಲಾರದು (ಜಗದಾ. ೨೦೪). ೧೭. ತೇಲಿಸು : ಸಾಗರದ ತೆರೆಗಳಲಿ ಗಿರಿಗಳ ತೂಗಿ ಸೇನೆಯ ನಡೆಸಿ (ಕುಮ್ಯಾಅ. ೨೨-೫೨).

**ತೂಗ ಕಟ್ಟು**=ನೇತುಹಾಕು : (ಕ). **ತೂಗಿಕೊಳ್**=ನೆಗೆ; ಹಾರು ; ಬೀಳಂ : ತಾಗುವ ತಗರು ಬರಲೋಡಿ ಬಾವಿಯ ತೂಗು[ಗಿ]ಕೊಂಡಂತೆ (ಸರ್ವಜ್ಞ. ೧೦೦೦). **ತೂಗಿ ತೊನೆ**=ತೂಗಾಡಂ ; ಒಲೆ : ಅಂತಾಕೆಗಳ್ ತೂಗಿ ತೊನೆವ ತೊನೆಪಂಗಳುಮುಂ ... ನೋಡಿ (ಪಂಪಭಾ. ೪-೯೦ವ). **ತೂಗಿ ನೋಡು**=೧. ತೂಕಮಾಡಿ ನೋಡು ; ಭಾರ ಕಂಡಂಹಿಡಿ : ಹಿರಿಯ ಭಕ್ತರ ಕೆರಹನೊಂದೆಸೆಗಿರಿಸಿವೊಂದೆಸೆಯಲಿ ಮಹೀಸುರವರರ ನೇಱಿಸಿ ತೊಲೆಯನೆಲ್ಲರು ತೂಗಿ ನೋಡಲ್ಕೆ (ಬಸವು. ೫೫-೫೭). ೨. ವಿಮರ್ಶಿಸು ; ಪರೀಕ್ಷಿಸಂ : ಗೋವಿಂದನ ಮತದಲಿ ತೂಗಿ ನೋಡುವೆನಿದಱ ತೂಕವನೆಂದನಾ ಭೂಪ (ಕುಮ್ಯಾಸ. ೨-೫). **ತೂಗಿಬಿಡು**=ಸೆಳೆದು ಬಿಡು; ಜಗ್ಗಿಬಿಡು : ಹೂಡಿ ಮಂಡಿಯ ಕಿವಿವರೆಗೆ ಕರಾಂಗುಲಿಗೂಡಿ ಬಾಣವ ತೂಗಿಬಿಡುತ ಕೂಡೆ ವೈರಿಗಳ ಕೆಡಹಿ ಪತಿರುಣವ ನೀಗಾಡಿದರು (ಕಂನವಿ. ೧೯-೬೫). **ತೂಗುಹಾಕು, ತೂಗಹಾಕು, ತೂಗಂಹಾಕು** = ನೇತುಹಾಕಂ ; ಇಳಿಬಿಡು : ಮನೆಯ ಗೋಡೆಯ ಮೇಲೆ ದೇವರ ಪಟಗಳನ್ನು ತೂಗು ಹಾಕಿದ್ದಾರೆ (ರೂಢಿ); ತೂಗಾಸರೆಯಿಂದ, ಜೋಲಿಯಲ್ಲಿ,–ತೂಗಹಾಕು; ಜೋಲಹಾಕು (Sling. ಇಂಕನಿ) ; ತನಿಗಂಪು ಹೂವುಗಳ ಪೊರೆಯೊತ್ತಿ ತಂಗರಗಕನುವಾಗಿ ತುಂಬಿ ತೂಗಂಹಾಕಿ ಬಿಜ್ಜಣಿಗೆಯನಿಲನಿಂ ಬೀಸಿ ಮಾಡಿದುದು ಹಂಸೋದಕಂ (ಸೂಪಶಾ. ೨-೪೦).

[ ದೇ.॥ ತಮಿ. ತೂಙ್ಕು, ತೂಕ್ಕು ; ಮಲ. ತೂಕ್ಕು, ತೂಙ್ಙು ; ಕೊಡ. ತುಂಗ್ ; ತುಳು. ತೂಂಕು, ತೂಂಗು, ತೂಕು, ತೂಗು ; ತೆಲು. ತೂಂಗು, ತೂಗು ; ಕುವಿ. ತೂಂಗಲಿ, ತೂಖಲಿ ]

**ತೂಂಕು₂, ತೂಕು₂, ತೂಗು₂** (ನಾ). ೧. ತೂಗಾಡಂವಿಕೆ ; ಒಲೆದಾಟ ; ತೊನೆತ. 'ತೂಂಕಂಗೊಳ್' ಪರಾ. **ತೂಕು₂** : ೨. ತೂಕ ; ಭಾರ : ನಗದ ತೂಕೇರಬೇಕೆಂದು ... ಖೊಟ್ಟಿತನದಿಂದ ತುಂಬಿದ್ದಾದರೆ ಆವಾಗಲೆ ತಿಳಿದು ಬರುವುದು (ಮುಂಬವ್ಯಾ. ೪೨). **ತೂಗು₂** : ೧. ಶಿರದ ತೂಗಿನ ತಳ್ವಮಾಱಿಸಲಳಲಿದಳು ಕಾಂತೆ (ತೊರರಾ. ೨-೩-೪೦). (ಗು). ೩. ತೂಗಾಡುವ ; ಒಲೆದಾಡುವ. 'ತೂಗುಗುಂಡು' ಪರಾ.

[ <ತೂಂಕು₁./ತುಳು. ತೂಂಕು, ತೂಕು ; ತೆಲು. ತೂಕು ]

**ತೂಂತಿಡು₁**, ತೂತಿಡು (ಕ್ರಿ). ೧. ತುಂಬು; ತುರುಕು; ಇಡಿ; ಗಿಡಿ (?) : ಆತನ ಕೆಲದೊಳ್ ಬಾಳಬಟ್ಟಂ ತೂಂತಿಟ್ಟಂತೆ ಸಂದಣಿಸಿ ನಿಂದ ಗೋಪ ಕುಮಾರರಣಿಯ ನಡುವೆ...ನಿಂದಾತನೆನ್ನ ತಮ್ಮಂ (ಪಂಪಭಾ. ೧೦-೫೭ವ). ೨. ಉಕ್ಕು ; ತುಂಬಿ ಬರು : ಎನಸುಂ ಭಿನ್ನಘಟಕ್ಕೆ ತೂಂತಿಡುವುವೇ ನದ್ಯಾದಿಗಳ್ (ಅರ್ಧನೇ. ೪-೫೭) ; ತುಂತುಱು ತೆರೆ ನೊರೆ ಘುಳುಘುಳುರವ ತೂಂತಿಟ್ಟು ಹೊಳೆವ ವಾರಿಧಿಯ ಕಾಂತೆಯರೆಲ್ಲರೀಕ್ಷಿಸುತಿರೆ (ಭರತ. ೨೩-೯೭). **ತೂತಿಡು** : ೧. ಕಿವಿಯೊಳ್ ಬೆರಳಂ ತೂತಿಟ್ಟು (ಕಾವ್ಯಕಾ. ೧೫೬-೧೫). [ ತೂಂತು₁ + ಇಡು₁ ]

**ತೊಂತಿಡು₂** (ಕ್ರಿ). ಕಂಡಿಮಾಡು ; ರಂಧ್ರಮಾಡು ; ವೆಜ್ಜಮಾಡು ; ಚುಚ್ಚು : ಗಾತ್ರಂ ವಿಯನ್ಮಂಡಲಕೆ ತಡೆಯೆ ತೊಂತಿಟ್ಟನೆಂಬಂತೆ ನಿಂದಂ (ಧರ್ಮಾಮೃ. ೯-೨೩೦) ; ಬಾಂಗೆ ತೊಂತಿಟ್ಟವೊಲಪ್ಪ ಮೆಯ್ (ಚಂದ್ರಪ್ರ. ೫-೭೦); ವಿದ್ಯಾಧರಬಲಂ ನೆಲಕಮಂಬರಕಂ ತೊಂತಿಟ್ಟಂತೊಡ್ಡಿ ನಿಲ್ವುದುಂ (ವರ್ಧಪು. ೮-೧೧೧) ; ಅಲ್ಲಿ ತೊಂತಿಟ್ಟಂತೆ ನಿರಂತರಂ ಸುಟಿವ ನಾನಾದೇಶ ಪ್ರಸಿದ್ಧರಾಜಪುತ್ರ ವಣಿಗ್ವಲ್ಲಭವಾರನಾರೀಭಾರತಿಕನಿಕರದ ... ಪರಿಮಳ ಪ್ರವಾಹಸಮೂಹದಿಂ (ಅನಂಪು. ೧-೧೧೫ವ). [ ತೊಂತು₃ + ಇಡು₁ ]

**ತೊಂತಿಱ್** (ಕ್ರಿ). ೧. ತುಂತುರುಹನಿಯನ್ನು ಹೊರತಳ್ಳು,-ಹೊರಹಾಕು: ಹರಿ ಹರಿದದ್ರಿಕುಂಭದಿನೊಱಲ್ದೊಗೆದಿಂದುವೆನಿಪ್ಪಗಸ್ತ್ಯನಚ್ಚರಿ ವಿಂಗೆ ನೀಳ್ದ ತನ್ನ ಕರದಿಂ ಪೊಗೆದಂಥತಮಸ್ಸಮುದ್ರಮಂ ತುರಿಪದಿನೀಂಟು ತಾಗಳೆಡೆ ಸಿಲ್ಕಿದ ಮುತ್ತುಗಳಂ ತೆರಳ್ಚಿ ಪುಷ್ಕರದೆಡೆಯಲ್ಲಿ ತೊಂತಿಱಿದ ಪೋಲ್ಪುಱುಗಿರ್ದುದು ತಾರಕೋತ್ಕರಂ (ವೃಷವಿ. ೮-೫೦). ೨. ಬಾಯಿಂದ ಗಾಳಿಬಿಡು ; ಊದು : ತಲ್ಲಿಂಗಾಗ್ರದೊಳ್ಪೆತ್ತಿ ಪೇಣ್ಬರಿತರ್ಪೊಂದು ಸೆಲಂದಿಯಂ ಜವದಿನಾಗಳ್ಕಂಡು ತತ್ಕಾಂತೆ ಬಾಯೆರಲಿಂ ತೊಂತಿಱಿದಳ್ (ವೃಷವಿ. ೯-೫೬) ; ಬಾಯುಗುಳ್ಪಿಡಿಯೆ ತೊಂತಿಱಿದಪ್ಪೆ (ವೃಷವಿ. ೯-೫೭).
[ ತೊಂತು₄ + ಇಱ್₁ ]

**ತೊಂತು₁** (ಕ್ರಿ). ಇಡಿ; ತಂಬು; ಗಿಡಿ ; ತಂರಂಕು; ತುರಿಸಂ: ಉಗ್ರುಗಜೇಂದ್ರಂ ಬೆರಸೋವದಂತಕನ ಬಾಯೊಳ್ ತೊನ್ತಿ (ಎಇ. XIII, ೩೨೯-೪ ; 930) ; ಅವನಂ ಮಾರುತಿ ನಿವಿಂಪಕ್ಕೆ ತೊಂತಿದಂ ಯಮಮುಖದೊಳ್ (ಪಂಪಭಾ. ೧೧-೭೦) ; ಕರಮಂ ತೊಂತಿ ತದಾಸ್ಯದೊಳ್ ಬಳೆಯಿಸಲ್ (ಜಗವಿ. ೫-೪೬) ; ತನ್ನ ಗೋತ್ರಾವಳಿಯುಕ್ತಮಾಗಿ ನೆಱೆ ತೊಂತುವೆನಂತಕನಾಸ್ಯರಂಧ್ರದೊಳ್ (ಶಾಂತೀಶ್ವ. ೭-೧೧೭); ಅವನ ಮೈಯನು ಕೊಱೆಕೊಱೆದು ತೊಂತುವರು ಬಾಯೊಳಗೆ (ವರ್ಧಜ. ೮-೮೯); ಬೀರ್ವಗ್ಗಮಂ ಹಾಯ್ಕಿ ಸೇದಿದರ್ ಮರುಳ್ಗಳ್ಗಳಿಂ ತೊಂತರು (ಜಿಬಪು. ೧೨-೩೬); ದೇವಿಯರನೇಪೊತ್ತುಂ ಸೇವಿಸಿಯುಮಿಂದೀಗಳ್ ಪುಲಿ ಕರಡಿ ಸಿಂಗಂಗಳ ಬಾಯೊಳ್ ತೊಂತಲೆಂದೆ ಕೊಂಡುಯ್ದಪೆಂ (ರಾಮಾಶ್ವ. ೨೯-೧೦). [ ದೇ.॥ ಕುವಿ. ತೂಥಲಿ ]

**ತೊಂತು₂** 'ತೂನ್' ಪರಾ.

**ತೊಂತು₃**, ತೂತಂ₁ (ನಾ). ಕಂಡಿ; ರಂಧ್ರ; ಬಿಲ : ಮಣಿಕುಟ್ಟಿಮಮಪ್ಪ ಬಾವಿಯಂ ಪೊಕ್ಕು... ಛಿದ್ರಕದ್ವಾರದ ತೊಂತನುರ್ಚಿ ನೀರಂ ಕಳೆದಾಗಳ್ (ವದ್ದಾರಾ. ೨೬-೨೦) ; ಪೆಡತಲೆಯ ತೊಂತಿಂದುಬ್ಬುವರಿಕ್ಕೆಟಿಸಿ ನಾರಕರ್ ನಾಲಗೆಯಂ (ಸುಕುಮಾ. ೧೧-೪೪); ಕವಲಂಬಿಂ ಕಡಿವೋದ ಕೊರಲಗಿನಂಬಿಂ ಕೂಡೆ ತೊಂತಾದ ತಾಗುವ ನಾನಾಯುದ್ಧದಿಂದನೇಕವಿಧಂ (ಮಹಾನೀ. ೧೨-೪೫). **ತೂತು₁**: ಷಡಾಧಾರ ಬಳಿವಿಡಿದು ನೆತ್ತಿಯಿಂದುತ್ತರಕ್ಕೆ ಉಚ್ಚಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಅದವ. ೧೧-೨೦); ಚಲಿಸಿ ಮೂತ್ರವೊಸರ್ವ ತೂತುಗಳೆಳಪಿದವದಿರು (ಬಸಪು. ೪೦-೭೯); ಎಲ್ಲರ ಮನೆಯ ದೋಸೆಯೂ ತೂತು (ಗಾದೆ); ಮಾತು ಮನೆ ಕೆಡಿಸಿತು ತೂತು ಒಲೆ ಕೆಡಿಸಿತು (ಗಾದೆ).

**ತಾತಾತೂತು, ತಾತತೂತು, ತಾತುತೂತು** (ದ್ವಿರುಕ್ತಿ) : ಕಂದರ್ಪ ನೊಡಲು ನಿಶಾಚರನಾಥನ ಕೂರ್ಗಣೆಯಿಂದ ತಾತಾತೂತಾದುದು(ಮೋಹತ. ೩೫-೩೩) ; ತಾತಾತೂತಾಗೆ ವಜ್ರಾಂಗಿ (ಕುಮಾಸಾಂ. ೩೪೯) ; ಕೂರಂಬಂ ವನ್ನೆಸೆಯೆ ಸಚಿವನ ಮೈಯಿಯು ತಾತತೂತಾಗಲೊಡನೆ (ನವಮೋ. ೨೮-೩೯); ದಾನವನ ವಜ್ರಕವಚವನೊಡೆದು ಸರ್ವಾಂಗ ತಾತುತೂತಂ ಗೈಯಲು (ನವಮೋ. ೧೨-೭೮). **ತೊಂತನಿಡು** = ೧. (ಯಾವುದಾದರೂ ವಸ್ತುವನ್ನು) ಗಿಡ್ಡಿ,-ತಂರುಕು: ಬಸದಿಯೊಳ್ ಧನ್ವಂತರಿ ವಿಶ್ವಾನು ಲೋಮನ ಮುನ್ನಿನ ಸೂರುಳಂ ನೆನೆದು ಕಿವಿಯೊಳ್ ತೊಂತನಿಟ್ಟು ಪಟ್ಟಿರ್ದಂ (ಧರ್ಮಾಮೃ. ೨-೧೭೨). ೨. ರಾಶಿಹಾಕು ; ತುಂಬು : ರೋದೋಂತಂ ಕೂಡೆ ರತ್ನೋಜ್ಜ್ವಳಗಿರಿಕುಳದಿಂ ತೊಂತನಿಟ್ಟಂತೆ ನೀಲಾಂಭೋದಂಗಳ್ ಕೂಡೆ (ಆದಿಪು. ೧೪-೯೭). **ತೂತಾಗು** = ರಂಧ್ರಬೀಳು ; ಕಂಡಿಬೀಳು : "ವ್ರಣಿತಿ = ತೂತಾದಪ್ಪುದು" (ಶಾಶಬ್ಧ. ೨೨೦) ; ಮಾತಿನಾ ಬೊಮ್ಮನಪ್ಪ ತೂತಾದ ಮಡಿಕೆಯು ಪಾತಕನ ನೆರೆಯು ಇವು ಮೂಱು ಲೋಕದೊಳಗೇ ತಕ್ಕು ಬೇಡ (ಸರ್ವಜ್ಞ. ೪೩೦). **ತೂತುಬೀಳು** = ತೂತಾಗು ; ರಂಧ್ರವಾಗು : "ವಿದ್ಧ=ತೂತುಬಿದ್ದದ್ದು" (ಗಂಗಾಮ. ೨೯೦); ಮಾತ ತಾನಱಿಯದಧಮಂಗೆ ಮಾಣಿಕವು ತೂತುಬಿದ್ದಂತೆ (ಸರ್ವಜ್ಞ. ೧೩೫೩) ; ಓಲೆಗರಿ ತೆಂಡಾಗುವ – ತೂತುಬೀಳುವ ಸಂಭವವುಂಟು (ದ್ರಾವಿವಿ. ೫೯). **ತೂತುಮಾಡು** = ರಂಧ್ರವನ್ನು ಮಾಡಂ,-ಕೊರೆ : ಆಸ್ಫೋಟನೀ = ರತ್ನಗಳನ್ನು ತೂತುಮಾಡುವ ಶಸ್ತ್ರ (ಗಂಗಾಮ. ೩೦) ; ಬೆಲೂನಿಗೆ ತೂತು ಮಾಡಿದೆ. ಒಡೆದುಹೋಯಿತು (ರೂಢಿ).
[ <ತೊಂತಂ₁./ ತೆಲು. ತೂಟಂ ; ಮಲ್ಯಾ. ತೂತ್ರು ]

**ತೊಂತು₄** (ನಾ). ೧. ಹೊರಸೂಸುವಿಕೆ. ೨. ಊದುವಿಕೆ. 'ತೊಂತಿಱ್' ಪರಾ. [ ? ]

**ತೊಂತುಗೊಱೆ**, ತೂತಂಕೊರೆ, ತೂತಂಗೊಱೆ (ಕ್ರಿ). ತೂತನ್ನು ಕೊರೆ; ತೂತುಮಾಡು ; ರಂಧ್ರವನ್ನು ಮಾಡು : ಲೋಹದೊಂದು ಭಾರ ಗುಂಡನಿಳಿಯಬಿಟ್ಟು ಮರ್ಮವೆರಡಱೊಳುಮವೆರಡನೊತ್ತಿ ತೊಂತು ಗೊಱೆದು ಕಯ್ಯೊಳಮರ್ಚಿ (ಸಾನಂಚ. ೬-೧೫೪ ರಗಳೆ). **ತೂತುಕೊರೆ** : ಮುಖದಲ್ಲಿ ಹೇಗೆ ತೂತುಕೊರೆಯಬೇಕೆಂಬುದನ್ನು ಹೆಣ್ಣಲ್ಲದೆ ಇನ್ನಾರು ಹೇಳಬೇಕು ? (ಗಾಳಿಪ. ೧೫೨). **ತೂತುಗೊಱೆ** : ದುಟ್ಟ ಕಡಂದುಱು ಗಳಿಂದೆ ತನುವನೆಯ್ದೆ ತೂತುಗೊಱೆದು ಒಡಲನೆಯ್ದೆ ತೀವುವಂತೆ ಕ್ಷಾರರಸವನೆಱೆದುವೆಱೆದು (ಸಾನಂಚ.೬-೯೮ ರಗಳೆ).
[ ತೊಂತು₃ + ಕೊಱೆ₁ ]

**ತೊಂತುವೋಗು**, ತೂತುವೋಗು (ಕ್ರಿ). ೧. ತೂತಾಗಂ ; ರಂಧ್ರಬೀಳು: ಧರಣಿಯಂ ಪೊಯ್ವನೋ ತೊಂತುವೋಗಲ್ (ಧರ್ಮಾಮೃ. ೯-೧೮೩) ; ಪೊಸಬಸದಿಯಂ ಮಾಡಿ ತೊಂತುವೋದ ಕಳಶಮನಿಡುವಂತೆ (ಧರ್ಮಾಮೃ. ೯-೧೮೭). **ತೂತುವೋಗು** : ೨. ಇಳಿ ; ಕಂಪಿ : ಪೃಥ್ವೀತಳಂ ಪಾತಾಳಕ್ಕೆ ತೂತುವೋಗೆ (ಅರ್ಧನೇ. ೮-೨೨ವ). [ತೊಂತು₃ + ಪೋಗು₁]

**ತೊಂಪ** 'ತೂಂಕಂ₁' ಪರಾ.

**ತೊಂಬ** 'ತೂಂಕು₁' ಪರಾ.

**ತೂಂಬು**, ತುಂಬು₃, ತೂಪ್ಪು, ತೂಬು (ನಾ). ೧. ಕಂಡಿ ; ರಂಧ್ರ. ೨. ಕೊಳವೆ; ಕೊಳಾಯಿ; ನಳಿಕೆ. ೩. ಕೆರೆ, ಕಟ್ಟೆ ಮೊದಲಾದ ಜಲಾಶಯಗಳಲ್ಲಿ ನೀರು ಬಿಡಲು ಮಾಡಿರುವ ಕಂಡಿ,-ದ್ವಾರ ; ನೀರುಗಂಡಿ : ಪೊಱಗಲೂರ ಮಟ್ಟಿಯುಳ್ಳಯ್ದೂಬು ಇನ್ತು ತಾಗೆ ಮೂಱಿಡಿ ತೂಂಬುಂ ದೇವಭೋಗಂ (ಎಕ. X, ಗೌರಿಬಿದ. ೦೧-೯; ಸು. 753); ಜಲಗರಂ ಬಿಡೆ ಪರಿಗುಮುಗುವರ್ಾಗಿ ತೂಂಬನುರ್ಚಿದ ತೆಱದಿಂ (ಲೋಕೋಪ. ೯-೧೧೬);ಈ ಕೆಱೆಯ ನೀರಂ ತೂಂಬನುರ್ಚಿ ಕಳೆದು ಕಿಱಿದಾನುಮುಱಿದ ನೀರಂ ತುಳುಂಕಿ ಕಳೆದೊಡೆ ನಿನ್ನಱಸುವುದಂ ಕಾಣಲಕ್ಕುಂ (ಜೀವಸಂ. ೧೬೩-೦೫) ; ವಾಪೀಕೂಪದೀರ್ಘಿಕಾಘಟೀಯಂತ್ರಪ್ರವಾಹಂ ಪುಗುವ ಬಚ್ಚಲ್ಗಳ ಪೊಱಮಡುವ ತೂಂಬುಗಳ ಬೆಡಂಗು ... ಮೆಱೆದಿರ್ದುದು (ಅನಂಪು. ೭-೨೧ವ) ; ಇಳೆಯಾಣ್ಮನ ಕರುಣರಸಂ ತೀವಿದ ಲಲಿತತಟಾಕಮದಾಗಲ್ಕರಮನೆ ತೊಳಗುವ ಬಾಗಿಲ್ವಾಡಮದಱ ತೂಂಬೆಂಬವೊಲೊಪ್ಪಿದುದು (ಜಯನೃ. ೧-೬೫). ೪. ಭೂಮಿಯಂ ಒಂದು ಅಳತೆ. 'ಅಯ್ದೂಂಬು' ಪರಾ. ೫. ಒಂದು ಊರಿನ ಹೆಸರು : ಕರಿಪೊಡೆವಿಷಯೇ ತೂಂಬು ವರವು ಪೂರ್ವ್ವತಟೇ ಪಾರಿಪೊಟಿ ತೂಂಬುನಾಮಗ್ರಾಮಯೋಃ

(ಮ್ಮಆರಿ. ೦೮೦೯, ೨-೦೯ ; 749). **ತುಂಬು₃** : ೩. ತುಂಬಿನ ನೀರನುರ್ಚಿದಾಗಳಡೆ ಪರಿದು (ಶಂಪಭಾ. ೫-೯೬ವ) ; ಹಿರಿಯ ಕೆಱೆಯ ಕೆಳಗೆ ಎರಡು ತುಂಬಿನ ನಡುವೆ ಬಿಟ್ಟ ಗದ್ದೆ (ಎಕ. XII, ಚಿಕ್ಕನಾ. ೦೩-೩೭ : 1181) ; ಮಹಾಜನಂಗಳು ಬಸವಯ್ಯನ ಕೆಱೆಯ ನೀರ ತುಂಬನೆತ್ತಿ ಹರಿಸಿಕೊಳ್ಳದೆ ಅಱುವತ್ತೊಂದು ವ್ರಿತ್ತಿಗೆ ನಿಲ್ವರು (ಎಕ. VI, ತರೀಕೆ. ೫೫-೮ : 1291 ?). ೬. ಚಕ್ರದ ಮಧ್ಯಭಾಗ ; ಗುಂಬ ; ಚಕ್ರನಾಭಿ ; ಪಿಂಡಿಕೆ: "ನಾಭಿಃ, ಪಿಂಡಿಕಾ – ಈ ೨ ತುಂಬು" (ಹಲಾಯು. ೭೩-೨೯೩). **ತೂಪು** : ೧. ಮುಂದುಪೂರ ತೂಱುಕೊಳ್ವಲ್ಲಿ ವಿಟ್ಟೋರ್ ಪೆರಾಣ್ಕೋವರ್ ಅವಂಗೆ ಪದಿ ತೂಪು ಕಟನಿ ನೆತ್ತಪಡಿ (ಎಕ. X, ಶ್ರೀನಿವಾ. ೨೦-೭ ; ಸು. 750). **ತೂಬು** : ೩. ನೈರುತ್ಯದೊಳ್ ಕಟ್ಟಿಯ ಕಡೆಯ ತೂಬು ಪಶ್ಚಿಮದೊಳ್ಪುಷ್ಕರಣಿ (ಎಕ. VIII, ಸಾಗರ. ೦೯-೬೦ : 1042) ; ತೂಬಿಲ್ಲದ ಕೆಱೆಯಂ ಕಟ್ಟುವೆನೆಂಬ ಕಾಲಿಲ್ಲದೆ ಪರಿವೆನೆಂಬ ... ಪಚ್ಚಪಸಿಯೆಗ್ಗನಂ ಪೋಲ್ಕುಂ (ಧರ್ಮಾಮೃ. ೧-೬೭) ; ಆರ್ದಿಱಿದು ಕಾಲನ ಬನಕೆ ರಕುತದ ಕೆಱೆಯ ತೂಬೆತ್ತಿದರು ಸೇವಣರಾಯರಾವುತರು (ಕುಮ್ಮಾಭೀ. ೪-೬೭); ತೂಬು ಉಳ್ಳ ಕೆರೆಯ ತುಳುಕಿದರೆ ಬತ್ತೀತೆ? (ಗಾದೆ). ೬. "ಪಿಂಡಿಕೆ, ನಾಭಿ–ಬಂಡಿಯ ತೂಬು" (ನಾಚಿರಾ.೬). ೭. ಕೊಡಲಿ, ಗುದ್ದಲಿ ಮೊದಲಾದ ಸಾಧನಗಳಲ್ಲಿ, ಕಾವನ್ನು ಒಳಗೆ ಸೇರಿಸಲು ಮಾಡಿರುವ ಕಣ್ಣು,–ತೂತಂ,–ರಂಧ್ರ: (೬). ೮. ಕಿವಿಯೋಲೆಯ ಕೊಳವೆ: (೬). ೯. (ಆಲಂ) ಹಾಳುಮಾಡುವವನು : ಅಪ್ಪನ ಖಜಾನೆಗೆ ಮಗ ತೂಬಾಗಿದ್ದಾನೆ (ರೂಢಿ).

**ತೂಂಬನಿಕ್ಕು**=ಕೆರೆ ಮೊದಲಾದುವುಗಳಿಗೆ ತೂಬನ್ನು ಮಾಡಿಸು,–ಕಂಡಿಯನ್ನು ಇಡು : ಸಿರಿಯಮಯ್ಯನೆರಡು ಕೆಱೆಯಂ ತೂಂಬನಿಕ್ಕಿ... ಮೂಱು ಕೆಱೆಯ ಬಿತ್ತುವಟ್ಟವಂ ಪಡೆದಂ (ಎಕ. IX, ಬೆಂಗಳೂ. ೭೯-೬ ; ಸು. 870).

[ ದೇ.॥ ತಮಿ. ತೂವ್ವು ; ಮಲ. ತೂಮ್ಬು ; ತುಳು. ತೂಂಬು, ತೂಂಬೆ, ಸೂಂಬು ; ತೆಲು. ತೂಮು ]

**ತೂಂಬುರ್ಚು**, **ತುಂಬುಚ್ಚು** (ಕ್ರಿ). ತೂಬಿನ ಬಾಗಿಲನ್ನು ಎತ್ತು, –ತೆಗೆ : ಮಿಂಬೊಲಸು ನಾರ್ಪ ಮೆಯ್ಗಮುಳುಂಬಂ ತೂಂಬುರ್ಚಿದಂತೆ ಸುರಿವರುಣಜಳಕ್ಕಂ ಬಿಡದೆ ಕಾಗೆಯುಂ ಪರ್ದುಂ ಬಳಸುವವು (ಸುಕುಮಾ. ೪-೫೯) : ಅರದಚಯಂ ... ಪತ್ರಿಚಯಮುದೆತ್ತಂ ಗಗನೋದರಮಂ ತೀವಿ ದುದಳಕಾಪ್ತರದಿಂ ತೂಂಬುರ್ಚಿದಂತೆ ಕವಿದವಿರಳಿತಂ (ವರ್ಧಪು. ೮-೪೦). **ತುಂಬುಚ್ಚು** : ಒಂಭತ್ತುದ್ವಾರದಿ ಮಲವು ತುಂಬುಚ್ಚಿದಂದದಲಿಳಿವ (ಚಿದಾಕೋ. ೪೦-೫). [ ತೂಂಬು + ಉರ್ಚು ]

**ತೂಕ** (ನಾ). ೧. ತೂಗುವುದು; ತೂಕಮಾಡುವುದು : (೬). ೨. ಯಾವುದಾದರೂ ವಸ್ತುವನ್ನು ತಕ್ಕಡಿಯಲ್ಲಿಟ್ಟು ತೂಗುವುದರಿಂದ ಗೊತ್ತಾಗುವ ಪದಾರ್ಥದ ಭಾರ,—ಗುರುತ್ವ: ಅಳತೆಗೆ ತೂಕಕ್ಕೆಣಿಕೆಗ ಮೊಳಗಾದುವು ಸಕಳವಸ್ತುಗಳ್ ಭುವನಜನಕ್ಕೆಳೆಯಲ್ ತೂಗಲ್ಕೆಣಿಸಲ್ಕಳುಂಬಮೆನಿಸಿದುದು ನಿನ್ನ ಗುಣಗಣಮರ್ಹಾ (ಆದಿಪು. ೦೦-೫೫) ; ಬಲ್ಲವರೊಡಗೂಡಿ ಬಣ್ಣದಿಂದೊರೆಯಿಂ ತೂಕದಿಂ ಮರ್ಚಿಯಿಂದಂ ಪೊನ್ನಂ ತೊಪ್ಪಗುಂ ... ಅಂತೆ ಸಮ್ಯಕ್ತ್ವದೊಳ್ ಕೂಡಿ...ಶ್ರಾವಕನು ಮೊಪ್ಪುವುದು (ಧರ್ಮಾಮೃ. ೦೩-೫) ; ಸೌರಾಷ್ಟ್ರಸೋಮನಾಥಂಗತಿಭಕ್ತಿಯಿಂ ತನ್ನ ತೂಕದ ಧೂಪವಮಂ ... ಓಹಿಲದೇವನರ್ಪಿಸುತಿರ್ದಂ (ಉದ್ಭಟ. ೦೦-೮೯ ವ): ತಲೆಪೊರೆಯ ತೂಕದಲಿ ಫಣಿಪತಿ ಬಳುಕತೊಡಗಿದ (ಕುಮ್ಮಾಉ. ೦೦-೧೫) : ಗುರುಕುಚದಲಘುನಿತಂಬದ ತೂಕದ ಸರಿಮಿಗಿಲಂ ಪಿಡಿದೆತ್ತಿ ನಿರೀಕ್ಷಿಪರಿಯಿಂ ಪ್ರಾಣೇಶ್ವರನಂಗೈಯಂ ತನುಮಧ್ಯದೊಳಿಡಲು (ಜಯುಕಾ. ೧೧-೪೪); ತೂಕಕ್ಕೆ ದಯವಿಲ್ಲ ಪಾಕಕ್ಕೆ ಹಸಿಯಿಲ್ಲ (ಗಾದೆ). ೩. ಒಂದು ವರಹದಷ್ಟು ಭಾರ : ಸಿಕ್ಕಿಸಲ್ವೇಳಿಯೆರಡುಮನೊಂದು ಪಾಗಮವು ನಾಲ್ಕಾಗೆ ಪಣಮೆನಿಕ್ಕುವು ದಶಂ ತೂಕಕ್ಕೆ (ಮಂಗರಾ. ೦೦೪-೧೧) ; ಹೊಸಸುಣ್ಣದ ನೀರನ್ನೂ ಬೆಲ್ಲದ ಪಾಕವನ್ನೂ ಒಲೆ ಮೇಲಿಕ್ಕಿ, ಎರಡು ತೂಕ ಬಿಳೀ ಪಾಷಾಣವನ್ನು ಹಾಕಿ ಕುದಿಸಿ ... ಕೊಡಲು ಛಳಿಜ್ವರಂ ನಿಲ್ಗುಂ (ಸಕವೈ ೭೪). ೪. ಎರಡು ಕೈಯಲ್ಲಿ ತೂಗಿ ತರುವಷ್ಟು (ನೀರಿನ) ಅಳತೆ : ಎಷ್ಟು ತೂಕ ನೀರು ಹಾಕಿದ್ದೀರಿ ? (ರೂಢಿ). ೫. ಸಮತೋಲ ; ಸಮಚಿತ್ತ : ಕೆಳಗು ಮೇಲಾಗದೊಲು ತೂಕವಿರಲಿ !! (ಉಯ್ಯಾಲೆ. ೭೯-೦೬). ೬. ಸಮಮಾನವಾದುದು ; ಸದೃಶವಾದುದು : ಋಷಿಪ್ರತಿಪನ್ನ ಮಂತ್ರವಮೋಘವದಱಿಂದೆನ್ನ ತೂಕದ ಮಗನಹನು (ಕುಮ್ಮಾಆ. ೩-೦೯); ಸರೋಜಜಗೆ ಸಂಭವಿಸಿದಗ್ಗದ ತನ್ನ ತೂಕದ ಬವರಿಗರ ತೋಱಿಸಿದನನಿಲಜನು (ತೊರರಾ. ೪-೭-೨೪). ೭. ಗೌರವ ; ಘನತೆ ; ಮಹತ್ವ : ಬರಿಸಿದನು ತೂಕದ ಮಹಾಮಂಡಳಿಕಮನ್ನೆಯರ (ಕುಮ್ಮಾಉ. ೮-೨೯) ; ಏಕೆ ನುಡಿಯನೋ ಇನ್ನೊಮ್ಮೆಯೆಂಬಂತೊಂದು ತೂಕದೊಳೆಸೆದನಾ ರಾಯ (ಭರತೇ. ೧-೩೪) : ತೂಗಬೇಕು ಮನದೊಳಗೆ ತೂಕವುಳ್ಳವರ ಮಾತು ಹಿಡಿದು (ನಲಮು. ೪೯-೯) ; ತಾನು ಈ ಪ್ರೊಫೆಸರರ ಬಾಲವನ್ನು ಹಿಡಿದು ಹೋದರೆ, ತನ್ನ ತೂಕ ಸ್ವಲ್ಪ ಹೆಚ್ಚೀತು (ಒಂಟಿದ. ೮). ೮. ಒಂದು ಬಗೆಯ ತೆರಿಗೆ : ಕಿಱುಕುಳ ತೂಕ ನೋಟವಣ ಅಭ್ಯಾಗತಪಳ . . . ಯೆಲ್ಲವನೂ ಕಾರುಣ್ಯಂಮಾಡಿ ಧಾರಾಪೂರ್ಬ್ಬಕಂ ಮಾಡಿಕೊಟ್ಟರು (ಎಕ. VI, ಕಡೂರು. ೪೯-೪೦ : 1291). ೯. ಒಲೆತ; ತೂಗುವಿಕೆ ; ತೂಗಾಟ; ತೊನೆದಾಟ : ಗೋಪೀನಟ ತೋಱಿದಳ್ ಮಿಸುಗುವೋಲೆಯ ತೂಕಮ ತೋಱೆ ನೃತ್ಯಮಂ (ಜಗವಿ. ೫-೦೪) ; ತೊಟ್ಟಿಲ ತೂಕದೊಳ್ ಪೊಣರೆ ಕಂಕಣರುಂಕೃತಿ (ಸೂಕ್ತಿಸು. ೭-೭೨). 'ತೂಕವಣೆ' ಪರಾ.

**ತೂಕತೂಗು**=ಘನತೆಯನ್ನು ಹೊಂದು ; ಗೌರವವನ್ನು ಗಳಿಸು : ಭಾರತದ, ಲೋಕದಾ ಮಕ್ಕಳಲಿ ಹಿರಿದಾಗಿ ತೂಕತೂಗುವಿರಾ ? (ಹೊಂಗಳು. ೨೦-೨). **ತೂಕದ ಕೋಲ ತೊಲೆ** = ತಕ್ಕಡಿಯ ಕೋಲು ; ತಂಲಾದಂಡ : ವನಿತೆ ... ಚಿಂತಿಸುತ ತೂಕದ ಕೋಲ ತೊಲೆಯಾದಳು (ಹರಿಕಾ. ೦೨-೪೭). **ತೂಕದ ಗುಂಡು** = ಗೋಡೆಯನ್ನು ಕಟ್ಟುವಾಗ ನೇರಸ್ಥಿತಿಯನ್ನು ಕಂಡುಹಿಡಿಯಲು ಬಳಸುವ ಸಾಧನ : ತೂಕದ ಗುಂಡನ್ನು ಹಿಡಿಯದೆ ಗಾರೆ ಬಳಿದರೆ ಗೋಡೆ ಸಮನಾಗುವುದಿಲ್ಲ (ರೂಢಿ). **ತೂಕದ ಮಾತು** = ಬೆಲೆಯುಳ್ಳ ಮಾತು ; ಗೌರವದ ಮಾತು ; ನ್ಯಾಯವಾದ ಮಾತು ; ನಿಷ್ಪಕ್ಷಪಾತವಾದ ನುಡಿ: ಅವರದು ಒಳ್ಳೆಯ ತೂಕದ ಮಾತು (ರೂಢಿ). **ತೂಕದಾಳ್** = ಘನತೆಯನ್ನು ಹೊಂದಿರುವವನು : ಬಾಣಸ್ಥಾಪನಕೆ ಮೆಚ್ಚಿದನು ಮೇಲಣ ತೂಕದಾಳವನು ಈ ಪರಿಯಲೆಂದಱಿಯೆನಹುದೈ ಚಾಪವಿದ್ಯಾಪಾತ್ರವಿಂದ ವನೀಪತಿಯಲಾ ಪೂತು ಮಝು ಎಂದೆಚ್ಚನಾ ಕರ್ಣ (ಕುಮ್ಮಾಕ. ೧೧-೪೪). **ತೂಕಮಾಡು** = ೧. ತಕ್ಕಡಿ ಮೊದಲಾದುವುಗಳ ಸಹಾಯದಿಂದ ಭಾರವನ್ನು ಕಂಡುಹಿಡಿ : ಈ ಹುರುಳೀಕಾಯನ್ನು ಬೇಗ ತೂಕಮಾಡು (ರೂಢಿ). ೨. ವಿಮರ್ಶಿಸು ; ಬೆಲೆಕಟ್ಟು : ನಮ್ಮಿಬ್ಬರ ಹೇಳಿಕೆಯನ್ನೂ ತೂಕಮಾಡು. ಯಾವುದು ಸರಿ ಎಂದು ನಿನಗೇ ಗೊತ್ತಾಗುತ್ತದೆ (ರೂಢಿ). ೩. ತೂಕಡಿಸು : ಅವನೆಲ್ಲೋ ತೂಕಮಾಡುತ್ತಾ ಕುಳಿತಿರಬೇಕು (ರೂಢಿ).

[ ದೇ.॥ ತಮಿ. ಮಲ. ತುಳು. ತೆಲು. ತೂಕ ]

**ತೂಕಗಾಣ್** (ಕ್ರಿ). ಗಾಂಭೀರ್ಯವನ್ನು ಗಮನಿಸು ; ಘನತೆಯನ್ನು ತಿಳಿ : ಆಕೆಯುಬ್ಬಾದೇವಿಯನುಜೆ . . . ತೂಕಗಾಣದೆ ನುಡಿದಳು (ಭರತೇ. ೫೦-೫೦). [ ತೂಕ + ಕಾಣ್ ]

**ತೂಕಗುಂದು** (ಕ್ರಿ). ವಿವಂಶೆ ಇಲ್ಲದಾಗು,–ತಪ್ಪು : ತೂಕಗುಂದದ ನೋಟವ ನೋಡುವೆನಯ್ಯ (ಅದವ. ೨೭-೭೭). [ ತೂಕ + ಕುಂದು₁ ]

**ತೂಕಡಿಕೆ** 'ತೂಂಕಡಿಕೆ' ನೋ.

**ತೂಕಡಿಸು** 'ತೂಂಕಡಿಸು' ನೋ.

**ತೂಕಡು** 'ತೂಂಕಡು' ನೋ.

**ತೂಕರಿಸು** (ಕ್ರಿ). ೧. ದೃಷ್ಟಿದೋಷ ಪರಿಹಾರಕ್ಕಾಗಿ ಹಾಗು ರಕ್ಷೆಗಾಗಿ ನೆತ್ತಿಯ ಮೇಲೆ ಊದು; ತೂಪಿರಿ: ತೂಕರಿಸಿ ಪರಸಲೆಂದು ಶಚೀಕಾಂತೆಯೊಡರ್ಚೆ ನಾಣ್ಚಿ ತಲೆವಾಗಿ (ಚಂದ್ರಪು. ೧೨-೧೫೮). ೨. ತಿರಸ್ಕರಿಸು; ಅವಹೇಳನ ಮಾಡು: ನಿಮ್ಮನೆಮ್ಮೊಲುವೆಂದು ಮೂದಲಿಸಿ ತೂಕರಿಸಿ ದಿಮ್ಮಿದಿರಗೊಡುತಲೊಲೆದತ್ತಿತ್ತ (ಜಿನಮು. ೧೩-೬೪).

[ <ತೂತ್ಕಾರ + – ಇಸು$_3$ ]

**ತೂಕವಣೆ** (ನಾ). [ನಾಟ್ಯ] ನೃತ್ಯದಲ್ಲಿ ಒಂದು ಗತಿ, –ಚಲನೆ: ಥಾಳದ ಮೇಲೆ ತೂಕವಣೆ ರೇಖೆಯನಾಳ್ದಿರೆ ಪಾದದೊಳ್ಪಯಂ ಮೇಳಿಸಿ ಝುಂಕೆ ಬಿಂಗದೊಳೊಡಂಬಡೆ ... ಸಿಂಹಸೇನಭೂಪಾಳನ ಚಿತ್ತವಲ್ಲಭೆಗೆ ಸಂದುದು ರಂಭೆಯ ಲಾಸ್ಯವಿಭ್ರಮಂ (ಅನಂಪು. ೪-೯೦); ರೂಪು ರೇಖೆ ಧಾವಣೆ ತೂಕವಣೆಯಂಕೆ ಝುಂಕೆ...ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತು ವಿರೆಯುಂ (ಶಾಂತೀಶ್ವ. ೦೭-೬೭೫). [ ತೂಕ + – ಅಣೆ$_4$ ]

**ತೂಕು$_1$** 'ತೂಂಕು$_1$' ನೋ.

**ತೂಕು$_2$** 'ತೂಂಕು$_2$' ನೋ.

**ತೂಗಡಿಕೆ** 'ತೂಂಕಡಿಕೆ' ನೋ.

**ತೂಗಾಟ** (ನಾ). ೧. ತೂಗಾಡುವಿಕೆ; ಒಲೆದಾಡುವಿಕೆ: ಸಾಲುಝಲ್ಲರಿಗಳ ಪತಾಕಾಜಾಲದಲಿ ಸಬಳದ ಹೊದಱ ಗೋವಳಿಗೋಲ ತೂಗಾಟದಲಿ ಸಮರಕೆ ದ್ರೋಣ ನಡೆತಂದ (ಕುವ್ಯಾದ್ರೋ. ೯-೧೬). ೨. ಡೋಲಾಯಮಾನವಾದ ಮನಸ್ಸಿನ ಸ್ಥಿತಿ; ನಿರ್ಣಯಕ್ಕೆ ಬಾರದಿರುವ ಸ್ಥಿತಿ: ಬಾಬಣ್ಣ ತೂಗಾಟದಲ್ಲಿ ಬಿದ್ದ. ಹೆಂಡತಿಯ ಮುಂದೆ ಸಾಲದ ವಿಷಯ ಹೇಳಬೇಕೋ ಬೇಡವೋ ಎಂದು ಯೋಚಿಸತೊಡಗಿದ (ಅಶೋಕ. ೩೩).

[ ತೂಗು$_1$ (<ತೂಂಕು$_1$) + ಆಟ ]

**ತೂಗಾಡಿಸು** (ಕ್ರಿ). ೧. ನೇತುಹಾಕು; ತೂಗಂಬಿಡು: ಕಪ್ಪು ಮತ್ತು ಭರಣಿಗಳನ್ನು ಕೊಂಡಿಗಳಲ್ಲಿ ತೂಗಾಡಿಸಿದರೆ ವ್ಯವಸ್ಥೆ ಚೆನ್ನಾಗಿ ಕಾಣುವುದು (ಅಡುಸಾ. ೪೫). ೨. ಬಾಗಿಸು; ಮಣಿಸು: ಯೋಗಕೆ ಮುಖವಿಕ್ಕಿದಾಗ ಮೂಲೋಕವ ತೂಗಾಡಿಸದೆ ಸುಮ್ಮನಿಹನೆ (ಭರತ. ೭೭-೫೬).

[ತೂಗಾಡು + – ಇಸು$_3$]

**ತೂಗಾಡು,** ಜೂಗಾಡು (ಕ್ರಿ). ೧. ಒಲೆದಾಡು; ತೊನೆ: ಮೇಖಂಗೆ ತೂಗಾಡುವ ಯೂಪಾನೇಕಪಂ ಮಿಳ್ಳಿಳಿಸಿ ಸೊವಡನಾರಯ್ದುದು (ವರ್ಧಪು. ೮-೩೪); ತಾಯನಪ್ಪುತ್ತ ಮೊಲೆಗೆ ಲಲ್ಲೈಸಿ ನಿಱಿವಿಡಿದು ಮೊಗವಂ ನೋಡುವ ತೂಗಾಡುವ ಮಗನ ಮುದ್ದುತನವಂ ಬಸವರಾಜಂ ಕಂಡು (ಬಸರ. ೦೦-೧೨೧): ಸೆಳೆಗೊಂಬೆಲರಿಂ ತೊನೆದೆಬ್ಬಿ ತಟ್ಟಿಗೆ ತೂಗಾಡಿದೊಡಂತದಂ ಪಿಡಿದುಕೊಂಡಲರಂ ನೆಱೆ ಕೊಯ್ದು ಕಾಂತೆ . . . ಪೆರ್ಚಿದಳ್ (ಕುಸುಮಾ. ೫-೦೧೧);ತೀಡುವ ತೆಂಬೆಲರ್ಗೆ ಚಲಿಪಚ್ಚತಳಿರ್ಗಳ ಘಾತದಿಂದೆ ತೂಗಾಡುವ ಪಣ್ಗಳ್ಳದೆ ಮಸೆದಂದೊಡೆಯುತ್ತೊಗುತಿರ್ಪನಂ ರಸಂ (ಉದ್ಭಟ. ೬-೧೨); ಬೆಳಗಿನ ತುಱುಗಲಲಿ ತೂಗಾಡುತಿದ್ದುದು ಕೈದು ತೊಡವಾಗಿ (ಕುವ್ಯಾದ್ರೋ. ೩-೬೧); ಮುಂದೆ ಸಾಗುವಾಗ ಅವಳ ಎಡತೋಳು . . . ಚುರುಕಾಗಿ ತೂಗಾಡುತ್ತಿತ್ತು (ಪುನರು. ೨೭೫). ೨. ಅಲ್ಲಾಡಿಸು; ಅಲುಗುವಂತೆ ಮಾಡು: ನೆಳಲುಗಂಡವ್ವಳಿಸುವುದು ಸುಂಡಿಲನು ತೂಗಾಡುವುದು . . . ಹಿಡಿಹಂಗೆ ಲಾಗಿಸುತಿರ್ದುದಾ ದಂತಿ (ಕುವ್ಯಾದ್ರೋ. ೩-೩೭); ಮೈಯೆಲ್ಲ ತೂಗಾಡದೊಂದಿನಿಸು ... ಸಲ್ಲಲ್ಲಿತದೊಳು ಹಾಡಿದರು (ಭರತ. ೧-೭೦); ಪೂಡಿದಳ್ ಪೊಂದೊಟ್ಟಿಲಂ ಸಖಿಯರೊಡನೆ ತೂಗಾಡಿದಳ್ (ಚಿಬಪು. ೪೭-೬). ೩. ತೂಕಡಿಸು: ಈ ಕಾರಣದಿಂದ ಗೌರೀದೇವಿಯು ಮಲಗಿಕೊಳ್ಳುವುದಕ್ಕೆ ಹಾಸಿಗೆಯಾದರೂ ದೊರೆಯದೆ ಒಂದು ಗೋಡೆಯನ್ನೊರಗಿಕೊಂಡು ಹಾಗೆಯೆ ತೂಗಾಡಬೇಕಾಯಿತು (ಕವಿಕ. ೫೩). ೪. ಹೊಯ್ದಾಡುತ್ತ ನಡೆ: (*). ೫. ಡೋಲಾಯಮಾನವಾಗು; ನಿರ್ಣಯಕ್ಕೆ ಬಾರದಿರು; ಅನಿಶ್ಚಿತ ಪರಿಸ್ಥಿತಿಯನ್ನು ಪಡೆ: ಈ ಜಂಜಾಟದಲ್ಲಿ ತೀರ್ಮಾನವು ತೂಗಾಡುತಿತ್ತು (ಚಿದೇವ. ೪೬); ವಾದ ವಿವಾದಗಳ ತಕ್ಕಡಿಯಲ್ಲಿ ತೂಗಾಡುವ ಈ ವಿಷಯದ ವಿಮರ್ಶೆ ಮುಂದೆ ಬರುತ್ತದೆ (ವ್ಯಾವಿವಿ. ೪೫). ೬. (ಆಲಂ) ಓಲಾಡು; ನಲಿದಾಡು: ಲಲ್ಲೆಯಿಂ ತೊನೆಯುತ್ತಿರ್ದ ನಿಜಾಂಗದಿಂದವೊಲೆಯುತ್ತುಂ ತೊಟ್ಟಿಲಂ ತತ್ಕುಮಾರನಿಳಾಧೀಶನ ಚಿತ್ತಮುತ್ಸವದೊಳಂ ತೂಗಾಡೆ ತೂಗಾಡುವಂ (ಕುಸುಮಾ. ೬-೦೪೩). **ಜೂಗಾಡು:** ೧. "ಜೂಗಾಡು = ತೂಗಾಡು" (ಜಾನಕೋ. ೬೦). [ ತೂಗು$_1$ (<ತೂಂಕು$_1$) + ಆಡು$_1$ ]

**ತೂಗಿಸು** (ಕ್ರಿ). ೧. ತೂಕ ಮಾಡಿಸು: ತೂಗಿಸಿ ತೊಲೆಯೊಳ್ ಬಾಯಂ ಮೂಗುಮನೊಡೆಯೊತ್ತಿ ಕೊಂದ ಕಳ್ಳನ ದೇಹಂ ತೂಗಿದೊಡೆ ಕುಂದದಾತ್ಮವಿಭಾಗಂ ಬೇಱಿಲ್ಲ ಜೀವನೆಂತುಂ ದೇಹಂ (ಯಕೋಚ. ೪-೨೦). ೨. (ಮೆಚ್ಚುಗೆಯಿಂದ ತಲೆಯನ್ನು) ತೂಗುವಂತೆ ಮಾಡು: ಶಿರವ ತೂಗಿಸುವುದೀ ವಚನದ ರಚನೆ (ಮೋಹತ. ೧-೨೫). ೩. ನೇತು ಹಾಕು; ಇಳಿಬಿಡು: ಲಿಂಗವ ಎದೆಗೆ ಕಟ್ಟಿನ್ನಾಗ ಬಳಿದನು ಭಸಿತ ವದನಕೆಯಂಗಸಂಗದಲಿ ತೂಗಿಸಿದ ರುದ್ರಾಕ್ಷಿಸರಗಳನು (ಬಿಜ್ಜಪು. ೯೧-೨). ೪. ತೊಟ್ಟಿಲನ್ನು ತೂಗು: ಹೆಸರನಿಕ್ಕಿದರನಿರುದ್ಧನೆಂದೆನುತೆ ತೂಗಿಸಲೊಡರ್ಚಿದರು ಜೋಗುಳವ (ಮೋಹತ. ೧೭-೫೦). ೫. ನಿಭಾಯಿಸು; ನಿರ್ವಹಿಸು; ಸಂಭಾಳಿಸು: ಈ ಕೆಲಸವನ್ನು ನೀನು ತೂಗಿಸಬಲ್ಲೆಯಾ? (ರೂಢಿ).

**ತೂಗಿಸಿಕೊಂಡು ಹೋಗು**=ನಿಭಾಯಿಸು; ಸಾಗಿಸು; ಸಂಭಾಳಿಸು: ಪಾತ್ರರಚನೆಯ ದೃಷ್ಟಿಯಿಂದ ಎಡ್ವಿನ್‌ನ ವ್ಯಕ್ತಿತ್ವದಲ್ಲಿ ಕತೆಯ ಬೌದ್ಧಿಕತೆಯನ್ನು ತೂಗಿಸಿಕೊಂಡು ಹೋಗುವ ನಿರ್ಲಿಪ್ತತೆಯಿಲ್ಲ (ಹೊಸಕ್ಷ. ೨೯೧); ಅಷ್ಟು ತಾಪತ್ರಯದಲ್ಲೂ ಅವನು ಹೇಗೋ ಸಂಸಾರವನ್ನು ತೂಗಿಸಿಕೊಂಡು ಹೋಗುತ್ತಿದ್ದಾನೆ (ರೂಢಿ).

[ ತೂಗು$_1$ (<ತೂಂಕು$_1$) + –ಇಸು$_3$ ]

**ತೂಗು$_1$** 'ತೂಂಕು$_1$' ನೋ.

**ತೂಗು$_2$** 'ತೂಂಕು$_2$' ನೋ.

**ತೂಗುಂಗೊಂಬು** (ನಾ). ನೇತಾಡುತ್ತಿರುವ ಕೊಂಬೆ: ತುಱುಗಿರ್ದ ಬಲ್ಮಿಡಿಯ ತೂಗುಂಗೊಂಬಿನೊಳ್ಪಾಯ್ದು ಮಂಡಳಿಸುತ್ತಿರ್ಪ ಶಾಖಾಳಿ (ಆದಿಪು. ೧೧-೯೬). [ ತೂಗು$_1$ (<ತೂಂಕು$_1$) + ಕೊಂಬು$_1$ ]

**ತೂಗುಂಜೊಡರ್,** ತೂಗಂಜೊಡರು (ನಾ). ನೇತುಹಾಕಿರುವ ದೀಪ; ತೂಗುದೀಪ: ಜಕಾರಕ್ಕೆ—ತೂಗುಂಜೊಡರ್, ಅಟ್ಟುಂಜಗಳಂ (ಶಮದ. ೧೭೦ಪ್ರಯೋ); ಮಾಲವವೆಸರ ವಿಷ್ಣುಭಕ್ತಂ ಆ ಕ್ಷೇತ್ರದ ದೇಗುಲದೊಳ್ ತೂಗುಂಜೊಡರನುರಿಯಿಸುವಂ (ಅದ್ಭುತ. ೧೬-೨೪). **ತೂಗುಂಜೊಡರು:** ಹಸಿರ ಬಸಿರೊಳೊಗೆದಲರಿನ ತೂಗುಂಜೊಡರಾಡಿಸುತಿವೆ ಇಲ್ಲಿ ಕೆಂಡಸಂಪಿಗೆ (ಹೂಹಾದಿ. ೯-೫).

[ ತೂಗು$_1$ (< ತೂಂಕು$_1$) + ಸೊಡರ್ ]

**ತೂಗುಂಜೊಡರು** 'ತೂಗುಂಜೊಡರ್' ನೋ.

**ತೂಗುಂದಲೆ** (ನಾ). ೧. ನೇತಾಡುತ್ತಿರುವ ತಲೆ: ಪೊಸ ದೂವೆ ದೂ[ಹಾಳಾಂ. ದಂಬೆತೂ]ವ ತೂಗುಂದಲೆ ಬಾಱಿಸ್ವಣಂ ಪೊಡರೆ ಬಳ್ಳುವ ಸಮ್ಮನ ಸೂಲವಾಲದೊಳ್ ಸಂದಣಿಯಾಗಿ ನೇಲ್ವ ಪೆಣನೊಂದಿರೆ (ಕಾವ್ಯಾವ. ೫೬); ದಕಾರಕ್ಕೆ–ಕಡುಕುಂದಱು ... ಆಡುಂದೊಟೆ, ತೂಗುಂದಲೆ (ಶಮದ. ೧೭೦ಪ್ರಯೋ). ೨. (ಒಪ್ಪಿಗೆ, ಮೆಚ್ಚುಗೆ ಮುಂತಾದುವನ್ನು ಸೂಚಿಸುವ

ದಕ್ಕಾಗಿ) ತೂಗುವ ತಲೆ : (ತೂಗುಂದಲೆಯಿಂದ ಪ್ರೋತ್ಸಾಹಿಸಿ ಎರ್ದೆಗುಡುವನು) (ಜಿಟ್ಕಅ. ೧೦೩-೯). [ತೂಗು$_1$ (< ತೂಂಕು$_1$) + ತಲೆ$_1$]

**ತೂಗುಂದೆನೆ** (ನಾ). ಅತ್ತಿಂದಿತ್ತ ಆಡುತ್ತಿರುವ ತೆನೆ,-ಹೊಡೆ : ಅನಿಲಾಯತ್ತೋಚ್ಚಲಚ್ಚಾಳಿಯೊಳವಯುವದಿಂ ಪಾಯ್ದು ಕಾಲ್ ಜಾಱಿ ತೂಗುಂದೆನೆಯುಂ ತಟ್ಟಿಕ್ಕುಸಿ (ಲೀಲಾವ. ೩-೫೯) : ತೂಗುಂದೆನೆಯಾ ಕಳವುಮಲ್ಲಲ್ಲಿ ಕಾಸಾರವುಮಲ್ಲಲ್ಲಿ . . . ಮೆಱೆವುದೆನೆ ಸುಖಾವಾಸವಾ ದೇಶವಲ್ತೇ (ವೃಷವಿ. ೪-೪). [ತೂಗು$_1$ (< ತೂಂಕು$_1$) + ತೆನೆ$_1$]

**ತೂಗುಂದೊಟ್ಟಿಲ್**, ತೂಗುತೊಟ್ಟಿಲು (ನಾ). ಅತ್ತಿಂದಿತ್ತ ಆಡುತ್ತಿರುವ ತೊಟ್ಟಿಲು ; ಜೀಕುತ್ತಿರುವ ತೊಟ್ಟಿಲು : ಎಸೆವ ತೂಗುಂದೊಟ್ಟಿಲೊಳ್ ಪಟ್ಟ ಪುತ್ರನ ವಕ್ತ್ರೇಂದುವನಂಜನಾಂಕಿತವುನಾನಿನ್ನೆಂದು ಪೇಱ್ ಕಾಣ್ಬೆನೋ (ಕಾದಂಪೂ. ೩೫೫); ದಕಾರಕ್ಕೆ-ಕಡುಕುಂದಱ್, ಉಕರ್ಗಂದೊಱ್, ತೂಗುಂದೊಟ್ಟಿಲ್, ಆಡುಂದೊಲೆ (ಶಮದ. ೧೭೦ ಪ್ರಯೋ) ; ತೂಗುಂದೊಟ್ಟಿಲೊಂದಾ ಪಾಂಗಿನಿಂ ಬಗೆ ಮನವುಱುಕದ ಗಂಡಗರ್ವದಿರ್ದೆಸೆಮೂಲೆಗಳೊಳಮುಯ್ಯಲಾಡೆ (ರಾಮಾಶ್ವ. ೯೩-೨೪) **ತೂಗುತೊಟ್ಟಿಲು** : ಮಂಡೋದರಿಯ ಸೊಸೆಯ ಶಿಶು ಕೂಗಿದನು ತೂಗುತೊಟ್ಟಿಲೊಳಿದ್ದು ಕುಳಿತು (ಶ್ರೀರಾಮಾ. ೪೫೦-೭) ; ತೂಗುತೊಟ್ಟಿಲಿನ 'ಕಿರೀಂ', 'ಕಿರೀಂ' ಸದ್ದು (ವಾತ್ಸಲ್ಯ. ೨).

[ತೂಗು$_1$ (< ತೂಂಕು$_1$) + ತೊಟ್ಟಿಲ್$_1$]

**ತೂಗುಂಮಂಚ**, ತೂಗುಮಂಚ (ನಾ). ತೂಗಲು ಅನುಕೂಲವಾಗುವಂತೆ ಕಟ್ಟಿರುವ ಮಂಚ ; ಉಯ್ಯಾಲೆ ಮಂಚ : ತೂಗುಂಮಂಚದೊಳ್ ಶಶಿಪ್ರಭಾಮಹಾದೇವಿಯುಂ ತಾನುಂ ಕುಳ್ಳಿರ್ದು (ಚಂದ್ರಪ್ರ. ೭-೯೫ವ) : ಸೀತೆಯೊರ್ವಳ್... ತೂಗುಂಮಂಚಮನೇಱಿ ಚೆಲ್ವದಿಂ ಕುಳ್ಳಿರ್ದು (ರಾಮಾಶ್ವ. ೧೭-೩೦). **ತೂಗುಮಂಚ** : "ಆಂದೋಳ ಪರಿಯಂಕಮೆನೆ ತೂಗುಮಂಚಮಕ್ಕುಂ" (ಮಂಗರಾ. ೩೦-೧೭); ಮಂಚಕ್ಕೆ—ಕಾಂಚನಮಂಚ, ತೂಗುಮಂಚ, ರತ್ನಮಂಚ (ಶಮದ. ೨೯೮ ಪ್ರಯೋ) ; ಅರಸು ಪವಡಿಪ ತೂಗುಮಂಚದ ಸರಪಳಿಯ ಬಳಿವಿಡಿದು ಪಟುಭೀಕರವಿಷೋರಗವಾಗಳೊಂದು ರವಣಿಸಿ ಹರಿತಂದು (ಬಸಪು. ೪೭-೨೦) ; ತೂಗುಮಂಚದಿ ಹಂಸತೂಲದ ಹಾಸಿಗೆ (ಪುರಂದ. ೩-೧೩೦-೨) : ಆಗಳಾ ದಮಯಂತಿ ಚಿತ್ರದ ಬಾಗಿಲುಪ್ಪರಿಗೆಯಲಿ ರತ್ನದ ತೂಗುಮಂಚದ ಹಾಸಿನಲಿ ಕುಳ್ಳಿರಲು (ನಳಚ. ೩-೨೮) ; ತೂಗುಮಂಚದ ಮೇಲೆ ಪೊಱಗುಮೂಡೆಗೆ ವಾಮಭಾಗವನಿಟ್ಟು ಕುಳಿತನು (ಭರಚ. ೪-೧೧೭) : ನಂದಗೋಪನ ಮನೆಯ ತೂಗುಮಂಚದ ಮೇಲೆ ನಿದ್ದೆ ಮೇಲುದುವಾತ್ಮ ಹೊದೆಯಲಿರೆ (ಗೋಕುನಿ. ೯-೧೯).

[ತೂಗು$_1$ (< ತೂಂಕು$_1$) + ಮಂಚ]

**ತೂಗುಕುದುರೆ** (ನಾ). ಹಿಂದಕ್ಕೂ ಮುಂದಕ್ಕೂ ಆಡುವ, ಮಕ್ಕಳ ಆಟದ ಕುದುರೆ : ಮಗು ಸವಾರಿ ಮಾಡುವ ಮರದ ತೂಗುಕುದುರೆ (cook-horse. ಇಂಕನಿ). [ತೂಗು$_1$ (< ತೂಂಕು$_1$) + ಕುದುರೆ]

**ತೂಗುಕೋಲು** (ನಾ). (ವಿಶೇಷವಾಗಿ ಹಳ್ಳಿಗಳಲ್ಲಿ) ಬೆಣ್ಣೆ ಮೊದಲಾದುವನ್ನು ತೂಕಮಾಡಲು ಬಳಸುವ, ಒಂದೇ ಪರಡಿ ಅಥವಾ ತಟ್ಟೆಯಿರುವ ಮರದ ಕೋಲು : ಚಿಂತಾಲು, ತಕ್ಕಡಿ, ತೂಗುಕೋಲು ...ಖಂಡಿ ಮುಂತಾದವುಗಳಿಂದಲೂ ಮೂರು ಬಗೆಯಾಗಿದೆ (ಸಿದ್ಧಾಂತಿ. ೩೦೦) ; ತೂಗುಕೋಲು ತಂದಿದ್ದೀಯಲ್ಲ, ತಕ್ಕಡಿ ಬಟ್ಟು ಎಲ್ಲಿ? (ರೂಢಿ).

[ತೂಗು$_1$ (< ತೂಂಕು$_1$) + ಕೋಲು$_1$ (< ಕೋಲ್$_1$)]

**ತೂಗುಗುಂಡು** (ನಾ). (ಗಡಿಯಾರದ) ಲೋಲಕ ; ತೂಗಾಡುವ ಗುಂಡು : ಕವಿಯ ಮನಸ್ಸು . . . ಹೀಗಿಂದ ಹಾಗೆ ಗಡಿಯಾರದ ತೂಗುಗುಂಡಿನಂತೆ ತೋರುತ್ತಿತ್ತು (ಅಂಚೂ. ೧೨೦).

[ತೂಗು$_1$ (< ತೂಂಕು$_1$) + ಗುಂಡು]

**ತೂಗುಜೋಕಾಲಿ** (ನಾ). ತೂಗಾಡುವ ಉಯ್ಯಾಲೆ : ಬಾಳುವೆಯು ಹೊಸದೊಂದು ಒಗಟವಾಗಿಹುದು. ನೆಲೆಯರಿಯದೇ, ತೂಗುಜೋಕಾಲಿಯಾಗಿ ತಲೆತಿರುಗಿಸುವದೊಮ್ಮೆ, ಕೆಳಗೆ ಮೇಲಾಗಿ (ಉಯ್ಯಾಲೆ. ೭೭-೭).

[ತೂಗು$_1$ (< ತೂಂಕು$_1$) + ಜೋಕಾಲಿ]

**ತೂಗುತೊಟ್ಟಿಲು** 'ತೂಗುಂದೊಟ್ಟಿಲ್' ನೋ.

**ತೂಗುತೊಲೆ** 'ತೂಗುದೊಲೆ' ನೋ.

**ತೂಗುದೀಪ** (ನಾ). =ತೂಗುಂಜೊಡರ್ : ಭವ್ಯವಾದ ದೇವಮಂದಿರ. ಬೆಳ್ಳಿಯ ತೂಗುದೀಪಗಳು (ಶ್ರೀರಾಯ. ೨೩೧).

[ತೂಗು$_1$ (< ತೂಂಕು$_1$) + ದೀಪ$_2$]

**ತೂಗುದೀವಿಗೆ** (ನಾ). =ತೂಗುಂಜೊಡರ್: ಜೋಲುವ ತೂಗುದೀವಿಗೆಯ ಸಾಲುಗಳೊಳು [ಪಾಠಾಂ. ಜೋಲುವ ದೀಪಸಾಲುಗಳೊಳು ಕೇಣಿ] ದೀಪಾಳಿಯ ಹಬ್ಬದಂತಿಹುದು (ಭರಚ. ೧೫-೨೩).

[ತೂಗು$_1$ (< ತೂಂಕು$_1$) + ದೀವಿಗೆ]

**ತೂಗುದೊಲೆ**, ತೂಗುತೊಲೆ (ನಾ.) ೧. ಒಂದು ಬಗೆಯ ಯುದ್ಧಸಾಧನ ; ಲಗ್ಗೆಯಲ್ಲಿ ಶತ್ರುಗಳ ಮೇಲೆ ತೂಗಿ ಎಸೆಯುವ ಮರದ ದಿಮ್ಮಿ : ಸಾಲ ಮುಗಿಲಟ್ಟಣೆಯ ಡೆಂಕಣೆಯ ಪಂದಿದಲೆಯೋಳಿಗಳ ಮರುಳ ಕೈಗಳ ತೂಗ[ಗು]ದೊಲೆಯ . . . ವಿಶಾಲಶಾಲಮನಿರದೆ ದಿವಿಜಪತಿ ಕಂಡು (ಚಬಪು. ೪೨-೨೨). **ತೂಗುತೊಲೆ**: ೨. ಇಳಿಬಿಟ್ಟಿರುವ ತೊಲೆ ; ನೇತುಹಾಕಿರುವ ಮರದ ದಿಮ್ಮಿ : ಎಂಥ ಭಾರಕು ಜೋಲಿ ಹೊಡೆಯದಿಹ ತೂಗು-ತೊಲೆ (ನಲಮು. ೫೦-೭).

[ತೂಗು$_1$ (< ತೂಂಕು$_1$) + ತೊಲೆ$_3$]

**ತೂಗುನೀರು** (ನಾ). ೧. ಎರಡು ಕೈಗಳಲ್ಲೂ ಕೊಡಗಳನ್ನು ಹಿಡಿದುಕೊಂಡು ಗಿಡ, ಮರ, ಬಳ್ಳಿ ಮೊದಲಾದುವುಗಳಿಗೆ ಒದಗಿಸುವ ನೀರು: ಅರಮನೆಯಲ್ಲಿ ಪ್ರತಿದಿನದಲ್ಲಿಯೂ ನಡೆಯುವಂತೆ ಕಟ್ಟುಮಾಡಿದ ಊಳಿಗಗಳ ವಿವರ...ಕರಗದ ಊಳಿಗ, ತೂಗುನೀರಿನ ಊಳಿಗ (ಚಾಮುವಂ. ೪೫). ೨. ನೇತುಹಾಕಿದ ಪಾತ್ರೆಯಲ್ಲಿಟ್ಟ ನೀರು : ತೂಗುನೀರಿನಲ್ಲಿ ಲವಂಗ, ಏಲಕ್ಕಿ, ಸಬ್ಬಸಿಗೆಬೀಜ, ತಾಳೀಶಪತ್ರ ಸಹ ಅರೆದು...ಸೇವಿಸೆ ಪೈತ್ಯರೋಗಂ ಗುಣಮಕ್ಕುಂ (ಸಳವೈ. ೧೩೪).

[ತೂಗು$_1$ (< ತೂಂಕು$_1$) + ನೀರು$_1$ (< ನೀರ್$_1$)]

**ತೂಗುಪಾತ್ರೆ** (ನಾ). ೧. ನೇತುಹಾಕಿರುವ ಪಾತ್ರೆ : ಆಗಾಗ ದೈವಿಕ ಪರಿಮಳದ ತೂಗುಪಾತ್ರೆಗಳು ಗಾಳಿಯಲ್ಲಿ ಓಲಾಡಿದ ಶಬ್ದ ನನಗೆ ಕೇಳುತ್ತಿತ್ತು (ಯೋಧಪು. ೪೮). ೨. ನೇತುಹಾಕಲು ಅನುಕೂಲವಾಗುವಂತೆ ಹಿಡಿ ಇರುವ ಪಾತ್ರೆ. [ತೂಗು$_1$ (< ತೂಂಕು$_1$) + ಪಾತ್ರೆ]

**ತೂಗುಬಿಡು** (ಕ್ರಿ). ಜೋಲಾಡುವಂತೆ ಮಾಡು ; ನೇತುಬಿಡು ; ಇಳಿಬಿಡು : ಅವರ ಖಗೋಳಸಿದ್ಧಾಂತದ ಪ್ರಕಾರ ಭೂಮಿಯು ಗೋಳಾಕಾರವಾಗಿದ್ದು ಅಂತರಿಕ್ಷದಲ್ಲಿ ತೂಗುಬಿಟ್ಟ ಹಾಗಿದೆ (ಶಿಲ್ಪನಾ. ೯೫).

[ತೂಗು$_1$ (< ತೂಂಕು$_1$) + ಬಿಡು$_1$]

**ತೂಗುಮಂಚ** 'ತೂಗುಂಮಂಚ' ನೋ.

**ತೂಗುಮಣಿ** (ನಾ). ಜೋಲಾಡುವಂತೆ ಹರಳನ್ನಿಟ್ಟು ಮಾಡಿರುವ ಒಂದು ಬಗೆಯ ಆಭರಣ : ಕೈಗಡಿಯಾರದ ಜೊತೆಗೆ ಚಿನ್ನದ ಬಳೆಗಳು. ಕಿವಿಗೆ ತೂಗುಮಣಿಗಳನ್ನು ಇಳಿಬಿಟ್ಟು ಹಣೆಗೆ ತಿಲಕವನ್ನಿಟ್ಟಿದ್ದಳು (ದೂರಸ. ೮೭). [ತೂಗು$_1$ (< ತೂಂಕು$_1$) + ಮಣಿ$_3$]

**ತೂಗುಮಣೆ** 'ತೂಗುವಣೆ' ನೋ.

**ತೂಗುಮರ** 'ತೂಗುವರ' ನೋ.

**ತೂಗುಯ್ಯಾಲೆ**, ತೂಗುಂಯ್ಯಾಲೆ (ನಾ). ೧. ತೂಗಾಡುತ್ತಿರುವ ಉಯ್ಯಾಲೆ : ಲಕ್ಷ್ಮಣಂ ... ಎಂದುಮುಗಲದಣ್ಣನ ಕಡೆಗೆ ದೂಳ್ಕಾಯ

ದೊಳ್ಪತ್ತಿ ಪೊರಳ್ವ ಸೀತೆಯ ಕಡೆಗೆ ತೂಗುಯ್ಯಲೆವೊಲಾದನು (ಜೈಮಿಭಾ. ೦೯-೨೯); ಕೊಂಬೆಯಂ ತೂಗುಯ್ಯಲೆಯುಲಿ ಹಕ್ಕಿ ಸುರಗಾನದ ಹೊಳೆಹರಿಸಿತು ಸೊಕ್ಕಿ (ಪಾಂಚಜ. ೩೬-೫). ೨. (ಅಲಂ) ಡೋಲಾಯಮಾನವಾದ ಸ್ಥಿತಿ; ಸಂದಿಗ್ಧಪರಿಸ್ಥಿತಿ: ಅವಳ ಪ್ರೇಮ ತೂಗುಯ್ಯಲೆಯಾಗಿತ್ತು (ಪುನರು. ೩೩೦). **ತೂಗುಯ್ಯಾಲೆ**: ೨. ಹಳೆಯದನ್ನು ಬಿಡಬೇಕೋ ಕಟ್ಟಿಕೊಳ್ಳಬೇಕೋ ಎಂಬ ತೂಗುಯ್ಯಾಲೆಯುಲ್ಲಿದೆ ನನ್ನೂರು (ನನ್ನೂರು. ೩೦೯).

[ ತೂಗು$_1$ (< ತೂಂಕು$_1$) + ಉಯ್ಯಲೆ (< ಉಯ್ಯಲ್) ]

**ತೂಗುಯ್ಯಾಲೆ** 'ತೂಗುಯ್ಯಲೆ' ನೋ.

**ತೂಗುವಣೆ**, ತೊಗುವಣೆ (ನಾ). ಉಯ್ಯಾಲೆ; ಜೋಕಾಲಿ: ತಳಿರತೊಂಗಲ ತೂಗುವಣೆಯಲ್ಲಿ . . . ಸುಳಿದಾಡುವ ಮಂದಮಾರುತ ಮತ್ಕಾಂತನ ಬಳಿಗೆನ್ನ ಸಾರ್ಚಿಂದಳಲುತ (ಮೋಹತ. ೯-೨೮). **ತೂಗುಮಣೆ**: ತೂಗುಮಣೆ ಇರೋದೆ ಮಕ್ಕಳಾಟಕ್ಕೆ, ಆಡಬೇಡ ಅನ್ನಬೇಡ (ರೂಧಿ). [ ತೂಗು$_1$ (< ತೂಂಕು$_1$) + ಮಣೆ ]

**ತೂಗುವರ**, ತೂಗುಮರ (ನಾ). ೧. = ತೂಗುದೊಲೆ ೧: ತಳಿವರ ನೂಲ ಹರಿಗೆ ಕಬ್ಬುನದ ಬಲ್ಲಲಗೆ ಬದ್ದರ ಸಾರವಾರಿ ತೊಲೆ ತೂಗುವರ ಬಲೆ ಹಗ್ಗ ಮಕರದಿಬ್ಬಿ ಸಲೆ ಮೆಟ್ಟಿದವು ದುರ್ಗದೊಳಗೆ (ಕುರಾಸಾಂ. ೩೬-೫೬). **ತೂಗುಮರ**: ೨. ನೇಣುಂಮರ; ಗಲ್ಲುಗಂಬ: ನಾನು ಈಗಲೆ ಹೇಳಿದ್ದೇನೆ. ಇವನು ಒಂದು ದಿನ ತೂಗುಮರ ಏರುತ್ತಾನೆ (ರೂಢಿ).

[ ತೂಗು$_1$ (< ತೂಂಕು$_1$) + ಮರ$_1$ ]

**ತೂಗುವೆರಳು** (ನಾ). (ಮೆಂಚ್ಚುಗೆಯಿಂದ) ಅಲ್ಲಾಡಿಸುತ್ತಿರುವ ಬೆರಳು: ಮೂರ್ಛೆ ಪೂತು ಭಾವಿಸುತ ತೂಗುವೆರಳಿನ ಮುಕುಟದೊಲಹಿನೊಳಾಗರುವಭಟರುಲಿಯ (ಕುಮ್ಮಾದ್ಯಾ. ೦-೩೬).

[ ತೂಗು$_1$ (< ತೂಂಕು$_1$) + ಬೆರಳು (< ಬೆರಲ್) ]

**ತೂಗುವೊಡಲು** (ನಾ). ಜೋಲುತ್ತಿರುವ ಶರೀರ; ನಿಲ್ಲಲಾರದೆ ತತ್ತರಿಸುತ್ತಿರುವ ದೇಹ: ತೂಗುವೊ[ಪಾಠಾಂ. ಗಿದೊ]ಡಲರೆಮುಚ್ಚುಗಂಗಳ...ಮೂರ್ಛೆಯುಲಿ ರವಿಸೂನು ವೈಮುಟಿದ (ಕುಮ್ಮಾಕ. ೧೦-೩೦).

[ತೂಗು$_1$ (< ತೂಂಕು$_1$) + ಒಡಲು (< ಒಡಲ್)]

**ತೂಗುಸೇತುವೆ** (ನಾ). "ತಳದಲ್ಲಿ ಆಧಾರವಿಲ್ಲದೆ ಎರಡು ಕೊನೆಗಳಲ್ಲೂ ಸ್ತಂಭ, ಮೊ.ಕ್ಕೆ ಬಿಗಿದು ಕಟ್ಟಿ, ಹೊಳೆ, ಮೊ. ಗಳಿಗೆ ಅಡ್ಡವಾಗಿ ತಂತಿ ಹೊರಜಿಗಳಿಂದ ಜೋಲ ಹಾಕಿರುವ ಸೇತುವೆ" (Suspension-bridge. ಇಂಕನ); ೧೫೫೦ರಲ್ಲಿ ಮೊದಲ ಬಾರಿ ಪೆಲೇಡಿಯೊ ಕಬ್ಬಿಣದ ತೂಗುಸೇತುವೆಯನ್ನು ಕಟ್ಟಿದನು (ಶಿಲ್ಪವಾ. ೦೫೪).

[ತೂಗು$_1$ (< ತೂಂಕು$_1$) + ಸೇತುವೆ]

**ತೂಗುಹಲಗೆ** (ನಾ). (ಅಂಗಡಿ ಮೊದಲಾದುವುಗಳ ಮುಂದೆ ಅದರ ಹೆಸರನ್ನು ಬರೆದು) ತೂಗುಹಾಕಿರುವ ಹಲಗೆ; ನಾಮಫಲಕ: ಆಮೇಲೆ ಬರುವಿ ನೀ ದತ್ತ್ತಾಯಾಗಿ ಕರ್ತವ್ಯಗಳ ತೂಗುಹಲಗೆಯನೆ ತೂಗಿ (ನವ್ಯಧ್ವ. ೭-೦೫); ಬಾಂಬೇ ಸೈಕಲ್ ಸ್ಟೋರ್ಸ್ ಎಂಬ ತೂಗುಹಲಗೆ ಅದರ ಮುಂದೆ ನೇತಾಡುತ್ತಿತ್ತು (ನಿಸುತ. ೦).

[ ತೂಗು$_1$ (< ತೂಂಕು$_1$) + ಹಲಗೆ (< ಪಲಗೆ) ]

**ತೂಗೋಲೆ** (ನಾ). ತೂಗಾಡುತ್ತಿರುವ ಓಲೆ; ಲೋಲಕ: ಕತ್ತಿನಲ್ಲಿ ವಜ್ರದ ಹಾರ. ಕಿವಿಗಳಿಗೆ ವಜ್ರದ ತೂಗೋಲೆ (ಪ್ರಕಾಶ. ೨).

[ತೂಗು$_1$ (< ತೂಂಕು$_1$) + ಓಲೆ]

**ತೂಟಿಸು** (ಕ್ರಿ). ನಾಶಮಾಡು; ಪರಾಭವಗೊಳಿಸು: ನಿನ್ನಿನ ರಣವನ್ನೆಯ ತಾ ತೂಟಿಸಿದುದೇನಾಯ್ತೆನುತ್ತ ಹೆಂಗಳ ನೋಟದಿಂದುತ್ತರಂ ನುಡಿದನು (ತುರಂಗ. ೩೬-೨೬). 'ತುಟ್ಟಿಸು' ಪರಾ.

[ < ತುಟ್ಟಿಸು ]

**ತೂಟೆದಾರ** (ನಾ). (ಕರಾ) ಉತ್ಸವಾದಿಗಳಲ್ಲಿ ತೆಂಗಿನ ಗರಿಗಳ ಕೊಳ್ಳಿಗಳನ್ನು ಹಿಡಿದು ಮಾಡುವ ಒಂದು ಬಗೆಯ ಹುಸಿಕಾಳಗ: ತೂಟೆದಾರ . . . ಬೋಂಟೆ (Hunting) ಇತ್ಯಾದಿಗಳು ತುಳುವರ ಧೈರ್ಯ, ಸ್ಥೈರ್ಯ, ವೀರತ್ವದ ಕುರುಹುಗಳೆಂಬುದಾಗಿ ಸೂಚಿಸಿದ್ದಾರೆ (ತುಳುನಾ. ೨೦). [ ← ತುಳು. ತೂಟೆದರ]

**ತೂಡಿಲ್** (ನಾ). ಒಂದು ಸ್ಥಳದ ಹೆಸರು: ಅಸ್ಯ ಸೀಮಾನ್ತರಂ ಪೆರ್ವ್ವಟ್ಟಿಯೂರ ಸೀಮೆ ಮೂಡಯ್ಯೂಡಿಲ ಪೆರ್ವ್ವಳ್ಳಮೇ . . . ಬಡಗಾಯ್ ಪೆರ್ವ್ವಳ್ಳಮೆ ಸೀಮೆ (ಎಕ. IV, ಹೆಗ್ಗಡ. ೪-೨೫ ; ಕ್ರಿ. 750). [ ? ]

**ತೂಣ**$_1$ 'ತೂಳ್$_1$' ನೋ.

**ತೂಣ**$_2$, ತೂನ (ನಾ). ಕಂಭ; ಸ್ತಂಭ: "ತೂಣ(ನ) – ಸ್ಥೂಣ = ಗೂಟ, ಕಂಬ" (ಶಬ್ದಕೋ. ೦೮); ಮುಡದಿಯ ನುಣ್ಗೊಡೆಗಳನ್ನು ಕಡೆಗೆ ಬಣ್ಣಿಸಲಾನೆಯಿಯ ಮೋಹನವೆಂಬ ಗುಡಿಗಟ್ಟಿ ತೂಣದಂತಿಹುದು (ಅಂಜಚ. ೫-೦೨೪); ಸುರರ ಸಂದಣಿ ಭರದಿಂದ ಮರನಾಕವಿಳಿದು ಕೂಡದೊಲಜ ತೂಣವನಿರಿಸಿದಂತಿಹುದಲ್ಲಿ ಮೇರು (ವರ್ಧಚ. ೦-೪೮).

**ತೂನ್**: (ಕ). 'ತೂನಗೆಣಸು' ಪರಾ. [ < ಸಂ. ಸ್ಥೂಣಾ ]

**ತೂಣ**$_3$ (ನಾ). = ತೂಣೀರ: ಕಾಮುಬಾಣಂಗಳ ತೂಣವೆಂದೆನಿಸಿ ರಂಜಿಸಿತೊಂದು ಮನೋಜ್ಞಮಂಟಪಂ (ಉದ್ಭಟ. ೫-೦೬); ತೂಣದಿಂ ಸರಳ್ಗಳ ನುರ್ಚಿ ತೊಟ್ಟು ತಿರುವಂ ತೆಗೆದೆಚ್ಚಂ (ತ್ರಿಪುವಿ. ೨೪-೩೫೨). [ ಸಂ. ]

**ತೂಣ**$_4$ (ನಾ). ಯಮಂ: ತೂಣನ ತೋಳಂ ತುಂಡಿಸಿ ಪೂಷನ ಕೋಣೆಯ ಹಲ್ಲೆಲ್ಲ ಫಲ್ಲಿಸಿ . . . ತಿರುಗಿದನಧ್ವರದೆಡೆಗೆ (ವೀರೇಜ. ೨-೪೩); ಓಹೋ ಹೋಯೆನ್ನಸುವಿಂಗ ತೂಣನ ತೋಹಿಗೆ ಸಿಲ್ಕದು (ಉದ್ಭಟ. ೩-೪೩); ತೂಣನಂ ತುಳಿದ ಪೆಬ್ಬಾವಿನೆಂಜಲುಂಡಾ ... ಕಟಿಗೊರಲ ಶಿವ ರಕ್ಷಿಸ್ಸೆನಿಶ್ಚಲದೊಳು (ನಂದಿಮಾ. ೨೦-೫೫). 'ತೂಣಕೋಡು', 'ತೂಣಕೋಣ' ಪರಾ. [ ? ]

**ತೂಣಕೋಡು** (ನಾ). ಯಮನ ವಾಹನದ ಕೋಡು: ಮನುಜಪತಿ ಜವಹರಂಬುಗುವವನೆನುತುಂ ಬಿನ್ನೈಸುತಿರ್ಪ ಸಮಯದೊಳಗೆ ಪಡಿಹಾರಿಯೊರ್ವನೆಯ್ತಂದು ತಚ್ಛೋಳನೆಡೆವಿಡದದರಿಂ ತೂಣಕೋಡುಗಳನೆನುತೊಡನೆ ಬಿನ್ನೈಸಿದಂ ತದ್ವಕ್ತ್ರಸಂದೋಹಕಣಯರಂ ಮುಂದದೊಳು (ಅರಾಚ. ೪-೭೪). [ ತೂಣ$_4$ + ಕೋಡು$_5$ ]

**ತೂಣಕೋಣ** (ನಾ). ಯಮನ ವಾಹನವಾದ ಕೋಣ,– ಮಹಿಷ: ಸುರಪಕರಿದಂತಮಂ ತೂಣಕೋಣನ ಕೊಂಬನಿರದೆ ಕಿಳ್ತಿರಡನುಟೆ ಪಿಡಿದು ತಾಳಂಗುಟ್ಟುತ (ಅರಾಚ. ೦೭-೮). [ ತೂಣ$_4$ + ಕೋಣ$_1$ ]

**ತೂಣಗೊಳ್ಳು** (ಕ್ರಿ). ಪರವಶವಾಗು; ಆವೇಶ ಹೊಂದು: ವನದೇವಿಯೋಲಗದೊಳುತ್ಸವದಿಂದಮುಡಿಗಡಿಗೆ ತೂಣಗೊಂಡವನಂತೆಸೆವ ಮಂದಮಾರುತನ ನೋಡೆಂದನು (ಜೈಮಿಭಾ. ೩-೩೨); ನವಿಲ ನಾಟ್ಯವನ್ನು ನೋಡಿ ನೆನೆಸಿ ನೆನೆಸಿ ತೂಣಗೊಂಡೆ (ಪಯಣ. ೭೭-೭); ತೂಣಗೊಂಡಿಹೆ ನಿಂತು ಮಹಾದ್ಭುತಪವಾಡಸಂದರ್ಶನಕ್ಕೆ (ಅನಿಕೇ. ೩೯-೯).

[ ತೂಣ$_1$ (< ತೂಳ್$_1$) + ಕೊಳ್ಳು$_1$ (< ಕೊಳ್$_1$) ]

**ತೂಣಮನ** (ನಾ). (ಕಂಬದಂತೆ) ಸ್ಥಿರವಾಗಿರುವ ಮನಸ್ಸು: ತೂಣಮನಗೈದಡವಿಯಂ ಸಾರ್ದೊಡಂ (ಶ್ರೀಣಪು. ೪-೩೬).

[ ತೂಣ$_2$ + ಮನ$_1$ ]

**ತೂಣೆ** (ನಾ). = ತೂಣೀರ: "ಮೂಡಿಗೆ, ತೂಣೆ, ಬತ್ತಳಿಕೆ – ಈ ೩ ಬೆನ್ನ ಹೊದೆ" (ಕಕಸಾ. ೫೨-೦೦೭); ನಮಿಸಿ ಮುನಿಗಳಿಗಾಗ ಧನುವನಂ ಬಾಣತೂಣೆಗಳಂ ಸಮರಜಯಕಾಂಕ್ಷೆಯುಲಿ ಧರಿಸುತ (ಜಾತ್ರರಾ. ೩೨-೬೦); ಪತಿಭಕ್ತಿಜಾಣೆಯಂ ಸುಲಭಪ್ರವೀಣೆಯಂ ಚಿದ್ಬಾಣತೂಣೆಯಂ . . . ಪಶುಪತಿಯ ರಾಣಿಯಂ ಮಿಗೆ ಪೊಗಳುವೆ (ಗುಭಚ. ೦-೭). [ ಸಂ. ]

**ತೂಣಿಕಾರ** (ನಾ). ಬತ್ತಳಿಕೆಯನ್ನು ಹಿಡಿದಿರುವ ವೀರ (?) : ಕಾಣಿಸಿ ಳ ದೇವಕೂಟದ ತೂಣಿಕಾರ × × × ದ್ದಲ್ಲಿ (ಶಿಇ. I, ೪೭-೧೦; 1425).
[ ತೂಣಿ + - ಕಾರ$_1$ ( < - ಕಾಱ ) ]

**ತೂಣೀರ** (ನಾ). ಬಾಣವನ್ನು ತುಂಬುವ ಚರ್ಮದ ಚೀಲ; ಬತ್ತಳಿಕೆ : "ತೂಣೀರಂ . . . ಕಳಾಪಃ–ಈ ೮ ಮೂಡಿಗೆ" (ಹಲಾಯು. ೭೬-೩೧೧) ; ಸನ್ನಹತೂಣೀರಚಾಪಕಂಬಳಸಹಿತಂ ರನ್ನದ ಚಿತ್ರಿತ ಘಟಮಂ ತನ್ನಯ ಭುಜದೆ ತಳೆವಂ ಮೃಗಾಂತ್ಯತ್ರ್ಯಂಶಂ (ಜಾತತಿ. ೧೯-೩೦) ; ಕವಚಂದೊಟ್ಟು ಶ ರಾ ಸ ನ ಂ ಬಿ ಡಿ ದು. ತೂಣೀರಂಗಳಂ ತಾಳ್ದಿ (ಪಂಪಾಪೂ. ೯-೪೬) ; ತೂಣೀರದೊಳ್ ಶರಂ ಪೋಗುವಂತೆ ತಲೆಯೊಳಗೆ ಮಾಣದೆ ಪೋಗಲು ಮೂರ್ಛೆಯೊಳಾಳ್ದು ಬೀಳೆ (ಚತುಪು. ೩-೮-೯೪); ಸಾರ್ಥಕಂಗೆಯ್‌ ವನ್ನಗೆ ಕೊಟ್ಟು ಧನುರ್ಬಾಣಮಂ ದಿವ್ಯತೂಣೀರಮಂ (ಶ್ರೀರಾಪಾ: ೧೯೩-೪೬೯) [ ಸಂ. ]

**ತೂತ** (ನಾ). ೧. ಹುರುಳಿಲ್ಲದವನು; ಪೊಳ್ಳಾದವನು: ಆಶೆಗೆ ಸಿಲುಕಿ ಸಾವ ತೂತರಿಗೆಲ್ಲಿಯದೋ ಲಿಂಗ (ಮೋಳಿಮಾ. ೪೮-೨೦೦) ; ನಾಡಿ ಸೂತ್ರಗಳ ಭೇದವನಱಿದೆವೆಂದು ದೀಪನ ಪಚನ ಪೈತ್ಯಕ್ಕೆ ಶ್ಲೇಷ್ಮವಿದೆಯೆಂದು ಆತ್ಮನ ಹಿತವನಱಿಯದ ತೂತ ವೈದ್ಯನಲ್ಲ (ಸರ್ವವ. ೨೨-೮೦೩). (ಗು). ೨. ಹುರುಳಿಲ್ಲದ; ಪೊಳ್ಳಾದ. 'ತೂತಜ್ಞಾನಿ' ಪರಾ.
[ ತೂತು$_1$ ( < ತೂಂತು$_3$ ) + - ಅ$_7$ ] ೨।

**ತೂತಜ್ಞಾನಿ** (ನಾ). ಪೊಳ್ಳುಜ್ಞಾನಿ ; ಅಜ್ಞಾನಿ : ಮಾತಿನ ಮಾಲೆಯ ಕಲಿತು ಸಂತೆಯ ಹೋತಿನಂತೆ ಹೋರುವ ತೂತಜ್ಞಾನಿಗಳಿಗಿನ್ನೇತಱ ವಿರಕ್ತಿಯೋ (ಮೋಳಿಮಾ. ೧೭೦-೬೩೫); ಮಾತಿನ ಮಾಲೆಯ ಬೋಧೆ ತೂತ ಜ್ಞಾನಿಗಳ ಸಂಸರ್ಗ (ಅವರೀ. ೪೭). [ ತೂತ + ಜ್ಞಾನಿ ]

**ತೂತಪ್ಪಚ್ಚಿ** (ನಾ). ೧. ವಂಧ್ಯೆ ತೂತು ಮಾಡಿರುವ ರೊಟ್ಟಿ ಮೊದಲಾದ ತಿನಿಸು ; ತಪ್ಪಲೆರೊಟ್ಟಿ ಇತ್ಯಾದಿ. ೨. ಸ್ತ್ರೀಯ ಗುಹ್ಯಾಂಗ ; ಯೋನಿ : (+). [ ತೂತು$_1$ ( < ತೂಂತು$_3$ ) + ಅಪ್ಪಚ್ಚಿ ]

**ತೂತಾಲಂಬ** (ನಾ). ತಪ್ಪನ್ನೇ ಹಿಡಿದು ಹೋರಾಡುವವನು ; ದೋಷಗ್ರಾಹಿ (?) : ಮಾತಿಗೆ ಮಾತ ಗಂಟನಿಕ್ಕಿ ನಿಹಿತವರ್ತನವಿಲ್ಲದೆ ಸರ್ವ ತೂತಾಲಂಬರ ಮಾತು ಸಾಕಂತಿರಲಿ (ಅವರೀ. ೮೦).
[ ತೂತು$_1$ ( < ತೂಂತು$_3$ ) + ಆಲಂಬ ]

**ತೂತಿಡು** 'ತೂಂತಿಡು$_1$' ನೋ.

**ತೂತು$_1$** 'ತೂಂತು$_3$' ನೋ.

**ತೂತು$_2$** (ನಾ). ಒಂದು ಬಗೆಯ ಮೀನು : ತೂತು ತೆಂತಲು ಸಿಸಿಲು . . . ಆನೆಮೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದರು (ಹದಕಾ. ೫-೪೫). [ ? ]

**ತೂತುಕೆಡವು** (ಕ್ರಿ). ರಂಧ್ರವನ್ನುಂಟುಮಾಡು ; ತೂತುಮಾಡು : "ಆವಿಧ ತೂತುಕೆಡವತಕ್ಕದು" (ಗಂಗಾಪು. ೨೮).
[ ತೂತು$_1$ ( < ತೂಂತು$_3$ ) + ಕೆಡವು ( < ಕೆಡಪು ) ]

**ತೂತುಕೊರೆ** 'ತೂಂತುಗೊಱೆ' ನೋ.

**ತೂತುಗೆಯ್** (ಕ್ರಿ). = ತೂತುಕೆಡವು : ಕಪೋತನೊಂದು ಶಾಂ ಠಕ್ಕಿಸಿ ಕಲ್ಲಿಯಂ ಕಡಿದು ಕನ್ನದೊಳೋಡಿದುದಂತೆ ಕಲ್ಲಿಯಂ ಚೆಕ್ಕನೆ ತೂತುಗೆಯ್ದು ಗಿಳಿಗಳ್ ಕರೆತಂದವು ತಮ್ಮ ಪೋತಮಂ (ಹಮ್ಮೀರ. ೪-೬೨).
[ ತೂತು$_1$ ( < ತೂಂತು$_3$ ) + ಕೆಯ್$_1$ ]

**ತೂತುಗೊಱೆ** 'ತೂಂತುಗೊಱೆ' ನೋ.

**ತೂತುತೆಗೆ** (ಕ್ರಿ). = ತೂಂತುಗೊಱೆ : ಗೋಡೆಯಲ್ಲಿ ಮೊದಲು ತೂತು ತೆಗೆದು ಆಮೇಲೆ ಮೊಳೆ ಹೊಡೆ (ರೂಢಿ).
[ ತೂತು$_1$ ( < ತೂಂತು$_3$ ) + ತೆಗೆ$_1$ ]

**ತೂತುಬಾಯ್, ತೂತುಬಾಯಿ** (ನಾ). ಯಾವ ವಿಷಯವನ್ನಾದರೂ ಗುಟ್ಟಾಗಿಡದೆ ಬಹಿರಂಗ ಪಡಿಸುವ ಬಾಯಿ ; ಒಡಕುಬಾಯಿ : ಮರ್ತ್ಯದ ಮನುಜರು ಸತ್ತರೆನುತ್ತ ಕತ್ತಲೆಯೊಳು ಮುಳುಗಿ ಈ ಮಾತು ಕಲಿತುಕೊಂಡು ತೂತುಬಾಯೊಳಗೆ ನುಡಿದು ... ಹುಚ್ಚುಗೊಂಡು ತಿರುಗುವ ಕತ್ತೆಮನುಜರ ಮೆಚ್ಚರು ನಮ್ಮ ಅಪ್ಪಣ್ಣಪ್ರಿಯಚನ್ನಬಸವಣ್ಣ (ಲಿಂಗವ. ೩೭-೫೯). **ತೂತುಬಾಯಿ :** ಅವಳದು ತೂತುಬಾಯಿ, ಯಾವುದೂ ಗುಟ್ಟಾಗಿ ಉಳಿಯುವುದಿಲ್ಲ (ರೂಢಿ).
[ ತೂತು$_1$ ( < ತೂಂತು$_3$ ) + ಬಾಯ್ ]

**ತೂತುಬಾಯಿ** 'ತೂತುಬಾಯ್' ನೋ.

**ತೂತುವೋಗು** 'ತೂಂತುವೋಗು' ನೋ.

**ತೂತೇಳು** (ಕ್ರಿ). ರಂಧ್ರವುಂಟಾಗು : ಮಾತುಗಾಱಿಕೆ ಬೇಡ ಹಿಡಿಯೆಂದು ಭಾಳದೆ ತೂತೇಳಲೆಚ್ಚು ಬೊಬ್ಬಿಱಿದ (ಮೋಹತ. ೧೨-೫೯).
[ ತೂತು$_1$ ( < ತೂಂತು$_3$ ) + ಏಳು$_1$ ( < ಏೞ್$_1$ ) ]

**ತೂತ್ಕಾರ** (ನಾ). ಒಂದು ಅನುಕರಣ ಶಬ್ದ : ಗೋವಳರೊತ್ತುವ ತಿತ್ತಿರಿಗಾಳೆಯ ತೂತ್ಕಾರವುಮಂ (ಅರ್ಧನೇ. ೮-೭೫೪).

**ತೂದ** (ನಾ). ಒಂದು ಬಗೆಯ ಮರ ; ಹೂವರಸಿ ; ಬ್ರಹ್ಮದಾರು : ತೂದಃ, ಪೂಗಃ, ಯೂಪಃ . . . ತೂಲಂ–೬ ಹುವ್ವರಿಸೆ ಗಿಡ . . . ಕಾಡಡಿಕೇಮರವೆಂದು ಕೆಲವರನ್ನುವರು (ಸಿದ್ಧಾಂತಿ. ೧೨೧). [ ಸಂ. ]

**ತೂದು** 'ತುಯ್$_2$' ಪರಾ.

**ತೂನ್, ತೂನು** (ಕ್ರಿ). ತೂಂತು$_2$ (ಭೂತನ್ಯೂ). ೧. ಜಗ್ಗು ; ಮುಂದಕ್ಕೆ ಎಳೆ : ಬಳ್ಳಿ ಎತ್ತಿನುವರದಿಂ ಪೊಱಮಟ್ಟು ಓಡುವುದುಂ ಶ್ವಾನಂಗಳ್ ಕಂಡು ತೂನುತ್ತಿರಲ್ (ಪಂಚತಂ. ೨೦-೬) ; ಆ ಧನುವನು ತೂನಲ್ಕಾಱದೆಯಂಗಾಧೀಶ ತಿರುಗೆ ಲಜ್ಜೆಯೊಳು (ನೇಮಿಸಂ. ೨೩-೨೬೬) ; ಕೆಲರಲ್ಲಿ ತಲೆಗೂಡಲಂ ಕಟ್ಟಿ ಬಿಡದೆ ಅಲೆದು ತೂನುತ್ತೊಯ್ವರು (ವೀಶೈಪು. ೪-೧೮-೨೬); ಸಸಿ ಸಾಣೆಯನು ತೆಂಕಣೆಲರ್ವರ್ಗದೊಳು ತೂಂತು ಮಸೆಯೆ (ನಾಗಕು. ೩೦-೨೬). **ತೂನು : ೨. ಕಿತ್ತುಕೊಳ್ಳು ; ಸೆಳೆದುಕೊಳ್ಳು ;** ವಸೂಲುಮಾಡು : ಇಂದು ಗೌರಿಯ ಹಬ್ಬವಿಂದು ದೀಪಾವಲಿ ಇಂದು ಕೇತಾರನ ದಿನವೂ ಇಂದು ಯುಗಾದಿ ಮತ್ತಿಂದು ಸಂಕ್ರಾಂತಿಯೆಂದೆಂದು ಧನವ ತೂನುತಿಹರು (ಅಂಜಜ. ೫-೧೨೮).

**ತೂನ** 'ತೂಣ$_2$' ನೋ.

**ತೂನಗೆಣಸು** (ನಾ). ಒಂದು ಬಗೆಯ ಗೆಣಸು ; ಮರಗೆಣಸು : ತೂನ ಗೆಣಸು, ಮುಡಿಗೆಣಸು, ನೂರೆಲೆಗೆಣಸು, ತುಣಗೆಣಸು, ದಂಡಾಲು (ಮೃಜಿಗಿ. ೩೧-೫೯೨).
[ ತೂನ ( < ತೂಣ$_2$ ) + ಗೆಣಸು ( < ಗೆಱಸು ) ]

**ತೂನಿಹುಳ** (ನಾ). ಒಂದು ಬಗೆಯ ಹುಳು : ತೂನಿಹುಳ, ಗೆದ್ದಲು (ನಮ್ಮನು. ೨೪೦). [ ತೂನಿ$_3$ + ಹುಳ ( < ಪುೞು ) ]

**ತೂನು** 'ತೂನ್' ನೋ.

**ತೂಪ** 'ತೂಂಕು$_1$' ಪರಾ.

**ತೂಪರ, ತುಪರ, ತೂಪರ್ಣೆ, ತೂಪುರ, ತೂಪ್ರ, ತೂಬರ$_1$, ತೂಬರೆ** (ನಾ). = ತುಂಬುರು$_2$ : ಮಾತ್ಗಂಟಿ ಮಗಳಲ್ಲ ತಾಟ್ಗಿತ್ತಿ ಸೊಸೆಯಲ್ಲ ತೂಪರದ ಚಕ್ಕೆ ಒಲೆಗಲ್ಲ (ಹಳ್ಳಿಬಾ. ೮೭). **ತುಪರ :** ಮರಗಳು :— ಹೆಸವ ... ಹಸರಗಣ್ಣೆ, ತುಪರ (ನಮ್ಮನು. ೨೩೭). **ತೂಪರ್ಣೆ :** (+). **ತೂಪುರ :** ತೂಪುರದ ಕೊಳ್ಳಿಯೋಪಾದಿಯಲ್ಲಿ ಛಟಛಟಗುಟ್ಟುವಂಥ ಕಟ್ಟುಗ್ರದ ಕಡುಗೋಪವೇ ರೋಷವು (ವಚಶಾ. II, ೧೦೫). **ತೂಪ್ರ :** ಕಂಬಳಿಕರೀಮರ, ಬೀಡಿಎಲೆಮರ, ತೂಪ್ರ, ತೂಬರೆ (ಮೃಜಿಗಿ. ೩೧-೬೦೪). **ತೂಬರ$_1$ :** ತೂಬರದ ಬೀಜ, ಕೊಡಸಿಗನ ಬೀಜ...ಇವಱ

ಕಷಾಯವ ಜೇನುತುಪ್ಪವೆರಸಿ ಸೇವಿಸಲು ರಕ್ತಪಿತ್ತಾತಿಸಾರ ಪರಿಹರ (ವೈದ್ಯಸಾ. I, ೨೧೧) : ಇಂಗು, ತೂಬರದ ಬೇರು, ಶುಂಠಿ ಈ ಮೂರನು ಸಾಸುವೆಯ ಎಣ್ಣೆಯಲ್ಲಿ ಕಾಸಿ ಕಿವಿ ತುಂಬ ಬಿಡಲು ಕರ್ಣಶೂಲೆ, ಕರ್ಣ ದೋಷಗಳು ಶಮನವಹವು (ವೈದ್ಯಸಾ. II, ೯೬). **ತೂಬರೆ :** "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಶಿತಸಾರಕಃ – ೪ ತುಂಬರಗಿಡ, ತೂಬರೇಗಿಡ" (ಸಿದ್ಧಾಂತಿ. ೧೧೬). [ < ಸಂ. ತುಂಬುರು ]

**ತೂಪರಿಡು** (ಕ್ರಿ). = ತೂಪಿಱು ೨ (?): ಕಟ್ಟಿ ಮಿಸಾಸಲ ತೂಪರಿಟ್ಟು ನೆಟುಕನು ಮುರಿವಳು (ಜಿನಮು. ೮೨-೬). [ < ತೂಪಿಡು ]

**ತೂಪರು,** ಜುಬ್ಬರ₁, ಜೂಪರ, ತೂಪರೆ₁, ದೂಮರ (ನಾ). ತುಂತುರು ಹನಿಗಳಿಂದ ಕೂಡಿದ ಮಳೆ ; ಜಿನುಗುಮಳೆ : ಈ ತೂಪರು ಸಾಕಾಗಿ ಹೋಗಿದೆಯಪ್ಪ (ರೂಢಿ). **ಜುಬ್ಬರ₁ :** ಇಷ್ಟೇ ಜುಬ್ಬರ ಬಂದು ನಿಂತೀ ತೆಂಬುವ ಹಾಗಿಲ್ಲ. ಇದಕ್ಕೂ ದೊಡ್ಡಮಳೆ ಬರುವ ಹಾಗೆ ಕಾಣುತ್ತದೆ (ಮುಂಬಯಿ. ೫-೫೦). **ಜೂಪರ ;** "ಜೂಪರ = ಜಿನಗುಡುವ ಮಳೆ, ಜುಬರುಮಳೆ" (ಜಾನಕೋ. ೬೦). **ತೂಪರೆ₁ :** "ತೂಪರೆ = ಜಿಟಜಿಟಿ, ಸಣ್ಣ ; (ತೂಪರೆಮಳೆ ; ತೂಪರೆ ಕಾಳು)" (ಜಾನಕೋ. ೬೭). **ದೂಮರ :** "ದೂಮರ = ಜಿಟಜಿಟಿ ಮಳೆ" (ಜಾನಕೋ. ೭).

[ ದೇ.॥ ತಮಿ. ತೂವಲ್, ತುವಲೈ ; ಮಲ. ತೂವಲ್ ; ತೆಲು. ತುಪ್ಪರ, ತುಂಪರ, ತುವ್ವರ ]

**ತೂಪರೆ₁** 'ತೂಪರು' ನೋ.

**ತೂಪರೆ₂** 'ತೂಪರ' ನೋ.

**ತೂಪಿಡು** (ಕ್ರಿ). = ತೂಪಿಱು ೨ : ಭಸಿತದ ತಿಲಕಮನಿಟ್ಟು...ಪ್ರಸಾದದ ತುಂತುಱಿಂ ತೂಪಿಟ್ಟು (ಬಸರ. ೧೦-೧೧೦) ; ರಾಕಾಚಂದ್ರಮನಂದಮಂ ಶರಧಿ ಕಂಠಿ ಮರ್ತ್ಯರಿಂ ದೃಷ್ಟಿದೋಷಾಕೌಟಿಲ್ಯತೆಯಕ್ಕುಮೆಂದಿರದೆ ... ತೂಪಿಟ್ಟಂತೆವೋಲ್ ತೋರ್ಕುಂ (ಕಮಮಾ. ೨-೩೮). [ < ತುಪ್ಪ + ಇಡು₁ ]

**ತೂಪಿರಿ** 'ತೂಪಿಱು' ನೋ.

**ತೂಪಿಱು,** ತೂಪಿರಿ (ಕ್ರಿ). ೧. ಬಾಯಿಂಯಿಂದ ಉರುಂಬು,– ಊದು : ಶಿವನ ತನುವಂ ನೋಡಿ ತೂತೂ ಎಂದು ತೂಪಿಱಿದ ಯುವತಿಯಂ ಕಂಡು (ಬಸವು. ೧೩-೨೦) ; ಲಿಂಗದೆಡೆದಂಗದೊಳ್ ಸಲದಿ ತತ್ರಿಯನಿಕ್ಕೆ... ಪಿಂಗದದ ತೂಪಿಱಿಯೆ (ಲಶಿಚಂ. ೩೫-೨೬) ; ಜೇಡವುಳು ತಾಂ ಪರಿಯೆ ಲಿಂಗದಗ್ರದೊಳು ತೂಪಿಱಿದ ಸತಿಯಂ ಪಾಪಿಯೆಂದಟ್ಟಿ (ರಾಘಚ. ೬-೨೪). ೨. (ಮಕ್ಕಳಿಗೆ) ದೃಷ್ಟಿದೋಷ ಪರಿಹಾರಕ್ಕಾಗಿ ಹಾಗು ರಕ್ಷೆಗಾಗಿ ನೆತ್ತಿಯಂ ಮೇಲೆ ಊದು : ನಿಜುಱಿಯ ಸೆಱಂಗನೋಸರಿಸಿ ಕೆಂದಳದಿಂದಮ ಕರ್ಚಿಕೊಂಡು ತೂಪಿಱಿದೊಗೆದಟ್ಟಿಕಿಱಿಂದ... ಕಣ್ದೆಱೆಯದ ಕಂದನೆಂದೆನಗೆ ಕಣ್ದೆಱೆಯಿಪ್ಪನೊ ಮಂದಹಾಸಮಂ (ಅರ್ಧನೇ. ೧-೧೧೦); ಸೊಡರ್ವಕ್ಕಿನ ಬೊಟ್ಟನಿಟ್ಟು ತೂಪಿಱಿದು ಪಲವರ್ಮೆಯುಂ ಪರಸಿ (ಚಂದ್ರಪ್ರ. ೩-೪೫) ; ಪರಾಗದ ತಿಲಕಮನಿಕ್ಕಿ ಸೌರಭದ ತುಂತುಱಿಂ ತೂಪಿಱಿದು (ಗಿರಿಜಾ. ೨-೭೦ವ) : ತನ್ನ ಮಗಳಿಗೆ ಸಮವಹ ರೂಪಜೀವೆಯರಿಲ್ಲೆಂದು ಚಾಪಳಿ ... ಪೇಟಿ ತೂಪಿಱಿದುಪ್ಪ ಸೂಸುವಳು (ಅಂಜಜ. ೩-೧೮೫) ; ತರಳಂಗೆ ಕಣ್ಣೀಂಜಲೆಂದು ತೂಪಿಱಿದು (ಮೋಹತ. ೧೭-೬೩); ಕನ್ನೆಗೆ ಕಣ್ಣೇರಾದು ದಕ್ಕಟಯೆಂದು ಚೆನ್ನೆಯರತ್ತಿ ತೂಪಿಱಿದು . . . ಬೀಸಿದರಾಲವಟ್ಟದಿಂ (ನಾಗಕು. ೨೫-೬೩). ೩. ಎಸೆ ; ಚೆಲ್ಲು : ಸಭೆಯಲಿ ಸುಲಿದು ಬಿಸುಡುವ ಸೀರೆಗಳ ತೂಪಿಱಿದು ಸುಳಿವುಪ್ಪಾರತಿಯು ತನಿಹರಕೆ ತಳಿತುದು ತಾಯ ನೇಮದಲಿ (ಕುಮಾವ್ಯಾ. ೭-೩೦). ೪. **ಹೊರಹೊಮ್ಮು :** ಧಾರಾವಿಭಿನ್ನ ಘ್ರಾಣಮುಖಿ ಬಳಿಕ ಹಾಯಿದಳು ಹೊಱವಡುವ ನೆತ್ತರ ಬಾಯ ತೂಪಿಱಿ ವಶ್ರುಜಲಪೂರಾಯುದಭವಮಾನಚ್ಯುತಿಯ ರೋದನನಿನಾದದಲಿ (ತೊರರಾ. ೩ ೫-೧) : ಉಱುಬಿನುಸುರಳ್ಗೆಗಳ ಮಿಗೆ ತೂಪಿಱಿವ ರಕುತದ ರಣದ ನಾಟಕದಱಿಕೆಕಾಱರು ಠಾವುಠಿಯಲೊಡ್ಡಿಗಿದರು ಸರಿಸದಲಿ (ತೊರರಾ. ೬-೧೯-೨೨). ೫. ಉಗಿ ; ಉಗುಳು ; ತುಪ್ಪು : ದಾಸಿಮಯ್ಯಂ ಮುದದಿ ತೂಪಿಱಿಯಲೆಂ[ಪಾಠಾಂ. ವೀಳ್ಯೆಯವನುಗುಳ್ವೆನೆಂ]ದು ಕೆಲಸಂ ನೋಡೆ (ಶಂಕರಿದಾ. ೧೯-೭೦). ೬. ಶಾಂತಪಡಿಸು ; ಸಮಾಧಾನಮಾಡು : ಅನುವುಳ್ಳ ಬುದ್ಧಿಯಂ ಕಂಡೆನೆಂದತಿ ಮೆಚ್ಚಿ ತನಗೆ ತಾ ತೂಪಿಱಿದುಕೊಂಡು (ಹಡಕಾ. ೩-೧೨); ಅಂಜದಿರೆನುತ ತೂಪಿಱಿದು ಹರಸಿದರ್ಕ್ರೆದೆಯಾಗೆಂದವನಿ ನಂದನೆಯ (ತೊರರಾ. ೬-೧೨-೫೮). **ತೂಪಿರಿ :** ೨. ಚಂಡಭುಜಬಲನೆಂದು ಶಾರದೆ ಗಂಡನುಪಚರಿಸಿದಳು ತೂಪಿರಿದಧಿಕಹರುಷದಲಿ (ಅಂಬಿಕಾ. ೩೭-೪೦); ನಾಲ್ದೆಸೆಯ ಸುತನಿಗುಂ ಕ್ರಮದಿ ತೂಪಿರಿಯಲುದುರಿದ ಕಣಂಗಳ ತೆರದಿ ನಕ್ಷತ್ರಗಣಮೆಸೆದುವು (ವಂಕಾರಾ. ೫-೬-೧೬); ತಾಯಿಯ ದೃಷ್ಟಿ ನಾಯಿಯ ದೃಷ್ಟಿ ಎಂದು ತೂಪಿರಿಯುತ್ತ (ಸಂಚಿತ್ರ. ೧೬). ೫. ಗೊಳ್ಳನೆ ನಕ್ಕು ಮೂದಲಿಸಿ, ಮೊಗದಿ ತೂಪಿರಿದು (ಗೊಲ್ಲಕಥಾ. ೯-೨೪೭). ೭. (ಆಲಂ) ಧ್ವನಿಮಾಡು; ಮೊಳಗು : ಹಮ್ಮಿನಿಂ ಕಹಳೆಗಳ್ ತೂಪಿರಿಯೆ ನಿಸ್ಸಾಳ ಬಿಮ್ಮಗಂ ಒದಗಿದುವು (ತುರಂಗ. ೬೨-೨೦). [ < ತುಪ್ಪ ? + ಇಱು₁ ]

**ತೂಪು** 'ತೂಂಬು' ನೋ.

**ತೂಪುರ** 'ತೂಪರ' ನೋ.

**ತೂಪುರಗೊಳ್ಳಿ** (ನಾ). = ತುಂಬುರುಗೊಳ್ಳಿ : ತೂಪುರಗೊಳ್ಳಿಯಂದದಿ ಛಿಟಛಿಟಿಲೆಂದು ಕೋಪವ ಮನಕೆ ತಾ ತಂದು (ಜ್ಞಾನಜ. ೫-೮೫).

[ ತೂಪುರ (< ತೂಪರ) + ಕೊಳ್ಳಿ₁ ]

**ತೂಪ್ರ** 'ತೂಪರ' ನೋ.

**ತೂಫಾನು** 'ತುಫಾನು' ನೋ.

**ತೂಬರ₁** 'ತೂಪರ' ನೋ.

**ತೂಬರ₂** (ನಾ). ೧. ಗಡ್ಡ, ಮಿಸೆ ಹುಟ್ಟದಿರುವ ಪುರುಷ. ೨. ನಪುಂಸಕ ; ಷಂಡ : ಭೀಮಸೇನನನ್ನು ನೋಡಿ–ಗಡ್ಡ ಮೀಸೆಗಳಿಲ್ಲದ ತೂಬರ, ತೂಬರ ಎಂದು ಬಾರಿಬಾರಿಗೆ ಹಂಗಿಸಿ (ಕೃಪಾಬು. ೨೫೨). ೩. ಕೊಂಬಿಲ್ಲದ ಪಶು : "ಕೊಂಬಿಲ್ಲದುವು ತೂಬರಾಖ್ಯಂ" (ಮಂಗರಾ. ೫೫-೯) ; "ಕೊಂಬಿಲ್ಲದ ಪಶುವುವಂ; ಗಡ್ಡ ಮಿಸೆಯಿಲ್ಲದ ಗಂಡಗೂಸುವಂ ತೂಬರವೆಂಬುದು" (ಹಲಾಯು. ೪೬-೧೨೩). [ ಸಂ. ]

**ತೂಬರಕ** (ನಾ). ಷಂಡ ; ನಪುಂಸಕ : ನಿಜಾಂಗನೆಯನನ್ಯರಿಗೆ ಕೊಟ್ಟವನ ಹೆಸು ತೂಬರಕ (ನಿಘಾಗ. ೫-೧೨-೧೦). [ ಸಂ. ]

**ತೂಬರೆ** 'ತೂಪರ' ನೋ.

**ತೂಬಾಕ** (ನಾ). (?) : ಸಣ್ಣದ ಬೊಟ್ಟನಿಟ್ಟಂತೆ ಕಿಱಿಗಣ್ಣಲಿ ತೂಬಾಕ ನೊಣ ನೋಡಿದಂತೆ ನಿನ್ನೊಳಾ ಪರಿಲಕ್ಷಣಿಂತೆ ತೇಜನಂತಾಗೆ ಬೆಳಗೋದು ಬಿರಿಸುಕ್ಕಿದಂತೆ (ಚದಾಕೋ. ೫೬-೫). [ ? ]

**ತೂಬು** 'ತೂಂಬು' ನೋ.

**ತೂಯಿಟ್** 'ತುಂಯ್ಟ್₂' ನೋ.

**ತೂರಣಿಗೆ** (ನಾ). "ತೂರುವ ಸಾಧನ: ತೂರಣಿಗೆ" (Fanner. ೩೦೯೧).

[ ತೂರು₁ (< ತೂಱು₁) + – ಅಣಿಗೆ ]

**ತೂರಲ್** 'ತೂಱಲ್' ನೋ.

**ತೂರಲು** (ನಾ). ತುಂತುರುಮಳೆ : ಬೆಳಗ್ಗೆಯಿಂದ ಹಿಡಿದಿರುವ ಈ ತೂರಲಿ ನಿಂದ ಎಲ್ಲಿಗೂ ಹೋಗಲಾಗಲಿಲ್ಲ (ರೂಢಿ).

[ < ತೂಱು₂ + – ಅಲ್./ತಮಿ. ತೂಱಲ್, ತೂಱ್ಱಲ್; ಮಲ. ತೂಱ್ಱಲ್; ತೆಲು. ತೂರ ]

**ತೂರಲ್ಗೊಂಬು** 'ತೂಱಲ್ಗೊಂಬು' ನೋ.

**ತೂರಾಡು** (ಕ್ರಿ). ೧. ತೂಗಾಡು; ಜೋಲಾಡು : ನೀನು ಕಮರಿಯ ತುದಿಯಲ್ಲಿ ತೂರಾಡುತ್ತಿರುವುದು ತಿಳಿಯುತ್ತಿಲ್ಲವಲ್ಲ ! (ವಚಧಾ. ೯೬೪)

೨. ಹೊಯ್ದಾಡಂ ; ಜೂಗಾಡಂ : ಆಗ ಒಂದು ವರ್ಷದ ಮಗು ತೂರಾಡುತ್ತ, ಹೆಜ್ಜೆ ಇಕ್ಕುತ್ತ ... ಗಟ್ಟಿಯಾಗಿ ನಕ್ಕಿತು (ಬಂಕಿಮ. ೧೦೫). ೩. ಚೆಲ್ಲಾಡು ; ಸೂಸು : ತನ್ನ ಹರೆಯದ ರೂಪಿನ ಚೆರಗ ತೂರಾಡಬಾರದೆಂದು ಬಸವಂತಿ ಜಪ್ಪಿಸುತ್ತಿದ್ದಳು (ದೀಪಹ. II, ೧೪೧).

[ ತೂರು$_1$ (< ತೂಱು$_1$) + ಆಡು$_1$ ]

**ತೂರಾಯು** 'ತುರಾ' ನೋ.

**ತೂರಾಯಿ** 'ತುರಾ' ನೋ.

**ತೂರಿಸು$_1$** 'ತೂಱಿಸು' ನೋ.

**ತೂರಿಸು$_2$** (ಕ್ರಿ). ೧. ಒಳಹೊಗಿಸು ; ತುರುಕು ; ಒಳಗೆ ಹೋಗುವಂತೆ ಮಾಡು : ಜಾನುಮಧ್ಯದಲ್ಲಿ ಶಿರ ಗೋಣು ತೂರಿಸಿಕೊಂಡು (ವಿದಾಕ್ಯ. ೫೬-೩); ಅವನ ಷೆಡ್ಡಿನೊಳಕ್ಕೆ ತಲೆ ತೂರಿಸಿ ಕಣ್ಣುಬಿಟ್ಟರೆ ಅದರ ಅಚ್ಚುಕಟ್ಟನ್ನು ನೋಡಿ ನಮಗೆ ಅಚ್ಚರಿಯಾಗುವುದು (ಜಂಗೂಲಿ. ೧). ೨. ಚುಚ್ಚು ; ಇರಿ : ವಾರಿಜಾಕ್ಷನು ಶುಕ್ರದೇವರ ಕಣ್ಣ ದರ್ಭೆಯಂಗುಲಿ ತೂರಿಸಲು ಕಣ್ಣೊಡೆದು ಹೋಯಿತು (ಸಂಭಪ. ೧೦-೨೪). [ ತೂರು$_2$ + – ಇಸು$_3$ ]

**ತೂರು$_1$** 'ತೂಱು$_1$' ನೋ.

**ತೂರು$_2$, ದೂರು$_2$** (ಕ್ರಿ). ೧. ಒಳಸೇರು ; ಒಳನುಗ್ಗು : ಹಾರಿ ಸ್ವರ್ಗವ ತೂರಿ ನರಕವ ಸೇರಿ ಧರಣಿಯ ಸುಕೃತದುಷ್ಕೃತ ಕಾರಿಯದೆ ಸುಖದುಃಖದೊಳಗೋಲಾಡುತಿಹರು (ಅಮೃತ. ೨-೫): ಕೃಷ್ಣಮೇಘಸದೃಶವೇಣಿ ತೂರಿ ಬೀರಿ ಬರುವಳು! (ಪಾಂಚಜ. ೧೧-೪); ಗಾಡಿಯೊಳಕ್ಕೆ ತೂರುವುದು ಬಹಳ ಕಷ್ಟವಾಯಿತು (ರಾಮಾನ. ೧೦೦); ಭೂಮಿಯು ಒಣಗಿ ಹೋಗಿದ್ದರೆ ನೇಗಿಲು ಭೂಮಿಯಲ್ಲಿ ತೂರುವುದೇ ಕಷ್ಟ (ಪ್ರವಮ. ೦೪); ಚಾಪೆ ಕೆಳಗೆ ಒಬ್ಬ ತೂರಿದರೆ ಇನ್ನೊಬ್ಬ ರಂಗೋಲೆಯ ಕೆಳಗೆ ತೂರಿದ (ಗಾದೆ). ೨. ಹೊರಕ್ಕೆ ಚಾಚು; ನೀಡು: ಹೆಬ್ಬುಲಿಯು...ಕೆಂಡಕಣ್ಣಿಂದೊಳರಿ ಹಲ್ಲುಗುರ್ಗಳ ತೂರಿ ಹೊಂಡದಿಂ ತೋರ್ದು ಗವಿ ಬಾಯ ಮೇಲ್ವಾಯೆ (ಕಾಲೂರ. ೯೫-೧೮೮), ೩. ದಾಟು ; ಹಾದುಹೋಗು : ಈ ಸಂಪ್ರದಾಯದ ಕಣ್ಣ ಕಪಾಟನ್ನು ತೂರಿಯೂ ಪ್ರತಿಭಾವಂತ ಕವಿಗಳ ಕಣ್ಣು ಸೌಂದರ್ಯದ ನೂರು ಪರಿಗಳನ್ನು ಕಂಡದ್ದುಂಟು (ಸಾಂದಸ. ೧೬೯). **ದೂರು$_2$** : ಆ ದ್ವಾರ ದೂರಿ ಸುಲಭವಾಗಿ ನಾನು ಗುಡಿಯೊಳಕ್ಕೆ ದೇಕಿಕೊಂಡು ಬರಬಹುದಾಗಿತ್ತು (ಗಲಿಪ್ರ. ೧೩).

**ತೂರಿಕೊಳ್ಳು** = ಸೇರಿಕೊಳ್ಳು ; ನುಸುಳು : ಈ ಕಡೆ ಖಾಲಿ ಇರುವ ಮನೆಗೆ ಒಬ್ಬಳು ತುಂಗಿ ಬಂದು ತೂರಿಕೊಂಡರೆ (ನಡೆದಾ. I, ೫೦೪). **ತೂರಿಬರು** = ದಾಟಿಬರು; ಹಾದುಬರು : ತಾಂ ತೂರಿ ಬರುತಿರುವ ಮನಮನದ ಮಾಧ್ಯಮದ ಚಿತ್ರ ಚಿತ್ರಾಕೃತಿಯ ತಳೆದೆಸೆವ ಬೆಳಕೋ (ಮಲೆದೇ. ೨೮-೧); ಪಕ್ಕದ ಕೋಣೆಯಿಂದ ಅಧಿಕಾರಿಗಳ ಮಾತಿನ ಸದ್ದು ತೂರಿಬರುತ್ತಿತ್ತು (ಪುನರು. ೫೩೮). [ ದೇ.॥ ತಮಿ. ತೂರ್ ]

**ತೂರುಗಂಡಿ** (ನಾ). (ಗೋಡೆ, ಬೇಲಿ ಮುಂತಾದುವುಗಳಲ್ಲಿ) ನುಸಿದುಕೊಂಡು ಹೋಗಲು ಅವಕಾಶವಿರುವಂತೆ ಇರುವ ಕಂಡಿ, – ತೂತು, – ರಂಧ್ರ : "(ಸೋರುವ, ಒಳತೂರುವ) ಒಡಕು, ಬಿರುಕು, ತೂತು; ಸೋರುಗಂಡಿ ; ತೂರುಗಂಡಿ" (Leak. ಇಂಕನಿ). [ ತೂರು$_2$ + ಕಂಡಿ$_1$ ]

**ತೂರುಗಾಳಿ** (ನಾ). ಒತ್ತಿ ಬೀಸುವ ಗಾಳಿ ; ಬಿರುಗಾಳಿ : ತೂರುಗಾಳಿಗೆ ಕಡಲು ಕುದಿಯಿತು (ಇಂಗೀತ. ೬೭-೧).

[ ತೂರು$_1$ (< ತೂಱು$_1$) + ಗಾಳಿ$_1$ ]

**ತೂರುನೊರೆ** (ನಾ). ಚಿಮ್ಮುತ್ತಿರುವ ನೊರೆ; ಹಾರುತ್ತಿರುವ ನೊರೆ : ನೀರ್ ಬೀಳು ಬೆಳ್ಪು ! ಕಡೆದ ನೊರೆ, ಚಿಗಿವ ನೊರೆ, ತೂರುನೊರೆ, ಕುದಿವ ನೊರೆ, ಬೆಳ್ಪಿನೊಳ್ ಬೆಳ್ಪು ! (ಹೊಂಗಳು. ೦೭-೬).

[ ತೂರು$_1$ (< ತೂಱು$_1$) + ನೊರೆ$_2$ ]

**ತೂರೆಣ್ಣೆ** (ನಾ). ಕೊಬ್ಬರಿಯೆಣ್ಣೆ ; ತೆಂಗಿನೆಣ್ಣೆ (?) : ಆರೆಣ್ಣೆ ತೂರೆಣ್ಣೆ ಆವರ್ಣನದೊಳ್ಪೆಣ್ಣೆ ... ಒತ್ತೀರಿ ರಾಜ್ಯವಾಳೋರ ಮಗನೀಗೆ (ಹಳ್ಳಿಯ. ೬೩). [ತೂರು? + ಎಣ್ಣೆ. / ತಮಿ. ತೂರ್ = ಎಳೆಯ ತೆಂಗು]

**ತೂರ್ಣ** (ಗು). ೧. ವೇಗವಾದ ; ಚುರುಕಾದ. 'ತೂರ್ಣಗತಿ' ಪರಾ. (ನಾ). ೨. ಚುರುಕು ; ವೇಗ ; ತ್ವರೆ : "ತೂರ್ಣಂ, ತ್ವರಿತಂ" (ವಸ್ತುಕೋ. ೧೦೫-೪೨) ; "ತ್ವರಿತಂ ದ್ರುತಂ ... ತೂರ್ಣಮಹ್ನಂ ಶೀಘ್ರ ಮಕ್ಕು" (ಮಂಗರಾ. ೧೨೭-೭) ; ವೀರರಸಾರ್ಣವದಂತೆ ಚಾತುರ್ದಂತಬಳಂ ಬೆರಸು ತೂರ್ಣದಿನೊಡ್ಡಿ ನಿಂದೊಡೆ (ನೇಮಿಪು. ೫-೮೩ ವ); ಸ್ವರ್ಣದೀಧರನಂ ಯಜಿಸೆ ದಲಾ ಯಕ್ಷಂಗೆ ತೂರ್ಣದೆ ವರದನಾಗಿ ಗಣಪತಿತ್ವವನಕ್ಷಿ ಕರ್ಣಾಭರಣನಿತ್ತನೆಂದು ಶೈವದ ಧರ್ಮಸಂಹಿತೆಯೆ ಮತ್ತಮುಲಿಗುಂ (ಪದ್ಮರಾ. ೦೧-೧೪೪). ೩. ಚುರುಕಾಗಿರುವವನು : "ತೂರ್ಣನೆಂದರೆ ಚೆಚ್ಚರಿಗನಕ್ಕು" (ಮಂಗರಾ. ೬೯-೧೨). [ ಸಂ. ]

**ತೂರ್ಣಗತಿ** (ನಾ). ಚುರುಕಾದ ನಡಗೆ ; ತೀವ್ರಗತಿ : ಕುರಂಗದ ಪೊಲ್ತು ತೂರ್ಣಗತಿಪ್ರಯುಕ್ತಂ...ಆ ರಾಜವಾಜಿದ್ವಯಂ (ರಾಜಶೇ. ೧೨-೧೦೨).

[ ತೂರ್ಣ + ಗತಿ ]

**ತೂರ್ಪನಿ** (ನಾ). ಸಿಡಿಯುತ್ತಿರುವ ಹನಿ ; ಹಾರುತ್ತಿರುವ ಜಲಬಿಂದು; ಸೀರ್ಪನಿ : ಎಲರಲೆಪದಿನೊಗೆದ ತೆರೆಗೊನೆಯ ತೂರ್ಪನಿಯ ತುಂತುಱುಗಳಿಂ ಮುಸಗುವ ಮಂಜಿನೊಳಂ ಅಂಜದೆ ಪೊಕ್ಕು (ಕಾದಂಪೂ. ೧೧೬).

[ ತೂಱ್ (< ತೂಱು$_1$) + ಪನಿ$_2$ ]

**ತೂರ್ಪಿಡು** (ಕ್ರಿ). (?) : ರಾಯರಘುಳಪ್ಪವಲ್ಲಭನ ನಚ್ಚಿನ ಬಿಲ್ಕರಚಕ್ರಮುಗ್ರಖಡ್ಗಾಯುಧವಾದ್ದಾಂತ ತೂರ್ಪಿಡುವ ಕಕ್ಕಟೆಯೆಂಬ ಪೊಲಿರ್ದಪರ್ (ಸಾಇಇ. IX-', ೨೨೦-೮೭; ?).

[ ☞ ಇದು 'ತೂಱಿಡು' ಎಂಬುದರ ಅಪಲಿಖಿತವಿರಬಹುದು ]

**ತೂರ್ಯ$_1$** (ನಾ). ೧. ನಾಲ್ಕನೆಯದು ; ಚತುರ್ಥ. ೨. [ಜ್ಯೋತಿ] ನಾಲ್ಕನೆಯ ಸ್ಥಾನ : ದನುಜೇಜ್ಯಂ ... ಚಂದ್ರನಿನಾದ್ಯಾಂತ್ಯಷಷ್ಟಮೈಕಾದಶನವ ಧನ ಪುತ್ರ ತ್ರಿ ತೂರ್ಯಂಗಳೊಳ್ ... ಲೇಸೆನಿಕ್ಕುಂ (ಜಾತತಿ. ೧೦-೧೨). ೩. [ವೇದಾಂತ] ತ್ರಿಮೂರ್ತಿಗಳಿಗೂ ಮೂಲವೆನಿಸಿರುವವನು; ಪರಮಾತ್ಮ: ತ್ರಿಮೂರ್ತಿಗಳ ಮಧ್ಯದಲ್ಲಿ ತೂರ್ಯನಾದ ... ಮಹೇಶ್ವರನೊಪ್ಪುತ್ತಿರಲಾಗಿ (ಭೈರಸೂ. ೧೭). ೪. ಮೋಕ್ಷಕ್ಕೆ ಯೋಗ್ಯವಾದ ಸ್ಥಿತಿ: ದಾಸರೆನಿಸಿ ಧರ್ಮ ಹಿಡಿದು ಆಸೆ ಕಡಿದು ತೂರ್ಯದಲ್ಲಿ ಕಾಸು ಕವಡಿ ಕಾಲಿಲೊದ್ದು ಈಶನೊಲಿಸಿಕೊಂಬುವಂಥಾ–ದಾಸರೊ ಹರಿದಾಸರೊ (ಶರೀಫ. ೪೫-೧). [ < ಸಂ. ತುರ್ಯ ]

**ತೂರ್ಯ$_2$** (ನಾ). ಒಂದು ಬಗೆಯ ವಾದ್ಯ : ತ್ರಿದಶಶರಾಸನಂ ತಳಿರ ತೋರಣಮಾಗಿರೆ ... ಘನಧ್ವನಿ ತೂರ್ಯಮಾಗೆ ರಾಗದಿನಿನರಶ್ಮಿಯೆಂಬ ಕಸಮಂ ಕಟಿದಂಬರಮೆಂಬ ಪಾಟನೇಱಿದುದಸಿತಾಂಬುವಾಹಕುಲಮೆಂಬ ಕುಟುಂಬಕದಂಬಕೋತ್ಕರಂ (ಆದಿಪು. ೬-೭೧) : ಶುಭಾಕ್ಷತಂ ಪೊಂಬಳೆ ತೂರ್ಯಂ ತೋರಣಂ ... ಸ್ವಸ್ತಿಕಂ ಸುಲ್ವಮೆಂಬೀ ಮಂಗಳ ರಚನೆಯಿನಂದೇಂ ಮನಂಗೊಂಡುದೋ . . . ಧನ್ಯಕನ್ಯಾಕದಂಬಂ (ಸುಕುಮಾ. ೫-೭೧); ಡಮರುಗತೂರ್ಯನಿರ್ಘೋಷಣಂ (ಸಾಇಇ. XX, ೧೪೪-೧೫; 1168); ಭೋರೆನೆ ತೂರ್ಯವಂಚೆಯುನಜಂ ಗಜಮಂ ಬಳವೈರಿ ... ವೃಷಭನಂ ಹರನೇಱಿ ನಭಕ್ಕೆ ಸಲ್ವುದುಂ (ಜಗವಿ. ೦-೩೬) ; ಪಿಕದ ತೂರ್ಯ ಮೊಳಗುತಿಹುದು (ಹೂಂದಲಿ. ೯-೧೩). [ ಸಂ. ]

**ತೂರ್ಯಕ್ಷ್ಮಾಜ** (ನಾ). [ಜೈನ] ದಿವ್ಯವಾದ್ಯಗಳನ್ನು ಒದಗಿಸುವ ಒಂದು ಕಲ್ಪವೃಕ್ಷ : ಅತಿಮೃದುರವದಾಯಿಗಳಂ...ಓಲಗಿಪುದೊ ದಂಪತಿಗೆಂದುಮವಾರ್ಯವೀರ್ಯ ತೂರ್ಯಕ್ಷ್ಮಾಜಂ (ಆದಿಪು. ೫-೩೫). 'ತೂರ್ಯಾಂಗ' ಪರಾ. [ತೂರ್ಯ$_2$ + ಕ್ಷ್ಮಾಜ ]

**ತೂರ್ಯತ್ರಯ** (ನಾ). ನೃತ್ಯ, ಗೀತ, ವಾದ್ಯ–ಈ ಮೂರರ ಮೇಳ: ಅಲ್ಲಿಯ ಮಾಹೇಶ್ವರರೆಲ್ಲರ್ಗೆ ಬೆಸಸೆ ಮಂಗಳಮೃದಂಗತೂರ್ಯತ್ರಯ ಪ್ರವೀಣ ನಾನಾವಿಳಾಸಿನೀನಿಕರದಿಂದಿದಿರ್ಗೊಳಲು (ನೇಂಬಿರ. ೮-೭೦): ನುಡಿಗಡಣ ತತ್ವವಿಚಾರ ಭಾಷೆಗಳಲಿವು ತೂರ್ಯತ್ರಯದ ಘೋಷಣವು (ಬಸವು. ೪-೩೪); ಏನನೆಂಬೆನು ಜೀಯ ಶಕ್ರಾಸ್ಥಾನವಲ್ಲಾ ದಿವ್ಯವಾದ್ಯ ಸುಗಾನನರ್ತನವಿಮಳತೂರ್ಯತ್ರಯದ ಮೇಳವದ ಆ ನಿತಂಬಿನಿಯರ ... ಭಾವಭಂಗಿಗಳ (ಕುಮಾ.ಆ. ೭-೯೩); ಗಾನವಾದ್ಯಂ ನೃತ್ಯಗೂಡಿ ತೂರ್ಯತ್ರಯದಿ ಮೇನಕಾಜಾನಾಥನಂಘ್ರಿಯಂ ಭಜಿಸುವವನೇನೆಂಬೆ (ಗುರುಚಾ. ೭-೭೫). [ತೂರ್ಯ$_2$ + ತ್ರಯ]

**ತೂರ್ಯತ್ರಿಕ** (ನಾ). = ತೂರ್ಯತ್ರಯ: ಚಿತ್ರೋದ್ಭವನಿನೆಸೆಯೆ ತೂರ್ಯತ್ರಿಕಂ ಹಾಸಪುಷ್ಪಾಂಜಳಿಯಿಂ ತತ್ಕಾಂತೆ ದೇಹದ್ಯುತಿ ಜವನಿಕೆಯಿಂ ನಾಟ್ಯರಂಗಂಬೊಲಿರ್ಪಳ್ (ಅಜಿಪು. ೨-೪೧). [ತೂರ್ಯ$_2$ + ತ್ರಿಕ]

**ತೂರ್ಯತ್ರಿತಯ** (ನಾ). = ತೂರ್ಯತ್ರಯ: ತೂರ್ಯತ್ರಿತಯದ ನಿಜ ಚಾತುರ್ಯಮನಂತಲ್ಲಿ ಮೆಚ್ಚಿದು (ಚಂದ್ರಪು. ೧೩-೭೮).
[ತೂರ್ಯ$_2$ + ತ್ರಿತಯ]

**ತೂರ್ಯನಾದ** (ನಾ). = ತೂರ್ಯನಿನದ: ಸೀಮಂತಿನೀಪ್ರಸರಂ ಮಂಗಳ ತೂರ್ಯನಾದಮೆಸೆಯುತ್ತಿರ್ಪನ್ನೆಗಂ ಚಕ್ರಿ ರಾಗಿಸಿ ಕೈ ನೀರೆಚ್ಚಿದಂ (ಶಾಂಪಥಾ. ೫-೨೫); ಅಂಬರ ಬಿರಿವ ತೂರ್ಯನಾದ ಪೊಟ್ಟನೂರಿಗರ ಕರ್ಣಗಹ್ವರವನ್ನು ಗಡಚಿಕ್ಕಿತು (ಅಲಾಕ. ೪೧). [ತೂರ್ಯ$_2$ + ನಾದ$_1$]

**ತೂರ್ಯನಿನದ** (ನಾ). ತೂರ್ಯವೆಂಬ ವಾದ್ಯದ ಧ್ವನಿ: ಪಸರಿಪ ಪೂಮಟ್ಟಿಯೊಡನೊಡನೆಸೆವುತ್ಸವತೂರ್ಯನಿನದಂ . . . ಎಸೆದುದು (ಪುಷ್ಪಪು. ೧೦-೯). [ತೂರ್ಯ$_2$ + ನಿನದ]

**ತೂರ್ಯರವ** (ನಾ). = ತೂರ್ಯನಿನದ: ಉಣ್ಮಿದತ್ತು ಘೋರನೆ ದಿವಿಜೇಂದ್ರತೂರ್ಯರವಂ (ಜಗವಿ. ೩-೩); ಒಪ್ಪಿದುವಸಂಖ್ಯತೂರ್ಯ ರವಂಗಳ್ (ಪುಷ್ಪಪು. ೦೦-೧೦). [ತೂರ್ಯ$_2$ + ರವ]

**ತೂರ್ಯಸ್ಥಿತಿ** (ನಾ).=ತುರಿಯಾವಸ್ಥೆ: ಧ್ಯಾನನಿಷ್ಠಸಮಯದಲ್ಲಿ ತೂರ್ಯ ಸ್ಥಿತಿಯಲ್ಲಿ ಇವರ ಸಮೀಪಕ್ಕೆ ಯಾರೂ ಹೋಗುತ್ತಿರಲಿಲ್ಲ (ಶರೀಫ. ೭೦ ಕವಿಕಾವ್ಯಪರಿಚಯ). [< ಸಂ. ತುರ್ಯಸ್ಥಿತಿ]

**ತೂರ್ಯಸ್ವನ** (ನಾ). = ತೂರ್ಯನಿನದ: ಅರಿಭೂಪಾಲರನಿಕ್ಕಿ ಗೆಲ್ದೊಸಗೆಯಿಂ ತೂರ್ಯಸ್ವನಂ ಪೊಣ್ಮೆ (ಗದಾಯು. ೩-೭೫); ಸುಪೀತವಸನಂ ಬಂದಾಸ್ಯದೊಳ್ ಪೊಕ್ಕುದು ಮೃಗಲಕ್ಷ್ಮಾನನೆ ಕಂಡಳುಣ್ಮೆ ವಭದೊಳ್ ದೇವೇಂದ್ರತೂರ್ಯಸ್ವನಂ (ಜಗವಿ. ೨-೭೭). [ತೂರ್ಯ$_2$ + ಸ್ವನ]

**ತೂರ್ಯಸ್ವರ** (ನಾ). = ತೂರ್ಯನಿನದ: ತೂರ್ಯಸ್ವರದೊಳ್ ತಳ್ಪೊಯ್ದುದೇಂ ಶೋಭಿಸಿದುದೊ ಪಿರಿದುಂ ಯೌವರಾಜ್ಯಾಭಿಷೇಕಂ (ಚಂದ್ರಪು. ೨-೭೮). [ತೂರ್ಯ$_2$ + ಸ್ವರ]

**ತೂರ್ಯಾಂಗ** (ನಾ). [ಜೈನ] ದಶವಿಧ ಕಲ್ಪವೃಕ್ಷಗಳಲ್ಲಿ ಒಂದು; ವಾದ್ಯಗಳನ್ನು ಕೊಡುವ ಕಲ್ಪವೃಕ್ಷ; ತೂರ್ಯಕ್ಷ್ಮಾಜ: ವಿಚಿತ್ರಭೇದನಿನಾದಂ ಜನಯಿಸೆ ತೂರ್ಯಾಂಗಂ ಕನದನೋಕಹಂ ಪಲವು ತೆಱದ ಪಣಿಗಳನೀಗುಂ (ಶಾಂತಿಪು. ೭-೦೧೩); ತೂರ್ಯಾಂಗವೆಂಬುದು ಪಣವಮದ್ದಳಕಾಹಳ ಭೇರೀಶಂಖಮೃದಂಗಾದಿ ವಿವಿಧ ತೂರ್ಯವಿಶೇಷಂಗಳನೀವುದು (ಚಾವುಂಪು. ೯). 'ದೀಪಾಂಗ' ಪರಾ. [ಸಂ.]

**ತೂರ್ಯಾರಾವ** (ನಾ). = ತೂರ್ಯನಿನದ: ಪೊಣ್ಮಿದುದು ಗಭೀರಂ ತತ್ತ್ರಿಯಾಮತೂರ್ಯಾರಾವಂ (ಚಂದ್ರಪು. ೮-೯೩).
[ತೂರ್ಯ$_2$ + ಆರಾವ]

**ತೂರ್ಯಾವಸ್ಥೆ** (ನಾ). ಮೋಕ್ಷವನ್ನು ಪಡೆಯುವ ಸ್ಥಿತಿ; ತುರೀಯಾವಸ್ಥೆ: ತೂರ್ಯಾವಸ್ಥೆಯು ಚಿಂತನೆಯಿಂದು ಮುಳುಗಿದ ನಿಜೈಕ್ಯನು ಆ ನಿಜವಸ್ತು ಭಾವದೊಳಿರುತ್ತಿಹನೆಂಬುದರ್ಥ (ಪದಗೋ. ೯೨-೨); ಆತ್ಮನ ಅಹಂಕಾರವಿಭ್ರಾಂತಿಯ ತೂರ್ಯಾವಸ್ಥೆಯಲ್ಲಿ ಜೀವಶುಕನೆಂದುಯಿಸಿ ಸಂಸಾರ ಪ್ರಪಂಚಿನಲ್ಲಿ ನೆಲಸಿದನು (ಅವಚಿಂ. ೩೮೭-೦೫-ಭಾವಾನುವಾದ).
[< ತುರ್ಯ + ಅವಸ್ಥೆ]

**ತೂರ್ಯೋದ್ಧಾರ** (ನಾ). ತೂರ್ಯವೆಂಬ ವಾದ್ಯವನ್ನು ಬಾರಿಸುವಿಕೆ, ನುಡಿಸುವಿಕೆ: ಆದಾರು ಹೊಱಕಡೆಯಲ್ಲಿ ತೂರ್ಯೋದ್ಧಾರವನು ಮಾಡುವ ರೆನುತ ಕೇಳಿದಳು ಕೆಳದಿಯರ (ಪ್ರಭುಲೀ. ೫-೧೦). [ತೂರ್ಯ$_2$+ಉದ್ಧಾರ]

**ತೂಲ, ತೂಳ$_3$** (ನಾ). ೧. ಹತ್ತಿ; ಅರಳೆ; **ಕಾರ್ಪಾಸ**: ಕುರುಭೂಭೃದ್ಬಲಕೂಲತೂಲಪವನಂ ಕೌರವ್ಯಗಂಧೇಭಕೇಸರಿ ... ಎಂದಭಿವರ್ಣಿಪೆಂ ರಣಯಶಶ್ರೀರಾಮನಂ ಭೀಮನಂ (ಗದಾಯು. ೧-೫೨); ಚತುರ್ಗತಿಗಳೊಳ್ ಸುಂಟಿಗಾಳಿಯ ತೂಲದಂತೆ...ತೊಟಲ್ತುರುತುಮಿರ್ದುದು ಸಾಲದೆ ಕರ್ಮಯೋಗದಿಂ (ಚಂದ್ರಪು. ೧೩-೯೦): ಮೂಲೋಕವನೊರ್ಮೆ ಕಿಱುವೆರಲಿಂದರ್ಕ ತೂಲವೆತ್ತುವೊಲೆತ್ತುವನ (ಚಂಪ್ರಭಾಂ. ೨೪-೧೯೩); ವೀರಯ್ಯಂಗೆ ತೂಲಮಂ ತೂಗಿ ಹಾಯ್ಕಲ್ಕೊಲ್ಲವೆನೆ ಬಲಾತ್ಕಾರದಿಂ ಹಾಯ್ಕಿ ಪೋಗೆ (ಗುರುಚಾ.೦೪-೪): ತೂಲಮೃದುವೆನಲುಜ್ಜಿದಳ್ ಪತಿ ಲಲಾಟಮಂ (ಶ್ರೀರಾಮಾ. ೩೫೦-೨೭೦). ೨. ಹಕ್ಕಿಯ ತುಪ್ಪುಳು. 'ಹಂಸತೂಲ' ಪರಾ. ೩. ಅರಳಿ ಜಾತಿಗೆ ಸೇರಿದ ಒಂದು ಬಗೆಯ ಮರ; ಹೂವರಸಿ: "ತೂದಃ, ಯೂಪಃ, ಪೂಗಃ, ಕ್ರಮುಕಃ . . . ತೂಲಂ–೬ ಹುಪ್ವರಿಸೆಗಿಡ ... ಕಾಡಡಿಕೇಮರವೆಂದು ಕೆಲವರೆನ್ನುವರು" (ಸಿದ್ಧಾಂತಿ. ೧೨೦). ೪. ಒಂದು ಬಗೆಯ ಗಿಡ ಮತ್ತು ಅದರ ಹಣ್ಣು; ಉಪ್ಪುನೇರಿಳೆ. **ತೂಳ$_3$**: ೧. ಅಮರರ್ಕಳೇಱಿದ ವಿಮಾನಮೆ ಗಾಳಿಯ ತೂಳದಂತಿರೆ (ಅನಂಪು. ೫-೭೪); ಸಂಸಾರತೂಳದವಶಿಖಿಯೆನಿಪ ಕೇಶಮಂ ಪಿಡಿದು (ಭಾವಚಿಂ. ೯-೩೦). 'ಹಂಸತೂಳ' ಪರಾ. [ಸಂ.]

**ತೂಲಕ, ತೂಳಕ** (ನಾ). = ತೂಲ ೧: "ಅರಳೆ ಪಿಚು ತೂಲ[ಪಾಕಾಂ. ೪]ಕಾಖ್ಯಂ" (ಮಂಗರಾ. ೩೮-೨೩). **ತೂಳಕ**: ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ತೂಲತಲ್ಪ**, ತೂಲತಳ್ಪ, ತೂಳತಲ್ಪ (ನಾ). ಅರಳೆಯಿಂದ ಅಥವಾ ಹಂಸ ಮೊದಲಾದ ಹಕ್ಕಿಗಳ ತುಪ್ಪಳದಿಂದ ಮಾಡಿದ ಹಾಸುಗೆ, ಸುಪ್ಪತ್ತಿಗೆ: ಮಲಗಿಸಿದರಾ ... ವಸುಧೇಶನಂ ಹಂಸಹೃದಯದ ತೂಲತಲ್ಪದಲಿ (ಶ್ರೀರಾಮಾ. ೧೧೧-೨೮). **ತೂಲತಳ್ಪ**: ಸೆಜ್ಜೆವನೆಯೊಳುಪಧಾನವಿರಾಜಮಾನಹಂಸತೂಲತಳ್ಪದೊಳ್ ವಿಶ್ರಮಿಸಿ (ಪಂರಾಮಾ. ೫-೩೦ವ). **ತೂಳತಲ್ಪ**: ಕಂದರ್ಪರೂಪ ಹಂಸೆಯ ತೂಳತಲ್ಪದೊಳಂದು ಮಂಡಿಸಿದ ನರ್ತಿಯಲಿ (ಕಂನವಿ. ೨೬-೨೩). [ತೂಲ + ತಲ್ಪ]

**ತೂಲತಳ್ಪ** 'ತೂಲತಲ್ಪ' ನೋ.

**ತೂಲರಾಸಿ** (ನಾ). ಅರಳೆಯ ರಾಶಿ: ಅಳಿಕನೇತ್ರನ ಕೂಡೆ ಸರಸಮೆ ತೂಲರಾಸಿಯು ಸಿಖಿಯ ಕೆಣಕಿದಂತೆ (ನವಮೋ. ೫-೨೨). [ತೂಲ+ರಾಸಿ$_1$]

**ತೂಲಿ$_1$** (ನಾ). ಹತ್ತಿ; ಅರಳೆ. [ಸಂ. ತೂಲೀ]

**ತೂಲಿ$_2$** (ನಾ). ತೂಲವುಳ್ಳುದು; ತೂಲತಲ್ಪ: ತೂಲಿಯೊಳತನು ವ್ಯಾಕುಲದಲ್ಲಿ ಕುಳಿತಿರ್ದತುಳಕರ್ಣನ ಕರೆಯುಲಿಲ್ಲಾ ರಾಯ ಮೌನದಲಿ (ಜನಭಾ. ೩೫-೬). [ಸಂ.]

**ತೂಲಿಕಾತಲ್ಪ** (ನಾ). = ತೂಲತಲ್ಪ: ಆ ಕೊಟಡಿಯಲ್ಲಿ ಎರಡು ದಪ್ಪನೆಯ ದಿಂಬುಗಳೂ ತೂಲಿಕಾತಲ್ಪವೊಂದೂ ಎತ್ತರವಾದ ಮಂಚದ ಮೇಲೆ ಅಣಿಗೊಂಡಿದ್ದುವು (ಪುನರು. ೨೯೭). [ಸಂ.]

**ತೂಲಿಕೆ, ತೂಳಿಕೆ** (ನಾ). ೧. ಚಿತ್ರವನ್ನು ಬರೆಯುವ ಕುಂಚ; ಚಿತ್ರಗಾರನ ಕುಂಚ: ಸಂಕಲ್ಪತೂಲಿಕಾಭಿತ್ತಿಯೊಳೀ ಭುವನತ್ರಯಮುಮಂ ಚಿತ್ರಿಸುವ ವಿರಿಂಚನ ವಿದ್ಯೆಗಧಿಪ ನೀಂ ಗುರುವಲ್ತೇ (ಜಗವಿ. ೯-೪೯).

೨. ನೆಯ್ಗೆಯವನು ಬಟ್ಟೆ ನೇಯುವಾಗ ಉಪಯೋಗಿಸುವ ಒಂದು ಬಗೆಯ ಉಪಕರಣ ; ನೆಯ್ಗೆಯವನ ಕುಂಚ. 'ತುರಿ$_5$' ಪರಾ. ೩. ಚಿನ್ನ, ಬೆಳ್ಳಿ ಮೊದಲಾದುವನ್ನು ಕರಗಿಸುವ ಮೂಸೆ. ೪. "ಅಕ್ಕಸಾಲೆಯರ ಸಲಾಕೆ" (ಗಂಗಾಮ. ೧೫೬). ೫. ದೇವರ ದೀಪ ಮೊದಲಾದುವಕ್ಕೆ ಉಪಯೋಗಿಸುವ, ಅರಳೆಯಿಂದ ಮಾಡಿದ ಬತ್ತಿ. ೬. ಅರಳೆ ಅಥವಾ ತುಪ್ಪಳ ಮತ್ತು ಅವುಗಳಿಂದ ಮಾಡಿದ ಹಾಸುಗೆ. ೭. ಹಾಸುಗೆಗೆ ಹಾಕಿರುವ ಅರಳೆ ಅಥವಾ ತುಪ್ಪಳ. 'ತೂಲಿಕಾತಲ್ಪ' ಪರಾ. **ತೂಳಿಕೆ$_2$:** ೧. ಚಿತ್ರಿಪೊಡೆ ತೂಳಿಕೆಯುಂ ತರಿಸುವಂ (ಶಮದ. ೨೫೦ ಪ್ರಯೋ). ೬. ಅದಱಿನವಿರಳವಾ ತೂಳಿಕಾ ಭ್ರಮಣಪರಿಗತತೂಳಿಕಾತಳಮಪ್ಪ ಮನಕ್ಕೆ...ಪರಿಣಮಿಸಿದ ಸುಸ್ಥತೆಯುಂ ವ್ಯರ್ಥಂ ಮಾಡದೆ (ಚಂದ್ರಪು. ೪-೧೮). [ ಸಂ. ತೂಲಿಕಾ ]

**ತೂವರ** (ನಾ). = ತೂಬರ$_2$. [ ಸಂ. ]

**ತೂಷ್ಣಿ** (ನಾ). ೧. ಮಾತನಾಡದಿರುವಿಕೆ ; ಮೌನ : ರೋಷವಂ ತಾಳ್ದೊಡೆಯುನಿರೆ ತೂಷ್ಣಿಯಿಂದ ವಿಶ್ವಾಸಿಯುಂ ನುಡಿಸಲೇಕಿವನೆಂದು ಸಲಿಗೆಯಿಂ ಬೇಸರೇಕೆಂದು ದೇವರಿಗೆಂದು ಶಬರಪತಿ ಬೆಸಗೊಂಡನಾ ಭೀಮನ (ತುರಂಗ. ೭೪-೩೫). ೨. (ಕರಾ) ಸಂಕ್ಷೇಪ ; ಸಂಗ್ರಹ : ನೀನು ಹೇಳಬೇಕಾದ್ದನ್ನು ತೂಷ್ಣಿಯಲ್ಲಿ ಹೇಳಿಬಿಡು (ರೂಢಿ).

[ < ಸಂ. ತೂಷ್ಣೀಂ ]

**ತೂಷ್ಣಿಭಾವ** 'ತೂಷ್ಣೀಭಾವ' ನೋ.

**ತೂಷ್ಣೀಂಭಾವ** (ನಾ). = ತೂಷ್ಣಿ ೧: ಆ ಬುಭೂಕ್ಷೆ ಒಳಮಾಡಿಕೆಗಳಲಿ ತು [ ತೂ ] ಷ್ಣೀಂಭಾವವಾಗಿ ದೇವರಾಯಸವು ಆಗಿ ಇಹುದು (ಅರಳು. ೧೮೮-೭). [ ಸಂ. ]

**ತೂಷ್ಣೀಂಭೂತ** (ಗು). ಮೌನವಾಗಿರುವ ; ಮಾತನಾಡದಿರುವ : ಸುಷುಪ್ತ್ಯವಸ್ಥೆ, ತೂಷ್ಣೀಂಭೂತಾವಸ್ಥೆ, ಸಮಾಧ್ಯವಸ್ಥೆಗಳಲ್ಲಿ ರಾಗದ್ವೇಷ ಗಳಿಲ್ಲವಾಗಿ ಕರ್ಮವೂ ಇಲ್ಲ (ವೇಸಾರ. ೬). [ ಸಂ. ]

**ತೂಷ್ಣೀಂಶೀಲ** (ನಾ). = ತೂಷ್ಣೀಕ ೧. [ ಸಂ. ]

**ತೂಷ್ಣೀಕ** (ನಾ). ೧. ಮೌನಸ್ವಭಾವದವನು ; ಮಾತನಾಡದೆ ಸುಮ್ಮನಿರುವ ಸ್ವಭಾವದವನು. ೨. [ಜೈನ] ದೇವಗಣದಲ್ಲಿ ಒಂದು ಬಗೆ : ರಾಕ್ಷಸರುಂ ಯಕ್ಷರುಂ . . . ತೂಷ್ಣೀಕರುಂ ಪವನರುಂ ಎಂದು ಪಿಶಾಚರ್ ಚತುರ್ದಶವಿಧಂ (ತತ್ತ್ವಪ್ರ. ೧೯೩). [ ಸಂ. ]

**ತೂಷ್ಣೀಕರಣ** (ನಾ). ಮಾತನಾಡದಿರುವಿಕೆ ; ಮೌನ. 'ತೂಷ್ಣೀಕರಿಸು' ಪರಾ. [ < ಸಂ. ತೂಷ್ಣೀಂಕರಣ ]

**ತೂಷ್ಣೀಕರಿಸು** (ಕ್ರಿ). ೧. ಮಾತನಾಡದಂತೆ ಮಾಡು ; ಬಾಯಿ ಮುಚ್ಚಿಸು : ಗಹಗಹಿಕೆಯಲಿ ತೂಷ್ಣೀಕರಿಸಿ ಸೌಮಿತ್ರಿ ಮಾಱಾಂತ (ತೊರರಾ. ೬-೩೪-೫೫). ೨. ಸುಮ್ಮನಿರು ; ಮೌನವಾಗಿರು : ಜಿಷ್ಣು ರಕ್ಷಕ ಜಿತೇಂದ್ರಿಯ ಜೀವನಾಧಾರ ತೂಷ್ಣೀಕರಿಸದಱಿಯೆನ್ನ (ಶತಸಾಂ. ೬೨-೬).

[ ತೂಷ್ಣೀಕರಣ + - ಇಸು$_3$ ]

**ತೂಷ್ಣೀಭಾವ,** ತೂಷ್ಣಿಭಾವ (ನಾ).=ತೂಷ್ಣಿ ೧ : ಈ ತೆರದಲ್ಲಿ ದುರ್ಯೋಧನನಿಗೆ ಬುದ್ಧಿಹೇಳಿ ಭೀಷ್ಮನು ತೂಷ್ಣೀಭಾವವನ್ನು ಅವಲಂಬಿಸಿದನು (ಭೀಷ್ಮಚ. ೮೭). **ತೂಷ್ಣಿಭಾವ:** ತೂಷ್ಣಿಭಾವದಲ್ಲಿ ಸುಮ್ಮನೆಯಿರುವ ಧರ್ಮರಾಯನ ಮನೋಭೀಷ್ಟವನ್ನು ತಿಳಿದು (ಶೀಷಧ. ೩-೪).

[ < ಸಂ. ತೂಷ್ಣೀಂಭಾವ ]

**ತೂಳ್**, ತೂಳು$_1$ (ಕ್ರಿ). ತೂಳ್ತು, ತೂಳ್ದು$_2$ (ಭೂತನ್ಯೂ). ೧. ಬೆನ್ನಟ್ಟು ; ಅರೆಯಟ್ಟು : "ಎಟ್ಟಿಟ್ಟೆಂದುಂ, ತೂಳೆಂದುಂ ಅಱಿಯಟ್ಟುವುದೆಂದುಂ ಬೆನ್ನಟ್ಟುವುದು" (ಕಶಸಾ. ೨೮-೫೮೮); "ಎಟ್ಟಿಟ್ಟೆಱಿಯಟ್ಟು ತೂಳಿನುತ್ತುಂ ಸಲೆ ಬೆನ್ನಟ್ಟೆನಲು" (ಕವಿಕಂ. ೨೩೧) ; ಮಸಗಿ ಬಳಾಕಾವರ್ತರ ಬೆಸದಿಂದಂ ಬಂದ ಮೇಘಮುಖರಂ ತೂಳ್ದೋಡಿಸೆ(ಆದಿಪು. ೧೪-೫೮) ; ಬಳಯುತರಂ ಬಟಿಲ್ಚುವ ಲತಾಂತಶರಂಗಿದಿರಾಗಿ ತಾಗಿ ಸಂಚಳಿಸೆ ಪಳಂಚಿ ತೂಳ್ದವನನೋಡಿಸಿ (ಎಕ. II, ೧೦೭-೮೫ ; 1123) ; ಮತ್ತ ಮಾತಂಗವಿಟ್ಟಳಿಸಿದ ಜನಂಗಳಂ ತೂಳ್ದು ಸೀಳ್ದೈದಿ ವಿಸಟಂಬರಿದು ಬರುತಿರ್ದುದು (ಸೌಂದಪು. ೩-೧೪) ; ಕೆಡಪಿದುದೀಳ್ದು ಸೀಳ್ದುದುಱಿ ತೂಳ್ದುದು ಪೋಳ್ದುದು ನೀಳ್ದ ಹಸ್ತದಿಂ ಪಡಿಬಲಮಂ ಮಹಾರಣವಿದಾರಣದಾರುಣ ಮತ್ತವಾರಣಂ (ರಾಜಶೇ. ೬-೮೩). ೨. ಓಡಿಸು ; ಸೋಲಿಸು ; ಹಿಮ್ಮೆಟ್ಟಿಸು : ವೈರಿರಜನೀಸಂಘಾತಮಂ ತೂಳ್ವ ಭಾಸುರಸೂರ್ಯಾಂಶುವೆನಲ್ಕೆ ಸಾಸಿರದ ಮೂನೂರ್ವ್ವರು ಯಶೋಮೂರ್ತ್ತಿಗಳು (ಎಕ. VII, ಶಿಕಾರಿ. ೧೮-೨೦ : 1158) ; ಜ್ಯಾತತರಾತಿ ಮಿಗೆ ಬಳಧೂಳೀತತಿಯುಂ ಗಱಿಯು ಗಾಳಿ ತೂಳ್ವನಿಮಿಷುಸಂಘಾತದಿನಿಸುತಂ ಕೃಷ್ಣನರಾತಿಯು ಬಗೆಗಟ್ಟಿ ತಿಂಬ ಜವನಂತಿರ್ದಂ (ಜಗವಿ. ೯-೨೯) ; ಅಸುರಂ ... ಬಾಱಿಯು ಬನದೊಳ್ಮದಶುಂಡಾಳಂ ಪೊಕ್ಕಂತೆ ಪೊಕ್ಕು ಸಬಳಿಗರಣಿಯುಂ ತೂಳೆ (ಉವ್ಯಟ. ೪-೭೪) : ಸೀಳ್ವನಿಳೆಯುಂ ಕೀಳ್ವನದ್ರಿಗಳನರ್ಕನಂ ತೂಳ್ವಂ (ಜಿಬಪು. ೩೧-೧೦) ; ಆ ಪೊಱ್ತಿಂಗೆ ಮಾಱಾಂತರಿರಾಯುಗುವರನಂ ತೂಳ್ದು . . . ಪ್ರತಾಪಾಗ್ರ್ಯಂ ಮಾರ್ಮಲೆದು ದಮನನಂ ತಡೆದೊಡ್ಡಿ ನಿಲ್ಪಂ (ರಾಮಾಶ್ವ. ೯೦-೨೦). ೩. ಹಿಂದಕ್ಕೆ ಸರಿ ; ಹಿಮ್ಮೆಟ್ಟು : "ತೂಳ್—ಅವಸರ್ಪಣೇ (ಹಿಂತಿರುಗಿ ಓಡು) "(ಶಮಧಾ); ಅಲಘುನಿತಂಬದ ಪೊಯ್ಲೊಳ್ ನೆಲೆಮೊಲೆಯಳ್ಳೇಱಿನೊಳ್ ತರಂಗಂಗಳ್ ತೂಳ್ದಲಱುಗುವುವೞಳ್ಳೇಱಿನೊಳಲಱುಗುಮೆರ್ದೆ ತೆರೆಗಳಳಱಿ ತೂಳ್ವುದು ಪಿರಿದೇ (ಆದಿಪು. ೧೧-೧೪೬) ; ಕಡಲ ಪೊದಟ್ಟಿ ಪೆರ್ದೆರೆಗಳೆಯ್ದೆ ಕುಲಾದ್ರಿಗಳೊಳ್ ಪಳಂಚಿ ತೂಳ್ದೊಡನೆ ಮರಲ್ದಪೋಲ್ ಕೆಡೆಯೆ ಪಾಯಿಸಿದುಗ್ರರಥಂಗಳ್ (ಪಂಪಭಾ. ೮-೯೦); ಅರ್ಕನಳುರ್ಕೆಗೆಟ್ಟು ನಭದಿಂ ತೂಳ್ದಂ (ಪಂಪಭಾ. ೧೦-೨೬) ; ದಿನಕರನೋದಯದೊಳ್ ತಮಮನಿತುಂ ತೂಳ್ದೋಡುವಂತೆ ಮಿಥ್ಯಾತ್ವತಮಂ ದಿನಕರನುದಿ(ದ)ಯಿಸೆ ನಿಜಕುಳವನದಿಂ ತೂಳ್ದೋಡಿ ಕಿಡುವುದೇಂ ವಿಸ್ಮಯಮೋ(ಎಇ. XVI, ೬೧-೩೫ ; 1081). ೪. ಅಡಗಿಸು ; ಪರಿಹರಿಸು ; ನಿವಾರಿಸು : ಕೇಳ್ದು ನೃಪನಾಗಳೊದವಿದ ಮಹಾಚಿಂತೆಯುಂ ತೂಳ್ದು ತನ್ನಾಪ್ತರಂ ಕರೆದು ... ಎನೆ (ಪದ್ಮರಾ. ೪-೫) ; ಪರಶಿವಂ ನೀನೆ ಕಾರುಣ್ಯದಿಂದಂ ಗುರುರೂಪಂ ತಾಳ್ದು ತೂಳ್ದೈ ಭವಮಂ (ವೃಷವಿ. ೨೭-೧೦); ನೋವೆಲ್ಲಮಂ ತೂಳ್ವ ನಿನ್ನ ಸದ್ಧರ್ಮಮನೆ ಮೆಚ್ಚುವೆಂ (ಸಾನಂದ. ೦೨-೧೬). ೫. ಸೆಳೆ ; ತೂಗು : ನನೆಯಂಬಂ ತೊಟ್ಟು ಕಾಮಂ ಮುಳಿದು ನರಪನಂ ನೋಡಿ ... ಕಾಮಿನಿಯುಂ ಶ್ಯಾಮಾಂಗಿಯುಂ ಮತ್ತೆನಿಸದೆ ಮಱಿಗೊಂಡಿರ್ದ ತೂಳ್ದೆಚ್ಚನಾಗಳ್ (ಧರ್ಮಾಮೃ. ೧೦-೨೯); ಕೂರಲಗಿಂ ಗಿಱ್ಱನೆ ತೂಳ್ದು ಬೇಗಮಿಱಿದಪಂ (ಧರ್ಮಾಮೃ. ೦೩-೦೦೮). ೬. ಹರಡು ; ಹೊರಹೊಮ್ಮು : ತುಂಗದಿರ್ವಟ್ಟನಿಂಗದಿರ್ದೊಂಗಲಂ ಪಿಂಗದೆ ಕಡಿದು ಕಂಡರಿಸಿ ಕರುವಿಟ್ಟು ಪೊಂಗಿ ತೂಳ್ವ ಬೆಳ್ವೆಳಗನುಗುಱ್ವಳೆಮುತ್ತಿನ ಮುಡುವೆಟ್ಟುಗಳಿಂ (ಉದ್ಭಟ. ೯-೩೧೮). **ತೂಳು$_1$:** ೧. ತೈಲ ಮರ ಕಲುಗುಂಡ ಸುರಿವುತ ತೂಳಿದರು ಕಪಿಭಟರು . . . ಕುಂಭಕರ್ಣನು ತೂಳಿದನು ಪಡೆಯ (ಕಾಶಿರಾ. ೨೫-೧೦). ೨. ತುಳಿಸಿದನು ತೂಳಿದನು ಹಿಡಿದನು . . . ರಕ್ಕಸ ಹಿಳುಕಹಿಳುಕನು ಹಳಚುತಿರ್ದನು (ಕಾಶಿರಾ. ೩೧-೧೪) ; ಕೈ ಮಾ ಡು ವ ನಿ ಶಾ ಚ ರ ರ ತೂಳಿದನು (ತೊರರಾ. ೬-೩೩-೨೪) ; ಆಸ್ಥಾಯಿಕೆಯೊಳಱಿದವರೆಂದರಾತನ ಸತ್ವಸಾಹಸದಂದವನು ... ಖಚರೇಂದ್ರವಿಂಧ್ಯಾವೃಷಭವನು ತೂಳಿದ ಪರಾಕ್ರಮದ (ಸಾಳ್ವಭಾ. ೨೨-೨೬) ; ಬಲಖಳನಾಗ ಖಚರರ ತೂಳಿ ಪೊಕ್ಕನು (ಅಂಬಿಕಾ. ೧೪-೧) ; ಆಳು ಮತ್ಸರದಿಂದ ತೂಳಿದರು ಹೂಳಿದರು ಸೀಳಿದರು ರಿಪುಬಲವನು (ತುರಂಗ. ೪೬-೨೯). ೪. ಮಾನಸದಂಧಕಾರವ ನೆಱಿ ತೂಳುವ ಭಾನುಮುನಿಗೆ ನಮಿಸುವೆನು

(ಅಂಜನ. ೧-೬೫) : ಈ ಲೋಕಾವಳಿಯೆಲ್ಲ ಮಾಡಿದ ಮಹತ್ಪುಣ್ಯಂಗಳೊಗ್ಗೊರ್ಡಿಯುಂ ತೊಳಲ್ಕಾಱದ ಪಾತಕಕ್ಕೆ ನೆಲೆಯಪ್ಪೆನ್ನಂ ಸಮುತ್ತಾರಿಸಲ್ (ವಸ್ತುವಂ. ೨-೧೨). ೫. ವೀರರು ತೊಳಿದರು ಕಣೆಯ (ಕುಮಾ.ಭೀ. ೪-೧೩) ; ಅಮರಗಿರಿ ತಱತೆಱಿಸೆ ತೂಳಿದರಸ್ತ್ರಶಸ್ತ್ರದ ಹೊಱಿಗೆಯಲಿ (ತೊರರಾ. ೩-೬-೮); ತೊಳುವ ಗುಂಡುಗಲ್ಗಳ ರಾಸಿ ಪಟ್ಟಣದಾಳುವೇರಿಯ ತುಂಬಿಹುವು (ಕಂನವಿ. ೬-೨೦). ೬. ಏಳುತಿತ್ತಿದನುಗ್ರ ವಿಕೃತ ಕರಾಳಶಕ್ತಿಯನುರಿ ಚಡಾಳಿಸಿ ತೂಳಿತಂಬರತಳವ (ತೊರರಾ. ೬-೨೭-೫೦); ತೂಳಿದೀ ಸಂಶಯವಿಪರ್ಯಾಸವನು ನೆಱೆ ಕೆಡಿಸಿ (ಅಮೃತ. ೧೦-೬೫) : ತೊಳುತಿರೆ ಭೇರಿಗಳ ಧ್ವನಿಯು ದಿಗ್ವಾಲಮಂ (ದುರವು. ೧೫-೪). ೭. ಉಬ್ಬು ; ಉಕ್ಕು : ದುರ್ಮುಖಿ ಸುಮುಖರೆಂಬುವರು ತೊಳುವಬುಧಿಯ ಸಬುದದವೊಲುಬ್ಬೇಳುವಗ್ಗದ ಗಾಢಿಕೆಯು ಕಟ್ಟಾಳುತನವನು ಮೆಱೆದರಿದಿರಲಿ ರಾಘವೇಶ್ವರನ (ತೊರರಾ. ೬-೪-೯). ೮. ತಳ್ಳು; ದಬ್ಬು; ನೂಕು: ತುಡುಕಿ ತೊಳುವ ಸೂತ್ರಯಂತ್ರದ ಗಡಣದಲ್ಲಿ ಗತಿಗೊಂಡು ಬೇಡಿತ ಕೊಡುವ ಮಣಿಪುತ್ರಿಕೆಗಳೆಸೆದವು (ತೊರರಾ. ೧-೦೩-೧೦) ; ದಳಪತಿಯಾಗ ಮೇಳೈಸಿ ಬಲವ ಕಗ್ಗೊಲೆಯ ಕಾಳಗಕಂದು ತೂಳಿದನೇನ ಬಣ್ಣಿಸುವೆ (ಕಂನವಿ. ೧೬-೭೯). ೯. ಒತ್ತರಿಸಿ ಬರು ; ನೆಂಗ್ಗು : ಆಳು ಹೊಕ್ಕುದು ದಂತಿಘಟೆಗಳು ತೂಳಿದವು (ಕುಮಾ.ಭೀ. ೯-೦೫); ತುಱುಗಿ ತೂಳುವ ಮತ್ತವಾರಣದುಱುಬೆಗಾಱದೆ ವೀರಹನುಮನ ಮಾಱಿಯ ಹೊಕ್ಕುದು ಭೂರಿವಾನರಸೇನೆ (ತೊರರಾ. ೬-೩೨-೯); ಮದಕರಿಗಳ ಸಾಲ ಪಟಗಳೆನಪ್ರಭೆಯ ತೂಳಗೊಡದೆ ಮುಸುಕಲು ರಾಹು ಪರ್ವದೊಲ್ ಮೇಳೈಸಿತು ತಮ ಜಗಕೆ (ಕಂನವಿ. ೧೯-೪೪) ; ತೊಳುತಿಹ ದಶವಾಯು ಬಂಧದಿ ಮೇಳವಿಸಿ ಪೊಱಪಡಿಸುತಿಹ ನವನಾಳಮಂ...ತಾಳಿ (ಶಂಕರದಾ. ೩-೮೦). ೧೦. ಅಲ್ಲಾಡಂ ; ಚಲಿಸಂ : ತುಱುಗಿ ತೂಳುವ ಸಿಂಧ ಸೆಳೆ ಮುಡಲಿಱಿವ ಝಲ್ಲರಿ (ಕುಮಾ.ಕ. ೩-೧೩) ; ತೋಳ ಗಾಳಿಗೆ ತೂಳಿದವು ಸೌಧಾಳಿ (ತೊರರಾ. ೬-೧೦-೨೬). ೧೧. ಹೆಚ್ಚಿಸಂ ; ಬೆಳೆಸು ; ವೃದ್ಧಿ ಪಡಿಸಂ : ಕೋಪವನು ಕೊನರಿಸುವ ನೃಪರನುತಾಪವನು ತೂಳುವ ಕುಬುದ್ಧಿವ್ಯಾಪಕನ ನೀ ವೈರಿಯಲ್ಲದೆ ಭೀಮನಲ್ಲೆಂದ (ಕುಮಾ.ಗ. ೮-೪೦). ೧೨. ಹೆಚ್ಚು ; ವೃದ್ಧಿಹೊಂದಂ : ಕೇಳಿ ತಲೆದೂಗಿದನು ಮೂಗಿನ ಮೇಲುವೆರಳಿನ ಹೊತ್ತ ದುಗುಡದ ತೂಳಿದುಬ್ಬೆಯ ನಟ್ಟ ನೋಟದ... ಹುದಿದ ಭಾವದಲಾಲಿಸಿದನಸುರಾರಿ ದೂತವ್ರಜದ ಬಿನ್ನಪವ (ಕುಮಾ.ಆ. ೨-೨); ಎಳನೇಸಱಿನವೊಲು ರಂಜಿಸುವ ರತ್ನಪ ತುಱುಗಿ ತೂಳುವ ಹರುಷ ಪುಳಕದಿನಿತ್ತನನುಜಂಗೆ (ತೊರರಾ. ೫-೯-೩೦). ೧೩. ಆವರಿಸಂ : ತೂಳುವಂತಸ್ತಾಪ ತಗ್ಗಿದುದು (ನಿಘಾಗ. ೧೦-೫೪-೧೦).

[ ದೇ.೫ ತಮಿ. ತುವಳ್=ನಡುಗು; ತೆಲು. ತೂಲು; ಕೊಲಾ. ಪರ್ಜ. ತೂಲ್; ನಾಯ್ಕಿ. ತೂಳ್ ]

**ತೊಳ್**$_1$, **ತೂಣ**$_1$, **ತೂಳ್ಳು**$_2$ (ನಾ). ೧. ಪರವಶತೆ ; ಆವೇಶ ; ಉನ್ಮಾದ : ತೂಳ ಬರೆ ಕುಣಿದುದು ಕಬಂಧದ ಜಾಲದೊಡನೆ ಪಿಶಾಚಗಣ (ಕುಮಾ.ಭೀ. ೫-೩೫) ; ಕಾಳಗದೊಳು ಬೊಮ್ಮ ಜಟ್ಟಿಗ ಬೀರ ಭೇತಾಳ ಶಾಕಿನಿ ಡಾಕಿನಿಯರ ತೂಳದೆ ಹೊಯ್ದಾಡಿ ಜೃಂಭಿಸಿ ಗಗನಾಂತರಾಳದಿ ಬೊಬ್ಬಿಕ್ಕುತಿಹರು (ಮೋಹತ. ೨೯-೧೦) ; ತಾಳಿ ಸುರರೆಂದು ದುವ್ವಾಳಿಸುತೆ ವಂದಿರವದೋಳಿ ಸುತ್ತಲ್ ಮುಸುಕೆ ತೂಳದಿಂ ಹರಿ ನಡೆದನು (ಜೆಬಪು. ೩೦-೫೫) ; ತೂಳದ ಭಕ್ತಿಯು ವ್ರತವು ಶೀಲಂಗಳ ಮೇಳೈಸುತ ಮನದೊಳಗೆ (ಅಮುಸಾಂ. ೪-೧೧೬). ೨. ದೆವ್ವ, ಭೂತ ಮೊದಲಾದುವು ಮೈಮೇಲೆ ಬರುವುದು; ಭೂತಾವೇಶ: ನಟ್ಟಲಗಂ ಪಿಡಿದು ಬಿಟ್ಟ ತಲೆವೆರಸು ತೂಳಂ ಬಂದಂತೆ ಬೊಬ್ಬಿಱಿದು ಪರಿವಬ್ಬರಗಲಿಗಳುಮಂ (ಲೀಲಾವ. ೫-೧೩೪) ; ಇದು ಮೋಹನದೇವತೆಯಾವೇಶದೊಳೊದವಿದ ತೂಳವೊ...ಎನಲೊಪ್ಪಿದುದಾ ಸುದತಿಗೆ ಸುಕುಮಾರನ ಕುವರನ ಮೊಗಮಂ ಕಾಣುತವೆ

(ಜಯಕಾ. ೪-೧೯). ೩. ಅತ್ಯಾಸಕ್ತಿ; ಉತ್ಕಂಠೆ: ಇಷ್ಟಲಿಂಗ ತೂಳದಿಂದ ಎಷ್ಟು ದೋಷ ದುರಿತಗಳನು ಬಿಟ್ಟು ಓಡಿಸುವೆನು (ಶಿವಗೀ. ೧೫೬-೭೫); ಬಾಲೆ ಕಾಂತನ ಕಿವಿದೆಱಪಿಗೆ ಪುಳಕಕೆ ತೂಳವೆತ್ತಿದಳು (ಪರ್ವಹ. ೫-೮೯) ; ತೂಳವೇತಕೆ ರಮಣಿ ನಿನಗದ ಕೇಳಿದಲ್ಲದೆಯಶನವಿಳಿಯದೆ (ಶಂಕರದಾ. ೭-೫೯). ೪. ಉತ್ಸಾಹ : ಹಸ್ತದೊಳಗೆ ಪೂಜಿಸು ನಮ್ಮನುಯೆಂದು ವಿಸ್ತರಿಸಿದನು ತೂಳದಲಿ (ಮಾದೇಸಾಂ. ೨-೪೦). **ತೂಣ**$_1$: ೧. ವಿಕಟಾಸವಮಾಂತೊರೆಯ ತೂಣಂ ಬಿರಿದೆನ್ನ ತುಟವರಿಯೆ ತಿರೆಯದಂ ಕೇಳೆ (ಗಿಳಿವಿಂ. ೯-೦೨೩). **ತೂಳ್ಳು**$_2$: ೧. ರಣದೊಳುಭಯವೀರರ್...ಕೂರಲಗಿನಿಂ ತೂಳು ವೆದ್ದಿಱಿದಾಡುತಿರ್ದರತಿ ಖಾತಿಯಿಂ (ಚೆಬಪು. ೨೬-೧೪).

**ತೂಳದವರು** = ಉನ್ಮಾದಸ್ವಭಾವದವರು ; ಆವೇಶವುಳ್ಳವರಂ : ತೂಳದವರ ಮಾತ ಕೇಳಿ ಖೂಳರೆಲ್ಲರು ಕೂಡಿಕೊಂಡು ಹಾಳುಮಾಡಿ ಕೈಯಲಿದ್ದ ಹೊನ್ನು ಹಣಗಳ (ಕನಕ. ೧೪೨-೩). [ ←ತುಳು. ತೂಳ ]

**ತೊಳ್**$_2$ (ನಾ). ದಪ್ಪ ; ತೋರ: "ತೂಳ-ಸ್ಥೂಲ=ದಪ್ಪ, ತೋರ" (ತದ್ಭಕೋ. ೧೮); ಸಕಾರದೊಡನೆ ಕೂಡಿದ ಥಕಾರಕ್ಕೆ ತಕಾರಂ . . . ಸ್ಥೂಲ-ತೂಳ (ಶಮದ. ೨೫೭ ಪ್ರಯೋ). [ < ಸಂ. ಸ್ಥೂಲ ]

**ತೊಳ್**$_3$ 'ತೂಲ' ನೋ.

**ತೊಳಕ** 'ತೂಲಕ' ನೋ.

**ತೊಳಗ, ತೂಳಿಗ** (ನಾ.) ೧. ಆವೇಶ ; ಉನ್ಮಾದ : ಶ್ರೀಕಾಂತನ ತೂಳಗವಂ ಲೋಕದೊಳಾರಾದಡಱಿದು ನಿಲ್ಲಿಸಿದೊಡೆ . . . ಆ ಕಾರಣ ಪುರುಷನಡಿಗೆ ಮಣಿದಪೆಂ (ಹಮ್ಮೀರ. ೭-೬). ೨. = ತೂಳ್$_1$ ೨: ತೂಳಗ ಬಂದವನಂತೆ ಭೂತ ಸೋಂಕಿದವನಂತೆ . . . ಮನ್ಮಥನ ಪರವಶನಾಗಿರುವ ಬಗೆಯನು ಕಂಡು (ವಡಕಾ. ೨೭). **ತೂಳಿಗ**: ೩. ದಂಬಾಚಾರ ; ಸೋಗು ; ಬೂಟಾಟಿಕೆ : ಜಾಳುಮನುಜರು ಒಡಲ ಪೊಱೆವರು ತೂಳಿಗವ ಮಾಡಿ (ಕಾಲಸಂ. ೩೪-೧೯). ೪. ಆವೇಶ ಬಂದಂತೆ ನಡೆಯುವವನಂ ; ಮನಸ್ಸು ಬಂದಂತೆ ವರ್ತಿಸುವವನಂ : ನರಸಿಂಹ ನಾಮದ ಅರಸು ನರಬೇಂಟೆ ಹೋದ ಧರೆಯೊಳು ತೂಳಿಗರು ಹಿರಿದು ಹೆಚ್ಚುವರು (ಶರಲೀ. ೫೦೦-೧೩). [ < ತೂಳ್$_1$ ]

**ತೊಳತಲ್ಪ** 'ತೂಲತಲ್ಪ' ನೋ.

**ತೊಳವೇಳಿಸು** (ಕ್ರಿ). ಮೈಮರೆಯುವಂತೆ ಮಾಡು ; ಪರವಶತೆಯನ್ನುಂಟುಮಾಡು : ಸಕ್ಕರೆವೆರಸಿದ ಚಿಲಿಪಾಲಿನಂತೆ ವರಕವಿ ಗೌರನ ವಚನ ಕೇಳುವ ರಸಿಕರ ತೂಳವೇಳಿಸುತಿಹುದು (ಮೋಳಿಪು. ೨-೨).

[ ತೂಳವೇಳು + – ಇಸು$_3$ ]

**ತೊಳವೇಳು** (ಕ್ರಿ). ೧. ಆವೇಶಗೊಳ್ಳು ; ಮೈಮರೆ : ತೂಳವೆದ್ದಲ್ಲಲ್ಲಿ ಜನಗಳು ಕುಣಿವುದ ಹೇಳಲಳವೆ (ಭರತ. ೪೦-೧೧೧) : ಲೀಲೆಯಿಂದುಸುರ್ದ ಪುರಾಣ ರಾಯಗೆ ತೂಳವೇಳುವಂತೆಂದು ಮೇಲ್ಗತಿಯ (ಮೋಳಿಪು. ೨-೧೧೬). ೨. ದೆವ್ವಹಿಡಿ; ಪಿಶಾಚಿ ಹಿಡಿ: ಒಬ್ಬ ತೂಳವೆದ್ದಂತಾಡುತಿರ್ದ (ಭರತ. ೫೩-೪೩). [ ತೂಳ್$_1$ + ಏಳು$_1$ (< ಏೞ್$_1$) ]

**ತೊಳಿಕೆ**$_1$ (ನಾ). ಎಸೆತ ; ಹೊಡೆತ ; ಬಡಿತ : ಕಾಳರಕ್ಕಸನುಗ್ರಪರಿಘದ ತೂಳಿಕೆಯ ತೋಟಿಗಳ ಧಾಳಾಧೂಳಿ ತುಂಬಿತು ಕಡೆಗೆ ಕಮಲಭವಾಂಡ ಮಂಡಲವ (ತೊರರಾ. ೬-೧೭-೩೫) ; ನಿಶಿತಕೋಪಜ್ವಾಲೆಯಲಿ ತಜ್ಜ್ವಲನ ಸುತ ನಿಂದನು ಸುದರ್ಶನದ ತೂಳಿಕೆಯ ಸರಿಸದಲಿ (ತೊರರಾ. ೬-೩೨-೩೩).

[ ತೂಳ್ + – ಇಕೆ ]

**ತೊಳಿಕೆ**$_2$ 'ತೂಲಿಕೆ' ನೋ.

**ತೊಳಿಗ** 'ತೂಳಗ' ನೋ.

**ತೊಳಿಸು** (ಕ್ರಿ). ೧. ಓಡಿಸು ; ಹಿಮ್ಮೆಟ್ಟಿಸು : ಬಾಣದ ಹೊಗೆಯಲಿ ರಿಪುಗಳ ತೂಳಿಸಿಕೊಂಡೇಣಾಂಕವಂಶಸಂಭವನು ... ಮಾಣದಿಱಿದ ರಿಪು

ಬಲವ (ಕಂನವಿ. ೩-೭೪) ; ತೂಳಿಸಿದ ದಶಲಕ್ಷವನು . . . ದೈತ್ಯನು (ಕೋಗಯು. ೨-೬೫). ೨. ಮುಂದಕ್ಕೆ ನುಗ್ಗಿಸು,— ಹಾಯಿಸು : ಜೋದರಾನೆಯ ತೂಳಿಸಲಿ ಸಮರಥರು ಸರಳಿಸಿ ಎಂದನಾ ಭೂಪ (ಕುವ್ಯಾಗ. ೫-೪೨); ತೂಳಿಸಿದರಾನೆಯುಂ ಜೋದರುರವಣಿಸಿ (ಜೈಮಿಭಾ. ೨೨-೭) : ರಾಯರಾವುತರು ತೂಳಿಸಿ ಕುದುರೆಗಳನು ಭೋಯೆಂದು ಬೊಬ್ಬಿಱಿದೇಱಿ . . . ಸಾಯಲಿಱಿದರು (ಕಂನವಿ. ೧೭-೫೨). ೩. ಮುಂದಾಗು ; ತಾನಾಗಿ ಮುಂದೆ ಬರು : ತೂಳಿಸಿ ಮೋಹವ ಕಾಣಿಸುವುದು ಪ್ರೌಢಲೋಲಾಕ್ಷಿಯರ ಮತವಲ್ಲ (ಕಂನವಿ. ೯-೧೫೬). ೪. ಪ್ರಯೋಗಿಸು ; ಹೊಡೆ : ತೂಳಿಸುವ ಬೆಂಗೊಡತಿಗಳ ಸಿಟ್ಟೇಳಿಸುವ ನಿಶಿತಾಂಕುಶದ ವಿಕರಾಳ ಮದಕರಿ ಮೆಱೆವುತಿರ್ದುದು ರಣದ ಸೊಬಗಿನಲಿ (ತೊರರಾ. ೬-೨೯-೨೦) ; ತೂಳಿಸು ಪೆಟಲಗುಂಡುಗಳನೆಂಬಸುರರ ಕೋಳಾಹಳವೊಪ್ಪಿತು (ಕಂನವಿ. ೧೪-೫). ೫. ಉದ್ದೀಪಿಸು; ಹೆಚ್ಚಿಸು; ಅಧಿಕಗೊಳಿಸು : ಮೇಲೆ ಮಾತಿನ್ನೇಕೆ ವಂಶವಿಶಾಲವೈಭವವೆನ್ನದೈಸಲೆ ತೂಳಿಸಗ್ನಿಯನೊಟ್ಟಲಿಂಧನವೆಂದಳಿಂದುಮುಖಿ (ತೊರರಾ. ೬-೫೩-೮೫).
[ ತೂಳ್ + – ಇಸು$_3$ ]

**ತೂಳು$_1$** ‘ ತೂಳ್ ’ ನೋ.

**ತೂಳು$_2$** ‘ತೂಳ್$_1$’ ನೋ.

**ತೂಳುಕಾರ** (ನಾ). (ಯುದ್ಧದಲ್ಲಿ) ಆಕ್ರಮಣ ಮಾಡುವವನು,– ಮುನ್ನುಗ್ಗುವವನು : ಹೇಳಲೇನದನಾ ಕ್ಷಣಾರ್ಧದಿ ಬೀಳುಕೊಟ್ಟನು ಕಾಲನಗ್ಗದ ಕಾಳದೇಹದ ತೂಳುಕಾರರ ಘೋರವಿಗ್ರಹರ (ಅಂಬಿಕಾ. ೪-೩೦). [ ತೂಳು$_1$ (< ತೂಳ್) + – ಕಾರ$_1$ (< – ಕಾಱ) ]

**ತೂಳುವಱೆ** (ನಾ). (ಯುದ್ಧಕಾಲದಲ್ಲಿ) ಆಕ್ರಮಣದ ಸೂಚನೆಯನ್ನು ನೀಡುವ ಒಂದು ಬಗೆಯ ವಾದ್ಯ ; ರಣವಾದ್ಯ : ತೂಳುವಱೆಗಳು ಗಜಱಿದವು ತಂಬಟದ ಲಗ್ಗೆಯಲಿ (ಕುವ್ಯಾದ್ರೋ. ೩-೭); ತಳುವದವರ ಮೇಲೆ ನಡೆದನು ಮಗ್ಗ ಹೊಯ್ಸಳ ತೂಳುವಱೆ ಮೊಳಗುತಿರೆ (ಕುರಾಸಾಂ. ೧೩-೩೭); ತೂಳುವಱೆಗಳ ರವಂ ತುಂಬಿತಾಶೆಗಳಂ (ಚಬಪು. ೩೮-೨೨).
[ ತೂಳು$_1$ (< ತೂಳ್) + ಪಱೆ$_1$ ]

**ತೂಳೆ** (ನಾ). ಅರಳೆ : ನವಮಣಿಮಂಚದಿಂದೆ ಮಿಸುಪಂಚೆಯ ತುಪ್ಪುಟ ತೂಳೆಯಿಂದೆ ... ಎಸೆದಿರ್ದ ಸೆಜ್ಜೆಯೊಳ್ ಪವಡಿಸಿ (ಪುಷ್ಪಪು. ೯-೯೭).
[ ಸಂ. ತೂಲ ]

**ತೂಳ್ತರು** (ಕ್ರಿ). ಆವೇಶದಿಂದ ಬರು ; ಮುನ್ನುಗ್ಗು : (ಓಡಿಹೋಗಿ, ಬಾಗಿಲ ಹೊರಗೆ ಪರೀಕ್ಷಿಸಿ, ತೂಳ್ತಂದು, ತವಕಿಗತನದಿಂದ ಆ ಚೀಲಗಳನ್ನೆತ್ತಿ ತೂಗಿ ತೂಗಿ ನೋಡಿ ಬಾಯ್ಕಟ್ಟಿನ ದಾರಗಳನ್ನೆಳೆಯುತ್ತಿರುವರು) (ಬೆಟ್ಟಅ. ೫೪-೨೦). [ತೂಳ್ + ತರು$_1$ (<ತರ್) ]

**ತೂಳ್ತು** ‘ತೂಳ್’ ಪರಾ.

**ತೂಳ್ದು$_1$** (ಕ್ರಿ). ೧. ಅಟ್ಟು ; ಓಡಿಸು ; ಬೆನ್ನಟ್ಟು : ತಾಪಸರು ಬೆರ್ಚಿಸಿ ತೂಳ್ದಿ ಬೇ[ಳ್ವ]ರಣೆಯುಂ ಕೊಂಡಾಶ್ರಮಕ್ಕಿಂತು ಬೇವಸಮುಂ ಮಾಡುವುದಾಯ್ತುದೊಂದು ವಿಭವಂ ಮತ್ತೇಭವಿಕ್ರೀಡಿತಂ (ಪಂಪಭಾ. ೮-೩೭) ; ಸದೋಷನಿಮ ದಲಸ್ಮದಾರಾಧನವಿಘ್ನಕಾರಿರಿಪುವೆಂದಸಿಖೇಟಹಸ್ತೆ ತೂಳ್ದಿದಳ್ (ಶಾಂತಿಪು. ೯-೬) ; ಆರ್ಮಯ್ದೋರ್ಪರಾರ್ಮಲೆವರಾರ್ ಪೊಣರ್ವರಾರ್ ತೂಳ್ದುವರಾರವಂ ಜವನೆ ದಲ್ ತಾನೆಂದು (ಶಮುದ. ೧೫೦ ಪ್ರಯೋ). ೨. ಓಡು ; ಹಿಂದಕ್ಕೆ ಸರಿ ; ಹಿಮ್ಮೆಟ್ಟು ; ಪಲಾಯನ ಮಾಡು : ಭೀತಿಯಿಂ ಮಱುಗಿ ತೆರಳ್ದು ತೂಳ್ದಿ ಸುಟಿಗೊಂಡುದು ಪಾಂಡವಸೈನ್ಯಸಾಗರಂ (ಪಂಪಭಾ. ೧೨-೩೦) ; ಹುತವಹ ಬಾಣದಿಂದಮಿಸೆ ತೂಳ್ದುದು ವಾನರಸೇನೆ (ಗದಾಯು. ೦-೨೪). ೩. ನಿವಾರಿಸು ; ಪರಿಹರಿಸು : ಪಸರಿಸಿದ ಕುತೀರ್ಥಧ್ವಾಂತಮುಂ ತೂಳ್ದಿ . . . ಅರ್ಕಂಬೊಲುದ್ಯೋತಿಸುಗೆ ಸಕಲಧಾತ್ರೀಚಕ್ರದೊಳ್ ಧರ್ಮಚಕ್ರಂ (ಅಜಿಪು. ೧-೧೭) : ಮೇಣ್ವಾರುಣಾಗ್ನೇಯಮಂಡಲವೇಳಾಕ್ರಮವೊಂದಿ ಸಂಭವಿಸಿದುತ್ಪಾತಂಗಳಂ ತೂಳ್ದುಗುಂ (ಲೋಕೋಪ. ೪-೮೭) : ಖೇದಮುಂ ಕ್ಷಣದೊಳೆ ತೂಳ್ದಿ ತಾಳ್ದುವುದು ಪಿಂಗದೆ ಪುತ್ರ ಸಮಸ್ತಧಾತ್ರಿಯುಂ (ಚಂದ್ರಪು. ೪-೧೯) ; ಮುನಿನಾಥಾ ಭವದೀಯ ದಿವ್ಯವಚನಂ ತೂಳ್ದಿತ್ತು ಸರ್ವಾರ್ಥಸಂಜನಿತ ಭ್ರಾಂತಿಯುಂ (ಮಹಾನೇ. ೨-೪೫). ೪. (ಪರಮತವನ್ನು) ಖಂಡಿಸು : ಅಭಿನವಗಣಧರರೆನೆ ದಿವ್ಯಭಾಷೆಯುಂ ತಾಳ್ದಿ ಕುಮತಮುಂ ತೂಳ್ದಿದರಂ ಶುಭಕೀರ್ತಿದೇವರಂ ... ಪೂಜ್ಯಪಾದರೆನ್ನದರೊಳರೇ (ಪಂರಾಮಾ. ೧-೨೦). ೫. ತೀರಿಸು ; ಮುಗಿಸು : ತೂಳ್ದಿ ಪಿತೃಗಳ ಋಣಮುಂ... ಪಾರ್ವರಂ ಮನ್ನಿಸಿದಂ (ಚಿಕವಿ.೪-೮೨) ೬. ನಂದಿಸು ; ಆರಿಸು ; ತವಿಸು : ಶಂಭುಜೂಟದೊಳಾಂತಂ... ತತ್ಸಿಂಧುಬಂಧದ ನೀರೆಲ್ಲಮನೊಂದು ಮುಕ್ಕುಳೊಳೆ ತಂದಾ ವಹ್ನಿಯುಂ ತೂಳ್ದಿದಂ (ಜಗವಿ. ೧೮-೫). ೭. ತಡೆಯಿಲ್ಲದೆ ಸಂಚರಿಸು ; ಮುನ್ನುಗ್ಗು : ಕನಕಾಂಭೋಜರಜಂ ನಿಜಾಂಗರುಚಿಯುಂ ಕನ್ನೆಯ್ದಿಲಿಂದಂ ಕಟಲ್ದಿನಿಸಂ ತೂಳ್ದಿ ತೆರಳ್ದಿಸಟ್ಟಿಯನಮುಂ ಕಂಪಂ ಕೊಳಲ್ಬರ್ಪ ಭೃಂಗನಿಕಾಯಂ ನಿಜಕೇಶಪಾಶರುಚಿಯುಂ ಕೈಕೊಳ್ವಿನಂ ಮೆಲ್ಲಮೆಲ್ಲನೆ ನೋಟಕ್ಕೆ ಸದೇಹಮಾಗಿ ಸುಟಿಯುತ್ತಿರ್ಕುಂ ವಿದೇಹಾನಿಲಂ (ಆದಿಪು. ೧-೬೨); ಪಟ್ಟರ್ಕ್ಕವೀಧಿಗಳೊಳ್ ತೂಳ್ದಿತು ಗೋಪಣನ್ದಿದಿಗಿಭ ಪ್ರೋದ್ಭಾಸಿಗಂಧದ್ವಿಪಂ (ಎಕ. II, ೬೯-೪೬ ; 1100). ೮. ಹೆಚ್ಚುಮಾಡು ; ಅಧಿಕಗೊಳಿಸು : ತಾಳ್ದಿದ ವಿರಹದೊಳೇಕೆಗೆ ಬೆಳ್ದಿಂಗಳ್ ಬಿಳಿಯ ಕಿರ್ಚು ಸಸಿಬಿಸಿ ಕಾವಂ ತೂಳ್ದುವ ದಾಮಂ (ಗಿರಿಕ. ೪-೧೦೭). [ <ತೂಳ್ ]

**ತೂಳ್ದು$_2$** ‘ ತೂಳ್ ’ ಪರಾ.

**ತೂಱ್** ‘ತೂಱು’ ನೋ.

**ತೂಱಲ್, ತೂರಲ್, ತೂಱಲು** (ನಾ). ೧. ದೂರ ಹರಡಿರುವುದು; ಚೆದರಿಕೊಂಡಿರುವುದು : “ತೂಱಲ್—ದೂರ ಪೋದುದು” (ಚತುನಿ. ಕ. I, ೭೭). ೨. ತುದಿ ; ಅಗ್ರ : ನಿನ್ನೊಡವರಲ್ ರೌದ್ರಾದ್ರಿದುರ್ಗಂ ಜಲಾಶ್ರಯಮಾ ಬೆಟ್ಟದ ತೂಱಲನ್ಯವಿಷಯಂ ಪಾತಾಳಮೆಂಬೀ ಮಹಾಭಯಸಂದೋಹಮಿಮೆಂತುಮೆನ್ನ ಮನಮಂ ಪೇಟಂಜಿಸಲ್ಕಾರ್ಪುವೇ (ಶೃಂಗಾರ. ೧-೫೫); ತೂಱಲ ಸೆಳ್ಳಗೊಂಬುವರಂ ನನೆ ಪೇಱಿದ ಮಾವು (ಅನಂಪು. ೧-೭೮). **ತೂರಲ್ :** ೧. ದೂರದ ಕವಿತೆಯ ಝಳಂಬದಾ ತೂರಲ ಕೆಳ್ಸರಗಂ ಮಿಳಿರ್ಚೆ ಬಂದೇರುವ ಮೆಲ್ಲೆಲರ ಶಕ್ತಿಯುಂ ನೇರರಿಪಲ್ ಪ್ರತಿಭಾನವೆಂದಪರ್ (ಸಂಸಪ. ೪೯-೯೭). **ತೂಱಲು :** ೧. ‘ತೂಱಲುಗೊಂಬು’ ಪರಾ.

ತೂಱಂತುದಿವಟ್ಟೆ = ಅತ್ಯಂತ ಎತ್ತರದಲ್ಲಿರುವ ಮಾರ್ಗ,–ಹಾದಿ : ನಟ್ಟಿರುಳೊಳ್ ತೂಱಂತುದಿವಟ್ಟೆಯೊಳೆಡೆಯಾಡುತಿರ್ಪನೆಂದತಿಭಯದಿಂದಿಟ್ಟಳೊ ರೋಹಿಣಿ ರಕ್ಷೆಯ ಬೊಟ್ಟಂ ಕಾಡಿಗೆಯೊಳಿಂದುವೆನಿಸಿತ್ತಂಕಂ (ಮಹಾನೇ. ೧೪-೫೪). **ತೂಱತುದಿಗೊಂಬೆ** = ತೂಱಿಲ್ಗೊಂಬು ೧ : ತೂಱತುದಿಗೊಂಬೆಯನು ಏಱಿಪ್ಪ ಶಿವಯೋಗಿ ಬೇಱೊಂದು ಬಯಸಿ ಹರಿದರೆ ಬೆಳಗಾಗಿ ಸೂಱೆ ಹೋದಂತೆ (ಸರ್ವಜ್ಞ. ೪೪೯). **ತೂಱಲ ತುದಿ** = ಅತ್ಯಂತ ಕೊನೆ ; ತಂಟ್ಟತುದಿ : ಖಚರರನಡರ್ದೇಱಿಸುವೆನೊ ಮೇರುಗಿರಿಯ ತೂಱಲ ತುದಿಯಂ (ಗದಾಯು. ೬-೧೭) ; ನೀನೇಱಿ ಜರಾಸಂಧಭಯದೆ ಗಿರಿದುರ್ಗಮನಾ ತೂಱಲ ತುದಿಯೊಳ್ಕೇದಗೆಯೇಱಿದ ಕೋಡಗದೊಲಿರ್ದ ತೆಱನಂ ಮಱೆದೈ (ಜಗವಿ. ೧೭-೪೫). [ತೂಱು$_1$+ –ಅಲ್$_2$]

**ತೂಱಲು** ‘ತೂಱಲ್’ ನೋ.

**ತೂಱಲುಗೊಂಬು** ‘ತೂಱಿಲ್ಗೊಂಬು’ ನೋ.

**ತೂಱಿಲ್ಗೊಂಬು,** ತೂರಲ್ಗೊಂಬು, ತೂಱಲುಗೊಂಬು (ನಾ). ೧. ಬಹುದೂರಕ್ಕೆ ಚಾಚಿಕೊಂಡಿರುವ ಕೊಂಬೆ,–ಶಾಖೆ : ತಾರಾಪಥ

ಮಂಡಲಮಂ ನೆಱೆ ಪಂದರಿಸಿ ಬೆಳೆದ ನವತರುಗಳ ತುಱುಗಿದ ತೂಱಲ್ಗೊಂಬಿನ ಕೆಲವು ಕವಲ್ಗೊಂಬೊಪ್ಪಿದುವು (ಜಯುಕಾ. ೧೫-೨೩); ಖಗಂಗಳ್ ನಿಡುಮರಂಗಳ ತೂಱಲ್ಗೊಂಬನಡರ್ದು ಮೋನವಿರ್ದುವು (ರಾಮಾಶ್ವ. ೩೦-೨೩). ೨. ತಂತ್ರತುದಿಯಂ ಕೊಂಬೆ: ಶಾಖಾಚರಂ ... ಮರದ ತುದಿಗೊಂಬಿಂಗೆ ಪಾಯ್ದು ತೂಱಲ್ಗೊಂಬನೇಱೆ (ಪಂಚತಂ. ೨೮೧-೯); ಬಾಲವಿಹಂಗಂಗಳನೆಱಂಕೆಯೊಳಿಱಂಕಿಕೊಂಡು ಪಾಱಲನುವಾಗಿ ತೂಱಲ್ಗೊರಿಬಿನೊಳಿರ್ಪ ವಿಹಂಗಸಂಕುಳದಿಂ (ಗಿರಿಕ. ೧-೧೨೮ವ); ಕೇದಗೆಯ ತೂಱಲ್ಗೊಂಬ[ಪಾಠಾಂ. ತೂಳಿಲ್ಗೊಂಬ]ನೇಱಿರ್ದ ಮರ್ಕಟನಂತಂತೆ . . . ದುಷ್ಕವಿಯದೇ ಹಾಸ್ಯಕ್ಕೆ ಪಕ್ಕಾದನೋ (ಧರ್ಮನಾ. ೧-೫೩). **ತೂರಲ್ಗೊಂಬು**: ೧. ಹಿರಿಯಾಲದ ಮರದ ತೂರಲ್ಗೊಂಬಿನ ಇರುಂಬಿನೊಳಗೆ ಚುಂಚನ ಶವವು ಗೋಣಂದ ನೇಲುತ್ತಿದೆ (ಚಿಟ್ಟಳಿ. ೧೬೨-೧೦). **ತೂಱಲುಗೊಂಬು**: ೧. ಎಲೆಗಳಿಱುಂಬಿನೊಳ್ ಮರದ ತೂಱಲುಗೊಂಬಿನ ನೀಡನೀಡದೊಳ್ ತೊಲಗದೆ ನಿಂದು (ಕುಸುಮಾ. ೬-೩೭); ವಿಹಂಗಸಂಕುಲಂ... ಮರಂಗಳ ತೂಱಲುಗೊಂಬುಗೊಂಬಿನೊಳ್ ಸುಂಟಗೆಗೋದ ಮಾಟಕ್ಕಿಯವೊಲಿರ್ದುವು[ಡಂ]ಗಿ ನಿದಾಘಕಾಲದೊಳ್ (ಸೂ ಕ್ತಿ ಸು. ೧೦-೧೧೯). [ ತೂಱಲ್ + ಕೊಂಬು$_1$ ]

**ತೂಱಾನೆ** (ನಾ). ಮಂದೋದ್ರೇಕದಿಂದ ಸಿಕ್ಕಿದವರನ್ನು ಸೊಂಡಿಲಿನಿಂದ ಹಿಡಿದಂ ಎಸೆಯುಂವ ಆನೆ (?): ಈ ಹದನನೆನಗಱಿಯಬಂದುದು ದ್ರೋಹಿಯನು ತೂ[ಪಾಠಾಂ. ಕ್ರೂ]ಱಾನೆಗಿಕ್ಕಲೆಬೇಕುದಾದೊಡೆ ರಾಯ ಚಿತ್ರ್ಯಸೆನ್ನ ಭಾಷೆಯನು (ಸಾಳ್ವಭಾ. ೨೨-೫೦). [ ತೂಱು$_1$ + ಆನೆ$_1$ ]

**ತೂಱಿಸು**, ತೂರಿಸು$_1$ (ಕ್ರಿ). ೧. ಕಾಳಂಕಡ್ಡಿಗಳನ್ನು ತೂರಂವಂತೆ ಮಾಡಂ. ೨. ನಂಗ್ಗಿಸು; ತಳ್ಳು: ಕೇಱಿಸುತೆ ಕೆದಱಿಸುತ ವೀರರಂ ನೋಡುತಂ ತೂಱಿಸುತೆ ಕಾಳೆಗಕೆ ಮುಸಗಿ ಹಲು ಮೊಱೆವುತಂ ... ವೀರನೊರ್ವಂ ನಗರಿಯೊಳು ನಡೆದು ಬರುತಮಿರೆ (ಏಕಾರ. ದೇ. ೧೧೭-೬). ೩. ಹಾರಿಸಂ; ಚಿಮ್ಮಿಸು: ಛತ್ರಚಾಮರಪತಾಕಾಳಿಯಂ ಕೆಂಗಱಿಯ ಗಾಳಿಯಿಂದೆ ತೂಱಿಸಿತು...ಬಭ್ರುವಾಹನನ ಶರಸಂಕುಲಂ (ಜೈಮಿಭಾ. ೨೩-೩೯). **ತೂರಿಸು$_1$**: ೧. ಭತ್ತ ತೂರಿಸಬೇಕು. ಆಳುಗಳೇ ಸಿಕ್ಕಲಿಲ್ಲ (ರೂಢಿ). [ ತೂಱು$_1$ + - ಇಸು$_3$ ]

**ತೂಱು$_1$**, ತೂರು$_1$, ತೂಱ್ (ಕ್ರಿ). ೧. ಭತ್ತ ಮೊದಲಾದ ಧಾನ್ಯಗಳ ಹೊಟ್ಟನ್ನು ಗಾಳಿಯಂ ಸಹಾಯದಿಂದ ಹಾರಿಸಂ, - ಹೊಟ್ಟು ಬೇರ್ಪಡುವಂತೆ ಮಾಡಂ: "ತೂಱು-ಉದ್ಧೂತೌ (ಧಾನ್ಯವನ್ನು ತೂರು)" (ಶಮಧಾ); ಕಳದೊಳ್ತೂಱಿದ ಭತ್ತಮನಳೆಯದೆ ನಿಂದಂದುದನುಜನಾ ಧಾನ್ಯಮನಾಗಳೆ ಕೊಳ್ವರೆಂಬರ್ (ಸಮುಪ. ೧೨-೪೭): ತೂಱಿದರೆ ತನಿಹೊಟ್ಟು ಗಾಳಿಗೆ ಹಾಱುವುದು (ಕುಮಾರ್ವ್ಯದ್ರೋ. ೧೬-೪೪); ನೂಱುಕಂಡುಗ ಹೊಟ್ಟ ತೂಱಿದರೆ ಫಲವೇನು (ಸರ್ವಜ್ಞ. ೩೪೦). ೨. ಎರಚು; ಬಿಸಂಡಂ; ಎಸೆ: ನೇಹವಂಂ ಮೆಱೆದು ಹೊಳ್ಳಿಸಿಬಿಟ್ಟಪನೆಂಬ ಡಾಳಿಯಂ ಸುಡುವುದು ಸುಟ್ಟು ತೂಱುವುದು ತೂಱಿದ ಬೂದಿಯ ಹಿಟ್ಟುಗಂಟ್ಟ ಬೊಟ್ಟಿಡುವುದು (ಅನಂಕು. ೮-೫೭); ನೂಱು ಹಣ ಸಿಗುವನಕ ವಿಱಾಱ ವಿನಯದಲಿಪ್ಪ ನೂಱೊಳ್ಳೂಱ ಕೇಳಿದರೆ ಸಾಲಿಗನು ತೂಱುವನು ಮಣ್ಣ (ಸರ್ವಜ್ಞ. ೧೩೯೪). ೩. ದೂರೀಕರಿಸಂ; ತಿರಸ್ಕರಿಸಂ: ತಂದೆ ತಾಯ್ಗಳ ವಿಱಾ ಬಂಧುಗಳನು ತೂಱಿ ... ಅಂಗನೆಯರ್ಗೆ ಸೋಲ್ವೆನ್ನ ಮಂದಮತಿಯ ರಂಗ ಬಿಡಿಸು (ಶತಸಾಂ. ೯-೪೯). ೪. ಚೆದರಿಸು; ಓಡಿಸಂ: ಮಾಱುಗೊಂಡರು ಮನುಜರುಗಿನುಜರುಗಳ ತೂಱಿಯಾಡಿಸಿ ಕಾಣೆನೆನಲು (ತ್ರಿಪುಸಾಂ. ೮-೬೨); ಖೂಳ ಫಡಫಡ ಜಾಱದಿರು ತೋಱಿಸಾಳ ತೂಱಿದ ಡೊಂಬು ಬೇಡ (ಕುಮಾರ್ವ್ಯಾಕ. ೧೪-೨೯); ಮೂದಲಿಸಿ ಮುತ್ತಿದ ರಿಪುಗುನ್ನಿಗಳನು ತೂಱಿದರು (ಕಂಸವಿ. ೧೪-೪೪). ೫. ಚಿಮ್ಮು; ಹಾರಂ; ಸಿಡಿ: ನೀರಾನೆಯ ಕೈಯೇಱಿಂ ತೂಱುವ ಮಣಿಗಣಮಯೂಖದೊಳ್ ಕಣ್ಗೆಸಗುಂ ... ಶಿವಿಂಗಿಳಗಿಳಂಗಳಿಂದೆ ಸಮುದ್ರಂ (ಪುಷ್ಪಾಸ್ರ. ೧೨-೧೩); ಕಣ್ಣೆವೆ ಜಾಱ ಜಾಱದುಮಶ್ವಚಯಂ ಪವಮಾನವೇಗದಲಿ ತೂಱಿ ಬಿದ್ದುದು ಮಕುಟ (ತೊರರಾ. ೩-೨-೨೦). ೬. ನಿವಾರಿಸಂ; ತಪ್ಪಿಸಂ; ಪರಿಹರಿಸಂ: ಎಡಬಲದಲೌಕುವ ಭಟಾಳಿಯ ತೊಡಕ ತೂಱುತ ವಿಱಾಱ ಮಿಸುಕುವ ಕಡುಹು ಕಾಱರ ಕಾಲನೂರಿಗೆ ಕಳುಹುತ (ತೊರರಾ. ೪-೬-೨೦); ಅತಿಶಯಾರ್ಥಂಗಳ ಕೋಱ ಜಾಡ್ಯವ ತೂಱಿ ಮತಿಗೆ ಮಂಗಲವನಿತ್ತೆನ್ನ ಕೃತಿಗೆ ನಿರ್ವಿಘ್ನದಾಯಕಿಯಾಗು (ನಾಗಕು. ೧-೨೦). ೭. ಹೊಯ್ದಾಡಂ; ಒಲೆದಾಡು: ಕಿವಿಗಳೆಳೆ(ಱ)ಲ್ದು ತೂಱುವೊಡೆ ಮೆಯ್ ಬಿಗಿದಪ್ಪೊಡೆ ದಿಟ್ಟ ನೆತ್ತಿಗೇಱು ವೊಡೆ...ಎಚ್ಚಗೆ ಪಟ್ಟಸೂ[ತ್ರಭಸ್ಮ]ವಂ (ಲೋಕೋಪ. ೯-೨೦೯). ೮. ಚೆಲ್ಲು; ಸೂಸಂ: ಮದವೇಱ ಪೊಸಗಂಪನೀವ ಮಕರಂದರಸವಂ ತೂಱಿ . . . ತೀಡಿದುದು ಸುಪ್ರಭಾತಾನಿಲಂ (ಉದ್ಭಟ. ೧೦-೦೩೯); ಸೌರಭಕ್ಕೆ ಕವ್ವರೆಗೊಂಡು ಬೆಂಬಿಡದೆ ತೂಱುವ ತುಂಬಿಯ ತಂಱುಗಲಂಬರದೊಳುಱಾದು ಬಂಬಲ್ಗೊಳ್ವಂತೆಯುಂ (ಅನಂಪು. ೮-೪೫). ೯. ದೂರಕ್ಕೆ ತಳ್ಳು,-ದಬ್ಬು,-ನೂಕು: ಹಾಱಲೂದಿ ಸುಶರ್ಮನವದಿರ ತೂಱಿ ತಿರುಗಿದ ಬಳಿಕ ಕೈ ಮೈ ತೋಱಿದನೆ ಕಲಿಕರ್ಣ (ಕುಮಾರ್ವ್ಯಾಕ. ೧೬-೧೩); ಶಿರದ ಗಂಗೆಯು ತೂಱಿ . . . ಹಣೆಗಣ್ಣುರಿಯನೆಬ್ಬಿಸಿ ತನುವನೊಡ್ಡಿದನಭವ ನಡುಕದಲಿ (ತೊರರಾ. ೩-೨-೩); ಸಾರಂಗಧರ ಬಂದು ಸುರತಕೆನ್ನಂ ಒಡಿದೊಡಂಬಡಿಸಲೊಲ್ಲದಿರಲು ತೂಱಿ ಮುಂದಲೆವಿಡಿದು...ಧಾರಣಿಗೆ ಕೆಡಹಿ ಮಾನಭಂಗವಂ ಮಾಡಿ ಕ್ರೂರನೀಗಂ ಪೋದಂ (ಗುರುಚಾ. ೦೩-೪೩); ಏನ್ನೆ ಮೈದುನ, ಜೀವಿತೇಶನೆನ್ನೊಂದು ಬಿನ್ನಪಮಂ ತೂಱದೆ ನಲ್ಮೆ ಮಿಗೆ ಪೊರೆದನೆ! (ರಾಮಾಶ್ವ. ೨೬-೨೩). ೧೦. ಓಡಿಹೋಗು; ಕಂಬಿಕೀಳಂ: (ಕ). ೧೧. ಬೀಳಿಸಂ; ಸಿಡಿಸು: ನಾರಾಚಂ ತೂಱುವ ಸರಲ್ (ಶಮದ. ೧೭೦ ಪ್ರಯೋ); ಅಸ್ತ್ರತತಿಗಳು ತೂಱಿದವು ತಲೆಗಳನು (ನಿಭಾಗ.೭-೧೧-೭); ಜಾನಕಿಯ ಸುತನ ಬಾಣಾವಳಿಯ ಹಾವಳಿಯನೇನೆಂಬೆನಹಿತರಂ...ತೂಱಿದುವು ಕೊಂದುವು (ಜೈಮಿಭಾ. ೨೦-೪೭). **ತೂರು$_1$**: ೧. ನೂರುಮುತದ ಹೊಟ್ಟ ತೂರಿ, ಎಲ್ಲ ತತ್ತ್ವದಲ್ಲೆ ವಿಱಾರಿ ... ಆಗು ನೀ ಅನಿಕೇತನ! (ಅನಿಕೇ. ೬೦-೮); ಆ ದಿನ ಮಾತ್ರ ಜಳ್ಳನ್ನು ತೂರಿ ಕಾಳು ಆರಿಸಲ್ಪಡುತ್ತದೆ (ತತ್ತ್ವಪ್ರಾ. ೩೩೭); ತೂರುವಾಗ ಹಾರಿದ್ದೆಲ್ಲ ಮಾರಿ ಪಾಲು (ಗಾದೆ). ೨. ಎರಡು ತಂಡದವರೂ ಕಲ್ಲುಗಳನ್ನು ತೂರಿದರು (ರೂಢಿ). ೬. ಅಖಿಲಲಯ ಕಾರಕನು ಮೆರೆವಹಂಕಾರಗಳ ಮುರಿದು ತೂರುವನು (ಮೀಗೀ. ೬೦-೧೦). ೮. ಟಾರ್ಚಿನ ಬೆಳಕನ್ನು ತೂರಿದ (ಮೂರುದಾ. ೦೨೩). ೯. ಮೂಡು ಕೆಂಪಿನಿಂದ ಕಂಗೊಳಿಸಿತು. ಅರುಣವನ್ನು ತೂರಿ ಕಿರಣವೂ ಹಾದುಬಂತು (ನಾಗಕಾ. ೩೭). ೧೨. (ಹಣದ ವಿಷಯದಲ್ಲಿ) ಪೋಲುಮಾಡಂ; ಹಿಡಿತವಿಲ್ಲದೆ ಖರ್ಚುಮಾಡಂ: ಓಟು ಗಿಟ್ಟಿಸುವುದಕ್ಕಾಗಿ ಹಣ ತೂರಿದ್ದಾರೆ (ರೂಢಿ). ೧೩. (ಕರಾ) ಛೇದಿಯಾಗು: ಅವನು ಕಾರುತ್ತಾನೆ, ತೂರುತ್ತಾನೆ (ರೂಢಿ). **ತೂರ್**: 'ತೂರ್ಪನಿ' ಪರಾ.

**ತೂಱಿಕೊಳ್**, **ತೂಱಿಕೊಳ್ಳು** = ತೂಱು$_1$ ೧: ಅಂತು ಪೊಕ್ಕು ವಿರೋಧಿಸೈನ್ಯಮಂ ಮಾರಿ ಪೊಕ್ಕಂತೆ ಪೆಣಮಯಂ ಮಾಡಿ ತೂಱಿಕೊಂಡ ಜೋಳದಂತಿರೆ ಪಡಲ್ವಡಿಸಿದಾಗಳ್ (ಪಂಪಭಾ. ೧೧-೯೩ವ); ಗಾಳಿ ಬಂದ ಕೈಯಲ್ಲಿ ತೂಱಿಕೊಳ್ಳಿರೋ (ಪುರಂದ. ೨-೨೦ ಪಲ್ಲವಿ). **ತೂರಿಬಿಡು** = ಕೈಬಿಡು; ಬಿಟ್ಟುಬಿಡಂ; ಹೋಗಬಿಡಂ: ಆದರ್ಶವನ್ನು ತೂರಿಬಿಡಬೇಕೋ (ರಂಗರೋ. ೧೪೭); ಜಗತ್ಸಿಂಹನು ಬಂಗಾಲಿ ಹುಡುಗಿಯನ್ನು ಮದುವೆಯಾಗಿ ಎಲ್ಲವನ್ನೂ ತೂರಿಬಿಟ್ಟನು (ಕುರಿಹಿಂ. ೨೭).

[ ದೇ.॥ ತಮಿ. ಮಲ. ತೂಱ್ಱು; ತುಳು. ತೂಪು; ತೆಲು. ತೂರು; ಗೊಂಡಿ. ತೂರಾನಾ ]

**ತೂಱು₂** (ಕ್ರಿ). ೧. ಸಣ್ಣ ಸಣ್ಣ ಹನಿಯಾಗಿ ಬೀಳು; ತುಂತುರು ತುಂತುರಾಗಿ ಬೀಳು,—ಉದುರು: ಖಿನ್ನಗೃಹಿಣೀನಿಶ್ವಾಸದಿಂ ಕೂಡೆ ತೂಱಿದುವು... ವಾರ್ಬಿಂದುಗಳ್ (ಚಂದ್ರಪು. ೪-೪೦); ಕಟ್ಟಳ್ಕಱಿಂ ತೂಪಿಱಿದಪಳೆನೆ ತುಱುಂಗಿ ತೂಱಿ ಸಿಡಿವ ಸೀರ್ವನಿ ಕಡುಬೆಡಂಗುವಡೆಯೆ (ರಾಜಶೇ. ೨-೮೪).

೨. ಹನಿ ಹನಿಯಾಗಿ ಬೀಳಿಸು,-ಉದುರಿಸು; ಸಿಂಪಡಿಸು: ಸಾಗರವುಂ ಕೂಡೆ ತೆರಳ್ಚಿದಂ ತೊಟಿಸಿದಂ ತುಳ್ಕಾಡಿದಂ ತೂಱಿದಂ ... ದೇವಕೀನಂದನಂ (ಜಗವಿ. ೭-೧೮); ಪುಷ್ಪರಸಮುಂ ತೆಗೆದೀಂಟಿ ತುಳುಂಕಿ ತೂಱಿ ತೇಂಕಾಡಿ ... ಮಗಮಗಿಸಿತ್ತೊಂದು ಮಧುಕರಂ ಮಲ್ಲಿಗೆಯೊಳ್ (ಗಿರಿಜಾ. ೨-೬೩); ತೂಱಿ ಕಂಗಳ್ ಕಿಡಿಗಳಂ ಸೂಸೆ ಮೈಬೆಮರ್ ತಾಱಿ ಬೇಗದೊಳೀಶನೆಡೆಗೆ ಬಂದು (ಚೆಬಪು. ೨೦-೨೫); ವಸಂತಮಂಟಪದ ಮಧ್ಯದ ಮಕರಂದರಸದ ತುಂತುಱಿಂ ತೂಱುವ ಪಜ್ಜಳಿಪ ಗೊಜ್ಜಗೆಯರಲಜಂತ್ರದ ಬೆಳ್ಮುಗಿಲ ಕೆಳಗೆ ... ತಳಿರಲರ್ವಾಸಿನೊಳರಸಿವೆರಸಿ ಕುಳ್ಳಿರ್ದು (ರಾಜಶೇ. ೧೧-೩೧೪).

[ದೇ.॥ ತಮಿ. ಮಲ. ತೂಱು; ತೆಲು. ತೂರು]

**ತೂಱುಗಲ್ಲು** (ನಾ). ತೂರುತ್ತಿರುವ ಕಲ್ಲು; ಎಸೆಯುತ್ತಿರುವ ಕಲ್ಲು: ತೋಡುಗವಣೆಯ ತೂಱುಗಲ್ಲಿನ ಝಾಡಿ ಝುಮ್ಮಿಡಿಸಿದವು ಗಗನವನು (ತೊರರಾ. ೭-೧೧-೩). [ತೂಱು₁ + ಕಲ್ಲು (<ಕಲ್₃)]

**ತೂಱುಗಿಡಿ** (ನಾ). ಸಿಡಿಯುತ್ತಿರುವ ಕಿಡಿ; ಹಾರುತ್ತಿರುವ ಕಿಡಿ,—ಅಗ್ನಿಕಣ: ತುಡುಕಿದನುಗ್ರಧಾರೆಯ ತೊಱುಗಿಡಿಗಳ ತುಱುಗಿದುರಿಯ ಮಹಾಸ್ತ್ರವನು ಕರ್ಣ (ಕುಮಾದ್ರೋ. ೧೬-೫೦); ಮಂಡಳಿಸಿ ಮುರಿದೇಳ್ವ ವಹ್ನಿಯ . . . ತುಂಡುಗಿಡಿಗಳ ತೂಱುಗಿಡಿಗಳ ಗುಂಡುಗಿಡಿಗಳ ಘಾಡಣೆಯ ಕಿಡಿ ಚಂಡಿಯಾಯ್ತು (ತೊರರಾ. ೫-೮-೮೨); ಮಿಕ್ಕು ಸೂಸುವ ತೂಱುಗಿಡಿಗಳ ಕಣಾಳಿಗಳ . . . ಪೆರ್ಗಿಚ್ಚುಗಳ ವಂಕಿ ಮೇಲಿಕ್ಕಿದುದು (ಜೈಮಿಭಾ. ೧೩-೧೨). [ತೂಱು₁ + ಕಿಡಿ]

**ತೃಟಿ** (ನಾ). ಒಂದು ಕಾಲಮಾನ; ಅತ್ಯಲ್ಪಕಾಲ; ಬಹಳಸೂಕ್ಷ್ಮವಾದ ಕಾಲ: ಕಾಲಮದು ನಿರ್ಗುಣಮಚೇತನದೊಳೊಂದಿ ತೃಟಿ ಲವ ಮುಖ್ಯಕಾಲಂಗಳಿಂದೆ (ಆರಾಜ. ೪-೭); ಒಮ್ಮೆ ಕಣ್ಣೆವೆಯನಿಕ್ಕುವನಿತಱ ನಾಲ್ಕುಭಾಗದೊಳಗೊಂದು ಭಾಗವೇ ತೃಟಿಯನಿಸುವುದು (ವಿವೇಕ. ೩೦೯); ಒಂದು ನಿಮಿಷದ ನಾಲ್ಕನೆಯ ಭಾಗವು ತೃಟಿಯೆನಿಸಿಕೊಂಬುದು (ದಶಟೀ. ೭೨-೧). [ಸಂ.]

**ತೃಟಿನೀಲಕರ** (ನಾ). [ಶೈವ] ಹದಿನೈದು ಬಿಂಬಾಗಮಭೇದಗಳಲ್ಲಿ ಒಂದು: ಚತುರ್ಮುಖತಂತ್ರ ಮಲಯತಂತ್ರ . . . ತೃಟಿ [ಪಾಠಾಂ. ತುಟಿ, ಕುಟಿ]ನೀಲಕರ ತುಲಾವೃತ್ತ ತುಲಾಯೋಗ ಕುಟ್ಟಿಮತಂತ್ರ ಸರ್ವಶೇಖರ ಮಹಾವಿದ್ಯೆ ಮಹಾಸಾರಮೆಂದು ಬಿಂಬಾಗಮದ ಹದಿನೈದು ಭೇದಂಗಳು (ವಿವೇಕ. ೭೧). [?]

**ತೃಡ್ಬಾಧೆ** (ನಾ). ನೀರಡಿಕೆಯ ತೊಂದರೆ; ಬಾಯಾರಿಕೆಯಿಂದುಂಟಾಗುವ ಕ್ಲೇಶ: ಜಲಜಾತಪ್ರಿಯನೆಂಟಱೊಳ್ ನಿಲೆ ಮನುಷ್ಯಂ ಕಿಚ್ಚಿನಿಂ . . . ಭಾರ್ಗವಂ ನಿಲೆ[ತೃಡ್ಬಾಧೆಯಿನರ್ಕಜಂ] ನಿಲೆ ಮಹಾಕ್ಷುದ್ವ್ಯಾಧಿಯಿಂ ಪೊಂದುಗುಂ (ಜಾತತಿ. ೨೩-೨). [ಸಂ. ತೃಡ್ಬಾಧಾ]

**ತೃಣ** (ನಾ). ೧. ಹುಲ್ಲು: "ವಾರಿಯೊಳು ಬಾಣದೊಳು ತೃಣದೊಳು ಶರಾಮ್ಯಮಕ್ಕು" (ಮಂಗರಾ. ೦೪೯-೪೫); ಗುಣಮಿದು ದೋಷಮಿದೆಂಬೀ ಗಣಿದಮನೆತ್ತಱಿಗುಮಶ್ರುತ ಪ್ರಕೃತಿ ಜನಂ ತೃಣಸಸ್ಯಘಾಸವಿಷಯ ಪ್ರಣಯಂ ಸಮವೃತ್ತಿಯಪ್ಪವೊಲ್ಕ್ಮಗಗಣದೊಳ್ (ಕವಿರಾ. ೧-೮); ನೃಪಂಗೆ ಮನದೊಳ್ ತೃಣವಲ್ಲಘುವಾದುದಾವಗಂ ಸ್ತ್ರೈಣಸುಖಂ (ಕಾದಂಪೂ. ೦೯); ಗೋಸಮುದಾಯಕ್ಕೆ ಬಹುಪ್ರಕಾರತೃಣಮುಂ ಸುಚ್ಛಾಯೆಯುಂ ತಮ್ಮೊಳ ಪ್ರಮಿತಂ ಕೇಳಿಸುಖಪ್ರದೇಶಮೆಸೆಗುಂ ವೃಂದಾವನಂ (ಜಗವಿ. ೩-೬೫); ಕಾಲೋಚಿತಕ್ಕೆದಿದಾ ತೃಣವೇ ಪರ್ವತವಲ್ಲವೇ(ಸೋಮೇಶ. ೦೬); ತೃಣಮುಂ ತನೆವೋದ ಬಟಿಕ್ಯೊಣಗುವುದದಱಿಂದೆ ನರರ ಬಾಟ್ ಲಘುಕಾಲಂ (ಅನಂಪು. ೩-೭೧); ಪರರ ವಸ್ತುವ ತೃಣಕೆ ಸರಿಯೆಂಬ ಭಾಷೆಯಿದು ರಾಘವಾಂಕಗೆ ಸಂದುದು (ಹಚಕಾ. ೧-೦೬); ಕ್ಷಣವೊಂದು ಯುಗವಾಗಿ ತೃಣಕ್ಕಿಂತ ಕಡೆಯಾಗಿ ಎಣಿಸಲಾಟದ ಭವದಿ ನೊಂದೆ ನಾನಾ (ಪುರಂದ. ೧-೯೩-೨); ತೃಣಕೆ ಹಸುರೆಲ್ಲಿಯದು? ಬೇರಿನದೆ? ಮಣ್ಣಿನದೆ? (ಮಂಕುತ. ೫೩). ೨. (ಅಲಂ) ಅಲ್ಪವಾದುದು; ಕನಿಷ್ಠವಾದುದು: ಚತುರಾಹವದ ಕೋವಿದ ದೇವದಲ್ಲಣನು ಅಣುವ ಮೊದಲಾದವರ ತೃಣವೆಂದೆಣಿಸಿ ಬಗೆಯದೆ ಬಂದ ... ಖಳಮಲ್ಲ (ಕಾಶಿರಾ. ೩೬-೦೬).

ತೃಣಕೆ ಕೊಳ್ = ಕೀಳಾಗಿ ಕಾಣು: ತೃಣಕೆ ಕೊಂಬೆನೆ ಫಲುಗುಣನ ಕಣೆಗಿಣೆಯನು (ಕುಮ್ಯಾಕ. ೫-೮). [ಸಂ.]

**ತೃಣಕಣ** (ನಾ). ಹುಲ್ಲಿನ ಚೂರು: ಪೆಣ್ಣೊರ್ವಳೊಲಿದಳಂ ರಕ್ಷಿಪ್ಪುದೇಂ ಕರಿಗೆ ತೃಣಕಣದ ಭಾರಕಣೆಯಲ್ತೆ (ಶ್ರೀರಾಮಪಾ. ೮೮-೩೬೬).

[ತೃಣ + ಕಣ₃]

**ತೃಣಕಬಳ** (ನಾ). ಹುಲ್ಲಿನ ತುತ್ತು: ತೃಣಕಬಳಂ ಜಗುಳೆ ಬಾಯಿಸರಿಯದು ಹರಿಣಗಣಂ (ಶಾಕುಂತ. ೫೪-೯೦). [ತೃಣ+ಕಬಳ₂ (=ಕಬಲ)]

**ತೃಣಕಲ್ಪ** (ನಾ). (ಅಲಂ) ಹುಲ್ಲಿಗೆ ಸಮಾನವಾದುದು; ಅಲ್ಪವಾದುದು; ಕೀಳಾದುದು: ರಾವಣನ ರೂಪು ಸೀತಾದೇವಿಗೆ ತೃಣಕಲ್ಪಮಾಯ್ತು (ಪಂರಾಮಾ. ೧೪-೧೦೮). [ಸಂ.]

**ತೃಣಕುಂಕುಮ** (ನಾ). ಒಂದು ಬಗೆಯ ಸುಗಂಧ ಸಸ್ಯ: "ಲೋಹಿತಂ-ಹರಿಚಂದನ, ತೃಣಕುಂಕುಮ, ಚೆಂಬು" (ಓಷಧಿ. ೦೪೩). [ಸಂ.]

**ತೃಣಕುಟಿ** (ನಾ). ಹುಲ್ಲಿನ ಗುಡಿಸಲು; ಜೋಪಡಿ: "ತೃಣಕುಟಿ ಪುಲ್ಗುಡಿ" (ವಸ್ತುಕೋ. ೪೬-೯); ಜರೆ ಬಿಱುಗಾಳಿ . . . ಮದೀಯ ಕಾಯತೃಣಕುಟಿಯಂ ಜರ್ಝರಿತಂ ಮಾಡದ ಮುನ್ನಮೆ ಪರಮತಪೋಭರಮನಾಂಪ ಬಗೆಯಂ ಬಗೆದೆಂ (ಚಂದ್ರಪು. ೪-೦೬); ತೃಣಕುಟಿಯೊಳ್ ಮಣಿಭವನಂ ತೃಣಕಲ್ಪಿತ ಪುತ್ರಿಕಾಳಿಯೊಳ್ ಯುವತಿಗಣಂ .... ಎನುತ್ತ ವಿರ್ದನುದಾತ್ತಂ (ಪಾರ್ಶ್ವಪು. ೬-೬); ಪೊಕ್ಕಳಾ ತ್ರಿಜಟೆ ತೃಣಕುಟಿಗೆ (ಶ್ರೀರಾಮಪಾ. ೪೯೯-೩೪೭). [ತೃಣ + ಕುಟಿ₂]

**ತೃಣಕುಟೀರ** (ನಾ). = ತೃಣಕುಟಿ: ಎಮ್ಮನೆಡೆಗೊಳ್ವ ಕಾವಲಿನ ಬಟ್ಟೆಯೆಡೆ ಇರ್ಪುದಾಕೆಯ ಸೆರೆಯ ತೃಣಕುಟೀರಂ (ಶ್ರೀರಾಮಪಾ. ೪೭೬-೮೪).

[ತೃಣ + ಕುಟೀರ]

**ತೃಣಗ್ರಾಹಿ** (ನಾ). ನೀಲಿಬಣ್ಣದ ರತ್ನ; ನೀಲರತ್ನ: ಓಮೋಪಳ ಮೊಸರ್ವವೊಲಿಂದುಕರಾವಳಿಗೆ ತೃಣಗ್ರಾಹಿ ನೀಳಮಣಿಯೊಸರ್ದಪುದೇ (ಚಂದ್ರಪು. ೧-೩೯). 'ತೃಣಮಣಿ' ಪರಾ. [ಸಂ. ತೃಣಗ್ರಾಹಿನ್]

**ತೃಣಚೂರ್ಣ** (ನಾ). ಹುಲ್ಲಿನ ಚೂರು: ಪಿಡಿದ ತೃಣಚೂರ್ಣಮಂ ರಾವಣ ಪ್ರತಿಗೆತ್ತು ಮೊಗಮೆತ್ತದೆಯೆ ಸಂಬೋಧಿಸಿದಳವನಿಜಾತೆ (ಶ್ರೀರಾಮಪಾ. ೩೩೩-೭೦). [ತೃಣ + ಚೂರ್ಣ₂]

**ತೃಣಜ್ಯೋತಿ** (ನಾ). ಒಂದು ಬಗೆಯ ಗಿಡಮೂಲಿಕೆ; ಕಂಗೊಂಗೆ; ಜ್ಯೋತಿಷ್ಮತೀಲತೆ: "ತೃಣಜ್ಯೋತಃ— ತೃಣಜ್ಯೋತಿ" (ಓಷಧಿ. ೬೨).

[ಸಂ. ತೃಣಜ್ಯೋತಿಸ್]

**ತೃಣದರ್ಭೆ** (ನಾ). ದರ್ಭೆಯಲ್ಲಿ ಒಂದು ಬಗೆ: "ಕುಶಂ . . . ಪವಿತ್ರಂ – ೪ ದರ್ಭೆಹುಲ್ಲಿನ ಹೆಸರುಗಳು. ವಿಶ್ವಾಮಿತ್ರದರ್ಭೆ, ಬ್ರಹ್ಮದರ್ಭೆ, ವಸಿಷ್ಠದರ್ಭೆ, ತೃಣದರ್ಭೆ" (ಸಿದ್ಧಾಂತಿ. ೦೩೨).

[ತೃಣ + ದರ್ಭೆ]

**ತೃಣದ್ರುಮ** (ನಾ). ತಾಳೆಜಾತಿಗೆ ಸೇರಿದ ಮರ: "ಹಿಂತಾಲಸಹಿತಾಃ— ಕಿರುತಾಳೇಗಿಡದೊಂದಿಗೆ ಸೇರಿದ ತಾಳ, ನಾರಿಕೇಳ, ಕ್ರಮುಕಗಳು, ಖರ್ಜೂರಃ – ಖರ್ಜೂರಹಣ್ಣಿನ ಗಿಡ, ಕೇತಕಿ – ಕೇದಗಿ ಹುಮ್ಬಿನ ತಾಳೆ

ಗಿಡವು, ತಾಳೀ, ಶ್ರೀತಾಳವಾಲೇಗಿಡವೂ, ಖರ್ಜೂರೀ–ಈಚಲುಮರ–೮ ತೃಣದ್ರುಮ" (ಸಿದ್ಧಾಂತಿ. ೧೫೩). [ತೃಣ + ದ್ರುಮ]

**ತೃಣಧಾನ್ಯ** (ನಾ). ಸಜ್ಜೆ, ನವಣೆ ಮೊದಲಾದ ಬಿತ್ತನೆಯಿಲ್ಲದೆ ತಾನಾಗಿ ಬೆಳೆಯುವ ಧಾನ್ಯ; ಕಾಡುನವಣೆ: "ತೃಣಧಾನ್ಯಂ, ನೀವಾರಃ – ಈ ೨ ಹೊಡೆಹುಲ್" (ಹಲಾಯು. ೯೬-೪೩೦); ತೃಣಧಾನ್ಯದ ಆರನೆಯ ಭಾಗವನ್ನು ನಮಗೆ ಕೊಡಬೇಕು (ಶಾಕುಂತ. ೨೬–೧೧). [ತೃಣ + ಧಾನ್ಯ]

**ತೃಣಧ್ವಜ** (ನಾ). ೧. ಬಿದಿರು; ವೇಣು: "ವಂಶಃ, ತ್ವಕ್ಸಾರಃ, ಕರ್ಮಾರಃ, ತ್ವಚಿಸಾರಃ, ತೃಣಧ್ವಜಃ ...ತೇಜನಃ– ೧೦ ಬಿದುರು ಹೆಸರು" (ಸಿದ್ಧಾಂತಿ. ೧೩೦). ೨. ತಾಳೆಮರ. [ಸಂ.]

**ತೃಣಪುರುಷ** (ನಾ). ೧. ಹೊಲ, ಹೊಸ ಕಟ್ಟಡ ಮುಂತಾದ ಕಡೆಗಳಲ್ಲಿ ನಿಲ್ಲಿಸುವ ಹುಲ್ಲು ತುಂಬಿದ ಬೊಂಬೆ; ಬೆರ್ಚ; ಬೆದರುಗೊಂಬೆ: "ಬೆರ್ಚು–ಸಂತ್ರಾಸೇ(ಭಯಪಡು),ತೃಣಪುರುಷೇ ಚ (ದೃಷ್ಟಿಪರಿಹಾರಾರ್ಥವಾಗಿ ಮಾಡಿರುವ ಬೊಂಬೆ)" (ಶಮದ). ೨. ತೃಣಪ್ರಾಯನಾದ ಮನುಷ್ಯ; ಅಲ್ಪವ್ಯಕ್ತಿ: ತೃಣಪುರುಷನಾಗಿ ಕಲ್ಪಿಸಿ ರಣರಭಸಮ ನಪ್ಪುಕೆಯ್ಯುಮ ಬಗೆಯದೆ ರಾವಣನುಮಂ...ರಘುರಾಮಂ (ಪಂರಾಮಾ. ೧೧–೬). [ತೃಣ + ಪುರುಷ]

**ತೃಣಪೂರ** (ನಾ). ಹುಲ್ಲಿನ ಕಂತೆ,— ಹೊರೆ: "ತೃಣಪೂರ ಪುಷ್ಪಧಾರಣಗಳೊಳು ಸೂಡು" (ಶಬ್ದಮಂ. ೯೩). [ತೃಣ + ಪೂರ$_1$]

**ತೃಣಪ್ರತಿ** (ನಾ). ಹುಲ್ಲುಕಡ್ಡಿಗೆ ಸಮವಾದುದು; ಅಲ್ಪವಾದುದು: ಮನುಜದನುಜಾಮರಮಹೋರಗಜನ ತೃಣಪ್ರತಿಯಾಯ್ತು (ತೊರರಾ. ೧-೮-೩೦). [ತೃಣ + ಪ್ರತಿ]

**ತೃಣಪ್ರಾಯ** (ಗು). ಹುಲ್ಲಿಗೆ ಸಮಾನವಾದ; ನಿಕೃಷ್ಟ; ನಿಷ್ಪ್ರಯೋಜಕ: "ತೃಣಪ್ರಾಯ–ಹುಲ್ಲುಕಡ್ಡಿಯ ಸಮಾನ" (ಗಂಗಾಮ. ೧೫೬); ರಾವಣನನ್ನು ರಾಮನು ತೃಣಪ್ರಾಯವಾಗಿ ಕಂಡನು (ರೂಢಿ). [ಸಂ.]

**ತೃಣಮಣಿ** (ನಾ). =ತೃಣಗ್ರಾಹಿ: ಕಾರೂಬಾಮಣಿ; ಶಿಲಾರಾಳ; ತೃಣಮಣಿ; ತೈಲಸ್ಫಟಿಕ; ಅಂಬರ್ (Amber. ಇಂಕನಿ). [ಸಂ.]

**ತೃಣಮನುಜ** (ನಾ). ಅಲ್ಪಮನುಷ್ಯ; ಹುಲುಮಾನವ; ಕೆಲಸಕ್ಕೆ ಬಾರದವನು: ತೃಣಮನುಜರು ಕೈಮುಗಿದು ವಂದನೆ ಮಾಡೆ ಅನುಮಾನ ಇಲ್ಲದಲೆ ಪಾಟಿಸುವ ಕರ್ಣ (ತೀರ್ಥಮ. ೧೬೧). [ತೃಣ + ಮನುಜ]

**ತೃಣಮಾತ್ರ** (ನಾ). ಅಲ್ಪವಾದುದು; ಸ್ವಲ್ಪವಾದುದು: ನಿಜವಾದ ಸಂನ್ಯಾಸಿಗಳು ಐಶ್ವರ್ಯವನ್ನು ತೃಣಮಾತ್ರದಂತೆ ಕಾಣುತ್ತಾರೆ (ರೂಢಿ). [ಸಂ. ತೃಣಮಾತ್ರಂ]

**ತೃಣರಾಜ** (ನಾ). ೧. ತಾಳೆಮರ; ತಾಳವೃಕ್ಷ: "ತೃಣರಾಜಃ, ತಲಃ ತಾಲಃ – ಈ ೩ ತಾಟಿ" (ಹಲಾಯು. ೩೨–೩೯). ೨. ತೆಂಗಿನ ಮರ. ೩. ಬಿದಿರು. ೪. ಕಬ್ಬು. [ಸಂ.]

**ತೃಣರಾಶಿ** (ನಾ). ಹುಲ್ಲಿನ ಹೊರೆ,—ಮೆಂದೆ: "ತೃಣರಾಶಿ ಹೆಡ್ಡತ್ವಗಳೊಳೆಸೆಗು ಮೆದೆ" (ಶಬ್ದಮಂ. ೧೦೦). [ತೃಣ + ರಾಶಿ]

**ತೃಣವಿಡಿ** (ಕ್ರಿ). ಹುಲ್ಲನ್ನು ಹಿಡಿ: ಸುಬುದ್ಧಿಯರುಹಿದ ಬಸವ ಕೆಡಬ್ಯಾಡೆಂದು ತೃಣವಿಡಿದು (ಬಿಜ್ಜಪು. ೬೧–೫೨).

**ತೃಣವಿಡಿದು ಹೇಳು**=ನಿರ್ಧಾರವಾಗಿ ಹೇಳು; ಸ್ಪಷ್ಟವಾಗಿ ಹೇಳು; ಕಡ್ಡಿಮುರಿದು ಹೇಳು. [ತೃಣ + ಪಿಡಿ$_1$]

**ತೃಣಶಯ್ಯೆ** (ನಾ). ಹುಲ್ಲಿನ ಹಾಸಿಗೆ: ರಘುಜರ್ ನದೀತಟದ ತೃಣಶಯ್ಯೆಯೊಳ್ ಮಲಗಿ (ಶ್ರೀರಾಮಾ. ೩೧–೯೨). [ತೃಣ + ಶಯ್ಯೆ]

**ತೃಣಶಿಖರ** (ನಾ). ಹುಲ್ಲಿನ ತುದಿ: ತೃಣಶಿಖರಾಧ್ಯುಷಿತಾಂಭಃಕಣಸಂಚಳಮಮರಚಾಪಚಪಳಂ ವಿದ್ಯುತ್‌ಕ್ಷಣಿಕಂ . . . ಯೌವನರೂಪವಿಭವಭೋಗಾಭೋಗಂ (ಆದಿಪು. ೪–೭೫). [ತೃಣ + ಶಿಖರ]

**ತೃಣಶೂನ್ಯ** (ನಾ). ಒಂದು ಬಗೆಯ ಮಲ್ಲಿಗೆ: "ತೃಣಶೂನ್ಯಾ, ಮಲ್ಲಿಕಾ, ಭೂಪದೀ, ಶೀತಭೀರುಃ—೪ ಮಲ್ಲಿಗೇಗಿಡದ ಹೆಸರುಗಳು" (ಸಿದ್ಧಾಂತಿ. ೧೧೨). [ಸಂ.]

**ತೃಣಾಗ್ರ** (ನಾ). ಹುಲ್ಲಿನ ತುದಿ: ತೃಣಾಗ್ರಗತವಾಃಕಣಿಕಾಗಣದಂತೆ ಸಂದ ಜೀವನಂ (ಪಂಚತಂ. ೫೯–೦೫). [ತೃಣ + ಅಗ್ರ$_1$]

**ತೃಣಾಸನ** (ನಾ). ಹುಲ್ಲಿನ ಪೀಠ; ಹುಲ್ಲಿನ ಚಾಪೆ: ದಾರುಕಾಸನ ಭಾಗ್ಯ ಹಾನಿ ಏರಲು ತೃಣಾಸನವಶೋಕವು (ಗಗತಾ. ೪–೨೨). [ತೃಣ + ಆಸನ]

**ತೃಣೀಕರಿಸು** (ಕ್ರಿ). ಹುಲ್ಲಿಗೆ ಸಮವೆಂದು ಭಾವಿಸು; ಅಲ್ಪವಾಗಿ ಎಣಿಸು; ಕ್ಷುಲ್ಲಕವಾಗಿ ಕಾಣು; ತುಚ್ಛೀಕರಿಸು: ಆ ಮಾಯಾಜನಿತ ವಸ್ತುಗಳಲ್ಲಿ ಬೇಕು ಬೇಡೆಂಬುದನಳಿದು ನಿಂದ ವಿಮಲವಿರಕ್ತಿಯಿಂದವು ತೃಣೀಕೃತ ಜಗತ್ರಯಂ ತೃಣೀಕರಿಸಲ್ಪಟ್ಟ ಮೂರು ಲೋಕವುಳ್ಳಂಥಾ ಸದ್ಗುರುಂ ಶ್ರೀ ಗುರುವನು (ಶಿವಪ್ರ. ४०–೧೧); ನೂರಾರು ಸಾವಿರಾರು ಮಂದಿಯ ಸಂಕಟವನ್ನು ತೃಣೀಕರಿಸಿ ಒಬ್ಬಿಬ್ಬರ ಸಂಕಟದ ಪರಿಹಾರಕ್ಕಾಗಿ ಆವನು ಸಮಾಜದ ಯಾವ ಘಾತಕರ ವಿರುದ್ಧವಾಗಿ ಸಿಡಿದಿದ್ದನೊ ಅಂಥವರನ್ನೆ ಈಗ ಆಶ್ರಯಿಸಬೇಕಾಯಿತು (ಪುನರು. ೩೩೫). [ತೃಣೀಕರಣ$_0$ + – ಇಸು$_1$]

**ತೃಣೀಕೃತ** (ಗು). ಹುಲ್ಲಿಗೆ ಸಮಾನವಾಗಿ ಎಣಿಕೆಯಾದ: ಅಭಿನವ ಯೌವನಾವಷ್ಟಂಭಪ್ರಾಗಲ್ಭ್ಯದೃಷ್ಟಿಪಾತ ತೃಣೀಕೃತತ್ರಿಭುವನನುಮಪ್ಪ ನೊರ್ವಂ ರಾಜಕುಮಾರಂ (ಆದಿಪು. ೩–೯೦ವ); ಲೋಕಸನ್ನುತಗುಣತೃಣೀಕೃತಲೋಕನವಿರಳಶೀಲ...ಸಂಸಾರಮಾಯಾರಿ (ಬಸವು. ೨೯–೨). [ಸಂ.]

**ತೃಣ್ಯೆ** (ನಾ).=ತೃಣರಾಶಿ: "ತೃಣ್ಯೆ=ಹುಲ್ಲಿನ ಸಮುದಾಯ" (ಗಂಗಾಮ. ೧೫೬). [ಸಂ. ತೃಣ್ಯಾ]

**ತೃತಿಯ** (ಗು). ೧. ಮೂರನೆಯ. (ನಾ). ೨. ಮೂರನೆಯದು: ಪ್ರಥಮದಲಿ ಹುಲಿಯಂತೆ ದ್ವಿತಿಯದಲಿ ಇಲಿಯಂತೆ ತೃತಿಯದಲಿ ತಾನು ಕಪಿಯಂತೆ ಕವಿಗಳಲಿ ಮತಿವಂತರಟುಹಿ (ಸರ್ವಜ್ಞ. ೨೧೦೦). [<ಸಂ. ತೃತೀಯ]

**ತೃತೀಯ** (ಗು). ೧. ಮೂರನೆಯ: ಸಮವಸರಣಮಂ ಪೊಕ್ಕು ಪ್ರಥಮ ದ್ವಿತೀಯ ತೃತೀಯ ಪೀಠಂಗಳುಮನನುಕ್ರಮದಿನರ್ಚಿಸಿ (ಶಾಂತಿಪು. ೯–೬೯ವ). (ನಾ). ೨. ತಾಂಬೂಲಕ್ಕೆ ಬಳಸುವ ವಸ್ತುಗಳಲ್ಲಿ ಮೂರನೆಯ ಘಟಕ; ಸುಣ್ಣ: (+). [ಸಂ.]

**ತೃತೀಯಕಲ್ಯಾಣ** (ನಾ). [ಜೈನ] ಪಂಚಕಲ್ಯಾಣಗಳಲ್ಲಿ ಮೂರನೆಯದು; ಸಂಸಾರದಿಂದ ಮುಕ್ತನಾದ ತೀರ್ಥಂಕರನಿಗೆ ಸಲ್ಲುವ ಪರಿನಿಷ್ಕ್ರಮಣಕಲ್ಯಾಣ: ಅನ್ನೆಗಂ ಸೌಧರ್ಮೇಂದ್ರಸಮೇತಂ ಚತುರ್ವಿಧವಿಬುಧನಿಕಾಯಂ ತೃತೀಯಕಲ್ಯಾಣಕರಣೋತ್ಸುಕತ್ವದಿಂ ಬಂದು ಭಗವತ್ಪಾದಪಯೋರುಹಕ್ಕೆಱಗೆ (ಶಾಂತಿಪು. ೮–೦೯ವ). [ತೃತೀಯ + ಕಲ್ಯಾಣ]

**ತೃತೀಯತೆ** (ನಾ). [ವ್ಯಾಕ] ವರ್ಗದ ಮೂರನೆಯ ಅಕ್ಷರ: ಪೂರ್ವೋಕ್ತಸೂತ್ರದಿಂ ಪರದ ಕತಪಕ್ಕೆ ತೃತೀಯತೆಯಕ್ಕುಂ; ಪೂರ್ವಪದಾಂತ್ಯಕ್ಕೆ ದೀರ್ಘಮುಮುತ್ತರಪದದಾದಿಗೆ ಲೋಪಮುಮಕ್ಕುಂ (ಶಮದ. ೨೯೩ ವೃತ್ತಿ). [ಸಂ. ತೃತೀಯತಾ]

**ತೃತೀಯತ್ವ** (ನಾ).=ತೃತೀಯತೆ: ತಕಾರದ ತೃತೀಯತ್ವಕ್ಕೆ-ಕಣ್ದೆಱವು; ಮೇಲ್ದುಡುಗೆ (ಶಮದ. ೬೫ ಪ್ರಯೋ). [ಸಂ.]

**ತೃತೀಯದ್ವೀಪ** (ನಾ). [ಜೈನ] ಜೈನಗ್ರಂಥಗಳಲ್ಲಿ ಹೇಳಿರುವ ಮುಖ್ಯವಾದ ಎಂಟುದ್ವೀಪಗಳಾದ ಜಂಬೂದ್ವೀಪ, ಧಾತಕೀದ್ವೀಪ, ಪುಷ್ಕರವರದ್ವೀಪ, ವಾರುಣೀವರ, ಕ್ಷೀರವರ, ಘೃತವರ, ಇಕ್ಷುವರ ಮತ್ತು ನಂದೀಶ್ವರ ಎಂಬುವುಗಳಲ್ಲಿ ಮೂರನೆಯದು; ಪುಷ್ಕರದ್ವೀಪ; P ಪುಷ್ಕರವರಸಮುದ್ರದಿಂದ ಸುತ್ತುವರಿದ

೧೬,೦೦,೦೦೦ ಯೋಜನ ವಿಸ್ತಾರವಾದ ಈ ಪುಷ್ಕರದ್ವೀಪದ ಮಧ್ಯದಲ್ಲಿ ಕಂಡಲಾಕಾರವಾದ ಮಾನುಷೋತ್ತರವೆಂಬ ಪರ್ವತವಿದೆ. ಇದರಿಂದಾಗಿ ಈ ದ್ವೀಪವು ಇಬ್ಭಾಗವಾಗಿದೆ. ಇದರ ಒಳಭಾಗದಲ್ಲಿ ಮನುಷ್ಯರು ವಾಸವಾಡುತ್ತಾರೆ. ಹೊರಭಾಗವು ಮನುಷ್ಯವಾಸಕ್ಕೆ ಯೋಗ್ಯವಾಗಿಲ್ಲ: ತೃತೀಯದ್ವೀಪದಂತೆ ನಿವಿಷ್ಟೇಷ್ವಾ [ಪ್ವಾ] ಕಾರಮಾನುಷೋತ್ಕ [ತ್ತ] ರಮುಂ . . . ಅಪ್ಪ ಸಂಗ್ರಾಮ ಭೂಮಿಯಂ ಪೊಱಮಟ್ಟು (ಚಂದ್ರಪ್ರ. ೧೦-೧೦೫ವ). 'ಜಂಬೂದ್ವೀಪ' ಪರಾ. [ತೃತೀಯ + ದ್ವೀಪ]

**ತೃತೀಯಪೀಠ** (ನಾ). ೧. ಮೂರನೆಯ ಆಸನ. ೨. [ಜೈನ] ಜಿನನು ಸಮವಸರಣದಲ್ಲಿ ಮಂಡಿಸುವ ಮೂರು ಪೀಠಗಳನ್ನೊಳಗೊಂಡ ಆಸನದಲ್ಲಿ ಮೂರನೆಯದು,-ಮೇಲಿನದು: ಸಮವಸರಣಮಂ ಪೊಕ್ಕು ಪ್ರಥಮ ದ್ವಿತೀಯ ತೃತೀಯಪೀಠಂಗಳುಮನನುಕ್ರಮದಿನರ್ಚಿಸಿ (ಶಾಂತಿಪು. ೯-೬೯ ವ). 'ದ್ವಿತೀಯಪೀಠ' ಪರಾ. [ತೃತೀಯ+ಪೀಠ]

**ತೃತೀಯವೃತ್ತಿ** (ನಾ). [ವ್ಯಾಕ] ವರ್ಗದ ಮೂರನೆಯ ಅಕ್ಷರ ಆದೇಶವಾಗಿ ಬರುವುದು: ಒಂದೆರಡರ್ಕೆ ಜಕಾರಕ್ಕಂದಾದೇಶ ರೇಫೆಗಂ ಡತ್ವಕ್ಕಂ ಬಂದಾದೇಶ ಜಟಕ್ಕಂ ಸಂಧಿಸಲು ತೃತೀಯವೃತ್ತಿ ಕತಪಕ್ಕೆಂದುಂ (ಶಮದ. ೬೬). [ತೃತೀಯ + ವೃತ್ತಿ$_2$]

**ತೃತೀಯಾಕೃತ** (ನಾ). ಮೂರು ಸಾರಿ ಉತ್ತ ಭೂಮಿ; ಮೂರು ಉಕ್ಕೆ ಆದುದು: "ತ್ರಿಗುಣಾಕೃತಂ, ತೃತೀಯಾಕೃತಂ, ತ್ರಿಹಲ್ಯಂ, ತ್ರಿಸೀತ್ಯಂ -ಳ ಮೂರುಸಾಲು ಉತ್ತ ಭೂಮಿ" (ಸಿದ್ಧಾಂತಿ. ೨೩೭). [ಸಂ.]

**ತೃತೀಯಾಕ್ಷರ** (ನಾ). [ವ್ಯಾಕ] ವರ್ಗದ ಮೂರನೆಯ ಅಕ್ಷರ; ಗ, ಜ, ಡ, ದ, ಬ ಎಂಬ ಅಕ್ಷರಗಳು: ಪದವಿಧಿಯಿಂ ನೆಲೆದುತ್ತರ ಪದದಾದಿಯೊಳೊಂದಿ ನಿಂದ ವರ್ಗಪ್ರಥಮಕ್ಕದಱ ತೃತೀಯಾಕ್ಷರಮಪ್ಪುದದಕ್ಕುಂ ಬಹುಳಮುಱಿಯೆ ಚಟವರ್ಗಂಗಳ್ (ಶಾಬ್ದಾವ. ೫೪); ಇರೆ ವರ್ಗಪ್ರಥಮಂಗಳ್ ಪರದೊಳ್ ಚಟವರ್ಗಮುಱಿಯೆ ತಮ್ಮ ತೃತೀಯಾಕ್ಷರಮಕ್ಕುಂ ಪದವಿಧಿಯೊಳ್ ಪರಿಹರಿಸಲ್ಬಾರದಲ್ಲಿ ಬಹುಳಸ್ಥಿತಿಯಂ (ಶಮದ. ೬೫). [ತೃತೀಯ + ಅಕ್ಷರ]

**ತೃತೀಯಾಪ್ರಕೃತಿ** (ನಾ). ಷಂಡ; ನಪುಂಸಕ: "ತೃತೀಯಾಪ್ರಕೃತಿಃ, ಷಂಡಃ, ಕ್ಲೀಬಂ, ಷಂಡೋ, ನಪುಂಸಕಂ - ೫ ನಪುಂಸಕನ ಪೆಸರುಗಳು" (ಸಿದ್ಧಾಂತಿ. ೧೫೫). [ಸಂ.]

**ತೃತೀಯಾವಿಭಕ್ತಿ** (ನಾ). [ವ್ಯಾಕ] ನಾಮವಿಭಕ್ತಿಗಳಲ್ಲಿ ಮೂರನೆಯದು; P ಇದು ಕರಣವನ್ನು ಕಾರಣವನ್ನು ತಿಳಿಸುವ ಶಬ್ದಗಳ ಮೇಲೆಯೂ ಕರ್ಮಣಿಪ್ರಯೋಗದಲ್ಲಿ ಕರ್ತೃಪದದ ಮೇಲೆಯೂ ಬರುವುದು: ತೃತೀಯೆಯುಂ - ತೃತೀಯಾವಿಭಕ್ತಿಯ ರೂಪಂ (ಶಮದ. ೦೧೬ ಟೀಕೆ). [ಸಂ.]

**ತೃತೀಯೆ** (ನಾ). ೧. ಮೂರನೆಯವಳು: ಈತಂ ನಿಸರ್ಗಭಿನ್ನನಿಕೇತನಮಂ ಶ್ರೀಸರಸ್ವತೀದ್ವಯಮಂ ತಂದೋತೊಂದೆ ಮೆಯ್ಯೊಳಿರಿಸಿದನೇ ತಡವವರೊಳ್ ತೃತೀಯೆಯಾಗಿರು ನಿರುತಂ (ಶಾಂತಿಪು. ೫-೧೦೫). ೨. ಪಕ್ಷದ ಮೂರನೆಯ ದಿನ; ತದಿಗೆ. ೩. [ವ್ಯಾಕ] ತೃತೀಯಾವಿಭಕ್ತಿ: ಪತ್ತಿಸುವರ್ ಮೂದೆಱಿನಂ ಪೆತ್ತ ತೃತೀಯೆಯನೆಕಾರಮಂ ಪರಿಹರಿಪರ್ (ಶಮದ. ೧೧೬). [ಸಂ. ತೃತೀಯಾ]

**ತೃಪತಿ** 'ತೃಪುತಿ' ನೋ.

**ತೃಪತಿಪಡು** (ಕ್ರಿ). = ತೃಪ್ತಿಗೊಳ್ಳು: ದೇವತಾದಿಗಳೆಲ್ಲ . . . ನಿಮ್ಮ ಪದನುತಿಯಿಂ ಕೃತಾರ್ಥರಾಗಿ ತೃಪತಿಪಟ್ಟರ್ಪರ್ (ವೀಶೈಪು. ೧-೭-೧೩). [ತೃಪತಿ (< ತೃಪುತಿ) + ಪಡು$_1$]

**ತೃಪುತ** (ನಾ). ತೃಪ್ತನಾದವನು; ಸಂತುಷ್ಟ: ನಿಜಸುಖತೃಪುತನಿರ್ದನು ಜಡ ಬಧಿರ ಮೂಕಾಂಧರಂದದಲಿ (ನಿಭಾಗ. ೫-೬-೪). [<ಸಂ. ತೃಪ್ತ]

**ತೃಪುತಿ, ತೃಪತಿ** (ನಾ). ತೃಪ್ತಿ; ಸಂತುಷ್ಟಿ: ಅಪರಿಮಿತ ಸಕ್ಕರೆಯ ಮೇಲೋಗರಂಗಳಂ ತೃಪುತಿಯನುಳಿದು ತಣಿಯದಾರೋಗಿಸುತ್ತಿರ್ದ ಕಪಿಲಸಿದ್ಧೇಂದ್ರಮಲ್ಲಯ್ಯಲಿಂಗಂ ಜಂಗಮದ ಮುಖದೊಳ್ (ಸಿದ್ಧರಾ. ೮-೮೪). **ತೃಪತಿ:** ನಿಪುಣಮತಿ ಮಾಡುವ್ವದು ಸುರಪಿತೃತೃಪತಿಯನು ಸುಶ್ರಾದ್ಧಮುಖದಲಿ (ನಿಭಾಗ. ೬-೧೪-೩೪). [<ಸಂ. ತೃಪ್ತಿ]

**ತೃಪ್ತ** (ಗು). ೧. ತೃಪ್ತಿಹೊಂದಿದ; ತಣಿದ; ಸಂತೃಪ್ತಿಗೊಂಡ. (ನಾ). ೨. ಸಂತೃಪ್ತಿಹೊಂದಿದವನು; ಸಂತುಷ್ಟನಾದವನು: ಷೋಡಶತೀರ್ಥಕರಪ ರ ಮೇ ಶ್ವ ರ ಂ ಪರಮಪದಪ್ರಾಪ್ತನುಮನಂತ ಸು ಖಾ ಮ್ರು ತ ತೃ ಪ್ತ ನು ಮಾ ಗಿ ರೆ (ಶಾಂತಿಪು. ೧೨-೫೦ ವ); ತೃಪ್ತಂಗೆ ಕ್ಷುದ್ಭಯವೆ (ಗಗತಾ. ೦೬-೪೪); ತೃಪ್ತನಿಗಾದರೂ ಮೃತ್ಯು ತಪ್ಪದು (ಗಾದೆ). [ಸಂ.]

**ತೃಪ್ತಿ** (ನಾ). ತಣಿವು; ಸಮಾಧಾನ; ತುಷ್ಟಿ: "ಪರ್ಯಾಪ್ತಂ, ಉಪಸಂಪನ್ನಂ, ತೃಪ್ತಿಃ, ಸೌಹಿತ್ಯಂ-ಈ ೪ ತ(ಣಿ)ಣುವು" (ಹಲಾಯು. ೫೪-೧೭೦); ನಿಮ್ಮ ಶರಣಂಗೆ ಆಪ್ಯಾಯನವಾದಡೆ ಎನಗೆ ತೃಪ್ತಿಯಾಯಿತ್ತು (ಬಸವ. ೮೨೭); ಘನತೃಷ್ಣಾತುರತೆ ಬೀಳುಕೊಂಡುದು ತೃಪ್ತಿನನಗಾಯ್ತು (ಕುವ್ಯಾಭೀ. ೦೦-೨೪); ಕೃಷ್ಣದೇವಂಗೆ ತಂದು ದ್ರೌಪತಿ ಇತ್ತ ಶಾಖವ ತಿಂದ ಮಾತ್ರದಲಖಿಳ ಮುನಿಜನರೊಂದೆ ತೃಪ್ತಿಯನನ್ನರಾದರೆ ತೃಪ್ತಿಯೆಂತಹುದು (ಗಗತಾ. ೧೩-೪೮); ತೃಪ್ತಿಯೆ ತಣಿದು ತೇಗಿದುದೆನಲ್ಕೆ ನಲಿದುದು ಜನಂ (ಶ್ರೀರಾಮಾ. ೧೦-೨೮೨). [ಸಂ.]

**ತೃಪ್ತಿಕರ** (ಗು). ೧. ಸಮಾಧಾನ ಉಂಟುಮಾಡುವ; ತೃಪ್ತಿಗೊಳಿಸುವ. (ನಾ). ೨. ಸಮಾಧಾನ ಉಂಟುಮಾಡುವಂಥದು; ತೃಪ್ತಿಗೊಳಿಸುವಂಥದು: ಅವರ ಸದ್ಯದ ವರ್ತನೆ ತೃಪ್ತಿಕರವೆಂದೇ ಹೇಳಬಹುದು (ಪುನರು. ೬೨೦). [ಸಂ.]

**ತೃಪ್ತಿಗೊಳಿಸು** (ಕ್ರಿ). ಸಂತುಷ್ಟಿಯನ್ನುಂಟುಮಾಡು; ಪೋದ ಗೊಳಿಸು; ತಣಿಸು: ಮೇಘಗಳು ಭೂಮಿಯನ್ನು ತೃಪ್ತಿಗೊಳಿಸುತ್ತವೆ (ಮುಕ್ತಾ. ೨೯೩). [ತೃಪ್ತಿ + ಕೊಳ್$_1$ + -ಇಸು$_3$]

**ತೃಪ್ತಿಗೊಳ್ಳು** (ಕ್ರಿ). ತಣಿ; ಸಮಾಧಾನ ಹೊಂದು: ಅವಳು ಆ ವೃತ್ತಿಯಿಂದ ತೃಪ್ತಿಗೊಂಡಿದ್ದಂತೆ ಮಾತ್ರವಲ್ಲ, ಹೆಮ್ಮೆಪಡುತ್ತಿದ್ದಂತೆ ಕಂಡಳು (ಪುನರು. ೧೯೭). [ತೃಪ್ತಿ + ಕೊಳ್ಳು$_1$ (<ಕೊಳ್$_1$)]

**ತೃಪ್ತಿಪಡಿಸು** 'ತೃಪ್ತಿವಡಿಸು' ನೋ.

**ತೃಪ್ತಿಪಡು** 'ತೃಪ್ತಿವಡು' ನೋ.

**ತೃಪ್ತಿಲಿಂಗ** (ನಾ). [ವೀಶೈ] ಲಿಂಗತ್ರಯಗಳಲ್ಲಿ ಒಂದು; ಭಾವಲಿಂಗ: ಬಳಿಕ ಇಷ್ಟಲಿಂಗ ಪ್ರಾಣಲಿಂಗ ತೃಪ್ತಿಲಿಂಗವೆಂದು ಶಿವಲಿಂಗತ್ರಯ ಭೇದಂಗಳವುಗಳಲ್ಲಿ . . . ಸಕಲಾವಸ್ಥೆಗಳಲ್ಲಿಯೂ ಶಿವಲಿಂಗದೊಡನನನ್ಯ ಭಾವನೆಯೇ ತೃಪ್ತಿಲಿಂಗಮಕ್ಕುಂ (ವಿವೇಕ. ೧೨೩). [ಸಂ.]

**ತೃಪ್ತಿವಡಿಸು, ತೃಪ್ತಿಪಡಿಸು** (ಕ್ರಿ). ತಣಿಸು; ಸಂತುಷ್ಟಿಗೊಳಿಸು: ಸತ್ಕ್ರಿಯಾಸಮ್ಮೇಳನದೊಳತಿತೃಪ್ತಿವಡಿಸಿ ದಯಾಳುವಂ ಬಿಜಯಂಗೆಯಿಸಿ ತಂದೊಳಗೆ ಕುಳ್ಳಿರಿಸಿ (ಬಸಪು. ೫೨-೪); ನುಡಿಸಿದ ಕೆಲರ ನೋಡಿದ ವಿನಯದಿ ತೃಪ್ತಿವಡಿಸಿದ ವೆಣ್ಣನೋವ್ಯಥೆಯ ಬಿಡಿಸಿದ ಬೆಮರ್ವನಿಗಳನೆಲ್ಲರಿಗೋತು ಕೊಡಿಸಿದ ಸಕಲಸನ್ನಹವ (ಮೋಹತ. ೦೬-೧೩), ಮಱಿಯ ಮಾತೇಕೇ ಕುವರನ ಸವಿಕಟೂಟಕೆಱಗಿದ ಮನದ ದೀಪನವ ನೆಱಿಯಾತನ ಸುರತದೆ ತೃಪ್ತಿವಡಿಸು (ಕುಂಸವಿ. ೯-೧೨೭). **ತೃಪ್ತಿಪಡಿಸು:** ಜನರ ಬಯಕೆಯನ್ನು ತೃಪ್ತಿಪಡಿಸುವ ಅಥವಾ ನಿರಾಕರಿಸುವ ಅಧಿಕಾರ ಅವಳದು (ಪುನರು. ೧೯೪). [ತೃಪ್ತಿವಡು + -ಇಸು$_3$]

**ತೃಪ್ತಿವಡು**, ತೃಪ್ತಿಪಡಂ (ಕ್ರಿ). ತಣಿ; ತುಂಬ್ಬಿಹೊಂದಂ: "ಪೂರಯತಿ= ತೃಪ್ತಿವಟ್ಟಪುದು" (ಕಾಶಕ್ಕ. ೨೮೦). 'ತೃಪ್ತಿವಡಿಸಂ' ಪರಾ. **ತೃಪ್ತಿಪಡು.** 'ತೃಪ್ತಿಪಡಿಸಂ' ಪರಾ. [ತೃಪ್ತಿ + ಪಡು₁]

**ತೃಷಾಪರ** (ಗುಂ). ೧. ಬಾಯಾರಿದ; ದಾಹದಿಂದ ಪೀಡಿತವಾದ; ನೀರಡಸಿದ. (ನಾ). ೨. ಬಾಯಾರಿದವನಂ; ನೀರಡಸಿದವನು: ಬಂದೀಯಂಧಕೂಪದೊಳ್ ಬಿಟ್ಟು ತೃಷಾಪರನೆಂ ರಸವುಂ ನೀರೆ ಗೆತ್ತು ಮೊಗೆಯಲ್ (ನೇಮಿಪು. ೪-೯೦ ವ). [ಸಂ.]

**ತೃಷಾರ್ತ** (ಗು). ೧. ಬಾಯಾರಿಕೆಯಿಂದ ಪೀಡೆಹೊಂದಿದ. (ನಾ). ೨. ನೀರಡಸಿದುದು : ಚಂಚು ಬೇಯಿ ತಲೆ ಬಿದಿರ್ದಸುವರೆಯಾದುದೊ ತೃಷಾರ್ತನೊಂದು ಮಯೂರಂ (ಚಂದ್ರಪು. ೯-೭೨). ೩. ಬಲವಾದ ಅಪೇಕ್ಷೆಯಿಂದ ತಳಮಳಗೊಳ್ಳುವುದಂ : ನನ್ನ ಮನಸ್ಸೋ ತೃಷಾರ್ತ ವಾಗಿತ್ತು (ಇಪ್ಪಕ. ೪೪೮). [ಸಂ.]

**ತೃಷಾವಿಷಾದ** (ನಾ). ಬಾಯಾರಿಕೆಯಿಂದಾಗುವ ಖೇದ : ಆತಪ ತಾಪಮಂ ತಳಿರ ಸತ್ತಿಗೆಯಿಂದೆ ತೃಷಾವಿಷಾದಮಂ ಶೀತಲ ತೋಯ ದಿಂದೆ ... ಪಥಶ್ರಮಾಂಬುವಂ ಸೀತೆಗೆ ತೂಳ್ದಿದಂ ಕದಳಿಕಾದಳವೀಜನ ದಿಂದೆ ರಾಘವಂ (ಪಂರಾಮಾ. ೭-೨೫). [ಸಂ.]

**ತೃಷಾವಿಷಾದನ** (ನಾ).=ತೃಷಾವಿಷಾದ: ವಾಃಕಣಸಂತತಿ ಸೋರೆ ಸೋರ್ದ ಡಂಗಿದುದೆಳಗಾರೊಳಾ ಸಕಳಚಾತಕಪೋತತೃಷಾವಿಷಾದನಂ (ಚಂದ್ರಪು. ೪-೪೭). [ಸಂ.]

**ತೃಷಿತ** (ಗುಂ). ೧. ಬಾಯಾರಿದ; ನೀರಡಸಿದ. ೨. ಆಸೆಯಿಂದ ಕೂಡಿರುವ; ಹಂಬಲಿಸುವ: ತೃಷಿತದೃಷ್ಟಿಯನಟ್ಟಿ, ನಿಸ್ಸೀಮಘಾಸ ಸೀಮಾರ್ಣವದ ವಿಸ್ತೀರ್ಣದೊಳ್ ಮನಂ ಲಯವಾಗೆ ನೋಡಿ (ಶ್ರೀರಾಮಾ. ೨೬೭-೧೧೩); ತನ್ನ ತೃಷಿತ ಬಾಲಭಾವನೆಗೆ ನೀರೆರದು ಚಿಗುರಿಸುತ್ತಲೂ ಬಂದಿದ್ದಳು (ಜಯಂತ. ೫೭). (ನಾ). ೩. ಬಾಯಾರಿಕೆ. ೪. ಆಸೆ; ಅಪೇಕ್ಷೆ; ಬಯಕೆ. ೫. ಬಾಯಾರಿದವನು; ನೀರಡಸಿದವನಂ: "ತೃಷಿತಃ, ತರ್ಷಿತಃ, ಪಿಪಾ(ಸುಃ), ಪಿಪಾಸಿತಃ—ಈ ೪ ನೀರಡಿಸಿದಾತಂ" (ಹಲಾಯು. ೫೯-೨೦೭); ಅತಿ ತೃ [ಪಾಠಾಂ. ಕೃ] ಷಿತನುಂ ಬುಭುಕ್ಷಾನ್ವಿತನು ಮೆನಲ್ ಬೀಟ್ವಿ ಕುಂಭಮಂ ಪಿಡಿದಂ ... ತುಳಾರ್ಕ್ಷಮಧ್ಯತ್ರ್ಯಂಶಂ (ಜಾತಕಿ. ೦೯-೨೦). [ಸಂ.]

**ತೃಷಿತನೇತ್ರ** (ನಾ). ಆಸೆ ತುಂಬಿದ ಕಣ್ಣು; ಬಯಕೆಯ ಕಣ್ಣು : ತನ್ನಂತಹ ನತದೃಷ್ಟನ ಮುಂದೆ ಲೋಲಾನಂತಹ ಲಾವಣ್ಯವತಿಯು ತೃಷಿತನೇತ್ರದಿಂದ ಕುಳಿತು ಯಾಚಿಸುವುದು ದೈವವಿಡಂಬನೆಯೆಂದು ಕೊಂಡನು (ಜಯಂತ. ೦೭೨). [ತೃಷಿತ + ನೇತ್ರ]

**ತೃಷೆ** (ನಾ). ೧. ನೀರಡಿಕೆ; ಬಾಯಾರಿಕೆ : ಹಸಿವಾದರೆ ಊರೊಳಗೆ ಭಿಕ್ಷಾನ್ನಂಗಳುಂಟು ತೃಷೆಯಾದರೆ ಕೆಱೆ ಭಾವಿ ಹಳ್ಳಂಗಳುಂಟು (ಮಹಾದೇ. ಬ. ೭೯-೧೯೯): ಬಿಸಿಲ ಬಿಸಿಗೆ ಹಸಿವಿಂಗೆ ತೃಷೆಯುಬ್ಬರದ ಡಗೆಗೆ ಸೈರಿಸಲಾಱದನುಗೆಟ್ಟು ನಡೆಗೆಡಲು ತೊಡಗಿದರು (ಹಜಕಾ. ೯-೨೭): ನಂಬಿಯಣ್ಣನನಗಲ್ದ ದಿನಂ ಮೊದಲಾಗಿ ... ಹಸಿವು ತೃಷೆಯುಂ ಒಡನೊಡನಗಲ್ದ ವಿರಹವಿಹ್ವಳೆಗೆ . . . ಕೊಳರ್ವಕ್ಕಿಗಳ ಕಳರವಂ ಶಿವದೂಷಕರ ನುಡಿಗೇಳ್ದ ಸದ್ಭಕ್ತನಂತೆ ಕೇವಿಯೇಱು (ನಂಬಿರ. ೧೭-೮); ತೃಷೆಯಿಲ್ಲದೊಡುದಕಮೊಳ್ಳಿತೆನೆ ಕುಡಿದಪರೇ (ಪಾರ್ಶ್ವಪು. ೧೫-೬೭); ನಳಸಂವತ್ಸರದೊಳ್ ಮುಂ ಘಟಿಲೆನೆ ಮನುಜರ್ಗಮಧಿಕ ತೃಷೆ ತಾನಕ್ಕು (ಅಟ್ಟಮ. ೭-೨೩); ಎತ್ತ ಹೋದುದೊ ಹಸಿವು ತೃಷೆ ಹೊಗದುತ್ತಮದ ಮಹಿಮಾತಿಶಯ ಹಸಿದತ್ತು ಮೊಲೆವಾಲಿಂಗೆ ಮೊಗಸು ವಡಿದು ವಿಚಿತ್ರವಲ (ತೊರರಾ. ೧-೮-೭೪). ೨. ಆಸೆ; ಅಪೇಕ್ಷೆ : ತೃಷೆ ಇಲ್ಲದವ ಋಷಿಗೆ ಸಮಾನ (ಗಾದೆ). [ಸಂ. ತೃಷಾ]

**ತೃಷ್ಣಕ** (ನಾ). ೧. ಬಾಯಾರಿದವನು; ದಾಹವುಳ್ಳವನಂ. ೨. ಅತಿ ಆಸೆ ಯುಳ್ಳವನಂ; ಆಸೆಬುರುಕ : "ಆಲುಬ್ಧನಭಿಲಾಷುಕಂ ಗೃಧ್ನು ತೃಷ್ಣಕಂ ಮೇಲೆ ಬಯಸುವನಕ್ಕು" (ಮಂಗರಾ. ೬೯-೧೧). [<ಸಂ. ತೃಷ್ಣಜ್]

**ತೃಷ್ಣಾಕರೆ** (ನಾ). ೧. ಬಾಯಾರಿಕೆಯನ್ನುಂಟುಮಾಡುವವಳು. ೨. ತೀವ್ರವಾದ ಅಪೇಕ್ಷೆಯನ್ನುಂಟುಮಾಡುವವಳು. ೧, ೨: ಮತ್ತಂ ಪಯೋರಾಶಿಯೊಳ್ಪುಟ್ಟಿಯುಂ ತೃಷ್ಣಾಕರೆಯುಂ ... ಪುರುಷೋತ್ತಮ ರತೆಯಾಗಿಯುಂ ದುರ್ಜನಪ್ರಿಯೆಯುಮೆನಿಸಿ ಪರಸ್ಪರವಿರೋಧಿಯಪ್ಪ ನಿಜಚರಿತ್ರಮು ಇಂದ್ರಜಾಲಮಂ ತೋರ್ಪಂತೆ ಮೆಱೆಯುತ್ತಿರ್ಪಳ್ (ಕಾದಂಪೂ. ೫೫೦). [ಸಂ. ತೃಷ್ಣಾಕರಾ]

**ತೃಷ್ಣಾಕುಲತೆ** (ನಾ). ನೀರಡಿಕೆಯ ಬಾಧೆ; ದಾಹದ ಪೀಡೆ : ನನ್ನನು ಸಾಕಿಕೊಂಡ್ಯೆ ಪಾರ್ಥ ಘನ ತೃಷ್ಣಾಕುಲತೆ ಬೀಳ್ಕೊಂಡುದತಿಶಯ ತೃಪ್ತಿ ಸನಗಾಯ್ತು (ಕುಮಾ.ಭೀ. ೧೦-೨೮). [ಸಂ. ತೃಷ್ಣಾಕುಲತಾ]

**ತೃಷ್ಣಾತುರ** (ಗು). ೧. ನೀರಡಿಕೆಯಿಂದ ತಪಿಸುವ; ನೀರಡಿಕೆಯ ಬಾಧೆಗೊಳಗಾದ : ಮಾತಂಗಿಯಂ . . . ತೃಷ್ಣಾತುರಗದ್ಗದಕಂಠೆ ಯನಾ ತಾಪಸನಾಗಳವಳನಿದಿರೊಳೆ ಕಂಡಂ (ಸುಕುಮಾ. ೪-೫೭). (ನಾ). ೨. ಅತ್ಯಾಸೆಯುಳ್ಳವನಂ : ಮುಱುಗುವ ತೃಷ್ಣಾತುರರಂ ಮಾಱುಗಿಸುವರ್ ನೆಱೆಯೆ ಮಱುಗಿ ಕುದಿವೆಣ್ಣೆಗಳೊಳ್ (ಸುಕುಮಾ. ೧೧-೪೭). [ಸಂ.]

**ತೃಷ್ಣಾಪರ** (ನಾ). ಆಸೆಯುಳ್ಳವನು : ಅತಿ ತೃಷ್ಣಾಪರನಾಗಿ ಮುನ್ನೆ ತೊಡರ್ದಿದರ್ಗಾ ಗಾಂಪೆ ಸಾಲ್ಗುಂ (ಆದಿಪು. ೧-೮೧). [ಸಂ.]

**ತೃಷ್ಣಾಭಂಗ** (ನಾ). ಆಸೆಯನ್ನು ತ್ಯಜಿಸುವಿಕೆ; ಆಸೆಯನ್ನು ಬಿಡುವಿಕೆ: ಸಾಂಗವೇದಾಧ್ಯಯನ ಸಜ್ಜನಸಂಗಶಾಸ್ತ್ರಶ್ರವಣ ತೃಷ್ಣಾಭಂಗ ಯಜನಾಧ್ಯಾನ ಮೌನ ವ್ರತ ಸದಾಚಾರ ... ಇವು ಸದ್ಧರ್ಮಗತಿಯೆಂದ (ಕುಮಾ.ಅ. ೧೫-೧೫). [ಸಂ.]

**ತೃಷ್ಣಾಭಿಭೂತ** (ನಾ). ನೀರಡಿಕೆಯಿಂದ ಪೀಡಿತನಾದವನು; ದಾಹದಿಂದ ತೊಂದರೆಗೊಂಡವನಂ: ಮಧ್ಯಂದಿನ ಸಮಯದೊಳ್ ಲಲಾಟಂತಪಮಾದ ತಪನತಾಪದಿಂ ತೃಷ್ಣಾಭಿಭೂತರಾಗಿ ಸಕಲಜನಾ ಪ್ಯಾಯನಕಾರಿಯಪ್ಪ ವೈಶಂಪಾಯನ ಸರೋವರಕ್ಕೆ ನೀರ್ಗುಡಿಯೆ ಪೋಗಿ (ಗದಾಯು. ೬-೩೭ ವ). [ಸಂ.]

**ತೃಷ್ಣೆ** (ನಾ). ೧. ನೀರಡಿಕೆ; ಬಾಯಾರಿಕೆ: "ಉದನ್ಯಾ, ತರ್ಷಃ, ತೃಟ್, ತೃಷ್ಣಾ, ಪಿಪಾಸಾ—ಈ ೫ ನೀರಟಿಕೆ" (ಹಲಾಯು. ೬೦-೨೦೮). ೨. ಬಯಕೆ; ಅಪೇಕ್ಷೆ: "ತೃಷ್ಣಾ, ಅಭಿಲಾಷಾ, ಲಿಪ್ಸಾ, ಆಶಾ, ಧನಾಯಾ, ಗರ್ಧನಾ—ಈ ೬ ಕಾಂಕ್ಷೆ" (ಹಲಾಯು. ೬೦-೨೦೯); ಅತಿಕಷ್ಟಮಪ್ಪವಸ್ಥಾತತಿಯಂ ಮಱೆಯಿಸಿ ಜಳಾಭಿಲಾಷೆಯನೀ ಜೀವಿತತೃಷ್ಣೆ ಮಾಡಿತು (ಕಾದಂಪೂ. ೧೯೪); ಘನಂ ಕರಗೆ ಕಂಡು ಕಂಡಶನಿವೇಗವಿದ್ಯಾಧರಂ ಘನೋಪಲದ ಮಾಟಕ್ಕಿಯಿಂ ಕರಗೆ ತೃಷ್ಣೆ ಸಾಮ್ರಾಜ್ಯದೊಳ್ ಮನಸ್ಸಿ ನಿಲವೇಟ್ಟು ತನ್ನ ಸುತನಂ ಸಹಸ್ರಾರನಾ ಜಿನೇಂದ್ರಮುನಿರೂಪಮುಂ ತಳೆದನಸ್ತ ಸಂತಾಪಮಂ (ಪಂರಾಮಾ. ೧೦-೧೨೭); ಇಹಪರಂಗಳ ತೃಷ್ಣೆ ಭವ ರೋಗಂಗಳ ಬಂಧನ...ಇಂತಪ್ಪ ಸಕಲ ಪ್ರಪಂಚನೊಳು ಸಿಲುಕದ..ಮಹಾ ಶರಣರ ತೋಱಿ ಬದುಕಿಸಾ ಎನ್ನ (ಆದವ. ೨೦-೪೯) : ವಾರಿಧಿಯೊಳಡಗಿ ನಿದ್ರಿಪ ಬಾಡವವೊ ತೃಷ್ಣೆ ಆರದನು ಕೆರಳಿಪರೊ (ಮುಂಕುಕ. ೨೭೭). ೧, ೨ : ಮದನರಸಪ್ಲವಂ ಕವಿಯೆ ತಣ್ಣಸನಾಗದೆ ತೃಷ್ಣೆಗಿಂಬುಕೆಯ್ಯದೆ ಪಗೆಗೊಂಡು ಪೋಪುದು (ಶಾಂತಿಪು. ೮-೯೭); ಮಧುರದ ಮೆಲುನುಡಿಯ ಸುಧೆಯಿಂದ ತೃಷ್ಣೆಯನಕಟ ಪರಿಹರಿಸು (ಕುಮಾ.ವಿ. ೨-೨೩). [ಸಂ. ತೃಷ್ಣಾ]

**ತೃಷ್ಣೆಗೊಳ್** (ಕ್ರಿ). ನೀರಡಿಸಂ; ಬಾಯಾರಂ: ಬರಯಿಗಳ ಬಿಸುಸುಯ್ಲಿಂ ಪೊರೆದುದೆನೆ ಬನಗಾಳಿ ಬೆಚ್ಚನೆ ತೀಡಿದುದು ಲೋಗರ್ ತೃಷ್ಣೆಗೊಂಡರ್ (ರಾಮಾಶ್ವ. ೫೨-೧೨). [ತೃಷ್ಣೆ + ಕೊಳ್₁]

**ತೆ₁** (ಅ). ಛೀ, ತೆಗೆ, ಬಿಡಂ ಎಂಬ ಅರ್ಥದ ಧಿಕ್ಕಾರಸೂಚಕವಾದ ಪದ: ಮುಳಿದು ಶಿಶುಪಾಲನಾ ಸಭೆಯೊಳಗೆ ... ಉಚ್ಚಳಿಸಿ ನುಡಿದಂ ತೆ ಕಳಕಳ ಹರಿಗೆತ್ತಿದನರ್ಘ್ಯದರ್ಘ್ಯಮಂ ಧರ್ಮಸುತಾ (ಪಂಪಭಾ. ೬-೮೩); ಏಱಿಸಿದೊಡ್ಡಮಂ ಬಿಡದೆ ಗೆಲ್ವ ಕೆರಳ್ವ ತೆ ಲೆಕ್ಕ ದಾಯುವಂ ತೋಱುದರೆಂಬ ... ಬನ್ನಣಂಬಡೆದುದಂತವರಿರ್ವರೊಳಕ್ಷವೇಳನಂ (ನಳಚಂ. ೭೫೮). [< ತೆಗೆ₁]

**–ತೆ₂** (ಪ್ರ). ಒಂದು ಭಾವವಾಚಕಕೃದಂತಪ್ರತ್ಯಯಂ: ತೆಕಾರಕ್ಕೆ– ಅಗಟ್ತೆ, ಪೊಗಟ್ತೆ, ನೆಗಟ್ತೆ, ಪುಗುಂತೆ (ಶಮದ.·೨೧೦ ಪ್ರಯೋ); ನೆಗಟ್ತೆ, ಪೊಗಟ್ತೆ (ಕೈಪಿಡಿ. ೧೬).

**–ತೆ₃** (ಪ್ರ). ಒಂದು ತದ್ಧಿತಭಾವನಾಮಪ್ರತ್ಯಯ. 'ಚಡಾಳತೆ', 'ಚಾಕಚಕ್ಯತೆ' ಪರಾ.

**ತೆಂ** (ನಾ). ತೆಂಕಂ ಎಂಬ ಶಬ್ದಕ್ಕೆ ಸಮಾಸದಲ್ಲಿ ಆದೇಶವಾಗಿ ಬರುವ ರೂಪ. 'ತೆಂಗಾಳಿ', 'ತೆಂಬೆಲರ್' ಪರಾ.

**ತೆಂಪಡುವಲು** = ದಕ್ಷಿಣ ಹಾಗು ಪಶ್ಚಿಮದಿಕ್ಕುಗಳ ನಡುವಣ ಭಾಗ; ನೈಋತ್ಯ: ಶಾಸನಗಳು ಆತನ ರಾಜ್ಯದ ಬಡಗಲಲ್ಲಿ ದೊರೆಯದೆ ತೆಂಪಡುವಲಲ್ಲಿ ಮಾತ್ರ ಕೆಲವೇನೋ ದೊರೆಯುವುದರಿಂದ (ಮೂರುಉ. ೬೧). **ತೆಂಬಡಗಣ**= ದಕ್ಷಿಣೋತ್ತರವಾದ: ತೆಂಬಡಗಣ ತೆವರಿಂ ಮೂಡಲ್ಲೆ ವತ್ತೆರಡು ಗೇಣಗಳೆಯಲು (ಎಕ. VIII, ಸಾಗರ. ೧೦೯–೬೩; 1042). **ತೆಂಬಡಗಲು**=ದಕ್ಷಿಣೋತ್ತರ: ಅದರಲ್ಲಿ ತೆಂಬಡಗಲಾಗಿ ಕೂಪಕ ... ಪರ ಕೊಂಕಣ ಎಂದು ಏಳು ದೇಶಗಳಿವೆ (ತುಳುನಾ. ೭೦). **ತೆಮ್ಮೂಡಲು** = ದಕ್ಷಿಣ ಹಾಗು ಪೂರ್ವ ದಿಕ್ಕುಗಳ ನಡುವಣ ದಿಕ್ಕು; ಆಗ್ನೇಯ ದಿಕ್ಕು: ಆಗ್ನೇಯ ಮಾರುತ: ತೆಮ್ಮೂಡಲ ಗಾಳಿ (South Easter. ಇಂಕನಿ). **ತೆಮ್ಮೂಡು**=ತೆಮ್ಮೂಡಲು: ಈ ಸಾರಸ್ವತರ ಒಂದು ಶಾಖೆಯು ತ್ರಿಹೋತ್ರ (ತಿರ್ಹತ) ದೇಶಕ್ಕೆ ತೆಮ್ಮೂಡಾಗಿ ಪ್ರವಾಸ ಮಾಡಿತ್ತೆಂದೂ ... ತಿಳಿಸುತ್ತಾರೆ (ತುಳುನಾ. ೧೬೦).

[<ತೆಂಕು./ತಮಿ. ಮಲ. ತೆನ್; ತುಳು. ತೆಣ್]

**ತೆಂಕ** 'ತೆಂಕಂ' ನೋ.

**ತೆಂಕಂಡ** (ನಾ). ದಕ್ಷಿಣದಿಕ್ಕಿನ ಭಾಗ,–ತುಣುಕು (?): ವಾಣಿಗತೋಟ್ಟಂ ತೆನ್ಕಣ್ಡಮುಂ ವಡಕಣ್ಡಮುಂ ವಿನಿತೇಶ್ವರಕ್ಕಂ ಪೊಯ್ದಾರ್ (ಎಕ. IV, ಚಾಮರಾ. ೬೩–೭: ಸು. 750). [ತೆಂ + ಕಂಡ₁]

**ತೆಂಕಕಡೆ** (ನಾ). ದಕ್ಷಿಣದಿಕ್ಕಿನ ಕಡೆ,–ಪಕ್ಕ: ಕೆಱೆಯ ತೆಂಕಕಡೆ ಪಡುವ ಪೋಗಿ ಕದವಿ ಪಡಿಕಟ್ಟಿಗೆಱೆ ಕಡೆ ಕೊಳಂ (ಮ್ಯಆರಿ.·೧೯೩೪, ೩೮–೧೪; 11ನೆಯ ಶತ). [ತೆಂಕ (<ತೆಂಕು) + ಕಡೆ₃]

**ತೆಂಕಣ್** 'ತೆಂಕಂ' ಪರಾ.

**ತೆಂಕಣ** 'ತೆಂಕಂ' ಪರಾ.

**ತೆಂಕಣವಳ್ಳಿ** (ನಾ). ಒಂದು ಊರಿನ ಹೆಸರು: ತೆಂಕಣವಳ್ಳಿಯ ಗುಡ್ಡಂ ಪುಬ್ಬಾಮಿ ಗಂಗೆಮಾಳಿಜ್ಗಾಮಿತ್ತಿಯಾಂಗೆ ಪುಟ್ಟಿದ ಶ್ರೀಮಾರಂ (ಎಕ. VII, ಶಿಕಾರಿ. ೨೮೩–೪; 830). [ತೆಂಕಣ + ಪಳ್ಳಿ₁]

**ತೆಂಕದೆಸೆ, ಟೆಂಕದೆಸೆ** (ನಾ). ದಕ್ಷಿಣದಿಕ್ಕು: ತೆಂಕದೆಸೆ[ಪಾಠಾಂ. ತೆಂಕಣದಿಶೆ] ಯೋಳಕಾಲದೊಳ್ ಮುಗಿಲಿಲ್ಲದೆ ಮಿಂಚಂ ಕಂಡಡಂ ನೀರೊಳಗಿಂದ್ರಧನುವಂ ಕಂಡೊಡಂ ನಾಲ್ಕು ತಿಂಗಳಾಯುಂ (ಪಸಾರ. ೩೫೫); ಕೋಳೊಡವೆ ಮುಂತಾಗಿ ತಿರುಗಿದಂ ಫಲುಗುಣಂ ಮೇಲೆ ನಡೆದುದು ಕುದುರೆ ತೆಂಕದೆಸೆಗೊಡನೆ (ಜೈಮಿಭಾ. ೧೬–೪೬); ಅಸಮವಿಗ್ರಹವೀರರ ತೆಂಕದೆಸೆಯೊಳಗೆಸಗಿದನೆರಡುಸಾಸಿರವ (ಕಂನವಿ. ೧೯–೫೭). **ಟೆಂಕದೆಸೆ:** ಆ ಕೆಱೆಯ ಟೆಂಕ[ದೆ]ಸೆಯ ಕೋಡಿಯ ಪಡುವಸೆ ದಿಕ್ಕಿನಲು ಕೊಟ್ಟ ಯೆರೆಯ ಬೀಜವರಿ (ಸೌಇಇ. IX–II, ೫೦೦–೯; 1516). [ತೆಂಕ (<ತೆಂಕು) + ದೆಸೆ₂]

**ತೆಂಕನಾಡು** (ನಾ). ದಕ್ಷಿಣದೇಶ,–ನಾಡು; ದಕ್ಷಿಣದಿಕ್ಕಿನಲ್ಲಿರುವ ನಾಡು: ತೆಂಕನಾಡ ಕಿಷ್ಕಿಂಧವೆಂಬ ಪರ್ವತಮನೆಯ್ದಿ (ವಡ್ಡಾರಾ. ೧೧೬–೨೮); ತೆಂಕನಾಡ ಮಱೆಯಲ್ಲಿಕ್ಕಿನ್ನೇಂ ಮನಂ ಬರ್ಕುಮೇ (ಪಂಪಭಾ. ೪–೩೦); ಉನ್ನತಿವೆತ್ತ ತೆಂಕನಾಡಿಂ ಬಂದಂ (ಧರ್ಮಾಮೃ. ೧–೯೭).

[ತೆಂಕ (< ತೆಂಕು) + ನಾಡು]

**ತೆಂಕಬಟ್ಟ** (ನಾ) ದಕ್ಷಿಣದಿಕ್ಕಿನ ಬಯಲು ಭೂಮಿ (?): ಶ್ರೀಪ್ರುರುಷ ನಾಯಿಗಗೆ ಪಟ್ಟಂಗಟ್ಟಿ ಕೊಟ್ಟ ಕಟನಿ ಅಮಟ್ತಿಯಿನ್ತೆಂಕಬಟ್ಟಂ ಮೂವತ್ತು ಗುಳ ಅಯ್ಯುಗ್ಗಳ ಪಾಳುಂ (ಎಕ. IX, ಹೊಸಕೋ. ೮೭–೯; ಸು. 720). [ತೆಂಕ (< ತೆಂಕು) + ಬಟ್ಟ₁]

**ತೆಂಕಮುಖ** (ನಾ). ೧. ದಕ್ಷಿಣದ ಕಡೆ; ದಕ್ಷಿಣದಿಕ್ಕು: ಸತಿಯನುಳಿದ ತಿದಿಗಂಬರನಾಗಿ ಮುಕ್ತಕೇಶಿತನಾಗಿ ನರಕಪಾಲದೊಳು ಸುರೆಯೆಱೆದು ಕುಡಿಯುತ ತೆಂಕಮುಖವಾಗಿ ಹೋಹಂ (ಹದಕಾ. ೨–೨೨); ರಘುನಂದನನ ಕೀರ್ತಿಸ್ತಂಭಡಂಬರವೆನಿಪ ಸೇತುವ ಕಂಡು ನಡೆದನು ತೆಂಕಮುಖವಾಗಿ (ಕುವ್ಯಾಸ. ೫–೨೪). ದಕ್ಷಿಣಾಭಿಮುಖನಾದವನಂ; ದಕ್ಷಿಣದಿಕ್ಕಿಗೆದುರಾದವನು: ತೆಂಕಮುಖನಾಗಿ ಮರುಜ್ಜವದಿಂ ಚಂಪಾಪುರಕ್ಕೆ ಬಂದು (ಧರ್ಮಾಮೃ. ೩–೩೯); ಪೊಸವಿಮಾನವನೇಱಿ ಬಂದಂ ತೆಂಕಮುಖನಾಗಿ (ಜ್ಞಾನಚಂ. ೨–೨೪). [ತೆಂಕ (< ತೆಂಕು) + ಮುಖ]

**ತೆಂಕಮೊಗ** (ನಾ). = ತೆಂಕಮುಖ ೧: ತೆಂಕಮೊಗದೆ ಬಂದು ವೃಷಭಾಚಳಮಂ ಕಂಡಂ (ಆದಿಪು. ೧೩–೬೫); ಪಾಂಡವರ್ ಸುರಂಗದಿಂ ಪೊಱಮಟ್ಟು . . . ತೆಂಕಮೊಗದೆ ಪಯಣಂಬೋಗಿ (ಪಂಪಭಾ. ೩–೮೭); ತೆಂಕಮೊಗದೆ ಬಂದು . . . ವೃಷಭಾಚಲಮಂ ಕಂಡು (ಅಜಿಪು. ೯–೩೪ವ); ತೆಂಕಮೊಗದ ಗಾವುಣ್ಡರ ಪಡುವಣ ಓರಿಯ ತೋಣ್ಟದ ತೆಂಕಣ ಸೀಮೆಯಿಂ (ಸೌಇಇ. IX–I, ೭೮–೫೫; 1045).

[ತೆಂಕ (< ತೆಂಕು) + ಮೊಗ]

**ತೆಂಕಲ್** 'ತೆಂಕಂ' ಪರಾ.

**ತೆಂಕಲು** 'ತೆಂಕಂ' ಪರಾ.

**ತೆಂಕಲ್ಯೆ** 'ತೆಂಗಲೆ' ನೋ.

**ತೆಂಕವಂಕ** 'ತೆಂಕವಕ್ಕ' ನೋ.

**ತೆಂಕವಕ್ಕ, ತೆಂಕವಂಕ** (ನಾ). ದಕ್ಷಿಣ ದಿಶೆ,–ದಿಕ್ಕು: ತೆಂಕವಕ್ಕ [ಪಾಠಾಂ. ವಂಕ] ದೊಳಸಂಖ್ಯಬಲಂ . . . ತುಱುಗೊಳಲ್ ಪೊಱಮಟ್ಟಂ (ಕಾವ್ಯಾವ. ೧೨೨). **ತೆಂಕವಂಕ:** ಆ ಪುರದ ತೆಂಕವಂಕದೊಳ್ . . . ಚಂಡಮಾರಿ ದೇವತೆಯಿರ್ಪಳ್ (ಯಶೋಚ. ೧–೭); ತೆಂಕವಂಕಮಂ ಪರಿಪಾಲಿಪಂ (ಅರಾಜ. ೧–೩೦). [ತೆಂಕ (< ತೆಂಕು) + ಪಕ್ಕ]

**ತೆಂಕವಟ್ಟೆ** (ನಾ). ದಕ್ಷಿಣದಿಕ್ಕಿನ ಮಾರ್ಗ, – ದಾರಿ: ಕೆಳೆಯರಿರ, ಇನ್ನೆಮಗೆ ತೆಂಕವಟ್ಟೆ (ಅಶ್ವತ್ಥಾ. ೪೦–೭೯೦); ಇಲ್ಲಿ ತಾರೆಗಳ ನೆರೆಯ ನಿಡಿಯ ಗಿರಿಮುಡಿಯ ಮೇಲೆ ಪೆಣಗಾಡಿ ತಳ್ವಿ, ತೆಂಕವಟ್ಟೆ ತಿರುಗ ವೇಟ್ಟುಂ (ಬದ್ಧಪ್ರ. ೩೮–೮೨೭). [ತೆಂಕ (<ತೆಂಕು) + ಬಟ್ಟೆ₂]

**ತೆಂಕವೊಲ** (ನಾ). ದಕ್ಷಿಣಕ್ಕೆ ಇರುವ ಹೊಲ,—ಪ್ರದೇಶ: [ತೆ]ಂಕ ಪೊಲದಲು ಪ್ರಭುಗಳ ಮಾನ್ಯದಿಂ ಮೂಡಲು ಹದಿಮೂಱು ಗೇಣ ಬೆಂಕೊಳ್ವನ ಕೋಲ ಮತ್ತರು ನೂಱು (ಎಇ. XXVII, ೦೫–೪೫; 1114).

[ತೆಂಕ (<ತೆಂಕು) + ಪೊಲ]

**ತೆಂಕವೋಗು** (ಕ್ರಿ). ದಕ್ಷಿಣದಿಕ್ಕಿನ ಕಡೆಗೆ ಚಲಿಸು, — ಹೋಗು; ತೆಂಕಮುಖವಾಗಿ ಹೊರಡು: ತಲೆಕೆದಱಿ ತೆಂಕವೋಗಿರೆ ... ತಾನೆ ಕನಸಿನೊಳಶುಭಂ (ಕಲ್ಯಾಕಾ. ३–೨೩). [ತೆಂಕ (<ತೆಂಕು) + ಪೋಗು₁]

**ತೆಂಕಾಯ್, ತೆಂಕೈ** (ಗು). ದಕ್ಷಿಣದಿಕ್ಕಿನ: ಸೀಯಮಂಗಲದ ಪೊಲ ಮೇರೆ ಇಸಾನದ ದೆಸೆ ನಡುಗಲ್ಲೆ ಅಮ್ಬಲ ತಿಣ್ಣೆಯಿನ್ತೆಂಕಾಯ್ ಪೇರೊಟ್ಟಿಯೆ

(ಎಕ. X (8), ಚಿಕ್ಕಬ. ೧೦೬-೬೬; 850); ಮೂಡಾಯ್ತೊಱ ತೆಂಕಾಯ್ಯಾಬ್ಟಾರನ ಮಾಡಮೆ ... ಸನ್ದು ಪೆರ್ಗೊಲ್ಲಿಯುಳ್ಕೊಡಿತ್ತು (ಎಕ. IV, ಎಡತೊ. ೬೦-೭೩; ಸು. 890). ತೆಂಕೈ : ಪ್ರಥಮಂ ದುಗ್ಗನ್ಕೆಱ ... ಕೆಱಯಿ ನ್ತೆಂಕೈ ನಟ್ಟ ಕಲ್ಲೆ (ಎಕ. X (8), ಚಿಕ್ಕಬ. ೬೬-೧೬ ; ಸು. 850).

[ತೆಂಕು + – ಆಯ್$_2$./ತುಳು. ತೆಂಕಾಯಿ, ತೆನ್ಕಾಯಿ]

**ತೆಂಕು, ಟೆಂಕ$_1$, ತೆಂಕ** (ನಾ). ದಕ್ಷಿಣದಿಕ್ಕು, — ದೆಸೆ : ತೆಂಕು, ಬಡಗು, ಪಡುದಿಕ್ಕುಗಳಲ್ಲಿಯೂ ಬೆಳಕು ಹರಡುವುದನ್ನು ಕಂಡಿದ್ದೇವೆ (ನಿಬಂಧ. I, ೪೯೪) ; ಗಿರಿಜ ಸತ್ತು ಪ್ರೇತವಾಗಿ ಸರೋವರದ ತೆಂಕಿನ ಹೊನ್ನೆಮರವನ್ನು ಆಶ್ರಯಿಸಿದ್ದಾಳೆ (ಪದ್ಯಸ. ೧೦). **ಟೆಂಕ$_1$** : ಕನಕಶೈಲಕೆ ಟೆಂ[ಪಾಠಾಂ. ತೆಂ]ಕವೆನಿಸಿ ರಾರಾಜಿಪುದು...ಅಯೋಧ್ಯಾಭಿಧಾನ ಪಟ್ಟಣಂ (ವೆಂಕಾರಾ. ೧-೪-೧). 'ಟೆಂಕದೆಸೆ' ಪರಾ. **ತೆಂಕ** : ತೆಂಕ ಪೇರೂರ ಪಳ್ಳಂ (ಎಕ. X, ಮುಳಬಾ. ೨೭-೬ ; 962) ; ತೆಂಕ ಪಾಲ್ವಳ್ಳಂ ... ಮೂಡಲೆರಡು ಪಳ್ಳದ ಕೂಡಲೆ ಮೇರೆಯಾಗೆ (ಸೌಇಇ. XI–i, ೫೨-೫೬; 1007); ಸುರರೆಲ್ಲಂ ಬಡಗಲು ನೆರೆದಿರೆಯಾ ದೆಸೆ ಕುಸಿದು ತೆಂಕ ನೆಗೆದೊಡೆ (ಸಮುಪ. ೧೦-೧೧೪); ಅದಱಿಂದೆ ತೆಂಕ ಕಿಂಪುರುಷವರ್ದೆ ತೆಂಕ ಹರಿವರ್ಷ (ಕಇ. IV, ೦-೧೩; 1204); ತೆಂಕ ಮುಂತಾಗಿ ನಡೆದನವನಿಪ ಸಮರಾಂಕಣಕಂದು ಲೀಲೆಯೊಳು (ಕುರಾಸಾಂ. ೧೧-೮೧).

**ತೆಂಕಣ್** = ದಕ್ಷಿಣದಿಕ್ಕು : ಮಂದಾನಿಲಂ ತೆಂಕಣಿಂ ಬರೆ ಚೈತ್ರಂ ಕುಡುವಫ್ಯ್ಕಲಾಜತತಿಯೋ (ಕಾದಂಪೂ. ೭೪೦) ; ಮೇರು ಪಡುವಣ್ಗೆ ಸ್ಸೀತಾತೀರಂ ತೆಂಕಣ್ಗೆ . . . ತನಗೆ ಸೀಮೆಯೆನಿಕ್ಕುಂ (ಮಲ್ಲಿಪು. ೨-೧೨) : ತೆಂಕಣ್ಗಾ ನಿರುಪಮ ದಿವ್ಯವಾಜಿ ನಡೆದತ್ತಾಗಳ್ (ಕುಸುಮಾ. ೧೦-೯೩೪) : ಕಂಪಿನೊಳೊಂದಿ ತೆಂಕಣಿಂ ಗಾಳಿ ಮೆಲ್ಲನೆ ಕೀಡುತಿದೆ (ಕಬ್ಬಿಕಾ. ೬೩). **ತೆಂಕಣ, ಟೆಂಕಣ, ತೆಂಕಳ** = ೧. ದಕ್ಷಿಣ ದಿಕ್ಕಿನ ; ದಕ್ಷಿಣಕ್ಕೆ ಇರುವ : ಪುಲಿಪದಿಯ ತೆಙ್ಕಣ ಪೇರೊಟ್ಟಿಯೆ ಪೇರ್ಬಿಳಿಕೆ ಎಱಗಲ ಕಱಣ್ಡಲೋ ಮುಕೂಡಲ್ (ಇಅ. XII, ೧೬-೧೭; 735) ; ಮೂಡಣ ದೆಸೆ ಯು ವ[ರಾಹ] ಕೆಱೆಯುಂ ಮೂಡಣ ಪಳ್ಳ ಅದಱ ತೆಙ್ಕಣ ದೆಸೆ [ಮಣ್ಣಗೆಱೆ] (ಸೌಇಇ. XI–i, ೯-೨೮; 862); ತೆಂಕಣೆಲರಲೆಪದಿಂದಂಕುರಿಸಿದ ಚೂತದಂತೆ ರೋಮಾಂಚಕಂಚುಕಿತಶರೀರನಾಗಿ (ಆದಿಪು. ೪-೨೦ ವ) ; ತೆಂಕಣ ಗಾಳಿ ಸೋಂಕಿದೊಡಂ . . . ನೆನೆವುದೆನ್ನ ಮನಂ ವನವಾಸಿದೇಶಮಂ (ಪಂಪಭಾ. ೪-೩೦); ತೆಂಕಣ ಭೂಪಾಲಕರಂ ಭೋಂಕನೆ ಪರಿದೆಯ್ದಿ ದರ್ಪಮಂ ಕಿಡಿಸಿ (ಧರ್ಮಾಮೃ. ೧-೧೧೨೨); ಅನಿಲಶರದಿಂದೂದಿದನು ಜಲನಿಧಿಯ ತೆಂಕಣ ತೀರಕಾ ಖಳನ (ತೊರರಾ. ೦-೦೦-೨೦); ಗಣನೆಯಿಲ್ಲದ ಕಪಿಗಳಂ ಕೂಡಿ ಕೊಂಡು ತೆಂಕಣ ಕಡಲ ತೀರದೊಳ್ಬಿಟ್ಟು ಬಂದೊಡೆ (ಜೈಮಿಭಾ. ೧೮-೭): ತೆಂಕಣ ಗಾಳಿಯು ಕೊಂಕಣ ಸೀಮೆಗೆ ಬಂತೈ ! (ಕವಿಪು. ೨೯-೬); ಪೂಗೊಳನ ತೆಂಕಳ ಗಾಳಿ ಸಂಚರಿಸಿತುಱ ಬನದೊಳು (ಏಕೋಪು. ೩-೮೦). ೨. ದಕ್ಷಿಣ ದಿಕ್ಕು: ಕರೆನಾಡು ಎಂಬುದು ... ತೆಂಕಣದ ಸೀಮೆಯನ್ನು ನಿರ್ದೇಶಿಸುವ ಹೆಸರು (ದ್ರಾವಿವಿ. ೮೨); ಬರುತ ಕರ್ನಾಟಕವನು ಕಳಿದುತ್ತರದಿಶಾಮುಖ ದಿಂದ ಟೆಂಕಣದೆಸೆಯ ಕೊಂಕಣಕೆ ಪರಮಪಾವನಮೂರ್ತಿ ಬಂದನು (ನಿಭಾಗ.೫-೪ -೩೯); ವಿಜಯಾದ್ರಿ ಟೆಂಕಣ ಶ್ರೇಣಿಯೊಳು ... ಪದ್ಮ ವರೂಥಖಚರವಿನೋದದೊಳು ತೆರಳಿದನು ದೇಶಭ್ರಮಣೆಗೆ (ಜಿನಭಾ. ೫೦-೧೮). **ತೆಂಕಣಂ**=ದಕ್ಷಿಣದೇಶಕ್ಕೆ ಸೇರಿದವನಂ: ಅಕಾರಕ್ಕೆ–ಮೂಡಣಂ, ತೆಂಕಣಂ, ಬಡಗಣಂ (ಶಮದ. ೧೧೧ ಪ್ರಯೋ); ತೆಂಕಲ್ ಪುಟ್ಟಿದಂ, ತೆಂಕಣಂ (ಶಬ್ದಾನು. ೨೯೨ ಪ್ರಯೋ). **ತೆಂಕಣರ್**=ಪಿತೃದೇವತೆಗಳು : ತೆಂಕಣರ್ ದೈವಂ ಬಿರ್ದೊರ್ಕ್ಕಲ್ ತಾನೆಂಬಿವೈದೆಡೆ ನಿಱಯೋವುದು ತಲೆ (ಕುಱಳ್. ೧-೫-೩). **ತೆಂಕಣರಾಯ**=ದಕ್ಷಿಣದೇಶದ ಅಧಿಪತಿ : ರಣದೊಳ್ ತೆಂಕಣ ರಾಯನಂಕದ ಚತುಃಸ್ಸೈನ್ಯೋತ್ಕರಂ ದಂಡೆಯುದ್ಧಣವೀತಂ (ಎಕ. XI, ದಾವಣ. ೨೫-೫೬ : 1224); ಹಣಿದಂಬೊಯ್ಕುಲ್ ಜವಂ ರಾಯರನೆ ಬಯಸಿ ಬರ್ಪಂತೆ ಸೋಮೇಶ್ವರಂ ತೆಂಕಣರಾಯಂ ಬಂದಂ (ಸೂಕ್ತಿಸು. ೧-೨೦). **ತೆಂಕಣಾದಿತ್ಯ** = ಹೊಯ್ಸಳರಾಜನಾದ ವಿಷ್ಣುವರ್ಧನನ ಒಂದು ಬಿರುದು: ವಿಷ್ಣುವರ್ಧನ ತೆಂಕಣಾದಿತ್ಯ ತೆಂಕಣಚಕ್ರವರ್ತ್ತಿ (ಎಕ. VII, ಶಿಪವೊ. ೬೯-೯ ; 1320). **ತೆಂಕಣಾಸೀಮೆ** = ದಕ್ಷಿಣದ ಸೀಮೆ : ಪಡುವಣ್ಣಾ ಸೀಮೆ ತಣ್ವಳ್ಳಿಗಾರ ಪಾಱ ತೆಙ್ಕಣ್ಣಾಸೀಮೆ ನೆಯ್ದಲ್ಗೆಱ (ಎಇ. XXI, ೧೭೮-೧೨೦ ; 8ನೆಯ ಶತ). **ತೆಂಕಲ್, ತೆಂಕಲು**=ದಕ್ಷಿಣದಿಕ್ಕು: "ಅವಾಚೀನಂ, ಅವಾಕ್—ಈ ೨ ತೆಂಕಲಾದುದಱ ಪೆಸರ್" (ಹಲಾಯು. ೧೬-೧೧೩) ; ತೆಂಕಲಾವುದೆನುತಂ ನೋಡುತ್ತುಮಿಂ ಪೋಗವೇೞ್ಪುದಿದಂ ತಲ್ಲದೆ ಬೇಱುಪಾಯವುಣಮಿಲ್ಲ (ಕಾದಂಪೂ. ೬೨೮) ; ತದ್ದವಾಡಿಗೆ ತೆಂಕಲ್ ತೊಱಗಲೆಗೆ ಬಡಗಲಿರ್ದುದು ನೆಱಯೆ ಸುಖೋದ್ದೀಪಮೆನಿಸಿ ಬೆಳುಗಲಿ ದೇಶಂ (ಅಜಿಪು. ೧೨-೪೪) ; ಆ ಕನಕಾದ್ರಿಯ ತೆಂಕಲ್ ಭೂಕಾಂತಾ ಕುಂತಳೋಪಮಂ ಕುಂತಳವಂತಾ ಕಾಂತವಿಷಯರಕ್ಷಕರೀ ಕಲಿಯುಗ ದಲ್ಲಿ ಪುಟ್ಟಿದಚ್ಚಾಲುಕ್ಯರ್ (ಎಇ. XX, ೧೨-೫ ; 1167) : ಉದ್ಭಟ ಭೂಮಿಪನುತ್ತರದಿಂ ಕೂರ್ತು ತೆಂಕಲಭಿಮುಖನಾದಂ (ಉದ್ಭಟ. ೨-೩೩) ; ಅದಱೊಪ್ಪುವ ತೆಂಕಲ್ ಪೆರ್ಚಿದ ಹಿಮವಾನ್ ಹೇಮಕೂಟನಿಷಧಂ ಬಡಗಲ್ ಸದಮಳನೀಲಶ್ವೇತಂ ಪದೆಪಿಂ ಶೃಂಗಿಗಳೆನಲ್ಕೆ ವರ್ಷ ಗಿರೀಂದ್ರಂ (ದಶಕು. ೭-೧೧) ; ಮೇರುಗೆ ತೆಂಕಲು ಸದಮಲ ಭರತಾವನಿ (ಇಅ. IX, ೯೭-೬ ; 1169) ; ಅತ್ತಲಿಹುದಾ ವರುಷ ಕಿಂಪುರುಷೋತ್ತಮ ಮದಱಿಂದ ತೆಂಕಲು ವರ ಹಿಮಾಚಲವು (ಸಂಭಪ. ೦೧-೩೦) ; ಮರಳಿ ಬಂದವರು ತೆಂಕಲು ಪಡುವಲು ಮೇವ ತುಱುವಿಂಡನು ಕೊಂಡು ಪೋಗಿ . . . ಒಪ್ಪಿಸಲು (ಜೀವಂಸಾಂ. ೮-೨೨).

[ದೇ.೫ ತಮಿ. ತೆಱ್ಕು, ತೆಕ್ಕು; ಮಲ. ತೆಕ್ಕು, ತೆಕ್ಕನ್;
ಕೊಡ. ತೆಕ್ಕಿ, ತೆಕ್ಕ್ಯ]

**ತೆಂಕುದಿಕ್ಕು** (ನಾ). ದಕ್ಷಿಣದಿಕ್ಕು : ತೆಂಕುದಿಕ್ಕಿನಲ್ಲಿರುವ ಐದಂಕಣದ ಮನೆಯನ್ನು ಅವರಿಗೆ ಕೊಟ್ಟು ತಾವು ಮಲೆನಾಡಿಗೆ ಹೊರಟು ಹೋಗಿದ್ದರು (ದೇವಹಂ. ೩೦). [ತೆಂಕು + ದಿಕ್ಕು]

**ತೆಂಕೈ** 'ತೆಂಕಾಯ್' ನೋ.

**ತೆಂಗಡೆ** (ನಾ). = ತೆಂಕಕಡೆ: ತೆಂಗಡೆಯಿಂ ಸುಳಿವ ಸುರಭಿವಾಯುವ ತಾಟನದಿಂ ತಳುವದೊಲೆವ ಲತೆಯಂತೆ (ಜಯುಕಾ. ೮-೫೯) ; ನಡೆತಂದಾ ಬಿಜ್ಜಾಧರ ಪೊಳಲ ತೆಂಗಡೆಯ ಶಬಾಲಯಕಾಗಿ ಕಡುನೀರರತಿ ಮುದದಿಂ ಪೋಗುತಿರೆ (ಶ್ರೀಪಾಲ. ೭-೧೫೨). [ತೆಂ + ಕಡೆ$_3$]

**ತೆಂಗಲೆ, ತೆಂಕಲೈ** (ನಾ). [ವಿಶಿಷ್ಟಾ] ವಿಶಿಷ್ಟಾದ್ವೈತಿಗಳಲ್ಲಿ ಹಣೆಯ ನಾಮದ ಕೆಳಗೆ ಪೀಠವನ್ನು ಹಚ್ಚುವ ಪಂಗಡ ; ರಾಮಾನುಜ ಭಕ್ತರ ಒಂದು ಪಂಥ : (ಕ). 'ಬಡಗಲೆ' ಪರಾ. **ತೆಂಕಲೈ**: ಶ್ರೀವೈಷ್ಣವಮತದ ಈ ತತ್ವ ಕ್ರಮೇಣ ಬಡಗಲೈ ತೆಂಕಲೈ (ಉತ್ತರ ದಕ್ಷಿಣ) ಭಾಗಗಳಾಗಿ ಒಡೆದವು (ಭಾರದ. ೨೯೭). [← ತಮಿ. ತೆನ್ಕಲೈ]

**ತೆಂಗಾಯ್, ತೆಂಗಾಯಿ, ತೆಂಗುಗಾಯ್, ತೇಂಗಾಯ್** (ನಾ). ತೆಂಗಿನ ಕಾಯಿ ; ತೆಂಗು ; ನಾರಿಕೇಳ : ತೆಂಗಾಯ ಪಾಸಟಿಯ ಕರ್ಕಶಕುಚಂಗಳ್ (ಸೌಂದಪು. ೭-೫೩) ; ತೆಂಗಾಯನು ಹೆರೆದದರ ಮೇಲಿಕ್ಕಿ (ಸೂಪಶಾ. ೩-೪) ; ಒಟ್ಟಿದ ಕಬ್ಬು ತೆಂಗಾಯಿಂದ ಮೆಱವುತ್ತಿದ್ದುದು ಖಡ್ಗಪೂಜೆ (ಭರಚ. ೨೦-೧೨೯) ;ತಟ್ಟೆಯ ತೆಂಗಾಯನು ಒಡೆದಲ್ಲಿಡು ಕೊಡು ಹಣ್ಗಳನಿಲ್ಲಿ (ಕೋಗಿಲೆ. ೮೦-೩೭). 'ಚೆಂದೆಂಗಾಯ್', 'ತೆಂಗಾಯ್ಗೊನೆ' ಪರಾ. **ತೆಂಗಾಯಿ** : ಸಣ್ಣಿಸಿದ ತೆಂಗಾಯಿ ತನಿವಾಲುಗಳ ಬೆರಸಿ . . . ಗಾರಿಗೆಯಡುವುದು (ಸೂಪಶಾ. ೧-೨೪); ತೆಂಗಾಯಿ ಪಲಸು ... ಬಹುಫಲಾದಿಗಳ ತೋಟಿಗರು ಸಾರಂಗಪಾಣಿಗೆ ಸಾರ್ಚಿದರು (ಪೋಹಕ. ೪-೩೨) ; ತೆಂಗಾಯಿ

ಯೊಳಗೆ ಪರಿಪೂರ್ಣಜಲ ಬಲಿದು ಹಿಂಗಿದಪ್ಪಂದ (ಸರ್ವಜ್ಞ. ೧೭೪).
**ತೆಂಗುಗಾಯ್ :** ಮುಡಿಪು ಕಟ್ಟುವರವರೆ ತೆಂಗುಗಾಯ್ ಬಾಳೆಗಾಯ್ . . . ನೈವೇದ್ಯನಿವಹಂಗಳಂ (ಶ್ರೀರಾಮಾ. ೭೦೩-೧೨೮). **ತೇಂಗಾಯ್ :** ಹೊಂಗೊಡದೊಳು ನೀರ ಹೊತ್ತ ಧೂರ್ಜಟಿಯಂತೆ ತೇಂಗಾಯ್‌ಮರ ಗಳೊಪ್ಪಿದುವು (ಮೋಹತ. ೩೪-೧೨) ; ಅವಲುಂ ಪುರಿಗಡಲೆಯು ಮುದ್ದ ಣಂಗೆ ; ಕಬ್ಬು ಕಬ್ಬಿಗಂಗೆ ; ತೇಂಗಾಯೆನಗ್ಗೈಸೆ (ರಾಮಾಶ್ವ. ೮೯-೫).
[ ತೆಂಗು₃ + ಕಾಯ್₁. ತಮಿ. ತೇಙ್ಕಾಯ್ ; ಮಲ. ತೆನ್ನನ್ ಕಾಯಿ ; ತೆಲು. ತೆಂಕಾಯ, ಟೆಂಕಾಯ ]

**ತೆಂಗಾಯಿ** 'ತೆಂಗಾಯ್' ನೋ.

**ತೆಂಗಾಯ್ಗೊನೆ** (ನಾ). ತೆಂಗಿನ ಕಾಯಿಂಗಳ ಗೊನೆ,–ಗೊಂಚಲು: ಕಕ್ಕಸದೆ ಬೆಳೆದ ತೆಂಗಾಯ್ಗೊನೆಗಳಂ ... ವನಪಾಲಕಂ ಪೊಟಿಸಿಕೊಂಡೈತಂದನು (ಜೆಬಪು. ೪೫-೨೯). [ ತೆಂಗಾಯ್ + ಗೊನೆ₃ (<ಗೊಲೆ₂) ]

**ತೆಂಗಾಯ್ಮೊಲೆ, ತೇಂಗಾಯ್ಮೊಲೆ** (ನಾ). ತೆಂಗಿನಕಾಯಿಯಂತಹ ಮೊಲೆ: ತೆಂಗಾಯ್ಮೊಲೆಯ ನುಣ್ಮೊಲೆಯ...ಮಹಾಪ್ರೌಢವನಿತೆಯರ್ ಕಣ್ಗೆಸೆದ ರಲ್ಲಿಗಲ್ಲಿ (ಜೆಬಪು. ೦೦-೨೦). **ತೇಂಗಾಯ್ಮೊಲೆ :** ನವೀನಲತಾಂಗದ ತೇಂಗಾಯ್ಮೊಲೆಯ...ತರಳಾಕ್ಷಿಯರೆಯ್ತಂದೀಕ್ಷಿಸಿದರ್ ನೃಪನ (ಜಯುಕಾ. ೧೦-೪೯). [ ತೆಂಗಾಯ್ + ಮೊಲೆ₁ ]

**ತೆಂಗಾಳಿ, ತೆಣ್ಗಾಳಿ** (ನಾ). ದಕ್ಷಿಣ ದಿಕ್ಕಿನಿಂದ ಬೀಸುವ ಗಾಳಿ : ಮದನೇಭ ಕ್ಕಾವ್ರುಮೊಂದಂಬುಜವೆರಡು ಕೊಳಂ ಮೂಱು ತೆಂಗಾಳಿ ನಾಲ್ಕು . . . ಅಳಿ ಪದಿಮೂಱಲ್ತೆ ಮತ್ತೋಪಚಾರಂ (ಶಾಂತಿಪು. ೯-೬೯) ; ತೆಂ[ಪಾಠಾಂ. ತಂ]ಗಾಳಿ ಪೇಱು ಒರಿದೊಂದುತ್ಸವಮಾಯ್ತು (ಕಾದಂಪೂ. ೯೦೦) ; ತನುಲತೆಯನ್ನೆದೆ ತೆಂಗಾಳಿಗೊಡ್ಡುವ ಕೋಮಲಾಂಗಿಯರು (ಹಡಕಾ. ೪-೩೯) ; ಈ ತೆಂಗಾಳಿ ತನ್ನಿಚ್ಛೆಯಿಂ ನಡೆತಂದಪ್ಪುದು (ಕಬ್ಬಿಕಾ. ೫೫) ; ಆಗರದೊಳು ರಸದಾಳಿ ತೆಂಗಾಳಿಯಂ ತಾಗಲೊಂದಱೊಳೊಂದು ಹಳಚಿ ಮೇಗೋಲ್ಗಳೊಡೆದಿನಿರಸದ ಪರಿಯೊಳಿಕ್ಷುಸಾಗರ ತುಂಬಿದಂತಾಯ್ತು (ಮೋಹತ. ೨-೪೮). **ತೆಣ್ಗಾಳಿ :** ತೆಣ್ಗಾಳಿಯಲೆಪದಿಂದೊಲೆದು ಪುಣ್ಯ ಪಣ್ಯಾರ್ಥಿಭವ್ಯಸಾರ್ಥಮನಿತ್ತಲೆಟ್ಟೆರ್ಪುದೆಂದು ಕೈಸನ್ನೆಯಿಂ ಕರೆವಂತೆ ಕರಮೆ ಸೊಗಯಿಸುವ ತಳಿರ್ಗೊಂಬುಗಳುಂ (ಚಂದ್ರಪು. ೨-೧೧೫).
[ ತೆಂ + ಗಾಳಿ₁ ]

**ತೆಂಗು₁** 'ತೇಂಗು₂' ನೋ.

**ತೆಂಗು₂** (ಕ್ರಿ). (?) : ಕರಂ ಬಿಂಕಂ ತೆಂಗುವ ಗೂಢಜತ್ರು ಸುದೃಢಾಯ ದ್ವಾಬಾಹುಕಾಂಡಂ (ಚಕವಿ. ೩-೨೦). [ ? ]

**ತೆಂಗು₃, ಟೆಂಗು** (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ; ನಾರಿಕೇಳ : "ನಾಳಿಕೇರಃ, ಲಾಂಗಲೀ, ಈ ೨ ತೆಂಗು" (ನಾಚಿರಾ. ೧೦೩); "ನಾರಿಯಲಿ ನಾಳಿಕೇರಂ ತೆಂಗೆನಿಕ್ಕು" (ಮಂಗರಾ. ೩೪-೧೧) ; ಎಲೆಯಡಕೆ ಯುಮಂ ತೆಂಗಿನೆಳನೀರುಮಂ ಕೊಳಲಿಂಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ತೆಂಗಿನ ಮರಂಗಳುಮಂ (ಪಂಪಭಾ. ೫-೪೭ ವ) ; ಶೀತಳಮಪ್ಪ ತೆಂಗಿನೆಳ ನೀರೊಳ್ . . . ಪುಂಡ್ರೇಕ್ಷು ಪಾನೀಯದೊಳ್ ಬೆಳೆದೋರಂತೊಱಗಿರ್ದು ತೋರ್ಪ ವಿಲಸತ್ಕರ್ಪೂರಶಾಳೀವನಾವಳಿಯಿಂದಂ ಕರಮೊಪ್ಪಿ ತೋರ್ಪುದು ಬನಂ (ಸುಕುಮಾ. ೧೦-೬೦) ; ತೆಂಗಿನ ಪೊಸನೇಣಂದಱು ದಿಂಗಳ್ವರಮಡಸಿ ಕಂಬಿಯಿಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ಧರ್ಮಾಮೃ. ೨-೯೨) ; ನಾಯ್ಗೆ ತೆಂಗೇವುದೊ ಕಾಗೆಗೇವುದೊ ರಸಾಯನಯುಕ್ತದ ಸಾರಭೋಜನಂ (ಲೀಲಾವ. ೨-೧೧೧) ; ಗಂಜೆಯನಾಗಳ್ ತೆಂಗಿನ ತಿಳಿವಟ್ಟಲೊಳಾ ತಂಗೆಟಿದಳ್ (ದಶಕು. ೧೨-೧೨೫) ; ತೆಂಗಿಗೆ ನೀರನೆಱೆದರೆ ಅಂಗೈಯಲ್ಲಿ ಫಲವು ಕಾಣುವಂತೆ (ಅಜಾಂಡೀ. ೬೦-೧೧) ; ತೆಂಗನು ಲಾಗಿಸಿ, ಅಡಕೆಯ ಬಾಗಿಸಿ . . . ಬಂತೈ ! ಬಂತೈ ! (ಕವಿಪು. ೨೮-೫) ; ಸಿಂಹಲದ್ವೀಪದಲ್ಲಿ . . . ತೆಂಗು ಮೊದಲಾದ ಫಲಗಳೂ ಬಹಳ ಆಗುತ್ತವೆ (ಮುಂಬಯಿ. ೪-೨೦೦); ತಲೆದೂಗೆ ತೆಂಗುಗಳ್ ಮೆರೆವ ಕಾಲೂರು (ಕಾಲೂರ. ೪೭-೬೭). **ಟೆಂಗು :** ಟೆಂಗು ಬಾಳೆಹಣ್ಣು ... ದ್ರಾಕ್ಷಿ ತಂದಿಹರು (ಸಿದ್ಧಪು. ೧೯-೮) ; ದೂರದ ದ್ವೀಪದ ಮೇಲಿನ ಟೆಂಗಿನಗಿಡಗಳು ... ಗೊಂಬೆಗಳಂತೆ ನಿಂತಿದ್ದವು (ಭೂಮಿತಾ. ೮೧).

**ತೆಂಗಿನಕಾಯ್, ಟೆಂಗಿನಕಾಯಿ, ತೆಂಗಿನಕಾಯಿ** = ತೆಂಗಾಯ್ : ತೆಂಗಿನ ಕಾಯದೊಂದು ಕಠಿನತ್ವಮನೊರ್ಮೆಯೆ ಕಂಡು ಪೊಲ್ಲದೆಂದೇಂ ಗಳ ಬೆಚ್ಚಿ ಭೀರುತನದಿಂ ಬಿಡದೊಯ್ಯನೆ ಮೂಸಿ ನೋಡಿ ನಾಯ್ಪಿಂಗಿದುದು (ಧರ್ಮಾಮೃ. ೧೧-೪೩) ; ಅಕ್ಕಿಯಡಕೆ ಓಲೆ ತೆಂಗಿನಕಾಯಿ ಕಂಡೆ (ಮಹಾದೇ. ಬ. ೪೦-೮೭) ; ಈಚೆಗೆ ಟೆಂಗಿನಕಾಯಿ ಬಹಳ ತುಟ್ಟಿ ಆಗಿವೆ (ರೂಢಿ) ; ತೆಂಗಿನ ಕಾಯ ಹೋಳ ಮಾಡಿದರು ಜೂದಿನಲಿ (ಮೋಹತ. ೨೦-೨೨) ; ಆಡಿ ಬಾ ಎನ ಕಂದ ಅಂಗಾಲ ತೊಳದೇನ ತೆಂಗೀನ ಕಾಯಿ ತಿಳಿನೀರ ತಕ್ಕೊಂಡು ಭಂಗಾರ ಮಾರಿ ತೊಳದೇನ (ಗರತಿ. ೮೬) ; ಉಪ್ಪಿನವ ಕೆಟ್ಟೆ ನೆಂದರೆ ತೆಂಗಿನಕಾಯಿಯ ಹೊರಳಿ ಹೊರಳಿ ಅತ್ತ (ಗಾದೆ). **ತೆಂಗಿನ ತಿರುಳೋಲೆ** = ತೆಂಗಿನ ಎಳೆಯ ಗರಿಯಿಂದ ಮಾಡಿದ ಓಲೆ : ಮಂಗಳ ಪ್ರಸಾಧನಮೆಸೆದತ್ತು ಕಪ್ಪುರದ ಕಂಠಿಕೆ ಬಣ್ಣದ ಸಣ್ಣ ಮಾಲೆ ತೆಂಗಿನ ತಿರುಳೋಲೆ ತಾವರೆಯ ನೂಲುಡೆನೂಲ್ (ಪಂಚತಂತ್ರ. ೩-೧೦೬) ; ಪೂವಿನ ಕಂಕಣ ತೆಂಗಿನ ತಿರುಳೋಲೆ ತಾವರೆನೂಲುಡೆನೂಲು ... ಭೂಷಾವಳಿ ಯಾದುದವಳಿಗೆ (ಕುಂತಾಸಾಂ. ೮-೩೪). **ತೆಂಗಿನ ಮರ** = ಒಂದು ಬಗೆಯ ಮರ ; **ತೆಂಗು :** ಎಲೆಯಡಕೆಯುಮಂ ತೆಂಗಿನೆಳನೀರುಮಂ ಕೊಳಲಿಂ ಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ತೆಂಗಿನ ಮರಂಗಳುಮಂ (ಪಂಪಭಾ. ೫-೪೭ ವ) ; ತೆಂಗಿನ ಮರ ಯಾಕೆ ಹತ್ತುತ್ತಿ ಎಂದರೆ ಕರುಕ್ಕಿಗೆ ಹುಲ್ಲು ಕುಯ್ಯೋದಕ್ಕೆ ಅಂದ (ಗಾದೆ) ; ತೆಂಗಿನ ಮರಕ್ಕೂ ಅಡಿಕೆ ಮರಕ್ಕೂ ಒಂದೇ ತಳಿಯೇ ? (ಗಾದೆ). **ತೆಂಗಿನ ಹಣ್ಣು** = ಬಲಿತ ತೆಂಗಿನಕಾಯಿ ; ತಳಲು : ಅಕ್ಕ ಕರಿಯವ್ವ ತಂಗೀಯು ಭದ್ರಕಾಳಿ ತೆಂಗಿನ ಹಣ್ಣಾ ಒಲೆ ಹೂಡಿ ಅಟ್ಟಲ್ಲೊ ... ಅಡಿಗೇಯಾ (ಹುಟ್ಟಿಹ. ೪೫). **ತೆಂಗಿನೋಲೆ** = ತೆಂಗಿನ ತಿರುಳೋಲೆ : ಮುಡಿದ ಪಾದರಿ ತೊಟ್ಟೆಳಮುತ್ತು ಸುತ್ತಿ ನೊಳ್ ಮಾಸದ ತೆಂಗಿನೋಲೆ ... ಸಂದ ಭೋಗಿಗೆ ವಿಲಾಸದ ದೇಸೆಯ ನುಂಟುಮಾಡುಗುಂ (ಸೂಕ್ತಿಸು. ೧೦-೦೩೯).
[ ದೇ.॥ ತಮಿ. ತೆಙ್ಕು, ತೆಙ್ಗ ; ಮಲ. ತೆಣ್ಣು ; ತುಳು. ತೆಂಗ್ ; ಕೊಡ. ತೆಂಗೆ ]

**ತೆಂಗುಗಱಿ** (ನಾ.) ತೆಂಗಿನ ಗರಿ, – ಸೋಗೆ ತೆಂಗುಗಱಿ ಕೊಡೆಯಿರ್ಪ ಕಡಲುಲಿಯ ಮನೆಯೇ (ಅಶ್ವತ್ಥಾ. ೩೫-೬೭೦). [ ತೆಂಗು₃ + ಗಱಿ ]

**ತೆಂಗುಗಾಯ್** 'ತೆಂಗಾಯ್' ನೋ.

**ತೆಂಗುದಿ** (ನಾ). ಕೆಂಪು ಬಣ್ಣದ ಪ್ರಾಣಿ : ಹರಿಣ–ಎರಳೆ, ಶಶ–ಮೊಲ, ಲೋಹಿತ–ತೆಂಗುದಿ (ಬಾಹಟೀ. ೨-೨-೬೨ ವ).
[ P ಇದು 'ಕೆಂಗುಱಿ' ಇರಬಹುದೆ ? ]

**ತೆಂಗುಹ** 'ತೇಂಗುಹ' ನೋ.

**ತೆಂಟು, ತೆವಟು** (ಕ್ರಿ). ಮೊರದಿಂದ ಕೇರು : "ತೆಂಟು–ಶೂರ್ಪಕರಣೇ (ಕೇರು)" (ಶಮಧಾ). **ತೆವಟು :** (ಕ).
[ ದೇ.॥ ತಮಿ. ಮಲ. ತೆಳ್ಳು ; ಕುರುಖ್. ತೆಲ್ನಾ ; ಮಲ್ತೊ. ತೇಲೆ ]

**ತೆಂಟೆ** (ನಾ). ಜೂಜುಕಟ್ಟೆ: ಕಂಡನವಂ ತೆಂ[ಪಾಠಾಂ. ತೇಂ, ದೀಂ] ಟೆಯೊಳ ನಿಂದು ಜೂಜಾಡುವವನಂ (ಪಾರ್ಶ್ವಪು. ೪-೨೦). 'ತಿಂಟೆ' ಪರಾ.
[ < ಪ್ರಾ. ಟೆಂಟಾ ]

**ತೆಂಡೆ** 'ತೆಟ್ಟೆ' ನೋ.

**ತೆಂಡೆಸುತ್ತು** (ಕ್ರಿ). ಬೆಳೆಯಂತ್ರಿರಂವ ಕಬ್ಬಿನ ಜಲ್ಲೆಗಳಂ ಕೆಳಗೆ ಬೀಳದಂತೆ ಗರಿಗಳಿಂದ ಸುತ್ತಿಕಟ್ಟು : (ಕ).
[ ತೆಂಡೆ (< ತೆಟ್ಟೆ) + ಸುತ್ತು$_1$ ]

**ತೆಂದೆಸೆ** (ನಾ). = ತೆಂಕದೆಸೆ: ಬಲಿತನವನು ಬಡವಾಗಲ್ ಸಲೆ ತನ್ನಯ ನೆಳಲು ತೆಂದೆಸೆಗೆ ಪೋಗುವದಂ ಭಳಿಲನೆ ಕಾಣಲ್ ಪ್ರಾಣಂ ಅಳಿವುದು ತಾ ಸತ್ಯಮೈದುದಿನದೊಳಗೆ (ಪಂಚತ. ೪೮-೩೨). [ ತೆಂ + ದೆಸೆ$_2$ ]

**ತೆಂಪು** (ನಾ). ಶೌರ್ಯ ; ಸಾಹಸ : ತೆಂಪಿನಿಂದೈತರುವಕಂಪನನ ಭರಕೆ ಭೂಕಂಪವಾಗಲ್ಪವನತನಯು ಕೋಪದಲಾ ನಿಲಿಂಪತತಿ ಸಂತಸಂಗೊಳುವಂತೆ ದೈತ್ಯನಂ ಸಂಹರಿಸಿದಂ ರಣದೊಳು (ವೆಂಕಾರಾ. ೬-೨೦ ಸೂಚನೆ). [ ದೇ.॥ ತಮಿ. ತೆಮ್ಬು ; ತೆಲು. ತೆಂಪು ]

**ತೆಂಪುಗಾರ** (ನಾ). ದುಂದುಗಾರ (?) : ಅಂಥ ತೆಂಪುಗಾರನಾದ ನೀನು ನಮ್ಮ ಸಾಲವನ್ನು ಹೇಗೆ ತೀರಿಸುವಿ (ಕಥಾಮಂ. IV, ೪).
[ ತೆಂಪು? + – ಗಾರ (< – ಕಾಱ) ]

**ತೆಂಬ** (ನಾ). ತಿಟ್ಟು ; ದಿಣ್ಣೆ ; ತೆವರು : ಬೆಟ್ಟಕ್ಕಿಂತಲೂ ಚಿಕ್ಕದಾದರೆ ಗುಡ್ಡ, ದಿಣ್ಣೆ, ಬೋರೆ, ತೆಂಬ, ತೆವರು ಎಂಬ ಹೆಸರುಗಳು ಬರುತ್ತವೆ (ಭೂಗೋ೪. ೧೧) ; ಇಂಬು ಮಾಡ್ಯಾರ ಅಣಿಗೇರಿ ತೆಂಬೊಳ್ಳೇದೆಂದೂ ಇಳಿದಾರ (ಕಜಾಗೀ. ೪೯) ; ಆ ಎತ್ತುಗಳು . . . ತಿಪಟೂರು ಕುಣಿಗಲ್ಲುಗಳಿಗೆ ಕಾಯಿ ಕೊಬರಿ ಬೆಲ್ಲ ತುಂಬಿದರೆ ಎಂಥ ತೆಂಬದಲ್ಲಿಯಾದರೂ ಸಲೀಸಾಗಿ ಎಳೆಯುತ್ತಿದ್ದುವು (ವನ್ಯೂರು. ೩೫). [ ? ]

**ತೆಂಬಾಲ** (ನಾ). ಒಂದು ಪ್ರದೇಶದ ಹೆಸರು (?): ಬಸದಿಯ ಪೂಜಿಗಣ ಪಿತ್ತಿಲೋದ್ಧಾಪಮುಂ ತೆಂಬಾಲದೊಳು . . . ಕೊಟ್ಟ ಮಣ್ಣು (ಎಕ. X, ಕೋಲಾರ. ೯೦-೯೦ ; 903). [ ? ]

**ತೆಂಬುಟಿ** (ನಾ). (?) : ತೆಂಬುಟಿ [ ಪಾಠಾಂ. ಪೆಂಪುಳಿ ] ಯೋಪಗ್ಗದನೇಕ ಭಂಗಿಯ ನವೀನಸ್ವಾದುವೆತ್ತಪೂರ್ವಗಾಯ್ಗಳನಾಳೋಕಿಸಿ ತಂದು ಬಡ್ಡಿಸಿದರ್ (ಶಾಂತೀಶ್ವ. ೦೫-೭೦). [ ? ]

**ತೆಂಬೆರಲ್** 'ತೆಂಬೆಲರ್' ನೋ.

**ತೆಂಬೆಲತ್ತಪಳ್ಳ** (ನಾ). ಒಂದು ಪ್ರದೇಶದ ಹೆಸರು (?) : ಕೆಟ್ಟಿಯು ಕೆಟುಗೆ ತೆಂಬೆಲತ್ತಪಳ್ಳ ಕಟನಿ ಮೂಗಣ್ಣುಗವೆಡೆ (ಎಕ. X ಕೋಲಾರ. ೯೦-೮೮ ; 903). [ ? + ಪಳ್ಳ ]

**ತೆಂಬೆಲರ್**, ತೆಂಬೆರಲ್, ತೆಂಬೆಲರಂ (ನಾ). = ತೆಂಗಾಳಿ : ಊದುವ ತೆಂಬೆಲರಿಂ ಬೆಡಂಗುವೆತ್ತು (ಎಇ. XIII, ೩೩೦-೨೮ ; 929) ; ಬೀಸಿದುದು ತೆಂಬೆಲರಪ್ಪಿಕೊಳ್ವವೊಲ್ (ಆದಿಪು. ೨-೬೫) ; ತೆಂಬೆಲರಲೆಪದ ಪೂಲತೆಯೆಂಬಿನಮಂಕುರಿಸೆ ಪುಳಕಮೊಪ್ಪೊರ್ದಲೊಳೆ ಬಿಲ್ಲುಂಬೆಜಿಗುವಾಗಿ ಸತಿ ಚೋದ್ಯಂಬಟ್ಟಳ್ (ಶಾಂತಿಪು. ೧೧-೭) : ಮೆಲ್ಲಗೆ ನಡೆದಪ್ಪುದು . . . ತೆಂಬೆಲರ್ (ವರ್ಧಪು. ೧-೬೬) ; ಪೂಗಳ ಪೊಸಗಂಪಿನೊಳ್ ಪೊರೆದು ತೀಡುವ ತೆಂಬೆಲರಂತೆ . . . ಸೋಲಿಸದೆ ಕಾವನ ಕಬ್ಬಮದಾರನಾದೊಡಂ (ಕಬ್ಬಿಕಾ. ೦೪); ತೆಂಬೆಲರ್ ತೀಡೆ ತುಂಬಿಗಳಾಡೆ (ಶ್ರೀರಾಮಾ. ೪೯೬-೨೯೭) **ತೆಂಬೆರಲ್** : ಬಂದಾಡುವ ತೊಂಡುವೆಣ್ಬುರುಳಿ ತೀಡುವ ತೆಂಬೆರಲ್ (ಪಂಪಭಾ. ೩-೩೭) ; ತೆಂಬೆರಲ್ ಪೊರೆಪೊರೆಯ ಸಡಿಲ್ಚೆ ನಡು ಪೊಂಗಿರೆ ಮಲ್ಲಿಗೆಗಳ್ ಬಸಂತದೊಳ್ ಬಿರಿದೊಡೆ (ಪಂಪಭಾ. ೫-೩೩) ; ಪಾರದೆ ವಸಂತಮಂ ಕೈವಾರದೆ ತೆಂಬೆರಲ [ ಪಾಠಾಂ. ತೆಂಬೆಲರ]ನಾ ಮುನೀಶನ ಬರವಿಂ ಪಾರೈಸಿದಂದದಿಂ ಸಹಕಾರಂ ತಾಳ್ದಿತ್ತು ಪುಳಕಮೆನೆ ಕಳಿಕೆಗಳಂ (ಚಂದ್ರಪು. ೨-೯೦). **ತೆಂಬೆಲರು** : ತೆಂಬೆಲರೊಯ್ಯನೆ ತೀಡೆ ನಿದ್ರಾಂಗನೆ ಗಿಂಬುಗೆಯ್ದನು ತನ್ನೊಡಲ (ಕರ್ಣವ್ಯ. ೪-೫). [ತೆಂ + ಎಲರ್]

**ತೆಂಬೆಲರು** 'ತೆಂಬೆಲರ್' ನೋ.

**ತೆಕಿಮುಕ್ಕಿ** 'ತಕ್ಕೆಮುಕ್ಕೆ' ನೋ.

**ತೆಕಿಮುಕ್ಕಿಬೀಳು** 'ತೆಕ್ಕಿಮುಕ್ಕಿಬೀಳು' ನೋ.

**ತೆಕ್ಕನೆ** (ಅ). ೧. ತಕ್ಷಣ; ಕೂಡಲೆ; ಒಡನೆ: ಆತನ ಭಾವ ಭಣಿತೆಯಾನಜೀಪವೊಲು ನಾನೊಂದುಪಾಯವನು ತೀವಿ ತೆಕ್ಕನೆ ಸಿಕ್ಕಿಸುವೆನು (ಪ್ರಭುಲೀ. ೨೦-೮) ; ಅಸುರರ ಸಂತತಿಯುಂ ಮುಂ ತೀವಿದ ಕೃತಕಧ್ವಾಂತಮುಮಾ ಜಯಭೂಪತಿ ದಿನಕರಶರಮಂ ಬಿಡಲೊಡನೆ ತಾಂ ತೆಕ್ಕನೆ ಪರೆದತ್ತು (ಜಯಕಾ. ೭-೩೩): ಏನು ತೆಕ್ಕನೆ ಚಿಂತಾಗ್ರಸ್ತರಾದಿರಿ? (ಚಂದ್ರಸ. ೦೨): ದಾಳಿಂಬೆಹಣ್ಣನು ತಿನ್ನುವ ಕವಿ ಅದನ್ನು ತಿನ್ನುತ್ತಾ ತೆಕ್ಕನೆಯೇ ಆ ಸವಿಯ ಮೂಲಕ್ಕೆ ಹೊರಟರುವುದು ಇದರ ವಿಶೇಷ (ಸೌಂದಸ. ೩೩). ೨. ಹೆಚ್ಚಾಗಿ; ಅತಿಶಯವಾಗಿ; ಅಧಿಕವಾಗಿ; ಬಹಳವಾಗಿ : ಆ ಶಿಶುವಿನಟಿಕ್ಕೆ ತೆಕ್ಕನೆ ತೀವಿತ್ತನಿತುಂ ದಿಕ್ತಟಮಂ (ಜಗವಿ. ೩-೦೨); ಜನನಿಯ ಶರೀರದೊಳ್ ತೆಕ್ಕ[ಪಾಠಾಂ. ಕ್ಕೆ]ನೆ ತೀವಿದ ರಾಗರಸದೊಳೋಲಾಡಿಯೆ . . . ಬಳೆವಂತೆ (ಚಂದ್ರಪು. ೩-೯೯): ಆ ರವವೆಣ್ದೆಸೆಯೆಲ್ಲಮಂ ತೆಕ್ಕನೊತ್ತರಿಸಿ ತೀವಿರೆ (ಧರ್ಮಪ. ೩-೩).

**ತೆಕ್ಕತೆಕ್ಕನೆ** (ದ್ವಿರುಕ್ತಿ) : ಕಾಳೋರಗನಿಶ್ವಾಸಾನಿಳನಿಂ ಜಗುನೆಯ ಮಡು ತೆಕ್ಕತೆಕ್ಕನುಕ್ಕುತಿರ್ಕುಂ (ಅರ್ಧನೇ. ೮-೪೧) ; ಕಮಂಡಲಜಲಂ ತೆಕ್ಕತೆಕ್ಕನೆ ಕುದಿಯೆ (ಹಚಕಾ. ೨-೩೩) : ಪದಪದಾರ್ಥಂಗಳು ಪಚನಕಾಲದೊಳೊಡನೊಡನೆ ತೆಕ್ಕ[ಪಾಠಾಂ. ಕ್ಕು]ತೆಕ್ಕನೆ ಕುದಿಯೆ (ಬಸಪು. ೩೬-೪೬); ಜಲಕ್ಕನಾದಾನಂದರಸಭರಿತನೇತ್ರದಿಂ ತೆಕ್ಕತೆಕ್ಕನೆ ನೆಗೆವುತಿರ್ಪ ಬೆಮರ್ವನಿಗಳಿಂದಿರದೆ ಸೆರೆ ಬಿಗಿವ ಕೊರಲಿಂ... ಮೆಯ್ಯಿಕ್ಕಿ (ಪದ್ಮರಾ. ೫-೨೫). **ತೆಕ್ಕನೆ** ತೀವು=ಜಡಿದು ತುಂಬು; ಅಂಚು ಮುಟ್ಟ ತುಂಬು: ಕರಿಯ ಕರಗಮಂ ತೆಕ್ಕನೆ ತೀವಿ (ವರ್ಧ್ಮಾರಾ. ೦೦೩-೨೭): ತೆಕ್ಕನೆ ತೀವಿದ ಕಣ್ಣ ನೀರೊಳ್ ದೆಸೆಗಾಣದೆ ನಿಂದಿರ್ದ ಸುಯೋಧನನಂ ಸಂಜಯನಿಂತೆಂದಂ (ಪಂಪಭಾ. ೧೩-೫೭ ವ); ಮನದೊಳ್ ತೆಕ್ಕನೆ ತೀವಿದೊಂದು ಪರಮಸ್ನೇಹಾಮೃತಂ ಕಣ್ಗಳಿಂದೆನಸುಂ ಪೊಣ್ಮಿದುದೆಂಬಿನಂ ಸುರಿವಿನಂ ಹರ್ಷಾಶ್ರು (ಜಗವಿ. ೬-೮೫); ಹೊಕ್ಕಳು ಗುಣ್ಣುಗೆಟ್ಟುದು ಪೊಡಲೊಳು ಶಿಶು ತೆಕ್ಕನೆ ತೀವಿ ಜೀವಿಸಲು (ಮೋಹತ. ೧೭-೭). [ ? + – ಅನೆ$_1$ ]

**ತೆಕ್ಕನೆವೋಗು** (ಕ್ರಿ). ೧. ವಿಸ್ಮಯಂಪಡಂ; ಅಚ್ಚರಿಗೊಳ್ಳು : ಆ ಭವದೊಳ್ ನೀಂ ವನಚರನೆ ಎನಲೊಡಂ ತೆಕ್ಕನೆವೋದಂ ಜನ್ಮನಾಟಕಕ್ಕವನೀಶಂ (ಅರ್ಧನೇ. ೪-೫). ೨. ಗಾಬರಿಯಾಗು : ಇತ್ತ ಲೀಲಾವತಿ ನಿಜವಲ್ಲಭಂ ಮಲ್ಲಿಕಾಮಂಡಪದೊಳಿಲ್ಲದುದಂ ಕಂಡು ತೆಕ್ಕನೆವೋಗಿ (ಲೀಲಾವ. ೦೪-೦೦೬ ವ). [ <ತೆಕ್ಕು$_2$ + ಪೋಗು$_1$ ]

**ತೆಕ್ಕಾಡು** 'ತೇಂಕಾಡು' ನೋ.

**ತೆಕ್ಕಾಮುಕ್ಕೆ** 'ತಕ್ಕೆಮುಕ್ಕೆ' ನೋ.

**ತೆಕ್ಕಾಮುಕ್ಕೆಬೀಳು** 'ತೆಕ್ಕಿಮುಕ್ಕಿ ಬೀಳು' ನೋ.

**ತೆಕ್ಕಿಮುಕ್ಕಿ** 'ತಕ್ಕೆಮುಕ್ಕೆ' ನೋ.

**ತೆಕ್ಕಿಮುಕ್ಕಿಬೀಳು**, ತೆಕಿಮುಕ್ಕಿಬೀಳು, ತೆಕ್ಕಾಮುಕ್ಕೆಬೀಳು (ಕ್ರಿ). ೧. ಬಲವಾಗಿ ತಬ್ಬು; ಗಟ್ಟಿಯಾಗಿ ಅಪ್ಪಿಕೊಳ್ಳು : ನಿಮ್ಮ ತಾಯಿ ಪುನರ್ಜನ್ಮವನ್ನು ಹೊಂದಿದ್ದಾಳೆ ಬಹಳ ಹೊತ್ತು ತೆಕ್ಕಿಮುಕ್ಕಿಬೀಳಬನ್ನಿರಿ (ಉರಾಹ. ೧೩೦) ; ಮುಳುಗುವವನು ಬೆಂಡಿಗೆ ತೆಕ್ಕಿಮುಕ್ಕಿಬಿದ್ದಂತೆ ಏನನ್ನಾದರೂ ಹಿಡಿಯ ಹೋಗುವನು (ಬಾಳಬ. ೨೬). ೨. (ಆಲಂ) ಕೂಡಿಕೊಂಡು ಬರು ; ಜೊತೆಯಲ್ಲಿ ಬರು : ಇತ್ತೀಚಿನ ಆರು ವರ್ಷಗಳಲ್ಲಿ ಮತ್ತೆ ಸುಖ ದುಃಖ ತೆಕ್ಕಿಮುಕ್ಕಿಬಿದ್ದು ಬಂದಿವೆ (ಕಂನಾಸಾ. ೦೦೪). **ತೆಕಿಮುಕ್ಕಿಬೀಳು** : ೧. ಮುಳುಗಾಂವ ಬೆಂಡಿಗೆ ತೆಕಿಮುಕ್ಕಿಬಿದ್ದಾಂಗ (ಗರಿ. ೦೦೦-೪). **ತೆಕ್ಕಾಮುಕ್ಕೆಬೀಳು** : ೧. ವೆಂಕಣ್ಣಮಾಸ್ತರರನ್ನು ಮತ್ತೆ ಕುಂತಿ ಗಾಂಧಾರಿಯರು ತೆಕ್ಕಾಮುಕ್ಕೆ ಬಿದ್ದಿದ್ದರು (ದೀಪಹ. I, ೪೯).
[ತೆಕ್ಕಿಮುಕ್ಕಿ ( <ತಕ್ಕೆಮುಕ್ಕೆ) + ಬೀಳು$_1$ (< ಬೀೞ್$_1$)]

**ತೆಕ್ಕಿಸು** 'ತ್ರುಟ್ಕಿಸಂ' ನೋ.

**ತೆಕ್ಕು$_1$** 'ತೇಗು$_1$' ನೋ.

**ತೆಕ್ಕು$_2$** (ಕ್ರಿ). ೧. ಅಂಜು; ಹೆದರು; ಭಯಂಪಡು : ಮುನಿದೊಡಂ ಮುಟ್ಟಿ ನೋಯಿಸಿದಡಂ ತೆಕ್ಕನೀತನನೆಂತು ಹುಸಿಯ ನುಡಿಸುವೆನೆಂದು ಚಿಂತಿಸುತ (ಹಿಕಳ. ೮-೪೩); ಕಾಡುವಂ ಶಿವನಂತದರ್ಕೆ ತೆಕ್ಕದೆ ಭಕ್ತ ರಾಢಿದುಕ್ತಿಯನೆ ಮನ್ನಿಸುತೆ (ಪದ್ಮರಾ. ३-೯); ಮನೋಜನ ಸಡಗರಕ್ಕೆ ತೆಕ್ಕಿದಳು...ಬೆಚ್ಚಿದಳಂಗಜಾಸ್ತ್ರದಲಿ (ಕುವ್ಯಾಅ. ೮-೨೦); ತೆರಳದೆ ತೆಕ್ಕದೆ ತೆಱಹುಗೊಡದೆ ರಾಮನಿರೆ ಮೆಚ್ಚಿದರು ದೇವತೆಗಳು (ಕುರಾಸಾಂ. ೨೦-೨೪). ೨. ಹಿಮ್ಮೆಟ್ಟು ; ಸೋಲು : ಎಂತಪ್ಪ ವಿದ್ವಾಂಸರುಂ ತನಗೆ ತೆಕ್ಕುವರ್ (ಸಾಮುರ.ಹ. ೨೩೮-೧); ಹಿಡಿ ಗುದಿಗಾಲ್ಗಳಂ ಕಟ್ಟಿ ಗೋತಮಂ ತೆಗೆ ತೆಕ್ಕದೊಡೆ ಕುತ್ತಿ ಕೆಡಹು (ಸಿಂಗಿರಾ. ३-೧೮); ಸಿಡಿಲ ಪೊಡರ್ಪು ತೆಕ್ಕುವಂತು ಗುಡುಗುಡಿಸಿ ಗುಡುಗಿ ಬೊಬ್ಬಿಱಿದಂ ಕಲಿಯಣಾವಂ (ರಾ ಮಾ ಕೃ. ೧३೧-३೦). ३. (?): ನಿಱಿ ತೆಕ್ಕಿದ [ ದೆ ] ರಳೆ ತೆರೆಗಳ್ ಪೊಱಮಾಱಿ ಭೋಂಕನಪ್ಪ ಘನನುಣ್ಣೊಡೆಯುಂ ನಿಱಿ ಸೋಂಕಿ ಸೋಂಕೆ ಕೊಳನಂ ತುಱುಗೆವೆಗಳ್ ತುಱುಗೆ ಪೊಕ್ಕುದಬಲಾನೀಕಂ (ಸೂಕ್ತಿಸು. ೧೨-೨३).

**ತೆಕ್ಕು$_3$** (ಕ್ರಿ). (ಪ್ರಾಣಿಗಳಂತೆ) ನಾಲಗೆ ಯಿಂ ನೆಕ್ಕಿಕೊಳ್ಳು: "ತೆಕ್ಕು–ತಿರ್ಯಕ್ಕಂಡೂತಿ ಲೇಹನೇ (ನವಗೆ ನೆಕ್ಕು)" (ಶಮದಾ).

[P ಇದು 'ತಿಕ್ಕು' ಎಂಬುದರ ಅಪಲಿಖಿತವಿರಬಹುದು]

**ತೆಕ್ಕೆ$_1$** 'ತಟ್ಕೆ' ನೋ.

**ತೆಕ್ಕೆ$_2$** 'ತಕ್ಕೆ$_3$' ನೋ.

**ತೆಕ್ಕೆಗಟ್ಟು, ತಕ್ಕೆಗಟ್ಟು$_1$** (ಕ್ರಿ). ೧. ಸುರುಳಿಗಟ್ಟು ; ಸುರುಳಿ ಸುತ್ತು ; ಸಿಂಬೆ ಸುತ್ತು : ಕುಂಡಲೀ, ಜಿಹ್ಮಗಃ—ಈ ೨ ತೆಕ್ಕೆಗಟ್ಟಿದ ಹಾವು (ಹಲಾಯು. ೦೦೫-೧೯); ತಲೆಸುತ್ತ ತೆಗೆದೊಡನೀಡಾಡಲಾ ಕೇಶ ನೆಲದೊಳಿರ್ದುದು ತೆಕ್ಕೆಗಟ್ಟಿ (ಭರಜ. ೬೦-೯೨). ೨. ರಾಶಿಯಾಗು ; ದಟ್ಟೈಸು ; ಸಂದಣಿಸು : ಪರಿಖೆಯ ತೆರೆವೊಯ್ಲಿಂದಂ ತೆರಳ್ದು ತಡಿವಿಡಿದು ತೆಕ್ಕೆಗಟ್ಟಿದ ಪೊಂದಾವರೆಯ ರಜದಂತೆ (ಮಲ್ಲಿಪು. ೨-೬೪) : ಹೊಡಕರಿಸಿ ಹೊದಱಿದ್ದು ಮುಂದಕ್ಕೆ ನಡೆನಡೆದು ಕೈ ಮಾಡಿ ಕಾಯದ ತೊಡಕನೊಲ್ಲದೆ ತೆಕ್ಕೆಗ[ ಪಾಠಂ. ಗೆ ]ಟ್ಟಿತು ಭಟರು ನಾಕದಲಿ (ಕುವ್ಯಾಭೀ. ೯-೧೮). ३. ಒಂದರೊಡನೊಂದು ಬೆರೆ ; ಕೂಡು ; ತೊಡಕುಹಾಕಿಕೊಂಡಿರು : ತೆಕ್ಕೆಗಟ್ಟಿರ್ದ ಫಣಿಪತಿಯ ಭಾವದಿಂದೆಸೆವ ಬಜ್ಜರವರಲ ಬಾಹುಪೂರಕ (ಸೌಂದಪು. ೭-೨೭). **ತಕ್ಕೆಗಟ್ಟು$_1$** : ೪. ಒಟ್ಟಿಗೆ ಸೇರಿಸಿ ಕಟ್ಟು ; ಪಿಂಡಿ ಮಾಡು : ಆ ಹುಲ್ಲೆಲ್ಲವನ್ನೂ ತೆಕ್ಕೆಗಟ್ಟು (ರೂಢಿ).

[ತೆಕ್ಕೆ$_1$ (<ತಟ್ಕೆ) + ಕಟ್ಟು$_1$]

**ತೆಕ್ಕೆಗೆಡಿಸು** (ಕ್ರಿ). ಗುಂಪುಗೆಡಿಸು ; ಚೆದರಿಸು : ಕಕ್ಕಸದೊಳೆಕ್ಕತುಳಕ್ಕೆತಂದ ವೀರರಂ ಮುಕ್ಕುರಿಕಿ ತೆಕ್ಕೆಗೆಡಿಸಿದಂ (ಜೈಮಿಭಾ. ೧೪-೬).

[ತೆಕ್ಕೆ$_1$ (<ತಟ್ಕೆ) + ಕೆಡಿಸು$_1$].

**ತೆಕ್ಕೆಗೆಡೆ** (ಕ್ರಿ). ಗುಂಪಾಗಿ ಬೀಳು ; ರಾಶಿಯಾಗಿ ಬೀಳು : ಮಿಕ್ಕು ನೂಕುವ ಕುದುರೆಕಾಱರು ತೆಕ್ಕೆಗೆಡೆದರು ಸಂದಣಿಸಿ ಕೈಯಿಕ್ಕಿದಾನೆಯ ನೇನನೆಂಬೆನು ಕಾಣೆನಳವಿಯಲಿ (ಕುವ್ಯಾದ್ರೋ. ೫-३).

[ತೆಕ್ಕೆ$_1$ (<ತಟ್ಕೆ) + ಕೆಡೆ$_1$]

**ತೆಕ್ಕೆಗೆಯ್** 'ತಟ್ಕೆಗೆಯ್' ನೋ.

**ತೆಕ್ಕೆಗೈ** 'ತಟ್ಕೆಗೆಯ್' ನೋ.

**ತೆಕ್ಕೆಗೈಸು** (ಕ್ರಿ). ಅಪ್ಪುವಂತೆ ಮಾಡು ; ತಬ್ಬಿಸು: ನಿನ್ನ ಉರಿವ ಗಾಜಿನ ಕಂಭಕೆ ತೆಕ್ಕೆಗೈಸಿ ಪರಿಭವದೊಳು ಬಳಲುವಾಗ ಹರಿಪುರುಷೋತ್ತಮನ ನಾಮ ನೆನೆಗೊಡದೆಲೆ ಮನ (ಪುರಂದ. ೧-೧೪೨-೬).

[ತೆಕ್ಕೆಗೈ (< ತಟ್ಕೆಗೆಯ್) + – ಸು$_1$]

**ತೆಕ್ಕೆಗೊಳ್** ತಟ್ಕೆಗೊಳ್' ನೋ.

**ತೆಕ್ಕೆಗೊಳ್ಳು** 'ತಟ್ಕೆಗೊಳ್' ನೋ.

**ತೆಕ್ಕೆಗೋಲ್** (ನಾ). ಗುಂಪಾಗಿ ಬರುವ ಬಾಣ : ಹೊಕ್ಕವಾನೆಗಳೆರಡು ಸೇನೆಯೊಳೊಕ್ಕಲಿಕ್ಕಿದವೆಸುವ ಜೋದರ ತೆಕ್ಕೆಗೋಲಿನ ಮಾಲೆ ಮುಕ್ಕುಳಿಸಿದವು ದಿಗುತಟವ (ಕುವ್ಯಾಭೀ. ४-೬೫). [ತೆಕ್ಕೆ$_1$ (<ತಟ್ಕೆ) + ಕೋಲ್$_1$]

**ತೆಕ್ಕೆತುರುಬು** 'ತೆಕ್ಕೆದುಱುಂಬು' ನೋ.

**ತೆಕ್ಕೆದುಱುಂಬು, ತೆಕ್ಕೆತುರುಬು, ತೆಕ್ಕೆದುಱುಬು** (ನಾ). ಸುರುಳಿ ಸುತ್ತಿ ಕಟ್ಟಿದ ಮುಡಿ : ತೆಕ್ಕೆದುಱುಂಬಿನ ತೊಂಡಿಲು ಮಣಿಬಲೆ ಚೊಕ್ಕ ಬೊಟ್ಟಿಕ್ಕಿದ ರವಕೆ ಇಕ್ಕಿ ಲೆಕ್ಕಿಸಿ ತಿದ್ದಿ ನಿಱಿವಿಡಿದುಡಿಸಿದ ಸುಕ್ಕಿನಂಬರದೊಳೆಸೆದರು (ಭರಜ. ३೦-४೧). **ತೆಕ್ಕೆತುರುಬು** : ಅಡ್ಡ ಮುಡಿ, ಸೋರುಮುಡಿ, ದೊಡ್ಡಮುಡಿ, ತೆಕ್ಕೆತುರುಬು ಮುಂತಾದ ಶೃಂಗಾರದ ತುರುಬುಗಳನ್ನು ತೋರದೆ ಬೇಸರುಮುಡಿಗಟ್ಟಿ ಬಂದರು (ಮಾಪುಲ್ಲಿ. ೧२೫). **ತೆಕ್ಕೆದುಱುಬು** : ಅಡ್ಡಮುಡಿಯು ಸೋರುಮುಡಿಯು ಸೊನ್ನಾರದ ದೊಡ್ಡಮುಡಿಯು ತೆಕ್ಕೆದುಱುಬ ಒಡ್ಡಿದೋಱದೆ ಬಿಟ್ಟು ಬೇಸಱುಮುಡಿಗಟ್ಟಿ...ಐತಂದರು (ಭರಜ. ೧೬-೨४).

[ ತೆಕ್ಕೆ$_1$ (<ತಟ್ಕೆ) + ತುಱುಂಬು$_2$ ]

**ತೆಕ್ಕೆದುಱುಬು** ' ತೆಕ್ಕೆದುಱುಂಬು ' ನೋ.

**ತೆಕ್ಕೆಬಡಿ** (ಕ್ರಿ). ಗುಂಪಾಗಿ ಬೀಳಿಸು ; ರಾಶಿಯಾಗಿ ಕೆಡವು : ಅಡ್ಡ ಮಳೆ, ಸಡ್ಡು ಹೊಡೆಯುವ ಸಿಡಿಲು, ಸಿಕ್ಕುದನು ತೆಕ್ಕೆಬಡಿಯುವ ಗಾಳಿ (ನೆಲವು. ೬೦-೧೦). [ ತೆಕ್ಕೆ$_1$ (<ತಟ್ಕೆ) + ಬಡಿ$_1$ ]

**ತೆಕ್ಕೆಬೀಳು** ' ತಕ್ಕೆಬೀಳು ' ನೋ.

**ತೆಕ್ಕೆಯಾಡು** (ಕ್ರಿ). ಗುಂಪುಗುಂಪಾಗಿ ಚೆಲ್ಲಾಪಿಲ್ಲಿಮಾಡು ; ಗುಂಪುಗುಂಪಾಗಿ ನಾಶಗೊಳಿಸು,–ಚೆದರಿಸು : ಮಿಕ್ಕುಳಿದ ನಿಮ್ಮ ಸೊರ್ಕಿ ಜವ್ವನಿಗರಂ ತಿಕ್ಕಿ ತೆಕ್ಕೆಯಾಡುವೆನಿಂತಿದು ದಿಟ್ಟಮೆಂದಂ (ರಾಮಾಶ್ವ. ೧४೨-२೮). [ ತೆಕ್ಕೆ$_1$ (<ತಟ್ಕೆ) + ಆಡು$_1$ ]

**ತೆಕ್ಕೆಯಿಸು** ' ತಟ್ಕೈಸು ' ನೋ.

**ತೆಕ್ಕೆಯ್ಸು** ' ತಟ್ಕೈಸು ' ನೋ.

**ತೆಕ್ಕೆವರಿ** (ಕ್ರಿ). ರಾಶಿಯಾಗು ; ಗುಂಪಾಗು : ತೆಕ್ಕೆವರಿದೇಳ್ವ ಕಬ್ಬೊಗೆಯ ಹೊರಳಿಗಳ ದಶದಿಕ್ಕುಗಳನಪ್ಪಳಿಪ ಕೇಸುರಿಯ ಚೂಣಿಗಳ . . . ಪೆರ್ಗಿಚ್ಚುಗಳ ಪೆಂಕೆ ಮೇಲಿಕ್ಕಿದುದು ಹಂಸಧ್ವಜನ ಸೇನೆ ಬೆಂದು ಬೇಗುದಿಗೊಂಡುದು (ಜೈಮಿಭಾ. ೧३-೧೨) ; ಫಣಿನಿಕರ ಘೋಳೆಂದು ತೆಕ್ಕೆವರಿದಿಂಗಳದ ಮೇಲ್ಬಿದ್ದು ಸುಡುತಿರಲ್ (ತುರಂಗ. ६-३೫).

[ ತೆಕ್ಕೆ$_1$ (<ತಟ್ಕೆ) + ಪರಿ$_2$ ]

**ತೆಕ್ಕೆವರಿಗೆ** (ನಾ). ಒಂದು ಬಗೆಯ ಗುರಾಣಿ (?) ; ಗುರಾಣಿಗಳ ಸಾಲು (?) : ನಡೆಗೋಟೆಯೆನೆ ಮಂಡಳಿಸಿ ಬಲಿದರು ತೆಕ್ಕೆವರಿಗೆಗಳ (ಕುವ್ಯಾಭೀ. ४-२೫); ಬಲುಮಾನಿಸದ ಬಂಡಿಗಳನೊಡ್ಡಿದರಾ ನಿರಂತರ ಶರವ ತಡೆದರು ತೆಕ್ಕೆವರಿಗೆಯಲಿ (ಕುವ್ಯಾಕ. ೧೧-೫೦) ; ಲಗ್ಗೆವರಿಗೆ ತೆ[ಪಾಠಾಂ. ತ]ಕ್ಕೆವರಿಗೆಗಳಿಂ ಬಂದು ಮುಗ್ಗಿ ಕವಿದು (ಕುರಾಸಾಂ. ೧೦-३೨) ; ಸಾಲು ಕೆಂಪಿನ ತೆಕ್ಕೆವರಿಗೆಯೊಳರಿಕುಲಕಾಲಾಂತಕಬಲಬಲನು ಶೂಲಧರನು ಖಗರಾಜಗೆ ಪಕ್ಷದವೋಲೆಸೆದಳು ಜೀವದೊಡತಿ (ವರ್ಧಜ. ६-೭೭).

[ ತೆಕ್ಕೆ$_1$ (<ತಟ್ಕೆ) + ಪರಿಗೆ$_3$ ]

**ತೆಕ್ಕೆವೆಳಗು** (ನಾ). ಅಧಿಕವಾದ ಬೆಳಕು ; ಹೆಚ್ಚಾದ ಕಾಂತಿ : ಹತ್ತು ಸಾವಿರ ಕೈಪ್ರಮಾಣದ ಸುತ್ತುವಳಯದ ಮಣಿಯ ಶಿಲೆಗಳ ತತ್ತ್ವವಣೆಗಳ ತೆಕ್ಕೆವೆಳಗಿನ . . . ವೈಡೂರ್ಯ ಶಿಲೆಗಳ ಮತ್ತವಾರಣ ವರವಿಧಾನ ದಲೆಸೆದುದಾಸ್ಥಾನ (ಕುವ್ಯಾಸ. ೦-೧४).

[ ತೆಕ್ಕೆ$_1$ (<ತಟ್ಕೆ) + ಬೆಳಗು$_2$ (<ಬೆಳಕು$_2$) ]

**ತೆಕ್ಕೆವೇಱು** (ಕ್ರಿ). ರಾಶಿಯಾಗು ; ದಟ್ಟೈಸು ; ಸಂದಣಿಗೊಳ್ಳು : ತದೀಯತನುವಂ ಪ್ರಾಳೇಯಸಂಸ್ತೋಮವಿಶ್ರಮವುಮಂದೆಕ್ಕಿದ ತೆಕ್ಕೆವೆತ್ತರಲೆ ಪೋಲ್ ಪತ್ತಿರ್ಪಿನಂ ನಿಂದನಶ್ರುಮದಿಂದಂ ತಟನೀತಟಾಕತಟದೊಳ್ ಯೋಗೀಂದ್ರಂ (ನೇಮಿಪು. ೨-೬೪) ; ತನಯಂ ಬಂದಾ ವಾರ್ತೆಗೆ ತನುಪುಳಕದ ತೆಕ್ಕೆವೆತ್ತು ಶಿಶಿರದ ಸೋಂಕಿಂ ನನೆವೆತ್ತೊಪ್ಪುವ ಮಾಲತಿ ಯನೆ ವಿಜಯಾವತಿ ಸಮಂತು ಪೋಲ್ತೆಸೆದಿರ್ದಳ್ (ಕುಸುಮಾ. ೧೫-೯೪).

[ ತೆಕ್ಕೆ$_1$ (<ತಟ್ಕೆ) + ವೇಱು$_1$ ]

**ತೆಕ್ಕೆಹಾಯ್**, ತೆಕ್ಕೆಹಾಯಂ (ಕ್ರಿ). ೧. ಅಪ್ಪಿಕೊಳ್ಳು ; ತಬ್ಬು : ಕಮಲೆಯು ಅಳುತ್ತ ... ಅವನಿಗೆ ತೆಕ್ಕೆಹಾಯ್ದಳು (ರಕ್ತಧ್ವ. ೧೫೭). **ತೆಕ್ಕೆಹಾಯು** : ೨. = ತೆಕ್ಕೆಬಡಿ : ದಿಕ್ಕುದಿಕ್ಕಿಗೆ ಮೋಡ ಪಕ್ಕ ಬೀಸುವುದು. ಎದುರು ಬಂದುದನವುರಿ ತೆಕ್ಕೆಹಾಯುವುದು ! (ನಲವು. ೧೫-೨೩).

[ ತೆಕ್ಕೆ$_1$ (<ತಟ್ಕೆ) + ಹಾಯ್$_1$ (<ಪಾಯ್$_1$) ]

**ತೆಕ್ಕೆಹಾಯು** 'ತೆಕ್ಕೆಹಾಯ್' ನೋ.

**ತೆಗಪು**, ತೆಗೆಪು$_1$ (ಕ್ರಿ). ೧. ಹೋಗುವಂತೆ ಮಾಡು; ಹೊರಡಿಸು; ತೆರಳಿಸು. ೨. ಕಂದಿಸು ; ಬೇಯಿಸು : ಕುದಿವ ಕರ್ಬೊನ್ನ ಕಾಯ್ಗೊಂಡೆಣ್ಣೆಯೊಳ್ ಬಳಲೆ ತೆಗಪು[ಪಾಠಾಂ. ತೆಗೆ]ವರುಂ(ಆದಿಪು. ೫-೮೫): ಕುದಿಯಿಸುಗೆ ಸುಣ್ಣದಿಂ ಕಯ್ಪೆದೊಂಡೆಯಂ ಕೋಕಿಲಾಕ್ಷಿವೆರಸು ಸಿತೇ ರಂಡದ ತೊಟ್ಟೆಯಲೆಗಳಿಂ ಪಡಲದ ಕಾಯಂ ತೆಗಪುಗವಱ ಕೈಪೆಗಳಿಗಿಂ (ಲೋಕೋಪ. ೮-೩೦) ; ತಳಿರ್ಗಳ್ ಮೆಯ್ವೆಂಕೆಯಿಂದಂ ತೆಗಪಿದ ತಳಿರಂತಾದುವಾದಂ ಮೃಣಾಳೀವಳಯಂ ಕೆಯ್ವೆಂಕೆಯಿಂದಂ ಕರಿಯ ಬಳೆಗಳಂತಾದುವು (ಲೀಲಾವ. ೧೧-೪೪) ; ತುಲಸಿಯ ನುಗ್ಗಿಯ ತಗ್ಗಿಯ . . . ಪತ್ರಂಗಳನೊಡನೆ ತೆಗಪಿಕೊಂಡದಱೊಳೆ ಸೇಕಂಗೆಯ್ಯೆ (ಅಶ್ವಶಾ. ೧೦-೨೦). **ತೆಗೆಪು**$_1$ : ೧. ಜಲನಿಧಿಯಂ ಪೀರ್ದಲ್ಲಿಯ ಜಲಚರಮಂ ಕೂಡೆ ತೆಗೆಪಿದಂ ತೆಗೆಪುವೆನಿಂ ಸ್ಥಲಚರಮನೆಂದು ವಡಬಾನಲನೆಟ್ಟವೊಲೊಗೆ ದುದರ್ಕಮಂಡಳಂ (ಕಾದಂಉ. ೪೬೩). ೨. ತೆಗೆಪಿ ಕುಡಿಯಿಸುಗೆ ಶಿವೆ ಕಳವಿಗೆ ಬಾಳಂ ... ಎಂಬಿನಿತುಮಂ (ಲೋಕೋಪ. ೯-೧೮).

[ ತೆಗೆ$_1$ + – ಪು$_1$ ]

**ತೆಗಲಮುಗು** (ನಾ). ಒಂದು ಬಗೆಯ ಸಸ್ಯ : (ವ್ಯಾಜಿಗಿ. ೪೨-೬೩೦). [ ? ]

**ತೆಗಲೆ** (ನಾ). ೧. ಎದೆ ; ವಕ್ಷಸ್ಥಳ : ಪುಲಿ ಬಂದು ಪಾಯ್ದು ಬಸಿಱಂ ಪೋಟ್ದು ನೆತ್ತರಂ ಕುಡಿದು ತೆಗಲೆಯಂ ಪೋಟ್ದು ತಿಂಬಾಗಳ್ (ವಡ್ಡಾರಾ. ೪೮-೧೯); ಅಡಿ ತೊಡೆ ಪೊರ್ಕುೞುಂ ತೆಗಲೆ ಕೈ ಕಣಕಾಲ್ ಕೊರಲೆಂಬಿವುಂ . . . ಸೀಟ್ದುವು ಪಾರ್ಥನಂಬುಗಳ್ (ಪಂಪಭಾ. ೧೧-೧೩೭); "ಹೆಕ್ಕತ್ತು ; ಹೆಗಲು" (ಪಂಪಭಾ. ಕೋಶ); ದೇಸಿಯಾದ ತೆಗಲೆ ಪದಕ್ಕೆ ವಕ್ಷಸ್ಥಳದ ಮೇಲ್ಗಡೆ ಎಂಬ ಅರ್ಥ ಮಾತ್ರವಲ್ಲದೆ ಒಳಗಡೆ ಎಂಬರ್ಥವಿಲ್ಲ (ನಾಡೋಜ. ೨೪೭) ; ತೆಗಲೆ ಎಂಬುದು ಉರಸ್ಥಳಕ್ಕೆ ನಮ್ಮಾ ಕನ್ನಡನಾಡಿನಲ್ಲಿ ಮಾತ್ರ ರೂಢವಾದ ಹೆಸರು . . . 'ತಗಲೆ' ಎಂದರೆ ತೆಗಲೆಯ ಮೇಲೆ ಬಿಗಿದು ಕಟ್ಟುವ ಬಟ್ಟಲಿನಾಕಾರದ ಒಂದು ಪದಾರ್ಥ (ಪಾರ್ತಿಸು. ೪೭). ೨. ಹೆಗಲಂ ; ಭುಜ : "ತೆಗಲ[ಪಾಠಾಂ. ಳ್]ಯೆಂದು ಪೆಗಲ್" (ಶಮದ. ನ. ೩೪೩ ಪ್ರಯೋ). ೩. (ಕರಾ) ಸೊಕ್ಕು ; ಮದ ; ಅಹಂಕಾರ : ಯಾವ ಇನ್ಸ್‌ಪೆಕ್ಟರರೇ ಬರಲಿ ವರದಿಪುಸ್ತಕದಲ್ಲಿ 'ಲಾಯ್ಕು' ಎಂದು ಬರೆದು ಹೋಗುತ್ತಾರೆ. ಅದರಿಂದ ಇವರಿಗೆಲ್ಲ ತಿಂದ ತೆಗಲೆ (ಸ್ವಪ್ನಹೊ.೩೪).

[ದೇ.॥ ತಮಿ. ಚುವಲ್, ಚಕಿಲ್ ; ತುಳು. ತಿಗಲೆ]

**ತೆಗವು**, ತೆಗುವು (ನಾ). ೧. ಭಾರವಾದುದಂ; ಜಡವಾದುದು. ೨. ಕಠಿನವಾದುದು ; ಕಷ್ಟಕರವಾದುದು : ಅವನ್ನ ಹೊರಗೆ ಹಾಕೂದೆಂದ್ರ ಓಟು ತೆಗವ ಹರೀತೇತಿ (ಗ್ರಾಮಾಯ. ೪೮). **ತೆಗುವು**$_2$ : ೨. ಅವಳಿಗೆ ಅಡುಗೆ ಮಾಡುವುದು ತೆಗುವೆನಿಸಹತ್ತಿತು (ಜವಿನಾನ್ನಾ.೭೩). [ ? ]

**ತೆಗಸು** 'ತೆಗೆಯಿಸು' ನೋ.

**ತೆಗಹು** (ನಾ). ೧. ಹಿಂದಕ್ಕೆ ತೆಗೆಯುವಿಕೆ,– ಎಳೆಯುವಿಕೆ ; ಸೆಳೆಯುವಿಕೆ : ಆಳು ಮಿಗೆ ಕುರುಭೂಪಾಲಕನ ಹಿಂದಿಕ್ಕಿ ಕಿವಿಗಡಿಗೋಲ ತೆಗಹಿನೊಳೊದಗಿದರು ದುಶ್ಶಾಸನಾದಿಗಳು (ಕುವ್ಯಾದ್ರೋ. ೨-೭೪) : ಭರಿತ ವಿಷದಹಿವರನ ತೆಗಹಿನ ತೆರಳಿಕೆಯಲುದಿಸಿದ ತಪೋನಿರ್ಭರಶರೀರದ ಸುಭಟರದೆ ನರನಾಥ ನೋಡೆಂದ (ತೊರರಾ. ೬-೨೦-೬೪). ೨. ಹಿಂದೆಗೆಯುವಿಕೆ; ನಿರ್ಗಮನ. 'ಬಿಸಿಲುದೆಗಹು' ಪರಾ. ೩. ತೆರವು ; ಬಿಡುವು ; ಅವಕಾಶ : ಹಗಲಿರುಳೆಡೆವಿಡದೀ ಮಳೆ ಕಱೆದುದು ತೆಗಹಿಲ್ಲ ಮುಂದೆ ಹೆಚ್ಚುತಿದೆ (ಭರತ. ೩೪-೭೨). ೪. ದೃಢತೆ ; ಕೆಚ್ಚು ; ಸತ್ವ : ಬಾಹುಸತ್ವದ ಹೊಗರು ಹೋಗದು ಮನದ ಖಾತಿಯು ತೆಗಹು ತಗ್ಗದು ಹೊಕ್ಕು ತಿವಿದಾಡಿದರು ಬೇಸಱದೆ (ಕುವ್ಯಾಸ. ೨-೧೦೦) ; ಕ್ಷತ್ರಧರ್ಮದ ತೆ[ಪಾಠಾಂ. ತ]ಗಹು ಸಾಯದು ನಿನಗೆನುತ ಗಹಗಹಿಸಿದನು ಶಕುನಿ (ಕುವ್ಯಾಸ. ೧೪-೨). [ ತೆಗೆ$_1$ + – ಹು$_2$ ]

**ತೆಗಳ್**$_1$ 'ತೆಗೞ್$_1$' ನೋ.

**ತೆಗಳ್**$_2$ 'ತೆಗೞ್$_2$' ನೋ.

**ತೆಗಳಿ**$_1$ 'ತೇಮಳು' ನೋ.

**ತೆಗಳಿ**$_2$ (ನಾ). = ತೆಗಳಿಕೆ$_2$. 'ತೆಗಳಿಗೊಳ್', 'ಸೆಗಳಿ' ಪರಾ. [ ? ]

**ತೆಗಳಿಕೆ**$_1$ (ನಾ). = ತೆಗೞ್ಕೆ೧ : ಪೊಗಳಿಕೆಗೆ ಹಿಗ್ಗಲೊಲ್ಲಡೆ, ತೆಗಳಿಕೆಗೆ ಕುಗ್ಗಲಾರಡೆ, ಲತೆ ಫಲಕೆ ಸಿಗ್ಗಲೇಕೆ ? (ಗೀವಿಂ. ೧೦೪-೪೪) : ಹೊಗಳಿಕೆ ತೆಗಳಿಕೆಗಳ ಕಡೆಗೆ ಲಕ್ಷ್ಯಕೊಡಬಾರದು (ಗೀತಾಸಂ. ೨೭).

[ ತೆಗಳ್$_1$ (<ತೆಗೞ್$_1$) + – ಇಕೆ ]

**ತೆಗಳಿಕೆ**$_2$ (ನಾ). ಹೆಕ್ಕಳೆ; ಪದರ : ಸುರಿತಂದಶ್ರುಪ್ರವಾಹಂ ಬೞತೊಣಗಿದ ಬಾಸುೞ್ಗಂ ಪೂಸೆಯುಂ ಕಾಯ್ದಿರದೆೞ್ದಾ ಚಂದನಾಲೇಪದ ತೆಗಳಿಕೆಗಳ್ . . . ಬೆರಸಲರ್ವಸೆಯೊಳ್ ಕಾಂತೆಯಿಂತಿರ್ದಳ್ (ಕುಸುಮಾ. ೧೩-೭೯). 'ಸೆಗಳಿಕೆ' ಪರಾ. [ ತೆಗಳಿ$_2$ + – ಕೆ ]

**ತೆಗಳಿಗೆ** (ನಾ). ಪದರ ; ಹೆಕ್ಕಳೆ ; ನಿರಿಗೆ : ಮುಗಿಲ ತೆಗಳಿಗೆಯ ನೆಗೆದ ಪೊರೆಗಳೊಳದೃಶ್ಯನಾದಂ ನಭದೊಳ್ (ಶಾಂತಿಪು. ೯-೯೪) : ಮುಗಿಲ ತೆಗಳಿಗೆಯ ಪೊರೆಯೊಳಗೊಗೆದ ಶರಚ್ಚಂದ್ರನಂದದಿಂದುದಯಿಸಿದಂ (ವರ್ಧಮಾ. ೬-೩೭) ; ಶರದದ ಮುಗಿಲ ತೆಗಳಿಗೆಯಿದೆನಿಪ ಮೇಲ್ಕಟ್ಟನ ಬೆಳ್ಪುಂಬಟ್ಟೆಯುಂ (ಚಂದ್ರಪು. ೧೨-೧೦೨). 'ಸೆಗಳಿಗೆ' ಪರಾ.

[ತೆಗಳಿ$_2$ + – ಗೆ]

**ತೆಗಳಿಗೆಬೀೞ್** 'ತೆಗಳಿಗೆವೀೞ್' ನೋ.

**ತೆಗಳಿಗೆವೀೞ್**, ತೆಗಳಿಗೆಬೀೞ್ (ಕ್ರಿ). ಹೆಕ್ಕಳೆ ಉಂಟಾಗು ; ಪದರವಾಗು : ತೆಗಳಿಗೆವಿರ್ದೊ[ಪಾಠಾಂ. ೞ್ದೊ]ಡಲುಂ ನಾಲಗೆಗಿತ್ತರೆ ಬೞತ ಬಾಯುಂ ... ತಾಱುವ ತಾಳ್ಗಳುಮುಗುರ್ವಿಸಲ್ ಕಾಡ ಕೋಣನೆಯ್ದಿದುದಱಲಂ (ಜಗವಿ. ೧೭-೬೭). **ತೆಗಳಿಗೆಬೀೞ್** : ಮೃಗಕುಲಂ ... ಬೆಂದೊಂವಲ್ ತೆಗಳಿಗೆಬೀೞ್ ಬಾಯ್ಗೆ ಕರಿಸಂ ಬರೆ ನಾಲಗೆಗಿಟ್ಟು ನಟ್ಟ ದಿಟ್ಟಿಗಳೊಡನಳ್ಳೆ ಪೊಯ್ಯೆ ನಡೆಗೆಟ್ಟುವು ತೃಷ್ಣೆಯಿಂ (ಪಂರಾಮಾ. ೭-೯೩).

[ತೆಗಳಿಗೆ + ಬೀೞ್$_1$]

**ತೆಗಳಿಗೊಳ್** (ಕ್ರಿ). ಸುಕ್ಕಾಗು ; ಪದರವಾಗು : ಅಂಗಜತಾಪದಿಂ ಕೊಱಗಿದಬ್ಜಮುಖಿಂ ಪರೆದಿರ್ದ ನುಣ್ಗೊರಲ್ ತುಂಗಕುಚಂಗಳೊಳ್ ತೆಗಳಿಗೊಂಡ ಲಸನ್ಮಳಯೋದ್ಭವಂ ... ರಂಜಿಸಿರ್ಪಂಗನೆ ಕಾಮದೇವ ನೆಡೆಯಾಡಿಪ ಪುತ್ರಿಕೆಯಂತಿರೆಯ್ದಿದಳ್ (ದಶಕು. ೬-೧೨೫).

[ತೆಗಳಿ$_2$ + ಕೊಳ್$_1$]

**ತೆಗಳಿಸು** 'ತೆಗೞಿಸು' ನೋ.

**ತೆಗಳ್ಱು**$_1$ 'ತೆಗೞ್$_1$' ನೋ.

**ತೆಗಳು$_2$** (ಕ್ರಿ). ತಳ್ಳು; ನೂಕು: ಬಂಗಾರ ಅಳದೀರ ಬಾಯ್ಮೇಲೆ ಹೊಯ್ದೀರ ಬಾಗ್ಲಿಂದಾಚೆಗೆ ತೆಗಳೀರ ಅಪ್ಪಾಜಿ ಹುಟ್ಟಿದಾ ಮನೆ ತಿರುವೀರಾ (ಹಳ್ಳಿಹಾ. ೩೩). [ ? ]

**ತೆಗಳು$_3$** 'ತೆಗಟ್$_2$' ನೋ.

**ತೆಗಳುಗಾರ** (ನಾ). ತೆಗಳುವವನು; ನಿಂದಿಸುವವನು; ಅವಹೇಳನ ಮಾಡುವವನು: ಕನ್ನಡಕದ ತೆಗಳುಗಾರ ನಡುವೆ ಮಾತು ಹಾಕಿದ (ಯೋಧಪು. ೫೬). [ತೆಗಳು$_1$ (<ತೆಗಟ್$_1$)+-ಗಾರ (< -ಕಾಱ)]

**ತೆಗಳುನಗೆ** (ನಾ). ತಿರಸ್ಕಾರದಿಂದ ಕೂಡಿದ ನಗೆ: ಸುಲೋಚನ ಧರಿಸಿದ್ದವನು ತನ್ನ ಮುಖದ ಮೇಲೆ ನೆಲಸಿದ್ದ ತೆಗಳುನಗೆಯನ್ನು ಎಲ್ಲರ ಮೇಲೆಯೂ ಚೆಲ್ಲಿ ಹೇಳಿದನು (ಯೋಧಪು. ೫೬).

[ತೆಗಳು$_3$ (<ತೆಗಟ್$_2$) + ನಗೆ]

**ತೆಗಳ್ಪು** (ನಾ). ತೆಗಳಿಕೆ; ನಿಂದೆ: ಇಲಿಗಂ ಮರಕುಟಗವಕ್ಕಿಗಮುಲಸದೆ ಕರ್ದುಕುತ್ತೆ ಕಡಿಯುತಿರ್ಪುದೆ ಸಹಜಂ ಸಲೆ ಚಪಲಂಗಂ ಕುಕವಿಗಮುಲಸದೆ ತೆಗಳ್ಪುದುವೆ ಸಹಜಮುವಱಿಂತೆ ಕರಂ (ಧರ್ಮಾಮೃ. ೧-೯೬).

[ತೆಗಳ್$_1$ (<ತೆಗಟ್$_1$) + -ಪು$_2$]

**ತೆಗಟ್$_1$**. ತೆಗಳ್$_1$, ತೆಗಳು$_1$ (ಕ್ರಿ). ೧. ಹೀಯಾಳಿಸು; ನಿಂದಿಸು; ಅವಹೇಳನ ಮಾಡು; ತಿರಸ್ಕರಿಸು: "ತೆಗಟ್=ನಿಂದಾಯಾಂ" (ಶಮದ); ಕಂಜನಾಭನ ಸಮಂಜಸಿಕೆಯೊಳ್ತನ್ನಂ ತೆಗಟ್ದು ನುಡಿದು ದರ್ಕೀವೈಸಿ (ಗದಾಯು. ೬-೯೫ವ); ಅಂತಾ ದುರಾತ್ಮಂ ... ಜಗಂ ತೆಗಟೆ ಜೀವಿಸುತ್ತುಂ (ವರ್ಧಪು. ೩-೧೨ವ). ೨. ವಿನೋದಮಾಡು; ಹಾಸ್ಯ ಮಾಡು: ನೀಂ ಮಹಾದೇವಿಯು ಮಂಚಮನಂಜದೇಱು ಆಕೆಯೊಡನೆ ನಗುತ್ತುಂ ತೆಗಟುತ್ತಮಿರೆಂದು ಕಲ್ಪಿಸಿದಂ (ವಡ್ಡಾರಾ. ೧೬೬-೧೯); ಇಚ್ಛೆಯಱಿದು ತೆಗಟ್ವಿ ತೆಗಟ್ಕೆಗಂ ಪದನಱಿದು ಪತ್ತುವ ಪತ್ತುಗೆಗಂ ... ಮನಂಬೆಚ್ಚು ಪತ್ತೆ ಪೊಯ್ದಂತಾಗಿರೆ (ಶಾಂತಿಪು. ೩-೫೯ವ). **ತೆಗಳ್$_1$**: ೧. ಭಗವತಿಯೇಱು ಶೌಚಗುಣಮತ್ತಿಯು ಪಣ್ಣಿನಿಮೇಳಪುಣ್ಣರಂ ತೆಗಳ್ವುದುದಾರ ಚಾರುಚರಿತಪ್ರಭೆಯಿಂ ಪಡೆವಳ್ಳತೈಲನ (ಸೌಇಇ. XI-i, ೫೨-೩೪; 1007 ?); ಉರಗ ನರ ಕಿಂಪುರುಷ ಕಿನ್ನರತರುಣಿಯರ ವ್ರತಗೆಡಿಸಿ ಭೋಗಿಸಿ ನರಳಿಸುವ ರೈದಿದರೆ ಕೊಲುವರು ತೆಗಳ್ದು ವಲ್ಲಭರ (ಅಂಬಿಕಾ. ೩೪-೩೬). **ತೆಗಳು$_1$**: ೧. ಅಗಿದು ಮೈದೆಗೆದು ಸಿಗ್ಗಾಗಿ ತಮ್ಮಿಂ ತಾವೆ ತೆಗಳಿ ಬೈಬೈದು ಬಾಯಳಿದು ಶೋಕಿಸಿ ತಾವೆ (ಸಾನಂಚ. ೪-೨೫೬ರಗಳೆ); ರಗಳೆಯ ಕವಿಯೆಂದು ತೆಗಳೆ ವಾದಿಗಳೆಲ್ಲ ಹರಿಯಣ್ಣನ ಪದಯುಗಳಕೆಱಗುವೆನಲ್ಲಿಯೊಳು (ಕುರಾಸಾಂ. ೧-೩೫); ಕಂಡವರ ತೆಗಳುವನೆ ... ಕಂಡಿಹರೆ ತೊಲಗು (ಸರ್ವಜ್ಞ. ೧೫೩೩); ಪೊಡವಿಯೊಳಗಡಗಿರುವ ತಳಹದಿಯ ತೆಗಳುವರೆ ? (ಪಾಂಚಜ. ೫-೧೮).

[ದೇ.॥ ತುಳು. ತೆಗು; ತೆಲು. ತೆಗಡು, ತೆವಡು]

**ತೆಗಟ್$_2$**, ತೆಗಳ್$_2$, ತೆಗಳು$_3$ (ನಾ). ೧. ನಿಂದೆ; ತಿರಸ್ಕಾರ; ಅವಹೇಳನ: "ತೆಗಟ್ ... ಅಣಕಂ-ಈ ೬ ನಿಂದೆ" (ಕಶಸಾ. ೧೩-೨೫೬); "ತೆಗಟಿನ್ನಲದು ತಾಂ...ನಿಂದಾಖ್ಯಂ" (ಕವಿಕಂ. ೧೨೩); ತವೊಡನಾಡಿಗಳಪ್ಪ ಮೇಳದ ಸಬ್ಬವದ ನಗೆಯ ತೆಗಟಿನವರನೆಮ್ಮ ಬಱಿಯಟ್ಟಿದಂದು ಬನ್ನಿಮೆಂದು ಪ್ರಿಯಂ ನುಡಿದಿರಿಸಿ (ಪಂಪಭಾ. ೨-೯೫ವ). ೨. ಕುಂದು; ಕಳಂಕ; ದೋಷ: ಮಾಷಮುಖದಂತೆ ದೋಷಗವೇಷಣರಪ್ಪರಂ ದೊಡದು ತೆಗಟಿಲ್ಲೆ (ಆದಿಪು. ೧-೨೦): ಅರೋಚಿಗಳದಂ ತೆಗಟಿಂದಾ ಗದ್ಯ ಪದ್ಯ ಕಾವ್ಯದೊಳಿಕ್ಕರ್ (ಶಮದ. ೬೦). ೩. ವಿನೋದ; ಚೆಲ್ಲಾಟ: ರಮಿಯಿಪುದಮರಿಯರೊಳ್ ತೆಗಟಮರಿಯರೊಳ್ ತವದ ಮೇಳಮ ಮರಿಯರೊಳ್ (ಶಾಂತಿಪು. ೬-೬೬); ನಗೆ ತೆಗಟ್ ಪಾಟಂ ಬಿಯಂ ಜವ್ವನಂ . . . ಇಂತಿವಂ ಬೇಟಕ್ಕಾಗರಮೆಂಬೆಂ (ಕಾವ್ಯಾವ. ೬೩೩). **ತೆಗಳ್$_2$**: ೧. ವಿಕ್ರಮಾದಿತ್ಯನೃಪಂ ಜ್ಯಾಯಂ ತನಗೆನೆ ಜಗದೊಳಗಾ ಯುವತಿಯ ಸತ್ಕುಲೀನತೆಗೆ ತೆಗಳುಂಟೇ (ಎಕ. XI, ದಾವಣ. ೪೦-೩೯; 1148). **ತೆಗಳು$_3$**: ೧. "ತೆಗಳು ನಿಂದೆಗೆ" (ಕಶರ. ೪೮); ದಕ್ಷನಾತ್ಮಜೆ ಗೌರಿ ಮಿಗೆ ತನ್ನ ಜನಕನೀಶ್ವರನನೇಳಿಸೆ ಬಹಳ ತೆಗಳನಾಲಿಸಿ ತನ್ನ ದೇಹಮಂ ಜ್ಞಾನಾಗ್ನಿಯೊಳ್ದಹಿಸಿ (ಪಾಸೋಪು. ೮-೨೨): ಇದು ಹೊಗಳೋ ತೆಗಳೋ ? (ಶಾಂತಲಾ. ೫೪). [<ತೆಗಟ್$_1$]

**ತೆಗಟಿಸು**, ತೆಗಳಿಸು (ಕ್ರಿ). ೧. ತೆಗಳುವಂತೆ ಮಾಡು; ನಿಂದಿಸುವಂತೆ ಮಾಡು: "ತೆಗಟಿಸು-ನಿಂದಾಯಾಂ (ನಿಂದಿಸುವಂತೆ ಮಾಡು)" (ಶಮಧಾ). **ತೆಗಳಿಸು**: ೧. ಮಱಿದುಂ ಪುಸಿದು ನುಡಿವ ಹುಸಿ ಸಿರಿಯಂ ಪಱಿಪಡಿವುದು ಸಂತಾನಂ ಕೆಡಿಸುವುದಱನಂ ತೆಗಳಿಸುವುದು ಪಳಿಯಂ ಪುಟ್ಟಿಸುವುದು (ಜಯುಕಾ. ೧೦-೧೨). ೨. ಮೀರು; ಸೋಲಿಸು: ಪೊಳಪ ಹಸುಳೆಲತೆಯಂ ಸಲೆ ತೆಗಳಿಪ ನಳಿತೋಳ್ಗಳ ಸಿಂಗದ ಶಿಶುವಂ ತಾನಿಳಿಕೆಯ್ವೊಳ್ನಡುವಿನ ನೃಪತನುಜೆಯು ತರುಣಿಮುಮೊಪ್ಪಿದುದು (ಜಯುಕಾ. ೩-೨೨).

[ತೆಗಟ್$_1$ + - ಇಸು$_3$]

**ತೆಗಟ್ಕೆ** (ನಾ). ೧. ನಿಂದೆ; ಅವಹೇಳನ. ೨. ವಿನೋದ; ಹಾಸ್ಯ: ಇಚ್ಛೆಯಱಿದು ತೆಗಟ್ವಿ ತೆಗಟ್ಕೆಗಂ ಪದನಱಿದು ಪತ್ತುವ ಪತ್ತುಗೆಗಂ ... ಮನಂಬೆಚ್ಚು ಪತ್ತೆಪೊಯ್ದಂತಾಗಿರೆ (ಶಾಂತಿಪು. ೩-೫೯ವ).

[ತೆಗಟ್$_1$ + - ಕೆ]

**ತೆಗಟ್ತೆ** (ನಾ). ವಿನೋದ; ಸರಸ; ಲಲ್ಲೆ (?): ಲಾಲಿಸುವ ಲಲ್ಲೆ ಮರಲ್ಚುವ ಮಾತು ಚಿತ್ತಮಂ ತೆಗೆವ ತೆಗಟ್ತೆ (ಚಂದ್ರಪು. ೪-೬೧).

[ತೆಗಟ್$_1$ + - ತೆ$_2$]

**ತೆಗಿಸು** 'ತೆಗೆಯಿಸು' ನೋ.

**ತೆಗುವು** 'ತೆಗವು' ನೋ.

**ತೆಗೆ$_1$** (ಕ್ರಿ). ೧. ಈಚೆಗೆ ತರು; ಹೊರ ತರು; ಬೇರೆ ಮಾಡು: ಸಿಂಧುರಾಜನ ಬಸಿಱಿಂ ಪೋಟ್ದಿನ್ನ ಮಗನನಾಂ ತೆಗೆಯದಿರೆಂ (ಪಂಪಭಾ. ೧೦-೧೨೦): ಕೋಮಳಶುಕಶಾಬಕಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ (ಕಾದಂಪೂ. ೧೬೮): ದೋಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತು ಬಾಣಂ (ಗದಾಯು. ೩-೩): ಬೆಳ್ಮುಗಿಲ ತೆಳ್ಪೊರೆಯಿನಿಂದ್ರಚಾಪರೇಖೆಯಂ ತೆಗೆವ ಶರಲ್ಲಕ್ಷ್ಮಿಯಂ ಪೋಲ್ತು ನಿಜೋತ್ತರೀಯ ಪಲ್ಲವದ ಪೊರೆಯಿಂ ತೆಗೆದು ... ಮಣಿದೊಡವನೊರ್ವಳಂಗನೆಗಿತ್ತಳ್ (ಮಲ್ಲಿಪು. ೪-೬೧): ನವ್ಯದುಕೂಲಮಂ ತೆಗೆದುಟ್ಟು ದಿವ್ಯವಸ್ತ್ರಮಂ ಪೊದೆದು (ಬಸರ. ೨-೪೩): ಅಂಬಿಲದೊಳಗೆ ಹೊಸ ಬೆಣ್ಣೆಯಂ ತೆಗೆಯಲು (ಬಸಪು. ೪೨-೨): ಹೊಟ್ಟುಗರ ತೆಗೆ ಹೋಗಹೇಳೆಂದೆಚ್ಚನತಿರಥರ (ಕುವ್ಯಾದ್ರೋ. ೨-೬೧); ತೆಗೆ ಹಯ ತೇರುಗಳ ತಳ್ಪಂಕ ಬೇಡೆಂಬಾರುಭಟೆ ಬಲುಹಾಯ್ತು (ತೊರರಾ. ೫-೮-೬೩); ಇದ್ದವಳು ತೆಗೆದು ಉಟ್ಟರೆ ಇಲ್ಲದವಳು ಕೊಡವಿ ಉಟ್ಟಳು (ಗಾದ). ೨. ಎತ್ತಿಕೊಳ್ಳು; ತೆಗೆದುಕೊಳ್ಳು: ತಾರಗೆಯಂ ವಿದ್ಯಾಧರಿಯರ್ ಮುತ್ತೆಂದು ತೆಗೆದು ತುಡಲ ವ್ವಳಿಪರ್ (ಗಿರಿಕ. ೧-೫೪); ಕೆಲಬಲದ ಮಾಮರದೊಳಿಪ್ಪ ನಿರ್ಯಾಸಮಂ ತೆಗೆದು ಕಿಱುಮೆರಳುಗುರ್ಗೊನೆಯಿಂದೆ ತಿದ್ದಿ ಬರೆದು (ಜೈಮಿಭಾ. ೩೦-೨೯); ಅನರ್ಘ್ಯಮಣಿಯಂ ಬಾಲದಿನಮಣಿಯಂ ತುಡುಂಕುವ ರಾಹುವೆನಿಸಿ ನಿಜ ಕರಮೆಸೆಯೆ ತುಡುಂಕಿ ತೆಗೆದು ತತ್ಪಾದಪೀಠದೊಳಿಳಿಪಿದಾಗಳ್ (ರಾಜಶೇ. ೫-೨೫ವ). ೩. ಏಳುವಂತೆ ಮಾಡು; ಎಬ್ಬಿಸು; ಮೇಲಕ್ಕೆತ್ತು: ಅಲ್ಲಿರ್ಪುದೊಂದು ಕಪಿ ಬೇಗಮಿದಿರಂ ಬಂದು ಅಂಜದಿರೆಂದು ಕೈಯಂಪಿಡಿದು ತೆಗೆವುದುಂ (ಪಂಚತಂ. ೧೦೬-೨೨); ಸುರಿವ ರಕುತದ ಸರಿಯ ಸೆಱಗಿನೊಳೊರಸಿ ರಥದಚ್ಚುಗಳನೊದೆದನು ತಿರುಹಿ ಗಾಲಿಯ ತೆಗೆದು ಮುಂಗೈಗೊಂಡು ನಡೆನಡೆದು ಅರಿಬಲವನಿಡೆ (ಕುವ್ಯಾದ್ರೋ. ೬-೫೫). ೪. ಉದ್ಧಾರ ಮಾಡು; ಉದ್ಧರಿಸು: ಧಗಧಗಿಸಿದಱುವತ್ತುಸಾವಿರ ಸಗರರನು

ಸಂಸ್ಕಾರವಮುಖದಲಿ ತೆಗೆಯಲೋಸುಗ ತಪದಲಿದ್ದನು ಕಮಲಗರ್ಭಂಗೆ (ತೊರರಾ. ೧-೧೩-೧೩). ೫. ಆಕರ್ಷಿಸು ; ಎಳೆ ; ಜಗ್ಗು ; ಎಳೆದು ಕೊಳ್ಳು : "ತೆಗೆ-ಆಕರ್ಷಣೇ" (ಶಮಧಾ) ; ಕೃಷ್ಣೆಯ ಕಚಪ್ರಾರಂಭಮಂ ಬಾಹುವಿಕ್ರಮಿ ದುಶ್ಶಾಸನ ಮುಂದೆ ತೆಗೆವಂದೆಲ್ಲಿರ್ದ (ಗದಾಯು. ೬-೩೩) ; ಪೊಸನನೆಯ ಬಿರಿಮುಗುಳ ಕುಸುಮ ಬಾಣಂಗಳಿಂ ... ಕಿವಿವರಂ ತೆಗೆದು ನೇರನಟಿದೆಸೆವುದುಂ (ಧರ್ಮಾಮೃ. ೧೧-೩೧) ; ಧರಾಧೀಶ್ವರನಾಶೀರ್ವಾಕ್ಸಮೇತಂ ತೆಗೆದು ಬಿಗಿದು ತಕ್ಕೈಸಿದಂ (ವರ್ಧಪು. ೧-೪೧) ; ಶರಣ ಇನ್ನೇಳೇಳೆನುತ...ಕರಕಮಲದಿಂ ತೆಗೆದು ಬಿಗಿಯಪ್ಪಿ (ಬಸಪು. ೨೧-೬) ; ಅತಿಶಯಪ್ರೀತಿಯಿಂ ತೆಗೆದು ಬಿಗಿಯಪ್ಪಿ (ಜೈಮಿಭಾ. ೪-೨೧). ೬. (ಗಾಳಿಯನ್ನು) ಎಳೆದುಕೊಳ್ಳು : ಆತ್ಮನಂ ಭೇದಿಸಿ ಪ್ರಾಣವಾಯು ನಾಡಿಗಳನಟಿತು ಹಿಡಿವ ಭೇದಮಂ ತಿಳಿದು ತೆಗೆವ ಬಿಗಿವ ಸಂಚಮಂ ಕಂಡು (ಆದಪ. ೨೮-೮೬). ೭. ಬಿಲ್ಲಿನ ಹೆದೆಯನ್ನು ಸೆಳೆ ; ಶರಸಂಧಾನ ಮಾಡು : ತೆಗೆದೆಚ್ಚ ನರ್ಜುನನಂಬು ತೀವೆ ತುದಿಯಿಂ ಬಾಲಂಬರಂ ಪಂದಿ ಸೌಳಗೆವೋಪಂತಿರೆ (ಪಂಪಭಾ. ೮-೧೬) ; ಮುಂದಿರ್ದ ಪಾಪೇಭಕಂಠೀರವನುಮಂ ಬಗೆದು ತೆಗೆದಿಸುವುದುಂ (ಶಾಂತಿಪು. ೪-೧೧೭) ; ಬಗೆಯದೆ ವಿರಹಿಗಳಂ ಮಿಗೆ ತೆಗೆದೆಚ್ಚ ಬಟಲ್ದ ಮಧುಸಖನ ಸುಯ್ಯೆಲರ್ವೋಲ್ ... ತಣ್ಣೆಲರದಿನಿಸು ಶೀಡಿತ್ರಾಗಳ್ (ಕಾದಂಉ. ೧೬೫) ; ತೆಗೆದೆಚ್ಚನಾ ಪಾರ್ಥ (ಕುಮಾದ್ರೋ. ೩-೪೯). ೮. ಕೀಳಂ ; ಕಿತ್ತು ಹಾಕು : ನಡುವಂ ಕೊಟಿ ಕುತ್ತಿ ಕರುಳ್ಗಳಂ ತೆಗೆ ಮೊಗಮಂ ಸುಡು (ವಡ್ಡಾರಾ. ೧೨೬-೧೧) ; ಮಾದೆಗನಂತೆ ಬಾರೆತ್ತುವರ್ ನಾಯಂತೆ ಕಟ್ಟಿ ತೆಗೆವರ್ (ಧರ್ಮಾಮೃ. ೩-೬೩) ; ಆಸೆಯಾಮಿಷ...ಕ್ರೋಧ ಕ್ಷುದ್ರ ಮಿಥ್ಯೆ ಇವನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯಾ (ಬಸವ. ೪೬) ; ಪಂದಿಯ ಬಳಿಯೊಳ್ ನೊಪ್ಪು ನೆಗೆದುಬ್ಬಿ ಪಾಯುತೆ ಚಪ್ಪರಿಸುತ್ತಾಗಿದು ಬಗಿದು ತೆಗೆದುವು ನಾಯ್ಗಳ್ (ಗಿರಿಕ. ೧-೧೧೩) ; ನಿನ್ನ ಕಣ್ಣಿಂಗೆನ್ನ ಕಣ್ಣೇ ಮದ್ದೆನುತ ಚಿತ್ತಂ ನಲಿದು ತನ್ನೇತ್ರಮ ತನ್ನಂಬಿನಲಿ ತೆಗೆದು (ಬಸಪು. ೧೮-೬೧) ; ಅಗೆವೊಯ್ವ ಕಳೆಗೀಳ್ವ...ಸಸಿಯ ತೆಗೆವ ನಡುವ ನಗೆವೊಗದ ಪಾಮರಿಯರ ಬಗೆ ಬೆಡಗಾಗಿಹುದಲ್ಲಿ (ಕುರಾಸಾಂ. ೨-೩೫). ೯. ಕಿತ್ತು ಕೊಳ್ಳು ; ದೋಚು ; ಕಸಿದುಕೊಳ್ಳು : ಮ್ಲೇಚ್ಛವರ್ಗವ ತಟಿದು ಶೋಧಿಸಿ ತೆಗೆದನಲ್ಲಿಯ ಸಾರವಸ್ತುಗಳ (ಕುಮಾಸ. ೪-೧೨) ; ಕುಳಿಂದನಂ ದಂಡಿಸಿದನಾ ದುಷ್ಟಬುದ್ಧಿ...ಹಿಂಡಿ ಹಿಳಿದರ್ಥಮಂ ತೆಗೆದಂ ಸೆಟಿವನೆಗಿಕ್ಕಿ ನಿಗಳಮಂ ಕಾಲ್ಗೆ ಮಾಡಿ (ಜೈಮಿಭಾ. ೨೧-೨೬) ; ಮುದ್ದುಮಾತಿನಲಿ ಮೋಹವ ಬೀಟಿಯವನೊಳಗಿದ್ದ ಹಣವ ತೆಗೆ ಮಗಳೆ (ಕಂಸವಿ. ೬-೧೫೧). ೧೦. ಕದಿ ; ಕಳವು ಮಾಡು ; ಅಪಹರಿಸು : "ಅಪಹಾರ, ಅಪಚಯ = ಬಹಳದ ಒಳ್ಪುಮಂ ತೆಗೆವುದು" (ನಾಚಿರಾ. ೬) ; ಅಜ್ಞಾನಿಗಳರಾ ಕಣ್ಣ ಕಾಣಿರೆ ಈ ನುಡಿಗಳೀಕಿಂತು ತೆಗೆದೆವೆ ನಿಮ್ಮ ಸಾಮ್ಯವನು (ಬಸಪು. ೫೮-೩೩) ; ಧೇನುವನು ತೆಗೆಯಲಿಕೆ ತನ್ನಯ ಸೇನೆಯಧಿಪನ ಕಳುಹಿ (ಸಂಭಪ. ೨೬-೨೦) ; ಕರುಣದೊಳಾತ ಕೊಟ್ಟ ಸೌಭಾಗ್ಯವ ತೆಗೆಯಲೋರ್ವರಿಗಳವಲ್ಲ (ಮೋಹತ. ೩೦-೦೬). ೧೧. ಕಳಚು ; ಬಿಚ್ಚು ; ತೆರೆ : ಬಲ್ಲಿದನ ಹಗೆಯ ತೆಗೆವನ್ನಬರ ಬಡವನ ಹರಣ ಹೋದ ತೆಐನಂತಾಯಿತ್ತು (ಮಹಾದೇ. ಬ. ೩೬-೬೧) ; ಉತ್ತರದ್ವಾರದ ಬಾಗಿಲ ಬಿಯಗವ ತೆಗೆದಲ್ಲಿ ನಾದಮಾರುತಿ ಯಪ್ಪ ಪ್ರಸಾದವ ಕಂಡೆ (ಆದಪ. ೨೪-೬೯) ; ಕಾಲ ಕೆರಹುಗಳಂ ತೆಗೆಯದಿಂತಿರ್ದಡೆಲೊ ನಿನ್ನ ಬೀಳ ಹೊಡೆವೆನು (ಬಸಪು. ೪೬-೧೧) ; ಕೆತ್ತ ಕದ ತೆಗೆಯದು (ಕುಮಾಆ. ೧೨-೭) ; ಅರುಣಾಬ್ಜ ನಿಳಯಕವಾಟ ಕೌಸ್ತುಭಮಣಿ ಕಿರಣದಿಂ ತೆಗೆದೊಳಪೊಕ್ಕು (ಮೋಹತ. ೧-೬). ೧೨. ಪ್ರಕಟವಾಗು ; ಕಾಣಿಸಿಕೊಳ್ಳು ; ತೋರು ; ಹೊಳೆ : ರತ್ನಾಭರಣಂಗಳ ರುಚಿ ... ತೆಐಂ ಬೊಳೆಯಲ್ಕಿಂದ್ರಾಯುಧಮೇಂ ಪೊಳೆದುದೋ ನೃಪಸುತನ ಮುಂದೆ ತೆಗೆದು ಬರುತ್ತುಂ (ಕಾದಂಪೂ. ೫೪೮) ; ತೆಗೆಯಬಹುದೆ ಕಡವರವು ದರಿದ್ರಂಗೆ (ಬಸವ. ೨೬೭) ; ಧರ್ಮಮುಖವರಳ್ವಂತೆ ಮುಕ್ತಿಯ ಸೆಜ್ಜೆ ತೆ[ ಪಾಠಾಂ. ದೆ ]ಗೆವಂತೆ ವೃಷಭನಮುಖಂ ವಿಕಾಸಮನೆಯ್ದೆ (ಬಸರ. ೪-೮೧). ೧೩. ತೋರ್ಪಡಿಸು ; ಕಾಣುವಂತೆ ಮಾಡು : ತೆಗೆದಯ್ ಮೋಕ್ಷದ ಬಟ್ಟೆಯಂ (ಶಮದ. ೨೧೭ ಪ್ರಯೋ). ೧೪. ಹೊರಬರು ; ಹೊರಸೂಸು : ಮೆಯ್ಯ ನೀರ್ತೆಗೆವನ್ನಂ ಜವಜವಜವನಂಜಿಸಿದುವು ಜವನಾಳ್ಗಳ ತೆಐದೆನ್ನ ಕಿನ್ನೆಯ ನರೆಗಳ್ (ಅಜಿಪು. ೨-೬೯). ೧೫. ಸಂಹರಿಸು ; ನಾಶಮಾಡು ; ಧ್ವಂಸಮಾಡು : ನಿನ್ನ ಧೈರ್ಯಾವಲೇಪಮಂ ಪ್ರಾಣಂಬೆರಸು ತೆಗೆಯದೆ ಮಾಣೆನೆಂದು ಮನೋಭವನಿಂ ನಿರ್ಭರ್ತ್ಸಿತೆಯಾದಂತೆಯುಂ (ಕಾದಂಉ. ೮೩) ; ಈ ಪುಸಿವನಂ ಕುಸಿಯೊತ್ತಿ ಬಟ್ಟೆಯೊಳ್ ಪೆಟ್ಟುಮೆಟಿದು ಬಳಸಿದ ದಸಿಯೊಳ್ತೆಗೆಯಿ ಮೆಂದು . . . ಪೇಟಿ (ಸುಕುಮಾ. ೭-೫೪) ; ನೈಷಧಭೂಮಿಪನ ಕೈಹಿಡಿದು ಬಾಳುವ ನೇಮವನು ತೆಗೆದ [ ಪಾಠಾಂ. ಬಿಸುಟ ] ಡವಿಗಟ್ಟಿತೆ ಕಠಿನವಹ ವಿಧಿಯು (ನಳಚ. ೭-೧೩). ೧೬. ನಾಶವಾಗು ; ಹಾಳಾಗು : ಒಬ್ಬ ಜಂಗಮದಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು (ಬಸವ. ೬೨೬). ೧೭. ಆಕ್ರಮಿಸು ; ಆವರಿಸು ; ಮೇಲೆ ಬೀಳು : ಕಾಳಿಯೆಂಬ ಜಲದೇವತೆ ಪೂರ್ವಭವಬದ್ಧವೈರದೊಳು ಗ್ರಗ್ರಾಹಾಕಾರದಿಂ ತೆಗೆಯೆ (ಜಾವುಂಪು. ೫೭) ; ಮಹಾರಣ್ಯದೊಳಗೆ ಬರ್ಬರನೊರ್ವ ಬೊಮ್ಮರಕ್ಕಸಂ ಕಂಡು ಪಿಡಿದು ತಿನಲೆಂದು ತೆಗೆವುದುಂ (ಪಂಚತಂ. ೧೫೨-೯) ; ತಾರೆಗಳು ನೆಣಗೊಬ್ಬಿನಲಿ ರಾಹುವ ತೆಗೆದು ಬದುಕಲು ಬಲ್ಲವೇ (ಕುಮಾದ್ರೋ. ೫-೭೩). ೧೮. ತಡೆ ; ಅಡ್ಡಿಪಡಿಸು : ಪೋಗದಿರೀಶ್ವರನಾಣೆಯೆಂದು ಫುಲ್ಲರುಳನಿನಾನುಮಂ ತೆಗೆದು ಕಾಡಿದುದಲ್ಲಿ ಫಣೀಂದ್ರಕೇತುವಂ (ಪಂಪಭಾ. ೧೩-೫೫) ; ಕಾಲಮೇಲೆ ಮುಟ್ಟಿದ ವಿನಯಾಭಿರಾಮನಂ ತೆಗೆದು ತಟ್ಟೈಸಿ (ಕಾದಂಉ. ೨೭೫) ; ಇಂದು ಪೋಗಲಾಗೆನ್ನನವಜ್ಞೆಗೆಯ್ದು ಬಿಸಿಲಾದುದು ನಿಮ್ಮಡಿ ನಾಳೆ ಪೋಪುದೆಂದುನ್ನತಶೀಲರಂ ತೆಗೆವುದುಂ (ಧರ್ಮಾಮೃ. ೧೩-೬೬) ; ದಂಡಾಗ್ರದೊಳ್ ರಂಜಿಪ ಬಿರುದ ಪಟವ್ರಾತಮೋರಂದದಿಂ ವಾಯುಗಮವ್ಯಾಪಾರಮಂ ನೆಟ್ಟಗೆ ತೆಗೆಯೆ ... ಬರುತುಮಿರ್ದಂ ಪುರಕ್ಕುರ್ವರೇಶಂ (ಕುಸುಮಾ. ೪-೧೧೪). ೧೯. ನಿವಾರಿಸಂ ; ಹೋಗಲಾಡಿಸು ; ಕಳೆ : ಬಯ್ವ ಜನರು ಜರಿವ ಜನರು ಅವರಿಗೇನು, ಬಾಯಿ ಕೊಬ್ಬು ನೋವು ತೆಗೆವರೆ ? (ಕವಿಸೋ. ೬೦-೨೦) ; ಪಿಸುರು ತೆಗೆದರೂ ಪಿಶಾಚ ಬಿಡುವುದಿಲ್ಲ (ಗಾದೆ). ೨೦. ತೊಡಗು ; ಉಪಕ್ರಮಿಸು ; ಆರಂಭಿಸು : ಮೆಲ್ಲನೆ ಮಾತ ತೆಗೆದನು (ಕುಮಾಕ. ೫-೫) ; ಸಿಂಹಳಕ್ಕಾಳ್ದನ ಬಂಟರುರ್ವಿ ಮಿಗೆ ಕಾಳೆಗಮಂ ತೆಗೆದರ್ (ರಾಜಶೇ. ೫-೦೨೪). ೨೧. ಉಂಟುಮಾಡು ; ಆಗಿಸು : ಬಗಸೆಗಣ್ ಕುಡಿನೋಟವಮಾವು ಪೊಸ ಗಾಡಿಯಂ ತೆಗೆಯೆ ... ದಿಟ್ಟಗೇನೆಸೆದಳೋ (ಪದ್ಮರಾ. ೩-೩೦) ; ಸುಮನ ಸುಗಂಧ ಕದಂಬದ ಕಂಪನು ತಿಮಿರಿ ತೆಗೆಯಲಾಗಿ (ಭರತ. ೧-೩೬). ೨೨. ಮಾಡು ; ರಚಿಸು ; ನಿರ್ಮಿಸು : ಕಡೆದರೊ ಶಂಖದಿಂ ತೆಗೆದರೋ ನವ ಮೌಕ್ತಿಕದಿಂ ... ಪೇಟಿನಲ್ಕರವೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ (ಕಾದಂಪೂ. ೬೬೭) ; ಗಗನಗಂಗಾನದಿಯ ಕಾಲುವೆ ತೆಗೆದರೆನೆ ಠಕ್ಕೆಯದ ಪಲ್ಲವ ಪಗಿಯೆ ಮೆಟಿದುದು ಬಿಗಿದ ಮೊಗರಂಬದ ವಿಳಾಸದಲಿ (ಕುಮಾದ್ರೋ. ೩-೪) ; ತೆಗೆದ ತೊಟಿ ಕಾಲುವೆಗಳುದ್ಯಾನಗಳ . . . ಈಕ್ಷಿಸುತರಸ ನೈತಂದ (ತೊರರಾ. ೦-೬-೧೧). ೨೩. ಬರೆ ; ರೇಖಿಸು ; ಚಿತ್ರಿಸು : ಎರಡು ಬರೆಯಂ ತೆಗೆದು[ಪಾಠಾಂ. ತೀವು]ದನರಸಂ ಕಂಡು ಕಡು ಮುಳಿದು (ವಡ್ಡಾರಾ. ೧೧೮-೨೮) ; ಗಾಡಿವೆತ್ತಡರ್ದು ಕತ್ತುರಿಯೊಳ್ ಮದ ಪಟ್ಟೆಯಂ ವಿಳಾಸದೆ ತೆಗೆದಂತೆ ಕಣ್ಗೆಸೆದು ತೋಟಿದುದಾ ಕದನತ್ರಿಣೇತ್ರನಾ (ಪಂಪಭಾ. ೩-೭೬) ; ಹೊಗರುಮೊಗಕೆ ಕಣ್ಗಳ ದಿಟ್ಟತಾಕದೊಲ್ತೆಗೆದ

ಕತ್ತುರಿರೇಖೆಯಂತೆ (ಕಂನವಿ. ೯-೧೧೪) ; ಖಲೀಲ ಜಿಬ್ರಾನನು ಮಹಾ ಕವಿಯೂ, ತತ್ವಜ್ಞಾನಿಯೂ, ಹಾಗು ಚಿತ್ರಕಾರನೂ ಆಗಿದ್ದನು ... ಆವನು ತೆಗೆದ ಚಿತ್ರಗಳು ಪಾಶ್ಚಾತ್ಯದೇಶದೊಳಗಿನ ಬಹುಶಃ ಎಲ್ಲಾ ಪ್ರಮುಖಪಟ್ಟಣಗಳಲ್ಲಿಯೂ ಪ್ರದರ್ಶಿತವಾಗಿವೆ (ಪ್ರಬಂಧ. ೧೦೨). **೨೪.** ಸರಿಸು ; ತಳ್ಳು : ಅಡಿಯಿಂ ಮೇಗಣ್ಗೆತ್ತುವ ಕಡುಗಾಳಿಯು ಪೊಯ್ಲೊಳಿದಱ ನೀರೊಗೆದಪುದಾರ್ದಡಿಗೆ ಬರೆ ತೆಗೆವ ಗಾಳಿಯಿಂನಡಿಗಿೞದ ಪುದಿದಱ ನೀರಿದೊಂದಚ್ಚರಿಯೇ (ಆದಿಪು. ೧೩-೫೨) ; ಎಲೆಎಲೆ ಹಿಡಿ ಭೀಮನನು ತೆಗೆ ಕಲಕೆ ದುರ್ಯೋಧನನ (ಕುಮಾ.ಆ. ೭-೩೬) ; ಪಾಂಡವರ ಮಾತ ತೆಗೆಯಾಡದಿರಿ (ತುರಂಗ. ೪೬-೧೨). **೨೫.** ಓರೆಯಾಗು ; ಆರುಗಾಗು ; ಪಕ್ಕಕ್ಕೆ ಸರಿ: ಒತ್ತೊತ್ತಿನಿಂ ನಿತ್ತರಿಸಲ್ಕಾನಾಱದೇನೊಂದೆಡೆಗೆ ತೆಗೆದುದೋ ವಿಶ್ವದಿಕ್ಚಕ್ರಂ (ಕಾದಂಬ. ೪೩೨) ; ಇದು ಹರಿಯ ಸಮರಲಕ್ಷ್ಮಿಯ ಮದುವೆಯೊಳೆಡೆವಿಡಿದ ಕಾಂಡಪಟಮೆನಿಸಿದ ಕೌಮುದಿ ತೆಗೆವಿನಂ ಮುಗುಟ್ದುದೆನಿಸಿದತ್ತು ಮುನ್ನೀರೊಳಿಂದುಘಟಿಕಾಪಾತ್ರಂ (ವರ್ಧಪು. ೮-೩೫). **೨೬.** ಒಯ್ಯು; ಸಾಗಿಸು : ಕೀರಂಗೆ ಕುಟುಕನಿಕ್ಕೆಂಬ ಚಕೋರಿಗಳಂ ಚಂದ್ರಕಾಂತದ ನೆಳಲ್ಗೆ ತೆಗೆಯೆಂಬ ... ಕೆಲಸದ ನೆವದಿಂ (ನಂಬಿರ. ೧೪-೩೬). **೨೭.** ತೆರಳಿಸು; ಹಿಂತಿರುಗಿಸು : ಇಚ್ಛೆಯಣಮಿಲ್ಲದೊಡಂ ತೆಗೆದಳ್ ಕರಂ ಮನಂ ಕಿಡೆ ಪೊಸತಪ್ಪುದೊಂದು ಪಿಡಿಗಂಕುಶಮಿಟ್ಟು ಮರಳ್ಚುವಂದದಿಂ (ಕಾದಂಪೂ. ೭೭೨); ಪಡೆಯ ತೆಗೆ ತರುವಲಿಯ ಕೊಲ್ಲದೆ ಹಿಡಿ (ಕುಮಾ.ದ್ರೋ. ೬-೭); ಬಗೆವೆತ್ತ ಬಾಗಿಲ ಕದ ವಜ್ರಲಾಳವಿಂಡಿಗೆಗಳ ಬಂಧನಗೊಳಿಸಿ ಮಿಗೆ ವಿಶ್ವಾಸಿ ಕಠೋರ ರಾಕ್ಷಸಿಯರ ತೆಗೆಯದೆ ಕಾಪನಿಕ್ಕಿದಳು (ಮೋಹತ. ೩೩-೩೭). **೨೮.** ಹಿಂತೆಗೆದುಕೊಳ್ಳು ; ವಾಪಸ್ಸು ತೆಗೆದುಕೊಳ್ಳು : ಪದಪಿಂ ನಟ್ಟರೆ ದಿಟ್ಟಿಯಂ ತೆಗೆದೆನೆಂತೆಂತಾನುಮುದ್ವೇಗದಿಂ (ಕಾದಂಪೂ. ೭೭೪); ಹಗೆಯರಿಗೆ ವರವೀವರಿಬ್ಬರು ತೆಗೆಯಲಱಿಯರು ಕೊಟ್ಟ ವರಗಳ (ಹರಿಶ್ಚ. ೨೮). **೨೯.** ಹೋಗು; ತೆರಳು : ಇತ್ತಲೀ ಪ್ರಾಣೇಶನಿದ್ದ ನಿಮಿತ್ತದಲಿ ಪಶುಗಳು ಬೆಳೆದ ಹೊಲಬತ್ತ ತೆಗೆಯಲು (ಬಸವು. ೬೦-೨೩). **೩೦.** ಹಿಮ್ಮೆಟ್ಟು; ಹಿಂದೆಗೆ : ಆಹವಧರೆಯೊಳ್ ಪತಿತಂ ಪ್ರಸ್ಕನ್ನಂ ಕಾದಿ ತಟ್ಟುಗಿದು (ರಣದೆ) ತೆಗೆದನಕ್ಕುಂ ನಷ್ಟಂ (ವಸ್ತುಕೋ. ೮೨-೫): ಕೈಕೊಳ್ಳದಗ್ಗದ ಬೀರರ್ ತೆಗೆದೋಡೆ (ಕಬ್ಬಿಕಾ. ೩೦೪); ತೆಗೆಯೆ ರಿಪುಬಲ ಕೊಲುತ ಬಂದುದು ದಿಗಿಭಪು (ಕುಮಾ.ದ್ರೋ. ೩-೪೨) ; ಹಗಲು ಸವೆದುದು ಹೊಂಬಿಸಿಲು ನೆಱೆ ತೆಗೆದುದತಿ ವೇಗದಲಿ (ನಳಚ. ೫-೪೩). **೩೧.** ಮುಚ್ಚು ; ರದ್ದುಪಡಿಸು : ಬಿಜಪಾಡ ಅಂಗಡಿಯು ಈಗ ತೆಗೆದು ಇರುತ್ತೇವೆ (ಮುಂಬಮಾ. ೨೩ ಪ್ರಸ್ತಾವನೆ). **೩೨.** ಹಿಡಿದುಕೊಳ್ಳು; ಹಿಡಿ: ಚೇಟೀ ಚಿಕ್ಕದೆಂದಟ್ಟಿಕೆಯಿಂ ತೆಗೆಯಲ್ ಕಚ್ಚದೆ (ಸೋಮೇಶ. ೪೧). **೩೩.** ಆಯ್ದಿಡು; ಆರಿಸಿಡು; ಮೀಸಲಿಡು: ಸರ್ವಸ್ವಮುಮಂ ಕುಡದಿರಲುರ್ವೀಪತಿ ಬಂದೊಡಾಗದೆಂದತಿಭಕ್ತರ್ ಖರ್ವಡನಿವಾಸಿಗಳ್ ಕೆಲರುರ್ವೀಶರ್ ತೆಗೆದರಾನೆಯಂ ಕುದುರೆಯುಮಂ (ಆದಿಪು. ೯-೧೨೮). **೩೪.** ಬಳಸು; ಉಪಯೋಗಿಸು : ನಿತ್ಯವು ತೆಗೆಯುತಲಿರಬೇಕು ಹುಟ್ಟನು ತಾನೆಯೆ ತೂರೆಯೊಳಂಬಿಗನು (ಇಂಜಾಪ. ೨೦೦-೩೬). **೩೫.** ಕ್ರಯ ಕೊಟ್ಟು ಪಡೆ; ಕೊಂಡುಕೊಳ್ಳು: ಇದನ್ನು ಎಷ್ಟು ದುಡ್ಡು ಕೊಟ್ಟು ತೆಗೆದಿರಿ ? (ರೂಢಿ). **೩೬.** ಉಚ್ಚರಿಸು; ಹೇಳು: ಮಾತು ಕೇಳದ ಮಕ್ಕಳ ಹೆಸರು ತೆಗೆಯಬಾರದು (ಪುರಂದ. ೨-೫೮-೧). **೩೭.** ತೋರಿಬಿಡು : ತೆಗೆಯೆ ಬೀರರವ [ದೆ] ಮೇಲೆ ಪರಿವ ಮದಗಜಂಗಳಿಂ ಚಳತ್ತುರಂಗಮಂಗಳಿಂ (ಪಂಪಭಾ. ೧-೫೮ ರಗಳೆ). **೩೮.** ನಿಲ್ಲಿಸು; ಸುಮ್ಮನಿರು : ಎಂತುಂ ತೆಗೆ ಮೇಘನಾದ ಸಹಿತಂ ತತ್ಪಾದಪದ್ಮೋಪಜೀವಿಗಳಾಗಿರ್ದ ಮಕ್ಕಳೆಲ್ಲಮಿದೆ ನಮ್ಮಂ ಕಾಣಲೆಂದೀಗಳಿಲ್ಲಿಗೆ ಮುಂತೀ ಬರುತಿರ್ಪರ್ (ಕಾದಂಬ. ೭೭೪); ಧರೆಯೊಳಗೆ ತಾರಕಂಗೆನಗರಿಮೇಘಮಹಾಬಲಂಗೆ ಸಮರಾಂಗಣದೊಳ್ . . . ಸುರಪತಿಗಿರಪತಿಯಜಂಗಿಜಂ ತೆಗೆ ಸರಿಯೇ (ಗಿರಿಕ. ೬-೩೮); ಫಡ ಫಡುರವಣೆ ಬೇಡ ತೆಗೆ ಬಾಯ್ಬಡಿಕತನವಿದು (ಕುಮಾ.ದ್ರೋ. ೨-೩೯). **೩೯.** ಸುಡು; ಮರಳಿಸು: ಕುದಿಸು: ನೇಱಿಲ ಬೀಜಂ ಕಡಸಿಗೆಯ ಬೇರಂ ಸುಣ್ಣಂ ಜಲಮಿಮೞಿಂ ತೆಗೆಯಲ್ ವಿಷಮುೞಿಗುಂ (ಲೋಕೋಪ. ೮-೨೩). 'ತೆಗೆಪು$_1$' ಪರಾ. **೪೦.** ತೇಯು; ಅರೆ : (+). **೪೧.** [ಗಣಿತ] ಭಾಗಿಸು: "ತೆಗೆಯೆನಲು ಭಾಗಿಸುಹಮಕ್ಕು" (ಮಂಗರಾ. ೧೦೪-೧೦೨).

**ತಕ್ಕೊ, ತಗೊ, ತೆಕ್ಕೊ**=ತೆಗೆದುಕೊಳ್ಳು; ಸ್ವೀಕರಿಸು : ತಕ್ಕೋ ಗಂಟ ನಿನ್ನಾಟವ ತಿಳಿಸುವೆ (ವಿದಾಕ್ಯ. ೩೫ ಪಲ್ಲವಿ): ನಿನ್ನ ಹಣವನ್ನು ನೀನೇ ತಗೋ (ರೂಢಿ); ತೆಕ್ಕೋ ನೀ ಮುನ್ನ ಕೊಟ್ಟ ಹೊನ್ನ (ಶರಲೀ. ೩೫೯-೪). **ತೆಗೆದಿಕ್ಕು** = ಧರಿಸು: ಕಾಸೆಯನುಟ್ಟು ಜನ್ನವಿರಮಂ ಪೆಗಲೊಳ್ ತೆಗೆದಿಕ್ಕಿ ವೇದದಭ್ಯಾಸಮನುಂಟುಮಾಡಿ ಪೊಲಸಂ ಪಸುತಿರ್ಪ ನಿಶಾಚರರ್ಕಳಂ ಗ್ರಾಸಮನುಣ್ಬುದೆಂದೊಡೆ (ಕಾವ್ಯಸಾ. ೫೩೫). **ತೆಗೆದಿಡು** = ಜೋಪಾನ ಮಾಡು; ಎತ್ತಿಡು: ಹೊಸಬಟ್ಟೆಯನ್ನು ಪೆಟ್ಟಿಗೆಯಲ್ಲಿ ತೆಗೆದಿಡು (ರೂಢಿ). **ತೆಗೆದಿರಿಸು** = ಬೇರೆಯಾಗಿರಿಸು ; ಮೀಸಲಾಗಿರಿಸು : ಸಕಲ ದೇವಾನ್ನವ ಒಡೆಯರಿಂದಲೂ ಮಿಗಿಲಾಗಿಕ್ಕಲು ತೆಗೆದಿರಿಸಿದೆನು (ಬಸವ. ೪೩೯) ; ನೊಣವನೆ ಬೇಯಿಸಿ ಬಡಿಸುವುದಾದರು ರೆಕ್ಕೆಯನೊಂದನು ಅಡುಗೆಯ ಭಟ್ಟರು ತಮಗಾಗಿ ತೆಗೆದಿರಿಸುವರು (ಇಂಜಾಪ. ೨೨೧-೯೪). **ತೆಗೆದುಕೊಳ್, ತಕೊಳ್, ತಕ್ಕೊಳ್, ತಕ್ಕೊಳ್ಳು, ತೆಕೊಳ್, ತೆಕ್ಕೊಳ್, ತೆಕ್ಕೊಳ್ಳು, ತೆಗಕೊಳ್, ತೆಗೆಕೊಳ್** = **೧.** ಸ್ವೀಕರಿಸು: ಸಮ್ಯಗ್ವ್ರತಂಗಳುಮಂ ತೆಗೆದುಕೊಳ್ವಂತೆ ವಿಚಿತ್ರವಸ್ತ್ರಂಗಳಂ ತೆಗೆದುಕೊಂಡು ... ಬನಮಂ ಪೊಕ್ಕು (ಸುಕುಮಾ. ೧೧-೮೩ ವ); ಆ ವಿಭೂತಿಯಂ ಸುಕೃತದಿಂ ತೆಗೆದುಕೊಂಡು . . . ಧರಿಸಿ ಲಿಂಗಾರ್ಚನೆಯ ಮಾಡುವ ಶರಣನಾತನೆ ವೇದವಿತ್ತು (ಆದವ. ೧೮-೪೩) ; ಆ ಜಂಗಮವೇ ಸಾಕ್ಷಿಯಾಗಿರ್ದು ವಿಭೂತಿ ವೀಳೆಯವ ತಕ್ಕೊಂಡು (ಚನ್ನಬ. ೦೨-೯) ; ಲಿಂಗ ಕೆಲದೊಳಿರೆ ಕರದಲ್ಲಿ ತಕ್ಕೊಂಡು (ಗುರುಚಾ. ೫-೭೪) ; ಬೆಣ್ಣೆ ತಕ್ಕೊಂಡ ಬಳಿಕ ಉಳಿಯುವುದೇನು ಮಜ್ಜಿಗೆ (ಮುಂಬಯಿ. ೧-೨೫) ; ತೋಟ ಮಠ ಕೆರೆಯ ಅಪಹರಿಸಿ ತೆಕೊಂಡಂಥಾ ಪಾಪಿಗಳು ದೇವಲೋಕ ಮರ್ತ್ಯಲೋಕಕೆ ಹೊರಗು (ಎಕ. XVI, ಚಿಕ್ಕನಾ. ೧-೧೯ ; 1622) ; ತಾಂಮ್ರಶಾಸನ ಸಹವಾಗಿ ಕ್ರಯುವನೂ ತಕ್ಕೊಂಡು (ಸೌಇಇ. IX–ii, ೫೦೭-೨೪; 1538) ; ಖಂಡಪರಶುವಿನ ಕೈಯಿಂದಲಾ ಹೊನ್ನ ತೆಕ್ಕೊಂಡು (ಚಿಬಪು. ೬೨-೬೨) ; ದುಡ್ಡುಗಳನ್ನೆಲ್ಲಾ ತಕ್ಕೊಂಡು ಪೇಟೆಗೆ ಹೋಗಿ (ಕಥಾಮಂ. IV, ೧೪) ; ವಿವಿಧವಾದಕರೊಳಗದೊರ್ವನ ಹೆಗಲ ಹಱೆವೊಂದ ತವಕಿಸದೆ ತೆಗಕೊಂಡು ತನ್ನೊಪ್ಪುವ ಹೆಗಲಿನೊಳು ಕೋದು (ಸಾಳ್ವಭಾ. ೧೮-೫೫) ; ಪೂವಸೆಗೆಲದೊಳವ ಮುನ್ನಿರಿಸಿ ದಸಿ ಖೇಡಯುವಿರಲು ತೆಗೆಕೊಂಡು ನೋಡುತಿರೆ (ಸಾಳ್ವಭಾ. ೧೭-೧೫). **೨.** ಪಡೆ ; ಹೊಂದು : ತಮ್ಮ ಆಪ್ತರು ಇಷ್ಟರು ಸ್ನೇಹಿತರು ಮುಂತಾದವರ ಭೆಟ್ಟಿಯನ್ನು ತಕೊಳ್ಳಬೇಕು (ಮುಂಬಯಿ. ೪-೩೪). **೩.** ವಹಿಸು : ಇನ್ನು ಮುಂದೆ ಹೆಚ್ಚು ಶ್ರಮ ತಕ್ಕೊಂಡು ಕಲಿಯಬೇಕಾಗುವುದು (ಮುಂಬಯಿ. ೪-೧). **೪.** ದೋಚು; ಕಸಿ; ಕೀಳು : ಬಿಕ್ಕು ಬಿಕ್ಕನೆ ತೋಱಿ ಇಕ್ಕುವಳು ಕಣ್ಣೀರ ಸಿಕ್ಕಿದಳು ಸೂಳೆಯೆನಬೇಡ ಅದು ರೊಕ್ಕ ತಕ್ಕೊಂಬುವುದಕೆ (ಸರ್ವಜ್ಞ. ೧೯೨೪). **ತೆಗೆದುನೋಡು**=ನೋಡಿಯೂ ನೋಡದ ಹಾಗೆ ಈಕ್ಷಿಸು,–ನೋಡು : ಪರೆದ ಕುರುಳಲುಗೆ ಘಟ್ಟಿಯನರೆಯುತ್ತುಂ ನಾಣ್ಚಿ ತೆಗೆದು ನೋಟ್ಪುದುಮೆನ್ನಂ (ಪಂಪಭಾ. ೮-೬೫). **ತೆಗೆದು ಹಾಕು** = **೧.** ಹೊಡೆದು ಹಾಕು : ಇಲ್ಲಿ ಬಂದಿರುವ ಅನಾವಶ್ಯಕ ವಾಕ್ಯವನ್ನು ತೆಗೆದುಹಾಕಬಹುದೆ ? (ರೂಢಿ). **೨.** ವಜಾಮಾಡು : ಅವನನ್ನು ಕೆಲಸದಿಂದ ತೆಗೆದು

ಹಾಕಿದರು (ರೂಢಿ). ೩. ನಿರಾಕರಿಸು ; ಅಲ್ಲಗಳೆ : ಆ ಮಾತನ್ನು ತೆಗೆದುಹಾಕುವಂತಿಲ್ಲ (ರೂಢಿ). **ತೆಗೆದು ಹೋಗು** = ಕೃಶವಾಗು ; ದುರ್ಬಲವಾಗು : ದಿನೇ ದಿನೇ ಮೊದಲಿಗಿಂತ ಹೆಚ್ಚಾಗಿ ತೆಗೆದು ಹೋಗುತ್ತಾ ಬಂದರು (ಚಿಕ್ಕದೇ. ೨೭೯) ; ನೀವು ಬಹಳ ತೆಗೆದು ಹೋಗಿದ್ದೀರಿ (ಮುರುಕು. ೯೯). **ತೆಗೆಬೀಯ** = ಕೊಡುಂಗೈಯವನು ; ವಂಕ್ತ ಹಸ್ತ ; ಉದಾರಿ ; ಒಂದು ಬಿರುದು (?) : ಅನ್ವಿತನ ಕಾಳೆಯ ಬಿರುದೆನ್ನಂದಡೆ ಅಳಿಂ ಮುಂನಿಱಿವಂ ಸಿತಗರ ಗಂಡಂ ತೆಗೆಬೀಯ ಚಲದಂಕರಾಮನ ಗಂಧವಾರಣಂ ಮಾಲೆವರ ಮಾರಿ (ಸೌಇಇ. XX, ೦೨೫-೮ ; 1185). P ಈ ಧಾತು ಅನೇಕ ಶಬ್ದಗಳ ಮುಂದೆ ಸೇರಿ ಸಂಯುಕ್ತ ಧಾತುವಾಗಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ:—ಕಾಲ್ತೆಗೆ, ಚಿತ್ರತೆಗೆ, ಪ್ರಾಣತೆಗೆ, ಬಾವಿತೆಗೆ, ಮೈದೆಗೆ, ಹೊರತೆಗೆ ಇತ್ಯಾದಿ.

[ದೇ.॥ ತಮಿ. ತೆಕ್ಕು ; ತೆವ್ವು ; ತುಳು. ದಪ್ಪು ; ತೆಲು. ತಿಗಿಯು, ತಿಗುಚು ; ತಿಗುವು, ತಿವ್ವು ; ಕೊಲಾ. ತಿಕ್, ತಿವ್ ; ನಾಯ್ಕಿ. ತಿಕ್ಕ್, ತಿವ್ವ್]

**ತೆಗ್₂** (ನಾ). ೧. ತೆಗೆದಂಕೊಳ್ಳುವಿಕೆ : (+). ೨. ಆಕರ್ಷಣೆ ; ಸೆಳೆತ : "ಆಕರ್ಷಣ ಪಲಾಯನಗಳೊಳ್ ತೆಗ" (ಶಬ್ದಮಂ. ೮೦). ೩. ಹಿಮ್ಮೆಟ್ಟುವಿಕೆ ; ಹಿಂದೆಗೆಯುವಿಕೆ ; ಪಲಾಯನ : ಅಮರ್ಚುವ ನಿಲ್ವೆಡೆಯುಂ ಬಗೆಯುಂ ತೆಗೆಯನಲ್ಲಾಟವುಂ ಕಾಟವುಂ ನೋವುದುಂ ಸಾವುದನೆಲ್ಲಂದದಿಂ ಬಗೆದಾಗಳ್ (ಪಂಪಭಾ. ೩-೪೩). ೪. ಇಳಿತ ; ಇಳಿಯುವಿಕೆ : ತೆರೆ ನೊರೆ ಬುದ್ಬುದಂ ಸುೞಿಜಲಂ ತೆಗೆ ಪೆರ್ಚುಗೆ ಗುಣ್ಪು ಘೋಷಣಂ ವರುಣ ನಗಂ ವಧೂಟಜನನಂ . . . ನೀರ್ಮೊಗೆ ವಭ್ರಮುರ್ವರಾಪರಿವೃತಿ ನಾಗರಿಕ್ಕೆ ಬಗೆದಾದೊಡೆ ಸೈತು ಸಮುದ್ರ ವರ್ಣನಂ (ಸೂಕ್ತಿಸು. ೨-೦). [<ತೆಗೆ₁]

**ತೆಗೆತ** (ನಾ). ತೆಗೆದಂ ಕೊಡುವಿಕೆ ; ದಾನ : "ದಯ—ದಾನ, ಗತಿ ಹಿಂಸಾದಾನೇಷು ಈವಿಯೊಳಂ, ನಡೆಯೊಳಂ, ಝುಂಕಣೆಯೊಳಂ, ತೆಗೆತದೊಳಂ" (ಕಾಶಕ್ಕ. ೧೧೦). [ತೆಗೆ₁ + – ತ₂]

**ತೆಗೆತರ್** (ಕ್ರಿ) ೧. ತೆಗೆದಂಕೊಂಡು ಬರು. 'ತೆಗೆತರಿಸು' ಪರಾ. ೨. ಸೆಳೆದಂಕೊಂಡು ಬರು : ಹೆಣ್ಣಾಳ್ಗಳೆನ್ನದೆ ತಱಿದಿಕ್ಕಿ ತೆಗೆತಂದು ಚಿಣ್ಣನನೆಮಗೊಪ್ಪಿಸೆಂದ (ಮೋಹತ. ೩೭-೩೦). [ತೆಗೆ₁ + ತರ್]

**ತೆಗೆತರಿಸು** (ಕ್ರಿ). ತೆಗೆದಂಕೊಂಡು ಬರುವಂತೆ ಮಾಡು : ಪೆಟ್ಟಿಗೆಗಳಂ ತೆಗೆ [ಪಾಠಾಂ. ಗ] ತರಿಸಿ ಮುಂದಿಟ್ಟು (ಬಸವು. ೧೧-೦೫). [ತೆಗೆತರ್+–ಇಸು₃]

**ತೆಗೆನೆಱಿ** (ಕ್ರಿ). (ಬಾಣ ಬಿಡಲು ಸಿದ್ಧವಾಗಿ) ಪೂರ್ತಿಬಾಣವನ್ನು ಎಳೆ : "ತೆಗೆನೆಱಿ – ಆಕರ್ಣಾಂತೇ (ಪೂರಾ ಎಳೆ)" (ಶಮಧಾ) ; ಗಱಿ ಸನ್ನೆಗೆಯ್ದು ತೆಗೆನೆಱಿದೆಱಿಗಿ ಪರಂಕಲಿಸಿ ಪರ್ವಿ ಕೂಕಿಱಿದಿಸೆ (ಪಂಪಭಾ. ೧೦-೭೩) : ಆಗಳಂಬರಚರಬಲದ ಧನುರ್ವಲಂ ತೆಗೆನೆಱಿದು ಪೊಕ್ಕು (ಶಾಂತಿಪು. ೪-೮೭) ; ಕಡೆಗಣ್ಣಿಂ ಕಯ್ಯುಮಿಂಬಾಗಿರೆ ತೆಗೆನೆಱಿದವ್ಯಗ್ರನೇಕಾಗ್ರಚಿತ್ತಂಬಡೆದಿರ್ದಂ (ಪಂಪರಾಮಾ. ೧೪-೧೭೭) ; ತೆಗೆನೆಱಿದಬ್ಜನಾಭನಿಸೆ (ಜಗವಿ. ೬-೮೩) ; ಸಂಚಳಿಸದ ಶಂಕರನ ಮನಂ ಚಳಿಯಿಪುದಂ ಸಾರ್ದು ಪಾರ್ದು ತೆಗೆನೆಱಿದಿರ್ದಂ (ಗಿರಿಕ. ೮-೪೪) ; ಓಸರಿಸದೆ ತೊಡರ್ಚಿ ಸಾರ್ಚಿ ತೆಗೆನೆಱಿದು ನಿಂದು (ರಾಜಶೇ. ೬-೯೭೭). [ತೆಗೆ₁ + ನೆಱಿ₁]

**ತೆಗೆನೇಣು** (ನಾ). ಎಳೆಯುವ ಹಗ್ಗ ; ಕಡೆಗೋಲಿನ ಹಗ್ಗ : ಮಂದರದ ಕಡೆಗೋಲ ಮೇಳವಿಸಿ ವಾಸುಗಿಯ ತೆಗೆನೇಣಿನಿಂದಸುರರೋಳಿಯಿಂ ನೀವು ಸಹಿತೆರಡು ಕಡೆಯಂ ಪಿಡಿದು ಮಥಿಸಲು (ಲಶಿಜಿಂ. ೦೨-೩) ; ನಳನಳಿಪ ತೋಳುಗಳ ನಿಜಕರತಳದ ತೆಗೆನೇಣುಗಳ ಮುಖದಲಿ ಹೊಳೆವ ಹೊನ್ನೋಲೆಗಳ . . . ಮೋಹನಗಾತ್ರೆಯೆಸೆದಳು ಮೊಸರ ಕಡೆವುತ್ತ (ನಿಭಾಗ. ೧೦-೯-೦೫) ; ಹರಿಗೆ ತಲ್ಪವಾಗಿರ್ದನು ಸಮುದ್ರಮಥನದಲ್ಲಿ ತೆಗೆನೇಣಾಗಿ ನೊಂದನು (ಭೈರಸೂ. ೨೦). [ತೆಗೆ₁ + ನೇಣು (<ನೇಣ್₁)]

**ತೆಗೆಪು₁** 'ತೆಗಪು' ನೋ.

**ತೆಗೆಪು₂** (ನಾ). ನೆನೆಸುವಿಕೆ : ಅಳಿಯೊಳ್ ತೆಗೆಪಾದರಳಿಯ ತಳಿರಂ ಮಾರುಡದ ಪತ್ರಿಯೆಳಗಾಯುಮನಾ ಜಳದೊಳ್ ಗೋಕ್ಷೀರಾನ್ವಿತಮಾ ಮಳಕಾಮ್ರಫಳಂಗಳಾವಗಂ ಮೃದುವಕ್ಕುಂ (ಲೋಕೋಪ. ೮-೨೦). [?]

**ತೆಗೆಬಗೆ, ತೆಗೆಬಿಗಿ** (ನಾ). ೧. ತೊಂದರೆ ; ಕಷ್ಟ : ಭೂಪತಿ ಕೊಗಡು ಗೊಳುತ್ತೆತಂದು ಕೇಳಲು ತೆಗೆಬಗೆಯಲುಸುರುತ್ತ ತಂದೆಯು ನೆಲೆಯ ತಿಳುಹಿದನು (ಕೌಶಿರಾ. ೦-೩೦) ; ಮುಸೆದು ಕರಗಳನೊರ್ವರೊರ್ವರು ಮುಸಗಿದರು ಮುಂಷ್ಟಿಪ್ರಹಾರದಲುಸಿರ ತೆಗೆಬೆ[ಬ]ಗೆಯಿಂದ ಮಂಡಿಯ ನೊಡ್ಡಿ ಸಮವಾಗಿ (ಕೋಗಯ. ೨೮-೦೯). ೨. ಪ್ರಾಣ ಹೋಗುವ ಸ್ಥಿತಿ ; ಉತ್ಕಟಾವಸ್ಥೆ : ಬಾಯ ಮಿಡುಕಿನ ಬಳಲುಗಂಗಳಿನಾಯುವಿನ ತೆಗೆಬಗೆಯ ರಕ್ಕಸರಾಯನನ ಕೊಂಡೊಯ್ದು ಬೀಸಿದರಾಲವಟ್ಟದಲಿ (ಕೊರರಾ. ೧-೦೫-೨೭). ೩. ಅತಿಶಯ ; ಆಧಿಕ್ಯ ; ಹೆಚ್ಚಳ : ವಿಕ್ರಮದ ತೆಗೆಬಗೆಯಿಂದಲರಿನೃಪರುಗಳ ಬಗೆಗೆಡಿಸುತ ನಡೆದಳು (ಕುರಾಸಾಂ. ೪೧-೮೪). 'ತಗೆಬಗೆ' ಪರಾ. **ತೆಗೆಬಿಗಿ** : ೧. ಸೊಗಸಿ ಬೆಳೆಯ ಕೊಯ್ದು ಪೊಱುವ ಜನಕೆ ತೆಗೆಬಿಗಿಯಿಲ್ಲವಾವ ಕಾಲದೊಳು (ರಾಮವಿ. ೨-೫೭). ೪. ಬಿಂಕ ; ಬಿಗುಮಾನ : ಸೊಗಯಿಪ ಸತ್ಕಾರದಿಂದ ತೆಗೆಬಿಗಿಯಿಲ್ಲದ ಸಮರತಿಯಿಂದವಳಗಣಿತಸುಖವಿತ್ತಳವಗೆ (ನೇಮಿಶಂ. ೧೦-೯೦) : ಮೊಗವ ಕಾಣುತ ನಮ್ಮೊತ್ತಿಗೆ ಬಹನಲ್ಲದೆ ತೆಗೆಬಿಗಿಯವನಲ್ಲ ನಿಮ್ಮ ಮಗ (ಕುರಾಸಾಂ. ೩೭-೦೨೪). 'ತಗಿಬಗಿ' ಪರಾ.

**ತೆಗೆಬಗೆಮಾಡು** = ತೊಂದರೆಯನ್ನುಂಟುಮಾಡು ; ಇಕ್ಕಟ್ಟನ್ನುಂಟು ಮಾಡು : ಶಿಶುವೆ ನೋಡಬಿಮನ್ಯು ಸುಭಟಪ್ರಸರದಿನಿಬರ ನೊಂದು ಛಾಯದೊಳುಸಿರ ತೆಗೆಬಗೆ ಮಾಡಿದನು (ಕುಮಾವ್ಯಾದ್ರೋ. ೫-೨೫). **ತೆಗೆಬಗೆಯಾಗು** = ೧. ಹೊಯ್ದಾಡು ; ಅನಿಶ್ಚಯವಾಗು : ಮುಗಿದ ಸರೋಜಮಾಲೆಗಮರಲ್ವಸಿತೋತ್ಪಲಮಾಲೆಗಂ ಮನಂ ತೆಗೆಬಗೆಯಾಗಿ ಸೈರಿಸದೆ ಷಟ್ಪದಸಂತತಿ ... ಎಡೆಯಾಡಿದುವಂಬುರುಹಾಕರಂಗಳೊಳ್ (ಅನಂಪು. ೭-೭೯). ೨. ಸಂಕಟವಾಗು ; ಕಷ್ಟವಾಗು : ಉಸುರು ತೆಗೆಬಗೆಯಾಯ್ತು ಜೀವರಿಗೆ (ಕೌಶಿರಾ. ೨೭-೫೪) ; ಇಳೆಯ ಭಾರಕರುಸುರು ತೆಗೆಬಗೆಯಾಗೆ ತೆರಳಿತು ಸೇನೆ ಪಶ್ಚಿಮಾಕೆ (ಕೊರರಾ. ೪-೯-೦).

[ತೆಗೆ₁ + ಬಗೆ₃]

**ತೆಗೆಬಿಗಿ** 'ತೆಗೆಬಗೆ' ನೋ.

**ತೆಗೆಮಿಳಿ** (ನಾ). ಪ್ರಾಣ ತೆಗೆಯುವ ಹಗ್ಗ ; ನೇಣು (?) : ಚಕೋರಿಗಳ್ ನಲಿಯೆ ಪಾಣ್ಬರಿಯರ್ಕಳ ಚಿತ್ತದಲ್ಲಿ ಪೆಂಪೊಗೆಯೆ ವಿಯೋಗಿಗಳ್ ಮುನಿಯೆ ಕತ್ತಲೆಮತ್ತಲೆಯಾಗಿ ಸಂಜೆಯೊಳ್ ತೆಗೆಮಿಳಿಯಾಡೆ [ಪಾಠಾಂ. ತೆಗೆಯೆ ಮುಳಿಯಾಡೆ] ಸೂರ್ಯನಪರಾಬ್ಧಿಯೊಳೊಯ್ಯನೆ ಮೆಯ್ಯನಿಕ್ಕಿದಂ (ಪುಣ್ಯಾಸ್ರ. ೩-೩೮). [ತೆಗೆ₁ + ಮಿಳಿ₂]

**ತೆಗೆಮೆಟ್ಟು** (ನಾ). (ಕಾಳಗದಲ್ಲಿ ಮುಂನುಗ್ಗಲು) ಹಿಂದಕ್ಕೆ ತೆಗೆದು ಇಟ್ಟ ಹೆಜ್ಜೆ : ಬೆದಱುಗಾಗೆಯ ನೋಟ ಸಾಳುವನೊದವು ಮಿಗಂಗಳ ಝುಳಕೆ ಕೇಸರಿಯಧಟು ಶಾಖಾಮೃಗದ ಲಂಘನ ತಗರ ತೆಗೆಮೆಟ್ಟು . . . ಸೊಕ್ಕಿದ ರದನಿಗಳ ಧೂಳಾಟ ಒಪ್ಪಿದವವರ ಯುದ್ಧದಲಿ (ಸಾಳ್ವಭಾ. ೨೨-೬೦).

[ತೆಗೆ₁ + ಮೆಟ್ಟು₂]

**ತೆಗೆಯಾಳ್** (ನಾ). ಆಕ್ರಮಿಸುವ ಯೋಧ ; ಧಾಳಿಯಿಡುವ ವೀರ : ದಿವ್ಯವಾಗ್ವಿದಿತ ಸುಧರ್ಮಮಾ ಸಭೆಯೊಳಿಂದು ವಿರಕ್ತನೃಪಾಳಜಾಳ ಮಿರ್ದುದು ತೆಗೆಯಾಳನಾಯ್ದು ತೆಗೆದಂತೆ ಕೊಳಲ್ಕಪವರ್ಗದುರ್ಗಮಂ (ಅನಂಪು. ೯-೪೯). [ತೆಗೆ₁ + ಆಳ್₃]

**ತೆಗೆಯಿಸು,** ತೆಗಸು, ತೆಗಿಸು, ತೆಗೆಸು (ಕ್ರಿ). ೧. **ಹೊರಕ್ಕೆ ತರು ; ಹೊರ ಬರುವಂತೆ ಮಾಡು :** ಸಂಬಂಧಮಂ ನೆಲಮನೆಯಿಂ ತೆಗೆಯಿಸಿ ಸನ್ಮಾನ ದಾನಂಗಳಿಂದಾತನಂ ಸತ್ಕರಿಸಿ (ವಡ್ಡಾರಾ. ೧೮೨-೨೩) ; ಎಲ್ವಂ ನೆಟ್ಟುಡಿದ ಬಾಳ ಕಕ್ಕಡೆಯುಡಿಗಳುಮನೆಯುಸ್ವಾಂತಮಂ ತೋಱ ತೆಗೆಯಿಸುತ್ತುಂ (ಪಂಪಭಾ. ೧೦-೨೫) ; ನಾನಿಂದಧರ್ಮದೊಳಿದ್ದರೆ ತೆಗೆಯಿಸು ಅಲ್ಲಿಯೆ ನೆಲೆನಿಲ್ಲದಂತೆ (ಇಂಜಾಪ. ೧೦೭-೬೯). ೨. **ಬರುವಂತೆ ಮಾಡು ; ಆಕರ್ಷಿಸು :** ಆ ಸ್ಥಿರಪ್ರಕೃತಿಯು ಸತ್ವ ಪ್ರಕೃತಿಯು ತೆಗೆಯಿಸಿದಪುದಾ ದಕ್ಷಿಣಹೃದಯೆಯು ದಕ್ಷಿಣತ್ವಮೆ ಗಮಿಯಿಸಿದಪುದಾ . . . ಮ ಹೋ ದಾ ರೆ ಯು ದಾ ರ ತೆ ಯೆ ಮನಂಗೊಳಿಸಿದಪ್ಪುದು (ಕಾದಂಉ. ೪೦೪). ೩. **ಇಳಿಸು ; ಕೆಳಕ್ಕೆ ತರಿಸು :** ಅಡವಿಯೊಳ್ ನಿಡಿಯ ಮರದ ತುತ್ತತುದಿಯೊಳಿರ್ದಟಲ್ವ ಗುಂಡಿಗೆಯುಂ ಕಂಡು ತೆಗೆಯಿಸಿ ಕೊಂಡು ಪೋಗಿ (ವಡ್ಡಾರಾ. ೯೦-೦೭). ೪. **ಸಾಗಿಸು ; ಕಳುಹಿಸು :** ಕನಕರತ್ನಾಭರಣಜಾಳಮನೊಪ್ಪುಗೊಂಡು ಭಂಡಾರಕ್ಕೆ ತೆಗೆಯಿಸುತ್ತುಂ (ಬಸರ. ೬-೩೩). ೫. **ಹೊರ ಹಾಕು ; ಬಹಿಷ್ಕರಿಸು :** ನಾಳೆ ಒಬ್ಬನನ್ನು ಜಾತಿಯಿಂದ ತೆಗೆಯಿಸುವ ವಿಷಯ . . . ಅಲ್ಲಿ ಬರುತ್ತದೆ (ಕುಡಿಕೂ. ೧೩೭). ೬. **ಕೊಂಡುಕೊಳ್ಳು ; ಕ್ರಯಕೊಟ್ಟು ಪಡೆ :** ಗಜನೂರಿನಲ್ಲಿ ಏನಾದರೂ ತಿಂಡಿ ತೆಗೆಯಿಸಿಕೊಂಡು ತಿನ್ನೋಣವೆಂದಂದು ಕೊಂಡೆ (ಚಂಗಾಳ್ಮ. ೪೯). ೭. **ಬಿಡು ; ತೊರೆ ; ತ್ಯಜಿಸು :** ಕುಮ್ಮಟವನು ತೆಗೆಯಿಸಿದರೆ ಕಾರ್ಯವನುಗೆಡುವುದು . . . ಅದಱಿಂದದ ಬಿಡುವುದು ಮನುಜೇಶ್ವರ ನೀತಿಯಲ್ಲ (ಕುಂರಾಸಾಂ. ೩೭-೪೮). ೮. **ಕಳಚುವಂತೆ ಮಾಡು ; ಬಿಚ್ಚುವಂತೆ ಮಾಡು :** ವೇಷವನ್ನು ತೆಗೆಯಿಸಿ, ಬಣ್ಣವನ್ನು ತೊಳಸಿ ಕಳಿಸಿದಾಗ ಬೆಳಗಾಗಿತ್ತು (ರೂಢಿ). ೯. **ಕೊಲ್ಲಿಸು ; ಸಂಹರಿಸು ವಂತೆ ಮಾಡು :** ಬಂಟರಂ ಕೊಂಡಾಡುವರ ಗಂಟಲೊಳ್ ನೇಣನಿಕ್ಕಿ ತೆಗೆಯಿಸುವಂ (ಧರ್ಮಾಮೃ. ೨-೭೭). **ತೆಗಸು :** ೪. ಹಿರಿಯ ಕಣಜದ ದವಸವೇನುವನಿರಿಸದೀಗಳ್ ತೆಗ[ಪಾಠಾಂ. ಗೆ]ಸು (ಬಸಪು. ೩೩-೦೮); ತೆಗ[ಪಾಠಾಂ. ಗೆ]ಸಿದನು ಬಳಿಕುತ್ತಮದ ತೊಡವುಗಳ ದಿವ್ಯದುಕೂಲರತ್ನಾಳಿ ಗಳಿನನುಪಮ ಗಜಹಯಾದಿ ಸಮಸ್ತವಸ್ತುಗಳ (ತೊರರಾ. ೦-೭-೨). ೯. ಲೋಹಶೂಲದೊಳಿನಿಬರಂ ತೆಗ[ಪಾಠಾಂ. ಗೆ]ಸುವೆನು ತಲೆಕೆಳಕಾಗಿ ನಿಮ್ಮು ವನು (ಬಸಪು. ೩೦-೫೦). ೧೦. **ಹೊಳಂ, ಕಸ ಮೊದಲಾದಂವನ್ನು ಹೊರಗೆ ಹಾಕು, — ಎತ್ತಿಹಾಕು:** ಪ್ರತಿ ವರುಷಉ ಕೆಱೆಯ ತೆಗಸುವ ಹಾಗೆ ಕೊಟ್ಟ ಸ್ವಾಸ್ತಿ (ಎಕ. VII(8), ಶಿಕಾರಿ. ೨೩೪-೦೦; 1526). ೧೧. **ಕೀಳುವಂತೆ ಮಾಡು ; ಕೀಳಿಸು :** ಅವರಂ ಕರೆಸಿ ಕಣ್ಣಂ ತೆಗ[ಪಾಠಾಂ. ಗೆ]ಸಿದನು (ಬಸಪು. ೬೦-೪). ೧೨. **ನಿವಾರಿಸು ; ಹೋಗಲಾಡಿಸು :** ಒಬಲುವಮರರ ಬಾಯಿ ಕೈಗಳ ಮೊರೆಯೆ ತೆಗಸಿ ಮಹಾಗಣಂಗಳೊಳಿರುವ ನಂದೀಶ್ವರನು ಹೊಕ್ಕನು ಹೊಯ್ದು ದಾನವರ (ಕುಮ್ಮಾಕ. ೭-೩೯). ೧೩. **ಹಿಂದಕ್ಕೆ ತೆಗೆದುಕೊಳ್ಳು ; ವಾಪಸ್ಸು ತೆಗೆದುಕೊಳ್ಳು :** ಬಲುಕಾಳೆಗವನೊಯ್ಯಾರಿಸುತ ರಾಯರು ತೆ ಗ ಸಿ ದ ರು ಸೇನೆಯನು (ಕುಮ್ಮಾಭೀ.೪-೦೦). ೧೪. **ಹಿಂದಕ್ಕೆಬರುವಂತೆ ಮಾಡು; ಹಿಮ್ಮೆಟ್ಟಿಸು:** ತೆಗಸಿದನು ಸಾತ್ಯಕಿಯನೀತನ ಬಿಗಿದನಂಬಿನಲವನ ಬಾಣಾಳಿಗಳ ಕಡಿದನು ಘಾಸಿಮಾಡಿದನವನ ರ ಥ ಹ ಯ ವ (ಕುಮ್ಮಾಕ. ೪-೬) ; ಪ್ರವೀರನಂ ತೆಗ[ಪಾಠಾಂ. ಗೆ]ಸಿದರ್ಜುನ್ನಲೆಗೆ (ಜೈಮಿಭಾ. ೮-೩೦). ೧೫. **ತೆರೆಯುವಂತೆ ಮಾಡು ; ತೆರೆಯಿಸು :** ಬಂದನಿತಱಿಂದಿಂದುಶೇಖರನಿಂದೆ ಕದಹುಗಳಂ ತೆಗ[ಪಾಠಾಂ. ಗೆ]ಸಿ (ಬಸಪು. ೪೪-೦೮). **ತೆಗಿಸು :** ೧೦. ಎಂಜಲ ತೆಗಿ[ಪಾಠಾಂ. ಗೆ]ಸಿ ಸಾರಿಸಿದನು (ಕುಮ್ಮಾಸ. ೭-೦೭) . ೧೫. ಸೌರಾಷ್ಟ್ರೇಶ ಸೋಮೇಶ ನೀಂ ತೆಗಿಸೀ ಬಾಗಿಲ ಪೊಂಗದಂಗಳನೆನುತ್ತಂ (ಉದ್ಧೃಟ. ೧೧-೬೦). **ತೆಗೆಸು :** ೧. ಫಲುಗುಣ ಹೊಕ್ಕನಾಯುಧಶಾಲೆಯನು ತೆಗೆಸಿದನು ಧನು ಮೊದಲಾದ ಕೈದುಗಳ (ಕುಮ್ಮಾದ್ರೋ. ೯-೦) ; ತೆಗೆಸಿದನು ಬಳಿಕಿನಕುಲದ ಹೀಳಿಗೆಯ ನೃಪರಾರ್ಜಿಸಿದ . . . ಅಖಿಳ ವಸ್ತುಗಳ (ತೊರರಾ. ೦-೭-೪). ೭. ಹೊಸಮಲೆಯನು ಬಲಿಯಿಸು ಕುಮ್ಮಟವನಸವಸದಿಂದ ತೆಗೆಸು (ಕುಂರಾಸಾಂ. ೩೭-೪೭). ೮. ಬ್ರಾಹ್ಮಣ ನಿಯೋಗಿಗಳು ಪರಶ್ರೇಷ್ಠರಾಗಿ ಬಂದರಮನೆವಾಗಿಲ ಕದಬೀಯುಗವ ತೆಗೆಸಿದರು (ಮೋಹತ. ೧೯-೪). ೧೪. ಸೂಳವಿಸಿದವು ಸನ್ನೆಯಲಿ ನಿಸ್ಸಾಳ ಸೇನೆಯ ತೆಗೆಸಿದವು ಹೆಗ್ಗಾಳೆ ಮೊಳಗಿದವಾನೆವಱ ಗಜಱಿದವು ಡೌಡೆಗಳು (ಕುಮ್ಮಾಭೀ. ೫-೨೮). ೧೫. ಬಾಗಿಲ ತೆಗೆಸಂಬನಿಷ್ಠುರದ ವಾಕ್ಯಗಳ ಮುಂಬರಿತಂದೊರ್ವಳುಸಿರಲ್ಕೆ (ಮೋಹತ. ೩೪-೩). ೧೬. **ನಿಲ್ಲಿಸು ; ಸ್ಥಗಿತಗೊಳಿಸು ; ಅಡ್ಡಗಟ್ಟು :** ಸಮಸಪ್ತಕರ ಬಲ ನಿಜಪಾಳಯಕೆ ತಿರುಗಿದುದು ಶೀರಿತು ತರಣಿಯಾಟೋಪ ಕಾಳೆಗವ ತೆಗೆಸಿದರು ಕೌರವರು (ಕುಮ್ಮಾದ್ರೋ. ೮-೧). ೧೭. **ತೋಡಿಸು ; ಅಗೆಯುವಂತೆ ಮಾಡು :** ಅವನು ಬಾವಿ ತೆಗೆಸಲು ಸಾಲ ಮಾಡಿದ್ದಾನೆ (ರೂಢಿ). ೧೮. **ಕಂದಿಸು ; ಬೇಯಿಸು :** ಗರಗಸದಿಂದಂ ಮಿಗೆ ನಿಷ್ಕರುಣೆಗಳೊಡನಿಕ್ಕಿ ನೆತ್ತಿಯಿಂದಂ ಪಾದಂಬರೆಗಂ ಸೀಳ್ದಾಭಾಗಮನುರಿವೆಣ್ಣೆಯೊಳಿಕ್ಕಿ ತೆಗೆಸುವರ್ಪಱುಗುವಿನಂ (ಧರ್ಮಾಮೃ. ೩-೭೦). [ ತೆಗೆ$_1$ + – ಇಸು$_3$ ]

**ತೆಗೆಸು** ‘ತೆಗೆಯಿಸು’ ನೋ.

**ತೆಗೆಹ** (ನಾ). **ತೆಗೆಯುವಿಕೆ ; ಬೇರ್ಪಡಿಸುವಿಕೆ :** ಉಪ್ಪು ಮಿಗಿಲಾದವಱ ಉಪ್ಪು ತೆಗೆ(ಹ)ಯೋಣ. ಕಹಿ ಮಿಗಿಲಾದವಱ ಕಹಿ ತೆಗೆ(ಹ)ಯೋಣ (ಭೀಮಸೂ. ೨). [ ತೆಗೆ$_1$ + – ಹ$_2$ ]

**ತೆಗ್ಗು$_1$** ‘ತಟ್ಗು’ ನೋ.

**ತೆಗ್ಗು$_2$** ‘ತಗ್ಗು$_2$’ ನೋ.

**ತೆಗ್ಗುಬೀಳು** ‘ತಗ್ಗುಬೀಳು’ ನೋ.

**ತೆಜಿಸು** (ಕ್ರಿ). **ಬಿಟ್ಟುಬಿಡು ; ತೊರೆ ; ತ್ಯಜಿಸು :** ತೆಜಿಸಿದಂ ಮಗುಳೆತ್ತಲೆಸೆ ವಂಗದೇಶಮಂ ಪೊಕ್ಕೊಡನೆ ಬಾಚಿದಂ ಬಹುನಾಣ್ಯಮಾ (ಪರಕು. ೧೧-೦೩); ನಿನ್ನ ಸುತನನೀಕ್ಷಣ ತೆ[ಪಾಠಾಂ. ತ್ಯ]ಜಿಸೆ ರಾಮಂಗಂ ಪಟ್ಟಗಟ್ಟೆ . . . ಸು ಖ ಮಿ ರ್ಪ ನು (ವೆಂಕಾರಾ. ೨-೭-೧೫) ; ಭೂರಿದಾರಿದ್ರ್ಯದಲಿಯಾ ಸಂಸಾರವನು ಮಾಡುವುದಕಿಂತಲೂ . . . ಈ ಶರೀರವನೆ ತೆಜಿಸುವುದು ಲೇಸು (ಸುದಾಮ. ೫-೮). [ < ತ್ಯಜಿಸು ]

**ತೆಟ್ಟಂದೆಱ** ‘ತೆಱ$_1$’ ಪರಾ.

**ತೆಟ್ಟುಂತೆಱ** ‘ತೆಱ$_1$’ ಪರಾ.

**ತೆಟ್ಟುಂದೆಱ** ‘ತೆಱ$_1$’ ಪರಾ.

**ತೆಟ್ಟೆ,** ತೆಂಡೆ, ತೆಮಟೆ, ತೆವಡೆ (ನಾ). ೧. **ಗುಂಪು ; ಸಮೂಹ ; ಸಂದಣಿ. ತೆಂಡೆ :** ೨. **(ಹುಲ್ಲು ಮುಂತಾದುವುಗಳ) ಕಟ್ಟು; ಹಿಂಡಿ ; ಕಂತೆ :** ಈ ನಾರಿಯನ್ನು ಮೈಯ್ಯೊಳಗೆ ಹುಲ್ಲು ತೆಂಡೆಯಿಂ ನೀನಿಂತು ಬಿಗಿಸಿದೊಡಿಸೆ ಮಾಳ್ಪ ಪಾಪವೇನಯ್ಯಾ (ಸಾನಂಗ. ೪೩). ೩. **ಮರ ಗಿಡಗಳ ಬುಡ ; ಬೇರುಗಳು ಹೊರಡುವ ಭಾಗ :** ತೆಂಗಿನ ತೆಂಡೆ ಮುರಿದು ತಳಕೆಳಕಾಗಿ ಗಂಗಾಧರನ ಪೂಜಕನ ಹಿಂಗದೆ ನೆನೆಯೆ ರಾಯಗೆ ಮಣಿದೊರೆತಾ ಅಂಗೈಗಳಲಂತ ಬಸವ (ಬಸಪ. ೨-೬೪). ೪. **ಮನೆತನ ; ವಂಶ ; ಬುಡಕಟ್ಟು :** ಉಳಿದವರೆಲ್ಲ ಅಣ್ಣತಮ್ಮದಿರಾಗಿ ಒಂದೇ ತೆಂಡೆಗೆ ಸೇರಿದವರು (ನನ್ನೂರು. ೨೧೯) ; ಒಬ್ಬ ಪ್ರಸಿದ್ಧ ಪುರುಷನಿಂದ ಅವರ ಮಕ್ಕಳು ಮೊಮ್ಮಕ್ಕಳುಗಳನ್ನು ಇಂತಹವರ ತೆಂಡೆ, ವಟಾರ, ಪಟ್ಟಡೆ ಎಂಬುದಾಗಿ ಕರೆಯುವ ವಾಡಿಕೆ (ಹುಟ್ಟುಹ. ೧೮). ೫. **ತೊಡರಿಕೊಂಡಿರುವಿಕೆ ; ಸುತ್ತಿಕೊಂಡಿರುವಿಕೆ :** (+). **ತೆಮಟೆ :** ೬. **ಹೊಲ ಉಳುವಾಗ ಕುಂಟೆಯ ಕುಳಕ್ಕೆ ತೆಕ್ಕೆತೆಕ್ಕೆಯಾಗಿ ಸುತ್ತಿಕೊಳ್ಳುವ ಮಣ್ಣು , – ಕೆಸರು :** ಎರಡು ಸಾರಿ ಕುಂಟೆಯನ್ನು ಎತ್ತಿ ಕುಡಕ್ಕೆ ಸುತ್ತಿಕೊಂಡಿದ್ದ

ತೆವಂಟೆಯನ್ನು ಕುರುಚಿಗೆಯಿಂದ ತೆಗೆಯುವುದಕ್ಕೇ ಇವನ ರಟ್ಟೆ ಬಿದ್ದು ಹೋಗಿದ್ದುವು (ಬೆಳುಮ. ೩೬೯). **ತೆವಡೆ:** ೭. ಹೊಲ, ಗದ್ದೆಗಳಲ್ಲಿ ಪಾತಿ ಅಥವಾ ಮಡಿಗಳ ಮಧ್ಯೆ ಕಟ್ಟುವ ಸಣ್ಣ ಬದು : (ಶ).

**ತೆಟ್ಟೆತೆಟ್ಟೆ** (ದ್ವಿರುಕ್ತಿ) : ತೆಟ್ಟೆತೆಟ್ಟೆಯೊಳೋಡುವ ಕುರುಸೈನಿಕ ಕೆಟ್ಟುದ ನೋಡಿ ಗೊಳ್ಳೆಂದು ದಿಟ್ಟರವರು ನಗುತವೆ ತುಟುಗಳನು ಹಿಮ್ಮೆಟ್ಟಿಸಿದರು (ನೇಮಿಸಂ. ೨೫-೧೫೩): ಬಟ್ಟಜವ್ವನೆಯರಾರತಿವಿಡಿದವನಿಗೆ ತೆಟ್ಟೆತೆಟ್ಟೆಯೊಳೆತ್ತಿದರು (ರಾಮವಿ. ೧೯-೮೦) ; ಬೆರೆಯದೆ ತೆಟ್ಟೆತೆಟ್ಟೆಯೊಳು ಸಂಗ್ರಾಮಕೆಂದೆರಡು ಪಡೆಗಳೊಪ್ಪಿದವು (ಜಂಪ್ರಸಾಂ. ೨೦-೦೨೦) ; ಕಟ್ಟೆತೋ ಪಲವಣ್ಣ ಮೇಘ ಬಾನದೊಳೆನೆ ತೆಟ್ಟೆತೆಟ್ಟೆಯೊಳು ತೋಱಿದುದು (ಜ್ಞಾನಜ. ೦೪-೬೦). **ತೆಂಡೆತೇಲು** = ೧. ಮರದ ಬೇರಿನ ಭಾಗ ಮೇಲೆ ಬರು ; ಮರ ಒಣಗತೊಡಗು. ೨. ವಂಶವು ನಿರ್ನಾಮವಾಗು ; ವಂಶದಲ್ಲಿ ಯಾರೂ ಇಲ್ಲದಂತಾಗು : ಆ ದೊಡ್ಡ ಬರದಲ್ಲಿ ತೆಂಡೆತೇಲದೇ ಇದ್ದದ್ದೇ ಹೆಚ್ಚು (ರೂಢಿ). [ದೇ.॥ ತೆಲು. ತೆಟ್ಟ, ತೆಟ್ಟು]

**ತೆಡಾಯ** (ನಾ). ಒಂದು ಬಗೆಯ ಆಯುಧ (?) : ಕತ್ತಿ ತೆಡಾಯ ಖಡ್ಗ ತೆಯುಲ್ಲಿ ಬಿಲ್ಲು ನಾರಾಚ ಗದೆ ಸೂಲ್ಲಿ ... ಮೊದಲಾದಾ ಬತ್ತೀಶಾಯುಧಾ ಶಕ್ತ ಸಮರ್ಥಕರಾದಾ (ಎಕ. XVI, ಗುಬ್ಬಿ. ೭೪-೨೦ ; 1776).

[P ಇದು 'ಖಡೆಯ' ಎಂಬುದರ ಅಪಲಿಖಿತವಿರಬಹುದೇ ?]

**ತೆಣರು** 'ತೆಣಱು' ನೋ.

**ತೆಣಱು, ತೆಣರು, ತೆಳಱು** (ಕ್ರಿ). ಭಾರದಿಂದ ಉಸಿರು ಕಟ್ಟು,-ತಿಣುಕು,-ನರಳು : ನೆಲನಂ ಪೊತ್ತ ಫಣಿ ತೆಣಱು [ಪಾಠಾಂ. ಪೊಱಲು] ತಿರೆ ನಡೆದತ್ತಾಗಳ್ ಸಗರ ಚಕ್ರವರ್ತಿಯ ಕಟಕಂ (ಅಜಿಪು. ೯-೧೭) ; ಕ್ಷಿತಿಚಕ್ರಂ ನಿಜಭಾರದಿಂ ತೆಣಱಿದತ್ತೆಂಬನ್ನೆಗಂ (ಪಂಪಾಮಾ. ೦೩-೭೭). **ತೆಣರು** : ಕುದಿಪೊಡಲ ಮದುಮಗಳ್ ತೆಣರುತಿಹಳಿಲ್ಲಿ ? (ಕಾಲೂರ. ೦೫೩-೩೩೭). **ತೆಳಱು** : ನಾಗರಾಜಂ ತೆಳಱಿ ಪೆಳಱಿ ದಿಗುದನ್ತಿಗಳು (ಬೊಂಕಪಾ. ೧೯೨೯, ನವಿಲುಗುಂದ. ೨೦೭-೦೦ ; 1184). 'ತಿಣಂಱು' ಪರಾ.

[ದೇ. ॥ ತಮಿ. ತಿಣಱು]

**ತೆಣೆ** 'ದಿಣ್ಣೆ' ನೋ.

**ತೆಣ್ಗಾಳಿ** 'ತೆಂಗಾಳಿ' ನೋ.

**ತೆತಾವು** (ನಾ). ಒಂದು ಪ್ರದೇಶದ ಹೆಸರು (?) : ಮೂಡಾಯ್ಕೋಡಿ ನೀರಿಟಿಮೆ ತಾಱಿ ಎ ತೆತಾವಿನ್ಕೊಲ್ಲಿ ಎ ಪೋಗಿ ಕುಣ್ಣು ಸೋಮೆ ಎ ಕರ್ಗಲ್ಲಾಬಿದೆ ಅನೆಗಲ್ಲೆ ಕಮ್ಮಾರ್ ಕೊಟ್ಟಲೆಯ ಮುದುವುಣಸೆ ಮಾಲ್ದಿಯುಳ್ ಕೂಡಿತ್ತು ಸೀಮೆ (ಎಕ. XVI, ಗುಬ್ಬಿ. ೭೫-೫೨ ; 733). [?]

**ತೆತ್ತ$_1$** 'ತೆಱು$_1$' ಪರಾ.

**ತೆತ್ತ$_2$** (ನಾ). ಮೂಲುಗಣ್ಣುಳ್ಳವನು ; ಮೆಳ್ಳೆಗಣ್ಣಿರುವವನು : ಅವನನ್ನು ತೆತ್ತಹನುಮ ಎಂದೇ ನಮ್ಮ ಹುಡುಗರು ಹಾಸ್ಯಮಾಡುತ್ತಾರೆ (ಗರುದಾ. ೦೪೭). [ತೆತ್ತು$_1$ + – ಅ$_7$]

**ತೆತ್ತಕಣ್ಣು** 'ತೆತ್ತಗಣ್ಣು' ನೋ.

**ತೆತ್ತಗಣ್ಣು, ತೆತ್ತಕಣ್ಣು** (ನಾ). ಮೂಲುಗಣ್ಣು ; ಮೆಳ್ಳೆಗಣ್ಣು ; ಓರೆಗಣ್ಣು : ಇನ್ನುಮೇಲೆ ನಿನ್ನ ತೆತ್ತಗಣ್ಣಿನ ಹಂಗೇ ನನಗೆ ಬೇಡ (ಗರುದಾ. ೦೪೯). **ತೆತ್ತಕಣ್ಣು** : ನಮ್ಮೂರ ಕ್ಷೌರಿಕ ಹನುಮನಿಗೆ ಸ್ವಲ್ಪ ತೆತ್ತಕಣ್ಣು, ಎಡಗಡೆ ಅವನು ನೋಡಬೇಕಾದರೆ ಬಲಗಡೆ ನೋಡುವಂತೆ ತೋರುತ್ತದೆ (ಗರುದಾ. ೦೪೭). [<ತೆತ್ತು$_1$ + ಕಣ್ಣು (< ಕಣ್)]

**ತೆತ್ತವಣೆ** (ನಾ). ಜೋಡಣೆ (?) : ಇತ್ತಲೀ ಮಹದೇವಿ ಮಿಗೆ ಜಳಿವುತ್ತಲಿದ್ದಳು . . . ಉತ್ತಮದ ಮೈಲುಲಿಳಿಯ ಕಾಂತಿಯ ಮತ್ತಗಜಗಮನದ ವಿಳಾಸದ ತೆತ್ತವಣೆಯ ನವೀನರೀತಿಯ ಜಾತಿಭಾವದಲಿ (ಪ್ರಭುಲೀ. ೧೦-೨). [ತೆತ್ತಿಸು$_1$ + – ಅಣೆ$_4$]

**ತೆತ್ತಿಗ** (ನಾ). ೧. ಬಂಧು ; ನಂಟ : ಮತ್ತಮಲ್ಲಿ ಬೇಟದ ತೆತ್ತಿಗನುಂ ಮೊತ್ತಮೊದಲಿಗನುಮಪ್ಪನೋರ್ವಂ . . . ಇಂತೆಂದಂ (ಶಾಂತಿಪು. ೮-೯೪ವ) ; ಸ್ವಬಂಧುನಿಕಾಯಕ್ಕುಪಕಾರಿ ತೆತ್ತಿಗನೆನಿಕ್ಕುಂ ಕೌಟಗೇಹೋದ್ಭವಂ (ಜಾತತಿ. ೧೭-೭) ; ಗುರುವೆ ತೆತ್ತಿಗನಾದ ಲಿಂಗವೆ ಮದವಳಿಗನಾದ (ಮಹಾದೇ. ಬ. ೧೧೩-೨೫೮) ; ಪನ್ನಗಾಭರಣನಾತನ ಭಕ್ತಿಯೋಗವುಂ ತಾಂ ನೋಡಿ ತಲೆದೂಗಿ ಮುಂಡಾಡಿಯೆನ್ನಣ್ಣ ಎನ್ನ ತೆತ್ತಿಗಯೆನ್ನ ಭದ್ರುಗಜವೇ . . . ಎಂದೊರೆದು (ಪದ್ಮರಾ. ೭-೮೩) ; ತಾವರೆಯ ತೆತ್ತಿಗನ ಕುಮುದದ ಜೀವಿಗನ ಮಿಗೆ ಮೇಲುನೋಟದೊಳಾ ವಿಗಡರುಗಳಡಸಿ ತಿವಿದಾಡಿದರು (ಕುಮ್ಮಾ.ಸ. ೨-೧೦೯) ; ಬಾಗಿಲ ಬೀಗ ಮುದ್ರೆಯ ಮಾಡಿಸಿಕೊಂಡು ಪೋಗಿ ತೆತ್ತಿಗರ ಬೀಳ್ಕೊಂಡು (ಮೋಹತ. ೧೮-೯೮) ; ಮೃತ್ಯು ಬೆನ್ನಿನೊಳಿಹುದು ತಾವಿನ್ನತ್ತು ಮಾಡುವುದೇನು ಪೂರ್ವದ ತೆತ್ತಿಗನು ನೀನೀಗ ರಕ್ಷಿಸು (ಹರಿಸಾ. ೯೨). ೨. **ಸೇವಕ ; ಆಳು** : ನಿಮ್ಮ ತೆತ್ತಿಗನು ಬೊಮ್ಮಯ್ಯನ ಕೀರ್ತಿ ಮಹತ್ತು ಘನವಂದೊಮ್ಮೆ ರಾಗಂಬೆತ್ತು ಕೈಲಾಸಕ್ಕೆ ಹೋಗಿ ಮರಳ್ದುದನುವಾಯ್ತು (ಬಸಪು. ೨೯-೨೯) ; ತಿಲಕವನು ತೆತ್ತಿಗರಲಂಕರಿಸಿದರು ಹೊಳಹಿನ ಹೊಗರ ಹೊಸ ಜವ್ವನದ ಜೋಡಿಯ ಜಾಡಿಯಿಮ್ಮಡಿಸೆ (ಕುಮ್ಮಾಅ. ೮-೩) ; ಹನುಮ ನೀನು ನರನ ತೆತ್ತಿಗನಾಗಿ ಸಾಯದಿರು (ಕೌಶಿರಾ. ೦೯-೧೩) ; ಬೆಂಬತ್ತಿ ಬಾರದೆ ಮಾಣರಭವನ ತೆತ್ತಿಗರು (ನಿಭಾಗ. ೪-೩-೨) ; ತನ್ನ ತೆತ್ತಿಗರಹ ನಂದೀಶ್ವರಾದಿ ಪ್ರಮಥರ ಕಳುಹು (ಪ್ರಭುಪು. ೪-೧೦). ೩. **ಹೊಣೆಗಾರ ; ರಕ್ಷಕ** : ಗುತ್ತಿಯ ಗಂಗಮಹೀಪ × × × ರಾಜ್ಯಕ್ಕೀತಂ ತೆತ್ತಿಗಂ (ಎಕ. IV, ನಾಗಮಂ. ೫೦-೦೪ ; 972) ; ಅಂಕ ಒಡಿದರೆ ತೆತ್ತಿಗಂಗೆ ಭಂಗವಯ್ಯಾ ಕಾದಿ ಗೆಲಿಸಯ್ಯಾ ಎನ್ನನು (ಬಸವ. ೨೯೯) ; ಸೂನಗೆಯನೆತ್ತಿ ಪರಿವ ತೆತ್ತಿಗ ವೀರರುಮಂ (ಲೀಲಾವ. ೫-೦೩೪) ; ಈ ಖಡ್ಗವನೊಲವಿಂ ಸಾಧಿಸುತಿರ್ದಾ ಖೇಚರತನುಜನ ಮಾತಾಪಿತೃವಾಕೆಯ ತೆತ್ತಿಗರಾಗಲ್ವೇಳ್ಕುಂ (ಕುಮುಂರಾ. ೮-೩೮) ; ನಿಮ್ಮ ವಿಪತ್ತು ತನ್ನದು ನಿಜಪದಾಶ್ರಿತ ಭಕ್ತರಸಂಗಳಿಗೆ ತೆತ್ತಿಗನಲಾ ತಾನು (ನಿಭಾಗ. ೬-೯-೩೩) ; ನೀಂ ಪಸುಳೆ ನಿನಗೆ ತೆತ್ತಿಗರದಾರಕಟ (ಜೈಮಿಭಾ. ೨೦-೦೪) ; ಚಿತ್ತೈಸಲೆ ಸ್ವಾಮಿ ಭೃತ್ಯನ ಬಿನ್ನಪ ತೆತ್ತಿಗರಾರು ನಿನ್ನಿಂದ (ಕೋಡಚ. ೦-೪೩). [ತೆತ್ತು$_1$ + – ಇಗ]

**ತೆತ್ತಿಸು$_1$** (ಕ್ರಿ). ೧. ಹೊಂದಿಸು ; ಜೋಡಿಸು ; ಅಳವಡಿಸು; ಹೂಡು: ಹರನೊಳೆ ಪತ್ತಿ ತೆತ್ತಿಸಿದ ಚಿತ್ರಮನಿರ್ಜಗಿಯಾಗೆ ಮೋಹಮೊತ್ತರಿಸೆ . . . ಅತ್ತಣ ಪಂಬಲ ಬಂಬಲೊಳ್ ತೆಱಂದಿರಿದುದು ಚಿತ್ತಂ (ಪಂಪಭಾ. ೦೩-೬೩); ತೋರಣಸ್ತಂಭಂಗಳೊಳ್ ತೆತ್ತಿಸಿದ ಜಂತ್ರದ ಹಂಸ ಕೀರ ಮಯೂರ ಪಾರಾವತ ವಾರಣಂಗಳಿಂ (ಗಿರಿಕ. ೦೦-೭೪ ವ) ; ತೆತ್ತಿಸಿದ ಪುತ್ತಳಿಗಳಾಭರಣಕಿರಣದಿಂ ಸೇಸೆಯುಂ ಸೂಸುವಂತೆ ದೇಸೆವಡೆದೆಸೆವ ಸಿವಿಗೆಯುಂ (ಪುಷ್ಪಪು. ೦೩-೮೪ ವ) ; ಪಿರಿದುಂ ಬಿನ್ನಣದಿಂದೆ ನಿರ್ಮಿಸಿದ ನಾನಾ ಚಿತ್ರಸತ್ಪುತ್ರಿಕೋತ್ಕರಮುಂ ತೆತ್ತಿಸಿ ಸುತ್ತಲುಂ (ಬಾಧಪು. ೪-೩೩) ; ಶರವನು ತೂಗಿ ಬಿಲ್ಲಿಗೆ ತೆತ್ತಿಸಿದನು (ಕುಮ್ಮಾದ್ರೋ. ೦೯-೩೨) ; ಸುತ್ತಿನುಂಗುರ ಮದ್ದುಮಣಿಯಂತ್ರಗಳ ತಂದು ತೆತ್ತಿಸಿದರು ಕಾಲ್ದೆಸೆಯ (ಮೋಹತ. ೧೭-೦೩) ; ಜಲಕಾಂತ ಶಿಲೆಯಿಂದ ನಿರ್ಮಿಸಿದ ತೊಟ್ಟಿಲಿಕ್ಕೆಲದಲ್ಲಿ ತೆತ್ತಿಸಿದ ವಿವಿಧಮಣಿದೀಪ್ತಿಯಿಂ (ಜ್ಞಾನಜಂ. ೦-೪೭). ೨. **ತೊಡಿಸು ; ಧರಿಸುವಂತೆ ಮಾಡು** : ಎತ್ತಲುಂ ಕೇಳ್ದಱಿಯೆವೀ ರುದ್ರಾಕ್ಷಿ ಮೂಗಿನಲಿ ತೆತ್ತಿಸುವುದಾವುದು ವಿಶೇಷವೊ (ಬಸಪು. ೧೨-೨೦); ಪೆಱನೇಸಱಂ ಮುಂಗುರುಳ ಮೇಲೆ ತೆತ್ತಿಸಿ (ಸೌಂದಪು. ೭-೨೪) ; ಕಾಯವಿರಹಿತನೆಂದು ಧರೆಗೆಱುವವಂತೆ ಮಾಗಾಯನಾ ಕರ್ಣಯುಗಳದೊಳೆಂದು ತೆತ್ತಿಸಿದರು (ಲಕಿಚಂ. ೩೦-೩೩). ೩. **ಮಂಡಿಯುವಂತೆ ಮಾಡು ; ಮಂಡಿಸು** : ಸೋಮರ್ಜಡಿಯೊಳೆಡೆಗೆಡೆಗೆ ಭಾವಕಿಯರರೆವಿರಿದ ಮಲ್ಲಿಗೆ ಜಾಜಿಯರಲ ತೆತ್ತಿಸಿದರತಿಸೊಬಗಿ

ನಿಂದ (ಸೌಂದಪು. ೬-೨೩) ; ಪುಂಡ್ರೇಕ್ಷುದಂಡಗಳನವಮರ್ಚಿ ಬಾಳವೇರ್ಗಳಿಂ ಜಗಿದೆಡೆದೆಡೆಯೊಳ್ ಸಂಪಗೆಯ ಬಿರಿಮುಗುಳ್ಗಳಂ ತೆತ್ತಿಸೆ (ರಾಜಶೇ. ೧೧-೩೦ ವ). ೪. ಒಳಹೊಗು ; ನಾಟಿಕೊಳ್ಳು ; ಚುಚ್ಚಿಕೊಳ್ಳು : ಬಾಳಂ ಕೊಂಡೆತ್ತಿ ಪೊಯ್ಯುದುಮಾ ಬಾಳ್ ನಾಗವೇದಿಕೆಯಂ ತಾಂಗಿ ತೆತ್ತಿಸೆ [ಪಾಠಾಂ. ಕೀಲಿಸೆ] ಮೇಗಂ ನೋಡಿ (ಪಂಚತಂ. ೧೯೫-೦೦) ; ಶರಾವಳಿಯೆಱಗಿದವು ತುಱುಗಿದವು ತೆತ್ತಿಸಿದವು ರಥಾಂಗದಲಿ (ಕುವ್ಯಾಕೆ. ೧೧-೯೬) ; ತೆತ್ತಿಸಿದುವುಭಯವೀರರ ಮೆಯ್ಯೊಳಂಬುಗಳ್ (ಜೈಮಿಥಾ. ೨೫-೪೦). ೫. ಚುಚ್ಚು ; ತಿವಿ ; ತುರುಕು : ರಿಪುವರ್ಗ್ಗದ ಬಾಯ ಬಾಗಿಲೊಳು ತೆತ್ತಿಸಿದಂ ಪಲರ್ಬ್ಬೆರ್ದೆಱೆ ಕೂರಲಗಂ (ಎಕ. VIII, ಸೊರಬ. ೩೯೫-೩೪ ; 1171) ; ಕಕ್ಷದೊಳ್ ಬಱಿಯೊಳ್ ನೇತ್ರದೊಳೆಯ್ದೆ ತೆತ್ತಿಸಿದ ನತ್ಯಾಭೀಳಬಾಣಂಗಳಂ (ಜಗವಿ. ೧೮-೧೦೩) ; ತೆತ್ತಿಸಿದಂಬಿನ ಗಱಿ ಮಿಱುಗುತ್ತಿರೆ (ವರ್ಧಪು. ೮-೫೫) ; ಪರೆವ ಕಣ್ಗಳೊಳಾಲಿಪ ಕರ್ಣಗಳೊಳ್ಪ ಗುಳ್ದು ರಿಪುವಯಶ್ಕಲಾಕೆಯನೆ ತೆತ್ತಿಸುವರ್ ಪರವೆಣ್ಗೆ ಕೂರ್ಪರಂ (ಅನಂಪು. ೯-೩೭) ; ಒತ್ತಿನಂಗಡಿಯ ಕಜ್ಜಾಯಮಂ ಬಲ್ಲೆಹದಿ ತೆತ್ತಿಸುತ ಬಸವ ಕೋಯೆನಲ್ (ಲಶಿಚಂ. ೩೨-೨೩) ; ಗಜವ ಒತ್ತಿ ಕಿವಿಗಳನೊದೆದು ಶಿರದಲಿ ತೆತ್ತಿಸಿದರಂಕುಶವನು (ಕುವ್ಯಾದ್ರೋ. ೩-೬) ; ನರನವನ ರೋಮ ರೋಮಂಗಳಂ ಭೇದಿಪವೊಲು ತೆತ್ತಿಸಿದನಂಬುಗಳನು (ಜೈಮಿಥಾ. ೨೫-೪೭). ೬. ಕೊರೆಯಿಸು ; ಕೆತ್ತಿಸಂ ; ಕಂಡರಿಸು : ದಿಙ್ಮುಖ ದಂತಿದಂತದೊಳ್ ತೆತ್ತಿಸಿದಂ ನಿಜಾಂಕ ಮಹಿಮಾಕ್ಷರಮಾಳಿಕೆಯಂ (ಶಾಸಮಂ. ೩೪೦) ; ಕುಂಬಳ ಬಿತ್ತಿನಂದದಿ ಕೊಱೆಕೊಱೆದು ತೆತ್ತಿಸಿದಂತೆ (ಭರಚ. ೬-೫೩). ೭. (ಹರಳಿನಂತೆ) ಕೂಡಿಸು ; ಕುಂದಣಿಸು ; ಮೆಟ್ಟು : ಮುತ್ತು ಮಾಣಿಕ ನವರತ್ನ ತೆತ್ತಿಸಿದಂತಿಹ ಉಪ್ಪರಿಗೆ ಮೇಗಳ ಶಿವಾಲಯವ ಕಂಡು (ಲಿಂಗವ. ೭೭-೪೦) ; ಸುತ್ತುವಳೆಯುವ ತೊಳಗಿ ಬೆಳಗುವ ಮುತ್ತು ವಜ್ರದ ನಡುವೆ ಮಾಣಿಕ ತೆತ್ತಿಸಿದ ಬೊಟ್ಟೊಂದು (ಪ್ರಭುಲೀ. ೪-೧೬) ; ತೆತ್ತಿಸಿದ ನವರತುನದಿಂದಲಿ ಮುತ್ತಿನಂಡೆಯ ಜೂಳೆಯಂಗಳ ಪತ್ತಿ ಪಚ್ಚೆಯ ಹಲಗೆ ಪವಳದ ಕಡೆದ ಬೋದಿಗೆಯ . . . ರಥ ಕಳಶ ಮೇಲೆಸೆಯೆ (ಕುವ್ಯಾದ್ರೋ. ಓರಿ. ಪರಿ. ೨೭೮) ; ಅಮಲವಜ್ರಂಗಳ ಶೀವಿ ತೆತ್ತಿಸಿದ ಪೊನ್ನುಡೆ ನೂಲ್ಗಳಂ ತಳೆದು (ಸೌಂದಪು. ೧೦-೨೩) ; ಅಗಣಿತ ಕನಕದಂಡದ ಪಲ್ಲವಛತ್ರ ನೆಗಹಿರೆ ರತ್ನ ತೆತ್ತಿಸಿದ ಸೊಗಯಿಪ ಮಣಿ ಸೊಡರ್ವೆಳಗಿನೊಳ್ ಮೆಱೆದುವು (ಮೋಹತ. ೦೫-೩೦) ; ಬಳಸಿರೆ ಕಟ್ಟಿ ಬಿಟ್ಟ ಪೊಸಮಲ್ಲಿಗೆಮಾಲೆ . . . ಮೌಕ್ತಿಕ ಪ್ರಸರಮಂ ಹರಿನೀಲಮಣಿ ಪ್ರತಾನದೊಳ್ಕೆಳಗೊಳಿಸುತ್ತೆ ತೆತ್ತಿಸಿದವೋಲ್ಮೆಱೆದಿರ್ದುದು ಮಂಟಪಾಗ್ರದೊಳ್ (ರಾಜಶೇ. ೮-೩). ೮. ಹೊಂದು ; ಸೇರು ; ಅಂಟು : ಬಸಿಱೆತ್ತಿ ಕಟ್ಟಿ ಮೆಯ್ ಕೀಲಿಸಿದಂತಿರೆ . . . ಕಿವಿ ತೆತ್ತಿಸಿದಂತಿರೆ . . . ಹರಿಣ ರೋಗಂ ತಡೆಯದೆ ಮಡಿಗುಂ (ಅಶ್ವಶಾ. ೧೩-೪೧) ; ಹತ್ತೆ ಬಂದಿರೆ ಸೂಜಿಗಲ್ಲನು ಹತ್ತಿ ಮೋಹಿಪ ಸೂಜಿಯಂತಿರೆ ತೆತ್ತಿಸಿದುದಾ ಸಚ್ಚಿದಾನಂದ ಸ್ವರೂಪೆನಿಪ ನಿತ್ಯವಲ್ಲಮನಂಶವಾದ ನಿಮಿತ್ತವಾಕ್ಷಣ ಕಾಣುತವೆ ಮೈಯೆತ್ತಿತೊಯ್ಯನೆಯನಿಮಿಷಯ್ಯನ ಕೈಯ ಶಿವಲಿಂಗ (ಪ್ರಭುಲೀ. ೧೦-೨೭). ೯. ನಿರ್ಮಿಸು ; ರಚಿಸು : ಅಸುರನ ಗದೆ ಭೂತ ಪಿಶಾಚ ಸಮಿತಿಗೆಱೆಯಿಸುವ ನೇತ್ರರಜವಟ್ಟಿಗೆ ತೆತ್ತಿಸಿದೆಲ್ವಿನ ಸೊದೆವನೆ (ಜಗವಿ. ೯-೬೦) ; ವಸುಧಾಮಂಡಳಮೆಯ್ದೆ ತೆತ್ತಿಸುವ ಚೈತ್ಯಂಗಳ್ಗೆ ದಾನಕ್ಕೆ ಪಾತ್ರ ಸಮೂಹಂ ದಿಟಮೆಯ್ದದೆಯ್ದದು ದಿಶಾಚಕ್ರಂ (ಅನಂಪು. ೯-೨) ; ಉರಿಯ ಜಾಳಿಗೆ ತೆತ್ತಿಸಿತು ಹರಿದಶ್ವಶತವನು (ಕುವ್ಯಾದ್ರೋ. ೧೯-೩೨). ೧೦. ಬಳಿ ; ಹಚ್ಚು ; ಲೇಪಿಸು : ಚಿತ್ರಜಂಗೆತ್ತಿದ ತಳಿರ್ಗಳ ಸತ್ತಿಗೆಯೊ ದಿವಿಜೇಭಕುಂಭದಿ ತೆತ್ತಿಸಿದ ಸಿಂದೂರವೋ . . . ಎನಲೆಸೆಯಿತ್ತು ರಾಗದಲಿಂದುಮಂಡಲ (ಜೀವಂಚ. ೧೭-೨೩). [ ತೆತ್ತು$_1$ + – ಇಸು$_3$ ]

**ತೆತ್ತಿಸು$_2$** (ಕ್ರಿ). ಕೊಡುವಂತೆ ಮಾಡು ; ಕೊಡಿಸು ; ತೆರಿಸು : ದಾಪಿತಃ – ಸಾಧಿತಃ – ೨ ತೆರಿಗೆ ತೆತ್ತಿಸಲ್ಪಟ್ಟವನು, ಕೊಡಿಸಲ್ಪಟ್ಟವನು, ಕೊಡುವ ಹಾಗೆ ಮಾಡಲ್ಪಟ್ಟವನು (ಸಿದ್ಧಾಂತಿ. ೨೮೪). [ ತೆತ್ತು$_2$ + – ಇಸು$_3$ ]

**ತೆತ್ತೀಸ, ತೆತ್ತೀಸು** (ನಾ). ಒಂದು ಸಂಖ್ಯಾವಾಚಕ ; ಮೂವತ್ತಮೂರು : ಹರಿಬ್ರಹ್ಮಾದಿಗಳು ಮೊದಲಾದ ತೆತ್ತೀಸಾದಿ ದೇವರ್ಕಳಂ ಉಘೆ ಉಘೆ ಎನುತಿರಲು (ಬಸವ. ೮೪೪) ; ಖಳಪಳದ ಕಟ್ಟುಲುಹು ಮೂರ್ಭಾಕುಳ ವನಿತ್ರವು ತರುಣ ಕೇಳ್ ತೆತ್ತೀಸ ದೇವರಿಗೆ (ಕೊರರಾ. ೬-೫೦-೬) ; ತೆತ್ತೀಸವೆಂದೆನಿಪ ಸ್ಥಲವಿವು (ಸಿದ್ಧೇಪು. ೨೪-೩೩). ತೆತ್ತೀಸು.

ತೆತ್ತೀಸಕೋಟಿ, ತೆತ್ತೀಸುಕೋಟಿ = ಮೂವತ್ತಮೂರು ಕೋಟಿ : ಮಱೆಯುಲಾಗದು ತೆತ್ತೀಸಕೋಟಿ ದೇವರ್ಕಳ (ಬಸವ. ೫೫೦) ; ದಕ್ಷನೊಬ್ಬ ಯಾಗವನಿಕ್ಕಲು ತೆತ್ತೀಸಕೋಟಿ ದೇವರ್ಕಳೆಲ್ಲಾ ತೊತ್ತಳದುಳಿಸಿಕೊಂಡು ನುಚ್ಚುನುಱಿಯಾಗಿ ಹೋದರು (ಸರ್ವವ. ೯೦-೫೦೨) ; ನರ್ತಿಪ ನವಿಲ ನಾಟ್ಯಕೆ ಮೆಚ್ಚಿ ಪುರುಹೂತ ತೆತ್ತೀಸಕೋಟಿ ನಿರ್ಜರರು ಮುತ್ತಿನ ತ್ಯಾಗವ ಕೊಟ್ಟಂತೆಯಾಲಿಕಲ್ ಬಿತ್ತಿಕ್ಕಿ ಬಿರ್ದುದುರ್ವಿಯಲಿ (ಮೋಹತ. ೪-೩೮) ; ಉರಿನಾಲಿಗೆಯ ಗರವೊಟ್ಟಗೆಯ ತೊಳಲಿಕೆ ತೆರಳಚಿತು ತೆತ್ತೀಸಕೋಟಿಗಳ (ಕುವ್ಯಾಆ. ೨೦-೫೭). [ <ಪ್ರಾ. ತೇತೀಸ, ತೇತ್ತೀಸ. / ಹಿಂ. ತೈಂತಿಸ್, ತೈಂತೀಸ್, ತೇತೀಸ್ ; ಮರಾ. ತೇತೀಸ್. / ಸಂ. ತ್ರಯಸ್ತ್ರಿಂಶತ್ ]

**ತೆತ್ತೀಸು** 'ತೆತ್ತೀಸ' ನೋ.

**ತೆತ್ತು$_1$** (ಕ್ರಿ). ೧. ಸಂಬಂಧಿಸಿರು ; ಹೊಂದಿಕೊಂಡಿರು : ಚಿತ್ರಜಂ ಕತ್ತಿಯಂ ಕಿತ್ತುಕೊಂಡೆತ್ತಿ ಹೊಯ್ಯುತ್ತೆ ಬರಲುತ್ತುಂಗವೃತ್ತಕುಚೆಯರ್ತಮಗೆ ತೆತ್ತಿರ್ದ ತೆತ್ತಿಗರನೊತ್ತಿಗರ ಸುತ್ತಿರ್ದರಾಗಳನುರಾಗದಿಂದೆ (ಜೈಮಿಥಾ. ೨೭-೬). 'ತೆತ್ತಿಗ' ಪರಾ. ೨. ಹೆಣೆದುಕೊಂಡಿರು ; ತೊಡಕಿಕೊಂಡಿರು: (+). ೩. ತಿರಿಚು ; ಸುತ್ತು. 'ತೆತ್ತಗಣ್ಣು' ಪರಾ. ೪. ಒಳಸೇರು ; ಅಡಗು : ಕಿರಣ ತೆತ್ತಿದವಭ್ರದಲಿ ತಾರಕೆಯ ತೇರುಗಳು ಹರಿವ ಮಂಜಿನ ನದಿಯ ಹೂಳ್ದವು (ಕುವ್ಯಾದ್ರೋ. ೪-೧೨). ೫. ಕೇವಣಿಸು ; ಕುಂದಣಿಸು; ವೆಂಟು ; ಕೂಡಿಸು : ಮುತ್ತಿನ ಸೇಸೆಯೊಳೆಸೆವ ರತ್ನಂಗಳ ತೆತ್ತಿರ್ದ ಹಸೆಯ ವಿಷ್ಟರದಿ ಹತ್ತಿದ ದಂಪತಿಗಳ ವಿಗ್ರಹಂಗಳು ತೆತ್ತಿಸಿದಂತೆ ಶೋಭಿಸಿತು (ಮೋಹತ. ೧೩-೭೨). [ ದೇ॥. ತಮಿ. ತೆತ್ತು, ತೆಱು ]

**ತೆತ್ತು$_2$** (ಕ್ರಿ). ತೆರು ; ಕೊಡು : ಶಚಿಪತಿಯು . . . ಕೃತ್ತಿವಾಸನ ತೋತ್ರರವ ಮಾಡುತ್ತ ಮಾನವ ತೆತ್ತಿ ಮಸ್ತಕವನ್ನು ಪಾದಕೆ ಸತತ ಮಣಿಯುವನು (ಪಾರ್ವಪು. ೨೦-೮೧) ; ಕೈತುಂಬ ವರದಕ್ಷಿಣೆ ತೆತ್ತಬೇಕು (ಸುಂದರಿ. ೦೦೩) ; ಹಲ ಜನುಮ ಕಳೆದರೂ ನೀ ತೆತ್ತಲಾರೆ ಬರಿ ಅಂಚೆ ವೆಚ್ಚ (ಉಯ್ಯಾಲೆ. ೪೧-೪) ; ಆತ ವಿಧಿಸಿದ ದಂಡವನ್ನೂ ತೆತ್ತಲು ಸಿದ್ಧರಿದ್ದರು (ಸಮುಚೀ. ೫೦೭). 'ಕಿತ್ತು$_1$' ಪರಾ. [ <ತೆಱು$_1$ ]

**ತೆತ್ತು$_3$** 'ತೆಱು$_1$' ಪರಾ.

**ತೆತ್ತು$_4$** (ನಾ). ಮೋಸ ; ವಂಚನೆ. 'ತೆತ್ತುತನ' ಪರಾ. [ ದೇ.॥ ತಮಿ. ತೆತ್ತು ]

**ತೆತ್ತುತನ** (ನಾ). ಮೋಸಮಾಡುವಿಕೆ; ವಂಚನೆ ಮಾಡುವಿಕೆ: ತೆತ್ತುತನಕ್ಕೆ ತೆತ್ತುತನಮಂ ಪುಸಿನಲ್ಮೆಗೆ ಮೋದಿ ನಲ್ಮೆಯಂ ಜತ್ತುಕಱಿಂಗೆ ಜತ್ತುಕಟ ನಾಸೆಗಮಾಸೆಯನಾದಲಂಪಿನಿಂ ಪತ್ತಿದ ಮೆಯ್ಗೆ ಪತ್ತುಗೆಯನುಕ್ಕೆವ ಕುಕ್ಕವಗೆಯ್ಯುಮಂ ಪೊಣರ್ಚುತ್ತುಮುಪಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೮೫ ಶೂದ್ರಕ). [ ತೆತ್ತು$_4$ + – ತನ ]

**ತೆನಂದಾಕ** 'ತೆನ್ನಂದಾರ್ಕ' ನೋ.

**ತೆನಂದಾಕಕೆಱೆ, ತೇನಂದಾಕಗೆಱೆ** (ನಾ). ಒಂದು ಕೆರೆಯ ಹೆಸರು : ತೆನನ್ದಾಕಕೆಱೆ ಎ ಪೆಂರ್ಮುಗಗೆಱೆ ಎ ವಡಗಾಯ್ ಸನ್ದು ಕಿಱುಮಾಮಿ

ಪಂಳ್ಳಿವೆ (ಎಕ. IV, ಎಡತೊ. ೬೦-೭೪ ; ಸು. 890): **ತೇನಂದಾಕಗೆಟಿ** : ತೇನನ್ದಾಕಗೆಟ ದಕ್ಷಿಣಾನ್ತ ಭಾಗತತಃ (ಮೈಆರಿ. ೧೯೪೨,೭೫-೧೦೬ ; 816). [ ತೆನಂದಾಕ (<ತೆನ್ನಂದಾರ್ಕ) + ಕೆಟಿ ]

**ತೆನುಂಗು** 'ತೆಲುಂಗು' ನೋ.

**ತೆನುಗು** 'ತೆಲುಂಗು' ನೋ.

**ತೆನೆ$_1$** (ನಾ). ೧. ಧಾನ್ಯದ ಹೊಡೆ ; ಕಾಳಿನ ಕದಿರು : "ಕಣಿಶಂ, ಧಾನ್ಯ ಶೀರ್ಷಕಂ – ಈ ೨ ತೆನೆ" (ಹಲಾಯು. ೯೫-೪೨೫) ; "ತೆನೆಯೊಳು ಕದಿರು" (ಶಬ್ದಮಂ. ೧೧೬) ; ಪ್ರಬಳ ಫಳಭಾರದಿಂ ಕೂಡಿ ಬಳ್ಕಿ ತೆನೆ ನೆಲನನಲೆಯೆ ಪವನಹತಿಯಿಂದೆ (ಸುಕುಮಾ. ೯-೫೨) ; ಪಿಂಗಳವಾದ ನೆಲ್ಲ ತೆನೆಯಂ ನಸುಗರ್ಚಿದ ರಕ್ತಚಂಚು ಪಕ್ಷಂಗಳ ಶಾದ್ವಲಚ್ಛವಿ ಮನಂಗೊಳೆ ಪಾಱುವ ಕೀರವಾಲೆ (ಜಗವಿ. ೪-೬೭) ; ಪೊಸಕಮ್ಮಂಗಳವೆಯ ತೆನೆಯ ತುದಿಯ ತನಿಗಂಪಂ ಭುಂಜಿಸಲ್ (ಜಯುಕಾ. ೧-೩೯): ದನಗಳ ಜೋಳದ ತೆನೆಯನ್ನು ಬಿಡಿಸಿದರೆ ಹೇಗೆ? (ಮಹಾತ್ಯಾ. ೬). ೨. **ಕೋಟೆಯ ಗೋಡೆಯ ಮೇಲ್ಭಾಗದ ರಚನೆ; ಕೋಟೆಯ ಪ್ರಾಕಾರದ ತುದಿಯ ಗಾಲಿ ಯಾಕಾರದ ರಚನೆ: "ಕೋಟೆಯ ತೆನೆಯಲ್ಲಿಯುಂ ಕಪಿಶೀರ್ಷವೆಂಬುದು"** (ಹಲಾಯು. ೧೩೧-೨) ; ನಿರಾಳದಲ್ಲಿ ನೀರಕೋಟೆಯನಿಕ್ಕಿ ಬಯಲ ಅಗಳ ತೆಗೆದು ಪಾಯುವ ತೆನೆ ಹೊಡಿ (ಅಱಮಾ. ೧೩೬-೫೧೯) ; ರಥಾಂಗವೆ ಗೆತ್ತರುಣಂ ತೆನೆಯನೆತ್ತಿ ನಗಿಸುವನಿನನಂ (ಅನಂಪು. ೦-೧೦೧) ; ತುಱುಗಿತ ಮರರು ಖಳನ ದುರ್ಗದ ತುದಿಯ ತೆನೆಗಳಲಿ (ಕುವ್ಯಾಅ. ೧೨-೩೩) : ಕೆಡಹಿದರು ಕೋಟೆಗಳ ತೆನೆಗಳನೊಡೆಬಡಿದರಟ್ಟಳೆಗಳನು (ತೊ ರ ರಾ. ೬-೧೭-೬) : ಕೋಟೆಯ ನೂತನ ತೆನೆಗಳೊಪ್ಪಿದುವು (ಕಂಸವಿ. ೨-೬೦). 'ಕೋಟೆದೆನೆ' ಪರಾ. [ ದೇ. ತಮಿ. ತಿನ್ಶ ; ಮಲ. ತಿನ ]

**ತೆನೆ$_2$** 'ತನೆ' ನೋ.

**ತೆನೆಂದಕ** 'ತೆನ್ನಂದಾರ್ಕ' ನೋ.

**ತೆನೆಂಧಕ** 'ತೆನ್ನಂದಾರ್ಕ' ನೋ.

**ತೆನೆಗಟ್ಟು** (ಕ್ರಿ). ತೆನೆ ಬಿಡು ; ಕಾಳಿನ ಹೊಡೆ ಕಟ್ಟು ; ಕಾಳಾಗು : ಅದೆ ಕಾಣ್ ಅದೊ, ಈ ನಾಡಿನ ನಡೆಜಾಡಿನ ಹಿರಿಜಾಣಿನ ತೆನೆಗಟ್ಟಿದ ಬೆಳಸು (ದ್ರಾಕ್ಷದಾ. ೨-೩೦). [ ತೆನೆ$_1$ + ಕಟ್ಟು$_1$ ]

**ತೆನೆಗರ್ಚು** (ಕ್ರಿ). ಧಾನ್ಯದ ಗೊಂಚಲನ್ನು ಕಚ್ಚು,—ಕಡಿ : ತಮ್ಮ ಕೆಯ್ಪಱಿಗೆ ಬೆರ್ಚಿ ಶುಕಂ ತೆನೆಗರ್ಚಿ ಬೇಗದಿಂ ಪಾಱೆ . . . ಪಾಮರಿಯ ರೀಕ್ಷಿಪರಾದುರ್ ನಭೋವಿಭಾಗವಂ (ಧರ್ಮನಾ. ೨-೨೮). [ ತೆನೆ$_1$ + ಕರ್ಚು$_1$ ]

**ತೆನೆಗಾಯಿ** (ನಾ). ವರ್ಷದ ಮೊದಲ ಫಲ : ಗೌರೀ ಹಬ್ಬಕ್ಕೆ ಸರಿಯಾಗಿ ತೆನೆಗಾಯಿ (ರೂಢಿ). [ ತೆನೆ$_2$ (<ತನೆ) + ಕಾಯಿ$_4$ (< ಕಾಯ್$_4$) ]

**ತೆನೆಗೊನೆ** (ನಾ). ಕೋಟೆಯ ಬುರುಜಿನ ತಂದಿ : ತಾರಗೆಗಳ್ ತೆನೆಗೊನೆಗಳೊಳೋರಂದದೆ ಬೆಳಪ ಸೊಡರ್ಗಳಂತಿರೆ (ಚಂದ್ರಪ್ರ. ೧-೧೧೯) ; ಹೊಂಗೋಂಟೆದೆನೆಗೊನೆಗಳಿಂದೇಳ್ವ ದೂಳಲ್ಲಿಗಲ್ಲಿಗೆ ಸ್ಥೂಲದಂಡಾಕೃತಿಯ ನಾಂತವೋಲ್ . . . ಡೆಂಕಣಿಯ ಕೈಗಳಾಲಿಗಚ್ಚರಿಯಾಗಿ ತೋಱುತಿವೆ (ಜೈಮಿಭಾ. ೩-೨೦). [ ತೆನೆ$_1$ + ಕೊನೆ$_2$ ]

**ತೆನೆಗೊಳ್** (ಕ್ರಿ). ೧. = ತೆನೆಗಟ್ಟು. 'ತೆನೆಗೊಳಿಸು' ಪರಾ. ೨. ಕೋಟೆಯ ತಂದಿಗೆ ತಾಗು : ಮುತ್ತಿನೋಳಿ ತೆನೆಗೊಂಡು ಪಱಿದ ಮುಗಿಲಿಂ ಸುರಿಗುಂ (ಮಲ್ಲಿಪು. ೨-೫೩). [ ತೆನೆ$_1$ + ಕೊಳ್$_1$ ]

**ತೆನೆಗೊಳಿಸು** (ಕ್ರಿ). ಹೊಡೆ ಮೂಡುವಂತೆ ಮಾಡು ; ತೆನೆಯಾಗುವಂತೆ ಮಾಡು : ಬಿತ್ತಿ ಬೆಳೆಯಿಸಿ ಪರಾಂಬರಿಸುವುದು ಒಕ್ಕಲಿಗನಾದರೆ, ಕೈಯನ್ನು ತೆನೆಗೊಳಿಸಿ ಮಾಗಿಸುವುದು ಕಾಲದ ಕೈವಾಡ (ವೀರಬಂ. ೪೮). [ ತೆನೆಗೊಳ್ + – ಇಸು$_3$ ]

**ತೆನೆತೀವು** (ಕ್ರಿ). ಬಸಿರು ತುಂಬು : ಅಲ್ಲಿಯೆ ಪೋಂತಪ್ಪುದುವದು ಮೆಲ್ಲನೆ ತೆನೆತೀವಿ ಸುಟಿಯೆ (ಯಶೋಚ. ೩-೫೫). [ ತೆನೆ$_2$ (< ತನೆ) + ತೀವು$_1$ ]

**ತೆನೆತುಂಬು$_1$** (ಕ್ರಿ). = ತೆನೆಗಟ್ಟು : ಕನ್ನಡ ನುಡಿ ಪಯಿರ್ ಮುನ್ನಡೆ ತೆನೆ ತುಂಬಿ ಪೊನ್ನಡಕಿಲ್ಗಂ ಪೊನ್ನಕ್ಕೆ (ಹೊಂಗಳು. ೪೫ ಹಾರೈಕೆ). [ ತೆನೆ$_1$ + ತುಂಬು$_1$ ]

**ತೆನೆತುಂಬು$_2$** 'ತನೆತುಂಬು' ನೋ.

**ತೆನೆದರ್ಭೆ** (ನಾ). ತೆನೆ ಬಿಡುವ ಒಂದು ಬಗೆಯ ದರ್ಭೆ : "ಚಾಮರ ಪುಷ್ಪಃ – ತೆನೆದರ್ಭೆ" (ಓಷಧಿ. ೫೬). [ ತೆನೆ$_1$ + ದರ್ಭೆ ]

**ತೆನೆದುಱುಗಲ್** (ನಾ) ಕಾಳಿನ ಗೊಂಚಲಿನ ಗಂಪು; ಕಣಿಶಗಳ ಸಮೂಹ: ಅನಿಳಾಹತಿಯಿಂ ಕಟವೆಯ ತೆನೆದುಱುಗಲೊಳೊಱೆತುಪರಿವ ಪಾಲಂ ಕಳ ಹಂಸ ನಿಕಾಯಮಿಾಂಟಿ ಪಾಳಿಯನನವರತಂ ಬಿಡದು ಪಾಳಿಯುಂ ಪಾಳಿಪ ವೋಲ್ (ಶಾಂತೀಶ್ವ. ೧-೯೪). [ ತೆನೆ$_1$ + ತುಱುಗಲ್ (< ತುಱುಂಗಲ್) ]

**ತೆನೆನಿಲ್ಲು** 'ತನೆನಿಲ್' ನೋ.

**ತೆನೆಬಲಿ** 'ತನೆಬಲಿ' ನೋ.

**ತೆನೆಬಿಡು** (ಕ್ರಿ). ಕಾಳಿನ ಗೊಂಚಲನ್ನು ಬಿಡು ; **ಹೊಡೆಯಾಗು** : ಹೊಲದಲ್ಲಿ ಜೋಳ ತೆನೆಬಿಟ್ಟಿದೆ (ರೂಢಿ). [ ತೆನೆ$_1$ + ಬಿಡು$_1$ ]

**ತೆನೆಬಿದಿರು** (ನಾ). **ಪೊದರಾಗಿ ಬೆಳೆಯುವ ಒಂದು ಬಗೆಯ** ಬಿದಿರು : (ಮೈಜಿಗ. ೫೯-೧೧೮೧) [ ತೆನೆ$_1$ + ಬಿದಿರು$_2$ (< ಬಿದಿರ್$_2$) ]

**ತೆನೆಮುಗುಟು** (ಕ್ರಿ). ಗರ್ಭಸ್ರಾವವಾಗು; ವೈಯಿಳಿ: "ತೆನೆಮುಗುಟ್ಟುದು ವೇಹತ್ತು" (ವಸ್ತುಕೋ. ೯೦-೮). [ ತೆನೆ$_2$ (< ತನೆ) + ಮುಗುಟು ]

**ತೆನೆಯಾವು** 'ತನೆಯಾವು' ನೋ.

**ತೆನೆವಳಿ** (ನಾ). ಕೋಟೆಯ ತುದಿ; ದುರ್ಗದ ಉನ್ನತಭಾಗ: ಕಲುವಳೆಯ ಕೋಲಾಹಲಕ್ಕಿವರಳುಕದಿಱಿದರು ಸುರಗಿಯಲಿ ತೆನೆವಳಿಯ ಹಿಡಿದರು ಹೊಯ್ದು ಕೇಶಾಕೇಶಿಯುದ್ಧದಲಿ (ಕುವ್ಯಾಸ. ೩-೫೦). [ ತೆನೆ$_1$ + ಬಳಿ$_3$ ]

**ತೆನೆವಾಲ್, ತೆನೆಹಾಲು** (ನಾ). ಹೊಡೆಯಲ್ಲಿ ಕಾಳು ಗಟ್ಟಿಯಾಗುವುದಕ್ಕೆ ಮುಂಚಿನ ಹಾಲು ; ಎಳೆಯ ತೆನೆಯೊಳಗಿನ ರಸ : ಫಳರಸದಿ ಬೆಳವ ನವಶಾಳೀವನಂಗಳಿಂ ತೆನೆ[ಪಾಠಾಂ. ತನಿ]ವಾಲನುಂಡು ಬಳೆವರಗಿಳಿಗಳಂಕೆಗಿಂ (ಶಿರುರ. ದೇ. ೨-೧೧) ; ತೆನೆವಾಲನುಂಡು ಬಳೆದುವು ಗಿಳಿಗಳು (ನಂಬಿರ. ೯-೧೭). **ತೆನೆಹಾಲು** : ತೆನೆಹಾಲು ದಕ್ಕಲಿ ಕಕ್ಕಿಸಬೇಡದನು ನಿನ್ನ ನಂಜಿನ ಸೆರಗ ಬೀಸಾಡಿ (ಗರಿ. ೧೧೬-೧೭) ; ಜನಕೆ ನಿನ್ನೀ ಹಾಡು ಕೆನೆಹಾಲು ಇದ್ದಂತೆ ತೆನೆಹಾಲು ನಿನಗೆ ಒಕ್ಕಲಿಗ ಇಂಪಾಗಿ ಮನಸೋತು ಮಲಗೆ ಶಿವಲೋಕ (ಕನ್ನಜಾ. ೨೦೭). [ ತೆನೆ$_1$ + ಪಾಲ್$_1$ ]

**ತೆನೆವೆರಸು** (ಕ್ರಿ). ತೆನೆಗಳಿಂದ ಕೂಡಿರು: ತೆನೆವೆರಸಿದಿಕ್ಷುಗಳ ಹೊರೆಗಳಗೊನೆ ವೆರಸಿ ಶೋಭಿಸುವ ಕದಳಿಯ (ನಿಭಾಗ. ೪-೮-೫೪). [ ತೆನೆ$_1$ + ಬೆರಸು$_1$ ]

**ತೆನೆವೊಱು** (ಕ್ರಿ). ಕಾಳಿನ ಗೊಂಚಲನ್ನು ಹೊತ್ತುಕೊಳ್ಳು ; ಹೊಡೆಯಾಗು: ತಿಳಿದ ತಡಿವಿಡಿದ ಮಡಿಗಳ ಜಳದೊಳ್ ರಂಜಿಸುವ ಧಾನ್ಯ ಮಂಜರಿಯ ನೆಟಲ್ ಪೊಳೆಯೆ ತೆನೆವೊತ್ತು[ಪಾಠಾಂ. ವೋದು]ವಿವು ಬೇರ್ಗಳೆನಿಪುದು ಬೆಳೆದ ಕಟವೆ ಭೂಸಾರತೆಯಿಂ (ಚಂದ್ರಪ್ರ. ೧-೯೨) ; (ಕಾವ್ಯಸಾ. ೧೧೧ ನೋ). [ ತೆನೆ$_1$ + ಪೊಱು ]

**ತೆನೆವೋಗು** (ಕ್ರಿ). ೧.= ತೆನೆಬಿಡು: ತೃಣಮುಂ ತೆನೆವೋದ ಬಟಿಕ್ಕೊಣಗುವುದು (ಅನಂಪು. ೩-೬೦). ೨. (ಕೋಟೆಯ) ತೆನೆಯಾಕಾರವಾಗು. ೧, ೨: ವಸುಧೆಯ ಮಿಸುನಿ ಬೆಳೆದು ತೆನೆವೋದಂದೆಂಬೆಸಕವನೀಕ್ಷಿಸುವರಿಗೆ ಪೊಸಯಿಸುತಾ ಪುರವರದ ಪೊಂಗೋಂಟೆ ಕಣ್ಗೆಸೆದುದು (ಕುರಾಸಾಂ. ೩-೬೩). [ ತೆನೆ$_1$ + ಪೋಗು$_1$ ]

**ತೆನೆಹಾಲು** 'ತೆನೆವಾಲ್' ನೋ.

**ತೆನೆಹುಲ್ಲು** (ನಾ). ೧. ತೆನೆಬಿಡುವ ಹುಲ್ಲು: ಕೈತೋಟದಲ್ಲೆಲ್ಲಾ ತೆನೆಹುಲ್ಲು ಬೆಳೆದಿದೆ (ರೂಢಿ). ೨. ತೆನೆಸಹಿತವಾದ ಹುಲ್ಲು.
[ ತೆನೆ₁ + ಹುಲ್ಲು (< ಪುಲ್) ]

**ತೆನ್ನಂದಾರ್ಕ, ತೆನಂದಾಕ, ತೆನೆಂದಕ, ತೆನೆಂಧಕ** (ನಾ). ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದವನು (?) : ವಾಣಿಗ ತೋಟ್ಟಮ್ ತೆನ್ಕಣ್ಣಮುಂ ವಡಕಣ್ಣಮುಂ ವಿನೀತೇಶ್ವರಕ್ಕಮ್ ಪೊಯ್ದರ್ ಮೂನ್ದ ತೆಂನನ್ದಾರ್ಕರುಂ ಮಾರಾಟ್ಟ ತೆಂನನ್ದಾರ್ಕರುಂ ಅವರ ಕುಂಬು ಪೊಯ್ದಾರ್ (ಎಕ. IV, ಚಾಮರಾ. ೬೩-೮ ; ಸು. 750). **ತೆನಂದಾಕ** : ಪೆರ್ವ್ವಯಲ ಕೆಟರುಂ ತೆನನ್ದಾಕರುಂ ಕೊಳನೆಲ್ಲೂರ ಸಾಲತ್ತರುಂ ವಾರದರುಂ ಎನೆವ್ವರುಂ ನರಸಾಕ್ಷಿ (ಎಕ. IV, ಎಡತೊ. ೬೦-೭೨ ; ಸು. 890) ; ತೆನಂದಾಕಗಾದೆಯುಂ ಕಣ್ಣಮಂಗಲದೊಳ್ವಸದಿ ಮಾಡಿಸಿ ಆ ಬಸದಿಗೆ ಕೊಟ್ಟ ಮಣ್ಣು (ಎಕ. X, ಕೋಲಾರ. ೯೦-೮೫ ; 903). **ತೆನೆಂದಕ** : ನೊಕ್ಕಿ ಊರೊಳೆ ಆಗ್ಗಡಿ ಕಳೊಸ ಕೊಟ್ಟ ನೆಲ ತೆನೆನ್ದಕ ಕಾಡೆಯುಕು ಸಾಕ್ಷಿ (ಮೈಆರಿ. ೧೯೧೬, ೧೩-೮ ; 726). **ತೆನೆಂಧಕ** : ಕೊಟ್ಟ ನೆಲ ತೆನೆನ್ಧಕ ಕಾಳೆಯುಕು ಸಾಕ್ಷಿ (ಎಕ. III, ಮೈಸೂರು. ೨೫-೨ : 750). [ ? ]

**ತೆನ್ನಮರ** (ನಾ). ೧. ತೆಂಗಿನ ಮರ. ೨. ತೆಂಗಿನ ಮರದ ಮೇಲೆ ಹಾಕುವ ಒಂದು ಬಗೆಯ ತೆರಿಗೆ: ತೆನ್ನಮರಂ (ಎಇ. XVIII, ೧೧೨-೧೮ ; 1434). [ ← ತಮಿ. ತೆನ್ನಮರ ]

**ತೆನ್ನೆಲೆಹುಳಿಗ** (ನಾ). ಒಂದು ಬಗೆಯ ಮೂಲಿಕೆ ; ಅಗಳುಶುಂಠಿ : "ಅರಣ್ಯವಾಸಿನಿ – ತೆನ್ನೆಲೆಹುಳಿಗ" (ಒಷಧಿ. ೯); "ವಲ್ಲೀಕಾ–ತೆನ್ನೆಲೆಹುಳಿಗ, ಹಿಡಿಹಿಡಿಕೆ, ಶ್ರೀವಲ್ಲಿ, ಅಗಳುಶುಂಠಿ" (ಒಷಧಿ. ೧೧೫). 'ತನ್ನೆಲೆಹುಳಿಗ' ಪರಾ. [ ? ]

**ತೆನ್ನೊಟ್ಟಿ** (ನಾ). ದಕ್ಷಿಣಕ್ಕಿರುವ ಬೇಲಿ : ದಕ್ಷಿಣಸ್ಯಾನ್ದಿಸಿ(ಶಿ) ಕ (?) ಋ ಪೊಜಿಕ್ಕಾಲ್ ತೆನ್ನೆ(ನ್ನೊ)ಟ್ಟಿ . . . ಎಕಿಋವ ದಿಕ್ಕಾಲ್ ತೆನ್ನೊಟ್ಟಿ ಎಕುಟ್ಟಿಕ್ಕಾಲ್ ತೆನ್ನೊಟ್ಟಿ (ಇಆ. XVIII, ೩೬೭–೨೩ ; 8ನೆಯ ಶತ). [ತೆಂ + ಒಟ್ಟಿ (<ಒಟ್ಟಿ )]

**ತೆಪರ** (ನಾ). ಬುದ್ಧಿಯಿಲ್ಲದವನು ; ದಡ್ಡ : ಸೈಕೋಲ್ ಕೊಟ್ಟು ಬುಡೋವಪ್ಪ ತೆಪರಾ ಅಂತ ತಿಳಕೊಂಡಿಯೇನೋ ? (ಇಡನೋ. ೨೨). [ ? ]

**ತೆಪ್ಪ, ತೆಪ್ಪೆ** (ನಾ). ೧. ನದಿ ಅಥವಾ ಹೊಳೆಯನ್ನು ದಾಟಲು ಬಳಸುವ ಸಾಧನ ; ಹರಿಗೋಲು ; ನಾವೆ : "ತಳ್ಪಂ, ಉಡುಪಃ, ಪ್ಲವಃ – ಈ ೩ ತೆಪ್ಪಂ" (ನಿಘಂಟು. ೧೧೦–೪೯) ; "ಉಡುಪ ಪ್ಲವ ಕೋಲ" (ನಾಚಿರಾ. ೬) ; ಪರಿದರ್ಪ ಪರ್ಬುಳ್ಳದೊಳ್ ಪಿರಿದಪ್ಪ ತೆಪ್ಪದ ಮೇಲೆ ತೇಂಕುತ್ತುಂ (ಪಂಪಭಾ. ೨೯೬–೦೨) ; ತೊಜಿಯೊಳ್ ಪೋಪನಂಗೆ ತೆಪ್ಪವನಿಕ್ಕಿದಂತೆ (ಧರ್ಮಾಮೃ. ೧–೧೪೮) ; ಬಾಲಮರಾಳಂಗಳಂ ಪದ್ಮಪತ್ರದಿನೊಪ್ಪುವ ತೆಪ್ಪದೊಳಿಟ್ಟು ದಾಂಟಿಸುತಿರ್ಪ ರಾಜಹಂಸರಾಜಿಗಳಿಂ (ಗಿರಿಕ. ೨–೭೦ ಪ) ; ತೆರೆಯ ಮೇಲಣ ತೆಪ್ಪದಂತಿರೆ ಧರಣಿಯೊಲೆದುದು ಗಾಲಿಗಳ ಹಾವರದ ಭಾರಿಗೆ (ಕುವ್ಯಾವಿ. ೬.೧೩. ೬–೫೯) ; ಉರುಳುತಿರ್ದವು ರಣದೊಳಗೆ ಹೆಣನೆರಡು ಸೇನೆಯೊಲರುಣಜಲವುಬ್ಬರಿಸುತಿರ್ದುದು ನೆಗಹಿ ನಾಲಕು ಬಲದ ತೆಪ್ಪಗಳ (ತೊರರಾ. ೬–೦೩–೪೦) : ನದಿಯ ದಂಡೆಯಲ್ಲಿ ಒಂದು ತೆಪ್ಪವು ಕಟ್ಟಿ ಹಾಕಲ್ಪಟ್ಟಿದ್ದಿತು (ಶ್ರೀಚಾಮ. ೦). ೨. ಬಿದಿರು, ಹಲಗೆಗಳಿಂದ ನಿರ್ಮಿಸಿದ ಚಪ್ಪಟೆಯಾದ ತೇಲುಸಾಧನ. 'ತೆಪ್ಪೋತ್ಸವ' ಪರಾ. **ತೆಪ್ಪೆ** : ೧. ಉದಕದಲ್ಲಿ ತೇಲಾಡುವ ತೆಪ್ಪೆಯ ವಿಧದಿಂದ ಮಹಾತ್ಮರು ಲೋಕ ಸಮುದ್ರದಲ್ಲಿ ಮುಳುಗದೆ ದಡವನ್ನು ಸೇರುವರು (ಮುದಿಕ್ವಾ. I. ೨೦೦) [ ದೇ.॥ ತಮಿ. ತೆಪ್ಪ, ತೆಪ್ಪಲ್, ತೇಪ್ಪೈ; ತುಳು. ತೆಪ್ಪ, ಚೆಪ್ಪೊ, ತೆಪ್ಪೊ; ತೆಲು. ತೆಪ್ಪ, ತೇಪ./ಅರ. ತಾಇಫಾ ; ಮರಾ. ತಾಪಾ,ತಾಫಾ ]

**ತೆಪ್ಪಗೆ** (ಅ). ೧. ಸುಮ್ಮನೆ ; ನಿಶ್ಚಲವಾಗಿ ; ಮೌನವಾಗಿ : ಮೊಳೆವುದೊಮ್ಮೊಮ್ಮೆ ಚಿತ್ತದೊಳು ವಿಕಲ್ಪ ಕೂಡಳಿವುದೆಂತೆನೆ ಘಾಳಿಯಿಂದ ಜಲದಲ್ಲಿ ತೆರೆಯೇಳುವಂತೆ ಮತ್ತಾ ಘಾಳಿ ನಿಲೆ ಜಲ ತೆಪ್ಪಗಿಹಂತೆ (ಭರತೇ. ೧೮–೪೯); ಆಜ್ಞೆ ಕೊಡಲಾರದೆ ತೆಪ್ಪಗೆ ನಿಂತುಕೊಂಡರು (ನಾಪೋಲೀ. ೮೦) ; ತೆಪ್ಪಗೆ ಕುಳಿತುಕೋ (ರಂಗಕ. ೦೧೯). ೨. ಪೆಚ್ಚಾಗಿ ; ಬೆಪ್ಪಾಗಿ : ನಾನೂ ತೆಪ್ಪಗೆ ಅವನ ಮುಖವನ್ನೇ ನೋಡುತ್ತಾ ನಿಂತಿದ್ದೆ (ಅಲಹೂ. ೪೯). ೩. ಆರಾಮವಾಗಿ ; ಸುಖವಾಗಿ ; ಹಾಯಾಗಿ : ತೆಪ್ಪಗೆ ಮದುವೆಯಾಗಿ ಸಂಸಾರಿಯಾಗು (ವಿದ್ಯಾರಿ. ೩೬).

**ತೆಪ್ಪಗಾಗು** = ಸುಮ್ಮನಾಗು ; ಮಾತನಾಡದಿರು ; ಮೌನವಾಗಿರು : ಖೈದಿಗಳೆಲ್ಲ ಸದ್ದು ನಿಲ್ಲಿಸಿ ತೆಪ್ಪಗಾದರು (ಪುನರು. ೫೩೮); ಈ ಮಾತುಗಳನ್ನು ಕೇಳಿ ಕುದುಕನು ತೆಪ್ಪಗಾದನು (ಹಳ್ಳಿಬ. ೨೦೦) ; ಇಬ್ಬರೂ ತೆಪ್ಪಗಾದರು (ಮುರುಕು. ೬). **ತೆಪ್ಪಗಿರು**=೧. ಸುಮ್ಮನೆ ಇರು; ಮೌನದಿಂದಿರು: ಟಪ್ಪ ತನ್ನ ಹಗೆತನವನ್ನೂ ಹಿರಿಯಾಸೆಯನ್ನೂ ತೋರೆದು ತೆಪ್ಪಗಿರಲಿಲ್ಲ (ಭಾರದ. ೪೨೫) ; ಅವನು ಹೆದರಿ ತೆಪ್ಪಗಿದ್ದರೆ ಅವನ ಸಹೋದ್ಯೋಗಿಗಳು ಹೇಡಿಯೆಂದು ಭಂಗಿಸಿ, ಅವನನ್ನು ಸೈನ್ಯದಿಂದ ಹೊರಹಾಕುತ್ತಿದ್ದರೆಂದೂ ವಾದಿಸಿದನು (ಪುನರು. ೩೪೪). ೨. ಹಾಯಾಗಿರು; ನೆಮ್ಮದಿಯಿಂದಿರು: ನಾನೆ ಪೋಪೆನಮ್ಮಾಜಿ ತೆಪ್ಪಗಿರಿ ನೀವೆಂದ (ಭರತೇ. ೩೭–೫೫) ; ಕೆಲವರು ರಾಜಕಾರಣವನ್ನು ಬಿಟ್ಟು ತೆಪ್ಪಗಿರಬೇಕೆಂದು ಯೋಚಿಸುತ್ತಿದ್ದರು (ಪಂಜಪಂ. ೧೮೧). 'ಸಪ್ಪಗೆ' ಪರಾ.

**ತೆಪ್ಪತೇರು** (ನಾ). ತೆಪ್ಪೋತ್ಸವದ ತೇರು ; ತೆಪ್ಪದ ರಥ : ಅವನ ತೆಪ್ಪ ತೇರಿನ ಮೇಲೆ . . . ನವಿಲುಹಿಂಡು ಕುಳಿತುಕೊಂಡು ಕಳಸಕ್ಕೆ ಕಪ್ಪು ತುಂಬುತ್ತವೆ (ಹಳ್ಳಿಬಾ. ೧೭). [ ತೆಪ್ಪ + ತೇರು₂ (<ತೇರ್₂) ]

**ತೆಪ್ಪತ್ತ** 'ತೆಪ್ಪಬು' ಪರಾ.

**ತೆಪ್ಪತ್ತು** 'ತೆಪ್ಪಬು' ಪರಾ.

**ತೆಪ್ಪನೆ** (ಅ). ೧. ಸುಮ್ಮನೆ ; ತೆಪ್ಪಗೆ : ಎಲೆ ಮರುಳೆ ! ನೀಂ ಭಯುಂಬಡಬೇಡ, ತೆಪ್ಪನೆ ನಡೆ (ಮಿತ್ರಗೋ. ೨೩) ; ಇಬ್ಬರೂ ತೆಪ್ಪನೆ ನಡೆದು ಬರುತ್ತಿದ್ದೆವು (ಮಗಮಾಂ. ೩೯). ೨. ಒಮ್ಮೆಲೆ ; ಇದ್ದಕ್ಕಿದ್ದಂತೆ ; ನಿಷ್ಕಾರಣವಾಗಿ : ಮುಪ್ಪಾಗ ಬೆಣ್ಣೆಯನ್ನು ತಪ್ಪದೆ ನಾ ಹಾಕಿ ಸಾಕಿದೆ ಒಪ್ಪದಿಂದ ಗಿಳಿಯು ಈಗ ತೆಪ್ಪನೆ ಹಾರಿ ಹೋಯಿತಯ್ಯೊ (ಪುರಂದ. ೧–೧೧೨–೪). ೩. ಹಾಯಾಗಿ; ಸಂಖವಾಗಿ : ತೆಪ್ಪನೆ ಬೀಣೆವಾಡದೊಳಗಾಡುವ ವಾಣಿಯ ನೂಪುರಸ್ವರಂ (ಚಿಕವಿ. ೪–೧೧೪).

**ತೆಪ್ಪತೆಪ್ಪನೆ** (ದ್ವಿರುಕ್ತಿ) : ಅವ್ಯಯ ಪದಾಂತ ಲೋಪಕ್ಕೆ. . . ತೊಪ್ಪ ತೊಪ್ಪನೆ, ತೆಪ್ಪತೆಪ್ಪನೆ ಪುರುಳ್ (ಶಮದ. ೧೯೩ ಪ್ರಯೋ). **ತೆಪ್ಪನಾಗು** = ತೆಪ್ಪಗಾಗು ; ಸುಮ್ಮನಾಗು : ಸುಮ್ಮನಿರುವುದರಲ್ಲಿ ಪುರುಷಾರ್ಥವಿದೆಯೆಂದು ಭಾವಿಸಿ ಬಸಗೋಂಡ ತೆಪ್ಪನಾಗುತ್ತಿದ್ದ (ದೀಪಪ. II, ೧೪೩). **ತೆಪ್ಪನಿರು** = ತೆಪ್ಪಗಿರು ; ಸುಮ್ಮನಿರು : ಹುಟ್ಟುಗುಣಗಳ ಮನಶ್ಶಕ್ತಿ . . . ಗುಪ್ತಮನಸ್ಸಿನಲ್ಲಿ ಅಡಗಿಬಿಡುತ್ತದೆ. ಅಡಗಿದರೆ ಅಡಗಿರಲಿ, ಎಂದು ತೆಪ್ಪನಿರುವಂತಿಲ್ಲ (ಶಿಕ್ಷದ. ೬೪೯).

**ತೆಪ್ಪರಿಗೆ** (ನಾ). (ಕರಾ) ತೆಂಗಿನ ಗರಿಯ ಬುಡದಲ್ಲಿರುವ ಎಳೆಎಳೆಯಾದ ಹೊದಿಕೆ ; ತೆಂಗಿನ ಸೀರೆ ; ಸೀಬಿ : ನಾವು ಗವಿಯೊಳಗೆ ಹೋಗುವಾಗ ತೆಂಗಿನ ಗಿಡದ 'ತೆಪ್ಪರಿಗೆ'ಯ ಸೂಟಿಗಳನ್ನು ಬೆಳಕಿಗೆಂದು ಒಯ್ದಿದ್ದೆವು (ಗಂಗಾವ. ೬೫). [←ತುಳು. ತೆಪ್ಪರಿಗೆ, ಚೆಪ್ಪರಿಗೆ ]

**ತೆಪ್ಪರಿಸು** (ಕ್ರಿ). ಚೇತರಿಸು ; ಎಚ್ಚೆತ್ತುಕೊಳ್ಳು : ಶ್ರೀರಾಜ ಒಡೆಯ ಮಹಾಸ್ವಾಮಿಯವರು ಆ ಮಹಾಸಭೆಯ ವಿಕಾರ ವಿಲಾಸಗಳ ಉಮ್ಮಹವದನ್ನು ತಲೆಗಿಡಿಸಿ ತೆಪ್ಪರಿಸಿ ನೇರ್ಪಡಿಸಿಕೊಂಡರು (ಮುಂತ್ರಿಕ. ೧೫೫–೨೨). [ತೆಪ್ಪರು (< ತೆಪ್ಪಬು ) + – ಇಸು₃ ]

**ತೆಪ್ಪರು** 'ತೆಪ್ಪಱು' ನೋ.

**ತೆಪ್ಪಸ** (ನಾ). = ತೆಪ್ಪ ೧ : ನರರ ತುರಂಗಂಗಳ . . . ಶರಹತಿಯಿನಾದ ಪಲ್ಲಟಗಡಿಗಳ್ ಪರಿವರುಣಜಲದ ತೊಱೆಯೊಳ್ ತೆರಳ್ದು ತೆಪ್ಪಸದ ತೆಱದೆ ಪರಿದವು ಧುರದೊಳ್ (ಮಹಾನೀ. ೫-೪೮). [< ತೆಪ್ಪ]

**ತೆಪ್ಪಹಾಂಸೆ** (ನಾ). ನೀರಿರುವ ಪ್ರದೇಶದಲ್ಲಿ, ಬೇರು ಆಳಕ್ಕಿಳಿಯದೆ ನೀರಿನ ಮೇಲೆ ತೇಲಿ ಬೆಳೆಯುವ ಒಂದು ಬಗೆಯ ಸಸ್ಯ ; ಅಂತರ ಗಂಗೆ : ಅಂತರಗಂಗೆ ಅಥವಾ ತೆಪ್ಪಹಾಂಸೆ (ಮುಂಬಯಿ. ೬-೨೭೫). [ತೆಪ್ಪ + ಹಾಂಸೆ (< ಪಾವಸೆ)]

**ತೆಪ್ಪಱು, ತೆಪ್ಪರು, ತೆರ್ಪಱು** (ಕ್ರಿ). ತೆಪ್ಪತ್ತ (ಭೂತಕೃ), ತೆಪ್ಪತ್ತು, ತೆರ್ಪತ್ತು (ಭೂತನ್ಯೂ). ಎಚ್ಚರಗೊಳ್ಳು ; ಚೇತರಿಸಿಕೊಳ್ಳು : "ತೆಪ್ಪಱು — ಚೇತನಕರಣೇ" (ಶಮಧಾ) ; ಆಗಳ್ ತೆ[ಪ್ಪ]ತ್ತುಮೆಲ್ಲಿದನೆತ್ತಣ ನೆಂದು ಕರ್ಣನ ಕಳೇವರಮಂ ನೋಡಿ ನೋಡಲಾಱದೆ ಕಣ್ಗಳಂ ಮುಚ್ಚಿ (ಪಂಪಭಾ. ೧೩-೫೮ ವ) ; ಕೂಸಂ ಕಾಣದೆ ಬೆರ್ಚಿ . . . ಪೊಡರ್ಪುಗೆಟ್ಟು ಮರವಟ್ಟಂತಂತೆ ತೆಪ್ಪತ್ತುರ್ . . . ಕಾಂತೆ ಪುಯ್ಯಲ್ಚಿದಳ್ (ಬಂಹರಿ. ೮-೫); ಮೂರ್ಛೆಗೆ ಸಂದ ರಾಯಂ . . . ಶೈತ್ಯೋಪಚಾರದತ್ತಣಿಂ ತೆಪ್ಪತ್ತನಾಗೆ (ರಾಮಾಶ್ವ. ೧೩-೨೨). **ತೆಪ್ಪರು** : ಕರೆಕರೆಯಾಂಪಳೊರ್ವೆ ನಿಜದೈವಮ ನೋರ್ವೆ ಕಡಂಗಿ ಬಯ್ವುದು ತೆಪ್ಪರುವಳದೊರ್ವೆ ಚಿಂತೆ ತಲೆದೋರೆ ಪಲುಂಬುವಳೊರ್ವೆ (ಚಂದ್ರಪ್ರಭ. ೬-೨೭). △ **ತೆರ್ಪಱು**: "ತೆರ್ಪತ್ತಂ— ಮೂರ್ಛೆತಿಳಿದಂ" (ಶಮದ. ಪರಿ. ೨) ; ತೆರ್ಪತ್ತು ಬಿಟ್ಟು ನಮೆಯು ತ್ತಿರ್ಪರ್ ನಾರಕರ್ (ಶಾಂತಿಪು. ೭-೯೯) ; ಎಚ್ಚಂಬೆರ್ದೆಯಿಂದುರ್ಚಲ್ . . . ತೆರ್ಪತ್ತಾಗಳ್ (ವೀರವಿ. ೧೨-೩೭).

ತೆಪ್ಪತ್ತುಕೊಳ್ಳು = ಚೇತರಿಸಿಕೊಳ್ಳು; ಎಚ್ಚತ್ತುಗೊಳ್ಳು : ಸ್ವಲ್ಪಕಾಲ ದಲ್ಲಿಯೇ ಮೊಗಲನು ತೆಪ್ಪತ್ತುಕೊಂಡು . . . ರಂಗಸ್ಥಳದಿಂದ ಹೊರಕ್ಕೆ ಹೋದನು (ಭಾರವೀ. ೧೨೩); ಅಂದಿನಿಂದ ಅವರು ಸ್ವಲ್ಪ ತೆಪ್ಪತ್ತುಕೊಂಡು ಎದ್ದು ಊಟ ಮಾಡಲೂ ಅಲ್ಲಲ್ಲಿ ತಿರುಗಲೂ ಅನುವಾದರು (ನಗೆಗ. ೭೭). [ದೇ.॥ ತೆಲು. ತೆಪ್ಪಱು, ತೆಪ್ಪರು, ತೆಪ್ಪಿರು, ತೆಪ್ಪಿಱಿಲು, ತೆಪ್ಪಿಱು]

**ತೆಪ್ಪೆ** 'ತೆಪ್ಪ' ನೋ.

**ತೆಪ್ಪೋತ್ಸವ** (ನಾ). ತೆಪ್ಪದಲ್ಲಿ ದೇವರನ್ನು ಕೂರಿಸಿ ಮಾಡುವ ಉತ್ಸವ,—ಮೆರವಣಿಗೆ: ನಮ್ಮ ದೇವಾಲಯಗಳ ಲಕ್ಷದೀಪ ತೆಪ್ಪೋತ್ಸವ, ದೀಪಾರಾಧನೆಗಳಲ್ಲಿ ಅಸಂಖ್ಯಾತ ದೀಪಗಳನ್ನು ಹಣತೆಯಲ್ಲಿ ಉರಿಸುತ್ತೇವೆ (ಬಾಲಪ್ರ. III, ೦೩೬೯). ℙ ಈ ರೂಪ ವ್ಯಾಕರಣ ಶುದ್ಧವಲ್ಲ.

**ತೆಬ್ಬಱಿಸು** (ಕ್ರಿ). ೧. ಹಾರು ; ನೆಗೆ ; ಚಿಮ್ಮು ; ಪುಟನೆಗೆ : ಎತ್ತಂ ತೆಬ್ಬಱಿಸಿಯಾಡುವಟ್ಟೆಗಳುಬ್ಬರದಿಂದೊಱೆದು ಪರಿವ ರುಧಿರಸ್ರೋತಂ (ನೇಮಿಪು. ೧೧-೧೪೪). 'ಟೆಪ್ಪರಿಸು' ಪರಾ. ೨. ಉತ್ಸಾಹಗೊಳ್ಳು ; ಹುರುಪನ್ನು ಪಡೆ : ಇರ್ವರುಂ ಪರಸಿ ತಡವರಿಸಿಯುಂ ತೆಬ್ಬಱಿಸಿ ಯುಮುಟ್ಟಿಕೊಳ್ಳಿಕೊಂಡು (ಪಂಪಭಾ. ೧೩-೮ ವ) ; ಆನಂದಿತಚಿತ್ತರಾಗಿ ತಡವರಿಸಿಯುಂ ತೆಬ್ಬಱಿಸಿಯುಂ ತೆಗೆದಪ್ಪಿಯುಂ (ಗದಾಯು. ೩-೮೪ವ) : "ಚೇತರಿಸಿಕೊಳ್ಳುವಂತೆ ಮಾಡು" (ಗದಾಸಂ. ಟಿಪ್ಪಣಿ) ;ಕರವಾಳ ಘಾತದಿಂ ಪರಿದುರುಳ್ವ ತಲೆಗಳನವುಂಕಿ ಪಿಡಿದರೆಬರ್ ತೆ[ಪಾಠಾಂ. ಟೆ]ಬ್ಬಱಿಸಿ ಮಗುಟ್ದಟ್ಟೆಯೊಳ್ ಬಿತ್ತರದಿಂ ಬೀರಕ್ಕೆ ಕಳಶಮಿಡುವಂತಿಟ್ಟರ್ (ಚಂದ್ರಪು. ೧೦-೭೩). [< ತೆಬ್ಬು₁ + – ಇಸು₃]

**ತೆಬ್ಬು₁** 'ತುಬ್ಬು₁' ನೋ.

**ತೆಬ್ಬು₂** 'ತಿರುವು₃' ನೋ.

**ತೆಮಟೆ** 'ತೆಟ್ಟೆ' ನೋ.

**ತೆಮರ್₁, ತೆಮರು₁, ತೆಮಱು, ತೆವರು₁** (ಕ್ರಿ). ೧. ಅಟ್ಟು; ಓಡಿಸು; ನಿವಾರಿಸು : ತಿಮಿರಭ್ರಮರವ್ರಜಮಾಕ್ರಮಿಸಿರೆ ಭಗಣಪ್ರಸೂನಕುಲಕಿಂದ್ರು ದಿಶಾರಮಣಿ ತೆಮರಲ್ಕೆ ಚಂಪಕಸುಮಕಂತುಕಮಿಟ್ಟಳಿನಿಕುಮಾ ವಿಧು ಬಿಂಬಂ (ರಾಜಶೇ. ೧೧-೯೬) ; ಪರಿತಂದು ತಿಮಿರ ಮಧುಪೋತ್ಕರಮುಡು ಸುಮಚಯಕೆ ಬಳಸಿ[ಸೆ] ತೆಮರಲ್ ಭರದಿಂ ಹರಿದಿಗ್ವಧುವಿಟ್ಟತಿಭಾಸುರ ಚಂಪಕದಿಂಡೆಯೆನೆ ನಿಶಾಕರನೆಸೆಗುಂ (ವಿಷ್ಣುಪು. ೫-೩-೧೧೦) ; ನೋಡಿದನ ಖಿಳಾಘಮುಂ ತೆಮರ್ವ ಕಣ್ಗಳಿಂ (ಶಬಶಂ. ೫-೪೦) ; ಐದು ಕೋಶಗಳ ಹೊಕ್ಕೈದು ಯೋಗಗಳ ವಿಕ್ಕೈದು ಲಕ್ಷಣವ ತೆಮರ್ದೈದು ವಿಷಯಗಳ ನೆಮರ್ದು (ಕೈಕವ. ೦-೨೦-೩). ೨. ಹೆದರು ; ಬೆದರು ; ಹಿಮ್ಮೆಟ್ಟು : ಸೆಡೆದನೆಂದುಂ, ನಡುಕಂಗೊಂಡನೆಂದುಂ . . . ತೆಮರ್ತನೆಂದುಂ – ಈ ೮ ಭಯಂಗೊಂಡವಂ (ಕ ಶ ಸಾ. ೧೨-೨೨೫) ; ಜನ್ಮಾರ್ಜಿತಾಘಂಗಳುಂ ತೆಮರ್ಗುಂ (ಕಮನೂ. ೩-೩೯೭). ೩. ಹೀಯಾಳಿಸು ; ತಿರಸ್ಕರಿಸು : ಎಮೆಂದುಱುಗಲ್ಕವಲ್ತು ಕುಡಿಗೊಂಡವೊಲಾಗಿರೆ ಸೋಗೆ ಸೋಗೆಯುಂ ತೆಮರ್ವವೊಲೊಪ್ಪೆ ಸೋಮರ್ದಾಡಿ . . . ಕಂಗೆಸೆದುದಗ್ಗದ ಪೂರ್ವವಿಳಾಸಿನೀಜನಂ (ರಾಜಶೇ. ೧೨-೫೫). **ತೆಮರು₁** : ೧. ವಿಭ್ರಮ ಮಱಿದಿರ್ಪುಗುಂದಿ ಬಸಿಱಂ ಪೊಸೆದೆತ್ತಿನೊಳೊಂದಿ ನಿಂದರಂ ತೆಮರಿ ತೆರಳ್ಕೆ ಕಾರ್ಯಮಣಮಿಲ್ಲದೆ ಬಣ್ಣಱಿದೊರ್ವಳೊಪ್ಪಿದಳ್ (ರಸರ. ಪರಿ. ೦೦೯). △ **ತೆಮಱು** : ೧. ನಡೆದುಚ್ಚಂಗಿಗೆ ಬಂದ ರಾಯದಳಮಂ ಕಯಿ ಕೊಳ್ಳದೊಂದಂಗದಿಂ ಬಿಡದೆಚ್ಚಾಡಿ ಸರಂಗಳಿಂ ತೆಮಱಯಂತಾ ಸೇನೆ ಪಿಂಗಲ್ಕೆ ತಾಂ ಪಡೆದಂ ವೀರದ ಪೆರ್ಮೆಯಂ (ಎಕ. V, ಅರಸೀ.೧೦೮-೨೦ ; 1255). **ತೆವರು₁** : ೧. ತುಂಬಿ ತುಂಬಿಯನಟ್ಟುವಂತಳಕವಳಕವರಲಂಬಂಬು ತೆವ[ಪಾಠಾಂ. ಮ]ರುವಂತೆ . . . ಚಿಟ್ಟುಮುರಿಯಾಡುತಿರ್ದರು ಸತಿಯರು (ಹಡಕಾ. ೪-೧೦) ; ಮಕ್ಕಳನು ತಱಿದಿವರ ತೆವರಿಯೆ ರಾಜ್ಯಮಾಡುತಲಿ (ಕುವ್ಯಾಆ. ಓರಿ೩. ೨೬-೧೧೫) ; ಭವಾಂತರದೋಷತಮವ ತೆವರುವ ನೇಸಱಿಂದೆನಿಪುದು (ಸೌಂದಪು. ೬-೪೫) ; ಗಿಳಿಗಳಂ ತೆವರುವ ಪಾಮರ ಸ್ತ್ರೀಯರ್ (ರೇವಣ. ೨೩-೯) ; ವಿಷಮನಮೃತಂ ಪುಣ್ಯಮಾ ಪಾಪವ ಸಲೆ ತೆವರುವಂತೆ ಪರವಾದಮಂ ಗೆಲ್ದು (ಜಬಪು. ೩-೨೮) ; ಅಪ್ಪಳಿಸಿ ಹೊಯ್ದೊ ಳಿದು ಸದೆದಿಟ್ಟೊರಸಿ ಮೆಟ್ಟಿ ಸೊಪ್ಪಿಸಿ ಪೊರಳ್ದರೆದು ತೆವರಿ ಪರಿದರೆಯಟ್ಟಿ ಚಿಪ್ಪುಚೀರಾಗಿಸಿತು ಸಕಲ ಪರಿವಾರವಂ (ಜೈಮಿಭಾ. ೦೩-೫೦). ೨. ಇವನ ಕಾಣುತ ಸಕಲಸುರಮುನಿನಿವಹವಾಚರಿಸಿತು ದೆಸೆದೆಸೆಗವಯವದ ಭೀತಿ ಯೊಳಗೊಡಿತು ಬ್ರಹ್ಮವಟುನಿವಹ ತೆವರುತಿರ್ದವು ಖಗ ಮೃಗಾವಳಿ (ಅಂಬಿಕಾ. ೭-೪೪). ೩. ಅರೆನಗೆಯು ಬಿಱುನಗೆಯು ನಗೆಗಳ ಹೊರಳಿಗಳ ಲಡಬಿದ್ದು ಕೈದಾವರೆಯ ಕಮಲಂಗಳಲಿ ತೆವರಿದರಿಟ್ಟು ಭೂಭುಜರ (ತೊರರಾ ೦-೧೫-೮).

**ತೆಮರ್₂, ತೆಮರು₂, ತೆವರ್, ತೆವರ, ತೆವರಿ, ತೆವರು₂** (ನಾ). ೧. ದಿಣ್ಣೆ ; ಬೋರೆ ; ದಿಬ್ಬ ; ತಿಟ್ಟು : ಅಡವಿ ಬಯಲಾಗೆ ನದ ಮೊಟ್ಟಡುಗೆ ತೆಮರ್ಸರಿಸಮಾಗೆ (ಕಾವ್ಯಾವ. ೨೪೪) ; ತೆಮರೆಲ್ಲಂ ಜೈನ ರಾಜಾಯತನಮೆ ಕುಱಿಯೆಲ್ಲಂ ನವಾಂಭೋಜಿನೀಷಂಡಮೆ ಪೌರೋದ್ಯಾನ ಮೆಲ್ಲಂ ಸುರಕುಜಮೆ (ಅನಂಪು. ೩-೭) ; ಮುಂಡಿಗೆಯ ತುದಿಗಳಂ ಕುಱಿ ತೆಮರಂ ಪಸರಿಸಿ ತೆಳ್ಗಲ್ಲೊಳ್ ಘಟಿಯಿಸುವುದು ಸುಸ್ಥಾನಶಯನಪ್ಪಂತೆ ನೆಲಂ (ಅಶ್ವಶಾ. ೭-೫). **ತೆಮರು₂** : ೧. ಪಳ್ಳದ ಬಡಗಣ ತೆಮರು (ಮೈಆರಿ. ೯೮೩೯, ೩೮-೯; 8 ನೆಯ ಶತ). **ತೆವರ್** : ೧."ದ್ವೀಪಃ, ಅಂತರೀಪಂ ಈ ೨ ನೀರ ನಡುವಣ ಕುರುವದ ಪೆಸರು. ಉದಕದ ತೆವರೆಂದು ಎಂಬರು" (ನಾಚಿರಾ. ೯೯) ; "ತೆವರಾರಯಲುದ್ದನೆಲಂ" (ಚತುನಿ. ೩೫) ; ಮುಂಗಿಲಿಂದೆ ಱಿಗುವ ಮಱಿ ಕದಡಿ ಬರ್ಪ ತೊಱಿ ಬೆಟ್ಟು ತೆವರ್ ಮೊರಡುಪ ಜಲಧಿಗಳೆನೆ (ಆದಿಪು. ೬-೬೨) ; ತೆವರೆಲ್ಲಂ ದೇವತಾಮಂದಿರನಿವಹಮೆ (ಎಇ. XVI, ೩೮-೨೪ ; 1152) ; ಕಲ್ಲಾಗಿ ಮಣ್ಣಾಗಿ ಕುಳಿಯಾಗಿ ತೆವರಾಗಿ (ಪಿಂಡೋರ.ಹ. ೫೦೦-೭) ; ಕುಱಿಯುಂ ತೆವರುಂ ಸಮನಾಯ್ತುದೆತ್ತಲುಂ

(ಪುಷ್ಪಪು. ೫-೪೬) ; ಭೂಮಿಯ ಕುಳಿ ತೆವರ್ವೊದಲಾದುದಂ ನೋಡಿ (ಶ್ರಾವಕಾ. ೯೩-೩೨) ; ತೊರಳೆಗುಪ್ಪೆ ಮಜ್ಜೆಯ ತೆವರ್ ಸುಂಟಗೆಯ ಸಾಲ್ (ಚಬಪು. ೪೮-೫೬). **ತೆವರ** : ೧. ಆ ತೆವರದ ಶಿಲೆಯ ಕಂಬ (ಎಕ. XII, ತುಮಕೂ. ೩-೧೨ ; 1515) ; ತಿಟ್ಟೆಯೊಳು ತೆವರದೊಳು ಹುಟ್ಟಿಹನೆ ಪರಶಿವನು ಹುಟ್ಟು ಸಾವುಗಳು ಅವಗಿಲ್ಲ ಜಗವನ್ನು ಬಿಟ್ಟಿಹನು ನೋಡ (ಸರ್ವಜ್ಞ. ೩೩೩). **ತೆವರಿ** : ೧. ತೆನೆ ತಿಂದ ಎತ್ತು ತೆವರಿಯನ್ನು ಏರಿತು (ಗಾದೆ). ೨. ಹೊಲ ಗದ್ದೆ ಮೊದಲಾದುವುಗಳ ಬದು,–ಏರಿ,–ಅಂಚು : ಗದ್ದೆಯ ತೆವರಿಯಲ್ಲಿ ಬರುತ್ತಿದ್ದ ದೊಡ್ಡನನ್ನು ದೂರದಿಂದಲೇ ಬೆಳ್ಳಿ ನೋಡಿದಳು (ಕಾಲೂರ. ೪ ಕಥಾಸಾರ). **ತೆವರು$_2$** : ೧. ತೆಙ್ಕಣ ತೆವರು ಪಡುವ ಪಳ ಮೇರೆ (ಎಕ. V, ಅರಕ ೨೪-೧೩ ; ಸು. 900) ; ಉಗುಳ ನುಂಗಿ ಹಸಿವ ಕಳೆದು ತೆವರ ಮಲಗಿ ನಿದ್ರೆಗೈದ್ದನಲ್ಲಾ (ಅವಚಂ. ೮೨-೩೩೪) ; ಕಡೆಯ ಹೊಲದ ತೆವರಿನಲ್ಲಿ ಮರ ತಾಗಿ ನೇಗಿಲು ಮುಱಿಯಿತ್ತು (ಮೋಳಿಮಾ. ೧೩೪-೩೦); ಗುರುಸೇವೆ ಕೈಕೊಂಡು ಹಿರಿದಾಗಿ ಮಾಡದಲೆ ಹರಿದೇಱಿ ಮುಕ್ತಿ ಪಡೆಯುವಡೆ ಅದು ತಾನು ಹಿರಿದಾದ ತೆವರೆ (ಸರ್ವಜ್ಞ. ೫೬) ; ಸಂದಿಗೊಂದಿಯೊಳೆ ಹಿಡಿಸದೆ ತುಂಬಿದೆ ತಗ್ಗಿಲ್ಲ ತೆವರಿಲ್ಲ (ಸಕೀಗೀ. ೨೪-೪೧೯) ೨. ಗದ್ದೆಗೆ ತೆವರು ಗಟ್ಟಿಯಿರಬೇಕು(ಸಂಸ್ಕಾರ. ೨೬) ; ನಮ್ಮ ಎರೆಹೊಲದ ತೆವರಿನಲ್ಲಿ ಒಂದು ಒಳ್ಳೆ ಹಲಸಿನ ಮರವಿದೆ (ಚಂಗಾಳ್ಕೆ. ೬೫). [ ? ]

**ತೆಮರು$_1$** 'ತೆಮರ್$_1$' ನೋ.

**ತೆಮರು$_2$** 'ತೆಮರ್$_2$' ನೋ.

**ತೆಮಲಿಸು** (ಕ್ರಿ). ನೂಕು; ತಳ್ಳು; ಕದಲಿಸು : ವಾರಿಯಿಂದದಿ ನಿಂದಿಹನ ಮತ್ತಾರು ತೆಮಲಿಪರೆಂದು ಬಳಲಿಕೆ ಸಾರಿದರು ಮೊದಲಿಂದ ಸೆಣಸಿದ ಖಚರಸಂತತಿಯೂ (ಜಿನಭಾ. ೫೨-೩೬).

[ ತೆಮಲು (<ತೆಮಟು) + – ಇಸು$_3$ ]

**ತೆಮಲು** 'ತೆಮಟು' ನೋ.

**ತೆಮಳ್** 'ತೆಮಟು' ನೋ.

**ತೆಮಳು** 'ತೆಮಟು' ನೋ.

**ತೆಮಳ್ಚು, ತೆವರ್ಚು** (ಕ್ರಿ). = ತೆಮಲಿಸು : ಮೇಲುದಂ ತೆಮಳ್ಚಿ ಕುಚ ಮಂಡಳಂ ಕುಣಿಯೆಂ . . . ಘಟ್ಟಿವಳ್ತಿಯರದೇಂ ಮನಂಗೊಂಡರೋ (ಧರ್ಮನಾ. ೨-೮೪). **ತೆವರ್ಚು** : ಮೇಲುದಂ ತೆವರ್ಚುತ ಸುಯ್ಯುದ್ದ ಬಿನ್ನಣದಿಂ ಬೇಟವಂ ಬೀರಿ ಮುಂಬರಿವವಳ (ರುಕ್ಮಾಂಗ. ೬-೭೦).

[ ತೆಮಳ್ (<ತೆಮಟು) + – ಚು$_1$ ]

**ತೆಮಳ್ದು** 'ತೆಮಟ್ದು' ನೋ.

△ **ತೆಮಱು** 'ತೆಮರ್$_1$' ನೋ.

**ತೆಮಟು, ತೆಮಲು, ತೆಮಳ್, ತೆವಂಳಂ,-ತೆವಳ್, ತೆವಳು** (ಕ್ರಿ). ೧. ಸೇರು ; ಕೂಡು ; ಬೆಂಬಲಿಸು : ಅಮಳರುಮಾ ಬೇಳ್ವೆಯ ಮಾತಂ ತೆಮಟಿ [ಪಾಠಾಂ. ತವುಗೆ] ನುಡಿದೊಡಮ್ಮ ಗಂಡವಾತುಮಳುಂಬಂ ಭೃತಮಕ್ಕುಮೆಂದು (ಪಂಪಭಾ. ೬-೨೬ ವ). ೨. ತಿರುಗು ; ಹೊರಳು : ತೆಮಟ್ವನ್ನೆಗಂ ನುಣ್ಪಂ ತಿಣ್ಪುಮನೊಳಕೊಂಡು (ಶಾಂತಿಪು. ೯-೧೪೩ ವ). ೩. ಹೊಟ್ಟೆ ಮೇಲೆ ಭಾರ ಹಾಕಿ ಮುಂದೆ ಸರಿ ; ದೇಕು : ಏಱು ದಿವಸದೊಳ್ ತೆಮಟ್ದು ಪೆಱವೇಱುದಿವಸಕ್ಕೆ ತಳರ್ನಡೆ ನಡೆದುಂ (ಆದಿಪು. ೫-೪೦ ವ) ; ತಡೆಯದೆ ಕುಳ್ಳಿರಲ್ ತುರಿಪದಿಂ ತೆಮಟಲ್ ತದನಂತರಂ ತಳರ್ನಡೆ ನಡೆಯಲ್ (ಶಾಂತಿಪು. ೬-೦೦೬). ೪. ಮಾಸು : ಮಂಕಾಗು; ಮಸುಳು: ಮುಟ್ಟಿ ಮಾಡೆ ಸುಕರತ್ವಂ ತೆಮಟ್ದಪ್ಪುದೆಂದು ಮನೋಜಾತ ನನಂಗನಾಗಿ ಮನದಿಂದಂ ಮಾಡಿದಂ ಪೆಣ್ಣ ವಿದ್ಧವಂ (ಅನಂಪು. ೨-೧೩). ೫. ಸಮನಾಗಿರು; ಮಟ್ಟಸವಾಗಿರು: ತೆಮಟ್ದಿದೆ ಕುಱಿಯಿಲ್ಲದೆಯುಂ ಸುಮನೋಹರವಪ್ಪ ಶಕ್ಷಮತಿಶುಭದಂಗಳ್ (ಲೋಕೋಪ. ೧೧-೭೦).

**ತೆಮಲು** : ೬. ಅಲುಗು; ಕದಲು; ಜರುಗು: ಜೈನರು ಬಸದಿಗಂ ಪೋಗಿ ಹೇಮಂಗದಗಳ ಬೀಗಮುಂ ತೆಗೆದು ನೂಂಕಲುದ್ದಾಮದಿಂ ತೆಮಲದಿರಲವರು ವಾದಯ್ಯನಿಂದಾದ ವಿಘ್ನವಿದೆನ್ನಲು (ಪ್ರಭುಪು. ೮-೫೦) **ತೆಮಳ್** : ೩. ಮರಳಿ ಕೆಲಬರ್ ಕಾಲ್ಗಳೊಡೆದು ಮುಂದಣ್ಗಡಿಯನಿರದಿಡಲ್ಕಾಱ ದಂಬಳ್ಳೆಗಳಿಂ ತೆಮಳ್ದು ಭರದೆ ಬರ್ಪರ್ ಕೆಲರ್ (ಅರಾಜ. ೪-೩೩). ೭ 'ತೆಮಳ್ಚು' ಪರಾ. ೭. ಹಿಮ್ಮೆಟ್ಟು ; ದೂರವಾಗು : ಮದಂಭ್ರಿಯುಂ ಸಮರ್ಚಿಪುದದಱಿಂ ತೆಮಳ್ಗುಂ ದ್ವಿಜಘ್ನದೋಷಂ (ಹಸ್ತಿಮಾ. ೯-೨೪) **ತೆಮಳು** : ೮. ನಡೆಸು ; ಚಲಿಸುವಂತೆ ಮಾಡು : ಸುಮತಿಸಾಗರ ಮುಂದೆ ಭರದಿ ವಿಮಾನವ ತೆಮಳಿಕೊಂಡೆಯ್ದಿ ವಾರ್ತೆ ಯನು ನಮಿರಾಜಗಱುಹೆ (ಭರತೆ. ೩೮-೮). **ತೆವಳ್** : ೩. ಕೋಲ್ಗಳಿಂ ತೊಡೆಗಳಂ ಕತ್ತರಿಸೆ ನಾದಿದುವು ದೂಳ್ಗಳರುಣಾಂಬುವಿಂದೆದೆಯೊಳ್ತೆವಳ್ದ ಹಿಯವೊಲ್ಗಂಡುಗಲಿ ಧನಂಜಯನ ಸಮ್ಮುಖಕೆ ಮೇಲ್ವಾಯ್ದನು (ಜೈಮಿಭಾ. ೧೪-೦೬) ; ಗಟಿಗೆಯನಿತು ತೆವಳಲಿರ್ಪ ಉಸಿರಿಗಳಾ ಸಾಹಸಮ್ (ಬದ್ಧಪ್ರ. ೨೯-೬೧೯). **ತೆವಳು** : ೩. ಕರಯುಗದೊಳೆರಡು ಕೈಮಣಿವಿಡಿದುಕೊಂಡು ಪುರವರದ ಬೀದಿಯೊಳೊರ್ವ ಕುಂಭಕಾರಂ ತೆವ[ಪಾಠಾಂ. ಮ]ಳಿ ಬರುತಿರಲ್ಕೆ (ಸಮ್ಯಕ್ತ್ವ. ೨-೪೨) ; ಮೆಲ್ಲನೆ ತೆವಳಿ ಆಡುವ ಕಿಱುವರೆಯದಂದಂಗಳದೊಳಾಡುತಲು ಹರಿಯಿರಲು (ಸಾಳ್ವಭಾ. ೨೧-೪೩) ; ಕಾಲೊಡೆದು ಕೆಲವು ದೂರ ತೆವಳುತ್ತ ಪೊರಳುತ್ತ ರಕ್ತಂ ಸುರಿವುತಾ ರಮಣಿ ಬರುತ್ತಿರಲ್ (ಪಾಸೋಪು. ೪-೧೪೮) ; ಇರದಮೃತ ಕಾಂತೆಯುಂ ಕೈವೀಸಿ ಕರೆವಂತೆ ಕರವ ಮುಂದಿಟ್ಟಲ್ಲಿ ತೆವಳುವಳು ಬಳಲುವಳು (ಸಿದ್ಧಕಾ. ೫-೩೦); ಕೊನೆಯ ನಾಲ್ಕೈದು ಮೈಲಿಗಳನ್ನಂತೂ ತೆವಳಿಕೊಂಡು ಬಂದ ಹಾಗೇ ಬಂದಿದ್ದ (ಅನಾಥ. ೨೬೩) ; ಉತ್ತು ಬರುವ ಮಂಗ ತೆವಳಿ ಬಂದರೆ ಹೆತ್ತ ತಾಯಿಯ ಪುಣ್ಯ (ಗಾದೆ). ೯. ನಿಧಾನವಾಗು; ಮಂದಗತಿಯಾಗಂ : ದೈಹಿಕ ಶಿಕ್ಷಣಕ್ಕೆ ನೆರವಾಗುವ ಚಟುವಟಿಕೆ ತೆವಳುವುದು (ಶಿಕ್ಷದ. ೭೮).

[ ದೇ.॥ ತಮಿ. ತವಟು, ತಿವಳ್; ಮಲ. ತವಿಟು; ತೆಲು. ತೆವುಲು ]

**ತೆಮಟ್ದು, ತೆಮಳ್ದು** (ಕ್ರಿ). ೧. ಒಟ್ಟುಮಾಡು ; ಒಂದುಗೂಡಿಸು ; ಕೂಡಿಸು ; ಸಂಗ್ರಹಿಸು : ತುಮುಳಯುದ್ಧದೊಳಿಂತೆ ನಿರಂತರಂ ತೆಮಟ್ದಿ ಕಾದಲೆ ನಮ್ಮಯ ಸತ್ತ್ವರಾಕ್ರಮಮನೆಂತಱಿಗುಂ ಜಗಮಂತಱಿಂ ಕ್ರಮದಿನೊರ್ವರೊಳೊರ್ವರೆ ಕಾದುವಂ (ನೇಮಿಪು. ೧೨-೨); ವಿರಹಾನಲನಾಳಿಯರೊಂದಹರ್ನಿಶಂ ತಳಿಯೆ ತೆಮಟ್ದು [ಪಾಠಾಂ. ದುರ್] ಪೀರ್ದ ಪಟನೀರ್ಗಳನಟ್ಟಿಸಲಾಱದೆಯ್ದೆ ಕಂಟಳಿಸಿ ಮುಗುಳ್ಚಿದಪ್ಪ ದೆನಲುಮ್ಮೆನೆ ಕಾಮಿನಿಯೇಂ ಬೆಮರ್ತಳೋ (ಲೀಲಾವ. ೧೨-೩೮) ; ಮೂಲೋಕಮುಮಂ ತನ್ನೊಂದು ಜೋಗದ ಜಾಣ್ಮೆಯ ಮ್ಮೆಮೆಯ ಬಲ್ಮೆಯಿನೊರ್ವೊದಲೊಳೆ ತೆಮಟ್ದಿ ಬಿಚ್ಚಟಿಸಿ ನೋಡಲ್ (ರಾಮಾಶ್ವ. ೬೯-೦೬). ೨. ಬಳಿದುಕೊಳ್ಳು ; ಪೂಸು ; ಹಚ್ಚಿಕೊಳ್ಳು : ಕುಮುದದ ಕೇಸರರಜಮಂ ತೆಮಳ್ದಿ ತಟ್ಕೈಸಿ (ಲೀಲಾವ. ೫-೮೫). **ತೆಮಳ್ದು** : ೧. "ತೆಮಳ್ದು – ಚಯನೇ (ಕೂಡಿ ಹಾಕು) (ಶಮುಧಾ)". ೩. ಒಟ್ಟಾಗು ; ಒಂದುಗೂಡು : ತಾಳ್ದನಸುರಾರಿ ಭೀತಿಯನೆಳ್ದೋಡಿದನಿಂದ್ರನಖಿಳದೇವ ಪ್ರತತಿ ತೆಮಳ್ದುದು (ವೀರವಿ. ೧೦-೮).

**ತೆಮಟ್ದಿಕೊಳ್** = ೧. ಒಟ್ಟುಮಾಡು ; ಒಂದುಗೂಡಿಸು : ಜಾತ ರೂಪಧರನಾಗಿ ತನ್ನ ಪಱಿದು ಬಿಸುಟ ಸಹಸ್ರಕುಂತಳಂಗಳಂ ತನ್ನ ತಳದೊಳ್ ತೆಮಟ್ದಿಕೊಂಡು ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗ ಳೊಳ್ ಪುದಿದುಯ್ವಂತುಯ್ದು (ಆದಿಪು. ೨-೬೯ ವ) ; ತಾನುಗುಟುತ್ತು ಮಿರ್ಪ ಪೊಸಗಂಪುಮನಿತ್ತೆ ತೆಮಟ್ದಿಕೊಂಡು ಮಂದಾನಿಳನುಯ್ಯುತಿರ್ಪ

ತನಿಗಂಪುವನಿತ್ತೆ . . . ಗಡಂ ಪ್ರಫುಲ್ಲಮಲ್ಲೀನವಪುಷ್ಪಮೋಗರದ ಕಂಪು ಗಳಾಗರವಾಯ್ತು ಸುಗ್ಗಿಯೊಳ್ (ಚಂದ್ರಪು. ೬-೪೯). ೨. ಬಳಿದಂ ಕೊಳ್ಳು; ಪೂಸಂ; ಲೇಪಿಸಿಕೊಳ್ಳು : ಕಿದಱುತ್ತುಂ ಮಣಲಂ ತೆಮಟ್ದಿ ಕೊಳುತಂ ಭೂರೇಣುವಂ . . . ಪೊಕ್ಕುದು ಬೇಡಂ ಲಯಕಾಲಕಾಲ ವಿಚಲದ್ಭೀಮಾರುತಂ ಮಾರುತಂ (ಕಾವ್ಯಾವ. ೪೧೯). [ <ತೆಮಟ್ ]

**ತೆಮ್ಮ** 'ತೊಂಬೆ$_1$' ನೋ.

**ತೆಮ್ಮಲ್**, ತೆಮ್ಮಲಂ (ನಾ). ಗುಂಪು; ಸಮೂಹ : "ಬಂಬಲ್, ತಂಱುಗಲ್ . . . ತೆಮ್ಮಲ್, ಗುಮ್ಮಿ, ಗೊಂದಣೆ (ಉಂದಲ್) ಈ ೪೦ ಸಮೂಹಂ" (ಕಶಸಾ. ೫೯-೨೨೨); "ತಂಡಂ ತೆರಳ್ಕೆ . . . ತೆಮ್ಮಲ್ . . . ಪಂಡಿತರಿಂ ಗಡಣ ವಂಗಡಂ ಕಿಕ್ಕಿಂದಂ" (ಕವಿಕಂ. ೧೦೬). **ತೆಮ್ಮಲು** : ತೆಮ್ಮಲಿನ ತಿಂಡಿಗಳ್ ಹಸುರೆಲೆಯು ತಟ್ಟೆ (ಕಾಲೂರ. ೬೩-೧೧೯). "ಸಂಗ್ರಹ" (ಕಾಲೂರ. ಕೋಶ). [ ತೆಮ್ಮ (<ತೊಂಬೆ$_1$) + – ಅಲ್$_2$ ]

**ತೆಮ್ಮಲು** 'ತೆಮ್ಮಲ್' ನೋ.

**ತೆಮ್ಮೊಡಲು** 'ತೆಂ' ಪರಾ.

**ತೆಮ್ಮೊಡು** 'ತೆಂ' ಪರಾ.

**ತೆಮ್ಮೆ** 'ತೊಂಬೆ$_1$' ನೋ.

**ತೆಮ್ವೊಲ** (ನಾ). ದಕ್ಷಿಣ ದಿಕ್ಕಿನಲ್ಲಿರುವ ಹೊಲ : ಬಸದಿಗೆ ಪಡುವಣ ತೆಜ್ಜತೋಣ್ಟವುಂ ತೆಮ್ವೊಲದೊಳ್ನಾಲ್ಗೊಳಿವೆಡೆ ಪಳ್ಳ ಕಳನಿ (ಎಕ. X, ಕೋಲಾರ. ೯೦-೯೨ ; 903). 'ತೆಂಬೊಲ' ಪರಾ. [ ತೆಂ + ಪೊಲ ]

**ತೆಯ್** 'ತೇ$_1$' ನೋ.

**ತೆಯುಲಯ್ಯಜೂಬು** (ನಾ). ಒಬ್ಬಾತನ ಹೆಸರು : ತೆಯುಲಯ್ಯಜೂಬು ಕಾಲಂ ಕಟ್ಟಿ . . . ಎಱೆಯ[ರ]ಸಂಗೆ ಬಿಟ್ಟಗ್ರಹಾರ (ಎಕ. I, ೯೦-೧ ; 10ನೆಯ ಶತ). . [ ? ]

**ತೆಯಲ್ಲಿ** (ನಾ). ಒಂದು ಬಗೆಯ ಆಯುಧ (?) : ಖಡಲ್ಲಿ ತೆಯಲ್ಲಿ ಬಿಲ್ಲು ನಾರಾಚ ಗದೆ . . . ಚಿಲುತಲಿ ಮೊದಲಾದ ಬತ್ತೀಶಾಯುಧಾ ಶಕ್ತಿಸಮರ್ಥಕರಾದಾ (ಎಕ. XVI, ಗುಬ್ಬಿ. ೭೪-೨೦ ; 1776). [ ? ]

**ತೆರ$_1$** 'ತೆಱ$_1$' ನೋ.

**ತೆರ$_2$** 'ತೆಱೆ$_3$' ನೋ.

**ತೆರಂ** 'ತೆಱಂ' ನೋ.

**ತೆರಂಗುಣಿ** (ಕ್ರಿ). ಚೆನ್ನಾಗಿ ಕುಣಿ ; ಅತಿಶಯವಾಗಿ ನರ್ತಿಸು : ಎಸಗಿದೆ ಎಂತೆ ಮೆಯ್ಮುಡುಕವೋವೊ ನವಿರ್ಗುಡಿಗಟ್ಟುಹಂ ಚಳಿಲ್ಲನೆ ಬೆಮರಶ್ರು ಮಾಲೆ ಬಗೆದೇಂಕು ತೆರಂಗುಣಿವಾಸೆ ಪೊಂಕಮೇಕಿನಿತೊ (ಸಂಸಪ. ೨೦-೫೩). [ ತೆರಂ (<ತೆಱಂ) + ಕುಣಿ$_1$ ]

**ತೆರಂಟು**, ತೆರಟು$_1$ (ಕ್ರಿ). ವಧೂವರರಿಗೆ ಉಡುಗೊರೆಯನ್ನು ಕೊಡು; ಮುಯ್ಯಿಕೊಡು: "ತೆರಂಟುನಿವಸನೋದ್ವಹನೇ (ಮುಯ್ಯ ಸೀರೆ ಕೊಡು) (ಶಮುಧಾ); ನಿತ್ಯ ಬಿಂದುಗೆ–ಬೆಡಂಗು ... ತೆರಂಟು, ಸೀಂಟು (ಶಮುದ. ೩೬ ಪ್ರಯೋ). **ತೆರಟು$_1$**: "ತೆರಟು–ನಿವಸನೋದ್ವಹನೇ" (ಶಮುಧಾ. ನ). 'ತೆಲ್ಲಂಟ' ಪರಾ. [ <ತೆಱು$_1$ ]

**ತೆರಂಬಿಡು** (ಕ್ರಿ) ತೆರವಾಗಿ ಬಿಡು ; ಖಾಲಿ ಮಾಡು : ಅವು ಮುನ್ನ ತಮಗಿರ್ದ ಗೌರವಕ್ಕೆಳ್ಳು ನೀರ್ ಕೊಟ್ಟು ದಿಕ್ಕುಗೆಟ್ಟೋಡುವುವು, ಬಾಳ್ ಭೂಮಿ ಸರ್ವಮುಂ ವೈರಿಗೆ ತೆರಂಬಿಟ್ಟು (ಶ್ರೀರಾಮಾ. ೬೮೩-೧೪೪). [ ತೆರ$_2$ (<ತೆಱೆ$_3$) + ಬಿಡು$_1$ ]

**ತೆರಕೊಡು** 'ತೆಱಕೊಡು' ನೋ.

**ತೆರಗಾಲ** (ನಾ). ಒಂದು ಪ್ರದೇಶದ ಹೆಸರು (?): ಪೆರ್ಮ್ಮಾಡಿಗಾವುಣ್ಡನ ಪೆಣ್ಡತಿ ಚಾವುಣ್ಡಬ್ಬೆ ಇ ದೇಗುಲವ ಮಾಡಿಸಿ ತೆರಗಾಲಂ ದೇವಟ್ಟ ಬಿಟ್ಟಳ್ (ಮೈಆರಿ. ೧೯೩೦, ೧೪-೯ ; ಸು. 870). [ ? ]

**ತೆರಟು$_1$** 'ತೆರಂಟು' ನೋ.

**ತೆರಟು$_2$** (ಕ್ರಿ). ೧. ದುಂಡಗೆ ಮಾಡು ; ಸಂತಯ್ಸು ; ಸಂರಂಭಿ ಮಾಡು. ೨. ಸೇರಿಸು : ಕೂಡಿಸು ; ಹೊಂದಿಸು : (ಕ). [ ದೇ.॥ ತಮಿ. ಮಲ. ತಿರಟ್ಟು ]

**ತೆರಟು$_3$** (ನಾ). ಹಿಂದಕ್ಕೆ ಬೀಳುವಿಕೆ ; ಹಿಂದಿರುಗುವಿಕೆ ; ಕೆಳಗೆ ಬೀಳುವಿಕೆ (?) : ಮಗ್ಗಿಗಳ ಮಿಗೆ ಕೂಡಿ ಕಳೆದರೆ ಸಗ್ಗವಹುದೇ ಮುಂದೆ ಭಾಗಿಸಿಯುಗ್ಗಡದ ಘನವರ್ಗಮೂಲವನಱಿದೊಡೀ ಭವದ ಹಗ್ಗ ಹರಿದೇಱುವನೆ ಮುಕ್ತಿಯ ದುಗ್ಗವನು ಕೇಳಯ್ಯ ತೆರಟನ ಬುಗ್ಗಿಯಲ್ಲದೆ ಬರೆದೊಡಂತ್ಯದೊಳಿಲ್ಲ ಸುಖವೆಂದ (ಪ್ರಹ್ಲಾಚ. ೬-೧೯) : "ಕಷ್ಟ" (ಪ್ರಹ್ಲಾಚ. ಕೋಶ). [ ? ]

**ತೆರಟುವಾಲ್** (ನಾ). ಕುದಿಸಿ ಗಟ್ಟಿಗೊಳಿಸಿದ ಹಾಲು : ಬಟ್ಟವಾಲ್ ತೆರಟು[ಪಾಠಾಂ. ಡು]ವಾಲ್ ಚಿಲುಪಾಲುಮೆಸರನದಕಟ್ಟು ಹಸಮಾಡು ವುದು (ಸೂಪಶಾ. ೨-೩). [ ←ತಮಿ. ತಿರಟ್ಟುಪ್ಪಾಲ್ ]

**ತೆರಣಿ$_1$** 'ತೆರಳಿ' ನೋ.

**ತೆರಣಿ$_2$** 'ತೆರಳ್ಕೆ$_2$' ನೋ.

**ತೆರಣಿ$_3$** (ನಾ). ಒಂದು ಬಗೆಯ ಸಸ್ಯ : ಹೆತ್ತರಾಣಿಕೆ, ನಲ್ಲ, ಹೆದ್ದರಣೆ, ಬಿಳಚಿ, ತೆರಣಿ, ಕಕೋರ್ಲ್ಲ (ಮೈಜಿಗಿ. ೬೩-೦೨೬೯). [ ? ]

**ತೆರಣಿಗಟ್ಟು** (ಕ್ರಿ). ಒಟ್ಟುಗೂಡಿಸಿ ಕಟ್ಟು ; ಉಂಡೆಗಟ್ಟು : ಕಂಚಿನ ಕರಡಗೆಯೊಳಗೆ ಕಂಬಿಯು ತೆರಣಿಗಟ್ಟಿ ನಿಂತಾಳು (ಅಪಡಂ. ೨೯೭-೧೩೦೦). [ ತೆರಣಿ$_2$ (< ತೆರಳ್ಕೆ$_2$) + ಕಟ್ಟು$_1$ ]

**ತೆರಣೆ** 'ತೆರಳಿ' ನೋ.

**ತೆರತವಳಿ** (ನಾ). ಒಂದು ಬಗೆಯ ಸೀರೆ : ಕುಂಬಳಗಂಟಿ ತೆರತ [ಪಾಠಾಂ. ಥ] ವಳಿ ತೆಲುಗಾವಿಯುಂ ಬಿಳಿದಿನ ಸೀರೆ ಬರಹ ನಿಂಬೆಯ ಕಾಯ ಪೊಪ್ಪಳಿ ಕರ್ಕವಾಡಗಳೆಂಬ ಸೀರೆಗಳೊಪ್ಪೆ ಮೆಱೆಯೆ (ಅಮುಸಾಂ. ೪-೧೯). [ ? + ಪಳಿ$_5$ (< ಪಟ್ಟಿ$_6$) ]

**ತೆರಪಿಚು** (ಕ್ರಿ). ತೆರವುಮಾಡು (?) : [ ಕೊ ] ಡಕುಣೆಯ ಸ್ಥಳದ ಸೇನ ಬೋವನೂ ಕರಸಿ ಆತನ ವಹಿಪ್ರಮಾಣಿನಲೂ ನೇಮಿಚಂದ್ರದೇವರೂ ಮಾಡಿಕೊಂಡ ಬಾಳ ತೆರಪಿಚಿ ಪಾಲಿಸಿದ ವಿವರ (ಕಆ. III, ೦೦-೦೪; 1542). [ ತೆರಪು (<ತೆಱಪು) + – ಚು$_1$ ]

**ತೆರಪು** 'ತೆಱಪು' ನೋ.

**ತೆರಪುಕೊಡು** 'ತೆಱಪುಗೊಡು' ನೋ.

**ತೆರಪುಗಾಣಿಸು** 'ತೆಱಪುಗಾಣಿಸು' ನೋ.

**ತೆರಪುಗೆಯ್** (ಕ್ರಿ). ಹೋಗಲಾಡಿಸು ; ಕಳೆ ; ನಿವಾರಿಸು : ಭಾಸ್ಕರ ಬಾಣಮುಂ ತೆಗೆದು ಪೂಡೆಚ್ಚು ಖಳನ ಕೃತತಿಮಿರಮುಂ ತೆರಪುಗೆಯ್ಯೆ ಹರಿದುದು ಕತ್ತಲೆಯು (ನಪಮೋ. ೩೨-೨೦). [ ತೆರಪು (< ತೆಱಪು ) + ಕೆಯ್$_1$ ]

**ತೆರಪುಗೊಡು** 'ತೆಱಪುಗೊಡು' ನೋ.

**ತೆರಪುಮೊಳೆ** (ನಾ). ಅಕ್ಷರದ ಮೊಳೆಗಳನ್ನು ಜೋಡಿಸುವಾಗ ಬಿಡುವಿ ನಲ್ಲಿ ಸೇರಿಸುವ ತಗ್ಗು ಮೊಳೆ : ಸೂಚೀ ಚಿಹ್ನೆಗಳು . . . ತೆರಪು ಮೊಳೆ ಗಳು . . . ಮತ್ತು ಸಂಯುಕ್ತಾಕ್ಷರಗಳೂ ಇರುತ್ತವೆ (ಮುದ್ರಕ. ೧೯). [ ತೆರಪು ( <ತೆಱಪು ) + ಮೊಳೆ$_2$ ]

**ತೆರವು$_1$** 'ತೆಱವು$_1$' ನೋ.

**ತೆರವು$_2$** 'ತೆಱವು$_2$' ನೋ.

**ತೆರವೆ** 'ತೆಱವೆ' ನೋ.

**ತೆರಸ** 'ತೇರಸ' ನೋ.

**ತೆರಸಿ** 'ತೇರಸಿ' ನೋ.

**ತೆರಸು** (ನಾ). ತೆರೆಯುವಿಕೆ ; ವಿಕಾಸ : ಕಣ್ದೆರೆಯ, ನಿನ್ನ ಕಣ್ಣಿಂದುವಿನಿ ದೆರಸಂ ಮರಸದೆನ್ನಲ್ಲಿ ಎನ್ನ ! (ಗಿರಿವಿಂ. ೫೦-೧೩).

[ ತೆರೆ$_1$ (< ತೆಱೆ$^3_1$) + – ಸು$_2$ ]

**ತೆರಹು$_1$** (ಕ್ರಿ). ಬಿಚ್ಚು ; ತೆರೆ: ಸರಸಿಗೆ ತೆರಹಿ ತೋರುವದು ಜಗವು ಹೃದಯವ (ಉಯ್ಯಾಲೆ. ೩೨-೬). [ ತೆರೆ$_1$ ( < ತೆಱೆ$^3_1$ ) + – ಹು$_1$ ]

**ತೆರಹು$_2$** 'ತೆಱಪು' ನೋ.

**ತೆರಹು$_3$** (ನಾ). ಕಾಣಿಕೆ ; ಕಪ್ಪ ; ತೆರಿಗೆ : ತೆರಹುಗಳ ತೆತ್ತು ವರಹದ ಭಂಡಾರ ಂತು (ಎಕ. IX(S), ಕಾನಕಾ. ೩೩-೬ : 17ನೆಯ ಶತ).

[ ತೆರೆ$_2$ (<ತೆಱೆ$^3_3$) + – ಹು$_2$ ]

**ತೆರಹುಗುಡು** 'ತೆಱಪುಗೊಡು' ನೋ.

**ತೆರಳ್, ತೆರಳು** (ಕ್ರಿ). ೧. ಹೋಗು ; ಚಲಿಸು ; ಸರಿ ; ನಡೆ : ದಿಗ್ಗಜಂ ದೆಸೆಯಿನತ್ತ ತೆರಳ್ದುವು (ಪಂಪಭಾ. ೧೧-೭೧) ; ಎಸೆವ ನಭಸ್ಸರೋವರ ದೊಳುಣ್ಮೆ ಕೆಲಕ್ಕೆ ತೆರಳ್ದ ನೀಲಿಕಾಪ್ರಸರವೊ . . . ಎಂದೆನಿಸಿತಂದು ಪುರಂದರಚಾಪವಿಭ್ರಮಂ (ಚಂದ್ರಪು. ೪-೫೦) ; ಮಹಾಸಂಗರದೊಳೊಬ್ಬರ ನೊಬ್ಬರೊಪ್ಪಿಸಿ ತೆರಳಲಾಗದು (ಕುಮ್ವಾದ್ರೋ. ೨-೭) ; ಹಸಿವು ನೀರಡಿಕೆ ಸಂತಾಪವ ನೆಱೆ ವಾರಿಸಿಕೊಂಡು ಬಲಗೂಡಿ ತೆರಳ್ದು (ಮೋಹತ. ೧೯-೬೦); ತೆರಳು, ತೆರಳುವೊಡಿನಿಯು ; ಪಥದಲಿ ನಿನಗೆ ಮಂಗಳವೊದಗಲಿ (ಭಾರವಿೂ. ೨೯೧). ೨. ಹರಿ ; ಪ್ರವಹಿಸು : ಕಡಲ್ ಕಡಲಂ ಮುಟ್ಟೆ ತೆರಳ್ವ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ (ಪಂಪಭಾ. ೧೦-೯೦) ; ಕುರವದಿಂ ಕೂಡೆ ನೆತ್ತರ್ತೆರಳ್ದನ್ಮವಿನಂ ಮೆಯ್ಯೆಲ್ಲಮಂ ಜರ್ಜರಿಸಿ(ಸುಕುಮಾ. ೭-೩೫); ನೆಲನನಿತುಂ ತೆರಳ್ದಡಸಿ ಬಿಟ್ಟೊಣೆಯುಂ ತವದೊಂದ ಮಾಟ್ಕೆಯಿಂ ನೆಲೆ ನೆಲೆವೆರ್ಚೆ ಮುಂಪರಿವ ಪೆರ್ದೊಱೆಗಳ್ (ಕಾವ್ಯಸಾ. ೪೬೩). ೩. ವ್ಯಾಪಿಸು; ಆವರಿಸು : ದಿನಕರಕರನಿಕರಂಗಳ್ ಘನವಿವರಪ್ರಸರವಾಗಿಯುಂ ತಮ್ಮಂ ಕಂಡನಿತಱೊಳೆ ತೆರಳ್ದಿನ್ನಾ ಮನೋಗತಧ್ವಾಂತಬಂಧಮಳಱಿತ್ತಿಲ್ಲಂ (ಕವಿರಾ ೨-೭೭); ನಟ್ಟ ಕೋಲ ಬಟೆವಿಡಿದೆತ್ತಂ ಸುರಿದುವವಂದಿರ ಮುಳಿಸಿನ ತೆರಳ್ದ ದಳ್ಳುರಿಯನಿಟಿಸಿ ನವರುಧಿರಂಗಳ್ (ಪಂಪಭಾ. ೧೨-೧೪೮). ೪. ಎಬ್ಬಿಸು ; ಹೊಮ್ಮಿಸು : ತೆರಳ್ದು ಸುರಭೂರುಹಪ್ರಸವಧೂಳಿಯುಂ ...ನಯದಿನಾಡಿಸಿತ್ತಾಗಳಪ್ಸರಃಪ್ರಕರದೊಳ್ಳುರುಳ್ಗಳನದೊಂದು ಮಂದಾನಿಳಂ (ಆದಿಪು. ೭-೬೬). ೫. ಮೇಲೇಳು; ಚಿಮ್ಮು ; ನೆಗೆ: ಕರಿಕರಶೀಕರಮದ ಜಳತುರಂಗಲಾಲಾಂಬುಸೇಕದಿಂದಱದುಱಿದಿರ್ದ ರಜಂ ನರೇಂದ್ರಚಾಮರ ಮರುದಭಿಹತಿಯಿಂ ತೆರಳ್ದು ತೂಳ್ದತ್ತಾಗಳ್ (ಆದಿಪು. ೧೧-೩೮). ೬. ಒಟ್ಟುಗೂಡು ; ಒಂದಾಗು : ಅಡಿಯೊಳ್ ಪಾಸಿದ ಚರ್ಮರತ್ನಪಟಮುಂ ತಚ್ಛತ್ರರತ್ನಂ ಬೆಡಂಗಿಡಿದೋರಂತಿರೆ ಮುಟ್ಟೆ ಪೊಲ್ದ ತೆಱಿದಿಂದಿಂಬಾಗೆ ತನ್ಮಧ್ಯದೊಳ್ಸೊಡರಿರ್ಪಂತಿರೆ ಚಕ್ರರತ್ನಮದಱೊಳ್ನಿರ್ಬಾಧವಿರ್ದತ್ತು ಪೆರ್ಮಡೆ ವಾರಾಶಿಯೊಳಿರ್ದ ಭೈತ್ರದೊಳಗಂದೆತ್ತಂ ತೆರಳ್ದಿರ್ದಪೊಲ್ (ಆದಿಪು. ೧೩-೬೦); ತೆಳ್ದರ್ದ ಕುಳಾಯದಿಂ ಬಿದಿರ್ದೆಱಂಕೆಯ ನೀರ್ವನಿಯುಂ ತೆರಳ್ದ ತುಪ್ಪುಱನೊನೆದಂಟ ಚಂಚುಪುಟದಿಂ . . . ಪಕ್ಕಿಗಳ್ ಮರಂಗಳ ತುದಿಗೋಡ ಮೇಲೆ ದನಿಗೆಯ್ಯುತುಮಿರ್ದುವು (ಜಗವಿ. ೧೪-೧೧). ೭. ಅಲುಗು ; ಅಲ್ಲಾಡು : ಮಲಯಾನಿಲನೊಡೆ ತೆರಳ್ವ ಚೂತಪಲ್ಲವದ ತೆರಳ್ಕೆ (ಪಂಪಭಾ. ೨-೧೪). ೮. ಹಿಮ್ಮೆಟ್ಟು ; ಹಿಂಜರಿ ; ಹೆದರು : ಬಿಸಿಲಂ ಬೆಳ್ದಿಂಗಳುಮಂ ಪಸರಿಸೆ ಕಟ್ಟಿಲೆ ತೆರಳ್ದು ತೂಳ್ದೊಡೆ (ಆದಿಪು. ೧೩-೫೦) ; ಸಂತಾಪಭೀತಿಯಿಂ ತನುಕಾಂತಿ ತೆರಳ್ದೋಡಿದಪುದೆನಲ್ (ಕಾದಂಬು. ೨೨೫) ; ನಿದಾಘದ ದೀಪ್ತಿವರ್ತಿಯೊಳ್ ಕಾಸೆ ತೆರಳ್ದ ಪಿಂಜರಿಯ ಪೋಲ್ ಕಿಸುಸಂಜೆ ತೆರಳ್ವಿನಂ ಪಟಿಂಗಾಸಿನ ಪೊನ್ನಗಂಟೆಯವೊಲೊಪ್ಪಿದುದ್ಗತಭಾನುಮಂಡಲಂ (ಅಜಿಪು. ೬-೭೦) ; ಕರಿ ಕೆಡೆಯೆ ಕಾಲಿನಲಿ ಜೋದರು ತೆರಳದೆಚ್ಚಾಡಿದರು (ಕುಮ್ವಾಕ. ೧೫-೨೮). ೯. ಮುರಂಟಂ ; ಸಂಕ್ಕುಗಟ್ಟು : ಮುಸು ಮುತ್ತಂತೆ ತೆರಳ್ದ ತನ್ನ ಮೊಗಮಂ ಕಂಡಳ್ಕನೋ ಕೂಡೆ ಜೋಲ್ದು ಸಡಿಲ್ದಿರ್ದೊಡಲಳ್ಳಿಜೊಳ್ಳಿತನಮಂ ಮೇಣ್ಕಾಣನೋ (ಆದಿಪು. ೨-೪೫) ; ಭೀಮಸೇನನ ಗದಾಘಾತದೊಳೂರು ಭಂಗಮುಂ ಪದಘಾತದೊಳ್ ಮಕುಟಭಂಗಮುಮಾಗೆ ಸುರುಳ್ದು ತೆರಳ್ದ ಸುಯೋಧನನಿರೆ (ಗದಾಯು. ೯-೧೭ ವ). **ತೆರಳು** : ೧. ಹೈಮವತಿ ಕೈಲಾಸ ಗಿರಿಗೆ ತೆರಳಿದಳು (ಸಿದ್ಧರಾ. ೧-೬೦) ; ಸರ್ವಾಭಿಸಾರ, ಸರ್ವೌಘ, ಸರ್ವ ಸನ್ನಹನ–ಎಲ್ಲಾ ಸೇನೆಯೂ ತೆರಳುವುದು (ನಾಚಿಂರಾ. ೩); ತೆರಳಿ ಮುಂದಕೆ ಹೋಗಬಾರದು ಮರಳಿ ಹಿಂದಕೆ ಬರಲು ಬಾರದು (ಬಸವು. ೪೦-೮) ; ಧನಂಜಯ ತೆರಳಿದನು ಪಾಳೆಯದ ಪಥವಿಡಿದು (ಕುಮ್ವಾಕ. ೧೪-೩೨) ; ಸರಸಿಜಗಂಧಿಯ ದಿವ್ಯಾಂಗ ಲಾವಣ್ಯಶರಧಿಯೊಳ್ನೆರವಿಗರಕ್ಷಿ ವರ ಮಾನಸಗಳು ನೆಱೆ ಪೊರಳುತ ತೆರಳುತ ಮರಳಿ ಮುಳುಗುತೊಪ್ಪಿದುವು (ಕಂಸವಿ. ೯-೯೫). ೨. ಕಣ್ಗಳಿಂ ಶೋಕಜಲಬಿಂದು ತೆರಳಿ . . . ಗದುಗದಿಸಿ ಬಿಕ್ಕುತೆ ಬಿದ್ದು (ಬಸರ. ೫-೧೯). ೮. ಅರಸನಂ ಕೆಡಿಸಿ ಹುಸಿ ತೋಱಿಂದಡೆನಗವಂ ತೆರಳುವವನೇ (ಹರಿಕಾ. ೯-೧೭) ; ರವಿಯ ಕೈ ಕತ್ತಲೆಯ ಹೊರಳಿಯ ತಿವಿಗುಳಿಗೆ ತೆರಳುವುದೆ (ಕುಮ್ವಾಕ. ೧೦-೪೬). ೯. ಒಳಗೆ ಮಂಚದ ಮೇಲೆ ನಡುಗುವ ತಲೆಯ ತೆರಳಿದ ಮೈಯ . . . ಚಲಿತ ವಚನದ ವೃದ್ಧರನು ತೋಱಿದನು (ಕುಮ್ವಾಆ. ೧೫-೧೦). ೧೦. ಅಳಿಸಿ ಹೋಗು; ಇಲ್ಲವಾಗು: ಪೂರೆದ ದುಕೂಲವೊಂದಿನಿಸು ಮಾಸಿದೆ ಭಾಳದೊಳಿಟ್ಟ ಚಂದನಂ ತೆರಳಿದೆ (ದಶಕು. ೧೧-೨೦). ೧೧. ತೆಗೆ; ಕಳೆ; ಬಿಡಿಸು: ಹಿರಿದು ಹೊರೆಗಳನೊಂದ ನೊಂದಂ ತೆರಳಿ ಸುಲಿಯಲು ಬಾಳೆಯದು ತಾನೊರೆಯಲಿಲ್ಲದೆ ಮುನ್ನಿನಾಕೃತಿಯಿಲ್ಲದಿಪ್ಪವೊಲು (ಬಸವು. ೩೫-೩೮).

[ ದೇ. ‖ ತಮಿ. ತಿರಳ್ ; ತೆಲು. ತೆರಲು, ತೆಲ್ರು ]

**ತೆರಳಿ, ತಿರುಳಿ$_2$, ತೆರಣೆ$_1$, ತೆರಣೆ, ತೆರಳೆ$_1$** (ನಾ). ೧. ಮಣ್ಣು, ಮಲ ಮೊದಲಾದುವುಗಳನ್ನು ಉಂಡೆಗಟ್ಟಿ ಸಾಗಿಸುವ ಒಂದು ಬಗೆಯ ಹುಳು : ಸ್ಪರ್ಶ ರಸ ಗಂಧ ರೂಪುಗಳೆಂಬೀ ನಾಲ್ಕುಮನಱಿವ . . . ಮಿಡುತ ತೆರಳಿ ಕೊಟ್ಟಾರಿಗಂ ಯೆಡೆವುಟುಯೆಂದಿತ್ಯೇವಮಾದಿಗಳೊಳಂ (ಪಸಾರ. ೪೯). ೨. ತನ್ನ ಶ್ಲೇಷ್ಮದಿಂದ ತನ್ನ ಸುತ್ತಲೂ ಎಳೆಯನ್ನು ನೆಯ್ದು ಸುತ್ತಿಕೊಳ್ಳುವ ಒಂದು ಬಗೆಯ ಹುಳು ; ರೇಷ್ಮೆಹುಳು : ನಿಷ್ಕಾರಣಂ ತೆರಳಿಯ ಪುಟುವಿನಂತೆ ನಿನ್ನಂ ನೀನೆ ದುಷ್ಪರಿಣಾಮದಿಂ ಸುತ್ತಿಕೊಂಡು (ಧರ್ಮಾಮೃ. ೧೪-೮೪); ತೆರಳಿ[ಪಾಠಾಂ. ತೆರಣೆ, ತೋರಣೆ]ಯ ಪುಟುವಂ ತನಗೆ ಮನೆ ಮಾಟ್ಪೆನೆಂದು ತನ್ನೊಳ್ ಪುಟ್ಟಿದ ನೂಲಿಂ ತನ್ನನೆ ಸುತ್ತಿಕೊಂಡು ಪೊಱಮಡಲಱಿಯದೆ ಸಾವಂತೆ (ಜೀವಸಂ. ೧೪೦-೧೧ ವ) ; ಹಲವು ಮಾಯಾಮೋಹಪಾಶದ ಬಲೆಯೊಳಗೆ ನೆಱೆ ಸಿಲುಕಿ ತೆರಳಿಯ ಹುಳುವಿನಂತೊಳಗಿರ್ದು ತಾಪತ್ರಯದ ದುಃಖದಲಿ (ನಿಘಾಗ. ೭-೬-೧೩). **ತಿರುಳಿ$_2$** : ೨. ಹಲವು ಮಾಯಾಮೋಹಪಾಶದ ಬಲೆಯೊಳಗೆ ತನು ಸಿಲುಕಿ ತಿರುಳಿಯ ಹುಳುವಿನಂತಳವಳಿದು ತಾಪತ್ರಯದ ಬೇಗೆಯಲಿ (ನಿಘಾಗ. ೩-೧೪-೪). **ತೆರಣೆ$_1$** : ೨. ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸುತ್ತಿ ಸಾವ ತೆಱನಂತೆ (ಮಹಾದೇ. ಬ. ೧೫-೧೭). **ತೆರಣೆ** : ೨. ಮೇಲಿನ 'ತೆರಳಿ' ಉಲ್ಲೇಖದ 'ಜೀವಸಂ' ಪ್ರಯೋಗದ ಪಾಠಾಂತರವನ್ನು ನೋಡಿ. **ತೆರಳೆ$_1$** : ೨. ಕೌಶೇಯ–ತೆರಳೆಯ ಹುಟು ಮುಕುಲಾಕಾರದಿಂದ ಮಾಡಿದುದ ಬಿಡಿಸಿ ನೆಯ್ದ ಸೀರೆ (ನಾಚಿರಾ. ೩) ; ಪರಿಪರಿಯ ಸಂಸಾರವಿಷಯದಿ ಹಿರಿದು ಬಿಗಿವಡೆದಿರ್ಪ ಮನುಜಗೆ ದೊರಕುವುದೆ ಪರತತ್ವ ತೆರಳೆಯ ಹುಳುವಿನಂತಿಹಗೆ (ಅಮೃತ. ೧-೩೭). [ <ತೆರಳ್ ]

**ತೆರಳಿಕೆ** 'ತೆರಳ್ಕೆ' ನೋ.

**ತೆರಳಿಚು** 'ತೆರಳ್ಚು' ನೋ.

**ತೆರಳಿಸು** (ಕ್ರಿ). ೧. ಹೋಗುವಂತೆ ಮಾಡಂ; **ಹೊರಡಿಸು**; ಕಳುಹಿಸು: ಬೆಸವೇಳ್ದು ತೆರಳಿಸಿದನನುಜನನು (ತೊರರಾ. ೪-೫-೨೭) ; ಆತನನಲ್ಲಿಂದ ತೆರಳಿಸಿ ಬಿಟ್ಟಳು (ಕಂನವಿ. ೬-೧೬೪). ೨. ಹೊಗಿಸಂ ; ಪ್ರವೇಶ ಮಾಡಿಸು : ಇಂತು ಸಿಂಗರವಾದ ಸ್ವಯಂವರಮಂಟಪಕಂ ತೆರಳಿಸಲು ಸುಮತಿಯು ಮಂತಣದಿಂದ ಸಿಂಗರಿಸಿದರಾ ದೇವಕಾಂತೆಯ ಶೃಂಗಾರ ದಂತೆ (ಶಾಂತೀಶ. ೩-೬೫). ೩. ಕೆದರು ; ಚೆಲ್ಲಾಪಿಲ್ಲಿ ಮಾಡು : ತೆರಳಿಸಿತು ಬಿರುಗಾಳಿ ತಾರೆಯು ನೆರವಿಯನು (ಸಾಳ್ವಭಾ. ೧೬-೩೪).

[ ತೆರಳ್ + – ಇಸು₃ ]

**ತೆರಳು** 'ತೆರಳ್' ನೋ.

**ತೆರಳಿ₁** 'ತೆರಳಿ' ನೋ.

**ತೆರಳೆ₂, ತೆರಣೆ₂** (ನಾ). ತುತ್ತು; ಮುದ್ದೆ ; ಉಂಡೆ : ತೆರಳೆ ಕೈಯೊಳಗಿದೆ ಬಾಯೆಮ್ಮ ತಂದೆ ಕುಳ್ಳಿರುಯೆಂದು ಕರೆದರಚ್ಯುತನಾ (ಕೃಷ್ಣಗೋ. ೨-೮೨) ; ಭಕ್ತನು ಒಂದು ಹೊತ್ತು ಅಡಿಗೆ ಮಾಡಿಕೊಟ್ಟ ಊಟದ ತೆರಳೆಯನ್ನು ಮಧ್ಯಾಹ್ನ ದೇವರೆದುರಿಗೆ ಭಿಕ್ಷವಾಗಿ ಸ್ವೀಕರಿಸಿ ಉಂಡು (ಸಣ್ಣಕ. VI, ೨೭). **ತೆರಣೆ₂** : 'ತೆರಣೆಗಟ್ಟು' ಪರಾ.

[ ದೇ.॥ ತಮಿ. ತಿರಳ್ಳೆ, ತಿರಣ್ಣೆ ; ತೆಲು. ತೆರಲ ]

**ತೆರಳ್ಕೆ, ತೆರಳಿಕೆ** (ನಾ). ೧. ಚಲನೆ ; ಅಲುಗಾಟ ; ಸ್ಪಂದನ : ಮಲಯಾನಿಲನೂದೆ ತೆರಳ್ವ ಚೂತಪಲ್ಲವದ ತೆರಳ್ಕೆ ತದ್ವನವಿಳಾಸಿನಿಯುಟ್ಟ ದುಕೂಲದೊಂದು ಪಲ್ಲವದ ತೆರಳ್ಕೆಯಂತೆಸೆಯೆ (ಪಂಪಭಾ. ೨-೧೪); ಕಲಶಮನೆತ್ತಿ ನೀರೆರೆವ ಕಾಂತೆಯ ತೋಳ ತೆರಳ್ಕೆ ಮೇಲುದಂ ತೊಲಗಿಸೆ (ಚಂದ್ರಪ್ರ. ೧-೯೮) ; ಚರಣನ್ಯಾಸದ ತುಱುಗಲ ತೆರಳ್ಕೆಯಭಿನಯದೊಳಭಿನವಂಬೆತ್ತು ಮನೋಹರವಾಗೆ (ಮಹಾನೇ. ೯-೧೧) ; ಉರಿಯುಂಮೇಣ್ ಕಣ್ಗಳ ತೆರಳ್ಕೆಯುಂ ಪೋಲ್ವ ರಶ್ಮಿ ತುರಗಂ ಕಿಱಿಱುತ್ತಿರೆ (ಅಶ್ವಶಾ. ೪-೭೨). ೨. ಓಡುವಿಕೆ ; ಓಟ : ಪೂಡಿದ ವಾರುವಂಗಳ ತೆರಳ್ಕೆಗೆ ನೇಸಱ ತೇರ ತೇಜಿಗಳಂ ಪಾಡೞಿದಿರ್ದಿನಂ . . . ಪರಿತಂದುವು ತೋರ್ಕೆಯ ತೇರ್ಗಳೋಳಿಯಿಂ (ಕಬ್ಬಿಕಾ. ೨೦೫). ೩. ವ್ಯಾಪಿಸುವಿಕೆ ; ಹರಡುವಿಕೆ : ರಾಜ್ಯಸಂಪದದ ಪೊದಳ್ಕೆ ತೇಜದ ತೆರಳ್ಕೆ ವಿರೋಧಿಯ ಬಾಳ್ಕೆ ತನ್ನದೆಂಬುದನೆನೆ ಪೆರ್ಮೆಯುಂ ತಳೆದನೋ ನ್ರಿಪರೊಳು ನ್ರಿಪಶ್ರೇಖಾನ್ತರಂ (ಎಕ. VIII, ಸಾಗರ. ೧೫೯-೧೩ : 1159). ೪. ಹೆಚ್ಚಳ ; ಅಧಿಕ್ಯ ; ಅತಿಶಯ : ಸೋರ್ವ ಕಂಬನಿಯ ತೆರಳ್ಕೆ ಗದ್ಗದಿಕೆಗೊಳ್ವ ಸರಂ (ಆದಿಪು. ೯-೬೬); ಸಿರಿಯ ತೆರಳ್ಕೆ ಜವ್ವನದ ಪೆರ್ಚುಗೆ ರೂಪವಿಳಾಸದೇಳ್ಗೆ . . . ಮೂರ್ತಿವೆತ್ತುದು (ವರ್ಧಪು. ೨-೩೪). ೫. ಸಮೂಹ ; ಗುಂಪು ; ನೆರವಿ : "ತಂಡಂ ತೆರಳ್ಕೆ . . . ಪಂಡಿತರಿಂ ಗಡಣವಂಗಡಂ ಕಿಕ್ಕಿಂದಂ" (ಕವಿಕಂ. ೧೦೬) ; ಈಳೆಯಿಟ್ಟೆಡೆಯುಂ ತಿಲಕದ ತೆರಳ್ಕೆಯುಂ ಅಸುಗೆಯ ಕುತ್ತುಱುಂ . . . ಎನಿಸಿದ ದೇವರಮಣೋದ್ಯಾನಮಂ . . . ಪುಗುತರ್ಪಾಗಳ್ (ಶಾಂತೀಶ್ವ. ೧೧-೬೪ ವ) ; ಸುವಿಲಾಸದಿಂದಪ್ಸರಸುಗಳ ತೆರಳ್ಕೆ ಘನಜವದಿಂದೆ ಸಪ್ತ ಋಷಿಗಳ ನೆರವಿ . . . ಓಲಗಕೆ ಬಂದುದು (ಚಿಬಪು. ೨-೧೭) ; ಸುಯ್ಯಿಟ್ಟ ಪೊರೆಗಳಂ ಬಿಟ್ಟು ಪ್ಯೆಗರೆದು . . . ಪೆಣ್ ತೆರಳ್ಕೆಯು ತೆರಳೆ (ಕಾಲೂರ. ೧೩೦-೨೭೯). ೬. ಮಡಿಕೆ ; ನಿರಿಗೆ. 'ತೆರಳ್ಕೆವೆಱು' ಪರಾ. ೭. ಠೀವಿ ; ಒಯ್ಯಾರ; ಬೆಡಗು: ಸ್ಮರಶರವುಂ ತದೀಯವ್ಯುದುಗೇಯವುಮುರ್ಚಿದ ಪುಣ್ಣನೊಕ್ಕ ನೆತ್ತರನಱಸಲ್ಕೆವೇಡ . . . ಬರ್ಬರೆಯ ಕಿರಾತೆಯೊಟ್ಟಜೆಗೆ ಕಿನ್ನರರೊಟ್ಟಜೆಯುಂ ತೆರಳ್ಕೆಯುಂ (ಶಾಂತಿಪು. ೨-೨೨) ; ಮಾತಿನ ತೆರಳ್ಕೆಗಳಿಂ ರಸಗೇಯದಂತಿರೀ ಕೃತಿ ಪೊಸದೇಸಿಯಿಂದಸೆದು ಸೋಲಿಪುದಚ್ಚರಿಯೇ ರಸಜ್ಞರಂ (ಲೀಲಾವ. ೪-೭೩) ; ಧರೆಗೆಸೆದತ್ತು ತಾರಕನಾಜ್ಞೆ ತಾರಕಾಸುರನ ತೆರಳ್ಕೆ ತಾರಕನ ತೀವ್ರತೆ ತಾರಕನುರ್ಬು (ಗಿರಿಕ. ೬-೧೧) ; ವಳಿಯ ತೆರಳ್ಕೆಯುಂ ವಹಣಿ ಯೊಟ್ಟಜೆಯುಂ ಪಸರಂಗಳಿಂಪನುಜ್ವಳಿಸುವ ಡಾಳಮಂ . . . ಅಱಿವನ್ನರಾರ್ (ಅನಂಪು. ೪-೮೮). **ತೆರಳಿಕೆ** : ೫. ನೆರದರಬಲೆಯ ರಂಗವಟ್ಟದ ಪರಿಮಳದ ಮುತ್ತಿಗೆಯ ತುಂಬಿಯ ತೆರಳಿಕೆಯ ಕತ್ತಲೆಯ ಕೆದಱುವ ಕಣ್ಣ ಬೆಳಗುಗಳ (ಕುವ್ಯಾಅ. ೮-೬) ; ತೇರುಗಳ ತೇಜಿಗಳ ಬಲುಮದವಾರಣಂಗಳ ತೆರಳಿಕೆಯ ರಣಚೋರಗಂಡಿಯ . . . ವೀರ ವಱಿಗಳ ರಭಸದಲಿ ರಂಜಿಸಿದುದಾ ದುರ್ಗ (ತೊರರಾ. ೬-೭-೧೫) ; ಶಿಖರಿದಶಸದ್ಯುತಿಯ ಬೆಳ್ಳಗೆಯ ಸೂಸಲೆನೆ ನಖರುಚಿಯ ತೆರಳಿಕೆಯ ಹೊರಳಿಯೆನೆ . . . ತಿಳಿನೀರ ತುಂತುರ್ವನಿಗಳೆಸೆದಿರ್ದುವು (ಜೈಮಿಭಾ. ೩೦-೧೧). ೮. ತೆರಳಿಸುವಿಕೆ ; ಸಾಗಿಸುವಿಕೆ : ಪುರವರವನಲ್ಲಿಂದ ಮೌಲ್ಯದ ತೆರಳಿಕೆಯ ಮಾಡಿದನು ಮೂಡಲು ಹರಿದು ಮುರಿದು ಸಮುದ್ರಸೇನನ ಸರ್ವಗವತೆಯುಲಿ ತೆರಳಿಯಲ್ಲಿಂದಿಂದ್ರಸೇನನನೊರೆಸಿ ಭಂಡಾರವನು ಹೇರಿಸಿ ಮರಳಿ ಮಂಗನನಪ್ಪಳಿಸಿದನು (ಕುವ್ಯಾಸ. ೪-೯). ೯. ಆಕ್ರಮಣ ; ಮುನ್ನುಗ್ಗುವಿಕೆ ; ರಭಸ : ಸರಳ ತೆರಳಿಕೆಗೆ ಮರಳಿತು ಕರುಳ ಸುರುಳಿಯೊಳು ಹೊರಳುತ್ತ ಬೀಳುತ್ತಲು . . . ಹಂದಿ ಮರಳಿ ಕಾನನಕೆಯ್ದಿತು (ಹಚಕಾ. ೬-೩೦) ; ಇಂದಿನೀ ಬಲವೀ ಸಮರಜಯದಂದವೀ ಸೌರಂಭವೀ ಸರಳಂದವೀ ತೆರಳಿಕೆಯದಾವಂಗೆಂದನವನೀಶ (ಕುವ್ಯಾದ್ರೋ. ೫-೧೭).

[ ತೆರಳ್ + – ಕೆ ]

**ತೆರಳ್ಕೆಯಿಡು** (ಕ್ರಿ). ಅಧಿಕಗೊಳಿಸು ; ಒತ್ತುಗೊಳಿಸು : ಇತ್ತಲೆಳ್ದ ಮಳೆಯ ರಾಜನುತ್ಸವಕ್ಕೆ ಹೆಚ್ಚುಗೊಟ್ಟು ಚಿತ್ರದೊಳ್ಸಮಸ್ತಸಂತಸಂಗಳಂ ತೆರಳ್ಕೆಯಿಟ್ಟು ರಂಗಮಂಟಪಕ್ಕೆ ಬಂದು (ಮಳರ.ಹ. ೨೩೧-೧೧).

[ ತೆರಳ್ಕೆ + ಇಡು₁ ]

**ತೆರಳ್ಕೆವೆಱು** (ಕ್ರಿ). ಪದರವಾಗು ; ನಿರಿಗೆಯಾಗು : ಕರೆವೆರಸಿದ ಪೊಸದುಗುಲವ ತೆರಳ್ಕೆವೆತ್ತುಡೆ ಹಟತ್ಕಟೀಸೂತ್ರಪರಿಸ್ಫುರಿತದೊಳಂ . . . ಜನಮನೇಂ ಮನಂಗೊಳಿಸಿದುದೋ (ಆದಿಪು. ೪-೩೭).

[ ತೆರಳ್ಕೆ + ಪೆಱು₁ ]

**ತೆರಳ್ಚು, ತೆರಳಿಚು** (ಕ್ರಿ). ೧. ಚಲಿಸುವಂತೆ ಮಾಡಂ; ಚಲನಗೊಳಿಸು ; ಸರಿಸಂ ; ತಳ್ಳು : "ತೆರಳ್ಚು–ಚಲನೇ, ಚಯನೇ ಚ" (ಶಮಧಾ) ; ಅಂತೀತನ ಕಟಕಕ್ಕೆ ನಿತ್ಯಕ್ಷಯವ್ಯಯಪ್ರತ್ಯವಾಯಂಗಳಂ ಮಾಡಿ ಬೇಸಱಿಸಿ ನೆಲದಿಂ ತೆರಳ್ಚುವಂ (ಆದಿಪು. ೧೩-೫೮ ವ) ; ಉಪವನದ ತರುಲತಾಗುಲ್ಮಜಾಲಮಂ ಸೋಂಕಿ ಬಂದು ತಿಳಿಗೊಳಂಗಳೊಳ್ ತೆರೆಯ ನೆರವಿಯಂ ತೆರಳ್ಚಿ . . . ಸಾಯಂತನಸಮಯ ಸಮೀರಣಂ ಸೌಖ್ಯಸಾರ ಸರ್ವಸ್ವಮೆನಿಸಿದಾಗಳ್ (ಚಂದ್ರಪ್ರ. ೮-೪ ವ) ; ವಾಯುವು (ನಸ್ನ) ಹಟ್ಟಿಯ ಬಾಗಿಲ ರಜಗಳಂ ತೆರಳ್ಚುವನು (ಶುಕಸ. ೧೪೪). ೨. ಅಲುಗಾಡಿಸು ; ಕಲಕು ; ಕ್ಷೋಭೆಗೊಳಿಸು ; ಕದಲಿಸಂ : ಮಿಡಿಯಂ ತೆರಳ್ಚಿ ತೆಗೆದೋವದೆ ಕಾಯದೆ ಕೂರಕರ್ಮದಿಂ ಸೊನೆ ಸುರಿವನ್ನೆಗಂ ಪಱಿದು ನೋಯಿಸಿ ಕಾಡಿದೆವು (ಆದಿಪು. ೧೧-೧೩೨) ; ಆಸುಂ ಕುಲಗಿರಿಗಳ ನಪ್ಪೊಡೆಂತುಂ ತೆರಳ್ಚಲಾಱನದಱಿಂದೆನಗಂ ನಗಂಗಳ್ ಪಿರಿಯವೆನೆ (ಪಂಚತಂ. ೨೫೯-೬); ಸಾಗರವಮಂ ಕೂಡೆ ತೆರಳ್ಚಿದಂ ತೊಱಸಿದಂ ತುಳ್ಕಾಡಿದಂ (ಜಗವಿ. ೭-೧೮); ತೆರಳ್ಚಿ ತರಂಗನೀವಿಯಂ...ಭುಜಂಗನವೋಲ್ ಸುಳಿಗುಂ ಸಮೀರಣಂ (ಶಬಶಂ. ೨-೬೦). ೩. ಅಲುಗಾಡು ; ಕದಲು : ಇಡುಮೊಲನಂ ತೆರಳ್ಚದಿಸು ಪುಲ್ಲೆಗಳಂ (ಗಿರಿಕ. ೧-೮೩). ೪. ಕಳುಹಿಸು ; ಸಾಗಿಸು: ಗೋವೃಜಂಗಳುಮನಿಂದ್ರಪ್ರಸ್ಥಕ್ಕೆ ತೆರಳ್ಚಿ (ಪಂಪಭಾ. ೬-೩೩ ವ). ೫. ಸುತ್ತಿಸಂ ; ತಿರುಗಿಸು : ವಿರಹಿಗಳಂ ತೆರಳ್ಚಿ ತುಱುವಲ್ಲಿಗೆ ನೀಂ ನೆರ ಮುಯ್ಯೊಳಕ್ಕೆ (ಆದಿಪು. ೧೧-೧೧೧ ಅಡಿಟಿ.); ಇರದೊಯ್ಯುದು ತನ್ನಿಚ್ಚೆಗೆ ವರ ಯವ್ವನದಂದು ಪುರುಷನಂ ಪ್ರಕೃತಿರಜಂಬೊರೆದು ತಿರುಪುತ್ತೆ ಸುಟ್ಟು ಱಿ ತೆರಳ್ಚಿ ತಱಗೆಲೆಯನುಯ್ವ ತೆಱದಿಂದೆತ್ತಂ (ಕಾದಂಪೂ. ೫೩೫) ; ಕೆಂದಳದಿಂ ಸಣ್ಣಗೆಯಂ ತೆರಳ್ಚಿ ತಿರುಪುತ್ತುಂ (ಕುಸುಮಾ. ೨-೧೦೬). ೬. ಒಂದ

ಗೂಡಿಸಂ ; ಸೇರಿಸು ; ಕೂಡಿಸು : ಮೂಜುಲೋಕದ ಚೆಲ್ವೆಲ್ಲಮಂ ವಿಧಾತ್ರನೊಂದೆಡೆಗೆ ತೆರಳ್ಚಿದಂತೆ (ಪಂಪಭಾ. ೧-೫೮ ವ) ; ಮಾಂಸ ವ್ರಾತಮಂ ಪೊತ್ತು ಕೇಸರಿಚಮರೀವಾಲಂಗಳಂ ತಾಳ್ದು ಬಂದರನೇಕರ್ (ಕಾದಂಪೂ. ೧೬೯) ; ತಂತಮ್ಮ ಭಂಟರರ್ಥಮಂ ತೆರಳ್ಚಿ ಕಟ್ಟಿಕೊಂಡು ಪೊಟಲ್ಗೆವಂದು (ಧರ್ಮಾಮೃ. ೨-೧೯೩). ೭. ಹರಡಂ ; ಪಸರಿಸು : ಪುಷ್ಪಕೇಸರಂ ತೆರಳೆ ತೆರಳ್ಚಿ ಬೀಸಿದುದು ತಂಬೆಲರ್ (ಆದಿಪು. ೨-೬೫) ; ಓಜೆಯರ್ ತೊಡೆದಂಗಾನುಲೇಪನದ ಸೌರಭ್ಯಮಂ ತೆರಳ್ಚಿ ವಿಟಜನ ಘ್ರಾಣಕೆ ಪಾರಣೆಯನೊಡರ್ಚಿಯುಂ (ಕುಸುಮಾ. ೪-೨೯ ವ) ; ಇಂಬುವೆತ್ತ ತಣ್ಬುಟೆಲೊಳಗೊಲ್ದು ಕೂಡುವಿನಿಯರ್ಗೆ ತೆರಳ್ಚಿದ ಕಂಪು ತಣ್ಪು ಪೊಂಪುಟೆಯನಲರ್ಚೆ ತೀಡುವುದು ತತ್ಪುರಬಾಹಿರ ಮಂದಮಾರುತಂ (ಅನಂಪು. ೩-೧೬) ; ಸರ್ಬದಳಮಂ ತಗುಳ್ದು ವೃ ಬೇಸಗೆಯ ಬಿಜುವ ಲರ್ಬೀಸಿ ರಜಮಂ ತೆರಳ್ಚುವಂತಾಗ ವೀರರ್ಬಿಂಕದಿಂದಾಂತು ನಿಂದರ್ (ಜೈಮಿಭಾ. ೨೫-೨೭). ೮. ಅಧಿಕವಾಗಿಸು ; ಅತಿಶಯವಾಗಿಸು : ಗುರುಗಳುಮಂ ಸುತರಂ ಸೋದರರಂ ಕೊಲಲಾಜಿನೆಂದ ಪಾರ್ಥನನಾಗಳ್ ಹರಿ ರಥಮಂ ಹರಿಯಿಸುತುಂ ತೆರಳ್ಚಿ ತತ್ವಮನೆ ಪೇಟ್ದು ಗಡ ಕಾದಿಸಿದಂ (ಸಮಪ. ೧೦-೧೬೨). ೯. ಉಂಟುಮಾಡು ; ಹೊಂದಿಸು : ಕಳೆಯಂ ಪತ್ತಿಸಿ ರಾಗಮಂ ನಿಲಿಸಿ ನುಣ್ಪಂ ನಣ್ಪುಗೆಯ್ದಿಂಪನಿರ್ಕೆಳಿಗೊಂಡು . . . ತೆರಳ್ಚಿ ಜತಿಯಂ ಸೈತೋಜೆಯಂ ತಾಳ್ದಿ ಗೋವಳರಾಯಂ ಕೊಟಲೂದಿದಂ ನೆಗಟ್ಬಿನಂ ಮಾಧುರ್ಯ ತೂರ್ಯಸ್ವನಂ (ಜಗವಿ. ೫-೨) ; ಕವಿಕಂದರ್ಪನ ಬಾಳಚಂದ್ರನ ಲಸದ್ಬಾಣೋತ್ಕರಂ ಕೂರ್ತುವಂದವರ್ಗಂ ನೆಟ್ಟನೆ ಕೂರ್ತು ಕೂಡಿದವರ್ಗಂ ರಾಗಾದಿ ಕಲ್ಲೋಲಮಂ ಕಿವಿಯಂ ತಾಗಲೊಡಂ ತೆರಳ್ಚುವುದು (ಅನಂಪು. ೧-೩೩). ೧೦. ಹಿಮ್ಮೆಟ್ಟಿಸು ; ಓಡಿಸು ; ಅಟ್ಟು : ಪುಂಖಾನುಪುಂಖಮಿಸುತ್ತಿರ್ಪೆಡೆಯೊಳ್ ತೆರಳ್ಚಿದುವಗುರ್ವಿಂ ಪರ್ವಿ ಬಾದಿರ್ದ ಮೇಘಮುಖಾಹೀಂದ್ರರ ಪೊಂಕಮಂ ಜಯಕುಮಾರೋನ್ಮುಕ್ತ ಬಾಣಾಳಿಗಳ್ (ಆದಿಪು. ೧೩-೬೦) ; ಗಂಗನ ಮೊತ್ತಮೆಲ್ಲಮಂ ಬೆದಱುವಿನಂ ತೆರಳ್ಚಿ ಪಲರುಂ ತುಟಿಲಾಳ್ಗನಿಕ್ಕಿ (ಎಕ. II, ೧೩೮-೧೨ ; ಸು. 940). ೧೧. ಹೋಗಲಾಡಿಸು ; ನಿವಾರಿಸು ; ಕಳೆ : ಭುಜಕಂಡುವಂ ತೆರಳ್ಚುವುದರ್ಕೆದುವೆ ಪದನೆಂದು ಕದನೋದ್ಯುಕ್ತನಾಗಿ (ಜಗವಿ. ೬-೬೦ ವ).

**ತೆರಳಿಚು** : ೪. ಅಲ್ಲಿಗಲ್ಲಿಗೆ ನಡೆದು ಸಾಧಿಸಿ ಕೆಲ್ಲೆ ಕುಹರದ ಕೋಣೆ ಬಾಗುಗಳೆಲ್ಲವನು ಹೊಕ್ಕಜಿಸಿ ತೆರಳಿಚಿದನು ಮಹಾಧನವ (ಕುವ್ಯಾಸ. ೩-೪೭) ; ಸುಧಾಮನ ವರಶತಾನಂದನನ ತೆರಳಿಚಿ[ಪಾಠಾಂ. ಸಿ]ದನು ಮಹೀಪಾಲ (ತೊರರಾ. ೦-೧೬-೧). ೭. ಆಲಿಗಳನರಳಿಚುತ ನಗೆಗಳ ಮಾಲೆಗಳ ತೆ[ಪಾಠಾಂ., ಕೆ]ರಳಿಚುತ ಕರೆ ಕಟ್ಟೂಳಿಗದ ಕಾತರರನೆಂದನು ಹರಿ ಸುಪರ್ಣಂಗೆ (ತೊರರಾ. ೦-೮-೫೪). ೧೦. ಕರ್ಣನ ತೆರಳಿಚಿದನೈನೂಱು ಹಜ್ಜೆಯಲಿಂದ್ರಸುತಸೂನು (ಕುವ್ಯಾದ್ರೋ. ೬-೫೧) ; ನೀನಿಂದು ಮುರವೈರಿಯಂ ತೆರಳಿಚಿದೆ . . . ಕರ್ಣಜನೆ ನಿಲ್ಲೆನುತೆ ತೆಗೆದೆಚ್ಚು ಬೊಬ್ಬಿಱಿದನು (ಜೈಮಿಭಾ. ೭-೫೮). ೧೧. ಶಂಕರನ ಪರಮಮೂರ್ತಿಯ ಹೃದಯಕಮಲದೊಳಿರಿಸಿ ಸಂಧಾನದಲಿ ಜೀವನ ತೆರಳಿಚಿದನು (ತೊರರಾ. ೨-೫-೧೯). ೧೨. ಅಧಿಕವಾಗು ; ಹೆಚ್ಚಾಗು : ಕರಿಯ ಬರಿಕೈಗೆಣೆಯೆನಿಪ ನಿಷ್ಠುರದ ಧಾರಾಸಾರ ತೆರಳಿಚಿ ಸುರಿದುದು (ಕುವ್ಯಾಅ. ೨೦-೩೩). [ ತೆರಳ್ + – ಚು$_1$ ]

**ತೆರಾಣೆ** (ನಾ). ಕೊಡುವ ಹಣ ; ಸುಂಕ ; ತೆರಿಗೆ : ಸರಕಾರಕ್ಕೆ ತೆರಬೇಕಾದ್ದೆಷ್ಟು ? ಹೊರಗಿನ ತೆರಾಣೆ ಎಷ್ಟು ? . . . ನೇರವಾಗಿ ತೆರುವ ಅಥವಾ ಸಾಲ ಸಿಬ್ಬಂದಿಗಳ ರೂಪದಲ್ಲಿ ತೆರುವ ತೆರಾಣೆ ಎಷ್ಟು ? (ಹಣಪ್ರ. ೨೬೩). [ ತೆರು$_1$ (< ತೆಱು$_1$) + ಆಣೆ$_5$ ]

**ತೆರಿಗಲು** (ನಾ). ಗಡಿಯ ಗುರುತಿಗಾಗಿ ನೆಟ್ಟ ಕಲ್ಲು : ಅಲಿಂದಂ ಪಡುವ ನಡುದು ನಟ ಗುಡುಕಲು ಅಲಿಂದಂ ಪಡವ ನಡದು ನಟ ತೆರಿಗಲು ಅಲಿಂದಂ ಪಡುವ ನಡದು ನಟ ಹಲಗೆಗಲು (ಎಕ. XII, ತಿಪಟೂ. ೧೩೯-೬೮ ; ?). P ಇದು 'ಕರಿಗಲ್ಲು' ಇರಬಹುದೇ ?

[ ತೆರಿ? + ಕಲು$_1$ (< ಕಲ್$_3$) ]

**ತೆರಿಗೆ** 'ತೆಱಿಗೆ' ನೋ.

**ತೆರಿಗೆದಾರ** (ನಾ). ತೆರಿಗೆಯನ್ನು ಕೊಡುವವನು: (Rate payer. ಪತ್ರಿನಿ. ೬೭). [ ತೆರಿಗೆ (< ತೆಱಿಗೆ) + – ದಾರ$_4$ ]

**ತೆರಿಮೆದ್ದು** (ನಾ). ಒಂದು ಬಗೆಯ ಸಸ್ಯ : (೬). [ ? ]

**ತೆರಿವಿಳಾಸ** (ನಾ). ಒಂದು ಬಿರುದು : ಮಹಾರಾಜಾಧಿರಾಜಪರಮೇಶ್ವರ ನೆಲ್ಲರ ಮರುಳಂ ತೆರಿವಿಳಾಸಂ ಮದಗಜಮಲ್ಲ . . . ಮಾಡಿದ ಮರ್ಯ್ಯಾದೆ (ಸಾಇಇ. IX-i, ೬೩-೫ ; 991). [ ತೆರಿ? + ವಿಳಾಸ ( = ವಿಲಾಸ) ]

**ತೆರಿಸು** 'ತೆಱಿಸು' ನೋ.

**ತೆರು$_1$** 'ತೆಱು$_1$' ನೋ.

**ತೆರು$_2$** 'ತೆಱು$_3$' ನೋ.

**ತೆರುಗಡೆ** 'ತೆಱುಗಡೆ' ನೋ.

**ತೆರುವಣ** (ನಾ). ಸುಂಕ ; ತೆರಿಗೆ : ಶಾಸನಗಳಲ್ಲಿ ಬರುವ ತೆರುವಣಗಳು :– ತೆರು, ಮುಂಡಗಡಿ, ಅರುಗಡಿ (ತುಳುನಾ. ೨೭೦).

[ತೆರು$_2$ (< ತೆಱು$_3$) + ಪಣ$_3$ ]

**ತೆರೆ$_1$** 'ತೆಱೆ$_1$' ನೋ.

**ತೆರೆ$_2$** 'ತೆಱೆ$_2$' ನೋ.

**ತೆರೆ$_3$** 'ತೆಱೆ$_3$' ನೋ.

**ತೆರೆ$_4$** (ನಾ). ೧. ಅಲೆ ; ತರಂಗ : "ವೀಚೀ, ಭಂಗಃ, ತರಂಗಃ – ಈ ೩ ತೆರೆ" (ಹಲಾಯು. ೧೦೮-೩೦) ; ಪಾಲ್ಗಡಲ ತೆರೆಯ ನೊರೆಯ ದೊರೆಯ ದುಕೂಲಾಂಬರಮನುಟ್ಟು (ಆದಿಪು. ೪-೪೦ ವ) ; ಗಂಗಾದೇವಿಯುಮಾ ಕೂಸಂ ಮುಟುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್ಗಳಿನೊಯ್ಯನೊಯ್ಯನೆ ತಟ್ಟಿಸಿ ತರೆ (ಪಂಪಭಾ. ೦-೯೫ ವ) ; ಕುಳಿರ್ವಚ್ಛೋದದ ತೆರೆಯೆಲರೊಳೆ ಪುಳಕಂ ಪೊಣ್ಮಿದಂತೆ ತಣ್ಗದಿರ್ಗಳ್ ಕಣ್ಗೊಳಿಸಿರೆ ಶಶಿಕಾಂತ ಶಿಲಾತಳಮೊಂದುಜ್ವಳಿಸಿತಾ ಲತಾಮಂಟಪದೊಳ್ (ಕಾದಂಬ. ೪೪೨) ; ಸಮುದ್ರದ ತಡಿಯಲೊಂದು ಮನೆಯ ಮಾಡಿ ನೊರೆ ತೆರೆಗಳಿಗಂಜಿದೊಡೆಂತಯ್ಯ (ಮಹಾದೇ. ಕ. ೫೦-೧೩೪) ; ತುಂತುಱಿಂ ತೆರೆಯಿಂ ಪೆರ್ದೆರೆಯಿಂ . . . ಒಪ್ಪಿತ್ತು ನೀರಾಕರಂ (ಗಿರಿಕ. ೦-೪೭) ; ವಾರ್ಧಿಯೊಗ್ಗಿನ ತೆರೆಯಂತೆ ಗಾಳಿಗಿದಿರೊಡ್ಡಿದ ಕೆಂಜೊಡರಂತೆ (ದಶಕು. ೦೪-೨೬) ; ತೆರೆಯ ಮೇಲಣ ತೆಪ್ಪದಂತಿರೆ ಧರಣಿಯೊಲೆದುದು (ಕುವ್ಯಾವಿ. ೦೧೩. ೬-೫೯) ; ತೇಜಿಯ ಸಾಲೋ ಶರಧಿಯ ತೆರೆಗಳ ರಾಜಿಯೊ . . . ಎನೆ ತಿರುಮಲರಾಜನೈತಂದನುಬ್ಬಿನಲಿ (ಕಂನವಿ. ೩-೩೩) ; ತೀರಕ್ಕೆ ಬಂದ ಮೇಲೆ ತೆರೆಯ ಭಯವೇನು ? (ಗಾದೆ). ೨. ಸುಕ್ಕು ; ಮಂಡಿಕೆ : ಜರೆಯಿಂದಂ ಪುರ್ಬು ಜೋಲಲ್ತೆರೆ ತರತರದಿಂದುಣ್ಮಿ ಪೊಣ್ಮಲ್ಕೆ (ಕಾದಂಪೂ. ೦೬೫) ; ನೆರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡು ಹೋಗದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೦೬೧) ; ಕಯ್ಯ ಕೊಡೆಯಿಂ ಮಯ್ಯ ತೆರೆಯಿಂ ಜೋಲ್ವ ಪುರ್ಬಿಂ . . . ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ನಂಬಿರ. ೬-೨೩) ; ನರೆ ತೆರೆಗಳಿಡಿದಡರಿ ತನು ಜರ್ಜರಿತವಾಗಿಯನೇಕ ದಿವದಲಿ ಹಿರಿಯರೆಂದೆನಿಸಿದರೆ ಹಿರಿಯರೆ (ಪ್ರಭುಲೀ. ೧೭-೧೮). ೩. ಪರದೆ; ಜವನಿಕೆ; ಮುಂಸುಕು: "ಅಪಟೀ, ಕಾಂಡಪಟಃ, ಪ್ರತಿಸೀರಾ, ಯವನಿಕಾ, ತಿರಸ್ಕರಿಣೀ – ಈ (೫) ತೆರೆ" (ಹಲಾಯು. ೫೨-೧೫೪) ; ಕೆಮ್ಮುಗಿಲ ತೆರೆಯ ಪೊರೆಯೊಳ್ ನೆಗೆದು ಪೊಱಮಡುವ ವಿದ್ಯಾಧರಿಯಂತೆ . . . ಚೌಪಳಿಗೆಯ ಬಾಗಿಲೊಳ್ ನಿಂದು (ಪಂಪಭಾ. ೪-೩೯ ವ) ; ಅಸುರೇಂದ್ರಂ . . . ಅಂಬರದ ನಿಱಿಮುಗಿಲ ತೆರೆಗಳ ಪೊರೆಯೊಳಗಣ ನಿಜ

ವಿಮಾನದೊಳಗಂ ಪೊಕ್ಕಂ (ಶಾಂತಿಪು. ೮-೩೨) : ರವಿ ಬಂದನಸ್ತಾಚಲಕ್ಕ್ಕ ದಯಕಾಲಕ್ಕೆ ಸುತ್ತಿದ ಕರಿಯ ತೆರೆಯೊ ಎನಿಸಿ (ಸಿದ್ಧರಾ. ೧-೫೪) : ಗುರು ಕಾರುಣ್ಯಮುಹೂರ್ತಕ್ಕೆ ಜನನಮರಣಂಗಳೆಂಬ ತೆರೆಯರ್ ಪಿಡಿದ ಸಂಸಾರದ ತೆರೆ ಸರಿಯೆ (ಬಸರ. ೪-೧೦೨) ; ತೆರೆಯ ಹಿಡಿದುದು ಮಱವೆ ಸಮ್ಯಜ್ಞಾನ ದೀಧಿತಿಗೆ (ಕುಮಾ.ದ್ರೋ. ೧೮-೬೦) ; ತೆರೆಯ ಹಿಂದೆ ನಾನು ಅವಳ ಅಪೂರ್ವ ನೃತ್ಯವನ್ನು ನೋಡುತ್ತಿದ್ದೆ (ಬಾಣಅ. ೮೯); ಅತಿಪ್ರಚ್ಛನ್ನ ಪಟ ದೇಹ ಸುರ್ಕುರ ತೆರೆಯು (ಶಬ್ದಮಂ. ೧೧೭). 'ತೆರೆವಿಡಿ' ಪರಾ. ೪. (ಪ್ರಕಾಶಗ್ರಾಹಿಯಾದ) ಕಣ್ಣಿನ ಪೊರೆ ; ದೃಷ್ಟಿಪಟಲ : ತೆರೆಯ ಮೇಲೆ ಬಿಂಬವು ಬೀಳಲು, ಆ ಅನುಭವವನ್ನು ಅಲ್ಲಿರುವ ಸೂಕ್ಷ್ಮ ನರಗಳು ಮಿದುಳಿಗೆ ತಿಳಿಸುವುವು (ಬಾಲಪ್ರ. I, ೪೮೪). ೫. ಒಂದು ಬಗೆಯ ಕಣ್ಣಿನ ರೋಗ ; ಕಣ್ಣಿನ ಪೊರೆ : ಪೂವರಸೆ ತೆರೆಯೆಂಬ ಪಲ ವಕ್ಷಿರೋಗವುಂ ಕಳೆಗುಂ (ಅಶ್ವಶಾ. ೧೫-೧೫) ೬. ಬೇಟೆಗಾರರು ಉಪ ಯೋಗಿಸುವ ಒಂದು ಬಗೆಯ ಸಾಧನ ; ಮುಸುಕಿನ ಆಕಾರದಲ್ಲಿ ಮಾಡಿರುವ ಬಲೆ : "ಪಟಹಂ = ಬೇಂಟೆಯ ತೆರೆ" (ಶಮದ. ಪರಿ. ೧); ತೆರೆಯ ಸರಳಿಸುವೆರಳೆ ಬಲು ನಾಯ ಬಾಯಿಂದ ಮುರುಚಿ ಕೊಂಡೋಡುವ ಮೊಲಂ (ಸೋಮಚ. ೩-೭) ; ತೆರೆಯ ತೋಹಿನ ಮೇಹಿನ ನೀರ ಬೇಂಟೆಯುರ್ವರೆಗಳನೀಕ್ಷಿಸುತವರು (ಅನಂಚ. ೧೭-೧೫). 'ತೆರೆವೇಂಟೆ' ಪರಾ. ೭. ಛಾಯಾಚಿತ್ರಪ್ರದರ್ಶನಕ್ಕಾಗಿ ಬಳಸುವ ಬಿಳಿಯ ಪರದೆ ; ಸಿನಿಮಾದಲ್ಲಿ ಚಿತ್ರವನ್ನು ಮೂಡಿಸುವ ಪಟ ; ರಜತಪರದೆ : ಹೆಚ್ಚು ಮಂದಿ ನಟನಟಿಯರನ್ನು ಏಕಕಾಲದಲ್ಲಿ ತೆರೆಯ ಮೇಲೆ ಅವರಿಗೆ ತರುವುದು ಸಾಧ್ಯವೇ ಇಲ್ಲ (ನಾಡಿಗೇ. ೬೧).

**ತೆರೆಯ ಊಳಿಗ** = ಪರದೆಯನ್ನು ಹಿಡಿಯುವ ಸೇವೆ : ಅರಮನೆ ಯಲ್ಲಿ ಪ್ರತಿದಿನದಲ್ಲಿಯೂ ನಡೆಯುವಂತೆ ಕಟ್ಟು ಮಾಡಿದ ಊಳಿಗಗಳ ವಿವರ . . . ಬೀಸಣಿಗೆಯ ಊಳಿಗ, ತೆರೆಯ ಊಳಿಗ . . . ಚಾವಡಿ ಕಾವಲು ಊಳಿಗ (ಚಾಮುವಂ. ೪೫). **ತೆರೆಯ ಸೀರೆ** = ಅಂತಃಪಟ : ತೆರೆಯ ಸೀರೆ ಚನ್ನೆಯರೊಲಿದು ಕಟ್ಟಿದರು (ಅಂಜಚ. ೪-೪೦) : ವೇದಿಕಾಗ್ರದೊಳ್ ತೆರೆಯ ಸೀರೆಯಂ ಪಿಡಿದು ವರನಂ ಕನ್ನಿಕೆಯಂ ಇಕ್ಕೆಲದೊಳಿರಿಸಿ (ಧರ್ಮಪ. ೭-೫ ವ). 'ತೆರೆಸೀರೆ' ಪರಾ.

[ ದೇ.॥ ತಮಿ. ತಿರೈ ; ಮಲ. ತಿರ ; ತುಳು. ಸೆರೆ ; ತೆಲು. ತೆರ ]

**ತೆರೆಗಟ್ಟು** (ಕ್ರಿ). ನಿರಿಗೆಗಳಿಂದ ಕೂಡಿರು ; ಪದರ ಪದರವಾಗಿರು : ಮಿಱುಮಿಱನಾದ ಮೈ ಹೊಳಹಿಂದ ತೆರೆಗಟ್ಟಿ ನಿಱಿದೇಳ್ವ ಹೊಂಗಾಸೆ ಯಿಂದ . . . ಬಯಲ್ಗೊಱೆ ಹೊಳೆವಂತೆ ಹೊಳೆವರು (ಭರತ. ೧೩-೧೧೦).

[ ತೆರೆ$_4$ + ಕಟ್ಟು$_1$ ]

**ತೆರೆಗಣ್ಣು** (ನಾ). ಬಿಟ್ಟಿರುವ ಕಣ್ಣು ;ಬಿಡುಗಣ್ಣು : ತೆರೆಗಣ್ಣಾಗಿ ನೋಡು ತಿರೆ, ಗುರುತಿಸಿದೆನಯ್ ಪಿತನನು (ಶ್ರೀರಾಮಾ. ೧೧೪-೧೧೭) : ಅವನ್ನೆಲ್ಲ ತೆರೆಗಣ್ಣಿನಿಂದ ನೋಡಲು ಕಲಿತಿದ್ದಾನೆ (ಸ್ವಪ್ನಹೊ. ೨೧೨).

[ ತೆರೆ$_1$ (<ತೆಱೆ$_1$) + ಕಣ್ಣು (< ಕಣ್) ]

**ತೆರೆಗುರು** 'ತೆಱೆಗಯ್' ನೋ.

**ತೆರೆಗೂಡು$_1$** (ಕ್ರಿ). ಅಲೆಗಳಿಂದ ಕೂಡಿರು,-ತುಂಬಿರು : ದೇವಗಂಗಾನದಿ ಗಗನಗಾಮಿನಿಯಾದ ಭಾವವ ನೋಡಬೇಕೆನುತ ಭಾವಿಸಿ ತೆರೆಗೂಡಿ ಕಾವೇರಿ ನೆಱೆ ಗಗನಾವಲಂಬಿತೆಯಾಗಿಹಳು (ಕಂನವಿ. ೫-೪೪).

[ ತೆರೆ$_4$ + ಕೂಡು$_1$ ]

**ತೆರೆಗೂಡು$_2$** (ನಾ). ಒಳಗಿರುವುದು ಕಾಣುವಂತಿರುವ ಗೂಡು,- ಕೋಶ : ದಿಂಡುಗಳು ಆವರಿಸಿದ್ದರೆ ಆವರಣಗಳು (Closed Cells) ; ಗೂಡು ರೆಕ್ಕೆ ಅಂಚಿನವರೆಗೂ ಇದ್ದರೆ ತೆರೆಗೂಡುಗಳು (Open Cells) (ಕೀಟವಿ. ೧೯). [ ತೆರೆ$_1$ (<ತೆಱೆ$_1$) + ಗೂಡು ]

**ತೆರೆಗೆಯ್ಸು** (ಕ್ರಿ). ಪರದೆಯನ್ನು ಹಾಕಿಸು ; ಮರೆಮಾಡಿಸು : ವೃಷ ಭೇಂದ್ರನಂ ಕರೆಯಲ್ಕೆಂದದೆಳಸಿ ತೆರೆಗೆಯ್ಸಿ ಬಸವಂ . . . ಅದಱ ಮುಱೆ ಯೊಳಗಿರ್ದಂ (ವೃಷವಿ. ೪೧-೫). [ ತೆರೆ$_4$ + ಕೆಯ್ಸು ]

**ತೆರೆಗೈ** 'ತೆಱೆಗಯ್' ನೋ.

**ತೆರೆಗೊನೆ** (ನಾ). ಅಲೆಯಮೇಲ್ಭಾಗ,-ನೆತ್ತಿ,-ತುಂದಿ: ಎಲರಲೆಪದಿನೊಗೆದ ತೆರೆಗೊನೆ[ಪಾಠಾಂ. ಮೇಗೊನೆ]ಯ ತೊರ್ಪನಿಯ ತುಂತುಱುಗಳಿಂ ಮುಸಗುವ ಮುಂಜಿನೊಳಂ ಅಂಜದೆ ಪೊಕ್ಕು (ಕಾದಂಪೂ. ೧೧೭) ; ನೀರ್ವಾನಸಂ ಮೆಲ್ಲು ಬಿಸುಡೆ ಪಸರಿಸುವ ತೆರೆಗೊನೆಯೊಳ್ ತೇಂಕಿ ಬರ್ಪ ಜಳಮೃಣಾಳನಾಳಮಂ ಜಳವ್ಯಾಳವೆಂದು ಕೆಲದ ಬಿಲದಿಂ ಪಿಡಿಯಲೆಂದು ಧೀಂಕಿಡುವ ವಿಷಾಪಹಾರಶಾಲೂರಜಾಲಂಗಳ್ (ಚಂದ್ರಪು. ೫-೪೦ ವ) ; ತೆರೆಗೊನೆಯೊಳ್ ತೆರಳ್ದು ನಿಱಿಗಟ್ಟಿದ ಕತ್ತುರಿಯೊಳ್ಗಸಱ್ . . . ಮನಕ್ಕೆ ಬಂದಿರೆ (ವರ್ಧಪು. ೪-೭೩). [ ತೆರೆ$_4$ + ಕೊನೆ$_2$ ]

**ತೆರೆಗೊರಳು** (ನಾ). ತೆರೆದ ಕೊರಳು ; ಮುಕ್ತಕಂಠ: ಈ ಗೀತಪದ್ಧತಿ ಶಕ್ತಿಯುತವಾದದ್ದು, ಹಾಗೆಯೇ ಗಟ್ಟಿಯಾಗಿ . . . ತೆರೆಗೊರಳಿನಿಂದ ಹಾಡ ಬೇಕಾದುದು (ಯಕ್ಷಬ. ೭೭). [ತೆರೆ$_1$ (<ತೆಱೆ$_1$)+ಕೊರಳು (<ಕೊರಲ್)]

**ತೆರೆಗೊಳ್** (ಕ್ರಿ). ೧. ತರಂಗಗಳಿಂದ ಕೂಡಿರು ; ಅಲೆಅಲೆಯಾಗು : ಪರಿಕಲಿಸಿ ಕಲಸಿ ಕಪ್ಪುರದ ರಜಂ ಕುಂಕುಮದ ರಜಂ ಮೃಗೋದ್ಭವರಜ ಮೇಂ ತೆರೆಗೊಂಡುವೊ ಸಿತಚಾಮರಮರುದಭಿಹತಿಯಿಂದಮಾ ಸಭಾ ಕುಟ್ಟಿಮದೊಳ್ (ಜಗವಿ. ೧೧-೬೫). ೨. ಮಡಿಕೆಯಾಗು; ನಿರಿಗೆಗಟ್ಟು; ಸುಕ್ಕುಗಟ್ಟು : ತೆರೆಗೊಂಡ ಮೊಗಂ ನಡುಗುತ್ತುಮಿರ್ಪ ಕೈ . . . ಸೆರೆ ಗೊಂಡ ಕಾಲ್ಗಳಿಂ ಮನಕೆ ವಿರಕ್ತಿಯುಂ ಪಡೆವ ಮುಪ್ಪಿನ ಪಾರ್ವನ ದೊರ್ಬನೊಪ್ಪಿದಂ (ಪುಣ್ಯಾಸ. ೩-೮೦) ; ನೆರೆದಲೆಗೆ ಮುಸಿಡೊಡೆದು ತೆರೆಗೊಂಡೊಡಲನು ಕತ್ತಲೆಯ ಮುಱೆಗೆಯ್ದು (ಜಿಬಪು. ೧೦-೬೬).

[ ತೆರೆ$_4$ + ಕೊಳ್$_1$ ]

**ತೆರೆಚಿಮ್ಮಿಸು** (ಕ್ರಿ). ಅಲೆಯನ್ನು ಹೊಮ್ಮಿಸು,-ಉಂಟುಮಾಡು : ಈಗ ಚಕಾರ ಎತ್ತದ ಈ 'ಮಹಾಪ್ರಾಣಿ' ಆಮೇಲೆ ಒಂಟಿಯಾಗಿ ತೆರೆಚಿಮ್ಮಿಸುವ ಅಳಲ ಮೊರೆ (ಬಿದ್ಧಪ್ರ. IV, ೩೬೮೪). [ ತೆರೆ$_4$ + ಚಿಮ್ಮಿಸು ]

**ತೆರೆದುಱುಗಲ್** (ನಾ). ಅಲೆಗಳ ಸಮೂಹ,-ಗುಂಪು: ಜಲಚರಂಗಳ ಪೊಳಪಿನೆಸಕದಿಂ ಮುಸಗಿ ಮೊಱೆವ ತೆರೆದುಱುಗಲ್ (ಕಾದಂಪೂ. ೧೧೭) ; ಮಿಥ್ಯಾತ್ವವಿಷಜಳಧಿಯ ತೆರೆದುಱುಗಲೆನಿಸಿ ಪೊಱಪೊಣ್ಮೆದಸಂಖ್ಯಾತ ಲೋಕಮಾತ್ರ ದುಃಪರಿಣಾಮಂಗಳುಂ (ವರ್ಧಪು. ೧೧-೫೯ ವ) ; ಪೊಳೆಪು ವಡೆದ ಪಾಲ್ಗಡಲ ತೆರೆದುಱುಗಲೊಳ್ ಪವಡಿಸುವ ಸಿರಿಯುಂ ಪೋಲ್ತಿ ರ್ಪಳ್ (ಕಬ್ಬಿಕಾ. ೩೧೫). [ ತೆರೆ$_4$ + ತುಱುಗಲ್ ( <ತುಱುಂಗಲ್) ]

**ತೆರೆದೆಗೆ** (ಕ್ರಿ). ೧. ಪರದೆಯನ್ನು ಓಸರಿಸು,-ಸರಿಸು : ನಾಂದಿಯನೋದಿ ಸೂತ್ರಧಾರಕಂ ಭೋಂಕನೆ ತೆರೆದೆಗೆಯೆ (ರಾಜಶೇ. ೫-೧೯ ವ) ; ತೆರೆದೆಗೆಯ ಲಲರಿಚಂ ಬೇಡೆಂಬ ಬಗೆಗೆ ಪೊರೆಯಲ್ಲಿ ? (ಕಾಲೂರ. ೧೮೮-೪೨೮). ೨. ಅಂತಃಪಟವನ್ನು ಎತ್ತು : ಅಂತು ತೆರೆದೆಗೆಯಲೊರ್ಬರೊರ್ಬರ ಮೊಗಮಂ ನೋಟ್ಟಿ ಸಮಯದೊಳ್ ಹೇಮದತ್ತಂ ಕೈನೀರೆಱೆಯೆ (ದಶಕು. ೪-೧೨೪ ವ). [ ತೆರೆ$_4$ + ತೆಗೆ$_1$ ]

**ತೆರೆದೆಗೆಸು** (ಕ್ರಿ). ೧. ಪರದೆಯನ್ನು ಓಸರಿಸು,-ಸರಿಸು: ೨.=ತೆರೆದೆಗೆ ೨ ಸುಮುಹೂರ್ತಮಂ ಕೇಳ್ದು ತೆರೆದೆಗೆಸಿ ಭೂದಿವಿಜರ ನಲ್ವರಕೆವೆತ್ತು . . . ಧಾರೆಯನೆಱೆದನು (ಜೈಮಿಭಾ. ೩೦-೧೬). 

[ ತೆರೆ$_4$ + ತಗೆಸು ( ⋞ ತೆಗೆಯಿಸು ) ]

**ತೆರೆದೊಂಗಲ್** (ನಾ). = ತೆರೆದುಱುಗಲ್ : ತೆರೆದೊಂಗಲ್ಪೊರೆದಿರ್ದ ತಣ್ಣೆ ಲರ್ಗಳಿಂ . . . ಮೆಲ್ಪುಣ್ಣುರಂಗೆಯ್ವ ಹಂಸ ರಥಾಂಗಂಗಳಿಂ (ಕಾದಂಉ. ೩೫೭). [ ತೆರೆ$_4$ + ತೊಂಗಲ್ ]

**ತೆರೆದೊಗಲು** (ನಾ). ಸುಕ್ಕುಗಟ್ಟಿದ ಚರ್ಮ,_ತೊಗಲು: ಬಟ್ಟಹೊಟ್ಟೆಯ ತೆರೆದೊಗಲ ಜೀರ್ಣ್ಣಂಗದ ಗಡವ ಗರುಡಿಯ ನಿನ್ನ ಜಗಜಟ್ಟಿತನವನ್ನು ಎಕ್ಕತುಳದಿಂದ ಸವಿಗೊಳ್ಳಬೇಕೆಂಬ ರಣರಣಿಕೆಯು ನನ್ನನ್ನೀ ವೀರತಾಣ್ಡವ ದಿಂದಾಡಿಸುತ್ತಿದೆ (ಮಂತ್ರಶ. ೬೩-೧೨).

[ ತೆರೆ$_4$ + ತೊಗಲು (<ತೋಲ್$_1$ ) ]

**ತೆರೆದೋಱು** (ಕ್ರಿ). ಅಲೆಗಳನ್ನು ಕಾಣಿಸು,_ತೋರು; ಚಂಚಲವಾಗು: ಕಲೆ ಇಲ್ಲದ ಮೌಕ್ತಿಕದಂತೆ ಜರವಿಲ್ಲದ ರತ್ನದಂತೆ ತೆರೆದೋಱದ ಅಂಬುಧಿಯಂತೆ ಒಡಲಳಿದವಂಗೆ ನೆಱೆ ಅಱಿದವಂಗೆ . . . ಬೇಱೊಂದೆಡೆ ಇಲ್ಲ (ಮೋಳಿಮಾ. ೧೧೧-೪೩೮). [ ತೆರೆ$_4$ + ತೋಱು ]

**ತೆರೆಪೊಡೆ** (ನಾ). ಮಡಿಲು; ಉಡಿ: "ತೆರೆಪೊಡೆಯೊಂದುಂ ಸೋಗಿಲೆಂದುಂ ಮಡಿಲ್" (ಕಶಸಾ. ೬೩-೩೯೬); "ತೆರೆಪೊಡೆಯೆನೆ ಮಡಿಲ್" (ಕಬ್ಬಿಕ್ಕೆ. ೭೫).

[ ತೆರೆ$_4$ + ಪೊಡೆ$_3$ ]

**ತೆರೆಬಟ್ಟೆ** (ನಾ). ಜವನಿಕೆ; ಪರದೆ: "ಪ್ರತಿಸೀರಾ, ಯವನಿಕಾ, ತಿರಸ್ಕರಣೀ_ತಿ ತೆರೆಬಟ್ಟೆ, ಫರದ" (ಸಿದ್ಧಾಂತಿ. ೧೭೮).

[ ತೆರೆ$_4$ + ಬಟ್ಟೆ$_2$ ]

**ತೆರೆಬಾಯಿ** 'ತೆಱೆವಾಯ್' ನೋ.

**ತೆರೆಬೀಳು** (ಕ್ರಿ). ೧. ಪರದೆ ಕೆಳಕ್ಕೆ ಬರು: ದೃಶ್ಯ ಮುಗಿಯುವ ಮೊದಲೇ ತೆರೆಬಿತ್ತು (ರೂಢಿ). ೨. (ಆಲಂ) ಮುಗಿ; ಪೂರೈಸು: ಅಲ್ಲಿಗೆ ಆ ಕೆಲಸಕ್ಕೆ ತೆರೆಬಿದ್ದ ಹಾಗೆಯೇ (ರೂಢಿ).

[ ತೆರೆ$_4$ + ಬೀಳು$_1$ (<ಬೀೞ್$_1$) ]

**ತೆರೆಮಗುಳ್ಚು** (ಕ್ರಿ). ಅಲೆಯನ್ನು ಹೊಮ್ಮಿಸು,_ಅಪ್ಪಳಿಸು: ಕಾಳಜಲಶರಧಿ, ಮೆಯ್ಯಮುರಿಯುವ ತೆರದಿ ತೆರೆಮಗುಳ್ಚುತೆ, ಭರದಿ ಮಲೆತುದು, ಮಹೇಂದ್ರ ಶಿಖರಂಗಳುಂ ನಾಣ್ಚಿದರಿ ಗೋಣ್ಸುಳ್ಗುವೋಲ್ (ಶ್ರೀರಾಮಾ. ೫೮೭-೬೫). [ ತೆರೆ$_4$ + ಮಗುಳ್ಚು (<ಮಗುಟ್ಚು) ]

**ತೆರೆಮರೆ** 'ತೆರೆಮಱೆ' ನೋ.

**ತೆರೆಮಸಗು** (ಕ್ರಿ). ೧. ಅಲೆಯು ಉಂಟಾಗು,_ಏಳು,-ಉಕ್ಕೇರು: ಎಸೆವುದು ವಳಿತ್ರಯಂಗಳಿನೆಸೆವಸಿಯಳ ತೆಳ್ಪಸಿಱ್ . . . ತೆರೆಮಸಗಿದ ಲಾವಣ್ಯರಸದ ಪೊನಲೆಂಬಿನೆಗಂ (ಮಲ್ಲಿಪು. ೩-೬೬); ಕವಲಿಱಿದ ಕುಂತಳಂ ಗಂಗಾಧರನೊಳ್ ಪುರುಡಿಸಿ ತೆರೆಮಸಗಿದ ಕಾಳಿಂದೀನದಿಯಂ ಶಿ[ ರೋ ]ಗ್ರುದೊಳ್ ಧರಿಸಿದಾತಿರ್ಪುದು (ನಂಬಿರ. ೪-೨೪); ಸಾಂದ್ರಚಂದ್ರಿಕೆಯಿಂದಾನಂದಸುಧಾಬ್ಧಿ ತೆರೆಮಸಗಿದಂತೆ ಪಲ್ಸೊಳಗು ಪಸರಿಸೆ (ರಾಜಶೇ. ೩-೮೦ ವ). ೨. (ಆಲಂ) ಹೆಚ್ಚಾಗು; ಅಧಿಕವಾಗು; ಅತಿಶಯವಾಗು: ಆತ್ಮಜಮುಖಸರೋಜವಮಂ ಮೋಹರಸಂ ತೆರೆಮಸಗೆ ನೋಟ್ಟಿ ಜನನಿಯ ಕರಿಯಾಲಿಗಳೆಂಬ ತುಂಬಿಗಳ್ ಧನ್ಯಂಗಳ್ (ಮಲ್ಲಿಪು. ೩-೧೨೦); ತೆರೆಮಸಗೆ ಕಾಂತಿ ನಾಭೀಸರೋಜವಮಲ್ಲಾಡೆ (ಗಿರಿಕ. ೩-೪೪); ದಳ್ಳುರಿದುಱುಗಲನು ತನಬಿಗಿದು ಭೀಮನ ರಥದ ಸುತ್ತಲು ಸೂಸಿ ತೆರೆಮಸಗೆ . . . ಉರವಣಿಸಿತಮಳಾಸ್ತ್ರ (ಕುಮಾ.ದ್ರೋ. ೧೯-೪೭); ಸಿರಿವೆತ್ತ ಮೆಲ್ಲಡಿಯ ಚೆಲ್ವಿಕೆಗೆ ಮಂಗಳಂ ತೆರೆಮಸಗುವುಗುರ ಕಾಂತಿಗೆ ಮಂಗಳಂ (ಗೀತಗೋ. ೩೪-೪); ಮರುಳ್ಗಿ ಧೂಪಂದೋಱುತಾ ಮನಃಕ್ಷೋಭಂ ತೆರೆಮಸಗೆ ಊದಿದೆನ್ (ಅಶ್ವತ್ಥಾ. ೩-೪೮). [ ತೆರೆ$_4$ + ಮಸಗು$_1$ ]

**ತೆರೆಮಱೆ,ತೆರೆಮರೆ** (ನಾ). ೧. ಪರದೆಯ ಹಿಂಭಾಗ: ತೆರೆಮಱೆಯೊಳಿರ್ದವಂ ನುಡಿಯ ಹಾಹೆಗಳುಲಿದೊಲಱಿಸುವುದು ಜಗದೊಳು (ನಂದಿಮಾ. ೧-೧೮). ೨. ಮುಚ್ಚುಮರೆ; ಗುಟ್ಟು; ರಹಸ್ಯ: ಪ್ರಾಣಕ್ಕೆ ಪ್ರಾಣ ಸಮುದರುಶನವಾಗಿದ್ದವರಲ್ಲಿ ತೆರೆಮಱೆ ಎಂಬುದಿಲ್ಲ ನೋಡಯ್ಯ (ಶೂನ್ಯಸಂ. ೯೨-೩). **ತೆರೆಮರೆ:** ೧. ಅವಲಾಂಗೆ ತೆರೆಮರೆಯಲ್ಲಿ ತಾಂ ಕುಳಿತು (ಸಾಗಂಧಿ. ೮೨-೪). 'ಕಱೆಮಱೆ' ಪರಾ.

**ತೆರೆಮರೆಯ ಪದ್ಧತಿ** = ಬುರಕಿಯನ್ನು ಧರಿಸುವ ಪದ್ಧತಿ; ಘೋಷಾ ಪದ್ಧತಿ: ಈ ಕಾಲದಲ್ಲಿ ತೆರೆಮರೆಯ ಪದ್ಧತಿ ಪ್ರಚಾರದಲ್ಲಿ ಬರುತ್ತಿತ್ತೆಂಬುದು . . . ತಿಳಿದು ಬರುತ್ತದೆ (ಕರ್ನಾಕ. ೧೩).

[ ತೆರೆ$_4$ + ಮಱೆ$_2$ ]

**ತೆರೆಮಾಲೆ** (ನಾ). ಅಲೆಗಳ ಮಾಲೆ,-ಸಾಲು: ಕೂಡೆ ಮಸಗಿತು ರಿಪುಚತುರ್ಬಲ ಜೋಡು ಮಾಡಿತು ಕಡಹದವರರು ಹೂಡಿದದ್ರಿಯು ನಂಬುಧಿಯ ತೆರೆಮಾಲೆ ಕವಿದಂತೆ (ಕುಮಾ.ದ್ರೋ. ೧೦-೨೯); ಶರಧಿಯ ತೆರೆಮಾಲೆಗಳಂತೆ ಖಾನರ ತುರಗದ ಘೌಜೇಱಿದುದು (ಕುಂರಾಸಾಂ. ೨೦-೨೪). [ ತೆರೆ$_4$ + ಮಾಲೆ ]

**ತೆರೆಮುಗಿಲ್, ತೆರೆಮುಗಿಲು** (ನಾ). ಅಲೆಅಲೆಯಾದ ಮೋಡ: ತೆರೆಮುಗಿಲ ಮಱೆಗೆ ನಲ್ಲಂ ಬರೆ ತೆಗೆದೆಳಸುವುದುಮೊಗೆವ ಸುಯ್ಯೊಲರ್ಗಳಿನಾನೆರೆದ ಮುಗಿಲ್ ಕರಗೆ ವಿಯಚ್ಚರಿಗೇಂ ಕಲಿಸಿದುದೊ ಲಜ್ಜೆಯೊಳ್ ಕರಗುವುದಂ (ವರ್ಧಪು. ೫-೨೭); ತೆರೆಮುಗಿಲ ಬಱಿವಿಡಿದು ಭಾಸ್ಕರರಥ ಪರಿಪರಿವ ತೆಱದ (ಪಾರ್ಶ್ವಪು. ೧೦-೧೧೨); ತೆರೆಮುಗಿಲನಡರ್ವ ವಿದ್ಯಾಧರಿ (ಯಶೋಚ. ೪-೯). **ತೆರೆಮುಗಿಲು:** ದೊರೆಮುಗಿಲು ತೆರೆಮುಗಿಲು ನಿಡುಮೋಹರದ ಮುಗಿಲು (ತೊರರಾ. ೪-೬-೫). [ ತೆರೆ$_4$ + ಮುಗಿಲ್ ]

**ತೆರೆಮುಗಿಲು** 'ತೆರೆಮುಗಿಲ್' ನೋ.

**ತೆರೆಮುೞುಗು** (ಕ್ರಿ). ಅಲೆಯಲ್ಲಿ ಮುಳುಗು ನೆತ್ತಿಯುಮಿದುಳೊಡೆದುಣ್ಮುವ ನೆತ್ತರ ಧಾರೆಗಳ ತೀವೆ ತನ್ನಯ ಮುಖದೊಳ್ನೆತ್ತರನೆ ಕಾಱಿ ಕುರುಪತಿ ನೆತ್ತರ ಕಡಲೊಳಗೆ ತೇಂಕಿ ತೆರೆಮುೞುಗಿರ್ದಂ (ಗದಾಯು. ೯-೧೭). [ ತೆರೆ$_4$ + ಮುೞುಗು1 (< ಮುೞುಂಗು) ]

**ತೆರೆಯ** (ನಾ). ಪರದೆಯನ್ನು ಹಿಡಿಯುವವನು: ಜನನ ಮರಣಂಗಳೆಂಬ ತೆರೆಯರ್ ಪಿಡಿದ ಸಂಸಾರದ ತೆರೆ ಸರಿಯೆ (ಬಸರ. ೪-೧೦೨).

[ ತೆರೆ$_4$ + _ ಅ$_7$ ]

**ತೆರೆಯಾಡು** (ಕ್ರಿ). ಅಲೆಗಳ ಚಲನೆಯನ್ನು ಹೊಂದು: ಇರವಿನಲ್ಲಿ ಆ ತೆರವು ತುಂಬಿ ತೆರೆಯಾಡುವಂತೆ ಕಡಲು ಅರಿವಿನೊಂದು ಹೊಸಬರವಿಗಾಗಿ ಹಾತೊರೆಯುತಿಹುದು ಒಡಲು (ನಲಮು. ೩೬-೩). [ ತೆರೆ$_4$ + ಆಡು$_1$ ]

**ತೆರೆಯಿಸು** 'ತೆಱೆಯಿಸು' ನೋ.

**ತೆರೆಯುಲಿಪು** (ನಾ). ಅಲೆಗಳ ಧ್ವನಿ,_ಮೊರೆತ: ಪಲತೆಱದ ಪಱಿಯ ದನಿ ತೆರೆಯುಲಿಪೆನೆ ಪೊಕ್ಕತ್ತು ಕಟಕಮಂ ನೋಟ್ಟರ ಕಣ್ಣಲಸೆ ವಿಭೀಷಣವಾಹಿನಿ ಜಲನಿಧಿಯಂ ಬಂದು ಪುಗುವ ಕುಲವಾಹಿನಿವೋಲ್ (ಪಂರಾಮಾ. ೧೨-೮೦). [ ತೆರೆ$_4$ + ಉಲಿಪು ]

**ತೆರೆಯೇೞ್** (ಕ್ರಿ). ಅಲೆಯೇಳು; ಉಬ್ಬರ ಹೊಂದು: ಸಾಗರವಂ ಕೂಡೆ ತೆರಳ್ಚಿದಂ ತೊೞಸಿದಂ . . . ತೆರೆಯೇೞಲ್ ಕದಡಲ್ ಕೆಸರ್ಮಸಗಲಂತಾ ದೇವಕೀನಂದನಂ (ಜಗವಿ. ೭-೧೮). [ ತೆರೆ$_4$ + ಏೞ್$_1$ ]

**ತೆರೆಯೊಟ್ಟಿಲ್** (ನಾ).=ತೆರೆದುಱುಗಲ್: ತರುಣಿಯರಂಬುಕೇಳಿಗೆ ಲಸಜ್ಜಳವಂ ಪುಗುವಾಗಳೊರ್ಬರೊರ್ಬರ ನೆಟಿಲೊಂದನೇಕವಿಧದಿಂ ತೆರೆಯೊಟ್ಟಿಲೊಳೆಯ್ದೆ ತೋಱಲ್ (ದಶಕು. ೧೧-೮೭). [ ತೆರೆ$_4$ + ಒಟ್ಟಿಲ್ ]

**ತೆರೆವಂಕು** (ನಾ). ಅಲೆಯ ಡೊಂಕು,_ವಕ್ರತೆ: ಆಗಸದ ಬಾಗು, ಚಂದ್ರಮನ ಗುಂಡಿನ ನುಣ್ಪು, ಸಾಗರದ ತೆರೆವಂಕು ... ಈ ಸೃಷ್ಟಿಯಿಂ ನಮ್ಮೊಳಾಗಿಹುದು ರೂಪರುಚಿ (ಮಂಕುಕ. ೨೦೭). [ ತೆರೆ$_4$ + ವಂಕು$_2$ ]

**ತೆರೆವಳಿಗೆ** (ನಾ). ಗೌಸು; ಅವಕುಂಠನ: ಆ ಸಮರಸಂಭ್ರಮದೊಳ್ ಹೊರಜೆಯೊಳ್ ಕಾಲ್ಗೋದು ನಿಂದ ಮಂದರಾಚಲಧರನಗಲದೆಗೆದ ಮೊಗದ ಹರಿಗೆಯಿಂ ಮುಗಿಲ ತೆರೆವಳಿಗೆದೆ [ಪಾಠಾಂ. ತೆರವಳಿಗೆದೆ, ತೆರೆಯೊಳಿೂ]ಗೆದ ಬಱಸಿಡಿಲಂತೆಯುಂ (ಅನಂಪು. ೧೪-೬ ವ).

[ ತೆರೆ$_4$ + ವಳಿಗೆ$_2$ ]

**ತೆರೆವಾಯ್** 'ತೆಱೆವಾಯ್' ನೋ.

**ತೆರೆವಾಯಿ** 'ತೆಱೆವಾಯ್' ನೋ.

**ತೆರೆವಿಡಿ** (ಕ್ರಿ). ೧. ಅಲೆಗಳನ್ನು ಅನುಸರಿಸು,_ಹಿಂಬಾಲಿಸು : ಕಲುಷರ ಹಿತಂಗಳೆನಿಸುವ ಕೊಳದೊಳಗೆ . . . ಕಣ್ಗೊಳಿಪುವು ತೆರೆವಿಡಿದು ಪೊಳೆವ ರವಿಬಿಂಬಂಗಳ್ (ಕಾದಂಪೂ. ೩೧೯) ; ನಡುನೀರೊಳೊಗೆದ ನಳಿನವುಂ ಮುಳಿಯಲೆಳಸಿ ಮುಗುಳ್ದು ತೆರೆವಿಡಿದೀಸುವೆಳವೇಡಿತಿ (ರಾಜಶೇ. ೬-೨೪ ವ). ೨. ಅಂತಃಪಟವನ್ನು ಹಿಡಿ : ಜೋಯಿಸರ್ . . . ಅಚ್ಚದುಗುಲ ದಿಂದೆರೆವಿಡಿದರ್ (ಉದ್ಭಟ. ೮-೫೬) ; ಮೃದುಶುಭ್ರತೆಯಿಂ ಮೆಱೆದಿರ್ದ ಸೀರೆಯಿಂ ತೆರೆವಿಡಿದರ್ (ದಶಕು. ೪-೧೨೩) ; ನೆಟ್ಟನೆ ತೆರೆವಿಡಿದರು ಕ್ಷತ್ರ ವಿಧಿಯಿಂದೆ ಮೆಟ್ಟಕ್ಕಿಯು ಮೇಲೆ ನಿಲಿಸಿ (ಮೋಹತ. ೧೩-೬೮). ೩. ಮರೆ ಮಾಡು ; ಮುಚ್ಚು : ನಾರಿಯರು ಕಂಡರು ಸುಲಜ್ಜಾಭಾರದಲಿ ತಡಿಗಡಿಗೆ ಹಾಯಿದು ಸೀರೆಗಳ ತೆರೆವಿಡಿದರಂಗೋಪಾಂಗಲತೆಗಳಿಗೆ (ಕುಮ್ಯಾಅ.೧೧-೩೦). [ ತೆರೆ$_4$ + ಪಿಡಿ$_1$ ]

**ತೆರೆವಿಡು** (ಕ್ರಿ). ಪರದೆಯನ್ನು ಬಿಡು : ದೆಶೆಗೆ ತೆರೆವಿಡಲ್ದೋಮುದರೆ ಯಕ್ಕುಂ (ಮಂಗರಾ. ೬೧-೧೬). [ ತೆರೆ$_4$ + ಬಿಡು$_1$ ]

**ತೆರೆವೇಂಟೆ** (ನಾ). ಮುಸುಕಿನ ಆಕಾರದ ಬಲೆಯನ್ನು ಹಾಕಿ ಬೇಟೆ ಯಾಡುವಿಕೆ : ಕಂತು ವಸಂತರ್ ತೆರೆವೇಂಟೆಗಿಟ್ಟ ದುಗುಲಂ ಪರ್ವಿತ್ತು ಚಂದ್ರಾತಪಂ (ಅನಂಪು. ೭-೮೬). 'ಪಟವೇಂಟೆ' ಪರಾ. [ ತೆರೆ$_4$ + ಬೇಂಟೆ ]

**ತೆರೆವೊಯ್ಲು, ತೆರೆಹೊಯ್ಲು** (ನಾ). ಅಲೆಗಳ ಹೊಡೆತ : ಪರಿಖೆಯ ತೆರೆವೊಯ್ಲಿಂದಂ ತೆರಳ್ದು ತಡಿವಿಡಿದು ತಕ್ಕೆಗಟ್ಟಿದ ಪೊಂದಾವರೆಯ ರಜದಂತೆ (ಮಲ್ಲಿಪು. ೨-೬೪) ; ತೆರೆವೊಯ್ಲಿಂದಾದ ತುಂತುರ್ವನಿ ನಿಜತನುವಂ ತೀವಿ ನಿದ್ರಾಂಗನಾನಿರ್ಭರ ಸಂಭೋಗಾಂತ್ಯದೊಳ್ಪೊಣ್ಮಿದ ಬೆಮರ್ವನಿಯುಂ ಪೋಲೆ (ಜಗವಿ. ೧-೫೩) ; ಮರದುಱುಂಗಲ್ಗಿರದೆಱಗಿ ಮುಱಿವ ಕರಿಕರಕಂಜ ನೀರ್ವೊರ್ಕ್ಕು ನಡುಗುವಂತೆ ತೆರೆವೊಯ್ಲಿಂ ಕಂಪಿಪದಱ ಪಡಿನೆಳಲ್ ಪರಿರಂಜಿಸೆಯುಂ (ರಾಜಶೇ. ೬-೨೪ ವ) ; ಲಾಲಾಜಲದಿಂ ತೀವಿದ ಬಾಲೆಯ ಬೆಳರ್ಗೆಂಪನಾಂತ ಬಾಯ್ ಕಂಗೊಳಿಸಿತ್ತಾಲೋಕಿಸೆ ತೆರೆವೊಯ್ಲೊಳಕಾಱದ ಬಾಯ್ದೆರೆದ ಸಜಲ ಶುಕ್ತಿಪುಟಂಬೊಲ್ (ದಮಸ್ಕ. ೦-೪೨). **ತೆರೆಹೊಯ್ಲು :** ಲವಣಾಬ್ಧಿ . . . ಬಡವರಿಗೆ ಬದುಕಿಲ್ಲವೆಂದಳ್ಳಿ ಹೊಯ್ವಂತೆ ತೆರೆಹೊಯ್ಲಿನಿಂ ಮೊರೆದುದು (ನವಮೋ. ೨-೯). [ ತೆರೆ$_4$ + ಪೊಯ್ಲು ]

**ತೆರೆಸೀರೆ** (ನಾ). ೧. ಪರದೆಯಾಗಿ ಉಪಯೋಗಿಸುವ ವಸ್ತ್ರ ; ಕಾಂಡಪಟ ; ಜವನಿಕೆ : "ಕಂಡವಡಂ ತೆರೆಸೀರೆ" (ಕರ್ಣಾನಿ. ೪) ; ಅರುಣ ಮಣಿಭೂಷಣಂಗಳ ಕಿರಣಂಗಳ್ ಪಸರಿಸಲ್ಕೆ ಮಣಿಭಿತ್ತಿಗಳಾಧರಿಸು ತ್ತಿರ್ದವು ಕೆಂಪಿನ ತೆರೆಸೀರೆಗಳೆಂಬ ಶಂಕೆಯುಂ ಭರದಿಂದಂ (ಬಾಧಪು. ೫-೯೫); ಹೊಂಬಳಿಯ ತೆರೆಸೀರೆಗಳ . . . ಸುವರ್ಣಾವಳಿಯ ದಿಂಡುಗಳೊಟ್ಟದವು ಬಂಡಿಗಳ ಜವ ಜಡಿಯೆ (ಕುಮ್ಯಾಗ. ೪-೦೪) ; ಸುತ್ತುವಳಸಿನ ತೆರೆಸೀರೆ ಕಣ್ಗೆ ರಂಜಿಸಿತು (ಮೋಹತ. ೩೬-೬೯) ; ಹೊಳೆವ ದೀಪಂ ಸೋಂಕಿ ತೆರೆಸೀರೆ ಬೇವುತಿರಲು (ಚಬಪು. ೬೨-೫೩); "ತೆರೆ" ಯಾಗಿ ಉಪಯೋಗಿಸುವ ಸೀರೆ ( = ವಸ್ತ್ರ ) ಇದು. ಬಯಲಾಟಗಳಲ್ಲಿ ವೇಷವು ಮೊದಲ ಬಾರಿ ರಂಗಸ್ಥಳಕ್ಕೆ ಬರುವಾಗ ಕೆಲವು ವೇಷಗಳಿಗೆ "ತೆರೆಸೀರೆ" ಹಿಡಿವ ಕ್ರಮವಿದೆ (ಸರಶೋಧ. ೧೬೮). ೨. ಬೇಟೆಯಲ್ಲಿ ಪ್ರಾಣಿಗಳನ್ನು ಹಿಡಿಯಲು ಉಪಯೋಗಿಸುವ ಒಂದು ಬಗೆಯ ಬಟ್ಟೆ : ಹೆಬ್ಬಲೆ ತೆರೆಸೀರೆ ಕಾಲ್ಕಣ್ಣೆ ಬೆಳ್ಳಾರ ಹಬ್ಬುಗೆವಲೆಗಳ . . . ಹೊತ್ತು ನಡೆದರಂದಬ್ಬರ ಮುಸಗೆ ಶಬರರು (ಕುರಾಸಾಂ. ೨೬-೪೩). [ ತೆರೆ$_4$ + ಸೀರೆ$_2$ ]

**ತೆರೆಸು** 'ತೆಱೆಯಿಸು' ನೋ.

**ತೆರೆಸುತ್ತು$_1$** (ಕ್ರಿ). ಪರದೆಯಿಂದ ಸುತ್ತುಗಟ್ಟು,_ಆವರಿಸು : ತನ್ನ ಕೇಸಡಿಯ ಕೆಂಪಿನೊಳುಜ್ಜ್ವಲಚಿತ್ರಭಿತ್ತಿನಿಸ್ಸಾಳ ನಿಜಮೌಕ್ತಿಕಾಭರಣ ದೀಧಿತಿಯಿಂ ತೆರೆಸುತ್ತಿದಂತೆ ಕಣ್ಗೊಳಿಸೆ (ಮಲ್ಲಿಪು. ೩-೯೬) ; ತುರ ಗಾವಳಿಯಿಂ ತೆರೆಸುತ್ತಿದಂತೆ ಕಾಯಾರವ ಬೀಸಿದಂತೆ (ಎಕ. XI, ಚಿತ್ರದು. ೧-೨೨ ; 1319). [ ತೆರೆ$_4$ + ಸುತ್ತು$_1$ ]

**ತೆರೆಸುತ್ತು$_2$** (ನಾ). ಅಲೆ ಅಲೆಯಾಗಿ ಸುತ್ತಿಕೊಂಡಿರುವುದು : ಎಳವಾಱೆಯ ತಿರುಳೆಲೆಯ ತೆರೆಸುತ್ತಿನೊಳಮೊಸೆವ ಪಸುರ್ವಂದರೊಳಗೆ (ಲೀಲಾವ. ೧೧-೫೦ ವ) ; ಅದಿರ್ಮುತ್ತೆಯ ಸುತ್ತುಗಳೆ ತೆರೆಸುತ್ತುಗಳಾಗೆ ಯುಂ (ಚಂದ್ರಪು. ೬-೮೭ ವ). [ ತೆರೆ$_4$ + ಸುತ್ತು$_2$ ]

**ತೆರೆಸೇಲೆ** (ನಾ). = ತೆರೆಸೀರೆ ೧ : ತೆರೆಸೇಲೆ ಮುಱಿಯೊಳಾ ತೆಱೆದ ಗವಾಕ್ಷ ದೊಳೊರೆದು ನೋಡುತ ಬ್ರಾಹ್ಮಜನವ ಅರಸಿಯರಿದ್ದರು . . . ಸಾಲಾಗಿ (ಭರಜ. ೧೨-೩೨). [ ತೆರೆ$_4$ + ಸೇಲೆ ]

**ತೆರೆಹೊಯ್ಲು** 'ತೆರೆವೊಯ್ಲು' ನೋ.

**ತೆರ್ಕಯಿಸು** 'ತಟ್ಕೈಸು' ನೋ.

**ತೆರ್ಕೆ** 'ತಟ್ಕೆ' ನೋ.

**ತೆರ್ಕೆಗಡಲ್** (ನಾ), ಇನ್ನೊಂದು ಸಮುದ್ರದೊಡನೆ ಸೇರಿದ ಸಮುದ್ರ; ಒಟ್ಟುಗೂಡಿದ ಬೇರೆಬೇರೆ ಕಡಲುಗಳು : ಅದಱ ಕರ್ಣಾಟಮರದ ಝಲ್ಲಿಯಂತೆ ಜಲ್ಲೆನೊಳ್ಕಿ ಧಾರೆಗೆದಱಿ ಪೇರ್ಸಿ ಸೂಸುವುಭಯಕಟತಟದ ಸೊರ್ಕುಕೆದಡಿನ ತೆರ್ಕೆಗಡಲ್ಗೊಳ್ಕೈಸಿ ಜಗಮನಿಕ್ಕಲೆಂದು ಮಹಾವ್ರತಮ ನೆತ್ತಿಕೊಂಡ ಕಲ್ಪಾಂತಕಾಳನ ಕೂರ್ಚಜಾಳಂ ಪರ್ಚಿಕ್ಕಿ ಬೇಱೆ ಬೆರ್ಚಿ ದಂತಿರ್ದಪುದು (ಅನಂಪು. ೧೩-೨೦ ವ). [ ತೆರ್ಕೆ (<ತಟ್ಕೆ) + ಕಡಲ್$_2$ ]

**ತೆರ್ಕೆಗೊಳ್** 'ತಟ್ಕೆಗೊಳ್' ನೋ.

**ತೆರ್ಪಂಬಡೆ** 'ತೆಱಪುವಡೆ' ನೋ.

**ತೆರ್ಪತ್ತು** 'ತೆಪ್ಪಱು' ಪರಾ.

△ **ತೆರ್ಪಱು** 'ತೆಪ್ಪಱು' ನೋ.

**ತೆರ್ಪು** 'ತೆಱಪು' ನೋ.

**ತೆರ್ಪುಱು** (ಕ್ರಿ). ಅವಕಾಶವನ್ನು ಹೊಂದು : ಇನಿತಂ ಕೋಪಾವಳೇಪ ಭ್ರುಕುಟನಿಟಲದೊಳ್ ಪುಟ್ಟೆ ತೆರ್ಪುತ್ತಿರ್ಪಂ ತೊಪ್ಪನೆ ಮಾರ್ಪಾರ್ಯುಂ ದಿಶಾಧೀಶರನಿದರ ದಿಶಾಧೀಶರೊಳ್ ತಾಗಿಕುಂ (ಎಕ. VI, ಚಿಕ್ಕಮ. ೧೬೦-೨೦ ; 1103 ?). [ ತೆರ್ಪು (<ತೆಱಪು) + ಉಱು ]

**ತೆರ್ಬು** 'ತಿರುಂಬು$_3$' ನೋ.

**ತೆಲಂಬಯು** (ನಾ). ಒಬ್ಬಾತನ ಹೆಸರು : ಇದಕ್ಕೆ ಸಾಕ್ಷಿ ಅಮುಚ್ಚಾರ್ ತೆಲಮ್ಬಯರ್ ಕರಾಸರ್ (ಎಕ. IV, ಗುಂಡ್ಲುಪೇ. ೮೬-೫ ; ಸು. 750). [ ? + ಅಯು$_1$ (<ಅಯ್ಯ$_1$) ]

**ತೆಲವಿ** 'ತೆಲಿವಿ' ನೋ.

**ತೆಲಸಂಗ** (ನಾ). ಒಂದು ಊರಿನ ಹೆಸರು; P ಈಗಿನ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನಲ್ಲಿರುವ ಊರು: ಆಯುರ್ವ್ವರ್ವಿದ್ಯಾ ಕುಶಳಧರಾಮರರಿಂ ಲೋಕೋತ್ತರಮೆಸೆವುದಸದಳಂ ತೆಲಸಂಗ (ಕಇ. II, ೦೪-೧೧ ; ?). [ ? ]

**ತೆಲಿಗ** 'ತೆಲ್ಲಿಗ' ನೋ.

**ತೆಲಿಗೆ, ತೆಲುಗೆ** (ನಾ). ಒಂದು ಬಗೆಯ ಮರ ; ತಿಲಕವೃಕ್ಷ: "ತಿಲಕಃ = ತೆಲಿಗೆಯ ಮರಂ" (ಕಾಶಕ. ೪೬). **ತೆಲುಗೆ :** "ತಿಲಕಃ_ ತೆಲುಗೆಯ ಮರನುಂ, ಹಣೆಯ ಬೊಟ್ಟುಂ" (ಕಾಶಕ. ೨೩೬). [ <ಸಂ. ತಿಲಕ ]

**ತೆಲಿವಿ, ತೆಲವಿ, ತೆಲುವು, ತೆಲ್ಮೆ** (ನಾ). ಜಾಣತನ ; ಬುದ್ಧಿವಂತಿಕೆ ; ತಿಳಿವು : ತೆಲಿವಿಯ ತಪ್ಪಿಸಿ ಬಲವನ್ನು ಹೋಗಾಡಿ ಅಲೆಯಪಡಿಸಿದನಾಗ ಚಲದೊಳು ಶನಿಯು (ಯನಳ. ೮೬). **ತೆಲವಿ :** ತೆಲವಿಗೆ ತಾನು

ತೆಲವಿಯಾಗಿಯುಂ ಯಿಾ ಭೇದಭಾವಗಳನ್ನೆಲ್ಲ ಗುರು ಅನುಗ್ರಹದಿಂದ ತಿಳಿದು (ತತ್ವಚಿಂ. ೨೮-೨). **ತೆಲುವೆ :** ವಿಶೇಷವಾಗಿ ತೆಲುವೆಯುಳ್ಳ ಮಹಾಪುರುಷರು ತಮ್ಮ ತರುವಾಯ ಹೆಸರು ನಿಲ್ಲುವ ಹಾಗೆ ಮಾಡಿಕೊಳ್ಳಬೇಕು (ಕಾಂಪೂಜ. ೫೩). **ತೆಲ್ಮೆ :** ಯುಕ್ತಿಗಳೊಳ್ ತೆಲ್ಮೆಯಂ (ಸೌಗಂಧಿ. ೨೨೦-೪). 'ತಿಳಿ' ಪರಾ.

[ ದೇ.॥ ತಮಿ. ಮಲ. ತೆಳಿವು. ತುಳು. ತೆರಿವು ; ತೆಲು. ತೆಲಿವಿ ]

**ತೆಲುಂಗ, ತೆಲುಗ, ತೇಲುಂಗ, ತೈಲಂಗ** (ನಾ). ೧. ತೆಲುಗು ಭಾಷೆಯನ್ನಾಡುವ ಜನರ ದೇಶ ; ಆಂಧ್ರ : ಕೊಂಗು ಕಳಿಂಗ ಸಿಂಗಳ ಸುಲಾಟ ವರಾಟ ತೆಲುಂಗ ಮಾಗಧೋತ್ತುಂಗ ನೃಪಾಳರಾರುಮಿದಿರಾಂಪವರಿಲ್ಲೆನಗೆ (ಎಕ. VI, ಕಡೂರು. ೧೪೬-೪ ; ಸು. 1180) ; ಪಾಂಚಾಳ ಚೋಳ ತೆಲುಂಗ ಭೂಭುಜರವನೆಸುಗೆಯು ತಾಳಲಾಜದೆ ತೊಲಗಿದರು (ನೇಮಿಸಂ. ೧೨-೮೩). ೨. ಆಂಧ್ರ ದೇಶಕ್ಕೆ ಸೇರಿದವನು : ಕಿಕ್ಕಿಜಿಗಿಜಿದು ಕುಳ್ಳಿರ್ದ ಲಾಳ ಗೌಳ . . . ತೆಲುಂಗ ಗುರ್ಜರ ಹಮ್ಮೀರ ನೇಪಾಳರ್ಮೊದಲಾದ ರಾಜಪುತ್ರರ ಪಂಕ್ತಿಗಳೊಳಂ (ಗಿರಿಕ. ೨-೧೦೫ ವ). **ತೆಲುಗ ;** ೨. "ತೆಲುಗನಾಂಧ್ರನೆನಿಕ್ಕು" (ಮಂಗರಾ. ೧೧೨-೭) ; ನಡುಭವಗಾ[ವು]ಣ್ಡಂಗೆ ತೆಲುಗರ ಮಾರಿಗಾವುಣ್ಡನೊಳ್ಪಟಜ್ಗಟ (ಎಕ. IV, ಹೆಗ್ಗಡ. ೧೦೪-೧೮ ; 1037) ; ತೆಲುಗರ ಮಾರೆಗೆಯು ಕ್ರಮಿತರ ಮನೆ (ಎಇ. XIII, ೪೮-೭೯ ; 1112) ; ಇವನು ತೆಲುಗನಿವ ಮಗಧ ಇವನು ಕನ್ನಡಿಗ (ನೇಮಿಸಂ. ೨೩-೨೫೩) ; ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗರು ರಯ್ಯಾ ಮಂಚಿದಿಯನೆ ತೆಲುಗ ಅಯ್ಯಯ್ಯ ಎಂಚಪೊರ್ಲಾಂಡೆಂದು ತುಳುವರು ಮೆಯ್ಯುಬ್ಬಿ ಕೇಳಬೇಕಣ್ಣ (ಭರಜ. ೧-೭). **ತೇಲುಂಗ :** ೧. ದೊರೆಕೊಳ್ಗೀ ಬಲುಹಿಂತದಲ್ಲದಡೆಯಾ ತೇಲುಂಗ ರಾಜ್ಯಂಗಳಂ ಪುರ ಮುಾಜಿಕ್ಕೆಣೆಯಾಗಿ ಮಾಡಿ ಕಳದಾ ತೇಜೋಗ್ರುವೆಂತಾದುದೋ (ಎಕ. XI, ದಾವಣ. ೫೯-೨೮ ; 1280). **ತೈಲಂಗ :** ೨. ತೆಲುಗು ಬ್ರಾಹ್ಮಣರು (ತೈಲಂಗರು) (ಕಭಾಗ. ೮೩).

ತೆಲ್ಗರ ಮಾರಿ = ಒಂದು ಬಿರುದು : ಆಚರಸನ ಪುತ್ರಂ ಸರ್ವಾಧಿಕಾರಿ ತೆಲ್ಗರಮಾರಿ ಪತಿಕಾರ್ಯದುರಂಧರಂ (ಎಇ. XIV, ೨೭೨-೩೪ ; 1103). **ತೆಲ್ಲಂಗರಾಯಸ್ಥಾಪನಾಚಾರ್ಯ = ಒಂದು ಬಿರುದು :** ತೆಲ್ಲಂಗರಾಯಸ್ಥಾಪನಾಚಾರ್ಯ . . . ಕರ್ನಾಟರಾಯ ದಿಸಾಪಟ್ಟ ದ್ವಾರಾವತೀ ಪುರವರಾಧೀಶ್ವರ ವಿಷ್ಣುವಂಸೋದ್ಭವ (ಕೊಲ್ಹಾಶಾ. ೧೯-೩ ; 1261).

[ ತೆಲುಂಗು + - ಅ₇ ]

**ತೆಲುಂಗಿತಿ, ತೆಲುಗಿತಿ** (ನಾ). ತೆಲುಗು ಭಾಷೆಯನ್ನಾಡುವವಳು ; ತೆಲುಗಿನವಳು ; ಆಂಧ್ರಸ್ತ್ರೀ : ಕುಟುಂಬಿತಿ, ತೆಲುಂಗಿತಿ, ತೆಲ್ಗಿಗಿತಿ (ಶಮದ. ೨೦೮ ಪ್ರಯೋ). **ತೆಲುಗಿತಿ :** (೬).

[ ತೆಲುಂಗ + - ಇತಿ₁ (< - ಇತ್ತಿ) ]

**ತೆಲುಂಗು, ತೆನುಂಗು, ತೆನುಗು, ತೆಲುಗು** (ನಾ). ೧. ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಒಂದು ಭಾಷೆ; ಆಂಧ್ರಭಾಷೆ. 'ತೆಲುಂಗ' ಪರಾ. **ತೆನುಂಗು :** ೧. ತೆಲುಂಗು, ತೆನುಗು, ತೆನುಂಗು ಎಂಬುದಾಗಿ ತೆಲುಗು ಭಾಷೆಗೆ ರೂಪಗಳನ್ನು ಕೊಡುವುದು (ನೀತಿಸಾ. ೬ ಟೀಕೆ). **ತೆನುಗು :** ೧. ಮೇಲಿನ 'ನೀತಿಸಾ' ಪ್ರಯೋಗವನ್ನು ನೋಡಿ. **ತೆಲುಗು ;** ೨. ತೆಲುಗುದೇಶ ; ಆಂಧ್ರ : ಒಡೆಯಗೆ ಕೈಮುಗಿದೊಯ್ಯನೆ ತೆಲುಗು ನಾಡೊಡೆಯ ಸಾಗಿದನೊಂದು ಬಳಿಗೆ (ಭರಜ. ೨೨-೨೦); ಭುಜಬಲಾನ್ವಿತರಾದ ತೆಲುಗು ಭೂಪಾಲರ ತ್ರಿಜಗ ಮೆಚ್ಚಲು ಗೆದ್ದು ತಂದ ಗಜಘಟೆಗಳ ಶಾಲೆಗಳೊಪ್ಪಿದುವಾಗ (ಕಂಸವಿ. ೬-೩೦).

[ ದೇ.॥ ತಮಿ. ತೆಲುಕು, ತೆಲುಙ್ಕು ; ಮಲ. ತೆಲುಙ್ಙು ; ತುಳು. ತೆಲುಂಗು, ತೆಲಂಗು ; ತೆಲು. ತೆಲುಂಗು. ತೆನುಂಗು ]

**ತೆಲುಗ** 'ತೆಲುಂಗ' ನೋ.

**ತೆಲುಗಕಾಂಬೋದಿ** (ನಾ). [ಸಂಗೀತ] ಒಂದು ರಾಗದ ಹೆಸರು: ಗುಮ್ಮಕಾಂಬೋದಿ ತೆಲುಗಕಾಂಬೋದಿ ಎಂಬಿವೇ ಕಾಂಬೋದಿಯು ಮಿಶ್ರರಾಗಂಗಳು (ವಿವೇಕ. ೨೩೫). [ ತೆಲುಗ (<ತೆಲುಂಗ) + ಕಾಂಬೋದಿ ]

**ತೆಲುಗಾಣೆಯ** (ನಾ). ಆಂಧ್ರ ಪ್ರದೇಶ : ತೆಲುಂಗಾಣೆ [ಪಾಠಾ. ತಿಗುಳಾಣ]ಯ ತೇರಬೀದಿ ತಿಗುಳನಾಡು ತಿಳಿದೆಡೆಯಾಡುವ ದಾರಿ (ಕುರಾಸಾಂ. ೫-೪೭). 'ತುರುಕಾಣ್ಯ' ಪರಾ.

[ ತೆಲುಗು + ಅಣ್ಯಂ (ಶ ← ತೆಲು. ಆಣೆ = ದೇಶ) ]

**ತೆಲುಗಿತಿ** 'ತೆಲುಂಗಿತಿ' ನೋ.

**ತೆಲುಗು** 'ತೆಲುಂಗು' ನೋ.

**ತೆಲುಗೆ** 'ತೆಲಿಗೆ' ನೋ.

**ತೆಲುವೆ** 'ತೆಲಿವಿ' ನೋ.

**ತೆಲ್ಮೆ** 'ತೆಲಿವಿ' ನೋ.

**ತೆಲ್ಲ₁** (ನಾ). ಶುಭ್ರವಾದುದು ; ಹೊಳಪುಳ್ಳುದು. 'ತೆಲ್ಲವಣ್ಣ' ಪರಾ.

[ ←ತೆಲು. ತೆಲ್ಲ ]

**ತೆಲ್ಲ₂** (ನಾ). ಎಳ್ಳೆಣ್ಣೆ : ತೈಲ . 'ತೆಲ್ಲಿಗ' ಪರಾ.

[ ←ಪ್ರಾ. ತೇಲ್ಲ. / ಸಂ. ತೈಲ ]

**ತೆಲ್ಲಂಟಿ, ತೆಲ್ಲಂಟೆ, ತೆಲ್ಲಟಿ, ತೆಲ್ಲಟೆ, ತೆಲ್ಲಟ್ಟಿ, ತೆಲ್ಲಟ್ಟು** (ನಾ). ೧. ಉಡುಗೊರೆ ; ಬಹುಮಾನ : ಏನಗೆನ್ನೋಪನ ಬಂದುದರ್ಕೆದುವೆ ದಲಾ ತೆಲ್ಲಂಟಿ (ಆದಿಪು. ೧೨-೪೪) ; ಈಶ್ವರಂ ಕೊಟ್ಟುದರ್ಕೆ ತೆಲ್ಲಂಟಿಯೆಂದು ಗೌರಿದೇವಿಯುಮಂಜಲಿಕಾಸ್ತ್ರಮೆಂಬಮೋಘಾಸ್ತ್ರಮಂ ವಿಕ್ರಮಾರ್ಜುನಂಗೆ ಕುಡೆ (ಪಂಪಭಾ. ೮-೨೭ ವ) ; ಲೆಕ್ಕವಿಲ್ಲದೆ ತೆಲ್ಲಂಟಿಯನಾತ್ರ್ಗೆ ಕೊಟ್ಟು ನೆಗಳ್ದಂ (ಎಇ. XIII, ೩೦೩-೨೪ ; 1125) ; ಅದಂ ಕಂಡರ್ಹದ್ದಾಸದೇವಂ ಕಾಮದೇವಂಗೆ ಪಟ್ಟಂಗಟ್ಟಿ ಕೊಟ್ಟ ರಾಗರಾಜ್ಯಕ್ಕೆ ತೆಲ್ಲಂಟಿಯಾಗಿ (ಅರ್ಧನೇ. ೨-೩೮ ವ) ; ನಾನು ಹೋಗಿದ್ದೆ ಪಾಪಿ, ನನ್ನ ಸಿರಿಗೌರಿಗೆ ತೇರು ಹಬ್ಬದ ತೆಲ್ಲಂಟಿ ತರಲೆಂದು (ತುಂಗಭ. ೫೩). ೨. ಮದುವೆಯ ಕಾಲಕ್ಕೆ ವಧೂವರರಿಗೆ ಕೊಡುವ ಬಳುವಳಿ ; ಮುಯ್ಯಿ : "ತೆಲ್ಲಂಟಿ – ನಿಬ್ಬಣಂ" (ಶಮದ. ಪರಿ. ೨) ; ಕರಮೊಸೆದಾ ದ್ರುಪದಜೆಯೊಳ್ ನೆರೆದೊಸಗೆಗೆ ತಮ್ಮ ಬೀರಮುಂ ಬಿಂಕಮುಮಂ ತೆಜಿವುಂ ತೆಲ್ಲಂಟಿಯುಂ ಸುಂದರಿಕೇಸರಿಗಾಗಳೀವವೋಲ್ ಬೆನ್ನಿತ್ತರ್ (ಪಂಪಭಾ. ೩-೭೨). **ತೆಲ್ಲಂಟೆ :** ೨. ಪ್ರಣತೇಂದ್ರಂ ವರನಂದು ಬಂದೆಸೆವ ಸೌಧರ್ಮಾದಿಗಳ್ ಬಂದ ನಿ ಬ್ಬ ಣಿ ಗ ರ್ ಕಲ್ಪದನಲ್ಪವಸ್ತುನಿವಹಂ ತೆಲ್ಲಂಟೆ (ಪುಷ್ಪಪು. ೧೨-೧೦೯). **ತೆಲ್ಲಟ :** ೧. ತೆಲ್ಲಟಿಯೆಂದು ಗಿರಿಜೆಯ ಮೆಚ್ಚಿ ಕೊಟ್ಟ ನಿಶಿತಾಸ್ತ್ರಮಂ . . . ಕೊಂಡು (ಪಂಪಭಾ. ೧೨-೨೦೦ ವ) ; ಮುಡಿಗೆ ಜೋಳಿಯ ತೆಲ್ಲಟಿಯೆಂಬ ನಾಣ್ನುಡಿಯಂತೆ (ಧರ್ಮಾಮೃ. ೬-೧೭೫) ; ಈ ಧರ್ಮಕ್ಕೆ ತೆಲ್ಲಟಿಯಾಗೆ . . . ಕರಂಬಂ ಮತ್ತರು ಹತ್ತುಮನಿತ್ತ (ಕಇಅ. ೪೨-೬೮-೮೮ ; 1117) ; ಚಲ್ಲಿದವು ರಥ ಗಾಲಿ ಮುಜಿದವು . . . ಎಲ್ಲಿಯವು ರಥವಾಜಿ ವಾಜಿಗೆ ತೆಲ್ಲಟಿಯಲೇ ರಥಿಕ ಸೂತರು (ಕುವ್ಯಾಗ. ೧-೩೦) ; ಮೆಲ್ಲಗೆಲ್ಲ ಕುಳಿರತೆರೆ ಚೆಲ್ಲಾಡುತ್ತಿರಲು ತೆಲ್ಲಟಿಯ ನಗೆನುಡಿಯ ದೊಡ್ಡನೆಂದಂ ಪೋಪೆ (ಕಾಲೂರ. ೭೦-೧೨೮). **ತೆಲ್ಲಟೆ :** ೨. "ತೆಲ್ಲಟಿ[ಪಾಠಾಂ. ಟ್ಟು]ಯೆನಲ್ಕೆ ಮುಯ್ಯ್" (ಚತುನಿ. ೭೦) . **ತೆಲ್ಲಟ್ಟಿ :** ೧. ರಸದಂಬುಲದಿನಿಗುಟಿಕಿಂದೆಸೆದರ್ಪಮ್ಮೆರ್ದೆಯೊಳೊಪ್ಪುವನುರಾಗವನೇ ರಸನೆಯೊಳುಟಿ ತೆಲ್ಲಟ್ಟಿಯನೊಸೆದೊರ್ವಗೊರ್ವರೀವವೋಲ್ (ವೀರವಿ. ೬-೭೫). **ತೆಲ್ಲಟ್ಟು :** ೨. 'ತೆಲ್ಲಟೆ' ಪ್ರಯೋಗದ ಪಾಠಾಂತರವನ್ನು ನೋಡಿ.

[ ←ತೆಲು. ತೆಲ್ಲಂಟಿ, ತೆಲ್ಲಟಿ ]

**ತೆಲ್ಲಂಟಿಗೆ, ತೆಲ್ಲಟಿಗೆ** (ನಾ). ೧. ಬಹುಮಾನ ; ಉಡುಗೊರೆ. ೨. ಬಳುವಳಿ; ಮುಯ್ಯಿ: 'ತೆಲ್ಲಂಟಿಗೆಗೊಡು' ಪರಾ. **ತೆಲ್ಲಟಿಗೆ :** ೧. "ತೆಲ್ಲಟಿಗೆ

ಯೆನಲ್ ಮರ್ಯಾದೆಯುಕ್ಕು" (ಕಶರ. ೪೮) ; ಮತ್ತಮಿಾ ಧರ್ಮಕ್ಕೆ ತೆಲ್ಲಟಿಗೆಯಾಗೆ (ಎಇ. IX, ೨೬೪-೮೮ ; 1117). ೨. "ತೆಲ್ಲಟಿಗೆವೆಸರು ಮುಯ್ಯೆಂದಕ್ಕು" (ಶಬ್ದಮಂ. ೬೩). ☞ ಇಲ್ಲಿ 'ತೆಲ್ಲಟಿ' ಎಂಬ ಶಬ್ದದ ಚತುರ್ಥೀವಿಭಕ್ತಿಯ ರೂಪವಾದ 'ತೆಲ್ಲಟಿಗೆ' ಎಂಬುದನ್ನು ಸ್ವತಂತ್ರ ರೂಪವನ್ನಾಗಿ ಕೆಲವರು ಸ್ವೀಕರಿಸಿರುವಂತಿದೆ. [ <ತೆಲ್ಲಂಟಿ ]

**ತೆಲ್ಲಂಟಿಗೆಗೊಡು,** ತೆಲ್ಲಟಿಗೆಗುಡು (ಕ್ರಿ). ೧. = ತೆಲ್ಲಂಟಿಗೊಡು: ಪುರವೆಂಬ ನಲ್ಲನೊಡನೆ ಸಿರಿ ಕೂಡಲು ಶರಧಿ ತನ್ನಯ ವಸ್ತುಗಳನೂ ತರಿಸಿ ತೆಲ್ಲಂಟಿಗೆಗೊಟ್ಟಪೊಲ್ (ವರ್ಧಚ. ೧-೧೧೯). **ತೆಲ್ಲಟಿಗೆಗುಡು: ೨.** ಉಡುಗೊರೆಯಾಗಿ ಕೊಡು: ತನ್ನಸುವಂ ತೆಲ್ಲಟಿಗೆಗುಡುವ ತೆಱದೊಳ್ಕೊಟ್ಟಂ (ಗದಾಯು. ೨-೧೫). [ ತೆಲ್ಲಂಟಿಗೆ + ಕೊಡು$_1$ ]

**ತೆಲ್ಲಂಟಿಗೊಡು (ಕ್ರಿ).** ಬಳುವಳಿ ಕೊಡು: ವಸ್ತುವಾಹನಸಂದೋಹವಂ ತೆಲ್ಲಂಟಿಗೊಟ್ಟು ವಧೂವರರಂ ತದೀಯಾಗಾರಕ್ಕೆ ಕಳಿಪಿ (ನೇಮಿಪು. ೧-೬೭ ವ). [ ತೆಲ್ಲಂಟಿ + ಕೊಡು$_1$ ]

**ತೆಲ್ಲಂಟಿದರ್,** ತೆಲ್ಲಟಿದರ್ (ಕ್ರಿ). ಕಾಣಿಕೆಯನ್ನು ತರು ; ಉಡುಗೊರೆಯನ್ನು ತರು : ತೆಲ್ಲಂಟಿದರ್ಪ ಸಾಮಂತಸಂದೋಹದಿಂ . . . ಕರಮೆ ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಜಿಪು. ೪-೭ ರಗಳೆ). **ತೆಲ್ಲಟಿದರ್:** ಚೆಲ್ವಾದರಾ ಕಾಮನುತ್ಸವದಿಂ ತೆಲ್ಲಟಿದಂದ ಮಾಧವಪುರ ಶ್ರೀಲೀಲೆಯಂ ಬಾಲೆಯರ್ (ಶಾಂತಿಪು. ೮-೧೫). [ ತೆಲ್ಲಂಟಿ + ತರ್ ]

**ತೆಲ್ಲಂಟೆ** 'ತೆಲ್ಲಂಟಿ' ನೋ.

**ತೆಲ್ಲಕಾಕಮುಷ್ಟಿ (ನಾ).** ಒಂದು ಬಗೆಯ ಸಸ್ಯ: ಬಿಳೀಕಾಕಮುಷ್ಟಿ, ಪೆಲ್ಲೆ, ತೆಲ್ಲಕಾಕಮುಷ್ಟಿ (ಮೃಜಿಗಿ. ೧೯-೩೫೪). [ ? ]

**ತೆಲ್ಲಟ** 'ತೆಲ್ಲಂಟಿ' ನೋ.

**ತೆಲ್ಲಟಿಗ (ಗು).** ಹೊಳಪುಳ್ಳ ; ಪ್ರಕಾಶಮಾನವಾದ: ಅಲ್ಲಿ ರಂಜಿಪು[ಪ] . . . ಪಲ್ಲವಿತಮಾದ ಮರಕತ ನೀಲವಜ್ರದಿಂ ತೆಲ್ಲಟಿಗ ಮಣಿಗಳಿಂದ (ಲಿಂಗಪು. ೩-೨೭). [ <ತೆಲ್ಲ$_1$ ]

**ತೆಲ್ಲಟಿಗೆ** 'ತೆಲ್ಲಂಟಿಗೆ' ನೋ.

**ತೆಲ್ಲಟಿಗೆಗುಡು** 'ತೆಲ್ಲಂಟಿಗೆಗೊಡು' ನೋ.

**ತೆಲ್ಲಟಿಗೊಳ್ (ಕ್ರಿ).** ೧. ಬಹುಮಾನವಾಗಿ ಪಡೆ. ೨. ಬಳುವಳಿಯನ್ನು ಸೆಳೆ; ಮುಯ್ಯಿಯನ್ನು ತೆಗೆದುಕೊಳ್ಳು: ಅವನಿಪ ಕಂತುವೆಚ್ಚ ಭವಬಾಣಮದೋವದೆ ಕೊಂಡು ಚಂಡವಿಕ್ರಮನ ಶಿರಕ್ಕೆ ತನ್ನ ಶಿರಮಂ ತವೆ ತೆಲ್ಲಟಿ [ಪಾಠಾಂ. ತಲೆ]ಗೊಳ್ಗುಮೆಂದು . . . ಓಡಿದಂ ನಿಜಪುರಕ್ಕೆ (ಕುಸುಮಾ. ೧೦-೫೮). [ ತೆಲ್ಲಟಿ (<ತೆಲ್ಲಂಟಿ) + ಕೊಳ್$_1$ ]

**ತೆಲ್ಲಟಿದರ್** 'ತೆಲ್ಲಂಟಿದರ್' ನೋ.

**ತೆಲ್ಲಟೆ** 'ತೆಲ್ಲಂಟಿ' ನೋ.

**ತೆಲ್ಲಟ್ಟಿ** 'ತೆಲ್ಲಂಟಿ' ನೋ.

**ತೆಲ್ಲಟ್ಟು** 'ತೆಲ್ಲಂಟಿ' ನೋ.

**ತೆಲ್ಲಪುನಿ (ನಾ).** ಒಂದು ಬಗೆಯ ಸಸ್ಯ ; ಬಿಳಿಯ ತಾಳೆ : ಬಿಳಿಪೊಳಿಕು . . . ಬಿಳಿತಾಳೆ, ತೆಲ್ಲಪುನಿ (ಮೃಜಿಗಿ. ೩೯-೭೭೩). [ ? ]

**ತೆಲ್ಲಯಿಸು,** ತೆಲ್ಲಯ್ಸು, ತೆಲ್ಲೈಸು (ಕ್ರಿ). ೧. ದಪ್ಪವಾಗು ; ಮಂದವಾಗು : (+). ೨. ಗಟ್ಟಿಯಾಗು ; ಬಲಗೊಳ್ಳು; ಶಕ್ತಿಯುತವಾಗು: (+). ೩. ಹೆಚ್ಚಾಗು ; ಅಧಿಕವಾಗು : (+). ೪. ಒಟ್ಟಾಗು ; ಗುಂಪಾಗು : ಕಲ್ಲದಾಡುವ ತೆಲ್ಲಯಿಸಿದ ಮಲ್ಲಗಿಳಿಯ ಸವಿನುಡಿಗೆ . . . ತಲ್ಲಣಂಗೊಂಡು (ರಾಮಾಶ್ವ. ೬೩-೪). ೫. ಜಿಡ್ಡಿನಿಂದ ಕೂಡಿರು ; ಸ್ನಿಗ್ಧವಾಗು ; ಅಂಟಂಟಾಗು : (+). ೬. ಬೆಳಗಿಸು ; ಪ್ರಜ್ವಲಗೊಳಿಸು : ತೆಲ್ಲಯಿಸಿ ಮಂಗಳಾರತಿಯ ವನಿತೆಯರೆಲ್ಲ ಭುಲ್ಲಯಿಸಿ ಹಾಡಿ ಹರಸುವ ಹೊತ್ತು (ಸಿದ್ಧರಾ. ೮-೪೮) ; ತೆಲ್ಲಯಿಸಿದಂ ಮೇಳಯಿಸಿದಂ (ಶಮಿದ. ೫೪ ಪ್ರಯೋ) ; ಪೊಲ್ಲಮೆಯುಂ ನಿರ್ಗುಣಮುಂ ತೆಲ್ಲಯಿಸುತೆ ತಮಗೆ ತಮಗೆ ಪುದುವಲ್ಲದೊಡಂ ನಿಲ್ಲದೆ ಜಗದೊಳ್ಪಾಳ್ವರೆ ಸಲ್ಲಲಿತರ್ (ಚಂದ್ರಪ್ರಭು. ೧೨-೨೭). **ತೆಲ್ಲಯ್ಸು : ೬.** ಅಲ್ಲಲ್ಲಿ ಕೈದೀವಿಗೆಗಳು ತೆಲ್ಲಯ್ಸೆ [ಪಾಠಾಂ. ತೆತ್ತೈಸೆ, ಬೆಳಗೆ]ಪಲ್ಲವಿಸೆ ಪಲ್ಲವಸತ್ತಿಗೆ ಮೇಲ್ಮಸಗೆ (ಸಂಬಿರ. ೧೦-೪೯). **ತೆಲ್ಲೈಸು : ೧.** "ತೆಲ್ಲೈಸಿತೆಂದು ಮಂದೈಸಿದಕ್ಕೆ ನಾಮಪದು" (ಶಬ್ದಮಂ. ೫೦) ; "ತೆಲ್ಲೈಸಿತೆನೆ ಬುಧರಿನದು ಮಂದೈಸಿಯೆ ನಿಂದರ್ಥಮಪ್ಪುದು" (ಕವಿಶಂ. ೨೦೨). ೩. ತಂಪಿನಿಂ ತೆಲ್ಲೈಸಿ ಕೋಡುಗುಟ್ಟುವ ಗಾಳಿ (ಕಾಲೂರ. ೭೫-೧೩೪). ೬. ಭರದಿಂ ತೆಲ್ಲೈಸಿದ ಬಹು ಕರದೀಪಿಕೆಗಳ ಮರೀಚಿಮಾರ್ಗಮನಂತಾ ಪುರಲಕ್ಷ್ಮಿಯ ಸೀಮಂತದ ಸುರುಚಿರಕುಂಕುಮದ ರೇಖೆಯೆನಿಸಿತ್ತಾಗಳ್ (ಮಹಾನೇ. ೧೪-೪೭). ೭. ಅಳವಡಿಸು (?): ಅಂತು ದೇವತೆ ಕೊಟ್ಟ ಗದಾದಂಡಮುನರ್ಚಿದಮರಿಯಂ ನಿರ್ವಿಚಿಪುಲ್ಲಿಯುಂ ತೆಲ್ಲೈಸಿ ಗೊಂಡೆಯಮಂ ದಂಡೆಗೊಳಿಸಿ ಚಾರಣಾಕೃತಿಯಂ ಪಿಡಿದಾಗಳ್ (ದಶಕು. ೨-೨೫ ವ). [ ತೆಲ್ಲ? + –ಇಸು$_3$ ]

**ತೆಲ್ಲಯ್ಸು** 'ತೆಲ್ಲಯಿಸು' ನೋ.

**ತೆಲ್ಲವಣ್ಣ (ನಾ).** ಶುಭ್ರವಾದ ಬಣ್ಣ ; ನುಣುಪಾಗಿ ಹೊಳೆಯುವ ಬಣ್ಣ : ಚೊಲ್ಲಣಿಗೆವಡೆದ ಚಿಂತಾರತ್ನಕಳಶದಿಂ ತೆಲ್ಲವಣ್ಣದ ಬಾಗಿಲಿಂ ಕನಕವಲಗೆಯಿಂ (ಲಿಂಗಪು. ೩-೨೦) ; ಪಲ್ಲವಿತಮಾದ ಹಲಸವರೆ ಪರ್ಕರೆಯವರೆ ತಲ್ಲಣಿಪ ಸವಿಗೊಡುವ ಸಾಲವರೆ ಸರಳವರೆ . . . ತೆಲ್ಲವಣ್ಣದ ಸೊಂಪಿನವರೆ (ಲಿಂಗಪು. ೮-೪೫). [ ತೆಲ್ಲ$_1$ + ಬಣ್ಣ$_2$ ]

**ತೆಲ್ಲಿಗ,** ತೆಲಿಗ, ತೇಲಿಗ$_2$ (ನಾ). ಎಣ್ಣೆಯನ್ನು ತೆಗೆದು ಮಾರಿ ಜೀವಿಸುವವನು ; ಗಾಣಿಗ: "ತೆಲ್ಲಿಗ=ತೈಲಿಕ=ಎಣ್ಣೆವ್ಯಾಪಾರಿ" (ತದ್ಭಕೋ. ೧೪); ತೆಲ್ಲಿಗ ಸೇಣಿಗ ಮನೆವೀಡಿಲ್ಲಾದುದು ತೆಱೆಯುಂ (ಎಇ. XIV, ೧೯೧-೨೯; 725); ಅಲ್ಲಿಯ ತೆಲ್ಲಿಗರು ಬಿಟ್ಟ ಧರ್ಮವೆಂತೆಂದಡೆ . . . ಸೋಟಿಗೆ ಯೆಣ್ಣೆಯುಂ ಬಿಟ್ಟರು (ಎಕ. VII (S), ಶಿಕಾರಿ. ೩೩೪-೨೭; ಸು. 1100); ಹಿಂಡಿಯುಂ ನಂಬಿಯೆಣ್ಣೆಯನುಗುವ ತೆಲ್ಲಿಗನುಮಂ (ಧರ್ಮಾಮೃ. ೮-೫೦); ಪಡವಂದಿಗಂ, ಪತ್ತಳಿಗಂ, ತೆಲ್ಲಿಗಂ (ಭಾಷಾಭೂ. ೧೭೩ ಪ್ರಯೋ) ; ಹೇಱಿ ಬಂದೆಳ್ಳ ರಾಸಿಗಳ ತೆಲ್ಲಿಗರೊಯ್ದು ಗಾಣವಾಡೊಳ್ತೆನಿಸಿದ ತೈಲಕುಂಭ ಕೋಟಿಗಳ ತಂದರು (ಸಿದ್ಧರಾ. ೮-೫೦) ; ಖಲಪ್ರವರ್ತನಂ ತೆಲ್ಲಿಗರೊಳ್ . . . ಅಲ್ಲದೆ ತನ್ನೊಳಿಲ್ಲೆನಿಸಿರ್ಪುದು (ದಶಕು. ೧-೨೨ ವ) ; ತೆಲ್ಲಿಗಂಗೆಳ್ಳನುದಿನಂ ಬೆಳೆದಂದದವಾಯ್ತು (ಬಸಪು. ೪೩-೭೦). **ತೆಲಿಗ :** ತೆಲಿಗರು ಸೇಡೆಯುಂ ಬಿಟ್ಟರು ನಖರ ಸೇಡೆಯುಂ ಬಿಟ್ಟರು (ಎಕ. V, ಬೇಲೂರು. ೧೭೭-೨೮ ; 1162). **ತೇಲಿಗ$_2$ :** ಪಟ್ಟಣಸಾಮಿ ಸೋಮಿಶೆಟ್ಟಿಯರು ಮುಖ್ಯವಾದ ಸಮಸ್ತ ನಗರಂಗಳುಂ ತೇಲಿಗರುಮಿರ್ದ್ದು ಬಿಟ್ಟ ದತ್ತಿ (ಎಕ. VIII, ಸೊರಬ.೧೪೦-೮೫ ; 1198); ದೂಸಿಗರುಂ ಮುಖ್ಯವಾಗುಳ್ಳ ಪರದರುಂ ತೇಲಿಗರುಂ (ಎಇ. XIII, ೨೦-೫೦ ; 1204) ; ತೇಲಿಗರ ಗಾಣವೊಳಗಾಗಿ ಅರಮನೆಯ ನ್ಯಾಯುವನ್ನಾಯ ಮಳ ಬ್ರಯ ಏನು ಬಂದಡಂ ಆ ಸ್ಥಳದಾಚಾರ್ಯ್ಯರು ತಾವೇ ತೆತ್ತು ನಿರ್ನ್ನಯಿಸುವರು (ಎಕ. II, ೩೩೩-೧೭ ; 1206 ?) ; ತೇಲಿಗ ಹಿರಿಯ ತಂಮುನ ಮಗ ರಾಮಗೆ ಪೊಂದು ಗ ೧ (ಎಕ. III, ತಿರುಮ. ೨-೬; 1367). [ ತೆಲ್ಲ$_2$ + –ಇಗ./ಸಂ. ತೈಲಿಕ ]

**ತೆಲ್ಲಿಗಗೆಱೆ (ನಾ).** ಒಂದು ಕೆರೆಯ ಹೆಸರು : ಹಿರಿಯ ಕೆಱೆಯ ಕೆಳಗೆ ಗದ್ದೆ ಮ ೧ ತೆಲ್ಲಿಗಗೆಱೆಯ ಕೆಳಗೆ ಗದ್ದೆ ಮರ್ತ್ತ ೧ ಕ ೪೫೦ (ಎಕ. XI, ದಾವಣ. ೨೦-೧೯ ; 1045). [ ತೆಲ್ಲಿಗ + ಕೆಱೆ ]

**ತೆಲ್ಲಿಗಗೇರಿ (ನಾ).** ಗಾಣಿಗರ ಬೀದಿ,–ಕೇರಿ : ಮಂತ್ರವಾದಿಯುಂ ಕಂಡ ಗೃಹದಂತೆ ತೆಲ್ಲಿಗರ್ ತಲ್ಲಣಿಸೆ ತೆಲ್ಲಿಗಗೇರಿಯಂ ಪೊಕ್ಕು (ಧರ್ಮಾಮೃ. ೨-೨೧). [ ತೆಲ್ಲಿಗ + ಕೇರಿ ]

**ತೆಲ್ಲಿಗವನೆ** (ನಾ). ಗಾಣಿಗನ ಮನೆ : ಮೂಡಣ ತ[ಳ]ದ ಮೂಱು ಹ[ತ್ತಿ]ಯ ತೆಲ್ಲಿಗವನೆಯುಮನಾ ಶತದೊಳಗೆ . . . ಸರ್ವ್ವಬಾಧಾಪರಿಹಾರವಾಗಿ ಬಿಟ್ಟರು (ಕಇ. II, ೧೦-೩೦ ; 1080) ; ದೇವರ ನಂದಾದೀ[ವಿ]ಗೆಗೆ ಬಿಟ್ಟ ××× ತೆಲ್ಲಿಗವನೆ (ಸೌಇಇ. XI-ii, ೧೨೯-೩೯ ; 1083).
[ ತೆಲ್ಲಿಗ + ವನೆ ]

**ತೆಲ್ಲಿಗಿತಿ** (ನಾ). ಗಾಣಿಗರ ಹೆಂಗಸು ; ಗಾಣಿಗಿತ್ತಿ : ತಲುಗಿತಿ, ತೆಲ್ಲಿಗಿತಿ, ಚಿಪ್ಪಿಗಿತಿ (ಶಮದ. ೨೦೮ ಪ್ರಯೋ). [ ತೆಲ್ಲಿಗ + – ಇತಿ$_1$ (< – ಇತ್ತಿ) ]

**ತೆಲ್ಲೈಸು** 'ತೆಲ್ಲಯಿಸು' ನೋ.

**ತೆವಟಿಗೆ** 'ತಿಪದಿಗೆ' ನೋ.

**ತೆವಟಿಗೆಬುಲ್ಲು** 'ತಿವಟಿಗೆ ಬುಲ್ಲು' ನೋ.

**ತೆವಟು** 'ತೆಂಟು' ನೋ.

**ತೆವಡೆ** 'ತೆಟ್ಟೆ' ನೋ.

**ತೆವಡೆಗಟ್ಟು** (ಕ್ರಿ). ಕಂತೆಕಟ್ಟು ; ಸಿವುಡುಗಟ್ಟು : ಹೊಲದಲ್ಲಿ ಆಳುಗಳು ಜೋಳದ ತೆನೆಗಳನ್ನು ತೆವಡೆಗಟ್ಟುತ್ತಿದ್ದಾರ (ರೂಢಿ).
[ ತೆವಡೆ (< ತೆಟ್ಟೆ) + ಕಟ್ಟು$_1$ ]

**ತೆವರ್** 'ತೆಮಱ್$_2$' ನೋ.

**ತೆವರ** 'ತೆಮಱ್$_2$' ನೋ.

**ತೆವರಿ** 'ತೆಮಱ್$_2$' ನೋ.

**ತೆವರಿಕೆ** (ನಾ). ಹೀಯಾಳಿಕೆ : ಆಗವೋಡಲ್ಕವರು ಪಿಡಿತಂದು ನಮ್ಮ ತೆವರಿಕೆ ಗುಮ್ಮಟಲಿಲ್ಲಲೆ ಈಗ ದಂಡಂ ಮಣಿಯೆನುತ್ತ ಬಗ್ಗಿಸಿ ಕೆಡಹೆ (ಚತುಪು. ೨-೩-೩೭). [ ತೆವರು$_1$ (< ತೆಮಱ್$_1$) + – ಇಕೆ ]

**ತೆವರಿಸು** (ಕ್ರಿ). ೧. ಅಟ್ಟು ; ಓಡಿಸು : ಇಲ್ಲಿಗಾತಂ ಬರಲು ಕದಹುದೆಱೆಯದೆ ಕಟಕಿಗಳನಾಡಿಸಿ ಕೆಳದಿಯರ ಕಯ್ಯಿಂದ ತೆವರಿಪುದೆನುತೆ ಬುದ್ಧಿಗಲಿಸಿ (ಸೌಂದಪು. ೧೫-೨೦) ; ತವಕದಲಿ ತತ್ಕ್ಷಣದಿನಭ್ರಕೆ ನ ವ ರು ಧಿ ರ ಮುಬ್ಬೆದ್ದು ಸುರಸೈನ್ಯವನು ತೆವ[ಪಾಠಾಂ. ಬೆದ]ರಿಸಿತೇನನೆಂಬೆನು ಸಮರ ಸಂಭ್ರಮವ (ತೊರರಾ. ೬-೩೩-೪) ; ಬ ವ ರ ಕೈ ದು ವ ಸಿದ್ಧಸಾಧ್ಯರ ತೆವರಿಸುತೆ ರಣವಿಜಯ ರಭಸದ ರವಳಿಯಿಂ ಸಂಚರಿಪ ಸಾಲ್ವನ ಕಂಡ ವಿಹಗೇಂದ್ರ (ಅಂಬಿಕಾ. ೨೨-೧೪). ೨. ಧ್ವಂಸ ಮಾಡು; ನಾಶಗೊಳಿಸು: ತೆವರಿಸಿದನನಿಬರ. [ ಪಾಠಾಂ. ಸವರಿದನು ಮತ್ತಾ ] ಚತುರ್ಬಲನಿವಹವನು ನಿಮಿಷಾರ್ಧದಲಿ (ಕುವ್ಯಾಗ. ೨-೩೨) . ೩. ಕಳೆ ; ನಿವಾರಿಸು ; ಪರಿಹರಿಸು : ಲಿಂಗವಿದು ತಾಪತ್ರಯಂಗಳಂ ತೆ ವ ರಿ ಪು ದು (ಸಿದ್ಧೇಪು. ೨೨-೧೦೬) ; ತಂದೆ ಪಂಚಾಕ್ಷರಿಯ ಮಂತ್ರಲಸದುಪದೇಶಮಂ ದಯದೊಳಿತ್ತೆನ್ನ ಪಾ ಪ ಕು ಲ ಮ ೦ ತೆವರಿಸು (ರಾಘಚ. ೧೦-೧೯). ೪. ಜರೆ ; ಹೀಯಾಳಿಸು : ಇರುಳರಸನಂ ಜಱೆವ ವದನವನಜದಯೆಸಳ ತೆಱನಂ ತೆವರಿಸುತಿರದೆ ತೊಳಗುವ ನಯನವೆಳಹರಿಯಿರವ ನೆಱೆ ನಗುವ ನಡು . . . ನೆಲವರೆಗಿಳಿದ ನಿಡುಜಡೆಯ ತರುಣಿಯರು (ನಂದಿಮಾ. ೯-೩೪).
[ ತೆವರು$_1$ (< ತೆಮಱ್$_1$) + – ಇಸು$_3$ ]

**ತೆವರು$_1$** 'ತೆಮಱ್$_1$' ನೋ.

**ತೆವರು$_2$** 'ತೆಮಱ್$_2$' ನೋ.

**ತೆವರೇರು** 'ತೆವರೇಱು' ನೋ.

**ತೆವರೇಱು, ತೆವರೇರು** (ಕ್ರಿ). ದಿಣ್ಣೆಯನ್ನು ಹತ್ತು ; ಗುಡ್ಡವನ್ನು ಏರು: ಕಾಲುವೆಯಂಗಳು ಕುಳಿತೆವರೇಱಲರಿದೆನಲು ಗಾಲಿವೊಗೆದುವು ಕೀಲು ಮುಱಿದುವು ಗೋಳುಗುಟ್ಟಿತು ಪುರಜನಂಗಳು (ಕಾಶಿರಾ. ೧೧-೪೪) ; **ತೆವರೇರು :** ತವರುಮನೆಯಾ ದೀಪ ತೆವರೇರಿ ನೋಡೇನು (ಹಳ್ಳಿಯು. ೯೩). [ ತೆವರು$_2$ (< ತೆಮಱ್$_2$) + ಏಱು$_1$ (< ಏಱ್$_1$) ]

**ತೆವರ್ಚು** 'ತೆಮಳ್ಚು' ನೋ.

**ತೆವಲು, ತೆವುಲು** (ನಾ). ೧. ಉತ್ಕಟವಾದ ಇಚ್ಛೆ ; ಗೀಳು; ಚಟ : ಈ ಮಾತುಗಳಿಂದ ಮಾಸ್ತೋವಳಿಗೆ ಹೆಂಡದ ತೆವಲು ಹತ್ತಿತು (ಪುನರು. ೧೪೬) ; ಆ ಕೂಟಕ್ಕೆ ಹೊಗೇಸೊಪ್ಪು ಎಲೆ ಅಡಿಕೆ ನಶ್ಯ ಸುಣ್ಣ ಮುಂತಾದ ತೆವಲು ಸಾಮಾನುಗಳನ್ನೊದಗಿಸಿ (ಹುಟ್ಟಿಹ. ೨೦). ೨. ಬೇನೆ ; ವ್ಯಾಧಿ : ನಿನಗೇನು ಬಂತು ತೆವಲು (ನಮ್ಮನು. ೧೦೨) ; ಸುಳ್ಳು ಹೇಳಲಿಕ್ಕೆ ನನಗೆ ಏನು ತೆವಲು (ಮಲಮ. ೫೯೨). **ತೆವುಲು :** ೧. ಅವಳಿಗೆ ಅಡಕಲೆ ತೆವುಲು ಜಾಸ್ತಿ (ರೂಢಿ). ೩. ತೀಟೆ ; ಬೆದೆ ; ನಸೆ: ತೆವುಲು ತೀರಿದ ಮೇಲೆ ಲೌಡಿಯ ಸಂಗವೇಕೆ ? (ಗಾದ).
[ದೇ.॥ ತುಳು. ತೆವಲ್ ; ತೆಲು. ತೆವುಲು, ತೆಗುಲು ]

**ತೆವಲುಗಾರ** (ನಾ). ಗೀಳು ಹಿಡಿದವನು ; ಚಟವುಳ್ಳವನು :(೬).
[ ತೆವಲು + – ಗಾರ (< – ಕಾಱ) ]

**ತೆವಳ್** 'ತೆಮುೞ್' ನೋ.

**ತೆವಳಾಟ** (ನಾ). ತೆವಳುವಿಕೆ ; ದೇಕುವಿಕೆ : ಎಳೆಯ ಮಕ್ಕಳ ತೆವಳಾಟವೂ ಹಾವಿನ ಹರಿದಾಟವೂ ಒಂದು ದೃಷ್ಟಿಯಲ್ಲಿ ಇದೇ ರೀತಿಯದು (ಮನೋನಂ. ೧೬೭). [ ತೆವಳು (< ತೆಮುೞ್) + ಆಟ ]

**ತೆವಳು** 'ತೆಮುೞ್' ನೋ.

**ತೆವಳಿ** (ನಾ). ಅಲಕ್ಷ್ಯ ; ಉದಾಸೀನ. 'ತೆವಳಿಗಾಣ್' ಪರಾ. [ ? ]

**ತೆವಳಿಗಾಣ್** (ಕ್ರಿ). ಉದಾಸೀನಮಾಡು; ಕಡೆಗಣಿಸು: ಸತಿ ಪುಯ್ಯಲ್ಚಿದ ಪಳ್ ರಘೂದ್ವಹ ಕುಲಸ್ತ್ರೀ ಸೀತೆ ಪೆಣ್ಬುಯ್ಯಲಂ ಶ್ರುತಿ ಕಯ್ಕೊಂಡುದು ಕೇಳ್ದಿದಂ ತೆವಳಿಗಂಡಂದೆನ್ನ ವಿಖ್ಯಾತಿ ದೂಷಿತಮಕ್ಕುಂ (ಪಂಠಾಮಾ. ೯-೧೪೪). [ ತೆವಳಿ + ಕಾಣ್ ]

**ತೆವುಲು** 'ತೆವಲು' ನೋ.

**ತೆಳ್, ತೆಳು** (ಗು). ತೆಳ್ಳಿತು, ತೆಳ್ಳಿತ್ತು ಎಂಬುದಕ್ಕೆ ಸಮಾಸದ ಪೂರ್ವಪದವಾಗಿದ್ದಾಗ ಬರುವ ಆದೇಶ ರೂಪ. 'ತೆಳ್ಗನ್ನಡ', 'ತೆಳ್ನಡು', 'ತೆಳ್ವರಿಜು' ಪರಾ. **ತೆಳು.** 'ತೆಳುಂಗದಪು', 'ತೆಳುವಸಿಱ್' ಪರಾ. 'ತಿಳ್ಳಿ$_2$' ಹೋ.

**ತೆಳ್ಳನೆಯ** = ತೆಳ್ಳಗಿರುವ : ತೆಳ್ಳನೆಯ ಕೋಟು ಧರಿಸಿದುದರಿಂದ ನೆಕ್ಲುದೋವನ ಮೈಯಲ್ಲಿ ನಡುಕ ತಲೆದೋರಿತ್ತು (ಪುನರು. ೩೦೯); ದೃಷ್ಟಿಪಾಟವುಳ್ಳವರ ಬರಿಯ ಕಣ್ಣುಗಳಿಗೆ, ಮಬ್ಬಿನಲ್ಲಾಗಲಿ ತೆಳ್ಳನೆಯ ಮೋಡ ಮುಚ್ಚಿಕೊಂಡಿರುವಾಗಾಗಲಿ, ಶುಕ್ರನ ಕಲೆಗಳು ಅನೇಕ ವೇಳೆ ಕಾಣುವುದುಂಟು (ಜ್ಯೋತಿರ್ವಿ. ೧೧೬). [ < ತೆಳ್ಳಿತು ]

**ತೆಳಗು** (ನಾ). ಕೆಳಭಾಗ; ಅಡಿಭಾಗ: ಆ ಪುಸ್ತಕ ಪೆಟ್ಟಿಗೆಯ ತೆಳಗಿದೆ (ರೂಢಿ).

**ತೆಳಗಣ** = ಕೆಳಗಿರುವ ; ತಳದ : ನಾಲು ಆಳುವ ರಾಜ್ಯಘಟ್ಟದ ಮೇಲಣ ಠಾಣೆಯ ಘಟ್ಟತ್ತೆಳಗಣ ಠಾಣೆಯಂಗಳಲ್ಲಿ (ಮೈಆರಿ. ೧೯೪೩, ೩೭-೧೭ ; 1642). [ < ಕೆೞಗು ]

**ತೆಳಗೆ** (ಅ). ಕೆಳಗೆ ; ಅಡಿಯಲ್ಲಿ : ಇದೊ ತಗ್ಗು, ಅದೊ ಗುಡ್ಡ, ಅಗೊ ಮಲೆಯ ಬೆಟ್ಟ ನೆಲ ತೆಳಗೆ ಬಿಟ್ಟ (ಗಂಗಾತ. ೪೧-೧೨). [ < ಕೆೞಗೆ ]

**ತೆಳಱು** 'ತೆಣಱು' ನೋ.

**ತೆಳು** 'ತೆಳ್' ನೋ.

△ **ತೆಳುಂಪು** 'ತೆಳ್ಪು' ನೋ.

**ತೆಳುಕಾಗದ** (ನಾ). ದಪ್ಪವಲ್ಲದ ಕಾಗದ : ತೆಳುಕಾಗದದ ಮೇಲೆ ಊರಿ ಬರೆಯಬಾರದು (ರೂಢಿ). [ತೆಳು (< ತೆಳ್) + ಕಾಗದ ]

**ತೆಳುಗದಪು** 'ತೆಳ್ಗದಂಪು' ನೋ.

**ತೆಳುಗನ್ನಡ** 'ತೆಳ್ಗನ್ನಡ' ನೋ.

**ತೆಳುಗಲ್ಲ** 'ತೆಳ್ಗಲ್ಲ' ನೋ.

**ತೆಳುಗಟಿ** 'ತೆಳ್ಗಟಿ' ನೋ.

**ತೆಳುಗಾವಿ** (ನಾ). ತಿಳಿಯಾದ ಕಾವಿಬಣ್ಣದ ಸೀರೆ: ಸಾರಂಗವಟ್ಟ ಪಳಿ ಸಂಧ್ಯಾರಾಗಂ ತ್ರಿವಳಿ ಮಂಚಿಟಗೆ ಪಲ್ಲಕಿ ನಲ್ಲೂರ ತೆಳು[ಪಾಠಾಂ. ಳ] ಗಾವಿಯೆಂಬಾ ಸೀರೆಗಳಂ ಸತಿಯರೊಲಿಯೊಳುರುಪಿದರಾಗಳ್ (ಶ್ರೀಪುವಿ. ೧೦-೨೮); ಕುಂಬಳಗಂಟಿ ತೆರತವಳಿ ತೆಳುಗಾವಿಯುಂ ಬಳಿದಿನ ಸೀರೆ (ಅಮುಸಾಂ. ೪-೧೯). [ತೆಳು (< ತೆಳ್) + ಕಾವಿ]

**ತೆಳುಗಾಳಿ** (ನಾ). ಮೆಲ್ಲನೆ ಬೀಸುವ ಗಾಳಿ; ಮೆಲುಗಾಳಿ; ಮಂದ ಮಾರುತ: ತೆಳುಗಾಳಿಯುಂ ಬಯಸಿ ಭದ್ರದೊಳು ಚರಿಸುವ ರತಾಂತ ಸತಿಯರ ಕಂಡನು (ಹಡಕಾ. ೪-೩೩); ಬಳಲಿಕೆಯಿಲ್ಲೆಮಗಣ್ಣಾಜಿ ನಿನ್ನಯ ನಿಳಯಕ್ಕಿನ್ನೆಯ್ದಿ ಬಹಾಗ ತೆಳುಗಾಳಿಯಲ್ಲದೆ ಬಿರುಗಾಳಿಯಿಲ್ಲ (ಭರಚ. ೩೯-೧೮); ತೆಳುಗಾಳಿಗೊಯ್ಯನೆಯೆ ನಿರಿನಿರಿ ವಿಕಂಪಿಸುವ ಪಟಿಕನಿರ್ಮಲ ನದಿಯ ಪುಲಕಿತಮುಕುರದಲ್ಲಿ ಮಜ್ಜನಕ್ಕುಜ್ಜುಗಿಸಿ (ಶ್ರೀರಾಮಾ. ೧-೯). [ತೆಳು (< ತೆಳ್) + ಗಾಳಿ$_1$]

**ತೆಳುಗೊರಳು** (ನಾ). ತೆಳ್ಪನೆಯಂ ಕೊರಳು: ನೀಳವಾದ ತೆಳುಗೊರಳಿನ . . . ಎಂಟು ವರ್ಷದ ಹುಡುಗನೊಬ್ಬ . . . ನಾವಿಕ ಟೋಪಿಯನ್ನು ಧರಿಸಿಕೊಂಡಿದ್ದನು (ಪುನರು. ೪೪೦). [ತೆಳು (< ತೆಳ್) + ಕೊರಳು (< ಕೊರಲ್)]

**ತೆಳುತೆರೆ** 'ತೆಳ್ದೆರೆ' ನೋ.

**ತೆಳುದಗಡು** (ನಾ). ತೆಳುವಾದ ಲೋಹದ ಹಲಗೆ,–ಫಲಕ: ಝಗ ಝಗಿಪ ಬೆಳುದಿಂಗಳಿನ ತೆಳುದಗಡಿನಲು ತೊಳಗುವ ದುಕೂಲವ ಬಗಿದು (ಕುಮ್ಯಾಗ. ೫-೪೧). [ತೆಳು (< ತೆಳ್) + ತಗಡು]

**ತೆಳುದುಗುಲ** (ನಾ). ಶುಭ್ರವಾದ ಬಟ್ಟೆ: ಮಳೆಯುಜದ ಮಲ್ಲಿಗೆಯ ಮುತ್ತಿನ ತೆಳುದುಗುಲ ಸುಲಿಪಲ್ಲ ನಿಡುಗೇಗಳ ಬೆಳಗು ದೆಸೆ ಮುಸುಕು ತಿರೆ (ಸಾಳ್ವಭಾ. ೩-೩೫). [ತೆಳು (< ತೆಳ್) + ದುಗುಲ]

**ತೆಳುದೊಗಲು** (ನಾ). ಸೂಕ್ಷ್ಮವಾದ ಚರ್ಮ; ನವುರಾದ ಚರ್ಮ: ತೆಳುದೊಗಲ ನಿಡುಸೋಗೆಯುಡುಗೆಯನೆಳಗರುಳ ಸಿಂಗಾರದುಬುಬಿನ... ಕಾಳಿಜದಟ್ಟುಗುಳಿಗಳ ಕೆಳಗಳೊಳು ಕೊಡಗೂಸು ಪೂತನಿನಿಕರವೊಪ್ಪಿದವು (ಕುಮ್ಯಾಭೀ. ೫-೩೪). [ತೆಳು (< ತೆಳ್) + ತೊಗಲ್ (< ತೋಲ್$_1$)]

**ತೆಳುನಿದ್ರೆ** (ನಾ). ಸಣ್ಣ ನಿದ್ರೆ; ಮಂಪರು: ಸಿರಿಮಂಚಮಂ ಸುತ್ತಿ ಮುತ್ತಿ ಕುಳ್ಳಿರ್ದ ಸತಿಯರು ಕೂಡೆ ಮಾತಾಡುತಿರುತಿರಲು ತೆಳುನಿದ್ರೆ ಕವಿದುದೇಂ ವಣ್ಣಿಸುವೆನು (ಸೋಮಚ. ೧-೮೪). [ತೆಳು (<ತೆಳ್)+ನಿದ್ರೆ]

**ತೆಳುನೀರು** (ನಾ). ತಿಳಿಯಾದ ನೀರಂ; ಶುಭ್ರವಾದ ನೀರು: (+). [ತೆಳು (<ತೆಳ್) + ನೀರು$_1$ (<ನೀರ್$_1$)]

**ತೆಳುನೋಟ** (ನಾ). ಸ್ವಚ್ಛವಾದ ನೋಟ; ನಿರ್ಮಲವಾದ ನೋಟ: ಸನ್ನೆಯ ನೋಟ ಸನ್ಮಾನದ ಸವಿನೋಟ . . . ಭಿನ್ನದೋಜಿದ ತೆಳು ನೋಟದ ಲಲಿತಾಂಗಿ [ಪಾಠಾಂ. ಬಿನ್ನಣದ ತೇಲ್ವ ನೋಟವ ನೋಡುತಲಾಗ] ಚೆನ್ನೆಯರಿರ್ದರೊಂದೆಸೆಯ (ಅಬ್ಬಲೂ. ೩-೧೦೭). [ತೆಳು (< ತೆಳ್) + ನೋಟ]

**ತೆಳುಪು** 'ತೆಳ್ಪು' ನೋ.

**ತೆಳುಬಣ್ಣ** 'ತೆಳ್ವಣ್ಣ' ನೋ.

**ತೆಳುಮಜ್ಜಿಗೆ** (ನಾ). ತಿಳಿಯಾದ ಮಜ್ಜಿಗೆ; ನೀರಮಜ್ಜಿಗೆ: ಪನಸಿ ಪ್ಮ್ಮಾವು ಕಜ್ಜೂರದ ಪಣ್ಗಳ ರಸಾಯನವಮನೀಂಟಿ ತೆಳುಮಜ್ಜಿಗೆಯ ಕೊಂಡು ನೀರ್ಗುಡಿದು ಹೊಟ್ಟೆಯ ತಡಹುತೆಳ್ದು ಕಯ್ದೊಳೆದರು (ಸಮ್ಯಕೌ. ೭-೨೮). [ತೆಳು (<ತೆಳ್) + ಮಜ್ಜಿಗೆ]

**ತೆಳುಮೆಯ್**, ತೆಳುಮೈ (ನಾ). ಸ್ಥೂಲವಲ್ಲದ ದೇಹ; ಕೃಶ ಶರೀರ: ಕಚ್ಚುಕನ್ನಡಕದ ತೆಳುಮೆಯ್ಯ ಬಾಲೆಯೊಬ್ಬಳು ಆ ಭಾಷಣವನ್ನು . . . ತರ್ಜುಮೆ ಮಾಡುತ್ತಿದ್ದಳು (ಪುನರು. ೩೪೫). **ತೆಳುಮೈ:** ಅತ್ತಿಂದಿತ್ತ ತಿರುಗಾಡುತ್ತಿದ್ದ ತೆಳುಮೈಯ ಗುಜ್ಜಾರಿಯನ್ನು ಕಂಡು ಅವನು ಬಳಿ ಸಾರಿದನು (ಪುನರು. ೧೮೭). [ತೆಳು (< ತೆಳ್) + ಮೆಯ್]

**ತೆಳುಮೈ** 'ತೆಳುಮೆಯ್' ನೋ.

**ತೆಳುಮೊಗ** (ನಾ). ತೆಳುವಾದ ಮುಖ; ಕೃಶವಾದ ಮುಖ: ಅವರಲ್ಲೊಬ್ಬಳ ವಯಸ್ಸು ಸುಮಾರು ನಲವತ್ತು. ಅವಳ ತೆಳುಮೊಗ ಬಿಳಿಚಿಕೊಂಡಿತ್ತು (ಪುನರು. ೧೪೦). [ತೆಳು (< ತೆಳ್) + ಮೊಗ]

**ತೆಳುವಸಿಜು್** 'ತೆಳ್ವಸಿಜು್' ನೋ.

**ತೆಳುವಸಿಜು** 'ತೆಳ್ವಸಿಜು್' ನೋ.

**ತೆಳುವಸುಜು** 'ತೆಳ್ವಸಿಜು್' ನೋ.

**ತೆಳುವಳಕು** 'ತೆಳ್ವಳಿಕು' ನೋ.

**ತೆಳುವಾಸೆ** 'ತೆಳ್ವಾಸೆ' ನೋ.

**ತೆಳುವು** 'ತೆಳ್ವು' ನೋ.

**ತೆಳುವುಡಿ** (ನಾ). ಸಣ್ಣ ಪುಡಿ; ನವುರಾದ ಹುಡಿ: ತೆಳುವುಡಿಯ ಮಳಲಿಡಿಯಲಿತ್ತಡಿಯ ತಳಗಡಿಯ ಪೊಳೆ ನೆಱೆಯಲುಱೆ . . . ಸಲೆ ಕಣ್ಗೆಸೆದಳಂದು ದಿವಿಜಸಿಂಧು (ಜೈಮಿಭಾ. ೯-೨೪). [ತೆಳು (<ತೆಳ್) + ಪುಡಿ$_2$]

**ತೆಳುವೆಣ್ಣು** (ನಾ). ತೆಳುವಾದ ಶರೀರವನ್ನುಳ್ಳ ಹೆಣ್ಣು; ಕೋಮಲೆ: "ತೆಳುವೆಣ್ಣು, ಲತಾಂಗಿ." (Sylph. ಇಂಕನಿ). [ತೆಳು (<ತೆಳ್) + ಪೆಣ್ಣು (<ಪೆಣ್)]

**ತೆಳುವೆಲರ್** 'ತೆಳ್ವೆಲರು' ನೋ.

**ತೆಳುವೆಳಗು** 'ತೆಳ್ವೆಳಗು' ನೋ.

**ತೆಳ್ಗದಂಪು**, ತೆಳಂಗದಪು, ತೆಳ್ಗದಪು (ನಾ). ಸುಂದರವಾಗಿರುವ ಕೆನ್ನೆ; ನುಣುಪಾದ ಕೆನ್ನೆ; ಕೋಮಲವಾದ ಕಪೋಲ: ದೇವಿಯ ತಾಂಬೂಲ ಚ್ಛಾಯಾವಿಷ್ಕೃತಮಾದ ತೆಳ್ಗದಂಪುಗಳೆಸೆಗುಂ (ಪುಷ್ಪಪು. ೩-೪೮); ಕರ್ಮ ಧಾರಯಕ್ಕೆ – ತೆಳ್ಗದಂಪು, ಒಳ್ಗನ್ನಡಂ (ಶಮದ. ೧೬೪ ಪ್ರಯೋ); ಸೊಗಸುವ ತೊಳಪಗಣ್ಗಳ ತೆಳ್ಗದಂಪುಗಳ ಸಂಪಗೆಯ ಪಳಿವ ಮೂಗಿನ . . . ಪೆಣ್ಗಳಿರ್ದರು (ಜಿಬಪು. ೭-೧೨). **ತೆಳುಗದಪು:** ಅವನ ಕುಳ್ಳಿರಿಸಿ ತೆಳುಗದಪಪಾಳಾಧರವ ಚುಂಬಿಸಿ ಸುಖದಳೆದಳು (ಕಂನವಿ. ೧೦-೩೦). **ತೆಳ್ಗದಪು:** ಭುಜಂಗಳ ತಣ್ಪನೊತ್ತು ಬಿಂಕಂಬಡೆದಿರ್ದ ತೆಳ್ಗದಪಿನೊತ್ತು (ಸೂಕ್ತಿಸು. ೧೦-೨೬೦); ಪಸರಿಪೆಳನಗೆಯ ತೆಳ್ಗದಪಿನಿಂ . . . ಕಾಂತೆ ಕಣ್ಗೆಸೆದಿರ್ದಳು (ಜೈಮಿಭಾ. ೧೮-೨೯); ಮೆಲ್ಲಡಿ, ಒಳ್ನಾಳ್, ತೆಳ್ಗದಪು (ಶಬ್ದಾನು. ೬೦ ಪ್ರಯೋ); ಪೆರೆನೊಸಲ ಚೆಂದುಟಿಯ ನುಣ್ದನಿಯ ತೆಳ್ಗದಪಿನ . . . ಮುಗ್ಧೆ (ವಂಕಾರಾ. ೫-೬-೫೮). [ತೆಳ್ + ಕದಂಪು]

**ತೆಳ್ಗದಪು** 'ತೆಳ್ಗದಂಪು' ನೋ.

**ತೆಳ್ಗನ್ನಡ**, ತೆಳಂಗನ್ನಡ (ನಾ). ತಿಳಿಯಾದ ಕನ್ನಡ; ಶುದ್ಧವಾದ ಕನ್ನಡ: (+). **ತೆಳುಗನ್ನಡ:** ಒಳುಗನ್ನಡವಚ್ಚಗನ್ನಡಂ ಪೊಸತೆಂಬುದು ತೆಳುಗನ್ನಡ ಮಿಶ್ರದಿನಿದನಿಳೆಯೊಳ್ ಸತ್ಪುರುಷರೋದಿ ಕೇಳ್ವುದು ಸತತಂ (ಕವಿಚ. III, ೧೪೯. ರಾಜಾವಳೀ ಕಥೆ). [ತೆಳ್ + ಕನ್ನಡ$_1$]

**ತೆಳ್ಗಪ್ಪುರ** (ನಾ). ಶುಭ್ರವಾದ ಕರ್ಪೂರ: ನೋಡಿದ ಕಣ್ಗಳಿಟ್ಟ ತೆಳ್ಗಪ್ಪುರದ ಸಲಗೆಯಂತಕ್ಕರಿಂ ಕೂಡೆ ಕೊಂಡಾಡಿದ ಬಾಯ್ಗೋರಂದದಿಂ ತೀವಿದ ತನಿಗೆನೆವಾಲಂತೆ ನೇರ್ಪಟ್ಟ ನಿನ್ನಗ್ಗದ ದೇಹಚಾಯೆಯಿಂ ತಣ್ಣನೆ ತಣಿಯದೆ ಲೋಕತ್ರಯಂ ಚಂದ್ರನಾಥ (ಧರ್ಮನಾ. ೫-೬೩). [ತೆಳ್ + ಕಪ್ಪುರ]

**ತೆಳ್ಗಲ್** (ನಾ). ಸಪುರವಾದ ಕಲ್ಲು, ಚಪ್ಪಡಿ: ಕುಱಿ ತೆಮರಂ ಪಸರಿಸಿ ತೆಳ್ಗಲ್ಲೊಳ್ ಘಟಿಯಿಸುವುದು ಸುಸ್ಥಾನಶಯನನ[ ಮ ]ಪ್ಪಂತೆ ನೆಲಂ (ಅಶ್ವಶಾ. ೭-೫). [ತೆಳ್ + ಕಲ್$_3$]

**ತೆಳ್ಗಲ್ಲ**, ತೆಳಂಗಲ್ಲ (ನಾ). = ತೆಳ್ಗದಂಪು : ಗಲ್ಲಕ್ಕೆ – ಗಲ್ಲಗಿವಿ . . . ಗಲ್ಲಸ್ಥಳಂ, ತೆಳ್ಗಲ್ಲ (ಶಮುದ. ೨೯೮ ಪ್ರಯೋ) ; ತೆಳ್ಗಲ್ಲ ಪೂಸರನ ತೋಳ್ಗಲ್ಲ ದಟ್ಟಡಿಗಳೊಳ್ಗಾಡಿ ಜೋಗಿಗಳ ಬುಳ್ಗೇಡಿ ನಳಿಸುಳಿಗುರುಳ್ಗರ್ಪಿನೊಳ್ಪಿನೊಂದೇಳ್ಗೆ ವಿಟರೆರ್ದೆವಾವುಗಳ್ಗಿಟ್ಟ ಪೇಳ್ಗೆ (ಉದ್ಭಟ. ೫-೨೦). **ತೆಳುಗಲ್ಲ** : ತನುರುಚಿ ನಗುವುದು ರನ್ನದ ತೊಡವ ಮಿಗೆ ಪಚ್ಚೆಗೆಂಪ ಲತಗೆಯ ಹುರುಡಿಪುದು ತೆಳುಗಲ್ಲವಾ ಸ್ವಯಂಪ್ರಭೆಗೆ (ವರ್ಧಚ. ೪-೮೦).
[ ತೆಳ್ + ಗಲ್ಲ$_1$ ]

**ತೆಳ್ಗಱಿ**, ತೆಳಂಗಱಿ (ನಾ). ತಿಳಿಯಾದ ಗಂಜಿ,–ಅಂಬಲಿ : ಎರಡುಂ ಬಾಳಕ ಪದ್ಮಕಮೆರಡುಂ ಚಂದನಮೆನಿಪ್ಪುವಂ ತೆಳ್ಗಱಿಯಿಂದರೆದು ನಡುನೆತ್ತಿಯೊಳ್ ಪೂಸೆ ರುಜಾರ್ತನ ತೃಷೆಯು ದಾಹದೊದವಂ ಕಳೆಗುಂ (ಲೋಕೋಪ. ೯–೨೮). **ತೆಳುಗಱಿ** : “ಗಂಜಿ . . . ಕಾಂಜಿಕಮೆನೆ ತೆಳುಗಱಿ” (ವಸ್ತುಕೋ. ೯೨-೪). [ ತೆಳ್ + ಕಱಿ$_4$ (<ಕಳಿ$_5$) ]

**ತೆಳ್ಗೂದಲು** (ನಾ). ನವುರಾದ ಕೂದಲು ; ತೆಳ್ಳಗಿರುವ ಕೂದಲು : ನೀಟಾಗಿ ಬಾಚಿಕೊಂಡಿದ್ದ ತೆಳ್ಗೂದಲಿನ ಬಿಳಿಚುಮೋರೆಯ ತರುಣ ಕಲಾವಿದ (ಪುನರು. ೩೫೩). [ ತೆಳ್ + ಕೂದಲು (< ಕೂಂದಲ್) ]

**ತೆಳ್ದುಟಿ** (ನಾ). ತೆಳುವಾದ ತುಟಿ ; ತೆಳ್ಳಗಿರುವ ತುಟಿ : ಕೆದರ್ದ ತಲೆನವಿರರಮು ಮುಗಿದ ಕಣ್ಗಳ್ ಜೋಲ್ದ ವದನದಿಂ ಭುಜದೊಳೊಱಗಿದ ಕೊರಲ್ ತೆಳ್ದುಟಿಯ ತುದಿ (ಚಬಪು. ೧೦-೬೩). [ ತೆಳ್ + ತುಟಿ$_2$ ]

**ತೆಳ್ದೆರೆ**, ತೆಳಂತೆರೆ (ನಾ). ೧. ಸಣ್ಣ ಅಲೆ,_ತರಂಗ : ಶರದೊಳ್ಮುಳುಂಗಿ ನೆಗಪಿದ ಕರಿಕುಂಭಂ ಫೇನ ಪಿಹಿತಮಿಂಬಾದುದು ತೆಳ್ದೆರೆ ಮೇಲುದಱಿಂ ಪೊಣ್ಮಿದ ಸರಸಿಯ ಮಲಯಜ ವಿಲಿಪ್ತ ಕುಚಕುಂಭದವೋಲ್ (ಶಬಶಂ. ೨-೫೬). **ತೆಳುತೆರೆ** : ೧. ತೆಳುತೆರೆಯಿಲ್ಲದಿಂಗಡಲೊಳು ತೇಲುವ ಪೊಳೆವ ಚಂದಿರನೊಲು . . . ಬೆಳ್ಳಿಯ ಘಳಿಗೆವಟ್ಟಲು ರಂಜಿಸಿದುದು (ವರ್ಧಚ. ೫-೪೮). ೨. ತೆಳುವಾದ ಮುಸುಕು,_ಪರದೆ : ತೆಳುತೆರೆಯ ಮರೆಯಲ್ಲಿ ಅವಳ ಸುಂದರವಾದ ಮುಖ ಕಾಣಿಸುತ್ತಿತ್ತು (ರೂಢಿ). [ ತೆಳ್+ತೆರೆ$_4$ ]

**ತೆಳ್ದೇಹ** (ನಾ). = ತೆಳಂಮೆಯ್ : ಇಂತಪ್ಪ ಶೂರೆಯುರೆನುತಿರ್ದು ತೆಳ್ದೇಹಮುಂ ತಾಳ್ದಿರೇಕೆಂದಳವಳು (ಮೋಹತ. ೪-೬೪).
[ ತೆಳ್ + ದೇಹ ]

**ತೆಳ್ನಡು** (ನಾ). ಕೃಶವಾಗಿರುವ ಸೊಂಟ; ಸಣ್ಣ ನಡು : ಬಂದರ್ ಗಡಣದೆ ತೆಳ್ನಡುವಿನ ಸೆಳೆನಡುವಿನ ಬಡನಡುವಿನಸಿಯುನಡುವಿನ ಸತಿಯರ್ (ಜಗವಿ. ೪-೧೨೦) ; ತೆಳ್ನಡು ಬಳ್ಕೆ ಸಖೀಕದಂಬಕಂ ನಲಿದೊಡನೇಱೆ ನೀಱೆ ಬಿಡದೇಱಿದಳೊಯ್ಯನೆ ರಮ್ಯಹರ್ಮ್ಯಮಂ (ರಾಜಶೇ. ೭-೦೭).
[ ತೆಳ್ + ನಡು$_2$ ]

**ತೆಳ್ಪಱಿ** (ಕ್ರಿ). ಕೃಶತೆ ಅಳಿದುಹೋಗು ; ದಪ್ಪವಾಗು : ಪೆತ್ತುಂ ತೆಳ್ಪಱಿಯದ ನಡು . . . ಮುನಿದುಂ ಚೆಲ್ವೊತ್ತರಿಪ ನಗೆಮೊಗಂ ಮೆಯ್ವೆತ್ತಿರೆ ಕರಮೊಪ್ಪಿದಪ್ಪರಲ್ಲಿಯ ಪೆಂಡಿರ್ (ಕಾವ್ಯಾವ. ೭೪೪).
[ ತೆಳ್ಪು + ಅಱಿ$_1$ ]

**ತೆಳ್ಪು**, ತೆಳಂಪು, ತೆಳಂಪು (ನಾ). ೧. ಪರಿಶುದ್ಧತೆ; ನಿರ್ಮಲತೆ; ಶುಭ್ರತೆ : ನೀರ ತೆಳ್ಪು ದುಗ್ಧಾಬ್ಧಿಗೆ ದೊರೆ ಸರಿ ಪೋಲ್ವೆಯೆಂಬೆನಱಿಯೆಂ ಪೊಗಟಲ್ (ಶಾಂತಿಪು. ೩-೫); ದಯೆಯಿಂದೊಳ್ಪಿನ ತೆಳ್ಪಿನ ಗುಣಗಣಾಳಂಕಾರದಿಂ ಮಾರ್ಗ್ಗನಿರ್ಣ್ನಯದಿಂ ತತ್ವವಿಚಾರದಿಂ . . . ಅಧಿಕನೆಂದು (ಸೌಇಇ. XX, ೧೮-೧೯ ; 980) ; ಕಲಿಕಾಲದೇಳ್ಗೆಯುಂ ದೆಸೆಗಿಡೆ ತೂಳ್ದಿ ತಾಳ್ದಿ ಕೃತಲಕ್ಷ್ಮಿಯನೊಳ್ಪಿನ ತೆಳ್ಪುಗಳ್ ಜಗಕ್ಕೆಸೆದಿರೆ (ಎಕ. VII, ಶಿಕಾರಿ. ೧೨೫-೧೫ ; 1019) ; ಪೂತ ಪೂಗೊಳಗಳ ತೆಳ್ಪು [ಪಾಠಾಂ. ತಣ್ಪು] ತೆಂಕಣೆಲರೊಳ್ಪು ಲತಾಳಿಯ ತಳ್ಪು (ಬಂಹರಿ. ೨-೫) ; ನಿಳ್ಪುಂ ಬೆಳ್ಪುಂ ತೆಳ್ಪುಂ ತಳ್ಪೊಯ್ದಿರೆ . . . ಒಳ್ಪಂ ಗೆಡೆಗೊಂಡು ಸೊಗಯಿಸುವ ಮಂಡಗೆಯುಂ . . . ಇಟ್ಟರ್ (ಪಾರ್ಶ್ವಪು. ೮-೫೧) ; ಶೋಭಿಸಿ ತೆಳ್ಪಂ ತಾಳ್ಪ ಚಂದ್ರೋಪಳಮುಮಳ ಶರತ್ಪೂರ್ಣ ಶುಭ್ರಾಂಶುವಂ (ಪುಷ್ಪಪು. ೩-೭೬). ‘ಕಡುದೆಳ್ಪು’ ಪರಾ. ೨. ತೆಳಂವಾಗಿರುವುದು ; ಸಣ್ಣಗಿರುವುದು ; ಕೃಶವಾಗಿರುವುದು : ನುಣ್ಪುಸಿಱಿನೊಳ್ ತೆಳ್ಪು ಬಾಳೆದೊಡೆಯೊಳ್ ನುಂಪು ನುಡಿಯೊಳ್ ಸೊಗಸಿನಿಂಪು ಸಂಜನಿಸಿ ಮೆಱೆಯೆ (ಚಬಪು. ೩೪-೬). △ **ತೆಳುಂಪು** : ೨. ಬಸಿಱ ತೆಳುಂಪು ಕುಂದದೆ . . . ನುತ ತ್ರಿವಳಿ ಕೆಟ್ಟಿರದೆ (ನೇಮಿಪು. ೮-೧೦೨). **ತೆಳುಪು** : ೨. “ತೆಳುಪಾದುದು–ಪೇಲವ, ವಿರಲತನು” (ನಾಚಿರಾ. ೬); ಲೋಲಲೋಚನಂಗಳ ಪೊಳೆಪುಮಂ ತೆಳ್ವಸಿಱ ತೆಳುಪುಮಂ (ಮುಹಾನೇ. ೧೪-೬೦ ವ).
[ ತೆಳ್ + – ಪು$_2$./ತಮಿ. ತೆಳಿಪು ; ತೆಲು. ತೆಲ್ಪು, ತೆಲುಪು ]

**ತೆಳ್ಪುಗೆಡು** (ಕ್ರಿ). ಶುಭ್ರತೆಯನ್ನು ಕಳೆದುಕೊಳ್ಳು; ಮಲಿನವಾಗು: ಮದವದ್ದಂತಿ ವರೂಥವಾಜಿಭಟ ಸಂಘಾತಂಗಳ್ . . . ತೆಳ್ತುರ್ವಿ ಪರ್ವಿದೊಡಾ ಮುನ್ನಿನ ತೆಳ್ಪುಗೆಟ್ಟು ಕೆಸಱಾಯ್ತಾಕಾಶಗಂಗಾಜಲಂ (ಪಂಪಭಾ. ೦೦-೨೯).
[ ತೆಳ್ಪು + ಕೆಡು$_1$ ]

**ತೆಳ್ಪುವೆಱು** (ಕ್ರಿ). ಶೋಭೆಯನ್ನು ಪಡೆ,_ಹೊಂದು ; ಶೋಭಿಸು : ಶರೀರಮುಬ್ಜಜನ್ಮನೆ ಸಮೆದಿಂದುಕಾಂತಮನಕಾಂತಿವೊಲೇಂ ತನೆ ತೆಳ್ಪುವೆತ್ತುದೋ (ಶಾಂತಿಪು. ೯-೧೯೮). [ ತೆಳ್ಪು + ಪೆಱು$_1$ ]

**ತೆಳ್ಪೊಡೆ** ‘ತೆಳ್ವೊಡೆ’ ನೋ.

**ತೆಳ್ಪೊರೆ** ‘ತೆಳ್ವೊರೆ’ ನೋ.

**ತೆಳ್ಪೊಟಿಲ್** (ನಾ). ಕಿರಿದಾದ ಪೊಟರೆ,_ಡೊಗರು : ಪೆರ್ಮರನ ಪಾಱುಗೊಂಬಿನೊಳ್ ಪೊಡೆಯ ತೆಳ್ಪೊಟಿಲೊಳೊತ್ತುಗಟ್ಟಿದ ಕಿಱುನೊಟಿನ ಸವಿಜೇನ ಸಜ್ಜೆನಿಂಬನಿಯುನೆಱೆದು (ರಾಮಾಶ್ವ. ೧೦೦-೨೯).
[ ತೆಳ್ + ಪೊಟಿಲ್$_1$ (< ಪೋಟಿಲ್) ]

**ತೆಳ್ಮಡಿ** (ನಾ). ಶುಭ್ರವಾದ ವಸ್ತ್ರ; ಸ್ವಚ್ಛವಾದ ಬಟ್ಟೆ : ಬೆಳ್ದೆರೆಯ ಮುಗಿಲ ಹತ್ತಿಯ ತೆಳ್ಮಡಿಯನುಟ್ಟು ಪೂರ್ಣಿಮಾರಜನಿಯಂತೆಸೆದಳಾ ಕೌಸಲ್ಯೆ (ಶ್ರೀರಾಮಾ. ೧೪-೩೮೦). [ ತೆಳ್ + ಮಡಿ$_5$ ]

**ತೆಳ್ವಣ್ಣ**, ತೆಳಂಬಣ್ಣ (ನಾ). ೧. ತಿಳಿಯಾಗಿ ಬಳಿಯುವ ಬಣ್ಣ : ತೊಡೆವ ಬೆರಸುವ ತೆರಳ್ಚುವಿಡುವರ್ಣದ ತೆಳ್ವಣ್ಣ[ಪಾಠಾ. ರ್ಣ]ದರ್ಧೋದಕದ ಬಹುವಿಧದ ವರ್ಣಕ್ರಮಮುಮಂ (ವರ್ಧಪು. ೭-೩ ವ). **ತೆಳುಬಣ್ಣ** : ೨. ತಿಳಿಯಾದ ಬಣ್ಣ : ಗಂಡ ಮಾಟವಾಗಿ ಹೊಲಿದ ತೆಳುಬಣ್ಣದ ದೂಳು ಕೋಟನ್ನೂ ದೋರೆಟೋಪಿಯನ್ನು ಧರಿಸಿದ್ದನು (ಪುನರು. ೪೩೯).
[ ತೆಳ್ + ಬಣ್ಣ$_2$ ]

**ತೆಳ್ವದ** (ನಾ). ಮನ್ಮಥದ್ರವ ; ಕಾಮರಸ : ತುಳ್ಕಿದವು ತೆಳ್ವದದಂತೆ ನವದ್ರವಾಂಬುಗಳ್ (ಲೀಲಾವ. ೨-೪) ; ಪೊಱಮಾಱೆಯೊಳುಚ್ಚಳಿಪ ತೆಳ್ವದಮಿರ್ವರೊಳೊಪ್ಪೆ (ಕಬ್ಬಿಕಾ. ೩೩೨) ; ತಳ್ವಲ್ಲದೆ ತೆಳ್ವದಂ ಸುರಿಯೆ (ಸೂಕ್ತಿಸು. ೧೪-೫೭) ; ಮಾನಿತ ವರಾಂಗದೊಳ್ ತೆಳ್ವದಂ ಸೂಸೆ (ಚಬಪು. ೨೦-೨೦).
[ ತೆಳ್ + ಪದ$_1$ ]

**ತೆಳ್ವರಿಜು** (ನಾ). ನವುರಾದ ಉಡುಪು,–ಉಡುಗೆ : ತೊಟಲ್ವ ಕಣ್ಮಲರು ಮಾನಾಕುಳಂ ತಳೆದ ತೆಳ್ವರಿಜುಂ . . . ಅಪೂರ್ವಭಾವಮುಂ ಲಲನೆಗೆ ತಂದುವಂದನುದಿನಂ ಬಳೆಯುತ್ತಿರೆ ಗರ್ಭದರ್ಭಕಂ (ಪುಷ್ಪಪು. ೪-೧೫).
[ ತೆಳ್ + ಪರಿಜು ]

**ತೆಳ್ವಸಿರು** ‘ತೆಳ್ವಸಿಱ್’ ನೋ.

**ತೆಳ್ವಸಿಱ್**, ತೆಳಂವಸಿಱ್, ತೆಳಂವಸಿಱು, ತೆಳಂಪಸುಱು, ತೆಳ್ವಸಿರು, ತೆಳ್ವಸಿಱು, ತೆಳ್ವಸುರು, ತೆಳ್ವಸುಱು (ನಾ). ಕೃಶವಾದ ಹೊಟ್ಟೆ,–ಉದರ : ತನುರೇಖೆಗೊಂಡ ಕೊರಲೊಡ್ಡಿದ ಪೆರ್ಮೊಲೆ ತೆಳ್ವಸಿಱ್ (ಪಂಪಭಾ. ೧-೧೦೮) ; ಸುದತಿಯ ತೆಳ್ವಸಿರ್ನೆಱೆ ಪೊದಟ್ದುದು ವಕ್ಷ

ಸರೋರುಹಂ ಬೆಳರ್ತುದು (ಸುಕುಮಾ. ೧೦-೧೪) : ಎಸೆವುದು ವಳಿತ್ರಯಂ ಗಳಿನೆಸೆವಸಿಯಳ ತೆಳ್ವಸಿಜ಼್ (ಮಲ್ಲಿಪು. ೩-೬೬) ; ಅವಳ ತೆಳ್ವಸಿಜ಼ಿನೆಸೆಗಂ (ಜಗವಿ. ೧೦-೨೬) ; ತೆಳ್ವಸಿಜ಼ೊಳೆಸೆವ ಸೊಂಪಿನಿಂ ತಾನುಂ ನೆಗೆತರೆ (ಸುಕುಮಾ. ೫-೮). **ತೆಳುವಸಿಜ಼್ :** ಸಿದ್ಧರಾಮನರಿಷಡ್ವರ್ಗಮಂ ಗೆಲಲು ನಡೆವಡಜನಿಟ್ಟ ಗೂಡಾರವಾ ಕಂಗೊಳಿಸಿತೆನೆ ತೆಳುವಸಿಜ಼್ ಪರ್ಚಿತು (ಸಿದ್ಧರಾ. ೧-೪೯). **ತೆಳುವಸಿಜು :** ಹೊಳೆವ ಕಂಗಳ ದೀರ್ಘ ಕೇಶದ ತೆಳುವಸಿಜ ... ಶಂಕಿನಿಯರ ನೃಪಾಲನೀಕ್ಷಿಸಿದ (ಜೀವಂಚ. ೧೭-೪೨). **ತೆಳುವಸುಜು :** ತೆಳುವಸುಜ಼ ಬಿಜುಪೊಯ್ಲ ... ಹಾಹಾರವದ ಕಾಯದಲಿ ಲಲನೆ ಬರೆ (ಕುಮ್ಮಾದ್ರೋ. ೭-೧೨) ; ಸೂಳುವೊಯ್ಲಿನ ತೆಳುವಸುಜ಼ ಕರತಾಳದಲಿ ಹಾಹಾವಿರಾವದ ಮೇಳವದ ಗೀತದಲಿ ಬಂದಳು ದ್ರೌಪದೀದೇವಿ (ಕುಮ್ಮಾಗ. ೧೦-೧೪) ; ತ್ರಿದಶರ ಹೊಟ್ಟೆ ತೆಳುವ ಸುಜಾಯ್ತು ಬೀತುದು ದೈವಗುರುಭೀತಿ (ನಿಘಾಗ. ೪-೦೦-೦೭). **ತೆಳ್ವಸಿರು :** ಸುಳಿಗುರುಳು ತೆಳ್ವಸಿರು ಬಡನಡುವು ನಡುಗೆ (ವೆಂಕಾರಾ. ೫-೬-೩೯). **ತೆಳ್ವಸಿಜು :** ಕಂಪಿಸುವ ನುಣ್ದೊಡೆಗಳ ಬಿದಿರುವ ಜಘನ ತೆಳ್ವಸಿಜ (ಮೋಹತ. ೦೯-೬೫). **ತೆಳ್ವಸುರು:** ಅಡಿ ಜಘನ ನಡು ತೆಳ್ವಸುರು ... ಮುಡಿಗಡಣದಿ ಸಲೆ ಸೊಗಸುತಿರಲ್ಕು (ನವಮೋ. ೨೪-೦೯). **ತೆಳ್ವಸುಜು :** ನಗೆಮೊಗದಲರ್ಗಣ್ಣ ಬಡಬಾಸೆ ತೆಳ್ವಸುಜ ತೊಂಗಲ್ಗುರುಳ ವಿಮಲ ಪದ್ಮಾವತಿಯ ನಿಟ್ಟಿಸಿದನು (ರಾಘಚ. ೦೩-೨೪).

[ ತೆಳ್ + ಬಸಿಜ಼್ ]

**ತೆಳ್ವಸಿಜು** 'ತೆಳ್ವಸಿಜ಼್' ನೋ.

**ತೆಳ್ವಸುರು** 'ತೆಳ್ವಸಿಜ಼್' ನೋ.

**ತೆಳ್ವಸುಜು** 'ತೆಳ್ವಸಿಜ಼್' ನೋ.

**ತೆಳ್ವಳಿಕು, ತೆಳಂವಳಂಕಂ** (ನಾ). ಶುಭ್ರವಾದ ಸ್ಫಟಿಕ ; ನಿರ್ಮಲವಾದ ಪಟಿಕ : ಪಗಲನುದಂಶುವಿಂದುಗುಟ್ಟಿ ದೀವಿಗೆ ತೆಳ್ವಳಿಕಿಂದಮಾದ ನುಣ್ಣಗ ಲಿಯೊಳ್ ... ಸಜ್ಜೆಯೋವರಿಯಿದೋವರಿ ಮಾಡಿತು ಕಂತುಗೆಮ್ಮೆಮಂ (ಚಂದ್ರಪು. ೮-೬೦). **ತೆಳುವಳುಕು :** ಕಡೆಗಣ್ಣೆಳಗೆಸೆದುವು ತತ್ಕಳಮೆಗೆಜಗ ಲೆನುತಾಗಸದೊಳ್ಮಂದ ಗಿಳಿಯಂ ಸೆಳೆಯಲೆನುತ್ತವರೆತ್ತಿದ ತೆಳುವಳುಕಿನ ಸೆಳೆಯೋ ಪಸುರ್ಮಟ್ಟೆಯ ತೊಳಗುವ ಗಾಳಿಪಟಕೆ ಕಟ್ಟಿದ ರಜ್ಜುವಿದೋ ಎಂಬಂತೆ (ಜಯಶಾ. ೧-೪೦) ; ತೆಳುವಳುಕಿನ ಬಟ್ಟಬಟ್ಟಲೊಳಗೆ ಕಣ್ಗೊಳಿಸುವ ಕತ್ತುರಿಗೆಸಱು ಎಳಸಿದುದಿಂದುಮಂಡಲದ ನಡುವೆ ನಳನಳಿಪ ಕಳಂಕವಿದೆನಲು (ಕುರಾಸಾಂ. ೮-೦೩). [ತೆಳ್ + ಪಳಿಕು$_2$ (<ಪಟಿಕ$_1$)]

**ತೆಳ್ವಳ್ಳಿ** (ನಾ). ತೆಳ್ಳಗಿರುವ ಅಳ್ಳಿ ; ತೆಳುವಾದ ಪಕ್ಕೆ : ಆಱದ ಬೆಮರ್ ನಿಟ್ಟುಸುರ್ಗಳಿಂ ಪೊಯ್ಯ್ವ ತೆಳ್ವಳ್ಳಿ[ಪಾಠಾಂ. ತೆಳ್ವಳಿಯ]ಬಳಲ್ದ ಕೈಮೆಯ್ಯ ಪೊಸಗಂಪು ಕೆದಱಿದ ನಿಱಿಯ ಸುರತಾಂತೆಯರ್ ದೇವಕಾಂತೆಯರ್ ಬರುತಿರ್ದರು (ಜಬಪು. ೦೯-೨೫). [ ತೆಳ್ವು + ಅಳ್ಳಿ$_1$ ]

**ತೆಳ್ವಾಸೆ, ತೆಳಂಬಾಸೆ** (ನಾ). ನವುರಾದ ಬಾಸೆ: ಸಣ್ಣನಡು ಬಳೆಯ ತಿವಳಿಗಳೆಡೆಗೆ ತೆಳ್ವಾ[ಪಾಠಾ. ಳುವಾ]ಸೆ ನುಣ್ಣನೆ ಪೊಗರ್ವಡೆಯೆ (ಜೈಮಿಭಾ. ೦೮-೩೪). **ತೆಳುವಾಸೆ :** ಮೇಲಿನ ಪ್ರಯೋಗದ ಪಾಠಾಂತರವನು. ನೋಡಿ. [ ತೆಳ್ವ + ಬಾಸೆ$_1$ ]

**ತೆಳ್ವು, ತೆಳುವು** (ನಾ). ೧. = ತೆಳ್ಪು ೨ : ನಿಱಿಯ ಸಿಂಗರದುಡೆ ತೆಳ್ವು ದಸಿಯ ಪೊಡೆಯು ... ಸೌಂದರಿಯುದರಸಿ (ಜೈಮಿಭಾ. ೧೧-೯). **ತೆಳುವು :** ೨=ತೆಳ್ಪು ೧ : "ಸ್ಫುಟಃ – ತೆಳುವುಂ, ವಿಕಾಸವುಂ" (ಕಾಶಶ. ೨೦). ೩. ಅಸ್ಥಿರವಾದಂದಂ ; ಬೇಗ ಮರೆತುಹೋಗುವಂತಹುದು : ಜನತೆಯ ನೆನಪು ತೆಳುವಾದುದು ; ತಾತ್ಕಾಲಿ ಪ್ರಮೇಯ ಪ್ರಸಂಗಗಳಲ್ಲಿ ಅದಕ್ಕೆ ಹೆಚ್ಚು ಆದರ (ಜದೀವ. ೦೫೬). [ ತೆಳ್ + – ವು ]

**ತೆಳ್ವುಸುರು** 'ತೆಳ್ಪುಸಂರಂ' ನೋ.

**ತೆಳ್ವೆಮರ್** (ನಾ). ಕಿರಂಬೆವರಂ ; ಸಣ್ಣನೆಯ ಬೆವರಂಹನಿ : ವಿಭೂಷಣಾಂಶುಲತೆ ತಂದಲ ಬಿಂದುವೊಲುಣ್ಮೆ ತೆಳ್ವೆಮರ್ಗಳಿಯಿಸೆ ಮೇಘಮಾಳಿವೊಲದೇನೆಸೆದತ್ತೊ ನಭಃಪ್ರಯಾಣದೊಳ್ ... ಖಚರಾಂಗನಾಜನಂ (ವರ್ಧಪು. ೫-೨೭). [ ತೆಳ್ + ಬೆಮರ್$_2$ ]

**ತೆಳ್ವೆಳಗ** (ನಾ). ಶುಭ್ರವಾದ ಬೆಳಕನ್ನುಳ್ಳವನು ; ಚಂದ್ರ : ಮಿಗಲ ಚ್ಚಣಂ ತೆಳ್ವೆ[ಪಾಠಾಂ. ತಣ್ಬೆ]ಳಗನಮರ್ದುಕಳೆವೆಳಗ ... ಶಶಿಯ ನಾಮಂ (ಕಬ್ಬಿಕ. ೪೩). [ ತೆಳ್ವೆಳಗು + – ಅ$_7$ ]

**ತೆಳ್ವೆಳಗು, ತೆಳಂವೆಳಗು** (ನಾ). ಬೆಳ್ಳನೆಯ ಬೆಳಕು ; ಶುಭ್ರವಾದ ಬೆಳಕಂ : ತಿಳಿವೆಳಗಿನ ತೆಳ್ವೆಳಗಿನ ಬಿಳಿವೆಳಗಿನ ಬಳ್ಳಿವೆಳಗಿನೊಳ್ವೆಳಗಿನ ಬೆಳ್ವೆಳಗಿನ ಬೆಳಸಿನ ಸಿರಿಯೆನೆ ತೊಳತೊಳ ತೊಳಗಿದುದು ಮೂರ್ತಿ ಚಂದ್ರಪ್ರಭನಾ (ಶಬ್ದಾನು. ೧೪೦ ವ್ಯಾಖ್ಯಾ). **ತೆಳುವೆಳಗು :** ಪಳಿಕಿನ ಕಲಶದ ತೆಳುವೆಳಗಿನೆಳಕದಿನೆಳನೀರ ಪೊನಲೊಳ್ ಮುಱುಗಿಸುವಂತೆಯುಂ (ಅನಂಪು. ೫-೭೦ ವ). [ ತೆಳ್ + ಬೆಳಗು$_2$ ]

**ತೆಳ್ವೆಱೆ** (ನಾ). ಗೆರೆಯಾಗಿರುವ ಚಂದ್ರ ; ಬಾಲಚಂದ್ರ : ಜಡೆಗಳ ಬಾಬಲೇ ತಲೆದಳಿರ್ ಫಣಿ ಸುತ್ತಿದ ಬಳ್ಳಿ ತಾಳ್ದ ಬಾನ್‌ಗಡಲದು ಪುಷ್ಪ ಮಾಲೆ ಗಱುವೂ ಗಱು ತೆಳ್ವೆಱೆ (ಶಬಶಂ. ೩-೩). [ ತೆಳ್ + ಪೆಱೆ ]

**ತೆಳ್ವೊಗೆ** (ನಾ). (ಹಿತವಾದ ಪರಿಮಳದ) ತೆಳುವಾದ ಹೊಗೆ,–ಧೂಪ: ಚಾಮರಾಲೆಗಳಲ್ಲಿಯೂ ಸೋಂಬಿನಿಂದ ಪಲವಾಕೃತಿಗಳಿಂದ ತೆಳ್ವೊಗೆಯ ಸಂಪದವನ್ನೊಯ್ಯನೆ ಏರಿಸಿ ಕುಡುತ್ತಿರುವ ಅಗುರು (ಜಟ್ಯಅ. ೮೨-೦೮).

[ ತೆಳ್ + ಪೊಗೆ$_2$ ]

**ತೆಳ್ವೊಡೆ, ತೆಳ್ಪೊಡೆ** (ನಾ). = ತೆಳ್ವಸಿಜ಼್ : ತೆಳ್ವೊಡೆ ಕಡುಜಿಲ್ವಡೆದುದು (ಅನಂಪು. ೬-೫). **ತೆಳ್ಪೊಡೆ :** ಕಡು ಬಿಣ್ಪು ವೆತ್ತ ಪೊಱಮಲೆಯುಗಿರ್ದವೆ ಸಣ್ಣ ಪುರ್ಬು ತೆಳ್ಪೊಡೆ ಸುಲಿಪಲ್ಗಳಂದದ ಕದಂಪಿರದೊಪ್ಪಿನ ಕಣ್ಗೆ ತೋಱಿದಳ್ (ರಾಜಶೇ. ೧೧-೮೫). [ ತೆಳ್ + ಪೊಡೆ$_3$ ]

**ತೆಳ್ವೊರೆ, ತೆಳ್ಪೊರೆ** (ನಾ). ನವುರಾದ ಪೊರೆ,–ಪದರ: ಬೆಳ್ಮುಗಿಲ ತೆಳ್ವೊರೆಯಿನಿಂದ್ರಚಾಪಲೇಖೆಯಂ ತೆಗೆವ ಶರಲ್ಲಕ್ಷ್ಮಿಯಂ ಪೋಲ್ತು ನಿಜೋತ್ತರೀಯ ಪಲ್ಲವದ ಪೊರೆಯಿಂ ತೆಗೆದು ... ಮಣಿದೊಡವನೊರ್ವಳಂಗನೆಗಿತ್ತಳ್ (ಮಲ್ಲಿಪು. ೪-೬೦ ವ) ; ಕೆಮ್ಮುಗಿಲ ತೆಳ್ವೊರೆಯ ಮಱಿಯೊಳ್ ವಿಱುಪ ಸಂಜೆವೆಱೆಯ ಮುಱುಕವುಂ ಮೆಱೆದುಂ (ವರ್ಧಪು. ೧೦-೫ ವ). **ತೆಳ್ಪೊರೆ :** ಕರಗಿಸೆ ಬೆಳ್ಳಿಯಪ್ಪುಡಿದು ತೆಳ್ಪೊರೆಯೆತ್ತ ದುಕೂಲವಪ್ಪ ಕಂಡರಿಸೆ ಮರಾಳವಪ್ಪ ... ಅಗುರ್ವನೊಳಕೊಂಡುದು ಚಂದ್ರಿಕೆ ಸಾಂದ್ರ ಭಾವದಿಂ (ಜಗವಿ. ೦೬-೦೯) ; ಪಿಡಿದ ಜವನಿಕೆಯ ಮಱಿಯೊಳ್ ಕುಡುಮಿಂಚಿನ ಬಳ್ಳಿ ಮುಗಿಲ ತೆಳ್ಪೊರೆ[ಪಾಠಾಂ. ತೆಣ್ಪೊರೆ]ಯೊಳ್ ಕಣ್ಗೆಡರಂ ಪೊಲಡರೆ ತೋರ್ದುವು ತೊಡವಿನ ಬಿಡುವುಂ ಬಿಡೌಜನಂಗನೆಯುಂ (ಅನಂಪು. ೫-೯೪). [ ತೆಳ್ + ಪೊರೆ$_6$ ]

**ತೆಳ್ಸರಿ** (ನಾ). ಸಣ್ಣನೆಯ ಮಳೆ ; ಹನಿಮಳೆ : ಮೆಲ್ಸರಿ ಸೂಳ್ಸರಿ ದುಂಗಿಲೊಳ್ಗಲ್ಸರಿ ತೆಳ್ಸರಿ ಕರಂ ಪೊನಲ್ವರಿಯಿಪ ಬಂಬಲ್ಸರಿ (ರಾಜಶೇ. ೮-೦೦); ಮೆಲ್ಸರಿ ತೆಳ್ಸರಿ ಸಾಲ್ಸರಿ ಸೂಳ್ಸರಿ ಕಾಲ್ಸರಿ ಸುರಿದವು ಉಧೋ ಉಧೋ (ಕ್ಯಾಂಡಕ್ಷ. ೫೨-೨೦). [ ತೆಳ್ + ಸರಿ$_6$ ]

**ತೆಳ್ಳ** (ನಾ). ೧. ಒಬ್ಬಾತನ ಹೆಸರು : ತೊರೆ ಕಾವಗದನುಂ ಬೀಪಗವಸಂ ವಾರಬದಿಗದಾಲನುಂ ತೆಳ್ಳನುಂ ತಾಟಲಿಯನುಂ (ಎಕ. III, ನಂಜನ. ೦೩೯-೬; 915 ?). ೨. ಒಂದು ಕುಲದ ಹೆಸರು: ಶ್ರೀತಿಪ್ಪುರುತೀರ್ತ್ಥದ ಹಳ್ಳಿ ಹಾದಿಲವಾಗಿಲ ಭೂಮಿಗೌರಂ ತೆಳ್ಳರ ಕುಲದ ಎಱೆಯಂಗ ಗಾಉಂಡನ ಮಗಂ (ಎಕ. III, ಮಳವ. ೪೮-೧೦ ; 1699). [ ? ]

**ತೆಳ್ಳಗೆ** (ಅ). ೧. ಸ್ಪಷ್ಟವಾಗಿ ; ನಿಷ್ಪೃಷ್ಟವಾಗಿ ; ತಿಳಿಯುವಂತೆ : ಉಳ್ಳೊಂದುಗಳೊಳಗೆನಿತಱುವುಳ್ಳರ್ಗಂ ತಿಳಿಪಲಱಿಯುದೆನಿಪೆಡೆಗಳುಮಂ

ತೆಳ್ಳಗಿರೆ ತಿಳಿಪುಗುಂ (ಪಂಪಭಾ. ೨-೩೫). ೨. ತಿಳಿಯಾಗಿ ; ನೀರಾಗಿ ; ಅಳ್ಳಕವಾಗಿ : ಒತ್ತರಿಸಿಯುದನು ತೆಳ್ಳಗೆ [ಪಾಠಾಂ. ನೆ]ವಾಡಿ (ಸೂಪಶಾ. ೧-೨೫) ; ಜೀರಿಗೆ, ಮೆಂತ್ಯ, ನುಚ್ಚು ಈ ಮೂರರನ್ನೂ ಮಜ್ಜಿಗೆಯೊಡನೆ ಅರೆದು ತೆಳ್ಳಗೆ ಕಲಸಿ . . . ಕೊಡಲು ಮತ್ತೊಂದು ಸಲ ವಾಂತಿಯಾಗು ವುದು (ಸಕವೈ. ಪರಿ. ೪೮೫). ೩. ತೆಳುವಾಗಿ; ಸಪುರವಾಗಿ: ಕೃಶವಾಗಿ: ಒಂಟೆಯ ಶರೀರವು ತೆಳ್ಳಗೆ ಇರುತ್ತದೆ (ಮುಂಬಯಿ. ೩-೬೪); ಗೆಡ್ಡೆಗಳನ್ನು ತೊಳೆದು ಸಿಪ್ಪೆ ತೆಗೆದು, ತೆಳ್ಳಗೆ ಕೊಯಿದು . . . ನೀರಿನಲ್ಲಿ ಬೇಯಿಸ ಬೇಕು (ಅಡುಸಾ. ೧೧೩).

**ತೆಳ್ಳಗಾಗು** = ೧. ನೀರಾಗಂ : ಅಂಬಲಿ ತೀರ ತೆಳ್ಳಗಾಗಿದೆ (ರೂಢಿ). ೨. ತೆಳುವಾಗಂ ; ವಿರಳವಾಗಂ ; ಹಗುರವಾಗು : ಹವೆಯು . . . ಮೇಲಕ್ಕೆ ಹೋದ ಹಾಗೆ ತೆಳ್ಳಗಾಗಿರುತ್ತದೆ (ಮುಂಬಯಿ. ೪-೭೦). ೩. ಸಣ್ಣಗಾಗಂ ; ಸೊರಗಂ : ಪ್ರೇಮಿಯಾದವನು ಯೋಚಿಸಿ ಯೋಚಿಸಿ ಸಣ್ಣಗಾಗಬೇಕು, ತೆಳ್ಳಗಾಗಬೇಕು (ಅಲಹೂ. ೩೩). [ತೆಳ್ + – ಆಗೆ$_3$]

**ತೆಳ್ಳನೆ** (ಅ). ೧. ಸ್ಪಷ್ಟವಾಗಿ ; ಚೆನ್ನಾಗಿ : ಮುನಿವಚನದೊಳಂ ನಂದನ ರೊಳವಾಗಳ್ ಯಶೋಮತಿ ಕ್ಷಿತಿಪಂ ತೆಳ್ಳನೆ ತಿಳಿದು (ಯಶೋಚ. ೪-೬೨); ಬಂದ ಕಾರ್ಯವ ನೀವು ತೆಳ್ಳನೆ ತಿಳಿವೊಲು ಪೇಳಿ (ವರ್ಧಚ. ೬-೧೪). ೨. ತೆಳುವಾಗಿ : ಕಳ್ಳಿಯುಮೆಕ್ಕೆಯುಮಂ ಸುಟ್ಟೆಳ್ಳಂ ಮಸಿಯಾಗಿ ಪುರಿದು ಚೂರ್ಣಸಮೇತಂ ತೆಳ್ಳನೆ ಪೂಸುಗೆ (ಅಶ್ವಶಾ. ೧೩-೨೦).

**ತೆಳ್ಳತೆಳ್ಳನೆ, ತೆಳ್ಳೆಳ್ಳನೆ** (ದ್ವಿರುಕ್ತಿ) : ಅದಂ ಚಾರಿಸಲು ತೆಳ್ಳತೆಳ್ಳನೆ ಮಡಕೆಯುಡಿಯೊಳಗೆ ಬಿಳ್ದು ಹಳೆಯಂತೆ ಹಾಲಹುದು (ಸೂಪಶಾ. ೨-೫) ; ತೆಳ್ದೆಳ್ಳನಾ[ಪಾಠಾಂ. ತೆಳ್ದೆಳ್ಳವಾ]ದ ಪಾಲ್ಗಡಲಲ್ಲೆರೆಯೊಳ್ ಮಸುಳ ಮಸುಳನೆಸೆದುವು ಮಣಿಗಳ್ (ಅನಂಪು. ೫-೬೩) ; ತೆಳ್ದೆಳ್ಳನಾದ ಪಾಲ್ಗಡ ಲೊಳು ತಳತಳಿಸುವ ಮಣಿನಿಚಯ (ಅನಂಚ. ೭-೧೨೬). [ತೆಳ್ + –ಅನೆ$_1$]

**ತೆಳ್ಳಿತು**, ತೆಳ್ಳಿತ್ತು (ಗು). ೧. ತೆಳ್ಳಗಿರುವ ; ಕೃಶವಾದ ; ತೆಳುವಾದ : ಬೆಟ್ಟಿತು ತೆಳ್ಳಿತು . . . ನಿಡಿದಿನಿದೆಂಬಂತುಳ್ಳುವು ತುದು ಕಡೆಯೆನೆ ಕೈಕೊಳ್ಳಿಂ ಗುಣವಾಚಿ ಮೇಣ್ ತುಕಾರಂ ದ್ವಿತ್ವಂ (ಶಮದ. ೭೭ ಪ್ರಯೋ). 'ತೆಳ್ಗೊದಲು' ಪರಾ. ೨. ಸುಂದರವಾದ ; ಕೋಮಲವಾದ. 'ತೆಳ್ಗದಂಪು' ಪರಾ. ೩. ಶುಭ್ರವಾದ ; ಬೆಳ್ಳ ಗಿರುವ. 'ತೆಳುದುಗುಲ', 'ತೆಳ್ಮಡಿ' ಪರಾ. **ತೆಳ್ಳಿತ್ತು** : ೧. " ಕೃಷ್ಟಂ, ಕೃಷ್ಟಿಃ ... ಕರ್ಶಿತವ್ಯಂ– ಈ ೭ ತೆಳ್ಳಿತ್ತು " (ಕಾಶಕ್ಯ. ೧೯೪) ; ತೆಳ್ಳಿತ್ತು ಕೆಂಪಸಿದೆನಿಪ್ಪ ನಾಲಗೆ ಲೇಸು ಕಕ್ಕು ಕವಲಾಗೆ ಪೊಲ್ಲಂ (ಮಂಗರಾ. ೮೨-೧೬).

**ತೆಳ್ಳಿದ** = ತೆಳ್ಳಗಿರುವವನಂ ; ಸಣ್ಣಗಿರುವವನಂ : " ಕೃಶಾನುಃ – ಬೆಂಕಿಯುಂ, ತೆಳ್ಳಿದನುಂ " (ಕಾಶಕ್ಯ. ೧೯೪) ; ದಕಾರಾದೇಶಕ್ಕೆ – ಒಳ್ಳಿದಂ, ತೆಳ್ಳಿದಂ, ಮೆಲ್ಲಿದಂ (ಶಮದ. ೧೫೨ ಪ್ರಯೋ). ತೆಳ್ಳಿದುವು (ಬಹುವ): ನಡೆ ನೋಟಿಳ್ಕೊಡಮಂತುಮಿಂತು ಮೂಱಿಸಿಯುವು ಮೂಱು ದೊಡ್ಡಿದುವು ಮೂಱಿಡೆ ತೆಳ್ಳಿದುವಂಬುಜಾಕ್ಷಿಯಾ (ಪಂಪಭಾ. ೪-೬೨) ; ಒಳ್ಳಿದುವು ಮೆಲ್ಲಿದುವು, ತೆಳ್ಳಿದುವು (ಶಬ್ದಾನು. ೨೩೭ ಪ್ರಯೋ).

[ದೇ॥ ತಮಿ. ಮಲ. ತೆಳಿ, ತೆಳಿವು; ತುಳು. ತೆಳಿ, ತೆಲಿ, ಸೆಲಿ]

**ತೆಳ್ಳಿತ್ತು** 'ತೆಳ್ಳಿತು' ನೋ.

**ತೆಳ್ಳುಸುರು,** ತೆಳ್ವುಸಂರಂ (ನಾ). ನಿಧಾನವಾದ ಉಸಿರಂ ; ಮಂದ ನಿಶ್ವಾಸ : ಸಂಭೋಗಿಸುವಾಗ ಬೊಟ್ಟು ಕಲಕಿ ತುಱುಬಳಿದು ತೆಳ್ಳು ಸುರುಬ್ಬಿ ಪುಟ್ಟಿದಿಹುದೆ ಮೈಗೆ ಬೆಮರು (ಭರಚ. ೧೫-೬೪). **ತೆಳ್ವುಸುರು:** ಎಂದೆಂದು ದನಿಗೆ ತೆಳ್ವುಸುರಿಗೆ ಸರಿಯಲ್ಲವೆಂದು ಜಱಿವರೆಮ್ಮನೆಂದು ಅಂದು ವೇಳೆಯ ಕಂಡು ಕೊಂದರಾ ಕಳಕಂಠ ಮಂದ ಮಾರುತರು ನೀಱಿಯರ (ಭರಚ. ೪೮-೮೩). [ತೆಳ್ + ಉಸುರು$_2$ (<ಉಸಿರ್$_2$)]

**ತೆಳ್ಳೆ** (ನಾ). ೧. (ಕೆಸರಂ) ನೀರಾಗಿರುವಂತೆ ಮಾಡಿರಂವುದು : ಎರಡು ಸಾಲಾಗಿದ್ದ ಗದ್ದೆಗಳನ್ನು 'ತೆಳ್ಳೆ' ಮಾಡಿ ಸಸಿಹಾಕಿ, ಹೆಂಗಸರು ಬರುವ ನಿರೀಕ್ಷಣೆಯಲ್ಲಿ . . . ಕಾದರು (ಗಂಗಾಳ. ೧೩೨). ೨. ಆಳವಿಲ್ಲದ ನೀರಿನ ಜಾಗ, ಸ್ಥಳ : ದಡದೆಡೆಯ ತೆಳ್ಳೆಯೊಳಿಳಿದು ಕೆಲಕೆಲರ್ ಮಿಂದರೆದೆ ಯಾಳದಾ ನೀರೊಳಗೆ (ಶ್ರೀರಾಮಾ. ೫೪೪-೧೨೦). ೩. (ಆಲಂ) ಹಗುರ; ಲಘು : ಅವರದೆಲ್ಲ ಅದೇ ಚಾಳಿಯಲ್ಲವೆ ? ನಾನಂತು ಪೊಳ್ಳಾಗಬಾರದು; ತೆಳ್ಳೆಯಾಗಬಾರದು ; ಹಾಗಾಗುವುದಾದರೆ ನನ್ನ ಗತಿ ಮುಗಿದಂತೆಯೆ (ಪುನರು. ೧೬೪). [<ತೆಳ್ಳಿತು]

**ತೆಳ್ಳೆಗಂಪು** (ನಾ). ತೆಳುವಾದ ಕಂಪು ; ಹಿತವಾದ ಸಂವಾಸನೆ : ತನೆ ಪಾಲೇಱಿದ ಶಾಲಿಗಂಪುಗಡಲೊಳ್ ಮುಟ್ಟಾಡಿ ಮುಟ್ಟಾಡಿ ಕೌಂಗಿನ ಪೊಂಬಾಳೆಯ ನಟ್ಟಗಂಪುಗಡಲೊಳ್ ಚುಳ್ಕಾಡಿ ಚುಳ್ಕಾಡಿ ಮಾವಿನ ರಲ್ಗೊಂಚಲ ತೆಳ್ಳೆಗಂಪುಗಡಲೊಳ್ ತೇಂಕಾಡಿ ತೇಂಕಾಡಿ ಪದ್ಮಿನಿಯೊಳ್ ತುಂಬಿ ಮುಲಂಗಿ ಸೇದೆಗಟ್ಟಿಗುಂ ಕಾಸಾರತೀರಂಗಳೊಳ್ (ಅನಂಪು. ೩-೧೦).

[ತೆಳ್ಳೆ + ಕಂಪು]

**ತೆಳ್ಳೆನೀರು** (ನಾ). ಆಳವಿಲ್ಲದ ನೀರಂ; ದಡದಲ್ಲಿರಂವ ನೀರಂ : ಧರ್ಮು ಹೊಳೆಯ ಅಂಚಿನ ತೆಳ್ಳೆನೀರಿಗಿಳಿದನು (ಮಲೆಮ. ೫೦೫).

[ತೆಳ್ಳೆ + ನೀರು$_1$ (<ನೀರ್$_1$)]

**ತೆಳ್ಳೆಲರು,** ತೆಳುವೆಲರ್ (ನಾ). ತೆಳುವಾಗಿ ಬೀಸಂವ ಗಾಳಿ; ಸುಳಿಗಾಳಿ; ಮಂದ ಮಾರುತ : ಸಕ್ಕರೆ ತೀವಿದ ತನಿವಾಲೂದುವ ತೆಂಕಣ ತೆಳ್ಳೆಲರು (ಜಯಕಾ. ೧-೨೪). **ತೆಳುವೆಲರ್ :** ನವ್ಯಪರಿಮಳದಿಂದೆ ಸೊಗಸು ತೀಡುವ ತೆಳುವೆಲರ್ಗೆ ಮೈಯೊಡ್ಡಿ ಮಾರ್ಗಶ್ರಮವನು ಕಳೆದರು (ಜೈಮಿಭಾ. ೮-೫). [ತೆಳ್ + ಎಲರು (<ಎಲರ್)]

**ತೆಱ$_1$**, ತಱ, ತೆರ$_1$ (ನಾ). ೧. ರೀತಿ ; ಕ್ರಮ; ಬಗೆ: ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ಮಂಜುವೋಲ್ಪೋಱ ಬೇಗಂ ಪರಿಗುಂ ಶ್ರೀರೂಪ ಲೀಲಾಧನವಿಭವಮ ಹಾರಾಶಿಗಳ್ನಿಲ್ಲವಾಗ್ಗಂ (ಎಕ. II, ೮೮-೧ ; ಸು. 700) ; ಮುನಿ ವೀತರಾಗನೆಂದುಂ ಬನಮಂ ಸಾರ್ತಕ್ಕುಮಾವ ತೆಱದಿಂ ಪೋಪಂ (ಕವಿರಾ. ೧-೭೮) ; ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ ನಾನಾಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ . . . ಬಡ್ಡಿಸಿದೊಡೆ (ವಡ್ಡಾರಾ. ೭೮-೧೭) ; ಪುಂಡ್ರೇಕ್ಷುದುಡಂಗಳಂ ಕಡಿಕಡಿದು ಯಂತ್ರ ಪೀಡನೆಯಿಂ ರಸಂಗೊಳ್ವ ತೆಱನುಮಂಱಿಯೆ ಪೇಟ್ದು (ಆದಿಪು. ೬-೭೭ ವ); ಮುನಿವಧದೋಷಮಾವ ತೆಱದಿಂ ಕಳೆಗುಂ (ಕಾದಂಪೂ. ೮೭೬) ; ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸುತ್ತಿ ಸಾವ ತೆಱನಂತೆ (ಮಹಾದೇ. ಬ. ೧೫-೧೭) ; ತೆಱನಂ ಕಾಣದ ತಾಣ ದಲ್ಲಿ ಕಪಟಂಗಳ್ ಮಾಟ್ಪರಿರ್ಪಲ್ಲಿ . . . ಇರ್ದೊಡೆ ಹಾನಿಯ್ಯೆ (ಸೋಮೇಶ. ೨೫) ; ಸುಮುಹೂರ್ತವೇ ಗಂಡುರೂಪಾದ ತೆಱನಾಗೆ ಅಮಮ ಕಾರಣಿಕ ಶಿಶು ಜನಿಯಿಸಿದನನುವಾಗೆ (ಬಸರ. ೧-೦೩೦) ; ತೆಱನಱಿದೀವ ಕಾರ್ಯ ಪಱಿದಂಜುವ . . . ಊರ್ಜಿತ ಬುದ್ಧಿಯುಳ್ಳದಿಂಬಱಿಯದ ಗಾವಿಲಂಗೆ ದೊರೆಕೊಳ್ವರೆ ಸೂಳೆಯರೆಂಬ ಡಾಳೆಯರ್ (ಸೂಕ್ತಿಸು. ೮-೪೦೨) ; ಭರತ ಸಂತತಿ ಫಲಿತ ಕದಳಿಯ ತೆಱದೊಳಾಯಿತಲಾ (ಕುಮಾಂ.ಅ. ೨-೨೧); ದೂಱು ಬರುವ ತೆಱ ನಂಬಿಕೆ ಕೊಟ್ಟರೆ ದುರ್ಜನ ಬರುವುದು ತಪ್ಪೀತೆ (ಪುರಂದ. ೧-೦೫೭-೧). ೨. ಅಂದ; ಮನೋಹರತೆ: ತಂನನೆ ಜಗಂ ಸಂಪ್ರೀತಿಯಿಂ ಬಣ್ಣಿಸಿತ್ತೆನೆ ತಾನುಂ ತೆಱದಿಂ ಜಸಕ್ಕೆ ನೆಲೆಯಾದಂ ನಾಚಿದಣ್ಡಾಧಿಪಂ (ಎಕ. XXVIII, ೫-೨೬ ; 1082). ೩. ಸಂಗತಿ ; ವಿಷಯಂ : ಪೆಱರಂ ದೂಱುವರೊಳ್ ತೆಱನಱಿಯದೆ ನುಡಿವವರೊಳ್ . . . ಬಱುಂಫಲೆ ಯೆಂದೆಳಸಿ ಕೇಳಲಾಗದು ಪುರುಷಂ (ಧರ್ಮಾಮೃ. ೬-೨೦೩) ; ಅಱಿವಿ ನೊಳಗಣ ಅಱಿವ ತೆಱದೊಳಗಣ ತೆಱವ ಕುಱುಹಿಟ್ಟು ಕುಱುಹ ಕುಱುಹು

ಅವಗವಿಸಿ ಭಿನ್ನವಿಲ್ಲದೆ ನಿರ್ವಾಹ ನಿರ್ಲೇಪವಾದುದು (ಮದೇವ. ೩೭೪-೧೬); ಆ ನೃಪ ಸುವ್ರತಾಖ್ಯಮುನಿ ಬರಲೆಱಗಿ ತನಗುದಯಿಸಿದ ಪುತ್ರರು ನಿರಾಯುಷರೇಕೆ ತನಗೀ ತೆಱನ ಹೇಳೆನೆ ಕರ್ಮವಶ ತಾನೆಂದನಾ ಮುನಿಪ (ಜೀವಂಧ. ೫-೩೫). ೪. ಮಾರ್ಗ; ಹಾದಿ; ಉಪಾಯ: ಚಿಂತಿಸಿದಳೊಂದು ತೆಱನಂ ಶಿವಂ ಮೆಚ್ಚುತಿರೆ . . . ಪನ್ನಗಾಭರಣನ ಪಸಿವನಾಱಿಸುವುದೆಂದು (ಶರ. ದೇ. ೫೩-೨೦). ೫. ಸ್ಪಷ್ಟವಾದುದು; ವ್ಯಕ್ತವಾದುದು. 'ತೆಱದರುಶನ' ಪರಾ. ತೆಱ: ೧. ನಿಜಪರಿಭವವ ನೆಲ್ಲವನು ಹರಿಪದಸರಸಿಜಕೆ ತೆಱವಾಗಿ ಬಿನ್ನಹ ಮಾಡಿದನು (ನಿಭಾಗ. ೧೦-೬೯-೨). ತೆರ₁: ೧. ಶ್ರುತಿಯೊಳಗಾಡುವ ಹಾಡಿನ ತೆರದಿ ಸ್ವತಂತ್ರ ನೀನೀ ಪಾರತಂತ್ರ್ಯಾದಿ (ಗಣೇಶ. ೪-೮೩); ಶುದ್ಧ ನೀಲಿ ಬಣ್ಣಕ್ಕೂ ಶುದ್ಧಬಿಳಿಯ ಬಣ್ಣಕ್ಕೂ ಮಧ್ಯೆ ಒಂದು ತೆರನಾದ ಬಣ್ಣವಿರುತ್ತದೆ (ಜೀವಾತ್ಮ. ೧೫೩); ಭಕ್ತಿಯಲ್ಲಿ ನಾನಾ ತೆರ (ಜಗದಾ. ೧೮).

**ತೆಱತೆಱ, ತೆಱಂತೆಱ, ತೆಱತಱ** (ದ್ವಿರುಕ್ತಿ): ದಿವಕ್ಕೆ ಪೋಪ ಬಟ್ಟೆಗೆ ಸೋಪಾನಂಗಟ್ಟಿದಂತೆ ತೆಱತೆಱದಿಂ ನೆಗೆದೊಗೆದ ಪೊಗೆಯಂ ಕಂಡು (ಪಂಚತಂ. ೧೧೬-೬); ತೆಱತೆಱದ ಕಲ್ಲೋಲಮಾಲೆಗಳ ಲೀಲೆಗಳ ಬೆರೆಬೆರೆವ ರಾಜಹಂಸಾಳಿಗಳ ಕೇಳಿಗಳ . . . ಮುನಿಜನಂ ಸೇವಿಸುವ ಭಾವಿಸುವ ಗಂಗೆಗವನಿಜೆ ಬಂದಳು (ಜೈಮಿಭಾ. ೧೯-೫); ತೆಱಂತೆಱದಿಂ ಶಿರೋಜಮಂ ನೆಗವುವ ಭಂಗಿ (ಜಗವಿ. ೧೦-೯೯); ತೆಱತೆಱ ಮೆಟ್ಟಿ ರಾಗದೊಡಗೂಡಿ ಬೆಡಂಗು ಪರಿಶ್ರಮಂಗಳೊಳ್ ನೆಱೆದಿರೆ . . . ನರ್ತಿಸಿದಾಕೆಯರೊಪ್ಪಿ ತೋಱಿದರ್ (?) (ಸೂಕ್ತಿಸು. ೧೩-೧೮). ತೆಱತ್ತು = ಹೀಗೆ; ಈ ರೀತಿಯಲ್ಲಿ: ನೀತಿನಿರಂತರಾನುಗತವೃತ್ತಿವಿಕಲ್ಪಿತಮಂ ತದೀಯ ನಿರ್ಣೀತಿಯನೀ ತೆಱತ್ತು ತಱಿಸಲ್ಗೆ ಬುಧೋತ್ತಮರುಕ್ತಿಪೂರ್ವಕಂ (ಕವಿರಾ. ೨-೧೦೧). [ ದೇ.॥ ತಮಿ. ತಿಱ; ಮಲ. ತಿಱ, ತಿಱವು; ತೆಲು. ತೆಱಂಗು, ತೆಱವು ]

**ತೆಱ₂** 'ತೆಱೆ³' ನೋ.

**ತೆಱಂ,** ತೆರಂ (ಅ). ಚೆನ್ನಾಗಿ; ಅಧಿಕವಾಗಿ. 'ತೆಱಂಬೊಳೆ' ಪರಾ. **ತೆರಂ.** 'ತೆರಂಗುಣಿ' ಪರಾ. [ < ತೆಱ₁ ]

**ತೆಱಂದಿರಿ** (ಕ್ರಿ). ೧. ಬಹುವಾಗಿ ಅಲೆದಾಡಂ, ಸುತ್ತು: ಅದೇಂ ತೆಱಂದಿರಿದು ಪಾಯ್ದುಪೋ ಕೇತಕಿಯೊಳ್ ಮದಾಳಿಗಳ್ (ಆದಿಪು. ೧೧-೧೨೦): ಅತ್ತಣ ಪಂಬಲ ಬಂಬಲೊಳ್ ತೆಱಂದಿರಿದುದು ಚಿತ್ತಮಾ ದೊರೆಯ ಯೋಗಿಗಮಿಂತುಟೆ ಮೋಹಮಾಗದೇ (ಪಂಪಭಾ. ೧೩-೬೩); ಅಲರ್ವಂಡನುಂಡು ತನಿಸೊರ್ಕಿಂ ಸೊರ್ಕಿ ತೆಱಂದಿರಿದು ಪಾಱುವ ಪೆಣ್ದುಂಬಿಗಳ ಬಳಗಮನೊಳಕೊಂಡ ಲತಾಮಂಟಪಂಗಳೊಳಂ (ಕಾದಂಬ. ೫೨೬). ೨. ಒಮ್ಮೆಲೇ ಹೊರಳು; ರಭಸದಿಂದ ತಿರುಗು: ಮೆಯ್ಯುಸವೊಂದೆ ಪೂವಿನೊಳೆ ಪೋಗಿ ತೆಱಂದಿರಿದಳ್ಳಿಗೆಱಂಬಿನೊಳ್ ಪಾಯ್ದುದುಂ (ಶಾಂತಿಪು. ೧-೬೩); ತೆಱಂದಿರಿದಾಂತ ಮೆಯ್ಸಂ ಸುತ್ತುವ ಬಲ್ಪು . . . ತವೆ ಮೊಳೆಯ್ದೆ ಮೆಯ್ವೆತ್ತಿರೆ ಬಿಚ್ಚತಂ ಪೊಣರ್ದುಪಂದೆರಡುಂ ಬಲದಂಕದಾನೆಗಳ್ (ಚಂದ್ರಪು. ೧೦-೮೪); ಬಿದಿರ್ಚಿ ದಳಂಗಳಂ ತೆಱಂದಿರಿದುದು ಜಕ್ಕವಕ್ಕಿ (ಅನಂಪು. ೭-೭೧): ಭರದಿ ತೆಱಂದಿರಿವಾ ತಿಹುರಿಯ ಮೇಲೆ ಇರದಿಟ್ಟು ಕುಂಬಱಗೋಲಾ ಪರಿಯೆನೆ ಗಜವಡೆಯಾದಶ್ವನ ಮೇಲೆ ಪಿರಿದೊಪ್ಪಿದನು ವಾಹಕನು (ಶ್ರೀಪಾಲ. ೪-೧೨). ೩. ಮನೋಹರವಾಗಿ ತಿರುಗಂ; ಸುಂದರವಾಗಿ ಸುತ್ತು: ಒಲವಿನೊಳಾದ ಕಾಯ್ಪು ಮಿಗೆ ಕಾದಲನಂ ಬಿಸುಟಂತೆ ಪೋಪ ಕಾದಲಳಟುತುಂ ತೆಱಂದಿರಿದು ನೋಡಿದ ನೋಟದೊಳ್ (ಪಂಪಭಾ. ೪-೧೦೮). [ ತೆಱ₁ + ತಿರಿ₁ ]

**ತೆಱಂದಿರಿಪು** (ಕ್ರಿ). ಬಗೆ ಬಗೆಯಾಗಿ ತಿರುವು, ಹೊರಳಿಸಂ: ಬಿಡದೊಯ್ಯನೆ ನೀವಿಯಂ ತೆಱಂದಿರಿಪುತುಮಲ್ಲಿ ತೀಡುವುದು ಕಾಮುಕನಂದದೆ ಸಾರವಾರುತಂ (ಸುಕುಮಾ. ೨-೧೦೧). [ ತೆಱ₁ + ತಿರಿಪು₁ ]

△ **ತೆಱಂಪು** 'ತೆಱಪು' ನೋ.

**ತೆಱಂಬಾಯ್** (ಕ್ರಿ). ಚೆನ್ನಾಗಿ ಓಡಾಡಂ: ಮೊರೆವುನ್ಮತ್ತಮಧುವ್ರಜಂ ಸುಟಾವ ಕಾದಂ[ಬಂ] ತೆಱಂಬೊ[ ಬಾ ]ಯ್ದು ಭೋರ್ಗರೆದೆತ್ತಂ ಪುಗಲೆಂಬ ಕೋಕಿಲೆ (ಸುಕುಮಾ. ೧-೭೩). [ ತೆಱಂ + ಪಾಯ್₁ ]

△ **ತೆಱಂಬು** 'ತೆಱಪು' ನೋ.

**ತೆಱಂಬೊಯ್** (ಕ್ರಿ). ಚೆನ್ನಾಗಿ ಹೊಡೆ: ಕಾಲ್ಗಳ್ಗಳಿಂ ಪಿಡಿದೀಡಾಡಿಯುಮುರ್ದಿಯುಂ ತಿರಿಪಿಯುಂ ತೇದುಂ ತೆಱಂಬೊಯ್ದುಮಾ ದಡಿಗಂ ದಾನವನಂದದಿಂ ಕೆಡಪಿದಂ ಸಂಗ್ರಾಮರಂಗಾಗ್ರದೊಳ್ (ಮುಹಾನೇ. ೧೩ ೨೦೪). [ ತೆಱಂ + ಪೊಯ್₁ ]

**ತೆಱಂಬೊಳೆ** (ಕ್ರಿ). ಚೆನ್ನಾಗಿ ಪ್ರಕಾಶಿಸಂ; ಅಧಿಕವಾಗಿ ಹೊಳೆ: "ತೆಱಂಬೊಳೆದುದೆಂದು ತೋರ್ಕೆವಡೆದ ಕಾಂತಿ" (ಕಶಸಾ. ೫೬-೨೦೬): ಪೊಱಪೊಣ್ಮುವ ಕಣ್ಣ ಬೆಳ್ಪುಮೋಪರ ಮನದೊಳ್ ತೆಱಂಬೊಳೆವ ಬಾಳೆಗಳಂತಿರೆ (ಆದಿಪು. ೧೧-೪೬); ತೆಱಂಬೊಳೆವ ಮಿಾಂಗಳನುಳ್ಳುವ ಕೈದುಗಳ್ ನಿರಾಕರಿಸಿರೆ ಮೇರೆದಪ್ಪಿ ಕವಿದತ್ತು ನರಾಧಿಪ ಸೈನ್ಯಸಾಗರಂ (ಪಂಪಭಾ. ೭-೬೮); ಪುಷ್ಪಶರಪ್ರಸನ್ನಾಗಘಟೆಯ ಕಟದಿನು ತ್ಕಟವಮಾದ ಮದವೃಷ್ಟಿಯಿಂ ತೆಱಂಬೊಳೆವ ಮಱಿದುಂಬಿಯ ಬಂಬಲಿಂ . . . ಅತಿ ರಮಣೀಯಮಾಗಿ (ಮಲ್ಲಿಪು. ೨-೩೩): ಒಪ್ಪಂಬೂಸಿದ ಪೋಲ್ ತೆಱಂಬೊಳೆವ ಕೊಂಕುಂ (ಕಬ್ಬಿಕಾ. ೫): ಕೆಂಬಟ್ಟೆಯ ಮೃದುತಲ್ಪದೊಳೊಱಗಿ ತಱಂಬೊಳೆದೊಪ್ಪುವ ರತಿಯೆನೆ (ಜಯಕಾ. ೩-೮). [ ತೆಱಂ + ಪೊಳೆ₁ ]

**ತೆಱಂಬೊಳೆಯಿಸು** (ಕ್ರಿ). ಚೆನ್ನಾಗಿ ಪ್ರಕಾಶಿಸುವಂತೆ ಮಾಡಂ; ಹೆಚ್ಚು ಶೋಭೆಯುಂಟಾಗುವಂತೆ ಮಾಡಂ: ವನಮಧ್ಯಮದೇಂ ದೇವನ ವನಮಾಲೆಯಂ ತೆಱಂಬೊಳೆಯಿಸಿತೋ (ಜಗವಿ. ೧೦-೫೩).

[ ತೆಱಂಬೊಳೆ + – ಇಸು₃ ]

**ತೆಱಕಾಱ** (ನಾ). ತೆರಿಗೆಯನ್ನು ವಸೂಲು ಮಾಡುವವನು: ಸೀನಿತ್ತವಧಿ ಕಿಱಿದೀವರಿಲ್ಲ ಧನವಂ ಗಳಿಸಿ ತಂದೀವೆನೆನಲು ದಿನವಿಲ್ಲೊಬ್ಬ ತೆಱಕಾಱನಂ ಕೊಟ್ಟೊಡಾತಂಗೆ ನಿರ್ಣಯಿಸಿ ಕೊಡುವೆನೆನಲು (ಹಚಕಾ. ೮-೫೬): ಸುರಿದನರ್ಥವನು ಕೌಶಿಕಮುನಿಯ ತೆಱಕಾಱ ತಲೆದೂಗಲು (ಹಚಕಾ. ೧೧-೨೬). [ ತೆಱ₂ ( < ತೆಱೆ³) + – ಕಾಱ ]

**ತೆಱಕೈ** (ನಾ). (ಹಣವನ್ನು) ಸೆಳೆದುಕೊಳ್ಳುವ ಕೈ; (ಸಿರಿಯನ್ನು) ದೋಚುವ ಕೈ: ತೌಳಿಕಾಱತನ ತೆಱಕೈ ಬಱುಬೋಸರಣೆ ಹೇವ ಹಳಿವು ಬೆಳ್ಳುಕ್ಕೆ ಬೆಳ್ಮೆನಿಸು ಕೈತವಮಂ ಕನಸಿನೊಳ್ ನೆನೆಯದೆ ಮದನಾಗಮವೆಂಬ ಮಹಾನಾಟಕಮನಭಿನೈಸುತೆ (ವಿರೂಪಾ. ೭೮).

[ ತೆಱ₂ ( < ತೆಱೆ³) + ಕೈ₂ ( < ಕೆಯ್₂) ]

**ತೆಱಕೊಡು, ತೆರಕೊಡಂ** (ಕ್ರಿ). ೧. ತೆರಿಗೆಯನ್ನು ತೆರು, –ಕೊಡಂ: ಬಾಳ ಬಡವರು ತೆಱಕೊಟ್ಟು ಬಾಹರು (ಕಇ. I, ೫೦-೨೮; 1432?). **ತೆರಕೊಡು:** ೨. ತಪ್ಪುಕಾಣಿಕೆಯನ್ನು ಕೊಡಂ; ದಂಡ ತೆರಂ: ಬಿಡುಗಡೆಯಾಗಬೇಕಾದರೆ ತೆರಕೊಡಬೇಕು (ಉದುಗಿ. ೬). ೩. ಕನ್ಯಾಶುಲ್ಕವನ್ನು ಕೊಡಂ, ತೆರಂ: ಬಿಟ್ಟಿಯೇ ಸಿಕ್ಕುವುದಾದರೆ ಹೆಣ್ಣೊಂದು ನನಗೊಂದು ನಮ್ಮಪ್ಪಗೊಂದು ತೆರಕೊಟ್ಟು ತರುವ ಹಾಗಿದ್ದರೆ ಮುದುಕನು ನಮ್ಮಪ್ಪ, ಹುಡುಗನು ನಾನು (ಇಂಚಾಪ. ೧೦೦-೮೭).

[ ತೆಱ₂ ( < ತೆಱೆ³) + ಕೊಡು₁ ]

**ತೆಱಗೊಳ್** (ಕ್ರಿ). ಸುಂಕವನ್ನು ಕೊಳ್ಳು; ತೆರಿಗೆಯನ್ನು ವಸೂಲು ಮಾಡಂ: ಘೋಷಾಕರಸಂಗ್ರಾಹಕರ ಗೋವ್ರಜಂಗಳುಮಂ ಅವನಾಳ್ವ ತೆಱ[ಪಾಠಾಂ. ಱೆ]ಗೊಳ್ವ ಬಿಟ್ಟಬೆಸಕೆಯ್ಯಿಸಿಕೊಳ್ವ ಭೋಗಿಪ ನಿಯೋಗಂಗಳುಮಂ ಮಾಡಿದಂ (ಆದಿಪು. ೮-೬೩ ವ). [ತೆಱ₂ ( < ತೆಱೆ³) + ಕೊಳ್₁]

**ತೆಱತ್ತು** 'ತೆಱ₁' ಪರಾ.

**ತೆಱದರುಶನ** (ನಾ). ಸ್ಪಷ್ಟವಾದ ನೋಟ,_ಕಾಣ್ಕೆ : ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನೆಂಬ ಷಟ್ಸ್ಥಲವನಱಿಯಬೇಕೆಂಬಿರಿ ಅಱಿವುದಕ್ಕೆ ಕುಱುಹು ತೆಱದರುಶನವ ಕಾಣಿರಣ್ಣಾ (ಮೋಳಿಮಾ. ೧೫೧-೫೭೩). [ ತೆಱ$_1$ + ದರುಶನ ]

**ತೆಱದರ್ಶನ** (ನಾ). = ತೆಱದರುಶನ : ಕುಱು ಹಿಂಗೂ ಅಱುವಿಂಗೂ ತೆಱದರ್ಶನವಿಲ್ಲವಾಗಿ ಸೊಪ್ಪನೊಳಕೊಂಡ ಬಿತ್ತಿನಂತೆ (ಮೋಳಿಮಾ. ೮೪-೩೭೧). [ ತೆಱ$_1$ + ದರ್ಶನ ]

**ತೆಱಪಱಿ** (ಕ್ರಿ). ೧. ಅವಕಾಶವನ್ನು ತಿಳಿ : ಬರವಂ ಪಡಿಯಱರ್ಗಱಿಪಿ ತೆಱಪಱಿದೋಲಗದೆಡೆಯುಂ ಪುಗಲು (ಕಬ್ಬಿಕಾ. ೧೬೦). ೨. ಎಡೆಯನ್ನು ತಿಳಿ ; ಸ್ಥಳವನ್ನು ಅರಿ : ಕೆಲಬಲದೊಳಲ್ಲಲ್ಲಿ ತೆಱಪಱಿದು ಕುಳ್ಳಿರಲು ನಲಿನಲಿದು ತುಂಬುರಂ ಬಲವಂಕದೊಳಗಿರಲು (ಸಂಬಿರ. ೫-೯೯). ೩. ಗುರುತನ್ನು ತಿಳಿ: ತೆಱಪಱಿದಾ ಋತುಪರ್ಣಂಗಱಿಪದೆ ವಾರಾಂಗನಾ ನಿವೇದಿತನಾಗಲ್ ಪೊಱಮಟ್ಟು ಬಂದನೆಲ್ಲರ್ಬೆಱಗಾಗಲ್ ಸತಿಯ ಮನೆಗೆ ಬಾಹುಕಂ (ನಳಚಂ. ೭೨೨). [ ತೆಱಪು + ಅಱಿ ]

**ತೆಱಪೀ** (ಕ್ರಿ). ಅವಕಾಶವನ್ನು ಕೊಡು : ನೆಗಟ್ದ ಚತುರ್ದಶರತ್ನದೆ ಸೊಗಯಿಪೆನಾನನ್ಯವಾಹಿನಿಗೆ ತನ್ನವೊಲಾನಗಿದು ತೆಱಪೀಯೆನೆನುತಂ ನಗುವುದು ವಿಜಯಾರ್ಧಕಟಕಕ್ಕೆ ವಿಭುಕಟಕಂ (ಪಾರ್ಶ್ವಪು. ೧೦-೦೯) ; ಬಾಯನೊಡೆ ಬಡಿ ಮೀಸೆಗೀಳ್ ಕುರುಳ್ಗೊಯ್ ಪುಗಲ್ ತಾಯೊಡಲ್ ತೆಱಪೀವುದೇ ನಿಮಗೆ ಪೊಯ್ದಾಡಿ ಸಾಯಲೂಣೆಯವಹುದೆ ಸುಡು ನಿಮ್ಮ ಬಾಳ್ಕೆಗಳನೆನುತೆ ಜಱೆದಮರಕುಲವಂ (ಜಬಪು. ೪೯-೪೯). [ ತೆಱಪು + ಈ$_2$ ]

**ತೆಱಪು**, ತೆರಪು, ತೆರಹು$_2$, ತೆರ್ಪು, ತೆಱಂಪು, ತೆಱಂಬು, ತೆಱಹಂ, ತ್ರೆಱಪು (ನಾ). ೧. ತೆರೆದ ಸ್ಥಿತಿ ; ಮರೆಯಿಲ್ಲದಿರುವುದು ; ಬಯಲು : ಮಱಸಿರ್ದಂಬರಮೆಯ್ದೆ ನಾಂದ ತನುವಂ ಪತ್ತಿರ್ದು ಕಣ್ಗಲ್ಲಿಯುಂ ತೆಱಪಂ ಮಾಡಿ (ಆದಿಪು. ೧೧-೧೫೩) ; ಬಾಲೆಯುರುರದೊಳ್ ಕೆಱುವೊಲೆ ಮೇಲುದು ನಸುದೊಲಗೆ ತೋರ್ಪ ತೆಱದಿಂ ಸರಸೀಮಾಲಿಯೊಳೆಸೆದುವು ನವಪತ್ರಾಲಿಯ ತೆಱಪಿಂದೆ ತೋರ್ಪ ಕಮಲದ ಮುಗುಳ್ಗಳ್ (ಜಗವಿ. ೪-೬೩) ; ಮೇಲುದಿನ ತೆಱಪಿನೊಳು ಮೊಲೆಗಳಲುಗಲು (ಹಡಕಾ. ೪-೧೩). ೨. ಎಡೆ ; ಸ್ಥಳ ; ಜಾಗ : ದಿಗ್ಭಿತ್ತಿಗಳನೊಡೆದು ತೆಱಪಂ ಮಾಡಲ್ ಪರಿವಂತೆ ದುಂದುಭಿಧ್ವನಿ ಪರವಿನೆಗಂ ದಿಗ್ಜಯಕೆ ಹರಿ ಪೊಱಮಟ್ಟಂ (ವರ್ಧಪು. ೮-೭೬); ಮಾಣಿಕವರಿಗೆಯ ತೆಱಪುಗಳೊಳ್ ಪೊಳೆವ ಬಾಳ ಬೆಳ್ವೆಳಗಂದೇಂ ಮೆಱೆದುವೊ (ಕಬ್ಬಿಕಾ. ೨೫೯) ; ತುಱುಗಿದ ತೂಱಲ್ಗೊಂಬಿನ ತೆಱಪುಗಳೊಳ್ ಕೂಡಿ ನುಸುಳಲಾಱದೆ ಸಿಲ್ಕಿಂ ಪಱಿದಿರ್ದ ಬೆಳ್ಮುಗಿಲ್ಗಳ ಮುಱಿಗಳಿವೆನಿಸಿದುವು ಶಾಲ್ಮಲೀಫಳತೂಳಂ (ಪುಷ್ಪಪು. ೫-೮೫) ; ಆನುದ್ದಂಡತ್ವದಿಂದಾಕ್ರಮಿಸಿದೊಡಮದಂ ಸೈರಿಸಿರ್ದುಂ ನಭಶ್ರೀ ತಾನೀಗಳ್ ಕೊಟ್ಟಳಾದಂ ತೆಱಪುಮನೆವಗಿಂತೆಂದು (ಬಾಧಪು. ೧-೦೦೪) ; ತಿಂತಿಣಿಯ ರಘುವರಚರಿತೆಯಲಿ ಕಾಲಿಡಲು ತೆಱಪಿಲ್ಲ (ತೊವ್ಯಾಅ. ೧-೧೭). ೩. ಅವಕಾಶ ; ಸಮಯ ; ಸಂದರ್ಭ ; ಬಿಡುವು : ತೆಱಪನೆ ಪಾರ್ದಿರ್ಪಂ ಮಾಯ್ದುಱುಗುಲಿ ಜವನದಱೆನಿನಿಸು ಪೊಟ್ಟುಂ ತನ್ನಂ ಮಱೆದಿರಲಕ್ಕುಮೆ ತಳರದೆ ತಱಿಸಲದಿನ್ನೆಱೆದುಮಱಿದುಮಿರ್ಪುದೇ ಚದುರಂ (ಆದಿಪು. ೪-೭೬) ; ನೆಱನೀತಂಗೂರುಯುಗ್ಮಂ ನೆಱನನಱಿಯದಾ ನಿನ್ನೆಗಂ ಮಾಣ್ದನಿಂ ಪೋ ತೆಱಪಂ ಪಾರ್ದಿರ್ಪೆಂ (ಪಂಪಭಾ. ೧೩-೯೭) ; ತೆಱಪಂ ನಿಟ್ಟಿಸಿ ಕುರುಪತಿ ಬಱಸಿಡಿಲೆಱಗುವವೊಲೆಱಗಿ ಪೊಯ್ಕಲ್ (ಗದಾಯು. ೮-೨೬) ; ತೆಱಪಂ ಪಾರ್ದು ಸುಗ್ರೀವನಂ ಮಾಯಾಸುಗ್ರೀವಂ ಗದಾದಂಡದಿನಡಸಿ ಸಿಡಿಲ್ ಪೊಯ್ವವೋಲ್ ಕಾಯ್ದು ಪೊಯ್ದಂ (ಪಂರಾಮಾ. ೧೧-೨೬); ಬಲಂ ಪಱಿವಡೆ ಜೊಮ್ಮನೆ ಜೋಲ್ದುಂ ತೆಱಪಂ ಪಾರ್ದಿರದೆ ತಡೆಯದೊರ್ಮೆಯೆ ಮುನಿವಂ (ಧರ್ಮಾಮೃ. ೪-೧೬೨). ೪. ವಿಸ್ತಾರ ; ಹರಹು : ಭರದಿಂ ಭೂದೇವಿ ಭೂಪಾಳಿಗೆ ಬಯಸಿ ಕೊಳಲ್ ನೀಡಿದಳ್ ಕೈಗಳಂ ನೀಟ್ದರು ತಾರಾಮಾಲೆಗೆಂಬಂತಿರೆ ತುಱುಗಿದ ಶಾಖಾಳಿಯಂ ಚುಂಬಿಸುತ್ತಂಬರವಂ ತಾನಿರ್ದುದಾ ಶಾಖೆಗಳ ತೆಱಪುಗಳ್ (ಕುಸುಮಾ. ೧-೧೧೧) ; ತೆಱಪಿನೆದೆಯ ಹೊನ್ನ ಜನ್ನಿವಾರದ ರೇಖೆ ಮೆಱೆಯೆ ರಾಜೇಂದ್ರ ಮೆಱೆದನು (ಭರಚ. ೧-೩೩). ೫. ಸ್ಪಷ್ಟತೆ : ನೀಂ ಪಲವುಂ ರಾಯಭಾರಿಗಳೊಳಂ ಮೆಲ್ಪುಂ ಬಲ್ಪುಂ ತೆಱಪುಂ ಮಱಪುಂ ಅನುವುಂ ಮೊನೆಯುಮಾಗಿ ನುಡಿದು ನಿನ್ನ ಬಿನ್ನಣಮುಂ ಬಿತ್ತರಿಪಂತಾನು ಮಿವಳ್ದರಂತರಮುಂ ತಿಳಿದು ನುಡಿವೆಂ (ಚಿಳವಿ. ೬-೦೩೩ ವ). ೬. ಗುರುತು; ಚಿಹ್ನೆ: ತೃಣ ತ್ರಿಣಯನ ಹೆಡಗೈಯ ಕಟ್ಟಿತ್ತು ಭವಕಾಲನ ಸಂಕೋಲೆಯ ನಿಕ್ಕಿತ್ತು ಕುಱುಹು ಅಱಿವವರ ಕೈಯಲ್ಲಿ ನೆಱೆ ನಂಬಿ ಎಂದು ತೆಱಪ ಹೇಳಿತ್ತು (ಮೋಳಿಮಾ. ೨೩೨-೭೮೦). ೭. ರೀತಿ; ಬಗೆ: ಸೆಱಗ ಹಿಡಿದೆಳದಪ್ಪಿ ಮುದ್ದಿಸಿ ತುಱುಬ ಪಲ್ಲಟಗೈದ ಮದನನ ತೆಱಪನೆಲ್ಲವ ಪೇಳು ತಿಳಿಪಿದನತಿ ವಿನಯದಿಂದ (ಸಾಳ್ವಭಾ. ೩೧-೫). **ತೆರಪು** : ೩. ದಾರಿಗಾಣದ ಮನಸ್ಸಿಗೆ ಈ ಸಂದರ್ಭವೇ ಒಂದು ತೆರಪನ್ನೊದಗಿಸಿತು (ನಾಡೋಜ. ೩೬೯); ತೆರಪ ನರಿಯದೆ ಪರಿವ ಕಾಲಪ್ರವಾಹದಲಿ ಪುರುಷರಚಿತಗಳೆನಿತೊ ತೇಲಿಹೋಗಿ ಹವು (ಮಂಕುಳ. ೪೧೧); ಹಗಲುರಾತ್ರಿ ತೆರಪಿಲ್ಲದೆ ಮಳೆ ಹತ್ತಿದ್ದರಿಂದ ಇದ್ದ ಉರುವಲು ಒದ್ದೆಯಾಗುವುದು ಸಹಜವೇ (ಚಟ್ಟಹೊ. ೪೩) ; ತೆರಪಿಲ್ಲವೆಂತ ತೆರಿಗೆ ಇಟ್ಟುಕೊಂಡು, ಚರಿಗೆ ತವಲೆ ಮಾರಿಸಿಕೊಂಡ (ಗಾದೆ). ೮. ಬರಿದಾದ ಸ್ಥಳ,-ಎಡೆ ; ಖಾಲಿಜಾಗ : ಈಗ ಇರುವ ಸಂಸ್ಕೃತ ಸಾಹಿತ್ಯದಲ್ಲಿ ಭಾರಿ ತೆರಪು ಅಥವಾ ಖಾಲಿಜಾಗಗಳಿವೆ (ತತ್ವಪ್ರಾ. ೪೮೨). **ತೆರಹು$_2$** : ೪. ಇಳೆಯ, ಗಾಳಿಯ ತೆರಹನೆಲ್ಲವ ಕೆಲೆವ ನಿಮ್ನಲಿ ತುಂಬಿತು (ಇಂಗೀತ. ೧೨-೬). ೮. ಈ ಗುಡಿಯ ಶೂನ್ಯತೆಗೆ ಪೂರ್ಣತೆಯ ತಾ ನೀರ ತೆರಹಿಗೊಲವಿನ ಅಚ್ಚಕುರುಹಾಗಿ ಬಾ ! (ಮಾನಸ. ೪೬-೧೦). **ತೆರ್ಪು** : ೨. "ಆತಂಕು=ತೆರ್ಪಿಲ್ಲದೆ ಇಡು : ಬಿಡತೆ ಇಲ್ಲದೆ ಇಡು" (ಗಂಗಾಮ. ೫). 'ತೆರ್ಪಂಬಡೆ' ಪರಾ. △ **ತೆಱಂಪು** : ೨. ತಂಪಿನೊಳಗೆ ನಡೆಸುವನು ಸೇನೆಯನು ತೆಱಂಪನಱಿದು ಬಿಡಿಸುವನು (ಭರಚ. ೨೭-೯). △ **ತೆಱಂಬು** : ೧. ನೆಱೆದಾಯುಷ್ಯಮೆ ಮಿಟ್ಟುವನಱಸುವ ತೆಱದಿಂದಮವರ ಪೋಬಱಿಯನೆ ಬಂದಱಿಸಿ ನಭಸ್ಥಳದೊದವಿದ ತ[ತೆ]ಱಂಬು ಕಳನಾಗಿ ಕಾದಲೆಂದಿರ್ದವರಂ (ಶಾಂತಿಪು. ೩-೭೪); ತದ್ದಿವ್ಯರಥಮನಾ ಫಣಾಧರನೆ ಸಾರಥಿಯಾಗೇಱಿ ಗಗನಕ್ಕೆ ನೆಗೆದಂಬರದ ತೆಱಂಬೆ ಕಳನಾಗಳುಂಬಮಾಗೊಡ್ಡಿ ನಿಂದ ವಿದ್ಯಾಧರವರೂಥಿನಿಯಂ ನೋಡಿ (ಚಂದ್ರಪು. ೬-೨೭ ವ) ; "ಸ್ಥಾನ, ಪ್ರದೇಶ" (ಪ್ರಭಣ್ಣ). ೨. ತನುವಿನೊಳಾದ ಜಲ್ಲಮಲ ಮಾಭರಣಂ ಪುಲಿಯಿರ್ಪುದೊಂದು ಕಾನನದ ಗುಹಾಂತರಂ ಮನೆ ಪರಲ್ಗಳ ಸುಳ್ಳ ತ[ತೆ]ಱಂಬು ಪಾಸು (ಜೀವಸಂ. ೫೦-೨೨) ; "ನೊರಜಂಕಲ್ಲಿನ ನೆಲ" (ಜೀವಸಂ. ಕೋಶ) ; ಪೌರೋದ್ಯಾನಮೆಲ್ಲಂ ಸುರಕುಜಮೆ ತ[ತೆ]ಱಂಬೆಲ್ಲಮುತ್ಕೀರ್ಣಕೇದಾರಮೆ (ಅನಂಪು. ೩-೭). ೩. ಇದಿದಿರೆ ರೋಮಕೂಪದೊಳಗುರ್ಚಿದ [ ಸಾಲ ] ಸರಲ್ಗ[ಳಂ ತೆಱಂಬಿಡಿದಿರೆ ಬೆಟ್ಟುವೋ] ಗುರ್ಡಿಸಿದಂತೆ ನೆಱಲ್ದಿರೆ . . . ಬಿಟ್ಟದೇನೆಸೆದನೋ ಶರಶಯ್ಯೆಯೊಳಂದು ಸಿಂಧುಜಂ (ಪಂಪಭಾ. ೧೩-೬೨). "ತೆಱಂಬಿಡಿದರೆ-ನಾನಾತೆರನಾಗಿ" (ಪಂಪದೀ. ೫೩೪). **ತೆಱಹು** : ೨. ಹರಿಯಂತರ ವಿಶಾಲ ಮಹಾಸಭಾ ವಿಸ್ತರಣ ಪದಱಲಿ ತೆಱಹ ಕಾಣೆನು (ತೊವ್ಯಾಸ. ೧೩-೩೨). ೩. ಬೆರಣಿಯನಾಯಲಲ್ಲದೆ ಅಟ್ಟುಣ್ಣ ತೆಱಹಿಲ್ಲವೆನಗೆ (ಬಸವ. ೨೭೦) ; ಅತ್ತಲಾ ಕೋಳಾಹಳದಲಿರಲಿತ್ತಲಾದುದು ಜೂಜು ನಿಮ್ಮ ವಿಪತ್ತು ಕಂಡುದು ತೆಱಹ ತಪ್ಪಿಸಿ ನಮ್ಮ ಸುಳಿವುಗಳ (ತೊವ್ಯಾಅ. ೨೨-೨೭) ; ತೆಱಹಿಲ್ಲ ತೆಱಹಿಲ್ಲವಯ್ಯಾ ನುಡಿಗಡಣಕ್ಕೆ (ಅಖಂಡೇ. ೩೩೮-೫೦). ೪. ಉರುಪ

ಭಂಡಾರದ ಮಹಾರ್ಘದ ನೆಱವಣಿಗೆ ಗಾಢಿಸಿತು ಬೀದಿಯ ತೆಱಹು ಕೆತ್ತವು ಹೊತ್ತ ಸರಕಿನ ಬಹಳ ಬಂಡಿಗಳ (ಶಬ್ದಾಗ. ೪-೧೭). ೬. ಕಾಣಬಾರದ ಘನವ ಹೇಳಬಾರದಾಗಿ ಹೇಳುವುದಕ್ಕೆ ನುಡಿಯಿಲ್ಲ ನೋಡುವುದಕ್ಕೆ ರೂಪಿನ ತೆಱಹಿಲ್ಲ (ಲಿಂಗವ. ೬೦-೪೭). ೯. ಭೇದ ; ವ್ಯತ್ಯಾಸ ; ಅಂತರ : ತೆಱಹಿಲ್ಲದ ನಡೆ ತೆಱಹಿಲ್ಲದ ನುಡಿ ತೆಱಹಿಲ್ಲದ ಸಂಭಾಷಣೆಯ ಸಂಖಿವು (ಬಸವ. ೯೦೪); ಎನಗೆ ತನಗೆ ತೆಱಹಿಲ್ಲದಂತೆ ಮಾಡಿ ತೋಱಿದನು (ಮಹಾದೇ. ಬ. ೨೨-೪೦) ; ಪರಶಿವನೇ ಲಿಂಗವಾ ಪರಮಾತ್ಮನೇಯಂಗವೆರಡಱೊಳ್ ತೆಱಹಿಲ್ಲದಿರ್ಪುದೇ ಸಂಯೋಗ (ಚೆಬಪು. ೬೧-೬೭). ೧೦. ಶಕ್ಯತೆ ; ಸಾಧ್ಯತೆ (?): ಮಹಾದೇವಿಯಕ್ಕನ ನಿಲವ ಕೊಂಡಾಡುವುದಕ್ಕೆ ತೆಱಹಿಲ್ಲ ಕಾಣಾ (ಅವಚಂ. ೨೪೩-೧೧೧೪). **ತೆಱಿಪು:** ೧. ಹರಿಕರಯಂತ್ರಾಂಬುಧಾರಾವಳೀಸ್ಪರ್ಶನಸೌಖ್ಯಾಪೇಕ್ಷೆಯಿಂ ಭೋಂಕೆನೆ ಪೊಲೆದೆಱಿಪಂ ಪೆತ್ತ ಪೋಲ್ ಶೋಭೆವೆತ್ತಳ್ (ಜಗವಿ. ೧೪-೧೦೩).

**ತೆಱಪಾಗು, ತೆರಪಾಗು=** ೧. ತೆರೆ ; ಬಿಚ್ಚು ; ಬಯಲಾಗಂ : ಆಱುವುಮಱವೆ ಎರಡ ನೂಂಕಿ ನಿಂದರೆ ಮುಂದೆ ಕಣ್ಣು ತೆಱಪಾಗಿ ತೋಱುವ ಬಯಲೇ ಲಿಂಗದ ಬೆಳಗು (ವಚಸಂ. ೩೨೨-೧೧೭); ಇನಿಯನನೆಯ್ದೆ ಸಮ್ಮುಖದೊಳೀಕ್ಷಿಸಲಣ್ಮದೆ ಮುಗ್ಧೆ ಪಾರ್ಶ್ವಯಾಯಿನಿ ತೆಱಪಾಗೆ ನೋಟ್ಪ ನಯನೇಂದ್ರಿಯದೊಳ್ ಸಕಲೇಂದ್ರಿಯಂಗಳಂ . . . ಸಲಿಪ್ಪನಿತುವರಂ ಕಡಂಗಿ ಕರೆಗಣ್ಮದಳುಣ್ಮದ ಘರ್ಮವಾರಿಯಿಂ (ಅನಂಪು. ೬-೬೦). ೨. ವಿಸ್ತಾರವಾಗು ; ವಿಶಾಲವಾಗಂ : ಪಂಚಾಗ್ನಿದೀಕ್ಷಿತರೂ ಕೋಡಿಯನೂ ತೆಱಪಾಗಿ ತೆಗಿಸಿ (ಎಕ. IX, ಮಾಗಡಿ. ೫೭-೫ ; 1389 ?); ಶ್ಲೇಷ್ಮಪ್ರಕೃತಿಯುಳ್ಳ ಪುರುಷನು... ತೆಱಪಾದ ಹಣೆಯುಳ್ಳವನಾಗಿ ಹೊದಱಾಗಿ ಕಪ್ಪಾದ ಕೇಶಪಾಶವುಳ್ಳವನಾಗಿಹನು (ವೈದ್ಯಸಾ. I, ೧೭). ೩. ಖಾಲಿಯಾಗು ; ಬರಿದಾಗಂ : ಕೆಲವು ಸದಸ್ಯರ ಸ್ಥಾನಗಳು ತೆರಪಾಗಿ ಹೊಸ ಚುನಾವಣೆಗಳಾದುವು (ದಿಲ್ಲಿಪ. ೧೨೨). **ತೆಱಪು ಮಾಡಿಸು** = ಖಾಲಿ ಮಾಡಿಸಂ ; ಬರಿದಂ ಮಾಡಿಸಂ ; ದೂರ ಕಳಂಹಿಸಂ : ಎಲ್ಲರ ತೆಱಪು ಮಾಡಿಸಿ ಎಂದಲೇನೆಂದುಸುರಬಹುದೀ ಬೆಂದ ಬಯಕೆಯು ನಿನ್ನೆದೆಯನಲಗಿಂದಿಱಿಯೆ ಹರಿದು ಬಂದ ನೆತ್ತರನೀಂಟಬೇಕೆಂಬೊಂದು ಬಯಕೆಯುಂ ಪುಟ್ಟಿತೆನಗೆ ... ಎಂದಳು ಭೂಪರನ ರಾಣಿ (ಸಾಳ್ವಭಾ. ೧೯-೪೩). **ತೆಱಪುಮಾಡು, ತೆಱಹುಮಾಡು** = ೧. ತೆರೆ ; ಬಿಚ್ಚು : ದಕ್ಷಿಣದಿಶಾಂತದೊಳಗೆಲರು ತಣ್ಣನೆ ತೀಡೆ ಕೋಕಿಲಂಗಳ್ ಕೊರಲ್ದೆಱಪು ಮಾಡೆ (ಭಾವಚಂ. ೪-೧೭) ; ಉದಯಕಾಲದಲಪ್ಪದಳಮಂಟಪವ ತೆಱಹುಮಾಡೆಯುಮ್ಮ (ಶಿವಗೀ. ೧೫೫-೬೯೨ ವ). ೨. ಎಡೆಮಾಡಂ ; ಜಾಗಮಾಡಂ : ಮುಱಿದು ಕೋಟೆಯನೊಂದು ಕಡೆಯಲಿ ತೆಱಹುಮಾಡಿ ಮಹಾರಥರು ಜನವಱಿಯದವೊಲೊಳಹೊಕ್ಕು (ಶಬ್ದಾಗ. ೯-೧೪). **ತೆರಪಿನ ಶಿಕ್ಷಣ=** ಅವಕಾಶ ಸಿಕ್ಕಾಗ ವಿದ್ಯೆ ಕಲಿಯಲು ವಿಶೇಷ ಶಿಕ್ಷಣವ್ಯವಸ್ಥೆ : ಇತ್ತೀಚೆಗೆ ವಿಶ್ವವಿದ್ಯಾಲಯಗಳು ತೆರಪಿನ ಶಿಕ್ಷಣಕ್ಕೆ ಅವಕಾಶವನ್ನು ನೀಡುತ್ತಿವೆ (ರೂಢಿ).

[ ತೆಱ$_1$ + – ಪು$_2$-/ತಮಿ. ತಿಱಪ್ಪು ; ಮಲ. ತುಱಪ್ಪು ; ತುಳು. ತೆರಪು ; ತೆಲು. ತೆಱಪ, ತೆಱಪಿ ]

**ತೆಱಪುಗಣ್**, ತೆಱಪುಗಣ್ಣು (ನಾ). ವಿಶಾಲವಾದ ಕಣ್ಣು ; ಅಗಲವಾದ ಕಣ್ಣು : ತೆಱಪುಗಂಗಳ ತೆಳುವಸಿಱ ತರುಣಿ ನಿನ್ನೊಳಿಕವನಿರದುಸುರುವೆನು (ನೇಮಿಸಂ. ೨೦-೬೧). **ತೆಱಪುಗಣ್ಣು :** ಎವೆಪೊಯ್ಯದೆ ತೆಱೆದ ತೆಱಪುಗಣ್ಣು ಬಳಲುವಂದದಿ ನೆಱೆ ನೋಡಿ (ನೇಮಿಸಂ. ೩೨-೧೨೧).

[ ತೆಱಪು + ಕಣ್ ]

**ತೆಱಪುಗಣ್ಣು** 'ತೆಱಪುಗಣ್' ನೋ.

**ತೆಱಪುಗಾಣ್**, ತೆಱಹುಗಾಣ್ (ಕ್ರಿ). ೧. ಅವಕಾಶವನ್ನು ಕಾಣು ; ಅನುಕೂಲವನ್ನು ಕಾಣು : ತಮ್ಮ ಮೆಯ್ವೊರೆದ ರವಿಕಿರಣಕವಚಮೊಪ್ಪೋರ್ದಲೆ ತೊಲಗೆ ತೆಱಪುಗಂಡು ತೂಳ್ದಿ ಸುತ್ತಿ ಮುಱಿಯುಟ್ಟುವಂಗ ಭವನಾಱಡಿಗೆ ಬೆಗಡುಗೊಂಡು ತಲ್ಲಣಿಸಿದಂತೆ ನಲ್ಲಳಂ ಬಿಸುಟು ದೆಸೆಗೆಟ್ಟು ಚಕ್ರವಾಕಂ ಕೋಕನದಸದನದಿನೆಟ್ಟು ಪೋಗೆಯುಂ (ವರ್ಧಪು. ೬-೩೩ ವ) ; ಆ ಕುಟಿಲನಾಕೆಯೊಳ್ ತೆಱಪುಗಾಣದೆ ಮುಳಿದು (ಅನಂಪು. ೧೧-೯೪ ವ). ೨. ಬಿಡುವನ್ನು ಕಾಣು ; ಕೊನೆಗಾಣು : ಸಂಸಾರಾನುಯಾತ್ರೆಗೆ ತೆಱಪುಗಾಣನುಪದ್ರುವದ ಬಹುವಿಧ ಪರಾಭವಕೆ (ನಿಘಾಗ. ೪-೧೪-೨೫). **ತೆಱಹುಗಾಣ್ :** ೩. ಮಾರ್ಗವನ್ನು ತಿಳಿ,–ಅರಿ: ತೆಱಹುಗಾಣದಱುಹು ಗುಂದಿ ಮಱಹುಗೊಂಡೆನೆನ್ನ ಗುರುವೆ (ಹಂಪರ. ಹ. ೫೧೧-೧೨).

[ ತೆಱಪು + ಕಾಣ್ ]

**ತೆಱಪುಗಾಣಿಸು**, ತೆರಪುಗಾಣಿಸಂ (ಕ್ರಿ). ಬಿಡುವು ಕಾಣಿಸಂ ; ಎಡೆ ಬಿಡಂ: ಭೂ ದಿವಗಳ ಕೆಚ್ಚೆಪಂದದ ಕೆಂದೂಳ ಹಾದಿಯು ತೆಱಪುಗಾಣಿಸದೆ ವೇದೋಜಿಯು ಬಲುಗುದುರೆ ಸಹಿತ ನೆಱೆ ಕಾದುವೊಡ್ಡೈತಂದನಾಗ (ಕಂನವಿ. ೧೪-೮೦). **ತೆರಪುಗಾಣಿಸು:** ಆರು ಜೀವವನಿಂತು ಸೆಳೆವರು ದಿವ್ಯಶಾಂತಿಯ ಧಾಮಕೆ ? ತೀರದಾಸೆಗೆ ತೆರಪುಗಾಣಿಸಿ ವಿಶ್ವತತ್ವವಿರಾಮಕೆ ? (ಕವಿಶಾ. ೮೪-೧೪). [ ತೆಱಪುಗಾಣ್ + – ಇಸು$_3$ ]

**ತೆಱಪುಗುಡು** 'ತೆಱಪುಗೊಡು' ನೋ.

**ತೆಱಪುಗೊಡು**, ತೆರಪುಕೊಡಂ, ತೆರಪುಗೊಡಂ, ತೆರಹುಗಂಡಂ, ತೆಱಪುಗಂಡಂ, ತೆಱಹುಕೊಡಂ, ತೆಱಹುಗುಂಡಂ, ತೆಱಹುಗೊಡಂ (ಕ್ರಿ). ೧. ಸ್ಥಳ ಕೊಡಂ ; ಎಡೆ ಕೊಡಂ : ಪುದಿದಿರ್ಪ ಸಕಲಸಾಮ್ರಾಜ್ಯದ ಪಟ್ಟಸ್ಥಿತಿಗೆ ಪದೆಪಿನಿಂ ಮುನ್ನಮೆ ತಾನದು ತೆಱಪುಗೊಟ್ಟುದೆನಲೆಸೆದುದು ಬಾಲನ ಭಾಳಮಾ ವಿಶಾಲತೆಯಿಂದಂ (ಕುಸುಮಾ. ೬-೧೨೧). ೨. ಅವಕಾಶ ಕೊಡಂ ; ಸಮಯ ಕೊಡು : ಬೆಱಗಿದೇನ್ಯೆ ಮೊದಲು ಬಂದಬ್ಬರದ ರಕ್ಕಸನಂತೆ ನೋಟಕೆ ತೆ ಱ ಪು ಗೊ ಡು ತಿ ದೆ ಚಿ ತ್ತ ವಿ ವ ನ ವ ನ ಲ್ಲ ವ ಲೆ ನೋಡು (ತೊರರಾ. ೬-೨೪-೧೧). **ತೆರಪುಕೊಡು :** ೧. ದೂರದೂರ ಇಡು; ತೆರಪುಕೊಡು; ಅಂತರ ಬಿಟ್ಟು ಇಡು (Space. ಪತ್ರಿನಿ. ೭೭). **ತೆರಪುಗೊಡು :** ೨. ಇಂಧನವನಟ್ಟಗ್ನಿಯಾರಿಪನಂದ ಸಂಸಾರದೊಳುಯಿನಿತೊಂದುಯಚ್ಚುತಲ್ಪೆದೆ ಪರಿಗ್ರಹ ತೆರಪುಗೊಡದಂತೆ (ಜಿನಸಾ. ೭೯). **ತೆರಹುಗುಡು :** ೨. ಅಂತರಿಕ್ಷದ ತೆರದೊಳಾ ಶರಣರಿಪ್ಪೆಗಂ ತೆರಹುಗುಡುವಂ ಶಿವನೊಲು ಸಂತತಂ (ಏಕೋಪು. ೭-೪೭). **ತೆಱಪುಗುಡು :** ೧. ಪೊಣರ್ವಕ್ಕಿ ವಿಳಾಸಮನೆನಿಸಂ ತಳೆದ ಘನಕುಚಂ . . . ಹಾರವಾಣಿಗೆ ನುಸುಳಲ್ಕೆ ತೆಱಪುಗುಡದನವರತಂ (ಜಗವಿ. ೧೧-೩೦) ; ವಿಕಾಸಲಕ್ಷ್ಮಿಯು ಬರವಿಂಗೆ ತೆಱಪುಗುಡುತಲಿರ್ದು ಕುವಲಯಂಗಳ ಕಿಱಿಸಟ್ಟಗೊಳ್ ಪೊಕ್ಕು . . . ಸಾಯಂತನಸಮಯ ಸವಿಾರಣಂ ತೀಡುತ್ತು ವಿಪರ್ಗಳ್ (ಕುಸುಮಾ. ೪-೨೯ ವ); ಬೆಂಗದಿರ್ಗಂ ತಣ್ಗದಿರ್ಗಂ ತೆಱಪುಗುಡದ ಮರದುಱಂಗಲ ಕಟ್ಟಲೆಯುಂ ಕಾರಿರುಳ್ಗೆತ್ತು ಸುಱಿಯಲಮನೆಯ್ದು ಗೂಗೆಗಳುವಂ (ಕಬ್ಬಿಕಾ. ೨೩೪). ೨. ಇರುಳುಂ ಪಗಲುಂ ಜೀರೆನುತುಂ ತೆಱಪುಗುಡದೆ ಕಱಿದುವು ಮಳೆಗಳ್ (ಗಿಳಿ. ೯-೪೯) ; ಓದಿ ಕೇಳಿಸುತ್ತಾ ಭ್ರಮರಿಕೆ ಪರಿಮಳಿಗೆ ತೆಱಪುಗುಡಲೊಡಂ (ಅನಂಪು. ೬-೮೦ ವ). **ತೆಱಹುಕೊಡು :** ೨. ತೆಱಹುಕೊಡದಿರಿ ಸೋತ ಕರ್ಣನ ಪರಿಬವೆಮ್ಮದು ನೂಕುನೂಕೆಂದು ರವಣಿಸಿದರು ಮತ್ತೆ ಕೌರವನಸುಜರವಗಡಿಸಿ (ಕುಮಾವ್ಯಾದ್ರೋ. ೧೩-೨೭). **ತೆಱಹುಗುಡು :** ೧. ತನುವಿನೊಳಗೆ ತೆಱಹುಗು[ಪಾಠಾಂ. ಗೊ]ಡದೆ ತೀವಿ ನಿಲ್ಲು ಹಂಪೆಯರಸ (ಹಂಪರ. ಹ. ೫೧೨-೨೩). ೨. ಎನ್ನಲ್ಲಿ ನಾನಱಿದೆನೆಂಬ ಆಱಿವಿಂಗೆ ತೆಱಹುಗುಡದೆ (ಶಿವಗೀ. ೧೩೦-೬೪೪) ; ಆಱಿಸಿ ಪೊಗಲಾ ಮ್ಯಾಯ ನಿಕರಕೆ ತೆಱಹುಗುಡದ ಪರಸ್ಪರೂಪನು (ಕುಮಾಭೀ. ೭-೧೭) ; ಕರಣದುಪಹತಿಗೆ ತೆಱಹುಗುಡದವನುಭವಿಸು (ಅನುಸಾ. ೮-೨-೯) ; ತೆಱಹುಗುಡದೊರ್ವರೊರ್ವರ ಮೇಲೆ ಮುಳಿದು ಜಱಿದೆಚ್ಚಾಡಿದರ್ಧರದೊಳು

(ಜೈಮಿಭಾ. ೧೨-೨೦). **ತೆಱಹುಗೊಡು** : ೧. ಗೌಳ ತೆಱಹುಗೊಡು ಲಾಳ ವೈಯಿಕ್ಕು ಗುರ್ಜರ ಬಿನ್ನವಿಸು (ಬಸರ. ೬-೨೭): ತರಣಿಗಂಟೀ ಸಮಯ ವನಿಲಗೆ ತೆಱಹುಗೊಡುವವರಾರು (ಕುಮ್ಮಾಳ. ೧೨-೩): ಒಱಲಿ ಫಲವೇನರಸ ಬಟ್ಟೆಯ ತೆಱಹುಗೊಡಿರೈ ಹೋಗಲೀ ನೃಪರು (ಕೊರರಾ. ೪-೩-೨೪) : ಕಿಱುಬಿದಿರುಗಳ ಕಂಟಕಗಳು . . . ಧರಣಿಯೊಳ್ಪಸರಿಸಿಕೊಂಡು ಪಚ್ಚೆಗಳಿಗೆ ತೆಱಹುಗೊಡದೆ ಮುಸುಕಿಹುವು (ಕಂಸವಿ. ೧೮-೪೫). ೨. ಮುಱಿದಹೆನೆಂದು ಭಾವಿಸಹೋದರೆ ತೆಱಹುಗೊ [ಪಾಠಾಂ. ಗು]ಡದು (ಅವಚಂ. ೯೮-೪೪೨) : ಬಾಯಿಬಡಿಕರು ನಾವು ನೀ ಗರುವಾಯಿಕಾಱನು ಬಯ್ವ ಬಿರುದಿನ ಬಾಯ ನೋಡಾಯೆನುತ ತೋಟಿಗೆ ತೆಱಹುಗೊಡದೆಸಲು (ಕುಮ್ಮಾಳ. ೪-೪).

[ ತೆಱಪು + ಕೊಡು$_1$ ]

**ತೆಱಪುಗೊಳ್**, ತೆಱಹುಗೊಳ್ (ಕ್ರಿ). ೧. ಎಡೆಯನ್ನು ಪಡೆ ; ವ್ಯಾಪಿಸು; ಸ್ಥಳವನ್ನಾಕ್ರಮಿಸು: ಅಚ್ಚಸೊಗದ ಮೊಳೆ ಬೆಳೆಯುತ್ತುಂ ತೆಱಪುಗೊಳುತ್ತಿರೆ ಮೇನೆಯ ಹೊಱಗೊಗೆದುದು ಗರ್ಭಸೂಚನಾ ಸೌಂದರ್ಯಂ (ಗಿರಿಕ. ೩-೩೬). ೨. ತೆರೆ ; ಬಿಚ್ಚು ; ತೆರವಾಗು : ಕೋಗಿಲೆಯ ಕೊರಲೂ ತೆಱಪುಗೊಂಡಿತು (ತಿಮ್ಮಸ. ೫-೨). **ತೆಱಹುಗೊಳ್** : ೧. ಎನ್ನ ಮನವ ತನ್ನತ್ತ ಸೆಳೆದು ಮಱಹ ಮಾಣಿಸಿ ಕುಱುಹಳಿದ ತೆಱಹುಗೊಂಡ ಸೌರಾಷ್ಟ್ರ ಸೋಮೇಶ್ವರಲಿಂಗವ ಬಲ್ಲರೆ ಬಲ್ಲೆ (ಆದಯ. ೨೨-೬೦). [ ತೆಱಪು + ಕೊಳ್$_1$ ]

**ತೆಱಪುವಡೆ, ತೆರ್ಪಂಬಡೆ** (ಕ್ರಿ). ೧. ಸ್ಥಳವನ್ನು ಪಡೆ,–ಹೊಂದು : ಮುಂದೆ ತೆಱಪುವಡೆಯದೆ ಸುತ್ತುಂ ಪರಿವಡೆದುದು ಪುರಜನಂ (ವರ್ಧಪು. ೫-೫೦). ೨. ಅವಕಾಶವನ್ನು ಪಡೆ,–ಹೊಂದು : ತೆಱಪುವಡೆದಂಗಜಂ ಕೆಯ್ಸೆಱೆಗೊಳೆ ನೋಟಕರ ಮನಮನಾಗಳ್ (ಪಂಪಭಾ. ೫-೬೭) : ತೆಱಪುವಡೆದಡಸಿ ರುಜೆ ಮೆಯ್ಯುಱುಗುವಿನಮವುಂಕಿ ಸೋಂಕಿ ನಿಃಕರುಣತೆಯಿಂ (ಸುಕುಮಾ. ೨-೧೧): ಅಂತು ಪಾಯದಟಮೆಲ್ಲಮೆಚ್ಚು ಮುಱಿದುಂ ಕುಱಿದಱಿಯಾಗೆ ತೆಱಪುವಡೆದಿದಿರೊಡ್ಡಿನ ತೇರೊಡ್ಡುಗಳ್ ಶೂರಸಾರಥಿ ಪ್ರೇರಣದಿನೋರೊಂದಂ ಪತ್ತೆಸಾರ್ಚಿದಾಗಳ್ (ಚಂದ್ರಪು. ೧೧-೭೪ ವ). **ತೆರ್ಪಂಬಡೆ** : ೩. ತೆರವಾಗು ; ಖಾಲಿಯಾಗು ; ಬರಿದಾಗು : ಕೆಸಱು ಬುರ್ಬುರೆಱೆ ನೀರ್ಬೊಬ್ಬುಳಿಸೆ...ತೆ[ಪಾಠಾಂ. ನೆ]ರ್ಪಂಬಡೆದಱುಗೆಱೆಗಳ್ ಬೀಡೆವೋಗಿರ್ದ ತಣ್ಣೀರೊಸರ್ದಾಣಂ ಬುವಿಯಾದತ್ತು (ಜಗವಿ. ೦೭-೬೨). P ಇದಂ ಛಂದಸ್ಸಿಗಾಗಿ ಮಾಡಿಕೊಂಡ ರೂಪ. [ ತೆಱಪು + ಪಡೆ$_1$ ]

**ತೆಱಪುವಾರ್** (ಕ್ರಿ). ಅವಕಾಶವನ್ನು ನೋಡು,–ನಿರೀಕ್ಷಿಸು ; ಸಮಯಂ ಕಾಯು: ಬಂದಿಕಾಱನಂತೆ ತೆಱಪುವಾರ್ದು ಪಿಡಿವ ಶಾಕಿನಿಯರಿಂ (ಕಾವ್ಯಸಾ. ೫೨೯ ಶೂದ್ರಕ) ; ತೆಱಪುವಾರ್ದು ನನೆವಿಲ್ಲ ಬಲ್ಲಹನಂ ಕಂಡು (ಕಬ್ಬಿಗಕಾ. ೦೮೮). [ ತೆಱಪು + ಪಾರ್$_1$ ]

**ತೆಱಪುವೆಱು** (ಕ್ರಿ). = ತೆಱಪುವಡೆ ೨ : ತೆಱಪುವೆತ್ತು ಪಾಪೇಭಕಂಠೀರವ ನೆಚ್ಚೊಂದಪೂರ್ವಸಾಯಕಂ ಚಿತ್ರಾನೀಕನಂ ನೆರೆಗೊಳ್ವುದುಂ (ಶಾಂತಿಪು. ೪-೨೩ ವ) ; ಅಂತೆಚ್ಚ ಮುನಿಕರಮನೋರಂತಿರೆ ತೞಿತೞಿದು ಕಾದೆ ಪಾಂಚಾಳನ ವಿಕ್ರಾಂತತೆಗೆ ವಿಳಯಕಾಲಕೃತಾಂತನ ತೆಱದಿಂದೆ ತೆಱಪುವೆತ್ತಾ ಕ್ಷಣದೊಳ್ (ನೇಮಿಪು. ೧೨-೧೩೦). [ ತೆಱಪು + ಪೆಱು$_1$ ]

**ತೆಱಯುಪ್ಪೆ(?)** (ನಾ). (?) : ಶ್ರೀಪೃಥುಮಾಣಿ ಪರಮಸುಭಗನ್ ಪಗೆವರ ಗನ್ಧಹಸ್ತಿ ಪಾರ್ವ್ವರ ಇಚ್ಚೆನತ ××× ಪೂರ್ವ್ವಾಚಾರದಾ ಈ ತೆಱಯುಪ್ಪೆ ಈಯೆಮೆನ್ದೊಡೆ ಪೊನ್ನೆರನುಂ ಚೋಲಮಹಾರಾಜನುಂ ಮೂವದಿಮ್ಬಪ್ಪಾರ್ವ್ವರಾನ್ಕೊನ್ದಾ (ಎಕ. XVI, ಮದ್ದಗಿ. ೦೦೮-೩ ; ೮ನೆಯ ಶತ). [ ? ]

**ತೆಱವಲಿತನ** (ನಾ). ಬಾಲಿಶಭಾವ ; ದಡ್ಡತನ ; ಅವಿವೇಕ: ಬಱುವಲಿಯರ ಮಾತಂ ಕೇಳ್ದಱಿಯದೆ ದೆಸೆಗೆಟ್ಟು ಜೀವಮುಂ ಗತಿಯುಂ ಕೇಳಱನುಂ ತಾವೊಳಮೆಂಬೀ ತೆಱವಲಿತನವೇಕೆ ನಿನಗೆ ಭುವನಾಧಿಪತೀ (ಧರ್ಮಾಮೃ. ೯-೪೦).

[ P ಇದು 'ತರುವಲಿತನ' ಎಂಬುದರ ಅಪಲಿಖಿತವಿರಬಹುದು ]

**ತೆಱವಾಳಿಕೆ** (ನಾ). ಒಂದು ಬಗೆಯ ತೆರಿಗೆ: ಆ ಸೀಮೆಯ ದೇವರ ಸ್ಥಾನಿಕದಲು ಸ್ಥಾನಿಕರ ಮನೆ ಮೊದಲಾದ ಮದವಳಿಕೆ ಸಲು × × ರಾಯ ಕಾಣಿಕೆ ಸುಂಕ ತೆಱವಾಳಿಕೆ ಸಹ ಸರ್ವ ಮಾ × × (ಎಕ. x, ಕೋಲಾರ. ೯೪-೦೭ ; 1406). [ <ತೆಱ$_2$ ? ]

**ತೆಱವಿ** (ನಾ). = ತೆಱಪು ೧. 'ಕಣ್ದೆಱವಿ' ಪರಾ.

[ ತೆಱ$^3_1$ + -ವಿ ]

**ತೆಱವಿಡು** (ಕ್ರಿ). ಪಣವಾಗಿ ಇರಿಸು ; ಶುಲ್ಕವನ್ನಾಗಿ ಇಡು : ಆಯುಧಕೆ ತೆಱವಿಟ್ಟೆನ್ನ ನಿನ್ನಾಯುಷವ ಹಿಂದಿಕ್ಕಿಕೊಂಬನ ತಾಯೆನುತ ಬೊಬ್ಬಿಱಿದು (ಕುಮ್ಮಾದ್ರೋ. ೦೬-೫೨). [ ತೆಱ$_2$ (<ತೆಱ$^3_3$) + ಇಡು$_1$ ]

**ತೆಱವು$_1$**, ತೆರವು$_1$ (ನಾ). ೧. ಎಡೆ ; ಸ್ಥಳ ; ಜಾಗ : ತೆಱವಿಂ ನೀಳ್ಕೆ ಗವಾಕ್ಷಮಂ ತೆಱೆವ ನೀರಂ ಮುಕ್ಕುಳೊಳ್ ತೀವಿಕೊಂಡೆಱೆವ . . . ಓಪರಟ್ಟಿಱಲಂಪಂಗನೆಯರ್ಗೆ ರಾಗಮನದೇಂ ಮಾಡಿತ್ತೊ ರತ್ನಂತದೊಳ್ (ವರ್ಧಪು. ೬-೫೨) ; ಉತ್ತಂಸವಲಯದೊಳಡ್ಡಂಗೆಡೆವ ಸಾರ್ದ್ರ ಕಬರೀಭಾರವುಂ ತೆಱವಿನೊಳ್ ಪೊಱಮುಯ್ಯಾಂಗಣೆದು ನೂಂಕುತ್ತುಂ (ಅನಂಪು. ೭-೫೦ ವ). **ತೆರವು$_1$** : ೧. ಉರುವಲು ತುಂಬಲು ಎದುರಿನಲ್ಲಿ ತೆರವು ಇದೆ (ಅಡುಗಾ. ೨೨). ೨. ಅವಕಾಶ ; ಬಿಡುವು : ಪ್ರೇರಣೆಯಾದಾಗಲ್ಲ ಕಾವ್ಯವು ಮನದಲ್ಲಿ ರಚಿತವಾಗಿ ತೆರವು ದೊರೆತಾಗ ಅದನ್ನು ಕಾಗದದ ಮೇಲೆ ಬರೆಯುವವರೆಗೂ ಅದು ಸಮಗ್ರವಾಗಿ ಸ್ಮರಣೆಯಲ್ಲಿ ಉಳಿಯುತ್ತಿತ್ತು (ಮುಹಾಯೋ. ೧೮೩). ೩. ಖಾಲಿಯಾದುದು ; ಬರಿದಾದುದು : ಬರಿದೋ ಬರಿದು ತೆರವೋ ತೆರವೂ ಬಡವರ ಬಗ್ಗರ ತುತ್ತಿನ ಚೀಲಾ (ಗರಿ. ೭೦-೦೮) ; ಭೋಜನಶಾಲೆಯನ್ನು ಪ್ರವೇಶಿಸಿ ಎಡಬಲಕ್ಕೆ ನೋಡದೆ ತೆರವಿದ್ದ ಒಂದು ಎಲೆ ಹಿಡಿದು ಕುಳಿತು (ಜಲುನಿ. ೧೧) : ಎರಡನೆಯ ನಂಬರ ಶಾಲೆಯಲ್ಲಿ ಒಂದು ಸ್ಥಳವು ತೆರವಿರುವದು (ಸ್ವಾಲಮಿ. ೫) ; ಇರವಿನಲ್ಲಿ ಆ ತೆರವು ತುಂಬಿ ತೆರೆಯಾಡುವಂತೆ ಕಡಲು ಅರಿವಿನೊಂದು ಹೊಸ ಬರವಿಗಾಗಿ ಹಾತೊರೆಯುತಿಹುದು ಒಡಲು (ನಲವು. ೩೬-೩).

**ತೆಱವುಮಾಡು, ತೆರವುಮಾಡು** = ೧. ಬರಿದು ಮಾಡು ; ಖಾಲಿ ಮಾಡು : ಮೆಱೆವ ಮಣಿಭವನವನು ರವಿಜಗೆ ತೆಱವುಮಾಡಿದ (ಕೌಶಿಂ. ೪೪-೫೦) : ಹಿತ್ತಲಲ್ಲಿಯ ಒಂದು ಕೋಣೆಯನ್ನು ತೆರವುಮಾಡಿ ನೀಲಾಂಬರಿಯು ಇರುವಂತೆ ವ್ಯವಸ್ಥೆಮಾಡಲಾಗಿದ್ದಿತು (ಜಯಂತ. ೪೨೬). ೨. ಅವಕಾಶ ಮಾಡಿಕೊಡು : ಆ ಗಡಿಯಾರ . . . ತಡವಾಗಿ ಶಾಲೆಗೆ ಬಂದರೂ ಬೇಗನೇ ಮನೆಗೆ ತೆರಳಲು ತೆರವುಮಾಡಿಕೊಡಲು ಪೂರ್ಣ ಸಹಕರಿಸುತ್ತಿದ್ದಿತು (ರೂಪಸಂ. ೬೦). **ತೆರವಾಗು** = ೧. ಬಿಡುವಾಗು ; ಪುರುಸೊತ್ತು ಹೊಂದು : ಈಗ ಸಾಹೇಬರು ತೆರವಾಗಿದ್ದಾರೆ. ನೀವು ಸುದ್ದಿ ಮುಟ್ಟಿಸಿರಿ (ಜಮಿನಾ. ೦೫೩). ೨. ಖಾಲಿಯಾಗು : ಆ ಮನೆ ತೆರವಾಗಿದೆ (ರೂಢಿ).

[ ತೆಱ$^3_1$ + -ವು. /ತಮಿ. ತೆಱವು ; ಮಲ. ತುಱವು ]

**ತೆಱವು$_2$**, ತೆರವು$_2$ (ನಾ). ೧. ಕಾಣಿಕೆ ; ಕಪ್ಪ : ತಮ್ಮ ಬೀರಮುಂ ಬಿಂಕಮುಮಂ ತೆಱವುಂ ತೆಲ್ಲಂಟಿಯುಮೆಂದರಿಕೇಸರಿಗಾಗಳೀವವೋಲ್ ಬೆನ್ನಿತ್ತರ್ (ಪಂಪಭಾ. ೩-೭೨). ೨. ತಪ್ಪುಕಾಣಿಕೆ. **ತೆರವು$_2$** : ೩. ಕನ್ಯಾಶುಲ್ಕ; ತೆರ : ತೆರವಿನ ಹಣ ಪಡೆದು ಸಾಲ ತೀರಿಸಿ ಗದ್ದೆ ಜಮಿನಾನು ಉಳಿಸಿಕೊಳ್ಳಬಾರದೇಕೆ? (ಮನೆಬೆ. ೧೬೧); ಹೆಣ್ಣಿನ ತಂದೆಗೆ ಒಂಬತ್ತುನೂರು ರೂಪಾಯಿ ತೆರವು ಎಣಿಸಿ, ಒಂಬತ್ತುವರುಷದ ಎಳೆಹುಡುಗಿಯನ್ನು ಅವನು ಮದುವೆಯಾಗಿದ್ದ (ಎರಡು. ೪). ೪. ಸಾಲ ; ಕಡ : ಉಪದೇಶ,

ವ್ಯವಹಾರಜ್ಞಾನಗಳು ಕಾವ್ಯದಲ್ಲಿ ಸೇರಬೇಕಾದರೆ ಕಾಂತೆಯರ ನಾಲಿಗೆ ಯನ್ನು ತೆರವು ತರಬೇಕು (ಸಾಹಿವಿ. ೯೪). 'ತೆಱ$^3_3$' ಪರಾ.

[ ತೆಱು$_1$ + – ವು ]

**ತೆಱವೆ, ತೆರವೆ** (ನಾ). ೧. ತೆರೆಯುವಿಕೆ : ತೆಱವೆ, ಪಳವೆ, ಎಳವೆ (ಶಮದ. ೨೦೦ ಪ್ರಯೋ). 'ಕಂದೆಱವೆ' ಪರಾ. ೨. ಕಾಣಿಸಿಕೊಳ್ಳುವಿಕೆ ; ಉಂಟಾಗುವಿಕೆ : ತೆಱವೆಯಾದುದು ಭೀತಿ ಬಲು ಬೊಬ್ಬಿಱಿತಕಸುರನ ಧೈರ್ಯ ಕಾಲನ ಮಱೆಯ ಹೊಕ್ಕುದು (ತೊರರಾ. ೩-೬-೫೧). **ತೆರವೆ** : ೨. ಹೋಳಿದವು ರಥಗಳಾನೆಯ ಮೇಲೆ ಜೊಂಪಾಡಿ ತಲೆಮುಟ್ಟಿ ನಿಂದವಾಳುಗಳೂ ಹಲವೇನು ತೆರವೇನು ತೆರವೆ ಮರವೆಯಿಲ್ಲ (ಸಾಂದಕಾ. ೧೧-೧೯). [ ತೆಱ$^3_1$ + – ವೆ ]

**ತೆಱವೊನ್** 'ತೆಱ್ಱಿವೊನ್' ನೋ.

**ತೆಱಸಲಿಕೆ** (ನಾ). ಕಂದಾಯವನ್ನು ಸಲ್ಲಿಸುವಿಕೆ ; ಸುಂಕವನ್ನು ತೆರುವಿಕೆ: ಮಲ್ಲಿಗ್ರಾಮದವರು ಅರಮನೆಗೆ ತೆಱುವ ಕುಳದ ಹೊಂನಿನ ವೊಳಗೆ ತೆಱಸಲಿಕೆಯ ಹಂನೆರಡು ಹೊಂನನೂ (ಕಇ. I, ೫೮-೧೬ : 1446).

[ ತೆಱು$_2$ (<ತೆಱ$^3_3$) + ಸಲಿಕೆ$_1$ ]

**ತೆಱಸು** 'ತೆಱಿಯಿಂಸು' ನೋ.

**ತೆಱಹಾರ** (ನಾ). (?): ಮೊಱಹಾರ ನೀಡಿದರೆ ತೆಱಹಾರ ಕೈಕೊಳ್ಳುತ್ತೈದಾನೆ ಅಹುದಹುದು ದೇವರ ಹಸಿವು ನಮಗೆ ಹೊಸತು ದೆಸೆದಿಕ್ಕಿಲ್ಲ ವಿಶ್ವತೋ ಮುಖದ ಕೂಡಲಸಂಗಮದೇವಂಗೆ ದೆಸೆದೆಸೆಯಲ್ಲಿ ನೀಡಿ (ಬಸಹ. ೧೦೮-೩೨೫): "ತೆರವಿಲ್ಲದ" (ಬಸವ. ಶ. ಕೋಶ). [ ? ]

**ತೆಱಹು** 'ತೆಱಪು' ನೋ.

**ತೆಱಹುಕೊಡು** 'ತೆಱಪುಗೊಡು' ನೋ.

**ತೆಱಹುಗಾಣ್** 'ತೆಱಪುಗಾಣ್' ನೋ.

**ತೆಱಹುಗುಡು** 'ತೆಱಪುಗೊಡು' ನೋ.

**ತೆಱಹುಗೊಡು** 'ತೆಱಪುಗೊಡು' ನೋ.

**ತೆಱಹುಗೊಳ್** 'ತೆಱಪುಗೊಳ್' ನೋ.

**ತೆಱಹುದೋಱು** (ಕ್ರಿ). ಅವಕಾಶವನ್ನು ಕೊಡು ; ಎಡೆಮಾಡಿಕೊಡು : ಅಱಸದಿರಿ ಬೇಱತ್ತಲಿತ್ತಲು ತೆಱಹು [ಪಾಠಾಂ. ಪು]ದೋಱುವೆ ನೋಡಿ ಸಮರವ ಮೆಱೆವುದುಳ್ಳಡೆ ಮೈಗುಡುವುದಗ್ಗಳಿಕೆ ನಿಮಗೆನುತ (ತೊರರಾ. ೫-೯-೨). [ ತೆಱಹು (<ತೆಱಪು) + ತೋಱು ]

**ತೆಱಹುಮಱಹು** (ನಾ). ೧. ಮೈಮರೆವು ; ತಲ್ಲೀನತೆ: ಇಂತು ಬಸವರಾಜದೇವರು ಲಿಂಗಾರ್ಚನೆಯಂ ಮಾಡುತ್ತಾ ತೆಱಹುಮಱಹಾಗಿರ್ದ ವೃತ್ತಾಂತಮಂ ಪ್ರಭುದೇವರು ಎಚ್ಚಱಿಸಿ (ಶೂನ್ಯಸಂ. ೧೦೩-೪೦). ೨. ಉದಾಸೀನತೆ ; ಉಪೇಕ್ಷೆ ; ಅಸಡ್ಡೆ : ಒಡೆಯರು ಮನೆಗೆ ಬಂದುದ ಕಂಡು ತೆಱಹುಮಱಹಾಗಿಪ್ಪನೆ ಭಕ್ತನು (ಚನ್ನವ. ಶ. ೧೨೦-೨೬೭).

[ ತೆಱಹು (<ತೆಱಪು) + ಮಱಹು./ತೆಲು. ತೆಱಪುಮಱಪು ]

**ತೆಱಿಗೆ, ತೆರಿಗೆ, ತೆಱುಂಗೆ, ತೆಱಿಗೆ** (ನಾ). ೧. ಸುಂಕ ; ಕರ : ನಿಮಗೆ ತೆಱಗೆ ಕಾಣಿಕೆ ಬೇಡಿಗೆ ಬಿರಾಡಯೇನುಂಟಾದದನೂ ನಾಉ ನಿಮಗೆ ಬಿಟೆಉ (ಮೈಆರಿ. ೧೯೪೬, ೨-೮ : ಸು. 1554) ; ಹಾಗದ ತೆಱಗೆ ಬೇಕೆಂದು ನಾ ನಿನ್ನೂರ ಬಾಗಿಲ್ಗೆ ಭಟರನಟ್ಟಿದೆನೆ (ಭರಅ. ೫೧-೬೩). ೨. ಕಾಣಿಕೆ : ಕಿರೀಟಿಯ ತಲೆಯ ತೆಱಿಗೆಗೆ ತಾವೆ ಹೊಣೆಯೆಂದುದು ಭಟಸ್ತೋಮ (ಕುವ್ಯಾಕ. ೨೨-೩೩). **ತೆರಿಗೆ**: ೧. ಯಿಾ ತೆರಿಗೆ ಹಣವಿ ×× (ಎಕ. VII, ಶಿವಮೊ. ೨೦-೧೧ : ?) ; ಜನರಕ್ಷಣೆಯುಗರೆಯುದೆ ತೆರಿಗೆ ದಂಡಗಳಾಸೆಗೈವರ (ಬಿಜ್ಜಳ. ೭೦-೩೨): ಪ್ರಜೆಗಳಿಂದ ಹೆಚ್ಚು ತೆರಿಗೆ ವಸೂಲು ಮಾಡಬೇಕೆಂಬುದು ನನ್ನ ಸಲಹೆ (ಪ್ರತಾಪ. ೯೧) ; ವೃತ್ತಿಗಳಿಲ್ಲದರ ಮೇಲೂ ತೆರಿಗೆಗಳು ಕ್ಲುಪ್ತವಾಗಿದ್ದುವು (ಭಾರದ. ೩೫೮). **ತೆಱುಗೆ**: ೨. ಕ್ರತುವಿನಲಿ ತೆಱುಗೆಯ ತೆಱುವರೆಮಗೆ ಮನ್ನಿಸುವರೆಂತಾದರೂ (ನಿಭಾಗ. ೦೧-೮-೨೪). **ತೆಱಿಗೆ** ಹದಿನಅಯ್ದು ಹಣವಿನ ತೆಱಗೆಯ ಭೂಮಿ (ಎಕ. VIII, ತೀರ್ಥಹ. ೦೪೮-೨೦ : 1417) ; ಸಮಸ್ತ ತೆಱಗೆ ಹೊಱಗೆ ಎಲ್ಲವನು ಕುಳವ ಕಡಿದು ಬಿಟ್ಟು ಸರ್ವಮಾನ್ಯದ ಅಗ್ರಾರವಾಗಿ ಚಿಕ್ಕರಾಯಪುರವೆಂಬ ಹೆಸರನು ಯಿಟ್ಟು (ಎಕ. IV, ಗುಂಡ್ಲುಪೇ. ೬೬-೪೭ : 1505).

[ ದೇ.॥ ತುಳು. ತೆರಿಗೆ ]

**ತೆಱಿಗೆದೆಱು** (ಕ್ರಿ). ೧. ಸುಂಕವನ್ನು ಕೊಡು. ೨. (ಅಲಂ) ಒಡ್ಡು ; ನೀಡು: ಮಲಯಪವನಗೆ ತೆಱಿಗೆದೆತ್ತರು ಮಯ್ಯ ಮನುಜರು (ತಿಮ್ಮಅ. ೫-೨). [ ತೆಱಿಗೆ + ತೆಱು$_1$ ]

**ತೆಱಿದಾರ** (ನಾ). ಒಬ್ಬಾತನ ಹೆಸರು (?) : ಕಡುಕಲ್ಲ ಪುಲ್ಲಮಜ್ಜಲ ತೆಱಿದಾರ ಪನ್ನಾಡನಾಳೆ (ಎಕ. IX, ದೇವನ. ೪೩-೩; ಸು. 900 ?). [ ? ]

**ತೆಱಿಸು, ತೆರಿಸು** (ಕ್ರಿ). ೧. ಕೊಡುವಂತೆ ಮಾಡು : ಅವರ್ ಪೊಳ್ಳನೆ ನಕ್ಕು ಕ್ರಮದಿಂ ತಿಳುಪಿ ಕನ್ನಡಿಯ ಬೆಲೆಯಂ ತೆಱಿಸಿದರ್ (ಧರ್ಮಾಪ. ೬-೧೩). ೨. ತಪ್ಪುಕಾಣಿಕೆ ಕೊಡಿಸು; ದಂಡ ಕೊಡುವಂತೆ ಮಾಡು: ಭೂಧವ ತೆಗೆ ನಿನ್ನ ಮುಸುಕನಿವಳೊಳಪರಾಧವ ತೆಱಿಸಿಕೊಡುವೆವು (ಭರಅ. ೧೪-೧೨೯). **ತೆರಿಸು** : ೧. ಹತ್ತುರೂಪಾಯಿ ತೆರಿಸಿದರು (ರೂಢಿ).

[ ತೆಱು$_1$ + – ಇಸು$_3$ ]

**ತೆಱು$_1$, ತೆರು** (ಕ್ರಿ). ತೆತ್ತ$_1$ (ಭೂತಕೃ), ತೆತ್ತು$_3$ (ಭೂತನ್ಯೂ). ಕೊಡು ; ನೀಡು : ಅವರಾ ಪಡೆಯಂ ಪೆರ್ವಟ್ಟಿಯೂರುಮನ್ನು ತೆಱೆ ಪೆರ್ನ್ನೆನ್ದಿ ಎರಡು ತೆಱುವುದು (ಎಕ. IV, ಹೆಗ್ಗಡ. ೪-೨೩; ಸು. 750) ; ಪರಮಂಡಳವ್ಯಸನಮನಾರಯ್ವುಮುಪ್ಪೊಡಿತ್ತುಂ ತೆತ್ತುಂ ಬಾಟ್ಟ ಮಂಡಲ ಮಲ್ಲದೆ ಕೇಱಯುಂ ವಿಸಾಱಿಯುಂ ನೆಗಟ್ಟ ಮಂಡಲಮಿಲ್ಲ (ಪಂಪಭಾ. ೬-೬೬ ವ) ; ಮಧುಕರಂ ಮಧುಕರಮಂ ತೆಱಲಾರದೆ ಮಲ್ಲಿಗೆಯೊಳಿ ಸೆಱಿಗೆಯ್ದಂತಿರ್ದುದೊಂದು ಪರಿಮಳಫಲಮಂ (ಅಜಿಪು. ೬-೧೮); ಇರುಳು ರಾಯನ ಮನೆಗೆ ಕಪ್ಪವ ತೆಱುವುದೋ ಹಗಲು (ಕುವ್ಯಾದ್ರೋ. ೫-೫೪) ; ತೆಱುವರೀತಗೆ ಕಪ್ಪವನು ಸಾಗರಪರೀತಸಮಸ್ತಪೃಥ್ವೀಶ್ವರರು (ತೊರರಾ. ೧-೩-೨೨). **ತೆರು$_1$**: ಹಣವನ್ನು ತೆತ್ತು ನೀ ಹೊತ್ತನು ಕೊಳಲ್ಲಾರೆ ಹೊತ್ತಿಗೆ ಬೆಲೆ ಹೆಚ್ಚು ಗೊತ್ತೆ (ಇಂಚಾಪ. ೧೫೪-೫೬) ; ಕನ್ನಡಿಯ ಮೇಲಣ ನಲ್ಮೆಯಿಂದ ಕೆಲವರಾದರೂ ತಪ್ಪನ್ನು ಊದಿ ಓದಿದರೆ ಬರೆಹಕ್ಕೆ ಕೀಳ್ಮಟ್ಟದ ಬೆಲೆಯನ್ನಾದರೂ ತೆತ್ತಂತಾಗುವುದು (ಕಾಲೂರ. ೫ ಮುನ್ನುಡಿ); ಎಲ್ಲವನ್ನು ತೆರಲು ಅವರು ಹಿಂಜರಿಯುವುದಿಲ್ಲ (ಮುನಿಮಾ. ೨೮). 'ತಿಱು' ಪರಾ.

[ ದೇ.॥ ಕೊಡ. ತೆರ್=ದಂಡ ಕೊಡು; ಕುಇ. ತೆಪ್ಪ=ಹಿಂದಿರುಗಿಸು ]

**ತೆಱು$_2$** 'ತೆಱ$^3_3$' ನೋ.

**ತೆಱುಗಡೆ, ತೆರಗಡೆ** (ನಾ). = ತೆಱಿಗೆ ೧: ಆ ಖಂಡಿಕದ ವ್ರಿತ್ತಿಗೆ ತೆಱುಗಡೆ ಹೊಱುಗಡೆ ನಿಮಿತ್ತವಾಗಿ ಆ ಮಹಾಜನಂಗಳು ಕೊಟ್ಟ ನಾಗಂಡುಗ ಗದ್ದೆ (ಎಕ. XII, ಚಿಕ್ಕನಾ. ೨-೨೦; 1261). **ತೆರುಗಡೆ** : ಶ್ರೀವಿಶ್ವನಾಥ ದೀಕ್ಷಿತೈಯ್ಯನವರಿಗೆ ದಂಣಾಯಕ ಸಿಂಗಮಗುಮಂಣ್ಣಂಗಳು ಕೆರೆಯ ಕಟ್ಟಿಸಿದದ ಕೊಡಗೆಯಾಗಿ ಯಾವ ತೆರುಗಡೆಯುಂಯಿಲ್ಲದೆ ಸರ್ವಮಾನ್ಯವಾಗಿ ಬೀಜವರಿಯಲಿ ಕೊಟ್ಟರು (ಮೈಆರಿ. ೧೯೩೦, ೮-೬; ?).

[ ತೆಱು$_1$+ಕಡೆ ? ]

**ತೆಱುಗೆ** 'ತೆಱಿಗೆ' ನೋ.

**ತೆಱುಮಾನ್ಯ** (ನಾ). ತೆರಿಗೆಯಿಲ್ಲದುದು ; ತೆರಿಗೆಯ ವಿನಾಯಿತಿ : ಬೇಣ ಬಿಳಿರು ಭಿಟು ಚಿಟಿ ಸೀಮೆ ಸಾಮ್ಯ ಮುಂತಾದ ಉತ್ಪತ್ತಿಯೆಲ್ಲವನು ತೆಱುಮಾನ್ಯವಾಗಿ . . . ಪಾಲಿಸಿಕೊಂಡು (ಕಇ. III-1, ೯-೩೩ : 1538).

[ ತೆಱು$_2$ (<ತೆಱ$^3_3$) + ಮಾನ್ಯ ]

**ತೆಱುಮಾರು** (ನಾ). (?) : ಪ್ರಥಮಸ್ಥಳಸಂಜಾತವಾದ ಹಳಿಕಾಱ ಹರವಾಗಿ ಗೌಡುಂಕೆಯಾಗಿ ಆರವನೆ ತೆಱುಮಾರುಗಳನೂ ಉಂಡಿಗೆಯು ಕಿರುಕೊಳ ಸಲ್ಲ (ಸೌಇಇ. IX-ii, ೪೩೩-೩೭; 1408). [ ? ]

**ತೆಱುವಟ್ಟಲ್** (ನಾ). ಒಂದು ಬಗೆಯು ಪಾತ್ರೆ (?) : ತಳಿಗೆ ಕನ್ನಡಿ ಸಿಪ್ಪು ಕಂಚಿನ ಸಟ್ಟುಗಂ ತೆಱುವಟ್ಟಲಗ್ಗಳದ ಕೈಮಳಿ ಶಾಳವೊಪ್ಪುವ ಗಿಣ್ಣಲೆಂಬಿವನಾವಗಂ ಕಳೆದುಕೊಂಡೊಡನಿರ್ದ ಧೂರ್ತಜನಕ್ಕೆ ಜೀವಿತ ಮೊದು ತನ್ನೊಳೆ ವಿಚಾರಿಸಿ ನಿಚ್ಚಲುಂ ಕುಡುವಂ ನೃಪಾತ್ಮಜನರ್ತಿಯಿಂ (ಧರ್ಮಾಮೃ. ೨-೨೬). [ P ಇದು 'ಕಿಱುವಟ್ಟಲ್' ಇರಬಹುದೇ ? ]

**ತೆಱುವಾಳು** (ನಾ). (?) : ತೋಳು ಸಾವಿರವಮರಪತಿ ತೆಱು [ಪಾಠಾಂ. ಱ]ವಾಳಿನೊಕ್ಕಲು ಕಂತುಕದ ವೈಹಾಳಿ ಪಾತಾಳದಲಿ ಸಪ್ತದ್ವೀಪ ಮನೆ ತನಗೆ (ಕುಮ್ಹಾ.ಸ. ೯-೬೦). "ಜೀತಗಾರ; ದಂಡ ಕೊಡುವವನು" (ಪ್ರಭಣ್ಣ). [ P 'ಇದು ತೆಱು + ಬಾಳು' ಇರಬಹುದೇ ? ]

**ತೆಱುವೆ** (ನಾ). = ತೆಱು³ಗೆ ೧: ಗುತ್ತಿಗೆ ಭೂಮಿ ೩೩೦೦ಕ್ಕೆ ಸಿದ್ಧಾಯುಗ ೨೦ ಪನು ತೆಱುವೆ ಬಿಟ್ಟು ಕೊಟ್ಟ (ಮ್ಯಾಅರಿ. ೧೯೨೮, ೩೭-೧೬ : 1501).

[ ತೆಱು₂ (< ತೆಱು³) + – ವೆ ]

**ತೆಱು¹, ತೆರ್₁** (ಕ್ರಿ). ೧. (ಮುಸುಕು, ಬಾಗಿಲು ಮುಂತಾದುವನ್ನು) ತೆಗೆ,–ಬಿಚ್ಚು : "ತೆಱು – ಅನಾವರಣೋದ್ಘಾಟನಯೋಃ , ಕರೇ ಚ (ಕಪ್ಪ, ಕಾಣಿಕೆ)" (ಶಮಧಾ) : ತೆಱು³ಯದೆ ಮುನ್ನ ಕೆತ್ತ ಪಡಿಗಳ್ ನವಸೌರಭಮುಣ್ಮೆ ಪೊಕ್ಕಳಂ ತೆಱು³ದುವು (ಆದಿಪು. ೨-೬೩) ; ಕರಮಂ ಪೇಱು ರದಂಗಳೊಳ್ ತೆಱು³ದು ಕರ್ಣದ್ವಂದ್ವಮಂ ತಾಮ್ರಭೀಕರಮಂ ಬಿಚ್ಚನೆ ಬಿಟ್ಟು ಕಣ್ಣನೆರಡುಂ . . . ವನದಂತಿ ಪೋರ್ವುದು (ಶಾಂತಿಪು. ೨-೧೧೦) ; ಮಗಳ ತೆಱು³ ನೀಂ ಕಣ್ಣಂ (ಕಾದಂಊ. ೬೮೧) ; ಅರೆಮುಗಿದ ಱಪ್ಪೆಗಳ ಬೆಳ್ಪಿನ ತಿರುಗದಿಹ ಕಣ್ಣಾಲಿಗಳ ನಸುಮುರಿದ ಕೊರಳ್ಗಳ ಬಿಗಿದ ನರಗಳ ತೆಱು³ದ ನೊರೆವಾಯ (ಬಸಪು. ೪೬-೫೬) ; ಲಲಾಟನೇತ್ರವ ತೆಱು³ದರೆ ನೀನು ಬೆಂದುಹೋದಪೆ (ಮೋಹತ. ೭-೨೬). ೨. ಸೀಳು; ಬಿರಿ : ತೆಱು³ದಿರ್ದ ಪುಣ್ಗಳೆಸೆವಕ್ಕರದಂತಿರೆ (ಪಂಪಭಾ. ೧೧-೪೭) ; ಸುತಶೋಕದಿಂದಾವಗೆಯಂತೆಳಗುರಿಯೆ ಭೋಂಕನೆರ್ದೆ ತೆಱು³ಯಲ್ (ಪಂಪಭಾ. ೧೨-೨೮) : ಕೇಳ್ದರೆರ್ದೆ ತೆಱು³ವಿನಮೊಳಱು ಪೆಂಟೆಯು ಪೊಟ್ಟೆಯುಂ ಕರ್ಚಿ ಸೆಳೆಯೆ (ಅರ್ಥನೀ. ೭-೯೧ ವ). ೩. ಸ್ಪಷ್ಟಪಡಿಸು ; ಸ್ಪಷ್ಟಗೊಳಿಸು : ಕುಱುತಂತು ಪೆಱರ ಬಗೆಯಂ ತೆಱು³ದಿರೆ ಪೆಱರ್ಗಱುಪಲಾರ್ಪವಂ ಮಾತಱುವಂ (ಕವಿರಾ. ೧-೧೫): ಗಂಭೀರೋದಾರ ಸಾರ ಭಿನ್ನನಯ ಸಂತತಿ ಸಮನ್ವಿತಮನಱುಯೆ ತೆಱು³ಯೆ ನೆಱು³ಯೆ ನುಡಿದು (ಶಾಂತಿಪು. ೩-೪೯ ವ). **ತೆರ್₁** : ೧. ತಟ್ಟದೊಡನೆಯೆ ತೆರೆವ ಕದವದಲ್ಲ (ಅನಿಕೇ. ೨-೧೦) ; ದಿನಸಿಯ ಜವಳಿಯ ಅಂಗಡಿ ತೆರೆಯಿತು (ಇಂಚಾಪ. ೭-೨೮). ೪. ಆರಂಭಮಾಡು; ಪ್ರಾರಂಭಿಸು : ೧೭೮೧ರಲ್ಲಿ ಒಂದು ಶಾಲೆಯನ್ನು ತೆರೆದರು (ಭಾರದ. ೪೨೬).

**ತೆಟ್ಟಂದೆಱು³, ತೆಟ್ಟಂತೆಱು³, ತೆಟ್ಟಂದೆಱು³** = ಪೂರ್ಣವಾಗಿ ತೆರೆ ; ತಡೆಯಿಲ್ಲದಂತೆ ತೆರೆ : ತನ್ನ ಹೃದಯಕವಾಟಮಂ ತೆಟ್ಟಂದೆಱು³ದತ್ತಳಗ ಮಾಡುತ್ತುಂಡವೇಟಮಂ ಬಯಲೊಳಿಕ್ಕಿ ಬಾಯುಱು³ದ ನಿಜಪತಿಯು ನುಡಿಗೆ ಸುದರ್ಶನನೆಂದಂ (ಅನಂಪು. ೧೧-೩೨ ವ) ; ನೆಟ್ಟನೆ ತನ್ನಯ ಮನವಮಂ ತೆಟ್ಟಂತಱು³ದುಸಿರ್ವ ನೃಪಮನೋಜನ ಮಾತಂ ತೊಟ್ಟನೆ ತಾಂ ಕೇಳ್ದು (ಕುಸುಮಾ. ೧೦-೧೨೮) ; ಕೀಟಕ್ಕೊಂಬಿನೊಳದ್ದಂ ಮೆಟ್ಟಿ ತೆಟ್ಟಂದೆಱು³ಯೆ ಗಳಪಿದತ್ತಾವಪ್ಪುದೊಳ್ ತಾವ್ರುತುಂಡಂ (ಚಂದ್ರಪು. ೭-೮೬). **ತೆರೆದ ಹೃದಯ** = ಬಿಚ್ಚುಮನಸ್ಸು ; **ನಿಷ್ಕಪಟತೆ** : ಮುಚ್ಚುಮರೆಯಿಲ್ಲದಿರುವುದು; ತೆರೆದ ಹೃದಯ ; ನಿಷ್ಕಾಪಟ್ಯ ; ಸಂಶಯರಾಹಿತ್ಯ ; ದಯಾಪರತೆ ; ಸೌಹಾರ್ದ (Open-Heart. ಇಂಕನಿ). **ತೆಱು³ದ ಹಸ್ತ, ತೆರೆದ ಹಸ್ತ** = ಕೊಡುಗೈ ; ಮುಂಕ್ತಹಸ್ತ ; ಔದಾರ್ಯ : ತೆಱು³ದ ಹಸ್ತವು ಲೇಸು . . . ಸರ್ವಕು ಶಿವನಿಂಗೆ ಶರಣವೇ ಲೇಸು (ಸರ್ವಜ್ಞ. ೨೪೦); ದಾನ ಮಾಡುವುದರಲ್ಲಿ ಅವರದು ತೆರದ ಹಸ್ತ (ರೂಢಿ). **ತೆಱು³ಯೆ ನುಡಿ** = ಸ್ಪಷ್ಟವಾಗಿ ಹೇಳಂ ; ನೇರವಾಗಿ ನುಡಿ : ತೆಱು³ಯೆ ನುಡಿದುದರ್ಕೆ ಕಡು ಮುಳಿದು (ಪಂರಾಮಾ. ೯-೯೩ ವ). **ತೆಱು³ಯೆ ಬಣ್ಣಿಸು** = ಚೆನ್ನಾಗಿ ತಿಳಿಯುಂವಂತೆ ವರ್ಣಿಸು : ಸಂಗತಜಿನಧರ್ಮಮತಿಗೆ ನಾಂಗಳ್ ನಿನಗಱು³ಯೆ ತೆಱು³ಯೆ ಬಣ್ಣಿಸೆವಿಮಾದಿತ್ಯಂಗೆ ಸೊಡರೆತ್ತುವೀ ಗಾಂಪಿಗಾಗರಮಾಗಿ ತೊಱು³ಗೆ ನೀರೆಡುಕುವವೋಲ್ (ಅಜಿಪು. ೬-೭೯). **ತೆಱು³ಯೆ ಪೆಱು³** = ಅಧಿಕವಾಗಿ ಮೆರೆ : ರಾಜಾಶ್ರಯತನಕ್ಕೆ ನೊಸಲ ಕಣ್ಣೆನಿಸಿ ತೇಜಮಂ ತೆಱು³ಯೆ ಪೆಱು³ವಾ ಪೂರ್ವದ್ವಾರಂ (ವರ್ಧಪು. ೧-೦೩).

[ ದೇ.॥ ತಮಿ. ತಿಱ ; ಮಲ. ತುಱ ; ತೆಲು. ತೆಱಚು, ತೆರಚು ]

**ತೆಱು²₂, ತೆರ್₂** (ನಾ). ತೆರೆಯುಂವಿಕೆ ; ತೆರೆದಿರುವ ಸ್ಥಿತಿ. 'ಬಾಯ್ದೆಱು²' ಪಂಗಾ. **ತೆರ್₂** : 'ಕಣ್ದೆರೆ', 'ಬಾಯ್ದೆರ್₂' ಪಂಗಾ. [ < ತೆಱು₁ ]

**ತೆಱು³₃, ತೆರ್₂, ತೆರ್ಮು₂, ತೆರ್₃, ತೆಱ್ಪು₂, ತೆಱುವು₂** (ನಾ). ೧. ಕಾಣಿಕೆ: ದೇವರ ನನ್ದಾದೀವಿಗೆಗೆ ಬಿಟ್ಟ ಗಾಣ ಮೂಱು ದೇವರಂಗಭೋಗಕ್ಕೆ ಅವರ ತೆಱು³ ಯೊಳಗಾಗಿ ಬಿಟ್ಟ ಸೂಳೆಯರೆ ೧೨ (ಎಕ. XI, ದಾವಣ. ೦೧-೨೬) ; 1066). ೨. ಕರ; ಸುಂಕ; ತೆರಿಗೆ: "ತೆಱು³–ಅನಾವರಣೋದ್ಘಾಟನಯೋಃ ಕರೇ ಚ (ಕಪ್ಪ, ಕಾಣಿಕೆ) " (ಶಮಧಾ) ; ದೇಶಾಧಿಪತಿಗಳಪ್ಪೊರ್ಗೆ ಕುಡುವ ತೆಱು³ (ಎಇ. XIV, ೧೯೦-೦೩ ; 725); ಪೆಱಗಣ ಮುಂಂತಣ ರಿತುಗಳ ತೆಱು³ಯಂ ನಿಶ್ಚಯಿಸಿ ಮಧುಕರಂ ಮಧುಕರಮಂ ತಿಱಲಾಱದೆ ಮಲ್ಲಿಗೆಯೊಳ್ ನೆಱು³ಗೆಯ್ದಂತಿರ್ದುದೊಂದು ಪರಿಮಳಫಲಮಂ (ಅಜಿಪು. ೬-೧೪); ಭೂಪರ್ ತೆಱು³ಯೊಳ್ ಮಗಂ ಮುಪ್ಪಿನೊಳ್ ಪೆಂಡತಿ ಕುತ್ತದೊಳ್ ಫಲಮಂ ತೋರ್ಪಂತೆ (ಧರ್ಮಾಮೃ. ೧೨-೩೮) ; ಪೂಜೆಗೆ ಬಿಟ್ಟ ಧರ್ಮ್ಮವಂ ಮಂನಿಸಿ ಕಾಪ್ಪದಲ್ಲದಿನಿಸಂ ತೆಱು³ ಕಾಣಿಕೆ ಸೇಸೆಯಾಸಿಗಳ ಮುಂನೆಯ ವಾಯದಾಯಮಿವು ಸಲ್ಲವು (ಎಇ. XXVII, ೦೫-೧೭ ; 1114) ; ಬಿಟ್ಟ ಬೀಡಾರಂ ಪೊಱು³ಗೆ ತೆಱು³ ಕೊಟ್ಟಣಂ ಕಾಣಿಕೆಯುಂ (ಬಸಪು. ೨೭-೫೨). **ತೆರ್₂** : ೨. ತೆರದ ರೂಪದಲ್ಲಿ ಸಂಬಳ, ಕಂದಾಯ, ಬಡ್ಡಿ ಮುಂತಾದ ಸಲುವಳಿಗಳ ರೂಪದಲ್ಲಿ ಹಣವು ಬಳಕೆಯಲ್ಲಿ ಬರುವುದು (ಮಾವಾದ. ೧೧೬); ಬನ್ನಿ, ನೋಳ್ಪಂ! ನಿಮ್ಮೆಲ್ಲರವೆ ತೆರಂ! ಕಾಣ್ಬವಿಾ ಕುಂಭಕರ್ಣನ ಕರಡಿಯಾಟವಂ! (ಶ್ರೀರಾಮಾ. ೬೪೯-೩೦೪). ೩. (ಮದುವೆಯ ಕಾಲಕ್ಕೆ) ವಧುವಿಗೆ ಕೊಡಬೇಕಾದ ಶುಲ್ಕ ; **ಕನ್ಯಾಶುಲ್ಕ** : ನಾನೂ ಆ ಕುದುರೆಗಳನ್ನು ತೆರವಾಗಿ ಕೊಟ್ಟು ಈಕೆಯಲ್ಲಿ ಒಬ್ಬ ಪುತ್ರನನ್ನು ಪಡೆಯುವೆನು (ಕ್ವಾಊ. ೧೪೬) ; ನೀರೀಗೆ ಹೋಗೋಳೆ ನೀಲದುಂಗುರದವಳೆ . . . ವೈಯ್ಯಾರ ಬಿಟ್ಟು ತೆರ ಹೇಳೆ (ಹಳ್ಳಿಯ. ೫೪); ಮದುವೆಯ ಖರ್ಚಿಗಾಗಲೀ, ಮದುಮಗಳ ತೆರಕ್ಕಾಗಲೀ ಸಿದ್ದಣ್ಣ ಸಾಲ ಮಾಡಬೇಕಾದ ಪ್ರಮೇಯವಿರಲಿಲ್ಲ (ಪಂಜಪಂ. ೫೪) ; ಮದುವೆ ಮಾಡಿಕೊಳ್ಳಬೇಕಾದರೆ . . . ತೆರ ಕಟ್ಟಬೇಕು (ಹಳ್ಳಿಜ. ೨೦) ; ಮದುವೆಯ ಕಾಲಕ್ಕೆ ಕೊಡಬೇಕಾಗಿದ್ದ 'ತೆರ' ದ ಹಣದಲ್ಲಿ ಅರ್ಧಭಾಗವನ್ನು ಆತನಿನ್ನೂ ತಂದು ಕೊಟ್ಟಿರಲಿಲ್ಲ (ಬೀದಿಬಿ. ೨೪). ೪. ದಂಡ ; ತಪ್ಪುಕಾಣಿಕೆ. 'ತೆರಕೊಡಂ' ಪಂಗಾ. **ತೆರು₂** : ೨. ಮೂವರಿಂದ ಸಲುವ ಶಾಶವರ್ಗದ ತೆರು ಯಿಾ ಆರುಮುಂದಿಗೂ ಹರುಗೋಲತ್ತೆರು ಸಹಾ ಬಿಟಿದೇವೆ (ಎಕ. VII, ಶಿವಮೊ. ೩-೨೮ ; 1671) ; ತೆರುವಿಂ ಮುಂದಿ ನೋಯಿಸಂ (ಸೌನಂದ. ೨-೨೬) ; ಶಾಸನಗಳಲ್ಲಿ ಬರುವ ತೆರುವಣಗಳು : – ತೆರು, ಮುಂಡಗಡಿ, ಆರುಗಡಿ (ತುಳುನಾ. ೨೭೧). **ತೆರ್₃** : ೨. ಕಯ್ಗೊಳ್ಳಂ ರಾಷ್ಟ್ರದಿಂದೆಂದುಂ ತೆರೆಯಿಂ ಪೆರತೇನನುಂ (ಸೌನಂದ. ೨-೩೩). **ತೆಱ್ಪು₂** : ೨. ನಾಲ್ಕುಱ ಮೇಲೆ × × ಬಹ ತೆಱಿನೂ ದನಿಯರು ತಮ್ಮ ಬದ್ಧ ಭೋಜನ ನಡವಂತಾಗಿಯಿಕ್ಕಿ

ಕೊಂಡು (ಸೌಇಇ. IX-ii, ೪೦೯-೨೬ ; 1365). **ತೆಱು$_2$** : ೨. ಅರಸಂಗೆ ತಪ್ಪು ಕಾ ಗ [೨]೦೦೦ ಹೊನ ತೆಱು ಅಡಕು ಅರಸು (ಸೌಇಎ. ೧೯೨೯, ಮಂಗಳೂರು. ೪೬೦-೨೦ ; 1297) ; ತೆಱವ ತೆಱು ಕಟಗ ೪೮೨ ಹೊನ ಬಳಿಯು ಭತ ನಾಗಂಡುಗದಲು ಮೂಡೆ ೪ (ಸೌಇಇ. IX-ii, ೪೨೮-೪೦; 1401) ; ಮಲ್ಲಪ್ಪನಾಯಕನ ಮಕ್ಕಿ ೮ ಗದೆಗೆ ತೆಱು ದೇವರಿಗೆ ವರುಷ ೧ಕ್ಕೆ ಬೆಳ್ಳಿ ಗ ೧ (ಕಇ. I, ೫೦-೨೬ ; 1432).

[ ದೇ.॥ ತಮಿ. ತಿಱ್ಱು ; ಮಲ. ತಿಱ ]

**ತೆಱಿಕುಱುಪು** (ನಾ). ತೆರೆಯಲು ಮಾಡಿದ ಗುರುತು ; ತೆಗೆಯುವ ಸ್ಥಳದ ಕುರುಹು : ಅಂಬುಜೋದ್ಭವನತಿಪ್ರೀತಿಯಿಂ ಪೊಂಗಳಸವೆರಡಱೊಳ್ ಪಿರಿದು ಸುಧೆಯಂ ನಿಜದೆ ತುಂಬಿ ಜತುಮುದ್ರೆಯಂ ತೆಱಿಕುಱುಪುಗೆಯ್ದು ನೋಯೆನಲೆಸಕದಿಂ ಪಯೋಧರದ ಚೂಚುಕವೆಯ್ದೆ ಕಪ್ಪನಾಂತಿರ್ದುವು (ಪಾಸೋಪು. ೨-೩೩). [ ತೆಱ$^1_1$ + ಕುಱುಪು (< ಕುಱಿಪು) ]

**ತೆಱಿಗಯ್**, ತೆರೆಗಯ್, ತೆರೆಗೈ (ನಾ). ಬಿಚ್ಚಿದ ಕೈ ; ಚಾಚಿದ ಕೈ : ಎನ್ನ ಕಡುಪಗೆಯಿದಿರ್ ಸೆಱಗೊಡ್ಡಿ ಮೊಱೆಯಿಟ್ಟು ತೆಱಿಗಯ್ಯನೆತ್ತುವೆನ್ (ಬದ್ಮಪ್ರ. ೫೩-೧೧೬೦). **ತೆರೆಗಯ್** : ಕಡುಪಗೆಯ ಎದುರಿನಲ್ಲಿ ಬಿಡುಗಡೆಗಾಗಿ . . . ತೆರೆಗಯ್ಯನ್ನು ಎತ್ತುವ ಕ್ಷುದ್ರತರ ದೈನ್ಯ ತನ್ನಲ್ಲಿ ಇಲ್ಲ ಎನ್ನುತ್ತಾನೆ (ಬದ್ಮಪ್ರ. XXii, ಪೀಠಿಕೆ). **ತೆರೆಗೈ** : ಅವ್ವಾ ನೋಡಿರೆ ! ಭೂವೈಕುಂಠನಿವಾಸಿ ವೆಂಕಟರಮಣನ. ತೆರೆಗೈ ತಿರುಕನ (ಉಯ್ಯಾಲೆ. ೯೬-೧೬) ; ಸತ್ಯವನ್ನು ಮೊದಲು ಯಾರು ತೆರೆಗೈಗಳಿಂದ ತಬ್ಬಿಕೊಂಡಿಲ್ಲ (ಬಾಬಲ. ೮೩). [ ತೆಱ$^1_1$ + ಕಯ್$_2$ (< ಕೆಯ್$_2$) ]

**ತೆಱಿಗೆ** 'ತೆಱುಗೆ' ನೋ.

**ತೆಱಿಗೊಳ್** (ಕ್ರಿ). ಸುಂಕವನ್ನು ತೆಗೆದುಕೊಳ್ಳು,–ಪಡೆ ; ಕಂದಾಯ ವಿತ್ತು : ಸ್ವಾತಿತ್ರಯದೊಳ್ ಗಮನೋದ್ಯೋತಾಸ್ತಮಯಿಪ್ಪ ಶುಕ್ರನಿಂ ಹೆಸುಗೆ ಭಯಂ ಪಾತೇಂ ತೆಱಿಗೊಳ್ಳರ್ ಸಂಪ್ರೀತಿಯು ನೃಪಸಮಿತಿ ಮುಳಿದು ತಮ್ಮೊಳಗಿಱುವರ್ (ಅಟ್ಟಮ. ೭-೧೩೭).

[ ತೆಱ$^3_3$ + ಕೊಳ್$^1_1$ ]

**ತೆಱಿದೆಱು** (ಕ್ರಿ). ತೆರಿಗೆಯನ್ನು ಕೊಡು,–ಸಲ್ಲಿಸು : ಕ್ರಿಯಾಸಮಾಸಕ್ಕೆ . . . ತೆಱ[ಪಾಠಾಂ. ಱ]ದೆತ್ತುಂ, ಮಱೆವೊಕ್ಕುಂ (ಶಮದ. ೧೬೭ ಪ್ರಯೋ).

[ ತೆಱ$^3_3$ + ತೆಱು$_1$ ]

**ತೆಱಿಪಡು** (ಕ್ರಿ). ಸುಂಕವನ್ನು ಕೊಡಬೇಕಾಗಿ ಬರು (?) : ದೇವರ್ಗೆ ದೇವಪೂವಿನ ಮುದನೆವಯ್ಯ ತೆಱಿಪಟ್ಟ ಪಾಳಿಯ ಪೊನ್ನರ ಕೊಟ್ಟು ಮಣ್ಣರ ಕೊಣ್ಣು ಬಿಡಿಸಿದಡೆ ಶ್ರೋತ್ರಿಯೂರ ಮಾರಯ್ಯಸೆಟ್ಟಿಯ ಮಗಂ ದೊರೆಯ್ಯಸೆಟ್ಟಿ (ಮ್ಯಆರಿ. ೧೯೪೬, ೨೮-೨೦ ; 1032).

[ ತೆಱ$^3_3$ + ಪಡು$_1$ ]

**ತೆಱಿಪು** 'ತೆಱಪು' ನೋ.

**ತೆಱಿಪೊನ್**, ತೆಱಪೊನ್ (ನಾ). ತೆರಿಗೆಯಾಗಿ ಕೊಡುವ ಧನ,–ಹಣ : ಆನ್ತೊ ಸಲೆ ಬಾಣರಾಜರ ವಿಷಯುದ ಅಗ್ರಹಾರಂಗಳನ್ನೆಱಿಪೊನ್ವೇಡಿ ಕೊಣ್ಣು (ಸೌಇಇ. IX-i, ೪೬-೬; ಸು. 8ನೆಯ ಶತ). **ತೆಱಪೊನ್**: ತೆಱವಿನ ಪೊನ್, ತೆಱಪೊನ್ (ಶಬ್ದಾಮ. ೩೩೨ ಪ್ರಯೋ). [ ತೆಱ$^3_3$ + ಪೊನ್ ]

**ತೆಱಿಯಿಸು**, ತೆರೆಯಿಸು, ತೆರಸು, ತೆಱಸು (ಕ್ರಿ). ತೆಗೆಯುವಂತೆ ಮಾಡು; ಬಿಚ್ಚಿಸು: ಕದವಂ ತೆಱಿಯಿಸಿರೆ ಎಲೇ ಅಪ್ಪರೇ (ವಾಗೀಶ. ದೇ. ೨೭೬-೦). **ತೆರೆಯಿಸು** : ತೆಗೆದ ಬಾಗಿಲ್ಗಳಿಂ ದಾರಿ ತೆರೆಯಿಸಿತು (ಕಾಲೂರ. ೪೮-೫೮); ಆಸ್ಮದಲ್ಲುಂಟಾದ ಮಹಾಪರಿವರ್ತನೆ ಭಂಡವಾಳಿಶಾಹಿ ಜನಾಂಗಗಳ ಕಣ್ಣು ತೆರೆಯಿಸುತ್ತದೆ (ಕಾಲಯಾ. ೩೬). **ತೆರೆಸು** : ಅನೇಕ ದಿನಗಳಿಂದ ಬೀಗ ಹಾಕಿದ ಬಾಗಿಲನ್ನು ತೆರೆಸಿದರು (ರೂಢಿ). **ತೆಱಸು** : 'ಬಾಯ್ದೆಱಸು' ಪರಾ. [ ತೆಱ$^1_1$ + – ಇಸು$_3$ ]

**ತೆಱಿವಾಯ್**, ತೆರೆಬಾಯಿ, ತೆರೆವಾಯ್, ತೆರೆವಾಯಿ (ನಾ). ೧. ತೆರೆದ ಬಾಯಿ ; ಅಗಲಿಸಿದ ಬಾಯಿ ; ಬಿಟ್ಟ ಬಾಯಿ : [ಮಿ]ಗವಲ್ಲ ಮಾನಸ ರೂಪಲ್ಲ ಕೇಸರಿವೊಗ ತೆಱಿವಾಯ ಪಲ್ಗಿಱಿದು ನಖದಿಂದಲಹಿತನ ಗೆಂಡಿಕೊಂಡುಱುಹಿದ ಪ್ರಕಟಿತ ಬಲುಹ ತೋಱಿನೆಗೆ (ಮೋಹತ. ೪೦-೨೨).
**ತೆರೆಬಾಯಿ** : ೧. ನನ್ನ ಭಾಷಣಕ್ಕಾಗಿ ನಿಮ್ಮ ತೆರೆಬಾಯಿ ನೀರೊಡೆದಿರಬಹುದು (ಹುಚ್ಚುಹು. ೦೦೩). ೨. ಪಕ್ಕನೆ ಬಾಯಿ ಬಿಡುವ ಸ್ವಭಾವ ; ಒಡಕುಬಾಯಿ : ನೋಡು ನೀನು ತೆರೆಬಾಯಿ ಮನುಷ್ಯ; ಪಿಸಕ್ಕನೆ ನಕ್ಕುಬಿಡುವಿ (ಕುಂಹಿಂ. ೧೬). **ತೆರೆವಾಯ್** : ೧. ಮರಿಯ ತೆರೆವಾಯ್ಗಿಡುತೆ ತನ್ನ ಕೊಕ್ಕಂ ಕುಟುಕು ಕೊಡುತಿರ್ದ ತಾಯ್ವಕ್ಕಿಯಂ ಕಂಡು (ಶ್ರೀರಾಮಾ. ೮-೧೯೫). **ತೆರೆವಾಯಿ** : ೧. ಈ ಗುಂಪುಗಳು ಅನೇಕ ವೇಳೆ ಕಿರೀಟಗಳಂತೆಯೂ . . . ತೆರೆವಾಯಿಗಳಂತೆಯೂ . . . ಮೆರೆಯುತ್ತಿರುವುವು (ಜ್ಯೋತಿರ್ವಿ. ೭೪). [ ತೆಱ$^1_1$ + ಬಾಯ್ ]

**ತೇ$_1$**, ತೆಯ್, ತೇಯ್, ತೇಯು (ಕ್ರಿ). ತೆಯ್ದು, ತೇದು, ತೇಯಿದು, ತೇಯ್ದು (ಭೂತಕೃ). ೧. ಅರೆ ; ಉಜ್ಜು ; ನುಣ್ಣಗೆ ಮಾಡು : ಇಱಿಯದೆ ಕೆಮ್ಮನಂತೆ ಭುವನಂಗಳಸುಂಗೊಳೆ ತಕ್ಕುದೆಂದೊಡೇ ಮಱುಕಮನೆಂಬುದೇವಿರಿದಿದೆನ್ನ ಭುಜಾಸಿಗೆ ತೇದು ಪೂಸಲುಂ ನೆಱೆಯದು (ಕಾವ್ಯಸಾ. ೪೧೦ ಶೂದ್ರಕ) ; ಆದ ಮುಳಿಸಿಂದಮೆಲ್ಲುಂ ತೇದುಂ ಕುಡಿಯಲ್ಕೆ ತಕ್ಕ ಪಗೆವನ ರುಧಿರಾಚ್ಛೋದಮನೆ ಕುಡಿದು ಮಾಣ್ದ ವೃಕೋದರನೇನಾವ ತೆಱದೊಳಂ ದೂಷಿಗನೇ (ಪಂಪಭಾ. ೧೨-೧೫೯) ; ಚಂದನವ ಕಡಿದು ಕೊಱೆದು ತೇದೊಡೆ ನೊಂದೆನೆಂದು ಕಂಪ ಬಿಟ್ಟಿತ್ತೆ (ಮಹಾದೇ. ಬ. ೨೮-೫೮) ; ಒರೆಯೆ ಸುವರ್ಣಂ ತೇಯೆ ಮಳಯಜಂ . . . ಪರಿಮರ್ದಿಸೆ ಹಿಮಕುಂಕುಮಮ್ಮಗಮದಮೊರಸೆ ಕರಂ ಸಾದಿನ ಪುಣುಗಿನ ಘನಪರಿಮಳಮೆನೆ ಮತ್ಕೃತಿ ಮಾಡುವುದು ಚಮತ್ಕೃತಿಯಂ ಸಂಘರ್ಷಿಸಲು (ಕುಮುರಾ. ಪೀಠಿಕಾಸಂಧಿ ೪೨); ಮುಂಸುಡನಮರಾದ್ರಿಯಲಿ ತೇವೆನು ದೇವಸಂತತಿಯ (ಕುವ್ಯಾವಿ. ೩-೬೮); ಕರದ ಕಂಕಣ ಝಣರೆನಲು ಗಂಧವ ತೇವ ತರುಣಿಯರೊಪ್ಪಿದರು (ಕಂನವಿ. ೬-೪೯) ; ಗಂಧವನು ತೇವಲ್ಲಿ ಒಂದು ನೊಣವನು ಕಾಣೆ (ಸರ್ವಜ್ಞ. ೮೦೮). ೨. ಸವೆ; ಕ್ಷಯಿಸು : ನೆಲನೆಲ್ಲ ಜವುಗಾಯ್ತು, ಮೊದಲು ಮತ್ತುಱೆ ತೇದು ತೊಳೆದುಹೋದುವು ಬಡಬೆಟ್ಟ (ಭರತ. ೩೪-೬೦). ೩. ಸವೆಯಿಸು ; ಸವೆಯುವಂತೆ ಮಾಡು ; ಕೃಶವಾಗಿಸು : ಖುಷ್ಯಾಶ್ರಮದೊಳೆ ತನುವಂ ಮುಪ್ಪಿನೊಳ್ತೇದು ಮೋಕ್ಷಾಸ್ಪದಮಂ ಕೈಕೊಳ್ವೆಂ (ಕಾದಂಉ. ೩೮೭); ಮಾಱುದೆ ಗುಣದಂತಿರಟ್ಟುಂಬರಿಗೊಂಡು ತೇದಪುದು ಬೇಟಮಿದೆನ್ನಯ ಪಾಪಮಲ್ಲದೇ (ಲೀಲಾವ. ೨-೧೧೭) ; ಮುತ್ತಜ್ಜಿಯು ತಂದೆ ತಾತಂದಿರ ಕಾಲದಿಂದಲೂ ಅರಮನೆಯ ಸೇವೆಯಲ್ಲಿ ಶರೀರವನ್ನು ತೇದಿದ್ದ ರಾಜಭಕ್ತನಾಗಿದ್ದನು (ಶ್ರೀರಾಯ. ೧೨೮). ೪. ಹಿಮ್ಮೆಟ್ಟು ; ಮರಳಿಹೋಗು : "ತೇ-ಅಪಸರಣೇ (ಹೊರಟುಹೋಗು)"(ಶಮುಧಾ). **ತೆಯ್** : ೧. ಮಲಯರುಹಕ್ಕುದ್ಧತಿಯಿಂ ಸಾಪಮನಿತ್ತೊಡೆ ಚತುರಾಸ್ಯಂ ತೆಯ್ದು ಬೊಟ್ಟನಿಡುವರ್ಪಲರುಂ (ಧರ್ಮಾಮ್ಮ. ೩-೧೬೦). ೩. ತನುವಂ ತೆಯ್ದಪ್ಪಳಕ್ಕಂ ಬ್ರತದೊಳ್ (ಕಾದಂಉ. ೭೯). **ತೇಯ್** : ೧. ಶ್ರೀಗಂಧಮಂ ತೇ[ಪಾಠಾಂ. ತ]ಯ್ದಂಗದಲಿ ಪೂಸಿ (ಬಸಪು. ೪೩-೩೦). ೩. ಕೊಳೆಯ ತೊಳೆಯಬೇಹುದಿಲ್ಲಿ ಒಡಲ ತೇಯಬೇಹುದಿಲ್ಲಿ (ವಿಸೀಗೀ. ೮೨-೨) ; ಅಖಂಡ ಆಯುಷ್ಯವನ್ನು ಅವಳ ಸೇವೆಯಲ್ಲಿ ತೇಯ್ದ ರಘು (ದೀಪಹ. II, ೪೧೬). **ತೇಯು** : ೧. ಕಾಲುಗಳಿಂದ ತೇಯುವುದೂ (ಕೃಷಾಕ. ೧೦೯). ೩. ದಿನದ ಇಪ್ಪತ್ನಾಲ್ಕು ತಾಸು ಪಿರಿಪಿರಿ ತಿರುಗಿ ದೇಶದುದ್ಧಾರಕ್ಕೆ ದೇಹವನು ತೇಯುಬಲ್ಲ (ನೆಲಮು. ೨೮-೨೬).

[ ದೇ.॥ ತಮಿ. ತೇಯ್ ; ಮಲ. ತೆಲು. ತೇಯು ; ಕೊಡ. ತೆಯ್ ]

**ತೇ₂** 'ಟೇ' ನೋ.

**ತೇಂಕಾಡಿಸು, ತೇಕಾಡಿಸು** (ಕ್ರಿ). ತೇಲುವಂತೆ ಮಾಡು ; ತೇಲಾಡಿಸು ; ತೇಲಿಸು : ಅಂಗಪ್ರಭೆಯೊಳಖಿಲಕಾಂತಾರಮುಂ ಕೂಡೆ ತೇಂಕಾಡಿಸುಂತಂ . . . ಬಂದನೋರ್ವಂ ಕುಮಾರಂ (ಕಾದಂಉ. ೫೪೭); ಕೂಡೆ ಮೂಜಗವಂ ಮುಸುಕಿ ತೇಂಕಾಡಿಸುವ ಗಂಗೆಯನುಮೇಶನು ಸೂಡಿದನಲಾ ಮಲ್ಲಿಕಾ ದಳದಂತೆ ಮೌಳಿಯಲಿ (ಬಸವು. ೫೪-೫೫) ; ನೀಜೆಯುರ ಮಂಕು ಮಾಡುವ ಮತಿದೋಷುವ ಸುಖವಲ್ಲಿ ತೇಂಕಾಡಿಸುವನೇನನೆಂಬೆ (ಭರತೇ. ೬-೮೫). **ತೇಕಾಡಿಸು :** ಪಗೆವಡೆಯು ನೆತ್ತರ ಪೊನಲಿನಲಿ ತೇಕಾಡಿಸಲು (ಸಾಳ್ವಭಾ. ೨೩-೩೯). [ ತೇಂಕಾಡು + – ಇಸು₃ ]

**ತೇಂಕಾಡು, ತೆಕ್ಕಾಡು, ತೇಕಾಡು, ತೇಗಾಡು** (ಕ್ರಿ). ೧. ತೇಲು ; ತೇಲಾಡು : ಇಳೆ ಜಲದ ಮೇಲೆ ತೇಂಕಾಡುತ್ತಿದೆಂಬಂತೆ ಬಂದ ಮಳೆಯೊಳು ಕವಿದ ಕತ್ತಲೆ ಕರಂ ಹೆಚ್ಚೆ (ಇಳೆರ. ದೇ. ೫೦-೨೬); ಜನನಾಥಂ ಜನಿತಾನುರಾಗರಸದೊಳ್ ತೇಂಕಾಡುತಿರ್ದಾಗಳ್ (ಕುಸುಮಾ. ೮-೩೩) ; ವಲ್ಮೀಕನಗರಿ ಬಲ್ದೆರೆ ತೆಪ್ಪವಾಗೆ ತೇಂಕಾಡಿ ತೊಳತೊಳಗಿ ಬೆಳಗುತ್ತ ಬರಬರಲು (ಸಾಂದಪು. ೫-೮೬) ; ನಿದ್ದೆ ಎಚ್ಚರಗಳಲಿ ಒಂದೆ ಬಾಳಿನ ಬಿಂಬ ತೇಂಕಾಡುವವು (ಉಯ್ಯಾಲೆ. ೩-೧೨). ೨. ತುಂಬಿ ತುಳುಕು : ಅಮೃತಾ ಸಾರದಿನಾ ಪ್ರದೇಶಮನಿತುಂ ತೇಂಕಾಡಲ್ (ಕಾ ದ ಂ ಉ. ೬೦೨). ೩. ಮುಳುಗಿ ಏಳು : ಅಖಿಳ ಕಾಮುಕನಿಕಾಯಮುವಿರಳಸುಖಾವಗಾಹ ದೊಳ್ ನಾಡೆ ತೇಂಕಾಡಿ ತಣಿವಿನಂ (ಪರ್ವಪು. ೩-೫೨ ವ) ; ಕೊಳೆಯೊಳ್ ತೇಂಕಾಡಿ ವಿಣ್ಮೂತ್ರದೊಳ್ ಪುದಿದೇತಕ್ಕೆ ಬಟಕ್ಕೆ ಬೇಟ್ವರದಜಂ ಮರ್ತ್ಯಂ ಜುಗುಪ್ಸಾಕರಂ (ಅನಂಪು. ೩-೬೫); ಸುರತಾಂಭೋನಿಧಿಯೊಳ ಗೊಗುವಿಂಗೆ ತೇಂಕಾಡಿದನರಸಂ ಮದನಾಗ್ನಿ ತವಿಪ ತೆಜದಿ (ಜಯಕಾ. ೮-೫೪). **ತೆಕ್ಕಾಡು :** ೩. ನೀರಿದೆ ಕೊಳ್ಳಿಯೊಂದು ಕಮಂಡಲವ ಮರುಗೆ ತೊಡೆಮಾದುದದು ಬಾಲವೃದ್ಧರು ಮೊಟೆಯಿಡುತ ತೆಕ್ಕಾ[ಪಾಠಾಂ. ತೇಕಾ]ಡುತಿರ್ದರು (ಸಾಳ್ವಭಾ. ೩೦-೩೬). **ತೇಕಾಡು :** ೧. ವಹಣಿಯ ತೆರೆಯೊಳ್ ತೇ[ಪಾಠಾಂ. ತೇಂ]ಕಾಡುತ್ತಿರೆ (ಭೃಂಗೀರ. ಹ. ೪೬೬-೧೫) ; ಸಟೆಯ ಸಾಗರದೊಳಗೆ ತೇಕಾಡುತಿರ್ದರು ಕೆಲವರು (ಗಣಭಾ. ೧೬೪-೨) ; ತಾಕಾಡುವಾಗ ಇತ್ತ ತೇಕಾಡುತಾವ ಚಿತ್ತ (ಗಂಗಾವ. ೧೯-೪). ೩. ಭಯ ಜಲಧಿಯಲಿ ತೇಕಾಡಿದರು ಕೌರವಜನಪರು (ಕುಮಾ.ಭೀ. ೧೧-೧೩). **ತೇಗಾಡು:** ೧. ಗಣಿಕಾಜನಗಳು ಭೋಗಸಾಗರಮಧ್ಯದೊಳಗೆ ತೇಗಾಡುತ ವಿಟಜನಗಳ ಚಿತ್ತವನಾಕರ್ಷಣಮಾಡುತಿಹರು (ಅಂಜಚ. ೩-೩೦೯).

[ ತೇಂಕು₁ + ಆಡು₁ ]

**ತೇಂಕಿಸು₁** (ಕ್ರಿ). ತೇಲಾಡಿಸು; ತೂಗಾಡಿಸು: ಸುಣ್ಣವಡೆದ ಸಳಿತೋಳ್ಗ ಳೆಂಬ ಸೆಳೆಗೊಂಬುಗಳ್ ಕಾವನೆಂಬ ಗಾಡುಗೋಗಿಲೆಯುಂ ತೇಂಕಿಸೆಯುಂ (ಕಬ್ಬಿಕಾ. ೧೨೩) ; ಲಾವಣ್ಯರಸದ ಪೊನಲ್ ಜನಲೋಚನ ಪಾಠೀನಮುಂ ತೇಂಕಿಸೆಯುಂ (ಪುಷ್ಪಪು.೫-೩೪ ವ). [ ತೇಂಕು₁ + – ಇಸು₃ ]

**ತೇಂಕಿಸು₂** (ಕ್ರಿ). ಬಳಲಿಸು ; ದಣಿಸು ; ಆಯಾಸಗೊಳಿಸು : ವಜ್ರ ಖಾನನಾದಾ ತೇಂಕಿಸಿ ರಾವುತಖಾನನನಂಕದೆ ಗೆಲ್ದಿಸೆವ ಮುನಿಲಖಾನನ ಮಾಜಿದಂ (ಕಳಸ. ೨-೧೨). [ ತೇಂಕು₂ (< ತೇಗು₁) + – ಇಸು₃ ]

**ತೇಂಕು₁, ತೇಂಗು₁, ತೇಕು₁**(ಕ್ರಿ). ೧. ತೇಲು : "ತೇಂಕಂದು ತೇಲ್ವುದು" (ಕಶಸಾ. ೩೦-೬೩೫) ; ಜಿನಸವನಾಂಬುವಿನೊಳ್ ಭೋಂಕೆನೆ ಚಂದ್ರಂ ತೇಂಕಿ (ಆದಿಪು. ೭-೯೯) ; ಆಬ್ದುದಿಲ್ಲೆಳೆ ತೇಂಕಿರ್ದುದು ಭಾರದಿಂ ಬಡಗೆ ನಲ್ ಪೊಪಾರ್ಗಗಸ್ತ್ಯಂಬರಂ (ಪಂಪಭಾ. ೪-೨೦) ; ಪೂಗೊಳಂಗಳೊ ಳ್ತೇಂಕಿ ಪಾಱುವ ಪಕ್ಕಿಗಳ್ (ಕಾದಂಉ. ೫೩೬) ; ನೆತ್ತರನೆ ಕಾಜಿ ಕುರುಪತಿ ನೆತ್ತರ ಕಡಲೊಳಗೆ ತೇಂಕಿ ತೆರೆಮುಟುಗಿರ್ದಂ (ಗದಾಯು. ೯-೧೭) ; ತೆರೆಯಂತೆ ನೂಂಕದೆ ಬೆಂಡಿನಂತೆ ತೇಂಕದೆ . . . ಶುಭಧ್ಯಾನಾರೂಢ ನಾಗಿರ್ಪುದುಂ (ಧರ್ಮಾಮೃ. ೬-೧೧೫) ; ತೀವಿದ ತಿಂಗಳ ಬೆಳಗಿನೊಳಗ ತೇಂಕುವ ರಾಕಾಶಶಾಂಕನಂತೆ ಶಾಂತನುಂ ನಿರ್ವಿಕಾರನುಂ ನಿರೀಹಿತನಂ ನಿರ್ಮಲನುಮಾಗಿ (ಅನಂಪು. ೬-೨೨ ವ) ; ಬೆಳ್ದಿಂಗಳ ಬೆಳ್ಳದೊಳಗೆ ಬಿನದದಿ ತೇಂಕುವ ಕುಸುಮಾಯುಧನೊ . . . ಎನಲಂಗನೆಯರ ಕಣ್ಬೆಳಗಿನ ಕಾಳ್ಪೂರದೊಳಾ ವಿಭು ನಡೆದಂ (ಜಯಕಾ. ೧೦-೬೨ ವ). ೨. ತೇಲಿದಂತಾಗು ; ತಲೆ ಸುತ್ತು ; ಬವಳಿ ಬರು : ಅರಸಂ ನಿಟಿಲದ ಗಾಯಕ್ಕೆ ತೇಂಕಿ ಮೈಮಱಿದಂ (ವಡಳು. ೨-೩೦). ೩. ಪರವಶತೆಗೆ ಒಳಗಾಗು ; ಮೈಮರೆ ; ಪರವಶಗೊಳ್ಳು : ಸೂಡಿದ ಪಾರಿಜಾತ ದಲರ್ಗಂಪಿಂ ತೇಂಕಿ ವೈಮಾನಿಕಂ ( ಅನಂಪು. ೪-೭೦). ೪. ತುಂಬಿ ತುಳುಕು: ತೆಂಕಣದೆಸೆಯೊಳ್ ಮೆಜೆಗುಂ ಸಂಕರ್ಷಣನರಾಜಧಾನಿ ನಿರರುತಿದೆಸೆ ಯೊಳ್ ತೇಂಕುವ್ರದವನರಸಿಯ ತನಿಬಿಂಕದ ಸರಸತಿಯ ರಾಣಿವಾಸಂ ಲೇಸಂ (ಚಳಪಿ. ೫-೧೩೯). **ತೇಂಗು₁ :** ೧. ಮೃಗೋದ್ಭವಕಲ್ಕಂ ಘನಸಾರ ರೇಣುಪಟಲಂ ಶ್ರೀಖಂಡಜಂ ಬಾಳೆಯೆಂಬಿವಱಿಂ ತೇಂಗೆ ತರಂಗಮಾಲೆ ರತಿಕಂದರ್ಪಂಗೆ ತೀವಿಟ್ಟ ಬಣ್ಣವುರಂ ತಾನೆನೆ ಕಣ್ಗೆ ಮಾಡಿದುದು ಕಾಸಾರಂ (ಅನಂಪು. ೭-೫೨). **ತೇಕು₁ :** ೧. ಸಂತೋಷಾರ್ಣವದೊಳು ಮೂಡಿ ಮುಳುಗಿ ತೇಕುತಿರ್ದಾ (ಗೂಮೃಚ. ೬-೫೧). [ ದೇ.॥ ತಮಿ. ತೇಙ್ಕು ]

**ತೇಂಕು₂** 'ತೇಗು₁' ನೋ.

**ತೇಂಕು₃** 'ತೇಗು₃' ನೋ.

**ತೇಂಕುದಾಣ** (ನಾ). ನಾಡಿ ಮಿಡಿಯುವ ಸ್ಥಳ, ಉಸಿರಾಡುವ ಜಾಗ ಮುಂತಾದುವು : ತೇಂಕುದಾಣಂಗಳನಂಟಾಟಲ್ಲಿಯುಂ ಕಾಣದೆ ಹರಣ ಮನತ್ಯುಷ್ಣದಿಂ ಸುಯ್ಯೆ (ಲೀಲಾವ. ೯-೨೦) ; ಜೀವವಿಕ್ಕುಂಬಾಸೆಯಿಂ ತೇಂಕುದಾಣಂಗಳಂ ಬಗೆದಳು (ಹಚಕಾ. ೧೨-೨೫) ; ಎಳದು ಬಾಯ್ ನಸುನಗುತ್ತಿದೆ ತೇಂಕುದಾಣಂಗಳಲುಗುವಂಗಂಗಳತಿ ಬಿಸಿವೆತ್ತಿವೆ (ಸಿದ್ಧರಾ. ೨-೫). [ ತೇಂಕು₂ (<ತೇಗು₁) + ತಾಣ ]

**ತೇಂಕುಮುಗಿಲ್** (ನಾ). ತೇಲುವ ಮೋಡ,–ಮುಗಿಲು : ತೇಂಕು ಮುಗಿಲ್ಗೆ ಕಾಲ್ಮೊಳೆತಂತೆ ಕನಸಿನೊಳ್ ಚರಯಿಪಂಬೊಲ್ ಪೋಗುತಿರ್ದನ್ (ಸಂಸಪ. ೩೨-೧೮೭). [ ತೇಂಕು₁ + ಮುಗಿಲ್ ]

**ತೇಂಗಾಯ್** 'ತೆಂಗಾಯ್' ನೋ.

**ತೇಂಗಾಯ್ಮೊಲೆ** 'ತೆಂಗಾಯ್ಮೊಲೆ' ನೋ.

**ತೇಂಗು₁** 'ತೇಂಕು₁' ನೋ.

**ತೇಂಗು₂, ತೆಂಗು₁, ತೇಗು₂** (ಕ್ರಿ). ೧. ನೆಲಸು : ಜವದಿಂದಾಗಸದೊಳ್ ಪಾಱುವ ಪಕ್ಕಿಯುಮಂತುಗಾಣಲಣಮಾಱದೆ ತೇಂಗುವುದು ಪತಾಕಾಗ್ರ ದೊಳ್ (ಚಂದ್ರಪು. ೧೦-೨೫). **ತೆಂಗು₁ :** ೨. (ಹಕ್ಕಿಯಂತೆ) ಎರಗು : (+). 'ತೆಂಗುಹ' ಪರಾ. **ತೇಗು₂ :** ೧. ಸಕಳಾವನಿ ರಾಗಿಸಿ ಬೀಗೆ ಕೀರ್ತಿ ದಿಕ್ತತಿಗಳ ಮೇಗೆ ತೇಗೆ ತಳೆದಂ ಭುವನಪ್ರಭು ರಾಜ್ಯಲಕ್ಷ್ಮಿಯುಂ (ಪುಷ್ಪಪು. ೧೩-೨). [ ? ]

**ತೇಂಗು₃** (ನಾ). ಹೋಲಿಕೆ ; ಎಣೆ ; ಸಾದೃಶ್ಯ : "ಸದೃಶಾರ್ಥತೆಗೆ ತೇಂ[ಪಾಠಾಂ. ತೆಂ]ಗು" (ಕಬ್ಬಿಕ್ಕೆ. ೨೦). 'ಪಾಂಗು' ಪರಾ. [ ? ]

**ತೇಂಗುಹ, ತೆಂಗುಹ** (ನಾ). ೧. ಹಕ್ಕಿಯು ಎರಗುವಿಕೆ: "ತೇಂಗುಹವೆಂದು ಪಕ್ಕಿಯೆಱಗುಹಂ" (ಕಶಸಾ. ೫೦-೧೦೪). ೨. ಹಕ್ಕಿಯಂತೆ ಎರಗುವಿಕೆ : ರಾಯಗದ್ದುಗೆಯ ಸಜ್ಜೆಗೆ ಮುಟ್ಟಲು ತೇಂಗುಹದ ಹವಣು ಒಂದೆರಡು ಅಂಗುಲಗಳಷ್ಟು ಸಾಲದೆ . . . ಬಿದ್ದು (ಬಟ್ಯಅ. ೧೮೯-೧೬). **ತೆಂಗುಹ:** ೧. "ತೆಂಗುಹಂ–ಹಕ್ಕಿಯೆಱಗುಹಂ" (ಶಮದ. ಪರಿ. ೨); "ತೆಂ[ಪಾಠಾಂ. ತೇಂ] ಗುಹವೆಂಬ ನುಡಿ ಹಕ್ಕಿಯೆಱಗುವುದಕಕ್ಕು" (ಕಬ್ಬಿಕ್ಕೆ. ೮೫) ; "ತೆಂಗುಹ ಮೆನಲ್ ಪಕ್ಕಿಯೆಱಗುವುದಕಪ್ಪುದು " (ಶಬ್ದಮಂ. ೩೧).

[ ತೇಂಗು₂ + – ಹ₂ ]

**ತೇಂಗೊಳಲು** (ನಾ). ಅಕ್ಕಿಹಿಟ್ಟು ಮತ್ತು ಉದ್ದಿನ ಹಿಟ್ಟು ಮುಂತಾದುವುಗಳನ್ನು ಕೂಡಿಸಿ, ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ತಿಂಡಿ : ಕೈಗಾವಲು ತಿಂಡಿ ಇರಲೆಂದು ಮಾಡಿಕೊಟ್ಟಿದ್ದ ತೇಂಗೊಳಲು, ಚಕ್ಕುಲಿ ಮತ್ತು ಬೇಸಿನ್‌ಲಾಡುಗಳು ಅದರಲ್ಲಿದ್ದುವು (ರಂಗಕ. ೬೧) ; ಎದುರಿಗೆ ತಟ್ಟೆಯಲ್ಲಿ ಗರಿಗರಿಯು ಚಕ್ಕುಲಿ, ಖಾರವಾದ ತೇಂಗೊಳಲು . . . ಹೊಳೆಯುತ್ತಿದ್ದುವು (ವೈದ್ಯವಿ. ೧೦೯) ; ತೇಂಗೊಳಲನ್ನು ಮುಚ್ಚಿಯಲ್ಲಿ ಮುರಿಮುರಿದು ಮುಕ್ಕಿದ ಹಾಗೆ (ರಾಮರಾ. ೬೮) ; ರಾಮಾನುಜರು ಕಂಡ ವೈಕುಂಠ ಕನಸು ಆಹಾ ನಮಗಾಗುತಿದೆ ತೇಂಗೊಳಲ ನನಸು (ಗಣೇಶ. ೭೦-೨೬).

[ ದೇ.॥ ತಮಿ. ತೇಙ್ಕುಳಲ್ ; ತೆಲು. ತೇನೆತೊಲ, ತೇನೆತೊನ ]

**ತೇಕರೆ** (ನಾ). ಕಮರುತೇಗು ; ಅಜೀರ್ಣದ ತೇಗು : ಲೋಕರಕ್ಷಕ ಮಂತ್ರಕಾರಣ ನಾಕಜಾಧಿಪ ಮುಖ್ಯಸುರರಿಗೆ ತೇಕರೆಯು ಮಾಡಿದರು ನುಂಗುವ ಮೃತ್ಯು ಕೇಳಿನಲು (ಸಂಭಪ. ೮-೮೪). 'ಕಟ್ಟಣಿ³' ಪರಾ.

[ ತೇಕು$_3$ (<ತೇಗು$_3$) + ಅರೆ$_5$ ]

**ತೇಕಲ್** (ನಾ). ಒಂದು ಊರಿನ ಹೆಸರು ; ℙ ಮಾಲೂರು ತಾಲ್ಲೂಕಿನ ಈಗಿನ **ಟೇಕಲ್** : ಅವಜಿ ಮೇಗೆ ಬಾಣರಾಟಸರ್ ತೇಕಲ್ಲ ಟೆ × × × ದೆಯೊನ್ ಅಗ್ಗಳಾ ಅರಸರಾ ಬೆಸಸಿದೊಡೆ (ಎಕ. X (S), ಬಾಗೇಪ. ೯೬-೬ : ಸು. 820) : ನಾಯಕತನಕ್ಕೆ ಪಾಲಿಸಿದ ತೇಕಲಸೀಮೆವೊಳಗಣ ಉಳ್ಳಿಯರ ಹಳ್ಳಿ (ಎಕ. X, ಮಾಲೂರು. ೩೫-೪ ; 1525). [ ? ]

**ತೇಕಾಡಿಸು** 'ತೇಂಕಾಡಿಸು' ನೋ.

**ತೇಕಾಡು** 'ತೇಂಕಾಡು' ನೋ.

**ತೇಕು$_1$** 'ತೇಂಕು$_1$' ನೋ.

**ತೇಕು$_2$** 'ತೇಗು$_1$' ನೋ.

**ತೇಕು$_3$** 'ತೇಗು$_3$' ನೋ.

**ತೇಕೆ** (ನಾ). ಅಳತೆಯಲ್ಲಿ ಧಾನ್ಯವನ್ನು ತಲೆಸವರಿ ಅಳೆಯುವಿಕೆ.

[ <ತೇಂಕು$_1$ ]

**ತೇಗ$_1$**, 'ತೇಗು$_4$' ನೋ.

**ತೇಗ$_2$**, ತೇಹ (ನಾ). ಒಂದು ಬಗೆಯ ಬಾಗಿರುವ ಕತ್ತಿ : ಕತ್ತಿ, ಕಠಾರಿ, ಕೈಚೂರಿ, ಪತಾತ, ಪಿಸ್ತೂಲ, ಕರುಳಿ, ತೇಗ (ಪಾಶ್ಚಾವಿ. ೫೧೩). **ತೇಹ :** ಸುರಾಯು, ಬಾಕು, ಕಠಾರಿ, ತೆ[ತೇ]ಹ ಮೊದಲಾದ ಆಯುಧಗಳನ್ನು ತಂದು . . . ಆತನ ಸಮಯವನ್ನು ನೋಡುತ್ತಿದ್ದರು (ಕೃಪಾಸ. ೧೧೮).

[ ←ಪಾರ. ಅರ. ಹಿಂ. ತೇಗ್ ; ಮರಾ. ತೇಗಾ, ತೇಘಾ ]

**ತೇಗಟ್ಟೂರ್** (ನಾ). ಒಂದು ಊರಿನ ಹೆಸರು : ತೇಗಟ್ಟೂರ್ವಿಷಯೋ ಬಾರದೂನ್ನಾರ್ಮಗ್ರಾಮ (ಮೈಆರಿ. ೧೯೪೪, ೧೫-೩೩ ; 725).

[ ? + ಊರ್ ]

**ತೇಗಳಿ** 'ತೇವಳಿ' ನೋ.

**ತೇಗಾಡು** 'ತೇಂಕಾಡು' ನೋ.

**ತೇಗು$_1$**, ಡೇಗು$_1$, ತೆಕ್ಕು$_1$, ತೇಂಕು$_2$, ತೇಕು$_2$ (ಕ್ರಿ). ೧. (ತೃಪ್ತಿಯಿಂದ) ಢರಕೆಹೊಡೆ ; ಉದಾನವಾಯು ಬಿಡು : " ತೇಗು– ಉದಾನವಾಯೌ, ವೃಕ್ಷ ಭೇದೇ ಚ " (ಶಮಧಾ); ಕೆನ್ನೆತ್ತರೊಳೋರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ ತ್ರಿಪುಂಡ್ರಮಿಟ್ಟುಂ ಕೂಕಿಱಿದುಂ ತೇಗಿಯುಂ . . . ಆಡುವಾಗಳ್ (ಪಂಪಭಾ. ೧೨-೧೫೮ ವ) ; ಗಱ್ತಿಂದೋವದೆ ತೇಗಿಯುಂ ಮಿಡಿಗಳಂ ಕುಂಟಾಗೆ ಕೊಯ್ದುಂ ಖಳರ್ (ಧರ್ಮಾಮೃ. ೬-೧೮೯) : ಭಕ್ತಿಯಿಂದವೆ ತಣಿದು ತೇಗಿ ತೂಗಾಡುತಂ (ಕಣ್ವರ. ದೇ. ೧೩೦-೨೨) : ತೇಗಿದನು ಡಜ್ಜಿನೆ . . . ಖಳನಧಿಕತೃಪ್ತಿಯಲಿ (ತೊರರಾ. ೬-೨೬-೫೯) : ಉಂಡವ ತೇಗುವಂತಾತ್ಮನ ಭಾವಿಸಿ ಕಂಡು ಕಂಡವ ಪೇಳಬೇಕು (ಭರಜ, ೨-೯೬) : ಕುರುಡ ಕುಂಟ ಹೆಳವರಲ್ಲಿ ಮರುಕಗೊಂಡು ಬೋನವಿಕ್ಕುಹರನು ಮೆಚ್ಚಿ ತೇಗಿ ತಾನು ಹರಸಿ ಪೊರೆವನು (ಕವಿಸೋ. ೪೪-೩). ೨. ಏಗು ; ಕಷ್ಟಪಡು ; ಆಯಾಸಪಡು : ಬೆವರುತಂ ಬಿಕ್ಕುತಂ ತೇಗುತಂ ತೂಗುತಂ ಕ್ರಮವಳಿದು ಸುಳಿದು ಸುಖಿಯಾಗುತಂ (ಬಸರ. ೩-೧೦೬). ೩. (ಆಲಂ) ತಿಂದು ಮುಗಿಸು : ಕದನದಲಿ ದುಶ್ಯಾಸನನ ತೇಗಿದನಲಾ ಬಕವೈರಿ (ಕುವ್ಯಾಗ. ೩-೨೯). **ಡೇಗು$_1$ :** ೧. ಬಿಱಿವಂತಾಯಿತುದರವೆಂದಂಜಿ ಬಿಟ್ಟನೋ ಎಂಬವೊಲ್ ಡೇಗಿ ಭೋಜನವ ಮುಗಿಸಿ (ಮಲ್ಲಜ. ೫-೧೫) : ಜನನಿ ತುಷ್ಟನಾದೆನು ಸಾಕು . . . ಎಂದಾತನುರೆ ಡೇಗಲು (ಮಲ್ಲಜ. ೮-೪೪). **ತೆಕ್ಕು$_1$ :** ೨. ತೆಕ್ಕುವಳ್ಳಿಯು ಬಿಟ್ಟ ಮಂಡೆಯು ಉಕ್ಕಿ ನೊರೆಗಟ್ಟುಳಿವ ರಕ್ತದ ಲಕ್ಕೆ ಬಾಯೆತ್ತಿದು (ಕೌಶಿರಾ. ೫-೨೦) ; ತೆಕ್ಕುತಿಹ ಕಿಬ್ಬದಿಯ ಬಸುಱಿಂಗೊಲಿವ . . . ಚಿಂತಾಹೃದಯ ನೋಡುತ ಮಱಿಯ ಹೊಕ್ಕನು ದೈತ್ಯ ದಲಪತಿಯ (ಕೌಶಿರಾ. ೩೯-೨೮). **ತೇಂಕು$_2$ :** ೧. ಆರೋಗಣೆಯುನಾ ಹೊಟ್ಟೆಯೊಡೆವ ಮರ್ಯಾದೆಯೊಳಗುಂಡು ತೇಂಕು [ಪಾಠಾಂ. ಗು]ತ್ತಿರ್ದರು (ಸಮ್ಯಕಾ. ೭-೨೬). ೨. ತಪೋವನಮಂ ಶಶಿಮೌಳಿ ಪೊಕ್ಕು ಮೆಲ್ಲನೆ ಬರುತುಂ ಪಥಶ್ರಮವನಾಂತು ಬಳಲ್ದವೊಲಾಗಿ ತೇಂಕುತುಂ (ಗಿರಿಕ. ೯-೮೯); ಹಣೆಯಿಂದ ಬೆಮರುಗೆ ನೆತ್ತಿ ಪೊತ್ತಿ ತೇಂಕುತ್ತ ಹರಿತಪ್ಪಾಗಳ್ (ಹಚಕಾ. ೧೨-೭) ; ಕೆಮ್ಮುಗುಂ ತೇಂಕುಗುಂ (ಬಾಲಚಿ. ೧೨೭-೪). **ತೇಕು$_2$ :** ೨. ಮೊಗಬೆಮರೆ ತೇಕುತಂ ಪರಿತಂದು (ಬಸರ. ೯-೯೬) ; ತೇಕಿ ತಲೆಕೆಳಕಾದನೀ ಯುವಿವೇಕಸಾಗರನೆಲೆ ನೃಪತಿ ಜಗದೇಕವೀರನು ಕರ್ಣ ತಾನಿರೆ ಸಂಧಿಯೇಕೆಂದ (ಕುವ್ಯಾಉ. ೫-೧೩) ; ಮುನಿಮನಂಗಳು ತೇಕಿ ತಲೆಕೆಳಗಾದುವೈ ಕಾಣಿಸದೆ ನಿಜಪದವ (ನಿಭಾಗ. ೩-೭-೨೨) ; ಕೌರವಂ ನೋಡಿ ಹಸುಮಕ್ಕಳಂ ಬರಿದೆ ನೀ ಕೊಂದೆಯಾಯೆಂದು ಪ್ರಾಣೋತ್ಕಟಂಗಳಿಂ ತೇಕುತಿರೆ (ತುರಂಗ. ೭೬-೫೭); ಅದಾಗ ಏದುತ್ತ ತೇಕುತ್ತ ಅಲ್ಲಿ ಬಂದು ತಲುಪಿದ ಸುರೇಶ (ಆಬೋಲೀ. ೯೬) ; ಬಾಗಿಲು ಕಾಯುವವನು ತೇಕುತ್ತಾ ಬಂದ (ಜಮಿನ್ಹಾ. ೯).

ತೇಗಿ ತೊನೆ = ತೃಪ್ತಿಪಡು : ಗಣಪತಿಯು ಶಿವನ ಮುಂದೆ ಜಗತ್ತಿನಲ್ಲಿ ಎಲ್ಲಿ ನೋಡಿದರೂ ಸುಖವೇ ಉಂಟೆಂದೂ ಆ ಸುಖವನ್ನುಂಡು ತೇಗಿ ತೊನೆದು ಉಬ್ಬಿ ಬಂದನೆಂದೂ ಮುಂಚಿತವಾಗಿ ಹೇಳಿರಲು (ಕನ್ನಜಾ. ೧೫೬). [ ದೇ.॥ ತಮಿ. ಮಲ. ತೇಕ್ಕು ; ತುಳು. ತೇಗು, ತೇಂಕ್, ಸೇಂಕ್; ತೆಲು. ತೇನು, ತೇಪು, ತ್ರೇಪು ]

**ತೇಗು$_2$** 'ತೇಂಗು$_2$' ನೋ.

**ತೇಗು$_3$**, ಡೇಗು$_2$, ತೇಂಕು$_3$, ತೇಕು$_3$ (ನಾ). ೧. ತೇಗುವಿಕೆ ; ಢರಕೆ : ಆಗುಳಿಕೆ ತೇಗು ಸೀನಿದನಾಗಿಸುಗುಂ (ಕಲ್ಯಾಕಾ. ೨-೧೭); ಮಹೇಶ್ವರಾಲಯದಂತೆ ಗೊರವು . . . ತಣಿಯುಂಡನಂತೆ ತೇಗು (ಬಂಹರಿ. ೨-೩೮ ವ) : ಎರಡಳ್ಳೆ ಪಿಱಿಗ್ಗಿ ತೇಗುಬ್ಬರಿಸಲ್ ಕುಳಿರ್ವಮಳಜಲಮನೀಂಟಿದೆಂ (ದಶಕು. ೪-೩೪) ; ವರಸಮಾಧಾನದಲಿ ಕೈದೊಳೆದುರವಣಿಪ ತೇಗಿನ ತರಂಗದ ಪರಬಲಾಂತಕನೆದ್ದು ನಿಂದನು (ಕುವ್ಯಾಆ. ೧೦-೩೪). **ಡೇಗು$_2$ :** ೧. 'ಅಬ್' ಎಂದು ಡೇಗುಹಾಕುತ್ತಾ ಮಧ್ಯಮದ ವಯಸ್ಸು ಸಮೀಪಿಸಿದ ಆ ಪಟೇಲರು . . . ಕುಳಿತಿದ್ದರು (ಬರಹಾ. ೬೩). **ತೇಂಕು$_3$ :** ೨. ಏದುಸಿರು ; ಮೇಲುಸಿರು : ಪಿಪ್ಪಲಿಯುಂ ತ್ರಿಫಳೆಯುಮನರೆದು . . . ತಿನೆ ನೆಗಡಿ ತೇಂಕರೆತಲೆಬೇನೆ ಜ್ವರಂಗಳೆಂಬಿವಿನಿತುಂ ಕಿಡುಗುಂ (ಲೋಕೋಪ. ೯-೯೨). **ತೇಕು$_3$ :** ೨. ಬಾಯಂ ಬಿಡುತುಂ ತೇಕುಣ್ಮೆ ಜಿಹ್ವಾಲತೆಯೆಟಲೆ ಜವಂಗುಂದುತುಂ ಬಂದು (ಶಾಂತೀಶ್ವ. ೧೨-೩೬) ; ಓಡಿ ಓಡಿ ಬಂದುದರಿಂದ ಅವನಿಗೆ ತೇಕು ಹೆಚ್ಚಾಗಿತ್ತು (ಬನಸಿ. ೭೬).

[ <ತೇಗು$_1$./ತಮಿ. ತೇಕ್ಕು ; ತುಳು. ತೇಗ್, ತೇಂಕೆ ]

**ತೇಗು₄, ಚೇಗು₁, ತೇಗ₁** (ನಾ). ಒಂದು ಬಗೆಯ ಮರ ; ಸಾಗುವಾನಿ: "ತೇಗಿನ ಮರನದೆ ಸಾಕಂ" (ವಸು.ಕೋ. ೩೫-೧೭) ; "ತೇಗು ೭ಉದಾನ ವಾಯೌ, ವೃಕ್ಷ ಭೇದೇ ಚ" (ಶಮಧಾ) ; "ತೇಗುಮುಂರಿವೇಷವಕ್ಕು" (ಮಂಗರಾ. ೩೭-೧೮) ; ಸಿರಿಸಂ ಸೀರೆ ಬೆಳ್ಳಲವಂಗಮೆಲವಂ ಬಳ್ಳಾಲೆರಂ ಬಿಕ್ಕೆ ತೇಗು (ಕಾವ್ಯಸಾ. ೦೦೮೦ ಶೂದ್ರಕ) ; ಮೊಗವಂ ತೊಳೆವಂತೆ ಬಾಗಿ ಮಾತಙಿಯದಳಂತೆ ಮೂಗಿ ಮಿಗಿಲುಂಡವರಂತಿರೆ ತೇಗು ... ಕರೆವಂತೆ ಪಾಲೆ ಶಂಕರಸಖನಂತೆ ಹೊನ್ನೆಯಳಿಯಂತೆರದಂತಿರರಣ್ಯವೊಪ್ಪುಗುಂ (ಮಲ್ಲಿಕಾ. ೩-೧೩೭) ; ತೇಗಾಲದ ನೇಱಿಲ . . . ಹೊನ್ನೆಯ ತರುಗಳ್... ಮೆಱೆಗುಂ (ಹಮ್ಮೀ.ರ. ४-೬४) ; ತೇಗರುಟಾಳ ಚಿಲ್ಲ ನೆಲ್ಲಿಯು ಹೊಂಗೆ ನೇಱಿಲು . . . ಸೂರಮಾರ್ಗವ ತಡೆದಿಹುವು (ಕಂಸವಿ. ೧೮-೩೭) ; ಎಕ್ಕೆ ಯಂಬಟೆ ತೇಗು ಮತ್ತಿಯು . . . ಕಿಕ್ಕಿಱಿದು ಬೆಳೆದಿರ್ದುವು (ಪ್ರಹ್ಲಾ.ಚ. ४-೧೧) ; ಭಸಿತಧಾರೆ ಪೊಣ್ಮುವ ರಂಧ್ರಮಂ ಭೋಂಕನೊಂದು ತೇಗಿನೆಳೆ ದಳಿರಿಂ ಕಟ್ಟಿ ಬಂಧಿಸುತ (ವೃಷವಿ. ೨೯-೧೩೫ ವ) ; ತೇಗಿಗಿಂತ ಗಟ್ಟಿಯಿಲ್ಲ ಜೋಗಿಗಿಂತ ಕುಂಬು ಇಲ್ಲ (ಗಾದೆ). **ಚೇಗು₁ :** ಚೆನ್ನಾಗಿ ಬಲಿತ ಚೇಗಿನ ಮರ ; ಒಂದಕ್ಕೊಂದು ತಟ್ಟಿದರೆ ಖಣಖಣಗುಟ್ಟುವಂತಿರುತ್ತದೆ (ವಾಹದ. ४ ಪರಿಚಯ). **ತೇಗ₁ :** ನಿಗುರ್ದ ಹೆತ್ತೇಗದಿಂ ಶೇಗದಿಂ ಕಾನನಂ ಕಣ್ಗೆಸೆದುದು (ರಾಘಚ. ೧೭-೫४) ; ಬಿದಿರುಮೆಳೆ ಮತ್ತು ತೇಗದ ಮರಗಳ ಭೀಕರ ಕಾಡಿನ ಮಧ್ಯೆ ಹತ್ತು ಮನೆ (ಹೊಸಕ್ಷಿ. ೧೨೩) : ತೇಗದ ಮರ, ಸಾಗವಾನಿ (ಮೃಜಿಗಿ. ೬೩-೧೫೦೫).

[ ದೇ.॥ ತಮಿ. ಮಲ. ತೇಕ್ಕು ; ತೆಲು. ತೇಕು ; ಟೇಕು ; ಕೊಲಾ. ಟೆಕ್ ; ಪರ್ಜಿ. ಟೇಕ್ ; ಗೊಂಡಿ ; ತೇಕಾ./ಇಂ. Teak ]

**ತೇಗುರು** (ನಾ). ಒಂದು ಊರಿನ ಹೆಸರು : ಯಿದಕ್ಕೆ ಸಾಕ್ಷಿ ಮುಗುಳಿ ಚಣ್ಣಯೂರ ಪಲ್ಮಾಡಿ ಅಮ್ಮಾಳೆ ಕಿರಿಯ ಮುಗುಳಿ ಮುಟಿವಳ್ಳಿ ಸಲ್ಲೂರು ಮಾಗುಣ್ಣ ತೇಗುರು ಆರಮಣ್ಣಂ ಬಿಟ್ಟ ಮಂಗಳಂ (ಎಕ. VI, ಚಿಕ್ಕಮ. ४೨-೨೨ ; 959).

[ ಇದು 'ತೇಗೂರು' ಎಂಬುದರ ಅಪಲಿಖಿತವಿರಬಹುದು ]

**ತೇಜ₁** (ನಾ). ೧. ಹೊಳಪು ; ದೀಪ್ತಿ ; **ಪ್ರಕಾಶ ;** ಕಾಂತಿ : ತೇಜಕ್ಕೆ ನ್ನೊಳ್ ಸೆಣಸುವನೀ ಜನಪತಿಯೆಂದು ಕಾಯ್ದು ತೆಱದಳೆರ್ದಂ ನೀರೇಜ ಸಖಂ (ಲೀಲಾವ. ೬-४೫) ; ರತಿಪತಿಗೆ ಮೂಲೋಕವಾವರಿಸುವ ರೂಪಂ ಸರಿತ್ಪತಿಗೆ ಗಂಭೀರತೆಯನು ಸ್ವಾಹಾಪತಿಗೆ ತೇಜಮಂ ಕೊಟ್ಟ ಗುರು ಮೂರ್ತಿ (ಹಚಕಾ. ೧-೧) ; ಪೃಥ್ವೀಪಾಲರಿದ್ದರು ತರಣಿಕಿರಣವನೇಳಿಸುವ ಮಣಿಭೂಷಣಂಗಳ ಬಹಳ ತೇಜದಲಿ (ತೊರರಾ. ೧-೧४-೬). ೨. ಕದಿರು; ರಶ್ಮಿ ; ಕಿರಣ : ತೇಜಂ ಪುದುವಿಲ್ಲೆನಿಸಿ ವಿರಾಜಿಸೆ ಪರರಾಜಮಂಡಲಂ ತನ್ನಿಂ ನಿಸ್ತೇಜಂಬೆತ್ತಿರೆ ಬೆಳಗಿದನೀ ಜಗಮಂ ಭಾನುವೆಂಬಿನಂ ಭಾಸುರಥಂ (ಶಂರಾಮಾ. ೨-೬೭). ೩. (ಪಂಚಭೂತಗಳಲ್ಲಿ ಒಂದಾದ) ಬೆಂಕಿ ; ಅಗ್ನಿ : ಈ ಅವಸ್ಥೆಗಳಲ್ಲಿರುವ ಬ್ರಹ್ಮನೇ ಪೃಥಿವ್ಯಪ್ತೇಜೋವಾಯ್ವಾಕಾಶ ವೆನ್ನಲ್ಪಡುವನು (ಹಿಂದಸಾ. ೨೩೩). ४. ಸೂರ್ಯ ; ರವಿ. ೫. ಹರಿತವಾಗಿರುವಿಕೆ; ತೀಕ್ಷ್ಣತೆ. ೬. ಶಕ್ತಿ; ಸಾಮರ್ಥ್ಯ; ಪರಾಕ್ರಮ; ಪೌರುಷ : "ಪೌರುಷಂ ತೇಜಂ ಪ್ರತಾಪಂ ಪರಾಕ್ರಮಂ ವೀರಕ್ಕೆ ಪೆಸರು" (ಮಂಗರಾ. ೧೩೦-೧೭) ; ಆರಾನುಂ ತೇಜದವರ್ ವಲ್ಲೆಯೆಂದು ಸುಟ್ಟಿಸಿ ತೋಱಿಲ್ ಸಲ್ಲದು (ಎಇ. XII, ೨೮४-೨೫೭ ; 1077) ; ಶತ್ರುಸಂತತಿ ತಲೆ ವಾಗೆ ಶಿಷ್ಟಜನದಾಟಿಡಿ ನಾಟ್ಯಡೆವೋಗೆ ತೇಜಮುದ್ಧತರನೆ ಕೊಂದು ಕೂಗೆ (ಪುಷ್ಪಪು. ೧೩-೨) ; ತೇಜ ಇದ್ದವನೇ ಪೂಜ್ಯ (ಗಾದೆ). ೭. ಹೆಚ್ಚಳ ; ಗೌರವ ; ಮಹತ್ವ ; ಘನತೆ : ವಿಶ್ವಾಮಿತ್ರಮುನಿಸುತೆಯರಂ . . . ಹರಿಶ್ಚಂದ್ರರಾಯಂ ತಂದನೆಂಬೊಂದು ತೇಜಮಂ ಕೊಡಬೇಹುದೆನಗೆ (ಹಚಕಾ. ೮-೩೦) ; ಸುಮ್ಮನಾಕೆಗೆ ತೇಜವಿತ್ತು ತಂದಾಳ್ದರೆ ಹೆಮ್ಮಕ್ಕಳೇನ ಮಾಡುವೆವು (ಭರಚ. ೩೭-೧೦೬) ; ಒಡೆಯನ ತೇಜವ ಕೆಡಿಸಿಯಾಡದವನ ತಡೆಯದೆ ಕಾರ್ಯ ಮಾಳ್ಪವನ . . . ನೀಂ ಪೊರೆವೆ (ಶಕಸಾಂ. ४೮-४೦); ಅನವರತವಗಲದಲೆ ಜನಪತಿಯನೋಲಯಿಸು ಧನಮಕ್ಕು ತೇಜ ಪಿರಿದಕ್ಕು (ಸರ್ವಜ್ಞ. ೭೩೩). ೮. ತನು ; ದೇಹ ; ಶರೀರ. ೯. ಮನೆ ; ಗೃಹ. ೧೦. ಹೊನ್ನು ; ಸಿರಿ ; ಚಿನ್ನ : "ಕಿರಣಂದ್ಯುತಿ ರುಗ್ದೀಧಿತಿ . . . ದೀಪ್ತಿ . . . ಅಂಶು ಭಾ ಭಾನು ರಶ್ಮಿ ಘೃಣಿವಸು ಗಭಸ್ತಿ ಪಾದಂ ತೇಜಂ" (ವಸು.ಕೋ. ೧೨-೬೫) ; "ತನು ಭವನಾ ನಲಾರ್ಕಕಿರಣಂಗಳು ತೇಜಸ ಮಾಹ್ವಯಂ" (ನಾನಾರ. ೫೨). ೧೧. (ಬಹುವ್ರೀಹಿ ಸಮಾಸದಲ್ಲಿ) ಕಾಂತಿಯುನ್ನುಳ್ಳವನು ; ತೇಜಸ್ಸಿನಿಂದ ಕೂಡಿದವನು : ಅತುಳತರ ತೇಜಂ ಮಲಪರೊಳ್ಗಂಡಪ್ರಚಂಡನಸಹಾಯಶೂರನೇಕಾಂಗವೀರಂ . . . ಸುಕಸಂಕಥಾವಿನೋದದಿಂ ಪೃಥ್ವೀರಾಜ್ಯಂಗೆಯುತ್ತಮಿರೆ (ಎಕ. VI, ತರೀಕೆ. ४೫-೫೦ ; 1196). ೧೨. [ಛಂದ] ಒಂದು ಅಕ್ಷರ ಗಣ ; ರಗಣ(–⏑–): ತೇಜಮರ್ಕನೀಶನಿಂದೋಜೆವೆತ್ತು ಬಂದೊಡಂ ಭೋಜನೇತ್ರೆ ಕೇಳ ನೀನೀ ಜಗದ್ವಿಭೂತಿಯಂ (ಛಂದೋಂಬು. ೨-೮೫).

**ತೇಜಮಾರ್ತಂಡ** = ತೇಜಸ್ಸಿನಲ್ಲಿ ಸೂರ್ಯನಂತಿರುವವನು ; ಒಂದು ಬಿರುದು : ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾ ಸಾಮನ್ತಂ ತೇಜಮಾರ್ತಣ್ಡಂ (ಸೌಇಇ. XX,೦೯-೨೯ ; 1015).

[ ಸಂ. ತೇಜಸ್ ]

**ತೇಜ₂, ತೇಜಿ₂** (ನಾ). (ವ್ಯಾಪಾರದಲ್ಲಿ) ಬೆಲೆಯೇರಿಕೆ, _ ಉತ್ಕರ್ಷ : ವ್ಯಾಪಾರಕ್ಕೆ ಬಹಳ ತೇಜ ಬಂದದರಿಂದ ಆವನಿಗೆ ಬಹಳ ಲಾಭ ವಾಗುತ್ತಿತ್ತು (ಮುಂಬಯಿ. ೫-೨೮೧). **ತೇಜಿ₂ :** ಹೊರದೇಶದ ವ್ಯಾಪಾರ ಬಹಳ ತೇಜಿಯಲ್ಲಿದೆ (ಹೇಮಕೂ. ೦೫) ; ಎಲ್ಲಾ ಮಾಲುಗಳಿಗೂ ಒಳ್ಳೆಯ ತೇಜಿಯ ಸಮಯ ಬರುತ್ತದೆ (ಜಾರುದಾ. ೦४೫) ; ಆ ಕಾಲಕ್ಕೆ ವರಗಳ ವ್ಯಾಪಾರವೇ ತೇಜಿಯಲ್ಲಿತ್ತು (ಕೊಳೆಮಾ. ೦೯೦). 'ಮಂದಿ₂' ಪರಾ.

**ತೇಜಮಾಡು** = ಬೆಲೆಯನ್ನು ಹೆಚ್ಚು ಮಾಡಂ,–ಏರಿಸಂ : ಆ ರೇಶಿಮಿ ಮಾರುವವನು ಬೆಲೆಯು ಹೆಚ್ಚು ಬೆಳಸುತ್ತಾನೆ. ಅಂದರೆ ತೇಜಿ ಮಾಡುತ್ತಾನೆ (ಮುಂಬಪ್ರಾ. ೬೭). [ ←ಪಾರ. ಹಿಂ. ಮರಾ. ತೇಜೀ ]

**ತೇಜಂಗಿಡಿಸು** (ಕ್ರಿ). ೧. ಕಾಂತಿಹೀನಗೊಳಿಸಂ. ೨. ಪರಾಕ್ರಮವನ್ನು ಕುಗ್ಗಿಸಂ ; ಶಕ್ತಿಗುಂದಿಸಂ. ೧, ೨: ಜಾಂಬವನಂ ಪಿಂಬಗಲಾದಿತ್ಯನಂತೆ ತೇಜಂಗಿಡಿಸಿ ಹನುಮನನನುಮಾನಂ ಮಾಡದೆ ನೆಲಕಿಕ್ಕಿ (ಧರ್ಮಾಮೃ. ೭--೯೫). [ ತೇಜಂಗಿಡು (<ತೇಜಂಗೆಡು) + – ಇಸು₃ ]

**ತೇಜಂಗಿಡು** 'ತೇಜಂಗೆಡು' ನೋ.

**ತೇಜಂಗುಂದು** (ಕ್ರಿ). = ತೇಜಂಗೆಡಂ : ತಾರಗೆಗಳ್ತೇಜಂಗುಂದೆ ಕೊರಗೆ ಚಾರುಚಕೋರಂಗಳ್ (ಉದ್ಭಟ. ೧೦-೬). [ ತೇಜ₁ + ಕುಂದು₁ ]

**ತೇಜಂಗೆಡು,** ತೇಜಂಗಿಡಂ (ಕ್ರಿ). ೧. ಕಾಂತಿಗುಂದು ; ಕಾಂತಿಹೀನ ವಾಗಂ : ಪಗಲ ಚಂದ್ರನಂತೆ ತೇಜಂಗೆಟ್ಟು (ಧರ್ಮಾಮೃ. ೦-೧೬೮) ; ತರಣಿ ತೇಜಂಗೆಡದಿರಗ್ನಿ ಬಿಸುಪಾಱದಿರು (ಹಚಕಾ. ೨-೩೦). **ತೇಜಂಗಿಡು : ೨.** ಪರಾಕ್ರಮ ಕುಂದು,-ಕುಗ್ಗು. 'ತೇಜಂಗಿಡಿಸಂ' ಪರಾ.

[ ತೇಜ₁ + ಕೆಡು₁ ]

**ತೇಜಂಬೊಂದಿಸು** (ಕ್ರಿ). ಕಾಂತಿಯನ್ನು ಹೊಂದುವಂತೆ ಮಾಡಂ,– ಹೊಂದಿಸಂ : ಅರ್ಗಂದೆಡಕೂಳಲ್ಲದೆ ತೇಜಂಬೊಂದಿಪರ್ಗಲ್ಲದದೆಂತುಂ (ಎಕ. VII, ಶಿವಮೊ. ೯೭-४೧ ; 1113). [ ತೇಜ₁ + ಪೊಂದಿಸು ]

**ತೇಜಃಕಣ** (ನಾ). ಬೆಂಕಿಯ ಕಣ,–ಅಂಶ : ಧಾರಾವಿಸರಭೂತಪರಿಸ್ಫು ಲಿಂಗಪ್ರಸರತೇಜಃಕಣಪರಿಷ್ಕೃತನವ್ಯಶತಭಾನು (ಕಾವ್ಯಾ ಸ. ೧೦-೭೭).

[ ಸಂ. ]

**ತೇಜಃಕ್ಷಯ** (ನಾ). ಕಾಂತಿಯಂ ಅಳಿವು ; ತೇಜೋಹೀನತೆ : ಕಾಲವಶದಿಂ ತೇಜಃಕ್ಷಯಂ ಭಾನುಗೆಂದಗಿದಾರ್ತಂಬಡುವಂತೆ (ಪುಷ್ಪಪು. ೩-೪೦). [ ಸಂ. ]

**ತೇಜಃಪಿಂಡ** (ನಾ). ಅಗ್ನಿಯಂ ರಾಶಿ : ರ ಘೂ ದ್ವ ಹ ಂ-ಗೆ ಪರಿತಾಪಂ ಲಕ್ಷ್ಮಣಂಗಾಗಳುಬ್ಬರವಾದತ್ತು ಲತಾಂಗಿ ಸೀತೆ ಪುಗೆ ತೇಜಃಪಿಂಡವಂ ಕುಂಡವಂ (ಕುಂರಾವಾ. ೧೬-೨೭). [ ಸಂ. ]

**ತೇಜಃಪುಂಜ** (ಗು).೧. ಪ್ರಕಾಶದಿಂದ ಕೂಡಿದ ; ಕಾಂತಿಯುತವಾದ : ಮರೆಯಾದುದಾ ದೇವ ತೇಜಃಪುಂಜ ಮುಖಮೂರ್ತಿಯಗ್ನಿ ಮೆಯ್ ಜ್ವಾಲಾನಿಮಗ್ನಮೆನಲ್ (ಶ್ರೀರಾಮಾ. ೧೪-೩೬೫); ತೇಜಃಪುಂಜ ಮುಖದ ಅಧಿಕಾರಿಯೊಬ್ಬನನ್ನು ನೋಡಿದನು(ಪುನರು. ೩೧೦).(ನಾ).೨. ಕಾಂತಿಯ ಸಮೂಹ : ಮಿಙುಪ ತೇಜಃಪುಂಜವುಕ್ಕಿತು ಹೊದಱ ಹೊಳಹಿನಲಿ (ಕುಮ್ಮಾ.ಸ. ೧೦-೬೮) ; ಧೂಮಕೇತು. . . ಪ್ರಕಾಶಮಾನವಾಗಿ ಇರುತ್ತದೆ. ಬಾಲ ಬಹಳ ಉದ್ದವಾಗಿ ತೇಜಃಪುಂಜವಾಗಿ ಇರುತ್ತದೆ (ಆಕಾಶ. ೩೬). ೩. ಸೂರ್ಯ : ಅಂತು ಬಾಹುಬಲಿ ತೇಜಃಪುಂಜಮೆ [ ಪಾಠಾಂ. ತೇಜಸ್ಫುರಿತಮೆ ] ಕಣ್ಣೊಳುಳ್ಳವಂತೆ ಸೈರಿಸದೆಮೆಯಿಕ್ಕಿ ದೃಷ್ಟಿಯುದ್ಧದೊಳ್ ಸೋಲೆ (ಆದಿಪು. ೧೪-೧೦೫ ವ). [ ಸಂ. ]

**ತೇಜಃಪ್ರಸರ** (ನಾ). ಕಾಂತಿಯ ವಿಸ್ತಾರ,–ಹರಹು: ಎಸೆವ ಕಿಸುಂಗಲ್ಲ ತೇಜಃಪ್ರಸರಂ ದಾವಾಗ್ನಿಶಂಕೆಯಂ ಮನದೊಳ್ ಪುಟ್ಟಿಸಿ (ಶಾಂತಿಪು. ೨೯-೯೬) ; ಕರಣಗಣದ ತೇಜಃಪ್ರಸರದೊಡನೆ ಬಿಸಿಲ ಬಿಸುಪಸದಳಮಾಗೆಯುಂ (ಚಂದ್ರಪು. ೭-೬೦ ವ). [ ಸಂ. ]

**ತೇಜನಕ** (ನಾ). ಒಂದು ಬಗೆಯ ಹುಲ್ಲು ; ಕಾಗೆಬಿದಿರು : "ಗುಂದ್ರಃ, ತೇಜನಕಃ, ಶರಃ – ಈ ೩ ಕಾಕಬಬ್ಬು" (ನಾಚಿರಾ. ೧೧೨) ; "ಗುಂದ್ರಃ, ತೇಜನಕಃ, ಶರಃ – ೩ ಕಾಗೆ ಬಿದಿರು" (ಸಿದ್ಧಾಂತಿ. ೧೩೧). [ ಸಂ. ]

**ತೇಜನಿ** (ನಾ). ೧. ಕುರಂಟಗೆಯ ಗಿಡ. ೨. ಜ್ಯೋತಿಷ್ಮತೀಲತೆ. ೩. ತೃಣ ; ಹುಲ್ಲು. [ ಸಂ. ತೇಜನೀ ]

**ತೇಜಪುಂಜ** (ನಾ). ಕಾಂತಿಯ ಸಮೂಹ : ನೀ ತೇಜಪುಂಜ, ನಾನೊಂದು ಚುಕ್ಕೆ (ಹೃದಸ. ೨೨-೧೩). [ < ತೇಜಃಪುಂಜ ]

**ತೇಜಫಲ** (ನಾ). ಒಂದು ಬಗೆಯ ಹಣ್ಣಿನ ಮರ : "ಶಾಲ್ಮಲೀಫಲಃ– ತೇಜಫಲ" (ಒಷಧಿ. ೧೬೩) ; ತೇಜಫಲ, ಜಿಮ್ಮಿ, ತುಂಬುರು (ವ್ಯಾಜಿಗಿ. ೭-೧೬೨೦). [ <ಸಂ. ತೇಜಃಫಲ ]

**ತೇಜಮಾನ್ಯ** (ನಾ). ಅಷ್ಟಭೋಗಗಳಿಂದ ಕೂಡಿರುವಂತೆ ಕೊಟ್ಟ ಮಾನ್ಯದ ಭೂಮಿ (?) : ನೀವೆಲ್ಲರೂ ತೆತ್ತು ನಿಂ × × × ತೇಜಮಾನ್ಯ ಸಂಕ (ಸೌಇಇ. ೧೯೩೨, ಉದುಟಿ. ೫೦೩-೧೦ ; 1397). [ ತೇಜ$_1$ + ಮಾನ್ಯ ]

**ತೇಜವಂತ** (ನಾ). ಕಾಂತಿಯುಳ್ಳವನು ; ತೇಜಸ್ವಿ : ರವಿಯ ತೆರದಿ ತೇಜವಂತನಾದ ಕವಿಯೆ (ಪಯಣ. ೬-೧೯). [ ತೇಜ$_1$ + – ವಂತ ]

**ತೇಜಶ್ಚಕ್ರ** (ನಾ). ಕಾಂತಿಯಿಂದ ಕೂಡಿದ ಚಕ್ರ ; ತೇಜೋಮಂಡಲ : ಉಗ್ರಪ್ರತಾಪೋರ್ಜಿತ ತೇಜಶ್ಚಕ್ರಮಿದಿರ್ದತ್ತೊಳಪೊಗದೆ ಪುರೋಪಾಂತದೊಳ್ ಚಕ್ರರತ್ನಂ (ಆದಿಪು. ೧೪-೩); ತೇಜಶ್ಚಕ್ರಧರಂ ರಿಪುರಾಜ್ಯಾಪಹಾರಿ ತನ್ನವೊಲುರ್ವೀಧರ ವಿಭ್ರಾಜಿತಕರನುದಯಿಪಂ ತನೂಜಂ (ಪಾರ್ಶ್ವಪು. ೭-೬೨). [ ಸಂ. ]

**ತೇಜಸಾಮ್ಯ** (ನಾ). = ತೇಜಸ್ವಾಮ್ಯ : ಹಳ್ಳದಿಂ ಮೂಡಣ ತ್ರಿಭೋಗ ಸುಂಕ ತೇಜಸಾಮ್ಯ ದೇವರ್ಗೆ ಸರ್ವಬಾಧಾಪರಿಹಾರವಾಗಿ ಕೊಟ್ಟರು (ಸೌಇಇ. XX, ೨೩-೨೭ ; 1029) ; ಕೊಳ್ಳಿಂಪೂರ ಸಗರದಕೆಯಿಮನ ತೇಜಸಾಮ್ಯವೆಲ್ಲಿಮಂ ಮಲ್ಲಿಮಯ್ಯಂಗಮರ್ಕ್ಕಳಿಂಗವೊಬ್ಬಸಿತಾಪ್ಪ ವಿತ್ತಿಗಂ ಜೊತೆಗಂದೊಱಂಗಾಗಿ ಪೊದರವರನಾ ಕೈಕೊಣ್ಣಾಡ ಸಮಾಚರಿಸಿದೊಡೆ (ಕಇಆ. ೧೨೪-೩೩-೭ ; 1085) ; ಆ ಹೆಬ್ಬಾಳು ಹನ್ನೆರಡಱ ಬಳಿಯ ಬಾಡಂ ಬಡಗನೂ ಯಷ್ಟಭೋಗ ತೇಜಸಾಮ್ಯವಂ ಯಾ ಬಾಳ ಸೋವರಸಂಗಳ ಕ್ರಯಮಂ ಕೊಂಡು ತಮ್ಮ ದೇವರ್ಗ್ಗೆ ಬಿಟ್ಟರು(ಕೊಲ್ಲಾಶಾ. ೧೪-೪೫; 1176). [ <ತೇಜಸ್ವಾಮ್ಯ ]

**ತೇಜಸ್ಕಾಯ** (ನಾ). [ಜೈನ] ಐದು ವಿಧವಾದ ಸ್ಥಾವರವಸ್ತುಗಳಲ್ಲೊಂದು ; ಅಗ್ನಿ : ಪೃಥ್ವೀಕಾಯ, ಅಪ್‌ಕಾಯ, ತೇಜಸ್ಕಾಯ, ವಾಯುಕಾಯ, ವನಸ್ಪತಿಕಾಯ ಎಂದು ಸ್ಥಾವರಗಳಲ್ಲಿ ಐದು ಪ್ರಕಾರಗಳು (ಜೈನಧ. ೩೦). [ ಸಂ. ]

**ತೇಜಸ್ತತ್ವ** (ನಾ). [ಜ್ಯೋತಿ] ದಿನದ ಕಾಲಮಾನದ ಒಂದು ಭಾಗ : ದಿನದ ಕಾಲಮಾನವನ್ನು ಪಂಚತತ್ವಗಳನ್ನಾಗಿ ವಿಂಗಡಿಸುವಾಗ ತೇಜಸ್ಸಿನ ಭಾಗಕ್ಕೆ ಬರುವ ಕಾಲ : ದೂರಪ್ರಯಾಣಕ್ಕೆ ಚಂದ್ರಸ್ವರ ಸಮೀಪಪ್ರಯಾಣಕ್ಕೆ ಸೂರ್ಯಸ್ವರ ಚಿರಕಾಲಪ್ರಯಾಣಕ್ಕೆ ಅಪ್ಪತತ್ವ ಕ್ಷಿಪ್ರಪ್ರಯಾಣಕ್ಕೆ ತೇಜಸ್ತತ್ವವಿರಬೇಕೆಂಬುದು ಮೊದಲಾದುವುಗಳಂ ತಿಳಿದು (ವಿವೇಕ. ೧೪೩). [ ಸಂ. ]

**ತೇಜಸ್ಪತಿ** (ನಾ). ತೇಜಸ್ಸಿನ ಒಡೆಯ; ಸೂರ್ಯ: ರಾಜಪುತ್ರಾಪನುಪಮಿತ ತೇಜಸ್ಪತಿ ಖಚರರಾಜಂ (ಶಾಂತಿಪು. ೩-೩೩). [ ಸಂ. ]

**ತೇಜಸ್ವಾಮ್ಯ** (ನಾ). ಅಷ್ಟಭೋಗಗಳೊಂದಿಗೆ ಕೂಡಿದ ಭೂಮಿಯ ಒಡೆತನ,–ಸಂಪೂರ್ಣ ಒಡೆತನ : ಅಷ್ಟಭೋಗ ತೇಜಸ್ವಾಮ್ಯವನೂ ಸೂಖದಿಂ ಬೋಗಿಸಿ ಬಹಿರಿ (ಮ್ಯಆರಿ. ೧೯೪೦, ೨೮-೨೫ ; 1509) ; ಈ ಭೂಮಿಯೊಳಲ್ಲಿಯಾದೊಡಂ ಸುಂಕಂ ದಂಡಂ ತೇಜಸ್ವಾಮ್ಯಂ ಮೊದಲಾಗೆ ಮತ್ತಂ ತೇಜಮೆನಿಸಿದವೆಲ್ಲಂ ದೇವರ ಸೊಮ್ಮಾಗೆ ಸರ್ವಬಾಧಾಪರಿಹಾರಂ ಮಾಡಿದೊರ್ (ಎಇ. XII, ೨೮೪––೨೫೫ ; 1877). 'ಅಷ್ಟಭೋಗ' ಪರಾ. [ <ಸಂ. ತೇಜಸ್ಸ್ವಾಮ್ಯ ]

**ತೇಜಸ್ವಿ** (ನಾ). ೧. ಕಾಂತಿಯುಳ್ಳವನು : ಅಂಜದರಾರ್ ಮುಟ್ಟುವಲ್ಲಿ ತೇಜಸ್ವಿಗಳಂ (ಪುಷ್ಪಪು. ೧೦-೧೮) ; ವಾಲ್ಮೀಕಿ ತಾಂ ನಡೆತಂದನ್ . . . ತೇಜಸ್ವಿ, ತರುಣಂ, ತಪೋವಲ್ಕಲವಸ್ತ್ರಶೋಭಿ (ಶ್ರೀರಾಮಾ. ೦-೫). ೨. ಪ್ರಭಾವಶಾಲಿ ; ಸಮರ್ಥ : ರಾಜವತಿಯುಕ್ಕುಮಲ್ಲದೆ ರಾಜನ್ವತಿಯಾಗದಲ್ತೆ ಧರೆ ಮತ್ತೂರ್ವಂ ತೇಜಸ್ವಿ ಪೊಡರ್ಪೊಡದಱಂ ರಾಜನ್ವತಿ ಮಾಡು ಧರಣಿಯಂ (ಆದಿಪು. ೧೪-೨೦) ; ಎನ್ನ ಪಕ್ಕದೆ ತೇಜಸ್ವಿಯನಂತಾಡಿದನಾ ಕಳಶಯೋನಿ (ಗದಾಯು. ೨-೧೯). ೩. ಒಂದು ಬಗೆಯ ಸಸ್ಯ ; ತುರಂವೆಗಿಡ; ಕಾಸಂಳಿ: "ತುಱುವ ತೇಜಸ್ವಿ ಕಾಸಂಳಿಯುಕ್ಕು" (ಮುಂಗರಾ ೩೯-೨೭). [ ಸಂ. ತೇಜಸ್ವಿನ್ ]

**ತೇಜಸ್ಸು** (ನಾ). ೧. ಹೊಳಪು ; ಪ್ರಕಾಶ ; ಕಾಂತಿ : ವಿಕಲ್ಪಾರ್ಥದಿಂ ಸಕಾರಾಂತದಲ್ಲಿ–ಯಶ, ಯಶಸ್ಸು; ತೇಜ, ತೇಜಸ್ಸು (ಶಮದ. ೮೬ ಪ್ರಯೋ); ತೇಜಸ್ಸಮುಗ್ರು ನೀನು (ವೀಶ್ವಪು. ೩-೧೯-೨೬) ; ಮೂರ್ತಿ ಸಣ್ಣದಾದರೂ ನಿಂತ ಆ ನಿಲುವಿನಲ್ಲಿ ಒಂದು ತೇಜಸ್ಸಿತ್ತು (ಹೊಸಕ್ಷಿ. ೩೩). ೨. ಬೆಂಕಿ ; ಅಗ್ನಿ : ಮತ್ತಂ ತೇಜೋಂಶಮರ್ಧಮುಂ ಮಿಕ್ಕ ನಾಲ್ಕುಂ ಭೂತಂಗಳಷ್ಟಮಾಂಶಂಗಳ್ ನಾಲ್ಕುಂ ಕೂಡಿ ತೇಜಸ್ಸೆನಿಕ್ಕುಂ (ಚಿಕಬಿ. ೨೬); ಪೃಥ್ವಿ ಜಲ ತೇಜಸ್ಸು ವಾಯು ಮನಸ್ಸು ಎಂಬ ಐದು ದ್ರವ್ಯಗಳು ಪುದ್ಗಲದಲ್ಲಿ ಸೇರಿದವು (ಹಿಂದಸಾ. ೮೦) ; ಪ್ರಪಂಚವು ಪೃಥಿವೀ, ಉದಕ, ತೇಜಸ್ಸು ಮತ್ತು ವಾಯುಗಳೆಂಬ ನಾಲ್ಕು ತತ್ವಗಳನ್ನು ಉಳ್ಳದು (ಭಾತತ್ತ್ವ ೧೯೫). ೩. ಪರಾಕ್ರಮ ; ಶೌರ್ಯ: ಕೌರವರಲ್ಲಿ ತೇಜಸ್ಸನ್ನು ತೋರಿಸುವುದಕ್ಕೆ ಕಾಲವೆಂದು ನಾನು ತಿಳಿದಿದ್ದೇನೆ (ವಚಭಾ. ೧೧೯). ೪. ಗೌರವ ; ಮರ್ಯಾದೆ. 'ತೇಜೋಭಂಗ', 'ತೇಜೋವಧೆ' ಪರಾ.

ತೇಜಸ್ಸಿನ ಸ್ವರ = ಪಂಚಭೂತಗಳಲ್ಲಿ ಒಂದಾದ ತೇಜಸ್ಸಿಗೆ ಸಂಬಂಧಿಸಿದ ನಾಳದಿಂದ ಹೊರಡುವ ಸ್ವರ ; ಪಂಚಸ್ವರಸಂಜ್ಞೆಗಳಲ್ಲಿ

ಒಂದಂ: ಒಂದೊಂದು ನಾಳದಲ್ಲಿ ಪೃಥ್ವೀಸ್ವರ ಅಪ್ಪುಸ್ವರ ತೇಜಸ್ಸಿನ ಸ್ವರ ವಾಯುವಿನ ಸ್ವರ ಆಕಾಶಸ್ವರ ಇಂತೀ ಪಂಚಸ್ವರಸಂಜ್ಞೆಯಿಂ ತಾಳಿ (ವಿವೇಕ. ೧೮೭). [ ಸಂ. ತೇಜಸ್ ]

**ತೇಜಿ$_1$** (ನಾ). ಕುದುರೆ; ಅಶ್ವ: ಕಾಯವೆಂಬ ಪಟ್ಟಣದೊಳಗೆ . . . ವಶೀಕರಣವೆಂಬ ಸೇನಬೋವ ಸಂಚಲವೆಂಬ ತೇಜಿ ಅಷ್ಟಮದವೆಂಬ ಆನೆ (ಜನ್ನವ. ೪. ೪೪೪-೪೪೭); ತೇಜಿಯ ತಿರುಹಿದನು ಶಲ್ಯ (ಕುವ್ಯಾ.೪. ೧೩-೪೮); ಬಿಳಿಯ ತೇಜಿಯು ಹೇಮರಥವನು ಸುಳಿಸಿದನು (ಕೌಶಿರಾ. ೨೭-೨); ಊರ್ಗೆ ಮರಳುವ ತೇಜಿಗಳ ಸಾಲ್ಗಳಾ ಮಧ್ಯಮಾರ್ಗದೊಳ್ಪವೆ ತೀವಿ ಸಂದಣಿಸುತಿವೆ (ಶ್ರೀಮಿಥಾ. ೩-೪೦); ಪಲಾಯನ ತೇಜಿಯನ್ನೇರಲ್ಕೆ ತವಕಿಸಿತು ಜೀವಮಾ ಜಾನಕೀಜೀವಿತೇಶ್ವರಗೆ ! (ಶ್ರೀರಾಮಾ. ೨೬೫-೫೨); ಕಪಿಲವರ್ಣದ ಮೂರು ತೇಜಿಗಳನ್ನು ಸಂಪಾದಿಸಿದ್ದಾನೆ (ಪುನರು. ೨೬೩). [ ←ಮರಾ. ತೇಜೀ, ತೇಜಿಕಾ ; ಪಾರ. ಹಿಂ. ತಾಜೀ ]

**ತೇಜಿ$_2$** 'ತೇಜ್ಯ$_2$' ನೋ.

**ತೇಜಿತ** (ಗು). ೧. ಹರಿತ ಮಾಡಿದ ; ಮಸೆದ ; ಮೆರುಗಂ ಕೊಟ್ಟ. (ನಾ). ೨. ಮಸೆದುದು ; ಹರಿತವಾದುದು : "ನಿಶಾತಂ, ನಿಶಿತಂ, ಧೌತಂ, ತೇಜಿತಂ – ಈ ೪ ಮಸೆದುದು" (ಹಲಾಯು. ೭೮-೩೨೦). [ ಸಂ. ]

**ತೇಜಿಮಂದಿ** 'ತೇಜೀಮಂದಿ' ನೋ.

**ತೇಜಿವಾರು** (ನಾ). ಕುದುರೆಗೆ ಕಟ್ಟುವ ಚರ್ಮದ ಬಾರಂ,–ಪಟ್ಟಿ : ಪೊನ್ನ ಪಲ್ಲಣಂ ಪಕ್ಕರೆ ತೇಜಿವಾರು ಕಟಿದಿರ್ಕಡಿಯಾದುವು (ಕಬ್ಬಿಕಾ. ೨೮೦). [ ತೇಜಿ$_1$ + ಬಾರು$_1$ (<ಬಾರ್$_4$) ]

**ತೇಜಿವಿಂಡು** (ನಾ). ಕುದುರೆಗಳ ಸಮೂಹ ; ಅಶ್ವಸೈನ್ಯ : ಇತ್ತರದಲಿ ತಳಿರ್ವಡೆದಿರ್ದ ಮಾಮರ ಮತ್ತೇಭ ಗಿಳಿ ತೇಜಿವಿಂಡು ಮೃತ್ತ ವಿಹಂಗಂ ಚಕೋರ ಕಾಲಾಳ ಮೊತ್ತದಿ ನಡೆದನಳ್ತಿಯಲಿ (ಮೋಹತ. ೬-೧೯). [ ತೇಜಿ$_1$ + ಪಿಂಡು$_2$ ]

**ತೇಜಿಷ್ಠ** (ನಾ). ೧. ಕಾಂತಿಯುಂತನಾದವನಂ ; ತೇಜಸ್ವಿ : ಬಹಳ ಮನ್ನಣೆಯ ತೇಜಿಷ್ಠಗಣವಿರ್ದುದೇವೊಗಳ್ವೆನು (ಸಿದ್ಧರಾ. ೧-೦೮). ೨. ಅಧಿಕನಾದವನಂ ; ಶ್ರೇಷ್ಠ : ಶೌರ್ಯನಿಕುರುಂಬದೋಳ್ ತೇಜಿಷ್ಠನರ್ಜುನಂ (ತುರಂಗ. ೮೦-೭). ೩. ಕೋಪಿಷ್ಠ ; ದಂಡುಕಂವವನಂ: ಮಳಯಕೇತುವೆಂಬ ರಾಜತನೂಜನತಿತೇಜಿಷ್ಠನಾಗಿ ತನ್ನ ಮಂತ್ರಿ ಮುದ್ರಾರಾಕ್ಷಸಂಗೆ ತಥ್ಯಾಭಿಯೋಗವಾದೊಡಂ ಮಿಥ್ಯಾಭಿಯೋಗಮೆಂದು ನಿಶ್ಚೈಸಿ (ಕಂಡತಂ. ೨೪೮-೦೭). [ ಸಂ. ]

**ತೇಜೀಮಂದಿ, ತೇಜಿಮಂದಿ** (ನಾ). ೧. ಮಾರುಕಟ್ಟೆಯಲ್ಲಿ ಸರಕಿನ ಬೆಲೆ ಹೆಚ್ಚು ಅಥವಾ ಕಡಮೆಯಾಗುವುದು ; ಬೆಲೆಗಳ ಏರಿಳಿತ : ವಿಶ್ವಾಸನಿಗೆ ತೇಜೀಮಂದಿಯ ಅರ್ಥವಾಗಲಿಲ್ಲ (ದೀಪಹ. I, ೮೭). ೨. ವಾಣಿಜ್ಯೋದ್ಯಮಗಳಲ್ಲಿ ಶೇರುಗಳನ್ನು ಕೊಂಡು ಮಾರುವುದು. ೩. ತುರಂಘನ್ನು ಕೊಂಡು ಆಡುವ ಒಂದು ಬಗೆಯ ಜೂಜು : ಅವನು ತೇಜೀಮಂದಿಯಲ್ಲಿ ಆಡುತ್ತಿದ್ದನೆಂದು ಹಲವರು ಊಹಿಸಿದ್ದರು. ಆದರೆ ಆ ಆಟಗಾರರಲ್ಲಿ ಇವನು ಅಪರಿಚಿತನಾಗಿದ್ದನು (ರಕ್ತಧ್ವ. ೪೪). **ತೇಜಿಮಂದಿ:** ೧. ಇಂಗ್ರೇಜಿ ಪತ್ರವ್ಯವಹಾರವನ್ನಿಟ್ಟು ತೇಜಿಮಂದಿಯ ತಾರುಗಳನ್ನು ಮಾಡುವುದು (ಮುಂಬಯ್ಯಾ. ೨೭೯). [ ← ಮರಾ. ತೇಜೀಮಂದೀ ]

**ತೇಜೋಜೀವಿ** (ನಾ). ೧. ಕಾಂತಿಯುಳ್ಳವನು. ೨. ಆಧ್ಯಾತ್ಮಿಕ ಕಾಂತಿಯುಳ್ಳವನಂ : ಋಷಿಯೂ ಭಕ್ತನಂತೆ ತೇಜೋಜೀವಿ (ಸಾಹಿವಿ. ೩೪) ; ಇಂದ್ರಿಯಜೀವಿಯದು ಪ್ರಾಣಾನುಭವ ; ಭಾವಜೀವಿಯದು ಕಾವ್ಯಾನುಭವ ; ತೇಜೋಜೀವಿಯದು ಶಿವಾನುಭವ (ಸಾಸಮಾ. ೩೯). [ ಸಂ. ತೇಜೋಜೀವಿನ್ ]

**ತೇಜೋತಿಶಯ** (ನಾ). ಅಧಿಕವಾದ ತೇಜಸ್ಸು,– ಕಾಂತಿ : ಜಾತಪ್ರಿಯನಾತಂ ತನುಜಾತನೆ ತಾನಾಗೆ ತನ್ನ ಕಣ್ಗಂ ಮನಕಂ ಜಾತಕುತೂಹಲನಾ ತೇಜೋತಿಶಯಮನರಸನಚಲದಂತಿರೆ ನೋಟ್ಟಿಂ (ಅಜಿಪು. ೫-೫೩). [ಸಂ.]

**ತೇಜೋದ್ವಯ** (ನಾ). (ಬ್ರಾಹ್ಮತೇಜ ಮತ್ತು ಕ್ಷಾತ್ರತೇಜಗಳೆಂಬ) ಎರಡು ಬಗೆಯ ಶಕ್ತಿ,– ಸಾಮರ್ಥ್ಯ : ನೀವಿರಲು ಕೃಪನಿರಲು ದಳವಾಯ್ ನಾವಹವೆ ನೀವಿಂದು ತೇಜೋದ್ವಯದಲಧಿಕರಲೆ ನಾವು ತಊವಾಯವರು (ಕುವ್ಯಾ.೮. ೦-೨೦). [ ಸಂ. ]

**ತೇಜೋನಿಧಿ** (ನಾ). ೧. ಕಾಂತಿಯ ನಿಧಿ,–ಆಗರ. ೨. ಸಾಮರ್ಥ್ಯದ ನಿಧಿ. ೧, ೨ : ತೇಜೋನಿಧಿ ಕರಹತ ಪರರಾಜಕ ನವಮೋಪದಿಗ್ಗಯಂ . . . ಉಪಮಿತ ತೇಜಸ್ಪತಿ ಖಚರರಾಜಂ (ಶಾಂತಿಪು. ೩-೩೩) ; ವೀರ ವೈರಾಗ್ಯದ ತೇಜೋನಿಧಿ ಅಕ್ಕ (ಕರ್ನಾಕ. ೭೩). [ ಸಂ. ]

**ತೇಜೋನಿಳಯ** (ನಾ). ಕಾಂತಿಗೆ ನೆಲೆಯಾದವನಂ ; ತೇಜಸ್ವಿ : ಅಮರೇಜ್ಯಂ ಕುಜಗೇಹದೊಳ್ ನಿಲೆ . . . ಕ್ಷಮಿ ತೇಜೋನಿಳಯಂ . . . ಗುಣಾಢ್ಯನೆನಿಕುಂ (ಜಾತತಿ. ೧೭-೨೭). [ ಸಂ. ತೇಜೋನಿಲಯ ]

**ತೇಜೋಪಾರ್ಜನೆ** (ನಾ). ಒಡೆತನದ ಭೂಮಿಯಿಂದಾದ ಗಳಿಕೆ : ಈ ಗ್ರಾಮದ ಸ್ಥಳ ಸುಂಕಕೆ ಸಲುವ ವಿನುಂಟಾದ ತೇಜೋಪಾರ್ಜನೆಯನು ನಾನು ಶ್ರೀವಿಟಲದೇವರಿಗೆ ಸರ್ವಮಾ(ಂ)ನ್ಯವಾಗಿ ಸಮರ್ಪಿಸ್ತೆನೂ (ಸೌಇಇ. IX-ii, ೬೦೭-೨; 1545). [ ಸಂ. ತೇಜೋಪಾರ್ಜನ ]

**ತೇಜೋಭಂಗ** (ನಾ). ಗೌರವದ ಹಾನಿ; ಅಭಿಮಾನಕ್ಕೆ ಬೀಳುವ ಪೆಟ್ಟು; ಅವಮಾನ : ಹೊಗೆ ಬಿಡುತ್ತಿರುವ ಜ್ವಾಲಾಮುಖಿಯಂತೆ ವಿಷ್ಣು ತೇಜೋಭಂಗವನ್ನು ಸಹಿಸುತ್ತ ಕುಳಿತ (ಸಮಜೀ. ೭೦೭). [ ಸಂ. ]

**ತೇಜೋಭಿಮಾನ** (ನಾ). ಆತ್ಮಗೌರವದಲ್ಲಿ ವಿಶ್ವಾಸ : ಅನತರ ತೇಜೋಭಿಮಾನವ ನೀನೊಲಿದು ಸಲಹೆಂದು ಮುದದಲಿ ಭಾನುಮತಿ ಮೈಯಿಕ್ಕಿದಳು ಮುರಹರನ ಚರಣದಲಿ (ಕುವ್ಯಾಉ. ೨-೦೭). [ಸಂ. ]

**ತೇಜೋಭಿರಾಮ** (ನಾ). ಪರಾಕ್ರಮದಿಂದ ಶೋಭಿಸುವವನಂ : ಒಲ್ದೀಕ್ಷಿಸಿದಂ ನಿಜಾಗ್ರಭವನಂ ದೈತ್ಯಾರಿ ತೇಜೋಭಿರಾಮನನನುಗ್ರಾರಿವಿರಾಮನಂ (ಜಗವಿ. ೪-೫೮). [ ಸಂ. ]

**ತೇಜೋಮಂಡಳ** (ನಾ). ಬೆಳಕಿನ ಮಂಡಲ ; ಕಾಂತಿಯ ವಲಯ : ಬಳೆವಾ ನೃಪತೇಜೋಮಂಡಳಕ್ಕೆ ಕಣ್ಣಳ್ಕೆ ವಿನಯವಿನಮಿತನವನೀತಳದೊಳಿ ಮೆಯ್ಯಿಕ್ಕಿ (ಶಾಂತಿಪು. ೩-೩೦). [ ಸಂ. ತೇಜೋಮಂಡಲ ]

**ತೇಜೋರಾಶಿ** (ನಾ). ತೇಜಸ್ಸಿನ ರಾಶಿ ; ಬೆಳಕಿನ ಪುಂಜ : ಮತ್ತಮಾ ಪರಮಕ್ಷತ್ರ ತೇಜೋರಾಶಿಗೆ (ಶಾಂತಿಪು. ೯-೦೫೨ ವ); ವಿಪರೀತವಾದ ನಕ್ಷತ್ರ ರಾಶಿ ಒಂದೆಡೆ ನೆಲೆಸಿ ಸುಳಿ ಸುತ್ತುವಂತೆ ಸುತ್ತುತ್ತಿದ್ದರೆ ನಾವು "ತೇಜೋರಾಶಿ" ಎನ್ನುತ್ತೇವೆ (ಆಕಾಶ. ೬೩) ; ವ್ಯಾಧಖಡ್ಗದ ಮಧ್ಯತಾರೆಯನ್ನು ದೂರದರ್ಶನಿಯಿಂದ ನೋಡಿದರೆ ಅದು ಒಂದು ವಿಶಾಲಾಕಾರದ ತೇಜೋರಾಶಿಯಾಗಿ ಹರಡುವುದು ಕಾಣುತ್ತದೆ (ನಕ್ಷತ್ರ. ೫). [ ಸಂ. ]

**ತೇಜೋಲಿಂಗ** (ನಾ). ಈಶ್ವರನ ಐದು ಲಿಂಗಸ್ವರೂಪಗಳಲ್ಲಿ ಒಂದು ; ಅಗ್ನಿಸ್ವರೂಪವಾದ ಲಿಂಗ : ಕಾಂಚೀಪುರದಲ್ಲಿ ಪಾರ್ಥಿವಲಿಂಗ, ಜಂಬೂಕ್ಷೇತ್ರದಲ್ಲಿ ಅಪ್ಪುಲಿಂಗ, ತಿರುವಣ್ಣಾಮಲೆಯಲ್ಲಿ ತೇಜೋಲಿಂಗ, ಕಾಳಹಸ್ತಿಯಲ್ಲಿ ವಾಯುಲಿಂಗ, ಚಿದಂಬರದಲ್ಲಿ ಆಕಾಶಲಿಂಗ – ಹೀಗೆ ವಿಶ್ವದಲ್ಲಿ ಕಾಣುವ ಪಂಚಭೂತಗಳ ರೂಪದಲ್ಲಿಯೂ ಪರಮಾತ್ಮನು ಸಾದಾಖ್ಯಗಳೆನಿಸಿ ವಿರಾಜಿಸುತ್ತಿರುವುದನ್ನು ನಾವು ಸ್ಪಷ್ಟವಾಗಿ ಕಾಣುತ್ತೇವೆ (ಶಕ್ತಿವಿ. ೨೭) ; ತೇಜೋಲಿಂಗವೆಂದರೆ ಪ್ರಕಾಶವೇ ಲಿಂಗವಾಗಿಯೂ . . . ಆಕಾಶಲಿಂಗವೆಂದರೆ ಬಯಲೇ ಲಿಂಗವಾಗಿಯೂ ಹಿಂದೆ ತಿಳಿಸಿದ ಕ್ಷೇತ್ರಗಳಲ್ಲಿ ಈಗಲೂ ಕಾಣುತ್ತಿವೆ (ಶಕ್ತಿವಿ. ೩೦). 'ಜ್ಯೋತಿರ್ಲಿಂಗ' ಪರ್ಯಾ. [ ಸಂ. ]

**ತೇಜೋವಧೆ** (ನಾ). ಅವಮಾನ ; ಮಾನಹಾನಿ : ಆದೊಡಾ ಕರ್ಣಂಗೆ ಸಾರಥಿಯಾದಿರಾದೊಡೆ ಸಮರಮುಖದಲಿ ಪಾದ ತೇಜೋವಧೆಯ ಮಾಡುವುದವನನವಗಡಿಸಿ (**ಕುವ್ಯಾ.ಉ. ೨-೧೭**) ; ದ್ರುಪದನಿಗೆ ತೇಜೋ ವಧೆಯಾಯಿತು (**ವಜಭಾ. ೮೯**) ; ವೀರರಾಜಯ್ಯನಿಗೆ ತೇಜೋವಧೆ ಯಾಯಿತು (**ಒಡಕ. ೦೫**). [ ಸಂ. ತೇಜೋವಧ ]

**ತೇಜೋವೃತ್ತಿ** (ನಾ). ಹೊಳಪುಂಟಾಗುವಿಕೆ ; ಕಾಂತಿಗೂಡುವಿಕೆ : ಖರಶಾಣಕಷಣದಿಂ ಮಣಿಗುರುತೇಜೋವೃತ್ತಿ ನೆಗಟ್ಟುವೋಲಕ್ಕುಂ ನಿಷ್ಠುರ ವಾಕ್ಪ್ರಪಾಣ ಪರಿಸ್ಫುರಿತಂ ಕೃತಿರತ್ನದೊಳ್ ಸಮುಜ್ವಲಭಾವಂ (**ಚಂದ್ರಪು. ೧-೪೪**). [ ಸಂ. ]

**ತೇಟ್** 'ಥೇಟ್' ನೋ.

**ತೇಟಗೀತೆ** (ನಾ). [ಛಂದ] ಒಂದು ಬಗೆಯ ದೇಶೀಯ ಛಂದೋ ರಚನೆ ; ಅಂಶಗಣದಿಂದಾಗುವ ಪದ್ಯ : ತೇಟಗೀತೆ ಒಂದು ಬ್ರಹ್ಮ, ಎರಡು ವಿಷ್ಣು, ಎರಡು ಬ್ರಹ್ಮ-ನಾಲ್ಕು ಸಲ (**ಕೃಪಿಡಿ. ೦೫೩**).

[ ← ತೆಲು. ತೇಟಗೀತಿ ]

**ತೇಟಿಗ** (ನಾ). (ಸಾಣೆ ಹಿಡಿದು) ಹೊಳಪುಗೊಳಿಸುವವನು ; ಒಪ್ಪ ಹಾಕುವವನು : ಸಾಣೆಯ ಮೇಲೆ ರತ್ನಗಳಿಟ್ಟು ಮಸೆದೊಪ್ಪಗಾಣಿಸಿ ಕುಡುವ ತೇಟಿಗರು (**ಮೋಹತ. ೩-೨೭**). [ ತೇಟು (<ಥೇಟ್) + – ಇಗ ]

**ತೇಟು**, 'ಥೇಟ್' ನೋ.

**ತೇಡಿಸು** (ಕ್ರಿ). (ತಿವಿದು) ಹೀಯಾಳಿಸು ; ರೇಗಿಸು ; ಚುಡಾಯಿಸು : ಸುರುಕ್‌ಸುರುವವ ಮುಟ್ಟಿದರು ಧೌತಾಂಶುಕದೊಳಗೆ ತಂಬುಲವ ಕಟ್ಟಿದ ರಕಟು ಪಾಥ್ಯರ ಮೋಚಿಯನು ತೇಡಿಸುತ ಬೆರಳಿನಲಿ (**ಕುವ್ಯಾ.ಆ. ೧೮-೮**). 'ಏಡಿಸು' ಪರಾ. [ < ಥೇಡಿಸು ]

**ತೇದಿ** (ನಾ). (ಸೌರಮಾನದ) ದಿನಾಂಕ ; ತಾರೀಖು : ಪ್ರಜೋತ್ಪತ್ತಿ ಸಂವತ್ಸರದ ತುಲಾಮಾಸ ೨೭ನೇ ತೇದಿ ಷಷ್ಠಿಯೂ ಸೋಮವಾರ (**ಮೈಆರಿ. ೧೯೩೫, ೨೮-೦೨ ; 1751**) ; ಕಾಂಗ್ರೆಸ್ ಅಧಿವೇಶನವು ಜನವರಿ ಇಪ್ಪತ್ತಾರನೇ ತೇದಿಯನ್ನು ಸ್ವಾತಂತ್ರ್ಯದಿನವಾಗಿ ಆಚರಿಸಬೇಕೆಂದು ದೇಶಕ್ಕೆ ಕರೆ ನೀಡಿತ್ತು (**ಆತ್ಮಾರ್ಪ. ೧೩೭**) ; ಅಥರ್ವವೇದ ಪರಿಷ್ಕರಣದಲ್ಲಿ ಮುಹೂರ್ತಗಳು ಚಂದ್ರನ ತೇದಿಗಳು, ಕರಣಗಳು ಮತ್ತು ಯೋಗಗಳು ಇದ್ದು ವಾರದ ದಿವಸಗಳು ತಿಳಿಸಲ್ಪಟ್ಟಿವೆ (**ತತ್ವಪ್ರಾ. ೪೮೩**).

[ದೇ.॥ ತಮಿ. ತೇತಿ; ತುಳು. ತೆಲು. ತೇದಿ ]

**ತೇದಿರೇಖೆ** (ನಾ). ದಿನದ ಗೊತ್ತುಪಾಡಿಗೆ ಸಂಬಂಧಿಸಿದ ಒಂದು ಸಂಕೇತ,-ಗುರುತು ; **P** ಶಾಂತಸಾಗರದಲ್ಲಿರುವುದೆಂದು ಭಾವಿಸ ಲಾಗಿರುವ ಗ್ರಿನಿಚ್ ಪಟ್ಟಣದಿಂದ ೧೮೦ನೆಯ ಡಿಗ್ರಿಯ ಮಧ್ಯಾಹ್ನ ರೇಖೆ ; ಈ ಗುರಿರೇಖೆಯಲ್ಲೂ ಇತರ ಎಲ್ಲಾ ಪ್ರದೇಶಗಳಲ್ಲೂ ಪಂಚಾಂಗದ ದಿನದ ಆರಂಭಾಂತ್ಯಗಳು ಮಧ್ಯರಾತ್ರಿಯಿಂದ ಮಧ್ಯ ರಾತ್ರಿಯವರೆಗೆಂದು ಎಣಿಸಲಾಗಿದೆ. ದಿನದ ಆರಂಭಾಂತ್ಯಗಳ ಸಮಯ ವ್ಯತ್ಯಾಸ ಹೊಂದುವುದರಿಂದ ಈ ರೇಖೆಯ ಪೂರ್ವಕ್ಕೂ ಮತ್ತು ಪಶ್ಚಿಮಕ್ಕೂ ಒಂದು ದಿನದ ಅಂತರವುಂಟಾಗುತ್ತದೆ. ಈ ಸಂಕೇತಕ್ಕೆ ಎಲ್ಲಾ ರಾಷ್ಟ್ರಗಳೂ ಸಮ್ಮತಿಸಿವೆ: "ತೇದಿಗಳಿಗೆ ಸಂಬಂಧ ಪಟ್ಟ ರೇಖೆ: ತೇದಿರೇಖೆ" (Date-Line. ಇಂಕನಿ). [ ತೇದಿ + ರೇಖೆ ]

**ತೇದಿಸು** (ಕ್ರಿ). ಕಾಲಕ್ರಮವನ್ನು ನಿರ್ಧರಿಸು ; ತಾರೀಖನ್ನು ನಿರ್ಣ ಯಿಸು : ಕಳಚುರ್ಯ ಬಿಜ್ಜಳನೇ ಬಸವೇಶ್ವರನ ಬಿಜ್ಜಳನೆಂದು ನಿಷ್ಪಷ್ಟ ವಾಗುವುದರಿಂದ, ಇನ್ನು ಬಸವೇಶ್ವರನ ಜೀವಮಾನದಲ್ಲಿಯ ವಿಶೇಷ ಘಟನೆಗಳನ್ನು ಹೀಗೆ ತೇದಿಸಬಹುದು (**ಮೂರುಉ. ೮೭**).

[ ತೇದಿ + – ಸು$_1$ ]

**ತೇನಂದಾಕಗೇಟಿ** 'ತೆನಂದಾಕಕೇಟಿ' ನೋ.

**ತೇನತೇನ** 'ತೇನತೇನಂ' ನೋ.

**ತೇನತೇನಂ, ತೇನತೇನ** (ಅ). ಹೆಚ್ಚು ಹೆಚ್ಚಾಗಿ ; ಮೇಲಿಂದ ಮೇಲೆ : "ತೇನತೇನಂ = ಮೇಲಿಮೇಲೆ" (**ಶಮದ. ಪರಿ. ೨**) ; ತರವೇಟಿ ಗೊಡಂ ಸುರರೊರ್ವರೊರ್ವರಂ ಕಟಿಯೆ ತೇನತೇನಂ ತಳರ್ದುಂ ಭರದಿಂ ನೀರಂ ಮೊಗೆದುಂ ಪರಿತಂದರ್ ಕನಕಕಳಶವಿಶದೋದಕಮಂ (**ಶಾಂತಿಪು. ೧೦-೩೯**) ; ಇದು ಚಿತ್ರಂ ತೇನತೇನಂ ನೆಗೆದುದು (**ಜಗವಿ. ೮-೮೦**) ; ಅಂತು ಕೈಕೊಳ್ಳದೆ ಬೆಂಬತ್ತಿ ತೇನತೇನಂ ಮಸಗಿ ಸಂದಣಿಸಿ ಬರ್ಪ ಸೊರ್ಕಾನೆಗಳ್ (**ಕಬ್ಬಿಕಾ. ೩೮೮**) ; **ತೇನತೇನ** : "ತೇನತೇನಮೆಂದು ಮೇಲಿಮೇಲೆಂ ಬರ್ಥಂ" (**ಕಶಸಾ. ೭೧-೭೦೯**) ; "ಮೇಲಿಮೇಲೆಂಬರ್ಥಮುಂ ತೇನತೇನ ಮೆನಲ್" (**ಕಬ್ಬಿಕೈ. ೮೯**) ; ನವೀನ ನಾಟಕಶಾಲೆಯಲ್ಲಿ ತೇನತೇನದೊಳು ಲೀಲೆಯ ತೋಜಿ (**ಭರಚ. ೩೮-೫೨**). [ ? ]

**ತೇನು** 'ಜೇನ್$_1$' ನೋ.

**ತೇನೆ** (ನಾ). ಒಂದು ಬಗೆಯ ಪಕ್ಷಿ: ಪಾರಿಜಾತದ ರೆಂಬೆಯೊಂದರ ಮೇಲೆ ಕುಳಿತ ತೇನೆ ಹಾಡೊಂದ ಹಾಡುತ್ತಿತ್ತು (**ಹೇಮುಕೂ. ೫೦**) ; ಆಗಾಗ ತೇನೆ, ಕಾಜಾಣ, ಗಿಳಿ . . . ಮಲೆವಕ್ಕಿಗಳ ಉಲ್ಲೇಖ ಬರುತ್ತಿದೆ (**ಸಾಸಮಾ. ೯೮**). [ ದೇ.॥ ತೆಲು. ತೇನೆಪಿಟ್ಟ ]

**ತೇನೆಹಕ್ಕಿ** (ನಾ). = ತೇನೆ : ತೇನೆಹಕ್ಕಿಗಳ ಹಾಡನ್ನೂ ಕಪ್ಪೆಗಳ ವಟವಟ ಧ್ವನಿಯನ್ನೂ ಕೇಳಿದಾಗ . . . ಮಂಗಳ ಸಂಗೀತದ ನೆನಪಾಯಿತು (**ಪುನರು. ೨೬೭**); ತೇನೆಹಕ್ಕಿಯೊಂದು ವಾಣಿ ಕೇಳುತ್ತಿತ್ತು (**ಅನಿಕೇ. ೪೩-೫**).

[ ತೇನೆ + ಹಕ್ಕಿ$_1$ (<ಪಕ್ಕಿ$_1$) ]

**ತೇಪಾಡು** (ಕ್ರಿ). ತುಂಬಿ ಸೂಸು ; ತುಳುಕು : ದೊಡ್ಡದೊಂದು ಕೆರೆ ... ತುಂಬಿ ತೇಪಾಡುತ್ತಿರುತ್ತದೆ (**ನನ್ನುರು. ೩**). [ ತೇಪು + ಆಡು$_1$ ]

**ತೇಪು, ಚೇಪು$_1$** (ಕ್ರಿ). ೧. ಎರಚು; ಚೆಲ್ಲು: ಆ ಬಟ್ಟಲು ಹಿಡಿದುಕೊಂಡು ತೋಡಿನಲ್ಲಿ ನಿಂತು ತೇಪಿದಿರಿ (**ಬಾಗಿ. ೦೦೯**). ೨. ಉಜ್ಜು ; ತಿಕ್ಕು : ಮುಂದೆ ಅದರ ಮೈಯ ಬಾಗುವಿಕೆಯು ಅತಿ ಶುದ್ಧವಾಗುವಂತೆ ತೇಪು ತ್ತಾರೆ (**ಬಾಲಪ್ರ. III, ೦೯೨೮**). **ಚೇಪು$_1$** : ೧. ವರ್ಷವೆಲ್ಲ ದಂಬೆ ನೀರಿದ್ದರೂ ನೀರಿನ ಹನಿಯನ್ನು ಅದಕ್ಕೆ ಚೇಪಿದವರಿಲ್ಲ. ಮರಗಳೆಲ್ಲ ಬಾಡಿದ್ದುವು (**ಜಿದಾಉ. ೩೬೦**). [ ←ತುಳು. ತೇಪು, ಚೇಪು ]

**ತೇಪೆ$_1$** (ನಾ). ೧. ಹರಿದುದನ್ನು ಕೂಡಿಸುವುದಕ್ಕಾಗಿ ಸೇರಿಸಿ ಹೊಲಿದ ತುಂಡು : ಉಟ್ಟ ಧೋತರ ಹಲವಾರು ತೇಪೆಗಳಿಂದ ಕೂಡಿದ್ದಿತು (**ಜನಜೀ. ೦೨೭**). ೨. ಹರಿದುದನ್ನು ಸರಿಪಡಿಸಿದ ಸ್ಥಿತಿ. ೩. ಬಟ್ಟೆ ಮುಂತಾದುವುಗಳ ಹರಿದ ಭಾಗಕ್ಕೆ ಬೇರೊಂದು ತುಂಡನ್ನು ಹೊಂದಿಸುವುದು. ೪. ಅಲ್ಲಲ್ಲಿ ಬಿಟ್ಟುಹೋದುದು : ಕಲಿತ ಗಿಳಿಯ ಪಾಠ ತಲೆಕೆಳಗಾಗಿ, ಸೊಟ್ಟಾಗಿ, ಚೂರಾಗಿ, ತೇಪೆಯಾಗಿ ಏನೇನೋ ಆಗಿ ಹೋಗಿ ತನ್ನ ಆಕಾರವನ್ನೇ ಕಳೆದುಕೊಂಡಿತ್ತು (**ರಂಗನಾ. ೦೫**).

**ತೇಪೆಹಚ್ಚು** = ೧. ಹರಿದಿರುವುದರ ಮೇಲೆ ಚೂರುಬಟ್ಟೆ ಕೂಡಿಸಿ ಹೊಲಿಗೆ ಹಾಕು : ಒಬ್ಬ ಹೆಂಗಸು, ತನ್ನ ಮತ್ತು ತನ್ನ ಮಕ್ಕಳ ಬಟ್ಟೆ ಗಳಿಗೆ ತೇಪೆಹಚ್ಚುವುದು ನೋಡುವುದಾಗುತ್ತಿರಲಿಲ್ಲ (**ಮಹಾತ್ಮಾ. ೨೦**). ೨. ತಾತ್ಕಾಲಿಕ ದುರಸ್ತಿಮಾಡು : ಅದರ ಹರಕಮುರಕ ಛಿದ್ರಕ್ಕೆ ತೇಪೆ ಹಚ್ಚುವ ಕಾಲವಿನ್ನೂ ಸಂಪೂರ್ಣ ಕೈಮೀರಿ ಹೋಗಿಲ್ಲ (**ಇಪ್ಪಕ. ೪೭೯**). **ತೇಪೆಹಾಕು** = ೧. ತೇಪೆಹಚ್ಚು ೧ : ಅವಳು ಬಹಳ ಒರಟಾದ ತೇಪೆ ಹಾಕಿದ್ದ ಒಂದು ಹಳೆಯ ಲಂಗವನ್ನು ಧರಿಸಿದ್ದಳು (**ಮಲಿನಾ. ೯೪**) ; ಹರುಕಿಗೆ ತೇಪೆಹಾಕುವುದೇ ಹೊರತು ಅದು ಬೇರೆ ಸರಿಯಾಗುವುದಿಲ್ಲ (**ಬಂಕಿಮ. ೧೭೭**). ೨. = ತೇಪೆಹಚ್ಚು ೨ : ಈ ಮುರುಕಲು ಮನೆಗೆ ವೃಥಾ ತೇಪೆಹಾಕಿದರೆ ಏನು ಪ್ರಯೋಜನ (**ಯೋಧಪು. ೨೮**).

[ ದೇ.॥ ಮಲ. ತ್ಯಪ್ಪು = ಹೊಲಿಗೆಕೆಲಸ ]

**ತೇಪೆ₂** (ನಾ). ೧. ವೇಶ್ಯೆ; ಗಣಿಕೆ: ಪತ್ತದರಾರೊ ಧೂರ್ತವಿಟಹೃತ್ಸಂತಾಪೆಯಂ ತೇಪೆಯಂ (ಲೀಲಾವ. ೨-೯೬); ಆತ್ಮಸಾರಸರ್ವಸ್ವಮುಮಂ ನೆಱೆಗೊಂಡು ತೇಪೆ ಬರೆ ಮುಂತ್ತುರು ದಂಡಂ ಕೊಂಡೊಡಲ್ಲದೆಂತುಂ ನಡೆಸಳ್ (ಪುಷ್ಪ. ೧೩-೩೭); ಕಥೆವೇಳ್ವ ತೇಪೆಯೊಡನಾಡಿದ ಪೆಂಡಿತಿಗುಂಟೆ ಸಜ್ಜನಂ (ಮನ್ಮವಿ. ೧೫-೭); ತೇಪೆಯೊಡನಿರ್ದ ಗರುವನ ಪಾಪದ ಫಲವೆಂತೋ (ನೀತಿಸಾ. ೧೦೩೦). ೨. ಚೆಲ್ಲಾಟವಾಡುವವಳು; ಆಟಗಾತಿ; ವಿನೋದಗಾತಿ: ಗಣಿಕಾಸಂದೋಹದೊಳ್ತೇಪೆಯೆ ಪುರುಷಗುಣಶ್ರೀ ಗಳಗ್ರಾಹಿಯಲ್ತೇ (ಲೀಲಾವ. ೨-೯೭). 'ತಾಪು', ತಾಪೆ$_1$' ಪರಾ. [ ? ]

**ತೇಪೆಕೆಲಸ** (ನಾ). ೧. "(ಬೇರೆ ಬೇರೆ ಬಗೆಯ ವಸ್ತ್ರ, ಬೇರೆ ಬೇರೆ ಬಣ್ಣದ ತುಂಡುಗಳನ್ನು ಸೇರಿಸಿ ಮಾಡಿದ) ತೇಪೆಕೆಲಸ" (Patch Work. ಇಂಕನಿ). ೨. ಅರ್ಧಂಬರ್ಧ ಮಾಡುವ ಕೆಲಸ; ಪೂರ್ಣವಾಗಿ ಮಾಡದ ಕೆಲಸ: ಅವನದೆಲ್ಲಾ ತೇಪೆಕೆಲಸವೇ (ರೂಢಿ).

[ ತೇಪೆ$_1$ + ಕೆಲಸ ]

**ತೇಮ** (ನಾ). ನೆನೆದಿರುವಿಕೆ; ಹಸಿ; ಒದ್ದೆ; ತೇವ: ಕಪಿತ್ಥಕುಜದಿಂದ ತೆಂಕದಿಸೆಯೊಳ್ ಕರಂ ಸಾರ್ಕೆವೆತ್ತ ಪುತ್ತು ದೊರೆಕೊಂಡೊಡೆ ... ಪಂಚಪುರುಷ ಪ್ರಮಾಣದೊಳೆ ತೇಟು [ ಮ ] ಮುಕ್ಕುಂ (ಲೋಕೋಪ. ೫-೩೦); "ಉದಕ" (ಲೋಕೋಪ. ಟೀಕ). [ ಸಂ. ]

**ತೇಮುಗೊಳು** (ಕ್ರಿ). ಒದ್ದೆಯಾಗು; ಹಸಿಯಾಗು; ತೇವಗೊಳ್ಳು: ಗಗನದಮೃತದ ಮೊಲೆಯ ಸೀಪುವೆಲೆಗಳ ನಡುವೆ ಮುದದಿ ಹನಿಯಾರಿಸುತ ತೇಮುಗೊಳುವಂತೆ (ಮಲೆದೇ. ೩೪-೮).

[ ತೇಮ + ಕೊಳು (<ಕೊಳ್$_1$) ]

**ತೇಮನ** (ನಾ). ೧. ಒದ್ದೆಮಾಡುವಿಕೆ. ೨. ಒದ್ದೆ; ಹಸಿ; ತೇವ. ೩. ಒಂದು ಬಗೆಯ ವ್ಯಂಜನ,-ಪದಾರ್ಥ: "ತೇಮನಂ, ನಿಷ್ಠಾನಂ-೨ ತೇಮನವೆಂಬ ಮಜ್ಜಿಗೆಪಳಿದ್ಯ, ಹಸೀಮಜ್ಜಿಗೆ, ಪಳಿದ್ಯ, ಮೊಸರುಚಟ್ನಿ" (ಸಿದ್ಧಾಂತಿ. ೨೪೭); "ತೇಮನ=ಪಳದೆ" (ಗಂಗಾಮು. ೧೫೭). [ ಸಂ. ]

**ತೇಮುಳು**, ತಿಗಳಿ, ತೆಗಳಿ$_1$, ತೇಗಳಿ, ತೇವುಳ್, ತೇವುಳಿ, ತೇವ್ಳು (ನಾ). ಕೂದಲು ಉದುರುವ ಒಂದು ಬಗೆಯ ರೋಗ: "ಕೇಶಘ್ನ ಮೆನಲು ತೇಮು[ಪಾಠಾಂ. ಉ]ಳು" (ಮಂಗರಾ. ೧೧೪-೩). **ತಿಗಳಿ**: ಏನು ತಲೆ ಬಣ್ಣಿಸಲಿ ತಿಗಳಿ ಮೇಯುವ ಹೊಲವ? (ನಾದಲೀ. ೫೩-೩); ತಿಗಳಿ ತಿಂದು ಮರುಳುಗಾಡಾದ ಅವಶೇಷಗಳನ್ನೂ ಕುಹಕಿಗಳ ಕಣ್ಣಿಗೆ ಬೀಳದಂತೆ ತನ್ನ ಎದೆಯಲ್ಲಿ ಅಡಗಿಸಿಟ್ಟು ಟೊಪ್ಪಿಗೆ ಒಡೆಯನ ಮಾನ ಕಾಯುತ್ತದೆ (ಗಾಳಿಪ. ೧೩೪). **ತೆಗಳಿ$_1$**: ಇಂದ್ರಲುಪ್ತಕ = ತಲೆಯ ಮೇಲಿನ ಕೂದಲು ಇಲ್ಲದ ಹಾಗಾಗುವ ಬೇನೆ; ತೆಗಳಿ ನೆಕ್ಕೋಣ (ಗಂಗಾಮು. ೩೨). **ತೇಗಳಿ**: ಇಂದ್ರಲುಪ್ತ ಅಥವಾ ತೇಗಳಿ ಅಂದರೆ ತಲೆಯ ಇಲ್ಲವೆ ಮೋರೆಯ ಮೇಲಿನ ಕೂದಲು ಉದುರುವುದು (ಗೃಹವೈ. ೬೭). **ತೇವುಳ್**: ಗುಳ್ಳದ ಪಣ್ಣಂ ಗುರುಗುಂಜೆಯೆಂಬಿವಂ ... ಪೂಸಿದಂದು ತೇವುಳ್ [ಪಾಠಾಂ. ತೆಗುಳಂ] ಕಿಡುಗುಂ (ಲೋಕೋಪ. ೯-೫೫). **ತೇವುಳಿ**: "ಕೇಶಘ್ನಂ, ಇಂದ್ರಲುಪ್ತಂ – ಈ ೨ ತೇವುಳು [= ತೇವುಳಿ]" (ಹಲಾಯು. ೯೯-೪೫೦). **ತೇವುಳು**: ಮೇಲಿನ 'ಹಲಾಯುಧ' ಪ್ರಯೋಗವನ್ನು ನೋಡಿ.

[ ದೇ.॥ ತಮಿ. ತೇಮಲ್ = ಮಚ್ಚೆ, ಹುಳುಕಡ್ಡಿ, ಒಂದು ಬಗೆಯ ಚರ್ಮರೋಗ ]

**ತೇಮಾನ** (ನಾ). ೧. (ಲೋಹಗಳು) ತಿಕ್ಕುವಿಕೆಗೆ ಒಳಪಟ್ಟು ಸವೆಯುವಿಕೆ; ತಿಕ್ಕುವುದರಿಂದಾಗುವ ನಷ್ಟ; ತೇಯುವುದರಿಂದ ಆಗುವ ನಷ್ಟ: ಘರ್ಷಣಕ್ಷಯ; ತೇಮಾನ (Attrition. ಇಂಕನಿ); ಚಿನ್ನದ ಒಡವೆಗೆ ತೇಮಾನ ತೆಗೆದು ನಯ ಮಾಡಿದಂತೆ (ಕನ್ನಸು. II, ೧೩೬). ೨. ನಷ್ಟ; ಹಾನಿ: ಮಾಡಬೇಕಾಗಿದ್ದ ಎಷ್ಟೋ ಕೆಲಸ ಮಾಡದೆ ಹೋಯಿತು ಇಲ್ಲವೆ ತೇಮಾನವಾಯಿತು (ಕಂಸಾಸಾ. ೮೩). ೩. ಯಂತ್ರ ಮೊದಲಾದುವುಗಳ ಸವೆತದಿಂದಾದ ನಷ್ಟ ಎಂದು ವರ್ಷಾಂತ್ಯದಲ್ಲಿ ತೆಗೆದಿಡುವ ಹಣ: ಈ ವರ್ಷದ ಉಳಿಕೆಯ ಕಾಲುಭಾಗದ ಹಣವನ್ನು ತೇಮಾನವೆಂದು ತೆಗೆದಿರಿಸಲಾಯಿತು (ರೂಢಿ).

[ ದೇ.॥ ತಮಿ. ತೇಯ್ಮಾನ; ಮಲ. ತೇಮಾನ; ತುಳು. ತೇಮಾನ, ತೇಮಾನೊ, ತೇಮನ; ತೆಲು. ತೇಮಾನ = ಹಣದ ಮೇಲಿನ ಬಡ್ಡಿ ]

**ತೇಮೋಷ್ಣ** (ಗುಂ). ತೇವವೂ ಉಷ್ಣವೂ ಕೂಡಿರುವ: ಸಮಭಾಜಕವೃತ್ತದ ತೇಮೋಷ್ಣ ವಾಯುಗುಣ (ಭೂವಿಪ. ೧೪೨). [ ತೇಮ + ಉಷ್ಣ ]

**ತೇಯ್** 'ತೇ$_1$' ನೋ.

**ತೇಯಿಸು** (ಕ್ರಿ). ಸವೆಯುವಂತೆ ಮಾಡು: ಈಯಿಸಿದು, ತೇಯಿಸಿದು (ಶಮದ. ೨೫೦ ಪ್ರಯೋ). [ ತೇ$_1$ + – ಇಸು$_3$ ]

**ತೇಯು** 'ತೇ$_1$' ನೋ.

**ತೇಯೆಲೆ** (ನಾ). ಚಹದ ಎಲೆ; ಟೀಸೊಪ್ಪು: ತೇಯೆಲೆ, ಟೀಸೊಪ್ಪು (Tea-leaf. ಇಂಕನಿ); ಹತ್ತಿ, ತೇಯೆಲೆ, ಕರ್ಪೂರ, ದಾಲ್ಚಿನ್ನಿ ... ಈ ಪದಾರ್ಥಗಳಲ್ಲಿ ಚೀಣಾದೇಶದೊಡನೆ ವ್ಯಾಪಾರ ನಡೆಸುತ್ತಿದ್ದರು (ಭಾಗ್ಯಶಿ. ೮). [ ತೇ$_2$ (<ಟೀ) + ಎಲೆ$_1$ ]

**ತೇರ್$_1$** 'ತೇರು$_1$' ನೋ.

**ತೇರ್$_2$**, ತೇರು$_2$(ನಾ). ೧. ಒಂದು ಬಗೆಯ ವಾಹನ,-ಬಂಡಿ; ರಥ; ಸ್ಯಂದನ: ಸಾರಥಿ ಕಣ್ಣಱಿದೊಯ್ಯನೆ ತೇರಂ ಕೊಸೆಗೊಂಡು ಚಕ್ರಿಯುಂ ಬಿನ್ನವಿಕುಂ (ಆದಿಪು. ೧೧-೫೭); ಪೆಱಗೇಕೆ ತೇರನೆಸಪಂ ಧರ್ಮಾನುಜಂಗೇಕೆ ಕಿಂಕರನಾದಂ ... ಆದಿದೇವನೆನಿಸಲ್ ಕೃಷ್ಣಂಗದೆಂತೊಪ್ಪುಗುಂ (ಗದಾಯು. ೩-೪೩); ತೇರ್ಗಳುಮನೋಜೆಯಿಂ ಪಣ್ಣಿದರ್ (ಚಿಬಪು. ೨೩-೨೫). **ತೇರು$_2$**: ೧. ನಿಮಿಷಕೆ ಹೂಡಿದುವು ತೇರುಗಳು (ಕುಮ್ಮಾದ್ರೋ. ೨-೧೪); ದಾರಿದೆಗೆದುವು ಮುಂದೆ ಹೂಡಿದ ತೇರುಗಳು (ತೊರೆರಾ. ೨-೩-೫೦); ಧರೆಯ ತೇರನು ಮಾಡಿ ಅಜನ ಸಾರಥಿ ಮಾಡಿ ಹರಿಯ ಶರವಮಾಡಿ ತ್ರಿಪುರವನು ಅಳಿದಂಗೆ ಸರಿ ಯಾರು (ಸರ್ವಜ್ಞ. ೨೨೦). ೨. ದೇವರ ವಿಗ್ರಹವನ್ನಿಟ್ಟು ಮೆರೆಯಿಸುವ ಅಲಂಕಾರದ ಬಂಡಿ: ಬಾರೊ ಸಾಧನಕೇರಿಗೆ ... ಮಳೆಯು ಎಳೆಯುವ ತೇರಿಗೆ (ಗಂಗಾತ. ೧೨-೩). ೩. ರಥದಲ್ಲಿ ದೇವರ ವಿಗ್ರಹವನ್ನಿಟ್ಟು ಮಾಡುವ ಉತ್ಸವ; ರಥೋತ್ಸವ; ಜಾತ್ರೆ: ರೈತರಿಗೆ ತೇರಿಗಿಂತ ದೊಡ್ಡ ಹಬ್ಬ ಯಾವುದೂ ಇಲ್ಲ (ಹಳ್ಳಿಪಾ. ೧೯); ತೇರು ನುಂಗುವವನಿಗೆ ಪರಿಸೆ ಹಪ್ಪಳ ಸಂಡಿಗೆ (ಗಾದೆ).

**ತೇರ ಕಾಣಿಕೆ** = ರಥೋತ್ಸವ ನಡೆಸಲು ಕೊಡುವ ಕಾಣಿಕೆ: ಯಿಾ ತೇರ ಕಾಣಿಕೆಯ ಹೊನ್ನ×ತೆರಕಣಾಂಬೆಯ ಚಾವಡಿಗೆ ... ಕೊಟ್ಟು (ಎಕ. XIV, ಗುಂಡ್ಲುಪೇ. ೮-೧೪; 1520). **ತೇರ ಬೀದಿ** = ತೇರು ಹರಿದು ಬರುವ ಮಾರ್ಗ; ರಥಬೀದಿ: ಇಳಿಯ ಮೇಲಣ ಸರ್ವಜನರು ನಳಿನಾಕ್ಷ ರಂಗಧಾಮನ ತೇರ ಬೀದಿಯೊಳಳವಟ್ಟು ಮೆಱೆದರರ್ತಿಯಲಿ (ಕಂಸವಿ. ೨೪-೧). **ತೇರಾಗು** = ರಥೋತ್ಸವವಾಗು; ಜಾತ್ರೆಯಾಗು; ಮೆರವಣಿಗೆಯಾಗು: ಸೋಮೆಯದೇವರಿಗೂ ರಾಮಚಂದ್ರದೇವರಿಗೂ ಪರದೇಗಿನ ತೇರಾಗಿ ... ರತೋತ್ಸವ ನಡೆಯಬೇಕೆಂದು ಮಾಡಿಸಿದನು (ಎಕ. X(8), ಮಾಲೂರು. ೧೪೭-೧೪; 1498); ತೇರಾದ ಮೇಲೆ ಜಾತ್ರೆ ನೆರೆಯಿತು (ಗಾದೆ).

[ ದೇ.॥ ತಮಿ. ಮಲ. ತುಳು. ತೇರ್; ತೆಲು. ತೇರು ]

**ತೇರ** 'ಥೇರ' ನೋ.

**ತೇರಂಜಿಸು** (ಕ್ರಿ). ಸಾಣೆ ಹಿಡಿದು ಹೊಳೆಯುವಂತೆ ಮಾಡು,–ಹೊಳಪು ಕೊಡು : ಮಣಿಯುಂ ತೇರಂಜಿಪಂತೊಪ್ಪುವುನೆಸಗುಗೆ ಕೆಯ್ಕೊಂಡು . . . ಅನುಪಮ ಮತ್ಕಾವ್ಯಮುಂ ಸತ್ಕವೀಂದ್ರರ್ (ಪುಷ್ಪಪು. ೧-೩೫).

[ P ಇದು 'ನೀರಂಜಿಸು' ಎಂಬುದರ ಅಪಲಿಖಿತವಿರಬಹುದೇ ? ]

**ತೇರಂಟಿ** 'ತೇರಂಟೆ' ನೋ.

**ತೇರಂಟೆ, ಚೇರಟೆ, ತೇರಂಟಿ** (ನಾ). ಸಾವಿರಕಾಲಿನ ಹುಳು ; ಕಪ್ಪರ ಚಟ್ಟಿ ; ಒನಕೆಮಂಡಿ ; ಬೆಟ್ಟಿಬೆನಕ (ಉಕ) : ಬೆಸದಪರಂತೆ ಮುಯ್ಯುಂ ನೋಡದೆ ತೇರಂಟೆಯಂತೆ ಕುಮತಕ್ಕೆ ಸೂರುಳದೆ . . . ಧರ್ಮದೊಳ್ ನಿಶ್ಶಂಕನುಮಪ್ಪುದು (ಧರ್ಮಾಮೃ. ೪-೪೬). **ಚೇರಟೆ :** ಚಳಿಯು ಹಿಡಿತ ಕ್ಕೊಳಗಾಗಿ ಬೆರಳು ಮುಟ್ಟಿದ ಚೇರಟೆ(ಶತಪದಿ)ಯಂತೆ ಎಂಟುಗೇಣಿನ ಮೈ ಎರಡುಗೇಣಾಗಿ ಜನಸಂದಣಿಗೆ ಸಂದಣಿ ಸುತ್ತಿ ಸುರುಟಿಹೋಗಿತ್ತು (ವೀರಬಂ. ೪೮). **ತೇರಂಟಿ :** ಸ್ಪರ್ಶರಸಗಂಧಂಗಳೆಂಬೀ ಮೂಱಿನಱಿವ ಇಱುವೆ . . . ಇಂದ್ರಗೋಪ ತೇರಂಟಿ (ಪಸಾರ. ೪೯).

[ ←ತುಳು. ತೇರಂಟೆ, ಚೇರಟೆ, ಚೊರಟೆ, ಶೇರಂಟೆ, ಶೇರಟೆ ]

**ತೇರಜೆ** (ನಾ). ಒಂದು ಬಗೆಯ ಪ್ರಾಣಿ : ಶ್ರೀಮದಮುಳ್ಳಂ ಮೊಸಳೆಯಾಗಿಯುಂ ರೂಪಮದಮುಳ್ಳಂ ಕಟ್ಟಿಯಾಗಿಯುಂ ಆಜ್ಞಾಮದಮುಳ್ಳಂ ತೇರಜೆಯಾಗಿಯುಂ ಪುಸಿಯುಳ್ಳಂ ಕರಡಿಯಾಗಿಯುಂ ... ನರಕದೊಳ್ ಪುಟ್ಟಿ (ಧರ್ಮಾಮೃ. ೬-೧೮೮).

[ ?./ಮರಾ. ತರಸ್=ಕತ್ತೆಕಿರುಬ./ಪ್ರಾ. ತರಚ್ಛ=ವ್ಯಾಘ್ರ./ಸಂ. ತರಕ್ಷು ]

**ತೇರಣ₁, ತೇರಣೆ, ತ್ಯಾರಣ** (ನಾ). ೧. ಒಂದು ಬಗೆಯ ಸಸ್ಯ ; ಕುರವಕ ; ಗೋರಂಟಿ : "ತೇರಣಂ ವ್ರಣಿಯಕ್ಕು" (ಮಂಗರಾ. ೩೫-೧೫) ; ತೇರಣದ ಬೀಜವಂ ಮೊಸರ ನೀರಿಂದ ತೇದು (ವಿವೈವಿ. ೩೩) ; ತೇರಣದ ಹೂವನ್ನು (ಕುರವಕ) ಧರಿಸುವುದರಿಂದ–ವ್ಯಾಪ್ತವಾದ ಪರಿಮಳ ಉಂಟಾಗಿ (ಸಕವೈ. ೪೪). 'ಗಿಡಂದೇರಣ' ಪರಾ. **ತೇರಣೆ :** ೨. ಒಂದು ಬಗೆಯ ಮರ : ಬಟೆ, ಅತ್ತಿ, ಅರಳೆ, ತೆಂಗು, ತೇರಣೆ (ಶಿವದ. ೭-೧೬). **ತ್ಯಾರಣ :** ೧. ಕೆಂಪಿನ ತ್ಯಾರಣದ ಹೂವಿನಂತೆ ಶುದ್ಧರಕ್ತದಂತೆಯೂ ಹೊಳಪುವುಳ್ಳ ರತ್ನವು (ಸೌಗಂಧಿ. ೩೬೬-೨೧). ೨. ಹೆದ್ದರಣ ತ್ಯಾರಣ ಗೊರವಿ . . . ಮೊದಲಾದ ಗಗನವಂ ತುಡುಕುವ ವೃಕ್ಷಂಗಳ್ (ಸೌಗಂಧಿ. ೫೪-೫). [ ? ]

**ತೇರಣ₂** (ನಾ). ಗೆದ್ದಲುಹುಳು (?) : ಪೇನಂತೆ ತಲೆಯಂ ಪತ್ತಿ ಪಲ್ಕಡಿವರ್ ತೇರಣದಂತೆ ತಳವುಂ ಪತ್ತಿ ಕತ್ತರಿಸುವರ್ ಕಂಕಣದಂತೆ ಮುಂಗೈಯಂ ಪತ್ತಿ ಕೊಱೆವರ್ (ಧರ್ಮಾಮೃ. ೩-೭೩). [ ? ]

**ತೇರಣೆ** 'ತೇರಣ₁' ನೋ.

**ತೇರಯ್** (ಕ್ರಿ). ೧. ಆಕ್ರಮಣ ಮಾಡು ; ಮೇಲೆ ಬೀಳು: ಕಡುಪಿಂದಾ ಕಾಕನಂ ಕುಪ್ಪಳಿಸಿದೆಡೆಯಿಂದಾ ಪೂತನಿ ರಕ್ತಮುಂ ಪೀರ್ದೆಡೆಯಾ ತೇರಯ್ವ ತೇರಂ ಪರಿಪಿದೆಡೆಯಿಂದಂ (ಅರ್ಧನೇ. ೮-೨೩). ೨. ತವಕಪಡು; ತವಕಿಸು: ಆಡಿಸುವ ತೋಳ್ ತೇರಯ್ವುಬಾಯ್ ತಪ್ಪಿ ಬರ್ಪರೆವಾತುಣ್ಮುವ ಕಿತ್ತುಸಿರ್ (ವರ್ಧಪು. ೪-೬೦). [ ? ]

**ತೇರಯಿಸು, ತೇರಯಿಸು, ತೇರೈಸು** (ಕ್ರಿ). ೧. ಆಕ್ರಮಿಸು ; ಮೇಲೇರಿ ಹೋಗು : ಅಂತು ರಕ್ಕಸವಡೆ ತನ್ನ ಪಡೆಯೆಲ್ಲಮಂ ತೆರಳ್ಚಿ ತೇರಯಿಸಿ ನುಂಗಿದೊಡೆ (ಪಂಪಭಾ. ೧೨-೮ ವ). ೨. ಅಧಿಕವಾಗಿರು ; ಹೆಚ್ಚಾಗು ; ಮೀರು : ಬೆಳ್ಮುಗಿಲ್ದುಱುಗಲಂ ತರತರದಿಂ ತೇರಯಿಸುವ ತೆರೆಗಳಿಂ (ದಶಕು. ೪-೩೫ ವ). ೩. ಆತುರಪಡು ; ತವಕಿಸು ; ಲವಲವಿಸು : ಒಡನುಡಿಯಲ್ಕೆ ತೇರಯಿಸೆ ನಾಲಗೆ (ಜಗವಿ. ೧೭-೧೨೦) ; ತೇರಯಿಸ [ಪಾಠಾಂ. ತೇರೈಸ]ದಿರ್ದನವನತಿಸತ್ವದಿಂದೆ (ಜೈಮಿಭಾ. ೮-೨೮). **ತೇರಯಿಸು :** ೧. ತುಂಬಿಗಳುಮೊಡನೊಡನೆ ತೇರಯಿಸುತಿರೆ ಪಾಡಿ (ಪುಷ್ಪಪು. ೨-೪೪) ; ದುರ್ಧರ ಗ್ರೀಷ್ಮರಾಜನ ನೆಗಳ್ದ ಚತುರಂಗಮೆನಲು ರವಿಯು ಕಡುಗಾಯ್ಪುಗಳ್ತೇರಯಿಸ[ಪಾಠಾಂ. ರೈಸ]ಲೊತ್ತರಿಸಿ ಕವಿದವು (ಜೈಮಿಭಾ. ೧೫-೪) ; ಥಟ್ಟುವರಿಯಿಪ ತೇರಯ್ಪ [ಪಾಠಾಂ. ತೇರೈಪ] ಬೋಳೈಪ ಬೋಹರದೊಳ್ಸಱಿಗೆಯ್ವ ಚೌಪಟದೇಱಾಟದೊಳ್ (ರಾಜಶೇ.೬-೧೧ ವ). **ತೇರೈಸು :** ೧. ವೃಕೋದರಂ ಚತುರ್ದಶಭುವನಂಗಳೆಲ್ಲಮಂ ತೆರಳ್ಚಿ ತೇರೈಸಿ ನುಂಗುವಂತು ಮುಸಕದಿಂ ಭಗದತ್ತನಂ ಮಾರ್ಕೊಂಡು (ಪಂಪಭಾ. ೧೧-೮ ವ) ; ಸುರವನುಱುಬೆಗೆ ಸೀವರಿಸೆ ಮೋಹರಿಸಿ ಮುರಿದೆಱಗುವ ಮಹೀಧರದುರವಣೆಯು ತೆಱನಂತೆ ತೇರೈ[ಪಾಠಾಂ. ರಯಿ]ಸಿದವು ಗಗನದಲಿ (ತೊರರಾ. ೪-೪-೧೭). ೨. ಬುದ್ಧಿಯೊಳಗಂ ಸಾರೈಸಿ ಅಹಂಕಾರಮುಂ ತೇರೈಸಿ ಚಿತ್ತದೊಳು ಪೂರೈಸಿ (ಬಸರ. ೪-೬೧) ; ನೀರಾಟಕ್ಕೆಳಸಿದೈರಾಪತವಾರಣ ಶರೀರ ಗೌರವರ್ಣಂ ತೇರೈಸಿದಂತೆಯುಂ . . . ನೈರ್ಮಲ್ಯದಿಂ ನೂರ್ಮಡಿಸಿರ್ದ ಅಮರನದಿಯಂ ಕಂಡು (ದಶಕು. ೯-೯ ವ) ; ಅಂಧಕಾರವನು ತೆಮರಿ ತೇರೈಸುತಿಹ ತೇಜದೇಳ್ಗೆ (ಸೌಂದಪು. ೧-೨೬) ; ನೀಡಿಡುವಾ ಮೊಗ ನಿಡುಸುಯ್ವ ನಾಸಿಕ ತೇರೈಸುವಾ ತಳ್ಳಂಕ (ಶ್ರೀಪಾಲ. ೪-೯೫). ೩. ದುಶ್ಶಾಸನೋರಸ್ಥಳೋಷ್ಣಸೃತಾಸೃಗ್ಜಲಪಾನಮಂ ಬಯಸಿ ಬಾಯ್ ತೇರೈಸೆ ಸೈತಿರ್ಪನೇ (ಪಂಪಭಾ. ೭-೫೮); ಹಬ್ಬಿ ಹಾರೈಸಿ ತೇರೈಸಿ . . . ಪರಿಪರಿದಾಡಿ (ಬಸರ. ೯-೨೭) ; ಚುಂಬನಕೆ ಬಾಯ್ತೇರೈಸಿಯಾಲಿಂಗನಕ್ಕೆ ನಿಜೋದ್ಯದ್ಭುಜ ಶಾಖೆಗಳ್ ನಿಮಿರೆ ಮೇಲ್ವಾಯ್ದಂ ಪಟಾಲೀಖದಂಗನೆಗಾಗಳ್ (ಕುಸುಮಾ.೯-೭೦) ತನುರೋಮೋದ್ಗಮ ಘರ್ಮದೊಳ್ವುದಿಯೆ ಬಾಯ್ ತೇರೈಸೆ (ಶಾಂತೀಶ್ವ. ೫-೩೩). ೪. ಗುಂಪಾಗು; ಒಟ್ಟಾಗು: ಮೇಲೆ ಮೇಲುಬ್ಬೇಳ್ವ ರಿಪುಶರಜಾಲಧಾರಾಧೂಮವಹ್ನಿಜ್ವಾಲೆಗುಱಿ ತೇರೈಸಿ ಕೋರೈಸಿತು ಕುರುಸ್ತೋಮ (ಕುವ್ಯಾಕ. ೧೯-೧) ; ತೇರೈಸಿ ಮಾಗಧ ಹಿಮವಂತರೊಳಗಾದ ಭೂರಿವ್ಯಂತರರಿಗೆ ಕೂಡೆ ಚಾರು ರತ್ನಾಂಬರಗಳನಿತ್ತು ನೊಲ್ದು (ಭರಜ. ೭೩-೨೦೬);ತೇರೈಸಿ ಬರ್ಪ ತುಂಬಿಗಳ ಮೈಗಪ್ಪು ಮುಂಗಾರ ಮುಗಿಲ್ (ಚಬಪು. ೪೫-೨೨). ೫. ನಿಧಾನವಾಗು; ಮಂದವಾಗು: ಒಳಗೆ ಗರ್ಭಂ ಬೆಳೆಯೆ ಪೊಱಗೆ ತನು ನಳನಳಿಸಿ ತಿಳಿದು ಮೆಲ್ನಡೆ ಜಘನಭಾರದಿಂ ತೇರೈಸಿತ್ರಿವಳಿ ಮೈಗರೆಯೆ (ಕಲ್ಲರ. ೨೨೯-೪). [ ತೇರಯ್ + – ಇಸು₃ ]

**ತೇರಯ್ಕೆ** (ನಾ). ೧. ತವಕ ; ತಂಡಿತ ; ಲವಲವಿಕೆ : ಅಚ್ಚವಣ್ಣೇಱಿದ ದಾಳಿಂಬಂ ತದುದ್ಯಾನದೊಳೊದವಿಸುಗುಂ ಬಾಯ್ಗೆ ತೇರಯ್ಕೆಯುರ್ವಂ (ಚಂದ್ರಪು. ೧೧-೫೪). ೨. ಕಾಳಗದ ಒಂದು ಪಟ್ಟು ; ಯುದ್ಧದ ಒಂದು ರೀತಿ : ತೆಱಪು ಪಸರವಾರೈಕೆ ತೇರಯ್ಕೆ ಕೂರ್ಪಂ ಕಿತವಾಕಾರಂ ತಡಂ ಕಿತ್ತಡವೆನಿಪ ಭೃಗು ಪ್ರೌಢಿಯಿಂ ಕೊಲ್ವನುಗ್ರಾಹಿತನಂ (ಎಕ. VIII, ಸೊರಬ. ೧೪೦-೩೪ ; 1108). [ ತೇರಯ್ + – ಕೆ ]

**ತೇರಯಿಸು** 'ತೇರಯಿಂಸು' ನೋ.

**ತೇರವಾದ** (ನಾ). [ಬೌದ್ಧ] ಮಹಾತ್ಮರ ಉಪದೇಶ ; ಸ್ಥವಿರವಾದ : ತೇರವಾದವೆಂದರೆ ಮಹಾತ್ಮರ ಉಪದೇಶವೆಂದರ್ಥ (ಭಾತತ್ತ್ವ. ೧೯೦).

[ ತೇರ (< ಥೇರ) + ವಾದ₃./ಪಾಲಿ. ಥೇರವಾದ ]

**ತೇರಸ, ತೆರಸ** (ನಾ). ೧. ಒಂದು ಸಂಖ್ಯಾವಾಚಕ ; ಹದಿಮೂರು : "ತೇರಸ – ತ್ರಯೋದಶ" (ತದ್ಭಕೋ. ೧೮); ಕರೆಯುಬಹೆನಾ ನಿನ್ನನಾಯುವಸರಕೆ ತೇರಸವೀರಷೋಡಶವರ ಗಣಾರ್ಚನೆಗೆ (ಬಸಪು. ೧೪-೧೨) ; ದಶಗಣ ತೇರಸ ಷೋಡಶ ದ್ವಾದಶ ಮಿಸುಪೇಕಾದಶ ರುದ್ರರುಗಳು . . . ಬಂದರು (ಬಸಪ. ೧-೨೩). ೨. = ತೇರಸಿ : ಮಾಘಶುದ್ಧ ತೇರಸದೊಳ್ ಗುರುಯೋಗದೊಳ್ ಪುಟ್ಟಿ (ಚಾವುಂಪು. ೪೪-೧೪) ; ಎಸೆವಾಶ್ವಯುಜದ ತೇರಸದಿಂ ತೊಟ್ಟಯ್ದುದಿವಸ (ಮು)ಂ ಮಾಱಿ ಕಱಿಯಾಲ್ (ಜಟ್ಟಿಮು. ೮-೧೭೪). **ತೆರಸ :** ೨. ಫಾಲ್ಗುಣ ಶುದ್ಧ ತೆರಸ[ಮುಂ] ಆದಿತ್ಯವಾರ ಮುಮಾದನ್ದು (ಸೌಇಇ. XX-i, ೩೧-೨ ; 10ನೆಯ ಶತ).

**ತೇರಸರ್** = ಪ್ರಸಿದ್ಧರಾದ ಹದಿಮೂರು ಜನ ಶಿವಶರಣರು ; P (ಪಾಲ್ಕುರಿಕೆ ಸೋಮನಾಥನು ಹೇಳಿರುವಂತೆ) ಕಲ್ಯಾಣಪಟ್ಟಣದಲ್ಲಿ ಪ್ರಸಿದ್ಧರಾಗಿದ್ದ ಬಸವರಾಜ, ಸಂಗಯ್ಯ, ಬೊಮ್ಮಿಸೆಟ್ಟಿ, ಸಾತ್ವಿಕ ಸಂಗಯ್ಯ, ಮೋಳಿಗೆ ನಿಜಸಂಗವ್ವೆ, ದೇವರಸ, ಕನ್ನಮರಸಿ, ಪಡಿಹಾರಿ ಬಸವಯ್ಯ, ಹೂವಿನ ಬಾಚಿದೇವಯ್ಯ, ದೇವಯ್ಯ, ಓಹಿಲದೇವಯ್ಯ, ಬೊಪ್ಪಿದೇವ ಮತ್ತು ಕಾಮಲದೇವಿ ಎಂಬ ಹದಿಮೂರು ಮಂದಿ ಶರಣರು: ನರರು ಕೇಳಲು ಕೂಡೆ ಸಾಱಿಸಿ ಭರದೊಳವರೊಳು ತೇರಸರುಮೆನೆ ಬಿರಿ[ರು]ದೆಸೆವ ಪದಿಮೂವರುಂ (ಬಸಪು. ೩೦-೭೦) ; ಹರುಷದಿಂ ಪ್ರಮಥರುಂ ರುದ್ರರುಂ ತೇರಸರನುರುದಶ ಗಣಂಗಳಂ . . . ಭಕ್ತಿಯಿಂದೊರೆದು (ಲಶಿಚಂ. ೩೪-೩೫); ಕಾಣುತೊಲವಿಂ ಸಂತವಿಸಿ ತೇರಸಗೂಡಿ . . . ಲಿಂಗವುಂ ಪೂಜಿಗೈದು (ಸಿದ್ಧೇಪು. ೭-೭೦).

[ < ಪ್ರಾ. ತೇರಸ./ಸಂ. ತ್ರಯೋದಶ ]

**ತೇರಸಿ, ತಿರಸೆ, ತೆರಸಿ, ತೇರಸೆ** (ನಾ). ಚಾಂದ್ರಮಾನಮಾಸದ ಪಕ್ಷಗಳ ಹದಿಮೂರನೆಯ ದಿನ,– ತ್ರಯೋದಶಿ: "ತೇರಸಿಯೆ ತ್ರಯೋದಶಿ" (ಚತುನಿ. ೬೪); ವೈಶಾಖಶುದ್ಧ ತೇರಸಿಯ ಬೆಳಗಪ್ಪ ಜಾಮದೊಳು (ಜಾಪುಂಪು. ೪೪-೯); ಕದನಂ ಮಾರ್ಗಶಿರದ ಶುದ್ಧದಿನಂ ತೇರಸಿ . . . ಅಮಾವಾಸೆಯ ದಿವಸದೊಳಂ ನಿರ್ಮೂಲಮಾಯ್ತು ಕೌರವವಂಶಂ (ಗದಾಯು. ೯-೩೭). **ತಿರಸೆ:** "ತ್ರಯೋದಶಿ–ತಿರಸೆ" (ಹೊಸುಗ. ೧೧೯). **ತೆರಸಿ** : "ತೆರಸಿ ತ್ರಯೋದಶಿ" (ಕವಿಕಂ. ೨೭೦). **ತೇರಸೆ:** ಸಿತಪಂಚಮಿ ಸಪ್ತಮಿ ದಶಮಿ ತೇರಸೆ ಬಿದಿಗೆ ತದಿಗೆಯೇಕಾದಶಿಯೆಂಬತಿಶಯದಿನಂಗಳೊಳ್ . . . ಯಾತ್ರೆಗೆ ಶುಭದಂ (ಲೋಕೋಪ. ೨-೪೫) ; ತ್ರಯೋದಶಿ, ತೇರಸೆ (ಶಬ್ದಾನು. ೧೬೦ ಪ್ರಯೋ).

[ <ಪ್ರಾ. ತೇರಸೀ./ಸಂ. ತ್ರಯೋದಶೀ ]

**ತೇರಸೆ** 'ತೇರಸಿ' ನೋ.

**ತೇರಹಪಂಥ** (ನಾ). [ಜೈನ] ಒಂದು ಪಂಥದ ಹೆಸರು : ಹದಿಮೂರು ತರದ ಚಾರಿತ್ರವುಳ್ಳವರಾದುದರಿಂದ ತೇರಹಪಂಥದವರೆಂದೂ ಹದಿಮೂರು ಜನರು ಕೂಡಿ ಈ ಪಂಥದ ಸ್ಥಾಪನೆ ಮಾಡಿದುದರಿಂದ ಇದಕ್ಕೆ ಈ ಹೆಸರು ಬಂದಿತೆಂದೂ ಕೆಲವರು ಹೇಳುತ್ತಾರೆ (ಜೈನಪ. ೭೬).

[ ತೇರಹ$_0$ (P ←ಪ್ರಾ. ತೇರಹ) + ಪಂಥ$_2$ (<ಪಂತ$_3$) ]

**ತೇರಾಳ್** (ನಾ). ಬಂಡಿಯನ್ನು ನಡೆಸುವವನು ; ರಥಿಕ ; ಸಾರಥಿ : ತೇರಾಳ್ಗಳ ಚಪ್ಪರಣೆಯೊಳ್ . . . ಕಿಱಿಗಿಱಿವ ಪೊಂದೇರೋರಣಮಿಂ ಬಿಡಿದಿರೆ (ರಾಮಾಶ್ವ. ೩೦-೩) ; ಕುದುರೆಯಾಳಕ್ಕೆ, ತೇರಾಳಕ್ಕೆ, ಕಾಲಾಳಕ್ಕೆ, ಮೇಹಾನೆಯಾಳಕ್ಕೆ, ನಿಮ್ಮೊಳೋರೊರ್ವನುಂ ಕಾಳೆಗಂಗುಡುವನು (ಶ್ರೀರಾಮಾ. ೭೩೦-೭೦). [ ತೇರ್$_2$ + ಆಳ್$_3$ ]

**ತೇರಿಸು** (ಕ್ರಿ). ಮುಂಟ್ಟಿಸು ; ತಲುಪಿಸು : ಕನ್ನಡ ಸಂಸ್ಕೃತ ವಾದವನ್ನು ಆಂಡಯ್ಯನು ಒಂದು ಘಟ್ಟಕ್ಕೆ ತೇರಿಸಿದನೆಂದು ಹೇಳಬಹುದು (ಕನ್ನನು. I, ೧೫೨). [ ತೇರು$_1$ + – ಇಸು$_3$ ]

**ತೇರೀಜು** (ನಾ). ೧. ಒಟ್ಟು ಮೊತ್ತ: ಕಲಿತು ದಿನದಿನದಿಯತಿ ಚಮತ್ಕಾರದಿಂ ಗುಣಿತಗಳ ಭಾಗಿಸಿ ಲೆಪ್ಪ ತೇರೀಜುಬೇರೀಜುಮಂ (ನವಮೋ. ೧೫-೬೨). ೨. ಕೂಡಂವಿಕೆ ; ಸಂಕಲನ.

[ ← ಮರಾ. ತೇರೀಜ್ ; ಹಿಂ. ತೇರಿಜ್ ]

**ತೇರು$_1$, ತೇರ್$_1$** (ಕ್ರಿ). ೧. ಬಲವಾಗು ; ಅಭಿವೃದ್ಧಿಹೊಂದು ; ಅಧಿಕವಾಗು : ಕುಮರಂ ನವಯೌವನದೊದವಿಂಗೆ ನೆಟ್ಟನೆ ಪೆರ್ಚಿಯೆಂತಿರೆ ತುಂಬಿ ತೇರಿದೊಂದು ಮೆಯ್ಸಿರಿಯಿಂ ಸೊಗಯಿಸಿದನಪ್ಪುದುಂ (ರಾಮಾಶ್ವ. ೧೦೮-೮) ; ವಯಸ್ಸೇರಿದಂತೆ ಜೀವದಾಸೆಯೂ ಲೋಭವೂ ತೇರಿ ಬೆಳೆಯುತ್ತಿರುವುವು (ಮಂತ್ರಶ. ೬೨-೧೬) ; ಅವುಗಳ ವರ್ಣನೆಯನ್ನು ನನಗಿಂತ ಬರವಣಿಗೆಯಲ್ಲಿ ತೇರಿದವರಿಗೆ ಬಿಟ್ಟುಕೊಟ್ಟದ್ದೇನೆ (ಭಾರವೀ. ೧೫೨). ೨. ಉತ್ತೀರ್ಣವಾಗು : ಶಿಕ್ಷಕನಾಗಬೇಕೆಂಬ ಹುರುಪಿನಿಂದ ಬಿ. ಟಿ. ಪರೀಕ್ಷೆಯಲ್ಲಿ ತೇರಿ . . . ಸಂಸಾರವೂ ಕಾವ್ಯಸಂಸಾರವೂ ಹೊಸ ಹುಮ್ಮಸ್ಸಿನಿಂದ ಮೊದಲಾದುವು (ಕಂನಾಸಾ. ೪೬). ೩. ತಿಳಿಯಾಗು ; ಸ್ವಚ್ಛವಾಗು : ನೀರು ತೇರಿತು (ರೂಢಿ). ೪. ನಿರ್ಣಯವಾಗು ; ತೀರು ; ಫಲಿತಾಂಶಕ್ಕೆ ಬರು : ಲೆಕ್ಕ ಇಷ್ಟಕ್ಕೆ ತೇರಿತು (ರೂಢಿ). ೫. ಸೇರು ; ತಲುಪು. 'ತೇರಿಸು' ಪರಾ. ತೇರ್$_1$ : ೨. 'ತೇರ್ಗಡೆ' ಪರಾ.

[ ದೇ.॥ ತಮಿ. ತೇಱು, ತೇಱ್ಱು ; ಮಲ. ತೇಱು; ತೆಲು. ತೇರು, ತೇಱು ]

**ತೇರು$_2$** 'ತೇರ್$_2$' ನೋ.

**ತೇರು$_3$** (ನಾ). ಒಂದು ಬಗೆಯ ಔಷಧಿ ಸಸ್ಯ,– ಮರೂಲಿಕೆ: "ಕರ್ಕಶಚ್ಛದಃ– ಸುರಸುರಲಿಕೆ, ತೇರು, ಮಿಟ್ಟಲಿ, ಸೌತೆ" (ಒಷಧಿ. ೨೬). [ ? ]

**ತೇರುಕಟ್ಟು** (ಕ್ರಿ). ೧. ರಥೋತ್ಸವಕ್ಕಾಗಿ ರಥವನ್ನು ಸಿದ್ಧಮಾಡು,– ಅಲಂಕರಿಸು : ರಥಸಪ್ತಮಿಗಾಗಿ ದೇವಾಲಯದಲ್ಲಿ ತೇರುಕಟ್ಟುತ್ತಿದ್ದಾರೆ (ರೂಢಿ). ೨. ಶವವನ್ನು ಸಾಗಿಸುವುದಕ್ಕಾಗಿ ವಿಮಾನವನ್ನು ರಚಿಸು ; ಚಟ್ಟ ಕಟ್ಟು : ಆ ತಮ್ಮನ ಹೆಣಾ ಕೆಡವಿ, ತೇರುಕಟ್ಟಿ ಎಳ್ಯೋ ಮಟ ನನಗಂತೂ ಸಮಾಧಾನ ಇಲ್ಲ (ಹೊಸಂಸಾ. ೨).

[ ತೇರು$_2$ (<ತೇರ್$_2$) + ಕಟ್ಟು$_1$ ]

**ತೇರುತೆಕ್ಕೆ** (ನಾ). ಕೈವಾಡ ; ಕುತಂತ್ರ : ತಂತಮ್ಮನಿಯರಂ ನೆನೆದು ಪುರಜನಂ ಮಂತಣಂಗೊಂಡು ಮಱುಗುತ್ತಿರಲ್ಕಾಣುತಾ ಕಂತು ಮಾಡುವ ತೇರುತೆಕ್ಕೆಯಿಂದಾ . . . ಕೆಟ್ಟೆವಿನ್ನೇವೆವೆನುತಿರ್ದರು (ಸಮ್ಯಕೌ. ೩-೧೯) ; ಇದು ನಿಮ್ಮ ಮಗಳು ಕಮಲೆಯ ತೇರುತೆಕ್ಕೆಯಿಂತಿದ ನೀವು ಬಲ್ಲಿರೋ (ಸಮ್ಯಕೌ. ೧೦-೨೩). [ ? ]

**ತೇರುಬೀದಿ** (ನಾ). ದೇವರ ವಿಗ್ರಹವನ್ನಿಟ್ಟ ರಥವನ್ನು (ಮಾಮೂಲಾಗಿ) ಎಳೆಯುವ ದೊಡ್ಡರಸ್ತೆ ; ರಥಬೀದಿ : ನಮ್ಮೂರಿನಲ್ಲಿ ತೇರುಬೀದಿಯೊಂದು ಬಿಟ್ಟರೆ ಉಳಿದವುಗಳೆಲ್ಲಾ ಚಿಕ್ಕ ರಸ್ತೆಗಳೇ (ರೂಢಿ).

[ ತೇರು$_2$ (< ತೇರ್$_2$) + ಬೀದಿ ]

**ತೇರುಹಬ್ಬ** (ನಾ). ರಥೋತ್ಸವ ; ಜಾತ್ರೆ : ಕೆಸರೂರಿನಲ್ಲಿ ತೇರುಹಬ್ಬದ ಸಂದರ್ಭದಲ್ಲಿ ಇನ್ನೊಂದು ವಿಶೇಷಸಮಾರಂಭ ನಡೆಯಲು ಏರ್ಪಾಡಾಗಿದ್ದಿತು (ಬೆಳುಮ. ೧೮೬). [ ತೇರು$_2$ (< ತೇರ್$_2$) + ಹಬ್ಬ (<ಪರ್ಬ) ]

**ತೇರೆಸಗು** (ಕ್ರಿ). ರಥವನ್ನು ನಡೆಸು; ಸಾರಥಿಯಾಗು: ವಿಳಿರ್ಪ ಪೊಸದಳಿರ ಪಱಿಯೆಗೆ ಗಿಳಿಗಳೆ ಪೂಡಿರ್ದ ಕುದುರೆ ತೆಂಗಾಳಿಯೆ ಕಣ್ಗೊಳಿ ತೇರೆಸಗುವನೆನೆ ಬಂದೆಳೆಮಾವಿನ ತೇರನೇಱಿ ನಡೆದಂ ಕಾಮಂ (ಕಬ್ಬಿಗಕಾ. ೨೦೯).

[ ತೇರ್$_2$ + ಎಸಗು$_1$ ]

**ತೇರೆಳೆ** (ಕ್ರಿ). ದೇವರ ವಿಗ್ರಹವನ್ನು ಕೂರಿಸಿದ ರಥವನ್ನು ಎಳೆ: ಜಾತ್ರೆಯಲ್ಲಿ ತೇರೆಳೆಯುವಾಗ ಉಂಟಾದ ನೂಕುನುಗ್ಗಲಿನಿಂದ ಜನ ಕಂಗೆಟ್ಟರು (ರೂಢಿ). [ ತೇರು$_2$ (< ತೇರ್$_2$) + ಎಳೆ$_1$ ]

**ತೇರೈಸು** 'ತೇರಯಿಸು' ನೋ.

**ತೇರೊಡ್ಡು** (ನಾ). ರಥಗಳ ಗುಂಪು ; ರಥಗಳ ಸೈನ್ಯ : ತೇರೊಡ್ಡು ಗಾಳಿಗೊಡ್ಡಿದ ನೀರದದೊಡ್ಡಿನವೊಲಾಗೆ (ಪಂರಾಮಾ. ೧೩-೭೩) ; ತೆಱಪು ವಡೆದಿದಿರೊಡ್ಡಿನ ತೇರೊಡ್ಡುಗಳ ಶೂರಸಾರಥಿ ಪ್ರೇರಣದಿನೋರೊಂದು ಪತ್ತೆಸಾರ್ಚಿದಾಗಳ್ (ಚಂದ್ರಪು. ೧೦-೭೪ ವ).

[ ತೇರ್$_2$ + ಒಡ್ಡು$_2$ ]

**ತೇರೋಟ** (ನಾ). ೧. ರಥದ ಓಟ. ೨. (ಆಲಂ) ರಥವನ್ನು ವೇಗವಾಗಿ ಓಡಿಸುವ ಕೌಶಲ್ಯ : ಬಿಲ್ಲ ಜಾಣನ್ ಈವಿಮಾಯಸ್ . . . ತೇರೋಟದ ಸೊಸ್ಥಾನೀಸ್ (ಪ್ಲಾರಸಿ. ೩-೭೦). [ ತೇರ್$_2$ + ಓಟ ]

**ತೇರ್ಗಡೆ** (ನಾ). ಜಯ ; ಗೆಲುವು ; ಉತ್ತೀರ್ಣತೆ ; ಸಫಲತೆ : ತೇರ್ಗಡೆಯಾಯಿತು ನನಗೆಂಬ ಗೆಲುವಿನ ಸುದ್ದಿಯು ಬರುವಷ್ಟರೊಳಗೆ

ಸ್ವರ್ಗಸ್ಥರಾದರು ತಂದೆ (ಇಂಜಾಪ. ೨೧-೯೫) ; ವರ್ಷದಲ್ಲಿ ಕೆಲವು ವಾರ ದುಡಿದಿದ್ದರೆ ಒಂದೆರಡು ವಿದ್ಯಾರ್ಥಿಗಳಾದರೂ ತೇರ್ಗಡೆ ಹೊಂದುತ್ತಿದ್ದರು (ಸ್ಕೂಲಮಿ. ೬೧).

[ ತೇರ್$_1$ (< ತೇರು$_1$) + ಕಡೆ$_3$./ತುಳು. ತೇರ್ಗಡೆ ; ತೆಲು. ತೇರುಗಡ ]

**ತೇರ್ಗುದುರೆ** (ನಾ). ರಥಕ್ಕೆ ಹೂಡಿದ ಕುದುರೆ ; ರಥಾಶ್ವ : ಒಯ್ಯನೆ ನಡೆವ ತೇರ್ಗುದುರೆಯಂ ಕಂಡು (ಜೈಮಿಭಾ. ೩-೪೧). [ ತೇರ್$_2$ + ಕುದುರೆ ]

**ತೇರ್ದೆಗೆ** (ಕ್ರಿ). ರಥವನ್ನು ಎಳೆ : ಆ ಸುಧನ್ವನಿಪ್ಪತ್ತುನಾಲ್ಕಂಬಿನಿಂ ತೇರ್ದೆಗೆವ ಕುದುರೆಗಳ ಕಾಲ್ಗಳಂ ಗಾಲಿಗಳ ಕೀಲ್ಗಳಂ ಮೂಡಿಗೆಯುನು ಮಿಾರ್ದಿಸುವ ಚಾಪಮಂ . . . ಕ್ಷಣಾರ್ಧದೊಳ್ ಕಡಿಯೆ (ಜೈಮಿಭಾ. ೧೨-೩೫). [ ತೇರ್$_2$ + ತೆಗೆ$_1$ ]

**ತೇರ್ನೊಗ** (ನಾ). ರಥದ ನೊಗ : ವಿಗಡ ತೇಜಿಗಳುಮನ್ ತೇರ್ನೊಗಕೆ ತಂದೆನ್ (ಬದ್ಮಪ್ರ. ೨೫-೫೩೨). [ ತೇರ್$_2$ + ನೊಗ ]

**ತೇರ್ಮನೆ** (ನಾ). ೧. ರಥವನ್ನಿಡುವ ಮನೆ. ೨. ರಥದ ಹಾಗೆ ಅಂತಸ್ತುಗಳಿಂದ ಕೂಡಿರುವ ಭವನ್ನ,-ಸೌಧ : ವಿಭೀಷಣಂ . . . ತೇರ್ಸೈಸಿದನು ನೇರವಮಲ್ಲಿಂ ತನ್ನ ತೇರ್ಮನೆಗೆ (ಶ್ರೀರಾಮಾ. ೫೭೪-೬೧೮).

[ ತೇರ್$_2$ + ಮನೆ ]

**ತೇರ್ಮರ** (ನಾ). ರಥವನ್ನು ಮಾಡಲು ಬಳಸುವ ಮರ : ತೇರ್ಗೆ ಮರಂ ತೇರ್ಮರಂ . . . ಮರಂ ತೇರ್ಗೆ, ಬಣ್ಣಂ ಮನೆಗೆ (ಶಬ್ದಾನು. ೨೯೨ ಪ್ರಯೋ). [ ತೇರ್$_2$ + ಮರ$_1$ ]

**ತೇರ್ವಾಯ್** (ಕ್ರಿ). ರಭಸದಿಂದ ಮುನ್ನುಗ್ಗು,-ಹಾಯು : ತನ್ನುಪಚಮೂಪತಿಗಳಂ ಕಡಿದು ತನ್ನುರುವ ಕಡಿತಲೆಗೆ ಬಲಿಗೊಟ್ಟುದಂ ಕಂಡು ನಮ್ಮ ಕಲಿ, ನಿಮ್ಮಾನೆ, ತೇರ್ವಾಯ್ದನೈ ಪ್ರಹಸ್ತಂ (ಶ್ರೀರಾಮಾ. ೬೫೫-೩೬೪). [ ತೇರ್$_1$ (<ತೇರು$_1$) + ಪಾಯ್$_1$ ]

**ತೇಲ್, ತೇಲು$_1$** (ಕ್ರಿ). ನೀರಿನಲ್ಲಿ ಮುಳುಗದೆ ಬೆಂಡಿನಂತೆ ಮೇಲೆ ಇರು; ನೀರಿನ ಮೇಲೆ ಚಲಿಸು : "ಬೆಂಡೇಟ್ಟುದೆಂದೊಡೆ ತೇಲ್ವುದಕ್ಕು" (ಕಬ್ಬಿಕೈ. ೩೬); ಪೊಸತೆರೆಗಳೊಳ್ಸಿಲ್ಕಿ ತೇಲ್ವ ಹಂಸಂಗಳಿಂ (ಉದ್ಭಟ. ೩-೮೬) : ಶಾರ್ಙ್ಗಭೃತ್ಸುಧಾಸರಸಿಯೊಳಟ್ಟು ತೇಲ್ದು ತಣಿದಾಂ ಕಳೆವೆಂ ಭವದಾವತಾಪಮಂ (ಚಿಕವಿ. ೧-೪). ೨. (ಗಾಳಿಯಲ್ಲಿ) ಹಾರು ; ಹಗುರವಾಗಿ ಚಲಿಸು : ಗಾಳಿಗೆ ತೇಲ್ವ ಮುಗಿಲುಗಳಂದದಿಂದೋಡಿದವು (ಸಾಳ್ವಭಾ. ೦೬-೦೨); ನಟುಸುಂಯ್ಯು ಗಾಳಿಗೆ ತೇಲ್ವ ದುಕೂಲದ ನೆಱಗು (ಭರತೇ. ೦-೩೩); ಕೈಪಱಿಗುಟ್ಟುವಂಡಲೆಗೆ ತೇಲ್ದು ಮೇಲುದು ಜಾಱೆ (ಜೈಮಿಭಾ. ೩-೭). ೩. ಪಕ್ಕಕ್ಕೆ ಸರಿ ; ನುಣುಂಚಿಕೊಳ್ಳು ; ಜಾರು ; ತಪ್ಪಿಸಿಕೊಳ್ಳು : ತೇಲ್ವುದು ರಣಾಗ್ರದಿಂದಲ್ಲದೊಡುಳುಹೆನೆನುತೆ ಕೋಲ್ವಳೆಗಟಿದನವಂ (ಜೈಮಿಭಾ. ೦೨-೩೬). ೪. ಸ್ಥಿರತೆಯಿಲ್ಲದಿರು ; ತಾರಾಡು ; ಹೊಯ್ದಾಡು : ಮದಿರಾಪಾನಮಂ ಮಾಡಿಯುಂರ್ಕಿ ಸೊರ್ಕಿ . . . ಜೋಲುತುಂ ತೇಲುತುಂ ಮಲೆಯುತುಂ ಮುನಂಗೊಳಿಪ ತದ್ವನಿತಾಜನ ಮಧ್ಯದಲ್ಲಿ . . . ಇರ್ದಂ (ಉದ್ಭಟ. ೫-೯೧ ಪ) : ಪುಸಿಲಜ್ಜೆಯಿಂದೆ ತೇಲ್ದುವಳ ತೆಱದಿಂದೆ ನಸುನಗೆಯ ಪಸರಿಸುತೆ (ಜೈಮಿಭಾ. ೫-೬೧). ೫. ಮುಳುಗದೆಯಿರು ; ಮೈಮರೆ : ಆಳವಳಿದು ಪವನಜಂ ತೇಲ್ವನಿತಱಿೊಳ್ಕಂಡು . . . ಅಚ್ಯುತಂ ತಾನೆ ಕೋಪದಿಂದಾಹವಕೆ ನಡೆತಂದನು (ಜೈಮಿಭಾ. ೭-೪೯). **ತೇಲು$_1$** : ೧. ಗುರುಕರುಣವಾರ್ಧಿಯೊಳಗೋಲಾಡುತಂ ಸಂಭ್ರಮಾನಂದದೊಳಗಕ್ಕಾಡಿ ತೇಲು[ಪಾಠಾಂ. ಗಂ]ತಂ (ದೀಕ್ಷಾಬೋ. ೩೪-೧೮); ನೀತಿಯೆಂಬುದು ನೀರ ಮೇಲೆ ತೇಲುವ ತೆಪ್ಪ ಮಾತ ಬಲ್ಲವರತ್ತ ತೆಗೆದಂತೆ ಬಹುದು (ಸಮ್ಯಕೌ. ೮-೧೮) ; ವನಚರಶ್ರೇಣಿ ಬೆಂಡೆದ್ದು ತೇಲಿದುವು (ಪೋಹಕ. ೧೯-೪೫) : ಕಪ್ಪುರ ನೀರಿಗಿಂತ ಹಗುರವಾಗಿರುವುದರಿಂದ ನೀರ ಮೇಲೆ ತೇಲುತ್ತದೆ (ಮುಂಬಯಿ. ೪-೬೧) ; ಬಾಳಿನ ಹೊಳೆಯೊಳು ಕಸದಂತೆ ತೇಲಿದರಾಗದು ಗಂರಿ ಬೇಕು ಕಂದ (ಇಂಚಾಪ. ೦೦೭-೭೧). ೨. ಬಿಳಿಯ ಮೋಡ ಬೆಳಕಿನಲ್ಲಿ ತೇಲುವಂತೆ ಬಂದಳೋ (ಗಂಗಾತ. ೯೬-೦೧). ೬. ಲಾಭವಾಗಿ ಬರು ; ಒದಗು : ತೊಡಗಿಸಿದ ಹಣದ ಮೇಲೆ ಸ್ವಲ್ಪವಾದರೂ ಬಡ್ಡಿ ತೇಲಬೇಡವೆ ? (ರೂಢಿ). ೭. (ಎಳೆಯ ಸಸ್ಯಗಳಂತೆ) ಬೇರು ಬಿಡದೆ ಮೇಲೆ ಬರು: ತಂಡಿ ತೇಲಿದೆ (ರೂಢಿ). ೮. ಭೂಮಿಯ ಮೇಲೆ ಕಾಣಿಸು : ಹುಲು ಬೇರ್ಕರಿಕೆ ಕಣ್ಣಿಗ ತೇಲುವಂದದಿಂದಲಿ ಹೊಡೆ ಹಣವಿನ ಹೊಲನ (ಅಮುಸಾಂ. ೩-೦೨೨).

**ತೇಲಕಟ್ಟು** = ಜೋಲುಬಿಡು ; ತೂಗುಹಾಕು : ತೇಲಕಟ್ಟಿದ ಕಂಠಮಾಲೆಗಳ ಗಳಿತಮಂಕ್ತಾಳಿಗಳಗಲಕೆ ಪರಿದೆಸೆಯೆ ಮುತ್ತಿನ ರಂಗವಾಲಿಗಳನಿಕ್ಕಿದರು ದರುಶನೋತ್ಸವಕೆಂಬ ತೆಱನಾದುದು (ಜೈಮಿಭಾ. ೦೬-೨೮). **ತೇಲಬಿಡು, ತೇಲಿಬಿಡು** = (ನೀರಿನಲ್ಲಿ) ಮುಳುಗದ ಹಾಗೆ ಮುಂದು ಹರಿಯಲು ಬಿಡು : ಆ ಹುಡುಗನ ಕೈಗೆ ಸಿಗುವ ಹಾಗೆ ಹೊಳೆಯಲ್ಲಿ ತೇಲಬಿಟ್ಟನು (ಮುಂಬಯಿ. ೪-೩೮) ; ನನ್ನವೀ ನುಡಿಗಳಿರ ! ಕಾಲದಲೆಗಳಲಿ ನಿಮ್ಮನುರಿಹಣತೆಯಂತಿದೊ ತೇಲಬಿಡುವೆ (ಗೀಮಿ೦. XIII) ; ಸಾನುರಾಗದಿಂದ ಇಂದು ದೀಪ ತೇಲಿಬಿಟ್ಟೆವೇ – ದೀಪ ತೇಲಿಬಿಟ್ಟೆವು (ನಾದಲೀ. ೬೨-೨೦) ; ವಿಶ್ವದಂಚಿನವರೆಗು ತೇಲಿಬಿಡು ನೌಕೆಗಳ (ನಲಮು. ೧೮-೫). **ತೇಲಿಬರು** = ನಿಧಾನವಾಗಿ ಬರು : ಗಾಳಿಗಡಲಿನಲ್ಲಿ ತೇಲಿಬರುತಲಿಹವು ನಾದಾ (ಗಂಗಾತ. ೦೦೩-೦). **ತೇಲಿಹಾಕು** = ಮೇಲಿರುವಂತೆ ನೆಡು ; ಆಳವಾಗಿ ನೆಡದಿರು : ತೆಂಗು ತೇಲಿಹಾಕು, ಬಾಳೆ ಬಗೆದು ಹಾಕು (ಗಾದೆ). **ತೇಲಿಹೋಗು** = ೧. ನೀರಿನಲ್ಲಿ ಮುಳುಗದಂತೆ ಮುಂದುವರಿ. ೨. ಕೊಚ್ಚಿಹೋಗು : ಪ್ರವಾಹದಲ್ಲಿ ಈಜಿ ಈಜಿ ಶಕ್ತಿ ಗುಂದಿ ತೇಲಿಹೋಗುತ್ತಿದ್ದೆ (ರಾಮಾನೆ. ೦೦೦) ; ಜಗವೆಲ್ಲ ತೊಯ್ದು ಹೋಗಿದೆ, ತಿಳಿಮಣ್ಣು ತೇಲಿಹೋಗಿದೆ (ನಲಮು. ೦೩-೨೨).

[ ದೇ.॥ ತುಳು. ತೇಲ್, ತೇಲು ; ತೆಲು. ತೇಲು ; ಪರ್ಜಿ. ಗಡಬ. ತೇಲ್; ಕುವಿ. ತೇಲಲಿ ]

**ತೇಲಾಡಿಸು** (ಕ್ರಿ). ನೀರಿನ ಮೇಲೆ ಚಲಿಸುವಂತೆ ಮಾಡು,-ಓಲಾಡಿಸು : ಚಿಕ್ಕಹುಡುಗರಿದ್ದಾಗ ಕಾಗದದ ದೋಣಿಯನ್ನು ಮಾಡಿ ನೀರಿನಲ್ಲಿ ತೇಲಾಡಿಸುವುದೂ ಒಂದು ಆಟ (ರೂಢಿ).

[ ತೇಲಾಡು + – ಇಸು$_3$ ]

**ತೇಲಾಡು** (ಕ್ರಿ). ೧. ನೀರಿನ ಮೇಲೆ ಚಲಿಸು ; ನೀರಿನಲ್ಲಿ ಮುಳುಗದ ಹಾಗೆ ಇರು : ಕುಲಪರ್ವತಗಳು ಸಮುದ್ರದಲ್ಲಿ ತೇಲಾಡಿದರೂ . . . ಅರ್ಜುನನು ಕರ್ಣನನ್ನು ಜಯಿಸಲು ಸಮರ್ಥನಾದಾನೆ (ಕೃಪಾಕ. ೦೬೮). ೨. (ಆಲಂ) ಉತ್ಸಾಹದಿಂದ ಕೂಡಿರು ; ಸಂತೋಷಿಸು : ತೇಲಾಡುವಾಗ ಮನಸು ಮೇಲಾಡತಾವ ಕನಸು (ಗಂಗಾತ. ೦೮-೦).

[ ತೇಲು$_1$ (<ತೇಲ್) + ಆಡು$_1$ ]

**ತೇಲಿ** (ನಾ). ಗಾಣಿಗ : ಉಜ್ಜನಪುರದಾ ತೇಲಿ ತಾಮುಲಿಂದಾಪುರಕೆ ತನ್ನ ಮಗಳನು ಕೊಟ್ಟು ಲಗ್ನ ಮಾಡಿರಲು (ಶನಿಮಾ. ೦೭). 'ತೆಲ್ಲಿಗ' ಪರಾ.

[ <ಸಂ. ತೈಲಿನ್ ]

**ತೇಲಿಕೆ** (ನಾ). ೧. ನೀರಿನಲ್ಲಿ ಮುಳುಗದಂತೆ ಇರುವುದು: "ತೇಲುವುದು, ತೇಲಿಕೆ, ಪ್ಲವನ" (Floatation. ಇಂಕಿನಿ). ೨. ಹಗುರವಾದುದು : ಸಮುದ್ರವು ಉಪ್ಪಾಗಿಯಿರುವುದರಿಂದ ಅನೇಕ ಗುಣಗಳು ಉಂಟು . . . ಅದರ ನೀರು ಸೀನೀರಿಗಿಂತಲೂ ತೇಲಿಕೆಯಾಗಿ ಇರುತ್ತದೆ (ಅನಂಶ. ೫೪).

[ ತೇಲು$_1$ (<ತೇಲ್) + – ಇಕೆ./ತಮಿ. ತೇಲಿಕ್ಕೈ; ತೆಲು. ತೇಲಿಕೆ ]

**ತೇಲಿಗ$_1$** (ನಾ). ತೇಲುವವನು : ನೀಲಾಕಾಶದ ತೇಲಿಗನಾಗಿ ಓಲಾಡಿ ಪುಣ್ಯರ ನಾಡಿಗೆ ಹೋದೆ (ಹಂಸದ. ೧೭೨-೦೮). [ ತೇಲು$_1$(<ತೇಲ್) + – ಇಗ ]

**ತೇಲಿಗ$_2$** 'ತೆಲ್ಲಿಗ' ನೋ.

**ತೇಲಿಸು** (ಕ್ರಿ). ೧. ನೀರಿನಲ್ಲಿ ಮುಳುಗದಂತೆ ಮಾಡು; ತೇಲಾಡಿಸು: ರಾಯರ ಉತ್ಸಾಹವು ನನ್ನನ್ನೂ ಸಂತೋಷದ ಕೆರೆಯಲ್ಲಿ ಮುಳುಗಿಸಿ ತೇಲಿಸಿತು (ರಾಯಕ. ೬೦); ಕಾವಿನಲಿ ಬೆಂದೋಡಿ ಆತ್ಮಜಯವಾದಾಗ ನೆಲ ಮುಗಿಲ ತೇಲಿಸುವ ಬೆಳಕಿನುಬ್ಬು (ನನಲ್ಲ. ೬೩-೭). ೨. ಅಮುಖ್ಯವೆಂದು ಪರಿಗಣಿಸು; ಗೌಣವಾಗಿಸು: ನಾನು ಆ ಮಾತನ್ನು ತೇಲಿಸಲು ಯತ್ನಿಸಿದೆ (ಅಲಹೂ. ೬೨); ಮಾತುಗಳನ್ನು ಲಘುವಾಗಿ ತೇಲಿಸಬೇಡಿ (ಬದುಜ. ೧೦೫). ೩. ಶಿಥಿಲವಾಗಿ ಉಚ್ಚರಿಸು; ಹಗುರವಾಗಿ ಉಚ್ಚರಿಸು: ಉಚ್ಚಾರಣೆಯಲ್ಲಿ ಒಮ್ಮೆ ಒತ್ತಿ ಹೇಳುತ್ತೇವೆ. ಇನ್ನೊಮ್ಮೆ ತೇಲಿಸಿ ಹೇಳುತ್ತೇವೆ (ದ್ರಾವಿವಿ. ೩೨೪). ೪. ಚಾಚು; ನೀಡು: ಬೆನ್ನನು ಕೋದು, ಕೈಕಾಲ್ಗಳನು ತೇಲಿಸಿ, ಹೊಳೆದಳು ಮಳೆಯ ಬಿಲ್ಲಿನ ಹಾಗೆ ಸ್ಥಾಣುವಿನೆಳೆಯ ಚಂದ್ರನ ಚಂದದಿ (ಕವಪು. ೩೮-೦೩). ೫. (ಆಲಂ) ಪಾರುಮಾಡು; ರಕ್ಷಿಸು: ತೇಲಿಸೋ ಇಲ್ಲ ಮುಳುಗಿಸೋ ನಿನ್ನ ಪಾಲಿಗೆ ಬಿದ್ದೆನೊ ಪರಮಕೃಪಾಳೋ (ಪುರಂದ. ೩-೦೮೪ ಪಲ್ಲವಿ). ೬. (ಆಲಂ) ನಿವಾರಿಸು; ಪರಿಹರಿಸು: ಪೆಱರುಪದ್ರವಂಗಳಂ ತೇಲಿಸುವವರ್ ತಾವೆ ಲೋಕಕಂಟಕರಾದರಿದ ಪರಿಹರಿಸದಿರ್ಪುದು ಬಾಲೇಂದುಮೌಳಿಗೇಂ ಸೈರಣೆಯೇ (ಜಬಪು. ೧೭-೨೬). [ತೇಲು$_1$ (<ತೇಲ್) + -ಇಸು$_3$]

**ತೇಲೀಜು** (ನಾ). ನೀರಿನ ಮೇಲೆ ಹೊಟ್ಟೆ ಮೇಲಾಗಿ ಮಲಗಿರುವಂತೆ ಈಜುವುದು: ಅವರು ತೇಲೀಜಿನಲ್ಲಿ ಗಟ್ಟಿಗರು (ರೂಢಿ).
[ತೇಲು$_1$ (<ತೇಲ್) + ಈಜು$_2$ (< ಈಸು$_4$)]

**ತೇಲು$_1$** 'ತೇಲ್' ನೋ.

**ತೇಲು$_2$** (ನಾ). ೧. ನೀರಿನ ಮೇಲೆ ಚಲಿಸುವಿಕೆ: (ಈ). ೨. (ಉಕ) ಕೋಡಿ; ಹೆಚ್ಚಿನ ನೀರು: ನಿನ್ನಿನ ಮಳೆಯಿಂದಲೇ ಹಿರಿಕೆರೆಯು ತೇಲು ಬಿದ್ದು, ಇನ್ನೂ ತೇಲು ಹರಿಯುತ್ತಿದೆ (ರೂಢಿ). [< ತೇಲ್]

**ತೇಲುಂಗ** 'ತೆಲುಂಗ' ನೋ.

**ತೇಲುಗಣ್ಣ** (ನಾ). ಬಸವಳಿದ ಕಣ್ಣುಗಳನ್ನು ಉಳ್ಳವನು: ನಿನ್ನ ಕೆಣಕಿ ಶ್ವಾಸಪಿತ್ತ ತೇಲುಗಣ್ಣರಾಗಿ ಚಿತ್ತವ್ಯಾಕುಲವಿರೆ ಹಗಲಿರುಳೂ ನಿದ್ದೆಯಿಲ್ಲ (ಜಂತನ. ೨೨-೨೦). [ತೇಲುಗಣ್ಣು + -ಅ$_7$]

**ತೇಲುಗಣ್ಣು** (ನಾ). ೧. ಸ್ಥಿರತೆ ತಪ್ಪಿದ ಕಣ್ಣು; ಬಸವಳಿದ ಕಣ್ಣು: ತೇಲುಗಣ್ಣು ಹಾಕುತ್ತ ನಡೆದ ಅವನಿಗೆ ನವಚೈತನ್ಯ ಬಂದಂತಾಯಿತು (ಚಂದುಟಿ. ೫೯); ಆ ಭಯಂಕರದೃಶ್ಯದಿಂದ ತನಗೆ ತೇಲುಗಣ್ಣಾದುದಾಗಿಯೂ ಹೇಳಿ . . . ತನ್ನ ಕಥೆ ಮುಗಿಸಿದಳು (ಪುನರು. ೨೦೯). ೨. ಚಂಚಲವಾದ ಕಣ್ಣು: ಆ ಪಾಂಡಿತ್ಯವನ್ನು ಗೌರವಿಸುತ್ತ ಮೂರ್ತಿಯ ತೇಲುಗಣ್ಣುಗಳನ್ನೆ ನೋಡುತ್ತಿರುವ ಚಪಲ ಯಾಕೆ? (ವಾತ್ಸಲ್ಯ. ೨೨೪).

**ತೇಲುಗಣ್ಣು ಮೇಲುಗಣ್ಣು**=೧. ಆಯಾಸಗೊಂಡ ಸ್ಥಿತಿ; ಬಳಲಿರುವಿಕೆ: ಏಕಾದಶೀಭಕ್ತಮಂಡಳಿ ಅನಶನಸ್ಥಿತಿಯಲ್ಲಿ ಕುಳಿತು, ಮಲಗಿ ತೇಲುಗಣ್ಣುಮೇಲುಗಣ್ಣು ಹಾಕತೊಡಗಿತ್ತು (ದೀಪಹ. II, ೬). ೨. ಸಾಯುವ ಸ್ಥಿತಿ: ಸ್ವಲ್ಪ ಹೊತ್ತಿಗೆ ಮುಂಚೆ ಅವರ ಸ್ಥಿತಿ ತೇಲುಗಣ್ಣು ಮೇಲುಗಣ್ಣು ಆಗಿತ್ತು (ರೂಢಿ).
[ತೇಲು$_1$ (< ತೇಲ್) + ಕಣ್ಣು (<ಕಣ್)]

**ತೇಲುನೋಟ** 'ತೇಲ್ನೋಟ' ನೋ.

**ತೇಲುನೋಟಕ** (ನಾ). ಮೇಲುಮೇಲಿನದನ್ನು ಮಾತ್ರ ನೋಡುವವನು; ಆಳವಾಗಿ ಅಭ್ಯಾಸ ಮಾಡದವನು: ಕವಿ ಶೃಂಗಾರವನ್ನು ಹೆಚ್ಚು ಬಳಸಿರುವುದಾಗಿ ತೇಲುನೋಟಕರಿಗೂ ಅನಿಸದಿರದು (ನಂಜುಂಡ. ೧೦೦). [ತೇಲು$_1$ (<ತೇಲ್) + ನೋಟಕ]

**ತೇಲುಪಟ್ಟಿ** (ನಾ). ಸಮುದ್ರಪ್ರಯಾಣದಲ್ಲಿ ಹಡಗಿನಲ್ಲಿಟ್ಟಿರುವ ಪ್ರಾಣರಕ್ಷಣೆಯ ಸಾಧನಗಳಲ್ಲಿ ಒಂದು; ತೇಲುವುದಕ್ಕೆ ಸಹಾಯವಾಗುವಂಥ ಸಾಧನ: ಪ್ರತಿಯೊಬ್ಬರಿಗೂ ಒಂದೊಂದು ತೇಲುಪಟ್ಟಿಯನ್ನು ಒದಗಿಸಿರುವರು (ಕಪಪು. ೫-೦೨೬).
[ತೇಲು$_1$ (< ತೇಲ್) + ಪಟ್ಟಿ$_2$ (< ಪಟ್ಟೆ$_2$)]

**ತೇಲುಮನೆ** (ನಾ). ನೀರಿನ ಮೇಲೆ ಚಲಿಸುವ ಮನೆ; ದೋಣಿ; ತೆಪ್ಪ: ಸುತ್ತಲೆಲ್ಲ ತನ್ನವರ 'ತೇಲುಮನೆ'ಗಳು, ಕೆಳಗೆ ಅನ್ನವನ್ನು ನೀಡುವ ತಾಯಿಕಡಲು (ಮುಂಗಾಮು. ೬೪).
[ತೇಲು$_1$ (< ತೇಲ್) + ಮನೆ]

**ತೇಲುಮಾತು** (ನಾ). ಅಮುಖ್ಯವಾದ ಮಾತು; ಗೌಣವಾದ ಮಾತು; ಹಾರಿಕೆಯ ಮಾತು: ಛೆ, ಛೆ, ಇದೆಲ್ಲ ಬರೀ ತೇ ಲು ಮಾ ತು! (ಹೊಸಕ್ಷಿ. ೫೭). [ತೇಲು$_1$ (< ತೇಲ್) + ಮಾತು$_1$]

**ತೇಲ್ನೋಟ**, ತೇಲುನೋಟ (ನಾ). ಅಸ್ಥಿರವಾದ ನೋಟ: ನಿಂದು ತೇಲ್ನೋಟದಿಂದಾಸ್ಯವ ನಿರೀಕ್ಷಿಸಲು ಕಂದರ್ಪ ಕಂಡು (ನವಮೋ. ೫-೨೦). **ತೇಲುನೋಟ**: ಅವಳತ್ತ ತೇಲುನೋಟದಿಂದ ನೋಡಿದನು (ರೂಢಿ). [ತೇಲ್ + ನೋಟ]

**ತೇಲ್ಮುಗಿ** (ಕ್ರಿ). ನಿಧಾನವಾಗಿ ಮುಚ್ಚು: ಕರಣದಿಂ ಬೆರಸಿ ಬೋಸರಿಸಿ ದೈನ್ಯದಿ ನಾಮೋಚ್ಚರಣೆಗೈವುತ ನೇಮಂಗಳಿಗೆ ಕರವಿಡೆ ತೇಲ್ಮುಗಿವರೆಗಣ್ಣುಮ್ಮಿಱಿದು ತಂಪೊರೆದೊಗುವರಲಂಬುಜಲವು (ಭೈರಸೂ. ೨೯೭).
[ತೇಲ್ + ಮುಗಿ]

**ತೇಲ್ಮೆ** (ನಾ). ನೀರಿನ ಮೇಲೆ ಚಲಿಸುವಿಕೆ: "ತೇಲುವುದು; ತೇಲ್ಮೆ" (Floatage. ಇಂಕನಿ). [ತೇಲ್ + -ಮೆ$_1$]

**ತೇವ** (ನಾ). ಹಸಿ; ಒದ್ದೆ; ಆರ್ದ್ರತೆ: "ತೇವಂ = ಆರ್ದ್ರಂ" (ಕಾಶಕ. ೧೦೫); ದ್ರಾಕ್ಷಿ, ಖರ್ಜೂರ . . . ತೇವ ತಾಗಿದರೆ ಹಾಳಾಗಬಹುದು (ಅಡುಸಾ. ೫೪); ಕೆಸರುಗದ್ದೆಯ ವಿನಾ ಭೂಮಿಗಳನ್ನು ಉಳುವಾಗ ಭೂಮಿಯಲ್ಲಿ ತೇವ ಹೆಚ್ಚಾಗಿರಬಾರದು (ವ್ಯವಮ. ೦೪); ದೀದಿಯ ಕಣ್ಣುಗಳು ತೇವವಾಗಿರುವುದು ನನ್ನ ಕಣ್ಣಿಗೆ ಬಿದ್ದಿತು (ಬಾಡಿಳ. ೫).
[<ಸಂ. ತೇಮ]

**ತೇವಗೊಳ್ಳು** (ಕ್ರಿ). ಒದ್ದೆಯಾಗು; ಹಸಿಯಾಗು: ಬಡಬ್ರಾಹ್ಮಣನ ಒಣಗಿದ ನಾಲಗೆ ಆಗಲೇ ತೇವಗೊಂಡಿತ್ತು (ಪದ್ಮಸ. ೦೩೬); ಭಟ್ಟನಿಯ ಕಣ್ಣುಗಳು ತೇವಗೊಂಡವು (ಬಾಡಿಳ. ೦೪೨); ಕಣ್ಣುಗಳತ್ತರೆ ಬಹು ಬೇಗ ಮೂಗುವೆ ತಾನಾಗಿ ತೇವಗೊಳ್ಳುವುದು (ಇಂಚಾಪ. ೨೩೭-೭೦).
[ತೇವ + ಕೊಳ್ಳು$_1$ (<ಕೊಳ್$_1$)]

**ತೇವಟಿಗೆ** 'ತಿವದಿಗೆ' ನೋ.

**ತೇವನ** (ನಾ). ಒಂದು ಬಗೆಯ ಮೇಲೋಗರ: "ತೇವನ – ತೇಮನ = ಒಂದು ಬಗೆ ಮಜ್ಜಿಗೆ, ತೇವ" (ತದ್ಭಕೋ. ೧೮); "ತೇಮನಂ, ನಿಷ್ಠಾನಂ– ೨ ತೇವನವೆಂಬ ಮಜ್ಜಿಗೆಪಳಿದ್ಯ, ಹಸೀಮಜ್ಜಿಗೆ . . . ಚಟ್ನಿ" (ಸಿದ್ಧಾಂತಿ. ೨೮೭). [<ಸಂ. ತೇಮನ]

**ತೇವಾರ** (ನಾ). ತಮಿಳುನಾಡಿನ ಪ್ರಾಚೀನ ಶಿವಶರಣರು ಶಿವನನ್ನು ಕುರಿತು ರಚಿಸಿದ ಭಕ್ತಿಗೀತೆಗಳ ಸಂಗ್ರಹ: ಕನ್ನಡಗೀತಸಾಹಿತ್ಯದ ಮೇಲೆ ತಮಿಳುನಾಡಿನ ಶಿವಶರಣರ ತೇವಾರಗಳ ಪ್ರಭಾವ ಅಪರಿಮಿತವಾಗಿ ಆಗಿರುವುದು (ಅವಹಂ. ೧೪ ಪೀಠಿಕೆ); ವೀರಶೈವರು ಶಿವಶರಣರ ವಚನಗಳನ್ನೂ ತಮಿಳು ಶೈವಸಿದ್ಧಾಂತದವರು ತೇವಾರಗಳನ್ನೂ ಪ್ರಮಾಣಗಳಾಗಿ ಅಂಗೀಕರಿಸಿದ್ದಾರೆ (ಭಾರದ. ೨೦೦). [←ತಮಿ. ತೇವಾರ]

**ತೇವಿಸು** (ಕ್ರಿ). ತೇವಮಾಡು; ಒದ್ದೆಯಾಗುವಂತೆ ಮಾಡು: ಜಲತಿ = ತೇವಿಸಿದಪಂ (ಕಾಶಕ. ೦೪೬). [ತೇವ + -ಇಸು$_3$]

**ತೇವುಳ್** 'ತೇವಂಳಂ' ನೋ.
**ತೇವುಳಿ** 'ತೇವಂಳಂ' ನೋ.
**ತೇವುಳು** 'ತೇವಂಳಂ' ನೋ.
**ತೇಹ** 'ತೇಗ$_2$' ನೋ.
**ತೇಳ್** 'ತೇಟ್$_2$' ನೋ.
**ತೇಳು** 'ತೇಟ್$_2$' ನೋ.
**ತೇಳ್ದೇರ** 'ತೇಟ್ದೇರ' ನೋ.

**ತೇಜಿಸಿತು** (ನಾ). ಪುಷ್ಟಿಯಾದುದು; ಬಲವಾದುದು; ಗಟ್ಟಿಯಾದುದು: ಘನಮಪ್ಪುದು ಗಂಭೀರಸ್ವನಮಪ್ಪುದು ತೇಜಿಸಿತಪ್ಪುದುತ್ಸಾಹೋನ್ಮೀಲನ ಮಪ್ಪುದು ಹೇಷಿತಮದು ಧನಕನಕಸಮೃದ್ಧಿ ಮಾಡಲಾರ್ಕುಂ ಜಯಮುಂ (ಅಶ್ವಶಾ. ೩-೨೫).

**ತೇಜಿಸಿದಂ** = ಪುಷ್ಟನಾದವನಂ ; ಬಲಿಷ್ಠ : "ತೇಜಿಸಿದನೆನೆ ಪುಷ್ಟಿ ಯಾದಂ" (ಕರ್ಣಾನಿ. ೭೦).

[ ದೇ.ಶ ತಮಿ. ಮಲ. ತೇಜ್ಜ = ಉತ್ಕರ್ಷ, ಬೆಳವಣಿಗೆ ]

**ತೇಟ್$_1$** (ಕ್ರಿ). ನಾಶವಾಗು ; ಅಳಿ (?): ಬೀಟುವಿನಂ ಕಣ್ಣುಳ್ಕೆ ನಿರಾಳಂ ಬನಮಾಗೆ ಮನದ ಮೋಹಸ್ತಂಭಂ ಬೀಟಿ ವಿಷಯಾನುರಾಗಂ ತೇಟಿ ನಭಸ್ಥಲದೊಳಾದುದುಳ್ಕಾಪಾತಂ (ಅಜಿಪು. ೬-೯೬).

[ P ಇದು 'ಕೀಟ್' ಎಂಬುದರ ಅಪಲಿಖಿತವಿರಬಹುದು ]

**ತೇಟ್$_2$, ಚೇಳಂ$_1$, ಚೇಟ್, ಚೋಳಂ, ತೇಳ್, ತೇಳು, ತೇಟು** (ನಾ). ಬಾಲದಲ್ಲಿ ಕೊಂಡಿಯನ್ನು ಉಳ್ಳ ಒಂದು ಬಗೆಯ ವಿಷಜಂತು ; ವೃಶ್ಚಿಕ: "ದ್ರುತಃ, ಆಳಿಃ, ವೃಶ್ಚಿಕಃ – ಈ ೩ ತೇಟ್ (ಚೇಳು)" (ಹಲಾಯು. ೧೦೬-೨೩) ; "ತೇಟಿಂದೆನೆ ವೃಶ್ಚಿಕದೊಳ್" (ಕರ್ಣಾನಿ. ೬೦): ಪುಟ್ಟಿದ ತಾಣಕ್ಕಟಿಪಂ ಪುಟ್ಟಿಸಲೊಡರಿಸುವ ಕಿಚ್ಚು ತೇಟ್ ಕ್ರಿಮಿ ಕುತ್ತಂ ಪುಟ್ಟುವವೋಲ್ ದುಷ್ಕೃತದಿಂ ಪುಟ್ಟಿದನೀ ಪಾಪಕರ್ಮನೆನ್ನಯ ಬಸುರಿಂ (ಕಾದಂಉ. ೪೮೩) ; ಪರ್ದಿನಂತೆ ಕೀಟ್ಬರ್ ತೇಟಿನಂತೆ ನೋಯಿ ಸುವರ್ (ಧರ್ಮಾಮೃ. ೩-೭೩) ; ತಿಂದ ತೇಟಿನಂತೆಯುಂ ಪೊಡೆವ ಸಿಡಿಲಂತೆಯುಂ . . . ಪೋದಲ್ (ಲೀಲಾವ. ೧೯-೧೦೭ ವ); ಕೇಡುಗಾಲಕ್ಕೆ ತಾಪೋಗೆವರ್ತೇಟಿಗೊಗೆವಂತಿವರ್ನಿನಗೆ (ಅನಂಪು. ೧೩-೯೯) ; ಮಾಡಿದ ನೇಕೆಯೊ ಮೇಲಂ ನೋಡದೆ ಬಿದಿ ವಿಷಮುಫಣಿಗಣಲ್ಗಳ ಪಲ್ಲಂ ರೂಢಿಸಿದ ತೇಟ್ಗೆ ಮುಳ್ಳಂ ನಾಡಟಿಕೆಯ ದುರ್ಜನಂಗೆ ನಿಡುನಾಲಗೆಯಂ (ಧರ್ಮನಾ. ೦-೬೨) ;ಪುದಿದಿರ್ಪುದು ತೇಟ್ಗೆ ವಿಷಂ ತುದಿವಾಲದೊಳ್ (ಚಿಕವಿ. ೦-೩೫). **ಚೇಳು$_1$** : ಊಡಿದ ಚೇಳಿನ ಏಡದ ಬೇನೆಯಲ್ಲಿ ಮೂಜುಲೋಕವೆಲ್ಲಾ ನರಳಿತ್ತು (ಅವಡಂ. ೬೮-೩೭೫) ; ಚೇಳಿಂಗೆ ಬಸುಟಾಯಿತ್ತೆ ಕಡೆ ಬಾಳೆಗೆ ಫಲ ವಾಯಿತ್ತೆ ಕಡೆ (ಬಸವ. ೬೬೪); ಚೇಳ ಬೆನ್ನಿನೊಳೊಡೆದು ಮೂಡುವ ಬಾಲ ವೃಶ್ಚಿಕದಂತೆ (ಕುವ್ಯಾಳೀ. ೧೦-೯) ; ಚೇಳಿನ ಮಂತ್ರ ಬಾರದವನು ಹಾವಿನ ಗುದ್ದಿಗೆ ಕೈ ಹಾಕಿದನಂತೆ (ಗಾದ) ; ಹಾವಿಗೆ ಹಲ್ಲು, ಚೇಳಿಗೆ ಬಾಲ (ಗಾದ). **ಚೇಟ್** : "ದ್ರುತಮಾಲಿ ವೃಶ್ಚಿಕಂ ಕ್ರೂರಚೇಟಿನಿಕುಂ" (ಮಂಗರಾ. ೦೯೧-೫); ಚೇಟ್ ಚಿಕ್ಕದೆಂದಟ್ಟುಜಿಂ ತೆಗೆಯಲ್ ಕಚ್ಚದೆ (ಸೋಮೇಶ. ೪೦). **ಚೋಳು** : ಚೋಳಿಗೆ ಪಾರುಪತ್ಯ ಕೊಟ್ಟ ಹಾಗೆ (ಗಾದ). **ತೇಳ್** : ಅಹಿ ಕೊಣ್ಣಡೆ ತೇಳ್ ತಿನ್ದಡೆ (ಎಇ. XII, ೨೮೩-೦೯೩ ; 1077). **ತೇಳು** : ವೇಣು ಕದಳಿ ತೇಳು ಕರ್ಕಟಗಳು ಕೇಡು ಮಾಣದೆ ತಮಗಾಗುವಲ್ಲಿ ಹುಣಿಸೆ ಫಲವಾಗುವಂತೆ ನೀ ಮಕ್ಕಳ ಜಾಣ ಪಡದೆ ಕೆಡುವುದಕೆ (ಅನಂಚ. ೨೦-೧೨೬) : ನಾನೊಂದು ತೇಳಾಗಿ, ಆವೆಯಾಗಿ, ಅಂತಹ ಇನ್ನೇನಾದರೂ ಆಗಿ ಹುಟ್ಟಬಾರದಾಗಿದ್ದಿತೇನು (ಸುಗುಗಂ. ೦೦೪-೭). **ತೇಟು**: ಸ್ಪರ್ಶ ರಸ ಗಂಧಂಗಳೆಂಬೀ ಮೂಱನಱಿವ . . . ಪೇನು ಸೀರು ತೇಟು ಇಂದ್ರಗೋಪ ತೇರಂಟಿ (ಪಶಾರ. ೪೯).

**ತೇಟ ಬಾಲ** = ೧. ಚೇಳಿನ ಬಾಲ : "ಅಳಂ, ವೃಶ್ಚಿಕಲಾಂಗೂಳಂ – ಈ ೨ ತೇಟ (ಚೇಳ) ಬಾಲಂ" (ಹಲಾಯು. ೧೦೬-೨೩). ೨. ಒಂದು ಬಗೆಯ ಸಸ್ಯ ; "ಕತ್ತರಿ" (ಚತುನಿ. ಕ. I, ೬೬).

[ ದೇ.ಶ ತಮಿ. ಮಲ. ತೇಳ್ ; ತುಳು. ತೇಳ್, ತೇಲ್, ಚೇಳ್ ; ಕೊಡ. ತೇಳೀ ; ತೆಲು. ತೇಲು ; ಮಲ್ತೊ. ತೇಲೆ ]

**ತೇಟು** 'ತೇಟ್$_2$' ನೋ.

**ತೇಟ್ಕುಟಿಗ** (ನಾ). ಚೇಳಿನ ವಿಷವನ್ನು ನಿವಾರಿಸುವ ಒಂದು ಬಗೆಯ ಮೂಲಿಕೆ: ಜಲದಿಂದಂ ತೇಟ್ಕುಟ (ಡಿ) [ಟ] ಗನ ನೆಲಗುಂಬಳವೆಂಬಿವಂ ಸಮಂಗೊಂಡರೆದಿಂ ಪಲವಚಿಗೊಳೇಂ ಕುಡಿಸಲ್ಕಂ ಖಲ ವೃಶ್ಚಿಕ ವಿಷಮುದಾಕ್ಷಣಂ ಪಱಿಪಡುಗುಂ (ಖಮುದ. ೧೧-೨೭).

[ ತೇಟ್$_2$ + – ಕುಟಿಗ$_1$ ]

**ತೇಟ್ದೇರ, ತೇಳ್ದೇರ**(ನಾ). ಚೇಳನ್ನು ವಾಹನವಾಗಿ ಉಳ್ಳವನು; ಭೈರವ: "ತೇಟ್ದೇರಂ ಬಿಗುರ್ವರಿಜಂ – ಈ ೨ ಭೈರವಂಗೆ ಪೆಸರ್" (ಕಶಸಾ. ೦-೮) ; "ಬಿಗುರ್ವರಿಜಂ ತೇಟ್ದೇರಂ ಬಗೆಯಲ್ಕಾಂ ಭೈರವಂಗೆ" (ಕವಿಕಂ. ೨೩) ; ಪೊರ್ದಲೆಯ ಕರ್ಪೋಗದ ತೇಟ್ದೇರನೊಂದು ಪೊಡರ್ಪಿನ . . . ಜವನ ದೂಟುಗಾಱರ ಜಂಗುಳಿ (ರಾಮಾಶ್ವ. ೭೯-೦೯). **ತೇಳ್ದೇರ** : "ಭೈರವಂಗೆ ತೇಳ್ದೇರನೆಂಬ ಪೆಸರ್" (ಕಶರ. ೪೮).

[ ತೇಟ್$_2$ + ತೇರ್$_2$ + – ಅ$_7$ ]

**ತೈ** (ನಾ). ಕುಣಿತದ ತಾಳವನ್ನು ಸೂಚಿಸುವ ಒಂದು ಅನುಕರಣ ಶಬ್ದ : (ಕ).

**ತೈಜಸ** (ಗು). ೧. ಹೊಳಪುಳ್ಳ; ಪ್ರಕಾಶಮಾನವಾದ. (ನಾ). ೨. ಕಾಂತಿ ; ಹೊಳಪು ; ಪ್ರಕಾಶ : ತೀಡುವಲರಿನ ಗುಂಪು ತೀವ್ರಭೃಗಳ ಗುಂಪು ಮೂಡಿ ಬಹ ಚವಲಾತಿಶಯದಿಂಪು ತೈಜಸದಿ ಕೂಡಿರುವ ವೈಭವದ ಲಂಪು . . . ಚಿರಮೆನುತ ಲಾಲಿಸುವ ಮೂಢರಿಂಗೇನೆಂಬೆನು (ವಂಕಾರಾ. ೨-೯-೨೬) ; ಮಿಂಚಿ ರೋಮಾಂಚನಿಸಿತೆಂಬವೋಲ್ ಮೊಗಕೆ ತುಳ್ಕಿದುದು ತೈಜಸಂ (ಶ್ರೀರಾಮಾ. ೩೯೯-೯೯೭). ೩. ತೇಜಸ್ಸಿಗೆ ಸಂಬಂಧಿಸಿದ ಇಂದ್ರಿಯ ; ನಯನೇಂದ್ರಿಯ ; ಕಣ್ಣು : ರೂಪವುಳ್ಳ ನಯನವು ತೈಜಸ (ಭಾತತ್ತ್ವ. ೩೬೩); P ಶಾಸ್ತ್ರಗಳಲ್ಲಿ ಘ್ರಾಣಕ್ಕೆ ಭೂಮಿ, ರಸನಕ್ಕೆ ಜಲ, ನಯನಕ್ಕೆ ತೇಜಸ್ಸು, ಸ್ಪರ್ಶಕ್ಕೆ ವಾಯು, ಶ್ರವಣಕ್ಕೆ ಆಕಾಶ – ಹೀಗೆ ಪಂಚೇಂದ್ರಿಯಂಗಳಿಗೂ ಪಂಚಭೂತಗಳಿಗೂ ಸಂಬಂಧವನ್ನು ಹೇಳಿದೆ. ೪. ಲೋಹ : "ಎಲ್ಲ ಲೋಹಂ ತೈಜಸಂ" (ಮಂಗರಾ. ೩೦-೫). ೫. [ತತ್ತ್ವಶಾ] ಮೂರು ವಿಧವಾದ ಅಹಂಕಾರತತ್ತ್ವ ಗಳಲ್ಲಿ ಒಂದು ; ರಜೋಗುಣಪ್ರಧಾನವಾದ ಅಹಂಕಾರ : ಮುತ್ತೆ ಬದಹಂಕಾರವದಱಿಂ ಸತ್ತ್ವದಿಂ ವೈಕಾರಿಕವು ತಿಳಿ ಮತ್ತೆ ತೈಜಸ ರಜದಿ ತಾಮಸದಿಂದ ಭೂತಾದಿ (ಅಮೃತ. ೪-೧೧) ; ವೈಕಾರಿಕ, ತೈಜಸ, ತಾಮಸ ವೆಂದು ಮೂರು ವಿಧ ಅಹಂಕಾರತತ್ತ್ವಗಳಿರುವುವು (ಹಸಾರ. ೦೪-೦ ತಾತ್ಪರ್ಯ) ; ಸಾತ್ವಿಕಾಹಂಕಾರಕ್ಕೆ ವೈಕಾರಿಕವೆಂದೂ ರಾಜಸಾಹಂಕಾರಕ್ಕೆ ತೈಜಸವೆಂದೂ ತಾಮಸಾಹಂಕಾರಕ್ಕೆ ಭೂತಾದಿಯೆಂದೂ ನಾಮಾಂತರಗಳು ಶಾಸ್ತ್ರದಲ್ಲಿ ಹೇಳಿವೆ (ತತ್ವಕು. ೬). ೬. (ಸಂಖ್ಯಾದರ್ಶನದ ಮೇರೆಗೆ) ಸತ್ತ್ವಗುಣಪ್ರಧಾನವಾದ ಅಹಂಕಾರ : ತೈಜಸಂ ವೈಕಾರಿಕಾಯತ್ತ ಭೂತಾದಿಯೆಂದಹಂಕಾರದಿಂತೀಯವನಿಯಲ್ಲಿ ಮೂದೆಱನಾದುದಾ ತೈಜಸವೆ ಸಾತ್ವಿಕದ ಗುಣವು (ವೀಶೈಪು. ೬-೫-೧೧) ; ತೈಜಸದಲ್ಲಿ ಸತ್ತ್ವಗುಣವು ಪ್ರಧಾನ ವಾಗಿಯೂ ವೈಕೃತದಲ್ಲಿ ರಾಜಸಗುಣವೂ ಪ್ರಧಾನವಾಗಿ ಇರುವುವು (ಭಾತತ್ತ್ವ. ೬೬೪). ೭. ಸ್ವಪ್ನಾವಸ್ಥೆಯನ್ನು ಅನುಭವಿಸುವ ಜೀವ ; ಆತ್ಮನ ಒಂದು ಅವಸ್ಥೆ : ಸೂಕ್ಷ್ಮಶರೀರದಲ್ಲಿರುವ ಜೀವನಿಗೆ ತೈಜಸನೆಂದೂ ಅಂತರಾತ್ಮನೆಂದೂ . . . ಹೇಳುವರು (ಶಿವಾಸೂ. ೪೯) ; ಈ ವಿಧದವಸ್ಥೆ

ಯಲಿ ಹೊಳೆಯುವ ಜೀವನೆನಿಸುತ ವಿಶ್ವ ತೈಜಸನೋವಿ ಪ್ರಾಜ್ಞನೆನಿಪ್ಪ ಪೆಸರನು ತಳೆದು ತೋಱುವನು (ಅಮೃತ. ೯-೧೨) : ಸೂತ್ರವೈಶ್ವಾನರರಧಿಗತವಿಶ್ವಾತ್ಮನುಂ ತೈಜಸಂ ಪ್ರಾಜ್ಞಕನಾದಂ ನೀನೆ (ಶಬಶಂ. ೫-೩೫); ಈ ರೀತಿಯಾದ ಪ್ರಾಜ್ಞ, ತೈಜಸ ವಿಶ್ವರೆಂಬ ಹಂತಗಳನ್ನು ಹತ್ತಿ ಶಿವನೇ ಆಗುವವನು (ಭಾರದ. ೨೦೭) : P ಶಾಸ್ತ್ರಗಳಲ್ಲಿ ಸ್ಥೂಲ ಶರೀರದಲ್ಲಿರುವ ಜೀವನಿಗೆ ವಿಶ್ವನೆಂದೂ ಸೂಕ್ಷ್ಮ ಶರೀರದಲ್ಲಿರುವ ಜೀವನಿಗೆ ತೈಜಸನೆಂದೂ ಕಾರಣಶರೀರದಲ್ಲಿರುವ ಜೀವನಿಗೆ ಪ್ರಾಜ್ಞನೆಂದೂ ಹೇಳಿದೆ ೮. [ಜೈನ] ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ ಮತ್ತು ಕಾರ್ಮಣಗಳೆಂಬ ಐದುಂ ಬಗೆಯ ಶರೀರಗಳಲ್ಲಿ ಒಂದುಂ ; ಸ್ಥೂಲ ಶರೀರದಲ್ಲಿ ದೀಪ್ತಿಯನ್ನುಂಟುಮಾಡುವಂಥ ಸೂಕ್ಷ್ಮ ಶರೀರ : ಅನುಕ್ರಮದಿನಯ್ದು ಭೇದದಿನೌದಾರಿಕ ವೈಕ್ರೀಯಕ(ಮಾ)ಹಾರಕ ತೈಜಸ ಕಾರ್ಮಣಂಗಳವು ತನು ವೆನಿಕುಂ (ಸುಕುಮಾ. ೮-೦೦) : ಔದಾರಿಕ, ವೈಕ್ರೀಯಕ, ಆಹಾರಕ, ತೈಜಸ, ಕಾರ್ಮಣ ಎಂಬ ಐದು ತರದ ಶರೀರಗಳುಂಟು . . . ತೇಜಸ್ಸು ಹುಟ್ಟುವ ಯೋಗ್ಯತೆಯುಳ್ಳ ಶರೀರವು ತೈಜಸವು (ಜೈನಧ. ೩೨). [ಸಂ.]

**ತೈಜಸಾವರ್ತನಿ** (ನಾ). ಲೋಹವನ್ನು ಕರಗಿಸುವ ಮೂಸೆ: "ತೈಜಸಾವರ್ತನೀ, ಮೂಷಾ – ೨ ಚಿನ್ನ ಮೊದಲಾದ್ದು ಕರಗಿಸುವ ಮೂಸೆಯ ಪೆಸರು" (ಸಿದ್ಧಾಂತಿ. ೨೭೦). [ಸಂ. ತೈಜಸಾವರ್ತನೀ ]

**ತೈತಿಕ್ಕು** (ಕ್ರಿ). (?) : ಸಂಕಿಲಿನಾಚಿಯರ ನೋಟದೊಡನೆ ತನ್ನ ನೋಟಂ ಘಳಲನೆ ಸಂದಿಸೆ . . . ನಡೆಗೆಟ್ಟು ಕಂಪಿಸಿ ನಸುಬೆಮರ್ತುರ್ಕೆ ಹೊಸ ನೋಟಂ ಹೋರಟೆಗುಟ್ಟಿ ತೈತಿಕ್ಕಿ[ಪಾಠಾಂ. ಕೈತೆಕ್ಕಿ]ತಳರದೆ ತಂತಮ್ಮೊಳ ಪೊಕ್ಕ ರೂಪು ಮಗುಳಲಾಱದೆ ನಟ್ಟು ನೋಡುತ್ತಿರಲ್ (ನಂದಿರ. ೦೩-೫೪).
[ ಇದು 'ಸೈತಿಕ್ಕು' ಎಂಬುದರ ಅಪಲಿಖಿತವಿರಬಹುದು ]

**ತೈತಿಕ್ಷೆ** (ನಾ). ಸಹನೆ; ತಾಳ್ಮೆ: ವಿತಿಯನರಿತಾಶೆ, ಸಮುಚಿತವ ಮರೆಯದ ಯತ್ನ ತೈತಿಕ್ಷೆ ಕಷ್ಟಾಂಶದಪರಿಹಾರ್ಯತೆಗೆ (ಮಂಕುತ. ೮೪೦).
[ ಸಂ. ತೈತಿಕ್ಷ ]

**ತೈತಿಲ** (ನಾ). ೧. ಖಡ್ಗಮೃಗ ; ಘೇಂಡಾಮೃಗ. ೨. ಒಬ್ಬ ದೇವತೆ. ೩. ಒಂದು ದೇಶದ ಹೆಸರು: ಬಿಸಕಾಂಭೋಜಕ ಬಾಹ್ಲೀಕ ಸೈಂಧವ ವಾರಟ್ಟ ತೈತಿಲಂ ಮಾನೇಯಂ ಪೆಸರ ಕ್ಷೇತ್ರದ ಹಯಕಾ ಪೆಸರೆ ಪೆಸರ್ ಜಾತಿಗಳ್ ಗುಹಾಧಾರಂಗಳ್ (ಅಶ್ವಶಾ. ೭-೭೬). ೪. [ಜ್ಯೋತಿ] ಹನ್ನೊಂದು ಕರಣಗಳಲ್ಲಿ ನಾಲ್ಕನೆಯದು. [ಸಂ.]

**ತೈತ್ತಿರ** (ನಾ). ೧. ಖಡ್ಗಮೃಗ ; ಘೇಂಡಾಮೃಗ. ೨. ಗೌಜಲಹಕ್ಕಿ ; ತಿತ್ತಿರಿ. ೩. ಗೌಜಲಹಕ್ಕಿಗಳ ಸಮೂಹ,–ಗುಂಪು. [ಸಂ.]

**ತೈತ್ತಿರೀಯ** (ಗು). ೧. ತಿತ್ತಿರಿಶಾಖೆಗೆ ಸೇರಿದ : ತೈತ್ತಿರೀಯ ಆರಣ್ಯಕವಂತೂ ಪ್ರತಿಮಾಶಿಲ್ಪಿಗಳಾದ ತ್ವಷ್ಟಾ, ವಿಶ್ವಕರ್ಮ ಮತ್ತು ಕಶ್ಯಪರ ಹೆಸರುಗಳನ್ನು ಸ್ಪಷ್ಟವಾಗಿ ಹೇಳುವುದು (ಭಾರದ. ೫೦೦). (ನಾ). ೨. ಈಶ, ಕೇನ, ಕಠ, ಪ್ರಶ್ನೆ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕಗಳೆಂಬ ದಶೋಪನಿಷತ್ತುಗಳಲ್ಲಿ ಒಂದು; ತಿತ್ತಿರಿ ಶಾಖೆಗೆ ಸೇರಿದ ಉಪನಿಷತ್ತು. [ಸಂ.]

**ತೈನಾತಿ** (ಗು). ೧. ನಿಯುಕ್ತ ಮಾಡಿದ ; ನೇಮಿಸಿರುವ : ಮಣಿಗಾರನ ತಾಬೆಯಲ್ಲಿ ತೈನಾತಿ ಜವಾನರು ಕುಳವಾಡಿಗಳು . . . ಮುಂತಾದ ಚಾಕರರು ಉಂಟು (ಕಥಾಮಂ. IV, ೩೦) : ತಾಲ್ಲೂಕಿನ ತೈನಾತಿ ಜವಾನನೊಬ್ಬ ಅವನನ್ನು ಎದುರುಗೊಂಡನು (ಸಣ್ಣ.ಕ. VI, ೫೯) ; ಟಿಳಕರ ತೈನಾತಿ ನೌಕರರಲ್ಲಿ ಭಿಸ್ತಿ ಎಂ ಪಕಾಲಿಯವನಿದ್ದ (ಸ್ಮೃತಿಚಿ. ೩೦೩). (ನಾ). ೨. ಪರಿಚರ್ಯೆ ; ಸೇವೆ ; ಚಾಕರಿ ; ಊಳಿಗ: ಕತ್ರಿ ಗೋಪಾಲಯ್ಯ ಅರಸಿನವರ ತೈನಾತಿಯಲ್ಲಿಯಿದ್ದರು (ಹೈದರ. ೩೦) ; ಮುಂದೆ ಇವಳನ್ನು ಬಾದಶಹ ಬೇಗಮಳು ತನ್ನ ಖಾಸ ತೈನಾತಿಗೆಂದು ಕರೆಸಿಕೊಂಡಳು (ಹಂಸಾ. ೦೩೨) ; ತೈನಾತಿಗೊಂದು ಮನೆಯ ಆಳೂ ಹೋಗಲಿತ್ತು (ದೀಪಹ. I, ೭೦) ; ನನ್ನ ತೈನಾತಿಯಲ್ಲಿ ಷೇಕ್ ಮೊಹದಿನ್ ಎಂಬ ಕಾನ್ಸ್ಟೇಬಲ್ ಇದ್ದ (ಕಲನೆ. ೦೦೯). ೩. ಊಳಿಗಕ್ಕೆ ಇರುವವನು; ಚಾಕರ ; ಕೈಯಾಳು : ಕಿಗ್ಗಟ್ಟನಾಡ ಮೊದೀಖಾನೆಯಲ್ಲಿ ಜೋಪಾನದಿಂದ ಮಡಗಿಸಿ ಅದಕ್ಕೆ ಒಬ್ಬ ತೈನಾತಿ ಮಾಡಿ (ರಾಜೇಂದ್ರ. ೭೭) ; ಜತೆಗೆ ತೈನಾತಿಯೊಬ್ಬ (ಕುದಿಕೂ. ೩೪) ; ಅವರಿಬ್ಬರ ಬೆನ್ನ ಹಿಂದೆ ತೈನಾತಿಗಳು ಹೊರಡುವಂತೆ ಹಿಂದಿನಿಂದ ಹಿಂಬಾಲಿಸುವ ಜನರು ಇದ್ದೇ ಇದ್ದಾರೆ (ಜಾರುದಾ. ೪೪).
[ ←ಹಿಂ. ಮರಾ. ತೈನಾತ್, ತೈನಾತೀ ; ಅರ. ತಇನಾತ್ ]

**ತೈಮಾಸ**, ತಯಿಮಾಸ (ನಾ). ಸೌರಮಾನ ವರ್ಷದ ಒಂಭತ್ತನೆಯ ತಿಂಗಳು : ಸಂಕ್ರಾಂತಿ ಬಂದು ತೈ(ಮಾಘ-ಫಾಲ್ಗುಣ)ಮಾಸ ಹುಟ್ಟಿಬಿಟ್ಟಿತು (ಕೂನಪ್ಪ. ೩೭). **ತಯಿಮಾಸ :** ಸಾಧಾ[ರಣ]ಸಂವತ್ಸರದ ತಯಿಮಾಸ ೫ ದಿಯಲೂ . . . ಆ ಸ್ಥಾನಿಕರಿಗೆ ಕೊಟ್ಟ ಸಂಸ್ಥೆ (ಸೌಇಇ. IX-ii, ೪೦೩-೪ ; 1370). [ ←ತಮಿ. ತೈಮಾಚ ]

**ತೈರು** (ನಾ). ಮೊಸರು. 'ತೈರುವಡೆ' ಪರಾ.
[ ದೇ.॥ ತಮಿ. ಮಲ. ತಯಿರ್; ತೆಲು. ತೈರು ]

**ತೈರುವಡೆ** (ನಾ). ಮೊಸರಲ್ಲಿ ನೆನೆಸಿದ ವಡೆ ; ಮೊಸರುವಡೆ : ಹೈಡ್ರೊಜನ್ ಬಾಂಬಿನಿಂದ ಹಿಡಿದು ರಾಜಭವನದ ಪೂರಿ, ತೈರುವಡೆಗಳ ವಿಸ್ತಾರಕ್ಕೂ ನಮ್ಮ ಹರಟೆ ಹಬ್ಬಿತ್ತು (ಇತಿನೋ. ೪೭). [ ತೈರು + ವಡೆ ]

**ತೈರೂರ್** (ನಾ). ಒಂದು ಊರಿನ ಹೆಸರು : ತೈರೂರ ಕೌಣ್ಡಿಲ್ಯಗೋತ್ರದ ಗಾವುಂಣ್ಡಸಾಮಿಗಳ ಮಗನ್ (ಎಕ. XIV, ಮಂಡ್ಯ. ೦೩-೭ ; 895).
[ ? + ಊರ್ ]

**ತೈಲ**$_1$ (ನಾ). ೧. ಎಳ್ಳಿನಿಂದ ತೆಗೆದ ಎಣ್ಣೆ ; ಎಳ್ಳೆಣ್ಣೆ: "ತಿಲಮೆನಲ್ಕೆಳ್ಳು ತೈಲಮದೆಣ್ಣೆ ತೈಲಕಂ ಹಿಂಡಿ" (ಮಂಗರಾ. ೧೦೦-೫). ೨. ಎಣ್ಣೆ : ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ (ಧರ್ಮಾಮೃ. ೦-೪೨) ; ತಿಲದ ಮುಱಿಯ ತೈಲದಂತೆ . . . ಚೆನ್ನಮಲ್ಲಿಕಾರ್ಜುನನ ನಿಲವನಾರೂ ಅಱಿಯಬಾರದು (ಮಹಾದೇ. ಬ. ೯-೨) ; ಮಳಲೊಳ್ ತೈಲಂಗಳಂ ಹಿಂಡಲಕ್ಕು . . . ಕಡುಮೂರ್ಖರ್ಗಂ ಹಿತ ಕೇಳ್ವನೇ (ಸೋಮೇಶ. ೪೯) ; ಕಮಲಾಕ್ಷಿಯರು ಪೂರಿತ ಪರಿಮಳದ ತೈಲವನು ಮೊಗದು . . . ನೇವರಿಸಿದರು ಸೆಳ್ಳುಗುರ್ಗಳಲಿ ಶಶಿಮುಖಿಯ ಸಿರಿಮುಡಿಯ (ತೊರರಾ. ೦-೦೪-೧೩) ; ರಘುರಾಮಚಂದ್ರನಿನಿಯಳ ಜೀವದೀವಿಗೆಗೆ ತೈಲಮುಂ ಕಾಂತಿಯುಂ ತಾನಾಗಿ ರಸವಾಹದೊಳ್ ತೇಲುತಿರ್ದನು (ಶ್ರೀರಾಮಾ. ೫೫-೨೭) ; ಇಂದು 'ಎಣ್ಣೆ' ಎಲ್ಲಾ ತರದ ತೈಲಕ್ಕೂ ಅನ್ವಯಿಸುತ್ತದೆ (ಸಂಶೋಧ.೮೮). ೩. ಕೆಲವು ಔಷಧಗಳನ್ನು ಸೇರಿಸಿ ತಯಾರಿಸಿದ ಎಣ್ಣೆ.
[ ಸಂ. ]

**ತೈಲ**$_2$, ತೈಳ (ನಾ). = ತೈಲಪ : ಮೊಲೆವೊತ್ತ ತೈಲಜನನಿಯ ಕೆಲದೊಳ್ ರಂಜಿಪರೆ ಮಿಸೆವೊತ್ತಣ್ಣಂಗಳ್ (ಅಜಿಪು. ೦-೬೫) : ಶ್ರೀತೈಲಭೂಪಾಳ (ಸೌಇಇ. XI-ii, ೦೩೭-೨೯ ; 1091). **ತೈಳ :** ತೈಳಭೂಪ(ಃ)ಸ್ತತೋ ಜಾತೋ ವಿಕ್ರಮಾದಿತ್ಯಭೂಪತಿಃ (ಸೌಇಇ. XI-ii, ೦೩೭-೨೨ ; 1091).
**ತೈಲನ ಸಿಂಘ** = ಒಂದು ಬಿರುದು : ವೈರಿನಿಃಕಂಟಂ ತೈಲನ ಸಿಂಘಂ ಸಾಹಸೋತ್ತುಂಗಂ (ಸೌಇಇ. XX, ೪೦-೦೦ ; 1068). [ ? ]

**ತೈಲಂಗ** 'ತೆಲಂಗ' ನೋ.

**ತೈಲಕ** (ನಾ). ಎಣ್ಣೆಯನ್ನು ತೆಗೆದ ನಂತರ ಉಳಿಯುವ ಸಾರವಿಲ್ಲದ ವಸ್ತು ; ಹಿಂಡಿ : "ತಿಲಮೆನಲ್ಕೆಳ್ಳು ತೈಲಮದೆಣ್ಣೆ ತೈಲ[ಪಾಠಾಂ. ಲಿ]ಕಂ ಹಿಂಡಿ" (ಮಂಗರಾ. ೧೦೦-೫). [ಸಂ.]

**ತೈಲಕಾರ** (ನಾ). ಎಣ್ಣೆಯನ್ನು ತೆಗೆಯುವವನು ; ಗಾಣಿಗ : ಸುವರ್ಣಕಾರ . . . ತೈಲಕಾರಾದಿ ಅನಾಥಪ್ರೇಷ್ಯ ದಾಸೀದಾಸಪ್ರಭೃತಿ ತಪಶ್ಚರಣಕ್ಕೆ ಅಯೋಗ್ಯಂಗಳಪ್ಪ ಹೀನಜಾತಿಗಳ್ (ಪಸಾರ. ೫೦). [ಸಂ.]

**ತೈಲಚಿತ್ರ** (ನಾ). ತೈಲವರ್ಣದ ಚಿತ್ರ; ತೈಲವರ್ಣವನ್ನು ಉಪಯೋಗಿಸಿ ಬರೆದ ಚಿತ್ರ : ಛಾಯಾಚಿತ್ರಗಳು, ತೈಲಚಿತ್ರಗಳು, ನೀರು ಬಣ್ಣದಿಂದ ಬರೆದ ಚಿತ್ರಗಳು, ಇವೆಲ್ಲವೂ ಹಾಫ್‌ಟೋನ್ ಪಡಿಯಚ್ಚಿಗೆ ಯೋಗ್ಯವಾದ ಮೂಲಪ್ರತಿಗಳು (ಮುದ್ರಕ. ೬೦) ; ಅರಸರ ತೈಲಚಿತ್ರಕ್ಕೆ ನಂದಾದೀವಿಗೆ ತಗುಲಿ, ಅದು ಉರಿದುಹೋಗುತ್ತದೆ (ಸಂಸಕ. ೯೯).
[ ತೈಲ$_1$ + ಚಿತ್ರ ]

**ತೈಲಧಾರೆ** (ನಾ). ಎಣ್ಣೆಯ ಸಂರಿತ,–ಸುರಿಯುವಿಕೆ : ಕಾಲವಕ್ಷಯ ದೀಪವದರ ಪಾತ್ರೆಯಪಾರ ಬಾಳ್ ಅದರಿನಾದೊಂದು ಕಿರುಹಣತೆ ಮಿಣುಕು ಗಾಳಿಯಾರಿವುದೊಂದನಿನ್ನೊಂದ ಹೊತ್ತಿವುದು ತೈಲಧಾರೆ ಯಖಂಡ (ಮಂಕುಕ. ೧೦೪). [ ತೈಲ$_1$ + ಧಾರೆ ]

**ತೈಲನಿಕ್ಷೇಪ** (ನಾ). ಭೂಮಿಯೊಳಗಿರುವ ಎಣ್ಣೆಯ ದಾಸ್ತಾನು,–ನಿಕ್ಷೇಪ : (Oil Reserve. ಪತ್ರಿನಿ. ೫೯). [ ತೈಲ$_1$ + ನಿಕ್ಷೇಪ ]

**ತೈಲಪ** (ನಾ). ಚಾಳುಕ್ಯವಂಶದ ಒಬ್ಬ ಪ್ರಸಿದ್ಧ ದೊರೆಯ ಹೆಸರು : ಚಕ್ರವರ್ತಿಯೊಳ್ತೈಲಪನೊಳ್ ಪಡೆದಂ ಮಹಿಮೋನ್ನತಿಯಂ . . . ರನ್ನಂ (ಗದಾಯು. ೧–೩೭) ; ಶ್ರೀಮಚ್ಚಾಳುಕ್ಯಚಕ್ರೇಶ್ವರನತುಳಬಳಂ ತೈಲಪಂ (ಇಅ. IV, ೨೦೮–೩ ; 1076) ; ಕಾಲಾಗ್ನಿರುದ್ರುನೆನಿಸಿದುದು ತೋಳ ಬಾಳ್ ತೈಲಪನಾ (ಕಮದ. ೧೦೭ ಪ್ರಯೋ). [ ? ]

**ತೈಲಪಕ್ವ** (ನಾ). ಎಣ್ಣೆಯ ಸ್ವರೂಪಕ್ಕೆ ಬರುವಂತೆ ಪಾಕವಾಗುವುದು : ಅರಗಿನ ಪುಡಿ ೧ ಪಡಿಯನ್ನು . . . ತೈಲಪಕ್ವವಾಗಿ ಅಟ್ಟು, ಶೋಧಿಸಿ ಕೊಂಡು, ಈತೈಲದಿಂ ಶರೀರಕ್ಕೆ ಲೇಪ ಅಭ್ಯಂಗನಾದಿಗಳಂ ನಡೆಸಲು . . . ಶೋಭೆ ಮುಂತಾದ ರೋಗಗಳು ಗುಣವಕ್ಕುಂ (ಸಕವ್ಯ. ೧೩೪).
[ ತೈಲ$_1$ + ಪಕ್ವ ]

**ತೈಲಪರ್ಣಿ** (ನಾ). ೧. ಗಂಧ ; ಚಂದನ : "ತೈಲಪರ್ಣಿ – ರಕ್ತ ಚಂದನ" (ಗಂಗಾಮು. ೧೫೭). ೨. ಸಾಂಬ್ರಾಣಿ ; ಹಾಲುಮಡ್ಡಿ ; ಲೋಬಾನ. ೩. ದೇವದಾರುವೃಕ್ಷದಿಂದ ತೆಗೆದ ಎಣ್ಣೆ : (೬).
[ ಸಂ. ತೈಲಪರ್ಣೀ ]

**ತೈಲಪರ್ಣಿಕ** (ನಾ). ಒಂದು ಬಗೆಯ ಗಂಧದ ಮರ : "ತೈಲಪರ್ಣಿಕಂ, ೧ ಬಹಳ ತಣ್ಣಗಿರುವ ಚಂದನವು" (ಸಿದ್ಧಾಂತಿ. ೨೦೪).
[ ಸಂ. ತೈಲಪರ್ಣಿಕಾ ]

**ತೈಲಪಾಕ** (ನಾ). ೧. ಎಣ್ಣೆಯಲ್ಲಿ ಹುರಿದ ಅಥವಾ ಕರಿದ ಪದಾರ್ಥ. ೨. ಎಣ್ಣೆಯನ್ನು ಉಪಯೋಗಿಸಿ ಒಂದು ಹದದಲ್ಲಿ ಕಾಯಿಸಿ ತಯಾರಿಸಿದ ಔಷಧಿಯ ವಸ್ತು : ತೈಲಪಾಕವನ್ನು ಮಾಡಲು ಎಣ್ಣೆ ಯನ್ನು ಹೇಳದಿರುವಲ್ಲಿ ಅಚ್ಚಳ್ಳೆಣ್ಣೆಯೆಂದು ತಿಳಿಯಬೇಕು (ಸಕವ್ಯ. XII). ೩. (?) : ಅನವರತ ಪ್ರಮುಚ್ಯಮಾನಪ್ರಚುರನಿಜನಾರಾಚ ರಾಜಿಯಿಂದಮವಿರಳ ಮದಜಳ ತೈಲಪಾಕ ದುರಾಲೋಕಂಗಳಪ್ಪ ತದ್ಬಲ ಕರಟಿಘಟಂಗಳನಲ್ಪತುಚ್ಛಚ್ಛಿದ್ರಂಗಳ್ಮಾಡಲ್ಪಡೆಯದೆಯುಂ (ಆ ದಿ ಪು. ೧೪–೧೦೩ ವ). [ ತೈಲ$_1$ + ಪಾಕ$_1$ ]

**ತೈಲಪಾಯಿಕೆ** (ನಾ). ೧. ಜಿರಳೆ ; ತೊಂಡಂಗಿ. ೨. ಒಂದು ಬಗೆಯ ಕೀಟ ; ಜೀರುಂಡೆ. ೩. ತೊಗಲಬಾವಲಿ : "ತೈಲಪಾಯಿಕೆ–ತೊಗಲ ಬಾವುಲಿ" (ಗಂಗಾಮು. ೧೫೭). [ ಸಂ. ತೈಲಪಾಯಿಕಾ ]

**ತೈಲಯ** (ನಾ). ಒಬ್ಬಾತನ ಹೆಸರು : ಚಾಗಿಗಳ ಬಲ್ಲಹಂ ಮಾರಹೂರ ತೈಲಯ (ಎಕ. VIII, ಸಾಗರ. ೭–೧೪ ; 1025).
[ ತೈಲ$_2$ + ಅಯ$_1$ (<ಅಯ್ಯ$_1$) ]

**ತೈಲಯಂತ್ರ** (ನಾ). ೧. ಎಣ್ಣೆಯನ್ನು ತೆಗೆಯುವ ಯಂತ್ರ ; ಗಾಣ. ೨. ಎಣ್ಣೆಯ ಹಬೆಯ ಸ್ಫೋಟನದಿಂದ ನಡೆಯುವ ಯಂತ್ರ,–ಎಂಜಿನು : ತೈಲಯಂತ್ರ (Oil-Engine)–ಇದರಲ್ಲಿ ಡೀಸಲ್‌ಎಣ್ಣೆಯಂಥ ಭಾರವಾದ ಎಣ್ಣೆಗಳನ್ನು ಇಂಧನವಾಗಿ ಬಳಸುತ್ತಾರೆ (ಶಿಲ್ಪನಾ. ೨೦೩).
[ ತೈಲ$_1$ + ಯಂತ್ರ ]

**ತೈಲರಂಧ್ರ** (ನಾ). "ಯಂತ್ರಗಳಲ್ಲಿ ತಿಕ್ಕಾಟ, ಮಸೆದಾಟ, ಕಡಮೆ ಮಾಡಲು ಘರ್ಷಣಾಪಹರಣಕ್ಕಾಗಿ ಎಣ್ಣೆ ಒಳಹೊಸರುವಂತೆ ಮಾಡಿರುವ ರಂಧ್ರ" (Oil-Hole. ಇಂಕನಿ). [ ತೈಲ$_1$ + ರಂಧ್ರ ]

**ತೈಲವರ್ಣ** (ನಾ). "ವರ್ಣದ್ರವ್ಯಕ್ಕೆ ಎಣ್ಣೆಹಾಕಿ ಅರೆದು ಮಾಡಿದ ಬಣ್ಣ" (Oil-Colour. ಇಂಕನಿ) : ಅನಂತರ ಈ ಕೆಲಸಗಳಿಗೆ ತೈಲವರ್ಣ (Oil-Colours) ವನ್ನು ಉಪಯೋಗಿಸತೊಡಗಿದರು (ಚಾಲಪ್ರ. I, ೩೯೩).
[ ತೈಲ$_1$ + ವರ್ಣ ]

**ತೈಲವರ್ತಿ** (ನಾ). ೧. ಎಣ್ಣೆಯಲ್ಲಿ ಅದ್ದಿದ ಬತ್ತಿ. ೨. ಎಣ್ಣೆಯ ಬತ್ತಿಯಿಂದ ಕೂಡಿದ ದೀಪ : ತೈಲವರ್ತಿ, ಘೃತವರ್ತಿ, ಕರ್ಪೂರವೆಂಬ ತ್ರಿವಿಧದೀಪಂಗಳಂ (ವಿವೇಕ. ೧೧೨). [ ತೈಲ$_1$ + ವರ್ತಿ ]

**ತೈಲವಾಯು** (ನಾ). ಇಂಗಾಲ ಮಿಶ್ರವಾದ ವಾಯು : ಕಾರ್ಬೋನನ್ನು, ಜಲವಾಯುಗಳ ಮಿಶ್ರಣದಿಂದ ಹುಟ್ಟುವ ಅಪಕಾರಕ ವಾಯುಗಳು–ಇವು ಕರ್ದಮೋತ್ಥವಾಯುವೆಂತಲೂ ತೈಲವಾಯುವೆಂತಲೂ ಎರಡು ಇರುತ್ತವೆ (ಮುಂಬಯಿ. ೬–೪೦). [ ತೈಲ$_1$ + ವಾಯು ]

**ತೈಲಶೋಧನಾಗಾರ** (ನಾ). ಎಣ್ಣೆಯನ್ನು ಶುದ್ಧೀಕರಣಗೊಳಿಸುವ ಕಾರ್ಖಾನೆ : (Oil-Refinery. ಪತ್ರಿನಿ. ೫೯).
[ ತೈಲ$_1$ + ಶೋಧನ + ಆಗಾರ ]

**ತೈಲಸಿಕ್ತ** (ನಾ). ಎಣ್ಣೆಯನ್ನು ಲೇಪಿಸಿಕೊಂಡಿರುವವನು : ತೈಲಸಿಕ್ತಂ ವಿರೋಧಿಪನೊರ್ವಂ ದ್ವಿಜ ಮುಕ್ತಕೇಶಿ . . . ಧೂಮಮುಂ ನಿಪುಣರ್ ಕಂಡರೆ ಪೋಗರ್ಶ್ರೆ (ಸೂಮುಶ. ೭೪). [ ತೈಲ$_1$ + ಸಿಕ್ತ ]

**ತೈಲಸ್ಫಟಿಕ** (ನಾ). ಒಂದು ಬಗೆಯ ಹವಳ ; ಶಿಲಾರಾಳ ; ಕರೋಬಾ ಮಣಿ : ಕಾರೂಬಾಮಣಿ, ಶಿಲಾರಾಳ, ತೃಣಮಣಿ, ತೈಲಸ್ಫಟಿಕ, ಅಂಬರ್ (Amber. ಇಂಕನಿ). [ ತೈಲ$_1$ + ಸ್ಫಟಿಕ ]

**ತೈಲಾಭ್ಯಂಗನ** (ನಾ). ತಲೆ ಮತ್ತು ಮೈಗೆ ಎಣ್ಣೆಯನ್ನು ಹಚ್ಚಿಕೊಂಡು ಮಾಡುವ ಸ್ನಾನ ; ಎಣ್ಣೆ ಸ್ನಾನ : ಅಂಗನೆಗೆ ಸೌರಭ್ಯ ತೈಲಾಭ್ಯಂಗನ ವನಾಚರಿಸಿ . . . ತಂದುಡಿಸಿದರು ನವದುಕೂಲವನು (ಬಸಪು. ೪–೩೪).
[ ತೈಲ$_1$ + ಅಭ್ಯಂಗನ ]

**ತೈಲಾಭ್ಯಂಜನ** (ನಾ). = ತೈಲಾಭ್ಯಂಗನ : ಅಂದು ಎಲ್ಲರೂ ತೈಲಾಭ್ಯಂಜನ ಮಾಡಿ . . . ಕಣ್ತುಂಬ ನಿದ್ರೆಮಾಡಬೇಕೆಂದು ರಾಜನ ಆಜ್ಞೆ (ನಟಸಾ. ೬೪೦). [ ತೈಲ$_1$ + ಅಭ್ಯಂಜನ ]

**ತೈಲಾರಿ** (ನಾ). ಎಣ್ಣೆಯ ಶತ್ರು ; ಎಣ್ಣೆಯನ್ನು ಹೋಗಲಾಡಿಸುವುದು ; ಸೀಗೆ : "ತೈಲಾರಿಯೆನಲಾ ಸೀಗೆಯಕ್ಕು" (ಮಂಗರಾ. ೪೫–೪೮).
[ ತೈಲ$_1$ + ಅರಿ$_6$ ]

**ತೈಲಾರ್ಚಿ** (ನಾ). ಎಣ್ಣೆಯ ದೀಪ : ಒಂದಾದ ಮೇಲೊಂದು ನಿರ್ವಾಣ ವೊಂದಲಾ ತೈಲಾರ್ಚಿತತಿ ಮಂಜುಮಂಜಾಗಿ ತೋರ್ದಡಂ, ಕೈಗಣ್ಮೆ ದೋಲಾಯ್ತು ಶೈಶಿರಜ್ಯೋತ್ಸ್ನೆ (ಶ್ರೀರಾಮಾ. ೪೪೪–೧೦೪).
[ ತೈಲ$_1$ + ಅರ್ಚಿ ]

**ತೈಲಿ** 'ಥೈಲಿ' ನೋ.

**ತೈಲಿಕ** (ನಾ). ಎಣ್ಣೆ ತೆಗೆಯುವವನು ; ಗಾಣಿಗ. [ ಸಂ. ]

**ತೈಲಿಗ** (ನಾ). = ತೈಲಿಕ : ಮಿಗೆ ತೈಲಿಗಂಗೆಳ್ಳು ಬೆಳೆದಂದಮಾಯ್ತು (ಅರಾಚ. ೮–೪೯). [ ತೈಲ$_1$ + – ಇಗ ]

**ತೈಲೀನ**$_1$, ತೈಳೀನ (ನಾ). ಎಳ್ಳು ಬೆಳೆಯುವ ಹೊಲ; ಎಳ್ಳಿನ ಹೊಲ : "ತಿಲ್ಯಂ, ತೈಲೀನಂ–ಈ ೨ ಎಳ್ಳ ಕೆಯ್" (ಹಲಾಯು. ೨೭-೮) : "ಎಳ್ಳ ಬೆಳೆವ ಕೆಯ್ ತೈಲೀನವೆನಿಸಿಕ್ಕು" (ಮಂಗರಾ. ೨೯-೪) ; ಲೀಲೆಯಿನದಟಿ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಪೌದ್ಗ್ರ . . . ತೈಲೀನಂ ಕೌದ್ರವೀಣಮೌಮ್ಯಂ ಯವ್ಯಂ (ಚಂದ್ರಪು. ೧-೯೧). **ತೈಳೀನ :** ಏನೆಸೆವುವೊ ಕೌದ್ರವೀಣದೌಮಾನದ ತೈಳೀನದ ಮಾಷೀಣದ ಮೌದ್ಗೀನದ ಬಹುಸಾರ ಸಸ್ಯಸಕಳಫಳಂಗಳ್ (ಪುಷ್ಪಪು. ೨-೧೨). [ ಸಂ. ]

**ತೈಲೋಕಪೊಟಲ್** (ನಾ). ಒಂದು ಸ್ಥಳದ ಹೆಸರು : ತೈಲೋಕಪೊಟಲಂ ದೊಪ್ಪುಬೆಪ್ಪೆ ಆಳುತ್ತಿರೆ ಅಲ್ಲಿ ಕೊಟ್ಟದು ಅಱುಗಣ್ಣುಗ ಮಣ್ಣು (ಎಕ. XII, ಶಿರಾ. ೨೪-೪೩; ಸು. 900). [ ತೈಲೋಕ$_0$ + ಪೊಟಲ್$_2$ ]

**ತೈಳ** 'ತೈಲ$_2$' ನೋ.

**ತೈಳೀನ** 'ತೈಲೀನ' ನೋ.

**ತೊಂಗಲ್**, ತೊಂಗಲು (ನಾ). ೧. (ತೂಗಾಡುವ) ಗೊಂಚಲು ; ಗಂಚ್ಚ ; ಕಂಚ್ಚು ; ಗೊಂಡೆ : "ತೊಂಗಲ್ ತೊಂಬೆ ಗೊಂಚಲ್ ತೊಡಂಬೆ ನುಣ್ಕೊದೆದ ಜೊಂಪಂ ತೊಂಗೆ ಗುಚ್ಛಮೆಂದಿರದೊಪ್ಪಿ ಪದ್ದೆದ ನಾಮಂ" (ಕಬ್ಬಿಕ್ಕ. ೧೯); ಪೊಂದಳಿರ ತೊಂಗಲ್ಗಳ ಸುತ್ತುಗೊಂಡ ಸುರಿಗೆಯ ಮುತ್ತಿನ ಬುಂಭುಕಂಗಳ ನಡುವೆ ಕಡೆಯಿಕ್ಕಿದ ಬಿಡುಮುತ್ತಿನ ಪೊಡರ್ದುಣ್ಮುವ ಬೆಳಗು (ಆದಿಪು. ೮-೧೫ ವ) ; ಘನನಿತಂಬಬಿಂಬಮಂ ಬಳಸಿದ ನೂಲ ತೊಂಗಲ ಮಧುರಧ್ವನಿ . . . ಪೊಣ್ಮೆಯುಂ (ಮಲ್ಲಿಪು. ೪-೯೭) ; ತಳಿರ ತೊಂಗಲ ಗದ್ದುಗೆಯೊಳೋಲಗಂಗೊಟ್ಟು . . . ಮುನಿನಾಥ ಕಣ್ಗೆಸೆದಿರ್ದನು (ಹರಿಶ್ಚ. ೫-೭೭); ತಳಿರ ತೊಂಗಲ್ ಕೆಂಜೆಡೆಯ ಬಿಂಕಮಂ ಬೀಱಿ . . . ನೇಱಿಲ್ವರಂ ಚೆಲ್ವಾದುದು (ಪದ್ಮರಾ. ೮-೩೦). ೨. ಹೂವಿನ ಗೊಂಚಲು: "ತೊಡಂಬೆ . . . ತೊಂಗಲ್, ಜೊಂಪಂ, ಗೊಂಚಲ್, ಗುಚ್ಛಂ-ಈ ೭ ಪುಷ್ಪಮಂಜರಿ"(ಕರಸಾ. ೦೮-೧೯೭). ೩. ಗುಂಪು; ರಾಶಿ; ಸಮೂಹ: ಸಂಗಡಿಸಿದ ಕಱುಜಡೆಗಳ ತೊಂಗಲ್ಗಳಿನೊಪ್ಪೆ ಜಾನು ಚಂಕ್ರಮಣಂ . . . ಸಿಂಗದ ಮಱಿಯಂತಿರೆಸೆದು ತೋರ್ಪ ಕುಮಾರಂ (ಕಾದಂಪೂ. ೩೫೭) ; ಧರಿತ್ರಿಯೊಳ್ ಕೆದಱುತುಮಿರ್ಪ ತಣ್ಗದಿರ ತೊಂಗಲ ಡಂಗೆ . . . ಮಾಸಿದ ಮುಕುರಂಬೊಲಂತೆ ವಿಗತಪ್ರಭನಾಯ್ತು ಮೃತಾಂಶು ಮಂಡಲಂ (ಕುಸುಮಾ. ೪-೬೭) ; ನೆಣವಸೆಯ ತೊರಳೆಯ ತೊಂಗಲಿ ನೊಂದೆಸೆವ ಚಕ್ರವ ನೋಡಿದನು ದೈತ್ಯಾರಿ (ಕುಮಾ.ಭಿ. ೬-೩೨). ೪. ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ: ಒಪ್ಪುವ ವೀರಪಟ್ಟ ಮುದಯಂಗೆಯ್ಯುಂದುವಂ ತೋರ್ಪ ತೊಂಗಲೆ ಜಂಬೂವಿಟಪಪ್ರಹಾರ ರುಚಿಯಂ ವಕ್ತ್ರಾರುಣಂ ಸಂಜೆಯಂ ಗೆಲೆ ಪೋಲ್ತತ್ತು (ಕಾವ್ಯಸಾ. ೫೨೫ ಕೊದ್ರುಕ) ; ಹರನರಸಂ ಸುರನ್ನೀರದ ಗುಣ್ಣು ಜಟಾವಳಿ ತೊಂಗಲಿನ್ದ ದುರ್ಧರ ಗಿರಿಸೇತು ಧರ್ಮ್ಮಗಳೆಯಂಕದ ಮುದ್ದಳೆ (ಎಕ. XII, ಶಿರಾ. ೨೪-೭೭ ; 943) ; ಆದಿತ್ಯನ ಎಲವೆ ಮಾಬಲಮಾಗೆ ಚನ್ದ್ರನೆ ಚನ್ದ್ರಬಲ ಮಾಗೆ ನಕ್ಷತ್ರ ತಾರಾಗಣಗಳೆ ತೊಂಗಲಾಗೆ (ಎಕ. X, ಕೋಲಾರ. ೧೭೦-೧೫; ಸು. 1180 ?). ೫. ತೂಗಾಟ ; ನೇತಾಡುವಿಕೆ. 'ತೊಂಗಲಿಸು' ಪರಾ. ೬. ಒಂದು ಬಗೆಯ ಆಯುಧ (?) : ರಾಹುವೇ ತೊಂಗಲಾಗಿ ಕೇತುವೇ ಸುರಿಗೆಯಾಗಿ ಕುಳಿಕನೇ ಮೊನೆಯಾಗಿ (ಎಕ. VII, ಶಿಕಾರಿ. ೧೦೪-೪೩ ; 1054). ೭. ಜುಟ್ಟು (?) : ಘಗದೆಡೆಮಾಡು ಚಪ್ಪರಿಸು ರೂಪಿಡು ಕೂಪಿಡು ಕೂರ್ಪುದೋಱು ಪಾಱಿಗಿಯದೆ ಕೂರ್ಮೆ ಮಿಕ್ಕು ತೆಗೆ ತೊಂಗಲನಿಂಬೆನೆ ನೂಂಕು ಯುದ್ಧಮಂ (ಕಾವ್ಯಾವ. ೪೧೭). **ತೊಂಗಲು :** ೧. "ತೊಂಗಲಿನೆ ತೊಡಂಬೆಯೆನಲ್ಕೆ ಗುಚ್ಛಂ" (ಕರಿರ. ೪೮); ತೊಡಕುಗುರುಳಿನ ತೊಂಗಲಿನ ಹೊಱವಡುವ ನೆತ್ತರ ಬಾದಣದ . . . ಹೊರಳುವ ಹೆಣನ ರಾಶಿಯುಲಿಡಿದುದಿಳೆ ಕಲಿಕುಂಭಕರ್ಣನ ಕರದ ಕದನದಲಿ (ತೊರರಾ. ೬-೨೮-೫೦) ; ಹೊಂಗೇದಗೆಯದಿರ್ಗಂಚಿ ಕಮ್ಮಲರ್ಗಳ ತೊಂಗಲು ಮೆಱೆದುವಪ್ಪುದಲಿ (ಮೋಹತ. ೧೭-೧೯). ೭. ತುಱಿಲಸಂದಂಗನುವರಂ ಮುಟ್ಟಿದೊಡಂ ಶ್ರಾವಕಂಗೆ ಬೋಧಿ ಪುಟ್ಟಿದೊಡಂ ಅ ತ ೦ ತೊಂಗಲ[ಪಾಠಾಂ. ತೊವಲ]ನೇಱಿಸಿ ಕೊಂಡು ನಡೆವುದು ಈತಂ ಮಹಾವ್ರತಂಗಳನೇಱಿಸಿಕೊಂಡು ತಪೋವನಕ್ಕೆ ನಡೆವುದು (ಜೀವಸಂ. ೨೦೨-೩).

**ತೊಂಗಲಾಡು** = ತೂಗಾಡು ; ಅ ಲು ಗಾ ಡಂ : ಉರಿಗಣ್ಣ ಜಾಲ ದಳ್ಳಿಸೆ ನಿಚ್ಚವಚ್ಚದ ಪಂದಲೆ ತೊಂಗಲಾಡೆ . . . ಮಾರುತಿಗೈ ವೊಗಂ ಮುವ್ಮೊಗನಾಗೆ ಜಡಿದಂ (ರಾಮಾಶ್ವ. ೦೩೨-೮).

[ ದೇ. ॥ ತಮಿ. ತೊಜ್ಜಲ್ ; ಮಲ. ತೊಜ್ಜಲ್ ; ತುಳು. ತೊಂಗೆಲ್, ದೊಂಕೆಲ್ ; ತೆಲು. ತೊಂಗಲಿ ]

**ತೊಂಗಲಿಸು** (ಕ್ರಿ). ತೂಗಾಡಂ ; ನೇತಾಡು : ಚೆಲ್ವ ದಶಾಂಗಮುಖ್ಯದ ನಱುಪೊಗೆಗಳಿಂ ತೊಂಗಲಿಪ ಸರಘಂಟೆಯಿಂ ಮೆಱೆವುದನರಸ ಕಂಡ (ಸಾಳ್ವಭಾ. ೪-೯೦). [ ತೊಂಗಲ್ + – ಇಸು$_3$ ]

**ತೊಂಗಲು** 'ತೊಂಗಲ್' ನೋ.

**ತೊಂಗಲುಗುರುಳ್** 'ತೊಂಗಲ್ಗುರಳ್' ನೋ.

**ತೊಂಗಲ್ಗಂಟೆ** (ನಾ). ಗಂಟೆಗಳ ಗುಚ್ಛ ; ಗಂಟೆಸರ : ತೋಳ ಕಟ್ಟಳಿಯ ತೊಂಗಲ್ಗಂಟೆಯ ಜೋಡುಶಂಖದ ಜಗಜಂಪಿನ ಸತ್ತಿಗೆಯ ಪಲಬಿರುದು ಗಳ್ಗಳ್ಗೆವಡೆಯ (ರಾಜಶೇ. ೬-೧೦ ವ). [ ತೊಂಗಲ್ + ಗಂಟೆ$_2$ ]

**ತೊಂಗಲ್ಗುರುಳ್**, ತೊಂಗಲುಗುರುಳ್ (ನಾ). ದಟ್ಟವಾದ ಕೂದಲಂ; ಒತ್ತೊತ್ತಾಗಿರುವ ಮುಂಗುರುಲು : ನೊಸಲಂ ತೊಂಗಲ್ಗುರುಳ್ ಮೇಲುದನೊಗೆವ ಕುಚಂ ಬೆನ್ನನಾ ನೀಳಕೇಶಪ್ರಸರಂ . . . ಓರಂತಲೆಯೆ ಭರತನಂ ನೋಡಲ್ಕೆತಂದಳೊರ್ವಳ್ (ಆದಿಪು. ೧೧-೦೭); ರವಿ ಹಿಮಕಿರಣಂ ಕುಂಡಲಂ ನೀಲಮೇಘಪ್ರಕರಂ ತೊಂಗಲ್ಗುರುಳ್ಗಳ್ (ಧರ್ಮಾಮೃ. ೯-೨೩೦) : ನಗೆಮೊಗಂ ತೊಂಗಲ್ಗುರುಳ್ ಕೆಂದಳಂ . . . ಚೆಲ್ವಾಗಿರೆ ನಿಂದ ಬೇಡಿತಿಯರಂ ಕಂಡಂ ಮಹೀವಲ್ಲಭಂ (ಕಾವ್ಯಾವ. ೨೦೭); ತೆಳ್ವಸುಱಿ ತೊಂಗಲ್ಗುರುಳ ವಿಮಲ ಪದ್ಮಾವತಿಯ ನಿಟ್ಟಿಸಿದನು (ರಾಘಚ. ೦೩-೨೪). **ತೊಂಗಲುಗುರುಳ್ :** ತೊಳಪಗಂಗಳ ನಗೆಮೊಗದ ತೊಂಗಲುಗುರುಳ ಸುಲಿಪಲ್ಲ . . . ಕಡು ಚೆಲುಶಬರಿಯರು ಕಾಳರಾತ್ರಿಯ ಸಿರಿಗಳೆನಿಸಿದರು (ಸಾಳ್ವಭಾ. ೦೭-೭). [ ತೊಂಗಲ್ + ಕುರುಳ್$_1$ ]

**ತೊಂಗಲ್ಗೊಳ್** (ಕ್ರಿ). ೧. ಗೊಂಚಲಾಗು ; ಜೊಂಪೆಯಾಗು : ತೊಂಗಲ್ಗೊಂಡುರು ಕರ್ಣಿಕಾರದಲರಂ ನಲ್ವಾಱವಣ್ಣಂ ಮಹೇಶಾಗಿತ್ತಳ್ (ಉದ್ಭಟ. ೯-೦೨) ; ತೊಂಗಲ್ಗೊಂಡಿರ್ದ ಕೆಂಪಾದಸುಗೆಯ ತಳಿರಂ . . . ಕೊಟ್ಟನೊರ್ವಂ (ಕಬ್ಬಿಕಾ. ೮೮). ೨. ರಾಶಿಯಾಗು ; ಒಟ್ಟಾಗು : ಪದ್ಧಕ್ರೋಕ್ತಿ ತೊಂಗಲ್ಗೊಂಡಿರ್ಪನವೊಲ್ದು ನಿಟ್ಟಿಸಿ ಸಮಂತಾ ನಂದಮುಂ ತಾಳ್ದು (ಉದ್ಭಟ. ೧೧-೭೯). [ ತೊಂಗಲ್ + ಕೊಳ್$_1$ ]

**ತೊಂಗಲ್ದೊಂಗು** (ಕ್ರಿ). ಗೊಂಚಲಾಗಿ ತೂಗಾಡು : ಬಳ್ಳಿಯೊಳೆ ಪಣ್ತು ತೊಂಗಲ್ದೊಂಗುವ ತೊಂಡೆಯ ಕಟಿವಣ್ (ರಾಮಾಶ್ವ. ೭೦-೧೧).

[ ತೊಂಗಲ್ + ತೊಂಗು$_1$ ]

**ತೊಂಗಲ್ವರಜೆ** (ನಾ). (ಅಲಂಕಾರದ) ಗೊಂಡೆಗಳಿಂದ ಕೂಡಿದ ಹಗ್ಗ : ಕನಕಘಂಟೆಗಳ್ಮಿಳಿರ್ವ ಕೊರಲ ಮಿಸುನಿಯ ತೊಂಗಲ್ವರಜೆಯ ಚಿನ್ನಮಣಿ ಪುದಿದ ಪಕ್ಕಗಂಟೆಯ . . . ಗಂಧಸಿಂಧುರಸಂದೋಹದಿಂ (ರಾಜಶೇ. ೬-೧೧ ವ). [ Pಇದು 'ತೊಂಗಲ್ವೊರಜೆ' ಎಂಬುದರ ಅಪಲಿಖಿತ ]

**ತೊಂಗಳೆ** (ನಾ). (?) : ತೊರಳೆ ತೊಂಗಳೆ ಮಜ್ಜೆ ಮಾಂಸಗಳನು ಸವಿದುರು ಭೂತದೆಂಜಲು ಕೈಗೆ ಎಱೆವ ಘಟದ ವಾರಿಗಳೆನೆ ರಕ್ತವ ಕಱೆದುವು ಭಟರ ಖಡ್ಗಗಳು (ಶಂಸವಿ. ೦೫-೫೩). [ ? ]

**ತೊಂಗಿಸು** (ಕ್ರಿ). ಒದಗಿಸು ; ಒಡ್ಡು : ಅಂಗಜ ಹೆಂಗಳ ಸಿಂಗರ ವನದೊಳು ತೊಂಗಿಸಿ ಮುನಿಮೃಗಾವಳಿಯ ಜಂಗುಳಿಗೊಡ್ಡಿದ ಬೆಳ್ಬರ ವಲೆಯೆನೆ ಕಂಗೊಳಿಸಿತು ಸೂಳೆಗೇರಿ (**ಕಂಸವಿ. ೬-೯೧**).

[ ತೊಂಗು$_1$ + – ಇಸು$_3$ ]

**ತೊಂಗು$_1$** (ಕ್ರಿ). ೧. ತೂಗಾಡು ; ಜೋಲಾಡು ; ತೊನೆದಾಡು : ತೊಂಗುವ ಫಲಾವಳಿಯ ಭಾರಂಗಳಾವಗಂ ಪಿಂಗವು (**ಜೈಮಿಭಾ. ೧೯-೬**) ; ಕಮ್ಮಲರ್ಜೊಂಪವೆ ಜಲ್ಲರಿಯಾಗೆ ಪಣ್ತು ತೊಂಗುವ ಪಣ್ ಫಲಾವಳಿಯಾಗೆ (**ರಾಮಾಶ್ವ. ೫೭-೨೭**). ೨. ಬಾಗು ; ಬಗ್ಗು : ತೊಲಗು ಚಿಂತೆಯೆ ವಿಕಟಗುಹೆಯೊಂದು ನಿನಗಿರಲಿ . . . ತೊಂಗಿದರೆಗಲ್ಲುಗಳ ಮರೆಗೆ ಬೇಗನೆ ಹಾರು (**ಭಾವಗೀ. ೨೨೭**). ೩. ಹೊರಟುಹೋಗು; ಸರಿ : ಅವಳ ಪೊತ್ತ ಮನದ ತಲೆಗೆ ನೋವು ತೊಂಗದಾ ನೋಟಕಜನದ (**ಕುರಾಸಾಂ. ೨೧-೭೨**) ; ತೊಂಗಿದ ಹಲ್ಲು ಬಹವೆ (**ಭರಜ. ೩೯-೯೧**). ೪. ಒದಗು ; ಉಂಟಾಗು ; ದೊರಕು : ಅಲಘುರುಜೆಗಳ್ತೊಂಗೆ ನಾರುಬೇರ್ವಣಿ ಮಂತ್ರಗಳನೊಲ್ಲದಿಹುದು ಮೂವತ್ತೆಂಟನೆಯ ಶೀಲ (**ಪಾಸೋಪು. ೨-೭೭**); ಲಿಂಗದ ಹಾರ ಜಂಗಮದರ್ಥದಾಗರ ತೊಂಗುವ ಭವಕೆ ನೀ ದೂರ (**ಅಮುಸಾಂ. ೫-೯೩**); ವೈಭವಂ ಪಿಂಗಿ ತೊಂಗಿದ ದರಿದ್ರದುಃಖದೊಳಾರ್ಯ ಚೂಡಾಮಣಿಯ ಬಳಿಗೆ ಬಂದು (**ಕೊಟ್ಬೂಬ. ೧೩-೩೪**). ೫. ಬಯಸು ; ಆಸೆಪಡು : ಹೊಂಗುವ ಮನ ಶಿವಪೂಜೆಗೆ ತೊಂಗುವ ಮನ (**ಶಂಕಕಂ. ೨೭**). [ **ದೇ.॥ ತಮಿ. ಮಲ. ತೊಙ್ಙು ; ತೆಲು. ತೊಂಗು** ]

**ತೊಂಗು$_2$** (ನಾ). ೧. ಜೋಲು ಬಿದ್ದಿರುವುದು ; ನೇತಾಡುವಿಕೆ : (**ಕ**). ೨. ಆಧಾರವಿಲ್ಲದಿರುವಿಕೆ : ಹಂಗು ಹರಿದ ಮೇಲೆ ತೊಂಗೇನು ತೊಡರೇನು? (**ಗಾದೆ**).

**ತೊಂಗುತೊಸಗು** = ತಪ್ಪನ್ನು ಹುಡುಕುವಾಗ ಆಡುವ ಮಾತು : ಎಂಥ ಪದಾರ್ಥವನ್ನು ತಂದುಕೊಟ್ಟರೂ ತೊಂಗುತೊಸಗು ಎಂದು ಹೇಳುತ್ತೀರಿ (**ಪಂಯಾತ್ರ. ೫೫**). [ <ತೊಂಗು$_1$ ]

**ತೊಂಗೆ, ಜೊಂಗೆ** (ನಾ). ೧. ಗೊಂಚಲು ; ಗುಚ್ಛ : "ತೊಂಗಲ್ ತೊಂಬೆ . . . ತೊಂಗೆ ಗುಚ್ಛಮೆಂದಿರದೊಪ್ಪಿ ಪದೆದ ನಾಮಂ" (**ಕಬ್ಬಿಕೈ. ೧೯**) : "ತೊಡಬೆ . . . ಗುಚ್ಚಂ ಸೊಗಯಿಪ ತೊಂಗೆಯೆ ತೊಂಗಲ್ ಬಗೆಯಲ್ ಬುಧರಿಂದೆ ಗುಚ್ಛಕಕ್ಕುಂ ನಾಮಂ" (**ಕವಿಕಂ. ೭೮**). ೨. ಹೂವಿನ ಗೊಂಚಲು : "ತೊಡಂಬೆ, ತೊಡಬೆ, ತೊಂಗೆ . . . ಗುಚ್ಛಂ–ಈ ೭ ಪುಷ್ಪಮಂಜರಿ" (**ಕಶಸಾ. ೫೫-೧೯೬**). **ಜೊಂಗೆ** : ೧. ತ್ರಿಕೂಟವೆಂದೆಂಬ ತ್ರಿವಿಧಮೂಲೆಯ ಜೊಂಗೆ (**ಚಿಬಾವ. ೫೮-೬**).

[ **ದೇ.॥ ತುಳು. ತೊಂಗೆ, ಜೊಂಕೆ, ದೊಂಕೆ** ]

**ತೊಂಚವಂಚ**, ತಂಚಾವಂಚ, ತೊಂಚಾವಂಚ (ನಾ). ಹಿಂದು ಮುಂದು ನೋಡುವಿಕೆ ; ಅನುಮಾನ ; ಮೀನಾಮೇಷ : ಎಣಿಸುವುದು : ಏನು ಹೇಳಬೇಕೋ ತಿಳಿಯದೆ ತೊಂಚವಂಚಪಡುತ್ತ ಇದ್ದ ಆನಂದ (**ಮರಳಿ. ೩೭**). **ತಂಚಾವಂಚ** : ಈ ತಂಚಾವಂಚದಲ್ಲಿಯೇ ಕಾಲ ಕಳೆದು ಹೋಗಿತ್ತು (**ರೂಪಸ. ೧೬**). **ತೊಂಚಾವಂಚ** : ವಿಷಯವನ್ನೇ ಆಯ್ಕೆ ಮಾಡಿ ಎಂದರೆ ಕೊಂಚ ತೊಂಚಾವಂಚ (**ಮನೋನಂ. ೦೪೪**). [?]

**ತೊಂಚಾವಂಚ** 'ತೊಂಚವಂಚ' ನೋ.

**ತೊಂಟತನ** (ನಾ). ತೊಂಡುತನ (?) : ಏಳನೆ ಗುಣ ಜಱಿದು ಎಂಟನೆ ಗುಣದ ತೊಂಟತನವ ಬಂಧಿಸಿ ತೋಱುವದಕ್ಕೆ ಮುನ್ನವೇಮನ ಜಾಱಿನಿಂದ ಮತ್ತೆ ಮೀಱಲಿಲ್ಲವಾಗಿ (**ಮೋಳಿಮಾ. ೧೯೩-೭೨೭**).

[ ತೊಂಟ$_0$ + – ತನ ]

**ತೊಂಡ$_1$**, ತಂಡು$_3$ (ನಾ). ೧. ಸೇವಕ ; ಗುಲಾಮ : ತೊತ್ತು ತೊಂಡರ ಕಾಲ ತೊಳೆದು ಸೇವೆಯ ಮಾಡಿ ಬದುಕುವನ ಪಡಿದೊತ್ತಿನ ಮಕ್ಕಳೆಂದು ಎಂಬರಲ್ಲದೆ ರಾಜಕುಮಾರನೆಂದೆನ್ನರು (**ಚನ್ನವ. ಕ. ೦೮೫-೪೦೫**) ; ಮಡದಿ ತೊಂಡನೆನುತ್ತ ನೀರೆಱೆಯದಿರೆ ಕೈಯ ಕಡಿದು ಹಾಯ್ಕೆಯೆ ಮೆಱೆದ ಕಲಿಕಂಬರು (**ಲಶಿಚಂ. ೩೫-೪೩**) : ತೊತ್ತುಗೈವುದು ಲೋಕವೀತಗೆ ಮೃತ್ಯುಗಿತ್ಯುಗಳಿವನ ತೊಂಡರು (**ಕೌಶಿರಾ. ೨೫-೭**) : ಚಾಮುಂಡಿಯನೊಲಿಸಿ ಕೊಂಡವನ ತೊಂಡನ ಮಾಡಿಕೊಡುವೆನು ನಿನಗೆ (**ಕುರಾಸಾಂ. ೨೪-೩೭**). ೨. ಭಕ್ತ; ಆರಾಧಕ: ಮಾಡುವವರೆಲ್ಲರೂ ಮಹಾಲಕ್ಷ್ಮಿಯ ತೊಂಡಂದಿರು (**ಸರ್ವವ. ೬೩-೩೩೯**) : ಪುರಂದರವಿಠಲನು ತೊಂಡರಿಗೆ ತೊಂಡನಾಗಿ ಸಂಚರಿಸುತಿಹನು (**ಪುರಂದ. ೦-೧೪೭-೩**) : ತಿರುಕುರುಂಬೆಯ ತೊಂಡರಂದು ಕಂಥೆಯನೊಗೆದು . . . ಕೈಲಾಸಮಂ ಪೊಕ್ಕರು (**ಚೆಬಪು. ೫೫-೩೭**). ೩. ಮುದಂಕ ; ವಯಸ್ಸಾದವನು ; ವೃದ್ಧ. 'ತೊಂಡಜ್ಜ' ಪರಾ. **ತಂಡು$_3$** : ೧. ನೀನಾಡಿಸಿದಂತೆ ನಾನಾಡುತ್ತಿದ್ದೆ ಸಂಜ್ಞೆಯನಱಿದ ತಂಡಿನಂತೆ ವೇದಿಸಿದುದ ನಾ ಸಾಗಿಸಿದೆ (**ಸಗಚೂ. ೮೫**).

**ತೊಂಡಮಂಡಳಿಕ** = ಮಲೆತ ಸಾಮಂತ ; ಸೊಕ್ಕಿದ ಮಾಂಡಳಿಕ: ಅಹಿತಮಂಡಳಿಕ ಕಾಳಾನಳ ತೊಂಡಮಂಡಳಿಕ ಮಂಡಳಪ್ರಚಂಡ ದೌವ್ವಾರ್ನಳ (**ಎಕ. II, ೦೪೩-೨೩ : 1131**): ತೊಣ್ಡಮಣ್ಡಳಿಕ ಕುಳಾಚಳ ವಜ್ರದಣ್ಡ ಬಿರುದ ಭೇರುಣ್ಡ ಕಂದುಕಾಚಾರ್ಯ್ಯಂ (**ಮೈಆರಿ. ೦೯೩೦, ೭೯-೫ : 1191**). **ತೊಂಡರ ತೊಂಡ** = ಸೇವಕರ ಸೇವಕ ; ತೊತ್ತಿನ ತೊತ್ತು; ದಾಸಾನುದಾಸ : ನಮ್ಮ ನೀಲವರ್ಣ ತೊಂಡರ ತೊಂಡ (**ವಾದಿಕೀ. ೦೨೭-೧೪**). [ **ದೇ.॥ ತಮಿ. ತೊಣ್ಡ ; ಮಲ. ತೊಣ್ಡ** ]

**ತೊಂಡ$_2$**, ತುಂಡ$_1$ (ನಾ). ೧. ಮಲೆತವನು ; ತಂಟ ; ಸ್ವೇಚ್ಛಾವೃತ್ತಿಯವನು ; ಉದ್ಧಟ : ತೊಂಡ ಬೇಡನು ಇಂತು ಮಾಡುವನೆ (**ಕಣ್ಣರ. ದೇ. ೦೪೫-೪**): ತೊಡರ್ದರನೊತ್ತಿ ತೊಂಡರನಮುಂಕಿ ಕಡಂಗುವರಂ ಕಳಲ್ಚಿ (**ಎಕ. VII, ಸಾಗರ. ೦೫-೩೨ ; 1218**) : ದಯಾವಿಹೀನನಧರ್ಮಂ ತೊಂಡನತಿಕಲುಷಿತಪಾಪದ ಪಿಂಡನೆನಿಪ್ಪವನೆ ಕೃಷ್ಣಲೇಶ್ಯೆಯ ಜೀವಂ (**ಶ್ರಾವಕಾ. ೭೧-೯**); ತೊಂಡ ಕೇಳೈ ನಿನಗೆ ಸತಿಯರು ಹೆಂಡಿರಾಗಿಯು ಮಕ್ಕಳಾಗಿಯು ಹಿಂಡು ಗೋಧನವಿದ್ದು ನೀವೇ ಮತ್ತೆ ಬೇಱಿಲ್ಲ (**ಕೌಶಿರಾ. ೩೩-೨೭**) : ಪಡಿಮಾತೇನಾ ಪಾತಕ ತೊಂಡನ ಕೆಡಹಿ ಕೊರಲ ಕೊಯಿಸುವೆನು (**ಕುರಾಸಾಂ. ೩೪-೧೫೭**); ಬಡಿ ಬಡಿ ತೊಂಡರ ಬಾಯನೆಂದನು ಚಕ್ರಿ (**ಭರಜ. ೩೬-೮೮**). ೨. ಕಳವು ಮಾಡುವವನು; ಕಳ್ಳ; ಚೋರ : (**ಕ**). **ತುಂಡ$_1$**: ೧. ದ್ರವ್ಯಾಪಹಾರರಿಗೆ ತುಂಡರಿಗೆ . . . ಇದು ತಾ ಯೋಗ್ಯವಲ್ಲೆಂದ (**ಜ್ಞಾನಸಿಂ. ೩೧-೪೭**) : ಜಗಳಗಂಟರೂ ತುಂಡರೂ ಅಪ್ರಮಾಣಿಕರೂ ಇರುತ್ತಾರೆ (**ಕಭಾಗ. ೨೨೮**). ೩. ನಿಷ್ಕರುಣಿ; ಕಠೋರಮನಸ್ಸಿನವನು: ತುಂಡನಾದ ಯಮನು ಬಂದು ಮಂಡೆ ಮೇಲೆ ಹೊಯ್ಯುವಾಗ ಹೆಂಡಿರು ಮಕ್ಕಳು . . . ಬಿಡಿಸೋದಿಲ್ಲ (**ಪುರಂದ. ೩-೮೧-೫**). 'ತುಂಟ' ಪರಾ.

**ತೊಂಡರ ಗಂಡ** = ದುಷ್ಟರನ್ನು ನಾಶಮಾಡುವವನು ; ಒಂದು ಬಿರುದು : ತೊಣ್ಡರ ಗಂಡನುದ್ಧತರ ಗಂಡನೋಱಂಟರ ಗಂಡನುಕ್ಕಿದುದ್ದಂಡರ ಗಂಡನೀ ಬೇಡರ ಗಂಡ (**ಸೌಇಇ. IX-i, ೨೫೭-೨೧ : 1150**).

[ ತೊಂಡು$_1$ + – ಅ$_7$./ಮಲ. ತೊಣ್ಣ ]

**ತೊಂಡ$_3$** (ನಾ). ೧. ಬಾಯಿ; ಮುಖ: ನೀಳ್ದ ನಿಡುಗಣ್ ಬೆಳಗೆ ತೊಂಡಂ ಬೆಳಗೆ ತೊಂಡರದ [**ಪಾಠಾಂ. ಚೆಂಬುದರ**]ಮಾಟ್ಕೆ[ಯಿನೊಡಂಬಡುತ ಲಾಡಿದಳು ಬೆಂಬಱಿಯ ಸಂಭ್ರಮದಲೊರ್ವಳ್] (**ಸೂಕ್ತಿಸು. ೦೩-೦೦**). ೨. ಕೊಕ್ಕು; ಚಂಚು: ಮಂಡಲೆವುತ ವಿಹಗರಾಜ ತೊಂಡದಿಂದಲೀ ತುಂಡಿಸಲ್ಕೆ (**ದೇವೀಪ್ರ. ೭೭**). ೩. (ಆನೆಯ) ಸೊಂಡಿಲು : ಬಂಧುಜನರೆಲ್ಲರನ್ನೂ ಖಡ್ಗಪ್ರಹಾರದಿಂದ . . . ಗಜತೊಂಡಕ್ಕೆ ಸಿಕ್ಕಿದ ಬಾಳೆಯ ಗಿಡದಂತೆ ಭಿನ್ನಭಿನ್ನವಾಗಿ ಖಂಡಿಸಿದರು (**ಪುರಾವಿ. ೭೫**).

[ <ಸಂ. ತುಂಡ ]

**ತೊಂಡ$_4$** (ನಾ). ಒಬ್ಬಾತನ ಹೆಸರು: ಆತನಿಂ ಬಳಿಕಂ ಗಾವುಣ್ಡಗೆ ನಿನ್ದನಾಹವಶೌಣ್ಡಂ ತೊಣ್ಡಂ (ಸೌಇಇ. XI-1, ೪೫-೦೩ : 980). [ ? ]

**ತೊಂಡಂಗಿ, ಜೊಂಡಿಂಗ, ಜೊಂಡಿಗ,** ತಂಡಂಗಿ$_2$, **ತೊಣ್ಣಂಗಿ** (ನಾ). ಒಂದು ಬಗೆಯ ಹಲ್ಲಿ ; ಜಿರಲೆ: "ಮುಖಲೋಮಿ ತೊಂ [ ಪಾಠಾಂ. ತುಂ]ಡಂಗಿಯುಕ್ಕುಂ" (ಮಂಗರಾ. ೪೯-೦೩). **ಜೊಂಡಿಂಗ :** ಸಣ್ಣ ಸಣ್ಣ ಇಲಿಗಳೂ ಜೊಂಡಿಂಗಗಳೂ ಪರಸ್ಪರ ಅಹಿಂಸಾಭಾವದಿಂದ ಸ್ವಚ್ಛಂದವಾಗಿ ಅತ್ತಿತ್ತ ಓಡಾಡುತ್ತಿವೆ (ಕುರಿಹಿಂ. ೧೪೪). **ಜೊಂಡಿಗ :** ರಾಜ್ಯದ ಹೆಗ್ಗಣಗಳ ತಾನೊಕ್ಕಿ ಜೊಂಡಿಗದಾ ಹುಲುಗಡಣವ ಮುಕ್ಕಿ . . . ಬೆಕ್ಕು ಹಾರುತಿದೆ ನೋಡಿದಿರಾ (ಗರಿ. ೮೨-೦೭) ; ಬಡಪಾಯಿ ಜೊಂಡಿಗದ ಜೀವ ತಕ್ಕೊಳ್ಳುವದು ನನ್ನ ಬೆಕ್ಕು (ಸ್ಮೃತಿಚಿ. ೩೮೯). **ತುಂಡಂಗಿ$_2$ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. **ತೊಣ್ಣಂಗಿ :** ತೇವವಿರುವ ಜಾಗದಲ್ಲಿ ತೊಣ್ಣಂಗಿಗಳು ಬಹಳವಾಗಿ ಇರುತ್ತವೆ (ಕೂಡಿ).

**ತೊಂಡಜ್ಜ** (ನಾ). (ಕರಾ) ಅಜ್ಜನ ತಂದೆ ; ಮುತ್ತಾತ.
[ ತೊಂಡ$_1$ + ಅಜ್ಜ$_2$ ]

**ತೊಂಡತನ,** ತಂಡತನ (ನಾ). ಔದ್ಧತ್ಯ; ಉದ್ಧಟತನ : ವೀರವಳಿದುದು ತೊಂಡತನಗಳು ಹೋಗಿ ಕೈಕಾಲೊಡೆದು ನಾಚುತ್ತ . . . ತೆರಳಿದ (ಶಾಶಿರಾ. ೦೯-೩೩). **ತುಂಡತನ :** ತಂಡತಂಡಾಗಿ ತಿರುಗುವ ನಾರಿಯರ ತುಂಡತನವನು ನೋಡು (ಕಾಲಸಂ. ೩೩) ; ಚಂಡವಿಕ್ರಮಭೀಮನಡಿಗೆಜಗಿ ಕೀಚಕನ ತುಂಡತನವಂ ಪೇಳ್ದಳು ಭಾವೆ (ಪಾಂಡಚ. ೩೭-೨).
[ ತೊಂಡ$_2$ + – ತನ ]

**ತೊಂಡನೂರ್** (ನಾ). ಒಂದು ಊರಿನ ಹೆಸರು : ತೊಣ್ಡನೂರ್ ಬೋಯಸ್ಯ ಕೌಶಿಕಗೋತ್ರ ರೇವಶರ್ಮ್ಮಣ (ಇಅ. VII, ೪೨-೩೭ ; 668).
[ ? + ಊರ್ ]

**ತೊಂಡಬಡಿಗೆ** (ನಾ). ಒಂದು ಬಗೆಯ ಆಯುಧ: ಬೇಟೆವೇಟೆತ್ತಿ ತತ್ತಿಸಿದ ತೋಮರದ ತೋರದೊಂಗಲ ತೊಂಡಬಡಿಗೆಯ ಗಂಡರ ದಾವಣಿಯ . . . ಸುಭಟಪೇಟಕಂ . . . ಅಜಾಂಡವೊಡೆಯೆ ಗಜಟಿ ಗರ್ಜಿಸುತ್ತುಂ (ಮಹಾನೀ. ೦೨-೦೯ ವ). [ ತೊಂಡ$_0$ + ಬಡಿಗೆ ]

**ತೊಂಡಬ್ಬೆ** (ನಾ). ಒಬ್ಬಾಕೆಯ ಹೆಸರು : ನಾಗತ್ತರನ ಮಗಳ್ತೊಂಡಬ್ಬೆಯು (ಎಕ. IX, ಬೆಂಗಳೂ. ೮೮-೨; ಸು. ೦೦). [ ತೊಂಡ$_4$ + ಅಬ್ಬೆ$_1$ ]

**ತೊಂಡಮಂಡಲ** (ನಾ). ಚೋಳಮಂಡಲ; ಪ್ರಾಚೀನ ತಮಿಳುರಾಜ್ಯದ ಒಂದು ಭಾಗ ; ಈ ಕಾಂಚಿಯನ್ನು ರಾಜಧಾನಿಯಾಗಿ ಹೊಂದಿದ್ದ ಆರ್ಕಾಟು, ಚೆಂಗಲ್ಪಟ್ಟು ಮತ್ತು ನೆಲ್ಲೂರುಗಳನ್ನೊಳಗೊಂಡ ಭಾಗ: ತೊಂಡಮಂಡಲದಲ್ಲಿ ಶೋಭಿಪ ಶಕ್ಕರಣ್ಯಮೆನಿಪ್ಪ ನಿಖ್ಖಂಡಿ ತೋತ್ಸವಮೊಂದು ಪಟ್ಟಣಮಿರ್ಪುದು (ಉದ್ಭಟ. ೦೨-೮೯).
[ ←ತಮಿ. ತೊಣ್ಡೈಮಣ್ಡಲ ]

**ತೊಂಡಲ್,** ತೊಂಡಲ, ತೊಂಡಲು$_1$, ತೊಂಡಿಲ್, ತೊಂಡಿಲು$_1$ (ನಾ). ೧. ತಲೆಯಲ್ಲಿ ಧರಿಸುವ ಒಂದು ಬಗೆಯ ಮುತ್ತಿನ ಆಭರಣ,– ಶಿರೋಭೂಷಣ : ದಂಡೆಯುಂ ತೊಂಡ[ಪಾಠಾಂ. ಡಿ]ಲುಂ ನೂಂಕುತುಂ ಥಂದದಿಂ ಚೆಂಡಿಕೆವಿಡಿದು ಮುಗಳನುದ್ಧರಿಸುವಂದದಿಂ (ಮಾನರ. ದೇ. ೦೬೯-೩); ಪಾಂಡ್ಯಸತಿಯರ ತೊಂಡಲ್ದೀವಿದ ಘನರತ್ನಂಗಳ್ ಪಾವುಗೆಗಳ ಬಳಸು ದೊಂಗಲೆಡೆಯೊಳ್ ತೋರ್ಕುಂ (ಚಕವಿ. ೩-೩೭) ; ತೊಂಡಲವು ಶಿವಗಣಕೆ ಗುಂಡಯ್ಯ ನೀನಾದಿ (ಕನ್ನಜಾ. ೩೦೨). ೨. ಸಾಲು ; ಶ್ರೇಣಿ : ಅಲ್ಲಲ್ಲಿಗೆ ಪರಿಯುತಿರ್ಪಜುಂಪೆಯ ತೊಂಡಲ್ (ಧರ್ಮಾಮೃ. ೩-೭೪). ೩. ಹೂವಿನ ಹಾರ, – ದಿಂಡು, – ದಂಡೆ : ರೂಢಿಸಿತ್ತು ಕೆಂಪಿಡಿದ ಬೆಡಂಗಿನಿಂದಮ . . . ವಿಳಾಸದಿಂ ಮುಡಿದ ಮಹೇಂದ್ರದಿಗ್ವಧುವ ಬಣ್ಣದ ತೊಂಡಲ ನಿಂದುಮಂಡಲಂ (ಲೀಲಾವ. ೨-೬) ; ತೊಂಡ[ ಪಾಠಾಂ. ಡಿ ]ಲ ಮುಡಿದು ಕೊಂಡು ತಮ್ಮ ತಮ್ಮ ಗಂಡರ ಹಿಂದುಗೊಂಡು ನಾಡುಮಿಂಡರ ನೋಡುತ್ತಲಿ ಇಂದು ನಮ್ಮ ಹುಲಿ ಹೋಯಿತ್ತು (ಬಸಹ. ೬೦-೦೬೭) ; ವಿಯಚ್ಚರಿಯರ ವೇಣಿಯಿಂ ಜಗುಟ್ದ ತೊಂಡಲ ದಂಡೆಯೊ (ದಶಕು. ೯-೪೦) ; ಪೊಸತೊರಳೆಗಳ ದಂಡೆದೊಂಡಲ್ಗಳಂ ಮುಡಿದುಮೆಲ್ಗಳ ತೊಡಂಗಳನೆ ತೊಟ್ಟು . . . ಮರುಳ ಮದವರ್ಕಳೆಸೆಯಲ್ (ಚಬಪು. ೩೨-೨೦) ; ಪರಿಪರಿಯ ಚಂದು ತೊಂಡಲ ಮಾಲೆಗಳ ಕೊಂಡು ತೆರಳ್ದು ಸೊಗಸಿಂ ಸೂಳೆಗೇರಿಗೈತರಲು (ನವಮೋ. ೦೭-೬೩). **ತೊಂಡಲ :** ೧. ದಂಡ್ಯಾಗ ಒರಗಿರುವ ಮಂಡಲದ ಗಿಣಿರಾಮು ತೊಂಡಲವು ತೂಗಿದಳವೆಲ್ಲಿ (ಕೋಕಗೀ. ೪೦). ೩. ಖಂಡೆಯಕೆ ಪೊಂದಿರ್ದ ತೊಂಡಲವ ಕೊಡೆ ತೆಗೆದುಕೊಂಡು ಮುದದಿಂದ ಬರೆ (ಪ್ರಾಥರಾ. ೦೩-೨೭). **ತೊಂಡಲು$_1$ :** ೧. ದುಂಡುಮುತ್ತಿನ ರತ್ನ ಕೇವಣಿಸಿದ ಹೊನ್ನ ತೊಂಡಲ ಸೂಡಿದು ಮುದದಿ (ಮೋಹತ. ೦೩-೬೫) ; ಕರುಳ ತೊಂಡಲು ಖಂಡದ ಬಣ್ಣಬಾಸಿಗ ನರದ ಹಂಜರ ಚಪ್ಪರದಲಿ ನೆರೆದು (ಕಂಸವಿ. ೧೫-೭೩) ; ೩. ಅಂಗಜ ವಿಭಂಗನವರಡಿದಾವರೆಗಳುತ್ತಮಾಂಗಕಮರಿದ ದಂಡೆ ತೊಂಡಲುಗಳೆನ್ನೇಕೆ (ಮುದೇಪು. ೨೩-೫) ; ಕಾಂತೆಯರುಯತಿಕುಶಲದಿಂ ಮಾಲೆ ಕಂಕಣಂ ಚೆಂಡು ತೊಂಡಲುಗಳಿರದೇ ಸಾತಿಶಯದಿಂ ಕಟ್ಟಿ (ನವಮೋ. ೦೦-೭೦) ; ತೊಂಡಲ ಮೇಗಣ್ದೆ ಸೆರಗನ್ನೆಳೆದುಕೊಳ್ಳುತ್ತ ಕೊರಲ್ವಾಗಿ ಹೊರಡುವಳು (ಬಿರುಗಂ. ೨೮-೦೨). **ತೊಂಡಿಲ್ :** ೧. ದಂಡೆ ತೊಂಡಿಲ ಮುಡಿಸಿ ಶುಂಡಾಲ ಗಾಮಿನಿಯ ಮಂಡೆಯೊಳು (ಜ್ಞಾನಸಿಂ. ೭-೨೪); ನರಮೌಕ್ತಿಕದ ತೊಂಡಿಲನು ಸಿರಿಮುಡಿಯೊಳಗಳವಡಿಸಿ (ಜ್ಞಾನಸಿ. ೩೬-೯೨) ; ಇಳೆಯೊಳ್ಪೆಂಡಿರ ತೊಂಡಿ ಲೊಳ್ಮಣಿಯನೀ ಚಂದ್ರಾಸ್ಯೆಯುಂ ಸೃಷ್ಟಿಗೈದು(ಮಿತ್ರಗೋ. ೫೦). ೩. ನಿರಾಳ ಬೋಳಿಂಗೆ ತೊಂಡಿಲ ಮುಡಿಸುವಂತೆ (ಅವಹಂ. ೦೩೩-೬೦೭). ೪. ಮದುವೆ ಯಲ್ಲಿ ಹೆಣ್ಣಿನ ತಲೆಗೆ ತೊಡಿಸುವ ಬಾಸಿಗ: ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ (ಮಹಾದೇ. ಬ. ೩೭-೭೮). **ತೊಂಡಿಲು$_1$ :** ೧. "ತೊಂಡಿಲು ಶಿರೋಗ್ರಂಥಿಯೆನಿಸಿಕ್ಕು" (ಮಂಗರಾ. ೯೯-೨೦); ಮುಡಿಗೆ ಮಂಗಳಮಪ್ಪ ಮಣಿದೊಂಡಿಲಿಟ್ಟು (ಚೀರಮ. ೫-೪೦) ; ತೊಂಡಿಲುಂಗುರ ತಾಳಿ ಬಂದಿ ಭೂಷಣದ ಕರಂಡಗೆಗೊಟ್ಟು ಕಳುಹಿದ (ಭರಚ. ೩೭-೦೨೬); ಮಣಿವ್ರಜಮಂಡಿತಮೊಂದಿ ತೊಂಡಿಲಾ ಸೋಮುರ್ಡಿಯಲ್ಲಿ . . . ಇಟ್ಟು ಸಿಂಗರಿಸಿ (ರಾಜಶೇ. ೮-೩೮); ಮೆರೆವ ತೊಂಡಿಲ ಧರಿಸಿ (ಹುನಳ. ೫೪). ೩. ಮಲ್ಲಿಗೆಯಲರ್ಗಳಿಂ ಸಮೆದ ತೊಂಡಿಲಿನಿಂದ ಮೊಲ್ಲೆಯ ದಂಡೆಗಳಿಂದ (ಹಂಪ್ರಸಾಂ. ೦೨-೦೦೩). ೪. ತೊಂಡಿಲು ಬಾಸಿಗವನು ಸೂಡಿದರು ಚಂದ್ರ ಮಂಡಲ ರತಿಮನ್ಮಥರ್ಗೆ (ಮೋಹತ. ೧೫-೨೩).

**ತೊಂಡಲ** 'ತೊಂಡಲ್' ನೋ.

**ತೊಂಡಲಿಪಿ** (ನಾ). ಉದ್ಧತರ ಬರವಣಿಗೆ ; ಉದ್ಧತರಾಜರ ಶಾಸನ : ತೊಡೆ ತೊಂಡಲಿಪಿಯನೆಂದನು ಧೂಳಿಲಿಪಿಗಳ ತೊಡೆವಂತೆ ತೊಡೆದನಾ ಭೃತ್ಯ (ಭರಚ. ೩೭-೯೪). [ ತೊಂಡ$_2$ + ಲಿಪಿ ]

**ತೊಂಡಲು$_1$** 'ತೊಂಡಲ್' ನೋ.

**ತೊಂಡಲು$_2$** (ನಾ). ಒಂದು ಬಗೆಯ ಹಕ್ಕಿ : ಗರುಡ ಕೊಣಕನು ಮೇಣು ಟೀವನು ಗರಗೆ ತೊಂಡಲು ಗಜಗ . . . ಪೆರುವರ್ದವಟಿಳೊಪ್ಪಿದವು (ಸಾಳ್ವಭಾ. ೫-೨೩). [ ? ]

**ತೊಂಡಲ್ವಚ್ಚ** (ನಾ). ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ ; ಬೈತಲೆಮಣಿ : ಬೆಳ್ಳಿಗರಡಿಗೆಯೊಳ್ ತಳತಳಿಪ ಪಟನುಡಿವೆಂಡಿರ ಪಚ್ಚೆಯ ತೊಂಡಲ್ವಚ್ಚದಂತೆಯುಂ (ಚಕವಂ. ೮೬-೭೦). [ ತೊಂಡಲ್ + ಪಚ್ಚ$_2$ ]

**ತೊಂಡಲ್ಪೂವು** (ನಾ). ಗೊಂಚಲಾಗಿರುವ ಹೂವು : ತೊಂಡಲ್ಪೂವಿನ ಗಾಲಿ ನನೆಯ ನಿಡುದಂಡೆ ಮನೋಹರಮಾದಚ್ಚು (ಜಯಕಾ. ೫-೬).
[ ತೊಂಡಲ್ + ಪೂವು (<ಪೂ$_2$) ]

**ತೊಂಡವಾಡಿ** (ನಾ). ಒಂದಂ ಸ್ಥಳದ ಹೆಸರಂ : ತೊಣ್ಡವಾಡಿಯ ಪಳ್ಳಿಯ ಮಳೆಬುತ್ತಯ್ಯನ ಮಗ ಅಯ್ಯಪಯ್ಯ (ಎಕ. IV, ಗುಂಡ್ಲುಪೇ. ೧-೯೩ ; 975). [ ತೊಂಡ + ಪಾಡಿ$_2$ ]

**ತೊಂಡಾಣೆ** (ನಾ). ಭಕ್ತನ ಆಣೆ : ಕೇಳಿನ್ನು ನಿನ್ನಾಣೆ ತೊಂಡಾಣೆ ಹೋಗೆಂದು ಕರುಣೆ ಕೇಳುಪಲ್ಕೆ (ಸಿದ್ಧರಾ. ೬-೫೦).
[ ತೊಂಡ$_1$ + ಆಣೆ$_3$ ]

**ತೊಂಡಾಲ** (ನಾ). ಒಂದಂ ಸ್ಥಳದ ಹೆಸರಂ : ಅಲ್ಲಿಂದ ತೆಂಕ ಪಡುವಲು ಉತ್ತನೂರ ತೊಂಡಾಲದ ಮುಕ್ಕೂಟಲ ಮಣ್ಕೂಟಡಿ (ಮ್ಯಆರಿ. ೧೯೨೫, ೧೦೫-೪೩ ; 934). [ ? ]

**ತೊಂಡಿ$_1$** (ನಾ). ದಾಸಿ ; ಸೇವಕಿ : ಬಸುರಿಳಿಯೆ . . . ಮಾಂಸದ ಚೀಲದಿಂ ಬೀಳೆಯೊಡನೆ ಗಾಂಧಾರಿಯುಂ ಮುಳಿಸಿಯದನೂ ಕಂಡಿದಕ್ಕಾಗಿ ತಾನೆರಡುವರುಷಂ ಧರಿಸಿಕೊಂಡೆನೆ ಗರ್ಭಮಂ ಬಿಸುಡು ಬಿಸುಡೆಂದಾಗ ತೊಂಡಿಯರಿಗುಸುರುತಿರಲು (ಲಕ್ಷ್ಮಭಾ. ೨೫-೩೭).
[ ತೊಂಡ$_1$ + – ಇ$_2$ ]

**ತೊಂಡಿ$_2$** 'ತೊಂಡೆ$_3$' ನೋ.

**ತೊಂಡಿಕೆ** (ನಾ). ತುಂಟತನ ; ತುಂಟಾಟ : ಕರುಮಾಡದ ಪೊಱಗನೆ ಪೋಪಳಂ ವಸುದೇವಂ ಕಂಡವಳ ಕೈಯಿಂದವಾ ಕರಂಡಕಮಂ ಕೊಂಡೊಡ ವಳಿಂತೆಂಬಳ್ ತೊಂಡಿಕೆಯನೊಪ್ಪೆ ನಿನ್ನೊಳ್ ಕಂಡುದಱಿನುಪಾಯದಿಂ ವನಾಂತರದೊಳ್ ಭೂಮಂಡಳಪತಿ ಸೆಱೆಯಿಟ್ಟುಂ ಕೊಂಡಾಟದೊಳಿರ್ದ ನೆಂದು ಬಗೆಯದೆ ಕಂಡಾ (ಬಂಹರಿ. ೨-೬). 'ತೊಂಡಿಕೆಗೆಯ್' ಪರಾ.
[ ತೊಂಡು$_1$ + – ಇಕೆ ]

**ತೊಂಡಿಕೆಗೆಯ್** (ಕ್ರಿ). ತುಂಟಾಟವಾಡಂ : ನಿಚ್ಚನಿಚ್ಚಂ ತೊಂಡಿಕೆಗೆಯ್ದು ಪುಯ್ಯಲ ಮಾಡುತ್ತಿರೆ (ಬಂಹರಿ. ೫-೩೦ ವ). [ ತೊಂಡಿಕೆ + ಕೆಯ್$_1$ ]

**ತೊಂಡಿಗ$_1$** (ನಾ). ಒಂದಂ ಬಗೆಯಂ ಪಕ್ಷಿ : ಶಕುನಿ ಕಂಕಂ ತೊಂಡಿಗಂ . . . ರತ್ನಖಗಮಿರ್ಕುಂ ತದ್ವನಾಗೌಘದೊಳ್ (ರಾಜಶೇ. ೫-೫೯) ; "ರಣಹದ್ದು" (ರಾಜಶೇ. ಕೋಶ) ; ಟಿಟ್ಟಿಭಂ ತೊಂಡಿಗನುರುಳಿಗನಿಬ್ಬಾಯನುಂ ಚಾತಕಂ . . . ಶಿಖಿ ಶುಕಂ ತದ್ವನಾಂತಸ್ಥಮಿರ್ಕುಂ (ಶಬಶಂ. ೩-೩೩). [ ? ]

**ತೊಂಡಿಗ$_2$** (ನಾ). ಒಬ್ಬಾತನ ಹೆಸರು : ಪಿರಿಯ ಮಗಂ ಕಾಳಿಧುರಂಧರನಾತಂ ತೊಣ್ಡಿಗ[ಂ]ಗೆ ಮೆಚ್ಚಿಸಿದೋಂ (ಸಾಇಇ. XI-1, ४೫-೧೪ : 980).
[ ? ]

**ತೊಂಡಿಲ್** 'ತೊಂಡಲ್' ನೋ.

**ತೊಂಡಿಲು$_1$** 'ತೊಂಡಲ್' ನೋ.

**ತೊಂಡಿಲು$_2$** (ನಾ). =ತೊಂಡೆ$_1$ : ಯಾಕವ್ವಾ ತೆರೆದು ತೊಂಡಿಲ ಬಾಯಿ ಸಾಕವ್ವಾ ಮನವು ಮಾವಿನಕಾಯಿ (ಸಜೀಗೀ. ೯೦-೧೭) : ಸಂಜೆ ಬಂಜೆತನವ ಹರಿಸಿ ಮೆರೆಯೆ ತುಟಿಯ ತೊಂಡಿಲ (ಸೂರ್ಯಪಾ. ೧೦೮-೪).
[ <ತೊಂಡೆ$_1$ ]

**ತೊಂಡು$_1$**, ತಂಡಂ$_2$ (ನಾ). ೧. ಉದ್ಧಟತನ ; ದಂಪ್ಪತನ ; ಸ್ವೇಚ್ಛಾವೃತ್ತಿ ; ಪುಂಡಾಟ : ತೊಂಡಿನೊಳುರ್ಕಿ ಕೆಟ್ಟ ದಶಕಂಠನನಕ್ಕಟ ಕೊಂಡ ಪೆರ್ಮರುಳ್ ಕೊಂಡುದೆ ತನ್ನುಮಂ (ಪಂಪಭಾ. ೬-೩೩); ತೊಂಡಿನೊಳೆಮ್ಮ ಪೇರಡವಿಯಂ ಪುಗುತಂದಪರೆಂದು ಲುಬ್ಧಕರ್ ತಂಡದೆ ಸುತ್ತಿಮುತ್ತೆ (ಪಂರಾಮಾ. ೭-೧೦೫) ; ಕೊಂಡು ಕಮಂಡಳಜಳದೊಳ್ ದಂಡಿತರಿಪು ತೀವೆ ಕಂಡು ಗುಂಡುಲಿಯೆ ಕರಂ ತೊಂಡಿಂದಾ ಪುರವರದೊಳ್ ಗುಂಡಿಗೆಯಂ ನೆಗಪಿ ಸುರಿಯೆ ಪರಿದುದು ನದಿಪೋಲ್ (ನೇಮಿಪು. ೭-೦೮೨) ; ತೊಂಡಿನ ಕೊಟ್ಟಿರ್ ಪಾಪದ ಪಿಂಡಮೆನಿಪ್ಪಂಗನಾಜನಂ ಬೆರಸಲ್ (ಖಮುದ. ೧೪-೬೨) ; ತೊಂಡಿನ ತವರುಮನೆ ಬಾಹಿರರಿಗಾಶ್ರಯಭವನ ಖಳರಥಿದೇವ ಭೀಷ್ಮನ ಕೊಲುವರಿಲ್ಲೆಂದ (ಕುವ್ಯಾಸ. ೧೦-೧೨). ೨. ಸೊಕ್ಕಿನ ನಂಡಿ ; ಉದ್ಧಟತನದ ಮಾತಂ : ಕಂಡುಳಿದಡುಳಿದರಲ್ಲದೆ ತೊಂಡಂ ನುಡಿದೆಡಱ ತೊಡರ್ವರುರವಣೆಯಂ ಕಂಡಿದಿರಲೆಬ್ದು ಮುಳಿಸಿಂ ಖಂಡಿಪನೆನೆ ಹಬ್ಬಣಂಗಿದಿರ್ಚುವನಾವಂ (ಮುಂಬಗ್ರಾ. ೨೪೩-೨೯ ; 1219). ೩. ಉದ್ಧಟ ವ್ಯಕ್ತಿ ; ಸ್ವೇಚ್ಛಾಚಾರಿ : ತೊಂಡೆನಿಸಿ ಬದುಕಿದವ ಪೆಣನಂತೆ ನಿಷ್ಫಲವು (ನಿಭಾಗ. ೧೧-೨೮-೧೭). ೪. ವಾಕ್ಪಟುತ್ವ : ಜನ್ನನ ದೇಸೆ ಪಂಪನ ಗುಣಂ ಗುಣನಂದಿಯ ತೊಂಡು ಪೊನ್ನನೊಳ್ ಸನ್ನಿದಮಾದ ಜಾಣ್ನುಡಿ . . . ನೆಲಸಿರ್ಪುವೀ ಸುಕವಿಮಲ್ಲನ ಕಾವ್ಯವಿಳಾಸಗೇಹದೊಳ್ (ಸೂಕ್ತಿಸು. ೧-೨೬). ೫. ಪರಾಕ್ರಮ ; ಶೌರ್ಯ : ಪೇಟೇವುದೊ ಶುಚಿಯಿಲ್ಲದವನ ಗಂಡುಂ ತೊಂಡುಂ (ಪಂಪಭಾ. ೮-೮೨) : ಗಂಡಿನ ತೊಂಡಿನಸಂಕದಧಟಲ್ ಪೊಂಕಾಳ್ತನಂ (ಹ್ಯಅಸಿ. ೦೩-೭-೭೩ : 1090) ; ತೊಂಡಿನೊಳೆ ಮಲೆಮಹೀಪರ ಮಂಡಳಮಂ ಸೂರೆಗೊಂಡು (ಎಕ. V, ಅರಸೀ. ೦೦೨-೬೫ : 1100 ?) ; ಭೇರುಂಡಪರಾಕ್ರಮಂಗೆ ಸಹದೇವ ಚಮೂಪತಿಗೆಂತು ಗಂಡಿನೊಳು ತೊಂಡನಿದಿರ್ಚಿ ಬಾಳ್ವದಟನಾರ್ಗ್ಗಳ ಮೈಳುಗಿಯಂಕ[ಕಾ]ರನೊಳು (ಸಾಇಇ. XV, ೧೫೩-೨೫ ; 1206) ; ಬಲಂಗೊಂಡಂ ತೊಂಡಂ ಬಿಡದೆ ಗಜಕರ್ಣಾವನಿಭುಜಂ (ಕೃಷ್ಣಪು. ೭-೮೦) : ತೋಱಿಸಿದೆ ನೀ ತೊಂಡಿನೋಲೆಯಕಾಱತನವನು (ಕುವ್ಯಾಕ. ೦೬-೦೩). ೬. ಮದ ; ಸೊಕ್ಕು : ಬಲವಂ ನಚ್ಚಿ ವಿರೋಧವಂ ಪಡೆವುದೇ ತೊಂಡಿಂದೆ ಸಾಮನ್ತರಂ ಕಲಹಂ ಬೇಡೆನೆ (ಎಕ. VI, ಕಡೂರು. ೩೫-೫೨ : 1136) ; ಕೂರ್ತನಂ ತೊಂಡಿನಿಂ ಕುಂಟಣಿ ಮಾಟ್ಪೆಳ್ಕೇಣದಿಂ ನಾಣೊಡೆಯನನೆಡೆಯೊಳ್ನಿರ್ಧನಂ ಮಾಟ್ಪೆಳ್ (ಲೀಲಾವ. ೨-೯೭) ; ಬಂದೊರ್ವ ಭವಿಯೆನಿಪ ವಿಪ್ರಂಗೆ ತೊತ್ತಾಗಿ . . . ಅರಮನೆಯ ಕೆಲಸಮಂ ಮಾಡುತುಂ ತೊಂಡು ಮಿಕ್ಕುದು (ನಿಂಬರ. ೧೨೫-೦೬) ; ಜನಪನಾಱಡಿಯನಾನೆಯ ದೊಂದು ತೊಂಡ ಗುರುವಿನ ದುರಾಚಾರಮಂ ಮಾಣಿಸಲ್ಬಲ್ಲರೇ (ಸಮ್ಯಕೌ. ೨-೭೫). 'ತೊಂಡುಗೆಡೆ$_1$' ಪರಾ. ತುಂಡು$_2$ : ೩. ಬಂಡು ಹೆಂಡತಿಯಾಗಿ ತುಂಡೊಬ್ಬ ಸೊಸೆಯಾಗಿ ಕಂಡಲ್ಲಿ ಹರಿವ ಮಗನಾದರಾ ಮನೆಗೆ ದಂಡ ತಪ್ಪುವದೆ (ಸರ್ವಜ್ಞ. ೦೭೫೫).

**ತೊಂಡನಿಕ್ಕು** = ದಂಪ್ಪತನದಿಂದ ವರ್ತಿಸು : ತೊಂಡನಿಕ್ಕಿ ಠವಾಳತನದಲ್ಲಿ ಭಂಡುಗೆಲೆವುತ ಮಲುಹಣಿಯ ತಾಯ್ ಮಿಂಡನಂ ಹೊಱವಡಿಸಿ ತಾ ತನ್ನಾತ್ಮಜೆಯನೊಬ್ಬ ಮಂಡಳೇಶನ ಪೊರೆಗೆ ಕಳುಹಲು (ಬಸಪು. ४೨-೧೯). **ತೊಂಡಿನ ದನ** = ತೊಂಡುದನ : ಮನಕ್ಕೆ ಲಿಂಗ ಬಾಹಾಗ ತೊಂಡಿನ ದನವೇ (ವೋಳಿಮೂ. ೦೧೯-४೬೭).

**ತೊಂಡು$_2$** (ನಾ). ಅಂಕೆ ; ಹತೋಟಿ : ಮದವೆದ್ದಾನೆಗಲ್ಲಿಯ ತೊಂಡು (ಆನಂರಾ. ೬-೨೩-೨೭). [ ದೇ.॥ ತಮಿ. ತೊಣ್ಡು ]

**ತೊಂಡು$_3$** (ನಾ). ಗುಂಪು ; ಸಮೂಹ : ಇಡೀ ಜಗತ್ತೆಲ್ಲ ಮೋಹವಿಭ್ರಾಂತರಾದ ಜನರ ತೊಂಡಿನಂತೆಯೂ . . . ಅವಳಿಗೆ ಕಂಡಿತು (ಖಿನರು. ೧೯೮).
[ < ತಂಡ ]

**ತೊಂಡು$_4$** (ನಾ). (ಕರಾ) ಮುಸಂರೆಯನ್ನು ಹಾಕುವ ಬಾನಿ,– ಕೂನಿ.
[ ? ]

**ತೊಂಡುಗಿಳಿ** (ನಾ). ಧ್ವನಿಮಾಡುವ ಗಿಳಿ ; ಗಳಪುವ ಗಿಳಿ : ಗಂಡುಗೋಗಿಲೆಯ ತಂಡಮುಂ ತೊಂಡುಗಿಳಿಯ ಪಿಂಡುಂ ಮುಂ ಪಯಣಮಾಗೆ (ಶಾಂತಿಪು. ೭-೧೨೯ ವ) ; ಪರಿವಿಡಿಗೆಯ್ಯೆ ತೊಂಡುಗಿಳಿ ತಂದೆಯ ತಾಯ ಸವಿಾಪದೊಳ್ (ರಸರ. ४-೦೭೭). [ ತೊಂಡು$_1$ + ಗಿಳಿ ]

**ತೊಂಡುಗೂಳಿ** (ನಾ). ಸ್ವೇಚ್ಛೆಯಾದ ಬಸವ ; ದೇವರಿಗೆ ಬಿಟ್ಟ ಗೂಳಿ; ಪುಂಡುಗೂಳಿ: ತೊಂಡುಗೂಳಿ ಬೆಳೆದ ಹಾಗೆ ಬೆಳೆದಿದ್ದೆ (ಸಂಧ್ಯಾರಾ. ೧೨).
[ ತೊಂಡು$_1$ + ಗೂಳಿ$_1$ ]

**ತೊಂಡುಗೆಡೆ$_1$** (ಕ್ರಿ). ೧. (ಗಿಳಿಯು) ಧ್ವನಿಮಾಡು,–ಗಳಹು: "ತೊಂಡುಗೆಡೆವುದೆಂದು ಶುಕವಿಲಾಸಂ" (ಕಲಸಾ. ೫೫–೨೦೪); "ತೊಂಡುಗೆಡೆದುದೆನೆ ಗಿಳಿಯವಾತು" (ಕಬ್ಬಿಕೈ. ೨೩); ತೊಂಡುಗೆಡೆದು ವಸಂತ ರಾಜನ ಪಡಿಯಱರಂತೆ ವಿರಹಿಗಳಂ ಚಪ್ಪರಿಪ ರಾಜಕೀರಂಗಳ್ (ಗಿರಿಕ. ೩–೧೦೩ ವ); ಕಂಗೊಳಿಸಿದುದಂದು ತೊಂಡುಗೆಡೆಯುತ್ತುಮತೀವ ವಿಲಾಸದಿಂ ಶುಕಾವಳಿ (ಉದ್ಭಟ. ೧೦–೯); ತೊಂಡುಗೆಡೆಯಿತ್ತುಪದೇಶಿಕನಂತೆ ಕಾಮತಂತ್ರದ ತಿರುಳಂ ಕನತ್ಕನಕಪಂಜರಪಿಂಜರಿತಾಂಶುಕಂ ಶುಕಂ (ಸೂಕ್ತಿಸು. ೧೪–೩); ಗಿಳಿಗಳೆಮ್ಮನೆ ಕಂಡು ಘೂಗ ಕಿಚ್ಚನೆ ಮಾಡಿ ತೊಂಡುಗೆಡೆದಪವೆಂದಳೊರ್ವ ವನಿತೆ (ಭಾವಚಿಂ. ೬–೨೬); ಬಗ್ಗಿಪ ಕಳಕಂಠಂ ತೊಂಡುಗೆಡೆವ ಗಿಳಿ ಪೂತೆಸೆದಿರ್ಪಲರ್ಜೊಂಪಂ (ರಾಜಶೇ. ೨–೩೮). ೨. (ಸ್ವೇಚ್ಛೆಯಿಂದವಾಗಿ) ಕೂಗು,–ಕಂಕಿಲಂ: ತೊಂಡುಗೆಡೆಯುತ್ತೆ ಪಿಕಾಳಿ ಶುಕಾಳಿಯೊಪ್ಪುಗುಂ (ಗಿರಿಕ. ೨–೩೬); ಪುಗಲ್ ಪುಗಲೆಂದು ಬಂಡಳಿಸಿ ತೊಂಡುಗೆಡೆವ ಗಂಡುಗೋಗಿಲೆಗಳುಂ (ಪುಷ್ಪಪು. ೨–೪೯ ವ); ಶುಕಪಿಕಂ ತೊಂಡುಗೆಡೆದುಱಿ ಕೂಗಲ್ (ಭಾವಚಿಂ. ೪–೦೭). ೩. (ಅಲಂ) ಕೂಗಾಡು; ಜರುಚು: ಬಾಣದ ಮೊನೆಯೊಳು ಲೇಪೆಯಿಂ ಕಟ್ಟಿ ತೊಟ್ಟನೆಸೆವುದದಂ ಮಾಗಧಂ ಕಂಡು ತೊಂಡುಗೆ[ಪಾಠಾಂ. ಕೆ]ಡೆವುದುಂ ಮಂತ್ರಿಗಳು ಮಾಣಿಸಲ್ (ಪುಣ್ಯಾಸ್ರ. ೧೦–೨೮ ವ); ಭಂಡ ನೀ ಬಾಯ್ಬುಡಿಕತನದಲಿ ತೊಂಡುಗೆಡೆವರೆ (ಕೌಶಿರಾ. ೨೦–೫೦); ಅಲ್ಲಿಗೆ ಪೋಗಿ ತೊಂಡುಗೆಡೆದು ನಿಂದಿಸಿ ನಮ್ಮ ಕಾಡಿದ ದಿಂಡೆಯದೇನ ಮಾಡುವೆನೆಂದ (ತ್ರಿಭುತಿ. ೯–೪೨).

[ ತೊಂಡು$_1$ + ಕೆಡೆ$_2$ ]

**ತೊಂಡುಗೆಡೆ$_2$** (ಕ್ರಿ). ರಾಶಿಯಾಗಿ ಬೀಳು; ಗುಂಪಾಗಿ ಕೆಡೆ: ಕರಚಂಡಘಾತದೊಳ್ ತೊಂಡುಗೆಡೆದ ತುರಗದಳಂಗಳುಂ (ಅನಂಪು. ೧೪–೬ ವ) ಕಡಿದು ಖಗಚಯ ತೊಂಡುಗೆಡೆದ ಕಾಯಿಪಣ್ಗಳೊಳು (ನವಮೋ. ೨೪–೫೬). [ ತೊಂಡು$_3$ + ಕೆಡೆ$_1$ ]

**ತೊಂಡುಗೆಡೆತ** (ನಾ). ಮಧುರವಾದ ಧ್ವನಿ,–ಕೂಗು: ಇಂದಿನ ಕನ್ನಡ ಕಾವ್ಯಪ್ರಪಂಚವು ಈ ಗಿಳಿವಿಂಡಿನ ತೊಂಡುಗೆಡೆತಕ್ಕೆ ಕಿವಿಗೊಟ್ಟೀತೆ? (ಗಿಳಿವಿಂ. XI, ಮುನ್ನುಡಿ). [ ತೊಂಡುಗೆಡೆ$_1$ + – ತ$_2$ ]

**ತೊಂಡುಗೆಡೆಪು** (ನಾ). ಮಧುರವಾಗಿ ಮಾತನಾಡುವುದು: ತಂಬೆಲರ ತನಿಸೋಂಕು ನಾಂ ಪುಗಲ್ಪುಗಲಂತೆ ತೊಣ್ಡುಗೆಡೆಪಂ ಪ್ರಪುಷ್ಪವಿಕಸನವ ಮುದ್ದಿಪಲರ್ವಕ್ಕಿಯಾಮೋದಮುಂ (ಸಂಚಪ. ೩೦–೧೬೨).

[ ತೊಂಡುಗೆಡೆ$_1$ + – ಪು$_2$ ]

**ತೊಂಡುಗೆಯ್** (ಕ್ರಿ). (ಗಿಳಿಯು) ಧ್ವನಿಮಾಡು,–ಗಳಹು: ಇನಿವಣ್ಣುಂಡು ಗಿಳಿವಿಂಡು ತೊಂಡುಗೆಯ್ಯಲೆಳಸಿತು (ಚಿಬಪು. ೪೫–೧೧).

[ ತೊಂಡು$_1$ + ಕೆಯ್$_1$ ]

**ತೊಂಡುಗೇಡು** (ನಾ). ಸೊಕ್ಕು ಇಳಿಯುವಿಕೆ; ಅಹಂಕಾರದ ಕೇಡು: ಗಂಡುಗುಂದಿನ ಬೀತ ಬಿರುದಿನ ತೊಂಡುಗೇಡಿನ ಜಯದ ಜಾಱಿನ ಖಂಡಶೌರ್ಯದ ಧೀರರಿದ್ದುದು ನೃಪನ ಬಳಸಿನಲಿ (ಕುವ್ಯಾಕ. ೧೩–೪೭).

[ ತೊಂಡು$_1$ + ಕೇಡು ]

**ತೊಂಡುಗೊಳ್** (ಕ್ರಿ). ಸ್ವೇಚ್ಛೆಯಾಗಿ ಓಡಾಡು: ಭಂಡಿಯುಂ ನಲವಿಂದ ನೂಂಕೆ ತದುಲ್ಲಸತ್ಪುರವೀಥಿಯೊಳ್ ತೊಂಡುಗೊಂಡಿರಲೊಂದು ತರ್ಣಕಂ . . . ಬಿರ್ದಟಿಯಲ್ (ಉದ್ಭಟ. ೧೩–೭೭). [ ತೊಂಡು$_1$ + ಕೊಳ್$_1$ ]

**ತೊಂಡುತನ**, ತುಂಡುತನ (ನಾ). ೧. ಸ್ವೇಚ್ಛಾಪ್ರವೃತ್ತಿ: (+). ತುಂಡುತನ: ೨. ತುಂಟತನ: (+). [ ತೊಂಡು$_1$ + – ತನ ]

**ತೊಂಡುತೆರೆ** (ನಾ). ಪ್ರಕ್ಷುಬ್ಧವಾದ ಅಲೆ: ತೊಂಡುತೆರೆಗಳ ಮುಸುಕಿನಲ್ಲಿ ಕಂಡು ಮಗಳ ಕರಗಿಹೋದ (ಇಂಗೀತ. ೬೭–೨೧).

[ ತೊಂಡು$_1$ + ತೆರೆ$_4$ ]

**ತೊಂಡುತೊಳಸು$_1$** (ಕ್ರಿ). ಮನಬಂದಂತೆ ಸಂತ್ರು,–ತಿರುಗು: ತೊಂಡುತೊಳಸುವ ದೋಣಿಯನ್ನು ನಂಬಿ ಬಂದೆನೆ? (ಗಿಳಿವಿಂ. ೫೫–೨೪).

[ ತೊಂಡು$_1$ + ತೊಳಸು$_2$ (<ತೊಟಸು$_1$) ]

**ತೊಂಡುತೊಳಸು$_2$** (ನಾ). ಸ್ವೇಚ್ಛಾಪ್ರವೃತ್ತಿ; ಉದ್ಧಟತನ: ತೊಂಡುತೊಳಸಕ್ಕಸಿಕ್ಕ ವಂಚನೆ ಕುಹಕ ಜೂದು ಕುತ್ಸಿತ ಲಂಡು ಭಂಡು ದುರ್ಜನ ಮೆಂಬಿವೆಲ್ಲ ದುಷ್ಟಸ್ವಭಾವಂ (ಸತ್ಯುಕ್ತಾ. ೬–೩೩); ಈ ನರದೇಹಕ್ರಿಮಿಗಳ ಮೊತ್ತದಾಗರ . . . ಇದು ಮುರಾರಿಯು ಶಕ್ತಿಯನಿಸುವ ಮಾಯೆ ಮಾಡುವ ತೊಂಡುತೊಳಸೆಂದ (ನಿಭಾಗ. ೧೧–೩೨–೨೦); ಉದ್ದಾಲಕಂ ಸಂತಸಗೊಂಡು . . . ಸಂಪ್ರೀತಿಯಿಂ ವಿಪರೀತದ ತೊಂಡುತೊಳಸಂ ಮುಱಿದು (ಜೈಮಿಭಾ. ೧೨–೩೦); ಕಂಡಿರಾ ಗುರುಗಳಿರ ತನಯನ ತೊಂಡುತೊಳಸಿನ ಮಾತ (ಪ್ರಹ್ಲಾಚ. ೬–೩೭).

[ ತೊಂಡು$_2$ + ತೊಳಸು$_4$ ( < ತೊಟಸು$_2$) ]

**ತೊಂಡುತೊಳಸುಗ** (ನಾ). ಮನಬಂದಂತೆ ವರ್ತಿಸುವವನು; ತೊಂಡುತೊಳಸುಗರನವನಿಯೊಳಂಡಲೆದಿಗಲಕ್ಕೆ ಪರಿದು (ಧರ್ಮನಾ. ೫–೯೧).

[ ತೊಂಡುತೊಳಸು$_1$ + – ಗ$_2$ ]

**ತೊಂಡುದನ** (ನಾ). ಅಗಡುದನ; ಸ್ವೇಚ್ಛೆಯಾಗಿ ಅಲೆಯುವ ದನ; ತುಡುಗುಂದನ: ಕಂಡವರ ಹೊಲಕಿಳಿವ ತೊಂಡುದನವಮಲ್ತು (ಕಾಲೂರ. ೯೧–೧೫೨); ನಾಲ್ಕುದಿಕ್ಕುಗಳಿಂದಲೂ ತೊಂಡುದನಗಳು ನುಗ್ಗಿ, ಮೇದು ತುಳಿದು ಹಾಳುಮಾಡಿದ ತೋಟವಾಯಿತು (ಕನ್ನನು. II, ೫); ಜಗತ್ತಿಗೆ ಶಾಂತಿ ಸಂತೋಷಗಳನ್ನು ಕೊಡುವ ಹೂವೇ ಧನ್ಯ, ಮಾನ್ಯ. ಮುಳ್ಳು ಉಪಯೋಗಕ್ಕೆ ಬಂದರೆ ತೊಂಡುದನಗಳಿಗೆ ಅಡ್ಡಿಯಾಗುವಂತೆ ಬೇಲಿಹಾಕುವುದಕ್ಕೆ (ಬಂಕಿಮ. ೧೬೧). [ ತೊಂಡು$_1$ + ದನ ]

**ತೊಂಡುನಗೆ** (ನಾ). ತುಂಟನಗೆ; ಚೇಷ್ಟೆಯ ನಗೆ: ತೊಂಡುನಗೆಯ ತೊಂಡೆಬಾಯ ಕಂಡು ಕಂಡು ಮುತ್ತನಿಟ್ಟು (ನಾದಲೀ. ೭೭–೧೯).

[ ತೊಂಡು$_1$ + ನಗೆ ]

**ತೊಂಡುನಡೆ** (ನಾ). ಸ್ವೇಚ್ಛಾಪ್ರವೃತ್ತಿ; ಉದ್ಧಟತನ: ವಿರಸವನು ಬಿತ್ತುತ್ತೆ ತೊಂಡುನಡೆ ನಡೆದು ಕೊಲೆಗೆ ಕೊಲೆ ಸಂತತಿಯನಿಡುವವರ ಬೇಡಿದಿರಿ (ಅಮೃತಂ. ೨೩–೯). [ ತೊಂಡು$_1$ + ನಡೆ$_2$ ]

**ತೊಂಡುನುಡಿ** (ನಾ). ಚೇಷ್ಟೆಯ ಮಾತು; ತುಂಟತನದ ನುಡಿ: ನಗೆವೆರಸಿರ್ದ ತೊಂಡುನುಡಿಯಿಂ ತಗುಳ್ದವಳ್ ಸಲೆ ಧೀರೆ (ರಸರ. ೩–೯೦ ಸೂತ್ರ). [ ತೊಂಡು$_1$ + ನುಡಿ$_2$ ]

**ತೊಂಡುಪಾಳೆಯಗಾರ** (ನಾ). ಉದ್ಧಟನಾದ ಪಾಳೆಯಗಾರ; ಸೊಕ್ಕಿದ ಪಾಳೆಯಗಾರ: ಚೆನ್ನರಾಜನು ಇದಿರುಬಿದ್ದು, ಉದ್ಧರುಟು ತನದಿಂದ ತೊಣ್ಡುಪಾಳೆಯಗಾರರೊಡನೆ ಸೇರಿಕೊಂಡು . . . ಸ್ವತನ್ತ್ರನಾಗಲು ಸಾಹಸಪಡುತ್ತಿರುವನು (ಚಿಟ್ಟಿಅ. ೪೪–೧೭).

[ ತೊಂಡು$_1$ + ಪಾಳೆಯಗಾರ ]

**ತೊಂಡುಬಂಡು** (ನಾ). (ಗಿಳಿಯು) ಧ್ವನಿಮಾಡುವ ಗದ್ದಲ,–ಗಳಹುವ ಕೋಲಾಹಲ: ತುಂಬಿಗಳ ಪಲ್ಮೊರೆಪದಿಂ ಗಿಳಿಯ ತೊಂಡುಬಂಡಿಂ ಬೆಟ್ಟಿತಾದ ನುಡಿಯಿಂ . . . ಮೆಱೆದುದಾ ವನಂ (ಪದ್ಮರಾ. ೮–೨೫).

[ ತೊಂಡು$_1$ + ಬಂಡು$_3$ ]

**ತೊಂಡುಬೀಳು** (ಕ್ರಿ). ಸ್ವೇಚ್ಛಾಪ್ರವೃತ್ತಿಗೆ ಬೀಳು; ತುಂಟಾಗು: ಸಾಧು ಕುದುರೆಯಾಗಿ ಮನೆಗೆ ಬಂದರಂತೂ ಸರಿಹೋಯಿತು; ಇಲ್ಲದೆ, ತೊಂಡುಬಿದ್ದರೆ? (ಬಂಕಿಮ. ೭೯). [ತೊಂಡು$_1$+ಬೀಳು$_1$ (<ಬೀೞ್$_1$]

**ತೊಂಡುಮರುಳ್** (ನಾ). ದುಷ್ಟಪಿಶಾಚಿ: ಸುಭಟರಟ್ಟೆಗಳನೆಟ್ಟಿಟ್ಟಿ ಕುಟ್ಟುವ ತೊಂಡುಮರುಳ್ಗಳುಂ (ಪಂಪಭಾ. ೧೧–೧೧೭ ವ).

[ ತೊಂಡು$_1$ + ಮರುಳ್$_3$ ]

**ತೊಂಡುಮೇ,** ತೊಂಡುಂಮೇಯಂ (ಕ್ರಿ). ಸ್ವೇಚ್ಛೆಯಾಗಿ ತಿನ್ನು,-ಮೇಯಂ ; ತುಡುಗುಮೇಯು : ತೊಂಡುಮೇವ ಪಸುವಿಂಡಿನ ತಪ್ಪೋ ಕಂಡು ಕಾಯದ ತುಱುಗಾವನ ತಪ್ಪೋ (ಗೀತಗೋ. ೬೦). **ತೊಂಡುಮೇಯು :** ಅಲ್ಲಿ ಯಾವ ಕಾಲದಲ್ಲಾದರೂ ಬರುವ ಮೂರು ವರ್ಷದ ಕೋಣಗಳು ತೊಂಡುಮೇಯುತ್ತಿರುತ್ತವೆ (ಸಣ್ಣಕ. VI, ೩) ; ಹಳ್ಳ ಅಡಗಿ ಹರಿದಲ್ಲಿ, ತುಡುಗುದನ ತೊಂಡುಮೇಯುವಲ್ಲಿ ದಿಕ್ಕು ತಪ್ಪತಾರ ತಪ್ಪಿ ಹೊಕ್ಕರ ಕಕ್ಕಾವಿಕ್ಕಿಯಾಗಿ (ಗಂಗಾಕ. ೮೬-೨).

[ ತೊಂಡು$_1$ + ಮೇ ]

**ತೊಂಡುಮೇಯು** 'ತೊಂಡುಮೇ' ನೋ.

**ತೊಂಡುವಾಡೆ** (ನಾ). ಪುಂಡುದನಗಳನ್ನು ಹಿಡಿದು ಹಾಕುವ ಸ್ಥಳ ; ದೊಡ್ಡಿ ; ಪೌಂಡಿಮನೆ ; **ಕೊಂಡವಾಡೆ :** ಯಾವ ರಾಸುಗಳಾಗಲಿ . . . ಮೇಯುತ್ತಿರುವ ಕಾಲದಲ್ಲ ಹಿಡಿದು ಅಥವ ಹಿಡಿಸಿ ಸಾವಕಾಶ ಮಾಡದೆ ಸಮೀಪವಾದ ತೊಂಡುವಾಡೆ ದೊಡ್ಡಿಗೆ ದಾಖಲ್ಮಾಡಬೇಕು (ಗ್ರಾಮಾಕ. ೧೦೭). 'ಕೊಂಡವಾಡೆ' ಪರಾ. [ ತೊಂಡು$_1$ + ವಾಡೆ$_3$ ]

**ತೊಂಡುವೆಣ್** (ನಾ). ಸ್ವೈರಿಣಿಯಾದ ಹೆಣ್ಣು; ಜಾರೆ: ತೊಂಡುವೆಣ್ಗಳ ನೇಹದೊಡಕಿಗೆ ಸಿಲುಕದೆ . . . ನಲ್ವೆಂಡಿರೊಡನೆ ಬೆರಸುವುದು (ಹದಿಬ. ೮-೪೬). [ ತೊಂಡು$_1$ + ಪೆಣ್ ]

**ತೊಂಡುವೆಣ್ಬುರುಳಿ** (ನಾ). ಗಳಹುವ ಹೆಣ್ಣುಗಿಳಿ ; ಹರಟುವ ಹೆಣ್ಣುಗಿಳಿ : ನಡಪಾಡುವ ರಾಜಹಂಸೆ ಬಂದಾಡುವ ತೊಂಡುವೆಣ್ಬುರುಳಿ (ಪಂಪಭಾ. ೩-೩೭). [ ತೊಂಡು$_1$ + ಪೆಣ್ಬುರುಳಿ ]

**ತೊಂಡುವೆಸರ್** (ನಾ). ಹೆಮ್ಮೆಗಾಗಿ ಪಡೆದ ಬಿರುದು : ನೀಚಂಗೆ . . . ಗಾವಿಲನೊರ್ವಂ ಕುಡೆ ಕೊಂಡ ತೊಂ[ಪಾಠಾಂ. ಕೊಂ]ಡುವೆಸರಿಂದೇಂ ಸಲ್ವುದೇ ನಿಲ್ವುದೇ (ಧರ್ಮನಾ. ೧-೪೯). [ ತೊಂಡು$_1$ + ಪೆಸರ್ ]

**ತೊಂಡುಸಲಗ** (ನಾ). ಮಂದಿಸಿದ ಸಲಗ ; ಮದ್ದಾನೆ : ತೊಂಡುಸಲಗನನ್ನು ಹಳ್ಳಕ್ಕೆ ಕೆಡವಿದ ಬೇಟೆಗಾರನ ಹೆಮ್ಮೆಯಿತ್ತು ಆ ಧ್ವನಿಯಲ್ಲಿ (ರಾಗಿಣಿ. ೬). [ ತೊಂಡು$_1$ + ಸಲಗ ]

**ತೊಂಡುಹೋಗು** (ಕ್ರಿ). ಸ್ವೇಚ್ಛೆಯಾಗಿ ತಿರುಗು: ಎಮ್ಮೆ ಕೋಣ ಕುಲವ ನಾ ಕಾಯಲಿಲ್ಲ ಅವು ಎನ್ನ ತುಱುವಿಗೆ ಹೊಱಗು ತೊಂಡುಹೋಗದಂತೆ ಕಾದೊಪ್ಪಿಸುವೆ (ತುಱುಗಾ. ೧) : ಹಸುವಿಂಗೆ ಒಂದು ಕಚ್ಚು . . . ಕಱುವಿಂಗೆ ಮೂಱು ಕಚ್ಚು ಇಂತಿವ ನೋಡಿ ಮೇಯಿಸಿಕೊಂಡು ತೊಂಡು ಹೋಗದಂತೆ ನಾ ಕಾದೊಪ್ಪಿಸಬೇಕು (ತುಱುಗಾ. ೨).

[ ತೊಂಡು$_1$ + ಹೋಗು$_1$ (< ಪೋಗು$_1$) ]

**ತೊಂಡುಱಿಸು** (ಕ್ರಿ). (?) : ಹರಿಣನಾ ಹಿಂಡ ಸವಱುತಲೆಸುತ ಖಂಡಿಸುತ ಶಬರಕುಳ ತೊಂಡುಱಿಸಿ ಬೇಂಟೆಯಿಂ ಪೆಚ್ಚುತಿರಲು (ಲಿಂಗಪು. ೬-೨೫) : ಸುರುಚಿರಾಭರಣದಿಂ ಖಂಡಶಶಿನೊಸಲ್ಗಳಿಂದಾ ತೊಂಡುಱಿಸಿ ವಿಟರ ಮೇಲ್ವಾಯ್ದು ಪಿಡಿದಪ್ಪುತಂ (ಲಿಂಗಪು. ೨೫-೪೭). [ ? ]

**ತೊಂಡೂರ್** (ನಾ). ಒಂದು ಊರಿನ ಹೆಸರು: ಮದರಿಕಲ್ಲೂ ತೊಣ್ಡೂರು ಮಲ್ಪಪ್ಪನ್ನೆರಡು ಅಮ್ಮವಳ್ಳಿ ಪನ್ನೆರಡು (ಎಕ. XI, ಹಳ್ಳಕೆ. ೩೪-೧೬ : ಸು. 915). [ ? + ಊರ್ ]

**ತೊಂಡೆ$_1$** (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಹಣ್ಣು : "ಓಷ್ಠೀ, ಬಿಂಬೀ, ತುಂಡಿಕಾ-ಈ ೩ ತೊಂಡೆ" (ಹಲಾಯು. ೩೪-೫೦); "ತುಂಡಿಕೇರೀ, ರಕ್ತಫಲಾ, ಬಿಂಬಿಕಾ, ಪೀಲುಪರ್ಣೀ ಈ ೪ ತೊಂಡೆ" (ನಾಚಿರಾ. ೧೧೧) ; ಗಾಣರ್ಗೆ ಬುಧರ್ಗೆ ಕವಿಶ್ರೇಣಿಗೆ ಪಗೆಯಾದೆವೆಂದು ತೊಂಡೆಯ ಪಣ್ಗಳ್ ನಾಣುಂ ಬೆಳರ್ತು ತೋರ್ಪವೊಲೇಣಾಕ್ಷಿಯರಧರಮಂದು ಬೆಳ್ಪ ಮೆರ್ದೆಸೆಗುಂ (ಉದ್ಭಟ. ೯-೧೨೬) ; ಮದಕರಿ ಮತ್ತೆ ಮೆಟ್ಟಿದ ಹಿರಿಯ ತೊಂಡೆಯ ಹಣ್ಣನಂದದಿ ಕರುಳನೋಕರಿಸಿದನು (ಕೌಶಿರಾ. ೨೨-೨೨) : ಚಿಲುಪಾಲುವೆಸರನದಕಿಟ್ಟು . . . ಹಸಿಯ ತೊಂಡೆಯ ಬೇರ ಕಟ್ಟಿ ತೊಳಸಿದೊಡೆ ಬಿಳುಪಹುದು (ಸೂಪಶಾ. ೨-೩) ; ತರುಣಿಯೋರ್ವಳ ತುಟಿಯ ತೊಂಡೆಯ ಪಣ್ಣಿಂದರಗಿಣಿಯೆಱಗಲು (ಕಂಸವಿ. ೫-೧೦೬).

[ ದೇ.॥ ತಮಿ. ತೊಣ್ಟೈ; ಮಲ. ತೊಣ್ಡ ; ತೆಲು. ದೊಂಡ ]

**ತೊಂಡೆ$_2$, ಡೊಣ್ಣೆ$_2$, ದೊಣ್ಣೆ$_2$** (ನಾ). ಓತಿಕೇತ ; ಗೋಸುಂಬೆ ; ಊಸರವಳ್ಳಿ : "ಸರಟಃ, ಕೃಕಲಾಸಃ-೨ ತೊಂಡೆ ಹೆಸರು" (ಸಿದ್ಧಾಂತಿ. ೧೩೭). 'ತೊಂಡೆಕೇತ' ಪರಾ. **ಡೊಣ್ಣೆ$_2$ :** 'ಡೊಣ್ಣೆಕೇತ' ಪರಾ. **ದೊಣ್ಣೆ$_2$ :** 'ದೊಣ್ಣೆಕಾಟ' ಪರಾ. [← ತೆಲು. ತೊಂಡ ]

**ತೊಂಡೆ$_3$, ತೊಂಡಿ$_2$, ದೊಂಡೆ$_2$** (ನಾ). ೧. [ಸಂಗೀತ] ಒಂದು ರಾಗದ ಹೆಸರು : ಆ ಪಥು ಲಾಗು ಬಾಗು ಮೋಹ ಚಾಳೆಯಂ ನೆಱೆ ಮಾಡಿ ತೊಂಡೆ ವೇಳಾವಾಳಿ ದೇಶಿ ಗುಜ್ಜರಿ ವರಾಳಿಗಳಿಂದಮೆ ನಾಡೆ ಪಾಡುತಂ (ಧರ್ಮಪ. ೩-೯೦). **ತೊಂಡಿ$_2$ :** ೨. ಮಧುರವಾದ ಸ್ವರ ; ಇಂಪಾದ ಧ್ವನಿ : ಶರೀರದ ಲಾಗು ಲಾಗಿನೊಳ್ ನೆಲಸಿದ ರೂಪು ರೂಪಿನೊಳ ಗುರ್ವಿಸುವುನ್ನತ ದೇಸಿ ದೇಸಿಯೊಳ್ ನೆಲಸಿದ ಗಾಡಿ ಗಾಡಿಯೊಳನಾರತ ಮೊಪ್ಪುವ ತೊಂಡಿ ತೊಂಡಿನೊಳ್ಗಲೆ ಬಳಸಿರ್ಪ ಭಾವವಳವಟ್ಟಿರೆ ನರ್ತಕಿ ನಾಡೆ ರಂಜಿಪಳ್ (ಧರ್ಮಪ. ೨-೨೪). **ದೊಂಡೆ$_2$ :** ೩. ಗಂಟಲು ; ಕಂಠ : "ಅಯ್ಯೊ" ಎಂದು ಕಂಪಿತ ಚೀರ್ದನಿ ಮುನಿಯನ ದೊಂಡೆಯಿಂದ ಹೊರಟಿತು (ಕಾಬಝೂ. ೬೭).

[ ದೇ.॥ ತಮಿ. ತೊಣ್ಟೈ ; ಮಲ. ತೊಣ್ಡ; ತುಳು. ದೊಂಡೆ ; ಕೊಡ. ತೊಂಡೆ ]

**ತೊಂಡೆ$_4$** 'ದೊಂಡೆ$_1$' ನೋ.

**ತೊಂಡೆ$_5$** (ನಾ). ಕಬ್ಬಿನ ಜಲ್ಲೆಯ ನಿಸ್ಸಾರವಾದ ಮೇಲುಭಾಗ ; ಕಬ್ಬಿನ ಸೋಗೆ : ತೊಂಡೆ ಹೊಯ್ದು ಒಂದೇ ಅಳತೆಗೆ ಕಬ್ಬುಗಳನ್ನು ಕತ್ತರಿಸಿ ರಾಶಿ ಹಾಕಬೇಕು (ನನ್ನೂರು. ೨೮೫). [ ? ]

**ತೊಂಡೆಕಾಯಿ** (ನಾ). ತರಕಾರಿಯಾಗಿ ಬಳಸುವ ಒಂದು ಬಗೆಯ ಕಾಯಿ : ತೊಂಡೆಕಾಯಿ, ನೆಲ್ಲಿಕಾಯಿ . . . ಬೆಣ್ಣೆ, ದ್ರಾಕ್ಷಹಣ್ಣು, ಇವಿಷ್ಟು ಪಾಂಡುರೋಗ, ಕಾಮಿಲೆ, ಹಲೀಮಕಂಗಳಲ್ಲಿ ಪಥ್ಯವರ್ಗಂಗಳು (ವೈದ್ಯಸಾ. I, ೩೪೯) : ಕಾಗೆದೊಂಡೆ, ಸಿಹಿತೊಂಡೆ, ತೊಂಡೆಕಾಯಿ (ಮ್ಯಾಜಿಗಿ. ೨೩-೪೨೩). [ ತೊಂಡೆ$_1$ + ಕಾಯಿ$_4$ (< ಕಾಯ್$_4$) ]

**ತೊಂಡೆಕೇತ, ಡೊಣ್ಣೆಕಾಟ, ಡೊಣ್ಣೆಕೇತ, ದೊಣ್ಣೆಕಾಟ** (ನಾ). ಹಲ್ಲಿಯ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ ; ಹೆಂಟೆಗೊದ್ದ : ಗಿಡದ ಮೇಲಿದ್ದ ತೊಂಡೆಕೇತವನ್ನು ನೋಡಿ ಮಗು ಹೆದರಿಕೊಂಡಿತು (ರೂಢಿ). **ಡೊಣ್ಣೆಕಾಟ :** ಅವುಗಳಿಗೆ ಸರ್ಪಜಾತಿಗಳಿಂದರೂ ಸರಟ (ಡೊಣ್ಣೇಕಾಟ) ಜಾತಿಗಳಿಂದರೂ ಸಲ್ಲುವುದು (ಮುಂಬಯಿ. ೬-೨೫೯). **ಡೊಣ್ಣೆಕೇತ :** ಡೊಣ್ಣೆಕೇತವನ್ನು ಕಂಡರೆ ಮಕ್ಕಳು ಅದರ ಮೇಲೆ ಕಲ್ಲೆಸೆಯುತ್ತಾರೆ (ರೂಢಿ). **ದೊಣ್ಣೆಕಾಟ :** ವೆಂಕಟನ ಮೊಗ ತಮ್ಮನ ಕಲ್ಲಿನೇಟಿಗೆ ಬಿದ್ದ ಆ 'ದೊಣ್ಣೆಕಾಟ'ದ ಮೃತಶರೀರವನ್ನು ನೋಡುತ್ತಿರುವಂತೆ ವಿವರ್ಣವಾಯಿತು (ಬನಸಿ. ೧೧೪). [ ತೊಂಡೆ$_2$ + ಕೇತ$_2$ ]

**ತೊಂಡೆಗರುಳು** 'ದೊಂಡೆಗರುಳ್' ನೋ.

**ತೊಂಡೆದಾಳಿದ** (ನಾ). ತೊಂಡೆಕಾಯಿಯಿಂದ ಮಾಡಿದ ಪಲ್ಯ : ತೊಂಡೆದಾಳಿದ ಪಟಲದಾಳಿದವ ಸವಿವುತಂ (ಲಿಂಗಪು. ೧೩-೧೬).

[ ತೊಂಡೆ$_1$ + ತಾಳಿದ ]

**ತೊಂಡೆಬಾಯ್** 'ತೊಂಡೆವಾಯ್' ನೋ.

**ತೊಂಡೆವಣ್,** ತೊಂಡೆವಣ್ಣು, ತೊಂಡೆಹಣ್ಣು (ನಾ). ತೊಂಡೆಯ ಬಳ್ಳಿಯಲ್ಲಿ ಬಿಡುವ ಹಣ್ಣು ; ಬಿಂಬಫಲ : ಅವಳ ಚೆಂದುಟಿಯಂ ಪೊಸ ತೊಂಡೆವಣ್ಣದೊಂದಚ್ಚರಿಯಲ್ಲಿ ಪುಟ್ಟಿತೆನುತಟ್ಟಿಯಿನೊಲ್ದು ಕರ್ದುಂಕಲ್

(ಉದ್ಭಟ. ೬-೭೪) ; ತಳಿರಡಿಗೆ ತೊಂಡೆವಣ್ದುಟಿಗೆ ತಾವರೆ ಮೊಗಕೆ . . . ಕೋಗಿಲೆ ಗಿಳಿಗಳಿಂಚರಕೆ ಸೋಲ್ದವಯವಂಗಳೊಳ್ನೆಲಸಿದುವು (ಜೈಮಿಭಾ. ೩೦-೪). **ತೊಂಡೆವಣ್ಣು** : ಮುದದಿಂದ ಗಿಳಿ ತೊಂಡೆವಣ್ಣಿನ ರಸವನು ಕರ್ದುಕಿ ಪೀರ್ವಂತೆ (ಕಂಪವಿ. ೯-೧೨೦) ; ನಾರಿಯರಧರಂಗಳಂ ಕಂಡು ತೊಂಡೆವಣ್ಣುಗಳೆಂದು ತಿಳಿದು ಎಳೆಗಿಣಿಗಳೆಲ್ಲ ಒಟ್ಟುಗೂಡಿ ಬರುತ (ಸೌಗಂಧಿ. ೪೭೪-೬). **ತೊಂಡೆಹಣ್ಣು** : ಬಿಂಬ, ಬಿಂಬಿಕೆ – ತೊಂಡೆಹಣ್ಣು (ನಾಚಿರಾ. ೬. ೭೯) ; ತೊಂಡೆಹಣ್ಣು ಮಣಿಯೆ ನಾಚಿ ನಗೆಯ ಚೆಲುವ ತುಟಿಯ ಚಾಚಿ (ಅನಿಕೇ. ೧೯-೧). [ ತೊಂಡೆ$_1$ + ಪಣ್$_3$ ]

**ತೊಂಡೆವಣ್ಣು** 'ತೊಂಡೆವಣ್' ನೋ.

**ತೊಂಡೆವಣ್ದುಟಿ** (ನಾ). ಬಿಂಬಫಲದಂತಿರುವ ತುಟಿ ; ಬಿಂಬಾಧರ : ಬಂದುಗೆದುಟಿ ತೊಂಡೆವಣ್ದುಟಿಯವರು ಮುಂದಗಮನೆಯೊಳ್ಳಿದಿದರು (ಜೀವಂಸಾಂ. ೦೦-೪೬) ; ತುಱುಗೆವೆಗಣ್ಣ ಕಟಾಕ್ಷ ಕೆಂಬಲ್ಗಳ ಮಿಱುಗುವ ತೊಂಡೆವಣ್ದುಟಿಯ ಬೆಡಗಿಂದೆ ಮಾತನಾಡಿದಳು (ಪೋಹಚ. ೦೬-೨೪) ; ಕಣ್ದೆಱೆದಾಕ್ಷಣ ಬರಸೆಳದಾ ತೊಂಡೆವಣ್ದುಟಿಯುಬಲೆಯನಪ್ಪಿ . . . ತೋಱಿದನು ಸ್ವರ್ಗಸುಖವ (ಭರಚ. ೦೫-೬೨).

[ ತೊಂಡೆವಣ್ + ತುಟಿ ]

**ತೊಂಡೆವಾಯ್, ತೊಂಡೆಬಾಯ್, ತೊಂಡೆವಾಯಿ** (ನಾ). ತೊಂಡೆಯ ಹಣ್ಣಿನಂತೆ ಕೆಂಪಾಗಿರುವ ಬಾಯಿ,-ತುಟಿ : ಬಂದರ್ ಪವಳವಾಯ ತಳಿರ್ವಾಯ ತೊಂಡೆವಾಯೊಳ್ವೆಂಡಿರ್ (ಜಗವಿ. ೪-೦೨೨) ; ನಿಡುಸುಯ್ಲುಂ ತನ್ನನೊತ್ತಂಬರಿಸೆ ನಿಲುಪುತುಂ ನೀಳ್ದ ನಳ್ಕೇಶದಿಂದಂ ತೊಡೆಯುತ್ತುಂ ತೊಂಡೆವಾಯಂ ಶ್ರಮಜಲಕಣಮಂ ಮೇಲುದಿಂ ವಾರಿಸುತ್ತುಂ . . . ಬಂದು ನಿಂದಳ್ (ಸೂಕ್ತಿಸು. ೮-೦೬೬) ; ಎನಗುಳಿದ ಗಂಡುಗಳೆಲ್ಲ ಸಹೋದರರೆಂದೀ ತೊಂಡೆವಾಯಬಲೆ ನುಡಿದಳು (ಶ್ರೀಪಾಲ. ೫-೮೬) ; ರಾಯ ಪರಾಕೆಂದು ಕೈವಾರಿಪ ತೊಂಡೆವಾಯ ಪಾಠಕಿಯರೊಪ್ಪಿದರು (ಪೋಹಚ. ೪-೬). **ತೊಂಡೆಬಾಯ್** : ತೊಂಡುನಗೆಯ ತೊಂಡೆಬಾಯ ಕಂಡು ಕಂಡು ಮುತ್ತನಿಟ್ಟು (ಸಾದಲೀ. ೬೬-೧೯). **ತೊಂಡೆವಾಯಿ** : ತುಱುಗೆವೆಯುಲರ್ಗಣ್ಣು ತುಂಬಿಗುರುಳ ತೊಂಡೆವಾಯಿ . . . ಇಂಬಾದವಾ ಬಾಲಕಿಗೆ (ಶ್ರೀಪಾಲ. ೩-೨೪). [ ತೊಂಡೆ$_1$ + ಬಾಯ್ ]

**ತೊಂಡೆವಾಯಿ** 'ತೊಂಡೆವಾಯ್' ನೋ.

**ತೊಂಡೆವಾಯ್ದೆರೆ** 'ತೊಂಡೆವಾಯ್ದೆಱೆ' ನೋ.

**ತೊಂಡೆವಾಯ್ದೆಱೆ, ತೊಂಡೆವಾಯ್ದೆರೆ** (ನಾ). = ತೊಂಡೆವಣ್ದುಟಿ : ತುಱುಗೆವೆಗಣ್ಣ ಕಾಂತಿ ಮುರಗಟ್ಟಲೆಯಂ ಬೆದಱಿಸೆ ತೊಂಡೆ ವಾಯ್ದೆಱೆ ಕಿಸುಸಂಜೆವೀಱೆ (ಜಗವಿ. ೦೬-೨೫) ; ಸಕ್ಕರೆಸವಿಯ ತೊಂಡೆ ವಾಯ್ದೆಱೆಯ ಸೊಗಸನುಗುಳ್ವಕ್ಕಜದ ಮುದ್ದುವಾತಿನ . . . ಪೆಣ್ಮಕ್ಕಳ ಯ್ವಂದರೊಸೆದು (ಪದ್ಮರಾ. ೩-೬೭) ; ತೊಂಡೆವಾಯ್ದೆಱೆಯ ಕಂಬು ಕಂಠದ . . . ನಿತಂಬಿನಿಗೆಣೆಯಾದರುಂಟೆ (ಜೀವಂಸಾಂ. ೦೦-೨೩) ; ಬೆಳರ್ವಣ್ಣಮಂ ತಳೆದ ತೊಂಡೆವಾಯ್ದೆಱೆಯ ಕೆಂಬೊಳಪಡರ್ದ ನಿಡು ಗಣ್ಣ . . . ಎಳವೆಣ್ಣು (ಉದ್ಭಟಪ. ೪-೩೪). **ತೊಂಡೆವಾಯ್ದೆರೆ** : ತೊಳಗುವ ತೊಂಡೆವಾಯ್ದೆರೆಯ ಮುದ್ದು (ಯಾದವಂ. ೨-೭೦).

[ ತೊಂಡೆ$_1$ + ಬಾಯ್ದೆಱೆ$_2$ ]

**ತೊಂಡೆಹಣ್ಣು** 'ತೊಂಡೆವಣ್' ನೋ.

**ತೊಂಡೇಳ್** (ಕ್ರಿ). = ತೊಂಡುಬೀಳು : ತೊಂಡೆದ್ದ ದಿಂಡಿಗತನದ ಪುಂಡ ಹೆಣ್ಣು (ಮಂತ್ರಶ. ೩೪-೦೬). [ ತೊಂಡು$_1$ + ಏಳು$_1$ (< ಎೞ್$_1$) ]

**ತೊಂತಗವಿತೆ** (ನಾ). ವ್ಯರ್ಥಪದಪೂರಿತವಾದ ಕವಿತೆ ; ಹುರುಳಿಲ್ಲದ ಕಾವ್ಯ : ಮುಂತೆ ಸರಿಯಿಲ್ಲೆಂದು ಪೊಗಳ್ದವರು ಪೊಱಮಟ್ಟ ಪಿಂತವನ ಕವಿತೆಯೇನೆಂದು ನಿಂದಿಸಿ ತಮ್ಮ ತೊಂತ[ಪಾಠಾಂ. ಕೊಂತ, ತೂಂತ] ಗವಿತೆಯ ತೊಂಬನುರ್ಚಿ (ಹಚಳಾ. ೧-೨೯) ; (ಸೋಮಚ. ೧-೧೬ ಸೋ) ; ತೊಂತಗವಿತೆಯ ಗು ಣ್ಣೇ೦ . . . ಸುಪ್ರಬಂಧದೊಳ್ಪಿಂಗೆಣೆಯೇ (ಹರಿಶ್ಚ. ೧-೨೩).

[ ಟಿ ಇದು 'ತೂಂತಗವಿತೆ (<ತೂಂತು$_2$ + ಕವಿತೆ)' ಎಂದೇ ಇರಬಹುದು ]

**ತೊಂತು$_1$** (ಕ್ರಿ). ೧. ಮೇಲೇರು ; ಆಕ್ರಮಿಸಂ ; ಮಱುತ್ತು : ಮನ್ಮಥ ಕುಮಾರಕ ತನ್ನ ತೊಂತಿದ ಖಳರನುತ್ತರಿಸಿ ಹಂತಿಯೊಳ್ ಕೆಡಹಲ್ಕೆ (ಪೋಹಚ. ೩೪-೬೭) ; ಮಂತ್ರೀಶ್ವರನ ಮೊಯಸ್ಥಾಗಿವಲ ರಥರಾಜಿ ದಂತಿಗಳಾ ಹವದೊಳಗೆ ತಿಂತಿಣಿ ಭರವಸದಿಂದಾಗ ಪರಿತಂದು ತೊಂತಿತು ನೀಲಾಂಬರನ (ಪೋಹಚ. ೪೦-೬೩). ೨. ಸಂತ್ರ್ಯಾಹಾಕಂ ; ಬಳಸು : ನೀನೀತನ ವರೂಥಮಂ ತೊಂತಿ ವಾಲಾಗ್ರದಿಂ ಗಗನದೊಳ್ತಿರಿಪಿಡು (ಜೈಮಿಭಾ. ೨೭-೪೩) ; ಕಾಲು ತೊಂತಿದ ಹಾವು ಕಚ್ಚದೆ ಬಿಡದು (ಗಾದೆ). ೩. ಪ್ರೇರಣೆ ಮಾಡಂ ; ಎತ್ತಿಕಟ್ಟು ; ಪ್ರಚೋದಿಸಂ : (ಶ).

**ತೊಂತಿಕೊಳ್** = ೧. ಸಂತ್ಯಗಟ್ಟು : ಬಸವಣ್ಣನ ತೊಂತಿಕೊಂಡು ಬಸವಣ್ಣನ ಧರಿಸಿಕೊಂಡು .... ನಾನು ಬಸವ ಬಸವಾ ಎನುತಿರ್ದೆನಯ್ಯಾ (ಅಬಂಡೀ. ೩೦೪-೮೩). ೨. ಹಬ್ಬು ; ವ್ಯಾಪಿಸಂ ; ತುಂಬಿಕೊಂಡಿರು : ಮೂವತ್ತಾರುತತ್ತ್ವದೊಳನಂತ ಜನ ದೇವ ದಾನವರಾದಿಯಾಗಿಹರು ತೊಂತಿಕೊಂಡಿಹರು (ಲಕ್ಷ್ಮಣಾ. ೩-೧೯-೬೨) : ಈ ಮದನಕಾಂತೆ ಮನದೊಳ ಹೊರಗೆ ತೊಂತಿಕೊಂಡಿರ್ದತುಳಚಿಂತಾಗ್ನಿ ಶಾಂತರಸದೋಳ್ಮುಳುಗಲು (ನವಮೋ. ೯-೪೬). ೩. ಸಿಕ್ಕಿಕೊಳ್ಳು : ತೊಂತಿಕೊಂಡಿರೆ ಶೋಕಸಾಗರದಿ ತೊಳಲುತಿರೆ ಪ್ರಾಣಂಗಳುಳಿಯವೆನಗೆ (ಪಂಕಾರಾ. ೨-೨೨-೩೬).

[ ← ತಮಿ. ತೊತ್ತು ]

**ತೊಂತು$_2$** (ನಾ). ದಟ್ಟಣೆ ; ನಿಬಿಡತೆ : ಅಂತರಾತ್ಮಕನ್ನೆದುವವ ನಿಶ್ಚಿಂತನ್ನೆ ಸಂಸಾರಸಾಗರ ತೊಂತಿನಿಂ ಕೆಡೆದಿಹರು ನೃಪ ನಿಶ್ಚಿಂತರಲ್ಲೆಂದ (ಅಂಬಿಕಾ. ೩೬-೨೩) ; ಮರಗಳ ತೊಂತು ಬಹಳ ಜಾಸ್ತಿಯಾದ್ದರಿಂದಲೂ . . . ಕತ್ತಲೆಯಾದ ಮೇಲೆ ಜನರು ಆ ದಾರಿಯನ್ನು ಉಪಯೋಗಿಸು ತ್ತಿರಲಿಲ್ಲ (ಚಂಗಾಳ್ಮ. ೪೩೩). [ < ತೊಂತು$_1$ /ತಮಿ. ತೊತ್ತು ]

**ತೊಂತುಳಿ** (ನಾ). ಅಜಿಗಿಜಿಯಾದ ಸ್ಥಿತಿ ; ಅಸ್ತವ್ಯಸ್ತವಾದ ಸ್ಥಿತಿ: ನಿಲೆ ಪೊಲಮುಚ್ಚು ತಮ್ಮ ಮನದೊಳ್ ಸಲೆ ಕಬ್ಬಸು ಪರ್ವಿದುರ್ವಿಯೊಳ್ ಚಲದಿಱಿದಾಂತು ಬಿಟ್ಟ ಭಟರಂತ್ರದ ತೊಂತುಳಿಯೊಳ್ ಸಿಲುಂಕಿ (ನೇಮಿಪು. ೧೧-೦೫೩).

[ ಟಿ ಇದು 'ತೊಟ್ಟುಳಿ' ಶಬ್ದದ ಅಪಲಿಖಿತವಿರಬಹುದು ]

**ತೊಂದರೆ** (ನಾ). ೧. ಕಷ್ಟ ; ಪೇಚಾಟ : ಇಲ್ಲದ ಸಲ್ಲದ ಹೆಚ್ಚಿನ ತೊಂದರೆ ಗಳೂ,ಕಾರ್ಯಭಾರವೂ . . . ಸಹನಿಗೆ ಬಂದೊದಗಿತು (ಸಸ್ಯಕ. ೦೫೦) : ಮನೆಮನೆಗಳಲ್ಲಿಯ ಜನಗಳಲ್ಲಿ ಒಮ್ಮನಸಿಲ್ಲದಾಗಿ, ತೊಂದರೆಗಳು ತಾಂಡವ ವಾಡುತ್ತವೆ (ಗಾಳಿಗು. ೫೦). ೨. ತೊಡಕು ; ತಡೆ ; ಅಡ್ಡಿ ; ಅನನಂ ಕೂಲ : ಮುಂದಡಿಯಿಡಬೇಕೆನ್ನುವವರಿಗೆ ಇನ್ನೂ ಕೆಲವು ತೊಂದರೆಗಳಿವೆ (ಯಕ್ಷಪ್ರ. ೦೮೨) : ಅವನ ಈ ಒಡನಾಟದಿಂದ ನನಗಾದ ಒಂದು ತೊಂದರೆ ಯೆಂದರೆ ಸಂಜೆ ಯಮುನಾ, ಲಲಿತೆಯರನ್ನು ನೋಡಲು ಸಮಯ ಸಿಗದುದು ! (ಅಲಹೂ. ೬೬). ೩. ಕಿರುಕುಳ ; ಕಾಟ ; ಹಿಂಸೆ : ರಾಮಪ್ಪನವರು ಒಂದು ಪಿಳ್ಳೆಗೂ ಯಾವ ತೊಂದರೆಯನ್ನೂ ಕೊಡಲಿಲ್ಲ (ಕಂಬಹು. ೦೨೦).

[ ದೇ.೫ ತಮಿ. ತೊನ್ದರವು, ತೊನ್ದರೈ ; ಮಲ. ತೊನ್ದರ ; ತುಳು. ತೊಂದರೆ ; ತೆಲು. ತೊಂದರ ]

**ತೊಂದರೆಗೊಳಿಸು** (ಕ್ರಿ). ಅಡ್ಡಿಪಡಿಸು ; ತೊಡಕಿಗೆ ಈಡುಮಾಡಂ : ಇತರರನ್ನು ಕಾರಣವಿಲ್ಲದೆ ತೊಂದರೆಗೊಳಿಸುವುದೇ ಕೆಲವರ ಸ್ವಭಾವ (ರೂಢಿ). [ ತೊಂದರೆ + ಕೊಳ್$_1$ + – ಇಸು$_3$ ]

**ತೊಂದರೆಪಡು** (ಕ್ರಿ). ಕಷ್ಟಪಡಂ : ಕುಡಿವಿಾಶೆ . . . ಇಲ್ಲದಿದ್ದಾಗ ಅನೇಕ ಕೀಟಗಳು ನಿಸ್ಸಹಾಯ, ತೊಂದರೆಪಡುತ್ತವೆ (ಕೀಟಬಿ. ೦೪) : ನನ ಗೋಸ್ಕರ ನೀನು ತೊಂದರೆಪಟ್ಕೋಬೇಡ (ರೂಢಿ). [ ತೊಂದರೆ + ಪಡು$_1$ ]

**ತೊಂದಿರೆ** (ನಾ). (?) : ನಾಲುವಿರುದ್ರುವ ಮುಖ್ಯಧಿದಾವ ತೊದಲುಂ ತೊಸ್ದಿರರುವ್ವೆ ನೂರ್ವ್ವರು ವಿುದ್ದ್ರ್ ಎಟ್ಟ ಧರ್ಮ್ಮವೆನ್ತೊಂದಡೆ (ಇಳ. XI. ೨೭೪-೨೭ ; 1158). [ ? ]

**ತೊಂಪೆ** 'ತೊಂಬೆ$_1$' ನೋ.

**ತೊಂಬತು** 'ತೊಂಬತ್ತು' ನೋ.

**ತೊಂಬತ್ತು**, ತೊಂಬತಂ, ತೊಂಭತಂ, ತೊಂಭತ್ತು (ನಾ). ಒಂದಂ ಸಂಖ್ಯಾವಾಚಕ ; ಒಂಬತ್ತನ್ನು ಹತ್ತರಿಂದ ಗುಣಿಸಿದರೆ ಬರುವ ಗುಣಲಬ್ಧ; ಹತ್ತುಕಡವೆಂನೂರು: ಅರಕೆಸಿಗಳಾಣತ್ತಿ ಆಗಪಳ್ಳಿಟ್ಟಿಟ್ಟು ಪ್ರಸಾದಂಗೆಯ್ದಾರಿದರ್ಕೆ ತೊಂಬತ್ತುಱುಸಾಸಿರದಾ ಪ್ರುಕೃತಿಗಳೆಲ್ಲೊರುಂ (ಎಕ. III. ತಿರುಮ. ೧-೯ : 726) : ತೊಂಬತ್ತೊಂಬಯ್ಸಾಸಿರದ ಇನ್ನೂಱೆಣ್ಬತ್ತು ನಾಲ್ಕು ವ್ಯಾಧಿಗಳುಂ (ವಡ್ಡಾರಾ. ೯೯-೪) ; ಮುಂದೆ ಲಕ್ಷದ ಮೇಲೆ ತೊಂಬತ್ತಾಱುಸಾವಿರ ಶಿವಾಲಯಂಗಳಂ ಮಾಡುತಿಪ್ಪರಂ ಕಂಡು (ಶೂನ್ಯಸಂ. ೩೫-೩). **ತೊಂಬತು:** ಲಕ್ಷದ ಮೇಲೆ ತೊಂಬತಾರ್ಸಾಸಿರ ಮಹಾಜಂಗಮಕ್ಕೆ ಮೃಷ್ಟಾನ್ನವಂ ದಾಸೋಹವಂ ಮಾಡುತ (ಚಬಪು. ೩-೩೨). **ತೊಂಭತು:** ಬರಿಸವಾಜಾಗೆ ಮತ್ತಂ ಶಕಾಬ್ದಂ ವಿಸ್ತಾರಂ ತೊಂಭತೇಟೊಂಭತುವೆನೆ (ಎಇ. VI, ೨೦೫-೭ : 1057) ; ತೊಂಭತತೊಂಬತ್ತು [ ಪಾಠಾಂ. ತೊಂಬತ್ತೊಂಬತ್ತು ] ಸಹಸ್ರಯೋಜನ ಗಳಿಂದಂಬರವನು ಮುಟ್ಟುತ್ತ . . . ಮೇರುವಿಂಬಾಗೆ ಲಕ್ಷಯೋಜನದಿ (ಜೀವಂಧಾಂ. ೧-೨೪). **ತೊಂಭತ್ತು :** ಪ್ರಿಥುವೀರಾಜ್ಯಕೆಯೆ ಕಂಭರಸರ್ ತೊಂಭತ್ತಱುಸಾಯಿ x x x (ಎಕ. IV, ಹೆಗ್ಗಡ. ೯೩-೨ ; ಸು. 780) ; ತೊಮ್ಭತ್ತಱುಸಾಸಿರ್ವ್ವರು ಮಯ್ಸಾಮನ್ತರು . . . ಇದಕ್ಕೆ ಸಾಕ್ಷಿ (ಎಕ. I, ೨-೯ ; 887) ; ತನ್ನೊಡನಾಡಿಗಳಪ್ಪ ತೊಂಭ[ ಪಾಠಾಂ. ಬ ]ತ್ತಾಱು ಸಾಸಿರ ಗೋಪಕುಮಾರರೊಡನೆ ಕೂಡಿ (ಪಂಪಭಾ. ೯-೦೨ ವ) ; ಎಳೆಯೊಳಟ್ಟುದು ಸಾಸಿರಯೋಜನಂ ಗಗನಕ್ಕೆ ತೊಂಭತ್ತೊಂಭಯ್ಸಾಸಿರಂ ಬಳೆದುದು . . . ಮೇರುಮಹೀಧರೇಂದ್ರಂ (ಶಾಂತಿಪು. ೧೦-೬೬) ; ಅಂತು ತೊಂಭತ್ತ[ ಪಾಠಾಂ. ತ್ತಾ ]ಱುಸಾಸಿರಮಂತಃಪುರಂಗಳಂ . . . ನೆಱೆದ ಸಾಮ್ರಾಜ್ಯಲಕ್ಷ್ಮಿಗಧಿಪತಿಯಾಗಿ (ಆದಿಪು. ೧೧-೧ ವ).

**ತೊಂಬದಿಂಬರ್** = ತೊಂಬತ್ತು ಮಂದಿ ; ತೊಂಬತ್ತು ಜನ : ಸಿಂಹಸೇನಂ ಮೊದಲಾಗೆ ತೊಂಬದಿಂಬರ್ ಗಣಧರರುಂ (ಆದಿಪು. ೮-೨೫ ವ). **ತೊಂಬಯ್ಸಾಸಿರ** = ತೊಂಬತ್ತುಸಾವಿರ : ತೊಂ[ ಪಾಠಾಂ. ಒಂ, ಎಂ ] ಬಯ್ಸಾಸಿರ್ವರ್ ನಿಮ್ಮಂಬಿನ ಬಂಬಲೊಳೆ ಮಕುಟಬದ್ಧರ್ ಮಡಿದರ್ (ಪಂಪಭಾ. ೧೦-೨೯) ; P ಕೇಶಿರಾಜನ ಮೇರೆಗೆ ' ಒಂಬತ್ತು + ಪತ್ತು ' ಎನ್ನುವುದಂ ಈ ಶಬ್ದದ ವ್ಯುತ್ಪತ್ತಿ.

[ ದೇ.॥ ತಮಿ. ಮಲ. ತೊಣ್ಣೂಱು ; ಕೊಡ. ತೊಂಬದೀ ; ತೆಲು. ತೊಂಬದಿ, ತೊಂಭೈ ]

**ತೊಂಬರೆ** (ನಾ). ಒಂದೆಡೆ ನಿಲ್ಲದವನು; ಅಲೆದಾಡುವವನು; ಅಲೆಮಾರಿ: ಅಂಬಲಿಯಲ್ಲದೆ ಉಂಬರೆ ಕೂಳಿಲ್ಲ ಕಂಬಳಿಗಳ ಹೊದ್ದಿಹೆವು . . . ತೊಂಬರೆ ಬದುಕು ಕೇಳ್ ನಮಗೆ (ಕವಿಚ. II, ೩೮೯ ಪ್ರಸಾದಸಾಂಗತ್ಯ).

[ ದೇ.॥ ತಮಿ. ತೊಮ್ಬರೈ ]

**ತೊಂಬಲ$_1$** 'ತಂಬುಲ' ನೋ.

**ತೊಂಬಲ$_2$** (ನಾ). (ಉಕ) ತೇವ : ಮಳೆಗಾಲದಲ್ಲಿ ಹವೆಯು ತೊಂಬಲ ವಾಗಿರುತ್ತಿದ್ದರೂ ನೆಲದ ಮೇಲಿನ ನೀರು ಸ್ವಲ್ಪ ಸ್ವಲ್ಪ ಬಾಷ್ಪವಾಗಿ ಹೋಗುತ್ತಿರುತ್ತದೆ (ಮುಂಬಯಿ. ೫-೧೩೪). [ <ತಂಬಲ ]

**ತೊಂಬಲು** 'ತಂಬುಲ' ನೋ.

**ತೊಂಬಾರ$_1$**, ತೊಂಭಾರ (ನಾ). ೧. (ಧಾನ್ಯದ) ರಾಶಿ,-ಗುಂಪು,-ಸಮೂಹ : (?). ೨. ಗುಂಪಿನ ಜನರಿಗಾಗಿ ಮಾಡಿದ ಅಡಿಗೆ ; ಸಾಮೂಹಿಕ ಭೋಜನ ; ತಂಡದ ಊಟ : ಅವುದೊಂದು ಸಿರಿಗರ ಹೊಡೆದಲ್ಲಿ ಪಾಕಭೇದವಾಗಿ ತೊಂಬಾ[ ಪಾಠಾಂ. ಬ ]ರಕ್ಕೆ ಬೇಱೆ ಮಾಡಿದುದು ರಾಜಾನ್ನವು (ಬಸವ. ೧೧೪-೩೫) ; ತನ್ನ ಜೊತೆಯಲ್ಲಿಯೇ ಕೂತ ಉಳಿದವರಿಗೆ ತೊಂಬಾರದ ಅಡಿಗೆಯನ್ನು ಮಾಡಿಸಿ . . . ಹಾಕಿಸುತ್ತಿದ್ದನು (ನೀತಿಚಿಂ. X, ೦೫) ; ಗುಂಪಿನ ಅಡಿಗೆ, ಅಪ್ಪೇನೂ ಅಚ್ಚುಕಟ್ಟಿಲ್ಲದ್ದು . . . ತೊಂಬವಾರ, ತೊಂಬಾರ (ನಮ್ಮನಂ. ೧೦೪). **ತೊಂಭಾರ :** ೩. ಆಧಿಕ್ಯ ; ಅತಿಶಯ : ಬಸವೇಶ್ವರದೇವರು . . . ಸರ್ವಾಲಂಕಾರಶೃಂಗಾರದ ತೊಂಭಾರದಿಂದಲಂಕಾರಂಗೊಂಡು (ಯಡಿಜೋರ. ೩೦).

[ ದೇ.॥ ತಮಿ. ತೊಮ್ಪಾರ, ತೊಪ್ಪಾರ ; ತುಳು. ತೊಂಬರ ; ತೆಲು. ತೊಮ್ಮರ ]

**ತೊಂಬಾರ$_2$** (ನಾ). ಭವನ ; ಸೌಧ : ಅಪ್ಪಾಜಯ್ಯನು ತನ್ನ ಸಂಗಡ ಚನ್ನುವೀರನನ್ನು ಕರದುಕೊಂಡು, ಹಿತ್ತಲ ಬಾಗಿಲಿಗಾಗಿ, ತೊಂಬಾರದ ಹಿಂದಟ್ಟಿಗಾಗಿ . . . ಕೆರೆಬಾಗಿಲಿಗಾಗಿ ಸುಗ್ಗಿ (ರಾಜೇಂದ್ರ. ೨೭೭).

[ ← ತಮಿ. ತೊಮ್ಪಾರ, ತೊಮ್ಪರ, ತೊಪ್ಪಾರ ]

**ತೊಂಬುಮ್ಪೋಯ** (ನಾ). ಒಬ್ಬಾತನ ಹೆಸರು : ತೊಮ್ಬುಮ್ಪೋಯನ ಮಕ್ಕಳ್ ನಾಗಯ್ಯನು ಕೊಣ್ಣಯ್ಯನು (ಎಕ. X. ಕೋಲಾರ. ೯-೪ : ಸು. 925). [ ? ]

**ತೊಂಬೆ$_1$**, ತೆಮ್ಮೆ, ತೆಮ್ಮೆ, ತೊಂಪೆ, ತೊಮ್ಮೆ$_2$, ತೋಮೆ (ನಾ). ೧. ಗೊಂಚಲು ; ಗುಚ್ಛ : "ಮಂಜರಿಯೊಳ್ತೊಂಬೆ ತೊಡಂಬೆ ಜೊಂಪ ಗೊಂಚಲ್ ತಿಳಿಗುಂ" (ಕರ್ಣಾನಿ. ೦೨) ; "ಜೊಂಪಮೆನಲ್ ತೊಂಬೆ" (ಚತುನಿ. ೯) ; ತಳ್ತ ಬಣ್ಣವಣ್ಣದ ಗುಡಿ ತೊಂ[ ಪಾಠಾಂ. ಕೊಂ ]ಬೆ ಗೊಂಚ [ಲೆಲೆ]ಯಿಕ್ಕಿದ ಕಾವಣವೆಲ್ಲಿಯುಂ ಪೊದಟ್ದೊದವಿರೆ (ಪಂಪಭಾ. ೩-೩೪) ; ತಳಿರ ತೊಂಬೆಯ ನಲ್ಲಾಡಿ ಹೂಗೊಂಚಲೊಳ್ ಸುಟಿದು (ಅಂಜನ. ೨-೫೦) ; ನನೆಗಳಂ . . . ತೊಂಬೆಗಳ ಕಾಯ್ಗಳಿಂ (ಜ್ಞಾನಚಿಂ. ೧-೬೩) ; ಹೀರಖಚಿತದ ಬೊಂಬೆ ಚಾರು ಪೂವಿನ ತೊಂಬೆ ತೋರಮುಡಿಯ ವಧೂಟಿ (ಪಂಚಾರಾ. ೫-೬-೫೭). ೨. ಗುಂಪು ; ಸಮೂಹ ; ಸಂದಣಿ ; "ಬಂಬಲ್" (ಚತುನಿ. ೬. I, ೨೫) ; "ದೊಂದಣಿ ತೆರಳ್ಕೆ ಸಾಲೊಬ್ಬುಳಿ . . . ಗಡಣಂ ಜಾಳಿಗೆಯುಂ ತೊಂಬೆಯೆನೆ ಶ್ರೇಣಿಕಾಖ್ಯಂ" (ಶಬ್ದಮಂ. ೫೫). ೩. ಸಾಲು ; ಶ್ರೇಣಿ ; ಪಂಕ್ತಿ : "ತೊಂಬೆಯೆನಲಕ್ಕದು ಶ್ರೇಣಿಗೆ" (ಕಶರ. ೪೯). **ತೆಮ್ಮೆ :** ೪. ಹೆಚ್ಚಳ ; ಆಧಿಕ್ಯ ; ಮೇಲ್ಮೆ. "ತೆಮ್ಮಂ ಶ್ರೇಣಿಯೊಳ್ ಪೆರ್ಚುಗೆಯೊಳಪ್ಪುದು" (ಕಶರ. ೪೮). **ತೆಮ್ಮೆ ;** ೨. ತೆಮ್ಮೆ ತೆಮ್ಮೆಯೊಳೆಯ್ದಿ ಸರ್ವರು ಮಾಡಿದ ಸಮ್ಮತಾರ್ಥವನೊಪ್ಪು ಗೊಂಡು (ಭರತ. ೬೧-೬೪). **ತೊಂಪೆ :** ೧. ಎದೆಯ ಮೇಲೆ ಬಹುಮಾನಗಳ ತೊಂಪೆಯನ್ನು ನೇತುಹಾಕಿಕೊಂಡಿದ್ದ ವಿಾಸೆ ಪೋಲೀಸಿನವನ ಕಡೆಗೆ ತಿರುಗಿ . . . ಆಜ್ಞಾಪಿಸಿದನು (ಪುನರು. ೦೪೮). **ತೊಮ್ಮೆ$_2$ :** ೪. 'ತೊಮ್ಮೆವಡೆ' ಪರಾ. **ತೋಮೆ :** ೨. ಪಂದಿಯ ಗೊಂದಳದಂತೆಯುಂ ಅಮ್ಮಾವಿನ ತೋಮೆಯಂತೆಯುಂ . . . ಎತ್ತಲುಂ ಮಿಡುಂಕಲ್ಪಡೆಯದೆ ಸಿಡಿಮಿಡಿಗೊಂಡು (ಪುಷ್ಪಪು. ೩-೧೨೭ ವ).

[ ದೇ.॥ ತಮಿ. ತುಮ್ಪೈ ; ತೆಲು. ತೊಂಬ, ತೊಪ್ಪ ]

**ತೊಂಬೆ$_2$**, ಟೊಮ್ಮೆ, ತಂಪೆ (ನಾ). ೧. ಧಾನ್ಯಗಳನ್ನು ಶೇಖರಿಸಿಡುವ ಬಿದಿರಿನಿಂದ ಹೆಣೆದ ದೊಡ್ಡ ಬುಟ್ಟಿ,-ಗೂಡೆ; ಗಳಗೆ : " ಗೊಂಚಲು ಗಳಿಗೆ ತೊಂಬೆಯೆನಿಕ್ಕು " (ಶಬ್ದಮಂ. ೧೦೨) ; ಸೀರೆಯನ್ನು ಹೊರ

ತೆಗೆದು ಹತ್ತಿರದಲ್ಲಿದ್ದ ಅರೆ ತುಂಬಿದ ಭತ್ತದ ತೊಂಬೆಯೊಳಕ್ಕೆ ಹಾಕಿದ (ನಿಶಉ. ೨೬೪); ತೀರಿಲ್ಲ ತಿಟುವಟವಿಲ್ಲ ಜಂಭ ಮಾತ್ರ ತೊಂಬೇ, ಅಷ್ಟು (ಗಾದೆ). ೨. ಹೊಟ್ಟೆ; ಉದರ: ತೋಕಿನ ನಳಿಗೆಯಿಂದ ಹಾರಿದ ಬೆಡಿ ಕಿರುಬನ ಪಕ್ಕೆಗೆ ತಗಲಿ ಅದರ ತೊಂಬೆಯನ್ನು ಸೀಳಿತು (ಹುಲಿಹಾ. ೧೦೦). 'ತೊಪ್ಪೆ₁' ಪರಾ. ಟೊಮ್ಮೆ: ೧. ವಿಟ್ಟವಿಟ್ಟನೆ ವಿಡುಕೆ ಟೊಮ್ಮೆಯ ಹೊಟ್ಟು ತವುಡಂ ಕರ್ಚಿ (ಮದೇಪು. ೫-೬೪). ತುಪ್ಪೆ: ೩. ಧಾನ್ಯದ ರಾಶಿ,-ಸಂಗ್ರಹ; ಕಾಳಿನ ಗುಂಡ್ಡೆ: ನೂರು ಮುಡಿ ಭತ್ತ ಆ ಬಾಕಿ ಮಾರಿನಿಂದ ಪ್ರತಿವರುಷ ಭಟ್ಟರ ಮನೆಯ 'ತುಪ್ಪೆ'ಯಲ್ಲಿ ಬಿದ್ದೇ ತೀರುತ್ತದೆಂದರೆ ಆಶ್ಚರ್ಯಪಡಬೇಕಾಗಿಲ್ಲ (ದಂಬನಾ. ೧೨).

[ದೇ.॥ ತಮಿ. ತೊಪ್ಪೈ, ತೊಪ್ಪೈ; ತುಳು. ತುಪ್ಪೆ]

**ತೊಂಬೆಗಡುಕು** (ನಾ). ಗೊಂಚಲಿನಂತಿರುವ, ಕಿವಿಯಲ್ಲಿ ಧರಿಸುವ ಒಂದು ಬಗೆಯ ಆಭರಣ: ಹಸ್ತಕಡಗದ ನೀಲಮುತ್ತಿನ ತೊಂಬೆಗಡುಕಿನ ಕೊರಳ ದಾರಗಳ... ಧರಿಸಿ (ಬಸಪು. ೬೧-೨೭); ಒಡನೆ ಕಿವಿಯೊಳೊಪ್ಪುವ ತೊಂಬೆಗಡುಕಿನ ಕಡುಚೆಲ್ವ . . . ಕೊಡಗಿತಿಯರು ರಾಜಿಸಿದರು (ಕಂಸವಿ. ೨೦-೮೬). [ತೊಂಬೆ₁ + ಕಡುಕು₃]

**ತೊಂಭತು** 'ತೊಂಬತ್ತು' ನೋ.

**ತೊಂಭತ್ತು** 'ತೊಂಬತ್ತು' ನೋ.

**ತೊಂಭಾರ** 'ತೊಂಬಾರ₁' ನೋ.

**ತೊಕಡಕನ ಮರ** (ನಾ). ಒಂದು ಬಗೆಯ ಮರ: ಪೇನಾರಿಮರ, ಪೀನಾರಿ, ಪಾತಾಳಮರ, ಭೇತಾಳ, ತೊಕಡಕನ ಮರ, ಭಾಕಾಳ (ಮೃಜಿಗಿ. ೬೨-೧೪೬೨). [? + ಮರ₁]

**ತೊಕ್ಕಡ** (ನಾ). (?): ಚೊಕ್ಕಪಲ್ಗಳು ದಟ್ಟ ಸಣ್ಣವು ವುಕ್ಕ ನವರಸ ಲಗ್ಗೆಯೆಂಬುದು ತೊಕ್ಕಡವು ತಾನಾದ ದಂತವು ಕ್ಷತಕೆ ಅದು ಹಿತವು (ಶಕ್ಕೋಶ. ೧೧-೧೬). [?]

**ತೊಕ್ಕಲು** (ನಾ). ಒಂದು ಬಗೆಯ ವ್ಯಂಜನಪದಾರ್ಥ: ಅವನಿಗೆ ಮಜ್ಜಿಗಂಬರ . . . ಮಾಸೊಪ್ಪು, ತೊಕ್ಕಲು, ಒಂದೆಸರು – ಇವು ಸುತರಾಂ ಬೇಕಿಲ್ಲ (ನನ್ನೂರು. ೫೭). [< ತೊಕ್ಕು₁]

**ತೊಕ್ಕಸ** (ನಾ). ಮಲ್ಲಯುದ್ಧದ ಒಂದು ವರಸೆ (?): ಸಂದ ತೊ [ಪಾಠಾಂ. ಕೊ]ಕ್ಕಸ ಗುಂಡು ಗೋಣಿಯ ವಿಂದೆಪಟ್ಟಸು ಚೇಣಪಟ್ಟಸು ಮೆಂದೆನಿಪ ವಿಂದಾಣದಲಿ ಕಾದಿದರು ಜಟ್ಟಿಗಳು (ಹಾಳ್ಳಭಾ. ೨೨-೬೨). [?]

**ತೊಕ್ಕು₁** (ನಾ). ಹುಣಿಸೆಕಾಯಿ, ನೆಲ್ಲಿಕಾಯಿ, ಮಾವಿನಕಾಯಿ ಮೊದಲಾದವುಗಳು ಬಲಿತ ಮೇಲೆ ಹದಗೊಳಿಸಿ ಮಾಡುವ (ಚಟ್ನಿಯಂಥ) ಒಂದು ಬಗೆಯ ವ್ಯಂಜನಪದಾರ್ಥ: ಹುಣಿಸೆಕಾಯಿ ತೊಕ್ಕು ರುಚಿಯಾಗಿರುತ್ತದೆ (ರೂಢಿ). [ದೇ.॥ ತಮಿ. ತೆಲು. ತೊಕ್ಕು]

**ತೊಕ್ಕು₂** (ನಾ). ೧. ತೊಗಲು; ಚರ್ಮ: "ತೊಕ್ಕು (ತೊಗೆ)–ತ್ವಕ್ (–ಚ್)" (ತದ್ಭಕೋ. ೧೮); ನಯನ ಕರ್ಣ ನಾಸಾ ರಸನೆ ತೊಕ್ಕು ಮನವೆಂಬ ಕರಗಳೊಳು ಬಿಡದರ್ಪಿಪಂ (ಸಿದ್ಧೇಪು. ೨೩-೫೦); ತ್ವಕ್ಕಿಂಗೆ ತೊಕ್ಕು ನೇತ್ರಕೆ ನೇತ್ರವು . . . ಆಗಿಹುದು ಲಿಂಗಮುಖವು (ಚಬಸು. ೬೦-೪೫): ಪ್ರತಿ ನಿತ್ಯವೂ ಮೈ ತಿಕ್ಕಿಸಿ ಅಥವಾ ಹಿಸಿಕಿಸಿಕೊಂಡಲ್ಲಿ . . . ತೊಕ್ಕು ಬಲಿತು, ಸಂದುಗಳಲ್ಲಿ ತ್ರಾಣವು ಹುಟ್ಟಿ (ಸಕವ್ಯ. ೩೦). ೨. ತೊಗಟೆ; ಸಿಪ್ಪೆ: ನೀರುಳ್ಳಿ ಹಸಿಯಲ್ಲಮಂ ತೊಕ್ಕ ತೆಗೆದಗುಳ ತೋರದೊಳು ಕತ್ತರಿಸಿ (ಸೂಪಶಾ. ೩-೨೫); ಪರಿಶುದ್ಧಮಾಗಿರ್ಪ ಪಾಲ್ಮರಗಳ ತೊಕ್ಕನಿರದೆತ್ತಿ ಕಾಸಿದ ಜಲವ (ಜಂಪ್ರಸಾಂ. ೧೪-೪೨); ಅಂಬಟೆಯ ತೊಕ್ಕು . . . ಹುಣಿಸೇಮೂಲದ ತೊಕ್ಕು . . . ಇವಚ ಕಷಾಯ ಶ್ಲೇಷ್ಮಾತಿಸಾರ ಮೊದಲಾದ ಹೊಟ್ಟೆಯ ಬೇನೆಯ ಪರಿಹರಿಸುವುದು (ವೈದ್ಯಸಾ. I, ೨೦೨). ೩. ಚೆಕ್ಕೆ: ಗಂಧ ಲವಂಗದ ತೊಕ್ಕು (ಅಶಾನಿ. ೮-೬). ೪. ಚರ್ಮದ ಹೊದಿಕೆ: ಇಕ್ಕಿದ ಪಕ್ಕರಕ್ಕೆ ನಿಡುರ್ಝುಲ್ಲಿ . . . ದಿಟ್ಟಿಸರ ಪೊಂಬಲಿಗಳ್ ಮೊಗರಂಬವೊಂದು ಪೊಂಬಕ್ಕಿಯ ತೊಕ್ಕು ಮೆಯ್ಗುರಿಯೆ ಬಾಸಿಗದಿಂ ಮೆಱೆದತ್ತು ಸಪ್ತಿಗಳ್ (ಚಕವಿ. ೨-೯೬). ೫. ಸೋಂಕು; ಸಂಸರ್ಗ: ಮೂತ್ರ ಮಲ ಮಾಂಸ ರಕ್ತಂಗಳೊಳಗಿಕ್ಕುಮೇ ಶಿವಮೂರ್ತಿಯೆನ್ನು ದರದೊಳಗವೆ ತೊಕ್ಕಿಲ್ಲಮೆನೆ (ಚಬಪು. ೪-೨೭). 'ತ್ವಕ್ಕು' ಪರಾ.

[ಸಂ. ತ್ವಚ್]

**ತೊಗಟು**, ತೊಗಟೆ, ತೊಗಡು, ತೊಪ್ಪಟೆ, ತೊಪ್ಪಡೆ, ತೊಬಟೆ, ತೊವಟೆ, ತೊವಡು, ತೋಟೆ₁ (ನಾ). ಹಣ್ಣು, ಕಾಯಿ, ದ್ವಿದಳ ಧಾನ್ಯ ಇತ್ಯಾದಿಗಳ ಗಟ್ಟಿಯಾದ ಮೇಲುಹೊದಿಕೆ,–ಸಿಪ್ಪೆ: ತೊಗಟನೊಳಗಣ ಬೀಜ ಬೀಜದೊಳಗಣ ಅಂಕುರ (ಸರ್ವಪ. ೧೦೯–೫೮೪); ತಱಿದರೆಯು ಪರ್ಣಗಳ ಕಾಷ್ಟಕೆ ಮುಱಿದರಾ ಶಾಖೆಗಳ ರೋಗಕೆ ಕೊಱೆದರೆಯು ಬೇರುಗಳ ನಾರಿಗೆ ಸುಗಿದರೆಯು ತೊಗಟ ತರು ತನುವ ತೆಱುವಂತೆ (ನಿಭಾಗ. ೧೦-೧೩-೨೪); ಹಣ್ಣಿನ ಒಳಗೆ ನಾಲ್ಕು ರಸವು ಐದು ದೊಡ್ಡಹರೆ ಕಾಣಪ್ಪ ಆಱು ಬಗೆಯ ಸ್ವರೂಪ ಕೇಳು ಏಳು ಬಗೆಯ ತೊಗಟುಂಟಣ್ಣ (ಪುರಂದ. ೧-೧೩೦-೫). ತೊಗಟೆ: ಕಮಲಮುಖಿ ನಾರಿನಾ ತೊಗಟೆಯನು ಕೊಳ್ಳೆ (ಶರಲೀ. ೨೦೬-೧೪); ಮಾದಾಳದ ತೊಗಟೆ (ಟಿ) ಯು ಕಹಿ, ಒಗರು (ಅಷ್ಟಾಂಗ. ೧೯೪); ತೊಗಲುಬಾವಲಿ ಮರದ ಜೋಲು ತೊಗಟೆ (ನವ್ಯಧ್ವ. ೮೭-೩). ತೊಗಡು: ತೊಗಡುಗಳೆಲ್ಲಗಳ ಕೇದಗೆಯಂ ವಾಸಿಸಿ (ಲೋಕೋಪ. ೬-೨೩). ತೊಪ್ಪಟೆ: ಆವರಿಕೆಬೇರಿನ ತೊಪ್ಪಟೆಯನು ೧ ಮೊರದಷ್ಟು ಹರವಿಯಲ್ಲಿ ಹಾಕಿ ನೀರ ಹೊಯ್ದು . . . ಇರಿಸಿಕೊಂಡಿರಲು ಆ ನೀರು ಮಂದವಾಗುವುದು (ಸಕವ್ಯ. ೩೮೩). ತೊಪ್ಪಡೆ: ಉಲಗನ ಬೇರಿನ ತೊಪ್ಪಡೆ, ಬೇವಿನ ಬೇರಿನ ತೊಪ್ಪಡೆ ... ಮೊಳಗದ ಬೇರಿನ ತಿಗಡು ಇವಂ ಸಮಾನಂಗೊಂಡು ಚೂರ್ಣಮಂ ಮಾಡಿ (ವಿಷ್ಯವಿ. ೯೯). ತೊಬಟೆ: ಸುಟ್ಟ ಬಾಳೆಯ ಕಾಯ ಸೀದ ತೊಬಟೆಯ ತೆಗೆದು ಒಳಗಣ ತಿರುಳ ತೆಗೆದು (ಭೀಮಸೂ. ೪೨). ತೊವಟೆ: ಚೆಕ್ಕು = ತೊವಟೆ (ಕಾಶಕ್ಕ. ೯೦). ತೊವಡು: ಗಿಡುಕಳ್ಳಿಯ ತೊವಡು ಕಟ್ಟೆ ನಿರ್ವಿಷಮಕ್ಕುಂ (ಖಮದ. ೧೬-೬೯). ತೋಟೆ₁: ಬಾಳೆಯ ಹಣ್ಣಿನ ತೋಟೆಯ ಸುಲಿದು ನೋಡಿದರೆಯೂ ಮೃದುವಾಗಿ ತೋಱುವುದಲ್ಲದೆ ಕಠಿಣವಾಗಿ ತೋಱದೆಂಬ ಹಾಗೆ (ವಚಸಾ. I, ೧೯೩); ಕೆಲವು ಗಿಡಗಳ ತೋಟೆಗಳಿಂದ ಸಹ ಕಾಗದ ಮಾಡುವುದುಂಟು (ಮುಂಬಯಿ. ೧-೨೪). 'ತಿಗುಂಡು₁' ಪರಾ.

**ತೊಗಟೆ** 'ತೊಗಟು' ನೋ.

**ತೊಗಡು** 'ತೊಗಟು' ನೋ.

**ತೊಗರ್** 'ತೊವರ್₂' ನೋ.

**ತೊಗರ₁** (ನಾ). ಕೆಂಬಣ್ಣದ ಒಂದು ಬಗೆಯ ಬೇಟೆಯ ನಾಯಿ: ಏಣಕುಲಕ್ಕೆ ಚಂಚುವಾಲಂ ದಣಿದಿರ್ದ ಕೊಂಡಗುಱಿಗೀ ತೊಗರಂ ರುರು ಸಂಕುಳಕ್ಕೆ ಜೂಗಂ ದಿಟಮಲ್ತು ಮಾರಿ (ದಶಕು. ೨-೧೦೯); ತರವೇಟಿ ಸಾಳುವವೇಗನಂ ತೊಗರನಂ ಹೆಗ್ಗಾಳನಂ ಜೂಗನಂ (ನಳಚಂ. ೬೬).

[ತೊಗರು₁ + –ಅ₇]

**ತೊಗರ₂** (ನಾ). ಒಂದು ವಂಶದ ಹೆಸರು (?): ಮಣಿಗಾಱ ನಾಗಿಸೆಟ್ಟಿಯುಂ ತೊಗರ ಮಾಚಿಸೆಟ್ಟಿಯುಂ ಮಿಂದಗುದ್ದಲಿ ಸಾವಿಸೆಟ್ಟಿಯುಂ ... ಕೊಟ್ಟ ಕೆಯಿ ಕಂಮ್ಮವಯ್ವತ್ತು (ಎಕ. VII, ಶಿಕಾರಿ. ೧೦೬_೩೭ ;1098).

[?]

**ತೊಗರತ್ತಿ** (ನಾ). ಒಂದು ಬಗೆಯ ಸಸ್ಯ: ತೊಗರತ್ತಿ, ಸಿಡಿಸಾಲೆ (ಮೃಜಿಗಿ. ೫-೭೪). [?]

**ತೊಗರಿ$_1$** 'ತೊವರಿ' ನೋ.

**ತೊಗರಿ$_2$** 'ತೊವರ್$_2$' ನೋ.

**ತೊಗರು$_1$, ಚೊಗರು$_2$** (ನಾ). ೧. ಕೆಂಪುಬಣ್ಣ; ಅರುಣವರ್ಣ: ತೊಗರಂ ಮಿಗಿಲಪ್ಪ ಬಣ್ಣಮಂ ಸಮನಿಪ ಗಂಧವಸ್ತುಗಳನಾದರದಿಂ ಪಿಡಿದು (ಅಟ್ಟಮ. ೬-೪೦). **ಚೊಗರು$_2$:** ೨. ಹಸಿಅಡಕೆಯನ್ನು ಬೇಯಿಸಿದಾಗ ಅದಕ್ಕೆ ಬಣ್ಣ ಬರಲು ಬೆರಸುವ ಒಂದು ಬಗೆಯ ಕೆಂಪುದ್ರವ; ಇದನ್ನು ನೇರಿಲೆಚಕ್ಕೆ, ರತ್ನಹೊನ್ನೆಗಿಡದ ಚಕ್ಕೆ ಮುಂತಾದುವುಗಳಿಂದ ತಯಾರಿಸುತ್ತಾರೆ: ನಾನೇ ತ್ವಾಟದಾಗೆ ಕದರಡಿಕೆ ಹೆರಕಿ, ಸುಲಿದು, ಚೊಗರು ಹಾಕಿ ಬೇಯಿಸಿ ಮಾಡಿದ್ದು (ಮಲೆಮ. ೯೩೮). 'ತೊಗರು ಕಷಾಯ' ಪರಾ. [ ದೇ.॥ ತೆಲು. ತೊಗರು, ತೊವರು ]

**ತೊಗರು$_2$** 'ತೊವರ್$_2$' ನೋ.

**ತೊಗರುಕಷಾಯ** (ನಾ). ಹಸಿ ಅಡಕೆಯನ್ನು ಬೇಯಿಸುವಾಗ ಅದಕ್ಕೆ ಬಣ್ಣ ಬರಲು ಬೆರಸುವ ಒಂದು ಬಗೆಯ ಕೆಂಪುದ್ರವ,-ಕಷಾಯ: ಮೊದಲೇ ಸಿದ್ಧಮಾಡಿ ಇಟ್ಟುಕೊಂಡಿದ್ದ ಅಡಿಕೆ ತೊಗರುಕಷಾಯವನ್ನು ಸೀಸೆಯಲ್ಲಿ ತುಂಬಿಕೊಂಡು ನಡೆದುಕೊಂಡೇ ಹೋದರು (ಕೊನಪ್ಪ. ೧೧೭). [ ತೊಗರು$_1$ + ಕಷಾಯ ]

**ತೊಗರೆಳೆ** (ನಾ). ಕೆಂಪುಬಣ್ಣದ ಎಳೆ: ಕಾಂತೆಯುಟ್ಟುದು ಬಿಳಿದು ತೊಗರೆಳೆಯುದು (ವೀಕ್ಷಿಷ. ೪-೨೧-೫). [ತೊಗರು$_1$+ಎಳೆ$_2$ (<ಎಟ್$_2$)]

**ತೊಗಲ್** 'ತೋಲ್$_1$' ನೋ.

**ತೊಗಲು** 'ತೋಲ್$_1$' ನೋ.

**ತೊಗಲುಗೊಂಬೆ** (ನಾ). ಚರ್ಮದಿಂದ ಮಾಡಿದ ಬೊಂಬೆ; ಚಕ್ಕಳ ಗೊಂಬೆ: ಈ ಅವಧಿಯಲ್ಲಿ ಯಕ್ಷಗಾನ ಆಟಕ್ಕೆ ಸಂಬಂಧಿಸಿದ ಬೊಂಬೆ, ತೊಗಲುಗೊಂಬೆಗಳ ಚಿತ್ರವೂ ಬೇಕೆನಿಸಿತು (ಯಕ್ಷಬ. IV, ಮುನ್ನುಡಿ); ನೆರೆಕೆರೆಯ ಕೇರಳ, ಆಂಧ್ರದೇಶಗಳಲ್ಲೂ ಇದೇ ಬಗೆಯಲ್ಲಿ ತೊಗಲು ಗೊಂಬೆ ಆಡಿಸುವವರಿದ್ದಾರೆ (ಯಕ್ಷಬ. ೧೫೦).

**ತೊಗಲುಗೊಂಬೆ ಆಟ** = ಚರ್ಮದಿಂದ ಮಾಡಿದ ಬೊಂಬೆಗಳ ಸಹಾಯದಿಂದ ತೋರಿಸುವ ಆಟ,-ಮನರಂಜನೆ: ಜಾನಪದಕಲಾ ಮೇಳದಲ್ಲಿ ತೊಗಲುಗೊಂಬೆ ಆಟ ಬಹಳ ಆಕರ್ಷಕವಾಗಿತ್ತು (ರೂಢಿ). [ ತೊಗಲು (<ತೋಲ್$_1$) + ಗೊಂಬೆ$_1$ ]

**ತೊಗಲುಡೆ** 'ತೋಲುಡೆ' ನೋ.

**ತೊಗಲುಪಟ್ಟಿ** (ನಾ). ಚರ್ಮದ ಪಟ್ಟಿ: ನಾಯಿಯ ಕೊರಳಿಗೆ ತೊಗಲು ಪಟ್ಟಿ ಕಟ್ಟಿದ್ದಾರೆ (ರೂಢಿ). [ ತೊಗಲು (<ತೋಲ್$_1$) + ಪಟ್ಟಿ$_2$ ]

**ತೊಗಲುಪೆಟ್ಟಿಗೆ** (ನಾ). ಚರ್ಮದಿಂದ ತಯಾರಿಸಿದ ಪೆಟ್ಟಿಗೆ: ಕನ್ನಡಿ ಯಿದ್ದ ಮೇಜಿನ ಮೇಲೆ ತೆರೆದಿದ್ದ ತೊಗಲುಪೆಟ್ಟಿಗೆಯಿತ್ತು (ಪುನರು. ೨೬೭). [ ತೊಗಲು (<ತೋಲ್$_1$) + ಪೆಟ್ಟಿಗೆ ]

**ತೊಗಲುಬಾವಲಿ** 'ತೋಲ್ವಾವಲ್' ನೋ.

**ತೊಗಲುಬೊಂಬೆ** (ನಾ). = ತೊಗಲುಗೊಂಬೆ: ತೊಗಲುಬೊಂಬೆಗಳಂತೆ ನಾಲುಕುಬಗೆಯ ನಿರ್ಮಾಣದಲಿ . . . ಬಗೆಬಗೆಯ ನಾಮಾಂಕಿತದ ಜೀವಿ ಗಳೆಲ್ಲವು ನಿನ್ನ ನಾಮದಿ ಜಗಕೆ ತೋರುತ್ತಿಹುದು (ಹರಿಸಾ. ೮೪). [ ತೊಗಲು (<ತೋಲ್$_1$) + ಬೊಂಬೆ ]

**ತೊಗಲುಹಕ್ಕಿ** (ನಾ). ಒಂದು ಬಗೆಯ ಪಕ್ಷಿ; ತೊಗಲುಬಾವಲಿ: ಲಿಂಗ ಯೋನಿಗಳ ತಂಡ, ತೊಗಲುಹಕ್ಕಿಗಳ ಹಿಂಡದಿನ್ನು, ಸುತ್ತುಗಟ್ಟಿರಲು (ಜಿಂಪನ. ೫೪-೨೨). [ ತೊಗಲು (<ತೋಲ್$_1$) + ಹಕ್ಕಿ$_1$ (<ಪಕ್ಕಿ$_1$) ]

**ತೊಗಲ್ಪೇಟು** (ನಾ). ಚರ್ಮದ ಚೀಲ: ತಿತ್ತಿ ಸಿದ್ದಿಗೆ ತೊಗ [ಪಾಠಾಂ. ವ]ಲ್ಪೇಟಿಸೊಳಗೆ ಬಂದತ್ತು ಗಂಗಾಸಾಗರವು (ಶರಾಸಾಂ. ೦೯-೧೧). [ ತೊಗಲ್ (< ತೋಲ್$_1$) + ಪೇಟು$_3$ ]

**ತೊಗೆ$_1$** 'ತೊವ್ವೆ' ನೋ.

**ತೊಗೆ$_2$**(ನಾ). (?): ಸ್ವಯಂಬುವದೇವರ್ಗ್ಗೆ ದತ್ತಿದೆಗಾಗಂಡ ಹಡುವಕ್ಕಿ ಬಿತ್ತೊಗೆ (ಮೈಆರಿ. ೦೯೪೬, ೧೦-೦೫; ಸು. 15 ನೆಯ ಶತ). [ ? ]

**ತೊಟ್** (ನಾ). ಒಂದು ಅನುಕರಣಶಬ್ದ: ಖಿಲನಾಕಾಶಕ್ಕೆ ತೊಟ್ಟೆಂದೊ ಗೆದಂ (ಜಗವಿ. ೧೫-೨).

**ತೊಟ್ಟೆನಲ್** = ಇದ್ದಕ್ಕಿದಂತೆ; ತಟ್ಟನೆ: ಈ ಮಹಾತ್ಮನಂ ತೊಟ್ಟೆನ ಲಿಂತು ದೇವ ಯುವರಾಜನನೀ ತೆಱದಿಂ ಪೆಸರ್ವುದೇ (ಕಾದಂಬ. ೪೭೯); ವಸುಧಾರಮಣೀರಮಣಂಗೆ ತೊಟ್ಟೆನಲ್ ಪುಟ್ಟಿಸಿದತ್ತು ಮೆಯ್ಯ ಪಿರ್ಗಳಂ ರಘುವೀರವಚಸ್ಸುಧಾರಸಂ (ಪಂರಾಮಾ. ೬-೭೦).

**ತೊಟ** (ನಾ). ಒಂದು ಅನುಕರಣ ಶಬ್ದ. 'ತೊಟಗುಟ್ಟು' ಪರಾ.

**ತೊಟಕಿಕ್ಕು** (ಕ್ರಿ). ಹನಿಹನಿಯಾಗಿ ಬೀಳು; ಒಸರು; ತೊಟ್ಟಿಕ್ಕು: ಕಾವ್ಯಸುಧೆಯು ತೊಟಕಿಕ್ಕುತಿಹುದು ರಸಪಾನಕಾಗಿ ರಸಿಕ (ಚಂದ್ರಮಾ. ೧೬-೧೩). [ ತೊಟಕು$_1$ ( < ತಟಕು$_1$) + ಇಕ್ಕು ]

**ತೊಟಕು$_1$** 'ತಟಕು$_1$' ನೋ.

**ತೊಟಕು$_2$** 'ತಟಕು$_2$' ನೋ.

**ತೊಟಕುಹನಿ** 'ತಟಕುಹನಿ' ನೋ.

**ತೊಟಗುಟ್ಟು** (ಕ್ರಿ). ಹನಿಹನಿಯಾಗಿಬೀಳು; ತೊಟ್ಟಿಕ್ಕು: ಎದ್ದವರು ಗೆದ್ದವರು ಬಾಂದುಂಬ ಕಾಣುವರು ಚುಕ್ಕೆ ತೊಟಗುಟ್ಟುತಿಹ ಬೆಳಕು, ಜೇನು (ಸೂರ್ಯಪಾ. ೨೭-೮). [ ತೊಟ + ಕುಟ್ಟು$_1$ ]

**ತೊಟ್ಟ** 'ತೊಡು$_1$' ಪರಾ.

**ತೊಟ್ಟಗೆ** (ಅ). ೧. ಕೂಡಲೆ; ಬೇಗನೆ; ತಟ್ಟನೆ; ಶೀಘ್ರವಾಗಿ: ಕುರುಕುಳಪ್ರಖ್ಯಾತನಂ ಕಾದಿ ತೊಟ್ಟಗೆ ಗೋವೃಂದಮನಾಂ ಮಗುಟ್ಟಿ ದಪೆಂ (ಪಂಪಭಾ. ೮-೧೦೩); ಮಚ್ಚಿ ಮತ್ಸರಿಚಯಕ್ಕಾದಂ ಮಹಾಶ್ವೇತೆ ತೊಟ್ಟಗೆ ತನ್ನಂ ತನುವಿಂದೆ ಪತ್ತುವಿಡಳಲ್ತೇ ಪಿಂದೆ (ಕಾದಂಬ. ೩೬೮); ತೊಟ್ಟಗೆ ಕೊಳೆ ಮೇಲೆವಾಯ್ದು ಮಹಿಷಾಸುರನಂ ತಪೆ ಕೊಂದಳ್ (ಛಂದೋಂಬು. ೧-೪); ತನ್ನಯ ಸೂಚಿಯಾನೆ ತೊಟ್ಟಗೆ ಸಮರಾಗ್ರದೊ ಳ್ಪರಿಯೆ (ಗದಾಯು. ೧-೧೬); ತೊಟ್ಟಗೆ ತದ್ವಾ [ಪಾಠಾಂ. ದ್ವಾ] ಹಮುಮಂ ಗಜೇಂದ್ರಮುಮನೊರ್ತ್ತೊಂಬಿನಂ ತುತ್ತಿ . . . ಪಾಱಿ ಸುರ ರಾಜಾವಾಸಮಂ ಮುಟ್ಟಿದಂ (ಕಾವ್ಯಾವ. ೫೯). ೨. ಒಮ್ಮಿಂದೊಮ್ಮೆ; ಇದ್ದಕ್ಕಿದ್ದಂತೆ; ಹಠಾತ್ತಾಗಿ: ಸಿಂಧುದೇಶಾಧೀಶ್ವರಂ . . . ಮೃಗಯಾ ಕ್ರೀಡೆಗೆ ಪಾಂಡುರಾಜತನಯರ್ ಪೋಪನ್ನೆಗಂ ಬಂದು ತೊಟ್ಟಗೆ ಪಾಂಚಾಳಿಯನೆತ್ತಿ ತನ್ನ ರಥದೊಳ್ ತಂದಿಟ್ಟುಕೊಂಡುಯ್ವಂ (ಪಂಪಭಾ. ೭-೩೦); ಒರ್ವ ವನಚರಂ ಮಹಾವನದೊಳ್ ವನದಂತಿಯಂ ಕಂಡ ನಿಮಿತ್ತಂ ಕೊಂದು ನಿಂದಿರ್ಪಿನಮೊಂದು ಮಹಾಹಿ ತೊಟ್ಟಗೆ ಬರೆ (ಪಂಚತಂ. ೩೦೦-೦೯); ಜನಪದದೊಳ್ ತೊಟ್ಟಗೆ ಕಿರ್ಚು ನಂದೆ ಮೇಣ್ ಪುಳ್ಳಿಯಿಲ್ಲ ದುರಿಯುತ್ತಿರೆ. . . ದೇಶಂ ಕಿಡುಗುಂ (ಲೋಕೋಪ. ೪-೪೪); ನಾಯ್ಸುಗ ದೆಡೆಯೆಲ್ಲಮಂ ಪುಗಿಸಿ ಬಯ್ಕದ ಭಾಜನಮಾಗೆ ಮಾಡಿ ತೊಟ್ಟಗೆ ವಿಭು ಸಾಯೆ (ಸುಕುಮಾ. ೨-೬೩). [ ತೊಟ್ + - ಅಗೆ$_3$ ]

**ತೊಟ್ಟನೆ** (ಅ). ೧. ಕೂಡಲೇ; ಬೇಗನೆ: ತೊಟ್ಟನೆ ಸರ್ವಾಂಗಮಲಧಾರಿ ಗಳೊಂದು ಶಿಲಾತಳದ ಮೇಗಿರ್ದು . . . ಸ್ವಾಧ್ಯಾಯದೊಳ್ ತಗುಳ್ದಿರ್ದೋರಂ . . . ಕಂಡು (ವಡ್ಡಾರಾ. ೯೬-೨); ಭವಪ್ರತ್ಯಯಜ್ಞಾನ ತೊಟ್ಟನೆ ಪುಟ್ಟೆ (ಆದಿಪು. ೨-೬೬); ಶಿವಭೂತಿಗೆ ತೊಟ್ಟನೆ ಬಗೆದನಹಿತಮಂ ತದ್ವನಚರಂ (ಪಂಚತಂ. ೧೧೨-೧೦); ಭವಸ್ಮರಣೆ ತೊಟ್ಟನೆ ಪುಟ್ಟೆ (ಮಲ್ಲಿಪು. ೪-೨೩); ನೆಗಳ್ದ ನೇತ್ರಜ್ವಾಲೆಯಿಂ ತೊಟ್ಟನೋವದೆ ಸುಟ್ಟಂ ಮದನಾರಿ (ಪಂಪಾಶ. ೪೦). ೨. ಇದ್ದಕ್ಕಿದ್ದಂತೆ; ಹಠಾತ್ತಾಗಿ: ಆ ನರಕಾಂತಕ ನೀಕೆಗಂಡು ತೊಟ್ಟನೆ ನಿಜಲಕ್ಷ್ಮಿಯುಂ ಮಱೆದಂ (ಪಂಪಭಾ. ೪-೮೫);

ರಸೆಯಿಂ ಕಾಲಾಗ್ನಿರುದ್ರಂ ಪೊಱಮಡುವವೊಲಂತಾ ಸರೋವರಮಧ್ಯದಿಂ ಸಾಹಸಗರ್ವಾಲಂಕೃತಂ ತೊಟ್ಟನೆ ಕೊಳೆ ಪೊಱವಂಟ್ಟು (ಗದಾಯು. ೭-೩೦); ಮರಣಭ್ರಾಂತಿಯಂ ಚಿಂತಿಸಿ ಬರುತ್ತುಂ ತೊಟ್ಟನೆ ಮುಂದಿರ್ದ ಪುರಾಣ ಕೂಪಮಂ ಕಂಡು (ಪಂಚತಂ. ೮೮-೨೦) : ಒಂದು ದಿವಸಂ ವಿಶ್ವಂಧರ ಮಹಾರಾಜಂ . . . ಪೊನ್ನುಯ್ಯಲನಾಡುವ ಸುಬಂಧುಶ್ರೀಯಂ ತೊಟ್ಟನೆ ಕಾಣ್ಬುದುಂ (ಧರ್ಮಾಮೃ. ೧೦-೨೮) ; ತೊಟ್ಟನೆ ಸಾವುದೊಳ್ಳಿತು ತೊಡಂಕದೆ ಕಾಮನ ಡಾಮರಂಗಳೊಳ್ (ಚಂದ್ರಪ್ರ. ೮-೬೬) ; ತೊಟ್ಟ ನಿಂತು ಕಣ್ ನೋಡದೆ ಹುಣ್ಣ ನೋಡದೆ ಹೋಗೆಂಬರೆ (ಬಸರ. ೪-೨೮); ಒಟ್ಟಿ ಲುಲಾಯ ಗರ್ದಭ ರಥಂಗಳನೇಱಿದವಂ . . . ನಟ್ಟ ವಿಲೋಚನಂಗಳೊಳೆ ಮೇಗನೆ ನೋಡುತುಮಿರ್ಪ ಮಾನಿಸಂ ತೊಟ್ಟನೆ ಬಂದು ಪೇೞಲ ಶುಭಂ (ಖಮದ. ೩-೫೬). ೩. ಸುಮ್ಮನೆ ; ವ್ಯರ್ಥವಾಗಿ : ನಿನಗೆ ಪತಿ ಪಾಶುಪತಿ ಇರೆ ತೊಟ್ಟನೆ ಪಶುಗಳಂ ಕೊಲುವ ಮೆಲುವ ಕುಮನದ ಪಶುಕರ್ಮಿಗಳ ದುಃಕರ್ಮಂಗಳೊಳಗಿರಲು(ಬಸವು. ೬೦-೪೦) ; ರಾಜಬೀದಿಯೊಳಗಟ್ಟಹಾಸದೆ ಬಟ್ಟಬಯಲ ತೊಟ್ಟನೆ ನಿಟ್ಟಪಂ (ಕೊಟ್ರಬ. ೭-೩೬).

**ತೊಟ್ಟನೆ ತೊಳಲು** = ಸುಮ್ಮನೆ ಅಲೆದಾಡು,-ಸುತ್ತಾಡು,-ತಿರುಗಾಡು : ಸದ್ಭಕ್ತರಿಗೆ ಉಳ್ಳುದೆಲ್ಲವ ಕೊಟ್ಟು ಐದರೇ ಎಂದು ಮಱುಗುವ ಏಕೋಗ್ರಾಹಿ ಶರಣನ ತೊಟ್ಟನೆ ತೊಳಲಿ ಅಱಸಿ ಕಾಣೆನು (ಸಮಾವ. ೬-೨೦) : ಅಱುವತ್ತುದಿವ್ಯಸಹಸ್ರಾಬ್ದಂಬರವಿಾ ತೆಱದಿಂ ತೊಟ್ಟನೆ ತೊಳಲ್ದು (ಸಾನಂಚ. ಕಥಾಗರ್ಭಸಂಧಿ ೨೩ ವ) ; ಬೆಟ್ಟಂಗೆ ಬೆಟ್ಟಿತ್ತನೆಸಗೆ ಪೃಥುಲಶ್ರೋಣಿ ತೊಟ್ಟನೆ ತೊಳಲ್ವಂತೆ ಮಾಡೆ (ಪದ್ಮರಾ. ೩-೨೮) ; ಕಾನನದೊಳಗೆ ತೊಟ್ಟನೆ ತೊಳಲಿ ಹದಿಮೂಱಬ್ದದ ಬಂದಾಪತ್ತನನುಭವಿಸಿ (ಕುವ್ಯಾಭೀ. ೩-೩೮). [ ತೊಟ್ + – ಅನೆ$_1$ ]

**ತೊಟ್ಟಿಲ್** (ನಾ). ಒಂದು ಸ್ಥಳದ ಹೆಸರು : ಸ್ವಸ್ತಿಶ್ರೀವಲ್ಲವ ಪೃಥವೀರಾಜ್ಯಂಕೆಯೆ . . . ಗುಣ್ಡಗೆವಾಟಿಕ್ಕ ತೊಟ್ಟಿಲಾಳುತ್ತುಮ್ ಕಾಡವಟ್ಟಿ ಬೋಳದುಳ್ಳಿ ಪೆಬ್ಬೀಳನಲ್ಲಕ್ಕಳ್ ಎಱಿದುವಿಟ್ಟಾರ್ (ಎಕ. XVI, ತುಮುಕೂ. ೯೬-೧ ; 780 ?). ‘ತೊಟ್ಟಿಲ್$_1$’ ಪರಾ. [ ? ]

**ತೊಟ್ಟಿಲ** ‘ತೊಟ್ಟಿಲ್$_1$’ ನೋ.

**ತೊಟ್ಟಿಲಿ** ‘ತೊಟ್ಟಿಲ್$_2$’ ನೋ.

**ತೊಟ್ಟಿಲು** ‘ತೊಟ್ಟಿಲ್$_1$’ ನೋ.

**ತೊಟ್ಟಿಲ್ಲಿ** ‘ತೊಟ್ಟಿಲ್$_2$’ ನೋ.

**ತೊಟ್ಟಿ$_1$, ದೊಡ್ಡಿ$_1$** (ನಾ). ೧. ಮನೆಯ ಹಜಾರದ ಮಧ್ಯದಲ್ಲಿರುವ ಚಾವಣಿಯಿಲ್ಲದ ಚಚ್ಚೌಕವಾದ ಸ್ಥಳ : “ಗೃಹಭೇದ ಲತೆಯೊಳು ತೊಟ್ಟಿ” (ಶಬ್ದಮಂ. ೯೦) ; ತೊಟ್ಟಿಯ ಸುತ್ತುವೆತ್ತ [ಪಾಠಾಂ. ಕಟ್ಟಿಯ ಸುಟ್ಟುವೆತ್ತ, ತಟ್ಟಿಯ ಸುತ್ತುವೆತ್ತ] ಪಸುರ್ವಂದಲ ಮುತ್ತಿನ ಮಂಟಪಂಗಳೊಳ್ ಕಟ್ಟಿದ ಪಚ್ಚೆದೋರಣದ ಬಾಜಿಪ ತೂರ್ಯದ ಸಂಭ್ರಮಂಗಳಿಂ . . . ನೇಪರ್ಟ್ಟುದು ನೋಟಕಗೋಸಗೆಯುಬ್ಬಣಮಪ್ಪಿನಮಾ ವಿವಾಹದೊಳ್ (ಸೂಕ್ತಿಸು. ೬-೨೨); ತೊಟ್ಟಿಗಳುಪ್ಪರಿಕೆ ಹೊಂಗಳಸಗಳು ಮೆಱೆವ ಮೇಲುಕಟ್ಟಿನ ಚಿತ್ರಗಳ . . . ತಾಯ್ಮನೆಯಿದೆಂಬಂತೆಸೆದುದೊಗ್ಗಿನಲಿ (ಪ್ರಹ್ಲಾದ. ೪-೪೨) ; ರಂಗುವಡದ ನವರಂಗದ ತೊಟ್ಟಿಯ ಸಾಲು (ಸೌಂದಕಾ. ೪-೩೨) ; ಊರಿನ ಗಂಡಸರೆಲ್ಲಾ ಆಗಲೇ ಆ ತೊಟ್ಟಿಯಲ್ಲಿ ಸೇರಿದ್ದರು (ಕಳಹು. ೯) ;ಹಟ್ಟಿ ಗುಡಿಸೀರಿ ತೊಟ್ಟೀಯ ಗುಡಿಸೀರಿ ಪುಟ್ಟ ಮಲ್ಲಿಗೆಯ ಹರಡೀರಿ (ನನ್ನೂರು. ೪೮). ೨. ಅಂತಃಪುರ ; ರಾಣೀವಾಸ : ತದ್ಧರಣೀಸತಿಯ ಕಾಂತಿರಸಭರಿತನಾಭಿಯೋ ಎನೆ ತೊಟ್ಟಿ ಕಣ್ಗೆಸೆದುದು (ಪದ್ಮರಾ. ೬ ೭೨) ; ದಿಟ್ಟಿಗೆ ನೂತನವಾದಪರಂಜಿಯ ಕಟ್ಟೆರಕದ ಭಿತ್ತಿಯಿಂದ ಸೃಷ್ಟೀಶನ ರಾಣಿಯರ ನವರತ್ನದ ತೊಟ್ಟಿಗಳಿಹುವರ್ತಿಯಲಿ (ಕಂನವಿ. ೭-೪೨) ; ಚಾಮರಾಜನಗರದಲ್ಲಿ ಮದನವಿಲಾಸತೊಟ್ಟೀ ಪುಟ್ಟುಸ್ವಾಮಿಯವರ ಹೆಸರಿನಿಂದ ಪ್ರತಿಷ್ಠಿತರಾದ . . . ದೇವಸ್ಥಾನಕ್ಕೆ . . . ವಪ್ಪಿಶಿದ ನಿಲುವಿನ ಸೇವಾರ್ಥ (ಎಕ. XIV, ಚಾಮಚಾ. ೨೦೮-೧ ; 1868) ; ಆ ರಾಜಕುಮಾರರಿಬ್ಬರನ್ನೂ ತಮ್ಮ ಅರಮನೆಯಲ್ಲಿ ಪೂರ್ವದಲ್ಲಿ ಇಳಿದಿದ್ದ ತೊಟ್ಟಿಯಲ್ಲಿಯೇ ಇರುವಂತೆ ನಿಯಮಿಸಿದಳು (ಚಾಮವಂ. ೧೫) : ಶಾಂತಲಾದೇವಿ ತೊಟ್ಟಿಯಿಂದ ಹೊರಟಳು (ಸವತಿ. ೩೦) ; ದೊರೆ ಇವಳ ತೊಟ್ಟಿಗೆ ಕೊಡುತಾ ಇದ್ದ ಖಾಸಾ ಸೋಬಸ್ಕರವನ್ನು ದಿನಕ್ರಮೇಣ ಕಡಿಮೆ ಮಾಡುತ್ತಾ ಕಡೆಗೆ ಕಗ್ಗಲ ರಾಗಿ ಮುಗ್ಗಲ ಹುರುಳಿಗೆ ಇಳಿಸಿದನು (ಪೀಟಮಾ. ೧೬). ೩. ದರ್ಬಾರು ನಡೆಯುವ ಸ್ಥಳ ; ಓಲಗಶಾಲೆ; ಆಸ್ಥಾನಮಂಟಪ : ಶ್ರೀರಂಗಪಟ್ಟಣದ ಅರಮನೆಯಲ್ಲಿ ಸುಜೆಯ ಸನ್ನಿಧಾನದ ತೊಟ್ಟಿ (ಕಂಸಕ. ೧೨೦). ೪. ಹಸು, ಕುದುರೆ ಮುಂತಾದುವನ್ನು ಕೂಡುವ ಸ್ಥಳ ; ಕೊಟ್ಟಿಗೆ : ಕುರಿಗಳೆಲ್ಲಾ ರೊಪ್ಪದಲ್ಲಿ, ದನಗಳೆಲ್ಲಾ ತೊಟ್ಟಿಯಲ್ಲಿ, ಜನಗಳೆಲ್ಲಾ ಹಟ್ಟಿಯಲ್ಲಿ ಬಳಲಿ ಕೆಡೆದರು ತೆಪ್ಪಗೆ (ಇಂಗೀತ. ೫೨-೧). **ದೊಡ್ಡಿ$_1$** : ೪. ಗುಡ್ಡ ಬೆರಳೊಳೆತ್ತಿ ದೊಡ್ಡಿ ಗೋವ್ಗಳ ಕಾಯ್ದು ಒಡ್ಡಿ ಜಗನ್ನಾಥ ಗಿಡ್ಡಾಗಿದ್ದನೆ (ಪುರಂದ. ೨-೩೨-೩) ; ನರಪಶುಗಳಿಹ ದೊಡ್ಡಿ ನರಕದ ದಿಡ್ಡಿ ಸಕಲರಿಂಗಿಕ್ಕಿದಡ್ಡಿ (ಷಶಿಲ. ೨-೬೧) ; ಅಲ್ಲಲ್ಲಿ ದೊಡ್ಡಿಗಳಲ್ಲಿರುವ ಸಂತೋಷಕರಗಳಾದ ಗೋವುಗಳ ಹಿಂಡುಗಳನ್ನೂ ನೋಡುತ್ತ (ಕೃವಾಉ.೧೪೨); ಗಿರಿಗಳೆಡೆಯೊಳು ಅಡವಿ ಮಧ್ಯದಿ ತುರುವ ದೊಡ್ಡಿಯ ಮಾಡಿಕೊಂಡು ಇರುವ ಕಾಳಿಂಗನೆಂಬ ಗೊಲ್ಲನ ಪರಿಯ ನಾನೆಂತು ಪೇಳ್ವೆನು (ಗೋಹಾಡು. ೨೦) ; ಆ ಎರಡು ತರಗತಿಯೂ ದೊಡ್ಡಿಯಂತಾಗಿದೆ (ಕಾಷೇರಿ. ೯೬). ೫. ಜನರು ವಾಸಿಸುವ ಸ್ಥಳ; ಹಟ್ಟಿ : ಅವನು ತನ್ನ ದೊಡ್ಡಿಯನ್ನು ತಲುಪಿ ಕಾರ್ಯನಿರತನಾದ ನಂತರ ಮನಸ್ಸಿನ ಮುರುಸು ಬೇಸರಗಳೆಲ್ಲ ಮಾಯವಾದುವು (ಪುನರು. ೨೬೪). ೬. ಕೆಲವು ಹಳ್ಳಿಗಳ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ. ೭. ಪೌಂಡಿಮನೆ ; ಕೊಂಡವಾಡ(ಉಕ). ೮. ಕಾಡಾನೆಗಳನ್ನು ಪಳಗಿಸುವ ಸ್ಥಳ ; ಖೆಡ್ಡಾ : (ಶ).

[ ದೇ.॥ ತಮಿ. ತೊಟ್ಟಿ ; ಮಲ. ದೊಟ್ಟಿ ; ತೆಲು. ದೊಡ್ಡಿ ]

**ತೊಟ್ಟಿ$_2$** (ನಾ). ೧. ನೀರು ತುಂಬುವುದಕ್ಕಾಗಿ ಕಲ್ಲು, ಮಣ್ಣು, ಸಿಮೆಂಟು ಮತ್ತು ಮರ ಮೊದಲಾದುವುಗಳಿಂದ ಮಾಡಿದ ಬಾನೆ; ಹೌದು ; ಟ್ಯಾಂಕು : ತೊಟ್ಟಿಯ ನೀರು ಕಾಲುವೆಯಲ್ಲಿ ಹರಿಯುತ್ತಿತ್ತು (ಕಪಪು. ೩-೧೫). ೨. ಮಾಯುಂಹಡಗಿನ ತಳಕ್ಕೆ ಕಟ್ಟಿರುವ ಒಂದು ಬಗೆಯ ತೂಗುದೊಟ್ಟಿಲು,-ದೋಣಿ : ಇದರ ಕೆಳಮಗ್ಗುಲಲ್ಲಿ ಒಂದು ತೊಟ್ಟಿಯನ್ನು (Gondala) ನಿರ್ಮಿಸುವರು. ಈ ತೊಟ್ಟಿಯಲ್ಲಿ ಜನರು ಕುಳಿತುಕೊಳ್ಳುವ ಅನುಕೂಲತೆಯಿದೆ (ಬಾಲಪ್ರ. II, ೧೧೨೬). ೩. ಕಸ, ಕುಪ್ಪೆಗಳನ್ನು ಹಾಕುವ ಗುಂಡಿ : ಕಸವನ್ನು ತೊಟ್ಟಿಗೆ ಹಾಕು (ರೂಢಿ). ೪. (ಆಲಂ)ವ್ಯಭಿಚಾರಿಣಿ ; ವೇಶ್ಯೆ ; ಜಾರೆ.

[ ದೇ.॥ ತಮಿ. ಮಲ. ತುಳು. ತೆಲು. ತೊಟ್ಟಿ ]

**ತೊಟ್ಟಿ$_3$** ‘ತೋಟ್ಟಿ$_2$’ ನೋ.

**ತೊಟ್ಟಿ$_4$** (ನಾ). ಒಂದು ಬಗೆಯ ಬಳ್ಳಿ : “ತೊಟ್ಟಿ[ಪಾಠಾಂ. ಟ್ಟಿ] ತುಷ್ಟೆಯಕ್ಕುಂ” (ಮಂಗರಾ. ೪೨-೩೭) : “ಗೃಹಭೇದ ಲತೆಯೊಳು ತೊಟ್ಟಿ” (ಶಬ್ದಮಂ. ೯೦) ; ಕುದಿಯಿಸುಗೆ ಸುಣ್ಣದಿಂ ಕೈಪೆದೊಂಡೆಯಂ ಕೋಕಿಲಾಕ್ಷಿವೆರಸು ಸಿತೇರಂಡದ ತೊಟ್ಟಿಯೆಲೆಗಳಿಂ ಪಡಲದ ಕಾಯಂ ತೆಗವುಗವಱ ಕೈಪೆಗಳೞಿಗುಂ (ಲೋಕೋಪ. ೮-೩೦); ತೊಟ್ಟಿಯೆಲೆಯ ಕಷಾಯಮಟ್ಕಮೆಯಂ ಕಳೆವುದು (ಧರ್ಮಾಮೃ. ೯-೧೦೮) ; ಬಸವೇಶ್ವರದೇವರ ಬಲದ ಕರ್ಣದಲ್ಲಿ ತೊಟ್ಟಿಗಿಡ ಹುಟ್ಟುವುದೇ ಕುಱುಹು (ಕಾಲಸಂ. ೮೪-೪) ; ನೆಲದಾಳ್ ದಾಗುಡಿ ಹೇರೀಚಲು ಮಾಳಂ ತರಣಿ ತೊಟ್ಟಿ... ಸತಕ್ರಪಾನಂ ವಿಷಹಂ (ಖಮದ. ೫-೯೬): ಸೀಗೆ ಗದುಗು ಕೀಚಕ ತೊ[ಪಾಠಾಂ. ದೊ]ಟ್ಟಿ

. . . ಗಡಣದಿಂದಾ ಕಾಡು ಕಡುಗುರ್ವುವಡೆದು ರಾಜಿಪುದು (ರಾಜುವಿ. ೧೫-೭೦); ತೊಂಡೆ ತೊಟ್ಟಿಯುಂ ಸೊಂಡೆಗಿಡ ಭೂಮಂಡಲಾದೊಳು ಬೆಳೆವ ತೊಳಸಿಯುಂ . . . ತಂಡತಂಡದಿ ಮೆರೆದುವು (ಗೋಹಾಡು. ೭).

[ ದೇ.॥ ತಮಿ. ತೊಟ್ಟಿ ]

**ತೊಟ್ಟಿಕ್ಕು** (ಕ್ರಿ). ಹನಿಹನಿಯಾಗಿ ಬೀಳು : ಕದಡಿ ತೊಟ್ಟಿಕ್ಕುವ ವಿಭೂತಿಗಳ ಬೆಮರಿನಿಂ (ಚಬಪು. ೩೫-೧೫) ; ತೊಟ್ಟಿಕ್ಕೆ ಕಂಬನಿಯು ಜೇನೆದೆಯ ಹೂವಿಂದ (ಕಾಲೂರ. ೧೭೫-೩೬೭); ಸುಮತಿಯ ಕಂಗಳಲ್ಲಿ ಕಂಬನಿ ತುಂಬಿಕೊಂಡು, ಮುತ್ತುದುರಿದಂತೆ ಅವಳ ಗಲ್ಲಗಳ ಮೇಲೆ ತೊಟ್ಟಿಕ್ಕುತ್ತಿದೆ (ಶೀಮೋದ. ೬೫) ; ಎಲೆ, ಕೊಂಬೆ ಮತ್ತು ಹುಲ್ಲುಗಳಿಂದ ನೀರು ತೊಟ್ಟಿಕ್ಕುತ್ತಿತ್ತು (ಪುನರು. ೨೭೮). [ ತೊಟ್ಟು₂ + ಇಕ್ಕು ]

**ತೊಟ್ಟಿಗ** (ನಾ). (?) : ಅಘಹರನು ಕಾವನ ತಗೆದೆಚ್ಚ ಬಾಣದ ಮಗನ ಹಿಡಿದು ತೊಟ್ಟಿಗರು ಪಗೆಗೆ ಮಾರಲ್ಕಂಜಿ ಘಿಗಿದು ಪರ್ವರ ಕಂಡು ಸುಗಿದು ಸೊರಗಿದೆವೆಂಬ ಪಸರಾ (ಕೋದಚ. ೧-೭೦). [ ? ]

**ತೊಟ್ಟಿಗಾಲ್** (ನಾ). ಒಂದು ಕಾಲುವೆಯ ಹೆಸರು : ಅನ್ತೆ ಬನ್ದು ತೊಟ್ಟಿಗಾಲ ತೆಙ್ಕಣಪೇರೊಟ್ಟೆಯಿಂ ಅನ್ತೆ ಬನ್ದು ಬಾಣಗಗೆಱೆಯ ಏರಿಯ ಮೇಗಣಿಂ (ಎಕ. III, ನಂಜನ. ೧೩೯-೨೦; 916 ?).

[ ತೊಟ್ಟಿ ? + ಕಾಲ್₂ ]

**ತೊಟ್ಟಿಡು** (ಕ್ರಿ). = ತೊಟ್ಟಿಕ್ಕು : ಸಡಿಲಿದ ಮುಡಿ ಬೆಮರ್ವನಿಗಳು ತೀವಿ ತೊಟ್ಟಿಡುವಾಸ್ಯದ . . . ಹೆಂಗಳಡಸಿದಂಗಡಿಗಳೊಪ್ಪಿದವು (ಮೋಹತ. ೩-೧೪) ; ತನಿಸುಧೆಯೊಸರ್ದು ತೊಟ್ಟಿಡುವ ಬಿಂದುಗಳ ಸಾಲಿದೆನಲು . . . ಮುತ್ತುಗಳ ಮಣಿಗಳೆಡೆವಿಡದೆ ಸೂಸುತಿರೆ (ಜೈಮಿಭಾ. ೦೦-೦೭); ತೊಟ್ಟಿಡುವ ಬೆವರುಗಳ ಮಸ್ತಕದಿ ರೋಷದಿಂದೊಗುವಾ (ದೇವೀಮ. ೩-೪೯); ನಿರ್ಮಳಾಂತಃಕರಣದಾನಂದಾಶ್ರುಗಳು ಕಂಗಳಲಿ ತೊಟ್ಟಿಡಲು (ಅನಂರಾ. ೧-೨-೩೦); ಮುಖದಲ್ಲಿ ಬೆವರು ತೊಟ್ಟಿಡುತ್ತಿದ್ದಿತು (ನಿರಾತ. ೨೦). [ ತೊಟ್ಟು₂ + ಇಡು₁ ]

**ತೊಟ್ಟಿಮನೆ** (ನಾ). ಹಜಾರದ ಮಧ್ಯದಲ್ಲಿ ಚಾವಣಿಯಿಲ್ಲದ ಚಚ್ಚೌಕವಾದ ಸ್ಥಳವನ್ನುಳ್ಳ ಮನೆ: ಇದ್ದಿರಬಹುದು ನಮ್ಮೂರಲ್ಲೂ ಕೋಟೆ, ಪೇಟೆ, ಅರಮನೆ . . . ಹನ್ನೆರಡು ಕಂಬದ ತೊಟ್ಟಿಮನೆ (ಜಂಗೂಲಿ. ೮) : ನಾನು ಈಗಲೇ ಹೋಗಿ ತೊಟ್ಟೀಮನೆ ಕೃಷ್ಣಪ್ಪನೋರನ್ನು ಕಾಣುತ್ತೇನೆ (ಮಾಂಗಲ್ಯ. ೯). [ ತೊಟ್ಟಿ₁ + ಮನೆ ]

**ತೊಟ್ಟಿಲ್₁**, ತೊಟ್ಟಲ, ತೊಟ್ಟಲು, ತೊಟ್ಟಿಲಂ₁ (ನಾ). ೧. ಮಗುವನ್ನು ಮಲಗಿಸಿ ತೂಗಲು ಮರ, ಬೆತ್ತ ಅಥವಾ ಲೋಹದಿಂದ ಮಾಡಿದ ಒಂದು ಬಗೆಯ ಸಾಧನ; ತೂಗಂಹಾಸಿಗೆ: "ಶೈಶವಿ ಬಾಲಶಯ್ಯೆಯನೆ ತೊಟ್ಟಿಲಕ್ಕುಂ" (ಮಂಗರಾ. ೬೦-೦೭) ; ನಿನ್ನ ತಂದೆವಿರ್ ಸಿದ್ಧಾರ್ಥರೆಂಬೊರ್ ನೀನ್ ತೊಟ್ಟಿಲೊಳಿರ್ದಂತೆ ನಿನಗೆ ಸೆಟ್ಟಿವಟ್ಟಂಗಟ್ಟಿ . . . ತಪಂಬಟ್ಟು (ವಡ್ಡಾರಾ. ೪೭-೨೭); ಮದದಂತಿದಂತದೊಳ್ ಕಟ್ಟಿದ ತೊಟ್ಟಿಲಂ ನಯದಿಂದಮೇಱ[ಸೆ] ಬಾಳಕಾಲದೊಳೆ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱಿದಂ (ಪಂಪಭಾ. ೧-೪೩) ; ದೇಹಿವರ್ಗದ ಕೃತಪಾಪಪುಣ್ಯಫಲಮಂ ಸಲೆ ತೂಗುವ ಕರ್ಮಸಾಕ್ಷಿಯಂ ಪದುಳದೆ ತೊಟ್ಟಿಲೊಳ್ ಪಡಿಸಿ ತೂಗಿದರ್ (ಜಗವಿ. ೩-೨೮) ; ಕೂಸಂ ಚಿಪುಂಟುವೈ ತೊಟ್ಟಿಲಂ ತೂಗುವೈ (ನಂಬಿರ. ೧೫-೧೪೧) ; ಎಳನೇಸಱ ತೊಟ್ಟಿಲುದಗ್ರ ದಾನವರೆಱವಟ್ಟು ಲಕ್ಷ್ಮಿಯ ತಪರ್ಮನೆ . . . ಮಹಾರ್ಣವಂ (ಸೂಕ್ತಿಸು. ೨-೩೮). ೨. ಒಂದು ಊರಿನ ಹೆಸರು : ಏಚಯ್ಯನುಂ ತೊಟ್ಟಿಲ ಪುಟ್ಟಿಗಾವುಣ್ಡನುಂ ಎಱೆಯಣ್ಣ ಪೆರ್ಮ್ಮಾಡಿ ಕೆಱೆಯ ಕಟ್ಟಿ ಕಲ್ಲ ತುಂಬನಿಕಿಸಿದ (ಮೈಆರಿ. ೧೯೩೨, ೧೧-೪ ; 886 ?). 'ತೊಟ್ಟಿಲ್' ಪರಾ. **ತೊಟ್ಟಲ** : ೧. ತನುವೆಂಬ ತೊಟ್ಟಿಲಕೆ ಮನವ ಸರಪಳಿ ಮಾಡಿ (ಅಖಂಡೇ. ೩೪೯-೧೩). **ತೊಟ್ಟಲು** : ೧. ಭಕ್ತನ ಹಸ್ತವೆ ತೊಟ್ಟ[ಪಾಠಾಂ. ಟ್ಟಿ]ಲು ತನಗಂ ಭಕ್ತ್ಯಮೃತಂ ಮೊಲೆವಾಲದು ತನಗಂ (ದೀಕ್ಷಾಬೋ. ೬೪-೫) : ಅಲ್ಲಿನ ಮಕ್ಕಳು ತಮ್ಮ ತೊಟ್ಟಲುಗಳಲ್ಲಿ ಸುಖವಾಗಿ ಮಲಗಿ ನಿದ್ರಿಸಲಿ (ಹುಟ್ಟಹ. ೧೯೦). **ತೊಟ್ಟಿಲು₁** : ೧. ತೊಟ್ಟಿ ) ಶಿಶುವಿಂಗೆ ಜೋಗುಳವಲ್ಲದೆ ಹೊಟ್ಟೆಯ ಶಿಶುವಿಂಗೆ ಜೋಗುಳವುಂಟೇ (ವಚಸಂ. ೪೦೭-೫೯) ; ಶರಣರ ಚರಣದ ತೊಟ್ಟಿಲೊಳು ಪಟ್ಟಿರಿಸಿ ಪುರಾತನರ ಗೀತದಿಂ ಜೋಗುಳಂಬಾಡಿ (ಬಸರ. ೧೦-೧೧೧) ; ಭೀಷ್ಮನ ತೋಳ ತೊಟ್ಟಿಲಿನೊಳಗೆ ಬೆಳೆದೆವು (ಕುಮಾಭೀ. ೭-೨೮) ; ಅಂಗದನ ತೊಟ್ಟಿಲಲಿ ವೀರೋತ್ತುಂಗ ದಶಕಂಧರನ ಕಟ್ಟಿದ ತುಂಗವಿಕ್ರಮವೆತ್ತ ಸರಿದುದು (ತೊರರಾ. ೪-೫-೯) ; ಬೆಟ್ಟಬೆಟ್ಟಕೆ ಕಟ್ಟಿ ಜೋಗುಳದ ತೊಟ್ಟಿಲನು ತೂಗಿದತ್ತು! (ಅನಿಕೇ. ೫೩-೫) ; ತೊಟ್ಟಿಲ ಹೊತ್ತುಕೊಂಡು ತೌರುಬಣ್ಣ ಉಟ್ಟುಕೊಂಡು . . . ತೌರೂರ ತಿಟ್ಟತ್ತಿ ತಿರುಗಿ ನೋಡ್ಯಾಳು (ಜಗೀತ. ೩೦). ೩. ಬಂಡಿಯಲ್ಲಿ ಜನ ಕೂರಲು ಅಥವಾ ಸಾಮಾನು ತುಂಬಲು ಇರುವ ಜಾಗ,-ಸ್ಥಳ.

**ತೊಟ್ಟಲುಗಾಯಿ** = ಒಡೆದಾಗ ಉದ್ದುದ್ದವಾಗಿ ವಿಭಾಗವಾಗುವ ತೆಂಗಿನಕಾಯಿ : ತೊಟ್ಟಲುಗಾಯಿ ಒಡೆದರೆ ಮನೆಯಲ್ಲಿ ಮಗುವಾಗುವ ಸೂಚನೆಯೆಂದು ನಂಬಿಕೆಯಿದೆ (ರೂಢಿ). **ತೊಟ್ಟಿಲ ಕಾರ್ಯ** = ಮಗುವನ್ನು ಮೊದಲ ಬಾರಿ ತೊಟ್ಟಿಲಿಗೆ ಹಾಕುವ ಶಾಸ್ತ್ರ,-ಸಮಾರಂಭ : ಪರಮಹರುಷದಿಂದ ಪುರಜನರೆಲ್ಲರು ನೆರೆದು ತೊಟ್ಟೀಲ ಕಾರ್ಯಕ್ಕೆ (ಸಿದ್ಧಪು. ೩-೨೫). **ತೊಟ್ಟಿಲ ಕೂಸು** = ಚಿಕ್ಕಮಗು ; ಎಳಗೂಸು : ಎರಡು ಸಪ್ತಕ ಜಗವ ಮಾಡಿದ ಸರಸಿರುಹಸಂಭವನೆ ನಾಭಿಯು ನಿರುತ ತೊಟ್ಟಿಲ ಕೂಸು (ಸಂಭಪ. ೭-೨). **ತೊಟ್ಟಿಲ ಚಪ್ಪರ** = ಅಂಬಾರಿ: ಆನೆಯ ಮೇಲೆ ತೊಟ್ಟಿಲ ಚಪ್ಪರದಲಿ . . . ಬರುವ ಮಾನರುಗಳು (ಕಂಸವಿ. ೦೦-೩೦). **ತೊಟ್ಟಿಲ ಜೀಕ, ತೊಟ್ಟಿಲು ಜೀಕ** = ತೊಟ್ಟಿಲನ್ನೊಳಗೊಂಡ ತಿರುಗುಯಂತ್ರ ; ರಾಟಣದುಯ್ಯಾಲೆ : ತೊಟ್ಟಿಲಜೀಕವ ತೂಗಿ ಕೈಬಿಟ್ಟರೆ ಗಾಳಿಯ ರಾಟಾಳದೊಳು ಪ್ರಾಣವು (ಸಖೀಗೀ. ೩೦-೦೦) ; 'ರಾಟಣದುಯ್ಯಾಲೆ' ಎಂದರೆ ನಮ್ಮಲ್ಲಿ ಈಗಲೂ ಪ್ರಚಾರದಲ್ಲಿದ್ದ ತೊಟ್ಟಿಲು ಜೀಕ (ಕರ್ನಾಜ. ೮೩). **ತೊಟ್ಟಿಲನಿಕ್ಕು** = ಮಗುವನ್ನು ಮೊದಲ ಬಾರಿ ತೊಟ್ಟಿಲಿಗೆ ಹಾಕುವ ಶಾಸ್ತ್ರ ಮಾಡಂ ; ತೊಟ್ಟಿಲಿಡಂ : ಕುಮಾರನಿಗೆ ತೊಟ್ಟಿಲನಿಕ್ಕುವ ಉತ್ಸವವಂ ಬೆಳೆಯಿಸಬೇಕು (ಸೌಗಂಧಿ. ೪೨-೮). **ತೊಟ್ಟಿಲ ಮಗ** = ತೊಟ್ಟಿಲ ಕೂಸು : ತೊಟ್ಟಿಲ ಮಗಂಗೆ ಪಟ್ಟಂಗಟ್ಟಿ . . . ಜಿನದೀಕ್ಷೆಗೊಂಡಂ (ಶಂಕಾಪೂ. ೨-೩೭). **ತೊಟ್ಟಿಲ ಹಬ್ಬ** = ತೊಟ್ಟಿಲ ಕಾರ್ಯ : ಕುಸುಮಾಸ್ತ್ರನಂಗನೆಯುಂ ಪಡೆದ ಶಿಶುವಂ ನೋಡಿ . . . ಸಸಿನೆ ತೊಟ್ಟಿಲ ಹಬ್ಬ ರಚಿಸುತ್ತ ನಾಮಕರಣಂಗೈಯೆ (ನಪಮೋ. ೧೫ ಸೂಚನ). **ತೊಟ್ಟಿಲಿಗೆ ಹಾಕು** = ತೊಟ್ಟಿಲಿಕ್ಕು : ಎಂತಿದ್ದರೂ ಅಕ್ಕಯ್ಯನ ಬಾಲೆ ತೊಟ್ಟಿಲಿಗೆ ಹಾಕೋ ಮನೆಗೆ ನಾನು ಬಂದೇ ಬರ್ತೀನಲ್ಲಾ? (ಮುಲಿಮ. ೨೨೭). **ತೊಟ್ಟಿಲು ಗಾಡಿ** = ಕಮಾನಿಲ್ಲದ ಎತ್ತಿನ ಗಾಡಿ. **ತೊಟ್ಟಿಲು ಮುಂದಾಗಿ ಬರು** = ಬಾಣಂತನವನ್ನು ಪೂರೈಸಿಕೊಂಡು ಗಂಡನ ಮನೆಗೆ ಮಗುವಿನೊಡನೆ ಬರಂ.

[ ದೇ.॥ ತಮಿ. ಮಲ. ತುಳು. ತೊಟ್ಟಿಲ್; ತೆಲು. ತೊಟ್ಟಿಲ, ತೊಟ್ಲ, ತೊಟ್ಲಯ, ತೊಟ್ಲೆ ]

**ತೊಟ್ಟಿಲ್₂**, ತೊಟ್ಟಲಿ, ತೊಟ್ಟಲ್ಲ, ತೊಟ್ಟಿಲ, ತೊಟ್ಟಿಲಂ₂, ತೊಟ್ಟಿಲಿ (ನಾ). (ಮುಳ್ಳುಗಳುಳ್ಳ) ಒಂದು ಬಗೆಯ ಸಸ್ಯ : ತಗರಂ ಕೊಳ್ಕುಳಿಸುಗಿ ಕಗ್ಗೊಱಲೆ ತೊಟ್ಟಿಲ್ ಸೂರಣಂ . . . ಪುತ್ತಿನ ಮಣ್ಣುಮಂ ಕದಡಿ ಕಾಸಿಟ್ಟೆಯ್ದೆ ಪೊಯ್ಯುವ ಬಾವುಗಳುಂ ತೀರ್ಚುಗುಂ (ಲೋಕೋಪ. ೯-೨೪೦). **ತೊಟ್ಟಲಿ**: ಕಾಯಿಗಳು: ಆಗಸೆ, ಹಲಸು, ತೊಂಡೆ, ತೊಟ್ಟಲಿ (ನಮ್ಮನು. ೨೩೭). **ತೊಟ್ಟಲ್ಲ** : ರಪ್ಪೆ, ತೊಟ್ಟಲ್ಲ (ಮೃಜಿಗಿ. ೦೭-೩೦೫).

**ತೊಟ್ಟಿಲ:** ತೊಟ್ಟಿಲ (ವಾಥಾಂಟಿ).–ಮುಳ್ಳುಗಳುಳ್ಳ ಬಹು ಸಾಧಾರಣ ವಾದ ಬಳ್ಳಿಯು (ಶಭಾಗ. ೪೦). **ತೊಟ್ಟಿಲು₂:** ಕಂಪುನೊಳ, ತೊಟ್ಟಿಲು, ಪ್ರಿಯಂಗು (ಮೃಡಿಗಿ. ೪-೫೭). **ತೊಟ್ಟಿಲೆ :** ಹೊಟ್ಟೆನೊಳ, ತೊಟ್ಟಿಲೆ (ಮೃಡಿಗಿ. ೭-೯೯). [ ದೇ.॥ ತೆಲು. ತೊಟ್ಲ ]

**ತೊಟ್ಟಿಲ** 'ತೊಟ್ಟಿಲ್₂' ನೋ.

**ತೊಟ್ಟಿಲಿಕ್ಕು** (ಕ್ರಿ). ಮಗುವನ್ನು ಮೊದಲ ಬಾರಿ ತೊಟ್ಟಿಲಿಗೆ ಹಾಕುವ ಶಾಸ್ತ್ರವನ್ನು ಮಾಡಂ : ತೊಟ್ಟಿಲಿಕ್ಕುವೆವೆಂದು ಹನ್ನೆರಡಿರುಳಿಂಗೆ ನೆಟ್ಟನೆ ಕೈಕೊಂಡರೊಲಿದು (ಮೋಹತ. ೦೭-೪೦).

[ ತೊಟ್ಟಿಲು₁ (<ತೊಟ್ಟಿಲ್₁) + ಇಕ್ಕು ]

**ತೊಟ್ಟಿಲಿಗ** (ನಾ). ತೊಟ್ಟಿಲ ಮಗಂ ; ಎಳಗೂಸು : ಬಾಳಕಾಲದೊಳೆ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱಿದಂ (ಪಂಪಭಾ. ೧-೪೩).

[ ತೊಟ್ಟಿಲ್₁ + – ಇಗ ]

**ತೊಟ್ಟಿಲಿಡು** (ಕ್ರಿ). = ತೊಟ್ಟಿಲಿಕ್ಕು : ತೊಟ್ಟಿಲಿಡುವ ದಿವಸ ಎಲ್ಲಿದ್ದರೂ ಬಂದೇವು (ಸವತಿ. ೨೭). [ ತೊಟ್ಟಿಲು₁ (< ತೊಟ್ಟಿಲ್₁) + ಇಡು₁ ]

**ತೊಟ್ಟಿಲು₁** 'ತೊಟ್ಟಿಲ್₁' ನೋ.

**ತೊಟ್ಟಿಲು₂** 'ತೊಟ್ಟಿಲ್₂' ನೋ.

**ತೊಟ್ಟಿಲುಹಬ್ಬ** (ನಾ). ಮಗುವನ್ನು ಮೊದಲ ಸಲ ತೊಟ್ಟಿಲಿಗೆ ಹಾಕುವ ಉತ್ಸವ,-ಸಮಾರಂಭ ; ತೊಟ್ಟಿಲ ಕಾರ್ಯ : ಗೌಡರ ಮೊಮ್ಮಗನ ತೊಟ್ಟಿಲುಹಬ್ಬ ನಿನ್ನೆ (ಕೃಣಸ. ೦೦).

[ ತೊಟ್ಟಿಲು₁ (< ತೊಟ್ಟಿಲ್₁) + ಹಬ್ಬ (< ಪರ್ಬ) ]

**ತೊಟ್ಟಿಲೆ** 'ತೊಟ್ಟಿಲ್₂' ನೋ.

**ತೊಟ್ಟಿಲ್ದುಂಬಿಸು** (ಕ್ರಿ). = ತೊಟ್ಟಿಲಿಕ್ಕು : ಧಾರಿಣಿ ಪೊಗಳ್ವಂತೆ ಪೊಲುಕ್ಸಾಹದಿ ತೊಟ್ಟಿಲ್ದುಂಬಿಸಿದಂ (ಜಯುಕಾ. ೨-೬೦).

[ ತೊಟ್ಟಿಲ್₁ + ತುಂಬಿಸು ]

**ತೊಟ್ಟಿಸು** (ಕ್ರಿ). ಹನಿಸು ; ಚಿಮುಕಿಸು : ಒಕ್ಕಲಿಗರ ಮನೆಯ ಸುಣ್ಣದ ಮೇಲೆ, ಮಜ್ಜಿಗೆಯನ್ನು ತೊಟ್ಟಿಸಿದರೆ . . . ಅದರ ದೋಷನಿವಾರಣೆ ಯಾಯಿತೆಂದು ಹೇಳಿ ಉಪಯೋಗಿಸುತ್ತಿದ್ದರಲ್ಲಾ ? (ಬೃಸರ್ವ. ೧೨೨).

[ ತೊಟ್ಟು₂ + – ಇಸು₃ ]

**ತೊಟ್ಟು₁** 'ತೊಡಂ₁' ಪರಾ.

**ತೊಟ್ಟು₂** (ಕ್ರಿ). ತೊಟ್ಟಿಡಂ ; ಹನಿಹನಿಯಾಗಿ ಬೀಳಂ : ಮೋಟಾರ್ ವಾಹನಗಳಿಂದ ತೊಟ್ಟಿದ ಎಣ್ಣೆಯು ತೆಳುವಾಗಿ ಹರಡಿ ಎಣ್ಣೆಯ ಪೊರೆಯು ಉಂಟಾಗಿರುತ್ತದೆ (ಭೌತವಿ. ೨೦೭) ; ಅವಳ ಕಣ್ಣಿನಿಂದ ಒಂದೆರಡು ಬೊಟ್ಟು ನೀರು ತೊಟ್ಟಿತು (ದೇವೀಚಾ. ೧೭೬).

[ ದೇ.॥ ತಮಿ. ಚೊಟ್ಟು ; ತೆಲು. ತೊಟ್ಟು ]

**ತೊಟ್ಟು₃** (ನಾ). ೧. ಹನಿ ; ಬಿಂದು : "ವೃಷಂತಿ, ಬಿಂದುಃ, ಪೃಷತಃ, ವಿಪ್ರುಷಃ, ೪ ಜಲಬಿಂದುಗಳ ಹೆಸರುಗಳು ಅಂದರೆ ನೀರಿನ ತುಂತುರುಗಳು; ಉದಕ ತೊಟ್ಟುಗಳು" (ಸಿದ್ಧಾಂತಿ. ೭೯) ; ತೊಟ್ಟು ಕೂಡ ಬಿಡದಂತೆ ಸವರಿ ಹಿಗ್ಗನ್ನು ಹುಡುಕಿ ಕುಡಿವೆ (ಅರಳು. ೨೦೪-೦೩). 'ತೊಟ್ಟಿಡಂ' ಪರಾ. ೨. ಕೊಂಚ ; ಸ್ವಲ್ಪ : ನೀವು ಇನ್ನೂ ಚಿಕ್ಕವರು . . . ಇಲ್ಲವಾದರೆ ಒಂದುತೊಟ್ಟು ಬೈದು ಮುಂದೆ ಸಾಗುತ್ತಿದ್ದೆ (ಕಾಬಲ. ೭೯).

[ < ತೊಟ್ಟು₂ /ತಮಿ. ಚೊಟ್ಟು ]

**ತೊಟ್ಟು₄** (ನಾ). ೧. ಹಣ್ಣು, ಹೂವು, ಎಲೆ ಮೊದಲಾದುವುಗಳ ತೊಂಬು,-ಕಾವು ; ದೇಟು : "ವೃಂತಂ, ಪ್ರಸವಬಂಧನಂ ಈ ೨ ಪುಷ್ಪ ಪತ್ರಂಗಳ ತೊಟ್ಟು" (ನಾಚಿರಾ. ೦೦೭) ; "ತೊಟ್ಟು ತುಂಬೆನೆ ವೃಂತನಾಮ ಮೆಂದೇ ತಿಳಿವುದು" (ಕಬ್ಬಸುಂ. ೨೩) ; ತೊಟ್ಟು ಬಿಟ್ಟ ಹಣ್ಣು ಮತ್ತೆ ಹತ್ತುವುದೇ (ಸರ್ವಜ. ೨೭-೧೨೦) ; ತೊಟ್ಟು ಪಿಂಡಿಗೆಯಾಗೆ ಫಲಮೆ ಲಿಂಗಮುದಾಗೆ (ಬಸರ. ೯-೫೭) ; ಫಲದಲ್ಲಿ ತೊಟ್ಟುಪೋಣಗದ ವೇಳೆಯಲ್ಲಿ ದಿರಿಟ್ಟು ಹಣ್ಣನು [ಪಾಠಾಂ. ಫಲವನು ತೊಟ್ಟ ಸರಿಸಕೆ ಕಾಲದಲ್ಲಿ ತಂದಿರಿಸಿ] ನಿಮ್ಮನುಕೂಲಧರ್ಮಂಗಳನು ಬೇಗದಿ ಹೇಳಿ (ಕುಮ್ಯಾಅ. ೩-೨೪) ; ಕೀಟಕವು ಕದುಕಿ ಕಡಿಯದ ತೊಟ್ಟುಗಳು ಪತ್ತಿದ ಸುಪುಷ್ಪವ . . . ಶಿವಲಿಂಗಕರ್ಪಿಸಿದಂ (ಶಂಕದಾ. ೫-೫೧) ; ತೊಟ್ಟು ಕಳಚಿದ ತೆರದಿ ಜೀವವ ಬಿಟ್ಟನೈ (ದೇವೀಮ. ೪-೨೦). ೨. ಮೊಲೆಯ ತಂದಿ ; ಚೂಚುಕ : "ತೊಟ್ಟು ಚೂಚಕಮೆನಿಕ್ಕುಂ" (ಮಂಗರಾ. ೯೫-೭) : ಬಟ್ಟಿದುವಪ್ಪ ಮೊಲೆಗಳ ತೊಟ್ಟು ಕರಂಗುವುದುಮೊಡನೆ ಸರ್ವಸ್ವಮುಮಂ ಕೊಟ್ಟು ಕರಂಗಿದರಹಿತರ್ ಕೆಟ್ಟುವು ವಳಿಯೊಡನೆ ವೈರಿವಂಶಾವಳಿಗಳ್ (ಪಂಚಾಶು. ೩-೯೭) ; ಬಟ್ಟಮೊಲೆಗಳ ತೊಟ್ಟೊಳು ಕಪ್ಪು ರಂಜಿಸಿತು (ಅಂಜಚ. ೯-೭); ತೊಟ್ಟು ಹಿಡಿದು ಎನ್ನ ತೊಟ್ಟ ಕುಪ್ಪಸಗಂಟು ಬಿಟ್ಟು ಬೇಗ ಮುದ್ದಿಟ್ಟು . . . ನೆಟ್ಟನೆ ನಡೆದ ಶ್ರೀಕೃಷ್ಣನೆಂಬವನು (ಪುರಂದ. ೧-೭೫-೧).

**ತೊಟ್ಟಿಡೆ** = ದೇಟಿನ ಭಾಗ : ನೆಟ್ಟನೆ ಬಳೆದು ನೆಗಟ್ದು ಕೊಟ್ಟಿಡೆ ಯೋರೆವಟ್ಟಲದರ್ಾವರೆಯಂತೆ ಬಟ್ಟಮೊಗವನೋರೆಗೊಳಿಸಿಯವನ ಮೊಗ ವಿಟ್ಟ ದಿಟ್ಟಿಯೊಳು ನಟ್ಟಿಪುದು (ಚಿಕವಿ. ೬-೦೫೭ ಸಾಂಗತ್ಯ).

[ ದೇ.॥ ಮಲ. ತೊತ್ತು ; ತುಳು. ತೊಟ್ಟು ]

**ತೊಟ್ಟು₅** (ನಾ). (ಕರಾ) ತೆಕ್ಕೆ ; ಕಂತೆ : ಈ ಹುಲ್ಲು ಎರಡು ತೊಟ್ಟು ಆಗುತ್ತದೆ (ರೂಢಿ).

[ ದೇ.॥ ತುಳು. ತೊಟ್ಟು = ತೆಕ್ಕೆಯಲ್ಲಿ ಹಿಡಿ, ತಬ್ಬು ]

**ತೊಟ್ಟು₆** (ಅ). ಮೊದಲಾಗಿ ; ಹಿಡಿದಂ ; ಆರಂಭವಾಗಿ : ಪುಟ್ಟಿದಂದಿಂ ತೊಟ್ಟಿಂತಪ್ಪುಣಸಂ ಕನಸಿನೊಳಪ್ಪೊಡಂ ಕಂಡಱಿಯದೆಮಗಂ ಚೋದ್ಯಂ ಬಟ್ಟು . . . ಆಕಂಠಪ್ರಮಾಣಂ ಬರೆಗಂ ತಣಿಯುಂಡು (ವಡ್ಡಾರಾ. ೭೮-೨೦) ; ಕೊರಲೊಳ್ ಕಟ್ಟಿದ ದೇವಿಯಂತಿರುರದೊಳ್ ಶ್ರೀ ತೊಟ್ಟಿಲೊಳ್ ತೊಟ್ಟನಂತರಮೆನ್ನೊಳ್ ನೆಲಸಿತ್ತು (ಪಂಪಭಾ. ೧೦-೯) : ಬಾಲಕಾಲದಿಂ ತೊಟ್ಟು . . . ಖಲಜನಸಂಗತನುಮಾಗಿಯುಂ ನಡೆಯುತ್ತುಮಿರೆ (ಪಂಚತಂ. ೨೭-೨೦) ; ಆ ಬಾಲಕರ್ ಬಾಲ್ಯದಿಂ ತೊಟ್ಟು ಗೋಳಾಂಗೂಳರಂತೆ ಸಹಜಚಾಪಲ್ಯರುಂ . . . ಎನಿಸಿ (ಸುಕುಮಾ. ೨-೫ ವ) ; ಅಂಗುಷ್ಠ ತೊಟ್ಟು ಪಾಣಾಗ್ರ ಪರಿಯಂತರದಲ್ಲಿ ಸ್ಥಾನವ ಮುಟ್ಟಿ ನೋಡಿ (ಸರ್ಪಪ. ೨೨-೧೦೧) ; ಕೆಱೆಯಂ ಕಟ್ಟಿಸು ಭಾವಿಯಂ ಸವಸು . . . ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾಂ ಯೆಱದಳ್ಪಾಲೆಱಮೆಂದು ತೊಟ್ಟು ಕಿವಿಯೊಳ್ (ಶಾಇಇ. IV, ೨೭೭-೪೫ ; ಸು. 1411) ; ನೀವು ಆ ಊರಿಗೆ ಹೋದಾಗಿನ ತೊಟ್ಟು ಎಷ್ಟು ಸುಧಾರಿಸೀರಿ (ಸುಳವು. ೪೨).

[ <ತೊಡು₁./ತಮಿ. ತೊಟ್ಟು ]

**ತೊಟ್ಟುಕಳಚು** (ಕ್ರಿ). = ತೊಟ್ಟುಬಿಡಂ : ಮರದಲ್ಲಿದ್ದ ಹಣ್ಣು ತೊಟ್ಟು ಕಳಚಿ ಉದುರಿದೆ (ರೂಢಿ). [ ತೊಟ್ಟು₄ + ಕಳಚು (<ಕಟಿಲ್ದು₁) ]

**ತೊಟ್ಟುಕಟಲ್** (ಕ್ರಿ). = ತೊಟ್ಟುಬಿಡಂ : ನಿಂದು ಕೀಲಿಸಿದೊಡುರ್ವರೆಯೊಗುರ್ಡಿಸಿತ್ತು ಸಾಗರಂ ವೇಳೆಯಿನುರ್ಕಿ ಸೂಸಿದುದು ತೊಟ್ಟುಕಟಲ್ದವು ತಾರಕಾಳಿಗಳ್ (ಅನಂಪು. ೧೧-೫೮). [ ತೊಟ್ಟು₄ + ಕಟಲ್₁ ]

**ತೊಟ್ಟುಬಿಡು** (ಕ್ರಿ). ತೊಟ್ಟಿನಿಂದ ಕಳಚಿಕೊಳ್ಳು,-ಬೇರೆಯಾಗಂ : ತೊಟ್ಟು ಬಿಡದನ್ನಕ್ಕರ ಮುತ್ತಾ ಬುಡದಾಸೆ ಬೇಕು. (ಕೂಸ್ಕಸಂ. ೨೨೪-೮) ; ತೊಟ್ಟು ಬಿಟ್ಟ ಹಣ್ಣನಂತೆ ದ್ರುಮ ತಟ್ಟಾಱಿದ ಫಲದಂತೆ (ಮೋಳಿಮಾ. ೧೨-೪೨). [ ತೊಟ್ಟು₄ + ಬಿಡು₁ ]

**ತೊಟ್ಟುವಾಯ್** 'ತೊಡು₁' ಪರಾ.

**ತೊಟ್ಟುಳಿಕೆ** 'ತೊಟ್ಟುಟೀಕೆ' ನೋ.

**ತೊಟ್ಟುಟೀಕೆ, ತೊಟ್ಟುಳಿಕೆ** (ನಾ). ರುಂಡ ಮುಂಡಗಳಂ ಒಟ್ಟು ಸೇರಿರುವ ಭಾಗ ; ಕಂಠ ; ಕೊರಳಂ : ತುಡುಂಕಲಪ್ಪಳಿಸುವ ಚಂಚು

ಘಾತಿಯಿಱಿದಾರ್ದೊಡೆ ವಾರಿ ಮಿಡುಂಕುತಿರ್ಪ ತೊಟ್ಟುಟಿಕೆ (ದಶಕು. ೧೧-೫೦). **ತೊಟ್ಟುಳಿಕೆ:** ಇಟ್ಟಣಿಸುವೀ ರಣವುದಾಂಧನ ತೊಟ್ಟುಳಿಕೆ ಯನು ಕೇಳ್ವ ರಾಯಘೆರಟ್ಟಸಿಲ್ಲಾ (ಕುವ್ಯಾ.ಕೆ. ೨೦-೨) : ರಾಮನನೊಟ್ಟ ವಿಸಿ ಮುಂಬರಿದು ಮುನಿಪನ ತೊಟ್ಟು [ಪಾಠಾಂ. ತುಟ್ಟ, ತೊಟ್ಟ]ಳಿಕೆ ಯಲಿ ಚಾಚಿದಳು ಚಾಪಳಚಪೇಟಕವ (ತೊರರಾ. ೧-೧೦-೧೨) : ಆರುಭಟೆ ಗಂಬುಗಳಳಿದವು ಮೇರೆಯನು ಸುರನಿಕರದಸುಗಳು ಸೇರಿದವು ತೊಟ್ಟುಳಿಕೆ ಗಿಟ್ಟಣಿಸಿತ್ತು ಸಂಗ್ರಾಮ (ನಿಘಾಗ. ೭-೭-೪೪). [ <ತೊಟ್ಟು₄ + ? ]

**ತೊಟ್ಟೂರಮ್ಮಳಿ** (ನಾ). ಒಂದು ಊರಿನ ಹೆಸರು : ಶ್ರೀ ಶಿವಮಾರ ಭಟಾರರ್ ಜಗವೆಲ್ಲವನ್ ಆಳುತ್ತಿರೆ ತೊಟ್ಟೂರಮ್ಮಳಿಯುಳ್ ಇಱಿದು ಪಿಡಿವಲ್ಲಿ (ಮ್ಯಆರಿ. ೧೯೨೪, ೪೭-೧ : ?). [ ? ]

**ತೊಟ್ಟೆ** (ನಾ). ೧. (ಕರಾ) ತೆಂಗಿನ ಗರಿಗಳಿಂದ ಮಾಡಿದ ಕುಕ್ಕೆ,- ಬುಟ್ಟಿ : ತೊಟ್ಟೆ ಕಟ್ಟಕೊಂಡು ಮೊಟ್ಟೆ ಹೊತ್ತ (ಗಾದೆ). ೨. ಪೊಟ್ಟಣ : ಸಾವುಕಾರ ಕಾಗದದ ತೊಟ್ಟೆ ಮಾಡಿ ಒಂದೊಂದಾಗಿ ಎಣಿಸಿ ಲೆಕ್ಕ ಗುಣಿಸಿದ (ಚಾಳಿಗಿ. ೫೦). 'ಚೊಟ್ಟೆ₃' ಪರಾ. [ ←ತುಳು. ತೊಟ್ಟೆ ]

**ತೊಟ್ಯಾನದಿ** (ನಾ). ಒಂದು ನದಿಯ ಹೆಸರು : ತೊಟ್ಯಾನದೀ ಪಶ್ಚಿಮ ತೋ ಪೇರೂರಾತ್ಪೂರ್ವ್ವಸ್ಥಿತಮ್ (ಮ್ಯಆರಿ. ೧೯೩೦, ೮೮-೧೨ ; ಸು. 475). [ ತೊಟ್ಯಾ₀ + ನದಿ ]

**ತೊಡ** (ನಾ). ೧. ಆಭರಣ; ಒಡವೆ : "ಪಸದನಂ, ಪಚ್ಚಂ, ತೊಡಂ – ಈ ೩ ಆಭರಣಂ" (ಕಶಸಾ. ೬೩-೪೧) : "ಪಚ್ಚಂ ತೊಡಂ ಪಸದನಮೆನಲ್ ತೊಡಿಗೆಯೆಂದಿಳಿಗೆ ನಾಮಮಕ್ಕುಂ" (ಕಬ್ಬಿಕೈ. ೨೫) ; ವಿನುತ ಮುತ್ತಿನ ತೊಡಗಳಂ ತೊಟ್ಟು (ಜಬಪು. ೧೦-೬೩) : ಮೋಕ್ಷವೇ ಮಣಿಯಾದ ವರ ರುದ್ರಾಕ್ಷದೊಡಗಳ ತೊಡಿಸಿ (ಶಂಕರಾ. ೪-೮). ೨. ಉಡುಪು ; ವಸ್ತ್ರ : (+). [ ತೊಡು₁ + – ಅ₆ ]

**ತೊಡಂಕಿಕ್ಕು** (ಕ್ರಿ). ಕಷ್ಟಕ್ಕೆ ಗುರಿಮಾಡು; ತೊಂದರೆಗೀಡುಮಾಡು : ನೀಮಾರ್ಗೆಲೆ ನಿಮ್ಮನಾವಱಿಯೆವೆಂದೆಮ್ಮಂ ತೊಡಂಕಿಕ್ಕುವಂದಿನ . . . ಸೊರ್ಕಕ್ಕಟ ಮುಕ್ಕುವೋಗಿ (ಸುಕುಮಾ. ೪-೨೭). [ ತೊಡಂಕು₃ + ಇಕ್ಕು ]

**ತೊಡಂಕು₁**, ತಡಂಕು₁, ತುಡಂಕು₁, ತೊಡಕು₁, ತೊಡಗು₁ (ಕ್ರಿ). ೧. ಸಿಲುಕಿಕೊಳ್ಳು ; ಸಿಕ್ಕಿಕೊಳ್ಳು : ಅದಟರ ಚೆನ್ನಪೊಂಗರ ಸಬಂಗಳ ತೊಟ್ಟುಟಿಯೊಳ್ ತೊಡಂಕಿ ನಿಲ್ಲದೆ ಪೊ[ಱಮಟ್ಟ] ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ . . . ಕರ್ಬುಸುಗಳ್ ಪರಿಗೊಂಡುವಾಜಿ ಯೊಳ್ (ಪಂಪಭಾ. ೮-೧೦೪) ; ತೊಟ್ಟನೆ ಸಾವುದೊಳ್ಳಿತು ತೊಡಂಕದೆ ಕಾಮನ ಡಾಮರಂಗಳೊಳ್ (ಚಂದ್ರಪು. ೮-೬೬) ; ನೇಣ್ಬಲೆಯ ತೊಡರೊಳ್ ತೊಡಂಕಿ ನಡುಗುವ ಕುರಂಗಿಯೊಳ್ದೊರೆಯಪ್ಪಳ್ (ವರ್ಧಪು. ೪-೫೮ ವ) ; ದಿಟ್ಟಿ ತೊಡಂಕೆ ರೂಪಿನ ಬೆಡಂಗಿನೊಳ್ (ಬಂಹರಿ. ೮-೫೩) : ಆರುಮಸತ್ಯ ದೊಳ್ . . . ಪರಸ್ತ್ರೀರತಿಯೊಳ್ ತೊಡಂಕದಿರಲೆಂಬುದು ನಿನ್ನ ಮತಂ (ಪುಷ್ಪಪು. ೬-೧೨) ; ಮೃದುಮೃಣಾಳನಾಳ ತಂತುಜಾಲಕದೋಳೊಯ್ಯ ನೊಯ್ಯನೆರಯ್ಯಮೆನೆ ನಡೆವೆಡೆಯೊಳಡಿ ತೊಡಂಕಿ ತಡೆಗಡೆವ ತರುಣ ಮರಾಳಂಗಳಂ ಕಂಡು (ರಾಜಶೇ. ೬-೨೪ ವ). ೨. ಸಿಕ್ಕಾಗು ; ಗೋಜಾಗು ; ಗಂಟುಗಂಟಾಗು ; ಹೆಣೆದುಕೊಳ್ಳು ; ತಿರಂಚಿಕೊಳ್ಳು : ತೊಡಂಕಿ ಪೀಱಿದ ಕುರುಳ್ಗಳಿ ಚಿತ್ರದೊಳಾದ ಬೇಸಱಿಂ ನುಡಿವವೊಲಾಗೆ (ಪಂಪಭಾ. ೧೩-೯೯) ; ಪೊರೆದು ಸರೋಜರೇಣುಗಳಿನೊಂದಱಿಳೊಂದು ತೊಡಂಕಿ ವಾಃಕಣೋತ್ಕರದೊಡಗೂಡಿ ಕಣ್ಗೆ ಕವಿತರ್ಪ ಜಟಾಳಿ (ಕಾದಂಬ. ೬೦೭); ಬಿಡದೆ ತೊಡಂಕಿ ತೋರ್ಪ ಜಡೆ (ಉಮಾಶ. ೧೪). ೩. ಅನುಮಾನದಿಂದ ಹಿಂದುಮುಂದು ನೋಡು ; ತಡವರಿಸು : ಇವನಱಿವರೆ ಕನ್ನಡಗಬ್ಬ ದೊಳ್ ತೊಡಂಕದೆ ಸಲ್ವರ್ (ಶಮದ. ೪೮). ೪. ಹೋರಾಡು ; ಸೆಣಸು : ಜಯದ್ರಥನನಿಕ್ಕುಟಿದಾರೊಳಮಿಂ ತೊಡಂಕವೇಡೆನುತುಂ (ಪಂಪಭಾ. ೧೧-೧೪೫) ; ಎಮ್ಮದೀ ಮಣಿಯೆಸುತ್ತಿರದೆಯ್ದಿ ತೊಡಂಕಿ . . . ಕಾಳಿಗಮಂ ತೆಗೆದರ್ (ರಾಜಶೇ. ೫-೧೨೪). ೫. ಅಡ್ಡಿಮಾಡು ; ಅಡಚಣೆಯೊಡ್ಡು ; ನಿರೋಧಿಸು : "ತೊಡಕು (ತೊಡಂಕು) – ವಿಪರ್ಯಾಸೇ (ಅಡ್ಡಿಮಾಡು)" (ಶಮುಧಾ). ೬. ತೊಡರು ; ತೊಡರಿ ಕೊಳ್ಳು : ಕರುಳ ಪಿಣಿಲು ಕಾಲಂ ತೊಡಂಕೆಯು ಮುಂದೆಗರು ಳ್ಗಳಿಂದೆ ದಾಡೆ × × ಯುಂ . . . ಕೊಂಗೆಯ ಸಾಹಣಿ ಸುರಲೋಕ ಪ್ರಾಪ್ತನಾದ (ಎಕ. VIII, ಸೊರಬ. ೦೩೯-೦೪ ; 1173). ೭. ಕೂಡು ; ಸೇರು : ತೊಡೆ ತೊಡಂಕಿದ ನುಣ್ದೊಡೆಯಿಂ ಮನಂ ನಿರಂತರ ಸುರತ ಪ್ರಪಂಚಸುಖದಿಂ ಪೆಱಪಿಂಗದೆ (ಚಂದ್ರಪು. ೪-೭೦). **ತುಡುಂಕು₁ :** ೮. ಮುಟ್ಟು ; ತಾಗು ; ಸೋಕು : ಇಂತು ಭೂಮಿ ಆಕಾಶಮಂಡಲಮಂ ತುಡುಂಕುತುಂ (ಶೂನ್ಯಸಂ. ೩೯-೨೦) ; ಇರ್ದುದೊಂದು ಕುಧರಂ ಗಗನ ಸ್ಥಳಮಂ ತುಡುಂಕುತುಂ (ದಶಕು. ೧೧-೬೨) : ನಿರುಪಮಮಪ್ಪ ರತ್ನ ಶಿಖರಂಗಳಿನಗಸಮಂ ತುಡುಂಕುತಿರ್ದ . . . ಪೊನ್ನಕೋಂಟೆಯುಂ ತರಣಿಹಯಂಗಳೀಕ್ಷಿಸಿ (ಬಾಧಪು. ೧-೧೧೯). ೯. ಬೇಗನೆ ಹಿಡಿ ; ಚುರು ಕಾಗಿ ಹಿಡಿ ; ಥಟ್ಟನೆ ಹಿಡಿ : "ತುಡುಕು, ತುಡುಂಕು – ಸತ್ವರ ಗ್ರಹಣೇ (ಥಟ್ಟನೆ ಹಿಡಿ)" (ಶಮುಧಾ) : ತಾಳವಟ್ಟಮಂ ಸೆಳೆದು ತುಡುಂಕಿ (ಚಂದ್ರಪು. ೫-೬೫) ; ಪರಿವ ಪಾವುಗಳಂ ತುಡುಂಕಿ (ಕುಸುಮಾ. ೦೪-೨೯ ವ) ; ನಖರ ದ್ಯುತಿಯಂ ಮಲ್ಲೀಕುಟ್ಮಲಮೆಂದಾ ನಲ್ಲಳ್ಬಯಲಂ ತುಡುಂಕಿ ಕೌತುಕ ಮಾಂತಳ್ (ಉದ್ಭಟ. ೯-೬೨) ; ಆ ನೃಪಂ . . . ದಿವ್ಯಗದಾಯುಧಮಂ ತುಡುಂಕಿದಂ (ದಶಕು. ೨-೨೫) : ಅಳಿಕುಳಮಂ ಹರಿನೀಲಮೆಂದು ತಿಱಿಯಲ್ ಸುರತರುಣಿ ತುಡುಂಕಿ ಸಖಿಯನೀಂ ನಗಿಸಿದಳೋ (ರಾಜಶೇ. ೩-೩೮) ; ಕಂಡರಿಸಿದ ಶುಕಕೋಲ್ಮೆಸಿ ತುಡುಂಕೆ ನೋಡಿ ಯಾರುಂ ನಗುವರ್ (ಮ್ಯಸೂಮ. ೫-೨೦). ೧೦. (ಕಾಮಾತುರದಿಂದ) ಆಕ್ರಮಣ ಮಾಡು : ಮದುವೆಯಾದ ಮೂಱುದಿವಸಮೊದವಿ ಮುಟ್ಟಲಾಗದ ವಳನದಱ ಮೇಲೆ ಬಲ್ಮೆಯಿಂ ತುಡುಂಕಲಾಗದು (ಜನವ. ೧೦-೫೦) ; ನೇಹಂದಳೆದು ಮೇಲ್ವರಿದು ಬರೆ ತುಡುಂಕುವ ಬರ್ದಿನಿನಿಯನ ವಿಲಾಸ ದಂತೆ (ಭಾವಚಂ. ೭-೧೭). ೧೧. ಹರಡು ; ವಿಸ್ತರಿಸು : ಸೋಗೆಯುಂ ನೆಗಪಿ ತುಡುಂಕಿ ಮೆಟ್ಟುವ ಸವಿಲ್ . . . ನಗುವ ಶುಕಾಳಿ (ಸೂಕ್ತಿಸು. ೧೦-೭೪). **ತುಡುಕು₁ :** ೪. ಘನಸಂಗರದೊಳಗೆ ನನ್ನೊಡನೆ ತುಡುಕಿದಡ ಱಿಯಬಹುದು (ಕುವ್ಯಾದ್ರೋ. ೪-೪೩) ; ತುಡುಕಲಮ್ಮುವರಿಲ್ಲ ಬಲದಲಿ ಮಿಡುಕಲಮ್ಮುವರಿಲ್ಲ (ಕುವ್ಯಾದ್ರೋ. ೭-೪೮) ; ಎರಡೂ ಮಹಾಸೈನ್ಯಗಳು ಒಂದನ್ನೊಂದು ತುಡುಕಿ, ಕಡಂಗಿ ಕಾದಿದವು (ಕರತ್ನ. ೫೮). ೮. ಪೊನ್ನ ಕೋಂಟೆ ಮುಗಿಲಂ ತುಡುಕುತ್ತಿರೆ (ಪಂರಾಮಾ. ೩-೩೫) ; ವಿಷದ ಕೊಡನ ತುಡುಕಲೆ ಬಾರದು (ಜನ್ನವ. ೫. ೩೩-೬೨) ; ತೆರೆಗೈಯಿಂ ತುಡುಕುತ್ತು ಮೊಳ್ದೊಡೆಯನಾದಂ . . . ಕಾಮುಕನವೊಲ್ ನೀರೇಱುತಿರ್ದತ್ತು . . . ಪದ್ಮಾಕರಂ (ಚಂದ್ರಪು. ೭-೧೨೭) ; ತುಡುಕಿದ ಜಲಂ ಸಿದ್ಧಾಂಬು ನುಡಿದ ನುಡಿಗಳು ಮೂಲಮಂತ್ರವು (ಸಿದ್ಧರಾ. ೨-೨೦) ; ಪ್ರಸಾದವ ಬೆಕ್ಕು ತುಡುಕುತಿಪ್ಪ ದಾಯವಂ ಪೇಳ್ವಂದು (ವೀಶಿಪು. ೮-೧-೫೨) ; ಕಡಗ ಕಂಕಣ ಬಳೆಗೈ ಝುಣರೆನೆ ನಾರಿ ಬಿಡದಾಗ ಕಲೆಯ ತಾಣಗಳ ತುಡುಕಿ ತಾಡನಗೈದು (ಕೊನವಿ. ೧೦-೪೫). ೯. ಕರಿಪೋತಂ . . . ಕೇಸರಿಣಿಯ ಕೆಚ್ಚಲಂ ತುಡುಕುತುಂ ಪರಿದತ್ತು (ಪಂಪಭಾ. ೭-೮೦) ; ಘಟಸರ್ಪನ ತುಡುಕಿ (ಬಸವ. ೬೨೫) ; ಮಿಱುಗುವ ಬೆಳತಿಗೆಗಣ್ಬೊಣರೊಱ ತೆಯ ಜಲದೊಳಗೆ ಪೊಳೆಯೆ . . . ಎಳಮಿನ್ನೆಳ್ಗೆತ್ತೀಂ ಕಿಱುವೇಡಿತಿ ತುಡುಕಿ ಶಬರನಂ ನಗಿಸಿದಳೋ (ಲೀಲಾವ. ೬-೪೩) : ಒಡನೆ ಥಾಳಿಯನಿಕ್ಕಿ ಶುಕ್ರನ ತುಡುಕಿ ತೇಜವ ಕೊಂಡು (ತೊರರಾ. ೧-೮-೩೪) ; ಸೆಱಗುವಿಡಿಯೆ ಸಾರ್ಸಾರೆಂಬ ಕರವನು ಭರದೆ ತುಡುಕಲೊಡೆಮುರಿವ . . . ತರಳೆವೆಣ್ಣು

ಗಳೊಪ್ಪಿದರು (ಕಂನವಿ. ೬-೧೭೫) ; ಮುತ್ತುಗಳ್ . . . ಪಾರೆ ಪನಿಗೆತ್ತು ನವಿಲ್ ತುಡುಕೆ (ರಾಜಶೇ. ೫-೪೧) ; ಕೊಡನ ಮಱಿಯ ಪಡೆಯಂ ತುಡುಕುವೆಗ್ಗನಂತೆ (ರಾಮಾಶ್ವ. ೭೪-೨೬) ; ಯುವಕನೆ ತುಡುಕು ಕಠಾರಿ ಯನು ! (ಪಾಂಡಜ. ೧೪-೧೪). ೧೦. ಮಹದೇವಿಯನು ಕಂಡರಸನೇಕಾಂತ ದಲಿ ತುಡುಕಿದೊಡೆ (ಪ್ರಭುಲೀ. ೧೦-೨೧) ; ಕಾಮಾತುರದಿ . . . ಬಂದವ ಭರದಿ ತುಡುಕಲು ಪುಷ್ಪವತಿ ತಾನೆಂದಳೆದೆ ಬೆದರಿ (ಅಂಬಿಕಾ. ೮-೬೨) ; ದ್ರೌಪದಿಯನ್ನು ಕೀಚಕನು ಬಲಾತ್ಕಾರದಿಂದ ತುಡುಕಿದನು (ನೀಗಟ್ಟು. ೧೩೬). ೧೨. ಎರಗು ; ಮುತ್ತು : ಪುಷ್ಪದೊಳು ಗ ಂ ಧ ವಿ ರ ಲಾ ಅ ಡಿ ತುಡುಕುವುದೆಂದು ನೆಲದೆ ನಿಡುಬೇರಿನೊಳ್ ಪರಿಮಳವೆತ್ತು ರಂಜಿಪ ಮುಡಿವಾಳ (ಮೋಹತ. ೩-೧೬); ಕಮ್ಮಲರ್ಗಂಧಗಂಧಿಯರು ತಮ್ಮ ನಾಳುವ ಕೃಷ್ಣರಾಯನ ತುಡುಕಿದ ಪೆರ್ಮೆಯನೇನ ಬಣ್ಣಿಪೆನು (ಮೋಹತ. ೦೪-೬೪). ೧೩. ಮುನ್ನುಗ್ಗು ; ಆಕ್ರಮಿಸು : ತುಡುಕಿದವು ತೇಜಿಗಳು ವಾಘೆಯ ಗಡಣದಲಿ (ಕುಮಾ.ದ್ರೋ. ೬-೪೯). ತುಡುಕುವಾನೆಯನೀಸಿನಲಿ ಖುರವಿಡುವ ಕುದುರೆಯನೊತ್ತಿಹಾಯ್ದುವ (ಕುಮಾ.ಕ. ೧೫-೨೩). ೧೪. ಆವರಿಸು ; ತುಂಬು ; ವ್ಯಾಪಿಸು : ತುಡುಕಿದವು ತಂಬಟದ ದನಿ ಜಗದಡಕಲನು (ಕುಮಾ.ದ್ರೋ. ೧-೪೭) ; ಪಿಡಿವ ಕಾಳೆಗಳ ಬಾಱಿಪ ಡಕ್ಕೆಗಳ ದನಿ ತುಡುಕಿತಜಾಂಡಮಂಡಲವ (ವರ್ಧಜ. ೬-೮೪). ೧೫. ತೆಗೆದುಕೊಳ್ಳು ; ಹಿಡಿ ; ಎತ್ತಿಕೊಳ್ಳು : ಪರವಧುವ ನೆರೆಯದೆ ಪರಧನವ ತುಡುಕದೆ (ದೇದಾವ. ೩೩-೬೦) ; ನಾರಿಯಂ ತುಡುಕಿ ಕರ್ಣದ ಕಡೆಗೆ ಸೆಳೆಯೆ (ಹದಶಾ. ೬-೩೬): ತುಡುಕುವಂಕುಶದಿಂದ ಮುನ್ನಿಳಿಯೊಡೆಯೆ ಗಜ ಗಾಧಿಸಿದವು (ಕುಮಾ.ಭೀ. ೨-೨); ತು ಡು ಕಿ ದ ರೆ ಕೈ ಬೇವುದು (ಕುಮಾ.ದ್ರೋ. ೪-೬೦) ; ತುಡುಕಿ ತೂಳುವ ಸೂತ್ರಯಂತ್ರದ ಗಡಣದಲಿ ಗತಿಗೊಂಡು ಬೇಡಿತ ಕೊಡುವ ಮಣಿಪುತ್ರಿಕೆಗಳೆಸೆದವು ವಿವಿಧ ರಚನೆಯಲಿ (ತೊರರಾ. ೧-೧೩-೧೦) ; ರಾಹು ತುಡುಕಿದ ಚಂದ್ರಮಂಡಲವೋ (ಜೈಮಿಭಾ. ೪-೧೩). ೧೬. ಧರಿಸು ; ಹೊಂದು ; ತಳೆ : ಬಿಸಿಲಂ ಕಳೆದು ಬೆಳು ದಿಂಗಳಂ ತುಡುಕುವ ಗಗನಲಕ್ಷ್ಮಿಯಂತೆ ಕೆಂಪಿನ ಪ ಸ ದ ನ ಮ ಂ ಕಳೆದು . . . ಬೆ ಳ್ಪ ಸ ದ ನ ಂ ಗೈ ದು (ಅರ್ಧನೇ. ೨-೧೩ ವ)

**ತೊಡಕು₁** : ೧. ಕಡುಭವದ ಬಾಧೆಗೆ ತೊಡಕಿ ಮೊಱೆಯಿಡುವ ಭವಿಗಳ ನಾಲಿಸುವವೊಲು (ಬಸಪು. ೩-೩೪); ಮಿಡುಕುವುದು ಬಾಯ್ ಚಿತ್ತವವಳಲಿ ತೊಡಕಿಹುದು (ಕುಮಾ.ಆ. ೦೯-೩೭) ; ಮಡದಿ ಮದನನ ಬಲೆಯ ಬಾಯಲಿ ತೊಡಕಿ ಬಿರ್ದುದನಱಿದರಾಗಳೆ (ಪ್ರಭುಲೀ. ೫-೨೩) ;ಒಡನೆನ್ನ ನಿಟ್ಟಿಸಿದರಾ ಮೋಹವಲೆಯೊಳು ತೊಡಕದರಿಲ್ಲ ನಿನ್ನಾಣೆ (ಕಂನವಿ. ೧೦-೩೪) : ಕಾಮುಕರ . . . ಕಡೆಗಂಗಳ ಸರಳಿಯೊಳು ತೊಡಕಿ ಹಮ್ಮ ಯಿಸುವರು (ಕೊಲ್ಲಾಪ. ೨೯). ೨. ತೊಡಕಿದ ಗಳದ ಹಾರದ ಕೆಂಪು ಗದಡಿದಧರದ . . . ಕೋಮಲೆಯರು (ಜೈಮಿಭಾ. ೧೦-೫೦). ೩. ಬೆದಱು ಗಂಗಳ ಬಿಟ್ಟ ಮಂಡೆಯ ಹುದಿದ ಹಾಹಾರವದ ತೊಡಕಿದ ಪದಯುಗದ . . . ವರಸುದತಿ ಬಂದಳು ರಾಜಸಭೆಗೆ (ಕುಮಾ.ಸ. ೦೪-೬೦). ೪. ಮುನ್ನ ತೊಡಕಿ ತನಗಾದ ಭಂಗಂಗಳಂ ಹೇಳನೇ ನಿನಗೆ ಕಮಲಜಕಂದನು (ಹದಶಾ. ೮-೧೫) ; ತೊಡಕಲಱಿಯದವಂ ತೊಡಕಿ ದವನಂ ತೊಡಕುವವನು (ಬಸಪು. ೫೦-೪೮) ; ಅಧಿಕರೊಳಿರದೆ ತೊಡಕುವು ದಾಗದೆಂಬುದನಱಿಯೆಯಾ ನೀನು (ಕುಮಾ.ಉ. ಓರಿಇ. ೯-೫೩) ; ಕಡಗಿದಡೆ ಕೋದಂಡರುದ್ರನ ತೊಡಕಿ ಬದುಕುವವರಾರು (ಕುಮಾ.ದ್ರೋ. ೧-೫೬) ; ತೊಡಕಿದವರ ಗಂಡನೆಂದೆಂಬೆಡದ ಕಾಲ ತೊಡರೆಸೆದುದು ರಾಮನಿಗೆ (ಕುರಾಸಾಂ. ೦೯-೩೦) : ವಿಚಾರಿಸೆ ನೀನೆನ್ನೊಳೋರಂತೆ ತೊ ಡ ಕಿ ದೆ ಮಹಾರಣಾಂಕಣದೊಳು (ಜಿಬಪು. ೫೦-೩೪); ಫಣಿಲೋಕಮಂ ಸುಡುವೆನು ಕಂಜಜ ಕಪರ್ದಿಗಳ್ತೊಡಕಿದೊಡೊರಲ್ಚುವೆಂ (ಜೈಮಿಭಾ. ೨೪-೩).

೫. "ತೊಡಕು (ತೊಡಂಕು)–ವಿಪರ್ಯಾಸೇ (ಅಡ್ಡಿಮಾಡು) " (ಶಮುಧಾ). ೬. ಬುದ್ಧಿಗೆ ಸಂಶಯಾಳಾಪ ತೊಡಕಿಕೊಂಡುದು (ತೊರರಾ. ೩-೯-೪). ೮. ನುಡಿಸಿಯಱಿಯೆವು ಕಂಡು ಕೇಳ್ದುಂ ತೊಡಕಲಱಿಯೆವು ನಿನ್ನನೆಂದುಂ ಗಡಬಡಿಸಿ ನೀನೆನ್ನುವಂ ಝಂಕಿಸಲೆಹಗೆ ಬಹುದು (ಬಸಪು. ೪೦-೩೮). ೧೭. ಅಡಗಿರು ; ಮರೆಯಾಗಿರು : ತಳ್ತ ಕಲ್ಪಭೂಮಿರುಹನಿಕುಂಜಮಂಜರಿ ಗಳೊಳ್ ತೊಡಕಿರ್ಪನೋ (ವರ್ಧಪು. ೧೦-೫೬). **ತೊಡಗು₁** : ೪. ಇತ್ತಲೆ ನ್ನಯ ಹಸಿವು ಹೆಚ್ಚಿದೆ ತುತ್ತು ಹೊಗದೊಳಗಿವನ ತೊಡಗಲದೆತ್ತಲಕಟಾ ವಿಧಿಯೆನುತ ಮುರಿದೆದ್ದನಮರಾರಿ (ಕುಮಾ.ಅ. ೧೦ ೩೨).

**ತೊಡಂಕುಸೊನ್ನೆನೂಲ್** = ಹೆಣೆಗೆಗೊಂಡ ಬಂಗಾರದ ಉಡಿದಾರ: ಬಜ್ಜರಮಂಕಿ ತೊಡಂಕುಸೊನ್ನೆನೂಲ್ ತಳತಳನಿಪ್ಪ ಸಣ್ಣ ಪೊಸಪೊನ್ನುಡೆ (ಚಿಕವಿ. ೩-೯೦).

[ ದೇ.॥ ತಮಿ. ತೊಟಕ್ಕು, ತುಟಕ್ಕು ; ತೆಲು. ತೊಡಗು, ತೊಡುಗು ]

**ತೊಡಂಕು₂**, ತೊಡಂಗು, **ತೊಡಕು₂**, ತೊಡಗು₂ (ಕ್ರಿ). ೧. ಪ್ರಾರಂಭಿಸು ; ಮೊದಲುಮಾಡು ; (ಕೆಲಸದಲ್ಲಿ)ಪ್ರವರ್ತಿಸು : ಸರ್ವಜ್ಞ ಭೂಪನೋಲಗದೊಳ್ಮಿಂದಿರೆ ದಂಡಾಧೀಶಂ ಕುಳ್ಳಿರೆ ಮಂತ್ರಿ ತೊಡಂಕೆ ಕವಿ ಜನಾರ್ದನದೇವಂ (ಅನಂಪು. ೧-೫೬). **ತೊಡಂಗು**: ೧. ಮತ್ತಮೆಂಟು ದಿವಸಂ ಮಹಾಮಹಿಮೆಯುಂ ಮಾಡಲ್ ತೊಡಂಗಿದೊಡೆ (ವಡ್ಡಾರಾ. ೧೦೭-೧೫) ; ಚಿರಕಾಲಂ ತೊ ಡ ಂ ಗಿ ಪರಿಗೃಹೀತಬ್ರಹ್ಮಚರ್ಯವ್ರತ ಪರಿಣತನಾದಂ (ಗದಾಯು. ೫-೪೪ ವ). **ತೊಡಕು₂** : ೧. ಅವನಿಜೆಯ ಕಾಬೆಣಿಕೆ ಕಡೆಗೆ ನಿಲಲಱಿಯದು ನಿರರ್ಥಕ ತೊಡಕಬಹುದೆ (ತೊರರಾ. ೪-೧೨-೩೦); ವೀರಚಿಕದೇವಂ . . . ಸೀಸಂ ಕರಂ ಕೊಂಕಸಂ ಮುಗುಬ್ಬಿಂತೀ ಗತಿಭೇದದಿಂ ತೊಡಕಿ ತೋರ್ಕುಂ ಸಾಧಕಪ್ರೌಢಿಯಂ (ಚಿಕವಿ. ೪-೧೪೬) : ಮೇಲಱಿಯದಧಿಕರೊಳು ಕಾಳಗವ ತೊಡಕಿ[ಪಾಠಾಂ. ಗಿ]ದರೆ ಬಾಳುವೆಯು ಕೆಟ್ಟು ಬಡವಕ್ಕು (ಸರ್ವಜ್ಞ. ೭೪೧). ೨. ಪ್ರಾಪ್ತವಾಗು ; ಒದಗು ; ಉಂಟಾಗು : ಒಡಲ ಜಡಿದವು ರೋಮರೋಮದೊಳಡಸಿದಂಬುಗಳಂಗ ವೇದನೆ ತೊಡಕಿತು (ಕುಮಾ.ಭೀ. ೧೦-೨೪). **ತೊಡಗು₂** : ೧. "ತೊಡಗು – ಪ್ರಾರಂಭೇ" (ಶಮುಧಾ) : ಸುರಿವುದು ತಡೆಯದಯೋಧ್ಯಾಪುರದೊಳ್ ನೀನಿಂದೆ ತೊಡಗಿ ವಸುಧಾರೆಯನಾದರದಿನೆನೆ (ಆದಿಪು. ೭-೩) ; ಕರಂ ಸಂಪ್ರೀತಿಯಿಂ ನೂತನಂ ತಾನಿಂತೆಂದು ನಿವೇದಿಸಲ್ತೊಡಗಿದಂ (ವರ್ಧಪು. ೩-೫೬) ; ಸುರಪತಿಯ ಕೆಟ್ಟ ಸಂಪದಮಂ ತರಲ್ಕೆಂದು ಉರವಣಿಸಿ ತೊಡ ಗಿದರು ಕಡಲ ಕಡೆಯಲ್ಕೆಂದು (ನಂಬಿರ. ೧-೪); ಹೊಸ ತವಸಿ ತೊಡಗಿದನು ಬಲುತಪವ (ಕುಮಾ.ಅ. ೪-೪೩) ; ಯಜ್ಞಮಂ ತೊಡಗೆ ದಕ್ಷಂ (ಭಾವಚಿಂ. ೩-೧೩). ೨. ಇದು ದಲ್ ವಿಸ್ಮಯಮಾಗಿ ತೋಱಿದವುದೇನಿಂತೀಗ ಳೆಂದಮಾದುದೋ ಮೇಣಲ್ಲದೊಡಾಳ್ದನಿಂ ತೊಡಗಿತೋ (ಸುಕುಮಾ. ೨-೩೦) ; ತೊಡಗಿತ್ತು ಕಿರಾತಭೀಕರಧ್ವನಿ ವನದೊಳ್ (ಗಿರಿಕ. ೧-೮೧) ; ನಾರಿ ತೊಡಗಿದ ಕೋಟಿದುಃಖದಿಂ ನುಡಿದ ನುಡಿ ಕೂರಂಬಿನಂದದಿಂ ಹೃದಯಮಂ ತಟ್ಟುಗಿಯಲು (ಭಾವಚಿಂ. ೮-೩೩) ; ಮಕ್ಕಳಿರ ನಿಮಗೆ ರಘು ವರನ ಸೇನೆಯೊಳಾಯ್ತು ಗಡ ಕಲಹಮೇಕೆ ತೊಡಗಿತು (ಜೈಮಿಭಾ. ೨೦-೪೪) : ಅರಸುಗಳಿಗಾದರೋ ಇಷ್ಟಾರ್ಥಸಿದ್ಧಿಯ ಸಂಗಡಲೇ ದುಃಖ ತೊಡಗಿರುವುದು (ಶಾಕುಂತ. ೬೨-೨೪).

**ತೊಡಗಿ** = ಮೊದಲುಮಾಡಿ ; ಆರಂಭಿಸಿ ; ಮೊದಲ್ಗೊಂಡು : ಅಲ್ಲಿಂ ತೊಡಗಿ ದಕ್ಷಿಣಾಪಥದೊಳದು ತೀರ್ಥಮಾಯ್ತು (ವಡ್ಡಾರಾ. ೧೧೭-೫) ; ಉಡೆವಣ [ಪ]ಱಿಯದ ಮುನ್ನಮೆ ತೊಡಗಿ ಚಲಂ ನೆಗೞೆ (ಪಂಪಭಾ. ೦-೪೬) ; ಮಗನಂ ಕಿಱಿಯಂದಿಂ ತೊಡಗಿ ಶಿಕ್ಷಿಸದಿರ್ದುದಱಿ ನಿಂತಾಯ್ತು (ಧರ್ಮಾಮೃ. ೨-೮೩) ; ಹಲವು ಕಾಲಂ ತೊಡಗಿಯಾಲದ ನೆಲೆಯೊಳಿರ್ದ್ದೆನ್ನಿರವಳಿದು ನಿಃಫಲವೆನಿಸಿತಲ್ಲಾ (ಬಸಪು. ೫೭-೧೫) ;

ಹಿಮಗಿರಿ ತೊಡಗಿ ಸಾಗರ ವೇಲೆ ಪರಿಯಂತಖಿಳನಗರಗ್ರಾಮಪುರವರದ . . . ಸಮಸ್ತಭೂಜನಜಾಲ ಹಸ್ತಿನಪುರಿಗೆ ಬಂದುದು (ಶುವ್ಯಾಗ. ೧೩-೧) ; ಕೃತಿಯ ಪಲ್ಲವಿ ತೊಡಗಿ ಪೂರ್ಣಮಪ್ಪನ್ನವಿಹಾ ಕೃತಿಯೊಳುತ್ಪ್ರೇಕ್ಷೆಯಿಲ್ಲದುದೊಂದು ಪದವಿಲ್ಲ (ಭಾವಚಿಂ. ೧-೧೭).

[ ದೇ.॥ ತಮಿ. ತೊಟಙ್ಕು, ತುಟಙ್ಕು ; ಮಲ. ತುಡಣ್ಣು ; ತುಳು. ತೊಡಗು ; ತೆಲು. ತೊಡಂಗು ]

**ತೊಡಂಕು₃,** ತಡಂಕು₂, ತೊಡಕು₃, ತೊಡಗು₃, (ನಾ). ೧. ಸಿಕ್ಕು ; ಗೋಜಲು ; ಗೊಂದಲ : ಮದಿರಾಮದದೊಳಮಳವಿಗಳಿಯೆ ಸೊರ್ಕಿ . . . ಕೂಕಿಡುವ ಕುಕಿಲ್ವ ಬಿಕ್ಕುಳಿಪ ತೇಗುವ ತನ್ನ ತೊಡಂಕದೆಯ್ದೆ ನೂರ್ಮಡಿ ಮನದೊಳ್ ಪಳಂಚಲೆಯೆ ದಕ್ಕೆಯೊಳಟ್ಟಜವಾಗೆಯಾಡಿದಳ್ (ಪಂಪಭಾ. ೪-೯೦) ; ಕರುಳ ತೊಡಂಕಂ ಬಿಡಿಸಿ ನಡೆ ನೋಟಪ್ಪಿನೊಳಗೆಲುವಡಗಿರ್ಪುದು ಜೀವನಿರ್ಪೊಡೆಲ್ಲಿಗೆಪೋದಂ (ಯಶೋಚ. ೪-೧೯) ; ಜಡಿವ ಹಾರವಲಯಗಳ ತೊಡಂಕ ತಪ್ಪಿಸದೆ . . . ತಲ್ಲಣಿಸಿ ಸೊಪ್ಪಡಸಿ ಕೆಡೆಯಲು (ನವಮೋ. ೭-೭). ೨. ತೊಡಕಿಕೊಳ್ಳುವಿಕೆ ; ಸಿಕ್ಕಿಹಾಕಿಕೊಳ್ಳುವಿಕೆ; ಕೂಟ: ನಳಿತೋಳಿದಿರ್ಗೊಳ್ವ ತೊಡಂಕಿನಪ್ಪು ಬಾಯ್ದೆಱೆಯಿದಿರ್ಗೊಳ್ವ ಚುಂಬನಂ (ಅರ್ಧನೇ. ೨-೩೬) ; ಸೋಂಕು ಯುವತಿಗರೊಳಲ್ಲದೆ ಬಿಡದ ತೊಡಂಕುಂ ಬೇಟದ ತೋಟಿಯೊಳಲ್ಲದೆ ಕೋಟಲೆಗಳು [ತಾಂ] ಬೇಱಿಲ್ಲ (ಕುಮುದಾ. ಪೀಠಿಕಾಸಂಧಿ. ೫೯) ; ಸೋಂಕಿ ಚೆಂದುಟಿಗಚ್ಚಿದಿನಿಯಗೆ ಮುಗ್ಧೆ ತೊಡಂಕು ಸಾಕೆಂದು ಕೈದೊದರ್ವ ಕಂಕಣದುಲುಹೊಯೆಂಬಂತೆ (ಭರಚ. ೧೧-೧೭). ೩. ಅಡ್ಡಿ ; ಅಡಚಣೆ : ಉಡಿಗೆ ತೊಡಿಗೆಯ ತೊಡಂಕಿಲ್ಲ[ಪಾಠಾಂ. ತೊಡಕಿಲ್ಲ, ಹಂಗಿಲ್ಲ]ದೆ ರನ್ನಗನ್ನಡಿಯೆ ಜಿನೇಂದ್ರನಾದಂತೆ (ಭರಚ. ೭೭-೩೭) ; ಕಾರ್ಯಸಿದ್ಧಿಗೆ ತೊಡಂಕು ತೋರ್ಪುದೆ (ರಾಜಶೇ. ೧೪-೪೪). ೪. ಕಷ್ಟ ; ತೊಂದರೆ ; ಕ್ಲೇಶ : ಪಟು ನುಡಿಯ ತೊಡಂಕನಡಿಗಡಿಗೆಡವದಂತಿರೆಡೆವಿಡದೆ ಬಿಚ್ಚಟಿಸಿ ಶಿಷ್ಯರ್ಗೆ ನಿರವಿಪ ಕುಲಪತಿಯುಂ (ರಾಮಾಶ್ವ. ೧೩೭-೨೯). **ತುಡುಕು₂ :** ೫. ಬೇಗನೆ ಹಿಡಿಯುವುದಂ ; ಸತ್ವರಗ್ರಹಣ. 'ಕೈದುಡುಕು₂' ಪರಾ.

**ತೊಡಕು₃ :** ೧. ನಿನ್ನಂ ನುಡಿಯ ತೊಡಕಿನ ಬೆಡಂಗಿನಿಂ ಸೋಲಿಸಿ . . . ತಗುಳ್ದುದಿದು ದೈವಿಕಂ (ಹಚಕಾ. ೧೧-೧೩). ೩. ವಿಶ್ವಾಮಿತ್ರಮುನಿಯೆನಗೆ ಮತ್ತೆ ಮಾಡಿದ ತೊಡಕಿದಾಗದಿರದು (ಹಚಕಾ. ೦೨-೪೦); ನಿನ್ನವೃತ್ತಾಂತವಖಿಳರಾಯಗಱುಹಿ ಮುಂದಾವ ತೊಡಕಿಲ್ಲದಂತೆ ಮಾಡುವೆ (ಮೋಹತ. ೧೦-೩೨); ಬಾಳ್ಕೆಯಲಿ ನೂರೆಂಟು ತೊಡಕು ತಿಣುಕುಗಳುಂಟು (ಮಂಕುತ. ೭೪೩); ನಮ್ಮ ಹಾದಿಯಲ್ಲಿ ತೊಡಕುಗಳು ವಿಪರೀತ (ಮುರುಕು. ೧೮). ೪. ಬಿಡಿಸಿದಿರೆನ್ನಿಂ ರಾಜ್ಯದ ತೊಡಕಂ [ಪಾಠಾಂ. ರಂ] ಕೈಕೊಂಡು ನೀಮೆ (ವರ್ಧಪು. ೯-೧೧) ; ಕೌರವ ಜೀವಿಸಲಿ ಮೇಣಳಿಯಲಮಗಿನ್ನಾ ತೊಡಕಿಲ್ಲ (ಕುವ್ಯಾಕ. ೧-೦೨) ; ಕಕುಸ್ಥಜನೊಪ್ಪದಿರ್ದಡೆ ತೊಡಕು ನಿನಗಹುದು (ತೊರರಾ. ೪-೯-೩೪). ೧, ೪ : ನದಿಯೊಳ್ವಕ್ರಗತಿ ಕೇಶತತಿಯೊಳ್ ತೊಡಕಬ್ಬದೊಳಾಱಿಡಿ ವರಕುಚಯುಗ್ಮದೊಳಲ್ಲದೆ ಕಠಿಣವೃತ್ತಿಯಿಲ್ಲಾ ನಾಡೊಳ್ (ಧರ್ಮಾಪ. ೦-೩೮). ೬. ಸಂಬಂಧ ; ಸಹವಾಸ ; ಕಾಯದ ತೊಡಕನೊಲ್ಲದೆ ತೆಕ್ಕೆಗಟ್ಟಿತು ಭಟರು ನಾಕದಲಿ (ಕುವ್ಯಾಭೀ. ೯-೦೮) ; ಮೇಳದೊಳು ತೊಡಕ ಬಿಡದವನ ಜಪವದುವೆ ಹಾಳುಮನೆಯಂತೆ (ಸರ್ವಜ್ಞ. ೦೭೩) ; ಕೋಪಭಾವದಿಂ ತೊಡವುಗಳ ತೊಡಕುಗಳನುಳಿದು ರಾಜೀವಾಕ್ಷಿ ತಿರೆಯೊಳೊರಗಿರ್ಪಳು (ವೆಂಕಾರಾ. ೨-೬-೫) ; ತನುಕಾಂತಿ ಮೋಹವಿಕೃತಿಗಳುಮಾ ತೊಡಕಿನವು ಕೊನೆಯಿರದ ಬಲೆಯೊ ಅದು (ಮಂಕುತ. ೧೭೮) ; ಒಲವು ಹಾಕಿದ ತೊಡಕನೆಂತು ಬಿಡಿಸಲು ಬಹುದು (ಸ್ವದರ್ಶಿ. ೭). ೭. ಗೊಡವೆ ; ಉಸಾಬರಿ : ತರಣಿಯೋಲಗಕೆ ಸೊಡರಂ ಪಿಡಿವ ತೊಡಕೇಕೆ (ಸಿದ್ಧರಾ. ೦-೪) ; ಒಡೆಯ ಚಿತ್ತೈಸಭಿಮತಂಗಳತೊಡಕವೇತಕೆ ನಿಧಿಯಿದಿರೊಳಿರೆ ಕಡೆಗೆ ಜಲಗಂ ತೊಳೆಯ ಹೋದಹೆವೆಂಬ ಮರುಳುಂಟೆ (ಬಸವು. ೫೭-೬೨) ; ನಮಗಿದೇಕರವಿಂದವದನೆಯ ತೊಡಕು (ಕುವ್ಯಾಅ. ೧೫-೩) ; ಗೊಡವೆ ತಪ್ಪಿತು ಹೋಗಲಿನ್ನೆನಗದಱ ತೊಡಕೇಕೆ (ಕಾಶಿರಾ. ೧೯-೬). ೮. ಜಟಿಲವಾದಂದು ; ಇಕ್ಕಟ್ಟು : ಸಾಂಖ್ಯದರ್ಶನದಲ್ಲಿರುವ ಬಹುದೊಡ್ಡ ತೊಡಕೆಂದರೆ : ಪ್ರಕೃತಿ ಪುರುಷರ ಸಂಬಂಧದ ಸಾಧ್ಯತೆ (ತತ್ವಪ್ರಾ. ೨೬೬). ೯. ಸಂಶಯ ; ಅನುಮಾನ : ಎಂತುಟು ಮೇಘನಾದ ತೊಡಕಿಲ್ಲದೆ ಪೇೞ್ ಮಗನಿರ್ದದೊಂದು ವೃತ್ತಾಂತಮಂ (ಕಾದಂಸಾ. ೬೬೮). ೧೦. ಸಂದಿಗ್ಧಪ್ರಶ್ನೆ ; ಸಮಸ್ಯೆ ; ಒಗಟು : ರಾಯರಾಜಗುರು ಜಗದ ಬಿನ್ನಾಣಿಯ ತೊಡಕ ಬಿಡಿಸಬಾರದು (ಬಸವ. ೭೨೪) ; ಕೊಡುವಡಿದು ವರವಲ್ಲದಿದ್ದರೆ ನುಡಿಗೆ ಮೊಳೆ ಹೊಮ್ಮುವರೆ ನಿಮ್ಮಯ ತೊಡಕನೊಲ್ಲುವವನಲ್ಲ (ಕುವ್ಯಾದ್ರೋ. ೧-೪೧) ; ಅಜಗಣ್ಣನು . . . ಕಡೆಯಲೀ ಪರಿ ಕಾಣಬಾರದ ತೊಡಕನೊಡ್ಡಿದನು (ಪ್ರಭುಲೀ. ೦೨-೮). ೧೧. ಜಗಳ ; ಕದನ : ಎನ್ನ ನೀ ಮೊದಲು ನೂಂಕಿದ ಕಾರಣದಿಂದೆ ನಿನ್ನ ನಾ ನೂಂಕಿದೆನ್ನೆಸೆ ಇನ್ನಾವ ತೊಡಕು ಬೇಡ (ಮೋಹತ. ೧೪-೮೦) ; ಅವನೊಳು ತೊಡಕು ಸಲ್ಲದು ನಿಮಗೆಂದ (ಕಂನವಿ. ೧೩-೭). **ತೊಡಗು₃ :** ೩. 'ಇಡುಗುತೊಡಗು' ಪರಾ.

**ತೊಡಕುಬೀಳು** = ಗೋಜಾಗು ; ಸಿಕ್ಕಾಗು : ಭೂಮಿಯನ್ನು ಅಳೆಯುವುದಕ್ಕೆ ಮೊದಲಿಟ್ಟ ಮೇಲೆ ಸರಪಣಿಯು ತೊಡಕುಬಿದ್ದಿರುವುದನ್ನು ನೋಡಬೇಕು (ಭೂಮಿಅ. ೪). [ < ತೊಡಂಕು₁ ]

**ತೊಡಂಕುವಲೆ, ತೊಡಕುವಲೆ** (ನಾ). (ಕಾಲಿಗೆ) ತೊಡರುವ ಒಂದು ಬಗೆಯ ಬಲೆ : ಮಿಳಿರ್ವ ಬಂಬಲ್ಗುರುಳ್ಗಳೆಂಬ ತೊಡಂಕುವಲೆ ಬಸಂತನ ಕೆಳೆಯನೆಂಬೆರಲೆಯುಂ ಸಿಲ್ಕಿಸೆಯುಂ (ಕಬ್ಬಿಕಾ. ೦೨೩) ; ಪೆರ್ವಲೆ ತೊಡಂಕುವಲೆ ಕೊಲ್ವಲೆ... ಬಿಡುವಲೆಗಳೆನಿಪ್ಪುವೆಸೆದಾವಾ ಬೇಂಟೆಗರೊಳ್ (ಶಬಶಂ. ೩-೨೪). **ತೊಡಕುವಲೆ :** ಬಳ್ಳಿವಲೆ ತೊಡಕುವಲೆ ... ಮಡಿಕೆವಲೆ ಮಂದಸಿನವಲೆಯು ಹೊಱಿಗಳ ಬೇಡವಡೆ ನೆರೆದುದು (ಹಚಕಾ. ೫-೮) ; ದಂಡಿವಲೆಗಳ ತೊಡಕುವಲೆಗಳ . . . ಕಿರಾತರು ಕೆದಱಿತಗಲದಲಿ (ಕುವ್ಯಾಅ. ೦೩-೨೩) ; ಪುತ್ರಮೋಹದ ತೊಡಕುವಲೆಯಲಿ ತಂದೆ ನೀ ಕಾಲಿಡದಿರು (ನಿಭಾಗ. ೩-೧-೭) ; ತಡಿಕೆವಲೆ ತಟ್ಟಿವಲೆ ಸಾಲುವಲೆ ಕೋಲುವಲೆ ತೊಡಕುವಲೆ . . . ಮರವಲೆಗಳಿರ್ದುವಾ ಶಬರರಲ್ಲಿ (ಸಿದ್ಧೇಪು. ೮-೬) ; ಉರುಲುವಲೆ ತೊಡಕುವಲೆ ಸಿಕ್ಕುವಲೆ ಸಿಡಿಲುವಲೆ . . . ಮೊದಲಾದ ಪರಿಪರಿಯ ವಲೆ ಸಮೂಹವ ನೋಡುತೆ (ನವಮೋ. ೦೭-೨೦). [ ತೊಡಂಕು₃ + ಬಲೆ₁ ]

**ತೊಡಂಗ** (ನಾ). ಒಂದು ಬಗೆಯ ಆಯುಧ : ಆ ಬೀರೆಗೌಡನ ಕೈಲಿದ್ದ ಚಿನ್ನದ ಬಳೆ ಎರಡು, ತೊಡಂಗದ ಸರಪಣಿ, ಬೆಳ್ಳಿಕಟ್ಟಿದ ಚೂರಿ, ವರೆಚೂರಿ, ಇದನ್ನು ಅವನ ಮೈಯಿಂದಾ ತೆಗೆದು . . . ಮುಚ್ಚಿ ಮಡಗಿ ಬಂದರು (ರಾಜೇಂದ್ರ. ೨೭೬). [ ? ]

**ತೊಡಂಗಟ್ಟು** (ಕ್ರಿ). ಅಲಂಕಾರಮಾಡು: ಅಬ್ಬಮುಂ ಮಾಣ್ದು ದುತ್ತುರದ ಕುಸುಮದ ತೊಡಂ[ಪಾಠಾಂ. ತೊಡವು]ಗಟ್ಟುವಂತೆ ಉತ್ತಮವಿದೆಂದು ಕೃಷ್ಣಾರ್ಜುನರ ಬಿಟ್ಟು ತಂದಿತ್ತ ತುರಂಗಂಗಳಂ (ಜೈಮಿಭಾ. ೨೫-೬೦). [ ತೊಡ + ಕಟ್ಟು₁ ]

**ತೊಡಂಗು** 'ತೊಡಂಕು₂' ನೋ.

**ತೊಡಂದುಡಿಸು** (ಕ್ರಿ). ಒಡವೆಯನ್ನು ಹಾಕು ; ಆಭರಣವನ್ನು ತೊಡಿಸು : ಅಡಿಯಾಡುವ ಮುಡಿಯಿಕ್ಕುವ ತಿಲಕವಿಡುವ ತೊಡಂದುಡಿಸುವ ನಿಱಿವಿಡಿದು ನೀಡುವ ನೆಲನನಗ್ಗಡಿಸುವ ಮುಕುರಮಂ ತೋಱುವ ಮಕರಿಕಾಪತ್ರಮಂ ಚಿತ್ರಿಸುವ . . . ನಿಖಿಳಪರಿಚಾರಿಣೀಜನಂ (ಕುಸುಮಾ. ೬-೬ ವ). [ ತೊಡ + ತುಡಿಸು (<ತೊಡಿಸು) ]

**ತೊಡಂದೊಡು** (ಕ್ರಿ). ಆಭರಣವನ್ನು ತೊಡು,-ಧರಿಸು: ಒಡನಂಟೊಡನೆ ತೊಡಂದೊಟ್ಟೊಡನಿರದಾಡಿಯೊಡನೆ ಹೊಸ ಹರೆಯುಂಬಡೆದ ಕೆಳೆಯರಿಂ . . . ಸುಕುಮಾರಂ ಸಡಗರದಿಂ ಸಲೆ ಸಂಪದದೊಳ್ ದಿನಮಂ ನೂಂಕುತ್ತಿಹನು (ಜಯುಕಾ. ೨-೬೬). [ ತೊಡ + ತೊಡು$_1$ ]

**ತೊಡಂಬೆ$_1$, ತೊಡಬೆ$_1$** (ನಾ). ೧. (ಹಣ್ಣು, ಹೂವು, ಕಾಯಿ ಮೊದಲಾದುವುಗಳ) ತೊಟ್ಟು; ತುಂಬು: "ಪ್ರತಾನಮುಳಪಂ ತೊಡಂಬೆಯುಂತದು ವೃಂತಂ" (ವಸ್ತುಕೋ. ೩೧-೮); "ವೃಂತಂ ಪ್ರಸವಬಂಧನಂ ಈ ೨ ಹೂವಿನ ತೊಡಂಬೆ" (ಹಲಾಯು. ೩೧-೩೦); ಲತಾಳಿಯ ತಳ್ಪ ಬಿರ್ಚದಂತೆಲೆಯ ತೊಡಂಬೆಗಳ್ ಪಱಿಯುದಂತು . . . ಎಲರೊಲವುಣ್ಮೆ ತೀಡಿದುದು (ಚಂದ್ರಪು. ೨-೧೦೦); ಅಗ್ಗದ ಗಾಳಿಯಿಂದೊಡನೊಡನೆ ಬೀತು ತೊಡಂಬೆಗಳು ಕಡು ಸಡಲಿ ತಮತಮಗವನಿಯಲಿ ಬಿದ್ದರಳುಗಳನುಳಿದು (ಬಸಪು. ೨೨-೮); ಬಿಟ್ಟ ತೊಡಂಬೆಯುನೆಂದು ಮುಟ್ಟವು ಪಣ್ (ಪರಮಾ. ೨೮-೮೩). ೨. ಮೂಲ; ಬುಡ: ನೋಟದ ಸೋಲಂ . . . ಸುಯ್ಯ ಕಂಪಾಟಿಸಲಲ್ಲೆ ಮೆಯ್ಬಟಲೆ ಸಂದಪುವೆ ಮಲರ್ದಯ್ದು ಮಿಂದ್ರಿಯುಂ ಬೇಟದ ಗೊಂಚಲಂತೆ ಮನಮೆಂಬ ತೊಡಂಬೆಯೊಳೊಮ್ಮೊದಲ್ ಸುಖಾಸ್ಫೋಟಮನೀಯುವೆನ್ನವು ಮನಃಪ್ರವಿಚಾರದ ಕಾಮಕೇಳಿಗಳ್ (ಅನಂಪು. ೪-೪೬). **ತೊಡಬೆ$_1$** : ೨. ಉಲುಕಿದರೆ ನಾಲಗೆಯ ತೊಡಬೆಯು ಕಳಚುವೆನು (ಕುಮಾ.ಶ. ೧೧-೨೫).

[ ದೇ.॥ ತೆಲು. ತೊಡಿಮೆ, ತೊಡಿಮ ]

**ತೊಡಂಬೆ$_2$, ತೊಡಬೆ$_2$** (ನಾ). ೧. ಗೊಂಚಲು; ಗಂಚ್ಚ: "ತೊಡೆಂಬೆ ನುಣ್ಪೊದೆದ ಜೊಂಪಂ ತೊಂಗೆ ಗುಚ್ಛಮೆಂದಿರದೊಪ್ಪಿ ಪದೆದ ನಾಮಂ" (ಕಬ್ಬಿಕೈ. ೧೯); ಮುಗುಳ ತೊಡಂಬೆ ಗಂಟೊಡೆಯೆ ಮೊಲ್ಲೆಗೆ ಬೆಳ್ಸುಱಿ ಪುಟ್ಟೆ . . . ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ (ಪಂರಾಮಾ. ೭-೧೩೯); ತಳಿರ ತೊಡಂಬೆಯುಂ ತಳೆದ ಮಾಮರಂ (ದಶಕು. ೧-೨೬); ಮಲ್ಲಿಗೆಯುಲರ ತೊಡಂಬೆಯು ಮಧ್ಯದೊಳುಲ್ಲಸದಿಂದೆ ಕುಳಿತ ಮಧುಕರನಂ . . . ಗೆಲ್ಲಂಗೊಂಡೆಸೆದುದು ಚಿಹ್ನಂ ಸಂಪೂರ್ಣ ಸುಧಾಕರನ (ಜಯುಕಾ. ೧೪-೧೩); ಒಳಪೊಱಗಾಗಿರ್ದ ಗದುಗಿನ ಕಾಯಂತೆ ಕೆಳಮೊಗವಾದ ಯೋನಿಗಳು ಬಿಲದಗ್ರದ ಕಟು ಗಳೊಳಗಿರ್ಪವವು ಪಾಪಫಲದ ತೊಡಂಬೆಗಳಂತೆ (ವರ್ಧಚ. ೮-೭೬). ೨. ಹೂವಿನ ಗೊಂಚಲು: "ತೊಡಂಬೆ, ತೊಡಬೆ . . . ಗುಚ್ಚ — ಈ ೭ ಪುಷ್ಪಮಂಜರಿ" (ಕಶಸಾ. ೫೫-೧೯೬); ಬಿಟ್ಟುಳಿಯ ಕಕ್ಕುಂಬ ತೊಡಂಬೆಯು ಮೂಡಿಗೆಯ ಕದಳಿಕೆಯ ಕಂಡಪಟಂಗಳುಮಂ (ಪಂಪಭಾ. ೫-೪೭ ವ); ತೊ[ಡಂಬೆ]ಯುಂತಪ್ಪಳಿಸುವ ಪೆಣ್ದುಂಬಿಗಳಂತೆ ಲಲಾಟರಂಗದೊಳುಂಗುರಿಸಿ ಕುಣಿವ ನೀಳಾಳಕಂಗಳ . . . ಸೌಂದರಿಯುದಿಂ ದೇಸೆವಡೆದ ಹದಿನಾಱಱ ಹರೆಯದ ಹರಂ (ಬಸರ. ೧೨-೮೦); ಬಂಡುಣಿವಿಂಡುಗಳುಂಡಾಡಲೇಗಳು ಮೊಡೆದ ತೊಡಂಬೆಗಳಿಂದೆ ನದಿಯ ದಡಂಗಳಲಸುಗೆಯ ಮರಗಳು ಬೋಳಾದುವಹ ಕಾಲವಶದೆ (ಗಾಥಾಸ. ೦೦೬-೨೨). ೩. ಗುಂಪು; ರಾಶಿ; ಸಮೂಹ: ಅಂಬರದೊಳು ಬಹುವರ್ಣದ ಮುಗಿಲ ತೊಡಂಬೆಗಳೆಡೆಯಾಡುವಂತೆ (ಭರಚ. ೧೮-೩೯). **ತೊಡಬೆ$_2$**: ೧."ತೊಡಬೆ, ತೊಡಂಬೆ . . . ಗುಚ್ಛಕಕ್ಕುಂ ನಾಮಂ" (ಕವಿಕಂ. ೭೮); ಕಳಿತ ಹೂವಿನ ತೊಡಬೆಗಳೊ ರಿಪುಬಲವೊ ಬಿಱುಗಾಳಿಯೊ ವೃಕೋದರನಳವ ಬಲ್ಲವನಾವನೈ (ಕುಮಾದ್ರೋ. ೨-೮೧). ೨. "ತೊಡಂಬೆ, ತೊಡಬೆ, ತೊಂಗೆ, ತೊಂಗಲ್, ಜೊಂಪಂ, ಗೊಂಚಲ್ ಗುಚ್ಚಂ—ಈ ೭ ಪುಷ್ಪಮಂಜರಿ" (ಕಶಸಾ. ೫೫-೧೯೬). ೩. ಸೀಗುರಿಸುವುರಿ ವಿಷದ ಲೋಳೆಯ ಲಾಗಿಸುವ ನಾಲಗೆಯ ಸುಯ್ಲಿನ ಬೇಗುದಿಯ ತೊಡಬೆಗಳ ಹಾವ್ ತುಡುಕಿದವು ಘಟ್ಟನಲಿ (ಕುಮಾ.ಕ. ೨೩-೩೯).

[ ದೇ.॥ ತುಳು. ತೊಡುಂಬೆ, ತೊಲುಂಬೆ ]

**ತೊಡಂಬೆಪಱ** (ಕ್ರಿ). ತೊಟ್ಟು ಕತ್ತರಿಸಿಹೋಗು: ಬಡಿ ಕೊಳೆ ಕಾಯುಂ ಪಣ್ಣುಂ ತೊಡಂಬೆಪಱಿದುದಿರ್ವ ಮಾಟ್ಕೆಯಿಂ ಕಿಱಿವಿರಿಯರ್ ಮಡಿವರ್ (ಪಂರಾಮಾ. ೧-೮೩). [ ತೊಡಂಬೆ$_1$ + ಪಱ$_1$ ]

**ತೊಡಂಬೆವಿಡು** (ಕ್ರಿ). ತೊಟ್ಟನ್ನು ಕಳಚಿಕೊಳ್ಳು,-ಬಿಡು: ತನಿತು ತೊಡಂಬೆವಿಟ್ಟುದಿರ್ದ ಪಣ್ಗಳನಟ್ಟಿಯೆ ಮೆಲ್ದು ಸೋರ್ವ ತೆಂಗಿನ ತಿಳಿನೀರನೀಂಟಿ . . . ಪೌರನಂದನದೊಳಗಿಂತಯುತ್ಸುಖಮಂ ಪಥಿಕರ್ ಪಡೆವರ್ (ಚಂದ್ರಪು. ೩-೧೫). [ ತೊಡಂಬೆ$_1$ + ಬಿಡು$_1$ ]

**ತೊಡಕಂಬು** (ನಾ). ಒಂದು ಬಗೆಯ ಬಾಣ,-ಸರಳು: ಸಿಲುಕಂಬು ತುದಿಮೊನೆಯ ಬೋಳೆ ತೊಡಕಂಬು . . . ದಡಿಮುಖ್ಯವಾದ ಕೈದುಗಳ ಪಿಡಿದು (ಸೌಂದಪು. ೧೮-೩೭). [ತೊಡಕು$_3$ (<ತೊಡಂಕು$_3$)+ಅಂಬು$_2$]

**ತೊಡಕಾಲು** 'ತೊಡಕುಗಾಲು' ನೋ.

**ತೊಡಕಿಸು** 'ತೊಡಗಿಸು$_1$' ನೋ.

**ತೊಡಕು$_1$** 'ತೊಡಂಕು$_1$' ನೋ.

**ತೊಡಕು$_2$** 'ತೊಡಂಕು$_2$' ನೋ.

**ತೊಡಕು$_3$** 'ತೊಡಂಕು$_3$' ನೋ.

**ತೊಡಕುಗಾಲು, ತೊಡಕಾಲು** (ನಾ). ೧.=ತೊಡರುಗಾಲು. ೨. (ಆಲಂ) ಅಡಚಣೆ; ಅಡ್ಡಿ: ಪೂಜ್ಯ ಪೂಜಕ ಸಂಬಂಧದಲ್ಲಿ ವ್ಯತ್ಯಾಸವಾಗಿ . . . ಈ ಅಹಿಂಸಾಮತಗಳು ವೈದಿಕಪದ್ಧತಿಗೆ ತೊಡಕುಗಾಲಾಗಿ ನಿಂತಿತು (ಭಾರದ. ೨೮೪). **ತೊಡಕಾಲು** : ೨. ಆ ವೇದವ್ಯಾಸಾಚಾರಿ ಹಾಕಿದ್ದ ತೊಡಕಾಲು (ಹರಿಜ. ೨೬).

[ ತೊಡಕು$_3$ (<ತೊಡಂಕು$_3$) + ಕಾಲು$_1$ (<ಕಾಲ್$_1$) ]

**ತೊಡಕುನೇಣು** (ನಾ). (ಕಡೆಗೋಲಿಗೆ) ಸುತ್ತುವ ಹಗ್ಗ; ಕಡೆಯುವ ಹಗ್ಗ: ಕಡಲನು ಕಡೆವುದಾ ಮಂದರಮಹಾದ್ರಿಯುನಿಟ್ಟು ವಾಸುಗಿಯು ತೊಡಕುನೇಣಲಿ ಕಡದೊಡಮೃತವ ಪಡೆವಿರಹಿತರು ಬಱಿದೆ ದುಃಖಂಬಡುವರು (ನಿಭಾಗ. ೮-೬-೧೫).

[ ತೊಡಕು$_3$ (<ತೊಡಂಕು$_3$) + ನೇಣು (<ನೇಣ್$_1$) ]

**ತೊಡಕುಬೇರು** (ನಾ). ಹೆಣೆದುಕೊಂಡ ಬೇರು; ಜಡೆಗಟ್ಟಿದ ಬೇರು: ಕಾಂಡದ ಕೆಳಭಾಗದಿಂದ ಹೊಸಹೊಸ ಬೇರುಗಳು ಬೆಳೆಯುತ್ತವೆ. ಈ ಬೇರುಗಳು ಭೂಮಿಯ ಮೇಲ್ಪದರುಗಳಲ್ಲಿಯೇ ಪಸರಿಸುತ್ತವೆ. ಇವುಗಳ ಗಾತ್ರ ಒಂದೇ. ಇಂತಹ ಬೇರುಗಳಿಗೆ ತೊಡಕುಬೇರಿನ ಸಮೂಹವೆಂದು ಹೆಸರು (ಸಸ್ಯಶಾ. ೧೩).

[ ತೊಡಕು$_3$ (<ತೊಡಂಕು$_3$) + ಬೇರು (<ಬೇರ್) ]

**ತೊಡಕುಮೆಳೆ** (ನಾ). ದಟ್ಟವಾಗಿ ಹೆಣೆದುಕೊಂಡಿರುವ ಪೊದೆ,-ಪೊದರು: ಕುಹರದ ತೊಡಕುಮೆಳೆಗಳಲದ್ರಿಕೂಟದಲೆಡಬಲದ ತಪ್ಪಲಲಿ . . . ಅಡಗಿ ತೋಱುತ (ತೊರರಾ. ೩-೮-೪೭).

[ ತೊಡಕು$_3$ (<ತೊಡಂಕು$_3$) + ಮೆಳೆ ]

**ತೊಡಕುವಲೆ** 'ತೊಡಂಕುವಲೆ' ನೋ.

**ತೊಡಕುವಳೆ** (ನಾ). ಸರಪಳಿಯ ಆಕಾರದ ಬಳೆ: ಕೊಡಲಿ ಮಾರಗತ್ತಿ ಬಲ್ಲೆಯುಂ ಚಕ್ರ ಗಿರುಗಟೆ ತೊಡಕುವಳೆ ವಂಕಿ ಕಲ್ಲಮಣಿ ಪದ್ಮಮಣಿ ಪುತ್ರಜೀವಿಯು ಹುಲ್ಲುಮಣಿ ಪಟಿಕಮಣಿಭೂಷಣಂ (ಗುರುಜಾ. ೩-೫೦).

[ ತೊಡಕು$_3$ (<ತೊಡಂಕು$_3$) + ಬಳೆ$_3$ ]

**ತೊಡಕುವೀಥಿ** (ನಾ). ಅಡ್ಡಲಾಗಿ ಹಾಯುವ ಬೀದಿ; ಅಡ್ಡಬೀದಿ: ಸಿಡಿದು ನೋಡಿದ ನಿಳಯನಿಳಯುಂಗಳಲಿ ನಿಮಿಷದಲಿ ತೊಡಕುವೀಥಿಯ ಕೇರಿಕೇರಿಗಳೆಡೆಯೆಡೆಯ ಮನೆಮನೆಯ . . . ಕೋಟೆಯ ಸುತ್ತುವಳಯದಲಿ (ತೊರರಾ. ೫-೨-೧೫).

[ ತೊಡಕು$_3$ (<ತೊಡಂಕು$_3$) + ವೀಥಿ ]

**ತೊಡಕೆ** (ನಾ). ಗಾಡಿಯಂ ತೊಟ್ಟಿಲಂ; ಬಂಡಿಯ ಒಳಗಿನ ಖಾಲಿಜಾಗ: ಎಲವೋ ಕುನ್ನಿ ಕೂಳಿದೆ ತಿನ್ನು ಬಾಯೆನುತ ತೊಡಕೆಯಲಿ ಕಲು ಮುಳ್ಳು ತುಂಬಿಯೆ ಬಿಡದೆ ಬುತ್ತಿಯನೊಂದು ಕೈಯಲಿ ಹಿಡಿದು ಬಂದನು ದೈತ್ಯನಲ್ಲಿಗೆ ಭೀಮ ಬೇಗದಲಿ (ಕುವ್ಯಾಅ. ೦೨೪. ೩೩-೬೬). [ ? ]

**ತೊಡಗಿಸು$_1$**, ತೊಡಕಿಸಂ (ಕ್ರಿ). ೧. ತಗಲಿಸಂ; ಸಿಕ್ಕಿಸಂ: ತಮ್ಮ ಜೀರ್ಣ ವಿಚಾರದ ಶೃಂಖಲೆಯನ್ನು ಅವರ ಕಾಲುಗಳಲ್ಲಿ ತೊಡಗಿಸುವ ಪಾಪವನ್ನು ಮಾಡಕೂಡದು (ಪ್ರಬಂಧ. ೧೧೬). ೨. ಹೂಡಂ; ಬಳಸಂ; ವಿನಿಯೋಗಿಸಂ: ನನ್ನ ಹತ್ತಿರ ಹೇರಳವಾಗಿ ಹಣವಿದೆ. ಅದನ್ನು ಯಾವ ಕಾರ್ಯದಲ್ಲಿಯೂ ತೊಡಗಿಸಿಲ್ಲ (ಪರಿಚೇ. ೩೦); ಒಮ್ಮೆ ಕರಗತವಾದ ಧನವನ್ನು ಸಂರಕ್ಷಿಸಿ, ವೃದ್ಧಿಗೊಳಿಸಿ, ಉದ್ದಿಮೆಯಲ್ಲಿ ತೊಡಗಿಸತಕ್ಕದ್ದು (ಮಿತವ್ಯ. ೧೧): ಇಷ್ಟೊಂದು ಹಣವನ್ನು ಇಂಥ ರತ್ನದಲ್ಲಿ ತೊಡಗಿಸುವುದು ರಾಯರಿಗೇನೂ ಕಷ್ಟದ ಕೆಲಸವಲ್ಲ (ರತ್ನಗೋ. ೨೮). **ತೊಡಕಿಸು**: ೧. ಆ ಕಂಬಗಳಿಗೆ ನಾಲ್ಕು ಬಂಗಾರದ ಸರ್ಪಳಿಗಳನ್ನು ತೊಡಕಿಸಿ ... ಜೋಲೆ ಬಿಟ್ಟಿದ್ದರು (ಮುಂಬಯಿ. ೫-೨೯೯); ರೈತನು ಆ ಹಲಿಗೆಯನ್ನು ಆ ದನದ ಕಣ್ಣಿಯಲ್ಲಿ ತೊಡಕಿಸದರಾಯಿತು, ಆ ದನ ಇದ್ದಲ್ಲಿಂದ ಓಡಿ ಬರುತ್ತಿತ್ತು (ಹಳ್ಳಿಬ. ೨೪). ೩. ಪ್ರತಿಭಟಿಸುವಂತೆ ಮಾಡಂ: ಮುಟಿವೇನೇ ಮುನಿದಿವರು ನೂರ್ವರು ತೊಟಿವರೆನ್ನನು ತೊಡಕಿಸುವೆನೇ ತಟಿದು ಬಿಸುಡುವರವರು ಕೌರವಶತಕವನು (ಕುವ್ಯಾಸ. ೦೩-೬೪).

[ ತೊಡಗು$_1$ (< ತೊಡಂಕು$_1$) + – ಇಸು$_3$ ]

**ತೊಡಗಿಸು$_2$** (ಕ್ರಿ). ೧. ಆರಂಭಿಸಂ; ಮೊದಲುಮಾಡಂ: ಒಳ್ಳಿತಪ್ಪ ದಿವಸವಾರನಕ್ಷತ್ರಮುಹೂರ್ತದೊಳ್ ಸಿದ್ಧಾಂತಮಂ ತೊಡಗಿಸೆ (ವರ್ಧ್ಮಾರಾ. ೬-೧೫); ಸಕಲವಿದ್ಯಾಬೀಜಪುಂಜಂಗಳಂ ಮೊದಲ್ ತೊಡಗಿಸಿ ನಿರ್ಬಂಧದಿಂದಮೋದಿಸುತ್ತುಂ (ಸುಕುಮಾ. ೨-೫೭ ವ); ಕುಮಾರರ್ಗೆ ಮುನಿಪತಿ ಚೌಲಕರ್ಮಂಗಳಂ ಮಾಡಿಸಿ ತೊಡಗಿಸಿದನಕ್ಷರಾಭ್ಯಾಸಮಂ (ಜೈಮಿಭಾ. ೦೯-೫೦). ೨. ಉಂಟುಮಾಡಂ; ಆಗಿಸಂ: ಕೆಡುಕು ತೊಡಗಿಸಲಿಳೆಯನುಡುಗಿಸಲಡಗಿ ನಡುಗಿಸಿ ನಗುವೆನು (ಕಏಪು. ೨೯-೮).

[ ತೊಡಗು$_2$ (< ತೊಡಂಕು$_2$) + – ಇಸು$_3$ ]

**ತೊಡಗು$_1$** 'ತೊಡಂಕು$_1$' ನೋ.

**ತೊಡಗು$_2$** 'ತೊಡಂಕು$_2$' ನೋ.

**ತೊಡಗು$_3$** 'ತೊಡಂಕು$_3$' ನೋ.

**ತೊಡಗುಹ** (ನಾ). ಆರಂಭ; ಕೈಕೊಳ್ಳುವಿಕೆ; "ಪ್ರಕ್ರಮಂ, ಆರಂಭ" (ನಾಚಿರಾ. ೩). [ ತೊಡಗು$_2$ (<ತೊಡಂಕು$_2$) + – ಹ$_2$ ]

**ತೊಡಚು** 'ತೊಡಚ್ರು' ನೋ.

**ತೊಡಪ** (ನಾ). ಪೊರಕೆ; ಕಸಬರಿಗೆ: "ತೇವವಾದ ಹಡಗಿನ ಅಟ್ಟವನ್ನು ಅಥವಾ ಬೀದಿಯನ್ನು ಗುಡಿಸಲು ಉಪಯೋಗಿಸುವ, ರಬ್ಬರಿನ ಅಲಗನ್ನು ಉದ್ದವಾದ ಹಿಡಿಗೆ ಅಳವಡಿಸಿ ಮಾಡಿದ ಸಲಕರಣೆ: ರಬ್ಬರು-ಪೊರಕೆ, ತೊಡಪ" (Squeegee. ಇಂಕನಿ). 'ತೊಡೆಪ' ಪರಾ.

[ ದೇ.೫ ತಮಿ. ತುಟಪ್ಪ, ತುಟೈಪ್ಪ; ಮಲ. ತುಡೆಪ್ಪ ]

**ತೊಡಪು$_1$**, ತೊಡಹಂ$_1$ (ಕ್ರಿ). ೧. ನಿವಾರಿಸಂ; ಕಳೆ: ಮೊಗದೊಳ್ ಮೊಗವಿಟ್ಟೊಡನೌಂಕಿ ಶಂಕೆಯಂ ತೊಡಪಿ (ಚಳವಿ. ೬-೨೦೨). **ತೊಡಹು$_1$**: ೨. ಹಚ್ಚಿಕೊಳ್ಳು; ಅಂಟಿಕೊಳ್ಳು: ಇವ ಸಂಸಾರಧರ್ಮವ ತೊಡಹಿದವನಲ್ಲ (ಮೋಳಿಮಾ. ೧೮೮-೭೦೮). [ ತೊಡೆ$_1$ + – ಪು$_1$ ]

**ತೊಡಪು$_2$**, ತಡಪು$_3$, ತಡುಪು, ತೊಡಹು$_2$, ತೊಡುಪು (ನಾ). ೧. ಆಭರಣ; ತೊಡಿಗೆ: ತೊಡಪಿನ ಸವಗ ಬಟ್ಟಲ ಠೌಳಿ ಮೈಜೋಡು ಹಿಡಿದ ಖಂಡೆಯ ... ರಂಜಿಸೆ ಬಂದರೊಡನೊಡ್ಡಿಯ ರಾವುತರು (ಕುರಾಸಾಂ. ೧೧-೨೩); ಭರದಾ ಉಡಿಗೆ ತೊಡಪುವುಲಿವಾ ಬಾವಲಿ ಧೀರಾ ಪುರುಷಹರಾಕ್ರಮನ ಕಂಡೆ (ತೀರ್ಥಮ. ೨೨೦-೩): ಯುಧಿಷ್ಠಿರನು ಮೊದಲಾದ ಕೌರವಕುಮಾರಕರು ... ಕೈಗಳಿಗೆ ತೊಡಪುಗಳನ್ನು ತೊಟ್ಟು (ಕೃಪಾಅ. ೨೫೦). ೨. ಒಂದು ಬಗೆಯ ಆಯುಧ: ದುಷ್ಟವಾದ ಮೃಗಗಳನ್ನು ಕೆಣಕಿ ಬೇಟೆಯಾಡುತ ... ತೊಡಪು, ಕಬ್ಬಿಣದೊಣ್ಣೆ, ಪಟ್ಟಾಕತ್ತಿ, ಒನಿಕೆ, ಭರಜಿ ಮೊದಲಾದ ನಾನಾವಿಧ ಆಯುಧಗಳಿಂದ ... ಕೊಲ್ಲುತ (ಕೃಪಾಅ. ೦೫೦). **ತಡಪು$_3$**: ೩. ದಟ್ಟಿ; ಲುಂಗಿ: ತ[ಪಾಠಾಂ. ಉ] ಡ [ಪಾಠಾಂ. ಡು]ಪನೊಂದಂ ನೆಯಿದುಕೊಟ್ಟಾಪಡೆ ಮೃಡನ ಕೈಯಿಂದಲಿನ್ನುಂ ಪಡೆಯದೇಂ ದವಸವನು (ಬಸಪು. ೩೩-೬೭): ನಡೆದನಲ್ಲಿಂ ವಿಪ್ರ ಹೆಗಲಿನ ಹಡಪ ಸುತ್ತಿದ ತಡಪು ನೊಸಲಲಿ ಬಡಿದ ಮಟ್ಟಿಯ (ಯಾದವ. ೧೦-೨೦). **ತಡುಪು**: ೨. ತಡುಪು ದೊಂಕಣಿ ಭಂಡಿವಾಳುಗ್ಗಡದ ಭೋಜವು ಚಕ್ರ ನಾನಾಘಡಬಡೆಯ ಕೈದುಗಳ ತಳಪಳವೆಸದುದಗಲದಲಿ (ಅಂಬಿಕಾ. ೦೯-೪೮). ೩. ತಲೆಗೆ ಬಟ್ಟೆ ಕಟ್ಟಿಕೊಂಡಿದ್ದ ಬಟ್ಟೆಯು ತರಹದ್ದೇ ಒಂದು ತಡುಪು ಸುತ್ತಿದ್ದ (ಕಂಗಾಳ್ಳ. ೩೫೩). **ತೊಡಹು$_2$**: ೧. ಆತನ ಕರುಳವಸಾಲೆಯ ಎಡದ ಕೈಯಲಿ ಹಿಡಿದು ಕಂಠಕೆ ತೊಡಹು ಮಾಡ್ದ ನೃಸಿಂಹ (ಗಗಿಕಾ. ೦೯-೨೮). **ತೊಡುಪು**: ೨. ಜಯುಬಾಡಿ ಶ್ರುಂಗಾರ ತೊಡುಪೂ ಸಂಣ ಚಂದ್ರಾಯುಧಾ ಚಲುತಲಿ ಮೊದಲಾದಾ ಬತ್ತೀಶಾಯುಧಾ ಶಕ್ತ್ರಸಮರ್ತಕರಾದಾ (ಎಕ. XVI, ಗುಬ್ಬಿ: ೭೪-೨೦; ಸು. 1672). ೪. (?): ಬಿಲ್ಲ ಹದೆ ಹಟಿದು ಬಿಲ್ಲಿನ ಹೆದೆಯಕೊಪ್ಪು ಅಲ್ಲಲ್ಲಿಗೆ ತೊಡುಪು ಮೆಲ್ಲಗೆ ಇರಿಸಿದಡೆ ಅದಟಲ್ಲಿಯೆ ಸಿಕ್ಕಿತ್ತು (ಮೋಳಿಮಾ. ೧೮೬-೬೯೯).

[ < ತೊಡು$_1$ + – ಪು$_2$./ತೆಲು. ತೊಡುಪು ]

**ತೊಡಪು$_3$** 'ತೊಡರ್ಪು' ನೋ.

**ತೊಡಬೆ$_1$** 'ತೊಡಂಬೆ$_1$' ನೋ.

**ತೊಡಬೆ$_2$** 'ತೊಡಂಬೆ$_2$' ನೋ.

**ತೊಡಬೆಗಳಚು** (ಕ್ರಿ). ೧. ತೊಟ್ಟನ್ನು ಕತ್ತರಿಸಂ,–ಬೇರೆಮಾಡಂ: ನುಡಿಗೆ ಮುಂಚುವ ಬಾಣ ಮಾರುತನಡಸಿ ಬೀಸುವ ಲಾಗ ತಲೆಗಳ ತೊಡಬೆಗಳಚುವ ಬೇಗವನು ಬಣ್ಣಿಸುವರೆನ್ನಳವೆ (ಕುವ್ಯಾದ್ರೋ. ೦೮-೦೯). ೨. (ಆಲಂ) ಸಾಯಂ; ದೇಹತ್ಯಾಗ ಮಾಡಂ: ಛಾಯುವಡೆದನು ಭೀಷ್ಮ ಬಳಿಕಿನೊಳಾಯುಧದ ಗುರು ತೊಡಬೆಗಳಚಿದನೀಯವಸ್ಥೆಗೆ ನಮ್ಮ ತಂದನು ಭಾನುನಂದನನು (ಕುವ್ಯಾಕ. ೧-೦೩).

[ ತೊಡಬೆ$_1$ (< ತೊಡಂಬೆ$_1$) ಕಳಚು (<ಕಟಲ್ಚು$_1$) ]

**ತೊಡವೆ** 'ತಡವೆ' ನೋ.

**ತೊಡರ್$_1$**, ತುಡರು, ತಂಡರು, ತೊಡರು$_1$ (ಕ್ರಿ). ೧. ಸಿಲುಕು; ಸಿಕ್ಕಿಕೊಳ್ಳು; ತೊಡಕಿಕೊಳ್ಳು: ವಿಕಟಾಕ್ಷರಂಗಳೊಳ್ ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ... ಪೇಟ್ವುದು ನೀತಿ ನಿರಂತರ ಕ್ರಮಂ (ಕವಿರಾ. ೧-೧೯೮); ತೊಡರ್ದೀ ಪುತ್ರಕಲತ್ರಮೋಹದೊಳಿದೇ ಕಟ್ಟಿರ್ದಪ್ಪೆ (ಆದಿಪು. ೧-೬೯): ಉಡೆನೂಲ್ ಸಡಿಲ್ದು ಮೇಗಾಲ್ದುಡಿಗೆಯ ಕುಸುರಿಯೊಳೆ ತೊಡರೆ (ಕಾದಂಅ. ೦೩೪); ನರಿ ತೊಡರ್ವಂತಿರಲೇಂ ಕೇಸರಿ ತೊಡರ್ಗುಮೆ ಬಲೆಯೊಳ್ (ಸಮಜ. ೧೩-೪೩); ತೊಡರ್ವೀ ಗಾಣದ ಗೂಳಿಯಂತೆ ತಿರಿಯುತ್ತಿಂತಿರ್ಪರೇ (ಅರ್ಧನೇ. ೩-೫); ತೊಡರ್ವ ನಿನ್ನಾವನರಿಷಡ್ವರ್ಗತತಿಗೆ (ಸಿದ್ಧರಾ. ೨-೪೦). ೨. ಸಿಕ್ಕಿಬೀಳುವಂತೆ ಮಾಡು; ಸಿಕ್ಕಿಸು; ತೊಡಕಿಸಂ: ನಾಗರಖಂಡಗಳನಾ ನಾಗರಖಂಡದೊಳೆ ತೊಡರೆ ನರನಿಸುವುದುಂ (ಪಂಪಭಾ. ೫-೮೯); ಹಿಡಿದು ದಧಿಯೆಂಬಾಸೆದೋಟಿಸಿ ಕೊಡುತ ಪುಷ್ಕರಣಿಕೆ ತಳುವನು ತೊಡರ್ದು ನಿಗ್ಗವದೆಡೆಯಲಂಘ್ರಿಗಳೆಡೆಯಲೆಲರಂತೆ ಒಡಲೆಡೆಯ ಲೊಲೆದಾಡೆ (ಸಾಳ್ವಭಾ. ೦೬-೦೪). ೩. ಹೊಂದಿಕೊಳ್ಳು; ಕೂಡಿ

ಕೊಳ್ಳು ; ಸೇರು : ತಂಕಣಗಾಳಿಯೊಳಾದ ಸೋಂಕಿನೊಳ್ ನಡುಗುವ ಶೋಕವಲ್ಲರಿಯ ಪಲ್ಲವದೊಳ್ ನವಚೂತಪಲ್ಲವಂ ತೊಡರ್ದವೊಲಾಗೆ (ಪಂಪಭಾ. ೩-೬೫) : ನುಡಿಯಂ ಕೇಳ್ದಾಯುತ್ತರದೊಳೊಡಂಬಡದು ನುಡಿವ ವೊಳ್ನುಡಿಯ ಯೆರ್ದೆಯೊಳ್ ಮಾರ್ನುಡಿವ ನುಡಿಗಳೊಳಮೆಂತುಂ ತೊಡರ್ದುತ್ತರಿಸಿದ ನುಡಿಯ ಕರಂ ಬಲವಂತಂ (ಲೋಕೋಪ. ೦೨-೫೬) : ಸಿರಿಸದ ಮಾಲೆಯೊಳ್ ತೊಡರ್ದ ನೆಯ್ದಿಲ ಮಾಲೆಯೊ (ಮಲ್ಲಿಪು. ೮-೧೦೬); ಮನದಿಂ ಜಾಣ್ನಡೆಗೊಳೆ ತೊಡರ್ದರಿನಿಯಕೂಟದೊಳಿನಿಯರ್ (ಚಂದ್ರಪ್ರ. ೮-೬೯) ; ಘನಪಾಂಸುಪಟಲದೊಳ್ ತೊಡರ್ದನಿಲಂ ಸುೞಿವಂತೆ (ಉದ್ಭಟ. ೧೦-೮೬); ಸರ್ವಾರ್ಥದ ಸಿದ್ಧಿಯೊಳ್ ತೊಡರ್ದು ಬೋಧಂ ಭವ್ಯಸಂಸೇವ್ಯಮಾಯ್ತು (ಪುಷ್ಪಪು. ೧-೨೪) : ಕೋಪಾಟೋಪದಿ ನಿಂತೆಂದನೆನಗೆ ತೊಡರ್ದ ಕನ್ಯಾರತ್ನಮನೊಯ್ದು ಮನುಜಂ ಧರಿತ್ರಿಯೊಳಿಲ್ಲಿರ್ದಪನೆಂದು (ಕಾಮಕ. ೧-೪೪ ವ). ೪. ಅಂಟಿಕೊಳ್ಳು ; ಹತ್ತಿಕೊಳ್ಳು : ತೊಡರ್ದುವು ಸಮುದ್ರದಿಂ ಪೊಱಮಡುವವಸರದಲ್ಲಿ ಮೌಕ್ತಿಕಪ್ರಕರ ಮೆನಲ್ ಕಡುಪಿಂದೆ ರೋಮರೋಮದೆ ಬಿಡದೆಸೆದುವು ಹರಿಗೆ ಬೆಮರ ಬಿಂದುಗಳಾಗಳ್ (ಕಾದಂಪೂ. ೪೫೫) ; ತದುಕಿನ ಮರದ ಮುೞಿಗಣ್ಣೊಳೊಗೆದ ಪಗಿನೊಳಗ್ಗಿವೆಗಡಿಂ ಕಾಲ್ದೊಡರ್ದು ಮಿಡುಕಿ ಕಳವಳಿಪ ಕಳವಿಂಕಸಂಕುಳಂಗಳುಂ (ಚಂದ್ರಪ್ರ. ೫-೬೫ ವ). ೫. ಸುತ್ತಿಕೊಳ್ಳು ; ಬಳಸು : ನಿಗಳಂಬೋಲ್ ತೊಡರ್ದುದು (ಭಾಷಾಭೂ. ೧೬೫ ಉದಾ); ಕುಡಿದೊಡೆ ಪೊಟ್ಟೆಯಿಂದೆ ಬೞಿನೀರ್ ಪೊಱಪಾಯ್ವುವೆ ಸುತ್ತಿ ಕಾಲನೇಂ ತೊಡರ್ವುವೆ ದಾಂಟುವಲ್ಲಿ ನಿೞಿ (ಚಂದ್ರಪ್ರ. ೮-೬೦) : ಬೆಳ್ಪಿಡೆವಿಡಿದಿರ್ಪ ರೂಪ್ಯಮಯಶೃಂಖಲೆ ರಾಜಕುಮಾರನಂಘ್ರಿಯೊಳ್ ತೊಡರ್ದಿರೆ (ದಶಕು. ೭-೩೬) ; ತೊಡರ್ದಡರ್ದಲವಳ್ಳಿಗಳ ಮಂಟಪಂಗಳಿಂ . . . ತದ್ರಾಜಕೇಳೀವನಂ ಕಣ್ಗೆಸೆದುದು (ಜೈಮಿಭಾ. ೨೯-೪೫). ೬. ಬಂಧಿಸು ; ಕಟ್ಟು : "ತೊಡರ್-ಬಂಧನೇ" (ಶಮಧಾ) : ತನಯುವಿಮೋಹಮೆಂಬ ನಿಗಳಂ ತೊಡರ್ದಿರ್ದಪುದು (ಸುಕುಮಾ. ೧೦-೩೨) : ತದೀಯ ಶುಕದಿರವನು . . . ನೋಡಿ ತೊಡರ್ದ ಬಲೆಯಂ ಕೞಲ್ಚಿ ಕಡೆಗೆದೆಗೆದು ಮೆಲ್ಲನೆತ್ತಿ ತಂದು (ಉದ್ಭಟ. ೪-೧೨೬ ವ) ; ತಮ್ಮನಿಯರ ತೊಡರ್ದ ತೆಕ್ಕೆಯನೊದ್ದು ನೂಂಕುತ (ಜಬಪು. ೧೯-೮). ೭. ಹೋರಾಡಲು ಬಿಡಂ ; ಕಾದಾಡಲುಂ ತೊಡಗಿಸಂ ; ಎದುರಿಸುವಂತೆ ಮಾಡಂ : ತೊಡರ್ದು ಬಿಡಿಂ ಸುಯೋಧನನೆನ್ನುಮಂ (ಪಂಪಭಾ. ೦೩-೯೧) : ಇವರಂ ಕೌರವರ್ಗೆ ತೊಡರ್ದು ಬಿಡು (ಪಂಚತಂ. ೨೦೯-೧೬). ೮. ಎದುರಿಸು ; ಪ್ರತಿಭಟಿಸು : "ತಳ್ಪೊಯ್, ತಡಂಬರೆ, ಪೋರ್ಕುಳಿ, ತೊಡರ್ದುದು . . . ತಡಂಬೊಯ್-ಈ ೨೫ ಪ್ರತಿಹತಕ್ಕೆ ಪೆಸರ್" (ಕಶಸಾ. ೫೯-೨೯೬) : ತೊಡರದೆ ನೀಮುಮಾ ನೆಗಟ್ದ ಪಾಂಡುವುಮೊಂದಿಯೆ ಬೞಿದ್ದಿರೊಂದೊಡಂಬಡು ನಿಮಗಿಲ್ಲ (ಪಂಪಭಾ. ೦೩-೦೮) ; ತಮ್ಮ ತರ್ಕ್ಕದ ಮೂಱುಂ ತರ್ಕ್ಕಗಳುಮನದರಿಯುಂ ತೊಡರಿಯುಂ ನುಡಿದಂತೆ ತಂತಮ್ಮಾನೆಯೊಳ್ಳನಮುಮಂ ಬಿನ್ನಣಮುಮಂ ಮೆಱೆದು (ಶಾಂತಿಪು. ೩-೨೬ ವ) : ಅರಸುಗೆಯ್ವಾತಂ ಶರಣೆನೆ ಕಾವುದು ಬೇಡಿದೊಡಿರದೀವುದು ತೊಡರೆ ಸೆಡೆಯದಿೞಿವುದು (ಪಂಚತಂ. ೨೫೪-೨) ; ಮೃಗಲಕ್ಷ್ಮನದೇನೆಂದೀ ನಗೆಮೊಗದೊಳ್ತೊಡರ್ವನೆಂದು ಹಾರಾಂಶುಗಳಿಂ ನಗುವಂತೆ (ಮಲ್ಲಿಪು. ೩-೬೭) ; ತೊಡರ್ದರಿಯಂ ಕೇಸರಿಯೊಳ್ ತೊಡರ್ದಿಭಮೆಂತಂತೆ ಮಾಡುವಂ ಭುಜಬಳದಿಂ (ಅರ್ಧನೇ. ೪-೧೦೧) : ತೊಡರ್ದ ರಾಯರನೊರಸಿದಪೆನೆಂದು ನುಡಿನುಡಿದು (ಹಚಕಾ. ೧-೪೫) ; ಈರೇಳು ಲೋಕದಲಿ ತೊಡರ್ವರಾರ್ ನಿಮ್ಮಡಿಗಳೊಳು (ಬಸಪು. ೨೨-೪೧); ಹರಿಯ ಬಳಗಂ ತೊಡರೆ ಗರುಡನಿರದೋಡುವನೆ (ಜಬಪು. ೫೩-೪೬). ೯. ಅಡ್ಡಿ ಹೊಂದು; ನಿಲ್ಲು; ತಡೆ ಹೊಂದು: ರಜತಗಿರಿಗುಹಾದ್ವಯದೆಡೆಯೊಳ್ ಪೋಪಂದುಮಣಮೆ ತೊಡರದುದೀ ಪುರಗೋಪುರದೊಳೇಕೆ ತೊಡರ್ದುದೋ ಚಕ್ರಂ (ಆದಿಪು. ೦೪-೮). ೧೦. ಮುಟ್ಟು ; ಹಿಡಿ : ಗಾಳಿ ಸೋಂಕಿದತ್ತು ಪಿಶಾಚಂ ತೊಡರ್ದುದು ಭೂತಂ ಬನ್ನಂಬಡಿಸಿದುದೆನೆ ಸಿರಿಯೊಳರಸುಗಳ್ಕೆಯ್ಯಱಿಯರ್ (ಕಾದಂಪೂ. ೫೬೩). ೧೧. ಆವರಿಸಂ ; ವ್ಯಾಪಿಸಂ : ನೀಂ ತಡೆಯೆ ತೊಡರೆ ಮನದೊಳ್ ಚಿಂತೆ ಸಮಂತಿಂತು ಬಂದೆವೆನೆ (ನೇಮಿಪು. ೪-೧೦೨); ಕಾಲ್ ತಡತಡವರೆ ತೊಡರ್ದಳಿಪಿಂದೆಳಸಿ ನೋಟ್ಪ ಮೃಗಲೋಚನೆಯಂ (ಕಾವ್ಯಾವ. ೬೨) : ಚಿಂತಾತುರಂ ತೊಡರ್ದಿರ್ಪಾ ವಿಜಯಾವತೀಸತಿಯ ದೀನಮ್ಲಾನವಕ್ತ್ರಾಬ್ಜಮಂ ಪೊಡವೀಶಂ ಪುಗುತುಂ ನಿರೀಕ್ಷಿಸಿ (ಕುಸುಮಾ. ೩-೩೬). ೧೨. ತೊಡಗು ; ನಿರತವಾಗು : ಮನಮನದೆ ಬಹುಪರಿಗ್ರಹವಿನೋದದೊಳ್ ತೊಡರ್ದ ಜಡರ್ಗೆ ಸಯ್ತಿರ್ದಪುದೆ (ಅಜಿಪು. ೨-೮೯) ; ಈ ಕಜ್ಜದೊಳ್ ನೀಂ ತೊಡರ್ದು ಮರುಳೆ ಬೆಂಡಾಗದಿರ್ಪೋಗು (ಗದಾಯು. ೯-೦೫) ; ಬಿಡದಾಡುವನಿತು ಪೊತ್ತುಂ ತೊಡರ್ದು ವಿಭಾವದೊಳೆ ಬಸನಿ ತನ್ನುಮನೞಿಯಂ (ಸಮುಪ. ೬-೫೨) ; ನೀನಾದಿಕೂರ್ಮನಾದಂದಾನೞಿದೊಡೆ ಪಿಡಿದು ತಂದದಂ ಮತ್ಕ್ರೀಡೋದ್ಯಾನಸರೋವರಸಲಿಲಸ್ಥಾನದೊಳಿರಿಸುವ ವಿನೋದದೊಳ್ ತೊಡರ್ದಿರೆನೇ (ಜಗವಿ. ೦೭-೩೫). ೧೩. ಉಂಟಾಗು ; ಪ್ರಾಪ್ತವಾಗು : ನೀನೆನ್ನಂ ಕಾಡವೇಡಾಂ ತೊಡರ್ದವಸರದೊಳ್ ಪ್ರತ್ಯಯಂಗೆಯ್ದನೊರ್ವಂಗೇನುಂ ತಳ್ವಿಲ್ಲದಾನೀಗಳೆ ಚಟುಲತೆಯಿಂ ನಿನ್ನನೆಯ್ತರ್ಪೆಂ (ಸುಕುಮಾ. ೭-೨೧) ; ಮರಣದ ದಂದುಗಂ ತೊಡರದನ್ನೆಗಮರ್ಚಿಪುದರ್ಥಿಯಿಂ ಜಿನೇಶ್ವರನಂ (ಸಮುಪ. ೧-೧೦೫) : ಅಸ್ತ್ರಮಂ ತಿರುಪಿದನುಗ್ರವೈರಿಗೆ ಭಯಂ ತೊಡರ್ವನ್ನೆವರಂ (ಜಗವಿ. ೦೨-೩೨) : ಇನಿತಾನುಮಱಿಪಿದಳ್ ತೊಟ್ಟನೆ ಕುಸುಮಾವಳಿಗೆ ತೊಡರ್ದ ಮೂರ್ಛೆಯ ತೆಱನಂ (ಕುಸುಮಾ. ೦೨-೧೦೬) ; ಶಿವನಿಂ ಕಲಾಯೋಗಭೋಗ ತೊಡರ್ದ ಕರ್ಮಕ್ಷಯಂ ಮಲದ ಪರಿಪಾಕಮಂ ಪಡೆದು (ಪಾಸೋಪು. ೧೦-೧೪೦). ೧೪. ತತ್ತರಿಸಂ ; ತಡವರಿಸು : ನಡುಗಲ್ಕೆರ್ದೆ ಬೆಮರಲ್ ತನು ತೊಡರಲ್ ನಾಲಗೆ ತಗುಳ್ದುದಾ ಮಾರ್ಗಣದಿಂ (ಪಂಪಭಾ. ೦೨-೬೨) ; ತೊಡರೆ ಕೊದಳ್ ಪೊದಟ್ದು ತುದಿನಾಲಗೆಯೊಳ್ . . . ತಡತಡಮೆಟ್ಟಿ ಪಾಡಿ ಪೊಸ ಕಳ್ಗಳನೀಂಟಿದುದಂಗನಾಜನಂ (ಸೂಕ್ತಿಸು. ೦೩-೭). ೧೫. ತಾಕು ; ಗೀರಂ ; ಗೀಚಂ : ಉಗುರ್ ತೊಡರ್ದಾಯೆಡೆ ರೇಖೆ ಪತ್ತಿ ಚೆಲ್ವಂ ತಳೆದಿರ್ಪುದು (ಚಂದ್ರಪ್ರ. ೮-೭೧). ೧೬. ತಂಗಂ ; ನಿಲ್ಲು : ಗಗನಗತಿಶ್ರಮಮಂ ನೆಟ್ಟಗೆ ಕಳೆವರ್ ಖಚರರದಱ[ರನ್ನದ]ನೆಗಳೋಳಿಗಳೊಳ್ ತೊಡರ್ದಿರ್ದು (ಕುಸುಮಾ. ೨-೭೭). ೧೭. ವಾದಿಸು; ವಿವಾದ ಮಾಡು: ವೇದಾಂತ ಸಿದ್ಧಾಂತ ಪ್ರಮಾಣ ಶಾಸ್ತ್ರಂಗಳನೋದಿ ತರ್ಕಿಸುವ ಪಂಡಿತರ್ಕಳೊಡನೆ ತೊಡರ್ದು ನುಡಿದು ಸದುತ್ತರಂಗುಡುತಿರ್ಪ ಶುಕಶಾರಿಕಾನಿಕಾಯಂಗಳುಮಂ (ಪಂಚತಂ. ೧೧೮-೭). **ತುಡರು :** ೧೮. ಆಕ್ಷೇಪಿಸು ; ತರಾಟೆಗೆ ತೆಗೆದುಕೊಳ್ಳು; ಜರಿ : ಅಣ್ಣ ಗಂಗಾಧರನನ್ನು ತುಡರಿ ಇದರ ಇತ್ಯರ್ಥಮಾಡಿಕೊಳ್ಳಬೇಕೆಂದು ಹಂಬಲಿಸಿದಳು(ಚಿಪರಿ.೦೪೨); ನಾನು ಯಾವ ದೃಷ್ಟಿಯಿಂದ ಕಡಿಮೆಯೆಂದು ಈ ಅನಾಚಾರಕ್ಕೆ ಳದಿರಿ ಎಂದು ತುಡರುತ್ತೇನೆ (ಮುಕ್ತ್ಯದ. ೨೭). **ತುಡುರು :** ೧೮. ಈಗೀಗ ಅವನು ಅವರನ್ನು ಒಮ್ಮೊಮ್ಮೆ ತುಡುರುತ್ತಿದ್ದನು (ಳವಲು. ೩೭): 'ದೇವರ ಗುಡಿಗಪ್ಪೇನು ಕಾಯಿಪಲ್ಲಾ ಕೊಡು ಹಾಂಗಿಲ್ಲೇನು' ಅಂತ ತುಡುರಿದೆ (ಮಿಂಚಹು. ೯೧); ಅವರನ್ನೆಲ್ಲ ತುಡುರಿ, ಅಸ್ತವ್ಯಸ್ತವಾಗಿ ಬಿದ್ದ ಸಾಮಾನುಗಳೆಲ್ಲವನ್ನು ಜೋಕೆಯಿಂದ ಒಳಗೆ ಇಡಿಸಿದನು (ಗ್ರಾಮಾಯ. ೩೦೬).

**ತೊಡರು₁ :** ೧. ಕರ್ಮವೆಂಬ ಅಂಕದೊಡನೆ ತೊಡರಿದೆ (ಬಸವ. ೬೯೯) ; ಆ ತೆಲುಗ ಬೊಮ್ಮಯನ ಶರನಿಘಾತಪಾತಕೆ ತೊಡರ್ದು ಮಡಿಯಲು (ಬಸಪು. ೩೪-೨೫) : ತೇಜಿಯ ದಾಂಟಿಸಿದನಾಹ ತೊಡರರಭವನ ಶರಣರಾ ಚತುರ್ವಿಧ ಪದಕ್ಕೆಂಬಂದದಿಂ ತಪ್ಪುತೆ (ಭಾವಚಿಂ. ೮-೧೮) : ನರದೊಳ್

ತೊಡರಿ ರಕ್ತದೊಳ್ ನನೆದು ಪೇರೆಲುಗಳುಮನೊದೆದು . . . ದೈತ್ಯಸೇನಾಭಟರ್ ತಲೆದಡವುತೋಡಿದರ್ (ಜಬಪು. ೧೧-೧೧). ೨. ಕೈದುಗಳೊಳಿಱಿದೊಡೀಯೆತ್ತು ಗಡಣಿಗೊಳ್ಳದು ಬಹಳ ಪಾಶಂಗಳ ಬೀಸಿ ತೊಡರಿ ಕೆಡಪಲ್ವೇಳ್ಕುಂ (ಜಬಪು. ೧೧-೧೫); ಭುಜಯು ಗೃಮಂ ತೊಡರಿಕೊಂಡುಪ್ಪರಿಸಿ ನರಕೃಷ್ಣರಿರ್ವರಂ ಮಿಡುಕಲೀಯದೆ ಬಿಗಿದು (ಜೈಮಿಭಾ. ೨೫-೫೪). ೩. ಮಖಾರಿಯ ಸ್ಥಿರಪರದೈವದೊಳ್ ತೊಡರದಿಂತು ಬರ್ದುಂಕಿದೆನ್ಯೆ (ಪಂಪಾಶ. ೨೩). ೫. ಬಿಡದೆಯಱಸುವ ಬಳ್ಳಿ ಕಾಲನು ತೊಡರಿತು (ಪ್ರಭುಲೀ. ೧೦-೨೪); ಪಲ್ಲವಿಸಿದ ನಿರ್ಜರವೃಕ್ಷವ ಕಲ್ಪವಲ್ಲಿಯು ತೊಡರಿಕೊಂಬಂತೆ (ಮೋಹತ. ೦೪-೮೩); ಬಿಡದಡಸಿ ತೊಳಲುತಿಹ ಬಳ್ಳಿ ತಾನೇ ಕಾಲ್ಗೆ ತೊಡರಲೇನೊಳ್ಳಿತಲ್ಲವೆ (ಜಬಪು. ೧೩-೧೪). ೬. ಕೊಡಹುವಂ ನರವ್ಯಗ ಶರೀರಿ ಚರಣಂಗಳಿಂ ತೊಡರುವಂ ಶರಭಾವತಾರಿ (ಜಬಪು. ೩೩-೨೦). ೮. ಐಯವೊಳೆಯ ಪುರಪರಮೇಶ್ವರರ್ ಕ೦ಹ ಸಂಪುಂನರಾಚಾರಗಲಿಗಳ್ ತೊಡರೆ ಬಲುಗಂಡರ್(ಕಇ. IV, ೫೫-೯; 1000?); ಕಣನೊಳಗೆ ತೊಡರಿದವರಿಗೆ ಬೆಂಗೊಡುವನಲ್ಲೆಂದುದುಗ್ಗಡವ ಕೇಳ್ಕೆ (ತ್ರಿಪುಸಾಂ. ೧೬೩); ರಾವುತರು ರಾವುತರನ್ನೂ ಕಾಲ್ಬಂದಿಯು ಕಾಲ್ಬಂದಿಯನ್ನೂ ತೊಡರಿಕೊಂಡು . . . ಯುದ್ಧವನ್ನು ಮಾಡಿದರು (ಕೃಪಾವಿ. ೫೬). ೯. ತೊಡರಿಯಡ್ಡಂಪಾರ್ವ ಜೀವಿಗಳಿಡೆಗುಪದ್ರುವದಹುದೊ ತಾ ಪೋಪೆಡೆಯೊಳಿನುತಂ ಕೈಗಳಂ ತಪೆ ಬೀಸದಿಹನಂತೆ (ಬಸಪು. ೩೮-೯). ೧೧. ಹರಿಪದದಿಂದೊಗೆದ ರಜಂ [ಹರಿ] ಪದಮಂ ತೊಡರೆ ನಡೆದುದಾ ನೃಪಸೈನ್ಯಂ (ಕುಸುಮಾ. ೦೫-೮೫); ಗುಹೆಯೊಳ್ ಪ್ರತಿಧ್ವನಿಗುಡುತ್ತುಂ ನಿಮ್ನಗಾಸ್ಥಾನದೊಳ್ ತೊಡರುತ್ತುಂ . . . ತೀಡಿದುದೊಂದು ಘೋರಪವನಂ (ದಶಕು. ೫-೭೦); ಮಿಡಿವ ಮರುತನ ತಂಪು ತೊಡರುವಳಿಗಳ ಪೆಂಪು (ಪಂಕಾರಾ. ೨-೧೮-೧೦). ೧೨. ನಿಂದೆಯೊಳ್ ತೊಡರದೆ ಸರ್ವರುಂ ತನಗೆ ಕೆಯ್ಮುಗಿದಿರ್ಪತಿಭಾಗ್ಯದೊಳ್ಪುಮಂ ಪಡೆದವಳಾವಳೀಕೆಯುವೊಲ್ (ದಶಕು. ೦೨-೮೫); ರಾಜ್ಯಕಾರ್ಯಗಳಲ್ಲಿ ತೊಡರುವುದರಿಂದ ಧರ್ಮವನ್ನು ಮಾತ್ರವೇ ಅಲ್ಲ ಅಧರ್ಮವನ್ನು ಕೂಡ ಮಾಡಬೇಕಾಗುವುದು (ಭೀಷ್ಮಣ. ೨೨೭). ೧೩. ಮನಕೆ ಲವಾಲಸಂ ತೊಡರದಂತೆ ವಿಚಿತ್ರವಿನೋದಕೋಟಿಯಂ ವಿನಯದಿನೊರ್ಮೆಯಿಂ ನೆಗೞುತುಂ (ಕುಸುಮಾ. ೬-೫); ಅನುಲೇಪನಂಗುಡುವ ವೀಳೆಯಮಂ ತೆಗೆದೀವ ದಂದುಗಂ ತೊಡರೆ ಮನಂಗೊಳಲ್ ನೆರೆದರಿಂದ್ರುಲತಾಂಗಿಯರನ್ನವಾಸದೊಳ್ (ಪುಷ್ಪಪು. ೯-೮೭); ಎನಗೆ ಮತ್ತೀ ರೂಪು ತೊಡರಿದುದು ದೈವಯೋಗಾನುಗತಿಯಿಂದಕಟ (ಪಂಕಾರಾ. ೦-೦೮-೦೩). ೧೯. ಹಾಕಿಕೊಳ್ಳು; ಧರಿಸು; ತೊಡು: ಬಿಡದುಟ್ಟ ಪಟ್ಟೆಯು ದಟ್ಟಿ ಕುಂಕುಮ ಗಾಸೆ ತೊಡರಿದ ದಿವ್ಯಭೂಷಣದ . . . ಸುಭಟರ ಗಡಣವೈತಂದುದರ್ತಿಯಲಿ (ಕಂನವಿ. ೨೩-೮೬).

**ತೊಡಂತೊಡರ್** = ಒಟ್ಟುಗೂಡು; ಸೇರು: ನಡುಕಮುಮುಮ್ಮಳಮುಂ ಬೆರಸಗಲ್ಕೆಯೊಳಿಂದಿನಿತೆಂಬವೊಲ್ತೊಡಂ[ಪಾಠಾಂ. ಲ್ಪರಂ]ತೊಡರೆ (ಆದಿಪು. ೧೨-೨೭). **ತೊಡರ್ದರ ಗಾಣ, ತೊಡರ್ದರ ಗಾಳ** = ಪ್ರತಿಭಟಿಸುವವರಿಗೆ ಗಂಟಲ ಗಾಳದಂತಿರುವವನು; ಒಂದು ಬಿರುದು: ತೊಡರ್ದರ ಗಾಣ ಮಱಿಹೊಕ್ಕರೆ ಕಾವ ಕೂಟದ ನಾಯಕರ ಗಂಡ ಕಾಡನೂರ ಮಡಯ ನಾಯಕನ ಮಗ (ಎಕ. XII, ಗುಬ್ಬಿ. ೦೮-೩; 1366); ಕೊಡಗರ ಕೇತಂ ಪಡವಳರೆರೆಯಮ್ಮಂ ಮಿಕ್ಕದಾನಿ ಗಡಿಯರ ಸಿಂಗಂ ತೊಡರ್ದರ ಗಾಳಂ ಕೆಂಚಂ (ಸೌಇಇ. XI-ii, ೦೩೩-೩೮; 1087). **ತೊಡರ್ದರ ಜವ** = ಪ್ರತಿಭಟಿಸುವವರ ಪಾಲಿಗೆ ಯಮನಂತಿರುವವನು; ಎದುರಿಸಿದವರನ್ನು ನಾಶಮಾಡುವವನು; ಒಂದು ಬಿರುದು: ಗಡಿಯಂಕಮಲ್ಲನೆನಿಪ್ಪ ತೊರ್ಡರ್ದರ ಜವನೆನಿಪರಾಶ್ರಿತರ್ಬ್ಬೇಡಿದಡಂ ಕುಡುವತ್ತಿರ್ಗಂಡರನೆ ಪೆಸರ್ವ್ವಡೆದರ್ (ಕಇ. I, ೨೪-೧೨; 1149). **ತೊಡರ್ದರ ಡೊಂಕಿ**, **ತೊಡರ್ವರ ಡೊಂಕಿ** = ಪ್ರತಿಭಟಿಸುವವರಿಗೆ ಡೊಂಕಿಯಂತಿರುವವನು; ಒಂದಂ ಬಿರುದಂ: ಮಾನ್ಯಖೇಡಪುರವರಾಧೀಶ್ವರಂ ಚತುರ್ಮುಖದಾಯಿಗಗೊಂದಳಂ ಬಡಿವಂ ತೊಡರ್ದರ ಡೊಂಕಿಯದಳರಾದಿತ್ಯಂ (ಎಕ. XII, ತುಮಕೂ. ೯-೦೦; 1151); ಮಾದಿರಾಜವಿಭು ತೊಡರ್ವರ ಡೊಂಕಿಯೆನಿಪ್ಪ ಬಿರುದನಿರದೆತ್ತಿಸಿದಂ (ಮುಂಬರಾ. X, ೨೬೪-೨೬; 1229).

[ ದೇ.II ತಮಿ. ತೊಟರ್, ತುಟರ್; ಮಲ. ತುಡರು; ತೆಲು. ತೊಡರು ]

**ತೊಡರ್$_2$**, ತೊಡರು$_2$ (ನಾ). ೧. ಹೊಂದಿಕೆ; ಸಂಬಂಧ; ಸೇರುವುದು: (ಕ). ೨. ಕಟ್ಟು; ಬಂಧನ: ಮೊದಲೊಳ್ಪಱಿದ್ಯೆ ಸಂಸಾರದ ತೊಡರಂ ನಿಂದೆ ಮುಕ್ತಿಪದದೊಳ್ (ಕಾದಂಉ. ೭೦೯); ತೊಡರ್ದಿರ್ದ ಮೋಹಪಾಶದ ತೊಡರಂ ಪಱಿಪಡಿಸಿ ಬಿಡಿಸಿ (ಸುಕುಮಾ. ೮-೫೨): ತೀರ್ಥಕರರ್ ನಿಪ್ಕ್ರಮಕುಳಮೊಲ್ಲರ್ ಮೋಹೋದ್ರೇಕವಿಹೀನರ್ಕಳಿಲ್ಲಿ ರಾಜ್ಯದ ತೊಡರಂ (ನೇಮಿಪು. ೧೩-೧೭); ಮುಂಗಡೆಯೊಳ್ ಪೊರಳ್ವ ಪೆಂಡಿರ ಕುರುಳೋಳಿಯೆಂಬ ತೊಡರೊಳ್ ತಡವಾಗದೆ . . . ಸಂತತಂ ವನಾಂತರಮನೆ ಗೊತ್ತುಮಾಡಿ ಭರದಿಂ ತಳರ್ದತ್ರಿಧಿರಾಜಕುಂಜರಂ (ಅನಂಪು. ೩-೧೦೪); ತೊಡರದಿರು ಮೋಹಪಾಶದ ತೊಡರಂ (ಜೀವಸಂ. ೨೭-೫೦). ೩. ಬೇಡಿ; ಸಂಕೋಲೆ: ತೊಡರಂ ಪೊಸೆದು ಪಱಿವ ಮದಕರಿಯಂತೆ (ಶಾಂತಿಪು. ೮-೫೦ ವ); ತೊಡರ್ಪಱಿವ ವನ್ಯವಾರಣದ ಮಾಟಿಕ್ಕೆಯಿಂ (ಪಂರಾಮಾ. ೨-೨೦); ಪಡೆಯೆ ನವೀನಯೌವನಮನಾ ಸತಿ ತಾಳ್ದಳೆ ಚಿತ್ರಜಾತನುಂ ತೊಡರನತರ್ಕ್ಯನೀ ಜಗತಿಗಿಕ್ಕಿದನಾಕೆಯ ರೂಪಿನೇಟಿಗ್ಗಂಡೆಡರಿದನುರ್ಕಿನಿಂ ಹರಿಹರಾಂಬುಜವಿಷ್ಟರರ್ಗೆಂಬಿನಂ ಕರಂ ಗೆಡೆಗೊಳೆ ರೂಪು ತನ್ನ ಸುತೆಗೆ (ನೇಮಿಪು. ೯-೭೦); ತೊಡರ ಬಿಗಿ ಮದನಂಗೆ ಮದವನು ತೊಡೆ ವಸಂತನ ಮಾರುತಗೆ ಮಱುವಿಡಿಯನಿಕ್ಕು (ತೊರರಾ. ೩-೪-೦೮); ಆವ ಕೆಯ್ಯುಂ ಬಿಡಿಸಲ್ಕೆ ಬಾರದ ಬಿಱುಬೆಸೆದ ತೊಡರಿಂದೆ . . . ಬಿಗಿದವೆನ್ ನಿನ್ನನ್ (ಬದ್ಮಪ್ರ. ೨-೨). ೪. ತೊಡಕು; ಗೊಂದಲ; ಗೋಜು: ಮನದೊಳ್ತೊಡರಿಲ್ಲದಾಗಳುಂ ಪರಮಜಿನೇಂದ್ರಪಾದದೊಳೆ ಕಾಂಕ್ಷಿತನಪ್ಪುದು(ಧರ್ಮಾಮೃ. ೩-೨೮೦); ದುರುಗದ ತೊಡರಟಾವ ಮನವನು ತಂದು ವೈರಾಗ್ಯದೊಳು ಶ್ರೀಜಿನಮಂದಿರದೊಳು (ಆದಿಪ. ೧೦-೧). ೫. ಕಟ್ಟುವ ಸಾಧನ; ಹಗ್ಗ, ಸರಪಳಿ ಮುಂತಾದುವು: ವಸಂತಗೃಹಮಂಪೊಕ್ಕು ನಡುವಣೆಳಗೌಂಗಿನ ಬಾಳ್ಗಂಬದೊಳ್ ತೊಡರ್ಚಿದ ಲತೆಯ ತೊಡರ ತೂಗುಂಮಂಚದೊಳ್ . . . ಕುಳ್ಳಿರ್ದು (ಚಂದ್ರಪು. ೭-೯೫ ವ); ತಳಸಂಕಲೆಯ ತೊಡರಂಕಣಿಯ ಕೊಂಡೆಯ . . . ಬಲುಪೊರಜೆಗಳ ಬಾರಸಂಕಲೆಗಳನು ಬಿಗಿದರು ಜೋಡಿಸಿದರುಬ್ಬರದ ಮದಗಜವ (ಕುಮಾರರಾ. ೩-೨). ೬. ಸ್ಪರ್ಧೆ; ಹುರುಡು; ಸವಾಲು ಹಾಕುವುದು: ಅತಿಕಾಮಿ ಚನ್ನಮಲ್ಲಿಕಾರ್ಜುನಯ್ಯಂಗೆ ತೊಡರನಿಕ್ಕಿ ಎರಡಱಿಯದೆ ಕೂಡಿದೆನು (ಮಹಾದೇ. ೫. ೭೦-೦೬೪). ೭. ಒಡವೆ; ಆಭರಣ; ಭೂಷಣ: ಸುರಯಿಯ ಚೊಲ್ಲೆಯುಮುಂ . . . ಪೊಂಬಾದರಿಯ ಕಿಱುಮುಗುಳ ತೊಡರುಂ ಪರಿವಡೆದಿರೆ ಬಂದನಟಿಸ್ರಿಯಿಂದೆ ಬಸಂತಂ (ಕಬ್ಬಿಕಾ. ೩೨೫). ೮. ಬಿರುದಿನ ಸಂಕೇತವಾಗಿ ಧರಿಸುವ ಕಾಲ ಬಳೆ; ಬಿರುದಿನ ಪೆಂಡೆಯ: "ತೊಡರ್-ಬಂಧನೇ, ಬಿರುದ ಶೃಂಖಲಾಯಾಂ ಚ (ಬಿರುದಿನ ಸರಪಣಿ)" (ಶಮಧಾ): "ತೊಡರೆಂದೊಡಕ್ಕು ಬಿರಿದಿನ ಹಾಹೆ" (ಕಬ್ಬಿಕೈ. ೬೬); ಬಿರುದಿನ ಅಂಕಮಾಲೆ ತೊಡರಿಕ್ಕಿದ ಕಾಲಲು ಗಂಡಪೆಂಡರಂ (ಸೌಇಇ. IX-i, ೨೬೬-೩೨; 1183); ಹೊಳೆಹೊಳೆವುತಿಪ್ಪ ಪೊಂಬಟ್ಟೆಯುಂ ಬಿಗಿದುಟ್ಟು ಘುಳುಘುಳಿಪ ಹೊಸ ತೊಡರನೆಡಗಾಲೊಳೊಲಿದಿಟ್ಟು (ಇಹರ. ದೇ. ೧೦-೦೦); ಬಾವುಲಿಯ ಕಾಲ ತೊಡರ ಮಹಾವೀರರ್ ಚೂಣಿ ಬವರಮಂ ಕೆಣಕಲ್ (ದಶಕು. ೨-೦೬); ನಿಮ್ಮ ನೂರ್ವರ ಬಣಗುಗಳಿಗೆಡಗಾಲ ತೊಡರಿದೆ ಬನ್ನಿ ನೀವೆನುತ

(ಕುವ್ಯಾ.ಆ. ೬-೪); ಕಡುಸಡಗರಂ ವಿಕ್ಕು . . . ಬಿರುದಿನ ತೊಡರ್ ಝಣ ಝಣಿಸಲೇಳ್ದು (ರಾಜಶೇ. ೬-೧೧ ವ). 'ಕಾಲ್ದೊಡರ್' ಪರಾ. ೯. ಅಡ್ಡಿ ; ಅಡಚಣೆ ; ತೊಂದರೆ : "ಪ್ರತಿಬಂಧದೊಳು ತೊಡರೆನಿಕ್ಕು" (ಕಶರ. ೧೨೪) ; ಜಯಕೇಶಿದೇವಮ[ಹಿ]ಪಂ ತಳದಂ ಮಾ[ನ]ನಿಧಿ ಸಕಳ ಧಾತ್ರಿಯನೇನುಂ ತೊಡರಿಲ್ಲ ತಂನ ದಕ್ಷಿಣಭುಜದೊಳು (ಕಇ. V, ೩೨-೧೦; 1215) ; ಈ ಮಖವನ್ನೆದೆ ನಡೆಸುವುದನ್ವಯಕ್ಕೆ ತೊಡರಪ್ಪುದು ವಿಚಾರದೊಳ್ಕೈಕೊಂಬುದು (ಜೈಮಿಭಾ. ೨-೬೨) ; ತೊಡರ್ಗಳನೆಲ್ಲ ಮುಂದೆ ಸರಿಗಯ್ಯುವುದದು (ಕಾಲೂರ. ೧೬೮-೩೬೬). ೧೦. ವ್ಯಾಜ್ಯ ; ವಿವಾದ : ಸೀಮಾವಿವಾದದಿಂ ತದ್ಭೂವಿಜರೋರೊರ್ವರಂ ಪಳಂಚಲೆವೆಡೆಯೊಳ್ ಸೀಮೆಗಳ ತೊಡರನುಡುಗಿಸಿ ಸೀಮಂಕರನೆಂಬುದೊಂದು ಪೆಸರಂ ಪಡೆದಂ (ಆದಿಪು. ೬-೫೭). ೧೧. ಯುದ್ಧ ; ಜಗಳ ; ಕದನ : "ತೊಡರೆಂದೊಡೆ ತೋಟಿಯಕ್ಕುಂ" (ಭಾರನಿ. ೨೨). ೧೨. ವ್ಯವಹಾರ ; ಕೆಲಸ ; ಉದ್ಯೋಗ : ಅರ್ಥಿಸಂತತಿಗೀಯಲ್ ಬಿಡುವೊನ್ನುಮನಾಳ್ಗಟ್ಟುವ ತೊಡರೊಳ್ ತೊಡರ್ದಿರ್ದರರಸುಮಕ್ಕಳ್ಕೆಲಬರ್ (ಪಂಪಭಾ. ೧೦-೩೮).

**ತೊಡರು₂:** ೩. ಷಟ್ಸವಾಧಿಯನೊಂದಿರಲಿ ವಾಚಿಸಲಿ . . . ಕರ್ಮದ ತೊಡರ ಬಿಡಿಸುವುದು (ಗಗಕಾ. ೧೭-೫೩) ; ಎಳೆಹರೆಯದಲ್ಲೇ ಸಂಸಾರದ ತೊಡರನ್ನು ಹರಿದು . . . ಹೊರಟ ಈ ತೇಜಸ್ವಿನಿಯ ಏಕನಿಷ್ಠೆ ಹಿರಿಯ ಅನುಭಾವಿಗಳನ್ನೇ ಬೆರಗುಗೊಳಿಸಿತು (ಕಾವ್ಯಸ. ೧೧೨). ೪. ಭೀಮಫಲು ಗುಣರಿಟ್ಟ ತೊಡರಿನೊಳಾರು ಸಿಲುಕರು ದಿವಿಜದನುಜರಲಿ (ಕುವ್ಯಾ.ದ್ರೋ. ೧೮-೨೪). ೫. ಪ್ರದಕ್ಷಿಣಂಗೈದು ತೊಡರು ಕಾಡಣೆಯಂ ತೆಗೆಸಿ ಇಮ್ಮಡಿ ಘಂಟೇಂದ್ರ ನರೇಂದ್ರಂ ಹನುಮಗತಿಯಿಂದೇರಿದನು (ಬೀಳವಂ. ೧-೪೫ವ). 'ಕಾಡಣೆ' ಪರಾ. ೭. ಅನುಪಮಪ್ರಣವಮಂದುಗೆ ದಯೆಯೆ ತೊಡರು . . . ಚಿತ್ತಿನ ನೊಸಲುಗನ್ನಡಿಯೊಳೆಸೆದನು (ಸಿದ್ಧರಾ. ೩-೪೬); ಸಿರಿಯ ಸಡಗರದ ತೊಡರ ಝಣಝಣರವದ ಮೆಲ್ಲಡಿಯಿಡುವ ಗಮನದ ಭರದಿ ಕಿಙುಬೆಮರಿಡುತ ಬಂದಳು (ನಳಚ. ೩-೫೭); ಚಾಮಿಕಾಕರದ ತೊಡರಿ ನೊಳ್ಪೆಳಗು ಪೊಂಬಿಸಿಲೆಸಕಮಾಗೆ (ನಂದಿವಾ. ೯-೪). ೮. ಕಲಿಯ ಕಾಲ ತೊಡರು ಛಲದಾಳಿಗಲ್ಲದೆ ಇಕ್ಕಬಾರದು (ಬಸವ. ೬೬೫) ; ಬಾವುಲಿಯ ತೊಡರುಗಳ ವೀರಗಣಾವತಾರದ ವೀರಭಕ್ತರು (ಬಸಪು. ೫-೪೦) ; ತೊಡರ ತೆಗೆದರು ಕೈಯಡಾಯ್ದುವ ಜಡಿಯಲಮ್ಮರು...ಕೈದೀವಿಗೆಯ ಮಙೆಯಲಿ ಮಿಡುಕದಿರ್ದುದು ರಾಯನೋಲಗದೊಳಗೆ ಪರಿವಾರ (ಕುವ್ಯಾ.ಕ. ೧-೧೪); ತೊಡರ ಝಣಝಣರವದ ಸುರರುಘ್ಘಡಣದ ಬಿರುದಿನ ಬಾವುಲಿಯ . . . ರಾಯರಕ್ಕಸನೈದಿದನು ಧನುವ (ತೊರರಾ. ೧-೫೫-೧೦) ; ಸೀಸಕದ ಪುಸ್ತಂಗ ತೊಡರಗಾವಳಿಯಿಂದ ಭೂಪೋತ್ತಮ ನಡೆದನುಬ್ಬಿನಲಿ (ಕಂನವಿ. ೧೫-೦೨). ೯. ಪಾಶ್ಚಾತ್ಯ ದರ್ಶನಕಾರರೂ ಎಷ್ಟೋ ತೊಡರು ಗಳಿಗೆ ಗುರಿಯಾಗಿರುತ್ತಾರೆ (ಜೀವಾತ್ಮ. ೪೫). ೧೪. ಹೊಡೆತ ; ಪೆಟ್ಟು (?) : ಬಾಳ ಹೊಯ್ಲೋ ಸಿಡಿಲ ತೊಡರಿನ ಸೂಳುಗಳೋ ಸಿಡಿದಲೆಯ ಗಿರಿಗಳ ಬೀಳುಗಳೊ (ಕುವ್ಯಾಸ. ೨-೧೦೪).

**ತೊಡರ ಬಾವುಲಿ** = ಬಿರುದಿನ ಪೆಂಡೆಯ: ತೊಡರ ಬಾವುಲಿಯೊಳಗೆ ಜವಿ ಹಲವು ದಂಡೆಯಿಂ ಗುರುಗಂಜಿಯಿಂ ಸವೆದ ದಂಡೆ ಮಂಡೆ ಯೊಳೊಪ್ಪೆ (ಬಸರ. ೯-೯೮).

[ <ತೊಡರ್$_1$./ತಮಿ. ತೊಟರ್, ತುಟರ್ ; ಮಲ. ತುಡರ್ ; ತುಳು. ತೊಡರ್, ತೊಡರು ]

**ತೊಡರಿಕ್ಕು** (ಕ್ರಿ). ೧. ತೊಡಕಿಸು ; ತೊಂದರೆಯನ್ನುಂಟುಮಾಡು : ಎನಿತಾನುಮುಪದ್ರವಂಗಳೊಳ್ ತೊಡರಿಕ್ಕಿಯುಂ ಗೆಲಲಾಜದೆ (ಪಂಪಭಾ. ೨-೩೨ವ) ; ಅನ್ಯಮಂತ್ರಿನಿಕರಕ್ಕದಟಿಂ ತೊಡರಿಕ್ಕಿದಂ (ಎಕ. VIII, ಸೊರಬ. ೧೪೦-೫೪ ; 1199). ೨. ಹುರುಡಿಸು ; ಸವಾಲು ಹಾಕು ; ಸ್ಪರ್ಧಿಸು : ಸಾಯಿಸುವ ಸಾವಂಜತೆನಗೆ ಚಿರಾಯು ತೊಡರಿಕ್ಕಿದೆನು ಮಾರ್ಕಂಡೇಯಮುನಿಗೆಂದರಸ ದೊಪ್ಪನೆ ಕೆಡೆದನವನಿಯಲಿ (ಕುವ್ಯಾ.ಶ. ೧-೩). ೩. ಸಂಕೋಲೆ ಹಾಕು ; ಬಂಧಿಸು. [ ತೊಡರ್$_2$ + ಇಕ್ಕು ]

**ತೊಡರಿಚು** 'ತೊಡರ್ಚು' ನೋ.

**ತೊಡರಿಸು** (ಕ್ರಿ). ೧. ಸಿಕ್ಕಿಸು ; ತೊಡಕಿಸು : ಬಲದ ಕಡೆಯ ಮಿಣಿವಲೆ ಯನೊಡ್ಡಿ ತೊಡರಿಸಿ ಹಿಂದಣ ಬೇಟೆಯ ನಾಯ್ಗಳ ಕೆಡಹುವ ಮುಂದಣ ಬೇಡನು (ಶಿವಗೀ. ೬೫೩) ; ಕೊಟದ ತೋಟಯೊಳ್ ತೊಡರಿಸಿಯುಂ ಅಗಲ್ದ ಮನಮಂ ಮಣಿಯಿಸಿಯುಂ . . . ಸುಪ್ರಭಾತ ಸಮೀರಣಂ ತೀಡುತ್ತಿರೆ (೦೬ಲಾವ. ೩-೨೦) ; ಕಡೆಗಣ್ಣ ಪಾಶಮಂ ತೊಡರಿಸುತ (ವಂಕಾರಾ. ೫-೬-೫೨). ೨. ಕೂಡಿಕೊಳ್ಳು ; ಸೇರು : ತೊಡರಿಸುತ ಕೊಡಹಿ ಕಳುಹುವ ಸೂಳೆಯನು ಸೊಡಚುವವನೆಗ್ಗ (ಸರ್ವಜ್ಞ. ೦೯೩೭). ೩. ಸೇರಿಸು ; ಕೂಡಿಸಂ : ತೊಡರ್ಪಂ ತೊಡರಿಸುವ ನರಕಗತಿಯೊಳ್ ತೊಡರ್ಪುದೆ (ಅಜಿಪು. ೨-೭೦) ; ನಿನಗೆ ಅಪಯಶಸ್ಸಿನ ಮೇಲೆ ಆಸೆಯಿದ್ದರೆ ನಮ್ಮ ಹೆಸರನ್ನೇಕೆ ಇದರಲ್ಲಿ ತೊಡರಿಸಿದೆ(ಮಧ್ಯಮ. ೨೦೦). ೪. ನಿಯಮಿಸಂ; ನಿಯೋಜಿಸಂ : ಅತಿ ಭಟರಂ ತೊಡರಿಸಲವರತಿವೇಗದೆ ನಡೆತಂದಾ ಕಡಬ ದುಗ್ರವನಮಂ ಪೊಕ್ಕರ್ (ಹಾಲಾಸ್ಯ. ೧-೪-೬೩). ೫. ಪ್ರವರ್ತಿಸು ; ಉದ್ಯೋಗಿಸಂ : ಬಿಡದೆ ಸೋಂಕುವ ಕೈಗಳಾದಡೆ ತೊಡರಿಸು [ಪಾಕಾಂ. ಚು]ವ ಸತ್ಕ್ರಿಯೆಗಳೊಡನೊಡನುಡುಗೆ ಗದ್ಗದಕಂಠಸಂಗತಿಯಿಂದೆ ದನಿ ಗೊಡುವ (ಬಸಪು. ೩೫-೫). ೬. ಬಂಧಿಸು ; ಕಟ್ಟು.

[ ತೊಡರ್$_1$ + – ಇಸು$_3$ ]

**ತೊಡರು$_1$** 'ತೊಡರ್$_1$' ನೋ.

**ತೊಡರು$_2$** 'ತೊಡರ್$_2$' ನೋ.

**ತೊಡರು$_3$**, ತೊದುರು (ನಾ). ಒಂದು ಬಗೆಯ ತೆರಿಗೆ : ಆನೆಯ ಸೇಸೆ ಗ ೨ ಪ ೬ ತೊಡರು ಹಾ ೧ ಖಾಣ ನಿಬಂಧ ಪ೯ (ಎಕ. VI, ಕಡೂರು. ೬೮-೩೫ ; ?). **ತೊದುರು:** ಕಲುಕು ಹಾ ೨ ತೊದುರು ಗ ೪ ಆನೆಯ ಸೆ ಗ ೬ ಅ ೧ ಪ ೨ (ಎಕ. V, ಹಾಸನ. ೬೪-೬೪ ; ಸು. 1230). [?]

**ತೊಡರುಗಟ್ಟು** (ಕ್ರಿ). ಹುರುಡಿಸಂ ; ಸ್ಪರ್ಧಿಸಂ : ತೊಡರುಗಟ್ಟುವ ಬೈವ ಭಟ್ಟರ ಬಿಡುವ ಕಾದುವ ವೀರಭಟರಿಂದಿಡಿದುದಮರಾವತಿಯ ಸೊಂಪಿನ ಸೂಳೆಗೇರಿಗಳು (ಕುವ್ಯಾ.ಭೀ.೫-೨೦).[ತೊಡರು$_2$(<ತೊಡರ್$_2$) + ಕಟ್ಟು$_1$ ]

**ತೊಡರುಗಾಲು** (ನಾ). ೧. ಅಡ್ಡಲಾಗಿ ಒಡ್ಡುವ ಕಾಲು ; ಅಡ್ಡಗಾಲು: ಅವರು ನೂರೊಂದು ಜನವಿದ್ದರೂ ಅವನೊಬ್ಬನೇ ಎಲ್ಲರನ್ನೂ ಮರ್ದನ ಮಾಡಿಬಿಡುವನು. ತೊಡರುಗಾಲು ಕೊಟ್ಟು ಬೀಳಿಸುವನು (ವಚಭಾ. ೧೭). ೨. ನಡೆಯುವಾಗ ಹರಡುಗಳು ಪರಸ್ಪರ ತಗುಲುವ ಕಾಲಂ. ೩. (ಅಲಂ) ಅಡ್ಡಿ ; ಅಡಚಣೆ. 'ತೊಡಕುಗಾಲು' ಪರಾ.

[ ತೊಡರು$_1$ (< ತೊಡರ್$_1$) + ಕಾಲು$_1$ (< ಕಾಲ್$_1$) ]

**ತೊಡರುಗೊಳ್ಳು** (ಕ್ರಿ). ಬಿಗಿಯಾಗು ; ಬಿಗಿದುಕೊಳ್ಳು : ಅವಯವದ ಸಂದುಗಳೆಲ್ಲವೂ ತೊಡರುಗೊಂಡು . . . ಮಧ್ಯಮವಾದ ಜ್ವರವೇಗ ವುಂಟಾಗಿರುವುದೇ ವಾತಶ್ಲೇಷ್ಮಜ್ವರವೆನಿಸಿಕೊಳ್ಳುವುದು (ಸಕವ್ಯ. ೯೫).

[ ತೊಡರು$_2$ (< ತೊಡರ್$_2$) + ಕೊಳ್ಳು$_1$ (< ಕೊಳ್$_1$) ]

**ತೊಡರುಮುಳ್ಳು** (ನಾ). ತೊಡಕಿ ಹಿಡಿದಂ ಕೊಳ್ಳುವ ಕೊಕ್ಕೆ ಯಂತಿರುವ ಮುಳ್ಳು : ತೊಡರುಮುಳ್ಳಿಗೆ ತಗುಲಿ ಬಟ್ಟೆಯೆಲ್ಲಾ ಹರಿದುಹೋಯಿತು (ರೂಢಿ).

[ ತೊಡರು$_1$ (< ತೊಡರ್$_1$) + ಮುಳ್ಳು (< ಮುಳ್) ]

**ತೊಡರುಲಿ** (ನಾ). ಆಭರಣದ ಧ್ವನಿ ; ಒಡವೆಯ ಸದ್ದು : ಮಾತೆಯ ಬಳಿಗೆ ಪರಿದೈದಿ ತೊಡರುಲಿಯೊಳು ಮಾಡುತ್ತ ಮುದ್ದ (ನವಮೋ. ೧೫-೫೮). [ ತೊಡರು$_2$ (<ತೊಡರ್$_2$) + ಉಲಿ$_2$ ]

**ತೊಡರ್ಚು, ತೊಡಚು, ತೊಡರಿಚು** (ಕ್ರಿ). ೧. ಕಟ್ಟು ; ಬಂಧಿಸು : "ತೊಡರ್ಚು – ಬಂಧನೇ" (ಶಮುಧಾ) ; ತನ್ನ ನಿರ್ಭರಪ್ರಣಯಿನಿಗಳ ದೊಳ್ ತೊಡರ್ಚಿ ತಾಗಿದಳ್ (ಆದಿಪು. ೧೨-೩೬ ವ) ; ದಾಮೋದರನಾಂ ಮತ್ತಿಯನೀ ಮುಱಿದಪೆನೆಂದದೊಂದು ಕುಜಮಂ ಕಾಂಚೀದಾಮದೆ ತೊಡರ್ಚಿ . . . ಮುಱಿದಳ್ (ಜಗವಿ. ೫-೨೧) ; ತೊಡರ್ಚಿದ ತೊಡಕ ಬಿಡಿಸ ಪೋಗಿ ಕಪ್ಪಿನೊಳ್ಕೆಡದೊಲಾಯ್ತು (ಸೂಬಸೋ. ೨೦-೬೯) ; ಪಿಂಗಾಲ್ಗೆ ತೊಡರ್ಚಿದಗ್ಗರಣೆಯಂ ಛಟಛಟನೆ ಕೀಳ್ತು (ರಾಜಶೇ. ೬-೧೧ ವ). ೨. ಸಿಕ್ಕಿಸು ; ತೊಡಕಿಸು : ದೇವರೆನ್ನಂ ಧರಾಭರದೊಳ್ ತಂದು ತೊಡರ್ಚಿ ಪೂಣ್ದು ತಲೆಗೋದಿದರ್ಪಂ (ಆದಿಪು. ೪-೮೧) ; ನಿಱಿಯ ಸೆಱಂಗನೆತ್ತಿ ನಿಜನೀವಿಯೊಳುಯ್ದು ತೊಡರ್ಚಿ (ಕುಸುಮಾ. ೬-೭೮). ೩. ಸೇರಿಸು ; ಹೊಂದಿಸು ; ಕೂಡಿಸು ; ಜೋಡಿಸು : ತಡವಡಿಸಿ ಯತಿಯನಿಂತಿರೆ ತೊಡರ್ಚಿ ಕೆಡೆವೇೞ್ದೊಡಕ್ಕುಮದು ಯತಿಭಂಗಂ (ಕವಿರಾ. ೧-೭೩) ; ತಡೆಯದೆ ಭವ್ಯರನಱದೊಳ್ ತೊಡರ್ಚಿ ಕಯ್ಗೊಳಿಪ ಸರ್ವಯಶರಂ ನೀಂ ಕಂಡು (ಶಾಂತಿಪು. ೪-೬೭) ; ಮಾಂಗಾಯ ಫಲಾವಳಿಗಳೊಳಂ ತೊಡರ್ಚಿದ ಪುನ್ನಾಗದ ಸೂಸಕಂಗಳೊಳಂ . . . ಪೊಂಬಾಱಯ ಚಾಮರಂಗಳೊಳಮೆಸೆವ ಮಂಟಪಂಗಳ್ (ಕಾದಂಉ. ೭೮೩) ; ದೇವಾಂಗವಿತಾನಮಂ ತೊಡರ್ಚುವ ನವಮುಕ್ತಾವಳಿಯಂ ಕಟ್ಟುವ ದಿಗ್ದೇವಿಯರೇಂ ರಾಗರಸದೊಳೋಲಾಡಿದರೋ (ಮಲ್ಲಿಪು. ೧೪-೨೩೦) ; ತದೀಯ ಪಾಣಿಪಲ್ಲವಮನನುರೂಪ ಕನ್ಯಾಕರಕಿಸಲಯದೊಳ್ ತೊಡರ್ಚಲ್ ಬಗೆದು (ಅರ್ಧನೇ. ೨-೩೪ ವ). ೪. ಧರಿಸುವಂತೆ ಮಾಡು ; ತೊಡಿಸು : ಬೇಡವೇಡನೆಯುಂ ಕಿವಿಯೊಳ್ತೊಡರ್ಚಿ ಪೋದಳೀ ಕುಸುಮಮಂಜರಿಯಂ (ಕಾದಂಪೂ. ೭೬೮) ; ಒಲವಿಂ ಮಣಿನೂಪುರಮಂ ತೊಡರ್ಚಿದಳ್ (ಉದ್ಭಟ. ೮-೩೯) ; ಮೆಚ್ಚಿ ವಸುದೇವನ ಕೊರಳ್ಗೆ ತೊಡರ್ಚಿದಳು ನವರತ್ನಮಾಲೆಯು (ಸಾಳ್ವಭಾ. ೧೮-೩೬) ; ಫುಲ್ಲಶರನ ಪಲ್ಲವಶರಕ್ಕೆ ಕೆಂಗಱಗಟ್ಟಿದಂತೆ ಕೆಂಬೆಳಗಂ ಕಱೆವ ಕೆಂಬೆರಲುಂಗುರಮನಂಗುಲಿಯೊಳ್ತೊಡರ್ಚಿಯುಂ (ರಾಜಶೇ. ೦೩-೫೯ ವ). ೫. ಮುಡಿಯುವಂತೆ ಮಾಡು; ಮುಡಿಸು: ಲಳನೆಯ ಕೇಶದಲ್ಲಿಯುಲರುಂ ತಳಿರುಂ ಪೊಳೆವಂದದಿಂದೆ . . . ದೇಸೆಯ ಪೂಮುಡಿಯಂ ತೊಡರ್ಚಿದರ್ (ಚಂದ್ರಪು. ೬-೩೪). ೬. ಪೋಣಿಸು ; ಸರಕಟ್ಟು : ಧಾತ್ರೀಶನ ಸಾಂದ್ರಮನಸ್ಸೂತ್ರದೊಳಾ ಸತಿಯ ಗುಣಗಣೋದ್ಗಮತತಿಯಂ ಚಿತ್ರವಿಧದಿಂ ತೊಡರ್ಚಿದ ಧಾತ್ರಂ ಮುಂ ಮಾಲೆಗಾಱರೊಡನಾಡಿದನೋ (ಚಂದ್ರಪು. ೩-೨೮) ; ನಳಿನಗುಣದೊಳ್ ತೊಡರ್ಚುತುಂ ಮೆಲ್ಲಮೆಲ್ಲನಿರವಂತಿಯ ಪೂದೊಡಗೆಗಳಂ ವಿರಚಿಸಿದಳ್ (ಗಿರಿಕ. ೫-೭೨) ; ಮಲ್ಲಿಗೆ ಮುಗುಳ ಸೂಸಕಂಗಳಂ ತೊಡರ್ಚಿ ನಿಮಿರ್ಚಿದ ಚೂತಪಲ್ಲವದ ಚುಂಚುಲೋವೆಯಿಂ (ರಾಜಶೇ. ೧೦-೩೦ ವ). ೭. ತೊಡಗಿಸು ; ನಿಯೋಜಿಸು : ಕರ್ಣನಂ ದ್ವಂದ್ವಕಲಹದಿಂ ದೇವಾಂಗನಾ ರತಿಕಲಹದೊಳ್ ತೊಡರ್ಚಿ (ಜಗವಿ. ೧೫-೫ ವ). ೮. ಉಂಟುಮಾಡು ; ಆಗಿಸು : ಅಳೀಕ ಲಜ್ಜೆಯಿನೇಂ ನಿನಗೆ ಗಮನಾಯಾಸಮನೆ ತೊಡರ್ಚಿದಪ್ಪೆಂ (ಕಾದಂಉ. ೩೯೯) ; ಮತಿ ಸಮ್ಮೋಹಮನಿದಿರವರ್ಗೆ ತೊಡರ್ಚಲ್ಕೇೞ್ದೊಡಲ್ಲಿಗಲ್ಲದು ದೋಷಂ (ಕಾವ್ಯಾವ. ೪೫೬) ; ವಿರಹಾತುಳಾಗ್ನಿ ತಾಪವನಿದನೆಂತು ನಂದಿಸುವೆನೇನನೊಡರ್ಚುವೆನಾವುದಂ ತೊಡರ್ಚುವೆಂ (ಕುಸುಮಾ. ೧೦-೨೩). ೯. ಆರಂಭಿಸು ; ತೊಡಗು ; ಪ್ರಾರಂಭಮಾಡು : ಮೆಯ್ಗಲಿತನದಿಂ ತೊಡರ್ಚಿದವು ಕಾಳೆಗಮಂ ಕಡುಕೆಯ್ದು ಕೋೞಿಗಳ್ (ದಶಕು. ೦೧-೫೦) ; ಕಳಲೆನಾಡೊಳೊಡರ್ಚಿ ತೊಡರ್ಚಿ ತೋಟಿಯಂ . . . ಬಂದ ಮಲೆನಾಡಿನ ಸಿಂಗಳರಾಯ (ಚಿಕವಿ. ೨-೬೮). ೧೦. (ಬಿಲ್ಲಿಗೆ ಬಾಣವನ್ನು) ಹೂಡು,–ಸಂಧಾನ ಮಾಡು,–ತೊಡು: ಮೆಲ್ಲನೆ ಬಿಲ್ಗೊಳಂಬಂ ತೊಡರ್ಚಿ (ನೇಮಿಪು. ೧-೭೫ವ); ಬಿಲ್ಗೀಸುವ ಬಾಣಮಂ ತಿರುಪಿ ತಿರ್ದುವ ಮಾರ್ತಿರುವಂ ತೊಡರ್ಚಿನೋಟ್ಪ ಸಹಜ ಕ್ರಿಯಾವನ ವನೇಚರರಿಂ ಬಗೆಗೊಂಡುದಾ ವನಂ (ಜಗವಿ. ೧೬-೦೬) ; ಹೊಸಮಸೆಯ ಬಾಣಂಗಳಂ ತೊಡರ್ಚಿ ಹೆಱದಲೆಯನಾತ್ಮಜನನೆಚ್ಚು ಮರಳೆಚ್ಚು ಬೊಬ್ಬಿಱದು ಕೈಯೊಡನೆಸೆಯೆ (ಜಬಪು. ೪೦-೦೨).

**ತೊಡಚು** : ೧. ಸಿದ್ಧಪತಿಯೊಂದು ದಿನ . . . ಪದ್ಮಾಸನಂಗೆಯ್ದು ಶಶಿರವಿಗಳಂ ಬಲಿದು ಕರಣಂಗಳ ತೊಡಚಿ ಕುಂಡಲಿಗೊತ್ತಿ (ಸಿದ್ಧರಾ. ೪-೨೭) ; ರೞಾಡಿಸುವ ತೆಗೆವ ತೊಡಚುವ ಪಿಡಿವ . . . ವಿರೋಧಿಯಿಂಗಿತವಱವ ಭಿನ್ನಣಂ ಹರನರರೊಳೆಸೆದಿರ್ದುದು (ಚಬಪು. ೫೩-೫೦). ೨. ಬಲಿದಂತಃಕುಂಡಲಿಯೊಳ್ ಪ್ರಾಣವ ತೊಡಚಿ . . . ನೆಗೆದಳ್ ಗಗನಾಂಗಣಕೆ (ವೀರೇಜ. ೦-೬೮); ವರಮಂದಿರದ ಮೇಲ್ವಲಗೆಯ ಕೊಂಡಿಗೆ ಸರಪಳಿಯನು ತೊಡಚಿದರು (ಮೋಹತ. ೧೭-೪೯). ೩. ಕಡಿಗಳ ಹದಿನೆಂಟನೊಡಗೂಡಿ ಸಂಧಿಸಿ ತೊಡಚಿ ಕಟ್ಟದೆ ನರರ ಬಂಧನದಲ್ಲಿ (ದೇದಾವ. ೩೭-೭೨) ; ನೇಹದ ನಲ್ಲರ ತೋಳೊಳ್ ತೊಡಚಿದ ಬಾಹುಲತಿಕೆದೆಗೆದೊಯ್ಯನೆ ಕುಲಟಾವ್ಯೂಹಂ ನಡೆತಂದುದು (ಜಯಕಾ. ೧೪-೨). ೬. ಮಾಲೆ ತೊಡಚುವ ಕಜ್ಜಮಂ ಮಱೆದು ನಿಬ್ಬೆಱಗುವಡೆದು ಲೆಪ್ಪದ ಪೆಣ್ಣನಂತಿರ್ದಳು (ಸೌಂದಪು. ೧೨-೪೦). ೯. ಖಗರಾಜನೊಳು ಹಿಂದೆ ಕಾದಿ ನುಗ್ಗೆದ್ದವರ್ ಜಗಳವ ತೊಡಚಲುಬಹುದೆ (ಮೋಹತ. ೩೯-೨೦). ೧೦. ಕಡೆಗಾಗಳೆನಿಪ ಬಾಣವನು ಭೂಚಾಪದಿಂ ತೊಡಚಿ ಎಸುವುದು (ಅಂಜಚ. ೩-೧೫೫) ; ಒಂದನಲ್ಲದೆ ನಿನ್ನ ತಲೆಗೆರಡಂಬ ತೊಡಚಿದರೆ ಇಂದು ನಿನ್ನಯ ಬಾಯ ತಂಬುಲ ತಿಂದವನು ನೋಡು (ಕುಮಾದ್ರೋ. ೧೭-೩೮) ; ಎಚ್ಚ ಬಾಣವ ತಱದು ತೊಡಚಿದನುಚ್ಚಿ ತೋಮರದಂಬನು (ತೊರರಾ. ೩-೬-೫೫) ; ಸದ್ಭಾವವೆಂಬ ಬಿಲ್ಲಿಂಗೆ ಸುಮನವೆಂಬ ನಾರಿಯ ಹೂಡಿ ಸುಜ್ಞಾನವೆಂಬ ಅಂಬ ತೊಡಚಿ (ಮೋಳಿಮಾ. ೨೪೫-೭೯೬ ಟೀಕ). ೧೧. ಸೇರು ; ಕೂಡು ; ಹೊಂದು : ನಿಮ್ಮ ಗರ್ಭದೊಳು ತೊಡಚಿ ಏಳೇ ತಿಂಗಳಿಗೆ . . . ಉದಯಿಸುವನು (ಸಾಳ್ವಭಾ. ೨೦-೯೩) ; ತೊಡರಿಸುತ ಕೊಡಹಿ ಕಳುಹುವ ಸೂಳೆಯನು ತೊಡಚುವವನೆಗ್ಗ (ಸರ್ವಜ್ಞ. ೦೯೩೭). ೧೨. ಎದುರಿಸು ; ವಿರೋಧಿಸು : ಕರ್ಣನ ನಾವು ತೊಡಚುವರಲ್ಲ ತೆರಳಿಚು ಪಾಳಯಕೆ ರಥವ (ಕುಮಾಕ. ೧೪-೩೭) ತೊಡಚಬೇಡ ಕುರುವಂಶದ ಹೊದಱನು ಕಡಿವ ಕಠೋರವಿಕ್ರಮನ ಒಡನಳಿಗಲಿಗಳೆನುತ ಕೌಂತೇಯರ ಕಡೆಯ ಕಾಳೆಗಳೊದಱದುವು (ನೇಮಿಸಂ. ೨೯-೪೪). ೧೩. ಪ್ರಾಪ್ತವಾಗು ; ಉಂಟಾಗು : ಆಗಲೀ ವೈಷ್ಣವಕೆ ನಮ್ಮಯ ತಾಗುಥಟ್ಟಿನ ರಕ್ಷೆ ತೊಡಚಿದುದಾಗಳಿದ್ದುದು ಪಾಶುಪತ ಶರವದಱ ಬಳಿವಿಡಿದು (ಕುಮಾಆ. ೧೪-೧೦). **ತೊಡರಿಚು** : ೧೨. ಒಡನೆ ಬೊಬ್ಬಿಡುವನು ಮಹಾಹವ ತೊಡರಿಚುವರಿಲ್ಲಾ ಎನಂತ (ಕುಮಾವಿ. ೭೮೩. ೪-೦೦).

**ತೊಡರ್ಚಿಕೊಳ್, ತೊಡಚಿಕೊಳ್** = ೧. ಕಟ್ಟಿಕೊಳ್ಳು ; ಬಂಧಿಸಿಕೊಳ್ಳು : ಆ ಕುನ್ನಿಗಳಂ ತಮ್ಮ ಶ್ರೋತ್ರನಾಳದೊಳ್ ತೊಡರ್ಚಿಕೊಂಬುದುಂ (ಪಂಚತಂ. ೨೦-೫). ೨. ಸಿಲುಕಿಸಿಕೊಳ್ಳು ; ಸಿಕ್ಕಿಸಿಕೊಳ್ಳು : ಮಾಯಾ ಮೋಹನಂಗಳಲಿ ತೊಡಚಿಕೊಂಬ ಸಮಸ್ತವಸ್ತುವನಡಕಿಕೊಂಬ ವಿದಗ್ಧಮುಗ್ಧೆಯರು . . . ಎಸೆದರು (ತೊರರಾ. ೧-೫-೩೦). ೩. ಧರಿಸಿಕೊಳ್ಳು ; ತೊಟ್ಟುಕೊಳ್ಳು : ಮುನಿಯ ವೇಷವ ತೊಡಚಿಕೊಂಡಿಹ ಕಾಲನೇಮಿಪ್ಪಂತೆ ರಂಜಿಸಿದ (ತೊರರಾ. ೬-೩೬-೭೮).

[ ತೊಡರ್$_1$ + – ಚು$_1$ ]

**ತೊಡರ್ಚುವಲೆ** (ನಾ). ಒಂದು ಬಗೆಯ ಬಲೆ : ತೊಡರ್ಚುವಲೆ ತೋಳುವಲೆ ಮರೆವಲೆ ಸಗಾಢವಲೆಗಳ ಹೊರೆಗಳೋಳಿಯಂ ಪೊತ್ತು ನಡೆತಂದುದು . . . ಭೂತಗಣಂಗಳು (ಸೌಂದಪು. ೧೮-೩೯). [ ತೊಡರ್ಚು + ಬಲೆ$_1$ ]

**ತೊಡರ್ಪು, ತೊಡಪ್ಪು₃** (ನಾ). ೧. ಕಟ್ಟು ; ಬಂಧನ : ಕಿಡುಗುಮೆ ರಾಜ್ಯಂ ರಾಜ್ಯದ ತೊಡರ್ಪದೇವಾಟಿತ್ತಿ (ಪಂಪಭಾ. ೧-೮೨) ; ದಯಿತಾಸಂಬಂಧ ಬಂಧಂ ಭವಪರಿಣತಿ ತನ್ಮೂಲವಿಾ ಬೇವಸಂ ನಿಶ್ಚಯಮೆಂದಾತಂ ತೊಡರ್ಪಂ ಬಿಡಿಸಿ ಕಿಡಿಸಿ ದುರ್ಮೋಹಮಂ (ಶಾಂತಿಪು. ೯-೧೪) ; ಪರಿಜನಕ್ಕೆಡಱಾದೊಡೆ ಪೊರೆವುದುಂ ಪಡೆದುದಂ ಪಚ್ಚುಕುಡುವುದುಂ ತೊಡರ್ಪಾಗೆ ಬಿಡಿಸುವುದುಂ . . . ಉತ್ತಮಗುಣಂಗಳೊಳವು (ಪಂಚತಂ. ೫೯೪-೨) ; ಸುಕುಮಾರನ ಮೋಹಬಂಧದ ಬಳ್ಳಿವಳ್ಳಿಯ ತೊಡರ್ಪಂ ಪಱಿಪಡೆ ಬಿಡಿಸುವಂತೆ (ಸುಕುಮಾ. ೧೧-೩೮ ವ) ; ಮನದೊಳ್ಮನ್ನಮೆ ರಾಜ್ಯವಲ್ಲಿಯ ತೊಡರ್ಪಂ ನಾಡೆಯುಂ ಬಿಟ್ಟು (ಶಾಂತೀಶ್ವ. ೧೩-೭೯). ೨. ಗೋಜು ; ತೊಡಕು ; ಗೊಂದಲ; ಸಿಕ್ಕು : ಮೋಹಬನ್ಧನದ ತೊಡರ್ಪಿನೊಳ್ತೊದಟ್ದು ಮೋಹಿಸಿ (ಎಕ. VII, ಶಿಕಾರಿ. ೨೦೨-೨೪ ; 913) ; ಗಾಂಗೇಯಂ ದಾಶರಾಜನಲ್ಲಿಗೆ ಪಂದಾತನ ಮನದ ತೊಡರ್ಪಂ ಪಿಂಗೆ ನುಡಿದು (ಪಂಪಭಾ. ೧-೬೨ ವ); ಪಾಪ ಬಂಧನದ ತೊಡರ್ಪಿನಂತು ಪಱಿಗುಂ ದಯೆಯಿಂ ಬೆಸಸಿಂ (ವರ್ಧಪು. ೧೨-೪). ೩. ಸಂಬಂಧ ; ಹೊಂದಿಕೆ : ಒಡಹುಟ್ಟಿಯುಮೊಡವಳೆದುಂ ಕಡೆಯೊಳ್ ನೀನೆನ್ನನಿಂತು ಕಂಡುಂ ಬಂದಿರ್ದೊಡೆಯುಡಿದೀ ನಮ್ಮಿರ್ವರ ತೊಡರ್ಪಿಂದಂ ನೀಂ ಪುನರ್ನವಂ ಮಾಡಿನ್ನುಂ (ಶಾಂತಿಪು. ೭-೧೦೪) ; ಇಂತು ಚಿಂತಿಸುವಂಗೆ ಬಾಹ್ಯವಸ್ತುಗಳೊಳ್ ತೊಡರ್ಪಿಲ್ಲ (ತತ್ತ್ವಾರ್ಥ. ೩೦೬). ೪. ಅಡ್ಡಿ ; ವಿರೋಧ : ಅರಸುಮಕ್ಕಳೆಲ್ಲರ್ ಬರೆ ನೀಂ ನಡುವೆಸೆದು ಬಾರದಾವುದು ತೊಡರ್ಪಿನಿಂ ಪೆಱಗೆ ನಿಂದೆಯೊರ್ವನೆ ಕಂಡಾ (ಕಾದಂಬ. ೬೬೬) ; ತೊಳ್ದಿನ್ನ ತೊಡರ್ಪುದೋಱದಿನಿಸಂ ಮುನಿಸಂ ಮುನಿಸಾನದಂತೆ ಬಿಟ್ಟನ್ನಿರೆ ಕೀರ್ತಿಲಕ್ಷ್ಮಿ ಬಿಡುಗುಂ ಕಿಡುಗುಂ ಕಡುಪೆಂಪಿನೆಟ್ಟರಂ (ಪುಷ್ಪಪು. ೭-೬೮). ೫. ಆಭರಣ ; ತೊಡವು : ತೋಳ ತೊಡರ್ಪು ಕಣ್ಗೆಸೆಯೆ . . . ಬಾಜಿಸಿದಳ್ ಸುವಿಲಾಸೆ ವೀಣೆಯಂ (ಸೂಕ್ತಿಸು. ೫-೧೯); ಅಲಸುವ ಮೆಯ್ಯುಂ . . . ಬಿಗು [ ಬಿಗು ] ರೇಜುತಿರ್ಪ ಮೇಖಳೆಯ ತೊಡರ್ಪು ಕಣ್ಗೊಳಿಪ ಯಾನದ ಮೆಲ್ಪುಮಪೂರ್ವಭಾವಮಂ ಲಲನೆಗೆ ತಂದುವಂದನುದಿನಂ ಬಳೆಯುತ್ತಿರೆ ಗರ್ಭದರ್ಭಕಂ (ಪುಷ್ಪಪು. ೪-೧೫). ೬. (ಅಲಂ) ಅಪ್ಪುಗೆ; ಆಲಿಂಗನ : ಅಡಿಮುಡಿ ಸಂಚು ವಂಚನೆ ವಿಡಾಯಮುಡರ್ಪು ತೊಡರ್ಪು ತೋಟಿ . . . ನುಸುಳ್ ಗಣಿಕಾಂಗನೆಯರ್ಗೆ ಶಾಶ್ವತಂ (ವೃಷವಿ. ೨೮-೬೩). **ತೊಡಪ್ಪು₃** : ೩. ಆ ಮರದ ಶಾಖೆಯ ತೊಡಪಿಂದ ಆ ಮರದ ಫಲವ ಕೈಗೆ ತಾಹಂತೆ (ತುಂಬಿಂಗಾ. ೩೭).

[ ತೊಡರ್₁ + – ಪ್ಪು₂./ತಮಿ. ತೊಟರ್ಪು ]

**ತೊಡವ** 'ತೋಡ್₂' ನೋ.

**ತೊಡವಣಿಕ** (ನಾ). (ಕರಾ) ಚೊಚ್ಚಲು ಕರುವನ್ನು ಈದ ಎಮ್ಮೆ ,-ಹಸು : ತೊಡವಣಿಕ= ಮೊದಲು ಬಾರಿ ಕರು ಹಾಕಿರುವ ಹಸು ಅಥವಾ ಎಮ್ಮೆ (ಸಂಶೋಧ. ೧೭೮). [ <ತೊಡಂಕು₁ + ಮಣಿಕ (<ಮಣಕ) ]

**ತೊಡವು** (ನಾ). ೧. ಆಭರಣ ; ತೊಡಿಗೆ : "ಪ್ರತಿಕರ್ಮಂ ನೇಪಥ್ಯಂ ... ವಿಭೂಷಾಪ್ರತಾನವಾಭರಣಮೆಂಬವವು ತೊಡವಕ್ಕುಂ" (ವಸ್ತುಕೋ. ೭೫-೧) ; "ಪಚ್ಚಂ ತೊಡವುಂ ಪಸದನಮೆನಲಾಭರಣಂ" (ಕವಿಕಂ. ೧೭೮); ಈ ತೊಡವೇವುದೊ ರೂಪೆ ಸಾಲದೇ (ಪಂಪಭಾ. ೩-೮೬) ; ತೊಡವಿಂಗೆ ತೊಡವು ನಿರತಂ ತೊಡವೇಂ ಪೆಱತುಂಟೆ ಜಿನನ ತೊಡವೆನೆ ಮತ್ತಾ ತೊಡವೆದ್ದಮಪ್ಪ ರೂಪಿನ ಬೆಡಂಗು ಭೂಷಣವಿಶೇಷಮಂ ಬಾರಿಸದೇ (ಶಾಂತಿಪು. ೧೧-೫೭); ಕುಂತಳ ಭೂತಳಕ್ಕೆ ತೊಡವಾದುದು ತಾಂ ವನವಾಸಿ ದೇಶಂ (ಎಕ. VIII, ಸೊರಬ. ೨೬೨-೪ ; 1077) ; ಪೊಸಸುಗ್ಗಿಯ ತೊಡವು ಪೆಱತೆ ಮಲ್ಲಿಗೆಯೆ ಪೊಲಂ (ಮಲ್ಲಿಪು. ೫-೧೫) ; [ಉ]ಡೆವಣಿಯ ತೊಡವು ಘಲಘಲಿಸುವಂದುಗೆ (ಬಸವ. ೧-೧೫೫) ; ಚಂದ್ರಾನನೆ ತೊಡವಿನ ಪೆಟ್ಟಿಯನಾನಂದದಿನೀಯಲು (ದಶಕು. ೮-೯೪); ತೊಡವುಗಳ ತೊಡಕಿಲ್ಲದವಯವಂ (ಜೈಮಿಭಾ. ೧೮-೨೫). ೨. ಅಲಂಕಾರಪ್ರಾಯನಾದವನಂ; ಶ್ರೇಷ್ಠನಾದವನಂ: ಎಲೆ ಭೂಪಾಲ ವಂಶದ ತೊಡವೆ ಮೆಚ್ಚಿದೆ ನಾನು (ನಿಘಾಗ. ೪-೯-೪೧). ೩. ಉಡಂಪು : (ಕ).

**ತೊಡವುಮಾಡು** = ಆಭರಣವನ್ನಾಗಿ ಮಾಡು ; ಒಡವೆಯಾಗಿಸು: ಜವ್ವನಿಗಿನಿಯನಿತ್ತ ನಖರದಕ್ಷತಂಗಳನೆ ತೊಡವುಮಾಡಿ ಮೆಱೆವುದನವ ಳೊಡನಾಡಿ ನೋಡಿ (ಚಂದ್ರಪು. ೮-೫೫ ವ).

[ ತೊಡು₁ + – ವು./ತೆಲು. ತೊಡವು ]

**ತೊಡವುಲಿ** (ನಾ). ಆಭರಣಗಳಿಂದ ಉಂಟಾಗುವ ಧ್ವನಿ ; ಒಡವೆಗಳ ಶಬ್ದ : ಕಡೆಗಣ್ಗಳ ಹೊಳಹಿನ ಬಳ್ಳಿಮಿಂಚಿನ ತೊಡವುಲಿಗಳ ಘನರವದ ಮುಡಿಯ ಮುಂಗಾರ ಮೇಘದೆ ಸೋಗೆನವಿಲಾಟದಡವ ತೋಱಿದ ರಂಗನೆಯರು (ಕಂಠವಿ. ೮-೬೫). [ ತೊಡ + ಉಲಿ₂ ]

**ತೊಡವೆ** (ನಾ). ಹೊಂದಿಕೊಂಡಿರುವವಳಂ ; ಸಹಚರಿ : ನಂಬಿದ ತೊಡವೆಯು ತಿಂಬರ್ಗೆ ನಡುವಪ್ಪಂ ಬಡಿಯೊಳಗಟ್ಟೊವವಗೆ ಇಂಬಿನ ನಂಟನ ಸತಿಗಳುಪಿರ್ದಗೆ ಕುಂಭಿನಿನರಕವಾದಪುದು (ತರ್ಕಕಾ. ೧೬-೫೭).

[ ← ತಮಿ. ತೊಟುವೈ ]

**ತೊಡವೆಳಗು** (ನಾ). ಆಭರಣದ ಕಾಂತಿ,-ಬೆಳಗು : ತೊಳಪ ಮಾಣಿಕದ ಮುತ್ತಿನ ನೀಲದ ತೊಡವೆಳಗಿನೆಲೊಪ್ಪಿದವಾಗ (ಶ್ರೀಪಾಲ. ೪-೧೨೫) ; ಕತ್ತಿವೆಳಗು ತೊಡವೆಳಗುಗಳ್ ಮಾಡೆ ಬೆಳಗಂ (ಚಬಪು. ೫೦-೨೩) ; ತೊಡವೆಳಗಿಂದ್ರಚಾಪಲತೆ ಸೋರ್ಮುಡಿ ಕಾರ್ಮುಗಿಲು (ರಾಜಶೇ. ೧೩-೯೩).

[ ತೊಡ + ಬೆಳಗು₂ ]

**ತೊಡಹ₁** 'ತೊಡೆಪ' ನೋ.

**ತೊಡಹ₂** (ನಾ). ೧. ತೊಡುವಿಕೆ ; ಧರಿಸುವಿಕೆ. ೨. ಉಡುಪು ; ಉಡುಗೆ : ಧೂರ್ತವೇಷದ ತೊಡಹವನು ತೊಟ್ಟಲ್ಲಮಪ್ರಭು ಬಂದು ನಿಂದಿರ್ದ (ಪ್ರಭುಲಿಂ. ೫-೭). ೩. ವೇಷ : ತೊಡು ಮಹಾಸ್ವವನಿನಗೆ ಕಪಟದ ತೊಡಹದವನಿವ ವಿಪ್ರನಲ್ಲಿವ (ತೊರರಾ. ೧-೧೧-೨೦).

[ ತೊಡು₁ + – ಹ₂ ]

**ತೊಡಹಗಾಱಿಕೆ** (ನಾ). ನಯಗಾರಿಕೆ : ತೊಡಹಗಾಱಿಕೆಯೊಳಾ ಮಂತ್ರಿ ಯಾಡಿದ ಮಾತಿಗೊಡನಹುದಹುದೆಂದ ನಗುತ (ಭರತೇ. ೨೦-೧೨೩).

[ ತೊಡಹ₁ (<ತೊಡೆಪ) + – ಕಾಱ + – ಇಕೆ ]

**ತೊಡಹತರ್** (ಕ್ರಿ). ಸಮಾಧಾನಗೊಳ್ಳು ; ಅಂಕೆಯಲ್ಲಿಟ್ಟುಕೊಳ್ಳು : ತನ್ನೊಳು ತಾನೆ ತೊಡಹತಂದುಕೊಂಡನು ಮನವ (ತೊರರಾ. ೬-೨೬-೧೩).

[ ತೊಡಹ₁ (<ತೊಡೆಪ) + ತರ್ ]

**ತೊಡಹು₁** 'ತೊಡಪ್ಪು₁' ನೋ.

**ತೊಡಹು₂** 'ತೊಡಪ್ಪು₂' ನೋ.

**ತೊಡಹು₃** (ನಾ). ಲೇಪನ : ಮೃಡಪಿತಾಮಹಪೂಜೆಗಾ ಸತಿ ಹಿಡಿಹಿನಲಿ ಮನೆವರಳಿ ಮುದ್ರೆಯ ತೊಡಹು ಹೊಱಗೊಳಗಿಂದುಮುಖಿಯರ ನ್ಯಾಸ ಮುದ್ರೆಯಾಲಿ (ಕುಮಾ. ಆ. ಓರಿಇ. ೩೬-೪೪). [ <ತೊಡಪ್ಪು₁ ]

**ತೊಡಾಯ** (ನಾ). (?) : ಚಿಕದೇವರಾಜ ಒಡೆಯರು ತಮ್ಮ ಸಾಮಾಜಿಕ ರೊಡನೆ ಆಲೋಚನೆಮಾಡಿ ೧೮ ಕಛೇರಿ ಎಂಬುದಾಗಿ ನಿಬಂಧನೆ ಮಾಡಿದರು ಯಾವವೆಂದರೆ ೧. ನಿರೂಪದ ಚಾವಡಿ , . . ೯. ತೊಡಾಯದ ಚಾವಡಿ (ಚಾಮುವಂ. ೧೪೦) ; ತೊಡಾಯದ ಚಾವಡಿ—ಇದರಲ್ಲಿ ಪೊಮ್ಮಿನ ಐವಜಿನಲ್ಲಿ ಶ್ರೀರಂಗಪಟ್ಟಣದಲ್ಲಿ ಮಾತ್ರ ಅರ್ಧ ಐವಜು ತೆಗೆದುಕೊಳ್ಳುವಂತೆ ಕಟ್ಟು ಮಾಡಿದರು (ಮಹಾವಂ. I, ೧೪೮). [ ? ]

**ತೊಡಿ** (ನಾ). ಕೈತೋಟ ; ಮನೆಯ ಮುಂದಿನ ಅಥವಾ ಹಿಂದಿನ ತೋಟ : ತಾಯಿ ಮತ್ತು ಮಗ ಅನ್ಯರ ಗದ್ದೆ ಮತ್ತು ತೊಡಿಗಳಲ್ಲಿ

ಗೇಯಬೇಕಾಯಿತು (ಹುಲಿಹಾ. ೪) ; ಅಂದಿನಿಂದ ಕೊಳುಂಬನು ಪಾಪನ ತೊಡಿಯಲ್ಲಿ ಕೆಲಸ ಮಾಡಲು ಬರಲಿಲ್ಲ (ಧೂಮಮ. ೪೦).

[ ದೇ.# ತಮಿ. ತೊಟು ; ಮಲ. ತೊಟ್ಟಿ ; ಕೊಡ. ತೊಡಿಯ ]

**ತೊಡಿಕೆ** 'ತುಡಿಕೆ' ನೋ.

**ತೊಡಿಗೆ** 'ತೊಡುಗೆ' ನೋ.

**ತೊಡಿಲಿ.** (?). (?) : ನಾವದಕ್ಕರಲ್ಲಿ ಅಳ ಆಳ ತೊಡಿಲಿ ಮು[೭]ಅಲ್ಲಳದ ಬೆಟಲಿ (ಸೌಇಂ. ೧೯೩೦, ಉಡುಪಿ. ೩೭೫-೨೭ ; ?). [ ? ]

**ತೊಡಿಸು,** ತುಡಿಸು (ಕ್ರಿ). ೧. (ಆಭರಣ, ವಸ್ತ್ರ ಮೊದಲಾದಂವನ್ನು) ಧರಿಸುವಂತೆ ಮಾಡು,–ಇಕ್ಕು : ತೊಡಿಸಿದನಾವನೀ ಕುಸುಮಮಂಜರಿಯಂ ನಿನಗೆ (ಕಾದಂಪೂ. ೬೯೨); ತರಿಸಿ ಬೊಂಬೆಯನೊಂದಂ . . . ಪೊನ್ನೋಲೆಯಂ ತೊಡಿಸಿ ಚೆಲ್ವನಪ್ಪ ಪೂಮಾಲೆಯಂ ಮುಡಿಯಿಸುತ್ತುಮಿರ್ತಿಯಿಂ (ಧರ್ಮಾಮೃ. ೩-೯) ; ಸೌಂದರಿಗೆ . . . ತೊಡವಂ ತತ್ತರುಣೀಮಣಿಯರೊಲ್ದು ತೊಡಿಸಿದರೊಲವಿಂ (ಉದ್ಭಟ. ೮-೬೫); ಶೋಭನಾರ್ಥಕ್ಕಾದಡಂ ಕೆಲವಾಭರಣಮಂ ತೊಡಿಸವೇಳ್ಕು ಮದೇಭಗಮನೆಗೆನುತ್ತ (ಬಸಪು. ೪-೩೩) ; ಸುರೇಶ್ವರನಿತ್ತ ಭೂಷಣವ . . . ಸಕುಲಾದಿಗಳ ಮೈಯಲಿ ತೊಡಿಸಿದನು ಕೈಯಾರೆ ಕಲಿಪಾರ್ಥ (ಕುವ್ಯಾಅ. ೧೧-೨೪) ; ಚೈತ್ರದ ಚೆಂಗದಿರನು ಚೆಂಬಿಸಿಲ ಚೆಂದುಡುಗೆಯನು ವಿಂಧ್ಯೆಯ ಗಿರಿಶಿಖರಗಳಿಗೆ ತೊಡಿಸುತ್ತಿದ್ದಾನೆ (ಮಹಸ. ೧). ೨. ಅ ಳ ವ ಡಿ ಸು; ಜೋಡಿಸು : ಬಿಲ್ಲನು ಕೊಂಡು ತಿರುವನು ತೊಡಿಸಿ ತಳೆದನು ಒಲಿದು ಮುಂಡಿಯಲಿ (ಸಂಛಪ. ೧೯-೩೧) ; ಪಾವಕಮಹಾಬಾಣಮಂ ತಿರುವಿನೊಳ್ತೊ [ಪಾಠಾಂ. ಳ್ತು]ಡಿಸಿ ಕಿವಿವರೆಗೆ ತೆಗೆದೆಚ್ಚೊಡೆ (ಜೈಮಿಭಾ. ೪-೩೬) ; ತುಡುಕಿ ಚಾಪವ ನೆಗಪಿ ಬಾಗಿಸಿ ತೊಡಿಸಿ ನಾರಿಯ ಠಂಕರಿಸಿ ಮುರಿದಿಡಲು (ಅನಂರಾ. ೧-೨೩-೩೨). ೩. ಹದಿ ; ಹೊಂದಿಸು ; ಕೂಡಿಸು : ಗಿಳಿ ಸೋಂಕದ ಮಾವಿನ ಪಣ್ಣಿನಂತೆ ಪೊನ್ ತೊಡಿಸದ ರತ್ನದಂತೆ (ಮಲ್ಲಿಕಾ. ೬-೬೦) ; ಒಡಲು . . . ತೊಗಲನು ತೊಡಿಸಿದೆಲುವಿನ ಜಂತ್ರ (ನಿಭಾಗ. ೭-೯-೪೪). ೪. ತೊಡಕಿಸು ; ತಗಲುಹಾಕು : ಕಡುಗಿ ಕೊರಳಲದಾರೊ ಪಾಶವ ತೊಡಿಸಿ ಕೆಳಯಿಂಕೆಳದ ದಾಡೆಯುದಡಿಗರಾರೋ ಮರಳೆಬಿಡಿಸಿದ ಪುಣ್ಯತರರ್ (ನಿಭಾಗ. ೬-೨-೨೭) ; ಕೊರಳಿಗೆ ಕೋಳವನು ಬಲವಾಗಿ ತೊಡಿಸುವ ಪೋಲು (ಅಮೃತ. ೦-೩೫). **ತುಡಿಸು :** ೧. ತುಡಿಸಿದನೆನಗಣಿಕೆಯಪ್ಪ ಮಣಿಭೂಷಣಮಂ (ಕವಿರಾ. ೩-೨೩೪) ; ಸುರಾಸುರೇಂದ್ರವಂದಿತಪಾದಂಗೆ ಮೃದುಪದಂಗಳೊಳ್ ಕಳರವರಣಿತ ನೂಪುರಂಗಳಂ ತುಡಿಸಿ (ಆದಿಪು. ೭-೧೦೫ ವ) ; ಆ ಲಾವಣ್ಯವತಿಯ ಪದನಖಮಯೂಖಂಗಳಂ ಜಲಧಾರೆಗೆತ್ತುತ್ಕಂಠಂಗಳಾದ ಸೋಗೆಗಳ ಕೇಗುಂಗಳ್ಗೆ ಗಿದವಟಿ ಕೊರಲಂ ಬಿಗಿವಂತೆ ಕಯ್ಯಿಂದಮುರ್ಚುವ ಮಣಿಕಂಕಣಂಗಳಂ ತುಡಿಸುತ್ತಂ (ಕಾದಂಉ. ೨೦೨); ಕಡಗ ಕಂಕಣ ಹಾರ ನೂಪುರಮಾದಿ ಭೂಷಣರಾಜಿಯಂ ತುಡಿಸಿ (ಧರ್ಮಾಮೃ. ೮-೧೩೪); ತುಡಿಸಿದ ಬೇಗದೊಳಾ ಪೂದೊಡವನಿತುಂ ಕೊರಗಿ ಕಾಡೆಯುಂ ಶಿಖಿಮುಖಮಂ ತೊಡರ್ದಂತಾಯ್ತು (ಕುಸುಮಾ. ೧೦-೨೭) ; ಜನ್ಮಾಭಿಷೇಕಂ ಮಾಡಿ ತದನಂತರಮನೇಕ ಬಾಲದುಡಿಗೆಗಳಂ ತುಡಿಸಿ (ಪುಣ್ಯಾಸ್ರ. ೦೦-೧೭ ವ) ; ರನ್ನದಾಭರಣಮಂ ತುಡಿಸಿ (ಸೌಂದಪು. ೩-೪೯). ೨. ಕರ್ಗಣೆಗಳಾಟಿಂ ಮತ್ತೆ ವಕ್ಷದೊಳ್ತುಡಿಸಿದಂ (ಜೈಮಿಭಾ. ೨೦-೩೦).

[ ತೊಡು₁ + – ಇಸು₃ ]

**ತೊಡು₁,** ತುಡು₁ (ಕ್ರಿ). ತೊಟ್ಟ (ಭೂತಕೃ), ತೊಟ್ಟು₁ (ಭೂತನ್ಯೂ). ೧. (ಆಭರಣ, ವಸ್ತ್ರ ಮೊದಲಾದಂವನ್ನು) ಧರಿಸು,–ಹಾಕಿಕೊಳ್ಳು : ಶೀತಕ್ಕಾಟಿದಳ್ಕಿ ತೊಟ್ಟರ್ದ ಧರಾತಳಮೆಂಬ ಪೆಣ್ಣ ಪೊಸ ಕಂಚುಳಿಕೆಯ ಸೀಮರ್ತಿಮೂರ್ತಿನಂದವಾದುವು ಪನಿಗಳ್ (ಕಾವ್ಯಸಾ. ೬೪೪ ಶೂದ್ರಕ) : ಪಿಂಡುಗಂಕಣಮಂ ತೊಟ್ಟ ಕೈಯಿಂದಂ ಪೊನ್ನ ಸಟ್ಟುಗಮಂ ತೀವಿ (ವಡ್ಡಾರಾ. ೮೯-೭) ; ತೊಟ್ಟಿಕ್ಕವಡಂ . . . ತೊಟ್ಟಂಗಿಗೆ ತನ್ನೊಳಮರೆ ಬೇಂಟೆಯ ನೊರ್ವಂ ಬಂದು (ಪಂಪಭಾ. ೫-೩೬) ; ಜವ್ವನಿಗ ತವಸಿ ತೊಟ್ಟರ್ಪ ಕರ್ಣಾವತಂಸಂ ಪೊಸತೀ ಲೋಕಕ್ಕೆ (ಕಾದಂಪೂ. ೭೬೦) ; ತೊಟ್ಟು ತೀವಿ ಬಳೆಯಂ ನಿಡುದೋಳ್ಗಳೊಳ್ (ಕಾವ್ಯಾವ. ೩೭೨) ; ನೀರ ಬೊಂಬೆಯ ಚೋಹವ ತೊಟ್ಟು ಅಗ್ನಿಯ ಬಣ್ಣದ ಹೊದಿಕೆಯ ಹೊದ್ದು (ಅವಹಂ. ೨೦೭-೯೩೦) ; ಪೊಸ ಮುತ್ತಂ ತೊಟ್ಟಪೋಲ್ ಪೊಣ್ಮುವ ಬೆಮರ್ವನಿಯಿಂ (ಲೀಲಾವ. ೧೦-೪೭) ; ತೊಡುವಲ್ಲಿ ಪೊದೆವಲ್ಲಿ ಸಂಗ ಶರಣೆಂದೆನುತೆ (ಬಸರ. ೩-೧೩೬) ; ಇಟ್ಟರೆ ತೊಟ್ಟರೆ ಪುಟ್ಟಕ್ಕ ಚಂದ (ಗಾದೆ). ೨. ಪಡೆ ; ಹೊಂದು ; ತಳೆ : ಕಾಮದ ಕಳವಳದಲ್ಲಿ ಹುಟ್ಟಿ ಸಂಸಾರವ ತೊಟ್ಟು ಲಿಂಗಮುಖ ಭವನಟಿಯದವರೆಲ್ಲರು ಅಂತಿರಲಂತಿರಲಿ (ಸಮಾವ. ೫-೧೬); ಶಿಳುಹಿ ಹೋದರು ಮುನಿಗಳೀತನ ತಿಳಿವು ತೊಟ್ಟುದು ಮಟಿವೆಯನು (ಕುವ್ಯಾದ್ರೋ. ೧೮-೬೪) ; ಕೊಂದೆನು ನಿನ್ನ ತಮ್ಮನ ದಹಿಸಿ ಲಂಕೆಯ ಬಳಿಕ ಮೌನವ ತೊಟ್ಟೆ ತಾನೆಂದ (ಕಾಶಿರಾ. ೨೮-೬೦) ; ತೆಗೆದ ಚಿತ್ರದ ನಟ್ಟ ನೋಟದ ಮೊಗದ ಭಾವದ ಭಕ್ತಿಯಂಗವ ತೊಟ್ಟನಲ್ಲಮನು (ಪ್ರಭುಲೀ. ೧೧-೩೪) ; ಮೆಟ್ಟಪ್ಪುದಾಸೆಯನು ಕಟ್ಟಪ್ಪುದಿಂದ್ರಿಯವ ತೊಟ್ಟಪ್ಪುದುಳ್ಳ ಸಮತೆಯನು (ಸರ್ವಜ್ಞ. ೩೦೬) ; ದೀಕ್ಷೆ ತೊಟ್ಟೆ ; ತಪದ ಕರಿಣಕೆದೆಯ ಕೊಟ್ಟೆ (ಅನಿಕೇ. ೦೬-೦೯). ೩. ಮೊದಲಾಗು ; ಆರಂಭವಾಗು : ಪೂರ್ವಭವದೊಳ್ತೊಟ್ಟೊಂದು ವೃತ್ತಾಂತಮಂ ನೆಱೆಯಱಿದು (ಆದಿಪು. ೨-೭೬) ; ಎಮ್ಮೊಳಾದ ಕಲಹಕ್ಕೆಂತಾದೊಡಂ ಕೇಳ ನೂರ್ವರೆ ದಲ್ ಕೌರವರಾಮುಮಯ್ವರೆ ವಲಂ ಮತ್ತೊರ್ವರೊಳ್ ತೊಟ್ಟ ಸಂಗರರಂಗಕ್ಕೆ ಜಸಕ್ಕೆ ಕೂಡುವೆಡೆಯೊಳ್ ನೂಱಯ್ವರಾವಲ್ಲವೇ (ಪಂಪಭಾ. ೭-೩೬). ೪. ಮೊದಲು ಮಾಡು ; ಆರಂಭಿಸು : ಕ್ರಮಗಣನೆಗೆ ತಾನುಂ ಮಧ್ಯಮಪಾಂಡವನಾದನಹಿತನೊಳ್ತೊಟ್ಟ ಮಹಾಸಮರಕ್ಕೆ ನರಾಗ್ರಜನಗ್ರಿಮಪಾಂಡವನಲ್ತೆ ಪಗೆಗೆ ಮೊದಲಪ್ಪುದಱಿಂ (ಗದಾಯು. ೭-೬೩) ; ಬಿಲ್ಲ ಪಡೆ ತಾಗಿದುದು ಬೇಗದಿ ಚೆಲ್ಲಿದೊಡೆ ತನ್ನಡ್ಡಣಾಯ್ತುರು ಕಾಳಗವ ತೊಡಲು (ಸಾಳ್ವಭಾ. ೧೯-೧೩). ೫. ಬಿಲ್ಲಿಗೆ ಬಾಣವನ್ನು ಹೂಡು ; ಶರಸಂಧಾನ ಮಾಡು : "ಕಣೆಯ ಸಂಧಾನದೊಳ್ ಪಚ್ಚೆದೊಳ್ ತೊಡು [ಪಾಠಾಂ. ತುಡು]ವದು" (ಶಬ್ದಮಂ.೧೯೩) ; ಮುಂ ತೊಟ್ಟಂಬನದನುಗಿದು ಕುಂದಿಸಿದಂ ಭಯದಿಂ ಕರ್ಣನೆಂದು ಲೋಕಂ ನಗದೇ (ಪಂಪಭಾ. ೧೨-೧೯೯); "ತೊಟ್ಟಗುರಿಯಿಟ್ಟು ಹೊಡಿದ" (ಪಂಪದೀ. ೫೦೦) ; ತೊ [ಪಾಠಾಂ. ತು]ಡುವಾಗಳೊಂದು ಬಿಲ್ಲಿಂ ಬಿಡುವಾಗಳ್ ಲಕ್ಕ ವೈರಿಸೇನೆಯ ಮೆಯ್ಯೊಳ್ ನಡುವಾಗಳ್ ಕೋಟಿಯಪ್ಪುದು ಗಡ ಪಾರ್ಥನ ಬಾಣಂ (ಸಮುಪ. ೧೧-೧೬೬) ; ತೊಟ್ಟನಿದಂ ನಿಟ್ಟಿಸಿದಂ ಬಿಟ್ಟನಿದೆಂಬೊಂದು ಬಿಲ್ಲ ಬಲ್ಮೆಯನಾರ್ಗಂ ದಿಟ್ಟಿಸುವುದರಿದು (ಕಬ್ಬಿಕಾ. ೦೭೧); ತೊಡು ಕೋಲಂ ಹರಿಣಂಗೆ ಹಾಸು ಬಲೆಯಂ ಕೋಕಂಗೆ (ಮಲ್ಲಿಕಾ. ೩-೨೭೩) ; ಆದೊಡೈವರ ಮಕ್ಕಳನು ತಲೆಗಾಯ್ದು ತೋಱ್ ಕಂದ . . . ಹೋದ ಬಾಣವ ಮರಳಿ ತೊಡದಿರು (ಕುವ್ಯಾಉ. ೦೦-೩೫) ; ತೊಡು ಮಹಾಸ್ತ್ರವನಿವಗೆ (ತೊರರಾ. ೧-೧೧-೨೦). ೬. ಉಂಟಾಗು ; ಹುಟ್ಟು : ನಿನ್ನೊಳ್ ತೊಟ್ಟೊಂದು ಭಕ್ತಿಯನಾದರಂಬೆರಸು ಪಟಿತೊಂದೇಮುಟ್ಟಾಮೊಲ್ಲೆಂ (ಶಾಂತಿಪು. ೦೦-೨೦) ; ಬಗೆಯೊಳ್ಬೆಟದ ಬೀಜಮಂ ತಳೆದು ನೀರ್ವೊಯ್ವುಂದದಿಂ . . . ನೀರ್ವೊಯ್ವುದುಂ ಪಾಂಥರಾಕೆಗಳೊಳ್ತೊಟ್ಟೊಲವಿಂಗಲ್ತೆ ಬಟಿನೀರೆಂಬಂದದಿಂದೀಂಟಿ ದಿಟ್ಟಿಗಳಿಂ ದೀಂಟುವರಾ ಪ್ರಪಾಪ್ರಣಯಿನೀಲಾವಣ್ಯನೀರಂಗಳಂ (ಮಲ್ಲಿಪು. ೨-೨೯) ; ಹೊದಱಿನಲಿ ಮಿಗೆ ತೊಟ್ಟ ಕಬ್ಬೊಗೆ ಝುಗೆಯ ಹೊರಳಿಯ ಕಿಡಿಯ ಗಡಣದಲೆ ಹುಟ್ಟಿದುರಿ ಹೆಮ್ಮರನ ಸುತ್ತಲು ಕಟ್ಟಿತು (ಕುವ್ಯಾಆ. ೨೦-೫೫). ೭. ಪಡೆ ; ಹೊಂದು : ಈತನೊಳ್ ತೊಟ್ಟ ಕಿಂಕರ

ಭಾವಂ ನಮಗಕ್ಕಿಗೊಟ್ಟು ಮಡಗೂಟುಣ್ಬಂದವಂ ಪೋ ೯ ಲ ದೇ ೯ (ಆದಿಪು. ೧೪-೩೨) ; ೮. ಸೇರು ; ಕೂಡಂ: ನಿಟ್ಟೆಯ್ದಿಯಾಗು ಪತಿಯೊಳ್ ತೊಟ್ಟನುವಶೆಯಾಗು ಶೀಲವತಿಯಾಗು ಚಿರಂ ನಿಟ್ಟಾಯುವಾಗು ನೀನೆಂದಿಟ್ಟರ್ ಸೇಸೆಯಂ (ಕಾವ್ಯಾವ. ೨೨೩). **ತುಡು₁ :** ೧. "ತುಡು – ಶರಸಂಧಾನೇ, ಭೂಷಣಾವರಣೇಚ (ಒಡವೆಯನ್ನು ಇಟ್ಟುಕೊ)" (ಶಮಧಾ) ; ಅನರ್ಘ್ಯಮಪ್ಪ ಮಾಣಿಕ್ಯದುಂಗುರವಂ ಕಳೆದು ತನಗೆ ತುಡಲ್ಕೆಂದು ಕೊಟ್ಟೊಡೆ (ವಡ್ಡಾರಾ. ೫-೨) ; ಇವು ರತ್ನಕುಂಡಲಂ ಜಿತರವಿಮಂಡಳಮಿವು ತುಡಲ್ಕೆ ಯೋಗ್ಯಮೆ ನಿನಗೆ (ಆದಿಪು. ೧೨-೧೧೮) ; ತುಡನೆ ಕವಚವಂ ರಾಧೇಯಂ (ಪಂಪಭಾ. ೧೨-೧೦೯) ; ನಿಮ್ಮ ತುಡುವಾಭರಣಂಗಳಂ ಪಲವಮೂಲ್ಯ ವಸ್ತುಗಳಂ ತಂದು (ಪಂಚತಂ. ೧೦೨-೧೪) ; ಉಟ್ಟ ನವಾಂಬರಕ್ಕಮರೆ ಪೂದೊಡವಂ ತುಡುವೊಂದು ಕೌತುಕಂ ಪುಟ್ಟೆ (ಜಗವಿ. ೬-೧೨) ; ತಾರೆಗೆಯಂ ವಿದ್ಯಾಧರಿಯರ್ ಮುತ್ತೆಂದು ತೆಗೆದು ತುಡಲವ್ವಳಿಪರ್ (ಗಿರಿಕ. ೧-೫೪). ೪. "ತುಡು–ಶರಸಂಧಾನೇ, ಭೂಷಣಾವರಣೇಚ (ಒಡವೆಯನ್ನು ಇಟ್ಟುಕೊ)" (ಶಮಧಾ) ; ಮತ್ತಮೈಂದ್ರ ವಾರುಣ ವಾಯವ್ಯಾಗ್ನೇಯ ಪಾರ್ವತಾದಿ ಬಾಣಂಗಳಂ ತುಡೆ (ಪಂಪಭಾ. ೨-೭೬ ವ) ; ಸೀಳ್ನಾಯ್ಗಳಂ ಬಿಡು ಕೋಲಂ ತುಡು (ಕಾದಂಪೂ. ೧೫೯) ; ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತುಬಾಣಂ (ಗದಾಯು. ೩-೩) ; ನೆನೆದು ನಿಜಜನನಿಗಿತ್ತುದನನುವರದೊಳ್ ದಿವ್ಯಬಾಣಮಂ ತುಡದುದನಾ ದಿನಪಸುತಂ ತುಡನೆ ಅದಂ (ನೇಮಿಪು. ೧೨-೧೭೨) ; ಕರುಣಿಸೆಲೆ ಶಬರ ತುಡದಿರು ಸರಲಂ ನೀಂ (ಕುಸುಮಾ. ೦೪-೪೨); ಬತ್ತಳಿಕೆಯಿಂದುಗಿವ ಸಮಯದೊಳಗೊಂದು ತುಡೆ ಪತ್ತು (ಜಬಪು. ೪೩-೧೭) ; ಪಿಡಿವಾಗಳೊಂದು; ಪಿಡಿಯಿಂ ತುಡುವಾಗಳೆರಡು . . . ಪಂಚಾಯುಧನ ಪೊಸಮಸೆಯ ವಿಶಿಖಂಗಳ್ (ರಾಮಾಶ್ವ. ೫೮-೨೭).

**ತೊಟ್ಟುವಾಯ್** = ಗುರಿಯಿಂಟ್ಟು ಮೇಲೆ ಬೀಳು: ಸ್ಫುರಿತ ಕೃಪಾಣಪಾಣಿಗಿದಿರಂ ನಡೆದಳ್ಕುಱ ತೊಟ್ಟುವಾಯ್ದು . . . ನೆಲಕಿಕ್ಕಿ ಪತ್ತಿ (ಪಂಪಭಾ. ೧೧-೧೦೪).

[ ದೇ.॥ ತಮಿ. ತೊಟು ; ಮಲ. ತೊಡು ; ತೆಲು. ತೊಡು, ತೊಡುಗು ]

**ತೊಡು₂**, ತಂಡು₂ (ನಾ). ಬಾಯಿಚಪಲ : ಮಗುವಿಗೆ ಮಳೆಗಾಲಕ್ಕೆ ತೊಡುವಿಗೇನಾದರೂ ಮಾಡು (ಮರೆಮ. ೩೪೯) ; ಸಂಜೆ ಮಕ್ಕಳಿಗೆ ತೊಡುವಾಗಿಯೇ ಆಗುತ್ತದೆ (ಸ್ವಪ್ನಹೊ. ೧೦೩) ; ದೋಸೆ ತಿನ್ನುವ ಆಸೆಯಿಂದ ಇದ್ದ ಸೊಸೆಗೆ ದ್ರೋಹಮಾಡಿದ ಪಾಪ ನನ್ನದು . . . ಎಷ್ಟು ತೊಡುವಾಗಿತ್ತೋ ಅವಳಿಗೆ (ಪದ್ಮಸ. ೬೧). **ತುಡು₂ :** ತುಡುವಾಗತ್ತೆ ಎಂದರೆ 'ತುಡುವಾಗತ್ತೆ ತುಡುವಾಗತ್ತೆ ತುಳಸಿನಾರಾಯಣ' ಎಂದು . . . ಕೋಡುಬಳೆ ರವೆವುಂಡೆಯನ್ನು . . . ಕೊಟ್ಟು ಕಳಿಸುತ್ತಿದ್ದಳು (ಪ್ರಶ್ನೆ. ೯೩) ; ಬೇಕು ಬೇಕಾದಾಗ, ತುಡು ಬಂದ ಕೂಡಲೆ, ಸಿಹಿ ತರಿಸಿ (ಚಂದ್ರಸ. ೪). [ ದೇ.॥ ತಮಿ. ತೊಟು = ತಿನ್ನು ; ತುಳು. ತೊಡು ]

**ತೊಡುಗೆ**, ತುಡಿಗೆ, ತುಡುಗೆ, ತೊಡಿಗೆ (ನಾ). ೧. ಒಡವೆ ; ಆಭರಣ ; ಅಲಂಕಾರ : "ನೇಪಥ್ಯಮಾ ಭೂಷಣಮಲಂಕಾರಮಾಭರಣಮೆಂದೆನಲು ತೊಡು [ಪಾಠಾಂ. ಡಿ]'ಗೆಗಭಿಧಾನಮಕ್ಕುಂ" (ಮಂಗರಾ. ೯೮-೧೦) ; "ಮಂಡನಂ, ಮಂಡನೀಯಂ, ಈ ೨ ತೊಡುಗೆ" (ಕಾಶಕ್ಕ. ೨೬೯). ೨. ಉಡುಪು: (ಕ). 'ಉಡುಗೆ' ಪರಾ. **ತುಡಿಗೆ :** ೧. ಪೊಸಮುತ್ತಿನ ತುಡಿಗೆ ಪೊದಟ್ದಿಸೆಯೆ (ಪಂಪಭಾ. ೨-೬೮) ; ಬಳೆ ತುಡಿಗೆಯಾಗಿಯುಂ ಸರಿಗೆಯಲ್ಲದಂತೆ . . . ದೂರಭವ್ಯರುಮಭವ್ಯರುಂ ಶ್ರಾವಕರಾಗಿಯುಂ . . . ಮೋಕ್ಷಗಾಮಿಗಳಲ್ಲರ್ (ಧರ್ಮಾಮೃ. ೧೧-೦೮೭); ವಾಸಂತಋತುಕಾಲ ಸಮಯ ಕುಸುಮವನಾ ವಿಳಾಸಿನೀಜನ ತು [ಪಾಠಾಂ. ತೊ]ಡಿಗೆಯಂ ಮಾಡಿ ತಂದೊಲ್ದು ಭೂಸುದತಿವಲ್ಲಭಂಗೀಯಲು (ಹಜಕಾ. ೩-೪೮) ; ತುಡಿ [ಪಾಠಾಂ. ಡ, ಡು] ಗೆಯಂ ತೊಟ್ಟಂ ; ಪೂವಂ ಮುಡಿದಂ (ಶಮದ. ೧೨೭ ಪ್ರಯೋ). 'ಕಿವಿದುಡಿಗೆ' ಪರಾ. **ತುಡುಗೆ :** ೧. "ಭೂಷಣಃ, ಅಳಂಕಾರಃ, ನೇಪಥ್ಯಂ, ಆಭರಣಂ–ಈ ೪ ತುಡುಗೆ" (ಹಲಾಯು. ೮೯-೩೮೫) ; ಅನರ್ಘ್ಯಮಪ್ಪ ತುಡುಗೆಗಳುಮಂ ಬಱವಱಗೊಟ್ಟು (ವಡ್ಡಾರಾ. ೧೫೦-೨) ; ತುಡಲ್ಕೆ ತುಡುಗೆಯನುಡಲ್ಕೆ ದಿವ್ಯಾಂಬರಮಂ . . . ಕುಡುವಮರಿ ಕಲ್ಪಲತೆಯನೆ ಪೋಲ್ವಳ್ (ಆದಿಪು. ೭-೧೧); ರತ್ನದ ತುಡು [ಪಾಠಾಂ. ತೊಡಿ] ಗೆಯನಿತ್ತುಂ ಯತ್ನದೆ ರಕ್ಷಿಸುವನೆಂಬನುತ್ತಮಜೈನಂ (ಸಮಪ. ೫-೧೫೦) ; ಪೊದಲ ಯುಗಳದೊಳೆ ಸುದತಿಯರುದಯಿಪರ್ . . . ಮಹಿಗೆ ತುಡುಗೆಯೆನಿಸುವ ತೆಱದಿಂ (ಪಾರ್ಶ್ವಪು. ೫-೮೧) ; ತುಡು [ಪಾಠಾಂ. ಡಿ] ಗೆಯ ತೊಟ್ಟು ಪಟ್ಟಾವಳಿಯ ಮುಂಜೆಱಗುಟ್ಟು ಕುಳಿತಿರೆ (ಕೌಶಿರಾ. ೨೪-೧೫). ೨. ತೊಡರ್ದಮರ್ದ ಬಾಳವಣ್ಣದ ತುಡುಗೆ ಪಳಂಚಲೆವ ಪಂಚಜಡೆ . . . ಚೆಲ್ವಿಡಿದಿರ್ದುದು (ಪಂಪಭಾ. ೨-೪)

**ತೊಡಿಗೆ :** ೧. "ತೊಡಿಗೆ–ಅಲಂಕಾರ, ಆಭರಣ, ಪರಿಷ್ಕಾರ, ವಿಭೂಷಣ, ಮಂಡನ" (ನಾಚರಾ. ೬) ; ಮುತ್ತಿನ ತೊಡಿಗೆಗಳಂ ತೊಟ್ಟು ದರ್ಭಶಯನದೊಳಿರ್ದು (ಪಂಪಭಾ. ೧-೧೦೮ ವ) ; ತನ್ನ ತೊಟ್ಟ ತೊಡಿಗೆಗಳೆಲ್ಲಮನ ನೆಗಂಗಚಿತ್ರಮನಿತ್ತೆಂತಾನುಂ ಬೀಟ್ಕೊಳಿಸಿ ಕಟಿಪಿ (ಕಾದಂಉ. ೩೨೪) ; ಅಂತು ತೊಡಿಗೆಗಳಂ ಪುಲಿಯಿಂ ಪಡೆದು (ಪಂಚತಂ. ೧೧೧-೧೧) ; ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು (ಬಸವ. ೨೫೧) ; ಹಳದಿಯ ಉಡುಗೆ ಸವೆಯದೂದುವ ಕೊಳಲು ಮೈಯ ತವರದ ತೊಡಿಗೆ ಎಸೆವುತಿರೆ (ಬಸರ. ೯-೦೦೨) ; ಕೆಂಡದ ತೊಡಿಗೆಗೆ ಮನವಿಟ್ಟರಗಿನ ಪುತ್ಥಳಿಯೆಂತಂತೆ (ವೀರೇಚ. ೦-೨೦) ; ತೊಡಿಗೆಗಳೆಲ್ಲವಂ ತೊಡುವಳ್ (ಸೂಕ್ತಿಸು. ೧೫-೨೯) ; ತೊಡಿಗೆಗಳು ಥಳಥಳಿಸೆ ಕಡೆಗಂಗಳ ಬೆಳಗು ಹೊಳೆಯೆ (ಬಸಪು. ೫-೨೮).

[ ತೊಡು₁ + –ಗೆ ]

**ತೊಡುಗೊರೆ** (ನಾ). ಉಡುಗೊರೆ; ಬಳುವಳಿ: (ಕ). ☞ ಸಾಮಾನ್ಯವಾಗಿ ಈ ಪದ 'ಉಡುಗೊರೆ, ಎಂಬ ಪದದೊಡನೆ ಬರುತ್ತದೆ.

[ ತೊಡು₁ + ಕೊರೆ₇ ( < ಕೊಱ³ ]

**ತೊಡುಪು** 'ತೊಡಪು₂' ನೋ.

**ತೊಡುವಡ್ಡಿ** (ನಾ). ೧. ಹಣವನ್ನು ತೊಡಗಿಸುವುದರಿಂದ ಬರುವ ಬಡ್ಡಿ. ೨. ಚಕ್ರಬಡ್ಡಿ : ಧನುಮಾಸದ ತಿಂಗಳವೊಂದರ ನಿತ್ಯೋೞ್ಛವದ ರಂಗಪೂಜೆ ಬೀಜವೊಂನ ತೊಡುವಡ್ಡಿಇಂದ ನಡವಂತಾಗಿ (ಎಕ. XV, ಬೇಲೂರು. ೨೪೮-೪ ; 1297).

[ <ತೊಡಗು₁ + ಬಡ್ಡಿ₂. / ತಮಿ. ತೊಟವರ್ಟ್ಟಿ]

**ತೊಡುವಿಲ್**(ನಾ). ಒಂದು ಬಗೆಯ ಬಿಲ್ಲು: ತೊಡುವಿ[ಪಾಠಾಂ. ತೊಡುಬಿ, ತೋಡುವಿ]ಲ್ಲಂಬು ತರಕಸ ಬಲ್ಲೆಯ ಜೋಡಖೇಡೆಯ ಸವಗ ಸೀಸಕದ ಗಾಡಿ ಕೈಮಿಗೆ ಪೊಱವಂಟರು ರಾವುತರು (ಕುಮಾರಾ. ೦೧-೦೭).

[ ತೊಡು₁ + ಬಿಲ್₂ ]

**ತೊಡೆ₁** (ಕ್ರಿ). ೧. ಲೇಪಿಸು ; ಬಳಿ ; ಪೂಸು ; ಸವರು ; ಹಚ್ಚು : ಮನ್ಮಥೋತ್ಸವಾಭಿಮುಖ ಮುಖಚಂದ್ರನಂ ಚಂದ್ರಕವಳದಿಂ ತೊಡೆದು (ಆದಿಪು. ೪-೪೧ ವ) ; ಕುಡಿ ಮುಱದಿರ್ದೊಡಂ . . . ಆಯೆಡೆಯೊಳ್ ಬಿಸಿಯಪ್ಪ ತುಪ್ಪಮಂ ತೊಡೆದು (ಲೋಕೋಪ. ೬-೧೩) ; ಒಪ್ಪವ ನುಡಿವರಯ್ಯಾ ತುಪ್ಪವ ತೊಡೆದಂತೆ (ಬಸವ. ೭೭೫) ; ತೊಡೆದ ಭಸಿತಂ ಧೂಮವಿಡೆ ಮೈಯ ರೋಮ ಕೌಱಡೆ . . . ಕೌಶಿಕಂ ಮುನಿದನು ವಸಿಷ್ಠಮುನಿಗೆ (ಹಜಕಾ. ೨-೩೩); ಮಂತ್ರಿಸಿದ ಸುರುಚಿರಭಸಿತವಂ ತಳಿದು ತಾಂ ತೊಡೆಯಲ್ಕೆ (ಬಸಪು. ೪೯-೨೯) ; ಆದ ಮೈಗಂಡಿಯೊಳು ರಕುತವ ಶೋಧಿಸುತ ಹಳದುಪ್ಪವನು ತೊಡೆದಾದರಿಸಿದುದು ವೈದ್ಯಸಂತತಿ ವೀರ ಭಟರುಗಳ (ಕುಮಾಭೀ. ೫-೪೦); ಕಡುಮೂರ್ಖನಾದರೇನು ದುಷ್ಕರ್ಮದಿಂ

ತೊಡೆದಾತನಾದರೇನು (ಪುರಂದ. ೦-೧೪೩-೧). ೨. ತೀಡಂ; ಸೋಕು: ಪರಿತಂದಾಗಳ್ ಚಂಚುವಿಂ ತೊಡೆದು ಮೆಯ್ಯಂ (ಕುಸುಮಾ. ೧-೫೩); ಪುಗಿಲುಪುಗಿಲೆಂದುಡೆಯ ತೊಡೆಯುತಿರೆ ತಂಗಾಳಿ (ಕಾಲೂರ. ೬೦-೯೯). ೩. ಒರಸು: ತದೀಯಪಾದಪಲ್ಲವಂಗಳನಾನಂದಾಶ್ರುಮಿಶ್ರಿತಜಳಂಗಳೊಳ್ ತೊಳೆದುಂ ನಿಜೋತ್ತರೀಯ ಪಲ್ಲವಂಗಳೊಳ್ ತೊಡೆದುಂ (ಆದಿಪು. ೫-೪೬ ವ); ಜಳದಿಂದೆ ಕರ್ಚಿ ವಲ್ಕಾಂಚಲದಿಂ ನಿಜವದನಬಿಂಬಮಂ ಸತಿ ತೊಡೆದಳ್ (ಕಾದಂಪೂ. ೬೦೨); ಅರಿಚರಣಪಾಂಸು ಪತ್ತಿರೆ ಶರೀರಮಂ ತೊಡೆದು ಕಳೆದೆ ವಸ್ತ್ರಾಂಚಲದಿಂ (ಗದಾಯು. ೯-೨೭); ನನೆಯುಂಬಂ ತಾವರೆಪೂವಿನ ಕೈಪೊಡೆಯಿಂ ಮನೋಭವಂ ತೊಡೆವವೊಲಾ ವನಿತೆಯ ಸಬಾಷ್ಪಲೋಚನಮನವನಿಪತಿ ಶೋಣಪಾಣಿತಳದಿಂ ತೊಡೆದಂ (ಮಲ್ಲಿಪು. ೪-೧೭); ಕಣ್ಬನಿಯಂ ತನ್ನ ಕರಾಗ್ರದಿಂದೆ ತೊಡೆದಂ ವಿಶ್ವಂಭರೇಶ್ವರಂ (ಕುಸುಮಾ. ೩-೪೯); ಬಾಷ್ಪೋದಕಬಿಂದುಸಂದೋಹಮಂ ತೊಡೆದು ನಿನ್ನ ದುಃಖಕ್ಕೆ ಕಾರಣವೇನೆನುತ್ತ ಮತ್ತಿಂತೆಂದಂ (ಪುಣ್ಯಾಸ್ರ. ೧-೬೨ ವ); ದುರ್ವ್ರಣವ ತೊಡೆದು ಕಟ್ಟುವ ಹಸ್ತವೈದ್ಯರ ಗಡಣ (ಕುಮಾ.ಭೀ. ೫-೪೦). 'ಕಂಬನಿದೊಡೆ' ಪರಾ. ೪. ಅಳಿಸಂ; ಉಜ್ಜಿ ತೆಗೆ: ಮನಸಿಜನ ತಲೆಯ ಬರೆಹವ ತೊಡೆದೆನು (ಮಹಾದೇ. ಬ. ೬೦-೧೭೫); ತೊಡೆವೆಂ ಶಕ್ರನ ನಾಮಮಂ ತುಡುಕಿ ನೀರೊಳ್ ಮೆಟ್ಟುವೆಂ ವಜ್ರಿಯಂ (ಜಗವಿ. ೩-೨೦); ತೆಕ್ಕನೆ ತೀವಿರೆ ತಾವಕ್ಕಿಕ್ಕಿದ ಸಿರಿಗಂಪು ಪಣೆಯೊಳಿಸೆದುದು ಕೋಪಂ ಮಿಕ್ಕತನು ಬೆಸಸಿದೊಡೆ ನೊಸಲಕ್ಕರಮಂ ತೊಡೆಯಲೆಂದು ಬಂದಿಂದುವವೋಲ್ (ಚಂದ್ರಪು. ೮-೮೭); ಎಡಱಿದನೋ ಅವನ ನೊಸಲಕ್ಕರವಂ ತೊಡೆದುದಕ್ಕಂ(ಶಮದ. ೫೭ ಪ್ರಯೋ); ಸರಸಿಜಾಸನನಂದು ನೊಸಲಲಿ ಬರೆದ ಲಿಪಿ ಹೆಡತಲೆಗೆ ಹೋಹುದೆ . . . ಮರಳಿ ತೊಡೆಯಲು ಕಾಯಲುಂ ಪಂಕರುಹಗರ್ಭಂಗಾಗದು (ಬಸವು. ೪೭-೧೩); ತೊಡೆದನಾಗಳೆ ನೊಸಲ ಕಣ್ಣಿನ ಕಿಡಿಯನೆಲ್ಲರನುಳುಹಿದನು (ಪ್ರಭುಲಿ. ೧೩-೬೨); ಲೀಲೆಯಿಂದೀ ಭೀಮ ದೈತ್ಯರ ಭಾಳಲಿಪಿಯನು ತೊಡೆದ (ಕುಮಾ.ಭೀ. ೬೨೫. ೧೫-೧೪); ಶರದ ಘನರಾಜೇಂದ್ರಪದವಿಯ ಬರಹ ತೊಡದುದು (ತೊರರಾ. ೩-೨-೨); ಬರೆಬರೆದಂತದಂ ತೊಡೆದು ತೊಟ್ಟನೆ ನಿಟ್ಟಿಸಿ . . . ತೋರ್ಪ ದುಷ್ಕವಿ ಮಹಾಕವಿಮಧ್ಯದೊಳೊಪ್ಪಲಾರ್ಪನೇ (ರಾಜಶೇ. ೧-೨೩); ತೊಡೆಯಲಪ್ಪುದೆ ನೊಸಲ ಬರೆಹಗಳ ಕುಂದಂ (ಕಾಲೂರ. ೧೧೧-೨೨೮). ೫. ಗುಡಿಸು; ಉಡುಗು: "ತೊಡೆ-ಸಂಮಾರ್ಜನೇ, ಅಂಗೇಚ" (ಶಮದ); ಉತ್ಪಲಿಕೆಯಂ ಕದಳೀಗೃಹಮರಕತವೇದಿಯಂ ಕಮಲದಳಂಗಳಿಂ ತೊಡೆಯಲುಂ . . . ಪೆಸರ್ವೆಸರೊಳೆ ಕರೆದು ಪೇಟ್ಟ (ಕಾದಂಪೂ. ೧೧೦೬); ಊರ ಚೌವಟ್ಟದೊಳಂ ತೊಡೆದು ಬರೆದಲ್ಲಿ ರಂಗಮನಡುಗೆಗಳಂ ಸುರಿದು ಸೂಸಿ ಕೆಡುವಮೂರ್ಖರ್ (ಸಮಪ. ೯-೧೩೦); ಕಡುಸೊಗಯಿಪ ಮಣಿಮನೆಯಂಗಣಮಂ ತೊಡೆವ . . . ಮಡದಿಯರ ಮೊತ್ತಂ ಕಣ್ಗೊಪ್ಪಿದುದು (ಜಯಕಾ. ೧೨-೧೩). ೬. ಶುದ್ಧಿಮಾಡು; ಶುಭ್ರಮಾಡು: ವರಮುಕುರವಂ ತೊಡೆವ[ಕಾಶಾಂ. ಬೆಳಪ]ರಾರ್ (ಹಜಕಾ. ೧-೨೨). ೭. ನಿರ್ಮೂಲಮಾಡು; ನಾಶಮಾಡು: ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ (ಮಹಾದೇ. ಬ. ೨೩-೪೩); ಜಿನಬುದ್ಧಸಮಯವಿದೆಂದುಲಿವ ಪೆಸರಿಲ್ಲದಂತಾತನು ತೊಡೆದು ಕಳೆದು (ಬಸವು. ೫೦-೫೦); ಜಯವಿಜಯರಾ ದೈತ್ಯಜನ್ಮವನು ಈತ ತೊಡೆದನು (ಕುಮಾ.ಉ. ೬೭೫. ೧೧-೨೪); ವೇಘಪ್ರಸರಕೊಳಗಹನೊಮ್ಮೆ ರವಿ ತೋಱುವನು ಮತ್ತೊಮ್ಮೆ ಅಸಮಸಮರದೊಳೀತನಾ ಪರಿ ಮಸುಳುವನು ತೋಱುವನೀ ತೊಡೆವನು ದೆಸೆಗೆಡಿಸುವನು ಬಳಿಕ ಮುಳಿಸಿ ನೊಳಾ ಮಹಾರಥರ (ಕುಮಾ.ಕ. ೧೧-೩೭) ೮. ನಾಶವಾಗು; ಇಲ್ಲವಾಗು: ತಪ್ಪಿತ ತೊಡೆಯಿತ್ತು ಭವಬಂಧನ ಹಿಂಗಿತ್ತು (ಪದಗೋ. ೨); ಪಾಂಡವರೂ, ಕುಂತಿಯೂ ಬದುಕಿಕೊಂಡು, ದ್ರೌಪದಿಯನ್ನು ಪಡೆದಿದ್ದಾರೆ . . . ದುಃಖ ತೊಡೆದಿದೆ ! (ವಜಘಾ. ೬೬); ಎಂದಾದರೊಮ್ಮೆ ತುಸು ಕದನ ಸುಳಿದರೆ . . . ಹೇಗೋ ತೊಡೆದು ಬಿಡುತ್ತಿತ್ತು (ಬಟ್ಟಹೊ. ४). ೯. ಪರಿಹರಿಸು; ನಿವಾರಿಸು: ಸಯ್ತಡವಡಿಕೆಗಳಂ ತೊಡೆದತ್ತೆಡವಱಿಯದೆ ಪೊಳೆವ ಮಿಂಚು (ಕವಿರಾ. ३-೧೨೫); ಕೋಪವುಂಗಜರಸಪೂರದೊಳ್ ತೊಡೆದವೋಲ್ ತಳರ್ದತ್ತು (ಶಾಂತಿಪು. ೮-೧೦೦);ಎನ್ನ ಕಾಯದ ಕರ್ಮವ ತೊಡೆದು . . . ಕಾರುಣ್ಯವ ಮಾಡು (ಅಪಚಂ. ೧೬೭-೬೫೩).

**ತೊಡೆದುಕೊಳ್, ತೊಡೆದುಕೊಳ್ಳು** = ೧. ಲೇಪಿಸಿಕೊಳ್ಳು; ಬಳಿದಂಕೊಳ್ಳು: ಎದುರಿಗೇ ಇದ್ದ ತಮ್ಮ ದೃಷ್ಟಿಯ ಸುಪ್ರಭೆಯನ್ನು ತೊಡೆದು ಕೊಂಡಿದ್ದ (ಸುವಸಂ. ೧೭). ೨. ಒರೆಸಿಕೊಳ್ಳು: ತುಡುಗಣಿ ತೊಟ್ಟಿನಂತೆ ಬಾಯಂ ತೊಡೆದುಕೊಂಡು (ಪಂಚತಂ. ೨೮೪-೨೩). **ತೊಡೆದುಹಾಕು** = ೧. ಅಳಿಸಿಹಾಕಂ; ಅಳಿಸು: ನಿನ್ನ ಹಣೆಯ ಬರಹವನ್ನು ತೊಡೆದು ಹಾಕುತ್ತೇನೆ (ರಾಜಸೂ. ೨೦). ೨. ನಾಶಮಾಡು; ನಿರ್ಮೂಲಮಾಡಂ: ರಾಯರ ದುಷ್ಟಸಹವಾಸಗುಣ ಅವರ ವಿವೇಕವನ್ನು ತೊಡೆದುಹಾಕಿತ್ತು (ಮರಳ. ೧೬೩); ಗ್ರಹಗಳು ರೂಪುಗೊಳ್ಳುವ ಕ್ರಿಯೆ ಅತ್ಯಂತ ಅಪೂರ್ವ ಸಂಭವವಾದುದು ಎಂಬುದು-ಮತಾಭಿಪ್ರಾಯವನ್ನು ತೊಡೆದುಹಾಕಲು ಇಚ್ಛಿಸದಿದ್ದ ಜನಸಾಮಾನ್ಯರ ದೃಷ್ಟಿಯಲ್ಲಿ ಒಂದು ಪ್ರಧಾನಗುಣವಾಗಿ ಪರಿಣಮಿಸಿತು (ಭೂಹುಟ್ಟು. ೨೯). **ತೊಡೆದು ಹೋಗು** = ಇಲ್ಲವಾಗು: ಅವರಿಗೆ ಉಂಟಾದ ಅಂತಹ ವಿಷಮವಿಪತ್ತಿನಲ್ಲಿ ಸಮಯಸ್ಫೂರ್ತಿಯು ತೊಡೆದುಹೋಯಿತು (ರಾವಿಜ. ೨೩).

[ದೇ.॥ ತಮಿ. ತೊಟ್ಟೈ, ತುಟ್ಟೈ; ಮಲ. ತುಡೆ; ತುಳು. ತೊಡೆ, ತುಡೆ; ತೆಲು. ತೊಡೆಯಂ, ತುಡ್ಡು]

**ತೊಡೆ₂** (ನಾ). ಸೊಂಟದಿಂದ ಮಂಡಿಯವರೆಗಿನ ಭಾಗ; ಊರು: "ಪ್ರಸೃತಾಖ್ಯೆ ಜಂಘೆ ತೊಡೆಯೂರು" (ವಸ್ತುಕೋ. ೬೭-೩); ವೀರಶ್ರೀ ಮಹಾದೇವಿಯರರಸನ ತಲೆಯಂ ತನ್ನ ತೊಡೆಯ ಮೇಲಿಟ್ಟು (ವಡ್ಡಾರಾ. ೧೧೭-೧೧); ವದನಂ ತೋಳ್ ತೊಡೆ ಪಾದಮೆಂಬಿವನಿವಂ ಶುಶ್ರೂಷೆ ಗೆಯ್ಯಲ್ಕೆ (ಆದಿಪು. ೮-೬೩); ಕುರುರಾಜನ ತೊಡೆಯನುಡಿವೆನೆಂದಂ ಭೀಮಂ (ಗದಾಯು. ೨-೨೮); ತೊಡೆಯ ಮೇಲಿರ್ದೊಡಂ ಸ್ತ್ರೀಯನಾರ್ಕೈದುಕೊಂಡಿರ ಬೇಕು (ಪಂಚತಂ. ೧೩೩-೧೭); ಸುರಪತಿಯ ಬೇಳಂಬವನು ವಿಸ್ತರಿಸಲೇತಕೆ ವಜ್ರಕೀಟೋತ್ಕರವ ಕಳುಹಿದರೆನ್ನ ತೊಡೆಗಳನುಗಿದವವು ಬಳಿಕ (ಕುಮಾ.ಕ. ೯-೩೦).

[ದೇ.॥ ತಮಿ. ತೊಟ್ಟೈ, ತುಟ್ಟೈ; ಮಲ. ತುಡ; ತುಳು. ತೊಡೆ, ತುಡೆ; ಕೊಡ. ತೊಡೆ; ತೆಲು. ತೊಡ]

**ತೊಡೆಗಟ್ಟಿ** (ನಾ). ಒಂದು ಬಗೆಯ ಸಸ್ಯ: ಬೀಟೆ, ತೊಡೆಗಟ್ಟಿ, ಕರೇವ್ಯಾಡಿ (ಮೃಜಿಗಿ. ೨೮-೫೪೫). [?]

**ತೊಡೆಚಲ್ಲಣ** (ನಾ). ಒಂದು ಬಗೆಯ ಚಲ್ಲಣ; ಮೊಳಕಾಲಿನವರೆಗೆ ಬರುವ ಉಡುಪು; ಅರ್ಧೋರುಕ: ತೊಡೆಚಲ್ಲಣ ತೊಟ್ಟು ಜೋಡು ಬಿಡದೆ ಮೆಱೆಯೆ ಬಿಲ್ಲವರು ನಡೆತಂದರು (ಕುರಾಸಾಂ. ೧೧-೩೫); ಹಜ್ಜೆ ಹಜ್ಜೆಗೆ ತೊಡೆಚಲ್ಲಣವಡಸಿರ್ದ ಗೆಜ್ಜೆಯು ಗಲಿರೆಂಬ ರವದಿ. . . ಬಂದನು (ಪೋಹಕ. ೧೨-೪೯). [ತೊಡೆ₂ + ಚಲ್ಲಣ]

**ತೊಡೆಚಾಟುಗೊಳ್** (ಕ್ರಿ). ತೊಡೆಗೆ ಮರೆಮಾಡಿಕೊಳ್ಳು,-ರಕ್ಷಣೆಯಾಗಿಟ್ಟುಕೊಳ್ಳು: ಬೆಳ್ಪೊಂಗುಬ್ಬಿವರಿಗೆಯಂ ತೊಡೆಚಾಟುಗೊಳುತೊಡನೆ ಖಡ್ಗಂಗಳ ರಘಳಪಿಸುತೆ . . . ಪೊಯ್ದಾಡುತಿರ್ದರಾ ಹರಿಗೆಯವರು (ಜಿಬಪು. ४೮-೫೦); ಕಾಳೆಯಿಂದೆ ಬೆದಱಿದಿರಿ ನೇಜಯಂಗಳನೂದು ಹರಿಗೆಯಂ ಕದಲಿಸು ವರೂಥಮಂ ತೊಡೆಚಾಟುಗೊಳ್ಳೆನುತೆ ಕದನ ವಿಕ್ರಮರೆಲ್ಲರುಂ ಬೆದಱಿ ಕಂಡ ಕಡೆಗೋಡಿದರು (ಜಿಬಪು. ೫೦-೧೭).

[ತೊಡೆ₂ + ಚಾಟು₃ + ಕೊಳ್₁]

**ತೊಡೆತ** (ನಾ). ೧. ಲೇಪನ ; ಬಳಿಯುವಿಕೆ : "ಲೇಪನಂ ತೊಡೆತಂ" (ಶಬ್ದಮ. ೨-೧-೮೭) ; (ಬಣ್ಣ, ಸುಣ್ಣ ಬಳಿಯುವುದರಲ್ಲಿ) ಮೊದಲನೆಯ ತೊಡೆತ (First Coat. ಇಂಕನ್.). ೨. ನಾಶ: ಗಡ್ಡೆ ಇರ್ಬ್ಬದು, ಕಿರಿದು, ಸಲವಿಸಿನ ಮುಂದುಗಡೆ, ನಾವೆಗಳ ತೊಡೆತ (ಶಾಂತಿ. ೧೭-೩೯೩).
[ ತೊಡೆ$_1$ + - ತ$_2$ ]

**ತೊಡೆತಟ್ಟು** 'ತೊಡೆದಟ್ಟು' ನೋ.

**ತೊಡೆದಟ್ಟು**, ತೊಡೆತಟ್ಟು (ಕ್ರಿ). ೧. ಚಂಕ್ಕುತಟ್ಟು : ಚಂಡವಿಕ್ರಮ ನೊಱಗಿದನು ನಾರಿಯರ್ ನಿಖಿಲೋಪಚಾರವ ಮಾಡಿ ಕೈವಾರಿಸಿ ತೊಡೆ ದಟ್ಟಲೊಡನೆ ಪಾರಿಯ ವಾದ್ಯ ಘೋಷಣಸಲ್ಕೆ ದಿವ್ಯವಿಭೇರಿಯು ಹೊಡೆದರ್ದರೂರೊಳಗೆ (ಮೋಹತ. ೧೮-೧೦೦). **ತೊಡೆತಟ್ಟು** : ೨. ಮಲ್ಲ ಯುದ್ಧಕ್ಕೆ ಸಿದ್ಧವಾಗು ; ಸಡ್ಡುಹೊಡೆ : ಜಟ್ಟಿಗಳು ತೊಡೆತಟ್ಟಿ ಮಲ್ಲಯುದ್ಧಕ್ಕೆ ಸಿದ್ಧವಾದರು (ರೂಢಿ). [ ತೊಡೆ$_2$ + ತಟ್ಟು$_1$ ]

**ತೊಡೆಪ**, ತೊಡಹ$_1$, ತೊಡೆಹ (ನಾ). ೧. ಬಳಿಯುವಿಕೆ ; ಲೇಪನ : ತೊಡೆಪಂ, ನಡೆಪಂ, ಮೊಗೆಪಂ (ಶಬ್ದಾನು. ೫೬೧ ಪ್ರಯೋ). **ತೊಡಹ$_1$** : ೧. ಜಡೆದಲೆಯ ತೊಡಹದ ವಿಭೂತಿಯ ಮಡಿವರಳ ಜಪಸರದ . . . ಮುನಿಯ ವೇಷವ ತೊಡಚಿಕೊಂಡಿಹ ಕಾಲನೇಮಿಪ್ಪಂತೆ ರಂಜಿಸಿದ (ತೊರರಾ. ೬-೫೭-೬೪) ; ಹೇಮದ ತೊಡಹದುರುನಿಸ್ಸಾಳತತಿಯಲಿ ನುಡಿ ವಡಚ್ಚರಿಯೆನಲು ಮಿಗೆ ಸಂಭ್ರಮಿಸಿತಾ ನಗರ (ತೊರರಾ. ೬-೫೩-೧೭). ೨. ಗಿಲೀಟು ; ಲೇಪ : ತೊಡಹದ ಕೆಲಸದ ಬಣ್ಣದಂತೆ ಕಡಿಹಕ್ಕೆ ಒರೆಗೆ ಬಾರದು ನೋಡಾ (ಬಸವ. ೩೪೯) ; ಚಿಗಿವ ಚಲನೆಯ ಚಂಗುವಾಱಿನ ಮೃಗ . . . ತರುಕದಂಬದಲಿ ಅಡಗಿ ತೋಱುತ ನಿಲುತ ನಿಗುರುತ ತೊಡಹದಳಿಮನದಧಮಪುರುಷನ ನುಡಿಯವೊಲು ವಂಚಿಸುತ ಹಾಯ್ದುದು ವಿಪಿನದಲಿ ಸ್ವಪನ (ತೊರರಾ. ೩-೮-೪೭). ೩. ಕಪಟ ; ಠಕ್ಕು ; ನಟನೆ : ಕಡಿಗಳ ಹದಿನೆಂಟನೊಡಗೂಡಿ ಸಂದಿಸಿ ತೊಡಚಿ ಕಟ್ಟಿದೆ ನರರ ಬಂಧನದಲ್ಲಿ ಈ ತೊಡಹದ ನಾಯ ನಿಚ್ಚ ನೀನಿಕ್ಕಿ ಕೆಡಿಸಿದೆಯಯ್ಯ (ದೇದಾವ. ೩೭-೭೨) ; ತೊಡಹದಧಟನೆ ತಳೆದು ಯುದ್ಧಕೆ ತಡಹರಿಸಿ ಸಮಸತ್ತ್ವದಲಿ ಫಣಿಶಯನು ಕಾದಿದನು (ಸಾಳ್ವಭಾ. ೨೨-೬೮). **ತೊಡೆಹ** : ೨. ಕನಕದ ತೊಡೆಹದೊಳಾ ಸರಪಣಿಯಂತೆ ಜನಪನಿನ್ನೊಬ್ಬ ಮಾಡುವನೆ (ಭರತ. ೪೯-೧೪೦) ; ಹೊಸ ಹೊನ್ನ ತೊಡೆಹದಂತೆಸೆವ ಮೈಬಣ್ಣ (ಭರತ. ೭೭-೧೯). ೪. ತೋರಿಕೆ: ವೀರ ರೆಂದೆನಿಸುವರು ತೊಡೆಹದ ಶೌರಿಯದ ಸಿರಿವಂತರರಸುಕುಮಾರಕರು ನಿನ್ನವರು (ಕುಮಾರ್ದ್ರೋ. ೧೩-೪೭) : ಹೊಳೆಹೊಳೆದು ತಂಬುಲದ ರಸದಲಿ ಮುಳುಗಿ ಮೂಡುವ ಥಗೆಯ ತೊಡೆಹದ ಮೆಲುನಗೆಯು . . . ಭೂಪಾಲನಿರವನು ಕಂಡು (ಕುಮಾರ್ದ್ರೋ. ೧೮-೯). [ ತೊಡೆ$_1$ + - ಪ$_2$ ]

**ತೊಡೆಮಡ** (ನಾ). ೧. ಆನೆ ಅಥವಾ ಕುದುರೆಯನ್ನು ಏರುವ ಒಂದು ಬಗೆಯ ವಿದ್ಯೆ,-ವರಸೆ : ಸರಸನ್ನೆ ತೊಡೆ[ಪಾಠಾಂ. ಡ]ಮಡಂ ಕಸೆಕಬ್ಬಿ ಕಡಿಯಾಣ ಸರಸಮುಂ ಸ್ವೈರಿಸದ ಚಳಬಳಿಕೆಗಳ ಚಾರು ತುರಗಕುಲ (ಸೋಮಚ. ೫-೨೮) ; ಬಳಿಕೆಯೊಳು ತೊಡೆಮಡ ಕಿಸಿ[ಕಸೆ]ಕಂಬಿಯ ಸರಸನ್ನೆಗಳಾಟದ ತೊಡಕಂ ಹೊದ್ದದೆ (ವೀರೇಶ. ೨-೨೯) ; ತೊಡೆಮಡ ದನಿ ಚಮ್ಮಟಿಗೆಗಳನೊಯ್ಯನೊಯ್ಯನೆ ಮೈವಳಿಗೆ ತಂದೊಡಂಬಡಿಸಿ (ರಾಜಶೇ. ೬-೧೧ ವ). ೨. ಸವಾರಿ : ಎನ್ನ ತೊಡೆಮಡದ ಮದಕರಿಯೆ ಭಕ್ತರ ಸಿರಿಯೆ ದುರಿತಗಜ ಹರಿಯೆ ಸಾಮರ್ಥ್ಯಗಿರಿಯೆ (ಸಿದ್ಧರಾ. ೮-೪೨); ೩. ಸವಾರಿಯ ಒಂದು ಕ್ರಮ : ಥಾಪನೆ ಬಯ್ಸಿಕೆ ತೊಡೆಮಡಕಯ್ದನಿ ಯೆಂಬ ಚಡಾಯತಿಕೆಗಾಯತಿಕೆವಡೆದಾರೂಢ ವಿದ್ಯಾವಿಳಾಸ (ಸೌಇಇ. IX-i, ೩೪೩-೨೦ ; 1226). ೪. (ಆಲಂ) ಸಲಿಗೆ; ಆತ್ಮೀಯತೆ : ಪೊಱಮಡಿಸಿದಂ ಪುರಹರನ ತೊಡೆಮಡದ ಸುಕುಮಾರನು (ಸೋಮಚ. ೫-೨೨). [ ತೊಡೆ$_2$ + ಮಡ$_1$ ]

**ತೊಡೆಯಿಸು** (ಕ್ರಿ). ೧. ಬಳಿಯುವಂತೆ ಮಾಡು ; ಲೇಪಿಸು : "ತೊಡೆಯಿಸು - ಲೇಪ್ಯಕರಣೇ" (ಶಮದ). ೨. ಅಳಿಸು ; ಉಜ್ಜಿ ತೆಗೆ ; ಇಲ್ಲದಂತೆ ಮಾಡು : ಪುರಾತನ ಚಕ್ರವರ್ತಿಗಳ ದಿಗ್ವಿಜಯ ಕೀರ್ತಿಗಳಂ . . . ದಂಡರತ್ನದಿಂ ತೊಡೆಯಿಸಿ ಕಳೆದು (ಆಜಿಪು. ೯-೩೪ ವ); ಆಂ ಬಂದು ಪೋದ ಪಜ್ಜೆಯನಂಬುಜಮುಖಿ ಪೆಱನದೊರ್ಬನಱಿಯದ ತೆಱದಿಂ . . . ತೊಡೆಯಿಸುವುದೆನುತುಮಾಂ ಪೊಱಮಟ್ಟೆಂ (ದಶಕು. ೧೦-೪೦); ತನ್ನರೇಂದ್ರನ ನೊಸಲ ಬರೆಹವ ಮುನ್ನೊರೆಸಿ ಬಿಜ್ಜಳನ ಸಾಮ್ರಾಜ್ಯೋನ್ನತಿಯನೀಶನ ಕವಳಿಗೆಯೊಳಂತು ತೊಡೆ[ಪಾಠಾಂ. ಡ] ಯಿಸುತ (ಬಸಪು. ೬೦-೭). [ ತೊಡೆ$_1$ + - ಇಸು$_3$ ]

**ತೊಡೆಯೇಱಿಸು** (ಕ್ರಿ). ತೊಡೆಯ ಮೇಲೆ ಕೂರಿಸಿಕೊಳ್ಳು : ಬಯಸಿ ಪಡೆದು ತೊಡೆಯೇಱಿಸಿ ಮುದ್ದನೊಱಲ್ದು ನೋಡಿ ನಡೆಪಿದ ಜನನೀ ಜನಕರ್ಗದೆನಿತಱಲ್ ಜನಿಯಿಕುಮೋ (ಕಾದಂಊ. ೪೭೫) ; ಅರಸನೆಂಬ ಪಾತಕನೆನ್ನಂ ತೊಡೆಯೇಱಿಸಿ ಕೇಳಿಕೆಯಾದೊಡೆ ನೋಡುತಿರ್ದೆಂ (ಯಶೋಚ. ೨-೫೦). [ ತೊಡೆ$_2$ + ಏಱಿಸು ]

**ತೊಡೆವಾಳ** 'ತೊಡೆವಾಳೆ' ನೋ.

**ತೊಡೆವಾಳೆ**, ತೊಡೆವಾಳ (ನಾ). ತೊಡೆಯ ಸಂದಿಯಲ್ಲಿ ಬಾಳೆಯ ಕಾಯಿಯಂತೆ ಏಳುವ ಬಾವು ; ಉಡುಚು ; ಒಂದು ಬಗೆಯ ಗುಹ್ಯ ರೋಗ : "ಜುಂಗಃ = ತೊಡೆವಾಳೆ" (ಕಾಶಕ್ಯ. ೧೦); ರಕ್ತಧಾತು, ಮಾಂಸ ಧಾತು ... ಇವಱಿಂದ ತೊಡೆಗಳ ಸಂದಿನಲ್ಲಿ ಆ ಗ್ರಂಥಿ ಉಂಟಾಗುವುದು. ಅದನ್ನೇ ತೊಡೆವಾಳೆ ಎಂದೆಂಬರು (ವೈದ್ಯಸಾ. II, ೧೭೪). **ತೊಡೆವಾಳ** : ಈ ಬೇರಂ ನಿಂಬೇಹುಳಿಯಲ್ಲಿ ತೇದು ತೊಡೆಯಲು ೩ ದಿನಕ್ಕೆ ತೊಡೆವಾಳ ಗುಣ (ವಿದ್ಯವಿ. ೪) ; ದೇಹದ ಗ್ರಂಥಿಗಳಿರುವ ಪ್ರದೇಶದಲ್ಲಿ (ಮು. ಕಂಕುಳಲ್ಲಿಯೂ ತೊಡೆಯ ಸಂದಿಯಲ್ಲಿಯೂ) ಏಳುವ ಗೆಡ್ಡೆ; ತೊಡೆವಾಳ; ಉಡುಚು (Bubo. ಇಂಕನಿ.).
[ ತೊಡೆ$_2$ + ಬಾಳೆ$_1$ (< ಬಾಟೆ³)./ತಮಿ. ತೊಟ್ಟೈವಾಟ³, ತುಟ್ಟೈವಾಟ್ಟೈ; ಮಲ. ತುಡವಾಟ್ಟ; ತುಳು. ತೊಡೆವಾಳ್, ತೊಡೆವಾಳೊ ]

**ತೊಡೆವೇನೆ** (ನಾ). ತೊಡೆಯ ನೋವು,-ವೇದನೆ : ಕುರುರಾಜಂ ತೊಡೆ ವೇನೆಗೆ ನರಳನೆ (ಗದಾಯು. ೯-೧೯). [ ತೊಡೆ$_2$ + ಬೇನೆ ]

**ತೊಡೆವೊಯ್** (ಕ್ರಿ). ತೊಡೆಯನ್ನು ಮೃದುವಾಗಿ ಬಡಿ,-ಮೆಲ್ಲನೆ ತಟ್ಟು : ಹೊತ್ತು ಹೋಯಿತ್ತೇಳಿರೇ ಶಿವಾರ್ಚನೆಗೆಂದು ತೊಡೆವೊಯ್ದು ಮೆಲ್ಲನೆಬ್ಬಿಸೆ (ಬಸರ. ೯-೧೪೯). [ ತೊಡೆ$_2$ + ಪೊಯ್$_1$ ]

**ತೊಡೆಸಂಕಲೆ** (ನಾ). ೧. ತೊಡೆಗೆ ಹಾಕುವ ಸಂಕೋಲೆ,-ಸರಪಣಿ : ತೊಡೆಸಂಕಲೆಯಿಕ್ಕಿದವೊಲ್ಕುಡಿಯಳ್ಳಿಗಳಿಂದೆ ಸುರಿದುವಿರ್ಕೆಲಕೆ ಕರುಳ್ (ಶಮದ. ೧೦೭ ಪ್ರಯೋ). ೨. ಬಿರುದಿನ ಬಳೆ : ಮೊಕ್ಕಳಮನೆ ಬಸಱೀ ಱಿಂದೊಕ್ಕ ಕರುಳ್ ತೊಡೆಯೊಳಾವಗಂ ತೊಡರ್ದನಸುಂ ಮಿಕ್ಕುವು ಬಿರುದರ ಬಿರುದಿಂಗಿಕ್ಕಿದ ನುಣ್ಪೆಸದ ಮಿಸುಪ ತೊಡೆಸಂಕಲೆಯಂ (ಚಂದ್ರಪು. ೧೦-೭೪). ೩. (?) : ಬಿರುದಿನುಬ್ಬಟೆಯ ತಳಪಟದೊಳೌಕಿದರು ತೊಡೆಸಂಕಲೆಯ ತೊಲಗದ ಕಂಭದಪ್ರತಿಬಲರು ಹಾಹಾಹಾಣೆಯಲಿ ಹೊಯಿದಾಡಿದರು ಕಡುಗಿ (ಕುಮಾಭೀ. ೪-೨೭). [ ತೊಡೆ$_2$ + ಸಂಕಲೆ ]

**ತೊಡೆಸಕ್ಕಿ**, ತೊಡೆಸಕ್ಕೆ (ನಾ). ೧. ಪ್ರತ್ಯಕ್ಷ ಸಾಕ್ಷಿ : ವಿಕ್ರಮಾಕ್ರಾಂತದಿಂ ದಿಗಧೀಶರ್ತೊಡೆಸಕ್ಕಿಯಾಗೆ ಧರೆಯಂ ನಿಃಕಂಟಕಂ ಮಾಡಿದಂ (ಸೌಇಇ. IX-i, ೧೫೩-೧೩ ; 1083); ನನೆಯಂಬುಗಳಂ ತೊಡೆಸಕ್ಕಿ ಮಾಡಿ ಕಾಂತೆಯ ತೊಡೆ ತೊಡೆದವು ಕನಕಕದಳಿಕಾವಿಲಸನಮಂ (ಮಲ್ಲಿಪು. ೩-೬೦) ; ಈವ ಗುಣಕ್ಕೆ ತಂನ ತೊಡೆಸಕ್ಕಿ ನಿಜಾಶ್ರಿತ ಪಂಡಿತರ್ಕ್ಕಳೊಳ್ ತೀವಿದುದಗ್ರ ಲಕ್ಷ್ಮಿ ನಿಜದೋರ್ಬ್ಬಳೆಳೇಲ್ಗೆ ಸಕ್ಕಿ (ಎಕ. VII, ಶಿಕಾರಿ. ೧೦೩-೧೫ ; 1149). ೨. ತೊಡೆ ತಟ್ಟಿ ಮಾಡುವ ಪ್ರತಿಜ್ಞೆ (?) : ವಜ್ರವೇದಿಕೆಯಂ

ತಾಂ ತೊಡೆಸಕ್ಕಿ[ಪಾಠಾಂ. ಸಾಕ್ಷಿ]ಪೊಯ್ವುವೋಲ್ ಪೊಯ್ದೊಡನೊಡನುಚ್ಚಳಿ ಪುವಿದಟ ತುಂಗತರಂಗಂ (ಆದಿಪು. ೧೩-೧೩೪). **ತೊಡೆಸಕ್ಕೆ:** ೧. ತೊಡೆಗಳ ನುಡಿಯುಲ್ಲುರುಗಳ್ ತೊಡೆಸಕ್ಕೆಗಳಾಗೆ (ಗದಾಯು. ೧-೭೮);"ಪ್ರತಿಬಂಧಕ" (ಪ್ರಭಣ್ಣ) : ಪರ್ಚುರ್ ಬಿರ್ದ ಪೆರ್ದೊಡೆ ತೊಡೆಸ[ಸ]ಕ್ಕೆಯಾಗಗಿದು ಕೆತ್ತುವ ಪುಣ್ಣಳ ಬಾಯ್ಗಳೀಟನುಪ್ಪುಡಿಸುವ ಬಾಯ್ಗಳಾಗಿರೆ ಕಟುತ್ತಿಬಾವೆಂ ನೃಪ ಸೈನ್ಯವಂ (ಶೃಂಗಾರ. ೧-೮೩) ; ನಖಿಂ ಮುಡುಪನವುಂಕೆ ಕಂಡು ಸತಿ ಕಂಟಿಸಿ ಕಾಡುವಳೆಂದು ತನ್ನೊಡನೆಯ ಬೇಂಟಿಕಾಟಿವಡೆಯುಂ ತೊಡೆಸಕ್ಕೆ ಯನುಂಟುಮಾಡಿದಂ (ಸೂಕ್ತಿಸು. ೩-೧೪೦); ತೊಡೆಯ ಸ[ಪಾಠಾಂ. ಸೆ]ಕ್ಕೆ= ತೊಡೆಸ[ಪಾಠಾಂ. ಸ]ಕ್ಕೆ (ಶಮದ. ೧೭೨ ಪ್ರಯೋ).

[ ತೊಡೆ$_2$ + ಸಕ್ಕೆ ]

**ತೊಡೆಸಕ್ಕೆ** 'ತೊಡೆಸಕ್ಕಿ' ನೋ.

**ತೊಡೆಸನ್ನೆ** (ನಾ). (ಕಂದುರೆಸವಾರಿ ಮಾಡುವಾಗ) ತೊಡೆಯ ಅವುಕು ವಿಕೆಯಿಂದ ಮಾಡುವ ಸನ್ನೆ,-ಸೂಚನೆ : ಆನೆಗೆ ಅಡಿಸನ್ನೆ ಕುದುರೆಗೆ ತೊಡೆಸನ್ನೆ ಹೆಣ್ಣಿಗೆ ಕಣ್ಣಿನ ಸನ್ನೆ (ಇಂಡಾಪ. ೯೦-೩೭).

[ ತೊಡೆ$_2$ + ಸನ್ನೆ$_2$ ]

**ತೊಡೆಸೋಂಕು** (ನಾ). ೧. ತೊಡೆಯು ಸ್ಪರ್ಶವಾಗುವಷ್ಟು ಹತ್ತಿರ,- ಸನಿಹ: ವಾಸವನ ತೊಡೆಸೋಂಕಿನಲಿ ಕುಳ್ಳಿಹರೀ ಮಹೇಶ್ವರರು (ಕುವ್ಯಾಸ. ೮-೧೮). ೨. (ಆಲಂ) ಸಲಿಗೆ ; ಆತ್ಮೀಯತೆ : ಎನಗೆ ನಿಮ್ಮಡಿಗಳಲಿ ಸಮಸೇವನೆಯೆ ದೇವ ಮುರಾರಿಯುಂಜಾವೆನಲು ತೊಡೆಸೋಂಕಿನಲಿ ಸಾರಿದು ಶೌರಿಯಿಂತೆಂದ (ಕುವ್ಯಾಉ. ೧೦-೨). [ ತೊಡೆ$_2$ + ಸೋಂಕು$_2$ ]

**ತೊಡೆಹ** 'ತೊಡೆಪ' ನೋ.

**ತೊಣಚಿ** 'ತೊನಸೆ' ನೋ.

**ತೊಣಚೆ** 'ತೊನಸೆ' ನೋ.

**ತೊಣಸಿ** 'ತೊನಸೆ' ನೋ.

**ತೊಣಸೆ$_1$** 'ತೊನಸೆ' ನೋ.

**ತೊಣಸೆ$_2$** (ನಾ). ಒಂದು ಬಗೆಯ ಸಸ್ಯ,-ಸೊಪ್ಪು : (ಕ).

[ ? ]

**ತೊಣೆ$_1$**, ತೊನ್ನೆ$_2$ (ನಾ). ೧. ಸರಿ ; ಸಮಾನ ; ಎಣೆ ; ಸಾಟಿ : "ಸರಿ ದೊರೆ . . . ಎಣೆ ತೊಣೆ . . . ಸಂಗಡಂ-ಈ ೧೮ ಸಮಾನಕೆ ಪೆಸರ್" (ಕಶಸಾ. ೧೫-೨೯೦) ; ಕರ್ಣನೆಣೆಗಂ ತೊಣೆಗಂ ನೃಪರಾರುಮಿಲ್ಲ (ಪಂಪಭಾ. ೧೨-೧೦೦) ; ಶಶಭೃತ್ಕಾಂತಿಗೆ ಮಿಂಚುಂಬುಬು ಸಮ ನೆಂತಕ್ಕುಮೊ ದೊರೆಗಮೊರೆಗಮೆಣೆಗಂ ತೊಣೆಗಂ (ಶಾಂತಿಪು. ೧೨-೭೭) ; ವಿದ್ಯಾವಿಭವವಂಶಸಂಪತ್ತಿಯೊಳಿಂದೀ ವರನೀಕೆಗೆ ತೊಣೆಯೆನೆ (ಪಾರ್ಶ್ವಪು. ೯-೪೩) ; ತೊಣೆಯಾಂಡಿಗಿಳೆಯೊಳಾರ್ತೊಣೆ (ಭೈರವೇ. ೧-೨೨೮) ; ಸಹದೇವಂಗೆ ಸತ್ಯವಂತಂ ತೊಣೆ (ರಾಮಾಶ್ವ. ೧೪೪-೨). ೨. ಜೊತೆ ; ಒಡನಾಟ; ಸಹವಾಸ: ಅವಳ ತೊಣೆ ಪೂವಿಗೂ ಹರ್ಷವನ್ನೊದಗಿಸುತ್ತಿದೆ (ಹುಲಿಹಾ. ೨೭೭). ೩. ಸಂಗಡಿಗ ; ಒಡನಾಡಿ : ರಕ್ಷಿಸು ನಮಃಶಿವಾಯ ನೀನೆ ತೊಣೆ ನೀನೆ ಹೊಣೆ ಎಂದು ಕಟಿಗೊರಲಂಗೆ ಮೊಟಿಯಿಡೆ (ಬಾಗೀರ. ದೇ. ೭೨೭-೯). 'ಎಣೆತೊಣೆ' ಪರಾ. **ತೊನ್ನೆ$_2$** : ೧. ನಿರುಪಮ ಧರ್ಮ್ಮಕಾರ್ಯ್ಯದೆಡೆಯೊಳು(ಳ್)ಸಲೆ ಶೋಭನಸಟ್ಟೆಯೊಳು(ಳ್) ದಿಟಂ ಸರಿ ದೊರೆ ಪಾಟ ಪಾಸಟ ಸಮಂ ತೊನೆಯೆಂದಡೆ ದೋಸಮಾಗದೇ (ಕಇ IV, ೧೦-೪೯; 1121).

**ತೊಣೆ ನಡೆಯರ್**=ಜೊತೆಗೂಡಿ ನಡೆಯುವವರು; ಒಡನಾಡಿಗಳು: ಬರ್ಪವಾಮ್ ತೊಣೆನಡೆಯರ್ ; ಇರ್ವ್ವರುಮ್ ನೋಡುತ್ತುಮೊರ್ವ್ವನಾ ಕಣ್ಣಳಿನ್ (ಅಂತಿಗೊ. ೪೪-೯೦೨).

[ ದೇ.॥ ತಮಿ. ತುಣೈ ; ಮಲ. ತುಣ ; ಕೊಡ. ತೊಣೆ ]

**ತೊಣೆ$_2$**, ಡೊಣೆ$_3$, ದೊಣೆ$_2$ (ನಾ). ಬಾಣದ ಕೋಶ ; ಬತ್ತಳಿಕೆ ; ತೂಣೀರ : "ಮೂಡಿಗೆ ತೊಣೆ ಬತ್ತಳಿಕೆಯು" (ಕವಿಕಂ. ೮೧) ; ನಿನ್ನ ಶರಕೊಂದೆ ವಾಹನಕಮೆರಡು ಆರ್ಮೋಗಕೆ ಮೂರ್ಬಿಲ್ಗೆ ನಾಲ್ಕು ತೊ[ಪಾಠಾಂ. ಡೊ]ಣೆಗೈದೆನುತೆ ಕೂರ್ಮೋನೆಯು ಸರಳ್ಗಳಿಂದೆಸೆಯಲ್ಕೆ (ಜಬಪು. ೪೩-೧೯). **ಡೊಣೆ$_3$** : "ತೂಣೀರಮುಪಾಸಂಗಂ ಬಾಣಧಿ ಬಾಣಾಶ್ರಯಂ ನಿಷಂಗಂ ಡೊಣೆಗಳ್" (ವಸ್ತುಕೋ. ೭೫-೧೯); ಅಂತುಮಾ ರೂಪನೆ ಚಿಂತಿಸಿ ಚಿಂತಿಸಿ ಕಾಂತೆಯರ್ ಪತಿಗೆ ರತಿ ಸೋಲ್ತು ಕಂದಳಿ ರಂತಲರ್ಗಣೆಗೆ ಡೊಣೆಯಾದರ್ (ಶಾಂತಿಪು. ೧೦-೯೨) ; ಮಸೆವೆತ್ತ ಕೂರ್ಗಣೆಗಳಂ ಡೊಣೆಗಳಿಂದುಗಿದುಗಿದು ತೆಗೆದೆಸೆಯಲು (ಜಬಪು. ೩೯-೧೯); ಡೊಣೆಯಿಂ ಕಣೆಯಂ ತೆಗೆದಾರ್ದು ಬಿಲ್ಗಂ ಪೂಡಿ (ಶಬಶಂ. ೩-೫೨). **ದೊಣೆ$_2$** : ತನುತ್ರವಿಸಾ ಭಯಂಕರಧನು ಖಿಟ್ಗಮತ್ತಪರವಿಂತೆರಡುಂ ದೊಣೆ ತೀವಿದಂಬುಮೊಂದಿರವು ತಪಕ್ಕಿದೆಂತುಟೊ (ಪಂಪಭಾ. ೮-೧೭) ; ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತು ಬಾಣಂ (ಗದಾಯು. ೩-೩) ; ಕಾಮನ ದೊಣೆಗೆ ತೊಣೆಯೆನಿಪ್ಪ ಕಿಬುದೊಡೆ (ಶಾಂತಿ.ದೇ. ೨೮೯-೭); ಇಂತೀ ನುಡಿಗೆ ಪುಷ್ಕಲಾ ಕರಂ ಕನಲ್ದು ದೊಣೆಯಿಂ ನಂಜನುಗುಟ್ಟಿ ಕವಲಂಬುಗಳನುರ್ಚಿ ಮೊಗೆದಿಸುತಂಮಿರೆಯಿರೆ (ರಾಮಾಶ್ವ. ೯೩-೩) ; ಗುರಿ ಸಿಕ್ಕಿತನುವಾಗ ದೊಣೆ ಬರಿದಾಗಿತ್ತು (ಚಂದ್ರವೀ. ೪೦-೬೦).

[ <ಪ್ರಾ. ತೋಣ./ಸಂ. ತೂಣ ]

**ತೊಣೆಗಾಣು** (ಕ್ರಿ). ಸಮಾನತೆಯನ್ನು ಕಾಣು : ಭೂಚಕ್ರದೊಳಗೀತಂಗೆ ತೊಣೆಗಾಣೆವೆಂದು ಸಜ್ಜನಸಮಿತಿ ಪೊಗಳುತಿರಲು (ಗುರುಚಾ. ೧೨-೩೨).

[ ತೊಣೆ$_1$ + ಕಾಣು (<ಕಾಣ್) ]

**ತೊಣೆವಕ್ಕಿ** (ನಾ). ಜೊತೆಯಾಗಿರುವ ಪಕ್ಷಿ ; ಅವುಳ್ವಕ್ಕಿ ; ಚಕ್ರವಾಕ: "ಕೋಕಮೆನಲ್ ತೊಣೆವಕ್ಕಿ [ಪಾಠಾಂ. ಪೊಣರ್ವಕ್ಕಿ]" (ಚಕಾನಿ. ೧೧೮) ; ಪಾರಿವವಂಚೆ ಕೊಂಚೆ ಗಿಳಿ ಸೋಗೆ ಕುಕಿಲ್ ತೊಣೆವಕ್ಕಿ . . . ದನಿ ಗೆಯ್ದಪುವು (ಸೂಕ್ತಿಸು. ೧೪-೫೦) ; ಪಾಡುತಿಹಾಬಿಡಿ ನೆಟಿ ಹೆಟಿಸಾರುವ ತೊಣೆವಕ್ಕಿ (ಉದ್ಭದೇ. ೪-೧೧). 'ಎಣೆವಕ್ಕಿ' ಪರಾ.

[ ತೊಣೆ$_1$ + ಪಕ್ಕಿ$_1$ ]

**ತೊಣೆವರ್** (ಕ್ರಿ). ಜೊತೆಯಲ್ಲಿ ಬರು : ಸೋಮಂ ಸೌಮ್ಯದೆ ಸಾನ್ನನುಂ ತೊಣೆವರಲ್ . . . ಜ್ಞಾನಕ್ಕೆ ಮೇಣ್ಪೊದ್ದನುಂ ತಾಮಾರ್ಗಡಮೆಂದು ತೋರ್ಪ ನಲವಿಂ ಗೆಲ್ಲಾಂಪನಾ ಗುಮ್ಮಟಂ (ಮೈಸೂಮು. ೨-೭೮).

[ ತೊಣೆ$_1$ + ಬರ್ ]

**ತೊಣೆವೆಱು** (ಕ್ರಿ). ಜೊತೆಯಾಗು ; ಸರಿಸಾಟಿಯಾಗು ; ಸರಿಸಮಾನತೆ ಯನ್ನು ಹೊಂದು : ಪೊಣರ್ದೊಡಮನುವರಮಿವನೊಳ್ [ತೊಣೆ] [ಪಾಠಾಂ. ದೊರೆ]ವೆತ್ತಪುದೆನಗೆ ನರನೊಳ್ (ಪಂಪಭಾ. ೧೨-೧೭೪).

[ ತೊಣೆ$_1$ + ಪೆಱು$_1$ ]

**ತೊಣೆಹೋಗು** (ಕ್ರಿ). ಜೊತೆಯಲ್ಲಿ ಹೋಗು : ಚಿಲುವ್ವೆಯನು ಹೊಂಗ ನೂರಿಂಗೆ ಚಿಕ್ಕಕೇತಯ್ಯ ದಣ್ಣಾಯ್ಕರು ತೊಣೆಹೋಹುತವಿದ್ದಲ್ಲಿ (ಎಕ. IX, ಚನ್ನಪ. ೧೩-೭ ; 1338).

[ ತೊಣೆ$_1$ + ಹೋಗು$_1$ (<ಪೋಗು$_1$) ]

**ತೊಣ್ಣಂಗಿ** 'ತೊಂಡಂಗಿ' ನೋ.

**ತೊಣ್ಣಂದ** (ನಾ). ಒಬ್ಬಾತನ ಹೆಸರು : ಬಿನವಿತಿಅಬ್ಬೆ ಊರಾಳಿ ಮುದುಗಾರ ತೊಣ್ಣಂದರ ಮಗನುಂ ಪೊರಿಗೊಣ್ಣನ್ದಮ್ಮಗನುಂ ಶ್ರೀಯಮ್ಮನೆ[ಮ್ಪೊ] × × ಯ್ವೆಸರ್ ಅರಿಧೀರನೆ[ಮ್ಪೋ]ದ × × × (ಸೌಇಇ. XX, ೧೦-೨ ; ?). 'ಕೊಣ್ಣಂದ' ಪರಾ. [ ? ]

**ತೊಣ್ಕೆ** (ನಾ). ಪ್ರಾಚೀನ ; ಮೂಲ (?) : ಭೂತಿಗೆ ಕುಱುಪೆಂಬ ಕಿಂಕರರ ತೊಣ್ಕೆಯಿದೆಂಬ ವಿಲಾಸಮೆಂಬ ದೇಸೆಗೆ ದಶಲಕ್ಷಲೆಕ್ಕದಸಿಪೇಟಕ

ಕೋಟಿಯ ಮಿಂಚುಬಳ್ಳಿದೀವಿಗೆಯನಲರ್ಚಿ ದೇವಸಭೆಯೊಳ್ ಮೆಱೆವರ್ ದಿವಿಜಾಂಗರಕ್ಷಕರ್ (ಅನಂಪು. ೪-೫೨). [ ←ತಮಿ. ತೊನ್ಮೈ ? ]

**ತೊತ್ತಳ** 'ತೊಟ್ಟುಳಿ' ನೋ.

**ತೊತ್ತಳಂತುಳಿ** 'ತೊಟ್ಟುಳಿದುಳಿ' ನೋ.

**ತೊತ್ತಳಂದುಳಿ** 'ತೊಟ್ಟುಳಿದುಳಿ' ನೋ.

**ತೊತ್ತಳಂದುಳಿಯಿಸು** (ಕ್ರಿ). ಅಜಿಗಿಜಿಯಾಗುವಂತೆ ತುಳಿಸು; ನಂಗ್ಗುನುರಿಯಾಗುವಂತೆ ತುಳಿಯಿಸು: ಆನೆಗಳಿಂ ತೊತ್ತಳಂದುಳಿಯಿಸಲು ಬಗೆದು (ವಾಗೀರ. ದೇ. ೫೭೭-೧).
[ ತೊತ್ತಳಂದುಳಿ (<ತೊಟ್ಟುಳಿದುಳಿ) + – ಇಸು$_3$ ]

**ತೊತ್ತಳತುಳಿ** 'ತೊಟ್ಟುಳಿದುಳಿ' ನೋ.

**ತೊತ್ತಳದುಳಿ** 'ತೊಟ್ಟುಳಿದುಳಿ' ನೋ.

**ತೊತ್ತಳದುಳಿತ,** ತೊತ್ತಳಿದುಳಿತ (ನಾ). ನುಗ್ಗುನುರಿ ಮಾಡುವಿಕೆ; ಉಗ್ರವಾದ ಆಕ್ರಮಣ: ಅವರ ತೊತ್ತಳದುಳಿತದಿಂದ ತಮ್ಮ ಕಾವಲ ಹುರಿಗಡಲೆಯ ರಾಶಿಯನ್ನೂ ಚೀಲಗಳನ್ನೂ ರಕ್ಷಿಸಿಕೊಳ್ಳುತ್ತಿರುವರು (ಬಿರುಗು. ೧೩-೧೨); ಉಲ್ಲೋಲ ಕಲ್ಲೋಲ ಜೀವನಾಂಭೋನಿಧಿಯ ರುದ್ರತಾಂಡವದ ತೊತ್ತಳ ದುಳಿತಕಾಳಾಗಿ (ನಡಬಂ. ೫೨-೭); ಪರಕೀಯರ ತೊತ್ತಳದುಳಿತವನ್ನು ಆಮಂತ್ರಿಸಿದ ಭಾರತೀಯರಿದ್ದಾರೆ (ಕರ್ನಾಟ. XV ಮುನ್ನುಡಿ). **ತೊತ್ತಳಿದುಳಿತ:** ಈ ಭೈರವಿಯ ತೊತ್ತಳಿದುಳಿತಕ್ಕೆ ಪರಕೀಯ ಸೊತ್ತಿನ ನೊಗ ಜಬ್ಬೆಜಬ್ಬೆಯಾಯಿತು (ಸುವರ್ಣ. ೨೨೬).
[ ತೊತ್ತಳ (<ತೊಟ್ಟುಳಿ) + ತುಳಿತ ]

**ತೊತ್ತಳಿ** 'ತೊಟ್ಟುಳಿ' ನೋ.

**ತೊತ್ತಳಿಗೊಳ್** (ಕ್ರಿ). ನಜ್ಜುಗುಜ್ಜಾಗು; ಅಜಿಗಿಜಿಯಾಗಂ: ಹಿಂಬರಿಕೆಯಡಿಯಲ್ಲಿ ಸಿಕ್ಕು ತೊತ್ತಳಿಗೊಂಡು ಸಾವವರ ನರಳಿಕೆಯ ಕಿವುಡುಗೇಳಿ, ಇಲ್ಲಿಯೂ ಅಲ್ಲಿಯೂ ಕೊನೆಗಾಣದಾಸೆಗಳ ಅಂತರ ಪಿಶಾಚಿಯೇ! (ಉಯ್ಯಾಲೆ. ೪೫-೩). [ ತೊತ್ತಳಿ (<ತೊಟ್ಟುಳಿ) + ಕೊಳ್$_1$ ]

**ತೊತ್ತಳಿದುಳಿತ** 'ತೊತ್ತಳದುಳಿತ' ನೋ.

**ತೊತ್ತಟಿ** 'ತೊಟ್ಟುಟಿ' ನೋ.

**ತೊತ್ತಟಿಂದುಟಿ** 'ತೊಟ್ಟುಟಿದುಟಿ' ನೋ.

**ತೊತ್ತಟಿದುಟಿ** 'ತೊಟ್ಟುಟಿದುಟಿ' ನೋ.

**ತೊತ್ತಿ** (ನಾ). ಊಳಿಗದವಳು; ದಾಸಿ: ಮತ್ತೊಂದು ಕಾರ್ಯಮೇನುಂ ಬಿತ್ತರಿಪೊಡಮಿಲ್ಲ ನಿನ್ನ ವಲ್ಲಭೆಗೆ ಕರಂ ತೊತ್ತಿಯರಾಗಿಯೆ ಬೆಸನಂ ನೆತ್ತಿಯೊಳಾಂತೆಯ್ದೆ ಮಾಟ್ಪುದಲ್ಲದೆ ನಮಗಂ (ಜಾಧಪು. ೬-೪೦); ರಾಮ ನಿನ್ನೀ ಹತ್ತುತಲೆಗಳ ಕಡಿಯೆ ಬಳಿಕವರೆನ್ನ ತೊತ್ತಿಯರು (ಜಾಶಿರಾ. ೧೧-೭೦); ಇವರು ತೊತ್ತಿಯರಂದದಿಂದೀ ದಿವಿಜಲೋಕದ ನಾರಿಯರು ನಾವಿವರ ನೋಡುವರಲ್ಲವೆನೆ (ನಿಘಾಗ. ೧೧-೮-೩೩).
[ ತೊತ್ತು (<ತೊಟ್ಟು) + – ಇ$_2$ ]

**ತೊತ್ತಿಗ** (ನಾ). ಊಳಿಗದವನು; ಸೇವಕ: ಬಿನುಗು ಕೋಡಗಿಗಳಿರ ನೀವೀತನಿಗೆ ತೊತ್ತಿಗರಾಗಿ ಸಾಯದಿರೆಂದು ಬೊಬ್ಬಿಱಿದ (ಜಾಶಿರಾ. ೧೯-೪೧); ಸಾಲವಿರುವವನು ತೊತ್ತಿಗನು ಲೋಕದೊಳ್ ಸಾಲವೇ ಶೂಲ (ನೀತಿಚಿಂ. XI, ೧೯). 'ಗಂಡುತೊತ್ತಿಗ' ಪರಾ.
[ ತೊತ್ತು (< ತೊಟ್ಟು) + – ಇಗ ]

**ತೊತ್ತು** 'ತೊಟ್ಟು' ನೋ.

**ತೊತ್ತುಗೆಯ್ಸು,** ತೊತ್ತುಗೈಸು (ಕ್ರಿ). ಊಳಿಗವನ್ನು ಮಾಡಿಸು: ಸುರರ ನೆಱೆ ಗೋಳುಂಡೆಗೊಳಿಸಿದೆ ತೊತ್ತುಗೆಯ್ಸಿದೆ ನೆರೆದ ಮರ್ಕಟರ (ಜಾಶಿರಾ. ೨೧-೫೨). **ತೊತ್ತುಗೈಸು:** ಎನ್ನಯ ಹೆಂಡಿರೆಲ್ಲರನು ತೊತ್ತುಗೈಸುವೆ (ಜಾಶಿರಾ. ೧೧-೭೦). [ ತೊತ್ತು (< ತೊಟ್ಟು) + ಕೆಯ್ಸು ]

**ತೊತ್ತುಗೆಲಸ** 'ತೊಟ್ಟುಗೆಲಸ' ನೋ.

**ತೊತ್ತುಗೆಲಸಂಗೆಯ್** (ಕ್ರಿ). ಆಳಿನ ಕೆಲಸವನ್ನು ಮಾಡು; ಊಳಿಗವನ್ನು ಮಾಡು; ಸೇವೆಯನ್ನು ಸಲ್ಲಿಸಂ: ತೊತ್ತುಗೆಲಸಂಗೆಯ್ಯುವೇಳ್ದ[ಪಾಠಾಂ. ಲಿತ್ತು]ದ್ಧರಿಸು (ಬಸವು. ೨೩-೨೯).
[ ತೊತ್ತುಗೆಲಸ (<ತೊಟ್ಟುಗೆಲಸ) + ಕೆಯ್$_1$ ]

**ತೊತ್ತುಗೈ** 'ತೊಳ್ತುಗೆಯ್' ನೋ.

**ತೊತ್ತುಗೈಸು** 'ತೊತ್ತುಗೆಯ್ಸು' ನೋ.

**ತೊತ್ತುಗೊಡು** 'ತೊಟ್ಟುಗೊಡಂ' ನೋ.

**ತೊತ್ತುಗೊಳ್** 'ತೊಟ್ಟುಗೊಳ್' ನೋ.

**ತೊತ್ತುತನ** 'ತೊಟ್ಟುತನ' ನೋ.

**ತೊತ್ತುಬಡಕ** 'ತೊತ್ತುಬಡಿಕ' ನೋ.

**ತೊತ್ತುಬಡಿಕ,** ತೊತ್ತುಬಡಕ (ನಾ). ಜಾರ; ವಿಷಯಲಂಪಟ: ತೊತ್ತುಬಡಿಕಂಗೇಕೆ ತತ್ತ್ವವಿಚಾರ (ಅಮ್ಮಿ.ಕ. ೧-೪೩). **ತೊತ್ತುಬಡಕ:** ತೊತ್ತುಬಡಕನಿಗೆ ಪರತತ್ತ್ವದ ವಿಚಾರವೇಕೆ (ಪುರಂದ. ೧-೩೧-೧); ತೊತ್ತುಬಡಕರಿಗೆ ತತ್ತ್ವ ಉಸುರದಿರು (ವಿಶಾಸು. ೭೮-೩); ತೊತ್ತುಬಡಕಗೆ ಬಹು ತತ್ತ್ವವಿಚಾರವ್ಯಾತಕೆ (ಪ್ರಸಕೀ. ೫೧-೧). [ ತೊತ್ತು (<ತೊಟ್ಟು) + – ಬಡಿಕ ]

**ತೊತ್ತುಬುದ್ಧಿ** (ನಾ). ವೇಶ್ಯಾಬುದ್ಧಿ: ಉಪರತಿಗೆ ಪರಪುರುಷನ ಬಯಸುವ ತೊತ್ತುಬುದ್ಧಿಯನೆಲ್ಲ ಬಿಡು ಕಂಡ್ಯ ಮನವೆ (ವಿದಾಕ್ಕ. ೫೧-೩).
[ ತೊತ್ತು (< ತೊಟ್ಟು) + ಬುದ್ಧಿ ]

**ತೊತ್ತುಮಗ** 'ತೊತ್ತುವಗ' ನೋ.

**ತೊತ್ತುವಗ,** ತೊತ್ತುಮಗ (ನಾ). ತೊತ್ತಿನ ಮಗ; ದಾಸೀಪುತ್ರ: "ದಾಸಂ ತೊತ್ತುವಗನಕ್ಕು" (ಮಂಗರಾ. ೭೧-೧೭). **ತೊತ್ತುಮಗ:** (ಕ).
[ ತೊತ್ತು (< ತೊಟ್ಟು) + ಮಗ ]

**ತೊತ್ತುವೆಗ್ಗಡೆ** (ನಾ). ರಾಣೀವಾಸದ ಮೇಲ್ವಿಚಾರಕ; ಅಂತಃಪುರದ ಅಧಿಕಾರಿ: "ತೊತ್ತುವೆಗ್ಗಡೆಗಳಂತರ್ವಂಶಿಕರಕ್ಕು" (ಮಂಗರಾ. ೭೯-೭). 'ಅಂತರ್ವಂಶಿಕ' ಪರಾ.
[ ತೊತ್ತು (< ತೊಟ್ಟು) + ವೆಗ್ಗಡೆ (< ಪೆರ್ಗಡೆ$_1$) ]

**ತೊತ್ತುವೆಸ** 'ತೊಟ್ಟುವೆಸ' ನೋ.

**ತೊತ್ತುವೇಟ** (ನಾ). ವೇಶ್ಯೆಯಂ ಪ್ರಣಯಂ: ಕಡಿದರೋ ಸುರತರುವನೆಲವದ ಮಿಡಿಯ ಬಯಕೆಗೆ ತೊತ್ತುವೇಟಕೆ ಹಡೆದ ತಾಯನು ತೊಱಿಸಿದರೋ (ತೊರರಾ. ೪-೫-೧೧).
[ ತೊತ್ತು (< ತೊಟ್ಟು) + ಬೇಟ (< ಬೇಂಟ) ]

**ತೊತ್ತುವೊಗು** (ಕ್ರಿ). ಕಿಂಕರನಾಗು; ದಾಸನಾಗು: ಲಿಂಗಜಂಗಮಕ್ಕೆ ತೊತ್ತುವೊಕ್ಕು ಲಿಂಗಜಂಗಮಪ್ರಸಾದಿಯಾದ (ಚನ್ನವ. ಕ. ೩೮೮-೮೨೧); ತೊತ್ತುವೊಕ್ಕಿಂ ಮಹೇಶ್ವರ ನೀಂ ರಕ್ಷಿಪುದೆನ್ನನು (ಶಂಕಶ. X, ೩೮೩).
[ ತೊತ್ತು (< ತೊಟ್ಟು) + ಪೊಗು (< ಪುಗು) ]

**ತೊತ್ತುವೋಗು** (ಕ್ರಿ). ದಾಸಿಯಾಗಂ; ಸೇವಕಿಯಾಗಂ: ಜೀಯ ತೊತ್ತುವೋದಳು ನಮಗೆ ಜಯವನಿತೆ (ಶ್ರೀರಾಮಾ. ೭೫೫-೩೪೮).
[ ತೊತ್ತು ( < ತೊಟ್ಟು) + ಹೋಗು$_1$ (<ಪೋಗು$_1$) ]

**ತೊತ್ತುಳಿ** (ಕ್ರಿ). ಅಜಿಗಿಜಿಯಾಗುವಂತೆ ತುಳಿ; ಧ್ವಂಸಮಾಡು: ತೊತ್ತುಳಿದರೂನೂ ಥಳ್ಥಳಿಸಿ ಹೊಳೆವೆ ಸಂಜೀವಭ್ರಮರನಂತೆ (ಅರಳು. ೨೧೫-೮); ಈ ದಿಬ್ಬವು . . . ಪುಣೆಯನ್ನೆಲ್ಲ ಒಂದು ದಿನ ತೊತ್ತುಳಿದು ಹಾಳುಮಾಡುವಂತೆ ಇದು ನನ್ನನ್ನು ಅಂಜಿಸಿದೆ (ಸಮುಜೀ. ೧೧೯).
[< ತೊಟ್ಟುಳಿದುಳಿ ]

**ತೊತ್ತುಟಿ** 'ತೊಟ್ಟುಟಿ' ನೋ.

**ತೊದ** 'ತೋಡ$_2$' ನೋ.

**ತೊದನಾಡು** (ನಾ). ತೊದವರ ನಾಡು: ಹದಿನಾಡ ಹಲಸೀನ ತೊದನಾಡ ಬಾಳೀಯು . . . ನನಗೆಂದು ತಂದೆ ಅಣ್ಣಯ್ಯ (ಜಗೀತೆ. ೫೮).
[ ತೊದ (< ತೋಡ$_2$) + ನಾಡು ]

**ತೊದಭಾಷೆ** (ನಾ). ನೀಲಗಿರಿಯ ತೋಡಜನಾಂಗದವರು ಆಡುವ ಭಾಷೆ : ೧೯೬೧ರ ಜನಗಣತಿಯಲ್ಲಿ ೭೬೫ ಜನ ತೊದಭಾಷೆಯನ್ನು ಆಡುವವರಿದ್ದಾರೆಂದು ಹೇಳಿದೆ (ದ್ರಾವಿವಿ. ೧೫೫).
[ ತೊದ (< ತೋಡ$_2$) + ಭಾಷೆ ]

**ತೊದಲ್$_1$** 'ತೊದಳ್$_1$' ನೋ.

**ತೊದಲ್$_2$** 'ತೊದಳ್$_2$' ನೋ.

**ತೊದಲ** 'ತೊದಳ' ನೋ.

**ತೊದಲಾಟ** (ನಾ). ಮಕ್ಕಳ ಅಸ್ಪಷ್ಟವಾದ ಮಾತು : ತಪ್ಪಡಿ ತಪ್ಪೀಸಿ ತೊದಲಾಟ ಬಿಟ್ಟೂ (ಮ್ಯೂಶೀಕಾ. ೪೧-೫).
[ ತೊದಲು$_2$ (< ತೊದಳ್$_2$) + ಆಟ ]

**ತೊದಲಿಸು** 'ತೊದಳಿಸು' ನೋ.

**ತೊದಲು$_1$** 'ತೊದಳ್$_1$' ನೋ.

**ತೊದಲು$_2$** 'ತೊದಳ್$_2$' ನೋ.

**ತೊದಲುನಾಲಗೆ** (ನಾ). ತಡವರಿಸುವ ಜಿಹ್ವೆ ; ತೊದಲುವ ನಾಲಗೆ : ಮೊದಲು ಭಜಿಸಿದೆನು ಈಶನನು ಸ್ತುತಿಗೈದು ತೊದಲುನಾಲಗೆಯಲ್ಲಿ ತಾಯ್ನುಡಿಯ ಹಿಡಿದು (ಕಎಪು. ೧೧-೬).
[ ತೊದಲು$_2$ (< ತೊದಳ್$_2$) + ನಾಲಗೆ ]

**ತೊದಲುನುಡಿ** 'ತೊದಳ್ನುಡಿ$_2$' ನೋ.

**ತೊದಲುಮಾಡು** 'ತೊದಳ್ಮಾಡು' ನೋ.

**ತೊದಲುಮಾತು** 'ತೊದಳ್ವಾತು' ನೋ.

**ತೊದಲುಲಿ$_1$** (ಕ್ರಿ). ತೊದಲುಮಾತನಾಡು : ಮಗು ತೊದಲುಲಿವೊಲು ತಾಯನು ಕರೆಯೆ, ಉಲಿವೆನು ಮಗುಳ್ನುಲಿವೆನು ಶ್ರೀಹರಿಯೆ ನಿನ್ನ ನಾಮವನು (೧೯ವಿಂ. ೨೬-೭). [ ತೊದಲ್$_2$ (<ತೊದಳ್$_2$) + ಉಲಿ$_1$]

**ತೊದಲುಲಿ$_2$** 'ತೊದಳುಲಿ' ನೋ.

**ತೊದಲ್ನುಡಿ$_1$** 'ತೊದಳ್ನುಡಿ$_1$' ನೋ.

**ತೊದಲ್ನುಡಿ$_2$** 'ತೊದಳ್ನುಡಿ$_2$' ನೋ.

**ತೊದಲ್ವಾತು** 'ತೊದಳ್ವಾತು' ನೋ.

**ತೊದಲ್ಸೊಲ್ಲಿಸು** (ಕ್ರಿ). =ತೊದಲುಲಿ$_1$: ತಲ್ಲಣಿಸುತ್ತೈದಿಯವ್ವಬ್ಬೆಬೇಯೆಂಬ ತೊದಲ್ಸೊಲ್ಲಿಸುತೆ . . . ಬಂದು ತೊಡೆಯಡರೆ (ನವಮೋ. ೧೫-೫೪).
[ ತೊದಲ್$_2$ (< ತೊದಳ್$_2$) + ಸೊಲ್ಲಿಸು ]

**ತೊದಳ್$_1$**, ತೊದಲ್$_1$, ತೊದಲು$_1$, ತೊದಟ್ (ಕ್ರಿ). ೧. ಮಾತಿನಲ್ಲಿ ತಡವರಿಸು : ನಿಮ್ಮನರ್ಚಿಪಾ ಬಾಯ್ಗೆ ನಮೋನಮೋ ತೊದಳದುನ್ನತ [ಪಾಠಾಂ. ದುಣ್ಮುತೆ]ಭಕ್ತಿಯೊಳೆಯ್ದೆ ಪಾಡುವಾ (ಶಂಪಶಾ. ೧೯). ೨. ಎದುರಿಸು; ಪ್ರತಿಭಟಿಸು : ವಯಚಯನ್ ತುರಗಗೊಳ್ಳಾಗಿ ದುಗ. ದರಸನುಂ ತೊದಳ್ದು ವೇಳೆಯವನಾಳು × ಪಟುಯುತ್ತ್ರಂ ಬಪ್ಪುದ ನನ್ನಗನ್ನಾದೆ (ಸೌಇಇ. IX-i, ೨೨-೫; 923); ಸಂಗರಾಗ್ರದೊಳು ತೊದಳ್ದ ಪರಾರುದಾತ್ತಕಲಿತೇಜಚಮೂಪನೊಟುಗ್ರಕೋಪನೊಳು (ಎಕ. XI, ದಾವಣ. ೪೪-೪೬; ಸು. 1180). ℙಇದು ಬಹುಶಃ 'ತೊಡರ್' ಎಂಬುದರ ಅಪಲಿಖಿತವಿರಬಹುದು. **ತೊದಲ್$_1$** : ೩. ಮಕ್ಕಳು ಮುದ್ದಾಗಿ ಮಾತನಾಡು: ಸುರಿವ ಸುರಯಿಯರಲ ಮುಗುಳ್ಗೆ ಮೊಗಸಿದಳಿಕುಳಂಗಳಿಂ ತೊದ[ಲ್ವ][ಪಾಠಾಂ. ಳ್ವ] ಶಿಶುಶುಕಂಗಳಿಂ(ಶಂಪಭಾ. ೧-೫೮). **ತೊದಲು$_1$**: ೧. ಅವಳ ಮಾತ ಕಲಿಯಲೆಂದು ತೊದಲುತಿಹುದು ಬಾಯಿಯು (ಆರಳು. ೪೯೪-೨೨) ; ನನಗೆ ಭಯವಾಗಿತ್ತು ಎಂದು ತೊದಲಿದ ಕೋಪವ್ವ (ಶಾಲಿಮು. ೧೭೦). ೩. ತೊದಲುತ ಮುದ್ದುಮುದ್ದಾಗಿ ರಸವೊಗಲು ಮಾತಾಡಿ (ಆನಂರಾ. ೧-೧೮-೧೦). △**ತೊದಟ್** : ೨. ನುಡಿದಡೆ ಕರ್ಣ್ನಾಹವದೊಳಿನ್ದ್ರಸುತಂ ಪಗೆಗೊಣ್ಡ ದರ್ಪ್ಪ[ದಿಂ] ತೊದಟ್ಟನಾಟಂಗೆ ಪಾಯುತನಯಂ (ಸೌಇಇ. XX, ೬೧-೧೪; 1044). ೪. ಸುಳ್ಳು ಹೇಳು: ಮೋಹಬನ್ಧನದ ತೊಡರ್ಪ್ಪಿನೊಳ್ತೊದಟ್ಟು ಮೋಹಿಸಿ (ಎಕ. VII, ಶಿಕಾರಿ. ೨೧೯-೨೪; 918) ; ಪರನಾರೀಪುತ್ರಕ ನಣ್ಬರ ತೊಟ್ಟು . . . ತೊದಟ್ಟರ ಬೀವ (ಎಕ. II, ೩೦೭; ಸು. 950) ; ಖಣ್ಡಳಿ ವಾಸುದೇವ ಮೂಳ ಭದ್ರೋದ್ಭವನ್ನುಡಿದು ಪುಸಿಯತ್ರ್ಪೊದಟ್ಟು ಕುಸಿಯಂ (ಎಕ. IV, ಹೆಗ್ಗ.ಡ. ೧೭-೧೨; 1033). 'ಕೊದಲು$_1$' ಪರಾ.
[ ದೇ. ॥ ಪರ್ಜಿ. ತೊತ್ರ್; ಕುವಿ. ತೊಥಲಿ./ ಹಿಂ. ತುತಲಾನಾ ; ಪಂಜಾ. ತೊತ್ಲಾವುಣಾ ; ಒರಿ. ತೊತಳಾ, ತೊತಲಾ ; ಗುಜ. ತೊತ್ಡ್ಯೊ, ಕೊತ್ಲ್ಯೊ, ಕೊತರ್ಯೊ ]

**ತೊದಳ್$_2$**,ತೊದಲ್$_2$, ತೊದಲು$_2$, ತೊದಳು (ನಾ).೧. ತಡವರಿಸುತ್ತ ಮಾತನಾಡುವಿಕೆ : ಉಣ್ಮಿದ ಬೆಮರೋಳವಟ್ಟ ನಿಡುಸುಯ್ ತೊದಳಿಂಗೆಡೆಗೊಂಡ ಮಾತು (ಶಂಪಭಾ. ೪-೬೦) ; ರಸನಾಗ್ರದೊಳ್ ತೊದಳ್ವೆರಸಿದ ಮಾತಿನಿಂದೆಸೆದರಂಗನೆಯರ್ ಮಧುಪಾನಕೇಳಿಯೊಳ್ (ಕುಸುಮಾ. ೧೧-೧೬೦) ; ತೊದಳಂ ಮಾಟ್ಪ ಕೊ [ದಳ್] ವಿಕಾರವಶವಂ ಕೈಕೊಂಡ ಮೆಯ್ (ಬಂಹರಿ. ೩-೫೭). ತೊದಳಿನಿತಿಲ್ಲದೊಳ್ಪೆಸೆವ ವಾಣಿಯ ಜಾಣ್ನುಡಿ ಕೇಳಲಾಯ್ತು (ದಶಕು. ೧೨-೫). ೨. ಮಕ್ಕಳ ತೊದಲು ಮಾತು, – ಅಸ್ಪಷ್ಟವಾದ ಮಾತು : "ತೊದಳ್ ಶಿಶುವಚಂ" (ಕರ್ಣಾನಿ. ೪೯); ಕಿವಿಗಿಂಪಂ ತೊ[ಪಾಠಾಂ. ಕೊ]ದಳೊಳ್ ಪೊದಟ್ದ ನುಡಿಗಳ್ ಕಣ್ಗಿಟ್ಟಳಂ ರಾಗದಾಡುವ ಕೂಸಾಟದ ಚೆಲ್ವುಗಳ್ ಕುಡೆ . . . ಬಾಲನಿಂತೊದವಿದಂ(ಆದಿಪು. ೭-೧೨೪); ಕಿಱುನಗೆ ಲೋಳೆವಾಯ್ ತೊದಳೊಂದಿದ ನಾಲಗೆ . . . ನೆಱೆ ತನಗೊಪ್ಪುವರ್ಭಕನನೊರ್ವನನಾಂ ಪಡೆವಂದ ಮಾವುದೋ (ಸುಕುಮಾ. ೯-೯೯) ; ತೊದಳಿಸದ ತೊದಳ್ ಕೊಂಕಿಲ್ಲದ ದಟ್ಟಡಿ . . . ಭಾಲಭಾವಮಚ್ಚರಿ ಜನನಾ (ಅನಂಪು. ೬-೮) ; ತೊದಳಿಂ [ಪಾಠಾಂ. ಲಿಂ]ದೆ ನುಡಿಯೆ ಶಿಶುವದಟಲ್ಲಿ ತಪ್ಪನಾ ಚದುರನಾರ್ಯ್ಯರು ದಂತೆ (ಅನುಸಾ. ೧-೨೦೩). ೩. ಸುಳ್ಳು ; ಹುಸಿ : "ತೊದಳ್=ಪುಸಿ" (ಶಮದ. ಪರಿ. ೨) ; "ತೊದಳೆಂದುಂ ಸುಳ್ಳೆಂದುಂ ಅನೃತಂ" (ಕಶಸಾ. ೨೭-೫೫೦) ; ಪರ್ವುವುದು ಕೀರ್ತಿ ಪುರಾಕೃತಪುಣ್ಯದಿಂದೆ ಸಂಗಳಿಸುವುವೆಂದೊಡೀ ಮಖದೊಳೇಂ ತೊದಳುಂಟೆ (ಶಂಪಭಾ. ೬-೧೯) ; ಮನ್ನಿಸಿ ಪಿರಿದೀವಂ ಕೊದಳಂನ್ನುಡಿಯನ್ನೊಡರ್ದು ಮಾಣನ್ (ಎಕ. II, ೧೩೩-೫೮; 982); ಇಱುವಬೆಡಂಗನ ಕೊರಲೊಳ್ಕೊಂಕುಂಟೆ ನುಡಿಯೊಳೇಂ ತೊದಳುಂಟೆ (ಗದಾಯು. ೨-೬) ; ತನ್ನುನಿ ಪೇಟ್ದಣುವ್ರತಮನಾನೀಗಳ್ ಬಿಸುಟ್ಪ್ಪಾಗಳೇಂ ತೊದಳಿಲ್ಲಂ ನುಡಿವಂದವಿಂತೆ (ಸುಕುಮಾ. ೬-೫೦) ; ತೊದಳಲ್ತು ನಾರದಂ ಪೇಟ್ದುದು (ಜಗವಿ. ೨-೪೭). ೪. ಅನುಮಾನ ; ಸಂಶಯಂ ; ಶಂಕೆ : ಮೊದಲೊಳ್ ಸಮಾಸಪದಮುಮನೊದವಿಸಿ ಪೇಟ್ದುದಱ ತುದಿಯೊಳಸಮಾಸಪದಾಸ್ಪದಮಾಗಿ ನಿಱಿಸೆ ಕಬ್ಬಿನ ತುದಿಯಂತಿರೆ ವಿರಸಮಕ್ಕುಮದು ತೊದಲುಂಟೇ (ಕವಿರಾ. ೨-೪೭) ; ಧರಣಿತಳಂ ಕೀರ್ತಿಸೆ ಕೇಳ್ದು ರಾಗಿಸುತ್ತಿರ್ಪವಿನ್ನುಪೇಂ ತೊದಳುಂಟೇ (ಆದಿಪು. ೦೪-೪೯) ; ಇಂತಾದ ಗಣದ ಮಾತ್ರಾಸಂತತಿ ನಾಲ್ಕಕ್ಕು ಮಂತವರ್ಕೋೕರೊಂದರ್ಕಂತಯ್ದುಗಣಂಗಳ್ ಬರ್ಕುಂ ತೊದಳೇಂ ಸ್ಕಂಧ ಜಾತಿಯೊಳ್ (ಛಂದೋಂಬು. ೪-೨೨೯) ; ಎನ್ನ ಚಿತ್ತದೊಳೊಂದುಂ ತೊದಳಿಲ್ಲ[ಪಾಠಾ. ತಡವಿಲ್ಲ]ವೆನ್ನ ಸುಗುಣಕ್ಕುತ್ಕ್ರಾಂತಿಯಂ ಮಾಡುವೆಂ (ಗದಾಯು. ೯-೨೯); ಪರಮಜಿನಚರಣಯುಗಮಂ ಸ್ಮರಿಯಿಸಿ ತೊದಳಿಲ್ಲದೆರಡುಗೇಳದೆ ಮನದೊಳ್ ಜಱಿಯದೆ (ಧರ್ಮಾಮೃ. ೧೩-೭೨) ; ಚಂದ್ರ

ಸೂರ್ಯರೆ ಮನುಷ್ಯಕುಮಾರಕರಾಗಿ ಬಂದರೇನುಂ ತೊದಳಲ್ತು (ಜಗವಿ. ೭-೧೩). **೫. ವಂಚನೆ ; ಮೋಸ ; ಕಪಟ :** ಏನಭಿಮತಮವರ್ಗ ವರ್ಗದನೇನುಂ ತೊದಳಿಲ್ಲದಿತ್ತು ಮನ್ನಿಸಿದಂ ಸನ್ಮಾನಪುರಸ್ಸರಂ (ಆದಿಪು. ೧೫-೧೨) ; ಮನದೊಳ್ ತೊದಳಿಲ್ಲದ ನಲ್ಮೆ (ಪಂಪಭಾ. ೪-೧೦೨) : ನೀನುಂ ಪಾಂಡುತನೂಜರುಮೇನುಂ ತೊದಳಿಲ್ಲದೊಂದಿ ನಡೆವುದು ಮಗನೆ (ನೇಮಿಪು. ೧೦-೩) ; ದೂಷ್ಯರುಗಳ ವಸ್ತುಗ್ರಹಣ ನಿಂದಿತರ್ಗನ್ನದಾನಂ ಬಳಿಕ್ಕೆ ಬಗೆಯೆ ತೊದಳಿಂ ಮಾಳ್ಪ ಬೆವಹಾರ ದೀಕ್ಷೆಯಿದು (ಪಾಸೋಪು. ೩-೬೩). **ತೊದಲ್$_2$ : ೨.** ವಶ್ಯಮಂತ್ರಾಕ್ಷರದಂತೆಪೊಲ್ಲರುಮಂ ಸೋಲಿಸಿದವು ತೊದಲಂ ನುಡಿವ[ಪಾಠಾಂ. ತೊದಳೊಳ್ಪುದಿದ] ರಾಮ ಚಂದ್ರನ ನುಡಿಗಳ್ (ಪಂಚಾಮಾ. ೩-೧೨೭); ಕಂದನಾಡುವ ಬಾಲಲೀಲೆಯಂ ನೋಡಿ ತೊದಲೊಂದಿದಿನಿಮಾತನುಱ್ ಕೇಳ್ದು (ಜೈಮಿಭಾ. ೧೮-೨೦) ; ಲಾಲಾಜಲಂ ತುಳುಕಲ್ ಬರ್ಪ ತೊದಲ್ ಮನಂಗೊಳಿಸಲ್ (ಶಾಕುಂತ. ೧೦೫-೧೮೦). **೩.** "ತೊದಲ್[ಪಾಠಾಂ. ತೊದಳ್, ತೊವಲ್] ನೂಳೆಂದು ನೆಱ್ ಪುಸಿಯೆನಲ್ಕನೃತಮಕ್ಕು" (ಶಬ್ದಕೈ. ೫೯) ; ದೊರೆಯೆ ಸಹವಾಸ ಮದರಿಂ ದೊರೆವುದು ಗುಣವೆರಡುಮೆಂದು ನುಡಿವುದು ತೊದಲೇಂ (ನರಪ. ೮೭-೨೩೦) ; ಕಳ್ಳರಿರ್ಕೈಗಳಂ ಬಿಗಿಸಿ ತೊದಲಂ ನುಡಿಸಿ ಸುಳ್ಳು ನಾಲಗೆಯ ನಡುಗಿಸುತರವನೆರೆಗುಂ (ಶಾಲೂರ. ೭೭-೧೪೧). **ತೊದಲ್ಕು$_2$ : ೧.** ವಿಷಮರಣಭೀತಿಯಲಿ ಕಂದಿದ ಮುಸುಡ ತೊದಲಿನ ನುಡಿಯ ಮರಣದ ದೆಸೆಯ ಕೈಸನ್ನೆಗಳ ಕಾತರರ್ಕೈದಿದರು ಪುರವ (ಕುವ್ಯಾವಿ. ೪-೩೮). **೨.** ಮೊದಲೆವೆಗಳನು ಮುಕುಳಿಸೆವ್ವ ಸಿರಿಯೇ ತೊದಲನ್ನು ನಿಲ್ಲಿಸೆನ್ನಯ ಹೊನ್ನ ಮರಿಯೇ (ಕಏಪು. ೨೪-೨) ; ಮೊಳೆವಲ್ಲು, ಉಗುವ ಜೊಲ್ಲು, ದಟ್ಟಿತಡಿ, ತೊದಲ ನುಡಿ (ಚಂದ್ರಸ. ೧೭-೧೯). **೩.** ಬದಲು ಮಾತಾಡಿದರೂ ತೊದಲು ಹೋಗಲಿಲ್ಲ (ಗಾದ). **ತೊದಳು : ೧.** ಪೊಳೆವ ನಿಡಿಯಲರ್ಗಣ್ಗಳ್ಗೆ ಮಳಮಳಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕೆಯಿಂ ತಳೆಯೆ (ಪಂಪಭಾ. ೭-೮೧ ವ); ತೊದಳಿನಿಂದೊರ್ಮೆ ಗದುಗದುಕೆಯಿಂದೊವ್ಮೊಮ್ಮೆ . . . ಬೊಬ್ಬಿಡುತೆ (ತಿರುಶ. ದೇ. ೫-೩). **೩.** "ತೊದಳು,ಸುಳ್ಳು... ಸಟೆ, ತಗಲು" (ಕಂನುಹು. ೮೬). **೬. ಗದ್ಗದ :** ನೋಡಿ ಪರಮಾನಂದ ಮೂಡಿ ಸಂತಸದೊಳೊಲಾಡಿ ಪುಳಕ ಸ್ವೇದ ತೊದಳು ಕಂಪನ ಮಱವೆಗೂಡಿ (ಹಚಕಾ. ೫-೮೦). 'ಕೊದಲ್ಕು$_2$' ಪರಾ.

**ತೊದಲುತೊದಲು (ದ್ವಿರುಕ್ತಿ) :** ಮಕ್ಕಳಕ್ಕರೆಯಿಂದೆ ತೊದಲು ತೊದಲಕ್ಕರಂ ನುಡಿದು ಕೈಮುಗಿದು ಕಂಬನಿಗರೆವನಂ ನೋಡಿ (ಶ್ರೀರಾಮಾ. ೩೦-೬೭) ; ನಾವು ಮಾತನಾಡಲು ಪ್ರಾರಂಭಿಸಿದಂದಿನಿಂದ ಈ ನಾನು, ನನ್ನ ಎಂಬ ಪದಗಳನ್ನು ತೊದಲುತೊದಲಾಗಿ ಉಚ್ಚರಿಸು ತ್ತೇವೆ (ಜೀವಾತ್ಮ. ೯). **ತೊದಳಾಗು, ತೊದಲಾಗು = ೧. ಸುಳ್ಳಾಗು ; ಹುಸಿಯಾಗು :** ಪಾವಕನುರ್ಕುಗೆಟ್ಟದೆಂತುಪೊ ತೊದಳಾಯ್ತು ದಾನಂ (ಪಂಪಭಾ. ೫-೯೬) ; ತೊದಳಾಯ್ತೆನ್ನಯ ಪೂಣ್ದ ಪೂಣ್ಕೆ (ಗದಾಯು. ೬-೧೭) ; ನುಡಿ ತೊದಳಾದೊಡೊಂದು . . . ಅಧಿಪಂಗೆ ತಪ್ಪಿ ಬರ್ದ್ದಡೆ ಗಡಿವೇಳುವೇಳು ನರಕಂಗಳಿವೆಂದಪನಲ್ತೆ ಗಂಗಣಂ (ಎಕ, V. ಬೇಲೂರು. ೧೨೪-೪೨; 1133); ತೊದಳಾಗದಾನೆಂದ ನುಡಿ, ದಿಟಂ ! (ನಚದಾ. I, ೪೫೦); ನಿನ್ನ ಶಾಪವು ತೊದಲಾಗದು (ನಚದಾ. I, ೫೫೫). **೨. ಏರುಪೇರಾಗು :** ತೋಹಿನಲಿ ತೊದಳಾಗಿ ಗೋರಿಯ ಗಾಹಿನಲಿ ಗುಱ್ ಗಡಬಡಿಸೆ ಬಲು ಸಾಹಸಕಂಜುವೆವೆ (ಕುವ್ಯಾಆ. ೧೩-೧೭).

[ <ತೊದಳ್$_1$./ತುಳು. ತೊದಳಿ./ಹಿಂ. ತುತಲೀ, ತುತಲಾ ; ನೇಪಾ. ತೊತೆ ; ಬಂಗಾಲಿ. ತೊತ್ಲಾ ]

**ತೊದಳ, ತೊದಲ (ನಾ). ತೊದಲು ಮಾತನಾಡುವವನು ; ಉಗ್ಗ ; ಗುಕ್ಕ (ಉಕ):** ವೃಷಭದೊಳ್ ಚಂದ್ರನೊಂದಿ ನಿಲೆ ಮೂಗನೆನಿಕ್ಕುವನಂತಾ ಶಶಿಯಂ ನೋಡುವೊಡೆ ಶುಭಪ್ರಕರಮಾತನೆನಿಕುಂ ತೊದಳಂ (ಜಾತತಿ. ೪-೩೯). **ತೊದಲ :** ರಾಶಿಯ ಕೊನೆಯಲ್ಲಿ ಪಾಪಗ್ರಹಗಳಿದ್ದು . . . ಆ ಚಂದ್ರನನ್ನು ಶುಭಗ್ರಹಗಳು ನೋಡಿದರೆ ಆತ ತೊದಲನಾಗುತ್ತಾನೆ (ಜಾತತಿ. ೪-೩೯ ಟೀಕ).

[ ತೊದಳ್$_1$ + – ಅ$_7$./ತುಳು. ತೊದಲೆ./ಹಿಂ. ತೋತಲಾ ; ಮರಾ. ತೋಂತ್ಯಾ, ತೋತ್ರಾ, ತೋಂತ್ರಾ ]

**ತೊದಳಿಲಿ (ನಾ). ೧.** ಸುಳ್ಳಿಲ್ಲದುದು;ನಿಜವಾದಂದು. **(ಗು). ೨.** ಸುಳ್ಳಿನಿಂದ ಕೂಡಿರದ ; ನಿಜವಾದ: ತಾಂ ಪದನರಿದು ಲೋಕಕ್ಕೆ ಪುಟವಹ ಬಾಯ್ಗಿನಿದಪ್ಪಮ ತೊದಳಿಲಿ ನಾಣ್ನುಡಿಗಳಂ ಕಲ್ಪಿಪ್ಪನನಿತ್ತೆ ದಲ್ (ಸಂಸಪ. ೩೮-೩). [ ತೊದಳ್$_2$+ – ಇಲಿ$_3$ ]

**ತೊದಳಿಸು, ತೊದಲಿಸು (ಕ್ರಿ). ೧. ಮಾತಿನಲ್ಲಿ ತಡವರಿಸು :** ಉಂತೆ ಪೊಳೆವ ನಿಡಿಯಲರ್ಗಣ್ಗಳ್ಗೆ ಮಳಮಳಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕೆಯಿಂ ತಳೆಯೆ (ಪಂಪಭಾ. ೭-೮೧ ವ) ; ಸುಯ್ಯು ಬಹಳದ ಭಟರು ತೊದಳಿಸುತೊಯ್ಯ ನೆಂದರು (ಕುವ್ಯಾಆ. ೧೯-೬). **೨. ಮಕ್ಕಳಂತೆ ತೊದಲು ಮಾತನಾಡು:** ತೊದಳಿಸದ ತೊದಳ್ ಕೊಂಕಿಲ್ಲದ ದಟ್ಟಡಿ . . . ಮುಳಿಸಿಲ್ಲದ ಕಾಟಂ ಬಾಲಭಾವಮಚ್ಚರಿ ಜಿನನಾ (ಅನಂಪು. ೬-೮) ; ನಸುನಗೆಯ ತೋಱದನು ಮಿಗೆ ತೊದಳಿಸಿದನಿಂತುಟನೇಕ ಬಾಲ್ಯವಿನೋದವನು ತೋಱ್ (ಶಾಳ್ವಭಾ. ೩೦-೪೬) ; ತೊದಳಿಸಿ ನುಡಿವ ದಟ್ಟಡಿಯಿಡುವ . . . ಕುಣಿವ ಲೀಲೆಯಂ ನೆಟ್ಟನೆ ಕುಮಾರಕತರ್ಗೆತೋಱದರ್ಜುನಕಿಗೆ (ಜೈಮಿಭಾ. ೧೯-೫೦). **ತೊದಲಿಸು : ೧.** ನಾನು . . . ತೊದಲಿಸಹತ್ತಿದೆ (ಚಂದುಟ. ೧೦೮) ; ಈ ಮಾತುಗಳನ್ನಾಡುವಾಗ ಅವರ ನಾಲಿಗೆಯು ಸ್ವಲ್ಪ ತೊದಲಿಸಿತು (ಚಂಗಾಳ್ಮ. ೧೭೬). **೨.** ಮನದಲ್ಲಿ ಕೇಳ್ವನು ನಸು ತೊದಲಿಸುವ ಸೊಲ್ಲುಗಳ ನೋರಂತೆ ಪಂಚಾಕ್ಷರಿಯನೋದಿಸುವ (ಬಸಪು. ೪೭-೩೨).

[ ತೊದಳ್$_1$ + – ಇಸು$_3$ ]

**ತೊದಳು** 'ತೊದಳ್$_2$' ನೋ.

**ತೊದಳುನುಡಿ** 'ತೊದಳ್ನುಡಿ$_2$' ನೋ.

**ತೊದಳುಲಿ, ತೊದಲುಲಿ$_2$ (ನಾ). ಮಕ್ಕಳ ತೊದಲುಮಾತು :** ಹಕ್ಕಿಯಿಂಚರದಲ್ಲಿ ಮಗುವ ತೊದಳುಲಿಯಲ್ಲಿ . . . ನಲಿವ ಮೂರುತಿಯೆ (ವಿಸೀಗೀ. ೪೫-೨). **ತೊದಲುಲಿ :** ತೊದಲುಲಿಯ ಚುರುಕಿಂದ ಚಪ್ಪರಿಸಿ ಚೀರಿ, ಕುದುರೆ ಆಟವ ಗೈದ ನೆನಪು (ಕಏಪು. ೨೫-೨); ಪುಟ್ಟ ಕಂದಮ್ಮನ ...ತೊದಲುಲಿ ಕೇಳಿತು ಮೆಟ್ಟಿತು ಕೊಳಲಿನ ಸವಿಯ (ಇಂಚಾಪ. ೪೧-೯೫).

[ ತೊದಳ್$_1$ + ಉಲಿ$_2$ ]

**ತೊದಳ್ನುಡಿ$_1$, ತೊದಲ್ನುಡಿ$_1$ (ಕ್ರಿ). ೧. ಅಸ್ಪಷ್ಟವಾಗಿ ಮಾತನಾಡು ; ಮಾತಿನಲ್ಲಿ ತಡವರಿಸು :** ಲೋಹಲಃ, ಅಸ್ಫುಟವಾಕ್ = ತೊದಳ್ನುಡಿವವನು (ನಾಚಿರಾ. ೬). **೨. ಮಕ್ಕಳಂತೆ ತೊದಲುಮಾತನಾಡು :** ಚಿಂಬಾಯಿಂದಿನಿರಸದಂತೆ ನಸುಜೊಲ್ಲು ಸುರಿಯೆ ತೊದಳ್ನುಡಿವ ಸೊಗಸಂ (ಚಕವಿ. ೪-೮೯). **೩. ಸುಳ್ಳು ಹೇಳು ; ಸುಳ್ಳಾಡು :** ತೊದಳ್ನುಡಿಯದೆ ಪೋಗು (ಪಂಪಭಾ. ೮-೨೯) ; ನೆರೆದತ್ಥಿಗತರ್ಥಮಂ ಕುಡುವ ಚಲಂ ತೊದಳ್ನುಡಿಯದಿಪ್ಪ ಚಲಂ (ಎಕ. II, ೧೩೩-೨೨; 982) ; ಆ ಧರ್ಮ ಪುತ್ರಂ ದಯಾಪರನೆಂದೆಲ್ಲರ ಪೇಟ್ದ ಮಾತು ಪುಸಿಯಾಯ್ತೆ ಕಾರ್ಮುಕಾ ಚಾರ್ಯನಂ ಗುರುವಂ ಬ್ರಾಹ್ಮಣನಂ ತೊದಳ್ನುಡಿದು ಕೊಂದಾಗಳ್ (ಗದಾಯು. ೩-೨೩). **ತೊದಲ್ನುಡಿ$_1$ : (೬).** [ ತೊದಳ್$_2$ + ನುಡಿ$_1$ ]

**ತೊದಳ್ನುಡಿ$_2$, ತೊದಲುನಂಡಿ, ತೊದಲ್ನುಡಿ$_2$, ತೊದಳಂನಂಡಿ (ನಾ). ೧. ಮಕ್ಕಳ ತೊದಲುಮಾತು :** ಮುಖಸರಸಿಜದೊಳ್ ದರಹಸಿತಂ ನೆಗಟ್ಟಿನಂ ತೊದಳ್ನುಡಿ ನುಡಿದು (ಆದಿಪು. ೮-೩); ಜಿನೋಕ್ತಿ ಮೊದಲಲ್ತು

ಮದಂಗದೊಳೆಂಬವೊಲ್ ತೊದಳ್ನುಡಿ ನುಡಿ ? ಪು. ೧೦-೮೩) : ನುಡಿಗಲ್ವಂತೆ ತೊದಳ್ನುಡಿ ನುಡಿಯಿಸಿದಂ ತನಗೆ **ಪೋಲ್ತ** ವಾಕ್ಕನ್ನಿಕೆಯಂ (ಅರ್ಧನೇ. ೨-೩೦) ; ಇಡಿದ ಲಾಲಾಜಳಂ ಶಿವಪ್ರಸಾದಂ ತೊದಳ್ನುಡಿಯೆಲ್ಲ ಶಿವಕೀರ್ತನೆಯು (ಸೌಂದಪು. ೩-೧೦) ; ಜೊಲ್ಲು ಸುರಿವ ಮುದ್ದು ಮೊಗದಲ್ಲಿ ನಗೆಯಾಂತು ಸೊಲ್ಲಿಸುವನು ತೊದಳ್ನುಡಿಯ (ಮೋಹತ. ೧೭-೭೯). **೨. ಸುಳ್ಳುಮಾತು :** ಮನುಕುಲದೊಳ್ ತೊದಳ್ನುಡಿ ಪೊದ ಟ್ಟುಮೆ (ಪಂಂಪಾಮಾ. ೬-೯೫). **೩. ಮೆಲುದನಿಯಲ್ಲಿ ಆಡುವ ಗಂಭೀರವಾದ ಮಾತು :** ನೆಗಟ್ದ ಮರಾಂಗನಾಜನದ ರೂಪುಗಳೆಲ್ಲಮದೀಕೆಯೊಂದು ದೇಸೆಗೆ... ನೆಗೆಟ್ಟೊಂದು ಮೆಲ್ಪಿನ ತೊದಳ್ನುಡಿಗಪ್ಪೊಡಮೆಯ್ದೆ ಮಾರವೇಂ (ಆದಿಪು. ೨-೭೫) ; ಆಕೆಯ ಮುದ್ದು ವೆರಸಿದ ತೊದಳ್ನುಡಿಗಂ ಪೂವಮಾಲೆ ವೆರಸಿದ ಬಟಲ್ನುಡಿಗಮಲಂಪುವೆರಸಿದ ನೋಟಕ್ಕಂ . . . ನಾಣ್ವೆರಸಿದ ಭಾವಕ್ಕಮೊಲ್ದು ಮೊಳಲ್ದು ಮಿರೆಯಿರೆ (ಪಂಪಭಾ. ೪-೧೭ ವ) ; ತೊದಳ್ನುಡಿಗಳೊಪ್ಪಿ ಪುಷ್ಪಚಯಮಂ ಸುಗಂಧಂಗಳಂ . . . ವಿದಗ್ಧೆ ಮಡಗಿಟ್ಟು ತಂದು ತನಗೀವೊಡೆ (ಮುದತಿ.೧೧ ೫೦). **೪. ಇಂಪಾದ ಧ್ವನಿ,–ಕುಕಿಲು :** ಒಲವಿಂದೋಲಗಿಸುವೆನೀ ನೆಲದೆಱೆಯನನೆಂದು ಬರ್ಪವೊಲ್ ಬಗ್ಗಿಪ ಕೋಗಿಲೆಯ ತೊದಳ್ನುಡಿ ಬಿರಯಿಯನಲೆಯುತ್ತಿರೆ ಬಿಡದೆ ಬಂದುದಂದು ಬಸಂತಂ (ಕಬ್ಬಿಗಕಾ. ೫೨). **ತೊದಲುನುಡಿ : ೧.** ತೊದಲುನುಡಿಗಲಿತು ಮುದ್ದಾಗಿ ಬಾಳ್ವವನಯ್ಯೋ ಪದೆದು ದಟ್ಟಡಿಯಿಟ್ಟು ನಡೆದು ಬಾಳ್ವವನಯ್ಯೋ (ಸಾನಂತ. ೪-೯೦ ರಗಳೆ) ; ಪರಮತತ್ವಾಮೃತವೆ ವೊಲೆವಾಲ್ . . . ಮೃದುಸೂಕ್ತಿಗಳೆ ತೊದಲುನುಡಿ (ಬಸವು. ೨-೧೧) ; ತೊದಲುನುಡಿಗಳಂಬೆಗಾಲು ದಟ್ಟಡಿ ಮುದವೊದವಿದ ಧೂಳಾಟದಿಂದ... ಕುಮಾರರೊಪ್ಪಿದರು (ಕಂಸವಿ ೪-೮೧). **೨. ಶಿಷ್ಟಂಗೆ** [ಪಾಠಾಂ. ಸೆಟ್ಟಿಗೆ] ತೊದಲುನುಡಿಯೇಕೆ (ಸರ್ವಜ್ಞ. ೧೪೭೪). **ತೊದಲ್ನುಡಿ₂ : ೧.** ನುಡಿಗಲಿಸಿದಂ ತೊದಲ್ನುಡಿ ಪಡೆವಿನೆಗಂ ಪಿತೃಯುಗ್ಮಕ್ಕೆ ಕರ್ಣಾಮೃತಮಂ (ಪಂಂಪಾಮಾ. ೧-೭೯) ; ತೊದಲ್ನು [ಪಾಠಾಂ. ಳ್ನು]ಡಿಗೇಳ್ವಲಂಪಿನಿಂ . . . ಸಲೆ ನುಡಿಸುತ್ತುಮಿರ್ಪ ನೆವದಿಂ ನುಡಿಗಲ್ತನಿಳೇಶನಂದನಂ (ಕುಸುಮಾ. ೬-೧೫೦) ; ಪರಮಶಿವಭಕ್ತತತಿ ತಮ್ಮ ಕಂದನ ತೊದಲ್ನುಡಿಗಳೆಂದು ಮೆಯ್ಯುರ್ವಿ ಪುಳಕಂದಾಳ್ದು ಲಾಲಿಸುತಿರೆ (ಪದ್ಮರಾ. ೧-೩೩) ; ಪಾಡು ವಿಂಚರಕೆ ಕೋಗಿಲೆ ತೊದಲ್ನುಡಿಯ ಮಾತಾಡುವುದಕೆ ರಾಜಕೀರ . . . ಜೋಡಿಸಿಕೊಟ್ಟರು ತ್ಸವದಿ (ಮೋಹತ. ೯-೭೭). **೨.** ಪಿತರಂ ಪುತ್ರನಂ ತೊದಲ್ನುಡಿಯಂ ನುಡಿಸಿದಂ[ಪಾಠಾಂ. ತೊದಲ್ನುಡಿಯನೆನಿಸಿದಂ] (ಶಬ್ದಾನು. ೨೦೫ ಪ್ರಯೋ). **೩.** ಆ ಹುಡುಗನು ತೊದಲ್ನುಡಿಯಲ್ಲಿ . . . ತಮ್ಮ ಬಳಿ ವಿದ್ಯಾದಾನವನ್ನಪೇಕ್ಷಿಸಿ ಬಂದಿರುವೆನು ಎಂದು ಹೇಳಿ (ಮುತಸ. ೬೦). **ತೊದಳುನುಡಿ : ೧.** ಬಾಲರ ತೊದಳುನುಡಿಯ ತಂದೆತಾಯಿಗಳಾಲಿಸಿ ಕೇಳ್ದು ತಪ್ಪಿರಲು ಆಳೋಕಿಸರಂತೆ ಕೃತಿದೋಷವಿರೆ ತಿದ್ದಿ ಬಾಲನಹೆನು ನಾ ನಿಮಗೆ (ಅಂಜಚ. ೧-೧೦೪). **೩.** ನಡೆತಂದರ್ ಚೆಲ್ವಿಂದೊಳ್ನುಡಿಯ ತಡಂನುಡಿಯ ತೊದಳು[ಪಾಠಾಂ. ಳ]ನುಡಿಯೊಳ್ವೆಂಡಿರ್ (ಜಗವಿ. ೪-೧೨೭) ; ಗದುಗದಗಂಠದಿಂ ತೊದಳುನುಡಿಗಳಿಂದ ಹೃದಯ ಸಖಿನೊಳಿಂತೆಂದು . . . ಕೇಳಿದೆನು (ಅಂಜಚ. ೫-೧೦೦) ; ರಂಜಿಸುವ ಯಮರಾಜನೋಲಗ ಕಂಜನಾಭಮುಕುಂದಗಾಯ್ತು . . . ಎಂಬೀ ತೊದಳು ನುಡಿಗೇಳ್ದು (ನಿಭಾಗ. ೬-೩-೪). [ ತೊದಲ್₂ + ನುಡಿ₂ ]

**ತೊದಳ್ಮಾಡು**, ತೊದಲುಮಾಡು (ಕ್ರಿ). **೧.** ತಡವರಿಸುವಂತೆ ಮಾಡು: ಬಾದಿನೊಳವೋದಿನೊಳಂ ವಿಬುಧರ್ಕಳಂ ತೊದಳ್ಮಾಡುವ ರಾಜಕೀರತತಿ (ಸೌಇಇ. IX-1, ೨೬೭-೨೩ ; 1160). **ತೊದಲುಮಾಡು : ೨.** ಹುಸಿಯಾಗುವಂತೆ ಮಾಡು : ಒಮ್ಮೆ ಆಡಿದ ಮಾತನ್ನು ತೊದಲುಮಾಡುವುದಕ್ಕೆ ಬಲಿಯು ಒಪ್ಪಲಿಲ್ಲ (ನೀಗಟ್ಟು. ೧೭೪). [ ತೊದಲ್₂ + ಮಾಡು₁ ]

**ತೊದಳ್ಮಾತು**, ತೊದಲುಮಾತು, ತೊದಲ್ಮಾತು (ನಾ). **೧. ಮಕ್ಕಳ ತೊದಲುನುಡಿ :** ತೊದಳ್ಮಾತ ಮಾತನಾಡುವ ಮುದ್ದುಗೆಯ್ವ ಭೂತಳದೊಳಗಂಬೆಗಾಲಿಟ್ಟು ನಡೆವಂತೆ ಚೇತನವಾದುದಂಗಜಗೆ (ಮೋಹತ. ೧೧-೫೯) ; ಶಿಷ್ಯೋಕ್ತಿಗಳಂ ತಾಂ ಪೇಳ್ದು ಪೇಳ್ವಂತಿರೆ ಕಲಿಸಿ ತೊದಳ್ಮಾತು ಚೆಲ್ವಾಗೆ ವಾಚಮಾಕ್ಷಿಗೆ ಪುರ್ಬಿಂ ಜರ್ಬಿನಿಂ ನೋಡೆನುತಱಿಪಿ ನೃಪಂ (ರಾಜಶೇ. ೪-೭೦). **೨. ವ್ಯರ್ಥವಾದ ಮಾತು:** ತೊದಳ್ಮಾತಿನೊಳೇನೋ ಪಾಂಡವರ ಕೈಯೊಳೆ ನಿನ್ನ ನಿಸೇಕಮಾಗದೇ (ಪಂಪಭಾ. ೯-೪೯). **ತೊದಲುಮಾತು : ೩. ಅಸ್ಪಷ್ಟವಾದ ಮಾತು:** ಕೆಲಂಬರು ತೊದಲುಮಾತುಗಳನಾಡುತ ಕಣ್ಣುಗಳಂ ಮುಚ್ಚಿ ಕೈಸನ್ನೆಗಳಂ ಮಾಡುವರು (ಸೌಗಂಧಿ. ೧೪೨-೧೧); ಲೋಹಲಃ , ಅಸ್ಫುಟವಾಕ್-೨ ವ್ಯಕ್ತವಾಗದೆ ತೊದಲುಮಾತನಾಡುವವನ ಹೆಸರುಗಳು (ಸಿದ್ಧಾಂತಿ. ೨೮೭). **ತೊದಲ್ಮಾತು : ೧.** ಪಸುಳೆತನದೊಳ್ ಪ್ರಣವಮಂ ಶರಣಗಣಕೆ ಬೋಧಿಸುವನೀ ಕುವರನೆಂಬೊಲ್ ತೊದಲ್ಮಾತು ರಂಜಿಸಿದುವು (ಚಬಪು. ೫-೪೧). **೪. ಮುದು ಮಾತು :** ಮಾತೆಯ ಪಕ್ಷಪುಟವ ಸೇರುವ ತೊದಲ್ಮಾತ ನುಡಿದು ಬಿನದಿಸುವ . . . ಗಿಳಿವಱಿಗಳ ರೀತಿಯ ಕಂಡಳಾ ಸೀತೆ (ಕಂಸವಿ. ೪-೪೭). [ ತೊದಲ್₂ + ಮಾತು₁ ]

**ತೊದಳ್ಳಿ** (ನಾ). ಒಂದು ಸ್ಥಳದ ಹೆಸರು: ಬನವಸೆಯ ಚಟ್ಟ ನಾಗರಕಣ್ಡಕ್ಕೆ ಮುನಿದು ಪರಿಯಾನಟ್ಟಿದಡೆ ತೊದಳ್ಳಿಯನಿಱಿದು (ಎಕ. VIII, ಸೊರಬ-೨೩೪-೮ ; ೨೨೨). [ ? ]

△ **ತೊದಟು** 'ತೊದಳ್₁' ನೋ.

**ತೊದಟ್ಟು** (ಕ್ರಿ). ಎದುರಿಸು; ಪ್ರತಿಭಟಿಸು : ಕುಲದೀಪತಿಲಕ ಗೋಪಾಲರಾಜ . . . ಅಟ್ಟಿ ಪೊಯ್ದು ನುಗುಟ್ಟುಟ್ಟಿ ತೊದಟ್ಟು ಮಲ್ಲಮಾಟು ಯೊನ್ದಾಸುರಮುಪ್ಪಿನಂ ಪೆಣೆದು ಕಟ್ಟಿದಂ (ಎಕ. VI, ಚಿಕ್ಕಮ. ೭೭-೨೦ ; ಸು. 1080 ?). [ ತೊದಟ್ (<ತೊದಳ್₁) + -ಚು₁ ]

**ತೊದುರು** 'ತೊಡರು₃' ನೋ.

**ತೊನಗು** 'ತೊಲಗು' ನೋ.

**ತೊನಚಿ** 'ತೊನಸೆ' ನೋ.

**ತೊನಚೆ** 'ತೊನಸೆ' ನೋ.

**ತೊನಪೆ** (ನಾ). ಒಂದು ಬಗೆಯ ಮರ ; ಹೊಂಗೆ : " ಗುಚ್ಛಕರಂಜಃ–ತೊನಪೆ, ಹೊಂಗೆಮರ " (ಓಷಧಿ. ೫೦). [ ? ]

**ತೊನಸಿ** 'ತೊನಸೆ' ನೋ.

**ತೊನಸೆ**, ತೊಣಚಿ, ತೊಣಚೆ, ತೊಣಸಿ, ತೊಣಸೆ₁, ತೊನಚಿ, ತೊನಚೆ, ತೊನಸಿ (ನಾ). (ನಾಯಿ, ಕುದುರೆ ಮೊಂತಾದುವುಗಳ ಮೈಯಲ್ಲಿ ಸೇರಿಕೊಳ್ಳುವ) ಒಂದು ಬಗೆಯ ನೊಣ : ಪಶುವಿನೊಳಲ್ಲಿರಲೇಂ ತಾನೆಂತೊ ತೊನಸೆಯೋ ನೊಣವುಗಳೋ (ಸಮಪ. ೯-೬೦) ; ಅಗಸೆಯ ಮರಕ್ಕೆ ತೊನಸೆ ಮುಱಿದುಂಬಿಯೆಂಬಂತೆ (ಧರ್ಮಾಮೃ. ೭-೨೨೯); ತುಂಬಿ ಪತಂಗ ನೊಣ . . . ತೊನಸೆ ಮೊದಲಾದುವಕ್ಕೆ ಸ್ಪರ್ಶನ ರಸನ ಘ್ರಾಣಮಕ್ಕು (ಶಾಸ್ತ್ರಟೀ. ೧೧೭-೬); ನೀನು ತೊನಸೆಯ ಕೊಲೆಯ ಮಾಡಿದೆ ಮುಳ್ಳುಮೊನೆಯಲಿ (ಸಂಭಪ. ೧೪-೧೭). **ತೊಣಚಿ:** ತೊಣಚಿ; ಗೋಮಕ್ಷಿಕ (Breeze. ಇಂಕನಿ). **ತೊಣಚೆ :** (+). **ತೊಣಸಿ:** ಹಾಲುಗೆಚ್ಚಲು ಬಳಿಯ ತೊಣಸಿ ಹತ್ತಿಕೊಂಡು ಕಾಲವನು ಕಳೆವ ಬಗೆ ಬಲ್ಲಿರೆಲ್ಲ ವೇಳೆವೇಳೆಗೆ ಹಸುವ ಕರದುಂಬ ನರನಂತೆ ಕೀಳು ತೊಣಸಿಯು ಉಂಡು ಹರುಷ ಪಡ ಬಲ್ಲುದೆ (ವಿದಾಕ್ಕ. ೧೮-೨). **ತೊಣಸೆ₁ :** ಬೆನ್ನಟ್ಟುವ ಘೋರರೂಪಿ ಆರ್ಗಸ್, ಕಡಿದು ರೂಪುಗೆಡಿಸಲೆಂದು ಎಡೆವಿಡದೆ ಹಾಯ್ದು ಬರುವ ತೊಣಸೆ . . . ಅವಳ ಪಾಲಿಗೆ ಬೆನ್ನಟ್ಟಿದ ಬೇತಾಳಗಳು (ಬದ್ಧಪ್ರ. Li, ನಾಟಕದ ಸಮುಸ್ಕ). **ತೊನಚಿ :** ತೊನಚಿಯಂ ಕೊಂದ ಪಾಪಸಮೇತ

ಮಾಂಡವ್ಯನಾ ಶೂಲದೊಳು ಬೀಳ್ದ (ವೀಕೃಪು. ೮-೫-೩೧). **ತೊನೆಚಿ :** ವಾನರಕೊದಗಿದ ತೊನಚಿಯು ಕಾಟ (ಅವಧೂ. ೧೧) ; ಜ್ಞಾನೋತ್ತರ ಮಾರ್ಗಕೆ ಜಂಜಾಟ ವಾನರಕೊರಲಿದ[ದಗಿದ]ತೊನಚಿ ಕಾಟ (ಅಜಷ. ೧-೧೦೭). **ತೊನಸಿ :** ಲಿಂಗದ ಚಿತ್ತದಲ್ಲಿ ಕರ್ಣದೊಳಗೆ ತೊನಸಿ ಹೊಕ್ಕು ಗೋಳಿಟ್ಟು ಬಾಧಿಸಿದಂತಾಯಿತ್ತಯ್ಯಾ (ವಚಸಂ. ೧೫೪-೬೮) ; ವರತಪವ ಕೆಡಿಸಬೇಕೆಂದು ತೊನಸಿಗಳಾಗಿಯಜಗೆಜಗಿ ಕರ್ಣಕ್ಕೆ (ಪ್ರಾಭರಾ. ೪-೨೪) ; ತೊನಸಿ ಮುಂದಿ ಎತ್ತ ಹಱಿಂದು ಹುಳಗಳನು ಜನಿಸಿ ಬಿಟ್ಟಂತೆ (ಸರ್ವಜ್ಞ. ೧೮೫೭) ; ತೊನಸಿಯು ತನ್ನ ತತ್ತಿಗಳನ್ನು ದನಗಳ ತೊಗಲಿನೊಳಗೆ ಹಾಕುತ್ತದೆ (ಮುಂಬಯಿ. ೫-೧೪೫).

**ತೊನಹು (ನಾ).** ತೂಗಾಟ; ಒಲೆದಾಡುವಿಕೆ: ಕಂಚುಗೂಡಲ ನಿಟ್ಟೊಡಲ ನಿಡುದೋಳ ತೊನಹಿನ ಮುಟ್ಟದವೆಗಳ ನಟ್ಟನೋಟದ ... ಪ್ರಭುಲಿಂಗ (ಪ್ರಭುಲೀ. ೨೨-೩೩). [ತೊನೆ₁ + – ಹು₂]

**ತೊನೆ₁ (ಕ್ರಿ).** ೧. **ಅಲುಗಾಡು ; ಅಲ್ಲಾಡು :** "ತೊನೆದುದು ತೂಗಿದು ದೊಲೆದುದುಮೆನುತಲಲ್ಲಾಡಿದುದು ನಡುಗಿತೆಂದೆನಲದು ಕಂಪನಮಕ್ಕು" (ಕವಿಕಂ. ೨೫೪); ಮನಸಿಜನೃಪಲೀಲಾಲಾಂಛನಂ ಸ್ವಸ್ತಿಕಂ ಸ್ತ್ರೀಜನದೊಳೆಸೆದು ನಿಂದತ್ತುತ್ತರೀಯಾಂತರೀಯಂ ತೊನೆಯೆ (ಆದಿಪು. ೧೧-೧೫೨) ; ಅರಿವ ನಡುವುಡಿವ ನೇರ್ಗೋಲ್ವರಿದುರ್ಚುವ ನಟ್ಟು ತೊನೆವ ಕಣೆಗಳ್ಗೆ ಮೊಗಂದಿರಿಯದೆ (ಪಂಪಭಾ. ೧೦-೭೪) ; ತೊನೆಯೆ ಕುರುಳ್ ಕದಕ್ಕದಿಸೆ ತುಂಗಕುಚಂ (ಮಲ್ಲಿಪು. ೧೨-೩೦) ; ತೊನೆವ ಬಾಲಂ ಕುಸಿದ ತಲೆ . . . ದೈನ್ಯವಿಡಿದ ಕಿಱುದನಿವೆರಸು ಬಂದೊಂದು ಕೃಷ್ಣಶುನಕ ಬಿರ್ದುದು (ಸಿದ್ಧರಾ. ೭-೪೩) ; ತೊನೆವುತಿಹ ಚಿತ್ರದ ಪತಾಕೆಗಳ ಜೋಕೆಗಳ ಕೋಟಾವಳಿಯುಮೆಸೆದುದು (ಜಬಪು. ೪೨-೨೧) ; ಮುತ್ತಿನ ಲಂಬಣಂ ತೊನೆವ ತೊಂಡಲ ಬಜ್ಜರಬೊಟ್ಟು (ಚಕವಿ. ೩-೪೯). ೨. **ತೂಗಾಡು ; ಒಲೆದಾಡು :** "ತೊನೆ ಆಂದೋಲನೇ (ತೂಗಾಡು)" (ಶಮಧಾ); ಪಂಚಬಾಣ ಕೃಪಾಣ ಪಟ್ಟದೊಡನೆ ಕೊನೆಯು ಬಿಣ್ಪಂ ತೊನೆದು ತೂಗದ ಪೂಗವನವಿಲ್ಲ (ಪಂಚಾಮಾ. ೦-೦೦೭ ಪ) ; ತೂಗಿ ತೊನೆದು ಮೆಯ್ಯಱೆವ ಹಂದಿಯನು ಕೌಶಿಕ ಕಂಡನು (ಹಚಕಾ. ೬-೬೦) ; ಹರಿಸದಿಂ ತೂಗುತುಂ ಬಾಗುತುಂ ತೊನೆಯುತುಂ ಭರವಸದಿ ನಲಿವುತುಂ ... ಅದೇಂ ನೆಗಳ್ದರೋ (ಪದ್ಮರಾ. ೬-೬೨) ; ತೋಳ ಮೈಯಲಿ ತೊನೆದು ನೋಟದ ಢಾಳದಲಿ ಧವಳಿಸಿಯೆ . . . ಒಪ್ಪಿರ್ದಳಾ ಮಾಯೆ (ಪ್ರಭುಲೀ. ೪-೫೭) ; ತೂಗುತೆ ತೊನೆಯುತೆ ಬಳ್ಕುತೆ ಬಾಗುತೆ . . . ಸೊಂಪಾಗಿರ್ದುವು ಕಣ್ಗೆ ಗಂಧಶಾಲಿವನಂಗಳ್ (ರಾಜಶೇ. ೨-೧೧) ; ಗಿಡವೂ ಒಪ್ಪಿಕೊಂಡು ತಲೆಯಾಡಿಸುವಂತೆ ಗಾಳಿಗೆ ಅತ್ತಿತ್ತ ತೊನೆಯಿತು (ಈಕಥ. ೭೪); ಆತನ ಮನಸ್ಸು ಒಮ್ಮೆ ತೊನೆಯಿತು (ನಡದಾ. II. ೧೯೯೫). ೪. **ಅಲುಗಾಡಿಸು ; ಅಲ್ಲಾಡಿಸು :** ಪಲ್ಲಂ ಕುಱುಕುತ್ತುಂ ಮೆಯ್ಯಂ ತೊನೆಯುತ್ತುಂ ಭೋಗಂಗಳಂ ಚಿಂತಿಸುತ್ತುಂ (ಧರ್ಮಾಮೃ. ೫-೧೩೭) ; ಮೈಯಂ ತೊನೆದುದ್ದಂ ನೀಡಿ ಗೋಣಂ ನವದಿನ ಮುಖದೊಳ್ ಕುಕ್ಕುಟಂ ಕೂಗಿತಾಗಳ್ (ಕುಸುಮಾ. ೪-೬೨); ಘನಕೋಪಾಟೋಪದಿಂದಂ ಕುಲಕುಧರಮಹಾಶೃಂಗಮಂ ಕೋಡ ಕೊಪ್ಪಿಂ ತೊನೆದೀಡಾಡುತ್ತೆ ಬಪ್ಪ ದ್ವಿರದಪತಿಯಂ . . . ನೋಡುತ್ತೆ (ಸೂಕ್ತಿಸು. ೩-೩೪) ; ನೆಣನ ತಿಂದು ತಣಿದು ತಲೆಗಳ ತೊನೆವ ಬೇತಾಳತತಿ (ಜಬಪು. ೪೦-೨೭); ನಗೆಮೊಗದೊಳಂಗಮಂ ತೊನೆಯುತ್ತೆ ಸಂತಸಂಬಡುತಿರ್ದರು (ಶೀಷರಾ. ೨೪-೩೫). **೫. ನಡಂಗು ; ಕಂಪಿಸು :** "ತೊನೆ, ಒಲೆ, ತೂಗು, ಸೆಡೆವು, ಅಲ್ಲಾಡು, ನಡುಕಂ – ಈ ೬ ಕಂಪನಂ" (ಕಶಸಾ. ೩೦-೬೫೦) ; ಗ್ರಹಪೀಡಿತನಂತೆ ತೊನೆಯುತ್ತುಂ . . . ತಾಯ್ ಸತ್ತ ಶಿಶುವಿನಂತೆ ಬಾಯ್ಬಿಡುತ್ತುಂ (ಧರ್ಮಾಮೃ. ೧-೧೧೪); ಮುನಿಯುತ್ತುಂ ಮುದ್ದಿಸುತ್ತುಂ ತೊನೆದು ತವಕಿಸುತ್ತುರ್ವುತುಂ (ರಕ್ಷಾ ೮. ೬೫) ; ಸೆಳೆಗೊಂಬೆಲರಿಂ ತೊನೆದೆಟ್ಟು ತಟ್ಗಿ ತೂಗಾಡಿದೊಡಂತದಂ ಪಿಡಿದುಕೊಂಡಲರಂ ನೆಱೆ ಕೊಯ್ದು (ಕುಸುಮಾ. ೫-೧೧೧) ; ಮೇಲೆ ಆಟ್ಟದ ನೆಲ ಆವನ ಓಡಾಟದ ರಭಸಕ್ಕೆ ತೊನೆಯುತ್ತಿದ್ದಿತು (ಕಾಗೆಕ. ೧೨೭). **೬. ಬೀಸು ; ತೀಡು :** ಸಂಪಗೆಯ ಷಂಡದೊಳಾವ್ಪುಮಹೀಜಮಾಲೆಯೊಳ್ ಫಲದ ತುಱುಂಗಲೊಳ್ ತೊನೆವುದೊರ್ಮೆಯುಮಲ್ಲಿಯ ಮಂದಮಾರುತಂ (ಮಹಾಸೀ. ೧೫-೪೪) ; ಗಾಳಿ ತೊನೆಯಿತು, ಗಂಧ ಹರಡಿತು (ಕರುಶ್ರಾ. ೨೭-೮). **೭. ಬಳುಕಂ ; ಒನಪುಮಾಡು :** ರೂಹಿಲ್ಲದೊಡಂ ಕೆಲಬರ ಸಹಾಯದಿಂ ಬಱಿದೆ ತೊನೆದು ಕೆಮ್ಮನೆ ವಿಟಸಂದೋಹಮನೊಲಿಸುವರ್ (ಧರ್ಮಾಮೃ. ೩-೧೩೦); ಪುಷ್ಪ "ನಾಚಿಸುತ್ತೀರಿ" ಎಂದು ತೊನೆದಳು (ಸುಖವಿ. ೬೯). **೮. ಒಲಿ; ಮನಸೋಲು; ಮೆಚ್ಚು :** ಕಾಲೂರ ಸೂಳೆಯಂತೆ ಬಱಿದೆ ದುರ್ಮತಕ್ಕೆ ತೊನೆಯದೆ . . . ಧರ್ಮದೊಳ್ ಕೂಡಿ ಜನಪಾದಸೇವೆಯೊಳಿರ್ದು ಸ್ವರ್ಗಾಪವರ್ಗ[ಸುಖ]ಕ್ಕೆ ಭಾಜನನಾಗು (ಧರ್ಮಾಮೃ. ೧೪-೮೪) ; ಕರಂ ನನ್ನಿಗನೆನ್ನನೇ ತೊನೆವನೆನ್ನನೆ ಬೇಡುವನೆನ್ನೊಳಾಡುವಂ (ಚಕವಿ. ೬-೧೭೦) ; ತಾಯಿಯ ಹೃದಯ ತೊನೆಯುತ್ತದೆ–ತನಯಳ ಮಾತುಗಳನ್ನು ಕೇಳಿ (ಶರಚ. ೨೦). **೯. ಮಿಸಾಟು; ಮಿಡಿ :** ಕಂದಳಮಿಂದು ವೀಣೆಯೆಡೆಯಾಡುವುದಲ್ಲಿದು ಹೃತ್ಸರೋಜದಾನಂದದ ನಾಡಿಯಂ ತೊನೆದು ಸೋಲಿಸಿ ಗಳ್ಪನೆ ಸೊರ್ಕನೇಱಿಸುವಂ (ಚಕವಿ. ೪-೧೨೦). **೧೦. ತೂಗಂ ; ತೂಗಾಡಿಸು :** ತೊನೆದು ಕತ್ತಿಯ ತಿರುಹುತಿರಲಿಕೆ ಸುತನ ನುಂಗೆನಲು (ಸಂಭಪ. ೮-೪೮); ಸಿಂಹಮಧ್ಯದ ಕನ್ನೆಯರು ತೋಳ್ಗಳಂ ತೊನೆಯಲು (ಭಾವಚಿಂ. ೯-೫೮) ; ತೊನೆದಿಡುವ ಹಸ್ತಬಲದಿಂದಂಬು ನಡೆದು ಪೆರರನು ಕೊಂಬುದಲ್ತೆ (ವಂಕಾರಾ. ೫-೪-೪೨) ; ಜಡಿದು ಕೈದುವ ತೊನೆವುತೆಂದರು ತಮ್ಮೊಳೊಳಗೊಳಗೆ (ಅಂಬಿಕಾ. ೫-೨೧) ; ನೆತ್ತರ್ ತವಕಿಪ ಕೂರ್ಮೊನೆ ಸಬಳಗಳನ್ ತೊನೆದನವನ್ (ಅಂತಿಗೊ. ೬-೧೧೧). **೧೧. ತಲೆಯನ್ನು ಆಡಿಸು :** ತೊನೆವವರ್ಮಾತಿಗೆ ಸೋಲ್ದು ತನ್ನ ತಲೆಯೊಳ್ ತಾನಿಟ್ಟು . . . ಲಜ್ಜೆಯಿಲ್ಲದನಿಬರ್ ತಾಂ ಮಾನ್ಯನೆಂದೆನ್ನದಾ ಮನುಜಂ ಸದ್ಗತಿ ಕಾಣನೈ (ಸೋಮೇಶ. ೫೦); ನುಡಿದ ನುಡಿಯಂ ಪರಿವಿಡಿಯಿಂ ನನ್ನಿ ಮಾಡಿದೆಯೆಂದು ತೊನೆಯುತ್ತೆ ಕಿಱಿದೆಡೆಯಂ ಪೋಗೆಪೋಗೆ (ಕಬ್ಬಿಗಕಾ. ೧೧೧). **೧೨. ಕೊಡಹಂ ; ನಿವಾರಿಸು :** ಅನಿತರೊಳಗನಿತಾತ್ಮ ತಿವಿಗುಳ ನೆನೆದು ಮರವೆಯ ತೊನೆದು ನಿಂದನು (ಕೃಷ್ಣಾಕ. ೨೧-೧೮). **೧೩. (ಆಲಂ) ಜಂಬಪಡು ; ಗರ್ವಿಸು ; ಬೀಗು :** ಕುಲಮುಂ ದಳಮುಂ ಜಳಬೊಬ್ಬುಳಿಕೆಯವೋಲ್ ಕಿಡುವುವೇಕೆ ತೊನೆವರ್ ಮೂಱರ್ (ಧರ್ಮಾಮೃ. ೭-೧೬೧) ; ತಲೆಗೇಱಿ ಸೊಕ್ಕು ತೊನೆವರ್ (ಸೋಮೇಶ. ೪೮) ; ಪಾರ್ಥನಂ ರಕ್ಷಿಸುವೆ ನೀಂ ಕೃಪೆಯೊಳಾವು ಬಱಿದೆ ತೊನೆದೊಡೇನಹುದಿನ್ನು (ಜೈಮಿಭಾ. ೧೩-೩೪) ; ಅಂತರಿಸದಾವೆಗಂ ತುಳ್ಕುತಿಹ ರೌದ್ರರಸದಿಂ ತೊನೆವ ಚಂಡಾಖ್ಯಭೈರವ ಮಹಾತೇಜದಿಂ ತರಣಿಯಂ ಜಱಿಯುತ (ನಂದಿಮಾ. ೩-೭). 'ಒನೆ' ಮರಾ.

**ತೊನೆ₂** 'ತೊಣೆ' ನೋ.

**ತೊನೆಪ, ತೊನೆಹ (ನಾ).** ೧. **ತೂಗಾಟ:** ಸೊನೆಯಿಂ ದಾನಜಲೌಘಮುಂ ತೊನೆಪದಿಂ ಕೊಂಬಾಟಮುಂ ಕೋಕಿಲಸ್ವನದಿಂ ಬೃಂಹಿತನಾದಮುಂ ... ಒಪ್ಪಲ್ (ಜಗವಿ. ೧೪-೭೪). ೨. **ಒನಪು; ಒಲಪು :** ಅಂತಾಕೆಗಳ್ ತೂಗಿ ತೊನೆವ ತೊನೆಪಗಳುಮಂ . . . ನೋಡಿ (ಪಂಪಭಾ. ೪-೯೦ ಪ) ; ತೊನೆಪಂ ಲೇಸು ಸಖಿಗೆಯರಿದೆಂಬಂತೆ . . . ಸಂಸಾರಸುಖಂ ಲೇಸು ಮೇಗಣ ನರಕದುಃಖಂಗಳರಿಯವು (ಧರ್ಮಾಮೃ. ೮-೮೦). **ತೊನೆಹ :** ೩. (ಆಲಂ) ಓಲಾಟ; ಮೆರೆತ: ಮನೆಮನೆವಾರ್ತೆಯಂ ಮುಡದಿ ಮಕ್ಕಳುಗಳ ತೊನೆಹದ ತೊಡಕಿನೊಳ್ತೊಡರಿ ಮನಗೆಟ್ಟು ಮತಿಯಲ್ಲಿ ಮಱುಗದವೋಲ್ ನಿನ್ನ ನೆನೆದೆನುಳುಹು (ಶತಸಾಂ. ೧೭-೯೨). [ತೊನೆ₁ + – ಪ₂]

**ತೊನೆಯಿಸು** (ಕ್ರಿ). ೧. ತೂಗು ; ಜೀಕು : ಲಲಿತಾಂಗಂ ಬಳ್ಳಲು ಉಯ್ಯಲಂ ತೊನೆಯಿಸಿದಳ್ (ಮಂದಾಕ. ೪-೪೬). ೨. ಪಲುಕನ್ನು ಮೂಡಿಸು: ನಾದಾನುಸಾರವಾಗಿ ಗಮಕದ ಗುಂಪು ಗುಂಗುಮಿಸುವಂತೆ ಹಾಡನ್ನೆತ್ತುವ, ಎತ್ತಿ ತೊನೆಯಿಸುವ ತೊನೆಯಿಸಿ ಕೊನೆಗಾಣಿಸುವ ಹಿಡಿತ (ಪಾರ್ತಿಸು. ೪೨). [ ತೊನೆ$_1$ + – ಇಸು$_3$ ]

**ತೊನೆಹ** 'ತೊನೆಪ' ನೋ.

**ತೊನ್ನ** (ನಾ). ತೊನ್ನುರೋಗವುಳ್ಳವನು : ತಾಂ ತೊನ್ನನಾಗಿ ಮುರುಂಟಿದ ಕೈಯುಂ ಕಾಲುಂ ಬೆರಸು . . . ಲೋಗರ ಮನೆಗಳೊಳ್ ಭೈಕ್ಷಮಂ ಬೇಡಿ (ವಡ್ಡಾರಾ. ೧೨೨-೨೨) ; ಪಂಚಮ ನವ ಸ್ಥಾನಂಗಳೊಳ್ ಕರ್ಕಟಾಳಿ ಮೃಗೋಕ್ಷೋದಯಮುಗ್ರರೊಂದಿದೊಡವರ್ ಮೇಣ್ ನೋಡೆ ತೊನ್ನಂ ನರಂ (ಜಾತತಿ. ೨೦-೧೫) ; ತೊನ್ನಂಗೆ ತುಳಿಲುಂಗೆಯ್ದಂ ಗೆನ್ನಂತಾಗೆಂದಂ (ಸಮಪ. ೯-೭೮) ; ಈ ತೊನ್ನಂಗೀ ಕಪ್ಪಂಗೀ ತೊಡವಿದೇಕೆ (ಧರ್ಮಾಮೃ. ೪-೭೮) ; ಒಡಲಂ ಪತ್ತಿದ ತೊನ್ನರ ತುಟಿಯಂತೆ (ಲೀಲಾವ. ೨-೧೧೭) ; ತೊನ್ನನ ಕೂಟದಿನಾದುದು ತೊನ್ನು (ಯಶೋಚ. ೩-೭೪) ; ಸಾವಂ ಬಯಸುವ ತೊನ್ನರುಂ ತುಱುಚರುಂ . . . ಬಂದಾ ಮರನ ಫಲಮಂ ಮೆಲೆ ನಿರೋಗಿಗಳಾಗಿ (ಧರ್ಮಪ. ೭-೪ ವ).

[ ತೊನ್ನು + – ಅ$_7$ ]

**ತೊನ್ನಿ** (ನಾ). ತೊನ್ನುರೋಗವುಳ್ಳವಳು. [ ತೊನ್ನ + – ಇ$_2$ ]

**ತೊನ್ನು** (ನಾ). ಚರ್ಮವು ಬಿಳಿದಾಗುವ ಒಂದು ಬಗೆಯ ರೋಗ ; ಶ್ವಿತ್ರ : "ಕುಷ್ಠಮೆನೆ ತೊನ್ನು" (ಮಂಗರಾ. ೧೧೩-೨) ; ಆ ಮಯೂರನ ತೊನ್ನಾದೊಡಲುಂ ಸುವರ್ಣಮಾದುದು (ಸಮಪ. ೯-೨೨) ; ತೊನ್ನಿನಂತೆ ರಸಿಗೆಯನುಳ್ಳುದು ಸೊಂಬನಂತೆ ಅಲಸಮಪ್ಪುದು (ಧರ್ಮಾಮೃ. ೪-೧೭೫) ; ಪಿರಿಯ ಬಿಳಿದಪ್ಪ ತೊನ್ನುಳ್ಳವನೆ ಪೂರ್ವದೊಳು ಬೆಳ್ಳಿಯ ಕದ್ದವಂ (ವೀಶೈಪು. ೪-೨೨-೨೫) ; ತೊನ್ನುರೋಗಕ್ಕೆ:– ನೆಲದಾಳವ ಗೋಮೂತ್ರದಿಂ ಅರೆದು ಪೂಸಲು ತೊನ್ನು ಮಾಣ್ಗುಂ (ವಿಷ್ಯವಿ. ೧೩೦) ; ಕುಷ್ಠಾಶ್ರಯಾ–ತೊನ್ನಿಗಾಲಯವಾಗಿರ್ಪುದು (ಬಾಹಟೀ. ೨-೩-೮ ವ). [ ದೇ.॥ ತೆಲು. ತೆನ್ನು ]

**ತೊನ್ನುಗೊಳ್** (ಕ್ರಿ). = ತೊನ್ನುವಿಡಿ : ಮನೆಮನೆಯಂ ತೊಟಲ್ದು ತನ್ನ ತೊನ್ನುಗೊಂಡಿರ್ಪುದನಱಿಪುತ್ತುಂ (ವಡ್ಡಾರಾ. ೧೨೨-೨೪) ; ಮೆಯ್ಗೆಲ್ಲಂ ತೊನ್ನುಗೊಂಡು ದುಃಖಂಬಟ್ಟೋವೊಯ್ಕೆಂದೊಳಱುತ್ತಿರ್ಪರ್ ಚರ್ಯಾದಿ ಜಿನೇಂದ್ರಧರ್ಮಮಂ ಪೞಿದವರ್ಗಳ್ (ಧರ್ಮಾಮೃ. ೬-೧೭೭).

[ ತೊನ್ನು + ಕೊಳ್$_1$ ]

**ತೊನ್ನುಬಡಕ** (ನಾ). ತೊನ್ನು ಹತ್ತಿದವನು : ತೊನ್ನುಬಡಕ ಮಾವ ಅನ್ಯಕಾರಿ ಅತ್ತೆ . . . ಎನ್ನ ಗೋಳು ತಾನೆ ನಾಶವೆಂದಿಗಹುದೊ (ಪುರಂದ. ೨-೮೪-೩). [ ತೊನ್ನು + – ಬಡಕ$_1$ (< – ಬಡಿಕ) ]

**ತೊನ್ನುವಿಡಿ, ತೊನ್ನುಹಿಡಿ** (ಕ್ರಿ). ತೊನ್ನುರೋಗ ಹತ್ತು : ತೊನ್ನು ವಿಡಿದಾವರಿಸಿ ರೂಪಳಿದಿಂತಿರುತ್ತಿರಲು (ಬಸಪು. ೫೭-೫೭). **ತೊನ್ನುಹಿಡಿ** : ತೊನ್ನುಹಿಡಿದವರ ಹೆಣಗಳನ್ನು ಸುಟ್ಟುಬಿಡುತ್ತಿದ್ದರು (ಹುಟ್ಟಿಹ. ೬೯).

[ ತೊನ್ನು + ಪಿಡಿ$_1$ ]

**ತೊನ್ನುಹಿಡಿ** 'ತೊನ್ನುವಿಡಿ' ನೋ.

**ತೊನ್ನೆ** (ನಾ). ತೊನ್ನು ಹತ್ತಿದವಳು: ಅರಸಿಯರ ಸೂಳೆಯರ ಕಣ್ಗಳೊಳ್ ಘುಟಿಕಾಂಜನಂಗಳನೆಚ್ಚಿದೊಡನಿಬರುಂ ತೊನ್ನೆಯರಾಗಿರ್ಪನ್ನೆಗಂ (ವಡ್ಡಾರಾ. ೧೨೪-೧೭). [ ತೊನ್ನ + – ಎ$_2$ ]

**ತೊಪ್, ತೊಪ್ಪು** (ನಾ). ಒಂದು ಅನುಕರಣ ಶಬ್ದ. 'ತೊಪ್ಪನೆ' ಪರಾ. **ತೊಪು** : ಬೆನ್ನಟ್ಟಿ ತಗುಳ್ದಿಡುವುದುಂ ಖಿಳಿಲ್‌ಖಿಳಿಲ್ ತೊಪ್ಪು ತೊಪ್ಪು ಛಳಿಲ್ ಛಳಿಲೆಂದು ಕೊಳ್ವ ಬಡಿಗಂ ಚಳಿತು (ಧರ್ಮಾಮೃ. ೬-೮೮).

**ತೊಪತೊಪ** (ನಾ). ಒಂದು ಅನುಕರಣ ಶಬ್ದ. 'ತೊಪತೊಪನೆ' ಪರಾ.

**ತೊಪತೊಪನೆ** (ಅ). ತೊಪತೊಪ ಎಂದು ಸದ್ದಾಗುವಂತೆ ; ನೀರು ತೊಟ್ಟಿಕ್ಕುವಂತೆ: ಅವನು ಮಳೆಯಲ್ಲಿ ತೊಪತೊಪನೆ ತೊಯ್ದು ಬಂದನು (ರೂಢಿ). 'ತಪತಪನೆ' ಪರಾ. [ ತೊಪತೊಪ + – ಅನೆ$_1$ ]

**ತೊಪ್ಪಟೆ** 'ತೊಗಟು' ನೋ.

**ತೊಪ್ಪಡೆ** 'ತೊಗಟು' ನೋ.

**ತೊಪ್ಪನೆ** (ಅ). ತೊಪ್ ಎಂದು ಸದ್ದಾಗುವಂತೆ ; ತಲೆ ಪಱಿದು ಜೋಲ್ದು ತೊಪ್ಪ[ಪಾಠಾಂ. ಪ್ಪೆ]ನೆ ನೆಲದೊಳ್ ತನು ಬೀೞೆ (ಧರ್ಮಾಮೃ. ೧೩-೧೬೨) ; ಬಿಡೆ ಕೆಮ್ಮಿ ಕೇಕರಿಸಿ ತೊಪ್ಪನುಗುಳುತ (ಸೌಂದಪು. ೮-೫೭) ; ಕುವರಿ . . . ತೊಪ್ಪನೆ ಬಿದ್ದಳುರ್ವಿಯಲಿ (ಮೋಹತ. ೩೫-೫೦) ; ಚೀಲವನ್ನು ತೊಪ್ಪನೆ ಒಂದು ಮೂಲೆಗೆಸೆದ (ಕೊನೆಘೀ. ೧೯೭).

**ತೊಪ್ಪತೊಪ್ಪನೆ** (ದ್ವಿರುಕ್ತಿ) : ಅವ್ಯಯಪದಾಂತಲೋಪಕ್ಕೆ–ಕಮ್ಮಕಮ್ಮನೆ . . . ತೊ ಪ್ಪ ತೊ ಪ್ಪ ನೆ, ತೆಪ್ಪತೆಪ್ಪನೆ (ಶಮದ. ೧೯೩ ಪ್ರಯೋ) ; ತಪ್ಪತಪ್ಪದೆ ಶರಶರಂಗಳಂ ತೆಗೆದೆಚ್ಚು ತೊಪ್ಪತೊಪ್ಪನೆ ಮೃಗಮೃಗಂಗಳಂ ಕೆಡಹಿದರಕಾನನದೊಳು (ಜೈಮಿಭಾ. ೨೮-೪೧).

**ತೊಪ್ಪನೆ ತೊಯ್, ತೊಪ್ಪನೆ ತೋ** = ೧. ಸಂಪೂರ್ಣವಾಗಿ ಒದ್ದೆಯಾಗು ; ಪೂರ್ತಿಯಾಗಿ ನೆನೆದು ಹೋಗು : ತೊಪ್ಪನೆ ತೊಯ್ದು ಕಾಮುರಸದಿಂ ಲಲಿತಾಂಗಿಯೊಪ್ಪಿದಳ್ (ಲೀಲಾವ. ೧೩-೧೭); ನಿಪ್ಪೊಸತಪ್ಪ ರತ್ನಚಯಮಂ ಪಿಡಿದಾಯ್ದು ಸುಧಾರಸಂಗಳಿಂ ತೊಪ್ಪನೆ ತೊಯ್ದವೊಲ್ ಪೊಳೆವ ಪಲ್ಗಳಂ (ಬಾಧಪು. ೨-೫೦) ; ಹರಶರಣಕರುಣಾಮೃತದ ಮಳೆ ಸುರಿಯೆ ತೊಪ್ಪನೆ ತೋದು ತೋದೀಶ್ವರಗಣಾಂಘ್ರಿಜಲದ ಕಡಲೊಳೋಲಾಡಿಪೋಲಾಡಿ (ಬಸಪು. ೬-೨೫) ; ನೀರ ಧಾರೆಗಳಿಂದ ತೊಪ್ಪನೆ ತೋದುದೊಡಲು (ಬಸಪು. ೧೮-೬೫) ; ೨. ಸಂಪೂರ್ಣವಾಗಿ ನೆನೆಯಿಸು,– ತೋಯಿಸು : ಇಪ್ಪತ್ತು ಕೂರ್ಗಣೆ ಕೆನ್ನೀರ ಮಳೆಯಿಂದೆ ತೊಪ್ಪನೆ ತೊಯ್ದನು ಖಳನ (ಮೋಹತ. ೩೪-೧೬). [ ತೊಪ್ + – ಅನೆ$_1$ ]

**ತೊಪ್ಪಲ** 'ತೊಪ್ಪಲು' ನೋ.

**ತೊಪ್ಪಲು, ತಪ್ಪಲ, ತಪ್ಪಲ್ಲು, ತೊಪ್ಪಲ, ತೊಪ್ಪಾಲೆ** (ನಾ). ೧. ಮರಗಿಡಗಳ ಎಲೆ, ಚಿಗುರು ಮೊದಲಾದುವು ; ಸೊಪ್ಪು : ಹಸಿಯ ತೊಪ್ಪಲನೆ ತಂದು ಆ ದೇವರ ಮಸ್ತಕದ ಮೇಲೊಟ್ಟುವ ಆ ತೊಪ್ಪಲನೆ ತಂದು ಬಿಸಿಮಾಡಿ ಪಶುಪತಿ ಎಂಬ ಜಂಗಮಕ್ಕೆ ನೀಡಿದೊಡೆ (ವಚಸಂ. ೧೯೦-೩೦ ಅಂಬಿಗ) ; ಬಿಸಿಲಲ್ಲಿ ಕಟ್ಟ ಕಗ್ಗಲಿಯ ತೊಪ್ಪಲನು ತುಳಿದು ರಸವ ಹಿಂಡಿಕೊಂಡು (ಅಶ್ವಟೀ. ೬೯-೧) ; ಅನ್ನವ ಬಿಟ್ಟು ತೊಪ್ಪಲ ತಿನ್ನುವನ ಕಂಡು ಕೊರಡುಯೆಂಬೆ (ಚದಾವ. ೨೩-೯) ; ಉಡುಗಿ ಮೈನಯದ ನೆಯ್ಗೆ ತೊಪ್ಪಲು ; ಹರೆಯ ಚಿಗುರಡಗಿ ನೆತ್ತರದ ನೆರೆಗೆಂಪು ಹಳಸುತಿದೆ ಭರದಲ್ಲೆ (ಉಯ್ಯಾಲೆ. ೧೨-೩). ೨. ಒಂದು ಬಗೆಯ ಸಸ್ಯ : ಈಶ್ವರೀಬೇರು, ತೊಪ್ಪಲು, ಗೋಪಾಲಪುಟ್ಟತೊಪ್ಪಲು (ಪ್ರಜಿಗಿ. ೯-೧೫೩) ; ಮರಗಳು : ಹೆಸವ, ಹೆಬ್ಬಲಸು . . . ಜಾಲಿ, ಕರೀಜಾಲಿ, ಗೊಬ್ಬಳಿ, ತೊಪ್ಪಲು, ಬಿಲಪತ್ರೆ (ನಮ್ಮನು. ೨೩೭). **ತಪ್ಪಲ**: ೧. ದಪ್ಪಗನಣುಗನ ಬಲದ ಮಸ್ತಕದ ಮೇಲಪ್ಪಳಿಸಿದ ಬಿಸಿಲ್ಗಿಡಿಗೆ ಕುಪ್ಪಟೆಯಾದುದುರುವೀರುಹ ಕಳಿತಿರ್ದ ತಪ್ಪಲ ತಱಗೆಲೆಯಾಯ್ತು (ಮೋಹತ. ೧೯-೪೪). 'ಮುಷ್ಟಿತಪ್ಪಲ' ಪರಾ. **ತಪ್ಪಲ್ಲು**: ೧. ಮೇವಿನ ಸೊಪ್ಪಿಯ ಕಿಚ್ಚು ಮಾಡಿ ಅದರಲ್ಲಿ ತುರುಬಿ, ತುಂಬಿ, ಗಣಜಲಿ, ಹೆಬ್ಬೇವು ಮೊದಲಾದ ತಪ್ಪಲುಗಳನ್ನು ಚೆಲ್ಲಿ (ಕನ್ನಜಾ. ೧೬೭). **ತೊಪ್ಪಲ$_1$** : ೧. ತೊಪ್ಪಲದ ಆಚ್ಛಾದನೆಯಿಂದ ಚಪ್ಪರವು ... ಶೋಭಿಸಿತು (ಹಬ್ಬಿಬ. ೪೭); ತಾಯಿಗೆ ಹೇಳಿ ಅದನ್ನು ಬಿಚ್ಚಿಕೊಂಡು ತೊಪ್ಪಲ ತರಲು ಊರ ಹೊರಗೆ

ನಡೆದನು (ಜಯಂತ. ೩೨). **ತೊಪ್ಪಾಲೆ : ೨.** ಬಿಳೀಜಾಲಿ, ತೊಪ್ಪಾಲೆ, ಸಾರಾಯಿಬೇಲ, ತುಂಬೆಮರ (ವ್ಮಜಿಗಿ. ೧-೧೬). 'ಸೊಪ್ಪು₃' ಪರಾ.

**ತೊಪ್ಪಲು ಪಲ್ಲೆ** = ಸೊಪ್ಪಿನ ಪಲ್ಯ : ಸಾಧ್ಯವಿದ್ದಷ್ಟು ಮಟ್ಟಿಗೆ ತೊಪ್ಪಲು ಪಲ್ಲೆಯನ್ನೂ ಚಪ್ಪರಬದನೇಕಾಯಿಯನ್ನೂ ತಿನ್ನಲು ಶಿವರಾಮನಿಗೆ ಸೂಚನೆ ಕೊಟ್ಟರು (ಚಿಲುನಿ. ೨೮).

[ ದೇ.॥ ತಮಿ. ಚುಪ್ಪಲ್ = ಒಣಗಿದ ಕುಡಿ ; ತುಳು. ತಪ್ಪು ; ಕೊಡ. ತೊಪ್ಪಿ, ಚಪ್ಪಲ ]

**ತೊಪ್ಪಾಲೆ** 'ತೊಪ್ಪಲು' ನೋ.

**ತೊಪ್ಪಿಗೆ** 'ಟೋಪಿ' ನೋ.

**ತೊಪ್ಪು** 'ತೊಪ್' ನೋ.

**ತೊಪ್ಪೆ₁** (ನಾ). ಬೊಜ್ಜು. 'ತೊಪ್ಪೆವ್ಮೈ' ಪರಾ.

[ ದೇ.॥ ತಮಿ. ತೊಪ್ಪೈ ]

**ತೊಪ್ಪೆ₂** (ನಾ). ಹಸಿಯಾದ ಸಗಣಿಯ ಮುದ್ದೆ : ಅಪ್ಪು ಉಳ್ಳನ್ನಕ್ಕ ತೊಪ್ಪೆ ಕಿಚ್ಚಿಗೊಳಗಪ್ಪುದೆ ಅಪ್ಪುವಾಱಿ ಕಿಚ್ಚು ಮುಟ್ಟಿದ ಮತ್ತೆ ತೊಪ್ಪೆಯೆಂಬ ನಾಮ ಎತ್ತ ಹೋಯಿತ್ತು (ವ್ಮಾದೂಳ. ೯೬೭-೫೮) ; ತೊಪ್ಪೆ ಮೇಲೆ ಹೆಜ್ಜೆ ಇಟ್ಟು ಮುಖಕ್ಕೆ ಸಿಡಿಸಿಕೊಂಡು, ಇದನ್ನ ಗೃಹಚಾರಾಂದರೆ ನಾವು ಮನುಷ್ಯರೇ! (ಉಮಾಶಿ. ೧೨೪) ; ತೊಪ್ಪೆ ಬರುವುದೇ ಹೆಚ್ಚಿಗೆ ? (ಗಾದ).

**ತೊಪ್ಪೆ ತಟ್ಟು** = ಸಗಣಿಮುದ್ದೆಯನ್ನು ತಟ್ಟು ; ಬೆರಣಿ ತಟ್ಟು : ತೊಪ್ಪೆ ತಟ್ಟಬೇಡವ, ರಾಗಿ ಮಾಡಬೇಡವ . . . ಹೊಟ್ಟೆಗಿಲ್ಲದೆ ಇದೆಲ್ಲಾ ಮಾಡಾಕಾದೀತಾ (ಮುಸುಗ. ೧೫೦). **ತೊಪ್ಪೆ ಹಾಕು** = (ಹಸು, ಎಮ್ಮೆ ಮೊದಲಾದಂವು) ಸಗಣಿ ಹಾಕಂ : ರಸ್ತೆಯ ಮಧ್ಯದಲ್ಲಿ ಹಸು ತೊಪ್ಪೆ ಹಾಕಿದೆ (ರೂಢಿ).

**ತೊಪ್ಪೆ₃** (ನಾ). ತೊಗಟೆ ; ಚಕ್ಕೆ : ಆ ಮರನನೇಱಿ . . . ಕೊಂಬ ಕಡಿವುತ್ತಿರಲಾಗಿ ಒಂದು ಹೊಯಿಲಿಗೆ ಅದಱಂಗಡ ತೊಪ್ಪೆ ಹಱಿದು (ಸರ್ವವ. ೧೦೫-೫೬೭) ; ಇಸುಬಿನ ಹುಣ್ಣಿಗೆ :-ಹುಳಿಸೊಡಲಿಯ ತೊಪ್ಪೆಯಂ ನಿಂಬೆಯ ಹುಳಿಯಲ್ಲಿ ಅರೆದು ಪೂಸೆ ಮಾಣ್ಗುಂ (ವಿವ್ಯವಿ. ೭೫) ; ಇಂಗಳದ ತೊಪ್ಪೆಯನು ಹಿಟ್ಟುಮಾಡಿ (ಅಶ್ವಬೀ. ೯೮-೩).

**ತೊಪ್ಪೆವ್ಮೈ** (ನಾ). ಬೊಜ್ಜು ಬೆಳೆದ ಶರೀರ ; ನಿಸ್ಸಾರವಾದ ದಪ್ಪ ದೇಹ : ಈ ಪ್ರಕಾರದಲ್ಲಿ ಉದಯಕಾಲದಲ್ಲಿ ಸಂಚಾರಮಾಡುವುದು ಹೀಗೆ ಮಾಡಿದಲ್ಲಿ ಶರೀರವು ಲಘುವಾಗಿರುವುದು . . . ತಾಮಸವಾದ ತೊಪ್ಪೆವ್ಮೈ ಹೋಗುವುದು (ಸಕವ್ಯ. ೨೯).

[ ತೊಪ್ಪೆ₁ + ಮೈ (<ಮೆಯ್) ]

**ತೊಬಟೆ** 'ತೊಗಟು' ನೋ.

**ತೊಬ್ಬು, ತುಬ್ಬು₂** (ಕ್ರಿ). (ಊಳಿಗದ) ಕೆಲಸಮಾಡು; ದುಡಿ: ಸೀಲವಂತರೆಲ್ಲರೂ ಮಹಾಲಕ್ಷ್ಮಿಯ ಮನೆಮನೆಯ ಎತ್ತಾಗಿ ಉತ್ತುತೊತ್ತಾಗಿ ತೊಬ್ಬಿ ಕತ್ತೆಯಾಗಿ ಹೊತ್ತು ಸಾವರೆಲ್ಲರೂ ಸದ್ಭಕ್ತರೆ (ಏಲೇಶ್ವ. ೪೦). **ತುಬ್ಬು₂ :** ಹೊತ್ತು ಮೂಡಿ ಮುಳುಗುವನ್ನೆವರ ತೊತ್ತುಗೆಲಸವನೆ ತುಬ್ಬಿ ಬೆಂದೊಡಲ ಬೇಗೆಯವನೇತಱದಿ ತಂಬಿಸುವೆಂ (ಸಮ್ಯಕ್ತ್ವ. ೫-೨೨).

[ ? ]

**ತೊಮ್ಮೆ₁** (ನಾ). ಒಂಬತ್ತು ಸಲ ; ಒಂಬತ್ತು ಬಾರಿ : ತೊಂಬತ್ತು, ಒಂಬತ್ತುಪತ್ತು.ತೊಮ್ಮೆ, ತೊಂಬರ್ (ಶಬ್ದಾನು. ೩೬೦ ಪ್ರಯೋ); ತೊಮ್ಮೆ, ನವವಾರಾನ್ (ಶಬ್ದಾನು. ೩೬೦ ವ್ಯಾಖ್ಯಾ). [ <ಒಂಬತ್ತು + -ಮ್ಮೆ₂ ]

**ತೊಮ್ಮೆ₂** 'ತೊಂಬೆ₁' ನೋ.

**ತೊಮ್ಮೆ₃** (ನಾ). (?) : ಬಾಗಿಲ ಗದೆ ತೊಂಮೆ ಉಪಾಧ್ಯಯನ ಗದ್ದೆ (ಸೌಇಎ. ೧೯೩೦, ಉಡುಪಿ. ೫೭೫-೨೨ ; ?). [ ? ]

**ತೊಮ್ಮೆವಡೆ** (ಕ್ರಿ). ಅಧಿಕಗೊಳ್ಳು ; ಆಧಿಕ್ಯಹೊಂದು : ತಿರಿಪು ತೊಮ್ಮೆ ವಡೆಯ ಗತಿ ಸಂಗತಿವಡೆಯೆ (ಶಾಂತೀಶ್ವ. ೧೬-೬೭ ವ).

[ ತೊಮ್ಮೆ₂ (< ತೊಂಬೆ₁) + ಪಡೆ₁ ]

**ತೊಯ್** 'ತೋ' ನೋ.

**ತೊಯಿ** 'ತೊವ್ವೆ' ನೋ.

**ತೊಯಿಸು** 'ತೋಯಿಸು' ನೋ.

**ತೊಯೆ** 'ತೊವ್ವೆ' ನೋ.

**ತೊಯ್ತ** (ನಾ). ಹಸಿಯಾಗಿರುವಿಕೆ ; ತೇವ ; ಆರ್ದ್ರತೆ : ತೊಯ್ತಂ, ತೊಯ್ತಂಗಳ್ ; ಕಾಯ್ತಂ, ಕಾಯ್ತಂಗಳ್ (ಶಬ್ದಾನು. ೫೫೩ ಪ್ರಯೋ).

[ ತೊಯ್ (< ತೋ) + -ತ₂ ]

**ತೊಯ್ಯಿಸು** 'ತೋಯಿಸು' ನೋ.

**ತೊಯ್ಯು** 'ತೋ' ನೋ.

**ತೊಯ್ಸು** 'ತೋಯಿಸು' ನೋ.

**ತೊರಂಗಲು** (ನಾ). ಒಂದು ಬಗೆಯ ಮರ ; ಹೊಂಗೆ ; ಹುಲಿಗಲು : ತೊರಂಗಲ ಎಣ್ಣೆ ಹಾಕಿದ್ದ ಹಣತೆಯ ಬತ್ತಿಯನ್ನು ಹೊತ್ತಿಸಿ ದೀಪ ಮಾಡಿದನು (ಮಲೆಮ. ೨೦೯). [ ? ]

**ತೊರಕೆ** (ನಾ). (ಕರಾ) ಒಂದು ಬಗೆಯ ಮೀನು. [ ←ತುಳು. ತೊರಕೆ]

**ತೊರಕೆಬಲೆ** (ನಾ). (ಕರಾ) ಒಂದು ಬಗೆಯ ಬಲೆ ; ತೊರಕೆಮೀನು ಹಿಡಿಯುವ ದೊಡ್ಡ ಕಣ್ಣಿನ ಬಲೆ. [ ತೊರಕೆ + ಬಲೆ₁ ]

**ತೊರಟೆ** (ನಾ). ಗಡ್ಡೆ ; ಮುದ್ದೆ ; ಗರಣೆ : ಕೀಕರಿಸಿ ಉಗುಳಿದರೆ ತೊರಟೆಯಾಗಿ ರಕ್ತ ಬಾಯಿಂದ ಬೀಳುವುದು (ವೈದ್ಯಸಾ. I, ೯೩). 'ಕೊರಟೆ' ಪರಾ. [ ? ]

**ತೊರತಿ** 'ತೋರತ್ತಿ' ನೋ.

**ತೊರತೆ** (ನಾ). ಜಿನುಗುವಿಕೆ; ಒಸರುವಿಕೆ; ಒರತೆ: ಮಳಮೂತ್ರಾಂಗಮನೇ ತನು ಕೊಳೆ ನೇತ್ರರ ಬಱಿಯ ತೊರತೆ[ಪಾಠಾಂ. ಬರೆಯ ತೊಱತೆ]ಯೋನಿಯೆ ತಾನೆಂದೆಳಸದೆ ಲಲನಾಸಂಗಮನುಱಿದಿರ್ಪಂ ಬ್ರಹ್ಮಚಾರಿ ವಿಜಿತವಿರಾಜಂ (ಶಾಂತೀಶ್ವ. ೧೩-೭೩). [ ತೊರೆ₂ + -ತೆ₂ ]

**ತೊರತ್ತಿ** 'ತೋರತ್ತಿ' ನೋ.

**ತೊರನಿ** (ನಾ). ಒಂದು ಬಗೆಯ ಸಸ್ಯ : (ವ್ಮಜಿಗಿ. ೭೮-೧೬೦೭).

[ ? ]

**ತೊರಮರ** (ನಾ). ಒಂದು ಸ್ಥಳದ ಹೆಸರು : ತೊರಮರದವಿಷಯೇ ಚಿತ್ರಸೇದುಗ್ರಾಮಮಧಿವಸತಿ (ಇಆ. XIX, ೧೫೦-೧೯ ; 692).

[ ? ]

**ತೊರಲೆ** (ನಾ). ಒಂದು ಬಗೆಯ ಮರ: ಸರಲೆಯಿಂ ಹಾಲೆಯಿಂ ಹೀಲೆಯಿಂ ನೀಲಿಯಿಂ ತೊರಲೆಯಿಂ ಹೊಂಗೆಯಿಂ . . . ಕಾಡೆಸೆದುದು (ನಂದಿಮೂ. ೧೩-೧೨). [ ? ]

**ತೊರವಿ** 'ತೊಱವಿ' ನೋ.

**ತೊರಸು** 'ತೋಱಿಯಿಸು' ನೋ.

**ತೊರಳಿ** 'ತೊರಳೆ' ನೋ.

**ತೊರಳೆ, ತೊರಳಿ, ತೊಳಲೆ, ತೊಳ್ಳೆ** (ನಾ). ಗುಲ್ಮ ; ಪ್ಲೀಹ : ಸರಳುರ್ಚಿ ನರಳುತ್ತ ತೊರಳೆಯೆಡಸಲು ಮೂಗನರಳಿಸೆಚ್ಚಂಬ ಹೊತ್ತು ರುಳ್ಳ ಕಂಬನಿಯಿಂದ ತರಳಚಿತ್ರದ ಹಂದಿ ಮರಳಿ ಕಾನನಕೆಯ್ದಿತು (ಹಚಕಾ. ೬-೩೦) ; ಕೊಳ್ಳಿಗಿಡಿ ತಾಗಲಳ್ಳೆವೊಯ್ದು ಬೀಟ್ವ ಬೆಳ್ಳರಳೆಗಳಿಂ ಉರಿಯಟ್ಟ ಪರಿಪರಿದು ತೊರಳೆವಾಯ್ದುರುಳ್ವ ಮರೆವಿಂಡುಗಳಿಂದ . . . ಸರ್ವಾಂಗವಂ ಕರ್ಬೊಗೆ ಸುತ್ತಿ ಕೊರ್ಬಿದೊಡಲಂ ಬಿಡುವ ಪೆರ್ಬಾವುಗಳಿಂದ ಗುರ್ಬುವೆತ್ತುವು (ನಳಚಂ. ೫೮೮ ವ) ; ತೊರಳೆಯ ತೊಂಗಲಿನೊಳಂದೆಸೆವ

ಚಕ್ರವ ನೋಡಿದನು ದೈತ್ಯಾರಿ ಕೋಪದಲಿ (ಕುಪ್ಪಾಭೀ. ೭-೩೨) ; ಪೊಸ ತೊರಳೆಗಳ ದಂಡೆದೊಂಡಲ್ಗಳಿಂ ಮುಡಿದುಮಲ್ಗಳ ತೊಡಂಗಳನೆ ತೊಟ್ಟು (ಚಿಬಪು. ೩೨-೨೦) ; ತೊರಳೆ ತೊಂಗಳೆ ಮಜ್ಜೆ ಮಾಂಸಗಳನು ಸವಿದು (ಕಂನವಿ. ೧೫-೫೩) ; ಕಡಿದು ಬಡಿದು ಕುರಿದರಿಯೊಟ್ಟುವೆನು . . . ಬಂದವರೊಡಲ ತೊರಳೆ ಮಾಂಸಂಗಳಂ (ಶ್ರೀರಾಮಾ. ೭೭೫-೫೮೭). 'ನಿಡಂದೊರಳೆ' ಪರಾ. **ತೊರಳೆ:** ಹೊಂಡೆಯದ ತೊರಳೆಗಳ ಕೊರಳಿನ ತುಂಡುಗಳ ಕಾಲಾಂತಕನ ಹೆಚ್ಚಳಸು ಹುಲುಸಾಯ್ತು (ಕುಪ್ಪಾಭೀ. ೯-೧೩). **ತೊಳಲೆ:** ಕಣೆವೋದ ಕಣೆಕಾಲ್ಗಳುಂ ಕೊಟಿದು ಬೀಟ್ವ ತೊ[ಪಾಠಾಂ. ಕೊ] ಳಲೆಗಳುಂ ಬಟ್ಟಲು ಕಟಲ್ದ ಮೊಣಕಾಲ್ಗಳುಂ . . . ಮಹಾಭಯಂ ಕಾರಮಾಗೆ (ಮಹಾನೇ. ೧೨-೫೪ ವ). **ತೊಳ್ಳೆ** : ನನಗೇಕೋ ತೊಳ್ಳೆ ನಡುಗುತಿದೆ (ಚಂದ್ರಸ. ೨೪-೨೦) ; ನಾನೂ ಗಟ್ಟಿಯಾಗಿ ಕೂರಾಕೆ ಪರ್ಯತ್ನ ಮಾಡಿದೆ, ಆಗಲಿಲ್ಲ, ತೊಳ್ಳೆ ನಡುಗಾಕೆ ಸುರುವಾಯ್ತು (ಮಲೆಮ. ೩೦೩). [ ದೇ.॥ ತುಳು. ತೊಳ್ಳೆ = ಬೊಜ್ಜುಹೊಟ್ಟೆ ]

**ತೊರಿಗ** (ನಾ). ಒಂದು ಬಗೆಯ ಕೀಟ: ದುಂಬಿ, ಹಸುರುದುಂಬಿ, ತುಡುವೆ, ತೊರಿಗ (ನಮ್ಮನು. ೨೪೧). [ ? ]

**ತೊರೆ₁** 'ತೊಱೆ¹₁' ನೋ.

**ತೊರೆ₂** (ಕ್ರಿ). ೧. ಮೊಲೆಯಲ್ಲಿ ಹಾಲು ತುಂಬಿಕೊಳ್ಳು, ಕೂಡಿಕೊಳ್ಳು: ಕಳಮಾಕ್ಷತಚೂರ್ಣಂ . . . ಏರ್ಮೆಯ ಪಾಲಿಂ ಕಲಸಿ ಕುಡಿಯಿಸುಗೆ ತೊರೆಗುಂ ಮೊಲೆಗಳ್ ಬಾಣ(ಳ)ಂತಿಗೆಚ್ಚು ಪಾಲ್ ಪಾಯ್ವಿನೆಗಂ (ಲೋಕೋಪ. ೯-೧೮೨). ೨. ಮೊಲೆಯಿಂದ ಹಾಲು ಸ್ರವಿಸು,- ಸುರಿಸು: "ತೊರೆ–ಸ್ತನ್ಯೇ (ಎದೆಹಾಲು ಸ್ರವಿಸು)"(ಶಮಧಾ); ತೊರೆದುದು ಕಾಮಧೇನು ತುಱುಗಲ್ಗೊನೆವಣ್ಣುದು ಕಲ್ಪವೃಕ್ಷಂ (ಪಂಪಭಾ. ೧೪-೨೦); ತೊರೆದ ಕುಚಕಲಶದಿಂದಂಬಿಱಿವಿಟ್ಟೊಗೆತಂದ ಪಾಲ ಧಾರೆಯಿಂ (ಆಜಿಪು. ೫-೫೭); ಬಱಿಡಿಯ ಕೈಯಲ್ಲಿ ಮಕ್ಕಳಿದ್ದಡೆ ತೊರೆವುದೆ ಮೊಲೆ (ಮೋಳಿಮಾ. ೨೫-೧೦೦) ; ಕುಮಾರನನಜಿತಸೇನಮಹಾದೇವಿ ನಲ್ಮೆರಕೆಯಿಂ ಪರಸಿ ಮೋಹರಸಪರವಶತೆಯಿಂ ತೊರೆದ ಮೊಲೆಗೆಲಕ್ಕೆ ತೆಗೆದು (ಚಂದ್ರಪು. ೬-೯೦ ವ); ತೊರೆದೆಚ್ಚು ಪಾಯ್ವ ಮೊಲೆವಾಲಿಂ ಮಗನಂ ಮಜ್ಜನಂಬುಗಿಸಿ (ಅರ್ಧನೇ. ೮-೨೦ ವ) ; ಹೆತ್ತ ತಾಯ ಮೊಲೆ ತೊರೆಯೆ (ನಂಬಿರ. ೮-೩೭); ಧರಣಿಯೊಳು ಬಸವಂಗೆ ಸಲೆ ಮೊಲೆ ತೊ[ಪಾಠಾಂ. ಸೊ]ರೆದು ಕಱು ವಂತಾಯ್ತು (ಬಸಪು. ೫೭-೮೩) ; ದೊರೆಯುಬಹುದೆ . . . ಎರೆದು, ಹೊಟ್ಟೆ ಎದೆಹಾಲು ತೊರೆವ ಪಾದೋದಕ ಪ್ರಸಾದ ? (ನಿಲಮು. ೩೬-೨). ೩. ಒಸರು ; ಜಿನುಗಂ; ತೊಟ್ಟಿಕ್ಕು: ಕಾಡ ಪಂದಿಗಳ ಬಲ್ಪಿಣದಿಂ ಪೊಲಸಂಟಿ ನಾರ್ವ ಜೇವಡೆಗಳ ಪುಣ್ಗಳಿಂ ತೊರೆವ ನೆತ್ತರ ಕೆಯ್ ನಡುಗಲ್ಕೆ ನೀಡಿ ಕೀಳಿಡೆಯಿಡೆ ಗಂಟಲಂ ಮುಱಿದನೊರ್ಮೆಯೆ ನಿರ್ಘೃಣನೆನ್ನ ತಂದೆಯಂ (ಕಾದಂಪೂ. ೧೮೪) ; ಹಿಂಗದೆ ನೋಳ್ಪವರ ಕಂಗಳ್ ತೊರೆಯೆ (ನಂಬಿರ. ೮-೩೭) ; ತೊರೆದುದು ಚಂದ್ರಕಾಂತಮಣಿ . . . ನೆಟ್ಟನೊಗೆಯಲ್ ಬಗೆದಂ ದೊಡೆ ಚಂದ್ರಮಂಡಲಂ (ಅನಂಪು. ೭-೭೭); ತೊರೆದುದು ಚಂದ್ರಕಾಂತಂ ಎಣೆವಕ್ಕಿಗಳಪ್ಪು ಸಡಿಲ್ದುವು (ಸೂಕ್ತಿಸು. ೮-೨೧೧) ; ತೊರೆದು ತೊಟ್ಟಿಡುವ ಪ್ರವಾಳಾಧರವ ಚುಂಬಿಸಿದ (ಮೋಹತ. ೧೮-೯೦). ೪. ಜಿನುಗಿಸು ; ಒಸರುವಂತೆ ಮಾಡು : ತೊರೆಯುತ ಮೊರೆಯುತ ಸುರಿಯುತ ರಕ್ತವ . . . ಅರಿವೆಣಗಳು ಲೆಕ್ಕವಿಲ್ಲದೆ ನೋಟಕಚ್ಚರಿಯ ಪುಟ್ಟಿಸುತೊಪ್ಪಿದುವು (ಕಂನವಿ. ೧೫-೭೦). ೫. ಹರಿ; ಪ್ರವಹಿಸು: ಬೆಟ್ಟ ಸುರಿವುದು ಕೊಳ್ಳಕ್ಕೆ, ಕೊಳ್ಳ ತೊರೆವುದು ನದಿಗೆ (ಹೃದಸ. ೫೮-೧೨). ೬. ವ್ಯಾಪಿಸು ; ಹರಡು : ಸರಸಿಜಾಕ್ಷಿಗೆ ತತ್ಸುರತಾಂತ್ಯದ ಕೆಂಪು ತೊರೆದ ಕಣ್ಗಡೆ ಗಳೊಪ್ಪಿದವು (ಶ್ರೀಪಾಲ. ೯-೩೮). ೭. ಪುಷ್ಪವಾಗು ; ದಪ್ಪವಾಗು : ಕಿಱುಗಾಯ್ಗಳಿಂ ತೊರೆದ ದೋರೆಗಳಿಂ ತನಿವಣ್ಣ ಪಂಕ್ತಿಯಿಂದಂ . . . ಚಪ್ಪರಿಪ ರಾಜಶುಕಾಳಿಯಿನಾಮ್ರಮೊಪ್ಪುಗುಂ (ಗಿರಿಕ. ೨-೩೩). ೮. ಉಂಟಾಗು: ಪಾರಿವಪಕ್ಕಿಯನರವಿಂದವಿಲೋಚನೆ ಕರವಿಪಾಕ್ಷಿಸಿ ತೊರೆದ ಮಱವೆಯುಂದವೆ ಮಣಿಗದ್ದುಗೆಯೊಳ್ ಮೆಯ್ಯಿಕ್ಕಿದಳು (ಆ ಯು ಕಾ. ೧೨-೨೫). 'ಸೊರೆ₁' ಪರಾ.

[ ದೇ.॥ ತಮಿ. ಚುರ ; ಮಲ ಚುರ, ಚೊರಿಯುಂ ; ತೆಲು. ತೊರಗು, ತೊರುಗು ]

**ತೊರೆ₃** 'ತೊಱೆ²₂' ನೋ.

**ತೊರೆಇಂಗುಳ** 'ತೊಱೆ³ಯಿಂಗುಳ' ನೋ.

**ತೊರೆಕರೆ** 'ತೊಱೆ³ಗರೆ₁' ನೋ.

**ತೊರೆಗರೆ** (ಕ್ರಿ). (ಮೊಲೆ ತುಂಬಿ) ಹಾಲನ್ನು ಸುರಿಸು : ಕರುವಿನ ಕರೆ ಕೇಳಿ ತೊರೆಗರೆಯದ ಹಸು ಇರಬಹುದೇನಲ್ಲಿ (ಸೂರ್ಯಪಾ. ೮೨-೧).

[ ತೊರೆ₂ + ಕರೆ₂ (<ಕಱೆ³₁) ]

**ತೊರೆಗರೆಯಿಸು** (ಕ್ರಿ). ಹಾಲನ್ನು ಸುರಿಸುವಂತೆ ಮಾಡು : ಬಂಜೆಗೆ ತೊರೆಗರೆಯಿಸಿತ್ತು ಈ ಮುಖರಸ (ಉಯ್ಯಾಲೆ. ೧೦೭-೯).

[ ತೊರೆಗರೆ + – ಇಸು₃ ]

**ತೊರೆದವನ** 'ತೊಱೆ³ದವನ' ನೋ.

**ತೊರೆಬಿಡಿಸು** (ಕ್ರಿ). = ತೊರೆಗರೆಯಿಸು : ರಾಧಾಕಾಕೂ ಅವರೇ ಕೆಚ್ಚಲಿಗೆ ಕೈಹಾಕಿ ತೊರೆಬಿಡಿಸಬೇಕೆಂದಿಲ್ಲ (ದೀಪಹ. II, ೩೫೦).

[ ತೊರೆಬಿಡು + – ಇಸು₃ ]

**ತೊರೆಬಿಡು** (ಕ್ರಿ). ೧. = ತೊರೆಗರೆ : ಕಾಮಧೇನು ತೊರೆಬಿಟ್ಟಂತೆ ಅಂದು ಧರ್ಮಾಮೃತವನ್ನು ಹರಿಸಿದರು (ದಾನಚಿಂ. ೧೦೪). ೨. ಜಿನುಗು ; ಒಸರು: ಮೃಗಶಿರದ ಮಂಚಿಕೆ ಚಂದಿರ ಬರುವಾಗ ಚಂದ್ರಿಕೆಯ ವಾತ್ಸಲ್ಯ ತೊರೆಬಿಟ್ಟಿತ್ತು (ಸಹೀಗೀ. ೨೨-೩೭೨) ; ಆತ್ಮಾನುಬಂಧ ಆನಂದದಿಂದ ತೊರೆಬಿಟ್ಟು ತುಟಿಗೆ ಚಿಮ್ಮಿ (ಮುಕ್ತಕಂ. ೧೬-೫). 'ಸೊರುಬಿಡು' ಪರಾ. [ ತೊರೆ₂ + ಬಿಡು₁ ]

**ತೊರೆಮಾವು** 'ತೊಱೆ³ಮಾವು' ನೋ.

**ತೊರೆಮೆಂತೆ** (ನಾ). ಹೊಳೆಯ ತಡಿಯಲ್ಲಿ ಬೆಳೆಯುವ ಒಂದು ಬಗೆಯ ಸಸ್ಯ : (+). [ ತೊರೆ₃ (<ತೊಱೆ²₂) + ಮೆಂತೆ (<ಮೆಂತೆಯ) ]

**ತೊರೆಯ** 'ತೊಱೆ³ಯ' ನೋ.

**ತೊರೆಯಿಟುಪು** (ಕ್ರಿ). ಹಾಲು ಸುರಿಸು ; ತೊರೆಗರೆ ; ಸೊರುಬಿಡು : ಆ ತುಱು . . . ಮೊಲೆಯುಣವಂದ ಕಱುವಿನ ಮೆಯ್ಗಂಪಂ ಸವಿದು ತೊರೆಯಿಟುಪಲೊಡಂ (ಚಿಕವಂ. ೬೮-೧೪).

[ ತೊರೆ₂ + ಇಟುಪು₀ (<ಇಟಿಪು) ]

**ತೊರೆಯೊಳ್ಕು** (ಕ್ರಿ). ನದಿಯಂತೆ ಹರಿ,–ಪ್ರವಹಿಸು : ಅಶ್ರು...ಆತ್ಮೋಕ್ಷ್ಮ ಸೋರ್ವ ಅನವರತ ರಸಧಾರೆಯೋಲ್, ತೊರೆಯೊಳ್ಕಿದುದು ಹನುಮ ನಕ್ಷಿಯ ಕೃತಜ್ಞತಾಶತಪತ್ರದಿಂ (ಶ್ರೀರಾಮಾ. ೪೭೮-೧೦೨).

[ ತೊರೆ₃ (<ತೊಱೆ²₂) + ಒಳ್ಕು₀ (<ಒಟ್ಕು₁) ]

**ತೊರೆವಳ್ಳಿ** 'ತೊಱೆ³ವಳಿ' ನೋ.

**ತೊರೆಹ** 'ತೊಱೆ³ಹ' ನೋ.

**ತೊರೆಹಾಲು** (ನಾ). (ಮೊಲೆಯಿಂದ) ಹೊರಸೂಸುವ ಹಾಲು : ಕಂಬನಿ, ತೊರೆಹಾಲು, ಬೆವರು, ರಕ್ತ, ವೀರ್ಯ ಮೊದಲಾದ ರಸಭೇದ ಗಳು ಬೇರೊಂದು ರಸನೆಯ ಪ್ರವಾಹಗಳಾಗಿವೆ (ಸಾಹಿವಿ. ೧೧).

[ ತೊರೆ₂ + ಹಾಲು₁ (<ಪಾಲ್₁) ]

**ತೊರ್ತು** 'ತೊಟ್ಟಿ' ನೋ.

**ತೊರ್ತುವೆಸ** 'ತೊಟ್ಟುವೆಸ' ನೋ.

**ತೊರ್ತುವೆಸಗೆಯ್** 'ತೊಟ್ಟುವೆಸಗೆಯ್' ನೋ.

ತೊಲ 'ತೊಲ್ತೆ' ನೋ.

△ ತೊಲಂಗಿಸು 'ತೊಲಗಿಸಂ' ನೋ.

△ ತೊಲಂಗು 'ತೊಲಗಂ₁' ನೋ.

**ತೊಲಗಿಕೆ** (ನಾ). ೧. ಅಗಲಂವಿಕೆ ; ದೂರವಾಗುವುದು ; ವಿಯೋಗ ; ವಿರಹ : ಆರಯೆ ರತಿಯಿಂದಂ ಶೃಂಗಾರಂ ಸ್ತ್ರೀಪುಂಸಯೋಗದಿಂ ತೊಲಗಿಕೆಯಿಂ ಸಾರಂ ಸಂಭೋಗಂ ಶೃಂಗಾರಂ ಸವಿಯೆನಿಪ ವಿಪ್ರಲಂಭ ಸಮಾಖ್ಯಂ (ರಸರ. ೧-೧೮ ಸೂತ್ರ). ೨. ನಾಶ ; ಅಳಿಯುವಿಕೆ : "ಧ್ವಂಸಃ, ಧ್ವಂಸಃ, ಧ್ವಂಸಾ, ಧ್ವಂಸನಂ, ಧ್ವಂಸನೀಯಂ, ಧ್ವಸ್ತಿಃ ಈ ೬ ತೊಲಗಿಕೆ" (ಶಾಶಕ್ಕ. ೧೩೨). [ ತೊಲಗು₁ + – ಇಕೆ ]

**ತೊಲಗಿಸು**, ತೊಲಂಗಿಸು (ಕ್ರಿ). ೧. ದೂರ ಸರಿಸು; ಅಗಲಿಸು ; ದೂರ ಮಾಡು : ಪಲಕಾಲಂ ತಪದಿಂದಂ ಚಲದಿಂ ಸಂದಿರ್ದ ನಿನ್ನ ನಚ್ಚಿನ ಮುನಿಯಂ ತೊಲಗಿಸಿದೆನೊಂದು ವಚನದಿಂ (ಧರ್ಮಾಮೃ. ೨-೨೨೬); ನಿದ್ದೆಯಂ ತೊಲಗಿಸಿದಂಚೆವೆಣ್ಣೆಸೆವ ಗಾಂದವದಿಂ ದನಿದೊಂಗಲೊಳ್ ತಡಂಗಲಿಸಿ (ಚಂದ್ರಪ್ರ. ೮-೯೭) ; ಒಯ್ಯನೆ ನುಡಿಗಲಿಯಲೆಂದು ಬಂದ ಪುರುಳಿಗಳನಾಳಿಯರಿಂದೆ ತೊ ಲ ಗಿ ಸು ತ್ತೆ (ಚಬಪು. ೭-೧೮). ೨. ಇಲ್ಲದಂತೆ ಮಾಡು ; ನಿವಾರಿಸು ; ಕಳೆ ; ಪರಿಹರಿಸು : ಜಡಧಿ ಸಂಗತಿಯಿಂ ಜಡಬುದ್ಧಿ ಬುದ್ಧಿಯಂ ತೊಲಗಿಸಿತಕ್ಕುಂ (ಪಂಪಭಾ. ೯-೪೪); ಮನಕ್ಕೆ ಸಂಕೆಯನ್ನೊಲಗಿಸಿದಂ (ಶಾಇಇ. XI-i, ೪೧-೩೭; 969); ಕರದೀಪಿಕಾನಿಕಾಯಂ ತರದಿಂದಂ ಮುಂದೆ ತೊಲಗಿಸುತ್ತಿರೆ ಕಕ್ಷಾಂತರ ತಿಮಿರಮಂ (ಕಾದಂಪೂ. ೩೯೨) ; ದಿನಕರನ ಹಯಂ ಗಗನಾಧ್ವಖೇದಮಂ ಪಟಯಿಗೆಗಳ ತಣ್ಣೆಲರ ತೀಟದಿಂ ತೊಲಗಿಸುಗುಂ (ಪಂಪಾಮಾ. ೧-೧೧೬) ; ಇಳೆಯೊಳೆಸೆವ ಭವ್ಯಜನಗಳ ಚಿತ್ತದ ಮಳವನಿರದೆ ತೊಲಗಿಸುವಾ . . . ಶ್ರುತಕೀರಿತಿಗಳಿಗೊಲಿದಾನೆರಗುವೆನು (ಅಂಜಚ. ೧-೩೩); ಗಾರುಡಮಂತ್ರ ಸಂಸ್ಕಾರವಿವಶದಿಂದಾ ... ವಿಷ ತೊಲಗಿಸುವುದಾತಂಗೆ (ಬಸಪು. ೪೭-೩೦); ಭಕ್ತರ್ಗೆ ಮನ್ಮನದ ಚಲನವಂ ತೊಲಗಿಸಿ ಶಿವಾಂಘ್ರಿಯೊಳ್ ಬೆಚ್ಚಂತೆ ನಿಲಿಸುಗೆಂದಾಂ ವಂದಿಪೆಂ (ಪದ್ಮರಾ. ೧-೧೦); ಪಗೆಯಾದ ಪಗಲಂ ತೊಲಗಿ ಪಂಧಕಾರಮೆನಲು (ಜೈಮಿಭಾ. ೨೮-೪೦) ; ಒಳವಿರ್ದ ವಿಟರ ಸೋಕಿದ ಕಾಮಗೃಹವನು ತೊಲಗಿಸುತಿಹರಂಗನೆಯರು (ಕಂಸವಿ. ೨-೧೦೦). ; ನಿಮ್ಮೊಳು ಭೇದವ ಗೈಯುವ ಬುದ್ಧಿಯ ತೊಲಗಿಸಿರಿ (ನನಲ್ಲ. ೧೧೮). ೩. ಎಸೆ ; ತ್ಯಜಿಸು ; ಕಳಚು ; ತೆಗೆದಂಹಾಕು : ಶ್ರಿಸಾಕ್ಷಿಕನಾಗಿ ವಸ್ತ್ರಾಭರಣಮಾಲ್ಯಾದಿಗಳಂ ಮೆಯ್ಯಿಂ ತೊಲಗಿಸಿ ಪೂರ್ವಾಭಿಮುಖನುಂ ನಿಬಿಡಬದ್ಧಪಲ್ಯಂಕಾಸನನುಮಾಗಿ (ಆದಿಪು. ೯-೭೭ ವ); ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ವಸ್ತ್ರಾಭರಣಾದಿಗಳಂ ತೊಲಗಿಸಿ ... ದೀಕ್ಷೆಯಂ ಕೈಕೊಂಡಂ (ಜಾವುಂಪು. ೩೭); ನೆಲಸಿರ್ಪ ವಾಸ್ತುಪುರುಷನ ತಲೆ ಹೃದಯಂ ನಾಭಿಪಾದಮೆಂಬಿವಱೆಡೆಯಂ ತೊಲಗಿಸಿ ಮುಂದಣ ಮೆಯ್ಯೊಳ್ ನಿಲಿಸುಗೆ ಕಂಭಮನಂ (ಲೋಕೋಪ. ೩-೨೫) ; ತೊಲಗಿಸಿ ಭೂಷಣಪ್ರತತಿಯಂ . . . ಬಟಲ್ದು ತೊಟಲ್ದು ಜಾನಿಪಳ್ (ಜಗವಿ. ೧೧-೨೩) ;ತನುಗುಣಂಗಳ ನುಳಿದುಳಿದು ಧಿಕ್ಕನೆ ತೊಲಗಿಸುತ ಸಾನುರಾಗಂ ಕೊನರ್ದು ಕೊನರ್ದಾ ಶಿವಶರಣರಂ ಕಂಡು (ಬಸಪು. ೩೫-೩). ೪. ತಳ್ಳು; ನೂಕು; ಸರಿಸು: ಮುಂದಣ ಮಾನಸರಂ ಪಡಿಯಱರ್ ತೊಲಗಿಸುತ್ತುಂ ಬರೆ (ವಡ್ಡಾರಾ. ೮೦-೧೪) ; ತೊಲಗೆನೆ ಬಟ್ಟೆಯಿಂ ತೊಲಗಲಾಱೆನಶಕ್ತನೆನಾರ್ಪೊಡೆನ್ನನಿಂ ತೊಲಗಿಸಿ ಪೋಗು ನೀನೆನೆ (ಪಂಪಭಾ. ೮-೩೨); ಕಲಶಮನೆತ್ತಿ ನೀರೆಱೆವ ಕಾಂತೆಯ ತೋಳ ತೆರಳ್ಕೆ ಮೇಲುದಂ ತೊಲಗಿಸೆ (ಚಂದ್ರಪ್ರ. ೧-೯೮) ; ತೊಲಗಿಸಿ ಮೇಲುದಂ ಬೆಮರ ಬಿಂದುಗಳಂ ತವೆ ಪೀರ್ದು ... ಮನ್ಮಥ ಜಯಾದಿ ಮನಃಪ್ರಿಯನಂತೆ ಸಾರ್ದದೇಂ ತಳೆದುದೊ ಕಾಂತೆಗುಣ್ಮಿದ ರತಿಕ್ರಮಮಂ ನವಮಂದಮಾರುತಂ (ಮಲ್ಲಿಕಾ. ೪-೧೯೮) ; ನಿಳಯಮಂ ಪೊಱಮಟ್ಟು ಬರಲತಿಬಳವೃಷಭ ಕೆಲವುತ್ತ ಮಂದಿಯ ತೊಲಗಿಸುತ ಮುಂದೆಸೆಗೆ ದಾರಿಯ ತೋಱಿ ನಡೆವುತಿರೆ (ಬಸಪು. ೬೧-೨೩). ೫. ಮರಳಿಸು ; ಹಿಂದಕ್ಕೆ ಸರಿಸು ; ಹಿಂದಿರುಗಿಸು ; ಹಿಮ್ಮೆಟ್ಟಿಸು : ರಾಯನನು ತೊಲಗಿಸಿದರಾ ಕರ್ಣಾಯತಾಸ್ತ್ರರು (ಕುಮಾದ್ರೋ. ೫-೨೪) ; ಕಂಗಳ ಬಳೆ ಮರಳಿ ಬಸವಳಿಯೆ ಸಾರಥಿ ತೊಲಗಿಸಿದನಾ ರಥವನು (ಕುಮಾದ್ರೋ. ೫-೩೩) ; ಸಂದಣಿಸಿ ದಳ ನೂಕಿಕೊಂಡೈತಂದುದಿದು ರವಿಸುತನ ತೊಲಗಿಸಿ ಮುಂದೆ ಮೋಹರದೆಗೆದು ಮೂದಲಿಸಿತು ಮರುತ್ಸುತನ (ಕುಮಾಕ. ೧೩-೨೫). ೬. ಚೆದರಿಸು ; ಚೆಲ್ಲಾಪಿಲ್ಲಿ ಮಾಡು : ಹವ್ಯವಾಹನಸಖಂ ತೊಲಗಿಸುವ ಬಹಳ ಮೇಘವ್ಯೂಹಸಂಘಾತದೊಡ್ಡವಣೆ ಮುಱಿವುದೆ ಕೃತಕೃಜನವಾತದಿಂದ (ಜೈಮಿಭಾ. ೧೩-೯). ೭. ಕತ್ತರಿಸು ; ತುಂಡುಮಾಡು : ಕಾಂಭೋಜಭೂಪನ ಮಕುಟಮಸ್ತಕವ ಕೊರಳ ತೊಲಗಿಸಿ ಮುಂದೆ ನೂಕುವ ಪರಶ್ರುತಾಯುವಿನೊಡನೆ ಘನಸಂಗರಕೆ ತೆಗೆದನು (ಕುಮಾದ್ರೋ. ೧೦-೧೬). △ **ತೊಲಂಗಿಸು:** ೨. ನಿರಂತರ ಪಾರಮಾರ್ಥಸಚ್ಚಿಂತನೆಯಂ ತೊಲಂಗಿಸಿ (ಅಮುಕ. ೫೫).

**ತೊಲತೊಲಗಿಸು** (ದ್ವಿರುಕ್ತಿ) : ವಿಲೋಚನೋತ್ಕೀರ್ಣಮುದಶ್ರುಮಾಲೆಯಂ ಪಕ್ಷ್ಮಾಪಾಳಿನೀಜಾಲದಿಂ ತೊಲತೊಲಗಿಸಿ (ಕುಸುಮಾ. ೧೫-೧೦೩ ವ). [ ತೊಲಗು₁ + – ಇಸು₃ ]

**ತೊಲಗು₁**, ತೊನಗು, ತೊಲಂಗು (ಕ್ರಿ). ೧. ಸ್ಥಳವನ್ನು ಬಿಡು ; ಹೊರಟು ಹೋಗು : ನಿಲ್ಲದೆ ತೊಲಗಿದಿರೇಂದಂ (ಕವಿರಾ. ೩-೨೦೦) ; ತೊಲಗೆನೆ ಬಟ್ಟೆಯಿಂ ತೊಲಗಲಾಱೆನಶಕ್ತನೆನಾರ್ಪೊಡೆನ್ನನಿಂ ತೊಲಗಿಸಿ ಪೋಗು ನೀನೆನೆ (ಪಂಪಭಾ. ೮-೩೨) ; ಅಂತಃಪುರದ್ವಾರದೇಶದೊಳಿರ್ದ ರಾಜಲೋಕಮೆಲ್ಲಮುಂ ಸಂಭ್ರಮಂಬೆರಸು ತೊಲಗಲ್ (ಕಾದಂಪೂ. ೪೨೫); ಅಳಿಯನಂ ಕಂಡತ್ತೆಯಂತೆ ತೊಲಗುತ್ತುಂ (ಧರ್ಮಾಮೃ. ೪-೭೭); ಸಾರೆಂಬರಸಾಳ್ಗಳ ತೊಲಗೆಂಬ ಪಡಿಯಱರ ಮುಂಗುಡಿಯ ಕುರುಳ ಕೊಂತದ ವೀರವೃಂದದ ಕೋಳಾಹಳಂ ಬೆರಸಿ ಬಂದು (ಬಸರ. ೬-೮) ; ಜಡರುಗಳಿರಾ ತೊಲಗಿ ಭೋ ಎನುತ (ಬಸಪು. ೨೧-೧೦); ಮಂದಿ ತೊಲಗಲಿ ತೆಱಹುಗೊಡು (ಕುಮಾಅ. ೭-೮೭). ೨. ಅಗಲು ; ತೊರೆ ; ಬಿಟ್ಟು ಹೋಗು: "ತೊಲಗು – ವಿವಿಕ್ತೇ" (ಶಮುಧಾ) ; ಎಲವೊ ದೇವೇಶನನೇಂ ಸೆಱೆವಿಡಿದೆ ತೊಲಗು ದೇವನ ಮಱೆಯಂ ಬಟಿಕಟಿಯಲಕ್ಕುಂ (ಪಂಪಭಾ. ೧೧-೧೨೧) ; ನಿಲೆ ನಿಜವಕ್ಷಸ್ಥಲವಜ್ರುಲೇಪವಿಪುಲೋಪಲಪ್ರದೇಶದೊಳೆಂದುಂತೊಲಗದೆ ಸಾಮ್ರಾಜ್ಯಶ್ರೀಲಲನೆ ತಾಂ ನರೇಂದ್ರನಂ ಸುರೇಂದ್ರನಂ ಗೆಲೆವಂದಂ (ಮಲ್ಲಿಪು. ೩-೨೨) ; ಅಳಿಯನ ಕಂಡರೆ ನಾಚೆಂಬೆ ಮಗಳೆ ಅಳಿಯನ ಕಂಡರೆ ತೊಲಗೆಂಬೆ ಮಗಳೇ ನಾಚುವರೆ ಮೊಱೆಯಿಲ್ಲ ತೊಲಗುವರೆ ನೆಲನಿಲ್ಲ (ಬಸವ. ೯೧೨) ; ನಿನ್ನ ಕಣ್ಣೆಂಬಲಗಿನಲಿ ತನ್ನೆದೆಯ ನೋಯಿಸಿ ತೊಲಗಬಹುದೇ (ಕುಮಾವಿ. ೨-೨೦) ; ಸೋಲಿಸಿ ತೊಲಗಿ ಪೋದವನ ನಿಟ್ಟಿಸುವ ಸಲೀಲೆಯಿಂದೆದ್ದಳಾ ಕುವರಿ (ಪ್ರೋಹತ. ೨೮-೬) ; ಖಂಡಿತದಿ ಲಕ್ಷ್ಮಿ ತೊಲಗುವಳು ಶಿವನೊಲುಮೆ ಕಂಡುಕೊಳದಿರಲು (ಸರ್ವಜ್ಞ. ೨೪೮). ೩. ಅಗಲಿಸು ; ಬೇರೆಯಾಗಿಸು : (+). ೪. ಜಾರು ; ಓರೆಯಾಗು: ಮನಸಿಜನೃಪಲೀಲಾಲಾಂಛನಂ ಸ್ವಸ್ತಿಕಂ ಸ್ತ್ರೀಜನದೊಳೆಸೆದು ನಿಂದತ್ಯುತ್ತರೀಯಾಂತರೀಯಂ ತೊನೆಯೆ ತೊಲಗಿ ನಿಂದಿರ್ದಲ್ಲಿ ತಂದಿತ್ತು ದುಚ್ಚಸ್ತನದೊಳಮರ್ದ ಹಸ್ತಸ್ವಸ್ತಿಕಂಗಳ್ ಬೆಡಂಗಂ (ಆದಿಪು. ೧೧-೧೩೨); ನಿಡುಸುಯ್ಯೆಲರಿಂ ಮೇಲುದು ತೊಲಗೆ (ಕಾದಂಉ. ೩೭) ; ಪೊದೆದ ಪೊಸದುಗುಲಂ ಕೆಲಕ್ಕೆ ತೊಲಗೆ (ವರ್ಧಪು. ೧೩-೬೨ ವ) ; ಮೊಲೆಗಳ ಮುಸುಕು ತೊಲಗಿದುದೆಂದೊ ಸರಸದ ನುಡಿಗಳಿನಿದೊಂದಿನಿತು ತಪ್ಪಿದುದಂದೊ (ಬಸಪು. ೪೩-೧೪). ೫. ಪಕ್ಕಕ್ಕೆ ಸರಿ ; ದಾರಿಯಿಂದ ಕದಲು ; ಅರುಗಾಗು : ನಿಮ್ಮ ಪಟ್ಟಣದಲ್ಲಿ ಹೊಲ್ಲ ಹನಸಗನೊಬ್ಬನಂ ಬಲ್ಲ

ಭಕ್ತನೆನುತ್ತ ಗರ್ವಿಸಿ ತೊಲಗನಾರಿಗೆಯುಂ (ಬಸವು. ೨೦-೧೪) ; ನೀ ಕೃಪೆ ಮಾಡಿ ತನ್ನನಂ ಕಳುಹಬೇಹುದು ನಿಮ್ಮೊಳಿದಿರೇ ರಣಕೆ ತಾನೆನುತ ಸೆಳೆದ ಬಾಣವನಿಳುಹಿದರೆ ಗುರು ತೊಲಗಿ ಕೊಟ್ಟನು ಪದವನಹಿತಾವಳಿಗೆ ಸಾತ್ಯಕಿ ವೊಳಗಿದನು ಕಳಶಜನ ನೇಮದಲಿ (ಕುಮ್ಮಾದ್ರೋ. ೧೧-೯). ೬. ಹಿಂದೆಗೆ ; ಹಿಂಜರಿ ; ಹಿಮ್ಮೆಟ್ಟು : ಗೆಲಲುಂ ಸಾಯಲುಮಾಜದೆ ತೊಲಗಿದೊಡೆ ನೆಗಟಿತ್ತೆ ತೋಱುಗುಮೆ ಸಿರಿಮೆಯ್ಯಿಂ (ಗದಾಯು. ೨-೨೧) ; ಕೆಚ್ಚಿನೊಳ್ತೊಲಗದೊರ್ಮೆಯೆ ಪಾಯಲಪ್ಪುದು (ಧರ್ಮಾಮೃ. ೦-೦೬೯) ; ಪುಲಿ ಬಂದು ಗರ್ಜಿಸುತ್ತಿರೆ ಕೆಲದೊಳ್ ಪಾವಡರ್ದು ಕೂಡೆ ಸುತ್ತಲ್ ಮೆಯ್ಯಂ ತೊಲಗದೆ ಕೆಯ್ಮಿಕ್ಕಿರ್ದಂ (ನೇಮಿಪು. ೧-೧೫) ; ಕಾಮಿನಿ ಬೆದಱಿದಳು ... ತೊಲಗಿ ಹಿಂದಡಿಯಿಡಲು ಕೀಚಕನಳುಕದೈತಂದಬುಜವದನೆಯ ಬಳಿಗೆ ಬಂದನು (ಕುಮ್ಮಾವಿ. ೨-೧೭); ತೊಲಗದೆ ನಿಂದ ವೀರನಂ ತಲೆಗಡಿದುರುಳ್ಚುವ ಮೂದಲಿಪ ವೀರನಂ ತೌದಲೆಗಾಣಿಪ ... ಕಟ್ಟಾಳ್ಗಳನಂಬೆತ್ತಂತೆ ಮೆಱೆದು ನೆರೆದ ಪದಾತಿವ್ಯೂಹದಿಂ (ರಾಜಶೇ. ೬-೧೧೦ವ). ೭. ಹಿಂತಿರುಗು ; ಮರಳು : ಯೋಗವೈದ್ಯರು ಬಂದು ಮಂತ್ರಿಸಿ ನಾಗವಿಷದಿಂ ಮಡಿದ ರಾಯನನಾಗದಯ್ಯೋತಮ್ಮ ಕೈಯಲೆನುತ್ತ ತೊಲಗಿದರು(ಬಸವು. ೪೭-೨೩); ತೊಲಗಿರ್ದ ಕಾಲಾಳು ಮೇಲಾಳಳವಿಗೊಡಲಿ ಮಹಾರಥರು ಮುಂಕೊಳಲಿ (ಕುಮ್ಮಾದ್ರೋ. ೫-೯) ; ಸಪ್ಪಳಾಗದ ತೆಱದೊಳಿದ್ದು ಮೆಲ್ಲನೆ ಮಂತ್ರಿಸುತೆ ತೊಲಗಿ ಬರುತಿರ್ದಳ್ (ಜೈಮಿಭಾ. ೩೦-೨೯). ೮. ದೂಡು ; ಅಟ್ಟು : ನಿಜಮೋಹರವನಂದ್ಯನೂಱು ಬಿಲ್ಲಂತರಕೆ ತೊಲಗಿ ಮಂತ್ರವ ಜಱಿಸಿದನು ಪಾರ್ಥ (ಕುಮ್ಮಾದ್ರೋ. ೯-೨೪). ೯. ಕಣ್ಣಿಗೆ ಕಾಣಿಸದಿರು ; ಅದೃಶ್ಯವಾಗು: ದಿವಸಕರ ಚಂದ್ರತಾರಾನಿವಹಂ ತೊಲಗಿರ್ಪ ಗಗನವಿಸ್ತಾರದವೊಲ್ (ಕಾದಂಪೂ. ೬೪) . ೧೦. ಮುಳುಗು ; ಅಸ್ತವಾಗು : ನಾಳೆ ಪಡುವಣ ತರಣಿ ತೊಲಗದ ಮುನ್ನ ಕೊಲುವೆನು ವೈರಿ ಸೈಂಧವನ (ಕುಮ್ಮಾದ್ರೋ. ೮-೩೫). ೧೧. ನಿವಾರಣೆಯಾಗು ; ಪರಿಹಾರವಾಗು : ತೊಲಗಿದವು ಜನಮನದ ಬಲುಂಗತ್ತಲೆ (ಕುಮ್ಮಾಉ. ೮-೫). ೧೨. ತೀರಿಹೋಗು ; ಮುಗಿದು ಹೋಗು : ತೊಲಗದು ಪುಬ್ಬಕೋಟಿಪರಿಸಂಖ್ಯೆವರಂ ಪರಮಾಯು (ಆದಿಪು. ೧-೫೨) ; ಮಬ್ಬು ಕ್ರಮೇಣ ಬೆಳೆಯುತ್ತಿದೆ; ಸಂಜೆ ತೊಲಗಿ ಇರುಳಾಗುತ್ತಿದೆ (ಜ್ಯೋತಿರ್ವಿ. ೨). ೧೩. ನಾಶವಾಗು ; ಅಳಿ : ತೊಲಗದ ಜವ್ವನಂ ತವದ ಮೆಚ್ಚು ಮರಲ್ಚುವ ನೋಟಮಚ್ಚಿಯಿಂ ಸಲಿಸುವ ಭೋಗಂ (ಆದಿಪು. ೫-೪೨) ; ತಳಮಳಗಾಗದ ತನು ಪೆಪ್ಪಳಿಸದ ನೆಲೆ ತೊಲಗದಱಿವು . . . ತಮಗಮರೆ ಮಡಿಪಿದರ್ ಮಣಿಚೂಳರ್ (ಶಾಂತಿಪು. ೭-೮೧) ; ಅಕ್ಕಱಿಂದಡಿಗಡಿಗೆ ನಿನ್ನಂ ತಕ್ಕವಿಸಲೆಂದಾಶಿಸುವ ಕರ್ಮಕ್ಕೆ ತೊಲಗುವುಪಾಯಮಾವುದೊ ಹೇಳಕಟ ತಾಯೆ (ಬಸವು. ೪೫-೯); ಕೆಟ್ಟುದಪಮೃತ್ಯು . . . ನೆಲೆಗುಂದಿದಳ್ ಮಾರಿ ತೊಲಗಿತಘಚಯ (ಚಬಪು. ೪-೩೫). ೧೪. ಸೋತುಹೋಗು; ಸೋಲು: (ಸ).೧೫. ಕಳಚು; ಬಿಚ್ಚು : ಪರೆಯದ ಜವ್ವನಂ ತೊಲಗದಾಭರಣಂ ಸಲೆ ಮಾಸದಂಬರಂ . . . ಬಾಡಿರದ ಪೂಮುಡಿಯೊಪ್ಪುವ ದೇವಲೋಕಸುಂದರಿಯರನಿಂದ್ರಜಾಲಿಕನತೀವಮನೋಹರಮಾಗೆ ತೋಱಿದಂ (ದಶಕು. ೬-೧೩೮). **ತೊನಗು** : ೨. ಘನಭಕುತಿಯು ನೇಣನೆ ಮಾಡಿ ನಿನ್ನಾ ಚರಣಕೆನ್ನ ಕೊರಳಿಗೆ ಸನುರುಚಿಯಿಂದ ಗಂಟನೆ ಹಾಕಿಕೊಂಡು ತೊನಗದೆ ಬಿಡೆನೊ ನಿನ್ನನು ಎಂದೆಂದಿಗೆ (ಮೋಕ್ಷದೀ. ೨೧-೪). △**ತೊಲಂಗು** : ೧. ಮಂತ್ರಿಪುತ್ರನ ಕಣ್ಣಱಿದು ವಿಳಾಸಿನೀಜನಂ ಕಾಮುಸಂಚಾರಚ್ಛಲದಿಂ ತೊಲಂಗೆಯುಂ (ಲೀಲಾವ. ೪-೩೪ವ); ಕುಲವಿಹೀನರು ಕನಿಷ್ಠರು ಕುಲಜರುತ್ತಮಪುರುಷರೀ ನಾಲ್ವರು ತೊಲಂಗದೆ ಪೋಪ ಬಟ್ಟೆಗಳು (ಬಸವು. ೪೧-೭೦). ೪. ಕೀಲು ತೊಲಂಗಿ ಡೊಂಕುಗಳೆಡೆಗೆಡೆಗೆ ನೆಲೆಗೊಂಡ ಕೈಕಾಲ . . . ಹೇಸಿಕೆಯು ನಾತವಧಿಕ ಭಯಂಕರವು (ಬಸವು. ೪೭-೫೮); ಮೇಲುಂದಱ ಸೆಱಗಂ ತೊ ಲಂ ಗೆ ನೂಕುವ . . . ಭಾವೆಯರ್ ಬರುತಿರ್ದರು (ಚಬಪು. ೩೭-೪೩). ೫. ಸಮಸ್ತ ಭಕ್ಷ್ಯಾವಳಿಗಳಂ ನೃಪನೆಯ್ದೆ ಗಡಣಿಸಿ ಅಲಗನುರ್ಚಿ ಕರದೊಳಮರ್ಚಿ ತೊಲಂಗಿ ನಿಂದಿರಲು (ಬಸವು. ೩೩-೦೪). ೧೩. ನಯನಂಗಳಂ ಬಲುಹಿಂದ ತೆಱೆದುಱೆ ನೋಡಲಾ ಜನನ ಅಂಗವದು ಛಟಛಟ ಎನುತ್ತ ತೊಲಂಗಿ . . . ಕೆಡೆದಿರಲು(ಬಸವು. ೫೦-೮೦) ; ಮಹಾಪುರುಷವರ್ಯನ ಕೃಪಾಪಾಂಗವು ಸಂಗಳಿಸೆ ಭವಭಾರಿಗಳ ದುರಾಚಾರಂ ತೊಲಂಗಿ ಸದ್ಗುಣವೊದಗುವುದು (ಕೊಟ್ಟೂಬ. ೩-೦೬) ; ವನಿತಾದಿ ವಿಷಯಮೋಹಂ ತೊಲಂಗುವದಿನ್ನು (ಮಲ್ಲಶ. ೦-೦೭).

**ತೊಲ ತೊಲಗು** (ದ್ವಿರುಕ್ತಿ) : ಪುಲಿ ಪುಲಿ ಪರಿ ಪರಿ ... ಮನವಮನಂಜದಂಜದೆ ತೊಲ ತೊಲಗೀ ಮೆಳೆಗೆ ಪುಲಿಯೆಂಬುದು ಮಾರ್ಗಂ (ಕವಿರಾ. ೨-೨೭) ; ಇರದೀ ಠಾವಿನಲಿ ತೊಲತೊಲಗೆನುತ ಸಿದಿಗೆಯನಿಳುಹವೇಳ್ದು (ಬಸವು. ೩೨-೪೩) ; ತೊಲತೊಲಗು ಮನ್ಮಥನ ಹೊಗರಿಟ್ಟಲಗು ಬರುತಿದೆ (ಕುಮ್ಮಾಆ. ೧೫-೩೩).

[ದೇ.॥ ತುಳು. ತೊಲಗು, ತೆಲವು, ತೆಲಾವು ; ತೆಲು. ತೊಲಗು, ತೊಲಂಗು, ತೊಲುಗು ]

**ತೊಲಗು₂** (ನಾ). ೧. ಮಲ್ಲಯುದ್ಧದ ಒಂದು ವರಸೆ ; ಹಿಡಿತದಿಂದ ತಪ್ಪಿಸಿಕೊಳ್ಳುವುದು : ಎಡ ಬಲದಲ್ಲಿ ಕೈಕಾಲು ಸಿರಸುಗಳ ಯತ್ನದಿಂದ ತೊಲಗುವದು ಅವದು ಅದು ತೊಲಗುಯೆಂಬುದು (ಜಿಡ್ಡಟೀ. ೪-೩೮). ೨. (ಬಾಣವನ್ನು) ನಿರೋಧಿಸುವ ಒಂದು ಬಗೆಯ ಸಾಧನ (?) : ಅಲಗಿನ ಮುಱೆ ಉಳ್ಳವಂಗೆ ಶಸ್ತ್ರದ ಭಯಮೇತಕ್ಕೆ ಬಾಣದ ತೊಲಗುಳ್ಳವಂಗೆ ಅಂಬಿನ ಘಾಯಮೇತಕ್ಕೆ (ಮದೇವ. ೨೮೧-೪೧). [ <ತೊಲಗು₁ ]

**ತೊಲಗೆ** (ನಾ). ಒಂದು ಬಗೆಯ ಸಸ್ಯ : (ವೃಜಿಗ. ೨೪-೪೪೩). [ ? ]

**ತೊಲಿ** 'ಟೊಳ್ಳು' ನೋ.

**ತೊಲೆ₁** (ಕ್ರಿ). ತೊಲಗು ; ದೂರ ಸರಿ : ಜಾತಿಗೆಟ್ಟಾ ಹುಡುಗಿಯು ತೊಲೆದು ಹೊರಟುಹೋದಳೊ ? (ದೇವೀಚಾ. ೦೭).

[ ದೇ.॥ ತಮಿ. ತೊಲ್ಯೆ, ತುಲ್ಯೆ ; ಮಲ. ತುಲಯು ]

**ತೊಲೆ₂** (ಕ್ರಿ). ೧. ತೂಗಾಡು ; ಜೋಲಾಡು ; ಒಲೆದಾಡು : ಅಲಘು ಕುಚದ್ವಯಂ ಕಚಭರಂ ತೊಲೆಯುತ್ತಿರೆ ಹಸ್ತಕಂಕಣಂ ಘಲಕೆನೆ . . . ಮೊಸರ್ಕಡೆದರ್ಲತಾಂಗಿಯರ್ (ಮಲ್ಲಶಾ. ೪-೫೫). ೨. ಅಲುಗಾಡಿಸು ; ಅಲ್ಲಾಡಿಸು : ಸಿಂಹಮಧ್ಯದ ಕನ್ನೆಯರು ತೋಳ್ಗಳಂ ತೊಲೆ[ಪಾಠಾಂ. ನೆ]ಯಲು (ಭಾವಚಿಂ. ೯-೫೮). [ <ತೊನೆ₁ ]

**ತೊಲೆ₃, ತೊಲ** (ನಾ). ೧. ಮಾಳಿಗೆಗೆ ಅಥವಾ ಚಾವಣಿಗೆ ಆಧಾರವಾಗಿ ಗೋಡೆಗಳ ಮೇಲೆ ಅಡ್ಡಲಾಗಿ ಹಾಕುವ (ಮರದ) ದೂಲ: ಪವಳದ ಕಂಭಂ ಪಳಿಕಿನೆಸೆವ ತೊಲೆ ವಜ್ರದ ಮತ್ತವಾರಣಂ ಮುತ್ತಿನ ಮಂಡವಿಗೆ (ಸುಕುಮಾ. ೧೧-೪೫) ; ಆ ಮನೆಯ ನೋಡಲೆಂದು ಹೋದರೆ . . . ಅದಕ್ಕೆ ಕಂಭ ಒಂದು ತೊಲೆಯಾಱು (ಆವಚಂ. ೨೨೨-೧೧೦೮) ; ಮಱಿಹುಲ್ಲೆ ಸಿಂಹದ ಮುಸಕಕಿದಿರೇ ಲತೆಯ ಎಳಗುಡಿ ಮಾಳಿಗೆಗೆ ತೊಲೆಯೆ (ಕುಮ್ಮಾಭೀ. ೩-೮೪) ; ಆ ಲಲಿತಪಟ್ಟೆಗಳ ತೊಲೆ ರನ್ನಬೋದುಗೆಗಳಾ ಪ್ರವಾಳಂಗಳಿಂದೆ ಮೇಲೆಸೆವ ಜಂತೆಗಳ್ (ಚಬಪು. ೫-೪೮), ಎಲುಬುಗಳ ತೊಲೆಗಳಲಿ ಮಾಂಸದಾ ಮಣ್ಣಿನಲಿ . . . ಬಿಡುಗಡೆಯ ಸಿರಿಗುಡಿಯ ಮುಸಣದಲಿ ಕಟ್ಟು ! (ಪಾಂಚಜ. ೮-೭). 'ಅಡ್ಡತೊಲೆ' ಪರಾ. ೨. ಮರದ ದಿಮ್ಮಿ : ನೀರ್ಗೆ ಬಾಗುಮೇತದ ತೊಲೆ ಕೊಳ್ಳಕೊಳ್ಳೆದೆರಡುಂ ಕಡೆಯಿಂದಱಿಪುತ್ತುಮಿರ್ಪುದು (ಜೀವಸಂ. ೧೫೭-೧೪) ; ನೂರಾರು ತೊಲೆಗಳನು ತಂದಿಲ್ಲಿ ರಾಶಿಗೈಯೆಂದೆನಗೆ ಕಟ್ಟಾಣೆಯ ಬೆಸಸಿ ಪೋದನ್ (ಬಿಗಾಳಿ. ೫೫). ೩. ಯುದ್ಧದಲ್ಲಿ ಬಳಸುವ ಮರದ ದಿಮ್ಮಿಯಂಥ ಒಂದು ಬಗೆಯ ಸಾಧನ: ಹಾಯಿಕುವ ಗುಂಡು ಮೇಲುಱೆ

ಕೆಡಹುವ ತೊ[ಪಾಠಾಂ. ತ]ಲೆ . . . ಎಸೆದವು ದುರ್ಗದೊಳು (ಕುರಾಸಾಂ. ೩೭-೫೩); ತೊಲೆಯುರುಳೆ ಕರಚರಣವುಡಿದು ಕೆಡೆದರ್ (ಜೆಬಪು. ೪೨-೩೭); ತೊಲೆಗಳೊಳಗೆ ದಸಿಗಳ ಪೆಟ್ಟೆ ಲಂಘಿಪ ಬಲುಮೆಕಾಱರ ಮೇಲೆ ನೂಕೆ (ಕಂಸವಿ. ೧೯-೭೧). ೪. ಉಯ್ಯಾಲೆ: ಇತ್ತ ಹೊಂದೋರಣದ ತೊಲೆಯಲಿ ಅತ್ತಲಿತ್ತಲಾ ಹನುಮ ತಿರುಗಲಾ ಮುತ್ತಿತವರಾರಿಗಳು ಶಿಖಿಯನು ಶಲಭ ಕವಿವಂತೆ (ಕಾಶಿರಾ. ೧೧-೨೬). ೫. ಒಂದು ರೂಪಾಯಿ ನಾಣ್ಯದ ತೂಕ : " ಬೀಸಿಗೆ . . . ಐ ದಾ ಗೊ ಂ ದು ತೊಲೆ " (ಮಂಗರಾ. ೧೦೪-೧೧) ; ತೊಲೆ ಪದಿನಯ್ದಱ ಬಿಣ್ಪಿಂದಿಲಾಧಿಪಂ ಪತ್ತು ತೊಲೆಯ ಬಿಣ್ಪಿಂ ಧನ್ಯಂ ತೊಲೆಯಯ್ದಱ ಬಿಣ್ಪಿಂ ಸುಖಿ ಖಲನಿರ್ತೊಲೆವರೆಯ ಬಿಣ್ಪು ಸವನಿಸಿದಾತಂ (ಲೋಕೋಪ. ೧೧-೯೩) ; ವರ್ಷ ನಿಬಂಧಿಯಾಗಿ ಹೂವಿನ ಪಡಿಗೆ ಜಾತಿಹವಳಕ್ಕೆ ತೊಲೆಗೆ ತಾ ೧ ಕರಿದಕ್ಕೆ ವೀಸ ೧ (ಎಕ. II, ೨೯೧-೨; ಸು. 1175); ಗುಗ್ಗುಳವೊಂದು ತೊಲೆಯನವರ್ಚಿ ಕಂಬಿಯೊಳಂದಮಾಗಿರೆ ಪೊತ್ತುಕೊಂಡುರವಣಿಸಿ ಬರುತಿರಲು (ಬಸಪು. ೪೩-೮೩). ೬. ತಕ್ಕಡಿ : ರಿಪುಭೂಪದಂತಿದಂತದ ತೊಲೆಯೊಳ್ ಪರಾಕ್ರಮದಿನೆನ್ನನೆ ಭೂಪತಿ ತೂಗಿ ತೋಱಿನೇ (ಪಂಪಭಾ. ೧೧-೪೦); ಅವರ ದುರ್ನಯಚೇಷ್ಟೆಗಳಿಂ ನೃಪನೈಶ್ವರ್ಯಂ ತೊಲೆಯಲ್ಲಿ ತೂಗಿಸಿಕೊಂಬುದು (ಪಂಚತಂ. ೧೬೯-೧೧) ; ಕೈಲಾಸಮಂ ತೂಗಿದೀ ತೊಲೆಯೊಳ್ ದಕ್ಷಿಣಬಾಹುದಂಡದೊಳಿದಿರ್ಚಲ್ ಗಂಡನಾರೆಂದು ಮೆಯ್ಗಲಿ ಪಾಯ್ದಂ (ಪಂರಾಮಾ. ೧೪-೧೮೮) ; ಇಂತು ಭಕ್ತಿಯನೆ ತೂಗುವ ತೊಲೆಯಿನಳವಡಿಸಿ (ಅನೀರ. ದೀ. ೯೭-೭) ; ಹಿರಿಯ ಭಕ್ತರ ಕೆರಹನೊಂದೆಸೆಗಿರಿಸಿಪೊಂದೆಸೆಯಲಿ ಮಹೀಸುರವರರನೇಱಿಸಿ ತೊಲೆಯನೆಲ್ಲರು ತೂಗಿ ನೋಡಲ್ಕೆ (ಬಸಪು. ೫೫-೫೭); ಹರದನು ಲೆಕ್ಕ ತಪ್ಪಿಸಿ ಹೊಡೆವನಳತೆಯ ತೂಕ ತೊಲೆಗಳಲಿ (ಕಾಶಿರಾ. ೧೦-೨೪) ; ದೈವಂ ಕೆಡಿಸಿದುದು ಸರಿಯಾಗಿ ತೂಗದೆಯ ತೊಲೆಯನ್ (ಪಾರಸಿ. ೧೪-೩೭). ೭. ಸಮಾನತೆ; ಸಾದೃಶ್ಯ; ಸಾಮ್ಯ: ತನ್ನ ತೂ ಕ ದ ತೊಲೆಯು ಮಹಿಪಾಕ್ಷಿಪ್ರಮುಖಗುಗ್ಗುಳವನೀವೆನು (ಬಸಪು. ೪೩-೨೦) ; ಈ ಸುರ ನರೋರಗರೊಳಗೆ ದಾ ನ ವ ರೊ ಳ ಗೆ ಮಹಿಮನ ತೊಲೆಗೆ ಬಹ ತೂಕದ ಮಹಾತ್ಮರದಾರು ಭುವನದಲಿ (ನಿಭಾಗ. ೩-೫-೨೪) ; ಪುಡಿ ತನಿಗೆಂಡದ ಬೂದಿಯ ಪಡಿ ನೆಲಮಟ್ಟೊಲೆಯ ತೊಲೆಯಲರ್ ಬಿರಯಿಯ ಬಾಯೆಡೆಯೆಲರ್ಗೆಣೆಯುರಿಗಿದು ಸರಿ ಕಡು ವಿಸಿಲೆನಿಸಿರೆ ನಿದಾಘವೋಂ ಪಸರಿಸಿತೋ (ರಾಜಶೇ. ೫-೩೪) ;ಪಾರ್ಥನೀಕ್ಷಿಸಿದ ವಿಶ್ವಶರೀರಗೆ ಜೋಡೆಲೆ ತುಳಸಿಯನಿತೆ ತೊಲೆಯೆ ? (ಗಿಳಿವಿಂ. ೪೧-೭). ೮. [ಜ್ಯೋತಿ] ತುಲಾರಾಶಿ: ಭಾವಿಸೆ ಮೇಷದಿಂ ತೊಲೆಯನೆಯ್ದುವಿನಂ ತೊಲೆಯಿಂದೆ ಮೀನಮಂ ತಾಪೊಸೆದೆಯ್ದುವನ್ನಮವರುಣ್ಬ ವಿನಾಟ್ಗಳೆಂದು ಪೇಟ್ದಂ (ಜಟ್ಟಿಮ. ೭-೩೪). ೬, ೮ : ಓವದೆ ಮೀನ ಮೇಷ ವೃಷಭಾದಿಗಳಂ ಕ್ರಮದಿಂ ದಿನಾಧಿಪಂ ಸೇವಿಸಿ ಮತ್ತೆ ಕನ್ನೆಯೊಡಗೂಡಲೊಡಂ ಕಿಡೆ ತನ್ನ ತೇಜಮಿನ್ನಾವುದು ಕಜ್ಜಮೆಂದು ತೊಲೆಯಂ ಜನರಂಜನೆಗೇಱಿ ರಾಗಮಂ ಭೂವಲಯಕ್ಕೆ ಬೀಱಿದಂ (ಪಂರಾಮಾ. ೭-೧೭೭); "ಕೃಶಮುಂ ವೇಶ್ಯಾಂಗವಸ್ತ್ರಂ ಸಮಂಜಸ ತೂಕಂ ತೊ[ಪಾಠಾಂ. ತು]ಲೆಯುಕ್ಕು" (ನಾನಾರ. ೧೫೯). ತೊಲ : ೫. ೧೦ ಮಾಷ = ೧ಕರ್ಷ (ಒಂದು ತೊಲ ಅಥವಾ ೧೧.೭ ಗ್ರಾಂಗಳು) (ಸಕವ್ಯ. Xiii ಪ್ರಸ್ತಾವನೆ) ; ೫ ಅಂಗುಲ ಬಾಹುವಿರುವ ಕಡೆ ಎಂಟು ತೊಲ ತೂಕವನ್ನು ಹಾಕಿರಲಿ (ಭೌತವಿ. ೪೦).

[ <ಸಂ. ತುಲಾ ]

**ತೊಲೆಗೋಲ್**, ತೊಲೆಗೋಲು(ನಾ). ೧. ತಕ್ಕಡಿಯ ಕೋಲು; ತೂಗುಕೋಲು ; ದಂಡಿಗೆ ; ತಕ್ಕಡಿ : ಗೃಹಸ್ಥಾಶ್ರಮಮೇ ಒಂದು ತಟ್ಟಂ ಮಿಕ್ಕಾದ ಮೂಱುಮಾಶ್ರಮಂಗಳುಮೊಂದು ತಟ್ಟಂ ಆಗಿ ನಾಲ್ಕೊಗಂ ತೊಲೆಗೋಲಿಂ ತೂಗಿ ನೋಡಿದನೆಂದು ಬಲ್ಲವರ್ಪೇಳ್ವರು (ಭಾರಶಾಂ. ೧೨-೫೮). ತೊಲೆಗೋಲು : ಕೂರಲಗು ತೊಲೆಗೋಲಿನಲಿ ನಿಮ್ಮಾರು ಭಟೆಯನು ನಮ್ಮ ಬಾಹುವಿಕಾರಬಲವನು ತೂಗಿಯೆನುತೆಚ್ಚನು (ಕುವ್ಯಾಕ. ೨೦-೨೭). [ ತೊಲೆ$_3$ + ಕೋಲ್$_1$ ]

**ತೊಲೆಗೋಲು** 'ತೊಲೆಗೋಲ್' ನೋ.

**ತೊಲ್ಮೊಱಡಿ** (ನಾ).ಒಂದು ದಿಣ್ಣೆಯ ಹೆಸರು: ಅನ್ತೆ ಬನ್ದು ತೊಲ್ಮೊಱಡಿಎ ಕಲ್ಕುಪ್ಪೆಎ ಅನ್ತೆ ಬನ್ದು ಕೊನ್ದೆವಡಿಎ ... ತುಟ್ಟಿಲ್ಗಾಲೊಳ್ಕೊಡಿತ್ತು (ಮೈಆರಿ. ೧೯೩೭, ೫೩-೨೮ ; ಸು. 550).

[ ತೊಲ್ ? + ಮೊಱಡಿ (<ಮೊರಡಿ) ]

**ತೊವಗೂರು** (ನಾ). ಒಂದು ಸ್ಥಳದ ಹೆಸರು : ಬೆಂಪೂರು ತೊವಗೂರು ಪೂವಿನ ಪುಲ್ಲಿಮುಜ್ಗಲ ಕೂತನಿಡುನಲ್ಲೂರು (ಎಕ. IX, ಬೆಂಗಳೂ. ೮೩-೬ ; ಸು. 890) ; (ಎಇ. I, ೩೫೦-೬ ; 900 ನೋ.)

[ ? + ಊರು$_3$ (<ಊರ್) ]

**ತೊವಟೆ** 'ತೊಗಟು' ನೋ.

**ತೊವಡು** 'ತೊಗಟು' ನೋ.

**ತೊವರ್$_1$** (ಕ್ರಿ). ಒಗರಾಗು ; ಒಗಚಾಗು : ಎಸಟ್ಟಸಗಿ ಮುಗುಳ್ಗೆ ನಕ್ಕು ತೋಱಿ ಮದಾಳಿಗಳ್ ನುಸುಳೆ ತೊವರ್ತಿರೆ ಕಂಪಲರ್ಚುವನಂಬುಜ ಪ್ರಸರಮನಾಳೆ ಬೆಳಪ್ಪನೀಗೆ ವರಂಗಳಂ (ಕಾವ್ಯಾವ.೯೧೭). 'ತೊವರ್ಚು' ಪರಾ. [ ದೇ.॥ ತಮಿ. ತುವರ್ ]

**ತೊವರ್$_2$**, ಚೊಗರು$_1$, ತೊಗರ್, ತೊಗರಿ$_2$, ತೊಗರು$_2$, ತೊವರು$_1$ (ನಾ). ರುಚಿಯಲ್ಲಿ ಒಂದು ಬಗೆ ; ಷಡ್ರಸಗಳಲ್ಲಿ ಒಂದು ; ಒಗರು ; ಒಗಚು : ಆವುದೊಂದು ಭೂಮಿಯಯನಗುಬಲ್ ಆ ಪುಟ್ಟಿದ ಮಣ್ ಕಪ್ಪಾಗಿರಲ್ ಅಲ್ಲಿ ಪುಟ್ಟಿದ ಉದಕಂ ತೊವರ[ಪಾಠಾಂ. ಒಗರ, ತೊಗರ] ಪ್ಪುದು (ಲೋಕೋಪ. ೫-೮ ಟೀಕು); ಉದಧಿಗಳೀಟುಮೆಯ್ದೆ ತೊವರಾದುವು ದಾನಜಲೌಘದಿಂ (ಸೂಕ್ತಿಸು. ೦-೪); ಪುಳಿ ಮಧುರಮುಪ್ಪು ತಿಕ್ತಂಗಳೆಂದು ತೊವರೆಂದು ಕಟುಕಮೆಂದಪ್ಪುವು . . . ಕುಡುಗೆ ಹರಿಗೆ ಪಾನಾದಿಗಳಂ (ಅಶ್ವಶಾ. ೭-೮೦). ಚೊಗರು$_1$ : ಆರೋಗಣೆಯ ವಿವರಗಳಲ್ಲಿ :–ಇನಿದು, ಸಿಹಿ, ಕಹಿ, ಕೈಪೆ, ಪುಳಿ, ಉಪ್ಪು, ಚೊಗರು (ಭಾಷಾಶಾ. ೨೫೭) ; ವರ್ಜ್ಯ – ಮಲಬದ್ಧತೆಯಾಗುವ ಚೊಗರುಳ್ಳ ವಸ್ತುಗಳು (ಮನಮ. ೯೪). ತೊಗರ್: ಅಣಲೆಗೆ ತೊಗರೆಂತು ಸಹಜಂ ಸುಂಟಿಗೆ ಕಾರವೆಂತು ಸಹಜಂ ತಾನಂತೆ ... ದೂಷಣಮುಂ ಔದಾಸೀನ್ಯಮುಂ ನರಕದುಃಖದೆಡೆಗೆ ಸಲ್ವ ಪುರುಷಂಗೆ ಸಹಜಮಾಗಿರ್ಕುಂ (ಧರ್ಮಾಮೃ. ೪-೪೦); ಪುಳಿ ಮಧುರಮುಪ್ಪು ತಿಕ್ತಂಗಳು ತೊಗರೆಂದುಂ (ಅಶ್ವವೈ. ೯-೯೩). ತೊಗರಿ$_2$ : "ಕಷಾಯ, ತುವರ = ತೊಗರಿ" (ನಾಚಿರಾ. ೬). ತೊಗರು$_2$: ವಾತದಿಂದ ಹುಟ್ಟಿದ ಅರೋಚಕದಲ್ಲಿ ಬಾಯಿ ತೊಗರಾಗಿ ಇಹುದು (ವೈದ್ಯಸಾ. I, ೧೭೭) ; ನೇರಿಲ ಚಿಗರು ಮಾವಿನ ಚಿಗರು ಆದರ ತೊಗರು (ವಾತ್ಸಾಚಿ. ೩೭-೬). ತೊವರು$_1$ : ಸಿಹಿಯುಂ ಕಾರಮುಮಾಮ್ಲಮುಂ ತೊವರುಮುಪ್ಪುಂ ಕೈಪೆಯುಂ ಬೇಱಿವೇಱಿ ಹಿತಂದೋರ್ಕುಂ (ರತ್ನಾಶ. ೫೦).

**ತೊವರ್ತೊವರ್** (ದ್ವಿರುಕ್ತಿ) : ಊದಿದುದು ತನ್ನೆಲರ್ ಕಳನಾದುದು ಸಾದರದೊಳೊಂದಿ ನೆಗಟ್ದುದು ಪದ್ಮಾಮೋದವಿನಿಸುಂ ತೊವರ್ತೊವರಾದುದು ಕೂಗಿದುವು ತಾಮ್ರಚೂಡಕುಳಂಗಳ್ (ಕಾವ್ಯಾವ. ೩೯೨). 'ಒಗರ್' ಪರಾ.

[ ದೇ.॥ ತಮಿ. ತುವರ್ ; ತುಳು. ಚೊಗರ್ ; ತೆಲು. ತೊಗರ, ತೊವರ ; ಕುಇ. ತೊರ್ಪ./ಸಂ. ತುವರ ]

**ತೊವರಮಣ್ಣು** 'ತುವರಮಣ್ಣು' ನೋ.

**ತೊವರಿ**, ತೊಗರಿ$_1$, ತೊವರು$_2$ (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ದ್ವಿದಳಧಾನ್ಯ : "ಆಢಕಿಯೆನಲ್ ತೊವ (ಗ) ರಿ"

(ಮಂಗರಾ. ೧೧೧-೫) ; "ತೊವರಿಯೆಂದು ತೊಗರಿ" (ಕಸಸಾ. ೨೮-೫೮೩) ; ತೊವರಿ ಗೋದುವೆ ಜೋಳಂ . . . ಎಂಬಿವಱೊಳೊಂದಱೊಳಾದ ತೈಲಮಂ. . . . ತಂದು ಪೂಸುವುದು (ಲೋಕೋ. ಪ. ೯-೧೦೭) ; ಪಟಿಗಟವೆಯು ಕೊಟ್ ತಿವ್ರಡುಗಳೆದ ತೊವರಿಯು ತೊದೆ (ಕಾವ್ಯಾ.ಪ. ೨೪೧) ; (ಸೂಕ್ತಿಸು. ೧೧-೮೩ ನೋ) ; ಒಡಗೂಡಿ ಬಿಲ್ವಮೂಲಂ ಕಡಲೆ ತೊವರಿ ಶುಂಠಿ ಎಂಬಿವಂ ಗಂಜಿಗೆ ಮೇಣ್ ಕುಡಿವಾಗಳ್ (ಕಲ್ಯಾ.ಕಾ. ೩-೨೭). ೨. ಸುಗಂಧಯುಕ್ತವಾದ ಭೂಮಿ : (+).

**ತೊಗರಿ₁** : ೧. "ಆಢಕೀ, ತುವರೀ . . . ಈ ೨ ತೊಗರಿ" (ಹಲಾಯು. ೯೭-೪೩೦); ದೇವಗ್ರ್ಗೆ . . . . ಕಡಲೆ ತೊಗರಿಯಾದಿಯಾಗಿ ಸಲುವುದು (ಎಕ್. VIII, ಸೊರಬ. ೩೨೮-೭೨ ; 1159) ; ಮೂವತ್ತೆತ್ತಿನೊಳು ತೊಗರಿ ಜೋಳದಕ್ಕಿ ಕಡಲೆಗಳನೊಡತೀವಿ ಕೊಡುವುದೆನುತ್ತಂದು ಶಿವ ಪ್ರೇರಣೆಯಿಂ ನುಡಿಯೆ (ಬಸರ. ೧೨-೪೮) ; ಸೂಪಕರ್ವಂಕೆ ತೊಗರಿ ಹೆಸಱಾ ಚಣಾಖ್ಯವಿನ್ನೋಪುರ್ದಿನುತ್ತಮಂ ಹೊಟ್ಟ ಕಳದಿರ್ದವಿನ್ನಾ ಪರಿಯ ಮಧ್ಯಮಂ (ವೀಕ್ಷಿಪು. ೭-೧೧-೭೪) ; ಮಿಸುನಿಯ ವಣ್ಣದ ತೊಗರಿಯ ಬೇಳೆ (ಕಂನವಿ. ೮-೮೭) ; ತೊಗರಿ ಬಿತ್ತಿ ಅವರೆ ಕೊಯ್ದರು (ಗಾದೆ). **ತೊವರು₂** : ೧. ಬೀಜದ ಒಳಗಿನ ತಿರುಳಂ ಅರೆದು ಶ್ರೀಗಂಧದಲ್ಲಿ ಹುದುಗಿಸಿ ಅವರೇ ತೊವರಷ್ಟು ನುಂಗಲು ಛಳಿ, ತಾಪಜ್ವರ ಸಹ ಮಾಣ್ಗುಂ (ವಿಷ್ಮವಿ. ೧).

[ ದೇ.॥ ತಮಿ. ತುವರೈ ; ಮಲ. ತುವರ ; ತುಳು. ತೊಗರಿ, ತೊಗರೆ, ತೊಗೊರಿ ; ತೆಲು. ತೊವರಿ, ತೊಗರಿ ; ಕೊಲಾ. ತೊಗರ್ ; ನಾಯ್ಕಿ. ತೊಗರಿ./ಸಂ. ತುವರೀ ]

**ತೊವರು₁** 'ತೊವರ್₂' ನೋ.

**ತೊವರು₂** 'ತೊವರಿ' ನೋ.

**ತೊವರೇಱು** (ಕ್ರಿ). ಒಗರಾಗು : ಮಾಂಗೊನರಂ ನಸುಗರ್ಚಿ ಸೊರ್ಕಿನಿಂ ತನು ದಳವೇಱ ಕಂಠವಿವರಂ ತೊವರೇಱ ಪಟುತ್ವವೇಱ ಕಾಮನ ನನೆಯಂಬುಗಳ್ ವಿರಹಿವ್ಯಂದದ ಮೆಲ್ಲೆರ್ದೆಯಂ ಪುಗಲ್ . . . ಪುಗಲ್ ಪುಗಲೆಂದುದು ಕೋಕಿಲವ್ರಜಂ (ಜಗವಿ. ೧೪-೩೪).

[ ತೊವರ್₂ + ಏಱು₁ (<ಏಱ್₁) ]

**ತೊವರ್ಗಂಪು** (ನಾ). ಒಗರಾದ ಸುವಾಸನೆ,-ಸುಗಂಧ : ಅಲರ್ವೀ ವನಜವನಂಗಳ ತೊವರ್ಗಂಪನಾಂಪ ಬಗೆ ಬಳೆಯೆ ಮೊರೆವುವಳಿಗಳ ಬಳಗಂ (ಆದಿಪು. ೧೨-೫೦); ತೊವರ್ಗಂಪಂ ತನಿಗಂಪನೇಕೆ ಕನರ್ಗಂಪಂ ಪೊತ್ತುವೇ ಕೋರಕದ್ರುವಮುಂ ತನ್ನಲರ್ಗೊಂಚಲುಂ ಮಿಡಿಗಳುಂ ತಮ್ಮತ್ತಲೇಂ ಕೂಗಿ ನೋಡುವುವೇ ಕೋಗಿಲೆಯೆಂದು ಸೊಕ್ಕಿದಳಿಯೆಂದೋವೆಂದು ಪೋ ಬಂದು ಮೇವುವೊ ಮಾವಲ್ಲದವೆಂಬವೋಲ್ ಬಳೆದುದೆತ್ತಂ ಕೀರಕೋಳಾ ಹಳಂ (ಲೀಲಾವ. ೧೩-೩೯). [ ತೊವರ್₂ + ಕಂಪು ]

**ತೊವರ್ಚು** (ಕ್ರಿ). ಒಗರಾಗು ; ಒಗಚಾಗು : ಅಸುಗೆಯ ನಾಗಕೇಸರದ ಬಲ್ಮುಗುಳಂ ಬಿರಿಯೊತ್ತಿ ತುಂಬಿ ಚುಂಬಿಸೆ ರಜದಿಂ ತೊವರ್ಚಿದ ಕೊರಳ್ ಸವಿಯಂ ತರೆ ಪಾಡಿ (ಶಾಂತಿಪು. ೭-೫೩). [ ತೊವರ್₁ + - ಚು₁ ]

**ತೊವಲ್₁** (ಕ್ರಿ). ೧. ಚಿಗುರು ; ಪಲ್ಲವಿಸು : ಪರಿವ ತೊಱೆಗಳುಮಂ ತೊವಲ್ತು ಸೊಗಯಿಸುವಡವಿಗಳುಮಂ . . . ಕಂಡು ತಮ್ಮ ಕಣ್ಗಂ ಮನಕಂ ಸೊಗಯಿಸೆ (ಪಂಪಭಾ. ೭-೨೫ ವ) ; ಎಲೆವಳ್ಳಿ ತೊವಲ್ತೆಲೆವಳ್ಳಿ ನಗಂ ಕೃತಕನಗಂ ಪಲಸು ಬಕ್ಕೆವಲಸಾ ಬನದೊಳ್ (ಜಗವಿ. ೬-೧೪). ೨. ತುಂಬು ; ಆವರಿಸು : ವಿಳಾಸಿನೀಘನಸ್ತನಶತಪತ್ರಪತ್ರಶತದಿಂದೆ ತೊವಲ್ತು . . . ಅಗರುಧೂಮಲತಾವಳಿಯಿಂ ಮುಡಲ್ತು ಮೆಲ್ಲನೆ ಸುಱಿದತ್ತು ಸದ್ಮಸರಸೀಶರಶೀಕರಮಂದಮಾರುತಂ (ಮಲ್ಲಿಪು. ೭-೪೮).

[ ದೇ.॥ ತಮಿ. ತುವಲ್ ]

**ತೊವಲ್₂**, ತೋಲ್₂ (ನಾ). ಎಳೆದಳಿರು; ಚಿಗುರು: "ಎಳೆದಳಿರ್ವೆಸರದು ತೊವಲೆ[ಪಾಠಾಂ.ರೆ]ನೆ (ಚತುನಿ.೧೧೪) ; ಸೋಮಶರ್ಮಭಟ್ಟಂ ಪಿರಿದೊಂದು ತೊವಲಂ ಪಿಡಿದಬ್ರಹ್ಮಣ್ಯಂ ಭೋ ಅಬ್ರಹ್ಮಣ್ಯಂ ಭೋಎಂದಱುತ್ತ . . . ಅರಮನೆಗೆ ಪೊಗಿ (ವಡ್ಡಾರಾ. ೨೩-೨); ಇದಂ ನೀನವಧಾರಿಸೆಂದು ತೊವಲಂ ಮುಂದಿಕ್ಕಿದಂ ಭೂಪನಾ (ಸುಕುಮಾ. ೭-೪೩) ; ಉಱಿ ಕಾವ ಸೂರ್ಯರಶ್ಮಿಗೆ ಮೊಱೆಯಿಡಲೆಂದೆತ್ತಿ ಪಿಡಿದ ತೊವಲೆಂಬಿನೆಗಂ ತುಱುಗಿ ದರ್ವವರೆಗೊಂಬಂ ಮಂಱಿದು ನೆಟಲ್ಮಾಡಿಕೊಂಡು ನಡೆವರ್ ಪಥಿಕರ್ (ಜಗವಿ. ೧೭-೬೯) ; ತೆಗೆದು ನನೆಗೊಯ್ದು ಬಿಡೆ ಮೇಲೊಗೆವೆಳದಳಿ ರ್ಗೊಂಬು ಪೋಲ್ತುದಾ ಪೂವಿನ ಸೂಱಗೆ ತೊವಲಂ ಪಿಡಿದು ಮದಾಳಿ ಗಳುಲಿಯಿಂ ಪುಯ್ಯಲಿಡುವಶೋಕೆಯು ಕೈಯಂ (ಚಂದ್ರಪು. ೭-೧೧೦) ; ತಮ್ಮ ಕರಾಗ್ರದೊಳ್ತೊವಲನಾಂತು ನೆಟಲ್ಗೆ ತೊಟಲ್ದವಾನೆಗಳ್ (ಬಾಧಪು. ೪-೮೨) ; ಕಲಶದ ತೊವರಂ [ಲಂ] ರತ್ನಾವಲಿಯೊಳ್ ಸಮ್ಮಿಶ್ರ ಪುಷ್ಪಮಂ ಮಸ್ತಕದೊಳ್ ತಳೆದಲ್ಲಿ ಬಣ್ಣಪುರದೊಳ್ ಬಟಿದು ಬಟಿಕಿಕ್ಕಿ ಮೇಖಲಾಲಂಕೃತಿಯಂ . . . ಕಟ್ಟುಗೆ ಪಟ್ಟವ(ಂ) ಲಲಾಟಪಟ್ಟಾಂತರ ದೊಳ್ (ಅಶ್ವಶಾ. ೮-೧೫). **ತೋಲ್₂**. 'ತೋಲ್ವಿಡಿ' ಪರಾ.

**ತೊವಲನಿಕ್ಕು** = ತೊವಲಿಕ್ಕು ೨ : ಬೇಂಟೆಯಾತಂಗೆ ಮೃಗ ವ್ಯಾಯಾಮಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು ತೊವಲನಿಕ್ಕೆಂದು ಮುಂದೆ ಪೇಟ್ದಿಟ್ಟ . . . ಬೇಂಟೆಗೆ ಪೊಱಮಟ್ಟು (ಪಂಪಭಾ. ೫-೪೭ ವ).

[ <ತೊವಲ್₁ ]

**ತೊವಲ್₃** 'ತೋಲ್₁' ನೋ.

**ತೊವಲಿಕ್ಕು** (ಕ್ರಿ). ೧. ಪಲ್ಲವಿಸು ; ಚಿಗುರು : ತೊವಲಿಕ್ಕಿದ ಪರ್ವಟು ಬೇಗೆಗಿರ್ಚಿನೊಳ್ ಬೇವವೊಲಿರ್ದುವಿರ್ವಲದ ಬಿಲ್ಲಣೆಗಳ್ ರಣರಂಗ ಭೂಮಿಯೊಳ್ (ಪಂಪಾವಾ. ೧೩-೪೮). ೨. ಹಳ್ಳ ಕಾಣದಂತೆ ಮೇಲೆ ಸೊಪ್ಪು ಮುಚ್ಚು : ಆಡಲಾಡಿಸಲ್ ಪಾಱಿಯಂ ನಿಱಿಸಲುಂ ಪರಿಗೊಳಲ್ ತೊವಲಿಕ್ಕಲೊಳಗಂ ಬರಲ್ . . . ಜಾಣಿಂ ನೀರ್ದಾಣ ಮೆಂದೆಡೆಯಱಿದುಂ ಮಾಡಲ್ ಮಾಡಿಸಲ್ ಪಡೆ ಮೆಚ್ಚೆ ನೀಂ ಬಲ್ಲೆ (ಪಂಪಭಾ. ೫-೪೧) ; "ಬಲೆ ಬೀಸು" (ನಾಡೋಜ. ೩೦೪).

[ ತೊವಲ್₂ + ಇಕ್ಕು ]

**ತೊವಲು** 'ತೋಲ್₁' ನೋ.

**ತೊವಲುಡಿಗೆ** 'ತೊವಲುಡುಗೆ' ನೋ.

**ತೊವಲುಡುಗೆ**, ತೊವಲುಡಿಗೆ (ನಾ). ಚರ್ಮದ ಉಡುಗೆ ; ತೊಗಲಿ ನಿಂದ ಮಾಡಿದ ವಸ್ತ್ರ : ಬರಿ ತೊವಲುಡುಗೆಯುವರ ನಾಡೊಂದಿದ್ದಿತು (ಬಿದುರಿ. ೭೭). **ತೊವಲುಡಿಗೆ** : ನಲಿದು ಬಿಗಿದುಟ್ಟ ತೊವ [ಪಾಠಾಂ. ಗ] ಲುಡಿಗೆಯಲಗುಗಳಸೆಯೆ (ಕಣ್ಣರ. ದೇ. ೧೨೭-೧೨).

[ ತೊವಲ್₃ (< ತೋಲ್₁) + ಉಡುಗೆ ]

**ತೊವಲುಡೆ** 'ತೋಲುಡೆ' ನೋ.

**ತೊವಲುಡೆಯ** (ನಾ). ಚರ್ಮವನ್ನು ಬಟ್ಟೆಯಾಗಿ ಧರಿಸಿದವನು ; ಚರ್ಮಾಂಬರಧಾರಿ ; ಶಿವ : "ಈಶ್ವರಂದೊವಲುಡಿ[ಡೆ]ಯನೆಂದೆ ನಲ್" (ಕಶರ. ೫೩) ; ನಡುವಿನೊಳುಟ್ಟ ವಲ್ಕಲಂ ತೊವಲುಡೆಯನ ಕೃತ್ತಿವಾಸಂಬೋಲ್ ಮನೋಜ್ಞಮಾಗಿರೆ (ರಾಮಾಶ್ವ. ೪೦-೨೯).

[ ತೊವಲುಡೆ (<ತೋಲುಡೆ) + - ಅ₇ ]

**ತೊವಲ್ಗೊಳ್** (ಕ್ರಿ). = ತೊವಲ್ವಿಡಿ : ಪೊಂಗಿ ಕಡಂಗಿ ಬೀರದೊಳೆ ಬೀಗುವ ನಿನ್ನಣುಗಾಳೆ ನೋಡೆ ನಿನ್ನಂಗನೆಯರ್ ತೊವಲ್ಗೊಳೆ ಭಯಂ ಗೊಳೆ ಕೋಡಗಗಟ್ಟುಗಟ್ಟೆ ಚಿತ್ರಾಂಗದನುಯ್ಯೆ (ಪಂಪಭಾ. ೯-೫೪) ; "ತೊವಲ್ಗೊಳೆ = ಕೈಯಲ್ಲಿ ಚಿಗುರನ್ನು ಹಿಡಿದಿರಲು" (ಪಂಪದೀ. ೩೨೩).

[ ತೊವಲ್₂ + ಕೊಳ್₁ ]

**ತೊವಲ್ವಲೆ** (ನಾ). ಚರ್ಮದಿಂದ ಮಾಡಿದ ಒಂದು ಬಗೆಯ ಬಲೆ: **ಪುಲಿವಲೆ** ಕೊಂಬು ಕಣ್ಣೆ ಮಿಡಿಗಣ್ಣು **ತೊವಲ್ವಲೆ** . . . ಎಂಬಿನಿತಂ **ಪೊಟಿಗಟ್ಟಿ** (ದಶಕು. ೨-೧೧೫). [ ತೊವಲ್$_3$ (< ತೋಲ್$_1$) + ಬಲೆ$_1$ ]

**ತೊವಲ್ವಿಡಿ, ತೋಲ್ವಿಡಿ** (ಕ್ರಿ). (ಶರಣಾಗತಿಯಾಗಿರುವುದನ್ನು ಸೂಚಿಸಲು) ಚಿಗುರನ್ನು ಕೈಯಲ್ಲಿ ಹಿಡಿ; (ಸೋಲನ್ನೊಪ್ಪಿರುವುದರ ಸಂಕೇತವಾಗಿ) ತಳಿರನ್ನು ಕೈಯಲ್ಲಿ ಹಿಡಿ; ಮರೆಹೊಗು: ಕಾಯದೆ ಕಾಮನಾರ್ದಿಸೆ **ತೊವಲ್ವಿಡಿ**ವಂತೆಡಗಯ್ಯೊಳೊಪ್ಪೆ ತೋರ್ಪಾ ಯೆಲೆ (ಪಂಪಭಾ. ೪-೩೭); ಸರಿದ್ವಲ್ಲಭಂ ಹರಿನೀಳಚ್ಛವಿಯಂ **ತೊವಲ್ವಿ ಡಿ**ದು ವೀಚೀಹಸ್ತದೊಳ್ ಘೂರ್ಣಿತಾತುರನಿರ್ಘೋಷಮುಂಣ್ಮೆ ಪುಯ್ಯ ಲಿಡುವಂತಿರ್ದತ್ತು (ಮಲ್ಲಿಪು. ೧೨-೧೩೨). **ತೋಲ್ವಿಡಿ**: **ತೋಲ್ವಿಡಿ**ದು ಸಾಱ **ವೇಟ್ಟ**ಪೆಂ . . . ನೀಂ ಬಲ್ವಿಡಿವಿಡಿ ಜನಪದಾಬ್ಜಯುಗವಂ **ಬಗೆಯೊಳ್** (ಉಸಾರ. ೫೭). [ ತೊವಲ್$_2$ + ಪಿಡಿ$_1$ ]

**ತೊವಲ್ವೆರಸು** (ಅ). ಚಿಗುರು ಸಹಿತವಾಗಿ; ಎಲೆಗಳಿಂದ ಕೂಡಿ: ಪಣ್ವೆರಸು ನಟ್ಟ ಮೈಂದವಾಟಿಗಳುಮಂ **ತೊವಲ್ವೆರಸು** ನಟ್ಟಾಲಂ ಗಳುಮಂ (ಪಂಪಭಾ. ೫-೪೭ ವ). [ ತೊವಲ್$_2$ + ಬೆರಸು$_3$ ]

**ತೊವಲ್ವೊದೆಯ** (ನಾ). ೧. ಚರ್ಮವನ್ನು ಹೊದೆದವನು. ೨. ಸಿಪ್ಪೆ ಯಿಂದ ಆವರಿಸಿರುವುದು. ೧, ೨: ತಿಸುಳಿಯಂತೆ ಮುಕ್ಕಣ್ಣನುಂ **ತೊವಲ್ವೊದೆಯ**ನುಂ ಮುಗಿಲಂತೆ ನೀರೊಡಲನುಮೆನಿಪ ತೇಂಗಾಯುಂ . . . ಪುರಂ ಕಣ್ಗೆಂಬಾದುದು (ರಾಮಾಶ್ವ. ೧೦೩-೧೭).
[ ತೊವಲ್$_3$ (< ತೋಲ್$_1$) + ಪೊದೆ$_2$ + - ಅ$_7$ ]

**ತೊವೆ** 'ತೊವ್ವೆ' ನೋ.

**ತೊವ್ವೆ**, ತೊಗೆ$_1$, ತೊಯಿ, ತೊಯೆ, ತೊವೆ, ತೋಯ$_1$, ತೋಯಿ, ತೋಯೆ, ತೋವೆ (ನಾ). ತೊಗರಿ, ಅವರೆ ಮುಂತಾದ ಬೇಳೆ ಗಳನ್ನು ಬೇಯಿಸಿ ತಯಾರು ಮಾಡುವ ಒಂದು ಬಗೆಯ ಮೇಲೋ ಗರ: ಹುಲಿಗಿಲ ಬೇಳೆಗಳಂ ನೇಱಿಲ ಬೀಜಂ ... **ತೊವ್ವೆ**ಯುಡೆ ಸವಿ ವಡೆಗುಂ (ಲೋಕೋಪ. ೮-೨೩); ಕೂಟುಂ **ತೊವ್ವೆ**ಯುಂ ಮೊದಲಾದುವ ನಟ್ಟಪರೆಂಬುದು ವ್ಯವಹಾರದೊಳಪ್ಪ ಸತ್ಕಮೆಂಬುದು (ಪಸಾರ. ೫೯೦); ವರ ಸಣ್ಣಕ್ಕಿಯೋಗರ **ತೊವ್ವೆ** ಪಳದ್ಯವ ತಱತಱದಲಿ ಬಡಿಸಿದರು(ಮೋಹತ. ೩-೫೦). **ತೊಗೆ$_1$**: ತೊಗೆ ತೊಗೆಯ ರಸ ಪುಣುಗುರಾಜಾನ್ನಮಿಶ್ರಿತದ ... ನೈವೇದ್ಯಮಂ ಧಗಧಗಿಪ ಕಲಧೌತಕನಕಹರಿವಾಣದೊಳು ತಂದಿಡಲು (ಪ್ರಭುಪು. ೯-೫೭); ಜೋಳದ ಬೋನಕ್ಕೆ ಬೇಳೆಯ **ತೊಗೆ**ಯಾಗಿ **ಕಾಳೆಮ್ಮೆ** ಕಱೆದ ಹಯನಾಗಿ (ಸರ್ವಜ್ಞ. ೧೬೧೭); ಕಡುಬ್ಬುಯ್ದು ಕಡಲೆ **ತೊಗೆ** ಮಾಡಿ ತುಪ್ಪ ಹಾಕಿ ಕೊಡದೋಳಿಗಿಕ್ಕೆ ಹದಿನಾರ (ನಾಪಡ. ೭೭). **ತೊಯಿ**: ಅನ್ನ, ಉದ್ದಿನ **ತೊಯಿ**, ಕಡುಬು, ಹಾಲು, ತುಪ್ಪ, ಮೊಸರು ಸಹ ಬಲಿಯಂ ತುಂಬಿ (ಬಾಲಚಿ. ೧೨೭-೩); ತೊವರಿಯ ಹಳಚಗಿರುವ **ತೊಯಿ** ರಸ ಹುಣಿಸೆಪಳದ್ಯವ ಎಳೆವೆಣ್ಣುಗಳಿಕ್ಕಿದರು (ಜ್ಞಾನಜ. ೩೯-೧೩೭). **ತೊಯೆ**: ಮಠದಲು ನಡೆವ ಛತ್ರ ಅಯಿದು ಪರಿ ಶಾಕ **ತೊಯೆ** ತುಪ್ಪ ವಿಳಿಯ ಸಹಿತ ಅಟ್ಟುವ ಬ್ರಾಹ್ಮಣ ೧ (ಸಾಇಇ. IX-ii, ೪೫೦-೯; 1447); ಸಣ್ಣಕ್ಕಿಯೋಗರಂ ಹೆಸಱ **ತೊಯೆ** ಹೊಚ್ಚಹೊಸ ಬೆಣ್ಣೆ ಕಾಸಿದ ತುಪ್ಪ (ಸಮ್ಯಕ್ತಾ. ೭-೨೪); **ತೊವೆ**: ಉಪಾಧ್ಯಾಯಂಗೆ ಕಟಮೆಯ ಕೂಟುಂ ತುಪ್ಪಮಂ **ತೊವೆ**ಯು [ಪಾಠಾಂ. ತೋಯು] ಮ ನು ಣ ಲ್ಕೊ ಟ್ಟು ಕುಮಾರನನೋದಿಸುಗೆಂದೋಲೆಯನಟ್ಟಿದೊಡೆ (ವಡ್ಡಾರಾ. ೭೫-೧೫); ಸಂದ ತಿರಿಕಂಗೆ **ತೊವೆ** ತುಪ್ಪಂ ದೊರೆಕೊಳಲುಣ್ಮೆ ನಲಿವ ತೆಱದಿಂ (ಧರ್ಮಾಮೃ. ೯-೩೦); ತಿಪುಡುಗಳೆದ ತೊವರಿಯ **ತೊವೆ** ಕಾಯ್ದಿಟಿಪಿದ ತುಪ್ಪಂ ಕೋಡುವ ಕಟಲಲ್ಲದೆ ದಿವ್ಯಭೋಜನಂ ವೆಱತುಂಟೇ (ಕಾವ್ಯಾವ. ೨೪೧); ಸುವರ್ಣದ ಸಟ್ಟುಗದಿಂ **ತೊವೆ**ಯೊಳ್ ಕಲಸಿದ ಕಟಮೆಯ ಕೂಟುಂ ತುಪ್ಪಮುಂ ನೀಡಿರೆ (ಪುಣ್ಯಾಸ್ರ. ೯-೧೭ ವ); ಪ್ರಸಾದ **ತೊವೆ** ಮೂರು ಮೇಲೋಗರ (ಎಕ. VIII, ತೀರ್ಥಹ. ೧೫೪-೧೪; ಸು. 1400). **ತೋಯ**: ಉಂಡಹೆನೆಂಬಲ್ಲಿ ಅನ್ನವನಿಕ್ಕದೆ ಸತ್ತ್ರ ಮಂತ್ರ **ಅಕ್ಕಿ**ಯು ಹೇಱ ಮಸ್ತಕದಲ್ಲಿರಿಸಿ ಘಟ್ಟಿತುಪ್ಪ **ತೋಯ**ುವ [ಪಾಠಾಂ. ತುಯ್ಯಲ]ನುಣ್ಣೆಂದು ಬಿಕ್ಕಿಬಿಕ್ಕಳುವನಂತೆ (ಉಶಿವ. ೩೩-೩೫); ಹೆಸಱು **ತೋಯ** ಪಳದ್ಯ (ಬೊಂಕಣಾ. ೧೯೪೦, ಕುಮಟ. ೦೦೩-೨೬; 1475). **ತೋಯಿ**: ಉದ್ದಿನ **ತೋಯಿ**, ಅಲಸಂದೆಯ ಗುಗ್ಗುರಿ . . . ಇವಂ ಮಂತ್ರಸಮನ್ವಿತವಾಗಿ . . . ಬಲಿಯಂ ಕೊಡಲು (ಬಾಲಚಿ. ೧೩೦-೩); ತುಪ್ಪ ಕುಡುತೆ ೨ಕ್ಕೆ ತಾರ ೫ **ತೋಯಿ** ತಾ ೨ ಶಾಕ ೫ (ಸೌಇಇ. ಮಂಗಳೂರು, ೪೭೫-೩೩; 1312). **ತೋಯೆ**: ಸಣ್ಣಗಳಮೆಯೋಗರ ತೊಗರಿಯ **ತೋಯೆ** ಬೆಣ್ಣೆಗಾಸಿದ ತುಪ್ಪವೆಱೆದು ಅಣ್ಣಂದಿರುಣಬನ್ನಿ ಯೆನಬೇಕಲ್ಲದೆ ಹೆಣ್ಣೆಗೆಂದವ್ವ ಕರೆವರೆ (ನೇಮಿಸಂ. ೨೩-೨೯); **ತೋಯೆ** ಪಾಯಸ ತುಪ್ಪ ಕಲಸು ಮೇಲೋಗರ ತಾಳಿಲ ಮುಂತಾದ ಪಂಚಭಕ್ಷಕ್ಕೆ (ಎಇ. VIII, ೦೩೨-೨೯; 1586) **ತೋವೆ**: ಸಣ್ಣ ಛತ್ರದೋಗರವಂ ಕಟ್ಟೆಸರ **ತೋವೆ**ಯುಂ ದೆಸೆದೆಸೆಗೆ ಪಸರಿಸುತ್ತ ಪರಿಮಳದಿಂ ಮಗಮಗಿಪ ಸದ್ಯ ಗಟ್ಟಿಮೊಸರು (ಧರ್ಮಪ. ೨-೫೭ ವ); ಹೆಸಱು **ತೋವೆ** ತುಪ್ಪ ನಾಲ್ಕು ಪರಿಯ ಶಾಕ ವೀಳೆಯ ಸಹ ಪ್ರತಿದಿನ ಒಂದಕ್ಕಂ ಕಾಟಿಹಣ ಒಂದಱ ಲೆಕ್ಕದಲು (ಸಾಇಇ. IX-ii, ४೧೭-೩೩; 1377); **ತೋವೆ**ಯಿಲ್ಲದ ಊಟ ಲೋವೆಯಿಲ್ಲದ ಮನೆಯು ನೋವನಱಿಯದಳ ಮನೆವಾರ್ತೆ ಸಿಹಿಯಱಿಸಿ ಬೇವು ತಿಂದಂತೆ (ಸರ್ವಜ್ಞ. ೦೭೧೯); ಮದುವೇ ಮನೇಲಿ **ತೋವೆ**ಗತ್ತರು ಗೌರೀಹಬ್ಬದಲ್ಲಿ ಕಾಯಿಗತ್ತರು (ಗಾದ).
[ ದೇ.II ತಮಿ. ತುವ್ವೈ; ತುಳು. ತೋವೆ ]

**ತೊಸಕ್** (ನಾ). ಒಂದು ಅನುಕರಣ ಶಬ್ದ: ಕೆಸರಿನಲ್ಲಿ **ತೊಸಕ್ಕೆಂ**ದು ಕಾಲು ಹೂತು ಹೋಯಿತು (ರೂಢಿ).

**ತೊಸಕ್ ತೊಸಕ್** (ದ್ವಿರುಕ್ತಿ): ದಾರಿಯ ಕೆಸರಿನಲ್ಲಿ ಗಾಡಿ **ತೊಸಕ್ ತೊಸಕ್** ಎಂದು ಶಬ್ದಮಾಡುತ್ತಾ ಹೋಯಿತು (ರೂಢಿ).

**ತೊಳಂಕು**, ತೊಳಕಂ, ಸೊಳಕ (ನಾ). ೧. ದೇಹದ ಮಧ್ಯಭಾಗ: ಭ್ರೂ ವಕ್ಷಂ ತೋಳ್ **ತೊಳಂಕು** ತೊಡೆಯೆಂಬೆಡೆಯೊಳ್ ಶೀವಿದುವು ಭೀಮನಿಸೆ ವಿಶಿಖಾವಲಿ ಮಾಱಾಂತರಾತಿಸೇನೆಯ ಮೆಯ್ಯೊಳ್ (ಕಾವ್ಯಾವ. ೦೭೯); ವಿಕಲ್ಪಬಿಂದುಗೆ – ಕದಂಪು, ಕದಪು . . . **ತೊಳಂಕು**, **ತೊಳಕು** (ಶಮದ. ೩೭ ಪ್ರಯೋ); "ಕೀಲಂ; ಸಂದಂ" (ಪ್ರಭಣ್ಣ). **ತೊಳಕು**: ೧. ಅಡಿ ತೊಡೆ ಪೊರ್ಕುಟುಂ ತೆಗಲೆ ಕೈಕಣಕಾಲ್ ಕೊರಲೆಂಬಿವುಂ ಬೆರಲ್ ನಡುವುರ ಬೆನ್ ಬಸಿಱ್ **ತೊಳಕು** ಕರ್ಚರೆ ಮುಯ್ಯು ಮುಸುಂಬು ಮೂಗಂ ಪೆರ್ದೊಡೆ ಕಟಿ ಮುಂಮುಡಂ ಪರಡು ಸಂದಿ ನೊಸಲ್ ಪಣೆ ಕಣ್ ಕದಂಪಿ ವೆಂಬೆಡೆಯನೆ ನಟ್ಟುವುರ್ಚಿದುವು ನೇರ್ದುವು ಸೀಳ್ದುವು ಪಾರ್ಥನಂಬುಗಳ್ (ಪಂಪಭಾ. ೧೧-೧೩೭). ೨. **ಸೊಳಕ**: ಸೊಂಟ; ನಡು: "ಸೊಳಕ = ಟೊಂಕ; ನಡು" (ಜಾನಕೋ. ೫೦). 'ಸೊಳಲು' ಪರಾ.

**ತೊಳಂಚಿ$_1$** 'ತೊಳಸಿ' ನೋ.

**ತೊಳಂಚಿ$_2$** 'ತೊಳಂಚೆ$_2$' ನೋ.

**ತೊಳಂಚೆ$_1$** 'ತೊಳಸಿ' ನೋ.

**ತೊಳಂಚೆ$_2$**, ತೊಳಂಚಿ$_2$ (ನಾ). ಒಂದು ಸ್ಥಳದ ಹೆಸರು; P ಈಗಿನ ಮಂಡ್ಯ ಜಿಲ್ಲೆಯ ತೊಣಚಿ ಎಂಬ ಊರು: ತೊ ಳ ಂ ಚಿ ಯ ದ ಸೀಮೆಯೊಳ್ ತಾಗಿ ಅರಸಿಯು (ಎಕ. XII, ನಂಜನ. ೨೬೯-೯೨; 904). **ತೊಳಂಚೆ$_2$**: ಹದಿನೆಣ್ಟು ವಿಷಯದ ದೇಸಿಯು ಕರೆದು ತೊಳಞ್ಚಿಯ ಅಜ್ಜಿಕಾಱದೇವರು ನಗರೀಸ್ವರದೇವರ್ಗ್ಗೆ ಕೊಟ್ಟ ಧರ್ಮಂ (ಮೈಆರಿ. ೧೯೧೫, ೨೦-೧೧; 1047). [ ? ]

**ತೊಳಕಲು** (ನಾ). (ಉಕ) ಮುಸುರೆನೀರು; ಕಲಗಚ್ಚು: ಈ ಹಸು ಕೊಡುವುದು ಒಂದು ಸಿದ್ದೆ ಹಾಲು, ಒಂದು ಉಸುರಿಗೆ ಮೂರು ಬಾನಿ ತೊಳಕಲನ್ನು ಕುಡಿಯುತ್ತದೆ (ರೂಢಿ).

[ ತೊಳ್₁ + – ಕಲ್ಲು₂ (< – ಕಲ್₄ ]

**ತೊಳಕು** 'ತೊಳಂಕು' ನೋ.

**ತೊಳಗು₁** (ಕ್ರಿ). ಹೊಳೆ; ತಳತಳಿಸು; ಪ್ರಕಾಶಿಸು; "ತೊಳಗು–ಕಾಂತೌ (ಪ್ರಕಾಶಿಸು)" (ಶಮಧಾ); ಅತಿಧವಳಜಳಧರಪಥಮಂ ತೊಳಪೆಳೆವೞಿಯಿಂ ಕಳೆದುವು ಮುಗಿಲು (ಕವಿರಾ. ೩–೧೬೭); ಶ್ರೀಗೆ ಕುಳಸದನ ಮನೆ ತೊ[ಪಾಠಾಂ. ಬೆ]ಳಪ ಮಣಿಭವನದೊಳ್ (ಆದಿಪು. ೭–೨೭ ರಗಳೆ); ತೊಳಗುವ ಪಾರಿಜಾತದಲರ್ಗೊಂಚಲಿನೊಪ್ಪುವ ಕರ್ಣಪೂರಮಂ ಕಳೆದೊಡಂ (ಕಾಂದಪೂ. ೮೩೩); ಭಾಸುರಮಾಯ್ತು ಜಿನೇಂದ್ರಾವಾಸಂ ತೊಳಗುವ ಸುವರ್ಣಕಳಶೋನ್ನತಿಯಿಂ (ಸೌಇಇ. XI-i, ೫೨–೪೫; 1007); ಮೃಗನೇತ್ರೆಯ ತೊಳಗುವ ಕಾಲುಗುಗ್ಗರ್ಗಳ ನೂಪುರದ ಪೊಳೆವ ವಜ್ರಂಗಳ ಕಾಂತಿಗಳಡರೆ (ಪಂಪ್ಲಪು. ೩–೯೫); ನಿಡುಗಣ್ ತೊಳಪ್ಪ ಕದಪುದ್ದ ನೊಸಲ್ . . . ಎಂಬಿವೞಿನೊಪ್ಪಿದುದಿರ್ದ ವನೇಚರೀಜನಂ (ಪುಷ್ಪಪು. ೫–೯೦).

**ತೊಳತೊಳಗು** (ದ್ವಿರುಕ್ತಿ): ರಕ್ತಾಶೋಕಪಲ್ಲವದಂತೆ ತೊಳತೊಳಗುವ . . . ಕರತಳಪಲ್ಲವಂಗಳ್ (ಪಂಪಭಾ. ೨–೪೯ ವ); ಅಂದೇ ಮಣಮಂದ ಪುತ್ರೂರ್ಗೆ ಕಳುಪುತ್ತಮಿರೆ . . . ತೊಳತೊಳಪ ದಿವ್ಯಾಭರಣಮಣಿಪ್ರಕರಮಂ (ನಂಬಿರ. ೫–೨೨); ಶಕ್ರನ ನೂಱುಮಡಿ ತೇಜದಲಿ ತೊಳ ತೊಳಗಿದನು ಕಲಿಪಾರ್ಥ (ಕುಮ್ಮಾಭಿ. ೭–೮೮). **ತೊಳಗಿ ಬೆಳಗು** = ಅತಿಶಯವಾಗಿ ಪ್ರಕಾಶಿಸು: ತಳತಳಸಿ ತೊಳಗಿ ಬೆಳಗುವ ಪಳಿಕಿನ ಸಱಿಯೊಂದು . . . ಒಪ್ಪಿ ತೋಱಿತ್ತಾಗಳ್ (ಕಮ್ಮಾಸಾ. ೧೧೫೦ ಬೂದ್ರಳ); ಮದನನ ಸೋದನದೇವಿಗೆಯೆನೆ ತೊಳಗಿ ಬೆಳಗಿದಂ ತುಹಿನಕರಂ (ಪಂಪಭಾ. ೮–೫೨); ಇನಬಿಂಬಂ ಕಣ್ಗಳುಂಬಂ ತೊಳಗಿ ಬೆಳಗೆ (ಕಾದಂಪೂ. ೩೫೪); ಪುಳಂವನೆಬ್ಬಿಸುತೆಯ್ತಪ್ಪನೆ ಜಯ ತೊಳಗಿ ಬೆಳಗುತ ನ್ನೊಳಗಿಪ್ಪನೆ ಜಯ (ಜಯುರ. ೮–೧೮); ಹಬ್ಬುಗೆಯ ಹದಿನಾಲ್ಕು ಲೋಕಂ ಮೊಬ್ಬುಗಳನೀಡಾಡಿ ನಭದೊಳಗೊಬ್ಬನೇ ರವಿ ತೊಳಗೆ ಬೆಳಗುನ ಪೋಲು (ಕುಮ್ಮಾಭಿ. ೮–೯). **ತೊಳತೊಳತೊಳಗು** = ಉಜ್ವಲವಾಗಿ ಬೆಳಗು; ಬಹಳ ಪ್ರಕಾಶಮಾನವಾಗಿ ಕಾಂತಿಯನ್ನು ಬೀರು: ದಿವ ತಳ್ಪತಳದ ಪೊರೆಯೊಳಗೆ ತೊಳತೊಳತೊಳಗಿ ಪೊಱಮಂಡುವೆಳನೇಸಱ ಬಳಗದ ಬೆಳಗನೊಳಕೊಂಡು (ಆದಿಪು. ೨–೬೦ ವ); ತೇಜಂ ಪಜ್ಜಳಿಸ ತಟತಟಿಸಿ ತೊಳತೊಳತೊಳಗಿದನಸ್ತಮಯಸಮಯದೊಳ್ ದಿನಪಸುತಂ (ಪಂಪಭಾ. ೧೨–೨೦೦); ತೊಳತೊಳತೊಳಗುವ ಬೆಳ್ದಿಂಗಳ ಪಕ್ಕದೆ ಪೊಳೆವ ರಶ್ಮಿಜಾಲಮಿದೆನೆ . . . ಅದೇನೊಪ್ಪಿದುವೊ ಧವಳಚಮರರುಹಂಗಳ್ (ಕಾದಂಉ. ೯೬); ಹಂಸನ ಚೆಲ್ವಂ ತಳೆದೇನೆಸೆದುವೊ ತೊಳತೊಳ ತೊಳಗುವ ಶಶಿಕಾಂತಮಣಿಕಮಂಡಲಂ ಕೆಲದೊಳ್ (ಚಂದ್ರಪು. ೯–೨೭); ಮೂಲಪ್ರಕೃತಿಗಳನ್ನುತ್ತರಿಸಿ ತೊಳತೊಳತೊಳಗೆ ಬೆಳಗುವ ಪರಮಶಿವನಲಿ ಸೆಣಸಿದೆವಲಾ (ಕುಮ್ಮಾಭಿ. ೩–೬೫).

[ ದೇ.॥ ತಮಿ. ಮಲ. ತುಳಙ್ಙು, ತುಳಕ್ಕು; ತೆಲು. ತುಲಕಿಂಚು ]

**ತೊಳಗು₂** (ನಾ). ಬೆಳಕು; ಕಾಂತಿ; ಪ್ರಕಾಶ: "ಕಳೆಗದಿರು . . . ತೊಳಗು ಬೆಳಗುಂ ಚವಿಯು ತಿಳಿವೆಸರ್ ಕಾಂತಿಗೆ" (ಶಬ್ದಮಂ. ೧೭); "ತೊಳಗೆನೆ ಮಿನುಗೆನೆ . . . ಕಾಂತಿಯೆನಿಕ್ಕುಂ" (ಕವಿಕಂ. ೧೦೦); "ತೊಳಗು ಕಾಂತಿ" (ಕಶರ. ೪೮). [ <ತೊಳಗು₁ ]

**ತೊಳಚಿ** 'ತೊಳಷಿ' ನೋ.

**ತೊಳಚೆ** 'ತೊಳಸಿ' ನೋ.

**ತೊಳಪ₁** (ನಾ). = ತೊಳಗು₂: "ತೊಳಗು . . . ತೊ[ಪಾಠಾಂ. ತ]ಳಪಂ. ಮಸೆ–ಈ ೧೪ ಕಾಂತಿ" (ಕಶಸಾ ೧೦-೨೦೨); "ಮಸೆಯೆಂದು ತೊಳಪ [ಪಾಠಾಂ. ತಳಪ, ತೊಳೆಪ]" (ಕಬ್ಬಿಕೈ. ೫೩). [ ತೊಳಗು₁ + – ಪ₂ ]

**ತೊಳಪ₂**, ತೊಳಹ₂ (ನಾ). ಒಂದು ಮನೆತನದ ಹೆಸರು ಮತ್ತು ಆ ಮನೆತನಕ್ಕೆ ಸೇರಿದವನು: ವಿನಯನಿಧಿ ರಾಜಗೌಡಿಗೆ ಮನುಚರಿತನೆನಿಪ್ಪ ತಿಪ್ಪಗೌಡಂಗಂ ಕೇತನು ಸಾತನೆಂಬ ಮಕ್ಕಳು ಜನಿಯಿಸಿದರು ತೊಳಪಕುಳಕೆ ತಿಳಕರೆನಲ್ಕಂ (ಕಇ I, ೨೪–೩೦; 1148). **ತೊಳಹ₂**: ಶಿವನಂದಯೋಗಿ ನಿವೇದ್ಯಶಾಲೆಯಂ ಮಾಡಿ[ ಸೂ ]ರಲಲಂ ತೊಳಹನೆ ಕಯ್ಯಲೂ . . . ಬದಿರೆ ಗದ್ದೆಯ ಮೇಲಿಕ್ಕಿದ ಪಾಣ್ಡ್ಯಗದ್ಯಾಣಂ (ಸೌಇಇ. VII. ೩೮೦–೦೩; 1140); ಶ್ರೀಶಂಕರನಾರಾಯಣದೇವರಿಂಗೆ ಮಾದಾಡಿ ತೊಳಹರು ಮಾಡಿ[ದ] ಧರ್ಮಪ್ರತಿಷ್ಠೆ (ಸೌಇಇ. IX-ii, ೪೨೫–೧೦; ಸು. 1401); ತುಳುವದ ತೊಳಹರ ಮೂಲವು ಬೆಳಗಾವಿನ ತೊಳಹರ ಕುಟುಂಬವೆಂಬುದಾಗಿ ಅನುಮಾನಿಸಲಾಗಿದೆ (ತುಳುನಾ. ೨೭೨).

**ತೊಳಹರ ಬಳಿ** = ತೊಳಪರ ವಂಶ: ತೊಳಹರ ಬಳಿಯ ಅನತಕ ಸೆಟ್ಟಿತಿಯ ಮಗ ಆದಿಸೆಟ್ಟಿ (ಪ್ಮೆಆರಿ. ೧೯೪೬, ೬–೨; 14ನೆಯ ಶತ); ತೊಳಹರ ಬಳಿಯ ಮಾಣಿಕ್ಕಸೆಟ್ಟಿಯ ಗಡಿಯಿಂದಂ ಬಡಗಲು (ಸೌಇಇ. IX-ii, ೪೬೪–೧೭; 1472); ತೊಳಹರ ಬಳಿಯ ಹಿರಿಯ ದೇವ[ಕ] ನಾಯಿಕಿತಿಯ ಮೊಂಮಗ (ಕಇ. I, ೬೭–೯; 1494). [ ? ]

**ತೊಳಪ₃** (ನಾ). (?): ಆ ಗ್ರಾಮದ ಸೀಮೆಯಿಂತೆ[ಂ]ದೊಡೆ ಆಲಿಗೊಂದದಿಂ . . . ತೊಳಪ ಬಳಪ ಬಳಿಯಳಱಿಯಿಂ . . . ಒಳಗುಳ್ಳ ಭೂಮಿ (ಇಆ. XVIII, ೩೦೨–೧೮; 11ನೆಯ ಶತ). [ ? ]

**ತೊಳಪು** (ನಾ). ಕಾಂತಿ; ಪ್ರಕಾಶ: "ತೊಳಪುಂ[ಪಾಠಾಂ. ತೊಳಪಂ, ತಳಪುಂ] ಮಿಱುಗು . . . ಡಾಳಂ ತಾವೆನಲ್ಕಾಂತಿಗೆ ಪೆಸರ್" (ಕಬ್ಬಿಕೈ. ೨೪); ತೊಳಪಿಂದೆ ರತ್ನವೊಪ್ಪೆ (ಸೌಇಇ. IX-i, ೨೯೮–೦೭; 1196); ಎಳವೆಣ್ಗಳ ಕಣ್ಬೆಳಗುಜ್ವಳಭಟರ ಕೃಪಾಣಲತೆಯ ತೊಳಪುಂ . . . ಪರ್ವಿತಾ ಸಭಾಮಂದಿರಮಂ (ಉದ್ಭಟ. ೨–೦೭); ಬಲು ಬೊಬ್ಬೆ ಸಿಡಿಲು ಖಡ್ಗಗಳ ತೊಳಪು ಮಿಂಚು ಸಲೆ ತುರಗದ ದನಿ ಗುಡುಗು (ಕಂನವಿ. ೧೮–೧೦೦).

[ ತೊಳಗು₁ + – ಪು₂ ]

**ತೊಳಮಿ**(ನಾ). (?):ಪಿತೃಕಳತ್ರ ಮಿತ್ರಜನಮಂ ಕಾಯ್ವಾಸ್ಕ ತಾಟ್ದಿಪ್ಪೊಡೀ ನಂಡಿಯಲ್ವೇಟ್ಕುಮೇ ಪೆಂಪನೊಪ್ಪ ಗುಣತೆ ತೊಳಮಿ ಕಿಟ್ಟಿ ಗೋಪಯ್ಯನಂ (ಎಕ. III, ಮೈಸೂರು, ೬–೧೦; ಸು. 750). [ ? ]

**ತೊಳಲ್₁** 'ತೊಟಲ್₁' ನೋ.

**ತೊಳಲ್₂** 'ತೊಟಲ್₂' ನೋ.

**ತೊಳಲಾಟ** (ನಾ). ೧. ಸಂತ್ರಾಟ; ಅಲೆದಾಟ; ೨. ಕಷ್ಟ; ಬವಣೆ; ಗೋಳು: ಈ ತೊಳಲಾಟದೊಳಗೆ . . . ಬಾಳುವೆಗಾಗಿ ಚಿಂತಿಸುತ್ತಾ ತಾಪಕ್ಕೊಳಗಾಗಿ (ಬಿದುರ. ೦೪೭); ಈ ಗೋಳಾಟವು ಅವಳ ಅಂತರಂಗದ ತೊಳಲಾಟವಾಗಿತ್ತು (ಭಾರತಿ. ೦೫೩); ಇನ್ನು ಈ ತೊಳಲಾಟ ಯಾಕೆ ? (ದೂಬಿಟ್ಟ. ೦೦೯); ಹೆಂಗಸರ ಈ ತೊಳಲಾಟ ಇದ್ದೇಇದೆ (ಸಮುಚೀ. ೯೩).

[ ತೊಳಲ್₁ (<ತೊಟಲ್₁) + ಆಟ ]

**ತೊಳಲಾಡು** (ಕ್ರಿ). ೧. ಸುತ್ತಾಡು; ಅಲೆದಾಡು: ದಿನವೆಲ್ಲಾ ಕಾಡಿನಲ್ಲಿ ತೊಳಲಾಡಿ ಅವರೆಲ್ಲಾ ಬಹಳ ಆಯಾಸಗೊಂಡರು (ರೂಢಿ). ೨. ಕಷ್ಟಪಡು; ತೊಂದರೆಪಡು; ಗೋಳಾಡು: ನಮ್ಮ ಕೈಯಾರ ಬಂಧನವನ್ನು ತೊಡಗಿಸಿ ಅದರಲ್ಲಿ ಸಿಕ್ಕಿ ತೊಳಲಾಡುವುದು ನನಗೆ ಸರ್ವಥಾ ಇಷ್ಟವಿಲ್ಲ (ಅನಾಮಿ. ೮೯); ಹಿಂದೂಸ್ಥಾನವೇ ದಾಸ್ಯದಲ್ಲಿ ತೊಳಲಾಡುವವರಿಗೆ ಚಟಗಳಿಗೆ ದಾಸನಾಗದ ಹಿಂದೀಯನು ಯಾರು (ಮುಂಗಾಪು. ೩೮).

[ ತೊಳಲ್₁ (<ತೊಟಲ್₁) + ಆಡು₁ ]

**ತೊಳಲಿಕಲ್ಲು** 'ತೊಟಲಿಕಲ್' ನೋ.

**ತೊಳಲಿಕೆ** 'ತೊಟಲ್ಕೆ' ನೋ.

**ತೊಳಲಿಚು** 'ತೊಟಲ್ಚು' ನೋ.

**ತೊಳಲಿಸು** (ಕ್ರಿ). ಸುತ್ತುವಂತೆ ಮಾಡು ; ತಿರುಗುವಂತೆ ಮಾಡು : ಬಂದುದೊಂದು ಸುಳಿಗಾಳಿ ಧರೆ ನಡಗುವಂತೆ . . . ತೊಳಲಿಸಿತಜಾಂಡ ಶತಕೋಟಿಗಳನು (ಜೈಮಿಭಾ. ೩೨-೩೯) ; ಅರ್ಜುನನನ್ನು ಸುಮ್ಮಸುಮ್ಮನೆ ಸೂಳಿಗೇರಿಯಲ್ಲಿ ತೊಳಲಿಸಿರುವುದೂ ಇದಕ್ಕೆ ನಿದರ್ಶನ (ಕಾವ್ಯಸ. ೮೧). [ ತೊಳಲ್$_1$ (<ತೊಟಲ್$_1$) + – ಇಸು$_3$ ]

**ತೊಳಲು$_1$** 'ತೊಟಲ್$_1$' ನೋ.

**ತೊಳಲು$_2$** (ನಾ). ಚಿಗುರು ; ತಳಿರು : ಆ ಗಾಳಿ ತಾನೆ ಬೀಸಣಿಗೆಯಾಗಿ ತನ್ನನ್ನೆ ಬೀಸಿಕೊಳಲು ತಲೆಯಲ್ಲಿ ಹೂವು ಅರಳಿರಲು ಮುಡಿಸಿಕೊಳಲೇಕೆ ತಳಿರ ತೊಳಲು ? (ಅರಳು. ೧೦೦-೧೯). 'ತೊವಲ್$_2$' ಪರಾ. [ <ತಳಲ್$_2$ ]

**ತೊಳಲೆ** 'ತೊರಳೆ' ನೋ.

**ತೊಳಲ್ಕೆ** 'ತೊಟಲ್ಕೆ' ನೋ.

**ತೊಳಲ್ವಲೆ** (ನಾ). ಒಂದು ಬಗೆಯ ಬಲೆ : ಕೋಲುವಲೆ ಹಬ್ಬಲೆ ತೊಳಲ್ವಲೆ ಸಗಾಢವಲೆಗಳ ಹೊಟಿಗಳೋಳಿಯಂ ಪೊತ್ತು (ಸೌಂದಪು. ೧೮-೩೯). [ ತೊಳಲ್ ? + ಬಲೆ$_1$ ]

**ತೊಳವಿಗೆ** (ನಾ). ಸಮೂಹ ; ಗುಂಪು (?) : ವಾರಿಯೊಳರ್ದಿಕೊಳ್ವರಣ್ಯ ವಾರಣಂಗಳೊಡನೆ ಭರದಿಂ ಪೋರ್ಗಂ ಮೊಗಂಬುಗುವ ನೀರ ಪೇರಾನೆಗಳ ತೊಳವಿಗೆಗಳೊಳಂ (ಚಂದ್ರಪು. ೫-೪೦ ವ). [ ? ]

**ತೊಳಸಂಬಟ್ಟೆ** (ನಾ). ಅಸ್ತವ್ಯಸ್ತತೆ ; ಅವ್ಯವಸ್ಥೆ ; ಗೊಂದಲ : ಪಲ್ಕದ ಸ್ವರ್ಗ ಅನುಭವಿಸುತ್ತಾ ಇರುವಾಗ ಆಧೀಸಿನ ನರಕದ ತೊಳಸಂಬಟ್ಟೆ ಜ್ಞಾಪಿಸುತ್ತೀಯಲ್ಲೇ ! (ನಡದಾ. I, ೫೨೬) ; (ನೀತಿ, ಮೊ.ಗಳ ವಿಷಯದಲ್ಲಿ) ತೊಳಸಂಬಟ್ಟೆಯ, ಸೊಟ್ಟಪಟ್ಟ, ಸುತ್ತುಬಳಸಿನ; ವಕ್ರ, ಕುಟಿಲ (Tortuous. ಇಂಕನಿ). 'ಕಂಡಾಬಟ್ಟೆ' ಹೋ. [< ತೊಟಸು$_1$]

**ತೊಳಸಾಟ** (ನಾ). ಜಗಳ ; ಕಲಹ : ಆಚಾರ್ಯರಿಗೆ ಕವುಟಲ್ಯಬುದ್ಧಿಯಂ ಕಲಿಸಿ ಒಂದಕೊಂದ ನೆನೆದು ತೊಳಸಾಟವಂ ಮಾಡಿ (ಎಕ. II, ೩೩೩-೨೨ ; 1206 ?) ; ತೊಳಸಾಟವಿದು ಗೋಚರಿಸಲಟಿಯದು ಗೋಮಿನೀಧವ ನೊಡನೆ ನಿನಗೆಂದ (ತೊರಠಾ. ೬-೨-೨೪) ; ಮರುಳೆ ಸುಮ್ಮಗಿರು ನಮ್ಮ ಕಣ್ಣಾರೆ ತೊಳಸಾಟವಂ ಮಾಡದಿರಿ (ತುರಂಗ. ೬೪-೪೫). [ ತೊಳಸು$_4$ (< ತೊಟಸು$_2$) + ಆಟ ]

**ತೊಳಸಿ, ತೊಳಂಚಿ$_1$, ತೊಳಂಚೆ$_1$, ತೊಳಚಿ, ತೊಳಚೆ** (ನಾ). = **ತುಲಸಿ** : "ತುಳಸೀ – ತೊಳಸಿ" (ಒಷಧಿ. ೭೧) ; ರುದ್ರಾಕ್ಷಿಯ ಧರಿಸಲೊಲ್ಲದೆ ಪದ್ಮಾಕ್ಷಿ ತೊಳಸಿಯ ಮಣಿಯಂ ಕಟ್ಟಿಕೊಂಬಿರಿ (ಸರ್ವಜ್ಞ. ೧೭೯-೮೨೯) ; ನಾಗದೇವನು ಮಾಡಿಸಿದ ತೊಳಸಿಯ ವ್ರಿಂದಾವನಕೆ ಸರ್ವ್ವರೂ ಅನುಕೂಲರು (ಎಕ. III, ಮಳವ. ೧೫-೩ ; 1389 ?) ; ಇದ ವಿಚಾರಿಸೆ ಬಟಿಯ ತೊಳಸಿಯ ವುದಕದಂತಿರೆಯಲ್ಲಿ ನೋಳ್ಪುದು ಪದುಮನಾಭನ ಮಹಿಮೆ ಧರ್ಮವಿಚಾರ ಮಾತ್ರವನು (ಕುವ್ಯಾಅ. ೧-೧೪) ; ಅಮ್ರುತಪಡಿಗೆ ಅಕ್ಕಿ . . . ತೊಳಸಿ ಹೂವಿನ ಮಾಲೆ (ಎಕ. VI, ಮೂಡಗೆ. ೫೯-೭ ; 1520) ; ಕೊರಲ ದಂಡೆಯ ತೊಳಸಿಯ ಪೊಸ ಚಿಗುರು (ಗೀತಗೋ. ೦೩-೨೦). **ತೊಳಂಚಿ$_1$** : ಬನ್ನಿಯೆಕ್ಕೆಯುತ್ತರಣೆಯ ಬೆಲ್ಲವತ್ತ್ರದ ತೊಳಂಚಿ [ಪಾಠಾಂ. ಚೆ] ಯ ಪತ್ರೆಯನೊಂದಿನಿತ್ತು ಚೆಚ್ಚರಮಮರತ್ವಮಂ ಪಡೆಯಿಮೆಂಬರ್ (ಸಮಪು. ೮-೧೨) ; ಒಪ್ಪುವ ಯಜ್ಞಸೂತ್ರಕಂ ಕಿವಿಯ ತೊಳಂಚಿಯುಟ್ಟುಡೆಯ . . . ವಿಲಾಸಮೊಪ್ಪೆ (ಮಹಾನೀ. ೧೧-೮೭). **ತೊಳಂಚೆ$_1$**: "ತೊಳಂಚಿ ತೊಳಚಿ" (ಚತುನಿ. ೬೦); ಸೂರಣಕ್ಕೆಲೆ ಕುಮಾರಿ(ಗೆ)ಯ ಕಳ್ಳಿಯ ಬೂದಿ . . . ಲವಣಕ್ಕೆ ತೊಳಂಚಿ ವಿಷಾಪಹಾರಕಂ (ಲೋಕೋಪ. ೮-೨೭). **ತೊಳಚಿ** : "ತೊಳಚಿಯೆನೆ ತುಳಸಿ" (ಶಬ್ದಮಂ. ೨೮) ; ಪೊಸೆವ ಮರನಂ ಬಿಲಂ ತೊಳಚಿ [ಪಾಠಾಂ. ಲಿ] ಸಮಸ್ತಂ ದೆಯ್ವಮಿಂತಿವೆಂಬಮೂರ್ಖರ್ (ಸಮಪು. ೯-೮೨) ; ಬಹುಳದಿಂ ಸತ್ವಕ್ಕೆ ಚತ್ವಂ – ಅಪ್ಸರಸ್ – ಅಚ್ಚರಸಿ . . . ತುಳಸಿ – ತೊಳಚಿ (ಶಮದ. ೨೬೩ ಪ್ರಯೋ) ; ಅಣಿಯರದ ತೊಳಚಿ ಗೊರಟನ ಮಣಿದೊಡವಿನ . . . ಮಟ್ಟಿಗರೆಸೆದರ್ (ಹಮ್ಮೀರ. ೬-೧೯) ; ತೊಳಚಿಯ ಪಸುರ್ವೆಳಗು ದುಗುಲದ ಪೊಂಬೆಳಗು . . . ಎನ್ನ ತಿಳಿವು ಬೆಳ್ವೆಳಗಿನೊಳೆಡೆವಿಡದಿರ್ಕೆ (ಕರ್ಣವ್ಯ. ೧-೩೪); ಎಂತೊ ತೊಳಚಿದೋಂಟದೊಳ್ ತುಱುಚಿ ಪುಟ್ಟುವಂತಿರೆ ನಿನ್ನೀ ಬಟಿಯೊಳ್ ಜಾಳಿನೆ ಪಂಚಮನಾಂ ಪುಟ್ಟಿದೆಂ (ರಾಮಾಶ್ವ. ೨೭-೭). **ತೊಳಚೆ** : ಇತ್ವಕ್ಕೆತ್ವಂ – ಅತಸಿ – ಅಗಸೆ . . . ತುಲಸಿ – ತೊಳಚೆ (ಶಮಂದ. ೨೭೯ ಪ್ರಯೋ) ; ದೇವಿಯರು ಬ್ರಹ್ಮನ ಕೈಯಲ್ಲಿ ಒಂದು ಬೀಜವ ಕೊಡಲು, ಅದ ತಂದು ಬೂದಿಯ ಮೇಲೆ ಬಿತ್ತಲು, ತೊಳಚಿ ಪುಟ್ಟಿತ್ತಾಗ (ಭೈರಸೂ. ೧೧೭). [ < ಸಂ. ತುಲಸೀ ]

**ತೊಳಸು$_1$** 'ತಳಿಸು$_1$' ನೋ.

**ತೊಳಸು$_2$** 'ತೊಟಿಸಂ$_1$' ನೋ.

**ತೊಳಸು$_3$** 'ತಳಿಸು$_2$' ನೋ.

**ತೊಳಸು$_4$** 'ತೊಟಸು$_2$' ನೋ.

**ತೊಳಸುಗ** (ನಾ). ಎದುರಿಸುವವನಂ ; ಪ್ರತಿಭಟಿಸುವವನಂ : ಸಳಿದು ಕೊಂಡನು ಖಡುಗವನು ಭುಜವಳಯದಿಂದವುಚಿದನು ತೋಟಿಯ ತೊಳಸುಗರ ಹೊಯ್ ಹೊಯ್ಯೆನುತ ಗರ್ಜಿಸಿದನಾ ಭೀಷ್ಮ (ಕುವ್ಯಾಸ. ೧೦-೨೭). [ ತೊಳಸು$_4$ (<ತೊಟಸು$_2$) + – ಗ$_2$ ]

**ತೊಳಸುಗೊಳ್ಳು** (ಕ್ರಿ). ಸಿಕ್ಕಿ ಬೀಳು ; ತೊಡಕಿಕೊಳ್ಳು : ತರ್ಕತಂತ್ರದ ತಟಿದ ಯುಕುತಿಗೆ ತೊಳಸುಗೊಳ್ಳದ ಠಾವಲಾಯೆಂದ (ಕುವ್ಯಾಅ. ೧-೨೨). [ ತೊಳಸು$_4$ (<ತೊಟಸು$_2$)+ಕೊಳ್ಳು$_1$ (<ಕೊಳ್$_1$) ]

**ತೊಳಹ$_1$** (ನಾ). ತೊಳೆಯುವಿಕೆ; ಶುದ್ಧಿಮಾಡುವುದು: ಹಸ್ತಶುದ್ಧಿಂ–ಕೈತೊಳಹವಂ (ಪ್ರಕಟೀ. ೬-೧೫) ; ಪರಶುರಾಮನ . . . ಪರಶುವಿನ ನೆಣವಸೆಯ ತೊಳಹದ ಪರನದಿಯ ವಿಸ್ತರಣವನು ಕೇಳಿದನು ಯಮಸೂನು (ಕುವ್ಯಾಅ. ೯-೧೫) ; ಎಲವೊ ಮಡಿವಳ ನಿನ್ನ ತೊಳಹವು ಚೆಲುವನಾದವು . . . ತೊಳೆದು ಕೊಡು ನಾವುಟ್ಟುದನು ನೀ (ಸಾಳ್ವಭಾ. ೨೨-೫೯). [ ತೊಳೆ$_1$ + – ಹ$_2$ ]

**ತೊಳಹ$_2$** 'ತೊಳಪ$_2$' ನೋ.

**ತೊಳಿಸು** 'ತಳಿಸಂ$_1$' ನೋ.

**ತೊಳೆ$_1$** (ಕ್ರಿ). ೧. ಸ್ವಚ್ಛಮಾಡು ; ಶುದ್ಧಮಾಡು: "ತೊಳೆ–ಪ್ರಕ್ಷಾಲನೇ, ಫಲ ತೂಲಾಯಾಂ ಚ" (ಶಮಧಾ) ; ನಿಮ್ಮ ಕಾಲಂ ತೊಳೆವೆ[ಪಾಠಾಂ. ಕರ್ಚುವೆ,ಕರ್ಚುವ]ಮೆಂದು ಮಹಾದೇವಿ ತಾನೆ ಕಾಲಂ ಕರ್ಚಿ (ವಡ್ಡಾರಾ. ೭೮-೧೧) ; ಪಳುಕಿನ ಪಾಪೆಯನಮರ್ದಿಂ ತೊಳೆದಂತೆ (ಆದಿಪು. ೬-೩೯) ; ತೊಳೆವೊಡದಂ ಜನಪತಿಮತಸಳಿಳಂ ತೊಳೆಗುಂ ವಿಶೋಧಿ ತೊಳೆಗುಂ ನಿಯಮಮಂ ತೊಳೆಗುಂ (ಶಾಂತಿಪು. ೪-೭೯) ; ಮುರಹರನಾಗಸಕೆತ್ತಿದ ಚರಣ ಮನಜನಲ್ಲಿ ತೊಳೆದನಾ ನೀರೆ ಗಡಂ ಸುರಸಿಂಧುವಾಗಿ ಬರುತಿರೆ (ಸಮಪು. ೮-೫೫) ; ಕುದುರನೇಸು ತೊಳೆದರೆಯೂ ಕೆಸಱು ಮಾಣ್ಬುದೆ (ಬಸವ. ೨೬೦) ; ಗುರುಗಳಿಗೆ ಕಾಲ ತೊಳದು ಧಾರಾಪೂರ್ವ್ವಕವಾಗಿ ಕೊಟ್ಟರು (ಎಕ. VII, ಶಿವಮೊ. ೭೦-೧೭ ; 1287) ; ತನ್ನಡಿಗಳಿಗೆ ತಪ್ಪಗ್ಗವಣೆಯುಂ ತಾನೆ ಕಳಕೊಂಡು ಅಡಿಗಳಂ ತೊಳಕೊಳುತ ಬಸವಂ ಸಡಗರಿಸಿ (ಬಸಪು. ೩೦-೯) ; ತೊಳೆದರೆ ಮಸಿಗೆ ಧವಳತೆಯುಂಟೆ (ಕೌಶಿರಾ. ೩೬-೪೭).

೨. ಅಳಿಸು ; ತೆಗೆದುಹಾಕು : ಅಜ ಬರೆದ ಬರೆಹವನು ತೊಳೆಯಬಲ್ಲನೆ ಬಾಣ (ಪುರಂದ. ೨-೪೪-೩). ೩. ನಿವಾರಿಸು ; ಪರಿಹರಿಸು : ಹಿಂದಿನವ ಮಾನಗಳ ತೊಳೆಯಿರೇಳಿ (ವಿಸೀಗೀ. ೪೩-೬) ; ಈ ಪುರೋಚನವೃತ್ತಾಂತ ದಿಂದ ಬಂದಿರುವ ಕಳಂಕವನ್ನು ತೊಳೆದುಕೊಂಡಂತಾಗುತ್ತದೆ (ವಚಭಾ. ೬೫). ೪. ಇಲ್ಲವಾಗು : ತನಗಿಂದು ತೊತ್ತಿನ ಕೆಲಸ ಕೊಂಡಿಹುದ ನಿಲಿಸುವೊಡೆ ಕದ್ರುವಿಗೆ ಕೊಟ್ಟರೆಯೊಲಿದು ಸುಧೆಯನು ದಾಸಿತನವದು ತೊಳೆದುಹೋಹುದು (ಸಂಭಪ. ೫-೫೪). ೫. ಹಾಳುಮಾಡು ; ನಾಶ ಮಾಡು: 'ನೀ ಬಂದು ಈ ಮನೆ ತೊಳೆದೆ' ಎಂದು ಅವಳು ದಿನಾ ಸೊಸೆ ಯನ್ನು ಛೇಡಿಸ ಹತ್ತಿದಳು (ಹೊಸಕ್ಷಿ. ೨೧). 'ತೊಡೆ$_1$' ಪರಾ.

**ತೊಳೆದ ಕೆಂಡ** = ಆರಿಸಿದ ಕೆಂಡ ; ಇದ್ದಲು : ಅವನ ಕ್ರೂರವಾದ ಕಣ್ಣು, ತೊಳೆದ ಕೆಂಡದಂಥ ಮೈಬಣ್ಣ ನೋಡುವವರಿಗೆ ಹೆದರಿಕೆಯನ್ನು ಹುಟ್ಟಿಸುವಂತಿತ್ತು (ರೂಢಿ). **ತೊಳೆದ ಮುತ್ತು** = ಶುಭ್ರಗೊಳಿಸಿದ ಮೌಕ್ತಿಕ ; ಶುದ್ಧವಾದ ಮುತ್ತು : ಆ ಮಗು ತೊಳೆದ ಮುತ್ತಿನಂತೆ ಬಹಳ ಮುದ್ದಾಗಿದೆ (ರೂಢಿ). [ ದೇ ॥ ತೆಲು. ತೊಲಂಚು ]

**ತೊಳೆ$_2$, ಸೊಳೆ$_2$, ಸೋಳೆ** (ನಾ). ಕಿತ್ತಲೆ, ಹಲಸು ಮುಂತಾದ ಹಣ್ಣು ಗಳ ಹಾಗು ಹತ್ತಿ ಮೊದಲಾದುವುಗಳ ಒಳಗಿನ ಒಂದೊಂದು ಭಾಗ,-ಖಂಡ : "ತೊಳೆ – ಪ್ರಕ್ಷಾಲನೇ, ಫಲತೂಲಾಯಾಂ ಚ" (ಶಮುಧಾ) ; ಪಲಸಿನ ತೊಳೆ(ೞೆ)ಗಳನರನೇೞಲ ಕೊನೆ ಕರ್ಪೂರಮೆಣ್ಣೆ ಯೆಂಬಿನಿತಿವಱಿಂ ಕಲಸಿ ಕಡುವಿಸಿಲೊಳವನಿರಿಸಲೊಡಂ ದ್ರವಿಯಿಸುಗು ಮಚ್ಚರಸಮಪ್ಪನೆಗಂ (ಲೋಕೋಪ. ೮-೩೫) ; ಕಡಲೆಯಂದದೊಳು ಹಲಸಿನ ತೊಳೆಯನುತ್ತರಿಸಿ ಹುಡಿಮೆಣಸು ಶುಂಠಿ ಯಾಲಕ್ಕಿಯಂ ಮೊಸರ ಕೆನೆಯೊಡನಿಕ್ಕಿ (ಸೂಪಶಾ. ೫-೫೪) ; ನಾನೊಂದು ತರಲ ಮರುಕಾಂತಾರ ದಲ್ಲಿ ತೊಟ್ಟು ಕಳಚಿದ ಹತ್ತಿಯ ತೊಳೆಯಂತೆ ಇಳಿಯುತ್ತಿದ್ದೆ (ಬಾಣಆ. ೧೯೩) ; ತೊಗಲು ತೊಳೆ ಆದೀತೆ ? (ಗಾದೆ). **ಸೊಳೆ$_2$** : ಆಲೂಗಡ್ಡೆ . . . ಹಲಸಿನಕಾಯಿಯ ಸೊಳೆ ಇತ್ಯಾದಿಗಳನ್ನೂ ತುಂಡುಮಾಡಿ ಈ ರೀತಿ ಕರಿಯಬಹುದು (ಅಡುಸಾ. ೯೦) ; ಬಳಿಕ ಮೂವರೂ ಸೊಳೆಗಳನು ತಿಂದರು (ಈಕಥ. ೧೦೩). **ಸೋಳೆ**: ರುಚಿ ನೋಡೋಣವೆಂದು ಒಂದೆರಡು ಸೋಳೆ ಬಾಯಿಗೆ ಹಾಕಿಕೊಂಡೆ (ಬಾಳಿಗಿ. ೧೧೯) ; ರಚ್ಚೆ ! ಹುಲ್ಲು ! ಯಾರಿಗದು ಸೋಳೆ ಇಲ್ಲದಿದ್ದರೆ ? (ಮೊಮುಗು. ೬೪).

[ ದೇ.॥ ತಮಿ. ಚುಳೈ; ಮಲ. ಚುಳ; ತೆಲು. ತೊಲ, ತೊನ; ಕುವಿ. ತೋಲ ]

**ತೊಳೆ$_3$** 'ಸೊಳೈ$_1$' ನೋ.

**ತೊಳೆ$_4$** (ನಾ). ದೋಣಿ ನಡೆಸುವ ಹುಟ್ಟು : ಆಗ ಸಾಲು ಸಾಲಾಗಿ ಜನರನ್ನು ಹಡಗಿನ ಬಾಣೆಗಳಲ್ಲಿ ಕುಳ್ಳಿರಿಸಿ ತೊಳೆ (oar)ಗಳಿಂದ ನೀರನ್ನು ತಳ್ಳಬೇಕಾಯಿತು (ಬಾಲಪ್ರ. II, ೬೪೩) ; ಆಗ ದೋಣಿಯ ತೊಳೆಗಳನ್ನು ಒಚ್ಚಬೇಕಾಗಿಲ್ಲ (ಒಂಟಿದ. ೧೩೬); ನೀನು ಒಂದು ತೊಳೆ ಹಿಡಿ, ನಾನೊಂದು ಹಿಡಿಯುತ್ತೇನೆ (ಔದಾಉ. ೧೬೧).

**ತೊಳೆಹಾಕು** = ಹುಟ್ಟುಹಾಕು : ರಾತ್ರಿ ಒಂದು ಹರದಾರಿ ತೊಳೆ ಹಾಕುವುದು ; ಅನಂತರ ಸ್ವಲ್ಪ ಹೊತ್ತು ತಣ್ಣಗೆ ಕುಳಿತಿರುವುದು (ಒಂಟಿದ. ೧೩೭). [ <ತೊಡಸು$_1$/ತಮಿ. ತುಟುವೈ ; ಮಲ. ತುಟ ]

**ತೊಳೆತ** (ನಾ). ಶುದ್ಧಮಾಡುವಿಕೆ ; ತೊಳೆಯುವುದು : "ಕ್ಷಾಲನಂ = ತೊಳೆತಂ" (ಕಾಶಕ್ಕ. ೩೬೧). [ ತೊಳೆ$_1$ + –ತ$_2$ ]

**ತೊಳೆಯಿಸು** (ಕ್ರಿ). ಶುದ್ಧ ಮಾಡಿಸು; ಸ್ವಚ್ಛ ಮಾಡಿಸು : ಭಕ್ತರ ಕೂಡ ಬಂದವನೀಗ ಕಾಲಂ ನೀಡಿ ತೊಳೆಯಿಸಿಕೊಂಡಹನು (ಬಸಪು. ೩೭-೪೦) ; ನಿಮಗೆ ಮುಖ ತೊಳೆಯಿಸಿ ಮಾತ್ರ ಕೊಡುವುದಕ್ಕೆ ಕಾಯ್ದು ಕೊಂಡಿದೇವೆ (ಚಂಗಾಳ್ಯ. ೧೫೪). [ ತೊಳೆ$_1$ + –ಇಸು$_3$ ]

**ತೊಳ್ತಳ** 'ತೊಟ್ತುೞ' ನೋ.

**ತೊಳ್ತಳಂದುಳಿ** 'ತೊಟ್ತುೞುದುೞ' ನೋ.

**ತೊಳ್ತಾಳ್** 'ತೊಟ್ತಾಳ್' ನೋ.

**ತೊಳ್ತು** 'ತೊಟ್ತು' ನೋ.

**ತೊಳ್ತುಗೆಯ್, ತೊತ್ತುಗೈ** (ಕ್ರಿ). ೧. ತೊತ್ತಾಗಿ ಮಾಡಿಕೊಳ್ಳು ; ಸೇವೆಮಾಡಿಸಿಕೊಳ್ಳು : ನಿಜಮೋಕ್ಷಲಕ್ಷ್ಮಿಯಂ ತ್ವರಿತದಿಂ ತೊಳ್ತು ಗೆಯ್ದಾಳ್ವ ಬಲ್ಗಾಡಿಯಿಂ (ಪದ್ಮರಾ. ೫-೩೪). **ತೊತ್ತುಗೈ** : ೨. ಸೇವೆ ಮಾಡು : ತೊತ್ತುಗೈವುದು ಲೋಕವೀತಗೆ (ಕಾಶಿರಾ. ೨೫-೭).

[ ತೊಳ್ತು (<ತೊಟ್ತು) + ಕೆಯ್$_1$ ]

**ತೊಳ್ತುಗೆಯ್ಮೆ** (ನಾ). ತೊತ್ತಿನ ಕೆಲಸ ; ಸೇವೆ ; ಊಳಿಗ : ತೊಳ್ತು ಗೆಯ್ಮೆಯ ಪೆರ್ಮೆಗೊಳ್ವನೆಸಗುವೆನೆಂದು ಕಜ್ಜಮಂ ಕೈಕೊಂಡೊಡೇಂ ಸ್ವಾರ್ಥದೋಷಮಂ ಕಾಣ್ಬರಾರ್ (ಶ್ರೀರಾಮಪೂ. ೧೧೫-೯೭).

[ ತೊಳ್ತು (<ತೊಟ್ತು) + ಗೆಯ್ಮೆ (<ಕೈಮೆ$_1$ ]

**ತೊಳ್ತುಗೆಲಸ** 'ತೊಟ್ತುಗೆಲಸ' ನೋ.

**ತೊಳ್ತುಗೊಡು** 'ತೊಟ್ತುಗೊಡು' ನೋ.

**ತೊಳ್ತುಗೊಳ್** 'ತೊಟ್ತುಗೊಳ್' ನೋ.

**ತೊಳ್ತುಬಾಳ್** (ಕ್ರಿ). ತೊತ್ತಾಗಿ ಜೀವಿಸು ; ಗುಲಾಮನಾಗಿರು : ನಾ ತೊಳ್ತುಬಾಳೆನು ನಿನಗೆ (ಮೂರುನಾ. ೧೧೨-೪೬೦).

[ ತೊಳ್ತು (<ತೊಟ್ತು) + ಬಾಳ್$_1$ (<ಬಾೞ್$_1$) ]

**ತೊಳ್ಪಟ್ಟಿ** 'ತೊಟ್ಪಟ್ಟಿ' ನೋ.

**ತೊಳ್ಮಗ** (ನಾ). ತೊತ್ತುಮಗ ; ಆಳುಮಗ : ಅವ [ ನಾ ] ತೊೞ್ಮಗ ಗೊಣ್ಡೊಮ್ (ಸೌಇಎ. ೧೯೩೨, ಪುಂಗನೂರು. ೧೯೭-೭ ; 9ನೆಯ ಶತ). 'ತೊಟ್ಪಟ್ಟಿ' ಪರಾ. [ <ತೊಟ್ತು + ಮಗ ]

**ತೊಳ್ಳು** (ಕ್ರಿ). ಸ್ವಚ್ಛವಾಗು : ಮೂವರು ಮೂರು ಒನಕೆಗಳನ್ನೆತ್ತಿ ಅನುಕ್ರಮವಾಗಿ ನೆಲಕುಳಿಗೆ (ಒರಳಿಗೆ) ಗುರಿತಪ್ಪದೆ ಕುಟ್ಟುವಾಗ ಹೊರಕ್ಕೆ ಹಾರುವ ಧಾನ್ಯವನ್ನು ತಂತಮ್ಮ ಒಂದೊಂದು ಪಾದದಿಂದ ಕೂಡುವರು. ಹೀಗೆ ಕೂಡದಿದ್ದರೆ ಅಕ್ಕಿ ಸರಿಯಾಗಿ ತೊಳ್ಳದು (ಸಂಶೋಧ. ೧೪೯). 'ತಳಿಸು$_1$' ಪರಾ. [ ದೇ. ॥ ತುಳು. ತೊಳ್ಳು ]

**ತೊಳ್ಳುಗುಂಡು** (ನಾ). ಕೆಳಗೆ ತಳ್ಳುವ ಗುಂಡು (?) : ಬಹು ಜನರು ಹತರಾಗುವಂತೆ ಮಾಡಿರುವ ತೊಳ್ಳುಗುಂಡುಗಳನ್ನೂ ತುಪಾಕಿಗುಂಡು ಗಳನ್ನೂ ಇರಿಸುವುದಕ್ಕೆ . . . ಉಗ್ರಾಣಗಳನ್ನು ಮಾಡಿಸಿದರು (ಚಾಮವಂ. ೮೯). [ < ತಳ್ಳು + ಗುಂಡು ]

**ತೊಳ್ಳೆ** 'ತೊರಳೆ' ನೋ.

**ತೊಳ್ಳೆಮೀನು** (ನಾ). ಒಂದು ಬಗೆಯ ಮೀನು: ಆ ಪೊಟ್ಟಣದಲ್ಲಿ ಕೆಲವು ಬೆಳ್ಳೇಡಿ, ಸೋಸಲು, ತೊಳ್ಳೆಮೀನುಗಳಿದ್ದು, ಒಂದು ತೊಳ್ಳೆಮೀನಿಗೆ ಇನ್ನೂ ಜೀವವಿದ್ದುದರಿಂದ ಚಿಮ್ಮಿ ಹಾರಿ ಒಲೆಯ ಬೂದಿಗೇ ಬಿದ್ದಿತು (ಮರಳಿಮ. ೫೮೮). [ ತೊಳ್ಳೆ ? + ಮೀನು$_2$ (<ಮೀನ್$_3$) ]

**ತೊಱಗಲೆ, ತೊಱಗೆಲೆ** (ನಾ). ಒಂದು ಊರಿನ ಹೆಸರು ; ℙ ಈಗಿನ ಬೆಳಗಾವಿಜಿಲ್ಲೆಯ ತೊರಗಲ್ಲು : ತದ್ದವಾಡಿಗೆ ತೆಂಕಲ್ ತೊಱಗಲೆಗೆ ಬಡಗಲಿರ್ದುದು ನೆಱೆಯ ಸುಖೋದ್ದೀಪನಮೆನಿಸಿ ಬೆಳುಗಲಿದೇಶಂ (ಅಜಿಪು. ೧೨-೪೪) ; ಕಿಸುಕಾಡೆಪ್ಪತ್ತುಮಂ ಬಾಗಡಗೆ ಯೆಪ್ಪತ್ತುಮಂ ತೊಱಗಲೆ ××× ಮಂ ಮಾಸೆಯವಾಡಿ ನೂಱ ನಾಲ್ವತ್ತುಮಂ . . . ರಾಜ್ಯಂಗೆಯ್ಯುತ್ತಂ (ಸೌಇಇ. XI-i, ೮೭-೮ ; 1050). **ತೊಱಗೆಲೆ** : ತೊಱಗೆಲೆ ಉಟ್ಟಹಳ್ಳಿ ನೆಗೞ್ದಾಜಿರಗೋಳ ಮೊನಿಪ್ಪಗುರ್ವುಪೆತ್ತಱಕೆಯ ಬೇಡವಟ್ಟುಗಳ . . . ಕಿಡಿಸಲಂಕದ ಮುನ್ನಿನ ಚಕ್ರವರ್ತಿಗಳ್ ಪೆಱರಳವಲ್ತು (ಕಾವ್ಯಾವ. ೨೧೨). [ ? ]

**ತೊಱಗೆಲೆ** 'ತೊಱಗಲೆ' ನೋ.

**ತೊಱಡು** (ನಾ). ಮರದಿಂದ ಹಣ್ಣನ್ನು ಕೀಳಲು ಉಪಯೋಗಿಸುವ ಕೊಕ್ಕೆ; ದೋಟಿ : (ಕ).

[ದೇ.॥ ತಮಿ. ತುಱಟು, ತುಱಟ್ಟಿ; ಮಲ. ತುಱಡು]

**ತೊಱಪ, ತೊಱಹ** (ನಾ). ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದವನು : ತೊಱಪರ ಬೂತಯ್ಯಂ ಪೂಲಿಯ ತುಱುವಂ ಕೊಂಡಡೆ (ಎಇ. XVIII, ೨೦೦-೩; 1107). **ತೊಱಹ** : ತಂಬುಲಿಗ ಸಾಸಿರ್ವ್ವರತ್ಥ೯ಂ ತೊಱಹರು ಕೊಣ್ಡಡಾಯತ್ಥ೯ಂ ಸಿಂಗಗಾವುಂಣ್ಡನಿಕ್ಕಿಸಿ ತಂದ[ಡೆ] (ಸೌಇಇ. XI-i, ೧೪೮-೨೩; 1099); ಆ ಗ್ರಾಮದ ತುಱುವಂ ತೊಱಹರ ಕಾಳಯ ಆ ಪುಯ್ಯಲಿಂಗೆಱಗಿ ಮೇಲಾಳಂ ನಿಱಿದು . . . ತುಱುವಂ ಮಗುಱ್ಚ್ಚಿ೯ (ಎಕ. VII, ಶಿವಮೊ. ೩೭-೭; 1140); ಕಾವಗೌಡಂ ನೆಗರ್ದ ತೊಱಹರ ಕುಳಕ್ಕೆ ತಿಳಕಂ (ಕಇ. I, ೨೪-೧೫; 1148); ತೊಱಹನಂ ಬೆಂಕೊಂಡು ತೂಳ್ದಿಯ್ದಿ ಮುಟ್ಟಿ (ಎಇ. XIX, ೨೩೦-೩೩ ; 1179). 'ತೊಳಪ₂' ಪರಾ.

ತೊರಹರ ಮಾರಿ = ಒಂದು ಬಿರುದು : ತೊರಹರ ಮಾರಿ ವೈರಿ ಸಂಹಾರಿ ದಂಡಿಂ ಮುಂನಿಱಿವಂ ಶೌರ್ಯ್ಯಮಂ ಮೆಱೆವಂ (ಎಕ. VIII, ಸಾಗರ. ೧೦೯-೫ ; 1042). [ ? ]

**ತೊಱಬು** (ನಾ). ಅಣಕ ; ಹಾಸ್ಯ : "ತೊಱಬೆಂದಣಕಂ" (ಕರ್ಣಾನಿ. ೬೮).

[ P ಇದು 'ಕೊಱಚು' ಎಂಬುದರ ಅಪಲಿಖಿತವಿರಬಹುದು ]

**ತೊಱರಗಣಗಿಲು** (ನಾ). ಒಂದು ಬಗೆಯ ಸಸ್ಯ : "ಕಾಂತಃ – ತೊಱರಗಣಗಿಲು, ನಂದಿವೃಕ್ಷ . . . ಸೂಜಿಕಲ್ಲು" (ಒಷಧಿ. ೨೮). 'ತೊಱೆಗಣಗಿಲು' ಪರಾ. [ ? + ಗಣಗಿಲು (<ಕಣಗಿಲೆ₁) ]

**ತೊಱವಿ, ತೊರವಿ** (ನಾ). ೧. ತ್ಯಜಿಸುವಿಕೆ; ವರ್ಜಿಸುವುದು; ತ್ಯಾಗ: ಕ್ರೋಧದ ತೊಱವಿಯುಂ ಲೋಭದ ತೊಱವಿಯುಂ . . . ಎಂಬಿವಯ್ದುಂ ಪುಸಿಯರ ವ್ರತದ ಭಾವನೆಗಳು (ಶಾಸ್ತ್ರಟೀ. ೭೪-೭); ವಕಾರಕ್ಕೆ–ತೊಱವಿ, ಅಳವಿ, ಬಳವಿ (ಶಮದ. ಸ. ೨೨೦ ಪ್ರಯೋ). ೨. ಬಿಡುಗಡೆ; ವಿಮೋಚನೆ: ನೀವಲ್ಲಿಗೆ ಬಿಜಯಂಗೆಯ್ದು ತತ್ಪಣಿಗೆ ತೊಱವಿಯಂ ಕುಡುವುದೆಂಬುದುಂ (ಧರ್ಮಾಮೃ. ೧೪-೯೩). **ತೊರವಿ:** ೧. ಅತಿಕಾಂಕ್ಷೆಗಳ ತೊರವಿಯಲಿಲ್ಲವು ಪಾಪಗಳೆಂದು ಕೊಟ್ಟನು (ಕದಂಪು. ೯) ; ತೊರವಿಯೆ ರಸ ಪರಿತ್ಯಾಗವೆಂಬುದು ತಾನರಿವುದು ಭವ್ಯರಿಂತಿದನು (ಪೂಜ್ಯಚ. ೧೨-೬೯). ೩. ತ್ಯಜಿಸಲು ಯೋಗ್ಯವಾದುದು : ಅಂತಹ ಧರ್ಮಗೊಡ್ಡಿನ ಹುಟ್ಟಾಟವು ಈ ಸನ್ದರ್ಭದವಸರಕ್ಕೆ ತೊರವಿಯದಹುದು (ಮಂತ್ರಶ. ೧೫೨-೨೪). [ ತೊಱೆ₁ + – ವಿ/ತಮಿ. ತುಱವಿ ]

**ತೊಱಸು** 'ತೊಱೆಯಿಸು' ನೋ.

**ತೊಱಹ** 'ತೊಱಪ' ನೋ.

**ತೊಱಿಸು** 'ತೊಱೆಯಿಸು' ನೋ.

**ತೊಱು** 'ತುಱು' ನೋ.

**ತೊಱುಕೊಲ್** 'ತುಱುಗೋಲ್' ನೋ.

**ತೊಱುಕೊಳ** 'ತುಱುಗೋಳ್' ನೋ.

**ತೊಱುಕ್ಕೊಳ್** 'ತುಱುಗೋಳ್' ನೋ.

**ತೊಱುಗರೆ** (ನಾ). ಒಂದು ಪ್ರದೇಶದ ಹೆಸರು : ಅಕ್ಕಾದೇವಿಯರ್ ಕ್ಕಿಸುಕಾಡೆಪ್ಪತ್ತುಮಂ ತೊಱುಗರೆಯಱುವತ್ತುಮಂ . . . ಆಳುತ್ತಮಿರೆ (ಎಇ. XV, ೭೮-೭; 1050). 'ತೊಱಗಲೆ' ಪರಾ. [ ? ]

**ತೊಱುಗೊಳ್₁** 'ತುಱುಗೊಳ್₁' ನೋ.

**ತೊಱುಗೊಳ್₂** 'ತುಱುಗೋಳ್' ನೋ.

**ತೊಱುಗೊಳ** 'ತುಱುಗೋಳ್' ನೋ.

**ತೊಱುಗೊಳ್ಳ** 'ತುಱುಗೋಳ್' ನೋ.

**ತೊಱುಗೋಳ್** 'ತುಱುಗೋಳ್' ನೋ.

**ತೊಱುಮಣ್ಣು** (ನಾ). (?) : ಬೊಂಬಸಮುದ್ರದ ಹಿಂದೆ ಗದ್ದೆ ಸ ೨ ಕೊ ×××ಗಗರಿಯ ಕಟ್ಟದೊಳಗೆ ಗದ್ದೆ ಸ ೨ ಕೊ ೧೦ × ಮುಂದಣ ಕೆಱೆಯ ಹಿಂದೆ ಗದ್ದೆ ಕೊ ೧೦ . . . ಇವೆಲ್ಲ ತೊಱುಮಂಣು ಚತುಸೀಮೆಗೆ ನಟ್ಟ ಕಲ್ಲೆ ಮೇರೆ ಸಾಲು (ಎಕ. XVI, ಚಿಕ್ಕನಾ. ೫೮-೨೮ ; 1260).

[ ತೊಱು ? + ಮಣ್ಣು (<ಮಣ್) ]

**ತೊಱುವಳ್ಳ** 'ತುಱುವಾಳ' ನೋ.

**ತೊಱುವಾಳ್ಳ** 'ತುಱುವಾಳ' ನೋ.

**ತೊಱೆ₁, ತೊರೆ₁** (ಕ್ರಿ). ೧. ಬಿಟ್ಟು ಬಿಡು; ಪರಿತ್ಯಾಗ ಮಾಡು; ವರ್ಜಿಸು; ತ್ಯಜಿಸು : "ತೊಱೆ –ವಿಸರ್ಜನೇ, ನದ್ಯಾಂ ಚ" (ಶಮಧಾ) ; ಪರರ ದೋಷಂಗಳುಮಂ . . . ತೊಱೆವುದು ತೊಱೆವಂತಸಾಧುಜನ ಸಂಗತಿಯಂ (ಕವಿರಾ. ೧-೬೭) ; ಉತ್ತಮಕುಲದೊಳಪ್ಪಭಿಮಾನಮಂ ತೊಱೆದು ಬಾಱುಸ್ಕಾರಣಮಾಗಿ ಕುಲಜರಲ್ಲದವರ್ಗಾಳಾಗಿ ಬಾಳ್ವರ್ (ವಡ್ಡಾರಾ. ೮೭-೩೦) ; ಎಲ್ಲಮಂ ತೊಱೆದು . . . ದಿಗಂಬರವಿಳಾಸಮಂ ಬಯಕೆ ತೀರ್ವಿನಂ ತಾಳ್ದಿದಂ (ಆದಿಪು. ೩-೫೭); ಮಹಾಶ್ರೀಯಂ ಕೊಳದ ಪುಲ್ಲ ಕಡ್ಡಿಯಂ ತೊಱೆವಂತೆ ತೊಱೆದು (ಧರ್ಮಾಮೃ. ೯-೩೨); ಪರನಾರಿಯರ ಸಂಗವ ತೊಱೆಯಿಂ ಭೋ (ಬಸವ. ೬೪೨); ಪರಾಂಗನೆಗೆ ಕೂರ್ತುರ್ಬಿಸೆದು ತಾಯಂ ತೊಱೆವ ಬೆಸನಿ ಜೋ (ಸಿದ್ಧರಾ. ೧-೫೯) ; ಭೀತಿಯಂ ತೊಱೆದು ಕಾಂತೆಯ ಕೂಡೆ ರಮಿಸಿದಂ (ಕೃಮಿಭಾ. ೧೧-೨೦). ೨. ಪ್ರಾಪಂಚಿಕಸುಖವನ್ನು ತ್ಯಾಗ ಮಾಡು; ವಿರಕ್ತಿಹೊಂದು : ಸಸಿಮತಿಶ್ರೀಗನ್ತಿಯರ್ . . . ಕಟ್ವಪ್ಪಿನೊಳ್ ತೊಱದಾರಾಧನೆ ನೋನ್ತು ತೀರ್ತ್ಥಗಿರಿ ಮೇಲ್ಸ್ವರ್ಗ್ಗಾಲಯಕ್ಕೇಱಿದಾರ್ (ಎಕ. II, ೭೭-೪ ; ಸು. 700) ; ಪರ್ವತದೊಳಿರ್ದ ಶಾರ್ದೂಲಂ ಜಾತಿಸ್ಮರನಾಗಿ ತೊಱೆದಿರ್ದುದೆಂಬುದನಾ ಮುನಿಪನವಧಿಯಿನಱಿದು (ಜಾವುಂಪು. ೨೫) ; ನರರರೆಬರ್ ವೈರಾಗ್ಯಂ ದೊರೆಕೊಂಡಡೆ ತೊಱೆವೆವೆಂಬರ್ (ಅಜಿಪು. ೨-೮೫). **ತೊರೆ₁ :** ೧. ಮರೆಯರೊ ನೀ ಮಾಡಿದ ಅನಿಮಿತ್ತೋಪಕಾರ ತೊರೆಯರೊ ನಿನ್ನಂಘ್ರಿಸೇವೆ ಪ್ರತಿವಾಸರ (ಜಗದಾ. ೯೯-೧) ; ತರಿದು ಬಿಡು, ತೊರೆದು ಬಿಡು, ತೊಡೆದು ಬಿಡು ನೆನಹಿಂದ ಕರೆಕರೆಯ ಬೇರುಗಳ ಮನದ ಗಂಟುಗಳ (ಮಂಕುಕ. ೬೪೮) ; ನಂಬಿರುವ ಸುಚರಿತರ ತೊರೆಯೆಯೆಂಬಾ ಕೀರ್ತಿ ಎಂದಿನಂತೆಯೆ ನೆರೆದು ಪೂಜ್ಯವಾಗುವುದು (ವಿಸೀಗೀ. ೨೩-೧೧).

[ ದೇ.॥ ತಮಿ. ತುಱ ; ತುಳು. ತೊರೆವು ; ತೆಲು. ತೊಱಂಗು ]

**ತೊಱೆ₂, ತೊರೆ₃** (ನಾ). ೧. ನದಿ ; ಹೊಳೆ : "ಸಿಂಧುಃ, ಸ್ರವಂತೀ . . . ಸರಿತ್, ರೋಧೋವಕ್ರಾ – ಈ ೨೧ ತೊಱೆ" (ಹಲಾಯು. ೧೧೧-೪೩) ; ವಾರಿ ಮರಳ್ಪುಣಸ ಪೆರಿ ×× ತೊಱೆಯು ಅಲರ್ ಮೇರೆ (ಎಕ. II, ೩೫-೬ ; ಸು. 800) ; ತೊಱೆಯ ಪಳ್ಳದ ನೀರ್ಗಳಂ ಕುಡಿದು (ವಡ್ಡಾರಾ. ೯೦-೨೨); ಶಿರದೊಳ್ [ ತೊ ]ಱೆ ತೊಱೆಯ ಕೆಲದೊಳೆಸೆದಿರೆ ಪೆಱೆ(ಪಂಪಭಾ. ೮-೨೪);ಹಾಲ ತೊಱೆಗೆ ಬೆಲ್ಲದ ಕೆಸಱು ಸಕ್ಕರೆಯ ಮಳಲು (ಬಸವ. ೨೯೦) ; ತೊಱೆಯ ಹೊನಲಲಿ ಹೋಹ ಕರಡಿಯನಱಿಯದದು ಕಂಬಳಿಯೆನುತ್ತಾಸಱದೆಯಂಬಿಗನೆಯ್ದಿ ಹಿಡಿಯಲು (ಬಸಪು. ೨೦-೨೨) ; ಮರೀಚಿಯ ತೊಱೆಗೆ ಹಱಗೋಲಿಡುವರುಂಟೇ (ಕುಮ್ಮಾದ್ರೋ. ೪-೩೮). ೨. ಪ್ರವಾಹ ; ನೆರೆ ; ಹರಿವು : ಎಱೆವ ತೊಱೆಯನಿದಿರಿಸುವುದೆಲ್ಲಿಯ ಗಾಂಪು (ಆದಿಪು. ೧೨-೧೦೮) ; ರಸದ ತೊಱೆ ಪರಿದುದು (ಸುಕುಮಾ. ೧೧-೨೩) ; ಹೆಣ ಸಾಱಿಟ್ಟ ತೊಱೆ [ಪಾಠಾ. ಟ್ಟುದುಱೆ] ಯೆನಲರುಣಜಲ ನಗರೋಪಕಂಠದಲಿ (ಕುಮ್ಮಾಉ. ೧೨-೨೫) ; ಉದಕಪ್ರವಾಹಮಂ ತೊಱೆಯೆಂಬರು . . . ಉರು ಶಿಲೆಯನಱೆಯೆಂಬರಲ್ಲದಿವ ನುಡಿಯುರವನಾಳ್ವ

ಳೆಯೊಳು (ಜೈಮಿಭಾ. ೨-೯) ; ತೊಱೆಗೂಡಿದ ನದಿ ನದಿಯು ಕಾಲುವೆಗಳು . . . ರಂಜಿಸುತಿಹ ಪುರವಿಹುವಾ ದೇಶದೊಳಗೆ (ಕಂಸವಿ. ೨-೧೧). **ತೊರೆ₃ :** ೧. "ಹೊಳೆಗೆ ತೊರೆಯೆಂದಕ್ಕು" (ಕಶರ. ೪೯) ; ಏಱೆ ತೊರೆ ಕಳವೃತ್ತಿ ಕಱೆವೊನ್ಪಾಙ್ಗುಮಹಾಪಾತಕನಕ್ಕುಮ್ (ಎಕ. XVI, ತುಮಕೂ. ೧೦೨-೩ ; 730) ; ನಿತ್ಯವು ತೆಗೆಯುತಲಿರಬೇಕು ಹುಟ್ಟನು ತಾನೆಯೆ ತೊರೆಯೊಳಂಬಿಗನು (ಇಂಚಾಪ. ೨೧೦-೩೯) ; ಕುದಿವುದು ಮೋಡವು ತೊಟ್ಟಿಡದಿದೆ ಮಳೆ ಬತ್ತಿತು ಹಳ್ಳವು ಅತ್ತಿತು ತೊರೆ ಹೊಳೆ (ಉಯ್ಯಾಲೆ. ೬೪-೪) ; ಬಾಳ ಗುಬ್ಬಿಗೆ ಗುಟುಕಿವಾಗಲಿ ಬಾಳ ತೊರೆಯುಲಿ ಹರಿಯುಲಿ (ಕಲ್ಲೋಲ. ೧-೧೨).

**ತೊಱೆತೊಱೆ, ತೊರೆತೊರೆ** (ದ್ವಿರುಕ್ತಿ) : ನಡುಗಿತಿಳೆ . . . ಹೆಮ್ಮರ ನುಡಿದು ಬಿದ್ದವು ಸಲಿಲವುಕ್ಕಿತು ಕೂಡೆ ತೊಱೆತೊಱೆ [ಪಾಠಾಂ. ಕೆಱೆ ತೊಱೆ]ಯ(ಕುವ್ಯಾಸ.೧೫-೪೩); ತೊರೆತೊರೆಯಾಗಿ ಹೊಳೆಬಸಿಯುತಿಹುದು (ಇಂಗೀತ. ೬೧-೧೧). **ತೊರೆ ಬಸಿ** = ಪ್ರವಾಹದಂತೆ ಉಕ್ಕಿ ಹರಿ : ಕಣ್ಣೀರು ತೊರೆಬಸಿವೆರಡು ತೋಳ್ಗಳಂ ಮುನ್ ಚಾಚಿ (ಶ್ರೀರಾಮಾ. ೬೯೬-೪೮೯).
**ತೊಱೆಗಳಾಣ್ಮ** = ನದಿಗಳ ಒಡೆಯ,–ಅಧಿಪತಿ ; ಸಮುದ್ರ : "ತೊಱೆಗಳಾಣ್ಮಂ ಮುನ್ನೀರ್, ನೀರೊಟ್ಟಿಲ್ (ಕಡಲ್) – ಈ ೪ ಸಮುದ್ರಂ" (ಕಶಸಾ. ೮-೧೪೧) ; "ಮುನ್ನೀರ್ ನೀರೊಟ್ಟಿಲುಮೆಂದೆನ್ನುತ್ತುಂ ತೊಱೆಗಳಾಣ್ಮ ಕಡಲೆನೆಯುಂ ತಾಂ . . . ಸಾಗರಮೆನಿಕುಂ" (ಕವಿಕಂ. ೮೯). **ತೊಱೆದಾಳ್ದ** = ಗಂಗೆಯನ್ನು ಧರಿಸಿದವನು ; ಶಿವ; ತೊಱೆದಾಳ್ದನ ಕಾರ್ಮುಕದ ಸಿಂಜಿನಿಯಿಂದೆ ನೆಱೆ ಬಾಗಿಸಿದರೆಂಬಂತೆ (ಮೋಹತ. ೨-೩೬). [ದೇ.॥ ತಮಿ. ತುಱೈ; ಮಲ. ತುಱ; ತುಳು. ತುದೆ]
**ತೊಱೆಕಡವ** (ನಾ). ನದಿಯ ತೀರದಲ್ಲಿ ಬೆಳೆಯುವ ಕಡವ ವೃಕ್ಷ "ನದೀಕದಂಬಃ – ತೊಱೆಕಡವ" (ಓಷಧಿ. ೮೪).

[ ತೊಱೆ₂ + ಕಡವ₁ (< ಕಡಂಬ) ]

**ತೊಱೆಕಾರಾಟ್ಟಿ** 'ತೊಱೆಕ್ಕಾರಾಟ್ಟಿ' ನೋ.
**ತೊಱೆಕ್ಕಾರಾಟ್ಟಿ, ತೊಱೆಕಾರಾಟ್ಟಿ** (ನಾ). ಒಂದು ಸ್ಥಳದ ಹೆಸರು : ತೊಱೆಕ್ಕಾರಾಟ್ಟಿಉ ಪೆಕ್ಕ ವಿಯಮುವೊಲ್ಗೊಗೆಯು ಕೂಡಲೂರು (ಎಕ. IV, ಗುಂಡ್ಲುಪೇ. ೮೮-೪ ; ಸು. 750). **ತೊಱೆಕಾರಾಟ್ಟಿ :** ಶ್ರೀಮತು ತೊಱೆಕಾರಾಟ್ಟಿಯ ಆಚಯ್ಯನ ಮಗಂ ಕೇಸವಭಟ್ಟಂ ದೇಗುಲವಂ ಮಾಡಿಸಿ . . . ಕೊಟ್ಟ ಭೂಮಿ (ಎಕ. IV, ಗುಂಡ್ಲುಪೇ. ೯೩-೨೦; 1049).

[ ℙ ಇದು 'ತೊಱೆಕಾರರ ಹಟ್ಟಿ ಇರಬಹುದೆ' ? ]

**ತೊಱೆಗಟ್ಟು** (ಕ್ರಿ). ಪ್ರವಾಹವಾಗು ; ಪ್ರವಹಿಸು : ಕಾಳಮೇಘವೆಂಬ ಭೂಮಿಯಲ್ಲಿ ಕಾಳರಾತ್ರಿಯೆಂಬ ಏರಿಗಟ್ಟಿ ಮಂಜಿನ ನೀರು ತೊಱೆಗಟ್ಟಿ ಹಾಯ್ದು ತುಂಬಿತ್ತು (ವಚಸಂ. ೫೪೬-೧). [ ತೊಱೆ₂ + ಕಟ್ಟು₁ ]
**ತೊಱೆಗಣಗಿಲೆ, ತೊಱೆಗಣಗಿಲು, ತೊಱೆಗಣಗಿಲೆ** (ನಾ). (ತೇವದ ನೆಲದಲ್ಲಿ ಬೆಳೆಯುವ) ಒಂದು ಬಗೆಯ ಕಣಗಿಲೆ. "ನಿಚುಲ, ಅಂಬುಜ, ಹಿಜ್ಜಲ = ತೊಱೆಗಣಗಿಲೆ" (ನಾಚಿರಾ. ೬) ; "ತೊಱೆಗಣ[ಪಾಠಾಂ. ಣೆ]ಗಿಲಾ ಲೋಮಕಂ ಪಿಚುಳಮದು" (ಮಂಗರಾ. ೩೪-೧೧). **ತೊಱೆಗಣಗಿಲು :** "ರಕ್ತಕಾರ್ಮುಕಃ– ತೊಱೆಗಣಗಿಲು" (ಓಷಧಿ. ೧೩೫); ತೊಱೆಗಣಗಿಲ ಕತ್ತರಿಯೆಸೆವ ಮೂಲವುಂ ಕತಕಕುಜಾವಳಿಯ ಪರಿಪಕ್ವ ಫಲರಸ ಜಳದಿಂದರೆದು (ಖಮದ. ೭-೨೦). **ತೊಱೆಗಣಗಿಲೆ :** "ನಿಚುಲಃ, ಹಿಜ್ಜಲಃ, ಅಂಬುಜಃ ಈ ೩ ತೊಱೆಗಣಗಿಲೆ ಹೆಸರು" (ನಾಚಿರಾ. ೧೦೮).

[ ತೊಱೆ₂ + ಕಣಗಿಲೆ₁ ]

**ತೊಱೆಗಣಜಿಲು, ತೊಱೆಗಣಜಿಲು, ತೊಱೆಗಣಜಿಲೆ** (ನಾ). (ತೇವದ ನೆಲದಲ್ಲಿ ಬೆಳೆಯುವ) ಒಂದು ಬಗೆಯ ಸಸ್ಯ : "ದೀರ್ಘಪತ್ರಃ– ಕಮ್ಮತ್ತಿ, ತೊಱೆಗಣಜಿಲು, ನೀರಿಪ್ಪೆ, ಹಬ್ಬೆಯ ಭೇದ" (ಓಷಧಿ. ೭೭).
**ತೊಱೆಗಣಜಿಲು:** ನೆಱೆ ಕು(ದಿ)ಸಿ ಕಟ್ಟುಗಿಂ ತೊಱೆಗಣಜಿ[ಪಾಠಾಂ. ಗಿ]ಲ ದಳಮನಾದೊಡಂ ಬಾತ ವಿಷಕ್ಕುಱಿಸಲ್ಯುಪನಾಹದೆ ತೊಱೆಯುಱುಗುಂ (ಖಮದ. ೧೬-೭೨). **ತೊಱೆಗಣಜಿಲೆ:** ನಱುವಲ್ ಮಗ್ಗಾರೆಯ ಕಾಯ್ ತೊಱೆಗಣ(ಜ)ಗಿಲೆ ದೇವದಾಳಿ . . . ಇವನರೆಯಲ್ ಜಲದಿಂದೆ ಫಣಿಯ ವಿಷನಿರ್ಹರಣಂ (ಖಮದ. ೫-೧೦೪).

[ ತೊಱೆ₂ + ಗಣಜಿಲು (< ಗಣಜಿಲೆ₁)

**ತೊಱೆಗಣಗಿಲು** 'ತೊಱೆಗಣಗಿಲೆ' ನೋ.
**ತೊಱೆಗಣಗಿಲೆ** 'ತೊಱೆಗಣಗಿಲೆ' ನೋ.
**ತೊಱೆಗಣಜಿಲು** 'ತೊಱೆಗಣಜಿಲು' ನೋ.
**ತೊಱೆಗಣಜಿಲೆ** 'ತೊಱೆಗಣಜಿಲು' ನೋ.
**ತೊಱೆಗರೆ₁, ತೊರೆಕರೆ** (ನಾ). ಹೊಳೆಯ ತಡಿ ; ನದೀತೀರ : ಕಡಲ ಕಡೆಯಲ್ಲಿ ಸಾರ್ಚಿರ್ಪುದೋ ಆತರ್ ಮೋಱನದ ತೊಱೆಗರೆಯ ತೆಮಿಸಿರದೆ ಎಂದಾನುಮೊರ್ಮೆ ಮನೆ ಮಾಟ್ಟರನ್ (ಬಡ್ಡಕ. ೩೮-೮೩೨). **ತೊರೆಕರೆ :** ಗೋವತ್ಸಲೀಲೆ ತೊರೆಕರೆಯ ಮೇಲೆ ವನಪಾಟಿ ಸಜ್ಜಿಸಾಲೆ (ಸೂರ್ಯಪಾ. ೩೫-೧). [ ತೊಱೆ₂ + ಕರೆ₄ ]
**ತೊಱೆಗರೆ₂** (ನಾ). ಒಂದು ಸ್ಥಳದ ಹೆಸರು : ಲೋಕಾಪುರಂ ಪನ್ನೆರಡು ತೊಱೆಗರೆಯಱುವತ್ತು ಇನ್ತು ಮೂವತ್ತೊಱ್ಚಾಸಿರದ ನೂಱಿರಡು ಬಾಡಮಂ ಲೋಕಟೆಯರಾಳೆ (ಎಕ. VII, (S), ಶಿಕಾರಿ. ೩೬೮-೭ ; 902). 'ತೊಱಗಲೆ ಪರಾ'. [ ? ]
**ತೊಱೆದಡಿ** (ನಾ). = ತೊಱೆಗರೆ₁ : ಬಿಲ್ಲವಳ್ಳಿಗಳೆಲ್ಲಂ ತೊಱೆದುವು ತೊಱೆದಡಿಗಳನಾರ್ ತೊಱೆಯುದರನುಕೂಲವೃತ್ತಿಗೆಟ್ಟೆಸಗುವರು (ಜಗವಿ. ೪-೧೧) ; ಅಂದು ನಮ್ಮನು ರಜತವಾಳುಕಿಯೆಂದೆನಿಪ ತೊಱೆದಡಿಯೊಳೀತನು ಬಂದು ಬಂಧುವೆಯಾಗಿ ರಕ್ಷಿಸಿದನು (ಸಾಳ್ವಭಾ. ೧೭-೯೦).

[ ತೊಱೆ₂ + ತಡಿ₂ ]

**ತೊಱೆದಲೆಯ** (ನಾ). ತಲೆಯಲ್ಲಿ ನದಿಯನ್ನು ಧರಿಸಿದವನು ; ಗಂಗಾಧರ ; ಶಿವ : ತೊಱೆದಲೆಯನ ಮುಂದಲೆಗೆ ಸೀಸಕವನಳವಡಿಸಿ, ಫಣಿಕುಂಡಲನ ಕರ್ಣಕ್ಕೆ ಮಕರಕುಂಡಲಮನಿಟ್ಟು (ರಾಜಶೇ. ೧೩೧-೯೦).

[ ತೊಱೆ₂ + ತಲೆ₁ + – ಅ₇ ]

**ತೊಱೆದವನ, ತೊರೆದವನ** (ನಾ). ನೀರಿರುವ ಜಾಗದಲ್ಲಿ ಬೆಳೆಯುವ ಒಂದು ಬಗೆಯ ದವನ : "ತಪೋಧನಃ – ಬೋಟತಱ, ತೊಱೆದವನ" (ಓಷಧಿ. ೬೬) ; ಗಿಣಿಮೂಗನ ಬೇರ್ ತೊಱೆದವನ ತೊಟ್ಟ ಮುಸ್ತೆಯ ನುಱೆ ಚೂರ್ಣಿಪುದು (ಖಮದ. ೫-೯೪). **ತೊರೆದವನ :** "ವನಾದೀ – ದವನ, ತೊರೆದವನ" (ಓಷಧಿ. ೧೪೯). [ ತೊಱೆ₂ + ದವನ ]
**ತೊಱೆನಾಡು** (ನಾ). ಒಂದು ಪ್ರದೇಶದ ಹೆಸರು : ಮಿದಿಯುರಸರ್ ತೊಱೆನಾಡಯ್ನೂಱುಂ . . . ಆಳೆ (ಎಕ. IV, ಹೆಗ್ಗಡ. ೯೩-೩ ; ಸು. 740) ; ಎಱೆಗಙ್ಗ ನಾಮಧೇಯಃ ತೊಱೆನಾಡು ಅಯಿನೂಱು[ಂ] . . . ಆಳೆ (ಇಆ. XIV, ೨೩೨-೪೯ ; ಸು. 9ನೆಯ ಶತ).

[ ತೊಱೆ ? + ನಾಡು ]

**ತೊಱೆನಾಯ್** (ನಾ). ನೀರುನಾಯಿ: ತೊಱೆನಾಯ್ ಸತ್ತೆಡೆಯ ಮಾಣ್ ಶುಕಾಸ್ಯಂ ಮದ್ಯಂ ಮುಱಿದೊಂಡೆಯುಬಿವಂ ಪೆಸರಱಿಯದ ಬಾಹುಗಳೊಳೊರಸೆ ಪೊಱಸಿ(ಸು)ಗೆ ಪೋಕುಂ (ಲೋಕೋಪ. ೯-೨೦೨).

[ ತೊಱೆ₂ + ನಾಯ್ ]

**ತೊಱೆಮತ್ತಿ** (ನಾ). ೧. ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮತ್ತಿಗಿಡ : "ನದೀಸರ್ಜಃ, ವೀರತರುಃ ಈ ೨ ತೊಱೆಮತ್ತಿ" (ನಾಚಿಂ. ೧೦೭) ; "ತೊಱೆಮತ್ತಿ ನೀತಿ ಕಕುಭಾಖ್ಯಾನಂ" (ನಾಸಾರ. ೧೨೯) ; "ನದೀಸರ್ಜಃ – ಮತ್ತಿ, ತೊಱೆಮತ್ತಿ" (ಓಷಧಿ. ೮೩).

೨. ಒಂದು ಬಗೆಯ ಸಸ್ಯ: "ಮುರುಕಿಲಾ ತೊಱೆಮತ್ತಿ ಸಿಂಧುಕಿ ಯೆನಿಕ್ಕುಂ" (ಮಂಗರಾ. ೩೩-೧೪). [ ತೊಱೆ$_2$ + ಮತ್ತಿ$_2$ ]

**ತೊಱೆಮಲ್ಲಿಗೆ** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮಲ್ಲಿಗೆ: ತೊಱೆಮಲ್ಲಿಗೆಯುಂ ಪ್ರವಿಲೇಪನಮಂ ಮಾಡುತ್ತವಿರಲ್ಕಚ್ಚರಿಯಿ ದೆಂಬಿನಂ ಕ್ರಿಮಿ ಕಿಡುಗುಂ (ಲೋಕೋಪ. ೯-೧೧೩); ತೊಱೆಮಲ್ಲಿಗೆ ಪುನ್ನಾಗಂ... ತೊಟ್ಟ ಮುಸ್ತೆಯನುಱೆ ಚೂರ್ಣಿಪುದು (ಖಮುದ. ೫-೯೪). [ ತೊಱೆ$_2$ + ಮಲ್ಲಿಗೆ ]

**ತೊಱೆಮಾವು, ತೊರೆಮಾವು** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮಾವಿನ ಮರ: ತೊಱೆಯ ಮಾವು = ತೊಱೆಮಾವು (ಶಮದ. ೧೬೨ ಪ್ರಯೋ); ಹಲಸು ಕೊಡಸಿಗ ಮಾವು ಕೊ[ಪಾಠಾಂ. ತೋ] ಱೆಮಾವುಲಿಯ ಕಣಗಿಲು ... ಹಾದರಿಯಮರ ಮೊದಲಾದುವುರ್ವಿಹವು (ಸಾಳ್ವಭಾ. ೫-೩). **ತೊರೆಮಾವು**: "ಆಮ್ರುಪತಾಕಾ – ತೊರೆಮಾವು" (ಓಷಧಿ. ೧೨). [ ತೊಱೆ$_2$ + ಮಾವು ]

**ತೊಱೆಯ, ತೊರೆಯ** (ನಾ). ೧. ಮೀನು ಹಿಡಿಯುವವನು; ಮೀನು ಗಾರ; ಬೆಸ್ತ: ಅರ್ಥವುಂಟೆಂದಹಂಕರಿಸಿ ಮಾಡುವನ ಭಕ್ತಿ ತೊತ್ತಿನ ಕೂಟ ತೊಱೆಯನ ಮೇಳದಂತೆ [ಪಾಠಾಂ. ತೊತ್ತಿನ ಕೂಟದ ತೂರ್ಯರ ಮೇಳದಂತೆ](ದೇದಾಮ೩೦-೫೩).ಕಾಡತುಱುಕಾಱನೋ ಮೀನ್‌ಬಿಡಿವ ತೊಱೆ ಯನೊ(ಅಶ್ವತ್ಥಾ. ೩೬-೩೮೮). **ತೊರೆಯ**:೧."ಬಿಸ್ತ್ರ=ತೊರೆಯಂ"(ಕಾರಕ್ಕ. ೨೬೦); ಇಲ್ಲಿಯ ಬೆಸಮಕ್ಕಳಾರೆನ್ನೊಡೆ ಕಾಱೆಗೊಡೆಯನುಂ . . . ತೊರೆಯರಾಳ ಪಡಿಯನುಂ (ಎಕ. III, ನಂಜನ. ೧೩೪-೯; 915 ?); ಸ್ವಸ್ತಿ ಶ್ರೀಮತ್ ಪಱಮೆಯರ ಕುಲದ ತೊರೆಯರ ಮಾರಣ್ಣಗಂ ಅನ್ನವ್ವೆಯಕ್ಕಂಗಂ ಪುಟ್ಟಿದ ವರ ತಾತಣ್ಣ (ಎಕ. IV, ಗುಂಡ್ಲುಪೇ. ೮೪-೨; 1000 ?); ೨. ದೋಣಿ ನಡೆಸುವವನು; ಅಂಬಿಗ: ಪಡುವ ದಿಬ್ಬದ ಗೌಡನೊಬ್ಬನು ಬಿಡದೆ ತೊರೆಯನ ಕೂಗಿಕೊಂಡನು (ಇಂಗೀತ. ೬೬-೨); ತೊರೆಯರರೆಯಾ ಏಕೆ ನಿನ್ನಹೊತ್ತಿಗಲ್ಲದೆ ಬಾರೆ ಮುನ್ನ? (ಗೀವಿಂ. ೫೫-೩೩). [ ತೊಱೆ$_2$ + – ಅ$_7$./ತಮಿ. ತುಱೈಯ ]

**ತೊಱೆಯಣುಗ** (ನಾ). ನದಿಯ ಮಗ; ಗಾಂಗೇಯ; ಭೀಷ್ಮ: ತೊಱೆಯಣುಗನು ಪರಿತಂದು ಅಱುಗುಲಿ ಕೌರವನಾಡುವ ಜೂದಿನ ತೆಱನನು ಧೃತರಾಷ್ಟ್ರಗುಸುರೆ (ನೇಮಿಸಂ. ೨೪-೩೬). [ ತೊಱೆ$_2$ + ಅಣುಗ (<ಅಣುಂಗ) ]

**ತೊಱೆಯಿಂಗುಳ, ತೊರೆಇಂಗುಳ** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಇಂಗುಳದ ಗಿಡ: "ತೊಱೆಯಿಂಗುಳಂ ದುರಾಲಂಬ ಮೆನಿಸಿಕ್ಕುಂ" (ಮಂಗರಾ. ೩೬-೧೬). **ತೊರೆಇಂಗುಳ**: ನೆಲಗುಳ್ಳ ತೊರೆ ಇಂಗ[ಗು]ಳ ... ಕಷಾಯ ಕಾಯಿಸಿ, ಹಿಪ್ಪಲಿ ಪ್ರತಿಪಾಕವಿಕ್ಕಿ ಸೇವಿಸೆ ಶ್ಲೇಷ್ಮಜ್ವರ ನಾಶವಾಗುವುದು (ಸಕವೈ. ೮೯). [ ತೊಱೆ$_2$ + ಇಂಗುಳ ]

**ತೊಱೆಯಿಸು, ತೊರಸು, ತೊಱಸು, ತೊಱಿಸು** (ಕ್ರಿ). ೧. ತ್ಯಜಿಸು ವಂತೆ ಮಾಡು: ತವರೂರ ಮಱೆಯಿಸಿ ನಿದ್ರೆಯ ತೊಱೆಯಿಸಿ ಸವಿಗಳ ನೆಱೆಯಿಸಿ . . . ಸುಖದೊಳೋಲಾಡಿಸುವವಗಡ ಯಾತಱಿಂದಾಯ್ತು (ಭರಚ. ೬-೩೯). ೨. ವೈರಾಗ್ಯವನ್ನು ಹೊಂದುವಂತೆ ಮಾಡು; ವೈರಾಗ್ಯದೀಕ್ಷೆಯನ್ನು ಕೊಡು: ಪರಮಾಯುಷ್ಯಾಂತಂಬರಂ ನಿರಾಕುಳ ಮಾಗಿರ್ಪಾ ಯಿರವಿನ ಜೈನಾಭಿಪ್ರಾಯಂ ಪ್ರಾಯೋಪಗಮನದಿಂ ತೊಱೆ ಯಿಸಿದಂ (ಆದಿಪು. ೨-೫೩). **ತೊರಸು**: ೧. ಶರೀರದಭಿಲಾಷೆಯಂ ಕೆಡಿಸುವರೆ ನೆರೆ ಸ್ವಬಂಧುವನೆಲ್ಲ ಮರಸುವಡೆ ತೊರಸುವಡೆ ಶಿರುತಿರುಗಿ (ತಿರುಶ. ೧-೭೮). **ತೊಱಸು**: ೧. ತೊತ್ತುವೇಟಕೆ ಹಡದ ತಾಯನು ತೊಱಸಿದರೋ[ಪಾಠಾಂ. ತೋಱಿದರು] (ತೊರರಾ. ೪-೫೧೧). **ತೊಱಿಸು**: ೧. ಅವನ ಮಾತಾಪಿತರ ತೊಱಿಸಿ[ಪಾಠಾಂ. ತೊಲಗಿಸಿ] ಪ್ರೀತಿಪಡಿಸಿ ಹಣವ ಸೆಳೆದು ರೀತಿಗೆಡಿಸಿ (ಪುರಂದ. ೨-೧೬-೨). ೩. ಕುಗ್ಗಿಸು; ಕಡಿಮೆಮಾಡು: ಕರ್ಪೂರಕ್ಕುಳ್ಳ ಗುಣಂಗಳಂ ತೊಱೆಸಿ ಮಲ್ಲಿಗೆಯೊಳ್ ಸಮನಾಗಿ ತೋರ್ಪ ನೀರುಳ್ಳಿಯ ಗಡ್ಡೆಯಂ . . . ಮೆಲ್ಲದ ಮಾನವನೇನ ಬಲ್ಲವಂ (ಸೂಕ್ತಿಸು. ೧೧-೯೩). [ ತೊಱೆ$_1$ + – ಇಸು$_3$ ]

**ತೊಱೆಯೊಡೆಯ** (ನಾ). ನದಿಯ ಒಡೆಯ,– ಪ್ರಭು; ಸಮುದ್ರ: "ಪಾರಾವಾರ ಶಬ್ದಂ ತೊಱೆಯೊಡೆಯನೆನಲ್" (ಕರ್ಣಾನಿ. ೯೦); ಎಱಗಿದ ನಿಱೆಮುಗಿಲೊಳ್ಪೆಱೆ ಮಿಱುಗುವ ಮಿಂಚುಗಳನುಡಿದು ಪಿಡಿದನೊ ಕಡುಪಿಂ ತೊಱೆಯೊಡೆಯಂ ತೆರೆಗೈಗಳಿನುಱದೆ ಕೆವಿಯ್ಯಾನ್ನಳೇಂ ಮನಂ ಗೊಳಿಸಿದವೋ (ರಾಜಶೇ. ೧-೯೯). [ ತೊಱೆ$_2$ + ಎಱೆಯ ]

**ತೊಱೆವನಿ** (ನಾ). ಪ್ರವಾಹವಾಗಿ ಹರಿಯುವ ಹನಿ: ಒಱೆವನಿಗಳದಿರ್ವನಿ ಮಸ್ತಕವನಿ ತೊಱೆವನಿಗಳನಾಂತು ಬಿಡದೆ ನೆಱೆ ವಿಶ್ವರೂಪಾದಂತೆ ಸಂತತಧಾರೆ ಸುರಿದುದೀಗಳೆಯಿಳೆಯೊಳಗೆ (ಮೋಹತ. ೪-೩೯). [ ತೊಱೆ$_2$ + ಪನಿ$_2$ ]

**ತೊಱೆವರಿ** (ಕ್ರಿ). ತೊರೆಯಾಗಿ ಹರಿ; ನದಿಯಾಗಿ ಪ್ರವಹಿಸು: ಕಱೆಯ ಬಱುಗೆಱೆಯಾಗಲೀಕ್ಷಿಸಿ . . . ನೀರಿದೆ ಕೊಳ್ಳಿಯೆಂದು ಕಮಂಡಲವ ಮಗುಗೆ ತೊಱೆವರಿದುದು (ಸಾಳ್ವಭಾ. ೩೦-೩೬). [ ತೊಱೆ$_2$ + ಪರಿ$_2$ ]

**ತೊಱೆವಳಿ, ತೊರೆವಳ್ಳಿ** (ನಾ). ಒಂದು ಊರಿನ ಹೆಸರು: ತೊಱೆವಳಿಯ × × × ಗಟಿದ್ದ (ಎಕ. VI, ಚಿಕ್ಕಮ. ೬೦-೨೦; 1058 ?). **ತೊರೆವಳ್ಳಿ**: ಪಡುವಣ ತೊರೆವಳ್ಳಿಯ ಬಾಸಂಬಾಳ್ಳಿಯೂರ ಮುಂದಣ ಕೆಱೆಯೊಳ್ (ಎಕ. IV,ಮೈಸೂರು. ೩೬-೧೫; ಸು. 990?); (ಮೈಆರಿ. ೧೯೧೬, ೨-೧೫ ನೋ). [ ? ]

**ತೊಱೆವಾಯ್** (ಕ್ರಿ). ನದಿಯನ್ನು ದಾಟು: ನಗುತ ತೊಱೆವಾಯ್ವಂಬಿ ಗರ ಗಂಡನೆಂಬ ಕೀಳ್ಬಗೆ ನಿಮಗೆ ನೈಜ (ಸಿಂಗಿರಾ. ೪೪-೧೧). [ ತೊಱೆ$_2$ + ಪಾಯ್$_1$ ]

**ತೊಱೆವು** (ನಾ). ಇಲ್ಲವಾಗುವಿಕೆ; ಬಿಟ್ಟುಹೋಗುವಿಕೆ: ವೀರನೆನಿಪಗ್ಗದ ಮಾತದು ದೂರವಾಯ್ತು ನಿಷ್ಠುರನಿವನೆಂಬ ಮಾತು ತೊಱೆವಾದುದು ಪೆಂಪಿನ ಮಾತು ಕೆಟ್ಟುದು (ಧರ್ಮಾಮೃ. ೧೩-೧೧೧). [ ತೊಱೆ$_1$ + – ವು. /ತಮಿ. ತುಱವು ]

**ತೊಱೆವೇಂಟೆ** (ನಾ). ನೀರಿನಲ್ಲಿ ಆಡುವ ಬೇಟೆ; ಮೀನು ಹಿಡಿಯುವಿಕೆ: ಇಂತು ಪನ್ನತಿಕೆಯಿಂ ಪಲವೇಂಟೆಯಾಡಿ ಕಾಡೊಡೆಯಂ ತೋಡಿಲ್ಲದ ತೊಱೆವೇಂಟೆಯಾಡಲು . . . ಪೆರ್ದೊಱೆಗೆಯ್ದಿ ಸಾರ್ದು (ರಾಜಶೇ. ೫-೧೧೪ ವ). [ ತೊಱೆ$_2$ + ಬೇಂಟೆ ]

**ತೊಱೆಹ, ತೊರೆಹ** (ನಾ). ತ್ಯಜಿಸುವುದು; ಬಿಡುವಿಕೆ; ತ್ಯಾಗ: ಸಂಕಾ ಕುಳಂ ಪುಲ್ಲೆಯೊಳ್ ತೊಱೆ[ಪಾಠಾಂ. ಱ]ಹಂ ಕ್ಷೀಣಮದಂಗಳೊಳ್ ಬಡತನಂ ಸ್ತ್ರೀಮಧ್ಯದೊಳ್ . . . ಅಲ್ಲದಿಲ್ಲ ಪೆಱತೇನಾರಯ್ವಡಾ ದೇಶದೊಳ್ (ಪುಣ್ಯಾಸ್ರ. ೧-೧೧೩). **ತೊರೆಹ**: ತೊರೆಹ: (ಅಧಿಕಾರ, ಹಕ್ಕು, ಬಾಧ್ಯತೆ, ಮೊ.ಗಳ) ವಿಧಿಗನುಸಾರವಾದ ಪರಿತ್ಯಾಗ (Abdication. ಇಂಕನಿ). [ ತೊಱೆ$_1$ + – ಹ$_2$ ]

**ತೊಱೊಗಂಗ** (ನಾ). (?): ಸರಿಸೆ ತೊಱೊಗಂಗಗೆ ಕಟ್ಟಿದ × ಡಿಯೆ . . . [ಯ]ದು (ಸಾಇಇ. XX, ೨೯-೨೨; 1044). [ ? ]

**ತೊಱ್ಱುಳಿದುಳಿ** 'ತೊಟ್ಟುಬಿದಂಟು' ನೋ.

**ತೊಟಕಲ್** (ನಾ). ತಿರುಗುವಿಕೆ; ಸುತ್ತುವಿಕೆ: "ತೊಟಕಲ್ ತೊಟಲ್ವುದು" (ಶಮದ. ಪರಿ. ೧). [<ತೊಟಲ್$_1$ + – ಕಲ್$_4$ ]

**ತೊಟಲ್$_1$, ತೊಳಲ್$_1$, ತೊಳಲು$_1$, ತೊಟಲು** (ಕ್ರಿ). ೧. ತಿರುಗಾಡು; ಸಂಚರಿಸು; ಅಲೆದಾಡು: ಚರಿಗೆವೊಕ್ಕಡವಿಯಂ ತೊಟಲ್ವಲ್ಲಿಯೊಂದು ಮರದ ಪೊಟಲೊಳಿರ್ದು (ವಡ್ಡಾರಾ. ೮೯-೬); ಅಂತು ಭರತೇಶ್ವರಂ

ಸಕಳಾಂತಃಪುರಸಹಿತಮಲ್ಲಿ ವಿಶ್ರಮಿಸಿ ವನಾಭ್ಯಂತರಮಂ ತೊಟಲೆ (ಆದಿಪು. ೧೧-೮೩); ಒಂದು ದಿವಸಂ ಯುವರಾಜನಿಂದ್ರಾಯುಧಮನೇಱಿ ಬೇಂಟೆಯ ವಿನೋದದಿಂ ತೊಟಲುತ್ತುಮಿರೆಯುರೆ (ಕಾದಂಪೂ. ೬೧೭) ; ಈ ಕಾಂತಾರದೊಳ್ ವ್ಯಾಧರಾಗಡೆಯತ್ಯಾಗ್ರಹದಿಂ ತೊಟಲ್ವರ್ (ಪಂಚತಂ. ೯೭-೧೮) ; ಶಾಸ್ತ್ರದಪೇಕ್ಷೆಯಿಂದೆ ತೊಟಲುತಿರ್ದಂ ಧರಾಮಧ್ಯದೊಳ್ (ನೇಮಿಪು. ೩-೧೭೨) ; ನೀಂ ತೊಟಲದ ಪಟ್ಟಣಂ ಪುಗದ ನಂದನಂ . . . ಅವುದು (ಜಗವಿ. ೧೭-೧೨೩) ; ಗಗನದೊಳೂರ್ಮೆಯುಂ ತೊಟಲುತಿರ್ಪ ವಿಯಚ್ಚರಸಂಕುಲಕ್ಕೆ . . . ಫಲಸಾರಮನಿತ್ತು (ಕುಸುಮಾ. ೯-೨೭). ೨. (ಸಂಸಾರಚಕ್ರದಲ್ಲಿ) ತಿರಂಗಂ ; ಸಂತ್ತಿ ಬರಂ ; ಭ್ರಮಣೆ ಹೊಂದಂ : "ತೊಟಲ್-ಭ್ರಮಣೇ" (ಶಮಧಾ) ; ಬಗೆದೀಡಾಡೆ ದುರಂತ ದುಃಖತತಿಗಳ್ . . . ಇನ್ನೆಗಮೋರಂತೆ ತೊಟಲ್ದನಿಂ ತಿರಿಯಲಾಱೆಂ ಭವಾಂಭೋಧಿಯೊಳ್ (ಆದಿಪು. ೯-೬೦) ; ಅರ್ಧಚಕ್ರವರ್ತಿಯಾಗಿ ಭೋಗಂಗಳನುಂಡು ಮತ್ತಂ ಸಂಸಾರಚಕ್ರದೊಳ್ ತೊಟಲ್ದು ಕಡೆಯ ತೀರ್ಥಕರನಕ್ಕುಂ (ಚಾವುಂಪು. ೫೧) ; ಗಾಣದೆತ್ತಿನಂತೆ ನಿಯಮಂಗೆಟ್ಟು ತೊಟಲುತ್ತಿರದೆ ಆಲದ ಬಿಟಲಂತೆ ನೆಲಕ್ಕೆಱಗದೆ (ಧರ್ಮಾಮೃ. ೫-೯೯). ೩. ಸುಳಿದಾಡಂ ; ಸಂಚಲಿಸು; ಹೊಳೆ : ಸುಭದ್ರೆಯ ರೂಪು ಕಣ್ಣ ಪಾಪೆಯಂತೆ ಕಣ್ಣೊಳೆ ತೊಟಲೆ (ಪಂಪಭಾ. ೪-೬೯ ವ) ; ಕಣ್ಣೊಳ್ ತೊಟಲ್ವಂದದಿಂದಾ ನಿದ್ರಾಂಗನೆ ಸೂಟ್ಗಿವಂದಳಿರುಳೊಳ್ ತತ್ಪೇಚರಾಧೀಶನಾ (ಶಾಂತಿಪು. ೫-೮೧); ಪ್ರಿಯೆಯ ಭಂಗಿ ತೊಟಲ್ದಪುದೆನ್ನ ಚಿತ್ತದೊಳ್ (ಶೃಂಗಾರ. ೩-೩೮) ; ಎನ್ನ ಚಿತ್ತಮಂ ನೋಯಿಸೆ ಕಣ್ಗಳೊಳ್ ತೊಟಲು ತಿರ್ದಪನಂಗಜಂ (ಬಂಹರಿ. ೮-೫೫) ; ಉಲಸುವ ಮೆಯ್ಯುಮಾಗುಳಿಸು ವಾನನಮುಂ ನಯದಿಂ ತೊಟಲ್ವ ಕಣ್ಮಲರುಂ (ಪುಸ್ಪಪು. ೪-೧೫). ಪೆಣ್ಣು ಕಣ್ಣೊಳ್ ತೊಟಲೆ ಧೈರ್ಯಂಗೆಟ್ಟು ಬಾಯ್ವಿಟ್ಟು ಕನ್ಯಾರತ್ನಂ ತನಗೆಂತು ಸಾಧ್ಯಮಪ್ಪುದೆಂದು ವಿಚಾರಿಸಿ (ಪುಣ್ಯಾಸ್ರ. ೩-೪೨ ವ) ; ೪. ಗಸ್ತು ತಿರುಗಂ; ಪಹರೆ ಮಾಡಂ: "ಗರವಟಿಗೆವಂದಂಗೆ ಮತಿಗೆಟ್ಟವಂಗಂ ತೊಟಲ್ದುದೆಂದೆಂಬ ನಾಮಂ" (ಸಂಜೀವ. ೧೪); ರವಿಕಿರಣನಿಕರದ ತೆಱದಿಂ ತೊಟಲುತ್ತುಮಿರ್ಪ ದಂಡಕನೆಂಬಾ ತಳಾಱಿಂ ಕಂಡು(ಧರ್ಮಾಮೃ.೨-೧೨೬). ೫. ಹೋಗು; ಗಮಿಸು; ನಡೆ : ಇಡುವಂತೆ ಪುಯ್ಯಲಂ ತಮ್ಮ ಕರಾಗ್ರದೊಳ್ ತೊವಲನಾಂತು ನೆಟಿಲ್ಗೆ ತೊಟಲ್ದವಾನೆಗಳ್ (ಚಾಧಪು. ೪-೮೨). ೬. ಸುತ್ತಾಡಿ ಪ್ರಚಾರ ಮಾಡು : ಆತಂಗೆಯಾತನ ಬೇಡುವುದೆಲ್ಲಮಂ ಕುಡುವೆನೆಂದು ತೊಟಲ್ವ ಗೋಸಣೆಯುಂ . . . ಅರಸಂ ಕೇಳ್ದು (ವಡ್ಡಾರಾ. ೫೦-೨೨). ೭. ಹುಡುಕು; ಶೋಧಿಸು: ಕುರುಡಕರ್ರುಡರ ಬಟೆಯಂ ಪರಿಪರಿದುಂ ತೊಟಲ್ವತೆಱದೆ (ಸಮಪ.೧೦-೧೮೪);ಎಣ್ಬಟ್ಟೆಗಳೊಳ್ ನೃಪನಂ ಕಾಣ್ಬನ್ನಂ ತೊಟಲಿಮೆಂದು ... ಒಂದೊಂದು ದೆಸೆಗೆ ಪೂಱಮಟ್ಟಿಗಳ್ (ದಶಕು. ೪-೧೯). ೮. ಕಷ್ಟಪಡಂ ; ಹಿಂಸೆಪಡಂ ; ಸಂಕಟಗೊಳ್ಳು : ಮನದೊಳ್ ತೊಟಲುತ್ತಂ ತಾಂ ಮನವೊಲ್ಲದೆ ತನಗೆ ಸೇವಮೆಂದೆನು ತೊರೆದಳ್ (ಕಾದಂಉ. ೫೦) ; ಮೂಱುಂ ಭುವನದೊಳಂ ತೊಟಲುತಿರ್ಪ ಜೀವಾವಳಿಯಂ ಭುವನಾಗ್ರಕ್ಕೆಯ್ದುಸುವರ್ತವತವಗೆ ಪಿರಿಯರಾ ಮಹಾತ್ಮರೆ ಜೈನರ್ (ಸಮಪ. ೪-೯೫) ; ಚೊಚ್ಚಲ್ ಪೆಱುವಳಂತೆ ತೊಟಲುತ್ತುಂ (ಧರ್ಮಾಮೃ. ೧-೧೬೦); ಮೃಗಾವಳಿ ತೃಷೆಯಿಂ ತೊಟಲ್ದು ಪರಿತಾಪಮನ್ಯೆದೆ ವನಾಂತರಾಳಮಂ ಬಳಸಿ ದವಾನಳಂ ಬಳಸಿತುಷ ಮರೀಚಿಮರೀಚಿಸಂಚಯಂ (ಉದ್ಭಟ. ೯-೮೪) ; ಎರೆವರ್ ತಮ್ಮಯ ಬಡತನದಿರವಿಂಗೆ ತೊಟಲ್ವರ್ (ದಶಕು. ೬-೧೧೫) ; ಈ ಪರಿಯ ತೊಟಲುತ್ತುಮವಸರದೊಳಾನ್ ತಳ್ವಿ ಬಿಡುಮಾಗಿ ಪರಿದೆನ್ (ಅಂತಿಗೊ. ೧೧-೨೧೩). **ತೊಳಲ್$_1$ :** ೧. ಅಱಸಿ ತೊಳಲಿದರಿಲ್ಲ . . . ತಪಸ್ಸು ಮಾಡಿದರಿಲ್ಲ ಅದು ತನ್ನ ತಾನಹ ಕಾಲಕ್ಕಲ್ಲದೆ ಸಾಧ್ಯವಾಗದು (ಮಹಾದೇ. ಬ. ೬೪-೧೫೭) ; ಕೂಡ ಹಡೆಯದೆ ತೊಳಲ್ವ ನವಿಲ ತಂಡಂಗಳಂ . . . ನೋಡುತುಂ ಕೊಂಡಾಡುತಿರ್ದನಾ ವನದೊಳಗೆ (ನಂಬಿರ. ೫-೧೦೫). ಸತತಮುಂ ಕಾಲು ನಿಲ್ಲದೆ ತೊಳಲ್ವ ಸೂರ್ಯನು ದೈವವೆಂತಹನು (ಬಸಪು. ೫೪-೧೨) ; ಬನದೊಳು ಬೇರು ಬಿಕ್ಕೆಯನಱಸಿ ತೊಳಲ್ದುದು ಸಾಲದೇ (ಕುಮಾವಿ. ೯-೪೦) ; ಅಱಸಿ ಕಾಲ್ಗೆಱಗುವೆನೆನುತೆದ್ದು ತನು ತರಹರಿಸುತೆ ತೊಳಲ್ದಳಾಲಯವ (ಮೋಹತ. ೨೭-೪೯). ೨. ತ್ರೇತೆಯಲಿ ರಘುರಾಮನಾಮದಿ ಸೀತೆಯಂ ಹೋಗಾಡಿ ದಶಶಿರದಾತನಿಂ ಬ್ರಹ್ಮತಿಗೆ ಸಿಕ್ಕಿ ತೊಳಲ್ದಱಸುತಿರನೇ (ಬಸಪು. ೫೪-೩೯) ; ಶಿವಪದವನಱಿಯದ ತೊರ್ಳಲ್ವರಿಂತು ಭವಾರ್ಣವದೊಳ್ (ಪದ್ಮರಾ. ೧೧-೧೭೭). ೫. ನೆಳಲ ನುಂಗಿದ ಮಾತ್ರದಿಂದ ಬಾನೆಡೆಯೊಳಂ ತೊಳಲಲಾದುದು ಪದಂ (ವೆಂಕಾಶಾ. ೫-೧-೫೬). **ತೊಳಲು$_1$:** ೧. ಬೆಳುದಿಂಗಳು ಬಿಸಿಲಾಯಿತ್ತು ಕೆಳದಿ ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವ (ಮಹಾದೇ. ಬ. ೪೩-೧೦೦); ಆಗಮಂಗಳ ಹಿಂದೆ ತೊಳಲದಿರು ತೊಳಲದಿರು (ಆದವ. ೨೧-೫೫) ; ತೊಳಲಿದೆನು ಮಧ್ಯಾಹ್ನ ಮೊದಲಾಗಿ ಕಡೆಹಗಲ ತನಕ (ಹಜಕಾ. ೧೧-೧೪) ; ವನಿತೆ ನಿಮ್ಮೊಡನೆಂತು ತೊಳಲುವಳನವರತ (ಕುಮಾಸ. ೧೭-೬೨) ; ನಿಮ್ಮಾಜ್ಞೆ ಯೊಳು ಲೋಕಂಗಳ ತೊಳಲಿದೆಂ (ಚಬಪು. ೩-೭) ; ಬಹುದೇಶಂಗಳ ತೊಳಲಿ . . . ಮಣಿಪುರಕೆ ನಡೆತಂದನು (ಜೈಮಿಭಾ. ೧೭ ಸೂಚನೆ). ೨. ತಮ್ಮ ಮಾನಸಿಕ ಪಾಪದ ಫಲವಾಗಿ ಅವರಿಬ್ಬರೂ ತಿರ್ಯಗ್ಯೋನಿಯಲ್ಲಿ ಆರಾರು ಸಲ ತೊಳಲಬೇಕಾಗುವುದು (ಕಾವ್ಯಸ. ೬೩); ಆ ಮೀನ ನುಂಗಿದುದು ಬಳಿಕೊಂದು ಮೀನದಂ ಮತ್ತೊಂದು ಮೀನ್ನುಂಗಿತಾ ಮೀನ ನುಂಗಿತೊಂದು ತೊಳಲುತೊಂದೊಂದನೊಂದಿಂತು ನುಂಗಲ್ (ಜೈಮಿಭಾ. ೬-೮) ; ಯುವಮುಖಸರಸಿಜದೊಳ್ ನೃಪನ ಕಣ್ಗಳೇಂ ತೊಳಲಿ[ಪಾಠಾಂ. ಗಿ]ದವೋ (ರಾಜಶೇ. ೪-೧೧೫). ೭. ಅವನನಱಸಿದ ನಿರುತ ಮಾರುತತನಯ ಕಾಣದೆ ಹಳ್ಳವನು ತೊಳಲಿ (ಸಂಭಪ. ೨೩-೭೬); ಮದುಮಗಂ ಕಾಣದಿರಲು . . . ಕೆರೆ ಕುಂಟೆಗಳನೆಲ್ಲ ತೊಳಲಿ ಪೊನ್ನಂಗೆ ದೊರಕಿದುದಳಲ ಪಾಲು(ಕಾಲೂರ. ೧೭೯-೪೦೫). ೮. ಹಿರಿದಾಗಿ ಮನದಲಿ ತೊಳಲಿದಿರಿ (ನಳಚ. ೨-೪೭) ; ಕಾಲುಗಂಜಿಗಳಲಿ ತೊಳಲಿ ಕೂಲಿ ಮಾಡಿ ಉಂಬ ಹೆಣ್ಣು . . . ಬಂದಳು (ಕವಿಸೋ. ೪೧-೯); ಹಲವು ಯೋಜನೆಗಳ ಸುಳಿಯಲ್ಲಿ ಸಿಕ್ಕಿ ಅವಳು ತೊಳಲುತ್ತಿದ್ದಳು (ತ್ಯಾಗಮು. ೧೬೪); ಹೇಗಾದರೂ ಆಸೆ ಫಲಿಸೀತೋ ಏನೋ ಎಂಬ ಕನಸಿನಲ್ಲೇ ತೊಳಲುವರು (ಶಿಕ್ಷದ. ೬೬೭). **ತೊಟಲು :** ೨. ತ್ರಿಪಿಷ್ಟನರೇಂದ್ರಂ ಭವಮಾಲೆಯೊಳ್ ತೊಟಲಿಯುಂ ತಾನಂತ್ಯತೀರ್ಥೇಶನಪ್ಪನುಮೆಂದಾ ಭರತಂಗೆ ಪೇೞ್ದನೊಲವಿಂ (ಶಾಂತೀಶ್ವ. ೨-೬೫).

[ ದೇ. ‖ ತಮಿ. ಚುಟಲ್ ; ಮಲ. ಚುಟಲು ; ತುಳು. ತುಲಿಪು, ತುಲಿಯು, ಸುಲಿಪು ; ತೆಲು. ಸುಡಿಯು ]

**ತೊಟಲ್$_2$, ತೊಳಲ್$_2$** (ನಾ). ೧. ಸುತ್ತಾಟ ; ತಿರುಗುವಿಕೆ : (+). ೨. ದಿಗ್ಭ್ರಮೆಗೊಳ್ಳುವಿಕೆ ; ತಬ್ಬಿಬ್ಬಾಗುವುದು : (+). **ತೊಳಲ್$_2$ :** ೨. 'ಕಣ್ದೊಳಲ್$_2$' ಪರಾ. ೩. ಬವಣೆ ; ದುಃಖ ; ಚಿಂತೆ : ಕಣ್ಣನೆನ್ನ ಕಣ್ಣಲಿ ನೆಟ್ಟು . . . ತೋಡಿದಳು ತೊಳಲ (ಹೊಂಗಳು. ೧೭-೧೭). [< ತೊಟಲ್$_1$ ]

**ತೊಟಲಿ** (ನಾ). ೧. ಸುತ್ತಲೂ ತಿರುಗುವಿಕೆ. 'ಕಣ್ಣಂದೊಟಲಿ' ಪರಾ. ೨. = ತೊಟಲಿಕಲ್ ೧. : ಕಾಯ್ದ ಶೃಂಖಲೆಗಳಿಂದಪಳಿಸಿಯುಂ ತೊಟಲಿಯೊಳ್ಪೇಸಿಯುಂ ಎಣ್ಣೆಯೊಳ್ಕಾಸಿಯುಂ . . . ಇಂತನೇಕ ಪ್ರಕಾರಂಗಳಿಂ ಪೀಡಿಸಿ (ಪಸಾರ. ೧೪೯). [ ತೊಟಲ್$_1$ + – ಇ$_3$ ]

**ತೊಟಲಿಕಲ್, ತೊಳಲಿಕಲ್ಲು, ತೊಟಲಿಕಲ್ಲು** (ನಾ). ೧. ಮರ ಅಥವಾ ಕಲ್ಲಿನಿಂದ ಮಾಡಿದ ಬತ್ತ ಒಡೆಯುವ ಕಲ್ಲು ; ಬತ್ತ ಬೀಸುವ ಕಲ್ಲು ;

ಒಡೆಗಲ್ಲು : "ತೊಟಲಿಕಲ್ಲಿನಲ್ ಸಂಘಟಿಗೆ ನಾವುಮಕ್ಕುಂ" (ಸಂಜೀವ. ೫) ; ಪಟಯಿಗೆ, ತೊಟಲಿಕಲ್ [ಪಾಠಾಂ. ತೊಟರಿಕಲ್] (ಶಬ್ದಾನು. ೧೪೦ ವ್ಯಾಖ್ಯಾ). ೨. "ತಿರಂವುವ ಗುಂಡು" (ಪ್ರಭಣ್ಣ). **ತೊಳಲಿಕಲ್ಲು :** "ತೊಳಲಿಕಲ್ಲು = ಭತ್ತ ಒಡೆಯುವ ಕಟ್ಟಿಗೆ ಕಲ್ಲು" (ಜಾನಕೋ. ೬೮). **ತೊಟಲಿಕಲ್ಲು :** ೧. ಕೊಡಲಿ ಕತ್ತಿ . . . ತೊಟಲಿಕಲ್ಲ ಅಸುವೆಕಲ್ಲು ಕಲ್ಲೊರಳು ಕಲ್ಗೊನಕೆಯೆಂದಿವು ಮೊದಲಾಗೊಡೆಯುವಂ ಮೊದಲನೆಯ ಅನರ್ಥದಂಡಮಕ್ಕುಂ (ಷಸಾರ. ೩೧೩). [ ತೊಟಲಿ$_1$ + ಕಲ್$_3$ ]

**ತೊಟಲಿಕಲ್ಲು** 'ತೊಟಲಿಕಲ್' ನೋ.

**ತೊಟಿಲು** 'ತೊಟಲ್$_1$' ನೋ.

**ತೊಟಲ್ಕೆ, ತೊಳಲಿಕೆ, ತೊಳಲ್ಕೆ (ನಾ).** ೧. ಅಲೆದಾಡುವಿಕೆ ; ಸುತ್ತಾಟ : ಚತುರ್ಗತಿಭ್ರಮಣರೂಪದಿನನೇಕಕ್ಲೇಶಂಬಡುವ ಜೀವ ರಾಶಿಯ ತೊಳ[ಟ]ಲ್ಕೆಯುಂ ಸಂಸಾರಮೆಂಬುದು (ಷಸಾರ. ೫೩೬). **ತೊಳಲಿಕೆ :** ೧. ತಿಳಿಗೊಳನ ತಂಪಗಿವ ತಕ್ಕೆಯ ತೊಳಲಿಕೆಯ ತಾವರೆಯ ತನಿಪರಿಮಳದ ವಿಸರದ ಹಸರದಲಿ ತೀಡಿದುದು ತಂಗಾಳಿ (ತೊರರಾ. ೨-೭-೩). ೨. ಗಸ್ತು ತಿರಂಗುವಿಕೆ ; ಪಹರೆ : ಗರವೊಟ್ಟಗೆಯ ತೊಳಲಿಕೆ ತೆರಳಿಚಿತು ತೆತ್ತೀಸು ಕೋಟಿಗಳ (ಕುವ್ಯಾಆ. ೨೦-೫೬) ; ಪಾಳಯವು ಗಜಬಜಿಸೆ ತೊಳಲಿಕೆಯಾಳು ನೆರೆದುದು (ಕುವ್ಯಾದ್ರೋ. ೮-೪೪). ೩. **ತೊಳಲಾಟ; ಬವಣೆ:** ಮಱುಗಿದನಂದಿನಿರುಳಲಿ ಕರುಳುಗಳ ತೊಳಲಿಕೆಯ ತಾಪದಲಿ (ತೊರರಾ. ೬-೨೯-೩). **ತೊಳಲ್ಕೆ:** ಹುರಿ ಮಣಲ ಭರವಸಮುಂ ತೊಳಲ್ಕೆಯುಂ ಬಳಲ್ಕೆಯುಂ ಕಾಳೆಗದೂಳಿಗಮುಂ ಕನಿಸಿನೊಳಮಿಲ್ಲೆನಿಸಿ (ಎಕ. XI, ಮೊಳಕಾ. ೨೦-೪೨; 1278 ?). [ತೊಟಲ್$_1$ + – ಕೆ]

**ತೊಟಲ್ಚು, ತೊಳಲಿಚು (ಕ್ರಿ).** ೧. ತಿರಂಗುವಂತೆ ಮಾಡು ; ಸುತ್ತಾಡಿಸು ; ಅಂಗನೆ . . . ಎಟ್ಟುರುತ್ತಿರೆ ಜನಂ ಕಂಡೆಯ್ದೆ ವಿಭ್ರಾಂತಿಗೊಂಡಿರಲಂತಂತೆ ತೊಟಲ್ಚಿ ವಿದ್ಯೆಗಳನಂಗಾಗಾರದತ್ತೊಯ್ಯೆ (ನೇಮಿಪು. ೮-೫೮) ; ವೇದೋದಯಮಘಕೃತಮಂದೇದೊರೆಯನುಮಂ ತೊಟಲ್ಚುಗುಂ ಸಂಸ್ಕೃತಿಯೊಳ್(ವರ್ಧಪು. ೧೩-೨೦); ಅಮಿತಶ್ರಮದಲ್ಲಿಯಳ್ಕಾಡೆ ತೊಟಲ್ಚಿ ತೂಳ್ದು ಕಡುಪಿಂ ಕೆದಱಿಟ್ಟ ಮಹಾಂಧಕಾರಮಂ ಕೂಡೆ ಗುಹಾಳಿಯುಂ ಪುಗಿಸುತಿರ್ದುದು ಚಂದ್ರಿಕೆ (ಕುಸುಮಾ. ೧೦-೧೩). ೨. ಪ್ರಕಟಿಸು ; ಸಾರಂ : ಪೊಟಲೊಳಗೆಲ್ಲಂ ಗೋಸನೆಯುಂ ತೊಟಲ್ಚಿ [ಪಾಠಾಂ. ತಗುಳ್ಚಿ]ದೊಡೆ (ಪದ್ಮರಾ. ೭೮-೪). **ತೊಳಲಿಚು :** ೧. ಅಳಿಯನನು ಕಾಣದೆ ವಿದರ್ಭನು ತೊಳಲಿಚಿದನನುಚರರ ನಾನಾ ಹಳುವದಲಿ ಹಳ್ಳಿಯಲಿ (ತೊರರಾ. ೩-೨-೧೬). [ ತೊಟಲ್$_1$ + – ಚು$_1$ ]

**ತೊಟಲ್ತರ್ (ಕ್ರಿ).** ಸುತ್ತಾಡಿ ಬರು ; ಅಡ್ಡಾಡು : ಮೃಗಯಾವ್ಯಾಜದಿನೊರ್ವ ಶಂತನು ತೊಟಲ್ತರ್ಪಂ ಪಳಂಚಲ್ಕೆ ತನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ ಸೋಲ್ತು (ಪಂಪಭಾ. ೧-೭೦) ; ಕುಂದದ ಮುಗುಳ್ಗಳುಮಸುಗೆಯ ಕೆಂದಳಿರ್ಗಳುಮಬ್ಜದಲರ್ಗಳುಂ ಬೆರಸು ತೊಟಲ್ತಂದಪುವು ತಮಾಳಲತೆಗಳೆಂದಮರರ್ ನೋಡೆ ಚರಿಯಿಪರ್ ವನಚರಿಯರ್ (ವರ್ಧಪು. ೧೦-೧೯). [ ತೊಟಲ್$_1$ + ತರ್ ]

**ತೊಟಿಸು$_1$, ತೊಳಸು$_3$ (ಕ್ರಿ).** ೧. (ನೀರನ್ನು) ಕದಡು ; ಅಲ್ಲಾಡಿಸು ; ಕಲಕು : ಆಟೋಪದಿಂ ಪೊಕ್ಕು ಸಾಗರಮಂ ಕೂಡೆ ತೆರಳ್ಚಿದಂ ತೊಟಿಸಿದಂ ತುಳ್ಕಾಡಿದಂ (ಜಗವಿ. ೭-೧೮). ೨. (ಸೌಟಿನಿಂದ ಸಾರು ಮೊದಲಾದುವುಗಳನ್ನು) ತಿರುಗಿಸು ; ತಿರುವು ; ಗೊಟಾಯಿಸು : ಬ್ರಹ್ಮಾಂಡವೆಂಬ ಕೊಪ್ಪರಿಕೆಯ ಮಧ್ಯದಲ್ಲಿ . . . ಮಾಸಋತುಗಳೆಂಬ ಸಟ್ಟುಗದಿಂ ತೊಟಸುತ್ತುಂ ಭೂತಂಗಳಂ ಜವನಡುತಿರ್ದನಿಂತೆಂಬುದೆ ವಾರ್ತೆ (ಷಂಡತಂ. ೬೫-೫) ; ಮಸಣದ ಕಿಚ್ಚಿನಿಂ ನರಕಪಾಲದ ಭಾಂಡಮನಿಟ್ಟು ಮಜ್ಜೆಯ ರಸವೆಸರಾಗೆ ಕೀಲಿಗನ ಹೆಂಡತಿ ತಾಂ ತೊಟಸುತ್ತಮಾಳೆಯೊಳ್ (ಧರ್ಮಾಮ್ಮ. ೧೧-೧೮೨) ; ಅಂತಕ್ಕಿಯುಂ ಪೊಯ್ದು ತೊಟಸಿ ಕುದಿ ಬರಲೊಯ್ಯನೆ ಮೇಲುರ್ಬಿದ ನೊರೆಯಂ ತೆಗೆದು ಬಿಸುಟು (ದಶಕು. ೧೨-೧೨೧ ವ). ೩. ಹೊಟ್ಟೆ ಕಲಕು; ಓಕರಿಕೆ ಬರಂವಂತಾಗು : (*). ೪. ಕ್ಷೋಭೆಗೊಳ್ಳು ; ಕ್ಷೋಭೆಯುಂಟಾಗಂ : ಅಂಗನೆಯಂ ಪಿಡಿದೊಯ್ದರೆಂದು . . . ಪುಯ್ಯಲ ಗಾವಳಿ ಕೆಯ್ಯನಿಟ್ಟುದೀ ತೊಟಸಿದ ಪಾಂಗೆ ಕಿಟ್ರಲೆ ಕಿಟಂದಲೆಯಾದುದು ಕೂಡೆ ಪಟ್ಟಣಂ (ಅನಂಪು. ೧೦-೭೩). ೫. ಹುಟ್ಟುಹಾಕಂ; ದೋಣಿ ನಡೆಸು: ನೆತ್ತರ ತೊಱೆಯುಂ ಮರುಳ್ತೊಟಸಿ ಪಾಯಿಸುತಿರ್ದುವು (ಪಂರಾಮಾ. ೧೩-೬೬). **ತೊಳಸು$_2$ :** ೨. ಎಲ್ಲರ ಹೆಂಡಿರೂ ತೊಳಸಿಕ್ಕುವರು ಎನ್ನ ಗಂಡಂಗೆ ತೊಳಸುವುದಿಲ್ಲ (ಸರ್ವವ. ೬೪-೩೪೨) ; ಅಲಗನೊಡಲೊಳು ತೊಳಸಿದಂತಿರೆ ಬಳಲಿದನು ಭೂಪಾಲ (ಕುವ್ಯಾದ್ರೋ. ಓರಿಇ. ಪರಿ. ೨೮೨) ; ಕುದಿ ಬಂದಾಗ ಒಮ್ಮಾನ ಹಾಲ ಹುಯಿದದನು ಸಟ್ಟುಗದಿ ತೊಳಸಿ (ಸೂಪಶಾ. ೧-೪೦) ; ೩. ವಾಂತಿ ಬರೋ ಹಾಗೆ ಆಗುಲ್ಲ, ಹೊಟ್ಟೆ ತೊಳಸುಲ್ಲ (ಮನೋನಂ. ೫೮); ಅವನಿಗೆ ಹೊಟ್ಟೆ ತೊಳಸಿ ಬಂತು (ದಾದಾನ. ೭೨). ೬. ಸುತ್ತಾಡು; ಅಲೆ : ತೊಳಸದಿರು ಬ್ರಾಹ್ಮಣನು ಭಕ್ತಿಸ್ಥಳವ ಬೇಱೆಯೆ ಮಾರ್ಗವಹುದಿದು ತಿಳಿದು ನೋಡಾ ದರ್ಶನಂಗಳೆನಲ್ಕೆ (ಬಸಪು. ೩-೭೧); ಆ ನೃಪ ತಿಳಕನ ವಾಗ್ವೈಭವಕ್ಕೆ ಮೂಱುಂ ಜಗಮಂ ತೊಳಸಿದೊಡೊರ್ವನೆ ಸಮನಾಗುಳಿದುದಱಿಂ ಶೇಷನೆನಿಪನಿನ್ನುಂ ಶೇಷಂ (ಧರ್ಮನಾ. ೩-೨೮). ೭. ಬಳಸು ಮಾತಾಡು; ಸುತ್ತು ಮಾತಾಡು : ತೊಳಸಲೇನೊರ್ವಸಿಗೆ ಜನಿಸಿದ ಅಲಘುಮುನಿ ಮಾತಂಗನೆಂಬಗ್ಗಳಿಯನುದ್ಭವಿಸಿದನಲಾ ಮಾತಂಗಿಯುದರದಲಿ (ಬಸಪು. ೫೭-೭೨). ೮. ಕಾದಾಡಂ; ಎದುರಿಸು: ಅಱಿದೆನಱಿದೆನೆಂದು ಮಱವೆಯ ತೋಟಿಯ ತೊಳಸುತ್ತ (ಮೋಳಿಮಾ. ೧೭೫-೬೬೦). ೯. ಕೀಳುಂ ; ಕಳಚು (?) : ಕಾಳುಗೆಡೆದರೆಯಗ್ನಿಯಾದರು ಕೀಳುವರು ನಾಲಿಗೆಯ ಕೃತಕವ ಮೇಳಯಿಸಿದರೆ ಸುರಪನಾದರು ಕಣ್ಣ ತೊಳಸುವರು (ಶಂಕದಾ. ೯-೬೪) ; "ಕುಟ್ಟು" (ಶಂಕದಾ. ಕೋಶ).

[ ದೇ.॥ ತಮಿ. ತುಟಿ, ತುಟ್ಟು, ತುಟಾವು, ಚುಲವು ;
ಮಲ. ತುಟಯು ; ತುಳು. ತುಳಾವು, ಸುಲಾವು ]

**ತೊಟಸು$_2$, ತೊಳಸು$_4$ (ನಾ).** ೧. ಸಂತ್ಕಲೂ ತಿರುಗುವಿಕೆ ; ಪರಿಭ್ರಮಣ : (*). ೨. (ಮನಸ್ಸಿನ) ಅಲೆದಾಟ ; ಚಂಚಲತೆ : (*). **ತೊಳಸು$_4$ :** ೩. (ಕಣ್ಣು) ಹೊರಳುವುದು : ಮುಚ್ಚಿರ್ಪ ಕಣ್ಗಳಂ ತೆರೆದು ತೊಳಸಿನ ಬೆಳ್ಪು ಚುಚ್ಚೆ (ಕಾಲೂರ. ೧೭೩-೩೮೮). ೪. ಘರ್ಷಣೆ; ತಿಕ್ಕಾಟ : ಅಱಿಯದುದನಱಿದಲ್ಲಿ ಮಱೆದು ಮಱದುದನಱಿದಲ್ಲಿ ಕಂಡು ಉಭಯದ ತೋಟಿಯ ತೊಳಸು ನಿಂದಲ್ಲಿ ನಿಃಕಳಂಕ ಮಲ್ಲಿಕಾರ್ಜುನಲಿಂಗದ ಅಂಗ ಕರತಳಾಮಳಕವಾಯಿತ್ತು (ಮೋಳಿಮಾ. ೯೩-೩೬೯) ; ಬಳಿಕೆಮಗೆ ಬಲವದ್ವಿರೋಧದ ತೊಳಸು ಬಿದ್ದುದು ತೋಟಿಗಾಱದೆ ಜಲಧಿಮಧ್ಯದಲೂರ ಕಟ್ಟಿದೆವು (ಕುವ್ಯಾಸ. ೨-೧೮). ೫. ತೊಡಕು ; ಸಿಲುಕಿಕೊಳ್ಳುವಿಕೆ ; 'ತೊಳಸುಗೊಳ್ಳು' ಪರಾ.

**ತೊಳಸಾಗು = ಗೊಂದಲಗೊಳ್ಳು ;** ಕೆಡು : ಯಮನಂದನನ ನುಡಿ ಸಂಧಾನದಲಿ ಸಂಜನಿಸಿತಾದೊಡೆ ಕಾಣೆನವನಿಯ ಹೊರೆಗೆ ಹರಿವುಗಳ ಮನದೊಳನುಸಂಧಾನವಂತಕತನುಜನಲಿ ತೊಳಸಾಯ್ತು ತೋಟಿಯ ನೆನಹು (ಕುವ್ಯಾಉ. ೩-೭). **ತೊಳಸುಮೆಳಸು = ಗೋಜು ;** ಸಿಕ್ಕು : ತಿಳಿಯ ಬಾರದು ಖಳರ ಕುಟಿಲದ ತೊಳಸುಮೆಳಸು (ಅಂಬಿಕಾ. ೨೦-೧೭).

[ <ತೊಟಿಸು$_1$ ]

**ತೊಟ್ಟುಕುತ್ತು (ನಾ).** (?) : ಒಕ್ಕಲುಳಿದುಣ್ಣು ಕಾದುವೊಂಗಿದು ಕಣ್ಗೆಟ್ಟು ತೊಟ್ಟುಕುತ್ತುವೆ [ಕ್ಕೆ] (ಪ್ಮಆರಿ. ೧೯೩೦, ೩೬-೧೦ ; ಸು. 800).

[ ಇದು 'ತೋಳ್ಕುತ್ತು' ಎಂಬುದರ ಅಪಲಿಖಿತವಿರ ಹುದೆ ? ]

**ತೊಟುವಾಳ್, ತೊಳ್ವಾಳ್** (ಕ್ರಿ). ತೊತ್ತು ಮಾಡಿ ಆಳು ; ಪ್ರಭುತ್ವ ನಡೆಸು: ಸಿರಿಯಂ ನೀನುಯ್ದು ತೊಟುವಾಳ್ದು [ಪಾಠಾಂ. ಳು] ರಾಗದಿನೆನ್ನೊಳ್ ಸುಕಮಿರ್ಪುದು (ಪಂಪಭಾ. ೮-೭೭). **ತೊಳ್ವಾಳ್:** ನೀನೆ ಆಳ್ವಾಡಿಕೊಳಲಲ್ಲೆನಲ್ ಬಪ್ಪುದೇ ನೀನೆ ತೊಳ್ವಾಳ್ವ [ಪಾಠಾಂ. ತ್ವಾಳ್ವ, ತ್ವಾಳ್ದ]ಡಿನ್ನಲ್ಲೆನಲ್ ಬಪ್ಪುದೇ (ನಂಬಿರ. ೭-೧೫೦).

[ ತೊಟ್ಟು + ಆಳ್$_1$ ]

**ತೊಟ್ಟು, ತೊತ್ತು, ತೊರ್ತು, ತೊಳ್ತು** (ನಾ). ೧. ದಾಸಿ ; ಸೇವಕಿ: "ಪೋಟಾ, ಚೇಟಾ, ಚೇಟೀ, ದಾಸೀ, ಕುಟಹಾರಿಕಾ – ಈ ೫ ತೊಟ್ಟು" (ಹಲಾಯು. ೮೧-೩೩೫); ತೊಟ್ಟನುಟಿದಂತುಟಿದ ಮಹಾಪುರುಷರಱಿಯದುಟಿದರೆ ಸಿರಿಯಂ (ಕವಿರಾ. ೩-೧೭೫) ; ಧರೆಯಂ ಪಟಿಕೆಯ್ದು ತೊಟ್ಟನುಟಿವಂತುಟಿದಂ ಸಾಮ್ರಾಜ್ಯಲಕ್ಷ್ಮಿಯಂ ಚಕ್ರಧರಂ (ಆದಿಪು. ೪-೮೭) ; ನಿನ್ನ ತೊಟ್ಟಿರೊಳಿನಿತೇಕೆ ಭಕ್ತಜನವತ್ಸಲ ನಿರ್ದಯನಾದೆ (ಕಾದಂಪೂ. ೯೩೪) ; ಪೊಲೆಯರಾಡಿನ ಪೆಸರ್ ಮಾಣಿಕದೇವಿಯೆಂಬಂತೆ ತೊಟ್ಟಿನ ಪೆಸರ್ ಸಿರಿಯ ದೇವಿಯೆಂಬಂತೆ (ಧರ್ಮಾಮೃ. ೮-೧೭೭). ೨. ದಾಸ ; ಸೇವಕ : ತೊಟ್ಟಿಂದು ದಾಸನುಂ ದಾಸಿಯುಮಕ್ಕುಂ (ಶಮದ. ಸ. ೩೩ ಪ್ರಯೋ). ೩. ಹಾದರಗಿತ್ತಿ; ಜಾರೆ: ಮತ್ತಮೊಂದೆಡೆಯೊಳೊರ್ವರ ತೊಟ್ಟು ಲಲಿತಾಂಗಂ ಬಂದನಿನ್ನಾವಾತನ ತೋಟಿ ಪಿಂಗುವಿನಂ ನೆರೆವನೆಯೊಳಿರ್ದು ಬರ್ಪಮೇಟಿಮೆಂದು ತನ್ನಾಳ್ದಿಚ್ಚೆಯು ರಪ್ಪ ಬಧಿರೆಯರ್ಗಂ ಮೆಲ್ಲನೆ ಪೇಟ್ದುದುಂ (ಧರ್ಮಾಮೃ. ३-೪೯). **ತೊತ್ತು:** ೧."ಕುಟಹಾರಿ ಚೈಟಂ ಚೇಟಿ ದಾಸಿಯೆನೆ ತೊತ್ತಕ್ಕು" (ಮಂಗರಾ. ೯೦-೪); ಎಲೆ ತೊತ್ತೆ ನಿನಗಿನಿತು ಸಾಮರ್ಥ್ಯವನಾರ್ಮಾಡಿದರ್ (ಪಂಚತಂ. ೧೫೫-೩) ; ಪ್ರಭುದೇವರ ತೊತ್ತಿನ ತೊತ್ತಿನ ಮಱುದೊತ್ತಿನ ಮಗಳು (ಮಹಾದೇ. ಬ. ೭೯-೧೯೮) ; ಹೆತ್ತ ತಾಯಂ ಮಾಱಿ ತೊತ್ತ ಕೊಂಬರೆ (ಹಚಕಾ. ೮-೭೭). ೩. ತೊತ್ತೇರಿಗುಂಟು ತಾಟಕಿಗುಂಟು ಹೆತ್ತ ತಾಯಿಗಿಲ್ಲವೀ ಕಾಲ (ಪುರಂದ. ೧-೧೩೦-೩). 'ತೊತ್ತುಬಡಿಕ', 'ತೊತ್ತುಬುದ್ಧಿ' ಪರಾ. **ತೊರ್ತು :** ೧. ಆ ದೇವರ ತೊರ್ತ್ತು (ಎಇ. XIII, ೩೨೦-೩೦ ; 1126). **ತೊಳ್ತು :** ೧. ವ್ಯಾಡ ತಾಂ ಭಿಕ್ಷವ ಬೇಡನೇ ಮಖಿಜೆ ತಾಂ ತೊಳ್ತಾಗಳೆ . . . ನರರ್ ಪೂರ್ವದೊಳ್ ಪಡೆದಪ್ಪುಣ್ಣದೆ ಪೋಪರೇ (ಸೋಮೇಶ. ೩೨) ; ತೊಳ್ತಿಗೆ ಚಮ್ಮವಟ್ಟಿಗೆವಿಡಿದಂತೊಡ್ಡಿದೊಡ್ಡಣದ ಕಡುಗಲಿಗಳನು ಕೈದೆತ್ತದಂದದಿ ಹುಯ್ಯದೊಡೆ ಪಂಥವೆಲ್ಲಿಯದಮಗೆ (ನೇಮಿಸಂ. ೨೯-೬) ; ವರವಿಳ್ದು ನಿಮಗೆ ತೊಳ್ತುವೆ ಬಿಡಿ ಮರುಳ್ತನಂ (ಮಹಾವಿ. ೬-೩೭). ೨. 'ಗಂಡುದೊಳ್ತು' ಪರಾ.

**ತೊತ್ತಿನ ಕೂಸು** = ದಾಸಿಯ ಪುತ್ರ; ಸೂಳೆಯ ಮಗ : ಪುಷ್ಪಾಸವವನ್ನು ಕಳುವ ತೊತ್ತಿನ ಕೂಸಾದ ಈ ದುರುದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು (ಶಾಕುಂತ. ೯೦-೧೭). **ತೊತ್ತಿನ ತೊತ್ತು** = ಸೇವಕನ ಸೇವಕ : ನಿಮ್ಮ ತೊತ್ತಿನ ತೊತ್ತು ನಾನು (ಜನ್ನವ. ೪. ೨೭-೬೦). **ತೊತ್ತಿನ ಮಗಳು** = ದಾಸಿಯ ಪುತ್ರಿ ; ಕೀಳು ಸೇವಕಿ : ಮನೆಯ ತೊತ್ತಿನ ಮಗಳ ಮಕ್ಕಳಿಗಿನಿತು ವುಂ ಸರಿಯಾಗದೆನ್ನನವನಿಯೊಳುತ್ತಮ ಭಕ್ತ ನಾನೆಂದಾತ್ಮದೊಳು ನೆನೆದು (ಬಸಪು. ೪೮-೨೭) ; ತೊಲಗು ತೊತ್ತಿನ ಮಗಳೆ ಮುಟ್ಟದಿರಿಳೆಯ (ತೊರರಾ. ೧-೧೧-೧೩). **ತೊತ್ತು ತೊಡಿಕೆ** = ಸೇವಕಿಯಂತೆ ಹೊಂದಿಕೊಂಡಿರುವವಳು : ಹೆತ್ತಯ್ಯನ ಮನೆಯಾ ತೆತ್ತಿಗಳು ನಾನಲ್ಲೆ ತುತ್ತಿನಾಸೆಗೆ ಬಂದಾ ತೊತ್ತು ತೊಡಿಕೆಯಲ್ಲಾ (ಶ್ರೀಕೃಪಾ. ೩೫). **ತೊಟ್ಟಿನ ಮಗ, ತೊತ್ತಿನ ಮಗ** = ದಾಸಿಯ ಮಗ : "ಗೋಪ್ಯಕ ೩, ದಾಸೀಸುತ ೩–ಈ ೨ ತೊಟ್ಟಿನ ಮಗಂ" (ಹಲಾಯು. ೮೨-೩೪೭) ; ತೊಟ್ಟಿನ ಮಗನಧ್ಯಯನಮೆ ಬಾಟಿಸ್ಗೆ ಮದಾತ್ಮಜರ ಬುದ್ಧಿಯುಂ ವೃದ್ಧಿಯುಮೇಂ ಬಾಟಿಸ್ಗೆ ನಿನಗೆಂದಟಲ್ದಳ್ (ಶಾಂತಿಪು. ೬-೬೪); ಗ್ರಾಸಕಿಲ್ಲದೆ ತೊತ್ತಿನ ಮಗನ ಮನೆಲುಂಡ (ಪುರಂದ. ३-೧೧-೧). **ತೊಟ್ಟಿರ್, ತೊತ್ತಿರು** (ಬಹುವ) : ಎನ್ನ ಪರಿವಾರಮನ್ನ ತೊಟ್ಟಿರೆನ್ನ ಮಾಣಿಕಭಂಡಾರಂ . . . ಎಂದಿವಱೊಳ್ ಮೋಹಿಸಿದ ಬುದ್ಧಿಯನೊಡೆಯನಾಗಿಯಾರ್ತಧ್ಯಾನದಿಂ ಸತ್ತು (ವಡ್ಡಾರಾ. ೧೪೦-೨೦) ; ಸಗ್ಗಂಗಳೊಳಿರ್ಪ ದೇವಡಿತಿ ತೊಟ್ಟಿರೊಳಟ್ಟಿಯನಾಗಲೀವೆನೇ (ಪಂಪಭಾ. ೧೦-೪೫) ; ಕಾದಿದ್ದರಯ್ಯ ಷಡುವರ್ಗವೆಂಬ ತೊತ್ತಿರು ಮುಟ್ಟದಂತೆ (ಅವಚ. ೨೭೭-೧೨೭೦) ; ನಾವಿನ್ನು ನಿಮ್ಮ ಶ್ರೀಪದಾಂಬುಜನಿತ್ಯಸೇವೆಯೊಳೋಪ ತೊತ್ತಿರ ತೊತ್ತಿರಾಗಿರಲು (ಬಸಪು. ೩೩-೪೭) ; ರಂಭೆಯೂರ್ವಶಿ . . . ಮೊದಲಾದ ಸುರಸತಿಯರೆನ್ನರಮನೆಯ ತೊತ್ತಿರುಗಳಾದರು (ಕುವ್ಯಾಅ. ೧೩-೬೫).

**ತೊಟ್ಟುಮಾಡು** = ಸೇವಕನನ್ನಾಗಿಸು : ಎನ್ನಾನೆಯಿಂದೆ ಪಗೆಗಳ ಬೆನ್ನೆಲ್ವಂ ಮೆಟ್ಟಿ ಮುಱಿಸಿ ಸಪ್ತಾಂಗದ ಸೊಂಪನ್ನಿನಗೆ ತಂದು ಕುಡದೊಡೆ ನಿನ್ನಹಿತನ ಮನೆಗೆ ತೊಟ್ಟುಮಾಡುವುದೆನ್ನಂ (ದಶಕು. ೭-೫೦).

[ ದೇ.॥ ತಮಿ. ತೊಟುತ್ತಿ, ತೊತ್ತು; ಮಲ. ತೊಟಿಲ್ = ಕೆಲಸ ; ತುಳು. ತೋಳಿಲ್ = ಕೆಲಸ, ಉದ್ಯೋಗ ; ತೆಲು. ತೊತ್ತು ]

**ತೊಟ್ಟುಗೆಲಸ, ತೊತ್ತುಗೆಲಸ, ತೊಳ್ತುಗೆಲಸ** (ನಾ). ಸೇವೆ ; ಊಳಿಗ : ಓರ್ವ ಸೊರ್ಕಿದ ತೊಟ್ಟು ತೊಟ್ಟುಗೆಲಸಕ್ಕರಮನೆಯಂ ಪುಗುವ ಪೊಱಮಡುವ ಸೂಟಿನೊಳ್ (ಪಂಚತಂ. ೧೭೯-೪). **ತೊತ್ತುಗೆಲಸ :** ತೊತ್ತಿಂಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿ ಎನಗೇಕಯ್ಯಾ (ಬಸವ. ೪೦೦) ; ಎಂಬತ್ತು ವರುಷಂಗಳು ಶಿವೈಕ್ಯರ ತೊತ್ತುಗೆಲಸಂ ಮಾಡಲು (ಬಸಪು. ೨೭-೬೨) ; ಅರಸುಮಗಳನಾ ತೊತ್ತುಗೆಲಸಕ್ಕೆ ಪರುಠವಿಸಿದಿರೆ (ಕುವ್ಯಾಅ. ೧೯-೩೩) ; ಹೊತ್ತು ಮೂಡಿ ಮುಳುಗುವನ್ನೆವರ ತೊತ್ತುಗೆಲಸವನೆ ತುಬ್ಬಿ (ಸಮ್ಯಕಾ. ೫-೨೨). **ತೊಳ್ತುಗೆಲಸ :** ಲೋಕವನಗಿವ ಕಾಲನೆಂಬ ದರ್ವೀಕರನ ದಾಡೆಯಂ ಕಿಳ್ತವಧಿವಿಧಿಗಳಿರ್ಗೆ ತೊಳ್ತು [ಪಾಠಾಂ. ತ್ತು] ಗೆಲಸವನಿತ್ತು (ಪದ್ಮರಾ. ३-೧೭ .)

[ ತೊಟ್ಟು + ಕೆಲಸ ]

**ತೊಟ್ಟುಗೊಡು, ತೊತ್ತುಗೊಡು, ತೊಳ್ತುಗೊಡು** (ಕ್ರಿ). ಪರಿಚಾರಕನನ್ನಾಗಿಸು; ಸೇವೆಗೆ ತೊಡಗಿಸು,–ಇಡು: ರಾಗೋದಯಮೆನ್ನನೋವದೆಟಿದೊಯ್ದೆಂ ತೊಟ್ಟುಗೊಟ್ಟತ್ತೊ (ಕಾದಂಉ. ೮೧). **ತೊತ್ತುಗೊಡು :** ತನುವನೀಶ್ವರಂಗೆ ಹಿಂಗದೊಪ್ಪಿಸುತ್ತೆ ತೊತ್ತುಗೊಟ್ಟು (ನಮರ. ದೇ. ೧೯೭-೧೨). **ತೊಳ್ತುಗೊಡು:** ಪುರಹರ ನಿಮಗೆನ್ನಂ ಸದಾ ತೊಳ್ತುಗೊಟ್ಟೆಂ (ರಕ್ಷಾಶ. ೭೮). [ ತೊಟ್ಟು + ಕೊಡು$_1$ ]

**ತೊಟ್ಟುಗೊಳ್, ತೊತ್ತುಗೊಳ್, ತೊಳ್ತುಗೊಳ್** (ಕ್ರಿ). ಊಳಿಗಕ್ಕೆ ಇಟ್ಟುಕೊಳ್ಳು ; ಸೇವಕನನ್ನಾಗಿ ಮಾಡಿಕೊಳ್ಳು : ದೆಸೆವೆಂಡಿರ್ಗೆ ಪಸದನಂಗೈದು ಬರ್ದಿಲವೆಣ್ಣಳಂ ತೊಟ್ಟುಗೊಂಡರ್ (ರಾಮಾಶ್ವ. ೧೪-೨೭). **ತೊತ್ತುಗೊಳ್:** ನಿನ್ನ ಕರುಣದ ಬಲವುಂಟೆನಗೆಂದು ಸಾಯಿದೇವನ್ನಂ ಬಲು ಸಲೆ ತೊತ್ತುಗೊಣ್ಣ ದಯಕೇಂ ಸಲೆವುಂಟೆ (ಸೌಇಇ.IX-i, ೨೯೭-೬೦; 1177) ; ದೇವ ಸಂಸಾರಂ ನೆಱೆ ಪುಗದ ಮುನ್ನ ನೀನೆಂದು ಬಂದೆನ್ನಂ ತೊತ್ತು[ಪಾಠಾಂ.ಳ್ತು]ಗೊಂಬೆಯೆಂಬುಮ್ಮಳಿಕೆಯಿಂದಳುವಂದದಿಂ (ನಂಬಿರ. ३-೧೧). **ತೊಳ್ತುಗೊಳ್ :** ಕೃಪೆಯೊಳೆನ್ನಂ ತೊಳ್ತುಗೊಂಡಾಳ್ದನಂ . . . ಕಂಡೆಂ ವಿರೂಪಾಕ್ಷನಂ (ಪಂಪಾಶ. ೩೭). [ ತೊಟ್ಟು + ಕೊಳ್$_1$ ]

**ತೊಟ್ಟುತನ, ತೊತ್ತುತನ** (ನಾ). ಸೇವೆ ; ಊಳಿಗ ; ಪರಿಚರ್ಯೆ : ನಿಜಜೀವಿತಮುಮಂ ತನ್ನುಮನಿರದಿತ್ತು ತೊಟ್ಟುತನಮಂ ತಾಂ ಕೊಂಡುಂ (ಕಾದಂಉ. ೧೧೪). **ತೊತ್ತುತನ:** ಬೆಚ್ಚದೆ ಬೆದಱದೆ ತೊತ್ತುತನವ ಮಾಡಲು ತನ್ನನೀವ ಕೂಡಲಸಂಗಮದೇವ (ಬಸವ. ೧೪೮) ; ಕಂದ ನೀವಿರಲೆನಗೆ ಸವತಿಯ ತೊತ್ತುತನವಾಯ್ತು (ಸಂಭಶ. ೫-೪೭). [ ತೊಟ್ಟು + –ತನ ]

**ತೊಟ್ಟುತೊಡರ್** (ನಾ). ಗುಲಾಮಗಿರಿಯ ಬಂಧನ; ದಾಸ್ಯಶೃಂಖಲೆ : ತೊಟ್ಟುತೊಡರಿನಿಱುಕೆಯನ್ನನಿಱಿಯುತಿರ್ಪವನ್ (ಬದ್ಧಪ್ರ. ೧೧-೨೦೬). [ ತೊಟ್ಟು + ತೊಡರ್$_2$ ]

**ತೊಟ್ಟುವೆಸ, ತೊತ್ತುವೆಸ, ತೊರ್ತುವೆಸ** (ನಾ). ಊಳಿಗ ಸೇವೆ : ನೀಮೆಸಗೆಡೆಮಡಗದೆ ಬೆಸಪ ತೊಟ್ಟುವೆಸನಂ ಬೆಸಸಿಂ (ಪಂಪಭಾ. ೯-೮೧); ಲವಣಾರ್ಣವದ ನಿಖಿಳ ವಸ್ತುಗಳಂ ಕಸ್ತೂರಿ(ಸಿ) ವಿಸ್ತಾರಿಸಿ ವೆಸರ್ವೆಸರೊಳ ಪೇಟ್ದುವಟಯ್ಯೆ ವರತನು ತೊಟ್ಟುವೆಸನಂ ಪೂಣ್ದಾಳಾದಂ (ಶಾಂತಿಪು. ೧೧-೧೦೫); ಇನ್ನನ ಸುಸತ್ವಗುಣಸಂಪನ್ನನ ಸತಿಗೆನಗೆ ತಗದು ತೊಟ್ಟುವೆಸಂ (ನೇಮಿಪು. ೧೩-೩೮); ನನ್ನ ಈ ಕಡುಕಷ್ಟಂಗಳನ್ ನಿನ್ನ ಈ ತೊಟ್ಟುವೆಸಕಾಗಿ ಮಾಱಾಡೆ ನಾನ್ (ಬದ್ಧಪ್ರ. ೫೦-೧೧೧೩). **ತೊತ್ತುವೆಸ:** ಆಂ ತೊತ್ತುವೆಸದೊಳಿರ್ಪೆಂ (ಬಂಹರಿ. ೯-೨). **ತೊರ್ತುವೆಸ.** 'ತೊರ್ತುವೆಸಗೆಯ್' ಪರಾ. [ ತೊಟ್ಟು + ಬೆಸ$_1$ ]

**ತೊಟ್ಟುವೆಸಗೆಯ್, ತೊರ್ತುವೆಸಗೆಯ್** (ಕ್ರಿ). ತೊತ್ತಿನ ಕೆಲಸವನ್ನು ಮಾಡು ; ಊಳಿಗಮಾಡು : ತೊಟ್ಟೆ ತೊಟ್ಟುವೆಸಗೆ[ಪಾಠಾಂ. ಕೆ]ಯ್ ಪೋ ಪೋಗು ನೀನೆಂದು ಬಯ್ದು (ಪಂಪಭಾ. ೭-೫). **ತೊರ್ತುವೆಸಗೆಯ್:** ತೊರ್ತುವೆಸಗೆಯ್ಕದ ಮಂಡಲನಾಥರಿಲ್ಲ (ಎಇ. XIII, ೪೪-೩೦; 1112). [ ತೊಟ್ಟುವೆಸ + ಕೆಯ್$_1$ ]

**ತೊಟ್ಟುಟ್, ತೊತ್ತಳ, ತೊತ್ತಳಿ, ತೊತ್ತಟ, ತೊತ್ತುಟ್, ತೊಳ್ತಳ** (ನಾ). ೧. ನುಗ್ಗುನುರಿ ; ಅಜಿಗಿಜಿ ; ಅಸ್ತವ್ಯಸ್ತವಾದ ಸ್ಥಿತಿ : "ತೊಟ್ಟುಟ್ (ತೊಟ್ಟುಟ್) = ಸೊಪ್ಪಾದುದು" (ಶಮದ. ಪರಿ. ೧); "ಸೊಪ್ಪಾದುದು ತೊಟ್ಟುಟ್" (ಕರ್ಣಾನಿ. ೬೮). ೨. ತಂಳಿತ; ತುಳಿಯಂವಿಕೆ : ಅದಟರ ಚೆನ್ನಪೊಂಗರ ಸಬಂಗಳ ತೊಟ್ಟು[ಪಾಠಾಂ. ತ್ತು]ಟಿಯೊಳ್ ತೊಡಂಕಿ ನಿಲ್ಲದೆ (ಪಂಪಭಾ. ೮-೧೦೪); ಪರ್ವಿದಾ ಪಡೆಯ ತೊಟ್ಟುಟಿಯಿಂ ಗಿಡುಬಳ್ಳಿ ಭೂರುಹಾವಳಿ ಪೊದಱುಳ್ಳ ಬಲ್ಲಡವಿ ಪೆರ್ವಯಲಾಯ್ತು (ಪುಷ್ಪಪು. ೫-೪೬). ೩. (ಅಲಂ) ಸ್ವಾಧೀನಪಡಿಸಿಕೊಳ್ಳುವಿಕೆ ; ಆಕರ್ಷಿಸುವಿಕೆ : ತೊಟ್ಟುಟಿಯುಮಂಗಿಯುಂ ಬಗಿಯುಂ ಮಾಡಿ ಮನಮಂ ಸುಟಿ ಸೆಟಿವಿಡಿದ ಸೀಯನಪ್ಪ ಗೇಯರಸಾಬ್ಧಿಪೂರದೊಳ್ ಮೂಡಿ ಮುಟುಗಾಡುತ್ತುಂ (ಶಾಂತಿಪು. ೨-೨೨ ವ). **ತೊತ್ತಳ :** ೧. 'ತೊತ್ತಳತಂಳಿ' ಪರಾ. ೨. ರಭಸ; ವೇಗ : ಬಿರುಗಾಳಿಯ ತೊತ್ತಳದೊಳು ಬಂಡೆ ಬಂಡೆ ಬಡಿ ಬಡಿಯಲು (ನಡಬಂ. ೬೮-೭). **ತೊತ್ತಳಿ :** ೧. 'ತೊತ್ತಳಿಗೊಳ್' ಪರಾ. **ತೊತ್ತಟ:** ೧. 'ತೊತ್ತಟದುಟಿ' ಪರಾ. **ತೊತ್ತುಟಿ :** ೨. ನೋಡಿರೆ ಕರ್ಣನಿತ್ತ ಕನಕೋತ್ತರರಾಶಿಯನಂದು ವಂದಿಗಳ್ ನಾಡೆಯುಮೆಯ್ದೆ ಪೊತ್ತಡಕಲಾಱದೆ ಮಿಕ್ಕೊಡೆ ರಾಶಿಗೆಯ್ದಿರಲ್ ಕೂಡೆ ಮದೇಭರಾಜಘಟಕೋಟಿಯ ತೊತ್ತುಟಿವೊಲ್ಲದಲ್ಲಿ ಬಟ್ಟೋಡೆ ನೆಲಂ ಸುವರ್ಣಮಯಮಾದುದು ತಚ್ಚಿಬಿರಾಂತರಾಳದೊಳ್ (ನೇಮಿಪು. ೧೧-೧೧೫). ೫. ಬಿಗಿತ : ಸವಿ ತಲೆಗಾದುದೀಯಧರದಿಂ ಪುಳಕಾಂಕುರಮಾಯ್ತು ಮಾಯ್ತು ಮೆಯ್ಯೊಳ ಕುಚಕ್ಕೆ ಕರ್ಕಶತೆ ಜೀವನಮಾಯ್ತುಟಿ ದಂತಿರೆನ್ನ ಬಾಯ್ದುವರದೊಳೆನ್ನ ತೋಳ್ದೊಣರ ತೊತ್ತುಟಿಯೊಳ್ ಕಡಿಕೆಯ್ದುದಿಂತು ಬಟ್ಟುವೆ ಪೊಣರ್ವೆನ್ನುರೋಹಶಿಯೊಳೆಂಬವೊಲೀಕ್ಷಿಸುತಿರ್ದ ನಲ್ಲನಾ (ಲೀಲಾವ. ೧೩-೩೧). **ತೊಳ್ತಳ :** ೧. 'ತೊಳ್ತಳಂದುಳಿ' ಪರಾ.

**ತೊಟ್ಟುಟಿಮಾಡು** = ನುಗ್ಗುನುರಿ ಮಾಡು ; ಅಸ್ತವ್ಯಸ್ತಗೊಳ್ಳುವಂತೆ ಮಾಡು : ರಿಪುಸೇನೆಯಂ ತುಟಿದು ತೊಟ್ಟುಟಿಮಾಡುವೆಂ (ಪಂಪಭಾ. ೧೩-೪೪); ಜನರಾಜಂ ವನವಾರಿಕೇಳಿ ವಿಭವಂ . . . ಶ್ರೀಯಂ ಮದೀಯ ಪ್ರಿಯಾಬ್ಜಿನಿಯಂ ತೊಟ್ಟುಟಿ ಮಾಡಿ ಕೀಟ್ಪಡಿಸಿದಂ (ಅನಂಪು. ೭-೫೬). [ <ತುಟಿ$_1$ ]

**ತೊಟ್ಟುಟಿದುಟಿ, ತತ್ತಟಿದುಟಿ, ತೊತ್ತಳಂತುಳಿ, ತೊತ್ತಳಂದುಳಿ, ತೊತ್ತಳತುಳಿ, ತೊತ್ತಳದುಳಿ, ತೊತ್ತಟಿಂದುಟಿ, ತೊತ್ತಟದುಟಿ, ತೊಳ್ತಳಂದುಳಿ, ತೊಟ್ಟುಳಿದುಳಿ, ತೋರ್ತಳದುಳಿ** (ಕ್ರಿ). ಪುಡಿಯಾಗುವಂತೆ ತುಳಿ ; ನುಗ್ಗುನುರಿಯಾಗುವಂತೆ ತುಳಿ ; ಸೊಪ್ಪಾಗುವಂತೆ ಮಾಡು; ಮುದ್ದೆಯಾಗುವಂತೆ ಮಾಡಂ: ಸುಪ್ರತೀಕ[ಂ]ಕೆಯ್ಯ ಕಾಲ ಕೋಡೇಱನೊಳ್ ಬಲಮನೆಲ್ಲಂ ಜವನೆ ಜಿವುಟಿದುಟಿವಂತೆ ತೊಟ್ಟುಟಿದುಟಿದು (ಪಂಪಭಾ. ೧೧-೭೨ ವ); ರಾಗರಸದಾಗರಮಪ್ಪ ವಲ್ಲಭನ ಮನಮನಾಗಳಾಗಳೆ ತೊಟ್ಟುಟಿದುಟಿದು ಬಂದಳೆನಿಸಿ (ವರ್ಧಪು. ೭-೯ ವ). **ತತ್ತಟಿದುಟಿ :** ನಾಡಂ ದಾಟಿಟ್ಟು, ಒಳ್ಳಿದರಂ ಪೊಳೆದು, ಕೂಟರಂ ತತ್ತಟಿದುಟಿದುಂ, ಬರ್ಕುಮಾತನಡಿಯಾಣತಿಯೊಳೆ ಸೇನೆ (ರಾಮಾಶ್ವ. ೧೨೦-೭). **ತೊತ್ತಳಂತುಳಿ:** ಒತ್ತಿದ ಜಗಳಕ್ಕೆ ಸುತ್ತ ಮುತ್ತಿಗೆಯಾಗಿ ತೊತ್ತಳಂತುಳಿದು ಕೊಲುವಾಗ ಉಳುವೆಯ ಕರ್ತ ಬಂದಾನು (ಸರ್ವಜ್ಞ. ೧೦೫೨). **ತೊತ್ತಳಂದುಳಿ :** ಮುಂದಲೆವಿಡಿದು ಕಿಡಿಪಿ ಪಾದಂಗಳಿಂ ತೊತ್ತಳಂದುಳಿದು ತಾಂಡವರೂಪಮಂ ಧರಿಸಿ ಕುಣಿವುತಿರೆ (ಚಬಪು. ೨೦-೩೨); ಧರೆಯೊಳಗುಳ್ಳ ಬಲ್ದೊರೆಗಳೆಲ್ಲ . . . ಪರಿತರೆ ತೊತ್ತಳಂದುಳಿದನಪ್ರತಿಮಂ (ಅಪ್ರತಿ. ೨೭-೨೧). **ತೊತ್ತಳತುಳಿ:** ಬುಧಜನಾಧಾರಂ ತೊತ್ತಳತುಳಿವಂ (ಬೊಂಕಶಾ. ೧೯೩೪, ಬಂಕಾಪುರ. ೩-೧೨; 984); ಅಧೈರ್ಯ, ಭಯ, ಹೆದರಿಕೆ ತೊತ್ತಳತುಳಿದವು (ಕಕಂಡ. ೧೩೮). **ತೊತ್ತಳದುಳಿ :** ಮಲೆವಕ್ಷ್ಮಾಧ್ವ್ರಿತ್ತರಂ ತೊತ್ತಳದುಳಿದು ನಿಜ ಪ್ರಾಜ್ಯ ಸಾಮ್ರಾಜ್ಯಮಂ ತೋಳ್ವಲದಿಂ ನಿಷ್ಕಂಟಕಂ ಮಾಡಿದನಧಿಕಬಳಂ (ಎಕ. II, ೧೩೨-೨೨ ; 1123); ಗೂಳಿಯಾಗಿ ಹೋಗಿ ಎಲ್ಲರ ತೊತ್ತಳದುಳಿದು ಒಕ್ಕಲಿಕ್ಕಿ (ಶೂನ್ಯಸಂ. ೧೫೦-೨೧); ತೊತ್ತಳದುಳಿದನರಿನಳಿನವನಮಂ ಬಸವ ಕುಂಜರನು (ಬಸಪು. ೫೯-೫೪); ಕದಳಿಯನು ಮದಕರಿಯು ತೊತ್ತಳದುಳಿದವೊಲು (ಕುಮಾಛಿ. ೪-೬೩); ವರ ಜಿತೇಂದ್ರಿಯರ ತೊತ್ತಳದುಳಿದ ಧೀರೋದಾತ್ತ ಜಯಯೆಂದು ಚಿತ್ರಜನನು ಹೊಗಳಿದರು (ಪ್ರೋಹತ. ೧೬-೮). **ತೊತ್ತಟಿಂದುಟಿ :** ಕೋಪಾಟೋಪದಿಂ ತೊತ್ತಟಿಂದುಟಿಯಲ್ಕೆಟ್ಟರೆ ರಾಸಭಾಕೃತಿಯಿನಾಗಳ್ ರೌದ್ರಮಂ ಬೀಱುತಂ (ಮಹಾನೇ ೬-೧೯); ಪಾರ್ವನಂ ತೊತ್ತಟಿಂದುಟಿದರ್ (ಚಕವಿ. ೬-೧೧೯); ತುಱುಗಿಱಿಯುವನಂ ತೊತ್ತಟಿಂದುಟಿದು ಬೆಂಗಳೂರವನಂ ಭಂಗಂಬಡಿಸಿ (ಚಕವಂ. ೫೭-೧೨). **ತೊತ್ತಟದುಟಿ :** ಹೀನಬಲನನಧಿಕಬಲಂ ತೊತ್ತಟದುಟಿದನೆಂಬ ಲೋಕದ ಪಟಿ ಪೊರ್ದದೆ ಮಾಣೆ ಧರ್ಮಯುದ್ಧದೊಳೆಸಗಿಂ (ಆದಿಪು. ೧೪-೧೦೨); ಕೊತ್ತಾಗಾಲಮಂ ತೊತ್ತಟದುಟಿದು (ಚಕವಿ. ೨-೨೯); ದುಱುದುಂಬಿಗುದುರೆ . . . ಪೊಕ್ಕು ಪೊಱದೋಂಟವಮಂ ತೊತ್ತಟದುಟಿದು ಪಾಟಿಗ್ಗಿಡಿಕುಂ (ರಾಮಾಶ್ವ. ೧೫೨-೧೩). **ತೊಳ್ತಳಂದುಳಿ:** ಅಖಿಳ ಜೀವರಂ ತೊಳ್ತಳಂದುಳಿದುಬ್ಬುತ ಪಾರಾಹನಿಂತು ಕೋಲಾಹಲಂ ಮಾಡಿ (ವೀಶೈಪು. ೩-೧೧-೧೭). **ತೊಟ್ಟುಳಿದುಳಿ:** ಕಲಿ ತೊಟ್ಟುಳಿದುಳಿದಿಕ್ಕೆ ಪರೆಯ ಭಾನೂದಯದೊಳ್ಕರ್ತ್ರಲೆಯನ್ನಿರೆ ರಿಪುಗಳ್ಕರ್ತ್ರಲೆವೆಸರಾದು ದಾತನೊಕ್ಕಲ್ವೆಸರುಂ (ಸೌಇಇ. XI-I, ೪೫-೫; 980). **ತೋರ್ತಳದುಳಿ:** ಕಾಲ್ದುಳಿಯೊಳಱಾಗೆ ತ್ರೋರ್ತ್ರಳದುಳಿವಂ ರಣರಂಗಭೈರವಂ ಗೋವಿನ್ದ (ಸೌಇಇ. XX, ೮೭-೨೮; ?). [ ತೊಟ್ಟುಟಿ + ತುಟಿ$_1$ ]

**ತೊಟ್ಟುಟ್ಟಿ, ತೊಳ್ಪುಟ್ಟಿ** (ನಾ). ದಾಸಿಯ ಪುತ್ರ ; ತೊತ್ತಿನ ಮಗ : ಎಟಿಬ್ರೋಗು ದೂತನಪ್ಪನ ಬೆಟ್ಟನ ನುಡಿಗೇಳ್ದುಮುಳಿಯಲಾಗದು ನೀನುಂ ಮೆಟ್ಟಟ್ಟು ವಿದುರನೆಂಬೀ ತೊಟ್ಟುಟ್ಟಿಯ ಮನೆಯ ಕೂಟಿ ನುಡಿಯಿಸೆ ನುಡಿದೈ (ಪಂಪಭಾ. ೯-೫೮). **ತೊಳ್ಪುಟ್ಟಿ :** ಮೂರು ತಲೆ ತೊಳ್ಪುಟ್ಟಿ ತಾಯ ಮಗನೆಂದು (ಮೂರುಸಾ. ೧೩೩-೧೧೦೬).

[ <ತೊಟ್ಟು + ಪುಟ್ಟು$_1$ + – ಇ$_3$ ]

**ತೊಟ್ಟುಟ್ಟು** (ನಾ). = **ತೊಟ್ಟುಟ್ಟಿ**: ನಾಲ್ಕುಂ ಗ್ರಹಂ ನೀಚ ಶತ್ರು ನಿವಾಸಂಗಳೊಳಕ್ಕೆ ನವಾಂಶಕದೊಳೊಂದಿರ್ದಂದು ತೊಟ್ಟು[ಪಾಠಾಂ. ಪು]ಟ್ಟು (ಜಾತತಿ. ೨೦-೨೧). [ < ತೊಟ್ಟು + ಪುಟ್ಟು$_2$ ]

**ತೋ, ತೊಯ್, ತೊಯ್ಯು, ತೋಯು** (ಕ್ರಿ). **ತೋದ$_1$** (ಭೂತಕೃ) **ತೊಯ್ದು, ತೋದು, ತೋಯ್ದು** (ಭೂತನ್ಯೂ). ೧. ತೇವವಾಗು; ನೆನೆ; ಹಸಿಯಾಗು: ಏನೆಂಬೆಂ ಬಾಲ್ಯದೊಳ್ ಮೇಲಱಿಯದೆ ಮಲದಿಂ ಮೂತ್ರದಿಂ ಶ್ಲೇಷ್ಮದಿಂ ತೋದಾ [ಪಾಠಾಂ. ತೊಯ್ದಾ] ನಾರೆಂದೇನುಮಂ ಭಾವಿಸದೆ(ರಕ್ಷಾಶ. ೪); ತೋದುದು ತೇರು ರಕ್ತದಲಿ (ಕುಮಾವ್ಯಾ. ದ್ರೋ. ೫-೫೫); ತೋದುದಂಬರತಳಂ ವಿಷದ ಲೋಳೆಗಳಿಂದೆ ತೀದುದಮರರ ಹರುಷವು (ಜೈಮಿ. ೪೩-೨೩); ಮಳೆಗಱೆದುದಿದೇತರ್ಕೆವಳ್ ತೋದೊಡೆ ಕುದ್ಧವಿಸಿತ್ರೋ ಪ್ರೀತಿ (ದಿವ್ಯಜ. ೭-೪೯); ಪಾದಪಗಳಡಿಗೆರೆಯೆ ಸಲಿಲವು ತೋದು ಕೊಂಬೆಗಳುಬ್ಬಿ ಪುಷ್ಪ ಸ್ವಾದುಫಲವೀವಂದದಲಿ (ಹಸಾರ. ೩-೧೩). ೨. ನೆನೆಯಿಸು; ಒದ್ದೆಮಾಡು: "ತೋ–ಆರ್ದ್ರೀಕರಣೇ (ನೆನೆಯಿಸು)" (ಶಮಧಾ); ಅರಗಿನರಮನೆಗುರಿಯಬಿಟ್ಟಂತರಚಿ ದಾನವ ವನಚರಂಗಳ ಸರಳ ಮಳೆಯಲಿ ತೋದನದ್ದಿದನವಮಮ ಮುಳುಗಿಸಿದ (ಳಾಶಿರಾ. ೩೨-೩೭). **ತೊಯ್**: ೧. "ತೊಯ್ (ತುಯ್)=ಸಾರ್ದ್ರತ್ವೇ" (ಶಮಧಾ); ಹಾಯ್ದು ಕರುಳಿನ ಮಿದುಳ ಜೋರಿನ ತೊಯ್ದು ರಕ್ತಾಂಬರದಿ ತಾನಿರಲ್ಕೆದಿ (ಕುಮಾವ್ಯಾ. ಕ. ೮-೪೧). ೨. ಹಳಮುಖನುಂ ಬೇಟೆಯನೆಣ್ಣೆಯೊಳ್ ತೊಯ್ದು [ಪಾಠಾಂ. ತೋದು]ನಖಾಗ್ರದಿಂ ತೊಟ್ಟು ನೆತ್ತಿವರೆಗಂ ಬಳಸಿಯುಂ . . . ಕಿಚ್ಚಂ ತಗುಳ್ಚಿ (ವಡ್ಡಾ. ರಾ. ೧೫೪-೭); ಕನಲ್ದ ಕೆಂಡದ ಮೇಲೆ ಪಱಿಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ (ಪಂಪಭಾ. ೩-೭೧ ವ); ನೀಲಿಯ ರಸದೊಳ್ ಕರಡಿಯ ತೋಲಂ ತೊಯ್ದಟ್ಟಿದ್ದೆ ಮಸಿಯೊಳದಱೊಳ್ ಪುದಿದತ್ತೀ ಲೋಕಮಕ್ಕುಮೆನಿಸಿತ್ತು . . . ತಮಸಂ (ಕಾವ್ಯಾವ. ೭೩೫); ಪೊಸ ಮುತ್ತನಾಯ್ದುಮರ್ದಿನೊಳ್ತೊಯ್ದಂತೆ ನೇರ್ಪಟ್ಟ ನಿರ್ಮಲದಂತಚ್ಛವಿ ಬೇಡಿದರ್ಗೆ ವರವೀವಂತಿರ್ಪುವು (ಅನಂಪು. ೨-೧೪). **ತೊಯ್ಯು**: ೧. "ನೆನೆ = ತೊಯ್ಯು" (ಗಂಗಾಮು. ೧೯೦). **ತೋಯು**: ೧. ಬಿಸಜಾಕ್ಷಿಯರು ತೋಯ್ದು ಪೊಱಮಟ್ಟು ಬಂದಾಗ . . . ದೇಹಲಾವಣ್ಯಪರಿಪೂರ್ಣರಸ ಸುರಿವಂತಾದುದು (ಪೋಹಕ. ೧೪-೫೭); ನೀನು ನೋಯೆ ಕಣ್ಣು ತೋಯೆ ರುದ್ರಭೂಮಿ ಈ ಜಗ (ಮಾನಸ. ೧೪-೧೫); ನೆಲವೆಲ್ಲ ಕಣ್ಣೀರಿನಿಂದ ತೋಯ್ದು ಹೋಗಿದೆ (ಮಹಾಲ. ೧೧೪).

[ ದೇ. ‖ ತಮಿ. ತೋಯ್; ಮಲ. ತೋಯು; ತೆಲು. ತೋಗು ]

**ತೋಂಟ, ತೋಟ$_1$** (ನಾ). ಹೂವು, ಹಣ್ಣು, ಕಾಯಿಪಲ್ಯೆಗಳು ಅಥವಾ ತೆಂಗು, ಅಡಿಕೆ ಮಾವು ಮೊದಲಾದುವುಗಳು ಬೆಳೆಯುವ ಭೂಮಿ; ಬಾಗಾಯತ ಭೂಮಿ: ಶ್ರೀಪುರದಾ ದಣ್ಣುಗಾಮುಣ್ಡರಾ ತೋಣ್ಟದಾ ಪಡುವಾಯೊನ್ದು ತೋಣ್ಟ (ಎಕ. IV, ನಾಗಮಂ. ೮೫-೭೭; 776); ಕಬನಿ ಮತ್ತಂ ಮಣ್ಣಿಯೆಲರ ಕೆಱಿಯ ಕೆಟಗಣ ತೋಣ್ಟಮುಂ (ಎಕ. IX, ನೆಲಮಂ. ೭೦-೧೨೫; 797); ಕಳ್ಳಿಯಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ (ಧರ್ಮಾಮ್ಮ. ೮-೫೦); ಕುಱಿವಿಂಡು ಕಬ್ಬಿನ ಉಲಿವ ತೋಂಟ [ಪಾಠಾಂ. ಹೊಲ]ವ ಹೊಕ್ಕು ತೆಱನಱಿಯದೆ . . . ಮೇದುವು (ಬಸವ. ೫೯೮); ಎಲವೊರ್ಯ್ದುಂದೆಸೆವಿಕ್ಷುಕಾಂಡರಸದಿಂ ತೋಂಟ [ಪಾಠಾಂ. ನಾಂದಿ]ಕ್ಕೆ ತವ್ಮೊಳ್ ಪಳಂಚಲೆವೊಳ್ಗೊಂಚಲ ಕಾಯೊಳುರ್ಕುವೆಳನೀರಿಂದಂ ಬನಂಗಳ್ಗಗುಂದಲೆ ನೀರೂಟಮಿದೇಕೆ (ವರ್ಧಪು. ೧-೪೩); ಕಂಡವರ್ ಕಾವಿಸೆ ಮಾಲೆಗಾಱರೊಸೆದೋವಿದ ಪೂವಿನ ತೋಂಟವೊಪ್ಪುಗುಂ (ಗಿರಿಕ. ೨-೭೦). **ತೋಟ$_1$**: ಗಳೆಯ ಮಂತ್ರರ್ ೩ ಬೆದ್ದಲೆ ಮತ್ತರ್ ೫ ಅಡಕೆಯ ತೋಟದಲು ಪರ್ಷಕ್ಕೆ ಮರದಲೊಂದಡಕೆ ಎಲೆಯು ಸುಂಕ (ಎಕ. VII, ಶಿಕಾರಿ. ೨೦-೧೫; 1032); ನಾಡಿಲ್ಲದರಸುಂ ಫಲಮಿಲ್ಲದ ತೋಟಮುಂ . . . ಒಪ್ಪಲಾರ್ಕುಮೆ (ಧರ್ಮಾಮ್ಮ. ೦-೬೫); ತನುವ ತೋಟವ ಮಾಡಿ ಮನವ ಗುದ್ದಲಿ ಮಾಡಿ ಅಗೆದು ಕಳೆದೆನಯ್ಯ ಭ್ರಾಂತಿನ ಬೇರೊಡೆದು(ಅವಚಂ.೧೮೦-೮೧೨);ಮುಳಿದು ಕಬ್ಬಿನ ತೋಟದಲಿ ನರಿ ಹುಲಿಯಪೋಲ್ ಗರ್ಜಿಸಿತು (ಕುಮಾವ್ಯಾ. ಕ. ೧೩-೪೪); ಬನ್ನಿ ಓ ಬಾನಲೆವರೆ, ನಮ್ಮ ತೋಟಕೆ (ಅನಿಕೇ. ೨೦-೧); ತೋಟ ಮೂರು ಮೊಳ ಕಾಯಿ ಆರು ಮೊಳ (ಗಾದೆ).

[ ದೇ. ‖ ತಮಿ. ಮಲ. ತೋಟ್ಟ; ತುಳು. ತೋಟ, ತೋಟೊ; ಕೊಡ. ತೆಲು. ತೋಟ; ಗಡಬ. ತೋಂಟ ]

**ತೋಂಟಕಂಡ** (ನಾ). ತೋಟದ ಭಾಗ,–ತುಣುಕು: ಮೊಳೆವಡೆ ಪದಿರ್ಕೊಳಂ ಆರಾತೋಣ್ಟದಿಂ ಮೂಡಣ ತೋಣ್ಟಕಣ್ಡಮುಂ ಮಾರಿ ಬೆಱತಿಯಿಂ ಬಡಗಣ ಮಣ್ಣು (ಎಕ. IV, ಎಳಂದೂ. ೨೫-೭; ಸು. 926 ?).

[ ತೋಂಟ + ಕಂಡ$_1$ ]

**ತೋಂಟಖಂಡ** (ನಾ). = **ತೋಂಟಕಂಡ**: ಶ್ರೀ ದೇಕಬ್ಬೆ ಮಹಾದೇವರ್ಗೆ ಬಿಟ್ಟ ಪೊಂಬೊಲಂ ತೋಂಟಖಂಡಮುಮಂ (ಎಕ. IV, ಹಗ್ಗಡ. ೧೮-೩೩; 1057). [ ತೋಂಟ + ಖಂಡ ]

**ತೋಂಟವಾಳ, ತೋಟವಳ, ತೋಟವಾಳ** (ನಾ). ತೋಟದಲ್ಲಿ ಕೆಲಸ ಮಾಡುವವನು; ತೋಟಗಾರ. 'ತೋಂಟವಾಳತಿ' ಪರಾ. **ತೋಟವಳ**: ಬಿನ್ನಪಂಗೆಯ್ದು ತೋಟವ [ಪಾಠಾಂ. ವಾ]ಳಂಗೆ ಪಸಾಯನ ಮನಿತ್ತು (ರಾಜಶೇ. ೧೧-೫ ವ). **ತೋಟವಾಳ**: ಮೇಲಿನ 'ರಾಜಶೇ' ಪ್ರಯೋಗದ ಪಾಠಾಂತರವನ್ನು ನೋಡಿ. [ ತೋಂಟ + – ವಾಳ$_1$ ]

**ತೋಂಟವಾಳತಿ** (ನಾ). ತೋಟದಲ್ಲಿ ಕೆಲಸ ಮಾಡುವವಳು; ತೋಟಗಾರ್ತಿ: ಇತ್ತಳರಸಗೊರ್ವ ತೋಂಟವಾಳತಿ ಹೊಂಗೇದಗೆ ಹೂವ (ಸೊಬಸೋ. ೩-೪೩). [ ತೋಂಟವಾಳ + – ತಿ$_1$ (<– ಇತ್ತಿ) ]

**ತೋಂಟವಾಳಿಗ, ತೋಟವಾಳಿಗ** (ನಾ). = **ತೋಂಟವಾಳ**: ಪುರವ ಪೊಗದ ಮುನ್ನ ತೋಂಟವಾಳಿಗನದನೊರೆಯಲು ಯುವರಾಜ ಮುಳಿದು (ವರ್ಧಚ. ೩-೬೩). **ತೋಟವಾಳಿಗ**: ತೋಟವಾಳಿಗ ಪೇಳಲಂದಾ ಬಿಸವಂದ ವನೇ ನೋಳ್ಪೆನೆಂದು . . . ಪೊಱಮಟ್ಟ (ಶ್ರೀಪಾಲ. ೩-೧೭).

[ ತೋಂಟವಾಳ + – ಇಗ ]

**ತೋಂಟವೆಸ** (ನಾ). ತೋಟದ ಕೆಲಸ,–ಕಾರ್ಯ. 'ತೋಂಟವೆಸಂಗೆಯ್' ಪರಾ. [ ತೋಂಟ + ಬೆಸ$_1$ ]

**ತೋಂಟವೆಸಂಗೆಯ್** (ಕ್ರಿ). ತೋಟದ ಗಿಡ, ಮರಗಳಿಗೆ ಆರೈಕೆ ಮಾಡು; ತೋಟವನ್ನು ಕೃಷಿಮಾಡು: ಮಂದಾನಿಲಂ ತೋಂಟವೆಸಂಗೆಯ್ದುಟ್ಟಱಿಂ ಪೆರ್ಚಿಸಿದ ವಿಚಕಿಳಂ ರಯ್ಯಮಲ್ಲಿಗೆಗಲ್ಲಿಂ (ಚಂದ್ರಪು. ೦-೮೭). [ ತೋಂಟವೆಸ + ಕೆಯ್$_1$ ]

**ತೋಂಟ$_1$** 'ತೋಟ$_1$' ನೋ.

**ತೋಂಟ$_2$** 'ತೋಟ$_2$' ನೋ.

**ತೋಂಟಿಗ, ತೋಟಿಗ** (ನಾ). ತೋಟದ ಕೆಲಸ ಮಾಡುವವನು: ಅಂತಃಪುರಕಾಂತಾಸಂತತಿಲತಾಪ್ರತಾನಮಂ ಜಲಧರ ಧಾರಾಂತಾಭಿಷೇಕದಿಂ ತಳಿದಂ ತೋಂಟಿಗನಂತೆ ಸಂತತಂ ಯುವರಾಜಂ (ಶಾಂತಿಪು. ೮-೩೬); ಮದನಂ ಗಡ ಯೌವನವನಕ್ಕೆ ತೋಂಟಿಗನಾದಂ (ಅಜಿಪು. ೨-೩೦); ಕಳ್ಳಿಯಂ ನಂಬಿ ಕೌಂಗಿನ ತೋಂಟವುಂ ಕಡಿವ ತೋಂಟಿಗನುಮಂ (ಧರ್ಮಾಮ್ಮ. ೮-೫೦); ಸೊಂಪಿನಿಂ ಬೆಳ್ಪುವೆತ್ತಿರ್ದಿಂಗೋಲಂ ಪಣ್ತದಾಳಿಂಬಗಳನೊಲವಿನಿಂ ತೋಂಟಿಗಂ ಕೊಟ್ಟನೋರ್ವಂ (ಕಬ್ಬಿಕಾ. ೮೮); ಲೋಗರ ಕಣ್ಣೊಂಜಲ್ ತಾಗದಂತು ಬೆರ್ಚನಿಟ್ಟು ಪಕ್ಕಿಗಳಂ ಬೆದರ್ಚಲೊಡರ್ಚಿದ ತೋಂಟಿಗನೊಂದಾಯತಿಯಂ ಕಂಡನಕ್ಕುಂ (ರಾಮಾಶ್ವ. ೮೫-೨೮).

ತೋಟಿಗ : ಸಮಸ್ತ ತೋಟಿಗರುಂ ಕೊನೆಕಾಜರು ವುಳಿಯ ಮೂನೂರ್ಬ್ಬರುಮಿರ್ದ್ದು . . . ಬಿಟ್ಟ ಧರ್ಮವಪ್ಪುದು (ಸೌಇಇ. IX-i, ೧೪೦-೩೩; 1136) ; ಬಾಳಿವಣ್ಣೊನೆಯ ಕಾಣಿಕೆಯಿತ್ತು ಭೂವರಗೊರ್ವ ತೋಟಿಗನೆಂದ (ಸೊಬಸೋ. ೩-೧೦) ; ಬಳಿಕಲಾ ತೋಟಿಗನ ಬುದ್ಧಿಗೆ ತಿಳಿವ ತೀಡುವೆನೆನುತ ಮಿಗೆ ಕಂಗಳಿಗೆ ಕಟ್ಟಿದಿರಾಗುತಲಿ ಶರಣಾರ್ಥಿಯೆಂದೆನಲು (ಪ್ರಭುಲೀ. ೧೧-೭) ; ತೋಟಿ ತೋಟಿಗಗಾಸೆ ಕೋಟಿ ಮನ್ನೆಯಗಾಸೆ (ಸರ್ವಜ್ಞ. ೧೯೦೭) ; ಅಗೆದು ಗೊಬ್ಬರವಿಕ್ಕಿ ನೀರೆರೆದು ತೋಟಿಗನು ಜಗಿವ ಮುಳ್ಳಿರಿತಗಳ ಸೈರಿಸೆ ಗುಲಾಬಿ ನಗುವುದೊಂದರೆನಿಮಿಷ (ಮಂಕುಕ. ೪೭೮). [ ತೋಂಟ + – ಇಗ ]

ತೋಂಟಿಗವೆಸ (ನಾ). ತೋಟಗಾರನ ಕೆಲಸ,–ಕಾರ್ಯ. 'ತೋಂಟಿಗವೆಸಂಗೆಯ್' ಪರಾ. [ ತೋಂಟಿಗ + ಬೆಸ$_1$ ]

ತೋಂಟಿಗವೆಸಂಗೆಯ್ (ಕ್ರಿ). ತೋಟಗಾರನ ಕೆಲಸ ಮಾಡು: ನನೆಯಂಬಂ ನನೆಮಾಡಿ ಚಾಪಲತೆಯಂ ನೀಳೇಕ್ಷುಗಳ್ಗಿತ್ತು ಕೇತನಮಂ ಖ್ಯಾತಿಯೊಳಿಕ್ಕಿ ತೋಂಟಿಗವೆಸಂಗೆಯ್ದಂಗಜಂ ತಿರ್ದೆ (ಅನಂಪು. ೧೦-೨೨). [ ತೋಂಟಿಗವೆಸ + ಕೆಯ್$_1$ ]

ತೋಂಟಿಗಸಮಯ (ನಾ). ತೋಟ ಮಾಡುವವನನ್ನು ನೇಮಿಸುವುದು,–ಕರಾರು ಮಾಡಿಕೊಳ್ಳುವುದು : ಮೂಱು ಮತ್ತರ ತೋಂಟವೊಂದದಂ ಜೈನರ್ಪ್ರತಿಪಾಳಿಸುವರಾ ತೋಂಟಕ್ಕೆ ತೋಂಟಿಗಸಮಯಮಿಲ್ಲದನಾರೋರ್ವ್ವರ್ಮ್ಮಾರ್ಪ್ಪರವರ್ಬ್ಬಸದಿಗೆ ಸಮಭಾಗಮಿಕ್ಕಿಯುಣ್ಬರ್ (ಸೌಇಇ. XI-i, ೫೨-೭೩ ; 1007).

[ ತೋಂಟಿಗ + ಸಮಯ ]

ತೋಂಟಿಗೊಳ್ (ಕ್ರಿ). ಯುದ್ಧಕ್ಕೆ ತೊಡಗು : ರಾಜನ್ಯಪನೊಳ್ ತೋಂಟಿಗೊಳಲೆಂದು ಎಡದೊಱೆಯೆಂಬ ಗಡಿಗೋಂಟೆಯೊಳ್ ಕಟ್ಟಿರ್ದ ಮೇಘಪುಷ್ಪಮೆಂಬ ಕೇಜಯಂ ಕಳವಿನಿಂದೆ ಕೊಂಡೊಯ್ವುದುಂ (ಚಿಕವಂ. ೫೦). [ ತೋಂಟ$_1$ (<ತೋಟ$_1$) + ಕೊಳ್$_1$ ]

ತೋಂಡಿಗೆಱೆ (ನಾ). ಒಂದು ಸ್ಥಳದ ಹೆಸರು: ಪಶ್ಚಿಮಾನ್ತ ಭಾಗ ತತಃ ತೋಣ್ಡಿಗೆಱೆ ದಕ್ಷಿಣಾನ್ತ ಭಾಗಃ (ಮ್ಯಆರಿ. ೧೯೪೨, ೭೫-೧೦೫ ; 813). [ ತೋಂಡಿ ? + ಕೆಱೆ ]

ತೋಂಡಿ ಪರೀಕ್ಷೆ (ನಾ). ಮೌಖಿಕ ಪರೀಕ್ಷೆ : ಮೌಖಿಕ ಪರೀಕ್ಷೆಗೆ ತೋಂಡಿ ಪರೀಕ್ಷೆ ಎಂದೂ ಹೆಸರಿದೆ (ರೂಢಿ).

[ ತೋಂಡಿ$_0$ ( P ←ಮರಾ. ತೋಂಡೀ) + ಪರೀಕ್ಷೆ ]

ತೋಕ (ನಾ). ಮಗ ಅಥವಾ ಮಗಳು; ಸಂತಾನ: "ಸೂನುಃ, ಸಂತತಿಃ . . . ತೋಕಂ, ತನಯಃ, ಸ್ತನಂಧಯಃ, ಅಪತ್ಯಂ – ಈ ೧೨ ಮಗವು" (ಹಲಾಯು. ೬೨-೩೪೩) ; ಬಿಜ್ಜಲೋರ್ವ್ವೀಶನ ತೋಕಂ ಸೋವಿದೇವಂ (ಸೌಇಇ. XV, ೧೪೨-೯ ; ?) ; ಘನಸಂಸಾರಸುಖಕ್ಕೆ ಸಾರಮಿದು . . . ಸುತಶಿರೋಜಾಘ್ರಾಣನಂ ಸೂನುಲೋಚನರೋಚಿಪ್ಪರಿಚರ್ಚೆ ತೋಕತನುಲಿಪ್ತಕ್ಷೋದ ಸಂದರ್ಶನಂ (ಕುಸುಮಾ. ೩-೫೮) ; 'ಜೀವತ್ತೋಕೆ' ಪರಾ. [ ಸಂ. ]

ತೋಕಿಸು (ಕ್ರಿ). ೧. ಹೊಡೆ; ಪ್ರಯೋಗಿಸು; ಬಿಡು : ಸಂಗರಕೆ ಬಿಲ್ಗೊಂಡು ಸರಳುಗಳ್ತೋಕಿಸುತಮತಿರಥರು ಪೊಕ್ಕು ಸೇನಾಜಲಧಿಯನ್ನೊರಸಿ (ತುರಂಗ. ೪೯-೪೦). ೨. ಬಾರಿಸು; ಮೊಳಗು; ಶಬ್ದವಾಗು : ಏಕಶಂಖಧ್ವನಿ ಭಡಾಳಿಸಲ್ಪರುಠವಣೆಯಿಾ ಕ್ರತುವು ಮುಗಿದ ಪರಿಯಂತರಮ್ಮೇಳುದಿನ ತೋಕಿಸಿತು ಪಗಲಿರುಳು (ತುರಂಗ. ೨೨-೪೭).

[ ತೋಕು$_1$ + – ಇಸು$_3$ ]

ತೋಕು$_1$ (ಕ್ರಿ). ೧. ಹೊಡೆ; ಪ್ರಹಾರ ಮಾಡು; ಪ್ರಯೋಗಿಸು : ತೋಕುವಂಬಿನ ಜೋದರೊಗ್ಗಿನೊಳೌಕಿದುವು ಸಾವಿರಮದೇಭಾನೀಕಬೊಬ್ಬೆಯ ಲಳಿಯ ತಾಕಿತು ಲಕ್ಕ ಪಾಯದಳ (ಕುವ್ಯಾಗ. ೧-೨೮) ; ಒಡನೆ ನೂಕಿತು ತೋಕುವಂಬಿನ ತಡವ ಶೂಲದ ಹೊಯ್ವ ಖಡ್ಗದ ಬಿಡುವ ಚಕ್ರದ ಬೀಸುಗವಣೆಯ ಬಹಳ ಭಟನಿಕರ (ತೊರಣಾ. ೫-೬-೧೧); ತೋಕುತಂಬನು ರಥದಿ ಕಲಿಬಲನಾಕರಸಿ ಮುಂದುಬ್ಬಿ ಬೊಬ್ಬಿಡೆ (ಅಂಬಿಕಾ. ೧೪-೪೨) ; ಪದ್ರಥರು ಸೊಕ್ಕಿ ಕೋಪಾಗ್ನಿಯಿಂ ತೋಕಿದರು ತನಿಸರಳ (ತುರಂಗ. ೫೨-೨೬). ೨. ಸುರಿಸು ; ವರ್ಷಿಸು : ತೋಕಿದವು ನಾರಾಚ ದೆಸೆದೆಸೆಯೋಕರಿಸಿದವೊ ಸರಳನೆನೆ (ಕುವ್ಯಾಆ. ೧೯-೧೩) ; ಮಾನವಸೂರ್ಯ ಭಾಪೆನುತ ತೋಕಿ ಪುಷ್ಪಾಂಜಲಿಯಲಮರಾನೀಕ ಕೈವಾರಿಸಲು (ನಿಭಾಗ. ೪-೧೦-೩೯) ; ಮರದ ಬುಡಕ್ಕೆ ನೀರು ತೋಕುತ್ತಿದ್ದ ರಾಮನಾಥನನ್ನು ಕರೆದು . . . ಗುಡುಗಿದನು (ಮೂರುದಾ. ೩೩). ೩. ಹೊರಹಾಕು ; ಚೆಲ್ಲು ; ತುಳುಕು : ನೆಱೆ ತೋಕಿದನು ಗಂಧರ್ವ ಜಲಧಿಯನೊಂದು ನಿಮಿಷದಲಿ (ಕುವ್ಯಾಆ. ೧೯-೧೭) ; ಹೊದೆಱ ಹರೆಗಡಿದೌಕಿದನು ತೋಕಿದನು ಸುಭಟರ ಜೀವವನು (ಕುವ್ಯಾದ್ರೋ. ೧೭-೨೫) ; ಕುಹಕದಲಿ ಮಲೆತರೆ ತೋಕುವೆನು ತನಿಗರುಳ ರುಧಿರವ ಶಾಕಿನಿಯರಿಗೆ (ನಿಭಾಗ. ೩-೭-೪೦). ೪. ಅಲ್ಲಾಡು ; ಬೀಸು : ತೋಕಿದವು ಸೀಗುರಿಗಳೆಡಬಲದಾಕೆಯಲಿ (ಕುವ್ಯಾಸ. ೧೫-೬೭). ೫. ಓಡು ; ಚೆದರು : ಬಲಜಲಧಿ ತೋಕಿದುದು ದೆಸೆದೆಸೆಗೆ ರಿಪುಬಲದ ಸುಭಟರಂ ನಾಕವಂ ಕಾಣಿಸಿತು (ತುರಂಗ. ೪೯-೩೮).

[ ದೇ.॥ ತಮಿ. ತುಕ್ಕೈ, ತುವೈ ; ತುಳು. ತೊಯಿಪ್ಪ ; ಕುಯಿ. ತೋಗ ; ಕುರುಖ್. ತೋಕ್‌ನಾ ]

ತೋಕು$_2$ (ನಾ). ಕೋವಿ ; ಬಂದೂಕು : ಮಾದಪ್ಪ ಹಗಲ ಮೇಲೆ ತೋಕನ್ನು ಏರಿಸಿ ಸೊಂಟಕ್ಕೆ ಪಡಿಕತ್ತಿಯನ್ನು ಸಿಕ್ಕಿಸಿ . . . ನರಿಬೇಟೆಗೆ ಹೊರಟ (ಹುಲಿಹಾ. ೧೭). 'ತುಪಾಕಿ' ಪರಾ.

[ದೇ.॥ ತಮಿ. ಮಲ. ತೋಕ್ಕು ]

ತೋಕು$_3$ (ನಾ). ಉತ್ಸಾಹ (?) : ಜಂರಘಾನಿಲ ಸುಳಿದೇಳ್ವ ರಭಸವೋ ಯೆನೆ ಕಾದಿದರ್ಕಲಿಗಳಿಗೆ ಪೊಸತೆನಲು ಹಾಣಾಹಣೆಯಿಂದಲುಚ್ಚಳಿಸಿದರ್ . . . ಗಜಗಳಿಂ ತುಳಿಸಿದರ್ ತೋಕಿನಿಂದ (ಲಕ್ಷ್ಮಭಾ. ೬-೩-೩೨).

[ ←ಮರಾ. ತೋಕ್, ತೋಖ್ ; ಹಿಂ. ತೋಖ್ ; ಅರ. ಶೌಕ್./ಸಂ. ತೋಷ ]

ತೋಕುಳಿ (ನಾ). ೧. ನೆನೆಸುವಿಕೆ ; ಅದ್ದುವಿಕೆ : (ಕ). ೨. ತೊಗಲು ಹದ ಮಾಡುವುದಕ್ಕಾಗಿ ನೆನೆಯಿಡುವ ಗುಳಿ : ಹರಳಯ್ಯಗಳ ತೋಕುಳಿಯ ನೀರ ತಂದು . . . ತಂಬುಗೆಗಳೊಳು ಮೊಗೆದು ಹರುಷದಿ ಮಧುವರಸಗೆಱೆಯಲು (ಪ್ರಭುಪು. ೯-೧೦೩) ; ಪೊಲೆಯರ ತೋಕುಳಿಯ ಕೊಳದೊಳಂಬುಜಮಂ ನೀನೆಲಸದೆ ಪುಟ್ಟಿಸಿದಂತೆ (ವೃಷವಿ. ೩೪-೧೦೮).

[ ತೋ + ಕುಳಿ$_2$ (<ಕುೞಿ$_2$) ]

ತೋಕೆ 'ಸೋಗೆ' ನೋ.

ತೋಕೆಗೋಧಿ (ನಾ). ಉದ್ದವಾಗಿರುವ ಒಂದು ಬಗೆಯ ಗೋಧಿ : ಓಟ್ಸು, ತೋಕೆಗೋಧಿ (ವ್ಯಾಜಿಗಿ. ೧೦-೦೪೧) ; ತೋಕೆಗೋಧಿ, ಜವೆ ಗೋಧಿ, ರೈ ಎಂಬ ಚಿಕ್ಕಗೋಧಿ . . . ಇವು ಸಮಶೀತೋಷ್ಣ ವಲಯದ ಇತರ ಮುಖ್ಯ ಬೆಳೆಗಳು (ಭೂವಿವ. ೧೪೬).

[ ತೋಕೆ (<ಸೋಗೆ) + ಗೋಧಿ$_1$ (<ಗೋದುವೆ) ]

ತೋಚಿಕೆ (ನಾ). ತೋರುವಿಕೆ ; ಗೋಚರವಾಗುವಿಕೆ; ಹೊಳೆಯುವಿಕೆ; ಭಾಸವಾಗುವಿಕೆ : ಆ ಕತೆ . . . ರಂಜನೀಯವಾಗಬಹುದೆಂದು ಮನಸ್ಸಿಗೆ ತೋಚಿತು, ಆ ತೋಚಿಕೆಯ ಫಲವೇ 'ಕಡುಗಲಿ ಕುಮಾರ ರಾಮ' ಗ್ರಂಥದ ಪ್ರಕಟಣೆ (ನಂಜುಂಡ. iii, ಪ್ರಸ್ತಾವನೆ).

[ ತೋಚು + – ಇಕೆ ]

**ತೋಚು**(ಕ್ರಿ). ೧. ಗೋಚರವಾಗು ; ಕಾಣು ; ತೋರು : ನವೋನವದ ಜಾಗೃತಿಯಲೆದ್ದ ಜೀವಾಗ್ನಿ ತೋಚುತಿಹುದು (ಜ್ವಲಾಲ. ೭-೧೩). ೨. (ಮನಸ್ಸಿಗೆ) ಹೊಳೆ ; ಭಾಸವಾಗು : ಕೀಚಕನಾಡಿದ ನೀಚನುಡಿ ಕೇಳಿ . . . ಮುಂದೆ ತೋಚದೆ ಖಳನ ವಿಚಾರಿಸಿಕೊಳ್ಳೊ ಶ್ರೀ ಚಕ್ರಪಾಣೀ . . . ಎಂದು ನುಡಿದಳು (ಪಾದಿಕೀ. ೬೫-೯) ; ಎನಗೇನು ತೋಚುವ ಪರಿಯು ಕಾಣೆನು (ಜನಭಾ. ೬೩-೩೭).

**ತೋಚಿಕೊಳ್ಳು** = ಭಾವಿಸು ; ಯೋಚನೆ ಮಾಡು : ವಶಃ- ಕಾಂತಿಃ ೨ ಮನಸ್ಸಿನಲ್ಲಿ ನೆನವುಂಟಾಗುವಿಕೆ; ತನ್ನೊಳಗೆ ತೋಚಿಕೊಳ್ಳುವಿಕೆ, ಬುದ್ಧಿಯಲ್ಲಿ ಸ್ಫುರಿಸುವಿಕೆ (ಸಿದ್ಧಾಂತಿ. ೩೦೭); ವೀರರಾಜ ಅದೇನು ತೋಚಿ ಕೊಂಡನೊ ಯಾವ ಪ್ರತಿಯನ್ನೂ ಹೇಳದೆ . . . ಸಾಗಿದನು (ಚಿಕರಾ. ೧೩).
[ <ತೋಱು + - ಚು$_1$./ತುಳು. ತೋಜು, ಸೋಜು; ತೆಲು. ತೋಚು ]

**ತೋಟ$_1$** 'ತೋಂಟ' ನೋ.

**ತೋಟ$_2$** 'ತೋಟಾ$_1$' ನೋ.

**ತೋಟಕ** (ನಾ). [ಛಂದ] ಪ್ರತಿ ಪಾದದಲ್ಲಿ ಹನ್ನೆರಡಂ ಅಕ್ಷರಗಳುಳ್ಳ ವೃತ್ತ ; : ಪವಮಾನ ಚತುಷ್ಕಯುತಂ ಯತಿಯುಂ ದಿವಸಾಧಿಪರೊಳ್ ನಿಲೆ ವಸ್ತು ಕವಿಪ್ರವರಸ್ತುತಮಪ್ಪುದು ತೋಟಕಮೆಂದವಧಾರಿಸು (ಛಂದೋಂಬು. ೨-೩೬). [ ಸಂ. ]

**ತೋಟಗಟ್ಟು** (ನಾ). ತೋಟದ ಪ್ರದೇಶ ಅಥವಾ ಸ್ಥಳ: ಬಿಟ್ಟ ಮೇಲು ಮಕ್ಕಿಯು ಗಡಿಯ ತೋಟಗಟ್ಟು ಕಮ್ಮ ೪೦೦ (ಸೌಇಇ. IX-i, ೯೫-೫೦; 1041); ಮನ್ನೆಯಗೆಱೆಯ ಕೋಡಿಯಿಂ ತೆಂಕ ತೋಟಗಟ್ಟು ಮತ್ತರೊಂದು ಆ ಕೆಱೆಯ ಕೆಳಗೆ ಗದ್ದೆ ಮತ್ತರೆರಡು (ಸೌಇಇ. IX-i; ೩೨೯-೫೩; 1200); ಮಂನೆಯಗೆಱೆಯ ಕೆಳಗೆ ಹಿರಿಯೂರಡೆಯರ ತೋಟಗಟ್ಟು ಮತ್ತರೆರಡು (ಸೌಇಇ. IX-i, ೩೩೩-೪೭ ; 1216).
[ ತೋಟ$_1$ (<ತೋಂಟ) + ಕಟ್ಟು$_2$ ]

**ತೋಟಗಾರ** (ನಾ). ೧. ತೋಟಮಾಡುವವನು ; ತೋಟಿಗ : ಆಶೆಗೆ ತಕ್ಕ ಹಾಗೆ ಮುತುವರ್ಜಿಯಿಂದ ಕೆಲಸ ಮಾಡುವ ತೋಟಗಾರರಿರಬೇಕು (ತರಬಿ. ೧). ೨. ತೋಟದ ಮಾಲೀಕ,-ಒಡೆಯ.
[ ತೋಟ$_1$ (<ತೋಂಟ) + - ಕಾರ$_1$ (<- ಕಾಱ) ]

**ತೋಟಗಾರಿಕೆ** (ನಾ). ತೋಟವನ್ನು ಬೆಳೆಸುವುದು ; ತೋಟ ಮಾಡುವುದು ; ತೋಟದ ಬೇಸಾಯ : ಮೈಸೂರುಸಂಸ್ಥಾನದಲ್ಲಿ ತೋಟಗಾರಿಕೆಯನ್ನು ಕುಲಕಸಬನ್ನಾಗಿ ಪಡೆದಿರುವ ಅಲ್ಪಸಂಖ್ಯಾತ ಪಂಗಡ ಪೊಂದಿದೆ (ತರಬಿ. ೨). [ ತೋಟಗಾರ + - ಇಕೆ ]

**ತೋಟಗಾವಲ್** (ನಾ). ತೋಟವನ್ನು ಕಾಯುವುದು ; ತೋಟಕ್ಕೆ ಕಾವಲಾಗಿರುವಿಕೆ : ಪುಲ್ಗಳ ಪಸುರ್ಗಳಿಸಿ ಪೊಕ್ಕಡಾ ತೋಟಗಾವಲ್ಗೆ ತನ್ನೊಡನಾಡಿಗಳ ಕೂಡೆ ಲೀಲೆ ಮಿಗೆ ಬಿಲ್ಗೊಂಡು ನಡೆತಂದವಂ ಕಂಡ ನರ್ಚಿತ ಸುವಾಜಿಯಂ (ಜೈಮಿಭಾ. ೨೦-೫).
[ ತೋಟ$_1$ (<ತೋಂಟ) + ಕಾವಲ್$_1$ ]

**ತೋಟತುಡಿಕೆ** (ನಾ). ತೋಟ ಮತ್ತು ಅದಕ್ಕೆ ಸಂಬಂಧಿಸಿದ ಭಾಗ : ಯಿಂತೀ ಚತುಸ್ಸೀಮೆಯೊಳಗುಳ್ಳ ಗಡಿಗ್ರಾಮ . . . ಹಟ್ಟಿಹಕ್ಕಲು ತೋಟತುಡಿಕೆ (ಮೈಆರಿ. ೧೯೩೪, ೫೩-೧೮ ; 1405) ; ಆ ದಂಣ್ಣಾಯಕ ಪುರಕ್ಕೆ ಸಲುವ ಚತುಸೀಮೆಯೊಳಗುಳ್ಳ ತೋಟತುಡಿಕೆ ಗದ್ದೆ ಬೆದ್ದಲು (ಎಕ. VII, ಶಿವಮೊ. ೭೦-೨೭ ; 1431).
[ ತೋಟ$_1$ (<ತೋಂಟ) + ತುಡಿಕೆ ]

**ತೋಟಪಟ್ಟಿ** (ನಾ). ತೋಟದ ಭೂಮಿ,-ಪ್ರದೇಶ : ತೋಟಪಟ್ಟಿಗಳ ಮೇಲೆ ಪ್ರಾತಃಕಾಲೀನ ಪ್ರಕಾಶ ಬೀರುವ ಹೇ ಪರಮಾತ್ಮಾ . . . ನಿನ್ನ ಕೃಪೆಯನ್ನು ಸುರಿಸು (ಆಶ್ರಮ. ೨೩) ; ಬೆಲ್ಲದ ನಾಡವರು. ತೋಟಪಟ್ಟಿ ಇದ್ದವರು (ಅಶೋಕ. ೭) ; ಅನುವಂಶಿಕ ಹಕ್ಕುದಾರಿಯು ಕಾಲರಾ ತನ್ನ ತೋಟಪಟ್ಟಿಯ ಕೃಷಿಮಾಡಲು ಬಂದಿತು (ಸ್ಮೃತಿಚಿ. ೨೦೭). 'ತೋಟ್ಟಿ ಪಟ್ಟು' ಪರಾ. [ ತೋಟ$_1$ (<ತೋಂಟ) + ಪಟ್ಟಿ$_2$ ]

**ತೋಟಮಲ್ಲಿಗೆ** (ನಾ). ತೋಟದಲ್ಲಿ ಬೆಳೆಯುವ ಮಲ್ಲಿಗೆ : ನಾಟಿರಾಗವು ಲೇಸು ತೋಟಮಲ್ಲಿಗೆ ಲೇಸು ಕೂಟವದು ಲೇಸು ಹಿರಿಯರೊಳು (ಸರ್ವಜ್ಞ. ೩೨೨). [ ತೋಟ$_1$ (<ತೋಂಟ) + ಮಲ್ಲಿಗೆ ]

**ತೋಟಮಾದಳ** (ನಾ). ತೋಟದಲ್ಲಿ ಬೆಳೆಯುವ ಮಾದಳ : ತೋಟ ಮಾದಳದ ಹಣ್ಣಿನ ರಸದಲ್ಲಿಯಾದರೂ ಹಸಿಶುಂಠಿರಸದಲ್ಲಿಯಾದರೂ ಕೊಡಿಸಲು . . . ಸಕಲ ರೋಗಂಗಳೂ ಪರಿಹರ (ವೈದ್ಯಸಾ. I, ೨೯೮).
[ ತೋಟ$_1$ (<ತೋಂಟ) + ಮಾದಳ ]

**ತೋಟವಳ** 'ತೋಂಟವಾಳ' ನೋ.

**ತೋಟವಾಳ** 'ತೋಂಟವಾಳ' ನೋ.

**ತೋಟವಾಳಿಗ** 'ತೋಂಟವಾಳಿಗ' ನೋ.

**ತೋಟಾ$_1$, ತೋಟ$_2$, ತೋಟ್ಟೆ** (ನಾ). ಬಂದೂಕಿನಲ್ಲಿಟ್ಟು ಹಾರಿಸುವ ಕೊಳವೆಯಾಕಾರದ ಗುಂಡು ; ಕಾಡತೂಸು : ಮೊದಲನೆ ಈಡು ಕಡಕಿನ ತೋಟಾದ್ದಾದ್ದರಿಂದ ಒಡೆರಡು ಕಡಕುಗಳು ಗಿಡಗಳಿಗೆ ತಗುಲಿದ್ದುದು ಕಂಡು ಬಂದಿತು (ಕಾನೂರು. ೧೪೩). **ತೋಟ್ಟೆ** : ಸುಲ್ತಾನಿ ತೋಟ ತುಂಬಿದಂಥಾ ತೋಸ್ತಾನಿ ಒಂದು . . . ಈ ಮೇರೆ ಎರಡು ಜನಕ್ಕೂ ಜಂಗಿ ಸಾಮಾನು ಕೊಟ್ಟು (ರಾಜೇಂದ್ರ. ೧೦೫). **ತೋಟ್ಟೆ**: ಆದರೆ ಪಿಸ್ತೂಲುಗಳನ್ನು ಇಟ್ಟುಕೊಳ್ಳುವುದು ಹೇಗೆ ? ಅದಕ್ಕೆ ಹತ್ತಾರು ರೂಪಾಯಿಗಳನ್ನು ಖರ್ಚುಮಾಡಿ ಮೇಲೆ ಮೇಲೆ ತೋಟೆಗಳನ್ನು ಕೊಳ್ಳುತ್ತಲೇ ಇರಬೇಕು (ಪಂಯಾತ್ರ. ೪೭).
[ ←ಮರಾ. ತೋಟಾ ; ಹಿಂ. ಟೋಟಾ ]

**ತೋಟಾ$_2$** 'ತೋಡಾ' ನೋ.

**ತೋಟಾವಳಿ** (ನಾ). ತೋಟಗಳ ಸಾಲು : ಹತ್ತಿರದಲ್ಲಿಯೇ ಕೆರೆ, ಅದರ ಕೆಳಗೆ ಅಂದವಾದ ತೋಟಾವಳಿಗಳು (ಜಂಗಾಳ್ಕೆ. ೩೦೯).
[ ತೋಟ$_1$ (<ತೋಂಟ) + ಆವಳಿ$_1$ (= ಆವಲಿ) ]

**ತೋಟಿ$_1$, ತೋಂಟಿ$_1$** (ನಾ). ೧. ಕಲಹ ; ಜಗಳ ; ಕದನ : "ತೋಟಿಯೆಂದು ಜಗಳಂ" (ಕರ್ಣಾನಿ. ೦೪) ; ಎರಡು ರಥವೊಳವು ನೋಟಕ್ಕೆ ರಡಱೊಳವನೊಂದು ರಥಮೆ ತೋ[ಪಾಠಾಂ. ಕೋ]ಟಿಗೆ ಪಲವಾಗಿರೆ ಪರಿದು (ಪಂಪಭಾ. ೫-೯೫) ; ಸುರಕೋಟಿ ವಿನೋದದ ತೋಟಯೊಳ್ ಚರಾಚರಗುರುವಿಂಗೆ ಪೊಟ್ಟುಗಳೆಯುತ್ತಿರೆ (ಶಾಂತಿಪು. ೧೦-೯೦); ತೊಡಗಿದರು ತೋಟಿಯನು ತಮತಮಗೆ (ಪ್ರಭುಲೀ. ೧೩-೭) ; ತೋಳನ ತೋಟಿ ಸದರವೆ ಕುಱಿಯ ಜಂಗುಳಿಗೆ (ತೊರರಾ. ೬-೩೭-೫೫) ; ಭರತೇಶನೊಳು ತೋಟಿ ಬೇಡೆಂದು ಮೊದಲೆ ಪೇಳ್ದರೆ ಕೇಳದುಕ್ಕಿ ಕಾದಿದರು (ಭರತೇ. ೩೪-೯೯) ; ತೊಡರ್ಚಿ ತೋಟಿಯಂ ಪಡಿದಟವಾಂತು ಬಂದ ಮಲೆನಾಡಿನ ಸಿಂಗಳರಾಯನಂ ಮೊಗಂಗಿಡಿಸಿ (ಚಿಕವಿ. ೨-೬೮). ೨. ಹೊಯ್ದಾಟ; ತೊಳಲಾಟ ; ಭಾವನೆಗಳ ತಾಕಲಾಟ : ಕಣ್ಬೇಟದ ತೋಟಿಯೊಳ್ತೊಡರ್ದು ದುಸ್ಸಹ ವಿರಹತಾಪಕ್ಕಳ್ಕಿ ವನದುರ್ಗಮಂ ಪುಗುವಂತೆ ಲತಾಗೃಹವನಂಗಳಂ ಪೊಕ್ಕು (ಮಲ್ಲಿಪು.೩-೩೨); ಅಱಿದೆನಱಿದೆನೆಂದು ಮಱವೆಯ ತೋಟಿಯ ತೊಳಸುತ್ತ (ಮೋಳಿಮಾ. ೦೭೫-೬೬೦). ೩. ಹಾವಳಿ ; ತೊಂದರೆ : ಮತ್ತಮೊಂದೆಡೆಯೊಳೊರ್ವರ ತೊಟ್ಟು ಲಲಿತಾಂಗಂ ಬಂದನಿನ್ನಾವಾತನ ತೋಟಿ ಪಿಂಗುವಿನಂ ನೆರೆವನೆಯೊಳಿರ್ದು ಬರ್ಪಮೇಟಿಮೆಂದು . . . ಪೇಟ್ವುದುಂ (ಧರ್ಮಾಮ್ಮ. ೨-೪೯) ; ಬಿರುದ ಬಿಸುಟರೆ ತೋಟಿಯೇನೆಂದ (ತೊರರಾ. ೧-೯-೩೨). ೪. ತಂಟೆ; ಗೊಡವೆ; ಗೋಜು : ಚೆಲ್ಲಂ ಬೇಂಟದ ತೋ ಟಿ ಯೊ ಳ್ ತೊಡರೆ ಕಂಡು

(ಕಾವ್ಯಸಾ. ೫೫೦ ಶೂದ್ರಕ) ; ಅದಱಿಂ ನಿನಗಿದಱ ತೋಟಿ ಬೇಡ (ಪಂಚತಂ. ೨೭೩-೨೪) ; ಬೇಟದ ಪದನೆಂದು ಕೂಟದ ಮದವೆಂದು ನೋಟದೊಳ್ಗಂಡರಱಿವೊಡೆ ಹಡಹಿನ ತೋಟಿಯೇಕೆಲಗೆ ಬೆಲೆವೆಣ್ಣೆ (ಲೀಲಾವ. ೨-೩೭) ; ಕಾಮದೇವನ ತೋಟಿ ಬೇಡೆಂದು ಬಿರುದೆತ್ತಿ ಕರೆವ ಕಂದರ್ಪನ ಕಹಳೆಗಳೆಂಬಂತೆ ತಂಡ ತಂಡದಿಂ ಕೂಗುವ ಗಂಡುಗೋಗಿಲೆಗಳಂ (ಗಿರಿಕ. ೩-೧೦೩ ವ) ; ಅಸುರಕುವರನ ತೋಟಿ ಬೇಡ (ಕಾಶಿರಾ. ೩೫-೧೮) ; ಈ ಕೊಡಲಿಕಾಱನ ತೋಟಿ ಬೇಡೆಂದ (ಕುವ್ಯಾಸ. ೯-೭೮). ೫. ಸಾಮರ್ಥ್ಯ; ಪರಾಕ್ರಮ : ನಾನಾವ ಮಂತ್ರದ ತಂತ್ರ ತೊಡಕಿನ ತೋಟಿಯುಳ್ಳವಳು (ಕುವ್ಯಾಅ. ೧೫-೨೩) ; ತೋಟಿಯಿಂದೊಳಪೊಕ್ಕು ಪುರಗಳೊಳಗೆ ಬಲು ಬೇಟೆಯ ನಾಯ ಹಿಡಿವರು (ಕುರಾಸಾಂ. ೧೧-೩). **ತೋಂಟಿ₁** : ೧. 'ತೋಂಟಿಗೊಳ್' ಪರಾ. ೬. ಮಾತ್ಸರ್ಯ ; ಹೊಟ್ಟೆಕಿಚ್ಚು : ಕವಿಶಿವನೆಸೆದಂ ತೋಂಟಿಯನುಳಿದ ಕವೀಶರ್ಗುಂಟೆನಿಸುತೆ ದಿವ್ಯ ಬೋಧೆಯಂ ದಕ್ಷಿಣೆಯಿಂ (ಹಾಲಾಸ್ಯ. ೭-೩-೬೧).

**ತೋಟಿ₂, ತೊಟ್ಟಿ₃, ತೋಂಟಿ₂** (ನಾ). ೧. ಗ್ರಾಮಸೇವಕರಲ್ಲಿ ಒಬ್ಬ ; ಕಸಗುಡಿಸುವವನು; ಜಾಡಮಾಲಿ: ತೋಟಿ-ತಳವಾರ, ವೆಟ್ಟಿ, ಬಾರೀಕಿ ಅಥವಾ ಕೋಲುಕಾರನೆಂದು ಹೆಸರುಂಟು (ಗ್ರಾಮೂಕ. ೧) ; ತೋಟಿ (Scavengers)ಗಳೇ ಅವಶ್ಯವಿಲ್ಲದ, ಬಾವಿ-ಪಾಯಿಖಾನೆ (Bore-hole Latrines)ಗಳನ್ನು ಯಾರೂ ಮಾಡಬಹುದು (ಬಾಲಪ್ರ. I, ೨೯೬) ; ಇವನ ಹೆಣವೂ ತೋಟಿಗ⁼ ಪಾಲಾಗಬೇಕೋ ಏನೋ (ದೀಪದ. ೫೧). ೨. (ಆಲಂ) ಕೀಳಾದವನು ; ಅಲ್ಪ ; ಕ್ಷುದ್ರ : ಭಂಡರ್ಗೆ . . . ತೋಟಿ ತೊನ್ನರಿಗೆ ಕೊಂಡೆಯರ್ಗೆಲೆ ರಂಗ ನಿನ್ನಯ ಪದಪದ್ಮಗಂಡಲ್ಲಿ ಮೋಕ್ಷ ಸಿದ್ಧಾಂತ (ನೀತಿಸಾಂ. ೭೭-೩೩). **ತೊಟ್ಟಿ₃** : ೨. ಇವನೆಂತಹ ತೊಟ್ಟಿ (ರೂಢಿ). **ತೋಂಟಿ₂**: ೩. ಸೇವಕ; ಪರಿಚಾರಕ: ಚಾವುಣ್ಡಯ್ಯಙ್ಗೆ ನಾಲ್ಕು ಮತ್ತತೋಂಟಿಗಳ್ಗೆ ನಾಲ್ಕು ಮತ್ತನೀವೇದ್ಯಕ್ಕೆ ನೆಲ್ಲ ಮಡಿ ಎರಡು (ಸಾಇಇ. IX-i, ೬೦-೧೫ ; 931). ☞ 'ತೋಂಟಿ' ಎಂಬುದೇ ಮೂಲ ರೂಪವಾಗಿರಬಹುದೇ ?

[ ದೇ. ॥ ತಮಿ. ಮಲ. ಶೋಟ್ಟಿ ; ತುಳು. ತೆಲು. ತೋಟಿ ]

**ತೋಟಿ₃** (ನಾ). ೧. ಪಕ್ಷಿಯ ಚುಂಚು,-ಕೊಕ್ಕು. ೨. ಬಾಯಿ: ಇತ್ತಲು ಭೀಮ ಬಲುದುತ್ತುಗಳ ತೋಟಿಯಲಿ ಮರನ ಮುಱಿದೆಱಗಿದರೆ ಪುನರಪಿ ಮುಱಿದು ನೋಡಿದು ಬಹೆನು ನಿಲ್ಲೆನುತರೆಗೆಲಸ ಪೂರೈಸಲೆಂದನು (ಕುವ್ಯಾಅ. ೧೧-೩೩). ೩. ಪಾತ್ರೆ ಮುಂತಾದುವುಗಳ ಮೂತಿ : ನೀರು . . . ಪಾತ್ರೆಗೆ ಹಚ್ಚಿದ ತೋಟಿಯೊಳಗಿಂದ ಹೊರಗೆ ಬೀಳುತ್ತದೆ (ಮುಂಬಯಿ. ೫-೮೨). [ <ಸಂ. ತ್ರೋಟೀ./ಮರಾ. ತೋಟೀ ]

**ತೋಟಿಕಾಱ** 'ತೋಟಿಗಾಱ' ನೋ.

**ತೋಟಿಗ** 'ತೋಂಟಿಗ' ನೋ.

**ತೋಟಿಗಾಱ, ತೋಟಿಕಾಱ** (ನಾ). ಯುದ್ಧಾಸಕ್ತ ; ಯುದ್ಧ ಮಾಡುವವನು : ಬಲು ತೋಟಿಗಾಱರು ತೊಡಗಿದರು ರಣವ (ನಿಘಾಗ. ೭-೯-೧೨). **ತೋಟಿಕಾಱ** : ನೋಟದಮರರ ನಯನಗಳಿಗಲ್ಲಾಟವೆನೆ ಪರಿಚಿತ್ರ ಗತಿಗಳ ತೋಟಿಕಾಱರು ಹೊಕ್ಕು ತಾಗಿದರುಭಯಸೇನೆಯಲಿ (ಕುವ್ಯಾಭೀ. ೭-೨೫) ; ಜಯದ ತವಕದ ತನಿಮನದ ಕಡುತೋಟಿಕಾಱರು ಕಾದಿದರು ಕಡುಗಿ (ಕುವ್ಯಾಗ. ೬-೨೯) ; ಶ್ರೀಮಂನಾಡಪ್ರಭು ಗಡಿಯಂಕ ಭೀಮಕಟಕ ತೋಟಿಕಾಱ (ಎಕ. XI, ಹೊಳಲ್ಕೆ. ೧೦೨-೩ ; 1631 ?).

[ ತೋಟಿ₁ + – ಗಾಱ (< – ಕಾಱ) ]

**ತೋಟಿಗಿತಿ** (ನಾ). ತೋಟದ ಕೆಲಸದವಳು : ಸುಂಕಿಗಿತಿ, ತೋಟಿಗಿತಿ (ಶಬ್ದಾನು. ೧೯೧ ಪ್ರಯೋ).

[ ತೋಟಿಗ₁ (<ತೋಂಟಿಗ) + – ಇತಿ₁(< – ಇತ್ತಿ) ]

**ತೋಟಿಗೈ** (ಕ್ರಿ). ಯುದ್ಧಮಾಡು ; ಕದನಮಾಡು : ಪೊಯ್ವ ತೊಡಂಕುವ ತೋಟಿಗೈವ ಕೂಂಕುವ ನೆಱೆ ನೂಂಕಂವೇಳ್ಗೆಯು ಬಲಂ ಬಗೆಗೊಂಡುದು (ರಾಜಶೇ. ೧೩-೮೭). [ತೋಟಿ₁ + ಗೈ (<ಕೆಯ್₁) ]

**ತೋಟಿಗೊಳು** (ಕ್ರಿ). ಜಗಳವಾಡು ; ಕಲಹ ಮಾಡು : ತೋಟಿಗೊಳುವ ದುಷ್ಟ ದಂಪತಿಗಳು ಬೂತಾಟಗಳಿಂದನುಗೆಟ್ಟು ಊಟ ನಿದ್ದೆಗಳೊಂದಱೊಳು ಸುಖವಿಲ್ಲದೆ ಕೋಟಲೆಗೊಂಡು ಕುಗ್ಗುವರು (ಹದಿಬ. ೬-೭).

[ ತೋಟಿ₁ + ಕೊಳು (<ಕೊಳ್₁) ]

**ತೋಟಿಯ** (ನಾ). ಶೂರ; ಪರಾಕ್ರಮಿ (:) ತೋಟಿಯರ್ ತಱಿದಿಕ್ಕಿದ ರಾಂಪದ್ವೈತ್ಯವಧೂಟಿಯ ಕರೆದು ತನ್ನೊಡನೆ ಸೂಟಿಯೊಳ್ ಸಾವಂತೆ ಕೆಯ್ಯ ಖಡ್ಗವನಿಕ್ಕಿ ದಾಟಿಸಿಕೊಂಡಳೆಲ್ಲರನು (ಮೋಹತ. ೩೩-೩೮).

[ ತೋಟಿ₁ + – ಅ₇ ]

**ತೋಟೆ** 'ತೊಗಟು' ನೋ.

**ತೋಟೆ₂** 'ತೋಟಾ₁' ನೋ.

**ತೋಟೆ₃** (ನಾ). ಒಂದು ಬಗೆಯ ಔಷಧಿ ಮೂಲಿಕೆ : ತೋಟೆಯ ಬಡಗ ಹರಿದ ಬೇರು ನೀರಲ್ಲಿ ಅರೆದು ಯೋನಿಯಿಂದಿಳಿಯ ಪೂಸಲು ಪ್ರಸವಮಾಗುವುದು (ವಿವ್ಯವಿ. ೧೦೭). [ ? ]

**ತೋಟ್ಟಪಟ್ಟು** (ನಾ). ತೋಟದ ಭೂಮಿ,-ಪ್ರದೇಶ: ಪುತ್ತೂರತ್ತಾಣಿಗೆ ಅಯ್ದೂಂಬು ಕಟನಿಯುಂ ಅಯ್ದೂಂಬು ತೋಟ್ಟಪಟ್ಟುಂ ಕೊಟ್ಟರ್ (ಎಕ. X, ಕೋಲಾರ ೨೨೭-೫; ಸು. 750); ಅಯ್ದೂಂಬು ಮೊದಕಟನಿಯು ಎಟ್ಟೂಮ್ಬು ಬಾಳೆ ತೋಟ್ಟಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X, ಕೋಲಾರ. ೨೩೧-೫ ; ಸು. 800 ?). 'ತೋಟಪಟ್ಟಿ' ಪರಾ.

[ ತೋಟ₁ (<ತೋಂಟ) + ಪಟ್ಟು₃ (<ಪಟ್ಟಿ₃) ]

**ತೋಡ₁** (ನಾ). ಬೆಳೆಯನ್ನು ನಾಶಪಡಿಸುವ ಬಿಳಿಯ ಇಲಿ : ಸುಂಡನ್ಗೆ ಶೂಲದ ಕತ್ತಿ ತೋಡನ್ಗೆ ಬಿಲ್ ಬಾಣ, ಮುಂದೋಗೋ ಹೆಣ್ಣಾನ್ಗೆ ನಾಗಸ್ವರದ ಕೊಳಲು (ಹುಟ್ಟಹ. ೧೭೫) ; ತೋಡ, ಹೆಗ್ಗಣ, ಗೋಲಂದಿ (ನಮ್ಮನು. ೨೩೯) ; ದೇವಸ್ಥಾನದ ಪ್ರಾಕಾರದ ಗೋಡೆಯ ಕೆಳಗೆ ಒಂದು ತೋಡ (ಬಿಳಿ ಇಲಿ) ಮನೆ ಮಾಡಿಕೊಂಡು ಸಂಸಾರ ಮಾಡಿಕೊಂಡಿದೆ (ಗರುಡಾ. ೧೮೧). [ <ತೋಡು₁ ]

**ತೋಡ₂, ತೊಡವ, ತೊದ** (ನಾ). ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು; ನೀಲಗಿರಿಯ ಆದಿವಾಸಿ: ನೀಲಗಿರಿಯ ತೋಡರು ಹೊರಗಿನ ಜನರೊಡನೆ ಈಗೀಗ ಬೆರೆಯತೊಡಗಿರುವರು (ಬಾಲಪ್ರ. I, ೭೯೯); ತೋಡರು ಹಾಲು, ಮೊಸರು, ಮಜ್ಜಿಗೆ ಮಾಡುವರು (ದ್ರಾವಿವಿ. ೧೫೭). **ತೊಡವ** : ತುಳುವರು ತೊಡವರು ಬಡಗರು (ಅರಳು. ೩೦೭-೭). **ತೊದ** : (ಈ). [ ದೇ.॥ ತಮಿ. ತೋಟ, ತುಟವ ]

**ತೋಡ₃** 'ತೋಡಾ' ನೋ.

**ತೋಡರ** (ನಾ). (?) : ನಂದಿಧ್ವಜನ ಚರಣಪಂಕೇಜಗಳು ಶೋಭಿಸಿದವಾಗ ದೃಕ್ಕರಣ ತೋಡರಗಳಿಂದ (ಮಲ್ಹಾರಿ. ೫-೧೨). 'ತೋಡಾ' ಪರಾ. ☞ ಇದು 'ತೊಡರು' ಎಂಬುದರ ಅಪಲಿಖಿತವಿರಬಹುದು.

**ತೋಡಾ, ತೋಟಾ₂, ತೋಡ₃, ತೋಡೆ₁** (ನಾ). ೧. ಮುಂಗೈಗೆ ತೊಡುವ ಒಂದು ಬಗೆಯ ಆಭರಣ ; ಹಸ್ತಾಭರಣಗಳಲ್ಲಿ ಒಂದು; ಕಂಕಣ ; ಕಡಗ : ತನಗೆ ಮಹಾರಾಜರು ಬಹುಮಾನವಾಗಿ ಕೊಟ್ಟ ತೋಡಾ, ಮಕರಕಂಠಿ ಮುಂತಾದ ಒಡವೆಗಳಿಂದ ಆತನನ್ನು ಅಲಂಕರಿಸಿ (ಗಾನಕ. ೬೮) ; ಮಹಾರಾಜರು ಅವರ ಎರಡು ಕೈಗಳಿಗೂ ರತ್ನಖಚಿತ ಚಿನ್ನದ ತೋಡಾ (ಬಳೆಗಳನ್ನು) ಹಾಕಿ ಬಹುಮಾನಿಸಿದರು (ಸಂಗೀತ. ೨೭). ☞ ರಾಜ, ಮಹಾರಾಜರು ಕಲಾವಿದರು ಅಥವಾ ವಿದ್ವಾಂಸರಿಗೆ ಬಿರುದಿನೊಡನೆ ಬಹುಮಾನರೂಪವಾಗಿ ಕೊಡುವ ಅಲಂಕಾರ

ಸಾಧನ. ತೋಟ್ಸಾ: ೨. ಹಣದ ಚೀಲ ; ಥೈಲಿ. ೩. ನಳಿಗೆ ಯಾಕಾರದಲ್ಲಿ ನಾಣ್ಯಗಳನ್ನು ಸುತ್ತಿದ್ದು ; ಒಂದೇ ಸಮನಾಗಿ ಜೋಡಿಸಿದ ನಾಣ್ಯಗಳ ಕಟ್ಟು: ಕಚೇರಿಯಾದ ಮೇಲೆ ಒಂದು ಬೆಳ್ಳಿಯ ತಟ್ಟೆಯಲ್ಲಿ ತಾಂಬೂಲಸಮೇತವಾಗಿ ಎರಡು ಹಣದ ತೋಟಾಗಳನ್ನಿಟ್ಟು ಕೃಷ್ಣಪ್ಪನವರಿಗೆ ಕೊಟ್ಟರು (ನಾಕಲಾ. ೫೮). ತೋಡ್ಸ: ೧. ಸಜ್ಜುಕ ಸರ ತೋಡ ಮುಕುರ ಬಾಚಣಿಗೆಯು ಕಜ್ಜದರೊಜಗಿರ್ದರು ಸುತ್ತ (ಸೂಬಸೋ. ೨೩-೨೭). ೪. (ಬಿರುದಿನ ಸಂಕೇತವಾಗಿ) ಕಾಲಿಗೆ ಹಾಕಿಕೊಳ್ಳುವ ಕಡಗ ; ಪೆಂಡೆಯಂ : ಪ್ರಭುಗಳು, ಮುತ್ತಿನ ಜೊಂಪೆಗಳಿಂದ ಕೂಡಿದ, ನವರತ್ನಖಚಿತವಾದ ಗಂಡಪೆಂಡೇರವೆಂಬ ಚಿನ್ನದ ತೋಡವನ್ನು ಕುವರನ ಬಲಗಾಲಿಗೆ ಬಹುಮಾನಿಸಿದರು (ಶಾಂತಲಾ. ೩೦೬). ತೋಡ್ಸೆ₁: ೧. ಜಡೆಯ ಮಾದರಿ, ತೋಡೆಯ ಮಾದರಿ ಇತ್ಯಾದಿ ಕೆಲವು ಮಾದರಿಯ ಮಾಲೆಗಳನ್ನು ಹೆಣ್ಣುಮಕ್ಕಳು ಕಟ್ಟುತ್ತಾರೆ (ಹ್ಮಾಮುತಾ. ೨೦). ೫. ಒಂದು ಬಗೆಯ ಆಭರಣ ; ಕಾಲ್ಗಡಗ : ಶ್ರೀಕೃಷ್ಣವಿಲಾಸದ ಲಿಂಗಾಜಮ್ಮಣ್ಣೀಯವರು ಮಾಡಿಸಿದ ಬೆಳ್ಳಿ ಬಸವನ ಆಭರಣದ ಲಿಖ್ಯಾ . . . ೧. ಕಾಲಿಗೆ ತೋಡೆ, ೨. ಮುಂಗಾಲಿಗೆ ಹೂವು (ಎಕ. XIV, ನಂಜನ. ೨೪೯-೨ನೇ ಕಾಲಂ ; 1840).

[ ←ಹಿಂ. ಮರಾ. ತೋಡಾ ]

**ತೋಡಿ** (ನಾ). [ಸಂಗೀತ] ಒಂದು ರಾಗದ ಹೆಸರು : ಮಲಹರಿ ಮೇಘರಂಜಿ ಘಳಮಂಜರಿ ತೋಡಿ ವಸಂತವೆಂಬ ಮಂಜುಳತರ ರಾಗ ರಂಜನದೆ . . . ಪಾಡಿ ಮುದಂ ಮಿಗೆ ಮೆಚ್ಚಿಸುತ್ತುಂ (ಬಾಥಪು. ೬-೧೪) ; ಮಲಹರಿ ದೇಸಿ ತೋಡಿಯೆನೆ ಪಾಡಿ ಮೊಸರ್ ಕಡೆದರ್ ಲತಾಂಗಿಯರ್ (ಮುಲ್ಲಕಾ. ೪-೫೫) ತೋಡಿ ಮಕರಂದಿ ವಸಂತರಾಗಂ ಇತ್ಯಾದಿಯಾದ ರಾಗಂಗಳಂ ಪಾಡುತ್ತಿರೆ (ಹಮ್ಮೀರ. ೨-೯೦) ; ಆಹಿರಿಯಲ್ಲಿ ತೋಡಿ ಯೊಳು . . . ರಾಗಿಸಿ ಸಭೆಗೆ ಸಮ್ಮೋಹನರಸವ ಸೂಸಿದರು (ಭರಪ. ೧೨-೪೩) ; ತೋಡಿ-೮ನೇ ಮೇಳಕರ್ತ ಹನುಮತೋಡಿಯು ರಾಗಾಂಗ ರಾಗ . . . ಈ ರಾಗ ಶುದ್ಧಕರ್ನಾಟಕವೆಂದೂ ಔತ್ತರೇಯವೆಂದೂ ಮತಭೇದವುಂಟು. ಸಾಯಂಕಾಲದಲ್ಲಿ ಹಾಡಬೇಕಾದ ರಾಗ. ಕರುಣಾರಸ ಪ್ರಧಾನರಾಗ (ಸಂಗೀಕಂ. ೧೪೫). [ ಸಂ. ತೋಡೀ./ಮರಾ. ತೋಡೀ ]

**ತೋಡಿಟ್ಟಿ** (ನಾ). ಎರಡು ತುದಿಗಳುಳ್ಳ ಒಂದು ವಿಧವಾದ ಈಟಿ: ಬಿಲು ಸರಳು ತೋಡಿಟ್ಟಿ ಮುದ್ಗರ ಪಿಡಿವಾಳಚಯ (ಕುಮ್ಮಾಭೀ. ೩-೨೦) ; ಬಡಿಗೋಲ್ಗೊಕ್ಕಿನ ಮುರ್ದು ಕೂಳಿ ಪದವಿಲ್ ತೋ[ ಪಾಠಾ. ಕೋ ]ಡಿಟ್ಟಿ ಕೈಗಲ್ಲುರುಳ್ ಮಿಡಿಬಿಲ್ಗೆರ್ಬಲೆ ... ಖಡ್ಗಂ ಗಾಳಮಿಂಬಾಗೆ ಕೊಂಡೊಡನಾ ಲುಬ್ಧಕಸಂಚಯಂ ನಡೆದುದಾಗಳ್ (ಯಾದಶಂ. ೪-೫೦).

[ ತೋಡು₃ + ಇಟ್ಟಿ₂ ]

**ತೋಡಿಸು₁** (ಕ್ರಿ). ಅಗೆಯಿಸು ; ಹಳ್ಳ ತೆಗೆಸು ; ಗುಣಿ ಮಾಡು : ಕೊಂಡವ ತೋಡಿಸಬೇಡ ಶುಷ್ಕವ ಸುಟ್ಟು ಕೆಂಡವ ಮಾಡಿಸಬೇಡ ಖಂಡೇಂದುಶೇಖರ ಕಣ್ಗೆಟ್ಟಿನಿಂದೆನ್ನ ಗಂಡನನುರುಪಿದಂತುರುಹು (ಮೋಹತ. ೮-೩೭) ; ಒಂದು ಬಾವಿಯನ್ನು ತೋಡಿಸಯ್ಯಾ (ಪ್ರಮುಹ. ೪೬).

[ ತೋಡು₁ + – ಇಸು₃ ]

**ತೋಡಿಸು₂** (ಕ್ರಿ). ಸರಿಗಟ್ಟು ; ಸಮವೆಂದು ಎಣಿಸು : ಪಾಳ್ . . . ದುಷ್ಕರ ಲಂಕಾಪುರಮಂ ನಭೋಗಪುರಮಂ ಕ್ರೌಂಚಾದ್ರಿಯಂ ದ್ವಾರಕೀ ಪುರಮಂ . . . ಸುಸ್ಥಿರ ಹಮ್ಮೀರಪುರಕ್ಕೆ ತೋಡಿಸಲೊಡಂ ಮುಂ ಊರ್ಧ್ವಲೋಕ್ತಿ ಮಂಮೂಲೋಕದೊಳ್ (ಹಮ್ಮೀರ. ೧-೩೪). [ ತೋಡು₃ + – ಇಸು₃ ]

**ತೋಡು₁** (ಕ್ರಿ). ೧. ಅಗೆ ; ಬಗಿ ; ಹಳ್ಳವನ್ನು ಮಾಡು ; ಕೊರೆ : ತೋಡುವೆನೆಂಬುದಲ್ಲದಿಡಲಾಗದು ನಿಕ್ಕುವ ತೋಟ್ಟಿನೆಂಬುದಂ (ಕವಿರಾ. ೨-೧೦೧) ; ಕಾಯೋತ್ಸರ್ಗದಿಂ ನಿಂದೊಸೆ ಗೃಧ್ರವಾಯಸಾದಿಗಳ್ ಪುಣ್ಣಂ ತೋಡಿ ತಿನೆ ಮೇರುಪರ್ವತಂಬೊಲಚಳಿತಧೈರ್ಯನಾಗೊಂದು ತಿಂಗಳ್ವ ರೆಗಂ ಸೈರಿಸಿ (ವಡ್ಡಾರಾ. ೬೫-೧) ; ಪಥಿಕರಜಲ್ಗೊಂಡು ತೋಡಿದಜುಂಬ ನೀರ ಬಗರಗೆಗಳುಮನೊಳಕೊಯ್ದು ಬತ್ತಿದ ಪಳ್ಳಂಗಳೊಳಮತಿರೌದ್ರ ಮಾದ ಪೇರಡವಿಯೊಳಗೆ ಬರ್ಪಾಗಳ್ (ಕಾದಂಬ. ೨೬೬) ; ಇಲಿಗಳ್ ಮನೆಯೊಳ್ ಪುಟ್ಟಿಯುಮಲಸದೆ ತವೆ ತೋಡಿ ಮನೆಗಳಂ ಕಿಡಿಸುವ ವೊಲ್ (ಪಂಚತಂ. ೧೦೬-೧೮) ; ತವರಾಜದ ನೊರೆ ತೆರೆಯಂತೆ ಆದ್ಯರ ವಚನವಿರಲು ಬೇಟೆ ಬಾವಿಯ ತೋಡಿ ಉಪ್ಪ ನೀರನುಂಬವನ ವಿಧಿ ಯಂತೆ ಆಯಿತೆನ್ನ ಮತಿ (ಬಸವ. ೨೯೦) ; ಗೋಡೆಗನ್ನವುಂ ತೋಡಿ ಮನೆ ಯೊಳಪೊಕ್ಕು ಪರಿಕಿಸಿ ನೋಡುವಲ್ಲಿ (ಬಸಪು. ೩೦-೬) ; ಬೇಡುವುದು ಗದೆ ನಿಮ್ಮ ವಕ್ಷವ ತೋಡಿ ನೆತ್ತರುಗೊಳದಲೋಕುಳಿಯಾಡುವುದನು (ಕುಮ್ಮಾಅ. ೧೧-೪೯) ; ಮಾಡಿದ ಪುಣ್ಯಕ್ಕೆ ಫಲವೇ ಸಾಕ್ಷಿ ತೋಡಿದ ಬಾವಿಗೆ ಜಲವೇ ಸಾಕ್ಷಿ (ಗಾದೆ). ೨. ಚುಚ್ಚು ; ತಿವಿ : ಐದುಬಾಣದೊಳುರವ ತೋಡಿದನು(ಕುಮ್ಮಾದ್ರೋ. ೫-೩೨) ; ದೈತ್ಯನ ಮೆಯ್ಯ ತೋಡಿದನೈದಂಬಿನಲಿ (ಮೋಹತ. ೩೪-೧೪) ; ತೋಡಿದಂ ಮೂವತ್ತು ಬಾಣದಿಂ ತಾಪಮಂಕುರಿಸು ವಂತವನೊಡಲೊಳು (ಜೈಮಿಭಾ. ೧೨-೪೬) ; ೩. ಹೊರ ತೆಗೆ ; ಹಿರಿ ; ಹಿರಿದುಕೊಳ್ಳು : ಧುರದೊಳು ಬಂದೊಡ್ಡಿ ವೈರಿಪ್ರಕರವಿರಲ ವಷ್ಟಂಭದಿಂ ಬಿಟ್ಟದೇವಂ ಕರವಾಳಂ ತೋಡಿ ಕೊಂಡಿಂ ಬಳಿಕ (ಎಕ. IV, ನಾಗಮಂ. ೨೮-೧೩ ; ಸು. 1125) ; ಕರವಾಳಂ ತೋಡಿಕೊಂಡು (ಕವಿಚ. I, ೧೧೪). ೪. (ಅಡಿಗೆ, ನೀರು ಮುಂತಾದುವನ್ನು ಒಂದು ಪಾತ್ರೆ ಯಿಂದ ಮತ್ತೊಂದಕ್ಕೆ) ಮೊಗೆದು ಹಾಕು : ಎಡಗೈಯೊಳೆ ತೋಡಿ ಬೆಣ್ಣೆಯಂ ತಿನುತಿರೆ (ಜಗವಿ. ೩-೫೦) ; ತೋಡಿ ಬಡಿಸುವೆ ಕಿವಿ ಗರೋಚಕ ವಾಯ್ತು ತೆಗೆಯೆಂದ (ಕುಮ್ಮಾಸ. ೧೦-೨೦) ; ನೀರು ತೋಡಿ ಇಟ್ಟಿದ್ದೇನೆ ಜಳಕ ಮಾಡಿರಿ (ಮುತ್ತಿನದ. ೨೩೦). ೫. ಹೊರಕ್ಕೆ ಹೋಗು ; ಆಚೆ ಹೋಗು : "ತೋಡು – ನಿಷ್ಕ್ರಮಣೇ (ಹೊರಟು ಹೋಗು), ಯುಗ್ಮೇ ಚ (ಜತೆ)" (ಶಮಧಾ) ;" ನಿಷ್ಕ್ರಮಣಯುಗಸಾಮ್ಯಂಗಳೊಳ್ ತೋಡಲಾ" (ಶಬ್ದಮಂ. ೯೨). ೬. (ಮನಸ್ಸನ್ನು ತೆರೆದು) ವ್ಯಕ್ತ ಪಡಿಸು ; ತಿಳಿಸು ; ಹೇಳಿಕೊಳ್ಳು : ದುಃಖಮಂ ತೋಡುವೆನಾರ ಕೂಡೆ (ಕಾವ್ಯಸಾ. ೫೬೬) ; ಈ ಭವದ ಯೋಗಗಳ, ಭೋಗಗಳ, ರೋಗಗಳ ತೋಡ ಬಾ, ಹಾಡ ಬಾ (ನವ್ಯಧ್ವ. ೩-೬). ೭. ಎಳೆಯನ್ನು ಬಿಚ್ಚಿ ಹಾಕು ; ತೆಗೆದುಹಾಕು : ನಾರಸಿಂಹನ ರೂಪಿಂ . . . ಪಟ್ಟಿಗಾಜನೆ ಪಾಸಂ ತವೆ ತೋಡುವಂತೆ ಕರುಳಂ ನೀಂ ತೋಡಿದೈ ದೈತ್ಯನಾ (ಕಾಮ್ಮಾವ. ೩೫೫) ; ಅವ್ವ ರೇಶಿಮೆ ತೋಡುವ ಕೆಲಸ ನಿಲ್ಲಿಸಿ ಅಡುಗೆಗೆ ತೊಡಗುತ್ತಿದ್ದಳು (ಪಾತರ. ೩೮).

**ತೋಡಿಕೊಳ್ಳು** = ಮನಸ್ಸಿನ ಅಳಲನ್ನು ಹೇಳಿಕೊಳ್ಳು : ಕಂಡ ವರೆದುರೊಳು ನಿನ್ನೆದೆಯೊಳಗನು ತೋಡಿಕೊಂಡಳಲಾಗ ನೋಡ (ರ್ಂಚಾಪ. ೨೩೦-೩೬).

[ ದೇ.॥ ತಮಿ. ತೋಣ್ಡು ; ಮಲ. ತೋಣ್ಡು ; ತುಳು. ತೆಲು. ತೋಡು ; ಕೊಡ. ಪರ್ಜಿ. ತೋಡ್ ]

**ತೋಡು₂** (ನಾ). ೧. ಅಗೆದಿರುವ ಸ್ಥಳ ; ಗುಂಡಿ ; ಹಳ್ಳ, ಕಾಲುವೆ ಮೊದಲಾದುವು : ಉಂಡ ಹಾಳೆಗಳನ್ನು ಮಡಿಸಿ . . . ತೋಡಿಗೆ ಎಸೆದು ಕೈ ತೊಳೆದು ಬಂದಳು (ನಂಬಿನಾ. ೨೦೯) ; ಅಂಗಳದ ಕೆಳಗಿನಿಂದ ಒಂದು ನೀರಿನ ತೋಡು ಸದಾ ಹರಿಯುತ್ತದೆ (ಕಂಬಹು. ೭೮) ; ೨ ಇಳಿಜಾರಾದ ಮಾರ್ಗ ; ಜಾಡು : ಈ ತೋಡು ಕಣಾಂತರ ದಲ್ಲಿರುವ ಬಾಯಿ ಮೂಲಕ ಗಂಟಲನ್ನು ಪ್ರವೇಶಿಸುತ್ತದೆ (ಪ್ರಾಣಿಶಾ. ೫೬). ೩. ಝರಿ ; ಅಬ್ಬಿ ; ಪ್ರವಾಹ : ಬೆಟ್ಟದ ಗುಣ ತೋಡಿನಿಂದಳಿ ಯಿತ್ತು ಸಾಗರದ ಗುಣ ಕೋಡಿಯಿಂದಳಿಯಿತ್ತು (ಮೋಳಮಾ. ೧೦೩-೪೧೧) ; ಗಣಸಲೆ ನೀರ ತೋಡಿನಿಂದ ಪಡುವಲು (ಬೊಂಕಶಾ. ೧೯೩೦, ಮಂಗಳೂರು.

ಈಶಾನ್ಯ ಹೊಳೆ (೫೨೬-೨೯ ; 1375) ;ತೋಡಿಗೆ ತೆಂಕ ಒತ್ತು ಬಿದರು ತಾಳ ತೋಡಿ ತೆವರಿನ ಮಲಪಡುವ ಮುಖವಾಗಿ ನೆಟ್ಟ ಕಲ್ಲು(ಎಕ. III, ತಿರುಮ. ೬೩-೨೬೯ ; 1748); ಅಲ್ಲಲ್ಲಿ ತಡೆತಡೆವ ಕಾಡುಗಳ ತೋಡುಗಳ ಕಲ್ಲ ಚೆಲ್ಲಿದ ಪಸಲೆಗಳ ನೊಸಲ ತುಳಿದಂ (ಕಾಲೂರ. ೧೦೮-೨೨೨); ಆ ದಾನವರಾದ ನಮ್ಮವರಂ, ಎಂಬವರ ಸ್ವಭಾವ ವರ್ತನೆಗಳು ಆ 'ಕಾಡ ಸೊಪ್ಪು ತೋಡ ನೀರಿನ' ಬಡಮುನಿಗಳ ಮೇಲೆ ಹೇಗೆ ಹೇಗೆ ತಾಂಡವವನ್ನಾಡಿದ್ದುವು? (ಪಾರ್ತಿಸು. ೫೮) ; 'ಕಾಡ ಸೊಪ್ಪ'ನ್ನು 'ತೋಡ ನೀರಿ'ನಲ್ಲರೆದು ಕುಡಿಸಿ ಗುಣಗೊಳಿಸುವ ಎಷ್ಟೋ ಮಂದಿ ಹಳ್ಳಿಗರೀಗಲೂ ಇದ್ದಾರೆ (ನಾಡೋಜ ೨೩೧). [ <ತೋಡು₁./ಮಲ. ತುಳು. ತೋಡು; ಕೊಡ. ತೊಡಿ]

**ತೋಡು₃** (ನಾ). ೧. ಜೊತೆ ; ಯುಗಳ : "ತೋಡು – ನಿಷ್ಕ್ರಮಣೇ (ಹೊರಟು ಹೋಗು), ಯುಗ್ಮೇ ಚ (ಜತೆ)" (ಶಮಧಾ) ; "ತೋಡು ಜೋಡಿಯು" (ಶಬ್ದಮಂ. ೫೬) ; ಬಿಸುಸುಯ್ದುತ್ತಗಲ್ದಿರ್ದ ನೀರ್ವಕ್ಕಿಗಳಾಗಳ್ ಕೂಡಿ ತೋಡಾದುವು (ಆದಿಪು. ೧೨-೯) ; ನೀರ್ವಕ್ಕಿಗಳ್ ಕೂಡಿ ತೋಡಾಗೆ ದಿಗಂತಂಗಳ್ ನಿತಾಂತಂ ತೊಳಗಿ ಬೆಳಗೆ . . . ಉದಯಂಗೆಯ್ದುತ್ತು ಶೋಭಾರುಣಕಿರಣಗಣಾಳಂಬಮಾದಿತ್ಯಬಿಂಬಂ (ಸುಕುಮಾ. ೧೨-೧೬) ; ತವಕದಿನಪ್ಪಿ ತಲ್ಲಣದೆ ಚುಂಬಿಸಿ ನಿಲ್ಲದೆ ಕೂಡಿ ತೋಡಗಲ್ದುವ ದಿವಸಾವಸಾನಸಮಯಕ್ಕೆ . . . ಅಗಲಲಾಱದಗಲ್ದುವು ಜಕ್ಕವಕ್ಕಿಗಳ್ ಕನಲ್ದು (ಅನಂಪು. ೭-೭೦) ; ಓಲೆಯು ತೋಡುಳಿಯಲ್ ಪೊಕ್ಕಳಬಲೆ ಜನಕಾಲಯಮಂ (ನಳಚಂ. ೫೭೮); ಬಿನ್ನಣದಿಂದ ಸಮೆದ ದಂಡೆ ತೊಂಡಿಲು ಹೊನ್ನೋಲೆಯು ತೋಡುಗಳನು (ಚಂಪ್ರಸಾಂ. ೧೨-೨೪೪). ೨. ಸಮಾನ ; ಸಾಟಿ: "ಸರಿ, ದೊರೆ, ಪಡಿ...ತೋಡು, ಓರಗೆ, ಜೋಳಿ, ಹೊಯ್ಕಯ್ ಹೋಟಿ, ಸಂಗಡಂ – ಈ ೧೮ ಸಮಾನಕ್ಕೆ ಪೆಸರ್" (ಕಕಸಾ. ೧೫-೨೯೧) ; ಪಾರ್ವ್ವತಿಗೆ ತೋಡು . . . ವಾಸವಾಂಗನೆಗೆ ಪಾಸಟಿ ಚಾಗಲ ದೇವಿ ಧಾತ್ರಿಯೊಳ್ (ಎಕ. VIII, ನಗರ. ೪೭-೧೧೩ ; 1062) ; ಕರಿವರಮಸ್ತಕದೊಳ್ ತೋಡಿಲ್ಲದೆ ಬಗೆಬಗೆದುತ್ಸುಕದೊಳ್ . . . ಪಿರಿದುತ್ಸುವದಿಂ ದೇಳ್ತಂದಾಗಳ್ (ರಾಜಶೇ. ೯-೪೧ ರಗಳೆ) ; ಇನ್ನೆಬರಂ ತಮಗೆ ಜಗಂ ತೋಡಾಗದೆಂದು ಸೊರ್ಕಿನುರ್ಕಿಂ ಬೞಿಗೊಂಡೆ ಪಂದೆ ರಾಯರಂ ಕಾಡಿಬೇಡಿ ಕೂಡಿದ ಜಾಳಿಗೆವೊನ್ನಂ ಕೋಳುಗೊಂಬೆಂ (ರಾಮಾಶ್ವ. ೧೨೭-೨೮) ; ನಾನಾ ಜಾತಿಯ ರಾಯರೊಕ್ಕು ಬನಮಂ ಮೈಸೂರ ಕಾಡೊಳ್ಗಿನೊಳ್ ಮಾನಾತೀತಮನೋವಿಕಾಸವಡೆಯಲ್ಕೀ ಕಾಡ ತೋಡಾವುದೋ (ಮೈಸೂಮ. ೧-೩೫) ; ಅವನ್ಗಿವಳ್ಗಿ ಬೆಳೆದ ಪತ್ತುಗೆಗೆ ತೋಡಿಲ್ಲಮ್ (ಅಂತಿಗೊ. ೨೬-೫೪೬). ೩. ಸಂದಣಿ; ಗುಂಪು: ಹೂಡಿದಂಬಿನ ಹೊದೆಯ ಬಂಡಿಯ ತೋಡ ಕಡಿದನು ಛತ್ರ ಚಮರದ ಝಾಡಿಗಳ ತಱಿದೊಟ್ಟಿದನು ಕಲಿಪಾರ್ಥ (ಕುವ್ಯಾಕ. ೨೬-೯). [ ದೇ॥. ತಮಿ. ತೆಲು. ತೋಡು ]

**ತೋಡು₄** (ನಾ). ಬಾಣವನ್ನು ತೊಡುವಿಕೆ ; ಶರಸಂಧಾನ : ತೋಡು ಬೀಡಂ ಕಾಣ್ಬುದು ನಾಡೆಯುಮರಿದೆನಿಸಿ ಕೃಷ್ಣನಾರ್ದಿಸೆ (ಪಂರಾಮಾ. ೯-೬೩);ತೋಡುಡುಗದೆಸುತಮಿರೆ ಮಾರ್ಪಡೆಯ[ರುಮುವ]ರವಯವಂಗಳೆನಿತೆನಿತಱಿೂಳಂ ಕೂಡೆ ನಡೆ ಮೆಯ್ಗಳಂಬಿನ ಮೂಡಿಗೆಯೆನೆ ಪೋಲ್ತು ಕೆಡೆದರುಗ್ರಾಹವದೊಳ್ (ಬಂಹರಿ. ೧೧-೧೧೦); ತೋಡು[ಮಂ]ಬಿಡುವಂದಲೀಕ್ಷಿಸಿ ನೋಡಿಯಱಿಯಲು ಬಾರದಂಬಿನ ಕೂಡೆ ಬಿಳ್ದಿಭ ತುರಗ ರಥ ಕಾಲಾಳ್ಗಳಿಂದಱಿಯೆ (ಕುಮುರಾ. ೨-೫೩).

**ತೋಡುಂ ಬೀಡುಂ, ತೋಡು ಬೀಡು**=(ಬಾಣವನ್ನು) ತೊಡುವುದುಂ ಮತ್ತು ಬಿಡುವುದುಂ: ಎರಡುಂ ಕೆಯ್ಯೊಳ್ ತೋಡುಂ ಬೀಡುಂ ಕಾಣಲಾಗದಂತಿಸೆ (ಪಂಪಭಾ. ೫-೯೬ ವ); ತೋಡುಂ ಬೀಡುಮಿಲ್ಲೆಚ್ಚುತೆ ಪೆಣಮಯಮಾದಪ್ಪುದೋ...ಎಂಬಂತಿರೆಚ್ಚಂ (ಅನಂಪು.೧೪-೧೭);ಕೃತವರ್ಮನೆಸುಗೆಯ ತೋಡುಬೀಡಿನ ಭರವ ಬಲ್ಲವನಾರು (ಕುವ್ಯಾಗ. ೨-೬). [<ತೊಡು₁]

**ತೋಡು₅** (ನಾ). ೧. ಉಪಾಯ ; ಹಂಚಿಕೆ ; ತಂತ್ರ ; ಯುಕ್ತಿ : ಶ್ರಮವನ್ನೂ ತೊಡಕುಗಳನ್ನೂ ತಕ್ಕ ತೋಡುಗಳಿಂದ ನಿವಾರಣಮಾಡಿ ಕೆಲಸವನ್ನು ಕೊನೆಗಾಣಿಸಿ ತೋರಿಸುವ ವಿವೇಕವೇ ಜ್ಞಾನಾಂಜನವೆನ್ನಿಸಿಕೊಳ್ಳುವುದು (ಕಾಂಪೂಡ. ೩೯) ; ಇದು ಬಿಕ್ಕಟ್ಟಿನ ಪ್ರಶ್ನವು. ಇದಕ್ಕೆ ಏನಾದರೊಂದು ತೋಡು (ಉಪಾಯ) ತೆಗೆಯಬೇಕು (ಬೀರಬ. ೧೪೧). ೨. ಕಟ್ಟು ; ಪ್ರತಿಬಂಧಕ ಉಪಾಯ: ಅದರ ತೋಡು ತಿಳಿದವರು ಮೂರುದಿನಗಳೊಳಗಾಗಿ ಬದುಕಿಸಿಕೊಳ್ಳಬಹುದು (ಚಿದೇವ. ೧೨೭) ; ನಾವು ಒಬ್ಬ ಮಾಂತ್ರಿಕನ ಕೈಯಲ್ಲಿ 'ತೋಡು' ಮಾಡಿಸಿದರೊ ? (ಕಣ್ಮಮು. ೭೮).

[ ತಮಿ. ತೋತು ; ಕೋತ. ತೋದ್./ಮರಾ. ತೋಡ್ ]

**ತೋಡುಂಗಿಱು** (ಕ್ರಿ). ಜೊತೆಯಾಗಿ ಎಣಿಸು; ಸಮಾನವೆಂದು ಭಾವಿಸು: ಆರಂ ತೋಡುಂಗಿಱದೆ ತನ್ನೊಂದು ಗರಗರಿಕೆಯ ಸೊಮ್ಮಿನಭ್ಯುದಯದ ಪದುಳಮರಸಾಳ್ವ ಬಸಂತರಾಯನುರ್ಕುಂ ಸೊರ್ಕುಂ ಸೋರ್ದು ಬಯಲಪ್ಪಿನೆಗಂ ದಾಟಿಗೆಯ್ದು (ರಾಮಾಶ್ವ. ೫೧-೧೮).

[ ತೋಡು₃ + ಗಿಱು ]

**ತೋಡುಕೈ** 'ತೊಡಂಗೈ' ನೋ.

**ತೋಡುಗವಣೆ** (ನಾ) ಜೋಡಿ ಕವಣೆ : ತೋಡುಗವಣೆಯ ತೂಱುಗಲ್ಲಿನ ಝಾಡಿ ಝಮ್ಮಿಡಿಸಿದವು ಗಗನವ (ತೊರರಾ. ೬-೧೧-೩).

[ ತೋಡು₃ + ಕವಣೆ₁ ]

**ತೋಡುಗಾಲುವೆ** (ನಾ). (ಅಗೆದು ಮಾಡಿದ) ಸಣ್ಣ ಕಾಲುವೆ : ದೊಡ್ಡ ನಾಲೆಯಿಂದ ಕಬ್ಬಿನ ಗದ್ದೆಗೆ ತೋಡುಗಾಲುವೆ ಅಗೆಯಬೇಕು (ರೂಢಿ).

[ ತೋಡು₂ + ಕಾಲುವೆ (<ಕಾಲ್ವಾಯ್) ]

**ತೋಡುಗೆಲಸ** (ನಾ). (ಭೂಮಿಯನ್ನು) ಅಗೆಯುವ ಕಾರ್ಯ : ಅಗೆತ : ನಾಲೆಯನ್ನು ಅಗೆಯಲು ೫೬ ಮೈಲಿಯ ಸಲೆ ಅಡಿ ತೋಡುಗೆಲಸವನ್ನು ೧೦೦೦ ಸಲೆ ಅಡಿಗೆ ೨೫ ರೂಪಾಯಿನ ದರದಲ್ಲಿ ಮಾಡಲಾಯಿತು (ಶಿಲ್ಪನಾ. ೨೪೬). [ ತೋಡು₂ + ಕೆಲಸ ]

**ತೋಡುಗೈ, ತೋಡುಕೈ** (ನಾ). ೧. ಬಗಿಯುತ್ತಿರುವ ಕೈ : ತೋಡುಗೈಗಳ ಮಿದುಳ ಬಾಯ್ಗಳ ಬಾಡುಗರುಳಿನ ಚೀತ್ಕೃತಿಯ ತಲೆಯೋಡುಗಳ ತನಿರಕುತಪಾನದ ಶಾಕಿನೀಜನವ . . . ಕಂಡೋಸರಿಸುವನದೊಂದು ದೆಸೆಗಾಗಿ (ಕುವ್ಯಾಗ. ೩-೧೧). **ತೋಡುಕೈ**: ೨. ಮೊಗೆಯಲು ಉಪಯೋಗಿಸುವ, ಚಿಕ್ಕ ಹಿಡಿಯುಳ್ಳ ಕೈಯ ಆಕಾರದ ಒಂದು ಬಗೆಯ ಸಲಕರಣೆ: (ಧಾನ್ಯ, ಸಕ್ಕರೆ, ಇದ್ದಿಲು, ಮೊ.ನ್ನು ತೋಡಿ ಮತ್ತೊಂದಕ್ಕೆ ಹಾಕಿಕೊಳ್ಳಲು ಅನುಕೂಲಿಸುವ, ಮೋಟುಹಿಡಿಯ, ಆಳವಾದ ಪಾತ್ರವುಳ್ಳ) ತೋಡುಕೈ, ಗೋರಿಗೆ. ಉದ್ದ ಹಿಡಿಯ, ಸೌಟಿನಾಕಾರದ, ಅದ್ದುಪಾತ್ರೆ (Scoop. ಇಂಕನಿ.). 'ಮಗುಚುಕೈ' ಪರಾ.

[ ತೋಡು₁ + ಕೈ₂ (<ಕೆಯ್₂) ]

**ತೋಡುದಾರಿ** (ನಾ). ದಿಣ್ಣೆಯನ್ನು ಅಗೆದು ಮಾಡಿದ ಹಾದಿ,–ಮಾರ್ಗ : ತೋಡುದಾರಿಯ ಪಕ್ಕದಲ್ಲಿ . . . ನೆಲಗಟ್ಟಿನ ಕಡೆಗೆ ನೆಕ್ಲುದೋವನ ದೃಷ್ಟಿ ಹರಿಯಿತು (ಪುನರು. ೪೬೭).

[ ತೋಡು₁ + ದಾರಿ ]

**ತೋಡುದೋಣಿ** (ನಾ). ೧. ಮರದ ದಿಮ್ಮಿಯನ್ನು ಕೊರೆದು ಮಾಡಿದ ದೋಣಿ: ತೋಡುದೋಣಿಯಿಂದ ಹಿಡಿದು ಸಮುದ್ರಯಾನದಲ್ಲಿ ಹಡಗಿನ ನಿರ್ಮಾಣದ ಹಾಗೆ ಆಕಾಶಯಾನದ ಬೆಳವಣಿಗೆಯೂ ವೈಜ್ಞಾನಿಕ ಸಾಧನೆಯಾಗಿರಲಿಲ್ಲ (ಶಿಲ್ಪನಾ. ೧೪೪). ೨. ದನಕರುಗಳು ಕುಡಿಯಲು ನೀರನ್ನು ತುಂಬಿಡುವ ಕಲ್ಲಿನ ಅಥವಾ ಮರದ ದೋಣಿ,–ತೊಟ್ಟಿ.

[ ತೋಡು₁ + ದೋಣಿ₃ ]

**ತೋಡುವಡಿ** (ನಾ). ಸಮಾನವಾದ ಅಳತೆ,-ಪ್ರಮಾಣ : ತಿಂಗಳಿಗೆ ಸಲ್ವ ಮೂಱುವೀಸ ದೋಪಾದಿಯ ಬಡ್ಡಿಯಲು ತೋಡುವಡಿಯಾಗಿ ವರ್ಷಂ ಪ್ರತಿ ಬಂದ ಬಡ್ಡಿ ಇಂದ ಆ ಇಂದ್ರಧರ್ಮ್ಮ ನಡವಂತಾಗಿ (ಎಕ. V, ಬೇಲೂರು. ೨೪೬-೬ ; 1298). [ ತೋಡು₃ + ಪಡಿ₁ ]

**ತೋಡುವೊಯ್ಲು** (ನಾ). (ದೇಹದಲ್ಲಿ ರಕ್ತವನ್ನು ಚಿಮ್ಮಿಸುವ) ಹೊಡೆತ ; ಗಾಯಂ ಕೊರೆಯಂಬ ಹೊಡೆತ: ಜಾಡಿಸುವ ಮಣಿಮಯದ ಗದೆಯಲಿ ತೋಡುವೊಯ್ಲಿನ ತುಡುಕುಗ್ಗಾಯದ ನೀಡುಮೊನೆಗಳ ವಿಗಡನಿಕ್ಕಿದನದಟರಕ್ಕಸರ (ಕುವ್ಯಾಅ. ೧೦-೫೨). [ ತೋಡು₁ + ಪೊಯ್ಲು ]

**ತೋಡುಹಾವುಗೆ** (ನಾ). "ಒಂದೇ ಮರದ ತುಂಡನ್ನು ಕೆತ್ತಿ ಮಾಡಿದ ಪಾದರಕ್ಷೆ ; ಮರದ ಅರೆಜೋಡಂ ; ಪಾವುಕೊರಡಂ ; ತೋಡು ಹಾವುಗೆ ; ಮರದ ಅಟ್ಟೆಯಂ ಪಾದರಕ್ಷೆ" (Sabot. ಇಂಕನಿ).

[ ತೋಡು₁ + ಪಾವುಗೆ ]

**ತೋಡೆ₁**, 'ತೋಡಾ' ನೋ.

**ತೋಡೆ₂**, ಥೋಡೆ, (ನಾ). ಸ್ವಲ್ಪ ; ಕಿಂಚಿತ್ತು ; ಅಲ್ಪ : ನಂಗೆ ಒಂದು ಹಂಚಿಕೆ ಹೊಳೀತಯ್ತು. ಮನೋಗ ಹೇಳು : ಧನೀರ ಕಡೇನೇ ಹೋಗಿ ಕೈಕಾಲು ಬೀಳ್ಳಿ. ಅಲ್ಲೆ ನಾನೂ ತೋಡೆ ಹೇಳ್ತಿನು (ಪ್ರೇಮೂಶ್ರ. ೧೩). **ಥೋಡೆ:** ಏನೋ ಥೋಡೇ ತುಸಾ ಯಾರರೆ ಧಾಂದಲೆ ಹಾಕತಾರ, ಅದನ್ನೆಲ್ಲ ಥಮ್ಮಣಿ ಮಾಡತೀವಿ (ಧನಂಜ. ೩೦).

[ ←ಹಿಂ. ಮರಾ. ಥೋಡಾ ]

**ತೋತಾಪುರಿ** (ನಾ). ಒಂದು ಬಗೆಯ ಮಾವಿನ ಮರ ಮತ್ತು ಅದರ ಕಾಯಿ ; ಗಿಣಿಮೂತಿಮಾವು : ನಮ್ಮ ತೋಟದಲ್ಲಿ ತೋತಾಪುರಿ ಮರ ಇದೆ (ರೂಢಿ). [ ←ಹಿಂ. ಮರಾ. ತೋತಾ = ಗಿಣಿ ]

**ತೋತಾಯ** (ನಾ). ೧. ಕೃತ್ರಿಮ ದಾಖಲೆ ಮೊದಲಾದುವನ್ನು ಹುಟ್ಟಿಸುವಿಕೆ. ೨. ಮೋಸಗಾರ ; ಡಾಂಭಿಕ. ೩. ಖೋಟಾ ವಾರಸುದಾರ : (ಕ). [ ←ಮರಾ. ತೋತಯಾ. / ಹಿಂ. ತೋತ ]

**ತೋತ್ತರ** (ನಾ). ಸ್ತೋತ್ರ ; ಸ್ತುತಿಸುವಿಕೆ : ಶಚಿಪತಿಯು ಎತ್ತು ಹತ್ತುವ ಕೃತ್ತಿವಾಸನ ತೋತ್ತರವ ಮಾಡುತ್ತ ಮಾನವ ತೆತ್ತಿ ಮಸ್ತಕವನ್ನು ಪಾದಕೆ ಸತತ ಮಣಿಸುವನು (ಪಾರ್ವಪ. ೨-೮೧).

[ <ಸಂ. ಸ್ತೋತ್ರ. /ತಮಿ. ತೋತ್ತಿರ ; ತುಳು. ತೋತ್ರ ]

**ತೋತ್ರ** (ನಾ). ಆನೆ, ಕುದುರೆ, ಎತ್ತು ಮೊದಲಾದ ಪ್ರಾಣಿಗಳನ್ನು ನಡೆಸಲು ತಿವಿಯುವ ಸಾಧನ ; ತಿವಿಗೋಲು : "ಪ್ರತೋದ, ಪ್ರಾಜನಂ, ತೋತ್ರಂ-೩ ಮುಳುಹುಗೋಲ್" (ಹಲಾಯು. ೯೪-೪೨೩) ; "ತೋತ್ರಂ, ವೈಣುಕಂ-ಆನೆಯನ್ನು ತಿವಿದು ಶಿಕ್ಷಿಸುವ ಬಿದುರಿನ ಕೋಲಿನ ಹೆಸರು" (ಸಿದ್ಧಾಂತಿ. ೨೦೩) ; ಧೈರ್ಯದೈರಾವತಂ ಹೋರಾಡುತಿರ್ಪುದಂ ಕಾಣುತೆ ಗುರು ವಸಿಷ್ಠನಾಡಿದನ್ ಮಾವುತಂ ತೋತ್ರದಿ ತಿವಿಯುವಂತೆ (ಶ್ರೀರಾಮಾ. ೧೭೦-೪೮೬). [ ಸಂ. ]

**ತೋದ₁** 'ತೋ' ಪರಾ.

**ತೋದ₂** (ನಾ). ೧. ದನ, ಕರು, ಕುದುರೆ ಮುಂತಾದುವುಗಳನ್ನು ಹೊಡೆದು ಕೊಂಡು ಹೋಗುವಿಕೆ,-ನಡೆಸಿಕೊಂಡು ಹೋಗುವಿಕೆ. ೨. ನೋವು ; ಯಾತನೆ : ಅಂಬುಧಿಸಂಗಸಂಜನಿತಶಂಬರನಿರ್ಭರಗರ್ಭೆ ಬಂದು ಕಾದಂಬಿನಿ ತತ್ಪ್ರಸೂತಿಸಮಯಂ ಬರೆ...ನರಲ್ವ ರಾವದಂತೇಂ ಬಗೆಗೊಂಡುದೋ ಗುಡುಗು ಸೂತಿಮರುತ್ಕೃತತೋದದೇಳ್ಗೆಯಿಂ (ರಾಜಶೇ. ೮-೧೦೩). [ ಸಂ. ]

**ತೋದನ** (ನಾ). ೧. ಹೊಡೆತ ; ಬಡಿತ : (ಕ). ೨. = ತೋತ್ರ : "ಪ್ರಾಜನಂ, ತೋದನಂ, ತೋತ್ರಂ-೩ ತಿವಿಗೋಲು" (ಸಿದ್ಧಾಂತಿ. ೨೩೮). ೩. ತೀವ್ರವಾದ ನೋವು,-ಯಾತನೆ,-ವೇದನೆ. [ಸಂ.]

**ತೋದೆ** (ನಾ). ತೋರಿಕೆಯ ನೆಪ ; ಕುಂಟುನೆಪ : ಅಮಲ್ದಾರರು ಹೇಳಿದುದಕ್ಕೆಲ್ಲ ಅವನು ಒಂದು ತೋದೆ (ಕುಂಟುನೆಪ) ಹಾಕುತ್ತಿದ್ದನು (ಗರುಡಾ. ೧೦೭). [ ←ತಮಿ. ತೋತು ]

**ತೋದ್ಯ** (ನಾ). (ಹೊಡೆಯಬಹುದಾದ ಅಥವಾ ಬಾರಿಸಬಹುದಾದ) ಒಂದು ವಾದ್ಯವಿಶೇಷ : ಸುದತಿ ಘನತೋದ್ಯದಳಿಗೀತದ ವಾದ್ಯದ ಹೃದ್ಯದುಚಿತ ಪತ್ರದ ರಸಚಿತ್ರದ ಮಾಳಾಕರ್ಮದ ನರ್ಮದ ಸಖಿಯರ ಬಿನದದಿಂದವಲಸಿಕೆಗಳಿವಳ್ (ಪುಷ್ಪಪು. ೪-೧೭). 'ಆತೋದ್ಯ' ಪರಾ.

[ ಸಂ. ]

**ತೋಪಡ₁**, ತೋಪರ, ತೋಬಡ (ನಾ). ೧. ಮರ ಅಥವಾ ಲೋಹವನ್ನು ಸಮಗೊಳಿಸಲು ಬಳಸುವ ಸಾಧನ ; ಉಜ್ಜುಗೊರಡು ; ಹತ್ತರಿ : ತೋಪಡ ಹೊಡೆಯಬೇಕಾದ ಲೋಹವನ್ನು ಒಂದು ಮೇಜಿನ ಮೇಲಿಟ್ಟು ಮೇಜೇ ಹಿಂದಕ್ಕೂ ಮುಂದಕ್ಕೂ ವಿದ್ಯುತ್ತಿನ ಬಲದಿಂದ ಓಡಾಡುವ ಹಾಗೆ ಮಾಡುತ್ತಾರೆ (ಶಿಲ್ಪನಾ. ೧೯೩). ೨. (ಆಲಂ) ಅನುತ್ತೀರ್ಣತೆ; ಸೋಲು : ಡ್ರಾಯಿಂಗ್ ಪರೀಕ್ಷೇಲಿ ನನಗೆ ತೋಪಡ ಆದರೆ ನಿಮಗೆ ತುಂಬಾ ಸಂತೋಷವೇನೋ (ಸ್ವಾಮಿಸ್ನೇ. ೩೧). **ತೋಪರ :** ೧. ಅವರು ತೋಪರ ಹಾಕಿ ಮರಗಳನ್ನು ನಯಮಾಡಿದರು (ಗಲಿಪ್ರ. ೯೯). **ತೋಬಡ:** ೧. ಬೈರಿಗೆಯ ಅಲಗು; ತೋಬಡದ ಉಳಿಯಲಗು; ಪಟಕಾರು, ಮೊ.ಗಳ ಕೊನೆಗತ್ತರಿ. ಕಡಿವಾಣ (Bit. ಇಂಕನಿ).

[ ←ತೆಲು. ತೋಪಡ, ತ್ರೋಪು ]

**ತೋಪಡ₂** 'ತೋಬರಿ' ನೋ.

**ತೋಪರ** 'ತೋಪಡ₁' ನೋ.

**ತೋಪಿ** 'ಟೋಪಿ' ನೋ.

**ತೋಪು₁**, ತೋಹು₁ (ನಾ). ಮರಗಳ ಗುಂಪು,-ಸಮೂಹ : ಇಂತು ಮನಂಗೊಳಿಪ ಮಾವಿನ ತೋಪಂ ಕಂಡು ಪೊಂಗಿ ಪೊಚ್ಚಯೋಜು ಮೆಲ್ಲನೆಟ್ಟಂದಾ ವನಮನಾಶ್ರಯಿಸಿಕೊಂಡಾನನಂತಕಾಲಮಿರಲ್ (ಉದ್ಭಟ. ೬-೧೩ ವ) ; ಗಂಧರ್ವಸುಭಟರಿಗೆ ಕುರುಪತಿಯ ಸುಭಟರಿಗೆ ತೊಡಕಿತು ತೋಟಿ ತೋಪಿನಲಿ (ಕುವ್ಯಾಅ. ೧೮-೨೯) ; ತಾಪವನು ಹಿಂಗಿಸುವಶೋಕೆಯ ತೋಪಿನಲಿ ಸರಮೆ ತ್ರಿಜಟೆಯರ ಕಾಪಿನಿಂದಿರಿಸಿದನು ತೊರವೆಯ ರಾಯನಂಗನೆಯ (ತೊರರಾ. ೩-೧೦-೪೪) ; ನರಸರಾಜನೂ ಶ್ರೀ ಪರಮೇಶ್ವರ ಪ್ರೀತಿಯಾಗಿ . . . ಬಾವಿಯನೂ ಆಗುಸಿ ಮಾವಿನ ತೋಪನು ಯಿಕ್ಕಿಸ್ತನು (ಸಾಇಇ. IX-ii, ೪೭೭-೨೩ ; 1509) ; ಆ ಪತಿವ್ರತೆಯಪ್ಪ ಖಗಿಯೂ ತೋಪಿನಲಿ ಪತಿಯೊಡನೆ ಸಂಗಿಸಿ . . . ಗರ್ಭ ಧರಿಸಿ (ನಿಭಾಗ. ೧೫-೧೩-೫೪) ; ಇಂದ್ರನ ತೋಳ್ಗಳಂದೊಪ್ಪಿದವುಯೆಳನೀರ್ವೊತ್ತ ತೆಂಗಿನ ತೋಪುಗಳ ತೆಱದಿ (ಸಾಳ್ವಭಾ. ೩೩-೭೦) ; ಮಾವಿನ ಮರಗಳಂ ಹಾಕಿ ತೋಪು ಮಾಡಿ ಯಾವ ಪುರುಷನು ಸಲಹುವನೊ ಆ ಪುರುಷನು . . . ಸದ್ಗತಿಯನೈದಿ ಸಂತೋಷಪಡುವನು (ಸೌಗಂಧಿ. ೪೨೪-೧೫) ; ಖಗಗಳುಲಿವ ವಿವಿಧ ಸ್ವನದ ಮೇಳ ತೋಪ ತುಂಬಿದೆ (ಮೂಂದಳಿ. ೯-೧೭). **ತೋಹು₁ :** ಮನೆ ನೆರೆಯೊಳಿವೆ ತೋಹುಗಳು ವಿವಿಧವೃಕ್ಷಗಳು ಸ್ಥಿರ ಜೀವನಕೆ ಹಸುರುಗುಡಿಯನೆತ್ತಿ (ಭಾರಂಗ. ೬೩).

[ ದೇ. ॥ ತಮಿ. ಮಲ. ತೋಪ್ಪು ; ತುಳು. ತೆಲು. ತೋಪು ]

**ತೋಪು₂** 'ತೋಪ್ರ್ಪ' ನೋ.

**ತೋಪು₃**, ಟೋಪು₁, ತೋಫು (ನಾ). ೧. ಗುಂಡು ಇಟ್ಟು ಹೊಡೆಯುವ ಸಾಧನ ; ಫಿರಂಗಿ : ಕರವೆಸೆವ ಕಾವಿ ಮಂಜಟಿಗೆ ತೋಪುಗಳಿಂದೆ ಭರದಿ ಬಾಸಣಿಸೆಸೆವ ಬಲ್ಲಾಳದಟ್ಟಿಯೊಳಗುರುಮೋದದಿಂ ಬರ್ಪವರ್ ಕೆಲರ್ (ಅರಾಚ. ೪-೨೩) ; ತೋಪು ತುಬಾಕಿಗಳು ಇಲ್ಲದಾಗ ಕಾಳಗದಲ್ಲಿ ಆನೆಗಳನ್ನು ಉಪಯೋಗಿಸುತ್ತಿದ್ದರು (ಮುಂಬಯಿ. ೪-೨೩) ;

ತೋಪು ತುಬಾಕಿ, ಕುರುಳಿ ಪಿಸ್ತೂಲಬಾಕ ಸಹಿತ ನಡುವಿನಾಗ (ಕನ್ನಜಾ. ೮೮). **ಟೋಪು$_1$:** ೧. ಸಮ್ಮೋಹದಿಂದೊಪ್ಪಿಸುತೆ ಗುರುಪಾದಕಂ ಜನಪನಾಗಳ್ ಟೋಪುಗಳನುಡಾವಿಸಿದ ಬಳಿಕನುನಯಂ ಚರಗಣದ ತಿಂಥಿಣಿಗೆ (ಮಹಾವಿ. ೨೨-೮೨). **ತೋಪು:** ೧. ಕೆಲವು ಜಹಜಿನಲ್ಲಿ ಎಪ್ಪತ್ತೆರಡು ತೋಪು ಇತ್ತು (ರಾಜೇಂದ್ರ. ೧೧೫) ; ನಾಡ ಸಂರಕ್ಷಣೆಗೆ ತೋಪು ಇರದಿರಲು ನಾಡಿಗೊಂದಿರಬೇಕು ಬಯ್ಯುವಾ ಮುದುಕಿ (ನಿರಾಭ. ೧೭೯-೨). ೨. ಗೌರವಕ್ಕೋಸ್ಕರವಾಗಿ ಫಿರಂಗಿಯನ್ನು ಹೊಡೆಯುವುದು,-ಹಾರಿಸುವುದು; ಫಿರಂಗಿ ಮರ್ಯಾದೆ : ಖಾವಂದರಿಗೆ ಕ್ರಮವಾಗಿ-ತೋಪು ಮುಂತಾದ ಮರ್ಯಾದೆಗಳು ನಡೆದುವು (ಮಹಾವಂ. II, ೪೩).

[ ←ಹಿಂ. ತೋಪ್ ; ತುರ್ಕೀ, ಮರಾ. ತೋಫ್ ]

**ತೋಪುಖಾನಿ** 'ತೋಫಖಾನೆ' ನೋ.

**ತೋಪೊಳೆ** (ಕ್ರಿ). ಚೆನ್ನಾಗಿ ಹೊಳೆ,-ಮಿರುಗು (?) : ತಾರಾಪತಿಯು [ಯು] ಸುತೆಯು ತನ್ನಣುಗಂಗೆ ಶ್ರೀಫಲಪಯೋಧರಂಗಳನು ಪಾನಂಗೈಸಿ ತೈಲವಂ ಪೂಸಿಯೆರೆದು ತೋಪೊಳೆವ ಪೊಂದೊಟ್ಟಲೊಳಗಿಟ್ಟು . . . ಸಲಹುತಿರ್ದಳು (ನವಮೋ. ೧೫-೪೭). [ <ತೋಱು + ಪೊಳೆ$_1$ ]

**ತೋಫಖಾನೆ,** ತೋಪುಖಾನಿ (ನಾ). ಮದ್ದುಗುಂಡುಗಳ ಸಂಗ್ರಹಾಲಯ,-ಗೋದಾಮು : ಜಪಾನಿಗಳಿಂದ ತೋಫಖಾನೆಯ ಗುಂಡುಗಳು ಹಾರಹತ್ತಿದ್ದುವು (ಪ್ರಣಸ. ೭೪). **ತೋಪುಖಾನಿ :** ತೋಪುಖಾನಿ ಸನ್ನಾಹತಂತ್ರ ಪ್ರಯೋಗಮುಖದಿಂ ಫೌಜಂ ಮೆದೆಗೆಡೆಹಿ (ಕೆಳನ್ನ ೮-೧೦).

[ ←ಮರಾ. ತೋಫ್ ಖಾನಾ ; ಹಿಂ. ತೋಪ್‌ಖಾನಾ ; ಪಾರ. ತೋಪ್‌ಖಾನಹ್ ]

**ತೋಫು** 'ತೋಪು$_3$' ನೋ.

**ತೋಬಡ** 'ತೋಪಡ$_1$' ನೋ.

**ತೋಬರ** 'ತೋಬರಿ' ನೋ.

**ತೋಬರಿ,** ತೋಪಡ$_2$, ತೋಬರ (ನಾ). ಕುದುರೆಯ ಬಾಯಿಗೆ ಕಟ್ಟುವ ಕಡಲೆಯ ಅಥವಾ ಹುರುಳಿಯ ಚೀಲ ; ಮುಖ ಚೀಲ : ಡೋರರು . . . ತೊಗಲಿನ ಬುದ್ದಲಿ, ಕುದುರೆಯ ತೋಬರಿ, ಲಗಾಮು, ಜೀನು ಮುಂತಾದ ತೊಗಲಿನ ಸಾಮಾನುಗಳನ್ನು ಮಾಡುವರು (ಕಭಾಗ. ೨೧೯) ; ತೋಬರಿಯಲ್ಲಿ ಕಡಲೆಯನ್ನು ಹಾಕಿ ಆ ತೋಬರಿಯನ್ನು ಕುದುರೆಗೆ ತೋರಿಸಿ . . . ಅದನ್ನು ಹಿಡಕೊಂಡದ್ದು ಅವನಿಗೆ ನೆನಪಾಯಿತು (ಮುಂಬಯಿ. ೪-೮೦). **ತೋಪಡ$_2$ :** ಕೂಸಪ್ಪ... ಹುರುಳಿ ಇಸುಗೊಂಡ ತೋಪಡದ ಚೀಲಕ್ಕೆ ತುಂಬಿ ಇಟ್ಟುಗೊಂಡ (ದಿನಾರಿ. ೩೭). **ತೋಬರ :**(೬).

[ ←ಪಾರ. ತೋಬರಾ, ತುಬರಾ; ಹಿಂ. ತೋಬಡಾ; ಮರಾ. ತೋಬ್ರಾ, ತೋಬರಾ ]

**ತೋಮ** (ನಾ). ಗುಂಪು ; ಸಮೂಹ ; ನೆರವಿ: "ಸ್ತೋಮ – ತೋಮ" (ಶಮದ. ೨೭೨ ಪ್ರಯೋ) ; "ಬಂಬಲ್, ತುಱುಗಲ್ . . . ತೋಮಂ, ತೆಮ್ಮಲ್, ಗುಮ್ಮಿ, ಗೊಂದಣಿ (ಉಂದಲ್) – ಈ ೪೦ ಸಮೂಹಂ" (ಕಶಸಾ. ೫೬-೨೨೨). [ <ಸಂ. ಸ್ತೋಮ ]

**ತೋಮರ** (ನಾ). ೧. ತುದಿಯಲ್ಲಿ ಮೊನಚಾಗಿರುವ ಈಟಿಯಂತಹ ಒಂದು ಬಗೆಯ ಆಯುಧ : "ತೋಮರ ಪಿಂಡಿವಾಳ ಪಟ್ಟಿಶ . . . ಕೈದುಗಳ ಭೇದಮಕ್ಕುಂ" (ಮಂಗರಾ. ೮೮-೩೮); ಶಕ್ತಿ ತೋಮರ ಮುಸಲ . . . ವಿವಿಧಾಯುಧಂಗಳೊಳಮತಿಪ್ರವೀಣನುಂ (ಪಂಪಭಾ. ೨-೩೪ ವ); ನಾಳಿಯ ಕೋಲ್ ಜವನಾಳಿವೆಂಬಿನಂ ಕವಿದುವು ತೋಮರಂ ಜವನ ಡಾಮರವಾದುವು (ಪಂರಾಮಾ. ೧೩-೬೧) ; ಶಶಿಕಾಂತದ ಶಿಲಾತಳದೊಳ್ ಪೊರಳುತಿರ್ಪ ಪರವಗೆ ಅಶೋಕೆ ಸಶೋಕೆ ಮಾಮರಂ ತೋಮರಂ ಬೆಳ್ದಿಂಗಳು ಬಿಳಿಯಿಂಗಳಂ (ನಂಬಿರ. ೧೬-೨೩) ; ಆ ಮಹಾಸಂಗ್ರಾಮ ಮುಖದಲಿ ತೋಮರದ ಕಾಣಿಕೆಗಳಲಿ ಸುಪ್ರೇಮವನು ಬೆಸಸುವುದು ದುರಿಯೋಧನನ ಮತವೆಂದ (ಕುವ್ಯಾಉ. ೧೧-೪) ; ಆ ಮರುತ್ತನ ಯಜ್ಞಕೃತಂದಾ ಮರುದ್ಗಣ ಮುನಿಗಣಂಗಳ ತೋಮರದ ತೋಟಿಯಲಿ ಕೆದಱಿತು ಕದನಕೇಳಿಯಲಿ (ತೊರರಾ. ೧-೮-೩೮); ಕುಂತ ತೋಮರ ಖಡ್ಗ ಸುರಗಿ ಭಲ್ಲಿಹಗಳ ಕಾಂತಿ ಮುಸುಕಿ ಚೌದೆಸೆಯ (ಕಂನವಿ. ೧೫-೨೧) ; ಹೆರರ ಕೊಲ್ಲಲು ಕತ್ತಿ ಪರಶು ತೋಮರ ಬೇಕು (ಪಾಂಚಜ. ೪೧-೫). ೨. ತುದಿಯಲ್ಲಿ ಅರ್ಧಚಂದ್ರಾಕೃತಿಯಲ್ಲಿರುವ ಒಂದು ಬಗೆಯ ಬಾಣ: ಕಿರಣತೋಮರದಕ್ಷಿಣೋರುಸ್ಫುರಣತಿಮಿರ ಮೃಗೀಕದಂಬಕ ತರಣಿ ನೂಕಿದನುದಯಶೈಲಕೆ ರತುನಮಯ ರಥವ (ಕುವ್ಯಾಕ. ೮-೧೫) ; ಮೂದಲಿಸಿ ಖಳನಿಟ್ಟನಿಪ್ಪತ್ತೈದು ತೋಮರಗಳಲಿ ಜೀವವಕಾಯ್ದುಕೊಳ್ಳೆನುತ (ನಿಭಾಗ. ೧೦-೭೯-೩೮). ೩. ಲೋಹದ ಗದೆ. ☞ ಈ ಆಯುಧದ ಆಕಾರವಿಷಯದಲ್ಲಿ ಭಿನ್ನಾಭಿಪ್ರಾಯವಿದೆ ೪. [ಛಂದ] ಒಂದು ವಿಧವಾದ ರಗಳೆ: ವೃತ್ತಜಾತಿ ಸಮುಚ್ಚಯದಲ್ಲಿ ಅಸಿ, ಅಶನಿ, ತೋಮರ . . . ಕ್ಷುರಪ್ರ ಇತ್ಯಾದಿ ಆಯುಧಗಳ ಹೆಸರುಗಳು ಪಂಚಮಾತ್ರಾಗಣ ನಿರ್ದೇಶಕ್ಕಾಗಿ ಪ್ರಯೋಗವಾಗಿವೆ . . . ಆದ್ದರಿಂದ 'ತೋಮರ' ಎಂದರೆ ಪಂಚ ಮಾತ್ರಾಗಣವೆಂದು ಸ್ಪಷ್ಟ (ಛಂದೋವಿ. ಪರಿ. ೨). 'ತೋಮರರಗಳೆ' ಪರಾ. [ ಸಂ. ]

**ತೋಮರರಗಳೆ** (ನಾ). [ಛಂದ] ರಗಳೆಯ ಭೇದಗಳಲ್ಲಿ ಒಂದು; ಲಲಿತ ಬರಗಳೆ ಪ್ರತಿಪಾದದಲ್ಲಿಯೂ ಐದು ಮಾತ್ರೆಯ ನಾಲ್ಕು ಗಣಗಳು ಇರುವ ರಗಳೆ:ತೋಮರರಗಳೆ-ಶ್ರೀ ಮದರುಹಚ್ಚರಣ ಸರಸಿರುಹಭೃಂಗನಂ ಭೂಮಿ ಕೀರ್ತಿಸೆ ನೆಗಳ್ದ ಗುಣಗಣೋತ್ತುಂಗನಂ (ಸೌಇಇ. IX-ii, ೧೧೭-೧೬ ; 1055) ; ತೋಮರರಗಳೆಯೆಂದರೆ ಪಂಚಕಲದ ಗಣಗಳಿಂದ ರಚಿತವಾದ ರಗಳೆಯೆಂದು ಅರ್ಥ . . . ಇಂದ್ರಕೀರ್ತಿಯನ್ನು ವರ್ಣಿಸುವ ಪದ್ಯಗಳು ಲಲಿತರಗಳೆಯಲ್ಲಿದ್ದು ಅಲ್ಲಿ ಅವುಗಳನ್ನು 'ತೋಮರರಗಳೆ' ಎಂದು ಹೆಸರಿಸಲಾಗಿದೆ (ಛಂದೋವಿ. ಪರಿ. ೨). [ ತೋಮರ + ರಗಳೆ ]

**ತೋಮಾಲೆ** (ನಾ). ದೊಡ್ಡ ಹಾರ : ಆಜ್ಞಾಧಾರಕರಾಗಿಯಿರುವ ಮಠದ ಬ್ರಾಂಹ್ಮರುಗೆ ಮೊದಲು ತೀರ್ಥ ತೋಮಾಲೆ ಮೊದಲಾದ ಸಕಲ ಮರಿಯಾದೆಗಳನ್ನು ನಡಸುವದು (ಮೈಆರಿ. ೧೯೩೮, ೧೯-೧೦ ; 1811) ; ಪಂಡಿತ ಪೆರುಮಾಳೆಯವರು ಅನಂತರ ಮಗಳ ಕೈಗೆ ನವಮಲ್ಲಿಕಾ ತೋಮಾಲೆಯನ್ನು ಕೊಟ್ಟರು (ಶಾಂತಲಾ. ೧೦೯). [ <ತೋರ + ಮಾಲೆ ]

**ತೋಮೆ** 'ತೊಂಬೆ$_1$' ನೋ.

**ತೋಯ$_1$** 'ತೊವ್ವೆ' ನೋ.

**ತೋಯ$_2$** (ನಾ). ೧. ನೀರು ; ಉದಕ ; ಜಲ : "ಸಲಿಲಂ ಜೀವನಮಂಬು ತೋಯಮುದಕಂ" (ವಸ್ತುಕೋ. ೨೨-೧); ಎನ್ನ ಮಾತಿಂಗೆಲೆ ಕೌಂತೇಯ ಮಱುಮಾತನಿತ್ತು ಮದೀಯ ಸರೋವರದ ತೋಯಮಂ ಕುಡಿ (ಪಂಪಭಾ. ೮-೩೦) ; ಚತುಃಕೋಣಕಳಶಭರಿತತೋಯದಿನಭಿಷೇಕಂಗೆಯ್ದು (ಅಜಿಪು. ೪-೭೦ ವ) ; ಕಾಶಿಯ ನದೀತೋಯಂಗಳಂ ಮಂಗಳೋತ್ಸವದಿಂ ಭೂವರ ವೃಂದಮಂ ನಿಲಿಸಿ ಸಾಲ್ಗೊಂಬಂತುಟೋರೋರ್ವಱಿದವನಂದ್ಯೆದಿಸಿದಂ ಸುವರ್ಣಘಟದಿಂ (ರಾಜಶೇ. ೩-೩೧) ; ಶೀತಲಸುಗಂಧಮಯ . . . ವಿಮಲತೋಯಮಿದು (ಶ್ರೀರಾಮಾ. ೧೭೭-೪೨೨). ೨. [ಛಂದ] ಒಂದು ಅಕ್ಷರಗಣ ; ಯಗಣ (ᑌ - -) : ಗುರು ಮೂಱಾಗಿರೆ ಧಾತ್ರಿ ಮುಂತೆರಡು ಬಿಣ್ಪಿಂ ತೋಯಂ (ಛಂದೋಂಬು. ೧-೩೮). [ ಸಂ. ]

**ತೋಯಕುಂಭ** (ನಾ). ನೀರಿನ ಕೊಡ,-ಕಳಶ : ದೇವಮಹೀರುಹವ್ರಜದೊಳಂ ದೇವಾಪಗಾತೋಯಕುಂಭದೊಳಂ ದೇವವರಂ ಸ್ತವಂಗೆಯೆ (ಜಗವಿ. ೩-೧೭). [ ತೋಯ$_2$ + ಕುಂಭ ]

**ತೋಯಜ** (ಗು). ೧. ನೀರಿನಲ್ಲಿ ಹುಟ್ಟಿದ. (ನಾ). ೨. ಕಮಲ ; ತಾವರೆ : ಸುಭಟರ ಚರಣತೋಯಜದ ಘಾತದಿಂ ಕೆಂಧೂಳಿ ಮುಸಗೆ (ಭಾವಚಿಂ. ೫-೧೮) ; ತೋಯಜವೆಂಬ ಪುಷ್ಪದ ಪೆಸರವರೊಳು . . . ಇರೆಸು ಕಂಡ್ಯ ಎನ್ನನು (ಕನಕ. ೧೫೦-೨). [ ಸಂ. ]

**ತೋಯಜಗರ್ಭ** (ನಾ). ೧. ಕಮಲದ ಒಳಭಾಗ : ಎಲೆ ಮಧುವ್ರತ ನೀನದ ಸೋಂಕೆ ನಿನ್ನ ಕೇಳ್ ತೋಯಜಗರ್ಭಮೆಂದೆನಿಪ ಬಂಧನಮಂದಿರ ಕಂದು ಸೇರಿಪೆಂ (ಶಾಕುಂತ.೯೧-೧೫೧). ೨. ಕಮಲದಲ್ಲಿ ಜನ್ಮತಾಳಿದವನು; ಬ್ರಹ್ಮ : ತೋಯಜಗರ್ಭನಾದಿಮುನಿಮುಖ್ಯಮತಪ್ರಕಟೀಕೃತಾಖಿಳಾ ಮ್ನಾಯಂ . . . ಒಲ್ದು ದೀರ್ಘಾಯುಮನೀಗೆ (ಪಂಚತಂ. ೧-೯).
[ ತೋಯಜ + ಗರ್ಭ ]

**ತೋಯಜನಾಭ** (ನಾ). ಹೊಕ್ಕುಳಲ್ಲಿ ತಾವರೆಯುಳ್ಳವನು; ವಿಷ್ಣು: ತೋಯಜನಾಭನನಂತಸಹಾಯಂ ನಲಿದಿಂತು ವತ್ಸಕುಲಮಂ ಕಾದಂ (ಜಗವಿ. ೩-೭೮). [ ಸಂ. (ತೋಯಜ + ನಾಭಿ + –) ]

**ತೋಯಜಪ್ರಭವ** (ನಾ). = ತೋಯಜಗರ್ಭ೨ : ಅಂಬುಜಾಂಬಕ ತೋಯಜಪ್ರಭವರು ಸುಧಾಶನನಾಯಕಾದಿ ದಿಶಾಧಿಪರು . . . ಬಂದರೀಶ ನನೋಲೈಸಲೆಂದು (ಬಸಪು. ೧-೪೧). [ ತೋಯಜ + ಪ್ರಭವ ]

**ತೋಯಜಭವ** (ನಾ). = ತೋಯಜಗರ್ಭ ೨. [ ಸಂ. ]

**ತೋಯಜಮಿತ್ರ** (ನಾ). ತಾವರೆಯ ಸ್ನೇಹಿತ ; ಸೂರ್ಯ : ಮತ್ತಮಾ ಗ್ರೀಷ್ಮಕಾಲದೊಳ್ ತೋಯಜಮಿತ್ರನೇೞ್ಗೆವಡೆದೊಪ್ಪಿರೆ (ಉದ್ಭಟ. ೯-೮೭). [ ತೋಯಜ + ಮಿತ್ರ ]

**ತೋಯಜಷಂಡ** (ನಾ). ೧. ತಾವರೆಗಳ ಸಮೂಹ. ೨. ತಾವರೆಗಳ ಗುಂಪನ್ನುಳ್ಳುದು;ಸರೋವರ: ತೋಯಜಷಂಡಮನಿದನಾನಾಯತಿಯಿಂ ಕಾವೆನೆನ್ನ ಮಾತಿಂಗೆಲೆ ಕೌಂತೇಯ ಮಱುಮಾತನಿತ್ತು ಮದೀಯ ಸರೋವರದ ತೋಯಮಂ ಕುಡಿ (ಪಂಪಭಾ. ೮-೩೯). [ ತೋಯಜ + ಷಂಡ ]

**ತೋಯಜಾಕರ** (ನಾ). ಕಮಲಗಳಿರುವ ಸರೋವರ ; ಕಮಲಾಕರ : ತೋಯಜಾಕರದಂತೆ ಪದ್ಮಾಲಯಂ ಶಿವನ ಕಾಯದಂದದೆ ಸರ್ವಮಂಗಳಾಲಂಕೃತಂ ಕಾಯಜನ ಪಿತನಂತನಂತಮಣಿರಂಜಿತದೊಳರಮನೆ ವಿರಾಜಿಸಿದುದು (ಚಬಪು. ೫-೫೩). [ ತೋಯಜ + ಆಕರ₃ ]

**ತೋಯಜಾಕ್ಷ** (ನಾ). ಕಮಲದಂತೆ ಕಣ್ಣುಳ್ಳವನು : ವಿಷ್ಣು ; ಅಂತಪುರ ಮಾವಳ್ಗೆ ವನಮಾಲಿಕಾಲಂಕೃತಂ ತೋಯಜಾಕ್ಷವಕ್ಷಸ್ಥಲಂ . . . ಆ ಲಕ್ಷ್ಮೀದೇವಿ ಸಂತತಮುಮೆನ್ನೊಳ್ಸುಧಾದೃಷ್ಟಿಯಂತಿಹ ಕಟಾಕ್ಷವೃಷ್ಟಿಯ ಸುರಿಸಲಿ (ಶೀಷರಾ. ೧-೪). [ ಸಂ. (ತೋಯಜ + ಅಕ್ಷಿ + –) ]

**ತೋಯಜಾನನೆ** (ನಾ). ಕಮಲದಂತೆ ಮುಖವುಳ್ಳವಳು; ಕಮಲಮುಖಿ: ಜೀಯ ನಿಮಗಂ ನಿನ್ನ ನಮಿಸಿದ ತೋಯಜಾನನೆ ಇಂದು ಮರಣಂಗೆಯ್ದಳ್ (ಬಸಪು. ೩೨-೪೩). [ ಸಂ. ತೋಯಜಾನನಾ (ತೋಯಜ+ಆನನ + –)]

**ತೋಯಜಾರಿ** (ನಾ). ಕಮಲಕ್ಕೆ ಶತ್ರುವಾದವನು ; ಚಂದ್ರ.
[ ತೋಯಜ + ಅರಿ₆ ]

**ತೋಯದ** (ನಾ). ನೀರನ್ನು ನೀಡುವುದು ; ಮೋಡ ; ಮುಗಿಲು : ನಡೆದನಾ ದೈತ್ಯೇಶ್ವರಂ, ದಿವಂಗತ ಸುತನ ಸತಿಯ ಶೋಕಾಗ್ನಿಯಂ ತವಿಪ ಪೆರ್ಮೞೆಗಳಂ ಕರೆಯುವ ಮನೋನಿಶ್ಚಯದ ತೋಯದಂಗಳಂ ಪೊತ್ತುಯ್ವ ಕಾರ್ಗಾಳಿಯೋಲ್ (ಶ್ರೀರಾಮಾ. ೭೩೯-೧೫೧). [ ಸಂ. ]

**ತೋಯಧಿ** (ನಾ). ಕಡಲು; ಸಮುದ್ರ: "ರತ್ನಾಕರಃ . . . ತೋಯಧಿಃ . . . ಸಮುದ್ರಃ – ಈ ೧೨ ಸಮುದ್ರಂ" (ಹಲಾಯು. ೧೦೭-೩೦) ; ಆಯುಂ ಶ್ರೀಯುಂ . . . ನೃಪತಿ ನಿನಗೆ ನಿಜಸಂತತಿಯುಂ ನ್ಯಾಯದೆ ಪೆರ್ಚುವುದಕ್ಕೀ ತೋಯಧಿ ಧರ[ಣೀಧ]ರಾಧರ ಸ್ಥಿತಿವರೆಗಂ (ಕವಿರಾ. ೩-೨೦೭) ; ಶ್ರೀಯನರಾತಿಬಳಾಸ್ಯಕ್ತೋಯಧಿಯೊಳ್ ಪಡೆವ ವೀರನುದರಿಗಳನಾತ್ಮೀಯಪದಸ್ಫುರಿತನಖಚ್ಛಾಯೆಗಳೊಳ್ ನಿಱಿಸಿ ನಿಂದ ಗಂಡಂ ಹರಿಗಂ (ಪಂಪಭಾ. ೩-೧); ಶ್ರೀಯಂ ನಿಜಪಾದದ್ವಯ ತೋಯಧಿಯೊಳ್ ತಾಳ್ದು (ಅಟ್ಟಮ. ೦-೧). [ ಸಂ. ]

**ತೋಯನಿಧಾನ** (ನಾ). = ತೋಯಧಿ : ತೋಯನಿಧಾನಫೇನವಿಶದೋತ್ತಮವಸ್ತ್ರಮನುಟ್ಟು ಪುಷ್ಪಮಾಲಾಯುತೆಯಾಗಿ . . . ಪೊಱಮಟ್ಟಳ್ (ಪಂಚತಂ. ೭೪-೫). [ ತೋಯ₂ + ನಿಧಾನ ]

**ತೋಯನಿಧಿ** (ನಾ). = ತೋಯಧಿ : ಶ್ರೀಯ ಚಾಮರದ (ಸುೞಿಗಳಂ)–ತಿಳಿಗೊಳಂಗಳಂ ತೋಯನಿಧಿಯ (ಪೆರ್ಗಱೆಯ)–ಪಿರಿಯ ಸುೞಿಗಳಂ . . . ಪೋಲ್ವೆಯಪ್ಪ ಮುಗಿಲಿಂದೆ ಮೞೆ . . . ಕಱೆಗುಂ (ಅಟ್ಟಮ. ೮-೧೨). [ ತೋಯ₂ + ನಿಧಿ ]

**ತೋಯಪಾನ** (ನಾ). ನೀರನ್ನು ಕುಡಿಯುವಿಕೆ ; ಜಲಪಾನ : ಬಾಯಿಗೇಳಿಸುತಿರ್ದ ನಾವ್ ತತ್ತೋಯಪಾನಕೆ ತಿರುಗಿ ಕಂಡೆವು ರಾಯನಂಘ್ರಿಗಳಾಣೆಯೆಂದರು ಶಬರರನಿಲಜಗೆ (ಕುವ್ಯಾಗ. ೪-೫೨).
[ ತೋಯ₂ + ಪಾನ₂ ]

**ತೋಯಪಿಪ್ಪಲಿ** (ನಾ). ನೀರಂ ಹಿಪ್ಪಲಿ [ ತೋಯ₂ + ಪಿಪ್ಪಲಿ ]

**ತೋಯಭೃತ್ತು** (ನಾ). ನೀರನ್ನು ಧರಿಸಿರುವುದಂ ; ಮೋಡ : ಅಪೂರ್ವ ತೋಯಭೃದ್ವಿಸರದೆ ವಾಃಕಣಂಗಳುಗುತಂದಪುವೆಂದೆ ಪೊಡರ್ಪುಗೆಯ್ದು ಪೂರಿಸುವಳಿಪಿಂದೆ ಪುಷ್ಕರಮನೆತ್ತಿದುದಂದು ನಭಕ್ಕದೊಂದಿಭಂ (ಚಂದ್ರಪ್ರ. ೯-೭೫). [ ಸಂ. ತೋಯಭೃತ್ ]

**ತೋಯರಾಶಿ** (ನಾ). ಜಲರಾಶಿ ; ಸಮುದ್ರ : ಮಂತ್ರಿವರ್ಗದುಜ್ವಲ ನವರತ್ನಭೂಷಣಕಿರೀಟಹಟದ್ರುಚಿಯಿಂದದೇಂ ಪಳಂಚಲೆದುದೊ ರಾಜರಾಜಸಭೆ ಕುಂಭಜನೀಂಟಿದ ತೋಯರಾಶಿಯಂ (ಶಂರಾಮಾ. ೬-೭೪).
[ ತೋಯ₂ + ರಾಶಿ ]

**ತೋಯರುಹ** (ನಾ). = ತೋಯಜ ೨. 'ತೋಯರುಹನಾಭ' ಪರಾ.
[ ಸಂ. ]

**ತೋಯರುಹನಾಭ** (ನಾ). = ತೋಯಜನಾಭ : ತೋಯರುಹನಾಭನೈಂದ್ರಾಗ್ನೇಯಾಂತಕಕೌಣಪಾಸ್ತ್ರತತಿಯಿಂದಿಸೆ (ಜಗವಿ. ೧೨-೪೧).
[ ಸಂ. (ತೋಯರುಹ + ನಾಭಿ + – ) ]

**ತೋಯಾಕರ** (ನಾ). ನೀರಿಗೆ ಆವಾಸಸ್ಥಾನವಾದುದು; ಜಲಾಶಯಂ ; ಸರೋವರ : ಪರಮಶ್ರೀಸಂತತಾವಾಸದೊಳಖಿಲಸುಖಸ್ವಚ್ಛಸಂಪನ್ನ ತೋಯಾಕರದೊಳ್ . . . ಸೌಂದರಕೇಲೀಹಂಸನಾದು (ಆದಿಪು. ೧೬-೭೫).
[ ತೋಯ₂ + ಆಕರ₃ ]

**ತೋಯಾಧೀಶ** (ನಾ). ನೀರಿಗೆ ಒಡೆಯನಾದವನಂ ; ಜಲಾಧಿಪತಿ ; ವರುಣ : ಪವಮಾನಂ ದಹನಂ ವಾಸವ ತೋಯಾಧೀಶರೆಂಬಿವರ್ ಸಲೆ ರಾತ್ರಿಂದಿವಗಳೊಳೊಂದೊಂ(ದರೆ ?)ದುಂ ಜಾವವನಾಳ್ವರ್ (ಲೋಕೋಪ. ೪-೭೮). [ ತೋಯ₂ + ಅಧೀಶ ]

**ತೋಯಾಶಯ** (ನಾ). ನೀರಿಗೆ ಆಶ್ರಯವಾದುದಂ ; ಜಲಾಶಯಂ ; ಕೆರೆ : "ಹ್ರದಃ, ತೋಯಾಶಯಃ – ಈ ೨ ಮಡು" (ಹಲಾಯು. ೧೧೦-೪೮); ಮಾರ್ಗಾನೇಕ ತೋಯಾಶಯಮನುರುರಜಂ ಪೀರೆ ದಾನಪ್ಲವಂ ಪೂರಿಸೆ ತೋಱಿತ್ತೆತ್ತಮಾದಂ ಹರಣಭರಣಚಾತುರ್ಯಮಂ ಚಾತುರಂಗಂ (ಚಂದ್ರಪ್ರ. ೧೦-೩೦). [ ತೋಯ₂ + ಆಶಯ ]

**ತೋಯಿ** 'ತೊವ್ವೆ' ನೋ.

**ತೋಯಿಲ** (ನಾ). ಹೊಲಸಂನೀರು : ನಾಯಡಗು ನರಕನಿಳಯಂ ಮಾಯೆಯ ಕಣಿ ಬಿಡದ ಜಿಗುಟು ಪಾಪದ ಪುಂಜಂ ತೋಯಿಲಕುೞಿ ಪೊಲಗೆಱೆಯೆಂದಾಯತಿಯಿಂ ಬಗೆವರುೞಿವರಾ ಸೂಳೆಯರಂ (ಪಸಾರ. ೨೯೯). 'ತೋಕುಳಿ' ಪರಾ. [ ? ]

**ತೋಯಿಸು,** ತೊಯಿಸಂ, ತೊಯ್ಯಿಸು, ತೊಯ್ಸು (ಕ್ರಿ). ನೆನಸಂ ; ಒದ್ದೆಮಾಡು ; ತೇವವಾಗಿಸು : ರಸವಿಶೇಷದೊಳತಿವಿಮಲಸಿತವಸನ ತೋಯಿಸಿ ಅಗ್ನಿಯೊಳಗಿಡೆ ಪಸರಿಸುವುದು ಪ್ರಕಾಶ ನಸುಗುಂದದಲೆ ಸರ್ವತ್ರ (ಜಗದಾ. ೨೨೮) ; ಒಂದೇ ಉಸುರಿನಲ್ಲಿ ಮಕ್ಕಳಂತೆ ಅಳುತ್ತಾ, ಕಣ್ಣೀರಿನಿಂದ ನನ್ನ ಕಾಲು ತೋಯಿಸಿದ (ಪತಂಗ. ೧೮) ; ಅವನನ್ನು (ಆತ್ಮನನ್ನು) ಶಸ್ತ್ರಗಳು ಕತ್ತರಿಸಲಾಗುವುದಿಲ್ಲ . . . ಜಲವು ತೋಯಿಸಲಾಗುವುದಿಲ್ಲ (ಅನಾಸ. ೭) ; ಸಾರಕವೆಂದು ಈ ತೌಡು ಉಪಯೋಗಿಸುವದಾದಲ್ಲಿ, ತೋಯಿಸಿ ಹಾಕಬೇಕು (ಗೋಗ್ರಾಸ. ೭೮). **ತೊಯಿಸು :** ಓಕುಳಿಯ ನೀರನುಚಿ ಸೂಸುವ ಕೋವಿದಜನಮಂ ನೂತ್ನಕಲಾಕೋವಿದೆಯತೊರ್ಯಿಸಿದರವರ್ದ ಪರಿಮಳಜಲದಿಂ (ಉದ್ಭಟ. ೮-೭೩) ; **ಜೊಲ್ಲು** ಆಹಾರವನ್ನು ತೊಯಿಸುತ್ತದೆ (ವಮಂಬಯಿ. ೪-೮೫). **ತೊಯ್ಯಿಸು :** ಮೇಘಜಲ ತೊಯ್ಯಿಸಿರೆ ತಳಿರುಗಳ (ಧ್ವನ್ಯಾಲೋ. ೭೭). **ತೊಯ್ಸು :** ಹರಿದು ಬಂದು ನನ್ನ ಮೈ ತೊಯ್ಸಲೆಂದೇ ನೀನಲ್ಲಿರುವೆ! (ಕಲ್ಲೋಲ. ೧೪-೮). [ ತೋ + – ಇಸು₃ ]

**ತೋಯು** 'ತೋ' ನೋ.

**ತೋಯೆ** 'ತೊಪ್ಪೆ' ನೋ.

**ತೋಯೇಜ** (ನಾ). = ತೋಯಜ ೨. 'ತೋಯೇಜಾಸನ' ಪರಾ. [ ಸಂ. ]

**ತೋಯೇಜಾಸನ** (ನಾ). ಕಮಲವನ್ನು ಪೀಠವಾಗಿ ಉಳ್ಳವನು ; ಬ್ರಹ್ಮ : ತೋಯೇಜಾಸನನಿಂದ್ರ ರುದ್ರ ಧನಧರ್ ಮುಂತಪ್ಪ ದೇವೇಶರುಂ ಶ್ರೀಯುಂ ಬೀರುವ ನಿನ್ನ ಪಾದರಜಮಂ ಶೀರ್ಷಾಗ್ರದೊಳ್ಪೊತ್ತು (ಮೃಸೂಮ. ೨-೫೮). [ ತೋಯೇಜ + ಆಸನ ]

**ತೋಯೋದ್ದೇಶ** (ನಾ). = ತೋಯಾಶಯಂ : ಅಪ್ಪದಿಜ್ಞಾಗರಾಜಗೆ ಮೆಯ್ಗುರ್ಚಿ ಕೊಳಲ್ಕಜಂ ಸಮೆದ ತೋಯೋದ್ದೇಶವೋ ಸಂದೆಯಂ ಬಗೆಗಾದತ್ತೆನಿಸಿರ್ದುದೇಂ ಪಿರಿದೊ ವೈಶಂಪಾಯನಾಬ್ಜಾಕರಂ (ಗದಾಯು. ೭-೧೧). [ ತೋಯ₂ + ಉದ್ದೇಶ ]

**ತೋಯೋದ್ಭವ** (ನಾ). ನೀರಿನಲ್ಲಿ ಹುಟ್ಟಿದುದು ; ಮಂತ್ರ, ರತ್ನ ಮೊದಲಾದುವು : ಬುಧಂ . . . ಶಶಿಗೇಹದೊಳ್ ನೆಲಸೆ ಬಂಧುದ್ವೇಷಿ ತೋಯೋದ್ಭವದ್ರವಿಣಂ (ಜಾತಕಿ. ೧೭-೨೪). [ ತೋಯ₂ + ಉದ್ಭವ ]

**ತೋಯೌಕಸ** (ನಾ). ನೀರಿನಲ್ಲಿ ಬದುಕುವ ಪ್ರಾಣಿ ; ಜಲಚರ : ಭೇಕ ಶುಕ್ತಿಕೆ . . . ಕಮಠ ಕಂಬು ಪ್ರಮುಖ ತೋಯೌಕಸಾಹ್ವಯದಿಂದೆ ರಾಜಿಸುತಿರ್ಪುದಂಬುನಿಧಿ (ಶಂಕದಾ. ೧-೩೦). [ ಸಂ. ತೋಯೌಕಸ್ ]

**ತೋರ, ಥೋರ** (ನಾ). ೧. ಗಾತ್ರವಾದುದಂ ; ದಪ್ಪವಾದುದು ; ಸ್ಥೂಲವಾದುದು : ಕಾಯ್ದು ಕರ್ಬೊನ್ನ ನಿಡಿಯವುಂ ತೋರಮುಮಪ್ಪ ಕೀಲ್ಗಳಿಂದಂ ಮೆಯ್ಯೆಲ್ಲಮುಮಂ ನಿರಂತರಮುರ್ಚಿ ಪೋಗಿ ನೆಲನಂ ತಾಪಿನಂ ಕೀಲಿಟಿಯೆವಟ್ಟ ಮೆಯ್ಯನೊಡೆಯನಾಗಿಯುಂ (ವಡ್ಡಾರಾ. ೫೦-೭) ; ಮಾನದ ತೋರಿಹ ಅವಿಂಗೆ ಕೊಳಗದ ತೋರಿಹ ಕಿಚ್ಚಲು (ಅವಜಂ. ೧೨-೪೮) ; ತೆಂಗಿನ ಕಾಯ ತೋರದ ಮೊಲೆವೊತ್ತ ಲತಾಂಗಿಯ . . . ಚೆಂದುಟಿಯನಿದನೆವೋಹತರಂಗಿಣಿವೇಳ್ವೆ (ಮೋಹತ. ೧-೩೭ ; ತೋರವಾಗಿರುತಿಹುದು ಪರ್ವತ ಧಾರುಣಿಯನದು ಹರಹಿಕೊಂಡೇ ದೂರದಿಂದಲಿ ನೋಡಿದಡೆ ಅಣುವಾಗಿ ಕಾಣಿಪುದು (ಜ್ಞಾನಸಿಂ. ೬-೨೦). ೨. ಗಾತ್ರ ; ಆಕಾರ : ತೋರದಲಿ ಕುಲಗಿರಿಯ ಸತ್ವದ ಸಾರದಲಿ ವಜ್ರವನು ದನಿಯಲಿ ಕಾರ ಬಜಸಿಡಿಲಂದವಿದನುಗಿದೊಂದು ಮಾಡಿದನು (ಕುಮಾ.ಭೀ. ೩-೧೮) ; ಕಣಿಕವನು ನಿಂಬೆಯ ಹಣ್ಣ ತೋರದುಂಡೆಯ ಮಾಡಿ (ಸೂಪಶಾ. ೧-೨೫) ; ಪಿರಿದಪ್ಪ ಕುಂಬಳಕಾಯ ತೋರದ ಮುತ್ತಿನಿರವಾಂತು ಮೆಜಿವ ಕಾವ್ಯಗಳು ಇರಲು ನಾ ಪೇಳ್ವೆ ನೆಲ್ಲಿಯಕಾಯ ತೋರದ ವರಮುತ್ತಿನಂತೀ ಕೃತಿಯ (ನಾಗಕು. ಪೀಠಿಕಾಸಂಧಿ. ೫೪) ; ೩. ಹೆಚ್ಚಳ ; ಆಧಿಕ್ಯ : ಮುರಿದೆಲರೆತ್ತೆ ಮೆಯ್ದುರಿದು ತೋರಮನಾಳ್ದು ಪೊದಟ್ದು ನೀಳ್ದ ಪಂಕರುಹ ಪರಾಗಮುಂ ಜವದೆ ಮಂದರಮಾಗೆ ಸರೋವರಾಬ್ಧಿಯಂ ಸ್ಮರಸುರವಲ್ಲಭಂ ಪೊಸೆದು ಪುಟ್ಟಿಸುವಿಂದುಗಳಂದದಿಂ (ಲೀಲಾವ. ೧೩-೧೨೩). (ಗು). ೪. ದಪ್ಪವಾದ ; ಸ್ಥೂಲವಾದ ; ಗಾತ್ರವಾದ : ಹೆಳ್ವಾರ ಸಮರದೊಳ್ಮುರಾರಿ ಮಾರನಾಗಿ . . . ರಾಣಿ ವಾಸಭಣ್ಡಾರಮಂ ಪೆಚಿದು ತೋರ ಪಳಯಿಗೆ ಭಾಗಿತ್ತಿ ತೊಜಿಬಡಗರೆನಾಡು ವಿಷಯ ಅಪ್ಪೊಗಾಲ್ನಾಮಗ್ರಾಮ ಸರ್ವ್ವಬಾದುಪರಿಹಾರವಮ್ಕಿಟ್ಟುಗೊಟ್ಟಂ (ಎಕ. III, ನಂಜನ ೧೨೩-೦೭; 266 ?); ಓಪನಂ ಮಿಡುಕಲೀಯದೆ ಕಾಲ್ವಿಡಿದಟ್ಟು ತೋರ ಕಣ್ಪನಿಗಳನಿಕ್ಕಿದಳ್ ತರಳಲೋಚನೆ ಸಂಕಲೆಯಿಕ್ಕಿದಂತೆವೋಲ್ (ಪಂಪಭಾ. ೪-೯೭); ಅನುಭವಿಸಿದ ಕೋಟಲೆಗಳನಿನಿಸೆಂದೆಣಿಸಲ್ಕೆ ಮೌಕ್ತಿಕಾಕ್ಷಾವಳಿಯಂ ವನಜದಳನಯನೆ ಸಮೆದಪಳೆನೆ ಸುರಿದುವು ತಜಿದೆ ತೋರ ಕಣ್ಬನಿದುಜುಗಲ್ (ಕಾದಂಊ. ೨೬೨). ೫. ದೊಡ್ಡದಾದ ; ಬೃಹತ್ತಾದ. 'ತೋರಗದ', 'ತೋರಗಲಂ' ಪರಾ. ೬. ಅತಿಶಯವಾದ ; ಹೆಚ್ಚಾದ : ನೀರಧಿಯ ಪೀರುವವೊಲ್ಕೆತಪ್ಪ ಮಾರುತಿಯ ನಿಟ್ಟಸುತ ನಕ್ರ ಕೂರ್ಮಂಗಳೆಲ್ಲ ತೋರಥಯದಿಂದೊಂದನೊಂದೊರಸಿ ವಿತಳಮಂ ಸಾರುತಿರಲು (ವೆಂಕಾರಾ. ೫-೧-೨೭). 'ತೋರತೋಟಿ' ಪರಾ. **ಥೋರ :** ೧. ನೂಲೆಳೆಯ ಗಾತ್ರದ ಮರದಲ್ಲಿ ಬೆಟ್ಟದ ಥೋರದ ಕಾಯಿ ಫಲವಾಯಿತು (ಮೋಳಿಮಾ. ೧೯೨-೭೨೨). ೫. ಥೋರ ಕುಲಗಿರಿನಿಚಯಕಂ ಕುಲಿಶ ಕವಿವವೋಲ್ (ತುರಂಗ. ೭೪-೨೪).

[ <ಪ್ರಾ. ಥೋರ./ಮರಾ. ಥೋರ./ತುಳು. ತೋರ, ತೋರೋ ; ತೆಲು. ತೋರ./ಸಂ. ಸ್ಥೂಲ ]

**ತೋರಂಜಿ** 'ತುರಂಜಿ' ನೋ.

**ತೋರಂಬಟಿ** (ನಾ). ಒಂದು ಬಗೆಯ ದಪ್ಪವಾದ ಅವಂಟಿಕಾಯಿಂ : ಹರುಷದಿಂದಿಟ್ಟು ತೋರಂಬಟಿಕಾಯನು ಜಜಿವ ಮೌಕ್ತಿಕದ ಬಾವುಲಿಯ (ಜ್ಞಾನಜ. ೪-೭). [ ತೋರ + ಅಂಬಟಿ ]

**ತೋರಕಬರಿ** (ನಾ). ದಪ್ಪವಾಗಿರುವ ತುರುಬು ; ತೋರವಾಂಡಿ: ತೋರಕಬರಿಯ ಕುಡಿತೆಗಂಗಳ . . . ಭೂರಿಭೂಷಣದಮರಿಯರು ಮೆಜಿದಿರ್ದರೊಂದೆಸೆಯ (ತೊರರಾ. ೫-೨-೭೦). [ ತೋರ + ಕಬರಿ ]

**ತೋರಕಿಡಿ** 'ತೋರಗಿಡಿ' ನೋ.

**ತೋರಕಿವಿ** 'ತೋರಗಿವಿ' ನೋ.

**ತೋರಕುಚ, ಥೋರಕುಚ** (ನಾ). ದೊಡ್ಡಗಾತ್ರದ ಮೊಲೆ : ಬಿಗಿದಡರಿದ ತೋರಕುಚ ಸಣ್ಣ ನಡುವಿನ ಸೊಗಸಲಿ ಮೆಜಿವ ತೆಳ್ಳಸಿಟಿ . . . ಶಂಖಿನಿಯರು ಮಿಗೆ ರಾಜಿಸಿದರು (ಕಂಸವಿ. ೨೦-೭೪). **ಥೋರಕುಚ:** ಥೋರಕುಚದ ಮೇಲೆ ಚಾರುಗಂಧವ ಪೂಸಿ (ವಾದಿಕೀ. ೪೭-೧೨).

[ ತೋರ + ಕುಚ ]

**ತೋರಗಂಬ** 'ತೋರಗಂಭ' ನೋ.

**ತೋರಗಂಭ, ತೋರಗಂಬ** (ನಾ). (ಮಾಳಿಗೆ ಅಥವಾ ಚಪ್ಪರಕ್ಕೆ ಆಧಾರವಾಗಿ ನಿಲ್ಲಿಸುವ) ದಪ್ಪವಾದ ಕಂಬ : ಲೋಹದ ತೋರಗಂಭಂಗಳೊಳಗೆ ಮುರಿಗೇಶದಿನೆಸೆವ ಶಬರರ ತಲೆಗಳೋಳಿಯಂತೆ ರಕ್ತಚಾಮರಂಗಳನ್ನೊಳಕೆಯ್ದು ಕರ್ಬೊನ್ನ ಕನ್ನಡಿಯ ತೋರಣಂಗಳೊಳಂ (ಕಾದಂಊ. ೨೬೯). **ತೋರಗಂಬ:** ಸರಸೀಪರಿಸರದೊಳ್ ನಟ್ಟು ಮುಗಿಲಂ ಮುಟ್ಟುವಂತೆ ಮುಂದಿರ್ದ ಕಲ್ಲ ತೋರಗಂಬಮಂ . . . ಕಿಟ್ಟು (ವರ್ಧಪು. ೨-೪೮ ವ) ; ಬೆಳೆದೆಳವಳ್ಳಿಯೊಳ್ ಪುದಿದು ತೋಱುವ ಮಾವಿನ ತೋರಗಂಬದಿಂ . . . ಸೊಗಯಿಪೋಲಗಸಾಲೆಯೊಳಿರ್ದರ್ (ಕಬ್ಬಿಕಾ. ೧೨೭).

[ ತೋರ + ಕಂಭ ]

**ತೋರಗಣು** (ನಾ). ದೊಡ್ಡ ಕಣ್ಣು : ಕಾರೊಡಲು ದಾಡೆ ಮಣಿಮಕುಟ ಫಣಿಕುಂಡಲಂ ತೋರಗಣು ಕಿಮ್ಮಿಸೆ . . . ಎಸೆವ ಬಾವುಲಿ ತೊಡರಿನ ವೀರಭದ್ರಂ (ಸಿದ್ಧರಾ. ೪-೬). [ ತೋರ + ಕಣು (<ಕಣ್) ]

**ತೋರಗದ** (ನಾ). ದೊಡ್ಡ ಬಾಗಿಲು: ತ್ರಿಭುವನದಗ್ರದಲ್ಲಿ ಮೂವತ್ತಾಱು ಲೋಕ ಅದರ ಮಧ್ಯದಲ್ಲಿ ಇಪ್ಪತ್ತೈದು ಮಹಾಮೇರುವೆ ಹದಿನಾಱು ವರ್ತನದ ಕೊಂಡಿ ಗುರು ಲಘುವೆಂಬ ತೋರಗದ (ಮೋಳಿಮಾ. ೨೩೫-೭೮೪). [ ತೋರ + ಕದ (<ಕದವು$_1$) ]

**ತೋರಗರುಳು** (ನಾ). ದೊಡ್ಡ ಕರುಳು,-ಅಂತ್ರ : ಸಾರು ನೀ ಸಾರೆಲವೊ ಭೀಮನ ತೋರಗರುಳಿನ ದಂಡೆಯನು ಕೈಯಾರೆ ಮಾರಿಗೆ ಮುಡಿಸುವೆನು (ಕುವ್ಯಾಕ. ೩-೧೮). [ ತೋರ + ಕರುಳು (<ಕರುಳ್) ]

**ತೋರಗಲು** (ನಾ). ದೊಡ್ಡ ಶಿಲೆ,- ಬಂಡೆ : ಅಱ ಸಱ ತೋರಗಲು ಕವಣೆಗಲು ಕಣೆ ಭಂಡಿಯು ಗಾಲಿ ಕೆಲ್ಲೆ ಹೆಗ್ಗೊಱದುಱಿಯೆ[ಣ್ಣೆ] ಕಾಯ್ದು ಮಣಲಗ್ಗದ ಥೇಂಕಣೆ (ಸೌಇಇ. XX, ೧೨೬-೩ ; 1186). [ ತೋರ + ಕಲು$_1$ (<ಕಲ್$_3$) ]

**ತೋರಗಾಯ್** (ನಾ). ದಪ್ಪವಾದ ಕಾಯಿ; ದೊಡ್ಡ ಕಾಯಿ : ಭಾರದಿಂ ತೂಗಿ ನೆಲನಂ ತಾಗುವ ತೋರಗಾಯ್ಗಳಿಂ ಜನನಿಯುಪ್ಪವನಿಯಂ ಮುದ್ದಿಂ ಮುಂಡಾಡುವಂತಿರಿರ್ದ ಮಾತುಲುಂಗಸಂಘಾತಂಗಳುಂ (ಚಂದ್ರಪು. ೧-೧೦೫ ವ); ತೋರಗಾಯ್ಗಳ ಬಹುಭಾರಮಂ ತಳೆದು ಸಾರ್ವ ವಿಹಂಗಚಯಕ್ಕೆ ಬೇಸಱಂ ಬಳೆಯಿಪುದೆಂದು ತಾಳತರುವಂ ನಗುವಂತೆ ಪೊಲಾದ ಬೀಡೆವಣ್ಗಳಿನೆಸೆದಿರ್ಪ ದಾಡಿಮತರುವ್ರಜಮಾ ಬನದೊಳ್ ವಿರಾಜಿಕುಂ (ಕುಸುಮಾ. ೦-೯೦) ; ಸಾರವಿಲ್ಲದ ಚಂದ್ರಕಳೆಯನು ಸೇವಿಪ ಭೂರಿ ನಿರ್ಜರರು ಗಾಂಪರಿಗೆ ತೋರಗಾಯ್ಗಳ ರಸದೋಟಲೆನಿಸಿ ನಾಳಿಕೇರ ಮಾಂಬರವ ಚುಂಬಿಪವು (ವರ್ಧಚ. ೧-೭೦). [ ತೋರ + ಕಾಯ್$_4$ ]

**ತೋರಗಿಡಿ, ತೋರಕಿಡಿ** (ನಾ). ದಪ್ಪವಾದ ಕಿಡಿ; ದೊಡ್ಡ ಕೆಂಡದ ಚೂರು: ಎಚ್ಚೊಡಂಬಂಬನಟ್ಟಿ ಪಳಂಚುತೆ ಸಿಡಿಲ್ದ ತೋರಗಿಡಿಯಿಂದೊಂ ದೊಂದಱೊಳ್ ಬೇವುದುಂ ತ್ರಿಪುರಂಬೊತ್ತಿಸಿದಂತೆ ಪೊತ್ತಿ ಪೊಗೆದತ್ತೆತ್ತಂ ವಿಯನ್ಮಂಡಳಂ (ಪಂಪಭಾ. ೧೧-೧೭) ; ಘಟಿಯೊಳ್ ಘಟಿ ಜೋಡಿಸಿ ದಂತ ಜಾಲದೊಳ್ ಭೋಂಕನೆ ಪೊಣ್ಮೆ ತೋರಗಿ[ಪಾಠಾಂ. ಕಿ]ಡಿ ಸೂಸೆ ಕಱುತ್ತುಱ ತಾಗಿತಾಜಿಯೊಳ್ (ಗಿರಿಕ. ೬-೭೨) ; ತೋರಗಿಡಿಯೆನೆ ತೊಳಗಿದುವ ರುಚಾಂಶುರುಚಿರತಾರಾನಿಕರಂ (ಪಾರ್ಶ್ವಪು. ೧೦-೨೩). **ತೋರಕಿಡಿ :** ಪೊಣ್ಮಿದ ಮುನಿಸಿಂ ಭುಗಿಲುರಿದಟ್ಟಿನಾ ದಿಟ್ಟಿಗಳೊರ್ಮೆಯೆ ತೋರ ಕಿಡಿಗಳಂ ಕೆದಱುವಿನಂ (ಕಬ್ಬಿಕಾ. ೦೫೦) ; ಹೊಸ ಮಸೆಯ ಧಾರೆಯ ತೋರಕಿಡಿಯುಲಿ ಮುಸುಕಿತರಸನ ತೇರು (ಕುವ್ಯಾದ್ರೋ. ೫-೨೦). [ ತೋರ + ಕಿಡಿ ]

**ತೋರಗಿರಿ** (ನಾ). ದೊಡ್ಡ ಬೆಟ್ಟ ; ಮಹಾಪರ್ವತ : ತೋರಗಿರಿಗಳ ಮೆರಸಿದಿಳೆ ತಾ ನೀರೊಳದ್ದುವದೆಂದು ಸಲೆ ಮದವಾರಣಂಗಳು ಧರಿಸಿ ಕೊಂಡಿಹವೆಂಟುದಿಕ್ಕಿನಲಿ (ಕುವ್ಯಾಅ. ೭-೨೭). [ ತೋರ + ಗಿರಿ$_1$ ]

**ತೋರಗಿವಿ, ತೋರಕಿವಿ** (ನಾ). ದೊಡ್ಡ ಕಿವಿ ; ಅಗಲವಾದ ಕಿವಿ : ತೋರಗಿವಿ ಕೆಂಗಣ್ಣು ಬಿಡುವಾಯಿ ನಿಡುದಾಡೆ ನಿಡಿಯ ಕಾಳರಕ್ಕಸಿ (ಸಿದ್ಧರಾ. ೭-೧). **ತೋರಕಿವಿ:** ವಾರಿಧಿಯ ನೀರೊಳಗೆ . . . ವಾರಿಕರಿಗಳು ಧುಮುಕೆಯವುಗಳ ತೋರಕಿವಿಗಳಿಗಂಟಿ ಫೇನವು ಚಾರುಚಮರಗಳಂತೆ ಯಿರ್ಪಾಗಾಗಿ ತೋರುವದು (ರಘುವಂ. ೧೪೦-೧೧). [ ತೋರ + ಕಿವಿ$_3$ ]

**ತೋರಗುಂಡು** (ನಾ). = ತೋರಗಲು : ಒತ್ತಿ ಕಾಲಿಡಲೊಡನೆ ಗಿರಿ ತಲೆಗುತ್ತುತಿರ್ದುದು . . . ನೆತ್ತಿಯಗ್ರದ ತೋರಗುಂಡುರುಳುತ್ತಲಿರ್ದವು (ತೊರರಾ. ೪-೧೨-೨೪). [ ತೋರ + ಗುಂಡು ]

**ತೋರಗುರುಳ್** (ನಾ). ಅಧಿಕವಾದ ಕೂದಲು,- ಮುಂಗೂದಲು : ಪೆಱನೊಸಲಂ ಮೆಟ್ಟಿ ನಿಮಿರ್ದ ತೋರಗುರುಳ ತೊಂಗಲೆಳವೆಱಯನಂಥ ಕಾರವಮಾವರಿಸಿದಂತೆ ತೋಱಯುಂ (ಪಂರಾಮಾ. ೩-೧೩೩ ವ); ಪಾಮರೀ. ವಿತತಿ ಮಾರ್ಪೊಳೆವೀಕ್ಷಣದಿಂ ನಿಜಾಸ್ಯ[ಮಂ] ತೋರಗುರುಳ್ಗಳಿಂ ಪಡೆವು ದೊಪ್ಪಮನಲ್ಲಿಗೆ ಮುನ್ನಿನಂದದಿಂ (ವರ್ಧಪು. ೧-೪೦). [ ತೋರ + ಕುರುಳ್$_1$ ]

**ತೋರಗೆಂಡ** (ನಾ). ದಪ್ಪವಾದ ಕೆಂಡ : ಒದಱ ಉಕಿಲ್ದು ಬೆಟ್ಟುಗಳ ಕೆಯ್ದುಗಳುರ್ವಿದ ನೀರ ತೋರಗೆಂಡದ ಸರಿಯಂ ಸಮಂತು ಸುರಿದು . . . ಬಾಧಿಸಿದತ್ತು ತದ್ಬಳಂ (ವರ್ಧಪು. ೧೫-೩೯). [ ತೋರ + ಕೆಂಡ ]

**ತೋರಗೊಂಡೆಯ** (ನಾ). ದೊಡ್ಡದಾದ ಕೊಂಡೆ,- ಕುಚ್ಚು : ಇಕ್ಕಿದ ಪಕ್ಕರಕ್ಕೆ ನಿಡುಝಲ್ಲಿ ತೊಡಂಕುವ ತೋರಗೊಂಡೆಯಂ ಸೆಕ್ಕಿದ ಖಂಡೆಯಂ ಬಿಗಿದ ಬಿಲ್ (ಚಕವಿ. ೨-೯೭). [ ತೋರ + ಗೊಂಡೆಯ ]

**ತೋರಗೊಂಬು** (ನಾ). ದೊಡ್ಡದಾದ ರೆಂಬೆ ; ದೊಡ್ಡ ಕೋಡು : ನನೆಯಂ ಪೇಱದ ತೋರಗೊಂಬು ನನೆಯಂ ಪೂಗೊಂಚಲಂ ಪೊತ್ತು ನೆಟ್ಟನೆ ಬಿಣ್ಪೇಱದ ಬಳ್ಳಿಗೊಂಬು (ಕಬ್ಬಿಕಾ. ೭೨). [ ತೋರ + ಕೊಂಬು$_1$ ]

**ತೋರಗೊನೆ** (ನಾ). ದಪ್ಪವಾಗಿರುವ ಗೊಂಚಲು; ಗಾತ್ರವಾದ ಗೊನೆ: ತೋರಗೊನೆವೇಱದ ಕಂಚಳವಾಱ ತೋರವಣ್ಪೇಱದ ಬಳ್ಕೆ (ಅನಂಪು. ೧-೭೮). [ ತೋರ + ಗೊನೆ$_3$ (<ಗೊಲೆ$_2$ ]

**ತೋರಡವು** (ನಾ). ತೋರಿಕೆಗಾಗಿ ಹಾಕುವ ಒತ್ತೆ; ನಂಬಿಕೆಗಾಗಿ ಇಡುವ ಒತ್ತೆ : "ತೋರಡವು—ಒತ್ತೆಹಾಕುವುದು" (ಜಾನಕೋ. ೭೪). [ ತೋರು (<ತೋಱು) + ಅಡವು$_2$ (<ಅಡರ್ಪು$_2$) ]

**ತೋರಣ** (ನಾ). ೧. ಹೆಬ್ಬಾಗಿಲು ; ಹೊರಬಾಗಿಲು : ತೋರಣಃ, ಬಹಿರ್ದ್ವಾರಂ – ಪುಷ್ಪಮಾಲಿಕೆ ತಳಿರು ತೋರಣ ಮಾವಿನ ಸೊಪ್ಪು ಮುಂತಾದವುಗಳನ್ನು ಕಟ್ಟುವದಕ್ಕೋಸ್ಕರ ಬಾಗಿಲ ಹೊರಗಡೆ ಕಾಣುವಂಥ ಕಂಭಗಳಿಂದ ಕಟ್ಟಲ್ಪಟ್ಟ ದ್ವಾರಬಂಧನದ ಚೌಕಟ್ಟು, ಮನೆಯ ಹೊರ ಬಾಗಿಲು, ತೋರಣಬಾಗಿಲು (ಸಿದ್ಧಾಂತಿ. ೯೨). 'ತೋರಣದ್ವಾರ' ಪರಾ. ೨. ಹಬ್ಬ, ಹರಿದಿನ ಇತ್ಯಾದಿ ವಿಶೇಷ ಸಂದರ್ಭಗಳಲ್ಲಿ ಅಲಂಕಾರ ಕ್ಕಾಗಿ ಬಾಗಿಲು, ಬೀದಿ ಮುಂತಾದೆಡೆಗಳಲ್ಲಿ ಕಟ್ಟುವ ತಳಿರು, ಹೂ, ಬಟ್ಟೆ ಮುಂತಾದುವುಗಳ ಮಾಲೆ,–ದಂಡೆ; ವಂದನಮಾಲೆ: "ದ್ವಾರದ ಮುಂದೆ ಸಂಧಿಸಿರೆ ಕಟ್ಟಿದ ವಂದನಮಾಲೆ ತೋರಣಂ" (ವಸ್ತುಕೋ. ೪೪-೧೬) ; "ವಂದನಮಾಲಾ, ತೋರಣಂ– ಈ ೨ ತೋರಣಂ" (ಹಲಾಯು. ೫೦-೧೪೬) ; ಪೊಟಲೊಳಗೊಪ್ಪೆ ಕನ್ನಡಿಯ ಕಂಚಿನ ತೋರಣದೋಳಿಗಳ್ (ಪಂಪಭಾ. ೩-೭೪) ; ಊರುಯುಗಸ್ತಂಭೋದ್ಗತ ತೋರಣಮೆಂಬಂತೆ ಮಿಸುಗುವುಡಿ ನೂಲ್ (ಕಾದಂಪೂ. ೩೩೪) ; ಪೊನ್ನ ತೋರಣದಿಂ ದುಕೂಲದ ಸೂಸಕಂ ಗಳಿನೊಪ್ಪುವೆತ್ತುನ್ನತಧ್ವಜದೋಳಿಯಿಂ . . . ಪಿರಿದುನ್ನತಿಕ್ಕೆಯಿನಿರ್ದುದೀ ಜಿನಮಂದಿರಂ (ಧರ್ಮಾಮೃ. ೬-೪೮) ; ಹಬ್ಬಕ್ಕೆ ತಂದ ಹರಕೆಯ ಕುಱ ತೋರಣಕ್ಕೆ ತಂದ ತಳಿರ ಮೇಯಿತ್ತು (ಬಸವ. ೧೨೫); ಕಾರಿರುಳ ಪಟ್ಟಣಕೆ ಚಂದ್ರನ ತೋರಣವ ಬಿಗಿದಂತೆ (ಕುವ್ಯಾಉ. ೧೧-೨೮) ; ಬೆಂದ ಮನೆ ಬಾಗಲಿಗೆ ಮುಂದೆ ತೋರಣವೇಕೆ (ಸರ್ವಜ್ಞ. ೯೧೯). [ ಸಂ. ]

**ತೋರಣಂಗಟ್ಟಿಸು, ತೋರಣಗಟ್ಟಿಸಂ** (ಕ್ರಿ). (ಚೆಗುರು ಮುಂತಾದುವು ಗಳ) ಮಾಲೆಯನ್ನು ಬಿಗಿಸಂ : ಮಣಿಭದ್ರಮುಪ್ಪ ಹೇಮ ಮುಕ್ತಾಹಾರಂಗಳಿಂ ತೋರಣಂಗಟ್ಟಿಸಿಯುರಸರ ಬರವಂ ಪಾರುತ್ತಿರೆ (ವಡ್ಡಾರಾ. ೨೬-೩) ; ಇನಿಯನನೀ ಪಾಸೊಳ್ ತಂದೆಳದಳಿರಿಂದೆ ತೋರಣಂ ಗಟ್ಟಿಸುವೆಂ (ಚಂದ್ರಪು. ೮-೯೦). **ತೋರಣಗಟ್ಟಿಸು :** ನೀರಜಭವನ ಮಾನಸಪುತ್ರ ನೀನಲ್ಲದಾರಾದೊಡೀ ಮಾತುಗಳ ಭಾರಾಂಕನಾಗಿಯೆನ್ನೊ

ಡನೆ ಪೇಳ್ದೊಡೆ ಸೀಳಿ ತೋರಣಗಟ್ಟುವೆನೆಂದ (ವೋಹತ. ೧೨-೩೦).
[ ತೋರಣಂಗಟ್ಟು + – ಇಸು₃ ]

**ತೋರಣಂಗಟ್ಟು**, ತೋರಣಗಟ್ಟು (ಕ್ರಿ). (ಚಿಗುರಂ ಮುಂತಾದುವು ಗಳ) ಮಾಲೆಯನ್ನು ಕಟ್ಟು,–ಬಿಗಿ: ಆಗಳಾ ಬಸಂತರಾಜನ . . . ಬರವಿಂಗೆ ತೋರಣಂಗಟ್ಟಿದಂತೆ ಬಂದ ಮಾಮರಂಗಳನಡರ್ದ . . . ಮಾಧವೀಲತೆಗಳುಂ (ಪಂಪಭಾ. ೨-೧೨ ವ); ಪುರವ್ವಾರವಮನವನಡಗಿಂ ಬುತ್ತಿಯಿಟ್ಟು . . . ಕರುಳಿನಿಂ ತೋರಣಂಗಟ್ಟಿ ಕೋಲಾಹಲನಾದಂ ಪೆರ್ಚಿ ಪೊಕ್ಕಂ ದನುಜನ ಪೊಟಲಂ ಸಾಗ್ರಜನ್ಮಂ ಮುಕುಂದಂ (ಜಗವಿ. ೬-೧೦). **ತೋರಣಗಟ್ಟು** : ರಾವುತ ತಲೆಯಂ ಸಂ × × × ತೋರಣಗಟ್ಟುತ್ತಂ ಚೆಲ್ವಿಂ ಸುರಲೋಕಮೆಯ್ದಿದಂ (ಸೌಇಇ. XX, ೦೬೯—೧೦ ; 1183).
[ ತೋರಣ + ಕಟ್ಟು₁ ]

**ತೋರಣಗಂಬ** 'ತೋರಣಗಂಭ' ನೋ.

**ತೋರಣಗಂಭ**, ತೋರಣಗಂಬ (ನಾ). (ತಳಿರಂ ಮುಂತಾದವುಗಳ) ಮಾಲೆಯನ್ನು ಕಟ್ಟುವ ಕಂಭ ; ತೋರಣವನ್ನು ಕಟ್ಟುವ ಕಂಭ : ತೋರಣಗಂಭದಲ್ಲಿ ಒಬ್ಬ ಭೈರವ ಜೋಗಿ ಶೂಲದಲ್ಲಿರುವನು (ಬತ್ತೀಸ್ಪು. ೧೨೩). **ತೋರಣಗಂಬ** : ಸೊಬಗಿಂಗೆತ್ತಿದ ತೋರಣಗಂಬಂಬೊಲಿರ್ದು ವಾಕೆಯ ತೊಡೆಗಳ್ (ಕಬ್ಬಿಗಕಾ. ೭೫). [ ತೋರಣ + ಕಂಭ ]

**ತೋರಣಗಟ್ಟಿಸು** 'ತೋರಣಂಗಟ್ಟಿಸಂ' ನೋ.

**ತೋರಣಗಟ್ಟು** 'ತೋರಣಂಗಟ್ಟು' ನೋ.

**ತೋರಣಗಲ್ಲು** (ನಾ). ತೋರಣವನ್ನು ಕಟ್ಟುವ ಕಲ್ಲಿನ ಕಂಬ : ಬಸ್ತಿಂದ ಪಡುವಲು ಪೂರ್ವದಲು ನಡವ ಉಭಯಮಾರ್ಗದ ಹಾದಿಗೆ ಯಿಕ್ಕಿದ ತೋರಣಗಲ್ಲಿನೊಳಗಣ ಪ್ರಮಾಣಿನಲಿ . . . ಮೂಡಕಡೆಯಲು ಮೂಡಣ ತೋರಣಗಲ್ಲಿಂ ಪಡುವಲು (ಸೌಇಇ. IX-ii, ೪೫೭-೫೬ ; 1455).
[ ತೋರಣ + ಕಲ್ಲು (<ಕಲ್₃) ]

**ತೋರಣಗ್ರಥನ** (ನಾ). ತೋರಣವನ್ನು ಕಟ್ಟುವುದು ; ತೋರಣದ ರಚನೆ, ಬಂಧ : ತೋರಣಗ್ರಥನ ಮುಕ್ತಾಮಾಳಿಕಾಳಂಬನವ್ಯಸನ ವ್ಯಗ್ರಕರಂ ಕರಂ ಸೊಗಯಿಸಿತ್ತಂತಲ್ಲಿ ಕಾಂತಾಜನಂ (ಚಂದ್ರಪ್ರ. ೬-೫೫).
[ ತೋರಣ + ಗ್ರಥನ ]

**ತೋರಣದರ್ಪಣ** (ನಾ). ತೋರಣದಲ್ಲಿರುವ ಕನ್ನಡಿ : ತೋರಣ ದರ್ಪಣದೊಳ್ ಚಮರೀರುಹಮಂ ನೃಪತಿಗಿಕ್ಕುಮಬಲೆಯರ ನೆಟಿಲ್ ರಾ ರಾ ಜಿ ಸಿ ದು ವು ರಿಪುರಾಜೀರಾಜ್ಯಶ್ರೀಸಮೂಹಮಿದಿರ್ವಂದಿರವಂ (ಚಂದ್ರಪ್ರ. ೧೦-೧೬). [ ತೋರಣ + ದರ್ಪಣ ]

**ತೋರಣದ್ವಾರ** (ನಾ). ಹೆಬ್ಬಾಗಿಲು ; ಮಹಾದ್ವಾರ : ಅಂತು ಸೊಗಯಿಸುವ ವನವೇದಿಕೆಯ ನಾನಾಮಣಿಮಯೂಖಮಾಲಾ ವಿರಾಜಿ ತೋತ್ತುಂಗ ತೋರಣದ್ವಾರದಿಂದಂ ನುಗುಳ್ದು ವನವೀಥಿವಿಡಿದು ಬಂದು (ಆದಿಪು. ೧೩-೧೧ ವ). [ ತೋರಣ + ದ್ವಾರ ]

**ತೋರಣವಿಡು** (ಕ್ರಿ). = ತೋರಣಂಗಟ್ಟು : ಆ ಸದ್ದಿಲ್ಲದ ಕತ್ತಲೆಯ ಮುಸುಕಿನಲ್ಲಿ, ಕಣ್ಣೀರ ಹಾರ ಕೋದು ತೋರಣವಿಟ್ಟ ಒಂದು ಗುಪ್ತ ಶೋಕಮಂದಿರವನ್ನು ನಿರ್ಮಿಸಿ ನಿಲ್ಲಿಸಿಕೊಂಡಳು (ಇಪ್ಪತ್ತ. ೨೮೪).
[ ತೋರಣ + ಇಡು₁ ]

**ತೋರತಕ್ಕು** (ನಾ). ಹೆಚ್ಚಿನ ಯೋಗ್ಯತೆ ; ಹಿರಿಯ ಯೋಗ್ಯತೆ : ಇಕ್ಕಿದ ಸೀಸಕಂ ಪಱಿದು . . . ಬೆನ್ನೊಳಮಾರ್ಚಿದ ಪೊನ್ನ ಪಲ್ಲಣಂ ಪಕ್ಕರೆ ತೇಜಿವಾರು ಕಟಾರಿರ್ದಡಿಯಾದುವು ಬಾಳ ಬಾಯೊಳಿಂತಕ್ಕುಮೆ ತೋರ ತಕ್ಕಿದೆನೆ ಗೋಟಯಿಲರ್ ಕೆಲರಲ್ಲಿ ಕಾದಿದರ್ (ಕಬ್ಬಿಗಕಾ. ೨೮೦).
[ ತೋರ + ತಕ್ಕು₂ ]

**ತೋರತೋಟಿ** 'ತೋರದೋಟಿ' ನೋ.

**ತೋರತ್ತಿ**, ತೊರತಿ, ತೊರತ್ತಿ (ನಾ). ದೊಡ್ಡ ಜಾತಿಯ ಉದುಂಬರ ; ದೊಡ್ಡ ಅತ್ತಿಯ ಮರ : ತೋರತ್ತಿ (ಕಾಸ್ಸೆಲ). ಸುಂದರವಾದ ಉನ್ನತವೃಕ್ಷ. ಕಟ್ಟಿಗೆ ಇಮಾರತಿಗೆ ಬರುತ್ತದೆ. ಬೀಜದಿಂದ ದೀಪದ ಯೆಣ್ಣೆ ಹೊರಡುತ್ತದೆ (ಕಥಾಗೆ. ೪೧). **ತೊರತಿ** : ಸಣ್ಣ ಸೊಳ್ಳಿ, ತೊರತಿ, ಮರ ತುತ್ತಿ (ವ್ಯಜಿಗಿ. ೪೫-೮೪೦). **ತೊರತ್ತಿ** : ತೊರತ್ತಿ, ಸುರಟೆ . . . ಎಣ್ಣೆ ಮರ, ಹಾಲವೆ (ವ್ಯಜಿಗಿ. ೪೫-೮೮೩). [ ತೋರ + ಅತ್ತಿ₁ ]

**ತೋರದಿಟ್ಟಿ** (ನಾ). ದೊಡ್ಡ ಕಣ್ಣು ; ಅಗಲವಾದ ಕಣ್ಣು ; ಬೊಗಸೆ ಗಣ್ಣು : ತೋರದಿಟ್ಟಿಯ ತುದಿಯೊಳು ತೊರೆದುದಕವ ಕೊರುಗುರಿಂ ಮಿಡಿಮಿಡಿದು ಪಾರಿಜಮುಖಿ ನುಡಿಯಲು (ಶ್ರೀಪಾಲ. ೨-೩೮).
[ ತೋರ + ದಿಟ್ಟಿ ]

**ತೋರದುಟಿ** (ನಾ). ದಪ್ಪವಾದ ತುಟಿ : ತೋರಕುಚದ ತೋರದುಟಿ ತೋರದುಱುಬಿನ ತೋರಿದ ಮೆಲ್ಲುವಿರುಗಳ ಮಾರಕೇಳಿಗೆ ಮನದಣಿಯದ ಚಿತ್ರಿನಿನಾರಿಯುರೆಸೆದರರ್ತಿಯುಲಿ (ಕಂಸವಿ. ೨೦-೮೧).
[ ತೋರ + ತುಟಿ₂ ]

**ತೋರದುತ್ತು** (ನಾ). ದೊಡ್ಡ ತಂತ್ತು : ಸಿತರಾಜಾನ್ನ ಸದ್ವೃತ ತೊವ್ವೆ ಗೂಡಿ ನಿರ್ಮಿತವಾದ ತೋರದುತ್ತುಗಳ ಜತನದಪ್ಪದೆ ಕೈಕೊಂಡರು (ವೋಹತ. ೬-೫೫). [ ತೋರ + ತುತ್ತು₂ ]

**ತೋರದುರುಬು** 'ತೋರದಂಱುಂಬು' ನೋ.

**ತೋರದುಱುಂಬು**, ತೋರದುರಂಬು, ತೋರದಂಱುಬು (ನಾ). ದೊಡ್ಡದಾದ ಕಬರಿ ; ದೊಡ್ಡ ತುರುಬು : ತೋರದುಱುಬಿನೊಳ್ ತೆಱಂಬೊಳೆವಲಗ್ರೊಂಚಲೊಪ್ಪೆ (ಲೀಲಾವ. ೮-೨೫). **ತೋರದುರುಬು** : ಇಟ್ಟ ಕಸ್ತುರಿಬಟ್ಟು . . . ತೋರದುರುಬನು ಉಟ್ಟ ದೇವಾಂಗದ ನಿರಿಯ ಮೇಗಳವಟ್ಟ ಹೊನ್ನುಡಿದಾರದಿಂದ (ಸೌಂದಕಾ. ೩-೮೩). **ತೋರದುಱುಬು**: ಕಾರಗತ್ತಲೆಯೊಳು ಥಳಥಳಿಸುತಲಿಹ ತಾರಗೆಗಳೊಯೆಂಬಂತೆ ತೋರ ದುಱುಬಿನೊಳು ಕವ್ಮಲರ್ಗಳ ತಂದಾ ರಮಣಿಗೆ ಮುಡಿಸಿದರು (ಜೀವಂಸಾಂ. ೧೦-೯). ತೋರದುಱುಬು ದುಂಬಿಗುರುಳರನೇಱಿಲ ದೋಲೆವಣ್ದುಟಿ ವೆಱಿನೊಸಲ . . . ವಾರಾಂಗನೆಯರೊಪ್ಪಿದರು (ಶ್ರೀಪಾಲ. ೯-೧೦);
[ ತೋರ + ತುಱುಂಬು₂ ]

**ತೋರದುಱುಬು** 'ತೋರದುಱುಂಬು' ನೋ.

**ತೋರದೆರೆ** (ನಾ). ದೊಡ್ಡ ಅಲೆ,–ತರಂಗ : ಹಂಸತಳ್ಪತಳದೊಳ್ ಪಾಲ್ಗಡಲ ತೋರದೆರೆಯ ಮೇಲೆ ಲೀಲೆಯಿನವತರಿಸುವ ಸಿರಿಯನನುಕರಿಸಿರ್ದು ನಿಜಮನೋವಲ್ಲಭನೊಡನೆ ಸುಖಸುಪ್ತಿಯಂ ತಳೆದು (ನೇಮಿಪು. ೬-೬೫ ವ); ತೋರದೆರೆ ಮುಱಿಯೆ ಮೂಡುವ ವಾರಣಮಂ ಪೋಲ್ದುದು (ಅರ್ಧನೇ. ೫-೧೧೩). [ ತೋರ + ತೆರೆ₄ ]

**ತೋರದೊಡೆ** (ನಾ). ದಪ್ಪವಾದ ತೊಡೆ : ಆತನಯೆ ತೋರದೊಡೆಗಳವಾತನ ನಿಡುದೋಳೆ ನಡೆಯುಮಾತನ ನಡೆ (ಕಾವ್ಯಾವ. ೪೩) ; ನಿಜಸತಿಯ ತೋರದೊಡೆಗಳ ಮೇಲೆ ಲಲಿತಮಣಿಮಕುಟಮಂಡಿತಮಸ್ತಕವನಿಳುಹಿ ಮುಗ್ಗಲಿಕ್ಕಿದನಾಗಳು (ಹಜಕಾ. ೬-೩೦) ; ಕೆಂಡಗಣ್ಣ ಹೆಮ್ಮಾರಿಮೊಗಗಳ ಬಿಗಿದ ಹುಬ್ಬುಗಳ ಬಲ್ಗೋರೆದಾಡೆಗಳ ಸಲೆ ಕೊಬ್ಬಿದ ತೋರದೊಡೆಗಳ . . . ದಡಿಗರಕ್ಕಸರ್ ಕೋಟಾನುಕೋಟಿಗಳದೇನೆಂಬೆನು (ಜಬುಪು. ೪೭-೦೪). [ ತೋರ + ತೊಡೆ₂ ]

**ತೋರದೊಣ್ಣೆ** (ನಾ). ದೊಡ್ಡ ಗುದಿಗೆ,–ದೊಣ್ಣೆ : ಕೂರಲಗುವಿಡಿದವನ ಕೂಡತಿವೀರರಾಗಿದ್ದವರು ಕಾದಲು ತೋರದೊಣ್ಣೆಯ ಹೊಯಿಲನಂ ಗೈಸುವರದಾರುಂಟು (ಕಾಶಿರಾ. ೨೦-೩೩). [ ತೋರ + ದೊಣ್ಣೆ₁ ]

**ತೋರದೋಟಿ**, ತೋರತೋಟಿ (ನಾ). ಭಾರಿಯಾದ ಕಾಳಗ ; ರಭಸದ ಯುದ್ಧ. 'ತೋರದೋಟಿಗ' ಪರಾ. **ತೋರತೋಟಿ** :

ಘೂಡುವವು ತಲೆ ಹಱಿದ ಗಱಿ ಹೊಱಬೀಡ ಬಿಡುವವು ಸುಭಟರಿಬ್ಬರ ರ್ಘೂಡಣೆಯ ಖಂಡೆಯದ ತುಂಡದ ತೋರತೋಟಿಯಲಿ [ಪಾಠಾಂ. ತಾಣಕೋಟಿಗಳ] (ತೊರರಾ. ೩-೧೧-೨೦).

[ ತೋರ + ತೋಟಿ$_1$ ]

**ತೋರದೋಟಿಗ** (ನಾ.) ಭಾರಿಯಾದ ಕಾಳಗ ಮಾಡುವವನು; ಮಹಾವೀರ : ಕಡು ಸಡಗರದ ಬಡಿವಾರದ ತೋರದೋಟಿಗ (ರಾಮಾಶ್ವ. ೧೪೪-೨೦). [ ತೋರದೋಟಿ + -ಗ$_2$ ]

**ತೋರಪಿಲ್ಲಿ** (ನಾ). ದೊಡ್ಡ ಪಿಲ್ಲಿ : ವೀರಮುದ್ರಿಕೆ ಕಾಲುಂಗುರ ಮೆಂಟಿಕೆ ತೋರಪಿಲ್ಲಿ ಕಿಱುಪಿಲ್ಲಿ ಭೂರಿರುಚಿಗಳಿಂದ ಮೆಱೆದವು (ಅನಂಚ. ೭-೧೦೮).

[ ತೋರ + ಪಿಲ್ಲಿ$_1$ ]

**ತೋರಬಾಷ್ಪ** (ನಾ). ಅತಿಶಯವಾದ ಕಣ್ಣೀರು ; ಅಧಿಕವಾದ ಕಣ್ಣೀರು : ಪುದಿದ ಮನೋಗತಾರ್ಥಮನದಂ ನೆಱೆ ಜಿಹ್ವೆಗೆ ತಂದು ಪೇಟಲೀಯದೆ ಮೊಗಕಡ್ಡಮಿರ್ಪ ಕಡುನಾಣ್ಚಿಕೆಯಂ ತೊಳೆವಂತೆ ತೋರಬಾಷ್ಪದ ಪನಿದಂದಲಂ ಸುರಿಯುತುಂ (ಕುಸುಮಾ. ೧೩-೧೪೪).

[ ತೋರ + ಬಾಷ್ಪ ]

**ತೋರಬೆರಳು** 'ತೋರುಬೆರಳು' ನೋ.

**ತೋರಮರ** (ನಾ). ದೊಡ್ಡ ಮರ ; ಹೆಮ್ಮರ: ಒತ್ತಿ ಕಾಲ್ಕಿಡಲೊಡನೆ ಗಿರಿ ತಲೆಗುತ್ತುತಿರ್ದುದು ತೋರಮರಗಳು ಕಿತ್ತು ಹಾರುತಲಿರ್ದವಂಬರ ಮಣಿಯನಣೆದಣೆದು (ತೊರರಾ. ೪-೧೩-೨೪). [ ತೋರ + ಮರ$_1$ ]

**ತೋರಮಲ್ಲಿ, ತೋರ್ಮಲ್ಲಿ** (ನಾ). ಒಂದು ಬಗೆಯ ಹರಳು,-ರತ್ನ ; ಗಂಧರ್ವಮಣಿ : "ಪ್ರಶಸ್ತಶಿಲೆಯಾಗಿ ಉಪಯೋಗಿಸುವ, ಬಲವಾದ ವಿದ್ಯುದ್ಗುಣಗಳನ್ನುಳ್ಳ, ಬೇರೆ ಬೇರೆ ಬಣ್ಣಗಳ ಖನಿಜ ವಸ್ತು : ತೋರಮಲ್ಲಿ" (Tourmalin (e). ಇಂಕನಿ). **ತೋರ್ಮಲ್ಲಿ** : ತೋರ್ಮಲ್ಲಿಗಳು ಒಳಗಡೆಯಲ್ಲಿ ಯುರೋಪದಿಂದ ಮುಂಬಯಿಗೆ ಮಾರಾಟಕ್ಕೆ ಬರುತ್ತವೆ. ಈ ಹರಳುಗಳು ಕಡಿಮೇ ಜಾತಿಯ ರತ್ನಗಳೆಂದು ಎಣಿಸಲ್ಪಡುತ್ತವೆ (ಮುಂಬಯಿ. ೭-೪೭).

[ ದೇ.॥ ತಮಿ. ತೋರಮಲ್ಲಿ, ತೋರಾಮಲ್ಲಿ ; ತೆಲು. ತೋರಮಲ್ಲಿ, ತೋರಮಲ್ಲೆ./ಮರಾ. ತೋರಮಲೀ, ತೋರಮಲ್ಲೀ./ಇಂ. Tourmaline. ಸಿಂಹಳೀ. ತೋರಮೊಲ್ಲಿ]

**ತೋರಮಲ್ಲಿಗೆ** (ನಾ). ದೊಡ್ಡ ಮಲ್ಲಿಗೆ : ಬಿಳಿಯ ತಾವರೆಯೆಳಗಾವಿನಸಿಯ ನೂಲೊಳ್ ಕೋದ ತೋರಮಲ್ಲಿಗೆಯ ಬಿರಿಮುಗುಳ ಸರಿಗೆಯುಮಂ (ಪಂಪಭಾ. ೩-೭ ವ); ಒದವಿದ ತೋರಮಲ್ಲಿಗೆಯ ಹಾರದ ಸೂಸಕದಿಂದೆ ಸಿಂಧುವಾರದ ಚಮರೀಜದಿಂದೆ ... ಚೆಲ್ವುವೆತ್ತುದು ಕದಳೀದ್ರುಮಗ್ರಥಿತ ಸುಂದರ ವಂದನಮಾಲಿಕಾವೃತಂ (ಕಾದಂಬ. ೨೦೩) ; ಕೊಸಗಿನೆಸಟ ಕೇಸರಮುಂ ತೊಡರ್ಚಿದ ತೋರಮಲ್ಲಿಗೆಯ ಮುಗುಳ್ಗಳಾರಂಗಳುಮಂ (ಜಗವಿ. ೬-೧೭ ವ). 'ತೋರಮೊಲ್ಲೆ' ಪಠಾ [ ತೋರ + ಮಲ್ಲಿಗೆ ]

**ತೋರಮಾಣಿಕ** (ನಾ). ದೊಡ್ಡ ಮಾಣಿಕ್ಯ,-ರತ್ನ: ತೋರಮಾಣಿಕವೆಂದು ಪಿಡಿದರೆ ಭೂರಿಕೆಂಡವಿದಾಯ್ತು.(ನಳಚ. ೬-೧೫). [ ತೋರ + ಮಾಣಿಕ ]

**ತೋರಮುಡಿ** (ನಾ). = ತೋರದುಱುಂಬು : ತೋರಮುಡಿವಿಡಿದು ಕುಡಿಯುಂ ನಾರಂ ಸದೆವಂತೆ ತದೆದು (ಯಶೋಚ. ೨-೫೦) ; ತೋರಮುಡಿ ಬಿಟ್ಟಿಪ್ಪುದಾರುಣಿಯೊಳಗ್ರ ಕಚಂ (ಸೂಕ್ತಿಸು. ೧೩-೯) ; ತೋರಮುಡಿಯ ಕೆಂಜೆಡೆಯ ರತ್ನದ ಕರ್ಣಪೂರದ ಫಣಿಕುಂಡಲಗಳ ಚಾರುಕುಂಕುಮಗಂಧ ಭಸಿತಲೇಪನದರ್ಧನಾರೀಶ ಜಯ (ತ್ರಿಭುತಿ. ೨೩-೧) ; ಕಡುತೋರಮುಡಿ ಮುಗಿಲನಧರಮತಿಸಂಚಯಂ [ಪಾಠಾಂ. ಮಧುವೃಷ್ಟಿಯಂ] ತನುಮಧ್ಯ ಮದು ಪುಸಿಯನು ಬಿಡದೆ ಮಿಕ್ಕಂ ಮಹಾಚಂಚಲಮೆ ರೂಪಾದ ಮಡದಿಯರ . . . ನಂಬುವಂ ಮೂಢಂ (ಜಿಬಪು. ೧೦-೫೭); ದೇವೇಂದ್ರ ಸಿಂಹಾಸನದಿಂದೆದ್ದು ತೋರಮುಡಿಯ ತಿಲೋತ್ತಮೆಯ ಕೈಯನ್ನು ಹಿಡಿದುಕೊಂಡು ಉದ್ಯಾನದಲ್ಲಿದ್ದ ನಮೇರುವೃಕ್ಷದಡಿಯನ್ನು ಸೇರಿದ (ಧೂಮಮ. ೬೦). [ ತೋರ + ಮುಡಿ$_3$ ]

**ತೋರಮುಡುಹು** (ನಾ). ದೊಡ್ಡ ಹೆಗಲು ; ಗಾತ್ರವಾದ ಹೆಗಲುಂ: ಪರಿಮಳದ ಕತ್ತುರಿಯು ತಿಲಕದ ಹೊರೆದ ಗಂಧದ ತೋರಮುಡುಹಿನ ಕರದ ಖಂಡೆಯರದಟರ್ಕೈದಿದರಾನೆ ಕುದುರೆಯಲಿ (ಕುಮ್ವ್ಯಾವಿ. ४-४೫) ; ತೋರಮುಡುಹು ನಿಡುಗಯ್ಯತಿದೀರ್ಘಶರೀರ ಪೇರುರ ಪೆರ್ಚಿ ಬೆಳೆದ ಚಾರುಬಾಹುಯುಗವೆಸೆಯ ಬಾದುರನಂದು ಸಾರಿದನಾ ಶಾರ್ಙ್ಗವನು (ಕುರಾಸಾಂ. ೧೪-೭೭). 'ತೋರಮುಯ್ಯುಂ' ಪಠಾ.

[ ತೋರ + ಮುಡುಹು$_5$ (<ಮುಡುಪ್ಪು$_4$) ]

**ತೋರಮುತ್ತು** (ನಾ). ದಪ್ಪವಾದ ಮುತ್ತು ; ಗಾತ್ರವಾಗಿರುವ ಮೌಕ್ತಿಕ : ತೋರಮುತ್ತಿನ ಹಾರಂಗಳುರಸ್ಥಳಂಗಳೊಳ್ಪೊಳೆದಾಡೆಯುಂ (ಕಾದಂಪೂ. ೭೭) ; ನೊಸಲೆಡೆಯಲ್ಲಿ ನೀಳ್ದ ಕುರುಳೋಳಿಗಳುಯ್ಯಲನಾಡೆ ಡಾಳಮುಂ ಪಸರಿಪ ತೋರಮುತ್ತಿನ ಸರಂ ಮೊಲೆಯೊಳ್ ತಲೆಯೊತ್ತೆ . . . ಪೊಸರನ್ನದಾರತಿಯನೆತ್ತಿದರಗ್ಗದ ಗಾಡಿಕಾರ್ತಿಯರ್ (ಕಬ್ಬಿಕಾ. ३४३) ; ಕೊರಳೊಳಿಕ್ಕಿರ್ದಾ ತೋರಮುತ್ತುಗಳೆಲ್ಲ ತಿಳಿಗೊಳದೊಳು ತೋರ್ಪ ತಾರಾಳಿಯಂತೆ ತೋಱಿದುವು (ಭರತ. ೧-४३) ; ಈಕೆಯ ಕೊರಳಿನ ಕಾಂತಿಯ ಹೊಳೆಯೊಳು ಮುಳುಗಿವೆ ತೋರಮುತ್ತುಗಳು (ಇಂಚಾಪ. ೮೫-೧೩). [ ತೋರ + ಮುತ್ತು$_5$ ]

**ತೋರಮುಯ್ಯು** (ನಾ). = ತೋರಮುಡುಹುಂ : ತೋರಮುಯ್ಯುಗಳೊಳೆಸೆವ ಕುಂಕುಮಂಗಳ ಬಂಬಲ ಸೋಂಕಿನೊಳ್ ರಜಂ ನೆಗೆದು ದೆಸೆಗಳ್ಪೊಂಬಣ್ಣಮಾಗೆಸೆಯೆಯುಂ (ಕಾದಂಪೂ. ೭೭).

[ ತೋರ + ಮುಯ್ಯು$_1$ ]

**ತೋರಮೂಗುತಿ** (ನಾ). ದೊಡ್ಡಗಾತ್ರದ ಮೂಗಂತಿ; ದೊಡ್ಡ ಮೂಗು ಬೊಟ್ಟು : ತೋರಮೂಗುತಿ[ಪಾಠಾಂ. ಮುತ್ತಿನ]ಬೊಟ್ಟು ತುಱುಬಿನ ಬಲವಣಿ ಸೇರಿ ಕಣ್ಗೆಸೆದುವವರಿಗೆ (ಕುರಾಸಾಂ. ३೭-೧೫೭).

[ ತೋರ + ಮೂಗುತಿ ]

**ತೋರಮೊಗ** (ನಾ). ಅಗಲವಾದ ಮುಖ ; ವಿಸ್ತಾರವಾದ ಮುಖ : ತೋರಮೊಗಂ ಸಮುನ್ನತಗಳಂ ಸಮಗೆಂಪಡರ್ದಕ್ಷಿ . . . ಕರ್ಕಶದೇಹ ಮತೀವಭೀಷಣಾಕಾರಮನಪ್ಪುಕ್ಕೆಯ (ದಕಳು. ९-೧೫).

[ ತೋರ + ಮೊಗ ]

**ತೋರಮೊಲೆ** (ನಾ). = ತೋರಕುಚ : ತೋರಮೊಲೆಗಳ ಮೊಗಂಗಳ್ ರಾರಾಜಿಸಿ ಕರ್ಪುವೆತ್ತು ಮೋಹನಧೂಮೋದ್ಗಾರಿಗಳಂ ಕಾಂಚನಭೃಂಗಾರಿಗಳಂ ಪೋಲ್ತುವು (ಪಂರಾಮಾ. ३-९೫); ಮೊರೆಯದ ತುಂಬಿಯುಂ ಕುರುಳ ಸಂದಣಿ ಸೋಲಿಸೆ ಜಕ್ಕವಕ್ಕಿಯಂ ಪರಿವಡೆದಿರ್ದ ತೋರಮೊಲೆ ಬಗ್ಗಿಸೆ (ಕಬ್ಬಿಕಾ. ೧೧३); ಮುಡಿ ತೋರಮೊಲೆಯ ಭಾರಗಳಿಂದಲುಂಗುರವಿಡಿನಡು ಬಳುಕುವಂತಿಹರು (ಮೋಹತ. ३-४३) ; ನೀರೆಱೆವಬಲಾಜನದಾ ತೋರಮೊಲೆಗಳಿಗೆಱಗಿದ ಪಾಂಥರ ದಿಟ್ಟಿ ತೋಱಿದುವನಿಮಿಷತೆಯನು (ಕಂಸವಿ. ३-೫४). [ ತೋರ + ಮೊಲೆ$_1$ ]

**ತೋರಮೊಲ್ಲೆ** (ನಾ). ದೊಡ್ಡ ಜಾತಿಯ ಮೊಲ್ಲೆ : ಭೃಂಗ ಕೈದುಡುಕದ ಸೌರಭ್ಯವಾಂತ ಪುಷ್ಪಂಗಳ ತೋರಮೊಲ್ಲೆಗಳ . . . ತಂದಿತ್ತು (ಮೋಹತ. ४-೫೦). [ ತೋರ + ಮೊಲ್ಲೆ ]

**ತೋರವಜ್ಜೆ** (ನಾ). ದೊಡ್ಡ ಹೆಜ್ಜೆ ; ಅಗಲವಾದ ಪಾದ: ಮನಮೊಳಸಿ ಮೆಲ್ಲ ಸಲ್ಲಕೀಪಲ್ಲವಂಗಳಲ್ಲಲ್ಲಿಗುಡಿದುಡಿದು ಬೀಟುತ್ತಿರೆ ಪೋದ ಮದ ವಾರಣಂಗಳ ತೋರವಜ್ಜೆಗಳುಮಂ (ಕುಸುಮಾ. ೧४-३९ ವ).

[ ತೋರ + ಪಜ್ಜೆ ]

**ತೋರವಣ್** (ನಾ). ದೊಡ್ಡದಾಗಿರುವ ಹಣ್ಣು : ಆವ್ರುದ ತೋರ ವಣ್ಣೊಳೊಂದಱ ರಸದಂತುಗಾಣದೆ ದಲೊಂದು ಶುಕಂ ಮಧುಸಮ್ಮ ದೋತ್ಸುಕಂ (ಚಂದ್ರಪು. ೭-೪೭) ; ಕಾಯ್ವೋಱಿದ ತೆಂಗು ತೋರಗೊನೆ ವೇಱಿದ ಕಂಚಳವಾೞಿ ತೋರವಣ್ಪೋಱಿದ ಬಕ್ಕೆ (ಅನಂಪು. ೧-೭೮).

[ ತೋರ + ಪಣ್$_3$ ]

**ತೋರವಣ್ಗೊನೆ** (ನಾ). ದೊಡ್ಡ ಹಣ್ಣುಳ್ಳ ಕೊಂಬೆ : ಎಳವಲಸು ನಿಜಸ್ಕಂಧಾವಳಂಬಿಯೆನಿಸಿರ್ದ ತೋರವಣ್ಗೊನೆಯಿಂ ಕಣ್ಗೊಳಿಸಿತ್ತು (ಚಂದ್ರಪು. ೭-೮೫). [ ತೋರವಣ್ + ಗೊನೆ$_2$ (<ಕೊನೆ$_2$) ]

**ತೋರವನಿ,** ತೋರಹನಿ (ನಾ). ದಪ್ಪವಾಗಿರುವ ಹನಿ,-ಬಿಂದು : ಸುರಿದಪುದು ಮುಗಿಲ ಮುತ್ತಿನ ಸರಿ ಗಗನದಿನೆನಿಸಿ ಪೊಳೆವುವೆಳವಿಸಿಲೊಳ್ ಬೆಳ್ಸರಿ ತೋರವನಿಯ ಪುದುವಿನೊಳರಲ್ದ ಕಿಳಿಗೊಳನೆ ನಭದೊಳೞಿ ದಂತಿರ್ದುಂ (ಆದಿಪು. ೧೧-೮); ಅಲ್ಲಲ್ಲಿಗೆ ಮುತ್ತಿನ ಪುಡಿಯ ನುಣ್ಮಳಲ್ಗಳಾಲ ವಾಲಂಗಳಿಂ ಕೂಡಿರ್ದಡೆವಿಡದೆ ಸುರಿವ ತೋರವನಿಗಳಿಂ (ಕಾದಂಉ. ೨೧೬); ಕಾರ ತೋರವನಿ ಚಾದಗೆಗೆ ಭಾರಮೆ ಶಿವನ ಕರುಣಮೆನಗಿದಿರ್ವರೆ ವಿಚಾರಮೆ (ಗಿರಿಕ. ೧೦-೩೬ ವ). **ತೋರಹನಿ:** ಕಣ್ಣೀರ ಕೋಡಿ ಹರಿಯಿತು. ತಟ್ಟೆಯಲ್ಲಿ ಅನ್ನದಲ್ಲಿ ಬಿದ್ದವು ಆ ಕಣ್ಣೀರ ತೋರಹನಿಗಳು (ಸುವಸಂ. ೧೯).

[ ತೋರ + ಪನಿ$_2$ ]

**ತೋರವೆಟ್ಟು** (ನಾ). = ತೋರಗಿರಿ : ಎಸೆವಲರ್ಗೊಂಚಲಂ ತಳೆದ ಪುಲ್ಲಿಗೆ ಪೂವಿನ ಸಂತೆ ಕೊಂಬಿನಿಂ ಮಿಸುಗುವ ಮಾಮರಂ ಪೆಸರ ಮಾಳಿಗೆ ಮಾಡಿದ ತೋರವೆಟ್ಟುಗಳ್ (ಕಬ್ಬಿಕಾ. ೦೦೧). [ ತೋರ + ಬೆಟ್ಟು$_2$ ]

**ತೋರವೆಣ** (ನಾ). ದೊಡ್ಡ ಹೆಣ; ಗಾತ್ರವಾದ ಶವ: ತೋರವೆಣಂಗಳಂ ತಳೆದು ಭೂತಗಣಂ ಕುಣಿದಾಡುವಂತಿರಲ್ . . . ಸುತ್ತಲುಂ ವಾರಿಧಿ ಪೋರೆದಪ್ಪಿ ಕವಿವಂತು ಬಿಗುರ್ವಿಸಿದಂ ದಶಾನನಂ (ಪಂರಾಮಾ. ೯-೧೮೯).

[ ತೋರ + ಪೆಣ ]

**ತೋರಶಿಖೆ** (ನಾ). ದಪ್ಪಗಾತ್ರದ ಜುಟ್ಟು (?): ದುಗುಲದಿಂದ ಬೀಗಿ ತೋರಶಿಖೆಯನು ಧರಿಸಿ (ಚಿಕಸ. ೧೭). [ ತೋರ + ಶಿಖೆ ]

**ತೋರಹತ್ತ** (ನಾ). ೧. ದೊಡ್ಡ ಸೊಂಡಿಲು: ಆ ವಾರಣದ ತೋರಹತ್ತ ಮಾನುಪೂರ್ವಿ ಸ್ಥೂಳಮುಮಾಭೀಳಮುಮತಿಪ್ರಲಂಬಮುಮಾಗೆ (ಅನಂಪು. ೧೩-೩೦ ವ); ಸೆಲ್ಲಿಯ ಕಾಯ್ಗಳಂ ಬಡಿಗೆ ಕೊಂಡವೊಲೆತ್ತಿದ ತೋರಹತ್ತದಿಂ ಜಲ್ಲನೆ ತುಂಬಿಗಳ್ ಕೆದಱೆ ಬಂದುವು ಬಿಂಕದಿನಂಕದಾನೆಗಳ್ (ಕಬ್ಬಿಕಾ. ೨೦೩) ; ಹೇಱಿದ ಹೇರಂಬುಗಳನಿಕ್ಕಡಿ ಮಾಡಿ ತೋಱದ ತೋರಹತ್ತದಲಿ (ಮೋಹತ. ೩೮-೪೭). ೨. (ಶಕ್ತಿಯುತವಾದ) ಕೈಗಳುಳ್ಳವನು ; ಶೂರ : "ತೋರಹತ್ತನೆನೆ ತಾಂ ರಣಧೀರಂ" (ಭಾರನಿ. ೩೪) ; ಭುಜಬಳದಳವಿಂ ಭೀಮನಿಂ ತೋರಹತ್ತಂ ಬಳನಿಂದಂ ತೋರಹತ್ತಂ (ಎಕ. V, ಅರಸೀ. ೯-೫ ; 1286) ; ಬೆಳೆದವೊ ಕೈಕಾಲು ನೀಲಾಚಲಕೆ ಹೇಳೆನೆ ಮುಗಿಲ ತುಡುಕುವ ತಲೆಯ ಜೋಕೆಯ ತೋರ ಹತ್ತನ ಕಂಡು ಕುರುಸೇನೆ (ಕುವ್ಯಾದ್ರೋ. ೧೫-೫೧); ಬೈದು ಬೆರಸುವ ತೋರಹತ್ತರ ಕೈದುಗಳ ಹೊಳೆಹೊಳೆವ ಧಾರೆಯ ಮೈದಡಿಗೆ . . . ಪಾರುಶದ ಮುಖ್ಯರು ಸಂದರಿದಿರಾಗಿ (ನಿಭಾಗ. ೮-೧೭-೨೬). ೩. ಶೌರ್ಯ ; ಸಾಹಸ: ನೀರೊಳು ಪೊಕ್ಕ ರಕ್ಕಸನ ಘೋರಾಕೃತಿವೆತ್ತು ಪಿಶಾನಾಗಿ ಮಡುಹಿದ ತೋರಹತ್ತವ ತೋಱಿಸ್ಲೊಡನೆ (ಮೋಹತ. ೪೦-೧೯). ೪. ಮಲ್ಲಯುದ್ಧದಲ್ಲಿ ಒಂದು ವರಸೆ : ಮಿಕ್ಕುದು ವಜ್ರ ಪಾತಮುಮನೆಂಬಿನಮುಬ್ಬಸಮಾದ ತೋರಹತ್ತಕ್ಕೆ ತಗುಳ್ದು ಪತ್ತಿಸುವ ಮಾನಸಗೋಳಮೆಸಿಪ್ಪ ಡೊಕ್ಕರಕ್ಕಿಕ್ಕಿದ ವಜ್ರಲೇಪವೆನೆ ಪತ್ತುವ ಲಗ್ಗೆಗೆ ಮಾರಿಯೊಳ್ ಮೊಗಂಬೊಕ್ಕವೊಲಾಗೆ ಬೆರ್ಚಿದನವಂ (ಚಂದ್ರಪು. ೫-೮೦) ; ಐರಾವತಂ ಮಲ್ಲವೇಷದೊಳಿದಿರಾದೊಡಂ ತೋರಹತ್ತದೊಳಂ ತಿವಿದು ತಿರಿಪುವ . . . ಮಲ್ಲರ ನೆರವಿಗಳೊಳು (ಗಿರಿಕ. ೨-೧೦೫ ವ) ; ಇರ್ವರ ಚಮತ್ಕಾರಕಿರ್ವರೇ ಸಾಟಿಯೆನಲು ವರಶಿರೋವಲಯದಿಂ ಸಿಲ್ಕಿಪರ್ ತೋರಹತ್ತದೆ ತವಕದಿಂ ಪಿಡಿವರು (ಚಬಪು. ೨೫-೩೪) ; ತಳಹತ್ತಂ ದಣುವಟ್ಟ ಖೊಪ್ಪರಮುರೋಬಂಧಂ ... ಭುಜಗಬಂಧಂ ತೋರಹತ್ತಂ ಶಿರೋವಳಯಂ ಬಾಹುತಳಂ ಚಮತ್ಕರಿಸೆ ನಾನಾ ಕೌಶಲಂದೋಱಿದರ್ (ಶಬಶಂ. ೪-೭೫). 'ತಳಹತ್ತ' ಪರಾ.

[ ತೋರ + ಹತ್ತ$_2$./ತೆಲು. ತೋರಹತ್ತ ]

**ತೋರಹನಿ** 'ತೋರವನಿ' ನೋ.

**ತೋರಹಾರ** (ನಾ). ದೊಡ್ಡದಾದ ಮಾಲೆ ; ದೊಡ್ಡ ಗಾತ್ರದ ಸರ : ಪಸರಿಸಿದ ತೋರಹಾರದ ಪೊಸವೆಳ್ದಿಂಗಳುಮನವರ್ದ ಪೆರ್ದುಡುಗೆ ಗಳೊಳ್ ಮಿಸುಗುವ ಪೊಸ ಮಾಣಿಕದೆಳವಿಸಿಲುಮನೊಡಗಾಣಲಾದುದಾ ಸ್ಥಾಯಿಕೆಯೊಳ್ (ಆದಿಪು. ೯-೫) ; ಪ್ರಮದದೊಳೆನ್ನ ಕಂಧರದೊಳಂ ದಿರುಳಿಕ್ಕಿದ ತೋರಹಾರಮುಂ ಹಿಮಗೃಹ ಪ್ರವೃತ್ತಕಮಂ . . . ಆ ರಮಣಿಯದೊಂದು ಭಾವಗತಮಂ ನೆಱಿಸೂಚಿಸೆ (ಕಾದಂಉ. ೩೪೭); ಸುತ್ತದೆ ನೆಲೆಗೊಂಡಂ ಪರಿವೃತ್ತೋನ್ನತ ಚಂದ್ರನಗಜೆಯಾಸ್ಯದೊಳೆಂದು ನ್ಮತ್ತತೆಯೊಳ್ ತಾರಗೆಗಳ್ ಸುತ್ತಿದುವೆನೆ ತೋರಹಾರಮಂ ರಂಜಿಸಿದರ್ (ಗಿರಿಕ. ೧೦-೩೭). [ ತೋರ + ಹಾರ$_1$ ]

**ತೋರಱಿಕೆ** (ನಾ). ಹೆಚ್ಚಿನ ಪ್ರಸಿದ್ಧಿ ; ಅತಿಶಯವಾದ ಕೀರ್ತಿ : ಅಗ್ಗದ ಬೀರರ್ ತೆಗೆದೋಡೆ ತೋರಱಿಕೆಯಾಳ್ಗಳ್ ಬಳ್ಕಿ ಬೆಂಬೀೞೆ (ಕಬ್ಬಿಕಾ. ೩೦೪). [ ತೋರ + ಅಱಿಕೆ ]

**ತೋರಾಟೆ** (ನಾ). ಒಂದು ಬಗೆಯ ಮರ : ತೋರಾಟೆ (ಕೌಂಟೆಲ) . . . ಇದರ ಎಣ್ಣೆ ಔಷಧಕ್ಕೂ ದೀಪಕ್ಕೂ ಬರುತ್ತದೆ (ಕಭಾಗ. ೪೧). 'ತೋರತ್ತಿ' ಪರಾ. [ ? ]

**ತೋರಾಯ** (ನಾ). ಬಹಳ ಸಾಮರ್ಥ್ಯ ; ಅತಿ ಪರಾಕ್ರಮ : ನಾರಾಯಣಂ ಮಹಾರೋಷದಿಂದೆಸುತಿರ್ಪ ತೋರಾಯದೆಸುಗೆಯಿಂ ತರಹರಿಸದಾಕ್ಷಣಂ ಪೂರಾಯ ಗಾಯದಿಂ ಬಲಮಳಿಯೆ ಕಂಡು ಸಂಹಾರಾ ವತಾರನಾಗಿ (ಚಬಪು. ೩೨-೮). [ ತೋರ + ಆಯ$_3$ ]

**ತೋರಿ** (ನಾ). (ಕರಾ). ಒಂದು ಬಗೆಯ ವಿಮಾನಂ. [ ? ]

**ತೋರಿಕೆ** 'ತೋಱಿಕೆ' ನೋ.

**ತೋರಿತು,** ತೋರಿತ್ತು, ತೋರಿದಂ (ನಾ). ೧. ದೊಡ್ಡದಾಗಿರುವುದಂ; ತೋರವಾದುದಂ: (+). **ತೋರಿತ್ತು :** ೧. ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ತೋರಿತ್ತು; ನೇರಿತ್ತು . . . ಬಲ್ಲಿತ್ತು ಎಂಬಂತೆ ನೋಡಿಕೊಳ್ವುದು (ಶಮದ. ೭೭ ಪ್ರಯೋ). ೨. ಅಗಲವಾದಂದಂ ; ವಿಶಾಲವಾಗಿರುವುದು : ಪೊಂಗೋಂಟೆಯುಂ ತೋರಿತ್ತಾದಗಳೆಯ್ದೆ ಸುತ್ತಿ ಮೆಱೆಗುಂ (ಬಾಧಪು. ೪-೨೬). **ತೋರಿದು :** ೧.ಪಾದರಿ ಪೂತುವು ತೋರಿದುವಾದುವು ಮಲ್ಲಿಗೆಗಳೆಯ್ದೆ ಪಣ್ತುವು ಮಾವು (ಆದಿಪು. ೧೧-೮೭); ತೋರಿದುವಾದ ಮಲ್ಲಿಗೆಯ ಮೊಗ್ಗೆಗಳೊಳ್ ಮೊಗವೂಱೆ ಬಿರ್ದುರ್ ಭೋಭೋರ್ರೆನೆ ಪಾಯ್ದು ಬಂಡಿನೊಳ್ ಬೆಂಡೊಗೆದು . . . ಕಾಱೆ ಕಡಲಿಟ್ಟುವು ಮತ್ತಮಧುವ್ರತಾಳಿಗಳ್ (ಲೀಲಾವ. ೯-೧೧೬) ; ನಾರಿಯ . . . ತೋರಿದುವಾದ ನಿತಂಬಂ ತೊಡೆಯಡಿಗಳು ಕಡುಸೊಗಸಿದುವು (ಜಯಕಾ. ೨-೭).

**ತೋರಿದಂ** = ತೋರವಾದವನು : ಒಳ್ಳಿದಂ, ತೆಳ್ಳಿದಂ, ಮೆಲ್ಲಿದಂ, ಬೆಟ್ಟಿದಂ, ತೋರಿದಂ (ಶಮದ. ೧೫೩ ಪ್ರಯೋ). [ <ತೋರ ]

**ತೋರಿತ್ತು** 'ತೋರಿತು' ನೋ.

**ತೋರಿದು** 'ತೋರಿತು' ನೋ.

**ತೋರಿಸು** 'ತೋಱಿಸು' ನೋ.

**ತೋರು** 'ತೋಱು' ನೋ.

**ತೋರುಗಣ್ಣು** (ನಾ). ಸನ್ನೆ ಮಾಡುವ ಕಣ್ಣು ; ಸೂಚಿಸುವ ಕಣ್ಣು : ಕುಳಿಂದಕನು ಚಂದ್ರಹಾಸನ ಕಡೆಗೆ ತೋರುಗಣ್ಣಾಗುತ್ತಾನೆ (ಚಂದ್ರಸ. ೬೭).
[ ತೋರು (<ತೋಱು) + ಕಣ್ಣು (<ಕಣ್) ]

**ತೋರುಗದ್ದಿಗೆ** (ನಾ). [ವೀಶೈ] ಶರಣರ ಹೆಸರಿನಲ್ಲಿ ನಿರ್ಮಿಸಿದ ನಾಮಮಾತ್ರ ಗದ್ದುಗೆ ; ತೋರಿಕೆಗಾಗಿ ಕಟ್ಟಿಸಿದ ಗದ್ದುಗೆ : ತೋರು ಗದ್ದಿಗೆ = ಶರಣರ ಹೆಸರಿನಲ್ಲಿ ನಿರ್ಮಿಸಿದ ನಾಮಮಾತ್ರ ಗದ್ದಿಗೆಗಳು (ನಿಜವಾದ ಗದ್ದಿಗೆಗಳಿಗೆ ವಿಭಿನ್ನವಾದುವು) (ವೀಶೈಪಾ. ೨೯೭).
[ ತೋರು (<ತೋಱು) + ಗದ್ದಿಗೆ (<ಗದ್ದುಗೆ$_2$) ]

**ತೋರುಗಪ್ಪುಕ** (ನಾ). (?) : "ತೋರುಗಪ್ಪುಕಮೆನಲ್ ವ್ಯಗಹಿಂಸೆಗೆ" (ಕಶರ. ೧೦). 'ಕಪ್ಪು$_3$' ಪರಾ. [ ? ]

**ತೋರುಗಾಣಿಕೆ** (ನಾ). ತೋರಿಕೆ ; ನಟನೆ : ಎಲ್ಲ ಎಷ್ಟು ಸುಳ್ಳು-ಕೆಲವು ಸಾರಿ ತೋರುಗಾಣಿಕೆ ಬೇರೆ (ಪ್ರಶ್ನೆ. ೫೩).
[ ತೋರು (<ತೋಱು) + ಕಾಣಿಕೆ (<ಕಾಣ್ಕೆ) ]

**ತೋರುಬೆರಳು**, ತೋರಬೆರಳಂ (ನಾ). ಹೆಬ್ಬೆರಳಿನ ಪಕ್ಕದ ಬೆರಳಂ ; ನಿರ್ದೇಶಿಸಲಂ ಬಳಸುವ ಬೆರಳಂ ; ತರ್ಜನಿ : ಎಡಗೈ ತೋರು ಬೆರಳನ್ನು ತುಟಿಯು ಮೇಲಿರಿಸಿ . . . ಬಾಲಿ ಅಣಕವಾಡಿದಳು (ಮಣ್ಣುಹೆ. ೮೯) ; ಆದರೆ ಅದು ನಿಂತಿರುವುದು ಆ ಪರಮಪ್ರಕಾಶದೆಡೆ ತೋರು ಬೆರಳಾಗಿ ಮಾತ್ರ (ಸೌಂದಸ. ೯೪). **ತೋರಬೆರಳು** : ತನ್ನ ಕೊರಳಿಗೆ ಅಡ್ಡವಾಗಿ ತೋರಬೆರಳನ್ನೆಳೆದುಕೊಳ್ಳುತ್ತ (ವೀರಯೋ. ೫೪) ; ರಾಜನ ಬಲಗೈಯಿನ ತೋರಬೆರಳು (ಝೂರಾಣಿ. ೯೪).
[ ತೋರು (<ತೋಱು) + ಬೆರಳು (<ಬೆರಲ್) ]

**ತೋರುಮನೆ** (ನಾ). ಪ್ರದರ್ಶನಾಲಯ : ವಸ್ತುಸಂಗ್ರಹಾಲಯ : ಗೋಡೆ ಗೋಡೆಗಳಲ್ಲಿ ಕಣ್ಣಲೆವ ಕಡೆಗಳಲಿ, ಸುತ್ತಣೆಲ್ಲೆಡೆಗಳಲಿ ಮೆರೆದುವಾ ಕುಂಭಕರ್ಣನ ಬಿನದವೇಂಟೆಯು ಕವರ್ತೆಗಳ್, ತೋರು ಮನೆಯುಲ್ಲಿ ! (ಶ್ರೀರಾಮಾ. ೪೫೫-೨೭೯). [ತೋರು (<ತೋಱು) + ಮನೆ]

**ತೋರುಮರ** (ನಾ). ದಾರಿ ತೋರಿಸುವ ಮರ: ಕೈಮರ: ಒಳದಾರಿಗಳ ಕತ್ತರಿ, ಚೌಕಗಳಲ್ಲಿ ತೋರುಮರಗಳಲ್ಲದಿದ್ದರೆ ಪ್ರಯಾಣ ಕಷ್ಟವಾಗುತ್ತದೆ (ರೂಢಿ) [ ತೋರು (<ತೋಱು) + ಮರ$_1$ ]

**ತೋರುವಳಿ** (ನಾ). ಹೊರಕ್ಕೆ ಕಾಣಿಸುವ ರೀತಿ ; ತೋರಿಕೆ : ತಿಕ್ಕುವುದಕ್ಕೆ ಸುರಿಯಲು, ಚಿಮುಕಿಸಲು, ಚೊಕ್ಕಗೊಳಿಸಲೋ, ಕಾಂತಿ ಹೆಚ್ಚಿಸಲೋ, ಗಮನ ಸೆಳೆವಂತೆ ಮಾಡಲೋ ತೋರುವಳಿಯನ್ನು ಬದಲಾಯಿಸಲೋ . . . ಬಳಸುವ ಆದರೆ ಸಾಬೂನಲ್ಲದ ವಸ್ತುಗಳಿಗೆ ಅಂಗರಾಗಪದಾರ್ಥಗಳೆಂದು ಹೆಸರು (ಕವಿಕೋ. I, ೩೩).
[ ತೋರು (<ತೋಱು) + - ವಳಿ$_1$ ]

**ತೋರುವೊತ್ತೆ** 'ತೋರೊತ್ತೆ' ನೋ.

**ತೋರೈಸು** (ಕ್ರಿ). ದೊಡ್ಡದಾಗು ; ವಿಸ್ತಾರವಾಗು : ಬಡತನದಿ ನವೆದವರು ಸುರುಚಿರ ಸುಭೋಜನವನುಣಲು ಹೆರೆ ಹೆಚ್ಚುವೊಲು ಬಡನಡುವು ತೋರೈಸಲು (ನವಮೋ. ೧೫೮-೮). [ ತೋರ + - ಇಸು$_3$]

**ತೋರೊತ್ತೆ**, ತೋರುವೊತ್ತೆ (ನಾ). = ತೋರಡವು : ಅವನು ಮನೆಯನ್ನು ತೋರೊತ್ತೆ ಇಟ್ಟಿದ್ದಾನೆ (ರೂಢಿ). **ತೋರುವೊತ್ತೆ** : ಅವರು ಹೊಲವನ್ನು ತೋರುವೊತ್ತೆ ಹಾಕಿ ಸಾವಿರರೂಪಾಯಿ ತಂದಿದ್ದಾರೆ (ರೂಢಿ). [ ತೋರು (<ತೋಱು) + ಒತ್ತೆ$_1$ ]

**ತೋರ್ಕೆ** (ನಾ). ೧. ಕಾಣಿಸುವಿಕೆ ; ತೋರುವಿಕೆ : "ಉಱೆ ತೋರ್ಪು ತೋರ್ಕೆಯೊಂದುಂ" (ಕವಿಕಂ. ೨೦೫); ಯಕ್ಷರೂಪಿನಿಂ ತೋರ್ಕೆಗೊಳಗಾಗಿ (ರೇವಣ. ೮-೨೧) ; ಕೀಟಗಳ ಮೊಟ್ಟೆಗಳು ಅವನ್ನಿಟ್ಟ ಕೀಟಗಳಷ್ಟು ಗಾತ್ರ, ಆಕಾರ, ತೋರ್ಕೆಗಳಲ್ಲಿ ವ್ಯತ್ಯಾಸವಾಗಿಲ್ಲ (ಕೀಟಬಿ. ೯೬). ೨. ಪ್ರದರ್ಶನ ; ದೃಷ್ಟಾಂತ ಪಡಿಸುವಿಕೆ : ಇದು ನಿನ್ನರ್ಚಿಸುವಿಕ್ಷುಚಾಪವಿದು ನಿನ್ನೀ ಲೋಕಮುಂ ಕೈಗೆ ಮಾಡಿದ ಪುಷ್ಪಾಸ್ತ್ರವಿದಲ್ತೆ ನಿನ್ನ ವಿಜಯಪ್ರಾರಂಭದೊಳ್ ತೋರ್ಕೆಗೆತ್ತಿದ ಚೈತ್ರಧ್ವಜಂ (ಆದಿಪು. ೧೧-೧೭) ; ಚಾಗದ ತೋರ್ಕೆಗಂ ನೆಗಟ್ವೆ ಬೀರದಳುರ್ಕೆಗದೊಳ್ಪನಪ್ಪಿದುದ್ಯೋಗದಮರ್ಕೆಗಂ ಸಿರಿಯ ಸಾರ್ಕೆಗಂ . . . ಸ್ತಿಮಿತಸಾಗರನಾಗರಮಾಗದಿರ್ಕುಮೇ (ಶಾಂತಿಪು. ೧-೬೮). ೩. ಆಕಾರ ; ರೂಪು ; ಗಾತ್ರ : ಕುದುರೆಯ ಬಣ್ಣದಿಂ ರಥದ ತೋರ್ಕೆಯಿನೆತ್ತಿದ ಚಿತ್ರಕೇತುವೃಂದದ ಕುಱುಪಿಂದ . . . ಒರ್ವರೊರ್ವರನೆ ಮಚ್ಚರದಿಂ ಗಱಿಸನ್ನೆಗೆಯ್ದು (ಪಂಪಭಾ. ೧೦-೮೭) ; ಬೆಡಂಗಿನ ತೋರ್ಕೆಗೆ ನೋಡ ನಾಡ ಸೌಂದರಿಯರೊಳಾವಗಂ ಸೆಣಸುವಳ್ ಸಲೆ ಗಾಡಿಗಮುನ್ನತಿಕ್ಕೆಗಂ (ಧರ್ಮಾಮೃ. ೮-೧೭೭); ಘನಪುಣ್ಯನಿರ್ದ ತಾಣಂ ಘನಮಾಗಲ್ವೇಳ್ಕುಮೆಂಬ ಬಗೆಯಿಂದೆಂಬಂತಿನಿಯಳ ತನೂದರಂ ತಾಂ ಘನಮಾಗಿಯೆ ಬಳೆದು ತೋರ್ಕೆಯುಂ ತಳೆದಿರ್ಕುಂ (ಜಾಧಪು. ೪-೩೭). ೪. ಹೋಲಿಕೆ ; ಸಾದೃಶ್ಯ : ವರಶಬ್ದಾಲಂಕಾರದ ವಿರಚನೆಗಳ್ನೋಟ್ಪೊಡೊಂದೆ ತೋರ್ಕೆಗಳಿಂತುಂ ಪೊರೆದಿರಲು (ಕವಿರಾ. ೨-೪೮) ; ೫. ಆಡಂಬರ; ಡಂಬ; ನಟನೆ : ಕೆಳಗಣದೊಂದು ತಾಣದೊಳಗಿರ್ದಮಳ್ದಾವರೆಯಂತೆ ತೋರ್ಕೆಯುಬ್ಬಳಿಯದೆ ತಳ್ತ ಪೆರ್ಮಾಲೆಗಳೊಳ್ (ಕಾವ್ಯಸಾ. ೬೦೧) ; ತಳೆಗುಂ ತೋರ್ಕೆಯು ಬಿತ್ತರಂಬಡೆದು ಬತ್ತಿತೆಂಬಪೋಲಿರ್ದ ಪೆರ್ಬೊಳೆ (ಶಾಕುಂತ. ೧೦೧-೧೭೧) ; ದಶಾನನಂ ನಿನ್ನನೆಮ್ಮಂ ವಂಚಿಸಲ್ಕೆಂದೆ ತೋರ್ಕೆಯಂತಃಕಲಹಮುಂ ರಚಿಸಿ . . . ನಿರಸನಂ ಗೆಯ್ದಿರ್ಪನೇಂ ಲಂಕೆಯಿಂ ? (ಶ್ರೀರಾಮಾ. ೬೧೩-೫೪). ೬. ಅರ್ಪಣೆ; ದಾನ. 'ತೋರ್ಕೆಗೊಡು' ಪರಾ. [ ತೋಱ್ (<ತೋಱು) + - ಕೆ ]

**ತೋರ್ಕೆಗಿಡು** (ಕ್ರಿ). ಕಾಣದಾಗು ; ಅಸ್ತವಾಗು : ರೂಪುಗೆಟ್ಟುದು ದೆಸೆ ತೋರ್ಕೆಗೆಟ್ಟುದಿನಮಂಡಲಂ (ಜಗವಿ. ೭-೮೦).
[ ತೋರ್ಕೆ + ಕಿಡು (< ಕೆಡು$_1$) ]

**ತೋರ್ಕೆಗುಡು** 'ತೋರ್ಕೆಗೊಡು' ನೋ.

**ತೋರ್ಕೆಗೊಡು**, ತೋರ್ಕೆಗುಡು (ಕ್ರಿ). ತೋರಿಸಿ ಕೊಡು ; ಒಪ್ಪಿಸಿ ಕೊಡು ; ಅರ್ಪಿಸು ; ದಾನವಾಗಿ ಕೊಡು: ಅರ್ಕಕೀರ್ತಿಗೆ ರಾಜ್ಯವಿರಲೆಂದು ಮ್ಖಾತ್ರಿಗೆ ತೋರ್ಕೆಗೊಟ್ಟೆಯ್ದಲೊ ತಪಕೆ (ಭರತ ೫೩-೧೧೪). **ತೋರ್ಕೆಗುಡು** : ನಿನಗೆನ್ನಂ ಬಿಡದುಣ್ಮದೀ ಬೆಮರ್ ಕೈನೀರಾಗಿರಲ್ತೋರ್ಕೆಗೊಟ್ಟನನಂಗಂ (ಕಾದಂಬ. ೫೯).
[ ತೋರ್ಕೆ + ಕೊಡು$_1$ ]

**ತೋರ್ಕೆಗೊಳ್** (ಕ್ರಿ). ಕಾಣು ; ರೂಪತಾಳು : ವಿಶ್ವರೂಪದೊಳಜಾಂಡದ ಮಂಡಲಿ ತೋರ್ಕೆಗೊಂಡುದು (ಚಕವಿ. ೩-೫೩).
[ ತೋರ್ಕೆ + ಕೊಳ್$_1$ ]

**ತೋರ್ಕೆವಡೆ** (ಕ್ರಿ). ೧. ಕಾಣು ; ಪ್ರಕಟವಾಗು ; ಸ್ಪಷ್ಟವಾಗು : "ಮಿಗೆ ತೆಱಂಬೊಳೆದುದೆಂದೆನೆ ತೋರ್ಕೆವಡೆದ ಕಾಂತಿಗೆ ನಾಮಂ" (ಕಬ್ಬಿಕೈ. ೫೪) ; ಸೊಕ್ಕೊರ್ಗೆದಬ್ಧಿಯ ಮಧ್ಯದೊಳುರ್ಕಿದ ಸಿಂಹಳನ ಮದಕಿದೌಷಧಮೆನಿಕುಂ ತೋರ್ಕೆವಡೆದೆಸೆವ ಬಾಳು ಪೊಣರ್ಕೆಗೆ ಪೊಡೆಯಿಪುದು ಭೇರಿಯಂ ಭರದಿಂದಂ (ರಾಜಶೇ. ೫-೧೨೮). ೨. ಪ್ರಸಿದ್ಧಿಯನ್ನು ಪಡೆ,-ಹೊಂದು : ಬೆಳ್ಳಕ್ಕರಿಗರ ಕಲ್ಪಿ ತೋರ್ಕೆವಡೆಯದು (ನೀತಿವಂ. I, ೨೦).
[ ತೋರ್ಕೆ + ಪಡೆ$_1$ ]

**ತೋರ್ಕೆವರ್** (ಕ್ರಿ). ಸ್ಪಷ್ಟವಾಗು; ಕಾಣುವಂತಾಗು : ಪದೆದಟ್ಟಿಱಳುರ್ಕೆ ತೋರ್ಕೆ[ಪಾಠಾಂ. ತೋಳ್ಗೆ]ವಂದೊದವಿರೆ ನಾಣನೊಕ್ಕಿರ್ದ ವಿಚಿತ್ರವಿಕಾರರಸಾಂತರಂಗದೊಳ್ ಪುದಿದಿರೆ ಮಾಣದಾಡಿಸಿದನಾತನನಂಗಜನೆಂಬ ನಟ್ಟುವಂ (ಆದಿಪು. ೪-೧೫). [ ತೋರ್ಕೆ + ಬರ್$_1$ ]

**ತೋರ್ಕೆವೆಱು** (ಕ್ರಿ). = ತೋರ್ಕೆಗೊಳ್: ಶರ್ಕರೆಯನು ಪಿಡಿವಾಗಳಂಗೈಯ ಸಂಪರ್ಕದಿ ಸಿಂಧೂರದಂತೆ ತೋರ್ಕೆವೆತ್ತುದು (ಭರತೇ. ೧೦-೩೬).
[ ತೋರ್ಕೆ + ಪೆಱು$_1$ ]

**ತೋರ್ಕೊಳಿಸು** (ಕ್ರಿ). ತೋರಿಸಂ; ಕಾಣಿಸಂ; ಪ್ರಕಾಶಪಡಿಸಂ: ಭೋಗಿಗಂ ಜೋಗಿಗಂ ಕರುಣಿಪನನುಭವವಿಂತಿವೆಂದೆನಗೆ ನಿಖಿಲಮುಮನೊಡನೆ ತೋರ್ಕೊಳಿಸುತ್ತೆ (ಸಂಸಪ. ೨೯-೯).
[ <ತೋಱು + ಕೊಳ್$_1$ + – ಇಸು$_3$ ]

**ತೋರ್ತಳದುಳಿ** 'ತೊಟ್ಟುಟಿದಂಟಿ' ನೋ.

**ತೋರ್ಪಡಿಸು** (ಕ್ರಿ). ೧. ತೋರಿಸು; ವ್ಯಕ್ತಗೊಳಿಸು; ಪ್ರಕಟಿಸಂ: ಯೋಗದೊಳಾತ್ಮತತ್ವವೆ ಕಡೆ ದಶವಿಧಭೋಗಕಂಗನೆ ಕಡೆಯೆಂದು ಯೋಗಶಾಸ್ತ್ರವ ಭೋಗಶಾಸ್ತ್ರವನೆರಡನು ತೂಗಿ ತೋರ್ಪಡಿಸಿ ಪಾಡಿದಳು (ಭರತೇ. ೧೧-೨೬). ೨. ತೋರು; ಪ್ರಕಟವಾಗಂ: ಸುಸ್ಮೇರಭವದ್ವದನದಾವಿಂಚಿಂತಿದೆ ನಿವ್ರ್ಯಾಜದಿ ಮನಕದೇಂ ಸಂಶಯಂ ತೋರ್ಪಡಿಸಿತೆನೆ (ಪರಶು. ೧೯-೨೦).

**ತೋರ್ಪಡಿಸಿಕೊಳ್ಳು** = ೧. ವ್ಯಕ್ತವಾಗು; ಪ್ರಕಟವಾಗು: ತಾನು ಎಂಬುದು ಎರಡು ಸ್ವರೂಪಗಳಲ್ಲಿ ತೋರ್ಪಡಿಸಿಕೊಳ್ಳಬಹುದು (ಇಸ್ಲಾಂಸಂ. ೨೪೨). ೨. ತೋರಿಸು; ವ್ಯಕ್ತಪಡಿಸಂ: ಅವರು ತಮ್ಮ ಅಂತ್ಯಕಾಲ ಸಮೀಪಿಸಿದೆಯೆಂದು ನಿರ್ಧರಿಸಿದ್ದ ಹಾಗೆ ಕಂಡರೂ ನನಗೆ ಬುದ್ಧಿ ಬಾದವನ್ನು ಹೇಳುವಾಗ ಅದನ್ನು ತೋರ್ಪಡಿಸಿಕೊಳ್ಳಲಿಲ್ಲ (ಬಂಗಾಳ್ಯ. ೧೫೫). [ ತೋರ್ಪಡು + – ಇಸು$_3$ ]

**ತೋರ್ಪಡು** (ಕ್ರಿ). ೧. ಸ್ಪಷ್ಟವಾಗಿ ಕಾಣು; ತೋರು; ಗೋಚರಿಸು: ಮರಾಳಾವಳಿ ನಗದ ಬಿಲದ್ವಾರದಿಂದೇಳ್ದುದಾಶಾವಳಯಂ ತೋರ್ಪಟ್ಟು ದಬ್ಬಂ ಪಳಚನಲದುರ್ದಬ್ಬಾರಿಬಿಂಬಂ ಕಳಂಕಂ ಕಳಿದತ್ತೆಂಬಂತೆ ನೀಡುಂ ತೊಳಗಿತು ತಿಳಿದತ್ಪಾಪಗಾವಾರಿಪೂರಂ (ರಾಜಶೇ. ೬-೨); ಸೊಂಟದಲ್ಲಿ ಧೋತ್ರ ಅಥವಾ ಇತರ ಬಟ್ಟೆಯಿದ್ದಂತೆ ತೋರ್ಪಡಲಿಲ್ಲ (ಕಪಾಕುಂ. ೧೪). ೨. ಮೇಲಾಗು; ಪ್ರಸಿದ್ಧವಾಗಂ; ಶ್ರೇಷ್ಠವಾಗಂ: ಶರಣಾ ಹೊಕ್ಕುದು ಬಂದು ಮಕುಟದ ಗರುವರವನೀಪಾಲಕರು ಮೋಹರಕೆ ತೋರ್ಪಟ್ಟವರು ಭಾರಿಯ ಬಿರುದಿನತಿಬಲರು (ಕುಮಾರದ್ರೋ. ೧೬-೨೦).
[ ತೋಱ್ (<ತೋಱು) + ಪಡು$_1$ ]

**ತೋರ್ಪು, ತೋರ್ಪು$_2$, ತೋರ್ವು, ತೋಹರ್ಪು$_2$, ತೋಹೆ** (ನಾ). ೧. ಕಾಣಿಸುವಿಕೆ; ತೋರುವಿಕೆ; ಪ್ರದರ್ಶನ: "ತೋರ್ಪೆನೆ ಕಾಣ್ಕೆ" (ರನ್ನಕಂ. ೧೨); "ತೋರ್ಪು ತೋರ್ಕೆಯೊಳಂ ಮಿಗೆ ತೋರ್ಕುಂ" (ಕರ್ಣಾನಿ. ೭); ದೀನನೇತ್ರಂ ತುಷಲಘುತರಮಾತ್ರಂ ಕರಂ ಪೊರ್ದಿ ತೋರ್ಪಿಂ ಜನಮುಂ ಬೇಳ್ಪಾಸೆಯಿಂ ಸಾವಿನ ಪರಿಯೆನಿಸಿಪೀ ದೈನ್ಯಮಂ ಬಿಟ್ಟು ನಿಮ್ಮಂ ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷಂ ರಕ್ಷಿಪ್ಪುದೆನ್ನಂ (ರಕ್ಷಾಶ. ೨೧); ತೆಱೆರ್ಪೆಂದು ತೋರ್ಕೆ (ತೋರ್ಪೆ) (ಶಮದ. ೧೧೫). ೨. ಆಕಾರ; ಸ್ವರೂಪ. 'ತೋರ್ಪುಗೆಡು' ಪರಾ. **ತೋಪ್ಪು$_2$**: ೧. ವ್ಯಾಪಿಸಿಯೆ ನೀವ್ ಮಲ್ಲವಿದ್ಯೆಯ ತೋಪ ಮೆಟಿಪುದು ಭೀಮನಿದ್ದರೆ ಆ ಪುರದೊಳೊತ್ತಿ ಹೊಗಳಿಸಿ ನಿಮ್ಮ ಬಿರುದುಗಳ (ಕುಮಾವಿ. ೬೧೪. ೪-೧೪). ೩. (ಬೇಟೆಯಲ್ಲಿ ಒಡ್ಡುವ) ಆಕರ್ಷಣೆ; ಆಮಿಷ; ಆಕರ್ಷಕ ವಸ್ತು: ಧರಣೀಪತಿ ಚಂಡಶಾಸನಂಬೆರಸು ವನಾಂತದೊಳ್ ತೆರೆಯ ತೋಪಿನ ಸೋಹಿನ ನೀರ ಬೇಂಟೆಯುರ್ವರೆಗಳನೀಕ್ಷಿಸುತ್ತೆ ಬರೆ (ಅನಂಪು. ೧೧-೪೦); ಸೋಪಿನ ತೋಪಿನ ಪಳಹದ ಕೋಪಿನ ಪಾಳಿವದ ಗೋರಿವೇಂಟೆಗೆ ಮತ್ತಂ ಚಾಪ ಪ್ರವೀಣರುದ್ಧತಕೋಪರ್ ನಡೆತಂದರಲ್ಲಿ ಮುಂದೆ ಪುಳಿಂದರ್ (ಸೂಕ್ತಿಸು. ೩-೧೦೪). **ತೋವು**: 'ತೋವಿಕ್ಕು' ಪರಾ. **ತೋಹ್ಪು$_2$**: ೩. ತೋಹಿನಶಬರನಂತೆ ಲಾಗಿನ ವ್ಯಾಘ್ರದಂತೆ ಆಡುವ ವಿಧಾನದಂತೆ ಇಂತೀ ವೇಷ ಸಹಜ (ಮೋಳಿಮಾ. ೩೪-೧೪೦); ಜಾಳವಣಿಗಳ ಬಲೆಯ ಠಕ್ಕಿನ ಠೌಳಿಗಳ ತೋಹುಗಳ ನಗೆಗಳ ಮೇಲುಮುದ್ದಿನ ಬೇಟೆಕಾತಿಯರೈದಿದರು ವನವ (ತೊರರಾ. ೧-೫-೩೯). ೪. ಬೇಟೆಯ ಸ್ಥಳ; (ದೀವದ ನೆರವಿನಿಂದ) ಬೇಟೆಯಾಡಲು ವನ್ಯಮೃಗಗಳನ್ನು ಆಕರ್ಷಿಸುವ ತಾಣ: ನಿಂದು ಬೇಡರ ತೋಹು ಸೋಹುಗಳ ಸಂದಿಯೊಳು (ಕನ್ನರ. ಡಿ. ೧೨೭-೨೦); ಬೆಳ್ಳಾರ ಬಿಗಿ ತೋಹಿನೊಳು ನಿಲ್ಲು ತಿಱಿಯಂಬ ಬಿಡು (ಹದಶಾ. ೫-೨೪); ಪುಳಿಂದರು ಬಳಸಿ ಬೇಂಟೆಯನೆಯ್ದಿ ಬನದೊಳು ತೋಹಿನಲ್ಲಿರ್ದು (ಬಸಪು. ೧೮-೨); ಸಿಂಹಳದ್ವೀಪದಿಂದೆಮ್ಮ ತೋಹಿಂಗೊಂದು ಸಿಂಹಮಾಟೋಪದಿಂ ಬರಲ್ (ಭಾವಚಿಂ. ೫-೧೨); ಹೋಯೆನ್ನಸು ಮಿಗ ತೂಣನ ತೋಹಿಗೆ ಸಿಲ್ಕದೆನುತ್ತುಂ ನಿಷ್ಠೆಯ ನೇಹದ ಸಾಹಸಿಗಂ ಶಂಕರನಳ್ಕಱ ಪೂಜೆಗೆ ಸಲ್ವಂ (ಉದ್ಭದೇ. ೩-೪೩); ಉದಕಮಂ ಕೊಳಬಂದ ಮೃಗಗಳ ಬೆದರದಂತೆಸೆಯಲ್ಕೆ ತೋಹಿನ ಹೊದರಿನೊಳು ಕಾದಿರ್ದ ಚಾಪಾಸ್ತ್ರಗಳ ಕೈಕೊಂಡು (ಅನಂರಾ. ೨-೩-೭). ೫. ಕಪಟ; ಮೋಸ: ಯುಧಿಷ್ಠಿರಾನಾಳ್ವ ದೇಶದೊಳ್ಕಳವು ಕೋಲೆ ಪಾದರಂ ಪುಸಿ ನುಸುಳು ವೈರವುಟ್ಟುಳಿ ತೋಹು ಬೆದಱು ಬೆಜ್ಜರ . . . ಅಲಸಿಕೆ ಕರ್ಕಶಂಗಳವು ಮೊಳೆದೋಱವು (ಜೈಮಿಭಾ. ೨-೫). ೬. ಗುರಿಯಿಡುವಿಕೆ; ಸಂಧಾನ ಮಾಡುವುದು: ಬಳಿಕ ನೂಱು ನಿರಂತರಸ್ವಾವಳಿವಿಘಾತಿಗೆ ನೂಱು ಲೆಕ್ಕವ ಕಳೆದವಿನ್ನೂಱಾನೆ ಪಾರ್ಥನ ಕೋಲ ತೋಹಿನಲಿ (ಕುಮಾಗ. ೧-೧೧); ಚೂರಿಸುವ ವೊಗಸೂನಿಗೆಯ ಕೊಲ್ಲಾರಿಗಳ ಶರಬಂಡಿಗಳ ಹೊಂದೇರು ಕವಿದುವು ಕೋಲ ಕೋಲಾಹಲದ ತೋಹಿನಲಿ (ಕುಮಾಕ. ೨-೪೪); ಬಿಲ್ಲ ತಿರುವಿನ ಕೋಲ ತೋಹಿನ ರಾಮನಿದ್ದನು ನೋಡುತಾಹವವ (ತೊರರಾ. ೪-೩-೧೫); ಪತ್ತು ರಥಂಗಳಾ ಮೆಸರ ಭೂಪನು ಭಾವಿಗೆ ತೋಹನಿಕ್ಕಿ ನೋಡುತ್ತಿರೆ (ಪಂಚತ. ೭೧-೪೧). ೭. ನೇತೃತ್ವ: ಮುಂದಾಳುತನ; ಮಾರ್ಗದರ್ಶನ: ಮನುಮುನಿಯತಿಪ್ರತಿಗಳೆಲ್ಲರು ನಿಮ್ಮ ತೋಹಿನೊಳಗಿದ್ದರು (ಜನ್ನವ. ಕ. ೩೯೩-೮೩೪); ಘನ ರೌದ್ರಮಯ ದುಗ್ಗಡದ ರಕ್ಕಸಸೇನೆ ನಿಂದುದು ಖಳನ ತೋಹಿನಲಿ (ತೊರರಾ. ೬-೧೯-೧೭). **ತೋಹೆ**: ೩. ಕರೆಸಿದಡವರು ನಿಲ್ಲರು ತೋಹೆ[ಪಾಠಾಂ. ಗೋರಿ]ಯಲಿ ಬಳಿಸಂದ ಮೃಗದಂತೆ (ಕುಮಾಸ. ೧೨-೬೪).

**ತೋಪಿನ ಬೇಟೆ** = **ತೋಹುವೇಂಟೆ**: ಪಾಂಡುರಾಜನಧಿಕತೇಜನುಂ . . . ಒಂದು ದಿವಸಂ ತೋಪಿನ ಬೇಂಟೆಯನಾಡಲಟ್ಟಿಯೆ ಪೋಗಿ (ಪಂಪಭಾ. ೧-೧೧೦ ವ). [ ತೋಱ್ (<ತೋಱು) + – ಪು$_2$ ]

**ತೋರ್ಪುಗೆಡು** (ಕ್ರಿ). ಗಾತ್ರ ಕಳೆದುಕೊಳ್ಳು; ಕುಗ್ಗು: ತನ್ನ ಪಕ್ಷಂ ಸತ್ತೊಡಂ ಮಾತು ಸಾಯದೆ ತೋರ್ಪುಗೆಟ್ಟೊಡಂ ಕೂರ್ಪುಗಿಡದೆ ತೇಜಂ ತೊಲಗೆಯುಮಾಯು ತೊಲಗದೆ (ಶಾಂತಿಪು. ೪-೩೨ ವ).
[ ತೋರ್ಪು + ಕೆಡು$_1$ ]

**ತೋರ್ಮಲ್ಲಿ** 'ತೋರವಂಲ್ಲಿ' ನೋ.

**ತೋಲ್$_1$, ತೊಗಲ್, ತೊಗಲಂ, ತೊವಲ್$_3$, ತೊವಲಂ, ತೋಲು$_1$, ತೋವಲ್** (ನಾ). ೧. ಚರ್ಮ; ಚಕ್ಕಳ; ತ್ವಕ್ಕು: "ತ್ವಚಮಜಿನಾಸೃಗ್ಧರೆ ಕೃತ್ತಿ ಚರ್ಮಮೆನೆ ತೋಲ್ ತ್ವಗಾಹ್ವಯಂ" (ವಸ್ತುಕೋ. ೭೨-೨೮); ಸಿಡಿಲಂತೊರ್ಮೆಯೆ ಪೊಯ್ಯೆ ಪೊಯ್ದ ಭರದಿಂದೊಂದಾನೆ ತೋಲ್ ನೆತ್ತರಲ್ಲದಗೊಂದೊಂದಱಿಳೊಂದುಮೊಂದದೆ ಗದಾನಿರ್ಘಾತದಿಂ ಮಾಯಮಾದೊಡೆ (ಪಂಪಭಾ. ೧೦-೧೦೫); ಕರಡಿಯ ತೋಲಂ ಕಜ್ಜಲ ಪರಾಗದಿಂ ಪೊರೆದು ಪಿರಿದು ಜೇನೆಯ್ಕೊಳ್ ತಂದಿರಿಸಿದಪೊಲ್ (ಶಾಂತಿಪು. ೮-೧೨೭); ಗಜಂ ಹತಮಾದುದಿಂದು . . . ಅದಱ ತೋಲೊಳಮೆಲ್ವಿನೊಳಪ್ಪುದಿಲ್ಲ ತತ್ಸಾರಧನಂ (ಜಗವಿ. ೭-೬೧); ತೋಲಂ ಕರ್ಚಿತೆ ನಲಿವ ಸೊಣಗಂ (ನೀತಿಮಂ. I, ೩೦೫). **ತೊಗಲ್**: ೧. "ಚರ್ಮ ತ್ವಚಂ

**ಕೃತ್ತಿ** ಅಜಿನವದಸೃಗ್ಧರೆಯೆನಲು ತೊಗಲಕ್ಕು" (ಮಂಗರಾ. ೧೦೬-೩) ; ತಪೋದಾನಶೀಲವ್ರತೋಪವಾಸಾದಿಗಳಿನೆಲ್ಲುಂ ತೊಗಲುಮಾಗಿರ್ಪರ್ (ಶಾಂತಿಪು. ೮-೧೨೫ ವ) ; ಕರ್ಪಿನಂತೆ ತೊಗಲನುಳ್ಳುದು ಬೀಣೆಯಂತೆ ನರದೊಳ್ ಕೂಡಿದುದು (ಧರ್ಮಾಮೃ. ೪-೧೭೫). **ತೊಗಲು :** ೧. ಸುಗಿದ ತೊಗಲೇಱದೆಗೆದಳ್ಳೆ ದಿಗ್ವಸನವಶ್ವಿದ ಕತ್ತಿಯೊಡ್ಡಿದ ಕಪಾಲವೆರಸು . . . ಕಾಳರಕ್ಕಸಿ ಬರುತ (ಸಿದ್ಧರಾ. ೬-೧) ; ಅಂಗುಳಂಗಳ ಸಂದಿಗಳ ಕಳೆಯಿಂಗಿ ನೆತ್ತರು ಸತ್ತ ತೊಗಲ ನರಂಗಳತಿದುರ್ಗಂಧವಾಗಳು ನಾರ್ವ ಬಾತೊಡಲ (ಬಸವು. ೪೬-೫೮) ; ತೊಗಲುಂ ಸಡಿಲಿದ ಗಲ್ಲ ಬತ್ತಿದ ಹೆಗಲು ನಱುಕಿದ ನೆರೆತ ವಿಾಸೆಯ . . . ಮುಪ್ಪಿನ ಮುಗುದನೀತನು (ಕುಮಾ.ಭೀ. ೧-೩೫) ; ಉಡಲುಬಹುದೇ ತೊಗಲು ನನ್ನೀಯಡಗು ಬೋನಕ್ಕಹುದೆ (ಕೌಶಿರಾ. ೮-೩೨) ; ತೊಗಲಿನ ದೇಹಕೆ ಗೋಪಿಗಂಧ ತೇದುಕೊಂಡು (ಪುರಂದ. ೨-೬೪-೨) ; ತೊಗಲು ಸಡಲಿ ಮುಪ್ಪು, ಹಗಲು ಸಡಲಿ ಇರುಳು (ಗಾದೆ) ; ನಾಯಿ ಬಲ್ಲದು, ತೊಗಲು ಬಲ್ಲದು (ಗಾದೆ). **ತೊವಲ್₃ :** ೧. "ಅಸೃಗ್ಧರಃ, ಅಜಿನಂ, ಚರ್ಮ,ಕೃತ್ತಿಃ, ತ್ವಕ್ – ಈ ೫ ತೊವಲ್" (ಹಲಾಯು. ೧೦೪-೮) ; ಪುಲಿಯ ತೊವಲ್ಗ [ಪಾಠಾಂ. ತೋಲ್ಗ] ಳುಮಂ ಚಮರಿಗಳುಮಂ ಕೊಂಡು ಬಂದು (ವಡ್ಡಾರಾ. ೧೬೩-೧೫) ; ಪಸಿಯ ತೊವಲ ತಿದಿಯೊಳ್ ಪುದಿದು ಪುಟಪಾಕಂ ಸುಡುವರುಂ (ಆದಿಪು. ೩-೮೫.ವ); ಕರಡಿಯ ತೊವಲಂ ಕಾಡಿಗೆಯೊಳರ್ದಿ ವಿಧಾತ್ರಂ ಲೋಕಮಂ ಬಾಸಣಿಸಿದ ನೆಂಬಂತಪ್ಪ ಕತ್ತಲೆಯೊಳ್ (ಧರ್ಮಾಮೃ. ೧೨-೨೦) ; ಜೋಲ್ವ ಪುರ್ವಿಂ ನೇಲ್ವ ತೋಳ ತೊವಲಿಂ ಇಟ್ಟ ವಿಭೂತಿಯಿಂ (ನಂಬಿರ. ೬-೨೪); ಎಲುವ ನಾಯಿಗೆ ಹೊಲೆಯುಗಂ ಮಾಂಸವನು ಮುಚ್ಚಿಗಗೆ ಬಳಿಕ ತೊವಲಂಬಂತೆ ಮುಳಿಸಿಂ ಕೆಲಕೆ ಬಿಸುಡುವಂ (ಬಸವು. ೨೦-೪೪). 'ತೊವಲ್ವೊದೆಯಂ, ಪರಾ. ೨. ಮರ, ಗಿಡ ಮೊದಲಾದಂವುಗಳ ತಿಗುಡು : ತೊಗಟೆ : ತಪಸಿಯ ತೊವಲೊಳಗೆ ಪುನರ್ನವಿಯುಮಂ . . . ಲೊಕ್ಕಿಯುಮಂ ಸವನಾಗಿ ಕೂಡಿಕೊಳ್ವುದು (ಅಶ್ವಶಾ. ೭-೩೨). ೩. ಕಿತ್ತಲೆ ಮುಂತಾದ ಹಣ್ಣಿನ ಕವಚ,–ಸಿಪ್ಪೆ. **ತೊವಲು :** ೧. ಬಲ್ಲಿದ ನರಹರಿಯ ತೊವಲು ಕರಿಗಜಾಸುರನ ತೊವಲು ಕರಿಪುಲಿದೊವಲ ನುಟ್ಟು ಹೊದ್ದ . . . ಕಟ್ಟುಗ್ರು(ನ?)ಲಾ (ಸರ್ವವ. ೧೬೬-೭೮೬) ; ಪುದಿದ ತೊವಲ ಕಂಡ ಮಿದುಳಲು ನರಗಳಿಂದೊದವಿದೊಡಲ ನೆನೆ ದೊಱಲುವುದು (ಗೀತಗೋ. ೫೬-೧) ; ತೊವಲು ಕೊಂಬುಗಳನ್ನು ಧರಿಸಿ ಯಜ್ಞದೀಕ್ಷೆಯನ್ನು ಹಿಡಿಯುವ ದುರ್ಮತಿಗಳೂ ಉಂಟೆ, ನಿನ್ನನ್ನು ಕಂಡ ಬಳಿಕ (ಬಿದುರಿ. ೦೩೪). 'ಗಂಗೆದೊವಲ್' ಪರಾ. **ತೋಲು₁ :** ೧. ಸುರಿವ ರಕ್ತದಿ ತೋಲು ತೋಡುದು ಸಾರಥಿ ತಿರುಗಿಸಿದನು ಬೇಗಾ ರಥವ (ಅಭಿಶಾ. ೧೨) ; ಗೋಳುವೋರೆಯ ಜೋಲುತೋಲಿನ ಜಾಲು ಅರಿವೆಯ ತಿರುಕ (ಕಗದ್ಯ. ೬೪). **ತೋವಲ್ :** ೧. ಭಾಗದ ತೋವಲಕ್ಕೆ ಕಡುಕರ್ಪಸವೆಟ್ಟಿನ ಗಂಗೆದೋವಲಕ್ಕಾಗಳೆ ಕೊಂಡು ಪುಣ್ಯದಿನದೊಳ್ . . . ಸುತ್ತಿ ಕಟ್ಟಿ (ಲೋಕೋಪ. ೬-೪೧).

**ತೊಗಲ ಚಲ್ಲಣ =** ಚರ್ಮದ ಚಲ್ಲಣ,–ಉಡುಪು : ತೊಗಟೆ ಕುಪ್ಪಸ ತೊಟ್ಟು ತೊಗಲ ಚಲ್ಲಣ ಉಟ್ಟು (ಹರಿಶ್ಚರ. ೨೮-೮೯). **ತೊಗಲ ಚಿಗರಿ =** ತೊಗಲ ಬಾವಲಿ : ತೊಗಲ ಚಿಗರಿಯನ್ನಂತೆತ್ತಿದನೆ ? ಅವನ ಬಿಲ್ಲಾಯ್ತು ರಲಿ ಗಡ ಪಿನಾಕಿ (ಹರಿಶ್ಚರ. ೩-೨೫). **ತೊಗಲ ಚೀಲ =** ಶರೀರ ; ದೇಹ : ತೊಗಲ ಚೀಲದಲ್ಲಿ ಪರಶಿವನಿದ್ದಾನೆಂದು ಪೊಡವಿಯ ಮೃಡಭಕ್ತರೆಲ್ಲ ನುಡಿವುತಿಪ್ಪರು (ಮೋಳಿಮಾ. ೩೩-೦೩೯). **ತೊಗಲ ತಿತ್ತಿ =** (ದ್ರವ ಪದಾರ್ಥಗಳನ್ನು ತುಂಬುವ) ಚರ್ಮದ ಚೀಲ : ಮದ್ದಿನ ಸುರೆಯ ತೊಗಲ ತಿತ್ತಿಯಲ್ಲಿ ತುಂಬಿ ಒಪ್ಪದಲ್ಲಿ ನಿಲಿಸಲಿಕೆ ಅದು . . . ಅಪ್ಪಳಿಸಿ ಬೀಳೂದ ಕಂಡೆ (ಸರ್ವವ. ೦೪೩-೭೦೩). **ತೊಗಲ ಬೊಂಬೆ, ತೊವಲ ಬೊಂಬೆ =** ಚರ್ಮದ ಗೊಂಬೆ : ಚಿತ್ರವಿಚಿತ್ರ ವಿನೋದದಾಟವನು ಜಂಗಮ ಮುಂತಾಗಿ ನೋಡದೆ ತಾ ನೋಡಿದನಾದಡೆ ತೊಗಲ ಬೊಂಬೆಯ ನೋಡಿದ ಸಮಾನ (ಚನ್ನವ. ಕ. ೧೨೪-೨೮೧) ; ವಿಶ್ವಪತಿಯಾಡಿಸಿದೊಡಾ ಡಿದರಲ್ಲದಕಟ ಪರಿಕಿಪೊಡೀ ತೊವಲ ಬೊಂಬೆಗಳ್ ತಾಮೆಯಾಡಲ್ ಸ್ವತಂತ್ರಮೇ (ಪದ್ಮರಾ. ೬-೨೨). **ತೊವಲ್ನಾರು =** (ಜಿಂಕೆಯ) ಚರ್ಮ ಮತ್ತು ವಲ್ಕಲ ; "ತೊಗಲುಂ ನಾರುಂ" (ಪಂಪಧಿ. ೨೫೪) ; ಆ ದುಶ್ಶಾಸನನಿಂದೆನಗಾದ ಪರಾಭವಮನೇನುಮಂ ಬಗೆಯದೊಡಿಂತಾದರಮೆ ತೊವಲ್ನಾರುಮನಾದರದೇ[ಂ] ನಿನ್ನ ಮನಕೆ ಚಿಂತೆಯುಮಿಲ್ಲಾ (ಪಂಪಭಾ. ೭-೪೯). **ತೋಲ ಬಾವಲಿ, ತೊಗಲ ಬಾವಲಿ, ತೊಗಲ ಬಾವುಲಿ =** ಒಂದು ಬಗೆಯ ಪಕ್ಷಿ ; ತೊಗಲು ಹಕ್ಕಿ ; ತೊಗಲಂ ಬಾವಲಿ : ಆ ದೇವಸ್ಥಾನದ ತುಂಬ ತೋಲ ಬಾವಲಿಗಳು ಸೇರಿಕೊಂಡಿವೆ (ರೂಢಿ) ; ಅಲ್ಲಿ ತೊಗಲ ಬಾವಲೀ ಚೀರತಾವ ಭರತಿ ಹಗಲಿನೊಳಗ (ಗಂಗಾತ. ೮೭-೧೩) ; ಇಂಥ ತೊಗಲ ಬಾವಲಿಗಳಿಗೆ ಸತ್ತ ಮೇಲೆ ಯಾವ ಪ್ರತ್ಯೇಕ ಸ್ಥಳದ ವ್ಯವಸ್ಥೆಯಾಗಬೇಕು (ರಕ್ತಧ್ವ. ೧೦೦) ; ನವಿಲು ಮಂಗ ತೊಗಲ ಬಾವುಲಿ ಮುಂತಾದ ಪ್ರಾಣಿಗಳು ಮನೆ ಮಾಡಿಕೊಂಡು ಇರುತ್ತವೆ (ಮುಂಬಯಿ. ೨-೩೦).

[ ದೇ.॥ ತಮಿ. ತೋಲ್, ತೊಲಿ ; ಮಲ. ತೋಲ್, ತೊಲಿ, ತುಕಲ್ ; ತುಳು. ತುಗಲ್, ತೊಲಿಕೆ ; **ಕೊಡ.** ತೊಲಿ ; **ತೆಲು.** ತೋಲು ; **ಕೊಲಾ,** ನಾಯ್ಕಿ. ಪರ್ಜಿ. ಗಡಬ. ಗೊಂಡಿ. ತೋಲ್ ; ಕುವಿ. ತೋಲು./ಸಂ. ತ್ವಕ್ ]

**ತೋಲ್₂** 'ತೊವಲ್₂' ನೋ.

**ತೋಲ್₃,** ತೋಲು₂ (ನಾ). ದಾರಿ ; ಮಾರ್ಗ : "ದಾರಿ ಕಡವಸಗಳೊಳ್ ತೋಲ್ [ಪಾಠಾಂ. ತೊಗಲ್]" (ಶಬ್ದಮಂ. ೦೦೭). **ತೋಲು₃ :** ಒರ್ಮೆ ವೇಂಟೆಗೆ ವನಚರರ್ಪೋದ ತೋಲಿನೊಳಗೊರ್ವೊರ್ವರ್ ನಡೆದು ನಿಜಪುರದ ಪಾಂಥದ ಹೊಲಬನೊರ್ಮೆಯುಂ ಕಾಣದೆ (ಸಮ್ಯಕ್ತ್ವ. ೧೧-೪೧).

[ ದೇ.॥ ತೆಲು. ತ್ರೋವ ]

**ತೋಲ** (ನಾ). ೧. ತೂಕ ; ಭಾರ : ಚಂದನದ ಕೊರಡುಗಳು ಕೆಂಪಾಗಿಯೂ ತೋಲವಾಗಿಯೂ ಸುಗಂಧವಾಗಿಯೂ ಇದ್ದ ಹಾಗೆ ಹೆಚ್ಚು ಬೆಲೆಗಾಣು ತ್ತವೆ (ಮುಂಬಯಿ. ೩-೭೮). ೨. (ಚಿನ್ನ, ಬೆಳ್ಳಿ ಮುಂತಾದ ಲೋಹ ಗಳ) ತೂಕದ ಪ್ರಮಾಣ ; ಒಂದು ರೂಪಾಯಿ ತೂಕ ; ತೊಲ : (ಸ). ೩. ಸಮಸ್ಥಿತಿ ; ಸಮತೋಲನ : ಮೈಯ ತೋಲ ತಪ್ಪಿತು (ಕುಡಿಕೊ. ೩೮) ; ಈ ತ್ರಾಸುಗಳಲ್ಲಿ ಕಡಿಮೆ ತೂಕದ ಕಲ್ಲು ಗಳಿಂದಲೂ ಭಾರವಾದ ಪಾತ್ರೆಗಳನ್ನು ಎತ್ತಿ ತೋಲದಲ್ಲಿರಿಸಲು ಬರುವುದು (ಬಾಲಪ್ರ. I, ೩೩೭). ೪. ಸಮಾನವಾದ ಆಕಾರ ; ಪ್ರಮಾಣ ಬದ್ಧತೆ : ನಿತ್ಯ ಬಳಸುವ ಕಲ್ಲು ಗಾರೆಗಳಿಂದ ಅದನ್ನು ನಿರ್ಮಿಸಿದ್ದರೂ ಅದರ ವಾಸ್ತುರಚನೆಯಲ್ಲಿ ಕಾಣುವ ವೈಖರಿ, ತೋಲ, ಇಕ್ಕಡೆಯ ಮೇಳ- ಬಲು ಚೆನ್ನಾಗಿವೆ (ಆಬೂಬ. ೧೦೪). [ ಸಂ. ]

**ತೋಲಂಗಿ** (ನಾ). ತೊಗಲಿನ ಅಂಗಿ : ಪುಲಿ ಚಿರತೆ ಮಿಗದ ತೋಲಂಗಿ ಸಿಂಗರಗೈದ ನವಿರಿಡಿದ ಮೆಯ್ಯು, ಬಣ್ಣದ ನಾರ್ಗಳಿಂ ಸಮೆದ ವಸ್ತ್ರದಿಂ ಶೋಭಿಸುವ ಮಲ್ಲಗಚ್ಚೆಯ ... ಸಿಡಿಲಾಳ್ಗಳ್ (ಶ್ರೀರಾಮಾ. ೨೯೧-೦೭೫).

[ ತೋಲ್₁ + ಅಂಗಿ₂ ]

**ತೋಲನ** (ನಾ). ೧. ತೂಕ ಮಾಡುವುದು ; ತೂಗುವುದು. ೨. ಆಯ ; ಸಮ ತೂಕ : ಆಸ್ಪತ್ರೆ ಮತ್ತು ಬಂಗ್ಲೆಗಳು ಅವಳ ಸ್ಮೃತಿಯಲ್ಲಿ ಬಂದು ಅವಳ ಚಿತ್ತತೋಲನವನ್ನು ತಪ್ಪಿಸುತ್ತಿದ್ದುವು (ವಂಶವೃ. ೩೭೮). ೩. ಹೋಲಿಕೆ ; ತಾಳೆ; ಸಾದೃಶ್ಯ : ಸಂವಿಧಾನದ ವಿವಿಧ ಭಾಗಗಳ ತೋಲನ ವನ್ನು ಕುರಿತು ನಾಟಕದ ತಂತ್ರದ ಬಗೆಗೆ ಪ್ರಸ್ತಾಪಿಸುವಾಗ ಹೆಚ್ಚು ಹೇಳುತ್ತೇವೆ (ಸಾಹಿಪ್ರ. ೦೩೫); ಈಚೆಲು ಹುಳುವನ್ನು ಸುಟ್ಟು ಬೂದಿ

ಮಾಡುವ ಸಣ್ಣ ಮಣ್ಣುಹಣತೆಯ ದೀಪವನ್ನು, ಪಟ್ಟಣವನ್ನೇ ದಹಿಸಿ ನಾಶಮಾಡುವ ಉರಿಗೆ ತೋಲನಮಾಡಿದರೆ ಹೇಗೋ ಹಾಗೆ (ಜ್ಯೋತಿರ್ವಿ. ೯೩). ೪. [ನಾಟ್ಯ] ಇಪ್ಪತ್ತು ಬಗೆಯ ಹಸ್ತವಿನ್ಯಾಸಗಳಲ್ಲಿ ಒಂದುಃ ಧೂನನ, ಶ್ಲೇಷ, ವಿಶ್ಲೇಷ . . . ವಿಕೃಷ್ಟ, ತಾಡನ, ತೋಲನ [ಪಾಠಾಂ. ತೋದನ, ದೋಡನ] ಛೇದ, ಭೇದ, ಸ್ಫೋಟನ, ಮೋಟನ, ವಿಸರ್ಜನ, ಆಹ್ವಾನ, ತರ್ಜನ ಈ ಇಪ್ಪತ್ತು ಕರಕರ್ಮ ಭೇದಂಗಳ್ (ಲಾಸ್ಯರ. ೪-೧೩ ವ). [ಸಂ.]

**ತೋಲನಯಂತ್ರ** (ನಾ). ತೂಕವನ್ನು ತೋರಿಸುವ ಯಂತ್ರಃ "ತೋಲನಯಂತ್ರ, ಸಮತೋಲಕ" (Balance. ಪತ್ರಿನಿ. ೮). [ತೋಲನ + ಯಂತ್ರ]

**ತೋಲಾಟ** (ನಾ). ಖಡ್ಗಯುದ್ಧದ ಒಂದು ಪಟ್ಟು,-ವರಸೆಃ ಮೊದಲು ನಿಲ್ಲುವ ಕಡೆಯಲ್ಲಿಯೇ ನಿಂತು ಯರಡು ಪಾದಗಳ ಮುಂದುಗಡೆಯಲ್ಲಿ ಹಿಂದುಗಡೆಯಲ್ಲಿ ದಾಟುವುದು ಆವದುಂಟು ಅದು ತೋಲಾಟಯೆಂದು ಸಮ್ಮತವು (ಖಡ್ಗಟೀ. ೩-೧೫). [ ? ]

**ತೋಲು**$_1$ 'ತೋಲ್$_1$' ನೋ.

**ತೋಲು**$_2$ 'ತೋಲ್$_3$' ನೋ.

**ತೋಲು**$_3$ (ನಾ). ಸಮಸ್ಥಿತಿ ; ಸಮತೋಲನಃ ಜೋಲಿ ಹೋದಾಗ ಆದಿರಿ ಕೋಲು ಹಿಡಿದಿರಿ ನಮ್ಮ ತೋಲು (ಹಾಡುಪಾ. ೪೧-೧೦). [ < ಸಂ. ತೋಲ ]

**ತೋಲುಡೆ**, ತೊಗಲುಡೆ, ತೊವಲುಡೆ (ನಾ). ಚರ್ಮದ ಉಡುಗೆಃ ಬಿಡದೆ ತೊಡಂಕಿ ತೋರ್ಪ ಜಡೆ ತೋಲುಡೆ ಪೂಸಿದ ಬೂದಿ (ಉಮಾಶ. ೨೯). **ತೊಗಲುಡೆ :** ತೊಗಲುಡೆಯ ತೆಗೆದಿಟ್ಟು . . . ಪೋದರಾಳುಗಳು (ಕಾಲೂರ. ೯೦-೧೭೫). **ತೊವಲುಡೆ:** ಪಿಡಿದ ಬಿಲ್ಲುಗಳಿಂದುಟ್ಟ ತೊವಲುಡೆ [ಪಾಠಾಂ. ತೊವಲುಡಿಗೆ]ಗಳಿಂ . . . ಬೇಡವಡೆ ಕೂಡೆ (ನಂಬಿರ. ೧೮-೩೦); ಮಿತ್ರನು ಧನಪತಿಯಾದರು ಶಂಕರ ತೊವಲುಡೆಯಾಂತನು ತಾನು (ಇಂಚಾಪ. ೧೬೩-೪). [ತೋಲ್$_1$ + ಉಡೆ$_2$]

**ತೋಲುತಪ್ಪು** (ಕ್ರಿ). ತೂಕ ತಪ್ಪು ; ಸಮತೋಲನವನ್ನು ಕಳೆದುಕೊಳ್ಳುಃ ತೋಲುತಪ್ಪಿತೊ-ಚೀರು, ಎದೆಯೊಡೆವ ಅಳು, ಕುದಿತ, ಮಿಡಿತ (ನವ್ಯಧ್ವ. ೩-೩). [ತೋಲು$_3$ + ತಪ್ಪು$_1$]

**ತೋಲೆ, ತೋಳೆ** (ನಾ). ೧. ಬಾವಲಿ ; ಕಣ್ಣಪಟಃ ತೊಗಲ ಬಾವಲಿ, ತೋಲೇಹಕ್ಕಿ ; ಕಣ್‌ಕಪಟ (ನಮ್ಮನು. ೨೩೯). ೨. ಕಣ್ಣಿನ ಪೊರೆ : (+). **ತೋಳೆ :** ೧. ಸ್ಪರ್ಶರಸ ಗಂಧ ರೂಪುಗಳೆಂಬೀ ನಾಲ್ಕುಮನಱಿವ . . . ತೊನಸಿ ತೋಳೆ ತೋಲೆ ಕೊಲಿಗ ಮಿಸಿರಿಕೆ ಪಚ್ಚೆ ಮಿಡುತೆ (ಪಸಾರ. ೪೯); ತೆ ೦ಳೆಯ ಹಿಂಡು ಕವಿದರೆ ಕರಿಗೆ ಕಳವಳವೇ (ಕಾಶಿರಾ. ೩೩-೨೦); ಎದ್ದ ತೋಳೆಯ ಹಿಂಡನಗಲಕೆ ಹದ್ದು ಬಡಿದಂದದಲಿ (ನಿಭಾಗ. ೪-೯-೧೭). [ < ತೋಲ್$_1$ ]

**ತೋಲ್ಗಟ್ಟು** (ಕ್ರಿ). (ಮುಂಗೈಗೆ) ಚರ್ಮವನ್ನು ಕಟ್ಟುಃ ಹಾರಾದ್ಯಾಭರಣಂಗಳನೊಲ್ಲದೆ ತೋಲ್ಗಟ್ಟಿ (ಧರ್ಮಾಮೃ. ೭-೬೩). [ತೋಲ್$_1$ + ಕಟ್ಟು$_1$]

**ತೋಲ್ದಪ್ಪು** (ಕ್ರಿ). ದಾರಿ ತಪ್ಪು; ಮಾರ್ಗ ಬಿಡುಃ ತೋಲ್ದಪ್ಪಿ ಕೇಡುಗಳ ಬಳಿವಿಡಿಯಲೆಳಸುತಿಹ ಮಾಲಿಸುವ ಕವಲ್ಗಳಿಮಾತುಗಳನುಗಿದು (ಕಾಲೂರ. ೧೨೭-೨೬೯). [ತೋಲ್$_3$ + ತಪ್ಪು$_1$]

**ತೋಲ್ಪಂಜರ** (ನಾ). ತೊಗಲಿನ ಗೂಡು; ಚರ್ಮದ ಪಂಜರಃ ಚಂಡಾಲರ ಕಯ್ಯೊಳ್ಪೆಟ್ಟ ತೋಲ್ಪಂಜರದ ಪಡಕೆಯೊಳ್ಸಿಲ್ಲ ದುರ್ವಾರದುಃಖೋತ್ಕರ ಮೆ[ಲ್ಲಂ ನೋಡ] ಲೆನ್ನಿಂದ್ರಿಯನಿವಹದ ದೋಷಂ ದಲ್ (ಕಾದಂಉ. ೭೫೪). [ತೋಲ್$_1$ + ಪಂಜರ$_1$]

**ತೋಲ್ವಾವಲ್,** ತೊಗಲುಬಾವಲಿ (ನಾ). (ದೊಡ್ಡ ರೆಕ್ಕೆಗಳುಳ್ಳ) ಮರ, ಗಿಡಗಳಿಗೆ ನೇತು ಬೀಳುವ ಒಂದು ಬಗೆಯ ಪಕ್ಷಿ : ಕಾವುದು ದೇವ ಯಾಚಕನನಂಜದಿರೇಕೆ ನೇಲ್ವ ತೋಲ್ವಾ[ಪಾಠಾಂ. ಳ್ವಾ]ವಲೊ ಮತ್ತವಾರಣದ ಸೊಂಡಲೊ (ಲೀಲಾವ. ೨-೧೦೮). **ತೊಗಲುಬಾವಲಿ :** ತೊಗಲುಬಾವಲಿ ಮರದ ಜೋಲು ತೊಗಟೆ (ನವ್ಯಧ್ವ. ೮೭). [ತೋಲ್$_1$ + ಬಾವಲ್ (<ವಾವಲ್)]

**ತೋಲ್ವಿಡಿ** 'ತೊವಲ್ವಿಡಿ' ನೋ.

**ತೋಳ್ವುಲ್ಲೆ** (ನಾ). (ಗುರಿಯಿಡಲು) ತೊಗಲಿನಿಂದ ಮಾಡಿದ ಹುಲ್ಲೆ; ಚರ್ಮದ ಜಿಂಕೆಃ ನೆರೆದಿಸುತಿರೆ ತೋಲ್ವುಲ್ಲೆಯನಿರದದು ಬಿಟಿಸ್ಕೊಡೆ ಪುರಾಣಕೂಪದೊಳ್ (ಪಂಪಭಾ. ೨-೩೦). [ತೋಲ್$_1$ + ಪುಲ್ಲೆ$_1$]

**ತೋವಲ್** 'ತೋಲ್$_1$' ನೋ.

**ತೋವಿಕ್ಕು** (ಕ್ರಿ). = ತೋಹಿಡುಃ ತೋವಿಕ್ಕಿ ಬಹ ಚಿತ್ರಕಾಯನುರುಗವಲಿಗುಂ ಜೀವ ತಾಂ ತಲ್ಲಣಿಸಿ ಗೋವ್ರಜಂ ಬೆಚ್ಚುವೊಲು . . . ಗಜಬಜಂಗೊಳುತಿರ್ದುದು (ಪರಶು. ೩೫-೧೪). [ತೋವು (<ತೋರ್ಪು) + ಇಕ್ಕು$_1$]

**ತೋವು** 'ತೋರ್ಪು' ನೋ.

**ತೋವೆ,** 'ತೊವ್ವೆ' ನೋ.

**ತೋಶಿಕಾನೆ** 'ತೋಷೀಖಾನೆ' ನೋ.

**ತೋಷ** (ನಾ). ಆನಂದ ; ಹರ್ಷ ; ಸಂತೋಷ : "ಗಹಗಹಿಕೆಯೆನಲ್ ೦೦ೀಷಂ[ಪಾಠಾಂ. ಸಂತಸ]" (ಧಾರನಿ. ೨೧) ; ತಂದರು ನೊಸಲಿಗೆ ಕೈಗಳ ಬಿನ್ನಹವೆಂದರನೂನತೋಷದಲಿ (ಶ್ರೀಪುಸಾಂ. ೧೬೭) ; ಶೀಲಕೆ ಸಮನಾದ ತೊಡವಿಲ್ಲ ತೋಷಕೆ ಸಮನಾದ ಧನವು ಬೇರಿಲ್ಲ (ಇಂಚಾಪ. ೧೩೪-೭೭) ; ರೋಷ ಹೆಚ್ಚಿ ತೋಷವಳಿದು ಮೋಸಹೋಯ್ತು ಜಗವಿದು ! (ಕರುಣಾ. ೮೧-೧೮) ; ಚಿಕ್ಕಶಿಶುವಾಗಿದ್ದ ಕಾಲವಿತ್ತೊಂದು . . . ಮಿಕ್ಕ ನೆನಹುಗಳು ಕೊಡವಾ ತೋಷವೆಂದುಂ (ಕಎಪು. ೯-೯). [ಸಂ.]

**ತೋಷಖಾನೆ** 'ತೋಷೀಖಾನೆ' ನೋ.

**ತೋಷಣ** (ನಾ). ೧. ಆನಂದವನ್ನುಂಟುಮಾಡುವಿಕೆ ; ತೃಪ್ತಿಪಡಿಸುವಿಕೆ. ೨. ಆಮೋದ ; ಆಹ್ಲಾದ ; ತೃಪ್ತಿ ; ಸಂತಸ : ತ್ಯಾಗಗುಣಕ್ಕೆ ತಾಯ್ವನ ಸಮಸ್ತನ್ರಿ[ನೃ]ಪಾಳನಿಯೋಗವರ್ತನಾಶ್ರೀಗೆ ನಿವಾಸವಿಷ್ಟರ ವಿಶಿಷ್ಟರ ತೋಷಣ ಪೋಷಣಾಂಗಳೊಳ್ಕಾಗರಮೆಂದು ಬಣ್ಣಿಸುವುದೀ ಧರೆ ಪಣ್ಡಿತಪಾರಿಜಾತನಂ ನಾಗನಾ ಜನಾರ್ಧನನಾ (ಎಇ. XXI, ೧೩-೩೩ ; 1260) ; ಈ ಬಿನದಿಗೆ ಕುಹಕವೆ ತೋಷಣವೋ (ಗಡೀಶ. ೪-೯೪). [ಸಂ.]

**ತೋಷಿಖಾನೆ** 'ತೋಷೀಖಾನೆ' ನೋ.

**ತೋಷಿತ** (ಗು . ಸಂತೋಷಗೊಳಿಸಿದ ; ತೃಪ್ತಿಪಡಿಸಿದ : ನಿಜಾಂತರಾಳಾಶ್ರಿತಲೋಕಾನಂದನಮುಂ ತೋಷಿತಮಾನಂದನಮುಂ ನಿರೀಕ್ಷಿಸಲ್ಪಡೆ ನೃಪತೀ (ರಾಜಶೇ. ೧೧-೩). [ಸಂ.]

**ತೋಷಿಸು** (ಕ್ರಿ). ಸಂತೋಷಪಡಿಸು ; ತೃಪ್ತಿಪಡಿಸು ; ಆಮೋದಗೊಳಿಸು : ಅಖಿಳವೀರರ್ಕಳಂ ಗೆಲ್ದನಿವನಾಂ ತೋಷಿಸುವೆನೆಂದನು (ಜೈಮಿಭಾ. ೨೭-೩೦) ; ನಿಜತನುವನರೆದು ತೋಷಿಸುವುದೊಲವು (ವಿಶೀಗೀ. ೨-೧೫). [ತೋಷಣ + – ಇಸು$_3$]

**ತೋಷೀಖಾನೆ,** ತೋಶಿಕಾನೆ, ತೋಷಖಾನೆ, ತೋಷಿಖಾನೆ, ತೋಷೇಖಾನೆ (ನಾ . ಅರಮನೆಯಲ್ಲಿ ಆಭರಣ, ಪೋಷಾಕು, ಹಣ ಮೊದಲಾದುವುಗಳನ್ನಿಡುವ ಮನೆ ; ಖಜಾನೆ ; ಭಂಡಾರ : ತೋಷೀಖಾನೆ ತಯಾರ್ರಿ (ಎಕ. XIV, ಮೈಸೂರು. ೧೩೦ ; 1827) ; ಟಿಪ್ಪೂಸುಲ್ತಾನರ ಕಾಲದಲ್ಲಿ ತೆ ೦ಷೀಖಾನೆಯ ಅಧಿಕಾರದಲ್ಲಿದ್ದ ಪೂರ್ಣಯ್ಯನವರನ್ನು ದಿವಾನ್‌ಪದವಿಗೆ ನಿಯಮಿಸಿದರು (ಮಹಾವಂ. II, ೩); ಪೂರ್ಣಯ್ಯನವರು

ಬಹು ಬುದ್ಧಿವಂತರಾಗಿ ಇದ್ದದ್ದರಿಂದ ತೋಷೀಖಾನೆಯ ಭಕ್ಷಿ ಆಸದಲ್ಲಿ ಖಾನನು ನವಾಬರಿಗೆ ಹೇಳಿ . . . ನೇಮಕ ಮಾಡಿಸಿದನು (ಖಾಮವಂ. ೨೦೯). **ತೋಶಿಕಾನೆ :** ಆ ದಂಡಿನ ಸಾಮಾನು, ಸರಂಜಾಮು, ತೋಶೀ ಕಾನೆ, ಫಿರಂಗಿ ಮುಂತಾಗಿ ಕೊಡಗಿನ ಸಂಸ್ಥಾನದವರು ತೆಗೆದುಕೊಂಡರು (ರಾಜೇಂದ್ರ. ೧೨). **ತೋಷಖಾನೆ :** ಶ್ರೀ ನರಸಿಂಹ ತೋಷಖಾನೆ ಗೆ ಇಲ್ಲ ಸೇರ್ವೆ ಜವರಾಯಿಗೌಡನ ಸೇವೆ (ಎಕ. XV, ಹೊಳೆನ. ೮೦ ; ?). **ತೋಷಿಖಾನೆ :** ನಾನು ಈಗಲೇ ತೋಷಿಖಾನೆಗೆ ಹೋಗಬೇಕಾದ ಕೆಲಸವಿದೆ (ಕೃಷ್ಣಭೂ. ೧೭); ಈ ಖಜಾನೆಯ ಐಶ್ವರ್ಯವನ್ನು ನೋಡು ವುದು ಸಾಧ್ಯವಿಲ್ಲ ಎಂದು ಆ ತೋಷಿಖಾನೆಯ ಸುತ್ತಲೂ ಸೇನೆಯವರನ್ನು ನಿಲ್ಲಿಸಿ ಹೊರಟು ಹೋದರಂತೆ (ಮುಸುಗ. ೩೭). **ತೋಪೇಖಾನೆ :** ಕಛೇರಿಗಳು–೧. ದಿವಾನ್ ಕಛೇರಿ . . . ೭. ತೋಷೇಖಾ (ಮಹಾವಂ. II, ೩೯).

[←ಪಾರ. ತೋಶ್‌ಖಾನ; ಹಿಂ. ತೋಶಾಖಾನಾ; ಮರಾ. ತೋಶ್‌ಖಾನಾ, ತೋಶೇಖಾನಾ]

**ತೋಷೇಖಾನೆ** 'ತೋಷೀಖಾನೆ' ನೋ.

**ತೋಸ** (ನಾ). = ತೋಷ. 'ತೋಸಂಗೊಳ್' ಪರಾ.

[ <ಸಂ. ತೋಷ ]

**ತೋಸಂಗೊಳ್** (ಕ್ರಿ). ಸಂತೋಷಹೊಂದು ; ಆನಂದಿಸು : ನೇಸಸರ್ಾಸಿರ ಕೈಗಳಿಂದೊಲವಿನಿಂ ತಟ್ಟಿಸಲೆಂದೇಗಳುಂ ತೋಸಂಗೊಂಡು ಕೆಲಕ್ಕ ದೊರ್ಮೆ ಸೆಳೆವಂತೆ (ಮುಸೂಮ. ೧-೫). [ ತೋಸ + ಕೊಳ್$_1$ ]

**ತೋಸ್ದಾನಿ** 'ತೋಸ್ದಾನು' ನೋ.

**ತೋಸ್ದಾನು**, ತೋಸ್ದಾನಿ (ನಾ). ಸೈನಿಕನು ತೋಟಾಗಳನ್ನಿಡಲು ಬಳಸುವ ಚರ್ಮದ ಚೀಲ ; ಶಿಪಾಯಿಯ ಮದ್ದುಗುಂಡಿನ ತೊಗಲಂಚೀಲ : (೬). **ತೋಸ್ದಾನಿ :** ಸುಲ್ತಾನಿ ತೋಟ ತುಂಬಿದಂಥಾ ತೋಸದಾನಿ ಒಂದು . . . ಕೊಟ್ಟು (ರಾಜೇಂದ್ರ. ೫೬).

[←ಮರಾ. ತೋಸ್ದಾನ್, ತೋಸ್‌ದಾನ್ ಪಾರ. ಹಿಂ. ತೋಶ್‌ದಾನ್ ; ]

**ತೋಹಡಿಕೆ** (ನಾ). ಓಕರಿಕೆ ; ವಾಂತಿ ; ವಮನ : "ತೋಹಡಿಕೆಯೆನಲೊ ಗಡಿಕೆ" (ಭಾರನಿ. ೫೩) : 'ಓಗಡಿಕೆ' ಪರಾ. [ ? + – ಇಕೆ ]

**ತೋಹಮತ್ತು**, ತೋಹಮಾತು (ನಾ). ಮಿಥ್ಯಾರೋಪ ; ಸುಳ್ಳು ಆರೋಪ ; ಅಪವಾದ : ಸುಮ್ಮಗೆ ಅವರ ಮೇಲೆ ತೋಹಮತ್ತೂ ಹಾಕುವ ದುರಾತ್ಮರನ್ನು ದಬ್ಬಿಸಿಬಿಡೋದು ಉತ್ತಮ (ವಾಗ್ದೇವಿ. ೧೯೭). **ತೋಹಮಾತು :** ನೀವು ಅವನ ಮೇಲೆ ನಿಷ್ಕಾರಣವಾಗಿ ತೋಹಮಾತು ಹಾಕುವದು ನಿಮ್ಮ ದುಷ್ಟಸ್ವಭಾವದ ದೃಷ್ಟಾಂತವೆಂತಲೇ ತಿಳಿಯಬೇಕು (ವಾಗ್ದೇವಿ. ೨೦೭).

[ ←ಅರ. ಹಿಂ. ತೋಹಮತ್, ತುಹಮತ್ ; ಮರಾ. ತೋಹಮತ್ ]

**ತೋಹಮಾತು** 'ತೋಹಮತ್ತು' ನೋ.

**ತೋಹಿಡು** (ಕ್ರಿ). ಬೇಟೆಗಾಗಿ ಅಡಗಿಕೊಂಡು ಹೊಂಚು ಹಾಕು : ಸರಸಿಯ ತಡಿಯ ಮರನನೇರ್ದಾ ಮರದೊಳು ತೋಹಿಡಲಾ ಸರಿತ ದೊಳಿರ್ದುದು ಲಿಂಗಾಕಾರವನಾದ್ಯಂದ (ಸಿಂಗಿರಾ. ೨೮-೩೪).

[ ತೋಹು$_2$ (<ತೋರ್ಪು) + ಇಡು$_1$ ]

**ತೋಹು$_1$** 'ತೋಪು$_1$' ನೋ.

**ತೋಹು$_2$** 'ತೋರ್ಪು' ನೋ.

**ತೋಹುಕಾಟ** (ನಾ). ಮರಸು ಬೇಟೆಯಾಡಲು ಸಂಚಿನ ಸ್ಥಳದಲ್ಲಿರುವ ವನು : ಬಲು ನಾಯ ಬಾಯಿಂದ ಮುರುಚಿಕೊಂಡೋಡುವ ಮೊಲಂ ತೋಹುಕಾಟರಿಂ ಪರಿದೆಟಗಿ ಕೊಲುವ ಕೋಣಂ (ಸೋಮಚ. ೩-೭).

[ ತೋಹು$_2$ (< ತೋರ್ಪು) + – ಕಾಟ ]

**ತೋಹುಗ** (ನಾ). = ತೋಹುಕಾಟ : ತಡೆಯದೊಡ್ಡಾ ಪಂದಿ ಮಿಗಗಳ ನಿಡುವಲೆಯ ನೋಡೈದೆ ತೋಹುಗರೆಡೆಗವಂ ಸೋವುಗರು ಜಡಿತರೆ ವಿಂಧ್ಯಕನು ಕಡುಗಿ (ಸಾಳ್ವಭಾ. ೫-೨೫).

[ ತೋಹು$_2$ (<ತೋರ್ಪು) + – ಗ$_2$ ]

**ತೋಹುಗಾಣಿಸು** (ಕ್ರಿ). ಮರಸುಬೇಟೆಯಲ್ಲಿ ಕಾಯಿಸಂ, – ಸಂಚಿನ ಸ್ಥಳದಲ್ಲಿರಿಸು : ವಿರಹಿಮಿಗವನೆಸುವರೆ ಕಾವ ಶಬರ ತನ್ನೆರ ತೋಹು ಗಾಹಿ[ಣಿ]ಸುವಂತೆ ಸರಸಿಜಲೋಚನೆಯರು ಲೀಲೆಯಿಂದ ಗೋಪುರ ದೊಳಗನುದಿನವಿಹರು (ತರ್ಕಕಾ. ೧-೫೮).

[ ತೋಹು$_2$ (<ತೋರ್ಪು) + ಕಾಣಿಸು ]

**ತೋಹುಗೊಳ್** (ಕ್ರಿ). ಬೇಟೆಗಾಗಿ ಮರೆಯಾದ ಸ್ಥಳದಲ್ಲಿರು, ಸಂಚಿನ ತಾಣದಲ್ಲಿರು : ಬಲೆಯೊಡ್ಡಿ ತೋಹುಗೊಂಡೆರೆಗದಟ ಬೆಳ್ವಾರ ಸುತ್ತಿ ಸರಿವ ಬಗಿವ ಸಂಕಟ ಬೇಡ (ಹಡಕಾ. ೫-೨೦).

[ ತೋಹು$_2$ (<ತೋರ್ಪು) + ಕೊಳ್$_1$ ]

**ತೋಹುವಿಡಿ** (ಕ್ರಿ). ಬೇಟೆಗಾಗಿ ಹೊಂಚುಹಾಕು : ಕಾನನಸ್ಥಳದೊಳ ಗೊಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ದಶಕು. ೨-೧೧೫); ಪಿರಿದೆನಿಪ ಗಜದ ಬೇಂಟೆಯನಾಡಲೆಂದು ಕಾನನದ ಮಧ್ಯದೊಳ ಗೊಂದು ಕರಮೆಸೆವ ಕೆಟಿಯೊತ್ತಿನೊಳ್ ತೋಹುವಿಡಿದಿರಲ್ಕೆ (ಸಿದ್ಧೇಪು. ೭-೯). [ ತೋಹು$_2$ (<ತೋರ್ಪು) + ಪಿಡಿ$_1$ ]

**ತೋಹುವೇಂಟೆ** (ನಾ). ಒಂದು ಬಗೆಯ ಬೇಟೆ ; ಮರಸುಬೇಟೆ : ನೆಗಳ್ತೆಯ ತೋಹುವೇಂಟೆ ಸಂಗಳಿಸಿದ ನೀರವೇಂಟೆ ಘನ ಸೋಹಿನ ವೇಂಟೆಯೆನಿಪ್ಪ ನಾಮಮುಮಂ ತಳೆದೆಸೆವೆಂಟು ಬೇಂಟೆಗಳನಾಡಿದಂ (ತ್ರಿಪುವಿ. ೨೭-೯೨) ; ಅರಸಿ ಮರುತಾದೇವಿಗೋಗೆದು ಜನನಾಮದಿಂದಿರುತೊಮ್ಮೆ ತೋಹುವೇಂಟೆಗೆ ಹೋಗಿ ನದಿಯೆಡೆಗೆ ಬರಲು (ವೀಕ್ಷಿಪು. ೪-೭-೩೭).

[ ತೋಹು$_2$ (<ತೋರ್ಪು) + ಬೇಂಟೆ ]

**ತೋಹೆ** 'ತೋರ್ಪು' ನೋ.

**ತೋಳ್**, ತೋಳು (ನಾ). ೧. ಬಾಹು ; ರಟ್ಟೆ : ಈ ನರೇಂದ್ರಂ ಸಾಕ್ಷಾ ದಿಂದ್ರಂ ತಾನೆನೆ ಸಲೆ ನೆಗಟ್ದಿಂದ್ರೇಂದ್ರನ ತೋಳೆ ತೊಟ್ಟಿಲಾಗಿರೆ ಬೆಳೆದಂ (ಪಂಪಭಾ. ೧-೪೪) ; ತೊಳಗುವ ಮಾಳವೀಮುಖಸರೋರುಹಕಾಂತಿಗೆ ಸೋಲ್ತ ಚಂದ್ರಮಂಡಳದ ಕಳಂಕಮಂ ಕಳೆದಪಳ್ ನಗರೀಲಲಿತಾಂಗಿ ನಿಳ್ಕಿ ತೋಳ್ಗಳಿನೆನೆ ಕೂಡೆ ಕಣ್ಗೊಳಿಸಿ ತೋರ್ಪುವು . . . ಕೇತನಾಳಿಗಳ್ (ಕಾದಂಪೂ. ೩೦೩) ; ಎನಗಿರ್ವರುಮೆರಡುಂ ತೋಳೆನಗಿರ್ವರುಮೆರಡು ಕಣ್ಗಳನ್ನರೆ ಯುವರಾಜನುಮಂಗರಾಜನುಂ (ಗದಾಯು. ೩-೬೭) ; ದೋಷ ಮುಳ್ಳೊಡೆ ತನ್ನ ತೋಳನಾದೊಡಂ ಕಡಿದುಬಿಡುವುದು (ಪಂಚತಂ. ೧೦೦-೫) ; ಬಲ್ಲಾಳನ ತೋಳ ಬಾಳ ನೆಳಲಾದುದು ಧಾತ್ರಿಗೆ ವಜ್ರ ಪಂಜರಂ (ಎಕ. VII, ಶಿವಮೊ. ೫೮-೧೩ ; 1203) ; ಸಖನ ಮಂಚದಲಿ ಕುಳ್ಳಿರಿಸಿ ತಕ್ಕಿಸಿಕೊಂಡು ಮುಖ ಕೊರಳುರ ತೋಳ್ದೊಡೆಯ ನಖದಗ್ರ ದಿಂದಿಟಿದಿಟಿದು (ಕಂಸವಿ. ೯-೧೨೩). ೨. ಮರದ ದೊಡ್ಡ ಕೊಂಬೆ, ಮುಖ್ಯ ಶಾಖೆ : ತೋಳ ನೀಳದ ಕಂದಳಿರಿಂದಂ ಸಂದಣಿಸಿರ್ದ ಮದಾಳಿ ಯಿಂದೋಳದಿಂ ಮಳಯಾನಿಳಲೀಲಾಂದೋಳದಿನೊಪ್ಪೆ (ಆದಿಪು. ೩-೬೦); ಬಂಣಟೆ ಮೂಡೆ ೨ ಮುಂಡಿನ ಮಾಡುವ ಬಳು ಮೂಡೆ ೧ ಚಿಕ್ಕ ಬಿಟ್ಟುವ ಕೊಡಂಗೆ ಮೂಡೆ ೧ ಅದಟ ಮೇಗಣ ತೋಳ ಆರವೆ ಕಂಬಿ ಸಹಿತವಾಗಿ (ಎಇ. XVII, ೧೬೨-೫೧ ; 1256). **ತೋಳು :** ೧. "ಭುಜ ದೊಳಗಕ್ಕು ತೋಳೆಂದು" (ಕಶರ. ೪೯) ; ಏರ್ದ ಪಡಪಡ ಪಾರ್ದಪುದೇಕೆ ಕೆಳದಿ ತೋಳುಗಳಂ ಪಿಡಿ ಮೃದುಹಸ್ತತಳದಿ (ಕಾದಂಪೂ. ೪೮೨ ರಗಳೆ) ; ಶಿವನ ತೋಳ ತೊಡವಾನತರ ವಿಾಸಲ ಮನೋರಥವು ಸಿರಿ ಸರಸ್ವತಿವೆರಸಿ ಗಿರಿಜೆ ಬಿಜಯಂಗೈದಳು (ಸಿದ್ಧರಾ. ೧-೫೭) ; ಸಿಂಹದ ತೋಳ ತೆಕ್ಕೆಯ

ಕರಿಯ ಸೆಳೆವಂದದಲಿ . . . ಧರಣಿಪಾಲನ ತೆಗೆದು ಭೀಮನ ಬಳಿಯ ನೆಚ್ಚನು ಜೋಡ ಜೋಕೆಯ ಜರುಹಿದನು (ಕುವ್ಯಾಕ. ೧೪-೩) ; ತೋಳು ಇಲ್ಲದವನಿಗೆ ಭುಜಕೀರ್ತಿ ತಾನೇಕೆ (ಪುರಂಧ. ೩-೭೪-೧೩) ; ರನ್ನದ ಬಳೆ ತೋಳ ತಾತಿ ಮೋಹನದತ್ಯುನ್ನತ ಭುಜಕೀರ್ತಿಯಿಂದ . . . ರೂಪ ಸಂಪನ್ನೆ ಮೆರೆದಳೊಲವಿನಲಿ (ಕಂನವಿ. ೯-೭೪) ; ಕಾಲಿಲ್ಲದಲೆ ಹರಿಗು ತೋಳಿಲ್ಲದಲೆ ಹೊರುಗು ನಾಲಿಗಿಲ್ಲದಲೆ ಉಲಿವುದು (ಸರ್ವಜ್ಞ. ೨೦೩೯). ೩. ಭುಜಬಲ ; ಸಾಮರ್ಥ್ಯ : ತೋಳಿಂದೆ ತಿಳಿವಿಂದೆ ನುಡಿಯಿಂದೆ ಜಗದಿರವ ಮೇಲೆನಿಪವನೆ ರಸಿಕ (ಮಂಕುಕ. ೩೭೫). ೪. ಆನೆಯ ಸೊಂಡಿಲು : ಮೋಟಿಯ ತೋಳಿನಲಿ ಮೋದಿದವು ಮಹಿಯನು ಸೊಕ್ಕಿದಾನೆಗಳು (ಕುವ್ಯಾದ್ರೋ. ೧೩-೭) ; ಅಟ್ಟಿ ಹೊಯ್ದನು ಹೊಗುವ ತೇರಿನ ಘಟ್ಟ ತೂಳುವ ತೋಳಿನಾನೆಯ ಮೆಟ್ಟಿದನು (ತೊರರಾ. ೩-೭-೪೨). 'ತೋಳವಟ್ಟ' ನೋ. ೫. ಅಂಗಿಯ ಅಥವಾ ಕೋಟಿನ ಕೈ : ಮುರಿದ ಕೈಯಾದರೆ ಮುಚ್ಚಿಕೊ ಕೈಯನು ಅಂಗಿಯ ತೋಳಿನ ಒಳಗೆ (ಇಂಚಾಹ. ೨೩೯-೮೦). ೬. ಗಾಡಿಯ ತೊಟ್ಟಿಲಿನ ಎರಡೂ ಬದಿಗಿರುವ ಮರದ ದಿಂಡು : ಯಾವ ಗಾಡಿಗೆ ತೋಳು ಇಲ್ಲ. ಯಾವುದರ ಬಾಟೆವು ಮುರಿದುಹೋಗಿದೆ (ಚಿಳಭಾ. ೧೭೭).

**ತೋಳ ತೀಟೆ** = ತೋಳಿನ ನವೆ ; ಯುದ್ಧ ಮಾಡುವ ತವಕ : ತೋಳ ತೀಟೆಯುನವನ ನೆತ್ತಿಯ ಮೇಲೆ ಕಳೆವೆನು (ಕುವ್ಯಾಭೀ. ೧-೭೦). **ತೋಳ ತೀನ್**=ತೋಳ ತೀಟೆ : ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳೆ ಬಾಳ್ ಪಳಂಚಿ ಮಾರ್ಕೆಡಿವಿಡೆ ನೋಡಲಂಜಿ ದೆಸೆದೇವತೆಗಳ್ ಪೆಜಪಿಂಗೆ ತೋಳ ತೀನ್ ಕಿಡೆ ನಲಿದು (ಪಂಪಭಾ. ೧೦-೪೩). **ತೋಳ ತೋಟಿ**=ತೋಳಿನ (ಬಲದ) ಸ್ಪರ್ಧೆ,–ಹುರುಡು : ಕಾಳಗದಲಮರೇಂದ್ರ ಸೋತರೆ ಸೋಲವದು ನಿನಗೆಂಬೆ ನಿನ್ನಯ ತೋಳ ತೋಟಿಯ ತೋಱು (ತೊರರಾ. ೪-೫-೫). **ತೋಳನ್ನಾಡು** = (ಮಕ್ಕಳು) ಆಟಕ್ಕಾಗಿ ಕೈಯ್ಯನ್ನು ಅಲುಗಾಡಿಸು : ತೋಳು ತೋಳು ತೋಳು ರಂಗ ತೋಳನ್ನಾಡ್ಯೆ (ಪುರಂದ. ೩-೧೮೯ ಪಲ್ಲವಿ). **ತೋಳ ಪಾವಡೆ** = ಅಧಿಕಾರ ಅಥವಾ ಬಿರುದಿನ ಸಂಕೇತವಾಗಿ ತೋಳಿಗೆ ಕಟ್ಟಿಕೊಳ್ಳುವ ಬಟ್ಟೆ : ಬಿರುದಿನ ತೋಳಪಾವಡೆಯ ದುರಗಲಿಗಳು ದುರ್ಗದಾಳ್ವೇರಿಯ ಮೇಲೆ ಪರಿಶೋಭಿಸಿದರುಬ್ಬಿನಲಿ (ಕಂನವಿ. ೧೧-೧೪೪). **ತೋಳ ಬಂದಿ** = ೧. ತೋಳಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ ; ಕೇಯೂರ : "ಕೇಯೂರಂ, ಅಂಗದಂ–ಈ ೨ ತೋಳ ಬಂದಿ" (ನಾಚಿರಾ. ೦೨೩) ; ಇಕ್ಕಿದ ರಷ್ಮದೋಲೆ ಹೊಸ ಮುತ್ತಿನ ಮೂಗುತಿ ತೋಳ ಬಂದಿ . . . ಚೆಲ್ವನೊಳಕೊಂಡಿರೆ (ಕಬ್ಬಿಕಾ. ೩೪೦). ೨. ತೋಳುಗಳ ಬಂಧನ; ಆಲಿಂಗನ. ೧, ೨ : ಆತ ಕೊಟ್ಟ ವಸ್ತು ಒಡವೆ ನನಗೆ ಅವಗೆ ಗೊತ್ತು ತೋಳುಗಳಿಗೆ ತೋಳಬಂದಿ ಕೆನ್ನೆ ತುಂಬ ಮುತ್ತು (ನಾದಲೀ. ೫೯-೧೫). **ತೋಳಬಾಪುರಿ, ತೋಳ ಭಾಪುರಿ** = ತೋಳಬಂದಿ : ತೋಳ ಬಾಪುರಿ ಯಿಟ್ಟು ಕಮಲ ಬಂಧವ ಕಟ್ಟಿ (ಜನರಾ. ೯-೫೨) ; ಚಾರುಭುಜಕೀರ್ತಿಯಂ ತೋಳ ಭಾಪುರಿಯು ಕರಕಂಕಣಂಗಳನು ಧರಿಸಿ (ನವಮೋ. ೧೭-೧೦). **ತೋಳ ಮಣಿ** = ತೋಳುಬಂದಿ ; ಕೇಯೂರ ; ನಳಿತೋಳೊಳ್ ತೊಡರ್ದೊಂದು ತೋಳ ಮಣಿವೋಲ್ (ಆದಿಪು. ೧೩-೪೦). **ತೋಳ ಮೊದಲ್** = ಕಂಕುಳಂ ; ಕಕ್ಷ : ಅಮರ್ದಂ ಮುಂದಿಡೆ ಮಂದಹಾಸಮಲರ್ಗಣ್ ಬೆಳ್ದಿಂಗಳಂ ಬೀಱೆ ತೋಳ ಮೊದಲ್ಗೆಯ್ದೆ ಪೊದಟ್ದೆ ಪೆರ್ಮೊಲೆಗೊಡಂಗಳ್ ಸೂಸೆ ಲಾವಣ್ಯತೋಯಮಂ (ಪಂರಾಮಾ. ೧-೧೦೩) ; ಲಾವಣ್ಯರಸಮಂ ಬೀಱೆ ಮುಮ್ದು ಮೊಗ ಮುಗುಳೆ ಹೊಗರಂ ತೋಳ ಮೊದಲಪ್ಪುಗೆಯ್ಯೆ (ಪದ್ಮರಾ. ೩-೩೧).

[ ದೇ. ॥ ತಮಿ. ಮಲ. ತೋಳ್ ; ತುಳು. ತೋಳ್, ತೋಳು ]

**ತೋಳ್₁** (ನಾ). ಒಂದು ಬಗೆಯ ಕಾಡುಮೃಗ ; ಈಹಾಮೃಗ ; ವೃಕ : "ಅರಣ್ಯಶ್ವಾ, ಕೋಕಃ, ಈಹಾಮೃಗಃ, ವೃಕಃ–ಈ ೪ ತೋಳಂ" (ಹಲಾಯು. ೩೮-೭೫); "ಕೋಕವಿಹಾಹಾಮೃಗಂ ವೃಕಮೆನಲ್ಕು ತೋಳನಕ್ಕು" (ಮಂಗರಾ. ೪೮-೮); ನಿಲ್ ತೋಳಂ ಬರ್ಪುದು (ಕವಿರಾ. ೧-೭೩); ಮೊಲನುಂ ಪಂದಿಯುಂ ತೋಳನುಂ . . . ಮುಂಗುರಿಯುಂ ಮೊದಲಾಗೊಡೆಯ ಸ್ಥಲಚರಂಗಳುಂ (ವಡ್ಡಾರಾ. ೯೭-೪) ; ಆತಂಗೆ ಧೂರ್ತವಿನೋದಮೆ ವಿನೋದಮಪ್ಪುದಱಿಂ ದುರ್ಜನಪರಿವೃತನಾಗಿ ಬಂದಂಗಡಿಯುಂ ಪುಗೆ ತೋಳನಂ ಕಂಡ ಕುಱಿವಿಂಡಿನಂತೆ ಪರದರ್ ಪರದುಪೋಗೆ (ಧರ್ಮಾಮೃ. ೩-೩೩) ; ಮರ್ತ್ಯರ ಸಹಸವೆಮ್ಮೊಡನೆ ತೋಳನಳವಿಗೆ ಮಲೆತ ಕುಱಿಗಳ ಜಾಲದಂತಿಹುದೆಂದು ಮಂದಕರಾಳವೃತ್ತಿಗಳು ನಗಲು (ಕುವ್ಯಾಸ. ೫-೩೯); ಪುಲ್ಲೆಯಂ ನೆಲದೊಳುಂ ಪಾಸಿ ತೋಳನ ತುಳಿದು (ಮಹಾವಿ. ೭-೨೭) ; ಹುಲಿ, ಕಿರುಬ, ತೋಳ ಮೊದಲಾದ ಕಾಡುಮೃಗಗಳು ಆ ಕಡೆ ಬಹಳ (ಕಳಹು. ೪) ; ತೋಳ ಗುಂಡಿಗೆ ಬಿದ್ದರೆ ಆಳಿಗೊಂದು ಕಲ್ಲು (ಗಾದ).

[ ದೇ.॥ ತಮಿ. ತೋಣ್ಪಾನ್; ತುಳು. ತೋಳ್, ತೋಳೆ; ತೆಲು. ತೋಡೆಲು, ತೋಡೇಲು ; ಬ್ರಾಹುಈ. ತೋಲ = ನರಿ ]

**ತೋಳ್₂** (ನಾ). ಗೆಳೆಯ ; ಮದುವೆಯಲ್ಲಿ ಗಂಡಿನ ಜೊತೆಯಲ್ಲಿ ಬರುವ ಸ್ನೇಹಿತ : ಅಳಿಯನಿಗಿಂತ ಅವನ ತೋಳನ ಅವಾಂತರ ಬಹಳ (ರೂಢಿ). [ ದೇ.॥ ತಮಿ. ಮಲ. ತೋಟಿ ]

**ತೋಳವಟ್ಟ** (ನಾ). ಆನೆಯು ಸೊಂಡಿಲಿನಿಂದ ಹೊಡೆಯುವ ಒಂದು ಕ್ರಮ : ಮಸಗಿದ ಮಿಟ್ಟುವೆ ಮದಗಜದೆಸಕಮನೊಳಕೊಂಡುದೆನಿಸಿ . . . ಬಂದು ಪನ್ನೆರಡುಂ ಹಸ್ತಪ್ರಹಾರದೊಳಂ ಪದಿನೆಂಟು ಕೋಡೇಱ ನೊಳಂ ಏಟುಂ ತೆಱದ ತೋಳವಟ್ಟದ ಪೊಯ್ಲೊಳಂ . . . ಪಡೆಯಂ ಪ್ರಳಯಮನೈದಿಸುತ್ತುಂ ಬರ್ಪುದಂ ಕಂಡು (ಮಹಾನೇ. ೧೩-೧೪೩ ವ).

[ <ತೋಳ್ + ? ]

**ತೋಳಾಟ** (ನಾ). ಮಕ್ಕಳು ತಮ್ಮ ತೋಳನ್ನು ಆಡಿಸುವ ಒಂದು ಕ್ರಮ : ಳಕಾರಕ್ಕೆ . . . ತೋಳಾಟಂ ; ಬಾಳೊಪ್ಪಂ (ಶಮದ. ೬೯ ಪ್ರಯೋ); ಮೇಲೆ ಪರವಾದಿಗಳ ಬಾಯ್ಗಳಂ ಪೊಯ್ವಂತೆ ತೋಳಾಟವಾಡಿ (ಚಬಪು. ೫-೩೯). [ ತೋಳ್ + ಆಟ ]

**ತೋಳಾಡಿಸು** (ಕ್ರಿ). ತೋಳನ್ನು ಅಲುಗಾಡಿಸು : ಪರವೆನಾಚಿ ಸಂಕಿಲಿ ನಾಚಿಯರನಪ್ಪುವ ತೋಳ್ಗಳಿವೆಂಬಂತೆ ತೋಳಾಡಿಸುತ್ತುಂ (ನಂಬಿರ. ೨-೫).

[ ತೋಳ್ + ಆಡಿಸು ]

**ತೋಳಾರ್ಪು** (ನಾ). ತೋಳಿನ ಶಕ್ತಿ ; ಭುಜದ ಬಲ : ಅವರಿಗೆ ತಿಮ್ಮಣ್ಣನಾಯಕನ ತೋಳಾರ್ಪಿನ ನೆನಪಾಯಿತು (ಕವೀರ. ೧೨೧).

[ ತೋಳು (<ತೋಳ್) + ಆರ್ಪು₁ ]

**ತೋಳು** 'ತೋಳ್' ನೋ.

**ತೋಳುಕಯ್ಗೊಡು** 'ತೋಳ್ಗೈಗೊಡು' ನೋ.

**ತೋಳುಕೆಲಸ** (ನಾ). ತೋಳಿನ ಶಕ್ತಿಯಿಂದ ಮಾಡುವ ಕೆಲಸ : ಬುದ್ಧಿಯ ಕೆಲಸ ಶ್ರೇಷ್ಠ ; ತೋಳುಕೆಲಸ ಮಧ್ಯಮ ; ಕಾಲ್ಕೆಲಸ ಹೆಗಲ ಕೆಲಸಗಳು ಅಧಮ (ವಚಭಾ. ೩೩೭).

[ ತೋಳು (<ತೋಳ್) + ಕೆಲಸ ]

**ತೋಳುಕೈಗೊಡು** 'ತೋಳ್ಗೈಗೊಡು' ನೋ.

**ತೋಳುಗುತ್ತು** (ನಾ). ಬಾಹುವಿಗೆ ಹೊಂದಿಕೊಂಡಿರುವಿಕೆ : ಭಾರಿಯ ತೋಳುಗುತ್ತಿನ ಜಯಲಕುಮಿ ಜಂಗಳವ ಜಾಱಿದಡೆ ಭಾಳಲಿಪಿಗಳ ಲೆಕ್ಕವನು ಪ್ರತಿಕೂಲವಿಧಿ ಪಲ್ಲಟಿಸಿ ಬರೆದಡೆ ಹೇಳಿ ಫಲವೇನೆನುತ ತುಂಬಿದನರಸ ಕಣಬನಿಯ (ಕುವ್ಯಾಗ. ೩-೨೮).

[ ತೋಳು (<ತೋಳ್) + ಗುತ್ತು₂ (<ಗುತ್ತ₁) ]

**ತೋಳುತೊಡಿಗೆ** (ನಾ). ತೋಳಿಗೆ ಧರಿಸುವ ಆಭರಣ ; ವಂಕಿ : "ಕೇಯೂರಂ, ಅಂಗದಂ ೨ ಬಾಹುಪುರಿ ಹೆಸರು. ನಾಗಮುರಿಗೆ ತೋಳು ತೊಡಿಗೆ ಬಾಜುಬಂದೂ ವಂಕಿ" (ಸಿದ್ಧಾಂತಿ. ೧೭೪).
[ ತೋಳು (<ತೋಳ್) + ತೊಡಿಗೆ (<ತೊಡುಗೆ) ]

**ತೋಳುಬಂದಿ** (ನಾ). = ತೋಳುತೊಡಿಗೆ : ತೋಳುಬಂಧನದಲ್ಲಿ ವಜ್ರದ ತೋಳುಬಂದಿಯು ಅಲಂಕೃತವಾಗಿದ್ದಿತು (ಶ್ರೀರಾಯ. ೨೩೨) ; ಶ್ಯಾಮು ರಾಯನಿಗೇ ಒತ್ತಿ ಒಗೆದ, ಬೆಳ್ಳಿಯ ತೋಳುಬಂದಿಯನ್ನು ಬಿಡಿಸಿಕೊಂಡು ತಂದ (ದೀಪಹ. II, ೧೪೩). [ ತೋಳು (<ತೋಳ್) + ಬಂದಿ$_1$ ]

**ತೋಳುಮರ** (ನಾ). ೧. ಗಾಡಿಯ ಮೂಕಿಗೂ ತೊಟ್ಟಿಲಿಗೂ ಸಂಬಂಧ ವನ್ನು ಕಲ್ಪಿಸುವ ಮರದ ಸಾಧನ : ಅನುಕರ್ಷಃ, ದಾರ್ವಧಸ್ಥಂ – ಆ ನೊಗದ ಕೆಳಗಿರುವ ಕೋಲೀಹಲಿಗೆಗೂ ತೋಳುಮರಕ್ಕೂ . . . ಹೆಸರು (ಸಿದ್ಧಾಂತಿ. ೨೫೪). ೨. ದಾರಿಯನ್ನು ತೋರಿಸುವ ಕೈಯಾಕಾರದ ಮರದ ಸಾಧನ ; ಕೈಮರ : ಆ ತೋಳುಮರದಿಂದ ಊರು ಮೂರು ಮೈಲಿಯಿದೆ (ಊ). [ ತೋಳು (<ತೋಳ್) + ಮರ$_1$ ]

**ತೋಳುವಲ** 'ತೋಳ್ವಲ' ನೋ.

**ತೋಳುವಲೆ** 'ತೋಳ್ವಲೆ' ನೋ.

**ತೋಳುವಳೆ** 'ತೋಳ್ವಳೆ' ನೋ.

**ತೋಳುವೆರಗು** 'ತೋಳ್ವೆಱಗು' ನೋ.

**ತೋಳೆ** 'ತೋಲೆ' ನೋ.

**ತೋಳೆಡೆಗೊಡು** (ಕ್ರಿ). (ತೋಳನ್ನು ದಿಂಬಾಗಿ ಮಾಡಿಕೊಂಡು) ನಿದ್ದೆ ಮಾಡು,– ಮಲಗು : ರಜನೀನಾರಿ ತೋಳೆಡೆಗೊಟ್ಟಳಂಬುಜಬಂಧು ಹೊಱವಂಟ (ಕುಮಾರವ್ಯಾ. ೧೮-೪೫). [ ತೋಳ್ + ಎಡೆಗೊಡು ]

**ತೋಳೆವಿಂಡು** (ನಾ). ಬಾವಲಿಗಳ ಸಮೂಹ,–ಗುಂಪು: ಬಿಲ್ವಡೆ ಪೊಕ್ಕಸೆ ಬಾಣಸಂಕುಲಂ ಕವಿದುವು ತೋಳೆ[ಪಾಠಾಂ. ಳ]ವಿಂಡು ಕವಿವಂತೆಲೆಯಿಕ್ಕಿದ ಕಾನನಂಗಳಂ (ಪಂಪಭಾ. ೧೩-೪೩). [ ತೋಳೆ (<ತೋಲೆ) + ಪಿಂಡು$_2$ ]

**ತೋಳೇರಿಸು** (ಕ್ರಿ). ಅಂಗಿಯ ತೋಳನ್ನು ಮೇಲೆತ್ತು ; ಜಗಳಕ್ಕೆ ಸಿದ್ಧ ನಾಗು : ನೀನು ಇನ್ನೊಂದು ಮಾತಾಡಿದರೆ ಆ ಮಾತಿನ ಕೊನೆಯುಸುರಿನ ಸಂಗಡ ಪ್ರಾಣವನ್ನು ಕಳೆದುಕೊಳ್ಳುವೆಯೆಂದು ತಿಳಿ ಎಂದು ತೋಳೇರಿಸಿದನು (ಜಯಂತ. ೨೯೫). [ ತೋಳು (<ತೋಳ್) + ಏರಿಸು (<ಏಱಿಸು) ]

**ತೋಳ್ಕಟ್ಟು** 'ತೋಳ್ಗಟ್ಟು' ನೋ.

**ತೋಳ್ಕೈಗೊಡು** 'ತೋಳ್ಗೈಗೊಡು' ನೋ.

**ತೋಳ್ಗಟ್ಟು**, ತೋಳ್ಕಟ್ಟು (ನಾ). ತೋಳುಬಂದಿ: ಎಡೆಯೆಡೆಗೆ ಸಜ್ಜುಕ ವೆನಿಸಿದ ಗೊಜ್ಜಗೆಯರಲ ಮಿಶ್ರದಿನುಪಾಶ್ರಯಂಬಡೆದ ಹೇಮತಾಮರಸದ ಮೊಗ್ಗೆಯ ತೋಳ್ಗಟ್ಟುಗಳು ಮಂ (ಜಗವಿ. ೬-೧೭ ವ). **ತೋಳ್ಕಟ್ಟು** : "ಕೇಯೂರಂ, ಅಂಗದಂ — ಈ ೨ ತೋಳ್ಕಟ್ಟು" (ಹಲಾಯು. ೯೧-೪೦೩).
[ ತೋಳ್ + ಕಟ್ಟು$_2$ ]

**ತೋಳ್ಗುಟ್ಟು** (ಕ್ರಿ). ತೋಳು ತಟ್ಟು; ಸಡ್ಡುಹೊಡೆ: ತೋಳ್ಗುಟ್ಟುತಾರ್ದು ಸುಮ್ಮಾನದಿಂ ಪಟುಭಟರ್ಕೊಳ್ಗೊಂಡು ಕುದಿಯುತಿರ್ದರು (ಜೈಮಿಭಾ. ೧೨-೫). [ ತೋಳ್ + ಕುಟ್ಟು$_1$ ]

**ತೋಳ್ಗೈಗೊಡು**, ತೋಳುಕಯ್ಗೊಡು, ತೋಳುಕೈಗೊಡು, **ತೋಳ್ಕೈಗೊಡು** (ಕ್ರಿ). ಗಂಡನ ಚಿತೆಯೇರಿ ಸಹಗಮನ ಮಾಡು ; ಮಹಾ ಸತಿಯಾಗು: ಅಷ್ಟಮಹಿಷಿಯರ್ ಕೃಷ್ಣನೊಡನೆ ... ತೋಳ್ಗೈಗೊಟ್ಟರು (ಪದ್ಮರಾ. ೧೧-೧೫೨). **ತೋಳುಕಯ್ಗೊಡು:** ಆ ಬೊಮ್ಮನಾಯ್ಕನ ಹೆಂಡತಿ × × ಬವೆನಾಯಕಿತ್ತಿ ತೋಳುಕಯ್ಗೊಟ್ಟು ಸಗ್ಗ ಪ್ರಾಪ್ತರಾದರು (ಎಕ. VII, ಶಿವಮೊ. ೬೧-೧೪ ;1287). **ತೋಳುಕೈಗೊಡು:** ಗಂಗಗೌಡನ ಸೊಸೆ ಮಗಸಿ ಶಿವುರಊಡದಲಿ ? ತೋಳುಕೈಗೊಟ್ಟಳು (ಮೈಆರಿ. ೧೯೩೭, ೬೦-೪; 16 ನೆಯ ಶತ). **ತೋಳ್ಕೈಗೊಡು:** ತಲೆಗಿರಿದು ಕೃಷ್ಣಂಗೆ ತಲೆಗೊಳ್ಳಿಯಾಱೊಡವನಳಲಿ ಕಿಚ್ಚಂ ಪಾಯ್ದುರಚ್ಯುತನೊಳು ಕಲಿ ರುಕ್ಮಿಣಿಪ್ರತತಿ ಬಲನೊಳಾ ರೋಹಿಣಿಯುಮೊಲಿದು ತೋಳ್ಕೈಗೊಟ್ಟುದುಮಂ (ಕಾನಂಚ. ೨-೧೧೮). [ ತೋಳ್ + ಕೈ$_2$ (<ಕೆಯ್$_2$) + ಕೊಡು$_1$ ]

**ತೋಳ್ತಿಂಡಿ** (ನಾ). ತೋಳಿನ ತೀಟೆ,–ನವೆ : ತಮ್ಮ ತೋಳ್ತಿಂಡಿಯನ್ನು ತೀರಿಸುವುದಕ್ಕೆ ಎಷ್ಟು ಹೆಚ್ಚು ಸಂದರ್ಭಗಳು ಒದಗುವುವೊ ಅಷ್ಟು ಅವರಿಗೆ ಆನಂದ (ಕರತ್ನ. ೩೪). [ ತೋಳು (<ತೋಳ್) + ತಿಂಡಿ ]

**ತೋಳ್ದಲೆ** (ನಾ). ಹೆಗಲು : "ತೋಳ್ದಲೆಯೆಂದುಂ ಮುಯ್ಯೆಂದುಂ ಭುಜಾಗ್ರಂ" (ಶಶಸಾ. ೩೦-೬೨). [ ತೋಳ್ + ತಲೆ$_1$ ]

**ತೋಳ್ದೀಂಟೆ** (ನಾ). = ತೋಳ್ತಿಂಡಿ : ಸುಧನ್ವಂ . . . ಇಂದೆನ್ನ ತೋಳ್ದೀಂಟೆಯಂ ಕಳೆವೆನೆನುತೆ ಕೃಷ್ಣಾರ್ಜುನರ ಸರಿಸಕ್ಕೆತರುತಿರ್ದನು (ಜೈಮಿಭಾ. ೧೪-೧). [ ತೋಳ್ + ತೀಂಟೆ$_1$ ]

**ತೋಳ್ದೀಸ್** (ನಾ). = ತೋಳ್ತಿಂಡಿ: ತೋಳ್ದೀಸಂ ಕಳೆದು ತಂದಪೆಂ ಪಂದಲೆಯಂ (ಚಂದ್ರಪು. ೧೧-೯೦). [ ತೋಳ್ + ತೀಸ್ ]

**ತೋಳ್ದುಱುಗಲ್** (ನಾ). ತೋಳುಗಳ ಸಮೂಹ,-ಗುಂಪು : ತ್ರಿದಶ ಗಣಾಧಿನಾಯಕನ ಪರ್ವಿದ ತೋಳ್ದುಱುಗಲ್ಗಳೊಳ್ ಪಳಂಚಿದೆ . . . ಎಂ ಪದುಳಮಾದುದೊ ದಿವ್ಯವಧೂಕದಂಬಕಂ (ಆದಿಪು. ೭-೧೨೫) ; ಎನಗೆ ನಭಂ ದಿಕ್ತಟಮಿನ್ನೆನಿತಂತರಮೆಂದು ನಿಳ್ಕಿ ನೋಡುವ ಗಿರಿರಾಜನ ತೋಳ್ದುಱುಗಲೆನಲ್ ನೀಳ್ದನೇಕಶಾಖೆಗಳೆಸೆದುದೊಂದು ಕದಂಬಂ (ಜಗವಿ. ೮-೨೪). [ ತೋಳ್ + ತುಱುಗಲ್ (<ತುಱುಂಗಲ್) ]

**ತೋಳ್ನಾಯಿ** (ನಾ). ಒಂದು ಬಗೆಯ ದೊಡ್ಡಗಾತ್ರದ ನಾಯಿ; ತೋಳ ದಂಥ ನಾಯಿ : ಉದಕಮಂಡಲದಿಂದ ಹೊಸದಾಗಿ ತಂದಿದ್ದ ಅಲ್ಸೇಶನ್ ತೋಳ್ನಾಯಿ ಅವರನ್ನು ಅಡ್ಡಾಡಿಸಲು ಕರೆದೊಯ್ದಿದೆ (ದಾಕೂಟ. ೨೪). 'ಸೀಳ್ನಾಯಿ' ಪರಾ. [ <ತೋಳ$_1$ + ನಾಯಿ (<ನಾಯ್) ]

**ತೋಳ್ನೆರ** (ನಾ). ತೋಳಿನ ನೆರವು,–ಆಸರೆ,–ಆಶ್ರಯ : ದಶರಥಂ ಪುಟ್ಟಿ, ಪಟಿ ಪೊರ್ದದ ಬಟಿಯಱಂ ಕಳೆಗುಂದದ ತೋಳ್ನೆರಂ ತನ್ನೊಳಾಗೆ . . . ತಿರೆಯಂ ಪೊರೆಯುತೆ (ರಾಮಾಶ್ವ. ೭-೧೧). [ ತೋಳ್ + ನೆರ$_2$ ]

**ತೋಳ್ಬಾಯ್** 'ತೋಳ್ವಾಯ್' ನೋ.

**ತೋಳ್ಬಲ** 'ತೋಳ್ವಲ' ನೋ.

**ತೋಳ್ಬಲ್ಪು** 'ತೋಳ್ವಲ್ಪು' ನೋ.

**ತೋಳ್ಬಲ್ಮೆ** 'ತೋಳ್ವಲ್ಮೆ' ನೋ.

**ತೋಳ್ಮಾಲೆ** (ನಾ). ತೋಳಿಗೆ ಕಟ್ಟುವ ಹಾರ ; (ಹೂವಿನ) ತೋಳು ಬಂದಿ: ತೊಳಪ ಚೆಂಗಣಿಗಿಲೆಯ ತೋಳ್ಮಾಲೆಗಳನಿಕ್ಕಿ ಬೆಳಪ ಸಪ್ತುಳಪ್ರಕರ ದುತ್ತರಿಗೆಯುಮನಿಕ್ಕಿ ಮಂಗಳವಿಳಾಸಮಂ ಮಾಡಿ (ನಂಪಿರ. ೫-೬೩).
[ ತೋಳ್ + ಮಾಲೆ ]

**ತೋಳ್ಮುರಿ** (ನಾ). ತೋಳುಬಂದಿ: ಗೆಜ್ಜೆ ಪದಸರ ಕಂಠಿ ಪದಕ ತೋಳ್ಮುರಿ ಹಸ್ತವಲಯ (ಜನಮು. ೪-೨). [ ತೋಳ್ + ಮುರಿ$_3$ ]

**ತೋಳ್ಮೊದಲ್**, ತೋಳ್ಮೊದಲು (ನಾ). ೧. ಬಾಹುಮೂಲ; ಕಂಕುಳು: ಅಲರ್ವಿಲ್ಲನ ಬಾಳ್ಮೊದಲಾದ ತೋಳ್ಮೊದಲ್ ತುಳ್ಕುವ ನುಣ್ಪನೀಕ್ಷಿಪಳಿಪಂ ಬಗೆಯೊಳ್ ಮಿಗೆ ಕಾದು ಕಾದಲಂ (ಚಂದ್ರಪು. ೭-೧೧೧). **ತೋಳ್ಮೊದಲು:** ೨. ಭುಜ: ತೋಳ್ಮೊದಲನಂಗಯ್ಗಳಿಂ ಚಪ್ಪರಿಸಿ ತೋರ ತೊಡೆಗಳ್ ನಪ್ಪ ಳಿಸಿ... ನಿಮಿರಿನಿಂತನು (ಶ್ರೀಕಾಮ. ೪೫೭-೩೩೮). [ತೋಳ್+ಮೊದಲ್]

**ತೋಳ್ಮೊದಲು** 'ತೋಳ್ಮೊದಲ್' ನೋ.

**ತೋಳ್ವಂಕಿ** (ನಾ). ತೋಳುಬಂದಿ: ಜೂಳೆಯ...ತಾಳಿಹೂ ಬೆಂಬಚ್ಚೆ ದಂಡೆ ತೋಳೊಂಕಿ [ತೋಳ್ವಂಕಿ] ಕರ್ಣಿಕೆ ಸರಪಣಿ ಮೊದಲಾಗಿ ಬಾಲೆಗಾಭರಣ ವೊಪ್ಪಿದುವು (ಭರಚ. ೪೦-೬೫). [ ತೋಳ್ + ವಂಕಿ ]

**ತೋಳ್ವಚ್ಚ (ನಾ).** ತೋಳಿನ ಆಭರಣ; ಕೇಯೂರ; ಅಂಗದ : ಮುತ್ತಿನೆಕ್ಕಸರಂಗಳುಂ ... ಪಚ್ಚೆಯ ತೋಳ್ವಚ್ಚಂಗಳುಂ ಕೆಂಬರಲ ಕಡಗಂಗಳುಂ (ಚಿಕವಂ. ೬೦-೧೧). [ ತೋಳ್ + ಪಚ್ಚ$_2$ ]

**ತೋಳ್ವಲ, ತೋಳಂವಲ, ತೋಳ್ಬಲ, ತೋಟ್ವಲ (ನಾ).** ಬಾಹುಬಲ; ಭುಜದ ಶಕ್ತಿ ; ತೋಳಿನ ಕಸುವು : ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು ಮಿಕ್ಕ ತೋಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನ ಗುಂಟೆ (ಪಂಪಭಾ. ೧೦-೨೩) ; ತನ್ನೊಂದೆ ತೋಳ್ವಲದಿಂ ಭೂತಳವಂ ನಿಮಿರ್ಚಿ (ಎಕ. VIII, ಸೊರಬ. ೧೮೪-೨೦; 1033 ?); ಬಿಸುಗಣ್ಣೊರವಂ ಕಾವನ ತೋಳ್ವಲಮನಱಿವೆನೆಂದೇಟ್ತಂದಾ (ಕಬ್ಬಿಕಾ. ೨೯೦) ; ಬಲಕ್ಕೆ- ಆಳ್ವಲ (ಆಳ್ಬಲ), ತೋಳ್ವಲ (ತೋಳ್ಬಲ) (ಶಮದ. ೨೯೮ ಪ್ರಯೋ) ; ಶರಧಿಯನು ತೋಳ್ವಲದೊಳೀಸುವೊಡುರವಣಿಪ ಮರುಳಂತೆ (ಸಾಳ್ವಭಾ. ೧-೩೭). **ತೋಳುವಲ :** ತಂನುವ ತೋಳುವಲವೆನೆ ಸಾಧಯಿಸಿತ್ತನೆ (ಬೊಂಕಶಾ. ೧೯೨೯, ನವಲುಗುಂದ. ೨೦೭-೨೨; 1184); ತೋಳುವಲಕಿದಿರಿಲ್ಲ ಬಿನುಗು ನೃಪಾಲನೆಲವೋ ಕರ್ಣ ಫಡಫಡ ಮೇಳವಾದರೆ ಮೊಗೆವೆ ನರುಣಾಂಬುವನು ನಿನ್ನೊಡಲ (ಕುವ್ಯಾದ್ರೋ. ೧೩-೨೫). **ತೋಳ್ಬಲ :** ಸಂದ ತೋಳ್ಬಲದದಟಂ ಪರಾಭವಮನೇಕೆಯೊ ಸೈರಿಸುವಂ ಬಲಸ್ಥನೊಳ್ ಬಲಮನೆ ಪೂಣ್ದುದುಂ ಪರಿಭವಕ್ಕೆ ಮೊದಲ್ (ಆದಿಪು ೧೨-೧೦೩).
△ **ತೋಟ್ವಲ :** ಅಸಹಾಯಶೂರನಾಂತರನಿಱಿದಟ್ಟೆಯಾಡಿಸಿದ ತೋಟ್ವಲದಿಂ (ಎಕ. VI, ತರೀಕೆ. ೪೫-೪೭ ; 1196). [ ತೋಳ್ + ಬಲ$_2$ ]

**ತೋಳ್ವಲಯ (ನಾ).** ತೋಳಿಗೆ ಧರಿಸುವ ಬಳೆ ; ತೋಳ್ಬಳೆ : ಮುಯ್ಪಿನೊಳಮರ್ಚುವ ಮೃಣಾಳದ ತೋಳ್ವಲಯಂಗಳೊಳಂ ಬಾಱಿಯ ತಿರುಳಿಲೆಯ ಬಿಜ್ಜಣಿಗೆಗಳೊಳಮೆಸಟಿ ಪಸೆಗಳೊಳಂ ಎಂತುಮಾ ಸಂತಾಪಮಂ ಸಂತಯಿಸಲಾಱದೆ (ಕಾದಂಉ. ೭೭೫).
[ ತೋಳ್ + ವಲಯ ]

**ತೋಳ್ವಲೆ, ತೋಳುವಲೆ (ನಾ).** ೧. ಬಾಹುಬಂಧನ ; ತೋಳಿನ ಸೆರೆ ; ತೋಳಿನ ಹಿಡಿತ : ನಿನ್ನನುಜರಂ ಕಂಡೆಂತುಮೇನೆನ್ನ ತೋಳ್ವಲೆಯೊಳ್ ಸಿಲ್ಕಿದೆಯೆಂದು ಮೂದಲಿಪುದುಂ (ಪಂಪಭಾ. ೧೨-೧೪೭) ; ದಶಾಸ್ಯ ದೇವೋತ್ತಮ ಕಾಮಿನೀಜನದ ತೋಳ್ವಲೆಯೊಳ್ ತೊಡರಲ್ಕೆ ತಕ್ಕುದೇ (ಪಂರಾಮಾ. ೧೪-೨೦೦). **ತೋಳುವಲೆ :** ೧. ಭೀಮಸೇನನ ತೋಳುವಲೆಯಲಿ ಸಿಕ್ಕಿದನು ಭೂಪಾಲ (ಕುವ್ಯಾಕ. ೧೩-೪೮). ೨. ಒಂದು ಬಗೆಯ ಬಲೆ : ತೊಡರ್ಚುವಲೆ ತೋಳುವಲೆ ಮರೆವಲೆ ಸಗಾಢವಲೆಗಳ ಹೊಱೆಗಳೊಳಿಯಂ ಪೊತ್ತು ನಡೆತಂದುದು ಪುಳಿಂದರೂಪದಲಿ ಭೂತಗಣಂಗಳು (ಸೌಂದಪು. ೧೮-೩೯). [ ತೋಳ್ + ಬಲೆ$_1$ ]

**ತೋಳ್ವಲ್ಪು, ತೋಳ್ಬಲ್ಪು (ನಾ).**=ತೋಳ್ವಲ : ಮೊದಲೊಳು ಹೊಯ್ಸಳ ರಾಜ್ಯಲಕ್ಷ್ಮಿಯೊದವಂ ತೋಳ್ವಲ್ಪಿನಿಂ ತಾಳ್ದಿ(ದಂ) (ಎಕ. VI, ತರೀಕೆ. ೬೦-೫ ; 1154 ?). **ತೋಳ್ಬಲ್ಪು :** ಮಾಱಾಂತಿಭಮಟ್ಟಿ ಪಾಟ್ಯನೆಯ ಪೋಲ್ ಬೀಟ್ವನ್ನೆಗಂ ಪೊಯ್ದು ಕೊಲ್ಲದೆ ಬಿಲ್ಬಲ್ಮೆಗೆ ಗೇಣ ಬಿನ್ನಣಕೆ ತೋಳ್ಬಲ್ಪಿಂಗೆ ಮುಯ್ಯಾಂಪುದೇ (ವರ್ಧಪು. ೭-೪೮) ; ದುರ್ಗವನ್ನು ಹೈದರ್‌ಅಲ್ಲಿಯು ಮುತ್ತಿದಾಗ ಈ ಸಿಂಹಿಣಿಯು ತನ್ನ ತೋಳ್ಬಲ್ಪಿನಿಂದ ಕೆಲವು ಕಾಲ ಹೈದರ್‌ಅಲ್ಲಿಯ ಸೇನಾಶರಧಿಯನ್ನು ತಡೆದು ಹಿಡಿದಳು (ಕವೀರ. ೧೪೧). [ ತೋಳ್ + ಬಲ್ಪು ]

**ತೋಳ್ವಲ್ಮೆ, ತೋಳ್ಬಲ್ಮೆ (ನಾ).** ಬಾಹುಬಲ ; ಭುಜಪರಾಕ್ರಮ : ಆಳ್ವಲ್ಮೆ ; ತೋಳ್ವಲ್ಮೆ (ಶಮದ. ೬೭ ಪ್ರಯೋ). **ತೋಳ್ಬಲ್ಮೆ :** ನಿನ್ನ ಕೈಹಿಡಿತವೂ ತೋಳ್ಬಲ್ಮೆಯೂ ಕಡಿಮೆಯಾಗಿ ಹೋಯಿತೇ ? ಗಾಂಡೀವ ತನ್ನ ಸತ್ವವನ್ನು ಕಳೆದುಕೊಂಡಿತೋ ? (ವ್ಯಾಸಜಿ. ೪೧೨).
[ ತೋಳ್ + ಬಲ್ಮೆ ]

**ತೋಳ್ವಳೆ, ತೋಳುವಳೆ (ನಾ).** ತೋಳಂಬಂದಿ : ವನಕುಸುಮಂಗಳಂ . . . ಮುಂಗುಳ್ಸರಿಗೆ ತೋಳ್ವಳೆ ಕಂಕಣವಾರವೆಂದು ಬೇಟ್ಪನಿತನೆ ಮಾಡಿ ತೊಟ್ಟು ಕರಮೊಪ್ಪಿದಳ್ (ಪಂಪಭಾ. ೨-೧೬) ; ಮಣಿಮೇಖಳೆ ಮಕರ ಕುಂಡಳಂ ತೋಳ್ವಳೆಯೆಂಬಿವನವರ್ಗೆ ಭೂಷಣಾಂಗಂ ಕುಡುಗುಂ (ಶಾಂತಿಪು. ೬-೧೧೦) ; ಶೀತಳಿಕೆಯ ಚಾಮರಂ ಪೊಸ ಮೃಣಾಳದ ತೋಳ್ವಳೆ ಮುತ್ತಿನಾರಂ . . . ಕಣ್ಗೊಳಿ (ಕಾದಂಉ. ೪೫೯). **ತೋಳುವಳೆ :** ಕುಡುದಾಡೆ ತೋಳುವಳೆ ಪಾವುಕಯ್ಯ (ಬೊಂಕಶಾ. ೧೯೩೩, ಹಾವೇರಿ. ೧೪೫-೧ ; ?). [ ತೋಳ್ + ಬಳೆ$_2$ ]

**ತೋಳ್ವಾಸ (ನಾ).** ೧. ಬಾಹುಬಂಧನ ; ತೋಳಿನ ಪಾಶ ; ಅಪ್ಪುಗೆ : ಮೆಯ್ಕಟಲಾಱುವನ್ನಮವನಂ ತೋಳ್ವಾಸದೊಳ್ ಕಟ್ಟಿ ತೂಗದೊಡಂ ಪೇಟ್ ಮೊಲೆವೊತ್ತೆನೇ ಅವನ ಮೇಷುಬೊತ್ತೆನಬ್ಬಾನನೇ (ಲೀಲಾವ. ೧೧-೭೮) ; ಆತ್ಮೇಶನಂ ಕಾಣುತನ್ಮಳ ಸಂಗಕ್ಕೊಳಗಾಗಿ ಬಂದನೆನುತಂ ಕಾಯ್ಪೇಱಿ ತೋಳ್ವಾಸದಿಂದೆಳೆದಾ ಕೋಮಳೆಯೋರ್ವಳೊತ್ತಿ ಬಿಗಿದಳ್ ಶೀತಾತುರಂ ಪೋಪಿನಂ (ರಾಜಶೇ. ೯-೩೨). ೨. ಒಂದು ಬಗೆಯ ತೋಳಿನ ಆಭರಣ ; ಬಾಹಂಪೂರ : ತರುಣಾರೀವರ್ಗಗವೊಪ್ಪುವ ಶೀರ್ಷಕಂಗಳಂ ಮೆಱೆವ ಭುಜಕೀರ್ತಿ ತೋಳ್ವಾಸ ನಡುಗಟ್ಟುಗಳನೆಱೆಯ ಕರವಾಲಗಳ ಶತಶರಾಶ್ರಯಚಾಪಯುಗ್ಮಮಂ ಕರದೊಳಾಂತು (ಭರಚ. ೩-೧೩).
[ ತೋಳ್ + ಪಾಸ$_1$ ]

**ತೋಳ್ವಿಡಿ (ಕ್ರಿ).** ತೋಳನ್ನು ಚಾಚು ; ಕೈಚಾಚು : ಉಗ್ರಕಣ್ಣಿಂದೆ ಕಾಮನ ಸುಟ್ಟು ಮನಸಿಜವಿಗ್ರಹವನು ಮಾಡಿಕೊಟ್ಟ ನಿಗ್ರಹದಿಂದೆ ತೋಳ್ವಿಡಿದಡೆ ಶಾಪಾನುಗ್ರಹದಿಂದೆ ಭಂಗಿಸುವೆ (ಮೋಹತ. ೧೦-೨೮).
[ ತೋಳ್ + ಪಿಡಿ$_1$ ]

**ತೋಳ್ವಿಸುಗೆ (ನಾ).** ತೋಳಿನ ಬೆಸುಗೆ,–ಬಂಧನ : ವೀರಾಂಗನೆ ಕಡ್ಡೆ ತೋಳ್ವಿಸುಗೆಯೊಳ್ಕೇರ್ವಟ್ಟು ನಿಲ್ವನ್ನಳೇ (ಪಂರಾಮಾ. ೧೨-೬೦).
[ ತೋಳ್ + ಬಿಸುಗೆ <ಬೆಸುಗೆ ]

**ತೋಳ್ವೀಸಲು (ನಾ).** ತೋಳನ್ನು ಬೀಸುವಿಕೆ : ಬೆರಲ್ಮಿಡಿತ ತಲೆದೂಕ ತೊಡೆವೊಯ್ಲು ಮುಡುಹಿನಾಟ ತೋಳ್ವೀಸಲು ಭ್ರೂಲೀಲೆ ನಯನಚೇಷ್ಟೆ ಇತ್ಯಾದಿಗಳ . . . ಸುಮ್ಮಾನ ಸಂತೋಷೋತ್ಸಾಹಗಳಲ್ಲಿರುವರು (ಬಟ್ಟಅ. ೭೦-೧೯). [ ತೋಳ್ + ಬೀಸಲು ]

**ತೋಳ್ವೆಱಗು, ತೋಳುವೆರಗು (ನಾ).** ತೋಳಿನ ಹಿಂಭಾಗ : ಪ್ರಣಯ ಕಲಹಕೇಳಿಯಿಂ ವಿಜಯಶ್ರೀಯಂ ಜನಿಸುವಂತೆ ತೋಳ್ವೆರ[ಱ]ಗ ನಪ್ಪುಕೆಯ್ದು (ಪಂರಾಮಾ. ೩-೯ ವ) ; ಶ್ರೀಗೆರ್ದೆವತ್ತುಗೆ ವರವಾಕ್ಶ್ರೀಗೆ ನಿಜಂ ಸುಮುಖವೃತ್ತಿ ತೋಳ್ವೆರ[ಱ]ಗು ಜಯಶ್ರೀಗೊಲವನೀಯೆ ನೆಗಟ್ದಂ ಭೂಗಧಿಪತಿ (ಚಂದ್ರಪು. ೨-೧) ; ಶ್ರೀಯಂ ಕೂರಿಸಿ ವಿಜಯಶ್ರೀಯಂ ತೋಳ್ವೆರೆ[ಱ]ಗಿನೊಳ್ ಮನಂಗೊಳಿಸಿ . . . ನೆಗಟ್ದಂ ವಿನೇಯಜನಮುಖತಿಲಕಂ (ಅನಂಪು. ೮-೧); ಜಯಶ್ರೀ ಮನಂಗೊಳ್ವಿನಂ ತೋಳ್ವೆರ[ಱ]ಗಂ ಪಾರ್ದಿರ್ಪ ದರ್ಪೋನ್ನತಿ (ಧರ್ಮನಾ. ೨-೧೪೩). **ತೋಳುವೆರಗು :** ವೀರಲಕ್ಷ್ಮಿ ತೋಳುವೆರಗಿನೊಳೊಪ್ಪೆ (ಎಕ. VI, ಚಿಕ್ಕಮ. ೧೬೦-೪೩ ; 1137). [ ತೋಳ್ + ಪೆಱಗು ]

**ತೋಳ್ವೊಯ್, ತೋಳ್ಬೊಯ್ (ಕ್ರಿ).** ಭುಜವನ್ನು ತಟ್ಟು,–ಆಸ್ಫಾಳಿಸು : ಉಭಯಸುಭಟರ್ಗಳಾರ್ಭಟಿಸಿ ತೋಳ್ವೊಯ್ದು ಪಟುಭಟವಾಜಿ ವರ್ಗಮಂ ರಾವ್ತರಡ್ಡಾಡಿದರ್ (ಜಿಬಪು. ೨೪-೩); ರಾಮಾವತಾರದೊಳ್ದೇಹಮುಳ್ಳನಿತು ದಿನವಾರ್ಜಿಸಿದ ಪುಣ್ಯಮಂ ರೂಹುಗಾಣಿಸಿಕೊಟ್ಟು ಶಕ್ತಿಯಂ ನೆಲೆಗೊಳಿಸಿ ಮುರಹರಂ ತೋಳ್ವೊಯ್ದನು (ಜೈಮಿಭಾ. ೧೩-೪೨). **ತೋಳ್ಬೊಯ್ :** ಹೂಂಕರಿಸಿ ತೋಳ್ಬೊಯ್ಯುತ್ತೆ . . . ಬಂದುದು ಪದಾತಿಬಲಂ (ಜಿಬಪು. ೪೭-೩೭). [ ತೋಳ್ + ಪೊಯ್$_1$ ]

**ತೋಳ್ಪೊಯ್ಲು** (ನಾ). ಭುಜ ತಟ್ಟಿಕೊಳ್ಳುವಿಕೆ ; ಬಾಹಂಸ್ಫಾಲನ : ತೋಳ್ಪೊಯ್ಲ ತುಟಿವೆರಳ ಬೊಬ್ಬೆಗಳ ರಿಪುಗಳಂ ಸೀಳ್ವ ಸಡಗರದ . . . ಸಂಭ್ರಮವನಿರದೆ ಪಡೆಯೆರಡೀಕ್ಷಿಸುತ್ತಿರ್ದುವು (ಜಬಪು. ೨೬-೧೬).
[ ತೋಳ್ + ಪೊಯ್ಲು ]

**ತೋಳ್ಸಾರ್ಚು** (ಕ್ರಿ). = ತೋಳ್ವಿಡಿ : ನೀನು ಆವ ಧೈರ್ಯದಿಂದ ಮನವೇರಿಸಿ ತೋಳ್ಸಾರ್ಚಿದೆ ? (ಬಿಟ್ಟಿಅ. ೧೯-೧೦).
[ ತೋಳ್ + ಸಾರ್ಚು ]

**ತೋಳ್ಸುತ್ತು** (ನಾ). ಬಾಹು ಬಂಧನ ; ಅಪ್ಪುಗೆ : ಜನನಂ ಸೋಲಿಪ ಪೆಂಡಿರಾರ್ ಪರಮನಂ ತೋಳ್ಸುತ್ತಿನೊಳ್ ಕಾವ ಕಾಮಿನಿಯಾರ್ (ಅನಂಪು. ೬-೨೪). [ ತೋಳ್ + ಸುತ್ತು$_2$ ]

**ತೋಳ್ಸೆರೆ** (ನಾ). = ತೋಳ್ಸುತ್ತು : ಅವನ ತೋಳ್ಸೆರೆಯಲ್ಲಿ ನಾನು ಮಲಗಿದಾಗ . . . ಒಂದು ಬಗೆಯ ಅಮಲು ಬಂದಿತ್ತು (ಮೂರುದಾ. ೩೦೧). [ ತೋಳ್ + ಸೆರೆ$_2$ (<ಸೆಱೆ$_2$) ]

**ತೋಱ್** 'ತೋಱು' ನೋ.

**ತೋಱಿಕೆ, ತೋರಿಕೆ** (ನಾ). ೧. ಕಾಣಿಸುವಿಕೆ ; ತೋರುವಿಕೆ ; ಹೊರ ನೋಟ : ತೋಱುವೀ ತೋಱಿಕೆಯ ತುಷವನು ತೂಱಿದರೆ ಮೇಣ್ ವಿಶ್ವಮುಖದಲಿ ತೋಱಿ ತೋಱದೆ ಮೆಱೆವನೀ ಹರಿಯೆಂದನಾ ಭೀಷ್ಮ (ಕುಮ್ಮಾಸ. ೯-೧೨) ; ತೋಱುವೀ ತೋಱಿಕೆಯೊಳಗೆ ಸಲೆ ವಿ ಱಿ ತೋಱುವ ನಿಜವನಱಿಯದ ಗಾಱುಗಳು ನೀವ್ ಪಶುಗಳೆಂದರೆ ಖೇದ ವೇಕೆಂದ (ಕುಮ್ಮಾಕ. ೭-೨೩) ; ಭೇದಾಭೇದದಿಂದ ತೋಱುವ ತೋಱಿಕೆ ಗಳೇನೂ ಇಲ್ಲದಂದು ಅಖಂಡೇಶ್ವರಾ ನಿಮ್ಮ ನೀವಱಿಯದೆ ಅನಂತಕಾಲ ವಿರ್ದಿರಂದು (ಅಖಂಡೇ. ೧-೧). ೨. ಸಾದೃಶ್ಯ ; ಹೋಲಿಕೆ : ತೋಱಿದವು ಗರ್ಭಗಳು ಶುಕ್ತಿಯ ತೋಱಿಕೆಯ ಮೌಕ್ತಿಕದವೊಲು (ತೊರರಾ. ೧-೮-೨). ೩. ದೃಶ್ಯ ; ನೋಟ : ಕಂಪಿನ ತನಿರಸದ ತಾವರೆಯ ತೆಕ್ಕೆಯ ತೋಳ ತೋಱಿಕೆಯ ಜಿನುಗುದುಂಬಿಯ ಜಾಳಿಗೆಯ ತನಿಮಿನುಗು ಮೋಱೆಯ ಕಣ್ಣ ಕೆಂಪಿನ ಘನಭಯಂಕರರೂಪ ಭೀಮನ ಕಂಡನವನೀಶ (ಕುಮ್ಮಾಅ. ೧೧-೪). ೪. ಅಂದ ; ಚೆಂದ : ಮೂಱುಂ ರೇಖೆಗಳಿಂದಂ ತೋಱಿಕೆಯಂ ಪಡೆದು ಸೊಗಸನೀವುತ್ತಿರ್ದಾ ನೀಱೆಯ ಕೊರಳತಿಶಯಿತಂ ಮಾಱುಂಗೊಂಡುದು ನೃಪಾಳಶಿಳಕನ ಮನಮಂ (ಬಾಧಪು. ೨-೪೫).
**ತೋರಿಕೆ :** ೧. ಇಂದ್ರಿಯಗಳು ತೋರಿಕೆಯ ಪ್ರಪಂಚವನ್ನು ಅರಿಯಲು ಮಾತ್ರ ಸಹಾಯ ಮಾಡುತ್ತವೆ (ತತ್ವಪ್ರಾ. ೧೧). ೫. ಆಡಂಬರ ; ದಂಬ ; ನಟನೆ : ತೋರಿಕೆಯ ಪ್ರವೃತ್ತಿ ಅವರದು (ಮರಳೀ. ೮೫).
[ ತೋಱು + – ಇಕೆ ]

**ತೋಱಿಕೆವೆಱು** (ಕ್ರಿ). ಕಾಂತಿ ಹೊಂದು ; ಥಳಥಳಿಸು ; ಹೊಳೆ : ತೋಱಿಕೆವೆತ್ತ ಭೂರಿತರ ಬಾಡವಸಂಸ್ಥಿತಿಯಿಂದಮೊಪ್ಪಿ ಕೂರ್ಪೇಱಿದ ತೀರದಂಬುಗಳನೆಯ್ದೊಳಕೊಂಡು . . . ಅಗುರ್ವನದಿತ್ತುದಾಕ್ಷಣಂ (ಬಾಧಪು. ೧೩-೪೧). [ ತೋಱಿಕೆ + ಪೆಱು$_1$ ]

**ತೋಱಿಸು, ತೋರಿಸು** (ಕ್ರಿ). ೧. ಕಾಣಿಸು ; ದೃಷ್ಟಿಗೆ ಬೀಳುವಂತೆ ಮಾಡು : ತನುವನದೊರ್ಮೆಯುಂ ಮಗುಟ್ದು ತೋ ಱಿ ಸ ಲಾ ಱ ನೆ (ಕಾದಂಉು. ೫೭೬) ; ಮಹಾನುಭಾವರ ತೋಱಿಸು ಕೂಡಲಸಂಗಮದೇವಾ (ಬಸವ. ೮೮೨) ; ಧುರದೊಳಹಿತಖಳೋತ್ತಮರ ದುರ್ಧರದ ಶಿರಖಂಡನವ ನೆಮ್ಮಯ ಸರಳ ಮೊನೆಯಲಿ ತೋಱಿಸುವೆವಿದ ನಂಬಿ ನೀವೆಂದ (ತೊರರಾ. ೦-೮-೬೭) ; ಚೆಂಬಣ್ಣ ಮಾಂದಳಿರಸುಗೆ ಪುನ್ನಾಗ ದಾಳಿಂಬ ತ್ರಿವರ್ಣಪುಷ್ಪಗಳು ಮುಂಬಾಗದೆ ತೋಱಿಸುವ ವಸಂತನನಿದಿರ್ಗೊಂಬುತೆ ಬನದಿ ರಂಜಿಸಿತು (ಮೋಹತ. ೪-೪೯). ೨. ಪ್ರಕಟಿಸು ; ವ್ಯಕ್ತಪಡಿಸು ; ಪ್ರದರ್ಶಿಸು : ಶ್ರುತಸಾಗರದ್ವಿಜವರಂ . . . ಅನೇಕವಿಧಶಾಸ್ತ್ರಪ್ರೌಢಿಯಂ ನಾಡೆ ತೋಱಿಸುತಿರ್ದಂ (ಕುಸುಮಾ. ೭-೫೧) ; ಉಱಿಯ ಬಿಲುವಿದ್ಯಾ ಚಮತ್ಕೃತಿಯುಳವು ಗರುಡಿಯೊಳಲ್ಲದೀ ರಿಪುಬಲಗ ತೋ ೀ ಱಿ ಸ ಬ ಹು ದೆ (ಕುಮ್ಮಾಭೀ. ೩-೫) ; ಜಯಸಿರಿಗೆ ನೀನೇ ಪತಿಯೆನಿಸಿ ತೋಱಿಸುವೆನೆಂದನು ಶಲ್ಯ ಕುರುಪತಿಗೆ (ಕುಮ್ಮಾಶ. ೧-೨೭). ೩. ಕಾಣಿಸಿಕೊಳ್ಳು ; ವ್ಯಕ್ತವಾಗು : ನೊಸಲೊಳ್ ತೃತೀಯಲೋಚನಮೆಮುಗುಂಟು ತೋಲಮಱೆಯಿಂದದು ತೋಱುವುದಿಲ್ಲ (ಕಾದಂಪೂ. ೫೭೮) ; ಸಮನಿಸಿ ತೋಱಿಸುಗುವಿವಿಂದ ಮಿಂದೆಯೆಂಬಿವು ತೃತೀಯೆಯೊಳ್ (ಶಮದ. ೧೦೭). ೪. ಜವಾಬ್ದಾರಿ ಹೊರಿಸು ; ಗುರಿಮಾಡು : ಎಮ್ಮ ತೋಱಿಸಬೇಡ ಸುಖದಲ್ಲಿ ನಿಮ್ಮ ಚಿತ್ತಕೆ ಬಹುದ ಮಾಡುವುದು (ಕುಮ್ಮಾಕ. ೧-೨೬). **ತೋರಿಸು :** ೧. ತಮ್ಮ ಚಾತುರ್ಯವನು ದೊಡ್ಡವರಿಗೆ ತೋರಿಸಬೇಕೆಂದು ಹುಡುಗರು ಸದಾ ಅಭಿಲಾಷಿಸುವರು (ರಾವಿಜ. ೨೨).

**ತೋಱಿಸಿಕೊಡು, ತೋರಿಸಿಕೊಡು** = ದೃಷ್ಟಿಗೆ ಬೀಳುವಂತೆ ಮಾಡು ; ತಿಳಿಸು ; ಅರಿಯುವಂತೆ ಮಾಡು : ಈ ವಿರೋಧಿಯ ಕೆಡಹು ಸೂರ್ಯನ ನಾವು ತೋಱಿಸಿಕೊಡುವೆವು (ಕುಮ್ಮಾದ್ರೋ. ೧೪-೩೮) ; ಸಾವಿರ ಸಾವಿರ ಶಿಷ್ಯರಿಗರಿವನು ತೋರಿಸಿಕೊಟ್ಟರು ತಂದೆ (ಇಂಚಾಪ. ೯-೩೪) ; ರಾಮಕೃಷ್ಣ ಪರಮಹಂಸ – ವಿವೇಕಾನಂದರು, ತಮ್ಮ ಬಾಳಿನಲ್ಲಿ, ಕೃತಿಗಳಲ್ಲಿ ಭಗವದ್ಗೀತೆಯ ರಹಸ್ಯವನ್ನು ತೋರಿಸಿಕೊಟ್ಟಿದ್ದಾರೆ (ಧರ್ಮಸಾ. ೧೨೭). [ ತೋಱು + – ಇಸು$_3$ ]

**ತೋಱು, ತೋರಂ, ತೋಱ್** (ಕ್ರಿ). ೧. ಕಾಣು ; ದೃಷ್ಟಿಗೆ ಬೀಳು ; ಗೋಚರವಾಗು : "ತೋಱು–ದರ್ಶನೇ" (ಶಮಧಾ) ; ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ಮಂಜುವೊಲ್ತೋಱೆ ಬೇಗಂ ಪಿರಿಗುಂ ಶ್ರೀರೂಪ ಲೀಲಾಧನವಿಭವಮಹಾರಾಶಿಗಳ್ನಿಲ್ಲವಾಗ್ಗ೯ಂ (ಎಕ. II, ೮೮-೦; ಸು.700) ; ಮದನಾಟವಿಯಂತೆವೊಲೊಪ್ಪಿ ತೋಱಿದಳ್ (ಕಾವ್ಯಸಾ. ೬೧೨ ಶೂದ್ರಕ) ; ಸಮುದಾಯಾರ್ಥಮನಾರಯೆ ಸಮನಿಸುವರ್ಥಪ್ರತೀತಿ ತೋಱಿದೊಡೆಲ್ಲಂ ಕ್ರಮಮಕ್ಕುಂ (ಕವಿರಾ. ೧-೭೭) ; , ದುಗ್ಧಾರ್ಣವಫೇನಪಾಂಡುರತೆಯಂ ಕೆಯ್ಕೊಂಡು ಬೆ ಳ್ದಿ ಂ ಗ ಳ ಂ ತಿ ರೆ ತೋಱುತ್ತಿಸೆವುತ್ತರೀಯವಸನಂ (ಕಾದಂಪೂ. ೮) ; ಸುರಭಸಜಂ ಜ್ಯೋತಿರಂಗಂ ಬೆಳಗೆ ತಮದ ಮಾತಿಲ್ಲ ಚಂದ್ರಾರ್ಕರುಂ ಮೈಗರೆದಿರ್ಪರ್ ತೋಱವಾಱುಂ ಋತು (ಪಂರಾಮಾ. ೧-೬೦). ೨. ದೃಷ್ಟಿಗೆ ಬೀಳಿಸು ; ಕಾಣಪಡಿಸು ; ತೋರಿಸು ; ವ್ಯಕ್ತಪಡಿಸು : ತಮ್ಮ ದೇವತ್ವಮಂ ತೋಱಲ್ವೇಡಿ ಆಕಾಶಮೆಲ್ಲಂ ಚಿತ್ರಪಟಂಗೆದಱಿದಂತೆ ವಿಮಾನಂಗಳಿಂ ಸಂಛನ್ನಮಾಗಿ ವ್ಯಾ ಪಿ ಸೆ (ಪಡ್ಮಾರಾ. ೧೪೦-೨೫) ; ಮೂಱಡಿ ಮಾಡಿದಂದು ನೆಲನೆಲ್ಲಮನಾ ಬಲಿಗಾದ ರೂಪಮಂ ತೋಱಿದಂ (ಪಂಪಭಾ. ೯-೬೦) ; ಕವರೆಲ್ಪಂದಂಗೆ ಬಯಕೆಯಂ ತೋಱಿದರೆಂಬಂತೆ (ಧರ್ಮಾಮ್ಮ. ೨-೦೪೯) ; ಎನ್ನ ಮನದ ದುರಾಶೆಯ ಮಾಣಿಸಿ ನಿಮ್ಮತ್ತ ತೋಱು (ಮಹಾದೇ. ಬ. ೧೫-೧೭) ; ಹಿತವಂ ತೋಱುವನಾತ್ಮಬಂಧು (ಸೋಮೇಶ. ೮) ; ಗುಣಹೀನನಲ್ಲಿ ಗುಣವನು ತೋಱುವದು ಗರುವರಿಗೆ ತೊಡಿಗೆಯಿದು (ಕುಮ್ಮಾಅ. ೨೦-೧೩) ; ದಾರಿಯ ತೋಱೋ ಮುಕುಂದಾ (ಪುರಂದ. ೩-೦೨೩ ಪಲ್ಲವಿ) ; ಊರಿಂಗೆ ದಾರಿಯನು ಆರು ತೋಱಿದಡೇನು (ಸರ್ವಜ್ಞ. ೩೪). ೩. ಉಂಟಾಗಂ ; ಆಗು : ನಿಜಕರದೊಳಾಯುಧವಿಲ್ಲ ಘನ ಸಂಗರಕೆ ಬೇಸಱು ತೋಱಿತೇ (ಕುಮ್ಮಾದ್ರೋ. ೩-೬೩). ೪. ತಿಳಿಸಿಕೊಡು ; ಅರಿವನ್ನುಂಟುಮಾಡು : ಲಿಂಗ ಜಂಗಮ ಪ್ರಸಾದದ ನಿಲವ ತೋಱ್ ಬದುಕಿಸಯ್ಯಾ (ಬಸವ. ೮೩೩). ೫. ಅಶುಭವನ್ನು ಸೂಚಿಸು ; ಅಪಶಕುನವಾಗು : ಅ ರ ಸಿ ಂ ಗೆ ತೋಱಿತೋ ದೇಶಕಳಿವಪ್ಪುದೋ ಹರನೆ ಬಲ್ಲಂ (ಕಣ್ಣರ. ದೇ. ೧೪೫-೧೩). ೬. ಹೊರಗೆಡಹು ; ಪ್ರಕಟಪಡಿಸು : ಚಂದ್ರಕಾಂತದ ಶಿಲೆಯಲ್ಲಿ ಜಲವಿಲ್ಲದನ್ನಕ್ಕ ಶೈತ್ಯವ ತೋಱುವ ಪರಿಯೆಂತೋ (ಬಸವ. ೮೦೮).

**ತೋರು :** ೧. ಇಲ್ಲಿ ಹುಡುಕಿದರೆ ಅಲ್ಲಿ ತೋರುವವನು ಎಲ್ಲಿಡೆ ಸ್ವಚ್ಛಂದ (ನೆಲಮು. ೩೯-೧೨); ಭೂಮಿಯ ಪೃಷ್ಠಭಾಗವು ಸಮನಾಗಿದ್ದಂತೆ ತೋರುತ್ತದೆ (ಮುಂಬಯಿ. ೪-೬೫). ೨. ತಾರತಮ್ಯ ತಂದು ತೋರಮ್ಮಯ್ಯ (ಕವಿಪು. ೮-೧). ೬. ರತಿಯನ್ನು ಅವನು ಸುಡಲಿಲ್ಲ. ಅವಳಿಗೆ ಕಾರುಣ್ಯವನ್ನು ತೋರಿದನು (ಸಾಹಿಸ. ೧೯೩). **ತೋಱ್ :** ೧. ಈಗಳೆನ್ನ ಕಂಡ ಕನಸುಗಳೀ ಯುಗದ ಕಡೆಯೊಳ್ ಪ್ರಜೆಗಳ್ಗೆ ವಿವಿಧೋಪದ್ರವಸೂಚಕಂಗಳಾಗಿ ತೋರ್ಕುಂ (ಆದಿಪು. ೧೫-೨೧ ವ); ನವಕೂಟಾಗ್ರಂಗಳೊಳ್ ತೋರ್ಪ ಕಾಂಚನವರ್ಣಾಂಚಿತಪಂಚರತ್ನಮಯ ಶೋಭಾಭಾಸಿಗೆ . . . ಜೈನಗೃಹಾಳಿಗಂದೆಱಗಿದಂ ಸೌಜನ್ಯಕಂದಾಂಕುರಂ (ಶಾಂತಿಪು. ೨-೧೦೯); ಮದ್ದುಕುಣಿಕೆಯಂ ತಿಂದಂಗೆ ಕಲ್ಲುಂ ಮಣ್ಣುಂ ಮರನುಂ ಪೊಂಬಣ್ಣಮಾಗಿ ತೋರ್ಪಂತೆ (ಧರ್ಮಾಮೃ. ೧-೧೧೪); ಕೈವಾರಮಂ ಬೀಸಿದಂತೆ ಬಟ್ಟಿತ್ತಾಗಿ ತೋರ್ಪುದು ಸೊನ್ನೆ (ಶಮದ. ೧೭ ವೃತ್ತಿ). ೨. ನರಪತಿಯ ಗುಣಾಗುಣದಂತರಮಱಿವುದನಾಳ ಸಿರಿಯ ಲೀಲೆಯೆ ತೋರ್ಕುಂ (ಶಾಂತಿಪು. ೧-೬೯); ಗುಣಮನೆ ತೋರ್ಪಂ ದೋಷದ ಗುಣಂಗಳನೆ ನೆಗಟ್ದು ತೋರ್ಪ ದುರ್ಜನನುಮದೇಂ ಗುಣಗಣನೆಗೆ ತೋರ್ಪಂ ಕೃತಿ ಗುಣದೋಷಪರೀಕ್ಷೆಗಾಱದಾರ್ಬಾರಿಪರೋ (ಗದಾಯು. ೧-೪೮); ಆಗ್ರಹಿಸಿ ತರ್ಕಶಾಸ್ತ್ರಸಮಗ್ರತೆಯಂ ತೋರ್ಪುದಲ್ಲಿ ನೀಂ (ಸುಕುಮಾ. ೨-೧೯); ಜಡರಂ ಕರಮಱಿದು ತಿಳಿಪಲೆಂತೆನೆ ಖರಕರನಂ ಗೂಗೆಗೆಯ್ದೆ ತೋರ್ಪಂತಕ್ಕುಂ (ಧರ್ಮಾಮೃ. ೧-೪೩); ಇನ್ನೀ ಭಕ್ತನ ದೃಢಭಕ್ತ್ಯುನ್ನತಿಯಂ ಧರೆಗೆ ತೋರ್ಪೆನೆಂದಾ ಸೋಮೇಶಂ ನಿಲ್ಲದೆ . . . ನಡೆತಂದಂ (ಉದ್ಭಟ. ೧೧-೧೦೪).

**ತೋರಗೊಡು** = ವ್ಯಕ್ತಪಡಿಸು; ಕಾಣಿಸು: ಅವನು ತನಗಾದ ದುಃಖವನ್ನು ತೋರಗೊಡಲಿಲ್ಲ (ರೂಢಿ). **ತೋಱಪಡು** = ಕಂಗೊಳಿಸು: ಬೇಱೊಂದು ಕೋಣೆಯುಂಟುಪ್ಪರಿಗೆಯೊಳಲ್ಲಿ ತೋಱಪಟ್ಟೊಂದು ಪಂತಿಯೊಳು ನೀಱನು ನೀಱೆಯರಾರೋಗಿಸಿದರು (ಭರಜ. ೧೧-೧೦೪). **ತೋಱಿಕೊಡು, ತೋಱಿಕುಡು** = ಕಾಣುವಂತೆ ಮಾಡು; ತೋರಿಸಿಕೊಡು: ಮನ್ಮಥ ಮಹೀಭುಜನೋವದೆ ತೋಱಿಕೊಟ್ಟುದೊಂದಾನೆಯ ತನ್ನನಾನೆಗೊಲಿಗೊ[೦]ದಪುದೆಂದು ಲತಾಂಗಿ ಬೆರ್ಚಿದಳ್ (ಪಂಪಭಾ. ೪-೫೮); ಚೆನ್ನಮಲ್ಲಿಕಾರ್ಜುನನ ತಂದೆನಗೆ ತೋಱಿಕೊಟ್ಟ ಗುರುವೆ ನಮೋ ನಮೋ (ಮಹಾದೇ. ಬ. ೨೩-೯೨); ಪಾರ್ಥನ ತೋಱಿಕೊಡುವೆನು (ಕುಮಾ.ಕ. ೯-೨); ತೊಡೆಯಂ ಪೊಯ್ದಾರ್ವ ನೆವದೆ ನೆಱನೀತಂಗೀಯೆಡೆಯೆಂದು ತೋಱಿಕುಡೆ (ಗದಾಯು. ೮-೬೫). **ತೋಱಿನುಡಿ** = (ಕುಂದನ್ನು ನಿರ್ದೇಶಿಸಿ) ಸ್ಪಷ್ಟವಾಗಿ ಮಾತನಾಡು,- ಖಂಡಿತವಾಗಿ ನುಡಿ: ನಿನ್ನ ಮೊಡಿರುವಮಂ ಬರ್ದುಂಕಲಿತ್ತಪ್ಪುರಿಲ್ಲೆಂದು ತೋಱಿ ನುಡಿದೊಡೆ (ಪಣ್ಣಾ.ರಾ. ೧೭೮-೩); ತೋಱಿ ನುಡಿದರೆ ಭೀಷ್ಮದ್ರೋಣರು ಜಾಱಿಸಿದ ರಣವೆಮಗೆ ಸದರವೆ ದೂಱುವವರಾವಲ್ಲ (ಕುಮಾ.ಕ. ೧-೨೪); P ಇದು ಬೇರೆ ಬೇರೆ ಶಬ್ದಗಳೊಡನೆ ಸೇರಿ ಅನೇಕ ಅರ್ಥಗಳನ್ನು ಕೊಡುತ್ತದೆ. ಉದಾ: ಕೈದೋಱು, ಬೆನ್ನುತೋರು, ಮೈದೋಱು ಇತ್ಯಾದಿ.

[ ದೇ.॥ ತಮಿ. ತೋಱ್ಱು ; ಮಲ. ತೋನ್ನು ]

**ತೋಱುಂಗೈ** (ನಾ). ಮಾರ್ಗದರ್ಶನ ಮಾಡುವ ಕೈ; ನಿರ್ದೇಶಿಸುವ ಕೈ: ಪಱುವಂ ಪೊಲನಂ ತಿರುಗಿಸಿ ಬಱಲಿಸದಿರು ತೋಱು ದೇವ ತೋಱುಂಗೈಯಂ (ವಸ್ತುವ. ೧೫-೧೦೨). [ ತೋಱು + ಕೈ$_2$ (<ಕೆಯ್$_2$) ]

**ತೋಱುಂಬೊಣೆ** (ನಾ). (ವ್ಯವಹಾರ ಪತ್ರ ಮುಂತಾದಂವುಗಳಲ್ಲಿ ಬರೆದು) ಕಾಣಿಸುವ ಹೊಣೆ: ಬಕವಾರಕ್ಕೆ – ಬತ್ತುಂಬಯಲ್ . . . ತೋಱುಂ ಬೊಣೆ[ಪಾಠಾಂ. ಳೆ] ಹೇಱುಂಬಳೆ (ಶಮದ. ೧೭೦ ಪ್ರಯೋ).

[ ತೋಱು + ಪೊಣೆ$_2$ ]

**ತೋಱುವಲೆ** (ನಾ). ಒಂದು ಬಗೆಯ ಬಲೆ: ತೋಱುವಲೆ ತೊಟ್ಟವಲೆ ಗೂಟವಲೆ ಕಣ್ಣವಲೆ . . . ಮಂದಸಿನವಲೆಯ ಹೊಱಿಗಳ ಬೇಡವಡೆ ನೆರೆದುದೇನೆಂಬೆನು (ಹರಿಕಾ. ೫-೮). [ ತೋಱು + ಬಲೆ$_1$ ]

**ತೋಱುಹ** (ನಾ). ಕಾಣಿಸುವಿಕೆ; ತೋರುವಿಕೆ: ಕುರುಡಂಗೆ ಕನ್ನಡಿಯಂ ತೋಱುಹವುಂ ಮೂರ್ಖನಂ ಬುದ್ಧಿವಂತನೋಲೈಸುಹವುಂ ಇವಱೋಪಾದಿ (ಪಂಚತಂ. ೧೩೬-೧೦). [ ತೋಱು + – ಹ$_2$ ]

**ತೋಱಿತ್ತು** (ನಾ). ಬೇಟೆಯಲ್ಲಿ ಕ್ರೂರವಾದ ವನ್ಯಮೃಗಗಳನ್ನು ಆಕರ್ಷಿಸಲು, ಅವುಗಳಿಗೆ ಕಾಣುವಂತೆ ಕಟ್ಟುವ ಎತ್ತು; ದೀಹದ ಎತ್ತು: ಕಾಂತಾರದೊಳು ಮೃಗವ ನೆಲೆಗೊಳಿಸಿ ಮೇಗಾಳಿಯಂ ದೂರದಿಂ ತೋಱಿತ್ತನೊಡ್ಡಿ ಕಿಗ್ಗಾಳಿಯಿಂ ಬಂಡಿಯಿಂದಿಳುಹಿ ಹುಲಿಯ ಹಾರಯಿಸಿ (ಹರಿಕಾ. ೫-೩೦). [ ತೋಱು + ಎತ್ತು$_2$ (<ಎಟ್ಟು$_1$) ]

**ತೋಟಯ್ಯ** (ನಾ). ಒಬ್ಬಾತನ ಹೆಸರು: ತೋಟಯ್ಯನ ಮಗ ಮಜ್ಜಯ್ಯಂ ದುರ್ವ್ವಿನೀತನ ತಮ್ಮ ಬೂತುಗಂ (ಎಕ. XII, ಮದ್ದಗಿ. ೩೯-೯; ಸು. 950).

[ ತೋಟ್ ? + ಅಯ್ಯ$_1$ ]

**ತೋಟೂರ್** (ನಾ). ಒಂದು ಊರಿನ ಹೆಸರು: ಮಾರಶಮ್ಮಣಃ ಪುತ್ರಾಯ ತೋಟೂರ್ವ್ವಾಸ್ತವ್ಯಾಯ (ಎಕ. X, ಗೌರಿಬಿ. ೪೭-೪೫; 762).

[ ತೋಟ್ ? + ಊರ್ ]

△ **ತೋಳ್ವಲ** 'ತೋಳ್ವಲ' ನೋ.

**ತೌಂಕಲ್** 'ತವುಂಕಲ್' ನೋ.

**ತೌಂಟಗೆ** 'ತಿವದಿಗೆ' ನೋ.

**ತೌಂಬುರವೀಣೆ** (ನಾ). ಒಂದು ಬಗೆಯ ವೀಣೆ: ಗೌರೀವೀಣೆಯ ಗೌರವದಿಂದಂ ತೌಂಬುರವೀಣೆಯ ತುಂಬುರರಿಂ ಕಿನ್ನರವೀಣೆಯ ಕಿಂಪುರುಷರಿಂದಂ . . . ಒಪ್ಪಿದತ್ತಾ ಮಹಾಲಿಂಗದಾಸ್ಥಾನಂ (ಹಮ್ಮಿರ. ೮-೪೦ ವ). 'ತುಂಬುರವೀಣೆ' ಪರಾ. [ ತೌಂಬುರ$_0$ + ವೀಣೆ ]

**ತೌಕಲ್** 'ತವುಂಕಲ್' ನೋ.

**ತೌಗೆ** 'ತವುಗೆ' ನೋ.

**ತೌಟಗೆ** 'ತಿವದಿಗೆ' ನೋ.

**ತೌಡಂಗಿ** 'ಚವುಡಂಗಿ' ನೋ.

**ತೌಡಿ** 'ತವುಡಿ$_1$' ನೋ.

**ತೌಡು** 'ತವುಡು' ನೋ.

**ತೌಡುಕುಟ್ಟು** 'ತವಡುಕುಟ್ಟು' ನೋ.

**ತೌತರ್** 'ತವುತರ್' ನೋ.

**ತೌದಲೆ** 'ತವುದಲೆ' ನೋ.

**ತೌದಲೆಗಾಣಿಸು** 'ತವುದಲೆಗಾಣಿಸು' ನೋ.

**ತೌದೆ** (ನಾ). ಒಂದು ಬಗೆಯ ತೆರಿಗೆ: ಬಸದಿಯ ಪಸದಲಿ ಪಲವ ಮನೆಗಳ ಮಾಡಿಸಿ ರಿಷಿಹಳ್ಳಿಯೆಂದು ಪೆಸರನಿಟ್ಟು ಮನೆದೆಱೆ ಮದುವೆದೆಱೆ ಊರುಟ್ಟಗೆ ತೌದೆ ಸುರಂದು ಕವರ್ತ್ತೆಸೇಸೆ . . . ಪೊಳಗಾಗಿ . . . ಆಚಂದ್ರಾರ್ಕತಾರಂಬರಂ ಸಲ್ಗೆ (ಮ್ಯಾಆರಿ. ೧೯೩೨, ೧೭-೫೯ : 1069).

P [ ಇದು 'ತವುಡಿ' ಯಾಅಪಲಿಖಿತವಿರಬಹುದು ]

**ತೌಬಂದ** (ನಾ). ಉಡುವ ಸೀರೆ,-ವಸ್ತ್ರ: ಚಂದ್ರಕಿರಣವು ಪೊಲ್ಲ ಚಲ್ವ ಜರತಾರಂಚಿನ ತೌಬಂದನುಟ್ಟು ಚೆಲ್ವಿಕೆಯಾ ನೋಡುತ್ತಿದ್ದಳು (ಶ್ರೀಕೃಬಾ. ೧೭). [← ಫಾರ. ತಹಬಂದ್, ತಹಮತ್ = ಲುಂಗಿ ]

**ತೌಮೊನೆ** (ನಾ). ನಾಶಕಾರಿಯಾದ ಮೊನೆ: ಎತ್ತಿದ ನಿನ್ನ ಕಯ್ಯ ನಿಶಿತಾಸಿಯ ತೌಮೊನೆ ಬೆನ್ನ ಬಾರನೆತ್ತುತ್ತಿರೆ (ಎಕ. II, ೨೯೦-೨೨; ಸು. 1175). [ <ತವು$_2$ + ಮೊನೆ$_1$ ]

**ತೌರು** 'ತವರ್' ನೋ.

**ತೌರುಮನೆ** 'ತವರ್ಮನೆ' ನೋ.

**ತೌರೂರು** 'ತವರೂರ್' ನೋ.

**ತೌರ್ಮನೆ** 'ತವರ್ಮನೆ' ನೋ.

**ತೌರ್ಯತ್ರಿಕ** (ನಾ). ವಾದ್ಯ, ನೃತ್ಯ, ಗೀತ ಈ ಮೂರರ ಮೇಳ: ತೌರ್ಯತ್ರಿಕಂ[ಪಾಠಾಂ. ತ್ರಯಂ]ಪೊಣ್ಮಲೇಳ್ವು ನಡೆತಂದು . . . ಭಕ್ತತತಿವೆರಸಂತವುರಕೆಯ್ದಿ ಶಿವಸುಖದೊಳೊಪ್ಪುತಿರ್ದಂ (ಪದ್ಮರಾ. ೧೧-೨೦೦): ತೆಕ್ಕನೆಯ ಮಾಧುರ್ಯಗಿರಿಶೃಂಗಮೆನಿಪೊಂದು ಸುಂದರಂ ಕೇಳ್ದತ್ತು ತೌರ್ಯತ್ರಿಕಂ (ಶ್ರೀರಾಮಾ. ೪೮೪-೩೮). [ ಸಂ. ]

**ತೌಲನಿಕ** (ಗು). ೧. ಪರಸ್ಪರ ಹೋಲಿಸಿ ನೋಡುವ; ತುಲನೆ ಮಾಡುವ; ತುಲನಾತ್ಮಕ. 'ತೌಲನಿಕವಿಧಾನ' ಪರಾ. (ನಾ). ೨. ತುಲನೆ ಮಾಡಿದುದು; ತುಲನಾತ್ಮಕವಾದುದು: ಈ ಪರಿಷ್ಕರಣಗಳನ್ನು ಮೊದಲು ತೌಲನಿಕವಾಗಿ ಪರಿಶೋಧಿಸಿದ ಕೀರ್ತಿ ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳಿಗೆ ಸಲ್ಲಬೇಕು (ಶೂನ್ಯಕು. ೩೫); ಇವೆರಡನ್ನು ತೌಲನಿಕವಾಗಿ ನೋಡುವವರು ಕನ್ನಡದ ಅಕ್ಷರಪಂಕ್ತಿ ಶಾಸ್ತ್ರೀಯವಲ್ಲವೆನ್ನುವುದುಂಟು (ಸಂಶೋಧ. ೩೫). [ ಸಂ. ]

**ತೌಲನಿಕವಿಧಾನ** (ನಾ). ತುಲನಾತ್ಮಕವಾದ ಅಭ್ಯಾಸ; ಹೋಲಿಕೆಯ ವಿಧಾನ: ವ್ಯಕ್ತಿ ಲೇಖಕರ ಅಭ್ಯಾಸದಲ್ಲಿ ಮಹತ್ವಪೂರ್ಣವೆನಿಸಿಕೊಂಡ ತೌಲನಿಕವಿಧಾನ, ಸಾಹಿತ್ಯದೊಡನೆ ನಾವು ಚಾರಿತ್ರಿಕವಾಗಿ ವ್ಯವಹರಿಸುವಾಗ ತುಂಬ ಉಪಯುಕ್ತವಾಗುತ್ತದೆ (ಸಾಹಿಪ್ರ. ೪೦).
[ ತೌಲನಿಕ + ವಿಧಾನ ]

**ತೌಲಿ, ತೌಳಿ** (ನಾ). [ಜ್ಯೋತಿ] ಮೇಷ ಮೊದಲಾಗಿ ಏಳನೆಯ ರಾಶಿ; ತುಲಾರಾಶಿ. 'ತೌಲಿಗೇಹ' ಪರಾ. **ತೌಳಿ:** ಲಲನಾ ವೃಶ್ಚಿಕ ತೌಳಿ ಕುಂಭ ಹರಿಗಳ್ ಶೀರ್ಷೋದಯಂಗಳ್ (ಜಾತತಿ. ೧-೪೯); ಕನ್ನೆ ಮಿಥುನಂ ಮಿನಂ ಮೃಗಂ ಕರ್ಕ ತೌಳಿ ಗವೇಂದ್ರಂ ವರಲಗ್ನಮಾಗಿ ನಿಲೆ ಮಾಟ್ಕಾನಂದದಿಂ ಚೌಳಮಂ (ಲೋಕೋಪ. ೨-೩೨).
[ ಸಂ. ತೌಲಿನ್ ]

**ತೌಲಿಗೇಹ** (ನಾ). = ತೌಲಿ. 'ತೌಲಿಗೇಹೋದ್ಭವ' ಪರಾ.
[ ತೌಲಿ + ಗೇಹ ]

**ತೌಲಿಗೇಹೋದ್ಭವ** (ನಾ). ತುಲಾರಾಶಿಯಲ್ಲಿ ಹುಟ್ಟಿದವನು: ಸ್ವಬಂಧು ನಿಕಾಯಕ್ಕುಪಕಾರಿ ತೆತ್ತಿಗನೆನಿಕ್ಕುಂ ತೌಲಿಗೇಹೋದ್ಭವಂ (ಜಾತತಿ. ೧೭-೭).
[ ತೌಲಿಗೇಹ + ಉದ್ಭವ ]

**ತೌವುಡಿ** 'ತವುಡಿ$_1$' ನೋ.

**ತೌಸಿತಾಳ** (ನಾ). (?): ನಲಿಸೆಟ್ಟಿಗೆ ಮಾಣತಂಗಿಗೆ ಅವರ ಮಗ ಮಂಚಿಗೌಂಡ ನಿಲಿಸಿದ ತೌಸಿತಾಳಯ ಕಲ್ಲು (ಎಕ. III, ಶ್ರೀರಂಗ. ೩೭-೪ ; ?).
[ ? ]

**ತೌಳವ** (ಗು). ತುಳುದೇಶಕ್ಕೆ ಸಂಬಂಧಿಸಿದ,-ಸೇರಿದ: ಕಾರ್ಮುಗಿಲ ಮುಂಬನಿಗಳೊಳು ವಹಿಲದಲಿ ಕೇರಳ ಜನಪದದ ತೌಳವದ ಕೊಂಕಣ ವಿಷಮವೀಥಿಯಲಿ . . . ಬಂದನು ಕಿರೀಟಿ (ಕುವ್ಯಾಆ. ೧೯-೨೦); ಸರೋಂಬುಧಿತೀರವೆ ಶರಣಾಗಿ ಬಾಳ್ವ ಚಾರುರಥಾಂಗ ತೌಳವ ತನುರಕ್ಷಕ ಸೇರುವೆ ಸೊಗಸದೆ ನೋಡು (ವರ್ಧಚ. ೧೧-೧೨೭); ಜಯಜಯ ತೌಳವ ತಾಯೇ ಮಣಿವೆ ತಂದೆತಾಯುಂದಿರ ತಾಯೇ (ಗೀವಿಂ. ೪೬-೧).
[ <ತುಳುವ$_1$ ]

**ತೌಳಿ** 'ತೌಲಿ' ನೋ.

**ತ್ಯಕ್ತ** (ಗು). ೧. ತೊರೆದ; ತ್ಯಜಿಸಿದ; ಬಿಟ್ಟ: ಕ್ರೂರಾತ್ಮಂ ತ್ಯಕ್ತವ್ರತನಾರ[ಕ್ತ]ಪಟಪ್ರಿಯನಜತ್ಯತಿಯ ತ್ರ್ಯಂಶಂ (ಜಾತತಿ. ೧೯-೩); ತ್ಯಕ್ತಾವಿಲದೋಷಂ ಸುವ್ಯಕ್ತಾಂಗಂ . . . ತೊಳಗುತಿರ್ದಂ (ಅನಂಪು. ೦೨-೪೦). (ನಾ). ೨. ತೊರೆದುದು; ತ್ಯಜಿಸಿದುದು; ಬಿಟ್ಟುದು: "ಅವಕೀರ್ಣಂ, ಅವಧ್ವಸ್ತಂ, ತ್ಯಕ್ತಂ, ಉತ್ಸೃಷ್ಟಂ, ಉಜ್ಝಿತಂ – ಈ ೫ ಬಿಡಲ್ಪಟ್ಟುದು" (ಹಲಾಯು. ೧೧೮-೨೯); "ತ್ಯಕ್ತಮುಪಕೀರ್ಣಮಪಧ್ವಸ್ತಮೆನಲು ಬಿಡುಹಂ" (ಮಂಗರಾ. ೧೨೯-೧೧). [ ಸಂ. ]

**ತ್ಯಜ** (ನಾ). ೧. ತೊರೆಯುವಿಕೆ; ಬಿಡುವಿಕೆ: "ಚರಿತಂ ತ್ಯಜಮುಂ ನೋಡೆ ವಿಸರ್ಜಾಹ್ವಯು" (ನಾನಾರ. ೬೩). ೨. [ಗಣಿತ] ಕಳೆಯುವಿಕೆ; ವ್ಯವಕಲನ: ರಜತಂ, ರಜಿತಂ, ಉವಿತಂ, ತ್ಯಜಂ . . . ಇಂತಿನಿತುಂ ಕಳೆವುದಕ್ಕೆ ಪೆಸರು (ವ್ಯವಹಾ. ೧೧-೨೦). [ ಸಂ. ]

**ತ್ಯಜಯಿಸು** 'ತ್ಯಜಿಸು' ನೋ.

**ತ್ಯಜಿಸು, ತ್ಯಜಯಿಸು** (ಕ್ರಿ). ೧. ಬಿಡು; ತೊರೆ; ವರ್ಜಿಸು: ಪ್ರಾಣವಂ ತ್ಯಜಿಸಿದ ಶರಣನಂ ಕಾಣುತಂ (ಬಸಪು. ೩೭-೧೪); ಮಹಾಮುಖಿಹಮ್ಮಕವ್ವ ದ್ವಿಷರ ವರ್ತನೆಯು ತ್ಯಜಿಸಲೀಸ[ಪಾಠಾಂ. ಭಜಿಸಲೀಯ] ನಿದೀಗ ಗರುಡಧ್ವಜನ ಬಿರುದು (ತೊರರಾ. ೧-೮-೧೪); ಗರ್ಭಾಣುಪಟ್ಟಿ ಪಕ್ಕಗಳಲ್ಲಿ ಬೆಳೆದು ಭ್ರೂಣದ ಪೊರೆಯನ್ನು ಕ್ರಮೇಣ ತ್ಯಜಿಸುತ್ತದೆ (ಕೀಟಬಿ. ೦೦೪). ೨. [ಗಣಿತ] ಕಳೆ; ವ್ಯವಕಲನಮಾಡು: ತ್ಯಜಿಸು, ಕಳೆ ಇಂತಿನಿತುಂ ಕಳೆವುದಕ್ಕೆ ಪೆಸರು (ವ್ಯವಹಾ. ೧೧-೨೦). **ತ್ಯಜಯಿಸು:** ೧. ರಾಜಭಾಗಂ ತ್ಯಜಯಿಸುವದು ತುಷ್ಣೀರುತಂ ಮೌನಮುಕ್ಕುಂ (ನಾನಾರ. ೦೩೬).
[ ತ್ಯಜನ + – ಇಸು$_3$ ]

**ತ್ಯನನಹಳ್ಳಿ** (ನಾ). ಒಂದು ಹಳ್ಳಿಯ ಹೆಸರು; ♇ ಈಗಿನ ಬೌರಿಂಗ್ ಪೇಟೆ ತಾಲ್ಲೂಕಿನ ತ್ಯಾರನಹಳ್ಳಿ: ನಮ್ಮ ನಾಯಕತನದ ತ್ಯನನಹಳ್ಳಿಯ ಅತ್ತಿಕುಣ್ಟೆ ಪೂರ್ವ್ವ (ಮ್ಯಆರಿ. ೧೯೨೩; ೦೪-೬ ; ?).
[ ? + ಹಳ್ಳಿ (<ಪಳ್ಳಿ$_1$) ]

**ತ್ಯಾಗ** (ನಾ). ೧. ಬಿಡುವುದು; ತೊರೆಯುವುದು; ವರ್ಜನ: ಸತ್ಯಶೌಚಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಾಪರ್ಯಾಪ್ತದಶ ಧರ್ಮಂಗಳುಮಂ ಕೈಕೊಂಡು (ಆದಿಪು. ೭-೩೦ ವ); ಭೋಗಿಗೆ ಲೋಭಿಗೆ ಯೋಗಂ ತ್ಯಾಗಂ ಹಿತಮಾಗದು (ಹಮ್ಮಿರ. ೨-೫). ೨. ದಾನ; ಕೊಡುಗೆ. 'ತ್ಯಾಗಜೀವನ', 'ತ್ಯಾಗಬುದ್ಧಿ' ಪರಾ. ೩. ಬಿಟ್ಟುಕೊಡುವುದು; ಔದಾರ್ಯ: ತ್ಯಾಗ ಬಲಿದಾನಗಳಿಂದ ಕೂಡಿದ ಧರ್ಮವೇ ನಿಜವಾದ ಧರ್ಮ (ಧರ್ಮಸಾ. ೭); ಗವುಡೀ ಹಾಡಿಗೆ ತವುಡೇ ತ್ಯಾಗ (ಗಾದೆ). ೪. [ಜೈನ] ಹದಿನಾರು ಭಾವನೆಗಳಲ್ಲಿ ಒಂದು: ತ್ಯಾಗತಪಸೀ ಸಮಾಧಿ ವೈಯಾವೃತ್ಯ . . . ಎಂಬ ಷೋಡಶ ಭಾವನೆಗಳೊಳು (ಚಾವುಂಪು. ೨೬೧).

**ತ್ಯಾಗಜಗರ್ಝಂಪ, ತ್ಯಾಗಜಗರ್ಝಂಪಿ** = ತ್ಯಾಗಗುಣದಿಂದ ಪ್ರಸಿದ್ಧನಾದವನು; ಒಂದು ಬಿರುದು: ತ್ಯಾಗಜಗರ್ಝಂಪನರ್ಧಾಂಗಿ . . . ಮೈಳಲ ಮಹಾದೇವಿಯರ್ (ಎಇ. XIII, ೨೭೦-೮ ; 1125); **ಮಹಾಶಕ್ತಿ** ಪ್ರಭಾವಂ ತ್ಯಾಗಜಗರ್ಝಂಪಿ ಝಂಪಳಾಚಾರ್ಯ್ಯ (ಎಇ. XVII, ೦೧೪-೯; 1124). **ತ್ಯಾಗಮಾಡು**=ಬಿಡು; ತೊರೆ; ತ್ಯಜಿಸು: ಭಾಸನ ವಾಸವದತ್ತೆ, ಪದ್ಮಾವತಿ, ಬಾಣನ ಮಹಾಶ್ವೇತೆ ಇವರೆಲ್ಲ ಪತಿಗಾಗಿ ಸರ್ವಸ್ವವನ್ನೂ ತ್ಯಾಗಮಾಡುವ ದುರ್ಭರ ದೀಕ್ಷೆಯಲ್ಲಿ ... ನಿಸ್ಸೀಮರು (ಧರ್ಮಸಾ. ೭೮). **ತ್ಯಾಗವಿನೋದ** = ದಾನದಿಂದ ಸಂತೋಷವನ್ನು ಪಡೆಯುವವನು; ಒಂದು ಬಿರುದು: ಮಹಾಲಕ್ಷ್ಮೀದೇವೀಲಬ್ಧವರಪ್ರಸಾದಂ ತ್ಯಾಗವಿನೋದಂ (ಸೌಇಇ. XX, ೭೦-೧೩ ; 1109); ತ್ಯಾಗವಿನೋದಂ ಬಿರುದ ಮನ್ನೆಯ ಮದನಿವಾರಣಂ . . . ಅರಸುಗೆಯ್ವುತ್ತುಮಿರೆ (ಕಇ. IV, ೧೧-೧೪ ; 12ನೆಯ ಶತ). [ ಸಂ. ]

**ತ್ಯಾಗಜೀವನ** (ನಾ). ಇತರರಿಗಾಗಿ ತನ್ನದನ್ನು ಬಿಟ್ಟುಕೊಡುತ್ತಾ ಬಾಳುವಿಕೆ; ತ್ಯಾಗಪೂರ್ಣವಾದ ಬದುಕು; ಪರೋಪಕಾರದ

ಬಾಳು : ತ್ಯಾಗಜೀವನದಿಂದ ಆತ್ಮಸಂತೋಷವಾಗುತ್ತದೆಂದು ತಿಳಿದ ಅವನು . . . ಆಸ್ತಿಯ ಮೇಲಣ ಸ್ವಾಮ್ಯವನ್ನು ತ್ಯಜಿಸಿ ರೈತರಿಗೆ ಅದನ್ನೆಲ್ಲ ಹಂಚುವುದೆಂದು ನಿರ್ಧರಿಸಿಕೊಂಡಿದ್ದನು (ಪುನರು. ೫೪).

[ ತ್ಯಾಗ + ಜೀವನ ]

**ತ್ಯಾಗಪತ್ರ** (ನಾ). ಯಾವುದಾದರೂ ಅಧಿಕಾರ, ಹೊಣೆಗಾರಿಕೆಗಳನ್ನು ತ್ಯಜಿಸಿರುವುದಾಗಿ ತಿಳಿಸಿ ಬರೆಯುವ ಪತ್ರ ; ರಾಜೀನಾಮೆ ಪತ್ರ : ಇದರ ಪ್ರತಿಭಟನೆಗಾಗಿಯೇ ೧೯೩೯ರಲ್ಲಿ ಕಾಂಗ್ರೆಸ್ ಪ್ರಾಂತಮಂತ್ರಿ ಮಂಡಲಗಳು ತ್ಯಾಗಪತ್ರ ಕೊಟ್ಟದ್ದು (ಎಚ್ಚಸಾ. ೧೯).

[ ತ್ಯಾಗ + ಪತ್ರ ]

**ತ್ಯಾಗಬುದ್ಧಿ** (ನಾ). = ತ್ಯಾಗಮನ : ಭರತಂ ಮಹಾತ್ಮನೆಸೆದನು ದಿವ್ಯ ತೇಜಸ್ವಿ, ತ್ಯಾಗಬುದ್ಧಿಯಲಿ (ಶ್ರೀರಾಮಾ. ೩೭-೭೪).

[ ತ್ಯಾಗ + ಬುದ್ಧಿ ]

**ತ್ಯಾಗಮನ** (ನಾ). ಎಲ್ಲವನ್ನು ತೊರೆಯುವ ಮನಸ್ಸು: ನಿರ್ಮಲಿನದಪ್ಪು ತತ್ವಮಾಗದು ತ್ಯಾಗಮನಮಿರದೆ (ಗಗತಾ. ೧೭-೩೩).

[ ತ್ಯಾಗ + ಮನ$_1$ ]

**ತ್ಯಾಗಮಯಿ** (ನಾ). ತ್ಯಾಗಗುಣದಿಂದ ಕೂಡಿದವಳು ; ಉದಾರ ಸ್ವಭಾವದವಳು : ಅವನ ಕಣ್ಣ ಮುಂದೆ ತ್ಯಾಗಮಯಿಯಾದ ರಂಗಸಾನಿ ದೇವತೆಯಂತೆ ಸುಳಿದಂತಾಯಿತು (ರಂಗರೋ. ೩೭) ; ಇದರ ಪ್ರಧಾನ ಪಾತ್ರಗಳಾದ ರಾಜರ್ಷಿ ಜನಕ . . ತ್ಯಾಗಮಯಿ ಮೈತ್ರೇಯಿ ಮತ್ತು ಬ್ರಹ್ಮವಾದಿನಿ ಗಾರ್ಗಿ ಭಾರತೀಯರಿಗೆ ಚಿರಪರಿಚಿತರಾಗಿದ್ದಾರೆ (ಭಾರದ. ೩೮). [ ಸಂ. ತ್ಯಾಗಮಯೀ ]

**ತ್ಯಾಗಮಾನ** (ನಾ). [ಛಂದ] ಒಂದು ಬಗೆಯ ಪದ್ಯಜಾತಿ: ತ್ಯಾಗಮಾನ ಅಟತಾಳ (ಸಾರಂಗ. ೧೪) ; ಯಾಲಪದವು ಮತ್ತು ತ್ಯಾಗಮಾನಗಳು ಅಂಶಗಣಾನ್ವಯವಾದ ಉತ್ಸಾಹಲಯದಲ್ಲಿವೆ ಎಂಬುದನ್ನು ಗಮನಿಸಬೇಕು (ಛಂದೋವಿ. ೨೫೦ ಅಡಿಟಿ). [ ? ]

**ತ್ಯಾಗವೀರ** (ನಾ). ತ್ಯಾಗದಲ್ಲಿ ಬಹಳ ಉತ್ಸಾಹವುಳ್ಳವನು ; ದಾನದಲ್ಲಿ ಆಸಕ್ತನಾದವನು : ಸಾಮಾನ್ಯಜನತೆಯ ಕ್ಷೇಮಸಾಧನೆಗಾಗಿ ತಮ್ಮ ಬಾಳನ್ನೇ ಮುಡಿಪಾಗಿಟ್ಟ ತ್ಯಾಗವೀರರೆಂದೂ ಅವರಿಗೆ ಮನವರಿಕೆಯಾಯಿತು (ಪುನರು. ೪೯೧). [ ತ್ಯಾಗ + ವೀರ ]

**ತ್ಯಾಗಶೀಲ** (ನಾ). ೧. ತ್ಯಾಗಸ್ವಭಾವ : ಧರ್ಮವೀರರ ತ್ಯಾಗಶೀಲವೂ, ಸಂನ್ಯಾಸಿಗಳ ಆನಂದವೂ ವ್ರತಶೀಲರ ಸಂಯಮಶಕ್ತಿಯೂ ಆದ ಯೇಸು ಭಗವಾನ್, ನಮ್ಮನ್ನುದ್ಧರಿಸು (ಪುನರು. ೧೭೪). ೨. ಉದಾರಬುದ್ಧಿಯುಳ್ಳವನು: ಇಂದಿನ ಸಿರಿವಂತರಲ್ಲಿಯೂ ಅನೇಕ ಜನ ತ್ಯಾಗಶೀಲರಿದ್ದಾರೆ (ರೂಢಿ). [ ತ್ಯಾಗ + ಶೀಲ ]

**ತ್ಯಾಗಾಂಗ** (ನಾ). [ವೀಶೈ] ಜೀವನ ಮೂರು ಅಂಗಗಳಲ್ಲಿ ಒಂದು; ತನುಗುಣವನ್ನು ಅಳಿದ ಸ್ಥಿತಿ : ತನ್ನಲ್ಲಿ ತ್ಯಾಗಾಂಗ ಭೋಗಾಂಗ ಯೋಗಾಂಗ ಸರ್ವಸಮಾಧಾನ ಸುಚಿತ್ರವಿರ್ದು ಮತ್ತೆ ಇತ್ಯಾದಿಗಳಲ್ಲಿ ನೋಡಿಹೆನೆಂಬ ಭ್ರಾಂತು ಭ್ರಾಮರವೇತಕ್ಕೆ (ಪ್ರೋಳವಾ. ೧೯೦-೭೦೫) ; ಮಹಾತ್ಯಾಗಾಂಗವೇ ಸ್ಥೂಲತನುವೆನಿಸಿ ವಿವಿಧ ಭೇದದೊಳಿಪ್ಪುದಂಗ ತ್ರಯಂ (ಲಶಿಚಿಂ. ೫೦-೩) ; ಸಂಸಾರಭ್ರಾಂತಿಯು ಸಹಜವಾಗಿಯೇ ತ್ಯಾಗವಾಗಿರುವುದರಿಂದ ಇನೆಯದು ತ್ಯಾಗಾಂಗವೆಂದು ಹೇಳಲ್ಪಡುವುದು (ಶಿವಾಸೂ. ೪೮-೭) ; ನ್ಯೂನಭಾವವನ್ನು ಹೊಂದಿದ ಅಂಗಸ್ಥಲವು (ಶುದ್ಧ ಜೀವನು) ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು ಮೂರು ವಿಧವಾಯಿತು (ಭಾರದ. ೨೫೩). [ ತ್ಯಾಗ + ಅಂಗ$_2$ ]

**ತ್ಯಾಗಾಂಗಿ** (ನಾ). [ವೀಶೈ] ಸಂಸಾರಭ್ರಾಂತಿಯನ್ನು ಕಳೆದು ಕೊಂಡವನು; ತನುಗುಣವನ್ನು ಬಿಟ್ಟುಕೊಡುವ ಸ್ಥಿತಿಗೆ ಏರಿದವನು: ತ್ಯಾಗಾಂಗಿಯಾಗಿ ಶಿವದೀಕ್ಷೆ, ಶಿವಪೂಜೆ, ಶಿವಧ್ಯಾನದ ಮೂಲಕ ಸಂಸಾರ ಭ್ರಾಂತಿಯನ್ನು ತ್ಯಾಗ ಮಾಡುವನು (ಭಾರದ. ೨೦೭).

[ ಸಂ. ತ್ಯಾಗಾಂಗಿನ್ ]

**ತ್ಯಾಗಿ** (ನಾ). ೧. (ಎಲ್ಲವನ್ನೂ) ಬಿಡುವವನು ; ವರ್ಜಿಸುವವನು ; ವಿರಾಗಿ: ತ್ಯಾಗಿಗೆ ಯೋಗಿಗೆ ಲೋಭಂ ಭೋಗಂ ಹಿತಮಾಗದು (ಹವ್ಯಾರ. ೨-೫) ; ತ್ಯಾಗೀ ಗುಣ ಭೋಗದಲ್ಲಿ ಕಾಣುವುದು (ಗಾದೆ). ೨. ಕೊಡುವವನು ; ದಾನಮಾಡುವವನು ; ಉದಾರಿ ; ದಾನಶೀಲ : "ತ್ಯಾಗಿಯುಂ ತಾಂ ಚಾಗಿ" (ಕವಿಕಂ. ೨೭೦) ; ಕವಿ ವಾಗ್ಮಿ ದೀರ್ಘಾಯುವು ಕಂಠಂ ಧಾರ್ಮಿಕಂ ತ್ಯಾಗಿ . . . ಧನುರ್ಗೇಹಜಂ (ಜಾತತಿ. ೧೭-೯) ; ಭೂವರರೊಳ್ ತ್ಯಾಗಿಗಳಿಲ್ಲವೇ (ಸೋಮೇಶ. ೩೮). [ ಸಂ. ತ್ಯಾಗಿನ್ ]

**ತ್ಯಾಜಕ** (ನಾ). ಕೊಡುವವನು ; ದಾನಿ : ಭೋಜನದಿ ಪರಮಭೋಜನ ಪರಬ್ರಹ್ಮರಸ ಯಾಚಿಸಲ್ಕೇನಿರ್ಪುದದನುಂಡ ಬಳಿಕ ? ತ್ಯಾಜಕ ತ್ಯಾಗ ಸಂತ್ಯಾಜ್ಯಭೇದಗಳಿರದೆ ರಾಜ ನೀಂ ಜಗಕೆಲ್ಲ (ಮಂಕುಕ. ೭೫೩). [ ಸಂ. ]

**ತ್ಯಾಜ್ಯ** (ಗು). ೧. ಬಿಡಲು ಯೋಗ್ಯವಾದ ; ವರ್ಜಿಸಲು ತಕ್ಕುದಾದ. ೨. ತ್ಯಜಿಸುವ. ೩. ಕೊಡಲು ಯೋಗ್ಯವಾದ ; ದಾನಮಾಡಲು ಅರ್ಹವಾದ. (ನಾ). ೪. ಬಿಡಲು ಯೋಗ್ಯವಾದುದು ; ಬಿಡಬೇಕಾದುದು ; ವರ್ಜ್ಯ : ಯೂಕಾಭೀತಿಯಿಂದಂಬರಂ ಪರಿಹರ್ತವ್ಯಮೆ ಮೇಣಜೀರ್ಣಭಯದಿಂ ಪ್ರಾಜ್ಯಾಜ್ಯಮೇಂ ತ್ಯಾಜ್ಯಮೇ (ಚಂದ್ರಪು. ೧-೧೫); ಗುಣವೂ ಗೌಣವಾದದ್ದಲ್ಲ, ಅದರಂತೆಯೇ ಕರ್ಮವೂ ತ್ಯಾಜ್ಯವಾದದ್ದಲ್ಲ (ಭಾರದ. ೧೧೭); ಶಿಕ್ಷಣಶಾಸ್ತ್ರದ ಬೆಂಬಲವು ಅದಕ್ಕಿಲ್ಲದೇ ಹೋದರೂ ಅದು ಸರ್ವಥಾ ತ್ಯಾಜ್ಯವೆಂದು ಹೇಳಲಾಗುವುದಿಲ್ಲ (ದ್ರಾವಿವಿ. ೮೭). [ ಸಂ. ]

**ತ್ಯಾಜ್ಯವಸ್ತು** (ನಾ). ವರ್ಜಿಸಲು ಯೋಗ್ಯವಾದ ಪದಾರ್ಥ; ಬೇಡವಾದ ವಸ್ತು : ಮನೆಯ ಎಲ್ಲಾ ತ್ಯಾಜ್ಯವಸ್ತುಗಳನ್ನೂ ನಿರ್ಮೂಲ ಮಾಡಿ ಸದಾ ಶುಚಿಯಾಗಿ ಇಟ್ಟುಕೊಳ್ಳಬೇಕು (ಗೃಹವಿ. ೧೮೯).

[ ತ್ಯಾಜ್ಯ + ವಸ್ತು ]

**ತ್ಯಾಪಿ** (ನಾ). ೧. ಗಾರೆ ಕೆಲಸದ ಒಂದು ಸಾಧನ ; ಕರಣಿಗೆ : ನಮ್ಮ ನರ್ಸಿನ ಸಹಾಯದಿಂದ ಒಂದು ಅಳತೆ ಕಟ್ಟಿಗೆ, ಉಪ್ಪಾರರ ಗುಂಡು, ತ್ಯಾಪಿಗಳನ್ನು ಸಂಪಾದಿಸಿದೆವು (ಮೇದಿಮ. ೨೦೩). ೨. ಲೇಪ; ಗಿಲಾಯಿ: ಮಣ್ಣಿನ ತ್ಯಾಪಿಯನ್ನು ಕೆದರಿಸಿ ಅದು ತಿಳಿಯಬಾರದೆಂದು ಸುಣ್ಣ ಬಳಿಸಿದ ರಂತೆ (ಹೂಅರ. ೧೨೪). [ ←ಹಿಂ. ಮರಾ. ಥಾಪೀ ]

**ತ್ಯಾಬೆ** (ನಾ). ಗೋಧಿ ಬೆಳೆಗೆ ಬರುವ ಒಂದು ಬಗೆಯ ರೋಗ: ತ್ಯಾಬೆ ಕುಂಕುಮ ಇಟ್ಟಂಗಿ ಮೊದಲಾದ ರೋಗಗಳು ಹಾಯದೆ ಧಾನ್ಯಗಳು ದಪ್ಪಾಗಿ ... ಮೂರು ತಿಂಗಳದೊಳಗೆ ಬರುವವು (ಕಷಿಪ್ರ. ೫೩). [ ? ]

**ತ್ಯಾಮನ** (ನಾ). ಸುಂಕ ; ತೆರಿಗೆ (?) : ತೆಂಗೆ ತ್ಯಾಮನದಿಂದ ಲೋಕವ ಮುರಿವರಿನ್ನು (ಕಾಲಸಂ. ೨೨-೫). [ ? ]

**ತ್ಯಾರಣ** 'ತೇರಣ$_1$' ನೋ.

**ತ್ರಪಾಹೀನ** (ನಾ). [ಕಾಮಶಾ] ಲಜ್ಜಾಹೀನವಾದುದು : ಲತಾವೇಷ್ಟನ ವೃಕ್ಷಾಧಿರೋಹಣವೆಂಬ ಯುರಡಾಲಿಂಗನಮುಂ ಸ್ತ್ರೀಯರಿಗೆ ತ್ರಪಾ[ಹಾಹೀ]ನಮೆಂಬ ಯರಡನೆಯ ಅವಸ್ಥೆ (ಕಾಮಶಾ. ೮೪).

[ ಸಂ. (ತ್ರಪಾ + ಹೀನ) ]

**ತ್ರಪು** (ನಾ). ೧. ಒಂದು ಬಗೆಯ ಲೋಹ ; ಸೀಸ : "ತ್ರಪು ವಂಗಂ ಸೀಸಂ" (ವಸ್ತುಕೋ. ೨೯-೯); ಅತಿವಿಚಿತ್ರತ್ರಪುಮಯಪತ್ರ ಖಚಿತೋಚ್ಚಂಡ ತಾಳ ಚಾಪದಂಡಂ (ಆದಿಪು. ೧೩-೪೫ವ); ಧರಿತ್ರಿಪುತ್ರನಿಂ ಹೇಮಮೈಂದವನಿಂದಂ ತ್ರಪು ಕಾಂಸ್ಯವರ್ಗಂ (ಜಾತತಿ. ೪-೧೫). ೨. ತವರ ; ತಗರ : "ಮಧುರಂ ತ್ರಪುವೆನಲು ವಂಗಮೆನೆ ತವರಮೆನಿಕ್ಕು" (ಮಂಗರಾ. ೩೦-೫).

[ ಸಂ. ]

**ತ್ರಪುಸ** (ನಾ). (ಸೌತೆ ಜಾತಿಗೆ ಸೇರಿದ) ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ: ತ್ರಪುಸ (ಸವತೀಜಾತಿ) . . . ಕೆಂಪುಕುಂಬಳ ಇವು ಕಫ ವಾತಕರ (ಅಷ್ಟಾಂಗ. ೧೩೭-೮೭). [ ಸಂ. ]

**ತ್ರಪುಸೆ** (ನಾ). ಸೌತೆಯ ಬಳ್ಳಿ : ಅಂಕುಡೊಂಕಿನ ಅಳ್ಳುಜಳ್ಳಿಯ ತರುವಿನ ಸುತ್ತ ಸುತ್ತುವುದಿದೊ ತ್ರಪುಸೆ (ಗಾಥಾಸ. ೬-೩೪). [ ಸಂ. ತ್ರಪುಸ ]

**ತ್ರಪೆ** (ನಾ). ಲಜ್ಜೆ ; ನಾಚಿಕೆ : "ಹ್ರೀ ತ್ರಪಾಹ್ವಯಂ ವ್ರೀಡೆ ಲಜ್ಜೆಯೆನೆ ಮಂದಾಕ್ಷಂ" (ವಸ್ತುಕೋ. ೧೧೪-೧೯) ; "ಹ್ರೀ, ಲಜ್ಜಾ, ಅಪತ್ರಪಾ, ವ್ರೀಡಾ, ತ್ರಪಾ, ಮಂದಾಕ್ಷಂ – ಈ ೬ ಲಜ್ಜೆ" (ಹಲಾಯು. ೯೩-೪೦೩). [ ಸಂ. ತ್ರಪಾ ]

**ತ್ರಪ್ಸ್ಯ** (ನಾ). ಮಜ್ಜಿಗೆ ; ತಕ್ರ. [ ಸಂ. ]

**ತ್ರಯ** (ನಾ). ಮೂರು ; ಮೂರರ ಗುಂಪು. 'ತಾಪತ್ರಯ' ಪರಾ. [ ಸಂ. ]

**ತ್ರಯಸ್ಥ** (ಗು). ೧. ತಟಸ್ಥವಾದ ; ಪಕ್ಷಾತೀತವಾದ : ಚರಿತ್ರ ಲೇಖಕರಿಗೆ ಇರಬೇಕಾದ ತ್ರಯಸ್ಥ ಭೂಮಿಕೆಯನ್ನವರು ಸಾಧಿಸಿದ್ದಾರೆ (ಸ್ಮೃತಿಚಿ. ೩). (ನಾ). ೨. ಮಧ್ಯಸ್ಥ ; ನ್ಯಾಯತೀರ್ಮಾನ ಮಾಡುವವನು : ತ್ರಯಸ್ಥರು ಈ ತಂಟೆಯನ್ನು ಬಗೆಹರಿಸಲು ಮಾಡಿದ ಪ್ರಯತ್ನ ಫಲಿಸಲಿಲ್ಲ (ಮನೆಬಿ. ೧೩೭). [ ಸಂ. ]

**ತ್ರಯಿ** (ನಾ). ೧. ಮೂರರ ಗುಂಪು ; ಮೂರರ ಸಮುದಾಯ. ೨. = ತ್ರಯೀ : "ಸಾಮರ್ಗ್ಯಜುಸ್ತ್ರಯಂ ತ್ರಯಿಯೆನಿಕುಂ" (ವಸ್ತುಕೋ. ೩-೧೨) ; ಸರ್ವಬೀಜ ಭೂತಾಧ್ವರ ಗರ್ಭಸ್ಫುರಿತೆಯಾದ ತ್ರಯಿಯುಂ ನೀನೇ (ವಿಷ್ಣುಪು. ೫-೧-೧೧೦). ೩. ಗಂಡ ಮತ್ತು ಮಕ್ಕಳುಗಳನ್ನುಳ್ಳ ಗೃಹಿಣಿ. [ ಸಂ. ತ್ರಯೀ ]

**ತ್ರಯಿರಾಶಿಕ** (ನಾ). = ತ್ರೈರಾಶಿ: ಇನ್ನು ಮುಂದೆ ರಾಜಾದಿತ್ಯನ ಗಣಿತದಲ್ಲಿ ತ್ರಯಿರಾಶಿಕ, ಬೆಸ್ತತ್ರಯಿರಾಶಿಕ (ವ್ಯವಹಾ. ೧೧ ಅನುಬಂಧ). [ <ಸಂ. ತ್ರೈರಾಶಿಕ ]

**ತ್ರಯೀ** (ನಾ). ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳೆಂಬ ಮೂರು ವೇದಗಳು: "ಮೂಱು ವೇದಂಗಳುಮಂ ತ್ರಯೀಯೆಂಬುದು" (ಹಲಾಯು. ೩-೮); ತತ್ತನಯಂ ತ್ರಯೀತ್ರಿಪಥಗಾ ಹಿಮವದ್ಗಿರಿ ಸಚ್ಚರಿತ್ರ ಸಂಪತ್ತಿಯ ಬಿತ್ತು. . . ದೇಚಿರಾಜವಿಪ್ರೋತ್ತಮನಾ ಮಹಾಪುರುಷನಂ ಪುರುಷೋತ್ತಮನೆನ್ನದಿರ್ಪರಾರ್ (ಶಾಪಮಂ. ೨೧೯ ; 1112) ; ವೇದವು ಋಗ್ವೇದ ಯಜುರ್ವೇದ ಸಾಮವೇದ ಎಂದು ಮೂರು ವಿಧ. ಮೂರಕ್ಕೂ ಸೇರಿ ತ್ರಯೀ ಎಂದು ಹೆಸರು (ಹಿಂದಸಾ. ೧೫೭). [ ಸಂ. ]

**ತ್ರಯೀಚೋರ** (ನಾ). ೧. ಮೂರು ವೇದಗಳನ್ನು ಕದ್ದವನು; ಹಯಗ್ರೀವನೆಂಬ ರಾಕ್ಷಸ : ಹಯವದನನಾಗಿ ನೀ ತ್ರಯೀಚೋರನನ್ನು ಕೊಂದು ಸ್ತ್ರೀಯರಿಗೆ ನ್ಯಾಯದಿಂದ ದಯಾ ಬೀರಿದೆಯಲ್ಲ (ವಾದಿಕೀ. ೩೭-೫). ೨. ಸೋಮಕನೆಂಬ ರಾಕ್ಷಸ. ☞ ಈ ಬಗ್ಗೆ ಪುರಾಣಗಳ ಕಥೆಗಳಲ್ಲಿ ಭೇದವಿದೆ. [ ತ್ರಯೀ + ಚೋರ ]

**ತ್ರಯೀತನು** (ನಾ). ಮೂರು ವೇದಗಳನ್ನು ಶರೀರವಾಗಿ ಉಳ್ಳವನು ; ಸೂರ್ಯ ; ಆದಿತ್ಯ : "ಆದಿತ್ಯಃ, ಸವಿತಾ . . . ತ್ರಯೀತನುಃ – ಈ ೪೭ ಆದಿತ್ಯನ ಪೆಸರ್" (ಹಲಾಯು. ೭-೩೭) ; "ತ್ರಯೀತನು . . . ಸೂರ್ಯನಕ್ಕುಂ" (ಮಂಗರಾ. ೧೦-೨). [ ತ್ರಯೀ + ತನು ]

**ತ್ರಯೀಮಯ** (ನಾ). = ಮೂರು ವೇದಗಳ ಸ್ವರೂಪನಾಗಿರುವವನು ; ಸೂರ್ಯ : ತ್ರಯೀಮಯನುಂ ನಿತ್ಯೋದಯನುಮಪ್ಪ ಗಭಸ್ತಿಮಾಲಿಗರ್ಘ್ಯಮನೆತ್ತಿ (ಪಂಚತಂ. ೨೩೭-೫). [ಸಂ.]

**ತ್ರಯೋದಶ** (ಗು). ೧. ಹದಿಮೂರನೆಯ. (ನಾ). ೨. ಹದಿಮೂರು : ಬಟಿಯಂ ಸಂಜ್ವಲನಕಷಾಯಚತುಷ್ಕನೋಕಷಾಯನವಕನಾಮ ತ್ರಯೋದಶಪ್ರಕೃತಿಗಳನರೆದು (ಶಾಂತಿಪು. ೧೦-೧೧೧ ವ) ; ಪರಿಗೃಹೀತ ದಶವಿಧ ಶ್ರಮಣ ಧರ್ಮನುಂ . . . ತ್ರಯೋದಶವಿಧ ಕ್ರಿಯಾನಿರತನುಂ (ಜಾವುಂಪು. ೫-೨೫). [ ಸಂ. ]

**ತ್ರಯೋದಶಿ** (ನಾ). ಚಾಂದ್ರಮಾನ ತಿಂಗಳ ಎರಡೂ ಪಕ್ಷಗಳ ಹದಿಮೂರನೆಯ ದಿನ : "ತೇರಸಿಯೆ ತ್ರಯೋದಶಿ" (ಚತುನಿ. ೬೪) ; ಅಮಾವಾಸ್ಯೆ ತ್ರಯೋದಶಿ . . . ನವಮಿಯೆಂಬವೇ ಸರಣಿಯಿಂ ಷಡ್ವಾದಿ ಸ್ವರೋತ್ಪತ್ತಿ ತಿಥಿಗಳು (ವಿವೇಕ. ೨೩೦). [ ಸಂ. ತ್ರಯೋದಶೀ]

**ತ್ರಯೋಭಾಗ** (ನಾ). ಮೂರನೆಯ ಒಂದು ಭಾಗ: ಬೆನಕಂಗೆ ತಾರಕಾರಿಗೆ ಎನಗೆ ನೀವಿಂದು ಧನಮುಳ್ಳುದಂ ತ್ರಯೋಭಾಗವಾಗಿರಲಿಂದು ಹಂಚಿ ಕೊಟ್ಟಲ್ಲದಾರೋಗಿಸಲ್ಕಾನೀಯೆ (ನಂಬಿರ. ೧೭-೯೩). ☞ಸಂಸ್ಕೃತ ವ್ಯಾಕರಣದ ಪ್ರಕಾರ ಇದು ಅಬದ್ಧರೂಪ. [ <ಸಂ. ತ್ರಿಭಾಗ ]

**ತ್ರಸ** (ಗು). ೧. ಚಲಿಸುವ ; ಸರಿಯುವ ; ಚರಿಸುವ. (ನಾ). ೨. (ಎರಡು ಅಥವಾ ಎರಡಕ್ಕಿಂತ ಹೆಚ್ಚು ಇಂದ್ರಿಯಗಳನ್ನುಳ್ಳ) ಚಲಿಸುವ ಜೀವ ; ಜಂಗಮಪ್ರಾಣಿ : "ತ್ರಸಮುಕ್ಕುಂ ಜೀವನಿಕಾಯಂ ಜಂಗಮಮಾವಿರ್ಭೂತ ಪ್ರಧಾನ ಚೈತನ್ಯಗುಣಂ" (ವಸ್ತುಕೋ. ೧೮-೨) ; ತ್ರಸವೆನೆ ಚರಿಸುವ ಜೀವಂ (ತ್ರಿಲೋಕ. ೯). ೩. [ಜೈನ] ತ್ರಸನಾಮಕರ್ಮದ ಉದಯದಿಂದ ಉಂಟಾಗುವ ಎರಡು ಇಂದ್ರಿಯಂಗಳಿಂದ ಹಿಡಿದು, ಐದು ಇಂದ್ರಿಯಂಗಳನ್ನು ಪಡೆದಿರುವ ಜೀವ: ತ್ರಸ ಸ್ಥಾವರ ಯೋನಿಗಳೊಳು ಪಲಕಾಲಂ ತೊಳಲ್ದು (ಜಾವುಂಪು. ೩೪೬-೧೪) ; ಕೇವಲ ಗಮ್ಯಂ ತ್ರಸಮುಂ ಸ್ಥಾವರಮುಂ . . . ಇರ್ದುವು ಜೀವದ್ರವ್ಯಂಗಳಿಂ ಜಗತ್ತ್ರಯ ಮಧ್ಯಂ (ಅಜಿಪು. ೧೦-೩೭) ; ತ್ರಸಮೆನಿಕುಂ ದ್ವೀಂದ್ರಿಯದಿಂ ಪೆಸರ್ಗೊಳೆ ಪಂಚೇಂದ್ರಿಯಂಬರಂ ಕ್ರಮದಿಂದಂ (ಚಂದ್ರಪು. ೦೬-೧೨). ೪. ಹುಳು ; ಕ್ರಿಮಿ ; ಕೀಟ : "ತ್ರಸ ಲಾಕ್ಷಂ ಕ್ರಿಮಿಯೆಂದೆನಿಕ್ಕು" (ನಾನಾರ. ೧೨೨) ; ಹಸಿದ ದಿಂಡುಕಂಗೆ ಭಕ್ತಂಗೆ ಎಸಕದ ಧ್ಯಾನ ಉಂಟೇ ಅದು ತನ್ನ ಹಸಿವಡಗುವನ್ನಕ್ಕ ತ್ರಸಗಳು ಬಂದು ಸೇರುವನ್ನಕ್ಕ ಹುಸಿಧ್ಯಾನದಿಂದ ಜೀವದ ಅಸುಗಳ ಕೊಂಬವು (ಪೋಲೀಮಾ. ೫೭-೨೩೮) ; ತ್ರಸಮಂ ಕರಿಪತಿ ಪರಿರಕ್ಷಿಸುವುದದೇನರಿದೆ (ಪಾರ್ಶ್ವಪು. ೫-೫೯) ; ಧರಣಿಯೊಳು ದ್ವೀಪಾದ್ರಿಗಂಗಾಶರಧಿಪಕ್ಷಿಮೃಗತ್ರಸಂಗಳ ವಿರಚಿಸಿದರೊಲವಿಂದ (ಶಂಕರದಾ. ೪-೨೯). ೫. ಕಾಡು ; ಅರಣ್ಯ. [ ಸಂ. ]

**ತ್ರಸಕಾಯ** (ನಾ). ೧. [ಜೈನ] ಚಲಿಸುವ ಶರೀರ : ನಾರಕರ್ಗೆ ಮಿಥ್ಯಾದೃಷ್ಟ್ಯಾದಿಯಾಗಿ ನಾಲ್ಕು ಗುಣಸ್ಥಾನಮುಂ ... ಪಂಚೇಂದ್ರಿಯತ್ವಮುಂ ತ್ರಸಕಾಯಮುಂ . . . ನೀನವಶ್ಯಂ ಮಾಡೆ ಪಡುಗುಂ (ಪಸಾರ. ೦೬೪). ೨. ಚಲಿಸುವ ಶರೀರವುಳ್ಳ ಪ್ರಾಣಿ : ಅಲ್ಲಿಯುಂ ತ್ರಸನಾಮ ಕರ್ಮೋದಯವಶಂಗಳ್ ತ್ರಸಕಾಯಂಗಳ್ (ಆದಿಪು. ೧೦-೬೦ ವ). [ತ್ರಸ+ಕಾಯ]

**ತ್ರಸಕಾಯಿಕ** (ಗು). ೧. ತ್ರಸಜೀವಿಗಳ ದೇಹಕ್ಕೆ ಸಂಬಂಧಿಸಿದ. (ನಾ). ೨. = ತ್ರಸಜೀವ : ಕಾಯಾನುವಾದದಿಂ ತ್ರಸಕಾಯಿಕಂಗಳ್ಗೆ ಮೂಱುಮೊಳವು (ತಸೂವ್ಯ. ೧೧) ; ತ್ರಸಕಾಯಿಕಂಗಳ ಗಣನಂ ಪಂಚೇಂದ್ರಿಯಸಂಖ್ಯಾಸಮಾನಂ (ತತ್ತ್ವಪ್ರ. ೨೨). [ ತ್ರಸ + ಕಾಯಿಕ ]

**ತ್ರಸಘಾತ** (ನಾ). [ಜೈನ] ತ್ರಸಜೀವಿಗಳನ್ನು ಕೊಲ್ಲುವುದು,–ನಾಶಮಾಡುವುದು : ಅಲ್ಲಿ ತ್ರಸಘಾತಮೆಂಬುದು ತ್ರಸಂಗಳಂ ಕೊಂದೊಡಲ್ಲದೆ ಮಧುಮಾಂಸಮಿಲ್ಲಪ್ಪುದಱಿಂದವಂ ಸದಾಕಾಲಂ ವರ್ಜಿಸುವುದು (ಪಸಾರ. ೩೦೭). [ ತ್ರಸ + ಘಾತ ]

**ತ್ರಸಜೀವ** (ನಾ). [ಜೈನ] ಸಂಚರಿಸುವ ಜೀವ ; ಜಂಗಮಪ್ರಾಣಿ : ಸ್ಪರ್ಶನರಸನಘ್ರಾಣಚಕ್ಷುಶ್ಶ್ರೋತ್ರೇಂದ್ರಿಯ ಸಮನ್ವಿತಂಗಳಪ್ಪ ಮನುಷ್ಯಾದಿ ಪಂಚೇಂದ್ರಿಯಂಗಳುಮೆಂದಿಂತು ತ್ರಸಜೀವಂಗಳ್ ಚತುರ್ವಿಧಮಕ್ಕುಂ (ಆದಿಪು. ೧೦-೬೩ ವ). [ ತ್ರಸ + ಜೀವ ]

**ತ್ರಸಜೀವಿ** (ನಾ). [ಜೈನ] ಚಲನೆಯುಳ್ಳ ಪ್ರಾಣಿ; ಜಂಗಮ; ಎರಡು ಅಥವಾ ಅದಕ್ಕಿಂತ ಹೆಚ್ಚು ಇಂದ್ರಿಯಗಳನ್ನುಳ್ಳ ಜೀವಿಗಳನ್ನು, ಅವುಗಳಿಗೆ ಚಲನಶಕ್ತಿಯೂ ಇರುವುದರಿಂದ ತ್ರಸಜೀವಿಗಳೆಂದು ಕರೆದಿದೆ (ತತ್ವಪ್ರ. ೧೪೬). [ ತ್ರಸ + ಜೀವಿ$_1$ ]

**ತ್ರಸನ** (ನಾ). ೧. ಭಯ; ಹೆದರಿಕೆ. ೨. ಕಳವಳ; ಆತಂಕ. ೩. [ಕಾವ್ಯಮೀ] ಸಂಚಾರೀಭಾವಗಳಲ್ಲಿ ಒಂದು: ಧೃತಿನಿದ್ರಾವೇಗಶಂಕಾ ತ್ರಸನಚಪಲತಾಲಸ್ಯ . . . ಇವಿಂತೆಯ್ದು ಸಂಚಾರಿಭಾವಂ (ಕಾವ್ಯಾವ. ೭೯೫). [ ಸಂ. ]

**ತ್ರಸನಾಮ** (ನಾ). [ಜೈನ] ಹದಿಮೂರು ಪ್ರಕೃತಿಗಳಲ್ಲಿ ಒಂದು; ತ್ರಸ ಕಾಯದಲ್ಲಿ ಜನ್ಮವುಂಟಾಗುವಂತೆ ಮಾಡುವ ಕರ್ಮ: ಪಂಚೇಂದ್ರಿಯ ಜಾತಿ ತ್ರಸನಾಮ ಶುಭಾಶುಭೋದಯ ಪರ್ಯಾಪ್ತ . . . ತೀರ್ಥಕರ ನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಆದಿಪು. ೧೬-೪೯ ವ); ಪಂಚೇಂದ್ರಿಯ ಜಾತ್ಯಾನುಪೂರ್ವೀತ್ರಸನಾಮ ಬಾದರ ಪರ್ಯಾಪ್ತ ಶುಭಗಾದೇಯ ಯಶಸ್ಕೀರ್ತಿ ತೀರ್ಥಂಕರ ನಾಮೋಚ್ಚೈರ್ಗೋತ್ರಂಗಳೆಂಬ ಪದಿನಾಱುಂ ಪ್ರಕೃತಿಗಳುಮೊರ್ಮೆಯೆ ನಿರ್ಮೂಲಮಾಗೆ (ಪಂರಾಮಾ. ೧೬-೮೦ ವ). 'ನಾಮಕರ್ಮ' ಪರಾ. [ ತ್ರಸ + ನಾಮ ]

**ತ್ರಸನಾಳ** (ನಾ). [ಜೈನ] ತ್ರಸಜೀವಿಗಳು ಇರುವ ಪ್ರದೇಶ: ಅಧೋಲೋಕಂ ಮಧ್ಯಮಲೋಕಮೂರ್ಧ್ವಲೋಕಂ ಕ್ರಮದಿಂ ತ್ರಸನಾಳಮೇಕ ರಜ್ಜುಪ್ರಮಿತಂ (ಅಜಿಪು. ೬-೩೬); ಸಮಚತುರಸ್ರಂ ತ್ರಸನಾಳಮೇಕರಜ್ಜು ಪ್ರಮಾಣನಿಯತಂ ಮೂಲಾಗ್ರಮನೆಯ್ದಿ . . . ಮಧ್ಯದೊಳಿರ್ಕುಂ (ಮಲ್ಲಿಪು. ೧-೫೮); ಚತುರಸ್ರಂ ತ್ರಸನಾಳಮೊಂದೆ ನಿಜರಜ್ಜುಪ್ರಾಪ್ತಿಯಿಂದಾ ತ್ರಿಲೋಕತಳಾಗ್ರಂಬರಮೆತ್ತಿನಿಂದ ಮಣಿಗಂಬಂಬೊಲ್ ಬೆಡಂಗಾದುದು (ಧರ್ಮನಾ. ೨-೫); ಒಂದು ರಜ್ಜುವಿನ ವಿಸ್ತಾರದಿ ತ್ರಸನಾಳ ಸಂದಿಹುದು ಊರ್ಧ್ವಾಧೋಸ್ಥಿತಿಗೆ (ಅನಂಚ. ೧-೩೪). [ ತ್ರಸ + ನಾಳ (= ನಾಲ) ]

**ತ್ರಸನಾಳಿ** (ನಾ). = ತ್ರಸನಾಳ: ಇಂಥ ಲೋಕದ ಮಧ್ಯದಲ್ಲಿ ಬುಡದಿಂದ ತುದಿಯುವರೆಗೆ, ಮರದಲ್ಲಿ ತಿರುಳು ಇರುವಂತೆ ಒಂದು ರಜ್ಜುವಿನಷ್ಟು ಅಗಲವಾಗಿಯೂ ಚೌಕವಾಗಿಯೂ ತ್ರಸನಾಳಿ ಇರುತ್ತದೆ (ಜೈನಪ. ೪೪೭). [ ತ್ರಸ + ನಾಳಿ (= ನಾಲಿ) ]

**ತ್ರಸರ** (ನಾ). ೧. ದಾರವನ್ನು ಸುತ್ತುವ ಅಟ್ಟೆ; ನೇಯಿಗೆಯ ಲಾಳಿ: "ತ್ರಸರಃ, ಸೂತ್ರವೇಷ್ಟನಂ – ೨ ನೇಯಿಗೆಯವರು ನೂಲು ಸುತ್ತುವ ಅರಟ" (ಸಿದ್ಧಾಂತಿ. ೩೬೮). ೨. "ಜೇಡರು ಒಂದು ವಿಧವಾಗಿ ಸುತ್ತಿದ ನೂಲು" (ಗಂಗಾಮ. ೧೫೯). [ ಸಂ. ]

**ತ್ರಸರೇಣು** (ನಾ). (ಕಿಟಕಿ ಅಥವಾ ಹೆಂಚಿನ ಸಂದಿಯಲ್ಲಿ ಬೀಳುವ) ಸೂರ್ಯನ ಕಿರಣದ ಮಧ್ಯದಲ್ಲಿ ಕಾಣುವ ಧೂಳಿನ ಕಣ; ☞ಒಂದು ಅಳತೆಯ ಪ್ರಮಾಣ; ಮೂರು ಅಥವಾ ಆರು ಅಥವಾ ಎಂಟು ಪರಮಾಣುಗಳಿಂದ ಕೂಡಿದ ಧೂಳಿನ ಕಣ: ಎಂಟು ಪರಮಾಣುಗಳು ಕೂಡಲೊಂದು ತ್ರಸರೇಣುವೆನಿಸುವದು (ವಿವೇಕ. ೩೦೦); ಎರಡು ಪರಮಾಣುಗಳೆಂದರೆ ಒಂದು ಅಣು, ಮೂರು ಅಣುಗಳೆಂದರೆ ಒಂದು ತ್ರಸರೇಣು (ಭಾಮೃತ. ೮೯); ಎಂಟು ತ್ರುಟರೇಣುಗಳಿಂದ ಒಂದು ತ್ರಸರೇಣು (ಜೈನಪ. ೩೦೭). [ ತ್ರಸ + ರೇಣು ]

**ತ್ರಸಿತ** (ನಾ). [ಜೈನ] ಒಂದು ನರಕದ ಹೆಸರು: ವಕ್ರಾಂತ ತ್ರಸಿತ ಅವಕ್ರಾಂತ . . . ತತ್ಸಂಬಂಧಿ ಶ್ರೇಢೀಬಂಧ ಪ್ರಕೀರ್ಣಕ ವಿಕಲ್ಪದಿಂ ತ್ರಿಂಶಲ್ಲಕ್ಷ ಬಿಲಂಗಳಪ್ಪುವು (ತತ್ತ್ವಪ್ರ. ೧೨೦). [ <ಸಂ. ತ್ರಾಸಿತ ]

**ತ್ರಸೆ** (ನಾ). ಕಾಡು; ಅರಣ್ಯ: ತಿಂಮಯ್ಯಸೆಟಿ ಮಾಡಿ ಧರ್ಮ ಭೇರಿ ಜೇಗಟೆ ಕೇಸ ಕಂಚು ಮುಟಗೆ ಮಾಡಿದು ಮುಗುವಿನ ಪೊಳಗೆ ತ್ರಸೆಯಲಿ ಅಂತಭಟ ಸಿದಪ್ಪಭಟನವರ ಮೂಲದ ಬಾಳ ಮೇಲೆ . . . ಕೊಟ ಕಾಟಿಹೊಂನು ೧೧೦ (ಸೌಇಇ. IX-ii, ೪೭೧-೪೮; 1482). [ಸಂ. ತ್ರಸ]

**ತ್ರಸ್ತ** (ಗು). ೧. ಹೆದರಿದ; ಅಂಜಿದ. ೨. ಕಳವಳಗೊಂಡ; ಗಾಬರಿಗೊಂಡ. (ನಾ). ೩. ಅಂಜುಬುರುಕ; ಭೀರು: "ಭೀರುಕರಂ ಕಾತರಂ ಭಯಸ್ಥಂ ತ್ರಸ್ತಂ" (ವಸ್ತುಕೋ. ೧೦೮-೧೨); "ಭೀರು ಭೀತಂ ಹಂದೆ ದರಿತನಾ ಕಾತರಂ ತ್ರಸ್ತನಾ ಚಕಿತನೆನೆ ಹೇಡಿಗಭಿಧಾನಮಕ್ಕುಂ" (ಮಂಗರಾ. ೬೯-೧೨); ಭವದೀಯಬಲವಿಜೃಂಭಿತರವದಿಂ ತ್ರಸ್ತನೆನಧೀಶ ಬಂದೆಂ ಕಾಣಲ್ ಭವದಂಘ್ರಿಸರೋಜಮಂ (ಆದಿಪು. ೦೩-೨೮); ಅತಿತ್ರಸ್ತನಾಗಿ ಮುಂದುಗಾಣದೆ ವಿಹ್ವಲನಾಗಿ ತೊಟಲುತ್ತುಂ ಕಟಕದ ನಡುವನೆಯ್ದಿ ಬರ್ಪನ್ನೆಗಂ (ಕಾದಂಬ. ೪೩೬); ಅನವಶ್ಯಕ ಜಗಳದ ಮಾತುಗಳಿದ್ದುದರಿಂದ ತ್ರಸ್ತನಾಗಿ ನಾನೇ ಸುಮ್ಮನಾದೆ (ಕಾಗಳ. ೧೦೦). ೪. [ನಾಟ್ಯ] ಮುಖ್ಯವಾದ ಮೂವತ್ತಾರು ದೃಷ್ಟಿಚಲನೆಗಳಲ್ಲಿ ಒಂದು: ಬೆದರ್ವಲರ್ವ ತಾರೆ ತಿರುಪಮನೊದವಿದ ಪುಟಮಾಗಿ ತೋಱೆ ತ್ರಸ್ತಮೆನಿಕ್ಕುಂ (ಲಾಸ್ಯರಂ. ೩-೩೭); ಉಳಿದ ೨೦ ನೋಟಗಳು ವ್ಯಭಿಚಾರಿ ಭಾವಯುಕ್ತವಾದುವುಗಳು: ೧. ಶೂನ್ಯ ... ೧೯. ತ್ರಸ್ತ, ೨೦. ಮದಿರ (ಅಭಾನ್ಯ. ೪೫). ೫. [ಜೈನ] ಒಂದು ನರಕದ ಹೆಸರು: ತ್ರಸ್ತ ವಕ್ರಾಂತ ತ್ರಸಿತ . . . ತತ್ಸಂಬಂಧಿ ಶ್ರೇಢೀಬಂಧ ಪ್ರಕೀರ್ಣಕ ವಿಕಲ್ಪದಿಂ ತ್ರಿಂಶಲ್ಲಕ್ಷ ಬಿಲಂಗಳಪ್ಪುವು (ತತ್ತ್ವಪ್ರ. ೧೨೦). [ ಸಂ. ]

**ತ್ರಸ್ತರಿ** (ನಾ). ಪರಿಹಾಸ; ಮೂದಲಿಕೆ. 'ತ್ರಸ್ತರಿಯಾಡು' ಪರಾ. [ ದೇ.॥ ತೆಲು. ತ್ರಸ್ತರಿ ]

**ತ್ರಸ್ತರಿಯಾಡು** (ಕ್ರಿ). ಪರಿಹಾಸ ಮಾಡು; ಮೂದಲಿಸು: ಸುರಭೂರುಹಮುಮನಗ್ಗದ ಸುರಭಿಯುಮಂ ಚಾಗಗುಣದೊಳಿಮ್ಮರಸಂ ತ್ರಸ್ತರಿಯಾಡುವಂ (ಧರ್ಮಾಮೃ. ೪-೨೦೭). [ ತ್ರಸ್ತರಿ + ಆಡು$_1$ ]

**ತ್ರಸ್ತಾಭಿಭೂತ** (ನಾ). ಭಯಗೊಂಡವನು; ಹೆದರಿದವನು: ಕಳ್ಳರೆಂದು ಪುಯ್ಯಲಿಟ್ಟಾಗಳನಿಬರುಂ ತ್ರಸ್ತಾಭಿಭೂತ[ಪಾಠಾಂ. ತ್ರಸ್ತಾಭೀತ]ರಾಗಿ ಪಟ್ಟನೆ ಪಾಱಿಯೋಡಿ (ವಡ್ಡಾರಾ. ೧೮-೨೫). [ ತ್ರಸ್ತ + ಅಭಿಭೂತ ]

**ತ್ರಸ್ತಾಲಸ** (ನಾ). [ನಾಟ್ಯ] ಕುಳಿತುಕೊಳ್ಳುವ ಒಂಭತ್ತು ಸ್ಥಾನಕಗಳಲ್ಲೊಂದು; ☞ ಗ್ಲಾನಿ, ಮದ, ವ್ಯಾಧಿ ಮೊದಲಾದುವನ್ನು ಅಭಿನಯಿಸುವ ಭಂಗಿ: ಸ್ವಸ್ಥ ಮಂದಾಲಸ ಕ್ರಾಂತ ವಿಷ್ಕಂಭಿತ ಉತ್ಕಟ ತ್ರಸ್ತಾಲಸ ಜಾನುಗತ ಮುಕ್ತಜಾನು ವಿಮುಕ್ತ ಈ ಒಂಬತ್ತು ಕುಳ್ಳಿರ್ದ ಸ್ಥಾನಕಂಗಳ್ (ಲಾಸ್ಯರಂ. ೭-೧೨ ವ); ತ್ರಸ್ತಾಲಸ: ಕೈಗಳನ್ನು ಜೋತು ಬಿಟ್ಟು ಆಲಸ್ಯದಿಂದ ಕೂಡಿ, ಕಣ್ಣುಗಳನ್ನು ಕಡೆದ ನೊರೆಯಂತೆ ಸುತ್ತಿಸುವುದು. ಹಾನಿ, ಗ್ಲಾನಿ, ಮದ, ವ್ಯಾಧಿ, ಮೂರ್ಛೆ, ಭಯ ಇವುಗಳನ್ನು ತೋರಿಸುವಾಗ ಇದನ್ನು ವಿನಿಯೋಗಿಸಬೇಕು (ಲಾಸ್ಯರಂ. ೩೩೨ ಗದ್ಯಾನುವಾದ). [ ತ್ರಸ್ತ + ಅಲಸ ]

**ತ್ರಸ್ತಾಲಸಕ** (ನಾ). = ತ್ರಸ್ತಾಲಸ: ಎರಡುಂ ಕೈಗಳ್ ಪಸರದಿನಿರೆ ತನು ಜಡನಾಗಿ ಕಣ್ಗಳೆರಡುಂ ಮಥಿಸಿದ ನೊರೆಯಾಗಿ ತಿರುಗಲದು ತಾಂ ತರುಣೀ ತ್ರಸ್ತಾಲಸಕದ ತಾಣಮೆನಿಕ್ಕುಂ (ಲಾಸ್ಯರಂ. ೭-೫೭). [ ಸಂ. ]

**ತ್ರಸ್ತೆ** (ನಾ). ಕಳವಳಗೊಂಡವಳು. [ ಸಂ. ತ್ರಸ್ತಾ ]

**ತ್ರಸ್ನು** (ನಾ). ಹೆದರುವ ಸ್ವಭಾವದವನು; ಅಂಜುಬುರುಕ; ಭೀರು: "ತ್ರಸ್ನುಃ, ಭೀರುಃ, ಭೀರುಕಃ, ಭೀಲುಕಃ–೪ ಹೆದರುವವನ ಪೆಸರು, ಭಯಪಡುವ ಪಿರಿಕಿ" (ಸಿದ್ಧಾಂತಿ. ೩೨೯). [ ಸಂ. ]

**ತ್ರಾಟಕ** (ನಾ). (ಕಣ್ಣುಗಳಲ್ಲಿ ನೀರು ಬರುವವರೆಗೂ) ಒಂದು ವಸ್ತುವನ್ನು ದಿಟ್ಟಿಸಿ ನೋಡುವಿಕೆ: ಅತಿ ಸೂಕ್ಷ್ಮವಾದ ವಸ್ತುಗಳನು ಸ್ಥಿರ ದೃಷ್ಟಿಯಿಂ ಕಂಬನಿ ಬರುವ ಪರಿಯಂತರ ನೋಡೂದು ತ್ರಾಟಕವೆನಿಸೂದು (ಶಿವಪ್ರ. ೬-೭). [ ? ]

**ತ್ರಾಟಿಕಿ** 'ತಾಟಕಿ' ನೋ.

**ತ್ರಾಟಿಕೆ** 'ತಾಟಕಿ' ನೋ.

**ತ್ರಾಟಿಸು** (ಕ್ರಿ). ೧. ಹೊಡೆ; ಬಡಿ; ತಾಟಿಸಂ: ಮರ್ಮವಜಿುತು ತ್ರಾಟಿಸುವಾಗ ಶ್ರೀವಿಶ್ವಕರ್ಮನ ಪೂಜೆಯು ಹೋಯಿತಲ್ಲೋ (ಪ್ರಸಕೀ. ೭೭-೧). ೨. ಚಪ್ಪರಿಸು; ತಟ್ಟು: ಕುದುರೆಯ ನೆರೆಯು ತ್ರಾಟಿಸಲಾನಂದದಿ ಸೆಟ್ಟಿಯು ಪುರಕೆ (ತರ್ಕಕೌ. ೧೭-೯೦). [ <ತಾಟಿಸು ]

**ತ್ರಾಡ** (ನಾ). ಶಬ್ದ; ಸಪ್ಪಳ; ರವ: "ರವಂ ತ್ರಾಡಮುಕ್ಕು" (ಮಂಗರಾ. ೯೭-೧೭). [ <ಸಂ. ತಾಡ ]

**ತ್ರಾಡಿಸು** (ಕ್ರಿ). ಹೊಡೆ; ಬಡಿ: ತ್ರಾಡಿಸುವ ಭೇರಿಗಳ ರಭಸದೊಳೀಡಿರಿವ ಹರುಷದಲಿ ತೇಜೋವತಿಯನೊಳಪೊಕ್ಕ (ಅಂಬಿಕಾ. ೮-೧೫); ಘೋಟಕ ಗಳನ್ನೇರಿ ನಿಜಕರಕಲಿತ ಕಶೆಗಳಿಂ ತ್ರಾಡಿಸ [ಪಾಠಾಂ. ತಾಡಿಸ]ಲ್ (ವೆಂಕಾರಾ. ೧-೭-೮). [ <ತಾಡಿಸು ]

**ತ್ರಾಣ** (ನಾ). ೧. ಕಾಪು; ರಕ್ಷಣೆ; ಪಾಲನೆ: ಪರಿಜನಪ್ರಾಣ ತ್ರಾಣಾ ಕುಲಮತಿಯುಪ್ಪೆನ್ನ ಬಿನ್ನಪಮಂ ದೇವರವಧಾರಿಸಿ ಪ್ರಸಾದಂಗೆಯ್ವುದು (ಕಾದಂಬ. ೩೭೯). ೨. ಶಕ್ತಿ; ಬಲ; ಕಸುವು; ಸಾಮರ್ಥ್ಯ: ದಪ್ಪವಾದ ಶರೀರವುಳ್ಳವನಾದರೂ ಒಬ್ಬನು ತ್ರಾಣವಿಲ್ಲದೇ ಇಹನು (ವೈದ್ಯಸಾ. I, ೨೦); ಉರುತರ ತ್ರಾಣದೊಳ್ ಜಯದೊಳ್ ಚಮತ್ಕೃತಿಯೊಳ್ ... ಪಂಥದೊಳ್ ಕಾಣೆನವರಿರ್ವರ್ಗೆ ಸಮರಾದ ಕಲಿಗಳಂ ಕ್ಷೋಣಿಯೊಳ್ (ಜೈಮಿ ಭಾ. ೨೨-೧೨); ಕಾಣಲೊಲ್ಲದೆ ತನ್ನ ತ್ರಾಣವನು ನೆಚ್ಚಿ ನಂಬಿ ಜಾಣತನವನ್ನು ತೋಱಿದರೆ ಗುರುಮುಖವ ಕಾಣದೆ ಹೋಹ (ಸರ್ವಜ್ಞ. ೩೭); ತ್ರಾಣಗಳನು ತೋರಿಸಿ ಪಾರಿಸುವ ಭೂರಿ ದಾರುಣವೀರ ಧೀರ ಶೌರ್ಯೋದಾರ್ಯ . . . ಕಾಮಾಂಧಕಾರಗೃಹದಿ ಸೇರಿಸಿದ ಮಾರನೆಷ್ಟೊಂದು ವೀರನರರೆ (ಸೌಗಂಧಿ. ೭೪-೧); ಅತ್ರಿಋಷಿಗಳಿಗೆ ಒಂದು ದಿನ ದೇಹದಲ್ಲಿ ಆಲಸಿಕೆಯಾಯಿತು. ನಡೆಯುವುದಕ್ಕೆ ತ್ರಾಣವಿಲ್ಲದೇ ಹೋಯಿತು (ನೀತಿಚಿಂ. IX, ೧೭); ತ್ರಾಣವಿದ್ದವನ ಸಂಗಡ ಹೋಗಿ ತಾಟಿಸಿಕೊಂಡ (ಗಾದೆ). ೩. ರಕ್ಷಾಕವಚ. 'ತನುತ್ರಾಣ', 'ಶಿರಸ್ತ್ರಾಣ' ಪರಾ. ೪. ರಕ್ಷಕ; ಪಾಲಕ. ೫. ಸರಕಿನ ಭಾರ ಹೊರುವ (ಹಡಗಿನ) ಶಕ್ತಿ: "ತ್ರಾಣವೆನೆ ಸರಿ" (ಮಂಗರಾ. ೧೩೦-೫). [ ಸಂ. ]

**ತ್ರಾಣಂಗೆಡು** (ಕ್ರಿ). ಬಲವನ್ನು ಕಳೆದುಕೊಳ್ಳು; ಶಕ್ತಿಗುಂದು: ಸುಖ ಬಂದಡೆ ಸಪ್ರಾಣಿಸುವೆ ದುಃಖ ಬಂದಡೆ ತ್ರಾಣಂಗೆಡುವೆಂ (ಶಂಕಕಂ. ೨೫). [ ತ್ರಾಣ + ಕೆಡು$_1$ ]

**ತ್ರಾಣಗುಂದಿಸು** (ಕ್ರಿ). ಶಕ್ತಿಗುಂದುವಂತೆ ಮಾಡಂ; ಶಕ್ತಿಗುಂದಿಸು: ಜವಗೆಡಿಸು=ತ್ರಾಣಗುಂದಿಸು (ಗಂಗಾಮ. ೧೩೮). [ ತ್ರಾಣ + ಕುಂದಿಸು ]

**ತ್ರಾಣಗುಂದು** (ಕ್ರಿ). = ತ್ರಾಣಂಗೆಡು: (ಕ). [ ತ್ರಾಣ + ಕುಂದು$_1$ ]

**ತ್ರಾಣಗೊಳ್ಳು** (ಕ್ರಿ). ಬಲಿಷ್ಠವಾಗು; ಶಕ್ತಿಯನ್ನು ಹೊಂದು: (ಕ). [ ತ್ರಾಣ + ಕೊಳ್ಳು$_1$ (<ಕೊಳ್$_1$) ]

**ತ್ರಾಣಪುಷ್ಟಿ** (ನಾ). ಬಲವನ್ನು ಕೊಡುವ ಸತ್ತ್ವ: ಹಸುವಿನ ಹಾಲಿನಲ್ಲಿರುವ ತ್ರಾಣಪುಷ್ಟಿ ಎಮ್ಮೆಯ ಹಾಲಿನಲ್ಲಿ ಇಲ್ಲ (ಹೇಮಾಕೀ. ೭೭). [ ತ್ರಾಣ + ಪುಷ್ಟಿ ]

**ತ್ರಾಣಿ** (ನಾ). ೧. ಶಕ್ತಿಯನ್ನು ಉಳ್ಳವನು; ಬಲಶಾಲಿ: "ಬಲಿಷ್ಠಃ, ಬಲೂಲಃ=ತ್ರಾಣಿ" (ಕಾಶಕೈ. ೯೭); ಕೇಣವನು ಕಳೆಯುವುದು ತ್ರಾಣಿಯೆಂದೆನಿಸುವುದು ಕ್ಷೋಣಿಮಾರ್ಬಲವ ಗೆಲ್ಲುವುದು ಪುಣ್ಯದತ್ರಾಣ ಕಾಣಯ್ಯ (ಸರ್ವಜ್ಞ. ೭೦೪); ಕೂಸಿಗಿಂತ ತ್ರಾಣಿಯಲ್ಲ ಪಾಪ! ರಾಯರು (ಮಾಂದಳಿ. ೩೦-೧೧); ತೊಟ್ಟಿಲಲ್ಲಿ ಆಡುವ ಕೂಸು . . . ನಡೆದಾಡುವಷ್ಟು ತ್ರಾಣಿಯಾದಾಗ (ಹೊಸಕ್ಕಿ. ೭೭). ೨. ರಕ್ಷಣೆಯನ್ನು ನೀಡುವಂತಹುದು: ತ್ರಾಣಿಗಳತ್ಯಧಿಕ ವರಶ್ರೇಣಿಗಳ್ (ಗಿರಿಕ. ೧೦-೫೭). [ ಸಂ. ತ್ರಾಣಿನ್ ]

**ತ್ರಾತ$_1$** (ನಾ). ರಕ್ಷಿಸುವವನು; ರಕ್ಷಕ: ಹುಟ್ಟುಗುರುಡಿಯನು ಹುಟ್ಟಿಸಿದಾತನಿಗೆ ವಿಶ್ವದ ತ್ರಾತನಿಗೆ ನನ್ನ ನಮಸ್ಕಾರ (ಚಿಂತನ. ೭೫-೨೭). [ ಸಂ. ತ್ರಾತೃ ]

**ತ್ರಾತ$_2$** (ನಾ). ಕಾಪಾಡಲ್ಪಟ್ಟುದು; ರಕ್ಷಿಸಲ್ಪಟ್ಟುದು: "ತ್ರಾಣಂ ತ್ರಾತಂ (ಸಮಂತು) ರಕ್ಷಿತಮವಿತಂ" (ವಸ್ತುಕೋ. ೧೦೫-೪೩); ೨. ರಕ್ಷಣೆ; ಪಾಲನೆ: "ತ್ರಾತಂ, ತ್ರಾಣಂ, ರಕ್ಷಿತಂ, ಅವಿತಂ, ಗೋಪಾಯಿತಂ, ಗುಪ್ತಂ-೬ ಪೊರೆಯಲ್ಪಟ್ಟದ್ದು" (ಸಿದ್ಧಾಂತಿ. ೩೩೨). "ತ್ರಾತಂ, ತ್ರಾಣಂ . . . ತ್ರಾಯಂ, ಈ ೫ ಪಾಲನೆ" (ಕಾಶಕೈ. ೧೨೪). [ ಸಂ. ]

**ತ್ರಾಪುಷ** (ಗು). ೧. ತವರದಿಂದ ಮಾಡಿದ. (ನಾ). ೨. ತವರದಿಂದ ಮಾಡಿದ ಪಾತ್ರೆ. [ ಸಂ. ]

**ತ್ರಾಯಂತಿ** (ನಾ). ಒಂದು ಬಗೆಯ ಔಷಧಿ ಸಸ್ಯ; ನೀರಾಮೆ ಬಳ್ಳಿ ಮತ್ತು ಅದರ ಬೇರು: ತ್ರಾಯಂತಿ = ತ್ರಾಯಂತಿಯ ಚೂರ್ಣಕಮಂ . . . ಎಂಬಿವುಗಳಿಂದಂ ... ಕೊರಳಿಂದ ಮೇಲಪ್ಪ ವಿಕೃತಿ, ಪಿತ್ತಂಗಳುಂ, ಮಾಣುವುವು (ವಿಮವಿ. ೧೬೨). [ ಸಂ. ತ್ರಾಯಂತೀ ]

**ತ್ರಾಯಮಾಣೆ** (ನಾ). ಒಂದು ಬಗೆಯ ಗಂಧದ್ರವ್ಯ: "ವಾರ್ಷಿಕಂ—ತ್ರಾಯಮಾಣೆ ಎಂಬ ಗಂಧದ್ರವ್ಯ, ದರೆಸಿ, ಬಿದಿರುಪ್ಪು" (ಓಷಧಿ. ೧೫೦). [ ಸಂ. ತ್ರಾಯಮಾಣಾ ]

**ತ್ರಾವಳಿ** (ನಾ). [ಸಂಗೀತ] ಒಂದು ರಾಗದ ಹೆಸರು: ಕೌಶಿಕಿ ವೇಳಾವಳಿ . . . ತ್ರಾವಳಿ . . . ಶಯಸೋದರಿಯೆಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದವು (ವಿವೇಕ. ೨೩೩). [ ? ]

**ತ್ರಾಸ** (ನಾ). ೧. ಭಯಂ; ಹೆದರಿಕೆ: "ಶಂಕೆ ಭಯಂ . . . ತ್ರಾಸಂ ದರಂ ವಿಭೀತಿ ಸಮಾನಾರ್ಥಂ" (ವಸ್ತುಕೋ. ೧೧೧-೫); "ಆತಂಕಃ, ಭಯಂ . . . ತ್ರಾಸಃ, ಸಾಧ್ವಸಂ – ಈ ೬ ಭಯಂ" (ಹಲಾಯು. ೧೨೦-೪೦); ಉದಯಿಸೆ ನೃಪಖಳ್ಗಂ ಮಹಾತೀಕ್ಷ್ಣಧಾರಾಪರಿಪಾತತ್ರಾಸದಿಂದೋಡಿದರತಿಜವದಿಂ ರಾಜಹಂಸರ್ (ಬಾಧಪು. ೨-೧೩). ೨. ಉಪದ್ರವ; ತೊಂದರೆ: ರಾಗಾದಿಗಳ್ ಜನ್ಮಮೃತ್ಯು ತ್ರಾಸಂಗಳನೀವುವು (ಪಂಚಾಮಾ. ೧-೪); ನನ್ನಿಂದ ನಿನಗೆ ತ್ರಾಸ ಮಾತ್ರ ಆಯಿತು (ಪ್ರೇಮತ. ೧೪); ನನ್ನ ಮನಸ್ಸಿಗೆ ಎಷ್ಟು ತ್ರಾಸವಾಯಿತೆಂಬುದನ್ನು ಆದೇ ಕಾಲಕ್ಕೆ ಪತ್ರದ್ವಾರದಿಂದ ತಿಳಿಸಿದ್ದೇನೆ (ದಾಸಹು. ೧೦೦). ೩. ರತ್ನದಲ್ಲಿಯ ಹುಳುಕು,–ದೋಷ: "ರತ್ನಂಗಳ ದೋಷದಲ್ಲಿಯುಂ ತ್ರಾಸವೆಂಬುದು" (ಹಲಾಯು. ೧೩೪-೨೨); "ಅಖಿಳ ರತ್ನದ ಕಾಂತಿ ಕೆಟ್ಟರಲು ತ್ರಾಸವೆನಿಸಿಕ್ಕು" (ಮಂಗರಾ. ೦೪೦-೧೦); ವರ್ಣಾಲ್ಪತೆ ರೇಖೆ ತ್ರಾಸಂ ಕಾಕಪದಂ ಬಿಂದುವೆಂಬಿವೈದು ದೋಷಂಗಳನುಳಿದ ಬಜ್ಜರಮಂ ತೊಡವುಗಳೊಳ್ ಕೇವಣಿಸಿ (ಹಾಲಾಸ್ಯ. ೨-೧-೫೫ ವ). ೪. ಹೆದರಿಸುವುದು; ಭಯಪಡಿಸುವುದು. ೫. ಚಲಿಸುವುದು; ಚಲನೆ. ೬. [ ಕಾವ್ಯಮೀ ] ಸಂಚಾರೀಭಾವಗಳಲ್ಲಿ ಒಂದು; ತ್ರಸನ; ಹೆದರುವುದು; ಬೆದರುವಿಕೆ: ತ್ರಾಸ ಎಂದರೆ ಬೆದರುವುದು (ಭಾರಮೀ. ೩೪೭). [ ಸಂ. ]

**ತ್ರಾಸಂಗೊಳ್**, ತ್ರಾಸಗೊಳ್ಳು (ಕ್ರಿ). ೧. ಹೆದರಿಕೊಳ್ಳು; ಭಯಪಡು: ವಸುಧಾತಳಪತಿಗಿತ್ತಂ ತ್ರಾಸಂಗೊಳುತುಂ ಸರ್ವಸ್ವಮುಂ ಪ್ರಭಾಸಾಮರನುಂ (ಆದಿಪು. ೧೩-೪). ತ್ರಾಸಗೊಳ್ಳು: ೨. ತೊಂದರೆಗೆ ಒಳಗಾಗು: ಜನರು ತ್ರಾಸಗೊಂಡಿದ್ದಾರೆ (ಧೂಳಾಚಿ. ೯೫೫). [ ತ್ರಾಸ + ಕೊಳ್$_1$ ]

**ತ್ರಾಸಕೊಡು** (ಕ್ರಿ). ತೊಂದರೆ ಕೊಡು; ಉಪದ್ರವ ಕೊಡು; ಪೀಡಿಸು: ಮಕ್ಕಳೇ ಜಗಳಮಾಡಬಾರದು; ಈ ಅಮ್ಮನಿಗೂ ಅಣ್ಣನಿಗೂ ತ್ರಾಸಕೊಡಬಾರದು (ಜಿದಾಉ. ೩೦೦); ಅವರು ಯಾವ ವಿಧದಲ್ಲೂ ತಮ್ಮ ಮಗನಿಗೆ ತ್ರಾಸಕೊಡುತ್ತಿರಲಿಲ್ಲ (ಅವತಂ. ೩). [ ತ್ರಾಸ + ಕೊಡು$_1$ ]

**ತ್ರಾಸಗೊಳ್ಳು** 'ತ್ರಾಸಂಗೊಳ್' ನೋ.

**ತ್ರಾಸದಾಯಕ** (ಗು). ಕಷ್ಟಕರ; ಉಪದ್ರವಕಾರಿ; ತೊಂದರೆಯನ್ನುಂಟು ಮಾಡುವ: ಹೊಸ ಶಿಕ್ಷಣಾಧಿಕಾರಿಯ ಆಡಳಿತವು ಆನಂದ – ಗೋವಿಂದ ರಾಯರಿಗೆ ತ್ರಾಸದಾಯಕವಾಯಿತು (ಸ್ಕೂಲಮಿ. ೨೨೮); ನೀರು ಹೊರುವ ಕೆಲಸ ತ್ರಾಸದಾಯಕವಿದ್ದ ಪ್ರಾಂತಕ್ಕೆ ಪೀಪಾಯಿ ಸವಾರಿ ಬಿಡುತ್ತಿದ್ದನು (ಕಂಬಹು. ೨೫); ಉಪದ್ರವಕಾರಕ, ತ್ರಾಸದಾಯಕ ಭೂತ, ರೋಗ ಮುಂತಾದುದರಿಂದ ತೊಂದರೆಯಾಗದಿರಲೆಂದು ಕೊಡುವ ಬಲಿ (ಕರ್ಣಾಟ. ೬೫). [ ತ್ರಾಸ + ದಾಯಕ ]

**ತ್ರಾಸಪಟ** (ನಾ). (?): ಪರಮೇಶ್ವರರಲ್ಲಿ ಭಕ್ತಿವುಳ್ಳವನಾದ್ದರಿಂದ ಪೂರ್ಣ ಚಂದ್ರನಿಗೆ ಸಮಾನವಾದ ಕಾಂತಿವುಳ್ಳಂಥಾದಾಗಿ ತ್ರಾಸಪಟಗಳು ಇಲ್ಲದೆ ಇರುವಂಥಾವರಾಗಿ ಉತ್ತಮವಾದ ಸ್ಫಟಿಕಲಿಂಗವನ್ನು ಸಂಪಾದಿಸಿ (ಶಿವದ. ೧೦೫-೦೭). [ ? ]

**ತ್ರಾಸಿಸು** (ಕ್ರಿ). (ಹೆದರಿಸಿ) ನಾಶಪಡಿಸು,–ಇಲ್ಲದಂತೆ ಮಾಡು: ಅಘಮಂ ತ್ರಾಸಿಸಲೆಂದವಳ ದೀಕ್ಷೆಯಂ ಕೆಯ್ಗೊಂಡಳ್ (ಶಾಂತಿಪು. ೪-೮೪). [ ತ್ರಾಸ + – ಇಸು₃ ]

**ತ್ರಾಸು₁** (ನಾ). ತೊಂದರೆ; ಆಯಾಸ; ಕಷ್ಟ: ನನ್ನಿಂದ ನಿಮಗೆ ಸುಮ್ಮನೆ ತ್ರಾಸು (ಹೊಸಕ್ಷಿ. ೩೫); ಮದುವೆ ಆದರೆ ಮಾಡಿಕೊಂಡವಳಿಗೂ ತ್ರಾಸು ನನಗೂ ತ್ರಾಸು (ರಕ್ತಧ್ವ. ೬೯); ಬಾಳ ತ್ರಾಸಾಗೈತಿ ಜೀವಕ್ಕ (ಮಣ್ಣುಹೆ. ೮); ನೀ ಒಪ್ಪೋದ ತ್ರಾಸು ಅಂತ ತಿಳಿದಿದ್ದೆ (ಅಪನಾ. ೨೯). [ <ಸಂ. ತ್ರಾಸ ]

**ತ್ರಾಸು₂**, ತರಾಜು, ತರಾಸು (ನಾ). ವಸ್ತುಗಳನ್ನು ತೂಕಮಾಡುವ ಸಾಧನ; ತಕ್ಕಡಿ: "ಪಾತ್ರದಂ ತ್ರಾಸು ಸಮದಂಡಿ ತೂಗುವ ಕೋಲು" (ಮಂಗರಾ. ೧೦೫-೧೪); ತೂಗೆ ಸಂದಾ ಮೇರು ಕ್ಷೋಣೀಂದ್ರಮಂ ತ್ರಾಸಿನೊಳ್ (ಎಕ. VII, ಶಿವಮೊ. ೬೪-೮೭; 1112); ತ್ರಾಸಿನ ಕೊಡನೊಂದು ಬಿರ್ದೊಡೊಂದುಟಿದಪುದೇ (ಧರ್ಮಾಮ್ಮ. ೫-೧೦೭); ಹೊನ್ನ ತೂಗಿದ ತ್ರಾಸು ಕಟ್ಟಳೆ ಹೊನ್ನಿಂಗೆ ಸರಿಯಪ್ಪುದೆ (ಅವಜಂ. ೧೦೮-೪೯೦); ಮಿಗೆ ಮನದೊಳಗೆ ನಸುನಗುತೆ ತಂದಿಕ್ಕಿದಂ ತ್ರಾಸಿನೊಳಗೆ ಕೌಪಂ (ಅನೀರ. ದೀ. ೯೭-೧೨); ಸೊಗಸು ಮಿಗಲಾ ತ್ರಾಸು ಕಟ್ಟಳೆಯೊಗುಮಿಗೆಯು ಮಾಷಗಳ ಪದ್ಧತಿಯಗಲದಲಿ ಹರಹಿದನು (ಸಂಭಪ. ೩೨-೩೩); ತ್ರಾಸಿಂದೆ ತೂಗಿದ ಮಣಿಯೆನೆ ಮಜ್ಜೀವಿತೇಶ ವಿಸ್ತರಿಸು ಮೇಲ್ಗತಿಯ (ಮೋಹತ. ೨೫-೧); ಕೂಗಿ ಹೇಳಿದರೆ ತೂಗುವ ತ್ರಾಸು ಕೇಳುತ್ತದೋ? (ಗಾದೆ). **ತರಾಜು**: ವಿಲಾಯತಿ ಕಬ್ಬಿಣ ಮತ್ತು ಹಿತ್ತಾಳಿಯ ತರಾಜು ಮತ್ತು ಘಡಿಯಾಳಗಳು (ಮುಂಬಬ್ಯಾ. ೧೯೨). **ತರಾಸು**: ನೀವು ನಿಮ್ಮ ಕೈಯೊಳಗೆ ಒಂದು ತರಾಸು ತಕ್ಕೊಂಡು ಎತ್ತಿ ಹಿಡಿಯಿರಿ (ಮುಂಬಯಿ. ೫-೫೪).

**ತ್ರಾಸಿನ ಕಟ್ಟಳೆ** = ತೂಕ; **ಪ್ರಮಾಣ**: ಅರಿದರಿದು ಸಮಗಾಣಿಸ ಬಾರದು ತ್ರಾಸಿನ ಕಟ್ಟಳೆಯಂತಿನಿತು ವೆಗ್ಗಳವಾದರೆ ಈಶ್ವರನೊಡೆಯಿಕ್ಕದೆ ಮಾಣುವನೆ (ಬಸವ. ೮೦೪).

[ ←ಪಾರ. ಹಿಂ. ತರಾಜೂ; ಮರಾ. ತರಾಸ್, ತರಾಜೂ ]

**ತ್ರಾಸು₃** (ನಾ). ಒಂದು ಬಗೆಯ ಚರ್ಮವಾದ್ಯ: ಲಿಂಗವ ಸೋಂಕಿದ ಮನಕ್ಕೆ ಲಿಂಗಾಭಿಮಾನವಾವುದೆಂದಡೆ ಶೇಷನ ಅವಸಾನದಂತಿರಬೇಕು ತ್ರಾಸಿನ ವಾಸದ ಭಾಷಾಂಗದಂತಿರಬೇಕು (ವೋಲವಾ. ೧೮೪-೭೦೫); ಛದ್ರಮೆಂಬ ಕರಾಡಿ ಶಾಸಕವೆಂಬ ನಗಾರಿ ಭೀಷಣವೆಂಬ ತ್ರಾಸಾ[ಸು] . . . ಘಂಟಿಕೆಯೆಂಬ ಘಂಟೆ ಇತ್ಯಾದಿಯ ದಶವಾದ್ಯಂಗಳಂ ಬಾಜಿಸಲುಳ್ಳ ವಿಚಕ್ಷಣರಿಂ ವಿನುತರಾಗಿ (ವಿವೇಕ. ೨೩೭); ವಾದ್ಯದ ಚೀರಲುಧ್ವನಿ, ತ್ರಾಸುಮಾರಿನ ಬಡಿತಗಳಿಗೆ ನಾಗನ ಪಾತ್ರಿಗಳು ಮಾತನಾಡುವ ಸೂಚನೆ ಕಾಣಿಸಿದಾಗ, ವಾದ್ಯದವರಿಗೆ ಕೈಸನ್ನೆ ಮಾಡಿದರು (ಸ್ವಪ್ನಹೊ. ೬೩). 'ತಾಸೆ' ಪರಾ. [ ? ]

**ತ್ರಾಸುಗಟ್ಟಳೆ** (ನಾ). (ತಕ್ಕಡಿಯಿಂದ ತೂಗುವ) ತೂಕ; ಪ್ರಮಾಣ: ತ್ರಾಸುಗಟ್ಟಳೆವೊರೆಗಲ್ಲು ಮಚ್ಚರಗಡ್ಡಿ . . . ಲೇಸಾಗಿ ಮಯಣದಿಂದೊಗೆಯನೆತ್ತುವ ಬಹುಕೌಶಲವಿದರಿರುತಿಹರು (ಅಂಜಚ. ೩-೮೧). [ ತ್ರಾಸು₂ + ಕಟ್ಟಳೆ₁ ]

**ತ್ರಾಹಿ** (ಅ). 'ಕಾಪಾಡು' ಎನ್ನುವ ಅರ್ಥದ ಶಬ್ದ: ತ್ರಾಹಿ ಸುರವರವಂದ್ಯ ಚರಣ ತ್ರಾಹಿ ಸುಜನಜನಾಘಹರಣ (ನಿಘಾಗ. ೩-೧೦-೧೩). P ಸಂಸ್ಕೃತದಲ್ಲಿ ಇದು ಒಂದು ಪೂರ್ಣ ಕ್ರಿಯಾಪದ. [ ಸಂ. ]

**ತ್ರಿ** (ನಾ). ಒಂದು ಸಂಖ್ಯೆ; ಮೂರು: ದ್ವಿತ್ರಿಪದರಚಿತವೃತ್ತಿ ವಿಚಿತ್ರೋಪಮ್ಯಾದ್ಯಲಂಕ್ರಿಯಾಸಮುಪೇತಂ . . . ಪಾಂಚಾಲರೀತಿಯೆನೆ ಪೆಸರ್ವಡೆಗುಂ (ಕಾವ್ಯಾವ. ೭೮೪); ಏಕ ದ್ವಿ ತ್ರಿ ಚತುಃಪಂಚಾಕಲಿತಾರ್ಥಂಗಳಾಗಿ ಬಿಟಿನೊಳವು (ಶಮದ. ೨೩). [ ಸಂ. ]

**ತ್ರಿಕ** (ನಾ). ೧. ಮೂರು. ೨. ಮೂರರ ಸಮುದಾಯ,–ಗುಂಪು. ೧, ೨: ಕೆಲವು ದ್ವಿಕ (ಜೋಡಿ) ಗಳಾಗಿಯೂ ತ್ರಿಕ (ಮೂರು ಮೂರು) ಗಳಾಗಿಯೂ ಅಥವಾ ಅನೇಕಗಳಾಗಿಯೂ ಇವೆ (ಜ್ಯೋತಿರ್ವಿ. ೨೦). ೩. ಮೂರರಷ್ಟು; ಮುಮ್ಮಡಿ. ೪. ತಿಗ; ಓರೈ: ಬಾಲದ ಮೊದಲೊಳ್ ತ್ರಿಕದೊಳುದರದೊಳಂ ಶಿವನಿಯೊಳಂ ಕುದಿರಿಗೆ ಸುಟೀಯಾದೊಡೆ ಕೊಲ್ಲದೆ ಮಾಣ್ಗುಮೆ ರಣದೊಳಧಿಪನಂ ಮಾರ್ಗಣದೊಳ್ (ಅಶ್ವಶಾ. ೪-೩೦). ೫. ಮೂರನೆಯಂ ಬಾರಿ ಸಂಭವಿಸುವುದು,–ಪ್ರಾಪ್ತವಾಗುವುದು,– ಘಟಿಸುವುದು,– ಬರುವುದು. ೬. ಮೂರು ರಸ್ತೆಗಳು ಸೇರುವ ಎಡೆ,–ಸ್ಥಳ. [ ಸಂ. ]

**ತ್ರಿಕಂಟಕ** (ನಾ). ೧. ಪ್ರತಿಯೊಂದು ಬೀಜಕ್ಕೂ ಮೂರು ಮೂರು ಮುಳ್ಳುಗಳುಳ್ಳ ಒಂದು ಬಗೆಯ ಸಸ್ಯ; ನೆಗ್ಗಿಲು: "ಗೋಕ್ಷುರಃ, ಸ್ಥಳಶೃಂಗಾಟಃ, ಶ್ವದಂಷ್ಟ್ರಾ, ತ್ರಿಕಂಟಕಃ – ಈ ೪ ನೆಗ್ಗಿಲು" (ಹಲಾಯು. ೩೩-೪೮); "ತ್ರಿಕಂಟಕಂ ಗೋಕ್ಷುರಕಂ ದಂಷ್ಟ್ರಿಯೆನೆ ನೆಗ್ಗಿಲಕ್ಕುಂ" (ಮಂಗರಾ. ೩೭-೨೨). ೨. ಒಂದು ಬಗೆಯ ಕಳ್ಳಿಗಿಡ; ಕೋಡುಕಳ್ಳಿ: "ತ್ರಿಕಂಟಕ" (ಪಂಡಿತ. ೨೫೦). ೩. ಒಂದು ಬಗೆಯ ಮೀನು. [ ಸಂ. ]

**ತ್ರಿಕಟಂ** 'ತಿಗಟಂ' ನೋ.

**ತ್ರಿಕಟು** (ನಾ). ಕಾರವಾದ ಮೂರು ಔಷಧೀದ್ರವ್ಯಗಳು; ಶುಂಠಿ, ಹಿಪ್ಪಲಿ ಮತ್ತು ಮೆಣಸು: "ತ್ರಿಕಟು, ತ್ರ್ಯೂಷಣಂ, ವ್ಯೋಷಂ–ಈ ೩ ತ್ರಿಕಟುಕಂ" (ಹಲಾಯು. ೧೦೦-೪೭೩). [ ಸಂ. ]

**ತ್ರಿಕಟುಕ** (ನಾ). = ತ್ರಿಕಟು: "ತ್ರಿಕಟು, ತ್ರ್ಯೂಷಣಂ, ವ್ಯೋಷಂ – ಈ ೩ ತ್ರಿಕಟುಕಂ" (ಹಲಾಯು. ೧೦೦-೪೭೩); ಎವೆಯಿಕ್ಕದಿರ್ದೊಡಂ ಮೇಣ್ಪೆ ಮರಿಂ ತೈಲಾಂಬುಲವಣದಿಂ ತ್ರಿಕಟುಕದಿಂ ಹಿಮದಿಂ ತಂಬುಲದಿಂ ಮೇಣ್ಸಮನಿಸುಗುಂ ಕಣ್ಣ ನೀರ್ಗಳ್ (ಮದತಿ. ೧೧-೧೯); ತ್ರಿಕಟುಕದ ಕಜ್ಜಾಯವಿದು ಬಾಲಕರ ಸೊಗಸೇ (ಕುವ್ಯಾಕ. ೧೨-೧೮); ಕಟುಕರೋಹಿಣಿ, ತ್ರಿಕಟುಕ . . . ಇವಿಷ್ಟನು ಸಮಾಂಶವಾಗಿ ಜೇನುತುಪ್ಪದಿಂದ ಅರೆದು (ವೃದ್ಧಸಾ. II, ೧೧೭); ತ್ರಿಕಟುಕ ನಿಂಬೆರಸದಲ್ಲಿ ಮರ್ದಿಸಿ ಹಣೆಗೆ ಲೇಪವಂ ಮಾಡೆ (ವಾತಾಚಿ. ೧೭-೨). [ ಸಂ. ]

**ತ್ರಿಕಟುಚೂರ್ಣ** (ನಾ). ಶುಂಠಿ, ಹಿಪ್ಪಲಿ ಮತ್ತು ಮೆಣಸುಗಳ ಪುಡಿ: ಸಮಭಾಗ ತ್ರಿಕಟುಚೂರ್ಣವನ್ನು ಚೆನ್ನಾಗಿ ಕಲಸಿ . . . ತೆಗೆದುಕೊಳ್ಳಲು ಶ್ಲೇಷ್ಮಪ್ರಕೃತಿಯವರಿಗೆ ಪ್ರವೃತ್ತಿ ಚೆನ್ನಾಗಿ ಆಗುವುದು (ಸಕವೈ. ಪರಿ ೪೭೯). [ ತ್ರಿಕಟು + ಚೂರ್ಣ₂ ]

**ತ್ರಿಕರಣ** (ನಾ). ೧. ಕಾಯ, ವಾಕ್ಕು, ಮನಸ್ಸು ಎಂಬ ಅಂಗಗಳು; ಕರಣತ್ರಯ: ಮೂಱನಿಪ ತ್ರಿಪುಟಿಯ ತ್ರಿವರ್ಗವ ತ್ರಿಕರಣಂಗಳನು . . . ಮೀಱಿ ತೋಱುವ ತುರ್ಯವೇ ಪರಮಾತ್ಮಪದವು (ಅಮೃತ

೭-೩೩) ; ಶಿವನು ಶಿಷ್ಯನ ತ್ರಿಕರಣಗಳನ್ನು ಪರೀಕ್ಷಿಸದೆ ಅನುಗ್ರಹಿಸನು (ಶಕ್ತಿವಿ. ೭೪). ೨. [ಜೈನ] ಜೀವಕ್ಕೆ ಒದಗುವ ಮೂರು ಬಗೆಯ ಪರಿಣಾಮ ; ಅಧಃಕರಣ, ಅಪೂರ್ವಕರಣ, ಅನಿವೃತ್ತಿಕರಣ ಎಂಬುವು : ತ್ರಿಕರಣ ದಿವ್ಯಾಂಜನದಿಂ ಸಕಳಪ್ರತ್ಯಕ್ಷ ಹೇತು ಸಮನಿಸೆ (ಮಲ್ಲಿಪು. ೧೪-೭೪) ; [ ತ್ರಿ + ಕರಣ ]

**ತ್ರಿಕರಣಕಷ್ಟ** (ನಾ). ಕಾಯ, ವಾಕ್ಕು ಮತ್ತು ಮನಸ್ಸುಗಳಿಗೆ ಉಂಟಾಗುವ ಶ್ರಮ : ಅದು ನಮ್ಮ ಪೂರ್ವಜರಿಂದ ಬಂದ ಸೊತ್ತಾಗಿದ್ದರೂ, ಇಂದಿನವರಾದ ನಾವು ತ್ರಿಕರಣಕಷ್ಟದಿಂದ ಗಳಿಸಿಕೊಳ್ಳಬೇಕಾಗಿದೆ (ಸಾಹಿವಿ. ೧೪೦). [ ತ್ರಿಕರಣ + ಕಷ್ಟ ]

**ತ್ರಿಕರಣಪರಿಣತ** [ಜೈನ](ನಾ). ಕರಣತ್ರಯಂಗಳ ಬಗೆಗೆ ಪರಿಪೂರ್ಣವಾದ ತಿಳಿವನ್ನು ಹೊಂದಿರುವವನು: ತ್ರಿಕರಣಪರಿಣತನೇಟುಂ ಪ್ರಕೃತಿಗಳುಮ ನಿಂತು ಕಿಡಿಸಿ . . . ಶುದ್ಧದರ್ಶನನಾದಂ (ಚಂದ್ರಪು. ೧೪-೬೬). [ ತ್ರಿಕರಣ + ಪರಿಣತ ]

**ತ್ರಿಕರಣಪೂರ್ವಕ** (ನಾ). ಕಾಯ, ವಾಕ್ಕು, ಮನಸ್ಸು - ಇವುಗಳ ಮೂಲಕವಾದುದು : ಅವರ ಆದರ್ಶವನ್ನು ಎಲ್ಲರೂ ತ್ರಿಕರಣಪೂರ್ವಕವಾಗಿ ಪರಿಪಾಲಿಸಬೇಕಂತೆ (ರಕ್ತರೂ. ೫೩) ; ಇಂದಿನ ನಮ್ಮ ಸಂಸ್ಥೆಗಳು ತ್ರಿಕರಣಪೂರ್ವಕವಾಗಿ ಹಾಗೆ ನಡೆಯುತ್ತಿವೆಯೆ ? (ಶಿಕ್ಷದ. ೩೧) ; ಸ್ವಾಮಿಯ ಸೇವೆಯನ್ನು ತ್ರಿಕರಣಪೂರ್ವಕವಾಗಿ ಮಾಡುವೆನೆಂದು ಪಣ ತೊಟ್ಟ (ಶಾಂತಲಾ. ೧೪೦); ಮಾನವ ತ್ರಿಕರಣ ಪೂರ್ವಕವಾಗಿ ನಡೆಯಬೇಕು (ರೂಢಿ). [ ಸಂ. ]

**ತ್ರಿಕರಣಶುದ್ಧ** (ನಾ). ೧. = ತ್ರಿಕರಣಶುದ್ಧಿ : ತ್ರಿಕರಣಶುದ್ಧವಿಲ್ಲದ ಅಬದ್ಧ ಪಾಪಿ ಚಾಂಡಾಲ ದ್ರೋಹಿಗೆ ಅಖಂಡೇಶ್ವರನು ಎಂತೊಲಿವನೊ ಎನಗೆ (ಅಖಂಡೇ. ೯೭-೧೬). ೨. ತ್ರಿಕರಣಶುದ್ಧಿಯನ್ನು ಹೊಂದಿರುವವನು: ತನುಮನಧನವರ್ಪಿಸಿ ತ್ರಿಕರಣಶುದ್ಧನಾಗಿರಬೇಕು (ಪಂಚೀಕ. ೯). [ ತ್ರಿಕರಣ + ಶುದ್ಧ ]

**ತ್ರಿಕರಣಶುದ್ಧಿ** (ನಾ). ಮಾತು, ಮನಸ್ಸು ಮತ್ತು ದೇಹವೆಂಬ ಮೂರು ಕರಣಗಳಲ್ಲಿಯೂ ಶುದ್ಧವಾಗಿರುವಿಕೆ : ತ್ರಿಕರಣಶುದ್ಧಿಯೊಳಾ ರಾಜಕುಮಾರಂ ಮಾರಮಥನನಂ ಸ್ತುತಿಯಿಸಿ (ಆದಿಪು. ೪-೨) ; ತಪಂಗೆಯ್ಯಲ್ ಕಾಲಮಿಲ್ಲೆಂದು ತ್ರಿಕರಣಶುದ್ಧಿಯಿಂ ಸಂನ್ಯಸನಮಂ ದಯಂಗೆಯ್ಯೆಮೆಂಬುದುಂ (ಸುಕುಮಾ. ೧೨-೯ ವ) ; ಶ್ರೀರಾಮಚಂದ್ರಮನಂ ತ್ರಿಕರಣಶುದ್ಧಿಯಿಂ ಸೇವಿಸಿಯುಂ ಪಡೆದ ಸೈಪಿನೇಟ್ಗಿನಿತೊಂದು ಫಲಮಾಯ್ತೇ ! (ರಾಮಾಶ್ವ. ೨೯-೧೪). [ ತ್ರಿಕರಣ + ಶುದ್ಧಿ ]

**ತ್ರಿಕರ್ಮಿ** (ನಾ). ಯಜನ, ಅಧ್ಯಯನ ಮತ್ತು ದಾನಸ್ವೀಕಾರಗಳೆಂಬ ಮೂರು ವಿಧವಾದ ಕರ್ಮಗಳನ್ನು ಆಚರಿಸುವವನು: ತ್ರಿಕರ್ಮಿಗಳಾದ ಬ್ರಾಹ್ಮಣರು ತಮಗೆ ಕೊಟ್ಟ ಭೂಮಿ ಮುಂತಾದುವುಗಳನ್ನು ಅನುಭವಿಸಿಕೊಂಡು ರಾಜ್ಯಾರ್ಥವನ್ನು ಅರಸುಗಳಿಗೆ ಕೊಡಬೇಕೆಂಬುದಾಗಿಯೂ . . . ಹೇಳಿದ ಗ್ರಂಥಕ್ಕೆ ಗ್ರಾಮಪದ್ಧತಿಯೆಂದು ಹೆಸರು (ತುಳುನಾ. ೯೯); ಇವುಗಳಲ್ಲಿ ೧೧೫ ಕುಲಗಳು ತ್ರಿಕರ್ಮಿಗಳು ; ತಂತುಮಾತ್ರ ಬ್ರಾಹ್ಮಣರು (ತುಳುನಾ. ೧೫೦). [ ಸಂ. ತ್ರಿಕರ್ಮಿನ್ ]

**ತ್ರಿಕಾಲ, ತ್ರಿಕಾಳ** (ನಾ). ೧. ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲಗಳೆಂಬ ಮೂರು ಕಾಲಗಳು: ಗಿರಿಜೇಶನಂಘ್ರಿಕಮಲವನು ತ್ರಿಕಾಲದೊಳು ಪರಮಕಾಷ್ಠೆಯಲಿ ಪೂಜಿಸಲು (ನವಮೋ. ೧೮-೩೫). ೨. ಭೂತ, ವರ್ತಮಾನ ಮತ್ತು ಭವಿಷ್ಯತ್ ಎಂಬ ಮೂರು ಕಾಲಗಳು : ಜನರ್ಗಂ ತ್ರಿಕಾಲಯೋಗಂ ಜನರ್ಗಂ ಸ್ವಾಧ್ಯಾಯಮಯ್ದು (ಅಜಿಪು. ೧೨-೩೦) ; ಪ್ರೇಮದಿಂದರ್ಚಿಸಿ ಪಡೆದನಭಿರಾಮವೆನಲಿಂತು ತ್ರಿಕಾಲಂ ಭೂಮಿಜನವಚ್ಚರಿವಡುತ ಕೀರ್ತಿಸಲು (ಬಸಪು. ೫೩-೫೭). ೩. [ಸಂಗೀತ] ಮೂರು ಬಗೆಯ ಕಾಲಗಳು,-ಲಯಗಳು : ೱ ಸಂಗೀತಕೃತಿಗಳನ್ನು ಹಾಡುವಾಗ ಎತ್ತಿಕೊಳ್ಳುವ ಬೇರೆ ಬೇರೆಯ ಕಾಲಗಳು. ಇವುಗಳಲ್ಲಿ ಮೂರು ಬಗೆಯುಂಟು, ಮೊದಲನೆಯ ಕಾಲ, ಎರಡನೆಯ ಕಾಲ ಮತ್ತು ಮೂರನೆಯ ಕಾಲ : ಅವರು ಕೊಂಚವೂ ಪ್ರಯಾಸವಿಲ್ಲದೆ ಕೃತಿಗಳನ್ನು, ಪಲ್ಲವಿಗಳನ್ನು, ಆಲಾಪನೆಗಳನ್ನೂ ತ್ರಿಕಾಲಗಳಲ್ಲಿಯೂ ಸುಲಲಿತವಾಗಿ ಹಾಡುತ್ತಿದ್ದರು (ಸಂಗೀತ. ೫೪). ತ್ರಿಕಾಳ : ೧. ಈಶ್ವರ ಮುಡಿಯಾರ್ಗ್ಗೆ ಕೊಟ್ಟ . . . ಪಞ್ಚಮಹಾಶಬ್ದಮಂ ತ್ರಿಕಾಳಂ ಬಾಜಿಸುವುದಕ್ಕೆ ತ್ರಿಕಾಳಂ ದೇವತಾರ್ಚ್ಚನಂಗೆಯ್ವುದಕ್ಕಂ (ಮೈಆರಿ. ೧೯೪೬, ೨೮-೧೬ ; 1032). [ ತ್ರಿ + ಕಾಲ ]

**ತ್ರಿಕಾಲಗ** (ಗು). ಮೂರು ಕಾಲಗಳಲ್ಲೂ ವ್ಯಾಪಿಸುವ. 'ತ್ರಿಕಾಲಗಯೋಗ' ಪರಾ. [ ಸಂ. ]

**ತ್ರಿಕಾಲಗಯೋಗ** (ನಾ). ತ್ರಿಕಾಲಜ್ಞ (?) : ತ್ರಿಕಾಲಗಯೋಗರ್ ಪರಮೇಶ್ವರರ್ ಪರಸುಗಿಂ ವಾತ್ಸಲ್ಯದಿಂ ಸರ್ವಸಾಧುಗಣಂ ಸಾಧುಗಳಪ್ಪವಾ ಪರಕೆಯಿಂದಾಮುಂ ವ್ರತವಾಪ್ತದೊಳ್ (ಶಾಂತಿಪು. ೧-೫). [ ತ್ರಿಕಾಲಗ + ಯೋಗ ]

**ತ್ರಿಕಾಲಗೋಚರ** (ನಾ). ಯೋಗಶಕ್ತಿಯಿಂದ ಭೂತ, ಭವಿಷ್ಯತ್, ವರ್ತಮಾನ ಕಾಲಗಳಲ್ಲಿ ನಡೆಯುವುದನ್ನು ತಿಳಿಯುವಿಕೆ : ಮುಕುರದೊಳಾ ಪ್ರತಿಬಿಂಬಂ ನಿಕಾಮಮೆಸೆವಂತೆ ತದ್ವಚೋವಿಸ್ತರದೊಳ್ ಸಕಲಜಗಂ ಸೊಗಯಿಸುಗುಂ ತ್ರಿಕಾಲಗೋಚರಮನಂತಪರ್ಯಾಯಯುತಂ (ಚಂದ್ರಪು. ೨-೮೫). [ ತ್ರಿಕಾಲ + ಗೋಚರ ]

**ತ್ರಿಕಾಲಜ್ಞ** (ನಾ). (ಯೋಗಬಲದಿಂದ) ಭೂತ, ಭವಿಷ್ಯತ್ ಮತ್ತು ವರ್ತಮಾನಗಳೆಂಬ ಮೂರೂ ಕಾಲಗಳ ಜ್ಞಾನವುಳ್ಳವನು: ಪಂಡಿತರು ತ್ರಿಕಾಲಜ್ಞರು, ಅವರಿಗೆ ತಿಳಿದೇ ಇರಬೇಕು (ಶಾಂತಲಾ. ೮೫). [ ಸಂ. ]

**ತ್ರಿಕಾಲಜ್ಞಾನ** (ನಾ). ಭೂತ, ಭವಿಷ್ಯತ್ ಮತ್ತು ವರ್ತಮಾನಗಳೆಂಬ ಕಾಲತ್ರಯದ ಅರಿವು : ತ್ರಿಕಾಲಜ್ಞಾನ ಆಯುರ್ವೇದ . . . ಎಂದು ಪ್ರೋದ್ಗೀತಾಗಮದ ಷೋಡಶಭೇದಂಗಳು (ವಿವೇಕ. ೭೧); ತ್ರಿಕಾಲಜ್ಞಾನ, ಖಗೋಳಜ್ಞಾನ ಮೊದಲಾದುವುಗಳು ಅವಾಂತರಸಿದ್ಧಿಗಳು (ಭಾರದ. ೧೬೫). [ ತ್ರಿಕಾಲ + ಜ್ಞಾನ ]

**ತ್ರಿಕಾಲಜ್ಞಾನಿ** (ನಾ).=ತ್ರಿಕಾಲಜ್ಞ : ಆಗ ತ್ರಿಕಾಲಜ್ಞಾನಿಯಾದ ಋಷಿಯು ಸ್ವಲ್ಪಹೊತ್ತು ಧ್ಯಾನಮಗ್ನನಾದನು (ಮತಸ.೬೫). [ಸಂ. ತ್ರಿಕಾಲಜ್ಞಾನಿನ್]

**ತ್ರಿಕಾಲತಾನ** (ನಾ). [ಸಂಗೀತ] ಒಂದು, ಎರಡು ಮತ್ತು ಮೂರನೆಯ ಕಾಲಗಳಲ್ಲಿಯೂ ನುಡಿಸುವ ತಾನ : ಅವರು ತ್ರಿಕಾಲತಾನಗಳನ್ನು ನುಡಿಸುತ್ತಿರುವಾಗಲಂತೂ ಮೇಲಿನಿಂದ ಮುತ್ತುಗಳ ಮಳೆಗರೆಯುತ್ತಿದೆಯೇನೋ ಎಂದೆನಿಸುತ್ತಿತ್ತು (ಸಂಗೀತ. ೬೬). [ ತ್ರಿಕಾಲ + ತಾನ ]

**ತ್ರಿಕಾಲದರ್ಶಿ** (ನಾ). ೧. = ತ್ರಿಕಾಲಜ್ಞ : ನೀಂ ತಪೋವೃದ್ಧರುಂ ತ್ರಿಕಾಲದರ್ಶಿಗಳುಂ ಸಕಳಭೂತಂಗಳಂ ಸವನಾಗಿ ಕಾಣ್ಬ ಕರುಣಾರಸಾರ್ದ್ರಹೃದಯರಪ್ಪುದಱಿಂ ನಿಮ್ಮಂ ನಂಬಿ ಬಂದಪೆವು (ಪಂಚತಂ. ೮೪-೧೫). ೨. ಋಷಿ ; ಮುನಿ : "ಋಷಿಃ, ತ್ರಿಕಾಲದರ್ಶೀ, ಮುನಿಃ, ವಾಚಂಯಮಃ - ಈ ೪ ಋಷಿಗಳ್" (ಹಲಾಯು. ೬೮-೨೫೮). [ ಸಂ. ತ್ರಿಕಾಲದರ್ಶಿನ್ ]

**ತ್ರಿಕಾಲವರ್ತಿ** (ಗು). ೧.ಭೂತ, ಭವಿಷ್ಯತ್ ಮತ್ತು ವರ್ತಮಾನಗಳೆಂಬ ಮೂರು ಕಾಲಗಳಲ್ಲಿಯೂ ಇರುವ,-ವರ್ತಿಸುವ (ನಾ). ಭೂತ, ಭವಿಷ್ಯತ್ ಮತ್ತು ವರ್ತಮಾನಗಳೆಂಬ ಮೂರು ಕಾಲಗಳಲ್ಲಿಯೂ ವರ್ತಿಸುವ ವ್ಯಕ್ತಿ: ಐದನೆಯ ನೆಲೆಯಲ್ಲಿ ವಿರಾಜಮಾನರಾಗಿರುವ ಅತೀತ, ಅನಾಗತ, ವರ್ತಮಾನವೆಂಬ ತ್ರಿಕಾಲವರ್ತಿಗಳಾದ ತೀರ್ಥಂಕರ ಪರಮದೇವರುಗಳಿಗೆ . . . ವಂದಿಸುತ್ತೇನೆ (ಬಿಜ್ಜಪು. ೧ ಪ್ರದೀಪಿಕೆ). [ ಸಂ. ತ್ರಿಕಾಲವರ್ತಿನ್ ]

**ತ್ರಿಕಾಲಸಂಗತಿ** (ನಾ). [ಸಂಗೀತ] ಒಂದೇ ಪಂಕ್ತಿಯನ್ನು ಸ್ವರವ್ಯತ್ಯಾಸಗಳೊಂದಿಗೆ ಮೂರೂ ಕಾಲಗಳಲ್ಲೂ ಹಾಡುವುದು: ಈ ಕೃತಿಗಳ ತ್ರಿಕಾಲಸಂಗತಿಗಳ ಪ್ರತಿಯೊಂದು ಸ್ವರವೂ ಸುಸ್ಪಷ್ಟವಾಗಿ ಕೇಳುತ್ತಿದ್ದುದು ಅಚ್ಚರಿ (ಸಂಗೀತ. ೬೬). [ ತ್ರಿಕಾಲ + ಸಂಗತಿ ]

**ತ್ರಿಕಾಲಾಬಾಧಿತ** (ಗು). ಭೂತ, ಭವಿಷ್ಯತ್ ಮತ್ತು ವರ್ತಮಾನಗಳೆಂಬ ಮೂರು ಕಾಲಗಳಲ್ಲೂ ವಿರೋಧವಿಲ್ಲದ,-ಪ್ರತಿಭಟನೆಯಿಲ್ಲದ: ವಿದ್ಯೆಯ ಜೊತೆಗೆ ವಿನಯವೂ ಸೇರಬೇಕು . . . ಎಂಬ ಭಾವವು ತ್ರಿಕಾಲಾಬಾಧಿತವಾದ ಸತ್ಯ (ಕ್ರಿಯಾಶಿ. ೮೨).
[ ತ್ರಿಕಾಲ + ಅಬಾಧಿತ ]

**ತ್ರಿಕಾಲಾವರ್ತಿ** (ಗು). ೧. = ತ್ರಿಕಾಲವರ್ತಿ. ೧. (ನಾ). ೨. ಸನ್ನಿಪಾತರೋಗದ ಒಂದು ಬಗೆ: ತ್ರಿಕಾಲಾವರ್ತಿಯೆಂಬುದು ಮೂರುಕಾಲದಲ್ಲಿಯೂ ಪ್ರಕೋಪಿಸುಗುಂ (ವಿವ್ವಿ. ೧೯೦). [ ಸಂ. ತ್ರಿಕಾಲಾವರ್ತಿನ್]

**ತ್ರಿಕಾಲೋಚಿತ** (ಗು). ಮೂರು ಕಾಲಗಳಿಗೂ ಯೋಗ್ಯವಾದ. 'ತ್ರಿಕಾಲೋಚಿತಜ್ಞಾನಿ' ಪರಾ. [ ತ್ರಿಕಾಲ + ಉಚಿತ ]

**ತ್ರಿಕಾಲೋಚಿತಜ್ಞಾನಿ** (ನಾ). ಭೂತ, ಭವಿಷ್ಯತ್ ಮತ್ತು ವರ್ತಮಾನಗಳೆಂಬ ಮೂರು ಕಾಲಗಳ ಬಗೆಗೂ ಸರಿಯಾದ ತಿಳಿವಳಿಕೆಯುಳ್ಳವನು: ತ್ರಿಕಾಲೋಚಿತಜ್ಞಾನಿ ಮುನಿಯಱಿದಸರಸನ ಮೇಲೆ ಕೌಶಿಕನ ಕಾಟವಡಿಯಿಟ್ಟನುವನು (ಹಚಕಾ. ೫-೭೦).
[ ತ್ರಿಕಾಲೋಚಿತ + ಜ್ಞಾನಿ ]

**ತ್ರಿಕಾಳ** 'ತ್ರಿಕಾಲ' ನೋ.

**ತ್ರಿಕಾಳಭೋಗ** (ನಾ). ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲಗಳೆಂಬ ಮೂರು ಕಾಲಗಳಲ್ಲೂ ಮಾಡುವ ಪೂಜೆ: ಕಣ್ಣವಳ್ಳಿಯ ಭೋಗೇಶ್ವರ[ದ] [ವಾ]ಮಸಕ್ತಿಪಣ್ಡಿತರ್ಗ್ಗೆ ತ್ರಿಕಾಳಭೋಗಮುಮಂ ಪೂಜೆಗೆ × × ನಡೆ[ಯಿ]ಸಿ (ಶಾಇಇ. XX, ೨೭-೧೬ ; 1041).
[ತ್ರಿಕಾಳ (=ತ್ರಿಕಾಲ) + ಭೋಗ ]

**ತ್ರಿಕುಂದಪುರ** (ನಾ). ಒಂದು ಊರಿನ ಹೆಸರು: ತ್ರಿಕುನ್ದಪುರ ಪರಮೇಶ್ವರ (ಎಇ. XI, ೬-೫ ; 10ನೆಯ ಶತ). [ತ್ರಿಕುಂದ ? + ಪುರ$_2$]

**ತ್ರಿಕೂಟ**(ನಾ). ೧. ಮೂರು ಶಿಖರಗಳನ್ನುಳ್ಳದು 'ತ್ರಿಕೂಟ ಪ್ರಾಸಾದ' ಪರಾ. ೨. ಒಂದು ಪರ್ವತದ ಹೆಸರು; ಲಂಕಾಪಟ್ಟಣವಿದ್ದ ಪರ್ವತ: ತ್ರಿಕೂಟಕುರುವಿಂದ ಪತಂಗ ರುಚಕ ನಿಷಧವೆಂಬೈದು ಗಿರಿಗಳೇ ಟಂಕಣಗಂಧಮಾದನಶೈಲದ ಪಡುವಲ ವಿಪುಲಾದ್ರಿಯ ಮಧ್ಯಭಾಗದೊಳಗಿಹವು (ವಿವೇಕ. ೨೦೪). ೩. ಮೂರು (ಶ್ರೇಷ್ಠ) ವ್ಯಕ್ತಿಗಳ ಸಂಗಮ: ನಾಭಿ–ವೃಷಭ–ಭರತ, ಈ ತ್ರಿಕೂಟವು, ವೈಷ್ಣವಶಿರೋಮಣಿಯಾದ ಧ್ರುವನ ತಂದೆ ಉತ್ತಾನಪಾದರಾಯನ ಭ್ರಾತೃವಂಶದಲ್ಲಿ ಮೆರೆಯುವುದು (ಭಾರದ. ೧೬೮). ೪. [ಯೋಗ] ಭ್ರೂಮಧ್ಯಸ್ಥಾನ; ತ್ರಿಪುಟೀಸ್ಥಾನ: ನೀನು ನಾನೆಂಬುಭಯಸಂಗವಳಿದು ತಾನು ತಾನಾದ ತ್ರಿಕೂಟವೆಂಬ ಮಹಾಗಿರಿಯ ಮೆಟ್ಟಿ (ಅವಚಂ. ೨೭೬-೧೨೩೭) ; ತ್ರಿಕೂಟದ ನೆಲೆಗೆ ನಿಂದು ಸುಷುಪ್ತಿ ಸರ್ಪನನೆಬ್ಬಿಸುತ್ತ (ಬಸವು. ೩-೮) ; ಆ ನಾಡೀತ್ರಯಂಗಳ ಸಂಬಂಧದಿಂ ತ್ರಿವೇಣಿಯೆಂಬ ಯೋಗಸ್ಥಲಕೆ ತ್ರಿಕೂಟವೆಂದು ಮಧ್ಯಹೃದಯವೆಂದು . . . ಪರ್ಯಾಯನಾಮಂಗಳನುಳ್ಳ ಶಿವಧ್ಯಾನಕ್ಕೆ ರಹಸ್ಯವಾದ ಭ್ರೂಮಧ್ಯಸ್ಥಾನದಲ್ಲಿ (ಅಖಂಡೇ. ೨೦೪-೫೮).
[ ತ್ರಿ + ಕೂಟ$_3$ ]

**ತ್ರಿಕೂಟಪ್ರಾಸಾದ** (ನಾ). ಮೂರು ಶಿಖರಗಳಿಂದ ಕೂಡಿದ ದೇವಸ್ಥಾನ, ಮಂಟಪ ಮುಂತಾದುವು ಚಾಮುಂಡರಾಜ ಮಾಡಿಸಿದ ತ್ರಿಕೂಟ [ಪ್ರಾಸಾದ]ಕ್ಕೆ (ಎಇ. XIX, ೨೫-೬೨; 1250).
[ ತ್ರಿಕೂಟ + ಪ್ರಾಸಾದ ]

**ತ್ರಿಕೂಟಸ್ಥಾನ** (ನಾ). [ಯೋಗ] ಮೂರರ ಸಂಗಮಸ್ಥಾನ; ಎರಡು ಹುಬ್ಬುಗಳ ನಡುವಿನ ಜಾಗ; ಭ್ರೂಮಧ್ಯಸ್ಥಾನ: ತ್ರಿಕೂಟಸ್ಥಾನದ ಸಮರಸದ ಸುಖದಲ್ಲಿ ಬೆಳೆದ ಕಂದ ಮೂಲಾದಿಗಳ ಹೊಸರಸದ ಅಮೃತವನು ಓಸರಿಸಿ (ಅವಚಂ. ೫೭-೨೪೪); ಪ್ರಾಣವಾಯುದ [ಯುವ] ನು ಪಶ್ಚಿಮಮಾರ್ಗದೊಳ್ನಡಸಿ ತ್ರಿಕೂಟಸ್ಥಾನದೊಳು ನಿಲ್ಲಿಸುತ್ತೆ (ನವಮೋ. ೬-೨೭). [ ತ್ರಿಕೂಟ + ಸ್ಥಾನ ]

**ತ್ರಿಕೂಟಾಚಲ** (ನಾ). = ತ್ರಿಕೂಟ ೨: ತ್ರಿಕೂಟಾಚಲದ ಮೂರು ಶಿಖರಗಳು ಕಲಾದೃಷ್ಟಿಯಿಂದ ಹೆಚ್ಚು ಆಕರ್ಷಕವಾಗಿದೆ (ಹೊಯ್ಸವಾ. ೧೭).
[ ತ್ರಿಕೂಟ + ಅಚಲ ]

**ತ್ರಿಕೆ** (ನಾ). (ಬಾವಿಯ ರಾಟೆಯನ್ನು ಹೊಂದಿಸಲು) ಕಬ್ಬಿಣ ಮುಂತಾದುವುಗಳಿಂದ ಮಾಡಿದ ತ್ರಿಕೋಣಾಕಾರದ ಚೌಕಟ್ಟು.
[ ಸಂ. ತ್ರಿಕಾ ]

**ತ್ರಿಕೋಟಿ** (ನಾ). ಮೂರು ಕೋಟಿ: ತ್ರಿಕೋಟಿರತ್ನದ ಮಳೆಯಂ ಸುರಿಯಲೆ ತೊಡಗಿದನನುದಿನಂ (ಚಂದ್ರಪು. ೧೧-೧೦೪) ; ಕಂದಮೂಲಫಲಾದಿಗಳನಿನಶಶಿಕಿರಣ ಪವನೋದಕಾಹಾರಂಗಳಿಂ ವರುಷ ತ್ರಿಕೋಟಿಗಳ ಸಲಿಸಿ (ಬಸವು. ೦-೬೪). [ ತ್ರಿ + ಕೋಟಿ$_1$ ]

**ತ್ರಿಕೋಣ** (ಗು). ೧. ಮುಮ್ಮೂಲೆಯ; ತ್ರಿಭುಜಾಕಾರದ. (ನಾ). ೨. [ರೇಖಾಗ] ಮುಮ್ಮೂಲೆಯ ಆಕೃತಿ; ತ್ರಿಭುಜ: ಹಿಂದುಸ್ಥಾನದ ಆಕಾರವು ಹಿಮಾಲಯವೆಂಬ ಪಾದದ ಮೇಲೆ ಆದ ತ್ರಿಕೋಣದಂತೆ ಅದೆ (ಮುಂಬಯಿ. ೪-೧೧೧) ; ಶಂಕುವಿನ ಸಹಾಯದಿಂದ ಕಂಡುಹಿಡಿಯುವ ತ್ರಿಕೋಣ ಚತುಷ್ಕೋಣಗಳಿಗೆ "ವಸಲೆ" ಯೆಂದು ಹೇಳುವುದೂ ಉಂಟು (ಭೂಮಿಅ. ೩). ೩. [ಜ್ಯೋತಿ] ಲಗ್ನದಿಂದ ಐದನೆಯ ಮತ್ತು ಒಂಬತ್ತನೆಯ ಸ್ಥಾನಗಳು: ನವಮಂ ಪಂಚಮಭಂ ತ್ರಿಕೋಣಮೆನೆ ಸಲ್ಗುಂ (ಜಾತತಿ. ೦-೩೫). [ ತ್ರಿ + ಕೋಣ$_2$ ]

**ತ್ರಿಕೋಣಪಾತ** (ನಾ). ಒಂದು ನರಕದ ಹೆಸರು: ಐದುಮಂತ್ರಿನರಕಂಗಳು ಸಹಿತಮಾಗಿ ತ್ರಿಕೋಣಪಾತವೆಂಬರಸುನರಕವಿಹುದು (ವಿವೇಕ. ೦೯೦).
[ ತ್ರಿಕೋಣ + ಪಾತ$_1$ ]

**ತ್ರಿಕೋಣಮಿತಿ** (ನಾ). [ರೇಖಾಗ] ತ್ರಿಭುಜದ ಆಕೃತಿಯ ಅಳತೆ, ಕೋಣಗಳ ಮತ್ತು ಬಾಹುಗಳ ಪರಸ್ಪರ ಸಂಬಂಧವನ್ನು ತಿಳಿಸುವ ಗಣಿತ ಭಾಗ; ☞ ತ್ರಿಕೋಣದಲ್ಲಿ ಕೊಟ್ಟಿರುವ ವಿವಕ್ಷಿತ ಅಳತೆಗಳಿಂದ ಇನ್ನುಳಿದ ಅವಯವಗಳ ಅಳತೆಯನ್ನು ನಿರ್ಣಯಿಸುವುದು ಇದರ ಕಾರ್ಯ. ಇದರ ಉಪಯೋಗವು ಮುಖ್ಯವಾಗಿ ಜ್ಯೋತಿಷ್ಯಶಾಸ್ತ್ರ, ಭೂಮಿಯ ಅಳತೆ ಮತ್ತು ನೌಕಾಶಾಸ್ತ್ರಗಳಲ್ಲಿ ಆಗುತ್ತದೆ: ಕೆಲವು ಕಡೆ ಬೀಜಗಣಿತ, ತ್ರಿಕೋಣಮಿತಿ (Algebra, Trigonometry) ಈ ಭಾಗಗಳನ್ನು ಉಪಯೋಗಿಸಲಾಗಿದೆ (ಭೌತವಿ. ೦೫); ಕುಟ್ಟುಕ (Algebra), ತ್ರಿಕೋಣಮಿತಿ (Trigonometry) ಮುಂತಾದ ಗಣಿತದ ಭಾಗಗಳೂ . . . ವೃದ್ಧಿಯನ್ನು ಪಡೆದವು (ಭಾಇಪ್ರ. ೩೬೬).
[ ತ್ರಿಕೋಣ + ಮಿತಿ./ಇಂ. Trigonometry ]

**ತ್ರಿಕೋಣಸ್ಥ** (ಗು). ತ್ರಿಕೋಣವಾಗಿರುವ; ತ್ರಿಕೋಣಾಕೃತಿಯ: ಸೋಮ ಸೂರ್ಯಾಗ್ನಿ ತ್ರಿಕೋಣಸ್ಥ ನೇತ್ರವಾದಾ ಮಹಿಮನೆಸೆದಿರ್ಪನಾ ಮಹೇಶಂ (ವೀಶೈಪು. ೨-೧-೩೭). [ ಸಂ. ]

**ತ್ರಿಕೋಣೀಕರಣ** (ನಾ). ಅಳೆಯಬೇಕಾದ ಕ್ಷೇತ್ರವನ್ನು ತ್ರಿಕೋಣಗಳನ್ನಾಗಿ ವಿಂಗಡಿಸಿ ಅಳತೆಯನ್ನು ಕಂಡು ಹಿಡಿಯುವ ಕ್ರಮ: ತ್ರಿಕೋಣೀಕರಣ ಕ್ರಮದ ಅಳತೆಯನ್ನು ಬಹುಭಾಗರೂಕತೆಯಿಂದ ಅತ್ಯಂತ ಸೂಕ್ಷ್ಮವಾದ ಯಂತ್ರಸಾಧನಗಳ ಸಹಾಯದಿಂದ ನಿರ್ವಹಿಸಬೇಕು (ಭೂವಿವ. ೩೩). [ ಸಂ. ]

**ತ್ರಿಕ್ರಮ** (ನಾ). ಮೂರು ಹೆಜ್ಜೆಗಳನ್ನಿಟ್ಟವನು; ವಾಮನಾವತಾರದ ವಿಷ್ಣು; ತ್ರಿವಿಕ್ರಮ: ಸುಚರಿತಕರೂರ್ಮ್ಮೋದಯಂ ಸಾರಸೂಕರಿಯ ವಿಳಾಸಂ ವಿಕ್ರಮ ಶ್ರೀನರಹರಿಪರಮಂ ತ್ರಿಕ್ರಮಂ (ಎಕ. VIII, ಸೊರಬ. ೧೪೦-೫; 1198). [ ತ್ರಿ + ಕ್ರಮ ]

**ತ್ರಿಖಂಡ** (ನಾ). [ಜೈನ] ಮೂರು ಖಂಡಗಳು; P ಭರತಖಂಡದ ಮೂರು ಭಾಗಗಳು; ಗಂಗಾ ಮತ್ತು ಸಿಂಧೂ ನದಿಗಳಿಂದ ಪ್ರತ್ಯೇಕಿಸಲ್ಪಟ್ಟ ಮೂರು ಭೂಭಾಗಗಳು: ತಾನುಂ ತ್ರಿಖಂಡ ಮಂಡಲಾಧಿಪತ್ಯಮುಂ ತಾಳ್ದಿ ಪೌದನಪುರಮಂ ಪೊಕ್ಕು (ಶಾಂತಿಪು. ೫-೬೪ ವ). 'ಷಟ್ಖಂಡ' ಪರಾ. [ ತ್ರಿ + ಖಂಡ ]

**ತ್ರಿಖಂಡಾಧಿಪ** (ನಾ). [ಜೈನ] ಮೂರು ಖಂಡಗಳಿಗೆ ಒಡೆಯ; ಅರ್ಧ ಚಕ್ರವರ್ತಿ; P ಷಟ್ಖಂಡಾಧಿ ಪತಿಯು ಚಕ್ರವರ್ತಿಯಾಗುತ್ತಾನೆ: ಮಯೂರಗ್ರೀವಂಗಂ ನೀಳಾಂಜನೆಗಂ ಪುಟ್ಟಿದ ನಿಖಿಳಖೇಚರಲಲಾಮಾಯ ಮಾಣಂ ತ್ರಿಖಂಡಾಧಿಪಂ (ಶಾಂತಿಪು. ೫-೨೬ ವ). [ ತ್ರಿಖಂಡ + ಅಧಿಪ ]

**ತ್ರಿಗಾತ್ರ** (ನಾ). ಉದ್ದ, ಅಗಲ ಮತ್ತು ಎತ್ತರ ಎಂಬ ಮೂರು ಗಾತ್ರಗಳು: ಕಲಾಕೃತಿಯ ಆಸ್ವಾದಕ್ಕೆ ಲೋಕಜೀವನದಿಂದ ಏನನ್ನೂ ತೆರಬೇಕಾಗಿಲ್ಲ . . . ಕಲಾಕೃತಿಯ 'ತ್ರಿಗಾತ್ರ'ದ ಅರಿವು ಮತ್ತು ವರ್ಣ ರೇಖಾದಿಗಳ ಪರಿಜ್ಞಾನ, ಇಷ್ಟಿದ್ದರೆ ಸಾಕು (ಸೌಂದಸ. ೭೬). [ ತ್ರಿ + ಗಾತ್ರ ]

**ತ್ರಿಗಾರವ** (ನಾ). [ಜೈನ] ಋದ್ಧಿಗಾರವ, ರಸಗಾರವ, ಸಾತಾಗಾರವ ಎಂಬ ಮೂರು ಬಗೆಯ ಅಹಂಕಾರಗಳು; P ಐಶ್ವರ್ಯದಿಂದ ಉಂಟಾಗುವ ಅಹಂಕಾರಕ್ಕೆ ಋದ್ಧಿಗಾರವವೆಂದೂ ಷಡ್ರಸೋಪೇತ ವಾದ ಆಹಾರದ ಮೂಲಕ ಉಂಟಾಗುವ ಅಹಂಕಾರಕ್ಕೆ ರಸಗಾರವ ವೆಂದೂ ಸಂಪೂರ್ಣವಾದ ಆರೋಗ್ಯದಿಂದುಂಟಾಗುವ ಅಹಂಕಾರಕ್ಕೆ ಸಾತಾಗಾರವವೆಂದೂ ಹೇಳುತ್ತಾರೆ: ತ್ರಿದಂಡ ತ್ರಿಶಲ್ಯ ತ್ರಿಗಾರವಂಗಳಂ ಕ್ರಮಕ್ರಮದಿಂ ಕಟಲ್ಚಿ ಕಳೆಯುತ್ತುಂ (ಸುಕುಮಾ. ೩-೪೬ ವ); ತ್ರಿದಂಡ ತ್ರಿಶಲ್ಯ ತ್ರಿಗಾರವ ತ್ರಿಮೂಢರಹಿತನುಂ (ರತ್ನಕ. ೧-೬ ವ). [ ತ್ರಿ + ಗಾರವ$_1$ ]

**ತ್ರಿಗುಟ** 'ತಿಗಟ' ನೋ.

**ತ್ರಿಗುಣ** (ನಾ). ೧. ಸತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ಮೂರು ಗುಣಗಳು; ಗುಣತ್ರಯ: ಷಟ್ಸರೋಜವೆ ಸದನ ಹೃದಯವೆ ಮಂಟಪಂಗಳು ತ್ರಿಗುಣಗಳೆ ಕಲಶ (ಹಸಾರ. ೫-೧೯). ೨. ಸತ್ವ, ರಜಸ್ಸು, ತಮಸ್ಸು ಈ ಮೂರು ಗುಣಗಳ ಸ್ವರೂಪವಾದ ಪ್ರಕೃತಿ: ಅಭಿಮಾನ ಸಂಕಲ್ಪ ಆಲೋಚನೆ ಶಬ್ದಾದಿ ಸ್ವಭಾವಗಳು ಹೊಸಹೊಸದು ಬರುವುವು. ಈ ಪ್ರಕೃತಿಗೆ ಪ್ರಧಾನವೆಂದು ಹೆಸರು. ಇದರಲ್ಲಿ ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿರುವುದರಿಂದ ಇದನ್ನು ತ್ರಿಗುಣವೆಂದು ಹೇಳುತ್ತಾರೆ (ಹಿಂದಸಾ. ೫೫). ೩. ಮೂರರಷ್ಟು; ಮುಮ್ಮಡಿ: ತ್ರಿಗುಣಂ ಪಿರಿದಕ್ಕುಂ ಪತ್ತಿಗೆ ಸೇನೆಯ ದಕ್ಕುಂ (ಪಂಚಾಮಾ. ೧೩-೭); ತನ್ನ ದೋರ್ಗ್ಗರ್ವ್ವಮಂ ತ್ರಿಗುಣಂ ಮಾಡೆ ಸಮಸ್ತವಂ ತಳೆದನುರ್ವ್ವೀಚಕ್ರಮಂ ವಿಕ್ರಮಂ (ಎಕ. XI, ದಾವಣ. ೩೫-೧೮; ಸು. 1160); ಇದರಿಂದ ಕಂಪಾಸಿನ ರುಂದಿಯು ಮೊದಲಿಗಿಂತಲು ತ್ರಿಗುಣ ವಿರಳವಾಯಿತು (ಭೂಮಿಇ. ೪೭). ೪. ಮೂರು ಎಳೆಗಳಿಂ ಅಥವಾ ದಾರಗಳಿಂದ ಕೂಡಿದುದು. [ ತ್ರಿ + ಗುಣ ]

**ತ್ರಿಗುಣಕೂಟ** (ನಾ). ಸತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಗುಣಗಳ ಕೂಟ: ನಕ್ಷತ್ರಂಗಳೇ ಪುಷ್ಪ ಶಿವತತ್ವಕಾಂತಿಯೇ ಆಭರಣ ತ್ರಿಗುಣಕೂಟವೇ ತಾಂಬೂಲ ಜ್ಞಾನಶಕ್ತಿಯೇ ಸಂಗ (ಅವಚಂ.೨೮೫-೧೦೭೩). [ ತ್ರಿಗುಣ + ಕೂಟ$_1$ ]

**ತ್ರಿಗುಣತತ್ವ** (ನಾ). ಸತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಗುಣಗಳಿಗೆ ಸಂಬಂಧಿಸಿದ ತತ್ವ: ಸೌಂದರ್ಯಾನುಭವದ ಈ ಅರೆಕೊರೆಗಳ ವಿಚಾರವನ್ನು 'ತ್ರಿಗುಣತತ್ವ' ಬಹು ಸೊಗಸಾಗಿ ವಿವರಿಸುತ್ತದೆ (ಸೌಂದಸ. ೧೧೧). [ ತ್ರಿಗುಣ + ತತ್ವ$_1$ ]

**ತ್ರಿಗುಣಾತ್ಮಕ** (ಗು). ೧. ಸತ್ವ, ರಜಸ್ಸು ಮತ್ತು ತಮಸ್ಸು ಎಂಬ ಮೂರು ಗುಣಗಳಿಂದ ಕೂಡಿದ: ತ್ರಿಗುಣಾತ್ಮಕ ಸೃಷ್ಟಿಯನ್ನು ನಿರ್ಮಿಸಿದ ಅಘನಾಶಕನು ನಮ್ಮ ಚಿಂತೆಯನ್ನು ದೂರ ಮಾಡಲಿ (ತುಳಸೀ. ೫೩). (ನಾ). ೨. ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿಂದ ಕೂಡಿದ ವ್ಯಕ್ತಿ: ತ್ರಿಗುಣಾತ್ಮಕರಾಡಿಪ ಬೊಂಬೆಗಳಾಗಿರ ಲೆಸೆವ ಶಂಭು ನಿನ್ನರೆಮೆಯ್ಯೊಳ್ಪಗೆಗೊಂಡಗಲದೆ ಬೆಚ್ಚಿರಲಗಸುತೆಯಾಂ ನಿನ್ನ ಘನವನಿನ್ನೇನೆಂಬೆಂ (ಉದ್ಭಟ. ೩-೧೦೪). [ ಸಂ. ]

**ತ್ರಿಗುಣಿಸು** (ಕ್ರಿ). ೧. ಮೂರರಷ್ಟು ಆಗು; ಮೂರು ಪಟ್ಟು ಹೆಚ್ಚಾಗು: ತ್ರಿಗುಣಿಸಿ ಬಲವರ್ಪ ನಿಳಿಂಪಗಣಂ (ಅಜಿಪು. ೪-೩೧); ತ್ರಿಗುಣಿಸೆ ನಯನ ವಿಭೂಷಣಾಂಶುಗಳಲಗಿನ ರುಚಿಯನಲಗನೆರಡುಂ ಕೈಯೊಳ್ ತ್ರಿಗುಣಿಸಿ ಚಿತ್ರಂಬಡೆದಳ್ ಬಿಗಿಯೆ ಕುಚಂ ಬಿಗಿಯಿಪಂತು ಕಂತುಗೆ ದೊಣೆಯಂ (ಜಗವಿ. ೫-೧೭); ಕಮನೀಯಾಂಗತ್ರಿಭಂಗಿ ತ್ರಿಗುಣಿಸೆ ನಿಜಲಾವಣ್ಯಮಂ (ಶಾಂತೀಶ್ವ. ೨-೭೭). ೨. ಮೂರರಷ್ಟು ಹೆಚ್ಚಿಸು; ಮೂರುಪಟ್ಟು ಮಾಡು: ತ್ರಿಗುಣಿಸೆ ಗುಲ್ಮಮನದು ನೆಟ್ಟಗೆ ವಾಹಿನಿಯಕ್ಕುಂ (ಪಂಚಾಮಾ. ೧೩-೭); ಆತನೊಳ್ ಸಂಗಳಿಸಿದ ಪುಣ್ಯಪ್ರಭಾವಮಂ ತ್ರಿಗುಣಿಪವೋಲ್ (ಚಂದ್ರಪು. ೯-೫೩). ೩. ಮೂರು ಎಳೆಗಳಿಂದ ಕೂಡಿರು: ತ್ರಿಗುಣಿಸಿದ ಮಲ್ಲಿಕಾಮಾಲೆಗಳಂ ಕಡು ತೋರವಪಾದ ಮುಡಿಯಲ್ಲಿ ಮನಂಬುಗುವಂತಿರೆ ಮುಡಿಸಿಟ್ಟಳ್ (ಬಾಧಪು. ೧೧-೭೭). [ ತ್ರಿಗುಣ + -ಇಸು$_3$ ]

**ತ್ರಿಗುಪ್ತಿ** (ನಾ). [ಜೈನ] ಮನಸ್ಸು, ವಾಕ್ಕು, ಕಾಯಗಳನ್ನು ವಶ ದಲ್ಲಿಟ್ಟುಕೊಂಡು, ವಿಷಯಸುಖಾಭಿಲಾಷೆಯನ್ನು ನಿರೋಧಿಸಿ, ಅವು ಧರ್ಮಧ್ಯಾನದಲ್ಲಿ ನಿರತವಾಗುವಂತೆ ಮಾಡುವುದು: ಆ ಮುನಿನಾಥಂ ತ್ರಿಗುಪ್ತಿಯೊಳ್ ನೆರೆದಂ (ಆದಿಪು. ೬-೨೪ ವ); ತ್ರಿಗುಪ್ತಿ ಯಿಂದಾಸ್ರವಮಂ ಬರಲೀಯದಿರ್ಪುದಾಸ್ರವನಿರೋಧಮದು ಭಾವಿಪಂದು ಸಂವರೆಯಕ್ಕುಂ (ಸುಕುಮಾ. ೧೨-೩೫); ಜೈನಮತದಲ್ಲಿ ತ್ರಿಗುಪ್ತಿಗಳು, ಪಂಚಸಮಿತಿಗಳು . . . ಪಂಚಚಾರಿತ್ರಗಳು, ದ್ವಾದಶತಪಗಳು ಇವುಗಳಿಂದ ಸಂವರವು ಸಾಧಿಸಲ್ಪಡುವುದು (ಜೈನಧ. ೩). 'ಗುಪ್ತಿ' ಪರಾ. [ ತ್ರಿ + ಗುಪ್ತಿ ]

**ತ್ರಿಗುಪ್ತಿಗುಪ್ತ** (ನಾ). ಮೂರುವಿಧವಾದ ನಿಗ್ರಹಗಳನ್ನು ಸಾಧಿಸಿ ದವನು: ತ್ರಿಗುಪ್ತಿಗುಪ್ತನುಂ ತ್ರಿದಂಡ ತ್ರಿಶಲ್ಯರಹಿತನುಂ . . . ಚತುರಶೀತಿಲಕ್ಷಣಗುಣರತ್ನಭೂಷಣನುಮಕ್ಕುಂ (ಜಾ ಪು ೦ ಪು. ೬); ದ್ವಿವಿಧಸಂಯಮಧಾರಿಯುಂ ತ್ರಿಗುಪ್ತಿಗುಪ್ತನುಂ . . . ಪಂಚದಶ ಪ್ರಮಾದಪರಿವರ್ಜಿತನುಮಾಗಿ (ಅಜಿಪು. ೩-೧ ವ). [ ತ್ರಿಗುಪ್ತಿ + ಗುಪ್ತ ]

**ತ್ರಿಜಗ** (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳಗಳೆಂಬ ಮೂರು ಲೋಕಗಳು: ತ್ರಿಜಗದೊಳಾದಿಪುರಾಣಮುಮಜಿತಪುರಾಣಮುಮನೆಸೆಯೆ ಪೇಟ್ದುದಱಿಂದಂ ದ್ವಿಜವಂಶಧ್ವಜ ವೈಶ್ಯಧ್ವಜರೆನ್ನದರೊಳರೆ ಪಂಪನಂ ರತ್ನನುಮಂ (ಅಜಿಪು. ೧೨-೪೧); ತ್ರಿಜಗದೊಳುಳ್ಳಚಿಕೆಯ ಭೂಭುಜರಂ ಭುಜಬಲದಿನೆನ್ನ ಕಾಲ್ಗೆಱಗಿಸಿದೆಂ (ಪಂಚಾಮಾ. ೧೪-೧೪೪). [ ತ್ರಿ + ಜಗ ]

**ತ್ರಿಜಗಚ್ಚೂಡಾಮಣಿ** (ನಾ). ಮೂರು ಲೋಕಗಳಿಗೂ ಶಿರೋಭೂಷಣ ನಾದವನು; ಶ್ರೇಷ್ಠ: ತ್ರಿಜಗಚ್ಚೂಡಾಮಣಿಯಂ ಕರಣತ್ರಯಶುದ್ಧಿ ಯಿಂದೆಱಗಿ ಪೊಡೆವಟ್ಟು (ಶಾಂತಿಪು. ೯-೬೪ ವ). [ ಸಂ. ]

**ತ್ರಿಜಗತ್ಪೂಜ್ಯ** (ನಾ). ಮೂರು ಲೋಕಗಳಿಂದಲೂ ಪೂಜೆಗೆ ಅರ್ಹ ನಾದವನು: ತ್ರಿಜಗತ್ಪೂಜ್ಯಂಗಿೞಿದು ಪೀಠದಿಂ ಪೊಡೆವಟ್ಟಂ (ಶಾಂತಿಪು.

೯-೩೪) ; ಪರಿತ್ಯಕ್ತಸಕಲವಸುಂಧರಾತಳಾಧಿರಾಜ್ಯನುಂ ತ್ರಿಜಗತ್ಪೂಜ್ಯನೆನಿಸಿದ ಶ್ರೀವಾಸುಪೂಜ್ಯಭಟ್ಟಾರಕರ ಪರಿನಿರ್ವಾಣಕ್ಷೇತ್ರಮಂ ಕಂಡು (ಸುಕುಮಾ. ೯-೪೬ ವ). [ಸಂ.]

**ತ್ರಿಜಗತ್ಸ್ವಾಮಿ** (ನಾ). = ತ್ರಿಜಗದೀಶ್ವರ: ಸಾಸಿರನಾಮ ತ್ರಿಜಗತ್ಸ್ವಾಮಿಸಲೆ ಸುಖಭೂಮಿಯನಗಾಶ್ರಯುವ ಗೈವುದು (ಬಿಜ್ಜಳು ೧-೧). [ಸಂ. ತ್ರಿಜಗತ್ಸ್ವಾಮಿನ್]

**ತ್ರಿಜಗದೀಶ್ವರ** (ನಾ). ಮೂರು ಲೋಕಗಳಿಗೂ ಒಡೆಯನಾದವನು: ಈ ಪರಮೇಶ್ವರಂ ತ್ರಿಜಗದೀಶ್ವರನೀ ಹತಕಲ್ಮಷಂಗೆ ಮಾತಾಪಿತೃಭಾವಮೆಂದು ನಿಮಗಾದುದು (ಶಾಂತಿಪು. ೧೦-೭೫). [ಸಂ.]

**ತ್ರಿಜಗದ್ಗುರು** (ನಾ). ಮೂರು ಲೋಕಗಳಿಗೂ ಗುರುವಾದವನು: ಸಿದ್ಧಭಕ್ತಿಪೂರ್ವಕಂ ತ್ರಿಜಗದ್ಗುರುವೇ ಗುರುವೆಂದು ತತ್ಪದಸರಸಿಜಧ್ಯಾನಪರಾಯಣನಾಗಿ (ಆದಿಪು. ೧೬-೭೨ ವ); ವೃದ್ಧಸೇವೆ ಯಾನಂ ತ್ರಿಜಗದ್ಗುರುಪ್ರಣತಿಯೆಂಬಿವನಾಗಳುಮೊಂದೆ ಕೀಲೆ ದಲ್ ಜಂತ್ರದ ಪಾಪೆಯುಂ ತೊಡರ್ಚುವನಿಂದ್ರನುಮಾ ಪ್ರತೀಂದ್ರನುಂ (ಶಾಂತಿಪು. ೭-೧೦೦). [ಸಂ.]

**ತ್ರಿಜಗದ್ವಂದಿತ** (ನಾ). ಮೂರು ಲೋಕಗಳಿಂದಲೂ ನಮಸ್ಕರಿಸಿಕೊಳ್ಳುವವನು: ತ್ರಿಜಗದ್ವಂದಿತನೆನಿಸಿರ್ದಜನಾ ಜಮದಗ್ನಿಗಖಿಳಭುವನಪ್ರಭುಪಂಕಜನಾಭಂ ದಶರಥಭೂಭುಜಂಗೆ ಸುತನಾದನೆಂಬುದಂ ಕೇಳ್ ಮೊದಲೊಳ್ (ಕಾದಂಬ. ೬೫೦). [ಸಂ.]

**ತ್ರಿಜಗನ್ನಾಥ** (ನಾ). = ತ್ರಿಜಗದೀಶ್ವರ: ತ್ರಿಜಗನ್ನಾಥನ ಮಜ್ಜನಕ್ಕೆ ಮಣಿಪೀಠಾಕಾರದಂತಾಗಿ ವಿಶ್ವಜಗತ್ಪೂಜಿತಮಾಗಿ ಪೆಂಪುವಡೆದಾಹೇಮಾಚಳೇಂದ್ರಕ್ಕೆ (ಆದಿಪು. ೭-೪೮); ತ್ರಿಜಗನ್ನಾಥಂಗೆ ತಾಯ್ತಂದೆಗಳೆನಿಸಿದ ಸೈಪಿಂಗೆ (ಮಲ್ಲಿಪು. ೧೩-೩೨). [ಸಂ.]

**ತ್ರಿಜಗನ್ಮಾತೆ** (ನಾ). ಲಕ್ಷ್ಮಿ, ಸರಸ್ವತಿ, ಪಾರ್ವತಿ ಮುಂತಾದ ದೇವತೆಗಳಲ್ಲಿ ಒಬ್ಬಳು. [ಸಂ. ತ್ರಿಜಗನ್ಮಾತೃ]

**ತ್ರಿಜಗೋದರ** (ನಾ). ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳನ್ನೂ ತನ್ನ ಹೊಟ್ಟೆಯಲ್ಲಿ ಉಳ್ಳವನು; ವಿಷ್ಣು: ಬಾಣಾಸುರಂ ಪ್ರತಿಷ್ಠಾವಿಧಿಯಿಂದಾದರದೆ ರಚಿಸಿದಂ ತ್ರಿಜಗೋದರನಂ ಪಡೆದನಂತಕೋಟೇಶ್ವರನಂ (ಎಕ. VIII, ಸೊರಬ. ೩೭೬-೮ ; 1070). [<ಸಂ. ತ್ರಿಜಗದುದರ]

**ತ್ರಿಜಾತಕ** (ನಾ). ಜಾಯಿಪತ್ರೆ, ದಾಲ್ಚಿನ್ನಿ, ಏಲಕ್ಕಿ ಇವುಗಳ ಕೂಟ,-ಮಿಶ್ರಣ: ತಿಗಡೆ ೧ ಪಲ, ತ್ರಿಜಾತಕ ೩ ಪಲ, ಕಳಿಂಗರಾಸ್ಮೆ ೧ ಪಲ . . . ಹೊತ್ತಿಗೆ ಕರ್ಷಪ್ರಮಾಣ ಸೇವಿಸಲು . . . ಅರೋಚಕ, ಹೃದಯಶೂಲೆ ಇವೆಲ್ಲಾ ಮಾಣುವುವು (ಸಕವೈ. ಪರಿ. ೪೪೧). [ಸಂ.]

**ತ್ರಿಜಾಯಿ** (ನಾ). ಮೂರನೆಯ ಒಂದು ಭಾಗ,-ಅಂಶ,-ಪಾಲು: ನಿಂತ ಐವಜಿಗೆ ತ್ರಿಜಾಯಿ ಒಂದು ಪಾಲಿಗೆ ಸರಿಯಾಗಿ ಐವಜು ಜಮೆ ಮಾಡಿ . . . ರಶೀದಿ ತರಿಸಿಕೊಳ್ಳುವದು (ಮಹಾಪಂ. II, ೭೭). [←ಮರಾ. ತಿಜಾಈ]

**ತ್ರಿಜ್ಞಾನ** (ನಾ). [ಜೈನ] ಶ್ರುತಿಜ್ಞಾನ, ಮತಿಜ್ಞಾನ ಮತ್ತು ಅವಧಿಜ್ಞಾನಗಳೆಂಬ ಮೂರು ಬಗೆಯ ಜ್ಞಾನಗಳು. 'ತ್ರಿಜ್ಞಾನಧರ' ಪರಾ. [ತ್ರಿ + ಜ್ಞಾನ]

**ತ್ರಿಜ್ಞಾನಧರ** (ನಾ). [ಜೈನ] ಶ್ರುತಿಜ್ಞಾನ, ಮತಿಜ್ಞಾನ ಮತ್ತು ಅವಧಿಜ್ಞಾನಗಳೆಂಬ ಮೂರು ಬಗೆಯ ಜ್ಞಾನಗಳನ್ನುಳ್ಳವನು: ಶ್ರೀನಿಳಯ ವಿದುವೆ ನಾಭಿಸ್ಥಾನಮೆನಲ್ ನೆಱದಯೋಧ್ಯೆಗವತರಿಸಲ್ ತ್ರಿಜ್ಞಾನಧರಂ ಬಗೆದಂ ಭವ್ಯಾನಂದಕರಂ ಸರಸ್ವತೀಮಣಿಹಾರಂ (ಆದಿಪು. ೭-೧). [ಸಂ.]

**ತ್ರಿಜ್ಯ** (ನಾ). [ರೇಖಾಗ] ಕೇಂದ್ರಬಿಂದುವಿನಿಂದ ವೃತ್ತರೇಖೆಯ ಅಥವಾ ವರ್ತುಳದ ಪರಿಧಿಯವರೆಗೆ ಎಳೆದ ಸರಳರೇಖೆ; ವ್ಯಾಸಾರ್ಧ: ಗ್ರಹಪಥದ ತ್ರಿಜ್ಯಗಳ ವರ್ಗಧಾತು ಬಹುಮಟ್ಟಿಗೆ, ಒಂದು ಗಣಿತಶ್ರೇಣಿಯಲ್ಲಿ ಹೆಚ್ಚುವುದು (ಭೂಹುಟ್ಟು. ೪೪); ವೃತ್ತದ ಅರ್ಧಜ್ಯಾವನ್ನು (Half-chord) ತ್ರಿಜ್ಯದಿಂದ (Radius) ಭಾಗಿಸಿ ಹಿಂದುಗಳು ಸ್ಟೈನುಗಳ ಕೋಷ್ಟಕವನ್ನು ನೇರವಾಗಿ ಬರೆದರು (ಶಿಲ್ಪಸಾ. ೯೪). [ಸಂ. ತ್ರಿಜ್ಯಾ]

**ತ್ರಿಜ್ಯಾಮಿತಿ** (ನಾ). = ತ್ರಿಕೋಣಮಿತಿ: ಬೀಜಗಣಿತ ಬಹುವಾಗಿ ಮುಂದುವರಿದು, ಅದಕ್ಕೆ ನೆರವಾಗತಕ್ಕ ತ್ರಿಜ್ಯಾಮಿತಿಯನ್ನು ಹಿಂದುಳಿಸಿದ್ದರೆ, ಹಲವು ರೀತಿಯ ತೊಡಕುಗಳು ತರಗತಿಯಲ್ಲಿ ಹುಟ್ಟಿಕೊಳ್ಳುವುವು (ಶಿಕ್ಷದ. ೨೩೦). [ಸಂ./ಇಂ. Trigonometry]

**ತ್ರಿಣಯ** (ನಾ). = ತ್ರಿಣಯನ: ತೃಣ ತ್ರಿಣಯನ ಹೆಡಗೈಯ ಕಟ್ಟಿತ್ತು (ಪೋಳವಾ. ೨೩೨-೭೮೧); ತ್ರಿಣಯನ ತಪಮಂ ಕೆಡಿಸಲ್ ಕ್ಷಣವೇಧಿಗಳೆನಿಸುವೆನ್ನ ತರಳಕಟಾಕ್ಷೇಕ್ಷಣಯುಗಮಿರ್ದಂತೀ ನನೆಗಣೆಗಳ್ ಪರ್ಯಂತವೇಕೆ ಮಕರಪತಾಕಾ (ಗಿರಿಕ. ೭-೭೫); ಪರಶಿವ ತ್ರಿಣಯನ ಕೃಪೆಯಿಂ ಧರೆಯೊಳು ಪಿರಿದು ಸಂತಾನವ ಪಡೆದು (ಕಂಠವಿ. ೨೬-೪೨); ದಿನಪನಿಂ ಬೆಳಗಿಲ್ಲ ಬೆನಕನಿಂದಧಿಕ ಗಣವಿಲ್ಲ ಪರದೈವ ತ್ರಿಣಯನಿಂದಿಲ್ಲ (ಸರ್ವಜ್ಞ. ೨೨೬); ತ್ರಿಣಯ ಕೊಟ್ಟನು ವರವ ದ್ರುಪದಸುತೆಗಂ ಮುನ್ನ (ತುರಂಗ. ೯೩-೧೫). [<ತ್ರಿಣಯನ]

**ತ್ರಿಣಯನ** (ನಾ). ಮೂರು ಕಣ್ಣುಗಳುಳ್ಳವನು; ಮುಕ್ಕಣ್ಣ; ಶಿವ: "ಈಶಾನಃ . . . ತ್ರಿಪುರಾಂತಕಃ, ತ್ರಿಣಯನಃ, ರುದ್ರಃ . . . ನೀಲಲೋಹಿತಃ - ಈ ೪೫ ಮಹಾದೇವರ ಪೆಸರ್" (ಹಲಾಯು. ೩-೧೦); ಮಣಿಗಳ ಸೂತ್ರದಂತೆ ತ್ರಿಣ[ಪಾಠಾಂ. ನ]ಯನ ನೀನಿಪ್ಪೆಯಯ್ಯ (ದೇದಾವ. ೨-೩); ತ್ರಿಣಯನನಂ ಹರನಂ ನಿರ್ಗುಣನಂ ಸಡಿಘಡ ರತೀಶನಿಸುವನೆ (ಗಿರಿಕ. ೮-೪೦). [<ಸಂ. ತ್ರಿನಯನ]

**ತ್ರಿಣಕೆ** (ನಾ). ಮೂರು ಗೆರೆ: ತ್ರಿಣಕೆಯಿಂದೊಪ್ಪುವ ಕಡೆದ ಶಂಖದಂತಿಪ್ಪ ಕರುಣಿ ವೆಂಕಟೇಶನ ಕಂಧರವ ಕಂಡೆ ನಾ (ವಾದಿಕೀ. ೧೦೨-೧೦). [<ತ್ರಿ ?]

**ತ್ರಿಣೇತ್ರ** (ನಾ). ೧. ಮೂರು ಕಣ್ಣುಗಳು: ದಶಭುಜಂ ಪಂಚವಕ್ತ್ರಂ ತ್ರಿಣೇತ್ರದಿನೊಪ್ಪೆ (ನಂದಿರ. ೭-೧೨೫). ೨. = ತ್ರಿಣಯನ: "ಭವನೀಶಂ, ಶಂಭು . . . ಶಿವನೀಶಾನಂ ತ್ರಿಣೇತ್ರಂ . . . ವಾಮದೇವಂ ವೃಷಾಂಕಂ" (ವಸ್ತುಕೋ. ೩-೧೩); ತ್ರಿದಶಾಸುರರಂ ಸುಡುವಗ್ಗದ ವಿಷಮಂ ನುಂಗಿದಾ ತ್ರಿಣೇತ್ರನುಮಾನೆಂಬುದನಱಿಯರ್ ಮಾನವರ್ (ಜಗವಿ. ೩-೮೧); ನರಸರಾಜೇಂದ್ರಚಂದ್ರಮನ ಚರಿತೆಯ ಲಾಲಿಸಿದವರಿಗಿಷ್ಟಾರ್ಥವ ಕರುಣಿಸುತಿಹನಾ ತ್ರಿಣೇತ್ರ (ಕಂಠವಿ. ೨೬-೪೯). [<ಸಂ. ತ್ರಿನೇತ್ರ]

**ತ್ರಿಣೇಶ್ವರ** (ನಾ). ಈಶ್ವರ; ಶಿವ: ಪಾವನರೂಪ ವಿಷಕಂಠ ಸುರಗಣನಮಿತ ತ್ರಿಣೇಶ್ವರನೆಸೆದಿಹನಾ ಪುರದೊಳಗೆ (ಕಂಠವಿ. ೨-೧೦೮). [<ಸಂ. ತ್ರಿನಯನೇಶ್ವರ]

**ತ್ರಿತತ್ವ** (ನಾ). [ವೀಶೈ] ಲಯ, ಭೋಗ ಮತ್ತು ಅಧಿಕಾರಗಳೆಂಬ ಮೂರು ವಿಧವಾದ ತತ್ತ್ವಗಳಂ; ಶೂನ್ಯತತ್ತ್ವ; ಶಿವತತ್ತ್ವ: ಲಯ ಭೋಗವುನ್ನತದೊಳೆಸೆವಧಿಕಾರವೆಂಬಾ ತ್ರಿತತ್ವಭೇದವೆ ಬಿಂದುವೆಂದಱಿವುದು (ವೀಶೈಪು. ೧-೯-೧೩). [ತ್ರಿ + ತತ್ತ್ವ₁]

**ತ್ರಿತತ್ವಾತ್ಮಕ** (ಗು). ೧. ಸತ್ವ, ರಜಸ್ಸು ಮತ್ತು ತಮೋಗುಣಗಳೆಂಬ ಗುಣತ್ರಯಗಳನ್ನು ಹೊಂದಿರುವ. (ನಾ). ೨. ಗುಣತ್ರಯಗಳ ಸ್ವರೂಪನಾದವನು; ಶಂಕರ; ಶಿವ: ತ್ರಿಭುವನಾಧೀಶಂ ತ್ರಿತತ್ವಾತ್ಮಕಂ ನಿರಘಂ . . . ಗೌರೀಶನೊಪ್ಪಿರ್ದನು (ಶಬಶಂ. ೫-೫೮). [ಸಂ.]

**ತ್ರಿತನು** (ನಾ). ಮೂರು ದೇಹ: ಪಾಂಡುರಂಗಂ ತ್ರಿತನುವಂ ಕೈಕೊಂಡು ಬಂದಪೊಲಿತ್ತ ಮೂವರ ದಂಡಿ ಲೇಸಾಯ್ತೆನುತ ಭಕ್ತರು ಕೀರ್ತಿಸುತ್ತಿರಲು (ಬಸವು. ೭೦-೩೩). [ತ್ರಿ + ತನು]

**ತ್ರಿತಯ** (ನಾ). ೧. ಮೂರರ ಗುಂಪು: ಅಲ್ಲಿಂದತ್ತಲ್ ಯೋಜನ ತ್ರಿತಯಾಂತರದೊಳ್ ಶುಕ್ರವಿಮಾನಮುಂ . . . ಅಲ್ಲಿಂ ಮೇಗನಿತೆ ಯೋಜನಾಂತರದೊಳ್ ಶನಿಯ ವಿಮಾನಮಿರ್ಕುಂ (ಸುಕುಮಾ. ೧೧-೫೯ ವ). ೨. ಮೂರು: ತ್ರಿತಯುಂ ಪರಮಗುಣತ್ರಯಮನಲಂ ಸುರನದಿ ಮಾರ್ಗತ್ರಯಮದು ಮೂಱು ನಾಮಂ (ವ್ಯವಹಾ. ೯-೩). ೩. ಮೂರು ಜನರು; ಮೂವರು: ಪಿತನಿರಲು ದಾತಾರನಿರೆ ನಿಜಪತಿಯಿರಲು ಸುತ ದಾಸ ಸತಿಯಿಾ ತ್ರಿತಯರುಂ ಸ್ವಾತಂತ್ರ್ಯದವರಲ್ಲ (ಕುವ್ಯಾಉ. ೩-೨೭). ೪. ಮೂರು ಭಾಗಗಳನ್ನು ಉಳ್ಳುದು; ಮೂರು ಅಂಶಗಳಿಂದ ಕೂಡಿದುದು. [ ಸಂ. ]

**ತ್ರಿತಯಜಾತ** (ನಾ). ಚತುರ್ವರ್ಣಗಳಲ್ಲಿ ಮೂರನೆಯ ವರ್ಣದಲ್ಲಿ ಹುಟ್ಟಿದವನು; ವೈಶ್ಯ: "ವಿಶನೂರುಭವಂ ತ್ರಿತಯಜಾತನಾರ್ಯಂ ಮಹೀಸ್ಪೃಶನೆನಲು ವೈಶ್ಯನಕ್ಕು" (ಮಂಗರಾ. ೧೦೨-೧).

[ ☞ ಇದು 'ತೃತೀಯಜಾತ' ಎಂಬುದರ ಅಪಲಿಖಿತ ]

**ತ್ರಿತಾಪ** (ನಾ). ಆಧಿದೈವಿಕ, ಆಧ್ಯಾತ್ಮಿಕ, ಆಧಿಭೌತಿಕವೆಂಬ ಮೂರು ವಿಧವಾದ ತಾಪಗಳು; ತಾಪತ್ರಯ: ಜಿತ ತ್ರಿತಾಪ ಬಸವೇಶ್ವರ ನೀಗೆಮಗೀಶಭಕ್ತಿಯುಂ (ರಾಜಶೇ. ೧-೧೧). 'ತಾಪತ್ರಯ' ಪರಾ.

[ ತ್ರಿ + ತಾಪ$_2$ ]

**ತ್ರಿತ್ರಿಕೋಣ** (ನಾ). [ಜ್ಯೋತಿ] (ಲಗ್ನದಿಂದ) ಒಂಬತ್ತನೆಯ ರಾಶಿ: ತ್ರಿತ್ರಿಕೋಣಾಖ್ಯಮಾ ನವಮಂ (ಜಾತತಿ. ೧-೩೫); ಒಂಭತ್ತನೆಯ ರಾಶಿಗೆ ತ್ರಿತ್ರಿಕೋಣ . . . ಎಂದು ಸಂಜ್ಞೆ (ಜಾತತಿ. ೧-೩೫ ಟೀಕು).

[ ತ್ರಿ + ತ್ರಿಕೋಣ ]

**ತ್ರಿದಂಡ** (ನಾ). ೧. ಒಟ್ಟಾಗಿ ಸೇರಿಸಿ ಕಟ್ಟಿದ ಮೂರು ದಂಡಗಳು; ಯತಿಗಳು ಹಿಡಿಯುವ ದಂಡ: ರಾವಣನು ತ್ರಿದಂಡ ಕಮಂಡಲುಗಳನ್ನು ಧರಿಸಿದ ಯತಿಯಾದನು (ವಚಭಾ. ೪೦೭). ೨. [ಜೈನ] ಕಾಯದಂಡ, ಮನೋದಂಡ, ವಾಗ್ದಂಡಗಳೆಂಬ ಮೂರು ವಿಧವಾದ ದಂಡಗಳು: ವಿವಿಧಾರ್ಥಸಳಿಳಪಾತಮತಿಯುಂ . . . ತ್ರಿದಂಡ ತ್ರಿಶಲ್ಯ ರಹಿತನುಂ (ಚಾವುಂಪು. ೭); ಮತ್ತಂ ತ್ರಿದಂಡ ತ್ರಿಶಲ್ಯ ತ್ರಿಗಾರವಂಗಳಂ ಕ್ರಮಕ್ರಮದಿಂ ಕಟಿಲ್ಚಿ ಕಳೆಯುತ್ತುಂ (ಸುಕುಮಾ. ೩-೪೭ ವ); ಭಾರತೀಯ ವಿವಿಧ ಧರ್ಮ–ಸಂಸ್ಕೃತಿಗಳ ಮೇಲೆಯೂ ನಿರ್ಗ್ರಂಥಸಂಪ್ರದಾಯದ ತ್ರಿದಂಡ ತ್ರಿ ಗು ಪ್ತಿ ಗ ಳ ಪ್ರಭಾವವು ಬಿದ್ದುದನ್ನು ಕಾಣಬಹುದು (ಜೈನಪ. ೫೪೦). [ ತ್ರಿ + ದಂಡ ]

**ತ್ರಿದಂಡಿ** (ನಾ). ಸಂನ್ಯಾಸಿಗಳಲ್ಲಿ ಒಂದು ವರ್ಗ; ತ್ರಿದಂಡವನ್ನು ಧರಿಸಿರುವವನು; ಮನಸ್ಸು, ವಚನ ಮತ್ತು ಕಾಯಗಳ ಮೇಲೆ ನಿಗ್ರಹಶಕ್ತಿಯನ್ನು ಹೊಂದಿರುವ ಯತಿ,–ಸಂನ್ಯಾಸಿ ಆಗಳವರ್ಗಳಾ ರೂಪಿನೊಳದಂ ನೆಗಟಲಂಜಿ . . . ಏಕದಂಡಿ ತ್ರಿದಂಡಿಗಳಪ್ಪ ಪರಿವ್ರಾಜಕರುಮಾಗಿ ತಮಗೆ ತಾವೇ ವನಪ್ರವೇಶಮಂ ಮಾಡಿ (ಆದಿಪು. ೯-೯೩ ವ). [ ತ್ರಿ + ದಂಡಿ$_5$ ]

**ತ್ರಿದಶ$_1$** (ನಾ). ೧. ಮೂರಂ ಹತ್ತು; ಮೂವತ್ತು: ತ್ರಿದಶ ದಿನಂ ಶೀವಲೊಡಂ ತ್ರಿದಶತ್ವಮನೆಯ್ದಿ (ವರ್ಧಪು. ೧೨-೧೯); ವ್ಯಾಳಕಂಕಣಗೆ ತ್ರಿ[ಪಾಠಾಂ. ತ್ರ್ಯ]ದಶ ಸೇರು ಧೂಪವನು ಅರ್ಪಿಸುವ ನೇಮವಿಡಿದು (ಪ್ರಾಢರಾ. ೧೨-೭). ೨. ಹನ್ನೆರಡು ಆದಿತ್ಯರು, ಎಂಟು ವಸುಗಳು, ಹನ್ನೊಂದು ರುದ್ರರು, ಇಬ್ಬರು ಅಶ್ವಿನಿಗಳು–ಹೀಗೆ ಮೂವತ್ತು ಮೂರು ದೇವತೆಗಳು. ೩. [ಛಂದ] ಮೂರು ಲಘುಗಳಿಂದ ಕೂಡಿದ ಒಂದು ಅಕ್ಷರಗಣದ ಹೆಸರು; ನಗಣ: ತ್ರಿದಶ ಪವನೇಶರ್ ಪುದಿದು ನಿಲೆ ಪಾದಾಂತ್ಯದೊಳಟು ವಿದಗ್ಧೇ ಸ ದ ಮ ಳ ವಿ ಶಾ ಲಂ (ಛಂದೋಂಬು. ೨-೮೨). [ ಸಂ. ]

**ತ್ರಿದಶ$_2$** (ನಾ). ಸದಾ ಯೌವನದಿಂದ ಕೂಡಿರುವವನು; ಬಾಲ್ಯ, ಕೌಮಾರ್ಯ, ಯೌವನವೆಂಬ ಮೂರು ಅವಸ್ಥೆಗಳನ್ನು ಮಾತ್ರ ಉಳ್ಳವನು; ದೇವತೆ: "ಸುರರಮೃತಾಶರ್ ಕ್ರತುಭುಜರ್ ನಿಳಿಂಪರ್ ತ್ರಿದಶರ್" (ವಸ್ತುಕೋ. ೭-೩೧); ತ್ರಿದಶ ನರಾಸುರೋರಗಗಣಪ್ರಭು . . . ಪುತ್ರವರಾರ್ಥಿಗಳಾಗಿ ತನ್ನ ಕಟ್ಟಿದಿರೊಳೆ ನಿಂದರಂ ನಯದೆ ನೋಡೆ (ಪಂಪಭಾ. ೦-೮೫); ತ್ರಿದಶರಂಜದೆ ಹುತವನುಣ್ಣಲಿ ಕದನ ಕಾವಿಹೆವು (ಕೌಶಿರಾ. ೦-೯೧). [ ಸಂ. (ತ್ರಿ + ದಶಾ + –) ]

**ತ್ರಿದಶಕನ್ನಿಕೆ** (ನಾ). ದೇವತಾಸ್ತ್ರೀ: ತ್ರಿದಶಕನ್ನಿಕೆಯರುವೆರಸಿ ಗಗನದೊಳುದಂಚಿತ ಮುಕ್ತಿಕನ್ನಿಕೆಯಿದಿರುಗೊಳುತಿದೆ (ಬಸಪು. ೨೪-೪೨).

[ ತ್ರಿದಶ$_2$ + ಕನ್ನಿಕೆ$_1$ ]

**ತ್ರಿದಶಗಣ** (ನಾ). ದೇವತೆಗಳ ಗುಂಪು,–ಸಮೂಹ: ತ್ರಿದಶಗಣೇಶ ಮೌಳಿಮಣಿಪೀಠನಿಷೇವಿಗಳೊಳ್ ಮುನೀಂದ್ರನಾ ಪದಯುಗಳಂಗಳೊಳ್ ಮುದದೆ ಬಾಗುವೆನೆಂಬುದು ದಕ್ಷಿಣಾಯನಂ (ಕವಿರಾ. ೨-೧೦೭). 'ತ್ರಿದಶ ಗಣಾಧಿನಾಯಂಕ' ಪರಾ. [ ತ್ರಿದಶ$_2$ + ಗಣ ]

**ತ್ರಿದಶಗಣಾಧಿನಾಯಕ** (ನಾ). ದೇವತೆಗಳ ಒಡೆಯ, – ಅಧಿಪತಿ; ಇಂದ್ರ: ತ್ರಿದಶಗಣಾಧಿನಾಯಕನ ಪರ್ವಿದ ತೋಳ್ದುಱುಗಲ್ಗಳೊಳ್ . . . ಜತ್ತವಟ್ಟದ ಮಣಿಯಂತದೇಂ ಪದುಳಮಾದುದೊ ದಿವ್ಯವಧೂ ಕದಂಬಕಂ (ಆದಿಪು. ೭-೧೨೪). [ ತ್ರಿದಶಗಣ + ಅಧಿನಾಯಕ ]

**ತ್ರಿದಶಗಣಾಧಿಪ** (ನಾ). = ತ್ರಿದಶಗಣಾಧಿನಾಯಂಕ: ತ್ರಿದಶಗಣಾಧಿಪರ್ ಸುರಿಯುತಿರ್ಪತಿನಿರ್ಮಳದುಗ್ಧವಾರಿಪೂರದೊಳ್ . . . ಒಪ್ಪಿದನಿಂದ್ರ ವಂದಿತಂ (ಪುಷ್ಪಪು. ೧೧-೨೯). [ ತ್ರಿದಶಗಣ + ಅಧಿಪ ]

**ತ್ರಿದಶತ್ವ** (ನಾ). ದೇವತ್ವ: ತ್ರಿದಶದಿನಂ ತೀವಲೊಡಂ ತ್ರಿದಶತ್ವಮನೆಯ್ದಿ ನೀನೆ ಬಂದು ಸಮಸ್ತ ತ್ರಿದಶೇಂದ್ರವಂದಿತ ಶ್ರೀಪದನಂ ಪ್ರತ್ಯಕ್ಷಮಾಗೆ ನಲಿದೀಕ್ಷಿಸುವೈ (ವರ್ಧಪು. ೧೨-೧೯). [ ಸಂ. ]

**ತ್ರಿದಶದೀರ್ಘಿಕೆ** (ನಾ). ದೇವನದಿ; ಗಂಗಾನದಿ; ಗಂಗೆ.

[ ತ್ರಿದಶ$_2$ + ದೀರ್ಘಿಕೆ ]

**ತ್ರಿದಶದ್ವೇಷ** (ನಾ). ದೇವತೆಗಳನ್ನು ಕುರಿತ ದ್ವೇಷ: ಮದದಿ ತ್ರಿದಶ ದ್ವೇಷದಿಂದಳಿದಧೋಗತಿಗೆ ಪುದುವಾದರ್ (ನವಮೋ. ೧೮-೭).

[ ತ್ರಿದಶ$_2$ + ದ್ವೇಷ ]

**ತ್ರಿದಶಧರಣೀರುಹ** (ನಾ). ದೇವಲೋಕದ ಮರ; ಕಲ್ಪವೃಕ್ಷ: ತ್ರಿದಶ ಧರಣೀರುಹದೊಳೊಳುಗಂಪುಮಿರ್ಪವೊಲಖಿಳಭಕ್ತರೊಳು ಪೂರಮಾಗಿಹ ನಿಮ್ಮ ಕೃತಿಯಂ ಪಾರವೆಯ್ದಿಸಿ ಪೊರೆವುದೆಮ್ಮನು (ಬಸಪು. ೧-೭).

[ ತ್ರಿದಶ$_2$ + ಧರಣೀರುಹ ]

**ತ್ರಿದಶಧುನಿ** (ನಾ). = ತ್ರಿದಶದೀರ್ಘಿಕೆ: "ತ್ರಿದಶಧುನಿ ವಿಷ್ಣುಪದಿ ಗಂಗೆ ಜಾಹ್ನವಿ ದೇವನದಿಯೆನಿಕು" (ಮಂಗರಾ. ೧೨೨-೧೧). [ ತ್ರಿದಶ + ಧುನಿ ]

**ತ್ರಿದಶನಗೇಂದ್ರ** (ನಾ). ದೇವತೆಗಳ ಬೆಟ್ಟ; ಮೇರು: ತ್ರಿದಶನಗೇಂದ್ರಂ ಧನುವಾದುದು ಪಶುಪತಿಗೆ (ಜಗವಿ. ೧೭-೨೭). [ ತ್ರಿದಶ$_2$ + ನಗೇಂದ್ರ ]

**ತ್ರಿದಶನದೀಸಲಿಲ** (ನಾ). ಗಂಗಾನದಿಯ ನೀರು: ತ್ರಿದಶನದೀಸಲಿಲದ ಪೂರದಿನಂಗನೆ ನಯದೊಳಭಿಷವೋತ್ಸವಮನೊಡರ್ಚಿದಳ್ (ಶಾಂತಿಪು. ೯-೧೭೯). [ ಸಂ. ]

**ತ್ರಿದಶನದೀಸುತ** (ನಾ). ಗಂಗೆಯ ಮಗ; ಭೀಷ್ಮ: ತ್ರಿದಶನದೀಸುತನಿಂ ತೀರದ ಕಜ್ಜಂ ಮುನ್ನ ಕಳಶಸಂಭವನಿಂ ತೀರದ ಕಜ್ಜಂ . . . ದ್ರೋಣ ಪುತ್ರನಿಂ ತೀರ್ದಪುದೇ (ಗದಾಯು. ೩-೬೦). [ ಸಂ. ]

**ತ್ರಿದಶನಿಕರ** (ನಾ). ದೇವತೆಗಳ ಸಮೂಹ,–ಗುಂಪು: ಅದಿರಿತಿಳೆ . . . ತ್ರಿದಶನಿಕರದ ಸಾಧುರವಮಂಜಿಸಿತು ಮೂಜಗವ (ಕುವ್ಯಾಗ. ೭-೪).

[ ತ್ರಿದಶ$_2$ + ನಿಕರ$_1$ ]

**ತ್ರಿದಶನಿವಾಸ** (ನಾ). ದೇವತೆಗಳ ವಾಸಸ್ಥಾನ ; ದೇವಲೋಕ : ತ್ರಿದಶನಿವಾಸಮಿಂತಿದು ನಿಜಾರ್ಜಿತಪುಣ್ಯದಿನಾದುದು (ಪಾರ್ಶ್ವಪು. ೫-೯೫). [ ತ್ರಿದಶ₂ + ನಿವಾಸ ]

**ತ್ರಿದಶಪತಿ** (ನಾ). = ತ್ರಿದಶಗಣಾಧಿನಾಯಕ : ತ್ರಿದಶಪತಿ ಪಾರಿಜಾತ ಪ್ರದನಾಗದೊಡಾಧಿಪತ್ಯಸವನಮದಿನ್ನಾಗದು ತನ್ನಗಾರಿಗಾಗಿಪ್ಪುದು ಧಾರಾಖಿಡ್ಗಸವನಮಂ ಮತ್ತಪ್ಪಗ್ಗಂ (ಜಗವಿ. ೧೩-೩೦) ; ತ್ರಿದಶಪತಿ ವಿನುತಪರ್ಹತ್ಸದನಂ ಮಾಹೇಂದ್ರಕಲ್ಪದೊಳ್ (ಪಾರ್ಶ್ವಪು. ೧೩-೨೫). [ ತ್ರಿದಶ₂ + ಪತಿ₂ ]

**ತ್ರಿದಶಪದ** (ನಾ). ದೇವಲೋಕದ ಪದವಿ ; ಸುರಲೋಕ ಪ್ರಾಪ್ತಿ : ತ್ರಿದಶಪದ ಸುಖಮನೆಯ್ದಲ್ ತುದಿಗಾಲೊಳ್ ನಿಂದನೀತಂ (ಜಗವಿ. ೧೩-೬೦). [ ತ್ರಿದಶ₂ + ಪದ₂ ]

**ತ್ರಿದಶಭುವನ** (ನಾ). = ತ್ರಿದಶಲೋಕ : ತ್ರಿದಶಭುವನವಂ ಪ್ರೀತಿಯಿಂ ಬಂದು ಕಾಣ್ಬಂಗೊದವಿದ್ದೈಶ್ವರ್ಯಮಂ ಭೀತರಿಗಸುಗತಿಯಂ ಮಾಬ್ಪನೇ (ಎಕ. VII, ಶಿಕಾರಿ. ೯೩-೩೭ ; 1179). [ ತ್ರಿದಶ₂ + ಭುವನ ]

**ತ್ರಿದಶರಿಪು** (ನಾ). ದೇವತೆಗಳ ಶತ್ರು ; ರಾಕ್ಷಸ ; ದೈತ್ಯ : ತ್ರಿದಶರಿಪುಗಳ ಗಂಡನಿದು ಕಾದಿದೆವು ನಾವಿಂದೆನುತ ಸುಭಟರು ಕದಡಿ ಸರಿದುದು (ಕುಮಾರವ್ಯಾ. ೩-೧೨). [ ತ್ರಿದಶ₂ + ರಿಪು ]

**ತ್ರಿದಶಲೋಕ** (ನಾ). ದೇವತೆಗಳ ಲೋಕ ; ದೇವಲೋಕ ; ಸ್ವರ್ಗ : ತ್ರಿದಶಲೋಕಕ್ಕೇಱುತಿರ್ದ ತ್ರಿಶಂಕುನರಾಧೀಶನ ಲಕ್ಷ್ಮಿ ಶಕ್ರನ ಮಹಾ ಹುಂಕಾರದಿಂ ಬಿರ್ದಳೆಂಬಿನೆಗಂ (ಕಾದಂಪೂ. ೨೮). [ ತ್ರಿದಶ₂ + ಲೋಕ ]

**ತ್ರಿದಶವಿರೋಧಿ** (ನಾ). = ತ್ರಿದಶರಿಪು : ತ್ರಿದಶವಿರೋಧಿಗೊರ್ಧ್ವಗತಿ ದೋಱುವವೋಲ್ ಮಣಿರಮ್ಯಹರ್ಮ್ಯಕೂಟದೊಳೆಸೆದತ್ತು ಚೀನವಸನ ಧ್ವಜಸಂತತಿ (ಜಗವಿ. ೬-೩೮). [ ತ್ರಿದಶ₂ + ವಿರೋಧಿ ]

**ತ್ರಿದಶಶರಾಸನ** (ನಾ). ದೇವತೆಗಳ ಬಿಲ್ಲು; ಕಾಮನ ಬಿಲ್ಲು ; ಇಂದ್ರ ಧನು : ತ್ರಿದಶಶರಾಸನಂ ತಳಿರ ತೋರಣಮಾಗಿರೆ ಕುಕ್ಕಿನೋಳಿ ಚೆಲ್ವಿದಿರ್ಗೊಳೆ ಬರ್ಪ ಸೊನ್ನಲಿಗೆಯಾಗೆ ಘನಧ್ವನಿ ತೂರ್ಯಮಾಗೆ ರಾಗ ದಿನಿನರಶ್ಮಿಯೆಂಬ ಕಸಮಂ ಕಟಿದು (ಆದಿಪು. ೬-೬೦); ತ್ರಿದಶಶರಾಸನರುಚಿ ಮೊದಲದು . . . ಉಱಿದವೆರಡು ರವಿಕಾಂತಂಗಳ್ (ಪಾರ್ಶ್ವಪು. ೧೩-೧೮). [ ತ್ರಿದಶ₂ + ಶರಾಸನ ]

**ತ್ರಿದಶಸಂಕುಳ** (ನಾ). = ತ್ರಿದಶನಿಕರ: ಹಂಪೆಯುರಸಂ ನಿಟಿಲಂದೆಱಿಯಲ್ ಬಳಿಕ್ಕದೆತ್ತಣ ಹರಿ ... ಎತ್ತಣ ತ್ರಿದಶಸಂಕುಳವೆತ್ತಣ ಭಾಸ್ಕರೇಂದುಗಳ್ (ಹಂಪಾಶ. ೩೮). [ ತ್ರಿದಶ₂ + ಸಂಕುಳ ( = ಸಂಕುಲ) ]

**ತ್ರಿದಶಸ್ತುತ** (ನಾ). ದೇವತೆಗಳಿಂದ ಸ್ತುತಿಸಿಕೊಂಡವನು : ತ್ರಿದಶಸ್ತುತ ನೋಡ ಪೊದಟ್ದಿದವಿದ ತಾಳೀತಮಾಳನೀಳದ ಕರ್ಪಿಂ ಪುದಿದು ಪರಭಾಗಮಂ ಪಡೆದಿದಱೆರಡುಂ ಕೆಲದೊಳೆಸೆವ ವನರಾಜಿಗಳಂ (ಆದಿಪು. ೧೧-೬೦). [ ತ್ರಿದಶ₂ + ಸ್ತುತ ]

**ತ್ರಿದಶಸ್ತುತ್ಯ** (ನಾ). ದೇವತೆಗಳಿಂದ ಸ್ತುತಿಸಿಕೊಳ್ಳುವಂತಹುದಂ : ತ್ರಿದಶಸ್ತುತ್ಯಮಿದಾದಿದೇವಚರಿತಂ (ಆದಿಪು. ೧೩-೭೮). [ ತ್ರಿದಶ₂ + ಸ್ತುತ್ಯ ]

**ತ್ರಿದಶಾಂಗನೆ** (ನಾ). ದೇವತಾಸ್ತ್ರೀ : ತ್ರಿದಶಾಂಗನೆಯರ್ . . . ಪಾಡಿದ ರೋಲಗಸಾಲೆಯೊಳ್ ಜಿನೇಂದ್ರಾಂಬಿಕೆಯಾ (ಶಾಂತಿಪು. ೯-೩೮೫) ; ತ್ರಿದಶಾಂಗನೆ ಜಿನಜನನಿಗೆ ಪದೆಪಿಂ ತಾರಾವತಂಸಮಂ ಭೂಷಿಸೆ (ಶಾಂತೀಶ್ವ. ೧೩-೨೦೮). [ ತ್ರಿದಶ₂ + ಅಂಗನೆ ]

**ತ್ರಿದಶಾಚಲ** (ನಾ).=ತ್ರಿದಶನಗೇಂದ್ರ : ತ್ರಿದಶಾಚಲಶಿಖರದೊಳಜಿತದೇವ ಜನ್ಮಾಭಿಷೇಕಮಂಗಳಸಮಯಾಂಬುದಸಮಯಂ ಸಮನಿಸೆ (ಅಜಿಪು. ೫-೭). [ ತ್ರಿದಶ₂ + ಅಚಲ ]

**ತ್ರಿದಶಾಚಾರ್ಯ** (ನಾ). ದೇವತೆಗಳ ಗುರು ; ಬೃಹಸ್ಪತಿ: "ವಾಚಸ್ಪತಿಃ, . . . ತ್ರಿದಶಾಚಾರ್ಯಃ, ಚಿತ್ರಶಿಖಂಡಿಪ್ರಸೂತಿಃ, (ಕಥ್ಯತೇ) – ಈ ೮ ಬೃಹಸ್ಪತಿಯ ಪೆಸರ್" (ಹಲಾಯು. ೯-೪೭). [ ತ್ರಿದಶ₂ + ಆಚಾರ್ಯ ]

**ತ್ರಿದಶಾಧಿನಾಥ** (ನಾ). = ತ್ರಿದಶಗಣಾಧಿನಾಯಕ : ಪದವಿನ್ಯಾಸದ ತುಱುಗಲ್ ಪೊದಟೆ ಲಯಂಬೆರಸು ರಂಗಮಂ ಬಳಸಿದನಾ ತ್ರಿದಶಾಧಿ ನಾಥನಳೆವವೊಲುದನ್ವದಾವೇಷ್ಟಿತಾಖಿಳಾವನಿತಳಮಂ (ಆದಿಪು. ೭-೧೧೯). [ ತ್ರಿದಶ₂ + ಅಧಿನಾಥ ]

**ತ್ರಿದಶಾಧೀಶ** (ನಾ). ೧. = ತ್ರಿದಶಗಣಾಧಿನಾಯಕ: ತ್ರಿದಶಾಧೀಶನಿನಾದ ಜನ್ಮಸವನಾಂಭಃಪೂರದೊಳ್ ನೀರನೂಡಿದುದೋಲಾಡಿದುದು . . . ದೇವೇಂದ್ರನೈರಾವತಂ (ಮಲ್ಲಿಪು. ೧೨-೧೫೪). ೨. ಜಿನ ; ತೀರ್ಥಂಕರ : ತ್ರಿದಶಾಧೀಶನ ಮುಂದೆ . . . ಸಪ್ತವಿಧಸೇನಾಚಕ್ರಮೇನೊಪ್ಪಿತೋ (ಪುಷ್ಪಪು. ೧೪-೪೩). [ ತ್ರಿದಶ₂ + ಅಧೀಶ ]

**ತ್ರಿದಶಾಧೀಶ್ವರ** (ನಾ). = ತ್ರಿದಶಗಣಾಧಿನಾಯಕ : ತ್ರಿದಶಾಧೀಶ್ವರ ಭೂತ್ಯತ್ಮದಾರವಿವಿಧಾರ್ಥವಿಭವನೀ ಭೂಪೇಂದ್ರಂ (ಕವಿರಾ. ೨-೬೦) ; ತ್ರಿದಶಾಧೀಶ್ವರಸಂಪದಂ ಸಫಲವಿಾ ಪೌಲೋಮಿಯಿಂ (ಜಗವಿ. ೧೩-೫೫). [ ತ್ರಿದಶ₂ + ಅಧೀಶ್ವರ ]

**ತ್ರಿದಶಾಧೀಶ್ವರಮಂತ್ರಿ** (ನಾ). ದೇವತೆಗಳ ಒಡೆಯನಿಗೆ ಮಂತ್ರಿಯಾದ ವನು ; ಗುರು : ತ್ರಿದಶಾಧೀಶ್ವರಮಂತ್ರಿ ಶೀತಕರರೆಂಬೀಯಿರ್ವರುಂ ಕರ್ಕಿಗೇಹದೊಳಿರ್ದಂದು . . . ಪುಟ್ಟಿದ ಮರ್ತ್ಯಂಗೆ ಚಿರಾಯು ಸಂಭವಿಸುಗುಂ (ಜಾತಕ. ೮-೧೫). [ ತ್ರಿದಶಾಧೀಶ್ವರ + ಮಂತ್ರಿ ]

**ತ್ರಿದಶಾನಕ** (ನಾ). ದೇವತೆಗಳ ದುಂದುಭಿ,–ಭೇರಿ : ತ್ರಿದಶಾನಕ ಕೋಟಿಗಳುಂ ಪುದಿದ ಚತುಷ್ಷಷ್ಟಿ ಚಮರಜಂ ಮುಕ್ಕೊಡೆ . . . ಮೃಗಾಧಿಪಪೀಠಂ ಎಸೆಯೆ (ನೇಮಿಪು. ೧೪-೧೪೩). [ತ್ರಿದಶ₂ + ಆನಕ]

**ತ್ರಿದಶಾನೀಕ** (ನಾ). ೧. = ತ್ರಿದಶನಿಕರ. ೨. ದೇವತೆಗಳ ಸಮೂಹ ದಿಂದ ಕೂಡಿದವನು : ಚತುಸ್ಸಹಸ್ರಸಾಮಾನಿಕಸಮೇತನುಂ ತತ್ಪ್ರಮಾಣಾಂಗರಕ್ಷ ತ್ರಿದಶಾನೀಕನುಂ . . . ಅಂತರ್ಮಧ್ಯಶ್ರೀಪ್ರಕಾರ ಪರಿಷತ್ಪ್ರಕಾಶಕರನಾಗಿ ಪರಮೈಶ್ವರ್ಯಸ[ಂಪ]ನ್ನನಾದಂ (ಸುಕುಮಾ. ೯-೩೧ ವ). [ ತ್ರಿದಶ₂ + ಅನೀಕ ]

**ತ್ರಿದಶಾರಿ** (ನಾ). = ತ್ರಿದಶರಿಪು : ತ್ರಿದಶಾರಿಧೂಮಕೇತುವನುದರದೊಳೀ ದೇವಿ ತಳೆದುದರ್ಕಿದೆ ದೃಷ್ಟಾಂತದ ಧೂಮಲೇಖೆಯೆನೆ ಕರ್ಪೊದವಿದ ರೋಮಾಳಿ ರಂಜಿಕುಂ ದೇವಕಿಯಾ (ಜಗವಿ. ೨-೯೦). [ ತ್ರಿದಶ₂ + ಅರಿ₆ ]

**ತ್ರಿದಶಾಲಯ** (ನಾ). ದೇವತೆಗಳ ವಾಸಸ್ಥಾನ ; ಸ್ವರ್ಗಲೋಕ ; "ತ್ರಿದಿವಂ . . . ತ್ರಿದಶಾಲಯಂ ನಾಕಮೂರ್ಧ್ವಲೋಕಂ ಸ್ವರ್ಗಮದು" (ಮಂಗರಾ. ೩-೮). [ ತ್ರಿದಶ₂ + ಆಲಯ ]

**ತ್ರಿದಶಾವಾಸ** (ನಾ). = ತ್ರಿದಶಾಲಯಂ : "ಸ್ವರ್, ಸ್ವರ್ಗಃ, ಸುರಸದ್ಮ, ತ್ರಿದಶಾವಾಸಃ . . . ಊರ್ಧ್ವಲೋಕಃ [ಚ] ಈ ೧೧ ದೇವಲೋಕದ ಪೆಸರ್" (ಹಲಾಯು. ೨-೩) ; ಇದು ದಲ್ಚೈತ್ರರಥಾಪ್ವಯಂ ಬನಮಿದ ಚೆಳ್ಪೋದಂ ಸರಂ ನೋಟ್ಪೊಡೀ ತ್ರಿದಶಾವಾಸಮಿದಿಂತುಟಲ್ತೆ ರಮಣೀಯಂ (ಕಾದಂಬ. ೪೪೫). [ ತ್ರಿದಶ₂ + ಆವಾಸ ]

**ತ್ರಿದಶಾಸನ** (ನಾ). ದೇವತೆಗಳ ಆಸನ,–ಪೀಠ : ತ್ರಿದಶಾಸನಂಗಳಲ್ಲಾಡಿ ದುವು ಜಗದ್ಗುರುಗೆ ಬೇಗಮುಚ್ಚಾಸನದಿಂದಿದಿರೇಱಿಮೆಂದು ಪೇಟ್ಪವೋಲ್ (ಆದಿಪು. ೭-೪೦). [ ತ್ರಿದಶ₂ + ಆಸನ ]

**ತ್ರಿದಶಾಹಾರ** (ನಾ). ದೇವತೆಗಳ ಆಹಾರ ; ಅಮೃತ : "ಅಮೃತಂ, ತ್ರಿದಶಾಹಾರಃ, ಸುಧಾ, ಪೀಯೂಷಂ – ಈ ೪ ಅಮರ್ದಿನ ಪೆಸರ್" (ಹಲಾಯು. ೨೨-೧೩೩). [ ತ್ರಿದಶ₂ + ಆಹಾರ ]

**ತ್ರಿದಶಾಹಿತ** (ನಾ). ದೇವತೆಗಳಿಗೆ ಶತ್ರುವಾದವನು; ದೈತ್ಯ. 'ತ್ರಿದಶಾಹಿತಮಂತ್ರಿ' ಪರಾ. [ ತ್ರಿದಶ$_2$ + ಅಹಿತ ]

**ತ್ರಿದಶಾಹಿತಮಂತ್ರಿ** (ನಾ). ದೈತ್ಯರ ಮಂತ್ರಿ ; ಶುಕ್ರ : ತ್ರಿದಶಾಹಿತ ಮಂತ್ರಿಯೊಳೊಂದಿದ ಶನಿಯಿಂ ಸ್ತ್ರೀಧನಾನ್ವಿತಂ (ಜಾತತಿ. ೧೫-೬).

[ ತ್ರಿದಶಾಹಿತ + ಮಂತ್ರಿ ]

**ತ್ರಿದಶೇಂದ್ರ** (ನಾ). = ತ್ರಿದಶಗಣಾಧಿನಾಯಕ : ತ್ರಿದಶೇಂದ್ರಂಗೆ ಯುಧಿಷ್ಠಿರಾಧ್ವರದ ಮಾಸಾಮರ್ಥ್ಯಮಂ ಸೂಟುಸೂಟದೆ ಪೇಟಲ್ ಪರಿಮೆತೆ ಪೊಣ್ಮೆ ಪಲವುಂ ಧೂಮಂಗಳ್ (ಪಂಪಭಾ. ೬-೩೮) ; ತ್ರಿದಶೇಂದ್ರವಂದ್ಯ ಬೆಸಸೆನೆ ಪೊದಟ್ದುದರ್ಹನ್ಮುಖೇಂದು ದಿವ್ಯನಿನಾದಂ (ಶಾಂತಿಪು. ೬-೫೮); ತ್ರಿದಶೇಂದ್ರಾರಾತಿ ದೈತ್ಯಂ ಧರೆಯೆನೆ ರಸೆಗಂದುಯ್ಯೆ (ಪಂರಾಮಾ. ೧೧-೪೪). [ ತ್ರಿದಶ$_2$ + ಇಂದ್ರ ]

**ತ್ರಿದಶೇಭ** (ನಾ). ಸ್ವರ್ಗದ ಆನೆ ; ಐರಾವತ : ತ್ರಿದಶೇಭಕ್ಕೆಸೆದಾದು ವಂದು ವದನಂ ಮೂವತ್ತೆರಟ್ ಕೂಡೆ ತದ್ವದನವ್ರಾತದೊಳಾದುವು ದ್ವಿರದನಂ ಪ್ರತ್ಯೇಕಮೆಂಟೆಂಟು (ನೇಮಿಪು. ೮-೧೨೩). [ ತ್ರಿದಶ$_2$ + ಇಭ ]

**ತ್ರಿದಶೇಶ** (ನಾ). ದೇವತೆಗಳ ಒಡೆಯ: ವೃಷಪಾಲಿ ತ್ರಿದಶೇಶನುಗ್ರಧನ್ವಿಗೆ . . . ಸರ್ವಜ್ಞಂಗೆ ವಾಮದೇವಂಗೆಱಗುವೆಂ (ಗುರುಚಾ. ೧-೨೨).

[ ತ್ರಿದಶ$_2$ + ಈಶ ]

**ತ್ರಿದಿವ** (ನಾ). ೧. ಸ್ವರ್ಗ; ದೇವಲೋಕ: "ತ್ರಿದಿವಂ . . . ದಿವಮೆಂದಿಂತಿದು ತಾನಮರ್ತ್ಯಭವನಂ" (ವಸ್ತುಕೋ. ೬-೩೦) ; ತ್ರಿದಿವ ದೊಳಚ್ಚರಸಿಯರಿರ್ಪುದು ವಿದಿತಂ (ಕಾದಂಪೂ. ೭೦೬) ; ತ್ರಿದಿವಪ್ರಾಪ್ತ ಮನೋಹರಂ ... ತಾನೆನುತ್ತುಂ ಸಮಂತದನಿಂತೇಳಿಪುದಿಂದ್ರನಂದನಮನಾ ಸಾರ್ವರ್ತುಕಾಖ್ಯಂ ವನಂ (ಕುಸುಮಾ. ೧-೧೦೫); ತ್ರಿದಿವವನು ತುಡುಕಿತು ಹವಿರ್ಗಂಧದ ಗಢಾವಣೆ ಧೂತಧೂಮನ ತುದಿ ತಪೋಲೋಕದಲಿ ತಳಿತುದು (ಕುವ್ಯಾಸ. ೭-೩೪). ೨. ಆಕಾಶ; ಗಗನ: ತ್ರಿದಿವಕ್ಕೇಱಿ ದೊಡಂಬೆಯಂಬೆರಸು ಜೋದರ್ ಪಾಱಿ³ (ವರ್ಧಪು. ೭-೪೮). [ಸಂ.]

**ತ್ರಿದಿವಾಂಗನೆ** (ನಾ). = ತ್ರಿದಶಕನ್ನಿಕೆ : ವಿಸ್ಫುರತ್ಕನ್ಯಕಾಕೃತಿಯಂ ತಳೆದಿರ್ದಳ್ ತಾಂ ತ್ರಿದಿವಾಂಗನೆವೋಲವಳ್ (ಪಂಚತಂ. ೨೫೬-೧೮).

[ ತ್ರಿದಿವ + ಅಂಗನೆ ]

**ತ್ರಿದಿವೇಶ** (ನಾ). ೧. ದೇವಲೋಕದ ಒಡೆಯಂ; ಇಂದ್ರ. ೨. ದೇವತೆ. [ ತ್ರಿದಿವ + ಈಶ ]

**ತ್ರಿದೋಷ** (ನಾ). ೧. ಕಾಯಿಕ, ವಾಚಿಕ ಮತ್ತು ಮಾನಸಿಕವಾದ ಪಾಪಗಳು : ಅವಸ್ಥಾತ್ರಯಂಗಳ ಅವಗುಣವಳಿದು ತ್ರಿದೋಷಂಗಳ ಪಲ್ಲಟಗೊಳಿಸಿ (ಅಖಂಡೇ. ೧೯೪-೧೪). ೨. [ವೈದ್ಯ] ವಾತ, ಪಿತ್ತ ಮತ್ತು ಕಫಗಳೆಂಬ ಮೂರೂ ವಿಷಮಗೊಂಡು, ಶರೀರಕ್ಕೆ ತೊಂದರೆ ಯನ್ನುಂಟುಮಾಡುವ ದೋಷಗಳು : ತ್ರಿದೋಷಸಮುದಿತರೋಗಂ ಸಮನಿಸುಗುಂ ಮನುಜಂಗಮೃತಮಯೂಖಾಪತ್ಯದಶೆಯೊಳವರೋಹಿಣಿ ಯೊಳ್ (ಜಾತತಿ. ೯-೨೪) ; ವಾಯು, ಅಪಸ್ಮಾರ, ತ್ರಿದೋಷ ಹದಿಮೂಱು ಪ್ರಕಾರದ ಸನ್ನಿಪಾತ ಹರ (ವಿಷ್ಣುವಿ. ೫೭); ತ್ರಿದೋಷಯುಕ್ತವಾದ ರೋಗ ಗಳೂ ಕಂಠರೋಗಗಳೂ ಸಹ ಗುಣವಾಗುವುವು (ಸಕವ್ಯ. ೨೯) ; ತ್ರಿದೋಷ ಲಕ್ಷಣ ಕಂಡಿತು (ಪ್ರೇಮಾಶ್ರ. ೧೦೯).

[ ತ್ರಿ + ದೋಷ ]

**ತ್ರಿದೋಷಹರ** (ಗು). ತ್ರಿದೋಷಗಳಿಂದುಂಟಾಗುವ ರೋಗಗಳನ್ನು ನಾಶಮಾಡುವ. [ ಸಂ. ]

**ತ್ರಿನಯನ** (ನಾ). ಮೂರು ಕಣ್ಣುಗಳನ್ನು ಉಳ್ಳವನು ; ಮುಕ್ಕಣ್ಣ ; ಶಿವ : ಮಣಿಗಳ ಸೂತ್ರದಂತೆ ತ್ರಿನ[ಪಾಠಾಂ. ಣ]ಯನ ನೀನಿಪ್ಪೆಯಯ್ಯ (ದೇದಾವ. ೨-೩). [ ತ್ರಿ + ನಯನ ]

**ತ್ರಿಪಂಚಲೋಚನ** (ನಾ). (ಐದು ಮುಖಗಳಲ್ಲಿ ಮೂರು ಮೂರರಂತೆ ಒಟ್ಟು) ಹದಿನೈದು ಕಣ್ಣುಗಳನ್ನು ಉಳ್ಳವನು ; ಶಿವ : ಪಂಚಲಪನ ಮಳದ್ವಿಪಂಚಬಾಹುಗಳು ತ್ರಿಪಂಚಲೋಚನನಸಮ ಪಂಚಶರ ಭಸಿತಾಂಗ . . . ಉಡುಪಮೌಳಿ ಮೃಡನೇ (ನವಮೋ. ೧-೭). [ ಸಂ. ]

**ತ್ರಿಪಟಿಕ** (ನಾ). ಮುಪ್ಪಟ್ಟೆಯಾಕಾರದಲ್ಲಿರುವುದು; ಮೂರು ಮೂಲೆ ಗಳುಳ್ಳದು : ಸೂರ್ಯನ ಕಿರಣ ಒಂದನ್ನು ಗಾಜಿನ ತ್ರಿಪಟಿಕ (Prism) ದ ಮೂಲಕ ಹಾಯಿಸಿದಾಗ ಅದು ನಾನಾ ವರ್ಣಗಳಾಗಿ ಪ್ರತ್ಯೇಕಿಸಲ್ಪಡು ತ್ತದೆ (ಆಕಾಶ. ೭). [ ತ್ರಿ +ಪಟಿಕ ]

**ತ್ರಿಪತಾಕ** (ನಾ). [ನಾಟ್ಯ] ಮೂರು ಬೆರಳುಗಳನ್ನು ಬಿಚ್ಚಿರುವ ಒಂದು ಬಗೆಯ ಹಸ್ತಮುದ್ರೆ : ಮತ್ತಾ ತ್ರಿಪತಾಕಂಗಳ್ ಬಿತ್ತರದಿಂ ತುದಿಗಳಿಂದೆ ಕಟಿಗಳನೊಂದಲ್ . . . ಪಕ್ಷಮಂಚಿತಮಕ್ಕುಂ (ಲಾಸ್ಯರಂ. ೨-೬೧) ; ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ ೧. ಪತಾಕ ೨. ತ್ರಿಪತಾಕ (ಅಭಾನ್ಯ. ೪೭) ; ಪತಾಕ, ಅರ್ಧಚಂದ್ರ, ತ್ರಿಪತಾಕ . . . ಶಿಖರಹಸ್ತ ಮೊದಲಾದ ನೂರಾರು ಹಸ್ತಮುದ್ರೆಗಳಿವೆ (ಬಾಲಪ್ರ. II, ೯೧೯). [ ಸಂ. ]

**ತ್ರಿಪತಾಕೆ** (ನಾ). ೧. ಮೂರು ಧ್ವಜಗಳು. ೨. ಮೂರು ಗೆರೆಗಳಂತೆ ಮೂರು ಮಡಿಕೆಗಳ ಗುರುತನ್ನು ಹೊಂದಿರುವ ಸ್ಥಿತಿ : ತ್ರಿಪತಾಕೆ ನಿನ್ನ ನೊಸಲೊಳ್ ತೋರ್ಪನ್ನೆಗಂ ಕೂರ್ಪುದೋರ್ಪವನಾವಂ (ಮಲ್ಲಿಪು. ೧೪-೩೬) ; ತ್ರಿಪತಾಕೆ ನಿಟಿಲತಟದೊಳ್ ಕಪಿಧ್ವಜಂ ಗಗನತಲದೊಳರ್ವಿಸೆ (ಪಂರಾಮಾ. ೧೩-೧೧೭). [ ಸಂ. ತ್ರಿಪತಾಕ ]

**ತ್ರಿಪತ್ರ** (ನಾ). ೧. (ಮೂರು ಎಲೆಗಳಿಂದ ಕೂಡಿರುವ) ಬಿಲ್ವಪತ್ರೆ ಮತ್ತು ಅದರ ಮರ; ಬೆಲ್ಲಪತ್ತ : ಭವಾನಿಯ ಪಾದದಲ್ಲಿ ತ್ರಿಪತ್ರ ವನ್ನೊಪ್ಪಿಸಲು ಹೋದೆನು (ಕಪಾಕುಂ. ೬೧). ೨. ಮುತ್ತುಗ; ಪಲಾಶವೃಕ್ಷ. [ ಸಂ. ]

**ತ್ರಿಪತ್ರಕ** (ನಾ). =ತ್ರಿಪತ್ರ ೨ : "ಬ್ರಹ್ಮವೃಕ್ಷಃ, ಪಲಾಶಃ, ಕಿಂಶುಕಃ, ತ್ರಿಪತ್ರಕಃ – ಈ ೪ ಮುಟ್ಟುಗದ ಪೆಸರ್" (ಹಲಾಯು. ೩೩-೪೪) ; "ಹೀಚಕಮಾ ತ್ರಿಪತ್ರಕಂ ಕಿಂಶುಕಾಖ್ಯಂ" (ಮಂಗರಾ. ೩೭-೨೦). [ ಸಂ. ]

**ತ್ರಿಪತ್ರಿಣಿ** (ನಾ). ಒಂದು ಬಗೆಯ ಸಸ್ಯ : "ವಾರುಳಿ ಬಲಿಬರ್ಧಾಕ್ಷಿ ಹಾವುಮೆಕ್ಕೆ ಹಿಡಿಹಿಡಿಕೆ ತ್ರಿಪತ್ರಿಣಿಯೆಂದೆನಿಕ್ಕುಂ" (ಮಂಗರಾ. ೪೪-೪೪).

[ ಸಂ. ತ್ರಿಪತ್ರಿಣೀ ]

**ತ್ರಿಪಥ** (ನಾ). ೧. ಮೂರು ಮಾರ್ಗಗಳು,–ದಾರಿಗಳು. ೨. ಸ್ವರ್ಗ, ಮರ್ತ್ಯ ಮತ್ತು ಪಾತಾಳ. ೩. ಮೂರು ರಸ್ತೆಗಳು ಸೇರುವ ಸ್ಥಳ,–ಜಾಗ. [ ತ್ರಿ + ಪಥ ]

**ತ್ರಿಪಥಗಾಮಿನಿ** (ನಾ). ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ಹರಿಯುವವಳು ; ಗಂಗಾನದಿ : ತ್ರಿಪಥ ಗಾಮಿನಿಯೆನಿಪ ಜಾಹ್ನವಿ ನೃಪನ ಚರಣದಲುದಿಸಿದಳು (ಕೌಶಿರಾ. ೨೭-೭); ಈ ಮೂರು ಮತಗಳು ತ್ರಿಪಥಗಾಮಿನಿಯ ಹಾಗೆ ಮೂರು ಹಾದಿಯನ್ನು ಹೊಂದಿದ್ದರೂ ಮೂರಕ್ಕೂ ಮೂಲೋದ್ದೇಶವು . . . ಕಡೆಯ ಸೂತ್ರವಾದ ಮುಕ್ತಿಯೇ (ಭಾರದ. ೨೭೦). [ ಸಂ. ತ್ರಿಪಥಗಾಮಿನೀ ]

**ತ್ರಿಪಥಗೆ** (ನಾ). = ತ್ರಿಪಥಗಾಮಿನಿ : ತ್ರಿಪಥಗೆಯ ಮೂಱು ಪೊನಲಿಂದೆ ಪೊಳೆವ ಹಿಮಗಿರಿಶಿಲಾತಳಕ್ಕಣೆಯೆನಿಸಿತ್ತುಪರಚಿತರುಚಿರಭಸ್ಮತ್ರಿಪುಂಡ್ರ ಲಾಂಛಿತಲಲಾಟಮಾ ಮುನಿವರನಾ (ಕಾದಂಪೂ. ೨೩೪) ; ಪ್ರಣಯದೆ ತ್ರಿಪಥಗೆ ನಡೆತರೆ ತ್ರಿಣೇತ್ರನೊಲವಿಂದೆ ತಾಳ್ದಿದಂ ಮಸ್ತಕದೊಳ್ (ಶಮದ. ೫೯ ಪ್ರಯೋ) ; ಲೋಕಪಾವನೆಯೆನಿಸುತೋರಂದದೆ ಪಾತಾಲ ದತ್ತಣ್ಗೆ ಪೋದ ತ್ರಿಪಥಗೆ ಕಾಣಿಸಿಕೊಂಡಳ್ (ರಾಮಾಶ್ವ. ೩೦-೧೪).

[ ಸಂ. ತ್ರಿಪಥಗಾ ]

**ತ್ರಿಪದ** (ನಾ). ೧. ಮೂರು ಪಾದಗಳು. ೨. ಮೂರು ಪಾದಗಳನ್ನು ಉಳ್ಳುದು ; ಕಾಲುಮಣೆ ; ತಿವದಿಗೆ. ೩. ಮೂರು ಭಾಗಗಳನ್ನು ಹೊಂದಿರುವುದು. ೪. ಮೂರು ಹೆಜ್ಜೆಗಳನ್ನಿಟ್ಟವನು ; ವಿಷ್ಣು. 'ತ್ರಿವಿಕ್ರಮ' ಪರಾ. [ ತ್ರಿ + ಪದ$_2$ ]

**ತ್ರಿಪದಾರ್ಥ** (ನಾ). [ವೀಶೈ] ಪಶು, ಪತಿ ಮತ್ತು ಪಾಶಗಳೆಂಬ ಮೂರು ವಿಧವಾದ ತತ್ತ್ವಗಳು : ಪತಿ–ಪಶು–ಪಾಶಗಳೆಂಬ ತತ್ತ್ವತ್ರಯಗಳೇ (ತ್ರಿಪದಾರ್ಥಗಳೇ) ಶೈವಾಗಮದ ಮೂಲತತ್ತ್ವಗಳು ... ಶೈವಾಗಮಗಳು ತ್ರಿಪದಾರ್ಥಪ್ರತಿಪಾದಕಗಳಾಗಿರುವಂತೆ . . . ಆರು ಬಗೆಯಾಗಿವೆ (ಭಾರದ. ೭೩). [ ತ್ರಿ + ಪದಾರ್ಥ ]

**ತ್ರಿಪದಾಸನ** (ನಾ). [ತತ್ತ್ವಶಾ] ಯೋಗಾಸನಗಳಲ್ಲಿ ಒಂದು : ಯೋಗ ಯೋಗ್ಯಾಸನಗಳಲ್ಲಿ ತ್ರಿಪದಾಸನ . . . ಅರ್ಧಾಸನಾದಿಯುಂಭತ್ತಾಲ್ಕಾಸನ ಭೇದಗಳು (ವಿವೇಕ. ೧೫೦). [ ತ್ರಿಪದ + ಆಸನ ]

**ತ್ರಿಪದಿ** (ನಾ). ೧. ಮೂರು ಪಾದಗಳನ್ನು ಉಳ್ಳುದು. ೨. ಮೂರು ಕಾಲಿನ ಮಣೆ ; ತಿವದಿಗೆ ; ಮುಕ್ಕಾಲುಮಣೆ : "ತ್ರಿಪದಿಯೆನೆ ತಿವದಿಯಕ್ಕುಂ" (ಮಂಗರಾ. ೬೨-೨೦). ೩. ಒಂದು ಬಗೆಯ ಸಸ್ಯ ; ಹಂಸಪಾದಿ ಗಿಡ : "ತ್ರಿಪದಿ ಧೃತಮಂಡಳಿ ಮರಾಳಪದಿಯೆನೆ ಹಂಸಪಾದಿ" (ಮಂಗರಾ. ೪೨-೪೯). ೪. ಆನೆಯನ್ನು ಕಟ್ಟುವ ಹಗ್ಗ : ನಂದನಭುಜಂಗವೇಷ್ಟಿತಚಂದನಮಾರ್ಗದೊಳಿಭಂಗಳೊಳ್ಪಾನೆಗಳಂತೊಂದು ತ್ರಿಪದಿಚ್ಛೇದದೊಳಂ ದರ್ಲ್ ತ[ಳ]ರದೆ ಪಯೋಧಿವೇಳಾವನದೊಳ್ (ಶಾಂತಿಪು. ೧೧-೫). ೫. [ಛಂದ] ಮೂರು ಪಾದಗಳಲ್ಲಿ ಒಟ್ಟು ಹನ್ನೊಂದು ಅಂಶಗಳಿದ್ದು, ಆರನೆಯ ಮತ್ತು ಹತ್ತನೆಯ ಗಣಗಳಲ್ಲಿ ಬ್ರಹ್ಮಗಣಗಳೂ, ಉಳಿದವುಗಳಲ್ಲಿ ವಿಷ್ಣುಗಣಗಳೂ ಇರುವ ಒಂದು ಕನ್ನಡ ಛಂದಸ್ಸು : ಬಿಸರುಹೋದ್ಭವಗಣಂ ರಸದಶಸ್ಥಾನದೊಳ್ ಬಿಸರುಹನೇತ್ರಗಣಮ ಬರ್ಕುಟಿದುವು ಬಿಸರುಹನೇತ್ರೇ ತ್ರಿಪದಿಗೆ (ಛಂದೋಂಬು. ೫-೨೪೮) ; ಕನ್ನಡ ಛಂದಕ್ಕೆ ಮೂಲ ತ್ರಿಪದಿ (ಛಂದೋವಿ. ೭೩). [ ಸಂ. ತ್ರಿಪದೀ, ]

**ತ್ರಿಪದಿಕೆ** (ನಾ). ೧. = ತ್ರಿಪದಿ ೨ : (+). ೨. = ತ್ರಿಪದಿ ೫ : ತ್ರಿಪದಿಗೆ ತಿವದಿ, ತಿವುಡೆ, ತ್ರಿವುಡೆ, ತ್ರಿಪದಿಕಾ ಎಂಬ ಹೆಸರುಗಳೂ ಬಳಸಲ್ಪಟ್ಟಿವೆ (ಛಂದೋವಿ. ೮೮). [ ಸಂ. ತ್ರಿಪದಿಕಾ ]

**ತ್ರಿಪದೆ** (ನಾ). = ತ್ರಿಪದಿ ೫ : "ತ್ರಿಪದಾ = ತಿವದೆ " (ಶಮದ. ೨೫೮ ಪ್ರಯೋ). [ ಸಂ. ತ್ರಿಪದಾ ]

**ತ್ರಿಪದೋನ್ನತಿ** (ನಾ). [ಛಂದ] ಒಂದು ವಿಷಮವೃತ್ತದ ಹೆಸರು ; ಮೂರು ಸಾಲುಗಳಲ್ಲಿ ಮೂರು ಭಗಣಗಳೂ, ಒಂದು ಗುರುವೂ. ಒಂದು ಸಾಲಿನಲ್ಲಿ ನಾಲ್ಕು ಭಗಣಗಳೂ ಬರುವ ವೃತ್ತ : ಚಂದ್ರಗಣತ್ರಿತಯಂ ಕಡೆಯೊಳ್ ಚಂದ್ರಧರಂ ಬರೆ ಮೂಱಿಡೆಯೊಳ್ ಚಂದ್ರಚತುಷ್ಟಯಮಾಗಿರೆ ಭಾವಿಸು ಚಂದ್ರಮುಖೀ ತ್ರಿಪದೋನ್ನತಿಯಂ (ಛಂದೋಂಬು. ೩-೨೧೪). [ ಸಂ. ]

**ತ್ರಿಪರ್ಣ** (ನಾ). ಬಿಲ್ವಪತ್ರೆಯ ಮರ : ಚೆಂಬಣ್ಣ ಮಾಂದಳಿರಸುಗೆ ಪುನ್ನಾಗ ದಾಳಿಂಬ ತ್ರಿಪರ್ಣ ಪುಷ್ಪಗಳು . . . ಬನದಿ ರುಜಿಸಿತು (ಮೋಹತ. ೪-೪೯). [ ಸಂ. ]

**ತ್ರಿಪರ್ಣಿ** (ನಾ). ೧. ಮೂರು ಎಲೆಗಳನ್ನುಳ್ಳುದು. ೨. ಕಾಡುಹತ್ತಿಗಿಡ. ೩. ನರಿಹೊನ್ನೆಗಿಡ : "ನಿಶಾ–ತ್ರಿಪರ್ಣಿ" (ಓಷಧಿ. ೮೬) ; "ಬೃಹತ್ಪತ್ರಾ ತ್ರಿಪರ್ಣಿ" (ಓಷಧಿ. ೧೦೯). [ ಸಂ. ತ್ರಿಪರ್ಣೀ ]

**ತ್ರಿಪಲ್ಯೋಪಮ** (ನಾ). [ಜೈನ] ಮೂರು ಪಲ್ಯಗಳ ಅವಧಿ ; ℙ ವ್ಯವಹಾರಕಲ್ಪ, ಉದ್ಧಾರಕಲ್ಪ, ಅದ್ಧಾಪಲ್ಯವೆಂಬ ಮೂರು ಪಲ್ಯಗಳಷ್ಟು ಕಾಲ : ಬದರೀಫಲ ಮಾತ್ರಾಹಾರಿಗಳುಮಾರೋಗ್ಯ ಶರೀರಂಗಳುಂ ಸೌಂದರಾಕಾರಂಗಳುಂ ತ್ರಿಪಲ್ಯೋಪಮಜೀವಿಗಳುಮಾಗಿ (ಆದಿಪು. ೫-೪೧ ವ) ; ಬದರೀಫಲಮಾತ್ರಾಹಾರರುಂ ವಿಗತವಾಹಾರರುಂ . . . ತ್ರಿಪಲ್ಯೋಪಮಾಯುರ್ಜೀವರುಮಾಗಿ (ಜಾವುಂಪು. ೨೬-೫). 'ಪಲ್ಯ$_2$' ಪರಾ [ ಸಂ. ]

**ತ್ರಿಪಾದ** (ಗು). ೧. ಮೂರು ಪಾದಗಳುಳ್ಳ: ಜ್ಯೋತಿಪುರುಷನೊಬ್ಬ ಪುರುಷನು ತ್ರಿಪಾದೂರ್ಧ್ವಪುರುಷನೊಬ್ಬ ಪುರುಷನು (ಬಸವ. ೯೫೫). ೨. (ನಾ). ಮೂರು ಪಾದಗಳು : ಏಳಯ್ಯ ಬೆಳಗಾಯಿತು . . . ಭೇದಿಸಿ ಭೂಮಿ ತ್ರಿಪಾದದಿಂದಳೆಬೇಕು (ಪುರಂದ. ೫-೧೯೪-೩). ೩. ಮೂರು ಕಾಲುಗಳಿಂದ ಕೂಡಿದ ಪೀಠ ; ತ್ರಿಪದಿ : ಗ್ರೀಸದೇಶದ ಅರಿಸ್ಟಾಟಲನೆಂಬ ತತ್ತ್ವಜ್ಞಾನಿಯು ತಮಗೆ ತಾವೇ ನಡೆಯುವಂಥ ತ್ರಿಪಾದಗಳನ್ನು (ತೀವಟಗೆಗಳನ್ನು) ತನ್ನದೊಂದು ಗ್ರಂಥದಲ್ಲಿ ವರ್ಣಿಸಿದ್ದಾನೆ (ಮುಂಬಯಿ. ೬-೨೪). ೪. ಮೂರು ಪಾದಗಳಿಂದ ಕೂಡಿದುದು. ೫. ಮೂರು ಭಾಗಗಳನ್ನುಳ್ಳುದು. ೬. ತ್ರಿವಿಕ್ರಮ; ವಿಷ್ಣು. ೭. ತ್ರಿಪಾದಿ ೨. [ ತ್ರಿ + ಪಾದ ]

**ತ್ರಿಪಾದಿ** (ನಾ). ೧. ಮೂರು ಕಾಲುಗಳಿಂದ ನಡೆದಂತೆ ನಡೆಯುವಿಕೆ : ಅವುಗಳ ನಡಿಗೆ ತ್ರಿಪಾದಿ-ಒಂದು ಕಡೆಯ ಮಧ್ಯದ ಕಾಲು ಮತ್ತು ಇನ್ನೊಂದು ಕಡೆಯ ಮುಂಗಾಲು ಮತ್ತು ಹಿಂಗಾಲುಗಳನ್ನು ಏಕಕಾಲದಲ್ಲಿ ಮುಂದಿಟ್ಟು, ಉಳಿದ ಮೂರು ಕಾಲುಗಳ ಮೇಲೆ - ಶರೀರವನ್ನು ಸರಿದೂಗಿಸಿ ನಡೆಯುತ್ತವೆ (ಕೀಟಜ. ೧೬). ೨. [ಜ್ಯೋತಿ] ಒಂದು ರಾಶಿಗೆ ಮೂರು ಪಾದಗಳು, ಮತ್ತೊಂದು ರಾಶಿಗೆ ಉಳಿದ ಪಾದಗಳು ಸೇರುವ (ಅಮಂಗಳವೆಂದು ಪರಿಗಣಿಸಲಾದ) ಕೃತ್ತಿಕೆ, ಪುನರ್ವಸು, ಉತ್ತರೆ, ವಿಶಾಖೆ, ಉತ್ತರಾಷಾಢ ಮತ್ತು ಪೂರ್ವಾಭಾದ್ರೆ ಎಂಬ ಆರು ನಕ್ಷತ್ರಗಳು. ೩. (ಆಲಂ) ನಿಂತ ಕಡೆ ನಿಲ್ಲದೆ ಸದಾ ಓಡಾಡುತ್ತಿರುವವನು; ಅಲೆಮಾರಿ : ಇಂದಿನ ಹುಡುಗರಿಗೆ ತ್ರಿಪಾದಿಯಂತೆ ಅಲೆಯುತ್ತಿರುವುದೇ ಕೆಲಸ (ರೂಢಿ). [ ಸಂ. ತ್ರಿಪಾದಿನ್ ]

**ತ್ರಿಪಾವಡೆ** (ನಾ). ಮೂರು ಪದರವಾಗಿ ಮಡಿಸಿದ ಬಟ್ಟೆ : ಪರ್ಣಫಲಂಗಳಲ್ಲಿ ಪುನರಪಿ ಪ್ರಕ್ಷಾಳನವ ಮಾಡಬೇಕು ಕೂಪೋದಕದಲ್ಲಿ ತ್ರಿಪಾವಡೆಯಲ್ಲಿ ಸೋದಿಸಬೇಕು (ಸರ್ವವ. ೧೮೯-೭೯). [ ತ್ರಿ + ಪಾವಡೆ (< ಪಾವಡ$_1$) ]

**ತ್ರಿಪಿಟಕ** (ನಾ). [ಬೌದ್ಧ] ಸೂತ್ರಪಿಟಕ, ವಿನಯಪಿಟಕ ಮತ್ತು ಅಭಿಧರ್ಮಪಿಟಕಗಳೆಂಬ ಬೌದ್ಧರ ಮೂರು ಪವಿತ್ರಗ್ರಂಥಗಳು : ಅನವ್ರಾಪ್ತ . . . ಇವನು . . . ತ್ರಿಪಿಟಕಗ್ರಂಥಗಳನ್ನೂ . . . ತಂದು ಬರ್ಮಾ ಇತಿಹಾಸದಲ್ಲಿ ಸುವರ್ಣಯುಗವನ್ನು ಆರಂಭಿಸಿದ (ಭಾರದ. ೩೪೧); ತ್ರಿಪಿಟಕ . . . ಸೂತ್ರಪಿಟಕ ವಿನಯಪಿಟಕ ಅಭಿಧರ್ಮಪಿಟಕ ಎಂಬ ಮೂರು ಪಿಟಕಗಳು (ಹಿಂದಸಾ. ೨೩); ತ್ರಿಪಿಟಕ ಬೌದ್ಧರ ಮತಗ್ರಂಥ (ಪ್ರವಾಇ. I, ೧೬೫ ಅಡಿಟಿ). [ ತ್ರಿ + ಪಿಟಕ$_1$ ]

**ತ್ರಿಪೀಡಿ** (ನಾ). ಮೂರು ತಲೆಮಾರುಗಳು. 'ತ್ರಿಪೀಡಿದಾನ' ಪರಾ. [ ತ್ರಿ + ಪೀಡಿ$_0$ (ℙ ← ಮರಾ. ಪಿಢೀ) ]

**ತ್ರಿಪೀಡಿದಾನ** (ನಾ). ಮೂರು ತಲೆಮಾರುಗಳು ಅನುಭವಿಸುವ ದಾನ : 'ತ್ರಿಪೀಡಿದಾನ' ಎಂಬ ಮರಾಠಿ ಪದವನ್ನು ಕೊಟ್ಟು . . . ಮೇಲಿನ ತೀರ್ಮಾನಕ್ಕೆ ಬಂದಿದ್ದಾರೆ. ವಾಸ್ತವವಾಗಿ 'ಮೂರು ತಲೆಮಾರುಗಳು ಅನುಭವಿಸುವ ದಾನ' ಎಂಬ ಅರ್ಥವೇ ಸರಿಯಾದುದು (ಕಶಾಅ. ೪೯ ಅಡಿಟಿ). [ ತ್ರಿಪೀಡಿ + ದಾನ ]

**ತ್ರಿಪುಂಡ್ರ** (ನಾ). ಹಣೆಯ ಮೇಲೆ ಅಡ್ಡವಾಗಿ ಧರಿಸುವ ಭಸ್ಮದ ಮೂರು ಗೆರೆಗಳು: ತದ್ಭೂತಿಯಿನಿಟ್ಟರ್ತ್ರಿಪುಂಡ್ರಮಂ ದಿವಿಜೇಂದ್ರರ್ (ಆದಿಪು. ೧೬-೫೩) ; ಜಿನದೇಹಮಂ ಭಸಿತಮುಯುಮಪ್ಪನ್ನಂ

ಸಂಸ್ಕಾರಿಸಿರ್ದು ತ್ರಿಪುಂಡ್ರಮಂ ನೊಸಲೊಳಿಡೆ (ಶಾಂತಿಪು. ೧೨-೩೫); ಅಡ್ಡ ತ್ರಿಪುಂಡ್ರದ ಮಣಿಮುಕುಟದ ವೇಷದ ಶರಣರಕಂಡರೆ ನಂಬುವುದೆನ್ನ ಮನವು (ಬಸವ. ೮೮) ; ತ್ರಿಪುಂಡ್ರದ ನೊಸಲರುಣ ಪಟವೇಕಜಡೆ . . . ಎಸೆವ ನಸುನಗೆದ ಶನರುಚಿ ದೆಸೆದೆಸೆಗೆ ಪಸರಿಸೆ (ಬಸಪು. ೧-೫೩) ; ಇಬ್ಬರೂ ಲಲಾಟದಲ್ಲಿ ತ್ರಿಪುಂಡ್ರವನ್ನು ಧರಿಸಿದ್ದರು (ಧೂರಾಣಿ. ೧೫). 'ಊರ್ಧ್ವಪುಂಡ್ರ' ಪರಾ. [ ತ್ರಿ + ಪುಂಡ್ರ ]

**ತ್ರಿಪುಂಡ್ರಕ** (ನಾ). = ತ್ರಿಪುಂಡ್ರ : ತೊಳಪ್ಪ ಕಪ್ಪುರದ ಭಸ್ಮ ರಜ[ಸ್ತ್ರಿಪುಂಡ್ರ]ಕವೊಪ್ಪೆ ಪಿಂಗ ಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ . . . ಕರವೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ (ಪಂಪಭಾ. ೬-೮); ಪೆರ್ಚಿನೊಸಲೊಳ್ಪಸಿತ ತ್ರಿಪುಂಡ್ರಕಂ (ಕಾದಂಪೂ. ೨೦೪). [ ತ್ರಿ + ಪುಂಡ್ರಕ ]

**ತ್ರಿಪುಚ್ಛ** (ನಾ). [ಸಂಗೀತ] ಒಂದೇ ಸ್ವರವನ್ನು ಮೂರು ಬಾರಿ ನುಡಿಯುವಿಕೆ : ತ್ರಿಪುಚ್ಛ – ಒಂದೇ ಸ್ವರ ಮೂರುಬಾರಿ ನುಡಿಯುವುದು (ಸಂಗೀಹಂ. ೨೮). [ ಸಂ. ]

**ತ್ರಿಪುಟ** (ಗು). ೧. ಮುಮ್ಮೂಲೆಯ ; ತ್ರಿಕೋಣಾಕಾರದ. (ನಾ). ೨. ಬಾಣ. ೩. ತೀರ ; ದಡ. ೪. ಒಂದು ಹಸ್ತಪ್ರಮಾಣ ; ಒಂದು ಮೊಳ. ೫. ನೆಲಗಡಲೆಕಾಯಿ. ೬. = ತ್ರಿಪುಟಿ ೧ : ಲಯ ಭೋಗಾಧಿ ಕಾರಂಗಳೆಂಬ ತ್ರಿಪುಟಂಗಳು ಆತನಿಂ ಮಾಡಲ್ಪಟ್ಟವು (ದಶಬೀ. ೧೦೦-೯). ೭. [ಸಂಗೀತ] ಏಳು ಬಗೆಯ ತಾಳಗಳಲ್ಲಿ ಒಂದು; ಒಂದು ಲಘು, ಎರಡು ದ್ರುತಗಳಿಂದ ಕೂಡಿದ ತಾಳ : ಧ್ರುವ . . . ತ್ರಿಪುಟ ಅಟ್ಟ ಏಕವೆಂಬ ಸಪ್ತತಾಳಭೇದಂಗಳಂ (ವಿವೇಕ. ೨೩೮). [ ಸಂ. ]

**ತ್ರಿಪುಟಿ** (ನಾ). ೧. ಒಂದಕ್ಕೊಂದು ಸಂಬಂಧವುಳ್ಳ ಮೂರು ಪದಾರ್ಥಗಳಂ ; ಮೂರರ ಕೂಟ. ೨. [ವೀಶೈ] ಜ್ಞಾತೃ (ತಿಳಿದುಕೊಳ್ಳುವವನು), ಜ್ಞಾನ (ತಿಳಿವಳಿಕೆ), ಜ್ಞೇಯ (ತಿಳಿಯಬೇಕಾದುದು) ಎಂಬ ಮೂರರ ಕೂಟ : ದೃಷ್ಟೃದೃಶ್ಯ ದರ್ಶನಂಗಳೆಂಬ ತ್ರಿಪುಟೀ ಸ್ವರೂಪವಾಗಿಯುಂ (ಮನೋವಿ. ೪-೧೨ ಟೀಕು) ; ಜ್ಞಾತೃ ಜ್ಞಾನ ಜ್ಞೇಯಗಳೆಂಬ ಮೂಱುಂ ತ್ರಿಪುಟಿಯಾಗಿರ್ಪುದು (ವಿವೇಕ. ೩೩) ; ಪರಮಾನಂದಜಲವೆಂಬ ಎಸರನಿಟ್ಟು ತ್ರಿಪುಟಿಯೆಂಬ ಒಲೆಯ ಹೂಡಿ (ಅಜಂಡೀ. ೩೧೯-೬). ೩. [ವೇದಾಂತ] ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿಂದ ಕೂಡಿಕೊಂಡಿರುವುದು ; ಮಾಯೆ : ಅಱುವುದು ತ್ರಿಪುಟಿಯ ನಿಜವನು (ಪರಬೋ. ೩-೧೭-೧೪) ; ಮಾಯೆ ತ್ರಿಪುಟಿಯು ರೂಪು (ಅಮೃತ. ೪-೫). ೪. [ಯೋಗ] ಮೂರು ನಾಡಿಗಳು ಕೂಡುವ ಸ್ಥಾನ ; ಭ್ರೂಮಧ್ಯಸ್ಥಾನ : ಉರಿವಗ್ನಿಯ ಮೇಲೆ ತಂಗಾಳಿ ಬೀಸಿದಂತೆ ತ್ರಿಪುಟಿಯ ಮೇಲೆ ಚಿದ್ಬೆಳಗು ಒಲಿದಾಡುತ್ತಿದೆ (ಘನವ. ೬೩); ತಾ ರುದ್ರನಾಗಲ್ ತ್ರಿನೇತ್ರಂಗಳಿಲ್ಲೆನಲ್ ತರಳನ ತ್ರಿಪುಟಿಯಲ್ಲಿ ಏಕೋಪು. ೬-೭೫). [ ಸಂ. ತ್ರಿಪುಟೀ ]

**ತ್ರಿಪುಟಿಜ್ಞಾನ** (ನಾ). ಜಗತ್ತು, ಜೀವ, ಶಿವ – ಈ ಮೂರುಂ ವಸ್ತುಗಳ ಅರಿವು : ಆ ಸುಖಜಲವ ತ್ರಿಪುಟಿಜ್ಞಾನದಿಂದ ಧರಿಸುವ ವೇದಾಂತಿ ಕರ್ಮಯೋಗದಲ್ಲಿ ವರ್ತಿಸುತ್ತಿರ್ಪ ಕಾರಣ . . . ಜ್ಞಾನ ಗುರೂಪದೇಶವಿಲ್ಲದೆ ಹೋಯಿತ್ತೆಂಬುದೀಗ ಮಾವಾತ ಬಂದ ಉದಕವನೆಱೆವವರ ನಾರನು ಕಾಣೆನೆಂಬ ಶಬ್ದಕ್ಕರ್ಥ (ವಚಸಂ. ೫೭೮-೨೪ ಟೀಕು). [ ತ್ರಿಪುಟಿ + ಜ್ಞಾನ ]

**ತ್ರಿಪುಟಿರಹಿತ** (ನಾ). ಸತ್ತ್ವ, ರಜಸ್ಸು ಮಂತ್ತು ತಮಸ್ಸುಗಳೆಂಬ ತ್ರಿಪುಟಿಯಿಂದ ದೂರನಾದವನು ; ತ್ರಿಗುಣಗಳನ್ನು ಮೀರಿದವನು : ತದ್ಧ್ಯಾನಕರ್ತೃವೋ ತ್ರಿಪುಟಿರಹಿತನೋ ತಾನು ಮೇಣೆನಲಾಯ್ತು ಚಿತ್ತದ ಶುದ್ಧಿಯರ್ಜನನ (ಕುಮ್ಮಾಅ. ೫-೭). [ ತ್ರಿಪುಟಿ + ರಹಿತ ]

**ತ್ರಿಪುಟಿರೂಪು** (ನಾ). (?) : ತ್ರಿಪುಟಿರೂಪಾಗಿ ತಾನೆಂಬಬ್ಧಿಯೊಳ್ಪುಟ್ಟಿದ ಪರಿಮಿತರತ್ನಾಗಮಾಳಿ ಮಾಯಾಪ್ರಭಾಧಿಪನೆ ರಂಭಾಚಿತ್ರ ಗಗನ ರೂಪಾದನೆಂದನ್ನಾತ ಚಿದ್ವಿಂಶಿಕೆಯೊಳು (ವೀಶೈಪು. ೫-೮ ಸೂಚನೆ). [ ? ]

**ತ್ರಿಪುಟೀಜ್ಞಾನ** (ನಾ). = ತ್ರಿಪುಟಿಜ್ಞಾನ : ಈ ಸಂವೇದನದಲ್ಲಿ ಗ್ರಾಹ್ಯವೆಂಬ ಘಟಾದಿ ವಸ್ತುವೂ ಗ್ರಾಹಕನೆಂಬ ಜೀವಾತ್ಮವಸ್ತುವೂ ಗ್ರಹಣವೆಂಬ ಸಂವೇದನವು – ಈ ಮೂರು ತೋರುವುವು. ಈ ಸಂವೇದನವನ್ನು ತ್ರಿಪುಟೀಜ್ಞಾನವೆಂದು ಹೇಳುವರು (ಹಿಂದಸಾ. ೧೭೭). [ ಸಂ. ]

**ತ್ರಿಪುಟೀಸ್ಥಾನ** (ನಾ). ಎರಡು ಹುಬ್ಬುಗಳ ನಡುವಿನ ಪ್ರದೇಶ ; ಭ್ರೂಮಧ್ಯಸ್ಥಾನ. [ ಸಂ. ]

**ತ್ರಿಪುಟೆ** (ನಾ). ಒಂದು ಬಗೆಯ ಔಷಧಿ ಸಸ್ಯ ; ತಿಗಡೆ : ಸರ್ವಾನುಭೂತೀ, ಸರಳಾ, ತ್ರಿಪುಟಾ, ತ್ರಿವೃತಾ . . . ರೋಚನೀ – ಈ ೭ ಕೆಚ್ಚನೇ ತಿಗಡೆಯ ಹೆಸರುಗಳು. ಬಿಳೀತಿಗಡೆ, ಭೇದಿಯಾಗುವ ಲಾಲ್‌ತಿಗಡೆ (ಸಿದ್ಧಾಂತಿ. ೧೨೦). [ ಸಂ. ತ್ರಿಪುಟಾ ]

**ತ್ರಿಪುಡ**, ತಿವುಡ್ಗೆ, ತ್ರಿವಿಡಿ, ತ್ರಿವುಡೆ$_1$ (ನಾ). ೧. [ಸಂಗೀತ] ತಾಳ ಭೇದಗಳಲ್ಲಿ ಒಂದು ; ತ್ರಿಪುಟತಾಳ : ಧ್ರುವತಾಳ ಮಟ್ಟತಾಳಂ ತ್ರಿಪುಡಂ ರೂಪಕ (ಛಂದಸ್ಸಾ. ೫-೧). ತಿವುಡ್ಗೆ : ೧. "ತಿವುಡೆ–ತ್ರಿಪುಟ = ಒಂದು ತಾಳ" (ತದ್ಭಕೋ. ೧೭) ; ಲೀಲಾವತೀ ಪ್ರಬಂಧದಲ್ಲಿ "ತಿವುಡ" ಎಂದು ಕರೆದುದು ತ್ರಿಪದಿಗೆ ಹೊಂದುವ ತ್ರಿಪುಟತಾಳದ ಗತಿಯನ್ನು ಲಕ್ಷಿಸಿಯ್ಯೆ ಆಗಿರಬೇಕು (ಸಂಶೋಧ. ೧೪೬). 'ತಿವದಿ' ಪರಾ. ೨. [ನಾಟ್ಯ] ನೃತ್ತ ಗತಿಗಳಲ್ಲಿ ಒಂದು ಬಗೆ : ಚಿಂದು ಜಕ್ಕಡಿ ಕೋಲಚಾರಿಗಳ್ ಮೊನೆಗಾಲ್ ಕಳಾಸ ಕೈಮಱಿ ತಿವುಡೆ [ಪಾಠಾಂ. ತಿವಟ] ಮಡುಹುಮುಳ್ಳನಿತು ಭೇದಂಗಳಿಂ ನರ್ತಿಸುವ ನೃತ್ಯದಬಲಾಜನಂ ಕಣ್ಗೆಸೆದುದು (ಚಬಪು. ೨-೨೯). ತ್ರಿವಿಡಿ : ೧. ತ್ರಿವಿಡಿ ಚಚ್ಚರಿ ಝಂಪೆಯ ಟಿಯೇಕತಾಳಮಂ ವಿವರವಱಿತುಂ ತಾಳಧಾರಿಗಳು ನುಡಿಸೆ (ಪ್ರಭುಪು. ೨-೬೭). ತ್ರಿವುಡೆ$_1$ : ೧. ನಮ್ಮ ದೇಶದ ಸಂಗೀತದಲ್ಲಿ . . . ಝಂಪೆ, ಧ್ರುಪದ, ತ್ರಿವುಡೆ . . . ಎಂಬ ಹಲವು ತಾಳಪದ್ಧತಿಗಳಿರುವುವು (ಬಾಲಪ್ರ. II, ೧೦೧೦). [ <ಸಂ. ತ್ರಿಪುಟ ]

**ತ್ರಿಪುಡೆ** 'ತಿವದಿ' ನೋ.

**ತ್ರಿಪುರ** (ನಾ). ತಾರಕಾಸುರನ ಮಕ್ಕಳಾದ ಮೂರುಜನ ದೈತ್ಯರು ಕಟ್ಟಿಕೊಂಡ ಮೂರುಂ ಪಟ್ಟಣಗಳಂ; P ಆಕಾಶದಲ್ಲಿ ವಿದ್ಯುನ್ಮಾಲಿಯ ಕಬ್ಬಿಣದ ಪಟ್ಟಣ, ಅದಕ್ಕೂ ಮೇಲೆ ಅಂತರಿಕ್ಷದಲ್ಲಿ ಕಮಲಾಕ್ಷನ ಬೆಳ್ಳಿಪಟ್ಟಣ, ಅದಕ್ಕೂ ಮೇಲೆ ತಾರಕಾಕ್ಷನ ಚಿನ್ನದಪಟ್ಟಣ: "ತ್ರಿಪುರ ಮನೆ ದೈತ್ಯಲೋಕಂ" (ಮಂಗರಾ ೧೦-೩೨) ; ತ್ರಿಪುರಂಬೊತ್ತಿಸಿದಂತೆ ಪೊತ್ತಿ ಪೊಗೆದತ್ತೆತ್ತಂ ವಿಯನ್ಮಂಡಳಂ (ಪಂಪಭಾ. ೧೧-೧೭) ; ತ್ರಿಪುರಂ ಬೆಂದುದು ರುದ್ರನಿಂ ಕೃತಯುಗಪ್ರಾರಂಭದೊಳ್ (ಗದಾಯು. ೧-೨೫); ಕರುಣದಿ ಮೊಲೆಯನುಣಿಸಿದ ಬಾಲಕಿಯ ಪಿಡಿದಸುವನಪಹರಿಸಿ . . . ತ್ರಿಪುರದ[ಪಾಠಾಂ. ರ] ಲಲನೆಯರ ವ್ರತಗೆಡಿಸಿ ಕೂಡಿದ ಕೆಲಸವುತ್ತಮವಾಯ್ತು (ಹರಿಸಾ. ೩೦). ೨. ತಾರಕಾಸುರನ ಮಕ್ಕಳಾದ ತಾರಕಾಕ್ಷ, ಕಮಲಾಕ್ಷ ಮಂತ್ತು ವಿದ್ಯುನ್ಮಾಲಿಯೆಂಬ ಮೂರು ಜನ ದೈತ್ಯರು. 'ತ್ರಿಪುರಾರಿ' ಪರಾ. [ ತ್ರಿ + ಪುರ$_2$ ]

**ತ್ರಿಪುರಜಯಿ** (ನಾ). = ತ್ರಿಪುರಾಂತಕ : "ತ್ರಿಣೇತ್ರಂ ತ್ರಿಪುರಜಯಿ [ಗಿರೀಶಂ] . . . ವೃಷಾಂಕಂ" (ವಸ್ತುಕೋ. ೩-೧೩). [ ಸಂ. ತ್ರಿಪುರಜಯಿನ್ ]

**ತ್ರಿಪುರಭಂಜನ** (ನಾ). = ತ್ರಿಪುರಗಳನ್ನು ನಾಶಪಡಿಸಿದವನು; ಶಿವ : ಕೀನಾಶವಿನಾಶಕರಂ ತ್ರಿಪುರಭಂಜನಂ . . . ಶೂಲಧರಂ ಕೈಲಾಸಕ್ಕೆ ಬಿಜಯಂಗೆಯ್ದಂ (ಗಿರಿಕ. ೧೦-೮ ವ). [ ತ್ರಿಪುರ + ಭಂಜನ ]

**ತ್ರಿಪುರವಾಸ** (ನಾ). [ಸಂಗೀತ] ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು : ಜಾತಿವಾಸ ಸಜಾತಿವಾಸ ಸುಕುಮಾರಿಕಾವಾಸ ಪಕ್ಷಾವಾಸ ಭುವನಾವಾಸ ಶ್ವೇತವಾಸ ಆದಿತ್ಯವಾಸ ರುದ್ರವಾಸ ಹರಿವಾಸ ದಿಗ್ವಾಸ ನಿಧಿವಾಸ ಋಷಿವಾಸ ಕುಮಾರವಾಸ ಅಘೋರವಾಸ ಬ್ರಹ್ಮವಾಸ ತ್ರಿಪುರವಾಸ ಶಿವಶಕ್ತಿವಾಸ ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವಱಿತು (ವಿವೇಕ. ೨೩೭). [ ತ್ರಿಪುರ + ವಾಸ$_1$ ]

**ತ್ರಿಪುರಹರ** (ನಾ). ತ್ರಿಪುರಗಳನ್ನು ನಾಶಮಾಡಿದವನು ; ಶಿವ ; ವೀರಮನ್ಮಥ ತ್ರಿಪುರಹರ ಜುಜ್ಝಾರಭಟ ಜಗಜಟ್ಟಿಗಿದಿರೆ ವಿಕಾರಿಯೇ ಫಡ ಭೀಮನೆನುತ್ತೈದಿತು ಭಟಸ್ತೋಮ (ಕುವ್ಯಾಕ. ೧೯-೮). [ ಸಂ. ]

**ತ್ರಿಪುರಾಂತಕ** (ನಾ). ತ್ರಿಪುರಗಳನ್ನು ನಾಶಮಾಡಿದವನು ; ಶಿವ : ತ್ರಿಪುರಾಂತಕನಡಿಯಂ ಕೀರ್ತಿಪ ನೆವದಿಂದಾನಱಿದವೊಲುಸಿರ್ದೆಂ (ಉದ್ಭಟ. ೧-೩೦). [ ತ್ರಿಪುರ + ಅಂತಕ ]

**ತ್ರಿಪುರಾರಿ** (ನಾ). ತಾರಕಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿಯೆಂಬ ದೈತ್ಯರ ಶತ್ರು ; ಶಿವ: ಆ ಮಹಾರ್ಣವಂ . . . ತ್ರಿಪುರಾರಿಯಂತೆ ವಿಷಧರಗಧಾರಿಯುಂ . . . ಎನಿಸಿದುದು (ಜಗವಿ. ೧-೪೪ ವ) ; ಆಗ ತ್ರಿಪುರಾರಿಯು ಮುಖ್ಯಗಣಗಳನ್ನು ಆಕೆಯ ಸಂಗಡ ಕೊಟ್ಟು . . . ತಂದೆಯ ಮನೆಗೆ ಕಳಿಸಿದನು (ತುಳಸೀ. ೧೮). [ ತ್ರಿಪುರ + ಅರಿ$_6$ ]

**ತ್ರಿಪುರುಷ**(ನಾ). ೧. ಮೂರು ತಲೆಮಾರಿನ ಜನ. 'ತ್ರಿಪುರುಷಭೋಗ' ಪರಾ. ೨. ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ: ಈ ಪುರುಷನಲ್ಲಾ ತ್ರಿಪುರುಷ ಗುಣತ್ರಯದ ಪುರುಷ (ಬಸವು. ೫-೬೨). ೩. ಮೂರು ಪುರುಷಪ್ರಮಾಣವುಳ್ಳುದು ; ಮೂರು ಆಳಂಗಳ ಆಳತೆ: ಬಡಗಣ ಮೇರೆ ಈಶಾನ್ಯದ ನಿಱಿಸುಂಗಲ್ಲಿಂಗೆ ತ್ರಿಪುರುಷದ ನಿಲವು (ಸೌಇಇ. XX, ೭೪-೩೭ ; 1113).
[ ತ್ರಿ + ಪುರುಷ ]

**ತ್ರಿಪುರುಷಭೋಗ** (ನಾ). ಮೂರು ತಲೆಮಾರಿನ ಜನಗಳು ಅನುಭವಿಸುವ ಭೋಗ : ತ್ರಿಭೋಗ ಎಂಬುದು ಧರ್ಮಶಾಸ್ತ್ರಗಳಲ್ಲಿ ಬರುವ ಪಾರಿಭಾಷಿಕ ಪದ.'ಮೂರು ತಲೆಮಾರುಗಳು ಅನುಭವಿಸಿದ್ದು' ಎಂದು ಅದಕ್ಕೆ ಅರ್ಥ. 'ತ್ರಿಪುರುಷಭೋಗ' ಎಂದರೂ ಇದೇ ಅರ್ಥ (ಕಶಾಅ. ೩೯ ಅಡಿಟಿ). [ ತ್ರಿಪುರುಷ + ಭೋಗ$_2$ ]

**ತ್ರಿಪ್ರದಕ್ಷಿಣೆ** (ನಾ). ಮೂರು ಸಲ ಮಾಡುವ ಪ್ರದಕ್ಷಿಣೆ ; ಮೂರು ಸಲ ಬಲವರುವಿಕೆ : ಭೂಭುಜ ತ್ರಿಪ್ರದಕ್ಷ[ಕ್ಷಿ]ಣೆಗೈದು ಸಾಷ್ಟಾಂಗ ನೀಡಲು (ಬಿಜ್ಜಪು. ೭-೩೫). [ ತ್ರಿ + ಪ್ರದಕ್ಷಿಣೆ ]

**ತ್ರಿಪ್ರಾಭೃತ** (ನಾ). ೧. ಭೂಮಿ, ಧನ ಮತ್ತು ವಸ್ತ್ರಗಳೆಂಬ ಮೂರು ಉಡುಂಗೊರೆಗಳು ೨. [ಜೈನ]ಪ್ರಶಸ್ತನೋಆಗಮ ಭಾವ ಪ್ರಾಭೃತ, ಅಪ್ರಶಸ್ತನೋಆಗಮಭಾವ ಪ್ರಾಭೃತ ಮತ್ತು ಗ್ರಾಂಥಿಕ ಪ್ರಾಭೃತ ಎಂಬ ಮೂರು ಪ್ರಾಭೃತಗಳು : ಅತಿಶಯಾತಪದಿಂ ಪಡೆದೊಡೆ ಚತುರಂಗಳು ಚಾರಣರ್ಧಿಯುಂ ಪದೆದರ್ಹತ್ಪತಿ ಮೆಚ್ಚುತ್ತಂ ತ್ರಿಪ್ರಾಭೃತಮನೆನಲ್ ಕೊಂಡಕುಂದ ಮುನಿಪತಿ ಸಂದಂ (ಪುಷ್ಪಪು. ೧-೧೭). [ ತ್ರಿ + ಪ್ರಾಭೃತ ]

**ತ್ರಿಪ್ರಾಸ** (ನಾ). [ಛಂದ] ಪ್ರಾಸದಲ್ಲಿ ಒಂದು ಬಗೆ ; ಪದ್ಯದ ಪ್ರತಿಸಾಲಿನ ಮೊದಲನೆಯ ಸ್ವರಕ್ಕೂ ನಾಲ್ಕನೆಯ ಸ್ವರಕ್ಕೂ ನಡುವೆ ಮೂರು ವ್ಯಂಜನಗಳು ಎಲ್ಲ ಸಾಲುಗಳಲ್ಲೂ ಬರುವುದು: ಕಾವ್ಯರಚನೆ ಘಟ(ಗುಟಿ)ತಮ(ಮೆ)[ನಿ]ಪ್ಪಾ ತ್ರಿಪ್ರಾಸಂ [ಸಲೆಯಂತಾದಿ ಪ್ರಾಸಂ] ಬೇಱೆ ನಾಲ್ಕು ತೆಱನಾಗಿರ್ಕುಂ (ಕವಿರಾ. ೩-೨೩೨). [ ಸಂ. ]

**ತ್ರಿಫಲ** (ನಾ). ನೆಲ್ಲಿ, ತಾರೆ ಮತ್ತು ಅಳಲೆಯೆಂಬ ಮೂರು ಫಲಗಳು : ಲವಂಗ, ತ್ರಿಫಲ, ತುಳಸಿ . . . ಇವುಗಳನ್ನು ನಾಲ್ಕು ತಾಲ್ಕು ತೂಕ ಚೂರ್ಣವಂ ಮಾಡಿ (ಸಕವೈ. ೬೩). [ ಸಂ. ತ್ರಿಫಲಾ ]

**ತ್ರಿಫಲೆ, ತ್ರಿಫಳೆ** (ನಾ).=ತ್ರಿಫಲ : "ಪ್ರವರ – ತ್ರಿಫಲೆ, ಕುಸ್ತುಂಬರಿ, ಲಾಮಂಚ [ಲಾಮಚ]" (ಓಷಧಿ. ೯೪) ; ತ್ರಿಫಲಾ = ಅಣಿಲೆ, ನೆಲ್ಲಿ, ತಾಱೆ (ವಿವೈವಿ. ೫೯) ; ಒಂದೆಲಗನ ಸೊಪ್ಪು . . . ತ್ರಿಫಲೆ, ಅತಿಬಜೆ . . . ಇವುಗಳನ್ನು ಸಮಾಂಶವಾಗಿ ಆನೆಯ ಮೂತ್ರದಲ್ಲಿ ಅರೆದು (ವೈದ್ಯಸಾ. II, ೫೦.). **ತ್ರಿಫಳೆ** : "ಹರೀತಕೀ, ಅಭಯಾ, ಪಥ್ಯಾ –ಈ ೩ ಅಣಲೆ . . . ನೆಲ್ಲಿ . . . ತಾಱೆ. ಈ ಮೂಱುಂ ಕೂಡಿದೊಡೆ ತ್ರಿಫಳಾಯೆಂಬುದು" (ಹಲಾಯು. ೧೦೧-೪೬೪). [ ಸಂ. ತ್ರಿಫಲಾ ]

**ತ್ರಿಫಳೆ** 'ತ್ರಿಫಲೆ' ನೋ.

**ತ್ರಿಬುವನಬುಜಗ** (ನಾ). ಒಬ್ಬಾತನ ಹೆಸರು : ಬೋಇಚಂ ಬಿಟ್ಟ ಸ್ಥಿತಿಯೆನ್ತೆನ್ದಡೆ ಕಿಳ್ಳಯ್ಯವುವರೊರುಮಿಟ್ಟು ಕೊಟ್ಟ ತ್ರಿಬುವನಬುಜಗಂನಕ್ಕಳ್ಗಗಱ್ಗ ನೆಲನಚು × × × (ಎಕ. X, ಕೋಲಾರ. ೨೩-೫; ಸು. 900 ?).
[ <ತ್ರಿಭುವನ + ಬುಜಗ$_0$ ]

**ತ್ರಿಭಂಗ** (ನಾ). [ನಾಟ್ಯ] ನಿಲ್ಲುವ ಒಂದು ಭಂಗಿ ; ಶರೀರವನ್ನು ಮೂರು ಕಡೆಗಳಲ್ಲಿ (ಕತ್ತು, ಕಟಿ ಮತ್ತು ಮೊಣಕಾಲು) ಬಾಗಿಸಿರುವ ರೀತಿ,–ಭಂಗಿ : ಮೂಱಿಡೆ ಬಳ್ಕಿದ ಶಕ್ರಚಾಪಲೇಖೆಯ ತೆಱದಿಂ ತ್ರಿಭಂಗದೊಳೇನೆಸೆದಿರ್ದಳೊ ಕಾಂತೆ ರಂಗದೊಳ್ (ಮಲ್ಲಿಪು. ೮-೪೨) ; ಮೇಘಶ್ಯಾಮಳಾಂಗಂ ತ್ರಿಭಂಗದಿನಿಂಬಾಗಿರೆ . . . ತಾನಾಗಳಾಡಿದ ಳೆಂಟುಂ ನಳತೋಳ್ಗಳಂ ಪಸರಿಸುತ್ತುಂ ಕನ್ನೆ ರೋದೋಂತದೊಳ್ (ಜಗವಿ. ೩-೧೬) ; ಮುಖ್ಯವಾದ ಕೆಲವು ಭಂಗಿಗಳು – ಇವು ನಾಲ್ಕು ವಿಧವಾಗಿವೆ . . . ತ್ರಿಭಂಗ – ಮೂರು ಕಡೆ ಬಾಗುವಿಕೆ (ಅಭಾನ್ಯ. ೩೨) ; ತ್ರಿಭಂಗದಲ್ಲಿರುವ ಈ ವಿಗ್ರಹಕ್ಕೆ ಪ್ರಭಾವಳಿ . . . ಕಾಲುಬೆರಳಿನ ಉಂಗುರಗಳು ಇವೆ (ಹೊಯ್ಸವಾ. ೩೪). [ ತ್ರಿ + ಭಂಗ ]

**ತ್ರಿಭಂಗಭಂಗಿ** (ನಾ).=ತ್ರಿಭಂಗ : ದಕ್ಷಿಣದಲ್ಲಿನ ತ್ರಿಭಂಗಭಂಗಿಯಲ್ಲಿನ ದೇವಿಯರ ಪ್ರತಿಮೆಗಳು . . . ನೋಟಗಾರನ "ನೇತ್ರಕೌಮುದಿ"ಯಾಗಿ ಪರಿಣಮಿಸಿವೆ (ಭಾರದ. ೫೧೯). [ ತ್ರಿಭಂಗ + ಭಂಗಿ$_3$ ]

**ತ್ರಿಭಂಗಿ$_1$** (ನಾ). "ಸೇದುವ, ಕುಡಿಯುವ, ತಿನ್ನುವ ಮಾದಕದ್ರವ್ಯಗಳು" (ಚನ್ನವ. ಕ. ಕೋಶ) : ಜಂಗಮಕ್ಕೆ ತಾಂಬೂಲವ ಕೊಡದೆ ತಾ ವೀಳೆಯವ ಮಾಡಿದಡೆ ತ್ರಿಭಂಗಿಯ ಕೊಂಡ ಸಮಾನ (ಚನ್ನವ. ಕ. ೧೨೩-೨೮೧) ; ತ್ರಿಭಂಗಿಯ ತಿಂದು ಅಂದಗೆಡುವನಿಗೇಕೆ ಲಿಂಗದ ಸುದ್ದಿ (ಮೋಳಿಮಾ. ೧೯-೭೬). [ ತ್ರಿ + ಭಂಗಿ$_1$ ]

**ತ್ರಿಭಂಗಿ$_2$** (ನಾ). ೧. ಮೂರು ಬಾಗಂಗಳನ್ನು ಉಳ್ಳುದು. ೨. ಮಡದಿ, ಮಕ್ಕಳು ಮತ್ತು ಹಣ ಎಂಬ ಮೂರು ವಸ್ತುಗಳ ಮೇಲಿನ ಮೋಹ ; ಈಷಣತ್ರಯ : ಇದರಂದವನಱಿಯದೆ ತ್ರಿಭಂಗಿಯಲ್ಲಿ ಸಿಕ್ಕಿಬೆಂದವರಿಗೇಕೆ ನಿಃಕಳಂಕಮಲ್ಲಿಕಾರ್ಜುನಾ (ಮೋಳಿಮಾ. ೭೮-೩೦೬). ೩. = ತ್ರಿಭಂಗ : "ಪಾದಂ ಕಟಿಯು ವೃತ್ತಂ ತ್ರಿಭಂಗಿ ಬಾಗೆನಲು ನಿಲುಕಡೆಯುಕ್ಕು" (ಮಂಗರಾ. ೨೫-೯) ; ಸರಸಲತಾತ್ರಿಭಂಗಿಯನದಿರ್ಪ ನಿಜಾಂಗಲತಾತ್ರಿಭಂಗಿ ಚಾಮರರುಚಿಯಂ ಕಟಾಕ್ಷರುಚಿಯೊಳೆಸೆ ಚಾಮರವಿಕ್ಕಿದರ್ ಪಯೋಧರವತಿಯರ್ (ಜಗವಿ. ೧೧-೬೩) ; ಕನ್ಯಾಜನ ಮೊಟ್ಟುದುದರಲಸರಂ ಚಿತ್ರಿಸಿದ ತ್ರಿಭಂಗಿಯ ಚಿತ್ರದ ತೆಱನಾಗಿ (ಜಯುಕಾ. ೧೧-೫೫) ; ಮತ್ತಮೊರ್ವಳ್ ವೃತ್ತಸ್ತನೆ ಚಿತ್ತಜನ ಮತ್ತಕಾಶಿನಿಯಂತೆ ಮುತ್ತಿನ ಮತ್ತವಾರಣಮಂ ತ್ರಿಭಂಗಿಯಿಂ ನೆಮ್ಮಿ ನಿಂದು (ರಾಜಶೇ. ೧೧-೮೬ ವ) ; ನಿಂತ ನಿಲುವೆಲ್ಲವೂ ತ್ರಿಭಂಗಿಯೇ (ಮುಕ್ತಿ. ೫೩).
[ ತ್ರಿ + ಭಂಗಿ$_3$ ]

**ತ್ರಿಭಂಗಿಭಣಿತೆ** (ನಾ). ಶರೀರವನ್ನು ಮೂರು ಕಡೆಗಳಲ್ಲಿ ಬಾಗಿಸಿರುವ ರೀತಿ : ಭರದಿಂ ಸಾಷ್ಟಾಂಗವೆಱಗಿ ಬಟಿಯುಮಭೀಷ್ಟಸ್ತುತಿಗೆಯ್ವಂ ತ್ರಿಭಂಗಿಭಣಿತೆಯಿನಿಂದ್ರಂ (ಅನಂಪು. ೫-೮೬). [ ತ್ರಿಭಂಗಿ + ಭಣಿತೆ ]

**ತ್ರಿಭಂಡಿ** (ನಾ). ಒಂದು ಮರದ ಹೆಸರು ; ಕೆಂಪು ತಿಗಡೆಮರ.
[ ಸಂ. ತ್ರಿಭಂಡೀ ]

**ತ್ರಿಭಿನ್ನ** (ನಾ). [ಸಂಗೀತ] ಹದಿನೈದು ಬಗೆಯ ದೇಶೀ ಗಮಕಗಳಲ್ಲಿ ಒಂದು : ಕಂಪಿತ ಸ್ಫುರಿತ ಲೀನ ತ್ರಿಭಿನ್ನ ಸಪ್ತದ ಆಂದೋಳಿತ ಆಹತ ವೆಂಬೇಳು ದೇಶೀಗಮಕಂಗಳೆಂತಲುಂ ತತ್ತಲ್ಲಕ್ಷಣಂಗಳಂ ತಿಳಿದು (ವಿವೇಕ. ೨೩೨) ; ತ್ರಿಭಿನ್ನ – ವೀಣೆಯ ಒಂದು ಸ್ವರಸ್ಥಾನದಲ್ಲಿ ಸಾರಣೆ, ಪಂಚಮ ಮತ್ತು ಮಂದ್ರ ಅನುಮಂದ್ರ ತಂತಿಗಳ ಮೇಲೂ . . . ಮೀಟುವುದು (ಸಂಗೀಚಂ. ೨೬). [ ಸಂ. ]

**ತ್ರಿಭುಜ** (ನಾ). [ಗಣಿತ] ಮೂರು ಸರಳರೇಖೆಗಳಿಂದ ಕೂಡಿದ ಮೂರು ಕೋಣಗಳುಳ್ಳ ಒಂದು ಆಕೃತಿ : ಭಿನ್ನರಾಶಿಗಳನ್ನು ೩/೪, ೧೩/೫, ೨/೮ ಎಂದು ಬರೆದರೆ, ಅಂಶವು (Numerator) ತ್ರಿಭುಜದ ಕರ್ಣವಾಗಿಯೂ ಛೇದವು (Denominator) ಒಂದು ಬಾಹುವಾಗಿಯೂ ಆಗುವುದು (ಗಣಿಚ. ೨೩ ಅಡಿಟ) ; ಮೂರು ಸರಳರೇಖೆಗಳಿಂದ ಕೂಡಿದ ಕ್ಷೇತ್ರಕ್ಕೆ ತ್ರಿಭುಜವೆಂದೂ ಮುಕ್ಕೋಣವೆಂದೂ ಹೆಸರು (ಭೂಮಿಅ. ೯).
[ ತ್ರಿ + ಭುಜ ]

**ತ್ರಿಭುವನ** (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳಗಳೆಂಬ ಮೂರು ಲೋಕಗಳು : ತ್ರಿಭುವನಭೂಷಣೋಪಮೆಗೆ ಸಂಗಮದೊಳ್ ಪರಭಾಗಮಾ ಸ್ವಯಂಪ್ರಭೆಗೆ (ಶಾಂತಿಪು. ೫-೨೮) ; ತ್ರಿಭುವನಮಂಗಲ ತೋರಣನಿಭಮಂ ಪ್ರವಚನಮನೆಯ್ದಿ (ಚಂದ್ರಪು. ೧-೧೫) ; ಈ ಪುರುಷನಲ್ಲಾ ತ್ರಿಭುವನಸ್ಥಾಪನಾಚಾರ್ಯೈಕಪುರುಷನು ಈ ಪುರುಷನ್ನೆ ತಂದನಿಂದೆಮ್ಮಂ ಸಲಹಲೆಂದು (ಬಸಪು. ೫-೬೨) ; ರಣದಲಿ ತ್ರಿಭುವನವು ರಂಜಿಸಿತು ಸವೆದುದು ಸಕಲಸನ್ನಾಹ (ಕುವ್ಯಾಭೀ. ೫ ಸೂಚನೆ) ; ನಲಿಯುಲಾ ತ್ರಿಭುವನಂ ಭರತನೊರೆದನು ವಚನವೇದಮಂ (ಶ್ರೀರಾಮಾ. ೧೬೯-೪೭೨).
ತ್ರಿಭುವನಮಲ್ಲ = ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾದ ಮಲ್ಲ ; ಪಶ್ಚಿಮ ಚಾಲುಕ್ಯರಲ್ಲಿ ಆರನೆಯ ವಿಕ್ರಮಾದಿತ್ಯನ ಬಿರುದು : ಆತನ ಮಗಂ ತ್ರಿಭುವನಮಲ್ಲನೆನಿಸಿದ ವಿಕ್ರಮಾದಿತ್ಯದೇವಂ (ಸೌಇಇ. XX, ೧೯-೨೩; 1015). ತ್ರಿಭುವನಮಲ್ಲದೇವ=ತ್ರಿಭುವನಮಲ್ಲ : ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ ತ್ರಿಭುವನಮಲ್ಲ ದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾ ಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ (ಸೌಇಇ. XX, ೭೫-೪ ; 1117).
[ ತ್ರಿ + ಭುವನ ]

**ತ್ರಿಭುವನಕರ್ತಾರ** (ನಾ). ಒಬ್ಬಾತನ ಹೆಸರು : ಶ್ರೀದಿಲಿಪಯ್ಯಂ ಪ್ರಿಥಿವಿ ರಾಜ್ಯಂಗೆಯೆ ತ್ರಿಭುವನಕರ್ತ್ತಾರ ಬಟಾರರ್ತ್ತಪರಾಜ್ಯಂಗೆಯ್ಯುತ್ತಿರೆ (ಎಕ. X (8), ಮುಳಬಾ. ೩೦೬-೧ ಸು. 950). [ ತ್ರಿಭುವನ + ಕರ್ತಾರ]

**ತ್ರಿಭುವನಗುರು** (ನಾ). ಮೂರು ಲೋಕಗಳಿಗೂ ಗುರುವಾದವನು : ತ್ರಿಭುವನಗುರು ಪರಿನಿಷ್ಕ್ರಮಣಕಲ್ಯಾಣಶಾರದಾಗಮಪ್ರತೀಕ್ಷಣದಿವ್ಯ ಹಂಸರುಂ . . . ಬಂದು (ಆದಿಪು. ೯-೬೦ ವ). [ ತ್ರಿಭುವನ + ಗುರು₂ ]

**ತ್ರಿಭುವನಪತಿ** (ನಾ). ಮೂರು ಲೋಕಗಳಿಗೂ ಒಡೆಯನಾದವನು : ಅಂತು ನಿರ್ವರ್ತಿತತ್ರಿಭುವನಪತಿಭವೋತ್ಸವನಾಗಿ . . . ಸುರಪತಿ ಜಗತ್ಪತಿಗೆಜಗಿ ತತ್ಪಿತೃಗಳುಮಂ ಬೀಳ್ಕೊಂಡು ಕಲ್ಪಾಮರಪುರಸ್ಸರಂ ನಿಜನಿವಾಸಕ್ಕೆ ಪೋದಂ (ಶಾಂತಿಪು. ೧೦-೮೦ ವ); ತ್ರಿಭುವನಪತಿಗೆ ವಿವಾಹದ ವಿಭವಂ ಕರಮೆಸೆಯೆ (ನೇಮಿಪು. ೧೩-೮೦). [ ತ್ರಿಭುವನ + ಪತಿ₂ ]

**ತ್ರಿಭುವನಮೋಹನ** (ನಾ). ಮೂರು ಲೋಕಗಳನ್ನೂ ಮೋಹ ಗೊಳಿಸುವಂತಹುದು : ತ್ರಿಭುವನಮೋಹನ ದೀಪಪ್ರಭೆ ನಿಜಕರ್ಣೋತ್ಪಳಾಯತಕೇಕರದೃಕ್ಪ್ರಭೆ ಪುಟ್ಟಿದಳ್ (ಚಂದ್ರಪು. ೬-೦೨).
[ ತ್ರಿಭುವನ + ಮೋಹನ ]

**ತ್ರಿಭುವನಾಧೀಶ** (ನಾ). ಮೂರು ಲೋಕಗಳ ಒಡೆಯ ; ಶಿವ : ಪನ್ನಗ ಭೂಷಣಂ ತ್ರಿಭುವನಾಧೀಶಂ ತ್ರಿತತ್ವಾತ್ಮಕಂ ನಿರಘಂ . . . ಗೌರೀಶ ನೊಪ್ಪಿರ್ದಂ (ಶಬಶಂ. ೫-೫೮). [ ತ್ರಿಭುವನ + ಅಧೀಶ ]

**ತ್ರಿಭೋಗ** (ನಾ). ರಾಜ, ದೇವತೆ ಹಾಗೂ ಬ್ರಾಹ್ಮಣ –ಈ ಮೂವರು ಒಟ್ಟಿಗೆ ಅನುಭೋಗಿಸುವ ದಾನ : ಹಳ್ಳದಿಂ ಮೂಡಣ ತ್ರಿಭೋಗ ಸುಂಕ ತೇಜ ಸಾಮ್ಯ ದೇವಗ್ಗ್ರ ಸರ್ವ್ವಬಾಧಾಪರಿಹಾರವಾಗಿ ಕೊಟ್ಟರು (ಸೌಇಇ. XX, ೨೩-೨೭ ; 1029). 'ತ್ರಿಪುರುಷಭೋಗ' ಪರಾ.
[ ತ್ರಿ + ಭೋಗ₃ ]

**ತ್ರಿಭೋಗದಾನ** (ನಾ).=ತ್ರಿಭೋಗ: ರಾಜ, ದೇವತೆ ಮತ್ತು ಬ್ರಾಹ್ಮಣರು –ಈ ಮೂವರು ಅನುಭವಿಸುವ ದಾನವೇ 'ತ್ರಿಭೋಗದಾನ', 'ತ್ರಿಭಿರ್ಭುಕ್ತಂ' ಎಂದರೂ ಇದೇ ಅರ್ಥ ಎಂದು ಫ್ಲೀಟ್ ಊಹಿಸಿದ್ದಾರೆ (ಕಶಾಅ. ೩೯ ಅಡಿಟ). [ ತ್ರಿಭೋಗ + ದಾನ ]

**ತ್ರಿಭೋಗಾನ್ವಯಸಿದ್ಧಿ** (ನಾ). = ತ್ರಿಭೋಗಾಭ್ಯಂತರಸಿದ್ಧಿ : ಇವಂ ತ್ರಿಭೋಗಾನ್ವಯಸಿದ್ಧಿಯಿಂದಾಳ್ದನುಭವಿಸುತ್ತಮಿರೆ (ಕಕುಲ. ೧೯-೨೫ ; 1094). [ ತ್ರಿಭೋಗ + ಅನ್ವಯ + ಸಿದ್ಧಿ ]

**ತ್ರಿಭೋಗಾಭ್ಯಂತರಸಿದ್ಧಿ** (ನಾ). ರಾಜ, ದೇವತೆ ಹಾಗೂ ಬ್ರಾಹ್ಮಣರು –ಈ ಮೂವರಿಗೂ ಸಂಯುಕ್ತವಾಗಿ ಕೊಟ್ಟ ದಾನ : ಶ್ರೀಮಧು ಸೂದನದೇವಗ್ಗ್ರಂ ಅಲ್ಲಿಯ ಮಹಾಜನಂ ನಾಲ್ಸೂರ್ವ್ವರ್ಗ್ಗಂ ತಾಳಕಂ ಗಣಿಗೆಯುಂ ಪ್ರತಿಷ್ಠಂ ಮಾಡಿ ತ್ರಿಭೋಗಾಭ್ಯಂತರಸಿದ್ಧಿಯಿಂ ಸರ್ಬ್ಬ ನಮಸ್ಯವಾಗೆ ಕುಡೆ ... ಪಡೆದು (ಕಇಆ. ೮-೩-೨೮೫; 1062); ಚಿಹ್ನಸಹಿತಂ ತ್ರಿಭೋಗಾಭ್ಯಂತರಸಿದ್ಧಿಯಿಂ ಸರ್ಬ್ಬನಮಸ್ಯವಾಗೆ ಕುಡೆ ಪಡೆದು (ಕೊಲ್ಹಾಶಾ. ೩-೧೧ ; 1079) ; ಶ್ರೀಮದ್ಯುವರಾಜಂ ಮಲ್ಲಿಕಾರ್ಜ್ಜುನ ದೇವರು ತರ್ದ್ದವಾಡಿಸಾಸಿರವ ತ್ರಿಭೋಗಾಭ್ಯಂತರಸಿದ್ಧಿಯಿಂದಾಳುತ್ತಮಿರೆ (ಸೌಇಇ. XX, ೭೦-೧೬ ; 1109) ; ತ್ರಿಭೋಗಾಭ್ಯನ್ತರಸಿದ್ಧಿಯಿಂದಾಳುತ್ತ ಮಿರೆ (ಕಇ. II, ೦೩-೦೮ ; 1115). [ತ್ರಿಭೋಗ + ಅಭ್ಯಂತರ + ಸಿದ್ಧಿ]

**ತ್ರಿಮತ** (ನಾ). ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತಗಳೆಂಬ ಮೂರು ಮತಗಳು. [ ತ್ರಿ + ಮತ ]

**ತ್ರಿಮತಸ್ಥ** (ಗು). ೧. ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತಗಳೆಂಬ ಮೂರು ಮತಗಳಿಗೆ ಸೇರಿದ, – ಸಂಬಂಧಪಟ್ಟ : ತ್ರಿಮತಸ್ಥ ಬ್ರಾಹ್ಮಣರು ಇಂದು ಸಭೆ ಸೇರಿದ್ದರು (ರೂಢಿ). (ನಾ). **೨.** ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತಗಳೆಂಬ ಮೂರು ಮತಗಳಲ್ಲಿ ಯಾವುದಾದರೂ ಒಂದು ಮತಕ್ಕೆ ಸೇರಿದವನು. [ ಸಂ. ]

**ತ್ರಿಮದ** (ನಾ). ವಿದ್ಯೆ, ಧನ ಮತ್ತು ಅಭಿಜನವೆಂಬ ಮೂರು ಅಹಂಕಾರಗಳು : ತ್ರಿಮದ ಮದನಾಂಧಕರು ರೋಷಕ್ರಮಿತಹೃದಯರು ಸಾಧುಜನಸಂಗವನು ಸೇರುವರೆಂತು (ನಿಭಾಗ. ೪-೦-೨೪).
[ ತ್ರಿ + ಮದ₁ ]

**ತ್ರಿಮಲ** (ನಾ). ೧. ಹೊನ್ನು, ಹೆಣ್ಣು ಮತ್ತು ಮಣ್ಣುಗಳೆಂಬ ಮೂರು ವಿಧವಾದ ಮಲಗಳು : ಬಿಡುವನು ಹೊನ್ನು ಹೆಣ್ಣು ಮಣ್ಣೆಂಬ ತ್ರಿಮಲದಾಸೆಯ (ಅಜಂಡೀ. ೯೮-೨೦). **೨.** [ವೀಶೈ] ಜೀವನಿಗೆ ಅಂಟಿ ಕೊಳ್ಳುವ ಆಣವ, ಮಾಯಾ ಮತ್ತು ಕಾರ್ಮಿಕಗಳೆಂಬ ಮೂರು ಬಗೆಯ ಮಲಗಳು : ಶ್ರೀಕುವಲಯಾಪ್ತಚೂಡಾರತ್ನ ತದ್ರೂಪ ಲೋಕತ್ರಯಾರಾಧ್ಯ ತ್ರಿಮಲಪ್ರಹರಣ ಸುವಿವೇಕಿ ಶಿವಸಮಯರತ್ನಾಕರ (ಏಕೋಪು. ೧-೧). [ ತ್ರಿ + ಮಲ₂ ]

**ತ್ರಿಮಾತ್ರ** (ನಾ). [ಛಂದ] ಮೂರು ಮಾತ್ರೆಗಳಿಂದ ಕೂಡಿದುದು ; ದೀರ್ಘಕ್ಕಿಂತಲೂ ಸ್ವಲ್ಪ ಕಾಲಾವಕಾಶವನ್ನು ಹೆಚ್ಚಿಗೆ ತೆಗೆದು ಕೊಳ್ಳುವುದು ; ಪ್ಲುತ: ಸ್ವರ ವ್ಯಂಜನದಿನೇಕಮಾತ್ರಮಾದೊಡೆ

ಹ್ರಸ್ವಂ, ದ್ವಿಮಾತ್ರಮಾದೊಡೆ ದೀರ್ಘಂ, ತ್ರಿಮಾತ್ರಮಾದೊಡೆ ಪ್ಲುತಂ (ಶಮದ. ೧೦ ವೃತ್ತಿ). [ಸಂ.]

**ತ್ರಿಮಾತ್ರಕ** (ನಾ). = ತ್ರಿಮಾತ್ರ : ಹ್ರಸ್ವಮದೇಕಮಾತ್ರಕಂ ದೀರ್ಘಮುಭಯಮಾತ್ರಕಂ ತ್ರಿಮಾತ್ರಕಂ ಪ್ಲುತಮಕ್ಕುಂ (ಶಮದ. ೧೦). 'ಏಕಮಾತ್ರಕ' ಪರಾ. [ಸಂ.]

**ತ್ರಿಮಾತ್ರಾಗಣ** (ನಾ). [ಛಂದ] ಮೂರು ಮಾತ್ರೆಗಳಿಂದ ಕೂಡಿದ ಗಣ: 'ದೇಪನಾವಂ' ಎಂಬಲ್ಲಿ "ನಾ" ನಿನ ಎರಡು ಮಾತ್ರೆಗಳಲ್ಲಿ ಒಂದನ್ನು ಹಿಂದಕ್ಕೂ ಮತ್ತೊಂದನ್ನು ಮುಂದಕ್ಕೂ ಸೇರಿಸಿ ಒಂದೊಂದು ಚತುರ್ಮಾತ್ರಾಗಣವೂ ತ್ರಿಮಾತ್ರಾಗಣವೂ ಆಯಿತೆಂದು ತಿಳಿಯಬಾರದು (ಕೈಪಿಡಿ. ೭೦). [ಸಂ.]

**ತ್ರಿಮಾರ್ಗಗೀತ** (ನಾ). [ಜೈನ] ರೂಪಸ್ತವ, ಗುಣಸ್ತವ, ಮತ್ತು ವಸ್ತುಸ್ತವವೆಂಬ ಮೂರು ಬಗೆಯ ಗೀತೆ: ಓರೊರ್ಮೆ ವಶಿತ್ವಾತಿಶಯದಿಂ ವೀತರಾಗರೂಪಗುಣವಸ್ತುವರ್ಣನಾನುಬದ್ಧತ್ರಿಮಾರ್ಗಗೀತಂಗಳಂ ತ್ರಿವಿಧಮಾರ್ಗಂಗಳೊಳ್ ಪಾಡಿ (ಚಂದ್ರಪ್ರ. ೯-೫೫ ವ).
[ತ್ರಿ + ಮಾರ್ಗ + ಗೀತ]

**ತ್ರಿಮುಖ** (ನಾ). ೧. ಮೂರು ಮುಖ ಅಥವಾ ವಿಭಾಗಗಳು : ಗಣಿತದ ತ್ರಿಮುಖಗಳಾದ ಅಂಕಗಣಿತ, ಬೀಜಗಣಿತ, ರೇಖಾಗಣಿತ - ಇವುಗಳೆಲ್ಲ ಪ್ರತ್ಯೇಕವಾಗಿ ಬೋಧನೆಯಾಗಬೇಕು (ಶಿಕ್ಷದ. ೧೬೫). ೨. ಒಂದು ಬಗೆಯ ಹಸ್ತಮುದ್ರೆ. [ತ್ರಿ + ಮುಖ]

**ತ್ರಿಮೂಢತಾನಿರಸನ** (ನಾ). [ಜೈನ] ಸಮ್ಯಗ್ದರ್ಶನದ ಒಂದು ಅಂಗ ; ಲೋಕಮೂಢತೆ, ದೇವಮೂಢತೆ ಮತ್ತು ಪಾಖಂಡಿಮೂಢತೆ ಎಂಬ ಮೂರು ಬಗೆಯ ಮೌಢ್ಯವನ್ನು ಬಿಡುವುದು : ಮುನಿಜನ ತನುಮಳವಿಚಿಕಿತ್ಸನವರ್ಜನಮುಂ ತ್ರಿಮೂಢತಾನಿರಸನಮುಂ ಉಪಗೂಹನಮುಂ . . . ಎಂದು ಪೇಳ್ದಿಯೆಂಟು ಗುಣಂಗಳುಂ ಸಮ್ಯಗ್ದರ್ಶನಾವಯವಂಗಳ್ (ಆದಿಪು. ೫-೫೭). [ಸಂ.]

**ತ್ರಿಮೂರ್ತಿ** (ನಾ). ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ : ವಿವರಿಸೆ ಯಥಾ ಶಿವಮಯಂ ವಿಷ್ಣುಮೆನಿಪಾ ನುಡಿಗಳು ತ್ರಿಮೂರ್ತಿಗಳಿವು (ಬಸಪು. ೫೪-೭೯); ಆಧುನಿಕ ತಿಳಿವಳಿಕೆಯ ಪ್ರಕಾರ ವಿಷ್ಣು ತ್ರಿಮೂರ್ತಿಗಳಲ್ಲಿ ಒಬ್ಬನು (ಭಾರದ. ೨೮೩). [ತ್ರಿ + ಮೂರ್ತಿ]

**ತ್ರಿಮೂರ್ತ್ಯಾತ್ಮಕ** (ನಾ). ೧. ಮೂರು ರೂಪಗಳಿಂದ ಕೂಡಿದುದು : ಅಭೇದ್ಯಂ ಜಂಗಮಸ್ಥಲವಲಾ ಜಕಾರಂ ಸಾದರದೆ ಗುರುರೂಪವಾಗಕಾರಂ ಮಹಾಹ್ಲಾದಲಿಂಗಂ ಮಕಾರಂ ಜಂಗಮಂ ಜ್ಞೇಯವೈ ದೇವಿಯಾ ತ್ರಿಮೂರ್ತ್ಯಾತ್ಮಕಂ ಜಂಗಮಂ (ವೀಶೈಪು. ೧-೩-೩೪). ೨. ಮೂರು ರೂಪಗಳಿಂದ ಕೂಡಿದವನು : ಸತ್ಯಂ ಸಾತ್ವಿಕಗುಣಕೆ ಮಹಾತ್ಯಾಗಂ ರಾಜಸಕ್ಕೆ ವಿಕ್ರಮಮಧಿಕೋದ್ದತ್ಯಂ ತಮಕ್ಕೆ ನೆಲೆಯಾಯ್ತೆಂತಂ ನೃಪನಿದೇಂ ತ್ರಿಮೂರ್ತ್ಯಾತ್ಮಕನೋ (ಪುಷ್ಪಪು. ೩-೭). [ಸಂ.]

**ತ್ರಿಮೂರ್ತ್ಯೈಕ್ಯವಾದ** (ನಾ). ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಪರಸ್ಪರ ಭೇದವಿಲ್ಲವೆಂಬ ವಾದ : ತ್ರಿಮೂರ್ತಿಗಳಿಗೆ ಮೂರ್ತಿಭೇದವೇ ವಿನಾ ಸ್ವರೂಪಭೇದವಿಲ್ಲವೆಂಬ ತ್ರಿಮೂರ್ತ್ಯೈಕ್ಯವಾದ (ಹಿಂದಸಾ. ೨-೬೭).
[ತ್ರಿಮೂರ್ತಿ + ಐಕ್ಯ + ವಾದ್ಯ]

**ತ್ರಿಯಂಬಕ** (ನಾ). ೧. ಮೂರು ಕಣ್ಣುಗಳನ್ನು ಉಳ್ಳವನು ; ಶಿವ ; ಮುಕ್ಕಣ್ಣ : "ಕಿಡಿಗಣ್ಣಂ ತ್ರಿಯಂಬಕ [ಪಾಠಾಂ. ತ್ರ್ಯಂಬಕ] ನೆನಿಪ್ಪುದು" (ಜತುನಿ. ೩೦) ; ಬಾಚಿರಾಜನುದಾತ್ತಮಹಿಮನು ಮರ್ತ್ಯನೇ ಸಾಕ್ಷಾತ್ ತ್ರಿಯಂಬಕನು (ಬಸಪು. ೫೪-೮೩) ; ಇಂಬುಗೆಟ್ಟುದು ರೀತಿ ರಣಕೆ ತ್ರಿಯಂಬಕನನಮರಾಧಿಪನ ಕೈಕೊಂಬನೇ ಕೌರವನೆನಲು ಖತಿಗೊಂಡನಾ ಭೀಮ (ಕುಮಾಭೀ. ೧-೫೯). ೨. [ಛಂದ] ದೀರ್ಘಾಕ್ಷರ ; ಗುರು (—). ನಯದಿಂ ಗುರುವೆಂಬುದು ಕೇಳ್ ತ್ರಿಯಂಬಕಂ ಲಘು ಮುರಾಂತಕಂ (ಛಂದೋಂಬು. ೧-೩೬). [ತ್ರಿ + ಅಂಬಕ]

**ತ್ರಿಯಂಬಕಾಸ್ತ್ರ** (ನಾ). ಶಿವನ ಅಸ್ತ್ರ : ಡೊಂಬಿಯೇಕೈ ಪಾರ್ಥ ಬಯಲಾಡಂಬರವ ನಾವರಿಯೆವೇ ತ್ರಿಯಂಬಕಾಸ್ತ್ರದ ತೊಡಹವಲ್ಲಾ ನಿನ್ನ ವಿಕ್ರಮಕೆ (ಕುಮಾಕ. ೨೨-೩೨). [ತ್ರಿಯಂಬಕ + ಅಸ್ತ್ರ]

**ತ್ರಿಯಕ್ಷ** (ನಾ). = ತ್ರಿಯಂಬಕ ೧ : 'ತ್ರಿಯಕ್ಷವಾಹ', 'ತ್ರಿಯಕ್ಷಸಖ' ಪರಾ. [<ಸಂ. ತ್ರ್ಯಕ್ಷ]

**ತ್ರಿಯಕ್ಷರ** (ಗು). ೧. ಮೂರು ಅಕ್ಷರಗಳುಳ್ಳ. (ನಾ). ೨. ಮೂರು ಅಕ್ಷರಗಳನ್ನೊಳಗೊಂಡುದು ; ಓಂಕಾರ ; ಪ್ರಣವಾಕ್ಷರ. ೩. ಚಾಡಿ ಹೇಳುವವನು ; ಪಿಸುಣ : "ದುಷ್ಕೃತಿಪ್ರೇರಕಂ ಚಹಡಂ ತ್ರಿಯಕ್ಷರಂ ಕೊಂಡೆಯಂ" (ಮಂಗರಾ. ೭೨-೨೩). ೪. ವಂಶದ ಚರಿತ್ರೆ ಅಥವಾ ಮೂಲದಲ್ಲಿ ಆಸಕ್ತಿಯುಳ್ಳವನು. [<ಸಂ. ತ್ರ್ಯಕ್ಷರ]

**ತ್ರಿಯಕ್ಷವಾಹ** (ನಾ). ಶಿವನ ವಾಹನ ; ವೃಷಭ ; ಎತ್ತು : "ಉಕ್ಷಂ . . . ತ್ರಿಯಕ್ಷವಾಹಂ ಶಾಕ್ವರಮುದನಡ್ವಂ ಬಲಾಧ್ಯಕ್ಷಮಾ ವೃಷಭಮಾ ಋಷಭಮಾ ಗೋ ಬಾಡಬೇಯಮೆನೆಯೆತ್ತೆನಿಕ್ಕುಂ" (ಮಂಗರಾ ೫೩-೧).
[ತ್ರಿಯಕ್ಷ + ವಾಹ]

**ತ್ರಿಯಕ್ಷಸಖ** (ನಾ). ಶಿವನ ಸಖ ; ಕುಬೇರ : "ರಾಜರಾಜಂ ತ್ರಿಯಕ್ಷಸಖನೈಳಬಿಳನರ್ಥಪಂ . . . ರಾಕ್ಷಸದ್ವಿಷನೆನೆ ಕುಬೇರನೆನಿಸಿಕ್ಕು" (ಮಂಗರಾ. ೧೭-೧೫). [ತ್ರಿಯಕ್ಷ + ಸಖ]

**ತ್ರಿಯಾಮೆ** (ನಾ). ಮೂರು ಜಾವಗಳನ್ನು ಉಳ್ಳದು ; ಇರುಳು ; ರಾತ್ರಿ : "ತಮಿ ಮಾ[ಸತೇಯಿ] ಶರ್ವರಿ ತಮಿಸ್ರೆ ನಿಶೆ ರಜನಿ . . . ಇರುಳ್ ತಾಂ ತ್ರಿಯಾಮೆ ಯಾಮಿನಿಯಕ್ಕುಂ" (ವಸ್ತುಕೋ. ೧೫-೫) ; ತ್ರಿಯಾಮಾತ್ರಿತಯಂಗಳಿಂದಮಾತ್ಮಸಮಾನಶ್ರಾವಕಾಗ್ರಣಿಗಳ್ಗೆ . . . ಕುಡುವ ಸಮುದತ್ತಿಯುಂ (ಆದಿಪು. ೧೫-೧೩ ವ). ; ☞ ಒಂದು ಯಾಮ ಎಂದರೆ ಮೂರು ಗಂಟೆಗಳ ಅವಧಿ. [ಸಂ. ತ್ರಿಯಾಮಾ]

**ತ್ರಿಯಾಯು** 'ತ್ರಿಯಾಯುಷ' ನೋ.

**ತ್ರಿಯಾಯುಷ, ತ್ರಿಯಾಯು** (ನಾ). ಮೂರು ಮಂದಿ ಆಯುಷ್ಯ : ಅನುನಯಪ್ರಿಯದಿಂ ತ್ರಿಯಾಯುಷಮೆನೆ ಯಜುಸ್ಸೂಕ್ತ್ಯರ್ಥಪೊದಗಿತ್ತೆನಗೆ (ಬಸಪು. ೪೩-೭೪). **ತ್ರಿಯಾಯು:** ವರಯತಿಕಶ್ಯಪಾಗಸ್ತ್ಯವಾಸಿಷ್ಠಾದಿ ಪರಮಮುನಿವರರು ಧರಿಸುತ್ತೆ ತ್ರಿಯಾಯುಮಂ ನೆರೆ ಪಡೆದ ಭಸಿತ (ನವಮೋ. ೭-೯); ☞ ಈ ಎರಡು ರೂಪಗಳೂ ವ್ಯಾಕರಣಬದ್ಧವಲ್ಲ.
[< ಸಂ. ತ್ರ್ಯಾಯುಷ]

**ತ್ರಿಯುಗ** (ನಾ). ೧. ಕೃತ, ತ್ರೇತಾ ಮತ್ತು ದ್ವಾಪರವೆಂಬ ಮೂರು ಯುಗಗಳು. ೨. ಈ ಮೂರು ಯುಗಗಳಲ್ಲಿ ಮಾತ್ರ ಅವತರಿಸುವವನು ; ವಿಷ್ಣು : ಜ್ಞಾನಶಕ್ತ್ಯಾದಿ ಷಡ್ಗುಣ ಭರಿತನಾಗಿರ್ಪುದರಿಂದ ತ್ರಿಯುಗನೆಂದು ಹೆಸರು (ಭಾರಕಾಂ. ೪೩). [ತ್ರಿ + ಯುಗ]

**ತ್ರಿರತ್ನ** (ನಾ). [ಬೌದ್ಧ] ಬುದ್ಧ, ಧರ್ಮ, ಸಂಘಗಳೆಂಬ ಮೂರು ಶ್ರೇಷ್ಠತತ್ವಗಳು : ಸ್ತೂಪ, ಧರ್ಮಚಕ್ರ ಮತ್ತು ತ್ರಿರತ್ನ ಚಿಹ್ನೆಗಳು ಇದರಲ್ಲಿ ಮುಖ್ಯವಾದುವು (ಭಾರದ. ೪೯೫) ; ತ್ರಿರತ್ನದಲ್ಲಿ ನಂಬಿಕೆ ಇಟ್ಟು ಅವನ್ನು ಆಚರಿಸಿದರೆ ಇಂಥಾ ತಪ್ಪುಸಿದ್ಧಾಂತಗಳನ್ನು ನಂಬುವ ಅವಶ್ಯಕತೆಯೇ ಇಲ್ಲ (ಪ್ರವಾಇ. I, ೪೨೪).
[ತ್ರಿ + ರತ್ನ]

**ತ್ರಿರತ್ನಿ** (ನಾ). ಮೂರು ಗುಂದ್ದುಮೊಳ ಉದ್ದದ ಅಳತೆ ; ಮುಷ್ಟಿ ಹಿಡಿದ ಮೊಳಕೈಯ ಮೂರರಷ್ಟು ಅಳತೆ : ರತ್ನಪ್ರಭಾಪ್ರಥಮೇಂದ್ರಕದೊಳ್ ತ್ರಿರತ್ನಿತದವಸಾನಪ್ರಸ್ತಾವದೊಳ್ ಸಪ್ತಕೋದಂಡ ತ್ರಿರತ್ನಿ ಷಡಂಗುಲೋತ್ಸೇಧಮುಂ (ತತ್ತ್ವಪ್ರ. ೧೨೨). [ತ್ರಿ + ರತ್ನಿ]

**ತ್ರಿರಾತ್ರ** (ನಾ). ೧. ಮೂರು ರಾತ್ರಿಗಳಿಂದ ಕೂಡಿದುದು ; ಮೂರು ದಿನಗಳ ಅವಧಿ : ನಾನಾವಿಧಮಂತ್ರಾನುಷ್ಠಾನಪ್ರಧಾನನುಪವಾಸದಿಂ ತ್ರಿರಾತ್ರಮನಿರ್ದಂ (ಆದಿಪು. ೧೨-೭೪). ೨. ಮೂರು ರಾತ್ರಿಗಳಲ್ಲಿ ಮಾಡುವ ಒಂದು ವ್ರತ. [ ಸಂ. ]

**ತ್ರಿರೇಖೆ** (ನಾ). ೧ ಮೂರು ರೇಖೆಗಳು : ನಳನಳಿಪ ನವಕಂಬುಕಾಂತಿಗೆ ನೆಲೆಯೆನಿಸಿತಲ್ಲಾ ತ್ರಿರೇ[ಪಾಠಾಂ. ಲೇ]ಖಾಕಲಿತವಿಳಸಿತಕಂಧರಂ (ಬಸಪು. ೪-೨೩). ೨. ಶಂಖ. 'ತ್ರಿಣಿಕೆ' ಪರಾ. [ ಸಂ. ]

**ತ್ರಿಲಿಂಗ** (ನಾ). ೧. [ವ್ಯಾಕ] ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗಗಳೆಂಬ ಮೂರು ಲಿಂಗಗಳು: ಅವ್ಯಯಲಿಂಗಂ ಸರಿ ಸರ್ವವಿಭಕ್ತಿಗಂ ತ್ರಿಲಿಂಗಕ್ಕಂ ತಾಂ ಸರಿ ವಚನತ್ರಿತಯಕ್ಕಂ ಸರಿಯೆನಿಸಿ ವಿಕಾರಮಿಲ್ಲದರ್ಥ ಮನೀಗುಂ (ಶಮದ. ೯೦). ೨. ಮೂರು ಲಿಂಗಗಳಲ್ಲಿಯೂ ಪ್ರಯೋಗ ವಾಗುವ ಶಬ್ದ ; ಗುಣವಾಚಕ. ೩. ಆಂಧ್ರ ಪ್ರದೇಶ; ☞ ಆಂಧ್ರ ಪ್ರದೇಶಗಳಲ್ಲಿ ಶ್ರೀಶೈಲ, ದಕ್ಷಾರಾಮ, ಕಾಳೇಶ್ವರ ಎಂಬ ಮೂರು ಲಿಂಗಗಳು ಇರುವುದರಿಂದ 'ತ್ರಿಲಿಂಗ'ವೆಂದು ಹೆಸರು. ಕೆಲವರು ವಿದ್ವಾಂಸರು 'ತ್ರಿಲಿಂಗ' ಎಂಬುದು 'ತ್ರಿಕಲಿಂಗ' ಎಂಬ ಶಬ್ದದಿಂದ ವ್ಯುತ್ಪನ್ನವಾಗಿದೆಯೆಂದು ಅಭಿಪ್ರಾಯ ಪಡುತ್ತಾರೆ. [ತ್ರಿ + ಲಿಂಗ]

**ತ್ರಿಲೇಖೆ** (ನಾ). = ತ್ರಿರೇಖೆ: ನಳನಳಿಪ ನವಕಂಬುಕಾಂತಿಗೆ ನೆಲೆಯೆನಿಸಿ ತಲ್ಲಾತ್ರಿಲೇ[ಪಾಠಾಂ. ರೇ]ಖಾಕಲಿತವಿಳಸಿತಕಂಧರಂ ಬಲದೇವಸಂದನೆಯು (ಬಸಪು. ೪-೨೩). [ ತ್ರಿ + ಲೇಖೆ ]

**ತ್ರಿಲೋಕ, ತ್ರೈಲೋಕ** (ನಾ). = ತ್ರಿಭುವನ : ತ್ರಿಲೋಕಮಂ ಕಂಡು ಬಸಕೆ ಬರಿಸುವನೆಂತುಂ (ಕವಿರಾ. ೩-೧೨೧); ಸಂಖ್ಯಾವಾಚಿ ಸಮಾಸಕ್ಕೆ—ಏಕಾಂಗ, ದ್ವಿಮುಖ, ತ್ರಿಲೋಕ, ಚತುರ್ವೇದ (ಶಮದ. ೮೨ ಪ್ರಯೋ). 'ತ್ರಿಲೋಕ ಗುರು' 'ತ್ರಿಲೋಕೇಶ್ವರ' ಪರಾ. **ತ್ರೈಲೋಕ** : ಆ ತ್ರೈಲೋಕತಿಳಕನ ಜನ್ಮೋತ್ಸವದೊಳ್ (ಆದಿಪು. ೭-೩೬ ವ); ಅಂತಕನಳವಂ ತ್ರೈಲೋಕದಟಿವಂ ಪರಿಭಾವಿಸಿ ದೇವ ನೀಂ ಬರಂ ಪ್ರಕೃತಿಗಳೆಂಟುಮಂ ಕಿಡಿಸುವುಜ್ಜುಗದೊಳ್ ತಱಿಸಂದರಾರ್ (ಮಲ್ಲಿಪು. ೧೩-೧೬೨). [ ತ್ರಿ + ಲೋಕ ]

**ತ್ರಿಲೋಕಗುರು** (ನಾ). ಮೂರು ಲೋಕಗಳ ಗುರು ; ಪರಮಾತ್ಮ; ಪರಮೇಶ್ವರ : "ಪರಮೇಷ್ಠಿ ಪರಂಜ್ಯೋತಿ ಸ್ವರೂಪನಾಪ್ತಂ ತ್ರಿಲೋಕ ಗುರು ಸರ್ವಜ್ಞಂ . . . ಜಿನೇಶ್ವರಂ ತೀರ್ಥಕರಂ" (ವಸ್ತುಕೋ. ೨-೮) ; ತ್ರಿಲೋಕಗುರುವೆಂಬ ಪೆಂಪಿಂತುಟೇಂ (ಆದಿಪು. ೧೩-೮೭).

[ ತ್ರಿಲೋಕ + ಗುರು2 ]

**ತ್ರಿಲೋಕಚೂಡಾಮಣಿ** (ನಾ). ಮೂರು ಲೋಕಗಳಿಗೂ ಶಿರೋ ಭೂಷಣನಾದವನು ; ಅತಿಶ್ರೇಷ್ಠ ; ಜಿನ : ತ್ರಿಲೋಕಚೂಡಾಮಣಿ ಯುದಯದೊಳ್ . . . ದೇವಲೋಕದೊಳ್ ಶಂಖಪಟಹ ಕಂಠೀರವ ಘಂಟಾರವಂಗಳೊವೆರ್ದಲೆಸೆವುದುಂ (ಶಾಂತಿಪು. ೧೦-೧ ವ).

[ ತ್ರಿಲೊಕ + ಚೂಡಾಮಣಿ ]

**ತ್ರಿಲೋಕಜನನಿ** (ನಾ). ಮೂರು ಲೋಕಗಳಿಗೂ ತಾಯಿ ; ತೀರ್ಥಂಕರನ ತಾಯಿ : ಗುಣಶೀಲವ್ರತದ ಮೇಗಣಾಯಮಾಯತಿಯ ಮೇಗಣಚೆ ವಱಿವಿನ ಮೇಗಣ ರೂಪುಂ ರೂಪಿನ ಮೇಗಣ ಕಾಂತತೆಯಾ ತ್ರಿಲೋಕ ಜನನಿಗೆ ಸಹಜಂ (ಶಾಂತಿಪು. ೯-೧೩೭). [ ಸಂ. ]

**ತ್ರಿಲೋಕಪ್ರಭು** (ನಾ). = ತ್ರಿಲೋಕಾಧಿಪತಿ : ಸರ್ವಲೋಕಪ್ರಿಯನಪ್ಪ ಮೇಘರಥ [ನಾ ಮುನಿಗಾನತನಾದೆನಿಂ ತ್ರಿಲೋಕಪ್ರಭುವಪ್ಪನಾತನೆನೆ] (ಶಾಂತಿಪು. ೯-೯೭). [ ತ್ರಿಲೋಕ + ಪ್ರಭು ]

**ತ್ರಿಲೋಕಾಂಬಿಕೆ** (ನಾ). = ತ್ರಿಲೋಕಜನನಿ : ಜನಚಂದ್ರಂ . . . ತ್ರಿಲೋಕಾಂಬಿಕೆಯ ಗರ್ಭಕ್ಕವತರಿಸಿ ಪ್ರವರ್ಧಮಾನದಶಾಧೀಶನಿರೆ (ಶಾಂತಿಪು. ೯-೨೧೨ ವ). [ ಸಂ. ]

**ತ್ರಿಲೋಕಾಧಿಪತಿ** (ನಾ). ಮೂರು ಲೋಕಗಳ ಒಡೆಯ: ತ್ರಿಲೋಕಾಧಿಪತಿ ನೋಡೆ ನಾಟ್ಯರಸಕೂಪಾರಂ ಮೇರೆದಪ್ಪಿ ಕಪ್ಪಂಗವಿಯಾಗಿ ಕವಿಯೆ (ಶಾಂತಿಪು. ೧೦-೬೨ ವ). [ ತ್ರಿಲೋಕ + ಅಧಿಪತಿ ]

**ತ್ರಿಲೋಕಿ** (ನಾ). ಮೂರು ಲೋಕಗಳು : ಶಶ್ವತ್ತ್ರಿಲೋಕೀ ಪ್ರಣುತನುಮತಿವಿಖ್ಯಾತನುಂ . . . ಪರಮಬ್ರಹ್ಮಸದ್ಮಕ್ಕೆ ಸಂದಂ (ಆದಿಪು. ೧೬-೫೦) ; ಕಾಮತ್ರಿಲೋಕೀಜಯಾಕರಶಾತಾಸಿಲತಾಳಿಯೋ ಬಗೆವೊಡೆಂ ಬಂತಿರ್ದುದಿಂದ್ವಂಕಕರ್ಬುರಕಾಯಂ ಶಬರೀಚಯಂ ನೆರೆದು ಪಾನಕ್ರೀಡೆ ಯೊಳ್ ನಾಡೆಯುಂ (ಚಂದ್ರಪು. ೫-೫೬). [ ಸಂ. ತ್ರಿಲೋಕೀ ]

**ತ್ರಿಲೋಕೇಶ** (ನಾ). = ತ್ರಿಲೋಕಾಧಿಪತಿ: "ಜಿನೇಂದ್ರಃ . . . ತ್ರಿಲೋಕೇಶಃ ತ್ರಿಕಾಲವಿತ್ – ಈ ೮ ಜಿನೇಶ್ವರನ ಪೆಸರ್" (ಹಲಾಯು. ೧೫-೮೬).

[ ತ್ರಿಲೋಕ + ಈಶ ]

**ತ್ರಿಲೋಕೇಶ್ವರ** (ನಾ). = ತ್ರಿಲೋಕಾಧಿಪತಿ : ವಾಕ್ಯವೇಷ್ಟನಸಂಧಿಗೆ – ನ ದೇವಚರಿತಂಚರನೆನಿಸಿದಯ್ ತ್ರಿಲೋಕೇಶ್ವರಾ (ಶಮದ. ೬೧ ಪ್ರಯೋ).

[ ತ್ರಿಲೋಕ + ಈಶ್ವರ ]

**ತ್ರಿಲೋಕೈಕಚೂಡಾಮಣಿ** (ನಾ). ಮೂರು ಲೋಕಗಳಲ್ಲೆಲ್ಲ ಶ್ರೇಷ್ಠ ನೆನಿಸಿದವನು : ತ್ರಿಲೋಕೈಕಚೂಡಾಮಣಿಗಳ್ಸಿದ್ಧರ್ ಸ್ವಕೀಯ ಪ್ರಭುತೆ ಯನೆಮಗಂ ಮಾಳ್ಕಿತಿ ಪ್ರೀತಿಯಿಂದಂ (ಆದಿಪು. ೧-೨).

[ ತ್ರಿಲೋಕ + ಏಕ + ಚೂಡಾಮಣಿ ]

**ತ್ರಿಲೋಚನ** (ನಾ). = ತ್ರಿನಯನ: ತತ್ ತ್ರಿಲೋಚನನ ಗಾತ್ರವಾಗಿರುತಿಪ್ಪ ಮಾನಸಗಾತ್ರನಾಗೆಸೆದಿಪ್ಪ ಸದ್ಗುರುಗಾತ್ರವಲ್ಲಾ ಜಗಕೆ ಗುರುಸನ್ನಿಹಿತ ರಾದವರು (ಬಸಪು. ೨೪-೭೧). [ ತ್ರಿ + ಲೋಚನ ]

**ತ್ರಿವಚನ** (ನಾ). [ವ್ಯಾಕ] ಏಕವಚನ, ದ್ವಿವಚನ ಮತ್ತು ಬಹುವಚನ ಗಳೆಂಬ ಮೂರು ವಚನಗಳು : ದ ದಪಾದಿಗಿದಾಗಮಮಪ್ಪುದು ವತ್ವಕ್ಕಿಲ್ಲದುಂ ತ್ರಿವಚನಾನುಗತಂ (ಶಮದ. ೨೨೧). [ ತ್ರಿ + ವಚನ ]

**ತ್ರಿವದಿ** 'ತಿವದಿ' ನೋ.

**ತ್ರಿವರ್ಗ** (ನಾ). ೧. ಮೂರರ ಸಮುದಾಯ, –ಸಮೂಹ: ಮೂಱೆನಿಪ ತ್ರಿಪುಟಿಯ ತ್ರಿವರ್ಗದ ತ್ರಿಕರಣಂಗಳನು . . . ಮೂಱು ಗತಿಗಳ ಮೀಱಿ ತೋಱುವ ತುರ್ಯವೆ ಪರಮಾತ್ಮಪದ (ಅಮೃತ. ೭-೨೨). ೨. ಧರ್ಮ, ಅರ್ಥ ಮತ್ತು ಕಾಮಗಳೆಂಬ ಮೂರು ಪುರುಷಾರ್ಥಗಳು : ರಾಜ ಧರ್ಮವ ಸಲೆ ತ್ರಿವರ್ಗವ ಹೆಚ್ಚಿಸುವವಗ್ಗಳವೆನಿಪ ಮೋಕ್ಷಕೆ ತಾನೇ ಹೇತು ವಾಗಿಹುದು (ತಿಮ್ಮಶಾಂ. ೨-೭೦) ; ಅನುಜರಂ . . . ತ್ರಿವರ್ಗಮಂ ಕಾಂಬಂತೆ ಕಾಣುತ್ತಮನುಪಮಪ್ರೀತಿಯಿಂ (ಶೇಷರಾ. ೨-೨). ೩. [ರಾಜನೀ] ರಾಜ್ಯದ ವೃದ್ಧಿ, ಸ್ಥಿತಿ ಮತ್ತು ಕ್ಷಯಂಗಳೆಂಬ ಮೂರು ಸ್ಥಿತಿಗಳು : "ಕ್ಷಯ, ಸ್ಥಾನ, ವೃದ್ಧಿಗಳು ಮೂರನ್ನೂ ತ್ರಿವರ್ಗವೆಂದು ನೀತಿಜ್ಞರು ಹೇಳುವರು" (ಸಿದ್ಧಾಂತಿ. ೨೦೭); ತ್ರಿವರ್ಗಮಂ ಸಮಾಕರಿಸಿಯುಂ . . . ಸಾಮ್ರಾಜ್ಯಮಂ ನಿಷ್ಕಂಟಕಮುಂ ನಿರಾತಂಕಮುಂ ನಿಜಾಯತ್ತ ಮುಮೆನಿಸಿದಂ (ಚಂದ್ರಪು. ೨-೬೧). [ ತ್ರಿ + ವರ್ಗ ]

**ತ್ರಿವರ್ಗವಾದಿ** (ನಾ). ಧರ್ಮ, ಅರ್ಥ ಮತ್ತು ಕಾಮಗಳಷ್ಟೆ ಮಾತ್ರವೇ ಪುರುಷಾರ್ಥಗಳೆಂದು ವಾದಿಸುವವನು : ಧರ್ಮ ಅರ್ಥ ಕಾಮ ಎಂಬ ತ್ರಿವರ್ಗವಾದಿಗಳು ಕೆಲವರೂ, ಮೋಕ್ಷವನ್ನೂ ಸೇರಿಸಿ ಚತುರ್ವರ್ಗವಾದಿಗಳು ಕೆಲವರೆಂದೂ ನಿರ್ಣಯವಾಗುತ್ತದೆ (ಹಿಂದಸಾ. ೧೨೫). [ ಸಂ. ತ್ರಿವರ್ಗವಾದಿನ್ ]

**ತ್ರಿವರ್ಣ** (ನಾ). ಮೂರು ವಿಧವಾದ ಬಣ್ಣಗಳು : ಸುಱಿವ ಮರಾಳ ಯಾನೆಯರಪಾಂಗಮರೀಚಿಚಯಂ ತ್ರಿವರ್ಣಮಂ ಗಟಿಯಿಸೆ (ಚಂದ್ರಪು. ೭-೧೧೭) ; ಸರಿಯಾದ ಬಣ್ಣದ ತ್ರಿವರ್ಣ ಮಸಿಯಿಂದ . . . ಮುದ್ರಿಸ ಬೇಕು (ಮುದ್ರಕ. ೬೮). [ ತ್ರಿ + ವರ್ಣ ]

**ತ್ರಿವರ್ಣಧ್ವಜ** (ನಾ). ೧. ಮೂರು ಬಣ್ಣಗಳುಳ್ಳ ಬಾವುಟ ; ೨. (ಅಶೋಕಚಕ್ರ ಸಂಕೇತದಿಂದ ಕೂಡಿದ) ಹಸಿರು, ಬಿಳಿ ಮತ್ತು ಕೇಸರಿ ಮೂರು ಬಣ್ಣಗಳಿಂದ ಕೂಡಿದ ಬಾವುಟ ; ಭಾರತದ ಬಾವುಟ: ಮನೆ ಮನೆಗಳ ಮೇಲೂ ತ್ರಿವರ್ಣಧ್ವಜ, ತಳಿರು ತೋರಣಗಳ ಅಲಂಕಾರ (ಆತ್ಮಾರ್ಪ. ೧೩೨). [ ತ್ರಿವರ್ಣ + ಧ್ವಜ ]

**ತ್ರಿವರ್ಣಮುದ್ರಣ** (ನಾ). (ಚಿತ್ರ ಮುಂತಾದುವುಗಳನ್ನು) ಮೂರು ಬೇರೆ ಬೇರೆ ಬಣ್ಣಗಳಿಂದ ಕೂಡಿರುವಂತೆ ಅಚ್ಚುಮಾಡಿರುವುದು,– ಮುದ್ರಿಸಿರುವುದು : ಈ ಬಣ್ಣಗಳಲ್ಲಿ ಯಾವ ಎರಡನ್ನಾದರೂ ವಿವಿಧ ಪ್ರಮಾಣಗಳಲ್ಲಿ ಬೆರಸಿ ಯಾವ ಬಣ್ಣವನ್ನು ಬೇಕಾದರೂ ತಯಾರಿಸಬಹುದು. ಈ ತತ್ತ್ವವೇ ತ್ರಿವರ್ಣ ಮುದ್ರಣದ ಆಧಾರ (ಮುದ್ರಕ. ೬೬) ; ನಿನ್ನೆ ಬಿಡುಗಡೆಯಾದ ಆ ಪುಸ್ತಕದ ಮುಖಪುಟವು ತ್ರಿವರ್ಣಮುದ್ರಣದಿಂದ ಕೂಡಿದ್ದು ನೋಡಲು ಆಕರ್ಷಕವಾಗಿದೆ (ರೂಢಿ). [ ತ್ರಿವರ್ಣ + ಮುದ್ರಣ ]

**ತ್ರಿವಲಿ₁, ತ್ರಿವಳಿ₁** (ನಾ). ೧. (ಸ್ತ್ರೀಯ) ನಾಭಿಯ ಮೇಲೆ ಅಡ್ಡಲಾಗಿರುವ ಮೂರು ಮಡಿಕೆಗಳು. ತ್ರಿವಳಿ₁ : ೧. ಮಧ್ಯಸ್ಥಂಗಳಾಗಿರ್ದುವಕ್ಕಲೆಯುಲ್ ತಕ್ಕುದೆ ಕೆನ್ನಮಾ ತ್ರಿವಳಿಗಳ್ಗೆನ್ನಂ ಸರೋಜಾಕ್ಷಿಯಾ (ಪಂಪಭಾ. ೪-೭೪) ; ತ್ರಿವಳಿ ಮೈಗರೆಯೆ ಹೊಕ್ಕುಳ ಗುಣ್ಪು ಹೊಱಸೂಸೆ (ಬಸರ. ೦-೧೦೬) ; ಬಸಿಱ್ ಬಳೆಯೆ, ತ್ರಿವಳಿಗಳಟಿಯೆ, ಮೊಗಂ ತೆಱಂಬೊಳೆಯೆ . . . ಸೀತೆ ಬಸಿಱಿಯಾದಳ್ (ರಾಮಾಶ್ವ. ೨೦-೭). ೨. ಬೆನ್ನಿನ ಮೇಲೆ ಮೂರು ಗೆರೆಗಳನ್ನುಳ್ಳದು ; ಅಳಿಲು : "ತರುಕುಟ ತ್ರಿವಳಿಯೆನಲಣಿಲದು" (ಮಂಗರಾ. ೪೯-೦೩). ೩. ಒಂದು ಬಗೆಯ ವಸ್ತ್ರ ; ಮೂರು ಗೆರೆಯಂಚಿನ ಸೀರೆ : ಸಂಧ್ಯಾರಾಗಂ ತ್ರಿವಳಿ . . . ತೆಲುಗಾವಿಯೆಂಬಾ ಸೀರೆಗಳಂ ಸತಿಯರೊಲಿಯೊಳುರುಪಿದರ್ (ತ್ರಿಪುವಿ. ೧೦-೩೮). ೪. ಮೂರೆಳೆಯ ಹಾರ : ಕೊರಳೊಳು ತ್ರಿವಳಿ ನ್ಯಾವಳಿ ತಾಯಿತು ಸರಪಳಿಯು ಪದಕ ಪ್ರವಳ ಮುತ್ತಿನ ಸರಪಳಿಗಳು ತೂಗಲು (ವಿದಾಕ್ಮ. ೭೧-೨). 'ತಿವಳಿ₁' ಪರಾ. [ ತ್ರಿ + ವಲಿ ]

**ತ್ರಿವಲಿ₂, ತ್ರಿವಳಿ₂** (ನಾ). ಒಂದು ಬಗೆಯ ವಾದ್ಯ. ತ್ರಿವಳಿ₂. ತ್ರಿವಲೀತೂರ್ಯನಿರ್ಘೋಷಣ, ತ್ರಿವಳಿತೂರ್ಯನಿರ್ಘೋಷಣ = ತ್ರಿವಳಿಯೇ ಮೊದಲಾದ ಪಂಚ ಮಹಾವಾದ್ಯಗಳ ಮರ್ಯಾದೆಯುಳ್ಳವನು ; ಒಂದು ಬಿರುದು : ತ್ರಿವಲೀತೂರ್ಯ್ಯನಿರ್ಘೋಷಣೋ ರಟ್ಟಕುಲಭೂಷಣಃ (ಇಎ. XIX, ೨೪೭-೪೭ ; 1208) ; ಲತ್ತನೂರ ಪುರವರಾಧೀಸ್ವ[ಶ್ವ]ರಂ ತ್ರಿವಳಿತೂರ್ಯ್ಯನಿಗ್ರ್ಘೋಷಣಂ ಅಟ್ಟಕುಳ ಭೂಷಣಂ ಮಂಡಳಿಕಗಂಡ ತಳಪ್ರಹಾರಿ ಬಿರುದಂಕಮಾರಿ (ಕೊಲ್ಹಾಶಾ. ೨೨-೨೨ ; 1209). 'ತಿವಳಿ₂' ಪರಾ.

[ ಸಂ. ತ್ರಿವಲೀ ]

**ತ್ರಿವಳಿ₁** 'ತ್ರಿವಲಿ₁' ನೋ.

**ತ್ರಿವಳಿ₂** 'ತ್ರಿವಲಿ₂' ನೋ.

**ತ್ರಿವಳೆ** 'ತಿವಳಿ₂' ನೋ.

**ತ್ರಿವಾತ** (ನಾ). [ಜೈನ] ಲೋಕವನ್ನು ಹೊರಭಾಗದಲ್ಲಿ ಸುತ್ತಿಕೊಂಡಿರುವ ವಾತ, ಘನವಾತ ಮತ್ತು ತನುವಾತಗಳೆಂಬ ಮೂರು ಗಾಳಿಯ ಆವರಣಗಳು : ನುತವೇತ್ರಾಸನ ಝಲ್ಲರೀಮೃದುಮೃದಂ ಗಾಭಂ ತ್ರಿವಾತಾಭಿವೇಷ್ಟಿತಮುತ್ತಪ್ತತ್ರಿಲಯೇತರಂ . . . ಜಗತ್ತ್ರಿತಯಂ ನಿಂದುದು ತಾನನಾದ್ಯನಿಧನಂ ಸ್ವಾಭಾವಿಕನ್ಯಾಯದಿಂ (ಸುಕುಮಾ. ೦೦-೪೦). [ ತ್ರಿ + ವಾತ ]

**ತ್ರಿವಾರ** (ಅ). ೧. ಮೂರು ಸಲ ; ಮೂರು ಬಾರಿ. ೨. ನಿಶ್ಚಿತವಾಗಿ ; ಖಚಿತವಾಗಿ : ಅಕ್ಷರಶಃ ನಿಜ, ತ್ರಿವಾರ ನಿಜ (ಪರಿಲ. ೭೦) ; ನನ್ನ ಈ ಪ್ರತಿಜ್ಞೆಯು ತ್ರಿವಾರ ಸತ್ಯವಾಗಿರುವುದು (ತುಳಸೀ. ೪೩). [ ಸಂ. ]

**ತ್ರಿವಿಕ್ರಮ** (ನಾ). ತನ್ನ ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನೂ ವ್ಯಾಪಿಸಿದವನು ; ವಾಮನ ; ವಿಷ್ಣು : "ಶ್ರೀವತ್ಸಂ . . . ತ್ರಿವಿಕ್ರಮನವಂ ದಾಮೋದರಂ . . . ಸುಪರ್ಣಧ್ವಜಂ" (ವಸುಕೋ. ೪-೨೨) ; ಕೌಸ್ತುಭರತ್ನಮಂತದಲ್ಲದು ಕರಚಕ್ರವಲ್ಲದದು ನಾಭಿಸರೋಜಮೆನಲ್ ದಿನೇಶಬಿಂಬದ ನೆಲೆ ತಗ್ಗಿತಪ್ಪಿನಮನುಕ್ರಮದಿಂ ಬಳೆದಂ ತ್ರಿವಿಕ್ರಮಂ (ಅರ್ಜನೇ. ೬-೨೬) ; ರಂಗ ಬಾರೋ . . . ತ್ರಿವಿಕ್ರಮ ಬಾರೋ (ಪುರಂದ. ೫-೭೩-೨) ; ಧರಣಿಯುಂ ತರಣಿಯುಂ ಪಿರಿದು ಕಂಪಿಸಲಾ ತ್ರಿವಿಕ್ರಮಂ ಚಕ್ರಮಂ ಕೊಂಡು ಕಾಳೆಗಕೆ ಬರಲು (ಜೈಮಿಭಾ. ೨೫-೫೦) ; ಕನ್ನಡ ಕಥಾರಂಗ, ಈಚೀಚೆಗೆ ತ್ರಿವಿಕ್ರಮನಂತೆ ಬೆಳೆದ ಕಾದಂಬರಿಯ ಹಬ್ಬುಗೆಯಲ್ಲಿ . . . ಕ್ಷೀಣವಾಗಿ ಹೋಗಿದೆ (ಚಗುಬ. ೨). [ ತ್ರಿ + ವಿಕ್ರಮ ]

**ತ್ರಿವಿಕ್ರಮಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ : ಅಷ್ಟವಿನ್ಯಾಸಗಳು : ೧. ಉತ್ಥಾನಾಸನ . . . ೭೧. ತ್ರಿವಿಕ್ರಮಾಸನ (ಭಾರದ. ೧೬೭). [ ತ್ರಿವಿಕ್ರಮ + ಆಸನ ]

**ತ್ರಿವಿಗ್ರಹಗತಿ** (ನಾ). [ಜೈನ] ಪ್ರಾಣವು ಒಂದು ದೇಹವನ್ನು ಬಿಟ್ಟು ಇನ್ನೊಂದು ದೇಹವನ್ನು ಸೇರುವ ಮುನ್ನ ಪಡೆಯುವ ಮೂರು ಗಮನಗಳು; ಪಾಣಿಮುಕ್ತ, ಲಾಂಗಲಿಕ ಮತ್ತು ಗೋಮೂತ್ರಿಕವೆಂಬ ಮೂರು ವಕ್ರಗತಿಗಳು : ಸರ್ವೋತ್ಕೃಷ್ಟವಿಗ್ರಹನಿಮಿತ್ತಂ ನಿಷ್ಕುಟಕ್ಷೇತ್ರದೊಳ್ ಪುಟ್ಟುವ ಜೀವಕ್ಕೆ ನಿಷ್ಕುಟಕ್ಷೇತ್ರಾನುಪೂರ್ವ್ಯನುಶ್ರೇಣ್ಯ ಜಗತ್ಕಭಾವಂ ನಿಷ್ಕುಟಕ್ಷೇತ್ರಪ್ರಾಪಣನಿಮಿತ್ತಂ ತ್ರಿವಿಗ್ರಹಗತಿಯುಕ್ಕುಮೆಂದಱಿವುದು (ತತ್ತ್ವಪ್ರ. ೦೦೦). [ ತ್ರಿ + ವಿಗ್ರಹ + ಗತಿ ]

**ತ್ರಿವಿಡಿ** 'ತ್ರಿಪುಡ' ನೋ.

**ತ್ರಿವಿಧ** (ನಾ). ೧. ಮೂರು ರೀತಿ,–ಬಗೆ : ತ್ರಿವಿಧೋತ್ಪಾತದೊಳುರ್ವಿನಾಭಸವಿಕಾರಂ ದೇವತಾಶಾಂತಿಯಿಂದವೆ ಶಾಂತ್ಯಾವಹಂ (ಲೋಕೋಪ. ೪-೪). ೨. ತನು, ಮನ ಮತ್ತು ಧನವೆಂಬ ಮೂರು ವಿಷಯಗಳು: ತ್ರಿವಿಧವನು ತ್ರಿವಿಧಕ್ಕಿತ್ತು ನಾ ಬಯಲದೇಹಿಯಾದೆನಯ್ಯಾ (ಲಿಂಗಪ. ೨೩-೯೩) ; ತ್ರಿವಿಧಕ್ಕೆ ತ್ರಿವಿಧವನಿತ್ತು ತ್ರಿವಿಧಭರಿತನಾಗಿಪ್ಪ ನಿಜಲಿಂಗಾಂಗಿಗೆ ಇಹಪರವೆಂಬ ಉಭಯವಿಲ್ಲ (ಮೋಳಿಮಾ. ೨೪-೯೪). ೩. [ವೀಶೈ]ಗುರು, ಲಿಂಗ ಮತ್ತು ಜಂಗಮವೆಂಬ ಮೂರು ಅಂಗಗಳು : ತನುವ ಕೊಟ್ಟು ಗುರುವನೊಲಿಸಬೇಕು ಮನವ ಕೊಟ್ಟು ಲಿಂಗವನೊಲಿಸಬೇಕು ಧನವ ಕೊಟ್ಟು ಜಂಗಮವನೊಲಿಸಬೇಕು ಈ ತ್ರಿವಿಧವ ಹೊಱಗು ಮಾಡಿ . . . ಕುಱುಹ ಪೂಜಿಸುವರ ಮೆಚ್ಚ ಕೂಡಲಸಂಗಮದೇವಾ (ಬಸವ. ೨೦೬); ತ್ರಿವಿಧಕ್ಕೆ ತ್ರಿವಿಧವನಿತ್ತು ತ್ರಿವಿಧಪ್ರಸಾದವ ಕೊಳಬಲ್ಲಡೆ ಆತನ ತ್ರಿವಿಧನಾಥನೆಂಬೆ (ಅವಚಂ. ೩೨-೦೩೪).

[ ತ್ರಿ + ವಿಧ ]

**ತ್ರಿವಿಧಗುರುದ್ವೇಷ** [ ದ್ವೈತ ] (ನಾ). ಉತ್ತಮರಲ್ಲಿ ದ್ವೇಷ, ಅವರ ಗುಣಗಳಲ್ಲಿ ಅಸೂಯೆ ಮತ್ತು ಅವರ ಐಶ್ವರ್ಯಾಪಹಾರ ಎಂಬ ಮೂರು ಬಗೆಯ ಗುರುದ್ವೇಷಗಳು : ದ್ವೇಷಪರಿಪಾಕಸಾಧನಗಳು ಸದಾ ದುರ್ವಿಷಯಾನುಭವಚಾಪಲ್ಯ, ತ್ರಿವಿಧಗುರುದ್ವೇಷ, ನವವಿಧಹರಿದ್ವೇಷ ಮೊದಲಾದುವು (ಹಿಂದಸಾ. ೨೯೩). [ ತ್ರಿವಿಧ + ಗುರು + ದ್ವೇಷ ]

**ತ್ರಿವಿಧದಾಸೋಹ** (ನಾ). [ವೀಶೈ] ಮೂರು ಬಗೆಯ ಪರಮಾತ್ಮನ ಸೇವೆಗಳು ; ಗುರುವಿಗೆ ತನು, ಲಿಂಗಕ್ಕೆ ಮನಸ್ಸು ಮತ್ತು ಜಂಗಮಕ್ಕೆ ಧನವನ್ನು ಅರ್ಪಿಸುವಿಕೆ : ಆಡಿದರೇನೊ ಹಾಡಿದರೇನೊ ಓದಿದರೇನೊ ತ್ರಿವಿಧ ದಾಸೋಹವಿಲ್ಲದನ್ನಕ್ಕ (ಬಸವ. ೨೦೭). [ ತ್ರಿವಿಧ + ದಾಸೋಹ ]

**ತ್ರಿವಿಧಪದಾರ್ಥ** (ನಾ). ಮೂರು ವಿಧವಾದ ಪದಾರ್ಥಗಳು : ಇಂತೀ ತ್ರಿವಿಧಪದಾರ್ಥಂಗಳಂ ಹಿಡಿದು (ಘನವ. ೬೭-೫೫).

[ ತ್ರಿವಿಧ + ಪದಾರ್ಥ ]

**ತ್ರಿವಿಧಪ್ರಸಾದ** (ನಾ). [ವೀಶೈ] ಗುರು, ಲಿಂಗ ಮತ್ತು ಜಂಗಮರಿಂದ ಪಡೆಯಲಾಗುವ ಪ್ರಸಾದ ; ಶುದ್ಧಪ್ರಸಾದ, ಸಿದ್ಧಪ್ರಸಾದ, ಪ್ರಸಿದ್ಧಪ್ರಸಾದ ಎಂಬ ಮೂರು ಬಗೆಯ ಪ್ರಸಾದಗಳು : ತ್ರಿವಿಧ ಪ್ರಸಾದವೆಂದೆಂಬರು ಅದೆಂತಹುದೊ (ಬಸವ. ೭೯೦) ; ಗುರುವಿನಲ್ಲಿ ಶುದ್ಧಪ್ರಸಾದ ಲಿಂಗದಲ್ಲಿ ಸಿದ್ಧಪ್ರಸಾದ ಜಂಗಮದಲ್ಲಿ ಪ್ರಸಿದ್ಧಪ್ರಸಾದ ಇಂತೀ ತ್ರಿವಿಧಪ್ರಸಾದ ಏಕಾರ್ಥವಾಗಿ ಮಹಾಘನಪರಿಪೂರ್ಣಪ್ರಸಾದವ ಳವಟ್ಟ ಶರಣನು ಜ್ಞಾನಿ ಅಲ್ಲ ಅಜ್ಞಾನಿ ಮುನ್ನವೇ ಅಲ್ಲ (ಮಹಾದೇ. ಬ. ೧೦೪-೩೩೫) ; ಆವಗಂ ತ್ರಿವಿಧಪ್ರಸಾದವಿಭೋಗವೇ ಸಾಕು (ಬಸಪು. ೯-೪೮). [ ತ್ರಿವಿಧ + ಪ್ರಸಾದ ]

**ತ್ರಿವಿಧಪ್ರಸಾದಿ** (ನಾ). [ವೀಶೈ] ಶುದ್ಧಪ್ರಸಾದ, ಸಿದ್ಧಪ್ರಸಾದ ಮತ್ತು ಪ್ರಸಿದ್ಧಪ್ರಸಾದಗಳೆಂಬ ಮೂರು ವಿಧವಾದ ಪ್ರಸಾದ ಗಳನ್ನು ಪಡೆದವನು : ಲಿಂಗನಿಷ್ಠಾಮಾನಸರು . . . ಚರಲಿಂಗ ನಿತ್ಯಾರಾಧಕರು ತ್ರಿವಿಧಪ್ರಸಾದಿಗಳು (ಬಸಪು. ೬೦-೩).
[ ಸಂ. ತ್ರಿವಿಧ ಪ್ರಸಾದಿನ್ ]

**ತ್ರಿವಿಧಭಕ್ತಿ** (ನಾ). [ವೀಶೈ] ಗುರು, ಲಿಂಗ ಮತ್ತು ಜಂಗಮರಿಗೆ ಸಲ್ಲಿಸಲಾಗುವ ಭಕ್ತಿ : ಪ್ರಾರ್ಥಿತತ್ರಿವಿಧೈಕಭಕ್ತಿಸುಖಾರ್ಥಿಗಳನಾ ತ್ರಿವಿಧಭಕ್ತಿ ಸದರ್ಥ ಸುಖತರಶರಧಿಯಲಿ ನೆಱೆಯದ್ದಿ (ಬಸಪು. ೬-೨೮) : ತ್ರಿವಿಧಭಕ್ತಿಯ ಮರ್ಮವನಱಿಯದವರ ಮೆಚ್ಚ ನಮ್ಮ ಅಖಂಡೇಶ್ವರ (ಅಖಂಡೇ. ೬೫-೪೯). [ ತ್ರಿವಿಧ + ಭಕ್ತಿ ]

**ತ್ರಿವಿಧಮಲ** (ನಾ). [ವೀಶೈ] ಆಣವ, ಕಾರ್ಮಿಕ ಮತ್ತು ಮಾಯಾ ಎಂಬ ಮೂರು ವಿಧವಾದ ಮಲಗಳು : ತ್ರಿವಿಧಮಲಶುದ್ಧವಾಗಿ ಜಂಗಮವನಱಿಯಬೇಕು (ಮೋಳಿಮಾ. ೨೪-೯೪). [ ತ್ರಿವಿಧ + ಮಲ$_2$ ]

**ತ್ರಿವಿಧಮಾರ್ಗ** (ನಾ). [ಸಂಗೀತ] ಹಾಡುವಾಗ ಬಳಸುವ ಶುದ್ಧ. ಸಾಳಗ ಮತ್ತು ಸಂಕೀರ್ಣವೆಂಬ ಮೂರು ಬಗೆ,-ಪ್ರಕಾರ : ಓರೊರ್ಮೆ ವಶಿತ್ವಾತಿಶಯದಿಂ ವೀತರಾಗರೂಪಗುಣವಸ್ತುವರ್ಣನಾನು ಬದ್ಧ ತ್ರಿಮಾರ್ಗಗೀತಂಗಳಂ ತ್ರಿವಿಧಮಾರ್ಗಂಗಳೊಳ್ ಪಾಡಿ (ಚಂದ್ರಪು. ೯-೫೫ ವ). [ ತ್ರಿವಿಧ + ಮಾರ್ಗ ]

**ತ್ರಿವಿಧಲಿಂಗ** (ನಾ). ೧. [ವ್ಯಾಕ] ಪುಲ್ಲಿಂಗ, ಸ್ತ್ರೀಲಿಂಗ ಹಾಗು ನಪುಂಸಕ ಲಿಂಗ : ಕನ್ನಡದೊಳ್ ಪಿರಿಮಂ ಸ್ತ್ರೀಲಿಂಗಮೆಂದುಂ . . . ತ್ರಿವಿಧಲಿಂಗ ಮೆಂದುಂ, ವಿಶೇಷ್ಯಾಧೀನಲಿಂಗಮೆಂದುಂ, ಅವ್ಯಯಲಿಂಗಮೆಂದು ಲಿಂಗಮೊಂಬತ್ತು ತೆಱಂ (ಶಮದ. ೮೮ ವೃತ್ತಿ). ೨. [ವೀಶೈ] ಇಷ್ಟಲಿಂಗ, ಪ್ರಾಣಲಿಂಗ ಮತ್ತು ಭಾವಲಿಂಗಗಳೆಂಬ ಮೂರುತೆರದ ಲಿಂಗಗಳು.
[ ತ್ರಿವಿಧ + ಲಿಂಗ ]

**ತ್ರಿವಿಧವಾಸನೆ** (ನಾ). ತನು, ಮನ ಮತ್ತು ಧನ ಇವು-ಮೂರರಲ್ಲಿ ಇರುವ ಆಸಕ್ತಿ : ತ್ರಿವಿಧಕ್ಕೆ ತ್ರಿವಿಧವನರ್ಪಿಸಿ ತ್ರಿವಿಧವಾಸನೆಯ ಹರಿದು ತ್ರಿವಿಧವು ಒಂದಾದ ಘನವನೊಡಗೂಡಬಲ್ಲಡೆ ಸದ್‌ಭಕ್ತನೆಂಬೆನಯ್ಯ (ಅಖಂಡೇ. ೭೭-೫೫). [ ತ್ರಿವಿಧ + ವಾಸನೆ ]

**ತ್ರಿವಿಧಶಕ್ತಿ** (ನಾ). [ರಾಜನೀ] ಪ್ರಭು, ಮಂತ್ರ ಹಾಗೂ ಉತ್ಸಾಹ ವೆಂಬ ಮೂರು ಶಕ್ತಿಗಳು : ಅಂತೇಕಚ್ಛತ್ರೀಕೃತಭಾರತವರ್ಷನುಂ ದ್ವಿಗುಣೀಕೃತಪ್ರಕೃತಿಪ್ರಮೋದನುಂ ತ್ರಿವಿಧಶಕ್ತಿಪ್ರಯುಕ್ತನುಂ ಚತು ರ್ನೃಪವಿದ್ಯಾವಿಶಾರದನುಂ. . .ದಶಾಂಗಭೋಗಸಂಗತನುಮಾಗಿ (ಚಂದ್ರಪು. ೭-೩೫ ವ) ; P ಪ್ರಭುಶಕ್ತಿ ಎಂದರೆ ಹಣ ಮತ್ತು ಸೈನ್ಯ, ಮಂತ್ರಶಕ್ತಿ ಎಂದರೆ ಜ್ಞಾನ, ಉತ್ಸಾಹಶಕ್ತಿ ಎಂದರೆ ಪರಾಕ್ರಮ.
[ ತ್ರಿವಿಧ + ಶಕ್ತಿ ]

**ತ್ರಿವಿಧಸೂತಕಿ** (ನಾ). [ವೀಶೈ] ಆಣವ, ಕಾರ್ಮಿಕ, ಮಾಯಾ ಎಂಬ ಮೂರು ಬಗೆಯ ಮಲಗಳನ್ನುಳ್ಳವನು : ಕಾಯಸೂತಕಿಗಳು ಗುರುವನಱಿಯರಾಗಿ ಭಾವಸೂತಕಿಗಳು ಲಿಂಗವನಱಿಯರಾಗಿ ತ್ರಿವಿಧ ಸೂತಕಿಗಳು ಜಂಗಮವನಱಿಯರಾಗಿ ತನುಶುದ್ಧವಾಗಿ ಗುರುವನಱಿಯ ಬೇಕು . . . ತ್ರಿವಿಧಮಲಶುದ್ಧವಾಗಿ ಜಂಗಮವನಱಿಯಬೇಕು (ಮೋಳಿಮಾ. ೨೩-೯೪). [ ತ್ರಿವಿಧ + ಸೂತಕಿ ]

**ತ್ರಿವಿಧಾಚಾರ** (ನಾ). [ವೀಶೈ] ಮೂರು ಬಗೆಯ ಆಚಾರಗಳು ; ಸದಾಚಾರ, ಶಿವಾಚಾರ, ಸಮಯಾಚಾರಗಳೆಂಬ ಮೂರು ವಿಧ ವಾದ ಆಚಾರಗಳು : ಗುರುವಿನಲ್ಲಿ ಸದಾಚಾರ ಲಿಂಗದಲ್ಲಿ ಶಿವಾಚಾರ ಜಂಗಮದಲ್ಲಿ ಸಮಯಾಚಾರ ಇಂತೀ ತ್ರಿವಿಧಾಚಾರಸಂಬಂಧವಾದ ಬಳಿಕ ತನ್ನ ಶೀಲಕ್ಕೆ ಶೀಲ ಸಮನಾಗದವರ ಮನೆಯ ಅನುಸರಿಸಿ ನಡೆದಡೆ . . . ಬಸವಣ್ಣ ಮೆಚ್ಚನಯ್ಯಾ (ಚನ್ನಬ. ಕ. ೧೮೩-೪೦೦). 'ಪಂಚಾಚಾರ' ಪರಾ. P ಸದಾಚಾರವೆನ್ನುವುದು ಒಳ್ಳೆಯ ನಡತೆಯನ್ನೂ ಶಿವಾಚಾರವು ಲಿಂಗವೇ ಅಂಗವೆಂಬ ಭಾವನೆಯನ್ನೂ, ಸಮಯಾ ಚಾರವು ಜಂಗಮರಲ್ಲಿ ಭೃತ್ಯಭಾವನೆಯನ್ನೂ ಸೂಚಿಸುತ್ತದೆ.
[ ತ್ರಿವಿಧ + ಆಚಾರ ]

**ತ್ರಿವಿಧಾತ್ಮ** (ನಾ). ೧. ಜೀವಾತ್ಮ, ಅಂತರಾತ್ಮ, ಪರಮಾತ್ಮ ಎಂಬ ಮೂರು ಬಗೆಯ ಆತ್ಮಗಳು. 'ಆತ್ಮತ್ರಯ' ಪರಾ. ೨. [ವೀಶೈ] ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ಆತ್ಮಗಳು : ಎನ್ನ ತ್ರಿವಿಧಾತ್ಮರು ನಿಮ್ಮ ಹೆಂಡಿರು ಸತ್ವರಜತಮಂಗಳು ನಿಮ್ಮ ಭೃತ್ಯರಯ್ಯಾ (ವಚಸಂ. ೨೫೫-೪೫). [ ತ್ರಿವಿಧ + ಆತ್ಮ ]

**ತ್ರಿವಿಧಾದ್ವೈತ** (ನಾ). ವಾಗದ್ವೈತ, ಕ್ರಿಯಾದ್ವೈತ, ಭಾವಾದ್ವೈತ ಗಳೆಂಬ ಮೂರು ಅದ್ವೈತಗಳು ; P ಮಾತು, ಕ್ರಿಯೆ, ಭಾವಗಳಲ್ಲಿ ಭೇದವಿಲ್ಲದಿರುವುದು. ಇವು ಪರಮಾತ್ಮನಿಂದಲೇ ಆದುವು ಎಂಬ ತಿಳುವಳಿಕೆ : ವಾಗದ್ವೈತ, ಕ್ರಿಯಾದ್ವೈತ, ಭಾವಾದ್ವೈತ ಇಂತೀ ತ್ರಿವಿಧಾದ್ವೈತ ಲಿಂಗಸುಖಸಾಹಿತ್ಯವಾದಲ್ಲಿ ನರಕವಿಲ್ಲ (ಅಪವ. ೩೩-೯೩).
[ ತ್ರಿವಿಧ + ಅದ್ವೈತ ]

**ತ್ರಿವಿಧಿ** 'ತಿವದಿ' ನೋ.

**ತ್ರಿವಿಧೋದಕ** (ನಾ). [ವೀಶೈ] ಗುರು, ಲಿಂಗ, ಜಂಗಮರಿಂದ ಪಡೆದ ತೀರ್ಥ ; ಗುರುಪಾದೋದಕ, ಲಿಂಗದ ಅಭಿಷೇಕೋದಕ ಮತ್ತು ಜಂಗಮ ಪಾದೋದಕ : ಒಲವಿನರ್ಪಿಸಿದ ಪ್ರಸಾದಂ ಬಳಿಕಲರ್ಪಿಸದಿಹ ಪದಾರ್ಥಂಗಳಲಿ ಕೂಡಿತೊ ಬೆರಸಿತೋ ತ್ರಿವಿಧೋದಕಂಗಳನು (ಬಸಪು. ೪೭-೧೭). [ ತ್ರಿವಿಧ + ಉದಕ$_2$ ]

**ತ್ರಿವಿಷ್ಟಪ** (ನಾ). ದೇವಲೋಕ ; ಸ್ವರ್ಗ : "ಸ್ವರ್, ಸ್ವರ್ಗಃ, . . . ತ್ರಿವಿಷ್ಟಪಂ . . . ಊರ್ಧ್ವಲೋಕಃ-ಈ ೧೧ ದೇವಲೋಕದ ಪೆಸರ್" (ಹಲಾಯು. ೨-೩); ಪುರನಿಕರಂ ತ್ರಿವಿಷ್ಟಪಮೊ ಪೇೞ್ ದಿವಿಜೇಂದ್ರ ನಿವಾಸಮೋ . . . ಎಂಬಿನಂ ನರಪತಿ ಮಾಡಿದಂ ಪುರಕೆ ಪೊಂಪುೞಿ ಯಪ್ಪಿನಮಪ್ಪಶೋಭೆಯಂ (ಶಾಂತಿಪು. ೧೦-೭೮) ; ಕೈಲಾಸ ತ್ರಿವಿಷ್ಟಪ ನವಖಂಡಕು ನಾನೆ ಅಧಿಪ (ಕ್ರೌಂಚಧ್ವ. ೩೭-೨೭). [ ಸಂ. ]

**ತ್ರಿವಿಷ್ಟಪಾಧಿಪ** (ನಾ). ದೇವಲೋಕದ ಒಡೆಯ ; ಇಂದ್ರ : ನಿನಗೆ ತ್ರಿವಿಷ್ಟಪಾಧಿಪನೆಲಗುವನು ಪದಕೆಂಬುದಚ್ಚರಿಯೆ (ನಿಘಾಗ. ೪-೧೧-೫೭).
[ ತ್ರಿವಿಷ್ಟಪ + ಅಧಿಪ ]

**ತ್ರಿವುಡೆ$_1$** 'ತ್ರಿಪುಡ' ನೋ.

**ತ್ರಿವುಡೆ$_2$** 'ತಿವದಿ' ನೋ.

**ತ್ರಿವೃತೆ** (ನಾ). ಕೆಂಪು ತಿಗಡೆ ಮರ. [ ಸಂ. ತ್ರಿವೃತಾ ]

**ತ್ರಿವೃತ್ತ** (ನಾ). ಮೂರು ಸುತ್ತು ಉಳ್ಳುದು : ತ್ರಿವೃತ್ತಮೆಂಬುದು ಮೂರು ಕೂಡಿಹುದು ಕೇಳು ಚಾಪಕವೆಂದು ಚಪ್ಪಟೆಯನ್ನೆದಿಹುದು (ರತ್ನಶಾ. ೨೦-೧೪). [ ತ್ರಿ + ವೃತ್ತ ]

**ತ್ರಿವೇಣಿ** (ನಾ). ಮೂರು ನದಿಗಳು ಸೇರುವ ಸ್ಥಳ ; ಗಂಗೆ, ಯಮುನೆ ಮತ್ತು (ಗುಪ್ತಗಾಮಿನಿಯಾದ) ಸರಸ್ವತಿ ಈ ಮೂರು ನದಿಗಳ ಸಂಗಮಸ್ಥಳ ; ಪ್ರಯಾಗ. [ ತ್ರಿ + ವೇಣಿ ]

**ತ್ರಿವೇಣೀಸಂಗಮ** (ನಾ). (ತ್ರಿವೇಣಿಯಂತೆ ಪವಿತ್ರವಾದ) ಮೂರರ ಕೂಟ, —ಸಂಗಮ : ಅದರ ಪ್ರತಿಫಲವು ಪ್ರೇಮ, ಸತ್ಯ, ಗೀತೆಗಳೆಂಬ ತ್ರಿವೇಣೀಸಂಗಮವಾಗಿ ಪ್ರವಹಿಸಿತು (ಪ್ರಬಂಧ. ೮೬). [ ಸಂ. ]

**ತ್ರಿವೇಣುಕ** (ನಾ). ರಥದ ಅಥವಾ ಗಾಡಿಯ ಮುಂಭಾಗದಲ್ಲಿ ನೊಗವನ್ನು ಕಟ್ಟಲು ಚಾಚಿದಂತಿರುವ, ಮೂರು ಬೊಂಬು ಅಥವಾ ಮರದ ತುಂಡುಗಳ ರಚನೆ ; ಮೂಕಿ : ಆಹವನೀಯ ಗಾರುಹಪತ್ಯ ದಕ್ಷಿಣ ವಾಯುಸಖರಾದರು ತ್ರೀವೇಣುಕಮಾ ರಥಾಗ್ರದಲಿ (ಕುವ್ಯಾ.ಕ. ೭-೪) ; ಕೋದಂಡ ರಥ ರಥಾಂಗ ತ್ರಿವೇಣುಕ ಯುಗಾಕ್ಷಂಗಳುರಿಗೊಳೆ ಪಾಂಡುಪುತ್ರಸೇನೆಯೊಳೆಲ್ಲರುಂ ಬೆದಱಿದರ್ (ಜೈಮಿಭಾ. ೮-೩೪). [ ಸಂ. ]

**ತ್ರಿವೇದಿ** (ನಾ). ೧. ಮೂರು ವೇದಗಳನ್ನು ಬಲ್ಲವನು. ೨. ನ್ಯಾಯ, ಮೀಮಾಂಸೆ, ವೇದಾಂತ ಎಂಬ ಮೂರು ಶಾಸ್ತ್ರಗಳನ್ನು ಬಲ್ಲವನು [ ಸಂ. ತ್ರಿವೇದಿನ್ ]

**ತ್ರಿಶಂಕು** (ನಾ). ೧. ಸೂರ್ಯವಂಶದ ದೊರೆ ; ಹರಿಶ್ಚಂದ್ರನ ತಂದೆ : ತ್ರಿದಶಲೋಕಕ್ಕೇಱುತಿರ್ದಾ ತ್ರಿಶಂಕುನರಾಧೀಶನ ಲಕ್ಷ್ಮಿ ಶಕ್ರನ ಮಹಾ ಹುಂಕಾರದಿಂ ಬಿರ್ದಳೆಂಬಿನೆಗಂ (ಕಾದಂಪೂ. ೨೪); ಕುಲವಳಿದು ರಾಜ್ಯಭ್ರಷ್ಟನಾಗಿ ಚಾಂಡಾಲತ್ವವಳವಟ್ಟು ನಿಮ್ಮಯ್ಯನೆನಿಪ ತ್ರಿಶಂಕುವನು ನಾನಲ್ಲದುದ್ಧರಿಸಿದ ಬಲವಂತರಾರ್ (ಹಡಕಾ. ೮-೩೯); ℙ ಹರಿಶ್ಚಂದ್ರನ ತಂದೆಯಾದ ಸತ್ಯವ್ರತನೆಂಬ ದೊರೆಯು ತಾನು ಮಾಡಿದ ಪರಸ್ತ್ರೀ ಅಪಹರಣ, ಸುಳ್ಳು ಹೇಳಿದುದು ಮತ್ತು ಮಾಂಸಭಕ್ಷಣ ಎಂಬ ಮೂರು ಪಾಪಕಾರ್ಯಗಳಿಂದ ವಸಿಷ್ಠರ ಶಾಪಕ್ಕೆ ಗುರಿಯಾಗಿ ಚಂಡಾಲತ್ವವನ್ನು ಹೊಂದಿಯೂ ವಿಶ್ವಾಮಿತ್ರರ ಪ್ರಯತ್ನದಿಂದ ಸಶರೀರನಾಗಿ ಸ್ವರ್ಗಪ್ರವೇಶ ಮಾಡಲು ಯತ್ನಿಸಿ ಸಾಧ್ಯವಾಗದೆ ಮತ್ತೆ ಅವರ ಕೃಪೆಯಿಂದಲೇ ಭೂಸ್ವರ್ಗಗಳೆರಡರ ಮಧ್ಯೆ ನಿಲ್ಲುತ್ತಾನೆ. ೨. ಪತಂಗದ ಹುಳು ; ಶಲಭ. ೩. ಚಾತಕಪಕ್ಷಿ. ೪. ಮಿಂಚುಹುಳು. ೫. ಬೆಕ್ಕು. ೬. = ತ್ರಿಶಂಕುರಾಶಿ : ಇವಿಷ್ಟೂ ಒಟ್ಟುಸೇರಿದರೆ 'ತ್ರಿಶಂಕು' ನಕ್ಷತ್ರಗಣವಾಗುತ್ತದೆ (ಜ್ಯೋತಿರ್ವಿ. ೪೮). [ ಸಂ. ]

**ತ್ರಿಶಂಕುರಾಶಿ** (ನಾ). [ಜ್ಯೋತಿ] ಒಂದು ನಕ್ಷತ್ರರಾಶಿಯ ಹೆಸರು : ಕಿನ್ನರ ಪ್ರಥಮ ದ್ವಿತೀಯಗಳ ಬಲಮಗ್ಗುಲಿಗೆ ಶಿಲುಬೆಯ ಆಕಾರದಲ್ಲಿ ಹೊಳೆಯುತ್ತಿರುವ ನಾಲ್ಕು ನಕ್ಷತ್ರಗಳು ತ್ರಿಶಂಕುರಾಶಿಯ ಹೆಗ್ಗುರುತು (ನಕ್ಷತ್ರ. ೬೩). [ ತ್ರಿಶಂಕು + ರಾಶಿ ]

**ತ್ರಿಶಂಕುಸ್ಥಾನ** (ನಾ). (ಆಲಂ) ಎಲ್ಲಿಯೂ ಎಡೆಯಿಲ್ಲದಿರುವುದು ; ಯಾವಕಡೆಗೂ ಸಲ್ಲದಿರುವ ಸ್ಥಿತಿ ; ಎಡಬಿಡಂಗಿತನ : ರಂಗಸಾನಿ ಹಾಗು ಆಕೆಯ ತಂಗಿ ವಿಮಲೆಯು ಸಮಾಜದಲ್ಲಿ ಸ್ತ್ರೀಯರಿಗಿರುವ ಇನ್ನೊಂದು ತ್ರಿಶಂಕುಸ್ಥಾನದ ಅರಿವನ್ನು ನಮಗೆ ಮಾಡಿಕೊಡುತ್ತಾರೆ (ಸಮಾಜೀ. ೧೩ ಪೀಠಿಕೆ). [ ತ್ರಿಶಂಕು + ಸ್ಥಾನ ]

**ತ್ರಿಶಂಕುಸ್ವರ್ಗ** (ನಾ). ೧. ಭೂಮಿ ಮತ್ತು ಸ್ವರ್ಗಗಳ ನಡುವೆ ಇರುವುದೆಂದು ನಂಬಲಾದ ಸ್ಥಳ ; ℙ ವಿಶ್ವಾಮಿತ್ರನು ಸೃಷ್ಟಿಸಿದನೆಂದು ನಂಬಲಾದ, ಸ್ವರ್ಗದಿಂದ ಬೇರೆಯಾದ ಮತ್ತೊಂದು ಲೋಕ. ೨. (ಆಲಂ) ಯಾವಕಡೆಗೂ ಸೇರದಿರುವ ಸ್ಥಿತಿ. [ ತ್ರಿಶಂಕು + ಸ್ವರ್ಗ ]

**ತ್ರಿಶತ** (ನಾ). ಮೂರು ನೂರು ; ಮುನ್ನೂರು : ತ್ರಿಶತ ಸಂಯುತ ಷಷ್ಟಿರುಜೆಗಳ ವಶದಿ ನೊಂದುಮ್ಮಳಿಸುವದಱಿಂ ಶಿಶುವಲಾ ನಾನು (ಬಸಪು. ೨೪-೧೪). [ ತ್ರಿ + ಶತ ]

**ತ್ರಿಶರ** (ನಾ). ಮೂರು ಬಾಣಗಳು : ತ್ರಿಶರ–ತ್ರಿಸರ (ಶಮದ. ೨೯೦ ಪ್ರಯೋ). [ ತ್ರಿ + ಶರ ]

**ತ್ರಿಶಲ್ಯ** (ನಾ). [ಜೈನ] ಮಿಥ್ಯೆ, ಮಾಯೆ, ನಿದಾನಗಳೆಂಬ ಮೂರು ಬಗೆಯ ಮೋಹಗಳು : ಚಾರಿತ್ರವಂತನೆಂಬೊಂ ಜನಮತಗತ ... ತ್ರಿದಂಡ ತ್ರಿಶಲ್ಯ ತ್ರಿಗಾರವರಹಿತನುಂ (ಚಾವುಂಪು. ೫-೧೯) ; ಮತ್ತಂ ತ್ರಿದಂಡ ತ್ರಿಶಲ್ಯ ತ್ರಿಗಾರವಂಗಳಂ ಕ್ರಮ ಕ್ರಮದಿಂ ಕಟಲ್ಚಿ ಕಳೆಯುತ್ತುಂ (ಸುಕುಮಾ. ೩-೪೬ ವ) ; ℙ "ವ್ರತಗಳನ್ನಾಚರಿಸುವವರು ಮಾಯೆ, ಮಿಥ್ಯಾತ್ವ, ನಿದಾನ ಎಂಬ ಮೂರು ಶಲ್ಯಗಳಿಲ್ಲದವರಾಗಿರಬೇಕು. ಮನಸ್ಸಿನಲ್ಲೊಂದು, ಕ್ರಿಯೆಯಲ್ಲೊಂದು ಈ ತರದ ಸ್ಥಿತಿಯು ಮಾಯಾಶಲ್ಯವು ; ತತ್ತ್ವಾರ್ಥದಲ್ಲಿ ಶ್ರದ್ಧೆಯಿಲ್ಲದಿರುವುದು ಮಿಥ್ಯಾತ್ವಶಲ್ಯವು ; ಭವಿಷ್ಯತ್ಕಾಲದಲ್ಲಿ ಇಂತಹ ವಿಷಯೋಪಭೋಗಗಳು ದೊರೆಯಬೇಕೆಂದು ಬಯಸುವುದು ನಿದಾನ ಶಲ್ಯವು ; ಶಲ್ಯಗಳಿರುವವರೆಗೆ ಅಹಿಂಸಾದಿ ಗಳನ್ನಾಚರಿಸಿದರೂ ಅವು ವ್ರತಗಳೆನಿಸಲಾರವು" (ಜೈನಧ. ೬೪). [ ತ್ರಿ + ಶಲ್ಯ ]

**ತ್ರಿಶಾಲ** (ಗು). ೧. ಮೂರು ಸ್ತರಗಳಿರುವ : ತತ್ಕನಕಶಾಲಾಭ್ಯಂತರದೊಳ್ ತ್ರಿಶಾಲ ತ್ರಿಪೀಠೋಪಸ್ಥಿತಾರ್ಹತ್ಪ್ರತಿಮೋಪೇತ . . . ಶೋಭಿತ ಮುಮೇಕಯೋಜನಪ್ರಮಾಣವಿಸ್ತಾರಮುಮಾಗಿ (ಆದಿಪು. ೧೦-೩೦ ವ). (ನಾ). ೨. ಮೂರು ಅಂತಸ್ತಿನ ಮನೆ. ಧನುರ್ಭವನಾಂತಸ್ಥಿತನಾಗೆ ತದ್ಗುರು ಬಲೋಪೇತಂ ನಿಕೇತಂ ತ್ರಿಶಾಲಮೆನಿಕ್ಕುಂ (ಜಾತತಿ. ೪-೧೪); [ ಸಂ. ]

**ತ್ರಿಶುದ್ಧಿ** (ನಾ). ದೇಹ, ಮನಸ್ಸು ಮತ್ತು ಮಾತುಗಳೆಂಬ ತ್ರಿಕರಣಗಳಲ್ಲಿ ಶುದ್ಧವಾಗಿರುವುದು : ತ್ರಿಶುದ್ಧಿಯಿನನುಕಂಪೆವೆರಸು ಸಮಸ್ತ ಪ್ರಾಣಿಗಳ್ಗಭಯಂಗುಡುವ ದಯಾದತ್ತಿಯುಂ (ಆದಿಪು. ೧೫-೧೩ ವ) ; ಬಗೆ ಶುದ್ಧಂ ತನು ಶುದ್ಧಮಾ ಸ್ತುತಿ ಪದಾರ್ಥಂ ಶುದ್ಧಮಿಂತೀ ತ್ರಿಶುದ್ಧಿಗಳಿಂ ಧ್ಯಾನಿಸುವೆಮ್ಮ . . . ಪರಮೇಶ್ವರರ್ ಪರಸುಗಿಂ ವಾತ್ಸಲ್ಯದಿಂ (ಶಾಂತಿಪು. ೧-೫); ಚಕ್ರವರ್ತಿಗೃಹೀತಸದ್ದರ್ಶನನನಂತದರ್ಶನನಂ ತ್ರಿಶುದ್ಧಿಯಿಂ ತ್ರಿಃಪ್ರದಕ್ಷಿಣಂಗೆಯ್ದು (ಚಂದ್ರಪು. ೭-೨೭ ವ) ; ತ್ರಿಶುದ್ಧಿಯಾಗಿ ಹೇಳು ನಿನಗೆ ಆ ಧನವನ್ನು ಕೊಟ್ಟುಬಿಡುವೆನು (ಲಕ್ಷ್ಮೀಪ್ರ. ೧೬೪). [ ತ್ರಿ + ಶುದ್ಧಿ ]

**ತ್ರಿಶೂಲ** (ನಾ). ೧. ಮೂರು ಮೊನೆಗಳುಳ್ಳ ಈಟಿಯಂಥ ಒಂದು ಬಗೆಯ ಆಯುಧ ; ℙ ಇದು ಶಿವನ ಆಯುಧವೆಂದು ಪ್ರತೀತಿಯಿದೆ : ತ್ರಿಶೂಲ ಸಬಳ ತೆಕ್ಕೆಯ ಪರಿಗೆ ಕೊಂತಗಳನಾಂತಾಂತು ಧುರಧೀರ ಕಲಿವೀರ ಭಟರೆಯ್ತಂದರು ದುರುಳಮಥನನಾಜ್ಞೆಯಲಿ (ಜೀವಂಸಾಂ. ೫-೩೬). ೨. ದೇವತೆ ; ಸುರ. ೩. ಹುತ್ತ. ೪. ಕ್ರೂರನಾದವನು ; ಕ್ರೂರಿ. "ಸುರಪಾರ್ವಮರಿಯರ್ ಪುತ್ತದಿ ಕ್ರೂರರ್ಗೆ ನಾಲ್ಕು ತ್ರಿಶೂಲವೆಸರ್" (ನಾನಾಕಂ. ೧೧೨) ; "ಸುರರುಂ ಪಾಮರಿಯುರ್ಭುಜಂಗಭವನಂ ಕ್ರೂರರಂ ತ್ರಿಶೂಲಾಹ್ವಯಂ" (ನಾನಾರ. ೯೩). ℙ ಮೊದಲ ಅರ್ಥವನ್ನು ಬಿಟ್ಟು ಉಳಿದ ಅರ್ಥಗಳು ಸಂಸ್ಕೃತದಲ್ಲಿಲ್ಲ. [ ತ್ರಿ + ಶೂಲ ]

**ತ್ರಿಶೂಲಧರ** (ನಾ). ತ್ರಿಶೂಲವೆಂಬ ಆಯುಧವನ್ನು ಹಿಡಿದಿರುವವನು; ತ್ರಿಶೂಲಿ : ತಮತಮಗೆಲ್ಲ ನೊಸಲ ಕಣ್ಣವರು . . . ತಮತಮಗೆಲ್ಲ ಖಟ್ವಾಂಗ ಕಪಾಲ ತ್ರಿಶೂಲಧರರು (ಬಸವ. ೮೧೪). [ ಸಂ. ]

**ತ್ರಿಶೂಲರೇಖೆ** (ನಾ). [ಸಾಮುದ್ರಿ] ತ್ರಿಶೂಲದ ಆಕಾರವುಳ್ಳ ರೇಖೆ : ಹಣೆಯಲ್ಲಿ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ತ್ರಿಶೂಲರೇಖೆಯಿರಲು ಆಕೆ ಸಹಸ್ರ ಸ್ತ್ರೀಯರುಗಳಿಗೆ ಅಧಿಪಳಾಗುವಳು (ಸಾಮುಲ. ೧೪೧-೧೪). [ ತ್ರಿಶೂಲ + ರೇಖೆ ]

**ತ್ರಿಶೂಲಿ** (ನಾ). ೧. ತ್ರಿಶೂಲವೆಂಬ ಆಯುಧವನ್ನು ಧರಿಸಿದವನು; ಶಿವ : ಕೈಲಾಸೇಂದ್ರ ಡಮರುಗಧರ ತ್ರಿಶೂಲಿಯುಂ ದಿಕ್ಪಾಲಕನೆನಲು (ಬಿಜ್ಜಪು. ೬೩-೪೭). ೨. ತ್ರಿಶೂಲದಾಕಾರದ ಎಲೆಗಳನ್ನು ಉಳ್ಳ ಒಂದು ಬಗೆಯ ಸಸ್ಯ : "ಶೂಲಪತ್ರೀ – ತ್ರಿಶೂಲಿ" (ಒಷಧಿ. ೧೬೯). [ ಸಂ. ತ್ರಿಶೂಲಿನ್ ]

**ತ್ರಿಶೃಂಗಿ** (ನಾ). ಮೂರು ಶಿಖರಗಳನ್ನು ಉಳ್ಳ ಪರ್ವತ ; ತ್ರಿಕೂಟ ಪರ್ವತ : ಸುಗಂಧಿ ಶಿಖಿ ತ್ರಿಶೃಂಗಿ . . . ಪಾರಿಜಾತವೆಂಬ ಹದಿನಾಲ್ಕು ಕುಲಾಚಲಂಗಳೇ ಪೂರ್ವೋಕ್ತ ವಿಪುಳವೆಂಬ ಕೀಲಕಪರ್ವತಕ್ಕೆ ಪಶ್ಚಿಮ ದಿಕ್ಕಿನಲ್ಲಿಹವು (ವಿವೇಕ. ೨೧೫). [ ಸಂ. ತ್ರಿಶೃಂಗಿನ್ ]

**ತ್ರಿಶ್ರ** (ನಾ). [ಸಂಗೀತ] ತಾಳದ ಒಂದು ಅಂಗ ; ಮೂರು ಲಘುಗಳ ಕಾಲ : ೧) ತ್ರಿಶ್ರ ೨) ಚತುರಶ್ರ ೩) ಖಂಡ ೪) ಮಿಶ್ರ ೫) ಸಂಕೀರ್ಣ ಈ ಐದು ಜಾತಿಗಳೂ ಲಘುವಿಗೆ ಮಾತ್ರ ಸಲ್ಲುತ್ತವೆ. (ಸಂಗೀಷಂ. ೫೭). [ <ಸಂ. ತ್ರ್ಯಶ್ರ ]

**ತ್ರಿಷವಣ** (ನಾ). ಪ್ರಾತಃಕಾಲ, ಮಧ್ಯಾಹ್ನ, ಸಂಜೆಗಳೆಂಬ ದಿನದ ಮೂರು ಕಾಲಗಳು : ತ್ರಿಷವಣಸ್ನಾನದಲಿ ಜಡೆ ಬಂಧಿಸಿದ ಕೇಶದ ಜೀರ್ಣವಸನದ . . . ಮೂಢ ಜಡಾಂಧರಂತಿರೆ ವಸುಧೆಯಲಿ ಚರಿಸುತ್ತ ಲಿರ್ದನು ಲೀಲೆಯಲಿ ವಿದುರ (ನಿಭಾಗ. ೩-೧-೨೮)) ; ನಮ್ಮ ಆಯುಷ್ಯದ ತ್ರಿಭಾಗದ ಕಾಲದಲ್ಲಿಯೂ ಭಗವದ್ರೂಪಗಳನ್ನು ತಿಳಿದು ಪೂಜಿಸುವುದೇ ತ್ರಿಷವಣದಲ್ಲಿ ಹೋಮಿಸುವ ಯೋಗವೆಂದು ಹೇಳುತ್ತಾರೆ (ಹಸಾರ. ೧೨-೩ ಅವತಾರಿಕೆ). [ ಸಂ. ತ್ರಿಸವನ ]

**ತ್ರಿಷಷ್ಟಿ** (ನಾ). ಒಂದು ಸಂಖ್ಯೆ ; ಅರುವತ್ತು ಮೂರು.

**ತ್ರಿಷಷ್ಟಿಪುರಾತನರು** = [ಶೈವ] ಕಲಿಗಣನಾಥ, ರುದ್ರಪಶುಪತಿ. ಮುರುಘ, ಚೊಕ್ಕನಾಯನಾರ್, ತಿರುನೀಲಕಂಠ, ಕಾರಿಕಾಲಮ್ಮ, ನರಸಿಂಗಮೊನೆಯಾಂಡ, ಕಡವೂರಿಕಾರಿ, ತಿರುನೀಲಕಂಠಪಾಣರ್, ಚಿರುಪುಲಿಯಾಂಡ, ಸೋಮಾಸಿಮಾರ, ಅಚ್ಯುತ, ಮೊನೆಯಾಂಡ, ಮಾನಕಂಜರ, ಪಗಲ್ಪೋಳ, ಕಲಿಕಾಮ, ತಿರುಮೂಲ, ಪಗಲ್ತೊಣೆಯಾಂಡ, ಅರಿವಾಳ್ತಾಂಡ, ನೈಸ, ನೀಲನಕ್ಕ, ತಿರುಕುರುಪೆತೊಂಡ, ತಿರುನಾಳ್ಪೋವ, ಏಣಾದಿನಾಥ, ಸೇದಿರಾಜ, ಪೂಸಲೆಯಾಂಡ, ಕಂಗುಲಿಯ ಕಲಿಯ, ಇರಿಭಕ್ತ, ಕಳಚಂಗಪೆರುಮಾಳ್, ನಮಿನಂದಿ, ಅಮರನೀತಿ, ಕಲಿಕಂಭ, ಕಣ್ಣಪ್ಪ, ನಾಟ್ಯಭಿಂಗೆತಾಂಡಿ, ಒಲಘಂಧಮೂರ್ತಿ, ಅಃಪೂತಿಯಡಿಯ, ವಾಗೀಶ, ತಿರುಜ್ಞಾನಸಂಬಂಧಿ, ಕುಲಶ್ವರ್ಯ, ಮಂಗಾಯಕ್ಕರಸಿ, ಸೌಂದರಪಾಂಡ್ಯ, ವೇಳ್ಕುತ್ತ, ಮಹಾಕುಳಚಂಗ, ಸಾಂಖ್ಯ, ವಾಹಿಲ್ಯ, ಚಿರುತೊಣೆಯಾಂಡ, ಕಳಚತ್ತಿಯಾಂಡ, ಕೊಲ್ಪುಲಿಯಾಂಡ, ತಂಡೇಶ, ಅಚ್ಚಕಲಿಯನಾರ್, ಐಯಡಿಯ, ಚಿರುತೊಂಡ, ಅತಿಭಕ್ತ, ಕಣಂಬುಲ್ಲ ನಂಬಿ, ಇಳೆಯಾಂಡ ಗಂಡಿಮಾರ, ಅಡಮಘೆಯ ಪೆರುಮಾಳ್, ಇಹಃಪಗೆಯಾಂಡ, ಮೆರೆಮಿಂಡ, ಚೇರಮ, ಪಿರುವಾಳವಿಕುರಂಬ, ಜಡೆಯನಾಯನಾರ್, ಯಸ್ಯಜ್ಞಾನದೇವಿ ಮತ್ತು ಸೌಂದರನಂಬಿ ಎಂಬ ತಮಿಳುನಾಡಿನಲ್ಲಿ ಪ್ರಸಿದ್ಧರಾಗಿದ್ದ ೬೩ ಮಂದಿ ಶೈವಭಕ್ತರು. ಈ ಹೆಸರುಗಳ ಪಟ್ಟಿಯಲ್ಲಿ ವ್ಯತ್ಯಾಸಗಳಿವೆ: ಕರ್ನಾಟಕಕವಿಚಕ್ರವರ್ತಿವಿರಚಿತಮಪ್ಪ ತ್ರಿಷಷ್ಟಿಪುರಾತನಚಾರಿತ್ರದೊಳ್ (ತ್ರಿಪುವಿ. ೬೩-೨೩ ವ). **ತ್ರಿಷಷ್ಟಿಶಲಾಕಾಪುರುಷರು**; = [ಜೈನ] ವೃಷಭ, ಅಜಿತ, ಸಂಭವ, ಅಭಿನಂದನ, ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ, ಅನಂತ, ಧರ್ಮ, ಶಾಂತಿ, ಕುಂಥು, ಅರ, ಮಲ್ಲಿ, ಮುನಿಸುವ್ರತ, ನಮಿ, ನೇಮಿ, ಪಾರ್ಶ್ವ, ವರ್ಧಮಾನರೆಂಬ ೨೪ ಜನ ತೀರ್ಥಂಕರರೂ, ಭರತ, ಸಗರ, ಮಘವಾ, ಸನತ್ಕುಮಾರ, ಶಾಂತಿ, ಕುಂಥು, ಅರ, ಸುಭೌಮ ಪದ್ಮ, ಹರಿಷೇಣ, ಜಯಸೇನ, ಬ್ರಹ್ಮದತ್ತ ಎಂಬ ೧೨ ಜನ ಚಕ್ರವರ್ತಿಗಳೂ, ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ, ಪದ್ಮರೆಂಬ ೯ ಮಂದಿ ಬಲದೇವರೂ, ತ್ರಿಪೃಷ್ಠ, ದ್ವಿಪೃಷ್ಠ, ಸ್ವಯಂಭೂ, ಪುರುಷೋತ್ತಮ, ಪುರುಷಸಿಂಹ, ಪುಂಡರೀಕ, ದತ್ತ, ಲಕ್ಷ್ಮಣ, ಕೃಷ್ಣ ಎಂಬ ೯ ಮಂದಿ ವಾಸುದೇವರೂ, ಅಶ್ವಗ್ರೀವ, ತಾರಕ, ಮೇರಕ, ಮಧುಕೈಟಭ, ನಿಶುಂಭ, ಬಲಿ, ಪ್ರಹರಣ, ರಾವಣ, ಜರಾಸಂಧ ಎಂಬ ೯ ಮಂದಿ ಪ್ರತಿವಾಸುದೇವರೂ ಸೇರಿದಂತೆ ೬೩ ಜನ. [ ತ್ರಿ + ಷಷ್ಟಿ ]

**ತ್ರಿಷ್ಟುಪ್ಪು** (ನಾ). [ಛಂದ] ಪ್ರತಿಪಾದದಲ್ಲಿಯೂ ಹನ್ನೊಂದು ಅಕ್ಷರಗಳು ಇರುವ ಒಂದು ಛಂದಸ್ಸು : ಈ ಛಂದಸ್ಸುಗಳಿಗೆ ಕ್ರಮವಾಗಿ ೧. ಉಕ್ತೆ . . . ೧೧. ತ್ರಿಷ್ಟುಪ್ಪು . . . ೨೬. ಉತ್ಕೃತಿ ಎಂಬಿವು ಸಂಜ್ಞೆಗಳು (ಕ್ಯಷಿಡಿ. ೭೮). [ <ಸಂ. ತ್ರಿಷ್ಟುಭ್ ]

**ತ್ರಿಷ್ಯ** (ನಾ). ಮೂರು ಮೂಲೆಗಳಿಂದ ಕೂಡಿದುದು: ತ್ರಿಷ್ಯವೆಂಬುದು ಮೂರು ಮೂಲೆಯದು (ರತ್ನಶಾ. ೨೦-೧೪). [ <ಸಂ. ತ್ರ್ಯಸ್ರ ]

**ತ್ರಿಸಂಗು** (ನಾ). ಒಂದು ಬಗೆಯ ಸಸ್ಯ: "ಕಾಂತ_ಹರೇಣುಕ, ದೊಡ್ಡ ಯಾಲಕ್ಕಿ, ನೆಲದಾಳಿ, ತ್ರಿಸಂಗು, ಪ್ರಿಯಂಗು, ಮೊಲ್ಲೆ, ಹುಳಿಹತ್ತಿ" (ಒಷಧಿ. ೨೮). [ ? ]

**ತ್ರಿಸಂಚ** (ನಾ). ಮೂರರ ಕೂಟ; ಸಂಚಿತ, ಆಗಾಮಿ ಹಾಗೂ ಪ್ರಾರಬ್ಧಗಳೆಂಬ ಮೂರು ವಿಧವಾದ ಕರ್ಮಗಳ ಕೂಟ : ಸಂಚಿತ ಪ್ರಾರಬ್ಧ ಆಗಾಮಿಗಳೆಂಬ ತ್ರಿಸಂಚವನಱಿತು (ಮೋಳಿಮಾ. ೧೫೦-೫೭೦). [ ತ್ರಿ + ಸಂಚ್ಯ]

**ತ್ರಿಸಂಜೆ** (ನಾ). = ತ್ರಿಸಂಧ್ಯೆ ೧ : ಶ್ರೀಮತು ಕುನ್ತದೇವಗ್ಗೆಯಚಳಭಕುತಿಯಿಂ ಗನ್ಧಮಂ ಅಕ್ಷತೆ ಪುಷ್ಪಧೂಪದೀ(ದ್ವೀ)ಪ ನಿವೇದ್ಯಮಂ ತ್ರಿಸಂಜೆಯ ಕಟ್ಟಳೆಪೂಜೆಯಂ ಮಾಪ್ಪ್ರ (ಎಕ. XI, ದಾವಣ. ೧೫೫-೩೮ ;1124). [ <ಸಂ. ತ್ರಿಸಂಧ್ಯಾ ]

**ತ್ರಿಸಂಜ್ಞ** (ನಾ). ಮಾತು, ನೇತ್ರಚಲನೆ, ಅಂಗಚಲನೆಗಳೆಂಬ ಮೂರು ಬಗೆಯ ಚಲನೆಗಳು : ನಂದಗೋಪನುಂ ಯಶೋದೆಯುಮಳ ವಿಗಟಿದಟಿಲನೊಳಕೊಂಡು ಚಂಡಾಹಿತುಂಡಖಂಡಿತಪುಂಡರೀಕಾಕ್ಷವದನ ವಿನ್ಯಸ್ತನಿರಸ್ತತರಳತಾರನೇತ್ರರುಂ ನಿಸ್ಸಂಜ್ಞತ್ರಿಸಂಜ್ಞಗಾತ್ರರುಮಾಗೆ (ಜಗವಿ. ೩-೯೫ ವ). [ ತ್ರಿ + ಸಂಜ್ಞ]

**ತ್ರಿಸಂಧಿ** (ನಾ). = ತ್ರಿಸಂಧ್ಯೆ ೧ : ಪಂಚಾಕ್ಷರಿಯ ಪ್ರಣವವ ತಪ್ಪದೆ ತ್ರಿಸಂಧಿಯಲ್ಲಿ ನೆನಹುಗೊಳ್ಳಿ (ಶರಚ. ೪೮೨). ೨. ಲವಂಗ; ದೇವಕುಸುಮ : "ತ್ರಿಸಂಧಿಯದು ದೇವಕುಸುಮವೆನಿಕ್ಕುಂ" (ಮಂಗರಾ. ೪೦-೩೦). [ ಸಂ. ]

**ತ್ರಿಸಂಧಿಗ್ರಾಹಿ** (ನಾ). ಒಂದು ಶ್ಲೋಕವನ್ನು ಮೂರು ಬಾರಿ ಕೇಳುವಷ್ಟರಲ್ಲಿ ಅರ್ಥಮಾಡಿಕೊಂಡು ಜ್ಞಾಪಕದಲ್ಲಿಟ್ಟುಕೊಳ್ಳುವವನು. 'ಏಕಸಂಧಿಗ್ರಾಹಿ' ಪರಾ. [ ಸಂ. ತ್ರಿಸಂಧಿಗ್ರಾಹಿನ್ ]

**ತ್ರಿಸಂಧ್ಯಾಕಾಲ** (ನಾ). = ತ್ರಿಸಂಧ್ಯೆ ೧: "ನಿರುತಂ ಮುಂಬಗಲೆನುತಂದುಱಿ ನಡುಕಡೆವಗಲೆನಲ್ ತ್ರಿಸಂಧ್ಯಾಕಾಲಂ" (ಕವಿಕಂ. ೧೨೦). [ ತ್ರಿ + ಸಂಧ್ಯಾ + ಕಾಲ ]

**ತ್ರಿಸಂಧ್ಯಾಸೇವೆ** (ನಾ). ದಿನದ ಮೂರು ಸಂಧಿಕಾಲಗಳಾದ ಬೆಳಗು, ಮಧ್ಯಾಹ್ನ ಮತ್ತು ಸಂಜೆಗಳಲ್ಲಿ ಸಲ್ಲಿಸುವ ಸೇವೆ; ತ್ರಿಕಾಲಸೇವೆ: ನಿರಂತರ ತ್ರಿಸಂಧ್ಯಾಸೇವೆಯುಮೆಂದೆಂಟುಂ ತೆಱದ ಪೂಜೆಯುಮನರ್ಕಪೂಜೆಯುಮಂ ಮನ್ನಿಸಿ (ಆದಿಪು. ೧೫-೧೩ ವ). [ ಸಂ. ತ್ರಿಸಂಧ್ಯಾ ಸೇವಾ ]

**ತ್ರಿಸಂಧ್ಯೆ** (ನಾ). ೧. ದಿನದ ಮೂರುಂ ಸಂಧಿಕಾಲಗಳಂ; ಬೆಳಗು ಮಧ್ಯಾಹ್ನ ಮತ್ತು ಸಂಜೆ : ನಿಯತಂ ತ್ರಿಸಂಧ್ಯೆಯೊಳ್ ಸಮತೆಯಿನರು ಹತ್ತೂಜೆಯಿಂದಮಿರ್ಪಾತಂ ನಿಶ್ಚಯದಿಂ ಮೂಱನೆಯಂ ಸಾಮಾಯಿಕ ವ್ರತಧಾರಿ ಪೆಸರೊಳಂ ಸಾಮಯಿಕಂ (ಸುಕುಮಾ. ೬-೨೮); ಶ್ರೀಮೂಲ ಸ್ಥಾನದೇವರ ಸೂಳೆವಳ ಸೋವಿನಾಯಕನ ಮಗ ಸೂಳೆವಳ ಬಸವಣಂಗೆ ದೇವಿಯಲ್ಲಿ ತ್ರಿಸಂಧ್ಯೆಯೊಳಂ ಸಂಜೆವಱಿಯಂ ಬಾಜಂತ್ರಿಯುಣ ಹಱಿಕಾಱಗೆ[ಕೆ]ಯ್ಮತ್ತರು ಹನೆರೆಡು (ಶಾಸಪ. ೯೭-೧೦೦; 1179); ಗೆಬ್ಬೂರೊಳು ತ್ರಿಸಂಧ್ಯೆಯಲಿ ಅನುನಯಂ ಮಿಗೆ ತತ್‌ಪ್ರಸಾದಮನನು ಭವಿಸುತಿರೆ (ಬಸವು. ೫೬-೧೧). ೨. ಒಂದು ಬಗೆಯ ಹೂವು : ನಂದ್ಯಾವರ್ತ ತ್ರಿಸಂಧ್ಯಾ ಬಂಧೂಕ ಕದಂಬಕ . . . ಮಲ್ಲಿಕಾದ್ಯನೇಕ ಸುರಭಿ ಕುಸುಮಂಗಳಂ ಸಜ್ಜುಕಮಪ್ಪುವಂ ಪುಟ್ಟಿಯೊಳ್ ತೀವಿಕೊಂಡು (ಪಂಚತಂ. ೧೧೭-೪). [ ತ್ರಿ + ಸಂಧ್ಯೆ ]

**ತ್ರಿಸರ** (ನಾ). ಮೂರು ಎಳೆಗಳಿಂದ ಕೂಡಿದ (ಮುತ್ತಿನ) ಸರ : ಹಾರ ತ್ರಿ[ಪಾಠಾಂ. ತಿ]ಸರ ಪಂಚಸರ . . . ತಾತಿಯನಂದಾ ರಾಯನಿತ್ತ ನಂದನೆಗೆ (ರಾಮವಿ. ೮-೯೭); ತ್ರಿಸರ ಕೌಸ್ತುಭಸುಕೇಯೂರದಿಂ ಹಾರದಿಂ ದೊಸೆದುಟ್ಟ ಪೊಂಬಟ್ಟೆಯುಡುಗೆಯಿಂ ತುಡುಗೆಯಿಂದೆಸೆವ ನೀಲೋತ್ಪಲ ಶ್ಯಾಮಲಂ ಕೋಮಲಂ ಬರುತಿರ್ದಂ (ಜೈಮಿಭಾ. ೧೪-೨೭); ನಿಮ್ಮ ಗಣಂಗಳ ಕಥೆಯನು ತಂದರೆ ಕಂಕಣವನು ತ್ರಿಸರವನು ಕೊಡು ಎಂದು ತಡೆದು (ಭೈರಸೂ. ೫೯). 'ತಿಸರ$_1$' ಪರಾ. [ ತ್ರಿ + ಸರ$_6$ ]

**ತ್ರಿಸಾಕ್ಷಿ** (ನಾ). ೧. ದೇಹ, ಮಾತು ಮತ್ತು ಮನಸ್ಸುಗಳೆಂಬ ಮೂರು ಸಾಕ್ಷಿಗಳು. ೨. [ಜೈನ] ಆತ್ಮ, ಇಂದ್ರ ಮತ್ತು ಸಿದ್ಧ ಎಂಬ ಮೂರು ಸಾಕ್ಷಿಗಳು : ತ್ರಿಸಾಕ್ಷಿಯಿಂ ಚತುರ್ವಿಧಾಹಾರಶರೀರನಿವೃತ್ತಿ ಶಾಸನಮಪ್ಪ ಸಂನ್ಯಸನಪ್ರತ್ಯಾಖ್ಯಾನಮಂ ದಯಂಗೆಯ್ದು (ಸುಕುಮಾ. ೧೩-೯ ವ); ವಸ್ತ್ರಮಾಳಾಮಣಿಭೂಷಾವಳಿಯಂ ನಿಜತನುವಿಂ ದೇವರ ದೇವಂ ತ್ರಿಸಾಕ್ಷಿಯಿಂ ತೊಲಗಿಸಿದಂ (ಮಲ್ಲಿಪು. ೧೩-೧೮೪).

[ ತ್ರಿ + ಸಾಕ್ಷಿ ]

**ತ್ರಿಸಾಕ್ಷಿಕ** (ನಾ). [ಜೈನ] ಆತ್ಮ, ಇಂದ್ರ ಮತ್ತು ಸಿದ್ಧರೆಂಬ ಮೂರು ಬಗೆಯ ಸಾಕ್ಷಿಗಳನ್ನು ಉಳ್ಳವನು: ಸಮಸ್ತವಸ್ತುಗಳೊಳ್ ಸಮತೆಯಂ ಭಾವಿಸಿ ಬಾಹ್ಯಾಭ್ಯಂತರಪರಿಗ್ರಹಪರಿತ್ಯಾಗೋನ್ಮುಖಮಾನಸಂ ತ್ರಿಸಾಕ್ಷಿಕನಾಗಿ ವಸ್ತ್ರಾಭರಣ ಮಾಲ್ಯಾದಿಗಳಂ ಮೆಯ್ಯಿಂ ತೊಲಗಿಸಿ (ಆದಿಪು. ೯-೭೬ ವ); ಸಕಳೋರ್ವೀಶ್ವರ ನಾಕಿನಾಯಕಚಮೂಪರ್ಯುಷ್ಟಿಪಾತ್ರಂ ತ್ರಿಸಾಕ್ಷಿಕನಾಗಳ್ ಬಲಗೆಯ್ ನೊಸಲ್ಗಿಡದ ಕೆಯ್ ಪರ್ಯಂಕಮಪ್ಪಂತು ಸಾರ್ಚಿ . . . ಜಿನಶ್ರೀದೀಕ್ಷೆಯಂ ತಾಳ್ದಿದಂ (ಶಾಂತಿಪು. ೮-೧೩೩).

[ ಸಂ. ]

**ತ್ರಿಸಾಲ** (ನಾ). ಮೂರು ಪ್ರಾಕಾರಗಳು : ಲತಾಭವನಂಗಳಿಂದಂ ತ್ರಿಸಾಲ ಪರಿವೇಷ್ಟಿತಂಗಳಿಂದಂ (ರತ್ನಕ. ೧-೨೮ ವ). [ <ಸಂ. ತ್ರಿಶಾಲ ]

**ತ್ರಿಸೂಲಿ** (ನಾ).=ತ್ರಿಶೂಲಿ ೨: "ಜರಟಿ-ಹುಲ್ಲು, ತ್ರಿಸೂಲಿ" (ಓಷಧಿ. ೭೦).

[ <ಸಂ. ತ್ರಿಶೂಲಿನ್ ]

**ತ್ರಿಸೆ** (ನಾ). ಬಾಯಾರಿಕೆ ; ನೀರಡಿಕೆ ; ದಾಹ : ತ್ರಿಸೆ ಮೆಯ್ಯ ತಿನಿಸು ನೆಱೆ ಸೈರಿಸಬಾರದ ತಲೆಯ ನೋವು . . . ಕಿಡಿಸಲಾಱವೆ ನರರಂ (ಧರ್ಮಾಮೃ. ೧-೧೭೦). [ <ಸಂ. ತೃಷಾ ]

**ತ್ರಿಸ್ಥಾನ** (ನಾ). = ತ್ರಿಸ್ಥಾಯಿ : ಕೊರಲಂ ನಿಟ್ಟೆಗೆ ತಂದು ವಂಶಶ್ರುತಿಯಂ ತ್ರಿಸ್ಥಾನ ಸಂಶುದ್ಧಿವೆತ್ತಿರೆ ನಾನಾವಿಧದಿಂ ಪ್ರಯೋಗಿಸುವುಪಾಂಗಂಗಳ್ ರಸಂಬೆತ್ತು ಬಿತ್ತರಿಪಂತಾಣತಿ ಮಾಡಿದಂ (ಮಲ್ಲಿಪು. ೮-೨೫); ವಸ್ತುಕ ವರ್ಣಕ ತ್ರಿಸ್ಥಾನದ ಮೇಲೆ ನುಡಿವ ನುಡಿಗಳು ಇತ್ತಿತ್ತಲಲ್ಲದೆ ಅತ್ತಲಾರು ಬಲ್ಲರು (ಅವಚಂ. ೧೩೯-೭೪೧). [ ತ್ರಿ + ಸ್ಥಾನ ]

**ತ್ರಿಸ್ಥಾಯಿ** (ನಾ). [ಸಂಗೀತ] ಮಂದ್ರ, ಮಧ್ಯಮ ಮತ್ತು ತಾರಗಳೆಂಬ ಮೂರು ವಿಧವಾದ ಸ್ಥಾಯಿಗಳು : ಒಂದೇ ಆಧಾರಶ್ರುತಿಯಲ್ಲಿ ಈ ಎರಡು ಶಾರೀರಗಳೂ ತ್ರಿಸ್ಥಾಯಿಯಲ್ಲಿ ಲೀಲಾಜಾಲವಾಗಿ ಹಾಡಲಾಗುವುದಿಲ್ಲ (ಸಂಗೀಜಂ. ೧೬೭); ಆತನಿಗೆ ತ್ರಿಸ್ಥಾಯಿ ಶಾರೀರವಿತ್ತು (ಸಂಗೀತ. ೪೫). [ ತ್ರಿ + ಸ್ಥಾಯಿ ]

**ತ್ರಿಸ್ಥೂಳಂ** (ಅ). ಮೂರು ಪಟ್ಟು; ಮುಮ್ಮಡಿ [?] ವಿರಾಟಂ ತ್ರಿಸ್ಥೂಳಂ ಮಸಗಿ ಪುರಕ್ಷೋಭಮಾಗಿರ್ದು ಸಮಸ್ತಸಾಧನಸಹಿತಂ ನಡೆಯೆ (ಬಂಹರಿ. ೧೧-೪೧ ವ). [ ?]

**ತ್ರಿಸ್ನೇಹ** (ನಾ). [ವೈದ್ಯಶಾ] ತುಪ್ಪ, ಹರಳೆಣ್ಣೆ ಮತ್ತು ಎಳ್ಳೆಣ್ಣೆ ಈ ಮೂರು ಪದಾರ್ಥಗಳ ಮಿಶ್ರಣ : ವಾತಕ್ಕೆ ತ್ರಿಸ್ನೇಹವನ್ನು ಕೂಡಿಸಬೇಕಾದರೆ, ತುಪ್ಪ ಒಂದು ಪಾಲು, ಹರಳೆಣ್ಣೆ ಎರಡು ಪಾಲು, ಎಣ್ಣೆ ಮೂರು ಪಾಲು ಈ ರೀತಿ ಕೂಡಿಸುವುದು . . . ಸಕಲರೋಗಗಳನ್ನೂ ತ್ರಿಸ್ನೇಹವನ್ನೊತ್ತಿ ಅಭ್ಯಂಗನಸ್ನಾನಮಾಡಲು ಪರಿಹರಿಸುವುದು (ಸಕವೈ. ೨೭). [ ತ್ರಿ + ಸ್ನೇಹ ]

**ತ್ರಿಸ್ರೋತೆ** (ನಾ). ಮೂರು ಲೋಕಗಳಲ್ಲಿ ಪ್ರವಹಿಸುವ ನದಿ ; ಗಂಗೆ : ಆ ತ್ರಿಸ್ರೋತೆಯಾದ ನದಿಯು ಮಳೆಗಾಲದ ಪ್ರವಾಹದಿಂದ ಕೂಡಿ ಆ ದಡದಿಂದ ಈ ದಡದವರೆಗೆ ತುಂಬಿ ಹರಿಯುತ್ತಿತ್ತು (ಬಂಕಿಮ. ೨೯೪).

[ <ಸಂ. ತ್ರಿಸ್ರೋತಸ್ ]

**ತ್ರಿಳೋಕ** 'ತ್ರಿಲೋಕ' ನೋ.

**ತ್ರೀಂದ್ರಿಯ** (ನಾ). ಸ್ಪರ್ಶ, ರಸನ ಮತ್ತು ಘ್ರಾಣೇಂದ್ರಿಯಗಳೆಂಬ ಮೂರು ಇಂದ್ರಿಯಗಳನ್ನು ಉಳ್ಳ ಜೀವ ; ಕ್ರಿಮಿ ಕೀಟ ಮುಂತಾದುವು : ಸ್ಪರ್ಶನರಸನಘ್ರಾಣೇಂದ್ರಿಯ ಸಮನ್ವಿತಂಗಳಪ್ಪ ಪಿಪೀಲಿಕಾದಿ ತ್ರೀಂದ್ರಿಯಂಗಳ್ (ಆದಿಪು. ೧೧-೭೧ ವ); ಇಱುವೆ ಮೊದಲಾದ ತ್ರೀಂದ್ರಿಯಂಗಳ್ಗಂ (ತಸೂವ್ಯ. ೪೩); ಇಂದ್ರಗೋಪ ಪರ್ಣವೃಶ್ಚಿಕ ಸಪಾದ ಕ್ರಿಮಿಕೀಟಕಾದಿ ತ್ರೀಂದ್ರಿಯಂಗಳ್ ಸ್ಪರ್ಶನ ರಸನ ಘ್ರಾಣೇಂದ್ರಿಯ ಬೋಧಕಲಿತಂಗಳಪ್ಪುವು (ತತ್ತ್ವಪ್ರ. ೯೮). [ ತ್ರಿ + ಇಂದ್ರಿಯ ]

**ತ್ರುಟಿ** (ನಾ). ೧. ಸೂಕ್ಷ್ಮವಾದುದು ; ಅಣು : "ಅಣು ಸೂಕ್ಷ್ಮಂ ಲೇಶಂ ತ್ರುಟಿ ಕಣಂ ಲವಂ ಸ್ತೋಕ . . . ಕಿಱಿದಪ್ಪುದದು" (ವಸ್ತುಕೋ. ೧೦೭-೫೬). ೨. ಕಾಲದ ಅತಿ ಸೂಕ್ಷ್ಮವಾದ ಭಾಗ ; ಒಂದು ಕ್ಷಣದ ಕಾಲುಭಾಗ : ತ್ರುಟಿಕಾಲ ಯುಗದಂತಿಹುದು ನೀನುಳಿಯೆ (ನಿಘಾಗ. ೦೦-೨೭-೧೩); ಇಂಥ ಮೂರು ತ್ರಸರೇಣುಗಳಷ್ಟು ಅಂತರವನ್ನು ಕ್ರಮಿಸಲಿಕ್ಕೆ ಸೂರ್ಯನಿಗೆ ಬೇಕಾಗುವ ಕಾಲಕ್ಕೆ "ತ್ರುಟಿ" ಎಂಬ ಸಂಜ್ಞೆಯು (ಭಾಮ್ಯತ. ೮೯). ೩. ಲೋಪ ; ಭಂಗ : ಚಾರು, ಅವರೆಲ್ಲರ ಆತಿಥ್ಯದಲ್ಲಿ ತಿಲಮಾತ್ರ ತ್ರುಟಿ ಆಗಗೊಡುತ್ತಿರಲಿಲ್ಲ (ಇಪ್ಪಳ. ೨೮೪); ತಾಯಿ ಮಗಳ ಬಾಂಧವ್ಯದಲ್ಲಿ ತ್ರುಟಿಯಾಯಿತೆಂದು ಹೇಳದಿದ್ದರೂ ಸುಖದುಃಖದ ಮಾತುಗಳ ವಿನಿಮಯ ತೀರ ಕಡಿಮೆಯಾಯಿತು (ಸಂಜೀವಿ. ೭೫). ೪. ಒಂದು ಬಗೆಯ ಪರಿಮಳ ದ್ರವ್ಯ ; ಕಚೋರ : ಲವಂಗಂ ನಾಗೋರ್ವೀರುಹಕುಸುಮಮುಲ್ಲಂ ಮೆಟಸು ಸೈಂಧವಂ ಬೆಲ್ಲಂ ಪತ್ರಂ ತ್ರುಟಿಯಿನಿತುಮಂ ಕೂಡಿ . . . ಧೂಪಿಸಿ (ಲೋಕೋಪ. ೮-೫೪). ೫. ಮುರಿಯುವಿಕೆ ; ತುಂಡುಮಾಡುವಿಕೆ. ೬. ಮುರಿದ ಭಾಗ ; ತುಂಡು. ೭. ಮಾತು ಮುರಿಯುವಿಕೆ ; ವಚನಭಂಗ. ೮. ಹಾನಿ ; ನಷ್ಟ. ೯. ಸಂದೇಹ ; ಸಂಶಯ. ೧೦. ಸಣ್ಣ ಜಾತಿಯ ಏಲಕ್ಕಿ. ೧೧. ಒಂದು ಬಗೆಯ ವೃಕ್ಷ. [ ಸಂ. ]

**ತ್ರುಟಿತ** (ಗು). ೧. ಭಂಗವಾದ ; ಮುರಿದ : ಕೊಪ್ಪಳದ ತ್ರುಟಿತ ಶಾಸನವು . . . ಈ ಸಂಗ್ರಹದಲ್ಲಿ ಮೊದಲಿನದು (ಶಾಸಪ. ೨ ಮುನ್ನುಡಿ). ೨ ನೋವಾದ; ಗಾಯಗೊಂಡ. (ನಾ). ೩. ಭಂಗ ; ಭಗ್ನ

ವಾದಂದಂ : ಪರಂಪರೆ ತ್ರುಟಿತವಾಗಿದೆ ಎಂಬುದರಿಂದ ಅವನು ಮೊದಲಿಗನಲ್ಲ ಎಂದು ತಿಳಿಯಬೇಕಾಗಿಲ್ಲ (ಕೆಸಾಚ. ೨೭೯). ೪. [ಜೈನ] ಒಂದು ಕಾಲಪ್ರಮಾಣ : ಎಂಬತ್ತುನಾಲ್ಕು ಲಕ್ಷ ಗುಣಿತಕ್ರಮದಿಂದ ಕುಮುದಾಂಗ ಮತ್ತು ಕುಮುದ . . . ತ್ರುಟಿತಾಂಗ ಮತ್ತು ತ್ರುಟಿತ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಪ. ೩೦೭). [ ಸಂ. ]

**ತ್ರುಟಿತಾಂಗ** (ನಾ). [ಜೈನ] ಒಂದು ಕಾಲಪ್ರಮಾಣ : ಎಂಬತ್ತುನಾಲ್ಕು ಲಕ್ಷ ಗುಣಿತಕ್ರಮದಿಂದ ಕುಮುದಾಂಗ ಮತ್ತು ಕುಮುದ . . . ತ್ರುಟಿತಾಂಗ ಮತ್ತು ತ್ರುಟಿತ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಪ. ೩೦೭). [ ಸಂ. ]

**ತ್ರುವ್ವಿ** (ನಾ). ಹಾಡುವಾಗ ಪ್ರತಿಸಾಲಿನ ಕೊನೆಗೆ ಬಳಸುವ ಒಂದು ಶಬ್ದ : ಮಣ್ಣೊಳಗಾಡಿ ನೀ ಬಂದೆಯಾ ತ್ರುವ್ವಿ ಬೆಣ್ಣೆಯ ಬೇಡೆ ಬಯ್ದರೆ ಕಂದ ತ್ರುವ್ವಿ (ಪುರಂದ. ೪-೨೦೦-೭). 'ಸಂವ್ವಿ' ಪರಾ. [ ? ]

**ತ್ರೇತಾಗ್ನಿ** (ನಾ). ೧. ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯ ಗಳೆಂಬ ಮೂರು ಅಗ್ನಿಗಳು : "ವಹ್ನಿತ್ರಿತಯಂ ತ್ರೇತಾಗ್ನಿ" (ವಸ್ತುಕೋ. ೫೮-೯೦). ೨. ಅಂತಹ ಮೂರು ಅಗ್ನಿಗಳನ್ನು ಇರಿಸಿ ಕೊಂಡವನು. [ ಸಂ. ]

**ತ್ರೇತಾಯುಗ** (ನಾ). ಕೃತ, ತ್ರೇತೆ ದ್ವಾಪರ ಮತ್ತು ಕಲಿ ಎಂಬ ನಾಲ್ಕು ಯುಗಗಳಲ್ಲಿ ಎರಡನೆಯ ಯುಗ : ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದ ವೆಂದೆನಯ್ಯ (ಅವಚಂ. ೧೩-೫೩) ; ನಡೆವುದಾದಿಯುಗಂಗಳೊಳು ನಾಲ್ಕಡಿ ಯೊಳುನ್ನತಧರ್ಮವಾ ಮೂಜಡಿಯ ನಡವುದು ಧರ್ಮವೂ ತ್ರೇತಾ ಯುಗಂಗಳಲ್ಲಿ (ಬಸಪು. ೨-೫). [ ಸಂ. ]

**ತ್ರೇತೆ** (ನಾ). ೧. ಮೂರರ ಗುಂಪು,-ಸಮೂಹ. ೨. = ತ್ರೇತಾಗ್ನಿ೧ : "ಹುತಾಶನ ತ್ರಿತಯನಾಮಕಂ ತ್ರೇತೆ" (ವಸ್ತುಕೋ. ೧೩೯-೧೨೭) ; "ಅಗ್ನಿ ಮೂಱುೊಡನುಡಿವುದುಂ ತ್ರೇತೆಯೆಂಬುದು" (ಮಂಗರಾ. ೧೩೮-೨). ೩. = ತ್ರೇತಾಯುಗ : ಕೃತಘ್ನಭಾವಂ ತ್ರೇತಾಪ್ರವೇಶದೊಳ್ . . . ಅಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ) ; ತ್ರೇತೆಯಲಿ ರಘುರಾಮನಾಮದಿ ಸೀತೆಯಂ ಹೋಗಾಡಿ (ಬಸಪು. ೫೪-೩೯) ; ಕೃತಯುಗದವರು ತ್ರೇತೆಯವರಿಂದತಿಪರಾಕ್ರಮಯುಕ್ತರು (ಕುವ್ಯಾಆ. ೧೧-೩೩) ; ಮಂಥರೆಯ ಈ ಮಮತೆಯಾವರ್ತದೊಳ್, ಸುಟ್ಟುರಿಗೆ ಧೂಳಿ ತರಗೆಲೆ ತಿರ್ರನೆಯೆ ಸುತ್ತುವೋಲ್ ಸಿಲ್ಕಿ ಘೂರ್ಣಿಸದಿಹುದೆ ಪೇಳ್ ತ್ರೇತಾಮಹಾಯುಗಂ! (ಶ್ರೀರಾಮಾ. ೨೭-೭೧೮). ೪. ಮೂರರ ಗರ : ಕೃತದಲ್ಲಿ ನಾಲ್ಕು ಅಂಕಗಳಿರುವುವು. ಆ ಅಂಕವು ಬಿದ್ದರೆ ತ್ರೇತೆ (೩), ದ್ವಾಪರ (೨), ಕಲಿ (೧) ಎಂಬ ಗರಗಳ ಅಂಕಗಳೂ ಸೇರಿ ಹತ್ತಾಗುವುವು (ಬೃಹ್ಮಭಾ. ೨೧೭ ಅಡಿಟಿ). [ ಸಂ. ತ್ರೇತಾ ]

**ತ್ರೈಕಾಲ** (ನಾ). ಭೂತ, ಭವಿಷ್ಯತ್ತು ಮತ್ತು ವರ್ತಮಾನಗಳೆಂಬ ಮೂರು ಕಾಲಗಳು: ಭುವನದೊಳು ತ್ರೈಕಾಲ ತಪಸಿನ ವಿವರವನು ವಿರಚಿಸಿದನು (ಬಿಜ್ಜಪು. ೧-೫೦). [ ಸಂ. ]

**ತ್ರೈಕಾಲಿಕ** (ಗು). ೧. ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂ ಕಾಲಗಳೆಂಬ ಮೂರು ಕಾಲಗಳಲ್ಲಿಯೂ ಉಂಟಾಗುವ. ೨. ಭೂತ, ಭವಿಷ್ಯತ್ತು ಮತ್ತು ವರ್ತಮಾನಗಳೆಂಬ ಮೂರು ಕಾಲಗಳಲ್ಲಿಯೂ ಇರುವ. [ ಸಂ. ]

**ತ್ರೈಕಾಲ್ಯ** (ಗು). ೧. ತ್ರಿಕಾಲಗಳಿಗೂ ಸಂಬಂಧಪಟ್ಟ; ೨. ಭೂತ, ಭವಿಷ್ಯತ್ತು ಮತ್ತು ವರ್ತಮಾನ ಕಾಲಗಳ ತಿಳಿವನ್ನು ಹೊಂದಿದ. 'ತ್ರೈಕಾಲ್ಯ ಯೋಗಿ' ಪರಾ. [ ಸಂ. ]

**ತ್ರೈಕಾಲ್ಯಯೋಗಿ** (ನಾ). ತ್ರಿಕಾಲಜ್ಞಾನಿಯಾದ ಯೋಗಿ : ತ್ರೈಕಾಲ್ಯ ಯೋಗಿ ಬಂದುದಂ . . . ಕೇಕಿಕೋಕಿಳಕಾಕಳಿಯಿಂದಱಿದು ಬನದೊಳ ಱಿಸಿದನಾಗಳ್ (ಚಂದ್ರಪು. ೨-೮೧). [ ತ್ರೈಕಾಲ್ಯ + ಯೋಗಿ ]

**ತ್ರೈಗುಣ್ಯ** (ನಾ). ಸತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ಮೂರು ಗುಣಗಳು ; ತ್ರಿಗುಣ : ಪುಣ್ಯಹೀನರನಾರಯಿದು ಕಾರುಣ್ಯದಿಂದಂ ಸಲಹುವಂ ತ್ರೈಗುಣ್ಯಕಾರಣಪುರುಷನಲ್ಲಾ ಭಕ್ತಿಭಂಡಾರಿ (ಬಸಪು. ೩೦-೧೮); ಜಗದಂಡಕರಂಡಷಂಡನಿರ್ಮಾಣಪ್ರವೀಣನುಂ ತ್ರೈಗುಣ್ಯವಾಸನಾತೀತಂ . . . ಒಪ್ಪುತ್ತಿರ್ದಂ (ಶಬಶಂ. ೧-೮೧ ವ). [ ಸಂ. ]

**ತ್ರೈಜಗ** (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳಗಳೆಂಬ ಮೂರು ಲೋಕಗಳು ; ತ್ರಿಜಗ : ಇವರೆಲ್ಲರೂ ಯೋನಿಜರೆಂಬುದ ತ್ರೈಜಗ ಬಲ್ಲುದು (ಬಸವ. ೫೪೭) ; ಕುಹಕಮತಿಗಳು ತಂದರೈ ತ್ರೈಜಗಕೆ ತಲ್ಲಣವ (ಕುವ್ಯಾಆ. ೧೩-೮) ; ಭಾರವಾಗಿದ್ದರೆ ಹಣದ ಕೈಚೀಲವು ಹಗುರವಾಗಿದ್ದರೆ ಮನವು ಅಂತಹ ಮನುಜನಿಗಾವುದಸಾಧ್ಯವು ತ್ರೈಜಗವಾತನ ವಶವು (ಇಂಚಾಪ. ೨೩೨-೪೭). [ <ಸಂ. ತ್ರಿಜಗತ್ ]

**ತ್ರೈಜಗದೀಶ** (ನಾ). ಮೂರು ಲೋಕಗಳ ಒಡೆಯ : ತ್ರೈಜಗದೀಶ . . . ರಕ್ಷಿಸು ನಮ್ಮನನವರತ (ಹರಿಸಾ. ೧೧). [ <ಸಂ. ತ್ರಿಜಗದೀಶ ]

**ತ್ರೈತ** (ನಾ). ಮೂರರ ಗುಂಪು ; ತ್ರಿತಯ : ಎಲ್ಲ ಜ್ಞಾನಕರ್ಮ ಗಳಲ್ಲಿ ಕರ್ತೃ ಕರ್ಮ ಕ್ರಿಯಾಪದಗಳ ತ್ರೈತವನ್ನೊ ತ್ರಿಪುಟಿಯನ್ನೊ ಆಶ್ರಯಿಸಲೇಬೇಕು (ವಿಚಾಮಂ. ೫೨). [ ಸಂ. ]

**ತ್ರೈದಶ್ಯ** (ಗು). ದೇವಲೋಕಕ್ಕೆ ಸಂಬಂಧಿಸಿದ ; ಸ್ವರ್ಗೀಯ : ಭೂಭೃತ್ಸುತೆ ತಾಂ ತ್ರೈದಶ್ಯಯೋಷಿಜ್ಜನಮನನುದಿನಂ ಗೆಲ್ವುದಾಶ್ಚರ್ಯಮೇ ದಲ್ (ರಾಜಶೇ. ೭-೬೨). [ <ಸಂ. ತ್ರಿದಶ ]

**ತ್ರೈಧರೆ** (ನಾ). = ತ್ರೈಜಗ : ತ್ರೈಧರೆಗೆ ಮಾರ್ಗವ ಯುಕ್ತಿಸಿದ ಸರ್ವಜ್ಞ ಚಿನ್ಮಯ ಜಿಷ್ಣು ತೀರ್ಥಕರ (ಜನಭಾ. ೬೨-೧೩). [ <ಸಂ. ತ್ರಿಧರಾ ]

**ತ್ರೈನೇತ್ರ** (ನಾ). ಮೂರು ಕಣ್ಣುಗಳು ; ತ್ರಿನೇತ್ರ. [ ಸಂ. ]

**ತ್ರೈಪುಂಡ್ರ** (ನಾ). = ತ್ರಿಪುಂಡ್ರ : ಲಲಾಟದೊಳು ತ್ರೈಪುಂಡ್ರಮುಜ್ವಳಿಸೆ (ಬಸಪು. ೪-೧೧). 'ತ್ರೈಪುಂಡ್ರಧಾರಿ' ಪರಾ. [ ಸಂ. ]

**ತ್ರೈಪುಂಡ್ರಧಾರಿ** (ನಾ). ತ್ರಿಪುಂಡ್ರವನ್ನು ಧರಿಸಿರುವವನು : ಆ ತ್ರೈಪುಂಡ್ರಧಾರಿಗೆ ನಮಿಸಿ ಬರುತಿಹ ಗಂಡ ಲಕ್ಷ್ಮಣನಿದಿರಲೇಱದ ಹೊಳೆವ ಮಣಿರಥವ (ಕೌಶಿರಾ. ೨೭-೨೫). [ ಸಂ. ತ್ರೈಪುಂಡ್ರಧಾರಿನ್ ]

**ತ್ರೈಪುರ** (ನಾ). ದೈತ್ಯರ ಮೂರು ನಗರಗಳು ; ತ್ರಿಪುರ : ಕೋಪದಿಂ ಮದಗಜದನುಜನಂ ಮೆಟ್ಟಿ ಸೀಳಿದನು ತ್ರೈಪುರಂಗಳನುರುಪಿದನು (ಬಸಪು. ೧೭-೩). [ ಸಂ. ]

**ತ್ರೈಪುರುಷ** (ನಾ). ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರೆಂಬ ತ್ರಿಮೂರ್ತಿಗಳು : ಅಖಿಳ ಜಗತೀತಳಕ್ಕೆ ಪ್ರತ್ಯಕ್ಷಂ ಮಾಡಿ ತೋಱುವನ್ತೆ ಕಟಕಕಮಳಾರ್ಕವೆಸರ ತ್ರೈಪುರುಷದೇವರ ಶಾಲೆಯುಮಂ . . . ಮಾಡಿಸಿ (ಕಇಆ. ೫-೨-೧೭೨ ; 1058) ; ಧಾರಾಪೂರ್ವ್ವಕಂ ಮಾಡಿ ತ್ರೈಪುರುಷ ದೇವರಂ ನೋಡಿ (ಸಾಇಇ. XX, ೬೫-೮ ; 1101). [ ಸಂ. ]

**ತ್ರೈಭುವನ** (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳಗಳೆಂಬ ಮೂರು ಲೋಕಗಳು ; ತ್ರಿಭುವನ: ವಂಗೀವಿಷಯಂ ತ್ರೈಭುವನಂಗಳೊಳಗ್ಗಳದ ವಿಷಯಮುಪಮಾತೀತಂ (ಶಾಂತಿಪು. ೧-೪೨) ; ಈತನೇ ತ್ರೈಭುವನ ಪಾವನನಕ್ಕ (ಬಸಪು. ೫-೪೯) ; ತ್ರೈಭುವನದೊಳ್ನಾನೇ ಕೃತಾರ್ಥನಲ್ಲಾ (ಜೈಮಿಭಾ. ೨-೪೭). [ ಸಂ. ]

**ತ್ರೈಮಲ** (ನಾ). ಹೆಣ್ಣು, ಹೊನ್ನು ಮತ್ತು ಮಣ್ಣುಗಳೆಂಬ ಮೂರು ವಿಧವಾದ ಮಲಗಳು; ತ್ರಿಮಲ : ಕಾಶಿ ಕಂಚಡಿಯೇಕೆ ... ಕೇಶವನು ಕಿತ್ತಿಕೊಳಲೇಕೆ ತ್ರೈಮಲದ ಆಶೆ ಬಿಡದನಕ (ಸರ್ವಜ್ಞ. ೫೭೩). [ ಸಂ. ]

**ತ್ರೈಮಾಸಿಕ** (ಗು). ೧. ಮೂರು ತಿಂಗಳಿಗೊಮ್ಮೆ ನಡೆಯುವ : ಇದೇ ವಿಷಯದ ಮೇಲೆ ತ್ರೈಮಾಸಿಕ ಪರೀಕ್ಷೆಯಲ್ಲಿ . . . ಪ್ರಬಂಧವೊಂದನ್ನು ಬರೆಯಿರಿ (ರೂಪಸಂ. ೫೩). (ನಾ). **೨.** ಸತ್ತವರಿಗಾಗಿ ಮೂರನೆಯ ತಿಂಗಳಿನಲ್ಲಿ ಮಾಡುವ ತಿಥಿ. ೩. ಮೂರು ತಿಂಗಳಿಗೊಮ್ಮೆ ಹೊರಡುವ ಪತ್ರಿಕೆ : ಹಿಂದಿನ ವರ್ಷದ ತ್ರೈಮಾಸಿಕವೊಂದರಲ್ಲಿ ಈ ಕತೆ ಪ್ರಕಟವಾಗಿದೆ (ರೂಢಿ).. 'ಮಾಸಿಕ' ಪರಾ. [ ಸಂ. ]

**ತ್ರೈಮೂರುತಿ** (ನಾ). = ತ್ರೈಪುರುಷ : ಸತಿಯರ ಬಲೆಗೆ ಸಿಲುಕದರಾರು ತ್ರೈಮೂರುತಿಗಳೊಳಗಾಗಿ (ತೊರರಾ. ೧-೫-೨೫).

[ <ಸಂ. ತ್ರಿಮೂರ್ತಿ ]

**ತ್ರೈಮೂರ್ತಿ** (ನಾ). = ತ್ರೈಪುರುಷ : ತ್ರೈಮೂರ್ತಿಯೊಳ್ ಸತ್ವಮೂರ್ತಿಯೊ ನೀಂ (ಜಗವಿ. ೧೮-೭೭) ; ಆದಿಯಲಿ ಕಮಲಾಸನನು ಮಧುಸೂದನನು ಮಧ್ಯದಲಿ ಮೇಲಣ ಹಾದಿಯಲಿ ಗಿರಿಜೇಶನಿರೆ ತ್ರೈಮೂರ್ತಿಮಯವಾಗಿ ಕಾದುಕೊಂಡಿಹರಖಿಳಲೋಕವಂ (ಕುಮ್ಯಾಉ. ೪-೧೦೭) ; ತ್ರೈಮೂರ್ತಿಗಳ ದಿವ್ಯಶಕ್ತಿಯಿಂ . . . ತೀವಿದ ಮಹಾಶರವನು . . . ಕಿವಿವರೆಗೆ ತೆಗೆದಾರ್ದು ಫಲುಗುಣನೆಚ್ಚಂ (ಜೈಮಿಭಾ. ೧೩-೪೭). [ <ಸಂ. ತ್ರಿಮೂರ್ತಿ ]

**ತ್ರೈರಾಶಿ** (ನಾ). [ಗಣಿತ] ಗಣಿತದ ಒಂದು ವಿಧಾನ ; ಮೂರು ಅಂಶಗಳ ಸಹಾಯದಿಂದ ನಾಲ್ಕನೆಯ ಅಂಶವನ್ನು ಕಂಡುಹಿಡಿಯುವ ಮಾರ್ಗ : ಈ ಪುಸ್ತಕದಲ್ಲಿ ಕ್ಷೇತ್ರಗಣಿತ, ತ್ರೈರಾಶಿ . . . ಸಮಕೋಶಕ್ಕೆ ಸಂಬಂಧಪಟ್ಟ ಲೆಕ್ಕಗಳೂ, ಒಟ್ಟು ೨೪೭ ಲೆಕ್ಕಗಳು ಒಂಬತ್ತು ಅಧ್ಯಾಯಗಳಲ್ಲಿ ಕೊಡಲ್ಪಟ್ಟಿವೆ (ಗಸಿಜ. ೧೫). 'ಪಂಚರಾಶಿ' ಪರಾ. [ <ಸಂ. ತ್ರೈರಾಶಿಕ ]

**ತ್ರೈರಾಶಿಕ** (ನಾ). = ತ್ರೈರಾಶಿ : ತ್ರೈರಾಶಿಕದ ಗಣಿತಮಱಿವುದರ್ಕೆ ಸೂತ್ರಂ (ವ್ಯವಹಾ. ೭-೬) ; ಆಗ ನಾವು ತ್ರೈರಾಶಿಕ ಹಾಕಿ . . . ೨೮ ಜನರು ಒಂದು ತಾಸು ಕೆಲಸಮಾಡಬೇಕು ಎನ್ನುವೆವು (ಬಾಂಪ್ರ. II, ೧೦೦೧). [ ಸಂ. ]

**ತ್ರೈರಾಸಿಕ** (ನಾ). = ತ್ರೈರಾಶಿ : ಯಿಾ ಪ್ರಕಾರದಿಂ ಯಿಾವೆಯನಿಟ್ಟು ಫಲದಿಂ ಗುಣಿಸಿ ಪ್ರಮಾಣದಿಂದ ಭಾಗಿಸುವುದು ತ್ರೈರಾಸಿಕದ ಕ್ರಮ (ಭಾಸ್ಕರ. ೧೬-೪). [ <ಸಂ. ತ್ರೈರಾಶಿಕ ]

**ತ್ರೈಲೋಕ್ಯ, ತ್ರೈಳೋಕ್ಯ** (ನಾ). = ತ್ರಿಭುವನ : ತ್ರೈಲೋಕ್ಯಕ್ಷೋಭಕಾರಣ ತೀರ್ಥಕರ ಪುಣ್ಯಹೇತುಗಳಪ್ಪ ಷೋಡಶಭಾವನೆಗಳಂ ಭಾವಿಸಿ (ಆದಿಪು. ೭-೩೩ ವ) ; ಮಾರ್ಗಾಲಂಬನಮಾದುದು ತತ್ತ್ರೈಲೋಕ್ಯಶರಣ್ಯಸೇವ್ಯ ದಿವ್ಯಧ್ವನಿಯಿಂ (ಶಾಂತಿಪು. ೧೨-೨೮). ತ್ರೈಳೋಕ್ಯ.

**ತ್ರೈಲೋಕ್ಯಮಲ್ಲ, ತ್ರೈಳೋಕ್ಯಮಲ್ಲ** = ಮೂರು ಲೋಕಗಳಲ್ಲಿಯೂ ವೀರನೆಂದು ಪ್ರಸಿದ್ಧನಾದವನು ; ಒಂದು ಬಿರುದು : ಶ್ರೀಮತ್ತ್ರೈಲೋಕ್ಯಮಲ್ಲ ಭುಜಬಳ ಶಾನ್ತರದೇವಂ (ಎಕ. VIII, ನಗರ. ೫೯-೧೧ ; 1066) ; ಶ್ರೀಮತ್ತ್ರೈಳೋಕ್ಯಮಲ್ಲದೇವರ ವಿಜಯರಾಜ್ಯಂ ಪ್ರವರ್ತ್ತಿಸೆ (ಇಆ. IV, ೧೭೯-೫ ; 1048) ; ಶ್ರೀಮತ್ತ್ರೈಳೋಕ್ಯಮಲ್ಲ ದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂ ಸಲುತ್ತಮಿರೆ (ಸಾಇಇ. XX, ೪೦-೪ ; 1066). [ ಸಂ. ]

**ತ್ರೈಲೋಕ್ಯಗುರು** (ನಾ). = ತ್ರಿಲೋಕಗುರು : ಮನುಷ್ಯದೇಹಮಂ ಕೆಯ್ಕೊಂಡು ತ್ರೈಲೋಕ್ಯಗುರು ಗುರುತನೂಜನ ಕೆಯ್ಯಂ ಪಿಡಿದರ ಮನೆಯಂ ಪೊಱಮಟ್ಟು . . . ಬೀಡಿಂಗೆ ವಂದು ಕುಂತಿಗೇಕಾಂತದೊಳಿಂತೆಂದಂ (ಪಂಪಭಾ. ೯-೭೦ ವ) ; ತ್ರೈಲೋಕ್ಯಗುರುಗಳ ಎಮಪ್ಪ ಕೀರ್ತಿಧರಗುರುಗಳ ಸಭಾಮಂಡಳಮಂ ಪೊಱಮಟ್ಟೊಂದಡಿ ಪರ್ವೊಡಂ ತಕ್ಕುದಲ್ತು (ಶಾಂತಿಪು. ೪-೮೨ ವ). [ ತ್ರೈಲೋಕ್ಯ + ಗುರು₂ ]

**ತ್ರೈಲೋಕ್ಯನಾಥ, ತ್ರೈಳೋಕ್ಯನಾಥ** (ನಾ). = ತ್ರಿಲೋಕಾಧಿಪತಿ : ದೇವೋತ್ತಮಾಂಗಂಗಳ್ಗಂ ಬಾಗಿದುವಾ ತ್ರೈಲೋಕ್ಯನಾಥೋದಯಮನಱಿಪುವಂತಾ ತ್ರಿಳೋಕಕ್ಕಮಾಗಳ್ (ಆದಿಪು. ೭-೩೮) ; ತ್ರೈಲೋಕ್ಯನಾಥನೋಲಗಸಾಲೆಯೊಳಮರೇಂದ್ರನೊಡನೆ . . . ಕುಳ್ಳಿರ್ದೋಲಗಿಸುತ್ತಿರ್ಪನಟ್ಟಿಯಿಂ ಜಿನಪತಿಯಂ (ಸುಕುಮಾ. ೯-೩೮) ; ಉದ್ಭವಿಸಿದಂ ತ್ರೈಲೋಕ್ಯನಾಥಂ ಜಿನಂ (ಪುಷ್ಪಪು. ೧೦-೨). **ತ್ರೈಳೋಕ್ಯನಾಥ :** ತ್ರೈಳೋಕ್ಯನಾಥವಿಭವ ಸಮಾಳೋಕನ ಜಾತಹರ್ಷಪುಳಕವಿಳಾಸಮ್ಯಾಳಂಬಮಾಯ್ತು . . . ಸಕಳಸಸ್ಯಸಮೂಹಂ (ಚಂದ್ರಪು. ೧೬-೪೩).

[ ತ್ರೈಲೋಕ್ಯ + ನಾಥ ]

**ತ್ರೈಲೋಕ್ಯನೇತ್ರ** (ನಾ). ಮೂರು ಲೋಕಗಳಿಗೂ ಕಣ್ಣನಂತಿರುವವನು; ಸೂರ್ಯ : ತ್ರೈಲೋಕ್ಯನೇತ್ರಂ ತ್ರಿವೇದಮಯಂ ಧ್ವಸ್ತತಮಸ್ತಮಂ ಹೃತನಿಶಾಟಾಟೋಪನೊಲ್ದೀಗೆ ಗೌತಮಗೋತ್ರಾಂಬುಜಷಂಡಚಂಡಕಿರಣಂ ಗಾದಿತ್ಯನುತ್ಸಾಹಮಂ (ಪಂಚತಂ. ೨-೧೨). [ ತ್ರೈಲೋಕ್ಯ + ನೇತ್ರ ]

**ತ್ರೈಲೋಕ್ಯಮೋಹಿನಿ** (ನಾ). ಮೂರು ಲೋಕಗಳನ್ನು ಮೋಹಗೊಳಿಸುವಂಥ ಒಂದು ಬಗೆಯ ವಶೀಕರಣವಿದ್ಯೆ : ಶ್ರೀಗಂಧಮಂ, ಗೋರೋಚನಮಂ . . . ಎತ್ತುನಾಲಿಗೆ, ವಿಷ್ಣುಕ್ರಾಂತಿ ಇವಂ ಒಂದೊಂದಾಗಿ ಮರ್ದಿಸಿ ತಿಲಕವಿಡೆ ತ್ರೈಲೋಕ್ಯಮೋಹಿನಿ (ವಿಮ್ಯವಿ. ೨೨೦). [ ತ್ರೈಲೋಕ್ಯ + ಮೋಹಿನಿ ]

**ತ್ರೈಲೋಕ್ಯಲೋಚನ** (ನಾ).೧.=ತ್ರೈಲೋಕ್ಯನೇತ್ರ. **೨.** ಜಿನ : ಅಂತು ವಜ್ರದಂತ ಚಕ್ರವರ್ತಿ ಲಬ್ಧಾವಧಿಲೋಚನಂ ತ್ರೈಲೋಕ್ಯಲೋಚನಂಗೆ ಸಾಷ್ಟಾಂಗ ಪ್ರಣತನಾಗಿ (ಆದಿಪು. ೩-೨೯ ವ). [ತ್ರೈಲೋಕ್ಯ+ಲೋಚನ]

**ತ್ರೈಲೋಕ್ಯಸಾರ** (ನಾ). ಮೂರು ಲೋಕಗಳಲ್ಲಿಯೂ ಅತ್ಯಂತ ಶ್ರೇಷ್ಠವಾದದ್ದು : ವಾರಾಶಿಯೊಳಿನ್ನವು ಮುತ್ತೊಳನ್ನವು ಪಡೆಯಲಾಗವತಿತರಳತರ ತ್ತಾರಾಹಾರಂ ಜಿತನೀಹಾರಂ ತ್ರೈಲೋಕ್ಯಸಾರಮಿಂತಿದು ಹಾರಂ (ಆದಿಪು. ೧೨-೧೧೮) ; ಓಂ ಣಮೋ ಅರಹಂತಾಣಂ . . . ಈ ಎರಡು ತ್ರೈಲೋಕ್ಯಸಾರಮೆಂಬ ಚಕ್ರದ ಮೂಲಮಂತ್ರಂಗಳಿಂದಱಿವುದು (ಪ್ರತಿಷ್ಠಾ. ೧೦-೧೧). [ ತ್ರೈಲೋಕ್ಯ + ಸಾರ₈ ]

**ತ್ರೈಲೋಕ್ಯೇಶ್ವರ** (ನಾ). = ತ್ರಿಲೋಕಾಧಿಪತಿ : ಅಂತು ಕನಕಶಾಂತಿ ಪಾಪೋಪಶಾಂತಿಗೆಂದು ತ್ರೈಲೋಕ್ಯೇಶ್ವರರೂಪಮಂ ಧರಿಯಿಸುವುದುಂ (ಶಾಂತಿಪು. ೯-೧೮ ವ). [ ತ್ರೈಲೋಕ್ಯ + ಈಶ್ವರ ]

**ತ್ರೈವರ್ಣ** (ನಾ). ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರೆಂಬ ಮೂರು ಜಾತಿಗಳು : ತ್ರೈವರ್ಣಂಗಳನು ಬರಲೀಯ್ಯ ನೋಲಗಸಾಲೆಗಾ ಬಸವ (ಬಿಜ್ಜಪು. ೯೦-೩). [ ಸಂ. ]

**ತ್ರೈವರ್ಣಿಕ** (ನಾ). = ತ್ರೈವರ್ಣಕ್ಕೆ ಸೇರಿದವನು : ಸ್ನಾನಧೌತವಸ್ತ್ರ ಪವಿತ್ರರಪ್ಪ ತ್ರೈವರ್ಣಿಕರು ಮೌನದಿಂ ತಂದ ವಿಶುದ್ಧಮಪ್ಪ ತೀರ್ಥೋದಕ (ಪ್ರತಿಷ್ಠಾ. ೫-೪). [ ಸಂ. ]

**ತ್ರೈವಿಕ್ರಮ** (ನಾ). = ತ್ರಿವಿಕ್ರಮ : ಪುರಹರಂ ತ್ರೈವಿಕ್ರಮನ ನಿಟ್ಟೆಲುವನುಱೆ ಮುಱಿದು ಧರಿಸಿದನು ಖಟ್ವಾಂಗವೆನಲ್ (ಬಸವು. ೫೪-೪೩). [ ಸಂ. ]

**ತ್ರೈವಿದ್ಯ** (ನಾ). ೧. ಋಕ್ಕು, ಯಜುಸ್ಸು ಮತ್ತು ಸಾಮಗಳೆಂಬ ಮೂರು ವೇದಗಳು. **೨.** ಈ ಮೂರು ವೇದಗಳನ್ನು ಅಧ್ಯಯನ ಮಾಡಿದವನು : ವೇದೋಕ್ತಸ್ಥೂಲಕರ್ಮಗಳನ್ನು ಅನುಷ್ಠಿಸುವವರು ತ್ರೈವಿದ್ಯರು (ಹಸಾರ. ೧೩-೧೮ ಪದ್ಯಾರ್ಥ). ೩. [ಜೈನ] ಷಟ್ಖಂಡಾಗಮವೆಂಬ ಗ್ರಂಥದ ಮೊದಲ ಮೂರು ಭಾಗಗಳಾದ ಜೀವಸ್ಥಾನ, ಕ್ಷುದ್ರಕಬಂಧ ಮತ್ತು ಬಂಧಸ್ವಾಮಿತ್ವವಿಚಯಂಗಳೆಂಬ ಮೂರು ಖಂಡಗಳನ್ನು ಅಭ್ಯಸಿಸಿದವನು : ತ್ರೈವಿದ್ಯರಪ್ಪ ಗಣಧರದೇವರ್

ಗಣ ಭದ್ರದೇವರೆನ್ನದರೊಳರೆ (ಜಾವುಂಪು. ೬-೧೧) ; ಭಾವಿಪೊಡೆ ಮೇಘಚಂದ್ರ ತ್ರೈವಿದ್ಯರದೆಂತೊ ಶಾಂತರಸಮಂ ತಳೆದರ್ (ಪಂರಾಮಾ. ೧-೧೯) ; ಮಹಾವಿಖ್ಯಾತಿಯಂ ತಾಳ್ದಿದಂ . . . ತ್ರೈವಿದ್ಯವಿದ್ಯೋದಿತ ವಿಶದಯಶಂ ಮೇಘಚಂದ್ರವ್ರತೀಂದ್ರ (ಎಕ. II, ೧೨೭-೧೭೨ ; 1115). 'ತ್ರೈವಿದ್ಯದೇವ' ಪರಾ. [ ಸಂ. ]

**ತ್ರೈವಿದ್ಯದೇವ** (ನಾ). [ಜೈನ] ಷಟ್ಖಂಡಾಗಮದ ಮೊದಲ ಮೂರು ಖಂಡಗಳನ್ನು ಅಭ್ಯಸಿಸಿದವನು ; P ಈ ಬಿರುದು ಮಾಘಣಂದಿ, ಅಕಲಂಕದೇವ, ರಾಮಚಂದ್ರ, ಶ್ರುತಕೀರ್ತಿ ಎಂಬ ನಾಲ್ಕು ಜನ ಜೈನಾಚಾರ್ಯರಿಗೆ ಇತ್ತು : ಈ ಮೂರು ಖಂಡಗಳನ್ನು ಪೂರ್ಣ ಅಭ್ಯಸಿಸಿದವರಿಗೆ 'ತ್ರೈವಿದ್ಯದೇವ' ಎಂಬ ಪದವಿಯನ್ನು ಕೊಡಲಾಗು ತ್ತಿದ್ದಿತೆಂದು ಗೊತ್ತಾಗುತ್ತದೆ (ಜೈನಪ. ೧೬೨). [ ತ್ರೈವಿದ್ಯ + ದೇವ ]

**ತ್ರೈವಿದ್ಯವ್ರತಿ** (ನಾ). = ತ್ರೈವಿದ್ಯದೇವ : ಶ್ರುತಕೀರ್ತಿ ತ್ರೈವಿದ್ಯವ್ರತಿ ರಾಘವಪಾಂಡವೀಯಮಂ ವಿಬುಧಚಮತ್ಕೃತಿಯೆನಿಸಿ ಗತಪ್ರತ್ಯಾಗತದಿಂ ಪೇಳ್ದಮಲಕೀರ್ತಿಯಂ ಪ್ರಕಟಿಸಿದಂ (ಪಂರಾಮಾ. ೧-೨೫). [ ಸಂ. ತ್ರೈವಿದ್ಯ ವ್ರತಿನ್ ]

**ತ್ರೈವಿದ್ಯಾಸ್ಪದ** (ನಾ). ವ್ಯಾಕರಣ, ತರ್ಕ, ಜೈನಸಿದ್ಧಾಂತವೆಂಬ ಮೂರುಂ ವಿದ್ಯೆಗಳಲ್ಲಿ ಪಾಂಡಿತ್ಯವುಳ್ಳವನು : ವಿದಿತ ವ್ಯಾಕರಣದ ತರ್ಕದ ಸಿದ್ಧಾಂತದ ವಿಶೇಷದಿಂ ತ್ರೈವಿದ್ಯಾಸ್ಪದರೆಂದೀ ಧರೆ ಬಣ್ಣಿಪುದು ದಿವಾಕರ ನಂದಿದೇವ ಸೈದ್ಧಾಂತಿಗಳಂ (ಸುಕುಮಾ. ೧-೨೮). [ ತ್ರೈವಿದ್ಯ + ಆಸ್ಪದ ]

**ತ್ರೈವಿದ್ಯೇಶ** (ನಾ). = ತ್ರೈವಿದ್ಯ ೩; ತ್ರೈವಿದ್ಯೇಶಂ ಮಾಘಣಂದಿ ವ್ರತಿ ಪೆಸರ್ವಡೆದಂ (ಚಂದ್ರಪು. ೧-೩೦). [ ತ್ರೈವಿದ್ಯ + ಈಶ ]

**ತ್ರೈಷಷ್ಟಿ** (ನಾ). = ತ್ರಿಷಷ್ಟಿ.

**ತ್ರೈಷಷ್ಟಿಪುರುಷವ್ರಾತ** = ಅರುವತ್ತುಮೂರು ಜನ ಮಹಾಪುರುಷರ ಸಮೂಹ: ತ್ರೈಷಷ್ಟಿಪುರುಷವ್ರಾತವೇ ಪೌರಾಣಪುರುಷಖ್ಯಾತವಡದರ್ಕ್ಕ ಚತುರಕಾಲದ ಕಲಿಯ ಪರಿಯಂತ (ಬಿಜ್ಜಪು. ೧೪-೬೨). [ ಸಂ. ತ್ರಿಷಷ್ಟಿ ]

**ತ್ರೈಸಂಧ್ಯೆ** (ನಾ). = ತ್ರಿಸಂಧ್ಯೆ ೧ : ಅಸಮಭಕ್ತಪ್ರಾಣನಿಧಿ ಕರವೊಸೆದ್ದು ಕೈಕೈಯಿಂದವಾರೋಗಿಸುತಿರಲ್ ತ್ರೈಸಂಧ್ಯೆ[ಪಾಠಾಂ. ಧಿ]ಯಲಿ ಲಿಂಗ ಪ್ರಸಾದವನು (ಬಸವು. ೩೩-೧೨). [ <ತ್ರೈಸಂಧ್ಯ ]

**ತ್ರೈಸೂಳು** (ನಾ). ಮೂರು ಬಾರಿ; ಮೂರು ಸಲ : ನಿಂತ ಯೋಗೀಶ್ವರನ ನೀಕ್ಷಿಸುತ್ತೈದಿ ದಕ್ಷಿಣವನಾಂತು ತ್ರೈಸೂಳ್ಬೈದಿ ದುರಿತಕೃತಾಂತ ಜಯ ಜಯವೆಂದು ಲಕ್ಷ್ಮೀಕಾಂತ ವಂದನೆಗೈದನು (ಜಿನಭಾ. ೭೧-೧೧). P ಇದು ವ್ಯಾಕರಣಬದ್ಧವಾದ ರೂಪವಲ್ಲ

[ <ತ್ರಿ + ಸೂಳು (<ಸೂಟ್) ]

**ತ್ರೈಳೋಕ್ಯ** 'ತ್ರೈಲೋಕ್ಯ' ನೋ.

**ತ್ರೈಳೋಕ್ಯನಾಥ** 'ತ್ರೈಲೋಕ್ಯನಾಥ' ನೋ.

**ತ್ರೋಟಕ** (ಗು). ೧. ಸಂಗ್ರಹವಾಗಿ ಹೇಳಿದ ; ಚುಟುಕಾದ: ಉದ್ದವಾದ ವಾಕ್ಯಗಳಿಗಿಂತ ತೂಕದ ಶಬ್ದಗಳ ತ್ರೋಟಕ ವಾಕ್ಯಗಳನ್ನು ಬರೆಯುವುದರಲ್ಲಿ ಅವರದು ಎತ್ತಿದ ಕೈ (ಸ್ಮೃತಿಚಿ. ೧೧). (ನಾ). ೨. [ಕಾವ್ಯಮೀ] ದೃಶ್ಯ ಕಾವ್ಯಗಳಲ್ಲಿ ಒಂದು ಭೇದ ; ಹದಿನೆಂಟು ವಿಧವಾದ ಉಪರೂಪಕ ಗಳಲ್ಲಿ ಒಂದು ; ಶೃಂಗಾರರಸಪ್ರಧಾನವಾಗಿರುವುದು : ೧. ನಾಟಿಕಾ. ೨. ತ್ರೋಟಕ . . . ೧೮. ಭಾಣಿಕಾ — ಎಂದು ಉಪರೂಪಕ ಗಳು ಹದಿನೆಂಟು ವಿಧ (ಸಂನಾಟ. ೩೨) ; ವಿಕ್ರಮೋರ್ವಶೀಯವು ಒಂದು 'ತ್ರೋಟಕ' (ಸಂನಾಟ. ೧೧೮) ; ತ್ರೋಟಕದಲ್ಲಿ . . . ಏಳರಿಂದ ಒಂಭತ್ತರ ವರೆಗೂ ಅಂಕಗಳಿರುತ್ತವೆ (ಕೈಪಿಡಿ. ೨೩೦). [ ಸಂ. ]

**ತ್ರೋಟಿ** (ನಾ). ೧. ಹಕ್ಕಿಯ ಕೊಕ್ಕು, ಚುಂಚ : "ಚಂಚೂ ತ್ರೋಟಿ ಚಂಚು ತುಂಡಂ" (ವಸ್ತುಕೋ. ೪೧-೧೧) ; "ಶಕುಂತಿಯೆನೆ ಪಕ್ಷಿಯಾ ಮುಖಮದು ತ್ರೋಟಿ ಚಂಚೂ ಚಂಚುವಕ್ಕು" (ಮಂಗರಾ. ೫೦-೧). ೨. ಪಕ್ಷಿ; ಹಕ್ಕಿ. ೩. ಒಂದಂ ಬಗೆಯ ಮೀನು. ೪. ಒಂದು ಬಗೆಯ ಸಸ್ಯ ; ಶಿವನಿ. [ ಸಂ. ]

**ತ್ರೋಟೀಪುಟ** (ನಾ). ಕೊಕ್ಕು ; ಚಂಚುಪುಟ : ನೆಳಲರಸಿ ಬಹ ಗಜದ ಮಸ್ತಕಂ ಕಾಯ್ದು ಚಿಳಿಚಿಳಿಲೆನುತ ಪೊರಬೀಳ್ವ ಮುತ್ತ ಜಲಕಣ ಮೆಂದು ಕೊಳಲಿ ಕಲಕಂಠ ತ್ರೋಟೀಪುಟದೊಳಂ ಪಿಡಿಯ ಚಂಚು ಚುರ್ರೆಸುತಂಟಲು (ಪಂಕಾರಾ. ೩-೬-೧೧). [ ಸಂ. ]

**ತ್ರ್ಯಂಗ** (ನಾ). ಎರಡು ಕೈಗಳು ಮತ್ತು ತಲೆ—ಈ ಮೂರು ಅಂಗಗಳು: ಅಷ್ಟಾಂಗದಿಂ ಪಂಚಾಂಗದಿಂ ತ್ರ್ಯಂಗದಿಂದೆಯುಂ ತುಳಿಲ್ಗೆಯ್ದು (ಹಾಲಾಸ್ಯ. ೪-೨-೧೩ ವ). [ ಸಂ. ]

**ತ್ರ್ಯಂಬಕ** (ಗು). ೧. ಮೂರು ಕಣ್ಣುಗಳುಳ್ಳ. (ನಾ). ೨. ಮೂರು ಕಣ್ಣುಗಳನ್ನು ಉಳ್ಳವನು ; ಶಿವ : ತ್ರ್ಯಂಬಕಲೋಚನಾರ್ಚಿಗಮಿದಗ್ಗಳ ಮೆಂಬಿನಮೇಟಗ್ಗಿಯೊಳ್ ಶಿಖಾಡಂಬರಮೆಯ್ದೆ (ಕಾವ್ಯಾವ. ೨೮) ; ತ್ರ್ಯಂಬಕನಂ ಬಲವರಲೆರಡೆಂಬೀ ಪದವೆಯ್ದುವೆಂದು ನಾಲ್ಕುಂ ಕಾಲಿಂದಂ ಬಲವಂದಪಳಿಂಬಂತಂಬಿಕೆಯಂಬಳಿಕೆಯಾಡುವಳ್ ಶೈಶವದೊಳ್ (ಗಿರಿಕ. ೩-೭೨) ; ನಂಬಿ ಭಜಿಸುವ ಗೊಲ್ಲಳಂಗೀ ತ್ರ್ಯಂಬಕಂ ಕೈಲಾಸದುರ್ಗಾ ಡಂಬರದ ಕದಹುಗಳನಾಗಳೆ ತೆಟಿದು ಹುಗಿಸಿದನು (ಬಸವು. ೪೩-೫೦) ; ತ್ರ್ಯಂಬಕನ ಹೋಲುವನು ರಾಘವನೆಂಬರದು ಹುಸಿಯಲ್ಲ (ಕಾಶಿರಾ. ೧೭-೩೭). [ ಸಂ. ]

**ತ್ರ್ಯಂಬಕಸಖ** (ನಾ). ಈಶ್ವರನ ಸಖ,-ಗೆಳೆಯಂ ; ಕುಬೇರ.

[ ತ್ರ್ಯಂಬಕ + ಸಖ ]

**ತ್ರ್ಯಂಶ** (ನಾ). ಮೂರನೆಯ ಒಂದು ಭಾಗ : ಗ್ರಹಂ ಗ್ರಹದಿಂದಂ ನವ ಪಂಚಮಂಗಳೊಳಿರಲ್ ತ್ರ್ಯಂಶಾಂಶಮಂ . . . ಪರಸ್ಪರಂ ಸ್ವಗುಣ ದಿಂದಾಳ್ಗುಂ (ಜಾತತಿ. ೯-೯). [ ಸಂ. ]

**ತ್ರ್ಯಕ್ಷ** (ನಾ). ಮೂರು ಕಣ್ಣುಗಳನ್ನು ಉಳ್ಳವನು ; ಶಿವ ; ಮುಕ್ಕಣ್ಣ : ದ್ವಂದ್ವಲೋಕವನಕ್ಷಿಯುಗದೆ ಪೊರೆದು ತ್ರ್ಯಕ್ಷನೊಂದರಿಂ ಮಾಯೆಯಾಟವ ಮಿಾರುವಂತೆ (ಮಂಕುಕ. ೬೯೫). [ ಸಂ. ]

**ತ್ರ್ಯಕ್ಷರ** (ಗು). ೧. ಮೂರುಂ ಅಕ್ಷರಗಳಿಂದ ಕೂಡಿದ. (ನಾ). ೨. ಅ ಉ ಮ್ ಎಂಬ ಮೂರು ಅಕ್ಷರಗಳನ್ನೊಳಗೊಂಡುದು ; ಓಂಕಾರ ; ಪ್ರಣವಾಕ್ಷರ : ಜಗದೀಶ್ವರಂ ಜಂಗಮ ತ್ರ್ಯಕ್ಷರಂಗಳೊಳ್ ಹದಿನಾಲ್ಕು ಲೋಕಾಶ್ರಯಸ್ವ ರ್ಗನಿರ್ಮಳಮರ್ತ್ಯ ಪಾತಾಳವಾದವು (ವೀಶೈಪು. ೧-೩-೨೮). 'ತ್ರ್ಯಕ್ಷರಮೂರ್ತಿ' ಪರಾ. ೩. [ಕಾವ್ಯಮೀ] ಮೂರೇ ಅಕ್ಷರಗಳನ್ನು ಬಳಸಿ ರಚಿಸುವ ಪದ್ಯಬಂಧ ; ಶಬ್ದಾ ಲಂಕಾರಪ್ರಧಾನವಾದ ಪದ್ಯಬಂಧ ; ಚಿತ್ರಕವಿತ್ವ : ಇದೇ ಶಬ್ದಾ ಲಂಕಾರದಲ್ಲಿ ನಿರೋಷ್ಠ್ಯ, ಅತಾಲವ್ಯ, ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರಾದಿ ಬಂಧಗಳಿಂದು ಅನೇಕ ವಿಧವಾದ ಚಿತ್ರಕವಿತ್ವಗಳು ಯೋಜಕರ ಬುದ್ಧಿ ಬಲಾನುಸಾರವಾಗಿ ಕಲ್ಪಿತವಾಗಬಹುದು (ಕೈಪಿಡಿ. ೨೫೮). 'ಏಕಾಕ್ಷರ' ಪರಾ. [ ಸಂ. ]

**ತ್ರ್ಯಕ್ಷರಮೂರ್ತಿ** (ನಾ). ಓಂಕಾರಸ್ವರೂಪನಾದವನು ; ಪ್ರಣವ ಸ್ವರೂಪಿ ; ಶಿವ ; ಈಶ್ವರ : ತ್ರ್ಯಕ್ಷರಮೂರ್ತಿಯಾದ ಪರಮಪ್ರಭು ವಾದ . . . ವಿರಿಂಚಿ ಮುಖ್ಯ ಸುರವಂದಿತಪಾದನುಮಾದ ಯಾ ವಿರೂ ಪಾಕ್ಷನೆ ದೇವನೆಂದು ನೆಚ್ಚಿ ನಂಬಿದೆಂ (ಶಂಕಶ. XXIV ಪೀಠಿಕೆ).

[ ತ್ರ್ಯಕ್ಷರ + ಮೂರ್ತಿ ]

**ತ್ರ್ಯಕ್ಷರಿ** (ನಾ). ಮೂರು ಅಕ್ಷರಗಳನ್ನುಳ್ಳ ಮಂತ್ರ : ಏಕಾಕ್ಷರಿ, ದ್ವ್ಯಕ್ಷರಿ, ತ್ರ್ಯಕ್ಷರಿ ... ಮುಂತಪ್ಪ ಪ್ರಸಿದ್ಧಮಂತ್ರಂಗಳೊಳವಲ್ತೆ (ರಾಮಾಶ್ವ. ೧೧೬-೧).

[ ಸಂ. ತ್ರ್ಯಕ್ಷರೀ ]

**ತ್ರ್ಯಣುಕ** (ನಾ). ಮೂರು ಅಣುಗಳಿಂದ ಕೂಡಿದುದು : ಹೀಗೆ ತ್ರ್ಯಣುಕಾದಿ ಕ್ರಮದಲ್ಲಿ ಮಹಾಪೃಥಿವೀ, ಜಲ, ತೇಜಸ್ಸು, ವಾಯುಗಳು ಸೃಷ್ಟಿಸಲ್ಪಡುತ್ತವೆ (ಭಾರದ. ೨೩೦) ; ಸಂಖ್ಯಾವಿಶೇಷವೆಂದರೆ ಸೃಷ್ಟಿಕಾಲದಲ್ಲಿ ದ್ವ್ಯಣುಕ ತ್ರ್ಯಣುಕಗಳ ಪರಿಮಾಣವು . . . ಅಣುತರ ಅಣುತಮವಾಗ ಬೇಕಾಗುತ್ತದೆ (ಹಿಂದಸಾ. ೧೨೭). [ ಸಂ. ]

**ತ್ರ್ಯಶ್ರೀಕೃತ** (ಗು). [ನಾಟ್ಯ] ಒಂದು ಕಾಲನ್ನು ಸಮವಾಗಿ ಇರಿಸಿ ಇನ್ನೊಂದು ಕಾಲಿನ ಬೆರಳಂಗಳನ್ನು ಪಕ್ಕಿಗೆ ಎದುರಾಗಿ ಮಾಡಿ ನಿಲ್ಲಿಸಿದ : ಶ್ರೀಕಮಳಲೋಚನಂ ತ್ರ್ಯಶ್ರೀಕೃತಪದನುನ್ನತೈಕಜಘನಂ ಲಲಿತಭ್ರೂಕಂ ತಿರ್ಯಗ್ವಳಿತ ವ್ಯಾಕುಂಚಿತಕಂಠನೂದುತಿರ್ದಂ ಕೊಟಿಲಂ (ಜಗವಿ ೫-೧). [ ಸಂ. ]

**ತ್ರ್ಯಸ್ರ** (ಗು). ೧. ಮೂರು ಕೋಣಗಳುಳ್ಳ ; ಮೂರು ಮೂಲೆಗಳುಳ್ಳ. (ನಾ). ೨. [ನಾಟ್ಯ] ಕೊರಳ ವಿನ್ಯಾಸಗಳಲ್ಲಿ ಒಂದು ; ಭುಜದ ಕಡೆಗೆ ಕೊರಳನ್ನು ಬಾಗಿಸುವ ಒಂದು ವಿನ್ಯಾಸ:ನತವಾಗಿ ಮುಡುಹನೊಂದಿದ ನುತಗಳಮೇ ತ್ರ್ಯಸ್ರಮೆಂಬ ಪೆಸರಂ ಪಡೆಗುಂ (ಲಾಸ್ಯರಂ. ೨-೧೧೭).
[ ಸಂ. ]

**ತ್ರ್ಯಾಹಿಕ** (ಗು). ೧. ಮೂರು ದಿನಗಳಿಗಾಗುವಷ್ಟು ಧಾನ್ಯವನ್ನು ಹೊಂದಿರುವ. (ನಾ). ೨. ಮೂರು ದಿನಗಳಿಗಾಗುವಷ್ಟು ಧಾನ್ಯವನ್ನು ಸಂಗ್ರಹಿಸಿರುವವನು : ಮೂರು ದಿವಸಕ್ಕಾಗುವಷ್ಟಿರುವವನು ತ್ರ್ಯಾಹಿಕನು (ಆರ್ಯಧ. ೯೭). ೩. ಮೂರು ದಿನಗಳಿಗೊಂದಾವರ್ತಿ ಬರುವ ಜ್ವರ : ತ್ರ್ಯಾಹಿಕವೆಂಬ ಜ್ವರವು ಮೇದಸ್ಸನ್ನು ಆಶ್ರಯಿಸಿ ಕೊಂಡು ಬರುವುದು (ಸಕವೈ. ೯೮) [ ಸಂ. ]

**ತ್ರ್ಯೂಷಣ** (ನಾ). ಶುಂಠಿ, ಹಿಪ್ಪಲಿ ಮತ್ತು ಮೆಣಸು – ಈ ಮೂರರ ಕೂಟ; ತ್ರಿಕಟುಕ : ತ್ರಿಕಟು, ತ್ರ್ಯೂಷಣಂ, ವ್ಯೋಷಂ—ಈ ೩ ತ್ರಿಕಟುಕಂ (ಹಲಾಯು. ೧೧೧-೯೭೩). [ ಸಂ. ]

**-ತ್ವ** (ಪ್ರ). ಒಂದು ಭಾವವಾಚಕ ಪ್ರತ್ಯಯ. 'ದುರುಳತ್ವ' ಪರಾ.
[ ಸಂ. ]

**ತ್ವಕ್ಕು** (ನಾ). ೧. ಸ್ಪರ್ಶಜ್ಞಾನವನ್ನು ಉಂಟುಮಾಡಿಕೊಡುವ ಇಂದ್ರಿಯ ; ತೊಗಲು ; ಚರ್ಮ : "ಅಸೃಗ್ಧರಃ, ಅಜಿನಂ, ಚರ್ಮ, ಕೃತ್ತಿಃ, ತ್ವಕ್–ಈ ೫ ತೊವಲ್" (ಹಲಾಯು. ೧೧೪-೮) ; ಶಿಕಾರವೆ ಬಸವಣ್ಣನ ನೇತ್ರ ವಕಾರವೆ ಬಸವಣ್ಣನ ತ್ವಕ್ಕು ಯಕಾರವೆ ಬಸವಣ್ಣನ ಶ್ರೋತ್ರ (ಪದಗೊಂ. ೧೫೭-೩೪). ೨. ಮರದ ಸಿಪ್ಪೆ ; ತೊಗಟೆ ; ತೊಕ್ಕು : "ತ್ವಕ್, ವಲ್ಕಾ, ವಲ್ಕಲಂ–ಈ ೩ ಮರದ ಹೊಟ ಸೊಪ್ಪು" (ಹಲಾಯು. ೩೦-೨೯) ; "ತ್ವಗ್ವಲ್ಕಲಂ ವಲ್ಕವೆನೆ ಮರದ ತಿಗುಡಕ್ಕು" (ಮಂಗರಾ. ೩೨-೩) ; ಹಿಪ್ಪೆಮರದ ತ್ವಕ್ಕಿನ ಛಾಯೆಯುಳ್ಳ ನೀಲವರ್ಣವಾದ ಕುದುರೆ ಮೇಘವೆಂದು ಪೇಳಲ್ಪಡುವದು (ಸೌಗಂಧಿ. ೩೦೦-೧೪),
[ ಸಂ. ತ್ವಚ್ ]

**ತ್ವಕ್ಪತ್ರ** (ನಾ). ೧. ಲವಂಗಪಟ್ಟೆ ; ದಾಲ್ಚಿನ್ನಿ. ೨. ತಮಾಲಪತ್ರ.
[ ಸಂ. ]

**ತ್ವಕ್ಪತ್ರಿ** (ನಾ). ೧. ಹಿಂಗಿನ ಮರದ ಎಲೆ ; ಹಿಂಗುಪತ್ರಿ ೨. ತಮಾಲಪತ್ರ
[ ಸಂ. ತ್ವಕ್ಪತ್ರೀ ]

**ತ್ವಕ್ಪುಷ್ಪ** (ನಾ). ೧. ರೋಮಾಂಚ ; ಮೈನವಿರು. ೨. ಒಂದು ಬಗೆಯ ಚರ್ಮವ್ಯಾಧಿ ; ಕಜ್ಜಿ ; ತುರಿ. [ ಸಂ. ]

**ತ್ವಕ್ಸಾರ** (ನಾ). ೧. ಬಿದಿರು ; ಬೊಂಬು : "ತ್ವಚಿಸಾರಃ, ... ತ್ವಕ್ಸಾರಃ, ಮಸ್ಕರಃ—ಈ೭ ಬಿದಿರ್" (ಹಲಾಯು. ೩೪-೫೦) ; "ವಂಶಂ ... ತ್ವಕ್ಸಾರ ಮೆನಲುಂ ಬೆಲ್ವ ಬಿದಿರಕ್ಕು" (ಮಂಗರಾ. ೩೮-೨೩). ೨. ಲವಂಗಪಟ್ಟೆ ; ದಾಲ್ಚಿನ್ನಿ. ೩. ಒಂದು ಬಗೆಯ ವೃಕ್ಷ ; ತಿಗಡುಮರ. [ ಸಂ. ]

**ತ್ವಗಸ್ಥಿಭೂತ** (ಗು). (ದೇಹದಲ್ಲಿ) ಚರ್ಮ ಮತ್ತು ಎಲುಬುಗಳು ಮಾತ್ರ ಉಳಿದಿರುವ ; ಕೃಶವಾದ ; ಬಡವಾದ : ಕಾಲಾಂತರದೊಳ್ ಶ್ರೀಪ್ರಭಾದ್ರಿ ಶಿಖರದೊಳ್ ಪ್ರಾಯೋಪಗಮನವಿಧಿಯಿಂ ತ್ವಗಸ್ಥಿಭೂತಸರ್ವಾಂಗಂ ಧೈರ್ಯಮನೆ ಮನದೊಳವಲಂಬಿಸಿ . . . ಪಾಯ್ವ ಪುಲಿಯೆಂಬೀ ಬಾಧೆಯೊಳ್ ಮೆಯ್ಯನೊಡ್ಡಿಸೆ (ಆದಿಪು. ೭-೩೩ ವ).
[ ಸಂ. ]

**ತ್ವಗಸ್ಥೀಭೂತ** (ನಾ). (ದೇಹದಲ್ಲಿ) ಚರ್ಮ ಮತ್ತು ಮೂಳೆಗಳು ಮಾತ್ರ ವಿರುವುದು ; ಕೃಶವಾಗಿರುವುದು : ಮುನಿಪತಿಯೆಸೆದಿರ್ದಾತನು ಸದ್ಭರ್ಧಿ ಸಮನ್ವಿತಂ ವ್ರತನಿಯಮಯುಕ್ತ್ವಗಸ್ಥೀಭೂತಂ (ಶಾಂತಿಪು. ೯-೧೧೨).
[ ಸಂ. ]

**ತ್ವಗಿಂದ್ರಿಯ** (ನಾ). ಸ್ಪರ್ಶದ ಜ್ಞಾನವನ್ನು ಉಂಟುಮಾಡಿಕೊಡುವ ಇಂದ್ರಿಯ ; ತೊಗಲು ; ಚರ್ಮ : ತ್ವಗಿಂದ್ರಿಯವಿಷಯದಿಂದೆ ಗಜ ಕೆಡುವುದು ರಾಜನ ಕೃತಕದಲ್ಲಿ (ಅಖಂಡೇ. ೭-೪); ಸ್ಪರ್ಶ ಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ತ್ವಗಿಂದ್ರಿಯವೆನಿಸಿ ಕೊಳ್ಳುವುದು (ತತ್ತ್ವಕು. ೭). [ ಸಂ. ]

**ತ್ವಗ್ಗತ** (ಗು). ಚರ್ಮದೊಳಗೆ ಸೇರಿದ. 'ತ್ವಗ್ಗತಜ್ವರ' ಪರಾ. [ಸಂ.]

**ತ್ವಗ್ಗತಜ್ವರ** (ನಾ). ಚರ್ಮದೊಳಗೆ ಸೇರಿದ ಜ್ವರ; ಒಳಜ್ವರ: ದೇಹದಲ್ಲಿ ಅಲ್ಪವಾದ ಜ್ವರ ಮತ್ತು ದಾಹವುಂಟಾಗಿ . . . ಬೆಮರುಂಟಾಗಿರುವುದೆ ತ್ವಗ್ಗತಜ್ವರ ಲಕ್ಷಣಗಳು (ಸಕವೈ. ೯೯). 'ಅಸ್ಥಿಗತಜ್ವರ' ಪರಾ.
[ ತ್ವಗ್ಗತ + ಜ್ವರ ]

**ತ್ವಗ್ಜ** (ಗು). ಚರ್ಮದಿಂದ ಆದ,-ಮಾಡಿದ : ತ್ರಿಜಗದ್ಭೂಷಣವಾರಣಂ ಮುಳಿಯೆ ಪಾಯ್ದಾಲಾನಮಂ ತ್ವಗ್ಜಲೋಹಜಬಂಧಂಗಳನೆಲ್ಲಮಂ ಪಱಿವಿನಂ ಪೊಯ್ದೆತ್ತಿ ಮೊತ್ತಕ್ಕೆ ಕಾಯ್ದು (ಪಂಪಾರಾಮಾ. ೧೫-೩೧). [ಸಂ.]

**ತ್ವಗ್ವಿಷ** (ನಾ). ಒಂದು ಬಗೆಯ ಸಸ್ಯ; ಸೇಗುಂಡಿಗೆ: "ಆರು ಮೆಣಸಿಗೆ ತ್ವಗ್ವಿಷ ಸೇಗುಡಿಗೆ" (ಮಂಗರಾ. ೪೨-೩೭). [ ಸಂ. ತ್ವಗ್ವಿಷನ್ ]

**ತ್ವಗ್ದೋಷ** (ನಾ). ಚರ್ಮಕ್ಕೆ ಸಂಬಂಧಿಸಿದ ದೋಷ ; ಚರ್ಮದ ರೋಗ ; ತೊನ್ನು : ತ್ವಗ್ದೋಷೇ ಚ–ತೊನ್ನಿಗುಂ ಭಗಂದರಕ್ಕುಂ (ವಿದ್ಯಾವಿ. ೧೭೩). [ ಸಂ. ]

**ತ್ವಗ್ಧರ** (ನಾ). (ಆನೆ, ಹುಲಿ) ಚರ್ಮವನ್ನು ಧರಿಸಿರುವವನು ; ಶಿವ.
[ ಸಂ. ]

**ತ್ವಗ್ರೋಗ** (ನಾ). ಚರ್ಮಕ್ಕೆ ಸಂಬಂಧಿಸಿದ ರೋಗ ; ಚರ್ಮರೋಗ : ಅದರಿಂದ ನಾರು, ಹುರುಕು, ಕಜ್ಜಿ . . . ಮುಂತಾದ ತ್ವಗ್ರೋಗಗಳು . . . ಮೈಯೊಳಗೆ ಸೇರುತ್ತವೆ (ಮುಂಬಯಿ. ೫-೧೫೮). [ ಸಂ. ]

**ತ್ವಙ್ಮಲ** (ನಾ). ೧. ಚರ್ಮದ ಮಲ,-ಕೊಳೆ. ೨. ಕೂದಲು ; ರೋಮ. [ ಸಂ. ]

**ತ್ವಚ** (ನಾ). ೧. ತೊಗಲು ; ಚರ್ಮ : "ತ್ವಚಮಜಿನಾಸೃಗ್ಧರೆ ಕೃತ್ತಿ ಚರ್ಮಮೆನೆ ತೋ(ಲ್ತ್ವಗಾ) ಹ್ವಯಂ" (ವಸ್ತುಕೋ ೭೨-೨೮) ; "ಚರ್ಮ ತ್ವಚಂ ಕೃತ್ತಿ ಅಜಿನಪದಸೃಗ್ಧರೆಯೆನಲು ತೊಗಲಕ್ಕು" (ಮಂಗರಾ. ೧೧೭-೩) ; ಪಂಚಬಾಣಂಗಳು ಪಂಚೇಂದ್ರಿಯಂಗಳು ಕರ್ಣ ನಾಸಿಕ ದೃಗು ಜಿಹ್ವೆ ತ್ವಚಂಗಳು (ಮದಹ. ೧-೭೭) ; ಕಾಪಾಲಿಶಾಸ್ತ್ರಿಗಳು ಶ್ರೀಅರವಿಂದರನ್ನು ನೋಡಿದಾಗ, ಅವರ ದೇಹದ ತ್ವಚದ ಮೇಲೆ ಆತ್ಮಾಕರ್ಷಕವಾದ ಕಾಂತಿಯೊಂದನ್ನು ಕಂಡರು (ಮಹಾಯೋ. ೧೩೪). ೨. ಲವಂಗಪಟ್ಟೆ ; ದಾಲ್ಚಿನ್ನಿ. ೩. ತೊಗಟೆ; ಸಿಪ್ಪೆ. [ ಸಂ. ]

**ತ್ವಚಿಸಾರ** (ನಾ). ಬಿದಿರು ; ವಂಶ : "ತ್ವಚಿಸಾರಃ, ಚಪಃ, ವಂಶಃ, ವೇಣುಃ, ತ್ವಕ್ಸಾರಃ, ಮಸ್ಕರಃ – ಈ ೬ ಬಿದಿರ್" (ಹಲಾಯು. ೩೪-೫೦).
[ ಸಂ. ]

**ತ್ವಚೆ** (ನಾ). ೧. ತೊಗಲು ; ಚರ್ಮ : ರುಚಿಯೊಪ್ಪೆ ರಸನೆಗದು ಶೂಲ ವಹುದುದರಕ್ಕೆ ತ್ವಚೆ ಬೇಳ್ಪ ತಂಗಾಳಿಯಿಂ ಬೇನೆಯೆದೆಗೆ (ಮಂಕುಕ. ೩೪೭). ೨. ತೊಗಟೆ ; ಸಿಪ್ಪೆ : ಎಲೆಯ ಮೇಲೆ ಬೀಳುವ ಸೂರ್ಯ ಕಿರಣಗಳು ಎಲೆಯ ಸಣ್ಣ ದೊಡ್ಡ ಶಿರಗಳೊಳಗಿಂದಲೂ ತ್ವಚೆಯೊಳ ಗಿಂದಲೂ ಸಮವಾಗಿ ಆರಪಾರ ಹೋಗುವುದಿಲ್ಲ (ಮುಂಬಯಿ. ೫-೧೮೮). [ ಸಂ. ತ್ವಚ ]

**ತ್ವದೀಯ** (ಗು). ನಿನ್ನ ; ನಿನಗೆ ಸೇರಿದ : ತ್ವದೀಯ ತನುಚಿಂತೆಯುಂ ಪಡೆಯೆ ನಿತ್ಯನೈಶ್ಚಿಂತ್ಯಮಂ ತ್ವದೀಯ ಪದಪೂಜೆಯೊಳ್ ತೊಡರೆ (ಚಂದ್ರಪ್ರ. ೧೪-೯೫). [ ಸಂ. ]

**ತ್ವರ** (ನಾ). = ತ್ವರೆ : ರಾಮು (ತ್ವರದಿಂದೆದ್ದು) (ಉಲಾಜಿ. ೭೫) ; ಇರಿಸಿ ಶರಧನುಗಳನು ಕರದಲಿ ತ್ವರದ ಬೇಂಟೆಯನಾಡಲಾ ನರವರನು ಚರಿಸಿರಲು (ರಘುವಂ. ೯-೫೦). [ ಸಂ. ತ್ವರಾ ]

**ತ್ವರಣ** (ಗು). ೧. ಆತುರಪಡಂವ ; ಅವಸರದ. (ನಾ). ೨. ಆತುರ ಪಡುವಿಕೆ ; ತವಕ : "ತ್ವರಿಃ, ತ್ವರಂ, ತ್ವರಣಂ, ತ್ವರಿತಂ . . . ತ್ವರಣೀಯಂ ಈ ೮ ತವಕ." (ಶಾಶಕ್ಕ. ೧೫೭). ೩. (?) : ಷಟ್ಕರ್ಮ ಷಣ್ಮುಖರಂ ಪರಮತತಪತ್ತ್ವರಣ ನಿರತರು (ಸೌಇಇ. XX. ೪೬-೨೭ ; 1072). ಇದು 'ತಪಶ್ಚರಣ'ದ ಅಪಲಿಖಿತವಿರಬಹುದು [ ಸಂ. ]

**ತ್ವರಿತ** (ಗು). ೧. ವೇಗವಾದ ; ಶೀಘ್ರವಾದ. (ನಾ). ೨. ವೇಗ ; ಶೀಘ್ರತೆ ; ಅವಸರ : "ಕ್ಷಿಪ್ರಂ ತ್ವರಿತಂ . . . ಚೆಚ್ಚರಂ" (ವಸ್ತುಕೋ. ೦೦೩-೦೩) ; "ತ್ವರಿತಂ ದ್ರುತಂ... ಶೀಘ್ರಮಕ್ಕು" (ಮಂಗರಾ. ೦೨೭-೭) ; ತ್ವರಿತದೆ ಹೇಮಕೂಟನಗರಕ್ಕಿರದೆಯ್ದಿ ಬಟಲ್ದಪೋಲ್ಮನೋಹರಿಯ . . . ಅಂಗರುಚಿಯೊಳ್ ಮುಬುಗಿತ್ತು ಮನಂ ಮಹೀಶನಾ (ಕಾದಂಬ. ೩೪೯) ; ತ್ವರಿತದಿಂ ಬಂದಂ ಪ್ರತೀಹಾರಕಂ (ಪಂರಾಮಾ. ೨-೨) ; ತರಣಿ ಶಶಿಗಳ ನೊಮ್ಮೆ ತರಲೇ ತ್ವರಿತದಲಿ ಬೆಸಸೆನಗೆ ನಾ ತಹೆನೆಂದ ಹನುಮಂತ (ಕಾಶಿರಾ. ೨೯-೨೯) ; ರಾಜನೂ ಮೂರ್ತಿಯೂ ತ್ವರಿತದಿಂದ ನಡೆದರು (ಸಾವಿತ್ರಿ. ೩೩). ೩. ವೇಗಶಾಲಿ ; ಚಟುವಟಿಕೆಯುಳ್ಳವನು; ಉತ್ಸುಕ: "ಉತ್ಸಾಳಃ, ತ್ವರಿತಃ – ಈ ೨ ಚುಟುಚುಟುಗಂ" (ಹಲಾಯು. ೭೦-೨೦೫); "ತ್ವರಿತನುತ್ಸುಕನೆನಲು .... ಚೆಚ್ಚರಿಗನಕ್ಕು" (ಮಂಗರಾ. ೬೯-೦೨). [ಸಂ.]

**ತ್ವರಿತಂ** (ಅ). ವೇಗವಾಗಿ ; ಶೀಘ್ರವಾಗಿ: ತ್ವರಿತಂ ಗೋಪಂ ಸಕೋಪಂ ಪೆಱಗೆ ಪರಿಯೆ (ಲೀಲಾವ. ೫-೦೦೦) ; ತ್ವರಿತಂ ಸೋಲಿಸಿ ಕನ್ನೆಯಂ ಮುರಹರಂ ಕೊಂಡುಯ್ದು (ಜಗವಿ. ೦೦-೮೭) ; ಬಳಸಿದ ಸುಖದ ತಣಿವಂಕುರಿಸಿದನುರಾಗದೊಳಟಿತು ತ್ವರಿತಂ [ಪಾಠಾಂ. ತುರಿತಂ, ಆತುರಂ] ತುದಿಗೇಱ (ನಂಬಿರ. ೧೪-೫೫). [ <ತ್ವರಿತ ]

**ತ್ವರಿತಗೊಳಿಸು** (ಕ್ರಿ). ವೇಗಗೊಳಿಸು ; ಶೀಘ್ರಗೊಳಿಸಂ : ಹಲವು ಶಿಕ್ಷಕರೂ ಪೋಷಕರೂ ಮಕ್ಕಳ ಶಿಕ್ಷಣಕಾಲದ ಪರಿಮಾಣವನ್ನು ಕಡಮೆ ಮಾಡಲು ಶಿಕ್ಷಣವನ್ನು ತ್ವರಿತಗೊಳಿಸುವುದುಂಟು (ಶಿಕ್ಷದ. ೮೯). [ ತ್ವರಿತ + ಕೊಳ್$_1$ + – ಇಸು$_3$ ]

**ತ್ವರಿತರಗಳೆ** (ನಾ). [ಛಂದ] ರಗಳೆ ಛಂದಸ್ಸಿನ ಒಂದು ಪ್ರಭೇದ ; ಮಂದಾನಿಲರಗಳೆ : ಪೊನ್ನನ ಶಾಂತಿಪುರಾಣ:–೩, ೭. ಇಲ್ಲಿ ತ್ವರಿತರಗಳೆ ಎಂಬ ಹೆಸರಿದೆ (ಕೃಪಿಡಿ. ೧೪೦) ; ಪೊನ್ನನು ತನ್ನ ಶಾಂತಿಪುರಾಣದಲ್ಲಿ ರಚಿಸಿದ ಮಂದಾನಿಲರಗಳೆಯನ್ನು 'ತ್ವರಿತರಗಳೆ' ಎಂಬುದಾಗಿ ಹೆಸರಿಸಿ ದ್ದಾನೆ (ಛಂದೋವಿ. ೦೬೭). [ ತ್ವರಿತ + ರಗಳೆ ]

**ತ್ವರಿತೆ** (ನಾ). = ತ್ವರಿತ ೨ : ತ್ವರಿತೆಯಿನಿಪ್ಪಾ ಭೂಪಸ್ಮರನಾಗ್ರಹದೂತಿ ಯೊಡನೆ ಮತ್ಸರಿಸಿದಪೋಲ್ ಪಿರಿದು ಪವನಂಜಯಾಹ್ವಯಮಿರದೆಯ್ದು ವುದಾ ಕ್ಷಣಕೆ ಯೋಜನಶತಮಂ (ಕುಸುಮಾ. ೦೦-೦೩೭). [ ಸಂ. ತ್ವರಿತ ]

**ತ್ವರೆ** (ನಾ). ಶೀಘ್ರತೆ ; ವೇಗ : ಕೃಷ್ಣನ ಕೊಳಲಿನ ಕರೆ – ತ್ವರೆ ತ್ವರೆ (ಗೋಕುನಿ. ೪-೪) ; ತ್ವರೆಯಿಂದ ಉದ್ದೇಶಸಾಧನೆಗಾಗಿ ಕನ್ಯಾನ್ವೇಷಣೆ ಮಾಡತೊಡಗಿದರು (ಕುರುಕ್ಷಾ. ೧೨೪) ; ಹರಿಯ ಚರಿತ್ರೆಯ ಪರಿ ಎನಗ್ಹೇ ಳೆಂದು ತ್ವರೆಯಿಂದ ವಿದುರ ಕೇಳಿದನು (ಕರ್ಣಾಕ. ೨೧೬).

**ತ್ವರೆಮಾಡು** = ತ್ವರೆಪಡಿಸಂ : ನಾಕವೆ ಧರೆಗಿಳಿದಂತಿದೆ ನೋಟಕ ಬಾ ಬೇಗ ಬಾ ತ್ವರೆಮಾಡು (ಇಂಚಾಪ. ೧೫೪-೫೭). [ ಸಂ. ತ್ವರಾ ]

**ತ್ವರೆಪಡಿಸು** (ಕ್ರಿ). ಅವಸರ ಮಾಡಂ ; ಆತುರಪಡಿಸು : ಹಿಂದೆ ನಿನಗೆ ಜೀವವನ್ನುಳಿಸಿದವನ ಪ್ರಾಣವನ್ನು ತೆಗೆಯಬೇಕೆಂದು ಹೀಗೇಕೆ ತ್ವರೆಪಡಿ ಸುವೆ? (ರಾವಿಜ. ೧೦). [ ತ್ವರೆಪಡು + – ಇಸು$_3$ ]

**ತ್ವರೆಪಡು** (ಕ್ರಿ). ಆತುರಪಡು. ಅವಸರಪಡಂ ; 'ತ್ವರೆಪಡಿಸು' ಪರಾ [ ತ್ವರೆ + ಪಡು$_1$ ]

**ತ್ವರ್ಯ** (ನಾ). = ತ್ವರೆ : ಹಠಾತ್ತಾಗಿ ಒದಗಿದ ತ್ವರ್ಯದ ಕೆಲಸದ ಮೇಲೆ ತಮ್ಮ ಮಿತ್ರರ ಮನೆಗೆ ಹೋಗಿದ್ದ ಕಾರಣ (ನಡದಾ. II, ೯೪೨) ; ತ್ವರ್ಯದಲ್ಲಿ ಮುಖ ತೊಳೆದು ಅಡಿಗೆಗೆ ಇಟ್ಟಳು (ಬೆಂದಜೀ. ೧೪೦). [ <ಸಂ. ತ್ವರಾ ]

**ತ್ವಷ್ಟ$_1$** (ನಾ). ೧. ಮರಗೆಲಸ ಮಾಡುವವನು ; ಬಡಗಿ. ೨. ದೇವತೆ ಗಳ ಶಿಲ್ಪಿ; ವಿಶ್ವಕರ್ಮ. [ <ಸಂ. ತ್ವಷ್ಟೃ]

**ತ್ವಷ್ಟ$_2$** (ಗು). ಕೆತ್ತಿದ ; ತೆಳುವಾಗಿ ಮಾಡಿದ ; ತೆಳ್ಳಗೆ ಮಾಡಿದ. [ ಸಂ. ]

**ತ್ವಷ್ಟೃ** (ನಾ). ೧. ಮರಗೆಲಸ ಮಾಡುವವನು ; ಬಡಗಿ :"ವರ್ಧಕಿ ದಲ್ ರಥಕಾರಂ ತ್ವಷ್ಟೃ ಕಾಷ್ಟತಟ್ ತಕ್ಷಕಾಭಿಧಾನಮೆನಿಕ್ಕುಂ" (ವಸ್ತುಕೋ. ೬೪-೭೩). ೨. ದೇವಶಿಲ್ಪಿ ; ವಿಶ್ವಕರ್ಮ : "ದೇವರ ವರ್ಧಕಿ ವಿಶ್ವ ಮಹೀವಿದಿತಂ ತ್ವಷ್ಟೃ ವಿಶ್ವಕರ್ಮಂ" (ವಸ್ತುಕೋ. ೦೦-೫೩) ; "ತ್ವಷ್ಟೃ ವೆನೆ ವಿಶ್ವಕರ್ಮಂ" (ಮಂಗರಾ. ೭-೨೩). ೩. ಬ್ರಹ್ಮ ; ಪ್ರಜಾಪತಿ : ಸೃಷ್ಟಿ ಚೋದನೆಗಳಿಂ ನರನೊಳಿಷ್ಟಗಳುದಯವಿಷ್ಟಸಿದ್ಧಿಗೆ ಯಂತ್ರತಂತ್ರಗಳ ಯುಕ್ತಿ, ತ್ವಷ್ಟೃ ಕುಶಲದೆ ಸೃಷ್ಟಿ ವಿಕೃತಿ (ಮಂಕುಕ. ೮೬೦). ೪. ದ್ವಾದಶಾದಿತ್ಯರಲ್ಲಿ ಒಬ್ಬ : ಧಾತಾ ಆರ್ಯಮಾ . . . ತ್ವಷ್ಟೃ ವಿಷ್ಣುಗಳೆಂಬವರೇ ಕ್ರಮದಿಂ ದ್ವಾದಶಾದಿತ್ಯರು (ವಿವೇಕ. ೨೬೬). ೫. ವಿಷ್ಣು ; ಪರಮಾತ್ಮ. ೬. ಚಿತ್ತಾನಕ್ಷತ್ರ. [ ಸಂ. ]

**ತ್ವಾಷ್ಟ್ರ** (ನಾ). ೧. ವಿಶ್ವಕರ್ಮನ ಮಗ ; ವಿಶ್ವರೂಪ ; ವೃತ್ರಾಸುರ. (ಕಿ). ೨. ಒರಟುತನ. ೩. ಕೊಳಕುತನದ ದುಶ್ಚಟಗಳನ್ನು ಉಳ್ಳ ಮನುಷ್ಯ. [ ಸಂ. ]

**ತ್ವಿಷಾಂಪತಿ** (ನಾ). ಬೆಳಕಿನ ಒಡೆಯ; ಆದಿತ್ಯ ; ಸೂರ್ಯ : " ಶೂರಃ . . . ತ್ವಿಷಾಂಪತಿಃ, ಅಹಃಪತಿಃ, ಭಾನುಃ, ಹಂಸಃ, ಸಹಸ್ರಾಂಶುಃ, ತಪನಃ, ಸವಿತಾ, ರವಿಃ – ಈ ೩೭ ಸೂರ್ಯನ ಪೆಸರುಗಳು" (ಸಿದ್ಧಾಂತಿ. ೩೨). P ಸಂಸ್ಕೃತದಲ್ಲಿ ಇವು ಎರಡು ಬೇರೆ ಬೇರೆ ಪದಗಳಂ. [ಸಂ.]

**ತ್ವಿಷೆ** (ನಾ). ಬೆಳಕು ; ಕಾಂತಿ ; ಪ್ರಕಾಶ ; ಪ್ರಭೆ. [ ಸಂ. ತ್ವಿಷಾ ]

**ತ್ವೇಷ** (ಗು), ೧. ಹೊಳೆಯುವ ; ಬೆಳಗುವ. ೨. ಆವೇಶದ ; ಉದ್ರೇಕದ. ೩. ಭಯಾನಕವಾದ ; ಉಗ್ರವಾದ. (ನಾ). ೪. ಆವೇಶ ; ಉದ್ರೇಕ : ತಮ್ಮ ತ್ವೇಷದ ಭರದಲ್ಲಿ ಕುಸುಮಾ ಕುಳಿತಿದ್ದ ಕೋಣೆಗೆ ಹೋಗಿ ಅವಳನ್ನು ಹಿಡಿದು ಹೊರಗೆ ಎಳೆತಂದು (ಸಮಜೀ. ೩೪೫): ವಿಫಲತೆಯ ಉರಿ ತಟ್ಟಿದಾಗಲೆಲ್ಲ...ಭುಸುಗುಟ್ಟಿದೆ ದ್ವೇಷ ತ್ವೇಷಗಳಿಂದ (ಮೂರುದಾ. ೨೦೬) ; ದ್ವೇಷ ತ್ವೇಷಗಳನ್ನು ಹೂಳಿರಿಲ್ಲಿ! (ಕರುಶ್ರಾ. ೭೭-೭) ; ನನ್ನ ತ್ವೇಷ ಮತ್ತಿಷ್ಟು ಹೆಚ್ಚಿತು (ಮೀದಿಮ. ೭೮) : ನಿನ್ನ ಅಕ್ಕಾಜಿಯ ಬಗ್ಗೆ ನಿನಗೆ ತ್ವೇಷವುಂಟಾಗದೆ ಇರಲಾರದೇ (ಹೇಮಂತ. ೧೩೬). ೫. ಭಯವನ್ನುಂಟು ಮಾಡುವಿಕೆ. [ ಸಂ. ]

**ತ್ಸತ್ರ** (ನಾ). ಚತ್ರ ; ಧರ್ಮಶಾಲೆ : ಮುದ್ದೆ ದಂಣಾಯಕ್ಕರೂ ಕೋಟೀಶ್ವರದೇವರಲ್ಲಿ ಕಟ್ಟಿಸಿದ ತ್ಸತ್ರದ ಮಠದಲ್ಲಿ ಉಂಬ ಬ್ರಾಹ್ಮರು (ಸೌಇಇ. IX-ii, ೪೦೭-೩೦ ; 1377). [P ಇದು 'ಸತ್ರ'ದ ಅಪಲಿಖಿತ.]

**ತ್ಸರು** (ನಾ). ಕತ್ತಿಯೇ ಮೊದಲಾದ ಆಯುಧಗಳ ಹಿಡಿ : "ತ್ಸರುಃ, ಮುಷ್ಟಿಃ—ಈ ೨ ಹಿ(ಪಿ)ಡಿ" (ಹಲಾಯು. ೭೮-೩೦೯) ; "ತ್ಸರು ಖಡ್ಗಮುಷ್ಟಿ" (ವಸ್ತುಕೋ. ೮೫-೨೦); "ತ್ಸರುವೆನಲ್ ಪಿಡಿ" (ಮಂಗರಾ. ೮೮-೩೭). [ ಸಂ. ]

**ಥ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತೇಳನೆಯ ಅಕ್ಷರ ; ಥಕಾರ. ೨. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : "ಥಥಸವಂ ದೇಟು" (ಮಂಗರಾ. ೧೦೪-೧೦).

**ಥಂಡಿ** 'ತಂಡಿ' ನೋ.

**ಥಕ** (ನಾ). (ಕುಣಿಯುವುದನ್ನು ಸೂಚಿಸುವ) ಒಂದು ಅನುಕರಣ ಶಬ್ದ. ರೈತರಿಗೆ 'ಬರದ ದೇವಿ' ಥಕ ಥೈ ಎಂದು ಕುಣಿದು ತಾಂಡವವಾಡಿಯೇ ಆಡಿದಳು (ಬರಹಾ. ೫೮).

**ಥಕಥಕ** (ದ್ವಿರುಕ್ತಿ): ಕುಣಿಯೋಣು ಬಾರ . . . ಕುಲುಕಿಸಿ ಕೈ ಕೈ ಮಲಕಿಸಿ ಮೈಮೈ ಥಕಥಕ ಥೈಥೈ (ಗರಿ. ೧೨೨-೯).

**ಥಕಥಾಕು** (ನಾ). ಒಂದು ಅನುಕರಣ ಶಬ್ದ : ಪ್ರಲಂಬನಹಹಾ ನೆನೆದೊಡೆ ಸಾಕು ಬಗೆ ಮುದದಿಂ ಕುಣಿವುದು ಥಕಥಾಕು(ಗೋಕುನಿ. ೧೫-೨೫).

**ಥಕಪಕ** (ನಾ). ಒಂದು ಅನುಕರಣ ಶಬ್ದ : ಹೊರಗೆ ದೂರದಲ್ಲಿ ನದಿಯ ನೀರು . . . ಕನ್ನಡಿಯ ತುಣುಕಿನಂತೆ, ಥಕಪಕ ಹೊಳೆಯುತ್ತಿತ್ತು (ಹೊಸಕ್ಷಿ. ೧೪೭).

**ಥಕಾರ** (ನಾ). ಥ ಎಂಬ ಅಕ್ಷರ : ಸತ್ವಮಿಶ್ರಮಪ್ಪ ಥಕಾರಂ ಬರೆಯುಂ ತಕಾರಮಕ್ಕುಂ ಸ್ವರಾನ್ವಿತಂ (ಶಮದ. ೨೫೭). [ ಸಂ. ]

**ಥಕಾಸು** (ಕ್ರಿ). ದಣಿ ; ಬಳಲು ; ಆಯಾಸಗೊಳ್ಳು : ಗೌಡರು, ಕಮತಿಗ್ಯಾ ನೆಟ್ಟಗ ಇದ್ದಾರ ? ನೀಲವ್ವ ಥಕಾಸಿರಬೇಕು (ದೀಪಹ. I, ೨೪೮) ; ತಮ್ಮಾಜಿಯ ಸಲುವಾಗಿ, ರಮಾಕಕ್ಕಿ ಥಕಾಸಿದ್ದರು (ದೀಪಹ. II, ೪೭). [ ಥಕಾ₀ (P ← ಮರಾ. ಥಕಣೇ) + – ಸು₁ ]

**ಥಕ್ಕು** (ನಾ). ಆಶ್ಚರ್ಯ ; ವಿಸ್ಮಯ : ಉಕ್ಕಿನ ಮೈಕಟ್ಟು ಸಕ್ಕರೆ ಸವಿ ಮಾತು ಥಕ್ಕು ಹಿಡಿಸುವ ನೋಡುವರಿಗೆ (ಮೂಗುತಿ. ೭-೩೩).

**ಥಕ್ಕಾಗು** = ಚಕಿತವಾಗು ; ವಿಸ್ಮಯಗೊಳ್ಳು: ಮೈನವಿರ ನವಿಲು ತಕತೈಯ್ಯ ಕುಣಿದು ಥಕ್ಕಾಗಿ ನಿಂತು (ಗಂಗಾತ. ೧೯೦-೬) ; ನಾನು ಕತ್ತಲ ಕೋಣೆ ನೋಡಿ ಥಕ್ಕಾದೆ (ವೈನಿ. ೧೧೪).

[ ← ಮರಾ. ಥಕ್ಕ; ಹಿಂ. ಥಕ ]

**ಥಟಕ್** (ನಾ). ಒಂದು ಅನುಕರಣ ಶಬ್ದ. 'ಥಟಕ್ಕನೆ' ಪರಾ.

**ಥಟಕ್ಕನೆ** (ಅ). ಬೇಗನೆ ; ಕೂಡಲೆ ; ಒಮ್ಮೆಲೆ ; ಇದ್ದಕ್ಕಿದ್ದಂತೆ : ಅಗಾಧ ಒತ್ತಡಗಳ ಸಂಮರ್ದದಲ್ಲಿ ವಸ್ತುವಿನ ಗುಣಗಳು ಹೇಗೆ ಥಟಕ್ಕನೆ ಬದಲಾಯಿಸುವುವು ಎಂಬುದನ್ನು ತತ್ವಶಃ ಅರ್ಥಮಾಡಿಕೊಳ್ಳಲಾಯಿತು (ಭೂಮಟ್ಟು. ೯೨) ; ಆತನ ಕಾಂತಿಯು ಥಟಕ್ಕನೆ ತಗ್ಗುತ್ತದೆ (ಜ್ಯೋತಿರ್ವಿ. ೭೦). 'ತಟಕ್ಕನೆ' ಪರಾ. [ ಥಟಕ್ + – ಅನೆ₁ ]

**ಥಟ್ಟಣೆ** (ನಾ). ೧. ಗುಂಪು; ಸಮೂಹ. ೨. ಪಡೆ; ಸೈನ್ಯ : ಗಣನೆಯಿಲ್ಲದ ಗಜ ಹಯದ ಭಾರಣೆಯ ಭಾರಿಯ ಭಟರೊಡನೆ ಥಟ್ಟಣೆಯ ಮೇಲೆ ಮಹೀಶ ಹೊಕ್ಕನು ಕಾಳೆಗದ ಕಳನ (ಕುವ್ಯಾಭೀ. ೮-೬) ; ಗಜಗಟ್ಟಿದ ವಿರೋಧಿವ್ರಜದ ಥಟ್ಟಣೆಯ ಮುಱಿದು ಕುಱಿದಱಿ ಮಾಡಿ ದೊರೆಗಳ ನಱಿಸಿ ಕಾದಿ ವಿಭಾಡಿಸುವ ರಣದುಱಬೆಕಾಱನನೆಂತು ಸೈರಿಸಿ ಗೆಲುವೆ ನೀನು (ಕುವ್ಯಾಕ. ೧೭-೨೪). 'ದಟ್ಟಣೆ' ಪರಾ.

[ ಥಟ್ಟು₂ + – ಅಣೆ₄ ]

**ಥಟ್ಟನೆ** (ಅ). ಕೂಡಲೆ ; ಬೇಗನೆ : ಥಟ್ಟನೆರಗಿ ಗರುಡನ ತೆರ (ಗದೀಜ. ೨೫-೧೩) ; ತನ್ನ ಚಿಂತೆಯ ಸುಳಿಯಲ್ಲೇ ಸುತ್ತಿಕೊಂಡು ನಡೆಯುತ್ತಿದ್ದ ಸೋಜ ಥಟ್ಟನೆ ತಲೆಯೆತ್ತಿ ನೋಡಿದ (ಮುಂಗಾಮು. ೦೦೬) : ಅವಳು ಥಟ್ಟನೆ ಲಜ್ಜಿತಳಾಗಿ ತನ್ನ ಸಾಲಿಗೆ ಕಚ್ಚಿಕೊಂಡಳು (ನಾಪೋಲೀ. ೧೬೫): ಜಟ್ಟಿಯಾದರೂ ಥಟ್ಟನೆ ಹಾರಬೇಕು (ಗಾದೆ). [ ಥಟ್₀ + – ಅನೆ₁ ]

**ಥಟ್ಟಯಿಸು** 'ಥಟ್ಟೈಸು' ನೋ.

**ಥಟ್ಟು₁** 'ತಟ್ಟು₄' ನೋ.

**ಥಟ್ಟು₂**, ತಟ್ಟು₂, ತಟ್ಟು₅ (ನಾ). ೧. ಗುಂಪು ; ಸಮೂಹ : "ಜಂಗುಳಿ ತೆರಳ್ಕೆ ದೊಂದುಳಿ ನೆರವಿ ಥಟ್ಟು . . . ಸಂದಣಿ ಜಾಳಿಗೆಯುಮೊನೆ ಶ್ರೇಣಿ ಕಾಖ್ಯಂ" (ಕಬ್ಬಿಕೈ. ೧೬) ; "ಥಟ್ಟೆನಲ್ ಶ್ರೇಣಿ" (ಕಶಬ. ೫೦) ; ಸರಸಿಜದ ಮೋಹರದ ಮುಂದೈತಪ್ಪ ಪರಿಮಳದ ಮೊರೆವ ತುಂಬಿಯ ಥ [ಪಾಠಾಂ. ತ]ಟ್ಟುಗಳ ತನಿವರಿವ ತಂಪಿನ ತುಱುಗಲಿನ ತತ್ಸರಸಿಯನು ದೂರದಲಿ ಕಂಡುಬ್ಬಿದನು ಕಲಿಭೀಮ (ಕುವ್ಯಾಅ. ೧೦-೪೨) ; ಅಟ್ಟಿ ಹೊಯ್ದನು ಹೊಗುವ ತೇರಿನ ಥಟ್ಟುತೂಳುವ ತೋಳಿನಾನೆಯ ಮೆಟ್ಟಿದನು ತಱಿದೊಟ್ಟಿದನು ತೇಜಿಗಳ ತಿಂತಿಣಿಯ (ತೊರರಾ. ೩-೭-೪೨); ದಟ್ಟವಿಸಿದಜ್ಞಾನ ತಿಮಿರದ ಥ[ಪಾಠಾಂ. ಧ]ಟ್ಟು ಮಾರ್ಗವ ಕಾಣಲೀಸದು (ನಿಭಾಗ. ೫-೮-೪). ೨. ಪಡೆ ; ಸೈನ್ಯ : "ಥಟ್ಟು ಸೈನ್ಯದೊಳ್" (ಕರ್ಣಾನಿ. ೨೯) ; ಕಾಳೆಗದೊಳ್ತಡಂಗಡಿದು ಮುಂದಣ ಥಟ್ಟನವೆಂಕಿ ಪಾಯ್ದೊಡೆ (ಎಕ. VI, ಕಠೀಕ. ೪೫-೨೪ : 1196) ; ಕೌರವೇಂದ್ರನ ಥಟ್ಟನಲಿ ಭಟರಾರೆನುತ ತಲೆದೂಗಿದನು ಪಾರ್ಥ (ಕುವ್ಯಾಕ. ೧೪-೨೨) ; ಎರಡು ಥಟ್ಟಿನ ಚೂಣಿ ಸಂದಣಿಸಿತಂರವಣೆಯೊಳು (ಜೈಮಿಭಾ. ೨೨-೩) ; ಅಧಟಿಂದವಱ ಥಟ್ಟುಗಳ ಪಂದಲೆಗಳಂ ದಿಗ್ವಲಿಂದಬಲಿಯಿತ್ತು (ಅಪ್ರತಿ. ೬-೮). **ತಟ್ಟಿ₂** : ೨. ಬನ್ದುಜನವನಜಮಾರ್ತ್ತಣ್ಡಂ ಕಾಯ್ವರ ಗಣ್ಡ ಅರಿತುರಗತಟ್ಟಸಂಘಟ್ಟಂ (ಸೌಇಇ. XI-i, ೭೮-೮೧ ; 1045) ; ಶ್ರೀಮನ್ಮಹಾಮಂಡಳೇಸ್ವರ ಕಲಿಗಳ ಮುಖದ ಕೈ ಸಾಳುವ ತಟ್ಟ ವಿಭಾಡ ರಿಪುಕಟಕ ಸೂಱೆಕಾಱ ನಗಿರೆಯ ಪುರವರಾಧೀಸ್ವರ (ಕಇ. I, ೫೦-೫; 1430). **ತಟ್ಟು₆** : ೧. ಆನೆಯ ಹಿಂಡುಗಳುಂ ಕುದುರೆಯ ತ[ಪಾಠಾಂ. ದ]ಟ್ಟುಗಳುಂ ಪದಾತಿ ಬಲ ದೊಡ್ಡುಗಳುಂ . . . ಪೊಱಮಡೆ (ಸಂಬಿರ. ೧೪-೭೩); ಜಿನಜನ್ಮೋತ್ಸವಮಂ ಮನಂದಣಿಯೆ ನೋಡಲ್ . . . ದೇವಕೋಟಿ ನೆಗಬಲ್ಕಾಡಿತ್ತು ಕೋಡಾಳಿಗಟ್ಟಿನ ತಟ್ಟಂದೆನೆ ಹಸ್ತಿ ಪೆತ್ತುದು ಮಹಾವೈಕುರ್ವಣೋತ್ಸಾಹ ಮಂ (ಅನಂಪು. ೫-೩೮). ೨. ಪೊಗಟ್ತಿಯಂ ತಳೆದ ತೇಜಿಯ ತಟ್ಟು ತೆರಳುದೆತ್ತಲುಂ (ಕಬ್ಬಿಕಾ. ೨೦೪) ; ಕರಿಘಟೆತೇಜಿಯ ತ[ಪಾಠಂ. ಥ]ಟ್ಟು ತೇರೊಡ್ಡುಸಂಗರ ವೀರಭಟರ ಸಮೂಹ ಬರುತಿದ್ದುದು (ಭರಜ. ೨೩-೧೩).

**ಥಟ್ಟು ಮಾಡು** = (ಸೈನ್ಯದೊಡನೆ) ಆಕ್ರಮಿಸು,–ದಾಳಿಮಾಡು,–ಮುತ್ತು: ಬೇಡಿದ ಮುನ್ನೀವುದು ವೀರವೈರಿ ಮೊನೆಯೊಳ್ ಕಟ್ಟೇಳ್ಗೆಯುಂ ಥಟ್ಟುಮಾಡದ ಮುಂ ಗೆಲ್ಬುದು ಭೀತನಳ್ಕಿದೆಡೆಯೊಳ್ ಕಾಯೆಂದು ಬಾ[ ಯ್ ]ವಿಟ್ಟು ನೋಡದ ಮುಂ ಕಾವುದು ವೀರಮಾರುತಿಗೆ ಬಲ್ಲಾಳಂಗೆ ಜಾತಿಬ್ರತನ್ (ಎಕ. V, ಚನ್ನರಾ. ೧೯೭-೩೮ : 1228) ; ಕರತಳ ಖಡ್ಗಮಂ ಜಡಿದು ಪಾಂಗಱಿದೊಡ್ಡಣಮೊಡ್ಡಿ ನಿಂದು ಪೇಚರರರಿದೆಂಬಿನಂ ಪೊಡೆವ ಪೊಯ್ವ ತಱುಂಬುವ ಥಟ್ಟುಮಾಳ್ಪ ಮುಂಬರಿವ ಮರಳ್ಚುವಬ್ಬರಿಪ . . . ತೊಡಂಕುವಗ್ಗಲಿಪ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ರಾಜಶೇ. ೬-೫೩). [ < ಪ್ರಾ. ಥಟ್ಟ ]

**ಥಟ್ಟುಗಿ** 'ತಟ್ಟುಗಿ' ನೋ.

**ಥಟ್ಟುಗೆಡಹು**, ತಟ್ಟುಗೆಡಹು (ಕ್ರಿ). ಒಟ್ಟಾಗಿ ಬೀಳಿಸು ; ಗುಂಪಾಗಿ ಬೀಳುವಂತೆ ಮಾಡು : ಮೂಱು ಲೋಕದ ಧೀರೆ ನಿದ್ರಾಂಗನೆ ಎಲ್ಲರನೂ ಹಿಂಡಿ ಹೀರಿ ಪ್ರಾಣಾಕರ್ಷಣೆಯ ಮಾಡಿ ಥ [ಪಾಠಾಂ. ತ]ಟ್ಟು

ಗೆಡಹಿದರೆಳಲ್ಲಾ (ಅಪಜಂ. ೧೫೨-೭೯೯); ಬೆಟ್ಟವನು ಬಲವೈರಿ ತಱಿವವೊಲಿಭದ ಮೋಹರವ ಥಟ್ಟುಗೆಡಹಿದನು (ಕುವ್ಯಾ.ಕ. ೧೩-೨೭); ಥಟ್ಟನೊಳ ಹೊಗುವಾನೆ ಕುದುರೆಯ ತೇರ ತಿಂಥಿಣಿಯ ಥಟ್ಟುಗೆಡಹಿದನಂ (ತೊರರಾ. ೫-೬-೧೫); ಬಿಟ್ಟ ಮಂಡೆಯಲೊಡೆಯನೊಡಲಲಿ ಥಟ್ಟುಗೆಡಹಿದ ರೊಡಲುಗಳನೊಡಗುಟ್ಟಿದರು ಬಸುಱುಗಳನಡಿಗಡಿಗವನಿಯಲಿ ಹೊರಳಿ (ನಿಭಾಗ. ೭-೨-೨೩). ತಟ್ಟುಗೆಡಹು: ರಾವುನ ಭಟರು ತ[ಪಾಠಾಂ. ಥ]ಟ್ಟುಗೆಡಹಿ ರಾವುತರ ಹಿಡಿದರು ಸಾಲಿಟ್ಟೋಡುವ ಕುದುರೆಗಳ (ಕುರಾಸಾಂ. ೨೦-೭೦). [ ಥಟ್ಟು$_2$ + ಕೆಡಹು (<ಕೆಡವು) ]

**ಥಟ್ಟುಗೆಡು** (ಕ್ರಿ). ಗುಂಪಿನಿಂದ ಬೇರೆಯಾಗು ; ಚೆದರು ; ಚೆಲ್ಲಾಪಿಲ್ಲಿಯಾಗು : ಥಟ್ಟುಗೆಡುವಾನೆಗಳಿಗಾನೆಯ ಕಟ್ಟುತಸುರರಿಗಸುರರನು ಹೊಗಗುಟ್ಟುತೀ ಪರಿ ನಡೆಸಿ ತಂದರು ದೃಢಪರಾಕ್ರಮನ (ತೊರರಾ. ೫-೭-೧೩). [ ಥಟ್ಟು$_2$ + ಕೆಡು$_1$ ]

**ಥಟ್ಟುಗೆಡೆ, ತಟ್ಟುಗೆಡೆ** (ಕ್ರಿ). ೧. ಗುಂಪಾಗಿ ಬೀಳು ; ಒಟ್ಟಾಗಿ ಕೆಳಕ್ಕೆ ಬೀಳು : ಅಟ್ಟಿ ರಣದಲಿ ಕರಿಯ ಸೇನೆಯ ಥಟ್ಟುಗೆಡೆದಿಹ ಕರಗಳಿಂದವ ಹಿಟ್ಟುಗುಟ್ಟಿದ ತುರಗ ತುರಗದಿ ಬಲವ ಬಱುಗೈದ (ಕಾಶಿರಾ. ೩೪-೧೪); ಬೆಟ್ಟದಂದದ ಬಲುಮರಂಗಳು ಥಟ್ಟುಗೆಡೆದವು ಧರೆಗೆ (ನಿಭಾಗ. ೩-೨-೨೦); ಥಟ್ಟುಗೆಡೆದುದು ಪಗೆಯ ಪಡೆಯೊಳಕ್ಷೌಹಿಣಿಯ ಶತಕವೊಂದೇ ಕ್ಷಣದೊಳು (ಜೈಮಿಥಾ. ೨೫-೫೦). ೨. ರಭಸದಿಂದ ಬೀಳು; ದಿಂಡುಗೆಡೆ: ಗಾಳಿಗೊಱಗಿದ ಕದಳಿಯಂತಿರೆ ಲೋಲಲೋಚನೆ ಥಟ್ಟುಗೆಡೆದಳು (ಕುವ್ಯಾ.ಆ. ೯-೨೭); ಥಟ್ಟುಗೆಡೆದಳು ಧರೆಗೆ ಸತಿ ಕಱುಗೆಟ್ಟ ತಾಯಂದದಲಿ (ನಿಭಾಗ. ೧೦-೭-೭). **ತಟ್ಟುಗೆಡೆ:** ೧. ತಟ್ಟುಗೆಡೆದಿಹ ವಾಜಿವಾರಣವರೂಥ ದಿಂದಿಟ್ಟಣಿಸಿ ಬಿದ್ದ ರಾಕ್ಷಸ ಮನುಜ ಕಪಿಗಳಿಂ . . . ಕಟ್ಟುಗ್ರಮಾದ ರಣರಂಗದೊಳ್ವಾಲ್ಮೀಕಿಮುನಿ ರಾವುನಂ ಕಂಡನು (ಜೈಮಿಭಾ. ೨೦-೪೮). [ ಥಟ್ಟು$_2$ + ಕೆಡೆ$_1$ ]

**ಥಟ್ಟುಚ್ಚು** 'ತಟ್ಟುಬೆರ್ಚು' ನೋ.

**ಥಟ್ಟುತಾಱು** 'ತಟ್ಟುಂತಾಱುಂ' ನೋ.

**ಥಟ್ಟುಪೊಟ್ಟು** (ನಾ). ಒಂದು ಅನುಕರಣ ಶಬ್ದ : ನಿಶಾಟರನುಂಡನಗ್ನಿ ಧುಮ್ಮೆಂಬ ಧಟಚ್ಚಟೆಂಬ ಧಗೆಯೆಂಬ ಧಗದ್ಧಗಯೆಂಬ ಥಟ್ಟುಪೊಟ್ಟೆಂಬ ರವಂ ಕಱುತ್ತಡಸಿ ಮೆಲ್ಲ ಸರಕ್ಕನುಸಾರಿಯುಪ್ಪಿನಂ (ಕಾವ್ಯಾ.ಪ. ೨೮).

**ಥಟ್ಟುವರಿಯಿಸು, ತಟ್ಟುವರಿಯಿಸು** (ಕ್ರಿ). ಗುಂಪಾಗಿ ಹೋಗುವಂತೆ ಮಾಡು : ಪಿಂಡಾನೆಗಳೊಂದುಗೂಡಿ ಶಿಕ್ಷೋಪಕರಣಂ ಬೆರಸು ಸುಳಿದೇಱುವ ಸುತ್ತಂ ಮೆಟ್ಟಿಸುವ ವಿಸಟಂಬರಿವಡ್ಡತರದೊಳಿಕ್ಕುವ ಥ[ಪಾಠಾಂ. ತ]ಟ್ಟುವರಿಯಿಪ ತೇರೈಪ ಬೋೞೈಪ (ರಾಜಶೇ. ೭-೧೧ ವ). **ತಟ್ಟುವರಿಯಿಸು:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಥಟ್ಟು$_2$ + ಪರಿಯಿಸು ]

**ಥಟ್ಟೈಸು, ತಟ್ಟೈಸು, ಥಟ್ಟಯಿಸು** (ಕ್ರಿ). ೧. ಗುಂಪುಗೂಡು; ಒಟ್ಟಾಗು: ಧರಣಿಪರು ಥಟ್ಟೈಸಿ ರಿಪುಮೋಹರಕೆ ಕವಿದುದು (ಕುವ್ಯಾದ್ರೋ. ೪-೩೦). ೨. ಮುತ್ತು; ಕವಿ: ಭೀಮನ ಬಿಡದೆ ಥಟ್ಟೈಸಿದನು ಶರನಿಕರದಲಿ ರವಿಸೂನು (ಕುವ್ಯಾದ್ರೋ. ೧೩-೨೬). **ತಟ್ಟೈಸು:** ೧. ತಟ್ಟೈಸಿ ತೆಂಕ ಬಡಗಲೊಂದೆ ತೆರೆಯದ್ದುದಿಟ್ಟದ್ದರಾಚೆ ಮುನ್ನೂಱು ತೊಟ್ಟೀಚೆ ಮುನ್ನೂಱು ಪಡಲಿಗೆ ಇದ್ದುವು ಮೆಟ್ಟಕ್ಕಿ ತುಂಬಿ ಸಾಲಾಗಿ(ಭರಚ. ೩೦-೭೭). **ಥಟ್ಟಯಿಸು:** ೧. ಕಲ್ಪಾಂತ ಮೇಘದ ಭಾರಣೆಯನೊಟ್ಟೈಸಿ ಥಟ್ಟಯಿಸಿತ್ತು ಕುರುಸೇನೆ (ಕುವ್ಯಾ.ಭೀ. ೮-೧೧). [ <ಥಟ್ಟಣೆ+ – ಇಸು$_3$ ]

**ಥಟ್ಟೊಡ್ಡು** (ಕ್ರಿ). ಸೈನ್ಯವನ್ನು ಒಡ್ಡು : ಪುರಮನಧಟಿಂ ಬಳಸಿ ಕಾದು ಪಮರವ್ರಜಂ ಮುರಿದು ಥಟ್ಟೊಡ್ಡಿ ನಿಂದುದು ಸುರಪ ನಾಜ್ಞೆಯಿಂ (ಜಿಬಪು. ೪೩-೩). [ ಥಟ್ಟು$_2$ + ಒಡ್ಡು$_1$ ]

**ಥಡಿ** 'ತಡಿ$_3$' ನೋ.

**ಥಣ್ಣಗೆ** 'ತಣ್ಣಗೆ$_2$' ನೋ.

**ಥಣ್ಣನೆ** 'ತಣ್ಣನೆ' ನೋ.

**ಥಣ್ಣೆ** 'ತಣ್ಣೆ' ನೋ.

**ಥತ್** (ನಾ). ಅವಹೇಳನವನ್ನು ಸೂಚಿಸುವ ಒಂದು ಅನುಕರಣ ಶಬ್ದ : ಥತ್ ಏನು ಹಾಳು ಲೆಕ್ಕಗಳೋ! (ಶಾಲಿಮು. ೩).

**ಥತ್ವ** (ನಾ). ಥ ಎಂಬ ಅಕ್ಷರ ; ಥಕಾರ : ಸತ್ವಮಿಶ್ರಮಪ್ಪ ಥಕಾರಂ ಬರೆಯುಂ ತಕಾರಮಕ್ಕುಂ ಸ್ವರಾನ್ವಿತಂ ಥತ್ವಮೊರ್ಮೆ ದಟಹ ಮುಮಕ್ಕುಂ (ಶಮದ. ೨೫೭). [ ಸಂ. ]

**ಥಪ್ಪಿ** (ನಾ). ಕಂತೆ ; ಪಿಂಡಿ : ಬಂದ ಜೀನಸುಗಳು ವಖಾರಿಯಲ್ಲಿ ಇಳಿಸಿಕೊಂಡು ಯಾವ ಆಸಾಮಿಯವರ ಎಷ್ಟು ಮಾಲು ಬಂತು ಇದರ ಬಗ್ಗೆ ತಗಡಿನ ಮೇಲೆ ಬರದು ಥಪ್ಪಿಯ ಮೇಲೆ ಹಚ್ಚುವದು (ಮುಂಬವ್ಯಾ. ೨೭೮). [ ←ಮರಾ. ಥಪ್ಪೀ ]

**ಥರ$_1$** (ನಾ). ಒಂದು ಅನುಕರಣ ಶಬ್ದ. 'ಥರಗುಟ್ಟು', 'ತರ$_1$' ಪರಾ. **ಥರಥರ$_1$** (ದ್ವಿರುಕ್ತಿ) ; ಅವರ ಮಾತು ಕೇಳಿ ಆಕೆ ಥರಥರ ನಡುಗಿದಳು (ರೂಢಿ).

**ಥರ$_2$** 'ತರ$_3$' ನೋ.

**ಥರ$_3$, ತರ$_4$** (ನಾ). ಪದರ ; ಪೊರೆ ; ಸ್ತರ : ಪರದುಕೂಲದ ಪಟ್ಟಕರ್ಮದ ಥರಗಳಿಂ [ಪಾಠಾಂ. ಥರದದಿಂ] ದೊತ್ತಿದವು ಚಾಮೀಕರಮಯದ ಬಹುವಿಧದ ಭಾಂಡದ ಬಂಡಿ ನೂಕಿದವು (ಕುವ್ಯಾ.ಗ. ೪-೧೩); ವಾತಾವರಣದ ಬುಡದ ಥರಗಳು, ಅಂದರೆ ಭೂಮಿಯ ಸಮೀಪಕ್ಕೆ ಇರುವ ಭಾಗಗಳು ಮೇಲಿನ ಥರಗಳ ಭಾರದಿಂದ . . . ಒತ್ತಲ್ಪಟ್ಟು ಹೆಚ್ಚಿಗೆ ನಿಬಿಡವಾಗಿರುತ್ತವೆ (ಮುಂಬಯು. ೫-೭೫); ಕಟ್ಟೆಗಿಂತ ಗುದ್ದುಮೊಳ ಎತ್ತರವಾಗಿ ಅರ್ಧ ವರ್ತುಲಾಕೃತಿಯ ಥರ ಕಟ್ಟಿ . . . ಆ ಥರದೊಳಗೆ ಎರಡು ಮುಶಿಗಳನ್ನು ಹಾಕಿಡುವರು (ಕಭಾಗ. ೨೭). **ತರ$_4$:** ನೆಲದ ಹೊಟ್ಟೆಯೊಳಗಿನ ಮಣ್ಣಿನ ತರಗಳೂ . . . ಎಲುಬುಗಳೂ, ಅಜ್ಞಾತ ಇತಿಹಾಸವನ್ನು ಉಸಿರುವ ಸಾಧನಗಳಾಗುವವು (ವಿಜಾಮಂ. ೭೦) : ಒಂದು ಭಾಷೆಯ ತರದ ಮೇಲೆ ಮತ್ತೊಂದು ಭಾಷೆಯ ಕಟ್ಟಡವು ನಿಲ್ಲುವಾಗ ಯಾವ ರೂಪವನ್ನು ತೆಗೆದುಕೊಳ್ಳುತ್ತದೆಂಬುದಕ್ಕೆ ಪಿಡ್ಗಿನ್ ಒಳ್ಳೆಯ ದೃಷ್ಟಾಂತ (ಭಾಷಾಶಾ. ೧೫): ಕ್ಷಾರಾಂಶದ ದಪ್ಪವಾದ ತರವು ಕೂಡುತ್ತದೆ (ಮುಂಬಯಿ. ೪-೧೯೮). [ < ಸಂ. ಸ್ತರ ]

**ಥರ$_4$** 'ತರಹ' ನೋ.

**ಥರಂಬಿಡಿ** 'ತರಂಬಿಡಿ' ನೋ.

**ಥರಗುಟ್ಟು** (ಕ್ರಿ). ಗಡಗಡ ನಡುಗು,-ಕಂಪಿಸು : ಅವರ ಕೈಕಾಲುಗಳು ಥರಗುಟ್ಟಿ ನಡುಗಹತ್ತಿದವು (ಅಂಬಿಕೆ. ೧೩); ಮಂದಿರಕ್ಕೆ ಮಂದಿರವೇ ಥರಗುಟ್ಟಿ ನಡುಗುವಂತೆ ಚೀರುವಳು (ತುಂಗಭ. ೧೪೨). [ ಥರ$_1$ + ಕುಟ್ಟು$_1$ ]

**ಥರಥರ$_1$** 'ಥರ$_1$' ಪರಾ.

**ಥರಥರ$_2$** 'ತರ$_3$' ಪರಾ.

**ಥರಥರ$_3$** 'ತರಹ' ಪರಾ.

**ಥರಥರನೆ** (ಅ). ಗಡಗಡನೆ : ಸುದ್ದಿ ಕೇಳಿ ಥರಥರನೆ ನಡುಗಿದನು (ರೂಢಿ). [ < ಥರ$_1$ + – ಅನೆ$_1$ ]

**ಥರಥರಿಸು** (ಕ್ರಿ). ನಡುಗು ; ಕಂಪಿಸು : ಬಿರುಬಿರನೆ ಕಂಗಳಂ ಬಿಟ್ಟು . . . ಥರಥರಿಸಿ ನಿಲ್ಲುತುಂ (ಜಿಬಪು. ೨-೨೭); ನಾಚಿಕೆ, ರೋಷ ಎರಡೂ ಸೇರಿ ಮುಖವೆಲ್ಲ ಥರಥರಿಸುತ್ತಿತ್ತು (ಸ್ವಾಮಿಸ್ಮ. ೫೨); ಬಾನಿನ ಆಮಲಿಗೆ ಮರುಳಾದ ನದಿಯ ನೀರು ಥರಥರಿಸತೊಡಗಿತು (ಸ್ವಪ್ನಹೊ. ೧೧೩). [ < ಥರ$_1$ + – ಇಸು$_3$ ]

**ಥರವಿಡಿ** 'ತರಂಬಿಡಿ' ನೋ.

**ಥರ್ಮಾಮಿಾಟರು** (ನಾ). ಜ್ವರಮಾಪಕಯಂತ್ರ : ಕೈಯಲ್ಲಿ ಥರ್ಮಾಮಿಾಟರನ್ನು ಹಿಡಿದು ಮುಗುಳುನಗುತ್ತಾ ನಿಂತಿದ್ದಳು (ದೀಪದ. ೧೪). [ ←ಇಂ. Thermometre ]

**ಥರ್ಮಾಸ್‌ಫ್ಲಾಸ್ಕು** (ನಾ). ಒಳಗಿರುವ ಬಿಸಿಯಾದ ಪಾನೀಯಂ ಬಹಳ ಹೊತ್ತು ಆರದಂತೆ ಇರುವ ಏರ್ಪಾಟು ಉಳ್ಳ ಒಂದು ಬಗೆಯ ಶಾಖಿಪಾತ್ರೆ: ಒಂದು ಟಿಫನ್‌ಕ್ಯಾರಿಯರ್‌ನಲ್ಲಿ ಊಟ, ಥರ್ಮಾಸ್‌ಫ್ಲಾಸ್ಕಿನಲ್ಲಿ ಕಾಫಿ . . . ತೆಗೆದುಕೊಂಡು ಹೋಗಬೇಕಾಗುತ್ತದೆ (ನಾಡಿಗೇ. ೧೪೮). [ ← ಇಂ. Thermos-flask ]

**ಥಳಕು** 'ತಳಕು$_2$' ನೋ.

**ಥಳತ್ಥಳಿಸು** 'ಥಳಥಳಿಸು' ನೋ.

**ಥಳಥಳ** (ನಾ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ : ಅಂಗಳ ಎಷ್ಟು ಥಳಥಳ! ಜಾಗ ಏನು ಜಳಜಳ! (ಗಾಳಿಪ. ೦೦೦). 'ಥಳಥಳನೆ', 'ಥಳಥಳಿಸು' ಪರಾ.

**ಥಳಥಳನೆ** (ಅ). ಪ್ರಕಾಶಮಾನವಾಗಿ ; ಹೊಳಪಿನಿಂದ ಕೂಡಿ : ಥಳಥಳನೆ ಹಗಲುಳುಕು ಬೀಳ್ದವು (ಸಾಳ್ವಭಾ. ೨೦-೩೪). [ ಥಳಥಳ + – ಅನೆ$_1$ ]

**ಥಳಥಳಾರಿಸು** (ಕ್ರಿ).=ಥಳಥಳಿಸು: ಕಣ್ಣುಗಳ ಬೆಳಕು ಥಳಥಳಾರಿಸುವದಂ ನೋಡಿ (ಶಾಗಂಧಿ. ೧೯೪-೧೦). [ < ಥಳಥಳಿಸು ]

**ಥಳಥಳಿಕೆ** (ನಾ). ಹೊಳಪು ; ಪ್ರಕಾಶ : ಥಳಥಳಿಸುವ ರಥಯೂಥಪಾದಿಗಳಿಂದ ಥಳಪಳನೆಸೆವ ಕೈದುಗಳ ಥಳಥಳಿಕೆಯೊಳು ಮೇಲಿಕ್ಕಿದ ಮಗಧನ ಥಳಕನೆ ಗೆಲಿದನೆ ಜಯತು (ಶತಸಾಂ. ೭೦-೫೯). [ ಥಳಥಳ + – ಇಕೆ ]

**ಥಳಥಳಿಲು** (ನಾ). ಒಂದು ಅನುಕರಣ ಶಬ್ದ : ಥಳ [ಪಾಠಾಂ. ಳ]ಥಳಿಲು ಥಟಥಟಿಲು ಖಣಿಕಟಿಲುಲುಹು ಮಿಗೆ ಧನಿ ಮೆಚಿಯೆ ರಿಪುಗಳ ಗೆಲುವೆವೆಂದುರವಣಿಸಿ ಹೊಯ್ದಾಡಿದರು ರಣದೊಳಗೆ (ಕುವ್ಯಾಭೀ. ೪-೪೨).

**ಥಳಥಳಿಸು**, ಥಳತ್ಥಳಿಸು (ಕ್ರಿ). ಪ್ರಕಾಶಿಸು ; ಹೊಳೆ ; ಮಿಂಚು : ಧನದನಗಂ ತನಗಟ್ಟಿದೊಡೆ ರಾಯಭಾರಿತನಂ ಬಂದಂತಿರ್ಪುವಿದಟಿ ಕುಂಜೋಪಾಂತಂ ಥಳಥಳಿಸಿ ಬೆಳಗೆ ಕುಳಿಶಶೃಂಗಗಳ್ (ಶಾಂತಿಪು. ೨-೧೧೫); ಪೇರುರದೊಳ್ಮಣಿಹಾರಂ ಥಳಥಳಿಸಿ ಪೊಳೆವುತಿರ್ದತ್ತು (ಕಾದಂಪೂ. ೩೦) : ಪರಿಪರಿಯ ಸತ್ತಿಗೆಯಲ್ಲಿ ಕಿಡಿಯನುಗುಳ್ವಲಗುಗಳ ಥಳಥಳಿಪ ಬೆಳಗಲ್ಲಿ (ಇಹರ. ದೇ. ೩೭-೧೬) ; ಒಡೆದು ನಡುನೆತ್ತಿಯನು ಝಳಪಿಸಿ ಕಡುವೆಳಗು ಥಳಥಳಿಸಿ ತರಣಿಯ ತುಡುಕಿ ಹಾಯ್ದುದು ರಶ್ಮಿ ರಂಜಿಸಿತಖಿಳದಿಗುತಟವ (ಕುವ್ಯಾದ್ರೋ. ೧೮-೭೦) ; ಆವ ದಿಕ್ಕಿನಲಿ ನೋಡಲು ಥಳಥಳಿಸುವ ತೀವಿದ ಮಿಸುನಿಪಟ್ಟಿಗಳು (ಕಂನವಿ. ೮-೯) ; ಥಳಥಳಿಸುತ್ತಿದ್ದ ತಂತಮ್ಮ ಪಾತ್ರೆಗಳಲ್ಲಿ ನೀರು ತೆಗೆದುಕೊಂಡು ಹೊರಟರು (ಚಂಗಾಳ್ವ. ೮೦). **ಥಳತ್ಥಳಿಸು** : ಸುಲಿಪಲ್ಗಳುಟಿ ಥಳತ್ಥಳಿಸೆ ಕೆಂಜೆಡೆ ಮಿಱುಗೆ ತಲೆಮಾಲೆಗಳ್ ಶೋಭಿವೆತ್ತು ರಂಜಿಸೆ . . . ವಿರೂಪಾಕ್ಷನಿರ್ದಂ ವಿಲಾಸದಿಂದೆ (ಚೆಬಪು. ೨-೨೨). 'ತಳತಳಿಸು' ಪರಾ. [ ಥಳಥಳ + – ಇಸು$_3$ ]

**ಥಳಪಳ** (ನಾ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ : ಅವಳ ವಜ್ರದ ಓಲೆ ಥಳಪಳ ಎಂದು ಹೊಳೆಯುತ್ತಿದೆ (ರೂಢಿ). 'ಥಳಪಳನೆ' ಪರಾ.

**ಥಳಪಳನೆ** (ಅ). = ಥಳಥಳನೆ : ಥಳಥಳಿಸುವ ರಥಯೂಥಪಾದಿಗಳಿಂದ ಥಳಪಳನೆಸೆವ ಕೈದುಗಳ ಥಳಥಳಿಕೆಯೊಳು ಮೇಲಿಕ್ಕಿದ ಮಗಧನ ಥಳಕನೆ ಗೆಲಿದನೆ ಜಯತು (ಶತಸಾಂ. ೭೦-೫೯). [ ಥಳಪಳ + – ಅನೆ$_1$ ]

**ಥಳಪು** 'ತಳಪು$_1$' ನೋ.

**ಥಳವಳಿಗೆ** (ನಾ). (?) : ಆ ಸೋಮದೇವರ ದೀವಿಗೆಗೆ ಎಣ್ಣೆ ಕೊಳಗವೊಂದು ಬಳ್ಳವೊಂದು ಮಾನವೊಂದಱ ಲೆಕ್ಕದೆ ದಿನ ಹದಿನಾಲ್ಕಕ್ಕಂ ಕೊಳಗ ಹದಿನೆಂಟು ಬಳ್ಳವೆರಡು ಥಳವಳಿಗೆಯ ಪಕ್ವಾನ್ನದಡಿಗೆಗೆ ಕೊಳಗ ಹತ್ತು ಬಳ್ಳವೆರಡು (ಎಕ. III, ತಿರುಮ. ೯೭-೫೦: 1276). [ ? ]

**ಥಳಿ** 'ತಳಿ$_2$' ನೋ.

**ಥಳಿಸು$_1$** 'ತಳಿಸು$_1$' ನೋ.

**ಥಳಿಸು$_2$** 'ತಳಿಸು$_3$' ನೋ.

**ಥಳುಕು** 'ತಳಕು$_2$' ನೋ.

**ಥಳುಕುಬಟ್ಟು** (ನಾ). "(ಉಡುಪು, ಮೊ.ಗಳಿಗೆ ಅಲಂಕಾರಕ್ಕಾಗಿ ಹಾಕುವ) ಹೊಳಪುಬಟ್ಟುಗಳ (ಲ್ಗೊಂದು ; ಚಮಕಿ ; ಥಳುಕು ಬಟ್ಟು) ; ಥಳಥಳಿಸುವ ಸಣ್ಣ ವಸ್ತು" (Spangle. ಇಂಕನಿ). [ ಥಳುಕು (<ತಳಕು$_2$) + ಬಟ್ಟು$_1$ (<ಬಟ್ಟ$_1$) ]

**ಥಟಿಲ್** (ನಾ). ಒಂದು ಅನುಕರಣ ಶಬ್ದ : ಖಟಿಲೆಂಬ . . . ಥಟಿಲೆಂಬ ಮಹಾಪ್ರಾಣಾಕ್ಷರಂಗಳೊಳ್ ಸುಟಿವುತಿರ್ಪನುಕರಣೆಯೆಲ್ಲವುಂ ನಿತ್ಯ ಜಟನೆಂಬರಾದಿಯ ಕವೀಂದ್ರರ್ (ಸಂಜೀವ. ೯).

**ಥಾಕು** (ನಾ). (ಉಕ) ೧. ನಿಲುಗಡೆ ; ವಿರಾಮ : ಬಾಯಿಗೆ ಥಾಕ ಇಲ್ಲ (ಕೋಲ್ಮಿಂಚು. ೧೭೦). ೨. ಸಂಬಂಧ : ಮಾತಿಗೆ ಮಾತು ಥಾಕಿಲ್ಲಲ್ಲಾ ! (ಹೊಸಂಸಾ. ೯೧). [ ←ಮರಾ. ಥಾಕ್ ]

**ಥಾಟು**, ತಾಟು$_5$ (ನಾ). ಡೌಲು : ಪ್ರದರ್ಶನ ; ಆಡಂಬರ ; ಶೋಭೆ : ಅಂದಿನ ಸರ್ಕಸ್ಸು ವಿಶೇಷ ಥಾಟನಿಂದ ಸುರುವಾಯಿತು (ಮೇದಿಮ. ೪೯) ; ಒಳ್ಳೆಯ, ನಗುಮುಖದ ಹೆಣ್ಣನ್ನು ಲಗ್ನವಾಗಿ ತನ್ನ ಸಂಸಾರವನ್ನು ಒಳ್ಳೆಯ ಥಾಟನಿಂದ ಸಾಗಿಸಿದ್ದಾನೆ (ಮುಕ್ತ. ೮) ; ಉಡುಗಿಯ ಮಾಟೇನ ನಡಿಗಿಯ ಥಾಟೇನ (ಗರಿ. ೧೦೦-೯) ; ನಮ್ಮ ದರ್ಬಾರದ ಥಾಟನ್ನು ನೋಡಿ ಕಣ್ಣು ಕತ್ತಲುಗೂಡಿಸಿದ ಹಾಗಾದದ್ದರಿಂದ (ಛತ್ರಪ. ೦೪೦) : ನನ್ನ ಹೆಂಡತಿಯನ್ನು ಕರೆದು ತಂದು ಮರೆಗೆ ನಿಲ್ಲಿಸಿ ನಿಮ್ಮ ರಸಿಕಜೀವನ, ರಸವತ್ತಾದ ಮಾತಿನ ಥಾಟನ್ನು ತೋರಿಸಿದೆ (ಕೂನೆಕಾ. ೩೦). **ತಾಟು$_5$**: ತಾಟನಿಂದಾಟದಿಂ ಜಿಂಕೆಗೂ ಮಿಗಾಗಿ ನಾಟಕದ ಪೋಲ್ ತಾಸಿನೊಳು ತೀರಿಹೋದೆಯಾ ? (ಉಯ್ಯಾಲೆ. ೭೦-೦೪). [ ←ಮರಾ. ಥಾಟ್ ]

**ಥಾನು** (ನಾ). (ನಲವತ್ತು ಗಜಗಳ) ಬಟ್ಟೆಯ ಕಟ್ಟು : ಮೇಲೊಂದು ಕಸೆಯ ಅಂಗಿ ಧರಿಸಿ, ತಲೆಗೆ ಒಂದು ಥಾನು ಬಟ್ಟೆಯನ್ನು ಪಾಗು ಸುತ್ತಿ . . . ದಿಗ್ವಿಜಯಕ್ಕೆ ಹೊರಟಂತೆ ಹೊರಡುತ್ತಿದ್ದರು (ಕರಚಿ. ೮೦೭) ; ನಾನು ರಾಜನಿಗೆ . . . ಬೆಲೆಯಾದ ಡಮಾಸ್ಕ್ ಮತ್ತು ಸಾಟನ್ ಬಟ್ಟೆ ಥಾನುಗಳನ್ನೂ ಅರ್ಪಿಸಿದೆ (ಪ್ರವಾಇ. II, ೦೩೧) ; ಬಟ್ಟೆ ಒಂದು ಥಾನು (ಗಲಿಪ್ರ. ೭೫).

ಥಾ ನು ಗ ಟ್ಟ ಲೆ = ಕಟ್ಟುಗಟ್ಟಲೆ : ಥಾನುಗಟ್ಟಲೆ ಬಟ್ಟೆಯಿಂದ ಯಿಜಾರ ಹೊಲಿಸಿಕೊಳ್ಳಬೇಕೆಂದರೆ ಎಷ್ಟು ಹಣವಾಗುತ್ತೆ ! (ನಾಡಿಗೇ. ೬). [ ←ಹಿಂ. ಮರಾ. ಥಾನ್ ]

**ಥಾಪಣೆ** 'ತಾಪಣೆ' ನೋ.

**ಥಾಲಿ**, ತಾಲಿ$_2$, ಥಾಳಿ (ನಾ). ಲೋಹದ ಗುಂಡನೆಯ ಸಣ್ಣ ಪಾತ್ರೆ, ತಟ್ಟೆ ಮೊದಲಾದುವು : ಚಾಪೆಯ ಬಳಿಯಲ್ಲಿ ಒಂದು ತುಂಬಿದ ತಂಬಿಗೆ, ಒಂದು ಥಾಲಿ ಕಂಡುವು (ಜನಜೀ. ೭೦) ; ಒಂದು ಥಾಲಿ ಆಕಳ ಹಾಲೇ ಅವರ ರಾತ್ರಿಯ ಆಹಾರ (ಹಬ್ಬಬ. ೧೧) ; ಅವಳು ಅಡುಗೇಮನೆಯಲ್ಲಿರುವ ನೆಲಂವಿನಲ್ಲಿ ಕೈ ಹಾಕಿ ತಂಬಿಗೆ ಥಾಲಿ ತೆಗೆದುಕೊಂಡಳು (ರಕ್ತಧ್ವ. ೦೮೮) : ತಾಟು ತಂಬಿಗೆ-ಥಾಲಿಗಳನ್ನು ಅಣಿ ಮಾಡಿದಳು (ಪ್ರೇಮುತ. ೩). **ತಾಲಿ$_2$** : ಕೈಯಲ್ಲಿ ಬೆಳ್ಳೀ ತಾಲಿಯನ್ನು ಹಿಡಿದು ಅವರ ಮನೆಗೆ ಊಟಕ್ಕೆ ಹೋದಳು

(ನೀತಿಚಂ. XIV, ೭) ; ಭೋಜನವೆಂದರೆ ಹತ್ತು ವೈಲಿ ಎಗ್ಗಿಲ್ಲದೆ ತಾಲಿ ಹಿಡಿದು ನಡೆದುಬಿಡುತ್ತಿದ್ದ ದಾಸಾಚಾರ್ಯ (ಸಂಸ್ಕಾರ. ೧೦) ; ಒಂದು ದೊಡ್ಡ ತಾಲಿಯಲ್ಲಿ ಹೆಂಡವನ್ನೂ ತಂದಳು (ಮಲಮ. ೨೨). **ಥಾಳಿ :** "ತಾಲಿ (ತಾಳಿ) – ಸ್ಥಾಲೀ = ಥಾಳಿ, ಪಾತ್ರೆ" (ತದ್ಭಕೋ. ೧೭).

[ <ಪ್ರಾ. ಥಾಲೀ./ಸಂ. ಸ್ಥಾಲೀ ]

**ಥಾಲೀಪಿಟ್ಟು**, ತಾಲೀಪಿಟ್ಟು (ನಾ). ೧. ಅಕ್ಕಿಹಿಟ್ಟು, ಉಪ್ಪು ಮುಂತಾದುವನ್ನು ಕಲಸಿ, ಕೊಳಗದಾಕಾರದ ಅಗಲವಾದ ಬಾಯುಳ್ಳ ತಪ್ಪಲೆಯಲ್ಲಿ ತಟ್ಟಿ, ಬೇಯಿಸಿ ತಯಾರಿಸುವ ಒಂದು ಬಗೆಯ ರೊಟ್ಟಿ ; ತಪ್ಪಲೆರೊಟ್ಟಿ. ೨. ಹಂಚಿನ ಮೇಲೆ ಎಣ್ಣೆಯನ್ನು ಬಳಿದು ಜೋಳದ ಹಿಟ್ಟನ್ನು ತಟ್ಟಿ ಮಾಡುವ ಒಂದು ಬಗೆಯ ಖಾದ್ಯ :ಅವನಿಗೆ ಥಾಲೀ ಪಿಟ್ಟು ಬಹಳ ಸೇರುತ್ತದೆ (ಸ್ಮೃತಿಚಿ. ೪೨೩); ಅಪ್ಪಗೆ ಬಂದರೆ ಅದ್ಭುತ ಸಿಟ್ಟು ಅವ್ವ ಮಾಡುವಳು ಥಾಲೀಪಿಟ್ಟು (ತುಪದ. ೨೪). **ತಾಲೀಪಿಟ್ಟು :** ೨. ತಾಲೀಪಿಟ್ಟು ... ಅಕ್ಕೀತರಿ ಉಪ್ಪಿಟ್ಟು ಯಾವುದಾದರೊಂದು ಇರುತ್ತಿತ್ತು (ಮುಯ್ಯಿ. ೧೪). [ <ಥಾಲಿ + ಪಿಟ್ಟು ]

**ಥಾವು** 'ತಾವು₂' ನೋ.

**ಥಾಳಥಳ್ಯ** (ನಾ). ಹೊಳಪು ; ಪ್ರಕಾಶ; ಕಾಂತಿ : ವರಮಣಿಗೆ ದೀಧಿತಿಯ ಕುಸುಮೋತ್ಕರಗಳಿಗೆ ಸೌರಭವ ದಿವ್ಯಾಂಬರಗಳಿಗೆ ಮಿಗೆ ಥಾಳಥಳ್ಯ [ಪಾಠಾಂ. ಥಾಳಥಳ್ಯ]ವ ಬರಿಸಲೋಸುಗವೇ . . . ಸಿಂಗರಿಸಿದರು ಚದುರೆಯರು (ಅನಂರಾ. ೧–೨೩–೧೧) ; ಆ ವಜ್ರಕುಂಡಲಗಳ ಮುಕ್ತಾಹಾರಗಳ ಥಾಳಥಳ್ಯವು (ಸುಗುಗಂ. ೪೯–೨). [ <ಥಳಥಳ ]

**ಥಾಳಿ** 'ಥಾಲಿ' ನೋ.

**ಥಾಱುಥಟ್ಟು** 'ತಾಱುಂತಟ್ಟು' ನೋ.

**ಥಿಟ್ಟಗಪಾನ** (ನಾ). ಒಂದು ಊರಿನ ಹೆಸರು (?) : ಸ್ವಸ್ತಿಶ್ರೀಭಟ್ಟಾರಕ ಥಿಟ್ಟಗಪಾನದಾ ತಮ್ಮಡಿಗಳ ಶಿಷ್ಯರ್ ಕಿತ್ತೆಱ × ಯರಾ ನಿಸಿಧಿಗೆ (ಎಕ. II. ೧೯–೧ : ಸು. 700). [ ? ]

**ಥಿಯೇಟರು, ಥೇಟರು** (ನಾ). ಚಲನಚಿತ್ರ, ನಾಟಕ ಮುಂತಾದುವನ್ನು ಪ್ರದರ್ಶಿಸುವ ಮಂದಿರ : ಥಿಯೇಟರು ಬಾಗಿಲು ಕಾಯುವ ಶಿಪಾಯಿಯಿಂದ ಹಿಡಿದು (ಹೇಮಂತ. ೩೫೫) ; ಪೋಲೀಸಿನವರ ಮತ್ತು ಥಿಯೇಟರಿನವರ ಮಧ್ಯಸ್ಥಿಕೆಯಿಂದ ಜಗಳ ನಿಲ್ಲುತ್ತೆ (ನಾಡಿಗೇ. ೩೨). **ಥೇಟರು :** ನಮ್ಮ ಥೇಟರಿನಲ್ಲಿ ಆ ಚಿತ್ರಪಟ ಅಂದೇ ಆರಂಭವಾಗಿತ್ತು (ಪ್ರತಿಸ. ೨).

[ ← ಇಂ. Theatre ]

**ಥೂ** (ನಾ). ಉಗುಳುವಿಕೆ, ಅವಹೇಳನ ಅಥವಾ ಅಸಹ್ಯಗಳನ್ನು ಸೂಚಿಸುವ ಒಂದು ಅನುಕರಣ ಶಬ್ದ : ಥೂ ! ಇಂಥಾ ಕೆಲಸ ಮಾಡಲು ಅವನಿಗೆ ಮನಸ್ಸಾದರೂ ಹೇಗೆ ಬಂತು ? (ರೂಢಿ).

**ಥೂಯೆಂಜಲುಗುಳು** = ಥೂಯೆನ್ : ಕೈಕೆಯುಂ ಪಳಿದು, ಬಯಲುಂ ನಿಟ್ಟಿಸಾಕೆಗಂಡವನಂತೆ ಥೂಯೆಂಜಲುಗುಳುತ್ತೆ, ವಿಕಲಮತಿ ದಶರಥಂ ಕಡುಭಯಂಕರನಾದಂ (ಶ್ರೀರಾಮಾ. ೯೪–೪೫೩).

**ಥೂಯೆನ್** (ಕ್ರಿ). 'ಥೂ' ಎಂಬ ಶಬ್ದ ಸಹಿತವಾಗಿ ಉಗುಳು : ಎದ್ದನವ ನಂದಂಬುನಿಧಿಯೊಳಗದ್ದ ಗಿರಿ ನೆಗೆವಂತೆ ಬಾಯೊಳಗಿದ್ದ ರಣಧೂಳಿಯನು ಥೂಯೆಂದುಗುಳುತೆಡಬಲಕೆ (ತೊರರಾ. ೬-೨೩-೨೨). [ ಥೂ + ಎನ್₁ ]

**ಥೂಕರಿಸು** (ಕ್ರಿ). ಉಗುಳು ; ಉಗಿ : "ನಿಷೇವಃ, ನಿಷ್ಠ್ಯೂತಿಃ, ನಿಷ್ಠೀವನಂ, ನಿಷ್ಠೇವನಂ–ಳ ಕೇಕರಿಗೆ, ಉಗುಳುವಿಕೆ ಥೂಕರಿಸುವಿಕೆ" (ಸಿದ್ಧಾಂತಿ. ೩೧೭); ಇಲ್ಲದ ಕಫ ಗಂಟಲಿಂದ ಕೆರೆದು ಹೊರತೆಗೆದು ಕಿಟಕಿಯಲ್ಲಿ ಥೂಕರಿಸಿದರು (ಮಾಮನ. ೧೯೦). [ ಥೂಕರಣ₀ + – ಇಸು₃ ]

**ಥೇಟ್**, ತೇಟ್, ತೇಟು, ಥೇಟು (ಗು). ೧. ತದ್ರೂಪವಾದ ; ವ್ಯತ್ಯಾಸವಿಲ್ಲದ ; ಅದೇ ಬಗೆಯ : ಹಳ್ಳಿಶಾಲೆ ಎಂದರೆ ಮಾತ್ರ ಥೇಟ್ ಹಳ್ಳಿಶಾಲೆಯೇ (ರೂಪಸಂ. ೫೩) ; ಇದರ ನೀರು ಥೇಟ್ ಇಂದ್ರನ ಅಮೃತ ಎಂದು . . . ಬಣ್ಣ ಬಣ್ಣವಾಗಿ ಮಾತಾಡಿದನು (ಕಂಬಹು. ೩) ; ಈಗ ಥೇಟ್ ಸಿನೇಮಾನಟ ಉಷಾಕಿರಣಳಂತೆ ಕಾಣುತ್ತೀರಿ (ಎಡಹ. ೧೫೪). **ತೇಟ್ :** ೧. ಅದರ ಅಂದ ಚಂದ ಬಣ್ಣಿಸಿ ಫಲವಿಲ್ಲ ! ತೇಟ್ ಮದವಾಳೆಪಕ್ಕಿ ! (ಜಾಳಗಿ. ೧). ೨. ಅಪ್ಪಟವಾದ ; ಶುದ್ಧವಾದ ; ಚೊಕ್ಕ : ನಮ್ಮ ನಟ್ರಾಜ ಹಟ್ಟೀಲಿ ಕಾಲಿಟ್ಟ ಗಳಿಗೆ, ಅಮುರ್ತಗಳಿಗೆ, ತೇಟ್ ಅಮುರ್ತಗಳಿಗೆ (ಸರ್ವಮಂ. ೯). **ತೇಟು :** ೨. ತೇಟು ಪರಂಗಿಯವನಿಗೆ ಒಂದು ಚೋಟುದ್ದ ವಂಶಪಾರಂಪರ್ಯವಾದ ಬಾಲದ ಮೊಟಕು ಇದ್ದೇ ಇರುತ್ತೆ (ಕಲನಿ. ೧೩೪). **ಥೇಟು :** ೧. ಥೇಟು ವಾತ್ಸ್ಯಾಯನೋಕ್ತ ವರ್ಣನೆಯ ಚಿತ್ತಿನಿ (ಸಂಸ್ಕಾರ. ೧೦) ; ಬೆಳ್ಳಕ್ಕನ ರೂಪ ಅಂದರೆ ಥೇಟು ರತಿಯ ರೂಪ (ಸರಸ. ೧೭). [ ←ಮರಾ. ಥೇಟ್; ಹಿಂ. ಥೇಠ್ ]

**ಥೇಟರು** 'ಥಿಯೇಟರು' ನೋ.

**ಥೇಟು** 'ಥೇಟ್' ನೋ.

**ಥೇರ**, ತೇರ (ನಾ). ೧. [ಜೈನ] ಮುನಿ. 'ಥೇರಕಪ್ಪ' ಪರಾ. **ತೇರ :** ೨. ವಯಸ್ಸಾದವನು ; ಹಿರಿಯ ವ್ಯಕ್ತಿ ; ವೃದ್ಧ. ೩. [ಬೌದ್ಧ] ಸಾಧು. 'ತೇರವಾದ' ಪರಾ.

[ <ಪಾಲಿ. ಥೇರ./ಪ್ರಾ. ಥೇರ, ತೇರ, ಥವಿರ./ಮರಾ. ಥೇರ./ಸಂ. ಸ್ಥವಿರ ]

**ಥೇರಕಪ್ಪ** (ನಾ). [ಜೈನ] ಮುನಿಗಳ ಆಚಾರಕ್ರಮಗಳಲ್ಲಿ ಒಂದು. ಕಠಿಣ ಸನ್ಯಾಸಜೀವನವೇ ಜಿಣಕಪ್ಪ. ಇಷ್ಟು ಕಠಿಣವಲ್ಲದ ಸನ್ಯಾಸಜೀವನ ಥೇರಕಪ್ಪ (ಕಶಾಅ. ೭೦ ಅಡಿಟಿ).

[ <ಪ್ರಾ. ಥೇರಕಪ್ಪ. / ಸಂ. ಸ್ಥವಿರಕಲ್ಪ ]

**ಥೈ** (ನಾ). ಕುಣಿತದ ತಾಳವನ್ನು ಸೂಚಿಸುವ ಒಂದು ಅನುಕರಣ ಶಬ್ದ : ಭರತಾರ್ಣವವು ಆದಿಶಬ್ದಗಳಾದ ತ, ಥೈ, ತೋಂ, ನಾಂಗಳನ್ನೂ ಕೊಡುತ್ತದೆ (ಭಾರದ. ೫೫೩) ; ತಕ್ಕ ಥೈಯಾ ಥೈಯೆನ್ನೋದೊಂದರ್ಥ ಕಾಣೆ (ನಾಪದ. ೨೦೮).

**ಥೈಥೈ** (ದ್ವಿರುಕ್ತಿ) : ಲಾಗಾ ಹೊಡೆದನು ಮಂಗಣ್ಣ ಥೈಥೈ ಕುಣಿದನು ನರಿಯಣ್ಣ (ಕಪವು. ೩–೮೪).

**ಥೈಲಿ**, ತೈಲಿ (ನಾ). ೧. ಚೀಲ ; ಸಂಚಿ : ಸೊಂಟದ ಮಡಿಕೆಯಿಂದ ಪುಟ್ಟ ಥೈಲಿ ಹೊರತೆಗೆದು ಒಣಗಿದ ವೀಳ್ಯದೆಲೆಗೆ ಸುಣ್ಣ ಬಳಿದು (ಹೊಸಕ್ಷಿ. ೫೦) . ೨. ಹಣ ಮೊದಲಾದುವನ್ನು ಹಾಕುವ ಚೀಲ ; ಹಮ್ಮಿಣಿ : ಹಣದ ದೊಡ್ಡ ದೊಡ್ಡ ಥೈಲಿಗಳ ನಡುವೆ ವಾಸಮಾಡಬೇಕಾಯಿತು (ಎಮುಕ. ೭೭) ; ಅವರು ಬಾಯಿಕಟ್ಟಿದ ಥೈಲಿಯಲ್ಲಿಯೂ ಚರ್ಮದ ಬೈಂಡು ಹಾಕಿದ ಲೆಕ್ಕದ ಪುಸ್ತಕದಲ್ಲಿಯೂ ಹುಡುಕಾಡುತ್ತಾರೆ (ನಿಬಂಧ. II, ೨೦೫) ; ಇದ್ದ ನಗದು ಜವಾಹಿರಿ ಸಾಗಿದಷ್ಟು ಹಣದ ಥೈಲಿಗಳ ಕಟ್ಟಿಸಿ (ಹೃದರ. ೧೦೪) : ಪೋಲೀಯಪನ ಕೈಯಲ್ಲಿ ಥೈಲಿ ಕೊಟ್ಟರೆ ಖಾಲಿಯಾಗದೆ? (ಗಾದೆ). **ತೈಲಿ :** (೬). [ ←ಹಿಂ. ಮರಾ. ಥೈಲೀ , ಥೈಲಾ ]

**ಥೊಪ್ಪನೆ** (ಅ). ಥೊಪ್ ಎಂದು ಸದ್ದಾಗುವಂತೆ : ಧಮ್ಮನೆ, ಥೊಪ್ಪನೆ, ಧಣಮ್ಮನೆ (ಶಮದ. ೧೪ ಪ್ರಯೋ). [ ಥೊಪ್₀ + – ಅನೆ₁ ]

**ಥೋಡೆ** 'ತೋಡ್ಕೆ₂' ನೋ.

**ಥೋರ** 'ತೋರ' ನೋ.

**ಥೋರಕುಚ** 'ತೋರಕುಚ' ನೋ.

*

# ದ

**ದ₁** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತೆಂಟನೆಯ ಅಕ್ಷರ; ದಕಾರ. ೨. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ: "ಭಧಸಮದೇಟು ಜದಹಮೆಂಟು" (ಮಂಗರಾ. ೦೦೪-೧೦).

**–ದ₂** (ಪ್ರ). ಆ ಸ್ಥಳದವನು, ಅಲ್ಲಿ ಹುಟ್ಟಿದವನು ಎಂಬ ಅರ್ಥದಲ್ಲಿ ಬರುವ ಒಂದು ತದ್ಧಿತಪ್ರತ್ಯಯ: ದ = ಇರುವ (ಅಲ್ಲಿ, ಇಲ್ಲಿ, ಎಲ್ಲಿ ಎಂಬ ಪದಗಳ ಮೇಲೆ ಮಾತ್ರ ಅಲ್ಲಿದ, ಇಲ್ಲಿದ, ಎಲ್ಲಿದ, (ಕೃಬಿಡಿ. ೧೮). 'ಅಲ್ಲಿದ' ಪರಾ.

**ದಂ** 'ದಮ್ಮು' ನೋ.

**ದಂಕಟ್ಟು** 'ದಮ್ಮುಗಟ್ಟು' ನೋ.

**ದಂಗಟ** (ನಾ). (?) : ಕಟಿಯ ಕಬ್ಬಿಲ ಬಂದು ಉಟಿಯ ಮೆಟ್ಟಿ ನೋಡಿ ಕಾಣದೆ ಮರಳಿ ಜಾಲವ ಹೊತ್ತುಕೊಂಡು ಹೋಹಾಗ ದಂಗಟನ ಪೂಜೆಯರು ಹೊಂಗಟಿಯ ಬಿಲ್ಲುಕೋಲನೊಂದು ಕೈಯಲಿ ಪಿಡಿದು . . . ಅಂಗಯ್ಯೊಳಗೊಂದು ಹಟಿದ ತಲೆ ಮೂಡಲು ದಂಗಟನ ಹೊತ್ತು ಕೊಂಡಾಡುತ್ತಿರಲು ಸಿಂಗಾರ ಸಮಯವಾಯಿತ್ತು (ಜನ್ನಪ. ಕ. ೧೪೬-೩೩೨). [ ? ]

**ದಂಗಾಗು,** ಡಂಗಾಗು (ಕ್ರಿ). ೧. ಬೆರಗಾಗು; ಸೋಜಿಗಗೊಳ್ಳು; ವಿಸ್ಮಿತವಾಗು: ಲಕ್ಷ್ಮಿ ಸರಸ್ವತಿಯರಿಬ್ಬರ ಕೃಪಾದೃಷ್ಟಿಗೂ ಪಾತ್ರರಾದ ಬಾಬೂರಾಯರನ್ನು ಕಂಡರೆ ಜನ ದಂಗಾಗಿ ಹೋಗುತ್ತಿತ್ತು (ರತ್ನಗೋ. ೪): ಅವನ ಕಾರ್ಯಚಟುವಟಿಕೆಗಳಿಂದ ನೆಕ್ಲುದೋವ್ ದಂಗಾಗಿದ್ದನು (ಪುನರು. ೫೦೪). ೨. ಗಾಬರಿಗೊಳ್ಳು; ಹೆದರು; ಅಂಜು: ತನ್ನ ಮಗನ ಬಾಯಿಂದಲೆ ಆ ಮಾತು ಬಂತೆ? ಎಂದು ವೆಂಕಮ್ಮ ದಂಗಾಗಿ ಹೋದರು (ಪದ್ಮಸ. ೧೦೪); ಅಳಿಯನ ಮನೆಯವರ ಅಪೇಕ್ಷೆಯನ್ನು ಕೇಳಿ ವಿಜಯಳ ತಾಯಿ ದಂಗಾದರು (ದೂರಸ. ೧೪೬). ೩. ಪರವಶವಾಗು; ಮೈಮರೆ: ಭಜನೆಯಲ್ಲಿಯೇ ದಂಗಾಗಿದ್ದ ಅವರಾರಿಗೂ ಕೇಳಿಸಿದಂತಿರಲಿಲ್ಲ (ಗ್ರಾಮಾಯ. ೫೭೩). **ಡಂಗಾಗು:** ೧. ಬಹಳ ಚನ್ನಾಗಿ ಹಾಡಿದಳಮ್ಮ. ಸೇರಿದವರೆಲ್ಲರೂ ಡಂಗಾಗಿ ಹೋದರು (ಮಧುಸಂ. ೯).
[ ದಂಗು + ಆಗು₁ ]

**ದಂಗಾಮುಸ್ತಿ** (ನಾ). ದಾಂಡಿಗತನ; ಆಕ್ರಮಣಶೀಲತೆ; ಜಬರದಸ್ತಿ: ಮರಿಸ್ವಾಮಿಯೂ ಅವನ ಪರವಾಗಿ ಗುರುಶಾಂತಪ್ಪನೂ ದಂಗಾಮುಸ್ತಿ ಮಾಡಿದರೆ ಅದನ್ನು ಖರೇಸೆಟ್ಟಿ, ಜಡಿಯಪ್ಪ, ಇಬ್ಬರೂ ನೋಡಿಕೊಳ್ಳುತ್ತಾರೆ (ಜರತಾ. ೧೧೭). [ ←ಮರಾ. ಧಿಂಗಾಮುಸ್ತೀ ]

**ದಂಗು,** ಡಂಗು (ನಾ). ೧. ಬೆರಗು; ಸೋಜಿಗ; ವಿಸ್ಮಯ. ೨. ಹೆದರಿಕೆ; ಭಯ; ಗಾಬರಿ. ೩. ಪರವಶತೆ; ತನ್ಮಯತ್ವ: ರಂಗೊಂದು ದಂಗೊಂದು ಗುಂಗೊಂದು ಒಂದಕ್ಕೊಂದು ಹತ್ತಾಗಿ ಜತ್ತಾಗಿ ಸುಳಿಧಾಂಗ (ಸಖೀಗೀ. ೫೨-೫). 'ದಂಗಾಗು' ಪರಾ. **ಡಂಗು:** ೧ 'ಡಂಗಾಗು' ಪರಾ.
[ ←ಪಾರ. ಹಿಂ. ಮರಾ. ದಂಗ್ ]

**ದಂಗುಬಡಿ** (ಕ್ರಿ). ಬೆರಗಾಗು; ಆಶ್ಚರ್ಯಪಡು: ಇಪ್ಪತ್ತನೆಯ ಶತಮಾನದವರೆಂದು ಹೆಮ್ಮೆಪಡುತ್ತಿದ್ದ ನಾನು ಅಂದಿನವರ ಒಳಚರಂಡಿಯ ವ್ಯವಸ್ಥೆಯನ್ನು ನೋಡಿ ದಂಗುಬಡಿದೆ (ಅನಾಮಿ. ೪೦); ಭಾರತಿ ಕೇಳಿ ದಂಗುಬಡಿದಳು (ಭಾರತಿ. ೭೮); ಒಮ್ಮೆಲೇ ದಂಗುಬಡಿದುಹೋದರು (ಚೆಂದುಟ. ೭೨). [ ದಂಗು + ಬಡಿ₁ ]

**ದಂಗುಬಡಿಸು** (ಕ್ರಿ). ೧. ಆಶ್ಚರ್ಯವನ್ನುಂಟುಮಾಡು; ಚಕಿತಗೊಳಿಸು: ಧೈರ್ಯ ಹೇಳುವ ಕೆಲರು ದಿಕ್ಕುಗೆಡಿಸುವ ಕೆಲರು ದಂಗುಬಡಿಸುವ ದಂಭದವರು ಕೆಲರು (ನನಲ್ಲ. ೮-೧೨). ೨. ಗಾಬರಿಗೊಳಿಸು: ಜನರು ತೋರಿಸಿದ ಉತ್ಸಾಹ ಹಾಗೂ ಸತ್ಯಾಗ್ರಹದ ಸಂಘಟನಾಕ್ರಮಗಳು ಸರಕಾರವನ್ನು ಒಮ್ಮೆಲೇ ದಂಗುಬಡಿಸಿದುವು (ರಾಜಪ. ೩೫).
[ ದಂಗುಬಡು + –ಇಸು₃ ]

**ದಂಗುಬಡು** (ಕ್ರಿ). ಬೆರಗಾಗು; ದಂಗಾಗು: ಆ ಕೂಡಲೆ ನಾವು ಇದರ ಬೀಗ ತೆಗೆದು ನೋಡಿ ದಂಗುಬಟ್ಟೆವು (ಅಂಬಿಕ. ೨೨).
[ ದಂಗು + ಪಡು₁ ]

**ದಂಗುವಡೆ** (ಕ್ರಿ). = ದಂಗುಬಡು: ದಂಗುವಡೆದವರಂತೆ ನಿಂತು ನೋಡುತ್ತಿದ್ದ ಸುಮತಿದೇವಿ ಥಟ್ಟನೆ ಕಟ್ಟೆಯಿಳಿದು ಬಂದು ತಾನೂ ಜಂಗಮನ ಪಾದಕ್ಕೆರಗಿದಳು (ಗಿರಿಸ. ೧೭); ಕ್ಷಣಮಾತ್ರ ದಂಗುವಡೆದಂತಾಗಿ . . . ಎಚ್ಚರ ಬಂದು (ಅಶ್ವಮೇ. ೩೮). [ ದಂಗು + ಪಡೆ₁ ]

**ದಂಗೆ** (ನಾ). (ಸರಕಾರ ಮೊದಲಾದ ಆಡಳಿತಕ್ಕೆ) ವಿರೋಧವಾಗಿ ಏಳುವ ಬಂಡಾಯ; ಪ್ರತಿಭಟನೆಯನ್ನು ಸೂಚಿಸುವುದಕ್ಕಾಗಿ ಜನಸಮುದಾಯ ಸೇರಿ ಕೋಲಾಹಲ ಮಾಡುವುದು; ಕಾಟಕಾಯಿ: ಶಿಪಾಯಿಗಳ ದೊಡ್ಡ ದಂಗೆಯಾದ ಬಳಿಕ ಆಗ್ರಾಪಟ್ಟಣಕ್ಕೆ ಬದಲಾಗಿ ಅಲಹಾಬಾದ್ ರಾಜಧಾನಿಯಾಯಿತು (ಭೂಗೋಳ. ೫೩); ವೀರನರಸಿಂಹರಾಯನು ಈ ದಂಗೆಗಳನ್ನು ಅಡಗಿಸಿ ಅನೇಕ ಯುದ್ಧಗಳನ್ನು ಮಾಡಬೇಕಾಯಿತು (ಕೃದೇವ. ೬). [ ← ಹಿಂ. ಮರಾ. ದಂಗಾ ]

**ದಂಗೆಕೋರ** (ನಾ). ದಂಗೆ ಏಳುವುದೇ ಸ್ವಭಾವವಾಗಿರುವವನು; ಎದುರುಬೀಳುವವನು; ಬಂಡಾಯಗಾರ; ಕ್ರಾಂತಿಕಾರ: ಅವರೆಲ್ಲರೂ ದಂಗೆಕೋರರು ಮತ್ತು ಮೂರ್ಖರು (ಭಾಗ್ಯಶಿ. ೪೭); ದಂಗೆಕೋರನಿಗೂ ಮೈತ್ರಿ ಎಂದರೇನು? (ದಾಲತ್. ೧೧೧); ದರೋಡೆಕಾರರ ಮತ್ತು ದಂಗೆಕೋರರ ಉಪದ್ರವವಿದ್ದಿತು (ಝಾರಾಣಿ. ೭೭).
[ ದಂಗೆ + –ಕೋರ₃ ]

**ದಂಗೆಗಾರ** (ನಾ). = ದಂಗೆಕೋರ: ಯಾರನ್ನು ಬಿಡಲಿ? ಯೆಹೂದ್ಯರ ಅರಸನೆಂಬ ಈ ಯೇಸುವನ್ನೊ? ಅಥವಾ ದಂಗೆಗಾರನಾದ ಬರಬ್ಬನನ್ನೊ (ಗೊಲ್ಗೊಥಾ. VII, ಮುನ್ನುಡಿ). [ ದಂಗೆ + –ಗಾರ (< – ಕಾಱ) ]

**ದಂಗೆಯೇಳು** (ಕ್ರಿ). (ಸರಕಾರ ಮೊದಲಾದ ಆಡಳಿತಕ್ಕೆ ವಿರುದ್ಧವಾಗಿ) ತಿರುಗಿಬೀಳು; ಬಂಡಾಯಹೂಡು: ಸಾಗರದ ಸೇನೆಯು ದಂಗೆಯೆದ್ದು ಸಾಗರವನ್ನು ಲೂಟಿಮಾಡಿತು (ಝಾರಾಣಿ. ೩೦೨); ದಂಗೆಯೆದ್ದ ಪ್ರಜಾವರ್ಗದವರಿಗೇ ಜಯವಾಗಿ ತಮ್ಮ ಬಲ್ಮೆಯೂ ತಮ್ಮ ಹಕ್ಕುಗಳೂ ಎಷ್ಟೆಂಬುದು ಜನತೆಗೆ ಮನದಟ್ಟಾಯಿತು (ಕ್ರಿಯಾಶಿ. ೩೯).
[ ದಂಗೆ + ಏಳು₁ (< ಏೞ್₁) ]

**ದಂಟಿ** (ನಾ). ಹಾದರಗಿತ್ತಿ; ಸೂಳೆ: ಒಂಟಿ ಮಾರಿ ತಂಟೆ ತೀರಿಸಿದರೂ ದಂಟಿ ಕೋಲ ಬಿಡಲಿಲ್ಲ (ಗಾದೆ). [ ? ]

**ದಂಟು** (ನಾ). ೧. ಜೋಳ, ಬಿದಿರು ಮೊದಲಾದ ಸಸ್ಯಗಳ ನಾಳ,–ಕಾವು,–ಕಾಂಡ: ಅವರ ಕೈಯಲ್ಲಿ ಒಂದೊಂದು ಜೋಳದ ದಂಟೋ ಅಥವಾ ಒಂದೊಂದು ಬಿದಿರುಕೋಲೋ ಇರುತ್ತೆ (ನಾಡಿಗೇ. ೫೫). ೨. ನಿಸ್ಸತ್ವವಾದ ಕಡ್ಡಿ; ತಾವರೆ, ನೈದಿಲೆ ಮೊದಲಾದುವುಗಳ

(ಕೋಮಲವಾದ) ನಾಳ : ಕಟ್ಟಿದ ಪಟ್ಟಮೆ ಸರವಿಗೆ ನೆಟ್ಟನೆ ದೊರೆ ಪಿಡಿದ ಬಿಲ್ಲೆ ದಂಟಂಗೆಣೆ ಕಣ್ಗೆಟ್ಟ ಮುದುಪಂಗೆ ಪಗೆವರ ನಿಟ್ಟೆಲ್ವಂ ಮುಱಿವೊಡೆನಗೆ ಪಟ್ಟಂಗಟ್ಟು (ಪಂಪಭಾ. ೧೦-೧೭) ; ದಂಟನೂದುವಂಗೆ ಕೊಟಿಲ್ ದೊರೆಕೊಂಡುದೆಂಬಂತೆ (ಧರ್ಮಾಮೃ. ೧೦-೨೮೩) ; ಮರಕತ ಮಯವಾದ ದಂಟುಗಳುಳ್ಳದ್ದಾಗಿ ವಿಕಸಿತಗಳಾದ ಸುವರ್ಣಕಮಲಗಳು (ಕೃವಾಸ. ೫) : ದಂಟು ಮುರಿದರೆ ಕಂಠವಾದೀತೆ ? (ಗಾದೆ). ೩. ಒಂದು ಬಗೆಯ ತರಕಾರಿ ಸೊಪ್ಪು ; ಹಂಳಿ, ಪಲ್ಯ ಮೊದಲಾದ ವ್ಯಂಜನ ಗಳನ್ನು ಮಾಡಲು ಉಪಯೋಗಿಸುವ ಸೊಪ್ಪು; ರಾಜಕೀರೆ (ಉಕ): ದಂಟಿನ ಸೊಪ್ಪಿನಲ್ಲಿ ಬಿಳುಪು ಮತ್ತು ಕೆಂಪುಬಣ್ಣಗಳಿರುವ ಎರಡು ವಿಧ ಗಳಿವೆ (ತರಬಿ.೧೭). ೪. (ಕರಾ) ಬ್ರಹ್ಮಚಾರಿಗೆ ಉಪನಯನದ ಕಾಲದಲ್ಲಿ ಹಿಡಿಸುವ ಮುತ್ತುಗದ ಕೋಲು ಮತ್ತು ಹಾಗೆ ಹಿಡಿಸುವ ಆಸವಾರಂಭ. [ ದೇ.II ತವಿ. ಮಲ. ತಣ್ಟು ; ತುಳು. ತೆಲು. ದಂಟು; ಕುಇ. ಡಂಡಿ./ಸಂ. ತಂಡಕ, ದಂಡಕ ]

**ದಂಟುಬೇರು** (ನಾ). ಕಬ್ಬು, ಜೋಳ ಮೊದಲಾದ ಸಸ್ಯಗಳ ಕಾಂಡ ದಿಂದ ಹೊರಡುವ ಬೇರು ; ಮರಿಬೇರು : ಕೇದಿಗೆ, ಕಾಂಡ್ಲಮರ . . . . ಮುಂತಾದ ಗಿಡಗಳಲ್ಲಿ ಕಾಂಡದಿಂದ ಅನೇಕ ದಂಟುಬೇರುಗಳು ಹೊರಡುತ್ತವೆ (ಸಸ್ಯಶಾ. ೧೫). [ ದಂಟು + ಬೇರು (< ಬೇರ್) ]

**ದಂಟುಸೊಪ್ಪು** (ನಾ). = ದಂಟು ೩ : ಹರಿವೇಸೊಪ್ಪು, ದಂಟುಸೊಪ್ಪು, ಚಿಲ್ಕರಿವೇಸೊಪ್ಪು (ಮೃಶಿಗಿ. ೬-೯೨). [ ದಂಟು + ಸೊಪ್ಪು₃ ]

**ದಂಟೂರ್ತ** (ನಾ). ಉಪನಯನದ ನಾಲ್ಕನೇ ದಿನದ ಸಮಾರಂಭ. 'ದಂಟು' ಪರಾ. [ ದಂಟು + <ಮುಹೂರ್ತ ]

**ದಂಟೆ** (ನಾ). (ಕರಾ) ಕೋಲು ; ದಂಡ : ಕೈಯಲ್ಲಿರುವ ಉದ್ದ ದಂಟೆ ಯೊಂದನ್ನು ಕೆಳಗೆ ಇರಿಸಿದ್ದನು (ನಿಷ್ಕಾಮ. ೩೦) ; ಜಾರಪ್ಪನು . . . ಒಂದು ದೊಡ್ಡ ದಂಟೆಯನ್ನು ಎತ್ತಿಕೊಂಡು ಬೇಗಬೇಗ ಬರಹತ್ತಿದನು (ಪರಾವ. ೬೧). [ ← ತುಳು. ದಂಟೆ ]

**ದಂಡ** (ನಾ). ೧. ನೇರವಾದ ಕೋಲು; ದೊಣ್ಣೆ; ಬಡಿಗೆ: "ದಂಡಮೆನಲು ದಡಿ" (ಮಂಗರಾ. ೧೩೧-೨೦) ; ದಂಡಿತವೈರಿ ವೈರಿಬಲಲೋಹಿತಬಂಧುರ ದಂಡಮಾ ಭುಜಾದಂಡಂ (ಗದಾಯು. ෧-೭೩). 'ಕೇತುದಂಡ' ಪರಾ. ೨. ಕಡೆಗೋಲು ; ಮಂತು. ೩. ಭೇರಿ, ನಗಾರಿ ಮೊದಲಾದುವನ್ನು ಹೊಡೆಯುವುದಕ್ಕೆ ಉಪಯೋಗಿಸುವ ಕೋಲು ; ಕುಡುಹು : "ಕಡೆವ ಕೋಲೊಳು ಹಱೆಯ ಕುಡುಹಿನೊಳು ದಂಡಮಕ್ಕು" (ಮಂಗರಾ. ೧೫೩-೬೦). ೪. ತಕ್ಕಡಿಯ ದಿಂಡು,–ಕೋಲು. 'ತುಲಾದಂಡ' ಪರಾ. ೫. ದೋಣಿ, ಹರಿಗೋಲುಗಳನ್ನು ನಡೆಸಲು ಉಪಯೋಗಿಸುವ ಕೋಲು,–ಹುಟ್ಟು. ೬. ನಾಲ್ಕು ಮೊಳದ ಒಂದು ಅಳತೆ : "ಎರಡು ಮೊಟಿನಾಗಲಾ ನಾಭಿಗೋಲೆಂದೆನಿಕ್ಕುಂ ಎರಟನ್ನಾಭಿಗೋಲಾಗೆ ದಂಡಮೆನಿಕು" (ಮಂಗರಾ. ೯೬-೧೧) ; ಚತುರ್ಹಸ್ತಃ–ಆ ಹಸ್ತಂಗಳು ನಾಲ್ಕಾದಡೆ, ದಂಡಃ–ಒಂದು ದಂಡವು, ಭವೇತ್–ಅಕ್ಕುಂ (ಪ್ರತಿಷ್ಠಾ. ೬-೨); ಹಸ್ತಂ ನಾಲ್ಕುಱೊಳೊಂದು ದಂಡಮೆನಿಕುಂ (ವ್ಯವಹಾ. ಅನುಬಂಧ. ೨-೫೦). ೭. ಬ್ರಹ್ಮಚಾರಿಗಳು ಇಲ್ಲವೆ ಸಂನ್ಯಾಸಿಗಳು ಶಾಸ್ತ್ರೋಕ್ತವಾಗಿ ಹಿಡಿದುಕೊಳ್ಳಬೇಕಾದ ಮುತ್ತುಗ, ಬಿದಿರು ಮೊದಲಾದುವುಗಳ ಕೋಲು : ಸುಬ್ಬಣ್ಣಕಕ್ಕ ಕಾವಿಯನ್ನು ಧರಿಸಿ ಕೈಯಲ್ಲೊಂದು ದಂಡ ವನ್ನೂ ಕಮಂಡಲವನ್ನೂ ಹಿಡಿದು ಬದರಿಕಾಶ್ರಮಕ್ಕೆ ನಡೆದ (ಹೊಸಕ್ಕಿ.೨೫೩). ೮. (ರಾಜ, ನ್ಯಾಯಾಧೀಶ ಮೊದಲಾದ ಧರ್ಮರಕ್ಷಕರು ಹಿಡಿದು ಕೊಳ್ಳುವ) ಅಧಿಕಾರಸೂಚಕವಾದ ಬೆಳ್ಳಿ, ಚಿನ್ನ ಮೊದಲಾದುವು ಗಳಿಂದ ಮಾಡಿದ ಕೋಲು ; ಅಧಿಕಾರದಂಡ : ನರಪತಿಯ ದಂಡ ಲೌಕಿಕ ವಿಭವಲಾಂಛನವು (ಕಎಶು. ೫೩-೨). ೯. ನಾಳ; ಕಾಂಡ; ದಂಟು: "ಅಬ್ಜನಾಳಂ ದಂಡಂ" (ವಸ್ತುಕೋ. ೨೫-೨೦). ೧೦. ಸ್ತಂಭ ; ಕಂಬ : ದಂಡಮೆಂಬುದು ಧ್ವಜದೊಳಗಲ್ಲದಕ್ಕಟಾ ದೇಶದೊಳಗಿಲ್ಲ (ಅಂಜಚ. ೨-೨೫). ೧೧. ಒಂದು ಬಗೆಯ ಸೇನಾವ್ಯೂಹ ; ಕೋಲಿನಂತೆ ಸಾಲಾಗಿ ಸೈನ್ಯ ವನ್ನು ನಿಲ್ಲಿಸುವುದು. ೧೨. ಬೆಲ್ಲ ; ಸಾಮಾನ್ಯವಾಗಿ ದಂಡಾಕಾರ ವಾಗಿರುವ ಬೆಲ್ಲ. ೧೩. ಪುರುಷನ ಜನನೇಂದ್ರಿಯ ; ಲಿಂಗ ; ಶಿಶ್ನ : ಸಣ್ಣವರ ಮೂತ್ರದಿಂದರೆದು ದಂಡ ಪರಿಯಂತ ತೊಡೆದು ಕಾಸಲು ಆ ಕ್ಷಣವೇ ಮೂತ್ರ ಬಿಡುವುದು (ಸಕವೃ. ೩೭೫). ೧೪. ಶಿಕ್ಷೆ ; ದಂಡನೆ : ತನುವಂ ಬಡವಮಾಡಿ ಕಾಡಿ ದಂಡಿಸಿದಪನಂಗಜನ್ಮನ ಕವರ್ತೆಯ ದಂಡದ ಪಾಂಗಿದೆಂತುಟೋ (ಪಂಪಭಾ. ೫-೧೩). ೧೫. ನಾಲ್ಕು ಬಗೆಯ ಉಪಾಯಗಳಲ್ಲಿ ಒಂದು ; ಶಿಕ್ಷೆಗೆ ಒಳಪಡಿಸಿ ಹತೋಟಿಗೆ ತರುವಿಕೆ ; ಹೊಡೆದು ಬಡಿದು ಅಧೀನಕ್ಕೆ ತರುವಿಕೆ. ☞ ಸಾಮ, ದಾನ, ಭೇದ, ದಂಡ ಎಂಬ ನಾಲ್ಕು ಉಪಾಯಗಳಿವೆ: "ಶಿಕ್ಷಿಸಲೊಡಂಬಟ್ಟೊಡದು ದಂಡಮೆನಿಸಿಕ್ಕು" (ಮಂಗರಾ. ೭೯-೬) ; ಜಗಳದ ಬಗೆ ತಾಂ ದಂಡಂ (ಹಮ್ಮೀರ. ೨-೧೨೧). ೧೬. ತಪ್ಪಿತಸ್ಥರಿಗೆ ವಿಧಿಸುವ ಜುಲ್ಮಾನೆ; ಶಿಕ್ಷೆಯ ಹಣ : "ಶಿಕ್ಷೆಯೊಳು ದಂಡಮೆಂಬುದು" (ಮಂಗರಾ. ೧೪೨-೧೭) ; ದಂಡಕ್ಕಂಜಿ ಜಂಗಮಕ್ಕೆ ಇಕ್ಕುವ . . . ನಾಟಕರಿಗೇಕೋ ಸದ್ಭಕ್ತಿ (ಪೋಲಿವಾ. ೩೪-೧೪೩) ; ಫಲವತ್ತಿಲ್ಲದ ರಾಜ್ಯದಲ್ಲಿ ಪ್ರಭು ದಂಡಕ್ಕಾಸೆಗೆಯ್ವಲ್ಲಿ . . . ಸಲೆ ಬಲ್ಲರ್ ನಿಲೆ ಸಲ್ಲದೈ (ಸೋಮೇಶ. ೧೫) ; ದಾನಗೈಯೆನಲು ಕನಲುವರು ದಂಡವನು ಮೌನ ದೀಯುವರು (ಸರ್ವಜ್ಞ. ೬೭೦) ; ಪಂಚಾಯ್ತರು ಆಚಾರಿಗೆ ಇನ್ನೂರು ರೂಪಾಯಿ ದಂಡ ಹಾಕಿದರು (ನನ್ನೂರು. ೧೮೭) ; ಮಾಡಿದ ಸೇವೆ ದಂಡಕ್ಕೆ ಸಾಲದು (ಗಾದೆ). ೧೭. ಪಡೆ ; ದಂಡು ; ಸೈನ್ಯ : "ನೃಪಸೇನೆಯೊಳಂ ದಂಡಂ" (ವಸ್ತುಕೋ. ೧೩೮-೨೦) ; "ಪಡೆಯೊಳು ಶಿಕ್ಷೆಯೊಳು ದಂಡ ಮೆಂಬುದು" (ಮಂಗರಾ. ೧೪೨-೧೭). ೧೮. ಉಪಯೋಗವಿಲ್ಲದುದು ; ನಿರರ್ಥಕ ; ವ್ಯರ್ಥ : ದಂಡವದನುಳಿದ ಸುಡಿ (ಮಂಕುಸ. ೪೯) ; ಕಾಲ ದಂಡ ಮಾಡುತ್ತೀರಿ (ಮುನಿಮಾ. ೦೧೯) ; ದಂಡದ ಕೂಳಿಗೆ ಬಿದ್ದ ನಿನಗೂ ನಾಲಿಗೆ ಬಂತೆ? (ಹೊಸಕ್ಕಿ. ೩೦) ; ಪತ್ರಿಕೆಗಳಿಗೆ ಕಾಸುಹಾಕುವುದು ದಂಡ ಎಂದರು (ರಾಯಸ. ೪೯) ; ಕಳ್ಳ ಹೊಕ್ಕ ಮನೆಗೆ ಎಣ್ಣೆ ದಂಡ (ಗಾದೆ). ೧೯. ಅಲ್ಲದ ಕೆಲಸ; ಸಲ್ಲದ ಕೆಲಸ; ಅಪಕೃತ್ಯ. ೨೦. ಯಮ. ೨೧. ಶಿವ. ೨೨. ಗರ್ವ. ೨೩. ಸೂರ್ಯನ ಮೂವರು ಸೇವಕರಲ್ಲಿ ಒಬ್ಬ : "ಮಾಠರಃ, ಪಿಂಗಳಃ, ದಂಡಃ, ಚಂಡಾಂಶೋಃ, ಸೂರ್ಯನ ಪಾರಿಪಾರ್ಶ್ವಕಾಃ,–ಪಾರ್ಶ್ವದೊಳಗಿರುವ ಅಂಗದೇವತೆಗಳ ಹೆಸರುಗಳು" (ಸಿದ್ಧಾಂತಿ. ೩೨). ೨೪.=ದಂಡಿ೩ ೧೦: ದಿನಾಲು ತಪ್ಪದೆ ಏನಿಲ್ಲೆಂದರೂ ೨೫ 'ದಂಡ', ಮತ್ತು ೫೦ 'ಉಟಾಬಸಿ' . . . ಅವಶ್ಯವಾಗಿ ತೆಕ್ಕೊಳ್ಳಲಿಕ್ಕೇ ಬೇಕು (ಬ್ರಹ್ಮಜೀ. ೧೯೯). "ಅಪಕೃತ್ಯಂ ಪಾವ್ಯಕೋಣಂಗುಡಂ ಅಪಮಾನಂ ಪಡೆಯಂತಕಂ ಮದನಶಿಕ್ಷೋಪಾಯ ದಂಡಾಹ್ವಯಂ" (ನಾನಾರ. ೧೨೮). ೨೫. [ಜ್ಯೋತಿ] ತುಲಾರಾಶಿ : ಸಾರಸ ಸಖತನಯಂ ದಂಡದೊಳ್ ರೋಹಿಣೀನಂದನನಂತಾ ದ್ವಂದ್ವದೊಳ್ವಿಶ್ರುತಮೆನೆ ಧಿಷಣಂ ಕರ್ಕಿಯೊಳ್ಸಂತ ಮಿಂತಿರ್ಪಿನಮತ್ಕುತ್ಪಾಹದಿಂದಂ ಗುರುವಿನುದಯದೊಳ್ ಪುತ್ರನಂ ಪೆತ್ತಳ್ (ಸುಕುಮಾ. ೧೦-೨೭). ೨೬. ಜನನ ಕಾಲದಲ್ಲಿ ಎಲ್ಲಾ ಗ್ರಹಗಳೂ ಲಗ್ನದಿಂದ ಹತ್ತನೆಯ ಸ್ಥಾನದಿಂದ ಮುಂದೆ ಲಗ್ನಭಾವಪೂರ್ತ ಎಡೆ ಬಿಡದ ನಾಲ್ಕು ಸ್ಥಾನಗಳಲ್ಲಿ ನೆಲೆಸಿದ್ದರೆ ಒದಗುವ ಯೋಗ : ಕರ್ಮದಿಂದುದಯಗ್ರಹಂಬರಂ ಗ್ರಹಮನಂತರವೊಂದಿರೆ ದಂಡಸಂಜ್ಞಿಕಂ (ಜಾತತಿ. ೧೩-೭). 'ದಂಡಜ' ಪರಾ. ೨೭. [ಜೈನ] ಮನಸ್ಸು, ವಾಕ್ಕು, ಕಾಯ ಎಂಬ ಮೂರು ಬಗೆಯ ಹಿಂಸೆಗಳು. 'ದಂಡತ್ರಯ' ಪರಾ.

**ದಂಡ ಕೊಡು** = ಜುಲ್ಮಾನೆಯನ್ನು ತೆರು; ಶಿಕ್ಷೆಯ ಹಣವನ್ನು ಸಲ್ಲಿಸು : ಇಪ್ಪತ್ತೈದುರೂಪಾಯಿ ದಂಡ ಕೊಟ್ಟು ಬಂದ (ರೂಢಿ). [ಸಂ.]

**ದಂಡಂಗೊಳ್** (ಕ್ರಿ). ೧. ಶಿಕ್ಷೆಯನ್ನು ಪಡೆ; ದಂಡನೆಗೊಳಗಾಗು; ಏಟುತಿನ್ನು : ಮತ್ತಂ ದುರ್ಗಂಧಕ್ಕಿರಲಾಱದೆ ಲೆಂಕರ್ ದಂಡಂಗೊಂಡರಂತೆ ಶಂಕಿಸುತ್ತುಂ ಪೆಱಪಿಂಗೆ . . . ತನ್ನೊಳಿಂತೆಂದಳ್ (ಧರ್ಮಾಮೃ. ೪-೧೫೯). ೨. ತಪ್ಪುಕಾಣಿಕೆಯನ್ನು ಪಡೆ; ದಂಡವನ್ನು ತೆಗೆದುಕೊಳ್ಳು; ಜುಲ್ಮಾನೆಯನ್ನು ವಸೂಲುಮಾಡು : ಅದನೆ ಪಿಡಿಯಚ್ಚುವಿಡಿದುಂಟುಮಾಡಿ ದಂಡಂಗೊಂಡು (ಶಾಂತಿಪು. ೮-೮೪ ವ); ತಸ್ಕರರಂ ಬಾರಿಸಿ ಕಷ್ಟರಂ ಕೆಡಿಸಿ ದಂಡಂಗೊಂಡು . . . ಪಾಲಿಪುದು ಧಾತ್ರೀಚಕ್ರಮಂ ಕ್ಷತ್ರಿಯಂ (ಧರ್ಮಾಮೃ. ೨-೮೪). [ ದಂಡ + ಕೊಳ್$_1$ ]

**ದಂಡಂದೆಱು, ದಂಡತೆರು** (ಕ್ರಿ). ದಂಡವನ್ನು ಕೊಡು; ಜುಲ್ಮಾನೆಯನ್ನು ತೆರು : ಮಿಂಡರ್ ದಂಡಂದೆತ್ತೊಕ್ಕಲಿಗನಂತೆರ್ದೆಗಿಡೆ (ಧರ್ಮಾಮೃ. ೨-೬೯). **ದಂಡತೆರು** : ಆ ದಿನ ಹನ್ನೆರಡುಗಂಟೆಯೊಳಗಾಗಿ ವಾಪಸ್ಸು ಕೊಡದಿದ್ದರೆ ಅನ್ಯಾಯವಾಗಿ ದಂಡತೆರಬೇಕಾಗಿತ್ತು (ಅಲಹೂ. ೮೩). [ ದಂಡ + ತೆಱು$_1$ ]

**ದಂಡಕ$_1$** (ನಾ). ೧. ನೆಟ್ಟನೆಯ ಕೋಲು; ಗಳು : "ಗಟಿ³ ದಂಡಕಂ ಸ್ತಂಭಮುಕ್ಕುಂ" (ಮಂಗರಾ. ೮೫-೨೭). ೨. ನರ್ಮದಾ ಮತ್ತು ಗೋದಾವರಿ ನದಿಗಳ ನಡುವೆ ಇರುವ ಪ್ರದೇಶ; ರಾಮಾಯಣದಲ್ಲಿ ದಂಡಕಾರಣ್ಯವೆಂದು ಪ್ರಸಿದ್ಧವಾಗಿದ್ದ ಸ್ಥಳ. ೩. [ಛಂದ] ಪಾದಗಳಲ್ಲಿ ಇಪ್ಪತ್ತಾರು ಅಕ್ಷರಗಳಿಗಿಂತಲೂ ಹೆಚ್ಚು ಅಕ್ಷರಗಳನ್ನು ಹೊಂದಿರುವ ಒಂದು ವೃತ್ತ : "ಮುಟ್ಟೆ ಬಹುಪದದ ನುಡಿ ದಂಡಕಮೆನಿಕ್ಕು" (ಮಂಗರಾ. ೨೬-೨); ಉಕ್ತೆ ಅತ್ಯುಕ್ತೆ . . . ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ ಅವಱಿಂ ಪೊಱಗೆ ಮಾಳಾವೃತ್ತ ದಂಡಕಂಗಳ್ ಮಾತ್ರಾನಿಯಮಸ್ಕಂಧಕಾದಿ ಜಾತಿಗಳೆಂಬಿವಕ್ಕು (ಛಂದೋಂಬು.೧-೪೬ ವ). ೪. ನಿಯಮಿತವಾದ ಗಣಗಳಿರುವ ಗದ್ಯ : ನಿಯತವಾದ ಗಣಗಳಿಂದ ಕೂಡಿ ಪಾದವಿಭಾಗವಿಲ್ಲದೆ ದಂಡಾಕಾರವಾಗಿರುವ ಶಬ್ದರಚನಾವಿಶೇಷವು ದಂಡಕವೆನಿಸುವುದು (ಶ್ರೀಪಿಡಿ. ೧೦೦). [ ಸಂ. ]

**ದಂಡಕ$_2$** (ನಾ). ನಿಯಮ; ಪದ್ಧತಿ; "ವಿಧಿ, ವಾಡಿಕೆ" (ಚಿತ್ರಪಾ.ಕೋಶ); ಸೀಮೆ ಇಷ್ಟು ಲಕ್ಷದ್ದೆಂದು ಲೆಕ್ಕ ಬರೆಯಲು ದಂಡಕವಿಲ್ಲ (ಚಿತ್ರಪಾ. ೭೪); ನಮ್ಮ ದೇಶದಲ್ಲಿ ಸಿಪಾಯಿ ಜನರು ಇನಾಂ, ಏಕನಾಮು ಮೊದಲಾದ್ದನ್ನು ತೆಗೆದುಕೊಳ್ಳತಕ್ಕ ದಂಡಕವಿಲ್ಲ (ಚಿತ್ರಪಾ. ೯೫). [ ←ಮರಾ. ದಂಡಕ ]

**ದಂಡಕಾಂತ** (ನಾ). ದಂಡಾಕಾರವಾದ ಅಯಸ್ಕಾಂತ : ಈ ಬಲರೇಖೆಗಳನ್ನು ಪೂರ್ಣವಾಗಿ ನೋಡಿದರೆ ಉದ್ದವಾದ ದಂಡಕಾಂತದ (Bar-Magnet) ಬಲರೇಖೆಗಳಂತೆಯೇ ಇರುವುವು (ಭೌತವಿ. ೩೩೫). [ ದಂಡ + ಕಾಂತ$_2$ ]

**ದಂಡಕಾರಣ್ಯ** (ನಾ). = ದಂಡಕ$_1$ ೨ : ಅದು ಮದವಿಹ್ವಳಿತನಾಗಿ ... ದಂಡಕಾರಣ್ಯಮಪ್ಪಡವಿಯ ನಡುವೆ . . . ಪರಿಯೆ (ವಡ್ಡಾರಾ. ೧೧೦-೧೭); ಅಂತು ತಳರ್ದು ಜಲಧಿಯಂ ದಾಂಟಿ ದಂಡಕಾರಣ್ಯಮನೆಯ್ದೆವಂದು (ಪಂಪರಾಮಾ. ೧೫-೨೩ ವ); ಒಲಿದು ಹೊಕ್ಕರು ದಂಡಕಾರಣ್ಯವನು ಹರುಷದಲಿ (ತೊರರಾ. ೩-೧-೧೨). [ ದಂಡಕ$_1$ + ಅರಣ್ಯ ]

**ದಂಡಕೋಲು** (ನಾ). ವಟು, ಸಂನ್ಯಾಸಿ ಮೊದಲಾದವರು ಹಿಡಿದುಕೊಳ್ಳುವ ಕೋಲು; ದಂಡ : ದಂಡಕೋಲಿನ ತುದಿಗೆ ಹಿಂಡುಕೌಪವ ಕಟ್ಟಿ ಮುಂಡೆಯರ ಕಂಡು ಮಿಡುಕುವ ಯೋಗಿಯ ಮಂಡೆ ಬೋಳೇಕೆ (ಸರ್ವಜ್ಞ. ೫೮೦); ಒಂದು ದಿನ ಒಬ್ಬ ಸಿದ್ಧನು . . . ಕೈಯಲ್ಲಿ ಪುಸ್ತಕ ದಂಡಕೋಲ ಪಿಡಿದು, ರಾಯನೆದುರಿಗೆ ಬಂದು ಇಂತೆಂದನು (ಬತ್ತೀಸ. ೫೩) [ ದಂಡ + ಕೋಲು$_1$ (<ಕೋಲ್$_1$) ]

**ದಂಡಖಂಡ** (ನಾ). ಸಣ್ಣ ಕೋಲು; ಮೋಟುದೊಣ್ಣೆ : ಪಕ್ಷಿಪಕ್ಷಚಂಚುಚರಣಾಭಿಘಾತದೊಳಂ ಶಿಶುಜನಾನುಪಾತದಂಡಖಂಡಾಘಾತದೊಳು ಮುದಿರ್ದು ನೆಲದೊಳ್ ಬಿರ್ದ ನೇಱಿಲ ಪಣ್ಗಳಂ ... ಸಾರ್ಚಿಕೊಟ್ಟು (ಸುಕುಮಾ. ೪-೬೩ವ). [ ದಂಡ + ಖಂಡ ]

**ದಂಡಜ** (ನಾ). [ಜ್ಯೋತಿ] ದಂಡವೆಂಬ ಯೋಗದಲ್ಲಿ ಹುಟ್ಟಿದವನು : ವಿಯುತಪ್ರಿಯಬಂಧು ದಂಡಜಂ (ಜಾತತಿ. ೧೩-೧೮). [ ಸಂ. ]

**ದಂಡಣೆ** (ನಾ). ೧. ಶಿಕ್ಷೆ: ಮೂವತ್ತೆರಡು ಘೋರಮಪ್ಪ ದಂಡಣೆಗಳಿಂದಂ ಕಳ್ಳನಂ ದಂಡಿಸಿ (ವಡ್ಡಾರಾ. ೧೨೪-೨೬); ದೊಡ್ಡಚಾಮುಪ್ಪ; – (ಮೆಲ್ಲಗೆಯಿಂದ) ದಣ್ಡಣೆಯಲ್ಲವಪ್ಪೆ ? (ಬಿಟ್ಟಿಅ. ೨೦-೨೮). ೨. ಯಾತನೆ; ಹಿಂಸೆ: "ಯಾತನಾ, ಕಾರಣಾ – ಈ ೨ ದಂಡಣೆ" (ಹಲಾಯು. ೧೦೩-೪); "ಅಯಾತನಂ ಕಾರಣಂ ದಂಡಣೆ(ನೆ)ಯೆನಿಕ್ಕು" (ಮಂಗರಾ. ೧೧೬-೧). [ <ಸಂ. ದಂಡನ./ಪ್ರಾ. ದಂಡಣ ]

**ದಂಡತೆರು** 'ದಂಡಂದೆಱು' ನೋ.

**ದಂಡತೋರಣಕ** (ನಾ). ನೀರು ಸೇದುವ ಮರದ ರಾಟೆಯ ಅರೆಕಾಲುಗಳ ಸಾಲು : ಮಲಯಜವಾರಿಯಿಂ ಕುಳಿರ್ವ ಬಾವಿಗಳಲ್ಲಿ ಮೃಣಾಳದಂಡಮಂಡಲಿಗಳ ದಂಡತೋರಣಕದಿಂ . . . ಸಮೆದಾಡುವ ಆಟಳಂಗಳಂ (ಕಾದಂಬ. ೨೧೫). [ ದಂಡ + ತೋರಣಕ$_0$ ]

**ದಂಡತ್ರಯ** (ನಾ). ೧. ಮೂರು ಕೋಲುಗಳು. ೨. [ಜೈನ] ಮಾನಸಿಕ, ವಾಚಿಕ ಮತ್ತು ಶಾರೀರಕವಾದ ಮೂರು ಬಗೆಯ ದೋಷಗಳು : ಮನೋದಂಡ ವಾಗ್ದಂಡ ಕಾಯದಂಡಮೆಂಬ ದಂಡತ್ರಯಮುಮಂ ಪರಿಹರಿಸುತ್ತುಂ (ಅಜಿಪು. ೭-೮ ವ); ನಿರ್ಜಿತದಂಡತ್ರಯಂ . . . ಘಾತಿಸಲೊಡರ್ಚಿದಂ ಘಾತಿಗಳಂ (ಪುಷ್ಪಪು. ೧೪-೧೫). ☞ ರಾಗ, ದ್ವೇಷ, ಮೋಹ ಎಂಬ ಮೂರು ಮನೋದಂಡಗಳು. ಅನೃತ, ಉಪಘಾತ, ಪೈಶುನ್ಯ, ಪರುಷ, ಅಭಿಶಂಸನ, ಪರಿತಾಪ, ಹಿಂಸನ ಎಂಬ ಏಳು ವಾಗ್ದಂಡಗಳು. ಪ್ರಾಣಿವಧ, ಚೌರ್ಯ, ಮೈಥುನ, ಪರಿಗ್ರಹ, ಆರಂಭ, ತಾಡನ, ಉಗ್ರವೇಷ – ಇವು ಏಳು ಕಾಯದಂಡಗಳು. [ ದಂಡ + ತ್ರಯ ]

**ದಂಡದಾಯ** (ನಾ). = ದಂಡಾಯ : ತಳಸಾರಿಗೆ ಕಾಣಿಕೆ ಕವಣಾಯ ದಣ್ಡದಾಯವಿನ್ನಿತುಮಂ ... ಕೊಟ್ಟರ್ (ಸೌಇಇ. IX-i, ೧೭೨-೧೯; 1106). [ದಂಡ + ದಾಯ$_2$ ]

**ದಂಡದೋಸ** (ನಾ). = ದಂಡ ೧೬ : ಕೋಗಟಿಯ ಚತುರಾಘಾಟ್ಟದೊಳ್ಗಾದ ಮಣ್ಣ ನೀರ ಸಾಮ್ಯಕ್ಕಂ ದಣ್ಡದೋಸಮೆಲ್ಲ ಬಸದಿಗೆ . . . ಬಿಟ್ಟುವರ್ (ಸೌಇಇ. IX-i, ೭೭-೨೮; 992). [ ದಂಡ + ದೋಸ ]

**ದಂಡದೋಷ** (ನಾ). = ದಂಡ ೧೬ : ಶ್ರೀಮದನ್ಧಾಸುರದೇವರ್ಗ್ಗೆ ಪೂಲಿಯ ದಣ್ಡದೋಷದೊಳಗೊಂದು ಭಾಗಮಂ ಬಿಡೆಂದು ಸಮರ್ಪ್ಪಿಸೆ (ಎಇ. XVIII, ೧೯೦-೭; ಸು. 1104). [ ದಂಡ + ದೋಷ ]

**ದಂಡದ್ರವ್ಯ** (ನಾ). ದಂಡವಾಗಿ ವಿಧಿಸಿದ ಹಣ; ಜುಲ್ಮಾನೆಯ ಹಣ: ಯಾವುದಾದರೂ ಕರವನ್ನು ಅಥವಾ ದಂಡದ್ರವ್ಯವನ್ನು ಹಾಕುವ ಅಥವಾ ವಿಧಿಸುವ ಉದ್ದೇಶಕ್ಕಾಗಿ (ಭಾಧಾನ. ೧೮). [ ದಂಡ + ದ್ರವ್ಯ ]

**ದಂಡಧರ** (ನಾ). ೧. ಕೋಲಿನ ಆಧಾರದಿಂದ ನಡೆಯುವವನು; ಕೋಲೂರಿ ನಡೆಯುವವನು. ೨. ಯಮ; ಅಂತಕ : ಸುರಪತಿ ಶಿಖಿ ದಂಡಧರಂ ನಿರುತಿ ಜಳೇಶಂ ಸಮೀರಣಂ ಧನದನುಮೀಶ್ವರನೆಂಬ ಲೋಕಪಾಲರನಿರವೇಟ್ಟುವರವರ ದೆಸೆಯೊಳ್ (ಶಾಂತಿಪು. ೧೦-೩೧); ದಂತವಕ್ತ್ರಂ . . . ಗೋಪನಂದನನೆಂದು ದಂಡಧರನನಂಡಲೆದುಂ ನಾಗನಿಳಯನೆಂದು ನೈಋತಿಯುಂ ನಿರಾಕರಿಸಿಯುಂ (ಜಗವಿ. ೯-೫೩ ವ); ಬಂಧುವುಂ ಮಿತ್ರನುಂ ಭೃತ್ಯನುಂ ಶತ್ರುವೊಲೆ ದಂಡಧರನೋಲಗಕೆ ನಿನ್ನನೆಳೆವವರೋ

(ಮಂಕುಕ. ೧೭೭). ೧, ೨ : ದಂಡಧರನಾಗಿ ದಿಟಂ ಜವನಲ್ತು . . . ವೃದ್ಧನಿದೇಂ ವಿರುದ್ಧನೋ (ಪುಷ್ಪಪು. ೧೩-೩೫). ೩. ಅಧಿಕಾರದಂಡವನ್ನು ಹಿಡಿದಿರುವವನು ; ರಾಜ ; ನ್ಯಾಯಾಧೀಶ : ದಂಡಧರರಿಲ್ಲದಂದು ತಂತಮ್ಮ ವೃತ್ತಿಗಳಂ ಪ್ರಜೆಗಳತಿಕ್ರಮಿಸಿ ನಡೆವರೆಂದುಂ (ಆದಿಪು. ೮-೭೪ ವ) ; ಪಿಂಡೀಭೂತದಂಡಧರಾಜ್ಞಾಪರಿಸ್ಫುರಣೆಗಂ . . . ತಾನೊರ್ವನೆ ನಿರುಪಮಜನ್ಮಭೂಮಿಯಾಗಿ (ಶಾಂತಿಪು. ೩-೪೯ ವ). ೪. ದ್ವಾರಪಾಲಕ ; ಕಟ್ಟಿಗೆಕಾರ. ೫. ನ್ಯಾಯಾಲಯಂದಲ್ಲಿ ನ್ಯಾಯಾಧೀಶನು ವಿಧಿಸಿದ ಶಿಕ್ಷೆಯನ್ನು ಕಾರ್ಯಗತ ಮಾಡುವ ಅಧಿಕಾರಿ : ಪೆಂಡತಿಯು ಮೂಗನಕಾರಣದಿನರಿವವನಂ ಜವನ ಬಾೞಿಗಟ್ಟುವುದೆ ಧರ್ಮವೆಂದು ಧರ್ಮಾಧಿಕರಣಂ ದಂಡಧರಂಗೆ ಪೇೞ್ವುದುಂ (ಪಂಚತಂ. ೭೯-೧೦). [ ಸಂ. ]

**ದಂಡಧಾರ** (ನಾ). = ದಂಡಧರ ೪ : ದಿವೌಕದಿಂ ಪೊಱಗೆ ನಿಲ್ ನಿಲ್ ಪಿಂಗು ನೀನೆಂಬ ದಂದುಗದಿಂ ದೇವರ ದಂಡಧಾರರೆರಡುಂ ಪಕ್ಷಂಗಳೊಳ್ ಸಾರೆ (ಶಾಂತಿಪು. ೧೦-೨೪). [ ಸಂ. ]

**ದಂಡಧಾರಣ** (ನಾ). ಕೋಲು ಹಿಡಿಯುವುದು ; ದೊಣ್ಣೆಯನ್ನು ಹಿಡಿಯುವುದು : ದಂಡಧಾರಣಗುಣಂ – ದೊಣ್ಣೆಯನ್ನು ಹಿಡಿದುಕೊಂಡು ತಿರುಗಾಡುವುದರಿಂದ . . . ದುಷ್ಟಜಂತು ಮುಂತಾದುವುಗಳ ಬಾಧೆಗಳನ್ನು ಕೆಡಿಸುವಂಥಾದ್ದಾಗಿ ಇರುವುದು (ಸಕವ್ಯ. ೫೭). [ ದಂಡ + ಧಾರಣ ]

**ದಂಡನ** (ನಾ). = ದಂಡನೆ. [ ಸಂ. ]

**ದಂಡನಮನ** (ನಾ). ನೆಲದ ಮೇಲೆ ಕೋಲಿನಂತೆ ದೇಹವನ್ನು ಚಾಚಿ ಕಾಲಿಗೆ ಬೀಳುವುದು; ದೀರ್ಘದಂಡ ನಮಸ್ಕಾರ ; ದಂಡಪ್ರಣಾಮ: ಅಸಿಗಳಿಂದಲಿ ಶಿರವನರ್ಪಿಸಿ ಬಸಿವ ಮುಂಡದಿ ದಂಡನಮನವನೊಸೆದು ಮಾಡುವ ದನುಜಕೋಟಿಯ ಕಂಡು ಬೆಱಗಾದ (ಕಾಶಿರಾ. ೩೯-೧೫). [ ದಂಡ + ನಮನ ]

**ದಂಡನಮಸ್ಕಾರ** (ನಾ). = ದಂಡನಮನ : ಮಾರಿ ಮಲಯಾನಿಲಂ ನವನೀರಜವನಮೆಂಬ ಕೆಂಡದೊಳ್ ದಂಡನಮಸ್ಕಾರಂ ಬಂದಪಂ (ಯಶೋಚ. ೧-೩೮). [ ದಂಡ + ನಮಸ್ಕಾರ ]

**ದಂಡನಾಥ** (ನಾ). ೧. ಸೈನ್ಯದ ನಾಯಕ ; ಸೇನಾಪತಿ ; ದಳವಾಯಿ : "ಆ ಚಮೂಪತಿಯನೀಕಸ್ಥನೆನೆ ದಂಡನಾಥನಕ್ಕು" (ಮಂಗರಾ. ೮೦-೮) ; ಬಿತ್ತರಿಪರಾಗ್ಗರ್ಗಳ ಭಾಸ್ಕರದಣ್ಡನಾಥನಂ (ಸೌಇಇ. XX, ೪೭-೩೨ ; 1072); ಸಜ್ಜನಪಾರಿಜಾತನು ದಂಡನಾಥರ ದೇವ ಬಲದೇವ ಭಾವರೂಪವಿಳಾಸಗುಣಶೋಭಾವಹಂಗಳನಾ ಪಿತಂ ನಾನಾವಿಧದೊಳುಪಲಾಲಿಸುತ್ತಿರೆ (ಬಸಪು. ೪-೧೩) ; ದೊರೆಗಳ ದಂಡನಾಥರ . . . ಅಲಂಪಿನ ಕೇರಿಗಳಂ ನಿರೀಕ್ಷಿಸುತ್ತುರುತರವೀರಕ್ರಮವಿಚಾರವಿಲಾಸಮಹೀಶನೆಯ್ದಿದಂ (ಹಮ್ಮಿರಾ. ೨-೭೯). ೨. ನ್ಯಾಯಾಧಿಪತಿ. ೩. ರಕ್ಷಕದಳದ ಮುಖ್ಯಾಧಿಕಾರಿ ; ಪೋಲೀಸುಅಧಿಕಾರಿ : (+). ೪. ಪ್ರಧಾನಅಧಿಕಾರಿ ; ಉನ್ನತಾಧಿಕಾರಿ : ಲಂಚವನೀವ ದಂಡನಾಥರ್ಕಳಂ ಲೆಕ್ಕಕ್ಕೆ ಬಂದಿರ್ಪ ರಾಜಪುತ್ರರ್ಕಳಂ . . . ನೋಡುತಂ ಬೆಱಗಾಗುತಲ್ಲಿ ಬಸವಣ್ಣನಿರೆ (ಬಸರ. ೫-೭೪).

**ದಂಡನಾಥ ಚೂಡಾಮಣಿ** = ಸೇನಾಪತಿಗಳಲ್ಲಿ ಶ್ರೇಷ್ಠನಾದವನು : ಆ ದಂಡನಾಥಚೂಡಾಮಣಿಯನ್ವಯಾವತಾರಮೆಂತೆಂದೊಡೆ (ಎಕ. VI, ತರೀಕೆ. ೪೫-೫೫ ; 1196). **ದಂಡನಾಥ ತ್ರಿಣೇತ್ರ** = ಸೇನಾಪತಿಗಳಲ್ಲಿ ಶಿವನಂತಿರುವವನು; ಒಂದು ಬಿರುದು: ಈತನಂ ಪೇಳ್ವೆಡೆ ಮತ್ತಿಲ್ಲಾರುಮೆಂಬಂತೆಸದಪನಮಿತಂ ದಂಡನಾಥ ತ್ರಿಣೇತ್ರಂ (ಎಕ V ತರೀಕೆ. ೪೫-೪೯ ; 1196). [ ದಂಡ + ನಾಥ ]

**ದಂಡನಾಯಕ** (ನಾ). = ದಂಡನಾಥ ೧ : "ರಕ್ಷಿವರ್ಗಃ, ಅನೀಕಸ್ಥಃ, ಸೇನಾನೀಃ, ವಾಹಿನೀಪತಿಃ – ಈ ೪ ದಂಡನಾಯಕಂ" (ಹಲಾಯು. ೭೧-೨೭೯) ; ಅಯೋಧ್ಯನೆಂಬ ದಂಡನಾಯಕನು ಬುದ್ಧಿಸಾಗರನೆಂಬ ಪುರೋಹಿತನು (ಆದಿಪು. ೧೫-೩ ವ) ; ಮಹಾಸಾಮಾನ್ತಾಧಿಪತಿ ಮಹಾಪ್ರಚಣ್ಡ ದಣ್ಣನಾಯಕಂ (ಸೌಇಇ. XX, ೪೭-೨೧ ; 1072) ; ಮಕುಟವರ್ಧನ ಮಂಡಳಿಕರ ದಂಡನಾಯಕರ ಥಕ್ಕುರರ ಮಹತ್ತರರಬ್ಬೊತ್ತಂಗಳಿತ್ತ ಸಮಯ ತ್ಯಾಗಮತ್ತಳಗಮಾಗೆ (ಅನಂಪು. ೫-೫ ವ) ; ದೇವರು ದೊಡ್ಡವನು ದಂಡನಾಯಕರೆ (ಸವತಿ. ೪೦). [ದಂಡ + ನಾಯಕ]

**ದಂಡನಾಯಕಿತಿ** 'ದಂಡನಾಯಕಿತ್ತಿ' ನೋ.

**ದಂಡನಾಯಕಿತ್ತಿ**, ದಂಡನಾಯಕಿತಿ (ನಾ). ಸೇನಾಪತಿಯ ಹೆಂಡತಿ: ಮಹಾಜನನೂೞಿರ್ಪ್ಪದಿಂಬರುಂ ಶ್ರೀಮದ್ದಣ್ಣನಾಯಕಿತ್ತಿ ರೆಬ್ಬಲದೇವಿಯರುಮಿೞ್ದು . . . ಬಿಟ್ಟ ಧರ್ಮ್ಮಂ (ಸೌಇಇ. IX-i, ೧೫೮-೫೩ ; 1090). **ದಂಡನಾಯಕಿತಿ :** ಸಿದ್ಧಾಂ[ತ]ದೇವರ ಗುಡ್ಡಿ ಜಕ್ಕಿಯವ್ವೆ ದಣ್ಣನಾಯಕಿತಿ ಸಾಹಳಿ (ಎಕ. II, ೪೦೦-೨ ; ಸು. 1120) ; ಆ ಗುಂಪಿನಲ್ಲಿ ಮಾಚಿಕಬ್ಬೆ, ಲಕ್ಷ್ಮೀಮತಿ ದಂಡನಾಯಕಿತಿ, ಜಕ್ಕಿಯಬ್ಬೆ ಇನ್ನೂ ಇತರರೂ ಇದ್ದರು (ಶಾಂತಲಾ. ೧೮೦). [ ದಂಡನಾಯಕ + – ಇತ್ತಿ ]

**ದಂಡನೀತಿ** (ನಾ). ೧. ದಂಡವನ್ನು ಪ್ರಯೋಗಿಸುವುದು ; ನ್ಯಾಯನಿರ್ವಹಣೆ. ೨. ಪ್ರಜಾಪರಿಪಾಲನೆ ಮತ್ತು ಸೈನ್ಯಕ್ಕೆ ಸಂಬಂಧಪಟ್ಟ ಶಾಸ್ತ್ರ ; ರಾಜನೀತಿ ಶಾಸ್ತ್ರ : ನಿನ್ನ ದಂಡನೀತಿಯ ಪುದುವೆ ವಲಂ ದಂಡರತ್ನಮೆಂಬುದು ಪೆೞತೇ (ಆದಿಪು. ೧೩-೨೭) ; ದಂಡನೀತಿ ಸ್ಮಾರ್ತಶೌಚೋದ್ದಂಡ ವೇದಾಧ್ಯಯನನಿಪುಣನ . . . ಪೌರೋಹಿತನ ಮಾಡುವುದು (ಕುಮ್ಯಾಉ. ೩-೮೭) ; ರಾಜಶಾಸ್ತ್ರವನ್ನು 'ನೃಪಶಾಸ್ತ್ರ ಮತ್ತು ದಂಡನೀತಿ ಎಂದೂ 'ದಮ' ದಂಡವೆಂದೂ, ನೀತಿಶಾಸ್ತ್ರವೆಂದೂ ಕರೆದಿದ್ದಾರೆ (ಭಾರದ. ೩೭೦) ; ನ್ಯಾಯಶಾಸ್ತ್ರದಲ್ಲಿ ವಿದ್ಯೆ ಆನ್ವೀಕ್ಷಕೀ ತ್ರಯೀ ವಾರ್ತಾ ದಂಡನೀತಿ ಎಂದು ಸಾಮಾನ್ಯವಾಗಿ ನಾಲ್ಕು ವಿಧವೆಂದು ವಿಂಗಡಿಸಿರುವರು (ಹಿಂದಸಾ. ೧೧೨). [ ದಂಡ + ನೀತಿ ]

**ದಂಡನೆ** (ನಾ). ೧. ಹೊಡೆತ ; ಶಿಕ್ಷೆ : ಕೊಲ್ಲದೆ ಬಂದ ತಪ್ಪಿಗೆ ವಿಹಿತವಿನ್ನೊಂದುಂಟು ದಂಡನೆಯಿಹಗೆನುತ್ತವೆ ತನ್ನ ಶಿರಮಂ ತಱಿದುಕೊಳಲೊಡನೆ (ಬಸಪು. ೭೧-೩೫). ೨. ಶಿಕ್ಷೆವಿಧಿಸುವುದು ; ದಂಡಿಸುವುದು : ಯಾವುದಾದರೂ ಉಚ್ಚನ್ಯಾಯಾಲಯವು ವ್ಯವಹಾರದ ಬಾಬಿನ ವ್ಯವಹರಣೆಯಲ್ಲಾಗಲಿ, ದಂಡನೆಯ ಬಾಬಿನ ವ್ಯವಹರಣೆಯಲ್ಲಾಗಲಿ . . . ಕೊಟ್ಟ ನಿರ್ಣಯ (ಭಾಧಾನ. ೭೧) ; ಅವನು ಅಪರಾಧಿ, ಭಯಂಕರದೋಷಿ, ಅವನಿಗೆ ದಂಡನೆಯಾಗಬೇಕು (ಬಾಣಳ. ೧೦೯) ; ದಂಡಿತನಿಗಿಂತಲೂ ದಂಡನೆ ಮಾಡಿದವನಿಗೆ ಇದರ ಜಳ ಹೆಚ್ಚು ತಾಕುವುದು (ರಂಗರೋ. ೫೭). ೩. ಯಾತನೆ ; ಕಾಟ ; ಬಾಧೆ. [ ಸಂ. ದಂಡನ ]

**ದಂಡನ್ಯಾಯಶಾಸ್ತ್ರ** (ನಾ). ನ್ಯಾಯಾಲಯಗಳಲ್ಲಿ ಅಪರಾಧ (ಕ್ರಿಮಿನಲ್) ವಿಚಾರಣೆಗೆ ಸಂಬಂಧಪಟ್ಟ ಶಾಸ್ತ್ರ ; ನ್ಯಾಯಶಾಸ್ತ್ರ : "ದಂಡನ್ಯಾಯಶಾಸ್ತ್ರ, ಫೌಜುದಾರೀಕಾನೂನು (ಉ.ಕ) (Criminal Law. ಪತ್ರಿನಿ. ೨೭). [ ದಂಡ + ನ್ಯಾಯ + ಶಾಸ್ತ್ರ ]

**ದಂಡಪಕ್ಷ** (ನಾ). ೧. [ನಾಟ್ಯ] ಮೂವತ್ತು ನೃತ್ತಹಸ್ತಗಳಲ್ಲಿ ಒಂದು : ಕರಮೊಂದು ಹಂಸಪಕ್ಷದಿನುರಕೆಯ್ದಲ್ ಮತ್ತಮೊಂದು ಕಯ್ಯ ಲತಾಖ್ಯದ ಕರಮಾಗಿ ಪಸರಿಸುತ್ತದನೆರಡುಂ ಮೆಯ್ಯಾಗೆ ದಂಡಪಕ್ಷಾಖ್ಯಾನಂ (ಲಾಸ್ಯರಂ. ೨-೭೩). ೨. ನೂರೆಂಟು ಕರಣಗಳಲ್ಲಿ ಒಂದು; ಮೂವತ್ತು ಮೂರನೆಯ ಕರಣ : ಮತ್ತೀ ಪರಿಯಿಮ್ಮೆಯ್ಯೊಳೆ ತೆತ್ತಿಸಿದೊಡೆ ದಂಡಪಕ್ಷಕರಣಮೆನಿಕ್ಕುಂ (ಲಾಸ್ಯರಂ. ೪-೮೫). [ ಸಂ. ]

**ದಂಡಪಾಣಿ** (ನಾ). ೧. ದೊಣ್ಣೆಯನ್ನು ಹಿಡಿದುಕೊಂಡಿರುವವನು; ಕೋಲನ್ನು ಕೈಯಲ್ಲಿ ಹಿಡಿದಿರುವವನು. ೨. ದಂಡಾಯುಧವನ್ನು ಕೈಯಲ್ಲಿ ಹಿಡಿದುಕೊಂಡಿರುವವನು; ಯಮ: "ದಂಡಪಾಣಿ ಕೀನಾಶಂ ಕೃತಾಂತನಕ್ಕುಂ" (ಮಂಗರಾ. ೧೫-೧೦); ಕೋದಂಡಪಾಣಿಗಳ್ ದಂಡಪಾಣಿ ಗೆಣೆಯೆನೆ ತಳರ್ದರ್ (ಪಂಪಾಭಾ. ೪-೫೧); ದಂಡಪಾಣಿಯ ಶಕ್ತಿಯುಂ ತವೆ ಖಂಡಿಸುವ ವರಸುತನೆ ಬಾರಾ (ಬಸಪು. ೨೪-೩೯). ೩. ಅಧಿಕಾರ ಲಾಂಛನವಾದ ಚಿನ್ನ, ಬೆಳ್ಳಿಗಳಿಂದ ಮಾಡಿದ ದಂಡವನ್ನು ಕೈಯಲ್ಲಿ ಹೊಂದಿರುವವನು; ರಾಜ ಮೊದಲಾದ ವ್ಯಕ್ತಿ. ೪. ಸ್ಕಂದ; ಕುಮಾರಸ್ವಾಮಿ. ೫. ಕಟ್ಟಿಗೆಕಾರ; ಸೇವಕ. ೬. ಕಾಶೀಕ್ಷೇತ್ರದಲ್ಲಿರುವ ಒಂದು ದೇವತೆ. [ ದಂಡ + ಪಾಣಿ₂ ]

**ದಂಡಪಾದ** (ನಾ). ೧. [ನಾಟ್ಯ] ಆಕಾಶಚಾರಿಗಳಲ್ಲಿ ಒಂದು: ದಂಡಪಾದ, ಅಂಘ್ರಿತಾಡಿತ. . . , ಉಲ್ಲೋಲ ಈ ಹತ್ತೊಂಬತ್ತೂ ದೇಶೀಯ ಸಂಬಂಧದ ಆಕಾಶಚಾರಿಗಳು (ಲಾಸ್ಯರಂ. ೬-೧೭ ವ). ೨. ನೂರೆಂಟು ಕರಣಗಳಲ್ಲಿ ಒಂದು: ಮಿಗೆ ನೂಪುರಚಾರಿಯ ಪದಯುಗದಿಂದಂ ಮಾಡಿ ದಂಡಪಾದವನೆಸಗುತ್ತೊಗೆಯಲ್ ಕರದಿಂ ಪಿಡಿದುಂ ಮಗುಳ್ದಿರಿಸಲ್ ದಂಡಪಾದಕರಣಮೆನಿಕ್ಕುಂ (ಲಾಸ್ಯರಂ. ೪-೧೩೯). [ ದಂಡ + ಪಾದ ]

**ದಂಡಪಾರುಷ್ಯ** (ನಾ). ೧. ದುಂಡಾವರ್ತಿ; ಹಲ್ಲೆ: ವ್ಯವಹಾರವು (೧) ಋಣದಾನ (Debt) . . . (೧೧) ದಂಡಪಾರುಷ್ಯ (Assault) . . . (೧೮) ದ್ಯೂತ ಸಮಾಹ್ವಯ (Gambling) —ಎಂದು ಹದಿನೆಂಟು ವಿಧವಾಗಿ ವಿಭಜಿಸಲ್ಪಟ್ಟಿತ್ತು (ಭಾರದ. ೫೭). ೨. ಉಗ್ರಶಿಕ್ಷೆ; ಕಠಿಣಶಿಕ್ಷೆ. ೩. [ರಾಜನೀ] ಬೇಟೆ, ಜೂಜು, ಸ್ತ್ರೀವ್ಯಾಮೋಹ, ಮದ್ಯಪಾನ, ವಾಕ್ಪಾರುಷ್ಯ, ಅರ್ಥದೂಷಣ ಮತ್ತು ದಂಡಪಾರುಷ್ಯಗಳೆಂಬ ಏಳು ಬಗೆಯ ದೋಷಗಳಲ್ಲಿ ಒಂದು; ಅಪರಾಧಿಗಳಿಗೆ ಮಿತಿಮೀರಿ ಶಿಕ್ಷೆಯನ್ನು ವಿಧಿಸುವುದು. [ ಸಂ. ]

**ದಂಡಪಾಶಕ** (ನಾ). ಮರಣದಂಡನೆಗೆ ಒಳಗಾದವನನ್ನು ಗಲ್ಲಿಗೆ ಹಾಕುವವನು; ಮರಣದಂಡನೆಯನ್ನು ಕಾರ್ಯಗತಮಾಡುವ ಅಧಿಕಾರಿ: ಈ ಶಕಟದಾಸನಂ . . . ಶೂಲಾರೋಹಣವಂ ಮಾಡಿಸು ವಂತೆ ನಾವು ಹೇಳಿ ಇದ್ದೇವೆಂದು, ದಂಡಪಾಶಕನಿಗೆ ತಿಳಿಸಿ ಬಾರೆಂದು ಉಸುರಿ (ಮುದ್ರಾಮಂ. ೨೯೮). [ ಸಂ. ]

**ದಂಡಪಿಂಡ** (ನಾ). ವ್ಯರ್ಥವಾಗಿ ಅನ್ನವನ್ನು ಉಣ್ಣುವ, ಯಾವ ಕೆಲಸಕ್ಕೂ ಬಾರದ ವ್ಯಕ್ತಿ; ಉಂಡಾಡಿ; ಅಪ್ರಯೋಜಕ: "ಅವರೆಲ್ಲ ಕೆಲಸಕ್ಕೆ ಬಾರದ ದಂಡಪಿಂಡಗಳು" ಎಂಬ ಅಭಿಪ್ರಾಯವಿತ್ತು (ಸ್ವಪ್ನಹೊ. ೩೪).

**ದಂಡಪಿಂಡ ತಿನ್ನು** = ವ್ಯರ್ಥವಾಗಿ ತಿಂದು ಬದುಕು; ನಿರುಪಯುಕ್ತನಾಗಿರು: ಹಿರಿಯ ಮಗನಾದರೂ ಮನೆಗೆ ಸಹಾಯ ಮಾಡದೆ ದಂಡಪಿಂಡ ತಿನ್ನುತ್ತಿದ್ದಾನೆ (ರೂಢಿ). [ ದಂಡ + ಪಿಂಡ ]

**ದಂಡಪ್ರಕ್ರಿಯಾಸಂಹಿತೆ** (ನಾ). ನ್ಯಾಯಾಲಯದಲ್ಲಿ ಅಪರಾಧಗಳ (ಕ್ರಿಮಿನಲ್) ವಿಚಾರಣೆಯ ವಿಷಯದಲ್ಲಿ ಅನುಸರಿಸಬೇಕಾದ ಕಾರ್ಯಕ್ರಮದ ನಿಯಮಾವಳಿಗಳ ನಿರೂಪಣೆಯ ಗ್ರಂಥ: ೧೯೭೫ರನೆಯ ಇಸವಿಯ ದಂಡಪ್ರಕ್ರಿಯಾಸಂಹಿತೆಯ ಮೇರೆಗೆ ತಾವು ಉಚಿತವೆಂದು ಭಾವಿಸುವ ಶಕ್ತಿಗಳನ್ನು ಪ್ರದಾನ ಮಾಡಬಹುದು (ಭಾಧಾನ. ೨೬೭). [ ಸಂ. ದಂಡಪ್ರಕ್ರಿಯಾಸಂಹಿತಾ ]

**ದಂಡಪ್ರಣಮ** (ನಾ). = ದಂಡನಮನ: ಆ ಜಂಗಮಾಕೃತಿಯವರನೀಕ್ಷಿಸಿ ಹೊಂಗುತಂ ಸಾಷ್ಟಾಂಗ ದಂಡಪ್ರಣಮವಂ ಮಾಡಿ (ಬಸಪು. ೨೫-೩೫). [ ದಂಡ + ಪ್ರಣಮ ]

**ದಂಡಪ್ರಣಾಮ** (ನಾ). = ದಂಡನಮನ: ನಂದಿ . . . ದಂಡಪ್ರಣಾಮವ ವನಿಕ್ಕಿ ವಂದಿಸುತ (ಬಸಪು. ೨-೨೦); ದಂಡಪ್ರಣಾಮವಂ ಮಾಡುವ . . . ಸಾಮಾಜಿಕರಂ (ಸೌಗಂಧಿ. ೪೮೬-೧). [ ದಂಡ + ಪ್ರಣಾಮ ]

**ದಂಡಭ್ರಮ** (ನಾ). ೧. ಕೋಲಿನಿಂದ ತಿವಿದು ತಿರುಗಿಸುವುದು. ೨. ಶಿಕ್ಷೆ ವಿಧಿಸುವುದರಲ್ಲಿ ಭ್ರಾಂತಿಯ ಮೂಲಕ ನಿರಪರಾಧಿಯನ್ನು ಅಪರಾಧಿಯೆಂದು ಶಿಕ್ಷಿಸುವುದು; ತಪ್ಪು ಮಾಡದವನನ್ನೂ ತಪ್ಪು ಮಾಡಿದವನೆಂದು ಭ್ರಮಿಸಿ ದಂಡಿಸುವುದು. ೧, ೨: ದಂಡಭ್ರಮಂ ಕುಲಾಲಚಕ್ರದೊಳ್ . . . ಮಹಾಮಾತ್ರವರ್ತನಂ ಸ್ಮಣಿಯೊಳಲ್ಲದಿಲ್ಲ ಮಲ್ಲಿಯುಂ (ಚಂದ್ರಪು. ೩-೯ ವ). [ ದಂಡ + ಭ್ರಮ ]

**ದಂಡಭ್ರಮರಿ** (ನಾ). [ನಾಟ್ಯ] ಒಂದು ಬಗೆಯ ನರ್ತನಭಂಗಿ; ತೋಳನ್ನು ತಿರುಗಿಸುವಿಕೆ: ಅಮರೇಂದ್ರಂ ಕುಡೆ ದಂಡಭ್ರಮರಿಯನು ದ್ದಂಡಬಾಹುಮಂಡಗಳೊಳಿರ್ದಮರಿಯರೇಂ ಯಕ್ಷಾಂದೋಳಮನಾಡುವ ಮಾಟಿಕ್ಕೆಯುಂ ಮನಂಗೊಳಿಸಿದರೋ (ಮಲ್ಲಿಪು. ೧೩-೪೭). [ ದಂಡ + ಭ್ರಮರಿ₁ ]

**ದಂಡಯಾತ್ರೆ** (ನಾ). ೧. ಸಾಲಾಗಿ ಹೊರಡುವ ಜನರ ಗುಂಪಿನ ಪ್ರಯಾಣ. ೨. ರಾಜರು ದಿಗ್ವಿಜಯಕ್ಕಾಗಿ ಹೊರಡುವ ಸೈನ್ಯ ಸಮೇತವಾದ ಪ್ರಯಾಣ; ಸೈನಿಕ ಯಾತ್ರೆ; ಶತ್ರುಗಳ ಮೇಲೆ ದಂಡೆತ್ತಿ ಹೋಗುವುದು: ಮೈಸೂರಿನ ಸೈನ್ಯವು ಉಮ್ಮತ್ತೂರಿನ ಮೇಲೆ ದಂಡಯಾತ್ರೆ ಹೊರಟಿತು (ಶ್ರೀರಾಮ. ೦೨೩); ದಂಡಯಾತ್ರೆಯ ಮೇಲಿದ್ದ ಜ್ಯೂಲಿಯಸ್ ಸೀಸರ್ ಏಗುಪ್ತ್ಯರ ದೋಣಿಗಳಿಗೆ ಬೆಂಕಿ ಹಾಕಿದಾಗ . . . ಪುಸ್ತಕಭಂಡಾರವು ಬೂದಿಯಾಯಿತು (ಶಿಲ್ಪನಾ. ೭೫). ೩. (ಆಲಂ) ಅನುತ್ತೀರ್ಣನಾಗಿ ಮತ್ತೆ ಮತ್ತೆ ಪರೀಕ್ಷೆಗೆ ಹೋಗುವುದು: ಮೂರು ವರ್ಷದಿಂದ ಅವನು ಪರೀಕ್ಷೆಯಲ್ಲಿ ದಂಡಯಾತ್ರೆ ಮಾಡುತ್ತಿದ್ದಾನೆ (ರೂಢಿ). [ ದಂಡ + ಯಾತ್ರೆ ]

**ದಂಡರತ್ನ** (ನಾ). [ಜೈನ] ಒಂದು ಬಗೆಯ ಶ್ರೇಷ್ಠ ಆಯುಧ; ಏಳು ಬಗೆಯ ಅಜೀವ ರತ್ನಗಳಲ್ಲಿ ಒಂದು; ದಿಗ್ವಿಜಯಂಕಾಲದಲ್ಲಿ ಅದ್ಭುತವಾದ ಸಹಾಯವನ್ನು ಮಾಡುವ ದಿವ್ಯದಂಡ: ವಿಜಯಾರ್ಧಾಚಲ ಮಹಾಗುಹಾಗಪ್ಪರವಜ್ರಕವಾಟಪುಟವಿಘಟನಪಟುವಪ್ಪ ಚಂಡವೇಗ ಮೆಂಬ ದಂಡರತ್ನಮುಂ (ಆದಿಪು. ೧೦-೩ ವ); ತನ್ನ ಪುಣ್ಯಪ್ರಭಾವದಿಂ ನಿಯೋಗಿಸಿಟ್ಟನಿತೆ ಬೇಗದಿಂ ಬೆಟ್ಟ ಘಟ್ಟಂ ಹಳ್ಳ ಕೊಳ್ಳಮೆಂಬ ವಿಷಮಭೂತಳಮನನಿತುಮಂ . . . ಸಮತಳಮಂ ಮಾಡೆ ಕೈಗೆ ಬಂದ ದಂಡರತ್ನಮುಂ (ಚಂದ್ರಪು. ೬-೧೦೦ ವ). [ ದಂಡ + ರತ್ನ ]

**ದಂಡರೇಚಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು: ಮಿಗೆ ದಂಡಪಾದಚಾರಿಯನೊಗೆಯಲ್ ಪದಮೆರಡಮೆರಡು ಕರಮಂ ಬೇಗಂ ಮಿಗೆ ದಂಡಪಕ್ಷಹಸ್ತಂ ನೆಗಳ್ದಿರೆ ಕೇಳ ದಂಡರೇಚಿತಾಖ್ಯಮೆನಿಕ್ಕುಂ (ಲಾಸ್ಯರಂ. ೪-೯೩). [ ಸಂ. ]

**ದಂಡಲ** (ನಾ). ಒಂದು ಬಗೆಯ ನಾಟ್ಯ: ಪೇರಣಂ ಪೆಕ್ಕಣಂ ಗುಂಡಲಂ ಸದಮಲದ ದಂಡಲಂ ಲಾಸ್ಯವೆಂದೆಂಬವಂ ತೋಱುತಿರ್ದಂ ಮಹೇಶಂ (ಚೇರಮ. ೧೦-೩೯). [ ? ]

**ದಂಡವಂತ** (ನಾ). ಕಟ್ಟಿಗೆಕಾರ: ಸಂಸಜ್ಞೀ—ದಂಡವಂತಂ, ಸತ್ತಿಗೆವಂತಂ— (ಶಬ್ದಾನು. ೪೦೨ ಪ್ರಯೋ). [ ದಂಡ + —ವಂತ ]

**ದಂಡವಲಗೆ** (ನಾ). ಒಂದು ಬಗೆಯ ಗುರಾಣಿ; ಉದ್ದವಾದ ಗುರಾಣಿ: ಬಿಗಿದ ಬಲ್ಲಿನ ದಂಡವಲಗೆಯ ಮುಸುಡಿ ಮುದ್ದ ಕಠಾರಿಯುಬ್ಬಣದ ಗಂಡುಗಲಿಗಳು ಕವಿದರು (ಕುಮಾರವ್ಯಾ. ೫-೭೦); ಖಡುಗದ ಮೊನೆಯು ಚೂರಿಸಿ ದಂಡವಲಗೆಯ ತೊಡೆಯೊಳೊದಚಿಸುತ . . . ಅರ್ಜುನ ಕುಮಾರನ ಕರೆದು ಹಳಚಿದನು (ಕುಮಾರವ್ಯಾ. ೬-೫೭). [ದಂಡ+ಪಲಗೆ]

**ದಂಡವಳ** (ನಾ). ದಳವಾಯಿ ; ದಳಪತಿ ; ಸೇನಾಪತಿ : ವೀರಗಂಟಿ ರಾಮನಾಥದೇವರ ದಿವ್ಯ ಶ್ರೀಪಾದಪದುಮಾರಾಧಕರುಮಪ್ಪ ದಂಡವಳ ದೋಕಣ್ಣನ ಮಕ್ಕಳು (ಎಕ. IX(S), ಚನ್ನಪ. ೩೮೭-೪ ; 1272). 'ಪಡೆವಳ' ಪರಾ. [ ದಂಡ + - ವಳ (< - ವಾಳ$_1$) ]

**ದಂಡವಿಘಾತಿ** (ನಾ). ರಾಜನ ಸಪ್ತವ್ಯಸನಗಳಲ್ಲಿ ಒಂದು; ವಿಧಿಸಿದ ಶಿಕ್ಷೆಯನ್ನು ಜಾರಿಗೆ ಕೊಡದಿರುವುದು; ಶಿಕ್ಷೆಯನ್ನು ಕಾರ್ಯಗತ ಮಾಡಲು ಅಡ್ಡಿ ತರುವುದು : ದ್ಯೂತ ಮೃಗಯಾವ್ಯಸನ ಪಾರುಷ್ಯಾತಿಶಯ ಮಧುಪಾನ ಕಾಂತಾಪ್ರೀತಿ ದಂಡವಿಘಾತಿ ದೂಷಣವರ್ಥ ಸಂಗತಿಯು ಜಾತಸಪ್ತವ್ಯಸನವಿವು (ಕುವ್ಯಾಸ. ೧೩-೮೯).

[ ದಂಡ + ವಿಘಾತಿ ]

**ದಂಡವಿಡು** (ಕ್ರಿ). ದೀರ್ಘದಂಡ ನಮಸ್ಕಾರವನ್ನು ಮಾಡು; ಪೊಡೆಮಡು : ಮೈ ದಿಂಡುಗೆಡಹಿದರೆ ಪುನರಪಿ ಜನನವಿಲ್ಲ ಸಲೆ ದಂಡ ವಿಟ್ಟವ ಮುಕ್ತನೊ (ವಿದಾಕ್ಕ. ೯೮-೫). [ ದಂಡ + ಇಡು$_1$ ]

**ದಂಡಸಂಹಿತೆ** (ನಾ). = ದಂಡನ್ಯಾಯಶಾಸ್ತ್ರ : (Criminal Code, ಪತ್ರಿನಿ. ೨೭). [ ದಂಡ + ಸಂಹಿತೆ ]

**ದಂಡಸಾಧ್ಯ** (ನಾ). ಸೈನಿಕ ಶಕ್ತಿಯಿಂದ ಗೆಲ್ಲಬಹುದಾದ ವ್ಯಕ್ತಿ; ಸೈನ್ಯದಿಂದ ಅಡಗಿಸಬಹುದಾದವನು : ವನಧಿಪರಿವೃತ ಸಮಸ್ತಾ ವನಿತಳದೊಳ್ ದಣ್ಡಸಾಧ್ಯಮಲ್ಲದೆ ತಾನಾಂಪನಿತುವರಮರಿಯರಿಲ್ಲೆಂಬಿ ನೆಗಂ ಜಯಸಿಂಹದೇವನಾಳ್ದಂ ನೆಲನಂ (ಕಇಅ. ೩-೩-೨೯ ; 1058).

[ ದಂಡ + ಸಾಧ್ಯ ]

**ದಂಡಾಂಕಿತ** (ಗು). ೧. ಸೈನ್ಯಬಲದಿಂದ ಕೂಡಿರುವ. ೨. ಶಿಕ್ಷಿಸುವುದೇ ಗುರುತಾಗಿರುವ : ಕರುಣವೀ ದಂಡಾಂಕಿತ ಪ್ರಭುತ್ವಕ್ಕೆ ಮೇಲು ಧರಣಿಪರ ಹೃದಯದಲಿ ಪಟ್ಟವದಕೆ (ಕಪು. ೫೩-೩). [ ದಂಡ+ಅಂಕಿತ ]

**ದಂಡಾಕಾರ** (ನಾ). ೧. ದಂಡದ ಆಕಾರ; ಕೋಲಿನಂತಿರುವುದು. ೨. ದೀರ್ಘವಾಗಿರುವುದು : ಎಡೆಬಿಡದೆ ಮನುಷ್ಯಕಂಠದಿಂದ ಹೊರಡುವ ದಂಡಾಕಾರವಾದೊಂದು ಶಬ್ದವನ್ನು ಕೇಳಿದಳು (ಕವಾಕುಂ. ೯೨).

**ದಂಡಾಕಾರದ ಪದ್ಧತಿ** = ಅರ್ಥ, ಅನ್ವಯಗಳಿಗೆ ಗಮನ ಕೊಡದೆ ಒಂದೇ ಸಮನಾಗಿ ಹೇಳಿಕೊಂಡು ಅಥವಾ ಓದಿಕೊಂಡು ಹೋಗುವ **ಕ್ರಮ** : ಓದುವುದರಲ್ಲಿ 'ದಂಡಾಕಾರ'ದ ಪದ್ಧತಿ ಎಂಬ ಹಳೆಯ ಕ್ರಮ ವಿದೆ. ಅದೇನೆಂದು ಓದುವವರನ್ನೆ ಕೇಳಿ ತಿಳಿಯಬೇಕಷ್ಟೆ (ದೇವಮ. ೪೦).

[ ದಂಡ + ಆಕಾರ$_2$ ]

**ದಂಡಾಜೀವಕ** (ನಾ). ಮೋಸಗಾರ ; ವಂಚಕ ; ಮಾಯಾವಿ : "ಮಾಯಿಕಂ ಕುಹಕಿ ದಂಡಾಜೀವಕಂ[ಪಾಠಾಂ. ವಿತಂ] . . . ಜಲಿಕನೆನೆ ಮಾಯೆಗೈವವನಕ್ಕು" (ಮಂಗರಾ. ೭೭-೬).

[ P ಇದು 'ದಾಂಡಾಜಿನಿಕ' ಎಂಬುದರ ಅಪಲಿಖಿತ ]

**ದಂಡಾಜ್ಞೆ** (ನಾ). ನ್ಯಾಯಾಲಯವು ಅಪರಾಧಿಗೆ ವಿಧಿಸುವ ಶಿಕ್ಷೆಯ ತೀರ್ಪು : ಸೇನಾವಿಧಿಯ ಮೇರೆಗೆ ಸಾದರಾದ ಯಾವುದಾದರೂ ದಂಡಾಜ್ಞೆ ಯನ್ನು . . . ಮಾನ್ಯಗೊಳಿಸಬಹುದು (ಭಾಧಾನ. ೩೦) ; ಅಂತಿಮರೂಪ ದಲ್ಲಿ ದಂಡಾಜ್ಞೆ ಅವರ ಕೈಸೇರುವ ತನಕ . . . ಮೊಖ್ತಿಯಾರ್ ಸಂಪೂರ್ಣ ಜವಾಬ್ದಾರ (ಪುನರು. ೧೫೭). [ ದಂಡ + ಆಜ್ಞೆ ]

**ದಂಡಾದಂಡಿ** (ನಾ). ಪರಸ್ಪರ ದಂಡದಿಂದ ಮಾಡುವ ಯುದ್ಧ : ಅಚ್ಯುತಂಗಿದಿರಾಗಿ ದಂಡಾದಂಡಿಗನುವಾದ (ನಿಭಾಗ. ೧೦-೭೦-೩೬) ; ತರದಿ ದಂಡಾದಂಡಿ ಕೂಡೆ ಖಡ್ಗಾಖಡ್ಗಿ ಭರದ ಮುಷ್ಟಾಮುಷ್ಟಿ ಕೂಡೆ ಕೇಶಾಕೇಶಿ ಪಿರಿದು ಹಾಣಾಹಾಣಿಯಂತೆ ಹೆಲ್ಲಾಹೆಲ್ಲಿ ಯುದ್ಧಮಾದುದು (ಸಾಳ್ವಭಾ. ೨೫-೧೪) ; ಭರದಿ ದಂಡಾದಂಡಿಯೊಳು ಪಿರಿದು ಕಚಾಕಚಿ ಮುಷ್ಟಾಮುಷ್ಟಿ ಯಿಂದಿರದೆ ಕಾದಿದರತಿಬಳರು (ಅನಂಚ. ೧೮-೫೪) [ ಸಂ. ]

**ದಂಡಾಧಿನಾಥ** (ನಾ). ಸೈನ್ಯದ ನಾಯಕ ; ದಳವಾಯಿ ; ಸೇನಾಪತಿ: 'ದಂಡಾಧಿನಾಥತಿಳಕ' ಪರಾ. [ ದಂಡ + ಅಧಿನಾಥ ]

**ದಂಡಾಧಿನಾಥತಿಳಕ** (ನಾ). ಸೇನಾಪತಿಗಳಲ್ಲಿ ಅಗ್ರೇಸರ; ಶ್ರೇಷ್ಠನಾದ ದಳಪತಿ: ಪರಮಗುಣರತ್ನನೆನಿಸಿದ ಸಿರಿಪತಿ ದಣ್ಡಾಧಿನಾಥತಿಳಕನೆ ಸುಜನಾ ಭರಣನ ಮಯ್ದುನನೆಸೆದಂ (ಸೌಇಇ. XX, ೭೪-೨೦ ; 1112).

[ ದಂಡಾಧಿನಾಥ + ತಿಳಕ (= ತಿಲಕ) ]

**ದಂಡಾಧಿನಾಯಕ** (ನಾ). = ದಂಡಾಧಿನಾಥ : ವಿಜಯಧ್ವಜಮಂ ತನಗೆತ್ತಿಸಿದಂ ದಂಡಾಧಿನಾಯಕಂ (ಸುಕುಮಾ. ೭-೫).

[ ದಂಡ + ಅಧಿನಾಯಕ ]

**ದಂಡಾಧಿಪ** (ನಾ). = ದಂಡಾಧಿನಾಥ : ಸಿದ್ಧದಂಡಾಧಿಪಂ ಹೆಚ್ಚುತಂ ಹಿಗ್ಗುತಂ . . . ಉಬ್ಬುತುಂ (ಬಸರ. ೫-೧೧೯) ; ಬಡಿದು ಕೆಡಹವನಂ ಹಿಡಿದು . . . ಕೊಲ್ಲೆಂಬ ದನಿಗಳು ಪೊಡವಿಯೊಳಗಿಲ್ಲ ಶುಭದಂಡಾಧಿಪನ ಮನೆಗಳಲಿ (ಬಸಪು. ೩೭-೭೦). [ ದಂಡ + ಅಧಿಪ ]

**ದಂಡಾಧೀಶ** (ನಾ). = ದಂಡಾಧಿನಾಥ : ದಂಡಾಧೀಶರಾಲಯಂಗಳ್ ಮೆಱೆಗುಂ (ಜಗವಿ. ೨-೨೨) ; ಅಮೃತದಂಡಾಧೀಶನಂ ಪುಣ್ಯದಿಂ ಪಡೆದಂ ಪದ್ಮಜಂ (ಎಕ. VI, ತರೀಕೆ. ೪೫-೬೩ ; 1196) ; ದಂಡಾಧೀಶರ ಸಚಿವರ ಶೂರರ ತಂಡದಲಂಪಿಂದೆ ಸಭೆಯೆಸೆದುದವನಿಪನ (ಉದ್ಭಟ. ೨-೧೪) ; ನಿಂದಿರೆ ದಂಡಾಧೀಶಂ ಕುಳ್ಳಿರೆ ಮಂತ್ರಿ (ಅನಂಪು. ೧-೫೬).

[ ದಂಡ + ಅಧೀಶ ]

**ದಂಡಾಧೀಶ್ವರ** (ನಾ). = ದಂಡಾಧಿನಾಥ : ಹೆದಱಿ ದಂಡಾಧೀಶ್ವರಂ ಮನಗದಡಿ ಬೊಮ್ಮಯ್ಯಗಳನೀಕ್ಷಿಸಿ (ಬಸಪು. ೩೬-೧).

[ ದಂಡ + ಅಧೀಶ್ವರ ]

**ದಂಡಾಧ್ಯಕ್ಷಕ** (ನಾ). ದಂಡಿಸುವ ಅಧಿಕಾರವುಳ್ಳವನು ; ನ್ಯಾಯಾಧಿಪತಿ : ದಂಡಾಧ್ಯಕ್ಷಕಂ ಪಾಮರಕುಲದೊಳಗೊರ್ವಂ ಬಿಸುಟ್ಟೋಪಳಂ ಮತ್ತಱುದಿಂಗಳ್ ಪೋಗೆ ಕೂಡಿರ್ದಿರವನಱಿದು ದಂಡಕ್ಕೆ ಸರ್ವಸ್ವಮಂ . . . ಬೇಡಲ್ (ಪಂಠಾಮಾ. ೧೫-೭೭ ಅಡಿಟಿ). [ ಸಂ. ]

**ದಂಡಾನ್ವಯ** (ನಾ). ಪದ್ಯಗಳಲ್ಲಿ ಜೋಡಿಸಿರುವಂತೆಯೇ ಅರ್ಥವನ್ನು ಹೇಳುವುದು; ಅನ್ವಯಾನುಸಾರವಾಗಿ ಅರ್ಥವನ್ನು ಹೇಳದೆ, ದಂಡಾಕಾರವಾಗಿ ಪ್ರತಿ ಪದಕ್ಕೂ ಅರ್ಥವನ್ನು ಹೇಳುವುದು : ಹಿಂದೆ ಶ್ಲೋಕಗಳಿಗೆ ದಂಡಾನ್ವಯದಲ್ಲಿ ಅರ್ಥ ಹೇಳುತ್ತಿದ್ದರು (ರೂಢಿ).

[ ದಂಡ + ಅನ್ವಯ ]

**ದಂಡಾಯ** (ನಾ). ಜುಲ್ಮಾನೆಯಿಂದ ಬಂದ ಹಣ,-ಆದಾಯ ; ದಂಡ ದಾಯಂ: ಕಿಱು [ದೆಱೆ ದ] ಣ್ಡಾಯಮೆಂಬಿವು ಮೊದಲಾಗಿ (ಸೌಇಇ. XI-I, ೪೦-೦೩ ; 965) ; ಊರೊಳೇನೊನ್ದು- ಪುಟ್ಟಿದ ದಣ್ಡಾಯಮೆಲ್ಲಂ ಕಿಱಿಗಿ [ ತ್ರಮ್] (ಇಅ. XIX, ೧೬೪-೧೮ ; 1040) ; ಪುರದ ಕೇರಿಯ ಮಣ್ಣಾಳ ದಂಡಾಯಮಾದುದೆಲ್ಲಂ (ಎಕ. VIII, ಸಾಗರ. ೧೦೮-೪೫ ; 1042) ; ಆಯದೆಱೆ ಹಡುವರ ಬೀರವಣ ನಲ್ವೆತ್ತು ನಲುಗಂಟಿ ನಲ್ಲಾಮ ದಣ್ಡಾಯ ತವುಡೆಯೊಳಗಾದ ಸಮಸ್ತ ಕಿಱುಕುಡವೆಲ್ಲವಂ . . . ಧಾರಾ ಪೂರ್ವ್ವಕಂ ಮಾಡಿ (ಎಕ. V, ಬೇಲೂರು. ೫೯-೮೭ ; 1174).

[ ದಂಡ + ಆಯ$_7$ ]

**ದಂಡಾಯುಧ** (ನಾ). ಒಂದು ಬಗೆಯ ಆಯುಧ; ಗದೆ : ಬಾಯುಲಿಡಸಿದ ನಹಿತರನು ದಂಡಾಯುಧದ ನಿಲವಿನಲಿ ಸುಭಟರ ದಾಯಗೆಡಿಸಿದನು (ಕುವ್ಯಾದ್ರೋ. ೧೭-೮). [ ದಂಡ + ಆಯುಧ ]

**ದಂಡಾಲು** (ನಾ). ಒಂದು ಬಗೆಯ ಗೆಡ್ಡೆ : ತೂನಗೆಣಸು, ಮುಡಿಗೆಣಸು, ನೂರೆಲೆಗೆಣಸು, ತುಣಗೆಣಸು, ದಂಡಾಲು (ಮೃಜಿಗಿ. ೩೦-೫೯೩).

[ ? ]

**ದಂಡಾವಳಿ$_1$** (ನಾ). ಒಂದು ಬಗೆಯ ಸೀರೆ; ಕಂಬಿಅಂಚಿನ ಸೀರೆ: ಶಾವಂತಿಯಿರುವಂತಿ ರುದ್ರಗಂಟಿಯನು ದಂಡಾವಳಿಯ ಚಾಪಗಂಟಿಯು . . . ನೇತ್ರಾವಳಿಯು ಮುಖ್ಯ ನಾನಾವಿಧದ ಸೀರೆಗಳ (ನವವೂ. ೧೭-೬೦). 'ಪಟ್ಟಾವಳಿ' ಪರಾ. [ದಂಡ + ಪಳಿ$_5$ (<ಪಟ್ಟಿ$_6$)]

**ದಂಡಾವಳಿ$_2$** (ನಾ). ದಂಡದ ಆಕಾರವಾಗಿರುವ ಅಲಂಕಾರ: ಎಳೆಯ ಪಳುಕಿನ ಶಿಲೆಯೊಳಡಸಿ ಕಟ್ಟಿದ ಕಟ್ಟೆಗಳಲಿ ದಂಡಾವಳಿಯ ಸೂಸಕದ ಪತ್ರತತಿಗಳೊಳೋರಣಂಗೊಳಿಸಿ (ಹಜಕಾ. ೩-೪೦).

[ದಂಡ + ಆವಳಿ$_1$ (= ಆವಲಿ)]

**ದಂಡಾಸನ** (ನಾ). ಒಂದು ಬಗೆಯ ಬಿಲ್ಲು: "ದಂಡಾಸನಂ ತೀರಿ ತದ್ವಳ ಮೆಂದು ಬಿಲ್ಲ ಭೇದಂಗಳಕ್ಕು" (ಮಂಗರಾ. ೮೭-೩೩). [ಸಂ.]

**ದಂಡಾಸ್ತ್ರ** (ನಾ). =ದಂಡಾಯುಧ: ವರುಣನು ವಾರುಣಾಸ್ತ್ರವನ್ನೂ . . . ಯಮನು ದಂಡಾಸ್ತ್ರವನ್ನೂ ಅವನಿಗೆ ಕೊಟ್ಟರು (ವಚಭಾ. ೧೨೭).

[ದಂಡ + ಅಸ್ತ್ರ]

**ದಂಡಾಹತ** (ನಾ). ಕಡೆಗೋಲಿನಿಂದ ಕಡೆದ ಮಜ್ಜಿಗೆ: "ದಂಡಾಹತಂ, ಕಾಲಶೇಯಂ, ಅರಿಷ್ಟಂ, ಗೋರಸಃ – ೪ ಕಡೆದು ತೆಗೆದ ಹಸುವಿನ ಮಜ್ಜಿಗೆ" (ಸಿದ್ಧಾಂತಿ. ೨೪೮). [ದಂಡ + ಆಹತ]

**ದಂಡಾಳು** (ನಾ). ದಂಡಿನಲ್ಲಿ ಕೆಲಸಮಾಡುವ ಮನುಷ್ಯ; ಭಟ; ಸೈನಿಕ; ಯೋಧ: ಅಲ್ಲಿ ಅವನಿಗೆ ಸಹಾಯಮಾಡಲು ಸಾವಿರಾರು ದಂಡಾಳುಗಳಿದ್ದರು (ಯೋಧರು. ೩); ನೀನು ಅರಸನ ದಂಡಾಳಿರಬಹು ದೆಂದು ಊಹಿಸಿದೆ (ಹಾಹುತ್ತ. ೭೮); ಜಮೀನ್ದಾರನು . . . ನಾಲ್ವತ್ತು, ಐವತ್ತು ಮಂದಿ ದಂಡಾಳುಗಳನ್ನಿಟ್ಟಿದ್ದ (ಜಮೀನ್ದಾ. ೭)

[ದಂಡು (<ದಂಡಿ$_3$) + ಆಳು$_3$ (<ಆಳ್$_3$)]

**ದಂಡಿ$_1$** (ನಾ). ೧. ದೊಡ್ಡತನ; ಹಿರಿಮೆ; ಮಹತ್ತ್ವ; ಘನತೆ: ದಂಡಿಯೊಳ್ ಪ್ರಚ್ಛನ್ನವೇಷದ ಖಂಡಪರಶುವೆನಲ್ ಮೆಱೆದು ಕೈ ಕೊಂಡು ಕೌದಿಗಳಂ ಹೊಲಿವ ಕಾಯಕವೆ ತನಗಾಗಿ (ಬಸವು. ೨೩-೩); ಕಂಡು ಪರಮೈಶ್ವರ್ಯಮೂರ್ತಿಯ ದಂಡಿಯನು . . . ದಂಡ ದಂತೀಡಾಡಿದನು ಕಾಯುವನು ಮೇದಿನಿಗೆ (ನಿಭಾಗ. ೬-೪-೩೫); ಪುಂಡರೀ ಕಾಂಬಕನು ಬಳಿಕಲಾಖಂಡಲಾದ್ಯರು ಬಂದ ಕಾರ್ಯದ ದಂಡಿಯನು ಸೂಚಿಸಿದ ಭಕ್ತಿಯೊಳಂಬಿಕಾಸತಿಗೆ (ಅಂಬಿಕಾ. ೧೦-೭೭). ೨. ಶಕ್ತಿ; ಬಲ; ಸಾಮರ್ಥ್ಯ: ಅಂಡಲೆವ ಘನಮೋಹಪಾಶಾಭೇದನಂ ಮಾಳ್ಪ ದಂಡಿ ಯುಳ್ಳೆನ್ನಪ್ಪ ಬಾರಾ (ಬಸವು. ೨೪-೩೯); ಕಂಡನರ್ಜುನ ತ್ರಿಪುರದಹನದ ಖಂಡಪರಶುವೊಲಿರ್ದ ಭೀಮನ ದಂಡಿಯನು ಥಟ್ಟೈಸಿ ಭೂತಗಳೆಡಬಲ ದೊಳಿರಲು (ಕುವ್ಯಾಕ. ೧೯-೬೯); ಕಂಡನಾ ಮಾರೀಚನಾತನ ದಂಡಿಯನು (ಉತ್ತರಾ. ೫-೨೭). 'ಸಮುದಂಡಿ' ಪರಾ. ೩. ಶ್ರಮ; ಪ್ರಯಾಸ: ಕಂಡನಲ್ಲಿ ಮಹಾಸಮುದ್ರವ ಕಂಡುದಿಲ್ಲರಿಪುರವನಾಕ್ಷಣ . . . ದಂಡಿ ಲೇಸಾಯ್ತೆನುತ ಧರಣೀಮಂಡಲಕ್ಕವತರಿಸುತಿದಿರಲಿ ಕಂಡನಾ ತೃಣಬಿಂದು ವನು (ತೊರರಾ. ೫-೧-೨೫). ೪. ಹೆಚ್ಚು; ಮಿಗಿಲು; ಆಧಿಕ್ಯ; ಅತಿಶಯ: ಮುನಿಗಳ್ . . . ಹರಿಸದ ದಂಡಿಯನಿದಿರ್ವಂದು ಮುನಿ ಗಳಂ ಕರೆದೊಯ್ದರ್ (ಹಾಲಾಸ್ಯ. ೧-೧-೩೭); ಎನ್ನ ಕಷ್ಟದ ದಂಡಿಯನು ತಿಳುಹು (ಅನಂರಾ. ೪-೪-೬೮); ಗಂಡನು ಮನೆಗೆ ಬರುವಾಗ್ಗೆ ದಂಡಿಯಾಗಿ ತಿಂದು ಕೂತುಕೊಂಡಳು (ಕಥಾಮಂ. IV, ೧೫). ೫. ಸೆಣಸಾಟ; ಹೋರಾಟ; ಕಾಳಗ; ಯುದ್ಧ: "ದಂಡಿಯೆನಲು ಸೆಣಸು" (ಚತುನಿ. ೧೬೫); "ದಂಡಿಯೆನಲ್ ಸೆಣಸು" (ಭಾರನಿ. ೩೭); ಈ ಕಮಲನೇತ್ರಂಗೆ ಘಡ ನೀನಾಕೆವಾಳನೆ ಶಿವಶಿವಾ ಜಗದೇಕದೈವದ ಕೂಡೆ ದಂಡಿಯೆಯೆಂದನಾ ಭೀಮ (ಕುವ್ಯಾಸ. ೨-೬೪); ಸೀತಾಸುತಂ ಬಂದಪಂ ನಾವಿವನೊಳು ದಂಡಿ ಗಾಱೆವು ನಮ್ಮನೀ ಬಾಲಕಂ ಪಿಡಿದುಕೊಂಡು ಪೋಗಲಿ (ಜೈಮಿಭಾ. ೨೦-೩೭); ಕಂಡಿರೇ ಶಿವದೂತರೆಸಗಿದ ದಂಡಿಯನು (ಅಂಬಿಕಾ. ೫ ೬). ೬. ರೀತಿ; ಬಗೆ: ಕಂಡು ಮಱುಗದೆ ಸೂನೆಗಾಱನ ದಂಡಿಯಲಿ ಮಗನಂ ವಧಿಸಿ (ಬಸವು. ೨೪-೨೦); ಗಂಡಗರ್ವವ ನುಡಿಯೆವೆಮ್ಮಯ ದಂಡಿ ತಾನದು ಬೇಱೆ (ಕುವ್ಯಾವಿ. ೩-೫೨); ಕಂಡವರು ಬೆಱಗಾಗಿ ಬೆಬ್ಬಳ ಗೊಂಡು ನೋಡುತಲಿರ್ದರಾತನ ದಂಡಿಯನು ತಾವೞಿಯಲೞಿಯದೆ ಕೂಡೆ ಜನವೆಲ್ಲ (ಪ್ರಭುಲೀ. ೨೨-೩೮); ಕಂಡದಟ್ಟುಳಿಯಾಯ್ತು ಸುಡುತಿಹ ದಂಡಿ ತಾನಿದು ಹೊಸತು (ಕೌಶಿರಾ. ೩೨-೧೧); ಪಂಡಿತರ್ಗೀವರೊಂದೆರಡು ಪಣವ ಬಲು ಭಂಡಿ ಮುಱಿವ ತೆಱದಿಂದ ಭಂಡರ್ಗೆ ಕೊಡುವರೀ ಕಾಲದ ರಸುಗಳ ದಂಡಿಯವರೊಳೊಳ್ಪಂಟೆ (ಕುರಾಸಾಂ. ೩೫-೮೭); ಪುಂಡರೀಕದ ಕಣ್ಣವನು ನೆಲೆಗೊಂಡನಿಂದೀಕೆಯಲಿ ಮುನ್ನಿನ ದಂಡಿ ಯಲ್ಲಿದು ಹೊಸತೆನುತ ಕಳವಳಿಸುತಿಂತೆಂದ (ನಿಭಾಗ. ೧೦-೩-೬); ನುತತಾಳ ಕ್ರಮ ದಂಡಿದಪ್ಪದೆ ಸುಧಾಮಾಧುರ್ಯದಿಂ ಪಾಡಿದರ್ (ಯಾದಚಂ. ೧೩-೮೭). ೭. ಸಮ; ಸಾಟಿ: ಹುರಿಗೊಂಡುದಾತನ ಸತ್ವವಾತನ ದಂಡಿ ಯಲಿ ಬಹರಾರು ಸುರ ನರ ನಾಗಲೋಕದಲಿ (ಕುವ್ಯಾಗ. ೪-೬). 'ದಂಡಿ ಕಾಱ' ಪರಾ. ೮. ಛಲ; ಹಠ: ಗಂಡನಂತಕಪುರಕೆ ಹೋಗಲು ರಂಡೆ ಪುತ್ರನ ಪಡೆವೆನೆಂದಾ ದಂಡಿಯಲಿ ಕಾಳಿಂದಿತೀರದಲಧಿಕ ತಪಸುಗಳ ಕೊಂಡೆಸಗೆ (ಸಂಭಪು. ೨೭-೮೨); ದಂಡಿಯೊಳೇಗಳುಂ ಪ್ರಾಣಕಾಂತನಪ್ಪಿ ಕೊಂಡಿರಿ ತೊಲಗ ಬೇಡೆನುತೆ ಮಿಂಡಿಯರಿಗೆ ಬುದ್ಧಿಗಲಿಸುವಂತೆಲೆವಳ್ಳಿ ಮುಂಡಿಗೆಗಳನಡರಿದುವು (ಮೋಹತ. ೨೪-೫೩).

[ದೇ.॥ ತಮಿ. ತಣ್ಟಿ; ತೆಲು. ದಂಡಿ]

**ದಂಡಿ$_2$** (ನಾ). ದುರ್ಗೆ; ಪಾರ್ವತಿ: ಮಂಡಲತ್ರಯನಿಳಯೆ ದಂಡಿ ಜಯದುರ್ಗಿ ಫಣಿಕುಂಡಲೆ ಮಹೇಶ್ವರಿ (ಕೈವಲ್ಯ. ೧-೬-೩).

[ದಂಡ + –ಇ$_2$]

**ದಂಡಿ$_3$**, ದಂಡು, ದಂಡೈ (ನಾ). ೧. ಕೋಲು; ದಡಿ. 'ದಂಡಿವಲೆ' ಪರಾ. ೨. ವೀಣೆ, ತಂಬೂರಿ ಮೊದಲಾದುವುಗಳ ದಂಡ; ದಂಡಿಗೆ: ಪ್ರಾಚೀನ ವೀಣೆಗಳು ನಾನಾರೂಪಗಳಲ್ಲಿ ಕಂಡುಬಂದರೂ ಮುಖ್ಯವಾಗಿ ಬಿದಿರು ಅಥವಾ ಬೊಂಬಿನ ಉದ್ದವಾದ 'ದಂಡಿ'ಯನ್ನು ಹೊಂದಿ . . . 'ಮೇರು'ಗಳ ಮೇಲೆ ಹಾದುಹೋಗುವ ತಂತಿಗಳನ್ನು ಹೊಂದಿದ್ದವು (ಸಂಗೀತಂ. ೩೦೦). ೩. ತುಡುಗುದನಗಳ ನಡಗೆಯನು ವೇಗವನ್ನು ಕುಗ್ಗಿಸಲು ಅವುಗಳ ಕೊರಳಿಗೆ ಕಟ್ಟುವ ಮರದ ತುಂಡು; ಗುದ್ದಿ: ಆ ಕೆಂದ ಹಸುವಿಗೆ ದಂಡಿ ಹಾಕದೆ ಹೊರಗೆ ಬಿಡಬೇಡಿ (ರೂಢಿ). ೪. ತಕ್ಕಡಿಯ ಕೋಲು. 'ಅಡ್ಡದಂಡಿ' ಪರಾ. ೫. ಕೆತ್ತುವ ಆಯುಧ; ಬಾಚಿ: "ದಂಡಿಯೆನೆ ಬಾಚಿಯಕ್ಕುಂ" (ಮಂಗರಾ. ೧೧೩-೮).

**ದಂಡು:** ೧. ತೆಱದ ಮೊಗಂ ಬಾಗಿದ ಬೆನ್ . . . ಊಱುವ ದಂಡು ವೆರಸು ಬರ್ಪನನಾಗಳ್ . . . ನೋಡಿ ಕಂಡು (ಜೀವಸಂ. ೨೦೮-೫೩); ಕೊಂಡನವಂ ತಪಮಂ ಗೆಡೆಗೊಂಡಿರೆ ದಂಡು ಬೂದಿ ಸೊರೆ ರುದ್ರಾಕ್ಷಂ (ಪಾರ್ಶ್ವಪು. ೪-೩೭). ೨. ದಂಡಿನಲಿ ತರುದೋಷ ನಾರಾಚ ಹರಿದ ದೋಷವಿದೆಂದು ತಂತಿಗೆ ಪಿರಿದು ದೋಷವನೊರೆದು (ಸಾಳ್ವಭಾ. ೧೪-೧೦). ೬. ವಟು, ಸಂನ್ಯಾಸಿ ಮೊದಲಾದವರು ಹಿಡಿದಿರುವ ಕೋಲು; ದಂಡ: ಕೊರಲ ಜನ್ನಿವರಂ ಕೊಡೆ ದಂಡು ಕೋವಣಂ ಕರಮೆಸೆ ಯುತ್ತಿರಲ್ಕೆ ಗಗನಾಂಗಣದಿಂದಿೞಿತಂದಂ . . . ನಾರದಂ (ಶಾಂತೀಶ್ವ. ೭-೯೫). ೭. ಪಡೆ; ದಳ; ಸೈನ್ಯ: ಕೀಚಕನೆಂಬಂ ಸುಯೋಧನನ ದಂಡೆಲ್ಲಮನಿಱಿದೋಡಿಸಿ (ಪಂಪಭಾ. ೮-೫೮ ವ); ದಂಡಿಂಗೆ ಪೋಪೆನೆಂದೆನೆ ಗಂಡಂ ನವಯುವತಿ ಭೀತಿಗೊಂಡಳ್ ಕೇಳ್ದು (ಪಾರ್ಶ್ವಪು. ೩-೧೫); ದಂಡು ನಡೆಯಲಿ ನಿಷಧಪುರಿಗಾ ಭಂಡನೃಪ ಪುಷ್ಕರನ ಮಾತೇನಂಡಲೆದು ಫಲವಿಲ್ಲ (ನಳಚ. ೯-೧೭); ಸೊಗಸುವ ಕೊಲ್ಲಾರಬಂಡಿಯ ಲೆಕ್ಕವ

ಬಗೆವನಾರಾ ದಂಡಿನೊಳಗೆ (ಕಂನವಿ. ೧೧-೩೩); ದಂಡಿನಲ್ಲಿ ಸೋದರಮಾವನೇ (ಗಾದೆ). **೮.** ಗುಂಪು; ಸಮೂಹ: ಕರಿರಥತುರಗಚರಣೋಚ್ಚಲಿತ ಧೂಳಿಯ ದಂಡು ನಡೆದುದು ಸೂರ್ಯಮಂಡಲಕೆ (ಕುವ್ಯಾದ್ರೋ. ೧೧-೫); ಇವೆರಡು ತಂಡಗಳ ಮಧ್ಯೆ ಇರುವ ವಿಶಾಲವಾದ ಪ್ರದೇಶದಲ್ಲಿ ಸಣ್ಣಸಣ್ಣ ಉಪಗ್ರಹಗಳ ದಂಡೇ ಇರುವುದು (ಜ್ಯೋತಿರ್ವಿ. ೧೦೧); ಮಿಡಿತೆ ದಂಡು ಬಿದ್ದ ಬೆಳೆಯೆಲ್ಲಾ ಹಾಳು (ಗಾದೆ); ದಂಡಿಗೆ ದಂಡೇ ಬಂತು (ರೂಢಿ). **೯.** ಸೈನ್ಯ ಇರುವ ಸ್ಥಳ; ಲಷ್ಕರು: ದಂಡಿನಲ್ಲಿರುವ ಯುನೈಟೆಡ್ ಥಿಯೋಲಾಜಿಕಲ್ ಕಾಲೇಜಿನ ಗ್ರೀಕ್ ಅಧ್ಯಾಪಕ (ಅಂತಿಗೊ. VII ಮುನ್ನುಡಿ); ಬೆಂಗಳೂರು ದಂಡು (ರೂಢಿ).

**ದಂಡೆ$_3$:** **೧೦.** ಒಂದು ಬಗೆಯ ಅಂಗಸಾಧನೆ; ಎರಡು ಅಂಗೈಗಳನ್ನೂ ನೆಲಕ್ಕೆ ಊರಿ ಮಂಡಿಯನ್ನು ನೆಲಕ್ಕೆ ಊರದೆ ಮೂಗನ್ನು ನೆಲಕ್ಕೆ ಮುಟ್ಟಿಸಿ ಮಾಡುವ ವ್ಯಾಯಾಮ; ಸಾಮು: ದಿನವೂ ತಪ್ಪದೆ ಬಸ್ಕಿಗಳನ್ನೂ, ದಂಡೆಗಳನ್ನೂ ಹಾಕುತ್ತಿದ್ದರು (ಸಂಗೀತ. ೬೬); ನೂರುಗಟ್ಟಲೆ 'ದಂಡೆ' ಹೊಡೆದು ಬಟ್ಟೆ ಒಗೆದುಕೊಂಡು (ದಯ್ಯಮ. ೧೧). **೧೧.** ಮಲ್ಲಯುದ್ಧ ಮೊದಲಾದ ಸಂದರ್ಭದಲ್ಲಿ ಹಾಕುವ ಒಂದು ಬಗೆಯ ವರಸೆ,-ಪಟ್ಟು: ಸೆಱಗಂ ಪಾರ್ವುದೆ ಗಂಡಂ ಶರೀರ ಸಂಸಾರ ಭೋಗ ನಿರ್ವೇಗಂಗಳ್ ದೊರೆಕೊಳುತೆ ಪರಿಗ್ರಹಮಂ ಪರಿಹರಿಪುದು ಕಲಿಯ ದಂಡೆಯಂ ತೂಂಕುವವೋಲ್ (ಅಜಿಪು. ೨-೧೧೪); ಸೆಱಗಂ ಬೆಱಗಂ ಬಗೆಯದೆ ಪೊರೆಯಿಲ್ಲದೆ ಕಲಿಯ ದಂಡೆಯಂ ತೂಂಕಿದವೋಲ್ (ಗದಾಯು. ೨-೨೨); ಪೊಱಮಡೆ ಕಂಡು ಗಂಡು ಮಿಗೆ ದಂಡೆಯನಿತ್ತು ಕಱುತ್ತು ಪತ್ತೆ ಸಾರ್ದುಱದೆ ನಿಲುತ್ತೆ (ಗಿರಿಕ. ೧-೯೮); ಬೆಮರನಾಱಿಸಿಕೊಂಡು ವಿಗತಶ್ರಮನು ಮೊಳಕಾಲಿಕ್ಕಿ ದಂಡೆಯೊಳಮರಿ ದೇಹವ ಬಲಿದು ವಕ್ಷದೊಳೌಂಕಿ ಗಾಢದಲಿ (ಕುವ್ಯಾಅ. ೧೪-೧೧); ತುಡುಕಲೀಯದೆ ತಿರುಗಿದರು ಗಡಬಡಿಸಿ ದಂಡೆಯೊಳೊತ್ತಿದರು ಸಮಚಡಿಸಿ ನಿಂದರು (ಕುವ್ಯಾಸ. ೨-೯೫); ಕೋಪದಿಂ ಪೋಪ ಪೆರ್ಬುಲಿಯಂ ದಂಡೆಯೊಳಾಂತು ನೂಂಕಿ ತಿವಿದಂ ವಿಕ್ರಾಂತಕಂಠೀರವಂ (ಕಾವ್ಯಸಾ. ೧೧೦೬); ಹೊಡಿದನು ದಂಡೆಯನು ವಹಣಿಯ ಮಾಡುತವೆ ಚಾಣೂರ ಮಲ್ಲನು (ಸಾಳ್ವಭಾ. ೨೨-೬೫); ದರ್ಪಕ ದೈತ್ಯವಲ್ಲಭನೊಳಗಿದಿರಾಂತು . . . ದಂಡೆಯ ಹೂಡಿ ನಿಂದಿರುವೊಪ್ಪವನೇನ ಬಣ್ಣಿಪೆನು (ಮೋಹತ. ೧೨-೮೪); ಗರ್ಜಿಸುತ್ತಿರ್ಪ ಬಗ್ಗದ ಬಲ್ಗಂಡಿಕೆಗಂಡು ಗಂಡುಗಲಿ ಬೇಡಂ ದಂಡೆಯಂ ಕೊಂಡು ನಿಂದು (ರಾಜಶೇ. ೫-೯೯). **೧೨.** ಬಿಲ್ಲನ್ನು ಹಿಡಿದು ಮುಂದಕ್ಕೆ ನೀಡುವ ಎಡಗೈ; ಬಿಲ್ಲನ್ನು ಹಿಡಿಯುವ ಒಂದು ವರಸೆ: "ಬಿಲುವಿಡಿದು ನೂಂಕುವ ಕರಂ ದಂಡೆ[ಪಾಠಾಂ. ನೂಂಕುವಂ ಕರದಂಡೆ]ಯಕ್ಕು" (ಮಂಗರಾ. ೮೮-೩೬); ಪೆರ್ಬುಲಿ ಪಾಯ್ದುಗಿಯಲ್ಕೆ . . . ನುರ್ಗಿದ ದಂಡೆಯ ಭಂಗಿ ರೌದ್ರಮಾಗಿರೆ . . . ಬರುತಿರ್ದನ ದೊರ್ವ ಲುಬ್ಧಕಂ (ಜಗವಿ. ೧೬-೨೧); "ಮಂಂಗಯ್" (ಅಯ್ಯಾಶಾ); ಪಸರಿಸಿ ಪರ್ಬಿದ ನೀಡಡಿ ಕುಸಿದಂಗಂ ನೀಳ್ದ ದಂಡೆ ನೆಗೆದ ಭುಜಾಗ್ರಂ . . . ಎಸೆದಿರ್ದುವು ದೃಷ್ಟಿ ಮುಷ್ಟಿ ಶರಸಂಧಾನಂ (ಗಿರಿಕ. ೮-೨೮). **೧೩.** ಒಂದು ಬಗೆಯ ಆಯುಧ: ಕೊಡತಿ ಕರವತಿಗೆ ಕೂಳಿಕ್ಕವಡ ದಂಡೆ ಕಯ್‍ಹೊಡೆಯಿಟ್ಟಿ ಗೂಡುಗಳು . . . ಸಿಂಹಪ್ರಕರವೆರಸಿ ಬೇಡರು ನೆರೆದರು (ಹಚಕಾ. ೫-೯). **೧೪.** ಗುರಾಣಿ; ಹರಿಗೆ: ಶ್ರೀನಾಗತಿ ಆಳ್ದನ ದಣ್ಡೆ (ಎಕ. II, ೪೫೨-೧; 1000); ಶ್ರೀಬಾಸನಣ್ಣನ ದಣ್ಡೆ (ಎಕ. II, ೪೫೩-೧; 1000); ವೆಂಗಿಮಣ್ಡಳೇಶ್ವರನುದಾರಮಹೇಶ್ವರನಯ್ಯನ ದಣ್ಡೆ ಶ್ರೀವಿಷ್ಣುವರ್ಧನಮಹಾರಾಜವಿಜಯಾದಿತ್ಯದೇವರ್ (ಎಕ. XI, ದಾವಣ ೧೧-೧೨; 1066); ದ್ರೋಣನ ಬಲುಸರಳ ಸರಿವಳೆಗೆ ದಂಡೆಯ ನೊಡ್ಡಿ ದಳವುಳಿಸಿ ... ಭೀಮ ಬೊಬ್ಬಿಱಿದು (ಕುವ್ಯಾದ್ರೋ. ೧೩-೧೨).

**ದಂಡಿಂ ಮುತ್ತಿಱಿವೊಂ** = ಸೈನ್ಯಕ್ಕಿಂತ ಮುಂದಾಗಿ ಇರಿಯುವವನು: ಒಂದು ಬಿರುದು: ಅಕಳಂಕಮಹೇಶ್ವರಂ ದಣ್ಡಿಂ ಮುತ್ತಿಱಿವೊಂ ಶ್ರೀಮತ್ ನರಸಿಂಗಯ್ಯ ನರಸಿಂಗೇಸ್ವರವ್ಮಾಡಿಸಿ ಮಣಲೇವಾಡಿಯನ ಭ್ಯನ್ತರ ಸಿದ್ಧಿಯಾಗೆ ಬಿಟ್ಟಂ (ಎಕ. XIV, ಮೈಸೂರು. ೧೨೬-೫; ಸು. 900). ⓟ ಇದು 'ದಂಡಿಂ ಮುಂತಿಱುವೊಂ' ಎಂಬುದರ ಅಪಲಿಖಿತವಿರಬಹುದು. **ದಂಡಿನ ಗೋವ**=ಸೈನ್ಯವನ್ನು ಸಂರಕ್ಷಣೆ ಮಾಡುವವನು; ಒಂದು ಬಿರುದು: ಪಡೆದು ಸಲೆ ದಂಡಿನ ಗೋವನೆಂಬುದು ಬಂಟರ ಬಲ್ಲಹಂ (ಇಅ. XII, ೯೬-೨೦; 1187); ದಂಡಿನ ಗೋವ ಕುಪ್ಪದೇವರಸರು ಪುಲಿಗೆ[ಱೆ]ಮೂನೂಱು . . . ನೂಱನಾಲ್ವತ್ತನಾಳುತ್ತಮಿದ್ರ್ದು (ಸೌಇಇ. XI-i, ೩೦-೧೧; ಸು. 12ನೆಯ ಶತ); ನಿಗಳಂಕಮಲ್ಲ ದಂಡಿನ ಗೋವ (ಎಇ. XXXVII, ೨೨; 12ನೆಯ ಶತ). **ದಂಡಿನ ಸ್ಥಳ**=ಸೈನ್ಯವನ್ನು ಇಟ್ಟಿರುವ ಪ್ರದೇಶ; ಪಾಳ್ಯ; ಸೈನ್ಯವನ್ನು ಇಟ್ಟಿರುವ ಪಟ್ಟಣ ಅಥವಾ ಪಟ್ಟಣದ ಭಾಗ: ಕಂಟೋನ್ಮೆಂಟು, ಜಲಂಧರ್, ಅಮೃತಸಾರಿಗೆ ಆಗ್ನೇಯ, ದಂಡಿನ ಸ್ಥಳ (ಭೂಗೋಳ. ೬೦). **ದಂಡಿನಾಳ್** = ದಂಡಿನವನು: ಕುಂಬಾಱಿರ್ ಸಂಚಳಮಿಲ್ಲದ ದಂಡಿನಾಳಂತೆ ಬೆರ್ಚೆ (ಧರ್ಮಾಮ್ಯ. ೨-೬೯). **ದಂಡಿನಾಳಿಕೆ** = ದೇಶದಲ್ಲಿ ದಂಗೆ, ಗೂಂಡಾಗಿರಿ ಮುಂತಾದ ವಿಶೇಷಕಾಲಗಳಲ್ಲಿ ನಡೆಯುವ ಸೈನಿಕ ಸರ್ಕಾರ; ಸೈನ್ಯಾಧಿಕಾರಿಗಳಿಂದ ನಡೆಸಲ್ಪಡುವ ರಾಜ್ಯಾಡಳಿತ: "ದಂಡಿನಾಳಿಕೆ, ಸೇನಾಪ್ರಭುತ್ವ, ಸೈನಿಕಶಾಸನ" (Martial Law. ಪತ್ರಿನಿ. ೫೩). **ದಂಡಿನೊಕ್ಕಲ್** = ದಂಡಿಗೆ ಸೇರಿದವರು; ಸೈನ್ಯದವರು: ದಂಡಿನೊಕ್ಕಲುಂ ತಳದೊಕ್ಕಲುಂ ದೆವಸವಳವೆಂಣೆಗಾಣದಲ್ಲಿ ಸೊಳಸವೆರಡು (ಎಇ. XX, ೧೨-೪೮; 1167). **ದಂಡುಗಲಿ** = ಶತ್ರುಸೈನ್ಯವನ್ನು ಕಲಕುವವನು,-ಮರ್ದಿಸುವವನು,- ಸದೆಬಡಿಯುವವನು; ಒಂದು ಬಿರುದು: ಶ್ರೀಮಂ ಮಹಾಸಾಮಂತಾಧಿಪತಿ ದಂಡುಗಲಿ ಸಿತಗರಗಂಡ . . . ಚಿಕ್ಕಬೊಂಮಯ್ಯನಾಯಕರು ನಿಡುಗಲ್ಲ ರಾಜ್ಯವನಾಳುತ್ತಿದ್ರ್ದು (ಸೌಇಇ. IX-i, ೩೫೯-೧೦; 1340). **ದಂಡು ಮಾಡು** = ಸೈನ್ಯವನ್ನು ತೆಗೆದುಕೊಂಡು ಹೋಗು; ದಂಡಯಾತ್ರೆ ಮಾಡು; ಮುತ್ತು: ದಂಡುಮಾಡಿದ ನೃಪರ ತಂತವ್ಮ ನಾಡಿಗೆ ಕಳುಹ ಚಿತ್ತೈಸು (ಭರಚ. ೫೩-೬೯). **ದಂಡುಹೋಗು** = ದಂಡುಮಾಡು: ಶ್ರೀವೀರ ಬುಕ್ಕರಾಯನು ಒರಗಲ್ಲದೇಸಕ್ಕೆ ದಂಡುಹೋದಲ್ಲಿ (ಎಕ. XII, ಚಿಕ್ಕನಾ. ೧೫-೩; 1384). [ <ಸಂ. ದಂಡ ]

**ದಂಡಿ$_4$** 'ದಂಡಿಗೆ' ನೋ.

**ದಂಡಿ$_5$** (ನಾ). ೧. ದಂಡವನ್ನು ಕೈಯಲ್ಲಿ ಹಿಡಿದುಕೊಂಡಿರುವವನು; ಕಟ್ಟಿಗೆಕಾರ; ವೇತ್ರಧರ; ಬಾಗಿಲು ಕಾಯುವವನು; ದ್ವಾರಪಾಲಕ; ಮಹಾರಾಜರು ಮೊದಲಾದವರ ಮುಂದೆ ದಂಡ ಹಿಡಿದುಕೊಂಡು, ಆಗಮನವನ್ನು ಸಾರುತ್ತಾ ದಾರಿ ಬಿಡಿಸುತ್ತಾ ಹೋಗುವ ರಾಜಭಟ: "ಕಟ್ಟಿಗೆಯವಂ ವೇತ್ರಧರನುತ್ಸಾರಕಂ ದಂಡಿಯಕ್ಕು" (ಮಂಗರಾ. ೭೯-೪). **೨.** ಆಶ್ರಮೋಚಿತವಾದ ದಂಡವನ್ನು ಹೊಂದಿರುವವನು; ಬ್ರಹ್ಮಚಾರಿ; ಸಂನ್ಯಾಸಿ: ನರ್ತ್ತಕ ನಟಕ ಪರೀತ ಗಾಯಕ ದಂಡಿ ಮುಡಿ ಸಿಖಂಡಿ ಸೋಡಸ ಯಾಚಕಜನಪ್ರಮುಖ್ಯ ದೀನಾನಾಥದರಿದ್ರತಿಮಿರಹರಣದಿವಾಕರ ಸರಣಾಗತಕ್ರಿಪಾಕರ (ಸೌಇಇ. XV, ೧೯೧-೧೬; 1257). 'ಏಕದಂಡಿ', 'ತ್ರಿದಂಡಿ' ಪರಾ. ೩. ದಂಡಾಯುಧವನ್ನು ಧರಿಸಿರುವವನು; ಯಮ. ೪. ಸಂಸ್ಕೃತ ಭಾಷೆಯಲ್ಲಿ 'ಕಾವ್ಯಾದರ್ಶ' ಮೊದಲಾದ ಗ್ರಂಥಗಳನ್ನು ಬರೆದ ಕವಿ: ಮೊದಲೊಳ್ ದಂಡಿಕವೀಶ್ವರಂ ದಶಕುಮಾರಾಖ್ಯಾತ ಚಾರಿತ್ರಮಂ ಪದೆಪಿಂ ಸಂಸ್ಕೃತಭಾಷೆಯಿಂ ರಚಿಸಿದಂ (ದಶಕು. ೧-೧೬). **[ಸಂ. ದಂಡಿನ್]**

**ದಂಡಿಕಾಱ** (ನಾ). ಸಮಾನನಾದವನು ; ಸಾಟಿಯಾದವನು : ನೀಲ ಶೈಲದ ದಂಡಿಕಾ [ಪಾಠಾಂ. ಗಾ]ಱನ ದೇಹಗರ್ತದ ರಕ್ತ ನಿರ್ಜರದ . . . ಬಿಡುವುಂಡೆಗೆದಱಿದ ಖಳನ ಕಂಡುದು ಭೂಸುರವ್ರಾತ (ಕುವ್ಯಾಅ. ೧-೩೩).
[ ದಂಡಿ$_1$ + – ಕಾಱ ]

**ದಂಡಿಕೆ** (ನಾ). ೧. ಕೋಲು ; ದೊಣ್ಣೆ. ೨. ಸಾಲು ; ಪಂಕ್ತಿ ; ಶ್ರೇಣಿ. ೩. ಹಗ್ಗ ; ರಜ್ಜು. ೪. ಮುತ್ತಿನ ಸರ,–ಹಾರ. [ ಸಂ. ದಂಡಿಕಾ ]

**ದಂಡಿಕೋಲು** (ನಾ). ವಟು, ಸಂನ್ಯಾಸಿ ಮೊದಲಾದವರು ಹಿಡಿದು ಕೊಳ್ಳುವ ಕೋಲು ; ದಂಡ : ಶಿವನು ಅನ್ಯಶಬ್ದವ ಕೇಳಲೊಲ್ಲದ ಭಕ್ತೆಯ ಮನವ ನೋಡುವೆನೆಂದು ಕಂತೆ ಕಮಂಡಲ ದಂಡಿಕೋಲು ಗುಂಡುಗಪ್ಪರವೆರಸಿ ಭಿಕ್ಷುಕಮೂರ್ತಿಯಾಗಿ ಬಂದು ಸತ್ಯಕ್ಕನ ಮನೆಯ ಮುಂದೆ ನಿಂದಿರಲು (ಭೈರಸೂ. ೩೮೦).
[ ದಂಡಿ$_5$ + ಕೋಲು$_1$ (<ಕೋಲ್$_1$) ]

**ದಂಡಿಗ** (ನಾ). ದಂಡಾಳು ; ಸೈನಿಕ ; ಯೋಧ : ಪೊಱೆವ ದಂಡಿಗರನ್ನಿಱಿವ ವಿಕ್ರಮೋತ್ತುಂಗ (ಸೌಇಇ. IX-1, ೧೨೮-೯ ; 1059) ; ಭೂರಿ ಬಾಣದ ಹಿಂದು ತಱಿದುವು ಹೊಗುವ ದಂ [ ಪಾಠಾಂ. ಗಂ ]ಡಿಗರ (ಕುವ್ಯಾಅ. ೧೮-೪೧). [ ದಂಡು (<ದಂಡಿ$_3$) + – ಇಗ ]

**ದಂಡಿಗಾಯಿಗ** (ನಾ). ಒಬ್ಬಾತನ ಹೆಸರು: ದಣ್ಡಿಗಾಯಿಗಜ್ಜ ಕುರುವಬ್ಬೆಗ ಪುಟ್ಟಿದ ಮಗ ದಸವವರ್ಮ್ಮಗಾಯಿಗಂ (ಎಕ VIII, ಸೊರಬ. ೫೭೦-೧೪ ; 951). [ ? ]

**ದಂಡಿಗೆ, ದಂಡಿ$_4$** (ನಾ). ೧. ಕೋಲು ; ಬಡಿಗೆ; ದಂಡ: ಉಪಕರಣಮಂ ಬಿಸುಟು ದಂಡಿಗೆಯನಿರದೆ ನೆಲಕಪ್ಪಳಿಸೆ ಗುರುಬಸವನಾ ನಾಗಿದೇವರೊಡ ನಿಂತೆಂಬನು (ಚಬಪು. ೭೩-೦೫). ೨. ವೀಣೆ ಮುಂತಾದ ತಂತೀವಾದ್ಯ ಗಳಲ್ಲಿ ಬುರುಡೆಯಿಂದ ಬೇರೆಯಾದ ಭಾಗ : ತಳದ ಕಡುಗೆಂಪು ಪುದಿದವ್ವಳಿಸಿರೆ ಸುರಯುವತಿ ಮಧುರತಂತ್ರೀನಾದಂ ಕೊಳೆ ಬೀಣೆಯ ದಂಡಿಗೆಯುಂ ತಳಿತರ್ದೆಂಬೊಂದು ಶಂಕೆಯಂ ಪುಟ್ಟಿಸಿದಳ್ (ಆದಿಪು. ೭-೨೧ ; ವನರುಹನಾಳಂ ದಂಡಿಗೆ [ಪಾಠಾಂ ದಂಡಂ] . . . ವನರುಹ ಸೂತ್ರಂ ತಂತ್ರಿಗಳೆನೆ ಶಿವನಂ ಜಾಣೆ ವೀಣೆಯಂ ಕೇಳಿಸುವಳ್ (ಗಿರಿಕ. ೩-೯೮). ತೊಳಪ ವೀಣೆಯನಚ್ಚರಸಿಯೋರ್ವಳು ಪಿಡಿದು ಬಾಜಿಸಲು ದಂಡಿಗೆ ತಳಿತುದೋಯೆನಿಸಿದುದು ಕೆಂದಳದೊಂದು ಕೆಂಪಿನಲಿ (ಸಾಳ್ವಭಾ. ೩೨-೨೮). ೩. ದಂಡದಿಂದ ಕೂಡಿದ ತಂತೀವಾದ್ಯ ; ವೀಣೆ, ತಂಬೂರಿ ಮೊದಲಾದುವು : "ತತ, ವೀಣಾದಿಕೆ ವಾದ್ಯ=ತಂತ್ರಿಯ ಕಟ್ಟಿ ಬಾಱಿಸುವ ದಂಡಿಗೆ ಬ್ರಹ್ಮಕಂಕಣ ಮೊದಲಾದವು" (ನಾಚಿರಾ. ೬) ; ಎನ್ನ ಕಾಯವ ದಂಡಿಗೆಯ ಮಾಡಯ್ಯ (ಬಸವ. ೫೦೦) ; ಪಾಡಿದರು . . . ಮಾನಿನಿಯರು ಗಳೋರಣಂಗೊಂಡು ಮಣಿಖಚಿತ ಕಾನಕದ ದಂಡಿಗೆಯ ನುಡಿಸುತ್ತ ಪೊಸ ತಾನಮಾನ ಗಂಧರ್ವಕಿನ್ನರಸತೀಸಂಕುಳದ ಗಾನವಂ ಕೀಳ್ಪಡಿಸಲು (ಸೌಂದಪು. ೮-೪) ; ದಂಡಿಗೆ ಬೆತ್ತ ಹಿಡಿಯುವುದಕ್ಕೆ ಮಂಡೆ ಮಾಚಿ ನಾಚುತಿದ್ದೆ ಹೆಂಡತಿ ಸಂತತಿ ಸಾವಿರವಾಗಲು ದಂಡಿಗೆ ಬೆತ್ತ ಹಿಡಿಸಿದಳಯ್ಯ (ಪುರಂದ. ೦-೯೫-೦) ; ದಂಡಿಗೆ ಶಂಖ ತಾಳ ತಂಬೂರಿ ಜಾಂಗಟೆಯುಗೊಂಡು ನಿನ್ನುಯ ಪರಮ ಪ್ರೀತ್ಯರ್ಥ ದಾಸರು . . . ಕೊಂಡಾಡೆ ಶಬ್ದ ಪ್ರತಿಶಬ್ದ ವಾಗುತಿದೆ (ವಿದಾಕ್ಕೆ. ೯೨-೬). ೪. ತಕ್ಕಡಿಯ ಕೋಲು; ತುಲಾದಂಡ: "ದಂಡಿಗೆ—ತಕ್ಕಡಿಯ ಕೋಲು" (ಜಾನಕೋ. ೩); ಯಾವುದೊಂದು ಪರಡಿ ಯೊಳಗಿನ ತೂಕವು ಸ್ವಲ್ಪ ಹೆಚ್ಚಾದರೆ ಅದರ ಕಡೆಯ ದಂಡಿಗೇ ತುದಿಯು ಕೆಳಗಾಗಿ ಮುಳ್ಳು ಡೊಂಕ ನಿಲ್ಲುವದು (ಮುಂಬಯಿ. ೫-೫೫). ೫. ಕೊರಳಿನ ಮೂಳೆ ; ಜತ್ರು : ಜತ್ರೋಃ = ದಂಡಿಗೆಯ ಎಲುವುಗಳ ಊರ್ಧ್ವಂ (ಬಾಹಟೀ. ೨-೪-೮ ವ) ; ದಂಡಿಗೆಯಸ್ತಿಯ ತೆಗೆದು ಕೋಲನೆ ಮಾಡಿ (ಅನುಭವಶಿಖಾಮಣಿ. ೬. ೧೧-೧೨-೦೫). ೬. ಮುತ್ತಿನ ಸರ,–ಹಾರ : ಗೆಂಡೆವಿಸಾನಂ ತಂದವಂಗೆ ದಂಡಿಗೆಯನಿಕ್ಕುವರ್ (ಚಿಕವಂ. ೭-೭). ೭. ಅಂದಣ ; ಮೇನಾ : "ದಂಡಿಗೆಯೆನಲ್ಕಂದಣದ ಪೆಸರಪ್ಪುದು" (ಕಶರ. ೧೨೪) ; ಗುಡಿಯ ಗೂಂಟಕ್ಕೆ ಬಲ್ಲಡವಿಗಳುಂ ದಂಡಿಗೆಗೆ ವೇಣು ವನಂಗಳುಂ . . . ಆ ಪಡೆಗೆ ನೆಱೆಯವೆನಿಸಿ (ಪಂಪಭಾ. ೯-೧೦೪) ; ಕರಣಂ ಕಳೆಯೇಱೆ ಸಿರಿವೊಗಂ ಸಂಪದವೇಱೆ ದಂಡಿಗೆಯಿಂ ಘಳಿಲನಿಳಿದು (ಬಸರ. ೧೦-೦೫) ; ಸುಭಟರ ಮೇಳದಲಿ ಬಂದಿಳಿದು ದಂಡಿಗೆಯಿಂದ ನಸುನಗುತೇಱಿದನು ರಥವ (ಕುವ್ಯಾಕ. ೮-೨೩) ; ತರಿಸಿದನು ದಂಡಿಗೆ ಯೊಳಗೆ ಕುಳ್ಳಿರಿಸಿ ಸತಿಯರ ಗಡಣದಲಿ ಮಂದಿರವ ಹೊಱವಂಟರಸ ನೇಱಿದ ಗಜದ ಕಂಧರವ (ನಳಚ. ೭-೪೦) ; ದಂಡಿಗೆ ಪಲ್ಲಕ್ಕಿ ಬೊಕ್ಕಸ ಬಂಡಾರ ಖಂಡಿತವಾಗಿ ತುಂಬಿದರು (ಮೋಹತ. ೩೭-೪೦); ಪಲ್ಲಕ್ಕಿ ದಂಡಿಗೆಗಳ ಮೇಲೆ ತಮ್ಮಯ ವಲ್ಲಭೆಯರು ಬರುತಿರಲು (ಕಂನವಿ. ೧೧-೩೨) ; ಏಱೆ ಕನಕದಂಡಿಗೆಯಂ . . . ಸಾರಿದನಾ ರಾಯ ಬೀದಿಯಿಂ ದರಮನೆಯಂ (ಚಿಕವಿ. ೩-೧೧೫) ; ಅವರನ್ನು ಹಿಂಬಾಲಿಸಿ ಆನೆ, ರಥ, ಪಲ್ಲಕ್ಕಿ, ದಂಡಿಗೆಗಳಲ್ಲಿ ಅನೇಕಾನೇಕ ಪರಿವಾರ . . . ತಂಡೋಪತಂಡವಾಗಿ ನೆರೆಯಿತು (ಪ್ರವಾಇ. I, ೨೭೦). P 'ಪಲ್ಲಕ್ಕಿ' ಮತ್ತು 'ದಂಡಿಗೆ' ಎಂಬ ಶಬ್ದಗಳಿಗೆ ಬೇರೆಬೇರೆ ಅರ್ಥವಿರಬೇಕು. ಆದರೆ ಒಂದೇ ಅರ್ಥದಲ್ಲಿ ಬಳಕೆಯಾಗುತ್ತಿವೆ. ೮. ಒಂದು ಅಳತೆ (?): ಭಂಡಿಗೆ ದಂಡಿಗೆವೊಂದು ಸೆವೆಯಯ್ದು ಹೊಟೆ ಎರಡಕ್ಕಂ ದಂಡಿಗೆವೊಂಡು(ದು) ಸೇವೆಯೆರಡು (ಎಇ. XIV, ೩೩-೩೦ ; 1135). **ದಂಡಿ$_4$** : ೭. ಒಂದು ರಾತ್ರಿ ಅಲ್ಲಿದ್ದು ಮಾರನೆಯ ದಿನ ದಂಡಿಯಲ್ಲಿ ಕುಳಿತು ಹೊರಟೆ (ಪ್ರವಾಇ. I, ೪೨೪).

ದಂಡಿಗೆ ಉಂಬಳಿ, ದಂಡಿಗೆಯ ಉಂಬಳಿ = ದೇವರ ಪಲ್ಲಕ್ಕಿ ಉತ್ಸವ ಕ್ಕಾಗಿ ಕೊಡುವ ಉಂಬಳಿ,–ಭೂಮಿ: ದೇವರಿಗೆ ದಂಡಿಗೆ ಉಂಬಳಿ ಬಗೆ . . . ಸಿವಾರ್ಪಿತವಾಗಿ ಬಿಟ್ಟು (ಎಕ. VII, ಶಿವಮೊ. ೧೭-೪ ; 1696) ; ಯಿಡುಗೂರ ಲಿಂಗಂಣಗೌಡಗೆ ಕೊಟ್ಟ ದಂಡಿಗೆಯ ಉಂಬಳಿ (ಎಕ. XII, ಗುಬ್ಬಿ. ೩೯-೪ ; ?).

[ <ಸಂ. ದಂಡಿಕಾ./ತಮಿ. ತಣ್ಟಿಕೈ ; ತುಳು. ದಂಡಿಗೆ ; ತೆಲು. ದಂಡಿಗ ]

**ದಂಡಿಗೆಗೋಲು** (ನಾ). ತಕ್ಕಡಿಯಕೋಲು ; ದಂಡಿಗೆ ; ತುಲಾದಂಡ : ಬಂಟರಾಡು ಲೆಗ್ಗಿಕೋಲ ತೂಗುತಕ್ಕಡಿ ದಂಡಿಗೆಗೋಲು . . . ಬಸವನ ಮುಂದೆ ಮೆರೆವ ನಂದಿಕೋಲ (ಲೋಕಗೀ. ೦೭೬).
[ ದಂಡಿಗೆ + ಕೋಲು$_1$ (<ಕೋಲ್$_1$) ]

**ದಂಡಿಗೆವಿಡಿ** (ಕ್ರಿ). ತಂಬೂರಿ, ವೀಣೆ ಮೊದಲಾದುವನ್ನು ಹಿಡಿದು ಕೊಳ್ಳು : ಗಾಣನಾಯಕಿಯರಂದು ದಂಡಿಗೆವಿಡಿದು ಪೊಡಮಟ್ಟು ಹಾಡ ಲುದ್ಯೋಗಿಸಿದರು (ಹರಕಾ. ೭-೫) ; ತಾಳ ದಂಡಿಗೆವಿಡಿದಮಳಗಾನೆಯರು . . . ಪಾಡಿದರು ಗೋಪಾಲಕೃಷ್ಣನ ಮುದ್ರಿಕೆಯ (ಮೋಹತ. ೦೪-೪೯) ; ಕರಿಯ ರದನಂಗಳ್ಗೆ ತಲೆಯೋಡ ಸೊರೆಗಟ್ಟಿ ನರದ ತಂತ್ರಿಯ ಪೂಡಿ ದಂಡಿಗೆವಿಡಿದು ಪಾಡಿದುವು ಕೆಲವು (ಜೈಮಿಭಾ. ೨೨-೨೪). [ ದಂಡಿಗೆ+ಪಿಡಿ$_1$ ]

**ದಂಡಿತ** (ಗು). ೧. ದಂಡನೆಯನ್ನು ಪಡೆದ ; ಶಿಕ್ಷೆಗೊಳಗಾದ. ೨. ಸೋತ ; ಪರಾಜಯಕ್ಕೊಳಗಾದ : ದಂಡಿತವೈರಿ ಚಕ್ರಧರನೆಂಬ ನೆಗಟ್ತೆಯ ಚಕ್ರವರ್ತಿ (ಶಾಂತಿಪು. ೭-೮೭) ; ದಂಡಿತವೈರಿ ವೈರಿಬಲ ಲೋಹಿತಬಂಧುರದಂಡಮಾ ಭುಜಾದಂಡಂ (ಗದಾಯು. ೦-೭೩) ; (ನಾ). ೩. ದಂಡನೆಗೆ ಗುರಿಯಾದವನು ; ಶಿಕ್ಷಿಸಲ್ಪಟ್ಟವನು: ದಂಡಿತನಿಗಿಂತಲೂ ದಂಡನೆ ಮಾಡಿದವನಿಗೆ ಇದರ ಜಳ ಹೆಚ್ಚು ತಾಕುವುದು (ರಂಗರೋ. ೫೭). ೪. ಅಭ್ಯಾಸದ ರೀತಿ; ಒಂದೇ ಸಮನೆ ಹೇಳುವುದು (?) : ಆ ಕೊಳ ದೊಳ್ಪು ಮನಂಗೊಂಡಿರೆ ಪೊಕ್ಕಲ್ಲಿ ಪಾದಶುದ್ಧಿಯನಾಗಳ್ ದಂಡಿತದಿನೋದಿ ವಿಳಸನಖಂಡಿತಗುಣನುತ್ತರಾಭಿಮುಖದೊಳ್ ನಿಂದಂ (ಬಂಹರಿ. ೨-೪೦)

[ ಸಂ. ]

**ದಂಡಿಪಳ್ಳಿ** (ನಾ). ಒಂದು ಊರಿನ ಹೆಸರು : ದಂಡಿಪಳ್ಳಿಯಂ ಲೋಕಟೆಯರಸ ಕುಡೆ ನಾಗಾರ್ಜುನ ಕಾಲ್ಗೆಱೆಯೆ ಬಿಟ್ಟಯ್ಯಂ ಕಾಲಂ ಕರ್ಚ್ಚಿದೊನ್ (ಎಕ. VII (S), ಶಿಕಾರಿ. ೩೭೮-೧೩ : 902).
[ ? + ಪಳ್ಳಿ$_1$ ]

**ದಂಡಿಯಾಸೆ** (ನಾ). ಒಂದು ಬಗೆಯ ಸಸ್ಯ : (ವೈಜಿಗಿ. ೩೫-೭೭೨).
[ ? ]

**ದಂಡಿವಲೆ** (ನಾ). ಒಂದು ಬಗೆಯ ಬಲೆ ; ಕೋಲಿಗೆ ಅಳವಡಿಸಿರುವ ಬಲೆ : ದಂಡಿವಲೆಗಳ ತೊಡಕುವಲೆಗಳ ಓಂಡುವಲೆಗಳ . . . ಕಿರಾತರು ಕೆದಱಿತಗಲದಲಿ (ಕುವ್ಯಾ.ಳ. ೧೩-೨೩). [ ದಂಡಿ$_3$ + ಬಲೆ$_1$ ]

**ದಂಡಿಸರ** (ನಾ). ತೀವ್ರತೆ ; ಉತ್ಕಟತೆ : ಕಂಡಳುದಕದ ನೆಳಲಿನಲಿ ಕೈಕೊಂಡ ಮಾಯಾಮೃಗದ ಮೂರ್ತಿಯ ದಂಡಿಸರದಭಿನವದ ಶಿಶುಲೀಲಾಕಳಾಪಕವ ಮಂಡೆಯನು ಮುರಿದೆತ್ತಿ ಸರಸಿಯ ದಂಡೆಯಲಿ ನೋಡಿದಳು (ತೊರರಾ. ೩-೮-೨೪) ; ಕಂಡುದಾ ಕಡುಕಪಟಮೃಗ ಕೋದಂಡರಾಮನ ಮನದ ನೆನಹಿನ ದಂಡಿಸರವನು ದಾರಿದೆಗೆದುದು ಘೋರವಿಪಿನದಲಿ (ತೊರರಾ. ೩-೮-೪೩) ; ಕಂಡನೀ ಪವಮಾನತನುಜನ ದಂಡಿಸರವನಿದೇನಿದೇನುದ್ದಂಡ ಮರುಳನೊ ಮೂರ್ಖನೋ . . . ಹೇಳದ ಕೇಳ್ವವು (ತೊರರಾ. ೬-೫-೫೩). [ ದಂಡಿ$_1$ + ? ]

**ದಂಡಿಸು** (ಕ್ರಿ). ೧. ದಂಡನೆಗೆ ಗುರಿಪಡಿಸು ; ಶಿಕ್ಷೆಯನ್ನು ಅನುಭವಿಸುವಂತೆ ಮಾಡು ; ಶಿಕ್ಷಿಸು : ಪಗೆವರಂ ಬಗೆವಂತೆ ದಂಡಿಸಿದನೆಂದು ಮನದೊಳ್ ಮುಳಿಸಂ ಭಾವಿಸಿ ಪೊಱಮಟ್ಟು ಪೋದಂ (ವಡ್ಡಾರಾ. ೪-೧೯) ; ಈತನಂ ದಂಡಿಸೆಂದು ಯಮದಂಡಂಗೆ ಬೆಸವೇೞ್ದೊಡೆ (ವಡ್ಡಾರಾ. ೧೨೪-೧೯) ; ತದ್ವೃತ್ತಾಂತವೆಲ್ಲಮನಱಿದು ತತ್ಪುರಾಧೀಶಂ ದಂಡಿಸೆ ಗತಜೀವಿತನಾಗಿ ಬಂದಿಲ್ಲಿ ನಕುಳನಾದಂ (ಆದಿಪು. ೫-೨೦ ವ) ; ಅಲ್ಲಿ ದುಷ್ಪರಂ ತಪೋಧನರ್ದ್ದಣ್ಡಿಸಿ ನಡೆಯಿಸುವರ್ (ಸೌಇಇ. IX-i, ೧೦೦-೫೭ ; 1045) ; ನೃಪರ್ ನಿಷ್ಕಾರಣಂ ದಂಡಿಪರ್ (ಸೋಮೇಶ. ೫೦) ; ದಂಡಿಸುವರಾರೆನ್ನನೆಂಬುದ್ದಂಡಿಕೆಯೊಳಿಮ್ಮರ್ಥಮಂ ನೀಂ ಕೊಂಡೆಯಲ್ಲದೆ ಮಿಕ್ಕಿನವರಾರಾದಡೇನವರ ದಂಡಿಸದೆ ಬಿಡುವನೆ (ಬಸಪು. ೧೧-೮); ಮಿಂಡಿವೆಂಗಳನಗಲಿದ ಚದುರರು ತಮ್ಮ ದಂಡಿಪ ಸ್ಮರಚಾಪವೆಂದು ಭಂಡಿವೆರ್ಗ್ಗುಡುಗೋಲುಗಳಿಂದಲಡೆಗಿಕ್ಕಿ ಖಂಡಿಸುವರು ಕಬ್ಬುಗಳನು(ಮೋಹತ. ೨-೪೯). ೨. ಹೊಡೆ ; ಬಡಿ : ನವೀನ ಪದಭರಿತಮಿಂತಿದೆನೆ ಸತ್ಕೃತಿಯಂ ತವೆ ಪೇಳ್ವುದು ಪೇಳದೊಡೇಂ ಕವರ್ವರೆ ಕೋಪಿಪರೆ ನಿಂದಿಪರೆ ದಂಡಿಪರೇ (ಗಿರಿಕ. ೧-೨೦); ಅಮ್ಮನ ಮಾತಿಗೆ ಕಿವಿಕೊಟ್ಟು ಗಿರಿಜಳನ್ನು ದಂಡಿಸಿದವನೂ ನಾನೆ (ಪದ್ಮಸ. ೨೧೭). ೩. ಗದರಿಸು ; ಬಯ್ಯು : ಶಾರದೆಯನ್ನು ದಂಡಿಸಿ ಒಳಗಡೆಗೆ ಕಳುಹಿಸಿದರು (ಕರಾಸಾ. ೭೭). ೪. ಪರಾಜಯಗೊಳಿಸು ; ಸೋಲಿಸು : ಪುರ್ಬುಗಳ್ ಕಾಮಕೋದಂಡಮಂ ದಂಡಿಸಿದುವು (ಜಬಪು. ೫-೪೪) ; ಇಳಿಯೊಳೊಪ್ಪುವ ವೈರಿನೃಪರ ದಂಡಿಸಿ ನೆಱೆ ಸೆಳೆದು ತಂದಾಯುಧದ ಶಾಲೆ ತೊಳಗಿದುವು (ಕಂಸವಿ. ೭-೪೮). ೫. ಮುರಿ ; ಭೇದಿಸು : ಅಸಮ ಪದ್ಮವ್ಯೂಹವನು ದಂಡಿಸಿಯೆ ಧೂಳೀಪಟವ ಮಾಡಿದು ಹೆಸರುವಡೆದತಿಖಳರನಡೆಗೆಡಹಿದನು ರಣದೊಳಗೆ (ಕುವ್ಯಾದ್ರೋ. ಓ೧ಇ. ಪರಿ. ೨೮೨). ೬. ಬಿಗಿಯಾಗಿ ಕಟ್ಟು ; ಬಂಧಿಸು : ಚಂಡಿಕೆಯನೊಂದ ಮಳಪಾಶದಿ ದಂಡಿಸಿದ ಕೊರಳಿಂಗೆ ಪಾಶದಿ ಮಂಡಿಸಿಯೆ ನಾಭಿಯನು ಬಿಗಿದನು ಮೂಱುಪಾಶದಲಿ (ಸಂಭಪ. ಪರಿ. ೩೦೮). ೭. ನಿಗ್ರಹ ಮಾಡು ; ಹಿಂಸೆಗೆ ಒಳಪಡಿಸು: ಪಲವು ದಿವಸಮುಗ್ರೋಗ್ರತಪದೊಳ್ ಮೆಯ್ಯಂ ದಂಡಿಸಿದ ಪರಿಶ್ರಮಂ ಪೋಗೆ (ಪಂಪಭಾ. ೮-೨೭ ವ) ; ತಱಗೆಲೆಯ ಕೈಗೊಂಡು ತಿಂಗಳು ನಾಲ್ಕ ಪವನಗ್ರಾಸದಿಂ ಬಳಿಕ ದಂಡಿಸಿದನೀ ದೇಹವನು (ಕುವ್ಯಾ.ಳ. ೬-೨೪) ; ಹುತ್ತ ಬಡಿದರೆ ಹಾವು ಸಾವುದೆ ವ್ಯರ್ಥವಾದುಪವಾಸ ಮೊದಲಾಗುತ್ತಲಿಹ ವ್ರತಗಳಲಿ ದೇಹವ ದಂಡಿಸಲು ಬಱದೆ ಮುಕ್ತಿ ದೊರಕುವದೇ (ಅಮೃತ. ೧-೫೦) ; ಶಿವಶಿವ ಸತ್ತ್ವಮೆಂತುಟೊ . . . ದಂಡಿಸಿದೊಡಲೊಳದ್ಭುತಂ (ಶಬಶಂ. ೪-೮೫); ಹೆಂಡತಿ ಮಕ್ಕಳಿಗೆಂದು ದಂಡಿಸದಿರು ದೇಹವ ಕಂಡ ವಸ್ತುವನು ಕೊಡದುಣದೆ ಬೈಚಿಡಲು ಕಂಡವರಿಗಹುದು (ಸರ್ವಜ್ಞ. ೭೭೮).
[ ದಂಡನ + – ಇಸು$_3$ ]

**ದಂಡಿಸೊಗೆ** (?) . (?) : ನಿಜಕಿರಣದಿಂ ಬೆಳಗನಿತ್ತನಂ ಗೋಚರಿಸುವ ದಂಡಿಸೊಗೆಗಂ ನುಡಿಸಿಯುವನವೋಲ್ನುಡಿವನ್ನಖಂಡಕೀರ್ತಿಯ ಶಾಂತ ನಂಜೇಶಗುಣಮಣಿಕರಂಡ ಪೊಗಳಲು ಬಾಲಭಾಷೆ ಪಿತೃಗೆಂತು ಕೈಕೊಂಡಂತೆ ಪೊರೆವುದೆನ್ನ (ವೀಶ್ವಪು. ೨-೧೧-೨). [ ? ]

**ದಂಡಿಱು** (ಕ್ರಿ). ಸೈನ್ಯವನ್ನು ಇರಿ ; ಹೋರಾಡು : ಸ್ವಸ್ತಿ ಶ್ರೀಮತ್ ಕೊಙ್ಗಣಿ ಮುತ್ತರಸರಾ ಬೆಸದೆ ಕಾಡುವಟ್ಟ ದಂಡಿಱಿದು ಕೊವಳಲ ದುಳ್ ಎಱಿದೋರ್ (ಎಕ. IX, ಹೊಸಕೋ. ೨೦-೪ ; ಸು. 750).
[ ದಂಡು (<ದಂಡಿ$_3$) + ಇಱು$_1$ ]

**ದಂಡು** 'ದಂಡಿ$_3$' ನೋ.

**ದಂಡುದಾಳಿ** (ನಾ). ಸೈನ್ಯದ ಮುತ್ತಿಗೆ : ಪ್ರಮಿತ್ಯೂಸ್ ಸಾವಿಲ್ಲದ ತನ್ನ ಮೇಲೆ ಉರಿಮಿಂಚು ಬಿರುಗಾಳಿ ಇವುಗಳ ದಂಡುದಾಳಿಯನ್ನೆ ಸ್ಯೂಸ್ ನಡೆಸಿದರೂ ತನಗೆ ಹೆದರಿಕೆಯಿಲ್ಲ ಎಂದನು (ಬದ್ಧಪ್ರ. XXII, ೬೬೫).
[ ದಂಡು (<ದಂಡಿ$_3$) + ದಾಳಿ (<ದಾೞಿ) ]

**ದಂಡುಪಾಳ್ಯ** (ನಾ). ದಂಡು ಬೀಡುಬಿಟ್ಟಿರುವ ಸ್ಥಳ,–ಶಿಬಿರ : ಸಂಜಯನು ಧೃತರಾಷ್ಟ್ರನ ಅಪ್ಪಣೆಯಿಂದ ದಂಡುಪಾಳ್ಯಕ್ಕೆ ಹೋಗಿ (ಕೃಪಾಭೀ. ೧೭). [ ದಂಡು + (<ದಂಡಿ$_3$) + ಪಾಳ್ಯ (<ಪಾಳೆಯ) ]

**ದಂಡುಬಿಡು** (ಕ್ರಿ). ಸೈನ್ಯದ ಬಿಡಾರವನ್ನು ಏರ್ಪಡಿಸು ; ಪಾಳೆಯ ಬಿಡು ; ಠಾಣ್ಯಹಾಕು : ರಂಜಿಪ ಪುಷ್ಪವಾಟಿವೃಂದದೊತ್ತಿನೊಳೆಯ್ದಿ ಭೂಪತಿ ದಂಡುಬಿಟ್ಟರಲು (ಬಸಪು. ೨೨-೨೮) ; ಹಲ ಹೆಣಮುರಿವ ಚಿತಾಗ್ನಿಯೆಲ್ಲೆಡೆಯೊಳುಜ್ವಲಿಸುತಿರಲು ದುಡಧರನಾ ನೆಲ ದಂಡುಬಿಟ್ಟವ ರುಣಲೆಂದಡುವ ಪೇರೊಲೆಗಳೆಂಬಂತೊಪ್ಪಿದುವು (ಶ್ರೀಪಾಲ. ೮-೧೨).
[ ದಂಡು (<ದಂಡಿ$_3$) + ಬಿಡು$_1$ ]

**ದಂಡುವರ್** (ಕ್ರಿ). ಸೈನ್ಯದೊಂದಿಗೆ ಯುದ್ಧಕ್ಕೆ ಬರು; ಗುಂಪಾಗಿ ಕೂಡಿ ಆಕ್ರಮಿಸು ; ಮುತ್ತು : ಗೊಜ್ಜಿಗನೆಂಬ ಸಕಲ ಚಕ್ರವರ್ತಿ ಬೆಸಸೆ ದಂಡುವಂದ ಮಹಾಸಾಮಂತರಂ ಮರಲಿಱಿದು ಗೆಲ್ದ ಸಾಮಂತ ಚೂಡಾಮಣಿಯ ಬೀರಮುಮಂ (ಪಂಪಭಾ. ೯-೫೨).
[ ದಂಡು (<ದಂಡಿ$_3$) + ಬರ್$_1$ ]

**ದಂಡುವೇೞ್** (ಕ್ರಿ). (ಯುದ್ಧಕ್ಕೆ ಹೋಗುವಂತೆ) ಅಜ್ಞಾಪಿಸು : ಅಯ್ಯಪದೇವಜ್ಗಿ ಸಾಮನ್ತಸಹಿತಂ ನಾಗತ್ತರನಂ ದಂಡುವೇೞ್ದೊಡೆ ತುಮ್ಬೆಪಾದಿಯೊಳ್ಕಾದಿ (ಎಕ. IX, ಬೆಂಗಳೂ. ೮೩-೪ ; ಸು. 890) ; ದಂಡುವೇಟ್ಟರಸಿನಂತೆ ತೂಗಿಬಿಡುವ ನಾಯಕನಂತೆ (ಧರ್ಮಾಮೃ. ೯-೨೩).
[ ದಂಡು (<ದಂಡಿ$_3$) + ಪೇೞ್ ]

**ದಂಡುವೋಗು** (ಕ್ರಿ). ಸೈನ್ಯಸಹಿತವಾಗಿ ನುಗ್ಗು ; ದಾಳಿಮಾಡು : ರಟ್ಟವಾಡಿ ಮೇಗೆ ದಣ್ಡುವೋದಲ್ಲಿ (ಎಕ. XII, ಮಧ್ಯಗಿ. ೯೨-೨ ; 750) ; ಕಿಱಿಯಪೊನ್ನಯ್ಯಂ ಬಲ್ಲಹನ ಬೆಸದಾಳು ಗಜಾಂಕುಸ ಚೋಟನ ಮೇಗೆ ದಣ್ಡುವೋಗಲು (ಸೌಇಇ. IX-i, ೨೫-೭; 948).
[ ದಂಡು (<ದಂಡಿ$_3$) + ಪೋಗು$_1$ ]

**ದಂಡುಳಂ** (ಅ). ಹೆಚ್ಚಾಗಿ ; ಅತಿಶಯವಾಗಿ (?) : ದಿಟ ನುಡಿವನ್ಯವಾದಿಮುಖಮುದ್ರಿತನುದ್ಧ[ತ]ವಾದಿ ಪಾಗ್ಮಳೋದ್ಭಟ ಜಯಕಾಳದಂಡನ ಪಶಬ್ದ ಮದಾನ್ಧಕುವಾದಿದೈತ್ಯಧೂರ್ಜ್ಜಟಿ ಕುಟಿಲ ಪ್ರವೇಯಮದವಾದಿ

ಭಯಂಕರನೆನ್ನು ದಂಡುಳಂ ಸಸ್ಫುಟಪಟು ಘೋಷ ದಿಕ್ತಟಮನೆಯ್ದಿತು ವಾಕುಪಟು ಗೋಪನನ್ದಿಯ (ಎಕ. II, ೬೯-೫೧ ; ಸು. 1100).

[ P ಇದು 'ದಂಢಳ' ಎಂಬುದರ ಅಪಲಿಖಿತವಿರಬಹುದು ]

**ದಂಡುಳಿಗ** (ನಾ). ಸೈನ್ಯದಲ್ಲಿರುವವನು; ದಂಡಿನಲ್ಲಿ ಕೆಲಸದಲ್ಲಿರುವವನು ; ಸಿಪಾಯಿ ; ಯೋಧ : ಉಳಿಗ ಪ್ರತ್ಯಯಕ್ಕೆ—ದೇವನೊಳನು ಕೂಲಮೆಂತಂತೆ ಬಾಟ್ಟಿಂ = ದೇವುಳಿಗಂ, ದಂಡುಳಿಗಂ (ಶಮದ. ೨೦೩ ಪ್ರಯೋ). [ ದಂಡು (<ದಂಡಿ$_3$) + – ಉಳಿಗ$_3$ ]

**ದಂಡುಱುಂಬೆ,** ದಂಡ್ರುಂಬೆ, ದಡ್ರುಂಬೆ, ದಡ್ರುಂಬೆ, ದುಂಡುಂಱುಂಬೆ, ದುಂದುಱುಂಬೆ (ನಾ). ಗುಂಪಿನ ವಂಧ್ಯೆ ಜಗಳ ತರುವವಳು ; ಗಂಡುಬೀರಿ; ತುಂಟಿ, "ದಿಟ್ಟೆ" (ಪಂಪದೀ. ೩೧) : ಕೆಲದೊಳಿರ್ದ ದಂಡುಱುಂಬೆಗಳ್ ಬುದ್ಧಿವೇೞೆ (ಪಂಪಭಾ. ೩-೭೭ ವ) ; ಅಂಬೆಯೆಂಬ ದಂ [ಪಾಠಾಂ. ದುಂ ] ಡುಱುಂಬೆ ನಿನಗೆ ವಧಾರ್ಥವಾಗಿ ಪುಟ್ಟುವೆನಕ್ಕೆಂದು ಕೋಪಾಗ್ನಿಯಿಂದಮಗ್ನಿಶರೀರೆಯಾಗಿ ದ್ರುಪದನ ಮಹಾದೇವಿಗೆ ಮಗನಾಗಿ ಹುಟ್ಟಿ (ಪಂಪಭಾ. ೧-೮೦ ವ). **ದಂಡ್ರುಂಬೆ :** (ಕ). **ದಡ್ರುಂಬೆ :** "ದಡ್ರುಂಬೆ (ದಡ್ರುಂಬೆ) – ಸಿತಗೆ (ಶಮದ. ಪರಿ. ೨) ; "ದಡ್ರುಂಬೆಯೊಂದೆನೆ ಜಾರೆಯರೊಳು ಭೇದಂ" (ಕಶರ. ೫೧). **ದಡ್ರುಂಬೆ :** "ದಡ್ರುಂಬೆ ಪಾಱೆಯರೆಂದು ಸಿತಗೆಯರ್" (ಶಬ್ದಮಂ. ೭೬) ; "ದಡ್ರುಂಬೆಯೆಂದೆನಲ್ ಪಾಱೆಂದು ಸಿತಗೆಯರ್ಗಮರ್ದ ನಾಮಂ" (ಕಬ್ಬಿಕ್ಕೆ. ೯೦). **ದುಂಡುಱುಂಬೆ :** ಮೇಲಿನ 'ಪಂಪಭಾ. ೧-೮೦ ಪ್ರಯೋಗದ ಪಾಠಾಂತರವನ್ನು ನೋಡಿ. **ದುಂದುಱುಂಬೆ :** ತನಗಿದಿರಾಗಿ ಬರ್ಪ ಪಾಣ್ಬೆಯುಂ ದುಂದುಱುಂಬೆಯುಂ ಕಂಡು (ಸುಕುಮಾ. ೭-೨೯ ವ). P 'ದಂಡ್ರುಂಬೆ' 'ದಡ್ರುಂಬೆ' 'ದಡ್ರುಂಬೆ' ರೂಪಗಳು ಅಪಲಿಖಿತಗಳಿರಬೇಕು.

[ ದಂಡು (<ದಂಡಿ$_3$) + ಉಱುಂಬು$_1$ + – ಎ$_2$ ]

**ದಂಡುಟಿ(?)** (ನಾ). ಸುಲಿಗೆ; ಸೂರೆ; ಕೊಳ್ಳೆ (?) : ದಟಿದುಟಿಮಾದು ದಾಗಳಸಿಯೇಱಿಸಿದೇ [ ಯೇ ] ಱಿದು ಬಂದಿ ದಂಡುಟಿಮೆಲೆ ದಂಡುಳ [ ಟಂ ] ಪಿಡಿದರಂಗನೆಯಂ ಪಿಡಿದೊಯ್ದರೆಂದು ತಲ್ಲಟಿಸಿ ತಡಂ ತಡಂಬರಿಯೆ ಪುಯ್ಯಲ ಗಾವಳಿ ಕೆಯ್ಯನಿಟ್ಟುದು (ಅನಂಪು. ೧೧-೭೩).

[ ? ]

**ದಂಡುಟಿ** (ನಾ). ಯುದ್ಧದಲ್ಲಿ ಕೊಳ್ಳೆಹೊಡೆದ ವಸ್ತು ; ಯುದ್ಧದಲ್ಲಿ ಪಡೆದ ಸಾಮಾನು. 'ದಂಡುಟಿಗೊಳ್' ಪರಾ.

[ ದಂಡು (<ದಂಡಿ$_3$) + ಉಟಿ$_2$ ]

**ದಂಡುಟಿಗ** (ನಾ). ಯುದ್ಧದಲ್ಲಿ ಸೆರೆಸಿಕ್ಕಿದವನು : "ದಂಡುಟಿಗಂ – ದಂಡದೊಳ್ ಪಡೆದವಂ" (ಶಮದ. ಪರಿ. ೧) ; "ದಂಡದೊಳ್ಪಡೆದವಂ ದಂಡುಟಿಗನೆನಿಕ್ಕುಂ" (ಸಂಜೀವ. ೪) ; ದಂಡುಟಿಗಂ (ಶಬ್ದಾನು. ೧೪೦ ವ್ಯಾಖ್ಯಾ). [ ದಂಡುಟಿ + – ಗ$_2$ ]

**ದಂಡುಟಿಗೊಳ್** (ಕ್ರಿ). ಕಾಣಿಕೆಯಾಗಿ ಪಡೆ,-ವಸೂಲುಮಾಡು : ದಂಡೋಪನತರಾದ ಮಂಡಳಿಕರೊಳ್ ದಂಡುಟಿಗೊಂಡ ಮದವೇತಂಡ ಗಂಡಭಿತ್ತಿಗಳ ಪುಷ್ಕರಷಂಡದ ದಾನಧಾರಾನೀಕ ಶೀಕರಾಸಾರದೊಳಂ (ಅನಂಪು. ೦-೧೧೫ ವ). [ ದಂಡುಟಿ + ಕೊಳ್$_1$ ]

**ದಂಡೆ$_1$** (ನಾ). ೧. ಹೂವಿನ ಸರ, – ಮಾಲಿಕೆ : ದಾಸವಣ ದಂಡೆಯುಂ ತೋರದಿಂಡೆಯಾಡಿದಂತೆ ದೆಸೆದೆಸೆಗೆ ಕೆದಱಿದ ಕಂಡದಿಂಡೆಗಳುಂ (ಪಂಪಭಾ. ೧೧-೧೪೦ ವ) ; ಆಗಳೇಱಿಸಿದ ತಿಮಿರೊಳಮಿಟ್ಟ ತಿಲಕದೊಳಂ ಕಟ್ಟಿದ ದಂಡೆಯೊಳಂ ಅರ್ಚಿಸಿದ ಕೊತ್ತಳದೊಳಂ . . . ಸುತ್ತಿದ ಬೇವಿನ ದಂಡೆಯೊಳಂ (ಅನಂಪು. ೧೧-೮೨ ವ) ; ದೇವರಿಗೆ ಹೂವಿನ ದಂಡೆಯ ಕಟ್ಟುವ ದಾಸುಗಳು ತಿರುವೆಂಗಳದಾಸನು (ಎಕ. X (S), ಮುಳಬಾ. ೩-೭೭; 1430) ; ತರುಣಿ ನಿಜತನು ಪರಿಮಳದಲುಱೆ ಹೊರೆದ ಹೂವಿನ ದಂಡೆಯನು ನಿಜವರನ ಕೊರಳಲಿ ಹಾಯ್ಕಿದಳು (ಕುವ್ಯಾಆ. ೧೫-೩೫). ೨. ಸರ; ಹಾರ: ತಲೆಯುರದ ಕರದ ಕವಡಿಕೆಯ ದಂಡೆಗಳೆಸೆಯೆ (ಕಣ್ವರ. ದೇ. ೧೨೭-೧೧) ; ತೋಳ ಗುಂಜಿಯ ದಂಡೆಗಳ ಕಟಿತಟದ ಸುರಗಿಗಳ ... ಶಬರಾಳಿ ಬಂದುದು ಪರ್ಣಶಾಲೆಗೆ (ತೊರರಾ. ೩-೩-೨). ೩. (ಹೂವಿನ) ಕಂಚು ; ದಿಂಡು : ಕೆಂಡಗಳ ದಂಡೆಯುಂ ಮಂಡೆಯೊಳ ಗಿಡಬಹುದೆ (ದೀಕ್ಷಾಬೋ. ೮೮-೧೭) ; ಗುಲಾಬಿಯ ದಂಡೆಯನ್ನು ಮಗಳಿಗೆ ಮುಡಿಸಲು ಕೈಲಿ ಹಿಡಿದು ನಿಂತಿದ್ದಳು (ದೂಜಟ್ಟ. ೧೦). ೪. ಒಂದು ಬಗೆಯ (ಶಿರಸ್ಸಿನ) ಆಭರಣ : "ಮಾಲಪಾಶ್ಯಾ, ಪಾರಿತಥ್ಯಾ – ಈ ೨ ಮುಡಿಯ ಮೇಲಣ ಮುತ್ತಿನ (ನಾಚಿರಾ. ೧೨೩); ಬಿರುದಿನ ಕರಿಯ ದಂಡೆಯೆನೆ ಮಂಡಳಿಸಿದಳಿಗಳಿಂ ದಂಡೆ" (ವರ್ಧಪು. ೧೦-೫ ವ) [ ←ತೆಲು. ದಂಡ ]

**ದಂಡೆ$_2$** (ನಾ). ೧. ನದಿ, ಸಮುದ್ರ ಮೊದಲಾದಂವುಗಳ ದಡ ; ಅಂಚು ; ಕರೆ ; ತೀರ : ಮಂಡೆಯನು ಮುರಿದೆತ್ತಿ ಸರಸಿಯ ದಂಡೆಯಲಿ ನೋಡಿದಳು (ತೊರರಾ. ೩-೮-೨೪) ; ಮೂಡಲು ಕೆಱೆ ದಂಡೆ ಹತ್ತಿರ ಹುಣುಸೆ ಮರದ ಕೆಳಗೆ ನೆಟ್ಟ ತ್ರಿಶೂಲ ಕಲ್ಲು ಮೇರೆ (ಎಕ. IX (S), ಬೆಂಗಳೂ. ೩೦-೭ ; 1537) ; ಹಿರಿಕೆರೆ ಹಿಂದಣ ಕೇರಿಗೆ ಮೆಳೆಯ ಮೊದಲ ಕಾಲುವೆ ದಂಡೆಯ ಗದ್ದೆ ಖ ೧ಕ್ಕೆ (ಎಕ. XVI, ಚಿಕ್ಕನಾ. ೫೩-೧೫ ; 1639) ; ರಾಮಗಿರಿಯ ದುರ್ಗದೊತ್ತಿನ ಮುಂದಣ ತೊಱೆಯ ದಂಡೆಯಲಿ ನಿಂದನು (ಕಂನವಿ. ೧೧-೧೧೪) ; ದೇವರು ಹೇಗೆ ದಂಡೆಗೆ ಒಯ್ದು ಮುಟ್ಟಿಸುತ್ತಾನೋ ಈ ನಡು ಸಮುದ್ರದಿಂದ (ಪ್ರಣಸ. ೯) ; ಕಪಿಲಾನದಿಯ ದಂಡೆಗೆ ಎಲ್ಲರೂ ಏಕಕಾಲದಲ್ಲಿ ಬಂದು ಸೇರಿದರು (ಶ್ರೀರಾಯ. ೧). ೨. ಹತ್ತಿರ; ಸಮೀಪ : ದಂಡೆಯೊಳ್ ಪೋಗಿ ಮಾತಾಡದೆಯಿರುವುದಂ ಕಂಡು ನನ್ನ ವಲ್ಲಭನಲ್ಲವೊ (ಸೌಗಂಧಿ. ೧೯೩-೧೭).

**ದಂಡೆಗೆ ಹಚ್ಚು** = ಸರಿಯಾದ ಸ್ಥಿತಿಗೆ ತರು; ದಡಮುಟ್ಟಿಸು : ಯಾವುದಾದರೂ ಒಂದು ದಂಡೆಗೆ ಹಚ್ಚಬೇಕೆಂದು ಹಗಲಿರುಳೂ ಅನಿಸುತ್ತಿದ್ದಿತು (ಗಂಗಾಸಾ. ೧೫). **ದಂಡೆಗೆಹತ್ತು** = ೧. ದಡವನ್ನು ಸೇರು, – ಮುಟ್ಟು : ಹಸುಗಳು ದಂಡೆಗೆ ಹತ್ತಿದುವು (ರೂಢಿ). ೨. ಉತ್ತಮಸ್ಥಿತಿಯನ್ನು ಪಡೆ ; ಕಷ್ಟದಿಂದ ಪಾರಾಗು ; ಗುರಿಮುಟ್ಟು : ನನ್ನ ಮಗಳ ಜನ್ಮ ದಂಡೆಗೆ ಹತ್ತುವ ತನಕ ನಾನೇನ ಕೊಡುವಂತಿಲ್ಲ (ಅಶೋಕ. ೧೧೯). **ದಂಡೆಯ ಸೀರೆ** = ಅಂಚಿನ ಸೀರೆ : ಬಿಳಿಯ ಪತ್ತಲವನ್ನು ತ್ಯಜಿಸಿ ಇದೀಗ ಅವಳು ಬಣ್ಣಬಣ್ಣದ ದಂಡೆಯ ಸೀರೆಗಳನ್ನು ಉಡತೊಡಗಿದಳು (ಪ್ರತಿಬಿಂ. ೧೫). **ದಂಡೆ ಸೇರು** = ೧. ದಡವನ್ನು ಸೇರು ; ತೀರಕ್ಕೆ ಬರು : ಅವರು ನದಿಯಲ್ಲಿ ಈಜಿಕೊಂಡು ದಂಡೆ ಸೇರಿದರು (ರೂಢಿ). ೨. ತಂದಿಮುಟ್ಟು ; ಕೊನೆಗಾಣು : ಹೀಗೆ ಮಗನ ವಿದ್ಯೆ ದಂಡೆ ಸೇರುತ್ತಲೇ ಮಗಳ ಚಿಂತೆ ಅಮ್ಮಮ್ಮನನ್ನು ಕೊರೆಯತೊಡಗಿತು (ಮಸಕೂ. ೯).

[ ದೇ.II ತುಳು. ದಂಡೆ; ತೆಲು. ದಂಡ ]

**ದಂಡೆ$_3$** 'ದಂಡಿ$_3$' ನೋ.

**ದಂಡೆಕಟ್ಟು** (ಕ್ರಿ). ನೀರು ಹಾಯಿಸಲು ದಡ ಕಟ್ಟು.

[ ದಂಡೆ$_2$ + ಕಟ್ಟು$_1$ ]

**ದಂಡೆಗಟ್ಟು** (ಕ್ರಿ). ಹೂವು ಮೊದಲಾದುವನ್ನು ಮಾಲೆಕಟ್ಟು ; ಹಾರ ಮಾಡು : ದಂಡೆಗಟ್ಟಿದ ಮಾಲತಿಯ ಮುಗುಳ ವನಮಾಲೆಗಳುಮಂ (ಜಗವಿ. ೬-೧೭ ವ) ; ಚೆಲ್ವಾಗಿರೆ ದಂಡೆಗಟ್ಟುವ . . . ಕುಮಾರಿಯ ರೊಪ್ಪುಗುಮಲ್ಲಿ ಸಂತತಂ (ಶಬಶಂ. ೨-೬೪). [ ದಂಡೆ$_1$ + ಕಟ್ಟು$_1$ ]

**ದಂಡೆಗರುಳ್** (ನಾ). ಹೂವಿನ ದಂಡೆಯಂತಿರುವ ಕರುಳು ; ಕರುಳ ಮಾಲೆ : ಮಹಿಷಾಸುರನ ಬಿರಿವೊಡೆಯಿಂ ಸುರಿದ ದಂಡೆಗರುಳ್ಗೆ ಪಾಸಟಿಯಪ್ಪ ಅರೆಜರಿದ ಜಾದಿನ ಕೋಡುಮೆಟ್ಟನೊತ್ತುಗೊಂಡು (ರಾಮಾಶ್ವ. ೭೨-೨೦). 'ದೊಂಡೆಗರುಳ್' ಪರಾ. [ ದಂಡೆ$_1$ + ಕರುಳ್ ]

**ದಂಡೆಗಲ್ಲು** (ನಾ). ಅರೆಯುವ ಗುಂಡುಕಲ್ಲು: ತಂಡುಲವ ತಿಲವನುದ್ದಂ ಗೋದಿಯುಂ ಜವದಿ ಚಂಡನಂಗೈವುತಂ ಸಣ್ಣಸುತ ನಾದಿ ಗುಡ ದಂಡೆಯಿಂ ಘಟ್ಟಿಸುತ ಬೆಣ್ಣೆಯುಂ ಕೈಗಲಸಿ ದಂಡೆಗಲ್ಲಿಂ ಚೌಕಿಸಿ ತೊಂಡೆವಸುರಂ ಘೃತವ ತೊಡೆದ ಭಾಜನದೆಡೆಯು ಕೆಂಡವಿಸಿಯಿಂ ಪಚನಿಸಲು ಚಲ್ವಿನೊಳು ರಸಗಂಡ ಕೋವಾಲದ ಸೌಖ್ಯದ ಸವಿಯು ಸಕ್ಕಜದ ಮಂಡಗೆ ಶಿವಾರ್ಪಣ ಸುಖಾ (ಲಿಂಗಪು. ೮-೧೧). [ ದಂಡೆ$_{6}$ + ಕಲ್ಲು (<ಕಲ್$_{3}$) ]

**ದಂಡೆಗುಂಟ** (ಅ). ದಡವನ್ನು ಅನುಸರಿಸಿ; ದಂಡೆಯ ಉದ್ದಕ್ಕೂ: ಆರ್ಯಕುಲದ ಜನತೆ ಬಂದು ಗಂಗಾಪಾಯಿಯು ದಂಡೆಗುಂಟ ನೆಲೆಸಿ ದಂದಿನಿಂದ ಈ ನಾಡೆಲ್ಲ ಒಂದು ತಪೋವನವಾಗಿತ್ತು (ಸಮಜೀ. ೧೩೦೮); ಹೊಳೆಯ ದಂಡೆಗುಂಟ ಹೋಗುತ್ತಿದ್ದರೆ ಬಹಳ ಚೆನ್ನಾಗಿರುತ್ತದೆ (ರೂಢಿ). [ ದಂಡೆ$_{2}$ + ಗುಂಟ$_{2}$ ]

**ದಂಡೆಗುಡು** (ಕ್ರಿ). ಸಮೀಪಿಸು: ಸುಳಿಸುಳಿದಶ್ವಮನೇಱುತೆ ಪೊಳಯಿಸಿ ವಿಗೆ ದಂಡೆಗುಡುತಿರ್ದಿರ್ಚುತೆ ಪೆಱಕಾಲ್ಗೊಳಿಸಿ ಪಳಂಚಿದರ್ತುರಂಗಿಗಳದ ಱೊಳ್ (ರಾಜಶೇ. ೧೩-೮೫). [ ದಂಡೆ$_{2}$ + ಕುಡು$_{1}$ (<ಕೊಡು$_{1}$) ]

**ದಂಡೆಗೊಡು** (ಕ್ರಿ). ೧. ವೀರವಮಂಡಿಹಾಕು; ಕುಸ್ತಿವರಸೆ ಹಾಕು; ಮಂಡಿಯೂರಿ ಕುಳಿತುಕೊಳ್ಳು: ಮೇಲ್ವಾಯ್ದ ಮೃಗೇಂದ್ರನಂ ಬಗೆಯ ದಾರ್ದುರ್ಂ ದಂಡೆಗೊಟ್ಟೆತ್ತಿ ಕಿಟ್ಟಿಸಿಱಂ ಕುತ್ತುತುರುಳ್ಚಿ ಕೊಂದನದನುರ್ವೀನಾಥ ವಿಮಾನಧ್ವಜಂ (ಕುಸುಮಾ. ೧೪-೧೧೧); ಜಡಿದಸಿಯಂ ರಭಳುಂಚಿಸಿ ಕರಾಗ್ರದೊಳೆತ್ತಿ ಕಡಂಗಿ ಸಾರ್ದು ಬೊಬ್ಬಿಡುತೆ ಪಳಂಚಿ ದಂಡೆಗೊಡುತಾರೆ ಪುಳಿಂದರವಂದಸತ್ವದಿಂ . . . ಪೊಯ್ದುದು (ರಾಜಶೇ. ೫-೦೨೩). [ ದಂಡೆ$_{3}$ (<ದಂಡಿ$_{3}$) + ಕೊಡು$_{1}$ ]

**ದಂಡೆಗೊಳ್**, ದಂಡೆಗೊಳು, ದಂಡೆಗೊಳ್ಳು (ಕ್ರಿ). ೧. ಹತ್ತಿರ ಬರು; ಸಮೀಪಿಸು: ರಣಮಂಡಲದೊಳ್ಪೆಱತೆಗೆದಣಿಯಂ ತೆಗೆನೆಱೆದ ಬಿಲ್ಲ ಪೊಲಿರ್ದ ಭಟಾಗ್ರಣಿ ಪರಿದು ದಂಡೆಗೊಂಡಡ್ಡಣದಿಂದಂ ಚಂಡಶಾಸನಂ ಕೈಕೊಂಡಂ (ಅನಂಪು. ೧೧-೮೪); ಕಡುಗವಮಂ ಪಿಡಿದು ಜಡಿದು ರ್ಘುಂಕಿಸಿ ದಂಡೆಗೊಂಡ ಶಬರನಂ (ರಾಜಶೇ. ೫-೫೫ ವ). ೨. ಜೊತೆಯಾಗಿ ಹಿಡಿ: ಸದರದೆ ದಾಯವಮಂ ಪಿಡಿವ ವಿತ್ತವನೊಡ್ಡುವ . . . ಅಕ್ಷವಂ ಕರಾಗ್ರದಿನುಱೆ ದಂಡೆಗೊಳ್ವ . . . ನೆತ್ತಗಾಱರ ವಿನೋದವನೀಕ್ಷಿಸು ತಿರ್ದನುರ್ವಿಪಾ (ದಶಕು. ೮-೮೯). ೩. ಸಿದ್ಧನಾಗು: ಸಮರಕ್ಕೆ ದಂಡೆಗೊಂಡನು ಚಂಡಶಾಸನ ನಿಮಿಷದೊಳತಿಭರದಿಂದ (ಅನಂಚ. ೧೮-೬೮). **ದಂಡೆಗೊಳು:** ೧. ದಂಡೆಗೊಳುತ್ತದಂ ಪೊಳೆದು ಚಿಮ್ಮಿದನೀಶ್ವರನಲ್ಲಿ . . . ತದ್ದನುವಂ ಸೆಳೆದು ಕರಾಗ್ರದಿಂದ (ಶಬಶಂ. ೪-೫೯). **ದಂಡೆಗೊಳ್ಳು:** ೩. ದಂಡೆಗೊಂಡಬ್ಬರಿಸಿ ತಿವಿದೊಡೆ ದಿಂಡುಗೆಡೆದುದು ಮಲ್ಲವಡೆ (ಅಕ್ರೂಚ. ೭-೭೦). [ ದಂಡೆ$_{2}$ + ಕೊಳ್$_{1}$ ]

**ದಂಡೆಗೊಳಿಸು** (ಕ್ರಿ). ಅಳವಡಿಸು: ಗದಾದಂಡವನುರ್ಚಿದವಱಿಯಂ ನಿರ್ವಿಚಿ ಪುಲ್ಲಿಯಂ ತೆಲ್ಲೈಸಿ ಗೊಂಡೆಯುವಂ ದಂಡೆಗೊಳಿಸಿ ಚಾರಣಾಕೃತಿಯಿಂ ಪಿಡಿದಾಗಳ್ (ದಶಕು. ೨-೨೫ ವ).

[ ದಂಡೆಗೊಳ್ + -ಇಸು$_{3}$ ]

**ದಂಡೆಗೊಳು** 'ದಂಡೆಗೊಳ್' ನೋ.

**ದಂಡೆಗೊಳ್ಳು** 'ದಂಡೆಗೊಳ್' ನೋ.

**ದಂಡೆತೊಂಡಿಲ್** 'ದಂಡೆದೊಂಡಿಲ್' ನೋ.

**ದಂಡೆತ್ತು** (ಕ್ರಿ). ಸೈನ್ಯಸಮೇತ ಯುದ್ಧಕ್ಕೆ ಹೋಗು; ದಾಳಿಮಾಡು: ಶ್ರೀಮತ್‌ರಾಜಮಲ್ಲ ಪೆರ್ಮ್ಮಾನಡಿಗಳ್ ಪ್ರಿಥಿವೀರಾಜ್ಯಂಗೆಯ್ಯುತ್ತಿರೆ ಶ್ರೀಮದೀಸರಗಣ್ಡಂ ಶ್ರೀರಾಜಪ್ರೇಮ ರಾಜಮಲ್ಲನರೆಪಂ ದಂಡೆತ್ತೆ ಬಹ ಮಳಿಟ್ಟೂರಿನ್ನಾಯಕನಿಪ್ಪ ಪಲ್ಲವ ಬಳಮಂ (ಎಕ. III, ಮಂಡ್ಯ. ೧೧೭-೫: 977); ಮುಂದೆ ದಂಡೆತ್ತಿ ಆ ಗಯಾಳರ ಗಾವಿಲರ ನಿರ್ಭಾಗಧೇಯರ ಮಾಡಿಯುತ್ತರಭಾಗದಲಿ ತಿರುಗಿತ್ತು ಪಾಳೆಯವು (ಕುಮ್ವಾಸ. ೩-೨೪); ಅಗಣಿತ ಬಲ ಸಹ ತಿರುಮಲರಾಜೇಂದ್ರ ನಗುತ ದಂಡೆತ್ತಿ ನಡೆದನು (ಕಂಸವಿ. ೩-೩೭); ಗ್ರೀಕರು, ಮಂಗೋಲಿಯರು, ಮುಸ್ಲಿಮರು, ಬ್ರಿಟಿಷರು ಭಾರತದ ಮೇಲೆ ದಂಡೆತ್ತಿ ಬಂದರು (ಧರ್ಮಸಾ. ೫೦).

[ ದಂಡು (<ದಂಡಿ$_{3}$) + ಎತ್ತು$_{1}$ ]

**ದಂಡೆದೊಂಡಿಲ್**, ದಂಡೆತೊಂಡಿಲ್ (ನಾ). ಗುಚ್ಛಾಕಾರವಾದ ತಲೆಯ ಆಭರಣ: ಪೀನಪಯೋಧರೆಯರ್ ಶೈಳತನೂಜೆಗೆ ವರರತ್ನದ ದಂಡೆದೊಂಡಿಲಂ ಸೈತಿಟ್ಟರ್ (ಗಿರಿಕ. ೧೦-೪೪). **ದಂಡೆತೊಂಡಿಲ್:** ನವರತ್ನದಿಂ ಸಮೆದ ದಂಡೆತೊಂಡಿ[ಪಾಠಾಂ. ದ]ಲ್ಮೆಱೆಯೆ (ಮಾನಸ. ಹ. ೬೭-೨೩). [ ದಂಡೆ$_{1}$ + ತೊಂಡಿಲ್ (<ತೊಂಡಲ್) ]

**ದಂಡೆಯಡ್ಡಣ** (ನಾ). = ದಂಡವಲಗೆ: ರಣದೊಳ್ ತೆಂಕಣರಾಯನಂಕದ ಚತುಸ್ಸೈನ್ಯೋತ್ಕರಂ ದಂಡೆಯಡ್ಡಣವೀತಂ (ಎಕ. XI, ದಾವಣ. ೨೫-೫೬; 1224). [ ದಂಡೆ$_{3}$ (<ದಂಡಿ$_{3}$) + ಅಡ್ಡಣ ]

**ದಂಡೆಯೊಡ್ಡು** (ಕ್ರಿ). ಗುರಾಣಿಯನ್ನು ಒಡ್ಡು; ಹರಿಗೆ ಹಿಡಿ: ಆತನಸ್ತ್ರಕೆ ದಂಡೆಯೊಡ್ಡಿ ಮಹಾತಿಬಳ ಕವಿದನು (ಕುಮ್ವಾದ್ರೋ. ೧೨-೧೭).

[ ದಂಡೆ$_{3}$ (<ದಂಡಿ$_{3}$) + ಒಡ್ಡು$_{1}$ ]

**ದಂಡೆಹೂ** (ನಾ). ದಂಡೆಯಾಗಿ ಕಟ್ಟಿದ ಹೂವು; ಹೂವಿನ ದಿಂಡು: ಚೆಂಡುಹೂ, ತುಂಬಿಹೂ, ಗೊಂಡೆಹೂ, ದಂಡೆಹೂ . . . ಇವುಗಳ ಸಂತೆ ನೆರೆಯಿತು (ಸಾಸಮಾ. ೯೧). [ ದಂಡೆ$_{1}$ + ಹೂ$_{2}$ (<ಪೂ$_{2}$) ]

**ದಂಡೇಶ** (ನಾ). = ದಂಡನಾಥ ೧: ಅಮಿತಂ ದಂಡೇಶರತ್ನಂ . . . ವಿಷಮಸಮಯಮಾದಲ್ಲಿ ತಾನೇಕವಾಕ್ಯಂ (ಎಕ. VI, ತರೀಕೆ. ೪೫-೬೩; 1196). [ ದಂಡ + ಈಶ ]

**ದಂಡೇಸ್ವರ** (ನಾ). ಒಂದು ವೃತ್ತಿಯ ಹೆಸರು (?): ಮಾಲಗಾಱಂಗೆ ಮತ್ತರ್ ೧೩ ದಣ್ಣೇಸ್ವರ್ರಂ ಯಿಪ್ಪಂಗೆ ಮತ್ತರ್ ೧೨ (ಸೌಇಇ. XI-i, ೧೦೩-೬; 11ನೆಯ ಶತ). [ ? ]

**ದಂಡೊಡೆ** (ಕ್ರಿ). ಗುಂಪು ಚೆದರು; ಚೆಲ್ಲಾಪಿಲ್ಲಿಯಾಗು (?): ತಮ್ಮಂ ರಕ್ಷಿಸುವ ಕರ್ತರುಗಳುಯಿನ್ನಾರೆಂದು ದಂಡೊಡೆದು ಬಂದು ತದ್ವನ ದೇವಿಯಳ ಬಿಡದೆ ಬೇಡಿಕೊಂಡೂ (ನವವೋ. ೧೧-೯೧).

[ ದಂಡು (<ದಂಡಿ$_{3}$) + ಒಡೆ$_{1}$ ]

**ದಂಡೋಕ್ತಿ** (ನಾ). ದಂಡೋಪಾಯದ ಮಾತು; ಬೆದರಿಕೆಯ ನುಡಿ; ಶಿಕ್ಷೆಯ ಮಾತು: ಸಾಮಾಭಾಸದಿಂ ದಂಡೋಕ್ತಿಯನೆ ನುಡಿಯಲೊಡಂ (ಚಂದ್ರಪು. ೬-೨೨ ವ). [ ದಂಡ + ಉಕ್ತಿ ]

**ದಂಡೋತ್ಪಲ**, ದಂಡೋತ್ಪಳ (ನಾ). ಒಂದು ಬಗೆಯ ಗಿಡ; ಸಹದೇವಿ. **ದಂಡೋತ್ಪಳ:** "ದಂಡೋತ್ಪಳಃ, ಸಹದೇ(ವಾ)ವಃ-ಈ ೨ ಸಹದೇವಿ" (ಹಲಾಯು. ೩೩-೪೭). [ ಸಂ. ]

**ದಂಡೋತ್ಪಳ** 'ದಂಡೋತ್ಪಲ' ನೋ.

**ದಂಡೋಪನತ** (ನಾ). ದಂಡನಮಸ್ಕಾರ ಮಾಡಿದವನು: ಮನೋ[ಜ] ರಾಜನಧಿರಾಜಂಗೆ ದಂಡೋಪನತನಾಗಿ ತನ್ನ ಸರ್ವಸ್ವಮುಮನಟ್ಟಿದಂತೆ ಮುಂಚಿ ಬಂದ ವಸಂತೋತ್ಸವದೊಳ್ (ಶಾಂತಿಪು. ೯-೭೪ ವ).

[ ದಂಡ + ಉಪನತ ]

**ದಂಡೋರ** 'ದಂಡೋರೆ' ನೋ.

**ದಂಡೋರೆ**, ದಂಡೋರ (ನಾ). ಡಂಗುರ ಸಾರುವುದು; ಘೋಷಣೆ: ಹರಾಜು ನಡೆಸುವ ಕ್ರಮವನ್ನು ಅವಶ್ಯಕವಾದ ಕಡೆಗಳಲ್ಲೆಲ್ಲಾ ಟಾಂಟಾಂ, ದಂಡೋರೆ ಮೂಲಕ ಪ್ರಸಿದ್ಧಪಡಿಸಬೇಕು (ಗ್ರಾಮಾಕ. ೮೧). **ದಂಡೋರ:** "ದಂಡೋರ = ಡಂಗರ" (ಜಾನಕೋ. ೩).

[ ←ಹಿಂ. ಢಂಢೋರಾ./ತೆಲು. ದಂಡೋರಾ ]

**ದಂಡ್ರುಂಚಿ** 'ದಂಡಂಚುಂಬೆ' ನೋ.

**ದಂತ₁** (ನಾ). ೧. ಆಹಾರವನ್ನು ಅಗಿಯಲು ಸಾಧಕವಾದ ಬಾಯಿಯೊಳಗಿರುವ ಒಂದು ಅವಯವ; ಹಲ್ಲು: "ದಶನಃ, ದ್ವಿಜಃ, ದಂತಃ, ರದಃ, ರದನಃ — ಈ ೫ ಪಲ್ (ಹಲ್ಲು)" (ಹಲಾಯು. ೮೭-೩೭೩); ಪೊಳೆವ ದಂತಮರೀಚಿಗಳಿಂದವಿಪಾಶ್ವರಂಗೊಸೆದಭಿಷೇಕಮಂ ಮುಗುಟಿ ಮಾಡುವವೊಲ್ ಬಗೆದೊಪ್ಪಿ ತೋಱಿದಳ್ (ಕಾದಂಪೂ. ೬೭೩); ವದನಮತಿಪ್ರಸನ್ನತೆಯನಾಳ್ದುದು ಶಾಂತಿಯನಾಂತು ದಂತವೆಯ್ದಿದು ದತಿಕಾಂತಿಯಂ . . . ಮುನಿಚಂದ್ರದೇವನಾ (ಪುಷ್ಪಪು. ೧-೩೨); **೨.** ಆನೆಯ ಬಾಯಿಯಿಂದ ಈಚೆಗೆ ಹಾಯ್ದು ಬಂದಿರುವ, ದಪ್ಪವಾಗಿಯೂ ಸ್ವಲ್ಪ ನೀಳವಾಗಿಯೂ ಇರುವ ಹಲ್ಲು; ಜಂತ; ಕೋರೆ: ಮದದಂತಿ ದಂತದೊಳೆ ಕಟ್ಟಿದ ತೊಟ್ಟಿಲಂ ನಯದಿಂದಮೇಱಿ [ಸೆ] (ಪಂಪಭಾ. ೧-೪೩); ಕಡೆದರೊ ಶಂಖದಿ . . . ದಂತದಿಂದೆಸೆಯೆ ರುಚಿರೋಜ್ವಲಾಂಗಮಂ ಮಾಡಿದರೋ (ಕಾದಂಪೂ. ೬೬೭); ತೊಳಗುವಂ ದಂತದೋಲೆ ಗುರುಗಂಜಿಯ ಬಣ್ಣಸರಂ . . . ಒಪ್ಪಿರೆ ಪುಳಿಂದಿಯರಾದರಮರ್ತ್ಯಕಾಂತೆಯರ್ (ಶಬಶಂ. ೩-೯); ದಂತದಿಂದಲೂ ಅನೇಕ ಪ್ರತಿಮೆಗಳು ನಿರ್ಮಿತವಾಗಿರುವುವು (ಭಾರದ. ೫೦೮). **೩.** ಬೆಟ್ಟದ ಕೋಡುಗಲ್ಲು,–ಶಿಖರ; ಪರ್ವತಶೃಂಗ. **೪.** ಬೆಟ್ಟದ ಅಕ್ಕಪಕ್ಕ, ಬೆಟ್ಟದ ತಪ್ಪಲು. **೫.** ಪೊದರು; ನಿಕುಂಜ. **೬.** ಆಯುಧಗಳ ತಂದಿ,–ಮೊನೆ. **೭.** ಒಂದು ಬಗೆಯ ಮರ; ಜಾಪಾಳಮರ: "ಶೃಂಗಂ ತರುಭೇದ ಕಂಟಕಗಜಂ ದಶನಾದ್ರಿವಿಭೇದಮೆಂಬಿವುಂ ದಂತಮೆನಿಕ್ಕುಂ" (ನಾನಾರ. ೬೨). **೮.** [ಗಣಿತ] ಮೂವತ್ತೆರಡು ಎಂಬ ಸಂಖ್ಯೆಯ ಸಂಕೇತ: "ದಂತ ಮೂವತ್ತೆರಡುವಿಂತಿವೆಲ್ಲಂ ಭೂತಸಂಜ್ಞೆಯಕ್ಕುಂ" (ಮಂಗರಾ. ೧೦೪-೯). [ಸಂ.]

**ದಂತ₂** (ನಾ). ಒಂದು ಬಗೆಯ ತೆರಿಗೆ: ತೆರಿಗೆಯ ವ್ಯವಸ್ಥೆಯ ಪುನರ್ ಘಟನೆ ಮಾಡಿ . . . ದಂತ, ಉಂಡಿಗೆ, ಸುಂಕ, ತಳವರಿಕೆ ಗುತ್ತಿಗೆಗಳೆಂಬ ಹದಿಮೂರು ಹೊಸ ಕರಗಳನ್ನು ನಿಯೋಜಿಸಿದರು ಬಸವಣ್ಣನವರು (ಶರಚ. ೧೩೯). [?]

**ದಂತಕತೆ** (ನಾ). ಯಾವ ಆಧಾರವೂ ಇಲ್ಲದೆ, ಒಬ್ಬರಿಂದೊಬ್ಬರಿಗೆ ಹರಡುತ್ತಾ ಹೋಗುವ ಕತೆ; ಬಾಯಿಂದ ಬಾಯಿಗೆ ಹಬ್ಬುತ್ತಾ ಹೋಗುವ ಕಥೆ; ಕಟ್ಟುಕತೆ: ಇಂಥ ಹಾಡುಗಳಲ್ಲಿ ಒಂದು ಜನಸಮುದಾಯದಲ್ಲಿ ರೂಢಿಯಾಗಿ ಹರಿದುಬಂದಿರುವ ದಂತಕತೆ, ಪುರಾಣ, ನಂಬಿಕೆಗಳು ಧಾರಾಳವಾಗಿ ಸೇರಿಕೊಂಡಿವೆ (ಜಾನಗೀ. ೧೪); ಇಲ್ಲಿ ಕೂಡಿಸಿರುವ ಘಟನಾವಳಿಗಳೂ ದಂತಕತೆಗಳೂ . . . ವೃತ್ತಿಜೀವನ ಇವುಗಳ ಬಗ್ಗೆ ಬೆಳಕು ಚೆಲ್ಲುತ್ತವೆ (ಸಂಗೀತ. VI ಪೀಠಿಕೆ); ಥೇಬಸ್ಸಿನ ಕ್ಯಾಡ್ಮಸ್ ಎಂಬವನು ಕ್ರಿ. ಪೂ. ೧೫೦೦ ರ ಸುಮಾರಿಗೆ ಫೊನೀಷಿಯದಿಂದ ಗ್ರೀಸಿಗೆ ಅಕ್ಷರಗಳನ್ನು ತಂದನೆಂದು ದಂತಕತೆಯೊಂದು ವಿವರಿಸುತ್ತದೆ (ದ್ರಾವಿವಿ. ೫೦). 'ಉದಂತ' ಪರಾ. [ದಂತ₁ + ಕತೆ]

**ದಂತಕಥೆ** (ನಾ). =ದಂತಕತೆ: ಎಲ್ಲ ಮಹಾವ್ಯಕ್ತಿಗಳ ಬಗೆಗೂ ದಂತಕಥೆಗಳು ಕಾಲಕ್ರಮೇಣ ಹುಟ್ಟಿಕೊಳ್ಳುವಂತೆ ಅಕ್ಕನ ಬಗೆಗೂ ಹುಟ್ಟಿಕೊಂಡಿವೆ (ಕರ್ನಾಕ. ೬೯); ಅಶೋಕನು ಎಂಭತ್ತುನಾಲ್ಕುಸಾವಿರ ಸ್ತೂಪಗಳನ್ನು ಕಟ್ಟಿಸಿದನೆಂದು ಬೌದ್ಧರ ದಂತಕಥೆಗಳು ಹೇಳುತ್ತವೆ (ಭಾರದ. ೪೯೫); ಸಿದ್ಧನಂಜೇಶನು ಹೇಳಿದ ಈ ಹಲ್ಲಿನ ಕಥೆ ದಂತಕಥೆಯೇ ಆಗಿರಬೇಕು (ಕಸಾಚ. ೧೭೪). [ದಂತ₁ + ಕಥೆ./ಹಿಂ. ಮರಾ. ದಂತಕಥಾ]

**ದಂತಕಪಾಲಿಕೆ** (ನಾ). ಒಂದು ಬಗೆಯ ಹಲ್ಲಿನ ಬೇನೆ,–ರೋಗ: ದಂತಕಪಾಲಿಕೆ ಎಂಬ ದಂತರೋಗದಲ್ಲಿ ದಂತಗಳು ತನ್ನ ತಾನೇ ಒಡೆದು ಉದುರಿ ಹೋಗುವವು (ವೈದ್ಯಸಾ. II, ೧೨೨). [ಸಂ. ದಂತಕಪಾಲಿಕಾ]

**ದಂತಕಾಂತಿ** (ನಾ). ಹಲ್ಲುಗಳ ಬೆಳಗು,–ಪ್ರಕಾಶ: ಪೊಸವೆಳ್ದಿಂಗಳ್ ಪಗಲೊಳಮೆಸೆವಂತಿರೆ ದಂತಕಾಂತಿಗಳ್ ವಿಭು ನುಡಿದಂ (ಶಾಂತಿಪು. ೮-೧೩೭); ಅರಸನಿಂತುಸಿರ್ದಂ ಸುಯ್ಯುಂದಿಸಿದಧರಕ್ಕೆ ಸುಧಾಬಿಂದುಗಳಂ ತಳಿಯೆ ದಂತಕಾಂತಿಪ್ರಸರಂ (ಯಶೋಚ. ೩-೮). [ದಂತ₁ + ಕಾಂತಿ]

**ದಂತಕಾಷ್ಠ** (ನಾ). ಹಲ್ಲನ್ನು ಉಜ್ಜಲು ಉಪಯೋಗಿಸುವ ಬೇವು ಮೊದಲಾದ ಮರಗಳ ಕಡ್ಡಿ; ಹಲ್ಲು ತಿಕ್ಕುವ ಕಡ್ಡಿ: ಪ್ರತಿದಿನ ಬೆಳಗ್ಗೆ ದಂತಕಾಷ್ಠದಿಂದ ಹಲ್ಲನ್ನೂ ನಾಲಗೆಯನ್ನೂ ತಿಕ್ಕಿಕೊಳ್ಳಬೇಕು (ಪ್ರವಾಇ. I, ೨೮೩). [ದಂತ₁ + ಕಾಷ್ಠ₂]

**ದಂತಕೂಟ** (ನಾ). ಆನೆಯ ದಂತದ ತುದಿ; ಆನೆಯ ಕೋರೆಯ ಮೊನೆ: ಬಲಗರ್ವಮಂ ತಾಳ್ದಿದಂ ಬಲಾಚ್ಯುತರ ಕೂಟದಿಂ ಜನಕನುಗ್ರವನ್ಯದ್ವಿಪಂ ಬಲಂ ಬಡೆದು ದೆಂಬಿನಂ ವಿಕಟದಂತಕೂಟಂಗಳಿಂ (ಪಂರಾಮಾ. ೪-೫೩). [ದಂತ₁ + ಕೂಟ₃]

**ದಂತಕ್ಷತ** (ನಾ). [ಕಾಮಶಾ] ಪ್ರಣಯಪರವಶರಾದ ಸ್ತ್ರೀಪುರುಷರು ರತಿಕ್ರೀಡೆಯ ಕಾಲದಲ್ಲಿ ಪರಸ್ಪರ ಶರೀರಗಳಲ್ಲಿ ಮಾಡುವ ಹಲ್ಲಿನ ಕಚ್ಚು; ಹಲ್ಲಿನಿಂದ ಕಚ್ಚುವಿಕೆ: ಸುದತಿ ಕೇಳ್ ದಂತಕ್ಷತದ ಭೇದಮಂ ಪೇಳ್ವೆಂ (ಜನವ. ೭-೨೬); ದಂತಕ್ಷತ ನಡೆಯುವ ಹಲ್ಲುಗಳ ಸ್ವರೂಪ ಸ್ವಭಾವಗಳನ್ನೂ, ಹನ್ನೆರಡು ಬಗೆಯ ದಂತಕ್ಷತಗಳ ಹೆಸರನ್ನೂ ಹೇಳಿ . . . ಉಪಸಂಹರಿಸಿರುವನು (ಮನ್ಮವಿ. XV, ಮುನ್ನುಡಿ). 'ನಖಕ್ಷತ' ಪರಾ. [ದಂತ₁ + ಕ್ಷತ]

**ದಂತಚಯ** (ನಾ). ಹಲ್ಲುಗಳ ಸಮೂಹ,–ಸಾಲು; ದಂತಪಂಕ್ತಿ: ತನು ನಿಷ್ಪ್ರಕಂಪಮಿರೆ ದಂತಚಯಂ ಸಮನಾಗಿ ತನ್ನೊಳೊಂದಿರೆ ಸಮಸಂದುದಾ ಪರಮಯೋಗಿಗೆ ಯೋಗನಿರೋಗಭಾವನಂ (ಆದಿಪು ೧೦-೧೪). [ದಂತ₁ + ಚಯ]

**ದಂತಚಲನ** (ನಾ). ಹಲ್ಲುಗಳು ಅಲ್ಲಾಡುವ ಒಂದು ಬಗೆಯ ಹಲ್ಲಿನ ರೋಗ: ದಂತಚಲನವೆಂಬ ದಂತರೋಗದಲ್ಲಿ ಹಲ್ಲುಗಳು ಅಲ್ಲಾಡುವವು (ವೈದ್ಯಸಾ. II, ೧೨೦). [ದಂತ₁ + ಚಲನ]

**ದಂತಚೂರ್ಣ** (ನಾ). ಹಲ್ಲನ್ನು ಉಜ್ಜಲು ಉಪಯೋಗಿಸುವ ಪುಡಿ; ಹಲ್ಲುಪುಡಿ: ಹಲ್ಲು ತೊಳೆಯುವುದಕ್ಕೆ ಉಪಯೋಗಿಸುವ ಪುಡಿ, ಸರಿ, ಮೊ.ವು: ಹಲ್ಲುಪುಡಿ; ದಂತಚೂರ್ಣ; ದಂತಧಾವಕ (Dentifrice. ಇಂಕನಿ). [ದಂತ₁ + ಚೂರ್ಣ₂]

**ದಂತಚ್ಛದ** (ನಾ). ಬಾಯ್ದೆರೆ: ತುಟಿ; ದಂತಚ್ಛದಾತಿರಾಗತೆ ಕುಂತಳ ಕೌಟಿಲ್ಯವೃತ್ತಿ ಪಿಂಗಿದುದಬಳಾಸಂತತಿಗೆ ಪಯಃಕೇಳಿಯೊಳ್ (ಚಂದ್ರಪು. ೭-೦೪೫); ರದನಂ ವಜ್ರಸಮಂ ಪ್ರವಾಳ ಸದೃಶಂ ದಂತಚ್ಛದಂ (ರಾಜಶೇ. ೩-೭). [ದಂತ₁ + ಛದ]

**ದಂತದಂಶಿತ** (ಗು). ಹಲ್ಲಿನಿಂದ ಕಚ್ಚಲ್ಪಟ್ಟ: ದಂತದಂಶಿತದಶನವಾಸದ ವೈರಿಹಿಂಸಾವ್ಯಸನ ವೀರಾವೇಶಿ ಬಂದನು ಕೃಪನ ಸಮ್ಮುಖಕೆ (ಕುಭಾಗ. ೯-೪೩). [ದಂತ₁ + ದಂಶಿತ]

**ದಂತಧಾವನ** (ನಾ). ೧. ಹಲ್ಲನ್ನು ಉಜ್ಜುವುದು,–ತೊಳೆಯುವುದು: "ಮುಕ್ಕುಳಿ ದಂತಧಾವನಂ" (ಕಬ್ಬಿಕೈ. ೫-೫); ಅಂತನಂತರಂ ದಂತಧಾವನಾಸವನಾದಿ ವೈಭಾತಿಕಂಗಳಂ ತೀರ್ಚಿ (ಚಂದ್ರಪು. ೮-೧೦೫ ವ); ಚತುರ ದ್ವಿಜೋಪಚಾರಂ ದಂತಧಾವನದೊಳು (ಹಚಳಾ. ೨-೧೧); ಅಲ, ಎಕ್ಕ . . . ಮೊದಲಾದ ಕಾಷ್ಠಗಳಲ್ಲಿ ದಂತಧಾವನವಂ ಮಾಡಿಕೊಂಡು . . . ನೀರನ್ನು ಚೆನ್ನಾಗಿ ಮುಕ್ಕಳಿಸಿ ಉಗಿವುದು (ಸಕವೈ. ೨೯). **೨.**=ದಂತಕಾಷ್ಠ: (ಕ). ೩. ಕಾಚಿನ ಮರ; ಕಗ್ಗಲಿ ಮರ; ಖದಿರ. "ಕದರಂ ಗಾಯತ್ರಿ ದಂತಧಾವನಮದು" (ವಸ್ತುಕೋ. ೩೫-೧೫). [ದಂತ₁ + ಧಾವನ]

**ದಂತಧಾವನಗೆಯ್** (ಕ್ರಿ). ಹಲ್ಲನ್ನು ಉಜ್ಜು, – ತಿಕ್ಕು : ಇಂತು ವರ ಕೊಡಗೂಸು ಆಗಳೆ ದಂತಧಾವನಗೆಯ್ದು ಮಿಂದು (ಬಸವು. ೧೪-೫).
[ ದಂತಧಾವನ + ಕೆಯ್$_1$ ]

**ದಂತಧಾವನಪರ್ಣ** (ನಾ). ೧. ಹಲ್ಲನ್ನು ಚೊಕ್ಕಟಗೊಳಿಸಲು ಉಪಯೋಗಿಸುವ (ಕೆಲವು ಬಗೆಯ) ಎಲೆ. ೨. ಕಗ್ಗಲಿ ಎಲೆ; ಖದಿರ ಪರ್ಣ: ಚೂರ್ಣಪರ್ಣತ್ಯಾಗವಿಲ್ಲದೆ ದಂತಧಾವನಪರ್ಣವನು ಸವಿದು ಭೋಗಿಸುವೊಡೆ . . . ಅವನನು ನೀಗಿ ಕಳೆವಳು ಭಾಗ್ಯವಧು (ಶುವ್ಯಾ.ಉ. ೩-೫೯). [ ದಂತಧಾವನ + ಪರ್ಣ ]

**ದಂತನೂತಿ** (ನಾ). ಒಂದು ಬಗೆಯ ದಂತವ್ಯಾಧಿ, – ವ್ರಣ; ಹಲ್ಲಿನ ಕುರು : ಸಕ್ಕರೆ, ಏಲಕ್ಕಿಪುಡಿ, ಕುರುಟಿಗೆ ಹಾಲು ಇಷ್ಟನ್ನೂ ಈ ಬತ್ತಿಯಲ್ಲಿ ಒಣಗಿಸಿ ದಂತದ ವ್ರಣಕ್ಕೆ ಇಕ್ಕಿಸಲು ಗುಣವಾಗುವುದು, ದಂತನೂತಿ ಮಾಣ್ಗುಂ (ವಿದ್ಯವಿ. ೧೩೭). [ ದಂತ$_1$ + ನೂತಿ$_1$ ]

**ದಂತಪಂಕ್ತಿ** (ನಾ). ಹಲ್ಲುಗಳ ಪಂಕ್ತಿ,–ಸಾಲು : ಅವಳ ಪೊಳೆವ ರುಚಿ ರೋಷ್ಠ್ಯಾಳಂಕೃತಿ ಪವಳದ ದಳದಂತಾರಕ್ತಾಕೃತಿ ದಂತಪಂಕ್ತಿ ದಾಡಿಮ ಬೀಜಾಕೃತಿ (ಸುಕುಮಾ. ೫-೫೦ ರಗಳೆ) ; ಕುಂದಕುಟ್ಮಳ ಪೋಲ್ವ ದಂತಪಂಕ್ತಿಗಳೆಲ್ಲಿ (ನವಮೋ. ೭-೧೪); ನಾಲಗೆಯ ತುದಿ ದಂತಪಂಕ್ತಿಯ ಮೇಲೆ ಒಸಡಿಗೆ ತಾಗಿ ನಿಲ್ಲುತ್ತದೆ (ದ್ರಾವಿವಿ. ೩೪೮). [ ದಂತ$_1$ + ಪಂಕ್ತಿ ]

**ದಂತಪತ್ರ** (ನಾ). ಒಂದು ಬಗೆಯ ಕಿವಿಯೋಲೆ : ವಿಭಾವರೀ ವನಿತಾ ವಿಲಾಸದಂತಪತ್ರನುಂ . . . ಕುಮುದಿನೀ ಬಾಂಧವನುದಯಿಸೆ (ಕಾದಂಉ. ೧೪೫). [ ದಂತ$_1$ + ಪತ್ರ ]

**ದಂತಪೀಠಿಕೆ** (ನಾ). ಹಲ್ಲಿನ ಪೀಠ; ಒಸಡು : ಕೆಳಗಣ ಮೇಲಣ ಪಲ್ಬೇರ್ಗಳ ಪಿಡಿದಿಹ ಸಂದು ದಂತಪೀಠಿಕೆಯಕ್ಕುಂ (ಅಶ್ವಶಾ. ೯-೩).
[ ದಂತ$_1$ + ಪೀಠಿಕೆ ]

**ದಂತಪುಪ್ಪುಟ** (ನಾ). = ದಂತನೂತಿ : ಎರಡು ಹಲ್ಲುಗಳಲ್ಲಿಯಾದರೂ ಮೂರು ಹಲ್ಲುಗಳಲ್ಲಿಯಾದರೂ ಬೆಂದಹಾಗೆ ಕಂದಿಕೊಂಡು ವಿವರ್ಣವಾಗಿಹುದು. ಈ ರೀತಿಯಲ್ಲಿ ಇದ್ದುದು ದಂತಪುಪ್ಪುಟ ಎನಿಸಿಕೊಂಬುದು (ವೈದ್ಯಸಾ. II, ೧೨೩). [ ದಂತ$_1$ + ಪುಪ್ಪುಟ ]

**ದಂತಪ್ರಭೆ** (ನಾ). ಹಲ್ಲುಗಳ ಹೊಳಪು ; ದಂತಕಾಂತಿ : ಆ ಕುವರನ ದಂತಪ್ರಭೆಯೆಂಬ ಶೀತಕರನುದಯುದಘಧ್ವಾಂತೌಘಮಧುಪಮಾಲಿಕೆಯಂ ತೊಲಗಿಸೆ ಮುಗಿದುವವನ ಕರಸರಸಿರುಹಂ (ಯಶೋಚ. ೧-೬೭).
[ ದಂತ$_1$ + ಪ್ರಭೆ ]

**ದಂತಬೇನೆ** (ನಾ). ಹಲ್ಲಿನ ನೋವು ; ದಂತವ್ಯಾಧಿ : ದಂತಬೇನೆಗೆ–ಪಚ್ಚೆ ತುತ್ತ, ಜಾಪಾಳ . . . ಅರೆದು ಮೂರು ಗುಳಿಗೆಯಂ ಮಾಡಿ ಹಸುವಿನ ಹಾಲಲ್ಲಿ ಗಟ್ಟಿಮೊಸರಲ್ಲಿ ಕೆಳಮೇಲಕ್ಕೆ ಇಕ್ಕಿ ನುಂಗುವುದು (ವಿದ್ಯವಿ. ೧೪೪).
[ ದಂತ$_1$ + ಬೇನೆ ]

**ದಂತಮಂಜನ** (ನಾ). ಹಲ್ಲನ್ನು ಉಜ್ಜಲು ಉಪಯೋಗಿಸುವ ಸಾಮಗ್ರಿ; ಹಲ್ಲುಪುಡಿ : ಸಮೀಪದ ಅಂಗಡಿಗೆ ಹೋಗಿ ಅತ್ಯವಶ್ಯವಾದ ಒಳ ಉಡುಪು, ದಂತಮಂಜನ ಮೊದಲಾದ ನಿತ್ಯೋಪಯೋಗದ ವಸ್ತುಗಳನ್ನು ಕೊಂಡು ತಂದು (ನಂಟರು. ೦೧೯). [ ದಂತ$_1$ + ಮಂಜನ ]

**ದಂತಮಲ** (ನಾ). ಹಲ್ಲಿನ ಕೊಳೆ ; ಕೀಚು ; ಪಿಟ್ಟು (ಕರಾ) : "ನೆಟಿ[3] ಕೀನಿ ದಂತಮಲವೆಂದು" (ಕವಿಕಂ. ೨೦೫). [ ದಂತ$_1$ + ಮಲ$_3$ ]

**ದಂತಮೂಲೀಯ** (ನಾ). [ವ್ಯಾಕ] ದಂತದ ಮೂಲ ಪ್ರದೇಶದಿಂದ ಹುಟ್ಟುವ ವರ್ಣ,–ಅಕ್ಷರ; ತವರ್ಗ, ಲ ಮತ್ತು ಸ ಅಕ್ಷರಗಳು. 'ಜಿಹ್ವಾಮೂಲೀಯ' ಪರಾ. [ ಸಂ. ]

**ದಂತರುಚಿ** (ನಾ). ಹಲ್ಲಿನ ಹೊಳಪು,–ಕಾಂತಿ : ಶ್ರವಣಕ್ಕಮರ್ದಿನ ಸರಿ ಸುರಿವಪೊಲಾಗೆ ವಚೋವಿಲಾಸವಾ ಸಭೆಗತ್ಯುತ್ಸವಮಂ ಕುಡೆ ನೇರ್ಪಡೆ ಬಿನ್ನವಿಸಿದನಾವರಿಸೆ ದಂತರುಚಿ ತತ್ಸಭೆಯಂ (ಪಂಪಾಮಾ. ೧೦-೬೭) ; ದಂತರುಚಿನಿಚಯ ಮುಕ್ತಾಕ್ರಾಂತಂ ಭಾಸುರ ಸುವರ್ಣ ರಚಿತಂ ತದ್ವಾಕ್ಸಂತತಿ ವಿಬುಧಜನಕ್ಕೆ ನಿರಂತರ ಕಮನೀಯಮಾಯ್ತು ಕರ್ಣಾಭರಣಂ (ಚಂದ್ರಪು. ೨-೮೬). [ ದಂತ$_1$ + ರುಚಿ ]

**ದಂತವಕ್ರ** (ನಾ). ೧. ವಕ್ರವಾದ ಹಲ್ಲುಳ್ಳವನು. ೨. ಒಬ್ಬಾತನ ಹೆಸರು : ಪರಾಕ್ರಮಶಾಲಿಗಳಾದ ಶಿಶುಪಾಲ ದಂತವಕ್ರರು ಅವನ ಸೇನಾಪತಿಯೂ ಅನುಯಾಯಿಯೂ ಆಗಿದ್ದಾರೆ (ವಚಭಾ. ೭೬).
[ ದಂತ$_1$ + ವಕ್ರ ]

**ದಂತವಾಸ** (ನಾ). ಹಲ್ಲುಗಳಿಗೆ ತೆರೆಯಂತೆ ಇರುವುದು ; ತುಟಿ.
[ ದಂತ$_1$ + ವಾಸ$_2$ ]

**ದಂತವೇಷ್ಟ** (ನಾ). ಒಂದು ಬಗೆಯ ಹಲ್ಲಿನ ಬೇನೆ,–ರೋಗ : ದಂತಗಳಿಂದ ರಕ್ತ ಸುರಿಯುತ ನಾತ ಉಂಟಾಗಿ ದಂತಗಳು ಅಲ್ಲಾಡುವವು. ಈ ರೀತಿಯಲ್ಲಿ ಇದ್ದುದು ದಂತವೇಷ್ಟವೆನಿಸಿಕೊಂಬುದು (ವೈದ್ಯಸಾ. II, ೧೨೩).
[ ದಂತ$_1$ + ವೇಷ್ಟ ]

**ದಂತವೈದ್ಯ** (ನಾ). ಹಲ್ಲಿನ ರೋಗಗಳಿಗೆ ಚಿಕಿತ್ಸೆ ಮಾಡುವವನು ; ದಂತ ಚಿಕಿತ್ಸಕ : "ದಂತವೈದ್ಯ ; – ಚಿಕಿತ್ಸಕ" (Dentist. ಇಂಕನಿ) ; ಹಲ್ಲು ನೋವಾದರೆ ದಂತವೈದ್ಯರ ಹತ್ತಿರ ಹೋಗು (ರೂಢಿ).
[ ದಂತ$_1$ + ವೈದ್ಯ ]

**ದಂತಶಠ** (ನಾ). ೧. ಹಲ್ಲನ್ನು ಜುಮ್ಮೆನ್ನಿಸುವ ಹಣ್ಣು ; ಹುಳಿ ; ಆಮ್ಲ. ೨. ನಿಂಬೆಗಿಡ ಮತ್ತು ಅದರ ಹಣ್ಣು : "ಜಂಬೀರಃ, ದಂತಶಠಃ, ಜಂಭಃ, ಜಂಭೀರಃ, ಜಂಭಲಃ ೫ – ನಿಂಬೇಗಿಡದ ಹೆಸರುಗಳು" (ಸಿದ್ಧಾಂತಿ. ೧೦೩). ೩. ಬೇಲದ ಮರ : "ಕಪಿತ್ಥ . . . ದಂತಶಠಃ –೭ ಬ್ಯಾಲದ ಮರಕ್ಕೆ ಹೆಸರುಗಳು" (ಸಿದ್ಧಾಂತಿ. ೧೦೨). [ ಸಂ. ]

**ದಂತಶಠೆ** (ನಾ). ಬಹಳ ಹುಳಿಯಾದ ಎಲೆಗಳುಳ್ಳ ಒಂದು ಬಗೆಯ ಸೊಪ್ಪಿನ ಗಿಡ ; ಪುಲ್ಲಂಪುರಚಿ ; ಅಂಬಷ್ಠೆ : "ಚಾಂಗೇರೀ, ಚುಕ್ರಿಕಾ, ದಂತಶಠಾ, ಅಂಬಷ್ಠಾ, ಆಮ್ಲಲೋಣಿಕಾ – ೫ ಪುಲಂಪುರುಚೀ ಸೊಪ್ಪಿನ ಹೆಸರು" (ಸಿದ್ಧಾಂತಿ. ೧೨೬). [ ಸಂ. ದಂತಶಠ ]

**ದಂತಶೂಲೆ** (ನಾ). ಹಲ್ಲುನೋವು ; ದಂತದ ಬೇನೆ : ತಾಳಕೇಶ್ವರರಸ:– ಶೋಧಿಸಿದ ರಸ ೧೨ ತೂಕ ತಾಳಕ ೨ ತೂಕ . . . ಗುಳಿಗೆಯಂ ಮಾಡಿ ಬಾಯೊಳು ಗುಳಿಗೆಯನಿಕ್ಕಲು ಅರುಚಿ, ಮೂಗಿನ ವ್ಯಾಧಿ, ದಂತಶೂಲೆ ಇವೆಲ್ಲಾ ಕೆಡುವುವು (ವಿದ್ಯವಿ. ೩೩). [ ದಂತ$_1$ + ಶೂಲೆ ]

**ದಂತಹತಿ** (ನಾ). = ದಂತಕ್ಷತ : ಇದು ನಖಕ್ಷತಮನಿಡುವೆಡೆ ದಂತಹತಿಯ ನೆಲೆಯಿದುವೆ ಸಮರತಿಯ ವಿವರಾ (ನವಮೋ. ೧೭-೮೨).
[ ದಂತ$_1$ + ಹತಿ ]

**ದಂತಹರ್ಷ** (ನಾ). ಒಂದು ಬಗೆಯ ದಂತರೋಗ : ದಂತಹರ್ಷ ಎಂಬ ದಂತರೋಗದಲ್ಲಿ ಹಲ್ಲುಗಳು ತಣ್ಣೀರು ತಾಕಿದರೆ ಶಿರಸ್ಸಿನಲ್ಲಿಯೂ ಮುಖದಲ್ಲಿಯೂ ಜುಮ್ಮು ಹತ್ತಿ ಮಹಾವೇದನೆ ಉಂಟಾಗಿಹುದು (ವೈದ್ಯಸಾ. II, ೧೨೦). [ ಸಂ. ]

**ದಂತಹೀನ** (ನಾ). ೧. ಹಲ್ಲಿಲ್ಲದವನು; ಹಲ್ಲು ಬಿದ್ದು ಹೋಗಿರುವವನು. ೨. ಕಮ್ಮಿ ಹಲ್ಲುಳ್ಳುದು ; ಇರಬೇಕಾದ ಹಲ್ಲುಗಳಿಗಿಂತ ಕಮ್ಮಿ ಸಂಖ್ಯೆಯ ಹಲ್ಲುಳ್ಳುದು: "ಕೆಳಗಾಱು ಮೇಲಾಱು ಹಲ್ಲಿರಲು ಜಯಮಕ್ಕು ಹೆಚ್ಚುಕುಂದಾಗೆ ದಂತಾಧಿಕಂ ದಂತಹೀನಂ" (ಮಂಗರಾ. ೮೨-೧೬). 'ದಂತಾಧಿಕ' ಪರಾ. [ ದಂತ$_1$ + ಹೀನ ]

**ದಂತಾಂಕುರ** (ನಾ). ಹಲ್ಲಿನ ಮೊಳಕೆ ; ಮೊಳೆಹಲ್ಲು : ಆ ದೇವಿಗಿಂತಿದು ಪುಣ್ಯಾಂಕುರಮೆಂಬಿನಂ ವದನದೊಳ್ ದಂತಾಂಕುರಂ ರೂಪುದೋಱಿದುವು (ಅಜಿಪು. ೫-೭೪). [ ದಂತ$_1$ + ಅಂಕುರ ]

**ದಂತಾಂಶು** (ನಾ). = ದಂತಕಾಂತಿ : ಕಾರುಣ್ಯದ ರಸದ ಪೊನಲ್ಪರ್ವು ತಿರ್ದತ್ತೆಂದೆಂಬೀ ತೆಱದಿಂ ದಂತಾಂಶುಜಾಳಂ ಪಸರಿಸೆ (ಕಾದಂಪೂ. ೨೩೭); ದಂತಾಂಶುಕೋದ್ಯನ್ಮಣಿಯುಂ ದಂತಾಂಶು ತೀವ್ರತ್ತೆಸೆಯೆ (ರಾಜಶೇ. ೫-೧೭). [ ದಂತ$_1$ + ಅಂಶು ]

**ದಂತಾಂಶುಕ** (ನಾ). = ದಂತವಾಸ : ದಂತಾಂಶುಕೋದ್ಯನ್ಮಣಿಯುಂ ದಂತಾಂಶು ತೀವ್ರತ್ತೆಸೆಯೆ (ರಾಜಶೇ. ೫-೧೭). [ ದಂತ$_1$ + ಅಂಶುಕ ]

**ದಂತಾಗ್ರ** (ನಾ). ಹಲ್ಲಿನ ಅಗ್ರ; ತುದಿಹಲ್ಲು : ಶ್ರೀ ಬಾಳಾಮೇಲಿಖ್ಯ ಮೇಲೆ ಸರ್ಪ್ಪದ ಮಹಾದನ್ತಾಗ್ರದುಳ್ಸಲ್ವಪೋಲ್ (ಎಕ. II, ೨೨-೧; ಸು. 700). [ ದಂತ$_1$ + ಅಗ್ರ ]

**ದಂತಾದಂತಿ** (ನಾ). ಹಲ್ಲಿನಿಂದ ಒಬ್ಬರಿಗೊಬ್ಬರು ಕಚ್ಚಾಡುವ ಜಗಳ : ಕೆಡಹಿ ಮೆಟ್ಟುತ್ತ ಕೇಶಾಕೇಶಿ ಬಳಿಕ ದಂತಾದಂತಿಯೆಂದೆನಿಪ್ಪಾ ಬೆಡಗಿನಿಂದೆಸೆವ ಮುಷ್ಟಾಮುಷ್ಟಿಯಿಂ ಪೋರೆ (ವೀಶೈಪು. ೩-೮-೧೫); ನಖಾನಖಿ ಪ್ರಬಳ ದಂತಾದಂತಿಯಿಂ ಕಾದಿದರ್ (ಹಮ್ಮೀರ. ೨-೮೭). 'ಕೇಶಾಕೇಶಿ' ಪರಾ. [ ಸಂ. ]

**ದಂತಾಧಿಕ** (ನಾ). ಸಾಮಾನ್ಯವಾಗಿ ಇರಬೇಕಾದ ಹಲ್ಲಿಗಿಂತಲೂ ಹೆಚ್ಚಾದ ಹಲ್ಲಿರುವುದು : "ಕೆಳಗಾಱು ಮೇಲಾಱು ಹಲ್ಲಿರಲು ಜಯಮಕ್ಕು ಹೆಚ್ಚುಕುಂದಾಗೆ ದಂತಾಧಿಕಂ ದಂತಹೀನಂ" (ಮಂಗರಾ. ೮೨-೧೭). [ ದಂತ$_1$ + ಅಧಿಕ ]

**ದಂತಾಬಲ** (ನಾ). = ದಂತಾವಲ. [ ಸಂ. ]

**ದಂತಾಮಯ** (ನಾ). ಹಲ್ಲಿನ ರೋಗ. [ ದಂತ$_1$ + ಆಮಯ ]

**ದಂತಾರ್ಬುದ** (ನಾ). ಒಂದು ಬಗೆಯ ಹಲ್ಲುಬೇನೆ : ದಂತಾರ್ಬುದಕ್ಕೆ ಗುಳ್ಳ, ಬದನೆಯ ಬೇರು, ಕಕ್ಕೆತಿಗಡು ಇವಂ ಎಣ್ಣೆಯಲ್ಲಿ ಅರೆದು ಪೂಸಲು ದಂತಾರ್ಬುದ ಮಾಣ್ಗುಂ (ವಿಷ್ಣವಿ. ೧೩೭). [ ದಂತ$_1$ + ಅರ್ಬುದ$_2$ ]

**ದಂತಾವರಣ** (ನಾ). = ದಂತವಾಸ : ಅರಯ ದಂತಾವರಣಂ ಪ್ರವಾಳರುಚಿರಚ್ಛಾಯಾರುಣಾಕ್ಷೇಪಿ . . . ಸುರೂಪಾಶ್ಚರ್ಯಮಾ ಕನ್ನೆಯಾ (ಸುಕುಮಾ. ೫-೫೩). [ ದಂತ$_1$ + ಆವರಣ ]

**ದಂತಾವಲ,** ದಂತಾವಳ (ನಾ). ೧. ಆನೆ; ಗಜ; ದಂತಿ : ಲಲನೆಯರ ನಡೆ ಎನುತೆ ದಂತಾವಲ ಘಟೆಯ ಸಾರೆನುತೆ . . . ನೆಲದೊಡೆಯ ಜಯಸಿಂಹ ಕಟ್ಟೆಗೆವಿಡಿದು ನಡೆತಂದ (ಶಂಕದಾ. ೯-೨೦). **ದಂತಾವಳ:** ಸರದೊಳ್ ಲೀಲಾಸರಂ ಪುಟ್ಟಿದತ್ತೆನೆ ಮುಱಿತ್ತವಗಾಹವಿುರ್ದು ಕೊಳದಿಂ ಕಾಯ್ಪೊಂದು ದಂತಾವಳಂ (ಅರ್ಧನೇ. ೫-೧೧೨); ಶ್ರಾವಕರು ನೆಱೆದಾತನಂ ದಂತಾವಳಕೆ ನೂಕೆ (ಬಸಪು. ೪೯-೩೮); ತಳವಱರ ಸುಂಕಿಗರ ದಂತಾವಳ ರಥಾಶ್ವಾರೋಹಕರ . . . ನಿವಾಸಂಗಳಲಿ ವಾಸವ ಮಾಡಿಸಿದನೊಲಿದನಿಲಬಾಂಧವನ (ತೊರರಾ. ೫-೮-೫೪); ಹರಿ ದಂತಾವಳ ಕೋಳ ಸೈರಿಭ ಮಹಾಶಾರ್ದೂಳ ಸಂದೋಹದಾಸುರದಾ ಬೇಂಟೆಯನಾಡಿ (ಹಮ್ಮೀರ. ೭-೭೭). ೨. ಗಜಾಸುರ. 'ದಂತಾವಳಾರಿ' ಪರಾ. [ ಸಂ. ]

**ದಂತಾವಳ** 'ದಂತಾವಲ' ನೋ.

**ದಂತಾವಳಾರಿ** (ನಾ). ೧. ಆನೆಯ ಶತ್ರು; ಸಿಂಹ. ೨. ಗಜಾಸುರನ ಶತ್ರು; ಶಿವ : ಓವಿ ಮದದಂತಾವಳಂ ತಿರುವಾಕರೀಶನನೆಂಟದಿರೆ ದಂತಾವಳಾರಿಯ ಕಿಂಕರನನೇಗೆಯ್ವುದಾ ದಂತಿ (ಬಸಪು. ೪೯-೩೮).
[ ದಂತಾವಳ (= ದಂತಾವಲ) + ಅರಿ$_6$ ]

**ದಂತಾಹತಿ** (ನಾ). ಆನೆಯ ದಂತದ ಪೆಟ್ಟು,- ಹೊಡೆತ : ಮಾದ್ಯದ್ರುದನೀಂದ್ರಸ್ಥೂಳ ದಂತಾಹತಿವಿದಳಿತ ಗೋಶೀರ್ಷಸಾರದ್ರವಾಮೋದದಿನೆತ್ತಂ ಗಂಧವಾಹಂ ಮಗಮಗಿಸೆ (ಆದಿಪು. ೧೩-೭೮). [ ದಂತ$_1$ + ಆಹತಿ ]

**ದಂತಿ** (ನಾ). ೧. ಆನೆ; ಗಜ : "ದ್ವಿರದಂ ದಂತಿ ಮತಂಗಜಂ . . . ಸಿಂಧುರಮೆಂದಿಂತಿವು ಸಾಮಜಾಖ್ಯೆಯೊಳಭಿನ್ನಾರ್ಥಂಗಳಕ್ಕುಂ" (ವಸ್ತುಕೋ. ೮೭-೩೦); ಏಱಿದಂ ತ್ರಿಜಗದ್ಭೂಷಣ ದಂತಿಯಂ ರಿಪುಚಮೂವಿದ್ರಾವಣಂ ರಾವಣಂ (ಪಂರಾಮಾ. ೧೦-೨೦೯); ಬೇಂಟೆಗೂಡ್ಪುಗಿಸಿ ವಿಪಿನಕೆ ನಡೆವೆನಲ್ಲಿ ಶರತತಿಯ ಕಱಿವೆಂ ದಂತಿಗಳ ತಲೆಯ ಮುತ್ತುಗಳುದುರೆ ಸೀಳ್ವೆಂ (ಭಾವಚಿಂ. ೬-೫); ಕಾಮರೂಪದ ಅರಸನು ವಿಂಧ್ಯಗಿರಿಗಳಿಂತಿದ್ದ ಹತ್ತು ದಂತಿಗಳನ್ನು ಕಳಿಸಿದ್ದನು (ಶಾಂತಲಾ. ೧೧೪). ೨. ಒಂದು ಬಗೆಯ ಗಿಡ; ಜಾಪಾಳದ ಗಿಡ. ೩. ಕರಿಯ ಉಮ್ಮತ್ತಿ ಗಿಡ : "ಮುಕೂಲಕಃ, ನಿಕುಂಭಃ, ದಂತಿಕಾ, ಪ್ರತ್ಯಕ್ಶ್ರೇಣೀ, ಉದುಂಬರಪರ್ಣೀ – ಈ ೫ ದಂತಿಯ ಗಿಡು" (ನಾಚಿರಾ. ೧೧); ಕ್ರಿಯೆಯಿಂ ನೆಲ್ಲಿಯುಂಮಂ ದಂತಿಯುಮಂ ರಜನಿಯುಮನರೆದು ಕುಡಿದೊಡೆ . . . ಭಗಂದರಂ ಪ್ರಶಮಿಸುಗುಂ (ಲೋಕೋಪ. ೯-೧೫೪); ತಿಗಡೆ ಸೈಂಧವಂ ದಂತಿಯುನುಷ್ಣಜಲಮಿಶ್ರಿತದಿಂ ಮಾಡೆ ಜಯಂಗೆಯ್ಗುಂ ಸಮಸ್ತ ಶೂಲಾ(ಲ)ವ್ಯಥೆಯಂ (ಅಶ್ವಶಾ. ೧೧-೧೦); ಬೆಲ್ಲ, ದಂತಿ, ಚೆಂಗಣಗಿಲ ಕೋಷ್ಟ, ಸೀಸ, ರಕ್ತಚಂದನ ಇಷ್ಟನೂ ಎಕ್ಕದ ಹಾಲಿನಲ್ಲಿ ಅರೆದು ಕರ್ಣಿಕ ಗ್ರಂಥಿಯ ಲೇಪಿಸಲು ಗ್ರಂಥಿಶಮನವಹುದು (ವೈದ್ಯಸಾ. I, ೮೦). ☞ ಆಯುರ್ವೇದ ನಿಘಂಟುಕಾರರು ಒಂದು ಪದದ ಅರ್ಥವನ್ನು, ಆ ಪದದ ಪರ್ಯಾಯ ಶಬ್ದಗಳಿಗೆಲ್ಲಾ ಅನ್ವಯಿಸುತ್ತಾರೆ. ೪. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : ಅಷ್ಟ, ವಸು, ದಂತಿ . . . ದಿಗ್ದಂತಿ ಇಂತಿನಿತುಂ ಎಕ್ಕೆ ಪೆಸರು (ವ್ಯವಹಾ. ೧೦-೩೦); ಶತಮುಪೇಂದು ದಿನಪತ್ರತಯಾಗ್ರದೊಳಾವಗಂ ಜಿತಮನೋಭವಗಣಂ ಬರೆ ದಂತಿಯೊಳೊಪ್ಪಿ ಪದ್ಧತಿಯೊಳಲ್ಲಿ ಯತಿ ತಾಂ ನಿಲೆ ಮಂಗಳಂ (ಛಂದೋಂಬು. ೨-೧೫೯).
[ ಸಂ. ದಂತಿನ್ ]

**ದಂತಿಕಪೋಲ** (ನಾ). ಆನೆಯ ಕೆನ್ನೆ,- ಗಂಡಸ್ಥಲ : "ದಂತಿಕಪೋಲ ಭೇಕ ಬಲಿಜೀವನಭಂ ಕರಟಾಹ್ವಯಂ" (ನಾನಾರ. ೮೮). [ ದಂತಿ + ಕಪೋಲ ]

**ದಂತಿಗ** (ನಾ). ೧. ಆನೆಯ ಮೇಲೆ ಕುಳಿತು ಯುದ್ಧಮಾಡುವ ಸೈನಿಕ,-ಭಟ : ಮಂತ್ರೀಶಗೇಡಿ ಮನ್ಮಥಕುಮಾರಕ ತನ್ನ ತೊಂತಿದ ಖಳರನುತ್ತರಿಸಿ ಹಂತಿಯೊಳ್ ಕೆಡಹಲ್ಕೆ ಕುಂಭಾಂಡನ ಕೊಂಡು ದಂತಿಗರಡ್ಡಯಿಸಿದರು (ಮೋಹತ. ೩೯-೩೭). ೨. ಒಬ್ಬಾತನ ಹೆಸರು : ಕಂಚಿಯನಾಳ್ವ ದಂಡಿಗನ ಮೇಗೆಟ್ಟು (ಎಇ. XXXIII, ೩೩೦-೭; 804); ಅವರಿಂ ಬಱಿಯಂ ಶ್ರೀದಯಿತಂ ದನ್ತಿಗನುದಿತೋದಿತಂ (ಎಕ. XI, ಚಿತ್ರದು. ೪೯-೩೭; 947). [ ದಂತಿ + -ಗ$_2$ ]

**ದಂತಿಗಮನೆ** (ನಾ). ಆನೆಯಂತೆ ನಡಗೆಯುಳ್ಳವಳು; ಗಜಗಮನೆ : ದಂತಿಗಮನೆಯಳ ಮೈಗಂಧ ಪೊರಸೂಸಲು (ನವಮೋ. ೪-೪೨).
[ ಸಂ. ದಂತಿಗಮನಾ (ದಂತಿ + ಗಮನ + -) ]

**ದಂತಿಘಟೆ** (ನಾ). ಆನೆಯ ಹಿಂಡು,-ಸೈನ್ಯ; ದಂತಿಘಟೆ ದಂತಿಘಟೆಯೊಳಾಂತು ಮೊಗಮಿಕ್ಕೆಯುಂ ಜೋದರ್ ಜೋದರೊಳೇಸಾಡೆಯುಂ (ಪಂರಾಮಾ. ೧೩-೭೭ ವ); ದಿಂಡುಗೆಡೆದವು ದಂತಿಘಟೆ ಶತಖಂಡವಾದವು ತುರಗದಳ (ಕುವ್ಯಾವಿ. ೪-೪೯). 'ಕರಿಘಟೆ' ಪರಾ. [ ದಂತಿ + ಘಟೆ ]

**ದಂತಿಚರ್ಮ** (ನಾ). ಆನೆಯ ತೊಗಲು,- ಚರ್ಮ : ಹೊಳೆಹೊಳೆವ ಕೆಂಜಡೆಯನಹಿಪತಿಯಳುಕೆ ಬಿಗಿದನು ದಂತಿಚರ್ಮವ ನೆಲಕೆ ಮುಂಜೆಱಗೆಳೆಯಲುಟ್ಟನು ದೇಸಿಪರಿ ಮೆಱೆಯೆ (ಕುವ್ಯಾಕ. ೭-೧೧).
[ ದಂತಿ + ಚರ್ಮ ]

**ದಂತಿನಿ** (ನಾ). ಹೆಣ್ಣು ಆನೆ; ಪಿಡಿ : ದಂತಿನಿ ಮೊಲೆಯೂಡೆ ನಿಂದು ನಿಜಪೋತಮಂ (ಶಾಂತಿಪು. ೨-೧೧೫); ದಂತಿನಿ ದಂತಿಯಂ ವನದೊಳಬ್ಬಿನಿಯೊಳ್ ಕಳಹಂಸಿ ಹಂಸನಂ ಕಂತುವನಾ ರತಿಪ್ರಮದೆ ನಂದನದೊಳ್ ನೆಱೆ ಕಾಣದಂತತಿಭ್ರಾಂತಿಯನಪ್ಪುಕೆಯ್ವ ತೆಱದಿಂ (ನೇಮಿಪು. ४-४४).
[ ಸಂ. ದಂತಿನೀ ]

**ದಂತಿಪ** (ನಾ). ಆನೆಯನ್ನು ಕಾಪಾಡುವವನು ; ಮಾವಟಿಗ : ಪಾಡುತಿರೆ ತದ್ದಂತಿಪನತಿನೂತ್ನಗೀತಪಾತನ ವಿಕಲಸ್ವಾಂತೆಗೆ ನೋಡುವ ಕೂಡುವ ಚಿಂತೆ ಕಡಲ್ವರಿದುದು (ಯಶೋಚ. ೭-೩೨). [ ಸಂ. ]

**ದಂತಿಪುರ** (ನಾ). ಕೌರವರ ರಾಜಧಾನಿ ; ಹಸ್ತಿನಾಪುರ : ನಿಜಸೇನೆ ಬರಲು ದಂತಿಪುರಕಲ್ಲಿಯ ಸಮಸ್ತವಸ್ತುಗಳ್ಳೈದುವಂತೆ ನೇಮಿಸಿ ಮಯೂರ ಧ್ವಜಂ ಸಹಿತ ನಡೆದಂ (ಜೈಮಿಭಾ. ೨೬-೭೭). [ ದಂತಿ + ಪುರ$_2$ ]

**ದಂತಿಮುಳ್ಳು** (ನಾ). ದಂತಿಗಿಡದ ಮುಳ್ಳು : ದಂತಿಮುಳ್ಳನು ಹೋಳಿಗೆ ೩ ಚುಚ್ಚುವದು ಕೆಂಪಿನ ಕಣಿಗಲು ಹೂ ೧೧ ಅರಿಶಿನ ಕೆಂಪು ಅಕ್ಷತೆ ಮನೇಬಾಗಿಲಲ್ಲಿ ಹೂಳುವದು (ಕಾಕುಚಿಂ. ೨-೩).

[ ದಂತಿ + ಮುಳ್ಳು (< ಮುಳ್$_2$) ]

**ದಂತಿರಾಜ** (ನಾ). ಶ್ರೇಷ್ಠವಾದ ಆನೆ ; ಗಜರಾಜ : ದಂತಿರಾಜನಂ ತೊಡರ್ಚಿ ಪಿಡಿದೊಯ್ಯನೊಯ್ಯನೆ ಪೊಱಮಟ್ಟು (ಅನಂಪು. ೬-೯೪ ವ).

[ ದಂತಿ + ರಾಜ ]

**ದಂತಿವೃಂದ** (ನಾ). = ದಂತಿಘಟೆ: "ದಂತಿವೃಂದಂ ಘಟೆಯೆನಿಕ್ಕು" (ಮಂಗರಾ. ೪೬-೩). [ ದಂತಿ + ವೃಂದ ]

**ದಂತಿವ್ರಜ** (ನಾ). = ದಂತಿಘಟೆ : ದಂತಿವ್ರಜದಿಂದಂ ದ್ವಿಜಸಂತತಿಯಿಂ . . . ತುಂಬಿರ್ಪುದು ತನ್ಮಹಿಕಾಂತನ ಬಂಧುಗಳ ವೈರಿವರ್ಗದ ದುರ್ಗಂ (ಬಾಧಪು. ೨-೧೮). [ ದಂತಿ + ವ್ರಜ ]

**ದಂತಿವ್ರಾತ** (ನಾ). = ದಂತಿಘಟೆ : ತುರಗನರರಥವಿಟ್ಟಣಿಸೆ ಸವಱಿದವು ದಂತಿವ್ರಾತವುಭಯದೊಳು (ಕುವ್ಯಾಭೀ. ೪-೭೮). [ ದಂತಿ + ವ್ರಾತ ]

**ದಂತಿಶಿಶು** (ನಾ). ಆನೆಯ ಮರಿ; ಕಲಭ : ಹಯಗ್ರೀವಂ ಆ ತ್ರಿಪೃಷ್ಠಂಗಿದಿರ್ಚಿ ವನನಾಗಾರಿಯನಾಂತ ದಂತಿಶಿಶುವೊಲ್ . . . ನೀಡಿಲ್ಲ ದಳ್ಳಾಡುಗುಂ (ಶಾಂತಿಪು. ೩-೨೭). [ ದಂತಿ + ಶಿಶು ]

**ದಂತಿಸಂತಾನ** (ನಾ). = ದಂತಿಘಟೆ : ದಂತಿಸಂತಾನಮಂ ಕಿಶೋರ ಕೇಸರಿಯುಳಱಿಸಲ್ ನೆಱೆವುದು (ನೇಮಿಪು. ೯-೨೬ ವ).

[ ದಂತಿ + ಸಂತಾನ ]

**ದಂತುರ** (ಗು). ೧. ಎತ್ತರವಾದ ಹಲ್ಲುಗಳುಳ್ಳ ; ಮೇಲಕ್ಕೆ ಉಬ್ಬಿದ ಹಲ್ಲುಗಳುಳ್ಳ. ೨. ಸಮತಳವಲ್ಲದ ; ಹಳ್ಳತಿಟ್ಟಾದ ; ವಿಷಮತಳ ವಾದ : ದಂತುರ ದಿಗಂತ ಚುಂಬಿತ ಉದಯಮೇಣಸ್ತರವಿದರ್ಶನಂ (ಶ್ರೀರಾಮಾ. ೪೦೩-೩೩). ೩. ಹರಡಿರುವ ; ವ್ಯಾಪ್ತವಾದ : ತುಪ್ಪಟ ತತಿಯಿಂ ದಂತುರವಾದೆನ್ನಂಗಮನಂತರಿಸದೆ ಕರದಿನೆಟಿವಿದಂ ಮನದಟಲಂ (ಕಾದಂಉ. ೭೩೦). [ ಸಂ. ]

**ದಂತುರಚಕ್ರ** (ನಾ). ಹಲ್ಲುಗಳನ್ನು ಹೊಂದಿರುವ ಚಕ್ರ : ದಂತುರಚಕ್ರ, ಅಂದರೆ ಹಲ್ಲುಗಳುಳ್ಳಂಥ ಚಕ್ರ . . . ಮುಳ್ಳುಗಳುಳ್ಳಂಥ ಚಕ್ರವೆಂತಲೂ ಅನ್ನಬಹುದು (ಮುಂಬಯಿ. ೩-೧೯೧ ಅಡಿಟಿ). [ ದಂತುರ + ಚಕ್ರ$_1$ ]

**ದಂತುರಿತ** (ಗು). ೧. ಹರಡಿರುವ ; ವ್ಯಾಪ್ತವಾದ : ಮಹಾ ಪ್ರವಾಹಿನೀ ಸಲಿಲ ಸಂಮಿಶ್ರ ಕರ್ಪೂರದಳ ಬಹುಳಕಾಂತಿ ದಂತುರಿತ ಚಂದ್ರಕಾಂತ ಕಲಶಂಗಳಿಂ (ಪಂರಾಮಾ. ೧೨-೨ ವ). ೨. ತುಂಬಿರುವ : ಮೌಕ್ತಿಕಮಂಡ ಪದ ನಡುವಣ ಮರಕತಪರ್ಯಂಕದೊಳವಿರಳಾಶ್ರುಬಿಂದುಸಂದೋಹ ದಂತುರಿತಪಕ್ಷ್ಮಮಾಲಾಲುಳಿತನೇತ್ರಯುಂ (ಚಂದ್ರಪು. ೩-೫೦ ವ). (ನಾ). ೩. ನೆಗ್ಗಿದುದು ; ಹಳ್ಳಬಿದ್ದಿರುವುದು : ವಿವಿಧಾಯುಧ ದಂತುರಿತಂಗಳೆಱಿದುಮಾ ಸಂಗರಜಳನಿಧಿಯೊಳ್ ವರೂಥಕರಿನಿಕರಂಗಳ್ (ಪಂಪಭಾ. ೧೩-೩೫). [ ಸಂ. ]

**ದಂತೋಷ್ಠ್ಯ** (ನಾ). [ವ್ಯಾಕ] ಹಲ್ಲು ಮತ್ತು ತುಟಿಗಳ ಸಹಾಯದಿಂದ ಹುಟ್ಟುವ ವರ್ಣ,-ಸ್ವನ ; ವಕಾರ: ದಂತೋಷ್ಠ್ಯ-ವ (ಕೈಪಿಡಿ. ೫).

[ ಸಂ. ]

**ದಂತ್ಯ** (ನಾ). [ವ್ಯಾಕ] ದಂತಪ್ರದೇಶದಿಂದ ಹುಟ್ಟುವ ಅಕ್ಷರ ; ಹಲ್ಲಿನ ಸಹಾಯದಿಂದ ಉಚ್ಚರಿಸಲ್ಪಡುವ ಅಕ್ಷರ ; ತಥದಧನ ಮತ್ತು ಲ, ಸ ವರ್ಣಗಳು : ದಂತ್ಯ ತವರ್ಗ, ಲ, ಸ, (ಕೈಪಿಡಿ. ೫) : ಕರ್ನಾಟ ಎಂಬ ದಂತ್ಯವರ್ಣದ ರೂಪ ಸರಿಯೆ ? (ದ್ರಾವಿವಿ. ೮೫). [ ಸಂ. ]

**ದಂತ್ಯಾವಳಿ** (ನಾ). = ದಂತಿಘಟೆ : ಆ ವಿಗಡಪರಿವಾರದಲಿ ರಥ ಸಾವಿರವ ಮೇಳೈಸಿದರು ದಂತ್ಯಾವಳಿಯ ಬೇಱೆಣಿಸಿ ನಿಲಿಸಿದರೈದುಸಾವಿರವ (ಕುವ್ಯಾಕ. ೧೯-೩). [ ದಂತಿ + ಆವಳಿ$_1$ (= ಆವಲಿ) ]

**ದಂದಣ** 'ದಣದಣ' ನೋ.

**ದಂದರಹಾಳ** (ನಾ). ವ್ಯರ್ಥವಾಗಿ ಖರ್ಚುಮಾಡುವವನು ; ದುಂದು ಗಾರ: "ಹಣವನ್ನು ಲಕ್ಷ್ಯವಿಲ್ಲದೆ ಖರ್ಚುಮಾಡುವವನು,-ಪೋಲುಮಾಡು ವವನು; ದುಂದುಗಾರ, ದಂದರಹಾಳ" (Spendthrift. ಇಂಕನ್ನ).

[ < ದುಂದು + ಹಾಳು (< ಪಾೞ್) + - ಅ$_7$ ]

**ದಂದರಹಾಳಿ** (ನಾ). ವ್ಯರ್ಥವಾಗಿ ಖರ್ಚುಮಾಡುವವಳು ; ದುಂದು ಗಾತಿ : ಅಕ್ಕಿಯನ್ನು ನಿಮ್ಮಪ್ಪನ ಮನೆಯಿಂದ ತಂದಿದ್ದೆಯೇನೆ ದಂದರಹಾಳಿ ? (ಮಾಮರಾ. ೧೦೦) ; ಬೀರಕ್ಕನು ದಂದರಹಾಳಿ, ವಿಪರೀತ ವೆಚ್ಚವನ್ನು ಮಾಡತಕ್ಕವಳು (ನೀತಿಚಿಂ. IX, ೨).

[ ದಂದರಹಾಳ + - ಇ$_2$ ]

**ದಂದವಡೆ** (ಕ್ರಿ). ಬೇರೆಯಾಗು ; ವಿಯೋಗವನ್ನು ಹೊಂದು (?) : ದಂದವಡೆದೊಡಗೂಡಲಿಲ್ಲದತಿಶಯಚಿಂತೆ ಸಂದಣಿಸಿದುದು ಚಿತ್ತದೊಳು (ಸೌಂದಪು. ೧೩-೩೩) : "ಮೋಹ ತಾಳು" (ಪ್ರಭಣ$_2$).

[ < ದ್ವಂದ್ವ + ಪಡೆ$_1$ ]

**ದಂದವೊಡೆ** (ಕ್ರಿ). ವೈಷಮ್ಯವನ್ನು ಪರಿಹರಿಸು ; ವಿರೋಧವನ್ನು ನೀಗು (?) : ದೂರ್ವಾಸ ಮುನಿ ನುಡಿದಂತೆ ಕೃಷ್ಣಂಗೆ ಸಂದೆಗಮಣಿಂ ದೋರದಾಟಿಯದನಿಂದ ಸಲೆ ಸಂದ ಮರಣಂ ಸಾಧ್ಯದರಿನೀಶಪ್ರಸಾದಿಗಳ ಮಹಿಮೆಯನಾವನು ದಂದವೊಡೆವಂತೆ ಬಣ್ಣಿಪನದಂತಿರ್ಕೆ ಮನದಂದು ಮಾತ್ರಂ ಕೇಳಿರೆಲೆ ವಿಪ್ರದುಷ್ಟರಿರ ಮುಂದಿನ್ನೆ ಪೇಳ್ವೆಂ ಸುಕೇಶಪುಂಗವನ ಕಥೆಯನದನಾಲಿಸುವುದು (ಅರಾಚ. ೬-೨೪).

[ ☞ ಇದು 'ಅಂದವಡೆ' ಎಂಬುದರ ಅಪಲಿಖಿತವಿರಬಹುದು ]

**ದಂದಶೂಕ** (ನಾ). ಹಾವು ; ಸರ್ಪ : "ವಿಷಧರಃ, ದಂದಶೂಕಃ . . . ಭುಜಂಗಮಃ - ಈ ೨೫ ಪಾವಿನ ಪೆಸರ್" (ಹಲಾಯು. ೦೦೫-೧೮) : ಕುಪಿತಾನೇಕಪದಂದಶೂಕದವ . . . ಜರಾತಂಕಾದಿಭೇದಂಗಳವ್ಯಾಪ ಸರ್ಗಂಗ[ಳಿ]ಂ (ಆದಿಪು. ೧೬-೯); ದುರ್ಜನರಿಗಂಜುವುದು ಲೋಕವು ಸಜ್ಜನರ ಲೆಕ್ಕಿಸದು ತಾರ್ಕ್ಷ್ಯನ ಸೆಜ್ಜೆಯೊಳಗಿಹ ದಂದಶೂಕ ನನರ್ಚಿಸು ವರೊಲಿದು (ಕುವ್ಯಾಉ. ೪-೨೦). [ ಸಂ. ]

**ದಂದಶೂಕಪತಾಕ** (ನಾ). ಬಾವುಟದಲ್ಲಿ ಸರ್ಪದ ಗುರುತುಳ್ಳವನು ಉರಗಪತಾಕ ; ದುರ್ಯೋಧನ : ದಂದಶೂಕಪತಾಕನ ಸೆಱಗಿಲ್ಲದ ಮೆಯ್ಗಲಿತನಕ್ಕೆ ಮೆಚ್ಚಿ (ಗದಾಯು. ೭-೩೦ ವ).

[ ಸಂ. ದಂದಶೂಕ + ಪತಾಕಾ + - ]

**ದಂದಶೂಕಪತಿ** (ನಾ). ಹಾವುಗಳ ಒಡೆಯ; ಸರ್ಪಶ್ರೇಷ್ಠ; ಆದಿಶೇಷ: ಭಾಳವಿಲೋಚನಂ ದಂದಶೂಕಪತಿಹಾರಮಂದಾರಸ್ಮೇರಮುಖಂ . . . ನಿಜರೂಪಂ ತೋಱಿದಂ (ರಾಜಶೇ. ೦೪-೮೬). [ ದಂದಶೂಕ + ಪತಿ$_2$ ]

**ದಂದಶೂಕಪ್ರಮಾಥಿ** (ನಾ). ಹಾವುಗಳನ್ನು ಮರ್ದಿಸುವವನು,-ಕೊಲ್ಲು ವವನು ; ಗರುಡ : ಮುಂದೆ ನಿಂದಿರ್ದ ದಂದಶೂಕಪ್ರಮಾಥಿಯಂ ಯಥೋಚಿತ ಸ್ನಿಗ್ಧಮಧುರಾಳಾಪದಿಂ ಸಂಭಾಷಿಸಿ ದೇವಕೀನಂದನಂ ಸ್ಯಂದನಮಂ ಕಿಱಿದು ನಡೆಯಿಸೆ (ಜಗವಿ. ೮-೮೦ ವ).

[ಸಂ. ದಂದಶೂಕಪ್ರಮಾಥಿನ್]

**ದಂದಶೂಕಭಯ** (ನಾ). ಹಾವಿನ ದೆಸೆಯಿಂದ ಉಂಟಾಗುವ ಹೆದರಿಕೆ ; ಸರ್ಪಭೀತಿ : ಅವದ್ಯವಾದ್ಯದ್ದಂದಶೂಕಭಯಜಾಗರೂಕರ ವನಿಪಾಶ್ರಮಂಗಳರಸುಗೆಯ್ಯುತ್ತಮಿರೆ (ಶಾಂತಿಪು. ೭-೧೨೩ ವ).
[ ದಂದಶೂಕ + ಭಯಂ ]

**ದಂದಶೂಕವನಿತೆ** (ನಾ). ಹೆಣ್ಣುಹಾವು ; ಭುಜಂಗಿ : ದಂದಶೂಕವನಿತಾ ಜನಮಭಿಮ್ಮುತಿಗೆಯ್ದು ಬಿನ್ನವಿಸೆ (ಜಗವಿ. ೩-೧೧೩ ವ).
[ ದಂದಶೂಕ + ವನಿತೆ ]

**ದಂದಶೂಕವಿಭೂಷ** (ನಾ). ಹಾವುಗಳೇ ಒಡವೆಯಾಗಿರುವವನು ; ನಾಗಭೂಷಣ ; ಶಿವ : ಜಯಜಯ ದಂದಶೂಕವಿಭೂಷ (ತ್ರಿಭುತಿ. ೧೨-೭). [ ಸಂ. ]

**ದಂದಶೂಕೇಶ್ವರ** (ನಾ). ಸರ್ಪರಾಜ ; ಆದಿಶೇಷ : ಸಂಜೀವಕದ ರತ್ನಮಂ ದಂದಶೂಕೇಶ್ವರಂ ಕುಡುವನೆಂಬಾಸೆಯಿಂ ಪಂಬಲಿಸುತಿರುತಿರ್ದರು (ಜೈಮಿಭಾ. ೨೯-೨೭). [ ದಂದಶೂಕ + ಈಶ್ವರ ]

**ದಂದಹಗೊಳಿಸು** (ಕ್ರಿ). ಸುಡು; ದಹಿಸು; ಸಂತಾಪವನ್ನುಂಟುಮಾಡು; ಹಿಂಸಿಸು : ಸಾಹಸಿಯಾಕೆಯರಸನು ಅವನ ಅಗ್ರಜನು ಬಲಯುತನು ಮೂಲೋಕ ದಂದಹಗೊಳಿಪನು (ಜಿನಭಾ. ೫೦-೨೮).
[ ದಂದಹ ? + ಕೊಳ್$_1$ + – ಇಸು$_3$ ]

**ದಂದಹ್ಯಮಾನ** (ಗು). ಹೆಚ್ಚಾಗಿ ಸುಡುವ ; ಅತಿಶಯವಾಗಿ ಸುಡುವ : ಧರೆಯಾಗಸವ ದಂದಹ್ಯಮಾನವ ಮೂಳ್ಪ ಉರಿವ ಬಾಣವ ಮಂತ್ರಿಸಿಡಲು (ಜ್ಞಾನಸಿ. ೫-೮೧). 'ದಂದಹ್ಯಮಾನಗಾತ್ರೆ' ಪರಾ. [ ಸಂ. ]

**ದಂದಹ್ಯಮಾನಗಾತ್ರೆ** (ನಾ). ಬಹಳವಾಗಿ ಸುಡುತ್ತಿರುವ ಶರೀರವುಳ್ಳವಳು ; ಬಹಳ ಸಂತಾಪವನ್ನು ಅನುಭವಿಸುತ್ತಿರುವವಳು ; ತುಂಬ ವ್ಯಥಿತಳಾದವಳು: ಅಸಹ್ಯಪರಿಭವಾನಲ ದಂದಹ್ಯಮಾನಗಾತ್ರೆಯುಮಾಗಿ . . . ಪಾಂಚಾಲರಾಜತನೂಜೆ ಪವಮಾನತನೂಜನಲ್ಲಿಗೆವಂದು (ಗದಾಯು. ೧-೫೫ ವ). [ ಸಂ.ದಂದಹ್ಯಮಾನಗಾತ್ರಾ (ದಂದಹ್ಯಮಾನ+ಗಾತ್ರ+–)]

**ದಂದಹ್ಯಮಾನಮಾನಸ** (ನಾ). ಬಹಳ ಸಂತಾಪಪಡುತ್ತಿರುವ ಮನಸ್ಸುಳ್ಳವನು ; ಅತ್ಯಧಿಕವಾದ ಮನೋವ್ಯಥೆಯನ್ನು ಅನುಭವಿಸುತ್ತಿರುವವನು : ಕುಲಾಪವಾದ ಪರಾಭವದ ದಾವಾನಳದಿಂ ದ[ಂ]ದಹ್ಯಮಾನ ಮಾನಸನುಮಸಹ್ಯಮಾನ ಚಿಂತಾಂತರಂಗನುಮಾಗಿ (ಸುಕುಮಾ. ೨-೧೦ ವ): ಸಲಿಲಸಂಘಾತದಿನಪಮೃತ್ಯು ಪುಟ್ಟೆ ಮಾನಸರಸಹ್ಯ ಶೋಕಾನಲ ದಂದಹ್ಯಮಾನಮಾನಸರಾಗೆ (ಪಂರಾಮಾ. ೧-೮೦ ವ).
[ ದಂದಹ್ಯಮಾನ + ಮಾನಸ$_2$ ]

**ದಂದಳ** 'ದಣದಣ' ನೋ.

**ದಂದುಗ** (ನಾ). ೧. ತೊಡಕು ; ಗೊಂದಲ ; ಸಿಕ್ಕು : ಪುರಪುರಂಧ್ರಿಯರ ಸಂದಣಿಸಿ ಬಳೆದ ಮೊಲೆಯೊಡೆಯನಿಱಿದೆಂದುಮಿಲ್ಲದ ಮುತ್ತಿನಾರಮಿಂದೆ ಸಂದುದೆಂಬ ಸಂದೆಗದ ದಂದುಗಮನವರೊಡನಾಡಿಗಳ ಚಿತ್ತದೊಳ್ ಬಿತ್ತಿಯುಂ (ಚಂದ್ರಪು. ೮-೪೩ ವ): ಇಂದಿನವರಂದಿನವರ್ ಕೆಲರೆಂದು ಪಿರ್ಕುಮೀ ದಂದುಗದಿಂದಮೋನೆಮಗನಿಂದ್ಯ ಕವೀಂದ್ರರೆ ವಂದ್ಯರಾಮಗಂ (ಧರ್ಮನಾ. ೧-೪೨). ೨. ವ್ಯಥೆ; ದುಃಖ ; ಶ್ರಮ ; ಕ್ಲೇಶ : ಎಂದೋ ಸಂಸಾರದ ದಂದುಗ ಹಿಂಗುವುದು (ಬಸವ.೨೨); ತನ್ನ ಕೇಳೀವನಮಂ ಪರೇತವನಮೆಂದವನೀಶನಮಂ ಸಮಂತು ಸಂಭಾವಿಸಿದಂದು ಭಾವಿಸದನೊಂದನೆ ದಂದುಗದಿಂದಗಲ್ದುದಂ (ಚಂದ್ರಪು. ೯-೧೭) : ಕವಿತೆಯನು ಬಱಿದೆ ದಂದುಗಕ್ಕೊಳಗಾಗಿ ಪೇಳ್ದನೆಂದೆನ್ನ ನಗುವಂದಮಂ ಮಾಡದೆನಗೊಲಿದಿತ್ತನ ಮಲಮತಿಯಂ ದೇವಪುರದ ಲಕ್ಷ್ಮೀರಮಣನು (ಜೈಮಿಭಾ. ೧-೭). ೩. ಕಷ್ಟ; ತೊಂದರೆ: ಇಂದು ಸುಧಾಂಶು ರಾಜನತಿ ಶೀತಳಶೀಲನನೂನದಾನಿಯೇಳ್ತಂದೊಡೆ ಪಂಕಜಕೆ ಚಕ್ರಯುಗಕ್ಕಸತೀಕುಲಕ್ಕೆ ಪೋ ದಂದುಗಮಾಯ್ತು (ಗಿರಿಕ.೪-೧೧೪) : ಮನುಜರೆಲ್ಲರುಂ ಸಾವ ಹುಟ್ಟುವ ದಂದುಗಕ್ಕೊಲ್ದು ಬಱಿದೆ ಕಿಡುತಿರ್ಪರದನಂಸಿರಲಳವೆ (ಚಿಬಸ. ೩-೦೫) ; ಪಲವುಂ ಪಂಬಲೊಂದು ದಂದುಗಂ ಬೆಟ್ಟತಾಗೆ ಬೀಟ್ಕೊಂಡಂ (ರಾಮಾಶ್ವ. ೩೯-೦೩). ೪. ಗೋಜು ; ಗೊಡವೆ : ವಿಷಾಹಿಗಣಮನೇಕರೌದ್ರ ಮೃಗಜಾತಿಗಳಾಳಳರಸೆಂಬುದೊಂದು ದಂದುಗಂ . . . ಪೊಱಗೆಂದೊಡಿಂ ಸುಖಮನೇವೊಗಟ್ಟುವುದೊ ಭೋಗಭೂಮಿಯಾ (ಆದಿಪು. ೫-೩೦) ; ನಿಮ್ಮನಱಿದ ಶರಣಂಗೆ ಶಿವಪೂಜೆಯ ಮಾಡುವ ದಂದುಗವೇಕೋ (ಶೂನ್ಯಸಂ. ೦೮೫-೪) ; ಎಮಗೆ ತಪಸ್ವಿಗಳ್ಗೆ ನೃಪವಾರ್ತೆಯ ದಂದುಗಮೇವುದೆಂದು ನಿರ್ಮಮತೆಯಿನಿರ್ಪೊಡೆ (ಶಬ್ದಾನು. ೪೭೮ ವ್ಯಾಖ್ಯಾ). ೫. ಕೆಟ್ಟ ಕೆಲಸ ; ದುಷ್ಕರ್ಮ ; ಪಾಪಕೃತ್ಯ : ಹಿಂದೆ ಮಾಡಿದ ಭವಭವಂಗಳ ದಂದುಗವು ಜೀವರನು ನಾನಾಛಂದದಲಿ ಬೇಸಱಿಸಿ ಕಾಡುವದು (ಅಕ್ರೂರ. ೩-೩೦). ೬. ಹವ್ಯಾಸ ; ಚಟ : ಕಬ್ಬದ ದಂದುಗವಿಲ್ಲದೊನಟ್ಟಿ ಕಳೆವರೆ ನಾಡಿಂ (ಬಂಹರಿ. ೧-೦೫); ವ್ಯಾಪಾರ, ನೌಕರಿ ಮೊದಲಾದ ದಂದುಗಗಳ ಒತ್ತಾಯಕ್ಕಾಗಿ ತಾಯಿಯು ತೊಟ್ಟಿಲಿನ ದಾರವನ್ನು ಆಳಿನ ಕೈಯಲ್ಲಿ ಕೊಡುವ ರೂಢಿಯು ಹೆಚ್ಚಾದರೆ (ಯುಕ್ತಪ್ರ. ೦೫೪). ೭. ಒಡನಾಟ ; ಸಹವಾಸ : ಸದ್ಬ್ರಾಹ್ಮಣನ ಕನ್ನೆಯನು ಅಂದವಾಗಿರಲಗ್ನಿಸಾಕ್ಷಿಕದಿಂದ ವರಿಸುವೆನೀಗ ನಿನ್ನಯ ದಂದುಗಕ್ಕೊಳಗಾಗೆನೆಂದನು (ತಿಮ್ಮಅ. ೫-೦೩) ; ಹಿಂದೊಬ್ಬ ಋಷಿಪುತ್ರನಂದು ದಾಸಿಯಂ ಕೂಡೆ ಸಂದೇಹವಿಲ್ಲದೆ ಹಲವು ಕಾಲ ದಂದುಗದೊಳಂ ಸಿಲುಕಿ ನಿಂದು (ಪುರಂದ. ೧-೦೭೨-೨) ; ಬಂಧನವ ಮಾಡಿದರು ಸಂದ ಜ್ಞಾನಿಯೆ ಲೇಸು ಹೊಂದಿ ಸಾಸಿರವ ಕೊಟ್ಟರೂ ಕರ್ಮಿಯ ದಂದುಗವೆ ಬೇಡ (ಸರ್ವಜ್ಞ. ೪೩೦). ೮. ಕೆಲಸ ; ಉದ್ಯೋಗ ; ಕಾರ್ಯ : ಅತ್ತಲಿತ್ತಲೆಡೆಯಾಡುವ ದಂದುಗದಾಗಳೇಂ ಪೊದಟ್ಟಿಸೆದುದೊ ಚಾರುದೇವಗಣಿಕಾಮಣಿನೂಪುರ ಮಂಜುಸಿಂಜಿತಂ (ಆದಿಪು. ೭-೨೨); ನಿನ್ನನಿನ್ನಾನುಮಂಗಲ್ವೆನೇ ಕೆಳೆಯ ಬೆನ್ನನೆ ಬಂದಪೆನಾಂತರಂ ಯಮಸ್ಥಾನಮನೆಯ್ದುಸುತ್ತಿದುಮೆ ದಂದುಗಂ (ಪಂಪಭಾ. ೦೩-೩) ; ಜಿನಪದಸೇವೆಯ ದಂದುಗದೊಳ್ ತೊಡರ್ದನೇಂ ಮಹಾತ್ಮನೊ ದಿವಿಜಂ (ಸುಕುಮಾ. ೧೦-೭); ಮಾಟ್ಟ ಸಂಹರಿಪ ದಂದುಗಮುಂ ಪೊಱಗಿಕ್ಕಿತೆಂಬ ಮೆಯ್ಸಿರಿ ಸಹಜಾತಮಾಗೆ (ವರ್ಧಪು. ೧-೮೯). ೯. ದುಷ್ಕರ್ಮಿ ; ಪಾತಕಿ ; ಪಾಪಿಷ್ಠ : ಬೆಂದ ಸಂಸಾರದಲಿ ತೊಳಲುವ ದಂದುಗರು ಹರಿಭಕ್ತಿಶೂನ್ಯರು ನಿಂದಕರು ಹೊಱವಡಲಿ ಬಣ್ಣಿಪೆ ಹರಿಕಥಾಮೃತವ (ಕಾಶಿರಾ. ೪-೨).

**ದಂದುಗಂಬಡಿಸು** (ಕ್ರಿ). ಕಷ್ಟಪಡಿಸು ; ನೋವನ್ನುಂಟುಮಾಡು ; ಪೀಡಿಸು : ಮಂದಮತಿಯುಮನಱಿದು ದಂದುಗಂಬಡಿಸುವುದಿಂದು ಶೇಖರವರಾದ್ವೈತವಱಿಯಾ (ಸಾನಂಜ. ೧-೦೯) ; ದಂದುಗಂಬಡಿಸಿದಡೆ ಭೂತದ ವೃಂದವನು ಕೊಲಿಸುವರು ಮಾಣದೆ ದಂದಶೂಕಾಖ್ಯದಲಿ (ನಿಭಾಗ. ೫-೧೦-೩೯). [ ದಂದುಗಂಬಡು + – ಇಸು$_3$ ]

**ದಂದುಗಂಬಡು, ದಂದಂಗಬಡು** (ಕ್ರಿ). ಕಷ್ಟವನ್ನು ಅನುಭವಿಸು ; ಕೋಟಲೆಗೊಳ್ಳು : ಸಮ್ಯಗ್ಜ್ಞಾನದುದಯದ ನೆಲೆಯ ಕಾಣಿಸದೆ ದಂದುಗಂಬಡುತಿಹುದಾ . . . ಜಗಪಂದೆ (ಕುವ್ಯಾಳು. ೪-೦೭). **ದಂದುಗಬಡು** : ಕಾದಿ ದಂದುಗಬಡದ ಮುನ್ನವೇ ತನ್ನಳವಿಗೈದಿದಂಕದ ಭಟರ ತೇರ್ಗಳಂ ತೆಗೆದಿಳೆಗೆ ಮೋದಿದಂ (ಜೈಮಿಭಾ. ೭-೪೭). [ ದಂದುಗ + ಪಡು$_1$]

**ದಂದುಗಂಬೊಱು** (ಕ್ರಿ). ತೊಡಕಿಗೆ ಸಿಕ್ಕಿಕೊಳ್ಳು : ಇಂದು ಗತಿಗೆಟ್ಟೆಮ್ಮುವಂ ಪೊಱವೆನೆಂಬೊಂದು ದಂದುಗಂಬೊತ್ತು ವಿಧವಾವಿತ್ರಮಂ ಕಳ್ದು ತಂದಿತ್ತು (ಪದ್ಮರಾ. ೦೩-೯). [ ದಂದುಗ + ಪೊಱು ]

**ದಂದುಗಗೊಳ್** (ಕ್ರಿ). ೧. ದುಃಖಪಡು ; ವ್ಯಥೆಯನ್ನು ಹೊಂದು : ದೇವದ್ರೋಹ ಪೋಗದಾಂ ಭಾರಪುಲ್ಲದೆ ಧರೆಗೆ ಹಿತನಾಗೆನೆನುತುಮಾನಂದಿ ದಂದುಗಗೊಂಡನು (ನಂದಿಮಾ. ೯-೫೨). ೨. ತೊಂದರೆಯನ್ನು

ಹೊಂದಂ ; ಕಷ್ಟವನ್ನು ಪಡೆ : ತಾಗಿ ದಂದುಗಗೊಂಡನನುಸಾಲ್ವನಂಗೈಸಿ ಬೀಗಿದಂ ಕರ್ಣಜಂ (ಜೈಮಿಭಾ. ೨೨-೪೧). [ ದಂದುಗ + ಕೊಳ್$_1$ ]

**ದಂದುಗಬಡು** 'ದಂದಂಗಂಬಡು' ನೋ.

**ದಂದೂರಿ** (ನಾ). ವ್ಯರ್ಥವಾಗಿ ಖರ್ಚುಮಾಡುವವಳು ; ದುಂದುಗಾತಿ : ತೆಂದರೆ ತಾ ಹೋಗ ದಂದೂರಿ **ಅತ್ತೆವ್ವಾ** ಬಳಕೂತ ಬಳಕೂತ ದುಂಡ ಗೊಡ ಹೊತ್ತೊ . . . ಬಳಕು ಹೆಣ್ಣಿನ ಮ್ಯಾಗ ಬರುತಾಳ ಬರುತಾಳ ಮತ್ತೊಬ್ಬಳ್ಯಾಂಗ (ಕಜಾಗೀ. ೩). 'ದಂದರಹಾಳಿ' ಪರಾ. [ ? ]

**ದಂಧತೆ** (ನಾ). ದುರಾಸೆ; ಲೋಭ (?) : ವಂದರೆಯು ವದನದೊಳ್ ನೆಲೆಗೈದು ವಕ್ರತರ ಬಂಧುರದ ನುಡಿಗಳಿಂದಶ್ವಪತಿಯಾತ್ಮಜೆಗೆ ದಂಧತೆಯ ಬೋಧಿಸಿ ವಿಕಾರವಮಂ **ಪುಟ್ಟಿಸುತಲ್** (ವಂಕಾರಾ. ೨-೩-೨೯).

[ < ದಂಧನ ? ]

**ದಂಧನ**, ದಂಧನೆ (ನಾ). ೧. ಮೋಸ ; ವಂಚನೆ ; ಕುತಂತ್ರ : ಇಂದು ಮುಂಖಿಯ ನೀ ಬಡಿಸೆಂದು **ಕೊಟ್ಟರೆ** ದಂಧನಗಳ **ಮಾಡಿ** ದೈತ್ಯರ ವಂಚಿಸಿದ (ಪುರಂದ. ೧-೧೩೦-೧). **ದಂಧನೆ :** ೨. ಭ್ರಮೆ; ಭ್ರಾಂತಿ ; ಮೋಹ : ಮನೆಯೆಂಬೊದೆ ಸುಮ್ಮನೆ ಮಕ್ಕಳೆಂಬೊದೆ ದಂಧನೆ (ವಾದಿಕೀ. ೩೨-೧).

[ ದೇ. ॥ ತೆಲು. ದಂದನ ]

**ದಂಧನಂಗೆಯ್** (ಕ್ರಿ). ಮೋಸಮಾಡಂ ; ವಂಚಿಸಂ : ಬೆದಱಿಸಿ ನುಡಿದುಂ ದಂಧನಂಗೆಯ್ದುಂ ಕಾಲಮಂ ಕಳಿವೆವು (ಚಿಕವಂ. ೧೭೬-೪).

[ ದಂಧನ + ಕೆಯ್$_1$ ]

**ದಂಧನೆ** 'ದಂಧನ' ನೋ.

**ದಂಧೆ** 'ಧಂದೆ' ನೋ.

**ದಂಪತಿ** (ನಾ). ೧. ಗಂಡಹೆಂಡಿರು ; ಸತಿಪತಿಗಳು : "ಮಿಥುನಂ ದಂಪತಿಗಳೆನಲು ಜಂಪತಿಗಳೆನೆ ಗಂಡಹೆಂಡಿರ್ಗೆ ಪೆಸರೆನಿಕ್ಕುಂ" (ಮಂಗರಾ. ೮-೨೪) ; ಮನ್ಮಥಕ್ರೀಡೆಗೆ ನೋಡೆ ನಾಡೆ ಗುಱಿಯಪ್ಪುವು ದಂಪತಿ ಭೋಗಭೂಮಿಯೊಳ್ (ಆದಿಪು. ೫-೪೧) ; ಅಗಲದೆ ನಲಿಯುಂತಿರ್ದರಾ ದಂಪತಿಗಳ್ (ಜಗವಿ. ೨-೫೨) ; ಯಾರೊಬ್ಬರಿಗೂ **ತಿಳಿಸದೆ** ದಂಪತಿಗಳು ಮನೆ ಬಿಟ್ಟಿದ್ದರು (ಶಾಂತಲಾ. ೯೦). ೨. ಜೊತೆ ; ಜೋಡಂ. 'ದಂಪತಿವಕ್ಕಿ' ಪರಾ. ೩. = ದಂಪತಿಕ್ಷೇತ್ರ : ವನಜಾತಾಹಿತಸೂನು ದಂಪತಿ ನವಾಂಶಸ್ಥಾಯಿ . . . ಅಖಿಳಗ್ರಹ ವಿಲಗ್ನ ಕ್ಷೇತ್ರಮಂ ವೀಕ್ಷಿಸಲ್ ಜನಿಯಿಕ್ಕುಂ ಪುರುಷತ್ರಯಂ (ಜಾತತಿ. ೬-೧೪). [ ಸಂ. ದಂಪತೀ ]

**ದಂಪತಿಕ್ಷೇತ್ರ** (ನಾ). [ಜ್ಯೋತಿ] ಮಿಥುನರಾಶಿ : ಧನುಜ್ಯೇಜಂ ಕುಜಗೇಹದೊಳ್ ನಿಲೆ ಪರಸ್ತ್ರೀಲೋಲಂ . . . ದಂಪತಿಕ್ಷೇತ್ರದೊಳ್ ಧನವಂತಂ ಧರಣೀಶಕಾರ್ಯಭರಧುರ್ಯಂ ಸತ್ಕಳಾಕೋವಿದಂ (ಜಾತತಿ. ೧೭-೨೯).

[ ದಂಪತಿ + ಕ್ಷೇತ್ರ ]

**ದಂಪತಿಗೆಯ್** (ಕ್ರಿ). ಜೋಡಿಮಾಡಂ ; ಜೊತೆಗೂಡಿಸಂ ; ಗಂಡಹೆಂಡಿರಾಗಂವಂತೆ ಮಾಡಂ : ಭುವನಜಂತುಗಳ ದಂಪತಿಗೆಯ್ವ ಕರ್ತುನಿನ್ನವರ ವಿವಾಹಕ್ಕೆ ಹೊಱತೆ (ವೋಹತ. ೪೧-೪೯). [ದಂಪತಿ+ಕೆಯ್$_1$]

**ದಂಪತಿಜನ** (ನಾ).=ದಂಪತಿ ೧ : ವೇಳವಿಸಿರ್ದ ದಂಪತಿಜನಂ ನಲಿದಾಡುವ ರಮ್ಯಹರ್ಮ್ಯದಿಂ . . . ಎಸೆದಿರ್ಪುದಾ ಪುರಂ (ಜಗವಿ. ೨-೩೪).

[ ದಂಪತಿ + ಜನ ]

**ದಂಪತಿಪೂಜೆ** (ನಾ). ಮದುವೆ, ಮುಂಜಿ ಮೊದಲಾದ ಶುಭಕಾರ್ಯಗಳಲ್ಲಿ ಹಿರಿಯರಾದ ಸತಿಪತಿಯರಿಗೆ ಮಾಡುವ **ಪೂಜೆ** : ದೊರೆಗಳವರು ಪ್ರತಿದಿನದ ನಿತ್ಯದಾನ, ಗೋದಾನ, ದಂಪತಿಪೂಜೆ, ಗೋಪೂಜೆ . . . ಮುಂತಾದ ಅನೇಕ ವ್ರತದಾನ ಧರ್ಮಗಳನ್ನು ಮಾಡಿ (ಮಹಾವಂ. I, ೧೩೦) ; ಕನ್ಯಾದಾನಕ್ಕೆ ಮುಂಚೆ ನಂಟರಲ್ಲಿ ಮುಖ್ಯರಾದವರಿಗೆಲ್ಲಾ ದಂಪತಿಪೂಜೆ ಮಾಡಲಾಯಿತು (ರೂಢಿ). [ ದಂಪತಿ + ಪೂಜೆ$_2$ ]

**ದಂಪತಿವಕ್ಕಿ** (ನಾ). ಗಂಡು, ಹೆಣ್ಣು ಯಾವಾಗಲೂ ಜೊತೆಯಲ್ಲೇ ಇರುವುವೆಂದು ಭಾವಿಸಲಾದ ಒಂದು ಬಗೆಯ ಹಕ್ಕಿ ; ಚಕ್ರವಾಕ ; ಎಣೆವಕ್ಕಿ : ಒಸರ್ವ ಮಕರಂದದ ತುಷಾರದ ಕೆಸಱೊಳದ್ದವು ಕೊಂಚೆಗಳು ಹಗಲೆಸೆವ ದಂಪತಿವಕ್ಕಿ ಸಾರಸ ರಾಜಹಂಸಗಳು (ಕುವ್ಯಾ.ಆ. ೫-೯).

[ ದಂಪತಿ + ಹಕ್ಕಿ$_1$ (<ಪಕ್ಕಿ$_1$) ]

**ದಂಪತ್ತಿ**, ದಂಪತ್ತು (ನಾ). = ದಂಪತಿ ೧ : ಧರೆಯ ಪಾಲನ ಮಾತುಗಳನಾ ಕುರುಡ **ದಂಪತ್ತಿಗಳು** ಕೇಳಲು (ರಘುವಂ. ೯೯-೭೮). **ದಂಪತ್ತು :** ಕಥೆಯ ದೃಷ್ಟಿಯಿಂದ ಇಲ್ಲಿ ಪ್ರಧಾನತೆ ಬರುವುದು ಮೂರು ದಂಪತ್ತುಗಳಿಗೆ (ಸಮಜೀ. ೧೭ ಪೀಠಿಕೆ) ; ಒಂದು ಕಿಟಕಿಯ ಮಗ್ಗುಲಲ್ಲಿ ಒಂದು ದಂಪತ್ತು ಕೂತಿರುತ್ತದೆ (ವೈನಿ. ೧) ; ಒಂದು ದಂಪತ್ತು ಪಕ್ಕದ ಕೊಠಡಿಯಲ್ಲಿದೆ, ಅವರ ಮಗುವೊಂದು ನಕ್ಕು ಕೆಲೆದು ಆಟವಾಡುತ್ತಿದೆ (ಪಹಾರ. ೩೩).

[ <ಸಂ. ದಂಪತೀ ]

**ದಂಪತ್ತು** 'ದಂಪತ್ತಿ' ನೋ.

**ದಂಬ**, ಜಂಬ$_1$, ಜಂಭ$_1$, ಡಂಬ$_1$, ಡಂಬು, ಡಂಭ, ಡಬ್ಬು$_4$, ಡೊಂಬ$_2$, ಡೊಂಬಿ$_2$, ಡೊಂಬು$_2$, ದಂಬು (ನಾ). ೧. ಮೋಸ ; ವಂಚನೆ ; ಅಸತ್ಯದ ನಡೆನುಡಿ; ಠಕ್ಕು: "ಶಾಂಬರಿ ದಂಬವಿಸಾರ್ಪ್ಯ ಕುಸೃತಿ ಮಾಯೆ" (ಮಂಗರಾ. ೧೩೩-೨೮). **ಜಂಬ$_1$ :** ೨. ತೋರಿಕೆಯ ಆಚಾರ ವಿಚಾರ ; ಸೋಗು ; ಬೂಟಾಟಿಕೆ ; ಆಡಂಬರ : ಎಳೆಯ ಕರುವಿಗೆ ಮೊಳೆವ ಕೊಂಬುಗಳ ಕಡಿತ ಅಂತೆಮ್ಮ ದೊರೆಸಾಮಿಗೂ ಕಲಿತ ನುಡಿತ. ಇದರ ನವೆ ತೀರಿಸಲು ನನ್ನರಿವೆ ಮೋಟುಕಂಬ ಏತಕ್ಕೊ ಸಗ್ಗದಿಹ ಮೊದ್ದುಮನವೆನ್ನ ಜಂಬ (ಗಣೇಶ. ೭೧-೨೪). ೩. ಹೆಮ್ಮೆ ; ಬಿಂಕ; ಸೊಕ್ಕು : ತುಂಬಿ ಜಗ ಬೆಳಗಿದನು, ಜಂಬದಲಿ ದಿನಮಣಿಯು (ಕನ್ನಡಾ. ೨೦೦) : ಕಲಿತವನೆಂಬ ಜಂಬ ಅವನಿಗೆ (ನಾಪೋಲಿ. ೦೪೪) ; ಜಂಬ ; ಬಡಾಯಿ ; ಹೆಮ್ಮೆ ; ಗರ್ವ ಅಥವಾ ಅಹಂಕಾರದ ಮಾತು ; ಆತ್ಮಸ್ತುತಿ (Boast. ಇಂಕನಿ). **ಜಂಭ$_1$ :** ೩. ಬೆನ್ನೊಟ್ಟೋಡುವ ಗಾಳಿಗೆ ನೀನು ಜಂಭವ ಬಿಡು ಇದಂ ಕಂಡಿಹೆ ನಾನು (ಅರಳು. ೧೫೯-೦೯). **ಡಂಬ$_1$ :** ೧. ಸತ್ತನೆ ಮತ್ತೆ ಪುಟ್ಟುವಂ ಗಡ ಪುಸಿ **ಕಾಣ** ಡಂಬಮಿದು ಖೇಚರ ನೀನಿದನೆಂತು ನಂಬಿದೋ (ಆದಿಪು. ೨-೮) ; ಹಿಡಿಂಬೆ ಡಂಬಮಿಲ್ಲದೆ ಭೀಮಸೇನನೊಳಪ್ಪೊಡಂಬಡಂ ನುಡಿಯೆ (ಪಂಪಭಾ. ೩-೧೮ ವ) ; ದುರ್ಜನಂ ನಂಬೆನುಡಿದು ಡಂಬಮಂ ವಿಜೃಂಭಿಸಿ (ನೇಮಿಪು. ೧೪-೩ ವ). ೨. ಹಿರಿಯ ಮಠಗಳನಾಳ್ವ ಯತಿವರರು ಕೆಲರುಂಟು ಡಂಬದಲಿ ಮೆರೆವರುಂಟು (ಕವಿಸೋ. ೧೭-೬). ೪. ತೋರಿಕೆಯ ವೇಷದವನು ; ಬೂಟಾಟಿಕೆಯವನು ; ಆಡಂಬರದವನು : ನೋಡೆ ವೇದಾದೀಕ್ಷೆಯಾದುದಾ ಡಂಬರಿಗೆ ನೋಡೆ ಬಸವನ ಕರುಣವೊದಗಿತ್ತು ಮೂರ್ಖರಿಗೆ (ಬಸರ. ೯-೫೯) ; ಶಿವಭಕ್ತ[ನಾಶಾಂ. ಕ್ರಿ]ಡಂಬನೆಂದೆನಿಸಲಾಱೆಂ (ತಿರುರ. ದೇ. ೨೦-೧೭) ; **ಬಱಿದೆ** ಪೇಳದಿರಿದನು ಡಂಬಗೆ ಜಱೆವವಗೆ (ನಿಭಾಗ. ೧೧-೩೫-೨೦). **ಡಂಬು :** ೧. ಪ್ರಪಂಚಿನ ಡಂಬಿನಲ್ಲಿ ಎನ್ನದೊಂದು ರೂಹುಮಾಡಿ ನೀವಿರಿಸಿದಿರಿ (ಬಸವ. ೨೯); ಡಂಬು ಮಾತ್ಸರ್ಯಕ್ಕೆ ಇಂಬುಗೊಡದೆ ಇರಬಲ್ಲರೆ ಶರಣ (ಸಿದ್ಧೇವ. ೯೪-೨೮೭). ೨. ಇವರು ಮೂವರ ಡಂಬಿನ ಭಕ್ತಿಗೆ ಹೊಱಗಣ ಹೊಲೆಯನೇ ಸಾಕ್ಷಿ (ಸರ್ವವ. ೦೮೩-೮೩೭) ; ಮಬ್ಬುದೋಱುವ ಮಾದದ ಡಂಬಿನ ಹಬ್ಬುಗೆಯುಳಿಹ ಗುರು ನಿರೂಪದಲುಬ್ಬುಮಾಡುವ ಮಾಟ ನಿಷ್ಫಲವೆಂದಳಾ ವಿಮಳೆ (ಪ್ರಭುಲೀ. ೭-೭) ; ಸುಜನರರ್ಥವನಪಹರಿಸುತಕ್ಕಜದ ಡಂಬಿನ ಯಜ್ಞಗಳ ಮಾಡುತ್ತಲಿಹರು (ನಿಭಾಗ. ೧೧-೯-೧೧). **ಡಂಭ :** ೧. ಆಂ ಭರದಿಂದೆ ನಿನ್ನಯ ಭುಜಾಬಲದೆಟ್ಟರಮಂ ಪರೀಕ್ಷಿಸಲ್ ಡಂಭದಿನೊಂದು ರೂಹುದಳೆದಿನ್ನೆವರಂ ಪೊಣರ್ದಿರ್ಕ್ಕುಮಿಟ್ಟು ಕಂಡೆಂ ಭವದೀಯ ಸಾಹಸಮಂ (ಚಂದ್ರಪು ೫-೮೨). ೨. ಪರಮುನಿಷ್ಠ ಮೌನಿಯಂತೆ ಧರೆಯ ಮೇಲೆ ಡಂಭ

ತೋಱಿ (ಪುರಂದ. ೧-೧೮೦-೮) : ಬಿಡು ಬಾಹ್ಯದೊಳು ಡಂಭವ ಮಾನಸ ದೊಳಗೆಡೆವಿಡದಿರು ಶಂಭುವ (ಕೃಕವ. ೩-೭ ಪಲ್ಲವಿ). ಡಬ್ಬು$_4$ : ೨. ಚಿತ್ರ ದುತೆ ಕಣ್ಣಿಗೆ ಡಬ್ಬಾಗಿ ಕಾಣುವಂತ ಕಾವ್ಯ ಚಿತ್ರಕಾವ್ಯ (ಧ್ವನ್ಯಾಲೋ. ೨೨೬) ; ಇದೆಲ್ಲಾ ಶ್ರೀಮಂತಿಕೆಯ ಡಬ್ಬು ಎಂದು ತಿಳಿದುಕೊ (ಬರದಾ. ೭೬). 'ಡಬ್ಬುಗಾಣ್', 'ಡಬ್ಬುಗಾತಿ' ಪರಾ. ಡೊಂಬ$_2$ : ೫. ಮೋಸಗಾರ ; ವಂಚಕ ; ಕಪಟಿ : ಟಕ್ಕನ ವಚನಮಂ ನಂಬಿ ನೆರೆಯುರ್ಗೆ ಪೋಪನುಂ ಡೊಂಬನ ಮಾತಂ ನಂಬಿ ಕೂಸುಗುಡುವನುಂ . . . ದುಃಖಕ್ಕಂ ದುರ್ಯಶಕ್ಕಂ ಭಾಜನನಕ್ಕುಂ (ಧರ್ಮಾಮೃ. ೧೧-೮೦) ; ಚಂದ್ರ ಹಾಸದಿ ಡೊಂಬರಾವಣ ಹೊಡೆಯಲೀ ವಿಧಿಯಾಯ್ತು ತನಗೆಂದ (ಕಾಶಿರಾ. ೭-೫೮). ೬. ಯಕ್ಷಿಣೀವಿದ್ಯೆಯನ್ನು ಬಲ್ಲವನು ; ಐಂದ್ರಜಾಲಿಕ : ಪರಮಜಿನೋದಿತಮಲ್ಲದ ದರವುರವಿದ್ಯೆಗಳನಱಿವವಂ ತೋಱಿದೊಡಚ್ಚರಿ ಯೆನ್ನದಿವೆಲ್ಲಂ ಡೊಂಬರ ವಿದ್ಯೆಗಳೆಂದೆ ಬಗೆವನುತ್ತಮಜೈನಂ (ಸಮಪ. ೦೨-೪೩) ; ಕಂದರ್ಪನೆಂಬ ಡೊಂಬನ ಚಂದದ ಪೊಂಬೊಂಬೆವಿಂಡು ನೆರೆ ದತ್ತಾಗಳ್ (ಹಮ್ಮಿರ. ೨-೭೦) ; ಕಳ್ಳರಿಗೆ ಸುಳ್ಳರಿಗೆ ಡೊಳ್ಳರಿಗೆ ಡೊಂಬರಿಗೆ ಸುಳ್ಳುಗೊರವರಿಗೆ ಕೊಡುವವರು ಧರ್ಮಕ್ಕೆ ಎಳ್ಳಷ್ಟು ಕೊಡರು (ಸರ್ವಜ್ಞ. ೬೭೩). 'ಡೊಂಬವಿದ್ದೆ' ಪರಾ. ೭. ಹಾವನ್ನು ಆಡಿಸುವವನು ; ಹಾವಾಡಿಗ : ಉರಗನಂ ಪಿಡಿದೊಂದು ಕರಡಿಗೆಯ ನಡುವಿರಿಸಿ ಪಿರಿ ದೊಂದು ಬಿಂಬದಿಂ ಡೊಂಬನಾಗಿ (ಜ್ಞಾನಚಂ. ೪-೧೦೪). ಡೊಂಬಿ$_2$ : ೧. ಡೊಂಬಿಯಲ್ಲಿದು ನೋಡೆ ಬಯಲಾಡಂಬರವು ತಾನಲ್ಲ . . . ಎಂದು ರಾವಣ ಹಗೆಯ ಹೊಗಳಿದನು (ಕಾಶಿರಾ. ೧೭-೩೭) ; ಕಲಹವ ತೆಗೆದು ಡೊಂಬಿಯಲಿ ಬಾದುರನನು ಕೊಲಬೇಕು (ಕುರಾಸಾಂ. ೧೮-೧೦೫) ; ವಿಕೃತ ರೂಪಿನ ಡೊಂಬಿಯೇಕಿದು ಸಕಲಧರ್ಮ ವಿಚಾರವಂತರಿಗೆ (ನಳಚ. ೮-೫೭). ಡೊಂಬು$_2$ : ೧. ಸೊಬಗಂ ಕೊಂಡಾಡುವೀ ಡೊಂಬುವೇಡ (ಮಲ್ಲಿಪು. ೫-೭) ; ಶರೀರಂ ಬಡವಾದಪುದೆನ್ನದೆ ಡೊಂಬಿಲ್ಲದೆ ಶುದ್ಧವೃತ್ತಿಯೊಳ್ ನೆಱೆ ನೆಗಟ್ದರ್ (ಧರ್ಮಾಮೃ. ೧೧-೧೦೭) : ಪಾರ್ಥ ನಿನಗೀ ಡೊಂಬಿದೇಕೈ ಹುಲುಬ್ರಹನ್ನಳೆತನದ ಬಹುರೂಪು (ಕುಮ್ಮಾವಿ. ೬-೪೭) ; ಹುಲುಮಾನಿಸರು ಡೊಂಬಿನ ಗಾವಿಲರು ನಿನಗತಿಥಿಪೂಜೆಯನೀವವರೆ (ಅಕ್ರೂಚ. ೮-೩೮). ೨. ನಡೆನಡೆ ಡೊಂಬುವೇಡ ನಿನಗೇಕೆ ತಪಸ್ಸಿನ ಕುತ್ತಮೆಂದು ನೇರ್ಪಡೆ ಜಡಿದಟ್ಟಿ (ಧರ್ಮಾಮೃ. ೮-೮೮) ; ಮುಳಿಸಿಂದಂ ಕಂಬದಿಂ ಮೂಡಿದನೆನಿಸಿದ ಡೊಂಬಿಂಗೆ ಹೇಮಯ್ಸಿ ತಾಂ ಬಿಜ್ಜಲದೇವಿರಾಣಿಗಂ ಹೊಯ್ಸಳಕುಳತಿಳಕಂ ಸೋಯಿದೇವಂಗವುಬ್ಬಿರ್ವಳಯುಂ ಬಪ್ಪೆಂ"ನಂ ಪುಟ್ಟಿದನ್ (ಎಕ. XV, ಬೇಲೂರು. ೩೪೨-೨೦ ; 1265) ; ಕೊಂಬೆನೇ ಧರ್ಮಜನ ಧರ್ಮದ ಡೊಂಬನು (ಕುಮ್ಮಾಸ. ೦೫-೩೫) ; ಮೇಗಡೆ ಮೆಱೆವವರು ನಾವಲ್ಲ ನುಡಿಯಾ ಬಯಲ ಡೊಂಬೇಕೆ (ಕುಮ್ಮಾಕ. ೫-೧೮) ; ಡೊಂಬಿನ ಮಲಿನ ಮಾನಸನೆತ್ತ ಫಣಿಪತಿ ಶಯನ ತಾನೆತ್ತ (ಅಕ್ರೂಚ. ೫-೪೨) : ಡೊಂಬಿನ ಚತುರ್ಬಲಮಿದೇಕೆ ಭೂಪಾಲರಾಡಂಬರದ ಛತ್ರಚಮರಂಗಳೇತಕೆ (ಜೈಮಿಭಾ. ೧೭-೫೪) ; ಡಂಬಕದ ಮಾತೇಕೆ ಯಿಂಬರಿಯಬೇಕು ತಮ್ಮ ಡೊಂಬಿನ ಮಹಾಶೌರ್ಯ ಕೊಂಬುದೇ ಕತ್ತಲೆಗೆ (ಲಕ್ಷ್ಮಭಾ. ೨೩-೩೭). ೫. ಕೆಲರು ಕರ್ಮದಿನೆಂಬರಕ್ಕಟ ಕೆಲರು ಬೊಮ್ಮದಿನೆಂಬರಯ್ಯೋ ಕೆಲರು ಭೋಗಾದೇವ ಮೋಕ್ಷವದೆಂಬ ಡೊಂಬುಗಳು (ಸಾನಂಚ. ೮-೬೨). ೮. ಶಕ್ತಿ ; ಮಹಿಮೆ ; ಸಾಮರ್ಥ್ಯ : ಕಾಲನ ಡೊಂಬಿದಾರಿಗೆ ಸಾಧ್ಯ ನಾವೇನೆಂಬುದಿದಕೆಂದಳಲಿದರು ಭೀಷ್ಮಾದಿ ಸಜ್ಜನರು (ಕುಮ್ಮಾಸ. ೧೬-೨೭). ೯. ಠೀವಿ ; ದರ್ಪ : ಅನುಜೆ ತಳುವಿದ ಳೆಂದು ರೋಷಸ್ತನಿತಗದ್ಗದಕಂಠನೊದೆದೆದ್ದನು ಮಹೀಮಂಡಲವ ನುಗ್ಗಾಂಬಕನ ಡೊಂಬಿನಲಿ (ಕುಮ್ಮಾಆ. ೯-೧೮). ದಂಬು: ೧. ಸೋಮಧರ ತಾಪತ್ರಯದ ಬೇಗೆ ಪಿರಿದಲ್ಲಿ ಪುಸಿ ದಂ[ಪಾಠಾಂ. ಡಂ]ಬು ಹಿಂಸೆ ಮೂರ್ಖತೆ ಯುಂಟು ಧರೆಯೊಳಗೆ (ಬಸರ. ೧-೭೦).

ಜಂಬದ ಕೋಳಿ = ಒಣಹೆಮ್ಮೆಯ ಅಥವಾ ಆಡಂಬರದ ವ್ಯಕ್ತಿ : ಕಛೇರಿಯಲ್ಲಿ ಅವನ ಫೋಟೋ ಇಟ್ಟ ದಿನವಂತೂ ಜಂಬದ ಕೋಳಿಯ ಹಾಗೆ ಕುಣಿದದ್ದೂ ಕುಣಿದದ್ದೇ (ಯೋಧಪು. ೬). [<ಸಂ. ದಂಭ]

**ದಂಬಡಿ** 'ದಮ್ಮಡಿ$_2$' ನೋ.

**ದಂಬಿಸು, ಡಂಬಿಸು** (ಕ್ರಿ). ೧. ಆಡಂಬರವನ್ನು ತೋರಿಸು; ವಿಜೃಂಭಿಸು; ಅಂಬುಜೋದ್ಭವ ಸೃಷ್ಟಿ ಜಗದೊಳು ತುಂಬಿಹವು ಕಾಲೆಣಿಕೆ ಕಟ್ಟಳೆ ದಂಬಿಸಿವೆ ಮೂರು ಲೋಕದೊಳು ನಾನಾಪ್ರಕಾರದಲಿ (ಕಕ್ಕೋಕ. ೩-೧೧). ಡಂಬಿಸು : ೨. ಮೋಸಗೊಳಿಸು ; ವಂಚಿಸು : ಚಿತ್ರಕಥೆಗಳಂ ಪಟದೊಳ್ [ಬ] ರೆದು ತೋಱಿ ಪೇಟ್ದು ಲೋಗರಂ ಡಂಬಿಸಿ ಮಾರಿಕೊಳ್ವ ಬತ್ತಮಂ ಕಳ್ವೊನ್ (ವಡ್ಡಾರಾ. ೦೨-೮); ನಂಬಿಪರೆನ್ನರಪ್ಪರುಮನೇತೆಱದಿಂ ಸಲೆ ನಂಬೆ ಪಾಣ್ಬಯರ್ ಡಂಬಿಪ [ಪಾಠಾಂ. ನಂಬಿಪ]ರಿಂತನೇಕ ವಿಧದಿಂದೆ (ಪಂಚತಂ. ೭೮-೬) ; ಧನಮುಳ್ಳನಂ ಕರಂ ಡಂ [ಪಾಠಾಂ. ಡೊಂ] ಬಿಸಿ ತಿಂಬರಿಲ್ಲದೊಡೆ ಪೊರ್ದದ ನಂಟರಂ ಪಾಂಗಿದೇ ಕರಂ ನಂಬಿಸಲಾಪವೇ (ಜೀವಸಂ. ೬೯-೧೪). [ದಂಬ + – ಇಸು$_3$]

**ದಂಬು** 'ದಂಬ' ನೋ.

**ದಂಬೆ** 'ದಬ್ಬೆ$_1$' ನೋ.

**ದಂಭ** (ನಾ). ೧. ಮೋಸ; ಠಕ್ಕು; ವಂಚನೆ: ದಂಭದಧಿಕಾರಿಗಳ ಮಾತನು ನಂಬುತವರಾತಿರ್ಪ ನೃಪತಿಯ ರಾಜ್ಯಮುಳಿಯುವುದೇ (ರಾಮಾಸಂ. ೩-೩-೬). ೨. ಆಡಂಬರ ; ಅಟಾಟೋಪ ; ಡೌಲು : ಷೋಡಶ ವಿಕಾರ–ರಾಗದ್ವೇಷ . . . ದಂಭ, ದರ್ಪ, ಅಹಂಕಾರ, ಇಚ್ಛೆ, ಭಕ್ತಿ, ಶ್ರದ್ಧೆ ಈ ಹದಿನಾರು (ಅಮೃತ. ೬-೨೬ ಅಡಿಟ) ; ಜಂಭಾರಿಯಿತ್ತ ಶರಚಾಪ ಗಳ ರಘುವರಗೆ ದಂಭದಿಂದೊಪ್ಪಿಸುತ ಕೃತಿಯಾದನಾ ಕುಂಭಸಂಭವಂ (ವೆಂಕಾರಾ. ೩-೫ ಸೂಚನೆ) ; ದಂಭವಿದ್ದವನಿಗೆ ಇಂಬು ಸಿಕ್ಕುವುದು (ಗಾದೆ). ೩. ಜಂಬ ; ಸೊಕ್ಕು ; ಹೆಮ್ಮೆ ; ಗರ್ವ : ಇತ್ತೀಚೆಗೆ ಅವನಲ್ಲಿ ತನ ಶೌರ್ಯದ ವಿಷಯವಾಗಿರುವ ಅಭಿಮಾನ ಬೆಳೆದು ದಂಭವಾಗಿ ರೂಪು ಗೊಳ್ಳುತ್ತಿತ್ತು (ನೂರಜ. ೪೯); ಒಂದು ವೇಳೆ ತಾನು ಪಿರಿಯರಸಿಯಾಗಿದ್ದು ಕೊಂಡು ಕಿರಿಯ ರಾಣಿಯ ಈ ಒಂದು ದಂಭವನ್ನು ದಮನಮಾಡಬಲ್ಲವಳೇ ಆದರೆ (ಸವತಿ. ೨೦೨). [ಸಂ.]

**ದಂಭಕ** (ನಾ). ಹೆಮ್ಮೆಯುಳ್ಳವನು ; ಜಂಭದವನು. [ಸಂ.]

**ದಂಭತ್ವ** (ನಾ). ಆಡಂಬರ : ಕುಂಭವೊಂದಱೊಳು ಜಲಮಂ ತುಂಬಿ . . . ದಂಭತ್ವದಿಂದಲಂಕರಿಸಲ್ (ವೀಶೈಪು. ೪-೨೦-೫೭). [ಸಂ.]

**ದಂಭವೈರಿ** (ನಾ). ಮೋಸಕ್ಕೆ ವಿರೋಧಿಯಾದವನು : ಭಕ್ತಸುರತರು ಜಿತಾಕ್ಷಂ ಸಿದ್ಧಿದಂ ದಂಭವೈರಿ ಮಾದರಸರೊಪ್ಪಿದರ್ (ಪದ್ಮರಾ. ೨-೧೬). [ದಂಭ + ವೈರಿ]

**ದಂಭಾಚಾರ** (ನಾ). ಬೂಟಾಟಿಕೆಯ ನಡವಳಿಕೆ; ಆಡಂಬರ ; ಸೋಗು; ಡಂಭಾಚಾರ : ಕಂಡುದನ್ನು ಕಂಡಂತೆ ಹೇಳುವ ಕೆಚ್ಚು, ದಂಭಾಚಾರ ವನ್ನು ಕಂಡರೆ ಸಾತ್ವಿಕವಾದ ರೊಚ್ಚು–ಇದು ಅವನ ವ್ಯಕ್ತಿತ್ವದ ಪಡಿಯಚ್ಚು (ಶರಚ. ೪೭೨). [ದಂಭ + ಆಚಾರ]

**ದಂಭೋಲಿ, ದಂಭೋಳಿ** (ನಾ). ೧. ಇಂದ್ರನ ವಜ್ರಾಯುಧ ; ಪವಿ. ದಂಭೋಳಿ : ೧. "ಪವಿಃ . . . ದಂಭೋಳಿಃ . . . ಶಂಬಃ – ಈ ೧೨ ಇಂದ್ರನ ವಜ್ರಾಯುಧದ ಪೆಸರ್" (ಹಲಾಯು. ೧೧-೫೬); ಸಕಲಕಪಿಸಮಿತಿ ವೆರಸಹಿತಕುಲಾಚಲಚಕ್ರಚಾರ ದಂಭೋಳಿ ಜಗತ್ಪ್ರಕಟೋದ್ಯನ್ಮಹಿಮ ನೆನಿಸುವ ಕಕುದ್ಬಲಿಯೆನಿಪ ಪೆಸರ ಬಲಿಮುಖನಿರ್ಪಂ (ಪಂಚತಂ. ೨೭೭-೫); ಅರಿಸಾಮಂತ ಕುಳಾಕುಳಾಚಳದಳದ್ದಂಭೋಳಿ ದಂಭೋಳಿ . . . ಎನಿಪಂ ಸಾವನ್ತ ನಾಗಾರ್ಜುನಂ (ಎಕ. VI, ತರೀಕೆ. ೪೨-೩೮ ; 1206) : ದಂಭೋಳಿಯುಂ ಸೆಳೆದುಕೊ ಜವದಿ ಬಲವೆರಸು (ಲಿಂಗಪು. ೧೧-೧೮).

೨. ಸಿಡಿಲು: ಲೋಕೈಕಭೀಕರಮಾಟಂದುದು ನೀಲಮೇಘ ನಿಕಟ ಪ್ರಸ್ಫಾರ ದಂಭೋಳಿಯವೋಲ್ (ಪಂಪರಾಮಾ. ೧೯-೧೭೪); ಬ್ರಹ್ಮಕಂದುಕದಿ ಶಂಪಾತರಂಗ ವದರೊಳು ತುಂಬಿ ಪರಿಯುತಿದೆ ದಂಭೋಳಿ ನೀನಾಗು (ಮಂಕುಕ. ೧೬೩).
[ ಸಂ. ]

**ದಂಭೋಳಿ** 'ದಂಭೋಲಿ' ನೋ.

**ದಂಭೋಳಿಹಸ್ತ** (ನಾ). ವಜ್ರಾಯುಧವನ್ನು ಕೈಯಲ್ಲಿ ಹೊಂದಿರುವವನು; ದೇವೇಂದ್ರ: ಜೃಂಭದ್ದಂಭೋಳಿಹಸ್ತಾಹತಚಕಿತಗತಕ್ಷ್ಮಾಧೃ ವಿಸ್ಫಾರವಿದ್ಯುತ್ಸಂಭಿನ್ನಂ . . . ಶುಂಭದ್ಗಂಭೀರಿವಂ ರಂಜಿಸಿದುದವಾಮ ದತ್ತೇಂದ್ರಭದ್ರಂ ಸಮುದ್ರಂ (ರಾಜಶೇ. ೧-೯೦).
[ ದಂಭೋಳಿ ( = ದಂಭೋಲಿ) + ಹಸ್ತ ]

**ದಂರೋಟ್**, ದಂರೋಟು (ನಾ). ಒಂದಂ ಬಗೆಯಂ ಸಿಹಿ ಭಕ್ಷ್ಯ; ಬೂದುಗುಂಬಳಕಾಯಿ ಮೊದಲಾದವುಗಳಿಂದ ಮಾಡಿದ ಹಲ್ವ: ಏನು ಕೊಡಲಿ ಸಾರ್. ಜಾಮೂನ್, ಜಿಲೇಬಿ, ದಂರೋಟ್ (ಮಹಾಲ. ೪೬). **ದಂರೋಟು**: ದಂರೋಟೆಂದರೆ ನನಗೆ ಬಹಳ ಇಷ್ಟ (ರೂಢಿ).
[ ? ]

**ದಂರೋಟು** 'ದಂರೋಟ್' ನೋ.

**ದಂಶ** (ನಾ). ೧. ಕಚ್ಚುವುದು; ಕಡಿತ: ಪಿರಿದಪ್ಪ ನಂಜುಪ್ಪುಗುಳುರ್ಬಿದವಂಗಸಿತಾಹಿದಂಶವಾದುದು (ಕಾದಂಪೂ. ೮೮೩); ಅಲ್ಪದಶನ ದಂಶ ಮಾತ್ರ ಖಂಡನೀಯ ಕರಂಗಳೆನಿಸಿದ ಮಂಡಕಂಗಳುಮಂ . . . ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೧೧-೨೯ ವ). ೨. ಕಾಡುನೊಣ; ವನಮಕ್ಷಿಕ: "ವಾನೇಯ ಮಕ್ಷಿಕಾಭಿಖ್ಯಾನಂ ದಂಶಂ" (ವಸ್ತು.ಕೋ. ೪೪-೨೪); ಬಿಸಿಲ್ಕೆಕಿಲ್ ಪಸಿವುಗ್ರದಂಶಮಶಕ ವ್ಯಾಬಾಧೆ . . . ಎಂಬೀ ಬಾಧೆಯೊಳ್ ಮೆಯ್ಯನೊಡ್ಡಿಸೆ (ಆದಿಪು. ೬-೩೪); ಆಮಯ ದಂಶ ಮಸಕ ಶೀತೋಷ್ಣ ಕದಂಬಕ ಬಾಧಾರಹಿತನೆನಿಸಿ ಸುಕುಮಾರಂ ಸುರಕುಮಾರ [ರಂ] ಮಸುಳಿಸಿದಂ (ಸುಕುಮಾ. ೧೧-೧೧೩); ದಂಶ ಮಶಕ ಮಕ್ಷಿಕಾಭ್ರಮರ ಪತಂಗಾದಿ ಚತುರಿಂದ್ರಿಯಂಗಳ್ ಸ್ಪರ್ಶನ ರಸನ ಘ್ರಾಣ ಚಕ್ಷುರಿಂದ್ರಿಯ ಪರಿಚ್ಛಿತ್ತ್ಯುಪೇತಂಗಳಪ್ಪುವು(ತತ್ತ್ವ.ಪ್ರ. ೯೮); ತರಕ್ಷು ದಂಶಶತ ಸಂವೃತ ಮಿರ್ದುದದೊಂದು ತಾಣದೊಳ್ (ರಾಜಶೇ. ೫-೯೨). ೩. ಹಲ್ಲಿನ ಗಾಯ. ೪. ಹಲ್ಲು; ದಂತ. [ ಸಂ. ]

**ದಂಶಕ** (ಗು). ೧. ಕಚ್ಚುವ; ಕಡಿಯುವ. (ನಾ). ೨. ಕಚ್ಚುವ ಪ್ರಾಣಿ; ಕಡಿಯುವ ಪ್ರಾಣಿ. ೩. ನೊಣ. ೪. ಹಲ್ಲಿನಿಂದ ಕಚ್ಚಿ ತಿನ್ನುವ ಉಪ್ಪಿನಕಾಯಿ ಮೊದಲಾದ ವ್ಯಂಜನ: ಸಂವರಿಸು ಬಂಡಿಯ ನಡಸು ಭಕ್ಷ್ಯದ ಸೂಪದಂಶಕವ ತರಿಸು (ಕುಮಾ.ಆ. ೧೧-೧೭). [ ಸಂ. ]

**ದಂಶನ** (ನಾ). ೧. ಹಲ್ಲಿನಿಂದ ಕಚ್ಚುವುದು; ಕಡಿತ. ೨. ಕವಚ; ಜೋಡು. ೩. ಆನೆಯ ಪಕ್ಕರಕ್ಕೆ; ಹಕ್ಕರಿಕೆ: "ದಂಶನಂ ಹಕ್ಕರಿಕೆ" (ಮಂಗರಾ. ೮೬-೩೦). [ ಸಂ. ]

**ದಂಶಿ** (ನಾ). = ದಂಶ ೨: ದಂಶೀ . . . ಚಿಕ್ಕಕಾಡುನೊಣ, ಕಾಡು ಸೊಳ್ಳೆ (ಸಿದ್ಧಾಂತಿ. ೧೪೦). [ ಸಂ. ದಂಶೀ ]

**ದಂಶಿತ** (ಗು). ೧. ಕಚ್ಚಿದ. ೨. ಅಂಗಿತೊಟ್ಟಿರುವ; ಕವಚವನ್ನು ತೊಟ್ಟ. [ ಸಂ. ]

**ದಂಷ್ಟ್ರ** (ನಾ). ಆನೆ, ಹುಲಿ, ಸಿಂಹ, ಹಂದಿ ಮೊದಲಾದಂವುಗಳ ಉದ್ದವಾದ, ಹೊರಹಾಯ್ದಿರುವ ಹಲ್ಲು; ಕೋರೆಹಲ್ಲು; ದಾಡೆ: ಪೊಳೆಯುತ್ತಿರ್ಪ ಮಹಾವರಾಹಾವದನೋದ್ಯದ್ದಂಷ್ಟ್ರಮಂ ನೆಮ್ಮಿನಿಂದಳೋ ಭೂಕಾಂತೆಯೆನಲ್ಕೆ (ಕಾದಂಪೂ. ೧೧೦೩). [ ಸಂ. ದಂಷ್ಟ್ರಾ ]

**ದಂಷ್ಟ್ರಕ** (ನಾ). = ದಂಷ್ಟ್ರ: ಆಕಾರಾಂ ಅಕಾರವಮಾದುದರ್ಕೆ–ಕಂಧರಾ, ಉಪತ್ಯಕಾ, ದಂಷ್ಟ್ರಕಾ, ವಾಲುಕಾ–ಎಂಬಿವು ಮೊದಲಾದುವು ಕಂಧರ, ಉಪತ್ಯಕ, ಕರುಣ–ಎಂದು ಅಕಾರಾಂತಮಂ ಪಡೆಯಲೊಡಂ ಲಿಂಗಮಾಗಿ ವಿಭಕ್ತಿ ಪತ್ತುಗುಂ (ಶಮದ. ೮೨ ಪ್ರಯೋ). [ <ಸಂ. ದಂಷ್ಟ್ರಿಕಾ ]

**ದಂಷ್ಟ್ರಾಂಕುರ** (ನಾ). ಹೊರಬರುತ್ತಿರುವ ಕೋರೆದಾಡೆ; ಮೊಳೆಯುತ್ತಿರುವ ಕೋರೆಹಲ್ಲು; ಮೊಳೆಹಲ್ಲು: ಬಲದೇವ ವಾಸುದೇವರ್ . . . ಪವಿತ್ರಕ್ಷತ್ರಧರ್ಮ ಕಂಠೀರವ ದಂಷ್ಟ್ರಾಂಕುರಯುಗ್ಮಮುಂ . . . ಗುಣಗಣ ಮಣಿಗಣಕೋಶಗೃಹದಂತೆಯುಮಾಗಿ ಮಾತಾಪಿತೃಗಳನು ರಾಗದೊಡನೊಡನೆ ಪ್ರಮೋದಪ್ರವರ್ಧಮಾಗೆ (ಶಾಂತಿಪು. ೧-೮೦ ವ); ರಾತ್ರಿಂಚರಪತಿಸಿತದಂಷ್ಟ್ರಾಂಕುರಂ . . . ಬಳೆದು ಬಳೆಸಿದಂತಾಯ್ತು ಬೆಳ್ದಿಂಗಳೆತ್ತಂ (ರಾಜಶೇ. ೧೩-೪೨). [ ಸಂ. ]

**ದಂಷ್ಟ್ರಾಕಿರಣ** (ನಾ). ಕೋರೆಹಲ್ಲುಗಳ ಕಾಂತಿ.–ಪ್ರಕಾಶ: ರಾಕ್ಷಸರಾಜಂ . . . ದಂಷ್ಟ್ರಾಕಿರಣಧವಳಿತಾಸ್ಥಾನನಿಂತೆಂದನಾಗಳ್ (ಜಗವಿ. ೨-೪೫).
[ ಸಂ. ]

**ದಂಷ್ಟ್ರಾಗ್ರ** (ನಾ). ಕೋರೆಹಲ್ಲಿನ ತುದಿ; ¬ಂತಾಗ್ರ: ಆದಿವರಾಹರೂಪದೊಳೆ ನೀನಂದೆತ್ತಿದೈ ಗೋಮಿನೀಧವ ದಂಷ್ಟ್ರಾಗ್ರದ ನೀಲಜಾಲವಣಿಯೆಂಬಂತಾಗೆ ಭೂಗೋಳಮಂ (ಜಗವಿ. ೧-೫೭); ದಾನವಹೃತ ಮೇದಿನಿಯಂ ದಂಷ್ಟ್ರಾಗ್ರದೊಳಿರಿಸಿ (ಮೋಂದಳಿ. ೪೨-೨). [ ಸಂ. ]

**ದಂಷ್ಟ್ರಾಯುಧ** (ನಾ). ೧. ಕೋರೆಹಲ್ಲೇ ಆಯುಧವಾಗಿ ಉಳ್ಳದು; ಕಾಡುಹಂದಿ. ೨. ಕಪಿ: (?). [ ಸಂ. ]

**ದಂಷ್ಟ್ರಿ** (ನಾ). ೧. ದಾಡೆಗಳುಳ್ಳದು; ಕಾಡುಹಂದಿ. ೨. ಹಂದಿ: "ಕೋಳೀ, . . . ದಂಷ್ಟ್ರೀ, ಘೃಷ್ಟಿ, ಕಿರಿ–ಈ ೮ ಹಂದಿ" (ಹಲಾಯು. ೩೪-೭೫). ೩. ನೆಗ್ಗಿಲ ಮುಳ್ಳು: "ದಂಷ್ಟ್ರಿಯೆನೆ ನೆಗ್ಗಿಲಕ್ಕು" (ಮಂಗರಾ. ೩೭-೨೨). [ ಸಂ. ದಂಷ್ಟ್ರಿನ್ ]

**ದಂಷ್ಟ್ರೆ** (ನಾ). = ದಂಷ್ಟ್ರ: ಅಣಲ್ಗಳ ದಾಡೆಯ ಪಲ್ಲಿಂ ಗಣಿಸುಗೆ ತಾಂ ದಂಷ್ಟ್ರೆಯೆಂಬ ಪೆಸರೆ ನಿದಾನಂ (ಅಶ್ವಶಾ. ೯-೭). [ ಸಂ. ದಂಷ್ಟ್ರಾ ]

**ದಂಸ$_1$** (ನಾ). = ದಂಶ: ವಿದ್ಯುಚ್ಚೋರ ಭಟಾರರ್ ಪ್ರತಿಮಾಯೋಗಂ ನಿಂದೊಡೆ ದೇವತೆ ಮುಳಿದು ಪೊಬಸುಗಳನಿವಿರಿಯುವು ದಂಸಮಸಕಂಗಳಂ ವಿಗುರ್ವಿಸೆ (ವಡ್ಡಾರಾ. ೧೩೪-೧೮). [ <ಸಂ. ದಂಶ ]

**ದಂಸ$_2$** (ನಾ). (?): ಘಳಿಸಿದ ದಂಸಂ ಸೇವರು (ಬೊಂಕಶಾ. ೧೯೩೩, ಹಾವೇರಿ. ೯೫-೪; ?). [ ? ]

**ದಕ** (ನಾ). ನೀರು; ಉದಕ. [ ಸಂ. ]

**ದಕನ್** 'ದಖನ್' ನೋ.

**ದಕುಪ್ಪಟ್ಟಿ** 'ಢಕಲಪಟ್ಟಿ' ನೋ.

**ದಕಾರ** (ನಾ). ದ ಎಂಬ ಅಕ್ಷರ: "ತಾವರೆ" ಎಂಬ ಪದದ ಆದಿಯ "ತ" ಕಾರಕ್ಕೆ ಪ್ರತಿಯಾಗಿ "ದ" ಕಾರವೂ ಬಂದಿದೆ (ಮಧ್ಯಮ. ೨೦). [ ಸಂ. ]

**ದಕಿದು** (ನಾ). ಮೃದಂಗವನ್ನು ಬಾರಿಸುವುದರಲ್ಲಿ ಒಂದು ವರಸೆ: ರಿಪುವಣಿ ಸಹರಣಿ ತುಡುಕು ದಕಿದು ವತ್ಕಿರಿ ಜತಿ ಜೋಕೆಯೆಂಬ ದೇಸೆಯ ಶಬ್ದಂಗಳೆಸೆಯೆ ಬಾಜಿಸುತ್ತಿರೆಯುಂ (ಶಾಂತೀಶ್ವ. ೧೬-೬೭ ವ). [ ? ]

**ದಕೋದರ** (ನಾ).=ಜಲೋದರ. [ ಸಂ. ]

**ದಕ್ಕಡ** 'ಢಕ್ಕಡ' ನೋ.

**ದಕ್ಕಡತನ** 'ಢಕ್ಕಡತನ' ನೋ.

**ದಕ್ಕಡತಿ** (ನಾ). ದಿಟ್ಟೆ; ಗಡುಸುಗಾತಿ; ಸಮರ್ಥೆ: ಕರ್ಕಸಿಯರತಿವೆಕ್ಕಸೊಕ್ಕಿಯರನಾರತಂ ದಕ್ಕಡತಿಯರು ಕಾಮದಿಕ್ಕೆಯರ್ (ಷಟಿಲ. ೨-೭೦).
[ ದಕ್ಕಡ ( <ಢಕ್ಕಡ) + –ತಿ$_1$ ( <–ಇತ್ತಿ) ]

**ದಕ್ಕಡಿಗ** 'ಢಕ್ಕಡಿಗ' ನೋ.

**ದಕ್ಕಡೆ** 'ಢಕ್ಕಡ' ನೋ.

**ದಕ್ಕಡೆಯು** 'ಢಕ್ಕಡೆಯಂ' ನೋ.

**ದಕ್ಕಡೆಯತನ** 'ಧಕ್ಕಡೆಯತನ' ನೋ.

**ದಕ್ಕಣ** (ನಾ). ದರ್ಶನೀಯವಾದುದು: ಚೈತ್ರರಥದುನ್ನತಿಯಂ ಸಮಕಟ್ಟಿಕೊಂಡು ಸಾಧಿಸುವತಿದಕ್ಕಣಂ ಸರಿಗೆವಾಳಮೆನಿಪ್ಪ ನೆಗರ್ತೆ ಕೂಡೆ ಮಾಡಿಸಿ ದನದೊಂದು ನಂದನಮುಂ (ವರ್ಧಮಾ. ೨-೧೩). [ <ಪ್ರಾ. ದಖ್ಖಣ ]

**ದಕ್ಕಣಿಸು** (ಕ್ರಿ). ಜಬರಿಸು; ಗದರಿಸು: ಗುರುಭೀಷ್ಮರು ಮಕ್ಕಳಾಟಿಕೆ ಬೇಡ ನಡೆ . . . ಸಂತೈಸೆನುತ ದಕ್ಕಣಿಸಿ ವಿದುರ ಗೌತಮರು ಧೃತರಾಷ್ಟ್ರಗಂ ತಿಳುಪಲ್ಕೆ ನಡೆತಂದನು (ತುರಂಗ. ೨೫-೧೬).
[ ದಕ್ಕಣಂ ( <ಧಕ್ಕಡ) + – ಇಸು₃ ]

**ದಕ್ಕಲು, ಧಕ್ಕಲು** (ನಾ). ಮಾದಿಗರಲ್ಲಿ ಒಂದು ಒಳ ಪಂಗಡ : ಅವನು ಧಕ್ಕಲದವನು (ಎಸಮ್ಮ. XVII, ೬). **ಧಕ್ಕಲು :** ಈ ಊರಿಗೆ ಬಹಳ ಮಂದಿ ಧಕ್ಕಲುಗಳು ವಲಸೆ ಬಂದಿದ್ದಾರೆ (ರೂಢಿ). [ ? ]

**ದಕ್ಕಳ** 'ಧಕ್ಕಡ' ನೋ.

**ದಕ್ಕಾಯ್ತಯ್ಯ** (ನಾ). ಒಬ್ಬಾತನ ಹೆಸರು: ದಕ್ಕಾಯ್ತಯ್ಯಂ ಊರಂ ಆಳುತ್ತಂ ಇರೆ (ಎಕ. X, ಮುಳಬಾ. ೨೨೯-೩ ; 909). [ ? + ಅಯ್ಯ₁ ]

**ದಕ್ಕಾಲಿ** (ನಾ). ಅಲುಗಾಡದ ಕಣ್ಣುಗುಡ್ಡೆ ; ನೋಡುವ ಸಾಮರ್ಥ್ಯವಿಲ್ಲದ ಕಣ್ಣುಗುಡ್ಡೆ : ಭರದಿಂ ಸುಟ್ಟನೆ ಸುಯ್ಯೆ ಸೂಗುಱಿಸೆ ಕಣ್ದಕ್ಕಾಲಿಗಳ್ ಬೀೞೆ (ಲೋಕೋಪ. ೯-೨೦೬); ಶಿವಲಿಂಗಮಂ ಮುಸುಕಿ ಬೆಳೆದುತ್ತಮಾಂಗವನು ಬಾವೆಂದು ದಿಟ್ಟಿಸಿ ನೋಡದವೆಯಿಕ್ಕದಿಹ ಕಣ್ಣ ದಕ್ಕಾಲಿಯೆಂದು . . . ಶಂಕೆಸಿ (ಸಿದ್ಧರಾ. ೨-೪) ; ಪೋಲಿಸೆ ತಮ್ಮ ಕಣ್ಣ[ಣ್ದ]ಕ್ಕಾಲಿಗಳಾಗಿರ್ದು ಬರ್ದವಲ್ಲದೆ ದಿಟವಮಾಗಾಲಿಸಿ ಕಂಡೊಡೆ ನಾಣ್ಚದೆ ಮೇಲಿಯ ಗೞಿಯುವಳ ಜಡಿವ ಮುಡಿಯ ಬೆಡಂಗಂ (ಧರ್ಮನಾ. ೩-೯೪).
[ ದಕ್ಕು₃ + ಆಲಿ₂ ]

**ದಕ್ಕಾಲಿಬೀಳು** 'ದಕ್ಕಾಲಿವೀೞ್' ನೋ.

**ದಕ್ಕಾಲಿಬೀೞ್** 'ದಕ್ಕಾಲಿವೀೞ್' ನೋ.

**ದಕ್ಕಾಲಿವೀೞ್**, ದಕ್ಕಾಲಿಬೀಳು, ದಕ್ಕಾಲಿಬೀೞ್ (ಕ್ರಿ). ಚಲಿಸದ ಕಣ್ಣುಗುಡ್ಡೆ ಉಂಟಾಗು: ಕಣ್ಮುಚ್ಚಿರೆ ದಕ್ಕಾಲಿವೀೞೆ ಬಾಟದು ತುರಗಂ (ಅಶ್ವಶಾ. ೬-೬೨). **ದಕ್ಕಾಲಿಬೀಳು :** ದಕ್ಕಾಲಿಬಿದ್ದ ಕಣ್ಣಿನಂತೆ ಜಂಗಮದ ಮೇಲೆ ಹರುಷವಿಲ್ಲದ ನೋಟ (ಬಸಪ. ೫೭-೧೫೪). **ದಕ್ಕಾಲಿಬೀೞ್ :** ಕಣ್ಗಳ್ ದಕ್ಕಾಲಿಬಿರ್ದು (ಬಂಹರಿ. ೧೪-೪೭ ವ).
[ ದಕ್ಕಾಲಿ + ಬೀೞ್₁ ]

**ದಕ್ಕಿಣ** (ನಾ). =ದಕ್ಷಿಣ : "ದಕ್ಕಿಣ – ದಕ್ಷಿಣ" (ತದ್ಭಕೋ. ೧೮).
[ <ಸಂ. ದಕ್ಷಿಣ ]

**ದಕ್ಕಿಸು** (ಕ್ರಿ). ೧. ದಕ್ಕುವಂತೆ ಮಾಡು ; ತನ್ನ ಸ್ವಾಧೀನಕ್ಕೆ ಬರುವಂತೆ ಮಾಡಿಕೊಳ್ಳು ; ತನ್ನದಾಗಿಸಿಕೊಳ್ಳು : ಬಹುಧನವ ದಕ್ಕಿಸಿಯೆ ಹೂತಿಕೊಂಡಿಹರು (ತುರಂಗ. ೩೦-೨೭). ೨. ಜೀರ್ಣಿಸಿಕೊಳ್ಳು ; ಅರಗಿಸಿಕೊಳ್ಳು : ದಕ್ಕಿಸಲಾಱದೆಯಾ ಮುನಿಯಾ ಕೂಳ ಕಕ್ಕಲು . . . ಮನದೊಳು ಮಱುಗಿ (ನೇಮಿಸಂ. ೨೦-೩೪); ವಿಷಯ ವಿಷವನುಂಡು ದಕ್ಕಿಸಬಲ್ಲ ನಿರ್ವಿಷಸಿದ್ಧ ನೀನವನೀಶ (ಭರಜ. ೨-೬೧).

**ದಕ್ಕಿಸಿಕೊಳ್ಳು** = ೧. ದೊರಕಿಸಿಕೊಳ್ಳು ; ಗಿಟ್ಟಿಸು: ಚಿಕ್ಕವನ ಹಿರಿಯನ್ನ ಮಾಡಿ ಪುಣ್ಯವ ದಕ್ಕಿಸಿಕೊಂಡೆ (ವಿದಾಕ್ಷ. ೧೫೫-೩); ಮೈಸೂರಿನವರು ಕೊಳ್ಳೆಯನ್ನು ದಕ್ಕಿಸಿಕೊಂಡು ಹಿಂತಿರುಗಿದರು (ಒಡಕ. ೩೧). ೨. ಜೀರ್ಣಿಸಿಕೊಳ್ಳು; ಅರಗಿಸಿಕೊಳ್ಳು: ವಿಷವ ಪದಾರ್ಥವೆಂದು ಕೊಡಲು ಉಂಡು ದಕ್ಕಿಸಿಕೊಂಡರು (ಘನವ. ೨೫) ; ಏಳಿ ಎಚ್ಚರಿ, ಬೆಂಕಿ ಹಚ್ಚಿರಿ ತಿಂದು ದಕ್ಕಿಸಿಕೊಳ್ಳಲಿ (ನೆಲಮು ೪೭-೦೨). [ ದಕ್ಕು₁ + – ಇಸು₃ ]

**ದಕ್ಕು₁** (ಕ್ರಿ). ೧. ದೊರಕು ; ಸಿಕ್ಕು ; ಪ್ರಾಪ್ತವಾಗು; ಲಭಿಸು; ಗಿಟ್ಟು: ವ್ಯಾಸರುಷಿಗಂ ದಕ್ಕದೆ . . . ಜಗದೊಳಗೆ (ಸಾನಂಜ. ೯-೧೨೨); ಮನವಿಕ್ಕಿದನಮರಾವತಿಯ ಸೊಕ್ಕಿದ ಸೂಳೆಯರಿಗೆ ತನ್ನನವರಿಗೆ ದಕ್ಕಲೀಯೆವು ನಿಮ್ಮಾಣೆ (ಕುರಾಸಾಂ. ೩೬-೧೨೨) ; ದಕ್ಕಿದುದು ಕಿಟಿಯೆನುತೆ . . . ಪಿಡಿದನು (ಜೆಬಪು. ೫೩-೩೯) ; ಸುತ್ತೇಳು ಬೀದಿಯ ಸುತ್ತುವ ಹೆಣ್ಣಿಗೆ ದಕ್ಕೀತು ಪೋಕಿಯ ಗಂಡು (ಇಂಜಾಪ. ೧೯೮-೭೬) ; ಅರ್ಜುನನು ಪ್ರಾಣಸಹಿತನಾಗಿರಲು, ಪಾಂಡವರ ರಾಜ್ಯಧನಗಳು ತನಗೆ ದಕ್ಕುವದೆ ? (ಕೃವಾಉ. ೩೩). ೨. ತನ್ನಲ್ಲೇ ಉಳಿ ; ಸ್ವಾಧೀನಕ್ಕೆ ಬರು ; ಹಿಡಿತಕ್ಕೆ ಸಿಕ್ಕು ; ಸಾಧ್ಯವಾಗು : ಮಂದಭಾಗ್ಯಂಗಣುಗ ದಕ್ಕುವನಲ್ಲ ಎನಗೆಂದ (ಕುವ್ಯಾದ್ರೋ. ೮-೨೧) ; ನವಲಕ್ಕ ತೆಲುಗರ ಗಂಡನೆಂದೆಂಬೀ ಬವರದ ಬಲು ಬಿರುದಿನ್ನು ರವಿಶಶಿಯುಳ್ಳನ್ನವರ ದಕ್ಕಿತೆಮಗೆಂದು ತವೆ ನಲಿದನು ನರನಾಥ (ಕುರಾಸಾಂ. ೮-೯೩) ; ಸೋಮೆಯನದಾವ ತೆಱದಿಂ ಮದುವೆ ನಿಲ್ವೆನೆಂಬಾ ಮಾತು ದಕ್ಕಿತಲ್ಲಾ ಮೆಚ್ಚಬೇಡವೆ ನೀಮೆನ್ನ ಚದುರತನಕೆ (ಸಮ್ಯಕಾ. ೬-೨೯) ; ಚಿಪ್ಪುಂಟುತುಗುರಿಂದಿರಿವೆಂ ಬಲ್ಗೊಡಲಿಯಾಂತೊಡಂ ದಕ್ಕುಗುಮೇ (ಚಂದ್ರಭು. ೭-೨೭) ; ಭೂದೇವಿಗೂ ದಕ್ಕೋ ಮನುಸ್ಯಾನೀ ಅಲ್ಲೋ, ಮಗನ, ನನಗೆ ಗೊತ್ತದ (ಕಮ್ಮಟ. ೧೮) ; ಅವನೆಂದೂ ಅವರಿಗೆ ದಕ್ಕುವುದಿಲ್ಲ (ಪುನರು. ೨೦೯) ; ಹೆತ್ತ ಮಕ್ಕಳು ಕೈಗೆ ದಕ್ಕದ ದುಃಖದಿಂದ ಇನ್ನರ್ಧ ಬಸವಳಿದು ಹೋಗಿದ್ದಳು (ನಡದಾ. II, ೯೫೫) ; ಶತ್ರುನಾಶವಾಗಿ ರಾಜ್ಯ ತನಗೇ ದಕ್ಕುವುದು ಎಂದು ದುರ್ಯೋಧನನು ಯೋಚಿಸಿದನು (ನೀತಿಚಿಂ. I, ೯). ೩. ಅರಗು ; ಜೀರ್ಣವಾಗು ; ಪಚನವಾಗು ; ಮೈಗೂಡು : ಎಲ್ಲ ಜಗವ ನುಂಗಿ ದಕ್ಕಿಸಿಕೊಂಡವಗೆ ಸಲ್ಲದು ರೋಗರುಜಿನವು (ಲಕ್ಷ್ಮೀಶೋ. ೩೮) ; ಉಂಡ ಅನ್ನ ದಕ್ಕದ ಲಕ್ಷಣವೆ ವಾತಪ್ರಕೋಪ (ಸಕವ್ಯ. ೧೩೧) ; ಇನ್ನೊಂದು ಬಟ್ಟಲು ಬಂದಿತು; ಅದನ್ನೂ ಕುಡಿದು ಮುಗಿಸಿದಳು; ಅದೂ ದಕ್ಕಲಿಲ್ಲ (ಕಗದ್ಯ. II, ೨೮). ೪. (ತಪ್ಪು ಮಾಡಿದರೂ) ಸರಿಯಾಗು; ವಿರುದ್ಧ ಪರಿಣಾಮವಾಗದಿರು: ದಕ್ಕೀತು ಎಂದು ತಕ್ಕದ್ದಲ್ಲದ್ದು ಮಾಡಬಾರದು (ಗಾದೆ). ೫. ಕುಸಿ (?): ಧನುವಂ ಕೊಂಡೊತ್ತಿ ತನ್ಮೌರ್ವಿಯನಟನಿಗೆ ಹಸ್ತಾಗ್ರದಿಂದೆತ್ತಿ ಕಂದರ್ಪನೃಪಾಲಂ ಕಾಯ್ಪಿನಿಂದೇಱಿಸುವ ಸರಭಸಕ್ಕುರ್ವಿ ತರ್ಗಿತ್ತು ನಾಗೇಂದ್ರನ ಭೋಗಂ ಬಳ್ಕಿ ಸುಯ್ಲಿಕ್ಕಿದುದು . . . ಪರಿಹತಕ್ಕುದ್ಧಘಾತಕ್ಕೆ ಬೆನ್ನೊಡ್ಡಿನ ಪೊಂಗಳ್ ದಕ್ಕಿ ಕೂರ್ಮಂ ಕುಸುರಿನೊಳರೆಮುಟ್ಟಿಗೆ ದುರ್ದಬ್ಬೋದ್ಧವಾಂಡಂ (ಕುಸುಮಾ. ೧೧-೪೫). ℙ ಈ ಪದ್ಯಕ್ಕೆ ಪಾಠಾಂತರವೊಂದಿದೆ. (ಶಾಂತೀಶ್ವ. ೩-೯೫ ನೋ).

**ದಕ್ಕಹಿಡಿ** = ದಕ್ಕುವಂತೆ ಹಿಡಿ ; ಗ್ರಹಣಮಾಡು ; ಸೆರೆಹಿಡಿ : ದಕ್ಕಹಿಡಿವರು ಪಶುಗಳ ಮನೆಯ ಕನ್ನವಿಕ್ಕುವರಿರದೆ ಪುರಗಳ ಹೊಕ್ಕಱಿವರು (ಕುರಾಸಾಂ. ೧೦-೫). **ದಕ್ಕಿ ಹೋಗು**= ವಶವಾಗು; ಸೇರು: ಆದರಾ ಅಗ್ರಹಾರವು ಮೈಸೂರಿನಲ್ಲಿ ಕಟ್ಟಲ್ಪಟ್ಟು ಇನ್ನಾರಿಗೋ ದಕ್ಕಿ ಹೋಯಿತು (ಹುಟ್ಟಹ. ೪) ; ಅವರಿಗೆ ದೊರೆತ ಹಣವೆಲ್ಲ ದಕ್ಕಿ ಹೋಯಿತು (ರೂಢಿ). **ದಕ್ಕು ಹಾಕಿಕೊಳ್ಳು** = ಸ್ವಾಧೀನ ಮಾಡಿಕೊಳ್ಳು; ವಶಪಡಿಸಿಕೊಳ್ಳು ; ತನ್ನದನ್ನಾಗಿ: ಆಭರಣಗಳಲ್ಲಿ ಬಹುಭಾಗ ಅಡವು ಇಟ್ಟುಕೊಂಡು ದಕ್ಕು ಹಾಕಿಕೊಂಡ ಅಂಶ ಮಗನಿಗೆ ತಿಳಿದಿತ್ತು (ವಂಶವೃ. ೧೯೫) : ಗುರುರಾಜರಾಯರ ಹಣಕ್ಕೆ ಮೋಸವಾಗಿದೆ. ಕೆಲವರೆಲ್ಲಾ ದಕ್ಕುಹಾಕಿಕೊಂಡಿದಾರೆ (ಮುರಳಿ. ೧೮೨).
[ ದೇ.॥ ತಮಿ. ಮಲ. ತಕ್ಕು; ತುಳು. ದಕ್ಕು; ತೆಲು. ದಕ್ಕು, ಡಕ್ಕು, ತಕ್ಕು ; ಕೊಲಾ. ನಾಯ್ಕಿ. ತಕ್ ; ಗೊಂಡಿ. ತಗ್ಗಾನಾ ]

**ದಕ್ಕು₂** 'ದಕರ್₁' ನೋ.

**ದಕ್ಕು₃** (ನಾ). ಸ್ವಾಧೀನ ; ವಶ : ಅವರವರಿಗೆ ದಕ್ಕಾಗಬೇಕೆಂದು ಪಂಚರ ನಿರ್ಣಯ (ಗ್ರಾಮಾಯ. ೯) : ಆಸ್ತಿಯೆಲ್ಲ ಯಾರಿಗೋ ದಕ್ಕಾಗಿ ಹೋಗಬಹುದಿತ್ತು (ಗ್ರಾಮಾಯ. ೩೫೩). [ <ದಕ್ಕು₁ ]

**ದಕ್ಕು₄** 'ದರ್ಕು₂' ನೋ.

**ದಕ್ಕುಂತಲೆ** (ನಾ). ದಕ್ಕುವ ತಲೆ; ಉಳಿಯುವ ತಲೆ: ಮೇಣುಂ ವೈಗರೆ ವಕ್ಕಿನ ತಲೆ ದಕ್ಕುಂತಲೆಯೇ ? ಇರ್ಕೆ (ರಾಮಾಶ್ವ. ೯೨-೩೦) [ ದಕ್ಕು₁ (< ದರ್ಕುಂದಲೆ₁) + ತಲೆ₁ ]

**ದಕ್ಕುಂದಲೆ₁** 'ದರ್ಕುಂದಲೆ'₁ ನೋ.

**ದಕ್ಕುಂದಲೆ₂** 'ದರ್ಕುಂದಲೆ'₂ ನೋ.

**ದಕ್ಕುಂದಲೆವರಿ** (ಕ್ರಿ). ಸೊಕ್ಕಿನಿಂದ ಮುನ್ನುಗ್ಗು; ಗರ್ವದಿಂದ ಹಾಯು: ಉರ್ಕಿಂ ಸೊಕ್ಕಿ ದಕ್ಕುಂದಲೆವರಿದುರಿದಪ್ಪರ್ಕರಂ ನಂದಿದಪ್ಪರ್ (ಅನಂಪು. ೦೩-೧೭). [ ದಕ್ಕುಂದಲೆ₁ (<ದರ್ಕುಂದಲೆ₁) + ಪರಿ₁ ]

**ದಕ್ಕುಂದಲೆವಾಯ್** 'ದರ್ಕುಂದಲೆವಾಯ್' ನೋ.

**ದಕ್ಕುಕೊಡು** (ಕ್ರಿ). ಅಧೀನಕ್ಕೆ ಕೊಡು; ಸ್ವಾಧೀನಮಾಡು: ಈ ಮೊಹರುಗಳನ್ನು ದಕ್ಕುಕೊಟ್ಟಿಲ್ಲ. ಕೈಗಡದಂತೆ ನೀವು ತಿಳುಕೊಳ್ಳಬೇಕು (ಮುಂಬಯಿ. ೫-೯೦). [ ದಕ್ಕು₃ + ಕೊಡು₁ ]

**ದಕ್ಕುಗೊಳ್** (ಕ್ರಿ). ವಶಪಡಿಸಿಕೊಳ್ಳು; ತನ್ನದನ್ನಾಗಿ ಮಾಡಿಕೊಳ್ಳು: ತನ್ನ ಪೆಣ್ಗಳಂ ಮರುಳ್ಗೊಳಿಸಿ ದಕ್ಕುಗೊಂಡ ಶ್ರೀಕೃಷ್ಣನಂ ದೂಱುವ ವೃದ್ಧಗೋಪಿಯರ ವಚನವ್ಯಾಜದಿಂ ವಿವರಿಸುವರ್ (ಗೀತಗೋ. ೭೩-೦ ವ): ಇರ್ಕೇಱಿಯನೊಕ್ಕಲಿಕ್ಕಿ ದಕ್ಕುಗೊಳಲೊಡವಾ ತುರುಕ ಪಡೆವಳಂ . . . ಮುಂತಣ್ಗೆ ಸವೆದು (ಚಳವಂ. ೫೭-೯). [ ದಕ್ಕು₃ + ಕೊಳ್₁ ]

**ದಕ್ಕುಗೊಳಿಸು** (ಕ್ರಿ). ವಶಪಡಿಸಿಕೊಳ್ಳು; ಸ್ವಾಧೀನಮಾಡಿಕೊಳ್ಳು: ಏನು ನೇಮದೊಳಿರ್ದುದೊ ಪೊಂಗೊಳಲೇನೋಂತುದೊ ಕೆಳದಿ ತಾನೊಲಿದಿನಿಯನ ದಕ್ಕುಗೊಳಿಸುತಿದೆ (ಗೀತಗೋ. ೧೪-೩೭ ಪಲ್ಲವಿ). [ ದಕ್ಕುಗೊಳ್ + – ಇಸು₃ ]

**ದಕ್ಕುಪಾರಿ** (ನಾ). ದಕ್ಕಿದ ಸೂಳೆ; ವಶಳಾದ ಜಾರೆ: ಚಿಕ್ಕಪ್ರಾಯದಿ ನಿನ್ನ ರೂಪಿಗೆ ಸಿಕ್ಕಿ ದಕ್ಕಿದ ನಾರಿಯಾ ತಕ್ಕೆಯೊಳಗಿಂದಗಲಿ ಹೋಹರೆ ದಕ್ಕುಪಾರಿಯ ನೀರೆಯಾ ಅಕ್ಕರಿಂದಲಿ ಕರೆದು ಮನ್ನಿಸೊ (ಮಡಿಕ್ಕಾ. V, ೧೨೫೫ ಗಂಗಾಧರನ ಅಷ್ಟಕ). [ ದಕ್ಕು₃ + ಪಾರಿ₂ (<ಪಾಱಿ₁) ]

**ದಕ್ಕುಬೀಳು** (ಕ್ರಿ). ವಶವಾಗು; ಅಧೀನವಾಗು: ಈಗ ಬಗೆಗಡಿನ ವೇಗಕ್ಕೆ ಸಂಚಳಿಸಿ ಸನ್ಯಾಸದ ಕಾಲಾಟಕ್ಕೆ ಸಿಲ್ಕಿ, ದಿಕ್ಕುಗೇಡಿಗೆ ದಕ್ಕುಬಿದ್ದು . . . ನಾವು ಮುಳುಗಿಹೋಗಿ ಉಸಿರಳಿಯಬಾರದು (ಮಂತ್ರಶ. ೭೨-೨೦). [ ದಕ್ಕು₃ + ಬೀಳು₁ (<ಬೀೞ್₁) ]

**ದಕ್ಕೆ₁** 'ಡಕ್ಕೆ' ನೋ.

**ದಕ್ಕೆ₂** 'ಧಕ್ಕೆ₂' ನೋ.

**ದಕ್ಕೆಬಲಿ** 'ಡಕ್ಕೆಬಲಿ' ನೋ.

**ದಕ್ಷ** (ನಾ). ೧. ಚತುರನಾದವನು; ಜಾಣ; ಸಮರ್ಥ: "ಚತುರಃ . . . ದಕ್ಷಃ, ಕುಶಲಃ . . . ಪ್ರವೀಣಃ—ಈ ೧೧ ಬಲ್ಲವಂ" (ಹಲಾಯು. ೫೫-೦೮೦); "ಚತುರಂ ಪ್ರವೀಣಂ ಕುಶಲನಭಿಜ್ಞಂ ಸುಶಿಕ್ಷಿತನೆನಲ್ ದಕ್ಷನೆನೆ . . . ಬಲ್ಲವಗೆ ನಾಮಂ" (ಮಂಗರಾ. ೬೭-೩); ಶ್ರೀರಮಣೀರಮಣಂಗರಿನಾರೀವೈಧವ್ಯದಿವ್ಯದೀಕ್ಷಾದಕ್ಷಂಗಾರೆಣೆ (ಶಂಪಭಾ. ೭-೧); ಉನ್ನತನ ರೂಪಾಧಿಕನ ಸಂಪೂರ್ಣ ದಕ್ಷನನನ್ಯರೆನ್ನವರೆನ್ನದನ ಪರರಿಂಗಿತಾಕಾರಪ್ರಭೇದಕನ . . . ಪರಿಹಾರಕನ ಮಾಡುವುದು (ಕಾವ್ಯಾಲು. ೩-೯೪); ದೇವರಾಜನು ಸ್ವತಃ ಶೂರನೂ ರಾಜ್ಯಕಾರ್ಯಭಾರದಲ್ಲಿ ದಕ್ಷನೂ ಚತುರನೂ ಇದ್ದನು (ಮುಂಬಯಿ. ೪-೮). ೨. ಬ್ರಹ್ಮನ ಮಗನಾದ ದಕ್ಷ: ದಕ್ಷ ಯಾಗವ ಮಾಡಿ (ಬಸವ. ೫೮೩); ಗಿಲಿಕೆ ಘಲಿಲೆಂದುಲಿಯೆ ದಕ್ಷನ ತಲೆಯ ಕೋಡಿನ ತೆಱದಿ ತಗರಿನ ಬಲಿದ ಕೊಂಬಂ ತನ್ನೆಡದ ಕೈಯಲಿ ಪಿಡಿದುಕೊಂಡು (ಬಸಪು. ೨೯-೪); ನೀರೇಜಾಸನಸೂನು ದಕ್ಷನುೞಿ ಸದ್ದಾಕ್ಷಾಯಣೀದೇವಿಯುಂ . . . ಪಡೆದಂ (ಹಮ್ಮಿರ. ೨-೭): ಮಾರವಮಾರಣದಕ್ಷ ದಕ್ಷಮದಾಪಹಾಂಕ ವಿರಾಜಿತೇ ಧೀರ ಧೀರತಿಪಾಲ ಪಾಲನಶೀಲೆ ಪಾಲಿಪುದಂಬಿಕೇ (ರಾಜಶೇ. ೩-೧೧೪). ೩. ಮುನಿ; ತಪಸ್ವಿ. ೪. ಹನ್ನೆರಡು ಮಂದಿ ಪ್ರಾಚೀನ ಋಷಿಗಳಲ್ಲಿ ಒಬ್ಬ: ಪುಲಸ್ತ್ಯ ಪುಲಹ . . . ದಕ್ಷ ಕ್ರತು ಜಮದಗ್ನಿ ಕೌಶಿಕರೆಂಬೀ ದ್ವಾದಶಋಷಿಗಳೇ ಕ್ರಮದಿಂದವರವರಂ ಕೀರ್ತಿಸುವರು (ವಿವೇಕ. ೨೬೭). ೫. ಗಂಡುಕೋಳಿ; ಹುಂಜ: "ಮುನಿಯೊಳು ಕೋಟಿಯೊಳು ದಕ್ಷವೆಂಬುದು" (ಮಂಗರಾ. ೧೪೨-೦೮). ೬. ಸಾಮರ್ಥ್ಯ; ಶಕ್ತಿ; ಅಣ್ಮು. ೭. ವೇಗ; ಶೀಘ್ರತೆ: "ದಕ್ಷ-ವೃದ್ಧೌ, ಶೀಘ್ರೇಚ, ಪೆರ್ಚುಗೆಯೊಳಂ ವೇಗದೊಳಂ" (ಕಾಶಕ್ಕ. ೧೧೭). ೮. ಕೊಲೆ; ಹತ್ಯೆ. ೯. ಬಲಗಡೆ: "ದಕ್ಷಂ = ಬಲಗಡ" (ಕಾಶಕ್ಕ. ೧೧೭). [ ಸಂ. ]

**ದಕ್ಷಕನ್ಯೆ** (ನಾ). ದಕ್ಷನ ಮಗಳು; ದಾಕ್ಷಾಯಣಿ; ಪಾರ್ವತಿ. [ ದಕ್ಷ + ಕನ್ಯೆ ]

**ದಕ್ಷತೆ** (ನಾ). ೧. ಚಾತುರ್ಯ; ಜಾಣತನ. ೨. ಸಾಮರ್ಥ್ಯ; ಶಕ್ತಿ; ಸತ್ವ; ಬಲ: ಪ್ರವಚನ ಪರಿಪಠನಕ್ಷಮತೆ ವಾಣಿಯಂ ತೀರ್ಥಯಾನ ದಕ್ಷತೆ ಪದಮಂ ಕಿವಿಯಂ ಜಿನವರ ಚರಿತ ಶ್ರವಣಪಟುತೆ ಪಿಂಗದನ್ನ ಮಾರ್ಜಿಪೆಸಜಿನಂ (ಚಂದ್ರಪು. ೪-೧೭). ೩. ಕಾರ್ಯಪಟುತ್ವ: ಪೂರ್ವಸಿದ್ಧತೆ ಉಪಾಧ್ಯಾಯರ ಶಕ್ತಿ. ದಕ್ಷತೆ, ಕೌಶಲ್ಯ ಇವನ್ನೆಲ್ಲ ಹೆಚ್ಚಿಸುತ್ತದೆ (ಶಿಕ್ಷದ. ೨೬೩); ಹೀಗೆ ತೆಗೆದುಕೊಂಡ ಉಷ್ಣದಲ್ಲಿ ಎಷ್ಟು ಹೆಚ್ಚು ಭಾಗವನ್ನು ಅದು ಕೆಲಸವಾಗಿ ಮಾರ್ಪಡಿಸಿದರೆ ಅಷ್ಟು ದಕ್ಷತೆಯು (Efficiency) ಹೆಚ್ಚೆಂದು ನಾವು ಹೇಳಬಹುದು (ಭೌತವಿ. ೨೬೨). [ ಸಂ. ದಕ್ಷತಾ ]

**ದಕ್ಷಬಗುರಿ** (ನಾ). ವೇಗವಾಗಿ ಸುತ್ತುವ ಬುಗುರಿ (?): ವಕ್ಷರುಹಗಳೊ ಚಕ್ರವಾಕದ ಪಕ್ಷಿಗಳೊ ಪೊಸ ಪೊನ್ನ ಕಲಶಗಳಿಕ್ಷುಚಾಪನ ಕರದ ಚಂಡುಗಳ ಸಮನಾಡುತಿಹ ದಕ್ಷಬಗುರಿಗಳಂದವೋ ಮೂಲಕ್ಷಣೆಯ ಲತಿಕಾಂಗಫಲ ಲೋಕೇಕ್ಷಣಂಗನೆ ಕುಟ್ಮಳಗಳರಿಯಂದಳಿಂದುಮುಖಿ (ಜಿರಾಪು. ೧೭-೪೮). 'ತಗಬುಗುರಿ' ಪರಾ. [ ದಕ್ಷ + ಬಗುರಿ₀ (<ಬೊಗರಿ) ]

**ದಕ್ಷಬ್ರಹ್ಮ** (ನಾ). = ದಕ್ಷ ೨: ದಕ್ಷಃ – ಸರಸ್ವತೀ ಬ್ರಹ್ಮನ ಮಗನಾದ ಸತೀದೇವಿಯ ತಂದೆಯಾದ ಶಿವನ ಮಾವನಾದ ದಕ್ಷಬ್ರಹ್ಮಂ (ಕಾಶಕ್ಕ. ೧೧೭). [ ಸಂ. ]

**ದಕ್ಷಮುಖ** (ನಾ). ದಕ್ಷಯಜ್ಞ: ನಾಡೆ ದಕ್ಷಮುಖಶ್ರೀ ಕೆಟ್ಟುದು (ವೀರವಿ. ೦೨-೬೦). [ ದಕ್ಷ + ಮುಖ ]

**ದಕ್ಷಮುಖಕ್ಷಯ** (ನಾ). ದಕ್ಷನ ಯಜ್ಞವನ್ನು ಹಾಳುಗೆಡಿಸಿದವನು; ಶಿವ: ಅಕ್ಷಯಂ ನಿಟಿಲಾಕ್ಷನಭವಂ ದಕ್ಷಮುಖಕ್ಷಯಕ್ಷಮನುಕ್ಷಗಂ ಪ್ರತ್ಯಕ್ಷವಾಗಿ ಸಮುಕ್ಷದಲಿ ನಿಂದು (ಬಸಪು. ೨೭-೩೨). [ ದಕ್ಷಮುಖ + ಕ್ಷಯ ]

**ದಕ್ಷಯಾಗ** (ನಾ). = ದಕ್ಷಮುಖ: ದಕ್ಷಯಾಗವ ನಡೆಸಲೆಂದು ಅಜಮುಖ್ಯರಾದ ಸುರರೆಲ್ಲಾ ನೆರೆದು (ಬಸವ. ೫೭೫). [ ದಕ್ಷ + ಯಾಗ ]

**ದಕ್ಷಸಾವರ್ಣಿಕ** (ನಾ). ಹದಿನಾಲ್ಕು ಮನುಗಳಲ್ಲಿ ಒಂಭತ್ತನೆಯವನು: ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸೂರ್ಯಸಾವರ್ಣಿಕ, ದಕ್ಷಸಾವರ್ಣಿಕ, ಬ್ರಹ್ಮಸಾವರ್ಣಿಕ, ಧರ್ಮಸಾವರ್ಣಿಕ, ರುದ್ರಸಾವರ್ಣಿಕ, ರೌಚ್ಯ, ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳೊಳಗೆ (ವಿವೇಕ. ೨೦೪). [ ಸಂ. ]

**ದಕ್ಷಸ್ಮೃತಿ** (ನಾ). ಹತ್ತೊಂಭತ್ತು ಧರ್ಮಶಾಸ್ತ್ರಗಳಲ್ಲಿ ಹದಿನಾರನೆಯದು: ಮನುಸ್ಮೃತಿ, ಅತ್ರಿಸ್ಮೃತಿ, ಹರಿತಸ್ಮೃತಿ, ವಿಷ್ಣುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ, ಉಶನಸ್ಮೃತಿ, ಆಂಗೀರಸಸ್ಮೃತಿ, ಯಮಸ್ಮೃತಿ, ಆಪಸ್ತಂಬಸ್ಮೃತಿ, ಸಂವರ್ತಸ್ಮೃತಿ, ಕಾತ್ಯಾಯನಸ್ಮೃತಿ, ಬೃಹಸ್ಪತಿಸ್ಮೃತಿ, ಪರಾಶರಸ್ಮೃತಿ, ವ್ಯಾಸಸ್ಮೃತಿ, ಶಂಖಲಿಖಿತಸ್ಮೃತಿ, ದಕ್ಷಸ್ಮೃತಿ, ಗೌತಮ

ಸ್ಮೃತಿ, ಶಾತಾತಪಸ್ಮೃತಿ, ವಶಿಷ್ಠಸ್ಮೃತಿಗಳೆಂಬವೆ ಆಯಾಯ ನಾಮಧೇಯ ಮುಳ್ಳವಱಿಂದುಕ್ತಮಾದ ಹತ್ತೊಂಭತ್ತು ಧರ್ಮಶಾಸ್ತ್ರಗಳು (ವಿವೇಕ. ೪). ಧರ್ಮಶಾಸ್ತ್ರಗಳ ಸಂಖ್ಯೆಯನ್ನು ಹದಿನೆಂಟು ಎಂದು ಹೇಳಿದವರೂ ಉಂಟು. [ ಸಂ. ]

**ದಕ್ಷಾಧ್ವರ** (ನಾ). ದಕ್ಷನ ಯಜ್ಞ ; ದಕ್ಷಬ್ರಹ್ಮನ ಯಜ್ಞ. 'ದಕ್ಷಾಧ್ವರಧ್ವಂಸಿ' ಪರಾ. [ ದಕ್ಷ + ಅಧ್ವರ ]

**ದಕ್ಷಾಧ್ವರಧ್ವಂಸಕ** (ನಾ). ದಕ್ಷಬ್ರಹ್ಮನ ಯಜ್ಞವನ್ನು ನಾಶಪಡಿಸಿದವನು ; ಶಿವ : "ಈಶಾನಃ : . . . ಅಂಧಕರಿಪುಃ, ದಕ್ಷಾಧ್ವರಧ್ವಂಸಕಃ . . . ನೀಲಲೋಹಿತಃ– ಈ ೪೫ ಮಹಾದೇವರ ಪೆಸರ್" (ಹಲಾಯು. ೩–೧೧).
[ ದಕ್ಷಾಧ್ವರ + ಧ್ವಂಸಕ ]

**ದಕ್ಷಾಧ್ವರಧ್ವಂಸಿ** (ನಾ). = ದಕ್ಷಾಧ್ವರಧ್ವಂಸಕ : ತೊಡೆವೆಂ ಶಕ್ರನ ನಾಮಮಂ . . . ಪರಾಭವಿಸುವೆಂ ದಕ್ಷಾಧ್ವರಧ್ವಂಸಿಯಂ (ಜಗವಿ. ೩–೨೧); ದೇವ ಶೈವಾಚಾರ್ಯನ ಸೋಮಾಸಿಮಾರನ ಮಹಾಯಾಗಕ್ಕೆ ದಕ್ಷಾಧ್ವರಧ್ವಂಸಿ ಬಿಜಯಂಗೆಯ್ವುದೆಂದು ಬಿನ್ನಪಂ ಮಾಡೆ (ನಂಬಿರ. ೧೬–೧೩೧) ; ದೇವ ನಿಮ್ಮಡಿ ಸಹಿತ ಕಂಡೆನು ದೇವದೇವನ ಚರಣವನು ಸಂಭಾವಿಸಿದ ನಮ್ಮಿಬ್ಬರನು ದಕ್ಷಾಧ್ವರಧ್ವಂಸಿ (ಕುಮ್ಮಾದ್ರೋ. ೯–೮) ; ಪೂರ್ವದಲ್ಲಿ ದಕ್ಷಾಧ್ವರಧ್ವಂಸಿಯಾದ ಪರಮೇಶ್ವರನ ಹಣೆಗಣ್ಣಿನಲ್ಲಿ ಹುಟ್ಟಿದ ಕೋಪವೇ ಜ್ವರರೂಪವಾಗಿ ವರ್ತಿಸಿರ್ಪುದು (ಸಕವ್ಯ. ೬೧).
[ ಸಂ. ದಕ್ಷಾಧ್ವರಧ್ವಂಸಿನ್ ]

**ದಕ್ಷಾಧ್ವರಹರ** (ನಾ). = ದಕ್ಷಾಧ್ವರಧ್ವಂಸಕಃ: ಗಿರಿಶ ಶ್ರೀಕಂಠ ದಕ್ಷಾಧ್ವರಹರ ವೃಷಭಾರೂಢ . . . ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೮೮). [ ಸಂ. ]

**ದಕ್ಷಾರಿ** (ನಾ). ದಕ್ಷನ ಶತ್ರು ; ವೀರಭದ್ರ : "ವೀರಂ ಭಯಂಕರಂ ದಕ್ಷಾರಿ ಶರಭನೆನೆ ವೀರಭದ್ರನೆನಿಕ್ಕು" (ಮಂಗರಾ. ೫–೧೫).
[ ದಕ್ಷ + ಅರಿ₆ ]

**ದಕ್ಷಿಣ** (ಗು). ೧. ಬಲಗಡೆಯ ; ಬಲಭಾಗದ : ದಕ್ಷಿಣ ಪಾಣಿಪಲ್ಲವಾಭಿನಯನಿವೇದಿತಾವಿನೇಯ ವಿಳಸಿತ ಚಕ್ರಾಯುಧಂ ನಿಂದಿರ್ದ (ಶಾಂತಿಪು. ೧೦–೧೬೮ ವ). ೨. ನೇರವಾದ ; ಋಜುವಾದ ; ಸರಿಯಾದ. ೩. ಚಾತುರ್ಯವುಳ್ಳ ; ಜಾಣ್ಮೆಯುಳ್ಳ. (ನಾ). ೪. ಬಲಭಾಗ ; ಬಲಗಡೆ ; ಬಲಪಕ್ಕ : "ಅಪಸವ್ಯಂ, ದಕ್ಷಿಣಂ – ಈ ೨ ಬಲಂ" (ಹಲಾಯು. ೧೨೪–೬೧) ; ನವಗ್ರಹಗಳಲ್ಲಿ ದೃಷ್ಟಿಯು ವಾಮ ದಕ್ಷಿಣ ಸಮ್ಮುಖಗಳೆಂಬ ಭೇದದಿಂದ ಮೂರು ಬಗೆಯೆಂದು ತಿಳಿಯತಕ್ಕುದು (ಅರ್ಕಮಾ. ೩೯). 'ದಕ್ಷಿಣಬಾಹು' ಪರಾ. ೫. ತೆಂಕಣದಿಕ್ಕು; ತೆಂಕಲು: ವೃಷಭ ಕನ್ನೆ ಮಕರ ಯೀ ೩ ರಾಶಿಯು ದಕ್ಷಿಣದಿಕ್ಕು (ಭಾಸ್ಕರ. ೬೮–೫). ೬. ಭಾರತದ ದಕ್ಷಿಣಕ್ಕಿರುವ ದೇಶ; ದಕ್ಷಿಣದೇಶ. 'ದಕ್ಷಿಣಮಾರ್ಗ' ಪರಾ. ೭. ನೇರವಾದವನು ; ಸರಿಯಾದವನು : "ಸರಳಃ, ದಕ್ಷಿಣ :– ಈ ೨ ಸಮ್ದಂ" (ಹಲಾಯು. ೬೩–೨೩೦). ೮. ಶೈವ ಪ್ರಭೇದಗಳಲ್ಲಿ ಒಂದು: ಮತ್ತಮಾ ಶೈವವೇ ವಾಮ ದಕ್ಷಿಣ ಮಿಶ್ರ ಸಿದ್ಧಾಂತವೆಂದು ನಾಲ್ಕುತೆಱನಾಗಿರ್ಪುದು (ವಿವೇಕ. ೬೩). ೯. [ಜ್ಯೋತಿ] ಲಗ್ನದಿಂದ ನಾಲ್ಕನೆಯ ಸ್ಥಾನ: "ದಕ್ಷಿಣ– ಚತುರ್ಥ" (ಜಾತತಿ. ೨–೯ ಟೀಕು). ೧೦. ದಕ್ಷಿಣದಿಕ್ಕಿನಲ್ಲಿಟ್ಟ ಯಾಗದ ಬೆಂಕಿ. 'ದಕ್ಷಿಣಾಗ್ನಿ' ಪರಾ. ೧೧. [ಜೈನ] ಜೈನ ಬ್ರಾಹ್ಮಣರ ಮನೆಗಳಲ್ಲಿ ಅರ್ಹಂತನ ಪೂಜೆಗಾಗಿ ಸ್ಥಾಪಿಸುವ ಮೂರು ಬಗೆಯ ಅಗ್ನಿಗಳಲ್ಲಿ ಒಂದು: ಆ ಕ್ಷಣದೊಳೇ ಅಗ್ನಿಕುಮಾರನ ಕಿರೀಟದೊಳುತ್ಪನ್ನವಾದ ಗಾರ್ಹಪತ್ಯ ಆಹವನೀಯ ದಕ್ಷಿಣವೆಂಬ ಅಗ್ನಿತ್ರಯವೂ ಕ್ರಮವಾಗಿ ಚತುರಶ್ರ ತ್ರಿಕೋಣವೃತ್ತಕುಂಡಗಳಲ್ಲಿ ಪ್ರವೇಶವಂ ಮಾಡಿತು (ಪುರುಜ. ೨೬೪). ೧೨. [ಕಾವ್ಯಮೀ] ದಕ್ಷಿಣ, ಧೃಷ್ಟ, ಅನುಕೂಲ, ಶಠವೆಂಬ ನಾಲ್ಕು ಬಗೆಯ ಶೃಂಗಾರನಾಯಕರಲ್ಲಿ ಒಂದು ಬಗೆ; ಅನೇಕ ನಾಯಿಕೆಯರಲ್ಲಿ ಸಮಾನ ಅನುರಾಗವನ್ನು ತೋರಿಸುವ ನಾಯಕ : ದೇವರಲಿ ಭಕ್ತರಿಗೆ ಗುರುಜನ ಸೇವೆಯಲಿ ಸತ್ಪಾತ್ರರಿಗೆ ವರಯುವ್ವತದಿ ದಕ್ಷಿಣರಿಗೆಂತೆಸೆವುದುತ್ಕ್ರಮಂ ಬಿಡದೆ (ವಿವೇಧ. ೨–೩೩) ; ದಕ್ಷಿಣನೆಂದರೆ, ಅನೇಕ ನಾಯಿಕೆಯರಿದ್ದು ಅವರೆಲ್ಲರಲ್ಲಿಯೂ ಒಂದೇ ರೀತಿಯಾದ ಪ್ರೇಮವನ್ನು ತೋರಿಸತಕ್ಕವನು (ಕೈಬಡಿ. ೨೦೯); ಶೃಂಗಾರನಾಯಕರಲ್ಲಿ ದಕ್ಷಿಣ, ಧೃಷ್ಟ, ಅನುಕೂಲ, ಶಠ ಎಂದು ನಾಲ್ಕು ವಿಧ (ಸರಿನಾಟ. ೧೮).

**ದಕ್ಷಿಣ ಅಕ್ಷಾಂಶ** = ಸಮಭಾಜಕವೃತ್ತದ ದಕ್ಷಿಣಕ್ಕೆ ಗೋಳದ ಮೇಲ್ಮೈಯ ಮೇಲೆ ಅಡ್ಡಡ್ಡಲಾಗಿರುವಂತೆ ಭಾವಿಸಿರುವ ವೃತ್ತಾಕಾರದ ರೇಖೆ : ಸಮಭಾಜಕವೃತ್ತಕ್ಕೆ ಉತ್ತರದಲ್ಲಿರುವ ಅಕ್ಷಾಂಶಗಳಿಗೆ ಉತ್ತರಅಕ್ಷಾಂಶ, ದಕ್ಷಿಣದಲ್ಲಿರುವವುಗಳಿಗೆ ದಕ್ಷಿಣ ಅಕ್ಷಾಂಶ ಎಂದು ಹೆಸರು (ಭೂವಿವ. ೧೬).
[ ಸಂ. ]

**ದಕ್ಷಿಣಕರ** (ನಾ). ಬಲಗೈ ; ಬಲಹಸ್ತ : ಶಿಷ್ಯನ ಶಿರದ ಮೇಲೆಯು ತಮ್ಮ ದಕ್ಷಿಣ ಕರವ ಚಾಚುತಲಿ (ಗಗಶಾ. ೨–೩೦). [ ದಕ್ಷಿಣ + ಕರ₃ ]

**ದಕ್ಷಿಣಖುರ** (ನಾ). ಬಲಗಾಲಿನ ಗೊರಸು : ನೆಲನಂ ಪೊಡೆವಂತಿರೆ ಬಾರಿಪುದಡಿಗಡಿಗೆ ಹಯಂ ತನ್ನ ತೀಕ್ಷ್ಣದಕ್ಷಿಣಖುರಮಂ (ಮಲ್ಲಿಪು. ೮–೧೫೧).
[ ದಕ್ಷಿಣ + ಖುರ ]

**ದಕ್ಷಿಣಘೂರ್ಜರಿ** (ನಾ). [ಸಂಗೀತ] ಒಂದು ರಾಗದ ಹೆಸರು: ಮಹಾರಾಷ್ಟ್ರ ಘೂರ್ಜರಿ, ಸೌರಾಷ್ಟ್ರಘೂರ್ಜರಿ, ದ್ರಾವಿಡಘೂರ್ಜರಿ ದಕ್ಷಿಣಘೂರ್ಜರಿ[ಪಾಠಾಂ.ಗುಜ್ಜರಿ]ಯೆಂಬ ನಾಲ್ಕುಂ ಉಪಾಂಗ ಘೂರ್ಜರೀರಾಗಂಗಳು (ವಿವೇಕ. ೨೩೪). [ ದಕ್ಷಿಣ + ಘೂರ್ಜರಿ ]

**ದಕ್ಷಿಣಚರಣ** (ನಾ). ಬಲಗಾಲು; ಬಲಗಡೆಯ ಪಾದ : ದಿವ್ಯಚಾಪಮಂ ಪಿಡಿದು ಪ್ರಥಮಚಳಿತ ದಕ್ಷಿಣಚರಣನಾಗಿ ನಿಜನಿವಾಸದಿಂ ಪೊಱಮಟ್ಟು (ಪಂಪಭಾ. ೪–೧೨ ವ) ; ಆ ಶುಕಂ ರಾಜಾಭಿಮುಖನುಮುನ್ನಮಿತ ದಕ್ಷಿಣಚರಣನುಮತಿಸ್ಪಷ್ಟವರ್ಣಸಂಸ್ಕಾರವುಪ್ಪವಾಣಿಯಿಂ ಕೃತಜಯ ಶಬ್ದನುಮಾಗಿ (ಕಾದಂಪೂ. ೫೮). [ ದಕ್ಷಿಣ + ಚರಣ ]

**ದಕ್ಷಿಣತಟ** (ನಾ). ಬಲಭಾಗದ ತೀರ,–ದಂಡೆ : ಆ ಮೂವರು . . . ಸೇರೆ ಸರಯೂನದಿಯ ದಕ್ಷಿಣತಟವನಲ್ಲಿ, ಸವಿಗೊರಳ ನೇಹದಿಂ ನೀಡಿದನು ಕುಶಿಕತನಯಂ ರಾಮಚಂದ್ರಂಗೆ. ಮಂಗಳಸ್ನಾತಂಗೆ, ಮಂತ್ರಸದ್ವಿದ್ಯೆಯಂ (ಶ್ರೀರಾಮಾ. ೩೧–೮೯). [ ದಕ್ಷಿಣ + ತಟ₃ ]

**ದಕ್ಷಿಣದೋರ್ದಂಡ** (ನಾ). ೧. ಬಲಭುಜ. ೨. (ಆಲಂ) ಹೆಚ್ಚು ಸಹಾಯಕನಾದವನು ; ಬಲಗೈಯಂತಿರುವವನು : ಮುದಿಯಪ್ಪನಾಯಕೇಂದ್ರನು ರಾಜ್ಯವಾಳುತ್ತಾಯಿರಲು ಆತಂಗೆ ದಕ್ಷಿಣದೋರ್ದಂಡವಾದ ವೀರಮಾಹೇಶ್ವರರಾರಾಧಕನಾದ ಶೀಲವಂತದಳವಾಯಿ . . . ಮಠ ಕೆರೆ ತೋಟಯಿ × × × ಮಾಡಿಸಿ (ಎಕ. XVI, ಚಿಕ್ಕನಾ. ೧–೧೦; 1623).
[ ದಕ್ಷಿಣ + ದೋರ್ದಂಡ ]

**ದಕ್ಷಿಣಧ್ರುವ** (ನಾ). [ಭೂಗೋಳ] ಅಕ್ಷರೇಖೆಗಳು ಕೂಡುವ ಬಿಂದು; ಅಕ್ಷರೇಖೆಗಳು ಒಂದೆಡೆ ಸೇರುವ ದಕ್ಷಿಣದ ತುದಿ; ಭೂಮಿಯ ಅಕ್ಷದ ಕೆಳತುದಿ: ಭೂಮಿಯ ಅಕ್ಷವನ್ನು ಅಂದರೆ ದಕ್ಷಿಣೋತ್ತರ ಧ್ರುವರೇಖೆಯನ್ನು ವೃದ್ಧಿಸಿದರೆ ಉತ್ತರದಲ್ಲಿ ಈ ರೇಖೆಯು ಖಗೋಳವನ್ನು ಸಂಧಿಸುವ ಬಿಂದು ಖಗೋಳೀಯ ಉತ್ತರಧ್ರುವ, ದಕ್ಷಿಣದಲ್ಲಿ ಸಂಧಿಸುವ ಬಿಂದು ದಕ್ಷಿಣಧ್ರುವ (ನಕ್ಷತ್ರ. ೩೪) ; ಉತ್ತರಧ್ರುವದಿಂ ದಕ್ಷಿಣಧ್ರುವಕೂ ಚುಂಬಕ ಗಾಳಿಯು ಬೀಸುತಿದೆ (ನಾದಲೀ. ೫೦–೧) ; ದಕ್ಷಿಣದ ಕಡೆ ಇರುವ ಧ್ರುವವನ್ನು ದಕ್ಷಿಣಧ್ರುವವೆಂದೂ ಕರೆಯುತ್ತಾರೆ (ಭೌತವಿ. ೩೧೧). 'ಉತ್ತರಧ್ರುವ' ಪರಾ. [ ದಕ್ಷಿಣ + ಧ್ರುವ ]

**ದಕ್ಷಿಣನಯನ** (ನಾ). ಬಲಗಡೆಯ ಕಣ್ಣು; ಬಲಗಣ್ಣು: ತ್ರಿಪಥಗಾಮಿನಿಯೆನಿಪ ಜಾಹ್ನವಿ ನೃಪನ ಚರಣದಲುದಿಸಿದಳು ಗಡ ತಪನ ದಕ್ಷಿಣನಯನವೆಂಬರು ಕಾಂಬೆವಾ ಕುಜುಹ (ಕಾಶಿರಾ. ೨೭-೭); ಸತಿಯ ದಕ್ಷಿಣನಯನವೀ ಭೂಪತಿಯ ವಾಮಭುಜಾಕ್ಷಿಗಳು ದುರ್ಗತಿಯ ಸೂಚಿಸಿ ತೋಱುತಿರ್ದುವು ಧರ್ಮನಂದನನ (ಕುವ್ಯಾಸ. ೧೬-೩೪).
[ ದಕ್ಷಿಣ + ನಯನ ]

**ದಕ್ಷಿಣನಾಯಕ** (ನಾ). [ಕಾವ್ಯಮೀ] ಶೃಂಗಾರನಾಯಕರಲ್ಲಿ ಒಂದು ಬಗೆ; ಅನೇಕ ನಾಯಿಕೆಯರಲ್ಲಿ ಸಮಾನ ಅನುರಾಗವನ್ನು ತೋರಿಸುವವನು: ನೋಟದಿನೊರ್ವಳಂ ನಗೆಯಿನೊರ್ವಳನೊಳ್ನುಡಿಯಿಂದಮೊರ್ವಳಂ ಬೇಟದಿನೊರ್ವಳಂ ಪಿಡಿಯುತ . . . ತೃಪ್ತಿಪಡಿಸಿರ್ದನವಂ ಗುಣರತ್ನಭೂಷಣಂ (ಇವಂ ದಕ್ಷಿಣನಾಯಕಂ) (ರಸರ. ೩-೧೩೪). [ ದಕ್ಷಿಣ + ನಾಯಕ ]

**ದಕ್ಷಿಣಪಕ್ಷ** (ನಾ). ಬಲಪಕ್ಕ; ಬಲಗಡೆ: ಅಂತಶ್ವಗ್ರೀವಂ ನಿರಾಯುಧನುಂ ನಿರ್ವಿದ್ಯನುಮಾಗಿ ಕೆಲನಂ ನೋಡಿ ತನ್ನ ದಕ್ಷಿಣಪಕ್ಷದೊಳಿರ್ದ ಚಕ್ರಮಂ ಕೊಂಡಿಡೆ (ಶಾಂತಿಪು. ೫-೬೨ ವ). [ ದಕ್ಷಿಣ + ಪಕ್ಷ ]

**ದಕ್ಷಿಣಪತಿ** (ನಾ). ತೆಂಕಲುದಿಕ್ಕಿನ ಒಡೆಯ; ಯಮ: ಗರ್ವಿಸುವ ದಕ್ಷಿಣಪತಿಯ ಮದವಂ ವಿಭಾಡಿಸುವ ಸರ್ವಮಂಗಳದಣುಗ ಬಾರಾ (ಬಸಪು. ೨೪-೩೭). [ ದಕ್ಷಿಣ + ಪತಿ$_2$ ]

**ದಕ್ಷಿಣಬಾಹು** (ನಾ). ಬಲಭುಜ; ಬಲತೋಳು: ಬಾಹುಬಲಿ ತನ್ನ ದಕ್ಷಿಣಬಾಹುವ ಕೆಲದಲ್ಲಿ ನಿಂದ ಚಕ್ರಮನಾಗಳ್ ಸಾಹಸರಸಿಕಂ ಕಂಡು (ಆದಿಪು. ೧೪-೧೨೦). [ ದಕ್ಷಿಣ + ಬಾಹು$_2$ ]

**ದಕ್ಷಿಣಭುಜ** (ನಾ).=ದಕ್ಷಿಣಬಾಹು: ಎಂತಾನುಂ ನೆನೆದಂ ಬಹುಚಿಂತಂ ಚಕ್ರೇಶನೆಮ್ಮ ದಿಗ್ವಿಜಯಮುಮಾದಂತೆಡಱದೆಯ್ದೆ ನಡೆಮುದೆ ಸಂತಮೆ ದಕ್ಷಿಣಭುಜಕ್ಕೆ ಭೂವಲ್ಲಭನಾ (ಆದಿಪು. ೧೪-೪೮); ದಕ್ಷಿಣಭುಜೋತ್ಪಡ್ಗನುದ್ದಾಮ ದಾರುಣ ಪ್ರತಾಪಕೋಪ ಪಾವಕ ಕಬಳಿತಾರಾತಿಬಳನೆಂಬೊಂ (ಸುಕುಮಾ. ೧-೭೯ ವ). [ ದಕ್ಷಿಣ + ಭುಜ ]

**ದಕ್ಷಿಣಮಾರ್ಗ** (ನಾ). ೧. ದಕ್ಷಿಣದೇಶದ ವಿಧಾನ,-ಪದ್ಧತಿ,-ಸಂಪ್ರದಾಯ; ಸಾತ್ವಿಕವಾದ ಕರ್ಮಮಾರ್ಗ: ದಕ್ಷಿಣಮಾರ್ಗವು ದೇವತೆಗಳ ಪೂಜೆ, ಜಪ ಇವುಗಳನ್ನು ಅಸಂಕೀರ್ಣವಾಗಿ ಆಚರಿಸುವುದಾಗಿದೆ (ಭಾರದ. ೨೨೮). ೨. [ಕಾವ್ಯಮೀ] ಕನ್ನಡದೇಶದ ದಕ್ಷಿಣಭಾಗದಲ್ಲಿ ಪ್ರಚಾರವಾಗಿದ್ದ ಶೈಲಿ; ವಿಶೇಷವಾಗಿ ಸ್ವಭಾವೋಕ್ತಿಯಿಂದ ಕೂಡಿದ ಶೈಲಿ; ಒಂದು ಬಗೆಯ ಭಾಷಾಪ್ರಯೋಗ ಕ್ರಮ: ಸತತಂ ದಕ್ಷಿಣಮಾರ್ಗೋದಿತೋಕ್ತಿ ಭೇದಕಗುಣಂ ಸ್ವಭಾವಾಖ್ಯಾನಂ . . . ಸಮ ಮಧುರ ನಿಬಿಡ ಕಾಂತ ಸುಕುಮಾರ ಸುಸಮಾಹಿತ ಪ್ರಸನ್ನೋದಾರ ಪ್ರಮಿತ ಗ್ರಾಮ್ಯೋಜಸ್ವಿ ಕ್ರಮದಿಂ ದಶಭೇದಮಲ್ಲಿ ದಕ್ಷಿಣಮಾರ್ಗಂ (ಕವಿರಾ. ೨-೫೩). 'ಉತ್ತರಮಾರ್ಗ' ಪರಾ.
[ ದಕ್ಷಿಣ + ಮಾರ್ಗ ]

**ದಕ್ಷಿಣಮುಷ್ಟಿ** (ನಾ). ಬಲಗೈಯ ಹಿಡಿ,-ಮುಷ್ಟಿ: ತನ್ನ ಮುಂತೆಗೆದ ದಕ್ಷಿಣಮುಷ್ಟಿಯೆ [ಪಾಠಾಂ. ಮುಷ್ಟಿಯೆ ದಕ್ಷಿಣ] ಕರ್ಣಮೂಲದೊಳ್ ಸೊಗಯಿಸೆ ಪಾಳಿಯಂ ನೆಱಪದಾಳ್ದನ ಕಜ್ಜಮನೊಕ್ಕು ಸತ್ತರಂ ನಗುವವೊಲಿರ್ದನಂಗಪತಿ (ಗದಾಯು. ೫-೧೦). [ ದಕ್ಷಿಣ + ಮುಷ್ಟಿ$_2$ ]

**ದಕ್ಷಿಣಮೇರು** (ನಾ). ಮೇರುಪರ್ವತದ ದಕ್ಷಿಣಭಾಗ. 'ಉತ್ತರಮೇರು' ಪರಾ. [ ದಕ್ಷಿಣ + ಮೇರು ]

**ದಕ್ಷಿಣವರ್ತನ** (ನಾ). ಬಲಭಾಗಕ್ಕೆ ತಿರುಗುವಿಕೆ: ದಕ್ಷಿಣವರ್ತನದಿಂದೆ ಪಜ್ಜಳಿಸುತಿರ್ದುದು ವಹ್ನಿಸಮುಸ್ತಂ (ಚಂದ್ರಪು. ೩-೯೪). 'ದಕ್ಷಿಣಾವರ್ತ' ಪರಾ. [ ದಕ್ಷಿಣ + ವರ್ತನ ]

**ದಕ್ಷಿಣಶೀತವಲಯ** (ನಾ). [ಭೂಗೋಳ] ದಕ್ಷಿಣಧ್ರುವದ ಬಳಿಯಿರುವ ಅತ್ಯಂತ ಶೀತಲವಾದ ಪ್ರದೇಶ: ದಕ್ಷಿಣಶೀತವಲಯ-ಇದು ದಕ್ಷಿಣ ಧ್ರುವಕ್ಕೂ ಮತ್ತು ಅದಕ್ಕೆ ಉತ್ತರದಲ್ಲಿ ಸುಮಾರು ಇಪ್ಪತ್ತುಮೂರುವರೆ ಅಕ್ಷಾಂಶಭಾಗಗಳ ದೂರದಲ್ಲಿರುವ ದಕ್ಷಿಣಧ್ರುವವೃತ್ತಕ್ಕೂ ಮಧ್ಯದಲ್ಲಿರುವ ದೇಶ (ಭೂಗೋಳ. ೯). [ ದಕ್ಷಿಣ + ಶೀತವಲಯ ]

**ದಕ್ಷಿಣಶ್ರೇಣಿ** (ನಾ). ದಕ್ಷಿಣಭಾಗದ (ರಾಜ್ಯಗಳ) ಪಂಕ್ತಿ,-ಸಾಲು: ಕೇಣಮನೊಕ್ಕು ತಕ್ಕನೞಿದುಕ್ಕೆವಮಂ ಪೆಱಗಿಕ್ಕಿ ದಕ್ಷಿಣಶ್ರೇಣಿಯ ರಾಜ್ಯಲಕ್ಷ್ಮಿ ದಮಿತಾರಿಯ ಪೋಕೆರ್ಮಳಿಗಿರ್ದೊಡುತ್ತರಶ್ರೇಣಿಯ ರಾಜ್ಯಲಕ್ಷ್ಮಿ ಪುರುಡಾಕೆಯೊಳಾವಗಮಾಗೆ ಲಂಚಮಂ ಮಾಣದೆ ಕೊಟ್ಟವೋಲ್ ಸೊಗಯಿಸಿರ್ದುವು ಕಪ್ಪದ ಪೊನ್ನರಾಶಿಗಳ್ (ಶಾಂತಿಪು. ೩-೧೩). 'ಉತ್ತರಶ್ರೇಣಿ' ಪರಾ. [ ದಕ್ಷಿಣ + ಶ್ರೇಣಿ ]

**ದಕ್ಷಿಣಸಮಶೀತೋಷ್ಣವಲಯ** (ನಾ). [ಭೂಗೋಳ] "ಮಕರ ಸಂಕ್ರಾಂತಿವೃತ್ತಕ್ಕೂ ದಕ್ಷಿಣ ಮೇರುವೃತ್ತಕ್ಕೂ ನಡುವೆ ಇರುವ ಭಾಗವು" (ಭೂವಿವ. ೧೯): ದಕ್ಷಿಣಸಮಶೀತೋಷ್ಣವಲಯವು ಮಕರ ಸಂಕ್ರಾಂತಿವೃತ್ತಕ್ಕೂ ದಕ್ಷಿಣಧ್ರುವವೃತ್ತಕ್ಕೂ ಮಧ್ಯದಲ್ಲಿರುವ ದೇಶವು (ಭೂಗೋಳ. ೧೦). [ ದಕ್ಷಿಣ + ಸಮಶೀತೋಷ್ಣವಲಯ ]

**ದಕ್ಷಿಣಸಾಗರ** (ನಾ). [ಭೂಗೋಳ] ಭೂಮಿಯ ದಕ್ಷಿಣ ಪ್ರದೇಶದಲ್ಲಿರುವ ಸಮುದ್ರ: (Antaretie Ocean. ಪಾರಿನಿ. ೫). 'ಉತ್ತರಸಾಗರ' ಪರಾ. [ ದಕ್ಷಿಣ + ಸಾಗರ$_3$ ]

**ದಕ್ಷಿಣಸ್ಥ** (ನಾ). ೧. ಬಲಗಡೆಯಲ್ಲಿರುವವನು. ೨. ರಥವನ್ನು ನಡೆಸುವವನು; ಸಾರಥಿ: "ದಕ್ಷಿಣಸ್ಥಂ ನಿಯಂತ್ರಿಯಾಕ್ಷತ್ತ್ರ ಸೂತನೆನೆ ಸಾರಥಿಗೆ ನಾಮಮಕ್ಕುಂ" (ಮಂಗರಾ. ೮೫-೨೫). [ ಸಂ. ]

**ದಕ್ಷಿಣಹಸ್ತ** (ನಾ . = ದಕ್ಷಿಣಕರ: ಅಂತಕಾರಾದಿ ಹಕರಾಂತ . . . ಸಂಯೋಗಾಕ್ಷರಗಳುಮಂ ಬ್ರಾಹ್ಮಿಗೆ ದಕ್ಷಿಣಹಸ್ತದೊಳುಪದೇಶಂಗೆಯ್ದು (ಆದಿಪು. ೮-೫೯ ವ); ಆ ಬಾಲಿಕೆ ಗದ್ಗದಕಂಠೆ ವಾಮಕರ ಪಲ್ಲವಾಂಗುಳಿನಖಾಕ್ಷಿಪ್ತಾಶ್ರುಸ್ರುವೆ ದಕ್ಷಿಣಹಸ್ತಾಚ್ಛಾದ್ಯಮಾನ ಸ್ತನಾಂಶುಕೆಯಾಗಿ ಬಿನ್ನವಿಸುಂ (ಶಾಂತಿಪು. ೬-೬೨ ವ). [ ದಕ್ಷಿಣ + ಹಸ್ತ ]

**ದಕ್ಷಿಣಾಂಘ್ರಿ** (ನಾ). ಬಲಗಾಲು; ದಕ್ಷಿಣ ಚರಣ: ಮೀನಾಬ್ಜ ಶಂಖಚಕ್ರ ವಿತಾನಾಂಕಿತ ದಕ್ಷಿಣಾಂಘ್ರಿ ತಲಪಲ್ಲವಮುತ್ತಾನಂ ರತ್ನಾಕರದವೊಲೇನಮರ್ದುದೊ (ಶಾಂತಿಪು. ೩-೪೮). [ ದಕ್ಷಿಣ + ಅಂಘ್ರಿ ]

**ದಕ್ಷಿಣಾಂಸ** (ನಾ). ಬಲತೋಳು; ಬಲಭುಜ: ದಮಿತಾರಿ ಚಕ್ರಕ್ಕೆ ಕೆಯ್ಯಂ ನೀಡೆ ಅದು . . . ದಕ್ಷಿಣಾಂಸದ ಮೇಗಿರ್ದುದು ನೀಳಶೈಲತಟದೊಳ್ ತಿಗ್ಮಾಂಶುವಿರ್ದಂದದಿಂ (ಶಾಂತಿಪು. ೪-೫೩). [ ದಕ್ಷಿಣ + ಅಂಸ ]

**ದಕ್ಷಿಣಾಕ್ಷಿ** (ನಾ). ಬಲಗಣ್ಣು; ದಕ್ಷಿಣ ನಯನ: ದಿನಪನುದಯಕ್ಕೆ ನಿಲೆ . . . ಪನ್ನೆರಡನೆಯೆಡೆಯೊಳ್ ದಕ್ಷಿಣಾಕ್ಷಿರಹಿತಂ ಪತಿತಂ (ಜಾತತಿ. ೧೮-೪); ನಿಜ ದಕ್ಷಿಣಾಕ್ಷಿ ದಕ್ಷಿಣಭುಜಪರಿಘಸ್ಪಂದಮೊಗೆಯೆ . . . ಪವನಜವಾನ್ವಿತ ರಥದಿನೆಯ್ದಿದಂ ಗೋಕುಲಮಂ (ಜಗವಿ. ೫-೭೩). [ ದಕ್ಷಿಣ + ಅಕ್ಷಿ ]

**ದಕ್ಷಿಣಾಕ್ಷಿಸ್ಪಂದ** (ನಾ). ಬಲಗಣ್ಣು ಹಾರುವಿಕೆ,-ಅದಿರುವಿಕೆ; ಗಂಡಸರಿಗೆ ಶುಭ, ಹೆಂಗಸರಿಗೆ ಅಶುಭವೆಂಬ ನಂಬಿಕೆ ಇದೆ: ಅರಿಮಕುಟರತ್ನಮಂ ನಿಜಚರಣಕ್ಕರ್ಘ್ಯಪ್ರದೀಪಮಾಗಿಪ್ಪುದನಾ ಭರತೇಶ್ವರಂಗೆ ಕಾಣ್ಬಂತಿರೆ ಸೂಚಿಸಿದತ್ತು ದಕ್ಷಿಣಾಕ್ಷಿಸ್ಪಂದಂ (ಆದಿಪು. ೧೧-೦೨); ಇಂದುವದನೆಗೆ ದಕ್ಷಿಣಾಕ್ಷಿಸ್ಪಂದವಾಯಿತು (ಕುವ್ಯಾಸ. ೧೩-೪೨).
[ ದಕ್ಷಿಣಾಕ್ಷಿ + ಸ್ಪಂದ ]

**ದಕ್ಷಿಣಾಗತಿ** (ನಾ). ಸೂರ್ಯನು ಸಮಭಾಜಕ ವೃತ್ತದಿಂದ ತೆಂಕಲಿಗೆ ಸರಿದು ತನ್ನ ಭ್ರಮಣದಲ್ಲಿ ಮಾರ್ಗವನ್ನು ಬದಲಿಸಿಕೊಳ್ಳುವ ಕಾಲ: ದಕ್ಷಿಣಾಗತಿಃ ದಕ್ಷಿಣಾಯಣಮೆಂಬುದೆ (ಸಿದ್ಧಾಂತಿ. ೩೭). [ ಸಂ. ]

**ದಕ್ಷಿಣಾಗ್ನಿ** (ನಾ). ೧. ಅಗ್ನಿತ್ರಯದಲ್ಲಿ ಒಂದು; ದಕ್ಷಿಣ ದಿಕ್ಕಿನಲ್ಲಿ ಇಟ್ಟಿರುವ ಯಾಗದ ಬೆಂಕಿ: "ದಕ್ಷಿಣಾಗ್ನಿಃ, ಗಾರ್ಹಪತ್ಯಃ, ಆಹವನೀಯಃ–ಈ ೩ನ್ನು ತ್ರಯೋಗ್ನಯಃ, ಪ್ರತ್ಯೇಕವಾಗಿ ತಮ್ಮ ತಮ್ಮ ಹೆಸರುಗಳಿಂದ ಪ್ರಸಿದ್ಧವಾದ ಮೂರು ಶ್ರೌತಾಗ್ನಿಗಳು" (ಸಿದ್ಧಾಂತಿ. ೩೦೮). ೨. = ದಕ್ಷಿಣ ೧೦: ತೀರ್ಥಕರಗಣಧರಾನಗಾರ ಕೇವಳಿಗಳ್ ಪರಿನಿರ್ವಾಣ ಕ್ಷೇತ್ರದೊಳ್ ಶರೀರಸಂಸ್ಕಾರಾದಿ ಗಾರ್ಹಪತ್ಯ ದಕ್ಷಿಣಾಗ್ನ್ಯಾಹವನೀಯ ಮೆಂಬ ಪೆಸರಂ ಪಡೆದು (ಆದಿಪು. ೧೩–೧೭ ವ). [ದಕ್ಷಿಣ + ಅಗ್ನಿ]

**ದಕ್ಷಿಣಾದಿ** (ನಾ). ೧. ದಕ್ಷಿಣದೇಶಕ್ಕೆ ಸಂಬಂಧಿಸಿದುದು. ೨. [ಸಂಗೀತ] ದಕ್ಷಿಣದಲ್ಲಿ ಪ್ರಚುರವಾಗಿರುವ ಸಂಗೀತ ಪದ್ಧತಿ; ಕರ್ಣಾಟಕ ಸಂಗೀತ: ಯಕ್ಷಗಾನದ ರೂಢಿಯ ಹಲವು ರಾಗಗಳಿಗೂ, ದಕ್ಷಿಣಾದಿಯ ಅವೇ ರಾಗಗಳಿಗೂ ಸ್ವರಪ್ರಸ್ತಾರದಲ್ಲಿ ವ್ಯತ್ಯಾಸವಿಲ್ಲ (ಯಕ್ಷಬ. ೭೩). [ದಕ್ಷಿಣ + ಆದಿ]

**ದಕ್ಷಿಣಾನಿಲ** (ನಾ). ದಕ್ಷಿಣ ದಿಕ್ಕಿನ ಗಾಳಿ; ತೆಂಗಾಳಿ: ಪೂಗಣಿಯನಟ್ಟಿದ ದಕ್ಷಿಣಾನಿಲಂ ಮುಂತೆವಂದು ಸೊಗದ ಸುಗ್ಗಿವೆಸರೋಲಗಸಾಲೆಯ ಬಾಗಿಲ್ವಾಡದೊಳ್ ನಿಂದಿರ್ಪಾ ಬಸಂತನಂ ಕಂಡೆಬಿಗಿ (ರಾಮಾಶ್ವ. ೫೭–೧). [ದಕ್ಷಿಣ + ಅನಿಲ]

**ದಕ್ಷಿಣಾಪಥ** (ನಾ). ೧. ಭರತಖಂಡದ ದಕ್ಷಿಣಭಾಗ; ವಿಂಧ್ಯಪರ್ವತದಿಂದ ದಕ್ಷಿಣಕ್ಕಿರುವ ದೇಶ: ದಕ್ಷಿಣಾಪಥದಿನೊರ್ವಳ್ಕನ್ನೆ ಚಂಡಾಲೆ ದರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ಬಾಗಿಲೊಳ್ (ಕಾದಂಪೂ. ೨೪); ಸಂಸ್ಕೃತಿಯ ದೃಷ್ಟಿಯಿಂದ ಆರ್ಯಾವರ್ತ, ದಕ್ಷಿಣಾಪಥ ಎಂಬ ಪ್ರಭೇದ ಮಾಯವಾಯಿತು (ಹುಕ್ಕಾರ. ೧೦೪ ಟೀಕೆ). ೨. = ದಕ್ಷಿಣಮಾರ್ಗ: ವಿಲಸಿತ ಸಸ್ಯಸಂಪದಭಿರಾಮಗುಣೋದಯೆ ತಾಳ್ದಿದಳ್ದರಾಲಲನೆ ವಿಶಾಲಲಕ್ಷ್ಮಿಯನನಾರತಮೆಂಬುದು ದಕ್ಷಿಣಾಪಥಂ (ಕವಿರಾ. ೨–೨೦೪). 'ಉತ್ತರಾಪಥ' ಪರಾ. [ಸಂ.]

**ದಕ್ಷಿಣಾಭಿಮುಖ** (ನಾ). ತೆಂಕಲು ದಿಕ್ಕಿಗೆ ಮುಖಮಾಡಿಕೊಂಡಿರುವವನು; ದಕ್ಷಿಣಕ್ಕೆ ಹೊರಟಿರುವವನು: ದಕ್ಷಿಣಾಭಿಮುಖನಾಗಿ ನಿತ್ಯ ಪ್ರಯಾಣಂಗಳಿಂ ಬಂದು (ಆದಿಪು. ೧೩–೭೭ ವ). [ದಕ್ಷಿಣ + ಅಭಿಮುಖ]

**ದಕ್ಷಿಣಾಮೂರ್ತಿ** (ನಾ). ೧. ಶಿವನ ಇಪ್ಪತ್ತೈದು ಲೀಲಾಮೂರ್ತಿಗಳಲ್ಲಿ ಒಂದು; ಜ್ಞಾನಮುದ್ರಾಂಗುಳಿಯಿಂ ಶಿಷ್ಯಪ್ರಬೋಧಪ್ರದನೆಸೆದನವಂ ದಕ್ಷಿಣಾಮೂರ್ತಿದೇವಂ (ರಾಜಶೇ. ೩–೧೦೯); ಅನೇಕವಿಧವಾದ ಮೂರ್ತಿಗಳನ್ನು ಶಿವದೇವಾಲಯಗಳಲ್ಲಿ ಕಾಣಬಹುದು. 'ಅಪೂಅರಿ' ನ ದಕ್ಷಿಣಾಮೂರ್ತಿ ... ಇವುಗಳಲ್ಲಿ ಪ್ರಸಿದ್ಧ (ಭಾರದ. ೫೦೩). ೨. ಮಹಾಮಂತ್ರಗಳಲ್ಲಿ ಒಂದು: ಗಾಯತ್ರಿ ಮೃತ್ಯುಂಜಯ ದಕ್ಷಿಣಾಮೂರ್ತಿ ನೀಲಕಂಠ ಶರಭ ವೀರಭದ್ರ ವಿಘ್ನೇಶ್ವರ ವಿಶಾಖ ವಿದ್ಯೇಶ್ವರ ಬ್ರಹ್ಮ ವಿಷ್ಣು ಸೂರ್ಯ ಭೈರವ ಪಾರ್ವತಿ ಕಾಮಧೇನು ಕಲ್ಪವೃಕ್ಷ ಮಾಯಾ ಸಾವಿತ್ರೀ ಸರಸ್ವತೀ ಅಮೃತೇಶ್ವರೀ ಸಪ್ತಮಾತೃಕಾ ದುರ್ಗಾ ಕಾಳೀ ಬಗಳಾಬಾಲಾ ಲಲಿತಾ ಶೂಲಿನ್ಯಾದಿ ಮಹಾಮಂತ್ರಂಗಳಂ (ವಿವೇಕ. ೮೧). [ಸಂ.]

**ದಕ್ಷಿಣಾಯಣ** (ನಾ). = ದಕ್ಷಿಣಾಗತಿ: ಸೂರ್ಯನಲ್ಲಿ ರಶ್ಮಿರೂಪವಾಗಿ ದಕ್ಷಿಣಾಯಣದಲ್ಲಿ ೩೭೦೦೦ ಉತ್ತರಾಯಣದಲ್ಲಿ ೩೭೦೦೦ ರಶ್ಮಿಗಳು ಆಗುವವು (ಹಸಾರ. ೭–೨ ತಾತ್ಪರ್ಯ); ಸೂರ್ಯನು ... ದಕ್ಷಿಣದಲ್ಲಿರುವಾಗ ದಕ್ಷಿಣಾಯಣ, ಆಗ ನಮಗೆ ಚಳಿಗಾಲ (ಕಿಂಕಥ. ೨). 'ಉತ್ತರಾಯಣ' ಪರಾ. [<ಸಂ. ದಕ್ಷಿಣಾಯನ]

**ದಕ್ಷಿಣಾಯನ** (ನಾ). ೧. = ದಕ್ಷಿಣಾಗತಿ: ಅಂಬುದಸಮಯಂ ಮೊದಲಾಗಱ ಋತುಗಳ್ ಮೂಱು ದಕ್ಷಿಣಾಯನಕೆ ಸಂತತಂ ವರ್ತಿಸುಗುಂ (ಜಾತತಿ. ೨೪–೪). ೨. = ದಕ್ಷಿಣಮಾರ್ಗ ೨: ತ್ರಿದಶಗಣೇಶಮೌಳಿಮಣಿಪೀಠನಿಷೇವಿಗಳೊಳ್ಪನೀಂದ್ರನಾ ಪದಯುಗಳಂಗಳೊಳ್ಪುದದೆ ಬಾಗುವೆನೆಂಬುದು ದಕ್ಷಿಣಾಯನಂ (ಕವಿರಾ. ೨–೧೦೭). [ಸಂ.]

**ದಕ್ಷಿಣಾಯನಪುಣ್ಯಕಾಲ** (ನಾ). ಸೂರ್ಯನು ವಿಷುವದ್ರೇಖೆಯಿಂದ ದಕ್ಷಿಣಕ್ಕೆ ಸಂಚರಿಸಲು ಪ್ರಾರಂಭಮಾಡುವ ಕಾಲ; ೪ ಜುಲೈ ತಿಂಗಳ ಮಧ್ಯದಲ್ಲಿ ಬರುವ ಸಂಕ್ರಮಣ ಕಾಲ. ಸೂರ್ಯನು ಕರ್ಕಾಟಕ ರಾಶಿಯನ್ನು ಪ್ರವೇಶಿಸುವ ಈ ಕಾಲವು ಸ್ನಾನ, ಜಪ, ದಾನ, ತರ್ಪಣಗಳಿಗೆ ಪ್ರಶಸ್ತವೆಂದು ನಂಬಲಾಗಿದೆ: ಸೂರ್ಯನು ಮಿಥುನ ನಕ್ಷತ್ರದಲ್ಲಿರುತ್ತಾನೆಂದು . . . ಈ ಕಾಲವನ್ನು ದಕ್ಷಿಣಾಯನಪುಣ್ಯಕಾಲವೆಂದು ಕರೆಯುತ್ತಾರೆ (ನಕ್ಷತ್ರ. ೨೪). [ದಕ್ಷಿಣಾಯನ + ಪುಣ್ಯಕಾಲ]

**ದಕ್ಷಿಣಾರ್ಥ** (ನಾ). ೧. ದಕ್ಷಿಣೆಯ ಅಪೇಕ್ಷೆ; ದಾನವನ್ನು ಪಡೆಯುವ ಉದ್ದೇಶ: ನೆರೆವುತಿದೆ ನಾನಾ ದಿಗಂತರ ಧರಣಿಪರು ಕನ್ಯಾರ್ಥಿಗಳಂ ಭೂಸಾರಸಮೂಹದ ಸಾಲು ನೆರೆದುದು ದಕ್ಷಿಣಾರ್ಥದಲಿ ಎರಡೆಱಕೊಳು ನಿಮಗೇನು ಕನ್ಯಾವರಣವೋ ವೇಂಕ್ ದಕ್ಷಿಣಾರ್ಥವೊ ಬರವು ನಿಮಗುಂಟೇ ಯೆನುತ ದ್ವಿಜನಿವರ ಬೆಸಗೊಂಡ (ಕುಮ್ಯಾಅ. ೧೧–೧೪). ೨. ದಕ್ಷಿಣೆಯ ದ್ರವ್ಯ: ಎನಿತ ಕಿಂಚಿತ್ ಪ್ರಹಸಿತಾನನವನಜನಾಗುತ ದಕ್ಷಿಣಾರ್ಥಕ್ಕನು ಗೊಳಲು (ಬಸವು. ೮೩–೭೩). [ಸಂ.]

**ದಕ್ಷಿಣಾರ್ಧ** (ನಾ). ದಕ್ಷಿಣಭಾಗದ ಅರ್ಧ; ಬಲಭಾಗದ ಅರ್ಧ: ಇದರ ಅರ್ಧ ದಕ್ಷಿಣಾರ್ಧದ ನಕ್ಷತ್ರಗಳು ದಿನದಲ್ಲಿ ೧೨ ಘಂಟೆಗಳಿಗಿಂತ ಕಡಿಮೆ ಕಾಲ ನಮ್ಮ ದಿಗಂತದ ಮೇಲಿದ್ದು ಹೆಚ್ಚುಕಾಲ ಮುಳುಗಿರುತ್ತವೆ (ನಕ್ಷತ್ರ. ೩೫). [ದಕ್ಷಿಣ + ಅರ್ಧ]

**ದಕ್ಷಿಣಾರ್ಹ** (ಗು). ೧. ದಕ್ಷಿಣೆಯನ್ನು ಪಡೆಯಲು ಅರ್ಹತೆಯುಳ್ಳ. (ನಾ). ೨. ದಕ್ಷಿಣೆಗೆ ಯೋಗ್ಯನಾದವನು: "ದಕ್ಷಿಣೀಯಃ, ದಕ್ಷಿಣಾರ್ಹಃ, ದಾಕ್ಷಿಣ್ಯಃ – ೩ ದಕ್ಷಿಣೆಗೆ ಯೋಗ್ಯನಾದವನು" (ಸಿದ್ಧಾಂತಿ. ೨೭೯). [ದಕ್ಷಿಣ + ಅರ್ಹ]

**ದಕ್ಷಿಣಾವರ್ತ** (ಗು). ೧. ಬಲಭಾಗಕ್ಕೆ ತಿರುಗುವ: ಪ್ರದಕ್ಷಿಣಂ ಬಂದು ದಕ್ಷಿಣಾವರ್ತಶಿಖಾಸ್ಪದನಂ ಹೋಮಾನಳನಂ ಮಾದುವಕ್ಕಳ್ ಮಿಸುಪ ಲಾಜೆಯಿಂ ಪೂಜಿಸಿದರ್ (ಜಗವಿ. ೧೦–೧೩೩). (ನಾ). ೨. ಬಲಭಾಗಕ್ಕೆ ತಿರುಗುವುದು: ಕರ್ಮಭೂತಳೋಪಸರ್ಗ ವಿಧ್ವಂಸನ ನಿಮಿತ್ತಮಾಗಿ ನೀರಾಜನಂಗೆಯ್ವಂತೆ ತದ್ಧರಾನಳಂ ದಕ್ಷಿಣಾವರ್ತಮಾಗಿ ಪಜ್ಜಳಿಸೆ (ಆದಿಪು. ೭–೩೭ ವ); ದಕ್ಷಿಣಾವರ್ತಮಾಗೆಸೆದುದು ಶಿಖಿ ಪಾಂಚಜನ್ಯದಂತೆ (ಮಲ್ಲಿಪು. ೧೨–೩). [ದಕ್ಷಿಣ + ಆವರ್ತ]

**ದಕ್ಷಿಣಾವರ್ತನ** (ನಾ). ದಕ್ಷಿಣಕ್ಕೆ ತಿರುಗುವುದು, – ಹೋಗುವುದು: "(ನಾವೆ) ದಕ್ಷಿಣಕ್ಕೆ ಪ್ರಯಾಣಮಾಡುವಲ್ಲಿ ಆದ ಅಕ್ಷಾಂಶವ್ಯತ್ಯಾಸ: ದಕ್ಷಿಣಾವರ್ತನ" (South.ng. ೩೦೪೨). [ದಕ್ಷಿಣ + ಆವರ್ತನ]

**ದಕ್ಷಿಣಾವರ್ತನಾಭಿ** (ನಾ). ಬಲಭಾಗಕ್ಕೆ ತಿರುಗಿರುವ ನಾಭಿ; ಬಲಸುಳಿ; ಹೊಕ್ಕುಳು: ಸರದೊಡನೆ ಗಂಭೀರಮಾದ ದಕ್ಷಿಣಾವರ್ತನಾಭಿಯುಂ ಅಧರಪಲ್ಲವದೊಡನೆ ಅಶೋಕ ಪಲ್ಲವಾನುರಕ್ತಂಗಳಾದ ಪಾಣಿಪಾದತಳಂಗಳುಂ ಲಲಾಟ ಪಟ್ಟದೊಡನೆ ಲಲಿತೋನ್ನತಂಗಳಾದ ಪೊಱಅಡಿಗಳುಂ . . . ಆತ್ಮೀಯ ಯೌವನಪ್ರಾದುರ್ಭಾವಮಂ ಪ್ರಕಟಂಮಾಡೆ (ಆದಿಪು. ೩–೯ ವ). [ದಕ್ಷಿಣಾವರ್ತ + ನಾಭಿ]

**ದಕ್ಷಿಣಾವೃತ್ತ[ತ್ತಿ]** (ನಾ). [ಸಂಗೀತ] ಗೀತ ಹಾಗೂ ವಾದ್ಯಗುಣಗಳಂ ಪ್ರಧಾನವಾಗಿರುವಿಕೆ: ಯತಿಯೊಳ್ ಗೋಪುಚ್ಛೆ ತನ್ನೊಳ್ ನೆಲಸಿ ನೆಗೞ್ದಿನಂ ಮಾರ್ಗದೊಳ್ ಚಿತ್ರಕೀಯಂ ಕೃತಕಕೂಚಾಡಂಬರಂ ರಂಜಿಸುವಿನ ಮೆಸೆಗುಂ ದಕ್ಷಿಣಾವೃತ್ತ[ತ್ತಿ]ವೃತ ತ್ರಿತಯಾಂತರ್ವರ್ತಿ ತಾನೆಂಬಿನ ಮನುಗತ ತತ್ತ್ವಾರ್ಥದೊಳ್ ತತ್ತ್ವದಿಂದನ್ವಿತಮಂ ವಿಸ್ತಾರಮತ್ಯ ಪ್ರಕಟಿತಮನದಿಂ ಮೆಚ್ಚಿದಂ ದೇವರಾಜಂ (ಅಜಿಪು. ೫–೧೨). [ಸಂ.]

**ದಕ್ಷಿಣಾಶಾಪತಿ** (ನಾ). ದಕ್ಷಿಣ ದಿಕ್ಪಾಲಕ; ಯಮ: "ಶಮನಃ . . . ದಕ್ಷಿಣಾಶಾಪತಿಃ, ಶ್ರಾದ್ಧದೇವಃ,–ಈ ೧೬ ಜವನ ಪೆಸರ್" (ಹಲಾಯು. ೧೩-೭೨). [ ಸಂ. ]

**ದಕ್ಷಿಣಾಶೆ** (ನಾ). ತೆಂಕಲು; ದಕ್ಷಿಣದಿಕ್ಕು: ದಕ್ಷಿಣಾಶೆಯ ನಱುಸುಯ್ಯ ಗಾಳಿಯನೆ ಪೋಲ್ವುದು ಗಂಧವಹಂ ವಸಂತದೊಳ್ (ಶಾಂತಿಪು. ೭-೧೨೬); ಮೇರುವಿನ ದಕ್ಷಿಣಾಶೆಯೊಳು . . . ಲಕ್ಷ್ಮಿಯ ರಾಜಧಾನಿಯೆನಲೊಪ್ಪುವುದು ಚಾರುತರ ಲಾಳದೇಶಂ (ಹರಿಕಾ. ೧-೩೪). [ ದಕ್ಷಿಣ + ಆಶೆ ]

**ದಕ್ಷಿಣಾಸ್ಥ** (ನಾ). = ದಕ್ಷಿಣಸ್ಥ ೨: ನಿಯಂತಾ, ಪ್ರಾಜಿತಾ, ಕ್ಷತ್ತಾ, ದಕ್ಷಿಣಾಸ್ಥಃ . . . ಸೂತಃ—ಈ ೭ ಸಾರಥಿ" (ಹಲಾಯು. ೭೩-೨೯೫). [ ಸಂ. ]

**ದಕ್ಷಿಣೆ** (ನಾ). ೧. ಪಿತೃಕಾರ್ಯ, ದೇವತಾಪೂಜೆ, ಯಾಗ, ವ್ರತ ಮುಂತಾದ ಸಂದರ್ಭಗಳಲ್ಲಿ ಬ್ರಾಹ್ಮಣರು, ಗುರುಹಿರಿಯರು ಮುಂತಾದವರಿಗೆ ನೀಡುವ ಕಾಣಿಕೆ,–ಸಂಭಾವನೆ: ಆವ ಲಕ್ಷಣದ ಹಯಮದಕೆ ಋತ್ವಿಜರೆನಿಬರೆನಿಸು ದಕ್ಷಿಣೆಗಳದರಂದವಂ ವಿಸ್ತರಿಸ ವೇಳ್ಕುದು (ಜೈಮಿಭಾ. ೨-೨೫); ತೃಪ್ತಿಯೆ ತಣಿದು ತೇಗಿದುದೆನಲ್ಕೆ ನಲಿದಂದು ಜನಂ ಭಾರಕಾ ಭೋಜನಕೆ ವೇಣ್ ದಾನ ದಕ್ಷಿಣೆಗೆ (ಶ್ರೀರಾಮಾ. ೧೧-೨೮೪). 'ಗುರುದಕ್ಷಿಣೆ' ಪರಾ. ೨. ಹಣದ ದಾನ,–ಕೊಡುಗೆ: "ಯಾಗವ್ರಯಂ ದಾನವಮುತ್ಸರ್ಗಮಪವರ್ಜನಂ ದಕ್ಷಿಣೆಯುದೆ ನಿಕ್ಕಂ" (ಮಂಗರಾ. ೭೭-೧೪); ಬಂದ ದಕ್ಷಿಣೆ ವ್ಯಪ್ತಭೋಜನದಿಂದ ತುಷ್ಟರು ನಾವು (ಕುವ್ಯಾಆ. ೧೫-೩); ಮಾಡಿದನು ಮನದಣಿಯೆ ದಕ್ಷಿಣೆಗೂಡಿ ಕನ್ಯಾಧೇನು ದಾನವನು (ತೊರರಾ. ೨-೨-೨೦); ಮುತ್ತೈದೆಯರಿಗೆ ಅರಿಶಿಣ ಕುಂಕುಮ ಫಲಪುಷ್ಪ ತಾಂಬೂಲಗಳನ್ನೂ ದಕ್ಷಿಣೆಯನ್ನೂ ಇತ್ತು ಸತ್ಕರಿಸಿದನು (ಶ್ರೀರಾಯ. ೬) ಭಕ್ಷ್ಯವಿಲ್ಲದಿದ್ದರೂ ದಕ್ಷಿಣೆ ಸಿಕ್ಕಿದರೆ ಸಾಕು (ಗಾದೆ). [ ಸಂ. ದಕ್ಷಿಣಾ ]

**ದಕ್ಷಿಣೆಗೊಡು** (ಕ್ರಿ). ಪಿತೃಕಾರ್ಯ, ದೇವತಾಪೂಜೆ ಮುಂತಾದ ಸಂದರ್ಭಗಳಲ್ಲಿ ಗುರುಹಿರಿಯರೇ ಮೊದಲಾದವರಿಗೆ ದಾನವನ್ನು ಕೊಡು,–ದಕ್ಷಿಣೆ ನೀಡು: ಅಂತು ನಿಜಧವಳಚ್ಛತ್ರ ಚಾಮರ ಸಿಂಹಾಸನಾದಿ ರಾಜಚಿಹ್ನಂಗಳುಂಬಿಯೆ ಸರ್ವಸ್ವಮೆಲ್ಲಮಂ ದಕ್ಷಿಣೆಗೊಟ್ಟು (ಪಂಪಭಾ. ೬-೪೦ ವ). [ ದಕ್ಷಿಣೆ + ಕೊಡು$_1$ ]

**ದಕ್ಷಿಣೇಂದ್ರ** (ನಾ). ದಕ್ಷಿಣ ದಿಕ್ಕಿನ ಅಧಿಪತಿ: ಬ್ರಹ್ಮಲೋಕನಿಳಯರಪ್ಪ ಲೋಕಾಂತಿಕರುಂ ದಕ್ಷಿಣೇಂದ್ರರುಂ . . . ಭವವಲ್ಲೀದಳಫಲಮೂಲ ವಿಷಯಮುಮಂ ಪಱಿದು (ಶಾಂತಿಪು. ೧೨-೪೩ ವ). P ಜೈನರ ಪ್ರಕಾರ ದಕ್ಷಿಣೇಂದ್ರರು ಸೌಧರ್ಮ, ಸನತ್ಕುಮಾರ, ಬ್ರಹ್ಮ, ಶುಕ, ಆನತ ಮತ್ತು ಆರಣ್ಯರೆಂದು ಆರುಮಂದಿ. [ ದಕ್ಷಿಣ + ಇಂದ್ರ ]

**ದಖನ್, ದಕನ್** (ನಾ). ದಕ್ಷಿಣಭಾರತದ ಪ್ರದೇಶ; ನರ್ಮದಾ ಮತ್ತು ಕೃಷ್ಣಾ ನದಿಗಳ ನಡುವಿನ ಭೂಭಾಗ: ದಖನ್ನಿನ ಭಾಗವು ವಾಸಯೋಗ್ಯವಾಗಿತ್ತು (ಭಾಇಪ್ರ. ೧೫); ದಖನ್ನಿನ ಒಂದು ಭಾಗ (ಚೀನಯಾ. ೧೦೪). **ದಕನ್**: ಈ ಕಾಲದಲ್ಲಿ ದಕನ್ ಬಾದಷಹರು ದಿಲ್ಲಿ ರಾಜನಿಗೆ ವಿರುದ್ಧರಾದರು (ಉರ್ದುಪಾ. ೬).

[ ←ಪಾರ. ದಕನ್; ಹಿಂ. ದಖನ್, ದಕನ್: ಪ.ಪಾ. ದಖ್ಖಿನ್./ ಪ್ರಾ. ದಕ್ಖಿಣ ]

**ದಖನಿ** (ಗು). ೧. ದಕ್ಷಿಣಕ್ಕಿರುವ; ದಕ್ಷಿಣದೇಶದ. (ನಾ). ೨. ದಖನ್ ಪ್ರದೇಶದ ಗುಲ್ಬರ್ಗ, ಬಿಜಾಪುರ ಪ್ರದೇಶಗಳಲ್ಲಿ ಪ್ರಚಲಿತವಾಗಿದ್ದ ಉರ್ದು ಭಾಷೆಗೆ ಮೊದಲಿನ ಒಂದು ಇಂಡೋ-ಆರ್ಯನ್ ಭಾಷೆ: (+). [ ←ಹಿಂ. ದಕ್ಖಿನೀ; ಮರಾ. ದಖಣೀ ]

**ದಖಾಫಿ** 'ಧಕ್ಕಾಫಿ' ನೋ.

**ದಖೀಲಿ** (ನಾ). ಮೊಗಲ್‌ಸೈನ್ಯದ ಒಂದು ಪಂಗಡ: ದಖೀಲೀ ಇದಕ್ಕೆ ಸಂಬಳವೇನೋ ಸರ್ಕಾರದಿಂದ ಬರುತ್ತಿದ್ದರೂ ಇದು ಮನ್‌ಸಬ್‌ದಾರರ ಅಧೀನದಲ್ಲಿರುತ್ತಿತ್ತು (ಇಸ್ಲಾಂಸಂ. ೬೮).

[ ←ಅರ. ಹಿಂ. ದಖೀಲ್ = ಅಧಿಕಾರಿ ]

**ದಗ** 'ದಗಾ' ನೋ.

**ದಗಡಿ** 'ಧಗಡಿ$_1$' ನೋ.

**ದಗದ** (ನಾ). (ಉಕ) ಕೆಲಸ; ಕಾರ್ಯ: ಹರಿಯು ಹೊತ್ತಿಲೆದ್ದು, ಅತ್ತಿಮಾವಗ ಶರಣ ಮತ್ತೊಂದು ಶರಣ ಗುರುವೀಗೆ ನಾ ಮಾಡಿ ಹೊಕ್ಕೇನಿ ಮನಿಯ ದಗದಕ (ಜನಗೀ. ೭೬); ಅಪ್ಪ ರಾಚಣ್ಣನ ತೇರೆಳೆದು ಬರುವಾಗ ತೀರಲಿಲ್ಲವ್ವ ಮನೆ ದಗದ (ಕನ್ನಜಾ. ೧೧); ಬೆಳತನಕ ದುಡಿಯೋವಷ್ಟು ದಗದ ಆದ್ರೂ ಏತಿರಾ ಅದು? (ಕುಮಾಕಾ. ೧೩೫); ಅವರ ಕಡೀಗೆ ತುಸು ದಗದ ಇತ್ತು (ಜೀವಪ್ರ. ೮೨). [ ?./ಮರಾ. ದಗದಗ = ಪರಿಶ್ರಮ. ]

**ದಗದಗ** (ನಾ). ಒಂದು ಅನುಕರಣ ಶಬ್ದ. 'ದಗದಗನೆ' ಪರಾ.

**ದಗದಗನೆ** (ಅ). ದಗದಗ ಎಂಬ ಶಬ್ದದೊಡನೆ: ಬೆಂಕಿ ದಗದಗನೆ ಉರಿಯಿತು (ರೂಢಿ) [ ದಗದಗ + –ಅನೆ$_1$ ]

**ದಗದಗಿಸು** (ಕ್ರಿ). (ಬೆಂಕಿ) ದಗದಗ ಎಂದು ಉರಿ; ಪ್ರಜ್ವಲಿಸು: ಕರಿಗಿರಿಯೊಳು ದಗದಗಿಸಿ ಹರಿಯಾವಳಿಯುರುಗುಲ್ಮದೊಳು ಭುಗುಭುಗಿಸಿ ಬಿರುದಿನ ಮನ್ನೆಯ ಭಟರ ಪ್ರತಾಪಾಗ್ನಿ ಮೆಱೆದುದು ರಿಪುವನದೊಳಗೆ (ಕಂನವಿ. ೧೫-೫೫). [ ದಗದಗ + –ಇಸು$_3$ ]

**ದಗಮು, ಧಗಮು** (ನಾ). ಒಂದು ಬಗೆಯ (ಚರ್ಮದ) ವಾದ್ಯವಿಶೇಷ: ಕೊಂಬು ಬೊಂಬುಳಿ ಕಾಳೆ ಡೋಳು ದಗಮು ಚಿನ್ನ ಚೆಂಬಕವಱೆ ತಿತ್ತಿರಿಗಳ ಡೊಂಬಿಯ ಧ್ವನಿಯಿಂದ ಪೌಜುಗಳತ್ಯಾಡಂಬರದಿಂದೆಯ್ದಿದವು (ಕುರಾಸಾಂ. ೧೨-೨೫); ಡಕ್ಕೆ ದಗಮು ಕೊಂಬು ಕೊಳಲು ತಪ್ಪಟೆ ಮೃದಂಗದ ರವ ತುಂಬಿತು ಲೋಕವನಿರದೆ (ರಾಮಾವಿ. ೬-೧೨); ಪೊಡೆವ . . . ತಂಬಟೆ ಡೋಳು ದಗಮು ಗಿಡಿಬಿಡಿಗಳ ಬಲ್ದನಿ ಮುಂಪೊಡವಿಯನಡರಲು ನಡೆದುದಾ ಸೇನೆ(ಚಂಪ್ರಸಾಂ. ೨೧-೬೯); ಅನ್ನಿಗರೆನಗೊಡ್ಡಿ ನಿಂದರೆ ದಗಮಿನ ಸನ್ನೆಯೊಳ್ಬಾಯ ಕುಟ್ಟಿಸುವೆ (ಭರಜ. ೪೯-೫೬); ಮೆಱೆವ ತುಡುಮು ಭೇರಿ ದಗಮು ಡಿಂಡಿಮು ಡೌಡೆ ಮೊಱೆವ ದೋಲುಗಳು ಡಕ್ಕೆಗಳುಂ (ಜ್ಞಾನಜ. ೪೧-೩೫). **ಧಗಮು**: ಭೇರಿ ತಮ್ಮಟ ನಿಸ್ಸಾಳ ಧಗಮು ರುಂಜೆ ಭೋರೆಂಬ ಶಂಖದೌಡೆಗಳು (ಜ್ಞಾನಜ. ೧೧-೩). [ ? ]

**ದಗಲಬಾಜಿ** 'ದಗಲ್ಬಾಜಿ' ನೋ.

**ದಗಲಬಾಜಿತನ** 'ದಗಲ್ಬಾಜಿತನ' ನೋ.

**ದಗಲು, ತಗಲ್$_2$, ತಗಲು$_3$** (ನಾ). ೧. ಮೋಸ; ವಂಚನೆ; ದ್ರೋಹ; ವಿಶ್ವಾಸಘಾತ: "ಠಕ್ಕತನ; ತಗಲು; (ದಗಲುಬಾಜಿ), ಅಪ್ರಾಮಾಣಿಕತನ" (ಜಾನಕೋ. ೨). **ತಗಲ್$_2$**: ೧. "ಮೋಸ, ವಂಚನೆ" (ಪ್ರಭಣ್ಣ). **ತಗಲು$_3$**: ೧. ಯಾವುದರಲ್ಲಿ ತಂಟೆಯಿಲ್ಲ ತಗಲು ಇಲ್ಲ; ಮೋಸವಿಲ್ಲ; ಮರೆಯಿಲ್ಲ (ಜನಜೀ. ೨೯). ೨. ಸುಳ್ಳು: "ತೊದಳು, ಸುಳ್ಳು . . . ಸಟೆ, ತಗಲು" (ಕಂನಹು. ೮೭). 'ತಗಲುಸಾಕ್ಷಿ' ಪರಾ.

ತಗಲುಬಗಲು = ಮೋಸ; ವಂಚನೆ: ತಗಲುಬಗಲಿನಿಂದ ದುಷ್ಟವಾಜಿಗಳಾಗ ಖಗಸಾಳ್ವನಂತೆ ಹೊಕ್ಕಿಱಿಯೆ (ಬಿಜ್ಜರಾ. ೧೨-೫೦). **ತಗಲುಬಿಗಲ್ಲನ**= ತಗಲುಬಗಲು: ಹೌದದು ಅಂಥವರು ಇರೋ ಹೊತ್ಗೇ ಮತ್ತೆ ಇಂಥ ತಗಲುಬಿಗಲ್ಲನ ನಡಿಯೋದು (ರಂಟಿರ. ೧೨). ತಗಲು ಮಾಡು = ಮೋಸ ಮಾಡು; ವಂಚಿಸು: ಅದರಲ್ಲಿ ಒಂದು ಪೈ ಸಹ ತಗಲು ಮಾಡಿದ್ದಿಲ್ಲ (ಮುಂಬಯಿ. ೪-೫೧); ತೂಕದಲ್ಲಿ ಯಾರಾದರೂ ತಗಲುಮಾಡಿದರೆ ಆ ತೂಕಕ್ಕೆ ಸರಿಯಾಗಿ ಅವರ ದೇಹದ ಮಾಂಸವನ್ನು ತೆಗಿಸುತ್ತಿದ್ದನು (ಹಿಂಮುಂಸ. ೭೦). [ ←ಅರ. ಹಿಂ. ಮರಾ. ದಗಲ್./ಸಂ. ಜಗಲ ]

**ದಗಲೆ₁**, ತಗಲೆ (ನಾ). ಕವಚ ; ತನುತ್ರಾಣ : "ದಗಲೆ ಜವಳಿ ಜೋಡು" (ಶಬ್ದಮಂ. ೯೪) : ಶೀರ್ಷಕಂ . . . ವ್ಯೂಢಕಂಟಕಃ ಈ ೧೭ ದಗಲೆಯ ತೊಟ್ಟು ಸನ್ನದ್ಧನಾಗಿದ್ದವನು (ರಾಜಶೇ. ೧೩೪) : ಕೆಂಪು ದಗಲೆಯಿಂದ ಕೆಳಗಾಗಲರುಣನ ಗರಿಪಾದಕಂಸೆಯಗಲಿ ಇಂದ್ರನೀಲದ ದಾಳ ದಿಕ್ಕುಗಳನೆ ಬೆಳಗುತಲೆ (ವಾದಿಶೀ. ೧೫೦-೨) ; ಮುತ್ತಿನ ದಗಲೆ ವಜ್ರದ ಜೋಡು ಸಿರದಲಿ ಬಿತ್ತರವಹ ಸೀಸಕದ ಪುಸ್ತಂಗ ತೊಡರಾ ಗಾವಳಿಯಿಂದ ಭೂಪೋತ್ತಮ ನಡೆದನುಬ್ಬಿನಲಿ (ಕಂನವಿ. ೧೫-೧೨) ; ಸಿರದ ಮುಂಡಾಸವ ಸೀಳ್ದಿಕ್ಕಿ ದಗಲೆಯ ಪರಿಪಾಟ ಮಾಡಿದರಾಗ (ಕಂನವಿ. ೧೫-೪೭) ; ಪೊಸದಗಲೆಯುಂ ಬಿಗಿದು ಅಳವಟ್ಟ ಪೊನ್ನ ಪಡಿದೇರನೇಱ ಮುಟ್ಟಯಿಸಿ ಕಱುತ್ತೆಱಗಿ (ರಾಮಾಶ್ವ. ೯೦-೨೯) ; ದಗಲೆ (ತಗಲೆ) :–ತೆಗಲೆ ಎಂಬುದು ಉರಸ್ಥಳಕ್ಕೆ ನಮ್ಮ ಕನ್ನಡನಾಡಿನಲ್ಲಿ ಮಾತ್ರ ರೂಢವಾದ ಹೆಸರಾದರೂ ಪಂಪಭಾರತದೊಳಗೆ ತೋರಿಬಾದುದರಿಂದ ಅದು ಅಚ್ಚಗನ್ನಡ ಎಂಬುದು ಈಗ ನಿರ್ಧಾರವಾಗಿದೆ. 'ದಗಲೆ' ಅಥವಾ 'ತಗಲೆ' ಎಂದರೆ ತೆಗಲೆಯ ಮೇಲೆ ಬಿಗಿದು ಕಟ್ಟುವ ಬಟ್ಟಲಿನಾಕಾರದ ಒಂದು ಪದಾರ್ಥ, ಇದನ್ನು 'ಉರಃಸ್ತ್ರ' ಎನ್ನಬಹುದು (ಪಾರ್ತಿಸು. ೯೭). **ತಗಲೆ :** ದಗಲೆ (ತಗಲೆ):– ತೆಗಲೆ ಎಂಬುದು ಉರಸ್ಥಳಕ್ಕೆ ನಮ್ಮ ಕನ್ನಡನಾಡಿನಲ್ಲಿ ರೂಢವಾದ ಹೆಸರಾದರೂ . . . ಇದನ್ನು 'ಉರುಸ್ತ್ರ' ಎನ್ನಬಹುದು (ಪಾರ್ತಿಸು. ೯೭).

**ದಗಲೆಜೋಡು** = ಯುದ್ಧಕಾಲದಲ್ಲಿ ಸೈನಿಕರು ಧರಿಸುವ ಕವಚ ; ತನುತ್ರಾಣ : ಜರಿಟೋಪಿ ದಗಲೆಜೋಡಿನ ರಾವುತರ ಮುಂದುರವಣಿಸುವ ನಿವನಾರೆ (ಕಂನವಿ. ೧೨-೫೪). [ <ಸಂ. ಜಗಲ ]

**ದಗಲೆ₂**, ಡಗಲಿ, ಡಗಲೆ, ದೊಗಲೆ, ದೊಗಳೆ (ಗು). ೧. ಸಡಿಲವಾದ ; ಅಳ್ಳಕವಾದ : ನನ್ನ ದೊರೆಯಾದ ಖಾಖಾನ್‌ಕಾಲಿಕಟ್ ದೊರೆಗೆ ಬಹುಮಾನವಾಗಿ ಕೆಲವು ಕುದುರೆಗಳನ್ನೂ, ದಗಲೆ ಅಂಗಿಗಳನ್ನೂ, ಜರತಾರಿ ಉಡುಪುಗಳನ್ನೂ . . . ಕಳುಹಿಸಿಕೊಟ್ಟಿದ್ದನು (ಪ್ರವಾಇ. II, ೦೯೯). (ನಾ). ೨. ಸಡಿಲವಾದ ಅಂಗಿ ಮೊದಲಾದುವು : ಬೂದುಬಣ್ಣದ ದಗಲೆ, ಕುರಿ ತೊವಲಿನ ಅಂಗಿ, ಜೊತೆಗೆ ಬೇಡಿ ಕೋಳಗಳ ಸೈನಿಕರ ತಂಡ ದಾರಿಯುದ್ದಕ್ಕೂ ಮಂಕಾಗಿಲು ಮೈಲಿ ದೂರದ ತನಕ ವ್ಯಾಪಿಸಿತ್ತು (ಪುನರು. ೫೫೭); ಮೈಯಿಂದ ಇಳಿಯುತ್ತಿದ್ದ ಬೆವರು ಅವನ ದಗಲೆಯನ್ನೂ ಸೊಂಟದ ಪಂಚೆಯನ್ನೂ ಒದ್ದೆಮುದ್ದೆಯನ್ನಾಗಿ ಮಾಡಿತ್ತು (ಮಲೆಮ. ೫೭೩). ೩. ಉಡುಪು ಕೊಳೆಯಾಗದಂತೆ ಮೇಲೆ ಕಟ್ಟಿಕೊಳ್ಳುವ ಉಡುಗೆ ; ಮೇಲಂಗಿ : ದಗಲೆಯನ್ನು ಎತ್ತಿಕೊಂಡು ಅದನ್ನು ಎದೆಯ ಮೇಲೆ ಹೊಂದಿಸಿ, ಕೊರಳಿಗೆ ಹಿಂಗಡೆಯಿಂದ ಕಟ್ಟುವಂತೆ ತಿಳಿಸಿದ (ಬಣ್ಣಮಾ. ೯೦) : ಮಕ್ಕಳ ಮತ್ತು ಕೆಲಸಗಾರರ ಉಡುಪು ಕೊಳೆಯಾಗದಂತೆ ಮೇಲೆ ಹಾಕುವ ದಗಲೆ (Jumper. ಇಂಕನಿ). **ಡಗಲಿ :** ೩. ಕೆಂಪು ರುಮಾಲು ಡಗಲಿಗಳಿಂದಲಂಕೃತನಾದ ಉಸ್ಮಾನಸಾಹೇಬರು ಕರೆಯುತ್ತಾರೆಂದು ಹೇಳಲು, ಶೇಷಪ್ಪ ಮತ್ತೆ ತಿರುಗಬೇಕಾಯಿತು (ಗ್ರಾಮಾಯ. ೨೫೫) : ನಾನು ಅವರ ವಚನಕ್ಕೆ ಅನುಮತಿಸಿ, ಅವರು ಕೊಟ್ಟ ಒಂದು ಡಗಲಿಯನ್ನು ಮೈಯೊಳಗೆ ಹಾಕಿಕೊಂಡು ಅವರ ಸಂಗಡಲೆ ಬಿದ್ದೆನು (ಮುಂಜಾಕ. ೧೦೨) : ಅವರ ಮುರಿಗೀ ಮುಂಡಾಸ ಬಣ್ಣದ ಡಗಲಿ, ಕೈಯಾಗಿನ ಕಟಾರಿ . . . ಎಲ್ಲಾ ಗುಂಗ ಹಿಡಿಸಿ ಬಿಡತಾವ ! (ಬೆಂದಯ. ೧೦೨). **ಡಗಲೆ :** ೨. ಮೊಣಕಾಲುಗಳನ್ನು ಮುಚ್ಚುವಷ್ಟು ಉದ್ದನಾದ ಹಸುರು ರೇಸಿಮೆಯ ಡಗಲೆ ಅವನ ಸ್ಥೂಲವಾದ ಕಾಯವನ್ನು ಹೇಗೋ ಮುಚ್ಚಿತು (ಜಿರಂಗ. ೭೭). **ದೊಗಲೆ :** ೪. ಸಡಿಲು; ಅಳ್ಳಕ: ಯಾವುದೂ ಪಿಟ್ ಆಗಕೂಡದು, ಎಷ್ಟು ದೊಗಲೆ ಆದರೆ ಅಷ್ಟು ಚೆಂದ (ನನ್ನೂರು. ೯೯೦). **ದೊಗಳೆ :** ೪. ಗಂಡಸು ತುಂಬ ಉದ್ದವೂ ತೀರ ದೊಗಳೆಯೂ ಆದ ಜೈಲುಡುಪು ಧರಿಸಿದ್ದನು (ಪುನರು. ೩೩).

ದಗಲೆ ಚಡ್ಡಿ, **ದೊಗಳೆ ಚಡ್ಡಿ**=ಸಡಿಲವಾದ ಚಣ್ಣ,–ಚಲ್ಲಣ; ಅಳ್ಳಕವಾದ ನಿಕ್ಕರು: ರಾತ್ರಿಯಲ್ಲಾಗಲೀ, ಹಗಲಿನಲ್ಲಾಗಲಿ ದಗಲೆ ಚಡ್ಡಿಗಳನ್ನು ಹಾಕಿಕೊಂಡು ಮನೆಯಲ್ಲಿ ಓಡಾಡಬೇಡ (ಮಹಾಗ. ೦೦೨) ; ಬೆಳ್ಳಿಯ ನಡುಕಟ್ಟು–ನೀಲಿಯ ಮೇಲಂಗಿ–ದೊಗಳೆಚಡ್ಡಿ (hose) ತುಪ್ಪಟದ (fur) ಜೋಡು ಕಬ್ಬಿಣದ ತಲೆಮುಚ್ಚು (casque) ಒಂದು ಛುರಿಕೆಯು ನಡುವಿನಲ್ಲಿ ನೇತಾಡುತ್ತಿದೆ (ಆರ್ಯಾಕೆ. ೧). ದಗಲೆ ಷರಾಯಿ, **ದೊಗಲೆ ಷರಾಯಿ**= ಸಡಿಲವಾದ ಇಜಾರ,–ಪಾಯಿಜಾಮ : ಮೊಣಕಾಲಿನವರೆಗೆ ಬಂದು ಅಲ್ಲಿ ಗೊಂಡೆಯ ದಾರದಿಂದ ಕಟ್ಟಿದ್ದ ದಗಲೆ ಷರಾಯಿ ; ಅದರ ಎರಡು ಪಕ್ಕದಲ್ಲೂ ಗುಂಡಿಗಳು (ಯೋಧಪು. ೮೦); ಹಿಂದೆ ಬರುತ್ತಿರುವ ಮಾರ್ವಾಡಿಗಳನ್ನಾಗಲೀ, ದೊಗಲೆ ಷರಾಯಿಯವರನ್ನಾಗಲೀ ಕಂಡು ಕಂಬಿಕೀಳಲು ಏರ್ಪಾಟುಗಳನ್ನು ಮಾಡಿಕೊಳ್ಳಬಹುದು (ನಾಡಿಗೇ. ೪೫) ; ನಮ್ಮ ಜನರು ಅನ್ಯಾಯವಾಗಿ ದೊಗಲೆ ಷರಾಯಿ ವರ್ಗದವರಲ್ಲಿ ಸಾಲ ತೆಗೆದುಕೊಂಡು ನಾನಾ ವಿಧವಾದ ಕಷ್ಟ ನಷ್ಟ, ಅಪಮಾನಗಳಿಗೆ ಗುರಿಯಾಗುತ್ತಿದ್ದಾರಲ್ಲ (ಕಸಬು. ೭೧). **ದೊಗಳೆ ಷರಟು** = ಸಡಿಲವಾದ ಅಂಗಿ: ಸಾವಿರದ ಏಳ ನೂರ ಮೂರು ಸಂಖ್ಯೆಯ 'ಮಲ್ಲಿನ' ದೊಗಳೆ ಷರಟು (ಬಾಳಹೂ. ೩).

[ ←ಹಿಂ. ದಗಲ್, ದಗಲಾ ; ಮರಾ. ಡಗಳ, ಡಘಳ ]

**ದಗಲ್ಬಾಜಿ**, ದಗಲಬಾಜಿ (ನಾ). ೧. ಕಪಟ ; ಮೋಸ ; ವಂಚನೆ ; ದ್ರೋಹ: (ಸ). ೨. ಕಪಟಿ; ಮೋಸಗಾರ; ದಗಾಕೋರ: ಅವನೊಬ್ಬ ಭಾರಿ ದಗಲ್ಬಾಜಿ (ರೂಢಿ). **ದಗಲಬಾಜಿ :** ೧. "ನನ್ನ ಹತ್ರ ದಗಲಬಾಜಿ ಮಾಡ್ತೀಯಾ ? " ಎಂದು ಗಂಗನನ್ನು ಬೈದನು (ಕಾನೂರು. ೯೯೪); "ನನ್ನ ಹತ್ತಿರ ದಗಲಬಾಜಿ ಮಾಡ್ತೀಯಾ ? " ಎಂದನು (ಮಲೆಮ. ೧೨೪).

[ ←ಮರಾ. ದಗಲ್‌ಬಾಜೀ ]

**ದಗಲ್ಬಾಜಿತನ**, ದಗಲಬಾಜಿತನ (ನಾ). ಮೋಸಮಾಡುವಿಕೆ ; ದಗಾ ಹಾಕುವಿಕೆ : ಆ ನಾಗಪ್ಪಯ್ಯನ ದಗಲ್‌ಬಾಜಿತನ ತಿಳಿದುದರಿಂದ, ಆ ನಾಗಪ್ಪಯ್ಯನನ್ನು ಹಿಡಿದು ತೂಗಹಾಕಬೇಕೆಂಬದಾಗಿ ಟೀಪುಸುಲ್ತಾನರು ಅಪ್ಪಣೆಕೊಟ್ಟದ್ದರಿಂದ (ರಾಜೇಂದ್ರ. ೧೭). **ದಗಲಬಾಜಿತನ :** ಸುಬ್ಬ ಕೃಷ್ಣನಿಗೆ ಮಧುಸೂದನನ ವಿಷಯದಲ್ಲಿ ವಿಶ್ವಾಸವಿತ್ತು. ಆದರೆ ಮುರಲಿಯ ದಗಲಬಾಜಿತನಕ್ಕೆ ಹೆದರುತ್ತಿದ್ದ (ರಾಗಿಣಿ. ೩೭). [ ದಗಲ್ಬಾಜಿ + – ತನ ]

**ದಗಳು** (ನಾ). ಒಂದು ಬಗೆಯ ಯುದ್ಧಸಾಧನ : ಚೇಳು ಬಾಣಗಳ ಱಾಟಳವುರಿಪೊಟ್ಟಣವೇಳುವ ಜಂತ್ರದ ದಗಳು ತೂಳುವ ಗುಂಡುಗಲ್ಲಗಳ ರಾಸಿ ಪಟ್ಟಣದಾಳುವೇರಿಯ ತುಂಬಿಹುವು (ಕಂನವಿ. ೩-೨೧).

[ ದೇ.೫ ತೆಲು. ದಗರು ]

**ದಗಾ**, ಡಗ್ಗೆ₂, ತಗ, ದಗ, ದಗ್ಗೆ₂, ದಹ್ವ₂ (ನಾ). ಮೋಸ ; ಕಪಟ ; ವಂಚನೆ ; ದ್ರೋಹ : ಕುಡಿತಕ್ಕೆ ದುಡ್ಡಿಲ್ಲದೆ ಕಳ್ಳತನ, ಮೋಸ, ದಗಾ ಆರಂಭವಾಗಿವೆ (ನನ್ನೂರು. ೩೦೫). **ಡಗ್ಗೆ₂ :** (ಸ). **ತಗ :** ನೊಱನಾದೊಡೆ ಕೊಂಬುದೇಱುದೂಱನೆಬೇಡ ವಿೞಾಱದಡೆ ತಗವ ಕೊಡುವುದು ಸಾಲಿಗನು ಗೂಱ ತಿಂದಾನೆ (ಸರ್ವಜ್ಞ.ಬ.೮೯೭). **ದಗ:** ಇದು ಪಶ್ಚಾತ್ತಾಪವೊ, ಸ್ವಕ್ಷೇಮ ಚಿಂತನೆಯೊ . . . ದಗವೊ ಹೃದ್ಗತವಾದ ಅಭ್ಯಾಸ ಬಿದ್ದ ಮಂತ್ರ ಮನಸ್ಸನ್ನು ಸುಳಿಯಿತು (ಸಂಸ್ಕಾರ. ೮೨); "ಎಷ್ಟು ಬಾರಿ ದಗ, ಅಧರ್ಮ ನಡೆಸಿದ ಮೇಲೆ" ನೀನೆ ನನಗ್ಕೊಟ್ಟೆ ದಗ. ನಾನ್ ನಿನಗ್ಕಾಕ್ದೆ–ನಾವು (ಶಕಾರ. ೨೩). **ದಗ್ಗೆ₂ :** ದಗೆಯೆಂಬುವದು ಹಗೆಯೇ ಸರಿ (ಗಾದೆ). **ದಹ್ವ₂:** ಅಮ್ರುತೂರ ಸಂದ್ಯ ಮಂಟಪದ ಸತ್ರಕೆ ಬಿಟ ಗ್ರಾಮಯಿದಕೆ ದಹ ಮಾಡಿದವ ಹುಳತೆ ಸಾವರು (ಎಕ. XVI, ಕುಣಿಗ. ೮೭-೯: 18 ನೆಯ ಶತ).

**ದಗಾ ಕೊಡು**, **ದಗೆ ಕೊಡು** = ಮೋಸಮಾಡು ; ವಂಚಿಸು : ನನ್ನ ಹಾಗೆ ಅದೆಷ್ಟು ದೊಡ್ಡಮನುಷ್ಯರಿಗೆ ದಗಾ ಕೊಟ್ಟಿದಾನೋ (ಸಾಹೇಬ್. ೨೮೨) ; ಎತ್ತಿನ ಗಾಡಿಯವರು ಮೋಸ ಕೊಟ್ಟರು, ಲಾರಿಯವರು ದಗೆ

ಕೊಟ್ಟರು (ಜಾರುದಾ. ೨೭೩). ದಗಾ ಮಾಡು=ಮೋಸಮಾಡು; ವಂಚಿಸು: ಆ ಚಿರಕಲ ರಾಜರು ಅರೆವಾಶಿ ಹಣಾ ಕೊಡದೆ ದಗಾಮಾಡಿದ ವಿವರ ಸೋಮಶೇಖರನಾಯಕರಿಗೆ ಬರೆಸಿ ಕಳುಹಿದಲ್ಲಿ (ರಾಜೇಂದ್ರ. ೭); ನಂಜಾ! ಸಾವಿರರೂಪಾಯಿಗೆ ದಗಾ ಮಾಡಿದೆಯಾ (ಮಾಂಗಲ್ಯ. ೨೩). ದಗಾ ಹಾಕು, ದಗ ಹಾಕು = ದಗಾಕೊಡು: ನಾನೇನೂ ಅವರ ಸಾಲಕ್ಕೆ ದಗಾಹಾಕು ವುದಿಲ್ಲ (ಮಳಮ. ೪೭೨); ಒಂದಲ್ಲ ಎರಡಲ್ಲ ಐವತ್ತುಸಾವಿರ ರೂಪಾಯಿ ಗಳನ್ನು ಕಾಗದ ಪತ್ರವಿಲ್ಲದೆ ಸಾಲ ಕೊಟ್ಟ ರಾಣಿಯನ್ನು ಹಿಡಿಸಿ ಅವಳಿಗೆ ದಗ ಹಾಕಬೇಕೆಂದು ಯೋಚಿಸಿದವನು ಅವನು (ಬಂಕಿಮ. ೨೯೨).

[ ←ಅರ. ಪಾರ. ಹಿಂ. ಮರಾ. ದಗಾ ]

**ದಗಾಕೋರ,** ದಗಾಖೋರ (ನಾ). ಮೋಸಗಾರ; ಕಪಟಿ; ವಂಚಕ: "ವಿತರ್ಕ್ಯ ಹೇಸದವನು; ದಗಾಕೋರ; ಪಟಿಂಗ, ಠಕ್ಕ" (Scoundrel. ಇಂಕನಿ); ಎಲ್ಲರೂ ದಗಾಕೋರರೆ (ಹೆಂಗೂಲಿ. ೧೯೦). **ದಗಾಖೋರ:** ದಗಾಖೋರರ ಕೈಲಿ ಸಿಕ್ಕಿಬಿದ್ದು ನರೇಶನ ಮರಣ? (ಹಾಡುಹು. ೭೧): ಅವನು ದಗಾಖೋರನಾಗಿ ವಂಚನೆಯಿಂದ ಪರರ ಧನವನ್ನು ಕಸರಿ ಕೊಂಡಿರುವನೋ ಅಂತಹವನ ಮೇಲೆ ನಾವು ಡಕಾಯಿತಿ ನಡೆಯಿಸುತ್ತೇವೆ (ದೇವೀಜಾ. ೧೧೯); "ಅವನೆಂಥ ಸ್ವಾಮಿ...ದಗಾಖೋರ, ನಿಷ್ಪ್ರಯೋಜಕ" (ತಾಯಿಳ. ೦೬೦). [ ದಗಾ + – ಕೋರ$_3$ ]

**ದಗಾಖೋರ** 'ದಗಾಕೋರ' ನೋ.

**ದಗಾಬಾಜಿ** (ನಾ).=ದಗಲ್ಬಾಜಿ ೧: ಅದೆಲ್ಲಾ ಬರೇ ಮೋಸ, ಸುಳ್ಳು, ದಗಾಬಾಜಿ, ಅದರಿಂದೇನೂ ಉಪಯೋಗವಿಲ್ಲ (ಸಾಹೇಬ್. ೨೮೫).

[ ←ಪಾರ. ಹಿಂ. ಮರಾ. ದಗಾಬಾಜೀ ]

**ದಗುಂತಿ,** ಅದಗುಂತಿ, ಡಗುಂತಿ (ನಾ). ೧. ಹೆಚ್ಚಳ; ಅತಿಶಯಂ; ಆಧಿಕ್ಯ: ಅಂತೆ ಮೂಱುಮಮರಾವಾಸಂಗಳೊಳ್ ಪೇೞ್ದೊಡುತ್ತಮಸಮ್ಯಕ್ತ್ವ ಫಲಂ ದಗುಂತಿ ಮಗಳೇ ನೀನಿಂತಿದಂ ನಂಬು (ಆದಿಪು. ೫-೭೩); ಕ್ಷಮೆ ಭೂರಿ ದಗುಂತಿ ಪೆಂಪು . . . ಚತುರಾನ್ವಿತಮೆಂಬ ನೆಗರ್ತ್ತೆಯಿಂದಿಳಾವಂತ ರೊಳಾರುಮೇಂ ದೊರೆಗೆ ವರ್ಪರೆ (ಲೋಕೋಪ. ಪೀಠಿಕೆ. ೦-೧೧); ಹರಿ ರುಕ್ಮಿಣಿಯರ ರಾಗದ ಪರಮಪ್ರೇಮದ ದಗುಂತಿಯುಂ ಬಣ್ಣಿಸು ವಂ (ನೇಮಿಪು. ೭-೦೦೬): ಚದುರ ಚಾಗದ ದಗುಂತಿಯುಂ ಮೆಱೆವ ವಿವಿಧ ವಿಟರೊಳಂ (ಪುಷ್ಪಪು. ೨-೭೭ ವ); ಪಡೆದುದು ತನ್ನಿತಂಬಿನಿಯ ಕಾಯದ ಕಾಂತಿ ಸುಧಾಂಶುವಿಂದೆ ನೂರ್ಮಡಿಸುವ ಕಾಂತಿ ಸಂತತಿಯ ಸಾರಸ ಮುಚ್ಚಯದಿಂ ದಗುಂತಿಯಂ (ಮಹಾನೇ. ೮-೫೭). ೨. ಆಶ್ರಯ; ನೆಲೆ: ವಿನಯದ ಮೇರೆ ಧರ್ಮ್ಮದ ತವರ್ಮ್ಮನೆ ಸತ್ಯದ ಜನ್ಮಭೂಮಿ ಮಾಂತನದ ದಗುಂತಿ ಚಾಗದ ಮಹಾನಿಧಿ (ಎಇ. XIII, ೦೭೦-೨೬; 1055). **ಅದಗುಂತಿ:** ೧. ನೆಗಟ್ಟಮರಾಂಗನಾಜನದ ರೂಪುಗಳೆಲ್ಲಮದೀಕೆಯೊಂದು ದೇಸೆಗೆ ನಿಮಿರ್ಪೊಂದು ಪೂರ್ವಿನ ನಯಕ್ಕಮಪೂರ್ಣದದಗುಂತಿಗೊಂದು ಭಂಗಿಗೆ ನೆಗಟ್ಟೊಂದು ಮೆಲ್ಪಿನ ತೊದಳ್ನುಡಿಗಪ್ಪೊಡಮೆಯ್ದೆ ವಾರವು (ಆದಿಪು. ೨-೭೫); ಸೋಂಕುವ ನಲ್ಲಳ ಸೋಂಕಲಂಪಿನುದ್ದಾನಿಯನೀಯೆ ಸಂತಸದ ದೊಂದದಗುಂತಿಯೆ ರೂಪುಗೊಂಡುದು (ಚಂದ್ರಪು. ೭-೭೯). ೨. ಅವರೊಡ ವುಟ್ಟಿದೊಳಱಿವಿನ ತವರೆನೆ ಧರ್ಮದದಗುಂತಿಯೆನೆ ನೆಗೞ್ದಳ್ (ಎಕ. II, ೦೫೯-೭; ಸು. 950). **ಡಗುಂತಿ:** ೧. ಆ ಮಹಿಮಾವಿಲಾಸದ ಡಗು[ನ್ತಿ]ಯ ಪೆರ್ಗ್ಗಡೆ (ಎಇ. XIX, ೨೨೦-೨೧; 1037). P ಇದು 'ದಗುಂತಿ' ಎಂಬುದರ ಅಪಲಿಖಿತವಿರಬಹುದು. [ <ಅಗುಂತಿ ]

**ದಗೆ$_1$,** ಡಗೆ$_1$, ಧಗೆ, ಢಗೆ (ನಾ). ೧. ಕಾವು; ಝಳ; ತಾಪ: ಕುದಿವ ಕೊಱಂತಿ ಕುದಿದು ದಗೆಯೇೞೆ ದ ಕೋಡಗದಂತೆ ಬೆಱಗಾಗಿ (ಧರ್ಮಾಮೃ. ೩-೩೫); ಮೃಗನೇತ್ರೆಯರು ಪಥಿಕರ್ಗೆ ನಗುತ ನೀರೆಱೆವುತಿಹರು ವಿರಹಾಗ್ನಿಯಿಂ ದ[ಪಾಠಾಂ. ಡ]ಗೆ ಪೆಚ್ಚಲೆದೆಯೊಳವರಿಗೆ (ಕುರಾಸಾಂ. ೨-೪೭); ವಿಪರೀತವಾಗಿ ಕಾಯುತ್ತ, ದಗೆಯು ಸೀಮೆಯಾಗಿರುವ ಅರಬ್ಬೀದೇಶದಲ್ಲಿ (ಪ್ರಮಹ. ೫೮). **ಡಗೆ$_1$:** ೧. ಬಿಸಿಲ ಡಗೆ ತಾಗಿ ವಸುಧೆಯವರೆಲ್ಲರು ಬಾಯ ಕಿಸುವುತ್ತಿದ್ದರು (ಮಸುಗುಂ. ೨೫೯-೫೦): ಶೋಕದ ಡ[ಪಾಠಾಂ. ಬ]ಗೆಯೊಳುಬ್ಬಿದ ನಗೆಯಲಾ ಸ್ವೇದದಲಿ ರೋಮಾಂಚ ದುಗುಡದಲಿ ಪರಿತೋಷ . . . ಭೀಷ್ಮಾದಿಗಳೊಳಗೆ ಪಲ್ಲಟಿಸುತಿರ್ದುದು ಪಡಿಮುಹೂರ್ತದಲಿ (ಕುವ್ಯಾಸ. ೧೫-೫); ಈ ಕಿಚ್ಚನೀಗ ಸಂಹರಿಸುವಂ ವರುಣಬಾಣದೊಳೆಂದಾ ಧನುವಿನಿಂ ಹರಿಸಿದಂ ಪಿರಿದು ಸಂಹರಿಸುವುರಿಯ ಡಗೆಯಾವರಿಸೆ ನೀರ್ ನಿಮಿಷದೊಳಗೆ (ಜೈಬಪು. ೪೦-೧೫); ಬೀಳ್ವೇಳ್ವ ಸುಳಿವ ಸುತ್ತುವ ಡಗೆಯಂ ತರಹರಿಪ ಸಾರ್ವ ಪಾರ್ವಟ್ಬರಿಪೆಸಕಂ ವಿಪಾಟಿ ಕಾದಿದರ್ ಕಡುಗಲಿಗಳ್ (ಶಬಶಂ. ೪-೭೭); ಕಟ್ಟುಱಿದ ಡಗೆಯ ಪೇರೊಡಲ ಗೋರರೂಪಿನ ದಾನವಂ (ರಾಮಾಶ್ವ. ೧೦೨-೧). ೨. ಬಾಯಾರಿಕೆ; ಸೇದೆ: ಬಿಱುಬಿಸಿಲ ಸೆಕೆಯುಸುರ ಬಿಸಿ ಹೊಡೆದುದುರಿಹೊತ್ತಿ ಬಾಯ್ಬತ್ತಿ ಡಗೆಸುತ್ತಿ ಸಾವಡಸುತಿದೆ (ಹಚಕಾ. ೭-೯). **ಧಗೆ:** ೧. ವಿರಹದ ಧಗೆ ರಥಾಂಗದೊಳಳಿಯೆ ರವಿಯುದಯಾ ಚಳಕೆ ಬಂದ (ಕುವ್ಯಾಕ. ೨-೧); ಝಳದ ಧಗೆ ಡಾವರಿಸೆ ಹೊಕ್ಕರು ಕೊಳನ (ತೊರರಾ. ೨-೪-೨೨); ಧಗೆಯಿಂ ನೀರ ಪೊಕ್ಕನೊ ಮಿತ್ರನೆಂಬಂ ತಾಗಲಸ್ತಮಯ (ಅಂಬಿಕಾ. ೨೩-೭೧). ೨. ಒಡಲ ಜಡಿದವು ರೋಮ ರೋಮದೊಳೆಡಸಿದಂಬುಗಳಂಗವೇದನೆ ತೊಡಕಿತುಬ್ಬರಿಸಿದುದು ಧಗೆ ಗೋನಾಳಿ ನೀರ್ದಗೆಯೆ ನುಡಿಯಲಾಱೆನು (ಕುವ್ಯಾಭೀ. ೧೦-೨೪): ೩. (ಆಲಂ) ಕಳವಳ; ತಳಮಳ: ಮನದ ಧ[ಪಾಠಾಂ. ಡ]ಗೆ ಪನ್ನೀರ ಶೈತ್ಯದಿಂ ಪರಿವುದೇ (ಹಚಕಾ. ಪರಿ. ೪-೭೩). ಮನದ ಧ[ಪಾಠಾಂ. ಡ]ಗೆ ಯಡಗಿದವು ಮತ್ಸ್ಯೇಶನ ಪುರಾಂತರದೊಳಗೆ ಮೈ ಮಱೆಸನುಪಮಿತ ಭುಜಸತ್ವರಿದ್ದರು ಭೂಪ ಕೇಳೆಂದ (ಕುವ್ಯಾವಿ. ೧-೩೨). **ಢಗೆ:** ೧. ಸುರ ತರುನಂದನಕ್ಕಿದಱ ನಂದನದಿಂ ಢಗೆ ಪೋಪುವಾ ಮಹೇಶ್ವರನ ಜಟಾಗ್ರ ದಿಂದಿಳಿದ ಗಂಗೆಯಾ (ಎಇ. XIII, ೪೪-೩೭; 1112); (P ಭಾಷಾಂತರ ದಲ್ಲಿ 'Danger' ಎಂದಿದೆ); ಹೊರಗೆ ಮುಗಿಲಿನಲ್ಲಿ ಮೋಡಕಟ್ಟಿ ಬಿಸಿಲಿಲ್ಲದಿದ್ದರೂ ಧಗೆ ಉಸಿರುಕಟ್ಟಿಸುತ್ತಿತ್ತು (ಚಂದತೋ. ೦೨); ಹೊಗೆ ನುಂಗುವುದಿದೆ ಧಗೆಯು ಕಳೆವುದಿದೆ ಅಡಿಯಿಂ ಮುಡಿವರ ಬೆಳಗುವುದಿದೆ ಇದೆ (ಅರಳು. ೨೬೦-೭). ೩. ಒಳಗೆಯೊತ್ತುವ ಧಗೆಯ ಹೊಱಗಣ ತಳಿತ ಬಿಮ್ಮಿನ ನಗೆಯ ನೃಪಮಂಡಲದ ಮೌಳಿಯುನೇನನೆಂಬೆನು (ಕುವ್ಯಾಆ. ೦೪-೩೭); ವೆಗ್ಗಳಿಸಿ ಭೋಗಿಸಲು ಧಗೆಯಹುದಾಸಱಹುದು ಮತಿಗೆಡುವುದು ಪಗೆಯಹುದಾ ಸುಖ ತನಗೆ (ಭರತೇ. ೭-೨೮).

[ ←ಮರಾ. ಧಗ್./ತೆಲು. ದಗ ]

**ದಗೆ$_2$** 'ದಗಾ' ನೋ.

**ದಗ್ಗನೆ** (ಅ).=ದಗದಗನೆ: ಬೆಂಕಿ ದಗ್ಗನೆ ಉರಿಯಿತು (ರೂಢಿ).

ದಗ್ಗನೆ ಹತ್ತಿಕೊಳ್ಳು = ದಗ್ಗನೆ ಉರಿ ಉಂಟಾಗು: ಬೆಂಕಿ ದಗ್ಗನೆ ಹತ್ತಿಕೊಂಡಿತು (ರೂಢಿ). [ ದಗ್$_0$ + – ಅನೆ$_1$ ]

**ದಗ್ಗಳಿ** 'ದೊಗ್ಗಳೆ' ನೋ.

**ದಗ್ಗುದುಳಿ** (ಕ್ರಿ). ಚೆನ್ನಾಗಿ ತುಳಿ; ನುಗ್ಗುನುರಿ ಮಾಡು: ಖಂಡ ತೊಗಲೆಲು ದಗ್ಗುದುಳಿದುರೆ ಕೆಲರು ಮಾಡಿದುದು ಕರಿಗಳೆಳವಿಯಲಿ ಯುಗ್ಗಡವನೇನೆಂಬೆ (ಅಂಬಿಕಾ. ೨೯-೧೫); ಎರಡೂ ಒಳಹೊಕ್ಕು ಮನಸ್ಸನು ದಗ್ಗುದುಳಿಯುವುದೂ ಉಂಟು (ದೇಕನ್ನ. ೯೦).

[ <ತಗ್ಗು$_1$ + ತುಳಿ$_1$ (<ತುಱಿ$_1$) ]

**ದಗ್ಧ** (ಗು). ೧. ಸುಟ್ಟ; ಬೆಂದ; ದಹಿಸಿದ: ವ್ಯಮರೆದಂ . . . ಸುತವಿರಹ ಸಂತಾಪದಗ್ಧವಸುಧಾಧಿಪಂ! (ಶ್ರೀರಾಮಾ. ೯೫-೪೭೩). ೨. ಬಾಡಿದ; ಬತ್ತಿದ; ಒಣಗಿದ. ೩. ಅಶುಭದ; ಅಪಶಕುನದ;

ಅಮಂಗಳದ. ೪. ದಂಷ್ಟ; ಕುತ್ಸಿತವಾದ. (ನಾ). ೫. ಸಂಶಯವಿಲ್ಲದಿರುವುದಂ; ನಿಶ್ಶಂಕೆ. ೬. ಸುಟ್ಟುದಂ; ದಹಿಸಿದುದು. [ ಸಂ. ]

**ದಗ್ಧಕ** (ನಾ). ಸುಟ್ಟಂತಹುದು; ಹಪ್ಪಳ ಇತ್ಯಾದಿ: "ಹಪ್ಪಳಾದಿಗಳ್ ದಗ್ಧ[ ಪಾಠಾಂ. ಗ್ಧ]ಕ ಮಕ್ಕು" (ಮಂಗರಾ. ೬೪-೩). [ ಸಂ. ]

**ದಗ್ಧಕರ್ಪೂರ** (ನಾ). ಸುಟ್ಟ ಕರ್ಪೂರ; ಉರಿದ ಕರ್ಪೂರ: ದಗ್ಧಕರ್ಪೂರದಂತೆಲ್ಲಾ ಜನಂಗಳೋಳ್ ಸ್ನಿಗ್ಧಮೆನೆ ಪಸರಿಸುವ ಕಾಮಾರಿಯುಗ್ನಿಕರರುಗ್ಧವಲಿಮಾಸ್ಪ ತ್ರಿಯಕ್ಷನೆ (ವೀಶೈಪು. ೩-೧೪-೧). [ ದಗ್ಧ + ಕರ್ಪೂರ ]

**ದಗ್ಧಪಟ** (ನಾ). ಸುಟ್ಟ ಅರಿವೆ, ಬಟ್ಟೆ: ನಿತ್ಯನೇಮವೆಂದು ಮಾಡುವ ಭಕ್ತಿವಿದಂಗೆ ಮಾಡಿಯೂ ಮಾಡದಿದ್ದಡೇನು ದಗ್ಧಪಟದಂತೆ (ಮೋಳಿಮಾ. ೧೪-೩೦): ಅನುಭಾವಿಯಾದಡೆ ಸುಟ್ಟ ಸರವೆಯಂತಿರಬೇಕು ಅನುಭಾವಿಯಾದಡೆ ದಗ್ಧಪಟದಂತಿರಬೇಕು (ಅಬಂಡೇ. ೧೯೨-೧೨); ದಗ್ಧಪಟವೆಂದಿನಂದದಿ ತೋಟಿಲಿಳಿಯಲಿ ವಿದಗ್ಧರಾರದನುಟ್ಟು ತಳ್ಪದರು ಹಿಮಮಂ (ಕವಿಜ. III, ೧೨೦ ನಿಜದೀಟಕಾರಕ್ಕ). [ ದಗ್ಧ + ಪಟ್ಟ ]

**ದಗ್ಧಪಟನ್ಯಾಯ** (ನಾ). ಸುಟ್ಟ ವಸ್ತ್ರದಂತೆ ಮೂಲರೂಪವಿದ್ದರೂ ಮೂಲಗುಣವಿಲ್ಲದ ಸ್ಥಿತಿಯನ್ನು ವಿವರಿಸುವ ಒಂದು ಬಗೆಯ ನ್ಯಾಯ: ಬಾಹ್ಯಕರಣಂಗಳು ಕರಣಮದಕ್ಕೆ ತೆಱಹುಗೊಡದೆ ಅಳವಟ್ಟು ಅವಗ್ರಹಿಸಿ ದಗ್ಧಪಟನ್ಯಾಯದ ಹಾಂಗೆ ತೋಱಕೆಯಿದ್ದು ಅವಱ ಗುಣಧರ್ಮ ಕರ್ಮಂಗಳೇನೂಯಿಲ್ಲದೆ ಸದ್ಯೋನ್ಮುಕ್ತನಾಗಿ (ಷಡಗೋ. ೨-೮೧). [ ದಗ್ಧಪಟ + ನ್ಯಾಯ ]

**ದಗ್ಧವಾಣಿ** (ನಾ). ಚೆನ್ನಾಗಿ ಮಾತನಾಡಂವುದಕ್ಕೆ ಬಾರದವನು; ವಾಗ್ಮಿಯಲ್ಲದವನಂ: ಕವಿಯಂ ಕಂಡೊಡೆ ಶಾಸ್ತ್ರಹೀನನಿವನೆಂದಿಂತಾರ್ದು ಶಾಸ್ತ್ರಜ್ಞನಂ ಕವಿಯಲ್ಲೆಂದಣಮಾರ್ದು ಮಿಕ್ಕ ಬಹುಶಾಸ್ತ್ರಜ್ಞನಪ್ಪಾ ಮಹಾಕವಿಯಂ ಕಂಡೊಡೆದಗ್ಧವಾಣಿಯವನೆಂದಿಂತಾರ್ದು ಹಾಸ್ಯೋಕ್ತಿಯಿಂ ಕವಿಗಳ್ ವರ್ತಿಪರ್ (ಸೂಕ್ತಿಸು. ೦-೩೭). [ ದಗ್ಧ + ವಾಣಿ$_1$ ]

**ದಗ್ಧವಾರಿ** (ನಾ). ಸುಟ್ಟು ಆವಿಯಾಗಿ ಹೋದ ನೀರಂ(?): ಉರಿದಟಿದವೃದು ಎಮ್ಮಯ ಕಱೀರವ್ವೋವೆಮ್ಮ ಪುತ್ರಶೋಕಾನಲನಿಂ ನರಪಾಲ ಮತ್ತಮನಲಾಂತರಮೇವುದೊ ದಗ್ಧವಾರಿಯೆಂಬುದುಮುಂಟೆ (ಅಜಿಪು. ೧೦-೩೯). [ ದಗ್ಧ + ವಾರಿ$_2$ ]

**ದಗ್ಧಹಸ್ತ** (ನಾ). ೧. [ಸಾಮಂದ್ರಿ] ದುರದೃಷ್ಟಕರವಾದ ಕೈ; ಬರಿಗೈ. ೨. ಅದೃಷ್ಟವಿಲ್ಲದವನು; ಬರಿಗೈಯವನಂ: ಯಾವಾತನ ಹಸ್ತದಲ್ಲಿ ರೇಖೆಗಳು ಕಪ್ಪಾಗಿಯಿರಲು ಆತನನ್ನು ದಗ್ಧಹಸ್ತನೆಂದು ಹೇಳುವರು (ಸಾಮುಲ. ೯೪-೮). [ ದಗ್ಧ + ಹಸ್ತ ]

**ದಗ್ಧಿಕೆ** (ನಾ). ಸೀದುಹೋದ ಅನ್ನ; ಕರಿಕಾದ ಅನ್ನ; "ಸುಟ್ಟ ಅನ್ನ ಹೊತ್ತು" (ಗಂಗಾಮು. ೦೩೨). [ ಸಂ. ದಗ್ಧಿಕಾ ]

**ದಗ್ಲಿ** 'ದೊಗ್ಗಳೆ' ನೋ.

**ದಚ್ಚಿ** (ನಾ). ೧. ಹಣಿಸೇಬೀಜದ ಬೇಳೆ; ಹಣಿಸೆಪಕ್ಕ. ೨. ಕವಡೆ. 'ದಚ್ಚಿಬಾರ' ಪರಾ. ೩. ದಚ್ಚಿಬಾರದ ಆಟದಲ್ಲಿ ಬೀಳುವ ನಾಲ್ಕರ ಗರ; ಚೌಕ.

**ದಚ್ಚಿ ಬಾಚು**=ಕವಡೆಯಾಟದಲ್ಲಿ ನಾಲ್ಕರ ಗರ ಬಿದ್ದ ಕವಡೆಗಳನ್ನು ಬಾಚು: ಕೈಮೇಲೆ ಕವಡೆಯಾಡುವಾಗ ಪ್ರತಿಸಾರಿಯೂ ಕಮಲೆಯೇ ದಚ್ಚಿ ಬಾಚುತ್ತಿದ್ದಳು (ರೂಢಿ). **ದಚ್ಚಿಯಾಟ** = ಚೌಕಾಬಾರ: ದಚ್ಚಿಯಾಟ ಆಡೋಣ ಬಾ (ರೂಢಿ). [ ದೇ.॥ ತಮಿ. ತಚ್ಚಿ; ತೆಲು. ದಚ್ಚಿ ]

**ದಚ್ಚಿಬಾರ** (ನಾ). (ಕವಡೆಯಿಂದಾಡುವ) ಚೌಕಾಬಾರ: ದಚ್ಚಿಬಾರ ಆಡೋಣ ಬಾ (ರೂಢಿ). [ ದಚ್ಚಿ + ಬಾರ$_2$./ತಮಿ. ತಚ್ಚಿಪಾರಾ ]

**ದಟದಟ** (ನಾ). ಒಂದು ಅನುಕರಣ ಶಬ್ದ. 'ದಟದಟಿಸು' ಪರಾ.

**ದಟದಟಿಸು** (ಕ್ರಿ). ದಟದಟ ಎಂದು ಶಬ್ದಮಾಡು: ಮುಗಿಲಡವಿಯೊಳ್ಜ್ವಲೆಯುಗುಳ್ದ ದವಶಿಖಿಯಂತೆ ಬಗೆಗೊಳಿಸಿ ಬಳ್ಳಿಮಿಂಚಾವಷ್ಪಿ ದಟದಟಿಸಿ ದಗದಗಿಪ ದವದಂತೆ ಸಿಡಿಲ ರವವೆಸೆಯೆ (ಸೌಂದಪು. ೧೫-೩೯). [ ದಟದಟ + -ಇಸು$_3$ ]

**ದಟಲ್** (ನಾ). ಒಂದು ಅನುಕರಣ ಶಬ್ದ: ಜೊಱಿಂಬ ಝುಮ್ಮೆಂಬ ಚಕ್ಕೆಂಬ ಧೊಕ್ಕೆಂಬ ಧಡಲೆಂಬ ದಟ[ಪಾಠಾಂ. ಡಟ, ಡಣ]ಲೆಂಬ . . . ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟೆ (ಇಹರ. ದೇ. ೪೨-೧).

**ದಟ್ಟ$_1$** (ನಾ). ೧. ಒತ್ತಾದುದಂ; ಸಾಂದ್ರವಾದುದಂ: "ಘನ, ನಿರಂತರ, ಸಾಂದ್ರ-ದಟ್ಟವಾದುದು" (ನಾಚಿರಾ. ೬); "ಬಹುಳಂ ಘನಂ ಸಾಂದ್ರಮವಿರಳಂ ದಟ್ಟಮದು" (ಮಂಗರಾ. ೧೨೪-೮); ಅಶಾವಧೂ ದೌತ್ಯವರ್ತನದಿಂದಂ ಗಗನಸ್ಥಳೀಕುಲಟೆ ಕೊಂಡಳ್ ನೀಲ ಚೇಲಾವಗುಂಠನಮಂ ತಾನೆನೆ ದಟ್ಟಮಾಗಿದೆ ತಮಂ ತಳ್ಪತ್ತು ದಿಕ್ಪ್ರಾಂತಮಂ (ಅನಂಪು. ೭-೭೩); ದಟ್ಟದ ಸೀರೆ ಬಟ್ಟನ ಬಟ್ಟುಂಗುರುಯಿಟ್ಟಾ ಕಿವಿಯ ಕಲ್ಲೋಲೆ (ಶ್ರೀಪಾಲ. ೪-೭೩); ಆ ವಾಯುವೊಂದೊಂದು ತಳದೊಳಗಿಪ್ಪತ್ತುಸಾಸಿರಗಾವುದ ದಟ್ಟಾ ಗಾವುದಕಿಪ್ಪು ಕಡಿಮೆ ತುದಿಗವಟಲ್ಲಿ ತೀವಿರುತಿಹುವಾಬುದ್ರವ್ಯ (ಭರಚ. ೭೭-೭೧); ಗುರುವನ್ನು ಸುತ್ತಲೂ ಆವರಿಸಿಕೊಂಡಿರುವ ವಾಯುಮಂಡಲವು ಬಲು ದಟ್ಟ ಮತ್ತು ದಪ್ಪ (ಜ್ಯೋತಿರ್ವಿ. ೧೫೩). ೨. ಒತ್ತಾಗಿ ಹೆಣೆದ ಬಟ್ಟೆ: ಮಂದಲಿಗೆಯನ್ನು ಹಾಸಿ ಅದರ ಮೇಲೆ ಹತ್ತಿ ದಟ್ಟವೊಂದನ್ನು ಹಾಕಿ ಮಲಗಿಕೊಂಡೆ (ಹಂಗಾಳ್ಕ. ೨೦೬); ಹಲವಾರು ಬಣ್ಣಬಣ್ಣದ ಬಟ್ಟೆಯ ಚೂರುಗಳನ್ನು ನೇರವಾಗಿ ಕತ್ತರಿಸಿ ಸೇರಿಸಿ ಹೊಲಿದ ದಟ್ಟಗಳನ್ನು ನೆಲದ ಮೇಲೆ ಎಲ್ಲೆಲ್ಲೂ ಹಾಸಿದಂತೆ ಕಾಣಿಸುವ ಹೊಲಗದ್ದೆಗಳು(ನಂಟರು. ೧೩೦). 'ದಟ್ಟ$_1$' ಪರಾ. (ಗುಂ). ೩. ದಪ್ಪವಾದ; ಮಂದವಾದ; ಸಾಂದ್ರವಾದ: ಹೊಲಸುಮೈಯವಗೇಕೆ ಹೊಸ ಕಸ್ತೂರಿ ವಾಟ ತಲೆದೋಱುವವಗೇಕೆ ದಟ್ಟ ಪುನುಗು (ಪುರಂದ. ೧-೧೦೦-೧). 'ದಟ್ಟಗತ್ತಲೆ' ಪರಾ. [ ದೇ. ॥ತಮಿ. ಮಲ. ತಟ; ತುಳು. ದಟ, ದಟೊ; ತೆಲು. ದಟ್ಟ; ಕೋ. ಡಾಟ./ಮರಾ. ದಾಟ್ ]

**ದಟ್ಟ$_2$** (ನಾ). ಒಂದು ಬಗೆಯ ವಾದ್ಯ: ಈಶಾನ ಈಶ್ವರಮುಡಿಯಾರ್ಗ್ಗೆ ಕೊಟ್ಟ ತಿವಳಿ ೧ ದಟ್ಟ ೩ ಖಣ್ಡೆಕೆ ೩ . . . , ಪಞ್ಚಮಹಾಶಬ್ದಮಂ ತ್ರಿಕಾಳಂ ಬಾಜಿಸುಂದಕ್ಕೆ (ಪ್ರಾಆರಿ. ೯೪೬, ೨೮-೧೪; 1033). [ ? ]

**ದಟ್ಟ$_3$** (ನಾ). ಹೆಣ; ಶವ(?): ಹರ ಗಿರಿ ಬಲ ಪಾರ್ವತಿ ವಟ ತರು ಪುಳಿನಂ ದ್ವಿಫಳೆ ವಾಣಿ ಶುಕ ನರಿ ದಟ್ಟಂ ನೊರೆ ಪುಣ್ಯ ಪಾವು ಶುಭ ಸುಖ ವರ ಸಿತ ಪದಿನೆಂಟು ನಾಮ ಶಿವಶಬ್ದಂಗಳ್ (ನಾನಾಳಂ. ೫). [?]

**ದಟ್ಟಂದರಿ** (ಕ್ರಿ). ಬಟ್ಟೆಯನ್ನು ಹರಿ,-ಕತ್ತರಿಸಂ: ಪ್ರುರ್ಚನಿಂ ಕುಣಿದಾಡಿ ದಟ್ಟಂದರಿವ ನಗುವ ಕವಡಿನಟಮುಟದ ವೇಸಂದಳೆಯದಿರ್ಪೊಡಂ ನನ್ನಿ . . . ಪೊಡಕರಿಪ ದಾರಿಯನಿತ್ತನಿರುಕಿಸಾ ದುಃಖದಿಂ ಪರಿಪಕ್ವಮಾದೆ (ಸಂಸಪ. ೨೫-೧೪). [ ದಟ್ಟ$_1$ + ತರಿ$_1$ (< ತಱಿ$_1$) ]

**ದಟ್ಟಕೂದಲು** 'ದಟ್ಟಗೂದಲು' ನೋ.

**ದಟ್ಟಗತ್ತಲೆ** (ನಾ). ಸಾಂದ್ರವಾದ ಕತ್ತಲೆ; ಕಗ್ಗತ್ತಲೆ: ಪಾತಾಳದಡಿಯ ದಟ್ಟಗತ್ತಲೆಯನ್ನೆತ್ತಿ ಸತ್ಯಲೋಕದ ಪಾವಟಿಗೆಗೆ ಹೊದೆಯಿಸಿದಂತಿದೆ (ಮಂತ್ರಶ. ೯೦-೧೫). [ ದಟ್ಟ$_1$ + ಕತ್ತಲೆ$_1$ (<ಕಟ್ಟಲೆ) ]

**ದಟ್ಟಗಾಡು** (ನಾ). ಒತ್ತಾದ ಕಾಡಂ,-ಅರಣ್ಯ: ಮಲೆಯ ಬೀಡಿನೆದೆಯ ಮೇಲೆ ದಟ್ಟಗಾಡು ಹಬ್ಬಿರೆ (ಅನಿಕೇ. ೪೨-೭). [ ದಟ್ಟ$_1$ + ಕಾಡು$_3$ ]

**ದಟ್ಟಗೂದಲು, ದಟ್ಟಕೂದಲಂ** (ನಾ). ಒತ್ತಾದ ಕೂದಲು: (+). **ದಟ್ಟಕೂದಲು**: ಅವಳಿಗೆ ದಟ್ಟಕೂದಲಿದೆ (ರೂಢಿ). [ ದಟ್ಟ$_1$ + ಕೂದಲು (<ಕೂಂದಲ್) ]

**ದಟ್ಟಗೆ$_1$** (ನಾ). ಸೀರೆಯ ಸೆರಗು (?) : ಎಲೆಯಕ್ಕ ನಿನ್ನ ವುರದೊಳಗೆ ಪರಮೇಶ್ವರಂ ಗೆಲವಿನಿಂ ಶ್ರೀಗಂಧವಿಧುಲೇಖನೀಲವಮಂ ವಿಲಘದಿಂ ಕುಱು ಹಾಂತು ನೆಲಸಿದನಿದೇನೆಂದು ಗಿಳಿ ಕೇಳಲವಳು ನಾಣ್ಚಿ ಒಲವಿನಿಂ ದಟ್ಟಗೆಯ ಮಱಸಿಕೊಂಡಳು (ಪ್ರಭುಪು. ೪-೧೪೨). [ ? ]

**ದಟ್ಟಗೆ$_2$** (ಅ). ಹೆಚ್ಚು ಒತ್ತಾಗಿ ; ತುಂಬ ನಿಬಿಡವಾಗಿ; ಸಾಂದ್ರವಾಗಿ: ಬೀಜಗಳನ್ನು ದಟ್ಟಗೆ ಬಿತ್ತಬಾರದು (ರೂಢಿ). [ ದಟ್ಟ$_1$ + – ಅಗೆ$_3$ ]

**ದಟ್ಟಡಿ, ತಟ್ಟಡಿ** (ನಾ). ಮಕ್ಕಳು ನಡೆಗಲಿಯುವಾಗ ಹತ್ತಿರ ಹತ್ತಿರವಾಗಿ ಇಡುವ ಹೆಜ್ಜೆ ; ಒತ್ತಾದ ಹೆಜ್ಜೆ ; ತಪ್ಪುಹೆಜ್ಜೆ : ತಳರ್ನಡೆ ಮುದ್ದು ಮೊಗಂ . . . ದಟ್ಟಡಿಯೊಳ್ಪರಿದೋಡುವಂಗಣಂ ನೆಱೆ ತನಗೊಪ್ಪುವರ್ಭಕನನೊರ್ವನನಾಂ ಪಡೆವಂದಮಾವುದೋ (ಸುಕುಮಾ. ೯-೯೯) ; ಬ್ರಹ್ಮಾಂಡ ಪವಣಿಸಿದ ವಿಲಸಿತದ ವಿಭುವಿಂಗೆ ದಟ್ಟಡಿ ಬಳುಕು ನಡೆ ಮೆಲ್ನಡೆಗಳೆಂಬಿವು ತಿಳಿವವರ ಮನಸಿಂಗೆ ಮಱೆ ತಾನಲ್ಲವೇಯೆಂದ (ತೊರರಾ. ೧-೮-೭೭) ; ಮೆಲ್ಲಮೆಲ್ಲನೆ ದಟ್ಟಡಿಯನಿಡಲ್ ಗೆಜ್ಜೆಗಳ್ ಘಲಘಲ್ಲನೆ . . . ಪಳಿಕಿನಿಂ ಸವೆದ ನೆಲೆಗಟ್ಟು ಜಾರ್ವುದು (ಚಿಬಪು. ೫-೪೦) ; ದಟ್ಟಡಿಯನಿಕ್ಕುವ ಬಾಲಕನಂಗದೊಂದು ಮಾರ್ಪೊಳಪಿರೆ ನೀಲಕುಟ್ಟಿಮದೊಳ್ (ರಾಜಶೇ. ೪-೭೨) ; ಶಿಷ್ಟಂಗೆ ತೊದಲುನುಡಿಯೇಕೆ ಕಳ್ಳಂಗೆ ದಟ್ಟಡಿಯದೇಕೆ (ಸರ್ವಜ್ಞ. ೧೧೮೩) ; ಹೆಜ್ಜೆಹೆಜ್ಜೆಗೆ ತಪ್ಪ ಮಾಡಿದರೇನಹುದು ದಟ್ಟಡಿಯನಿಡದೆ ನಡೆ ಕಲಿಯಬಹುದೇ ? (ಅರಳು. ೨೭೩-೪). **ತಟ್ಟಡಿ** : ಅಂಬೆಗಾಲಿಂದ ತೊದಲುಲಿದ ತಟ್ಟಡಿಯಿಟ್ಟು ಬೆಳಬೆಳದು (ಜಿನಮು. ೪೦-೪). [ ದಟ್ಟ$_1$ + ಅಡಿ$_1$ ]

**ದಟ್ಟಡಿಕಾಱ** (ನಾ). ದೃಢವಾದ ಹೆಜ್ಜೆಯನ್ನು ಹಾಕುವವನು ; ಗಂಭೀರವಾದ ನಡಗೆಯನ್ನುಳ್ಳವನು: ಹಲವು ಪಯಣದೊಳು ದಟ್ಟಡಿಕಾಱ ಗಂಗಾ ಕೂಟವದು ಮುಟ್ಟಮುಟ್ಟಲಾಯ್ತೆನೆ ಬರುತಿರ್ದ (ಭರಪ. ೩೭-೨೪).

[ ದಟ್ಟಡಿ + – ಕಾಱ ]

**ದಟ್ಟಡಿಯಿಡಿಸು** (ಕ್ರಿ). ನಡೆಗಲಿಸು ; ತಪ್ಪುಹೆಜ್ಜೆಯನ್ನು ಹಾಕುವಂತೆ ಮಾಡು : ಪಟ್ಟಾಭಿಷೇಕಾನು ಕಟ್ಟಿದಾನೆಯ ನೋಡಿ ತೊಟ್ಟ ಭೂಷಣವು ಮಾವುತನಿಗೆ ಕೊಟ್ಟಾನು ದಳಕರ್ತ ಮೆಚ್ಚಿದನಾನೆಯ ದಟ್ಟಡಿಯಿಡಿಸಿ ನೋಡಿದರು (ಸೌಂದಕಾ. ೫-೭೦). [ ದಟ್ಟಡಿ + ಇಡಿಸು$_1$ ]

**ದಟ್ಟಡಿಯಿಡು** (ಕ್ರಿ). ನಡೆಯಲು ಪ್ರಾರಂಭಿಸು ; ತಪ್ಪುಹೆಜ್ಜೆಹಾಕು ; ನಿಧಾನವಾಗಿ ನಡೆ : ಎಡೆಯಾಡಿದಪುದು ರನ್ನದ ಸೊಡರೆನೆ ಹರಿನೀಳ ರತ್ನಕುಟ್ಟಿಮದೊಳ್ದಟ್ಟಡಿಯಿಡುವ ತನೂಭವನಂ ನಡೆ ನೋಡಲ್ಪಡೆದ ತಾಯ ಜನ್ಮಮೆ ಸಫಳಂ (ಮಲ್ಲಿಪು. ೩-೧೧೮) ; ಚಲನದೊಳ್ ಭವನಾಂಗಣದೊಳ್ ಕಂದನೆಂದು ದಟ್ಟಡಿಯಿಡುವಂ (ಚಂದ್ರಪು. ೩-೪೮) ; ದಟ್ಟಡಿಯಿಟ್ಟು ಭಕ್ತಿ ತನ್ನಯ ಮನಮಂ ಬಂದಡರೆ ಭರಂ ಮಿಗೆ ಮುದದಿಂದಂ ಪುಷ್ಪಾಪಚಯಕೆ ಗಿರಿಸುತೆ ಬಂದಳ್ (ಗಿರಿಕ. ೫-೫೦) ; ದಟ್ಟಡಿಯಿಡುತಲಿ ಬೆಣ್ಣೆಯ ಮೆಲುವ ತೋಳನ್ನಾಡೈ (ಪುರಂದ. ೩-೦೮೯-೩) ; ಅಂಬೆಗಾಲಿಕ್ಕಿ ತೊಳಲುವನಲ್ಲ ಕಾಲು ಬಲಿದು ದಟ್ಟಡಿಯಿಡುವವನಲ್ಲ ಬಾಲನೆಲ್ಲಿಗೆ ಹೋದನವ್ವ (ಮೋಹತ. ೪-೮೩). [ ದಟ್ಟಡಿ + ಇಡು$_1$ ]

**ದಟ್ಟಣೆ** (ನಾ). ನಿಬಿಡತೆ ; ಒತ್ತಾಗಿರುವುದು ; ಕಿಕ್ಕಿರಿದಿರುವಿಕೆ ; ಸಾಂದ್ರತೆ ; ನೆರವಿ : ತೊಡರಿದಡೆ ತಾಂ ಕೈಗಟ್ಟಿ ಮ್ಮಡನೊಡನಾದಡಂಜದೆ ಗೆಲಲು ಜಂಗಮದ ದಟ್ಟಣೆಗೆ ಸೈರಿಸುವ ಮನವಳವಟ್ಟಿರಲು (ಬಸಪು. ೮-೫೭) ; ಕಿಚ್ಚಿನುಱುಬೆಯ ದಟ್ಟಣೆಗೆ ಧಾರೆಗಳ ಬಿಡುತೆಣ್ಣೆಗಳ ಪಕ್ಕಲೆಯ ಥಟ್ಟುಗೆಡುವಾನೆಗಳಿಗಾನೆಯ ಕಟ್ಟುತ (ತೊರರಾ. ೫-೭-೧೩); ಜನವಸತಿಯ ದಟ್ಟಣೆಯಿಂದ ನಿರ್ಣಯಿಸಲ್ಪಡುವುದಾದರೆ ದ್ರಾವಿಡಜನಾಂಗದ ಗುರುತ್ವಾಕರ್ಷಣವು ಮೈಸೂರುರಾಜ್ಯದ ಸಮಿಪವರ್ತಿಯಾಗುವುದು (ತಶ್ಮಪ್ರಾ. ೪೨೩). [ ದಟ್ಟಯಿಸು + – ಅಣೆ$_4$ ]

**ದಟ್ಟದರಿದ್ರ** (ನಾ). ಕಡುಬಡವ ; ನಿರ್ಗತಿಕ : ದಟ್ಟದರಿದ್ರನಂತೆ ಕಾಸಿಗೆ ಮನವಿತ್ತನೆಂದವಳಕೀರ್ತಿನಿತಂಬಿನಿ ದೂಱುತಿರ್ಪಳ್ (ವೀರವಿ. ೨-೫೪) ; ದಟ್ಟದರಿದ್ರರು ಮೊದಲಾಗಿ ಹತ್ತನು ಬಿಟ್ಟಹರುಂಟು ಬಾಹ್ಯದೊಳು (ಭರಪ. ೭೦-೮೨) ; ಸತಿಪತಿಯರು ರೂಪಸಂಪನ್ನರಾದರೆ ದಟ್ಟದರಿದ್ರರು ಆರರೆ ! (ಇಂಜಾಪ. ೧೮೧-೯೩) ; ಹೊಟ್ಟೆಗೆ ಹಿಟ್ಟಿಲ್ಲದ, ಮೈಗೆ ಬಟ್ಟೆಯಿಲ್ಲದ, ದಟ್ಟದರಿದ್ರರಿಗೆ ಕುಲವಂತೆ ಕುಲ (ತುಂಗಭ. ೫೪) : ಇನ್ನೊಬ್ಬರ ಅನುಕೂಲತೆಗೆ ಒದಗದ ಲಕ್ಷಾಧೀಶನು ದಟ್ಟದರಿದ್ರನೆಂದೇ ನನ್ನ ಅಭಿಪ್ರಾಯ (ರಂಗರೋ. ೧೫೮). [ ದಟ್ಟ$_1$ + ದರಿದ್ರ ]

**ದಟ್ಟದಾರಿದ್ರ್ಯ** (ನಾ). ಕಡುಬಡತನ ; ನಿರ್ಗತಿಕತನ : ಶ್ರೀರಮ್ಯವಪ್ಪ ಭೋಗಂಗಳಳಿದಾ ದಟ್ಟದಾರಿದ್ರ್ಯವಾಗಲು (ವೀಶೈಪು. ೩-೧೭-೧೪).

[ ದಟ್ಟ$_1$ + ದಾರಿದ್ರ್ಯ ]

**ದಟ್ಟದಾರಿದ್ರ್ಯತ್ವ** (ನಾ). = ದಟ್ಟದಾರಿದ್ರ್ಯ : ಅಕುಲಂಗೆ ಸಕಲರಾಜ್ಯಂ ತ್ರಿಕರಣಶುದ್ಧಂಗೆ ದಟ್ಟದಾರಿದ್ರ್ಯತ್ವಂ . . . ಮೆರೆವುದೀ ಕಲಿಯುಗದೊಳ್ (ನೀತಿಸಾ. ೧೫೨). [ ದಟ್ಟ$_1$ + ದಾರಿದ್ರ್ಯತ್ವ ]

**ದಟ್ಟದೊವಲ್** (ನಾ). ದಪ್ಪವಾದ ತೊಗಲು : ನಂಜುಂಡಂ ದಟ್ಟದೊ[ಪಾಠಾಂ. ದ]ವಲಂ ಪೊದೆದಗಜೆವೆರಸು ಬೆರೆವೊಡಲೊಳಿರ್ದಂ (ರಾಮಾಶ್ವ. ೧೧೫-೭). [ ದಟ್ಟ$_1$ + ತೊವಲ್$_2$ (<ತೋಲ್$_1$) ]

**ದಟ್ಟಪಳುವ** (ನಾ). = ದಟ್ಟಗಾಡು : ಸಾಗಿದಳು ಹಜ್ಜೆಹಜ್ಜೆಯನಿಟ್ಟು ದಟ್ಟಪಳುವದ ಪಸುರ್ ನೆಳಲೊಳ್ (ಶ್ರೀರಾಮಾ. ೧೨೭-೭೭).

[ ದಟ್ಟ$_1$ + ಪಳುವ (<ಪಱುವ) ]

**ದಟ್ಟಯಿಸು, ದಟ್ಟಯ್ಸು, ದಟ್ಟವಿಸು, ದಟ್ಟಿಸು$_1$, ದಟ್ಟೈಸು** (ಕ್ರಿ). ೧. ಒತ್ತಾಗು ; ಸಾಂದ್ರವಾಗು ; ದಟ್ಟವಾಗು : ಧಿಗಧಿಪರೆಣ್ದೆಸೆಗಾಂತಿರೆ ಭುಜದೊಲು ಗಗನದ ಮೋಲ್ಕಟ್ಟುಂ ದಟ್ಟಯಿ[ಪಾಠಾಂ. ದಟ್ಟೈ]ಸಲು ಮಿಗೆ ಭಕ್ತರ ಜಯರವ ಒಟ್ಟಯಿಸಲು (ತಿರುನಾ. ದೇ. ೨೨೦-೫) ; ಭೀಮಸೇನನ ದಂಡಿಯನು ದಟ್ಟಯಿಸೆ ಸುಯಿ ದಳ್ಳುರಿಯ ಚೂಣಿಯಲಿ ಗಂಡುಗೆದಱಿದ ರೋಷಶಿಖಿ ಹುರಿಗೊಂಡುದಕ್ಷಿಗಳಲಿ (ಕುಮ್ಮಾಗ. ೮-೨೨) ; ಹೆಣೆದುಕೊಂಡವು ಗಗನ ದಿಗು ಧಾರುಣಿಗಳನು ದಟ್ಟಯಿಸಿ ರಿಪುಮಾರ್ಗಣ ವಿತಾಳಿಸಿ ಮುಸುಕಿದುದು ರಘುನಂದನನ ರಥವ (ತೊರಕಾ. ೬-೫೦-೫) ; ಹೊಳೆಹೊಳೆಯುವ ಅವರ ಮುಖಗಳನ್ನು ಕಂಡು ಚಕೋರಚಯ ದಟ್ಟಯಿಸಿ ಬಂದವು (ಧಾಮುಹಿ. ೧೨೦). **ದಟ್ಟಯ್ಸು** : ೧. ಬಟ್ಟಿತಂ ಮಾಡಿ ಸುತ್ತುಗಳೆತ್ತಲ್ಕಸಿತಾತಪತ್ರಮೆನಲಕ್ಕುಂ ತಾನಿದೆಂಬಂತಿರೀ ಜಗದೊಳ್ ಕಣ್ಗೆ ವಿಚಿತ್ರಮಾಗೆ ನೆಱೆ ದಟ್ಟಯ್ಸಿ[ಪಾಠಾಂ. ದಟ್ಟಯಿಸು]ತ್ತನಿತ್ತಂ ತಮಂ (ಗಿರಿಕ. ೪-೭೭). **ದಟ್ಟವಿಸು**: ೧. ದಟ್ಟವಿಸಿದಜ್ಞಾನತಿಮಿರದ ಥಟ್ಟು ಮಾರ್ಗವ ಕಾಣಲೀಸದು (ನಿಭಾಗ. ೫-೮-೪). **ದಟ್ಟಿಸು$_1$** : ೧. ನಟ್ಟಡವಿಯಲ್ಲಿ ಬೀಡಂ ಬಿಟ್ಟಿರಲಾ ಬಂಧುದತ್ತನಾತನ ಬೀಡಂ ನಟ್ಟಿರುಳು ಬಂದು ಬೇಡರ್ ದಟ್ಟಿಸಿ ಕೂಕಿಱಿದು ಸುತ್ತಿ ಮುತ್ತಿದರಾಗಳ್ (ಪುಣ್ಯಾಸ್ರ. ೮-೮) ; ತುರುಗಿ ದಟ್ಟಿಸಿದಾ ಕತ್ತಲೆಯ ಮೊತ್ತದೊಳು ಸ್ಮರನಂಗಜಾತ ಪ್ರೀತರ ಕೂಡಿ . . . ಮೆಲ್ಲಡಿಗಳಿಡುತೇ ಬರುತಿರಲು (ನವಮೋ. ೧೭-೨೦). **ದಟ್ಟೈಸು**: ೧. "ದಟ್ಟೈಸಿತೆಂದೊಡತಿಸಾಂದ್ರಾರ್ಥಂ" (ಧಾರನಿ. ೩೪) : ಚಿತ್ತಕ್ಕೊಗೆಗುಮತಿಭೀತಿಯೆನಲುರ್ವಿಗೆ ದಟ್ಟೈಸಿದುರ್ದಂಧಕಾರಾಕಾರಂ (ದಶಕು. ೨-೪೨) ; ಬಾಲಕನ ಘನತೇಜಮುರ್ವಿಯ ಮೇಲೆ ಪರ್ಬಲು ಸೂಚಿಮುಖಮಂ ಕೀಲಿಸುವೊಡರಿದೆನಿಸಿ ದಟ್ಟೈಸುವ ತಮಂಧದಲಿ (ಬಸಪು. ೩-೩೦) ; ದಟ್ಟೈಸಿತು ಬನಬನದಲ್ಲಿ ಕೊಳ ಮಳಲೊಟ್ಟು ಗೋಮತಿಯ ತೀರದಲಿ (ಮೋಹತ. ೩೭-೭೨) : ಕಿನ್ನರರ್ ಸಿದ್ಧ ವಿದ್ಯಾಧರರ್ ಕಿಂಪುರುಷರು ದಟ್ಟೈಸಿದರ್ (ಚಿಬಪು. ೩೦-೪೦) ; ಕತ್ತಲೆಯ ಮೊತ್ತ ದಟ್ಟೈಸಲಾ ವಾರ್ತೆ ಕೇಳುತ್ತರ್ಕ ತನ್ನ ಚೂಣಿಯ ಭಟರ ಕಳು

ಹಲ್ಕೆ (ನವವೋ. ೧೯-೨೬); ಬುವಿ ಬಾನಂತರವೆಲ್ಲವ ಕತ್ತಲುಂ ತುಂಬಿರಲು . . . ತವಾಳಿವು ಸೇತುವೊ ಎನೆ ದಟ್ಟೈಸಿರೆ ತಾರೆಗಳು (ಗಣೇಶ. ೨೮-೪); ಕತ್ತಲಲಿ ಮಿಂಚು ಹೊಳೆದಂತಾಗಿ, ಬಟ್ಟೆಗೆಡುವುದು, ಕುರುಡು ದಟ್ಟೈಸಿ! (ಚಂದ್ರಸ. ೨೦-೧೯). ೨. ಹೆಚ್ಚಾಗು; ಅತಿಶಯವಾಗು: ನೆಟ್ಟನೆ ಪೃಥಿವೀಪತಿಗಳು ತನಯರ್ಗೆ ಪಟ್ಟವ ಕಟ್ಟಿ ಕಾಣಿಕೆಯ ಇಟ್ಟೆಡೆಗಿದರೇನು ಹೀನವೆ ಪರಿತೋಷ ದಟ್ಟೈಸುವುದು ಕಣ್ಮನಕೆ (ಮೋಹತ. ೩೬-೧೨).

[ ದಟ್ಟ$_1$ + – ಇಸು$_3$ ]

**ದಟ್ಟಯ್ಸು** ‘ದಟ್ಟಯಿಸು’ ನೋ.

**ದಟ್ಟವಳ್ಳಿ** (ನಾ). ಒತ್ತಾಗಿ ಬೆಳೆದಿರುವ ಬಳ್ಳಿ; ನಿಬಿಡವಾದ ಲತೆ: ಅತ್ವಕ್ಕೆ – ಬಟ್ಟಿತ್ತು ತೊಡೆ, ಬಟ್ಟದೊಡೆ, ಬೆಟ್ಟವೇಸಗೆ, ದಟ್ಟವಳ್ಳಿ – ಇವುಮದಱಂತೆ (ಶಮದ. ೧೭೮ ಪ್ರಯೋ). [ ದಟ್ಟ$_1$ + ಬಳ್ಳಿ ]

**ದಟ್ಟವಿಸು** ‘ದಟ್ಟಯಿಸು’ ನೋ.

**ದಟ್ಟಳ್** (ನಾ). ಪರಾಕ್ರಮಿ; ಶೂರ (?): ಅಟ್ಟದೆಲೆಯ ಮಾತನ್ನೆಟ್ಟನೆ ದಟ್ಟಳ್ಸಿರಗಂಬೆರಗುವಂ ಬಗೆಯದೆ ಕಟ್ಟಳ್ಸತ್ತನೆಱೆಯಮ್ಮ (ಸಾಇಇ. IX-i, ೩೧-೧೧; 966).

[ ☞ ಇದು ‘ದಟ್ಟಾಳ್’ ಎಂಬುದರ ಅಪಲಿಖಿತವಿರಬಹುದು.]

**ದಟ್ಟಿ$_1$, ಧಟ್ಟಿ** (ನಾ). ೧. ಸೊಂಟಕ್ಕೆ ಸುತ್ತುವ ವಸ್ತ್ರ ವಿಶೇಷ: ಮಡದಿಯಿಲ್ಲದೆ ಬೊಮ್ಮಚರಿಯವು ಉಡಿಗೆ ನಾರಿನ ದಟ್ಟಿಯಲ್ಲೆ ತಮ್ಮಡಿಗೆ ಕಾಳಗವೇಕೆ (ಕಾಶಿರಾ. ೨೨-೪೨); ಉಡಿಯ ಪಟ್ಟೆಯ ದಟ್ಟಿ ಬೆನ್ನ ಜಲ್ಲಿಯಂ ವೀರರೆಡಬಲದೊಳಗೈತರಲು (ಕಂನವಿ. ೧೨-೩೪); ನಡುವಂ ಬಿಗಿದುಡೆ ದಟ್ಟಿಯನೊಡನರಿವನಿತಾಜನಕ್ಕೆ ಜಗುಳ್ಗುಂ ಮುಡಿಗಳ್ (ಚಿಕವಿ. ೩-೨೨); ಪಾಂಚಾಲಿಯ ದೀನಾಲಾಪಗಳನ್ನು ಕೇಳಿ . . . ಭೀಮಸೇನನು . . . ವಿಜೃಂಭಿಸಿ ದಟ್ಟಿಯನ್ನು ಕಟ್ಟಿ (ಕೃಷಾವಿ. ೪೬): ಕಟ್ಟಿದ ದಟ್ಟಿಯ ಬಲ್ಪಿನ, ತೊಟ್ಟ ಪೊಸಗುಪ್ಪಸದ ಚೆಲ್ವಿನ . . . ಕಿಱುಜವ್ವನದ ಬಿಂಕದ ನಡೆವೊಂದು ಗಾಡಿಯ ಪುಷ್ಕಲಂ (ರಾಮಾಶ್ವ. ೪೮-೧೭); ಸೊಂಟದಿಂದ ಕೆಳಕ್ಕೆ ನಾಲ್ಕು ಮೊಳದ್ದು ಒಂದು ದಟ್ಟಿ (ನಮ್ಮೂರ. ೯); ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ ಮೊಳ ಹಾಕಿ ನೋಡಿದ (ಗಾದೆ). ೨. ಬಟ್ಟೆ; ವಸ್ತ್ರ: ನೀಲಿಯ ದಟ್ಟಿಯನಿಳಿಗೆ ದಿಶಾಲಂಬನವಾಗೆ ಕವಿಚನಸುರಾರಿಯೆನಲ್ಕಾ ಲೋಕನಕ್ಕೆ ಭಯಮಂ ಸಾಲಿಡುತಂ ತಂದನಂಧಕಾರಕಾರಂ (ನಳಚಂ. ೧೮೩); ಕಾಗಿನ ಸುಚಲ್ಲಣದ ದಟ್ಟಿ ಹೇರಿಟ್ಟಿ ಹಿಲ್ಲರಿ (ರುಕ್ಮಾಂಗ. ೧೦-೧೮). ೩. ನಡುವಿನ ಸುತ್ತು ಕಟ್ಟಿಕೊಳ್ಳುವ ಪಟ್ಟಿ; ನಡುಕಟ್ಟು: ಕಾಶೆ ದಟ್ಟಿ ಚಲ್ಲಣಂಗಳಂ ಸಮಂತು ತೊಟ್ಟು ಬಲ್ಮೀಸೆಯಂ ಕರಾಬ್ಜಹಿಂದೆ ತಿರ್ದುತೆ (ಹಾಲಾಸ್ಯ. ೨-೧೧-೧೬). ೪. ಚಿಕ್ಕ ಸೀರೆ; ಕಿರಿಗೆ: ಪಟ್ಟವಾಳಿಯನುಟ್ಟು ಬನ್ನಿ ದಟ್ಟಿ ಚುಂಗ ಬಿಟ್ಟು ಬನ್ನಿ (ಪುರಂದ. ೧-೧೧೭-೭): ಚಪ್ಪರ ಮಂಟಪದಾಗ ಹೊಕ್ಕಬಾಳ್ಗೊತ್ತಾತು ಪುತ್ರಿಯಾ ಮಾರಿ ಬಳಲ್ಯಾವ ಬೀಗುತಿ ದಟ್ಟಿಯ ಉಡಿಸ ಮಗಳಿಗೆ (ಲೋಕಗೀ. ೫೯); ಉಟ್ಟ ದಟ್ಟಿ ಎಷ್ಟು ಮಾಸಿದೆ (ಮುಂಬಯಿ. ೦-೦೩). ೫. ಅನೇಕ ಮಡಿಕೆಗಳಿರುವಂತೆ ಬಟ್ಟೆಯನ್ನು ಸೇರಿಸಿ ಹೊಲಿದ ಹೊದಿಕೆ; ಕವುದಿ; ಲೇಪು: ಭುಜಂಗಳ ತಣ್ಣನೊತ್ತು ಬಿಂಕಂಬಡೆದಿರ್ದ ತೆಳ್ಗದಪಿನೊತ್ತು ವಿಟರ್ ನೆಱೆ ಕಾವುದಲ್ಲದೀ ಕಂಬಳಿ ದಟ್ಟಿ ಬೂರವಡವೆಂಬವು ಕಾವುವೆ ಶೀತಕಾಲಮಂ (ಸೂಕ್ತಿಸು. ೧೧-೨೬೦).

**ಧಟ್ಟಿ:** ೨. ಮುಂಭಾಗದೊಳ್ ಮುತ್ತಿನ ಸರಂಗಳಂ ಚೌಕಳಿಯಾಗಿ ಪೆಣೆದು ಕಟ್ಟಿರುವ ಧಟ್ಟಿ (ಸೌಗಂಧಿ. ೩೦೫-೯). ೩. ಬೞಿಮಂಡೆ ಪೂಸಿದ ಗಂಧ ಕಾಸೆಯ ಧಟ್ಟಿ ಮೇಱೆಯ ಸಬಳಿಗರೆಯ್ದೊಂದು ತಱುಬಿದರಂದು . . . ಮಿಱುಗೆ ಸಬಳ ಕಯ್ಯೊಳಗೆ (ಶುರಾಸಾಂ. ೧೦-೩೪).

[ ದೇ.॥ ತಮಿ. ತಟ್ಟ; ತುಳು. ದಟ್ಟಿ, ಜಟ್ಟಿ; ತೆಲು. ದಟ್ಟಿ./ಸಂ. ಧಟೀ ]

**ದಟ್ಟಿ$_2$** ‘ದಡ್ಡಿ$_2$’ ನೋ.

**ದಟ್ಟಿ$_3$** (ನಾ). ಶೌರ್ಯ; ಪರಾಕ್ರಮ: ಕನ್ನಡವಕ್ಕಿ ಪೊಣರ್ವಕ್ಕಿ ಮೊದಲಾದ ದಟ್ಟಿಯ ಕೂರಾಳ್ಗಳುಂ ತುತಮ್ಮ ಪಡೆವೆರಸು ಬಂದು ಕಾಣ್ಬುದುಂ (ಕಬ್ಬಿಕಾ. ೧೯೬). [ <ಸಂ. ಧೃಷ್ಟಿ ]

**ದಟ್ಟಿಗಟ್ಟಿಸು** (ಕ್ರಿ). ೧. ನಡುಕಟ್ಟನ್ನು ಬಿಗಿಸು. ೨. (ಆಲಂ) ಸಿದ್ಧವಾಗಿರುವಂತೆ ಮಾಡು: ಇಂತು ಮೊರೆಯಿಟ್ಟು ಪುರುಡಂ ಪುಟ್ಟಿಸಿ ದಟ್ಟಿಗಟ್ಟಿಪುದುಂ (ಚಿಕವಿ. ೨-೩೮ ವ); ಸರ್ವಶಕ್ತಿಯೊಳ್ ಪೊಣರಲ್ಕಾತನಂ ದಟ್ಟಿಗಟ್ಟಿಸಲೆಂದು ದೇವರ್ ತಮ್ಮೊಳಿಸಗಿದ ಪರಿಭವವಮುವನೊಳ್ ನಡೆಯಿಪೌದಾಸೀನ್ಯಮುಮಂ ಬಿನ್ನವಿಸಿ (ಚಿಕವಂ. ೨೦-೮); ನಿನ್ನ ವಾತ್ಸಲ್ಯಗುಣಂ ಮುಂದುವರಿದೆನ್ನಂ ದಟ್ಟಿಗಟ್ಟಿಸುತ್ತಿದೆ (ಚಿಕಬಿ. ೨೭).

[ ದಟ್ಟಿಗಟ್ಟು + – ಇಸು$_3$ ]

**ದಟ್ಟಿಗಟ್ಟು** (ಕ್ರಿ). ೧. ನಡುಕಟ್ಟನ್ನು ಬಿಗಿ. ೨. (ಆಲಂ) ಸೊಂಟಕಟ್ಟು; ಸಿದ್ಧವಾಗು; ತಯಾರಾಗು: ಜೀಯ ಪರಾಕಿದು ಬೇೞೊಂದೋಯರದಿಂ ಬಂದು ವಂದಿಪೆರ್ ಕೀೞಿಯರಸರ್ ಸಾಯಸವಡುವರ್ ಸಂತತವಿಜಯೆಸಕ ಮನೆಳಸಿ ದಟ್ಟಿಗಟ್ಟುವರನಿಬರ್ (ಚಿಕವಿ. ೫-೫೮).

[ ದಟ್ಟಿ$_1$ + ಕಟ್ಟು$_1$ ]

**ದಟ್ಟಿಗೆ$_1$** (ನಾ). (?): ಸುರರ ಮನ್ನಿಸಿ ಕಳುಹುತಂದೆನು ನಿರುತ ನಿಮ್ಮಯ ಬಾಧೆ ತನ್ನದು ಥರಥರದ ದಟ್ಟಿಗೆಯ ದೈತ್ಯರ ಹವಣು ತನಗೆಂದ (ಸಂಭಪ. ೭-೬೩). [ ? ]

**ದಟ್ಟಿಗೆ$_2$** (ನಾ). ಉಪ್ಪರಿಗೆ; ಕರುಮಾಡ; ಮಂಹಡಿ (?):

ದಟ್ಟಿಗೆಯವನೆ = ಉಪ್ಪರಿಗೆ ಮನೆ (?): ಕನಕಮಯ ನಿರ್ಮಿತಗಳಿಂದಲಿಹ ದಟ್ಟಿಗೆಯವನೆಯ ಸುತ್ತಲ್ ಮೆರೆವ ಮದನಗೃಗಳ ಮೇಲೆ ನಿನದದೊಳ್ ನವಿಲ ತಂಡಗಳಿರಲ್ (ರುಕ್ಮಾಂಗ. ೩-೪೨). [ ? ]

**ದಟ್ಟಿಚಲ್ಲಣ** (ನಾ). ನಡುಪಟ್ಟಿಯುಳ್ಳ ಚಲ್ಲಣ: ದಟ್ಟಿಚಲ್ಲಣವನುಟ್ಟು ಕಠಾರಿಯಂ ನಡುವಿನೊಳು ಕಟ್ಟಿ (ಭೈರಸೂ. ೨೩೭); ಮಲ್ಲಗಾಸಿಯ ದಟ್ಟಿ ಚಲ್ಲಣಗಳನುಟ್ಟು (ಸೌಂದಕಾ. ೧೨-೩೩); ಕಟ್ಟಿದ ದಟ್ಟಿಚಲ್ಲಣದ ಉಟ್ಟ ಮಲ್ಲವಳಿಯ ಈ ವೇಷದಿಂದ . . . ಕಂಗೊಳಿಸುತ್ತ (ವಿಗಡ. ೩೦-೨೫); ಕಂಠೀರವಒಡೆಯರು . . . ಅಲ್ಲಿ ಕೋಟೆ ಬಾಗಲಿಗೆ ಕಟ್ಟಿದ್ದ ದಟ್ಟಿಚಲ್ಲಣಗಳನ್ನು ತಮ್ಮ ಆಳಿನ ಕೈಕೋಲಿನಿಂದ ತೆಗೆಸಿ ಅನಂತರ ಕೋಟೆಯೊಳಕ್ಕೆ ಪ್ರವೇಶಮಾಡಿದರು (ಒಡಕ. ೩೫). ☞ ಇವು ಪ್ರತ್ಯೇಕವಾಗಿಯೂ ಬಳಕೆಯಾಗುತ್ತಿವೆ. [ ದಟ್ಟಿ$_1$ + ಚಲ್ಲಣ ]

**ದಟ್ಟಿತು, ದಟ್ಟಿತ್ತು** (ನಾ). ೧. ದಪ್ಪವಾದುದು; ಗಾತ್ರದಿಂದ ಕೂಡಿದುದು: ಕುಟ್ಟಿ ಕಣಿಕದೊಳು ಸರಿ ಬೆಣ್ಣೆಯಾೞೊಳೊಂದು ಬಟ್ಟವಾಲನೆಯಿಕ್ಕಿ ಮಿದಿದು ಬಟ್ಟಂ ಮಾಡಿ ದಟ್ಟಿತೆಂದೆನಿಸಿ ಲತೆಯಿೞಿದು ಹಂಚಿನೊಳಿಟ್ಟು ಸುಟ್ಟು ಪರಿಯಣಕೆ ತೆಗೆದು (ಸೂಪಶಾ. ೦-೧೦). (ಗ೦). ೨. ದಪ್ಪವಾದ; ದಟ್ಟವಾದ; ಗಾತ್ರವಾದ; ಮಂದವಾದ: ಬೆಟ್ಟಿತು. ಬೆಟ್ಟಿತ್ತು, ದಟ್ಟಿತು, ದಟ್ಟಿತ್ತು (ಶಮದ. ೭೭ ಪ್ರಯೋ). ೩. ವಿಸ್ತಾರವಾದ; ಅಗಲವಾದ: ನೂಱು ಗಾವುದದುದ್ದ ಮೊದಲ ದಟ್ಟಿತು . . . ನೋಡೆ ಪಗಡೆಯ ಕಾಯಂತೆ ತೋಱುತಿದ್ದುದು ವೃಷಭಾದ್ರಿ (ಭರತ. ೩೬-೮೦). **ದಟ್ಟಿತ್ತು:** ೧. “ಪ್ಲಕ್ಷ, ಪ್ರುಕ್ಷ – ಕ್ಷರಣಸ್ನಿಗ್ಧಾರ್ಥೇ, ಒರಸುಹಣದೊಳಂ ದಟ್ಟಿತ್ತರೊಳಂ” (ಕಾಶಕ್ಕ. ೨೬೮). ೨. ಮೇಲಿನ ‘ಶಮದ’ ಪ್ರಯೋಗವನ್ನು ನೋಡಿ.

ದಟ್ಟಿತಾಗು, ದಟ್ಟಿತ್ತಾಗು: ಒತ್ತಾಗು = ಸಾಂದ್ರವಾಗು; ನಿಬಿಡವಾಗು: ದಟ್ಟಿತಾಗಿಹ ತೋಳು ತೊಡೆ ಬಾಯ್ಬಿಟ್ಟ ಬೆಟ್ಟದ ತೆರದಿ ಬಂದನು ಕಿತ್ತು ಪೇರ್ಮರನ (ಜರಾಮಾ. ೩೦-೩೬); ಈ ವನಮಹೀವ ಭೀಕರವೆನಿಸಿದಪುದು ನಾನಾವಿಧದ ಮರಗಿಡುಗಳಿಂದೆ ದಟ್ಟಿತ್ತಾಗಿ ಕಾವಳಂಗೊಂಡು (ಶೀಪರಾ. ೪-೨). [ <ದಟ್ಟಿ$_1$ ]

**ದಟ್ಟಿತ್ತು** 'ದಟ್ಟಿತಂ' ನೋ.

**ದಟ್ಟಿಪಂಚೆ** (ನಾ). ಅಡ್ಡಲಾಗಿ ಸುತ್ತಿಕೊಳ್ಳುವ ಪಂಚೆ; ಮುಂಡು; ತಡಪು: ಅವಳ ಜೊತೆಗೆ ಇದ್ದಾತ ಎತ್ತರವಾದ ಆಳು ... ಒಂದು ದಟ್ಟಿಪಂಚೆಯುಟ್ಟು ಕೊಳೆಯಾದ ಒಂದು ಶರಟು ಧರಿಸಿದ್ದ (ಕುಸುಸಂ. ೩೪); ಕುಳ್ಳಗೆ ಇದಾನೆ. ಒಂದು ದಟ್ಟಿ-ಪಂಚೆ ಖಾದಿಯದು ಮೇಲಕ್ಕೊಂದು ಅರೆತೋಳಿನ ಷರಟು (ಅಲಹೂ. ೧೦೬). 'ಕಚ್ಚೆಪಂಚೆ' ಪರಾ. [ ದಟ್ಟಿ₁ + ಪಂಚೆ ]

**ದಟ್ಟಿಸೀರೆ** (ನಾ). ಸಣ್ಣ ಸೀರೆ; ಕಿರಿಗೆ: ದಟ್ಟಿಸೀರೆ, ಬೆಳ್ಳಿ ತೋಳಬಂದಿ, ಬೆಳ್ಳಿ ಕೈಕಡಗ, ಕೊರಳಲ್ಲಿ ಕೆಂಪುಹವಳದ ಸರ, ಕಿವಿಯಲ್ಲಿ ಬಂಗಾರದ ಬೆಂಡವಲಿ (ಹೊಸಂಸ್ಕಾ. ೧೪೧). [ ದಟ್ಟಿ₁ + ಸೀರೆ₂ ]

**ದಟ್ಟಿಸು₁** 'ದಟ್ಟಯಿಸು' ನೋ.

**ದಟ್ಟಿಸು₂**, ಧಟ್ಟಿಸು, ಧಟ್ಟೈಸು (ಕ್ರಿ). ೧. ಗದರಿಸು; ಬೆದರಿಸು: ನಿನ್ನ ನಿಟ್ಟೆಲುವ ಮುಱಿವೆನೆಂದುರವಣಿಸಿ ಜಱಿಯುತ್ತ ದಟ್ಟಿಸುತ ಬಂದು (ಹಜಕಾ. ೧೨-೩೭); ದಟ್ಟಡಿಯಿಡುತೆಯಿತಹ ಹಸುಳೆಯನೊಲಿದಿಟ್ಟಿಯುದಱ ದಿಟ್ಟಿಯನು ತೊಟ್ಟನೆ ಮಾಱುಗೊಂಬಳು ಬಾಲ್ಕವಟಿಯಲು ದಟ್ಟಿಸದಿಹಳೆ ಲೋಕವನು (ಅಂಜಜ. ೪-೫೭); ದಟ್ಟಿಸುತ್ತೆಲೆ ಬಸವ ಕೊಡುಕೊಡು ಪೆಟ್ಟಿಗೆಯ ಪೊನ್ನೆಲ್ಲವಂ ಓಮ್ಮೆಟ್ಟಿದೀಗಳೆ (ಬಸಪು. ೧೧-೩); ತನಯರು ಗಳತಿ ದಟ್ಟಿಸುವರಂಗನೆಯರುಲ್ಲಂಘಿಸುವರಂ ... ತಿಳಿಯೆ ದರಿದ್ರನಿಂದತಿ ಕಷ್ಟರಿಲ್ಲೆಂದ (ಜೀವಂಚ. ೬-೩); ಇರುಳಿನಲಿ ನಿದ್ರೈಶಿಳಿದಾ ಹೊಲೆಯ ನವನಾವವನೊ ಮಾಂಸವ ಕಳುವವನು ಹೇಳೆನುತ ಗರ್ಜಿಸಿ ದ[ಪಾಠಾಂ. ಧ]ಟ್ಟಿಸುತಲಿರಲು (ತಿಮ್ಮಾಶಾಂ. ೫-೫೭); ರವಿನಂದನಂ ರಯದಿ ಪಾಶದಿಂ ಬಿಗಿದವನ ತವಕದಿ ಸೆಳೆಯೆ ಲಿಂಗದೊಳು ಪರಶಿವನುದಿಸಿ ಧವಳಾಂಗನಾಗಿ ದಟ್ಟಿಸುತಜಿನ ಮುಮ್ಮೊನೆಯ ಸಬಳದಟ್ಟುಗಿಯೊಳಱಿಯೆ (ಪ್ರಭುಪು. ೩-೧೦೦); ನೋಡಿರ್ರೈ, ದೊರೆಸ್ವಾಮಿ ಹೆಂಡತಿ ನಳಿನಿ, ಏಪರಿ ಗಂಡನ ನಮ್ಮಿದಿರೆ ದಟ್ಟಿಸುತಲಿರುವಳು (ಗಣೇಶ. ೭೪-೨). ೨. ಹೀಗಳೆ; ತಿರಸ್ಕರಿಸು; ಮೂದಲಿಸು: ನೇವುರದ ದನಿ ದಟ್ಟಿಸಿತು ವೇದಾವಳಿಯ ನಿರ್ಘೋಷವನು ನಾನಾವಿಭೂಷಣಕಾಂತಿ ಕೆಣಕಿತು ಮುನಿಸಮಾಧಿಗಳ (ಕುವ್ಯಾಅ. ೧೪-೬); ಬೆಟ್ಟದ ಬಲ್ಮೆಯಿಂದೆಮ್ಮ ರಾಯಸವನು ದಟ್ಟಿಸಿ ಕಳೆದ ಕಂಪಿಲನ ಕಟ್ಟಿ ತರಿಸುವೆನು (ಕುರಾಸಾಂ. ೧೭-೮೪). ೩. ಪ್ರತಿಭಟಿಸು; ವಿರೋಧಿಸು: ದಿಟ್ಟಿಸಿ ಹೋಗೆಂಬೆ ಹೋಗದಿದ್ದರೆ ಬೆನ್ನ ಮುಟ್ಟಿ ಹೋಗೆಂದು ನೂಂಕಂವೆನು ದಟ್ಟಿಸಿದರೆ ಕಟ್ಟಿ ಕಳುಹುವೆ ಶಿಬಿಕೆಯೊಳಿಟ್ಟು ಚಿಕ್ಕಮ್ಮನ ಬಳಿಗೆ (ಧರಚ. ೪೯-೫೪). ೪. ಘಟ್ಟಿಸು; ಹೊಡೆ; ತಾಗು: ಪಟ್ಟಣದುರು ವೀಧಿಗಳೊಳಗಾ ನೃಪರಿಟ್ಟಣಿಸಿಯೆ ಬರುತಿರಲು ದಟ್ಟಿಸಿ ಪೊಡೆವ ನಾನಾವಾದ್ಯದ ರವ ಮುಟ್ಟಿ ದಿಗಂತರಾಳವನು (ಅಂಜಜ. ೧೧-೨೭೭); ಬಿಟ್ಟನು ನಿಜವೃಷಭಾಂಕನು ಬಲವೆರಸಿಟ್ಟಣಿಸಿಯೆ ತ್ರಿಪುರವನು ದಟ್ಟಿಸಿ ಪೊಡೆವ ನಾನಾವಾದ್ಯರವಗಳು ಮುಟ್ಟಿ ದಿಗಂತರಾಳವನು (ತ್ರಿಪುಸಾಂ. ೦೩-೦೮೦). **ಧಟ್ಟಿಸು**: ೧. ಸುರಪನಾನಂದರಸವಱತು ಬೆಱಗಿನ ಮೊಗದೊಳಿರಲು ನಾರಂದ ಧಟ್ಟಿಸುತಿದ್ದು ಕೊಡು ವಸಿಷ್ಠಂಗೆ ಭಾಷೆಯನು ಕೌಶಿಕ ಎಂದನು (ಹಜಕಾ. ೨-೨೪); ಓರೆಪೋರೆಯೊಳಾಡಿ ಧರ್ಮದ ಧಾರಣೆಯ ಧಟ್ಟಿಸುವದಿದು ಗಂಭೀರರಿಗೆ ಗರುವಾಯಿಯೇ (ಕುವ್ಯಾಸ. ೧೪-೮೪); ನೀ ತಳೋದರಿ ಕಱುಚುಗೆಡದೀ ಮಾತಿನಲಿ ತಾ ಬಿಡುವೆನೇ ನಿನ್ನಾತಗಳ ನುಡಿಸೆಂದು ಖಳ ಧಟ್ಟಿಸಿದನಂಗನೆಯ (ಕುವ್ಯಾಸ. ೦೫-೧೦); ನಿನ್ನಯ ಪುರುಷನಪಗತನಾದ ಬಳಿಕೀ ಪರಿಯ ಮೆಱೆದಿಹುದುಚಿತವೇ ಹೇಳೆಂದು ಧಟ್ಟಿಸಿದ (ಜೀವಂಚ. ೦೩-೩); ಮಾರೀಚನಾ ದಶಗಳನ ಧ[ಪಾಠಾಂ. ದ]ಟ್ಟಿಸಿ ಕೆಲವು ದಿನ ನೀನುಳಿವುಪಾಯವ ಮಾಡುವೆನು ... ಕಾನೆಂದ (ತೊರರಾ. ೩-೮-೧೦). ೨. ಧಿಟ್ಟನೆಹೆ ಬಾಣಸಿಗ ಸವಿಯೊಳಗಟ್ಟಕೂಳನ ತಿಂದು ದೇಹದೊಳಟ್ಟೆಯಲಿ ಸಿರವಿರಲಹಂಕಾರದಲಿ ನೀನೆಂದು ಧಟ್ಟಿಸುತ ಜೀಮೂತಮಲ್ಲನು ... ಹೊಕ್ಕನು ತೋಳ ತೆಕ್ಕೆಯ ಮಲ್ಲಗಾಳಗಕೆ (ಕುವ್ಯಾವಿ. ೬೮೩. ೪-೭೪). ೩. ಖರ್ಪರನೆಂಬ ಜೋಗಿ ಶಿವಸಿದ್ಧರಾಮನ ಸರ್ವಸಾಮರ್ಥ್ಯದ ಹೆಸರ ಧಟ್ಟಿಸುವೆ ವಾದಿಸುವೆ ಸೋಲಿಸುವೆನೆಂದೊಸೆದು ... ಐತಂದನು (ಸಿದ್ಧರಾ. ೭-೨೭). ೪. ತೋಳ ನೆಗಹಿನಲ್ಲಟ್ಟಿ ಹೊಯ್ದುದು ನೀಲನನು ನೀಲಾದ್ರಿಯನು ದಂಭೋಳಿ ಧ[ಪಾಠಾಂ. ದ]ಟ್ಟಿಸಿದಂತೆ ನೊಂದನು ಹೊಯ್ಲಲಿಭಪತಿಯ (ತೊರರಾ. ೬-೩೨-೫೭). ೫. ನಿಗ್ರಹಿಸು; ಸೋಲಿಸು; ಹಿಡಿತಕ್ಕೆ ತರು; ಅಂಕೆಯಲ್ಲಿರಿಸು: ಪದಪಾಣಿ ಗುಹ್ಯ ಕರ್ಮೇಂದ್ರಿಯಂಗಳಲ್ಲಿ ಬೆದಱದವ ಧಟ್ಟಿಸುವ ಅದಟು ಬೇಕವಱಲ್ಲಿ (ದೀಕ್ಷಾಬೋ. ೦೩-೦೯); ಚೋಳ ಪಾಂಡ್ಯರ ದಳವ ಧಟ್ಟಿಸಿ ಕೊಂಡನನುಪಮಸಾರವಸ್ತುಗಳ (ಕುವ್ಯಾಸ. ೫-೨೦). **ಧಟ್ಟೈಸು**: ೨. ಪುಟ್ಟನೆಂದೆನಬೇಡ ಪರಮಶಕ್ತಿಯಂ ತಂದುಕೊಟ್ಟನು ಕೃಷ್ಣ ಮನ್ಮಥಗೆ ಧಟ್ಟೈಸಿ ನೀ ಬಾಹುಬಲದಿಂದೆ ಕಾದಲಂ ಪೆಟ್ಟನಿಕ್ಕದೆ ಬಿಡನೆಂದ (ಮೋಹತ. ೦೨-೯).

**ಧಟ್ಟಿಸುತೆ ಹೇಳು** = ಒತ್ತಾಯ ಮಾಡು: ಬಿಟ್ಟು ಹೋಗುವ ಲಲನೆ ವಲ್ಲಭಗೆ ಬುದ್ಧಿಯಂ ಧಟ್ಟಿಸುತೆ ಹೇಳಿ ಮೇಲಟ್ಟಿಬೊಳು ಗುಡುಹವದೆ ಬಟ್ಟಲೊಳಂ ಚಿಲಿಪಾಲ ಸಲಿಸೆಂದು ತಾ ತಳರ್ವಳಂತೆಯವಳಂತೆ ನೀನು ಅಟ್ಟುಳಿಯ ಮಾಡಿದವೆ (ಪ್ರಭುಪು. ೬-೨೩). [ ದಟ್ಟ₃ + ~ ಇಸು₃ ]

**ದಟ್ಟೆ** (ನಾ). ದಪ್ಪಬಿದಿರಿನ ಸೀಳು–ದಬ್ಬೆ: ಏಪಿನಕ್ಕೆ ಹೊರಟ ಕೇತಯ್ಯ ಚಂದದಿಂ ಬಿದಿರನುಂ ಸೋಸಿ ತರುವುದಕೆ ಹೋಗಿ ದಟ್ಟೆಯ ತರಿದು ಪೊಳವೆ ಸೀಳಂತಿರೆ (ಶರಲೀ. ೦೭೨-೧೦). [ <ತಟ್ಟೆ₁ ]

**ದಟ್ಟೈಸು** 'ದಟ್ಟಯಿಸು' ನೋ.

**ದಡ₁** (ನಾ). ಒಂದು ಅನುಕರಣ ಶಬ್ದ. 'ದಡಗುಂಟ್ಟು₁' ಪರಾ.

ದಡದಡ (ದ್ವಿರುಕ್ತಿ) = ೧. ರಭಸ; ವೇಗ; ಜೋರು: ದಡದಡ ಎಂದು ಓಡುತ್ತಾನೆ (ರೂಢಿ). ೨. ನಡುಕ; ಕಂಪನ: ಗಡಬಡಿಸಿದುದು ಲಗ್ಗೆವಱೆ ಕೋಟಿಪಗೆಗಳಂ ಕೆಡೆಕೆಡೆಯೆನುತ್ತ ಕಹಳೆಗಳೊದರ್ದುವಳ್ಳಿರ್ದೆಯ ದಡದಡಂಗಳ್ ಮೂಣ್ದುದವುರರ್ಗೆ (ಜಬಪು. ೪೯-೫೦). ದಡಮಾಡು = ಅವಸರಪಡಿಸು: ದಡಮಾಡಿದರು ಯಮುನಾಳುಗಳು ಓಡಿಬಂದರು ಏಳೇಳೆನುತ ಏಳಲೆಳೆದರು ಪಾಪಿಯ ಬೀಳಲೆಳೆದರು (ಪುರಂದ. ೫-೦೨೬-೦).

**ದಡ₂** 'ದಡ್ಡ₂' ನೋ.

**ದಡ₃** 'ತಡ₂' ನೋ.

**ದಡ₄** 'ದಳ₁' ನೋ.

**ದಡಂಗೊಳ್** (ಕ್ರಿ). ದಡ ಸೇರು: ಮಕರಾಕರದಿಂ ಪೊಱಮಡುವ ಕರಿಮಕರದಂತೆ ಕಮಳಾಕರದಿಂ ಪೊಱಮಟ್ಟು ದಡಂಗೊಳ್ವಲ್ಲಿ (ಆರ್ಧನೇ. ೫-೧೦೩ ವ).

[ ದಡ₃ (<ತಡ₂) + ಕೊಳ್₁ ]

**ದಡಂದಡಿಸು** 'ದಡದಡಿಸು' ನೋ.

**ದಡಕ್** (ನಾ). ಒಂದು ಅನುಕರಣ ಶಬ್ದ: ಅಟ್ಟದಿಂದ ಪಾತ್ರೆಯು ದಡಕ್ ಎಂದು ಬಿದ್ದಿತು (ರೂಢಿ).

**ದಡಕಟ್ಟು** 'ದಡೆಕಟ್ಟು' ನೋ.

**ದಡಗಲಿ** (ನಾ). ದಪ್ಪನೆಯ ಹೆಂಗಸು: ಈಗ ಹೊಸದಾಗಿ ನಡೆಯುವುದನ್ನ ಕಲೀತೀರೋ ಈ ದಡಗಲಿ ಕೋಲು ಜಾರಿ ಬಿದ್ದಿದ್ದೇ ಒಂದು ಭಯಂಕರ ವಿಚಾರವೇ! (ಉಮಾಶ. ೬೮). 'ದಡಾಲಿ' ಪರಾ. [ ? ]

**ದಡಗುಟ್ಟು₁** (ಕ್ರಿ). ೧. ದಡದಡ ಶಬ್ದ ಮಾಡು: ಗಾಡಿ ದಡಗುಟ್ಟುತ್ತಾ ಬಂತು (ರೂಢಿ). ೨. ವೇಗದಿಂದ ಕೂಡಿರು: ಬೇಕಾದಷ್ಟು ಸಮಯ ಇದ್ದರೂ ಆಕೆ ದಡಗುಟ್ಟಿಕೊಂಡು ಕೆಲಸ ಮಾಡುತ್ತಾಳೆ (ರೂಢಿ).

[ ದಡ₁ + ಕುಟ್ಟು₁ ]

**ದಡಗುಟ್ಟು$_2$** (ಕ್ರಿ). ದಡ ಸೂಸಿ ಹರಿ; ತುಂಬಿ ಹರಿ : ಸಾಲದ್ದಕ್ಕೆ ಕೆಲಸದ ಆಯಾಸವೂ ಸೇರಿ ಬೆವರು ದಡಗುಟ್ಟಿಕೊಂಡು ಹರಿಯುತ್ತಿದೆ (ಫಾಟೀಮು. ೧೦೩). [ದಡ$_3$ (<ತಡ$_2$) + ಕುಟ್ಟು$_1$ ]

**ದಡದಡನೆ** (ಅ). ೧. ದಡದಡ ಎಂಬ ಸದ್ದಿನೊಡನೆ : ಶ್ರೀ ಸೋಮನಾಥನು ನಡುವಿರುಳು ಭಕ್ತಂಗೊಲಿದು ದಡದಡನೆ [ಪಾಠಾಂ. ಧಡಧಡನೆ] ಕದವಂ ಹಾಟಿತೆಗೆಯಲು (ಬಸವು. ೪೩-೪೭). ೨. ವೇಗವಾಗಿ : ಬೇಗನೆ ; ಶೀಘ್ರವಾಗಿ : ಆವನು ದಡದಡನೆ ಮೆಟ್ಟಿಲಿಳಿದನು (ರೂಢಿ).

[ ದಡ$_1$ + – ಅನೆ$_1$ ]

**ದಡದಡಿಸು**, ದಡಂದಡಿಸು, ಧಡಧಡಿಸು$_1$ (ಕ್ರಿ). ೧. ನಡುಗು; ಅದುರು; ತತ್ತರಿಸು : ತೊಡೆ ದಡದಡಿಸೆ ನಡೆಗೆಟ್ಟು ಕಳಲುಲಿಗೆ ಬಟಿಸಲ್ವ ಕಳಹಂಸಮಂಡಲಕ್ಕಯಶಮಂ ಮಾಡಿಸಿಯುಂ (ಕಾದಂಉ. ೩೭) ; ಕುತ್ತಂ ಬಡೆದರಂತೆ ಬೀಟ್ವರ್ ಬಡಗೊಂದೆಯಂತೆ ದಡದಡಿಸುವರ್ (ಧರ್ಮಾಮೃ. ೩-೮೧) : ಕಣ್ಗಳಂ ಮುಚ್ಚಿ ಸೆರೆಬಿಗಿದು ದಡದಡಿಸಿ ದೊಪ್ಪನೆ ಬಿದ್ದು (ಬಸರ. ೨-೫೮); ಕುಡಿದು ಕೊಬ್ಬಿದ ಬಸುಟು ದಡದಡಿಸಿ ತರಹರಿಸುವಡಿಯ . . . ಕಲಿವೀರ ಬಾಹುಕ ಬರುತ್ತಂ (ಹಚಕಾ. ೧೧-೦೭); ತನುವನೊಲೆದವು ದಡದಡಿಸಿ ಕಿವಿಗೊನೆಯ ಜೋಲಿಸಲಲ್ಲಿ ಮಡಿಗಾಲಿನಲಿ ಕುಸಿದವು (ಕುವ್ಯಾವಿ. ೮-೮೩) ; ಇಂತು ನಲ್ಮೆ ಮಿಗೆ ಬಿನದಿಪ ಕಾಮಿನಿಯರ್ಗೆ . . . ನೊಸಲೊಳ್ ಬೆಮರ್ ಪನಿಯೆ ತೆಳ್ಗದಂಪು ಕೆಂಪಡರೆ ಎರ್ದೆ ದಡದಡಿಸೆ (ರಾಮಾಶ್ವ. ೧೨೩-೭). ೨. ಆತುರಪಡು ; ಸಂಭ್ರಮದಿಂದ ಕೂಡಿರು ; ತ್ವರೆಮಾಡು : ತಾಳ್ದು ಪರಮಾನಂದವಂಕುರಂದೋಱುತಂ ದಡದಡಿಸುತೆದ್ದು ತಿರುನೀಲಕಂಠರ್ಬಂದು (ತಿರುರ. ದೇ. ೨೫-೦) : ದಡದಡಿಸಿ ಕೊಳನಿಂದ ಹೊಱಟಡಿಯಿಡುತ ಬಳಲಿದನನಿಲಸುತನವರೊಡನೆ ಮೆಯ್ಯಿಕ್ಕಿದನು (ಕುವ್ಯಾಅ. ೭ರಿ೩. ೨೭-೨೯) ; ಕಡು ಮಱುಗುತೆ ವಿಪ್ರಜನವೆದ್ದು ತಣ್ಣೀರ ತೊಡೆದು ಕಣ್ಗಳಿಗಾಗ ಮೆಲ್ಲನೆ ಪಿಡಿದೆತ್ತಿ ನಿಂದಿರಿಸಲು ದಡದಡಿಸುತೆ ಕೆಡಿಸಿದ ಶುಭವಸ್ತುನಿಚಯವ (ತ್ರಿಭುತಿ. ೯-೨೭). **ದಡಂದಡಿಸು** : ೧. ಅಡವಿಗಿಚ್ಚಟ್ಟಿದೆಳಹುಲ್ಲೆಯಂತೆರ್ದೆ ದಡಂದಡಿಸಿ ಪವ್ವನೆ ಪಾಱಿ ದೂವೆಯೊಳ್ ಪೊಕ್ಕುರಗಿಯಂತೆ ಬೆದಬೆದನೆ ಬೆಂದು (ಜಬಪು. ೦೯-೪೩). **ಧಡಧಡಿಸು$_1$** : ೧. ಕರಹತಿಗೆ ಧಡಧಡಿಸಿ . . . ಧೈರ್ಯದಲಿ ಹೊಡಕರಿಸಿ ಹೊಱಬಿನೊಳೆದ್ದು ಹೊಯ್ದನು ಪಾರ್ಥನಂದನನ (ಕುವ್ಯಾದ್ರೋ. ೬-೫೯) ; ಧಡಧಡಿಸಿದವೊಳ್ನುಡಿಗಳ್ ನಿಡುಸುಯ್ ಪೊಣ್ಮಿದುದು ಮೊಗದೆ ಬೆಮರ್ವನಿಯೊಗೆದತ್ತುಡುಗಿದುದಳವು ನಡುಂಗಿದು ದೊಡಲ್ವಿದರ್ಭಜಗೆ ವಿಪಿನಗಮನಶ್ರಮದಿಂ (ದಮುಸ್ವ. ೨-೧೦). [ <ತಡತಡಿಸು ]

**ದಡಪಡಿಸು** 'ಧಡಪಡಿಸು' ನೋ.

**ದಡಪಶಾಹಿ** (ನಾ). ಅಧಿಕಾರದ ಬಲದಿಂದ ಜನರನ್ನು ಹತ್ತಿಕ್ಕುವುದು ; ಅನ್ಯಾಯದ ಆಳ್ವಿಕೆ ; ದಬ್ಬಾಳಿಕೆ : ಈ ಮೊದಲೇ ದಡಪಶಾಹಿಗೆ ಕಳೆಯೇರಿ ಸಾವಿರಾರು ಜನರು ತುರಂಗದಲ್ಲಿ ಬಿದ್ದಿದ್ದರು (ಕಾಂಗ್ರೆಸ. ೧೭).

[ ←ಮರಾ. ದಡಪ್‌ಶಾಹೀ ]

**ದಡಬಡ$_1$** (ನಾ). ಒಂದು ಅನುಕರಣ ಶಬ್ದ : ದಡಬಡ ಶಬ್ದಮಾಡುತ್ತ ಗಾಡಿ ಹೊರಟಿತು (ರೂಢಿ).

**ದಡಬಡ$_2$** 'ಧಡಪಡ' ನೋ.

**ದಡಬಡನೆ** (ಅ). ಆತುರದಿಂದ ಕೂಡಿ : ಉದ್ದಿನ ಮೂಟೆಯು ದಡಬಡನೆ ಉರುಳಿ ಹೋಗುವಂತೆ ಈ ಮರಳನ್ನೂ ದಾಟಿ ... ಮರೆಯಾಗಿರುವಳು (ಹುಟ್ಟಿಹ. ೧೨೯) ; ರಂಗಪ್ಪ ಪಕ್ಕದ ಮನೆಯಲ್ಲಿ ಗುಲ್ಲು ಕೇಳಿ ದಡಬಡನೆ ಎದ್ದು ಹೊರ ನೋಡಿದ (ಚಿಗುಬ. ೩೪) ; ಹುಡುಗರ ತಲೆತಲೆ ಟೊಪ್ಪಿಯ ಆಟವ ದಡಬಡನಾಡಿಸಿ, ಮನೆಮನೆ ತೋಟವ ಅಡಿಮೇಲಾಗಿಸಿ (ಕಎಪು. ೨೮-೫). [ ದಡಬಡ$_2$ (<ಧಡಪಡ) + – ಅನೆ$_1$ ]

**ದಡಬಡಲು** (ನಾ). ಆತುರ ; ವೇಗ ; ಗಡಿಬಿಡಿ : ಯಾಡತರದ ಕಾಂತೆಯರೆಲ್ಲಾ ದಡಬಡಲಾಗಿ ಅಲಂಕಾರಗಳಂ ಮಾಡಿಕೊಳುತ್ತಿರುವ (ಸೌಗಂಧಿ ೨೦೨-೧೫). [ ದಡಬಡ$_2$ ( <ಧಡಪಡ) + – ಅಲು (< – ಅಲ್$_3$) ]

**ದಡಬಡಿ** (ನಾ). ದಪ್ಪ ; ಗಾತ್ರ : ದಡಬಡಿ ಇದ್ದರೆ ಠೊಣ್ಯನೆಂಬರು ತೆಳುವಿದ್ದರೆ ರೋಗಿಷ್ಟನೆಂಬರು (ಪುರಂದ. ೪-೭೦-೫). [ ? ]

**ದಡಬಡಿಸು$_1$** (ಕ್ರಿ). ದಡದಡ ಶಬ್ದವನ್ನು ಮಾಡು : ಸಣ್ಣ ಬಂಡಿಗಳು ದಡಬಡಿಸುತ್ತಿದ್ದುವು (ಪುನರು. ೧೮೨). [ ದಡಬಡ$_1$ + - ಇಸು$_3$ ]

**ದಡಬಡಿಸು$_2$** 'ಧಡಪಡಿಸು' ನೋ.

**ದಡಮಿ** 'ದುಡುಮಿ' ನೊ .

**ದಡಯ** 'ಧಡೆ$_1$' ನೋ.

**ದಡರ್** (ನಾ). ಒಂದು ಅನುಕರಣ ಶಬ್ದ : ತಡೆಯದೇ ಕಳ್ತೊಯ್ದುದಂ ಕಂಡು ಬೆದಱಿ ಎದೆ ದ[ಪಾಠಾಂ. ಧ]ಡರೆಂದು ಬಡಿಯಲಿನ್ನೇವೆನಕಟಕಟ (ಸಮ್ಯಕೌ. ೧೧-೭೮). 'ಬಡಾರ್' ಪರಾ.

**ದಡಲ್** (ನಾ). ಒಂದು ಅನುಕರಣ ಶಬ್ದ : ಬಾವಿಯಲ್ಲಿ ಕಲ್ಲು ದಡಲ್ ಎಂದು ಬಿದ್ದಿತು (ರೂಢಿ). 'ದಡಲನೆ' ಪರಾ.

**ದಡಲನೆ** (ಅ). ವೇಗವಾಗಿ ; ರಭಸವಾಗಿ : ಬಹುಮೃಗಗಳಂ ಕೊಂದು ಕೆಡಹಿ ಕೊಬ್ಬಿಱಿದು ಕಡುಲಹರಿಯಿಂ ದಡಲನೆಯ್ದುವ ಹುಲಿಗಳಾ ಪಂಕರುಹಮಿತ್ರನಪರವಾರಾಶಿಯಂ ಪುಗೆ ತದ್ವನಾಂತರದೊಳ್ ಸೊಗಯಿಸಿದುವು (ಸಮ್ಯಕೌ. ೧೦-೨೫). [ ದಡಲ್ + – ಅನೆ$_1$ ]

**ದಡಸಲು** (ನಾ). ಒಂದು ಬಗೆಯ ಮರ : ಬಾಳೆ . . . (ಪರೂಷಕ) ದಡಸಲಹಣ್ಣು, ಆಮ್ರಾತ . . . ಇವುಗಳ ಫಲಗಳು ಪೌಷ್ಟಿಕ (ಅಷ್ಟಾಂಗ. ೧೪೫-೧೧೭-೧೨೦). 'ತಡಸಲು$_3$' ಪರಾ. [ ? ]

**ದಡಸು** 'ದಳಸು' ನೋ.

**ದಡಸೂಸು** (ಕ್ರಿ). ದಡಮೀರಿ ಹರಿ ; ಅಂಚನ್ನು ಮೀರು ; ತಂಳುಂಕಿ ಹೊರಬರು ; ತುಂಬಿ ಹರಿ : ತುಳುಕಿದ ಮಧುರಸ ದಡಸೂಸೆ ಪರಿವ ಪೆರ್ಬೊಳೆಯೆಸೆದುದನೀಕ್ಷಿಸಿದ (ಮೋಹತ. ೫-೨೩).

[ ದಡ$_3$ (<ತಡ$_2$) + ಸೂಸು$_1$ ]

**ದಡಾಣಿ** 'ದಡಾಲಿ' ನೋ.

**ದಡಾರ್** (ನಾ). ಒಂದು ಅನುಕರಣ ಶಬ್ದ : ಗಾಳಿಗೆ ಬಾಗಿಲು ದಡಾರ್ ಎಂದು ಮುಚ್ಚಿಕೊಂಡಿತು (ರೂಢಿ).

**ದಡಾರ** (ನಾ). ಮೈಮೇಲೆಲ್ಲಾ ಗುಳ್ಳೆಗಳಾಗಿ ಬಾಧೆಯನ್ನುಂಟುಮಾಡುವ, ಸಾಮಾನ್ಯವಾಗಿ ಮಕ್ಕಳಿಗೆ ಬರುವ ಅಂಟುರೋಗ : ಮಕ್ಕಳಲ್ಲಿ 'ದಡಾರ' (Measles) ಕಾಣಿಸುವುದಕ್ಕೆ ಮುಂಚೆ ಕಣ್ಣು ಕೆಂಪಾಗಿ ನೀರು ಸುರಿಯುವುದುಂಟು (ನಿಮ್ಮದ್ಯ. ೦೩೯) ; ಇದು ಮಕ್ಕಳ ಕಾಯಿಲೆ. ಮೈಮೇಲೆ ದಡಾರ ಬರೋದು. ಒಮ್ಮೆಯಲ್ಲ, ಒಮ್ಮೆ ನಮಗೆಲ್ಲರಿಗೂ ಬರುತ್ತೆ (ತಾಯಿ. ೧೬೭) ; ಮಕ್ಕಳಿಗೆ ದಡಾರವೆದ್ದಾಗ ತಾಯಂದಿರು . . . ಮಾರಿಗುಡಿಗೆ ಪ್ರಯಾಣಬೆಳೆಸುವುದನ್ನು ನಾವು ಇಂದೂ ನೋಡುತ್ತಿದ್ದೇವೆ (ಕೆಲರೋ. ೧) ; ನಮ್ಮ ದೇಶದಲ್ಲಿ ದಡಾರ ಇಳಿದ ತಕ್ಷಣ ಬೇವಿನಸೊಪ್ಪು ಮತ್ತು ಅರಶಿನ ಅರೆದು ಹಚ್ಚಿ ಸ್ನಾನ ಮಾಡಿಸುವರು (ಗೃಹವಿ. ೦೫೦). 'ಗೋಣಿದಡಾರ' ಪರಾ. [ ? ]

**ದಡಾರನೆ** (ಅ). ದಡಾರ್ ಎಂಬ ಶಬ್ದದೊಂದಿಗೆ : ದಡಾರನೆ ಬಾಗಿಲು ಮುಚ್ಚಿತು (ರೂಢಿ). [ ದಡಾರ್ + – ಅನೆ$_1$ ]

**ದಡಾಲಿ**, ದಡಾಣಿ (ನಾ). ದಪ್ಪನೆಯ ಹೆಂಗಸು : (ಕ). **ದಡಾಣಿ** : (ಕ.) ದಡಾಲ್ದಿಮ್ಮಿ, ದಡರದಿಮ್ಮಿ=ಗಟವಾಣಿ; ಗಯ್ಯಾಳಿ: ದಡಾಲ್ದಿಮ್ಮಿಯ ಹಾಗೆ ಆಡಿದರೆ ಜನ ನಗುತ್ತಾರೆ (ರೂಢಿ). ದಡರದಿಮ್ಮಿಯ ಹಾಗೆ ಆಡಬೇಡ (ರೂಢಿ). [ ? ]

**ದಡಾಳಿ** (ನಾ). (?): ಬಿಂಕದ ಬಿರುದಂಕದ ವಿಡಾಯದ ದಡಾಳಿಯ ವೀರಾಳಾಪದ **ವಿಪುಳ**ಪ್ರತಾಪದ ಬನ್ನಣೆಯ ಬಿನ್ನಣದ ರನ್ನದೋರಣದ . . . ಮಿಂಚಿನ ಸಂಚಯದಂತೆ ಮುಂಚುವ ಸರಳೆಸುಗೆಯ ಕೌತುಕದ ಕಡುಗಲಿ ಬಿಲ್ಲಾಳ್ಗಳ ಬೆಂಬಲವಾಗಿರ್ದಂ (ಹಮ್ಮಿರ. ೩-೩೩ ವ). [ ? ]

**ದಡಿ$_1$**, ದಡೆ$_1$ (ನಾ . ೧. ಬಿದಿರಿನ ಕೋಲು ; ಬಡಿಗೆ : "ವೈಣವಂ ಯಷ್ಟಿ ರಂಭಾದಂಡಮೆನಲು ದಡಿ" (ಮಂಗರಾ. ೧೩೧-೫೦) ; ತಲೆಯಂ ದಡಿಯಿಂ ಪೊಯ್ದುಂ (ಧರ್ಮಾಮೃ. ೭-೧೦೫) ; ಗುಡಿಯೊಳಗಿರ್ದ ಗುಡಿಯ ನೇಣ ಕೊಯಿದರೆ ಗುಡಿಯು ದಡಿ[ಪಾಠಾಂ. ದಂಡಿಗೆ]ಬಿದ್ದು ಹಲ್ಲು ಹೋಹುದು ನೋಡಾ (ಬಸವ. ೫೬೬) ; ದಡಿಯಂ ಪಿಡಿದಬ್ಬರಿಸುತ್ತುಮಿರ್ಪ . . . ತತ್ಪುರೀಜನದ ಪೊದಟ್ಟು ತಲ್ಲಣದ ಮಲ್ಲಣೆ ಬೀದಿಯೊಳಾದುದದ್ಭುತಂ (ಪರ್ಣಪು. ೩-೫); ಗೂಢಗರ್ಭವನಿದ ನೋಡೆಲ್ಲೆನೆಂದವ ಕೂಡಿ ಬಡಿದು ದಡಿಯೊಳಗೆ ಜೋಡೆ ನೀನೆಸಗಿದಂದಕೆ . . . ಸಮಮಾಡಿಸದಾನು ಬಿಡುವೆನೆ (ಅಂಜಚ. ೯-೩೩) ; ನಿನ್ನ ತಲೆಗೊಂಬೆವೆಂದು ದಡಿ ಗುಂಡು ಬಡಿಯಂ ಕೊಂಡು ನೆಲದಿನಾಕಾಶಂಬರಂ ಬೆಳೆದು ಘುಡುಘುಡಿಸಿ ಬೆದಱಸುತ್ತಿರಲು (ಸಮ್ಯಕ್ತ್ವ. ೮-೬೨). (ಗು). ೨. ದಪ್ಪವಾದ ; ಗಾತ್ರದಿಂದ ಕೂಡಿದ. 'ದಡಿಗೋಲು' ಪರಾ. **ದಡೆ$_1$** : ೧. ಎಱದು ಸತ್ತರ್ ಆಂಕನ್ ದಡೆಯೆ ಬಡಿದು ಸುರಾಂಗನೆಯೊಳ್ನರೆದನಾತಗೆ ಕೊಟ್ಟ (ಎಕ. X, ಶ್ರೀನಿವಾ. ೬೪೭೪ ; ಸು. 930) ; ಕಾಬ ಕಣ್ಣದ್ದು ಕನ್ನಡಿಯ ನೋಡುವನಂತೆ ನಡೆವ ಕಾಲಿದ್ದು ದಡೆಯನೂಱ ನಡೆವವನಂತೆ (ಮೋಳಿಮಾ. ೧೬೭-೭೨೫).

**ದಡಿಯ ಕೈಯವರು** = ಕೋಲನ್ನು ಹಿಡಿದಿರುವವರು : ಬಡದ ನಾಯಕವಾಡಿ ಚೂಣಿಯ ಹಿಡಿದು ಕಾದಿತ್ತುಭಯರಾಯರು ದಡಿಯ ಕೈಯವರಿಂದ ಕವಿಸಿದರಂದು ಸಬಳಿಗರ (ಕುಮಾ್ರಭೀ. ೪-೩೮).

[ ದೇ.॥ ತಮಿ. ಮಲ. ತಟಿ ]

**ದಡಿ$_2$** 'ತಡಿ$_2$' ನೋ.

**ದಡಿ$_3$** 'ತಡಿ$_3$' ನೋ.

**ದಡಿಕಾಱ** (ನಾ). ಕೋಲನ್ನು ಹಿಡಿದಿರುವವನು ; ದಂಡಧಾರಿ ; ಕಟ್ಟಿಗೆ ಕಾರ ; ವೇತ್ರಧಾರಿ : ಇಬ್ಬರು ದಡಿಕಾಱರು ಬಾಗಿಲ ಕಾಯ್ದಿಪ್ಪರು (ಅವಚಂ. ೨೨೨-೧೦೦೮) ; ಗಡಬಡಿಸದಿರಿ ಗದಱಕೊಳ್ಳದಿರಿ ಮೂಲೋಕ ದೊಡೆಯನ ಸಮಕ್ಷಮದಲ್ಲೆಂದು ದಡಿಕಾಱರುಗಳಡಿಗಡಿಗೆ ಪೇಳುತಿಹರು (ಜಕುಪು. ೦-೨-೧೦೦). [ ದಡಿ$_1$ + – ಕಾಱ ]

**ದಡಿಕೆ** (ನಾ). (ಕರಾ) ಬಾಸುಳು ; ಬಾಸುಂಡೆ : ಅವರು ರಾಕ್ಷಸರ ಹಾಗೆ ಈ ಮಗುವನ್ನು ಬಡಿಯುವಾಗ ಸುಮ್ಮನಿರಬೇಕೇ ? ನೋಡು, ಇದರ ಬೆನ್ನು ಹೇಗೆ ಕೆಂಪಾಗಿ ದಡಿಕೆ ಬಂದಿದೆ (ಮುಗಿಯು. ೯೫).

[ ←ತುಳು. ದಡಿಕೆ ]

**ದಡಿಗ, ಧಡಿಗ** (ನಾ). ೧. ದೊಣ್ಣೆಯನ್ನು ಹಿಡಿದವನು. ೨. ಶೂರ ; ಬಲಶಾಲಿ : ಸಡಿಲ್ದು ಪಾಲಿಗೆವಂದರಂ ಕರ್ಚಿ ಕೈಯಡ್ಡಾಯುಧವನೀಡಾಡಿ ದಡಿಯಂ ಕೊಂಡು ಪರಿವ ದಡಿಗರುಮಂ (ಲೀಲಾವ. ೫-೧೩೪ ವ) ; ಕಾಲಾಳ್ಗಳಿಂ ಪಿಡಿದೀಡಾಡಿಯುಮರ್ದಿಯುಂ ತಿರಿಪಿಯುಂ ತೀದುಂ ತೆಱಂಬೊಯ್ದುಮಾ ದಡಿಗಂ ದಾನವನಂದದಿಂ ಕೆಡಪಿದಂ ಸಂಗ್ರಾಮ ರಂಗಾಗ್ರದೊಳ್ (ಮಹಾನೇ. ೧೨-೨೦೪) ; ದಡಿಗ ಕಾಳಗಕ್ಕೈದಲಾಕ್ಷಣ ಪೊಡವಿಸುತೆಗೆಡಗಣ್ಣು ಕುಣಿದುದು (ಕೌಶಿರಾ. ೦೦-೩೨) ; ಪೊಡೆಯರಿದ್ದಾ ಮನೆಯ ಪೊಕ್ಕುದೆ ನೋಡೆನುತ ಕೋಪವನು ಪಿಡಿದಾ ದಡಿಗನಪ್ಪಳಿಸಿದರೆ ಘಾಯಕೆ ಹಿಂದೆ ತಿರುತಿರುಗಿ (ಕೃಷ್ಣಾಕ ೨೧-೦೯). ೩. ದಾಂಡಿಗ ; ದಡಿಯ : ದಡಿಗನ ಮಿಟ್ಟುವಂ ಮಿಡಿದೊಡಲ್ಲದೆ ಮಾಣೆನಮೋಘಮೆಂದು ಕೂರ್ಪುಡುಗದೆ ಬಂದು ತಾಗೆ ಯಮಳರ್ ತಡೆಗೊಂಡೊಡೆ ತಾವುಮೆಮ್ಮೊಳಂ ತೊಡರ್ದಪರ್ (ಪಂಪಭಾ. ೧೨-೧೬೨); ಮಿಂಚುದಲೆ ಒಣಕರುಂ ನಿಡುಗಯ್ಯ ದಡಿಗರುಂ . . . ಕುಳ್ಳಿರಲು (ವಾಗೀರ. ದೇ. ೨೫೪-೨೨) ; ಕಡುಗಾಯ್ದು ಲೋಹರಸಮಂ ಕುಡಿಯೆಂದವರೊಡೆದು ಬಾಯೊಳೆಱವರ್ಕಳ್ಳಂ ಕುಡಿದ ಕಡುಪಾಪಿಯಿವನೆಂ . . . ದಂಡಿಸುತ್ತುಮಿರ್ಪರ್ದಡಿಗರ್ (ಶಾಸ್ತ್ರಟೀ. ೫೧-೫) ; ದಡಿಗಂ ರಕ್ಕಸನೆನ್ನದಿರ್ಗೆ ಮುಳಿಸಿಂದೆಟ್ಟಿಂದನಾ ಶೈಲದಿಂ (ದಶಕು. ೧೨-೬೪). ೪. ಒಬ್ಬಾತನ ಹೆಸರು: ಗಂಗಗಚ್ಚಿನ ಪಿರಿಯ ಮಗಂ ದಡಿಗಂ ವಯ್ಯೊಕ್ಕನ್ದವಾಸಿಯಾದೊಡೆ ದಡಿಗೇಸ್ವರಮೆನ್ದು ದೇಗುಲಮಂ ಮಾಡಿಸಿದಂ (ಎಕ. IX. ಮಾಗಡಿ. ೭೫-೦೫ ; 966) ; ರಾಮ ಲಕ್ಷ್ಮಣಗ್ಗೆ ದಡಿಗ ಮಾಧವರೆಂದು ಪೆಸರನಿಟ್ಟು (ಎಕ. VII, ಶಿವಮೊ. ೪-೨೫ ; 1133). (ಗು). ೫. ದೊಡ್ಡದಾದ; ಎತ್ತರವಾದ : [ವಿ]ಷ್ಣು ಭಟ್ಟೋಪಾಧ್ಯಾಯರಿಂಗೆ ಕೊನಿಗಾರಗದ್ದೆಯೊ[ಳಗೆ] ದಡಿಗೆ ಮೂಡೆ ೩ (ಎಇ. XXVII, ೧೬೨-೪೭ ; 1256) ; ದಡಿಗ ರಕ್ಕಸಿಯರಂತಾ ನೀಱ ಯಾಳಿಯರೊಡನೇಳ್ತಂದು ಬೇಗದೊಳು ಜಡಿದು ಕೆಡಪಲೆಳ್ದು ಬಂದಾ ಕಾಮುಕಿ ತೊಡರಿ ಪಿಡಿದಳು ಮತ್ತವನ (ಕುರಾಸಾಂ. ೩೨-೧೦೩). 'ದಡಿಗವೆಣ' ಪರಾ. ೬. ಬಲಿಷ್ಠವಾದ ; ಶೌರ್ಯದಿಂದ ಕೂಡಿದ : ಕಿಡಿಗಣ್ಣ ದಡಿಗಜಟ್ಟಿಗರ ಗರ್ಜನೆಗಳಿಂ ನಿಡುಗರುಳ ಮಾಲೆಯಂ ತಳೆದ ಸುರಮುನಿಗಳಿಂ . . . ದುರ್ಗಾನಿಲಯಮಂ ಮಹೋದ್ಯೋಗದಿ ವಸುಧಾಧಿಪಂ ಪೊಕ್ಕನತಿಮನೋರಾಗದಿಂ (ದಶಕು. ೫-೫ ರಗಳೆ) ; ದಡಿಗ ಕುಱಗಳನೇಳನೇಳಾಳೊಡನೆ ಕೊಂಡುರು ಕ್ರಮದಿ ತಿದ್ದಿದರೊಡನೆ (ಸಾಳ್ವಭಾ. ೧೭-೭೪). **ಧಡಿಗ** : ೬. ಕೊಂತ ಭಲ್ಲೆಯ ಶೂಲ ಸಬಳದಲಿ ಇಡುತ ಬಾಣದಲೆಸುತ ಕವಿದರೆ ಧಡಿಗ ದಾನವರೆರಡುಕಡೆಯಲಿ ಜಡಿದು ಹೆಮ್ಮರದಿಂದ ಹೊಡೆದೀಡಾಡಿದನು ಹನುಮ(ಕೌಶಿರಾ. ೧೦-೨೭).

[ ದಡಿ$_1$ + – ಗ$_2$ ]

**ದಡಿಗಯ್ಯ** 'ದಡಿಗೆಯ್ಯ' ನೋ.

**ದಡಿಗವಟಿ** (ನಾ). ೧. ಒಂದು ಊರಿನ ಹೆಸರು. ☞ ಈಗಿನ ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೂಕಿನ ದಡಿಗವಾಡಿ : ಶ್ರೀ ಸತ್ಯಯೂನಾಳೆ ದಡಿಗವಟಿಯ ಮಸಿಕಲ್ಲಗಾವುಣ್ಡನ ಮಗಂ ಮಟ್ಟಿಗಂ ಸೆಡೆಯಲ್ಲಾಕನ ಕಾಳೆಗದೊಳ್ ಸತ್ತಂ (ಮೈಆರಿ. ೧೯೩೭, ೪೨-೦ ; 900). ೨. ಒಂದು ಪ್ರದೇಶದ ಹೆಸರು (?) : ದೇವರ್ಗ್ಗೆ ನಿವೇದ್ಯಕ್ಕಂ ನನ್ದಾದೀವಿಗೆಗನ್ದಡಿಗವಟಿಯಾದ ವಿಕ್ರಮ ಚೋಳಮಣ್ಡಲದ ಕುಕ್ಕನೂರ್ನ್ನಾಡ ನಾಟ್ಗಾವುಣ್ಡಂ ಗಂಗಗಾವುಣ್ಡನ ಮಗಂ ರಟ್ಟಕುಳಕಾಲ ಚೋಳಗಾವುಣ್ಡಂಗಂ . . . ಗಟ್ಟಿದ್ದಿಯುಂ ಕೊಣ್ಡಂ (ಎಕ. IX, ನೆಲಮಂ. ೧-೮ ; 1029). [ ? ]

**ದಡಿಗವೆಣ** (ನಾ). ದೊಡ್ಡಗಾತ್ರದ ಹೆಣ : ಉಡಿದಿರ್ದ ಕಯ್ದು ನೆತ್ತರ ಕಡಲೊಳಗಡಿಗಡಿಗೆ ತಳಮನಾರ್ಚುತ್ತಿರೆ ಕಾಲಿಡಲೆಡೆವಡೆಯದೆ ಕುರುಪತಿ ದಡಿಗವೆಣಂಗಳನೆ ಮೆಟ್ಟಿ ನಡೆಯುತ್ತಿರ್ದಂ (ಗದಾಯು. ೪-೧೪)

[ದಡಿಗ + ಪೆಣ ]

**ದಡಿಗಸೆಟ್ಟಿ** (ನಾ). ಒಬ್ಬಾತನ ಹೆಸರು : ಶ್ರೀಮತ್ ಸ್ವಸ್ತ್ಯನೇಕ ಗುಣ ಗಣಾಳಂಕೃತರಪ್ಪ ದಡಿಗಸೆಟ್ಟಿಯರ ದೇವರದಾಸಯ್ಯನ ಅಬ್ಬಿಗಳ್ (ಎಕ. XV, ಹೊಳೆನ. ೬೭-೪ ; ಸು. 950). [ ದಡಿಗ + ಸೆಟ್ಟಿ ]

**ದಡಿಗಾಳು** (ನಾ). ದಪ್ಪವಾದ ಕಾಳು : ದಡಿಗಾಳುಗಳು ಬೇಗನೆ ಬೇಯುತ್ತವೆ (ರೂಢಿ). [ ದಡಿ$_1$ + ಕಾಳು$_2$ (<ಕಾಱ್$_8$) ]

**ದಡಿಗಿರಿ** (ನಾ). ದೊಡ್ಡ ಬೆಟ್ಟ ; ಭಾರಿ ಪರ್ವತ : ಕಿಡಿಗಳನು ಕಂಗಳಲಿ ಕಾಱುತ ದಡಿಗಿರಿಗಳನು ದಾಡೆಯಿಂದವೆ ಕೆಡಹುತಾಗಳೆ ಹರಿದ ರಾಕ್ಷಸಗಾಗಿ ಹರಿ ಬಳಿಕ (ಸಂಭಪ. ೭-೩೬). [ ದಡಿ + ಗಿರಿ$_1$ ]

**ದಡಿಗೆಯ್ಯ**, ದಡಿಗಯ್ಯ, ದಡಿಗೈಯ (ನಾ). ಕೋಲನ್ನು ಹಿಡಿದಿರುವವನು ; ದಂಡಧರ ; ಯಮ : "ಜವನಱಂ ದಮ್ಮನು ದಡಿಗೆ[ಪಾಠಾಂ.

ಗ]ಯ್ಯ ... ನೇಸಱಣುಗನೆನಲಂತಕನೊಳಿಡೆವಿಡದ ನಾವು" (ಶಬ್ದಮಂ. ೧೩).

**ದಡಿಗಯ್ಯ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

**ದಡಿಗ್ಗೈಯ:** "ದಡಿಗ್ಗೈಯನೆಂದೆನಲ್ ದಮ್ಮನೆಂದೆನಲಂತಕಂ" (ಕಶರ. ೫೦). [ ದಡಿ$_1$ + ಕೆಯ್$_2$ + – ಅ$_7$ ]

**ದಡಿಗ್ಗೈಯ** 'ದಡಿಗೆಯ್ಯ' ನೋ.

**ದಡಿಗೊಳ್** (ಕ್ರಿ). ಕೋಲನ್ನು ಹಿಡಿ ; ದಂಡ ಹಿಡಿ : ಪುರವರವನು ನೆಱೆ ಕವಿಸಿದ ವಜ್ರಖರ್ಪರವನುದ್ಧತ ಗದೆಯಿಂದ ಭರದಿ ಪೊಡೆಯಲದು ದಡಿಗೊಂಡ[ಡು] ಮಣ್ಣ ಬಗ್ಗರೆಯನೊಡೆದ ತೆಱನಾಯ್ತು (ನೇಮಿಸಂ. ೨೫-೫೨). [ ದಡಿ$_1$ + ಕೊಳ್$_1$ ]

**ದಡಿಗೋಲು** (ನಾ). ದಪ್ಪವಾದ ಕೋಲು ; ಲಾಠಿ : ಅಗುಳ್ಚೇಗೆ ಎಂಬ ದಡಿಗೋಲಿನಲ್ಲಿ ಅಗಡದ ಎಮ್ಮೆಯ ಚರ್ಮವ ತೆಗೆದು ಉಭಯನಾಮವೆಂಬ ನಾರಿನಲ್ಲಿ ತಿತ್ತಿಯನೊಪ್ಪವ ಮಾಡಿ (ಸರ್ವವ. ೧೦೨-೫೩೪). [ ದಡಿ$_1$ + ಕೋಲು$_1$ (<ಕೋಲ್$_1$) ]

**ದಡಿತ** (ನಾ). (?) : ಕಿಡಿಯನುಗುವೆರಡಕ್ಷಿ ಕೆತ್ತುವ ನಿಡುಗಿವಿಗಳುಂ ಕೆಟಿದ ಹಲ್ಗಳು ದಡಿತ[ಪಾಠಾಂ. ದ]ಮಂಡೆಯ ಮೇಲೆ ಮಿಡುಕುವ ಬಾಲವಾಯ ತದಿ (ಸಾಳ್ವಭಾ. ೫-೩೦). [ ? ]

**ದಡಿದೋಳ್** (ನಾ). ದಪ್ಪವಾದ ತೋಳು : ಪೇರೊಡಲುರ್ವಿನಿಂದೆ ದಡಿದೋಳ್ಗಳ ಕೊರ್ವಿನಿಳಾತಳಾಗ್ರದೊಳ್ ಬೀಱುತೆ ತಮ್ಮ ಮಂತ್ರಚಯಮಂ (ಹಾಲಾಸ್ಯ. ೨-೧೫-೨೦). [ ದಡಿ$_1$ + ತೋಳ್ ]

**ದಡಿದೋತ್ರ,** ದಡಿಧೋತರ, ಧಡಿದೋತರ (ನಾ). ಅಂಚುಳ್ಳ ಪಂಚೆ: ಮಣಿದೊಡವಿನ ಪೆಡಗೆ ಪಾಗು ದಡಿದೋತ್ರದ . . . ಮಟ್ಟಿಗರೆಸೆದರ್ (ಹಮ್ಮೀರ. ೬-೧೯). **ದಡಿಧೋತರ :** ಶರೀಫರು . . . ತುದಿ ಕಾಲ್ಬೆರಳು ಗಳು ಮುಚ್ಚುವಂತೆ ನಿರಿಗೆ ಹೊಯ್ದು ದಡೀಧೋತರವನ್ನು ಉಡುತ್ತಿದ್ದರು (ಶರೀಫ. ೬೦ ಕವಿಕಾವ್ಯ ಪರಿಚಯ). **ಧಡಿದೋತರ :** ಗದಗನ್ನು ದಾಟುತ್ತಲೆ ಚುಂಗುಬಿಟ್ಟು ಧಡಿದೋತರ ಉಟ್ಟ ಜನರು . . . ಕಪ್ಪುಮುಖದಲ್ಲಿ ಮುಳುಗಿಹೋದ ಸಾದಿನ ಬೊಟ್ಟು ಇಟ್ಟುಕೊಂಡ ಬಾಲಕಿಯರು–ಇವರೇ ತುಂಬಿಬಿಟ್ಟರು (ಮುಂಗಾರು. ೨೭). [ ದಡಿ$_2$ (<ತಡಿ$_2$) + ದೋತ್ರ (<ಧೋತ್ರ) ]

**ದಡಿಧೋತರ** 'ದಡಿದೋತ್ರ' ನೋ.

**ದಡಿಯ$_1$,** ಧಡಿಯ$_1$ (ನಾ). ೧. ಬಲಶಾಲಿ ; ಶಕ್ತ ; ಶೂರ : ಕೈದು ವಿಡಿಯನಾಂ ನಿನಗನಾಯುಧಂಗೆಂದು ಕೈಯ ಪಾವಂ ವಿನತಾತನಯಂ ಬಿಸುಡುವ ಪೋಲ್ ತೊಟ್ಟನೆ ಬಿಸುಟಂ ಪಿಡಿದ ಬಡಿಯನಂತಾ ದಡಿಯಂ (ಚಂದ್ರಪು. ೫-೭೭). ೨. ದಾಂಡಿಗ ; ಟೊಣಪ : ಯಾವ ಕೆಲಸಕ್ಕೂ ಬಾರದ ದಡಿಯ ಅವನು (ರೂಢಿ). **ಧಡಿಯ$_1$ :** ೨. ಅವತ್ತು ಅಂಗಡಿಗೆ ಹೋಗದೆ ಮುದಿ ತಾಯಿಯನ್ನೇ ಕಳುಹಿಸಿದ ಧಡಿಯ (ಹೊಸಕ್ಕಿ. ೦೩೭). 'ದಡಿಗ' ಪರಾ. [ ದೇ.॥ ತಮಿ. ಮಲ. ತಟಿಯ ]

**ದಡಿಯ$_2$** 'ಧಡ್ಡ$_1$' ನೋ.

**ದಡಿವಲೆ** (ನಾ). ಒಂದು ಬಗೆಯ ಬಲೆ ; ದಡಿಗಳನ್ನುಳ್ಳ ಬಲೆ : ಬರಿಯಂ ಬಿಡದೆ ಹೊಡೆವ ದಡಿವಲೆಗೆ ನೊಂದೆಡೆ ಮೊಳೆಯ ಹೊಕ್ಕು ನೇಣ ಕಡಿವುತಿರೆ (ಸೋಮಚ. ೩-೦೨) ; ಸರಳ ಸೊಂಪಿನ ಸೋಹಿನಲಿ ನಿಱುಗರುಳ ದಾವಣಿವಲೆಗಳಲಿ ಸಂಗರದ ಸುಭಟವ್ರಜದ ಮಧ್ಯದ ಗೂಡುವಲೆಗಳಲಿ ಉರುಗದೆಯ ದಡಿವಲೆಯಲಸಿ ಮುದ್ಗರದ ಸಿಡಿವಲೆಗಳಲಿ ಸಮರದೊಳರಿ ಮೃಗವ್ರಾತವನು ಭೀಮಕಿರಾತ ಕೈಕೊಂಡ (ಕುಮಾರವ್ಯಾ. ೦೨-೩೦) ; ಒಡ್ಡಿದರು ದಡಿವಲೆಯ ಸಿಡಿವಲೆ ಕಡ್ಡಿವಲೆ ಕುಣಿವಲೆಯನಗಲಕೆ (ತೊರರಾ. ೩-೩-೦೨) ; ತನ್ನಾಳ್ದನಂ ಬೇಂಟೆಯೊಳ್ ಮೆಚ್ಚಿಸಿ ಬಸಂಗೆಯ್ದುಪೆನೆಂದು ದಡಿವಲೆಗಳಂ ಬಡಿಕೋಲ್ಗಳಂ ಅಂಟುಗಳಗಳಂ ಕಾಲ್ಗಣ್ಣಿಗಳಂ ಗಿಡುಗ ಸಾಳುವ ಜಾಯಿಲಂಗಳಂ ದೀಹದ ಮಿಗವಕ್ಕಿಗಳಂ ತರಿಸಿರಿಸಿ (ಚಿಕವಂ. ೫-೦೭). 'ತಡಿವಲೆ' ಪರಾ. [ ದಡಿ$_1$ + ಬಲೆ$_1$ ]

**ದಡಿವಿಡಿ** (ಕ್ರಿ). ಕೋಲನ್ನು ಹಿಡಿ ; ದಂಡವನ್ನು ಹಿಡಿ : ದಡಿವಿಡಿದು ಧಟ್ಟಿಸುತೆ ನಂದಿವಾಕಾಳರತಿಬಳನಸಿತಗಳನ ಸಮ್ಮುಖದೆಂಳಿರ್ದರುನ್ನತಿ ವೆರಸಿ ಸಲುಗೆಯಿಂದೆ (ಸಿದ್ಧೇಪು. ೧-೪೩) ; ಅಧಿಕಾರದ ತಲೆಸುತ್ತು, ಕಕ್ಕಸದ ಎದೆ, ಕಿಡಿಕಣ್ಣುಗಳಿಂದ ದಡಿವಿಡಿದು ಹುಲಿಗಳಂತೆಯೇ ಬಂದು ಮದುವೆಂತು ಮನೆಯನ್ನು ನುಗ್ಗಿದರು (ಕಾಲೂರ. ೦೫ ಕಥಾಸಾರ). [ ದಡಿ$_1$ + ಪಿಡಿ$_1$ ]

**ದಡಿವೊಯಿಲ** (ನಾ). ದೊಣ್ಣೆಯಿಂದ ಹೊಡೆಯುವವನಂ : ಕಡವೆಗ ತ್ಯಾಸ್ವಾದಿಯೆಂಬ ನರಿಮೊಲಗಳಿಗೆ ದಡಿವೊಯಿಲನೆಂಬ ಕರಡಿಯ ಗಂಡನೆಂಬ ಬಿಟ್ಟಡೆ ತೋಳ ಜಜ್ಜಾರನೆಂಬ ನರಿದಿನಿಹಿಯೆಂದೆಂಬ ಕುನ್ನಿಗಳನಾಯ್ದು ಗಡಣದಿಂ ಬೇಡವಡೆಯೊಡೆಯರೆಲ್ಲರು ನೆರೆದು (ಹಡಕಾ. ೫-೭) ; "ಕೋಲಿನ ಏಟುಂ ; ದೊಣ್ಣೆಯ ಪೆಟ್ಟು" (ಹಡಕಾ. ಕೋಶ). [ ದಡಿ$_1$ + ಪೊಯಿಲ್ (<ಪೊಯ್ಯು) + – ಅ$_7$ ]

**ದಡಿಸೀರೆ** (ನಾ). ಅಂಚಿನ ಸೀರೆ : ದಡಿಸೀರೆ ದುಡಿಸೀರೆ ಪೊಸಸೀರೆಗಳನುಟ್ಟು ನಡು ಕನಕರುಚಿ ಪೋಲ್ವ ಕುಬುಸಗಳನುರೆ ತೊಟ್ಟು (ಸಿದ್ಧಕಾ. ೮-೧೨) ; ರಂಗೀಲಿ ಉಟ್ಟೇರಿ ರೇಸ್ಮಿ ದಡಿಸೀರೆ ಮತ್ತೆ ಹಂಗನೂಲಿನ ಪರವಿ ಮರತೆವ್ವ ನಾರಿ (ಶರೀಫ. ೨೧-೩). [ ದಡಿ$_2$ (<ತಡಿ$_2$) + ಸೀರೆ$_2$ ]

**ದಡುಂ** (ನಾ). ಒಂದು ಅನುಕರಣ ಶಬ್ದ : (+).

**ದಡುಕಿಸು** (ಕ್ರಿ). (?) : ಕಡಿಯಲು ಖಡ್ಗದಿ ತಲೆಯನು ಮಡದಿಯ ಶಿರ ತಾಗಿದಾಗ್ಗ ಭೇದಿಸದಿರಲಾ ಪೊಡವಿಪ ಚಿಂತಿಸಿ ಮನದೊಳ್ ದಡುಕಿಸಿ ತಾ ಪುನಹ ಕಡಿಯೆ ಸುರಗಣ ಮೆಚ್ಚಲ್ (ಹಮಚ. ೨೦೩). [ ? + – ಇಸು$_3$ ]

**ದಡೂತಿ** 'ಧಡೂತಿ' ನೋ.

**ದಡ್ಡೆ$_1$** 'ದಡಿ$_1$' ನೋ.

**ದಡ್ಡೆ$_2$,** ದಡ್ಡ$_2$ (ನಾ). ತೂಕಮಾಡುವಾಗ ತಕ್ಕಡಿಯಲ್ಲಿ ಒಂದು ಕಡೆ ಪಾತ್ರೆ ಮೊದಲಾದುವನ್ನು ಇಟ್ಟು, ಅದರ ತೂಕಕ್ಕೆ ಸರಿಯಾಗಿ ಮತ್ತೊಂದು ಕಡೆ ಇಡುವ ಬಟ್ಟು, ಕಲ್ಲು ಮುಂತಾದ ವಸ್ತು ; ಪೇರು ; ಕಾಣಿ. 'ದಡೆಕಟ್ಟು' ಪರಾ. ದಡ್ಡ$_2$. 'ದಡಕಟ್ಟು' ಪರಾ. [ ದೇ.॥ ತಮಿ. ಶಟ್ಟೆಯ ; ತೆಲು. ದಡ ]

**ದಡ್ಡೆ$_3$** 'ಧಡ್ಡೆ$_1$' ನೋ.

**ದಡೆಕಟ್ಟು,** ದಡಕಟ್ಟು (ಕ್ರಿ). ತಕ್ಕಡಿಯಲ್ಲಿ ಪಾತ್ರೆ ಮೊದಲಾದುವುಗಳ ತೂಕವನ್ನು ಸರಿದೂಗಿಸುವಾಗ ಮತ್ತೊಂದು ಕಡೆಗೆ ಬಟ್ಟು, ಕಲ್ಲು ಮುಂತಾದ ಸಾಮಗ್ರಿಯನ್ನು ಹಾಕಿ ತೂಕವನ್ನು ಸಮತೋಲನ ಗೊಳಿಸು; ಪೇರುಕಟ್ಟು : ದಡೆಕಟ್ಟಿ ಬೆಣ್ಣೆ ತೂಗು (ರೂಢಿ). **ದಡಕಟ್ಟು:** ತೂಗುವ ಮುಂಚೆ ದಡಕಟ್ಟು (ರೂಢಿ). [ ದಡ್ಡೆ$_2$ + ಕಟ್ಟು$_1$ ]

**ದಡೆಮಾರು** (ನಾ). (?) : ಆ ಮೇಳಣ ದಡೆಮಾರಂಗಳಲ್ಲಿ ಮುಡಿ ೪ (ಇಆ. V, ೪೨-೩೭ ; 1587). [ ? ]

**ದಡೆಯ** 'ಧಡ್ಡೆ$_1$' ನೋ.

**ದಡ್ಡ$_1$** (ನಾ). ಹೊಂದಿಕೆ ; ಜೋಡಣೆ ; ಸೇರಿಕೆ ; ಒತ್ತಾಗಿರುವಿಕೆ : "ಗಾಢದೊಳೆ ದಡ್ಡಂ" (ಕರ್ಣಾನಿ. ೬೦). 'ದಡ್ಡಕ್ಕರ' ಪರಾ. [ ದೇ.॥ ತೆಲು. ಜಡ್ಡ ]

**ದಡ್ಡ$_2$,** ಧಡ್ಡ (ನಾ). ೧. ತಿಳಿಗೇಡಿ ; ಮೂರ್ಖ ; ಅಜ್ಞಾನಿ : ಅನುಸರಣೆಯಿಂದ ದಡ್ಡರೂ ದೊಡ್ಡವರಾಗಬಹುದೆ ? (ಕಥವಿ. I, ೪೦) ; ನಾ ಬಲು ದಡ್ಡ (ನನ್ನಹೊ. ೩೨) ; ದಡ್ಡನಿಗೆ ದೊಣ್ಣೆ ಪೆಟ್ಟು, ಜಾಣನಿಗೆ ಮಾತಿನ ಪೆಟ್ಟು (ಗಾದೆ). (ಗು). ೨. ತಿಳಿಗೇಡಿಯಾದ ; ಮೂರ್ಖ

ತನದ ; ಬುದ್ಧಿಯಿಲ್ಲದ : ಅಡ್ಡಬಿದ್ದು ಶಿಷ್ಯನ ಮಾಡಿಕೊಂಬ ದಡ್ಡ ಪ್ರಾಣಿಗಳನೇನೆಂಬೆನಯ್ಯ (ವಚಸಂ. ೧೨೪-೧೦). **ಧಡ್ಡ :** ೧. ನಮಗ ಧಡ್ಡರು ಅಂತ ಬಯ್ಯೋದನ್ನ ಬಿಟ್ಟು, ನಮ್ಮ ಊರವರು ಅಂತ ತಿಳಿಸಿಕೊಡು (ಕಮ್ಮಟ. ೫೭); ಈಗೇನು ಹೊತ್ತಿಲ್ಲದ ಹೊತ್ತಿನ್ಯಾಗ ಬಿರಡಿ ಹಚ್ಚಿ ಕೊಡತಾರೊ ಧಡ್ಡ ಖೋಡಿ (ವ್ಯನಿ. ೨೭).

**ದಡ್ಡ ದಾಮೋದರ** = ಹೆಡ್ಡನಾದವನು ಎಂಬರ್ಥದಲ್ಲಿ ಬಳಸುವ ಒಂದು ಮಾತು : ಅವನೊಬ್ಬ ದಡ್ಡ ದಾಮೋದರ (ರೂಢಿ).

[ ದೇ.II ತುಳು. ದಡ್ಡೆ ; ಕೊಡ. ದಡ್ಡೇ ]

**ದಡ್ಡ₃** 'ದಡ್ಡಸ' ನೋ.

**ದಡ್ಡಕ್ಕರ** (ನಾ). ಹೊಂದಿಕೊಂಡಿರುವ ಅಕ್ಷರ; ಒತ್ತಕ್ಷರ; ದ್ವಿತ್ವಾಕ್ಷರ; ಸಂಯುಕ್ತಾಕ್ಷರ : "ದ್ವಿತ್ವಾಕ್ಷರಮದು ದಡ್ಡಕ್ಕರಂ" (ಚತುನಿ. ೨೪) ; ಬಿಂದು ವಿಸರ್ಗಂ ವ್ಯಂಜನಮೊಂದಿದ ದಡ್ಡಕ್ಕರಂ ಪದಾಂತ್ಯಂ ದೀರ್ಘಂ ಬಂದೊಡಱಿ ವನಜಮುಖಿ ಗುರುವೆಂದುಂ (ಛಂದೋಂಬು. ೧-೩೫) : ಪಿರಿಯರ್ ಸಲಿಪರ್ ದಡ್ಡಕ್ಕರದ ಱಿಕ್ಕೈದೆ ರೇಫೆವೆರಸಿದ ದಡ್ಡಕ್ಕರಮಂ ಱಿಟನಾಗದನುಚ್ಚರಿಸಲ್ಕಾಗಿರ್ದ ತೆಱದಿನಂತೆದು ಶುದ್ಧಂ (ಶಮದ. ೨೪) ; ಕಥೆಯನಾಲಿಸಿ ನವರಸಾಂಬುಧಿಯೊಳಾಳದೀ ಕಥೆಯ ನಿಂದಿಸುವರ್ ತಕಾರ ದಡ್ಡಕ್ಕರದ ಕಥೆಗಳಲ್ಲದೆ ಮನುಜರಲ್ಲವದಱಿಂ ಭಕ್ತರೀ ಕಥೆಯ ಕೇಳ್ವು ದೊಲಿದು (ಚಬಪು. ೧-೩೦). 'ಒತ್ತಕ್ಕರ' ಪರಾ. [ದಡ್ಡ₁ + ಅಕ್ಕರ₂]

**ದಡ್ಡತನ** (ನಾ). ತಿಳಿಗೇಡಿತನ; ಅಜ್ಞಾನ; ಮಂಕುತನ: ದಡ್ಡತನದಿ ಹೀಗೆ ಹೆಡ್ಡೆಯಾಗಿರುವಂತ ಮಡ್ಡಿಯಾದರೆ ನಿನ್ನ ನೆನೆಯೆ (ಕಪೋತ. ೧೪-೫೦); ನಾವು ಮೌನದಿಂದಿದ್ದರೆ, ನಮ್ಮ ದಡ್ಡತನವು ಒಂದು ವೇಳೆ ಜನರಲ್ಲಿ ಪ್ರಕಟವಾಗದೆ ಇರಬಹುದು (ಮುಂಬಯಿ. ೪-೪೯) ; ತನ್ನ ಮಾತೃಭಾಷೆಯಲ್ಲಿ ಉಪನ್ಯಾಸ ಮಾಡುವದಂತೂ ಶುದ್ಧ ದಡ್ಡತನ (ಹುಚ್ಚುಹು. ೧೧೧).

[ ದಡ್ಡ₂ + - ತನ ]

**ದಡ್ಡಸ, ದಡ್ಡ₃** (ನಾ). ಒಂದು ಬಗೆಯ ಚರ್ಮವಾದ್ಯ ; ಡೊಂಬರವನ ಡೊಳ್ಳು ; ದೊಂಬರ ಹರೆ : "ದಡ್ಡಸ = ದೊಂಬವಱಿ" (ಶಮದ. ಪರಿ. ೨) ; "ದಡ್ಡಸವೆಂದು ಡೊಂಬವಱಿ" (ಕರ್ಣಾನಿ. ೧೮) ; ದಡ್ಡಸ ಮೆನಲ್ ಡೊಂಬರೂದುವ ವಾದ್ಯವು" (ಕಶಶ. ೫೦) ; ಬೆಸರ್ ನಿನಗೆ ಕೇಳ್ ಮೊಸರ್ ಪೆಱರ್ಗೆ ನಿನ್ನ ಮೆಯ್ ಡೊಂಬ ದಡ್ಡಸಕ್ಕೆ[ಪಾಠಾಂ. ಮೆಯ್ಗೊಳ್ವ ದಡ್ಡಿಸಕ್ಕೆ] ಗುಱಿಯಪ್ಪುದೊಡ್ಡಿಱಿದು ತಿಂಬರನ್ನಕ್ರಿಯಾವಸಾನವಿರಸಂ ಗಳಿಂದ್ರಿಯಸುಖಂಗಳಿಂತಾದೆ ಸಂತಸಂ ಗತವಿವೇಕ ಪೇೞ್ ನಿನಗಸಾರ ಸಂಸಾರದೊಳ್ (ಆದಿಪು. ೩-೭೧) : ನಿಮ್ಮ ದಡ್ಡಸದ ಕುಡುಪಿನಾಣತಿ ಯಂತೆಯೇ ಗಳಿಗೂಸಾಡಲುಳ್ಳ ಡೊಂಬರ ಪೋರಿಯು ನಾನು (ಮಂತ್ರಶ. ೨೯-೭). **ದಡ್ಡ₃ :** "ದಡ್ಡ-ಡೊಂಬರ ಡೊಳ್ಳು" (ಗಂಗಾವಮ. ೧೭೩).

**ದಡ್ಡಿ₁** (ನಾ). ದಡ್ಡಳಾದ ಹೆಂಗಸು ; ದಡ್ಡೆ : ಅವಳೋ ಶುದ್ಧ ದಡ್ಡಿ (ರೂಢಿ). [ ದಡ್ಡ₂ + - ಇ₂ ]

**ದಡ್ಡಿ₂, ದಟ್ಟಿ₂** (ನಾ). ೧. ತೆರೆ ; ಪರದೆ ; "ಜವನಿಕೆ" (ಚತುನಿ. ೬. II, ೨೪) : ಕೂಡೆ ಮುಸುಱುವ ಮಱಿದುಂಬಿಯ ಬಂಬಲಿಂ ಲತೆಗಳುಂ ಕರಿಯ ದಡ್ಡಿಯಂ ಕವಿದಂತೆಯುಂಮಾಗೆ (ಕಾದಂಬ. ೨೧೯); ಗುರುವ ಬಿಜಯಂಗೈಸಿ ಮನಕೆ ಪರಿತೋಷ ಪುಟ್ಟಲು ವಜ್ರಪಂಜರದ ದಡ್ಡಿಯಾಡ್ಡಂಬಡೆಯಲು (ಸಿದ್ಧರಾ. ೯-೫) ; ರಾಣಿಯ ವಾಸದಂದಳಕೆ ದಡ್ಡಿ ಮುಸುಂಕುವುದುಂಟು ತಮ್ಮ ನೇರಾಣಿಯ ಪೊಂಗಳಂದಳಕೆ ದಡ್ಡಿ ಮುಸುಂಕಿದನಿತ್ತೆ ಭೇದಮಾ ರಾಣಿಯ ವಾಸದೊಳ್ ತಮಗೆನಿಪ್ಪ ವಿಳಾಸಿನಿಯರ್ . . . ನಡೆ ತಂದರದೊಂದು ಲೀಲೆಯಿಂ (ಪಾರ್ಶ್ವಪು. ೮-೯೩) ; ಕವಿದ ಚಿತ್ರಾವಳಿಯ ದಡ್ಡಿಯ ವಿವಿಧ ಭಟರುಗ್ಗಡಣೆಯಲ್ಲಿ ಮರೆಯುವತಿ ಬಂದಳು (ಕುವ್ಯಾಉ. ೬-೧೮) ; **ಮಣಿಮಯದ** ಮುಕ್ತಾಫಲದ ಕೇವಣದ ಕನಕದ ದಡ್ಡಿ ಬಿಗಿ ದಂದಣವನೇಱಿದರರಸಿಯರು (ತೊರರಾ. ೧-೬-೫) ; ಅಱುವರೇ ತಾಮಸದ ದಡ್ಡಿಯ ಮಱಿಯ ಮೂರ್ಖರು (ಉತ್ತರಾ. ೧೧-೫೦) ; ಮುತ್ತಿನ ದಡ್ಡಿಯ ಪಲ್ಲಕ್ಕಿಯೇಱಿ ತಮ್ಮೊತ್ತಿನೊಳ್ಪಹ ಕೆಳದಿಯರ ಮೊತ್ತದ ದೊರೆ ಕುಮಾರಿತಿಯರಾ ಬೀದಿಯೊಳರ್ಗೆಯೊಳೆಡೆಯಾಡುತಿಹರು (ಕಂಠನವಿ. ೭-೧೯) ; ಮುಗಿಲೊಡ್ಡಿನ ದಡ್ಡಿಯಂತೆ ಜವನಾಳ್ಗಳ ಜಂಗುಳಿಯಂತೆ ನಡೆವ ಕಾರೊಡಲ ಪೇರಾನೆಗಳ (ರಾಮಾಶ್ವ. ೯೪-೯). ೨. ಮನೆಯ ಮಾಳಿಗೆ,-ಮಂಹಡಿ : "ದಡ್ಡಿಯೆಂದು ಮಾಳಿಗೆ"(ಕಶಸಾ.೧೭-೩೧೫);"ದಡ್ಡಿಯೆ ಮಾಳಿಗೆಯೆನಿಪುದು" (ಚತುನಿ. ೩೮); ಸೆಗಳಿಗೆ ಪೆಂಡಿರ ಮೊಲೆ ಕಿಚ್ಚುಗರುವ ಪೊಗೆ ಕುಂಕಮಾಂಕ ಮೋವರಿ ನೆಲಮಾಳಿಗೆ ದಡ್ಡಿಯೆಂಬಿವಮರ್ದರಸಗಲ್ಲುದು ಪೊಲೆಯಾಳ ತೆಱದೆ ಮುಟ್ಟದೆ ಶಿಶಿರಂ (ಪುಷ್ಪಪು. ೬-೫೩). ೩. ಮುಂಚ್ಚೆಳ್ಳ ; ಮುಸುಕು ; ಆಚ್ಛಾದನ : "ದಡ್ಡಿಯೆನಲ್ಕೆ ಪಿಧಾನನಾಮದೊಳ್" (ಕರ್ಣಾನಿ. ೧೮) ; ತೆಗೆಸುವೆವು ನಾಳಿನಲಿ ನಿಮ್ಮಯ ಮೊಗದ ಮುಗುಡದ ದಡ್ಡಿಯನು ವೈದೆಗೆಯದಿರಿ ಕಲಿಯಾಗಿಯೆಂದನು ನೃಪತಿ ಸುಭಟರಿಗೆ (ಕುವ್ಯಾಕ. ೧-೨೨) : ಪಂದಲೆಯಿಂದಮೋ ಜಗಲಿ ನಿಗ್ಗವದಿಂದಮೆ ಕಂಬಮಿಟ್ಟಿಗಾ ವಿಂದಮೆಯಡ್ಡಮಾಸು ಕಣೆಯಿಂದಮೆ ಪಂಜರಗಟ್ಟು . . . ಪಲಗೆ ಯಿಂದಮೆ ದಡ್ಡಿಯುಮೆಡ್ಡಮಾಗೆ ಚೆನ್ನೊಂದಿತು ಬೀರವೆಣ್ಮದುಮೆಯೊಳ್ ಪಸೆಗಿಕ್ಕಿದ ಪಂದಲಂದದಿಂ (ಚಕವಿ. ೨-೭೨). ೪. "ಪಂಜರ" (ಚತುನಿ. ೬. I, ೧೧) : ನವನಾಳ ಬಿಂದುಗಳ ದಡ್ಡಿಯಂ ನಿಟ್ಟಿಸುತ (ಲಿಂಗಪು. ೨೨-೨೭).

**ದಟ್ಟಿ₂ :** ೧. ಸಿದ್ಧೇಂದ್ರನಂ ತಂದು ಬಿಜಯಗೈಸಿ ಇತ್ತರದಿ ವಜ್ರಪಂಜರದ ದಟ್ಟಿಯ ಬಿಗಿದು ಸುತ್ತ ಪರಿಜನವೈದೆ ಹರಿದು ಬರುತ (ಸಿದ್ಧರಾ. ೯-೯) ; ಪಸೆ ಪಂದಲ್ ದಟ್ಟಿ ಜಾಗಂ ಜಗಲಿ ಬಿಗಿದ ಭೃಂಗಾರಿ ಮೇಲ್ಕಟ್ಟು ಚಿತ್ರಂ ಪೊಸಕುಂಭಂ ಶಂಕು ನೂಲ್ವೆರಣೆ ತಳಿರ್ಗಳಸಂ . . . ಸಮಸ್ತ ಸ್ತ್ರೀಜನಂ ಕನ್ನಡಿ ಜವಳಿಗಳುದ್ವಾಹದೊಳ್ ವರ್ಣನೀಯಂ (ಸೂಕ್ತಿಸು. ೬-೧). ೩. ಗುರುವಿಗೆ ಸೂರ್ಯನ ಸುತ್ತುಬರಲು, ೧೨ ವರುಷಗಳ ಕಾಲ ಹಿಡಿಯುವುದು. ಅದರ ಸುತ್ತಲು, ಮುಗಿಲುಗಳ ದಟ್ಟಿಯ ಮೇಲೆ ದಟ್ಟಿ ಗಳಿವೆ (ಬಾಲಪ್ರ. I, ೧೮೨). 'ತಟ್ಟಿ₁' ಪರಾ.

[ ದೇ.II ತಮಿ. ಮಲ. ತಟ್ಟಿ ; ತಟ್ಟು ; ತುಳು. ದಡೆ, ತಟ್ಟಿ ; ತೆಲು. ದಡಿ ; ಕುಯಿ. ತಟಿ ]

**ದಡ್ಡಿ₃** 'ದಿಡ್ಡಿ' ನೋ.

**ದಡ್ಡು₁, ಜಡ್ಡು₂, ಜೆಡ್ಡು** (ನಾ). ಮೇಲಿಂದ ಮೇಲೆ ಏಟು ಬಿದ್ದು ಘರ್ಷಣೆಯಾಗಿ ಅಥವಾ ಒತ್ತಿ ಒತ್ತಿ, ಚರ್ಮವು ಒರಟಾಗಿ ಕಾಯಿ ಗಟ್ಟುವಿಕೆ,- ಒರಟಾಗುವುದು : ಚೆಂದಳಿರ ಮೆಲ್ಪಾಸಿನೊಳ್ಮಲಂಗುತಿರ್ದ ನಿನ್ನೀ ಬೆನ್ನೆಲುವಿನೊಳಾವಗಂ ಬಿಗಿದಿರ್ದ ಪಲ್ಲಣದೊತ್ತಿನಿಂದೊಗೆದ ದಡ್ಡು ಗಳುಮಂ (ಕಾದಂಬ. ೭೩೦) ; ಕಿಱಿದೆಡೆಯಯಶದ ಭಯದಿಂ ಕರಟಾದ ಪೊಲಿಣೆಯ ಬುಗುಟು ನೆಗೆದೆಡೆ ಶಿರದೊಳ್ ತರದಿಂದೆ ದಡ್ಡು ನೆಗೆದಂತಿರೆ ಪಿರಿದಪಮಾನಮೆಯ್ದಿದಂ ದುಶ್ಚರಿತಂ (ಪಾರ್ಶ್ವಪು. ೪-೨೭) ; ತಿರುಪೊಯ್ಲಿಂ ದಾದ ದಡ್ಡುಬ್ಬರಿಸಿ ಮೆಱೆವ ಮುಂಗೆಯ್ಗಳಿಂ ವನ್ಯಮಾತಂಗರದಾ ಘಾತಕ್ಷತಂ ಕಣ್ಗೊಳಿಪಗಲ್ದುರದಿಂ ಕಾಳಮಂ ಕಾನನಕ್ಕುಬ್ಬರಮಾಗಲ್ . . . ತಾನಿರ್ದನಾ ಬೇಡರೊಳೊರ್ವಂ (ಶಾಂತೀಶ್ವ. ೩-೭೫) ; ಬಲೆ ಕಲ್ಲಿ ಕುಬ್ಬಿಗಳ ಪೊತ್ತ ಹೆಗಲಿನ ದಡ್ಡು[ಪಾಠಾಂ. ಸೊಗಡು, ದಂಡ]ಗಳ ಪಿಡಿದ ಬಲೆ ಕೋಲ ಕುಕ್ಕುರಂಗಳ ಕೆಯ್ಗೊಳಳವಟ್ಟ ಗಿಡುಗ ಲಗುಡಗಳೆಸೆಯಲಲ್ಲಿ ವನಚರರಿಂದೆ ವನಮೆಸೆದುದು (ಚಬಪು. ೫೩-೭೨) ; ನಮ್ಮ ಕಾಲಿಗೆ ಅಥವಾ ಇನ್ನಾವುದಾದರೂ ಭಾಗಕ್ಕೆ ಮೇಲೆ ಮೇಲೆ ಕೆಲಸ ಬಿದ್ದು ಅಲ್ಲಿ 'ದಡ್ಡು' ಆಗಿರುತ್ತದೆ (ಪರಿನ. ೨೭). **ಜಡ್ಡು₂ :** ಭಕ್ತರಂ ಬಿಡದಱಿಸಿ ಜಡ್ಡಾದವೀ [ಪಾಠಾಂ. ಕಾಯ್ದುಟ್ಟಿದುವು] ಪದಂ ಭಕ್ತರ್ಗೆಯಿತ್ತಿತ್ತು ನಿಂದುದೆಮ್ಮಯ ಪದಂ (ಅನೇರ ದೇ. ೩೮-೨೫) ; ದೊಡ್ಡಮಾರ್ಗಂ=ಆನೆ ಕುದುರೆಗಳೊಳಾದ

ಕಿಱುದೊಡೆಯ ಜಡ್ಡು [ಪಾಠಾಂ. ಜಿಡ್ಡು, ದಡ್ಡು] (ಶಮುದ ಪರಿ. ೨). **ಜಿಡ್ಡು** : 'ಜಿಡ್ಡುಗಟ್ಟು' ಪರಾ. [ದೇ.॥ ತುಳು. ದಡ್ಡ್, ಜಡ್ಡ್]

**ದಡ್ಡುಗಟ್ಟು**, ಜಡ್ಡುಕಟ್ಟು, ಜಡ್ಡುಗಟ್ಟು, ಜಿಡ್ಡುಗಟ್ಟು (ಕ್ರಿ). (ಚರ್ಮ) ಮೃದುತ್ವವನ್ನು ಕಳೆದುಕೊಳ್ಳು; ಒರಟಾಗು; ಜಡವಾಗು; ಕಾಯಿಗಟ್ಟು : ಕರಿಗೊಱಡನುಡ..ವರ್ದರ್ವೆನಿಪ ಸೆರೆಗಾಲ್ಗಳಿಂ ಬಿಡದೆ ಪೊಡೆವಡೆ ದಡ್ಡುಗಟ್ಟಿದ ನೊಸಲ್ಗಳಿಂ (ಕಾದಂಬ. ೩೭೧). **ಜಡ್ಡುಕಟ್ಟು** : ಭೀಮಸೇನನು ಊದಿ ಜಡ್ಡುಕಟ್ಟಿದ್ದ ಅವಳ ಕೈಗಳನ್ನು ತನ್ನ ಕೆನ್ನೆಗಳ ಮೇಲಿಟ್ಟುಕೊಂಡು, ಮಹಾವೀರನಾದರೂ ಗೊಳೋ ಎಂದು ಅತ್ತುಬಿಟ್ಟನು (ಪರ್ವ. ೧೯೪); ರಂಪ, ರಗಳೆಗಳಲ್ಲಿ ತಪ್ಪನ ಒಳಜೀವನ ಮೊದಲು ತನ್ನ ಸೂಕ್ಷ್ಮತೆಯನ್ನು ಕಳೆದುಕೊಂಡು ಒರಟಾಗುತ್ತದೆ, ಜಡ್ಡುಕಟ್ಟುತ್ತದೆ (ಹೊಸಕ್ಷಿ. ೨೩೭). **ಜಡ್ಡುಗಟ್ಟು** : ಕೆನ್ನೆಗೆ ಹೊಡಕೊಂಡು ಕೈ ಕೆನ್ನೆ ಎಲ್ಲಾ ಜಡ್ಡುಗಟ್ಟಬೇಕು ಪಾಪ (ಮರಳಿ. ೫); ದುಡಿದುಡಿದು ಮೈ ಜಡ್ಡುಗಟ್ಟಿಕೊಂಡಿದ್ದ ರೈತರಂತೆ ಅವನು ಯಾವ ಕೆಲಸವನ್ನಾದರೂ ನಿರಾಯಾಸವಾಗಿ ಅತ್ಯಂತ ತ್ವರಿತವಾಗಿ ಮಾಡುತ್ತಿದ್ದನು (ಪುನರು. ೩೨೯). **ಜಿಡ್ಡುಗಟ್ಟು** : ಯಾಹನು ಗಾಂಡೀವದ ಹೆದೆಯ ಪೆಟ್ಟುಗಳಿಂದ ಎರಡು ಪಾರ್ಶ್ವಗಳಲ್ಲಿಯೂ ಎತ್ತಿನ ಹೆಗಲೋಪಾದಿಯಲ್ಲಿ ಜಿಡ್ಡುಗಟ್ಟಿ . . . ಅಂಥಾ ಅರ್ಜುನನು (ಕೃಪಾವಿ. ೪). [ದಡ್ಡು + ಕಟ್ಟು$_1$]

**ದಡ್ಡುಗೈ** (ನಾ). ಜಡ್ಡುಗಟ್ಟಿರುವ ಕೈ: ಅಲ್ಲೊಂದು ವಿಲಕ್ಷಣ ರೀತಿಯುಂಟು. ಅದೇನೆಂದರೆ ದಡ್ಡುಗೈಯವರು ಮಾತ್ರ ಪಂಕ್ತಿಗೆ ಕೂತು ಊಟಮಾಡಬಹುದು (ಪವಣ. ೫೬). [ದಡ್ಡು + ಕೈ$_2$ (< ಕೈಯ್$_2$)]

**ದಡ್ಡುಬೀಳು** 'ದಡ್ಡುವೀೞ್' ನೋ.

**ದಡ್ಡುವೀೞ್**, ದಡ್ಡುಬೀಳು (ಕ್ರಿ). ಜಡ್ಡುಗಟ್ಟು; ಒರಟಾಗು; ಸೂಕ್ಷ್ಮತೆಯನ್ನು ಕಳೆದುಕೊಳ್ಳು: ಕಣೆಕಲ್ಲಂ ತಾಗಿದಂತಾಗೆ ಕೊಂಡಸಿಯುಂಬೊಂದನೆ ದಡ್ಡುವಿರ್ದ ಹೃದಯಂ ಜಾಳಾಂದರಂಬೋಪಿನಂಬೆಸೆದೆಚ್ಚಂ ಕಡುದೇಸಿವೆಂಡಿರನದೇಂ ಕಾಮಂ ಛಲಗ್ರಾಹಿಯೋ (ಅರ್ಧನೇ. ೪-೧೪೭); ಕಸಕಿಲ್ಗೆಯ್ಮೆಯನೆಸಗುವ ಮಸಕದ ಕಡುದಡ್ಡುವಿಟ್ಟ ಪಡಿಗದ ಪಟನೀರ್ವಸೆಯಾಜಿದ ಪಾಟ್ಗೆಯಿಂದ ಸತಿಯರಿದೆ ಪಿಡಿವರಯ್ಯೊ ಪೊಸಮಡಿಮೆಯ್ಯಂ (ಚಿಕವಿ. ೬-೧೨೦). **ದಡ್ಡುಬೀಳು** : ಕೆಲವು ತಾಸುಗಳ ದುರ್ಧರವಾದ ದುಃಖಾನುಭವದಿಂದ ದಡ್ಡುಬಿದ್ದು, ಅದು ಯಾತಕ್ಕೂ ಹಣಿಯದಂತಾಗಿದೆ (ಪದ್ಮನ. ೨೧); ದಿನದ ಅವನ ಮಾತು ಕೇಳಿಕೇಳಿ ಅವರಿಗೆ ದಡ್ಡುಬಿದ್ದಂತಾಗಿತ್ತು (ಸಮುಜೀ. ೧೩೨೪). [ದಡ್ಡು + ಬೀೞ್$_1$]

**ದಡ್ಡೆ$_1$** (ನಾ). ದಡ್ಡ ಹೆಂಗಸು: ಯಾಕಮ್ಮಾ ಹೀಗೆ ದಡ್ಡೆಯಾಗಿಬಿಟ್ಟೆ (ಪತಾಕ್ಷಿ. ೧೧೨). [ದಡ್ಡ$_2$ + -ಎ$_2$]

**ದಡ್ಡೆ$_2$** (ನಾ). ಪ್ರಾಯದ ಹಂದಿ; ಬಲಿತ ಹಂದಿ (?): ತನ್ನ ಪ್ರಾಯದ ಮದದಿಂದ ಸಣ್ಣಮರಿಗಳೆನ್ನದೆ ಆಗ ತಾನೆ ಮರಿಹಾಕಿದ್ದವೆನ್ನದೆ ಗಬ್ಬದ ದಡ್ಡೆಗಳೆನ್ನದೆ (ಮಲಿಮ. ೧೦೩). [?]

**ದಡ್ರುಂಚೆ** 'ದಂಡುಱುಂಬೆ' ನೋ.

**ದಡ್ರಿಂಚ** (ನಾ). ಜಾರ; ನೀತಿಬಾಹಿರ; ವಿಷಯಲಂಪಟ: ಕ್ರೂರಫಣಿಪಂ ತಲ್ಪಮಧುಮಮಾಂಸಾದನ ಮಹೋರಗಾರಿಯೆ ವಾಹನಂ ಸಂಚಲೆ ಸ್ವೈರಚಾರಿಣಿಯೆ ನಿಜರಾಣಿ ನಾಣ್ಗೆಟ್ಟು ದಡ್ರಿಂಚನಾಗಿ ಗೋಪಿಯರ ನೆರದು (ಕೊಟ್ಟೂಬ. ೬-೩೩). 'ದಂಡುಱುಂಬೆ' ಪರಾ. [?]

**ದಡ್ರುಂಚೆ** 'ದಂಡುಱುಂಬೆ' ನೋ.

**ದಢಕ್** (ನಾ). ಒಂದು ಅನುಕರಣ ಶಬ್ದ. 'ದಢಕ್ಕನೆ' ಪರಾ.

**ದಢಕ್ಕನೆ** (ಅ). ಇದ್ದಕ್ಕಿದ್ದಂತೆ; ಅನಿರೀಕ್ಷಿತವಾಗಿ : ಥಕ್ಕಾನಿನಾದದಿಂ ಥಾಳಥವಳಂದ್ರು ಥಕ್ಕೆ ತನ್ನೊಡನೆ ಮಾಱಾಂತ ಥಕ್ಕಾದಿಯಾದ ಮೂರ್ಧರ್ಕಳ ಖಳರ ದಢಕ್ಕನಳಿದ ಹರಿ ಜಯತು (ಕಶಸಾಂ. ೭೧-೫೭). [ದಢಕ್ + -ಅನೆ$_1$]

**ದಢೀರ್** (ನಾ). ಒಂದು ಅನುಕರಣ ಶಬ್ದ : ಅಲೆಯು ಬಂದು ದೋಣಿಯ ಪಾದಕ್ಕೆ ದಢೀರೆಂದು ಬಡಿದು, ಬಟ್ಟೆಯನ್ನು ಒದ್ದೆಮಾಡಿ ಹಿಂದಕ್ಕೆ ಹೋಯಿತು (ನೀತಿಚಿಂ. XI, ೨೫).

**ದಣದಣ**, ದಂದಣ, ದಂದಳ, ದಾಂದಣ (ನಾ). ೧. ಒಂದು ಅನುಕರಣ ಶಬ್ದ : ಕಾನನವೆಲ್ಲ ದಣದಣವೆಂದು ಪ್ರತಿಧ್ವನಿಗೊಡಹತ್ತಿತು (ಮುಂಬಯಿ. ೫-೩೦೩). **ದಂದಣ** : ೧. ದಿಂದಿಮಿ ದಂದಣ ತೊದಿಗಿದಿಮಿಕುದಿಮ್ಮೆಂದು ನಾನಾ ವಿಧದಲ್ಲಿ ವೃಂದಾರಕವೃಂದ ಬಾಜಿಸುತಿಹ ಸುರದುಂದುಭಿರವವ ಹಾಡಿದರು (ಭರಚ. ೧-೯೫). **ದಂದಳ** : ೨. ಗಲಾಟೆ; ಗೊಂದಲ : ತುಂಬಿದ ಮನೆಯ ಹೊಕ್ಕಡೆ ದಂದಳ [ಪಾಠಾಂ. ದ್ವಂದ್ವ] ವಾಯಿತ್ತು ಈ ಸಂದಳಿಗಾಱದೆ ತುಂಬಿದ ಮನೆಗೆ ಕಿಚ್ಚನಿಕ್ಕಿದಡೆ ನಿಶ್ಚಿಂತವಾಯಿತ್ತು (ಲಿಂಗವ. ೮೪-೯೯). **ದಾಂದಣ** : ೧. ಕಲ್ಪಾಂತವನದ ರವದಂತಿಂಬುವಡೆದ ತದ್ಗಂಭೀರಭೇರಿಯುರುದಾಂದಣರವಂ (ಕುಮಾಪು. ೭-೯೪).

ದಂದಣ ದತ್ತಣ ಎನ್ನು = ಬೇಡಿಕೊಳ್ಳು; ದಮ್ಮಯ್ಯಾ ಎನ್ನು : ಕೂಡಲ ಸಂಗಮ ದೇವರ ಮುಂದೆ ದಂದಣ ದತ್ತಣ ಎನ್ನಿ (ಬಸವ. ೦೭೬). ದಂದಣಾ ದಂದಣಾ ಎನ್ನು = ದಂದಣ ದತ್ತಣ ಎನ್ನು : ಎನ್ನೊಡೆಯ ಸಂಗನ ಬಸವಣ್ಣ ಪಣ್ಣಿಯ ದಂದವನಿಕ್ಕಿಕೊಟ್ಟ ಆ ದಂದುಗದಲ್ಲಿದೇನೆ ಆ ಮಾತಿಂಗೆ ದಂದಣಾ ದಂದಣಾ ಎನ್ನದೆ . . . ಚೆನ್ನ ಹೇಳಿದ ಮಾತು ಕೇಳಿರಣ್ಣಾ (ಸರ್ವವ. ೧೮-೯೦).

**ದಣಪೆ** (ನಾ). ದನಕರಂಗಳು ಒಳಗೆ ಬರದಂತೆ ಬೇಲಿಗೆ ಅಳವಡಿಸಿರುವ ಬಿದಿರು ಅಥವಾ ಬೊಂಬಿನ ಚೌಕಟ್ಟು : ಬೊಮ್ಮನನ್ನು ಶಪಿಸುತ್ತ ಮನೆಯ ದಣಪೆಯನ್ನು ಸಮೀಪಿಸುವಾಗ ಮೋನಪ್ಪನಾಯ್ಕರು ಭೆಟ್ಟಿಯಾದರು (ಮೂರುದಾ. ೧೧); ತುಂಗಕ್ಕ ದಣಪೆ ದಾಟಿ ತನ್ನ ಹಿತ್ತಲನ್ನು ಸೇರಿದ್ದನ್ನು ನೋಡಿದ ಚಂದ್ರಭಾಗಕ್ಕ . . . ಗಂಡನನ್ನು ಪ್ರತಿಭಟಿಸುತ್ತ ಕೇಳಿದಳು (ಮೂರುದಾ. ೩೯); ಅವರು ಗಂಗೊಳ್ಳಿಯವರ ದಣಪೆ ತಲುಪಿದ್ದರು. ಶಿನ್ನಪ್ಪ ಮಾತು ಬೆಳೆಸುವ ಮನಸ್ಸಿಲ್ಲದವನಂತೆ ದಣಪೆ ಹೊಕ್ಕ (ಅಜೋಲೀ. ೦೫೫). [< ತಡಮೆ]

**ದಣಬ** 'ದಳಿಂಬ' ನೋ.

**ದಣಸಿ** (ನಾ). (ಕರಾ) ಒಂದು ಬಗೆಯ ಮೀನು. [?]

**ದಣಾಯಕ** 'ದಣ್ಣಾಯಕ' ನೋ.

**ದಣಾಯಕಪಟ್ಟ** (ನಾ). ಸೇನಾಪತಿಯ ಪಟ್ಟ,-ಅಧಿಕಾರ : ಮನ್ನಣೆಯೊಳಂ ದಣಾಯಕಪಟ್ಟಮಂ ಕಟ್ಟಿಯುನ್ನತದ ಭದ್ರಗಜಮಸ್ತಕವನಡರಿಸುತ (ಪ್ರಭುಪು. ೭-೨೮). [ದಣಾಯಕ (< ದಣ್ಣಾಯಕ) + ಪಟ್ಟ$_3$]

**ದಣಾಯಕಸಾಮ್ಯ** (ನಾ). ದಂಡನಾಯಕನಿಗೆ ಕೊಡುವ ಸುಂಕ : ದಣಾಯಕಸಾಮ್ಯ ಸಹ ಗ ೨೪ (ಮೈಆರಿ. ೧೯೩೪, ೨೭-೦೫; 1430). [ದಣಾಯಕ (< ದಣ್ಣಾಯಕ) + ಸಾಮ್ಯ$_1$]

**ದಣಾವಟಿ**. 'ದಣುವಟ್ಟಿ' ನೋ.

**ದಣಿ$_1$** 'ತಣಿ$_1$' ನೋ.

**ದಣಿ$_2$** 'ದನ್ನಿ' ನೋ.

**ದಣಿಂಬ** 'ದಳಿಂಬ' ನೋ.

**ದಣಿಕೆ** (ನಾ). ಆಯಾಸ; ದಣಿವು : ನನಗಂತೂ ದಣಿಕೆ ಆಗಿ ನಿದ್ದೆ ಬಂದದ (ನಡದಾ. I, ೩೫೫). [ದಣಿ$_1$ (< ತಣಿ$_1$) + -ಕೆ]

**ದಣಿಬ** 'ದಳಿಂಬ' ನೋ.

**ದಣಿಬು** 'ದಳಿಂಬ' ನೋ.

**ದಣಿಬಿ** (ನಾ). ಒಂದು ಬಗೆಯ ಮೃಗ (?) : ಗಿಳಿಗಳನು ನವಿಲುಗಳ ವೃಶ್ಚಿಕಗಣಗಳನು ನಂದೀಶ ತಗರಿನ ದಣಿಬಿಗಳ ವರಹುಲ್ಲೆ ಮೊದಲಾಗಿರ್ದ ಮೃಗಗಣವ (ಕೋಗಯು. ೯-೩೪) [?]

**ದಣಿಯಿಸು** 'ತಣಿಯಿಸು' ನೋ.

**ದಣಿಯುಣ್** 'ತಣಿಯುಣ್' ನೋ.

**ದಣಿವಟ್ಟೆ** 'ದಣುವಟ್ಟೆ' ನೋ.

**ದಣಿವಾಗು** (ಕ್ರಿ). ಜಡ್ಡುಬೀಳು; ಖಾಯಿಲೆಯುಂಟಾಗು: ಅವನು ದಣಿವಾಗಿ ಬಿದ್ದಿದ್ದಾನೆ (ರೂಢಿ). [ ದಣಿವು (<ತಣಿವು) + ಆಗು₁ ]

**ದಣಿವಾರಿಸು,** ದಣುವಾರಿಸು (ಕ್ರಿ). ದಣಿವನ್ನು ನಿವಾರಿಸು; ಆಯಾಸವನ್ನು ಪರಿಹರಿಸು: ಅವರು ಮರದ ನೆರಳಿನಲ್ಲಿ ಕುಳಿತು ದಣಿವಾರಿಸಿಕೊಂಡರು (ರೂಢಿ). **ದಣುವಾರಿಸು:** ವಿಸ್ತಾರವಾದ ಸಮುದ್ರವು ದಿಗಂತದ ವರೆಗೆ ವ್ಯಾಪಿಸಿತ್ತು. ಇದನ್ನು ನೋಡುತ್ತಾ ದಣುವಾರಿಸಲಿಕ್ಕೆ ನಿಂತಾಗ ಸೂರ್ಯನು ಇನ್ನೂ ಮೂಡಿ ಬಂದಿದ್ದಿಲ್ಲ (ನಿಷ್ಕಾಮ. ೧೧೨).
[ ದಣಿವು (<ತಣಿವು) + ಆರಿಸು₂ (<ಆಱಿಸು) ]

**ದಣಿವು** 'ತಣಿವು' ನೋ.

**ದಣಿವುದೋರು** (ಕ್ರಿ). ಆಯಾಸವನ್ನು ತೋರ್ಪಡಿಸು; ಬಳಲಿಕೆಯನ್ನು ತೋರಿಸು: ದಣಿವುದೋರದ ಆ ಮುಖದ ಮುಗುಳುನಗೆ, ಸ್ನೇಹ ತುಂಬಿದ ಜೀಕು (ನೆಲಮು. ೭೬-೧).
[ ದಣಿವು (<ತಣಿವು) + ತೋರು (<ತೋಱು) ]

**ದಣಿವುಹತ್ತು** (ಕ್ರಿ). ಆಯಾಸಹೊಂದು; ಬಳಲು: ಯಾರ ಹತ್ತಿರವೂ ಹೆಚ್ಚಿನ ಮಾತಿಲ್ಲ – ಮಾತನಾಡಿದರೇ ದಣಿವುಹತ್ತುತ್ತಿದ್ದಂತೆ (ಮೂರುದಾ. ೨೭೩). [ ದಣಿವು (<ತಣಿವು) + ಹತ್ತು₁ (<ಪತ್ತು₁) ]

**ದಣಿವೈದಿಸು** (ಕ್ರಿ). ಬಳಲುವಂತೆ ಮಾಡು; ಆಯಾಸಪಡಿಸು: ಮೆಲ್ಲಗೆ ಬಸುಱಿಳಿಪ್ಪ ದಣಿವೈದಿ[ಪಾಠಾಂ. ತಣಿವೈದಿ,ತಣಿವೆಯಿದಿ]ಸದೆ ಮುಱುಗಿ ಸಿಡಿಮಿಡಿಗೊಂಡು ಕಂಬನಿಗಳು ಒಗುವ ಕಣ್ಣಿಂ ನೋಡಿ (ಸೋಮಕ. ೧-೭೭). [ ದಣಿವು (<ತಣಿವು) + ಐದಿಸು (<ಎಯ್ದಿಸು) ]

**ದಣಿವೈದು** (ಕ್ರಿ). ಆಯಾಸಹೊಂದು; ಬಳಲು. 'ದಣಿವೈದಿಸು' ಪರಾ.
[ ದಣಿವು (<ತಣಿವು) + ಐದು₁ (<ಎಯ್ದು) ]

**ದಣಿಸು** 'ತಣಿಯಿಸು' ನೋ.

**ದಣುಬ** 'ದಳಿಂಬ' ನೋ.

**ದಣುವಟ್ಟ,** ದಣಾವಟಿ., ದಣಿವಟ್ಟೆ, ದಣುವಟ್ಟೆ, ದಣುವೊಟ್ಟೆ, ಧಣುವಟ್ಟ, ಧಣುವಟ್ಟೆ, ಧನುವಟ್ಟೆ (ನಾ). ಒಂದು ಬಗೆಯ ಕುಸ್ತಿ ವರಸೆ; ಮಲ್ಲರ ಕಾಳಗದಲ್ಲಿ ಒಂದು ವರಸೆ: ಅಂ ಪಿಡಿದುದೆ ಕತ್ತರಂ ಕರವಳಂ ಸೆರವಟ್ಟಣೆ ಹತ್ತ ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದಣುವಟ್ಟೆ ಪಟ್ಟಸಂ (ಅನಂಪು. ೨-೨೭); ತಳಹತ್ತಂ ದಣು[ಪಾಠಾಂ. ಧಣು, ಧನು]ವಟ್ಟ ಖೊಪ್ಪರಮುರೋಬಂಧಂ ಲತಾಬಂಧ ಮುಜ್ಜ್ವಳಶಾಖಾಚರಬಂಧಮಾಯತಿಕೆಬಂಧಂ ಡೊಕ್ಕರಂ ಪಟ್ಟಸಂ . . . ಬಾಹುತಳಂ ಚಮತ್ಕರಿಸೆ ನಾನಾ ಕೌಶಲಂದೋಱಿದರ್ (ಶಬಶಂ. ೪-೭೫). **ದಣಾವಟಿ:** ಎಸೆವ ಮುಹಗ್ಗಳಂ ಠಡಕಿ . . . ದಣಾವಟಿ. [ಪಾಠಾಂ. ವನ್ನಿಮುಟ್ಟ] ಚಟ್ಟುಸಿರಣವಟ್ಟ ಬಾಹುದಣಿ . . . ಸಸಿಕುವನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (ಚಂದ್ರಪು. ೫-೭೪). **ದಣಿವಟ್ಟೆ:** ಪಿರಿದು ದಣಿವಟ್ಟೆ ಪಟ್ಟಿಸ ಕರವಳಯ ಭುಜಂಗ ಬಂಧತಳ ಕೊಪ್ಪರ ಡೊಕ್ಕರ ತೋರಹಸ್ತಮೆಂಬಿವನುರುತರದಿಂ ತೋಱಿ ಬಿಡದೆ ಕಾದುತ್ತಿರ್ದರ್ (ತ್ರಿಪುವಿ. ೨೬-೦೯). **ದಣುವಟ್ಟೆ:** ಎಳೆದು ದಣುವಟ್ಟೆ[ಪಾಠಾಂ. ವೊಟ್ಟೆ] ಯುಲಿ ಬೊಪ್ಪರದೊಳಗೆ ಜಾಳಿಸಿ ಚಿಮ್ಮಿ ಝಡಿತೆಯು ಸೆಳೆದು ಮುಡುಹಿನ ಲೌಕಿ ಬಿಗಿದರು ಪಟ್ಟಮುಡುಹಿನಲಿ (ಕುಮಾವ್ಯಾಸ. ೨-೯೮). **ದಣುವೊಟ್ಟೆ:** 'ದಣುವಟ್ಟೆ' ಉಲ್ಲೇಖಕ್ಕೆ ಕೊಟ್ಟಿರುವ ಪ್ರಯೋಗದ ಪಾಠಾಂತರವನ್ನು ನೋಡಿ. **ಧಣುವಟ್ಟ:** ಕರವಳಯ ತಳಹತ್ತ ಡೊಕ್ಕರ ಶಿರವ ಧಣು ಧಣುವಟ್ಟ ತಳಖೊಪ್ಪರ ದುವಂಗುಲ ಕಂದ ಡೊಕ್ಕರ ತೋರ ಹತ್ತದಲಿ . . . ತೋಱಿದರು ಕೌಶಲವ (ಕುಮಾವ್ಯಾಆ. ೬-೨೯). **ಧಣುವಟ್ಟೆ:** 'ದಣುವಟ್ಟೆ' ಉಲ್ಲೇಖಕ್ಕೆ ಕೊಟ್ಟಿರುವ 'ಶಬಶಂ' ಪ್ರಯೋಗದ ಪಾಠಾಂತರವನ್ನು ನೋಡಿ. **ಧನುವಟ್ಟೆ:** 'ದಣುವಟ್ಟೆ' ಉಲ್ಲೇಖಕ್ಕೆ ಕೊಟ್ಟಿರುವ 'ಶಬಶಂ' ಪ್ರಯೋಗದ ಪಾಠಾಂತರವನ್ನು ನೋಡಿ.
[ ? ]

**ದಣುವಟ್ಟೆ** 'ದಣುವಟ್ಟ' ನೋ.

**ದಣುವಾರಿಸು** 'ದಣಿವಾರಿಸು' ನೋ.

**ದಣುವಿಕೆ** (ನಾ). ಆಯಾಸ; ಶ್ರಮ; ದಣಿವು: ವಸಧಿಯೊಳು ಸಪ್ತದ್ವೀಪದ ವ್ಯತ್ತಿಕೆ ಹಾಕಿ ದಣುವಿಕ್ಕಲ್ಲದೆ ಪೂರ್ಣವಹುದೆ (ವಿದಾಕ್ಕ. ೪೮-೧೬).
[ ದಣುವು (<ತಣಿವು) + – ಇಕೆ ]

**ದಣುವು** 'ತಣಿವು' ನೋ.

**ದಣುವೊಟ್ಟೆ** 'ದಣುವಟ್ಟ' ನೋ.

**ದಣ್ಣ** 'ದರಣ₁' ನೋ.

**ದಣ್ಣಾಯ** (ನಾ). ಜುಲ್ಮಾನೆಯಿಂದ ಬಂದ ಹಣ,–ಆದಾಯ: ಭಂಡಿಯ ಬತ್ತದ ಸುಂಕ ಉಪ್ಪರ ನೆಲವಳಿ ಅನುಪು ಆಳು ಅರ[ಕಾ]ಣಿಕೆ ಕಡಾಯಮು ದಂಣಾಯಮವಾರರು ಪಂನ್ ಓ (ಸೌಇಇ. IX-ii, ४३೮-೧೭ ; 1418).
[ <ದಂಡಾಯ ]

**ದಣ್ಣಾಯಕ,** ಡಣಾಯಕ, ಡಣ್ಣಾಯಕ, ದಣಾಯಕ, ದಣ್ಣಾಯ್ಕ (ನಾ). ೧. ದಂಡಿನ ಒಡೆಯ; ಸೇನಾಪತಿ; ದಂಡನಾಯಕ; ಸರದಾರ: ದಾದಿ ಸೋಮೆಯ ದಂಣಾಯಕರ ಕುಮಾರ ಬಲಪ್ಪ ದಂಣಾಯಕರ ಪ್ರಧಾನ ಕಳುವ ಚಿಕವಿಠಪ್ಪನವರ ಆಕ್ಕ (ಎಕ. X (S), ಕೋಲಾರ. ೩೨-೫ ; 1342) ; ಆರಗದ ದೇವಪದಂಣಾಯಕವೊಡೆಯರ ಮಕ್ಕಳು (ಎಕ. VII, ಶಿವಮೊ. ೧೧-೯ ; ಸು. 1400) ; ಆ ನಾಡಿನ ಒಬ್ಬ ಪಡೆವಳನು ಮಿತಪರಿವಾರನಾಗಿ ದಣ್ಣಾಯಕನನ್ನು ಎದುರುಗೊಂಡನು (ಸನತಿ. ೫೫). ೨. ಉನ್ನತ ಅಧಿಕಾರಿ; ಪ್ರಧಾನಾಧಿಕಾರಿ: ಬಲ್ಲಿದನೆ ಬಾಣಾಸುರನ ಬಾಗಿಲಂ ಕಾದೆ ಕಲ್ಯಾಣದೊಳು ಬಸವ ದಣ್ಣಾಯಕಂಗೊಲಿದೆ (ಹಂಗೂರ. ೯೫-೧೮) ; ಬಿಜ್ಜಳಂ ಕಂಡು ಕೇಳ್ದು ದಣ್ಣಾಯಕರ ಪದತಳಕ್ಕೆಱಗಿ (ಬಸರ. ೬-೮೭). **ಡಣಾಯಕ:** ೧. ಚಾಮರಾಜಂಗೆ ರಾಜ್ಯಾಭಿಷೇಕಂಗೆಯ್ದು, ತನ್ನ ಕುವರಂಗೆ ಪಡುವಣ ಡಣಾಯಕನ ಕೋಂಟೆಯಂ . . . ಇತ್ತು (ಚಿಕವಂ. ೫೨-೭) ; ಇವರೂ ಸಹ ನಿಮ್ಮಂತೆಯೇ ಪೂರ್ವಾಶ್ರಮದಲ್ಲಿ ಡಣಾಯಕರಾಗಿದ್ದು ಈಗ ದಾಸರಾಗಿದ್ದಾರೆ (ಹೇಮಕೂ. ೮೯) ; ಕೊತ್ತಳದ ಮೇಲೆ ಅರಮನೆಯ ಮನ್ನೆಯರು, ಪಸಾಯಿತರು, ಡಣಾಯಕರು . . . ನಿಂತಿದ್ದರು (ರೂಲೇಖ. ೩). **ಡಣ್ಣಾಯಕ:** ೧. ಬಾಹತ್ತರ ನಿಯೋಗಾಧಿಪತಿ ಪರಮವಿಶ್ವಾಸಿ ಬಿಲವೊಳ ಡಣ್ಣಾಯಕರ ಬವಣೆಯಲು ಕೊಮಾರನ ಬೀಡಿನ ಕೊಟ್ಟಿಗೆಯ ಮಾರೆಯನಾಯಕನ ಮಗ . . . ಕಾದಿ ಹಲರಂ ಕೊಂದು (ಮ್ಯಾಆರಿ. ೧೯೩೮, ೪೦-೬; 1223). **ದಣಾಯಕ:** ೧. "ದಣಾಯಕ (ದಣ್ಣಾಯಕ) = ದಂಡನಾಯಕ" (ಶಬ್ದಕೋ. ೧೮) ; ಮಂದಿಯನಂ ಹಿಂದಕ್ಕ ನೀಉ ಆತು ಬಂನಿಯೊಂದು ಮಂಗಪ್ಪ ದಣಾಯಕರೂ ನಿರೂಪವ ಕೊಟ್ಟು (ಕಇ. I, ೩೫-೫; 1398 ?) ; ಗವುರಪ್ಪದಣಾಯಕರ ಕಾಲದಲೂ (ಸೌಇಎ. ೧೯೩೨, ಉಡುಪಿ. ೨೭೦-೭ ; 1494) ; ಆ ದಣಾಯಕನ ಬಳಿಯೊಳೋಲಗಿಸುತ್ತೆ ಕುಳಿತು ಶಿವಸುಖದೊಳೊಪ್ಪಿರ್ದನಾನಂದದಿಂದೆ (ಸಿದ್ಧೇಪು. ೨೧-೭೭); ಆಯತಂ ಕರೆಯಿಸೆನೆ ತನ್ನ ದಣಾಯಕನ ಕಳುಹಿದನು ಶಂಕರದಾಸಿಯಿದ್ದೆಡೆಗೆ (ಶಂಕರದಾ. ೦೦-೩೪) ; ಸಾಲೀಮಠಕ್ಕೆ ಯಾರೋ ದಣಾಯಕರು ಬಂದಿದಾರೆ, ದಣಾಯಕರು ! (ತುಂಗಭ. ೩). ೨. ಚೆನ್ನಬಸವಣ್ಣಂಗೆ ಕೈಮುಗಿದು ತತ್ತ್ವಸಂಪನ್ನ ಕೇಳಿದೆ ದಣಾಯಕಬಸವರಾಜನೈತಂದನೆನೆ (ಚಬಪು. ೬-೩). **ದಣ್ಣಾಯ್ಕ:** ೧. ಶ್ರೀಮನುಮಹಾ

ಪ್ರಧಾನಂ ಮೆದಗಿದೇವದಂಡನಾಯ್ಕ ಮಹಾಪ್ರಧಾನಂ ಮಾಚಯ ದಂಣ್ನಾಯ್ಕರುಂ . . . ರಾಜ್ಯಂಗೆಯ್ಯುತ್ತಮಿರಲು (ಎಕ. XI, ಚಿತ್ರದು. ೧-೩೦ ; 1210) ; ಬಸವೆಯ ದಂಣಾಯ್ಕರ ನಿರೂಪದಿಂ (ಮೈಆರಿ. ೧೯೩೮, ೪-೫ ; 1369) ; ಶ್ರೀಮನ್ಮಹಾಪ್ರಧಾನಂ ಇರುಗಪ್ಪದಂಣಾಯ್ಕಒಡೆಯರ ಹೆಸರ ತೂಬಿನ ಕಂಭ (ಎಕ. XVI, ಕುಣಿಗ. ೫೦-೨ ; 1394).

[ <ಸಂ. ದಂಡನಾಯಕ ]

**ದಣ್ಣಾಯಕಿತ್ತಿ** (ನಾ). ಸೇನಾಪತಿಯ ಹೆಂಡತಿ: ಮಾದಿಗಿದೇವದಂಣ್ನಾಯಕರ ಅರಸಿ ಮಾಯಿದೇವಿದಂಣ್ನಾಯಕಿತ್ತಿರ ಹೆಸರ (ಎಕ. XV, ಹೊಳೆನ. ೫೯-೫೮ ; 1316). [ ದಣ್ಣಾಯಕ + –ಇತ್ತಿ ]

**ದಣ್ಣಾಯ್ಕ** 'ದಣ್ಣಾಯಕ' ನೋ.

**ದಣ್ಣಿಕ್ಕು** (ಕ್ರಿ). ದಂಡನಮಸ್ಕಾರ ಹಾಕು ; ಅಡ್ಡಬೀಳು : ಶಿಂಗ್ನಾ ಚಾರಿಯು ಉದ್ದಕ್ಕೂ ದಣ್ಣಿಕ್ಕಿ ಕ್ಷಮಿಸಬೇಕು ಸ್ವಾಮಿ . . . ಎಂದನು (ಬೈಸರ್ವ. ೭). [ <ದಂಡ + ಇಕ್ಕು ]

**ದಣ್ಣೆರು** (?) (ನಾ). (?): ಮುವತ್ತುನಾಲ್ಕು ಮಂಡಿ ಅಕ್ಕಿ ಗೇಣೆಯಿಕ್ಕುವ ಬಾಳು ಆ ಬಾಳಿನ ಚತುಸ್ಸೀಮೆಯ ವಿವರ ಮೂಡಲು ದಣ್ಣೆರ ಸಾಲಿಂದಂ ಪಡುವಲು ತೆಂಕಲೂ ದಣ್ಣೆರ ಸಾಲಿಂದಂ ಬಡಗಲು . . . ಗಡಿಯಿಂದಂ (ಸೌಇಇ. IX-ii, ೪೭೪-೧೨ ; 1472). [ ? ]

**ದತ್ತ** (ಗು). ೧. ಕೊಟ್ಟ ; ನೀಡಿದ : ಚಕ್ರವರ್ತಿ ಯತಿರಾಜಗಣಾಗ್ರಣಿ ದತ್ತವಿತ್ತಭಾಜನ ಕವಿ . . . ಜಿನಚಂದ್ರಮುನೀಂದ್ರಂ (ಶಾಂತಿಪು. ೧-೨೬) ; ತಂದೆಗವನತನಾದಂ ಆಗಿ ದೌವಾರಿಕ ದತ್ತ ಕನಕವಿಷ್ಟರಮನಗಲೆ ನೂಂಕಿ (ಪುಷ್ಪಪು. ೪-೭೦ ವ) ; ದುಸ್ತರಜ್ಞಾನಪ್ರಪಂಚತಮಸ್ತತಿಪ್ರಹರಾರ್ಥ ದತ್ತಪ್ರಸ್ತುತಜ್ಞಾನಪ್ರತಾನ ಶ್ರೀಗುರುವೆ ಜಯತು (ಬಸಪು. ೭-೧೬). ೨. ದಾನಮಾಡಿದ . 'ದತ್ತಾಪಹಾರ' ಪರಾ. (ನಾ). ೩. ಉಪಾಯನ; ಕೊಡುಗೆ ; ಕಾಣಿಕೆ ; ದಾನ : ದತ್ತಾ ಕೊಟ್ಟು ಮತ್ತೆ ಕೇಳಿದವ ಎತ್ತಿ ಗಿಂತ ಕಡೆ (ಗಾದೆ). ೪. ಸ್ವೀಕಾರಮಾಡಿಕೊಂಡ ಮಗ ; ದತ್ತುತೆಗೆದು ಕೊಂಡ ಮಗ ; ಔರಸನಲ್ಲದ ಪುತ್ರ : ದತ್ತನು ಮಗನಲ್ಲ ಧಾವಳಿ ಮಡಿಯಲ್ಲ ಭಟ್ಟನು ಭಟನು ತಾನಲ್ಲ (ಇಂಡಾಪ. ೦೭೦-೪೨). ೫. ದತ್ತಾತ್ರೇಯ. ೬. ಕೆಲವು ಹೆಸರುಗಳ ಮುಂದೆ ಸೇರುವ ಒಂದು ಪದ. ಉದಾ. ಗುರುದತ್ತ, ಭಾನುದತ್ತ.

**ದತ್ತ ವಸ್ತು** = ಕೊಟ್ಟ ವಸ್ತು : ಲೇಖಕನ . . . ಕಾರ್ಯ ಪೂರ್ಣಗೊಳ್ಳುವುದಕ್ಕೆ ಮುನ್ನ ಮತ್ತೊಂದು ಅಂಶ ಬೇಕಾಗುತ್ತದೆ. ದತ್ತವಸ್ತುವನ್ನು ಕ್ರಮ, ಸಾಮರಸ್ಯ, ಸೌಂದರ್ಯ, ಪರಿಣಾಮಸಾಮರ್ಥ್ಯ ಇವುಗಳ ತತ್ತ್ವಗಳಿಗನುಗುಣವಾಗಿ ರೂಪಿಸಬೇಕಾಗುತ್ತದೆ (ಸಾಹಿಪ್ರ. ೯). **ದತ್ತ ಹಾಕು** = ದಾನವಾಗಿ ಬರೆದುಕೊಡು : ವಿಜಯನಗರದ ಸಾಮ್ರಾಜ್ಯ ಕಾಲದಲ್ಲಿ ಮಂತ್ರಿಗಳಾದ ಮಾಧವಾಚಾರ್ಯರು . . . 'ದತ್ತ' ಹಾಕಿ ಕೊಟ್ಟರು. ಇದು ಈಗಲೂ ವಸೂಲು ಬರುತ್ತಾ ಉಂಟು (ತುಳುನಾ. ೧೧೭). **ದತ್ತಾರ್ಥಿಕಾಂಚನ**=ಕೇಳಿದವರಿಗೆಲ್ಲಾ ಹಣವನ್ನು ನೀಡುವವನು: ಅರ್ಥಿಜನಕ್ಕೆ ಕಾಂಚನದಾನಮಾಡಿದವನು ; ಒಂದು ಬಿರುದು : ಕಾದಂಬಚಕ್ರಿ ಮಯೂರವರ್ಮ್ಮ . . . ಸಿಂಘಲಾಂಛನ ದತ್ತಾರ್ತ್ಥಿಕಾಂಚನ ಸಮರದಯಕಾರಣ ಪ್ರತಾಪಮಾರ್ತ್ತಂಡ ಮಾರ್ಕೊಳುವರ ಗಂಡ ನಾಮಾದಿ ಸಮಸ್ತಪ್ರಸಸ್ತಿಸಹಿತಂ (ಸೌಇಇ. XX, ೬೬-೧೨ ; 1118).

[ ಸಂ. ]

**ದತ್ತಕ** (ನಾ). ೧. ಸ್ವೀಕೃತ ಪುತ್ರ ; ತಾಯಿ ತಂದೆಗಳು ಮಕ್ಕಳಿಲ್ಲದವರಿಗೆ ದಾನಮಾಡಿ ಕೊಟ್ಟ ಮಗ ; ದತ್ತುಪುತ್ರ ; ಔರಸಪುತ್ರನಲ್ಲದ ಮಗ : ದತ್ತಕಮಗನನ್ನು ಮಾಡಿಕೊಂಡರೆ ಏನು ತಪ್ಪು ? (ವೈದ್ಯರಾ. ೪೧). ೨. ದತ್ತುಪುತ್ರಸ್ವೀಕಾರ : ಆ ಊರ ದೇಶಪಾಂಡೆಯವರ ಮನೆಯಲ್ಲಿ ಒಂದು ದತ್ತಕವಾಯಿತು (ಮೇದಿಪು. ೦) ; ವಶಿಷ್ಠಸ್ಮೃತಿ . . . ಗೃಹಸ್ಥಧರ್ಮ, ಪಾಪಿಷ್ಠಳಾದ ಪತ್ನಿಯ ತ್ಯಾಗ, ಅನಧ್ಯಯನ, ದತ್ತಕ, ಸಾಕ್ಷಿ, ರಾಜಧರ್ಮ ಮತ್ತು ಪ್ರಾಯಶ್ಚಿತ್ತ ವಿಚಾರಗಳಿವೆ (ಭಾರದ. ೬೬).

**ದತ್ತಕ ಮಾಡಿಕೊಳ್ಳು**=ದತ್ತುಮಗನನ್ನಾಗಿ ಸ್ವೀಕರಿಸು; ಮಗ್ಗನನಾಗಿ ಸ್ವೀಕರಿಸು : "ತಾವು ಚಿಕ್ಕನಹಳ್ಳಿ ಚಾಮೇಅರಸಿನವರ ೩ ವರ್ಷ ವಯಸ್ಸಿನ ಪುತ್ರರನ್ನು ದತ್ತಕ ಮಾಡಿಕೊಂಡು ಆ ಬಾಲಕರಿಗೆ ಪಟ್ಟವನ್ನು ಕೊಡಬೇಕು (ಒಡಕ. ೬೦) ; ಮುಪ್ಪು ಒತ್ತಿಬರುವ ಹೊತ್ತಿನಲ್ಲಿ, ಸದ್ಗತಿಯ ಆಶೆಯಿಂದ ಪಂತಮಾಮಾ ದತ್ತಕ ಮಾಡಿಕೊಂಡಿದ್ದರು (ದೀಪಹ. II, ೧೫೭). **ದತ್ತಕರಾದವರು** = ಹೆಚ್ಚು ವಿಶ್ವಾಸವುಳ್ಳವರು ; ಮಾರುಹೋದವರು : ಪರಸಂಸ್ಕೃತಿಗೆ ದತ್ತಕರಾದವರು ಹೆಚ್ಚುತ್ತ ಬಂದಹಾಗೆಲ್ಲ ಜನಾಂಗವು . . . ನಾಶವನ್ನು ಪಡೆಯುವುದು (ನೀಗಟ್ಟು. ೫೩). **ದತ್ತಕ ಹೋಗು** = ಸ್ವೀಕೃತ ಮಗನಾಗು ; ದತ್ತುಮಗನಾಗಿ ಸ್ವೀಕರಿಸಲ್ಪಡು : ಆ ಮನೆತನಕ್ಕೆ ದತ್ತಕ ಹೋದೆ (ಅಶ್ವಮೇ. ೩೪). [ ಸಂ. ]

**ದತ್ತಕನಿಷ್ಠಿಕ** (ನಾ). (ಎಣಿಕೆಯಲ್ಲಿ) ಕಿರುಬೆರಳನ್ನು ಮಡಿಸಿ ಎಣಿಸಬೇಕಾದವನು ; ಮೊದಲನೆಯವನು: ಸುಕವಿಜನಗಣನೆಯೊಳ್ ದತ ಕನಿಷ್ಠಿಕನಾಗೆ ಕಾಳಿದಾಸಂ ಮೊದಲೆಂದು ಕರಂ ಬಣ್ಣಿಪರದಱಿಂದೆ ಕಾಳಿದಾಸಂಗೆ ದಾಸರೆನಿಪರ್ ಕವಿಗಳ್ (ಜಗವಿ. ೧-೯) ; ಈ ನೆಲದೊಳ್ ಸಂದ ಬೀರರ ಲೆಕ್ಕಕ್ಕೆ ದತ್ತಕನಿಷ್ಠಿಕನಾಗಿ ಅಲರ್ಗೊಡೆಯನಡಿಮಲರ ಬಂಡುಣಿಯೆಂಬೊಂದು ಬಿರುದಂ ತಾಳ್ದಿ (ರಾಮಾಶ್ವ. ೯೬-೮).

[ ಸಂ. ದತ್ತಕನಿಷ್ಠಿಕ (ದತ್ತಾ + ಕನಿಷ್ಠಿಕಾ + –) ]

**ದತ್ತಕಮಗಳು** (ನಾ). ಸ್ವೀಕೃತಪುತ್ರಿ ; ದತ್ತುಪುತ್ರಿ : ರುಮಾದೇವಿಯು ಸಂಜೀವಿನೀ ಸ್ಟುಡಿಯೋದ 'ದತ್ತಕಮಗಳು' ಎಂಬಂತೆ ಇದ್ದಳು (ಹೇಮಂತ. ೩೨೩). [ ದತ್ತಕ + ಮಗಳು (<ಮಗಳ್) ]

**ದತ್ತಗೇಡಿ** (ನಾ). ಅದೃಷ್ಟವಿಲ್ಲದವನು ; ನತದೃಷ್ಟ ; ಕೊಟ್ಟುದನ್ನು ಹಾಳುಮಾಡಿಕೊಳ್ಳುವವನು; ದಂಡ್ಯೆವಿ: ದತ್ತಗೇಡಿಗೆ ಕೊಟ್ಟವರಿಲ್ಲಂತ ದೈವಾನರದು ಕಸಗೊಂಡವರಿಲ್ಲಂತ . . . ವತನದಾರ ಮನ್ಯಾಗ ಹುಟ್ಟಿ ಮಾಡೇದಾಗ ಬೆಳದಿವಿ (ಅಲ್ಪವಿ. ೧೦೮). [ ದತ್ತ + ಕೇಡಿ$_1$ ]

**ದತ್ತನಂದನ** (ನಾ).=ದತ್ತಕ ೧ : ತನಗೆ ತಾನೆ ದೊರಕೊಂಡವಂ ದತ್ತನಂದನನಿವಂ ತನಗೆಂದವಂ ಮುದದೆಡೊಳೆತ್ತಿಕೊಂಡು (ಜೈಮಿಭಾ. ೨೮-೫೭).

[ ದತ್ತ + ನಂದನ ]

**ದತ್ತಪುತ್ರ** (ನಾ).=ದತ್ತಕ ೧ : ಅವಂ ನರಸಿಂಗವೊನೆಯರ್ ಪೆತ್ತ ಮಗನಲ್ಲಂ ಕೊಂಡು ಸಾಕಿದ ದತ್ತಪುತ್ರಂ (ನಂಬಿರ. ೭-೩೯) ; ದತ್ತಪುತ್ರನಿಗೆ ಪಿತೃಭಕ್ತಿ ಹುಟ್ಟುವದೋ ? (ಗಾದೆ). [ ದತ್ತ + ಪುತ್ರ ]

**ದತ್ತಮಂಡಲ** (ನಾ). ಕಡಪ, ಕರ್ನೂಲು, ನೆಲ್ಲೂರು, ಬಳ್ಳಾರಿ ಮತ್ತು ಅನಂತಪುರ ಎಂಬ ಐದು ಜಿಲ್ಲೆಗಳಿಂದ ಕೂಡಿದ ಪ್ರದೇಶ : ಈ ಬೃಹದ್ಬಾಣರು ಈ ಕಾಲದಲ್ಲಿ ಪಲ್ಲವರ ಸಾಮಂತರಾಗಿ ದತ್ತಮಂಡಲ (Ceded Districts) ದ ಕೆಲಭಾಗ (ಶ್ರೀಶೈಲದ ಮಗ್ಗುಲಿನ ಭಾಗ) ಗಳನ್ನು ಆಳುತ್ತಿದ್ದರು (ಕರ್ಣಾಅ. ೪). [ ದತ್ತ? + ಮಂಡಲ ]

**ದತ್ತಯ್ಯ** (ನಾ). ೧. ದತ್ತಾತ್ರೇಯ. ೨. ಇನ್ನೊಬ್ಬರ ಕರುಣೆಯನ್ನು ಯಾಚಿಸುವಾಗ ಬಳಸುವ ಪದ : ಅಂಗಲಾಚಿ ಬೇಡಿಕೊಂಡು ದತ್ತಯ್ಯ ಅಂದರೂ ಅವಳು ತಾನು ಹಿಡಿದ ಹಠವನ್ನು ಸಾಧಿಸಿಯೇ ಬಿಟ್ಟಳು (ರೂಢಿ). [ ದತ್ತ + ಅಯ್ಯ$_1$ ]

**ದತ್ತಸಂಖ್ಯೆ** (ನಾ). ಕೊಟ್ಟಿರುವ ಅಂಕಿ ; ಕೊಟ್ಟ ಸಂಖ್ಯೆ : ದತ್ತಸಂಖ್ಯೆಗಳು ಅಪವರ್ತನವಾಗಿರುವ ಕನಿಷ್ಠಸಂಖ್ಯೆಗೆ ಅವುಗಳ ಲಘುತಮ ಸಾಮಾನ್ಯ ಅಪವರ್ತ್ಯ (ಲ.ಸಾ.ಅ.) ಎಂದು ಹೆಸರು (ಕವಿಕೋ. I, ೩). [ ದತ್ತ + ಸಂಖ್ಯೆ ]

**ದತ್ತಸ್ವಾತಂತ್ರ್ಯ** (ನಾ). [ದ್ವೈತ] ಭಗವಂತನಂ ಜೀವನಿಗೆ ಕೊಟ್ಟ ಆಂಶಿಕವಾದ ಸ್ವಾತಂತ್ರ್ಯ : ಪರಮಾತ್ಮನು ಜೀವನಿಗೆ ಕೊಟ್ಟ ಅಲ್ಪವಾದ ದತ್ತಸ್ವಾತಂತ್ರ್ಯದಿಂದ "ಜೀವೋಪಿಕರ್ತಾ" ಎಂದು . . . ಸೂಚಿಸುತ್ತಾ ತತ್ಸಂಬಂಧವಾದ ಕೆಲವು ತತ್ತ್ವವಿಚಾರಗಳನ್ನು ಹೇಳುತ್ತಾರೆ (ಹಸಾರ. ೧೬-೦ ಅವತಾರಿಕೆ). [ದತ್ತ + ಸ್ವಾತಂತ್ರ್ಯ]

**ದತ್ತಸ್ವೀಕಾರ** (ನಾ). ದತ್ತು ತೆಗೆದುಕೊಳ್ಳುವಿಕೆ ; ದತ್ತುಸ್ವೀಕಾರ : ಸ್ವೀಕಾರ ; ದತ್ತಸ್ವೀಕಾರ (Adoption. ಇಂಕನಿ). [ದತ್ತ + ಸ್ವೀಕಾರ]

**ದತ್ತಹಸ್ತ** (ನಾ). ನೀಡಿದ ಕೈ ; ಹಸ್ತಾವಧಾನದ ಗೌರವ : ಬಾಜಿಸೆ ಮಂಗಳಾನಕಮನಾ ದಿವಿಜೇಂದ್ರನ ದತ್ತಹಸ್ತದೊಳ್ . . .ಮುಕ್ತಿವಧೂ ವಿವಾಹಗೇಹಾಜಿರದಂತುಟಂ ಸಿವಿಗೆಯಂ ಭುವನತ್ರಯನಾಥನೇಱಿದಂ (ಮಲ್ಲಿಪು. ೦೩-೦೭೦). [ದತ್ತ + ಹಸ್ತ]

**ದತ್ತಾತ್ರೇಯ** (ನಾ). ಅತ್ರಿ ಮತ್ತು ಅನುಸೂಯೆಯರ ಮಗನಾದ, ವಿಷ್ಣುವಿನ ಅಂಶವುಳ್ಳ ಒಬ್ಬ ಮುನಿ: ಸುಮೇಘಪರ್ವತದಲ್ಲಿ ಅತ್ರಿ ... ದತ್ತಾತ್ರೇಯ . . . ಉಪಮನ್ಯು ಮೊದಲಾದ ಅಷ್ಟಾಶೀತಿ ಸಹಸ್ರ ಋಷಿಗಳಿಗನಂತಾಶ್ರಯಂಗಳುಂ (ವಿವೇಕ. ೨೦೭). [ಸಂ.]

**ದತ್ತಾಧಿಕಾರ** (ನಾ). ಕೊಟ್ಟ ಅಧಿಕಾರ,-ಪದವಿ : ಸಂಸ್ಥೆಗಳಿಗೆ ಕೆಲವು ಗೊತ್ತಾದ ಎಲ್ಲೆಗಳೊಳಗಾಗಿ ಕಾರ್ಯಾಧಿಕಾರವನ್ನು ವಹಿಸಿಕೊಡುತ್ತದೆ. ಇಂಥ ಸಂಸ್ಥೆಗಳ ಅಧಿಕಾರವು ದತ್ತಾಧಿಕಾರ (ಡೆಲಿಗೇಟೆಡ್ ಪವರ್) (ರಾಜ್ಯಶಾ. ೩೪೮). [ದತ್ತ + ಅಧಿಕಾರ]

**ದತ್ತಾನಪಾಕರ್ಮ** (ನಾ). ದಾನಮಾಡಿರುವುದನ್ನು ಪೂರ್ತಿ ಕೊಡದಿರುವಿಕೆ ಅಥವಾ ದಾನಮಾಡಿದುದನ್ನು ಹಿಂದಕ್ಕೆ ತೆಗೆದುಕೊಳ್ಳುವುದು : ವ್ಯವಹಾರವು (೧) ಋಣಾದಾನ (Debt) . . . (೫) ದತ್ತಾನಪಾಕರ್ಮ (Noncompletion of gift by delivery). . . (೧೮) ದ್ಯೂತಸಮಾಹ್ವಯ (Gambling)–ಎಂದು ಹದಿನೆಂಟು ವಿಧವಾಗಿ ವಿಭಜಿಸಲ್ಪಟ್ಟಿತ್ತು (ಭಾರದ. ೩೭). [ಸಂ. ದತ್ತಾನಪಾಕರ್ಮನ್]

**ದತ್ತಾಪಹಾರ** (ನಾ). ದಾನವಾಗಿ ಕೊಟ್ಟ ವಸ್ತುವನ್ನು ಕಸಿದುಕೊಳ್ಳುವುದು ; ದಾನ ಮಾಡಿದ ವಸ್ತುವನ್ನು ಅಪಹರಿಸುವುದು. [ದತ್ತ + ಅಪಹಾರ]

**ದತ್ತಾಪಹಾರಕ** (ನಾ). ದಾನ ಮಾಡಿದ ವಸ್ತುವನ್ನು ಕಸಿದುಕೊಳ್ಳುವವನು : ಪರಧನಬಾಧಕನ ದತ್ತಾಪಹಾರಕನ ಜ್ವಲನದನ ಶಿಶುಘಾತಕನ ಪರಿದಳಿತಧರ್ಮನ ಗತಿಗಳಲಿ ತಾನಿಳಿವೆನೆಂದೇ ಕೊಲ್ಲದಿರ್ದರೆ ಸೂತನಂದನನ (ಕುಮ್ಮಾಕ. ೧೮-೭). [ಸಂ.]

**ದತ್ತಾಪ್ರದಾನಿಕ** (ನಾ). = ದತ್ತಾನಪಾಕರ್ಮ : ವ್ಯವಹಾರಕಾಂಡದಲ್ಲಿ–ಸಾಧಾರಣವ್ಯವಹಾರಮಾತೃಕಾ . . . ದತ್ತಾಪ್ರದಾನಿಕ, ಕ್ರೀತಾನುಶಯ . . . ಸ್ತ್ರೀಸಂಗ್ರಹಣ ಪ್ರಕೀರ್ಣ ಎಂಬ ೨೫ ಪ್ರಕರಣಗಳಿವೆ (ಭಾರದ. ೬೨). [ಸಂ.]

**ದತ್ತಾವಧಾನ** (ನಾ). ಗಮನ ಕೊಡುವವನು ; ಮನಸ್ಸಿಡುವವನು : ಎಂತು ಬೆಸಗೊಂಡೆ ಬೆಸಗೊಂಡಂತಿರೆ ದತ್ತಾವಧಾನನಾಗು ಜಯಶ್ರೀಕಾಂತೆಯುಮಂ ಪರಮಶ್ರೀಕಾಂತೆಯುಮಂ ನಿನಗೆ ಕುಡುವುದೀ ಸತ್ಕಥನಂ (ಯಶೋಚ. ೧-೭೦). [ದತ್ತ + ಅವಧಾನ]

**ದತ್ತಾಶಿಕ್ಷ** (ನಾ). [ಗಣಿತ] ಕೊಡುವಿಕೆ ; ಕೊಡುವುದು : ಯುತಂ, ಯುಕ್ತಂ, ಮಿಶ್ರಂ, ಸಮ್ಮಿಶ್ರಂ, ಸಂಯೋಗಂ, ದತ್ತಾಶಿಕ್ಷಂ . . . ಇಂತಿನಿತುಂ ಕೂಡೂದಕ್ಕೆ ಹೆಸರು (ವ್ಯವಹಾ. ೦೧-೧೯) [?]

**ದತ್ತಾಳು** (ನಾ). ನಿಯೋಜಿತನಾದ ಆಳು,-ಯೋಧ (?) : ಅಜಂಣ ಸಾಹಣಿಯ ದತ್ತಾಳುಗಳ ಬಳಿಯ (ಸೌಇಎ. ೧೯೩೨, ಉಡುಬ. ೨೬೨-೯ ; 1334). [?]

**ದತ್ತಿ** (ನಾ). ೧. ದಾನವಾಗಿ ಕೊಟ್ಟ ಭೂಮಿ : ಯಾ(?) ದತ್ತಿಯಾನ್ ಕಿಡಿಪೊನ್ . . . ಸನ್ಮೊನಕ್ಕುಮ್ (ಇಆ. VIII, ೨೮೫-೫ ; 706) ; ಮಹಾರಾಜಾಧಿರಾಜಪರಮೇಶ್ವರಭಟಾರರಾ ಕೊಟ್ಟ ದತ್ತಿ (ಇಆ. X, ೧೬೫-೩ ; 733); ಪದಿನ್ಮುಳಂ ಪಾಟುಂ ಇದಂ ಪಡೆದೋರೇಶ್ವರದಾಸರ್ ಪರಮೇಸ್ವರ ದತ್ತಿ (ಎಕ. X (S), ಚಿಕ್ಕಬ. ೧೦೭-೭೫ ; 850); ರಾಮಾದ್ಯನೇಕ ರಾಜದತ್ತಿ [ಪಾಠಾಂ. ದತ್ತಂ] ಗಳಪ್ಪನೇಕ ಭೂದೇವಭೋಗಾಗ್ರಹಾರಂಗಳನಾಗ್ರಹದಿಂದಱಿದು . . . ನಿರವಶೇಷದಿಂ ಕಿಡಿಸಿಯುಂ (ಪಂಚತಂ. ೨೮-೮) ; ಲಾ ಕು ಳಾ ಗ ಮ ಸಮಯಸಮುದ್ಧರಣರಪ್ಪ ಪದ್ಮರಾಸಿ ಪಂಡಿತರ್ಗ್ಗೆ ಕಾಲಂ ಕರ್ಚ್ಚಿ ಧಾರಾಪೂರ್ವಕಂ ಮಾಡಿ ಬಿಟ್ಟ ದತ್ತಿ (ಎಕ. XVI, ಚಿಕ್ಕನಾ. ೫೪-೮ ; 1292) ; ಸ್ವಯಂಬುವದೇವರ್ಗ್ಗೆ ದತ್ತಿದೆಗಾಗಂಡ ಹಡುಪಕ್ಕೆ ಬಿ ತೊಗೆ (ಮೈಆರಿ. ೧೯೪೭, ೧೦-೧೩ ; ಸು. 15ನೆಯ ಶತ). ೨. ದಾನವಾಗಿ ಕೊಟ್ಟ ಹಣ ; **ಕೊಡುಗೆ :** ಆರನೆಯ ಸಂಪುಟದ ಮುದ್ರಣಕ್ಕಾಗಿ ಬಂದ ೫,೦೦೦ ಪೌಂಡುಗಳ ದತ್ತಿಯೊಂದನ್ನುಳಿದು ಮಿಕ್ಕ ಬಂಡವಾಳವನ್ನೆಲ್ಲಾ ಒದಗಿಸಿ, ಈ ಮಹಾಗ್ರಂಥದ ಮುದ್ರಣವನ್ನೂ ಪ್ರಕಾಶನವನ್ನೂ ಕೈಕೊಂಡ ಸಾಹಸಿಗಳು ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ಸಿನವರು (ಸಮಾಲೋ. ೨೬೭). ೩. [ಜೈನ] ಆರ್ಯಕರ್ಮವಾದ ಇಜ್ಯೆ, ವಾರ್ತೆ, ದತ್ತಿ, ಸ್ವಾಧ್ಯಾಯ, ಸಂಯಮ, ತಪ ಎಂಬ ಷಟ್ಕರ್ಮಗಳಲ್ಲಿ ಒಂದು ; ತಂದೆ ತನ್ನ ಸಂಪತ್ತನ್ನೆಲ್ಲ ಮಗನಿಗೆ ಒಪ್ಪಿಸುವುದು : ಇಜ್ಯೆಯುಂ ವಾರ್ತೆಯುಂ ದತ್ತಿಯುಂ . . ಎಂಬೀ ಆಚಾರ್ಯಷಟ್ಕರ್ಮಂಗಳುಂ ಶ್ರಾವಕಜನಕ್ಕೆ ಕುಲಧರ್ಮಂಗಳ್ (ಚಾವುಂಪು. ೨೨೮) ; ನಿಜಾತ್ಮಜಂಗೆ ಸಮಸ್ತ ಗೃಹಪರಿಚ್ಛೇದಮನೊಪ್ಪಿಸುವ ಸಕಳದತ್ತಿಯುಮನುಳ್ಳದು ದತ್ತಿಯೆಂಬ ಮೂಱನೆಯಾರ್ಯಕರ್ಮಂ (ಸುಕುಮಾ. ೬-೨೫ ವ).

**ದತ್ತಿ ಉಪನ್ಯಾಸ** = ಯಾವುದಾದರೂ ವಿಷಯದಲ್ಲಿ ಆಸಕ್ತಿಯುಳ್ಳವರು ತಮ್ಮ ಅಥವಾ ತಮ್ಮ ಪ್ರಿಯರಾದವರ ಹೆಸರನ್ನು ಶಾಶ್ವತಗೊಳಿಸಲು ಹಣವನ್ನು ಕೊಡುಗೆಯಾಗಿ ಕೊಟ್ಟು ಅದರ ಬಡ್ಡಿಯ ಸಹಾಯದಿಂದ ಏರ್ಪಡಿಸುವ ಭಾಷಣ,-ಉಪನ್ಯಾಸ : ಕನ್ನಡ ಸಾಹಿತ್ಯಪರಿಷತ್ತಿನಲ್ಲಿ ಅನೇಕ ಉದಾರಿಗಳು ದತ್ತಿ ಉಪನ್ಯಾಸಗಳನ್ನು ಏರ್ಪಡಿಸಿದ್ದಾರೆ (ರೂಢಿ). [ಸಂ.]

**ದತ್ತಿಟಿ**[3] (ನಾ). ಒಂದು ಊರಿನ ಹೆಸರು (?) : ನೇಱಿಲೆಯುಂ ಮಾಯೊತ್ತಿಂ ನಡಪ್ಪಳ್ಳಿ ಮೂಳಾಣಂ ನಡಲು ಏರ್ಪಳ್ಳಿ ದತ್ತಿಟಿ ಕೞಿಯ ಒರಲ್ಗೋಡು ಇವುಬಾ ಬತ್ತ ಇಪ × ಅಕ್ಕಿ ಇಕಂಳಂ ತುಪ್ಪ ಇದು ಪ್ರವಾಹಂ (ಎಕ. VI, ಚಿಕ್ಕಮ. ೯೫-೦೬ ; 1025 ?). [?]

**ದತ್ತು** (ನಾ).=ದತ್ತಕ ೧ : ಉತ್ತಮಗುಣಗಳುಳ್ಳವನನ್ನು ಸತ್ತ್ವಶಕ್ತಿಯುಳ್ಳವನನ್ನು ದತ್ತು ತೆಗೆದುಕೊಂಡು ರಾಜ್ಯವನ್ನು ಅವನ ಕೈಲಿಡುವುದು ಲೇಸು (ಶಾಂತಲಾ. ೨೦೦) ; ಶ್ಯಾಮಾಶಾಸ್ತ್ರಿಗಳು ಕಂಚಿಕಾಮಾಕ್ಷಮ್ಮನಿಗೆ ದತ್ತು (ಗಾನಕ. ೩೦). [<ಸಂ. ದತ್ತ]

**ದತ್ತುಗೊಳ್** (ಕ್ರಿ). ದತ್ತು ತೆಗೆದುಕೊಳ್ಳು : ಪೆತ್ತೊಡಮೇಂ ಬಸಿಱೊಳ್ ಬೆಳೆಯಿತ್ತೊಡಮೇಂ ದತ್ತುಗೊಂಡು ಪೊರೆದೊಡೆ ಮೇಣಾ ತುತ್ತುವ ಮಿಟ್ಟುಗಮೊತ್ತೆಯ ಪತ್ತುವ ಮುತ್ತಬ್ಬೆಗಳ್ಗೆ ಮೆತ್ತಣ ಮಱುಕಂ (ಚಿಕವಿ. ೬-೯೦). [ದತ್ತು + ಕೊಳ್[1]]

**ದತ್ತುಪುತ್ರ** (ನಾ). = ದತ್ತಕ೧ : ದತ್ತು ತೆಗೆದುಕೊಂಡಾಕ್ಷಣಕ್ಕೆ ದತ್ತುಪುತ್ರನು ಸಿಂಹಪೀಠವನ್ನೇರಬೇಕು ಎಂದೇನೂ ಇಲ್ಲ (ಸ ವ ೩. XIV, ಪ್ರಸ್ತಾವನೆ). [ದತ್ತು + ಪುತ್ರ]

**ದತ್ತುಮಗ** (ನಾ).=ದತ್ತಕ ೧ : ದತ್ತುಮಗನಾತನೈ ನಮ್ಮರಸು ಕುಳಿಂದಂಗೆ (ಚಂದ್ರಸ. ೫೩-೧೪). [ದತ್ತು + ಮಗ]

**ದತ್ತೂರ,** ದತ್ತೂರಿ, ಧತ್ತೂರಿ (ನಾ). ಒಂದು ಬಗೆಯ ಮುಳ್ಳಿನ ಗಿಡ ; ಮದ್ದುಗುಣಿಕೆ ; ಉಮ್ಮತ್ತಿ : ಕಲ್ಪತರುವಿನ ನಾಮವ ಹಡೆದ ದತ್ತೂರದಂತೆ ಭಕ್ತರ ವಿರಕ್ತರೆಂದರೆ ಸತ್ಯರಪ್ಪರೆ (ಪ್ರೋಲಿಮಾ. ೮೯-೩೫೭) ; ದತ್ತೂ[ಪಾಠಾಂ. ತ್ತು]ರದ ಬಿತ್ತಿನಲ್ಲಿ ಕಲ್ಪತರು ಹುಟ್ಟಿ ಕಲ್ಪತರುವಿನ ಅಗ್ರುದಲ್ಲಿ ಇಟ್ಟೆಯ ಹಣ್ಣಾಯಿತ್ತು (ಅಜಿಮಾ. ೧೫೬-೧೯೪) ; ಸೂಚಿಸುವೆ ಪುಷ್ಪಾರ್ಚನೆಯದಿದ ನವಶಾಸ್ತ್ರ ಗೋಚರವನಾಲಿಸ್ಯೆ ಚಂಪಕಂ ದತ್ತೂರ ಮೇಚಕೋತ್ಪಲ ಪತಾಶಂ ಪಾಟಲಿಯ ಪಂಚಪುಷ್ಪಂಗಳುತ್ತಮಮಿವು (ಚಕುಪು. ೬-೪-೩೯) ; ಕರೀಉಮ್ಮತ್ತಿ, ದತ್ತೂರ (ವ್ಯಜಿಗಿ. ೨೯-೫೫೪). **ದತ್ತೂರಿ :** "ದತ್ತೂರ–ಧತ್ತೂರ–ಉನ್ಮತ್ತ (ದತ್ತೂರಿ, ದುತ್ತೂರ)" (ತದ್ವಕೋ. ೧೪). **ಧತ್ತೂರಿ :** ಉಮ್ಮತ್ತಿಯನ್ನು ಧತ್ತೂರಿಯೆಂದೂ ಹೇಳುತ್ತಾರೆ (ರೂಢಿ).

**ದತ್ತೂರಿ ಹಚ್ಚು**= ಮೋಸ ಮಾಡು ; ವಂಚಿಸು : "ದತ್ತೂರಿ–ಅಗಡು; ಕವಡು ; ವಂಚನೆ (ದತ್ತೂರಿ ಹಚ್ಚು)" (ಜಾನಕೋ. ೩). **ದತ್ತೂರಿ ಹಿಡಿಸು**= ಮೋಸಮಾಡು ; ವಂಚಿಸು :· ಹಿಸೇದ ಆಶಾಕ್ಕ ರೊಕ್ಕಾ ಕೊಟ್ಟೆ. ಪಾಂಚಸೇಕ್ಕ ಧತ್ತೂರಿ ಹಿಡಿಸಿದಂದ್ರು (ದೀಪಹ. I, ೧೫೪). 'ದುತ್ತೂರ' ಪರಾ. [ <ಸಂ. ಧತ್ತೂರ ]

**ದತ್ತೂರರಸ** (ನಾ). ಉಮ್ಮತ್ತಿಯ ಹಾಲು,–ರಸ : ಪರಿವರ್ದಿಸುವುದು ದತ್ತೂರರಸಮನಿಂಬಾಗಿ ಪಿರಿದು ನೆಲದೊಳ್ ಲವಣಂಬೆರಸೊರಸಿಕೊಂಡು ಪೂಸುಗೆ ಕರಗುಗುಮೇಬಿಸ್ಫೋರೆಯೆನಿಪ್ಪ ಕುರಂಪುಂ ಬೇಗಂ (ಶಮದ. ೧೪೯ ಪ್ರಯೋ). [ ದತ್ತೂರ + ರಸ ]

**ದತ್ತೂರಿ** 'ದತ್ತೂರ' ನೋ.

**ದತ್ತೆಯ್ಯ** (ನಾ). ಒಬ್ಬಾತನ ಹೆಸರು : ಬಹುಧಾನ್ಯ ಸಂವತ್ಸರಂ ಪ್ರವರ್ತಿಸೆ ಸೂರ್ಯಗ್ರಹಣದನ್ದು ದತ್ತೆಯ್ಯನುಂ ತಿಂಕಯ್ಯನುಂ ಪೆವ್ವುರ್ಬ್ಬುಗೆಯ್ಯೆ ತಾಗೆರತ್ತಿಯ ಮಾಹಾಜನಕ್ಕೆ ಪೊನ್ನಬ್ಬೆ ಪೊನ್ನ ಕೊಟ್ಟು (ಎಕ. VII, ಶಿಕಾರಿ. ೬೦-೪ ; 978). [ P ಇದು 'ದತ್ತಯ್ಯ' ಇರಬಹುದು ]

**ದತ್ತೆಲೆ** (ನಾ). ಒಂದು ಬಗೆಯ ಔಷಧಿ ಸಸ್ಯ : (ವ್ಯಜಿಗಿ. ೬೫-೧೩೦೫).
[ ? ]

**ದತ್ವ** (ನಾ).=ದಕಾರ : ಅಣ್ ಪತ್ತ್ರದ ದಿಗ್ವಾಚಕದೊಳ್ ದತ್ವಂ :–ಕೆಲದಂ, ಬಲದಂ (ಶಮದ. ಮ.೧೩೦ ವೃತ್ತಿ). [ ಸಂ. ]

**ದತ್ವವಿಧಿ** (ನಾ). ದಕಾರವು ಆಗಮವಾಗುವ ನಿಯಮ : ಪುರುಷಪರ ಮಾಡೊಡತ್ವಂ ದೊರೆಕೊಳ್ಗುಮದಣ್ಣಾಗುಳ್ದ ದಿಗ್ವಾಚಕದೊಳ್ ಪರ ದಿಗ್ವಾಚಕದೊಳ್ ಸಂಚರಿಸುವುದಾ ತೆಱದೆ ದತ್ವವಿಧಿ ಶಾಬ್ದಿಕರಿಂ (ಶಮದ. ೧೧೧). [ ದತ್ವ + ವಿಧಿ ]

**ದದಾತಿ** (ನಾ). ಕೊರತೆ ; ಅಭಾವ : ನನಗೆ ರೊಕ್ಕದ್ದ ಯಾನ ದದಾತಿ ಇಲ್ಲ ತಗಿ (ನಡದಾ. I, ೨೯೩) ; ಮುಂಬೈಪ್ರಾಂತದಲ್ಲಿ ನಮಗೆ ನವಕರಿಯ ದದಾತಿ ಇರಲಿಲ್ಲ (ದೀಪಹ. II, ೨೩೨) ; ಮನೆಯಲ್ಲಿ ಯಾವುದಕ್ಕೂ ದದಾತಿಯಿಲ್ಲ (ಗೀಚುಗಿ. ೫೮). [ ←ಮರಾ. ದದಾತೀ, ದದಾತ್ ]

**ದದಿವ್ವಾಟಿಗೆ** (ನಾ). ಒಂದು ಪ್ರದೇಶದ ಹೆಸರು : ಶ್ರೀಮತ್ತ್ರೈಳೋಕ್ಯ ಮಲ್ಲನೊಟಂಬಪಲ್ಲವಪೆರ್ಮ್ಮಾನಡಿದೇವ ದದಿವ್ವಾಟಿಗೆ ಸಾಸಿರವುಂ ಬಲ್ಲಕುನ್ದೆ ಮೂನೂಱುಂ ಕೊನಡಿಯೂಱುಮುಂ ಸುಖಸಂಕತಾವಿನೋದದಿ ರಾಜ್ಯಗೆಯ್ಯುತ್ತಂ ಇರೆ (ಎಕ. VII, ಹೊನ್ನಾಳಿ. ೧೧೯-೦೩ ; 1054 ?). [?]

**ದದ್ದರ**$_1$ (ನಾ). ಬಾತುಕೊಳ್ಳುವಿಕೆ; ಊದಿಕೊಳ್ಳುವಿಕೆ. 'ದದ್ದರಿಸು$_1$', 'ದರ್ದರ$_2$' ಪರಾ. [ <ದದ್ರು ? ]

**ದದ್ದರ**$_2$ (ನಾ). ಭಯ ; ಅಂಜಿಕೆ : ಬಿದ್ದು ಸಂಸಾರದಲಿ ಸಾಯುದ ಬುದ್ಧಿಯನು ಬಲ್ಲೊಡೆ ಕೃತಾಂತನ ದದ್ದರಕೆ ಸಿಲುಕದವೊಲಚ್ಯುತನಡಿಯ ಪಿಡಿರೆಂದ (ಪ್ರಹ್ಲಾಚ. ೯-೬೨). [←ಮರಾ. ದಾದರಣೇ=ಗಾಬರಿಯಾಗು]

**ದದ್ದರಿಸು**$_1$ (ಕ್ರಿ). ಊದು ; ಬಾತುಕೊಳ್ಳು : ಮುಖ ದದ್ದರಿಸಿಕೊಂಡು ಜ್ವರ ಬಂದಹಾಗಿದೆ (ರೂಢಿ). [ ದದ್ದರ$_1$ + – ಇಸು$_3$ ]

**ದದ್ದರಿಸು**$_2$ (ಕ್ರಿ). ಹೆದರು ; ಗಲಿಬಿಲಿಗೊಳ್ಳು : ಗದ್ದಲಕೆ ಕಲ್ಯಾಣ ಸದ್ದೆದ್ದು ಜಲ್ಲೆಂದು ಎದ್ದು ಓಡಾಡಿ ಜನಬಿದ್ದು ಹೌಹಾರಿ ದದ್ದರಿಸಿ ಲೋಕ ಗಜಿಬಿಜಿಗೆ (ಕನ್ನಜಾ ೨೩೪). [ ದದ್ದರ$_2$ + – ಇಸು$_3$ ]

**ದದ್ದು**$_1$ 'ತರ್ದ್ದ$_2$' ನೋ.

**ದದ್ದು**$_2$, ದುದ್ದು$_2$ (ನಾ). ೧. (ಮಡಕೆ, ಬಳೆ ಮೊದಲಾದುವು) ಬಿರುಕು ಬಿಟ್ಟಿರುವುದು,–ಸೀಳಿರುವುದು : ದದ್ದಾಗಿರುವ ಬಳೆ, ಹಾಕಿಕೊಳ್ಳಬೇಡ (ರೂಢಿ). 'ದದ್ದುಮಡಕೆ' ಪರಾ. ೨. ಒಡೆದ ಹಾಲಿನ ಗಟ್ಟಿ ಭಾಗ : ಒಡೆವ ಸಮಯುದೊಳು ಹಾಲೊಳಗೆ ಸುಣ್ಣದ ತಿಳಿಯ ಬಿಡಲು ಜುಮ್ಮನೆ ತಿಳಿವುದು . . . ಆ ದದ್ದನು ಮಡಗಿ (ಸೂಪಶಾ. ೨-೫). **ದುದ್ದು**$_2$ : ೨. ಒಡೆದ ಹಾಲಿನ ದುದ್ದು ನನೆಯಕ್ಕಿ ತೆಂಗಾಯನೊಡಗೂಡಿ . . . ಲಡ್ಡುಗೆಗಳಂ ಹಸನಾಗುವಂದದೊಳ್ ಕಟ್ಟಿ ಚತುರರ್ಗೀವುದು (ಸೂಪಶಾ. ೧-೫೫) ; ತುಪ್ಪದಿ ಹುರಿದ ಹಾಲ ದುದ್ದೆರಡುಳ್ಳಿ . . . ಮೆಂತೆಯದ ಚೂರ್ಣ ಹಪ್ಪಳಂ ಸಂಭಾರವಸ್ತುವಹವು (ಸೂಪಶಾ. ೪-೧). [ ? ]

**ದದ್ದುಮಡಕೆ** (ನಾ). ಬಿರುಕು ಬಿಟ್ಟ ಮಡಕೆ : ದದ್ದುಮಡಕೆಯಲ್ಲಿ ನೀರು ಹಾಕಿದಂತೆ (ರೂಢಿ). [ ದದ್ದು$_2$ + ಮಡಕೆ ]

**ದದ್ದುರೋಗ** (ನಾ). ಮೈಮೇಲೆ ತದ್ದುಗಳೇಳುವ ಒಂದು ಬಗೆಯ ಚರ್ಮರೋಗ : ಶಸ್ತ್ರಕ್ರಿಯೆಯ ಭಾಗದಲ್ಲಿ ದದ್ದುರೋಗದವರಿಗೂ ಕಡಿಮೆಯಿರಲಿಲ್ಲ (ಹುಚ್ಚಮ. ೨೭) ; (ಅನೇಕ ವೇಳೆ ಸೊಂಟದ ಸುತ್ತ ಹರಡಿಕೆ ಇಳ್ಳುವ) ಒಂದು ಬಗೆಯ ದದ್ದುರೋಗ (Shingles. ಇಂಕನಿ).
[ ದದ್ದು$_1$ (<ತರ್ದ್ದ$_2$) + ರೋಗ ]

**ದದ್ದುಹಿಡಿ** (ಕ್ರಿ). ದದ್ದುರೋಗ ಅಂಟು : ದದ್ದುಹಿಡಿದು ನೋಟಕ್ಕೆ ಅಸಹ್ಯವಾಗಿದ್ದ ನಾಯಿಯೊಂದು . . . ಬೀದಿಯ ನಡುವೆ ನಿಂತು. ಸುತ್ತಲೂ ನೋಡಿತು (ಕಾನೂರು. ೪೯೩) ; ದದ್ದುಹಿಡಿದು ಬಡಕಲಾಗಿ ಬೂದಿಬುಕ್ಕಗಳಾಗಿದ್ದ ಅವನ ಮನೆಯ ನಾಯಿಗಳೂ . . . ಕೂಗ ತೊಡಗಿದ್ದುವು (ಮಲೆಮ. ೦೪).
[ ದದ್ದು$_1$ (<ತರ್ದ್ದ$_2$) + ಹಿಡಿ$_1$ (<ಪಿಡಿ$_1$) ]

**ದಧ್ಯಾನ್ನ** (ನಾ). ಮೊಸರಿನಲ್ಲಿ ಕಲಸಿದ ಅನ್ನ ; ಮೊಸರನ್ನ : ಕೋಳಾಲದಲಿ ಶ್ರೀಸೋಮೇಶ್ವರದೇವರಿಗೆ ದಧ್ಯಾಂನ ಅವಸರ ನಯಿವೇದ್ಯಮಾಡಿ (ಎಕ. X (S), ಕೋಲಾರ. ೨೭೭-೭ ; 1540). [< ಸಂ. ದಧ್ಯನ್ನ ]

**ದದ್ರು** (ನಾ). ೧. ಪಿತ್ತದಿಂದ ಚರ್ಮದ ಮೇಲೆ ಏಳುವ ಗಂದೆ ; ತದ್ದು : "ದದ್ರುವೆನೆ ತರ್ದೆನಿಕ್ಕುಂ" (ಮಂಗರಾ. ೧೧೩-೦). ೨. ಹುಳುಕಡ್ಡಿ, ಗಜಕರ್ಣ ಮುಂತಾದ ಚರ್ಮರೋಗ : ಗರಿಕೆ, ಅಳಲೆಯ ಕಾಯಿ, ಸೈಂಧವ, ತಗಚೆ, ಅಚ್ಚಿಗೆ ಇವನ್ನು ಅಂಬಿಲದಲ್ಲಾಗಲೀ ಮಜ್ಜಿಗೆಯೊಳಗಾಗಲೀ ಅರೆದು ಮೂಱು ಬಾರಿ ಪೂಸಿದರೆ ಬಹಳವಾಗಿ ಬಲಿತಿದ್ದ ದದ್ರು ತಿಮಿರಂಗಳೆಲ್ಲವಂ ಕೆಡಿಸುವದು (ವಿವ್ಯವಿ. ೦೫೯); ಏಲಕ್ಕಿ, ಚಿತ್ರಮೂಲ . . . ತೈಲವನಟ್ಟು ಪೂಸಿದರೆ ರಕ್ತಮಂಡಲ, ಕುಷ್ಟ, ದದ್ರು, ತೊನ್ನು ಮುಂತಾದ ದುಷ್ಟವ್ರಣಗಳು, ಕರಕು ಇವೆಲ್ಲವನ್ನೂ ಕೆಡಿಸುಗುಂ (ವಿವ್ಯವಿ. ೦೫೯) ೩. ಒಂದು ಬಗೆಯ ಕುಷ್ಠರೋಗ.
[ ಸಂ. ]

**ದದ್ರುಘ್ನ** (ನಾ). ಒಂದು ಬಗೆಯ ಗಿಡ ; ಅಗಸೆ ; ತಗಚೆ ; ಚಗಚೆ : "ಏಡಗಜಃ, ಪ್ರಪುನಾಟಃ, ದದ್ರುಘ್ನಃ, ಚಕ್ರಮರ್ದನಃ – ಈ ೪ ತಗ(ಚೆ)ಟೆ" (ಹಲಾಯು. ೧೧೧-೪೬೫). [ ಸಂ. ]

**ದದ್ರುಣ** (ನಾ). ದದ್ರುರೋಗವುಳ್ಳವನಂ : "ತರ್ದುಳ್ಳವನಂ ದದ್ರುಣನೆಂಬುದು" (ಹಲಾಯು. ೯೯–೪೫೩). [ ಸಂ. ]

**ದಧಿ** (ನಾ). ಹಾಲಿಗೆ ಹೆಪ್ಪುಹಾಕುವುದರಿಂದ ಉಂಟಾಗುವ ಪದಾರ್ಥ; ಮೊಸರು: "ದಧಿಯನೆ ಮೊಸರದು" (ಮಂಗರಾ. ೫೪-೫); ಕರಮೆ ಮುನಿ ದುಗ್ಧ ದಧ್ಯಾದಿ ರಸಂಗಳನೆಯೆ ತೊಱೆದು . . . ನಾಲ್ಕನೆಯ ರಸಪರಿತ್ಯಾಗಮೆಂಬ ತಪಮಂ ತಳೆದಂ (ಚಂದ್ರಪು. ೧೧-೧೧); ದೂರ್ವೆ ದಧಿಗಳನು ತರಿಸಿದನು ಸಿದ್ಧಾರ್ಥ (ಕಾಶಿರಾ. ೩-೩೦); ಹೊನ್ನ ಹರಿವಾಣದಲಿ ಬಡಿಸಿದರಣ್ಣುರಿಗೆ ಬೀಸುರಿಗೆ ಮಂಡಿಗೆ ಬೆಣ್ಣೆ ಕಾಸಿದ ತುಪ್ಪ ದಧಿ ಮಧು ಕ್ಷೀರ ಸಕ್ಕರೆಯ (ಸುದಾಮ. ೬-೧೮). [ಸಂ.]

**ದಧಿತೈಲ** (ನಾ). ಮೊಸರು ಬೆರಸಿದ ಒಂದು ಬಗೆಯ ಔಷಧಿತೈಲ: ದಧಿತೈಲ–ಅತಿಬಜೆ, ಜಾಯಿಕಾಯಿ . . . ಅಚ್ಚಳ್ಳೆಣ್ಣೆ ಒಂದು ಪಡಿ, ಹಸುವಿನ ಮೊಸರು ಒಂದು ಪಡಿ ಎಲ್ಲಾ ಬೆರೆಯುವಂತೆ ಸೇರಿಸಿ . . . ಹೊತ್ತಿಗೆ ಗ ೧ ತೂಕ ತೈಲವನ್ನು ಸೇವಿಸಿದರೆ ಗ್ರಹಿಣಿರೋಗ ಮಾಣು ವುದು (ಸಕವೈ. ಪರಿ. ೯೮೦). [ದಧಿ + ತೈಲ$_1$]

**ದಧಿತ್ಥ** (ನಾ). ಒಂದು ಬಗೆಯ ಮರ; ಬೇಲ; ಕಪಿತ್ಥ; ಬೆಳವಲ: "ಕಪಿತ್ಥಃ, ದಧಿತ್ಥಃ . . . ದಂತಶಠಃ – ೭ ಬ್ಯಾಲದ ಮರಕ್ಕೆ ಪೆಸರುಗಳು" (ಸಿದ್ಧಾಂಶಿ. ೧೦೭). [ಸಂ.]

**ದಧಿಪುಷ್ಪಿ** (ನಾ). ಒಂದು ಬಗೆಯ ಔಷಧಿ ಸಸ್ಯ: "ಖಟ್ವಾಪರ್ಯಾಯ ವಾಚೀ–ದಧಿಪುಷ್ಪಿ" (ಒಷಧಿ. ೪೪). [ಸಂ. ದಧಿಪುಷ್ಪೀ]

**ದಧಿಫಲ,** ದಧಿಫಳ (ನಾ). = ದಧಿತ್ಥ: "ಕಪಿತ್ಥಃ, ದಧಿತ್ಥಃ. . . . ದಧಿ ಫಲಃ, ಪುಷ್ಪಫಲಃ, ದಂತಶಠಃ – ೭ ಬ್ಯಾಲದ ಮರಕ್ಕೆ ಪೆಸರುಗಳು" (ಸಿದ್ಧಾಂಶಿ. ೧೦೭). **ದಧಿಫಳ:** ಪಾದರಿ ಮಾದಳಂ ದಧಿಫಳಂ ಚಾಂಪೇಯಮುಂ ಕುಂಭಬಿಲ್ವಂ ದಾಳಿಂಬಮರಂ . . . ಇರ್ದ ವನಾಂತರಾಳ ದೊಳ್ ಪದ್ಮಾಕರಮಿರ್ಪುದು (ಹಮ್ಮಿ.ರ. ೬-೧೭). [ಸಂ.]

**ದಧಿಫಳ** 'ದಧಿಫಲ' ನೋ.

**ದಧಿಮಂಡ** (ನಾ). ೧. ಮೊಸರಿನಲ್ಲಿರುವ ನೀರಾದ ಭಾಗ. ೨. ಮಜ್ಜಿಗೆ; ತಕ್ರ: "ದಧಿಮಂಡಃ, ಮಸ್ತು – ಈ ೨ ಮಜ್ಜಿಗೆ" (ಹಲಾಯು. ೫೩-೧೬೭). ೩. ಮೊಸರಿನ ಕೆನೆ. [ಸಂ.]

**ದಧಿಮಂಥ** (ನಾ). ೧. ಮೊಸರನ್ನು ಕಡೆಯುವುದು. ೨. ಮಜ್ಜಿಗೆ; ತಕ್ರ: "ದದಿಮಂಥಂ ಮಸ್ತುವೆಂಬುದಕ್ಕುಂ ಪೊಯ್ನಾರ್" (ವಸ್ತುಕೋ. ೯೨-೩); "ದಧಿಮಂಥಮೆನಲು ಕೈಯುಳಿಯಕ್ಕು" (ಮಂಗರಾ. ೬೫-೬). [ದಧಿ + ಮಂಥ]

**ದಧಿಮುಖ** (ನಾ). ೧. ಒಂದು ಸರ್ಪದ ಹೆಸರು. ೨. ಸುಗ್ರೀವನ ಸೇನಾಪತಿಗಳಲ್ಲಿ ಒಬ್ಬನ ಹೆಸರು: ಕೋಲು ಹತ್ತಱಲೆಸಲು ದಧಿಮುಖ ರಕ್ತಮುಖನಾದ (ತೊರವೆರಾ. ೨೮-೪೪). ೩. [ಜೈನ] ಒಂದು ಪರ್ವತದ ಹೆಸರು. ☞ ನಂದೀಶ್ವರ ದ್ವೀಪದ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಅಂಜನಗಿರಿಗಳೂ ಒಂದೊಂದು ಅಂಜನಗಿರಿಯ ನಾಲ್ಕು ಪಾರ್ಶ್ವಗಳಲ್ಲಿಯೂ ನಾಲ್ಕು ಸರೋವರಗಳೂ ಇರುವುವು. ಪ್ರತಿಯೊಂದು ಸರೋವರದ ಮಧ್ಯದಲ್ಲಿಯೂ ಮೊಸರಿನಂತೆ ಬೆಳ್ಳಗಿರುವ, ಸಹಸ್ರ ಯೋಜನ ಎತ್ತರವಾಗಿರುವ ಒಂದೊಂದು ದಧಿಮುಖ ಪರ್ವತ ವಿರುತ್ತದೆ. ಹೀಗೆ ದಧಿಮುಖಪರ್ವತಗಳು ಒಟ್ಟು ಹದಿನಾರು ಎಂದು ಜೈನಪುರಾಣಗಳು ಹೇಳುತ್ತವೆ: ನಂದೀಶ್ವರವರದ್ವೀಪಮಧ್ಯದ ನಾಲ್ಕುಂ ದೆಶೆಯೊಳ್ ನಾಲ್ಕಂಜನಪರ್ವತಂಗಳುಮವಱ ನಾಲ್ಕುಂ ದೆಶೆಯೊಳ್ ಸಮಚತುರಸ್ರಂಗಳಪ್ಪ ದಿವ್ಯಸರೋವರಂಗಳ್ಪದಿನಾಱಪ್ಪುವವಱ ನಡುವೆ ದಧಿಮುಖಶಿಖರಿಗಳುಂ (ಸುಕುಮಾ. ೧೧-೫೦ ವ). [ಸಂ.]

**ದಧಿವಡೆ** (ನಾ). ಒಂದು ಬಗೆಯ ತಿನಿಸು; ಮೊಸರುವಡೆ; ತೈರೊಡೆ: ಒಡೆಯಂಬೊಡೆ ದಧಿವಡೆಯು ತಿಂಥಿಣಿ ಒಡೆಯ ಎಡೆಗೆ ಒಡನೆ ಬಡಿಸಿದ (ಪುರಂದ. ೧-೭೬-೩). [ದಧಿ + ವಡೆ]

**ದಧಿವಿಘಾತ** (ನಾ). ಕಡೆಗೋಲು; ಮಂತು: "ವೈಶಾಖವೆಸೆ ಮಂಥ ಮೆನೆ ದಧಿವಿಘಾತಮೆನೆ ಮಂಥಿ ಮಂಥಾನಮೆನೆ ಕಡೆಗೋಲದು" (ಮಂಗರಾ. ೫೪-೭). [ದಧಿ + ವಿಘಾತ]

**ದಧಿಸಕ್ತು** (ನಾ). ಮೊಸರಿನಲ್ಲಿ ಕಲಸಿದ ಹುರಿಹಿಟ್ಟು; ಕರಂಭ: "ಕರಂಭಃ, ದಧಿಸಕ್ತುಃ–ಈ ೨ ಮೊಸರೊಳ್ ಕಲಿಸಿದ ಸತ್ತುಗಂ" (ಹಲಾಯು. ೫೩-೧೬೭); "ದಧಿಸಕ್ತು ಕರಂಭಾಖ್ಯಂ" (ವಸ್ತುಕೋ. ೯೨-೩). [ದಧಿ + ಸಕ್ತು]

**ದಧಿಸಾರ** (ನಾ). ಬೆಣ್ಣೆ ನವನೀತ: "ದಧಿಸಾರಂ, ನವನೀತಂ – ಈ ೨ ಬೆಣ್ಣೆ" (ಹಲಾಯು. ೪೭-೧೧೯). [ದಧಿ + ಸಾರ$_3$]

**ದಧಿಸೃಷ್ಟ** (ನಾ). ಮೊಸರಿನಿಂದ ಸಿದ್ಧಪಡಿಸಿದ ಅಥವಾ ಮೊಸರು ಕಲಸಿದ ಖಾದ್ಯ: "ದಧಿಸೃಷ್ಟಂ ದಾಧಿಕ ನಾಮಧೇಯಕಂ" (ವಸ್ತುಕೋ. ೯೨-೩). [ದಧಿ + ಸೃಷ್ಟ]

**ದಧೀಚಿ** (ನಾ). ಒಬ್ಬ ಋಷಿಯ ಹೆಸರು. ☞ ವೃತ್ರಾಸುರನ ವಧೆಗಾಗಿ ದೇವತೆಗಳಿಗೆ ತನ್ನ ಬೆನ್ನಿನ ಮೂಳೆಯನ್ನು ನೀಡಿದ ಮುನಿ: ಹರನಿಳಯದೊಳು ಹುಗುವ ನಂದೀಶ್ವರನೊ ಉಪಮನ್ಯುವೊ ದಧೀಚಿಯೊ ವರಮುನಿಪ ದೂರ್ವಾಸನೋ ಭೃಗುವೋ (ಬಸಪು. ೯೩-೯೦); ಕಪಿಲಂ ಮರೀಚಿ ಜೈಮಿನಿ ಗೌತಮಂ ದಧೀಚಿ ಪುಲಸ್ತ್ಯನಾಂಗಿರಂ . . . ಸುಮಾಂಡವ್ಯರೆಂದು ತಪಗೆಯ್ವ ಮುಮುಕ್ಷುಋಷಿಯರೆನಿಕ್ಕು (ಮಂಗರಾ. ೭೭-೧೧). [ಸಂ.]

**ದಧ್ಯನ್ನ** (ನಾ). ಮೊಸರಿನಲ್ಲಿ ಕಲಸಿದ ಅನ್ನ; ಮೊಸರನ್ನ: ಹರಿದ್ರಾನ್ನ ಪರಮಾನ್ನ ಕೃಸರಾನ್ನ ದಧ್ಯನ್ನ ಗುಡಾನ್ನ ಶುದ್ಧಾನ್ನ ಶಾಲ್ಯನ್ನವೆಂಬ ಅಷ್ಟವಿಧಾನ್ನಂಗಳಂ (ವಿವೇಕ. ೧೦೫); ವಜ್ರದ ತಟ್ಟೆಯೊಳ್ ದಧ್ಯನ್ನವಂ . . . ಬಡಿಸಿ (ಸೌಗಂಧಿ. ೩೭-೧೮). [ದಧಿ + ಅನ್ನ$_3$]

**ದಧ್ಯೋದನ** (ನಾ). = ದಧ್ಯನ್ನ; ಕೊಳಚೆನೀರಿನ ಬಳಕೆಯುಲಿ ಕತ್ತಲೆಯ ದಧ್ಯೋದನದಲಾಯುಷವಿಳಿದುಹೋಗದೆ ದಿನದಿನದೊಳವನೀಶ ಕೇಳೆಂದ (ಕುಮಾ.ಉ. ೩-೫೭). [ದಧಿ + ಓದನ]

**ದನ,** ದನವು (ನಾ). ೧. ಹಸು, ಎಮ್ಮೆ, ಎತ್ತು ಮೊದಲಾದ ಪ್ರಾಣಿ: ಸೆಳೆವುದಱೊಳ್ದನದೊಳುಂ ಸುಲಿ (ಶಬ್ದಮಂ. ೧೦೮); ದಾರಿಯಲ್ಲಿ ಯಾವುದಾದರೂ ಪೋಲಿಯ ದನ ಸಿಕ್ಕಬಹುದೆಂದು ನೋಡುತ್ತಾ ಬಂದರು (ಕಳಹು. ೫೦); ದನದ ಮುಂದೆ ಹೋಗಬೇಡ, ಕುದುರೆ ಹಿಂದೆ ಹೋಗ ಬೇಡ (ಗಾದೆ). ೨. ಮಂದೆ; ಕಾಲ್ನಡೆ: ಸಿರಿ ತನಗೆ ಕಾಂತೆ ಗಡ ಲೋಗರ ದನವಮಂ ಕಾಯಲೇಕೆ ಸಕಳಜಗತ್ತಂ ಪರಿಪಾಲಿಸುವಾತಂ ಗಡ ನರನಾಳಾಗಿರ್ಪುದೇಕೆ ಚೋದ್ಯಮಿವೆಲ್ಲಂ (ಧರ್ಮಾಪ. ೨-೭೪). 'ದನಗಾಹಿ' ಪರಾ. ೩. ಧನ; ಸಂಪತ್ತು: ಧನ – ದನ, ಧಾರಾ – ದಾರೆ (ಶಮದ. ೨೫೫ ಪ್ರಯೋ); ಧನ–ದನ; ಧರ್ಮ–ದಮ್ಮ (ಶಬ್ದಾನು. ೦೯೩ ಪ್ರಯೋ). **ದನವು:** ೧. ತಲೆ ಹುಳಿತ ದನವಿನಂತೆ ಗಳುವಿನಾಶಗಾಗಿ ಇವರಿಗೆ ಲಿಂಗದ ಅನುವಿನ ಆಶೆ ಯಾಕೆ (ಮೋಳಿಮಾ. ೧೦೫-೯೮೯); ತಗರ ಕೋಡು ಬಿಳಿಯ ಸಾಸವೆ ಹಾವಿನ ಹೆರೆ ದನವಿನ ಹಲ್ಲು ಇವಂ ಕೂಸಿಂಗೆ ಧೂಪ ವಿಕ್ಕುವುದು (ಬಾಲಚಿ. ೧೨೫-೧೯); ದನವಿನ ವರ್ಣ ಹಾಲಲ್ಲಿ ತಿಳಿದೀತೆ? (ಗಾದೆ).

ದನ ಓಣಿ = ದನಗಳ ಓಡಾಟದಿಂದಾದ ಕಾಲುದಾರಿ; ದನಗಳು ಮೇಯಲು ಹೋಗುವ ದಾರಿ: ದೇವಯ್ಯಾ ಕಾಡಿನ ಕಡೆಗೆ ಏರುವ ದನ ಓಣಿಯ ಬಳಿ ನಿಂತು (ಮಲೆಮ. ೫೩೦); ದೇವಯ್ಯನಿಗೆ ಕಾಣಿಸಿತು, ಕಂಬಳಿಕೊಪ್ಪೆ ಹಾಕಿಕೊಂಡಿದ್ದ ಇಬ್ಬರು, ಬಸಿರಿಮರದ ಪಕ್ಕದ ದನ ಓಣಿಯ ಕೆಸರುಹಾದಿಯಲ್ಲಿ ಮನೆಯ ಕಡೆ ಗುಡ್ಡದಿಂದ ಇಳಿದು ಬರುತ್ತಿದ್ದುದು (ಮಲೆಮ. ೭೩೦) ದನದ ಮೈಲಿ = ಹಸುವಿನ ಕೆಚ್ಚಲಿನ ಮೇಲೆ ಏಳುವ

ಸಿಡುಬು; ದನದ ಸಿಡುಬು: ನನಗೆ ದನದ ವೈಲಿ (Cow-Pox) ಆಗಿದೆ; ದನದ ವೈಲಿ ಆದವರಿಗೆ ಸಿಡುಬು ತಗಲದು (ಮೂನಸಾ. ೩).

[ <ಸಂ. ಧನ ]

**ದನಂಗಾಹಿತನ** (ನಾ). ದನಕಾಯುವ ಕೆಲಸ; ಗೋಪಾಲವೃತ್ತಿ: ಪಿಂಗಿದುದಿಲ್ಲಿನ್ನುಂ ಮನದಿಂ ಗೋವರ ಗಡಣದೊಳ್ ದನಂಗಾಹಿತನಂ ನೀಂಗಳದೆತ್ತಱಿವಿರ್ ಬರ್ಮಂಗಂ ಬಗೆದಱಿವುದರಿದನಂಗಾಹಿತನಂ (ಕಾವ್ಯಾವ. ೫೫೩). P ಇದಂ ಶಬ್ದಾಲಂಕಾರಕ್ಕಾಗಿ ಮಾಡಿಕೊಂಡ ರೂಪವಿರಬಹುದಂ. [ <ದನಗಾಹಿ + – ತನ ]

**ದನಕರು** 'ದನಕಱು' ನೋ.

**ದನಕಱು,** ದನಕರು (ನಾ). ಹಸು, ಎಮ್ಮೆ, ಕರು ಮೊದಲಾದುವು: ಮದುವೆ ಮುಂಜಿ ದನಕಱುಯೆಂಮೆ (ಬೊಂಕಶಾ. ೯೪೩೭, ಹಾನಗಲ್. ೮೦-೯; ?). **ದನಕರು:** ದನಕರುಗಳಂ ಕಾಯ್ವ ಹೊಣೆಯ ಹೊತ್ತಿದೆ ಹುಲಿಯೆ ಇನಿತು ಕಣ್ಣಿಟ್ಟಿದರೆ ಎತ್ತು ದನವಿಲ್ಲ (ಕಾಲೂರ. ೫೨-೮೦); ನಮ್ಮ ದನಕರುಗಳನ್ನು ಮೇವಿಗೆ ಬಿಟ್ಟಿದ್ದೆವು (ಆರ್ಯಕ. ೧೧).

[ ದನ + ಕಱು$_2$ ]

**ದನಗ$_1$** (ನಾ). ಗೌಳಿಗ; ಗೋಪಾಲಕ: ಮೂಡಗೇರಿಯಲ್ಲಿ ದನಗರ ಮನೆಯು ಸ್ಥಳದೊಳ್ ಹದಿನಾಲ್ಕುಗೆಯ್ಯಕ್ಕಡವನೆ (ಎಇ. XIII, ೩೦-೫೩; 1204). [ ದನ + – ಗ$_2$ ]

**ದನಗ$_2$** (ನಾ). ೧. "ಬೀಜ ಹೊಡೆಯದ, ಆದರೂ ಬೀಜವಿಲ್ಲದ, ನಪುಂಸಕ ಟಗರು" (ವನ್ನೂರು. ಕೋಶ): ಒಳ್ಳೆ ದನಗ ಬೆಳೆದ ಹಾಗೆ ಬೆಳೆದಿದ್ದಾನೆ (ರೂಢಿ). ೨. ಬಲಿತುಂದು; ಕೊಬ್ಬಿದುಂದು. 'ದನಗುರಿ' ಪರಾ. [ ? ]

**ದನಗಜ್ಜಿ** (ನಾ). ದಪ್ಪವಾದ ಕಜ್ಜಿ. [ ದನ + ಕಜ್ಜಿ ]

**ದನಗಬ್ಬು** (ನಾ). ಒಂದು ಬಗೆಯ ಕಬ್ಬು: ದನಗಬ್ಬಿನಿಂದ ಹಾಲು ಹೆಚ್ಚು ಬರುವುದಿಲ್ಲ (ರೂಢಿ). 'ಗೋಮಾರಿಕಬ್ಬು' ಪರಾ.

[ ದನ + ಕಬ್ಬು$_2$ (<ಕರ್ಬು$_1$) ]

**ದನಗಳ್ಳ** (ನಾ). ದನಗಳನ್ನು ಕದಿಯುವವನು: ದನಗಳ್ಳ (Cattle-lifter. ಇಂಕನಿ); ದಾರಿಗಳ್ಳ; ದನಗಳ್ಳ (Cateran. ಇಂಕನಿ). [ ದನ + ಕಳ್ಳ$_1$ ]

**ದನಗಾಯ್** (ಕ್ರಿ). ಗೋವುಗಳನ್ನು ಕಾಯುಂ; ದನ ಮೇಯಿಸು: ಅಂಕದರ್ಜುನ ಹೇಡಿ ಶಂಕರನು ತಿರಿದುಂಡ ಪಂಕಜನಾಭ ದನಗಾಯ್ದನುಳಿದವರ ಬಿಂಕವೇನೆಂದ (ಸರ್ವಜ್ಞ. ೮೫೪). [ ದನ + ಕಾಯ್$_1$ (<ಕಾ$_1$) ]

**ದನಗಾಯಿ** 'ದನಗಾಹಿ' ನೋ.

**ದನಗಾರ** (ನಾ). ದನಗಳನ್ನು ಸಾಕುವ ವೃತ್ತಿಯವನಂ; ಗೋವಳ: ನಿಮ್ಮ ಕುಲಗುರು ಕೃಪಾಚಾರ್ಯರು ಸಭೆಯಲ್ಲಿ ಇರುವಾಗ ಈ ದನಗಾರನಿಗೋ ಅಗ್ರಪೂಜೆ ಮಾಡುವುದು ? (ವ್ಯಾಸಜಿ. ೦೦೪); ಹಟ್ಟಿಕಾರರಲ್ಲಿ ಕುರುಬರು ತುರುಕಾರರು ಎಂದು ಬಗೆಗಳಾದರೂ ಇವರೆಲ್ಲರೂ ದನಗಾರರು (ಕರ್ನಾಪೂ. ೦೩); ಈ ಕನ್ನಡ ದನಗಾರನೇ ಮರಾಠಿಯಲ್ಲಿ ಧನಗರನಾದನು (ಕರ್ನಾಪೂ. ೦೪). [ ದನ + – ಕಾರ$_1$ (< – ಕಾಱ) ]

**ದನಗಾರಿಕೆ** (ನಾ). ದನಗಳನ್ನು ಸಾಕುವುದಂ; ಹೈನುಗಾರಿಕೆ; ಪಶುಪಾಲನೆ: ಹಿಂದಿನ ಬೇಟೆಗಾರಿಕೆ ದನಗಾರಿಕೆಗಳಂ ಬಿಟ್ಟುಹೋದುವು ಎಂದಲ್ಲ (ಸಾಹಿಸಂ. ೧೩೦). [ ದನಗಾರ + – ಇಕೆ ]

**ದನಗಾವಲು** (ನಾ). ಹುಲ್ಲುಂಗಾವಲು; ಗೋಮಾಳ (?): ೩ ಲೌ ೦೪ ಸತ್ರದ ಬಗ್ಗೆ ೮ ಲೌ ೪೧೦ ವಾಲಗದವರಿಗೆ ೬ ಲೌ ೦ ದನಗಾವಲು ಬಗ್ಗೆ (ಎಕ. VIII, ತೀರ್ಥಹ. ೧೩೭. ಪುಟ. ೬೦೦; 1702).

[ ದನ + ಕಾವಲು (<ಕಾವಲ್$_1$) ]

**ದನಗಾವಿ** 'ದನಗಾಹಿ' ನೋ.

**ದನಗಾಹಿ,** ದನಗಾಯಿ, ದನಗಾವಿ (ನಾ). ದನಗಳನ್ನು ಕಾಯುವವನಂ; ಗೋವಳ; ಗೋಪಾಲ: ಗೋವಳಿಗರ ಪಳ್ಳಿಯೊಳ್ ನೆಲಸಿದಾ ದನಗಾಹಿಯೆನಿಪ್ಪ ಕೃಷ್ಣನೇಂ ತಳಿಗೆಯೊಳಿಟ್ಟು ಸಂಹರಿಸನೇ ಕಲಹಂಬರಮುಂಟೆ ತನ್ನ ದೋರ್ಬಳದ ಪೊಡರ್ಪನುತ್ತ ಶಿಶುಪಾಲನನೇಳಿಸುವಂ ವೃಕಧ್ವಜಂ (ಜಗವಿ. ೧೮-೮೪): ದನಗಾಹಿಗಳ ಸದ್ದು ಆಗಾಗ ಕೇಳಿಸುತ್ತಿರುವುದು (ಕಮ್ಮಟ. ೧); ದನಗಾಹಿ ಬಾಲಕರು ಹಾಡುತ್ತಿದ್ದಾರೆ (ಬಿಟ್ಟಹೂ. ೪೦). **ದನಗಾಯಿ:** ಭೂಮಿಯು ಹೊತ್ತ ಹಾವಿನ ಹೆಡೆವಣಿಯ ಕಿತ್ತು ತನ್ನಿಯೆನ್ನದೆ ದನಗಾಯಿಯು ಮತ್ತೆಮಗಿದಿರನಿಕ್ಕುವರೆ (ನೇಮಿಸಂ. ೧೬-೭೩); ಮನೆಗೆ ಮರಳಿ ಹೊರಟ ದನಗಾಯಿಗಳು ಮಾತ್ರ ಎದುರಾಗುತ್ತಿದ್ದರು (ಗಾಳಿಗು. ೧೬). **ದನಗಾವಿ:** ಪೋರಾಟ ಮಾಡಿದ್ದಲ್ಲವೊ ನೀನು ಎನ್ನ ಕೂಡೆ ಸೇರಿ ಗೋಕುಲದಿ ದನಗಾವಿಯಾಗೂ (ಶ್ರೀಕೃಪಾ. ೩೦). [ ದನ + ಕಾಹಿ ]

**ದನಗಾಹಿಗ** (ನಾ). =ದನಗಾಹಿ: ದನಗಾಹಿಗರ ಕೊಳಲಿನ ಸವಿನಾದ ಎಲ್ಲವೂ ಸೊಗಸೆನಿಸಿದ್ದಿತು (ಗಿರಿಬಾ. ೨೩). [ ದನಗಾಹು + – ಇಗ ]

**ದನಗಾಹು** (ನಾ). ದನಗಳನ್ನು ಕಾಪಾಡುವುದಂ, – ರಕ್ಷಣೆ. 'ದನಗಾಹಿಗ' ಪರಾ. [ ದನ + ಕಾಹು$_1$ (<ಕಾಪು) ]

**ದನಗುರಿ** (ನಾ). ಬಲಿತ ಕುರಿ; ಕೊಬ್ಬಿದ ಕುರಿ: ಮಂದೆಯಲ್ಲಿ ದನಗುರಿಗಳು ಹೆಚ್ಚಾಗಿವೆ (ರೂಢಿ). [ <ದನಗ + ಕುರಿ$_3$ (< ಕುಱಿ) ]

**ದನಗೊಡಿಗೆ** (ನಾ). ಗೋಗ್ರಹಣದಲ್ಲಿ ಹೋರಾಡಿ ಸತ್ತವನಿಗೆ ಕೊಟ್ಟ ಕೊಡಿಗೆ ಹೊಲ: ಬೊಮ್ಮಯ್ಯ ಮಗ ಕಾಮುಗೆ ಕೊಟ್ಟ ನೆತ್ತರುಗೊಡಿಗೆಯ ಕ್ರಮವೆಂತೆಂದರೆ ನಿಮ್ಮ ಬೊಮ್ಮಿಉ ನಮ್ಮ ಸೇವೆಗೆ ಸತ್ತ[ದ]ಕೆ ನಾಉ × × ನಡ ಕೋಣೆಗೆ ದನಗೊಡಿಗೆ ಹೊಲವಾಗಿ ಕೊಟ್ಟೆಉ (ಎಕ. VIII ಸಾಗರ. ೨೬-೭; 1598 ?). [ ದನ + ಕೊಡಿಗೆ(<ಕೊಡಂಗೆಯ್$_2$) ]

**ದನಗೊಬ್ಬರ** (ನಾ). ಸಗಣಿಗೊಬ್ಬರ: ರೈತರು ಈಗ ದನಗೊಬ್ಬರಕ್ಕಿಂತ ರಾಸಾಯನಿಕ ಗೊಬ್ಬರವನ್ನೇ ಹೆಚ್ಚಾಗಿ ಬಳಸುತ್ತಾರೆ (ರೂಢಿ).

[ ದನ + ಗೊಬ್ಬರ$_1$ ]

**ದನಗೊರಸುನೀರು** (ನಾ). ದನದ ಗೊರಸಿನಿಂದಾದ ತಗ್ಗಿನಲ್ಲಿ ನಿಲ್ಲುವಷ್ಟು ನೀರಂ; ಗೋಷ್ಪದಜಲ; ಸ್ವಲ್ಪ ನೀರಂ: ಕಡಲೆನಗೆ ದನಗೊರಸುನೀರೆಂದು ತಿಳಿ, ನೆಗೆಯೆ (ಶ್ರೀರಾಮಾ. ೫೮೯-೫೦೬).

[ ದನ + ಗೊರಸು$_1$ + ನೀರು$_1$ (< ನೀರ್$_1$) ]

**ದನಗೋಳು** (ನಾ). ದನಕರುಗಳಿಗೆ ತೊಂದರೆಯಾಗುವುದಂ; ದನಗಳಿಗೆ ಕಷ್ಟವಾಗುವುದಂ: ಮುಂಗಾರುಮಳೆ ಕಾಡೆಲ್ಲ ಕಂಗಾಲಾಗುವಂತೆ ದನಗೋಳಾಗಿ ಸುರಿಯತೊಡಗಿತು (ಮಲೆಮ. ೪); ದನಗೋಳು ಮಳೆ ಹುಯ್ಯು (ರೂಢಿ). 'ಕಾಡುಗೋಳು' ಪರಾ.

[ ದನ + ಗೋಳು$_2$ (< ಗೋಳ್$_3$) ]

**ದನಬದುಕು** (ನಾ). (ಅಲಂ) ಪಶುವಿನಂತಹ ಜೀವನ; ಕೀಳುಮಟ್ಟದ ಜೀವನ: ಹೆಣವಾದವು ಹೆಂಡದಲ್ಲಿ ಉರುಮಲು ಬಾಳ್ಕೊಂಡದಲ್ಲಿ ದನ ಬದುಕಿದು ತೆಂಡದಲ್ಲಿ (ಮುಕ್ತಕಂ. ೬೨-೮).

[ ದನ + ಬದುಕು$_2$ (< ಬರ್ದುಕು$_2$) ]

**ದನಬಳ** (ನಾ). ಒಂದು ಬಗೆಯ ತೆರಿಗೆ: ಶ್ರೀಮಹಾಲಕ್ಷ್ಮೀದೇವಿಯ ಪ್ರತಿಷ್ಠೆಯ ಮಾಡಿಸಿ ಆ ದೇವಿಯ ನಿವೇದ್ಯಕ್ಕೆಂದು ... ೬ ಕಯ್ಯ ನೀಳದ ಅಂಗಡಿ ೧ ಅದಕ್ಕೆ ತಳಸಾರಿಗೆ ದನಬಳ ಕೊಟ ಹ [ ೧ ] . . . ಸರ್ವನಮಸ್ಯವಾಗಿ ಬಿಟ್ಟರು (ಸೌಇಇ. XV, ೨೩೨-೧೦; 1206); ಹುಲುಂಗೊರ ಹಂನ್ನಿರ್ವ್ವರು ಗಾವುಂಡು ಸಮಸ್ತ ಪ್ರಜೆ ನಖರ ಮುಮ್ಮುಂ(ಮು)ರಿದಂಡಂಗಳಿಗೆ ಆ ಸ್ಥ(ಸ್ಥ)ಳದ ದನಬಳವನು ಸರ್ವ್ವನಮಸ್ಯವಾಗಿ ಬಿಟ್ಟರು (ಎಇ. XVI, ೩೩೬-೩೩; 1255).

[ P ಇದು ದನದ ಮೇಲೆ ಹಾಕುವ ತೆರಿಗೆ ಇರಬಹುದೆ ? ]

**ದನವು** 'ದನ' ನೋ.

**ದನಾಗ್ರ** (ನಾ). ಒಂದು ಬಗೆಯ ಗ್ರಂದಿಗೆ ವಸ್ತು (?) : ಚೂರ್ಣಗಳು– ಶುಂಠಿ,ದಾಳಿಂಬದ ಕಾಯಿ, ಅಳಲೆಕಾಯ ಬೀಜ, ದನಾಗ್ರ ಗ ೧ ತೂಕ ಸಹ ಚೂರ್ಣವಂ ಮಾಡಿ ಬೆಲ್ಲದಿಂ ಕಲಸಿ ನಿಂಬೆಯ ಕಾಯಷ್ಟನು ಮೆಲ್ಲಲು ರಕ್ತಗ್ರಹಣಿ ನಿಲುವುದು (ಸಕವೈ. ೩೫೦). [ ? ]

**ದನಿ$_1$, ಧನಿ$_1$** (ನಾ). ೧. ಸದ್ದು ; ಸಪ್ಪಳ; ಮೊಳಗು; ಶಬ್ದ: "ಸಪ್ಪಳಬ್ಬರ ದನಿ ಸರಂ ಗಾವರಂ ಗಾವಳಿಯುಮುಲಿಯು ಧ್ವಾನಮಕ್ಕುಂ" (ಶಬ್ದಮಂ. ೩೦) ; ಕೂಷ್ಮಾಂಡರಸದೊಳಂ ಬೆಲ್ಲದೊಳಂ ಹಾರಕ್ಕಿನ(ಯ) ಸೊರ್ಕ ಟಗಿಗುಂ ವಾರಣಮದಮುಡುಗುವಂತೆ ಸಿಂಗದ ದನಿಯಿಂ (ಲೋಕೋಪ. ೧೦-೪೩); ರುಂಜೆಯ ದನಿ ದಿಕ್ಪಾಲರನಂಜಿಸೆ ತಳ್ತೊಗೆವ ಕೋಡ ಕಾಳೆಯ ದನಿ ದಿಕ್ಕುಂಜರಮಂ ಬೆದಱಿಸೆ (ಶಂರಾಮೂ. ೪-೫೭); ಸಾರಮಸಾರವಿ ದೆಂದು ವಿಚಾರಿಸಿ ಕೈಕೊಂಡು ಕಿಡಿಸಲಾಪ್ಪುದೆ ಚೀ ನಿಷ್ಕಾರಣಮದಱಿಂ ದನ್ನರ್ ಬಾರಿಸೆ ಮಾಣ್ಬುಂದು ಮಾವ ಕಂಚಿನ ದನಿಯೇ (ಧರ್ಮಾಮೃ. ೩-೨೭೦); ಅಲರ್ಗಳ ಸರಿ ಪೊಂಗಳ ಮಳೆಯೆಲರ್ಗಳ ತೀಟಂ ಸುರಾನಕದ ದನಿ ದಿವಿಜಾವಳಿಯ ಪೊಗಟ್ಕೆಗಳೆಂಬೀ ಲಲಿತಾಶ್ಚರ್ಯಂಗಳಾದವೊದ ವಿದುವಯ್ದುಂ (ವರ್ಧಪು. ೧೫-೨೩); ತುಡುಕಿದವು ತಂಬಟದ ದನಿ ಜಗದಡಕಿಲನು (ಕುಮಾದ್ರೋ. ೦-೪೭). ೨. ಇಂಪಾದ ಸ್ವರ ; ಇಂಚರ : ಇದು ಲೀಲಾಂದೋಳಮಿಂದೋಳದ ದನಿ ನೆಱೆಗೊಳ್ವನ್ನೆಗಂ ಪಾಡ ಲೆಂದೇಱಿದಳಂ ತೂಗುತ್ತುಮಿರ್ದನ್ನಯ ಪರಿಜು (ಆದಿಪು. ೪-೯) ; ಪುಗಲೆನ್ನದೆ ದಲ್ ಪುಗಿಮೆಂದು ಮೆಲ್ಪುಗುಂದದ ದನಿಯಿಂ ತಳಿರ್ತಸುಗೆ ಯೊಳ್ ನೆಲಸಿರ್ದ ಪಿಕಾಳಿ ಮೆಲ್ಲನುಲಿವುದು (ಪಂಪಭಾ. ೧೪-೦೩) ; ಅಲಿಗಳವು ನಸುಮುಚ್ಚಿ ಪಕ್ಷಯುಗಮೊಳಲೆ ರಸಂದೆಗೆವ ವನಿ ನಿಮಿರೆ ನಾಲಗೆ ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ (ಗಿರಿಕ. ೨-೩೯) ; ಪಾರಿವಗಳ ದನಿ ಕೊಳರ್ವಕ್ಕಿಯ ಲಲ್ಲೆ ಕೀರವಱಿಗಳ ಬೈದಾಟ (ಕಂನವಿ. ೧೦-೪೩). ೩. ಕಂಠ ; ಶಾರೀರ : ಆಕ್ರಂದನದಿಂ ಗಂಟಲೊಡೆದು ದನಿ ಕಿಡೆ (ಕಾದಂಪೂ. ೯೪೯) ; ಕ್ರಮೇಣ ದನಿಯನ್ನು ದೊಡ್ಡದು ಮಾಡಿದನು (ಕಳಹು. ೩). ೪. [ಕಾವ್ಯಮೀ] ವ್ಯಂಗ್ಯಾರ್ಥ ; ಧ್ವನಿ : ಪದಮೆ ಪದಮರ್ಥಮರ್ಥಂ ಪುದಿದ ರಸಂ ತೃಪ್ತಿಕರರಸಂ ಭಾವಂ ಪೊಣ್ಮಿದ ಸದ್ಭಾವಂ ದನಿಯಿಂಪೊದವಿದ ದನಿಯೆನಿಸೆ ಪೇಟ್ದಪಂ ಕವಿತಿಲಕಂ (ಪುಷ್ಪಪು. ೦-೬೨). **ಧನಿ$_1$ :** ೧. ಹತ್ತಿರ ಬರುತ್ತಿರುವ ಸ್ತ್ರೀಯ ಕಾಲಿನ ಧನಿ ಅವನ ಮನಸ್ಸನ್ನು ಎಳೆಯಿತು (ಮಲೆನಾ. ೭೭). ೨. ಅಳುವ ಕಂದನ ಕಿರಿಕಿರಿಧನಿಯೂ ಅದನ್ನು ಸಂತೈಸಿ ಹಾಡುವ ತಾಯಿಯ ಧನಿಯೂ (ನಿರಾಭ. ೪೯). [ < ಸಂ. ಧ್ವನಿ ]

**ದನಿ$_2$, ದಣಿ$_2$, ಧಣಿ** (ನಾ). ಒಡೆಯ ; ಯಜಮಾನ: ಅಯನದೀವಿಗೆಗೂ ದೇವರಿಗೆ ಮಾಲೆಗೂ ಕೂಡಿ ಹಂನೆರಡು ಹೊ(೦)ನ್ನನ್ನೂ ದನಿಯರ ಕಯ್ಯಲು ತಂದುಕೊಡುವರು ಯೀ ಧರ್ಮ್ಮವನೂ ಯೀಶ್ವರದನಿಯರ ಮಕ್ಕಳು ದಿವಾಕರದನಿಯರು ಆದಿಯಾಗಿ ನಡೆಸಿ ಪಾಲಿಸಿ ಬಹರು (ಸೌಇಇ. IX-ii, ೪೦೭-೧೮ ; 1364) ; ಕಟೆಯ ಹಬ್ಬದಲು ಉಭಯ ಜಂಗಮರಿಗೆ ಆರೋಗಣಿಯ ಧರ್ಮಕೆ ಕೊಂಡ ಬಾಳು ಕೊಟ ಬಾಳತಿಯ ಬಗೆಯಲು ದನಿಯರು ಮೂಲವಾಗಿ ಕೊಂಡ ಬಾಳು . . . ಬಾರಕೂರ ಪರಿವರ್ತ್ತನಕೆ ಸಲುವ ಗದ್ಯಾಣ ನೂಱು ಹೊಂನಂ ದನಿಯರ ಕೈಯಲು ಕೊಟ್ಟರು . . . ವರುಷಪ್ರತಿಯೂ ದಿವಾಕರದನಿಯರು ನಡಸಿ ಯಿಾ ಧ(೦)ರ್ಮ್ಮ ವನೂ ಪಾಲಿಸಿ ಬಹರು (ಸೌಇಇ. IX-ii, ೪೦೫-೧೦; 1372); ದನಿಯರೇ ಬಹುದೂರದಲ್ಲಿ ಕುದುರೆಯ ಖುರಸಪ್ಪಳವು ಕೇಳಬರುತ್ತದೆ ; ಬೇಗನೆ ಓಡಿರಿ (ಮಂದಾಕಿ. ೩೦). **ದಣಿ$_2$ :** "ದಣಿ (ಧಣಿ, ದನಿ) – ಧನಿನ್" (ತದ್ಭಕೋ. ೧೮); ದಣಿಯ ವಂನ ನೋಡಿದೆನೋ ವೇಂಕಟನ ಮನದಣಿಯ ನೋಡಿದೆ ಶಿಖಾಮಣಿ ತಿರುಮಲನ (ಪುರಂದ. ೨-೧೨೭ ಪಲ್ಲವಿ) ; ದಣಿಯ ಅಪ್ಪಣೆಗೆ ತನ್ನ ಅಭಿಲಾಷೆಯೂ ನೆರೆಯಿತು (ಕಾವ್ಯಸ.೯೭); ವಿಕಾರಿಯಂತೆ ವಿಕಟನರ್ತನ ಮಾಡಿದ್ದೇಕೆ . . . ಅದೂನೂ ಸಾಕಿದ ದಣಿಯ ಎದುರಿಗೆ! (ತುಂಗಭ. ೨೪); ದಣೀ ತನಕ ದೂರು, ಹೊಳೇ ತನಕ ಓಟ (ಹುಟ್ಟಹ. ೧೧೪); ದಣಿ ಹೇಳಾಟ, ಬಡಗಿ ಮಾಡಾಟ (ಗಾದ). **ಧಣಿ :** ಧಣಿ ಅನ್ನಾ ಉಂಡು ಬೆಳೆದ ದೇಹ (ಗ್ರಾಮಾಯ. ೭೦೦) ; ನಾವು ಧಣಿಗಳು, ನೀವು ಸೇವಕರು (ರಂಗಕ. ೫೮) ; ಧಣಿ ದಾನ ಕೊಡುವನು ಅಂದಾನ (ಅರಳು. ೪೩೦-೭).

[ < ಸಂ. ಧನಿನ್./ತುಳು. ದನಿ, ದಣಿ./ಮರಾ. ಧನೀ, ಧಣೀ ]

**ದನಿಕೂರು** (ಕ್ರಿ). ಗಂಟಲು ಕಟ್ಟು : ಹಾಡು ಹೇಳಲು ಆಗುತ್ತಿಲ್ಲ. ದನಿಕೂತಿದೆ (ರೂಢಿ). [ ದನಿ$_1$ + ಕೂರು$_2$ (<ಕೂರ್$_3$) ]

**ದನಿಗುಟ್ಟು** (ಕ್ರಿ). ಧ್ವನಿಮಾಡು; ಕೂಗು; ಕಿರಿಚು : ಹಟ್ಟಿಯೊಳಗಂದೆರಡು ಹೊತ್ತುಂ ಮುಟ್ಟಿ ಪೂಜಿಪ ದೇವರಿಗೆ ಮನವಿಟ್ಟು ತಾವಂತೆಱಗೆಱಗಿ ನಿಲಿನಿಲಿಕಿ ನೋಡುವವು . . . ದನಿಗುಟ್ಟುವವು ತಪ್ಪಿಲ್ಲವೆಮ್ಮುಂ ದಿಟ್ಟಿಸೈ ಎಂಬವೊಲು ಕೀತಯ್ಯಗಳಿದಿರೊಳಿಹವು (ಬಸಪು. ೭೦-೨೯).

[ ದನಿ$_1$ + ಕುಟ್ಟು$_1$ ]

**ದನಿಗುಡು** 'ದನಿಗೊಡು' ನೋ.

**ದನಿಗೂಡಿಸು** (ಕ್ರಿ). ೧. ಬೇರೆಯವರ ಧ್ವನಿಯೊಂದಿಗೆ ತನ್ನ ಧ್ವನಿ ಯನ್ನೂ ಸೇರಿಸು : ಹಾಡಿನಲ್ಲಿ ನೀನೂ ದನಿಗೂಡಿಸು (ರೂಢಿ). ೨. ಇನ್ನೊಬ್ಬರ ಅಭಿಪ್ರಾಯವನ್ನು ಅನುಮೋದಿಸು : ಉಳಿದೆರಡು ಉಕ್ತಿಗಳು ನಿಜವಾದ ವಿಮರ್ಶಕ ವಿವೇಕದಿಂದ ಹೊರಟಿವೆ. ಅವಕ್ಕೆ ನಾವೂ ದನಿಗೂಡಿಸುತ್ತೇವೆ (ತವನಿ. ೧೯೯). [ ದನಿ$_1$ + ಕೂಡಿಸು ]

**ದನಿಗೂಡು** (ಕ್ರಿ). ಸ್ವರವನ್ನು ಹೊಮ್ಮಿಸು ; ದನಿದೋರು : ಹೃದಯವು ಉಕ್ಕಿಬಂದಾಗ ಕೊರಲು ದನಿಗೂಡುವುದೆಂದು ಸರೋಜನಿದೇವಿಯು ಒಂದೆಡೆಗೆ ಹೇಳಿರುವಳು (ಪ್ರಬಂಧ. ೭೭). [ ದನಿ$_1$ + ಕೂಡು$_1$ ]

**ದನಿಗೆಡು** (ಕ್ರಿ). ಧ್ವನಿ ಒಡೆ ; ಧ್ವನಿಯು ಕರ್ಕಶವಾಗು : ಜಿಡ್ಡುಪದಾರ್ಥ ತಿಂದು ದನಿಗೆಟ್ಟಿದೆ (ರೂಢಿ). [ ದನಿ$_1$ + ಕೆಡು$_1$ ]

**ದನಿಗೆಯ್, ದನಿಗೈ** (ಕ್ರಿ). ಸದ್ದುಮಾಡು ; ಧ್ವನಿಮಾಡು ; ಕೂಗು : ಗೊಂಕಱುಕಪ್ಪೆ ಪಸುಂಬಂ ತತ್ಕ್ರಮದಿಂದಮೆ ದೀಪ್ತದಿಗ್ಭಾಗದೊಳ್ ದನಿಗೆಯ್ಯೆ ಮನಸ್ಸಿದ್ಧಿಯನಾಗಳೆ ಉಂಟುಮಾಡುಗುಂ (ಲೋಕೋಪ. ೧೨-೦೭) ; ದನಿಗೆಯ್ಯದು ಮಿಸುಕದಿದೇಕಿನುತುಂ ಮೃಗಧೂರ್ತಸಮಿತಿ ಸಾರ್ತರೆ ಪಂಚಾನನಮಿರ್ದುದು ಪಂಚತ್ವಮನನಾಕುಳಂ ಪೊರ್ದಿದಂತೆ ನಿಷ್ಕಂಪತೆಯಿಂ (ವರ್ಧಪು. ೧೨-೩೩) ; ದನಿಗೆಯ್ವ ಕೂಟ ಕೋಗಿಲೆಗಳೊಪ್ಪಿ ದುವು (ಮೋಹತ. ೫-೨೫) . **ದನಿಗೈ :** ಉಱೆ ದನಿಗೈವ ಕೊಂಬಳವಟ್ಟು ಮೆಱೆವಾ ಕಾಳೆ ಸನ್ನೆಗಳೆಸೆದುದವರೊಡನೆ (ಸಾಳ್ವಭಾ. ೫-೧೫).

[ ದನಿ$_1$ + ಕೆಯ್$_1$ ]

**ದನಿಗೇಳ್, ದನಿಗೇಳು** (ಕ್ರಿ). ಧ್ವನಿಯನ್ನು ಕೇಳು; ಸ್ವರವನ್ನು ಆಲಿಸು: ಮನವಾಳ್ತೆ ಮೆಯ್ಯುಲಿಸಿಕೆ ಮಕ್ಕಳ ಮುದ್ದುಬಿನದಂಗಳನು ಬಿಟ್ಟೆದ್ದು ದ ನಿ ಗೇ ಳ ದ ಮು ನ್ನ ತಾನಿದಿರ್ಗೊಂಡವನನುವಱಿತನುಸರಿಸುವುದು (ಹದಿಬ. ೩-೧೩). **ದನಿಗೇಳು :** ನಾಲಗೆಯ ತೆರ ಬಾಡ ಸವಿ ತಿಳಿಯದು . . . ಮುರಿದು ಕೊಲ್ಲದಿದು ಕೈಯಂತೆ ; ದನಿಗೇಳದು (ಕಪು. ೪೩-೭).

[ ದನಿ$_1$ + ಕೇಳ್ ]

**ದನಿಗೇಳು** 'ದನಿಗೇಳ್' ನೋ.

**ದನಿಗೈ** 'ದನಿಗೆಯ್' ನೋ.

**ದನಿಗೊಡು, ದನಿಗುಡು** (ಕ್ರಿ). ೧. ಧ್ವನಿಮಾಡು ; ಕೂಗು ; ಮೊಳಗು : ದಟ್ಟಿಸುಗು ತೊಪ್ಪನೆ ಕೆಡೆಗು ದ[ಪಾಠಾಂ. ಧ]ನಿಗೊಟ್ಟು ಕರೆದು ಕರಂ ಮುಗಿದು ಹೊಡವಟ್ಟು ಗಿಣ್ಣಲನಂತು ನೂಕುಗು (ಬಸಪು. ೧೪-೧೮) ;

ತಪ್ಪೆವೆಮ್ಮಯ ವ್ರತಕೆನುತೊಱಲುತಿಪ್ಪವೊಲು ದನಿಗೊಟ್ಟು ಕರೆವುತಿಪ್ಪ ವಂಬೆಯೆನುತ್ತ ತಲೆಗಳನೆತ್ತಿ ನೋಡುವವು (ಬಸಪು. ೬೦-೨೮) ; ತೊಲಗಿ ಬಾ ಬಿದ್ದವರ ತುಳಿಯದಿರೆನುತ ದನಿಗೊಡಲು (ಕೌಶಿರಾ. ೨೯-೨೫). ೨. ಪ್ರತಿಧ್ವನಿ ಮಾಡು : ಮರಗಿರದ ವ್ಯಗಗಿಗದ ಮಾತೇನರಸ ಭೀಮನ ದನಿಗೆ ಬೆಚ್ಚದೆ ಗಿರಿಗುಹೆಗಳೇ ಮಲೆತು ನಿಂದವು ದನಿಗೆ ದನಿಗೊಡುತ (ಕುವ್ಯಾಅ. ೧೦-೧೧). **ದನಿಗುಡು: ೧.** ದನಿಗುಡೆ ಬದ್ದವಣಂ ಮೇದಿನಿಸುರ ರುಚ್ಚರಿಪ ಮಂತ್ರದುಲಿ ಪಸರಿಸೆ (ಉದ್ಭಟ. ೮-೫೬) ; ಮುಡಿ ಜಗುಟಿ ನೇವುರಂ ದನಿಗುಡೆ ಬಡನಡು ಬಳ್ಕೆ . . . ಬಂದಳೊರ್ವಳ್ ನಡೆ ನೋಡಿದಳಾಗಳಂತೆ ನಾಣಟಿವಿನೆಗಂ (ಕಬ್ಬಿಕಾ. ೩೩೫)

[ ದನಿ$_1$ + ಕೊಡು$_1$ ]

**ದನಿದೋರು** 'ದನಿದೋಱು' ನೋ.

**ದನಿದೋಱಿಸು** (ಕ್ರಿ). ೧. (ಹೆದೆ ಮುಂತಾದುವನ್ನು) ಧ್ವನಿಯಾಗುವಂತೆ ಮಾಡಂ,–ಸದ್ದುಮಾಡಿಸಂ : ಧನುವ ನೇವರಿಸಿದನು ಕೊಪ್ಪಿನ ಕೊನೆಯನಾರೈದುಭಯದಲಿ ಸಿಂಜನಿಯ ದ[ಪಾಠಾಂ. ಧ]ನಿದೋಱಿಸಿದ ಸಬುಜಭವಾಂಡಘಟ ಬಿಱಿಯೆ (ತೊರರಾ. ೩-೬-೭). ೨. ಮೊಳಗು ; ಮೊರೆ ; ಘೂರ್ಣಿಸಂ : ಕೇಶವ ಸರ್ವೋತ್ತಮಯೆಂದು ತತ್ವವಿಲಾಸದಿ ನುಡಿದಾಮ್ನಾಯಘೋಷಣೆಯೆಂಬಂತೆ ಲವಣಾಬ್ಧಿ ಪರಮಸಂತೋಷದ ದನಿದೋಱಿಸಿತು (ಮೋಹತ. ೨೯-೨೪). [ ದನಿ$_1$ + ತೋಱಿಸು ]

**ದನಿದೋಱು,** ದನಿದೋರು (ಕ್ರಿ). ಸದ್ದುಮಾಡು ; ಶಬ್ದಮಾಡು : ಬಂದುವಿನೊಳಗಡಗಿಪ್ಪ ನಾದ ದನಿದೋಱದಂತೆ ಪಿಂಡ ಬ್ರಹ್ಮಾಂಡಂಗಳ ಕೂಡಿಪ್ಪ ಸೌರಾಷ್ಟ್ರಸೋಮೇಶ್ವರಲಿಂಗವನಾರು ಭೇದಿಸಬಾರದಯ್ಯ (ಆದವ. ೨-೭); ಅನ್ಯಭೃತಂ ದನಿದೋಱದನ್ನಮೋರಂತೆ ವಸಂತದೇಟ್ಟಿರವು ದೋಱುವವೋಲ್ ನನೆದೋಱಿದತ್ತು ವಾಸಂತಿ (ಜಗವಿ. ೧೪-೨೦) ; ಕನರ್ಗೊನರಂ ಕರ್ದುಂಕಿ ದನಿದೋಱುವ ಕೋಗಿಲೆ ಮೇಳೆದಾಳ್ದಳಿಂದೆನೆ (ಕಬ್ಬಿಕಾ. ೬೧); ಸುಳಿವ ಕಟ್ಟಿಗೆಕಾಱರಾಸ್ಥಾನದೊಳು ಕೋಗಿಲೆಯಂತೆ ದನಿದೋಱುತಿಹರು (ಭರತ. ೧-೬೦). **ದನಿದೋರು :** ಭೀಮನ ಕೊಳ್ಳವ ನೇರಿ ರಾಮು ಹೊರಟನು ಆಗ ಸ್ವಾಮಿ ಮೆಲ್ಲನೆ ದನಿದೋರೂ ಎನುತ (ಸಿದ್ಧಪು. ೫-೬೦). [ ದನಿ$_1$ + ತೋಱು ]

**ದನಿಮಾಡಿಸು** (ಕ್ರಿ). ನುಡಿಸಂ; ಬಾರಿಸಂ : ಹಾಡಿಸಬೇಡ ನಾನಾವಾದ್ಯವ ದನಿಮಾಡಿಸಬೇಡೋರ್ವರೊಡನೆ ಆಡಿಸಬೇಡ ಸ್ವಸ್ಥದಿ ನಿದ್ದೆಗೆಯ್ಯು ದೆಂದಾಡಿದಳಾ ಚಿತ್ರಲೇಖೆ (ಮೋಹತ. ೨೭-೩೬) ; ವಾರಿಜದಳನೇತ್ರ ಬಲಗೂಡಿ ಪ್ರಸ್ಥಾನಭೇರಿಯ ದನಿಮಾಡಿಸಿದ (ಮೋಹತ. ೩೬-೨೭).

[ ದನಿಮಾಡು + – ಇಸು$_3$ ]

**ದನಿಮಾಡು** (ಕ್ರಿ). ೧. ಶಬ್ದಮಾಡು ; ಜೇವೊಡೆ ; ಟಂಕಾರಮಾಡಂ : ಸಾರಥಿಯ ಬೋಳೈಸಿ ಚಾಪದ ನಾರಿಯನು ದನಿಮಾಡಿ (ಕುವ್ಯಾಕ. ೪-೧೦). ೨. ಗಟ್ಟಿಯಾಗಿ ಕೂಗಂ: ಓನಾಮ ಓದು ಚಿಲ್ಲಾಳ ಬಾಯೆಂದು ಚೆಂಗಳಿ ಕರೆದಾಳ ದನಿಮಾಡಿ (ಲೋಕಗೀ. ೧೮೦) ; ಬಾಲಸಿದ್ಧ ದನಿಮಾಡಿ ತಾಯಿಗೆ ಕರೆದನು (ಸಿದ್ಧಪು. ೩-೮೭). [ ದನಿ$_1$ + ಮಾಡು$_1$ ]

**ದನಿಮಿಟು** (ನಾ). ದನಿಯಂ ಮಿಡಿತ ; ಧ್ವನಿ : ಕ್ರಿಮಿ–ಕೀಟ ತುಂಬಿ ಈಟೀಟು ತುಂಬಿ ದನಿಮಿಟು ತುಂಬಿ ತುಂಬಿ ಇದ್ದದ್ದು ತುಂಬಿ ಇಲ್ಲದ್ದು ತುಂಬಿ ಅಹುದಲ್ಲದೆಲ್ಲ ತುಂಬಿ (ಗಂಗಾತ. ೧೦೮-೧೩). [ದನಿ$_1$+ಮಿಟು$_2$]

**ದನಿಯಿಡು** (ಕ್ರಿ). ೧. ಧ್ವನಿಯನ್ನು ತೆಗೆ,–ಎತ್ತು : ದನಿಯಿಡುತುಂ . . . ಕೀರಮಿರುತಿರ್ದುದು ತತ್ಸಹಕಾರಶಾಖೆಯೊಳ್ (ಕುಸುಮಾ. ೧೩-೧೩). ೨. ಧ್ವನಿಯನ್ನು ಸೇರಿಸಂ ; ದನಿಮೂಡಿಸಂ ; ಸ್ಪಂದಿಸಂ : ಯಮುನೆಯ ಮರುಕದೊಂದಿಗೆ ನನ್ನ ಹೃದಯವೂ ದನಿಯಿಟ್ಟಿತು (ಅಲಹೂ. ೧೧೪). [ ದನಿ$_1$ + ಇಡು$_1$ ]

**ದನಿಯೆತ್ತು** (ಕ್ರಿ). ಸ್ವರವನ್ನು ಹೊಮ್ಮಿಸಂ ; ಧ್ವನಿಮಾಡು : ನಡೆ ಕೆಲಕಂಚೆ ಬಿಸ್ನವಿಸು ಬೇಗದೆ ಕೋಗಿಲೆ ಪಾಡಿನೋಜೆಯಂ ಗಡಣಿಸು ತುಂಬಿ ಸೋಗೆ ದನಿಯೆತ್ತದಿರೊಯ್ಯನೆ ಬಂದು ಕುಳ್ಳಿರೀಯೆಡೆಗೆ ಬಸಂತಯೆಂದು ಗಿಳಿಗಳ್ ಕಡುಪಿಂ ನಡೆತಂದು ಸುತ್ತಲುಂ ಪಡಿಯಱರಾಗಿ ಚಪ್ಪರಿಪುವೊಲಗದೊಳ್ ಸಲೆ ಕರ್ವುವಿಲ್ಲನಾ (ಕಬ್ಬಿಕಾ. ೦೨೭).

[ ದನಿ$_1$ + ಎತ್ತು$_1$ ]

**ದನಿಷ್ಠೆ** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಇಪ್ಪತ್ತು ಮೂರನೆಯದು : "ಧನಿಷ್ಠಾ, ಶ್ರವಿಷ್ಠಾ–ಈ ೨ ದನಿಷ್ಠೆ" (ಹಲಾಯು. ೧೦-೫೦). [ <ಸಂ. ಧನಿಷ್ಠಾ ]

**ದನಿಸಂತೆ** (ನಾ). ಅನೇಕ ಶಬ್ದಗಳ ಕೂಟ ; ಗಲಾಟೆ ; ಗದ್ದಲ : ವರ್ಧಿಸಿತೊ ನೂಪುರರವಂವೆರಸಿ ಸ್ತ್ರೀಜನಾಕ್ರಂದನಂ, ಪುಷ್ಪಪ್ರಭಾತದೊಳ್ ಕ್ರೌಂಚಪಕ್ಷಿಯ ಪಂಕ್ತಿ ನೆರೆದು ಮುಂಗಿಲೆತ್ತರದಿ ದನಿಸಂತೆಗೈವಂತೆವೋಲ್ (ಶ್ರೀರಾಮಾ. ೯೦-೩೬೦). [ ದನಿ$_1$ + ಸಂತೆ$_1$ ]

**ದನಿಸರ** (ನಾ). [ಸಂಗೀತ] ಸ್ವರ : ಒಂದು ಹರಿವ ಹಾವು ಒಂದು ದನಿಸರಕ್ಕೆ ನಿಂದ ಹಾವು ಒಂದು ಉರಿವ ಹಾವು ಮೂವಱ ನಡುವೆ ನಿಂದು ಆಡುವ ಕೋಡಗದಿರವು ಎಂತೆಂದಡೆ (ಅಱಿಮಾ. ೦೪೭-೧೬೩). [ ದನಿ$_1$ + ಸರ$_3$ ]

**ದನು** (ನಾ). ದಕ್ಷನ ಮಗಳು ; ಕಶ್ಯಪನ ಹೆಂಡತಿ ; ದಾನವರ ತಾಯಿ : "ದಾನವರ ತಾಯ್ ದನುವೆನಿಕುು" (ಮಂಗರಾ. ೭-೨೪). [ ಸಂ. ]

**ದನುಕಂಪ** (ನಾ). (?) : ಒಂದನೆ ಕೇಳ್ ಪೇಟ್ವೆಂ ಪನ್ನೊಂದನೆ ಯುಗ ಕಾದಿಯಪ್ಪ ಪಿಂಗಳೆದೊಳ್ ಕಾರ್ಗೆಂದು ಮುಟಿಯಿಲ್ಲ ಕಳ್ಳರ್ ಕುಂದರ್ ದನುಕಂಪಮೆಂಬ ಮತ್ತಂ ಬರ್ಕುಂ (ಜಟ್ಟಮು. ೭-೨೪).

[ ℙ ಇದು 'ತನುಕಂಪ' ವಿರಬಹುದೆ ? ]

**ದನುಕುಲ** (ನಾ). ದನುವಿನ ಸಂತತಿ ; ರಾಕ್ಷಸಕುಲ : ಮನುಕುಲವೆಲ್ಲ ದನುಕುಲದಂತೆ ಒಬ್ಬರನ್ನೊಬ್ಬರು ತಿಳಿಯುತ್ತಾರೆ (ಬಾಳಬ. ೩).

[ ದನು + ಕುಲ ]

**ದನುಜ** (ನಾ). ದನುವಿನಲ್ಲಿ ಹುಟ್ಟಿದವನು ; ದಾನವ ; ರಾಕ್ಷಸ ; ℙ ದಿತಿ ಮತ್ತು ದನು ಇವರಿಬ್ಬರೂ ಬೇರೆ ಬೇರೆಯ ವ್ಯಕ್ತಿಗಳಾದರೂ ರಾಕ್ಷಸರ ತಾಯಿಯೆಂದು ಪರಿಗಣಿಸಲ್ಪಡುತ್ತಾರೆ : "ದನುಜರ್ ದೈತೇಯರ್ ದಿತಿತನೂಭವರ್ ಪೂರ್ವದೇವರಸುರರ್ . . . ಶುಕ್ರಶಿಷ್ಯರ್" (ವಸ್ತುಕೋ. ೬-೩೨) ; "ಆ ದನುಜರಂ ಪುಣ್ಯಜನಮೆಂಬುದು" (ಮಂಗರಾ. ೦೨೮-೨) ; ದನುಜರ ಕಯ್ಯೊಳಿರ್ದ ಮಾರ್ದನಾವಗಮಿವಾಟಿಕ್ಕೊಳಲೆಂದು ದೈತ್ಯಮರ್ದನನೆನಿಸಿರ್ದವಂ ಕಪಟದಿಂದೆ ವಿಲಾಸಿನಿಯಾದ ವೇಷಮಂ ನೆನೆಯಿಸಿದಪ್ಪುದೀ ಪಸಿಯ ಬಣ್ಣಮಿವಳ್ಗೆನೆ . . . ಆದಮೊಪ್ಪಿದಳ್ (ಕಾದಂಪೂ. ೩೪). [ ಸಂ. ]

**ದನುಜಕುಲ** (ನಾ). ರಾಕ್ಷಸರ ವಂಶ ; ದನುಜಕುಲಶಿವ ಕೊಡಲಿಗಾವಾದನು ಮಹಾದೇವ (ಕೌಶಿರಾ. ೨೨-೩೪). [ ದನುಜ + ಕುಲ ]

**ದನುಜಗುರು** (ನಾ). ರಾಕ್ಷಸರ ಗುರು ; ಶಂಕ್ರಾಚಾರ್ಯ : ಬಹುವಕ್ತ್ರಂ ಪದ್ಮಗರ್ಭಂ ದನುಜಗುರುರು ಗುರುದ್ವೇಷಿ ಜೀವಂ ಸುರಾಧೀಶಹಿತಾತ್ಮಂ ಸುಪ್ರಬುದ್ಧೋದ್ಧವನೆನಿಪವನುಂ ತಾನಕಾರ್ಯ್ಯಪ್ರಯುಕ್ತಂ (ಎಕ. VIII, ಸೊರಬ. ೧೪೦-೫೬ ; 1193). [ ದನುಜ + ಗುರು$_2$ ]

**ದನುಜಘರಟ್ಟ** (ನಾ). ೧. ರಾಕ್ಷಸರಿಗೆ ಬೀಸುವ ಕಲ್ಲಿನಂತಿರುವವನಂ ; ದನುಜರನ್ನು ನಾಶಮಾಡುವವನು. ೨. ವಿಷ್ಣು : ರಾಯದನುಜ ಘರಟ್ಟ ಪಾಂಡವರಾಯ ಜಂಗಮಜೀವ ನಿರ್ಜತಪಾಯ ನಿಜವನು ತೋಱಿ ಪಾರ್ಥನನೊಲಿದು ಬೋಧಿಸಿದ (ಕುವ್ಯಾಭೀ. ೩ ಸೂಚನೆ). ೩. ರಾಮ : ಅತ್ತ ದನುಜಘರಟ್ಟ ದೂರದಿ ಕಂಡು ನಸುನಗುತಿರ್ದ ಮನದೊಳಗೆ (ಕೌಶಿರಾ. ೧೮-೫೩). [ ದನುಜ + ಘರಟ್ಟ ]

**ದನುಜಪುಂಗವ** (ನಾ). ರಾಕ್ಷಸರಲ್ಲಿ ಶ್ರೇಷ್ಠನಾದವನು ; ದೈತ್ಯಶ್ರೇಷ್ಠ : ಶೂಲಾಗ್ರದೊಳಗಿರ್ದ ಕರಿದನುಜಪುಂಗವಂ ಭಾಲಾಕ್ಷನಂ ಕೀರ್ತಿಸುತ್ತ ಬಿನ್ನವಿಸಿದಂ (ವೀಶೈಪು. ೩-೧೮-೩೭). [ ದನುಜ + ಪುಂಗವ ]

**ದನುಜಮಥನ** (ನಾ). ರಾಕ್ಷಸರನ್ನು ನಾಶಮಾಡುವವನು; ಕೃಷ್ಣ : ರಥದಿಂದಮಿಳಿದು ತನಗಿದಿರಾಗಿ ಬಹ ದನುಜಮಥನನಂ ಕಾಣುತ (ಜೈಮಿಭಾ. ೧೪-೨೮). [ ದನುಜ + ಮಥನ ]

**ದನುಜವಿರೋಧಿ** (ನಾ). ರಾಕ್ಷಸರ ವೈರಿ ; ಕೃಷ್ಣ : ದನುಜವಿರೋಧಿ ಮಾಡಿದೊಡಮಾಗದ ಸಂಧಿಯೊಳೇನೊ (ಗದಾಯು. ೧-೫೭).

[ ದನುಜ + ವಿರೋಧಿ ]

**ದನುಜಹರ** (ನಾ). ರಾಕ್ಷಸರನ್ನು ನಾಶಮಾಡುವವನು ; ಕೃಷ್ಣ : ಎನಗಾ ದನುಜಹರಂ ಜನಕಂ (ಜಗವಿ. ೧-೩೪) ; ಭುಜಾಸ್ಫಾಲನವಿಬಂಧನ ಚಿತ್ರ ಗತಿಗಳಲಿ ತನತನಗೆ ಗೋವಳರು ಮಲ್ಲರನನುಕರಿಸಿ ತಿವಿದಾಡುವರು ಬಲ ದನುಜಹರರೊಡನಾಡಿಗಳು ತಾವಾಗಿ ವಿಪಿನದಲಿ (ನಿಭಾಗ. ೧೦-೧೮-೧೦).

[ ಸಂ. ]

**ದನುಜಾಂತಕ** (ನಾ). = ದನುಜಹರ : ದನುಜಾಂತಕನೆಂಬೀ ನಿನ್ನ ನಚ್ಚು ವೋದಂಕಮೆಲವೊ ಮುನ್ನೆನ್ನನ್ನಂ ದನುಜಂ ಪುಟ್ಟದೆ ಸಂದುದು ನಿನಗೀ ಪೆಸರೆನ್ನ ಮುಂದೆಯುಂ ಸಂದಪುದೇ (ಪಂಪಭಾ. ೬-೫೪).

[ ದನುಜ + ಅಂತಕ ]

**ದನುಜಾಧೀಶ್ವರ** (ನಾ). ರಾಕ್ಷಸರ ರಾಜ ; ರಾವಣ : ದನುಜಾಧೀಶ್ವರನ ಪುರಾತನ ಪುಣ್ಯದ ಫಲದಿನಾಯುಧಾಗರದೊಳೇಂ ಜನಿಯಿಸಿದುದೊ . . . ಚಕ್ರಂ (ಪಂರಾಮಾ. ೧೦-೧೯೫). [ ದನುಜ + ಅಧೀಶ್ವರ ]

**ದನುಜಾರಾತಿ** (ನಾ). ೧. ರಾಕ್ಷಸರ ವೈರಿ; ವಿಷ್ಣು : "ದನುಜಾರಾತಿ ಮುಕುಂದನಬ್ಧಿಶಯನಂ . . . ಅಬ್ಜೋದರಂ" (ವಸ್ತುಕೋ. ೪-೨೦). ೨. ಕೃಷ್ಣ : ದನುಜಾರಾತಿ ಸ್ಯಮಂತರತ್ನವ ನೃಪಂಗೀಯಲ್ಕೆ ದೂಱು ವೋದುದೇ ಜನರಂ ಮೆಚ್ಚಿಸಲಾಗದೈ (ಸೋಮೇಶ. ೮೩). ೩. ದೇವತೆ : ನಿಜನೇತ್ರಂ ಲೋಕನೇತ್ರಂ ನಿಜಭರಣಮಿಳಾಚಕ್ರಭಾರಾವಹಂ ಮೇಣ್ ನಿಜವಾಹಂ ಧರ್ಮಗೇಹಂ ನಿಜಧನು ದನುಜಾರಾತಿಜಾತಾಧಿವಾಸಂ . . . ಕುಡುಗೆಮಗತುಳಶ್ರೇಯಮಂ ಶೈಲಜೇಶಂ (ರಾಜಶೇ. ೧-೨).

[ ದನುಜ + ಅರಾತಿ ]

**ದನುಜಾರಿ** (ನಾ). = ದನುಜಾರಾತಿ : ಆ ದನುಜಾರಿಯನಾತ್ಮಗರ್ಭದೊಳ್ ಧರಿಯಿಸಿ ನಿಂದಳೀ ಪಿರಿಯಳಿಂ ಪಿರಿಯರ್ ಪೆಱರಿಲ್ಲ ಲೋಕದೊಳ್ (ಜಗವಿ. ೩-೯೭) ; ಅಂಜನಾದ್ರಿಯ ಮೇಲೆ ಸಿಡಿಲೆಱಗಿದಂತಾಗೆ ದನುಜಾರಿ ಮೈಮಱೆದನು (ಜೈಮಿಭಾ. ೭-೫೫). [ ದನುಜ + ಅರಿ$_6$ ]

**ದನುಜಾರಿಪ್ರಿಯೆ** (ನಾ). ವಿಷ್ಣುವಿನ ಹೆಂಡತಿ; ಲಕ್ಷ್ಮಿ : "ಶ್ರೀರಾಮೆ ಗೋಮಿನಿ ವಾರಿರುಹಾವಸಥೆ ಪದ್ಮೆ ರಮೆ ಕಮಲೆ . . . ಸಿರಿ ದನುಜಾರಿ ಪ್ರಿಯೆಯೆಂದಿವಿಂದಿರಾನಾಮಂಗಳ್" (ವಸ್ತುಕೋ. ೫-೨೭).

[ ದನುಜಾರಿ + ಪ್ರಿಯೆ ]

**ದನುಜಾರಿರಿಪು** (ನಾ). ಕೃಷ್ಣನ ಶತ್ರು; ಜರಾಸಂಧ : ದನುಜಾರಿರಿಪು ಜರಾಸಂಧನೆಂಬ ಸುತನತಿರಥಂ ಬೃಹದ್ರಥನಾಮಾವನಿಪಂಗೆ ಚಂಡಕೌಶಿಕ ಮುನೀಂದ್ರನಿಂದಾದಂ (ಕಾದಂಪೂ. ೩೪೯). [ ದನುಜಾರಿ + ರಿಪು ]

**ದನುಜೆ** (ನಾ). ರಕ್ಕಸಿ ; ರಾಕ್ಷಸಿ ; ದೈತ್ಯೆ : ದನುಜೆಯುಲ್ಲಾಂ ಮನುಜೆಯಾನರ್ಥವಿಷಯದಾಪೇಕ್ಷೆಯಿಂ ಕೊಂಡೊಯ್ದು ಕೊಂದೆನೀ ಶಿಶುವ (ಹಚಕಾ. ೧೩-೬) ; ಮತ್ತಿದುವೆ ಹೊಮ್ಮಿಗವಧೆಗೆ ಕೋ ಮತ್ತಿದುವೆ ದನುಜೆಯ ಮೂಗ ಕೊಯ್ದಾ ಸುಭಟತನಕಿದುವೆ ಇದು ಸುಬಾಹುವ ಹರಣಕೊಂಡುದಕೆ . . . ಕೊಳ್ಳೆನುತಸುರ ರಾಮನನೆಚ್ಚು ಮೂದಲಿಸಿ (ಕೌಶಿರಾ. ೩೫-೩೦). [ ಸಂ. ದನುಜಾ ]

**ದನುಜೇಂದ್ರ** (ನಾ). ರಾಕ್ಷಸರ ರಾಜ ; ರಾಕ್ಷಸರ ದೊರೆ : ದನುಜೇಂದ್ರನ ಸೇನೆಯ ವಜ್ರನ ದೋರ್ದಂಡಂಗಳಂ ಕುಠಾರಾಯುಧದಿಂ . . . ತಱಿದಂ (ಪಂರಾಮಾ. ೧೩-೧೦೪) ; ದನುಜೇಂದ್ರನ ಮಡಿವರ್ಗ ಮನೆನಗೀಯದೊಡೆ . . . ಅಗಸವೊಯ್ಲ್ಲ ಸವಿಯಂ ತೋರ್ಪೆಂ (ಜಗವಿ. ೬-೭). [ ದನುಜ + ಇಂದ್ರ ]

**ದನುಜೇಂದ್ರನಿಕೇತ** (ನಾ). ರಾಕ್ಷಸರ ವಾಸಸ್ಥಾನ ; ಪಾತಾಳಲೋಕ : " ಪಾತಾಳಂ ದನುಜೇಂದ್ರನಿಕೇತಮದೋಭುವನಮುರಗಲೋಕಂ " (ವಸ್ತುಕೋ. ೧೯-೫). [ ದನುಜೇಂದ್ರ + ನಿಕೇತ ]

**ದನುಜೇಜ್ಯ** (ನಾ). = ದನುಜಗುರು : ದನುಜೇಜ್ಯಂ ಧರ್ಮ ಕರ್ಮ ತ್ರಿತನು ಧನ ಚತುಷ್ಪಂಚ ರಂಧ್ರಾಯದೊಳ್ . . . ಲೇಸೆನಿಕ್ಕುಂ (ಜಾತತಿ. ೧೦-೧೨) ; ಅನಿಮಿಷಮಂತ್ರಿಯೊಳೊಂದಿದ ಶನಿಯಿಂದಂ ಮಡಕೆ ಮಾಟ್ಪನಡಲುಂ ಬಲ್ಲಂ ದನುಜೇಜ್ಯನಿಂ ಗಂಣಾಧಿಕನೆನಿಕುಮದೀ ಯೋಗ ಸಂಭವಂ ಬುಧಮಿತ್ರಾ (ಜಾತತಿ. ೧೫-೫). [ ಸಂ. ]

**ದನುಜೋದೀರಿತ** (ನಾ). [ಜೈನ] ರಾಕ್ಷಸರಿಂದ ಉಂಟಾದುದು : ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತಂಗಳೆಂ ಬಯ್ದುಂ ತೆಱದ ದುಃಖಂಗಳೊಳದು್ (ಆದಿಪು. ೫-೮೮ ವ). ℙ ಶರೀರದಿಂದ, ಮನಸ್ಸಿನಿಂದ, ಕ್ಷೇತ್ರದಿಂದ, ಪರಸ್ಪರರಿಂದ ಮತ್ತು ರಾಕ್ಷಸರಿಂದ ಉಂಟಾದುವೆಂದು ಹೇಳಲಾಗುವ ಐದು ಬಗೆಯ ದುಃಖಗಳು.

[ ದನುಜ + ಉದೀರಿತ ]

**ದನುನಂದನ** (ನಾ). = ದನುಜ : ದನುನಂದನನಿನನಂದನನಿನನಂದನನಿನನ ನಂದನನ ನಂದನನಂ ದಿನನಂದನನೆಂದನುದಿನ ದನನಿನನಾನನ್ನನಾದೆನಾಂದಂ ನಿನ್ನಂ (ಮುದತಿ. ೬-೧೦). [ ದನು + ನಂದನ ]

**ದನುಪ್ರಭವ** (ನಾ). = ದನುಜ : ದನುಪ್ರಭವದಾರಣತ್ವರೆಯ ನಿನ್ನುಮಂ ಮುಂಚೀಯನಾಥ ಭಯವಾರಣಪ್ರವಣಹಸ್ತಮುದ್ಯೋಗಿಕುಂ (ವಸ್ತುಪಂ. ೨೫). [ ದನು + ಪ್ರಭವ ]

**ದನುಸುತ** (ನಾ). = ದನುಜ : ದನುಸುತಂ ಕಿಟಿ ತನ್ನನಾ ಮುಳಿಸಿಂ ವ್ಯಾಡಾದ್ರಿಯೆ ಸಿಂಹವಾಹಿನಿಯ ರೂಪಿನೊಳಾಹವಕ್ಕೆ ಸಹಾಯಮಾಯ್ತು ರಘೂದ್ವಹಂಗೆ (ಪಂರಾಮಾ. ೧೪-೫) ; ದನುಸುತನೊರ್ವನುರ್ವರೆಯನಾರಸೆಗುಯ್ದೊಡಮಂಗೆ ಭಂಗಮಂ ಜನಿಯಿಸಿ ತನ್ನ ಮುಂನಿನ ಮುಕುಂದನ ಶೌರ್ಯಮನಾತ್ಮವಿಕ್ರಮಂ ನೆನೆಯಿಸೆ (ಎಕ. XI, ದಾವಣ. ೩೫-೮ ; ಸು. 1160). [ ದನು + ಸುತ ]

**ದಪ್** (ನಾ). ಒಂದು ಅನುಕರಣ ಶಬ್ದ : ಅವನು ದಪ್ ಎಂದು ಬಿದ್ದ (ರೂಢಿ) ; ಅವಳು ದಪ್ಪೆಂದು ಹೊಡೆದಳು (ರೂಢಿ).

**ದಪ$_1$** (ನಾ). ಒಂದು ಅನುಕರಣ ಶಬ್ದ.

ದಪದಪ (ದ್ವಿರುಕ್ತಿ) : ಅವನು ಕಳ್ಳನಿಗೆ ದಪದಪ ಎಂದು ನಾಲ್ಕೇಟು ಹೊಡೆದ (ರೂಢಿ). 'ದಪದಪನೆ' ಪರಾ.

**ದಪ$_2$** 'ದಫಾ' ನೋ.

**ದಪಗೊಳ್ಳು** (ಕ್ರಿ). ಯಾಸಗೊಳ್ಳು; ಸುಸ್ತಾಗು: ಹೀಗೆಯೆ ದಪಗೊಂಡು ಬಿದ್ದಾಗ ಒಂದು ಮೂಲೆಯಲ್ಲಿ ಬೆಳಕು ತೋರಿತು (ಮೇದಿಮ. ೭೦).

[ ದಪ ? + ಕೊಳ್ಳು$_1$ (<ಕೊಳ್$_1$) ]

**ದಪದಪನೆ** (ಅ). ದಪದಪ ಎಂಬ ಶಬ್ದದೊಡನೆ : ಗಾಡಿ ಇದ್ದಕ್ಕಿದ್ದಂತೆ ನಿಂತಾಗ ಅದರಲ್ಲಿದ್ದ ವಸ್ತುಗಳೆಲ್ಲಾ ದಪದಪನೆ ಬಿದ್ದುಹೋದುವು (ರೂಢಿ).

[ <ದಪ$_1$ + - ಅನೆ$_1$ ]

**ದಪಾ** 'ದಫಾ' ನೋ.

**ದಪ್ತರ** 'ದಫ್ತರು' ನೋ.

**ದಪ್ತರಖಾನೆ** 'ದಫ್ತರಖಾನೆ' ನೋ.

**ದಪ್ಪರದಾರ** 'ದಪ್ಪರದಾರ' ನೋ.

**ದಪ್ಪರು** 'ದಪ್ಪರಂ' ನೋ.

**ದಪ್ಪ$_1$, ದಿಪ್ಪ** (ನಾ). ೧. ತೋರ; ಗಾತ್ರ; ಗಡಂತರ; ಮಂದ: "ತೋರಂ ದಪ್ಪಂ" (ಕಾಶಕ್ಕ. ೧೭೮); ಬೆರಲ ದಪ್ಪದೊಳು ಬಟುಹಾಗಿ ಕಳಿಲೆಯನ್ನುತ್ತರಿಸಿಕೊಂಡದಜ[ವೊಗರನು]ಹೋಹ ತೆಜದಿನುಕ್ಕರಿಸಿ ನೀರಂ ಹಿಂಡಿ (ಸೂಪಶಾ. ೭-೩); ಥಾಳಿಸುವ ನಿಡುಗಣ್ಣುಳು ದಪ್ಪಾದ ಗಂಭೀರ ನಾಭಿಯಂ . . . ಬಟ್ಟನುಣ್ಪೊಡೆ ಜಂಘೆಗೊಪ್ಪುತ್ತಿರುವ ಮೆಲ್ಲಡಿಗಳಿಂದ ಮಖವೀರ್ಯನಾತ್ಮಜಂ ಶೋಭಿಸಿದನು (ಪರಶು. ೪-೨). (ಗು). ೨. ಒರಟಾದ; ನಯವಿಲ್ಲದ. 'ದಪ್ಪಕಾಗದ' ಪರಾ. ೩. ದೊಡ್ಡದಾದ; ಗಾತ್ರವಾದ. 'ದಪ್ಪಕ್ಕಿ' ಪರಾ. **ದಿಪ್ಪ:** (ನಾ). ೪. ಸಮೂಹ; ದಟ್ಟಣೆ; ಸಂದಣಿ: ಉಪ್ಪರಿಗೆಗಳಗ್ರಂಗಳೊಳೊಪ್ಪಂಬಡೆದಿರ್ದ ಪೊನ್ನ ಕಳಸಸಮೂಹಂ ತಪ್ಪನೆ ಪುರಮಂ ನೋಡಲ್ ದಿಪ್ಪದೆ ಬಂದಿರ್ದ ಸೂರ್ಯಕುಲಮೆನೆ ತೋರ್ಕುಂ (ಹಾಲಾಸ್ಯ. ೧-೪-೭೦). ೫. ಮಂದವಾದುದುಂ; ದಟ್ಟವಾದುದುಂ: ಗೋಮಯಪಂಕಮಂ ವಿಳಸಿತೋನ್ನತ ಭಸ್ಮ ಕಾರಣಮೆಂದು ತವ್ಮ ಮೊಕಂಗಳೊಳ್ ದಿಪ್ಪಮಾಗೆ ಪೂಸಿಕೊಂಡು (ಹಾಲಾಸ್ಯ. ೪-೧೫-೮೦). ೬. ಕಡುವಾದುದುಂ; ಗಟ್ಟಿಯಾದುದುಂ: ದಿಪ್ಪಾದ ಬಣ್ಣವನ್ನು ಕೂಡ್ರಿಸಬೇಕಾದರೆ ಯೆರಡು ಮೂರು ಸಾರಿ ಬಣ್ಣದೊಳಗೆ ಯೆದ್ದಬೇಕಾಗುತ್ತದೆ (ಕಭಾಗೆ. ೧೫೩).

ದಪ್ಪವಾಗು=ಸ್ಥೂಲವಾಗು; ತೋರವಾಗು: ಅವಳು ಬರುಬರುತ್ತಾ ತುಂಬ ದಪ್ಪವಾಗುತ್ತಿದ್ದಾಳೆ (ರೂಢಿ).

[ದೇ.॥ ತುಳು. ದಪ್ಪ, ದಪ್ಪೊ; ತೆಲು. ದಪ್ಪ]

**ದಪ್ಪ$_2$** (ನಾ). ೧. ಸೊಕ್ಕು; ಗರ್ವ; ಅಹಂಕಾರ: ದ್ವಿತ್ವಾಗ್ರ ರೇಫ ಲೋಪಕ್ಕೆ–ಅರ್ಘ–ಅಗ್ಗ . . . ದರ್ಪ–ದಪ್ಪ (ಶಮದ ೨೬೧ ಪ್ರಯೋ); ತಪ್ಪಿ ನುಡಿದೊಡೆ ಗರುಡದೇವನ ದಪ್ಪ[ಪಾಠಾಂ. ದರ್ಪ]ವನು ಹರಿ ಸೆಳೆದು ಬಿಸುಟನು (ಕುಬ್ಬಾಉ. ೯-೧೦). ೨. ಕೆಚ್ಚು; ಶೌರ್ಯ; ಪರಾಕ್ರಮ: "ದಪ್ಪ ಪೆಟ್ಟದಟಾರ್ಪು ಸಾಸ ಪೆರ್ಚುಬ್ಬಟೆಯದಪ್ಪುದಬ್ಬರಮುನ್ನತಿಕೆಯುಂ ಪನ್ನತಿಕೆಯೆನೆ ತಪ್ಪದಣ್ಮೆನೆ ಪರಾಕ್ರಮ ವಾಚಿ" (ಶಬ್ದಮಂ. ೩೯); "ಪನ್ನತಿಕೆ ಪೆಟ್ಟು ತಕ್ಕುಮೆಯಿನ್ನುಂ ತಾಂ ಸಾಸ ದಪ್ಪಮದಟಾರ್ಪಣ್ಮೆಂದೆನ್ನಲ್ ಪರಾಕ್ರಮಾಖ್ಯಂ" (ಕವಿಕಂ. ೧೨೫); ಕಡಲೊಳ್ ನೇಸಱನಟ್ದಲುಂ . . . ಪೆಡೆಯಂ ತೊಟ್ಟನೆ ಮೆಟ್ಟ ಬಾಸುಗಿಯನಾದಂ ಸೀಟಲುಂ ಪೊತ್ತು ಬಾನೆಡೆಯಂ ಬೇಗದಿನೆತ್ತಲುಂ ಬಗೆದನಾಗಳ್ ದಪ್ಪದಿಂ ದಪ್ಪಗಂ (ಕಬ್ಬಿಗಕಾ. ೦೫೨); ದಪ್ಪ[ಪಾಠಾಂ. ದರ್ಪ]ವುಳ್ಳಂಗೀಸು ಮಂಗಳವೊಪ್ಪದೇನ್ಯೆ ಜಗದೊಳಾವಂಗಪ್ಪುದೀ ಬಲವೀ ನಿಗರ್ವಿತೆಯೆಂದನಾ ಮತ್ಸ್ಯ (ಕುಬ್ಬಾವಿ. ೯-೨೮); ತಪ್ಪದೆ ಲಗ್ಗೆಗೇಱಿದ ಖಳರನು ಕೊಲ್ವ ದಪ್ಪವನೇನೆಂಬೆನು (ಕಂಸವಿ. ೦೪-೫೬). [<ಸಂ. ದರ್ಪ]

**ದಪ್ಪಕ, ದಪ್ಪಗ** (ನಾ). ಕಾಮ; ಮನ್ಮಥ: "ಕುಡುವಿಲ್ಲ ಪೂವುಣುಂಬಂ . . . ಜೊನ್ನೊಡಲನಳಿಯಂ ದಪ್ಪಕಂ ಮಯಣನೆಂಬಿವಿಂತೊಡನೆ ಮನ್ಮಥ ನಾಮವು" (ಶಬ್ದಮಂ. ೮); "ದಪ್ಪಕ–ದರ್ಪಕ = ಮನ್ಮಥ"(ತದ್ಭಕೋ. ೧೮). ದಪ್ಪಕ ರತಿಯ ವಸಂತಕೇಳಿಯ ಚಿತ್ರವಿಪ್ಪುದ ನೋಡಿ ಸಂತಸದಿ ಚಪ್ಪರ ಮಂಚದ ಮೇಲೆ ಕುಂಕುಮದಲಸುರ್ಪಪ್ಪತ್ತಿಗೆಯಲಿ ಮಂಡಿಸಿದ (ಮೋಹತ. ೨೨-೧೨). **ದಪ್ಪಗ:** ಪೊತ್ತು ಬಾನೆಡೆಯಂ ಬೇಗದಿನೆತ್ತಲುಂ ಬಗೆದನಾಗಳ್ ದಪ್ಪದಿಂ ದಪ್ಪಗಂ (ಕಬ್ಬಿಗಕಾ. ೦೫೨); ದಪ್ಪಗನರ್ಧಾಂಗಿಯ ರೂಪಿಗಿವ್ಮಡಿ ಸುಪ್ರೌಢಾನ್ವಿತೆ ಕೇಳು (ಮೋಹತ. ೨೨-೩೦); ತನ್ನ ನಲ್ಲೆಳೆಯನೊಂದು ಸವರ್ಯಿಯಿಂ ಸಂತುಪ್ಪನಾಗಿ ದಪ್ಪಗಂ ಪಡೆವೆರಸುಬಿಡದ ಕಡೆವಗಲನಿರುಳಂ ಪುಸಿಗಾಳೆಗದುಜ್ಜುಗದೊಂದೆಣಿಕೆಯಿಂ ಕಟಿದು (ರಾಮಾಶ್ವ. ೫೭-೧೯).

[<ಸಂ. ದರ್ಪಕ]

**ದಪ್ಪಕವಗೆಯು, ದಪ್ಪಗವಗೆಯು** (ನಾ). ಮನ್ಮಥನ ಹಗೆ; ಶಿವ: "ಗನಹ ಮಾದೇವ ಕಣ್ಣಡಿಯು ಕಟಿಗೊರಲ ಪಿಱಿತಿನಿಯಾಣ್ಮ ದಪ್ಪಕವಗೆಯು . . . ಅಮರ್ದುವೆಣ್ಣಿನಿಯನೆಂದೆಂಬಿವೀಶ್ವರನ ನಾ ಮ ಂ" (ಶಬ್ದಮಂ. ೪); "ಮಿಗಗೈಯಂ ಕಣ್ಣಡಿಗಂ . . . ಬಾನ್ನವಿರಂ ದಪ್ಪಕವಗೆಯಂ ಮಾದೇವ ಸಬ್ಬ ಗಂದರಗಿವಿಯಂ" (ಕವಿಕಂ. ೧೬). **ದಪ್ಪಗವಗೆಯು:** ಪಣೆಗಣ್ಣಂ ತಾನೊಡ್ಡಿ ನಿಲ್ವುದುಮಣುವಂ ಸಿಡಿಮಿಡಿಗೊಂಡಸವಸದಿಂ ದಪ್ಪಗವಗೆಯನಂ ಕ್ಶೆಯ ಪೆರ್ವರನೊಳ್ . . , ಮಾಲೆದು ತಾಗಿದಂ (ರಾಮಾಶ್ವ. ೦೩೧-೨೪). [ದಪ್ಪಕ + ಪಗೆ$_2$ + –ಅ$_7$]

**ದಪ್ಪಕಾಗದ** (ನಾ). ತೆಳುವಲ್ಲದ ಕಾಗದ; ಒರಟು ಕಾಗದ: ಪುಸ್ತಕಗಳಿಗೆ ರಟ್ಟುಹಾಕಲು ದಪ್ಪಕಾಗದ ಬೇಕು (ರೂಢಿ). 'ತೆಳುಕಾಗದ' ಪರಾ.

[ದಪ್ಪ$_1$ + ಕಾಗದ]

**ದಪ್ಪಕ್ಕಿ** (ನಾ). ಅಕ್ಕಿಯಲ್ಲಿ ಒಂದು ಬಗೆ; ಸಣ್ಣದಲ್ಲದ ಅಕ್ಕಿ: ರೊಟ್ಟಿಗೆ ದಪ್ಪಕ್ಕಿ ಚೆನ್ನ (ರೂಢಿ). 'ಸಣ್ಣಕ್ಕಿ' ಪರಾ. [ದಪ್ಪ$_1$ + ಅಕ್ಕಿ$_1$]

**ದಪ್ಪಗ** 'ದಪ್ಪಕ' ನೋ.

**ದಪ್ಪಗಟ್ಟು** (ಕ್ರಿ). ಮಂದವಾಗು; ಗಟ್ಟಿಯಾಗು: ಮಿಶ್ರಣವು ದಪ್ಪಗಟ್ಟಲು ಪ್ರಾರಂಭವಾದಾಗ ಅದಕ್ಕೆ ಸಕ್ಕರೆ, ಸುಲ್ತಾನದ್ರಾಕ್ಷೆ ಮತ್ತು ಬೆಣ್ಣೆಯನ್ನು ಸೇರಿಸಿ . . . ಮತ್ತೆ ಕಾಯಿಸಬೇಕು (ಅಡುಸಾ. ೯೭).

[ದಪ್ಪ$_1$ + ಕಟ್ಟು$_1$]

**ದಪ್ಪಗವಗೆಯು** 'ದಪ್ಪಕವಗೆಯು' ನೋ.

**ದಪ್ಪನೂಲು** (ನಾ). ದಪ್ಪವಾದ ದಾರ; ಒರಟುನೂಲು: ಮನೆಯಲ್ಲಿ ಉಡಲು ದಪ್ಪನೂಲಿನ ಸೀರೆ ಸಾಕು (ರೂಢಿ).

[ದಪ್ಪ$_1$ + ನೂಲು$_2$ (<ನೂಲ್$_2$)]

**ದಪ್ಪನೆ$_1$** (ಅ). ದಪ್ ಎಂಬ ಶಬ್ದದೊಡನೆ: ಅವನು ದಪ್ಪನೆ ಬಿದ್ದುಬಿಟ್ಟ (ರೂಢಿ) [ದಪ್ + –ಅನೆ$_1$]

**ದಪ್ಪನೆ$_2$, ದಪ್ಪನ್ನ, ದಪ್ಪಾನೆ** (ಗು). ೧. ದಪ್ಪವಾದ; ತೋರವಾದ: ದಪ್ಪನೆ ಜಡೆಯ ಹುಡುಗಿ ಬರುತ್ತಿದ್ದಾಳೆ (ರೂಢಿ). ೨. ಒರಟಾದ: ಕಿಟಕಿಗಳಿಗೆ ತೆರೆಹಾಕಲು ದಪ್ಪನೆ ಬಟ್ಟೆ ಉಪಯೋಗಿಸಿದರೆ ಮೇಲು (ರೂಢಿ). **ದಪ್ಪನ್ನ:** ೧. ದಪ್ಪನ್ನ ಎಲುವು (ಮುಂಬಯಿ. ೪-೮೨). ೨. "ಸ್ಥೂಲ-ಶಾಟಿಕ–ದಪ್ಪನ್ನ ಅರಿವೆ" (ಗಂಗಾಮ. ೩೪೦). **ದಪ್ಪಾನೆ:** ೩. ಗಾತ್ರವಾದ; ದಟ್ಟವಾದ: ಆಗಳಿಂದ ೩ ತಾಸುಗಳ ತನಕ ಊರಲ್ಲೆಲ್ಲಾ ದಪ್ಪಾನೆ ಕತ್ತಲೆ ಕವಿಯಿತು (ಗೂಲಿಶ್ಯಾಥಾ. VIII ಮುನ್ನುಡಿ).

[ದಪ್ಪ$_1$ + –ಅನೆ$_2$ (<–ಅನೆಯ$_2$)]

**ದಪ್ಪನ್ನ** 'ದಪ್ಪನೆ$_2$' ನೋ.

**ದಪ್ಪಬಟ್ಟೆ** (ನಾ). ತೆಳುವಲ್ಲದ ಬಟ್ಟೆ; ಒರಟುಬಟ್ಟೆ: ಈಗಿನ ಕಾಲದಲ್ಲಿ ದಪ್ಪಬಟ್ಟೆಗೆ ಹೆಚ್ಚು ಬೇಡಿಕೆಯಿಲ್ಲ (ರೂಢಿ). [ದಪ್ಪ$_1$ + ಬಟ್ಟೆ$_2$]

**ದಪ್ಪಮೆಣಸಿನಕಾಯಿ** (ನಾ). ಒಂದು ಬಗೆಯ ಮೆಣಸಿನಕಾಯಿ; ಹೊಟ್ಟೆಮೆಣಸಿನಕಾಯಿ; ದೊಣ್ಣೆಮೆಣಸಿನಕಾಯಿ: ಹಗುರವಾಗಿರುವ ದಪ್ಪಮೆಣಸಿನಕಾಯಿ ಹಣ್ಣು ಅಷ್ಟು ಖಾರವಿಲ್ಲದಿರುವುದರಿಂದ ತರಕಾರಿಯಂತೆ ಉಪಯೋಗಿಸಲ್ಪಡುತ್ತದೆ (ತರಜಿ. ೫೨).

[ದಪ್ಪ$_1$ + ಮೆಣಸಿನಕಾಯಿ]

**ದಪ್ಪರಿ** (ನಾ). ಒಂದು ಅನುಕರಣ ಶಬ್ದ: ದಪ್ಪರಿ ದುಬ್ಬುಂ ಪೊಟ್ಟನೆ ದೊಪ್ಪಥೊಗಪ್ಪನೆ ದಿಧಿಲ್ಬುಥಿಲ್ಲನೆ ಗದೆಗಳ್ ಸೊಪ್ಪುಸೊವಡಪ್ಪಿನಂ ಸೂಟ್ರಿಪ್ಪದೆ ಕಡುಕೆಯ್ದು ಪೊಯ್ದರೊರ್ವರನೊರ್ವರ್ (ಗದಾಯು. ೮-೧೦).

**ದಪ್ಪವಳಿ** (ಕ್ರಿ). ಹೆಮ್ಮೆಗುಂದು: ಅಪ್ಪಾಜಿ ಹಾ ನಮ್ಮನೀಡಾಡಿ ಜಗದಗ್ರ ಕುಪ್ಪರಿಸಿದೆಯ ಹಾಯೆಂದು ದಪ್ಪವಳಿದು ಬೆದೆಬೆಂದರು ಶಿಶು ಬಿಸಿ ತುಪ್ಪವ ಕುಡಿದ ರೀತಿಯೊಳು (ಭರಜ. ೭೮-೮೧). [ದಪ್ಪ$_2$ + ಅಳಿ$_1$ (<ಅೞಿ$_1$)]

**ದಪ್ಪವೇಱಿಸು** (ಕ್ರಿ). ಬಲವನ್ನು ಹೆಚ್ಚಿಸು; ಸತ್ತ್ವವನ್ನು ವರ್ಧಿಸು: ಮುಪ್ಪಾದ ನರರೊಮ್ಮೆ ಕೊಂಡರಾಕ್ಷಣದೊಳು ತುಪ್ಪುಳುಮಿಾಸೆಯು ಮಾಡಿ ದಪ್ಪವೇಱಿಸುವ ಶಕ್ತಿಯು ಧರಿಸಿದ ಹೆಱದುಪ್ಪವನೆಱದಳು ಪತಿಗೆ (ಭರಚ ೧೦-೩೩). [ ದಪ್ಪ₂ + ಏಱಿಸು ]

**ದಪ್ಪಾನೆ** 'ದಪ್ಪನ್ನೆ₂' ನೋ.

**ದಪ್ಪು** 'ಡಪ್ಪು' ನೋ.

**ದಫನ್**, ದಫನ (ನಾ). (ಹೆಣವನ್ನು) ಹೂಳುವಿಕೆ, – ಹುಗಿಯುವಿಕೆ, – ಮಣ್ಣುಮಾಡುವಿಕೆ; ಅಂತ್ಯಕ್ರಿಯೆ: ದಿಕ್ಕಿಲ್ಲದ ಶವವನ್ನು ದಫನ್ ಮಾಡುವುದಕ್ಕೆ ಏರ್ಪಾಡು ಮಾಡುವುದು ಗ್ರಾಮಾಧಿಪತಿಯ ಕೆಲಸವಾಗಿರುತ್ತದೆ (ಗ್ರಾಮಾಕ. ೫೯). **ದಫನ:** ಮುಸ್ಲಿಂ ಪದ್ಧತಿಯಂತೆ, ಆ ಮುದುಕನ ದಫನ ಮಾಡಿಸಿದರು (ಅನ್ನ. ೩೪೪); ಅವನ ಜನನ, ಮದುವೆ ಮತ್ತು ದಫನಗಳ ಪುರಾವೆಯು ನನಗೆ ದೊರಕಿತ್ತು (ಬೆಂಜನ್. ೯).

[ ←ಅರ. ಹಿಂ. ಮರಾ. ದಫನ್. ]

**ದಫನ** 'ದಫನ್' ನೋ.

**ದಫನಕ್ರಿಯೆ** (ನಾ). = ದಫನ್: ರಾಮಪ್ಪನ ದಫನಕ್ರಿಯೆ ಮುಗಿಸಿ ಬಂದು ತಾಯಿ ಮಕ್ಕಳಿಬ್ಬರೂ ಕಂಬನಿ ಸುರಿಸುತ್ತಾ ಕುಳಿತುಕೊಂಡಿದ್ದವರು ನನ್ನನ್ನು ಕಂಡು ಎದ್ದು ನಿಂತರು (ನಾಪೋಲೀ. ೨೦೬); ಮುಸಲ್ಮಾನ ಸಮಾಜಬಂಧುಗಳು ತಮ್ಮ ಸಂಪ್ರದಾಯದಂತೆ ದಫನಕ್ರಿಯಾದಿಗಳನ್ನು ಮಾಡುವ ಆಗ್ರಹಪಟ್ಟರು (ಶರೀಫ. ೭೯ ಕವಿಕಾವ್ಯಪರಿಚಯ).

[ ದಫನ (<ದಫನ್) + ಕ್ರಿಯೆ ]

**ದಫನಭೂಮಿ** (ನಾ). ಸಮಾಧಿಮಾಡುವ ಸ್ಥಳ; ರುದ್ರಭೂಮಿ; ಸ್ಮಶಾನ: ಈಗ ಇದ್ದ ದಹನ, ದಫನಭೂಮಿಯಲ್ಲಿ ಮುಂಚಿನ ಊರಿತ್ತಂತೆ (ದೀಪಹ. II, ೨೨೨). [ ದಫನ (<ದಫನ್) + ಭೂಮಿ ]

**ದಫಾ**, ದಪ್ಪ₂, ದಪಾ (ನಾ). ಸರದಿ; ಸಲ; ಬಾರಿ: ಎರಡನೇ ದಫಾ ಕಾಗದ ಬರದು ಕಳುಹಿಸಿ, ತನ್ನ ಫೌಜು ತೆಗೆದುಕೊಂಡು, ಜಮಾಲಾಬಾದಿಗೆ ಹೋದನು (ರಾಜೇಂದ್ರ. ೬೦); ಜುಮಾರ್ನೆ ವಗೈರೆ ಮೊದಲೇ ಒಂದು ದಫಾ ಪಾವತಿಯಾಗಿದ್ದು ಪುನಃ ರಿಮಿಷನ್ ಆದರೂ ಅಂತಹ ಬಾಬುಗಳಿಗೆ ಪ್ರತ್ಯೇಕವಾಗಿ ಸಪ್ಲಿಮೆಂಟಲ್ ಬಿಲ್ಲನ್ನು ತಯಾರುಮಾಡಿ ರವಾನಿಸಬೇಕು (ಗ್ರಾಮಾಕ. ೭). **ದಪ್ಪ₂:** ನಾನಲ್ಲಿಗೆ ಎರಡು ದಪ ಹೋದೆ (ಪುನರು. ೨೨೬). **ದಪಾ:** ಈ ದಪಾಕ್ಕೆ ರೋಜಾಕಡ್ಡಿಗಳಿಗೆಲ್ಲ ಪಾತಿಗಟ್ಟಿ . . . ಓಗಿಬಿಡ್ತೀನಿ (ಕಲನ. ೪೦೦). [ ←ಅರ. ಹಿಂ. ಮರಾ. ದಫಾ; ]

**ದಫೇದಾರ** (ನಾ). ೧. ಕೆಲವು ಸೈನಿಕರ ಮುಖ್ಯಸ್ಥ; ಸೈನ್ಯಾಧಿಕಾರಿ. ೨. ಪೋಲೀಸು ಅಧಿಕಾರಿ: ನ್ಯಾಯಸ್ಥಾನದ ಒಳಗಿದ್ದವರೆಲ್ಲ ಹೊರಡುತ್ತಿದ್ದಂತೆ ದಫೇದಾರ ಮೂರು ಸಾರೆ ಕೂಗಿದ (ಏಕಾಂಗಿ. ೨೦೨); ದಫೇದಾರನಾಗಿದ್ದಾಗ ಇದ್ದ ದರ್ಪದ ಒಂದಿಷ್ಟು ಕುರುಹೂ ಈಗ ಅವನಲ್ಲಿ ಇರಲಿಲ್ಲ (ಅನ್ನಪೂ. ೬೫); ದಫೇದಾರ ರಂಗರಾಯನೊಟ್ಟಿಗೆ ಒನ್–ಬೈ–ಟು ಕಾಫಿ ಗುಟುಕರಿಸುತ್ತ ಕುಳಿತಿದ್ದ . . . ಯೂನಿಫಾರಂನಲ್ಲಿದ್ದ ದಫೇದಾರನೂ ಅಲ್ಲಿಗೆ ಬಂದ (ಬೆಂಗಬ. ೨೪). ೩. ಜವಾನರ ಮುಖ್ಯಸ್ಥ: ಕಛೇರಿಯಲ್ಲಿ ಆರು ಜನ ಜವಾನರಿಗೂ ಇವನು ದಫೇದಾರ (ರೂಢಿ). ೪. ಅಶ್ವದಳದ ಒಬ್ಬ ಅಧಿಕಾರಿ: (ಕ).

[ ←ಮರಾ. ದಫೇದಾರ್; ಹಿಂ. ದಫಾದಾರ್ ]

**ದಫೇದಾರಿ** (ನಾ). ದಫೇದಾರನ ಕೆಲಸ, – ವೃತ್ತಿ: ಓದು ಮುಗಿಸಿ ಎಷ್ಟೋ ವರ್ಷಗಳಾದವು. ಈಗ ಅವನಿಗೆ ದಫೇದಾರಿ ಕೆಲಸ ಸಿಕ್ಕಿದೆ (ರೂಢಿ).

[ ←ಹಿಂ. ದಫಾದಾರೀ ]

**ದಫ್ತರ್** 'ದಫ್ತರು' ನೋ.

**ದಫ್ತರ್‌ಬಂದಿ** 'ದಫ್ತರಬಂದಿ' ನೋ.

**ದಫ್ತರ್‌ಶಾಹಿ** (ಗು). ೧. ಕಾಗದ ಪತ್ರಗಳಲ್ಲೇ ಮುಳುಗಿರುವ; ನೇರವಾಗಿ ಕ್ರಿಯಾಮುಖವಾಗದ; ಸೋಮಾರಿತನದ: ದೇಶಕ್ಕೆ ಎಂದೂ ಈ ದಫ್ತರ್‌ಶಾಹಿ ಸರಕಾರದಿಂದ ಒಳ್ಳೆಯದಾಗಲಾರದು (ರೂಢಿ). (ನಾ). ೨. ಕಾಗದ ಪತ್ರಗಳಲ್ಲಿ ಮುಳುಗಿ ನಡೆಸುವ ಸರ್ಕಾರ,– ಅಧಿಕಾರ: ಕೆಲವು ದೇಶಗಳಲ್ಲಿ ಸರ್ಕಾರ ದಫ್ತರ್‌ಶಾಹಿಯಾಗಿದೆ (ರೂಢಿ).

[ ದಫ್ತರ್ (<ದಫ್ತರು) + ಶಾಹಿ ]

**ದಫ್ತರ** 'ದಫ್ತರು' ನೋ.

**ದಫ್ತರಖಾನೆ**, ದಪ್ತರಖಾನೆ (ನಾ). ಸರ್ಕಾರದ ಕಾಗದಪತ್ರಗಳನ್ನು ಇಟ್ಟಿರುವ ಕಚೇರಿ,–ಆಫೀಸು: "ಕಾಗದ ಪತ್ರಗಳನ್ನು ಇಟ್ಟಿರುವ ಸ್ಥಳ: ದಫ್ತರಖಾನೆ; ಪತ್ರಾಗಾರ" (Cartulary. ಇಂಕನಿ). **ದಪ್ತರಖಾನೆ:** ದೊಡ್ಡ ರಂಗಭೂಮಿ; ದಪ್ತರಖಾನೆ; ಮನೆಗೆ ಹಿಂದೆ ತೋಟ (ದೇವೀಚಾ ೪).

[ ←ಮರಾ. ದಫ್ತರ್‌ಖಾನಾ; ಹಿಂ. ದಫ್ತರೀಖಾನಾ;

ಪಾರ. ದಫ್ತರೀಖಾನಹ್ ]

**ದಫ್ತರದಾರ**, ದಪ್ತರದಾರ (ನಾ). ದಫ್ತರಖಾನೆಯ ಹಿರಿಯ ಅಧಿಕಾರಿ: (ಕ). **ದಪ್ತರದಾರ:** ಇವರು ಓರಿಸ್ಸಾ ದೇಶದ ಗಜಪತಿ ಅರಸರಲ್ಲಿ ದಪ್ತರದಾರರಾಗಿದ್ದು ರಾಜ ಪ್ರಜೆಗಳೀರ್ವರಿಂದಲೂ ಸನ್ಮಾನ್ಯರಾಗಿದ್ದರು (ಕಭವಿ. I ೧೫). [ ←ಪಾರ. ಮರಾ. ದಫ್ತರ್‌ದಾರ್ ]

**ದಫ್ತರಬಂದಿ**, ದಫ್ತರ್‌ಬಂದಿ (ನಾ). ಕಚೇರಿಯ ಕಾಗದಪತ್ರ ಅಥವಾ ದಾಖಲೆಗಳ ಮೇಲ್ವಿಚಾರಕರ ಸಹಾಯಕ; ದಾಖಲೆಗಳನ್ನು ವ್ಯವಸ್ಥಿತವಾಗಿ ಜೋಡಿಸಿ ಇಡುವವನು: ದಫ್ತರಬಾದಿಯಿಂದ ಹೇಳಿಸಿದ ಶಾನುಭೋಗ ಪುರಾಣದಲ್ಲಿ ಸುಭೇದಾರಿಯ ದಶಾವತಾರಗಳೂ ಕುಣಿದಾಡಿಹೋಗಿವೆ (ಗರುದಾ. ೬). **ದಫ್ತರ್‌ಬಂದಿ:** ನಾನು ಮೊದಲು ಸರ್ಕಾರಿ ಕೆಲಸಕ್ಕೆ ಸೇರಿದುದು ತಾಲ್ಲೂಕುಕಛೇರಿಯಲ್ಲಿ ದಫ್ತರ್ ಬಂದಿಯಾಗಿ (ಗರುದಾ. ೮೦). [ ←ಪಾರ. ಮರಾ. ದಫ್ತರ್‌ಬಂದ್ ]

**ದಫ್ತರಿ** (ನಾ). ದಫ್ತರಬಂದಿ; ಕಚೇರಿಯ ಕಾಗದಪತ್ರಗಳನ್ನು ಜೋಡಿಸಿ ಇಡುವವನು; ಗುಮಾಸ್ತ; ಕಾರಕೂನ: ನನ್ನಿಂದ, ತಮ್ಮ ಸರ್ವೀಸ್, ರೆಕಾರ್ಡು ಹಿಂದು ಮುಂದಾದದ್ದನ್ನು ಬಿಡಿಸಿ, ಜೋಡಿಸಿಕೊಂಡು . . . ಗಟ್ಟಿರಟ್ಟಿನ ಫಾಯಿಲ್‌ಬೋರ್ಡಿನಲ್ಲಿ ಬಂಧಿಸ್ತ ಮಾಡಿಸಿಕೊಂಡರು ಮತ್ತು ಹುಡುಗ ದಫ್ತರೀ ಆಗಲಿಕ್ಕೆ ಲಾಯಖ್ ಇದ್ದಾನೆಂದರು (ದೀಪಹ. II, ೧೮): ಅವರ ಖಾಸ್ ದಫ್ತರಿಯಾದೆನೆಂದರೂ ಅಡ್ಡಿಯಿಲ್ಲ (ದೀಪಹ. II, ೩೫೩). [ ←ಪಾರ. ಹಿಂ. ದಫ್ತರೀ ]

**ದಫ್ತರು**, ದಪ್ತರ, ದಪ್ತರು, ದಫ್ತರ್, ದಫ್ತರ (ನಾ). ೧. ಸರ್ಕಾರದ ಕಾಗದಪತ್ರ,–ದಾಖಲೆ; (ವಿಶೇಷವಾಗಿ ಕಂದಾಯದ) ಲೆಕ್ಕಪತ್ರ: ರಾಜಾಸ್ಥಾನದ ಎಲ್ಲ ಅರಮನೆಗಳಿಗೂ ಭೇಟಿಕೊಟ್ಟು ಆ ಅರಮನೆಗಳಲ್ಲಿ ದೊರಕುವ ಐತಿಹಾಸಿಕ ದಫ್ತರುಗಳನ್ನು ಪರಿಶೀಲಿಸಿದ್ದರು (ವಂಶವೃ. ೨೭೦). ೨. ವ್ಯವಸ್ಥಿತವಾಗಿ ಜೋಡಿಸಿಟ್ಟ ಕಾಗದಪತ್ರಗಳ ಕಟ್ಟು; ದಾಖಲೆ ಪುಸ್ತಕ; ರಿಜಿಸ್ಟರು: ಲೆಕ್ಕಣಿಕೆ ಹಿಡಿದು, ತನ್ನ ದಫ್ತರನ್ನು ಬರೆಯುವ ಕುಲಕರ್ಣಿ ಅಲ್ಲಿ ಕಾಣುವ (ಗಾಳಿಗು. ೨); ಟೈಕೊಬ್ರಾಹಿ . . . ಎಂಬ ಜ್ಯೋತಿಷ್ಕನು ಕುಜಾದಿ ಗ್ರಹಗಳ ಸ್ಥಾನಗಳನ್ನು ಸೂಕ್ಷ್ಮವಾಗಿ ಗೊತ್ತುಹಚ್ಚಿ ಒಂದು ದೊಡ್ಡ ದಫ್ತರನ್ನು ಮಾಡಿಟ್ಟನು. ಈ ದಪ್ತರವು . . . ಕೆಪ್ಲರಿನ ಕೈಗೆ ಸಿಕ್ಕಿತು (ಶಿಲ್ಪನಾ. ೮೦). **ದಪ್ತರ:** ೨ ಯಿಾ ಸನದೀ ನಕಲನ್ನು ಸಿರಸ್ತೇದಾರರ ದಪ್ತರಕೆ ಬರಸಿಕೊಂಡು ಅಸಲ ಸನ್ನದನ್ನು ಹೆಚಿಕಿಮ್ಮಯ್ಯನ ವಶಕೆ ಕೊಡುವದು (ಎಕ. VI, ಕೊಪ್ಪ. ೪೮-೫೦; 1811); ಯಿ ನಿರೂಪ್ಪದ ನಕಲುನು ಸರಕಾರದ ದಪ್ತರಕ್ಕೆ ಬಸ್ಸಿ (ಮೈಆರ. ೧೯೩೦, ೪೩-೪೩; 1812); ಸಂನ ೧೮೧೩ ಯಿಸವಿ ದಾಖ ದಪ್ತರ ಕಂಪಡಿ ಹಿರಂಣ್ಯಪ್ಪ ದಿವಾನ್ ಕಛೇರಿ ಹಜೂರು (ಮೈಆರ. ೧೯೨೯,

೯೪-೩; 1813): ಸಾಹೇಬರು . . . ಕಾಗದವನ್ನು ದಪ್ತರದಲ್ಲಿಡಲಿಕ್ಕೆ ಶಿಕ್ಷಕರ ಕಡೆಗೆ ಕೊಟ್ಟರು (ಬಿಟ್ಟಹೊ. ೧೯). **ದಪ್ತರು :** ೨. ಭಾರತದ ಸರಕಾರೀ ಭೂಪಟಗಳಲ್ಲಿ, ದಪ್ತರಿನಲ್ಲಿ ಈ ಹೆಸರು ಬಹಿಷ್ಕೃತವಾಗಿದೆ (ಕರ್ನಾಟ. ೯೯೬) ; ವಿಕ್ರಮಾದಿತ್ಯನ ಸಿಂಹಾಸನದ ಮೇಲೆ ಕುಳಿತ ಮಗು ಕೂಡ ನ್ಯಾಯವನ್ನು ಕೊಡುವಂತೆ, ಒಳ್ಳೆಯ 'ದಪ್ತರು' ಎಂಥ ಬೇವಕೂಫನ ನ್ನಾದರೂ ಸಾಹೇಬನನ್ನಾಗಿ ಮಾಡಬಲ್ಲದು . . . ಕಿಟ್ಟಿ ಇನ್ನೂ ದಪ್ತರಿನ ಚಾರ್ಜ ತೆಗೆದುಕೊಳ್ಳುವ ಮೊದಲೇ 'ನೋಡೋಣ'! ಎನ್ನಬಲ್ಲವನೆಂದ ಮೇಲೆ ಅದು ದಪ್ತರಿನ ಮಹಿಮೆಯಲ್ಲದೆ ಇನ್ನೇನು ? (ಗಂಮಾಯಿ. ೨೩). ೩. ಕಾರ್ಯಾಲಯ ; ಕಚೇರಿ ; ಆಫೀಸು : ಧಾರವಾಡ ಜಿಲ್ಲೆಯ ದಪ್ತರಿನಲ್ಲಿ ಈಗಿನ ಲೆಕ್ಕದ ಪದ್ಧತಿಗೆ ಹೊಂದುವಂಥ ತಾಳೇಬಂದು ಯೆಲ್ಲಕ್ಕೂ ಹಳೇದು . . . ದೊರಿಯುತ್ತದೆ (ಕಥಾಗಿ. ೩೯೦). **ದಫ್ತರ್:** ೧. (ಮೃಗಜ. IV, ೭೬೭). **ದಫ್ತರ :** ೧. ಕುಲಕರ್ಣಿ ಪಟ್ವಾರಿಗಳ ದಫ್ತರದ ಭಾಷೆಯೆಲ್ಲಾ ಉರ್ದು (ಕನ್ನನು. I, ೨೬). ೨. ಆಯುಧಕ್ಕೆ ಪೂಜೆಯಂ ನೆರವೇರಿಸಿ ಕಂಕಣವಿಸರ್ಜನೆಯಂ ಮಾಡಿ, ಶಿಖಾಸರವನೂ. ದಫ್ತರವನ್ನೂ ಸಹ ಪೂಜಿಸಿ . . . ಪೂಜೆಯಂ ಬೆಳೆಸಿದರು (ಮಹಾವಂ I, ೩೮) ; ತಹನಾಮೆಯನ್ನು ಬರೆಸಿ, ತಲಚೇರಿ ಸರಕಾರದ ದಫ್ತರದಲ್ಲು ಮಡಗಿ ಇದೆ (ರಾಜೇಂದ್ರ. ೫೩) ; ಕುಮಾರೈಯ್ಯನು ದಫ್ತರವನ್ನು ಹಿಡಿದು ಕೊಂಡು ಬೀದಿಯ ಬಾಗಿಲಲ್ಲಿ ನಿಂತಿದ್ದ (ಜಂಗಾಳ್ಕ. ೭೩) ; ಹೆಗ್ಗಣಗಳೂ ಆ ದಫ್ತರಗಳ ಸಂದಿಯಲ್ಲಿ ಮನೆಮಾಡಿಕೊಂಡಿದ್ದವು (ಗರುಡಾ. ೮೦): ತಮ್ಮ ದಫ್ತರದ ಮೇಲೆ ಕಟ್ಟಿದ್ದ ರೇಷ್ಮೆಯ ವಸ್ತ್ರವನ್ನು ಬಿಚ್ಚಿ ಆ ದಫ್ತರದಿಂದ ಒಂದು ಜಾತಕವನ್ನು ತೆಗೆದು (ಶ್ರೀರಾಯ. ೭೩) ; ಸಿಂಗಪ್ಪಯ್ಯನವರು ತಾವು ಹೊಸದಾಗಿ ತಂದ ದಫ್ತರ ಚೌಕದೊಳಗೆ ದಫ್ತರ ಸಮೇತ ಕಟ್ಟಿಟ್ಟಿದ್ದರು (ನನ್ನೂರು .೧೫೯). [ ←ಅರ. ಮರಾ. ಹಿಂ. ದಫ್ತರ್ ]

**ದಬಕ್** (ನಾ). ಒಂದು ಅನುಕರಣ ಶಬ್ದ. 'ದಬಕ್ಕನೆ' ಪರಾ.

**ದಬಕಹಾಕಿಸು** (ಕ್ರಿ). ಮಂಡಿ ಊರುವಂತೆ ಮಾಡಿಸು,-ಮಡಿಚುವಂತೆ ಮಾಡು (?) : ರಾಜನು ತನ್ನ ಫೌಜು ಮುರಿದು ಹೋದ್ದನ್ನು ಕಂಡು ಆನೇಕಾಲಿಗೆ ದಬಕಹಾಕಿಸಿ ನಿಂತುಕೊಂಡು . . . ೬ ತಾಸಿನಿಂದ ೧೦ ತಾಸಿನವರೆಗೂ ಯುದ್ಧಮಾಡುತಿದ್ದನು (ಚಿತ್ರಪಾ. ೫೫).

[ ದಬಕ? + ಹಾಕಿಸು (<ಹಾಯ್ಕಿಸು) ]

**ದಬಕ್ಕನೆ** (ಅ). ದಬಕ್ಕೆಂಬ ಶಬ್ದದೊಡನೆ: ಗೂಡಿನಲ್ಲಿಟ್ಟಿದ್ದ ಗಂಟು ದಬಕ್ಕನೆ ಉರುಳಿಬಿತ್ತು (ರೂಢಿ). [ ದಬಕ್ + – ಅನೆ$_1$ ]

**ದಬಡ್ಡಾಳಿಕೆ** 'ಡಬಡ್ಡಾಳಿಕೆ' ನೋ.

**ದಬದಬ$_1$** (ನಾ). ಒಂದು ಅನುಕರಣ ಶಬ್ದ : ಎದೆ ದಬದಬ ಎಂದು ಹೊಡೆದುಕೊಳ್ಳತೊಡಗಿತು (ರೂಢಿ).

**ದಬದಬ$_2$** (ನಾ). ಫಿರಂಗಿ ಮುಂತಾದ ಯುದ್ಧಸಾಧನಗಳನ್ನಿಡುವ ಎತ್ತರವಾದ ತಿಟ್ಟು,-ಜಗಲಿ : ನವಾಬನ ಸೇನೆಯವರು ಗಾರೇ ಬಾಗಿಲ ಬಳಿ ಒಂದು ದಬದಬ ಕಟ್ಟಿ ೬ ಫಿರಂಗಿ ಏರಿಸಿ ಹೊಡೆಯುತಾ ಬಂದರು (ಚಿತ್ರಪಾ. ೯೬). [ ?./ತೆಲು. ದದ್ದಡ ; ದದ್ದಳ ]

**ದಬದಬೆ** 'ಧಬಧಬೆ' ನೋ.

**ದಬರಿ** 'ಡಬರಿ' ನೋ.

**ದಬರಿಟೊಪ್ಪಿಗೆ** 'ಡಬರಿಟೊಪ್ಪಿಗೆ' ನೋ.

**ದಬಾಣ** 'ಡಮಾನ' ನೋ.

**ದಬಾದಬ** 'ದಬಾದುಬಿ' ನೋ.

**ದಬಾದುಬಿ,** ದಬಾದಬಿ (ನಾ). ಬೆದರಿಸಿ ಮಾಡುವ ಒತ್ತಾಯ,-ಜೋರು : ಕಾವ್ಯಾಗ್ನಿಯಿಂದ ಬೇಯದ ಜೀವ, – ಕಾವ್ಯ ರಸದಲ್ಲಿ ಈಜಾಡದ ಜೀವ–ಹೇಗೆ ಪರಿಶುದ್ಧವಾದೀತು ? . . . ಅದರ ಕಿವಿ ಮರಗಿವೆ ; ಅದರ ನುಡಿ ತೊದಲ್ನುಡಿ. ಅಂಥ ಜನ ಮಾಡುವ ರಾಜ್ಯ ಶಾಸನ ದೊಂಬಿಯ ದಬಾದುಬಿ (ಸಾಹಿಶ. ೨೬) ; ನನ್ನ ಕಕ್ಷಿಗಾರನ ಮೇಲೆ ಇವರೇ ದಬಾದುಬಿ ಮಾಡಿ ಕತ್ತಿ ಕಟ್ಟಿದ್ದಾರೆ (ಚಂದಕೋ. ೧೬೨). **ದಬಾದಬಿ:** ಅವನಿಗೆ ಪೋಲಿಸರ ವಿಚಾರ ಚೆನ್ನಾಗಿ ಗೊತ್ತು ; ಇಲ್ಲಿ ಅವರ ದಬಾದಬಿಯ ಖಂಡನ ವಿಡಂಬನಾತ್ಮಕವಾದ ಒಂದು ವಿವರ ಬರುತ್ತದೆ (ಬಂಕಿಮ. ೧೦೬).

[ ←ಮರಾದ. ಬದುಬೀ ; ಹಿಂ. ದಬ್‌ದಬಾ = ಆಟೋಪ, ಪ್ರತಾಪ ]

**ದಬಾಯಿಸು** (ಕ್ರಿ). ೧. ನೂಕು ; ತಳ್ಳು. ಅವನ ಸುಪ್ತ ಭಾವನೆಗಳನ್ನು ದಬಾಯಿಸುತ್ತೀರಿ (ರಂಗರೋ. ೧೨೬) ; ಬಾಗಿಲನ್ನು ದಬಾಯಿಸಿ ಹಾಕು (ರೂಢಿ). ೨. ಗದರಿಸು ; ಜಬರಿಸು : ಆ ಹೊತ್ತೇ ತೀರಿಸಿಬಿಟ್ಟೆ ; ಇನ್ನೇನೂ ಕೊಡತಕ್ಕದ್ದಿಲ್ಲ ಹೋಗೆಂದು ದಬಾಯಿಸಿದನು (ಕಥಾಮಂ. IV, ೭೬) ; "ಸುಮ್ಮನಿರೋ ನೀನು, ಅವನಿಗೆ ಗೊತ್ತಾಗದಿದ್ದರೆ ಅವನೇ ಕೇಳುತ್ತಿದ್ದ" ಎಂದು ದಬಾಯಿಸಿದ (ಪರೀಕ್ಷೆ. ೮); ಅವಳೂ ನನ್ನ ಮೇಲೆ ತಿರುಗಿ ಬಿದ್ದು ದಬಾಯಿಸಿದಳು (ಆಲಹೂ. ೩೭) ; ಸ್ವಲ್ಪ ಬಲವಾಗಿ ದಬಾಯಿಸಿ ಈ ತುಂಟತನವನ್ನು ಚಿಗುರಿನಲ್ಲೇ ಚಿಗುಟಿ ಹಾಕಿದರೆ ದಾರಿಗೆ ಬರ್ತಾನೆ (ಸ್ವಾಮಿಸ್ಮೀ. ೧೮೫). ೩. "ಒತ್ತಾಯ ಮಾಡು ಜುಲುಮೆ ಮಾಡು" (ಜಾನಕೋ. ೩). ೪. ಅಪಹರಿಸು ; ದೋಚು : ಬೀರಣ್ಣನಿಗೆ ಆ ಪೆಟ್ಟಿಗೆಯಲ್ಲಿ ನಿಧಿ ಸಿಕ್ಕಿದ ವಿಚಾರ ತಿಮ್ಮಪ್ಪನ ಕಿವಿಗೂ ಬಿತ್ತು . . . ಅದು ತನ್ನ ಪಾಲಿಗೆ ಬರಬೇಕಿತ್ತು ; ಬೀರಣ್ಣ ತನ್ನಿಂದ ಅದನ್ನು 'ದಬಾಯಿಸಿದ್ದೇ' ಎಂದು ಆತ ತಿಳಿದುಕೊಂಡ (ಮುಂಗಾಮು. ೬೦) ; ಗಡಿಯಾರ ಬಂದ್ಯೆತೆ ? ಎಲ್ಲಿ ದಬಾಯಿಸಿದೆ (ಉದುಗೊ. ೭೮).

[ ದಬಾ$_0$ ( P ←ಹಿಂ. ದಬಾನಾ) + – ಇಸು$_3$ ]

**ದಬಾಲಿ$_1$** 'ಡವಾಲಿ' ನೋ.

**ದಬಾಲಿ$_2$** (ನಾ). ದಪ್ಪನಾದ ಹೆಂಗಸು ; ಸ್ಥೂಲಕಾಯದವಳು : ಆ ದಬಾಲಿಗೆ ಕುಳಿತುಕೊಳ್ಳಲು ಇಷ್ಟು ಜಾಗ ಸಾಕಾದೀತೆ ? (ರೂಢಿ). 'ಡುಬಲಿ' ಪರಾ. [ ←ಮರಾ. ಧಬಾಲೀ = ಸ್ಥೂಲ, ದಪ್ಪ ]

**ದಬಾವಣೆ** (ನಾ). ದಬಾಯಿಸುವಿಕೆ ; ಗದರಿಸುವಿಕೆ ; ಜೋರುಮಾಡುವಿಕೆ : ನಿನ್ನ ದಬಾವಣೆ ನನ್ನ ಮುಂದೆ ನಡೆಯಲಾರದು (ಬವರಿ. ೫೫) ; ಅವನು ತೀರ ದಬಾವಣೆ ಮಾಡಿದರೆ ನನ್ನ ಹತ್ತಿರ ಬಾ (ಧರ್ಮಶ್ರೀ. ೧೦೮) ; ಈ ದಬಾವಣೆ ಮಾತು ಯಾಕಾಡೀಯಾ ? (ಮಾಂಗಲ್ಯ. ೧೭).

[ ದಬಾಯಿಸು + – ಅಣೆ$_4$./ಮರಾ. ದಬಾವಣೀ ]

**ದಬೀರ** 'ಡಬೀರ' ನೋ.

**ದಬ್ಬಣ** 'ದಬ್ಬಳ' ನೋ.

**ದಬ್ಬಣಕಾಟಿ,** ಡಬ್ಬಣಕಾಟಿ, ದಬ್ಬಣಕಾಠಿ (ನಾ). ದಬ್ಬಳದ ಅಗಲ ದಪ್ಪ ಅಂಚು : ದಬ್ಬಣಕಾಟಿಯ ಮೀಸೆ ; ನಿಡಿದಾದ ಮೂಗು (ತಿದುಗು. ೩೪). **ಡಬ್ಬಣಕಾಟಿ :** ಎತ್ತೆತ್ತಲೋ ಉಟ್ಟ 'ಡಬ್ಬಣಕಾಟಿ'ಯ ತೀರ ದಪ್ಪನಾದ, ಕೆಂಪಾದ ಧೋತರ (ಗಂಗಾಗಾ. ೨). **ದಬ್ಬಣಕಾಠಿ:** ಗೋವಿಂದ ರಾಯನು . . . ಸ್ಥೂಲಕಾಯನು. ದಬ್ಬಣಕಾಠೀ ಮೀಸೆಯುಳ್ಳವನು (ಅಂಬಿಕೆ. ೧೮೦). [ ←ಮರಾ. ದಾಭಣಕಾಠೀ ]

**ದಬ್ಬಣಕಾಠಿ** 'ದಬ್ಬಣಕಾಟಿ' ನೋ.

**ದಬ್ಬಣಸಾಲಿ,** ಡಬ್ಬಣಸಾಲೆ (ನಾ). ದಬ್ಬಳದ ಗಾತ್ರದ ಒಂದು ಬಗೆಯ ಬತ್ತ : ದಬ್ಬಣಸಾಲಿ ಅಕ್ಕಿ ದಬ್ಬಣದಂತೆ ದಪ್ಪ (ರೂಢಿ) **ಡಬ್ಬಣಸಾಲೆ :** ಡಬ್ಬಣಸಾಲೆ ಅಕ್ಕಿ (ರೂಢಿ).

[ ದಬ್ಬಣ ( <ದಬ್ಬಳ) + ಸಾಲಿ$_3$ ]

**ದಬ್ಬಣಿಗ** (ನಾ). ಸೂಜಿಕಾಯಕದವನು (?). 'ದಬ್ಬಣಿಗೆ' ಪರಾ.

[ದಬ್ಬಣ ( <ದಬ್ಬಳ) + – ಇಗ ]

**ದಬ್ಬಣಿಗೆ** (ನಾ). ಸೂಜಿಯು ಕಾಯಂಕ (?). 'ದಬ್ಬಣಿಗೆದೆಱೆ' ಪರಾ. [ ? ]

**ದಬ್ಬಣಿಗೆದೆಱೆ**[3] (ನಾ). ದಬ್ಬಣಿಗೆ ವೃತ್ತಿಯಂ ಮೇಲೆ ಹಾಕುವ ತೆರಿಗೆ (?) : ಕಾರವುಣ್ಣಮಿಯಲು ಗೆಲ್ವತ್ತಿನ ಸೇಸೆ ಗದ್ಯಾಣವೊನ್ದು ಮೇದರಲ್ಲಿ ದಬ್ಬಣಿಗೆದೆಱೆಯ ನೋಡಿಕೊಂಬರು (ಸೌಇಇ. IX-i, ೧೭೦-೨೫ ; 1106). [ ದಬ್ಬಣಿಗೆ + ತೆಱೆ$_3$ ]

**ದಬ್ಬರಿ** 'ಡಬರಿ' ನೋ.

**ದಬ್ಬರೆ$_1$** 'ಡಬರಿ' ನೋ.

**ದಬ್ಬರೆ$_2$** ನಾ). "ಸುಳ್ಳು" (ಜಾನಕೋ. ೩) : ಎಲ್ಲಾ ದಬ್ಬರೆ ಮಾತು (ರೂಢಿ). [ ದೇ.॥ ತಮಿ. ತಪ್ಪರೈ ; ತೆಲು. ದಬ್ಬರ, ದಬ್ಬಱ, ಡಬ್ಬಱ ]

**ದಬ್ಬಳ, ಡಬ್ಬಣ, ಡಬ್ಬಳ, ದಬ್ಬಣ** (ನಾ). ಗೋಣಿಚೀಲ ಮೊದಲಾದುವನ್ನು ಹೊಲಿಯಲು ಉಪಯೋಗಿಸುವ ಸೂಜಿಯಂತಹ ದಪ್ಪ ಸಾಧನ : ದಬ್ಬಳಮಂ ಬೆರಲ್ಗಳೊಳಡಂಗುವಿನಂ ನಡೆ ಪೊಯ್ದು . . . ಒರ್ವನಂ ಬೊಬ್ಬಿಱಿದಾರ್ದು ಕೊಲ್ವ ಕೊಲೆಯಂ ಹರಿಣೇಕ್ಷಣೆ ಕಂಡು ಭೀತಿಯಿಂ (ಸುಕುಮಾ. ೭-೬) ; ಗುಡಿ ನೇಣ್ ಕಾಂಡಪಟಂ ಮೊಱಂಗಳಗೆಯುಂ . . . ಕುಡುಗೋಲ್ ಕತ್ತಿಗೆ ದಬ್ಬಳಂ ಕೊಡಲಿ ಗೂಟಂ ಹಾರೆ ಹಾರಂಗಿ ಕೈಪಿಡಿದಾ ತಾಮ್ರಸಭಾಂಡಮೆಂಬಿವಿನಿತುಂ ದಂಡಿಂಗೆ ಸಾಮಗ್ರಿಗಳ್ (ಸೂಕ್ತಿಸು. ೧೮-೨೩) ; ಸರಕಿನ ಕೋಣೆ ಕಟ್ಟಳೆಮರಂ ಕುಡುಗೋಲ್ತೆರೆ ಸೀರೆ ದಬ್ಬಳಂ ಹುರಿ ಗಡ ಹಾರೆ ಸವಗಂ ತೊದೆ ಮೊಚ್ಚೆಯುಂಗಳೆಂಬುರಂತರ ಸಾಧನಂ ಬೆರಸು ದಂಡಿನವರ್ ಪೊಱಮಟ್ಟರರ್ಥಿಯಿಂ (ತ್ರಿಪುವಿ. ೩೪-೨೮೫); ಸೂಜಿ ಮೊದಲು ದಬ್ಬಳವೆ ಕಡೆಯಾದ ಮುವ್ವತ್ತೆರಡಱಿಂ ಪೋರ್ದರಾ ದನುಜಪತಿ ಹರಿಗಳು (ವೀಶೈಪು. ೨-೧೨-೪೦) ; ಕಲ್ಲು ಚೂಪಾಗಿ ದಬ್ಬಳದಂತೆ ಚುಚ್ಚುತ್ತಿದ್ದಿತು (ದಸ್ತಕ. ೫೮). **ಡಬ್ಬಣ :** ತಲೆಯ ಕೂದಲುಗಳಂತೂ ಡಬ್ಬಣ ಗಡುತರ ಆಗಿರುತ್ತವೆ ! (ಮೋಹಿನೀ. ೨೮). **ಡಬ್ಬಳ :** ತಾಯಿಯೊಂದು ಕಡೆ, ತಂದೆಯೊಂದು ಕಡೆ ಸೂಜಿ ಡಬ್ಬಳ ತೆಗೆದುಕೊಂಡು ಚುಚ್ಚುತ್ತಿದ್ದರೆ ಅವನಿಗೆ ಹೇಗಿದ್ದಿರಬೇಕು ? (ಮಹಾಗ. ೮೮). **ದಬ್ಬಣ :** ಬಸಿದ ದಸಿಯೊಳ್ ತೆಗೆವುದುಂ ಕಬ್ಬುನದ ದಬ್ಬಣಂಗಳಂ ದಬ್ಬುಕದ ಡಂಗೆಗಳಿಂ ಬೆರಲ್ಗಳೊಳಡಂಗೆ ಬೆಟ್ಟುವುದುಂ (ಸುಕುಮಾ. ೧೧-೪೭ ವ) ; ಶೂರನುಕ್ಕಿನ ದಬ್ಬಣದಿ ತಲೆಯೂಱಿ ನಿಂದನು (ಕೌಶಿರಾ. ೫-೪) ; ದಿಬ್ಬಣವೆರಡೊಂದು ದಿಬ್ಬಣವಾಗಿ . . . ದಬ್ಬಣದೊಳು ದಾರ ನಡೆವಂತೆ ನಡೆದುದು ಸಬ್ಬಲಗ್ಗೆಯೊಳರಮನೆಗೆ (ಭರತೇ. ೩೦-೬೪). [ ದೇ.॥ ತಮಿ. ತಪ್ಪಣ ; ತುಳು. ದಬ್ಬಣ, ದಬ್ಬಣೊ, ದಬನ ; ತೆಲು. ದಬ್ಬಲ, ದಬ್ಬನ./ಸುರಾ. ದಾಭಣ ]

**ದಬ್ಬಾಟ** (ನಾ). ನೂಕುವಿಕೆ ; ತಳ್ಳುವಿಕೆ : ಜಗಳದಲ್ಲಿ ದಬ್ಬಾಟವೇ ಜಾಸ್ತಿ (ಕಸಾಪ. I, ೨೯೦). [ ದಬ್ಬು$_1$ + ಆಟ ]

**ದಬ್ಬಾಡು** (ಕ್ರಿ). ನೂಕು ; ತಳ್ಳು : ಜಗಳದಲ್ಲಿ ಒಬ್ಬರನ್ನೊಬ್ಬರು ದಬ್ಬಾಡಿದರು (ರೂಢಿ). [ ದಬ್ಬು$_1$ + ಆಡು$_1$ ]

**ದಬ್ಬಾಳಿಕೆ** (ನಾ). ನಿರಂಕುಶಾಧಿಕಾರ ನಡೆಸುವುದು ; ಒತ್ತಾಯವನ್ನು ಹೇರುವುದು ; ಬಲಾತ್ಕಾರದ ಆಡಳಿತ : ತಾಯ ಸೆರೆಯುಂ ಸವರಲೆಂದೆ ವೆರವಿನಾ ಬವರ-ದಬ್ಬಾಳಿಕೆಯ ಮೆಟ್ಟಡಿಯ ತಬ್ಬಬೇಕೆ? (ಗೀವಿಂ. ೭೦-೨೬); ಬ್ರಿಟಿಷ್‌ಸಾಮ್ರಾಜ್ಯಶಾಹಿಯ ಹಿಂಸೆ, ದಬ್ಬಾಳಿಕೆ, ಕ್ರೂರ ಶಿಕ್ಷೆಗಳ ಪರಿಣಾಮ ಹೀಗೇ ಆಯಿತು (ಆತ್ಮಾರ್ಪ. ೧೩೦) ; ಕಾಂಗ್ರೆಸ್ಸಿನ ಶಕ್ತಿ ಹೆಚ್ಚಿದ ಹಾಗೆಲ್ಲಾ ಸರ್ಕಾರದ ದಬ್ಬಾಳಿಕೆಯೂ ಹೆಚ್ಚಾಗುತ್ತಿತ್ತು (ಪಂಜಪಂ. ೭೫) ; ಪರಕೀಯರ ದಬ್ಬಾಳಿಕೆ, ನಮ್ಮವರೆದೆಯುಬ್ಬಾಳಿಕೆ, ಮಬ್ಬಾಳಿಕೆ, ಗಬ್ಬಾಳಿಕೆ—ಎಲ್ಲ ಒಂದೆ, ಒಂದೆ (ನಡಬಂ. ೭೦-೨). [ ದಬ್ಬು$_1$ + ಆಳಿಕೆ ( <ಆಳ್ಕೆ) ]

**ದಬ್ಬಿಸು, ದೊಬ್ಬಿಸು** (ಕ್ರಿ). ನೂಕಿಸು ; ತಳ್ಳಿಸು : ಅವನನ್ನು ಆಚೆಗೆ ದಬ್ಬಿಸಿದರು (ರೂಢಿ). **ದೊಬ್ಬಿಸು :** ಬಿಡಿಸುವೆನೆಂದು ತನ್ನಯ ಗರ್ವಮನು ತಬ್ಬರಿಸಿ ದೊಬ್ಬಿಸಿದಾ (ಅನಂರಾ. ೧-೯-೮). [ ದಬ್ಬು$_1$ + - ಇಸು$_3$ ]

**ದಬ್ಬು$_1$, ಡಬ್ಬು$_1$, ದೊಬ್ಬು** (ಕ್ರಿ). ೧. ನೂಕು ; ತಳ್ಳು ; ದೂಡು : ದೇವೇಂದ್ರನು ಆ ತಕ್ಷಕನನ್ನು ಕೆಳಕ್ಕೆ ದಬ್ಬಿಬಿಟ್ಟನು (ಕೃವಾಆ. ೮೧) ; ಸಬ್ಬರೀ ಜವುದಗ್ನಿಸುತನಿಂ ಮಬ್ಬು ಮುಸುಕಿದ ತೆರದೊಳಿರ್ದರು ದಬ್ಬುತವನನು ಸಲಹಿದೈ ವಸುಧಾಧಿಪತಿಗಳನು (ರಾಮಾಸಂ. ೧-೫-೨೪) ; ಮಾರೀಚನಂ ನೂರು ಯೋಜನ ದಬ್ಬಿ ಸಮುದ್ರದಲ್ಲಿ ಕೆಡಹಿ (ಕೃಷ್ಣರಾ. ೧-೧೧). ೨. ಮುಂದೂಡು ; ಮುಂದಕ್ಕೆ ಹಾಕು : ಈ ದಿನ ನಡೆಯಬೇಕಾಗಿದ್ದ ಸಭೆಯನ್ನು ದಬ್ಬಿದ್ದಾರೆ (ರೂಢಿ). **ಡಬ್ಬು$_1$ :** ೧. ಒಬ್ಬನೆಸುವನು ಪಾರ್ಥರಿವರೆಲ್ಲರುಂ ಕೂಡಿ ಬೊಬ್ಬೆಯಿಂ ಕಣೆಗಳಂ ತರಿದೊಟ್ಟೆ ನಾಯಕರು . . . ಎಸುವರಿವದಿರು ಕಡಿವನನಿತುವಂ ನರನೊಬ್ಬನೆ ಡಬ್ಬುವನು ಕಣೆಗಳನ್ನವರೆಸಲು (ತುರಂಗ. ४೬-೩೮); ಇನ್ನಾದರಬ್ಬರಿಸಿ ಪಾರ್ಥನಂ ತರುಬುವದು ಹೆಣಗುವದು ನಮ್ಮ ಕಡೆ ಬಾರದಂತೆ ಡಬ್ಬುವುದು ನೀವೆಲ್ಲರುಂ ಕೂಡಿ (ತುರಂಗ. ४೭-೭). **ದೊಬ್ಬು :** ೧. ಸಲೆ ನಿರೋಧಿಪ ರೋಗ ದುರಿತಾವಳಿಯನೆಲ್ಲವ ದೊಬ್ಬಿ ಸತ್ಪಥದಲಿ ಚಲಿಸುತಿಹ ಯೋಗಿ ಸಜ್ಜನನಾಗಿ ಸುಖಿಯಹನು (ತಿಮ್ಮಶಾಂ. ೯-೩೩) ; ತಿವಿತಿವಿದು ಗಾಢಾಂಧಕಾರವ ರವಿಯ ಕಿರಣಂ ದೊಬ್ಬುವವೊಲ್ (ವಿವೇಕ. ೨-೧೯) ; ಇವನನ್ನು ಕೆಳಕ್ಕೆ ದೊಬ್ಬಿಬಿಡು (ಕಥಾಮಂ. IV, ೮೫) ; ಅಚ್ಚರಿಯಿಂದ ಗಿಳಿ ಸಾಕಿ ಕಿಚ್ಚಿಗೆ ದೊಬ್ಬ್ಯಾರೋ (ಗಾದೆ). ೨. ನಿಲ್ಲದಾ ಕಾಲವನು ವಿಘ್ನಗಳಲ್ಲಿ ಯೋಚಿಸಿ ನೆವವಿಡುತ ಭೂವಲ್ಲಭನು ದೊಬ್ಬ್ಯೂದು ಸನ್ಮತವರಸ (ತಿಮ್ಮಶಾಂ. ೫-೨೭). ೩. ತೊರೆ ; ತ್ಯಜಿಸು : ಉಬ್ಬಿ ಸಂಸಾರಿಯಾಗಿ ನಿಮಿಷಕೆ ದೊಬ್ಬಿ ಸಂನ್ಯಾಸಿಯಾಗಿ (ಜ್ಞಾನಸಿಂ. ೫-೧೪೮). [ ದೇ.॥ ತುಳು. ದಬ್ಬು, ಡಬ್ಬು, ದೊಬ್ಬು ; ತೆಲು. ದ್ರೊಬ್ಬು ; ನಾಯ್ಕಿ. ಧೊಬ್ಟ್ ]

**ದಬ್ಬು$_2$, ಡಬ್ಬು$_2$** (ನಾ). ಅಡಿಮೇಲು; ಬೋರಲು; ಬೆನ್ನುಮೇಲಾಗಿರುವಿಕೆ. 'ದಬ್ಬುಹಾಕು' ಪರಾ. **ಡಬ್ಬು$_2$ :** ಹೂಂ ! ಬೀಳಲಿ, ಡಬ್ಬು (ಹುಚ್ಚಾಟಿ. ೧೧೧). [ ? ]

**ದಬ್ಬುಕ, ಡಂಬುಕ, ಡಬ್ಬುಕ, ಡುಬ್ಬುಕ** (ನಾ). ಕಲ್ಲನ್ನು ಸೀಳುವ ಒಂದು ಬಗೆಯ ಉಪಕರಣ; ಚಾಣ; ಉಳಿ: ಕಬ್ಬೊನ್ನ ದಬ್ಬುಕಂಗಳಿಂ ತಲೆ[ಯಂ] ಸಿಪ್ಪು ಬಿ[ಚ್ಚಿ]ತ ಬಿರಿದು ಶತಖಂಡಂಗಳಪ್ಪನಮೊತ್ತಿ ಪೊಯ್ಯೆಯಾಂ (ವರ್ಧಮಾ. ೫-೩೪ ವ); ದಬ್ಬಳಮಂ ಬೆರಲ್ಗಳೊಳಡಂಗುವಿನಂ ನಡೆಪೊಯ್ದು ಮೂಳೆಯುಂ ದಬ್ಬುಕದಿಂದೆ ನುಗ್ಗುನುಱಿಯಪ್ಪಿನೆಗಂ ಬಿಡೆ ಬೀಸಿ ಪೊಯ್ದು . . . ಒರ್ವನಂ ಬೊಬ್ಬಿಱಿದಾರ್ದು ಕೊಲ್ವ ಕೊಲೆಯಂ ಹರಿಣೇಕ್ಷಣೆ ಕಂಡು ಭೀತಿಯಿಂ (ಸುಕುಮಾ. ೭-೬) ; ಸಱಿಗಲ್ಲಂ ದಬ್ಬುಕದಿಂದಿಱಿದೊಡೆ ಕಿಡಿ ಹಾಱುವಂತೆ ಮುಂತೊಗೆದ ಮುಗಿಲ್ದುಱುಗಲನೆ ಮಿಚರಿ ಕುಚವಿಂದಿಱಿದಲ್ ಕಿಱುಮಿಂಚು ನುಚ್ಚುನುಱಿಯಪ್ಪಿನೆಗಂ (ಅರ್ಧನೇ. ೩-೧೮) ; ಕರಗಸ ಗಾಳ ನಿಚ್ಚಣಿಗೆ ದಬ್ಬುಕವೆಂಬಿವನಿಕ್ಕಿ ಕಾದಿ ನಿತ್ತರಿಸದೆಯೋಡಿ ಹೋದ ಬೆಳ್ಳಿರಳೆಯ ಬೇಂಟೆಯುಲು ಕೊಲಲುಪೊಲ್ಲದೆ ಕಾವನು ವಿಕ್ರ[ಮಂ] ಭೂಭುಜ (ಸೌಇಇ. IX-i, ೨೭೬-೩೩ ; 1183) ; ತುಂಬುರು ಮುತ್ತದಿಂದೆ ನಡೆಕಲ್ಗಳನಿಂಬಿನೆ ಬೇಯೆ ಸುಟ್ಟು(ಟ್ಟ) ಸುಣ್ಣಂಬೆರಸಿರ್ದ ನೀರನೆಱೆದಾಱಿಸು ಮೋದಿಸು ದಬ್ಬುಕಂಗಳಿಂದಂ ಬಿರಿಗುಂ ಶಿಲಾಳಿ (ಅಟ್ಟಮ. ೧೧-೫೭). **ಡಂಬುಕ :** ಬಱಸಿಡಿಲು ಸಿಡಿಲಂಬು ಡಂಬು[ಪಾಠಾಂ. ಡಬ್ಬು, ಡುಬ್ಬು]ಕ ಗಱಿದಳೆದ ಹಾಯ್ಸಿಟ್ಟ . . . ಮುಱಿಮುಱಿದು ಮೋದುವ ಭೂತಗಣದುಬ್ಬಿಱಿತದೊಡ್ಡನು ಮುಂದೆ ನಿಲಿಸಿದನಾ ಚಮೂರಮಣ (ತೊರರಾ. ೬-೧೯-೧೭). **ಡಬ್ಬುಕ :** ಡಾವರಿಪ ಡಾವರದ ಡಬ್ಬುಕದ

ಕುತ್ತುವಾರೆಯ ಬಗೆಯದಾನೆಗಳಿತ್ತ ಮುರಿದವು ಸಿಂಹನಾದಕೆ ಮತ್ತಗಜ ವೊಗದಿರುಹಿದವು ದಳವುಳಿಸಿದನು ಭೀಮ (ಕುಮಾ.ಗ. ೨-೩೮) ; ಕುಡು ಗೋಲ್ಕೊಡಲಿ ಕೈಪಾರೆ ಗುದ್ದಲಿ ಮಚ್ಚು ಕಡುಕತ್ತಿ ಡಬ್ಬುಕ[ಪಾಠಾಂ. ದಬ್ಬುಕ, ಕಬ್ಬುನ]ಗಳನು ಬಿಡದಾಂತು ನಡೆದರು ಬಿಟ್ಟಿಯವರು ನೆಲ ಪಡೆದುದೆಂದೆನಲು ಸಂದಣಿಸಿ (ಕುರಾಶಾಂ. ೪೧-೪೮). **ಡುಬ್ಬುಕ :** ಮೇಲಿನ 'ಡುಬುಕ' ಉಲ್ಲೇಖದ 'ತೊರರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ದಬ್ಬುದಲೆ** (ನಾ). ೧. ತಬ್ಬಿಬ್ಬು ; ಗಾಬರಿ ; ದಿಗ್ಭ್ರಮೆ : ಕೋಂಟೆಯ ಮುಂದೆ ಕುಳ್ಳಿರ್ದು ಕಡು ರಿಸವಡೆದು ಹೃದಯದೊಳಿನಿಸು ದಬ್ಬುದಲೆ ಯಿಲ್ಲದೇ ನುಡಿಯುತೊಳ್ನುಡಿಯ ನಸುನಗೆಯಿಡುವ ಮಾಣವಕನಂ ಕಂಡು ತಾಂ ನುಡಿದನಿಂತು (ಸಮ್ಯಕ್ತ್. ೨-೬೫); ಕೊಲಬಂದ ಪಗೆಗಡಿಗಡಿಗೆ ಕಪ್ಪವ ತೆತ್ತು ನಿಲಿಸುವಂತನ್ನಪಾನಗಳಾ ಸಲಿಸಿ ಹಸಿವು ತೃಷೆಗಳ ತಡೆವುತ ದಬ್ಬು ದಲೆಬಿ[ಬ]ಟ್ಟು ಬಾಳ್ವುದು ಸುಖವೆ (ಭರಹ. ೬೬-೧೧೯). 'ದಬ್ಬುದಲೆ ಗೊಳ್' ಪರಾ. ೨. ಒದರಾಟ; ಒದರಿಕೊಳ್ಳುವಿಕೆ; ಒದ್ದಾಡುವಿಕೆ: ಶೂಲವೇಱಿಯರೆಮುಗುಳ್ದಕ್ಷಿ ಹಲವು ಕದುಕೇಱಿನಿಂ ಸುರಿವರುಣಜಲ ದಬ್ಬುದಲೆಯನಾಡುವ ಹಸ್ತಪಾದ ಕೆದಱಿದ ಕೇಶ . . . ಕುಬುಬೆಂದು ಕೂಗುವೀ ಬಲುಗೆಯ್ಮನಿವನಾರೆನಲ್ಕೆ (ಸಮ್ಯಕ್ತ್. ೪-೩೧).

ದಬ್ಬುದಲೆಯ ಮಾತು = ಗದ್ಗದಿಸುವ ಮಾತು ; ತಡವರಿಸುವ ನುಡಿ : ಬೆಳ್ಗರೆವ ಕೊರಲು ಮೆಯ್ಯ ಹಬ್ಬಿದ ನಡುಕ ಹೊಯ್ವಳ್ಳೆ ದಬ್ಬು ದಲೆಯ ಮಾತು ದುರುದುರುಗಣ್ಣಿಂದುಬ್ಬಸಗೊಳುತಿದ್ದನವನು (ಶ್ರೀಪಾಲ. ೮-೬೦). [ ? ]

**ದಬ್ಬುದಲೆಗೊಳ್** (ಕ್ರಿ). ೧. ತಬ್ಬಿಬ್ಬುಗೊಳ್ಳು ; ಗಾಬರಿಯಾಗು : ದಬ್ಬುದಲೆಗೊಂಬ ವಾರಣವಾಹಕಪ್ರತತಿ ತಬ್ಬಿಬ್ಬುಗೊಂಬ ತುರಗಾ ರೋಹಕಪ್ರತತಿ (ಸಮ್ಯಕ್ತ್. ೮-೬೩) ; ಕಾಳಗತ್ತಲೆ ತುತ್ತುಱುಂಬಾಗಿ ತುಂಬಿದಾಭೀಳಮಪ್ಪಾರಣ್ಯಮಧ್ಯದೊಳ್ದಬ್ಬುದಲೆಗೊಂಡು ದಾರಿಯ ತಪ್ಪಿದಾ ಮೇಳದ ವಣಿಗ್ಜಾಲ ಸಹಿತ ಬಂದು (ಸಮ್ಯಕ್ತ್. ೧೦-೩೭) ; ಅಲಘುಪರಾಕ್ರಮಿಯಾದಿತ್ಯಸಣುಗನ ಬಲದ ಬಲ್ಗೊಲೆಯ ಸ್ಯೆರಿಸದೆ ತಲೆಬಾಲಗೆಟ್ಟು ಕೌಂತೇಯರ ಬಲ ದಬ್ಬುದಲೆಗೊಂಡುದತಿಭೀತಿಯಿಂದ (ನೇಮಿಸಂ. ೨೯-೧೦೮). ೨. ಒದರಾಡು ; ಒದ್ದಾಡು ; ಹೊಯ್ದಾಡು : ದಬ್ಬುದಲೆಗೊಂಡು ನರಲ್ವರೆವೆಣಂಗಳ ತಂಡವುಬ್ಬಸಂಗೊಂಡೇಳ್ವ ಬಿಳ್ವ ಹಯಮೇತಂಡ ನಿಬ್ಬರದಿ ನಡೆದು ಪಿಡಿದಸಿಗಳಂ ಝುಳಪಿಸುವ ಮುಂದೆ ಮುಗ್ಗಿಱಿವ ಮುಂಡ . . . ಕಡಿಕಂಡದೊಬ್ಬುಳಿಯಿನೆಸೆವ ಬಿಸಿಯರುಣ ಜಲಗಳ ಕೊಂಡವೆಸೆದುವಾ ಧುರಧರೆಯೊಳು (ಸಮ್ಯಕ್ತ್. ೮-೫೦).

[ ದಬ್ಬುದಲೆ + ಕೊಳ್ $_1$ ]

**ದಬ್ಬುಹಾಕು,** ಡಬ್ಬುಹಾಕು (ಕ್ರಿ). ತಲೆಕೆಳಗಾಗಿ ಹಾಕು; ಮಗುಚಿಡು; ಬೋರಲುಹಾಕು : ಹೊಲದಲ್ಲಿ ಶಿವಶರಣನ ಹೆಸರಿಲೆ ದಬ್ಬುಹಾಕುವ ಮಡಕೆಗೆ ಒಕ್ಕಲಿಗನು 'ಬೆಚ್ಚು' ಎಂದು ಕರೆದಿರಬಹುದು (ಕನ್ನಜಾ. ೧೩೭); ದಬ್ಬುಹಾಕಿದ ಕಜ್ಜಾಯ ಬೇಯಿಸುವ ಕೊಪ್ಪರಿಗೆಯು (ಕನ್ನಜಾ. ೧೫೯). **ಡಬ್ಬುಹಾಕು :** ಆಕಾಶವು ಡಬ್ಬುಹಾಕಿದ ನೀಲವರ್ಣದ ಕೊಪ್ಪರಿಗೆ ಯಂತೆ ತೋರುತ್ತದೆ (ಮುಂಬಯಿ. ೬-೩೫೭) ; ಹೋಳಿಗೆಯ ಮಣೆಯ ಮೇಲೆ ಕಬ್ಬಿಣಂಚು ಡಬ್ಬುಹಾಕಿಕೊಂಡು ಮನೆಗೆ ನಡೆದಿದ್ದ ಳಾಕೆ (ಅಶೋಕ. ೯) ; ಭಾವಚಿತ್ರ ಹರಿದೊಗೆಯಲಿಲ್ಲ. ಕಣ್ಣುಮುಂದೆ ಬೇಡ ಎಂದು ಟ್ರಂಕಿನ ಕೆಳಭಾಗದಲ್ಲಿ ಡಬ್ಬುಹಾಕಿದ (ಅಪನಾ. ೫೭).

[ ದಬ್ಬು$_2$ + ಹಾಕು (<ಪಾಯ್ಕು$_1$) ]

**ದಬ್ಬೆ$_1$,** ಡಬ್ಬೆ$_1$, ಡೆಬ್ಬೆ$_1$, ದಂಬೆ, ದೆಬ್ಬೆ$_1$ (ನಾ). ೧. (ಬಿದಿರು, ಅಡಕೆ ಮೊದಲಾದ ಮರಗಳ) ಸೀಳು; ಗೀಳು; ಹೋಳು: ವೇಣುದಬ್ಬೆಯ ನೆಗಹಿ ಜಂತ್ರವ ಕ್ಷೋಣಿಗಿಳುಹಿದರೀಗ ದ್ರುಪದನು ಕಾಣದಂದದಿ ಕಟ್ಟಿ ತಂದರೆ ರಣಕೆಯೆದುರಿನಲಿ (ಜನಭಾ. ೬೩-೩೩) ; ಮುರಿದ ಕೈಯನ್ನು 'ದಬ್ಬೆ'ಯಿಂದ ಚೆನ್ನಾಗಿ ಕಟ್ಟಿಕೊಂಡನು (ಬಂಗಾಹ. ೩೩); ಎತ್ತರದ ಜಗುಲಿ ಯಿಂದ ಮಕ್ಕಳು ಕೆಳಕ್ಕೆ ಬೀಳದಿರಲೆಂಬ ಉದ್ದೇಶದಿಂದ ಅಡಕೆಯ ಮರದ ದಬ್ಬೆಗಳನ್ನು ಅಡ್ಡವಾಗಿ ಹೊಡೆದಿದ್ದರು (ಕೊನೆಭೀ. ೧೦); ನಾಯಿಬಾಲಕ್ಕೆ ದಬ್ಬೆ ಕಟ್ಟಿದ ಹಾಗೆ (ಗಾದೆ). **ಡಬ್ಬೆ$_1$ :** ೧. 'ಬೆನ್ನುಡಬ್ಬೆ' ಪರಾ. **ಡೆಬ್ಬೆ$_1$:** (ಕ). **ದಂಬೆ :** ೨. ಗದ್ದೆ, ತೋಟಗಳಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ನೀರು ಹಾಯಿಸಲು ಏರ್ಪಡಿಸಿರುವ ಅರ್ಧಕ್ಕೆ ಸೀಳಿದ ತಾಳೆ, ತೆಂಗು, ಬಿದಿರು ಮೊದಲಾದ ಮರಗಳ ದೋಣಿ,– ಕಾಲುವೆ : ನೀರಿನ ದಂಬೆಯೊಂದು ಹರಿಯುವಲ್ಲಿ ಪಡುವಣ ಬಾನು ತೆರವಾಗಿ ಕಾಣಿಸುವಲ್ಲಿ – ನೆಲ ಸವರಿದರು (ಕುಡಿಕೂ. ೩೪) ; ಇದರ ಬಳಿಯಲ್ಲೇ ಗುಳುಗುಳು ಸದ್ದುಮಾಡಿ ಹರಿಯುವ ದಂಬೆನೀರು (ಬಟ್ಯಜೀ. ೭). **ದೆಬ್ಬೆ$_1$:** ೧. ಬಿದಿರು ದೆಬ್ಬೆಗಳನ್ನು ದೂರ ದೂರ ಹಾಕಿ ಬಿಗಿದ ಚಪ್ಪರದ ಮಧ್ಯೆ ತಲೆ ಸಿಕ್ಕಿಹಾಕಿಕೊಂಡಿತು (ನನ್ನೂರು. ೩೧೯) ; ನಾಯಿ ಬಾಲಕ್ಕೆ ದೆಬ್ಬೆ ಕಟ್ಟಿದ ಹಾಗೇನೇ (ನಮ್ಮಳ್ಳಿ. ೮).

[ ದೇ.॥ ತಮಿ. ತಪ್ಪೈ; ತುಳು. ದಬ್ಬೆ, ದೆಬ್ಬೆ, ದಂಬೆ; ತೆಲು. ದಬ್ಬ ]

**ದಬ್ಬೆ$_2$** 'ದರ್ಬೆ' ನೋ.

**ದಭ್ರ** (ನಾ). ೧. ಸ್ವಲ್ಪವಾದಂದು ; ಅಲ್ಪವಾದಂದು ; ಸಣ್ಣದು : "ಸೂಕ್ಷ್ಮಃ, ಲೇಶಃ, ಲವಃ, ಶ್ಲಕ್ಷ್ಣಃ, ಕ್ಷುದ್ರಂ, ದಭ್ರಂ . . . ಅಲ್ಪಃ, ತ್ರುಟಿಃ – ಈ ೧೫ ಕಿಱಿದು" (ಹಲಾಯು. ೧೧೪-೩) ; "ಅಲ್ಪಂ ಲವಂ ಲೇಶಂ , . . ಕ್ಷುದ್ರಮುಂ ದಭ್ರಮುಂ ವಪ್ರ ಕಿಂಚಿತ್ ತನುಸ್ತೋಕಮೆನೆ ಕಿಱಿದೆನಿಕ್ಕು" (ಮಂಗರಾ. ೧೨೭-೫). ೨. ದುರ್ಬಲ ; ಅಶಕ್ತ : (ಕ).

[ ಸಂ. ]

**ದಮ** (ನಾ). ೧. ಅಂಕೆಯಲ್ಲಿಡುವುದು; ಹತೋಟಿಯಲ್ಲಿಡುವುದು ; ನಿಗ್ರಹಿಸುವುದು. ೨. ಇಂದ್ರಿಯನಿಗ್ರಹ ; ಸಂಯಮ : ವೈರಾಗ್ಯಮೆ ಕುಲವಟಿಯೆಂಬಂತೆ ತಂದೆಯಂ ಮುನ್ನಂ ನಿರ್ಮಲ ಜಿನದೀಕ್ಷೆಗವರ್ ಪೂಣ್ದಲಂಘ್ಯದಮಮಂ ಧರಿತ್ರಿಯಿಂ ಪೊಗಟಿಸಿದರ್ (ಶಾಂತಿಪು. ೯-೫೩); ಬಾಹ್ಯಕರಣನಿಗ್ರಹವೇ ದಮವಕ್ಕುಂ (ವಿವೇಕ. ೧೫) ; ಶಮಾದಿ ಷಟ್ಕ– ಶಮ (ಮನೋನಿಗ್ರಹ), ದಮ (ಇಂದ್ರಿಯನಿಗ್ರಹ) (ಅಮೃತ. ೩-೩ ಟೀಕ). ೩. ದಂಡನೆ ; ಶಿಕ್ಷೆ ; ದಂಡ. ೪. ರಾಜನೀತಿ ; ದಂಡನೀತಿ: ರಾಜ ಶಾಸ್ತ್ರವನ್ನು 'ನೃಪಶಾಸ್ತ್ರ' ಮತ್ತು ದಂಡನೀತಿ ಎಂದೂ 'ದಮ' ದಂಡ ವೆಂದೂ, ನೀತಿಶಾಸ್ತ್ರವೆಂದೂ ಕರೆದಿದ್ದಾರೆ (ಭಾರದ. ೩೭೦). ೫. [ದ್ವೈತ] ನಲವತ್ತು ಗುಣಗಳಲ್ಲಿ ಒಂದು : ರೂಪ, ರಸ, ಗಂಧ . . . ಶಮ, ದಮ, ದಯೆ, ತಿತಿಕ್ಷೆ, ಭಯ ಬಲ, ಲಜ್ಜೆ . . . ಸ್ಥೈರ್ಯ, ಶೌರ್ಯ, ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಸಾ. ೨೭೫). [ ಸಂ. ]

**ದಮಗೊಳಗ** (ನಾ). ಧರ್ಮಕಾರ್ಯಕ್ಕಾಗಿ ಕೊಡುವ ಧಾನ್ಯದ ಒಂದು ಅಳತೆ, – ಕೊಳಗ : ಮೂಲಸ್ಥಾನದೇವರಿಗೆ ಮತ್ತ ೩ ಕಲಿದೇವರ ಸಂದಾದೀವಿಗೆಗೆ ಗಾಣ ೧ ದೇವಗೊಳಗ ದಮಗೊಳಗವಂ ಧಾನ್ಯದಲಿ ಕುಳವಂ . . . ಕೊಟ್ಟರು (ಸೌಇಇ. IX–i, ೮೮-೨೪ ; 1034).

[ <ಧರ್ಮಗೊಳಗ ]

**ದಮಡಿ$_1$** 'ದಮ್ಮಡಿ$_1$' ನೋ.

**ದಮಡಿ$_2$** 'ದಮ್ಮಡಿ$_2$' ನೋ.

**ದಮಡೆ** 'ದಮ್ಮಡಿ$_2$' ನೋ.

**ದಮಣಿ,** ಡಮಣಿ, ಥಮಣಿ, ದಮನಿ$_2$, ಧಮಣಿ (ನಾ). (ಉಕ) ಎತ್ತಿನ ಸಣ್ಣಗಾಡಿ ; ಪೆಟ್ಟಿಗೆಯಂತೆ ಚೌಕವಾಗಿದ್ದು ಒಳಗೆ ಆಸನಗಳಿರುವ

ಜೋಡೆತ್ತಿನ ಗಾಡಿ : ಭೀಮಾಚಾರ್ಯರು ಸಂಭ್ರಮದಿಂದ ದಮಣಿಯಲ್ಲಿ ಮೆರವಣಿಗೆ ತೆಗೆದಿದ್ದರು (ಸಮಜೀ. ೫೩೧). **ಡಮಣಿ :** ಡಮಣಿಯಲ್ಲಿ ಇಬ್ಬರೂ ಹೊರಟರಾಗಲಿ ಒಬ್ಬರೂ ಮಾತಾಡಲಿಲ್ಲ (ಪಹಾರ. ೩೪); ಶ್ಯಾಮರಾಯನನ್ನು ಕರೆದು ತರಲು ಖುದ್ದ ಅವರಿಗಾಗಿ ಡಮಣಿ ಹೋಗಿತ್ತು (ದೀಪಹ. I, ೨೩); ಸಾವುಕಾರ ಬಂಗಲೆಗೆ ಅವ್ವನನ್ನೂ ಸಾವುಕಾರರ ಡಮಣಿಯಲ್ಲೇ ಕರೆದೊಯ್ಯಲಾಯಿತು (ವ್ಯನಿ. ೮೧). **ಢಮಣಿ :** ಢಮಣಿ ಹೊಡಿಯೋ ಧಂದೆ ಮಾಡುತ್ತಿದ್ದನರಿ. ಈ ಮೋಟರ ಬಂಧ್ಯು ನಮ್ಮ ಹೊಟ್ಟಿ ಮ್ಯಾಗ ಕಾಲಕೊಟ್ಟತರಿ (ಏಧ್ರುವ. ೧೭). **ದಮನಿ₂ :** ಗಾಡಿಯವನು ಇಳಿದು ಬಂದು ದಮನಿಯ ಬಾಗಿಲ ತೆರೆಯಲು ಅವರೆಲ್ಲರೂ ಗಾಡಿ ಯಿಂದ ಇಳಿದರು (ಇಂದುಮು. ೧೫); ಮೇಲ್ಕಟ್ಟು ಇಲ್ಲದ 'ದಮನೀ' ಗಾಡಿಯಲ್ಲಿ ನಾವು ನಾಲ್ವರೂ ಕುಳಿತು ನಡೆದೆವು (ತೊಳಮು. ೨೬೧). **ಧಮಣಿ :** ಅವರಿಬ್ಬರೂ ಧಮಣಿಯನ್ನು ಏರಿದರು. ಧಮಣಿಯು ಹೊರಟಿತು (ರಕ್ತಧ್ವ. ೧೧೧). [ ←ಮರಾ. ದಮಣೀ ]

**ದಮಥ** (ನಾ). ಇಂದ್ರಿಯನಿಗ್ರಹ ; ಜಿತೇಂದ್ರಿಯತ್ವ. [ ಸಂ. ]

**ದಮನ** (ನಾ). ೧. ಅಂಕೆಯಲ್ಲಿಡುವಿಕೆ ; ಹತ್ತಿಕ್ಕುವುದು ; ವಿಕಾಸಕ್ಕೆ ಅವಕಾಶ ಕೊಡದಿರುವುದು ; ನಿಗ್ರಹ : ಹುಟ್ಟುಗುಣಗಳನ್ನು ದಮನ ಮಾಡಲು ಯತ್ನಿಸುವುದು ಒಳ್ಳೆಯದಲ್ಲ (ಶಿಕ್ಷದ. ೮೩). ೨. ದಂಡನೆ ; ಶಿಕ್ಷೆ. ೩. [ಕಾಮಶಾ] ಪುರಂಪರಲ್ಲಿ ಒಂದು ವರ್ಗ : ಅನುರಕ್ತ ಭಾವದಿಂ ಪದ್ಮಿನಿ ಮೊದಲಾಗಿರ್ಪ ನಾಲ್ಕುಜಾತಿ ಸ್ತ್ರೀಯರ್ಗಿನಿಯರ್ ವರ್ತಿಪರಿಂತು ಮದನ ಚಿತ್ರಕ ದಮ[ನ ಮೊಳ]ವಾಕ್ಯರೆನಿಪ್ಪರ್ (ಮನ್ಮವಿ. ೨-೧೧) ; ಶಂಖಿನೀಶ ದಮನಾಖ್ಯಂ ಭೂತಳಕ್ಕೊಪ್ಪುಗುಂ (ಮನ್ಮವಿ. ೨-೧೪).
[ ಸಂ. ]

**ದಮನಕ** (ನಾ). ೧. ಅಡಗಿಸುವವನು ; ಹತೋಟಿಮಾಡುವವನು. ೨. (ಪಂಚತಂತ್ರದಲ್ಲಿ ಬರುವ) ಒಂದು ನರಿಯ ಹೆಸರು; ಉಪಾಯ ಗಾರ ನರಿ. ೩. (ಅಲಂ) ತಂತ್ರಗಾರ ; ಉಪಾಯಗಾರ. 'ಕರಟಕ' ಪರಾ. [ ಸಂ. ]

**ದಮನಗೊಳ್ಳು** (ಕ್ರಿ). ಅದುಮಲ್ಪಡು ; ಹತ್ತಿಕ್ಕಲ್ಪಡು ; ಹತೋಟಿಗೆ ಒಳಗಾಗು : ಒಂದು ಕಡೆ ಭಯದಿಂದ ದಮನಗೊಂಡಿದ್ದ ಕಹಿಯೂ, ಮತ್ತೊಂದು ಕಡೆ ಅಧಿಕಾರ ಪ್ರತಿಷ್ಠೆಗಳ ಪ್ರಜ್ಞೆಯೂ ಎದ್ದು ಕಾಣು ತ್ತಿದ್ದುವು (ಪುನರು. ೨೬೧). [ ದಮನ + ಕೊಳ್ಳು₁ ( <ಕೊಳ್₁) ]

**ದಮನಶೀಲತೆ** (ನಾ). ಹತ್ತಿಕ್ಕುವ ಗುಣ ; ಹತೋಟಿಮಾಡುವ ಗುಣ ; ನಿಗ್ರಹಿಸುವ ಸ್ವಭಾವ : ಅದು ದರ್ಪದಿಂದ ಕೂಡಿದ ದಮನಶೀಲತೆ ಯನ್ನು ಬಿಟ್ಟು ಕ್ಷಮಾಶೀಲದಿಂದ ಕೂಡಿದ ರಕ್ಷಣೆಯನ್ನು ಅನುಗ್ರಹಿಸು ವುದು (ಬದ್ವಪ್ರ. LXii ಪೀಠಿಕೆ). [ ಸಂ. ದಮನಶೀಲತಾ ]

**ದಮನಿ₁** (ನಾ). ನರ ; ರಕ್ತನಾಳ ; ಸೆರೆ : ನಿನ್ನ ದಮನಿಗಳಲ್ಲಿ ವೀರರಕ್ತ ವಿದೆ (ದಾಳತ್. ೩೬೧). [ <ಸಂ. ಧಮನಿ ]

**ದಮನಿ₂** 'ದಮಣಿ' ನೋ.

**ದಮಯಂತಿ** (ನಾ). ೧. ತನ್ನ ಅತಿಶಯಸೌಂದರ್ಯದಿಂದ ಇತರ ಸ್ತ್ರೀಯರ ಗರ್ವವನ್ನು ಅಡಗಿಸುವವಳು. ೨. ನಳಚಕ್ರವರ್ತಿಯ ಹೆಂಡತಿಯ ಹೆಸರು : ಬಿಸುಟನೈ ಬಳಿಕಡವಿಯೊಳಗಾಯಸವ ಸೈರಿಸ ಲಾಜದಾ . . . ದಮಯಂತಿಯನು ವಿಪಿನದಲಿ (ತೊರರಾ. ೩-೨-೧೪) ; ನಳನೃಪಗೆ ಸತಿಯಾದಳಾ ದಮಯಂತಿ ಮನವೊಲಿದು (ನಳಚ. ೨ ಸೂಚನೆ).
[ ಸಂ. ದಮಯಂತೀ ]

**ದಮಾಣ** 'ಡಮಾನ' ನೋ.

**ದಮಾನ** 'ಡಮಾನ' ನೋ.

**ದಮಾವಿ** 'ಡಮಾವಿ' ನೋ.

**ದಮಾಸು** (ನಾ). ಚಿತ್ರದ ನೆಯ್ಗೆಯುಳ್ಳ ರೇಷ್ಮೆಯ ವಸ್ತ್ರ : ರಥದ ಅಲಂಕಾರಕ್ಕೆ . . . ೮ ದಮಾಸಿನ ವೃಷಭಧ್ವಜಗಳೂ ××× ೮ ಬನಾತಿನ ತೆರೆಗಳೂ (ಎಕ. XIV, ನಂಜನ. ೨೯೩, ಪುಟ ೦೪೩ ; 1847) ; ಪಾಗುಗಳನ್ನೂ ಸೂರಿಯಪಟಗಳನ್ನೂ ದಮಾಸುಗಳನ್ನೂ . . . ತಂದು . . . ಧರ್ಮ ರಾಯನ ಸಮ್ಮುಖವನ್ನು ಸೇರಿದನು (ಕೃವಾಸ. ೧೦೪). 'ಧುಮಾಸ್' ಪರಾ. ☞ ಇಂಗ್ಲಿಷಿನಲ್ಲಿ 'ಡಮಾಸ್ಕಸ್' ಎಂಬ ಪದಕ್ಕೆ ಲ್ಯಾಟಿನ್ ಭಾಷೆಯೇ ಮೂಲವೆಂದು ಹೇಳುತ್ತಾರೆ. ಲ್ಯಾಟಿನ್‌ಭಾಷೆಯಲ್ಲಿ 'ಡಮಾಸ್ಕಸ್' ಎಂದರೆ ರೇಷ್ಮೆಯೆಂಬ ಅರ್ಥವಿದ್ದು, ರೇಷ್ಮೆಯನ್ನು ಹೆಚ್ಚಾಗಿ ತಯಾರಿಸುತ್ತಿದ್ದ ಊರಿಗೆ 'ಡಮಾಸ್ಕಸ್' ಎಂಬ ಹೆಸರು ಬಂದಿತಂತೆ. [ ←ಇಂ. Damask ]

**ದಮಿತ** (ಗು). ಗೆದ್ದ ; ಅಡಗಿಸಿದ ; ನಿಗ್ರಹಿಸಿದ : "ದಮಿತಂ ದಾಂತಂ" (ವಸ್ತುಕೋ. ೧೦೭-೫೦): ಮಹೀಚಕ್ರಸಂಸ್ತುತದೋರ್ಮ್ಮಂಡಳ ಮಂಡಳಾಗ್ರ ದಮಿತಾನವಾರಿ ನವಾರಿ ಕೀರ್ತ್ತಿತ ದಿಗ್ವರ್ತಿತ ಜೈತ್ರಲಕ್ಷ್ಮೀ ಭರತ ಶ್ರೀಮಚ್ಚುಮೂವಲ್ಲಭಂ (ಎಕ. VI, ಚಿಕ್ಕಮ. ೧೬೦-೮೬ ; 1137).
[ ಸಂ. ]

**ದಮಿತಾರಿ** (ನಾ). ಶತ್ರುಗಳನ್ನು ಸೋಲಿಸಿದವನು : ಪರಾಕ್ರಮ ಮಿಲ್ಲೆಂದಿಳಿಕೆಗೆಯ್ದು ಭರತಂಗಿತ್ತಂ ದಮಿತಾರಿ ದಶರಥ ರಾಜ್ಯಮನೆಂಗುಂ ರಾಮನಿತ್ತನೆಂಗುಮೆ ಲೋಕಂ (ಪಂರಾಮಾ. ೬-೧೪೩).
[ ದಮಿತ + ಅರಿ₆ ]

**ದಮಿಸು** (ಕ್ರಿ). ಹತೋಟಿಮಾಡು ; ಅಂಕೆಗೆ ಒಳಪಡಿಸು ; ಸಾಧಿಸು : ದಮಿಸು ಭವಮಂ ಧರ್ಮಾಕಾರೇ ದಯಾವತಿ ಪಾರ್ವತೀ (ವೃಷವಿ. ೪-೦೨೭) ; ದಮಯಂತಿಯ ದಮಿಸಿ ಮನದಿ ನಳನಳಿಸುವ ನಳನ ಆನಡೆಯವನೆಂಬೆನೆ ನಾ, ಎಂದೋ, ನಿಮ್ಮಯ ಮಿಳನ (ಹಂಸದ. ೨೮).
[ ದಮನ + – ಇಸು₃ ]

**ದಮುನ** (ನಾ). ಬೆಂಕಿ; ಅಗ್ನಿ : "ದಹನಂ ಕೃಶಾನು ದಮುನಂ ಚಿತ್ರಭಾನು ಹುತವಹಂ . . . ಅಗ್ನಿಯಕ್ಕುಂ" (ಮಂಗರಾ. ೦೪-೭) ; ಗಮಿಸುವಸಂವಿನ ಲೋಹಮಂ ಚಿದ್ದಮುನದಿಂ ಹದಗೊಳಿಸುವಾ ಕಮ್ಮಾಱನುಂ ತಾನೆ (ಬಸವು. ೨೦-೨೯). [ ಸಂ. ದಮುನಸ್ ]

**ದಮೆ** (ನಾ). ಇಂದ್ರಿಯನಿಗ್ರಹ ; ಜಿತೇಂದ್ರಿಯತ್ವ : ದಮೆಯುಂ ಕ್ಷಮೆಯುಂ ಪುಣ್ಯಾಶ್ರಮಂಗಳೆಂದಱಿದನುಷ್ಠಿಸಲ್ ಸಿದ್ಧಂ (ಜಿನಾಳಿ. ೧೯-೧೯) ; ಭಕ್ತಿ ಶಮೆ ದಮೆ ಯೋಗ ಯಾಗ ಶ್ರುತಿಮತಮಯಾ ವಿರಕ್ತಿ ಘೋರವ್ರತ ತಪೋನಿಷ್ಠೆ ಜಪ ಗುಣಾಸಕ್ತತೆ . . . ಲಿಂಗಾರ್ಚನಾಸಕ್ತಿಯಿಂ ಬೆಳೆದ ಪುಣ್ಯ ದೊಳರ್ಥಮಂ ಸುಧಾಭುಕ್ತರಱಿಯಲು ಕೊಡುವೆನಾ ಹರಿಶ್ಚಂದ್ರ ಹುಸಿಯಂ ನುಡಿಯದಿರಲೆಂದನು (ಹಕಾ. ೩-೨೭) ; ಹದನನಱಿದಡೆ ಸಾಕು ಶ್ರುತಿವಾಕ್ಯದಲಿ ದುರ್ಘಟನಲ್ಲ ಶಮೆ ದಮೆ ಹೃದಯದಿಂದಲಿ ಉತ್ತಮಂ ವಿದ್ವಾಂಸರಱಿತಿರಲು (ಬಸವು. ೪೦-೦೦).
[ ಸಂ. ದಮ ]

**ದಮ್ಮ₁** 'ಧಮ್ಮ₁' ನೋ.

**ದಮ್ಮ₂** 'ದ್ರಮ್ಮ₁' ನೋ.

**ದಮ್ಮ₃, ಧಮ್ಮ₂** (ನಾ). ದಪ್ಪವಾದುದು ; ಗಾತ್ರವಾದುದು : ಒಂದೇ ಬೆಳೆಯಾದರೂ ಬಹಳ ವಿಶೇಷವಾಗಿ ಕಾಳು ದಮ್ಮವಾಗಿ ತೀವ್ರವೇ ಬೆಳೆ ಯಾಗಿ ಅದು ಸರ್ವೋತ್ಕೃಷ್ಟವಾಗುವದು (ಕೃಷಿಪ್ರ. ೭೯) ; ಸಣಬಿನ ಹುರಿ ಯನ್ನು ನೂಲಿನ ಹಾಗೆ ಎಷ್ಟು ಸಣ್ಣಾದರೂ ಮತ್ತು ಎಷ್ಟು ದಮ್ಮ ವಾದರೂ ಮಾಡಲಿಕ್ಕೆ ಬರುವದು (ಕೃಷಿಪ್ರ. ೮೭). **ಧಮ್ಮ₂ :** ಅರಕ್ಷಣದ ಬೇರು ದೊಡ್ಡದು ಅಂದರೆ ಧಮ್ಮ ಮತ್ತು ಉದ್ದಾದಂಥಾದ್ದಿರಬೇಕು (ಮುಂಬವ್ಯಾ. ೩೭).

ಧಮ್ಮದು = ದಪ್ಪವಾದುದು ಒರಟಾದುದು : ರೇಶಿಮೆ ಸಣ್ಣದು ಅಥವಾ ಧಮ್ಮ ದೋ, ಬೆಳ್ಳಗೆ ಸಫೆಯುಳ್ಳದ್ದೋ ಅಥವಾ ಮೊತ್ರಗೆ ಇದ್ದವ್ದೋ . . . ತರಿಸಿಕೊಂಡರೆ (ಮುಂಬವ್ವಾ. ೨೭ ಪ್ರಸ್ತಾವನೆ).

[ < ದಪ್ಪ ? ]

**ದಮ್ಮಗಹಳೆ,** ದರ್ಮಗಾಳೆ (ನಾ . ಒಂದು ಬಗೆಯ ಕಹಳೆ; ಗೆದ್ದವರು ದಯೆಯಿಂದ ಯುದ್ಧವನ್ನು ನಿಲ್ಲಿಸುವ ಸಂಕೇತವಾಗಿ ಊದುವ ಕಹಳೆ : ತೆಗೆದು ಒಂದಕೆ ನಿಷಧಪತಿ ಕಾಳೆಗದಿ ಹಿಡಿಸಿದ ದಮ್ಮ[ಪಾಠಾಂ. ಗೌರು, ಧರ್ಮ] ಗಹಳೆಯು (ನಳಚ. ೯-೩೭). **ದರ್ಮಗಾಳೆ :** ತಲೆಯ ಹೊಇದು ಹೆದೊಱೆಯ ಕೂಡಿ ದಂರ್ಮಗಾಳೆಯು ಹಿಡಿಸಿ ಬಿಟ್ಟಲಿ ಬಿಡದೆ ಹಂಪೆಗೆ ಬಂದು ಬಿಟುದು ಮಾನವ ಹೊಯಿಸಿ ತುಂಗಭದ್ರೆಯುಲಿ ಬಲೆಯುಮ ತೊಳೆದು (ಮೈಆರಿ. ೧೯೩೧೦-೧-೬೩ ; 1310). 'ಅಪಹಾರ ತೂರ್ಯ' ಪರಾ. [ ದಮ್ಮ$_1$ (< ಧಮ್ಮ$_1$) + ಕಹಳೆ ]

**ದಮ್ಮಗುತ್ತಿ** (ನಾ). ಒಂದು ಬಗೆಯ ದಪ್ಪ ಬತ್ತ : ಕುಂದದ ಚಂದ್ರಲೇಖೆ ನಸುಗಂದದೆ ರಂಜಿಪ ಪುಷ್ಪಮಾಲೆ . . . ಸರ್ವಸಾಧ್ಯಂ ದಲೆನಿಪ್ಪ ಕೇಸರಿ ನಿರಂತರವೊಪ್ಪುವ ದಮ್ಮಗುತ್ತಿಯೆಂಬಂದದನೇಕನಾಮದೆಸೆಗಂ ಮೃದು ಬಂಧುರಗಂಧಶಾಲಿಗಳ್ (ದಶಕು. ೧-೨೮). [ ದಮ್ಮ$_3$ + ಗುತ್ತಿ$_1$ ]

**ದಮ್ಮಗುರು** (ನಾ). ಧರ್ಮೋಪದೇಶ ಮಾಡುವ ಗುರು; ಧರ್ಮಗುರು: ವೊಳಗೆಱೆಯ ವಿತ್ತಿಯ ದಮ್ಮಗುರುಗಳು ಆ ಬೊಮ್ಮಗುರುಗಳು ಸಾಡ ಸೇನಬೋವ ಬಾಚಂಣ್ಣ . . . ಒಳಗಾದ ಸಮಸ್ತ ಪ್ರಜೆಗಳು (ಎಕ. XI, ಚಿತ್ರದು. ೧೨-೩೮ : 1286). [ ದಮ್ಮ$_1$ (< ಧಮ್ಮ$_1$) + ಗುರು$_2$ ]

**ದಮ್ಮಜಾನ** (ನಾ). [ ಜೈನ ] ನಾಲ್ಕು ಧ್ಯಾನಗಳಲ್ಲಿ ಒಂದು; ಧರ್ಮಧ್ಯಾನ (?): ಬಳಿಕಣುಪೆಕ್ಕೆ ಪನ್ನೆರಡಱಿಲ್ಲಿ ಚತುಷ್ಕದ ದಮ್ಮಜಾಗ [ನ] ದೊಳ್ ಸಾಲಸುಳಿದಾಡಿ ಕೂಡೆ ಗುರುಪಂಚಕದೊಳ್ಪೊಳೆದಾಡಿ ಚಿತ್ತದಗ್ಗಳಮನ ಡಂಗಿಸುತ್ತೊಡನೆ ತನ್ನಯ ದೇಹದೊಳಾತ್ಮನಲ್ಲಿ ನಿಂದಳಲಱಿದಿರ್ದಮಂ ತಪ ಕೃಪಾತ್ಮನಲಾ ಅಪರಾಜಿತೇಶ್ವರಾ (ಅಪಶ. ೮). [ < ಸಂ. ಧರ್ಮಧ್ಯಾನ ]

**ದಮ್ಮಡಯ್ಯ** (ನಾ). ಒಬ್ಬಾತನ ಹೆಸರು : ಕಣ್ಣಬ್ಬರಸಿಯ ತಮ್ಮ ಚಾವಯ್ಯನುಂ ದಮ್ಮಡಯ್ಯನುಂ ನಾಗವರ್ಮ್ಮನುಂ ಬಂದಿಲ್ಲಿ ದೇವರಂ ಬಂದಿಸಿದರ್ (ಎಕ. II, ೪೬೬-೧ ; ಸು. 10ನೆಯ ಶತ).

[ ದಮ್ಮಡ$_0$ + ಅಯ್ಯ$_{s1}$ ]

**ದಮ್ಮಡಿ$_1$,** ದಮಡಿ$_1$, ದಿಮಡಿ, ದಿಮ್ಮಡಿ (ನಾ). ಕೈಯಲ್ಲಿ ಹಿಡಿದು ಬಾರಿಸುವ, ಗೆಜ್ಜೆಗಳುಳ್ಳ ಚಿಕ್ಕ ತಮ್ಮಟೆಯಂತಹ ವಾದ್ಯ: ಮೂವರು ತಮ್ಮಂದಿರು ತಾಳ ದಮ್ಮಡಿಗಳನ್ನು ಬಾರಿಸುತ್ತಾ ಆಲಾಪನೆ ಮಾಡಿದರು (ಕಥಪಿ. II, ೧೭೭) ; ಡೊಳ್ಳು, ಹಲಗೆ, ದಮ್ಮಡಿ, ದಪ್ಪು, ಟಮಾರೆ ಮೊದಲಾದ ವಾದ್ಯಗಳನ್ನು ಬಾರಿಸಿಯೂ ಏಕತಂತಿ, ಚೌಡಕಿ ತಾಳಗಳನ್ನು ನುಡಿಸಿಯೂ ಕುಣಿಯುವುದನ್ನು ಕರ್ನಾಟಕದ ತುಂಬಾ ಈಗಲೂ ನೋಡ ಬಹುದು (ಕನ್ನಜಾ. ೩೦). **ದಮಡಿ$_1$ :** ತಾಳ ದಮಡಿ ಹಿಡಿದು ಏಕನಾದ ಸ್ವರದಲ್ಲಿ . . . ಹಾಡುತ್ತ ಭಜನೆ ಮಾಡುವರು (ಕಪಪು. ೬-೧೭) ; ಗುಂಗ ಮಾಟ ದಮಡಿ ಬಡಿಯುತ್ತಿದ್ದ (ಧರ್ಮಶ್ರೀ. ೬). **ದಿಮಡಿ:** ನಮ್ಮ ಸಿದ್ಧಪ್ಪ ಎಲ್ಲಾರೂ ಭಜನೀನ ಮಾಡತಿರತಾರ ಅಂತ ಕಣ್ಣಾ ಮುಚ್ಚಿ ದಿಮಡಿ ಹೊಡದ ಹೊಡಿತಿರತಾನು (ಹೊಸಂಸಾ. ೧೮); ಶಿವಾಯ ನಮ ಓಂ ಶಿವಾಯ ನಮಃ ದಿಮಡಿ ಮಿಡಿಯುತ್ತಿತ್ತು (ಹೃದಸ. ೭೩-೧). **ದಿಮ್ಮಡಿ :** ಎಂಟು ಹತ್ತು ಜನ ಡೊಳ್ಳು, ದಿಮ್ಮಡಿ, ಕಾಳೆ ಮೊದಲಾದುವುಗಳನ್ನು ಉಪ ಯೋಗಿಸಿ ಸಪ್ಪಳ ಮಾಡುವವರು (ಮೇದಿಮ. ೧೪೩). 'ತಮಟೆ' ಪರಾ.

**ದಮ್ಮಡಿ$_2$,** ದಂಬಡಿ, ದಮಡಿ$_2$, ದಮಡೆ (ನಾ). ಒಂದು ಅತಿ ಚಿಕ್ಕ ನಾಣ್ಯ; ಒಂದು ಕಾಸು: ಒಂದು ದಮ್ಮಡಿಯಿಲ್ಲ ನನ್ನ ಪತ್ತಿರ (ವಾತ್ಸಲ್ಯ. ೬೪) ; ದಮ್ಮಡಿ ಕೂಡ ಕೊಡದ ಹಾಂಗ ಬಿಮ್ಮಗ ಹೊಂಟಾಕೆ (ಅರಳು. ೧೩೬-೧೧) ; ಕಲ್ಲು ಕಡವೆಮ್ಮ ಗುಡಿ ಭಟ್ಟನೇ ದೋಭಿ, ಮನವ ಮಡಿಯಾಗಿಡಲು ದಮ್ಮಡಿಯ ತಮಡಿ ನಮಗೆ ಬೇಕೀತನಿಗೊ ನಲ್ಮೊರೆಯೆ ತಮಡಿ (ಗಡೀಶ. ೭೦-೫). **ದಂಬಡಿ :** ನಾನು ಯಾವ ಗಂಡಸಿನ ತಾಗೂ ಸುಮುಸುಮುಕೆ ಒಂದು ದಂಬಡೀನು ತಗಂಡವಳಲ್ಲ (ಬೆಂಗಬ. ೬೮). **ದಮಡಿ$_2$:** ಈಗ ಮನಿಯೊಳಗ ಒಂದು ಕುರುಡು ದಮಡೀನೂ ಇಲ್ಲ (ಜನಜೀ. ೫೦); ಅವರ ಇದ್ದ ದಮಡಿಯ ಮಾನ ಹೋದಂತಾಗಿತ್ತು (ಅಪನಾ. ೨೨೩). **ದಮಡೆ :** ಶಂಬುಲಿಂಗಯ್ಯ ಇಂಬಾದ ಚೌಕವು ತುಂಬದಿ ದುಡ್ಡು ದಮಡೆಗಳನು ರಂಬೆ ಬೇಕಾದಾಗ ಮುಸುರಿಗ್ಗೆಯಲಿ ತಗದು ಕೊಂಬುವೆ ಎಷ್ಟು ಭಯವಿಲ್ಲವೇಳ (ಲೋಕಗೀ. ೬೮). 'ದ್ರಮ್ಮ$_1$' ಪರಾ.

[ ← ಹಿಂ. ಮರಾ. ದಮಡೀ./ತಮಿ. ತಮಟ ; ತೆಲು. ದಮ್ಮಡಿ ]

**ದಮ್ಮಣಿ** 'ದಮ್ಮಾಣಿ$_1$' ನೋ.

**ದಮ್ಮಣ್ಣ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀದಮ್ಮಣ್ಣನ್ನಿ(ೕ) ತ್ರೊನ್ಗಣಪತಿಯುನ್ನಾಗಕುಮಾ[ರ] (ಕಇ. I, ೯-೩ ; ?).

[ ದಮ್ಮ$_1$ (< ಧಮ್ಮ$_1$) + ಅಣ್ಣ$_1$ ]

**ದಮ್ಮದತ್ತಿ** (ನಾ). = ಧರ್ಮದತ್ತಿ : ಸೋಮೇಶ್ವರದೇವರ್ಗೆ ಅರಸರ್ ದಮ್ಮದತ್ತಿಯಾಗೆ ಬಿಟ್ಟರ್ (ಎಕ. X, ಚಿಂತಾಮ. ೩೦-೧೭ : 1047).

[ ದಮ್ಮ$_1$ (< ಧಮ್ಮ$_1$) + ದತ್ತಿ ]

**ದಮ್ಮನೆ** (ಅ). ೧. ದಮ್ ಎಂಬ ಶಬ್ದದೊಡನೆ: ಹಮ್ಮನೆ ಹಾರಿ ದಮ್ಮನೆ ಬಿದ್ದು ಶೋಕವಂಗೈದಳು (ಕರಿಕ. ೮೦-೭). ೨. ಸಂಪೂರ್ಣವಾಗಿ; ಹೆಚ್ಚಾಗಿ.

**ದಮ್ಮನೆ ತಣಿ, ದಮ್ಮನೆ ದಣಿ**=೧. ಸಂಪೂರ್ಣವಾಗಿ ತೃಪ್ತಿಗೊಳ್ಳು: "ಮಾದಯತೇ = ದಮ್ಮನೆ ತಣಿದಪಂ" (ಶಾಶಕ್ಕ. ೨೭೩) ; ಕಮ್ಮನೆ ತುಪ್ಪ ಕಜ್ಜಾಯ ಪಾಯಸದಿಂದೆ ದಮ್ಮನೆ ತಣಿದೆವೆಂದೆನುತ ಬೊಮ್ಮರ ಸಂತತಿ ನುಡಿಯುತೆ ಸಾರ್ದರು ನಿರ್ಮಳಶಯಾನಸ್ಥಳಕೆ (ಮೋಹತ. ೩-೫೯). ೨. ಅತಿಯಾಗಿ ಆಯಾಸಗೊಳ್ಳು ; ಬಹಳವಾಗಿ ಬಳಲು : ವನರುಹ ಭವಾಂಡಮಂ ತಿರುಗಿ ದಮ್ಮನೆ ದಣಿದು ಮೇರುವಾಗ್ರದಿ ನಿಂದನೋ (ನವಮೋ. ೨೫-೩೨); ನಕ್ಕು ನಕ್ಕು ದಮ್ಮನೆ ದಣಿದು ತೇಕುತ್ತ ತೇಕುತ್ತ ವಂಶಲೋಚನರೆಂದರು (ಎರಸ. ೬೩). **ದಮ್ಮನೆ ದಣಿಸು** = ಅತಿಯಾಗಿ ಆಯಾಸಗೊಳಿಸು ; ಬಹಳವಾಗಿ ಬಳಲಿಸು : ಬೊಮ್ಮ ಗಿಮ್ಮಾಸ್ತ್ರ ಭವೇಂದ್ರಗಿಂದ್ರಾಸ್ತ್ರಗಳೆಮ್ಮೊಳು ಪ್ರತಿಕೂಲವಲ್ಲ ನಿಮ್ಮ ರಕ್ಕಸಗಜ್ಜವ ತೋಱಿಸೆಂದೆಚ್ಚು ದಮ್ಮನೆ ದಣಿಸಿದ ಖಲನ (ಮೋಹತ. ೪೦-೪೬); ನಳನ ದೇಶಭ್ರಷ್ಟನೆನಿಸಿತ್ತು ಧರ್ಮಜನ ದಮ್ಮನೆ ದಣಿಸಿತು (ನವಮೋ. ೮-೬೦). [ ದಮ್ + – ಅನೆ$_1$ ]

**ದಮ್ಮಯ್ಯ** (ನಾ). ೧. ಬೇಡಿಕೊಳ್ಳುವಾಗ ಬಳಸುವ ಒಂದು ಶಬ್ದ : ದೇವ ಪರಡಿಯ ಪಾಯಸವನುಣ್ಣು ದಮ್ಮಯ್ಯ (ಬಸರ. ೭-೧೨೮) ; ಹಿಮ್ಮೆಟ್ಟಿ ಬೇಡಿನ್ನುಯೆಮ್ಮಯ್ಯ ದಮ್ಮಯ್ಯ (ದೀಕ್ಷಾಬೋ. ೮೯-೬) ; ನಡೆ ನಡೆ ನಡೆ ಯೆಂದು ಮೆಲ್ಲನೆ ಪಿಡಿಯಲು ಬಿಡಿ ಬಿಡಿ ಬಿಡಿ ದಮ್ಮಯ್ಯ ಎನುತಾ (ಪುರಂದ. ೨-೭೨-೩) : ದಮ್ಮಯ್ಯ ಸಾಕೆಮ್ಮನುಳುಹಿಕೊಳ್ ದಾತರಿರ ತಾತರಿರ ದೂತರಿರಯೆಂದು ಮೊಱೆಯಿಡೆ (ಚಬಪು. ೫೬-೫೮) ; ಹಮ್ಮು ಹತ್ತಿದವನು ದಮ್ಮಯ್ಯ ಅಂದಾನೆ (ನೀತಿಚಂ. IV, ೧೧) ; ದಮ್ಮಯ್ಯ ಅವ್ವ ನೀ ಕರೆಯಬೇಡೌ ನಾಯ ! (ಕಎಪು. ೩೨-೨). ೨. ಒಬ್ಬಾತನ ಹೆಸರು : ಸೊತ್ತಿಯೂರೆರೆಯುಮ ದಮ್ಮಯ್ಯನ ಮಗ ಶ್ರೀವರ್ಮ್ಮಯ್ಯ (ಎಕ. X, ಕೋಲಾರ. ೯೦-೮೯ ; 903).

**ದಮ್ಮಯ್ಯಗುಡ್ಡೆ ಇಡು** = ಗೋಗರೆದು ಬೇಡು ; ಯಾಚಿಸು : ಆ ಮಗನಿಗೆ ಸರಿಯಾದ ಬುದ್ಧಿ ಕಲಿಸ್ತೀನಿ. ನಿಮ್ಮ ಬಳಿಗೆ ಬಂದು ಅವನು ದಮ್ಮಯ್ಯಗುಡ್ಡೆ ಇಟ್ಟು ಒಪ್ಪಿಸಿ ಹೋಗಬೇಕು, ಅಂಗೆ ಮಾಡ್ತೀನಿ

(ಊರುಕ. ೫೦). **ದಮ್ಮಯ್ಯಗುಡ್ಡೆ ಹಾಕು** = ದಮ್ಮಯ್ಯಗುಂಡ್ಡೆ ಇಡು: ಕೃಷ್ಣಕುಮಾರಿಯ ತಾಯಿಯು ಮಗಳನ್ನು ರಕ್ಷಿಸಿ, ರಕ್ಷಿಸಿ, ಎಂದು ಎಲ್ಲರಿಗೂ ದಮ್ಮಯ್ಯಗುಡ್ಡೆ ಹಾಕಿದಳು (ಕಗದ್ಯ. II, ೨೪); ರಾಜ ಅವನನ್ನು ಹಿಂಬಾಲಿಸಿ ದಮ್ಮಯ್ಯಗುಡ್ಡೆ ಹಾಕಿ ಗಾಮಾ ಹೇಳಿದ್ದಕ್ಕೆಲ್ಲ ಒಪ್ಪಿದ (ಪ್ರಬಾಇ. II, ೨೩೪). [ ದಮ್ಮ$_1$ (< ಧಮ್ಮ$_1$) + ಅಯ್ಯ$_1$ ]

**ದಮ್ಮಶಾಸನ, ದರ್ಮಶಾಸನ** (ನಾ). ದಾನವನ್ನು ಕೊಟ್ಟು ಬರೆಸಿದ ಶಾಸನ; ದಾನಶಾಸನ: ದೇವರಾಯವೊಡೆಯರ ದಮ್ಮಶಾಸನ ನಿರೂಪದಿಂ ಬೆಳಿವಾರನ ಹಳಿಯಡಾವುಲ ಸೂರೆನಾಯ್ಕನಂ (ಎಕ. X (S), ಮುಳಬಾ. ೯೪-೨೪ : 1406). **ದರ್ಮಶಾಸನ:** ಪಂಚಾಂಗದವರ ದರ್ಮಶಾಸನವನೂ ಬರಸಿ ಕೊಡಬೇಕು ಎಂದು ಕೋರಲಾಗಿ (ಎಕ. X, ಬಾಂಗ. ೧೯-೭೭ : 1472). [ ದಮ್ಮ$_1$ (<ಧಮ್ಮ$_1$) + ಶಾಸನ ]

**ದಮ್ಮಸ್** 'ದಮ್ಮಸು' ನೋ.

**ದಮ್ಮಸು, ದಮ್ಮಸ್, ಧಮ್ಮಸ** (ನಾ). ಭೂಮಿಯನ್ನು ಗಟ್ಟಿಮಾಡಲು ಉಪಯೋಗಿಸುವ ಒಂದು ಬಗೆಯ ಸಾಧನ; ನೆಲಗಟ್ಟನ್ನು ಕುಟ್ಟಿ ಗಟ್ಟಿ ಮಾಡುವ ಸಾಧನ; ಗಟ್ಟಣೆಯ ಸಾಧನ. **ದಮ್ಮಸ್:** (ಟ). **ಧಮ್ಮಸ:** 'ಧಮ್ಮಸವಿಕ್ಕು' ಪರಾ.

**ದಮ್ಮಸು ಮಾಡು** = ನೆಲಗಟ್ಟನ್ನು ಕುಟ್ಟಿ ಗಟ್ಟಿ ಮಾಡು: ಕಾಂಕ್ರೀಟನ್ನು ತಳಪಾಯದಲ್ಲಿ ಹಾಕಬೇಕಾದಾಗ ತಳಕ್ಕೆ ನೀರನ್ನು ಹೊಯ್ದು ದಮ್ಮಸು ಮಾಡಬೇಕು (ಶಿಲ್ಪನಾ. ೨೯೦); ಸಂಜೆಯ ಹೊತ್ತಿಗೆ ಎಲ್ಲಾ ದಮ್ಮಸು ಮಾಡಿದ ಮೇಲೇ ಕೂಲಿಗಳನ್ನು ಮನೆಗೆ ಬಿಡುವುದು (ಸಾಹೇಬ್. ೦೪); ಆ ಸ್ಥಳದಲ್ಲಿ ಮತ್ತೆ ಹೊಸಮಣ್ಣನ್ನು ಹಾಕಿ ದಮ್ಮಸು ಮಾಡಬೇಕು (ಗ್ರಾಮಾಕ. ೧೨೦). [ ←ಪಾರ. ದಮಸ್ ]

**ದಮ್ಮಾಣಿ$_1$, ದಮ್ಮಣಿ** (ನಾ). ಧರ್ಮಾರ್ಥವಾಗಿ ದಾರಿಹೋಕರಿಗೆ ಕೊಡುವ ನೀರು, ಪಾನಕ ಮುಂತಾದ ಪಾನೀಯ: ಪೂರ್ವಪದಾಂತ್ಯಕ್ಕೆ ದೀರ್ಘಮುಂ ಉತ್ತರಪದಾದಿಗೆ ಲೋಪಮುಮಾಗಿ ಕಾಂಸ್ಯತಾಳ– ಕಂಸಾಳ; ಧರ್ಮಪಾನೀಯ – ದಮ್ಮಾಣಿ – ಎಂದಾಯ್ತು (ಶಮದ. ೨೯೩ ಪ್ರಯೋ). **ದಮ್ಮಣಿ:** ನಿನಗೆನ್ನೊಳ್ ದಯೆಯಿರ್ಕುಮಪ್ಪೊಡೆ ಲೋಗರನುವಿಂಗೊಂದು ದಮ್ಮಣಿಯನೆರ್ವಡಿಸೈ (ರಾಮಾಶ್ವ. ೩೮-೨೩). [ <ಸಂ. ಧರ್ಮಪಾನೀಯ ]

**ದಮ್ಮಾಣಿ$_2$** (ನಾ). ಕಮ್ಮಟ; ನಾಣ್ಯಗಳನ್ನು ಮುದ್ರಿಸುವ ಸ್ಥಳ; ಟಂಕಸಾಲೆ: "ದಮ್ಮಾಣಿ – ದ್ರುಮ್ಮಾಣಿ = ಟಂಕಸಾಲೆ" (ತದ್ಭಕೋ. ೦೮); ದಮ್ಮಾಣಿ, ದ್ರುಮ್ಮಾಣಿಃ .... ಟಂಕಶಾಲಾ ಇತರ್ಥ್ಯಃ (ಶಬಾನು. ೩೭೮ ವ್ಯಾಖ್ಯಾ). [ ? ]

**ದಮ್ಮಾಹಳಿ** (ನಾ). ಒಂದು ಊರಿನ ಹೆಸರು: ದುಮ್ಮಾಹಳಿಯ ಮಾದಿಯಣ್ಣ ಆಳಿಕೆಯಲು . . . ದೇವಾಂತರಿ ಮೊದಲಯೊಗೆ ಕಂಭ ಕೊಟ್ಟ (ಎಕ. V, ಹಾಸನ. ೧೮೩-೮; ?). [ ? ]

**ದಮ್ಮಿ** (ನಾ). ಧರ್ಮವಂತ: ತಮ್ಮಡಿಗೆ ಮೊಟಿವ ಶ್ವಾನಂ ದಮ್ಮಿ [ಪಾಠಾಂ. ದರ್ಮಿ, ಧರ್ಮಿ]ಯನೇಕೆ ಬಾಟಲಿತ್ತಪುದು (ಪಂಚತಂ. ೦೭೮-೧೫). [ <ಸಂ. ಧರ್ಮಿನ್ ]

**ದಮ್ಮಿಡು** (ಕ್ರಿ). ಸ್ವಲ್ಪ ವಿಶ್ರಾಂತಿ ಹೊಂದು; ವಿರಮಿಸು: ಆ ಪುಣ್ಯಪುರುಷರು ಸರಸಿಜಾಕ್ಷಿಯು ಸಹಿತ ಬಿಲದೊಳು ತೆರಳಿದರು ನಡುರಾತ್ರೆ ಸಮಯದೊಳ್ಳಿಲ್ಲಿ ದಮ್ಮಿಡದೇ ತ್ವರಿತಪಯಣದೊಳ್ಳೆದಿದರು (ಜಿನಭಾ. ೦೪-೦). [ ದಮ್ಮು + ಇಡು$_1$ ]

**ದಮ್ಮಿಲ್ಲ** (ನಾ). ಕಟ್ಟಿದ ಮುಡಿ; ಮುಡಿಗಂಟು; ಕಬರಿ: ವರಗತಿಗೆ ವದನಾಂಬುರುಹಮಲರೆ ಪೀನಪೀವರಕುಚಾಯತಕೆ ದಮ್ಮಿಲ್ಲಮುಲ್ಲಾಸಿಸಲ್ (ನಂದಿಮಾ. ೨೩-೧೮); ಪೊಗರೊರೆವ ಪೊಂಗಲಶಕುಚಗಳ ನಗೆ ಮೊಗದ ದಮ್ಮಿಲ್ಲವೇಣಿಯು ಸೊಗಪ ಹಂಗಳು ವರ್ತಿಸುವರಾ ಸೊಗಸಿನಿಂದಾ (ಆದಿಪು. ೧೮-೧). [ <ಸಂ. ಧಮ್ಮಿಲ್ಲ ]

**ದಮ್ಮು, ದಂ** (ನಾ). ೧. ಉಸಿರು; ಪ್ರಾಣವಾಯು: ಕಾಮಾಕ್ಷಿಯ ಮಾತಿಗೆ ದಂಗಾಗಿ ಹೋದರು ವೆಂಕಮ್ಮ. ಮಾತನಾಡುವುದಕ್ಕೆ ಎಲ್ಲಿದೆ ದಮ್ಮು (ಪದ್ಮಸ. ೦೦೯); ಸೇತುವೆಯಿಂದ ಮನೆಯ ಚಾವಡಿಯ ತನಕ ಓಡಿಬಂದಿದ್ದ ಅವರಿಗೆ ಮಾತನಾಡುವುದಕ್ಕೆ ದಮ್ಮೇ ಇರಲಿಲ್ಲ (ದೇವಹಂ. ೨೩೭). ೨. ತಾಳ್ಮೆ; ಸಹನೆ: ದಮ್ಮು (ತಾಳ್ಮೆ) – ಹುಡುಗಗ ದಮ್ಮು ಇಲ್ಲ. (ಹುಡುಗನಿಗೆ ತಾಳ್ಮೆ ಇಲ್ಲ) (ಸುವರ್ಣ. ೩೨೪); ಜರಾರ ದಮ್ಮು ಅತ್ಕ್ಯೋ ಇಲ್ಲೇ ಇಕೀಗಿ? ಜಗದ ಹೊರತಾಗೇ ಇಕ್ಕಿ ಒಬ್ಬಾಕಿ ಅತ್ತಿ ಆಗಿದಾಳ (ನಿಸರ್ಗ. ೦೯೦). ೩. ತ್ರಾಣ; ಚೈತನ್ಯ; ಶಕ್ತಿ: ದಮ್ಮು ಇದ್ದರೆ ಬಾರೋ, ನೋಡ್ದೋಣ (ರೂಢಿ). ೪. ಗೂರಲುರೋಗ; ಉಬ್ಬಸ; ಅಸ್ತಮ: ಆಕಳ ಹಾಲು . . . ಕೆಮ್ಮು ದಮ್ಮು . . . ಪಿತ್ತಗಳನ್ನು ಕಳೆಯುವುದು (ಅಷ್ಟಾಂಗ. ೬೯-೨೨ ಅರ್ಥ); ಸತ್ತರೇನು ಸಾರ್ಥಕತೆ ದಮ್ಮಿನಲಿ ಕೆಮ್ಮಿ ನವಿದು ನವಿದು (ಸೂರ್ಯಪಾ. ೦೬-೭); ಛೇ! ದಮ್ಮಿನವರು ಇದ್ದು ಸತ್ತಂತೆ: ದಮ್ಮು ಜೋರಾಗಿದೆ, ಮಾತಾಡಿಸಿ ಹೋಗಬೇಕೆಂದು ಮೊನ್ನೆಯೇ ಹೇಳಿಕಳಿಸಿದ್ದಾರೆ (ಬಟ್ಟಹೂ. ೫೭). ೫. (ಆಯಾಸದಿಂದ) ನಿಂತು ನಿಧಾನವಾಗಿ ಉಸಿರು ಬಿಡುವಿಕೆ. 'ದಮ್ಮಿಡು' ಪರಾ. ೬. ಒಂದು ಹದ,–ಬಾರಿ,–ಸಾರಿ,–ಸಲ: ಇನ್ನೂ ಒಂದು ದಮ್ಮು ಬೇಯಲಿ ಇಡ್ಲಿ (ರೂಢಿ). **ದಂ:** ೩. ದಂ ಇದ್ದರೆ ನಾಳೆ ನೀನು ಕದ್ದುಕೊಂಡು ಬಾರೋ (ನಡಿದಾ. I, ೫೩೭). ೭. ಜುರುಕೆ: ಒಂದು ದಂ ಬೀಡಿ ಸೇದಿ ಬರುತ್ತೇನೆ (ರೂಢಿ). [ ←ಪಾರ. ಹಿಂ. ಮರಾ. ದಮ್, ದಮಾ ]

**ದಮ್ಮುಕಟ್ಟು** 'ದಮ್ಮುಗಟ್ಟು' ನೋ.

**ದಮ್ಮುಗಟ್ಟು, ದಂಕಟ್ಟು, ದಮ್ಮುಕಟ್ಟು** (ಕ್ರಿ). ೧. ಉಸಿರನ್ನು ಬಿಗಿಹಿಡಿ; ಶ್ವಾಸವನ್ನು ತಡೆ: (ಟ). **ದಂಕಟ್ಟು:** ೧. ಆ ಹುಡುಗ ದಂಕಟ್ಟಿ ಓಡುತ್ತಿದ್ದಾನೆ (ರೂಢಿ). **ದಮ್ಮುಕಟ್ಟು:** ೧. ಸ್ಕ್ಯೋವೊರೋನ್ಸಿಕೋವ್ ಬೆರಳುಬುಡದ ಸಂದಿಯಲ್ಲಿ ಅಪ್ಪಚ್ಚಿಯಾಗಿದ್ದ ಸಿಗರೇಟಿನ ಹೊಗೆಯನ್ನು ದಮ್ಮುಕಟ್ಟಿ ಸೇದಿದನು (ಪುನರು. ೩೭೪). ೨. ಗೂರಲು ರೋಗ ಅಂಟು: ದಮ್ಮುಕಟ್ಟಿಕೊಂಡು ಹಮ್ಮು ಕಳಕೊಂಡ (ಗಾದೆ). [ ದಮ್ಮು + ಕಟ್ಟು$_1$ ]

**ದಮ್ಮುಗೊಳ್ಳು** (ಕ್ರಿ). ಉಬ್ಬಸ ಹತ್ತು; ಶ್ವಾಸರೋಗ ಹಿಡಿ: ಮದನ ಬಾಣಂಗಳ ಪೆಟ್ಟಿಗೆ ದಣಿದು ದಮ್ಮುಗೊಂಡಿರುವವನಂತೆ ಉಸುರುಗಳು ಬಿಡುತ (ಸೌಗಂಧಿ. ೦೯೯-೧). [ ದಮ್ಮು$_2$ + ಕೊಳ್ಳು$_1$ ( <ಕೊಳ್$_1$) ]

**ದಮ್ಮುದಿಮ್ಮನೆ** (ಅ). ಒಂದು ಅನುಕರಣಾವ್ಯಯ: ಭಕ್ತನ ಬರವಿಂಗೆ ಮಂಚವನಿಳಿಯದ ಕಾರಣ ದುಮ್ಮುದಿಮ್ಮನೆ ಬೆನ್ನ ಬಡಿದು ಅವಿರಟ್ಟು ಗೆಲಸಕ್ಕೆ ಹೋಗಿನಾಗಿ ಎನ್ನ ತೊಡೆಯ ಕೊಯ್ದು ಕೊಂಬ (ಸರ್ವವ. ೪೭-೨೫೦).

**ದಮ್ಮುಹತ್ತು** (ಕ್ರಿ). ೧. ತೇಕು; ಏದು: ಒಂದೇ ಧಾಪಿನಲ್ಲಿ ಓಡಿಬಂದು ದಮ್ಮುಹತ್ತಿ ಬಾಯಿಂದ ನೊರೆಯ ತೆರೆಯನ್ನು ತೇಲಿಸುವ ಹಯಗ್ರೀವ ಶ್ರೇಷ್ಠನಂತೆ ಮುಸುಮುಸು ಭುಸುಭುಸುಗುಟ್ಟತೊಡಗಿದನು (ದೀಪಹ. II, ೩೪೮). ೨. ಗೂರಲು ರೋಗ ಉಂಟಾಗು: ಮೊದಲೇ ನಿತ್ರಾಣನಾಗಿದ್ದ ಮುದುಕನಿಗೆ ದಮ್ಮುಹತ್ತಿ, ಒಂದು ತಿಂಗಳಲ್ಲಿಯೇ ತೀರಿಕೊಂಡ (ರೂಢಿ). [ ದಮ್ಮು + ಹತ್ತು$_1$ (<ಪತ್ತು$_1$) ]

**ದಮ್ಮುಹೊಡೆ** (ಕ್ರಿ). ಬಾಯಿಂದ ಜೋರಾಗಿ ಎಳೆದುಕೊಳ್ಳು; ಜುರುಕಿ ಹೊಡೆ; ಸೇದು: ಕಗ್ಗತ್ತಲಿನಲ್ಲಿ ಆ ಮರದ ಬುಡದ ಕಡೆಯಿಂದ ಬೀಡಿ ದಮ್ಮುಹೊಡೆದಂತೆ ಕಾಣಿಸಿತು (ನನ್ನೂರು. ೦೯). [ ದಮ್ಮು + ಹೊಡೆ$_1$ ( <ಪೊಡೆ$_1$) ]

**ದವ್ಮೆಳೆ** (ಕ್ರಿ). = ದವಮ್ಮುಹೊಡೆ : ಅವನು ಬೀಡಿಯನ್ನು ದವ್ಮೆಳೆದು ಹೊಗೆ ಬಿಟ್ಟನು (ರೂಢಿ). [ ದವ್ಮು + ಎಳೆ$_1$ (<ಎಟಿ$_1$) ]

**ದವ್ಮೇರು** (ಕ್ರಿ). ದಮ್ಮುಬರು ; ಉಬ್ಬಸಬರು ; ಗೂರಲಾಗು : ಅವನಿಗೆ ದವ್ಮೇರಿ ಸಂಕಟಪಡುತ್ತಿದ್ದಾನೆ (ರೂಢಿ). [ ದವ್ಮು + ಏರು$_1$ (<ಏಱ್$_1$) ]

**ದಯ** (ನಾ). ಕರುಣೆ ; ಅನುಕಂಪ ; ಕೃಪೆ : ದಯವಿಲ್ಲದ ಧರ್ಮವದೆ ವುದಯ್ಯಾ ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ ದಯವೇ ಧರ್ಮದ ಮೂಲವಯ್ಯಾ (ಬಸವ. ೨೪೭) ; ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ (ಪುರಂದ. ೨-೬೧ ಪಲ್ಲವಿ) ; ದಯವಿರಬೇಕು ಸಕಲ ಪ್ರಾಣಿಗಳಲ್ಲಿ ಭಯವಿರಬೇಕು ಗುರುಲಿಂಗಜಂಗಮದಲ್ಲಿ (ಅಖಂಡೇ. ೧೩೦ ೧೧೦) ; ಬಿಂದು ನಿರ್ಣಯ ವರುಹಿದನು ಪೂರ್ಣೇಂದುಬಿಂಬನ ಪೋಲ್ವ ನಗುಮುಖದಿಂದ ಗಗನಾನಂದ ಶ್ರೀಗುರು ಕಂದನಿಗೆ ದಯದಿ (ಗಗತಾ. ೧೯ ಸೂಚನೆ) ; ಗುರುವೇ ತಮ್ಮ ದಯಕ್ಕೆ ಪಾತ್ರನಾಗಿ ಈ ಜನ್ಮವನ್ನು ನೀಗಿಕೊಳ್ಳಬೇಕೆಂದು ಇದ್ದೇನೆ (ನೀತಿಚಿಂ. IV, ೨೮). [ ಸಂ. ದಯಾ ]

**ದಯಂಗೆಯ್**, ದಯಗೆಯ್ (ಕ್ರಿ). ಕೊಡು ; ಅನುಗ್ರಹಿಸು ; ದಯಪಾಲಿಸು ; ಕರುಣೆಯಿಂದ ನೀಡು : ಸೋಮಶರ್ಮನ ದಾಯಿಗನಪ್ಪ ಸೋವಿಲನೆಂಬೊಂಗೆ ತನ್ಮಂತ್ರಿಪದವಿಯಂ ದಯಂಗೆಯ್ಯು... (ಸುಕುಮಾ. ೨-೨೯ ವ) ; ಅಗ್ನಿಭೂತಿಯುಮವರ ಬೆಂಬಟ್ಟಿಯನೆ ತಗುಳ್ದು ಪೋಗಿ . . . ಎನಗೆ ನಿಮ್ಮಡಿ ದೀಕ್ಷೆಯಂ ದಯಂಗೆಯ್ಯಿಮೆಂದು ತತ್ಕಾಳಿಕ ಕಾಲಲಬ್ಧಿಯಿಂ ಸಂವೇಗವೈರಾಗ್ಯಪರನಾಗಿ . . . ಬೇಡಿದೊಡೆ (ಸುಕುಮಾ. ೪-೩೮ ವ). **ದಯಗೆಯ್** : ದೀಕ್ಷೆಯಂ ದಯಗೆಯ್ಯಿಮೆಂದು ಬೇಡಿದೊಡೊಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು (ವರ್ಧಮಾ. ೬-೨) ; ಗೆದೆಯ ಪನ್ನೆರಡಱ ನಾಟ್ಯಾಗ್ವುಣ್ಣ ಸೀಬಳ್ಳಿಯೆಱೆಹಯ್ಯನ ಜೇಷ್ಠಪುತ್ರ ನಂಗಮ್ಮನ ಮಗ ಜೋಗಯ್ಯಂಗೆ ದಯಗೆಯ್ದು ಕೊಟ್ಟ ಸ್ಥಿತಿ (ಎಕ. VIII, ಸೊರಬ. ೪೭೬-೦೮ ; 991). [ ದಯ + ಕೆಯ್$_1$ ]

**ದಯಕಾರ** 'ದಯಕಾಱ' ನೋ.

**ದಯಕಾಱ**, ದಯಕಾರ (ನಾ). ಕರುಣಾಳು ; ದಯಾವಂತ ; ಕೃಪೆಯುಳ್ಳವನು : ನಿರನುನಾಸಿಕ ಯಕಾರಕ್ಕೆ – ಬಯಕೆ, ಬಿಯದಂ, ಬಿಯಲಂ, ದಯಕಾಱಂ (ಶಮದ. ೧೭ ಪ್ರಯೋ). **ದಯಕಾರ** : ನಿಮ್ಮ ವಾದವಾಗ್ಮಿತೆಗಳನ್ನು ಸ್ವಲ್ಪ ಸಂಕ್ಷಿಪ್ತವಾಡಿ ಅರಿಕೆಮಾಡಿಕೊಳ್ಳುವಷ್ಟು ದಯಕಾರರಾಗಬೇಕೆಂಬುದು – ಈ ಮಹಾಸಭೆಯ ಸವಿನಯಪ್ರಾರ್ಥನೆ (ಮಂತ್ರಶ. ೬೮-೧೭). [ ದಯ + – ಕಾಱ ]

**ದಯಗೆಡು** (ಕ್ರಿ). ನಿಷ್ಕರುಣೆಯಾಗು; ನಿರ್ದಯನಾಗು ; ಕ್ರೂರನಾಗು ; ಕಟುಕನಾಗು : ಎಮಗೆ ದಯಗೆಡಲಾಗದೆಲೆ ಕುಮಾರಕ (ಸಂಬಿರ. ೬-೯೩) ; ಅವಳ ಅಂಗದೆಂಜಲ ಹಾಲುಮಂ ಪೇಮಂಗಳಿಲ್ಲದೆ ಕುಡಿದರಿಂತಿದಕಂಗವಿಸಿ ದಯ[ಪಾಠಾಂ. ದಯೆ, ಮತಿ]ಗೆಟ್ಟು ಮತ್ತಾ ಹೊನ್ನ ಧೇನುವನು ಕಡಿವುತಂ (ಬಸಪು. ೫೫-೦೫). [ ದಯ + ಕೆಡು$_1$ ]

**ದಯಗೆಯ್** 'ದಯಂಗೆಯ್' ನೋ.

**ದಯದೃಷ್ಟಿ** (ನಾ). ಕರುಣೆಯ ದೃಷ್ಟಿ : ನಿನ್ನ ದಯದೃಷ್ಟಿಗೆ ಚಿತ್ತವಿಲ್ಲದಿರೆ ಮುನ್ನೇನು ಗತಿಯು ಎನಗೆ (ಪುರಂದ. ೪-೧೮ ಪಲ್ಲವಿ). [ ದಯ + ದೃಷ್ಟಿ ]

**ದಯದೋಱು** (ಕ್ರಿ). ಅನುಕಂಪೆಯನ್ನು ತೋರಿಸು ; ಕರುಣೆ ತೋರು : ಮಡದಿಯರು ನಿನ್ನ ಬಿಡದೆ ಬೇಡಲು ಕಡುದಯದೋಱದ್ದು ಎಲ್ಲಿ ಕಲಿತೆಯ್ಯ (ಪುರಂದ. ೧-೯೭-೪). [ ದಯ + ತೋಱು ]

**ದಯನೀಯ** (ಗು). ೧. ಕರುಣಾಜನಕವಾದ ; ಅನುಕಂಪನೀಯ. (ನಾ). ೨. ಕರುಣಾಜನಕವಾದುದು : ಆ ಬಡಜೀವಿಗಳ ಅವಸ್ಥೆಯು ನಿಜವಾಗಿಯೂ ದಯನೀಯವಾಗಿತ್ತು (ಅಲ್ಪವಿ. ೯). [ ಸಂ. ]

**ದಯನೀಯತೆ** (ನಾ). ಕರುಣಾಜನಕ ಸ್ಥಿತಿ : ತಂದೆಯ ದಯನೀಯತೆಯನ್ನು ಕಂಡು ಅಪ್ಪಾ ಹೊರಡೋಣ ಎಂದರು (ಕುಟ್ಯದೂ. ೫೯). [ ಸಂ. ದಯನೀಯತಾ ]

**ದಯಪಾಲಿಸು** (ಕ್ರಿ). ಅನುಗ್ರಹಿಸು ; ಕೃಪೆದೋರಿ ನೀಡು : ದಯಪಾಲಿಸೆ ಮಾತೆ ತ್ರೈಲೋಕ್ಯವಿಖ್ಯಾತೆ (ಪುರಂದ. ೪-೧೧೩-೨); ಅವರು ದಯಮಾಡಿ ಮಹಕೆ ದರಣ ಪ್ರಕಾರ ಕೊಡುಯಂತ ದಯಪಾಲಿಸಿ (ಎಕ. VIII, ಸಾಗರ. ೪೭-೪೫ ; 1646 ?) ; ನನ್ನ ಮೇಲೆ ಗುರುವಿಗೆ ದಯೆಯುಂಟಾಗಲಿಲ್ಲ ವರ ದಯಪಾಲಿಸಲಿಲ್ಲ (ಮತಸ. ೬೩) ; ನನ್ನ ಹಾರೈಕೆಯನ್ನು ದೇವರು ಇವತ್ತು ದಯಪಾಲಿಸಿದ (ಹೆಂಗಾಳ್. ೪೩೫). [ ದಯ + ಪಾಲಿಸು ]

**ದಯಮಾಡಿಸು** (ಕ್ರಿ). ೧. (ಕೃಪೆಯಿಂದ) ನೀಡು ; ಅನುಗ್ರಹಿಸು : ಸ್ವಾರ್ ಕಚೇರಿ ಬಕ್ಷಿ ಭೀಮರಾಯರಿಗೆ ದಯಮಾಡಿಸ್ದ ಯಿನಾಂ ಕೊಡಿಗೆ (ಎಕ. III, ನಂಜನ. ೭೦-೫ ; 1818) ; ೨. ಬರು ; ಆಗಮಿಸು : ಸವಾರಿಯು ದಯಮಾಡಿಸಿದರೆ ನಾನು ಕರೆದುಕೊಂಡು ಹೋಗುತ್ತೇನೆ (ದೌಲತ್. ೩೨೮) ; ಮಹಾರಾಜ ಹುಕ್ಕ ವಿದ್ಯಾರಣ್ಯರಿಗೆ . . . ಅಲಂಕರಿಸಿದ್ದ ಗುರುಪೀಠದ ಮೇಲೆ ದಯಮಾಡಿಸಬೇಕೆಂದು ವಿಜ್ಞಾಪಿಸಿಕೊಂಡನು (ನಡದಾ. II, ೯೯೯). ೩. ಹೊರಡು : ತಾವು ಊರಿಗೆ ದಯಮಾಡಿಸೋದು ಯಾವಾಗ ? (ರೂಢಿ). [ ದಯಮಾಡು + – ಇಸು$_3$ ]

**ದಯಮಾಡು** (ಕ್ರಿ). ೧. ಕರುಣೆತೋರು ; ಕೃಪೆಯಿಡು : ದಯಮಾಡೊ ದಯಮಾಡೊ ರಂಗ ದಯಮಾಡೊ (ಪುರಂದ. ೧-೩೩ ಪಲ್ಲವಿ) ; ಯಾತಕೆ ದಯಮಾಡಲೊಲ್ಲೆ ರಂಗಯ್ಯ (ಕನಕ. ೭೨-೮೩) ; ಶಶಿಪೋರನ ನಗೆಗಿಂಬಾದವನೇ ದಯಮಾಡಯ್ಯ ದಂತಾಯುಧನೇ (ಗಹೇಶ. ೧-೧೪) ; ನಾನಲ್ಪಳೆನ್ನುವ ಭಾವನೆ ಬರದಂತೆ ನನ್ನಲ್ಲಿ ದಯಮಾಡುವಂತೆ . . . ಮಾತಾಡು (ಇಂಚಾಪ. ೧೬೭-೨೩). ೨. ಕರುಣೆಯಿಂದ ನೀಡು ; ಅನುಗ್ರಹಿಸು: ಕ್ಷೇಮಮಂ ದಯಮಾಡೆನೆ ತಲ್ದುದ್ದಾಮಶಿವಭಾಪದಿ ಶರಣಾಪೊಗಲು (ಬಸಪು. ೨೩-೧೭). ೩. ಬರು ; ಆಗಮಿಸು : ತಾವು ಶುಚಿಯಾಗಿ ದಯಮಾಡಬೇಕು (ನೀತಿಚಿಂ. IV, ೧೮). ೪. ಹೊರಡು ; ಹೋಗು : ಇಲ್ಲಿ ನಮಗೆ ಆಜ್ಞಾಪಿಸುವುದನ್ನು ಆಜ್ಞಾಪಿಸಿ ಹಿಂದಕ್ಕೆ ದಯಮಾಡಬೇಕು (ಶಾಕುಂತ. ೫೫-೨೫). [ ದಯ + ಮಾಡು$_1$ ]

**ದಯವಿಡು** (ಕ್ರಿ). = ದಯದೋಱು : ನನಗೆ ದಯವಿಟ್ಟು ಸಹಾಯ ಮಾಡಿ (ರೂಢಿ). [ ದಯ + ಇಡು$_1$ ]

**ದಯಾಂಬುಧಿ** (ನಾ). ಕರುಣೆಯ ಸಾಗರದಂತಿರುವವನು; ಬಹಳ ದಯೆಯುಳ್ಳವನು: ಕಬ್ಬಿಲರ ಬಳಗ ವಿನುತಿಸುತ ಸೈಗೆಡೆದೆಡೆಗೆಡೆಗೆ ವಿನಮಿಸುತ ಬಸವಯ್ಯ ಅಭಯಾಘನ ದಯಾಂಬುಧಿಯಭಯಮಭಯವಮಾತ್ಮಶೇಖರನೆ ಎಂದುವುಂ (ಬಸಪು. ೫೯-೫೦) ; ಕಾದಿ ಮಡಿದಾತ್ಮಜರ ಶೋಕಮಂ ಮಱೆದು ಮಧುಸೂದನನಂಗೆಱಗಿದೊಡೆ ಮಗುಳಪ್ಪಿ ಸಂತೈಸುತಾ ದಯಾಂಬುಧಿ ವಿಜಯನಂ ಕರೆದು ಮೈತ್ರಿಯಿಂದಾತನಂ ಕೂಡಿಸಿದನು (ಜೈಮಿಭಾ. ೧೪-೬೦). [ ಸಂ. ]

**ದಯಾಕಟಾಕ್ಷ** (ನಾ). ಕೃಪಾದೃಷ್ಟಿ ; ಅನುಗ್ರಹ. [ ಸಂ. ]

**ದಯಾಕರ** (ಗು). ೧. ಕೃಪೆಯನ್ನು ತೋರುವ ; ಅನುಗ್ರಹಿಸುವ ; ಕರುಣೆಗೆ ಆಕರನಾದ ; ಕೃಪಾಕರನಾದ. (ನಾ). ೨. ಕರುಣೆಯ ಗಣಿಯಾದ ವ್ಯಕ್ತಿ ; ಕೃಪಾನಿಧಿ. [ ಸಂ. ]

**ದಯಾಕೂಪಾರ** (ನಾ). ಕರುಣೆಯ ಸಾಗರದಂತಿರುವವನು ; ಬಹಳ ದಯೆಯುಳ್ಳವನು : ಶ್ರೀಪರಮಗುರು ಹಲಗೆಯಾರ್ಯ ಮುಂದಾಱನೆಯದೇಪರಿಯೊಳಾ ವಿಂಶಿಕೆಯೊಳೆಂಬುದಂ ದಯಾಕೂಪಾರ ನಿರವಿಸೆಂದಾ ಕೆಂಚವೀರಾಹ್ವಯಗೆಂದನಾಚಾರ್ಯಂ (ವೀಶೈಪು. ೫-೧೭-೩). [ ಸಂ. ]

**ದಯಾಗರ್ಭ** (ನಾ). ಕರುಣೆಯುಳ್ಳವನು; ಕೃಪಾಳು: ವಿಶ್ವೋರ್ಜಿತ ಶಾಸ್ತ್ರ ಗರ್ಭಮುಮಳಾಳೋಕಂ ದಯಾಗರ್ಭಮೆಂಬೀ ವಿಖ್ಯಾತಿ ಸಮಸ್ತ ದಿಕ್ಸರಗರ್ಭಂ ನೋಟಿಬ್ಬೊಡೆಂಬನ್ನೆಗಂ ತ್ರೈವಿದ್ಯ ಶ್ರುತಕೀರ್ತಿ ದೇವನೆಸೆದಂ (ಚಂದ್ರಪು. ೧-೩೪). [ ಸಂ. ]

**ದಯಾಗುಣ** (ನಾ). ೧. ದಯೆಯಿಂದ ಕೂಡಿದ ಸ್ವಭಾವ; ಕೃಪಾಗುಣ. ೨. ಕರುಣಾಭಾವದಿಂದ ಕೂಡಿದವನು; ಕರುಣಿ. [ ಸಂ. ]

**ದಯಾದತ್ತಿ** (ನಾ). [ಜೈನ] ದಯಾದತ್ತಿ, ಪಾತ್ರದತ್ತಿ, ಸಮದತ್ತಿ ಮತ್ತು ಅನ್ವಯದತ್ತಿ ಎಂಬ ನಾಲ್ಕು ವಿಧವಾದ ದಾನಗಳಲ್ಲಿ ಒಂದು; ಸಕಲ ಪ್ರಾಣಿಗಳಲ್ಲಿ ದಯೆ ತೋರುವಿಕೆ: ದಯಾದತ್ತಿ ಮೊದಲಾದ ಚತುರ್ವಿಧ ದತ್ತಿಯಂ (ಚಾವುಂಪು. ೪೭); ದತ್ತಿಯೆಂಬುದು ದಯಾಪಾತ್ರಸಮಂ ಸಕಲಭೇದದಿಂ ಚತುರ್ವಿಧಮಕ್ಕುಮಲ್ಲಿ ದಯಾದತ್ತಿ ಯೆಂಬುದುಮನುಕಂಪೆವೆರಸನುಗ್ರಾಹ್ಯಮಪ್ಪ ಪ್ರಾಣಿಗಳ್ಗೆ ತ್ರಿ ಶು ದ್ಧಿ ಯಿನಭಯದಾನಮಂ ಕುಡುವುದು (ಚಾವುಂಪು. ೨೨೯); ಸಕಲಜೀವಂಗಳ್ಗೆ ಅನುಕಂಪಾಪೂರ್ವಕಂ ತ್ರಿಶುದ್ಧಿಯಿಂ ಅಭಯದಾನಂಗುಡುವುದು ದಯಾದತ್ತಿ (ತತ್ತ್ವಪ್ರ. ೨೮೭). [ ಸಂ. ]

**ದಯಾದರಿದ್ರ** (ನಾ). ದಯಾಭಾವದಲ್ಲಿ ದರಿದ್ರನಾದವನು; ನಿರ್ದಯಿ; ಕಠೋರನಾದವನು; ನಿಷ್ಕರುಣಿ: ಕಂಡಕಂಡವರ ಸ್ವತ್ತನ್ನು ಅಪಹರಿಸಿ ದಯಾದರಿದ್ರರಾಗಿ ಬಾಳುತ್ತಿರುವ ಹಣಗಾರರನ್ನು ಸುಲಿದು ಸುಲಿದು . . . ಬಡಬಗ್ಗರಿಗೆ ಶಕ್ತಿಮೀರಿ ಉಪಕರಿಸಬೇಕು (ಚನ್ನಬೇ. ೩೧). [ ಸಂ. ]

**ದಯಾಧಾರ** (ನಾ). ೧. ದಯೆಯನ್ನೊಳಗೊಂಡಿರುವುದು. ೨. ದಯಾಮಯಿ; ಕರುಣಿ. [ ಸಂ. ]

**ದಯಾನಿಧಿ** (ನಾ). ಕರುಣೆಗೆ ಆಶ್ರಯಸ್ಥಾನವಾದವನು: ದಯಾನಿಧಿ ಮೆಚ್ಚಿ ನಿಚ್ಚಂ ತನಗೆ ಪಡಿಯಾಗಿ . . . ಒಂದು ಹಾಗಮನೀಯಲು (ಬಸಪು. ೨೮-೬); ಕಳುಹುವುದಾ ದಯಾನಿಧಿಯಡಿಗೆ ಸಾರಿದೊಡಹುದು ಪರಮಸುಖ (ಕೌಶಿರಾ. ೨೩-೧೩); ನಾನಾ ತೆಜದಿಂದೆ ಎನ್ನ ಹುಸಿ ದಿಟವ ಮಾಡಿ ಕಾಡದಿರಯ್ಯ ನೀವು ದಯಾನಿಧಿ ಎಂದು ನಂಬಿದೆನಯ್ಯ (ಅಖಂಡೇ. ೧೩೧-೭೪). [ ಸಂ. ]

**ದಯಾಪರ** (ನಾ). ದಯೆಯುಳ್ಳವನು; ಕರುಣಾಶಾಲಿ: ಸಕಲಜೀವದಯಾ ಪರನಪ್ಪುದಜಿನರಸನಂಜದಿರೆಂದು ಗಿಡಿಗನಂ ನೋಡಿ (ಶಾಂತಿಪು. ೯-೮೯ ವ); ಕಲಿದೇವನಂ ಫಣಿ ತಿಂದು ಸತ್ತಿತು ಮತ್ತೆಯಾ ಅಯ್ಯಂ ದಯಾಪರನಾಗಿ ಅದಱ ಪ್ರಾಣವಂ ಪಡೆದು ವಂದಿಸುತ್ತಿರೆ (ಬಸಪು. ೩೩-೨೭). [ ಸಂ. ]

**ದಯಾಪರಿಣತಿ** (ನಾ). ದಯಾಪೂರ್ಣತೆ; ದಯೆ ತುಂಬಿರುವುದು: ಸುಚರಿತ್ರದೊಳ್ ದಯಾಪರಿಣತಿಯೊಳ್ ಕಳಾವಿಭವದೊಳ್ . . . ನಿನಗಾರ್ ದೊರೆ (ಪುಷ್ಪಪು. ೧-೮೧). [ ಸಂ. ]

**ದಯಾಪಾರಮಿತೆ** (ನಾ). [ ಬೌದ್ಧ ] ಸದಾಚಾರಗಳಲ್ಲಿ ಒಂದು; ಕರುಣೆಯ ತುತ್ತತುದಿ; ಕೃಪೆಯ ಪರಾಕಾಷ್ಠೆ: ಪಾರಮಿತಾ ಎಂದರೆ ಪರಾಕಾಷ್ಠೆಯು, ಅಭ್ಯಾಸಸಮಾಪ್ತಿಯೆಂದರ್ಥ. ಇದರಲ್ಲಿ ದಯಾಪಾರಮಿತಾ, ದಾನಪಾರಮಿತಾ, ಶೀಲಪಾರಮಿತಾ ಮೊದಲಾದ ಸದಾಚಾರಗಳನ್ನು ಸಂಗ್ರಹಿಸಿರುವರು (ಹಿಂದಸಾ. ೪೧).

[ ಸಂ. ದಯಾಪಾರಮಿತಾ ]

**ದಯಾಪಾರಿ** (ನಾ). = ದಯಾಪರ: ಸರ್ವಜೀವ ದಯಾಪಾರಿಯೆಂದು ಭೂತದಯಕ್ಕಿಕ್ಕುವವನ ಮನೆ ಸಯಿಧಾನದ ಕೇಡು (ಬಸವ. ೨೨೭).

[ ಸಂ. ದಯಾಪಾರಿನ್ ]

**ದಯಾಬ್ಧಿ** (ನಾ). ಕರುಣೆಯ ಸಾಗರದಂತಿರುವವನು; ಬಹಳ ದಯೆಯುಳ್ಳವನು: ದಿಟಮುದ್ಯದ್ಭಕ್ತಿಯಿಂ ತತ್ಪದಧ್ಯಾನಂಬೆತ್ತು ದಯಾಬ್ಧಿಯಂ ಘನತಪಂಗೆಯ್ದೊಚ್ಚತಂ ಮಚ್ಚಿಪೆಂ (ಶಬಶಂ. ೨-೮೯). [ ಸಂ. ]

**ದಯಾಭರಣ** (ನಾ). ಕರುಣೆಯಿಂದ ತುಂಬಿದವನು; ಕೃಪಾನಿಧಿ: ಸುರನರೋರಗನಮಿತಚರಣ ಜಯಜಯ ದಯಾಭರಣ ಜಯಜಯ . . . ದುರಿತಹರಣ ಜಯಜಯತುಜಯಾತು (ಹಚಕಾ. ೩-೬೯). [ ಸಂ. ]

**ದಯಾಮೂಲ** (ನಾ). ಕರುಣೆಯೇ ಮೂಲವಾದುದು;, ಕೃಪೆಯನ್ನು ಪ್ರಧಾನಪ್ರವೃತ್ತಿಯನ್ನಾಗಿ ಉಳ್ಳುದು: ಭವ್ಯನುಂ ಮನುಷ್ಯಭವಕ್ಕೆ ವಂದಲ್ಲಿ ಯುಕ್ತ್ಯಾಚಾರರಪ್ಪಾಚಾರ್ಯರಂ ಪೊರ್ದಿ ದಯಾಮೂಲವಪ್ಪ ಧರ್ಮಮಂ ಕೇಳ್ದು ನಂಬಿ . . . ಶ್ರಾವಕನಪ್ಪುದು (ಜೀವಸಂ. ೪-೮); ಪ್ರಾಣಹಿಂಸೆಯಂ ಮಾಡಲ್ವೇಡ ದಯಾಮೂಲಂ ಧರ್ಮಂ ಪದುಳಿಸಿ ಕೇಳ್ಮಗನೆ ಹಿತಮಿದುಭಯಭವಕ್ಕಂ (ಯಶೋಚ. ೪-೩೫). [ ಸಂ. ]

**ದಯಾರಸ** (ನಾ). ಕರುಣೆಯ ಭಾವ; ದಯೆಯ ಭಾವ: ದೊರೆಕೊಳೆ ಕಾಲಲಬ್ಧಿ ಬಗೆದಂತಿರೆ ಕೂಡೆ ಗುರೂಪದೇಶಮಾಪರಿಸೆ ಜಿನೇಂದ್ರಭಕ್ತಿ ಪೊಱಪೊಣ್ಮೆ ದಯಾರಸಮಿಂತು ನಾಡೆಯುಂ ಪರಿಕರದಿಂ ಮನಕ್ಕೆಱಿವು ಸಾರೆ . . . ದೊರೆಕೊಂಡ ದೃಷ್ಟಿವಿಭವಂ ಕಳೆಗುಂ ಖಿಲಕರ್ಮಬಂಧಮಂ (ಆದಿಪು. ೫-೩೩). [ ಸಂ. ]

**ದಯಾರಸಾರ್ಣವ** (ನಾ). ಕರುಣೆಯ ಸಾಗರದಂತಿರುವವನು; ಬಹಳ ದಯೆಯುಳ್ಳವನು: ಜಯ ವಿಮಳ ಕೇವಳಾರ್ಕೋದಯಗಿರಿವರ ಜಯ ದಯಾರಸಾರ್ಣವ (ಚಂದ್ರಪು. ೭-೭). [ ದಯಾರಸ + ಅರ್ಣವ ]

**ದಯಾರ್ಣವ** (ನಾ). = ದಯಾರಸಾರ್ಣವ: ನಾವಿಂದು ಧನ್ಯರ್ಭಕ್ತರೆಡೆಗೀ ದಯಾರ್ಣವಂ ಬಂದುದಚ್ಚರಿಯಲಾ ಬಾಂಧವರ ದರ್ಶನಂ ನಮಗೆ ಕೌತುಕ ಮಪ್ಪುದು (ಜೈಮಿಭಾ. ೭-೨೦). [ ಸಂ. ]

**ದಯಾರ್ದ್ರ** (ಗು). ೧. ಕರುಣೆಯಿಂದ ಕೂಡಿದ; ಅನುಕಂಪೆಯ. 'ದಯಾರ್ದ್ರಹೃದಯ' ಪರಾ. (ನಾ). ೨. ಕರುಣಾಮಯಿಯಾದವನು; ದಯೆಯಿಂದ ಕೂಡಿದವನು: ದೂರ್ವಾಸನು ಸ್ವಭಾವದಿಂದ ವಕ್ರನಾದವನು . . . ಆದರೂ ಅವನನ್ನು ಸ್ವಲ್ಪ ದಯಾರ್ದ್ರನನ್ನು ಮಾಡಿದೆನು (ಶಾಕುಂತ. ೪೭-೨೩). [ ಸಂ. ]

**ದಯಾರ್ದ್ರಹೃದಯ** (ನಾ). ಕರುಣೆಯಿಂದ ಕೂಡಿದ ಮನಸ್ಸುಳ್ಳವನು; ಅನುಕಂಪೆಯ ಹೃದಯವುಳ್ಳವನು: ಸಂಜ್ಞಾನಮಯಂ ದಯಾರ್ದ್ರ ಹೃದಯಂ ಸುತಪೋವಿಭವಂ ಶಿವಂಕರೋದ್ಯಾನದೊಳಿರ್ದಪಂ ಪರಿವೃತವ್ರತಿ ವೃಂದಸಭಂ ಗುಣಪ್ರಭಂ (ಚಂದ್ರಪು. ೯-೧೭); ಗೊಲ್ಲನೊಬ್ಬನು ಆ ಮಗುವಿನ ಅಳುವನ್ನು ಕೇಳಿ ದಯಾರ್ದ್ರಹೃದಯನಾಗಿ . . . ಮಗುವನ್ನೆತ್ತಿಕೊಂಡು ಮನೆಗೆ ಹೋಗಿ ಸಲಹಲೆಂದು ತನ್ನ ಸತಿಗೆ ಕೊಟ್ಟನು (ಕವಿಕ. ೯).

[ ದಯಾರ್ದ್ರ + ಹೃದಯ ]

**ದಯಾರ್ದ್ರಹೃದಯೆ** (ನಾ). ದಯೆಯಿಂದ ಕೂಡಿದ ಹೃದಯವುಳ್ಳವಳು: ಅವಳು ದಯಾರ್ದ್ರಹೃದಯೆಯಾದುದರಿಂದ ... ಅವನನ್ನು ಆತನ ದಯೆಗೆ ಪಾತ್ರನನ್ನಾಗಿ ಮಾಡಿಸುವಳೆಂದೂ ಹಿತೋಪದೇಶವನ್ನು ಮಾಡಿದನು (ಕವಿಕ. ೪೧).

[ ಸಂ. ದಯಾರ್ದ್ರಹೃದಯಾ (ದಯಾರ್ದ್ರ + ಹೃದಯ + –) ]

**ದಯಾರ್ದ್ರೆ** (ನಾ). ದಯೆಯಿಂದ ಕೂಡಿದವಳು; ಕರುಣಾಮಯಿ: ನೀನು ದಯಾರ್ದ್ರೆ, ನೀನು ನನ್ನನ್ನು ಕ್ಷಮಿಸಬೇಕು (ಶಾಂತಲಾ. ೩೩೪).

[ ಸಂ. ದಯಾದ್ರ್ರಾ (ದಯಾ + ಆರ್ದ್ರ + –) ]

**ದಯಾಲು, ದಯಾಳು** (ನಾ). ಕರುಣೆಯಿಂದ ಕೂಡಿದವನು; ಕೃಪಾಳು; ಕರುಣಿ: ನೃಪತೀ . . . ವಿಶದಶಶಧರಾಯತಕೀರ್ತೀ ವ್ಯಪಗತಭಯಾ ದಯಾಲೂ ರಿಪುವರ್ಗಮನಲೆದು ಗೆಲ್ವೆಯಾಗಾಹವದೊಳ್ (ಕವಿರಾ. ೨-೩೪). **ದಯಾಳು:** ಆ ದಯಾಳುಗಳರಸನಾ ಶೋಕೋದಧಿಗೆ ವಡಬಾಗ್ನಿ ಸಮನೆನಿಪಾದಿಯಲಿ ಷೋಡಶಮಹೀಶರ ಕಥೆಯ ವಿರಚಿಸಿದ (ಕುಮಾರವ್ಯಾ. ದ್ರೋ. ೭-೩೭); ನೀನೆ ದಯಾಳೋ ನಿರ್ಮಲಚಿತ್ತ ಗೋವಿಂದ (ಪುರಂದ. ೧-೫೮ ಪಲ್ಲವಿ);

ನೀವೆಲ್ಲರೂ ದಯಾಳುಗಳೂ ನ್ಯಾಯಪಕ್ಷಪಾತಿಗಳೂ ಆಗಿರುವುದರಿಂದ (ಮುಂಬಯಿ. ೪-೧೦೩); ದಯಾಳು ಮತ್ತು ದೂರದೃಷ್ಟಿಯುಳ್ಳಂತಹ ತಂದೆ ಭಗವಾನ್ ಚಂದ್ರರು ಮಗನ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ . . . ಇಂಗ್ಲೆಂಡಿಗೆ ಕಳುಹಿಸಿಕೊಟ್ಟರು (ಸಸ್ಯಕ. ೯೫).

**ದಯಾಳಳು** = ಕರುಣೆಯಿಂದ ಕೂಡಿದವಳು: ಶರಣು ಶರಣಾರ್ಥಿ ದಯಾಮೂರ್ತಳೇ ದಯಾಳಳೆ ಶರಣು ಶರಣಾರ್ಥಿ ಎನ್ನಕ್ಕ ಮಹಾದೇವಿ (ಸರ್ವವ. ೧೬೩-೮೨೧). [ ಸಂ. ]

**ದಯಾವಂತ** (ನಾ). ಕರುಣೆಯುಳ್ಳವನು; ಕರುಣಾಮಯ: ಅವನು ದಯಾವಂತನಾದುದರಿಂದ ಬೇಡುವವರ ಕಾಟ ಹೆಚ್ಚು (ರೂಢಿ).

[ ಸಂ. ದಯಾವತ್ ]

**ದಯಾವಂತೆ** (ನಾ). = ದಯಾರ್ದ್ರೆ: ಅನ್ತೆನಿಸಿದಾಚಭೂಪನ ಕಾನ್ತೆ ದಯಾವಂತೆ ಭಾಗ್ಯವಂತೆ ನಿತಾಂತಂ ಶಾನ್ತೆ ನಯವಂತೆ ಸತ್ಕುಳವಂತೆ ಮಹಾದೇವಿಯೆಂಬ ಪೆಸರಿಂದೆಸೆವಳ್ (ಎಇ. XX, ೧೨-೧೫; 1167).

[ ದಯಾವಂತ + -ಎ$_2$ ]

**ದಯಾವತಿ** (ನಾ). = ದಯಾರ್ದ್ರೆ: ದವಿುಸು ಭವಮಂ ಧರ್ಮಕಾರೇ ದಯಾವತಿ ಪಾರ್ವತೀ (ವೃಷವಿ. ೪-೧೨೭). [ ಸಂ. ದಯಾವತೀ ]

**ದಯಾಸಂಪನ್ನ** (ನಾ). = ದಯಾಲು: ನೀನೇ ದಯಾಸಂಪನ್ನನೋ ಕಾವೇರಿ ರಂಗ (ಪುರಂದ. ೨-೧೦೮ ಪಲ್ಲವಿ). [ ಸಂ. ]

**ದಯಾಳು** 'ದಯಾಲು' ನೋ.

**ದಯಿತ** (ಗು). ೧. ಇಷ್ಟವಾದ; ಬಯಸಿದ; ಪ್ರಿಯವಾದ. (ನಾ). ೨. ಕಾದಲ; ಪ್ರಿಯ: "ವಲ್ಲಭಃ, ದಯಿತಃ, ಪ್ರಿಯಃ—ಈ ೩ ಕೂರ್ಪವಂ" (ಹಲಾಯು. ೬೦-೨೧೨). ೩. ಪತಿ: "ನಾಯಕಂ . . . ಪ್ರಿಯನಧಿಪಂ ದಯಿತನೀಶಂ . . . ವಲ್ಲಭನೆನಲು ನೇತೃವೆನಲೊಡೆಯಂಗೆ ನಾಮಮಕ್ಕುಂ" (ಮಂಗರಾ. ೬೭-೬); ಶ್ರೀದಯಿತನ ಹರಿಗನ ಸಂಪಾದಿತ ಭುಜವೀರ್ಯ ಮಟ್ಕಿಱಿಂ ತನಗೆರ್ದೆಯೊಳ್ ಚೋದಿಸೆ (ಪಂಪಭಾ. ೧೩-೧); ಅಂತು ಕೀರ್ತಿ ಲತೆಯೆ ಮೂರ್ತಿವತಿಯಾದಂತೆಯುಂ ಸರಸ್ವತಿದೇವಿಯೆ ನಿಜರೂಪಿ ನೊಳೊಂದಿ ಬಂದಂತೆಯುಮಾತ್ಮೀಯ ದಯಿತನ ಮನಕ್ಕೆವರೆ ಸೂಟ್ಗಿ ವಂದು (ವರ್ಧಮಾ. ೧೧-೫೭ ವ); ಚಿಂತೆಯಿನ್ನೆತಂದ ದಯಿತನ ಬಳಿಯೊಳು ವಿಹಿತಮನ್ನುಗಳನು ನೆನೆದು (ಗಾಥಾಸ. ೧೫-೬೦). [ ಸಂ. ]

**ದಯಿತಾಸಂಬಂಧ** (ನಾ). ಪತ್ನಿಯ ಸಂಬಂಧ: ದಯಿತಾಸಂಬಂಧಬಂಧಂ ಭವಪರಿಣತಿ ತನ್ಮೂಲಮಿಾ ಬೇವಸಂ ನಿಶ್ಚಯಮೆಂದಾತಂ ತೊಡರ್ಪಂ ಬಿಡಿಸಿ ಕಿಡಿಸಿ ದುರ್ಮೋಹಮಂ . . . ಅಘಮಂ ಗೆಲ್ದು ನಿರ್ಮೋಹನಾದಂ (ಶಾಂತಿಪು. ೯-೧೪). [ ಸಂ. ]

**ದಯಿತೆ** (ನಾ). ೧. ಪತ್ನಿ; ವಲ್ಲಭೆ: ದಯಿತಾಸಂಬಂಧಬಂಧಂ ಭವಪರಿಣತಿ ತನ್ಮೂಲಮಿಾ ಬೇವಸಂ (ಶಾಂತಿಪು. ೯-೧೪); ರತಿಯಿಚ್ಛೆಯಿಂ ರತಿಯೆಡೆಗೆ ನಡೆಗೊಳ್ವ ಮಿಾನಕೇತನನಂತೆ ಕಾಮಂಚೇತನನಾಗಿ ನಡೆದನು ನರಾಧಿಪಂ ದಯಿತೆಯ ಸಜ್ಜೆವನೆಗೆ (ಶ್ರೀರಾಮಾ ೬೭-೩೫೪); ದಯಿತೆಯನ್ನು ಬೇಡರ ಹೆಣ್ಣೆಂದೂ ವಾಸಗೃಹವನ್ನು ಕಾರಾಗಾರದ ಪಂಜರವೆಂದೂ ರೂಪ ಕಾಲಂಕಾರವನ್ನು ವಿಸ್ತರಿಸಿದ್ದರೆ ಅತ್ಯಂತ ಅನೌಚಿತ್ಯವೊದಗುತ್ತಿದ್ದಿತು (ಧ್ವನ್ಯಾಲೋ. ೮೬ ಅಡಿಟಿ). ೨. ಕಾದಲೆ; ಪ್ರಿಯೆ: ೩. ಹೆಣ್ಣು; ಸ್ತ್ರೀ: "ರಾಮಾ . . . ದಯಿತಾ, ಪ್ರತೀಪದರ್ಶಿನೀ, ವಧೂಃ, ವಶಾ, ಯುವತಿಃ—ಈ ೨೮ ಸ್ತ್ರೀಯರ್" (ಹಲಾಯು. ೭೯-೩೨೮). [ ಸಂ. ದಯಿತಾ ]

**ದಯೆ** (ನಾ). ೧. = ದಯ: "ಅನುಕ್ರೋಶಃ, ಕೃಪಾ, ಶೂಕಂ, ದಯಾ, ಕರುಣಾ, ಘೃಣಾ—ಈ ೬ ಕರುಣಂ" (ಹಲಾಯು. ೧೨೦-೩೯); "ಕರುಣಂ ಘೃಣಂ ಕೃಪೆಯನುಕ್ರೋಶಮಾಶೂಕಮೆನಲು ದಯೆಗಕ್ಕು ನಾಮಂ" (ಮಂಗರಾ. ೧೨೯-೧೨); ಮುನ್ನಿನ ನೆಲನಂ ಕುಡುಗೆಮಗೆನ್ನರ್ ದಾಯಿಗರೆ ಮೆನ್ನರಂತಲ್ತಿಂತಲ್ತೆನ್ನರ್ ಕರುಣಿಸಿ ದಯೆಯಿಂದಿನ್ನಿತ್ತುದೆ ಸಾಲ್ಗು ಮೆಂಬರ್ (ಪಂಪಭಾ. ೯-೪೧); ಸತ್ಯ . . . ಧೃತಿ ದಯೆ. . . ಶೌಚವೆಂಬ ಯಮಾಂಗದಶಕಮಂ (ವಿವೇಕ. ೧೪೮); ತನಯ ತಿಳಿಯಾ ಬ್ರಹ್ಮಚರ್ಯವು ಕ್ಷಮೆಯು ಧೃತಿ ದಯೆ ಆರ್ಜವವು . . . ವ್ರತ ನಿಯಮ ದಶವಂಗಳ (ಗಗತಾ. ೧೧-೬೭); ಸತ್ಯ . . . ದಯೆ ಮಮತೆ—ಇವೇ ಮಾನವ ಧರ್ಮದ ಮೂಲತತ್ತ್ವಗಳು (ಧರ್ಮಸಾ ೩). ೨. ದಕ್ಷ ಪ್ರಜಾಪತಿಯ ಮಗಳು; ಧರ್ಮಪ್ರಜಾಪತಿಯ ಪತ್ನಿ. [ ಸಂ. ದಯಾ ]

**ದಯೆಗಿಡು** 'ದಯೆಗೆಡು' ನೋ.

**ದಯೆಗೆಡು, ದಯೆಗಿಡು** (ಕ್ರಿ). ಕರುಣೆಯಿಲ್ಲವಾಗು; ಕಠೋರವಾಗು; ಕೃಪೆಯಿಲ್ಲವಾಗು: ಕೋಮಳಶುಕಶಾಬಕಪ್ರಕರಮಂ ತೆಗೆದಂ ದಯೆ ಗೆಟ್ಟು ಲುಬ್ಧಕಂ (ಕಾದಂಪೂ. ೧೭೮). **ದಯೆಗಿಡು**: ನಾಟಕಮನಭಿನಯಿಸಿ ಕರಂ ಬಟಲ್ದು ನೈಪಥ್ಯಮಂ ಕಳೆಯಲ್ ಶಕ್ತಿಯಿಲ್ಲದೆ ನಿದ್ರಾಸಕ್ತರಾದೆವು ಇದರ್ಕೆ ದೇವರ್ ದಯೆಗಿಡಲ್ವೇಡಂ [ಪಾಠಾಂ. ದಯೆಗೆಯ್ಯಲ್ ಬೇಕೆಂ]ದು ಕಾಲ್ಗೆಱಗುವುದುಂ (ಪಂಚತಂ. ೧೯೬-೧೨). [ ದಯೆ + ಕೆಡು$_1$ ]

**ದಯೆಗೆಯ್** (ಕ್ರಿ). ೧. ಕರುಣಿಸು; ಕೃಪೆಮಾಡು; ಅನುಕಂಪೆತೋರು: ಶ್ರೀಮಾಜಿಗ್ಗೋಯಿನ್ದರಸರ್ ಪ್ರಭೂತುಜ್ಗ ಮರಿಯದೆಯಂ ದಯೆಗೆಯ್ದು (ಮೈಆರಿ. ೧೯೪೨, ೪೭-೧೨; 790); ಕುಲಮುದ್ದಗಾಮಿಗಾಗೆ ಅರಸರ್ದಯೆ ಗೆಯ್ದು ಪೂರ್ವ್ವಾಚಾರದ ನಾಲ್ಕೆಟ್ಟಿನೊಳ್ವೊಟ್ಟಿಸಿ ಗೆಟ್ದಿಯನಳದು ದಯೆಗೆಯ್ದು (ಎಕ. VIII, ಸೊರಬ. ೧೦-೧೧; ಸು. 800). ೨. ನೀಡು; ಕೊಡು; ಅನುಗ್ರಹಿಸು: ಭಟ್ಟಾರಾ ಎನಗೆ ದೀಕ್ಷೆಯಂ ದಯೆಗೆಯ್ಯಿಮೆನೆ (ವಡ್ಡಾರಾ. ೭೪-೧೨); ಪೊಡಮಡುವರ್ ಜೀಯೆಂಬರ್ ಕುಡು ದಯೆಗೆಯ್ಯೆಂ ಪ್ರಸಾದಮೆಂಬಿವು ಪೆಱರೊಳ್ ನಡೆಗೆಮ್ಮ ನಿನ್ನಯೆಡೆಯೊಳ್ ನಡೆಯಲ್ವೇಡೆನಗೆ ಕೆಳೆಯನ್ನೆ ರಾಧೇಯಾ (ಪಂಪಭಾ. ೨-೮೫); ಸರಸ್ವತಿಯಂದದಿಂ ಸರಸ್ವತಿ ದಯೆಗೆಯ್ಗೆ ನಮ್ಮೊಳನುಕೂಲತೆಯಿಂದಮೆ ನಿರ್ಮಳತ್ವಮಂ (ಕಾದಂಪೂ. ೨); ಪೆಂಪಿನ ಕೀರ್ತಿನಾರಾಯಣಂ ದಯೆಗೆಯ್ಗೆ ಚಾಗ ಚತುರ್ಭುಜಂ ಗರುಡಧ್ವಜಂ (ಕಾವ್ಯಾವ. ೩೫೮). [ ದಯೆ + ಕೆಯ್$_1$ ]

**ದಯೆದೊಱೆ** (ಕ್ರಿ). = ದಯೆಗೆಡು: ಕಡುಶೋಕದಿಂದೆ ತನು ರ್ಝೊಂಪಿಸಲ್ಕೆ ಸೆರೆ ಬಿಗಿದು ಕಂಬನಿಯಿಂದೆ ನನೆದಳಲ್ದೊರೆಯೊಳಾಳ್ದನುಜನಂಘೂರ್ಮಿಸುತೆ ನಿನಗೆ ದೋಷಮೆ ತಾನಿರಲ್ಕೆ ನಡೆ ಕಳುಹೆಂದರಸನೇಂ ದಯೆದೊಱೆದನೋ (ಜೈಮಿಭಾ. ೧೮-೫೯). [ ದಯೆ + ತೊಱೆ$_1$ ]

**ದಯೆಪಾಲಿಸು** (ಕ್ರಿ). ದಯಪಾಲಿಸು; ಕೊಡು: ದೇವರು ಅವರಿಗೆ ಒಂದು ತರದ ಗಿಡಗಳನ್ನು ದಯೆಪಾಲಿಸಿದ್ದಾನೆ (ಮುಂಬಯಿ. ೩-೧೧೧).

[ ದಯೆ + ಪಾಲಿಸು ]

**ದಯೆವೆರಸು$_1$** (ಕ್ರಿ). ದಯೆಯಿಂದ ಕೂಡಿರು; ಅನುಕಂಪೆಯಿಂದ ಕೂಡಿರು: ಪ್ರೀತಿಂಕರಶಂಕರವಿದ್ಯಾತಿಶಯನಿಧಾನ ನಿನ್ನ ದಯೆವೆರಸಿದತಿ ಪ್ರೀತಿಯೊಳಾನತ್ಯುತ್ತಮಜಾತಿಗಳೊಳ್ ಪುಟ್ಟಿ ಸುಖಮನುಣುತಂ ಬಂದೆಂ (ಆದಿಪು. ೫-೭೩); ಮೆಱೆವ ನಾನಾ ಬಗೆ ವಸ್ತುಗಳನು ದಯೆವೆರೆ[ರ] ಸುತೆ ಧರ್ಮಮಾರ್ಗದಲಿ ಕರೆಕರೆದಾಕ್ಷಣ ಕ್ರಯಕೀವ ಹರದರ ಸುರುಚಿರ ಗೃಹಗಳೊಪ್ಪಿದುವು (ಕಂನವಿ. ೬-೫೧). [ ದಯೆ + ಬೆರಸು$_1$ ]

**ದಯೆವೆರಸು$_2$** (ಅ). ಕರುಣೆಯಿಂದ ಕೂಡಿ; ದಯೆಯಿಂದ ಕೂಡಿ; ಅನುಕಂಪೆಯನ್ನು ಹೊಂದಿ: ನಿನ್ನ ದಯೆವೆರಸು ನೋಟ್ಟಿ ಮಹೋನ್ನತಿಯುಂ ಸತ್ಪ್ರಸಾದಮುಂ ಕಿಱುಕುಳನಪ್ಪೆನ್ನೊಂದಿಗನೊಳನುಚಿತಮಿದು (ಶಾಂತಿಪು. ೫-೯). [ ದಯೆ + ಬೆರಸು$_3$ ]

**ದಯೈಕನಿಧಿ** (ನಾ). ಕರುಣೆಗೆ ಒಬ್ಬನೇ ಆಶ್ರಯನಾದವನು; ಕೃಪಾನಿಧಿ: ಕಾನೂರ್ಗಣಮುನಿಪತಿ ವಿದ್ಯಾನಿಧಿ ಗುಣನಿಧಿ ದಯೈಕನಿಧಿ . . . ಭುವನಾನತಪದಕನಕಕಮಳನಮಳಿನಚರಿತಂ (ಶಾಂತಿಪು. ೧-೧೭). [ಸಂ.]

**ದಯ್ವ** 'ದೆಯ್ವ' ನೋ.

**ದರ$_1$** 'ದಾರ$_2$' ನೋ.

**ದರ$_2$** (ಗು). ೧. ಸ್ವಲ್ಪ; ಕೊಂಚೆ; ನಸು: ಪರಿಪೂರ್ಣಚಂದ್ರನಂ ತಿಗ್ಮರೋಚಿಯಂ ಕಲ್ಪವೃಕ್ಷಮಂ ಕ್ಷೀರಜಲಾಕರಮಂ ದರವಿಕಸದ್ವಾರಿರುಹ ಮನಾಕಾಂತೆ ನಿಶೆಯಾ ಕಡೆಯೊಳ್ ಕಂಡಳ್ (ಪುಷ್ಪಪು. ೬-೧೨೦). (ನಾ). ೨. ಕುಳಿ: "ನಿಮ್ನಂ. ಅಗಾಧಂ, ಗರ್ತಃ . . . ಕುಹರಃ, ದರಃ – ಈ ೧೫ ಕಂಟಿ" (ಹಲಾಯು. ೧೦೩-೨). ೩. ಭಯಂ; ಆತಂಕ; ಹೆದರಿಕೆ; ತಲ್ಲಣ: "ಆತಂಕಃ, ಭಯಂ, ಆಶಂಕಾ, ದರಃ, ತ್ರಾಸಃ, ಸಾಧ್ವಸಂ–ಈ ೬ ಭಯಂ" (ಹಲಾಯು. ೧೨೦-೪೦); "ಸಾಧ್ವಸಮೆನಲ್ ತ್ರಾಸಮೆನೆ ದರವಮದಾತಂಕ ಮಾಶಂಕೆಯೆಂದೆನೆ ಭಯಂ" (ಮಂಗರಾ. ೧೨೪-೯); ಈ ದರವ ಬಿಟ್ಟವ ನೊಳಾದರವ ಮಾಡು (ಮಲ್ಲಾರಿ. ೯-೨೨); ಗಿರಿಗಳ ಕಂದರಗಳ . . . ವಕ್ರಪಥಗಳ ದರ ಸುಂದರ ಶಮಕರ ರೂಪಂಗಳನರಿವೊಡೆ ನೀಂ ನಡೆದು ನೋಡು ಕೊಡಗಿನ ಬೆಡಗಂ (ನಿವೇದ. ೨೦-೭); ನಿನ್ನ ಮಾನಸವು ದರವ ಪಟ್ಟಿರ್ದಾದರೇ ನೀನಿರದೆ ಕರಗಳ ಮುಗಿದು ಬೇಗನೆ ಶರಣು ಬಂದರೆ ನಿನ್ನ ಪ್ರಾಣಗಳನ್ನು ಪೊರೆಯುವೆನು (ರಘುವಂ. ೧೧-೭೮). ೪. ಶಂಖ: ಸಂಗತಗಳಿಂದ ಚಾಮರಂಗಳಿಂ ದರಗಳಿಂ ಭಂಗಬಾರದ ರಣ ಶಪಥಗಳಿಂ ರಥಗಳಿಂ ಸುರಪತಿಯ ಬಲವೆಸೆದುದು (ಮಲ್ಲಾರಿ. ೬-೨೬). ೫. ತೊರೆ; ಹೊನಲು. ೬. ಒಂದು ಬಗೆಯ ಸಸ್ಯ; ಒಂದಂ ವಿಷವೃಕ್ಷ: "ದರಂ ವತ್ಸನಾಭಿ" (ಒಷಧಿ. ೭೩). [ಸಂ.]

**ದರ$_3$** (ನಾ). ಸರಕಿನ ನಿಗದಿಯಾದ ಬೆಲೆ,-ಕ್ರಯ: ನಡೆಯಲು ಒಂದು ದರವು ಗೊತ್ತಾಗುತ್ತದೆ (ಮುಂಬಯಿ. ೫-೨೯೦); ವರ್ತಕನ ಸಂಗಡ ಒಳ್ಳೆ ಮಾತುಗಳನ್ನಾಡುತ್ತಾ ಕೂತುಕೊಂಡು ದರ ಹತ್ತು ಸೇರಿನ ಮೇರೆಗೆ ಒಂದು ಹಣದ ಉದ್ದು (ಕಥಾಮಂ. IV, ೧೪). [←ಹಿಂ. ಮರಾ. ದರ್]

**ದರ$_4$** (ನಾ). ಪ್ರತಿಯೊಂದು. 'ದರಸಾರೆ' ಪರಾ. [← ಮರಾ. ದರ್]

**ದರ$_5$** (ನಾ). (?): ಸಂಬಳ ಹಾಗ ಅನ್ನು ದರವನು × × × ಪಡಿ ತೆರುವರು (ಎಕ. IX, ಕಾನಕಾ. ೧೧೧-೨೬; 1306 ?). [?]

**ದರಕಟ್ಟು** (ಕ್ರಿ). ಬೆಲೆ ನಿರ್ಣಯಿಸಂ; ಕ್ರಯಕಟ್ಟು: ದರಕಟ್ಟಿ ನಾನು ಅದನ್ನು ಅವಳಿಗೆ ಹಿಂತಿರುಗಿ ಕೊಟ್ಟೆನು (ಕಮಕ. ೩೭). [ದರ$_3$+ಕಟ್ಟು$_1$]

**ದರಕದಾರ** (ನಾ). ಸರ್ಕಾರದ ಉನ್ನತಾಧಿಕಾರಿ: ಬೇರೆ ಬಹು ಜನ ಸಂಸ್ಥಾನಿಕರು, ಸರದಾರರು, ದರಕದಾರರೇ ಮೊದಲಾದವರು ಕಟಾಂಜನದ ಹೊರಗೆ ನಿಂತುಕೊಂಡಿದ್ದರು (ಸತ್ಯಸಾ. ೪೪). [←ಮರಾ. ದರಕದಾರ್]

**ದರಕಾರ** 'ದರಕಾರು' ನೋ.

**ದರಕಾರು,** ದರಕಾರ (ನಾ). ೧. ಅಗತ್ಯ; ಜರೂರು. ೨. ಲಕ್ಷ್ಯ; ಪರಿವೆ; ಗಮನ; ಎಚ್ಚರ: ವಕೀಲರು . . . ಇಲ್ಲಿಂದ ಕಚೇರಿಗೆ ಕರೆದೊಯ್ದು ಒಂದು ರೂಪಾಯಿ ದರಕಾರಿಲ್ದ ಚಲ್ಲಾವರಿ (ರಕ್ತಧ್ಮ. ೧೯೭); ದಪೇದಾರುಗಳು ಅಂದ್ರೇ ಅವನಿಗೆ ದರಕಾರೇ ಇಲ್ಲ (ಬೆಂಗಬ. ೨೭); ತಮ್ಮ ಮಾತಿನ ದರಕಾರೇ ಇಲ್ಲದವಳ ಹಾಗೆ ಜಗಲಿಯ ಮೆಟ್ಟಲುಗಳನ್ನು ಏರುತ್ತಿದ್ದಾಗ (ಮೂರುದಾ. ೨೭). **ದರಕಾರ:** ೨. ಹೊರಟಿತ್ತು ಹಕ್ಕಿಗಳ ಗುಂಪಿನಲಿ ಎದೆಬಿರಿವ ಘೋರ ಚೀತ್ಕಾರ ತೆರೆಗಳಿಗೆಲ್ಲಿ ಅದರ ದರಕಾರ? (ಚಂದ್ರಮೂ. ೪೮-೧೧); ಯಾರ ದರಕಾರವೂ ನಿನಗಿಲ್ಲ ಗಾಳಿ – ನೀ ಗೂಳಿ ಗಾಳಿ! (ಕರುಶ್ರಾ. ೬೩-೫); ಸ್ಕೌಟ್‌ಮಾಸ್ತರರು ದರಕಾರವಿಲ್ಲದೆ ಎತ್ತಿಕೊಂಡು ದುಡುದುಡು ನಡೆಯುತ್ತಿದ್ದರು (ವ್ಯನಿ. ೨೫೭). ೩. ಸಂಬಂಧ; ಗೋಜು: ಈ ವಾಗಣೆ ಎರಡು ನಮ್ಮದು ನಿಮಗೆ ದರಕಾರ ಇಲ್ಲಾ. ಇದರ ತಳ್ಳಿ ನೀವು ಬರುವ ಕೆಲಸವಿಲ್ಲಾ (ರಾಜೇಂದ್ರ. ೯೨). ೪. ಕಾಳಜಿ: ಹಸಿದವರಿಗೆ ತುಂಬಾ ದರಕಾರ ಮಾಡಿದೆ ಸರಕಾರ (ಅರರೋ. ೩೭). [←ಪಾರ. ಹಿಂ. ಮರಾ. ದರ್‌ಕಾರ್]

**ದರಕು** 'ತರಕು' ನೋ.

**ದರಕುದನಿ** (ನಾ). ಒರಟುಧ್ವನಿ; ಗಡಸು ಸ್ವರ; ಗರ್ಗರಧ್ವನಿ: (೬). [ದರಕು (<ತರಕು) + ದನಿ$_1$]

**ದರಖಾಸ್ತ್** 'ದರಖಾಸ್ತು' ನೋ.

**ದರಖಾಸ್ತು,** ದರಖಾಸ್ತ್, ದರ್ಕಾಸ್ತ್, ದರ್ಖಾಸ್ತ್, ದರ್ಖಾಸ್ತು (ನಾ). ೧. ಅರ್ಜಿ; ಮನವಿಪತ್ರ; ಬೇಡಿಕೆ: ಒಬ್ಬರ ದರ ಇನ್ನೊಬ್ಬರಿಗೆ ಗೊತ್ತಾಗದಂತೆ ಧನಾಧಿಕಾರಿಗಳಿಗೆ ದರಖಾಸ್ತು ಸಲಿಸುತ್ತಾರೆ (ಹಣಪ್ರ. ೨೧೭); ಆ ಗ್ರಾಮದ ರೈತರೇ ಆಗಲಿ ಸಮೀಪದ ಗ್ರಾಮದ ರೈತವಗ್ಯೆರೇರು ಆಗಲಿ ದರಖಾಸ್ತು ಮಾಡಿದಲ್ಲಿ ಅದಕ್ಕೆ ಸಹ ಆಮಿಲಾ ಶಿರಸ್ತೆದಾರರ ರುಜುವಿನಿಂದ ಶ್ರಯಪಟ್ಟಿ ಬರೆದು ಕೊಡುವ ಕಾಯಿದೆ ತಪ್ಪೀಲು (ಮಹಾವಂ. II, ೬೦); ನೀನು ಹೊಲಗದ್ದೆಗೆ ದರಖಾಸ್ತು ಮಾಡಿದರೆ **ಅವೂ** ಸಿಕ್ಕುತ್ತೆ (ಕಲನೆ. ೧೪೭); ಏನೋ ಒಂದು ದರಖಾಸ್ತಿನಂತೆ ಬಂಜರು ಸ್ಥಳದಲ್ಲಿ ಅಗಳು ತೋಡಿ ಸಣ್ಣ ಮನೆ ಕಟ್ಟಿದ್ದ (ಚಿಗುಬ. ೩೭). **೨.** ಸಾಗುವಳಿ ಮಾಡಲು ಸರ್ಕಾರದವರು ಕೊಡುವ ಭೂಮಿಗಾಗಿ ತೆರುವ ಹಣ; ದರಖಾಸ್ತು ಭೂಮಿಗೆ ತೆರುವ ಬೆಲೆ: ಕಂದಾಯವನ್ನು ಪೋಟಾಪೋಟ ಮಾಡಿ ಹೆಚ್ಚು ದರಖಾಸ್ತಿಗೆ ಒಪ್ಪಿಕೊಂಡವರಿಗೆ ಭೂಮಿಯನ್ನು ಸ್ವಾಧೀನಪಡಿಸುತ್ತಿದ್ದರು (ಚಾಮುವಂ. ೩೩೯). **ದರಖಾಸ್ತ್:** ೧. ಜಮೀನನ್ನು ಸಾಗುವಳಿ ಮಾಡಲು ಅರ್ಜಿ; ಸಲ್ಲಿಕೆ; ಬೇಡಿಕೆ (ಶ್ರೀಸಗ. II, ೫೪೭). **ದರ್ಕಾಸ್ತ್:** ೩. ಸಾಗುವಳಿ ಮಾಡಲು ಸರ್ಕಾರದವರು ಕೊಡುವ, ಇನ್ನೂ ಸಾಗುವಳಿಯಾಗದಿರುವ ಸರ್ಕಾರೀಭೂಮಿ: ಈ ಸಾಮ್ರಾಜ್ಯದ ವಿಚಾರದಲ್ಲಿ – ಕಾನ, ಬಾಣೆ, ಕುಮುಕಿ, ದರ್ಕಾಸ್ತ್, ತೋಡು, ಕೆರೆ ಇವುಗಳ ವಿಸ್ತೀರ್ಣಗಳೆಲ್ಲ ಬಾಯಿಪಾಠ (ಕರುಕ. ೭). **ದರ್ಖಾಸ್ತ್:** ೩. ನಿನಗೆ ಹತ್ತೆಕ್ರೆ ದರ್ಖಾಸ್ತ್ ಕೊಡಿಸುತ್ತೇನೆ (ಚಿಂಗೂಲಿ. ೧೪೧). **ದರ್ಖಾಸ್ತು:** ೧. ಸರಕಾರ ಹರಿಜನರಿಗೆ ಕೃಷಿಮಾಡಲು ದರ್ಖಾಸ್ತಿಗೆ ಸ್ಥಳ ಕೊಡುತ್ತಿದೆ (ಮಣ್ಣನಂ. ೧೫). [← ಹಿಂ. ಮರಾ. ದರಖಾಸ್ತ್; ಪಾರ. ದರಖ್ವಾಸ್ತ]

**ದರಖಾಸ್ತುದಾರ** (ನಾ). ಅರ್ಜಿದಾರ; ಮನವಿಮಾಡಿಕೊಳ್ಳುವವನಂ: "ಬೇಡುವವನು; ಕೇಳಿಕೊಳ್ಳುವವನು; ಮಂಗವೇಗಾರ; ಅರ್ಜಿದಾರ; ದರಖಾಸ್ತುದಾರ" (Applicant. ೩೦ಕನಿ). [ದರಖಾಸ್ತು + –ದಾರ$_4$]

**ದರಗ** 'ದರಗಾ' ನೋ.

**ದರಗಂಡಕಳ್ಳ** (ನಾ). ಅನುಭವಿಯಾದ ಕಳ್ಳ; ಚೋರತನದಲ್ಲಿ ಗಟ್ಟಿಗನಾದವನು: ದರಗಂಡ ಕಳ್ಳನೊಡನೆ ಹೇಳುವ ಹಾಗೆ ಈ ತಂದೆಯಾದ ಸಬ್ ಇನ್ ಸ್ಪೇಕ್ಟರರು ಹೊಟ್ಟೆಯ ಮಗನನ್ನು ಗದರಿಸಿದರು (ರಂಗರೋ. ೧೩೦). [ದರಗಂಡ ? + ಕಳ್ಳ$_1$]

**ದರಗಾ,** ದರಗ, ದರಗಾಹ, ದರ್ಗಾ (ನಾ). ಮುಸಲ್ಮಾನ ಸಂತರ ಸಮಾಧಿಯಿರುವ ಪವಿತ್ರಸ್ಥಳ: ಕೊಲ್ಲಾಪುರ ಗೆಝೆಟಿಯರ್ ಪ್ರಕಾರ ಪೀರಾಸಾಹೇಬರ ದರಗಾ ೧೪೯೧ರಲ್ಲಿ ಕಟ್ಟಲ್ಪಟ್ಟಿತು (ಶರಜ. ೬೩೦); ಖಾಜಾ ಅಬ್ಬಾಸಪೀರನ ದರಗಾದಲ್ಲಿಯು, ಗೋರಿಗೆ, ರಾವಜೀಕಾಕಾ ಉರುಸಿನ ವೇಳೆಗೆ ಹರಿತ ವಸ್ತ್ರ ಪರಿಧಾನಮಾಡಿ (ದೀಪಹ. I, ೧೪೪). **ದರಗ:** ದರಗ (ಮೈಎರಿ. ೧೯೩೪, B. ೧೫೫; 1759). **ದರಗಾಹ:** ಮಾಂನ್ಯವಾಗಿ ದರಗಾಹದ ಧರ್ಮಕ್ಕೆ (ಶಾಇಎ. ೧೯೩೪, ಸೇಲಂ. ೦೫೫-೨೦; 1759). **ದರ್ಗಾ:** ಅವರು ಖಿಡೇಬಜಾರವನ್ನು ಸುತ್ತಿ ದರ್ಗಾದ ಹಾದಿಯಲ್ಲಿರುವ ತಯಾರೀ ಅರಿವೆಗಳ ಅಂಗಡಿಗಳನ್ನು ದಾಟಿ . . . ಪಲ್ಲೆಯ ಪೇಟೆಗೆ ಬಂದರು (ರಕ್ತಧ್ಮ. ೨೨); ಬೆಳಗಾವಿಯ ಕಿಲ್ಲೇದಾರನಾದ ಅಸದ ಖಾನನ ಗೋರಿಯು ಈ ದರ್ಗಾದಲ್ಲಿರುತ್ತದೆ (ಬೆಳವ. ೭೦). [←ಪಾರ. ಹಿಂ. ದರಗಾಹ್; ಮರಾ. ದರಗಾ, ದರ್ಗಾ]

**ದರಗಾಹ** 'ದರಗಾ' ನೋ.

**ದರಗು**$_1$ 'ತಱಗು' ನೋ.

**ದರಗು**$_2$ 'ತರಕು' ನೋ.

**ದರಗುನಾಲಗೆ** (ನಾ). ಒರಟಾದ ನಾಲಗೆ ; ನಯವಾಗಿರದ ಜಿಹ್ವೆ : ಕರು ಪುಳಕಿತವಾಗಿ ಅವರ ಕಿವಿಗಳನ್ನು ಕೆನ್ನೆಗಳನ್ನು ತನ್ನ ಹಿತವಾದ ದರಗು ನಾಲಗೆಯಿಂದ ನೆಕ್ಕಲು ಪ್ರಾರಂಭಿಸಿತು (ಸಂಸ್ಕಾರ. ೯೭). [ ದರಗು$_2$ (<ತರಕು) + ನಾಲಗೆ ]

**ದರಚಾಗಾ** (ನಾ). ಮೊಕ್ಕಾಂ (?) : ತಾರೀಖು ೯ನೇ ಜೂನ್ ಸನ್ ೧೯೨೬ನೇ ಇಸವಿ ದರಚಾಗಾ ಬೆಂಗಳೂರು (ಗುರುದ. ೧೦). [ ? ]

**ದರಜವಾಬು** (ನಾ). ಲಿಖಿತ ಜವಾಬು ; ಬರೆದು ಕಳಿಸಿದ ಉತ್ತರ : ಬರದು ಕಳುಹಿದಲ್ಲಿ, ಅದಕ್ಕೆ ದರಜವಾಬಾಗಿ . . . ಬರದು ಕಳುಹಿದ ಕಾಗದದಲ್ಲಿ (ರಾಜೇಂದ್ರ. ೬೦) ; ಇದಕ್ಕೆ ಬದಲು ದರಜವಾಬು ಜ್ಯೇಷ್ಠ ಶು. ೩ರಲ್ಲು ಮಹಾರಾಜರವರು ಬರದ ಕಾಗದದ ವಿವರ (ರಾಜೇಂದ್ರ. ೧೮೯). [ ←ಪಾರ. ದರ್ಜವಾಬ್ ]

**ದರಜು** 'ದರದು' ನೋ.

**ದರಣ**$_1$, ದಣ್ಣ (ನಾ). ಒಂದು ವರಹದ ಕಾಲು ಭಾಗ: ಅವರ ದಯಮಾಡಿ ವರಹಕೆ ದರಣ ಪ್ರಕಾರ ಕೊಡುಯಂತ ದಯಪಾಲಿಸಿ (ಎಕ. VIII, ಸಾಗರ. ೪೬-೪೪ ; 1646 ?) **ದಣ್ಣ** : ದಿನಕ್ಕೊಂದು ದಣ್ಣದ (ಒಂದು ರೂಪಾಯಿ) ಹುದ್ದೆಗಳು ಯಾವಾಗಲೂ ತೆರವಾಗಿರುತ್ತಿದ್ದವು (ಬೆಳುಮ. ೧೬೫). [ <ಸಂ. ಧರಣ = ಹದಿನಾರು ಮಾಷಗಳ ತೂಕ ]

**ದರಣ**$_2$ (ನಾ). ಸೀಳುವಿಕೆ ; ಒಡೆಯುವಿಕೆ ; ಹರಿಯುವಿಕೆ. [ ಸಂ. ]

**ದರದಟ್ಟಿ** (ನಾ). ೧. ಹೊಟ್ಟೆಗಿಲ್ಲದ ಗತಿಕಸ್ಥಿತಿ; ಕಡುದರಿದ್ರಾವಸ್ಥೆ : ಅಂದಿಗೆ ಆ ಬಟ್ಟೆ, ಇಂದಿಗೆ ಈ ಬಟ್ಟೆ, ಮುಂದಕ್ಕೆ ದರದಟ್ಟಿ ಇನ್ನೆಂದು ಹೊಟ್ಟೆ ತುಂಬ ಹಿಟ್ಟ ಹಾಕಿದ್ದೀಯೆ ? (ಮುಸುಗ. ೧೧೫). ೨. ನಿರ್ಗತಿಕ; ದರಿದ್ರ: ಅವನೊಬ್ಬ ದರದಟ್ಟಿ, ಅವನಿಗೆ ಹೆಣ್ಣು ಕೊಡೋದೆ ? (ರೂಢಿ). [ ? ]

**ದರದರ**$_1$ 'ದಱದಱ' ನೋ.

**ದರದರ**$_2$ (ಅ). ೧. ಒಂದೇ ಸಮನೆ ; ಏಕ ಪ್ರಕಾರವಾಗಿ: ಕಣ್ಣುಗಳಿಂದ ದರದರ ಧಾರೆ ಸುರಿಯುತ್ತದೆ (ದೇವೀಜಾ. ೭). ೨. ಬೇಗಬೇಗನೆ ; ಸರಸರನೆ ; ಶೀಘ್ರವಾಗಿ : ಪೆಟ್ಟಿಗೆಗಳನ್ನು ದರದರ ಎಳೆದು ಸೆಕೆಂಡ್‌ಕ್ಲಾಸ್ ಗಾಡಿಯೊಂದರಲ್ಲಿ ದಬ್ಬಿದರು (ಸ್ವಾಮಿಸ್ನೇ. ೨೧೫). [ <ದಱದಱ ]

**ದರದರನೆ** 'ದಱದಱನೆ' ನೋ.

**ದರದಳಿತ** (ಗು). ಸ್ವಲ್ಪ ಅರಳಿದ ; ನಸು ತೆರೆದ; ತುಸು ಬಿರಿದ; ಕೊಂಚ ವಿಕಸಿತವಾದ: ದರದಳಿತಕಮಲಕುಟ್ಮಳಪರಿಮಳವೆನಿಸಿರ್ದ ಸಹಜಮುಖ ಸೌರಭಮಂ (ಕಾದಂಪೂ. ೪೨೦) ; ಸುರಪತಿಜಿನಪತಿಪದಮಂ ದರದಳಿತಲತಾಂತಮಾಳೆಯಿಂದರ್ಚಿಸಿದಂ (ಮಲ್ಲಿಪು. ೧೨-೧೬೦) ; ದರದಳಿತಾಂಬುಜಾನನದೊಳೊಪ್ಪುವ ಕತ್ತುರಿಬೊಟ್ಟಿನಂತೆ ಸಾರ್ದಿರಲಳಿತೊಟ್ಟ ಮುತ್ತುಗಳಿವೆಂಬಿನವೊಪ್ಪಿರೆ ಸೀಕರಾಳಿ . . . ಪೊಚ್ಚ ಪೊಸವೆಣ್ಣಲೆ ಸಿಂಗರವಾಂತು ತೋಱದಳ್ (ರಾಜಶೇ. ೨-೭). [ ದರ$_2$ + ದಳಿತ (= ದಲಿತ) ]

**ದರದಿನ** (ನಾ). ಪ್ರತಿದಿವಸ : ನಮ್ಮ ಲುಕಸಾನಿಯಾಗುವದು ಮುಂತಾದ ಪ್ರಕಾರದ ಟಪಕೆಗಳು ದರದಿನ ಪತ್ರದಲ್ಲಿ ಬರಿಯುತ್ತಾರೆ(ಮುಂಬವ್ಯಾ. ೨೩೦). [ ದರ$_4$ + ದಿನ ]

**ದರದು**, ದರಜು, ದರ್ದು$_2$ (ನಾ). ೧. ಅವಸರ ; ಗರಜು ; ಅಗತ್ಯ ; ಅವಶ್ಯಕತೆ : ಏನ ಮಾಡತೀರಿ ತೊಗೊಂಡು ಮಾಡಿಕೊಂಡ ಗಂಡಗ ಸಿಕ್ಕಂಗ ಅನ್ನವರಿಗೆ ನಮ್ಮಂಥವರ ದರದ ಎಲ್ಲಿದ, ಅನ್ನಬೇಕ ? (ಕಾಗೆಕ. ೧೦೭) ; ಪಂಚಭೂತಗಳು ವರದರಾಗಿರಬಹುದು. ಆದರೆ ನಮಗೆ ವರವನ್ನು ಕೇಳುವ ದರದು ಬೇಕಲ್ಲ (ಶಿಲ್ಪನಾ. ೪); ದೇವರಾಣೆಗೂ ನಿಮ್ಮ ಚಂಡಾಲಮಿತ್ರನೇ ಅಲ್ಲವೇ ಈ ಕೆಲಸ ಮಾಡಿರೋನು ? ಇನ್ನು ಯಾರಿಗೆ ಹೀಗೆ ಮಾಡಬೇಕೂಂತ ದರದು ? (ಉಮಾಶಿ. ೧೨೭) ; ನನಗೇನು ಅಂಥ ದರದು (ಚಂದತೋ. ೧೯೫). ೨. ಗಮನ ; ಎಚ್ಚರಿಕೆ ; ಯೋಚನೆ : "ದರದು – ಕಾಳಜಿ" (ಜಾನಕೋ. ೪). **ದರಜು** : ೨. ಅಪನವರ ಮಾತೆಂದರೆ, ಕಾಕಾಅವರಿಗೆ ಬ್ರಹ್ಮವಾಕ್ಯ. ಆದರೆ ಶ್ಯಾಮರಾಯನಿಗೆ ಅದರ ದರಜಿರಲಿಲ್ಲ(ದೀಪಹ. II, ೧೧೦). **ದರ್ದು**$_2$: ೧. ನಂಗೇನು ಗೊತ್ತು ಅದರ ದರ್ದ ? (ಮಲಿಮ. ೩೦೩). [ ←ಪಾರ. ಹಿಂ. ದರ್ದ್; ಮರಾ. ದರದ್, ದರ್ದ್ ]

**ದರದುರ** 'ಧರಧುರ' ನೋ.

**ದರದುಹುಂಡಿ** (ನಾ). ಅಗತ್ಯವನ್ನು ಪೂರೈಸಲು ಕೊಟ್ಟ ಹುಂಡಿ: ಒಬ್ಬನ ದರದು ನಿಮಿತ್ತವಾಗಿ ಅವನಿಗೆ ಹಣ ದೊರಕಿಸಲು ಕೊಟ್ಟ ಹುಂಡಿ; ದರದುಹುಂಡಿ (Accommodation Bill. ಇಂಕಣಿ). [ ದರದು + ಹುಂಡಿ$_2$ ]

**ದರನಿಮೀಲಿತ** (ಗು). ನಸುಮುಗಿದ ; ಸ್ವಲ್ಪಮುಚ್ಚಿದ : ಸುರತಸೌಖ್ಯದೊಳ್ ಸತಿ ದಿಗಂಬರವೇಷಮನಾಂತು ಮುಕ್ತಕೇಶಮದೆಸೆಯಲ್ಕೆ ಕಣ್ ದರನಿಮೀಲಿತಮಾಗೆ . . . ಯೋಗಿನಿಯಂತಿರೊಪ್ಪಿದಳ್ (ಕಾವ್ಯಸಾ. ೬೭೫). [ ದರ$_2$ + ನಿಮೀಲಿತ ]

**ದರನಿಮೀಲಿತಲೋಚನ** (ನಾ). ಸ್ವಲ್ಪ ಮುಚ್ಚಿದ ಕಣ್ಣು; ನಸು ಮುಗಿದ ಕಣ್ಣು : ತನ್ನ ಕಣ್ಗಳನರೆದೆಱೆದು ದರನಿಮೀಲಿತಲೋಚನ ಕಮಲಾಕರಮಿರ್ಪಂತೆಯಿರ್ದ ಶಂತನುತನೂಜನ ಕರ್ಣಾಭ್ಯರ್ಣಮಂ ಪೊರ್ದಿ (ಗದಾಯು. ೫-೪೦ ವ). [ ದರನಿಮೀಲಿತ + ಲೋಚನ ]

**ದರನಿಮೀಲಿತಾಂಬಕ** (ನಾ). ನಸು ಮುಚ್ಚಿದ ಕಣ್ಣುಗಳುಳ್ಳುದು : ಪರಮಯೋಗಿಯಿರ್ಪಂದದಿಂದಕಂಪಿತಶರೀರನಿರ್ದುದು ಜಲಾಶಯೋಪಾಂತದೊಳ್ ಬಕಂ ದರನಿಮೀಲಿತಾಂಬಕನಶೇಷದೋಷಾಶಯಂ (ಪಂರಾಮಾ. ೭-೯೧). [ ಸಂ. (ದರನಿಮೀಲಿತ + ಅಂಬಕ + –) ]

**ದರಪಣ** (ನಾ). ಕನ್ನಡಿ ; ಮುಕುರ: ಕರದ ಕಂಕಣಕೊಡ್ಡಲೇಕೈ ದರಪಣವ (ಪ್ರಹ್ಲಾಚ. ೧೦-೧೨). [ <ಸಂ. ದರ್ಪಣ ]

**ದರಬಾರ** 'ದರ್ಬಾರು' ನೋ.

**ದರಬಾರಿ** 'ದರ್ಬಾರಿ' ನೋ.

**ದರಬಾರು** 'ದರ್ಬಾರು' ನೋ.

**ದರಬಾರುಖರ್ಚು** (ನಾ). ಸಾರ್ವಜನಿಕ ಕಾರ್ಯಕರ್ತರಿಗೆ ಲಂಚವಾಗಿ ಕೊಟ್ಟ ಹಣ : (+).

[ ದರಬಾರು (<ದರ್ಬಾರು) + ಖರ್ಚು (<ಕರ್ಚು$_4$) ]

**ದರಬೇಸಿ** 'ದರವೇಶಿ' ನೋ.

**ದರಮುಹಾ** 'ದರಮಾಹೆ' ನೋ.

**ದರಮಾಹೆ**, ದರಮುಹಾ (ನಾ). ೧. ಮಾಸಿಕ ವೇತನ; ತಿಂಗಳ ಸಂಬಳ: ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ . . . ಶಬ್ದಗಳೆಂದರೆ– ಕಛೇರಿ (ಕಚ್ಚರಿ)...ದರಮಾಹೆ ; ಬೇರೀಜ್ . . . ಶಿಕ್ಕಾ ಇತ್ಯಾದಿ (ಭಾಷಾಶಾ. ೧೬೬). **ದರಮುಹಾ** : ೨. ಪ್ರತಿತಿಂಗಳಿನದು; ಪ್ರತಿಮಾಸಿಕದ್ದು : (+). [ ←ಪಾರ. ದರಮಾಹ್; ಹಿಂ. ದರಮಾಹಾ ]

**ದರಲೆ**, ದರಳೆ (ನಾ). (ಕರಾ) ತರಗೆಲೆ : ಮರದ ಹಸಿ ಅಡರುಗಳಿಂದ ಒಂದು ಗುಡಿಸುವ ಹಿಡಿ ಮಾಡಿ, ತರಗೆಲೆ ಗುಡಿಸಿದಳು. 'ಕೂತಲ್ಲೇ ಮೂರು ಬೀಳು ಹೆಡಗೆದರಲೆಯಾಯಿತು'ಎಂದು ಹಿಗ್ಗಿದಳು(ಮರಮ. ೨೭). **ದರಳೆ** : ಸರಸರ ಎಂದು ಸದ್ದು ಹುಟ್ಟಿಸುವ ದರಳೆಯ ಮೇಲೆ ಮೆಲ್ಲನೆ ಹೆಜ್ಜೆಯಿಡುತ್ತಾ . . . ಮನೆಗೆ ಹೋದ (ದೇವಹಂ. ೧೧). 'ತರಗೆಲೆ' ಪರಾ. [ <ತಱಗೆಲೆ ]

**ದರಲೆಹಕ್ಕಿ** (ನಾ). ಒಂದು ಬಗೆಯ ಪಕ್ಷಿ : ದರಲೆಹಕ್ಕಿ, ಗಿಳಿ, ಕೋಗಿಲೆ, ಡೇಗೆ, ಮತ್ತೊಂದು ಎಂದು ಸಾವಿರ ಜಾತಿಗಳಿವೆ (ಸ್ವಪ್ನಹೊ. ೧೨).
[ ದರಲೆ ? + ಹಕ್ಕಿ$_1$ (<ಪಕ್ಕಿ$_1$) ]

**ದರವಂದ** 'ದಾರವಂದ' ನೋ.

**ದರವಡೆ** 'ದರೋಡೆ' ನೋ.

**ದರವಡೆಖೋರ** 'ದರೋಡೆಖೋರ' ನೋ.

**ದರವಡೆಗಾರ** 'ದರೋಡೆಕಾರ' ನೋ.

**ದರವಾನ,** ದರ್ವಾನ (ನಾ). ಬಾಗಿಲನ್ನು ಕಾಯುವ ಆಳು ; ದ್ವಾರಪಾಲಕ : ಪಕ್ಕದಲ್ಲಿ ಹಿತ್ತಾಳಿಕಟ್ಟಿನ ಲಾಠಿಯನ್ನು ಹಿಡಿದು ದರವಾನನು ಹೋಗುತ್ತಿದ್ದನು (ನಿಬಂಧ. II, ೩೨) ; ಹೆಬ್ಬಾಗಿಲಿನ ಸಮೀಪದಲ್ಲಿ ಬೆಳ್ಳಿಯ ಬಿಲ್ಲೆ ಸೊಂಟಕ್ಕೆ ಸುತ್ತಿಕೊಂಡು ಒಬ್ಬ (ಸಿಪಾಯಿ) ದರವಾನನು ನಿಂತಿದ್ದನು (ವಿಧಿವ್ಯ. ೩೪) ; ದರವಾನನೊಬ್ಬ – ನಮ್ಮ ಹಿಂದಕ್ಕೆ ಬಂದ (ಅಬೂಬ. ೯). **ದರ್ವಾನ :** ಥಿಯೇಟರಿನ ದರ್ವಾನನಿಗೂ ಸಮವಸ್ತ್ರ (ರೂಢಿ).
[ ←ಪಾರ. ಹಿಂ. ದರ್ಬಾನ್, ದರಬಾನ್ ]

**ದರವಾರು** (ನಾ). ಪೇಟೆಯ ಧಾರಣೆಯ ವಿವರಣೆ: (ಸ್ಕಾಂಡರ್).
[ ದರ$_3$ + ವಾರು$_3$ (<ವಾರಿ$_3$) ]

**ದರವಿಕಸಿತ** (ಗು). =ದರದಳಿತ: ದರವಿಕಸಿತಮುಂ ರಜದೊಳ್ ಪೊರೆದಾತ್ಮಜ ಮುಖಸರೋಜಮಂ ಮೋಹರಸಂ ತೆರೆಮಸಗೆ ನೋಟ್ಟು ಜನನಿಯ ಕರಿಯಾಲಿಗಳೆಂಬ ತುಂಬಿಗಳ್ ಧನ್ಯಂಗಳ್ (ಮಲ್ಲಿಪು. ೩-೧೨೦).
[ ದರ$_2$ + ವಿಕಸಿತ ]

**ದರವಿಚಳದಪಾಂಗ** (ನಾ). ತುಸು ಚಂಚಲವಾಗುವ ಕಡೆಗಣ್ಣು: ಸ್ಮರವಿಶಿಖನಿಷಂಗಂ ಸಾಶ್ರುಪಾತಾಂತರಂಗಂ ದರವಿಚಳದಪಾಂಗಂ ಮ್ಲಾನಮಾಯ್ತಾ ರಥಾಂಗಂ (ಚಂದ್ರಪು. ೮-೫).
[ ಸಂ. (ದರ + ವಿಚಳತ್ + ಅಪಾಂಗ) ]

**ದರವೀಸ** (ನಾ). ಸ್ವಲ್ಪವಾದುದು ; ಅತಿಕಡಿಮೆ ; ಕಿಂಚಿತ್ತು (?) : ಕಿಱುಸುಂಕಗರಡಮಂ ಬಣ್ಣಿಗೆಯುಂ ದರವೀಸಮನಳಿಪಿಕೊಣ್ಡವ (ಬೆ.೦ಕಶಾ. ೧೯೩೮, ಇಂಡಿ. ೩೫-೩೬ ; ?). 'ತರವೀಸ' ಪರಾ. [ ? ]

**ದರವುರ** (ನಾ). ಸಾಮಾನ್ಯವಾದುದು ; ತುಚ್ಛವಾದುದು ; ಕ್ಷುಲ್ಲಕವಾದುದು : ದರವುರಮುಮಂಟಸುಂಟಿಯುಮುರೆಪೊರಕನುಮೆನಿಸಿ ತಱತಱಂ ನುಡಿದು ಸಭಾಂತರದೊಳ್ ರಂಜಿಪುದೆ ರಸಾಂತರಂಗಳಂ ಮುಟ್ಟಿ ನುಡಿದು ರಂಜಿಸವೇಡಾ (ಅಜಿಪು. ೧-೪೮) ; ದರವುರಮಲ್ಲದ ರುಜೆ ತುಚ್ಛವೈದ್ಯರಿಂ ತೀರ್ದಪುದೆ (ವರ್ಧಪು. ೧೨-೧೧) ; ಹರನೊಳ್ ತವನಿಧಿಯಂ ತಾಂ ದರವುರವಿಲ್ಲೆನಿಸಿ ಪಡೆದು ದೇಗುಲಮಂ ಪುರಹರನ ಕೈಲಾಸದಂತಿರೆ ವಿರಚಿಸಿದ ಶಂಭುಭಕ್ತಿಧಾಮಂ ರಾಮಂ (ಎಇ. V, ೨೫೨-೯೯; ಸು. 1200). **ದರವುರವಾಗು** = ಕ್ಷೀಣವಾಗು ; ಕಡಿಮೆಯಾಗು : ದರವುರ [ ಪಾಠಾಂ. ದುರದರ ]ಮಾಗಿ ಪೋಕು ಮಟಿ ಪೆರ್ವೆಳಸೆಲ್ಲಿಯುಮಾಗದು ... ಸಲೆ ದುಷ್ಷಮಕಾಲದೇಟ್ಗಿಯೊಳ್ (ಧರ್ಮಾಮೃ. ೧೪-೧೯೭). [ ? ]

**ದರವುರಂಗಾಣ್** (ಕ್ರಿ). ಸ್ವಲ್ಪವಾದರೂ ನೋಡು ; ಕಿಂಚಿತ್ತಾದರೂ ಕಾಣು: ಮನಮೊಲ್ದಾತನ ಗಾಡಿಯಂ ದರವುರಂಗಂಡಾಕೆಗಳ್ ಪೂವಿನಂಬಿನ ಕೋಳ್ಗಂ . . . ತಣ್ಬಾನಿಯೊಳ್ಕೋಡಿಸುತಿರ್ಪ ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ (ಆದಿಪು. ೧-೭೫). [ ದರವುರ + ಕಾಣ್ ]

**ದರವುರಗಲಿ** (ನಾ). ಸಾಮಾನ್ಯ ಶೂರ (?): ಆಗಳಾ ಕಳಕಳಕ್ಕಾ ಪೊಟಲ ನೆರೆದ ದರವುರಗಲಿಗಳುಂ ಮೆಯ್ಗಲಿಗಳುಂ ಭೀಮಸೇನನ ಭೀಮಾಕಾರ ಮುಮಂ ಉಲ್ಬಣಮಾಗೆ ಮುಳಿದು ತುಟಿಯೆ ಸತ್ತ ಪೆಣಂಗಳುಮಂ ಕಂಡು ಭಯಂಗೊಂಡು ತಮ್ಮೊಳಿಂತೆಂದರ್ (ನೇಮಿಪು. ೧೦-೧೧೧ ವ).
[ ದರವುರ + ಕಲಿ$_2$ ]

**ದರವುರವಿದ್ದೆ** (ನಾ). ಕ್ಷುಲ್ಲಕ ವಿದ್ಯೆ; ಅಗ್ಗದ ಜ್ಞಾನ :ಪರಮಜಿನೋದಿತಮಲ್ಲದ ದರವುರವಿದ್ದೆಗಳನಱಿವವಂ ತೋಱಿದೊಡಚ್ಚರಿಯೆನ್ನನಿವೆಲ್ಲಂ ಡೊಂಬರ ವಿದ್ಯೆಗಳಿಂದೆ ಬಗೆವನುತ್ತಮಜೈನಂ (ಸಮಪ. ೧೨-೯೧).
[ ದರವುರ + ವಿದ್ದೆ (<ಬಿಜ್ಜೆ$_2$) ]

**ದರವುರಿಗ** (ನಾ). ಅಲ್ಪನಾದವನು ; ನಾಡಾಡಿ (?) : ಅಂತು ಮಟಿಗಾಲದ ನಾಲ್ಕು ತಿಂಗಳುಂ ದರವುರಿಗರಂತರವರಿಸದೆ ಮಾರಮೊದಲೊಳಿರ್ದು (ಧರ್ಮಾಮೃ. ೧೧-೨೦೪). [ ದರವುರ + – ಇಗ ]

**ದರವೇಶಿ,** ದರಬೇಸಿ, ದರವೇಸಿ, ದರ್ವೇಸಿ (ನಾ). ೧. ಮುಸಲ್ಮಾನ ಸಾಧು; ಫಕೀರ: ಇಂತು ಜಸವಡೆದಿರಲ್ಕೋರ್ವ ದರವೇಶಿ ವಿಮಾನಂ ತಂದು (ಗುರುಚಾ. ೧೧-೧೨) ; ಇಲ್ಲಿ ಇಂಡಿಯಾದೇಶದ ದರವೇಶಿಗಳು . . . ನೆಲೆಸಿದ್ದಾರೆ (ಪ್ರವಾಇ. II, ೧೮೫). ೨. ದರಿದ್ರನಾದವನು ; ಬಡವ : ಇವನಾರೊ ಸಂನ್ಯಾಸಿ, ಅತ್ತೊಬ್ಬ ಬಿಕನಾಸಿ ಇಲ್ಲೊಬ್ಬ ದರವೇಶಿ ನರಳುತಿಹನು (ಗಂಗಾತ. ೬೦-೨). **ದರಬೇಸಿ :** ೧. ನೀವು ದರಬೇಸಿಗಳಂತೆ ಸಮಾಜದಿಂದ ದೂರವಾಗಿರಬಾರದು (ಅಕ್ಕರ. ೧೩೦). **ದರವೇಸಿ :** ೧. ಜೋಗಿ ಜಂಗಮ ದರವೇಸಿಗಳಿಗೆ . . . ಹಡಗೆ ಹೆಡಗೆಯೊಳನ್ನವನೀವ ರಾಗದ ಭವನವೊಪ್ಪಿದುವು (ಕಂಸವಿ. ೨೦-೪೭). ೨. ಕೆಡ್ವಾ ಶಾಮ್ಯೆಂಗಾರ್ಯರ ಕಾಲವನ್ನು ಮನಸ್ಸಿನಲ್ಲಿಯೇ ಮೆಚ್ಚುತ್ತಿದ್ದ ನಾನು ಈ ದರವೇಸಿಯು ಹೋಗಿಳಿದರೆ ಅದಕ್ಕೆ ಸಮ್ಮತಿಯ ರುಜು ಹಾಕಿಬಿಡುತಿರಲಿಲ್ಲ (ಶ್ರೀಕಥ. ೬೯) ; ಒಳ್ಳೆಯ ಅಡಕೆಗೆ ಎಲ್ಲಿತ್ತು ತರಗೆಲೆ: ನೆಲ್ಲಿಕಾಯಂತ ಬಟವಾನ – ಹುಡುಗಿಗೆ ಎಲ್ಲಿದ್ಯೋ ಜೋಗಿ ದರವೇಸಿ (ಹಳ್ಳಿಹಾ. ೬೧). **ದರ್ವೇಸಿ :** ೧. ಈ ಕನಸಿನಲ್ಲಿ ಅಬ್ದುಲಾಯೆಂಬ ಹೆಸರಾದ ದರ್ವೇಸಿಯು ಬರಲು, ಬಾಬರನು ಅವನಿಗೆ ಆತಿಥ್ಯ ಮಾಡಿ ಅವನನ್ನು ಕುಳ್ಳಿರಿಸಿಕೊಂಡನು (ಮೋಬಾದ. ೭). (ಗು). ೩. ದರಿದ್ರ ; ಕ್ಷುಲ್ಲಕ : ಈಗ ಅಲ್ಲಿ ಚರ್ಮ ಮಾರುತ್ತಾಳಂತೆ, ದರ್ವೇಸಿ ಹೆಂಗ್ಸು (ಹೊಸಕ್ಷ. ೫೯); "ಇಂಥಾ ದರ್ವೇಸಿ ಮನುಷ್ಯನನ್ನು ನಾ ಜನ್ಮದಲ್ಲಿ ನೋಡಿಲ್ಲ" ಎಂದರು (ಮೂರುದಾ. ೬೪).
[ ←ಪಾರ. ದರವೇಶ್, ದರ್ವೇಶ್; ಹಿಂ. ದರವೇಶ್, ದರ್ವೇಸ್; ಮರಾ. ದರವೇಶ್, ದರವೇಶೀ ]

**ದರವೇಸಿ** 'ದರವೇಶಿ' ನೋ.

**ದರಶನ,** ದರಿಶನ (ನಾ). ಹವಳದ ಮಣಿ, ಬಿಳೀಮಣಿ ಮುಂತಾದ ಮಣಿಗಳ ಸರ : ದರಶನಕಟ್ಟುವುದು – ಜೋಗಿತ್ತೀರ ಹಾಗೆ ಬಿಳೀಮಣಿ, ಹವಳದ ಮಣಿಸರ ಹಾಕಿಕೊಳ್ಳುವುದು (ಚಿತ್ರಪಾ. ೨ ಅನುಬಂಧ). **ದರಿಶನ :** ದರಿಶನ–ಚಿಪ್ಪುಗಳಿಂದ ಕೂಡಿದ ಕೊರಳಿನ ಸರ (ಸ್ಕಾಂಡರ್). [ ? ]

**ದರಸಾರೆ** (ನಾ). ಪ್ರತಿಸಲ ; ಪ್ರತಿಯೊಂದು ಬಾರಿ: ಹೋಗು ಮುಂದೆ ದರಸಾರೆ ನನಗ ಹೇಳಿ ಹೋಗುತ್ತಿದ್ದ (ಮುಂಗಿಮ. ೧೩೯).
[ ದರ$_4$ + ಸಾರೆ$_2$ (<ಸಾರಿ$_1$) ]

**ದರಸಿ** (ನಾ). ಔಷಧಿಗಾಗಿ ಬಳಸುವ ಗಿಡಮೂಲಿಕೆಗಳಲ್ಲಿ ಒಂದು ; ಒಂದು ಬಗೆಯ ಕಹಿಯಾದ ಮೂಲಿಕೆ : "ಯುವತಿಕ್ತಾ – ದರಸಿ, ಕಾಡುವಿಟ್ಟಿ" (ಒಷಧಿ. ೧೩೧) ; ದರಸಿಗೆ ಸೆಳ್ಳೆನಾರಮರ್ದುವಳ್ಳಿಗೆ ಬಾಟಿ(ಗೆ)ಯ ಸೊಪ್ಪು ಕಳ್ಳಿಗಾವರೆ ಲಶು ನದ್ವಯಕ್ಕಮರೆ . . . ಪಥ್ಯ ಲವಣಕ್ಕೆ ತೊಳೆಂಚಿ ವಿಷಾಪಹಾರಕಂ (ಲೋಕೋಪ. ೮-೨೭); ನೀಂ ಬೇಮಾದೊಡೆ ನಿನ್ನ ಕುಟುಂಬಿನಿಯುಂ ಕಯ್ಪೆಸೊರೆಯ ಕುಡಿಯೇಂ ಮಿಡಿಯೇನೆಂಬಂತೆ ದರಸಿಯಾದಳಿದೇಂ ಬಳ್ವಳಬಳೆದ ಬಂಧುತನಮಿನಿದಾಯ್ತೋ (ಸುಕುಮಾ. ೪-೨೪) ; ಕುರುಪತಿ ನಿಮ್ಮಾಜ್ಞರ ನುಡಿ ದರಸಿಯ ಕಯ್ಪೆಯ ಪೊಲಕ್ಕೆ ಹಿತಕರಂ (ನೇಮಿಪು. ೧೦-೧೧). [ ದೇ.॥ ತುಳು.ದರಸಿಗೆ ]

**ದರಸ್ಮಿತ** (ನಾ). ನಸುನಗೆ ; ಕಿರುನಗೆ ; ಮುಗುಳುನಗೆ ; ಮಂದಹಾಸ : ಅನಿಮಿತ್ತದರಸ್ಮಿತದಿಂದನಕ್ಷರಾಳಾಪದಿಂದಸಂಕೇತವಿಳೋಕನದಿಂದ ಕಾರಣಾ

ನಂದನದಿಂದುತ್ತಾನಶಯನದಿಂ ಹರಿಯಿಸೆದಂ (ಜಗವಿ. ೩-೨೯) ; ಬರುತಿರೆ ಮುಂದೆ ಪಟ್ಟಣದೆರಳ್ದೆಸೆಯೊಪ್ಪುವ ರಾಜವೀಥಿಯೊಳ್ ನೆರೆದ ಶಶಾಂಕ ವಕ್ತ್ರೆಯರ ಕಣ್ಗಳ ಕಾಂತಿ . . . ದರಸ್ಮಿತಕಾಂತಿಯೆಂಬ ವಿಸ್ತರಿತ ಸುಖಾಬ್ಧಿಯಂ ಸುಖದೊಳೀಸುತೆ ಬಂದನಗೇಂದ್ರವಲ್ಲಭಂ (ಗಿರಿಕ. ೩-೧೧೪). ೨. ನಸುನಗೆಯಿಂದ ಕೂಡಿದವನು ; ಮಂದಹಾಸದಿಂದ ಕೂಡಿದವನಂ: ದೇಶಾಧೀಶ ತನೂಭವರ್ ಸೆಡೆವುದಂ ಸಾಕೇತಸಿಂಹಾಸನಾಧೀಶಂ ಕಂಡು ದರಸ್ಮಿತಂ ದಶರಥಂ ಭ್ರೂವಲ್ಲರೀಪಲ್ಲವಾದೇಶಂ ನೋಡೆ (ಶಂರಾಮಾ. ೫-೮೩). [ ದರ್$_2$ + ಸ್ಮಿತ ]

**ದರಸ್ಮೇರ** (ನಾ). = ದರಸ್ಮಿತ ೧ : ವದನೇಂದುದ್ಯುತಿ ಪೊಣ್ಮೆ . . . ಸಾರ್ತಂದಳಿಂದೀವರಾಕ್ಷಿ ದರಸ್ಮೇರಮರೀಚಿ ಸೂಸೆ ಸುಧೆಯಂ ತನ್ಮಂದಿರ ಪ್ರಾಂತಮಂ (ರಾಜಶೇ. ೮-೮೨). [ ದರ್$_2$ + ಸ್ಮೇರ ]

**ದರಹಮೇಷ** (ಅ). ಯಾವಾಗಲೂ ; ಎಲ್ಲಾ ಕಾಲದಲ್ಲಿಯೂ : ಹಿಂದೂಸ್ಥಾನದಲ್ಲಿಂದ ಸಾವಿರಾರು ತಿಕಾಣದಿಂದ ದರಹಮೇಷ ಈ ಮೂಲವು ಬರುತ್ತದೆ (ಮುಂಬವ್ಯಾ. ೫೨). [ ದರ್$_4$ + ಹವೇಷ ]

**ದರಹಸ** (ನಾ). = ದರಸ್ಮಿತ ೧ : ಕರುಣಾಮೃತರಸದೋಕುಳಿಯಿರಾವೆಂದೆನೆ ಮೆರೆಯೆ ದರಹಸಪ್ರಭೆ ಪದೆಪಿಂ ಪಿರಿದೊಲ್ದು ನಿಂದು ಮುಂಗಡೆ ಸಿರಿಸತಿ ನಿನ್ನಿಪ್ಪವಾವುದದನೊರೆಯೆಂದಳ್ (ಚಂದ್ರಪ್ರ. ೧೬-೧೭೬).

[ ದರ್$_2$ + ಹಸ$_4$ ]

**ದರಹಸನ** (ನಾ). = ದರಸ್ಮಿತ ೧ : ಅಲಿಕಾಭಿಲಾಷಿತ್ವಾತಿಸಂಧಾನಪರತ್ವ ಪ್ರವೃದ್ಧರಾಗ ಪರಾಂಗನಾ ದರಹಸನಾದಿಗಳ್ ಸ್ತ್ರೀವೇದನೀಯದ ಆಸ್ರವಂಗಳ್ (ತತ್ತ್ವಪ್ರ. ೨೬೨). [ ದರ್$_2$ + ಹಸನ$_2$ ]

**ದರಹಸಿತ** (ಗು). ೧. ನಸುನಗೆಯ ; ಕಿರುನಗೆಯ ; ಮಂದಹಾಸದ : ಅಂಬಿಕೆಯ ಸೂಟಾಯ್ತೆಯುಪ್ಪಾಕೆ ದರಹಸಿತವದನಾರವಿಂದೆಯಾಗಿ ಬರವಂ ಕೈಕೊಂಡಳ್ (ಪಂಪಭಾ. ೧-೮೫ ವ) ; ಮರುನ್ನಂದನಂ ದರಹಸಿತವದನಾರವಿಂದನಾಗಿ (ಗದಾಯು. ೧-೫೪ ವ) ; ನಸು ಬಿರಿದ ಪರಿಪಕ್ವದಾಡಿಮವಸರದೊಳಗೆರವಟ್ಟಗೆಯ ದರಹಸಿತ ಪಂಕಜಗಳಿತ ಮಕರಂದದ ತಟಾಕದಲ್ಲಿ . . . ಛತ್ರವನೆಸಗಿಯುಪವನವೆಸೆದುದ್ಯೆ ಧಾರ್ಮಿಕನವೊಲು (ಕುವ್ಯಾಉ. ೭-೨೪). (ನಾ). ೨. ಮೆಲ್ನಗೆ ; ಮಂದಹಾಸ: ಪರುಷಾಳಾಪಮುಘುತಿ ನಿಷ್ಠುರವೀಕ್ಷಣಮುಖವಿಕಾರಮುಂ ಮಱಸಿರೆಯುಂ ತರಳಾಪಾಂಗಮುಮಾಕೆಯ ದರಹಸಿತಮುಮಱಿಯೆ ಪೇಟ್ಗುದೆ(ಮೆ)ಱಕಮನೆರ್ದೆಯೊಳ್ (ಕವಿರಾ. ೩-೧೧೯) ; ಉದ್ಯತ್ಪರಿಮಳಮುಖಸರಸಿಜದೊಳ್ ದರಹಸಿತಂ ನೆಗಟ್ವಿನಂ ತೊದಳ್ನುಡಿ ನುಡಿದಂ (ಆದಿಪು. ೮-೩) ; ಶ್ರೀಮತ್ಸುಧರ್ಮ ಮುನಿಪಸ್ವಾಮಿ ... ದರಹಸಿತದಿನಂದಾ ಮುನಿಗೆಂದಂ (ಸುಕುಮಾ. ೪-೧).

[ ದರ್$_2$ + ಹಸಿತ ]

**ದರಹಸಿತಮುಖ** (ನಾ). ಮುಗುಳಿಂನಗೆಯಿಂದ ಕೂಡಿದ ಮುಖ ; ಹಸನ್ಮುಖ : ದರಹಸಿತಮುಖವಲರಿ ನೋಡುತ್ತಿರೆ ತದಾಸ್ಥಾನದೊಳ್ ನಲಿನಲಿದುರುತರ ಪ್ರಿಯಪರವಶದಿ ತನ್ನಂ ಮಱೆದು ಮಱೆದು (ಬಸವು. ೬-೨೭) ; ಶಿರವ ಸಿರಿಹಸ್ತದಲ್ಲಿ ಮೆಲ್ಲನೆ ಬರಸೆಳೆದು ಬಿಗಿಯಪ್ಪಿ ನುಡಿದನು ದರಹಸಿತಮುಖದಿಂದ [ಪಾಠಾಂ. ವದನದಲಿ, ಮುಖನಾಗಿ] ನಿಜಶರಣಂಗೆ ವಿನಯದಲಿ (ತೊರರಾ. ೬-೫೩-೧೧). [ ದರಹಸಿತ + ಮುಖ ]

**ದರಹಸಿತಮುಖಿ** (ನಾ). ಮಂದಹಾಸದ ಮುಖವುಳ್ಳವನು; ಹಸನ್ಮುಖಿ : ದಾಶರಥಿ ತಾನಿನಿತು ನಾಣಿಂ ತಮ್ಮನಂ ನೋಡಿ ದರಹಸಿತಮುಖಿಯಾಗಿ ಸುಯ್ದು ಧ್ಯಾನಸ್ಥನಾದಂ (ಶ್ರೀರಾಮಾ. ೨೮೭-೭೨).

[ ಸಂ. ದರಹಸಿತಮುಖಿನ್ ]

**ದರಹಾಸ** (ನಾ). = ದರಹಸಿತ ೨ : ದರಹಾಸಾಮೃತವಾರಿ ಮಜ್ಜನಜಲಂ ದೇಹಪ್ರಭಾಜಾಲಮಂಬರಶೋಭಾವಹಂ (ಅಜಿಪು. ೨-೪೨) ; ಓಲಗಕ್ಕೆ ವರ್ಪಲಘುನಿತಂಬೆಯರ್ ಸುರಪುರಂಧ್ರಿಯರೆತ್ತಣಿನೆಂದು ನಿಟ್ಟಿಪಾಕುಲತೆಯನೊಂದೆ ಕಂಡು ದಿವಿಜಂ ತಳೆವಂ ದರಹಾಸಲಕ್ಷ್ಮಿಯಂ (ಚಂದ್ರಪ್ರ. ೪-೭೪) ; ಇಚ್ಛೆ ಯಾವುದು ಬೇಡು ನೀನೆನೆ ಅಚ್ಚುಕದ ದರಹಾಸಲಕ್ಷ್ಮಿ ಮುಖಾಬ್ಜದೊಳು ಮೊಳೆಯೆ ಪೆಚ್ಚಿ ಬಿನ್ನೈಸಿದನೆವಂಗೆ (ಬಸವು. ೨-೨೩).

[ ದರ್$_2$ + ಹಾಸ$_2$ ]

**ದರಹುಣಿಸೆ** (ನಾ). ಒಂದು ಬಗೆಯ ಹುಣಿಸೆ (?) : ಹೊಲದ ಬರಬಿನ ಮೇಲೆ ದರಹುಣಿಸೆಯ ಸರಿತದಲು ಆ ಮಾರದ ಮೇಲೆ ಅದಕ್ಕೆ ಮೂಡಲು . . . ಸಲುವ ಸೀಮೆಯುಷ್ಟನೂ ನೀವು ಕಟುವ ಕೆಱೆಯ ಕೆಳಯಿಂಕೆ ಸೀಮೆಯನೂ ಮಾಡಿಕೊಟು (ಎಕ. X, ಮುಳಬಾ. ೬-೬ ; 1416).

[ ದರ್$_0$ + ಹುಣಿಸೆ (<ಪುಳಿಸೆ) ]

**ದರಳೆ** 'ಠಲೆ' ನೋ.

**ದರಾಂಬ** (ನಾ). ಒಂದು ಬಗೆಯ ವಂರ : ಅರಸಿನಗುರ್ಜಿ (ದರಾಂಬ).– ಮಧ್ಯಮ ಆಕಾರದ್ದು . . . ಇದರ ಅಂಟನಿಂದ ಹುಟ್ಟುವ ರೇವಾಚಿನ್ನಿಯೆಂಬ ಹಳದೀ ಬಣ್ಣದ ವ್ಯಾಪಾರವು ಬಹಳ ನಡಿಯುತ್ತದೆ (ಕಭಾಗ. ೩೫).

[ ? ]

**ದರಿ** (ನಾ). ೧. ಆಳವಾದ ಕಮ್ಮರಿ; ಕಂದರ; ಕೊಳ್ಳ: "ದರೀ, ಕಂದರಃ- ಈ ೨ ದರಿಯ ಪೆಸರು" (ನಾಚಿರಾ. ೧೦೪); "ಕಂದರಮೆನಲು ದರಿಯಕ್ಕುಂ" (ಮಂಗರಾ. ೩೦-೨); ಕುಮಾರನಿಂದಾರೂಢಮಪ್ಪ ದುಷ್ಟಾಶ್ವಂ ಕುಮಾರನಂ ಕೊಂಡು ಮನೋವೇಗದಿಂ ಗಿರಿವನದರಿನದೀಪ್ರದೇಶಂಗಳೊಳ್ . . . ಪರಿಯುತ್ತಿರ್ದುದು (ವಡ್ಡಾರಾ. ೫೬-೭) ; ಅತ್ತ ಪುಲಿಯಿತ್ತ ದರಿಯೆಂದತ್ತಿತ್ತಡಿಯಿಡದೆ ಲಕ್ಷ್ಮಿ ತಳವೆಳಗಾದಳ್ (ಗದಾಯು. ೯-೧೬) ; ಗಿರಿದರಿಗಳ ವನದೊಳ್ ಬೇಡರ ಬಸಿಱೊಳ್ ಬಂದು ಪಾಪಮಂ ಸಾಲ್ವನಿತಂ ನೆರೆಪಿ ಕಡೆಗಾಲದೊಳ್ ವನಚರರ್ಕಳಿಂದೊಡನೆ ಸತ್ತು ಪುಲ್ಲೆಗಳಾದರ್ (ಪಂರಾಮಾ. ೧೫-೪೦) ; ದರಿಗಳೊಳು ದರ್ವೀಕರಾವಳಿಯುರವಣಿಸಿದರೆ ಬಲ್ಲುದೇ ಕುಲಗಿರಿ (ಕುವ್ಯಾದ್ರೋ. ೧೬-೪೦) ; ಸರಂಗಳಿಂ ದರಿಗಳಿಂ ಹಳ್ಳದಿಂ ಕೊಳ್ಳದಿಂ . . . ಗಜರ್ವ ಮರುಳ್ಗಳಿಂ ಶಾಕಿನಿಯರಿಂ ಡಾಕಿನಿಯರಿಂದಮಾ ಪಥ ಬೆದಱಿಸುವುದು (ಚಿಬಪು. ೫೬-೨೩) ; ದರಿಯಿರದೆ ಗಿರಿಯಿಲ್ಲ, ನೆರಳಿರದೆ ಬೆಳಕಿಲ್ಲ ಮರಣವಿಲ್ಲದೆ ಜನನಜೀವನಗಳಿಲ್ಲ (ಮಂಕುಕ. ೨೯೩); ಇಂದ್ರಧನು ತಾ ಕುಸುಮಿಸಿದವೊಲು ರಂಗುಗೊಳುತಿವೆ ದರಿಗಳು (ಚಿಂತನ. ೪೮-೮). ೨. ಡೊಗರು ; ಬಿರುಕು ; ಕಂಳಿ. 'ದರಿಗೆಡಹಂ' ಪರಾ. ೩. ಗವಿ ; ಗುಹೆ : "ಕಂದರಂ, ಕಂದರಾ, ದರೀ– ಈ ೩ ದರಿ" (ಹಲಾಯು. ೨೮-೧೩) ; ವಿದಳತ್ಕುಂದಶಶಾಂಕಶಂಖ ಧವಳಂ ಗಂಧೇಭದಾನಾಂಬು ಪೂರ್ಣದರೀಸುಂದರ ಕಂದರಂ (ಪಂಪಭಾ. ೭-೭೨) ; ಮೇದಿನಿಯನೆತ್ತಿದಾದಿವರಾಹನಂತೆ ದರಿಗಳಂ ಕೋಡೆಯೊಳ್ ಕುತ್ತಿಯೆತ್ತಿ ಬಿದಿರ್ದೀಡಾಡುತ್ತಿರ್ದು (ಪಂಚತಂ. ೪೬-೧) ; ಶೂಕರಾದ್ರಿಯ ನಿಖರದಲ್ಲಿ ದರಿಯ ಬಾಗಿಲ ಮುಂದೆ ತಪವಂ ಧರಿಸಿ ಮಂತ್ರದ ಜಪವ ಮಾಡುವ ಪರಮತರುಣಿಯ . . . ಕಂಡು ಬೆಱಗಾಗಿ (ಜ್ಞಾನಚಂ. ೨-೨). [ ಸಂ. ]

**ದರಿಕಂದ** (ನಾ). ಔಷಧಿಗಾಗಿ ಬಳಸುವ ಒಂದು ವಿಧವಾದ ಸಸ್ಯ : "ಕಂದಾರಃ –ಮಲೆಸೌತೆ, ದರಿಕಂದ, ರಕ್ತಪಿಂಡಾಲು" (ಒಷಧಿ. ೨೧).

[ ? ]

**ದರಿಗೆಡಹು** (ಕ್ರಿ). ೧. ಕೊಳ್ಳದಲ್ಲಿ ನೂಕು: ನರಕದಲಿ ದರಿಗೆಡಹಿ ಬಾಯೊಳಗೆಱೆವರರಗನು ಕರಗಿಯೆದೆಯನು ಕೆರ್ಚುಗಾಲೊಳು ಮೆಟ್ಟಿ ನಿಂದು (ನಿಭಾಗ. ೫-೧೧-೩೫). ೨. ಕುಳಿಯಾಗುವಂತೆ ಮಾಡಂ; ಗುಳಿಬೀಳಿಸಂ : ಮುಷ್ಟಿಯ ಕೋಲಿಂ ಭಂಗಾರಿಗಳನಿಱಿದೊಡೆವುತ್ತುಂ ಜಗಲಿಯಂ ದರಿಗೆಡಹುತಂ ಮಂಗಳವೆಲ್ಲವನಮಂಗಳವಂ ಮಾಡುತ್ತಿರಲ್ (ನಂಬಿರ. ೬-೬೩). [ ದರಿ + ಕೆಡಹು (<ಕೆಡಪು) ]

**ದರಿಗೊಳ್** (ಕ್ರಿ). ೧. ಬಿರುಕುಹೊಂದು ; ಕೊರಕಲು ಬೀಳು : ಪಳಿಕಿನ ಶಿಲಾಪಟ್ಟಂ ಪ್ರಸ್ಥಾನದೊಳ್ ವಿಜಯದ್ವಿಪಾವಳಿಯ ದರಿಗೊಂಡುದ್ದೇಶಂ ಚಕ್ರವರ್ತಿಯ ಪಾವುದಗ್ಗಳದ ಸಿರಿಯಂ ಪೋಲ್ವನ್ನಂ ತದ್ದ್ವಿಪಾಳಿ ದಿಗಂತದೊಳ್ ತಳೆದುದು ಜಯಸ್ತಂಭಶ್ರೀಯಂ ತ್ರಿಕೂಟಮಹೀಧರಂ (ಶಾಂತಿಪು. ೧೧-೧೮). ೨. (ಆಲಂ) ದಂಡೆಯನ್ನು ಅನುಸರಿಸು ; ದಡ ಸೇರು : ದರಿಗೊಂಡೀಡಿಱಿದಾಡುತುಂ ಕೊಣಕಱುತುಂ (ಜಗವಿ. ೪-೨೫).

[ ದರಿ + ಕೊಳ್₁ ]

**ದರಿತ** (ಗು). ೧. ಹರಿದ ; ಸೀಳಿದ ; ವಿಭಾಗವಾದ. ೨. ಭಯಗೊಂಡಿರುವ ; ಹೆದರಿರುವ. (ನಾ). ೩. ಪುಕ್ಕಲ ; ಹೇಡಿ ; ಹೆದರಿದವನು : "ದರಿತಃ, ಚಕಿತಃ, ಭೀತಃ . . . ಶಂಕಿತಃ – ಈ ೭ ಪ(ಹ)ಂದೆ" (ಹಲಾಯು. ೫೮-೧೯೯) ; "ಭೀರು ಭೀತಂ ಹಂದೆ ದರಿತನಾ ಕಾತರಂ ತ್ರಸ್ತನಾ ಚಕಿತನೆನೆ ಹೇಡಿಗಭಿಧಾನಮಕ್ಕುಂ" (ಮಂಗರಾ. ೭೯-೧೨). [ ಸಂ. ]

**ದರಿದ್ರ** (ಗು). ೧. ಹಾಳಾದ ; ಹೀನವಾದ. 'ದರಿದ್ರಕೆಲಸ' ಪರಾ. (ನಾ). ೨. ಬಡವ; ಬಡತನದಲ್ಲಿರುವವನು; ಹಣದ ಕೊರತೆಯುಳ್ಳವನು ; ಧನಹೀನ : "ಕ್ಷುದ್ರಃ, ದರಿದ್ರಃ, ಅಕಿಂಚನಃ, ದುರ್ವಿಧಃ, ದುಸ್ಥಃ,ದುರ್ಗತಃ – ಈ ೬ ಬಡವಂ" (ಹಲಾಯು. ೫೭-೧೯೩) ; "ದುಸ್ಥರ ನಕಿಂಚನಂ ದುರ್ವಿಧಂ ದುರ್ಗತಂ ದರಿದ್ರಂ ಬಡವನೆಂದೆನಿಕ್ಕುಂ" (ಮಂಗರಾ. ೭೮-೯) ; ಅರಿ ನೀಚಕ್ಷೆದೊಳೊಂದು ನಿಂದೊಡೆ ದರಿದ್ರಂ (ಜಾತತಿ. ೧೫-೯) ; ಇಂತಹ ಎಷ್ಟು ಜನ ಶ್ರೀಮಂತರು, ನನ್ನಂತಹ ದರಿದ್ರರ ಹೊಂಗನಸನ್ನು ಹೊಡೆದು ಪುಡಿ ಪುಡಿ ಮಾಡಿಲ್ಲ ? (ನಡದಾ. II, ೯೧೭). ೩. ಬಡತನ ; ಹೀನಸ್ಥಿತಿ ; ದಾರಿದ್ರ್ಯ : ಕನಕದ ಕೊನರಂ ತಾಳಿಸಿ ತಿನೆ . . . ತನುಗೇಱಿದ ವಿಷಮಾಗಳ್ ಕನಕದ ದೆಸೆಯಿಂ ದರಿದ್ರ ಮಟ್ಟಿವಂತಟ್ಟಿಗುಂ (ಜಮದ. ೧೨-೨೫) ; ದೈವದ ದಯೆ ಇದ್ದವಗೆ ದರಿದ್ರವಿಲ್ಲ (ಗಾದೆ). ೪. ಅದೃಷ್ಟಹೀನ : ತೆಗೆಯಬಹುದೆ ಕಡವರವು ದರಿದ್ರಂಗೆ (ಬಸವ. ೫೬೭). ೫. ಬರ; ಕೊರತೆ: ಅಲ್ಲೇನು ಕೆಲಸಕ್ಕೆ ದರಿದ್ರ (ಮುನಿವಾ. ೧೩೭) ; ಸಮುದ್ರದ ನಂಟು ಉಪ್ಪಿಗೆ ದರಿದ್ರ (ಗಾದೆ).

**ದರಿದ್ರ ನಾರಾಯಣ** = ದರಿದ್ರರೂಪದ ನಾರಾಯಣ ; ℙ ದರಿದ್ರ ಸೇವೆಯು ದೇವರ ಸೇವೆಯಂತೆ ಪವಿತ್ರವೆಂಬ ಭಾವನೆಯಿಂದ ಪ್ರಯೋಗವಾಗುವ ಪದ: ಬೋಲಷೆವಿಕರಂ ರಾಜ್ಯದ ಸರ್ವಾಧಿಕಾರವನ್ನು ನಿರ್ಗತಿಕಕಾರ್ಮಿಕಶ್ರೇಣಿಯವರಿಗೆ ವಿಾಸಲಾಗಿಡಬೇಕೆಂದು ಹೇಳುವ ಮಾತು ಭಾಗವತರ ದರಿದ್ರನಾರಾಯಣ ಸಾಯುಜ್ಯವನ್ನು ಹೋಲುತ್ತದೆ (ಭಾರದ. ೩೭೫). [ ಸಂ. ]

**ದರಿದ್ರತನ** (ನಾ). ಬಡತನ; ದಾರಿದ್ರ್ಯ : ಎಷ್ಟು ಕೊಟ್ಟರೂ ಅವನ ದರಿದ್ರತನ ಹರಿಯಲಿಲ್ಲ (ರೂಢಿ). [ ದರಿದ್ರ + – ತನ ]

**ದರಿದ್ರತೆ** (ನಾ). = ದರಿದ್ರತನ : ಒಂದಿದ ತಗುಳ್ದು ತಳ್ತು ಪತ್ತಿದ ರುಜೆ ಪೆರ್ಚ್ಚೆ ಸಾರ್ಚ್ಚಿದ ದರಿದ್ರತೆ ಬಟ್ಟೆಯೊಳಾದ ಸೇದೆ ಪಿಂಗಿದಪುದು (ಎಕ. VIII, ನಗರ. ೫೮-೩೦ ; 1062) ; ನಿಷ್ಠುರಮಪ್ಪ ದರಿದ್ರತೆ ಪೊರ್ದಿರೆ ಕೊಟ್ಟಿಂ ಸಿರಿಗಮುಂದು ತಾಂ ಗೆಂಟಾದರ್ (ಧರ್ಮಾಮೃ. ೮-೧೫೯); ಸಿರಿಗೆ ದರಿದ್ರತೆ ಬಾಟ್ಕೆಗೆ ಮರಣಂ ಜರೆ ಯೌವನಕ್ಕಮಭಿಘಾತಮೆನುತ್ತಿರೆ ಕಂಡು (ಚಂದ್ರಪು. ೨-೩೭) ; ಇನಿತು ಲಿಂಗಸದರ್ಥನಾಗಿಯು ಘನ ದರಿದ್ರತೆ ಯಾದುದಯ್ಯೋ ಮನೆಯೊಳಗೆ ನೋಡಲು ತವುಡು ನೊಣವಿಂಗೆಟಗಲಿಲ್ಲ (ಬಸವು. ೨೩-೬). [ ಸಂ. ದರಿದ್ರತಾ ]

**ದರಿದ್ರತ್ವ** (ನಾ). = ದರಿದ್ರತನ. [ಸಂ.]

**ದರಿದ್ರಲಕ್ಷ್ಮಿ** (ನಾ). ಬಡತನಕ್ಕೆ ಅಧಿದೇವತೆಯಾದ ಲಕ್ಷ್ಮಿ ; ಜ್ಯೇಷ್ಠಾದೇವಿ : "ಅಲಕ್ಷ್ಮೀಃ = ಪಾಲ್ಗಡಲ ಕಡೆತದಲ್ಲಿ ಚಂದ್ರನತ್ತಣಿಂ ಕಡೆಸಾರಿ ಹುಟ್ಟಿದ ... ಅಥರ್ವನ ಹೆಂಡತಿಯಾದ, ಜೋಕುಮಾರನ ತಾಯಿಯಾದ, ಜೇಷ್ಠಾದೇವಿಯೆಂಬ ಹೆಸರುಳ್ಳ, ದರಿದ್ರಲಕ್ಷ್ಮಿ" (ಕಾಶಕ್ಕ. ೨೫೩).

[ ದರಿದ್ರ + ಲಕ್ಷ್ಮಿ ]

**ದರಿಧೂಳ** (ನಾ). "ಗುಡ್ಡದ ಓರೆಯಲ್ಲಿರುವ ಒಂದು ದೇವತೆ" (ಗರತಿ. ಕೋಶ) : ಗುಡ್ಡ ದಾರ್ಯಾಗ ಗುಲಗಂಜಿ ಬನದಾಗ ಒಬ್ಬನ ಹ್ಯಾಂಗಿದ್ದಿ ದರಿಧೂಳ ನಿನ ಮುಂದ ಅಬ್ಬರಿಸಿ ಗಂಗೆ ಹರಿದಾಳ (ಗರತಿ. ೪೦).

[ ℙ ಇದು 'ಧೂಳಿಮಾಕಾಳ' ಎಂಬುದರ ಸಂಕ್ಷಿಪ್ತ ರೂಪವಿರಬಹುದು ]

**ದರಿಮುಷ್ಟಿ** (ನಾ). ಒಂದು ಬಗೆಯ ಗಿಡಮೂಲಿಕೆ : "ಖಟ್ವಾಂಗೀ–ದರಿಮುಷ್ಟಿ" (ಓಷಧಿ. ೪೨). [ ? ]

**ದರಿಯಾ** (ನಾ). ೧. ಕಡಲು ; ಸಮುದ್ರ. 'ದರಿಯಾಮಾರ್ಗ' ಪರಾ. ೨. ಹೊಳೆ ; ನದಿ.

**ದರಿಯಾ ತೆಂಗಿನಕಾಯಿ** = ಒಂದು ಬಗೆಯ ದೊಡ್ಡ ತೆಂಗಿನ ಕಾಯಿ; ℙ ಇದರ ಕರಟವನ್ನು ಸಂನ್ಯಾಸಿಗಳು ಪಾತ್ರೆಯಂತೆ ಉಪಯೋಗಿಸುತ್ತಾರೆ: ಸೂರ್ತಿಚವಾಳಾವುಣದ ಮೇಲೆ ಕಿಮ್ಮತ್ತು ಇರತಕ್ಕ ಜೀನಸುಗಳು ೧. ಅಕ್ಕಲ ಖಾರ, ಹಲಕಿ . . . ೧೧೦. ದರಿಯಾ ತೆಂಗಿನಕಾಯಿ (ಮುಂಬವ್ಯಾ. ೧೨೪). **ದರಿಯಾದೌಲತ್** = ನದಿಯ ಬಳಿಯ ಕಟ್ಟಡ ; ℙ ಶ್ರೀರಂಗಪಟ್ಟಣದಲ್ಲಿ ಕಾವೇರೀನದಿಯ ದಡದಲ್ಲಿರುವ ಟಿಪ್ಪು ಸುಲ್ತಾನನ ಅರಮನೆಯ ಹೆಸರು.

[ ←ಪಾರ. ದರಿಯಾ, ದರ್ಯಾ ; ಹಿಂ. ದರಿಯಾ ]

**ದರಿಯಾಪ್ತು** 'ದರ್ಯಾಪ್ತು' ನೋ.

**ದರಿಯಾಫ್ತಿ** 'ದರ್ಯಾಫ್ತು' ನೋ.

**ದರಿಯಾಮಾರ್ಗ** (ನಾ). ಕಡಲ ಮಾರ್ಗ: ಗೋವೆಯಿಂದಾ ಇಲ್ಲಿಗೆ ಬರುವ ದರಿಯಾಮಾರ್ಗದಲ್ಲಿ ಆಗಲಿ ಕಿರೆಮಾರ್ಗದಲ್ಲಿ ಆಗಲಿ (ರಾಜೇಂದ್ರ. ೧೧೭).

[ ದರಿಯಾ + ಮಾರ್ಗ ]

**ದರಿವು** 'ದರು₂' ನೋ.

**ದರಿಶನ** 'ದರಶನ' ನೋ.

**ದರಿಸನ** 'ದರುಶನ' ನೋ.

**ದರಿಸಿನ** 'ದರುಶನ' ನೋ.

**ದರಿಸು** (ಕ್ರಿ). ಕುಸಿದುಬೀಳು ; ಕೊರಕಲಾಗು : ರಘು ಜಲಕ್ರೀಡೆಯಾಡಿದ ಸರೋವರತಟಂ ದರೆ ದರಿಸಿ, ಪರ್ಬಿದುದು ಸಾಂದ್ರಂ ಜಲ ಪಿಶಾಚಿ, ಪಾಚಿ (ಶ್ರೀರಾಮಾ. ೫೫೦-೬). [ದರಿ + – ಇಸು₃]

**ದರು₁** (ನಾ). ೧. [ಸಂಗೀತ] ಒಂದು ಬಗೆಯ ಹಾಡು ; ಶೃಂಗಾರರಸ ಪ್ರಧಾನವಾದ ಗೀತೆ : ದರು ಪರಿ ವಿಕೃತಿ ವಿಣ್ಣಾಣವೆಂಬ ಚತುರ್ವಿಧ ದಂಡರೀತಿಯಲ್ಲಿ . . . ಪಾಡಿ ಮೋಹಿಸುವ ಗಾಯಕರಿಂ (ವಿವೇಕ. ೨೩೭); ದರು – ಸಾಹಿತ್ಯ, ಧ್ರುವ ಅಥವಾ ಪ್ರಧಾನವಾಗಿದ್ದು, ಸಂಗೀತ ಗೌಣವಾಗಿರುವ ಶೃಂಗಾರರಸಪ್ರಧಾನರಚನೆ (ಸಂಗೀಜಂ. ೭೪). ೨. [ನಾಟ್ಯ] ಒಂದು ಬಗೆಯ ಶೃಂಗಾರ ನೃತ್ಯ : 'ದರು' ಎಂಬ ಒಂದು ನೃತ್ಯಜತಿಯನ್ನು ಮಾಡಿ ಒಂದೊಂದು ಪಾತ್ರವೂ ರಂಗಸ್ಥಳಕ್ಕೆ ಪ್ರವೇಶಿಸಬೇಕು (ಅಭಾನ್ವ. ೬೫). [ <ಸಂ. ಧ್ರುವ ]

**ದರು₂**, ದರಿವು, ದರುವು₁ (ನಾ). ಕಂದರ ; ಕೊಳ್ಳ ; ಕಣಿವೆ: ನಡೆನಡೆದು ನಸು ಬಳುಂಕುತ್ತೆಡಬಲನಂ ನೋಡಿ ಕೂಡೆಯಾಘ್ರಾಣಿಸುತುಂ ಗಿಡುವಿನ ಸರುವಿನ ದರುವಿನ[ಪಾಠಾಂ. ದಡುವಿನ, ದೆಸುವಿನ] ಮಡುವಿನ ಬಳಿಗೊಂಡು ಶುನಕನಟ್ಟಿತು ಮೊಲನಂ (ಗಿರಿಕ. ೧-೮೭); ಕರೆದು ಕರೆದಲವತ್ತು ಹಂಬಲಿಸುತ ಬೆಟ್ಟದೊಳು ಘಟ್ಟದೊಳು ಸರುವಿನೊಳು ದರು[ಪಾಠಾಂ. ಮರು]ವಿನೊಳು ಕೆಟ್ಟ ಸಂದಿಯೊಳು ಗೊಂದಿಯೊಳಱಸಿ ಬಳಲಿ (ಸಿದ್ಧರಾ. ೨-೫೪). **ದರಿವು:** ಶ್ವೇತಪರ್ವತದ ಪಾದತಟದ ಸರಿವು ದರಿವಿನ ಹಾಲೊಜಿತೆ

ಸುರಿತಪ್ಪಂತೆ ಹಾಲ ಹಳ್ಳವೋಲಗದ ನಡುವೆ ಮಡುಗಟ್ಟಿ ಪರಿದು ಪೊಱಸೂಸೆ (ಬಸರ. ೧೦-೭೧). **ದರುವು₁ :** ಮಿಕ್ಕ ಸರುವಿಂಗೆ ದರುವಿಂಗೆ ಹಳ್ಳಕ್ಕೆ ಕೊಳ್ಳಕ್ಕೆ ಗಿಡುವಿಂಗೆ ಮಡುವಿಂಗೆ . . . ನಾನಾ ಧ್ವನಿಗೆ ನಾನಾ ಭಯಂಕರಕಿಕ್ಕೆವನೆಯಾನೆಂದು ಬೊಬ್ಬಿಟ್ಟು ಪೇಳ್ವಂತೆ ಘೀಳಿಡುತ್ತಿರ್ದುದಡವಿ (ಹಡಕಾ. ೫-೨೧) ; ಭೋರೆಂದು ದರುವಿನಲ್ಲಿ ಬೀಳುವ (ಚಿತ್ರಸ್ಕ. ೧೫ ಮುನ್ನುಡಿ). [ <ಸಂ. ದರಿ. ]

**ದರು₃ (ನಾ).** ಕಸುವು ; ಶಕ್ತಿ ; "ತ್ರಾಣ, ಸಾಮರ್ಥ್ಯ" (ಜಾನಕೋ. ೪) : ಆ ಕೆಲಸ ಮಾಡಲು ಅವನಿಗೆ ದರುವಿಲ್ಲ (ರೂಢಿ). [ ? ]

**ದರುಮ** 'ಧಮ್ಮ₁' ನೋ.

**ದರುವಕ್ಕಿ (ನಾ).** ಒಂದುಂ ಬಗೆಯ ಹಕ್ಕಿ (?): ಚಕೋರನಂತೆ ದಿನವನೆಣಿಸುತ್ತಿರ್ದಳವ್ವೆ ದರುವಕ್ಕಿ ಕಂಡ ಕನಸಿನಂತಿರ್ದಳವ್ವೆ ಮೋಡಂಬೊಕ್ಕ ಚಂದ್ರಮನಂತಿದ್ದಳವ್ವೆ ಎಂಟನೆಯ ಅವಸ್ಥೆಯವಳು ಆಚಿತಡಿಯಲ್ಲಿದ್ದವನ ಈಚೆಯ ತಡಿಗೆ ಕರೆದುಕೊಂಬಂತೆ ಇಂದು ನಮ್ಮ ಮಹಾಲಿಂಗ ಗಜೇಶ್ವರನು ಕಂಗಳ ಕಾವು ಕೆಂಗಾಹಿ ಕಂಡವ್ವಾ (ಸರ್ವವ. ೬೮-೩೭೯) ; ನಿಂದು ನೋಡಿದರು ಶಕುನವ ದರುವಕ್ಕಿ ಸಂಧಿಸಿ ಕೆಟುಕು ಕೊಡುತಿರ್ದ (ಗುಂಡುಸು. ೨-೧೧೪). [ ದರು ? + ಪಕ್ಕಿ₁ ]

**ದರುವು₁** 'ದರು₂' ನೊ.

**ದರುವು₂ (ನಾ).** ವ್ಯಾಪಿಸಿದುದು ; ತುಂಬಿದುದು. 'ದರುವು ಹಿಡಿ' ಪರಾ. [ ? ]

**ದರುವುಹಿಡಿ (ಕ್ರಿ).** (ಕವಿಯು) ತುಂಬ ವ್ಯಾಪಿಸು ; ಗಡಚಿಕ್ಕು : ಹರುಷ ವಿಸ್ಮಯಗಳಿಂದ ಕೂಗು-ಬೇಕಾಟೆಗಳನ್ನು ಊರು ದರುವು ಹಿಡಿಯುವಂತೆ ಹಾಕುವವರೇ (ಕರಿಹಾ. ೩೩) ; ದನಗಳು, ನಾಯಿ, ಬೆಕ್ಕುಗಳು- ಯಾವ ಪ್ರಾಣಿಗಳಿಂದ ಆ ಹಳ್ಳಿ ತುಂಬಿರುತ್ತಿತ್ತೋ, ಅವುಗಳ ಕೂಗಿನಿಂದ ಹಳ್ಳಿಗೆ ಹಳ್ಳಿಯೇ 'ದರುವು' ಹಿಡಿಯಬೇಕಾಗಿತ್ತೊ, ಆ ಯಾವ ಪ್ರಾಣಿಗಳೊಂದೂ ಆಕೆಗೆ ಕಂಡು ಬರಲಿಲ್ಲ (ಬರಹಾ. ೧೨೪).
[ ದರುವು₂ + ಹಿಡಿ₁ (<ಪಿಡಿ₁) ]

**ದರುಶನ,** ದರಿಸನ, ದರಿಸಿನ, ದರುಸನ (ನಾ). ೧. ಕಾಣುವುದು ; ನೋಡುವುದು ; ನೋಟ ; ಕಾಣ್ಕೆ : ನಿಮ್ಮಂ ನೆನೆವುದೆ ಶಿವಚಿಂತೆ ನೋಡುವುದೆ ದರುಶನಂ ಮುಟ್ಟಿದುದೆ ಸ್ಪರ್ಶನಂ (ಬಸರ. ೭-೧೧೧) ; ಜಯಜಯೆಂದುದು ನಿಖಿಳಜಗವಕ್ಷಯನ ದರುಶನಕೆಂದು ಸುತಿಕೋಟಿಯ ಗಡಾವಣೆ ಗಾಸಿಯಾಮುದು ಹರನ ಗಲ್ಲಣೆಗೆ (ಕುವ್ಯಾ.ಅ. ೬-೭೭) ; ಅಲ್ಲಿಯ ಮಹಾಜನಂಗಳು . . . ಶುಭವಾದ್ಯವೆರಸಿ ನಡೆದಿದಿರ್ವಂದು ಕನಕ ಯಜ್ಞೋಪವೀತವ ಪವಿತ್ರದ ಫಲಗಳ ದರುಶನವ ನೀಡಿ ಶ್ರುತಿ ಮಂತ್ರಾಕ್ಷತೆಯನಿತ್ತು (ಸೌಂದಪು. ೫-೨) ; ನಿಮ್ಮ ದರುಶನದಿ ಬವಣೆ ಹಿಂಗಿ ಕೃತಾರ್ಥನಾದೆನು (ನಳಚ. ೮-೩೩) ; ಸಾರದಲೆ ಸದ್ಧರ್ಮದಿಚ್ಛೆಯೆ ಚಾರುದರುಶನ (ಪಶುಭಾ. ೫-೨೦) ; ನಾ ಧನ್ಯ ನಾ ಧನ್ಯ ನಾ ಧನ್ಯನಿಂದು! ಉಪಾರವಿಯ ದರುಶನಕೆ ಇಲ್ಲಿಗೈತಂದು ! (ಅನಿಕೇ. ೯-೧೨). ೨. ಕಾಣಿಕೆ ; ನಜರು : ಸೆಟ್ಟಿ ತನ್ನ ತಂದ ದರುಶನವಮನರಸಂಗೆ[ಪಾಠಾಂ. ಕಾಣಿಕೆಯಂ] ಕೊಟ್ಟು (ಜೀವಸಂ. ೨೨೬-೧೮). ೩. [ಯೋಗ] ಯೋಗಾಭ್ಯಾಸದಲ್ಲಿ ಬರುವ ಆರು ಅಂತರಾಯಗಳಲ್ಲಿ ಒಂದು ; P ಪ್ರತಿಭಾ, ಶ್ರವಣ, ವಾರ್ತಾ, ದರುಶನ, ಆಸ್ವಾದನ, ವೇದನೆಗಳೆಂಬಿವು ಆರು ಅಂತರಾಯಗಳು ಅಥವಾ ವಿಘ್ನಗಳು : "ದರುಶನಗಳ್ . . . ತಲೆಯ ಮೇಲಿನಿಂದ ಹೊರಡುತ್ತಿರುವ ಬೆಳಕಿನಲ್ಲಿ ಸಿದ್ಧರನ್ನು ಕಾಣುವುದು" (ಅಮೃತ. ೬-೮೯ ಅಡಿಟಿ) ; ಮತಿಯುತನೆ ಪ್ರತಿಭಾಶ್ರವಣ ವೋಣತಿಶಯದ ವಾರ್ತಾದರುಶನಗಳತುಳವಪ್ಪಾಸ್ವಾದನವು ವೇದನೆಯುಮೆಂಬಾಱು . . . ಬ್ರಹ್ಮಾಭ್ಯಾಸಕಾಲದಲಂತರಾಯಗಳು (ಅಮೃತ. ೬-೮೯). ೪. [ಜೈನ] ಸಮ್ಯಕ್‌ದರ್ಶನ : ದರುಶನವಿಲ್ಲದ ಪೆಂಡಿರ ವರಭೋಗಂ ನರಕಗತಿಯ ಪೆರ್ಬಟ್ಟೆ (ಧರ್ಮಾಮೃ. ೧೦-೭೧). **ದರಿಸನ :** ೫. ( ಯಾ ದಾರ್ಶನಿಕರ ತತ್ತ್ವಗಳನ್ನು ತಿಳಿಸುವ) ತತ್ತ್ವಶಾಸ್ತ್ರ : ನಿರುತದಿಂ ತನ್ನೃಪನ ಸಭೆಗೆ ವಾದಕ್ಕೆಂದು ಗುರುಪಂಡಿತೇಶನಂ ಕರೆಯಿಸಿ ಸಮಸ್ತಮತದರಿಸನಂಗಳೊಳು ವಾದಂಗೆಯ್ಯಲೆಲ್ಲಮಂ ಖಂಡಿಸಿದನತಿಪೆರ್ಮೆಯಿಂ (ಪಾಸೋಪು. ೭-೬೯). **ದರಿಸಿನ :** ೨. ತವಗೆ ನಡೆವ ದರಿಸಿನವಮನಾಚಂದ್ರಾರ್ಕತಾರಂ ನಡೆವನ್ನು ಮಾಡಿಕೊಟ್ಟರು (ಸೌಇಇ. XI-ii, ೧೮೧-೨೦ ; 1096). **ದರುಸನ :** ೧. ದರ್ಶನ – ದರುಸನ, ಪದ್ಮ – ಪದುಮ (ಶಮದ. ೨೫೪ ಪ್ರಯೋ). ೨. ವಿಮಳತರಯಾಧಿಕಾಕುಸುಮದಂದಿಗೆಯ ತಂದು ಸಖಿಯರು ದರುಸನವನಿತ್ತರುಚಿತವಾದಲರ್ದೊಡವನಿತ್ತು ಸೌಂದರನಾಥಗೆ (ಸೌಂದಪು. ೧೦-೨೮). ೩. ದರುಸನಂಗಳಿಗೆಲ್ಲ ಭಿಕ್ಷಾಟನಚರಿತ್ರ ಗುರುಮಾತವದಾಗಿರಲು ಉಳಿದ ಚರಿತ್ರಗಳಿದಕೆ ಸರಿಯಿಲ್ಲವಾಗಿ ಪೇಳಿದೆ (ಭಿಕ್ಷಾ. ೧-೫). [ <ಸಂ. ದರ್ಶನ ]

**ದರುಶನಗಾಣಿಕೆ (ನಾ).** ರಾಜರು, ಸಾಧು, ಸಜ್ಜನರು, ಗುರುಹಿರಿಯರು ಮೊದಲಾದವರನ್ನು ನೋಡಲು ಹೋಗುವಾಗ ತೆಗೆದುಕೊಂಡು ಹೋಗುವ ನಜರು ಅಥವಾ ಕಾಣಿಕೆ ; ದರ್ಶನಕಾಣಿಕೆ : ಪರಮಹೀತಳದಖಿಳಜನದುಬ್ಬರದ ದರುಶನಗಾಣಿಕೆಯನನುಕರಿಸುತನುಪಮ ವಿಷಯವೀಥಿಯ ನೋಡುತೈತಂದ (ತೊರರಾ. ೦-೬-೭).
[ ದರುಶನ + ಕಾಣಿಕೆ (<ಕಾಣ್ಕೆ) ]

**ದರುಶನತಪ್ಪುಕ (ನಾ).** ನೋಟದಿಂದ ಅಪರಾಧ ಮಾಡುವವನು : ದರುಶನತಪ್ಪುಕ ಪ್ರಥಮಪಾತಕ ಸ್ಪರ್ಶನತಪ್ಪುಕ ದ್ವಿತೀಯಪಾತಕ . . . ಮಾಂಸಾಹಾರಿ ಪಂಚಮಹಾಪಾತಕ ಈ ಐವರೊಡನೆ ನೀನಂಡಿಯಲಿಲ್ಲೈ ರಾಮನಾಥಾ (ದೇದಾವ. ೧೯-೨೮). 'ಸ್ಪರ್ಶನತಪ್ಪುಕ' ಪರಾ. [ ದರುಶನ + ತಪ್ಪುಕ ]

**ದರುಶನಾರ್ಥಿ (ನಾ).** ನೋಡುವ ಅಪೇಕ್ಷೆಯುಳ್ಳ ವ್ಯಕ್ತಿ ; ನೋಡಲಿಚ್ಛಿಸುವವನು : ಅರಸ ಬಿನ್ನಹ ಮಾವದೇವರು ದರುಶನಾರ್ಥಿಗಳೆನಲು ಮನದಲಿ ಕುರುನೃಪತಿ ಚಿಂತಿಸುತ ಬರಹೇಳೆಂದು ನೇಮಿಸಿದ (ಕುವ್ಯಾಸ. ೧೨-೯). [ <ಸಂ. ದರ್ಶನಾರ್ಥಿನ್ ]

**ದರುಶೆ (ನಾ).** ಸೂರ್ಯ, ಚಂದ್ರರು ಒಂದೆಡೆ ಸೇರುವ ಕಾಲ ; ಅಮಾವಾಸ್ಯೆ : ದರುಶೆಯೊಳರ್ಕನಂ ಬೆರಸಿದಿಂದುವ ಕೋಮಲಲೇಖೆಯಂತೆ ... ತತ್ಕಮಲಾಕ್ಷಿಯೊಪ್ಪಿದಳ್ (ಉದ್ಭಟ. ೫-೫೬).
[<ಸಂ. ದರ್ಶ]

**ದರುಸನ** 'ದರುಶನ' ನೋ.

**ದರೆ₁ (ನಾ).** ೧. (ದಡದಲ್ಲಿ ಕಟ್ಟುವ) ದಂಡೆ ; ದಿಂಡು ; ತೆವರು : ರಘು ಜಲಕ್ರೀಡೆಯಾಡಿದ ಸರೋವರತಟಂ ದರೆ ದರಿಸಿ, ಪರ್ಬಿದುದು ಸಾಂದ್ರಂ ಜಲಪಿಶಾಚಿ, ಪಾಚಿ (ಶ್ರೀರಾಮಾ. ೮೫೦-೬) ; ತೋಟದ ಒಂದು ಬದಿಯಲ್ಲಿ ದರೆಯಾಗಬೇಕಿತ್ತು (ಪದ್ಮಸ. ೨೨೦) ; 'ಇಕೊ' ಎಂದು ಅವ್ಯಕ್ತದಿಂದ ಬಂದದ್ದನ್ನು ಕೃತಜ್ಞತೆಯಿಂದ ಸ್ವೀಕರಿಸುವುದು. ದರೆ ಹತ್ತುವ ಪರದಾಟ ಬೇಡ (ಸಂಸ್ಕಾರ. ೮೮) ; ತನಗೆ ಎದುರಾಗಿ ಕಡಿದಾಗಿ ಎದ್ದಿದ್ದ ದರೆಯನ್ನು ಕಂಡು, ಹತ್ತಲು ಎರಡು ಮೂರು ಸಾರಿ ನೆಗೆದು ಜಾರಿಬಿದ್ದು ಸೋತು, ಹಿಂದಕ್ಕೆ ಹಾರಲು ಪ್ರಯತ್ನಿಸುತ್ತಿದ್ದಾಗ ಮಂಜ . . . ಬಡಿಗೆಯನ್ನೆತ್ತಿ ಹಂದಿಯ ಸೊಂಟಕ್ಕೆ ಇಕ್ಕಡಿಸಿ ಬಿಟ್ಟನು (ಮಲೆಮ. ೦೩೦) ; ಆಚೆ ಹೊಳೆಯಿದೆ. ಮೂರು ಬದಿಯಲ್ಲಿ ದರೆ ಇದೆ. ಉರಿ ಮೇಲಕ್ಕೇಳಲು ಗಿಡಗಳು ಬಿಡುವುದೇ ಇಲ್ಲ (ಪಾಳಿಗಿ. ೪೩) ; ಬಡ ಎತ್ತಿಗೆ ದರೇ ಮೇಲಣ ಹುಲ್ಲೇ (ಗಾದೆ). ೨. ನೊರಜುಗಲ್ಲು ಮತ್ತು ಮರಳು ಭೂಮಿ : ಗಣೆಗೂರ ಸನ್ನಿಗಾಲಾನಾಡ ದರೆ ಪೋಗಿ ತೇನವಾಡಕಕೊಳ್ಳಾಲೆಯುಳ್

ಕುಡಿತ್ತು (**ಎಕ. XVI. ಗುಬ್ಬಿ. ೭೫-೫೦ ; 733**) ; ಸಂಕರನಾಯಕನ ಹಿತ್ತಲ ದರೆ ಪಡುವಲು ಬಸ್ತಿಯ ದೇವಸ್ವಯಿದಕೆ ಹಂನೆರಡು ಮೂಡೆ ಬಿಟ ಧರ್ಮ (**ಕಇ. I, ೫೦-೪೩ ; 432 ?**) ; ಕಾಡರಂಬ ನೀರಾರಂಬಕೆ ಸಲುವ ಕೆಱೆ ಕುಂಟೆ ಕೊಣಾಸು ಅಬೆ ಅಚುಕಟು ದರೆ ನೆರಳೆ ಸಕಳಾ ಬತ್ತಾಯ (**ಎಕ. X (8), ಕೋಲಾರ. ೩೦೪-೦೫ ; 17 ನೆಯ ಶಕ**) ; ಇವು ನೆಲದಲ್ಲಿ ಜಾತಿಗಳು:-ರೇಗಡೆ, ಎರೆ . . . ದರೆ (ಕಲ್ಲುನೆಲ) (**ನಮ್ಮನು. ೨೯೩**). ೩. (ಕರಾ) ಬೇಲಿಗೆ ಬದಲಾಗಿ ಕಟ್ಟಿದ ಮಣ್ಣಿನ ಗೋಡೆ,- ಆವರಣ. [ ←ತುಳು. ದರೆ ]

**ದರೆ₂** (ನಾ). ನೆಲ ; ಭೂಮಿ ; ಧರೆ ; ಪೃಥ್ವಿ : "ಎಳೆ, ಪೊಡವಿ, ತಿರೆ, ದರೆ, ರನ್ನವಸಿಱಲ್, ಬೂವಿ, ಬುವಿ-ಈ ೭ ಭೂಮಿ" (**ಕಕಸಾ. ೧೦-೨೦೦**); ದರೆಯುಂ ಪೊತ್ತಾನೆಯು ಕೈಗೊರೆಯೆನೆ ಕಡುವೆಟ್ಟಿತಾದ ನಾಲ್ಕುಂ ತೋಳುಂ ಕರಮೆಸೆದಿರೆ ಕುಳ್ಳಿರ್ದಂ ಸಿರಿಯರಸಂ ಕಾರವಮುಗಿಲ ರೂಪೆಂಬಿನೆಗಂ (**ಕಬ್ಬಿಕಾ. ೦೭೫**). [ <ಸಂ. ಧರಾ ]

**ದರೆಗುಂಬ** (ನಾ). ಒಡೆದ ಮಂಡಕೆ ; ಬಿರುಕು ಬಿಟ್ಟ ಗಡಿಗೆ ; ತೂತು ಮಂಡಕೆ : ಅಟ್ಟೆಯೊಳಗಡಿಮೇಲಾಗಿ ಬಾಳೆಯ ಬಿತ್ತಿ ದರೆಗುಂಬದಿಂ ನೀರ ತಂದು ಎಱೆವುತಿರಲು ಕಂಡು ಬಲರಾಮನಿಂತೆಂದ (**ನೇಮಿಸಂ. ೩೪-೧೯೭**).
[ <ದರಿ + ಕುಂಬ₂ ]

**ದರೆಹೊಲ** (ನಾ). ಸಣ್ಣ ಸಣ್ಣ ಕಲ್ಲು ತುಂಬಿದ ಹೊಲ : ಒಂದು ದಿನ ಇವನು ಮಂಡಹಳ್ಳಿಗೆ ಹೋಗುವ ದಾರಿ ಪಕ್ಕದ ದರೆಹೊಲದಲ್ಲಿ ಸೀಳುಕ್ಕೆ ಹೊಡೀತಾ ಇದ್ದ (**ನನ್ನೂರು. ೨೯೭**). [ ದರ್₁ + ಹೊಲ (<ಪೊಲ) ]

**ದರೋಗ** (ನಾ). ೧. (ಅಬ್ಕಾರಿ, ಪಶು, ಕಾಡು, ಉದ್ಯಾನವನ ಇತ್ಯಾದಿ ಇಲಾಖೆಗಳ) ಸರ್ಕಾರದ ಅಧಿಕಾರಿ,- ಮೇಲ್ವಿಚಾರಕ : ನಮ್ಮ ಜಾತಕದ ಯೋಗಗಳನ್ನು ತಿಳಿದು ಕೆಲಸಮಾಡಿದರೆ ಸುಂಕದ ದರೋಗ ಸಾಬರ ಕಾಟ ನಿವಾರಣೆಯಾಗುತ್ತೆ (**ಮಾಮರಾ. ೦೫೨**); ಎಲ್ಲವನ್ನು ತೆಗೆಯಿಸಿಕೊಂಡು ಬಾ ಎಂದು ದರೋಗರ ಅಪ್ಪಣೆಯಾಯಿತು (**ಮುಸುಗಿ. ೦೨೩**). ೨. ಕಾವಲುಗಾರ ; ಪಹರೆಯವನು : ಪೋಲೀಸು ದರೋಗನು ತಮ್ಮನ್ನು ಎಳೆದೊಯ್ಯುವ ಮೊದಲು ತಾಯಿಯನ್ನು ಕುರಿತು—" ಅಮ್ಮಾ ಇದೇನು ?" ಎಂದು ಕೇಳಿದನು (**ಹಸಿವು. ೭**) ; ಸಂಸ್ಥಾನದಲ್ಲಿ ಒಂದು ಉನ್ನತಹುದ್ದೆಯಲ್ಲಿದ್ದ ಬಕ್ಷೀಷ್‌ಆಲೀ ಎಂಬುವನನ್ನು ಬಂದೀಖಾನೆಯ (ಜೈಲ್) ದರೋಗನನ್ನಾಗಿ ನೇಮಿಸಲಾಯಿತು (**ಘೂರಾಡಿ. ೦೫೭**).
[ ←ಪಾರ. ದಾರೂಘ್, ದಾರೋಗಹ್ ; ಹಿಂ. ಮರಾ. ದರೋಗಾ, ದಾರೋಗಾ ]

**ದರೋಡೆ,** ದರವಡೆ (ನಾ) ೧. ಭಯಂಗೊಳಿಸಿ ಬಲಾತ್ಕಾರವಾಗಿ ಕಸಿಯುವುದು,- ಅಪಹರಿಸುವುದು ; ಕೊಳ್ಳೆ ಹೊಡೆಯುವುದು; ಲೂಟಿ ; ಸುಲಿಗೆ : ಓ ವರ್ತಮಾನದ ಸುದ್ದಿ ಎಲ್ಲೊ ಗಲಾಟೆ, ಖೂನು, ದರೋಡೆ, ಚಕ್ರಬಂಧದ ಒಗಟ, ರಾಶಿಭವಿಷ್ಯ, ಲೂಟ, ಲಾಟರಿ (**ಅರಳು. ೪೨೫-೨೦**) ; ವಿಶ್ವನಾಥಪಂತರ ಕೊಲೆ ಮತ್ತು ಅವರ ಮನೆಯಲ್ಲಾದ ದರೋಡೆ ಇವುಗಳ ಸಮಾಚಾರವೇನಾದರೂ ನಿನಗೆ ಗೊತ್ತಿದೆಯೇ? (**ವಿಭವ್ಯ. ೮೯೧**) ; ದಸ್ಯುಗಳು ಗುಂಪುಕಟ್ಟಿಕೊಂಡು ಬಂದು ನಡೆಸುವ ದರೋಡೆಗಳನ್ನು ಯುದ್ಧವೆನ್ನಲಾದೀತೆ? (**ಶ್ರೀರಾಮ. ೧೪೪**) ; ಸಭೆಯಲ್ಲಿ ನಡೆಸಿದ ಈ ದರೋಡೆ ನಿನಗೆ ಮುನಿಜನಗಳಿಂದ ಮರ್ಯಾದೆ ತರುವಂತಿಲ್ಲ (**ವಚಥಾ. ೧೧೫**). ೨. ಲೂಟಿ ಹೊಡೆಯುವ ಜನರ ಗುಂಪು : ದರೋಡೆಯು ಬಂದಿದ್ದರೆ ಇಷ್ಟು ಅಂಜುವ ಕಾರಣವಿದ್ದಿಲ್ಲ (**ಮುಂದಾಕಿ. ೦೨೬**). **ದರವಡೆ:** ೧. ಹೊಟ್ಟೆಗೆ ದೊರೆಯದಿದ್ದ ಬಳಿಕ ಜನರು ಬರಗಾಲದಲ್ಲಿ ಕಳವು ದರವಡೆಗಳಿಗೆ ಪ್ರವೃತ್ತರಾಗುತ್ತಾರೆ (**ವೋಜೀವ. ೩**).

**ದರೋಡೆ ಮಾಡು** = ಕೊಳ್ಳೆಹೊಡೆ ; ಲೂಟಿಮಾಡು ; ದೋಚು : ನಾನೀಗ ದರೋಡೆಮಾಡಿ ತರುವ ದ್ರವ್ಯದಿಂದ ಅನುಭವಿಸುವ ಸುಖ ಸಂತೋಷಗಳಿಗೆಲ್ಲಾ ನೀವು ಭಾಗಿಗಳಲ್ಲವೆ? (**ಸುಧಾ. ೩೪**).
[ ←ಮರಾ. ದರೋಡಾ ]

**ದರೋಡೆಕಾತಿ** (ನಾ). ದರೋಡೆ ಮಾಡುವವಳು; ಲೂಟಿ ಹೊಡೆಯುವವಳು: ಮಕ್ಕಳು ಅಳುಕಳುಕಿ ನಿಂತು ಬೆದರುಗಣ್ಣಾಗಿ ದರೋಡೆಕಾತಿಯ ಕಡೆಗೆ ದುರುಗುಟ್ಟಿಕೊಂಡು ನೋಡುತ್ತಿದ್ದರು (**ಪುನರು. ೬**).
[ ದರೋಡೆ + - ಕಾತಿ₂ ]

**ದರೋಡೆಕಾರ,** ದರವಡೆಗಾರ (ನಾ). ಲೂಟಿ ಹೊಡೆಯುವವನು ; ದರೋಡೆಮಾಡುವವನು: ಒಂದು ದಿನ ಅವರು ಆಶ್ರಮಕ್ಕೆ ಹೊರಗೆ ಒಂದು ಮರದ ಕೆಳಗೆ ಮೌನದಲ್ಲಿ ಮುಳುಗಿದ್ದಾಗ ಕೆಲವರು ದರೋಡೆಕಾರರು ಆ ಕಡೆ ಬಂದರು (**ವ್ಯಾಸಜಿ. ೩೬**); ಕೈರೋಕ್ಕೆ ಹೋಗುವ ದಾರಿಯಲ್ಲಿ ಅನೇಕ ಸಲ ದರೋಡೆಕಾರರು ಈ ಸಾಮಾನುಗಳನ್ನು ಕಸಿದುಕೊಳ್ಳುತ್ತಾರೆ (**ಪ್ರವಾಇ. II, ೨೨೦**). **ದರವಡೆಗಾರ:** ಮೊದಲೇ ದರವಡೆಗಾರರ ಹಾವಳಿಯಿಂದ ಹೈರಾಣಾಗಿದ್ದ ಹಂಸೆಯ ದೇಹ ಈಗಿನ ಮಾನಸಿಕ ಅಸ್ವಸ್ಥತೆಯಿಂದ ಮತ್ತಿಷ್ಟು ಹೈರಾಣಾಗಲು, ಅವಳು ಹಾಸಿಗೆಯಿಂದ ಎದ್ದಿರಲಿಲ್ಲ (**ಹಂಸಾ. ೬೨**).
[ ದರೋಡೆ + - ಕಾರ₁ (< - ಕಾಱ) ]

**ದರೋಡೆಖೋರ,** ದರವಡೆಖೋರ (ನಾ). = ದರೋಡೆಕಾರ : ಶಿವನಿಗೆ ತಿಳಿಯಿತು ಇವರು ಕಳ್ಳತನಕ್ಕಾಗಿ ಹೋಗುತ್ತಿದ್ದಾರೆಂದು ! ದರೋಡೆಖೋರರು !! (**ದೇವಸಾ. ೦೫**). **ದರವಡೆಖೋರ:** ಪ್ರತಿಯೊಬ್ಬ ದರವಡೆಖೋರನೂ, ಪ್ರತಿಯೊಬ್ಬ ಮೋಸಗಾರನೂ ನಮ್ಮ ಕಡುವೈರಿಯಾಗಿರುವನು (**ಅಂಬಿಕ. ೨೫**); ನಾವು ಕಳ್ಳರಲ್ಲ . . . ನಾವು ದರವಡೆಖೋರರು (**ಅಶ್ವಮೇ. ೦೬**); ಮಹಾ ಚಾಣಾಕ್ಷನಾದ ಒಬ್ಬ ದರವಡೆಖೋರನು ನನ್ನನ್ನು ಹುಚ್ಚನನ್ನಾಗಿ ಮಾಡಿ ಕೂರಿಸಿರುವನು (**ಕಳ್ಳಕಾ. ೩**) ; ಸಭೆಯಲ್ಲಿ ದರವಡೆಖೋರರ ಚಂದದ ಆಚರಣೆ ನಡೆದದ್ದರಿಂದ, ತಪಸ್ವಿಗಳು ಬಂದರೂ ನಿನಗೆ ಉತ್ಸಾಹವಿಲ್ಲದಾಗಿದೆ (**ಮಭಾರ. ೨೨**).
[ ದರೋಡೆ + - ಖೋರ ( - ಕೋರ₃ ) ]

**ದರೋದರ** (ನಾ). ೧. ಪಗಡೆಯಾಟ ; ದಾಳದಾಟ. ೨. ಜೂಜುಕೋರ ; ಜೂದಾಳಿ. ೩. ಪಣ ; ಪಂಥ ; ಜೂಜು. ೪. ಪಗಡೆ ; ದಾಳ. [ ಸಂ. ]

**ದರೋಬಸ್ತು** (ಗು). ಎಲ್ಲಾ ; ಸಮಗ್ರ ; ಸಮಸ್ತ ; ಸಂಪೂರ್ಣ ; ಪೂರ್ತಿಯಾದ ; ಒಟ್ಟಾದ : ಬೆಳ್ಳಾರೆ ಮಾಗಣೆ ಒಂದಕ್ಕೆ ದರೋಬಸ್ತುಗ್ರಾಮ ಮೂವತ್ತೇಳು (**ರಾಜೇಂದ್ರ. ೨೫೦**) ; ಅವರಿಗೆ ಸ್ವಲ್ಪವಾದರೂ ಆಟಕಾವು ಮಾಡದೆ ದರೋಬಸ್ತು ಮಹಸೂಲು ಬಿಟ್ಟುಬಿಡುವುದು (**ಮಹಾಪಂ. II, ೬೬**).

**ದರೋಬಸ್ತರು** = ಎಲ್ಲರು ; ಸಮಸ್ತರು : ದಿಗರ ತಾಲ್ಲೂಕಿಗೆ ಹೋಗಿರುವ ರೈತರು ಯಾವ ಯಾವ ತಾಲ್ಲೂಕಿನಲ್ಲಿಧಾರೆಯೊ ದರೋಬಸ್ತರ ಪತ್ತೇ ಹತ್ತಿಸಿ ಸದರಹೂ ರೈತರಿಗೆ ನಂಬಿಕೆಯಿಂದ ಕರೆತರಿಸಿ . . . ಜಿರಾಯಿತು ಕೆಲಸದಲ್ಲಿಡಬೇಕು (**ಮಹಾಪಂ. II, ೬೨**). **ದರೋಬಸ್ತಾಗು** = ಸಂಪೂರ್ಣ ಸಜ್ಜಾಗು : ಏನೋ, ಗುತ್ತೀ ಮುಗಿಲ ಕಡೆ ನೋಡ್ತಾ ನಿಂತೆ ? ದೂರಾ ? ಒಳ್ಳೆ ದರೋಬಸ್ತಾಗಿದ್ದೀಯಲ್ಲಾ ! (**ಮಲೆಮ. ೧**).
[ ←ಪಾರ. ಮರಾ. ದರೋಬಸ್ತ್ ]

**ದರೋಬಸ್ತುಫೌಜು** (ನಾ). ಒಟ್ಟು ಸೈನ್ಯ ; ಸಮಗ್ರದಳ ; ಸಂಪೂರ್ಣ ಸೇನೆ : ದರೋಬಸ್ತುಫೌಜು ಹೊರಟು ಹೊಸಕೆರೆ ಬಳಿ ನಿಂತಿತು (**ಚಿತ್ರಪಾ. ೬೩**). [ ದರೋಬಸ್ತು + ಫೌಜು (<ಪೌಜು) ]

**ದರ್ಖಾಸ್ತು** 'ದರಖಾಸ್ತು' ನೋ.

**ದರ್ಕು₁**, ದಕ್ಕು₂ (ಕ್ರಿ). ೧. ಅಧಿಕವಾಗು; ಹೆಚ್ಚಾಗು. 'ದರ್ಕುಸೋರಂ' ಪರಾ. ೨. ಸೊಕ್ಕಿಗೇಳು; ಅಹಂಕಾರಪಡು; ಗರ್ವಿಸು. ೩. ಉತ್ಸಾಹಗೊಳ್ಳು; ಸಂಭ್ರಮಗೊಳ್ಳು. 'ದರ್ಕುಂದಲೆ₁' ಪರಾ. **ದಕ್ಕು₂** : ೨. 'ದಕ್ಕುಂದಲೆ₁' ಪರಾ. [ ←ತಮಿ. ತರುಕ್ಕು ]

**ದರ್ಕು₂**, ದಕ್ಕು₄ (ನಾ). ೧. ಚೂಪಾದ ಮರದ ಕೋಲು; ದಸಿ : ಸಭೆಯೊಳೀಶಾನೇಂದ್ರನೆಮ್ಮ ಸಮ್ಯಗ್ದರ್ಶನಮಂ ಪೊಗೞ್ದುದರ್ಕೆ ದರ್ಕಂ ನುಂಗಿದಂತುದ್ಗ್ರೀವನಾಗಿ ಮತ್ಸರಪ್ರೇರಿತನೆಮ್ಮಂ ಸೋಲಿಸಲ್ ಬಂದು ತಾನೆ ಸೋಲ್ತು ಪೋದಂ (ಶಾಂತಿಪು. ೮-೧೫೦ ವ); ದರ್ಕು[ಪಾಠಾಂ. ದಕ್ಕು] ವೆರಸಿದ ಕುೞಿಯಲ್ಲಿಯುಂ [ಉ]ಮಿವೆರಸಿದ ಕಿಚ್ಚಿನಲ್ಲಿಯುಂ ಕುಕೂಲ ಮೆಂಬುದು (ಹರಿವಂಶ. ೧೩೮-೪೦). ೨. ಚೂಪಾದ ತುದಿಯುಳ್ಳ ಲೋಹದ ಸಾಧನ; ಶೂಲ: ಅವರುಮಾತನಂ ಶ್ಮಶಾನಕ್ಕೆೞೆದುಕೊಂಡು ಪೋಗಿ ದರ್ಕಂ ಬಸಿದು ಸೂಲದೊಳಿಕ್ಕುವಾಗಳ್ (ವಡ್ಡಾರಾ. ೧೧೭-೨೫). ೩. ಮುಳ್ಳು; ಕೂಳೆ : ಮೂವತ್ತೆರಡುಕೋಟಿ ಕಸವರ ಮುಮಂ ಕೊಳದ ಪುಲ್ಲ ದರ್ಕಂ ತೊೞೆವಂತನಿತುಮಂ ತೊೞೆದು (ವಡ್ಡಾರಾ. ೪೬-೧೦). **ದಕ್ಕು₄**: ೧. "ಆರೋಗ್ಯ ದಸಿ ಪಶಗಳೊಳ್ ದಕ್ಕು" (ಶಬ್ದಮಂ. ೭೯); ಕಲಹಂಸೆಗಳ್ ಬಲ್ಲಿತಪ್ಪುದೊಂದು ದಕ್ಕಂ ತಂದದೞೆರಡು ಕಡೆಯುಮಂ ತಾವಡಸಿ ಕರ್ಚಿ ನಡುವೆಯಾಮೆಯುಂ ಕರ್ಚಿಸಿಕೊಂಡನೇಕ ಗ್ರಾಮ ನಗರ . . . ದ್ರೋಣಾಮುಖಂಗಳಂ ಜನಪದಂಗಳಂ ಕಳಿದು ಬರುತ್ತುಂ (ಪಂಚತಂ. ೧೫೭-೧೫); ದಕ್ಕಿನೊಳ್ ಮಾಡಿದ ಮನೆ ಸೊಕ್ಕಿದಾನೆ ಸೋಂಕೆ ಕೆಡೆದು ಬೀೞ್ವಂತೆ ದೆಸೆೞಿಯಪ್ಪ ದೇವನಂ ಪಿಡಿದ ಮಾನಿಸನುಂ . . . ಬೀೞ್ಗುಂ (ಧರ್ಮಾಮೃ. ೧೧-೪೪); ಲಿಂಗವ ಪೂಜಿಸಿದ ಬಳಿಕ ಜಂಗಮಕ್ಕಂಜಲೇ ಬೇಕು ದಕ್ಕ ನುಂಗಿದಂತೆ ಬೆರತುಕೊಂಡಿರಬೇಡ (ಬಸವ. ೦೮೯); ಆತ್ಮತೃಪ್ತ ದಕ್ಕುಳ್ಳ ಕುೞಿಯುಮಿವೆರಸು ಕಿಚ್ಚಿನೊಳು ಸಲೆ ಕುಕೂಲಮದೆಂಬುದು (ಮಂಗರಾ. ೧೪೨-೧೮). ೨. ಬೊಂತಿಯಂತೆ ದಕ್ಕಿನೊಳಿರ್ದ ಪಂದಲೆಗಳಂ ಬಂದಿಕಾಱನಂತೆ ತೆಱಪುವಾರ್ದು ಪಿಡಿವ ಶಾಕಿನಿಯರಿಂ (ಕಾವ್ಯಸಾ. ೫೨೯ ಶೂದ್ರಕ); ತನಗಲ್ಲದುದ ನಾಸಿಕ ವಾಸಿಸಿದಲ್ಲಿ ಅಲ್ಲಿಯೇ ದಸಿಯ ದಕ್ಕನೇಱಿಸುವೆನು (ಸರ್ವಜ್ಞ. ೧೧೧-೫೪೯). ೩. ತಿಲಕದ ತೊಕ್ಕಪ ಮಾರ್ಗಂಗಳ ದಕ್ಕಂ ಸುಟ್ಟು ಮೂತ್ರದಿಂದರೆದು ಸರ್ವೋಜ್ವಲಚೂರ್ಣಾವಿಮಿಶ್ರಿತದಿಂ ವಿಲೇಪನಂಗೆಯ್ದು ಕಳೆಗೆ ದುಷ್ಟ ವ್ರಣಮಂ (ಅಶ್ವಶಾ. ೦೨-೪).

**ದರ್ಕುಂದಲೆ₁**, ದಕ್ಕುಂದಲೆ₁ (ನಾ). ೧. ಸೊಕ್ಕಿಗೇರುವಿಕೆ ; ಉನ್ಮತ್ತತೆ; ಉದ್ಧತಿಕೆ. ೨. ಉತ್ಸಾಹಗೊಳ್ಳುವಿಕೆ ; ಸಂಭ್ರಮ. 'ದರ್ಕುಂದಲೆವಾಯ್' ಪರಾ. **ದಕ್ಕುಂದಲೆ₁** : 'ದಕ್ಕುಂದಲೆವರಿ', 'ದಕ್ಕುಂದಲೆವಾಯ್' ಪರಾ. [ ದರ್ಕು₁ + –ದಲೆ ]

**ದರ್ಕುಂದಲೆ₂**, ದಕ್ಕುಂದಲೆ₂ (ನಾ). ಶೂಲಕ್ಕೆ ಹಾಕಿದ ತಲೆ: ಉದಂತಕ್ಕೆ ತಕ್ಕುಂದಱಿ, ದರ್ಕುಂ[ಪಾಠಾಂ. ಕ್ಕುಂ] ದಲೆ, ತಾಱುಂಬಱಿ (ಶಮದ. ೦೬೩ ಪ್ರಯೋ). **ದಕ್ಕುಂದಲೆ₂**: ಅಲ್ಲಿ ಗುಡಿಗಟ್ಟಿದ ಸೀರೆಯಂತೆ ದಕ್ಕುಂದಲೆಗೆ ವಂದರುಂ ಮೆಚ್ಚುಕೆಯ್ವರಂತೆ ತೂಗುವ ತೂಗುಂದಲೆಗಳುಂ (ಬಂಹರಿ. ೨-೧೧ ವ). [ ದರ್ಕು₂ + ತಲೆ₁ ]

**ದರ್ಕುಂದಲೆವಾಯ್**, ದಕ್ಕುಂದಲೆವಾಯ್ (ಕ್ರಿ). ೧. ಸೊಕ್ಕಿನಿಂದಿರು; ಬೀಗು; ಸೆಟೆ; ಸೆಡೆ: ಉರ್ಕಿ ದರ್ಕುಂದಲೆವಾಯ್ದು ಪಂಚಶರನಂ ಮಂಚದ ಕಾಲೊಳ್ ಕಂದು ಕಟ್ಟಿ ನಿನ್ನ ಪಗೆಯು ಬಗೆದಂತೆ ಕೀರ್ಚಿ ತೋಱುವೆಂ (ಲೀಲಾವ. ೧೧-೮೩ ವ). ೨. ಉತ್ಸಾಹಗೊಳ್ಳು ; ಉಬ್ಬು : ಪೊರ್ಕುಳಿಯಾಡಿದುವಲರೊಳ್ . . . ತನಿಗಂಪಿಂದಟ್ಟಿಮೆವಟ್ಟುವು ಕುಡಿಯೊಳ್ ದರ್ಕುಂದಲೆವಾಯ್ದುವಲ್ಲಿ ಮದಮಧುಪಂಗಳ್ (ಮಲ್ಲಿಪು. ೦೪-೧೪೪). **ದಕ್ಕುಂದಲೆವಾಯ್** : ೧ ಉದ್ಧತಿಯಿಂದಮುಮಂದಿರುರ್ಕಿ ದಕ್ಕುಂದಲೆವಾಯ್ವರ್ (ಸುಕುಮಾ. ೨-೮) ; ಅಂತುರ್ಕಿ ಸೊರ್ಕಿಂ ದಕ್ಕುಂದಲೆವಾಯ್ದು ದೂರ್ತಿಂ ಕಣ್ಣಾಣದೆ ಸೂಳೆಗೇರಿಯುಂ ಪೊಕ್ಕು (ಧರ್ಮಾಮೃ. ೨-೪೩) ; ಉರ್ಕಿ ದಕ್ಕುಂದಲೆವಾಯಲ್ಕಳ್ಕಿ ವೀರಾರಿಗಳುಱದಡುರ್ (ಮುಂಬರಾ. XI, ೨೪೮-೦೪ ; 1121). ೨. ತನಿವಣ್ಣ ರಸದಿಂ ಸೊರ್ಕಿತನಿ ದಕ್ಕುಂದಲೆವಾಯ್ದು ಬಗ್ಗಿಸುವ ಪಿಕಂಗಳ . . . ವೀಕ್ಷಿಸುತ್ತುಂ (ಮಹಾನೇ. ೫-೨೧ ವ); ಕುಸುಮಾಸವಮಂ ಸವಿದುರ್ಕಿ ಸೊಕ್ಕಿ ದಕ್ಕುಂದಲೆವಾಯ್ವಾಗಳ್ . . . ಉನ್ಮದಾಳಿಗಳ್ (ಧರ್ಮನಾ. ೩-೮೩). [ ದರ್ಕುಂದಲೆ₁ + ಪಾಯ್₁ ]

**ದರ್ಕುಸೋರ್** (ಕ್ರಿ). ಅಧಿಕವಾಗಿ ಸೋರು (?) : ಸರಳಾಂಗಂ ಮಿಗೆ ಕುಂದಿ ತೋಱೆ ಕಿವಿಗಳ್ ತಣ್ಪೇಱೆ ಕಣ್ದರ್ಕುಸೋರೆ ಕರಂ ಮೆಯ್ ನವಿರುದ್ದಮಾಗಿ ನಿಲೆ ಮಂ(ಕುಂ)ದಾಯ್ತು (ಲೋಕೋಪ. ೯-೨೧೨). "ಥಣ್ಣನೆ(ನಾಗಿ)ಯಿರುಹ" (ಲೋಕೋಪ. ಟೀಕೆ). [ ದರ್ಕು₁ + ಸೋರ್₁ ]

**ದರ್ಖಾಸ್ತ್** 'ದರಖಾಸ್ತು' ನೋ.

**ದರ್ಖಾಸ್ತು** 'ದರಖಾಸ್ತು' ನೋ.

**ದರ್ಗಾ** 'ದರಗಾ' ನೋ.

**ದರ್ಜಿ** (ನಾ). ಬಟ್ಟೆ ಹೊಲಿಯುವವನು ; ಸಿಂಪಿಗ ; ಚಿಪ್ಪಿಗ : ಒಮ್ಮೆಗೆ ಓಲಗದೊಳು ಕುಳಿತಿರಲು ಬಂದರೆಡೆಗೆ ಇಬ್ಬರು ದರ್ಜಿಗಳು (ಗಜೇಶ. ೬೦-೪) ; ಆ ಕೋಟೆಗೂ ಒಂದು ಕಮಾಲು ಮಾಡಿಸಿದ್ದೆ, ದರ್ಜಿಗೆ ಹೇಳಿ (ಹಂಗೂಲಿ. ೧೧೨); ನಮ್ಮ ದೇಹಗಳು ನಮ್ಮ ಅಧೀನವೆ ? – ದರ್ಜಿಯವನಿಗೆ ಮಾರಿಕೊಂಡವು (ಸಾಹಿಜೀ. ೫೩). [ ←ಪಾರ. ದರ್ಜೀ ; ಹಿಂ. ಮರಾ. ದರಜೀ, ದರ್ಜೀ ]

**ದರ್ಜಿಗಿತ್ತಿ** (ನಾ). ಬಟ್ಟೆ ಹೊಲಿಯುವವಳು ; ಸಿಂಪಿಗಿತ್ತಿ : ದರ್ಜಿಗಿತ್ತಿಗಳು ನನ್ನ ಅಳತೆ ತೆಗೆದುಕೊಂಡರು (ಗಂಪ್ರ. ೭೫). [ ದರ್ಜಿ + –ಗಿತ್ತಿ ]

**ದರ್ಜೆ** (ನಾ). ೧. ವರ್ಗ; ಮಟ್ಟ; ಶ್ರೇಣಿ: ಆಕಳಿನ ಹಾಲು; ಇದರಲ್ಲಿರುವ ಸಸಾರಜನಕಗಳು ಅತ್ಯಂತ ಉತ್ತಮ ದರ್ಜೆಯವು (ಆಡುಸಾ. ೮೦); ಅವರ ಕಲಾಕೌಶಲ್ಯ ಎಷ್ಟು ಉಚ್ಚದರ್ಜೆಯದಾಗಿತ್ತು ಎಂಬುದಕ್ಕೆ ಪ್ರತ್ಯಕ್ಷ ನಿದರ್ಶನ ಈ ರತ್ನಗೋಲ (ರತ್ನಗೋ. ೨೪); ಅದಕ್ಕೆಲ್ಲಾ ಕಾರಣವೇನೆಂದರೆ, ಅವನ ಎರಡನೆಯ ದರ್ಜೆಯ ಗುಮಾಸ್ತೆ ನೌಕರಿ ! (ಕಂಬಹು. ೧೨೩). ೨. ಅಂತಸ್ತು ; ಯೋಗ್ಯತೆ ; ಅರ್ಹತೆ; ಪದವಿ ; ಗೌರವ : ಈ ತಾವು, ಶ್ಯಾಮರಾಯನ ದರ್ಜೆಗೆ ಹಲಕಾ ಎನಿಸತೊಡಗಿತು (ದೀಪಹ. II, ೦೪೭) ; ಅವರವರ ದರ್ಜೆಗೆ ತಕ್ಕಂತಹದು (ಉಡುಗೊ. ೭೮) ; ನಿಮ್ಮನ್ನು ಮೀರಿ ನಿಮಗಿಂತಲೂ ಕಡಿಮೆ ದರ್ಜೆಯವರು ಆ ಪದವಿಯನ್ನು ಹೊಂದುವರು (ಮಹಾತ್ಮಾ. ೭೮) ; ನಮ್ಮ ದರ್ಜೆಗೆ ಮೀರಿದವನಲ್ಲ ಎಂಬ ಭಾವ ನಮ್ಮಲ್ಲಿ ಆಗಾಗ ಹುಟ್ಟುವುದು (ರಾಮಾಪಿ. ೧೦೫). ೩. ತರಗತಿ ; ಇಯತ್ತೆ : ಅವನು ಆನೇ ದರ್ಜೆಯಲ್ಲಿ ಓದುತ್ತಿದ್ದಾನೆ (ರೂಢಿ). [ ←ಅರ. ದರ್ಜಾ, ದರಜಾ ; ಹಿಂ. ದರಜಾ ; ಮರಾ. ದರ್ಜಾ ]

**ದರ್ದು₁** 'ತರ್ದು₂' ನೋ.

**ದರ್ದು₂** 'ದರದು' ನೋ.

**ದರ್ದುರ₁** (ನಾ). ಕಪ್ಪೆ ; ಮಂಡೂಕ : "ಭೇಕಂ ಶಾಲೂರಂ ಮಂಡೂಕಂ ವರ್ಷಾಭು ದರ್ದುರಂ" (ವಸ್ತುಕೋ. ೨೩-೮) ; "ಭೇಕಂ . . . ದರ್ದುರಂ ಪೇೞೆ ಮಂಡೂಕಮಾ ಶಫರಿ ಶಾಲೂರಮೆನೆ ಕಪ್ಪೆಯಕ್ಕು" (ಮಂಗರಾ. ೦೨೧-೮); ದರ್ದುರಂ ಚೂಡಾಮಣಿಯಾಯ್ತು ನಕ್ರಂ ಚರ್ಮರತ್ನಮಾಯ್ತು (ಚಾವುಂಪು. ೭೮) ; ಸರ್ಪಂ . . . ಕೆಲವು ದಿವಸಂ ತಲೆಯಿಕ್ಕಿ ಪಟ್ಟಿರ್ದುದ ನೊಂದು ದರ್ದುರಂ ಕಂಡು (ಪಂಚತಂ. ೨೬೯-೯) ; ಹರಡೆ ಹಂಗಂ ರಾಸಭಂ ದರ್ದುರಂ ಗೌಳಿ ದರುಶನ ಸ್ವರವನಾ ವಾಮಭಾಗದೊಳೀಯೆ ಯರಲೆ ಕಾಕಂ ಹಸುಬನಾ ನಕುಲವಿವು ಬಲದೊಳಂ ತೋಱೆ ದನಿಮಾಡಲು ಪರಿಪಕ್ವಫಲವು (ಹೀರಮ. ೧೧-೩). [ ಸಂ. ]

**ದರ್ದುರ₂,** ದರ್ದುಟಿ (ನಾ). ಬಾವು ; ಊತ ; ದದ್ದರಿಸಿಕೊಂಡುದು : ಪುರಾಕೃತಸುಕೃತ ಫಲಂಗಳವಂ ನೆನೆದನವರತಮುಱ್ಚು ಬಾತ ಕಣ್ಗಳ್ಗಂ ಚಿಂತಾನಿದ್ರೆಯಿಂ ದರ್ದುರವಾದ ಮೊಗಮುಂ (ಶಾಂತಿಪು. ೪-೭೯ ವ).
△ **ದರ್ದುಟಿ :** ಬಿಸುಸುಯ್ಯು ಬೆಂಕೆಯಲೆಪಿಂ ಪಳ್ಚಿರ್ದ ಬೆಳ್ವಾಯು ದರ್ದುಟಿಮೇಂ[ಪಾಠಾಂ. ಮುರ್ಮುಟಿನೇರ] ಮಾಣ್ದುದೆ ತಾಂ ಗಡ (ಲೀಲಾವ. ೨-೬೫). 'ದದ್ದರ$_1$' ಪರಾ. [ ? ]

**ದರ್ದುರಕ** (ನಾ). [ಕಾಮಶಾ] ರತಿಬಂಧಗಳಲ್ಲಿ ಒಂದು: ಅಸಿಯಳಂಗತನೆ ಮಲಂಗಿ ಸಸಿನೆ ತೊಡೆಯನಿಟ್ಟು ಮಡಿಯೆ ಪಸರವಾಗಿ ಪದಮನೆರಡನೂರು ಯುಗದೊಳು ಮಿಸುಕದಂತಿರಲು ಪುಳಕವೊಸರಲಪ್ಪಿ ಗಾಢದಿಂದಪೊಸೆದು ರಮಿಪಳಿಂದೆ ದರ್ದುರಕವೆನಿಪ್ಪುದು (ಜನವ. ೧೦-೮). [ ಸಂ. ]

**ದರ್ದುರಿ** (ನಾ). ಒಂದು ಬಗೆಯ ಮರ; ಬಿಂಟ್ಲಮರ: "ದರ್ದುರಿಯೆನಲು ಮಿಟಲಿಯಕ್ಕು" (ಮಂಗರಾ. ೩೫-೧೪). [ ? ]

△ **ದರ್ದುಟಿ** 'ದರ್ದುರ$_2$' ನೋ.

**ದರ್ದ್ರು** (ನಾ). ಹುಳುಕಡ್ಡಿ. [ ಸಂ. ]

**ದರ್ಪ** (ನಾ). ೧. ಹೆಮ್ಮೆ ; ಗರ್ವ ; ಸೊಕ್ಕು ; ಅಹಂಕಾರ; ಮದ : "ದರ್ಪಃ, ಮದಃ . . . ಅಹಂಕಾರಃ – ಈ ೬ ಗರ್ವಂ" (ಹಲಾಯು. ೧೦೯-೩೭) ; "ದರ್ಪಮೆನಿಸಿರ್ಪುದಂ ದಪ್ಪವೆನಲಕ್ಕು" (ಕಬ್ಬಿಕ್ಕ. ೯೩) ; ನಿಜಾಧೀಶ್ವರರಾಜ್ಞೆಯಿಂ ಪ್ರತ್ಯಂತವಾಸಿಗಳಾಗಿ ಮಲೆದ ರಿಪುನೃಪರ ಸಮಿತಿಯ ದರ್ಪ್ಪಮಂ ಪೊಡರ್ಪ್ಪುಮನಡಂಗಿಸಿ ತದೀಯ ಸರ್ಬ್ಬಸ್ವಮಂ ನಿಜೇಶಂಗೆ ತಂದುಕೊಟ್ಟು (ನಾಂದೇಡ್. ೩-೨೨ ವ : 1047) ; ಹರುಷ ದರ್ಪ ಕ್ರೋಧ ಲಜ್ಜಾತುರತೆ ಮಾನ ವಿಮಾನವಿವರಲಿ ನಿರುತ ಸಮನೆಂದೆನಿಸಿ ಕೃತ್ಯಾಕೃತ್ಯಕೌಶಲವ ವಿರಚಿಸುವ ... ಕಾರ್ಯವೆಸಗುವವನೆ ಪಂಡಿತನು (ಕುಮ್ಮಾಉ. ೩-೪೪). ೨. ಠೀವಿ ; ಜಬರ್ ; ಜೋರು ; ವೆಂಕಪ್ಪಯ್ಯ ಮೊದಲಿನಿಂದಲೂ ದರ್ಪದ ಗಂಡನಾಗಿದ್ದ ವ್ಯಕ್ತಿ (ವಿದ್ಯಾರ. ೩): ಲಂಚ ಕಡಮೆಯಾಗಬೇಕಾದರೆ ಆಡಳಿತದಲ್ಲಿ ಬಿಗಿ ಮತ್ತು ದರ್ಪ ಹೆಚ್ಚಾಗ ಬೇಕು (ಪಂಚಪಂ. ೧೬೫). ೩. ಕೆಚ್ಚು ; ಧೈರ್ಯ ; "ಅದಟು" (ಚತುನಿ. ೬. I, ೯೯). [ ಸಂ. ]

**ದರ್ಪಂಗಿಡು** 'ದರ್ಪಂಗೆಡು' ನೋ.

**ದರ್ಪಂಗೆಡು,** ದರ್ಪಂಗಿಡು (ಕ್ರಿ). ಸೊಕ್ಕು ಅಡಗು ; ಹಮ್ಮು ಕಡಮೆ ಯಾಗು : ಪಂಚಾಕ್ಷರಿಯ ಪ್ರಣವವ ತಪ್ಪದೆ ತ್ರಿಸಂಧ್ಯೆಯಲ್ಲಿ ನೆನಹುಗೊಳ್ಳಿ ಇದರಿಂದ ರುಜೆ ದರ್ಪಂಗೆಡುಗು (ಸರ್ವವ. ೧೯-೯೨) ; ಬಾಳ ಬಾಯ್ದಾರೆಯ ಸೋಂಕಿಂದು ಕದಳೀದಳ ಸ್ಪರ್ಶನಕ್ಕೆ ದರ್ಪಂಗೆಟ್ಟೊ [ಪಾಠಾಂ. ಗಿಟ್ಟೊ]ಪ್ಪಂ ಗುಂದುತ್ತುಂ (ಗಿರಿಕ. ೪-೧೧೮ ವ). **ದರ್ಪಂಗಿಡು:** ಮೇಲಿನ 'ಗಿರಿಕ' ಪ್ರಯೋಗದ ಪಾಠಾಂತರವನ್ನು ನೋಡಿ. [ ದರ್ಪ + ಕೆಡು$_1$ ]

**ದರ್ಪಕ$_1$** (ನಾ). ಕಾಮ ; ಮನ್ಮಥ : "ಪ್ರದ್ಯುಮ್ನಃ . . . ದರ್ಪಕಃ ಶೂರ್ಪಕಾರಾತಿಃ, ... ಮನೋಭವಃ ಈ ೨೮ ಕಾಮ(ದೇವ)ನ ಪೆಸರ್" (ಹಲಾಯು. ೭-೩೪) ; ಧೈರ್ಯಂಗೆಟ್ಟು ಮೇಲ್ವಾಯ್ವ ಚೇಷ್ಟೆಗೆ ಪೌಲಸ್ತ್ಯನು ಮೊತ್ತುಗೊಟ್ಟನೆನಲಾರಂ ದರ್ಪಕಂ ದಂಡಿಸಂ (ಪಂಪರಾಮಾ. ೯-೧೪೮) ; ಓರೊಂದೆ ಪೂವಿನ ಬಾಣಂಗಳು ಮೆಯ್ದ್ದಿ ಹೀನನಧಿಕಂಗಾಕ್ಷೇಪಮಂ ಮಾರ್ಪ್ಪುದಾವ ನಯಂ ದರ್ಪ್ಪಕ ಮೇಘಚಂದ್ರಮುನಿಯೊಳ್ಮಾಣ್ ನಿನ್ನ ದೋರ್ದ್ದರ್ಪ್ಪಮಂ (ಎಕ. II, ೦೨೭-೦೨೦ ; 1115) ; ಸಕಳ ನಿಕೇತನಂ ಗಳೊಳೆ ದರ್ಪಕನನ್ನಸ್ಮರಿತಿ ದರ್ಪಕಾಜ್ಞೆ ದರ್ಪಕನ ಕಥಾಳಿ . . . ದರ್ಪಕ ನಾಣೆ ಸುತ್ತಲುಂ (ಗಿರಿಕ. ೪-೦೨೦) ; ಇದು ಕುಸುಮಾಸ್ತ್ರನಸ್ತ್ರಮಿದು ದರ್ಪಕನಾರ್ಪು ಮನೋಜನೋಜೆ ನೋಡಿದು ನನೆವಿಲ್ಲ ಬಲ್ಲುಹನ ಚೆಲ್ವಿದು . . . ಮಾರವೀರನಗ್ಗದಸದಳಂ ಕೃತಿಧ್ವಜಮಿದೆಂದೆನಿಸಿರ್ದುದು ರೂಪು ನೀಟಿಯಾ (ರಾಜಶೇ. ೭-೬೩). [ ಸಂ. ]

**ದರ್ಪಕ$_2$** (ನಾ). ತರಕಲಾದುದು (?) : ದರ್ಪಕವುಲ್ಲದ ಜಿಹ್ವಂ ನೇರ್ಪಟ್ಟಸಿದಾಗಿ ನುಣ್ಪುವೆತ್ತೆಳ್ಪನಿತುಂ ಕರ್ಪಿಲ್ಲದೆ ನಿಡಿದಪ್ಪುದದಾರ್ಪ ತೆರಪು ದಶನರಾಜಿಯುಂ ರಾಜಿಪುದುಂ (ಅಶ್ವಶಾ. ೧-೨೨). [ ? ]

**ದರ್ಪಕದರ್ಪಭಂಜನ** (ನಾ). ೧. ಮನ್ಮಥನ ಗರ್ವಭಂಗ ಮಾಡಿದವನು; ಶಿವ. ೨. ಮನ್ಮಥನ ಸೊಕ್ಕನ್ನು ಅಳಿಸಿದವನು; ಜಿನ : ಅನಂತಬೋಧ ನಿಧಿ ನಿತ್ಯಸುಖೋನ್ಮುಖಿನೀ ಕುಮಾರಕಂ ಪರಿಣಯನೋತ್ಸವಕ್ಕೆ ಬಗೆ ದರ್ಪನೆ ದರ್ಪಕದರ್ಪಭಂಜನಂ (ಮಲ್ಲಿಪು. ೧೩-೮೪).
[ ದರ್ಪಕ$_1$ + ದರ್ಪ + ಭಂಜನ ]

**ದರ್ಪಕಧ್ವಂಸಿ** (ನಾ). ಕಾಮನನ್ನು ನಾಶಮಾಡಿದವನು ; ಶಿವ : ಇಂತು ಸಕಲದೇವವಲ್ಲಭನಪ್ಪ, ಸರ್ಪಾಭರಣನಂ ದರ್ಪಕಧ್ವಂಸಿಯಂ . . . ಅರ್ಚಿಸುತ್ತಮಿಪ್ಪ ಸಮಯದೊಳು (ಬಸರ. ೪-೧) ; ಕಂದರ್ಪಜನಕಾದಿಗಳ್ ಮೊಟೆಯಿಡಲ್ ಕೇಳ್ದು ತದ್ದರ್ಪಕಧ್ವಂಸಿ ತವ ಮಥೆಗೆ ಬರುತಿರಲುಸಿರ ಬಂದೆವಿದು ಹದನೆಂದನು (ಜಬಪು. ೪೭-೧೭). [ ಸಂ. ದರ್ಪಕಧ್ವಂಸಿನ್ ]

**ದರ್ಪಕಪ್ರತಾಪ** (ನಾ). ಕಾಮನ ಪರಾಕ್ರಮ ; ಮನ್ಮಥನ ಶಕ್ತಿ : ವಿಚಾರಿ ಪೊಡಿಂತಿದು ದರ್ಪಕಪ್ರತಾಪದ ಪರಿಜೊಂದು ಸಂದಣಿಯೊ ಪೇಳೆನೆ ಬಂದುದು ಭಾಮಿನೀಜನಂ (ರಾಜಶೇ. ೧೦-೧೨). [ ದರ್ಪಕ$_1$ + ಪ್ರತಾಪ ]

**ದರ್ಪಕವಿರೋಧಿ** (ನಾ). ಮನ್ಮಥನ ಶತ್ರು ; ಶಿವ : ಬಾಣಾಸುರಂ ಸಂಗ್ರಾಮಕಾಮನಾಗಿ ತನ್ನುಪವನದೊಳ್ ಸನ್ನಿಹಿತನಾಗಿರ್ಪ ದರ್ಪಕ ವಿರೋಧಿಯನಾರಾಧಿಸಿ (ಜಗವಿ. ೧೭-೮೮ ವ). [ ದರ್ಪಕ$_1$ + ವಿರೋಧಿ ]

**ದರ್ಪಕಹರ** (ನಾ). = ದರ್ಪಕಧ್ವಂಸಿ : ದರ್ಪಕಹರನಿಂದ ತನು ದಗ್ಧನಾದ ಕಂದರ್ಪ ನಿನ್ನಯ ಬಸಿಟಿಗೊಳಗೆ ಬರ್ಪನು ನಾ ಕೊಟ್ಟ ವರದೊಳು ತುಸು ಮಾತ್ರ ತಪ್ಪದು ಕೇಳಾಯತಾಕ್ಷಿ (ಮೋಹತ. ೪-೨೩). [ ಸಂ. ]

**ದರ್ಪಕಾಹಿತ** (ನಾ). ಮನ್ಮಥನ ವಿರೋಧಿ ; ಶಿವ : ದರ್ಪಕಾಹಿತಮೂರ್ತಿ ಮುನಿಮುಖದರ್ಪಣನು ಶಿಷ್ಯನನು ಕರೆದು ಸಮರ್ಪಿಸಿದನರಸಂಗೆ ವೇದ ವ್ಯಾಸಮುನಿರಾಯ (ಕುಮ್ಮಾಅ. ೨-೭). [ ದರ್ಪಕ$_1$ + ಅಹಿತ ]

**ದರ್ಪಣ** (ನಾ). ಕನ್ನಡಿ; ಮುಕುರ : "ಆದರ್ಶಃ, ದರ್ಪಣಃ, ಮುಕುರಃ – ಈ ೩ ಕನ್ನಡಿ" (ಹಲಾಯು. ೯೦-೪೦೦) ; "ಆದರ್ಶನಂ ದರ್ಪಣಂ ಮುಕುರ ಮೆಂದೆನಲ್ ಕನ್ನಡಿಗೆ ನಾಮಮಕ್ಕುಂ" (ಮಂಗರಾ. ೬೧-೧೮); ಕೇರಳ ವಿಟೀ ಕಟೀಸೂತ್ರಾರುಣಮಣಿ ಮಲಯಯುವತಿದರ್ಪಣನಾಂಧ್ರೀ ನೀರಂಧ್ರ ಬಂಧುರಸ್ತನಹಾರನುದಾರಂ ಸರಸ್ವತೀಮಣಿಹಾರಂ (ಆದಿಪು. ೦-೩೨) ; ಕಂದನ ಕೈಯ ದರ್ಪಣವ ಪ್ರತಿಬಿಂಬ ನುಂಗಿತ್ತು ದಿವಾರಾತ್ರಿ ಉದಯದ ಬೆಳಗನು ಕತ್ತಲೆ ನುಂಗಿತ್ತು (ಅವಚ. ೪-೦೩) ; ತುಪ್ಪೇಜಿದ ದರ್ಪಣದೊಳ್ ಪಜ್ಜಳಿಸಲಾರ್ಪುದೇ ಪ್ರತಿಬಿಂಬಂ (ಯಶೋಚ. ೦-೩೯) ;
[ ಸಂ. ]

**ದರ್ಪಣನ್ಯಾಯ** (ನಾ). ಒಂದು ಬಗೆಯ ನ್ಯಾಯ ; ಕನ್ನಡಿಯಲ್ಲಿ ಪ್ರತಿಬಿಂಬಿಸುವ ಮುಖವೇ ಮೊದಲಾದವುಗಳ ಪ್ರತಿಬಿಂಬವು ಬಿಂಬ ಕ್ಕಿಂತ ಬೇರೆಯಾದುದಲ್ಲ. ಹಾಗೆಯೇ ಒಂದು ವಸ್ತುವಿನಂತೆ ಮತ್ತೊಂದು ವಸ್ತುವು ಇದೆ ಎಂದು ತಿಳಿಸುವ ನ್ಯಾಯ. ಇದನ್ನೇ ಬಿಂಬಪ್ರತಿಬಿಂಬನ್ಯಾಯವೆಂದೂ ಹೇಳುತ್ತಾರೆ : ವರ ಸಮಾನೀಕ ರೊಳ್ ದರ್ಪಣನ್ಯಾಯದಿಂ ಪರಿಶೋಭಿಸುತ್ತಿಹಂ (ವಂಶಾರಾ. ೨-೧-೩೦)
[ ದರ್ಪಣ + ನ್ಯಾಯ ]

**ದರ್ಪಣಮಂಟಪ** (ನಾ). ಕನ್ನಡಿಯಿಂದ ರಚಿತವಾದ ಮಂಟಪ, – ಚಪ್ಪರ ; ಕನ್ನಡಿ ಜೋಡಿಸಿದ ಮಂಟಪ : ಮತ್ತಮಾ ವನಂಗಳಲ್ಲಿ ಚಿತ್ರಶಾಲೆ . . . ದರ್ಪಣಮಂಟಪ, ಪಟಮಂಟಪ, ಪುಷ್ಪಮಂಟಪ, ಚಿತ್ರಮಂಟಪ, ರತ್ನಮಂಟಪ, ತರುವಾಟಿಗಳ ತಣ್ಣೆಳಲ್ಗಳೊಳಗೆಯುಂ (ವಿವೇಕ. ೨೨೮). [ ದರ್ಪಣ + ಮಂಟಪ ]

**ದರ್ಪಣಲಿಪಿ** (ನಾ). ಒಂದು ಬಗೆಯ ಲಿಪಿ ; ಗೂಢಲಿಪಿ ; ಕನ್ನಡಿಯಲ್ಲಿ ನೋಡಿ ಓದಬಹುದಾದ ಲಿಪಿ (?) : ಲೇಖಲಿಪಿ, ದರ್ಪಣಲಿಪಿ, ರಗಣಲಿಪಿ . . . ಅಗಣಿತ ಲಿಪಿಗಳ ನೋಡಲಚ್ಚರಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲ (ಭಾಸ್ಕರ. ೭೭-೬).
[ ದರ್ಪಣ + ಲಿಪಿ ]

**ದರ್ಪಣಾವಲೋಕನ** (ನಾ). ಕನ್ನಡಿಯಲ್ಲಿ ನೋಡಿಕೊಳ್ಳುವಿಕೆ : ಸಕಲ ವಾಧ ಭೂಷಣಭೂಷಿತನಾಗಿ ದರ್ಪಣಾವಲೋಕನವಂ ಮಾಡಿ, ಅಗ್ನಿ ಕಾಣಿಸಿದ್ದನ್ನು ತಿಳಿದು ನೋಡಿ ಭೋಜನ ಮಾಡಬೇಕೆಂದು ಬಲ್ಲವರ ಮತವು (ಸಕವ್ಯ. ೪೯). [ ದರ್ಪಣ + ಅವಲೋಕನ ]

**ದರ್ಪಪೂರಿತ** (ಗು). ದರ್ಪದಿಂದ ಕೂಡಿದ ; ಠೀವಿಯಿಂದ ಕೂಡಿದ : "ಬರುತ್ತೀಯೋ ಇಲ್ಲೋ ?" ಎಂದು ಫೌಜುದಾರರು ಕೇಳಿದರು – ದರ್ಪ ಪೂರಿತ ಸ್ವರದಲ್ಲಿ (ನಾಪೋಲೀ. ೨೪೭). [ ದರ್ಪ + ಪೂರಿತ ]

**ದರ್ಪಮುಖಿ** (ನಾ). ಸೊಕ್ಕೇರಿದವನು : "ಮದಮುಖರೆನೆ ದರ್ಪ ಮುಖರು" (ಭಾರನಿ. ೨೪). [ ದರ್ಪ + ಮುಖ ]

**ದರ್ಪರಹಿತ** (ಗು). ೧. ಅಹಂಕಾರವಿಲ್ಲದ ; ಸರಳ ಸ್ವಭಾವದ. (ನಾ). ೨. ಅಹಂಕಾರವಿಲ್ಲದವನು ; ನಿರಹಂಕಾರಿ ; ಸರಳ ಸ್ವಭಾವದವನು: ಸಿರಿಯೊಡೆಯನಾಗಿಯುಂ ದರ್ಪರಹಿತನೋದೊಡೆಯನಾಗಿಯುಂ ವಿಗಳಿತ ಮತ್ಸರಂ . . . ಏಂ ಪಿರಿಯನೊ ಖಗೇಂದ್ರಾಧೀಶಂ (ಶಾಂತಿಪು. ೩-೮೭).
[ ದರ್ಪ + ರಹಿತ$_1$ ]

**ದರ್ಪವಡೆ** (ಕ್ರಿ). ಅಹಂಕಾರವನ್ನು ಹೊಂದು ; ಗರ್ವ ಪಡೆ : ದರ್ಪಕ ನೆರ್ದೆಯಲ್ಲಿ ಶಿವಿದು ರಕ್ಕಸ ಬಹು ದರ್ಪವಡೆದು ನಿಂದಿರ್ದ (ಮೋಹತ. ೧೨-೭೬). [ ದರ್ಪ + ಪಡೆ$_1$ ]

**ದರ್ಪಿತ** (ಗು). ೧. ದರ್ಪದ; ಸೊಕ್ಕಿನ; ಗರ್ವದ: ಕ್ಷಿತಿತಳದೊಳ್ ನೆಗಟ್ದಿರ್ದ ಪ್ರತಿಮಲ್ಲನನಿಕ್ಕಿ ಮುಯ್ವುನಣವಾನದೆ ದರ್ಪಿತ ದುರಿತ ಮಲ್ಲನುಮನುಡಿವ ತಕ್ಕಿನಿಂ ಸಭೆಗೆ ನಡೆದಂ (ಆದಿಪು. ೧೪-೧೩೪) ; ಸೂರ್ಪಕ ಪ್ರಹರಪ್ರಹಾರಿಗೆ ದರ್ಪಿತತ್ರಿಪುರೇಂದ್ರನಾಗ್ನಿಗಹರ್ಪತಿಪ್ರಣುತ ಪ್ರ ಭಾ ಮಯ ದಿವ್ಯದೇಹಂಗೆ . . . ಅರ್ಪಿಸುವೆನು (ಬಸವು. ೫೮-೪೧). (ನಾ). ೨ = ದರ್ಪಿಷ್ಠ : ಆದರೆ ಅವನ ಅನುಭವಕ್ಕೆ ಇನ್ನೂ ಗೋಚರವಾಗದ ಅನೇಕ ವಿಷಯಗಳು ಈ ಪ್ರಪಂಚದಲ್ಲಿರುವುದರಿಂದ ಇಂತಹ ಭವಿಷ್ಯವನ್ನು ನುಡಿಯುವವನು ದರ್ಪಿತನೆಂದು ಹೇಳಬೇಕೇ ಹೊರತು ಅಜ್ಞನೆಂದಲ್ಲ (ಭೌತವಿ. ೨೭೭). [ಸಂ.]

**ದರ್ಪಿಷ್ಠ** (ನಾ). ದರ್ಪದಿಂದ ಕೂಡಿರುವವನು; ಅಹಂಕಾರಿ : ನೆರೆದಿರ್ದ ನೃಪವರರುಮಂ ಮೂದಲಿಸಿ ಮಾತಂ ಬೂತುಮನಟ್ಟುವುದುಂ ದರ್ಪಿಷ್ಠ ನಪ್ಪ ಶ್ರಿಪೃಷ್ಠಕುಮಾರಕಂ (ಶಾಂತಿಪು. ೫-೪೭ ಪ) ; ರತ್ನಸಿಂಹಾಸನದ ಮೇಲೆ ದರ್ಪಿಷ್ಠ ದರ್ಪಕಕರಿಮೃಗೇಶನಗಜಾತಿವೆರಸೋಲಗಂಗೊಟ್ಟನು (ಸಿದ್ಧರಾ. ೧-೦೮). [ ಸಂ. ]

**ದರ್ಪಿಸು** (ಕ್ರಿ). ದರ್ಪಹೊಂದು ; ಗರ್ವಪಡು ; ಹೆಮ್ಮೆತೋರು: (ಶ).
[ ದರ್ಪ + – ಇಸು$_3$ ]

**ದರ್ಬಾರ್‌ಚಾವಡಿ** (ನಾ). ದರ್ಬಾರು ನಡೆಸುವ ಆಸ್ಥಾನ ಮಂದಿರ ; ಓಲಗಶಾಲೆ : ಮಹಾಸ್ವಾಮಿಗಳ ದರ್ಬಾರ್‌ಚಾವಡಿಯಲ್ಲಿ ಕಾಲುಮಡಿ ಯನ್ನಾಗಿ ಉಪಯೋಗಿಸಲು ಯೋಗ್ಯವಾಗಿದೆ (ಗಲಿಪ್ರ. ೨೩).
[ ದರ್ಬಾರ್$_0$ (<ದರ್ಬಾರು) + ಚಾವಡಿ ]

**ದರ್ಬಾರ್‌ಭಕ್ಷಿ** (ನಾ). (ಆಸ್ಥಾನದ) ಹಣಕಾಸಿನ ವ್ಯವಹಾರ ನೋಡಿ ಕೊಳ್ಳುವ ಅಧಿಕಾರಿ : ಕೂಡಲೆ ಮಹಾರಾಜರು . . . ದರ್ಬಾರ್‌ಭಕ್ಷಿ ಯವರಿಗೆ ಅದೇರೀತಿ ಅಪ್ಪಣೆಮಾಡಿದರು (ಸಂಗೀತ. ೪೯).
[ ದರ್ಬಾರ್$_0$ (<ದರ್ಬಾರು) + ಭಕ್ಷಿ (<ಬಕ್ಷಿ) ]

**ದರ್ಬಾರಿ,** ದರಬಾರಿ (ಗು). ೧. ದರ್ಬಾರಿಗೆ ಉಚಿತವಾದ; ಆಸ್ಥಾನಕ್ಕೆ ಯೋಗ್ಯವಾದ : ಪ್ರತಿಷ್ಠಿತರನ್ನೆಲ್ಲ ದರ್ಬಾರೀವಿನಯದಿಂದ ಸ್ವಾಗತಿಸಿದ (ಗ್ರಾಮಾಯ. ೮). (ನಾ). ೨. ಆಸ್ಥಾನಕ್ಕೆ ಸಂಬಂಧಿಸಿದವನು ; ಸಭಾಸದ ; ಆಸ್ಥಾನಿಕ : "ಆಸ್ಥಾನದ ದೊಡ್ಡ ಮನುಷ್ಯ; ಆಸ್ಥಾನಿಕ; ದರ್ಬಾರಿ" (Courtier. ೩೦೪೩). **ದರಬಾರಿ :** ೨. ನಗರದಲ್ಲಿ ಅವರಿಗೆ ಯಥೇಷ್ಟ ದರಬಾರಿಗಳು ದೊರೆತರು (ಸ್ಮೃತಿಚಿ. ೪೦೨).
[ ←ಪಾರ. ಹಿಂ. ದರ್ಬಾರೀ; ದರಬಾರೀ, ಮರಾ. ದರಬಾರೀ ]

**ದರ್ಬಾರು,** ದರಬಾರ, ದರಬಾರು (ನಾ). ೧. ಆಸ್ಥಾನ; ಒಡ್ಡೋಲಗ; ರಾಜಸಭೆ : ಮಹಾರಾಜರವರ ದರ್ಬಾರಿನಲ್ಲಿ . . . ಸರದಾರರನ್ನು ಮೊಕರರ್ಮಾಡಿದರು (ಮಹಾವಂ. II, ೩) ; ಅರಸನು ದರ್ಬಾರನ್ನು ಮುಗಿಸಿ ಹೊರಟನು (ಪಂಚಾಮ್ಮ. ೬೮) ; ಸಭೆಯು ಒಬ್ಬ ಮಹಾರಾಜನ ಅಥವಾ ಮಠಾಧಿಪತಿಯ ದೊಡ್ಡ ದರ್ಬಾರಿನಂತೆ ಕಾಣುತ್ತಿತ್ತು (ಹುಟ್ಟಿಹ. ೨೨). ೨. ಆಡಂಬರ ; ವೈಭವ ; ದೌಲು : ಆತನ ದರ್ಬಾರಿಗೆ ಕೊನೆಯೇ ಇಲ್ಲ (ತತ್ತ್ವಪ್ರಾ. ೫೬೩) ; "ಆದರೆ ನೆನಪಿರಲಿ, ನನ್ನ ದರ್ಬಾರೆಲ್ಲ ಒಂದೆ ಒಂದು ಗಂಟೆಯದು" ಎಂದು ಮಾಸ್ಲೆನಿಕೋವ್ ನುಡಿದನು (ಪುನರು. ೨೨೩). ೩. ದರ್ಪದಿಂದ ಕೂಡಿದ ಅಧಿಕಾರ : "ನೀನು ಈಗಿನಿಂದ ಏಟು ಹಾಕುತ್ತಿದ್ದೀ, ದರ್ಬಾರು ನಡೆಸಲಿಕ್ಕೆ" ರಾಯರು ಹೆಂಡತಿಯ ಮಾತಿಗೆ ನಕ್ಕು ಹೇಳಿದರು (ಮರಳಿ. ೮). ೪. [ಸಂಗೀತ] ಒಂದು ರಾಗದ ಹೆಸರು: ದರ್ಬಾರು:– ೨೨ನೇ ಮೇಳಕರ್ತ ಖರಹರಪ್ರಿಯದಲ್ಲಿ ಜನ್ಯ. ಗಂಭೀರ ರಾಗ, ಉಪಾಂಗರಾಗ . . . ವೀರರಸ ಪ್ರಧಾನ ರಾಗ. ಎಲ್ಲಾ ವೇಳೆ ಯಲ್ಲೂ ಹಾಡಬಹುದು (ಸಂಗೀಶಂ. ೧೬೨). **ದರಬಾರ$_1$ :** ೧. ; ಮಹಾರಾಜರ ದರಬಾರದ ಹಳೆಯ ಕಾಗದ ಪತ್ರಗಳನ್ನು ನೋಡುವ ಇಚ್ಛೆ ಅವರಿಗಿದ್ದಿತು (ರತ್ನಗೋ. ೭೦) ; ದ ರ ಬಾ ರ ದಿಂ ದ ಗಣೇಶ ನಾರಾಯಣನು ತನ್ನ ಮನೆಯ ಕಡೆಗೆ ಹೊರಟನು (ಮಂದಾಕಿ. ೨೨). **ದರಬಾರು :** ೧. ಶ್ರೀರಂಗಪಟ್ಟಣದಲ್ಲಿ ದವಲತ್ತು ಮಾಡಿದ ನವಾಬ ಹೈದರಲ್ಲಿ ಖಾನ ಬಹದರವರ ದರಬಾರಿನ ವರ್ತಮಾನದ ವಿವರ (ಹೈದರ.೨೯): ಅದನ್ನು ಬಾದಷಹ ಕೇಳಿ ದೊಡ್ಡ ದರಬಾರು ಮಾಡಿ . . , ಬುದ್ಧಿಯನ್ನು ಅರಿಯಬೇಕು (ಕಥಾಮಂ.IV, ೫೭) ; ಶ್ರೀರಂಗಪಟ್ಟಣದ ಮಹಾಮಂಡ ಲೇಶ್ವರರ ದರಬಾರಿನಲ್ಲಿ ಮೈಸೂರಿನ ರಾಜಒಡೆಯರಿಗೆ ಮನ್ನಣೆಯಿದ್ದಿತು (ಶ್ರೀರಾಯ. ೫).

**ದರ್ಬಾರು ನಡೆಸು, ದರಬಾರ ನಡೆಸು** = ೧. ಒಡ್ಡೋಲಗ ನಡೆಸು: ಮೈಸೂರು ಮಹಾರಾಜರು ದಸರೆ ಹಬ್ಬದಲ್ಲಿ ದರ್ಬಾರು ನಡೆಸುತ್ತಿದ್ದರು (ರೂಢಿ). ಭಾರತೀಯರ ಹೃದಯ ದೈವ ಸಮ್ರಾಜ ದರಬಾರ ನಡೆಸಿದನೆಲ್ಲಿ ನೋಡಿದುದೆ ಥಿಲ್ಲಿ (ಕಪುಪು. ೫೫). ೨. ಮಜಾ ಮಾಡು: ನಡೆಯುವಾಗ ಅವನು ದರ್ಬಾರು ನಡೆಸಿಬಿಟ್ಟ (ರೂಢಿ). ೩. ಅಧಿಕಾರ ನಡೆಸು : ಎಲ್ಲರ ಮೇಲೂ ದರ್ಬಾರು ನಡೆಸಿದರೆ ಸುಮ್ಮನಿರುತ್ತಾರೆಯೆ ? (ರೂಢಿ).
[ ←ಪಾರ. ಹಿಂ. ದರ್ಬಾರ್; ದರಬಾರ್, ಮರಾ. ದರಬಾರ್ ]

**ದರ್ಬು** (ನಾ). (?) : ಒಬ್ಬ ಪುರುಷನು ಹಲವು ಸ್ತ್ರೀಯರ ದರ್ಬಿನಲ್ಲಿ ಭೋಗಿಸುವನದು ತಾನಿಬ್ಬರೊಳು ಕದಂಬರತಿಯ್ಕೆ (ಕಕ್ಕೋಕ. ೦೦-೨೭).
[ P ಇದು 'ತರ್ಬು' ಎಂಬುದರ ಅಪಲಿಖಿತವಿರಬಹುದು ]

**ದರ್ಬೆ,** ದಬ್ಬೆ$_2$ (ನಾ). ಕುಶ; ದರ್ಭೆ : ಕೊರಲ ಪೊಸಜನ್ನಿವರಮೊಪ್ಪಿರೆ . . . ದರ್ಬೆ ಕರಮುತಿಶಯದಿಂ ಬೆರಳೊಳ್ ರಂಜಿಸೆ ಕಾಶಾಂಬರಮೆಸೆದಿರೆ ಬಂದು ನಿಂದು ಭೂಸುರನೊರ್ವಂ ವೇದರುಕ್ಕಂ ಪೇಟ್ದುಕ್ಷತೆಯನೀವುದುಂ (ಧರ್ಮಾಮೃ. ೧-೯೫). 'ದರ್ಬೆಹುಲ್ಲು' ಪರಾ. **ದಬ್ಬೆ$_2$ :** "ಧರ್ಭಾ – ದಬ್ಬೆ" (ಕಾಶಕ್ಕ. ೨೦೯). "ದಬ್ಬೆ–ದರ್ಭಾ = ಕುಶ" (ತದ್ಯಕೋ. ೦೮) ;
[ <ಸಂ. ದರ್ಭ ]

**ದರ್ಬೆಹುಲ್ಲು** (ನಾ). ಒಂದು ಬಗೆಯ ಹುಲ್ಲು; ಕುಶ : ನಾಳೆ ಗ್ರಹಣ, ಸ್ವಲ್ಪ ದರ್ಬೆಹುಲ್ಲು ತಾ (ರೂಢಿ). [ ದರ್ಬೆ + ಹುಲ್ಲು (<ಪುಲ್) ]

**ದರ್ಭ** (ನಾ). ಹೋಮ, ಹವನಾದಿಗಳಿಗೆ ಬಳಸುವ, ಸೂಜಿಯಂತೆ ಮೊನೆಯುಳ್ಳ ಹುಲ್ಲು; ದರ್ಭೆಯ ಹುಲ್ಲು; ಕುಶ; ದರ್ಭೆ: "ಬರ್ಹಿಃ ದರ್ಭಃ, ಕುಥಃ, ಕುಶಃ – ಈ ೪ ಕುಶೆ" (ಹಲಾಯು. ೩೨–೩೭). [ ಸಂ. ]

**ದರ್ಭಪರಿಸ್ತರಣ** (ನಾ). ದರ್ಭೆಯನ್ನು ಹರಡಿರುವುದು; ಹಾಸಿದ ದರ್ಭೆ : ದರ್ಭವಿಷ್ಟರೇ – ದರ್ಭಪರಿಸ್ತರಣದ ಮೇಲೆ, ಶಾಯಯೇತ್ – ಪಟ್ಟಿರಿಸುವುದು (ಪ್ರತಿಷ್ಠಾ. ೬–೦). [ ದರ್ಭ + ಪರಿಸ್ತರಣ ]

**ದರ್ಭಶಯನ** (ನಾ). ೧. ದರ್ಭೆಯ ಹುಲ್ಲಿನಿಂದ ಮಾಡಿದ ಹಾಸಿಗೆ; ದರ್ಭೆಹುಲ್ಲಿನ ಹಾಸಿಗೆ : ಚಿಲಾತಾವರ್ತರ್ ಪೂಜಾಪುರಸ್ಸರಂ ದರ್ಭಶಯನತಳಗತರ್ . . . ಬಂದು (ಆದಿಪು. ೧೩–೫೮ ವ): ಲಕ್ಷ್ಮಣನೊಡನೆ ದರ್ಭಶಯನದಲ್ಲಿ ಮಲಗಿದನು (ಪಡಭಾ. ೪೦೦). ೨. ದಕ್ಷಿಣ ಭಾರತದಲ್ಲಿ, ರಾಮೇಶ್ವರದ ಹತ್ತಿರದಲ್ಲಿರುವ, ರಾಮನು ದರ್ಭಶಯನದಲ್ಲಿ ಮಲಗಿದ್ದನೆಂದು ಹೇಳಲಾದ ಒಂದು ಸ್ಥಳದ ಹೆಸರು; ಒಂದು ತೀರ್ಥಕ್ಷೇತ್ರ. [ ದರ್ಭ + ಶಯನ ]

**ದರ್ಭಶಯ್ಯೆ** (ನಾ). = ದರ್ಭಶಯನ ೧ : ಅರ್ಚಿಸುವ ತುರಂಗದಂತಿರಥಸಂಕುಳಮೇಱುವ ದರ್ಭಶಯ್ಯೆ ಪೂಜಿಸುವ ಜನೇಂದ್ರಬಿಂಬಮೆಸೆವುಗ್ರರಣಾನಕರೌದ್ರಘೋಷಮೇರ್ವಸಕಮನುಂಟುಮಾಡಿದುದು ಪಂದೆಗಂ (ಆದಿಪು. ೧೪–೯೦). [ ದರ್ಭ + ಶಯ್ಯೆ ]

**ದರ್ಭಾಂಕುರ** (ನಾ). ದರ್ಭೆಹುಲ್ಲಿನ ತುದಿ: ಒಂದು ದಿವಸಂ ಶೋಣಿಯೆಂಬ ತೊಱೆಯ ತಡಿಯೊಳ್ ತನ್ನ ಕಾಲಂ ದರ್ಭಾಂ[ಪಾಠಾಂ. ವನ್ನಾಂ]ಕುರಂ ನೆತ್ತವರೆ ಕೊಂಡೊಡೆ ಮುಳಿದದನಗುಟ್ಟು ಸುಡುವೊನಂ ಸುಬಂಧು ಕಂಡು (ವಡ್ಡಾರಾ. ೧೮೪–೦). [ ದರ್ಭ + ಅಂಕುರ ]

**ದರ್ಭಾಧಿಕಾರ** (ನಾ). ದರ್ಭೆಯನ್ನು ಧರಿಸುವ ಹಕ್ಕು; ದರ್ಭೆಯನ್ನು ಹಿಡಿದು ಕರ್ಮಾಚರಣೆ ಮಾಡುವ ಅಧಿಕಾರ : ಚಾತುರ್ವರ್ಣ್ಯದೊಳಂ ದ್ವಿಜಜಾತಿಗೆ ದರ್ಭಾಧಿಕಾರಮಲ್ಲದೆ ವಂಶೋದ್ಭೂತನೃಪೋಚಿತಮರಿಯಂ ಘಾತಿಪ ಶಸ್ತ್ರಾಸ್ತ್ರಮವರ್ಗೆ ಜಾತಿವಿರುದ್ಧಂ (ಗದಾಯು. ೨–೦೭). [ ದರ್ಭ + ಅಧಿಕಾರ ]

**ದರ್ಭಾಸನ** (ನಾ). ದರ್ಭೆಯಿಂದ ಮಾಡಿದ ಪೀಠ; ಕುಶಾಸನ : ಕಾಪಾಲಿಕನು ಕಪಾಲಕುಂಡಲೆಯನ್ನು ನವಕುಮಾರನನ್ನೂ ದರ್ಭಾಸನದ ಮೇಲೆ ಕುಳ್ಳಿರಿಸಿ, ತಾನು ತಾಂತ್ರಿಕ ಸಂಬಂಧವಾದ ಪೂಜೆಗೆ ತೊಡಗಿದನು (ಕಪಾಕುಂ. ೦೨೯). [ ದರ್ಭ + ಆಸನ ]

**ದರ್ಭಾಸ್ತರ** (ನಾ). ದರ್ಭೆಯ ಹಾಸು; ಹಾಸಿದ ದರ್ಭೆ : ಬದರಿಯ ಫಲಂಬೆರಸಿದಿಂಗುಳದ ಹಿಂಡಿಯಂ ದರ್ಭಾಸ್ತರದೊಳಿಟ್ಟು ಪಿಂಡವಿತ್ತನ್ (ಶ್ರೀರಾಮಾ. ೦೬೭–೪೨೭). [ ದರ್ಭ + ಆಸ್ತರ ]

**ದರ್ಭಾಸ್ತರಣ** (ನಾ). = ದರ್ಭಾಸ್ತರ : ನಿಜವಿಜಯತುರಗರಥಂಗಳ ನರ್ಚಿಸಿ ಪೊಡೆವಟ್ಟು ದರ್ಭಾಸ್ತರಣದೊಳಾಯಿರುಳಂ ಕಳೆದಾಗಳ್ (ಪಂಪಭಾ. ೦೨–೫೩ ವ); ತರುಣಿ ನೀ ಹೆಸರಿಸಿದವಿವು ದುರ್ಮರಣಸಾಧನವಮಲ ದರ್ಭಾಸ್ತರಣವಿದು ಪಾವನವಲಾ ಪ್ರಾಯೋಪವೇಶದಲಿ (ಕುಮ್ಮಾಭ. ೨೦–೦೯). [ ದರ್ಭ + ಆಸ್ತರಣ ]

**ದರ್ಭೆ** (ನಾ). = ದರ್ಭ : "ಬರ್ಹಿಃ ಕುಶಂ ಕುಥಮೆನಲು ದರ್ಭೆಯದು" (ಮಂಗರಾ. ೩೪–೯); ನಿಮ್ಮ ಕೈಯಲ್ಲಿ ಕಟ್ಟಿದ ದರ್ಭೆಯ ಹುಲ್ಲು ಕೂಡಲ ಸಂಗನನಱಿಯದೆ ಮೊಱೆಯಿಡುವಂತೆ (ಬಸವ. ಕ. ೫೭೯); ಬೆರಳಲಿ ಮುರಿದ ದರ್ಭೆಗಳ ಉಟ್ಟ ಬಾಸರ ಬಳಲುಗಚ್ಚೆಯನಟ್ಟಹಾಸದ ಜನದ ನಗೆಗಳ ನಟ್ಟವಿಗನೋಸರಿಸಿ ಸಭೆಯಲಿ ಮೆಲ್ಲನೈತಂದ (ಕುಮ್ಮಾಭ. ೦೫–೦೫): [ ಸಂ. ದರ್ಭ ]

**ದರ್ಭೋದಕ** (ನಾ). ದರ್ಭೆಯಿಂದ ಸಿಂಪಡಿಸುವ ಅಥವಾ ತಳಿಯುವ ನೀರು : ಮಂತ್ರಪೂತವಾದ ಈ ದರ್ಭೋದಕದಿಂದ ನಿನ್ನ ಶರೀರದ ಬಾಧೆಯೆಲ್ಲಾ ಪರಿಹಾರವಾಗುವುದು (ಶಾಕುಂತ. ೪೨). [ ದರ್ಭ + ಉದಕ$_2$ ]

**ದರ್ಮ** 'ಧರ್ಮ$_1$' ನೋ.

**ದರ್ಮಗಾಳೆ** 'ದಮ್ಮಗಹಳೆ' ನೋ.

**ದರ್ಮಗೆಯ್** (ಕ್ರಿ). ಧರ್ಮಮಾಡು; ದಾನಮಾಡು; ಉದಾರವಾಗಿ ಕೊಡು : ಸಕಳ ಸಮಯಮನ್ನು ದರ್ಮಗೆಯ್ದು ಸನ್ಮಸದ × × × ನಿಜಸ್ಥಿತಿ (ಎಕ. III, ಮೈಸೂರು. ೪೦–೪ ; ಸು. 980 ?).

[ ದರ್ಮ (< ಧರ್ಮ$_1$) + ಕೆಯ್$_1$ ]

**ದರ್ಮಶಾಸನ** 'ದಮ್ಮಶಾಸನ' ನೋ.

**ದರ್ಯಾಃಪ್ತು** 'ದರ್ಯಾಪ್ತು' ನೋ.

**ದರ್ಯಾಪ್ತಿ** 'ದರ್ಯಾಪ್ತು' ನೋ.

**ದರ್ಯಾಫ್ತಿ** 'ದರ್ಯಾಪ್ತು' ನೋ.

**ದರ್ಯಾಪ್ತು**, ದರಿಯಾಪು , ದರಿಯಾಫ್ತಿ, ದರ್ಯಾಃಪ್ತು, ದರ್ಯಾಪ್ತಿ, ದರ್ಯಾಫ್ತಿ (ನಾ). ವಿಚಾರಣೆ; ತನಿಖೆ; ತಪಾಸಣೆ : ಉಸುರೋರ್ವ ಮುನಿಷಿಯಂ ಕರದುಕೊಂಡುದ್ದೂರಿಗೈದಿಯಾ ಖೂನಿ ದರ್ಯಾಫ್ತನ್ನು ಮಾಡಿಯಾ ಜನರೆಲ್ಲರಂ ಅದ್ದಕದಿ ಕರದುಕೊಂಡೈದುವಂತೆಯು (ಅರ್ಜಾವಿ. ೩೦–೩೮). **ದರಿಯಾಪ್ತು** : ನಾಳೆ ಈ ನ್ಯಾಯ ದರಿಯಾಪ್ತು ಆಗುವಾಗ್ಯೆ ಜಬರದಸ್ತಿ ನಡೆದುದು ನಮ್ಮ ಕಡೆಯಿಂದಲೋ? ಅವರ ಕಡೆಯಿಂದಲೋ? ಎಂಬುದನ್ನು ತಿಳಿಯದೆ (ರಾಜೇಂದ್ರ. ೯೨). **ದರಿಯಾಫ್ತಿ** : ಯಾವತ್ತು ಗೌಡ ಶ್ಯಾನುಭಾಗ ಶೆಟ್ಟಿ ವರ್ತಕ ವಗೈರೆ ಜನರಿಂದ ಯಥಾವತ್ತಾಗಿ ದರಿಯಾಫ್ತಿ ಮಾಡಿ ರುಜು ಮುಚ್ಚಳಿಕೆಯು ಬರೆಸಿಕೊಂಡು ಮಾಜಿ ಅವಿವಾಲಗೆ . . . ಮಹಜರು ಬರೆದು ಕೊಡಬೇಕು (ಮಹಾಪಂ. II, ೫೯). **ದರ್ಯಾಃಪ್ತು** : ಚಂನ್ನಾಗಿ ದರ್ಯಾಃಪ್ತು ಮಾಡಿ ಸಾಬಕ್ಕು ಮಾಮೂಲ್ಲು ಪ್ರಕಾರಕ್ಕೆ ನಡೆದು ಕೊಳುವ ಹಾಗೆ ನಿಮ್ಮ ನಿಂಮ್ಮ ತಾಲ್ಲುಕ್ಕದಲ್ಲಿ ಯಿರುವಂತ್ಹಾ ವಡೆರಿಗೆ ಜೋರ ತಾಕಿಯಿತು ಮಾಡುವದು (ಮೈಅರಿ. ೦೯೩೦, ೪೩–೩೨ ; 1812). **ದರ್ಯಾಪ್ತಿ** : ಮುಸಲ್ಮಾನರಲ್ಲಿ ಬಂದ ವ್ಯಾಜ್ಯಗಳ ದರ್ಯಾಫ್ತಿಗೂ ಹುಜೂರಲ್ಲಿ ಸದರ್ ಕೋರ್ಟು ಎಂಬದಾಗಿ ಒಂದು ನ್ಯಾಯಸ್ಥಾನ ಏರ್ಪಟ್ಟಿತ್ತು (ಮಹಾಪಂ. II, ೨೭); ಇವರುಗಳ ದರ್ಯಾಪ್ತಿಯಿಂದ ಕಳವು ನಡೆದ ಮೂರನೆಯ ದಿನವೇ ಲಿಂಗ ಸಾಲಿಗ್ರಾಮಕ್ಕೆ ಬಂದು . . . ಕಾಲ ಕಳೆಯುತ್ತಿದ್ದನೆಂದು ತಿಳಿದು ಬಂತು (ಕಲಸ. ೦೦೫); ಆ ದಿವಸ ಗ್ರಾಮಾಧಿಪತಿಗಳು ಸಣ್ಣ ಮೊಕದ್ದಮೆಗಳನ್ನು ದರ್ಯಾಪ್ತಿ ಮಾಡತಕ್ಕದ್ದಲ್ಲವು (ಗ್ರಾಮಾಕ. ೬೭). **ದರ್ಯಾಫ್ತಿ** : ತನ್ನ ಸಮಕ್ಷಮದಲ್ಲಿ ಆರಂಭಿಸಲ್ಪಟ್ಟ ಮೊಕದ್ದಮೆಯ ದರ್ಯಾಫ್ತಿ ಪೂರೈಸುವವರೆಗೂ ಅಂಥಾ ಮನುಷ್ಯನು ಸದರಿ ವಿಚಾರಣೆಯಲ್ಲಿ ಹಾಜರಿರಲು ಬದ್ಧನಾಗಿರತಕ್ಕದ್ದು (ಗ್ರಾಮಾಕ. ೦೮).

[ ←ಪಾರ. ಹಿಂ. ದರ್ಯಾಫ್ತ್; ದರಿಯಾಫ್ತ್; ಮರಾ. ದರ್ಯಾಪ್ತ್, ದರ್ಯಾಪ್ತೀ, ದರ್ಯಾಫ್ತ್, ದರ್ಯಾಫ್ತೀ. ]

**ದರ್ವಾನ** 'ದರವಾನ' ನೋ.

**ದರ್ವಿ** (ನಾ). ೧. ಸೌಟು; ಸಟ್ಟುಗ : "ದರ್ವೀ, ತದರ್ಮಃ, ಖಜಿಕಾ, ದಾರುಹಸ್ತಃ – ಈ ೪ ಸಟ್ಟುಗಂ" (ಹಲಾಯು. ೫೨–೦೫೭); "ಖಜಿಕೆ ದರ್ವೀ ದಾರುಹಸ್ತಂ ದ್ರುತಂ ಹುಟ್ಟಿನಿಕ್ಕು" (ಮಂಗರಾ. ೬೦–೦೮); ದರ್ವಿಯಂ ಸಂಪಾದಿಸಿರಲು ಕೈಯನ್ನು ಸುಟ್ಟುಕೊಳ್ಳುವುದೇಕೆ (ಮುದ್ರಾಮಂ. ೦೫೨). ೨. ಯಜ್ಞ, ಯಾಗಾದಿಗಳಲ್ಲಿ ತುಪ್ಪವನ್ನು ಹಾಕಲು ಉಪಯೋಗಿಸುವ ಸೌಟನ್ನು ಹೋಲುವ ಮುತ್ತುಗ ಮೊದಲಾದ ಮರದ ಸಾಧನ : ದಿಕ್ಪಾಲಕರನು , ಮಹೇಂದ್ರನನ್ನೂ ಆಹ್ವಾನಿಸಿ . . . ಪರಿಸ್ತರಣಗಳ

ಪೇಲೆ ದರ್ವಿ, ಸಮಿತ್ತು, ಆಜ್ಯಪಾತ್ರೆ, ಅರ್ಘ್ಯಪಾತ್ರೆ ಇವುಗಳನಿಟ್ಟು (ಶಾಂತಲಾ. ೧೦೭). ೪. ಹಾವಿನ ಹೆಡೆ. 'ದರ್ವೀಕರ' ಪರಾ. ೪. (ಆಲಂ) ಒಂದು ಸಾಧನದಂತೆ ಕೆಲಸಕ್ಕೆ ಉಪಯೋಗಿಸಿಕೊಳ್ಳುವ ವ್ಯಕ್ತಿ; ಕಾರ್ಯಸಾಧನೆಯಲ್ಲಿ ಸಹಾಯಕ: ತಮ್ಮ ಕೆಲಸಕ್ಕೆ ದರ್ವಿಯಾಗಿ ಉಪಯೋಗಿಸಲು ಇವನೇ ಪರಮಮಿತ್ರನೆಂದು ಭಾವಿಸಿಕೊಂಡಿದ್ದರು (ಅದೂಟ. ೧೬೦); ಪೆದ್ದನಾದ ಕಿಟ್ಟಿಜೋಯಿಸನೇ ಸರಿಯಾದ ದರ್ವಿಯಾಗಿದ್ದಾನೆಂದು ಯೋಚಿಸಿದರು (ಮೂಮುರಾ. ೧೫೦). [ ಸಂ. ]

**ದರ್ವೀಕರ** (ನಾ). ೧. ಸಟ್ಟುಗ ಹಿಡಿದವನು; ಸೌಟು ಹಿಡಿದವನು; ಅಡಿಗೆಯವನು: ಸೂಕಮಿರ್ಕಕ್ಕಟ ದರ್ಭಪಾಣಿ ಯಮಜಾ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತನಿಂದ್ರತನಯುಂ ... ಶಸ್ತ್ರವಿಡಂಬಮೇವುದ ವರ್ಗಂ (ಗದಾಯು. ೩-೩೪). ೨. ಹಾವು; ಸರ್ಪ: "ವಿಷಧರಃ, ದಂದಶೂಕಃ . . . ದರ್ವೀಕರಃ, ದೃಕ್‌ಛ್ರುತಿಃ, ಭುಜಂಗಮಃ– ಈ ೨೫ ಪಾವಿನ ಪೆಸರ್" (ಹಲಾಯು. ೧೦೫-೧೮); ನಿಷ್ಠುರಗರಳರಸಾದ್ರ್ರಸ್ಫುರಜ್ಜಿಹ್ವ ದರ್ವೀಕರದುರ್ದರ್ಶಂ . . . ಮನಕ್ಕದ್ಭುತರಸದೊದವಂ ತಂದುದಂ ದ್ರೊಂದಗೇಂದ್ರಂ (ಚಂದ್ರಪು. ೫-೭೭). ಎಲೆಯರ್ಜುನಿಕ ನೀನಿನ್ನು ಬಿಡು ದರ್ವೀಕರವನೆನಲು (ತಿಮ್ಮಆ. ೧-೮). ೧, ೨: ಏಂ ನಿನ್ನ ಪ್ರಾಣಂಗಳ್ಗೆ ದರ್ವೀಕರನಾಗೆನೆ! (ರಾಮಾಶ್ವ. ೦೪೪-೨೮). ೩. ನಾಗರಹಾವು; ಫಣಿ: ದರ್ವೀಕರ ಮಂಡಲ ರಾಜಿಗಳೆಂಬ ಮೂರು ತೆರನಾದ ಸರ್ಪವಿಷಗಳಲ್ಲಿ ಸಳಿಯ ಸಟ್ಟುಗದ ಬೇರ ನೀರಲ್ಲಿ ಅರದು ಕುಡಿಯಲು ವಿಷಹರ (ವಿಷಚಿ. ೧೦-೪). [ ಸಂ. ]

**ದರ್ವೀಕರಾಂತಕ** (ನಾ). ಸರ್ಪಕ್ಕೆ ಮೃತ್ಯುವಿನಂತಿರುವವನು; ಗರುಡ: ಕಲಾನಿಧಿ ಸಕಲಲಕ್ಷ್ಮ ದರ್ವೀಕರಾಂತಕಗಮನ ವಿಮಲತರದು [ದೃ] ಕ್ಷ್ಣಣಪದ್ಮರಾಗ (ಏಕೋಪು. ೭-೧೦೦). [ ದರ್ವೀಕರ + ಅಂತಕ ]

**ದರ್ವೇಸಿ** 'ದರವೇಶಿ' ನೋ.

**ದರ್ಶ** (ನಾ). ೧. ನೋಟ; ತೋರಿಕೆ; ದೃಶ್ಯ. ೨. ಅಮಾಪಾಸ್ಯೆ: "ಸ್ಪಷ್ಟಂ ಸೂರ್ಯೇಂದು ಸಮಾಶ್ಲಿಷ್ಟವಮಾವಾಸೆಯೆಂಬುದಕ್ಕುಂ ದರ್ಶಂ" (ವಸ್ತುಕೋ. ೦೭-೮); ದರ್ಶದ ನಿಶೆಯೊಳ್ ಧವಳಾಂಶುವಾಗಿ ತಾರಾಧವನಂ ನೀನರಸಿ ಮೊರೆವುದೇಂ ಚಪಲತೆಯೋ (ನಿವೇದ. ೨೩-೮).

[ ಸಂ. ]

**ದರ್ಶಕ** (ಗು). ೧. ನೋಡುವ; ಕಾಣುವ. ೨. ಪರೀಕ್ಷಿಸುವ; ಪರಿಶೋಧಿಸುವ. (ನಾ). ೩. ನೋಟಕ; ಪ್ರೇಕ್ಷಕ. ೪. ತೋರಿಸುವವನು; ಪ್ರದರ್ಶಕ: ೫. ವಿವರಿಸುವಿಕೆ; ಸ್ಪಷ್ಟಪಡಿಸುವಿಕೆ. ೬. ಕಾವಲುಗಾರ; ದ್ವಾರಪಾಲಕ; ಪಹರೆಯವನು. ೭. ಪಂಡಿತ; ವಿದ್ವಾಂಸ: ಕವಿ ದರ್ಶಕರಿಂದೆಸೆದತ್ತು ಭೂತಳಂ (ವರ್ಧಪು. ೧-೧೮).

[ ಸಂ.]

**ದರ್ಶನ** (ನಾ). ೧. ನೋಡುವಿಕೆ; ಕಾಣುವಿಕೆ; ಅವಲೋಕನ; ನೋಟ: "ನಿಭಾಳನಂ, ನಿಶಮನಂ . . . ದರ್ಶನಂ, ದೃಷ್ಟಿಃ, ದ್ಯೋತನಂ – ಈ ೮ ನೋಟು" (ಹಲಾಯು. ೯೩-೪೧೨); ದರ್ಶನವಘುಸಮಿತಿಗೆ ಸದ್ದರ್ಶನದಿಂದಪ್ಪುದಕ್ಕೆ ನಿ ಮ ಗ ಕ್ಕೆ ಪುನರ್ದರ್ಶನವೆಂದಾರಾಧಿತದರ್ಶನರಾ ಚಾರಣರ್ ನಭಕ್ಕೊಗೆದಾಗಳ್ (ಆದಿಪು. ೫-೭೪); "ಎದಿರಿಸುವುದು" (ಆದಿಪು. ಕೋಶ); ಕೂಡಲಸಂಗನ ದರ್ಶನ ಸ್ಪರ್ಶನದಿಂದ ಮನವೊಲಿದು ನೆರೆವ ಭರವನೇನ ಹೇಳುವೆನಯ್ಯಾ (ಬಸವ. ೪೯೩); ದರ್ಶನವೆಂದರೆ ನೋಡುವಿಕೆ ಎಂದು ಅರ್ಥ (ಭಾರಧ. ೧೨೦); ದರ್ಶನ ಎಂಬ ಪದದ ಲೌಕಿಕವಾದ ಅರ್ಥ ನೋಡುವಿಕೆ ಅಥವಾ ತಿಳಿಯುವಿಕೆ (ಭಾತತ್ತ್ವ. ೧೭೫). ೨. ಕಾಣುವುದು; ಭೇಟಿಯಾಗುವುದು; ಸಂದರ್ಶನ: ಒರ್ವಳ್ ಕನ್ನೆ ಚಂಡಾಲೆ ದ ರ್ಶ ನ ತಾ ತ್ಪ ರ್ಯ ದೆ ರಾಜಕೀರಸಹಿತಂ ಬಂದಿರ್ದಪಳ್ ಬಾಗಿಲೊಳ್ (ಕಾದಂಪೂ. ೨೪): ಶ್ರೀಪೃಥುಳೈಶ್ವರ್ಯನಗತಲೇಪನ ದರ್ಶನದೊಳಾದ ಪರಮಾನಂದ ಶ್ರೀಪದದೊಳ್ ರಂಜಿಸಿದನಿಳಾಪೂಜ್ಯಂ ಪ್ರಭುಗುಣಾಬ್ಜವನಕಳಹಂಸಂ (ಪುಷ್ಪಪು. ೦೨-೧); ಹಿರಿಯರ ದರ್ಶನ ಮಾಡುವುದೆ ಸ್ನಾನ (ಪುರಂದ. ೧-೨೫-೩). ೩. ಕಾಣಿಸಿಕೊಳ್ಳುವುದು; ಪ್ರತ್ಯಕ್ಷವಾಗುವುದು. 'ದರ್ಶನಕೊಡು' ಪರಾ. ೪. ತೋರಿಸುವಿಕೆ; ಪ್ರದರ್ಶನ. ೫. ಹಿರಿಯರನ್ನು ಕಾಣುವಾಗ ಅವರಿಗೆ ಅರ್ಪಿಸುವ ಕಾಣಿಕೆ; ನಜರು: ಕರಿಕುಂಭದ ಮುತ್ತುಂ ಕತ್ತುರಿಮಿಗಮುಂ ಸಿಂಹಶಾಬಮುಂ ದರ್ಶನಮಿತ್ತುರವಣಿಸಿ ಬಂದನಾ ಧೀವರನಾಯಕನಿಭ್ಯಕೇತು ಭೂನಾಯಕನಂ (ಅರ್ಧನೇ. ೪-೩). ೬. ಕಾಣ್ಕೆ; ಕಣಸು; ವಿಶೇಷವಾದ ಅಂತರಂಗದ ಅರಿವು: ಇಂತಹ ಶಕ್ತಿಯನ್ನು ಪಡೆದಾಗಲೇ – "ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ" ಎನ್ನುವ ದರ್ಶನ ದೊರೆತೀತು (ಸೌಂದಸ. ೯೦); ತನಗಾದ ದರ್ಶನದಿಂದ ಅವನು ಭಯಚಕಿತನಾದನು (ಪುನರು. ೧೬೨). ೭. ಅಲೌಕಿಕ ಶಕ್ತಿಗಳ ಆವೇಶ; ದೇವರು, ದೆವ್ವ ಮೊದಲಾದುವು ಮೈಮೇಲೆ ಬರುವುದು. 'ದರ್ಶನಬರು' ಪರಾ. ೮. [ತತ್ತ್ವಶಾ] ತತ್ವಕ್ಕೆ ಸಂಬಂಧಿಸಿದ ವಿಷಯ, – ಗ್ರಂಥ, – ಮೀಮಾಂಸೆ ಮುಂತಾದುವು; ಆಧ್ಯಾತ್ಮಿಕ ಸಿದ್ಧಾಂತ; ತತ್ತ್ವಶಾಸ್ತ್ರ: ಜೀವಾತ್ಮನ ಸ್ವರೂಪವೆಂಥದು? ಜೀವಾತ್ಮನ ಗುರಿ ಏನು? ಎಂಬ ಪ್ರಶ್ನೆಗಳು ಎಲ್ಲಾ ಧರ್ಮಗಳಲ್ಲಿಯೂ ಬರುತ್ತವೆ. ಇವುಗಳನ್ನು ವಿಮರ್ಶಿಸಿ ಒಂದು ತೀರ್ಮಾನಕ್ಕೆ ಬರುವ ವಾಙ್ಮಯಕ್ಕೆ ದರ್ಶನಗಳೆಂದು ಹೆಸರು (ಭಾರದ. ೨೦೭); ಈ ತತ್ವವಿಚಾರವನ್ನು ತತ್ವದರ್ಶಿಗಳಾದ ಆರು ಋಷಿಗಳು ಆರು ವಿಧವಾಗಿ ಲೋಕಕ್ಕೆ ತೋರಿಸಿಕೊಟ್ಟು ಉಪಕಾರಮಾಡಿರುತ್ತಾರೆ. ಇವರ ಗ್ರಂಥಗಳಿಗೆ ದರ್ಶನಗಳೆಂದು ಹೆಸರು (ಭಾರದ. ೨೬೯). 'ಷಡ್ದರ್ಶನ' ಪರಾ. ೯. [ಜೈನ] ಸಮ್ಯಗ್ದರ್ಶನ. 'ದರ್ಶನವಿನಯ', 'ದರ್ಶನವಿಶುದ್ಧ' ಪರಾ. [ ಸಂ. ]

**ದರ್ಶನಕಾಣಿಕೆ** (ನಾ). (ದೇವರು, ಅರಸರು ಹಾಗೂ ಅಧಿಕಾರಿಗಳ) ದರ್ಶನ ಅಥವಾ ಭೇಟಿಮಾಡಿದಾಗ ನೀಡುವ ಕಾಣಿಕೆ; ನಜರು: ಅನೇಕ ಖಿಲ್ಲತ್ತುಗಳನ್ನು ವಿಜಯನಗರದ ಸಾಮ್ರಾಟ ಶ್ರೀಕೃಷ್ಣದೇವರಾಯನಿಗೆ ದರ್ಶನಕಾಣಿಕೆಯಾಗಿ ಕೊಡಲು ಹೊತ್ತು ತರುತ್ತಿದ್ದರು (ಹೇಮುಕೂ. ೦೪). [ ದರ್ಶನ + ಕಾಣಿಕೆ (<ಕಾಣ್ಕೆ) ]

**ದರ್ಶನಕಾರ** (ನಾ). ದಾರ್ಶನಿಕ; ತತ್ತ್ವಜ್ಞಾನಿ: ಈ ಅಹಂಕಾರವೆಂಬ ವೃತ್ತಿಯನ್ನು ಒಪ್ಪದ ಕಾರಣ ಪಾಶ್ಚಾತ್ಯ ದರ್ಶನಕಾರರು ಎಷ್ಟೋ ತೊಡರುಗಳಿಗೆ ಗುರಿಯಾಗಿರುತ್ತಾರೆ (ಜೀವಾತ್ಮ. ೪೫). [ ಸಂ. ]

**ದರ್ಶನ ಕೊಡು** (ಕ್ರಿ). ಕಾಣಿಸಿಕೊಳ್ಳು; ಪ್ರತ್ಯಕ್ಷವಾಗು; ಮೈದೋರು: ಭಗವಂತನಾದ ಶ್ರೀಕೃಷ್ಣನೇ ಬಂದು ದರ್ಶನಕೊಟ್ಟನಲ್ಲಾ ಎಂದು ಎಲ್ಲರೂ ಸಂತೋಷಪಟ್ಟರು (ನೀತಿಚಿಂ. I, ೨). [ ದರ್ಶನ + ಕೊಡು$_1$ ]

**ದರ್ಶನತಂತ್ರ** (ನಾ). ತಾಂತ್ರಿಕ ಸಿದ್ಧಿಮಂತ್ರಗಳಲ್ಲಿ ಒಂದು: ಶಾಬರತಂತ್ರ ಶಾಕಿನೀತಂತ್ರ . . . ದರ್ಶನತಂತ್ರ ಖನನತಂತ್ರ ಬಂಧನತಂತ್ರ ವಚನತಂತ್ರಾದಿ ತಾಂತ್ರಿಕ ಸಿದ್ಧಿಮಂತ್ರಂಗಳಂ ದ್ರಾವಿಡ ವೈಕೃತ ಪ್ರಾಕೃತ ಶವಥಾದಿ ಕ್ಷುದ್ರಮಂತ್ರಂಗಳಂ ಬೇಟೆ ಬೇಟೆ ಉಪದೇಶ ಅನುಷ್ಠಾನ ಪರೀಕ್ಷೆಗಳಂ ವಿವೇಕಿಸಿ ತಿಳಿದಿರಲಕ್ಕುಂ (ವಿವೇಕ. ೮೦).

[ ದರ್ಶನ + ತಂತ್ರ ]

**ದರ್ಶನಧ್ವನಿ** (ನಾ). (ಕಾವ್ಯದಲ್ಲಿ ಹೊರಡುವ) ತಾತ್ತ್ವಿಕವಾದ ವಿಶೇಷಾರ್ಥ; ವ್ಯಂಗ್ಯಾರ್ಥದಲ್ಲಿ ಒಂದು ಬಗೆ: ದರ್ಶನಧ್ವನಿ ರಸಾಮೃತಪಾನದಾನಂದದಿಂ (ಶ್ರೀರಾಮಾ ೮೭೬-೨೧೯); ಅತ್ಯಂತ ಸುಮಧುರ ಸುಂದರ ಭವ್ಯವಾದ ಐದು ಸೂತ್ರಗಳನ್ನು ಭಕ್ತಿ, ಪ್ರಾರ್ಥನಾ ಮತ್ತು ಕೃಪಾದೇವಿಯರ ವಾಣಿಯಲ್ಲಿ ಹಂಚಿ ಅಳವಡಿಸಿದೆ. ಬಹುಶಃ

ಆ ಹಂಚಿಕೆಯಲ್ಲಿಯೂ ಆಯಾ ದೇವಪಾತ್ರಗಳಿಗೆ ಅನ್ವಯವಾಗುವ ದರ್ಶನ ಧ್ವನಿಯನ್ನು ಸಹೃದಯೋತ್ತಮರು ಗುರುತಿಸಬಹುದೆಂದು ಭಾವಿಸುತ್ತೇನೆ (ಚಂದ್ರಸ. v ಮುನ್ನುಡಿ). [ ದರ್ಶನ + ಧ್ವನಿ ]

**ದರ್ಶನಪ್ರತಿಮೆ** (ನಾ). [ಜೈನ] ಪಂಚಮ ಗುಣಸ್ಥಾನದಲ್ಲಿರುವ ಶ್ರಾವಕನು ಧರ್ಮಮಾರ್ಗದಲ್ಲಿ ಉನ್ನತಿಯನ್ನು ಹೊಂದುವಂತೆ ಸಾಧಿಸುವ ಹನ್ನೊಂದು ಮೆಟ್ಟಲುಗಳಲ್ಲಿ ಮೊದಲನೆಯದು; ☞ ದರ್ಶನ, ವ್ರತ, ಸಾಮಾಯಿಕ, ಪ್ರೋಷಧೋಪವಾಸ, ಸಚಿತ್ತ ತ್ಯಾಗ, ರಾತ್ರಿಭೋಜನತ್ಯಾಗ, ಬ್ರಹ್ಮಚರ್ಯ, ಆರಂಭತ್ಯಾಗ, ಪರಿಗ್ರಹತ್ಯಾಗ, ಅನುಮತಿತ್ಯಾಗ, ಮತ್ತು ಉದ್ದಿಷ್ಟಾಹಾರ ತ್ಯಾಗ ಗಳೆಂಬಿವು ಹನ್ನೊಂದು ಪ್ರತಿಮೆಗಳು : ಸಮ್ಯಗ್ದರ್ಶನದೊಡನೆ ಎಂಟು ಮೂಲ ಗುಣಗಳನ್ನು ಧರಿಸುವುದೂ ಸಪ್ತವ್ಯಸನಗಳ ತ್ಯಾಗಮಾಡುವುದೂ ದರ್ಶನ ಪ್ರತಿಮೆಯೆನಿಸುವುದು (ಜೈನಧ. ೧೧೫). [ ದರ್ಶನ + ಪ್ರತಿಮೆ ]

**ದರ್ಶನಬರು** (ಕ್ರಿ). (ದೇವರು ಅಥವಾ ದೆವ್ವ) ಮೈಮೇಲೆ ಬರು; ಆವೇಶ ಬರು : ಹೆದರಿ ಕಿರುಚುತ್ತಾ ಓಡಿ, ಒಲೆಯ ಹತ್ತಿರ ಅಡುಗೆಮನೆ ಯಲ್ಲಿ-ದರ್ಶನ ಬರುತ್ತಾ ಕೂತಳು (ಪರಾವ. ೩೮); ಅಲ್ಲಲ್ಲಿ ಮನುಷ್ಯರ ಮೈಮೇಲೆ ದರ್ಶನಬಂದು ಮಾತನಾಡುವ ದೆವ್ವಗಳು (ಪಂಜಪಂ. ೩).
[ ದರ್ಶನ + ಬರು (<ಬರ್) ]

**ದರ್ಶನಭ್ರಾಂತಿ** (ನಾ). ನೋಡಿದುದನ್ನು ಬೇರೆ ಎಂದು ತಿಳಿಯುವುದು; ನೋಡುವಿಕೆಯಲ್ಲಿ ಉಂಟಾದ ಭ್ರಮೆ: ದರ್ಶನಭ್ರಾಂತಿ (ಭ್ರಾಂತಿ ದರ್ಶನ ಅಂದರೆ ಬೇರೆ ತಿಳಿಯುವುದು) (ಅಮ್ಮಕ. ೬-೮೮ ಟೀಕು).
[ ದರ್ಶನ + ಭ್ರಾಂತಿ ]

**ದರ್ಶನಮಣಿ** (ನಾ). ಒಂದು ಬಗೆಯ ರತ್ನ: ತನ್ನಂ ನೋಡಿದ ಮಾತ್ರದೊಳಮೃತಾಂಜನವೆಚ್ಚಿದಂತೆ ನೇತ್ರಾನಂದಕರಮಾದ ದರ್ಶನಮಣಿ ತನ್ನಂ ಧರಿಸಿದ ಮಾತ್ರದಿಂ ಕ್ಷುತ್ಪಿಪಾಸೆಗಳಿಲ್ಲದ ಅಮೃತಮಣಿ . . . ಶಿವಜ್ಞಾನಮಂ ಕೊಡುವ ಜ್ಞಾನಮಣಿ . . . ಅಲ್ಲಿಯಣ ಶಿವಭಕ್ತರ್ಗೆ ಸುಕೃತಾನುರೂಪದಿಂದಾನಂದಕರಗಳಾಗಿರ್ಕುಂ (ವಿವೇಕ. ೨೦೦).
[ ದರ್ಶನ + ಮಣಿ ]

**ದರ್ಶನಮೋಹ** (ನಾ). [ಜೈನ] ಮೋಹನೀಯ ಕರ್ಮದ ಎರಡು ಪ್ರಕಾರಗಳಲ್ಲಿ ಒಂದು : ಸಾತಾಸಾತಸಂವಿಭಾಗದಿನಿರ್ತೆಱನಪ್ಪ ವೇದ ನೀಯಮುಮಂ ದರ್ಶನಮೋಹದೊಳಂ ಚಾರಿತ್ರಮೋಹದೊಳಂ ಯಥಾ ಕ್ರಮದಿಂ ಸಮ್ಯಕ್ತ್ವ . . . ಸ್ತ್ರೀಪುನ್ನಪುಂಸವೇದಮೆನಿಸಿಯುಂ (ಸುಕುಮಾ. ೩-೩೯ ವ). [ ದರ್ಶನ + ಮೋಹ ]

**ದರ್ಶನಮೋಹನೀಯ**(ನಾ). [ಜೈನ] ಮೋಹನೀಯ ಕರ್ಮಗಳಲ್ಲಿ ಒಂದು ಆತ್ಮನ ಸಮ್ಯಗ್ದರ್ಶನಕ್ಕೆ ಅಡ್ಡಿ ಮಾಡುವಂತಹುದು: ಮಿಥ್ಯಾತ್ವ ಸಮ್ಯ ಕ್ಪ್ರಕೃತಿ ಸಮ್ಯಙ್ಮಿಥ್ಯಾತ್ವಮೆಂದು ತ್ರಿವಿಧಮಪ್ಪ ದರ್ಶನಮೋಹನೀ ಯಮಂ ನಿರ್ಮೂಲಿಸಿ (ಶಾಂತಿಪು. ೧೧-೧೧೧ ವ); ಮೋಹನೀಯ ಕರ್ಮದಲ್ಲಿ ದರ್ಶನಮೋಹನೀಯ, ಚಾರಿತ್ರಮೋಹನೀಯ ಎಂಬ ಎರಡು ಪ್ರಕಾರಗಳು (ಜೈನಧ. ೬೫). 'ಚಾರಿತ್ರಮೋಹನೀಯ' ಪರಾ.
[ ದರ್ಶನ + ಮೋಹನೀಯ ]

**ದರ್ಶನಯುಗ** (ನಾ). ತತ್ವಮೀಮಾಂಸಕರು ಇದ್ದ ಕಾಲ; ದಾರ್ಶನಿಕರ ಯುಗ : ಶ್ರುತಿ, ಸ್ಮೃತಿ, ಆಗಮ-ಇವುಗಳ ಯುಗವಾದ ಮೇಲೆ ದರ್ಶನಯುಗ ಆರಂಭವಾಯಿತು (ಭಾರದ. ೦೨೦). [ ದರ್ಶನ + ಯುಗ ]

**ದರ್ಶನರತ್ನ** (ನಾ). [ಜೈನ] ಶ್ರೇಷ್ಠವಾದ ದರ್ಶನ ; ಸಮ್ಯಗ್ದೃಷ್ಟಿ; ಜೀವಾದಿ ನವಪದಾರ್ಥದೊಳಾವಗಮರ್ಥಿಯನೆ ಮಾಡು ಮೂಢತ್ರಯ ದೊಳ್ ಭಾವಮನೆ ಬಿಸುಡು ಬೆಳಗುಗುಮೀ ವಿಧದಿಂ ನೆಗಟ್ ನಿನ್ನ ದರ್ಶನರತ್ನಂ (ಆದಿಪು. ೫-೫೬). [ ದರ್ಶನ + ರತ್ನ ]

**ದರ್ಶನವತ್ಸಲತ್ವ**, ದರ್ಶನವತ್ಸಳತ್ವ (ನಾ). [ಜೈನ] ಹದಿನಾರು ಭಾವನೆ ಗಳಲ್ಲಿ ಒಂದು; ದರ್ಶನದಲ್ಲಿ ವಾತ್ಸಲ್ಯವಿರುವಿಕೆ; ತತ್ವವಿಚಾರದಲ್ಲಿ ಪ್ರೀತಿಯಿರುವಿಕೆ : ದರ್ಶನವಿಶುದ್ಧಿ . . . ದರ್ಶನವತ್ಸಲತ್ವಮೆಂಬ ಷೋಡಶಭಾವನೆಗಳೊಳ್ (ಚಾವುಂಪು. ೨೬೦). ದರ್ಶನವತ್ಸಳತ್ವ :ಶಂಕಾದಿ ಮಳವಿಹೀನಮಪ್ಪ ಸಮ್ಯಗ್ದರ್ಶನ ಸಂಶುದ್ಧಿಯುಂ . . . ಸದ್ಧರ್ಮ ಸ್ನೇಹ ಲಕ್ಷಣೋಪೇತಮುಮಪ್ಪ ದರ್ಶನವತ್ಸಳತ್ವಮುಮೆಂಬೀ ಷೋಡಶ ಭಾವನೆಗಳಂ . . . ಭಾವಿಸುತ್ತುಮಿರ್ದು (ಚಂದ್ರಪು. ೧೧-೨೨ ವ). 'ಷೋಡಶಭಾವನೆ' ಪರಾ. [ಸಂ.]

**ದರ್ಶನವಿನಯ** (ನಾ). [ಜೈನ] ಸಮ್ಯಗ್ದರ್ಶನದ ವಿಷಯದಲ್ಲಿ ಅತ್ಯಂತ ನಿಷ್ಠಾಪೂರ್ವಕವಾಗಿ ವ್ಯವಹರಿಸುವುದು: ದ್ವಾದಶಾಂಗ ಚತುರ್ದಶ ಪ್ರಕೀರ್ಣಕಾದಿ ಶ್ರುತಸಮುದ್ರದೊಳೊಂದೊಂದಕ್ಷರಮಾನಕ್ಕೆ ಮೇಣು ಸಂದೇಹಂಬಡದೆ ನಂಬುವ ನಿಃಶಂಕೆ ತತ್ವಾದಿ ಗುಣಮನುಳ್ಳದು ದರ್ಶನ ವಿನಯಂ (ಶ್ರಾವಕಾ. ೮೭-೧). [ ದರ್ಶನ + ವಿನಯ ]

**ದರ್ಶನವಿನ್ಯಾಸ** (ನಾ). ಆಧ್ಯಾತ್ಮಿಕ ತತ್ವನಿರೂಪಣೆ; ತತ್ವವಿಷಯ; ತಾತ್ವಿಕ ರಚನೆ: ವೈದಿಕವಾಙ್ಮಯದ ಕಾವ್ಯತ್ವವನ್ನು ರವೀಂದ್ರರೂ ದರ್ಶನವಿನ್ಯಾಸವನ್ನು ರಾಧಾಕೃಷ್ಣರೂ ವಿವರಿಸಿದರು (ಜುಕ್ಕಾರ. ೧೧೯ ಪೀಠಿಕೆ). [ ದರ್ಶನ + ವಿನ್ಯಾಸ ]

**ದರ್ಶನವಿಶುದ್ಧ** (ನಾ). [ಜೈನ] ನಿರ್ಮಲವಾದ ಸಮ್ಯಕ್ ದರ್ಶನ ವುಳ್ಳವನು : ಪಾತ್ರಮುತ್ತಮಮಧ್ಯಮಜಘನ್ಯಭೇದದಿಂ ತ್ರಿವಿಧ ಮಕ್ಕು ಮಲ್ಲಿ ದರ್ಶನವಿಶುದ್ಧನುಂ ಶೀಲಸಂಪನ್ನನುಮಪ್ಪ ಸಂಯತನುತ್ತಮ ಪಾತ್ರಂ (ಆದಿಪು. ೧೧-೯ ವ). [ ದರ್ಶನ + ವಿಶುದ್ಧ ]

**ದರ್ಶನವಿಶುದ್ಧತೆ** (ನಾ). = ದರ್ಶನವಿಶುದ್ಧಿ: ತವೆ ತಮುದೊಡ್ಡು ರಾಜಸ ಲೋಚರ್ಕೆ ದಿಗಂಬರಲೀಲೆ ಪುಟ್ಟೆ ಭೂಭುವನಜನಕ್ಕೆ ದರ್ಶನವಿಶುದ್ಧತೆ ಕುಂದೆ (ಪುಷ್ಪಪು. ೧೩-೬೦). [ ದರ್ಶನ + ವಿಶುದ್ಧತೆ ]

**ದರ್ಶನವಿಶುದ್ಧಿ** (ನಾ). ೧. ತತ್ವದೃಷ್ಟಿ; ತಾತ್ವಿಕದೃಷ್ಟಿ: ನಾಗಚಂದ್ರ "ಕವಿಗೆ ದರ್ಶನವಿಶುದ್ಧಿಯೇ ಮೌಲ್ಯ" ಎಂದುದೂ ಬಹುಶಃ ಈ ಅರ್ಥ ದಲ್ಲೇ (ಸೌಂದಸ. ೩೮). ೨. [ಜೈನ] ತೀರ್ಥಂಕರ ನಾಮಕರ್ಮಕ್ಕೆ ಕಾರಣ ವಾಗುವ ಒಂದು ಭಾವನೆ; ☞ ತೀರ್ಥಂಕರತ್ವಕ್ಕೆ ಕಾರಣವಾದ ಹದಿನಾರು ಭಾವನೆಗಳಲ್ಲಿ ಮೊದಲನೆಯದು. ಸಮ್ಯಗ್ದರ್ಶನದಲ್ಲಿ ಅತ್ಯಂತ ನಿರ್ಮಲವಾದ ಹಾಗೂ ದೃಢವಾದ ಚಿತ್ತವೃತ್ತಿ : ದರ್ಶನ ವಿಶುದ್ಧಿ . . . ದರ್ಶನವತ್ಸಲತ್ವಮೆಂಬ ಷೋಡಶಭಾವನೆಗಳೊಳ್ (ಚಾವುಂಪು. ೨೬೦); ಎನ್ನ ದರ್ಶನವಿಶುದ್ಧಿಯ ಮೌಲ್ಯಂ (ಪಂರಾಮಾ. ೫-೦೦). [ ದರ್ಶನ + ವಿಶುದ್ಧಿ ]

**ದರ್ಶನವಿಶುದ್ಧೆ** (ನಾ). ನಿರ್ಮಲವಾದ ಸಮ್ಯಗ್ದರ್ಶನವುಳ್ಳವಳು; ಸಂಶಯರಹಿತವಾದ ತತ್ವಜ್ಞಾನವುಳ್ಳವಳು : ಸಂಕ್ಷೇಪದಿಂ ಸನ್ಮಾರ್ಗ ಸ್ವರೂಪನಿರೂಪಣಂಗೆಯ್ದು ವಿಷಮವಿಷಧರವಿಷಘಾತದಿಂ ನಿನಗಾಯು ರವಧಿಯುಮಿಂದಿನನಿತೆ ದರ್ಶನವಿಶುದ್ಧೆಯಾಗೆಂದು ಪರಮತಪಸ್ವಿ ಪರಸಿ (ಸುಕುಮಾ. ೫-೪೪ ವ).
[ ಸಂ. ದರ್ಶನವಿಶುದ್ಧಾ (ದರ್ಶನ + ವಿಶುದ್ಧ + -) ]

**ದರ್ಶನಶಕ್ತಿ** (ನಾ). [ಜೈನ] ಕಾಣುವ ಶಕ್ತಿ: ಆತ್ಮನ ದರ್ಶನಶಕ್ತಿಯನ್ನು ಮುಚ್ಚುವ ಕರ್ಮವು ದರ್ಶನಾವರಣೀಯಕರ್ಮವೆನಿಸುವುದು (ಜೈನಪ. ೩೬೬). [ ದರ್ಶನ + ಶಕ್ತಿ ]

**ದರ್ಶನಶುದ್ಧತೆ** (ನಾ). = ದರ್ಶನವಿಶುದ್ಧಿ : ಅತಿಸೂಕ್ಷ್ಮತತ್ವಮಂ ಕಣ್ಣು ತನುವನೊಟ್ಟಯಿಸಿ ಕಟ್ಟುವೀ ದರ್ಶನಶುದ್ಧತೆಗಂ ದೃಢಗುಣ ಸುಸಮರ್ಥತೆಗಂ ಸಲೆ ದೇವಚಂದ್ರಯತಿಪತಿ ನೋಂತಂ (ಚಂದ್ರಪು. ೧-೩೨).
[ ದರ್ಶನ + ಶುದ್ಧತೆ ]

**ದರ್ಶನಶುದ್ಧಿ** (ನಾ). = ದರ್ಶನವಿಶುದ್ಧಿ: ಮುನಿಗೆ ದರ್ಶನಶುದ್ಧಿ ವಿನೇಯಂ . . . ವಾತ್ಸಲ್ಯಮಿಂತೆನುಪಾಯ್ತಾ ತೀರ್ಥಕೃತನಾಮಕರ್ಮವನೀವ ಷೋಡಶಭಾವನೆಯೆ ಭಾವದೊಳ್ (ಅನಂಪು. ೮-೩೬).
[ ದರ್ಶನ + ಶುದ್ಧಿ ]

**ದರ್ಶನಸುಖ** (ನಾ). ನೋಟದಿಂದುಂಟಾಗುವ ಸಂತೋಷ: ಇನಿಯಳ ನಿಜಮನ್ನುಕೆ ದರ್ಶನಸುಖಮಂ ತನ್ಮಯತೆಯನೊಂದಿದ ಮನದಿಂ ದನುಭವಿಪನಗವಳಂ ನೀಂ ನೆನವಿತ್ತೀಂ ಮಗುಳ್ದು ಚಿತ್ರಗತೆಯಂ ಗೈದೈ (ಶಾಕುಂತ. ೯೧-೦೫೩). [ ದರ್ಶನ + ಸುಖ ]

**ದರ್ಶನಸ್ಥಾನ** (ನಾ). ನೋಡುವಂತಹ ಸ್ಥಳ; ಪ್ರೇಕ್ಷಣೀಯ ತಾಣ; ನೋಡಬಹುದಾದ ಸ್ಥಾನ: ಕಟ್ಟಿದನು ಸೌಮಿತ್ರಿ . . . ಪರ್ಣ ಶಾಲೆಯನೊಂದನೆತ್ತರದೊಳಾ ಗಿರಿಯ ದರ್ಶನಸ್ಥಾನವುಂ ದೂರ ವಿಸ್ತಾರದಾ ದೃಶ್ಯದಾ ಸ್ಥಾನದಧ್ಯಕ್ಷತಾಸ್ಥಾನಮುಂ ತಾನೆನಿಪ ಗಿರಿಭುಜ ಸ್ಥಾನವಲಿ (ಶ್ರೀರಾಮಾ. ೧೪೯-೬೨). [ ದರ್ಶನ + ಸ್ಥಾನ ]

**ದರ್ಶನಹುಂಡಿ** (ನಾ). "(ಹುಂಡಿಯಲ್ಲಿ ಬರೆದಿರುವವನಿಗೆ, ಅಥವಾ ಆ ಹುಂಡಿಯನ್ನು ತರುವವನಿಗೆ, ಅದರಲ್ಲಿ ನಮೂದಿಸಿರುವ ಹಣ ವನ್ನು ತನ್ನ ಲೆಕ್ಕದಿಂದ ಕೊಡಬೇಕೆಂದು ಬರೆದಿರುವ) ಹಣದ ಚೀಟಿ; ದರ್ಶನಹುಂಡಿ; ಚೆಕ್ಕು" (Cheque, ಇಂಕನಿ); ಸರ್ಕಾರದ ಖಜಾನೆಯವರು ದರ್ಶನಹುಂಡಿ ತಂದಿದ್ದಾರೆ (ಅದೂಟ. ೭).
[ ದರ್ಶನ + ಹುಂಡಿ$_2$ ]

**ದರ್ಶನಾಚಾರ** (ನಾ). [ಜೈನ] ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ವ್ಯವಹರಿಸುವಿಕೆ: ಸರ್ವಜ್ಞರಾದ ತೀರ್ಥಂಕರರು ಹೇಳಿದ ಜೀವಾದಿ ತತ್ತ್ವ ಗಳಲ್ಲಿ ಶ್ರದ್ಧೆಯಿಡುವುದು, ದರ್ಶನಾಚಾರವು (ಜೈನಧ. ೧೦೦).
[ ದರ್ಶನ + ಆಚಾರ ]

**ದರ್ಶನಾಭ್ಯಾಸಿ** (ನಾ). ಆಧ್ಯಾತ್ಮಿಕ ತತ್ತ್ವಗಳಲ್ಲಿ ಆಸಕ್ತಿಯುಳ್ಳವನು: ಆರುದರ್ಶನಗಳನ್ನು ಮೂರುಗುಂಪುಗಳಾಗಿ ವಿಂಗಡಿಸುವ ಕ್ರಮ ದರ್ಶನಾ ಭ್ಯಾಸಿಗಳಲ್ಲಿ ರೂಢಿಯಲ್ಲಿದೆ (ಭಾರದ. ೧೨೨).
[ ದರ್ಶನ + ಅಭ್ಯಾಸಿ ]

**ದರ್ಶನಾರಾಧನೆ** (ನಾ). ಸಮ್ಯಗ್ ದರ್ಶನವನ್ನು ಪಾಲಿಸುವುದು: ಶಂಕಾ ದ್ಯಷ್ಟಮಲಂಗಳಂ ಕಳೆದು ನಿಶ್ಶಂಕಾದ್ಯಷ್ಟಗುಣಂಗಳಂ ಕೊಡುವುದು ದರ್ಶನಾರಾಧನೆ (ಜೀವಸಂ. ೩-೧೮). [ ದರ್ಶನ + ಆರಾಧನೆ ]

**ದರ್ಶನಾವರಣ** (ನಾ). [ಜೈನ] ಆತ್ಮನ ದರ್ಶನಶಕ್ತಿಯನ್ನು ಮರೆ ಮಾಡುವುದು: ಚರಮದೊಳಯ್ದು ಜ್ಞಾನಾವರಣಮುಮಂ ನಾಲ್ಕು ದರ್ಶನಾವರಣಮುಮಂ ಪರಮೇಶ್ವರನೊರ್ಮೊದಲೊಳಪಹರಿಸಿದನಯ್ದು ಅಂತರಾಯಂಗಳುಮಂ (ಮಲ್ಲಿಪು. ೧೪-೯೦); ದರ್ಶನಾವರಣ ಎಂದರೆ ದರ್ಶನ ಗುಣಗಳನ್ನು ತಡೆಯುವುದು (ಭಾತತ್ತ್ವ. ೨೫೭).
[ ದರ್ಶನ + ಆವರಣ ]

**ದರ್ಶನಾವರಣಚತುಷ್ಕ** (ನಾ). [ಜೈನ] ಚಕ್ಷುರ್ದರ್ಶನಾವರಣ, ಅಚಕ್ಷು ರ್ದರ್ಶನಾವರಣ, ಅವಧಿದರ್ಶನಾವರಣ ಮತ್ತು ಕೇವಲದರ್ಶನಾ ವರಣ ಎಂಬ ದರ್ಶನಾವರಣದ ನಾಲ್ಕು ಅಂಗಗಳು: ಚಕ್ಷುರಚಕ್ಷುರವಧಿ ಕೇವಲ ದರ್ಶನಾವರಣ ಚತುಷ್ಕಮುಮಂ ದಾನಲಾಭಭೋಗೋಪಭೋಗ ವೀರ್ಯಾಂತರಾಯ ಪಂಚಕಮುಮನೊರ್ಮೊದಲೆ ಕಿಡಿಸಿ (ಆದಿಪು. ೧೧-೧೪). [ ದರ್ಶನಾವರಣ + ಚತುಷ್ಕ ]

**ದರ್ಶನಾವರಣೀಯ** (ನಾ). [ಜೈನ] ಆತ್ಮನ ಅನಂತಜ್ಞಾನ, ಅನಂತ ವೀರ್ಯ ಮೊದಲಾದ ಗುಣಗಳನ್ನು ಮಲಿನಗೊಳಿಸುವಂತಹ ನಾಲ್ಕು ವಿಧವಾದ ಘಾತಿಕರ್ಮಗಳಲ್ಲಿ ಒಂದು: ದರ್ಶನಾವರಣೀಯಮುಂ ನವವಿಧಮೆಂತೆನೆ ನಿದ್ರಾನಿದ್ರಾಪ್ರಚಲಾಪ್ರಚಲಾಸ್ತ್ಯಾನಗೃದ್ಧಿ ನಿದ್ರಾಪ್ರಚಲಾ ಚಕ್ಷುರಚಕ್ಷುರವಧಿ ಕೇವಲಬೋಧದರ್ಶನ ಪ್ರಜ್ಞಾನದಿನಿನಿತು ಭೇದಮಕ್ಕುಂ (ಶಾಂತಿಪು. ೧೨-೧೧ ವ); ದರ್ಶನಾವರಣೀಯೋತ್ಕರ ತಾಮಸಕ್ಕೆ ರವಿಬಿಂಬಂ . . . ಎಂಬಂತು ಘಾತಿ ರಿಪುವ್ರಾತ ವಿಘಾತಿಯಾಯ್ತು (ಪುಷ್ಪಪು. ೧೪-೩೭).
[ ಸಂ. ]

**ದರ್ಶನಿಕ** (ನಾ). [ಜೈನ] ಶ್ರಾವಕರ ಹನ್ನೊಂದು ತರಗತಿಗಳಲ್ಲಿ ಮೊದಲನೆಯ ತರಗತಿಯವನು: ದರ್ಶನಿಕಂ ವ್ರತಿಕಂ ಸಾಮಾಯಿಕಂ ಪ್ರೋಷಧೋಪವಾಸಿಕಂ ಸಚಿತ್ತವಿರತಂ ರಾತ್ರಿಭುಕ್ತವ್ರತಂ ಬ್ರಹ್ಮಚಾರಿ ಆರಂಭಕಂ ಪರಿಗ್ರಹವಿರತಂ ಅನುಮತಿವಿರತಂ ಉದ್ದಿಷ್ಟವಿರತನೆಂದಿಂತು ಪನ್ನೊಂದು ವಿಕಲ್ಪಮನುಳ್ಳ ಶ್ರಾವಕರೊಳ್ (ಸುಕುಮಾ. ೬-೩೬ ವ); ತೋಱುವ ಶಂಕೆಗಳೆಂಟುಮಂ ಪಾಱಿದ ದರ್ಶನಿಕರಮಲದರ್ಶನಶುದ್ಧರ್ (ಅನಂಪು. ೩-೫೮). [ ಸಂ. ]

**ದರ್ಶನೀಯ** (ಗು). ೧. ನೋಡಬಹುದಾದ; ಕಾಣಬಹುದಾದ. ೨. ನೋಡಲು ಯೋಗ್ಯವಾದ. ೩. ಮನೋಹರವಾದ; ಸುಂದರ ವಾದ. (ನಾ). ೪. ಮನೋಹರವಾದುದು; ಸುಂದರವಾದುದು: "ಕಮನೀಯಂ ಚಾರುರಮ್ಯಂ . . . ಅತಿಶಯ ಶೋಭಾನ್ವಿತಂ ದರ್ಶನೀಯಂ . . . ಮಧುರಂ ಮಂಜುಳಂ ಮಂಜುಸೌಮ್ಯಂ (ವಸ್ತುಕೋ. ೧೦೭-೫೮); ಆವುದು ಚೆಲ್ವಾದುದದುವೆ ದರ್ಶನೀಯಂ (ಶಮದ. ೧೪೩ ಪ್ರಯೋ). [ಸಂ.]

**ದರ್ಶನೋತ್ಕಂಠೆ** (ನಾ). ಕಾಣಲು ಅತಿಯಾದ ಉತ್ಸುಕತೆ; ನೋಡಲು ತೀವ್ರವಾದ ಆತುರ: ಜೀವನದಲ್ಲಿ ನಮಗೆ ದರ್ಶನವನ್ನೀಯಬಹುದಾದ ರಮಣೀಯವಾದ ಸತ್ಯದ ಹಾಗೂ ಅದರ ದರ್ಶನೋತ್ಕಂಠೆಯಿಂದ ನಿತ್ಯ ನೂತನವಾಗಿ ಸಿದ್ಧವಿರುವ ಹೃದಯದ ನಡುವೆ ಒಂದು ಜವನಿಕೆಯು ಇರುತ್ತದೆ (ಪ್ರಬಂಧ. ೮). [ ದರ್ಶನ + ಉತ್ಕಂಠೆ ]

**ದರ್ಶನೋಪಯೋಗ** (ನಾ). [ಜೈನ] ದರ್ಶನೋಪಯೋಗ, ಜ್ಞಾನೋಪಯೋಗವೆಂಬ ಎರಡು ಉಪಯೋಗಗಳಲ್ಲಿ ಒಂದು: ವಿಶೇಷ ಜ್ಞಾನರಹಿತವಾದ ಸಾಮಾನ್ಯ ಅನುಭೂತಿಯು ದರ್ಶನೋಪ ಯೋಗವು (ಜೈನಧ. ೨೬). [ ದರ್ಶನ + ಉಪಯೋಗ ]

**ದರ್ಶಶ್ರಾದ್ಧ** (ನಾ). ಅಮಾವಾಸ್ಯೆಯ ದಿನ ಮಾಡುವ ಶ್ರಾದ್ಧ, -ತಿಥಿ: ಅನ್ವಾಹಾರ್ಯಂ, ಮಾಸಿಕಂ — ೨ ತಿಂಗಳು ತಿಂಗಳಿಗೂ ಮಾಡತಕ್ಕ ಪಿಂಡ ಪಿತೃಯಜ್ಞಕ್ಕೆ ಹೆಸರು, ದರ್ಶಶ್ರಾದ್ಧಕ್ಕೆ ಹೆಸರು, ಮಾಸಿಕ ಶ್ರಾದ್ಧಕ್ಕೂ ಹೆಸರು (ಸಿದ್ಧಾಂತಿ. ೦೯೩). [ ದರ್ಶ + ಶ್ರಾದ್ಧ ]

**ದರ್ಶಿತ** (ಗು). ೧. ಕಂಡ; ತೋರಿದ. ೨. ತೋರಿಸಿದ; ಪ್ರದರ್ಶಿಸಿದ: (ನಾ). ೩. ತಿಳಿಸಿದುದು; ವಿವರಿಸಿದುದು: ಎಂದಿಂತು ಸವಿಸ್ತಾಪಪ್ರಾಸಂ ದರ್ಶಿತಮಾಯ್ತು ಮತ್ತನುಪ್ರಾಸಮಮಂ ಸಂದಿಸಿದೆಡೆಯಕ್ಕರ ಮೊಂದೊಂದಱೊಳಳವಡೆಯುಸಿರ್ದೊಡನುಗತಮಕ್ಕುಂ (ಛಂದೋಂಬು. ೧-೪೬ ಅಡಿಟಿ). [ ಸಂ. ]

**ದರ್ಶಿಸು** (ಕ್ರಿ). ೧. ನೋಡು; ಕಾಣು: ಸಸಿನೆ ಭೋರೆಂದಾತನಂ ದರ್ಶಿಸುವ ತವಕದಿ ಬಪ್ಪವರನುಪ್ಪುಸುವ ನಿಜನೇಮಂಗಳಂ ಸಲೆ ಸಲಿಸಿದಹ ನೆಂದ (ಬಸಪು. ೬-೧೧). ೨. ತಿಳಿ; ಅರಿತುಕೊಳ್ಳು: ಮಕ್ಕಳೇ ಪ್ರಯತ್ನ ಪೂರ್ವಕವಾಗಿ ನಿಯಮಗಳನ್ನೋ ತತ್ತ್ವಗಳನ್ನೋ ದರ್ಶಿಸುವಂತೆ ಮಾಡದೆ ಉಪಾಧ್ಯಾಯರು ಪುಸ್ತಕಗಳಲ್ಲಿ ಮುಂದ್ರಣವಾಗಿರುವ ಭಾಗಗಳನ್ನು ಬರಸಿ ಬಿಟ್ಟರೆ . . . ಅರ್ಥ ತಿಳಿಯದೆ ಕಂಠಪಾಠ ಮಾಡುತ್ತಾರೆ (ಶಿಕ್ಷದ. ೨೨೭).
[ ದರ್ಶನ + -ಇಸು$_3$ ]

**ದರ್ಸೂಕ** (ನಾ). ಒಂದು ಬಗೆಯ ಮರ: ದರ್ಸೂಕ (ಪಾಂಡರೀ ಧಾವಣ).- ಮಧ್ಯಮ ಆಕಾರದ್ದು. ಕಟ್ಟಿಗೆಗಳೇ ಸಾಮಾನಿಗೆ ಬರುತ್ತದೆ. ಇದರ ನಾರಿ ನಿಂದ ಹಗ್ಗ ಹೊಸೆಯುತ್ತಾರೆ (ಕಭಾಗೆ. ೪೦); ದರ್ಸೂಕ, ಕಾಡುಕಡಲೆ (ವೃಜಿಗಿ. ೪೧-೮೦೭). [ ? ]

**ದರ್ಹಂ** (ನಾ). ಒಂದು ಬಗೆಯ ಬೆಳ್ಳಿಯ ನಾಣ್ಯ: ಅವರು ತಲೆಯೊಂದಕೆ: ನಾಲ್ಕು ಸಾವಿರ 'ದರ್ಹಂ' ನಾಣ್ಯಗಳನ್ನು ಕೊಡಬೇಕಾಗಿದ್ದಿತು (ಪ್ರಗಂಬ. ೫೪).
[ ←ಅರ. ಫಾರ. ದರಹಮ್ ; ಹಿಂ. ದಿರಮ್, ದಿರಹಮ್ ;
ಮರಾ. ದಿರವ್, ದಿರಿಮ್ ]

**ದಲ್** (ಅ). ೧. ಖಂಡಿತವಾಗಿ; ನಿಶ್ಚಯವಾಗಿ; ನಿಸ್ಸಂದೇಹವಾಗಿ; ಸರಿಯಾಗಿ; ಸಹಜವಾಗಿ: "ಜಿಕ್ಕಟಂ ದಲೆಂದೆನಲು" (ಕಬ್ಬಿಕ. ೪೯); "ವಲಂ ವೆಱಂ ದಲೆಂಬಿವು ಸಾಜ ದಿಟಕೆ" (ಶಬ್ದಮಂ. ೩೫) ; ಇದು ದಲ್ ವರ್ಗ ಪ್ರಾಸಕ್ಕುದಾಹೃತಂ ಕುಱಿತು ಶಷಸವರ್ಣತ್ರಯಮುಂ ವಿದಿತ ಪ್ರಾಸ ವಿವಿಕ್ತಾಸ್ಪದದೊಳ್ನಿಲೆ ಪೇೞ್ದೊಡದು ಸಮಾಪಪ್ರಾಸಂ (ಕವಿರಾ. ೨-೩೭) ; ಯಶಂಬಡೆದಂ ಗೊಗ್ಗಿ ದಲ್ ಎಂಬುದು ಪಡೆ ಮತು × × ಲಾಯ್ತು ಭುವನದೊಳಗುಂ ಪೊಱಗುಂ (ಎಕ. XI, ಚಳ್ಳಕೆ. ೬-೫ ; ಸು. 925) ; ನೀನರಸನೆ ಎನ್ನ ರಾಜ್ಯವಿಭವಕ್ಕೆಲೆ ನೀನೆ ದಲೆಂದು ಬಂದ ಮಾವಂರನನೆ ಮೂಱು ಸೂೞ್ ಪಿರಿದುಮಟ್ಟಿಱಿನಿಂ ಬಲವಂದನಂಗಜಂ (ಆದಿಪು. ೧೧-೧೦೦); ಕಯ್ದೀವಿಗೆಗಳ ಬೆಳಗಿಂ ಕಾಯ್ದಸೆವ ಸಹಸ್ರಕಿರಣನಿಂ ಭೇದಿಸಲೇ ಗೆಯ್ದುಂ ಬಾರದು ದಲ್ ತವೆ ಮಾಯ್ದಾ ಜವ್ವನದೊಳೊಡಲೊಳಿಡಿದಿರ್ದ ತಮಂ (ಕಾದಂಪೂ. ೫೨೯); ಕಡುಮೋಸಂ ಕೆಡಿಕು ದಲೈ (ಸೋಮೇಶ. ೪೩); ಏಗಂ ವಲಂ ವೆಱಂ ದಲ್ ತಾಗುಗುಮತಿ ನಿಶ್ಚಯಾರ್ಥಮಂ (ಶಮದ. ೩೦೬); ಕಣ್ ದರನಿಮೀಲಿತವಾಗೆ ದಲಾಸನಕ್ರಮಂ ಸಮನಿಸೆ ಹೂಂಕೃತ ಪ್ರಣವ ಮೊಪ್ಪೆ . . . ಯೋಗಿನಿಯಂತಿರೊಪ್ಪಿದಳ್ (ಕಾವ್ಯಸಾ. ೬೬೫); ಎಮ್ಮೊಳೆತ್ತಿ ಬಂದಿರ್ಪಂ, ಕಡುಗಲಿ ದಲಿವಂ ಕಾದಿ ಗೆಲ್ದೊಡೆಮ್ಮಿನಸದಳಂ (ರಾಮಾಶ್ವ. ೯೫-೯). ೨. ಅಲ್ಲವೇ ಎಂಬಂತೆ ಅವಧಾರಣೆಯನ್ನು ಸೂಚಿಸುವ ಮಾತು: ಅಂತೆಂಬನಾರ್ಗೆ ಪಿರಿದುಂ ಭ್ರಾಂತು ದಲೇಂ ದ್ರೋಣನೆಂಬನೇಂ ಪಾರ್ವನೆ ಪೇೞೆಂತೆನಗೆ ಕೆಳೆಯನೇ (ಪಂಪಭಾ. ೨-೪೭) ; ಆನುಂ ದುಶ್ಶಾಸನನುಂ ನೀನುಂ ಮೂವರೆ ದಲಾತನುಂ ಕಟ್ಟಿದ ಬಟುಕ್ಕಾನುಂ ನೀನೆ ದಲ್ (ಗದಾಯು. ೫-೧೧) ; ಬ್ರಹ್ಮನೆ [ದ]ಲ್ಲಮಗಾದೀ ಬ್ರಹ್ಮಜಿನಂ ತಾನೆನುತ್ತೆ ಸಾಸಿರ್ವ್ವರುಮಾ ಬ್ರಹ್ಮಜಿನನಿಳಯಕಿತ್ತರ್ವ್ವಬ್ರಹ್ಮ ಜಿನಾಳಯ ಮೆನಿಪ್ಪ ಪೆಸರಂ ಮುಂದದಿಂ (ಸೌಇಇ. XI-i, ೫೨-೬೨ ; 1007).

**ದಲ, ದಳ₂** (ನಾ). ೧. ಭಾಗ ; ಚೂರು ; ಅಂಶ; ಶಕಲ. ೨. ಎಸಳು; ರೇಕು ; ಪತ್ರ. 'ಚಲದಲ' ಪರಾ. ೩. ಗುಂಪು ; ತಂಡ; ಸಮೂಹ: ಈ ಜಾಗೃತಿಯಲ್ಲಿ ಚೀಣದ ನವಯುವಕದಲವು ಹೆಚ್ಚು ಕಾರ್ಯಭಾಗವನ್ನು ವಹಿಸಿತು (ಜಗಸಂ. II, ೧೦) ; ದಲದ ಮುಂದಾಳು ಮುಂದೆ ಬಂದು. . . ನಮಸ್ಕಾರಮಾಡಿ ಬರುತ್ತೇವೆ ಎಂದಳು (ಅಕ್ಕತಂ. ೬). ೪. ಸೈನ್ಯ ; ಪಡೆ: ದಲವ ಕೊಂದೀ ಕಪಿಯ ಜೀವವ ಕೊಳದೊಡಾನಿಂದ್ರಾರಿಯೇ (ಕಾಶಿರಾ. ೩೪-೧೯) ; ಕಂಡನಮಿತ ದಲ ಪದದಲನಮಂ ಸಮುದ್ಭೂತರೇಣು ಪ್ರವಾಹವಂ (ಶ್ರೀರಾಮಾ. ೧೫೭-೧೫೦). **ದಳ₂** : ೨. "ಬರ್ಹಂ, ಪರ್ಣಂ, ದಳಂ...ಛದಂ–ಈ ೭ ಮರದ ಎಲೆ" (ಹಲಾಯು. ೩೧-೩೦); "ಪತ್ರಂ ದಳಂ ಛದನಂ ಪಲಾಶಮೆನೆ ಪರ್ಣಮಕ್ಕುಂ" (ಮಂಗರಾ. ೩೨-೩) ; ಕೇಸರ ಲವಂಗ ದಳಂಗಳನಿಕ್ಕಿದಿಂ ಬಟ್ಟಿಕದಱೊಳೆ ಸದ್ಗುಡಂ ನೆಱೆಯೆ ಧೂಪಿಸೆ ಮಜ್ಜಿಗೆ ಯಕ್ಕುಮಂತ್ತಮಂ (ಲೋಕೋಪ. ೮-೫೩) ; ಅಂಕುರ ಪಲ್ಲವ ದಳ . . . ಪಕ್ವಫಲಗಳ ಪಂಕ್ತಿಗಳುಂ ಸಕಲರೋಗಹರಂಗಳಾಗಿ . . . ಕಂಗೊಳಿಸು ತಿರ್ಕುಂ (ವಿವೇಕ. ೨೦೨). ೩. ನಾನು ಹೋಗುತ್ತಿದ್ದ ದಾರಿಯಲ್ಲಿ ಯಾವುದೋ ಒಂದು ಮದೋನ್ಮತ್ತ ಉತ್ಸವಕಾರಿ ದಳ ಹೊರಟಿದೆ (ಬಾಣಅ. ೦೨೭). ೪. ಆನೆಯ ಕುದುರೆಯ ದಳ (ಮ್ಯಆರಿ. ೧೯೩೭, ೩೦-೨ ; ಸು. 1125) ; ಇಕ್ಕೇರಿಯ ದಳವ ಮುಱಿಯಲಱಿದು ಬೆನ್ನಟ್ಟಿ ಬಂದಾಕ್ಷಣ ಪುರವ ಮುತ್ತಿದನಾ ಖಾನ (ಕಂನವಿ. ೧೧-೪) ; ದಳ ನಡಿಸೋ ಬಂಟ ಬತ್ತಿ ನೂಕ್ಯಾನೆ ? (ಗಾದ). ೫. ನೆಲ ; ಭೂಮಿ. 'ಮನೆದಳ' ಪರಾ. ೬. ದವಸ ; ಧಾನ್ಯ. ೭. ದೈನ್ಯತೆ ; ದೀನತೆ. ೮. ವ್ಯಾಖ್ಯಾನ; ಒಕ್ಕಣೆ. ೯. ಆನೆ ; ಗಜ: "ವಕ್ಕಣೆ ಕರಿ ದಾರುಣಿ ಮೂಱಕ್ಕುಂ ದಳ ಶಬ್ದಮಕ್ಕು" (ನಾನಾಕಂ. ೧೧೦) ; "ದಳಮೆನೆ ಧಾರುಣಿಯಕ್ಕು ದಳಮೆಂದೆನೆ ಧಾನ್ಯಮಕ್ಕು ಪರಬಲಮಕ್ಕುಂ ದಳಮೆನೆ ಪಯಗಜಮಕ್ಕುಂ ದಳಮೆಂದೆನೆ ಸೈನ್ಯಮಕ್ಕು ಶಬ್ದಾಗಮದೊಳ್" (ಶಬ್ದರ. ೧೨). ೧೦. ಒಂದು ಬಗೆಯ ಅಡಕೆ : ಹತು ದಳ ಸಲುಗೆಯೆನಿ[ ತು ] ದಳಸನ್ದಡ ದಳಕೆ ವೀಶವೀಶ[ಮಂ] ಲೆಕ್ಕವಿಟ್ಟು ಕೊಳ್ವುದು (ಸೌಇಇ. XI-ii, ೧೫೩-೧೭; 1103); ಅಚ್ಚಿನ ಟಂಕಸಾಲೆಯಲು ದಳಕ್ಕೆ ವೀಸ ೨ ಎಲೆಯ ಹೆಱಿನಲು ಎಲೆ ೫೦ (ಸೌಇಇ. IX-i, ೨೨೮-೧೦; 1133) ; ಅಚ್ಚಿನ ಮೊಳೆಯಲ್ಲಿ ಕೊಟ್ಟ ದಳಕ್ಕೆ ವೀಸ ೨ ಕಾಣೆ ೨ (ಎಇ. XIV, ೨೭೩-೫೦ ; 1173) ; 'ಕದರಡಕೆ'ಗೆ ಸರಿಯಾದ ತಿಂಡಿ ಸಾಮಾನು ಬರುವುದಿಲ್ಲ ಎಂದು ಶಂಕಿಸಿ . . . ಒಳ್ಳೆಯ ಹಸ ಮತ್ತು ದಳಗಳನ್ನು ಕದ್ದು ಸೇರಿಸಿಕೊಂಡು ಬಂದಿದ್ದ (ಮಲೆಮ. ೪೩೯). ೧೧. ಒಂದು ಬಗೆಯ ತೆರಿಗೆ : ಹೊಂಗೆ ಮಾನ ೧ ದಳಕ್ಕೆ ಕೊಂಬು ಬೆಲ್ಲಕ್ಕೆ ನೂಱು ಕೊಂಡು (ಸೌಇಇ. IX-i, ೨೯೭-೪೮, 1177) ; ಕಬ್ಬುನ ದಳ ಮಿಡಿ ಹೆಸೆಯ ಕುಳ ಮುಖ್ಯವಾದ ಸರ್ವ ಆಯವನು . . . ಧಾರಾಪೂರ್ವ್ವಕವಾಗಿ ಬಿಟ್ಟು (ಎಕ. IX, ಚನ್ನಪ. ೬೬-೧೪; 1288) ; ತುಪ್ಪ ದಳ ಮಿಳಿ ಗುಳು ನೂಲು ಮುಖ್ಯವಾದ ಯೆಲ್ಲಾ ಅಪೂರ್ಬಾಯ ಗೂಡಿಕಟ್ಟಿಕೊಟ್ಟಗುತ್ತಗೆಯ ಸಿದ್ಧಾಯ ಗದ್ಯಾಣ ನೂಱು (ಎಕ. XV, ಬೇಲೂರು. ೨೫೨-೭ ; 1298).

**ದಳದಬ್ಬುಕ** = ಸೈನ್ಯವನ್ನು ಸೀಳುವವನು ; ಒಂದು ಬಿರುದು : ತಂನದಟಿಂ ದಳದಬ್ಬುಕನುನ್ನತನಾವಾದಿ ರಾಜ ದಣ್ಡಾಧೀಶಂ . . . ದಣ್ಡಾಧೀಶ್ವರಮಾದಿರಾಜನೆಸೆವಂ ದಣ್ಡೈಕ ಧರ್ಮಾತ್ಮಜಂ (ಕೊಲ್ಹಾಶಾ. ೨೩-೩೩; ?). **ದಳಬದ್ಧರಾಗು** = ಪಡೆಯಾಗು ; ಗುಂಪಾಗು : ಪಠಾಣರು ಅಕ್ಬರ ಬಾದಷಹನಿಂದ ವಂಗದೇಶದಿಂದ ಹೊರಡಿಸಲ್ಪಟ್ಟವರಾಗಿ ಉತ್ಕಲ (ಒರಿಸ್ಸಾ) ದೇಶದಲ್ಲಿ ದಳಬದ್ಧರಾಗಿ ಬಂದು ಸೇರಿಕೊಂಡಿದ್ದರು (ಕಪಾಕುಂ. ೩೩) ; ಜಗತ್ತಿನ ಸಕಲ ದೇಶಗಳಲ್ಲೂ ಈ ಮತಾನುಯಾಯಿಗಳು ದಳಬದ್ಧರಾಗಿ . . . ಪ್ರಚಂಡ ಚಳವಳಿ ನಡೆಸುತ್ತಿರುವರು (ಭಾರದ. ೩೬೩). **ಧಳಮುಟ್ಟೆ ಗಂಡ** = ಶತ್ರುಸೈನ್ಯವು ಆಕ್ರಮಣ ಮಾಡಿದಾಗ ಕಲಿತನವನ್ನು ಮೆರೆಯುವ ಶೂರ; ಏಕಾಂಗಶೂರ; ಒಂದು ಬಿರುದು: ಕೊಂಕಣ ಭಯಂಕರಂ ಧಳಮುಟ್ಟೆಗಣ್ಡನಣ್ಣನಬಂಟಂ (ಸೌಇಇ. XX, ೧೯-೩೦ ; 1015); ರಟ್ಟ ಮಾರ್ತಣ್ಡಂ ಧಳಮುಟ್ಟೆಗಣ್ಡಂ (ಸೌಇಇ. XI-i, ೭೮-೧೦ ; 1041). [ ಸಂ. ]

**ದಲತ್ಕೈರವ, ದಳತ್ಕೈರವ** (ನಾ). ಅರಳುತ್ತಿರುವ ಬಿಳಿ ನೈದಿಲೆ,–ಕುಮುದ : ಇವಱ ಸಮಾಸಕ್ಕೆ – ಕ್ವಣತ್ಕಂಕಣ . . . ಚಲತ್ಕುಂತಳ, ದಲ[ಪಾಠಾಂ. ಳ]ತ್ಕೈರವ . . . ಘೋಷದರ್ಣವ – ಎಂದಿರಿಸಿ ಸಮಾಸಮಂ ಮಾಡಿ, ಎಲ್ಲಕ್ಕಂ ವಿಭಕ್ತಿಯಂ ಪತ್ತಿಸುವುದು (ಶಮದ. ೮೦ ಪ್ರಯೋ). **ದಳತ್ಕೈರವ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ]

**ದಲನ, ದಳನ** (ನಾ). ೧. ಒಡೆಯುವಿಕೆ; ಸೀಳುವಿಕೆ : "ಹಟಿ–ನಿರ್ದ್ರವ ಕರಣೇ (ಹಿಂಡು), ದಲನಾರ್ಥೇ (ಸೀಳು ಎಂಬರ್ಥದಲ್ಲಿ) ಕುಳಂ" (ಶಮಧಾ). ೨. ನಾಶಪಡಿಸುವುದು ; ಹೋಗಲಾಡಿಸುವುದು : ತನ್ನ ತುಳಿತಕ್ಕೆ ತುತ್ತಾದ ವರ್ಗವನ್ನು (ದುಡಿಮೆಗಾರ ವರ್ಗವನ್ನು) ಹೆಚ್ಚಿನ ದಮನಕ್ಕೂ ದಲನಕ್ಕೂ ಗುರಿಮಾಡುವ ಹೊಸದೊಂದು ಸಾಧನವನ್ನಾಗಿ ಉಪಯೋಗಿಸ ಹತ್ತಿವದು (ಮಾವಾದ. ೧೬೬). **ದಳನ**: ೧. ವೈರಿಭೂಭೃನ್ಮದವನ್ಮಾತಂಗ ಕುಂಭಸ್ಥಳ ದಳನ[ಖ]ರೋಗ್ರಾಸಿ ಪಂಚಾಸ್ಯ ಧೈರ್ಯಂ ವಿದಿತ ಪ್ರತ್ಯಕ್ಷ ನಾಶಾಕರಿ ನಿಕಟತಟಶ್ರಾಂತದಾನಂ ಭರಂಗೆಯ್ದಿದಿರೊಳ್ ವಿಕ್ರಾಂತ ತುಂಗಂ ಹರಿಗನಿರೆ (ಪಂಪಭಾ. ೬-೭೭). [ ಸಂ. ]

**ದಲಪತಿ,** ದಳಪತಿ (ನಾ). ೧. ಸೇನಾನಾಯಕ ; ಸೈನ್ಯಾಧಿಪತಿ ; ದಂಡನಾಯಕ: ಕುದಿವ ಚಿತ್ತದ ದೃಢತೆಗುಂದಿದ ಪದವ ಬತ್ತಿದ ಬಸುಱ ಚಿಂತಾಹೃದಯ ನೋಡುತ ಮಱೆಯ ಹೊಕ್ಕನು ದೈತ್ಯ ದಲಪತಿಯ (ಕಾಶಿರಾ. ೩೨-೨೮). **ದಳಪತಿ:** ೧. ಮಗನು ದಳಪತಿಯಾದ ಗಡ ಕಾಳೆಗವ ನೋಡುವೆ ನೆಂಬವೊಲು ಜಗದಗಲದಲಿ ನೆಱೆ ಕಡಿತವಿಕ್ಕಿತು ತಿಮಿರವನದೊಳಗೆ (ಕುಭ್ಯಾಕ. ೨-೧) ; ದಳಪತಿ ಸಹ ಬಂಧುಗಳು ಕೂಡಿ ಪಂಕ್ತಿಯೊಳೊಲಿದು ಭೋಜನವನು ಮಾಡಿ . . . ಹರುಷದೊಳೊಪ್ಪಿದನು (ಕಂಸವಿ. ೮-೯೨) ; ಹೈದರನು ಪ್ರಸಿದ್ಧ ದಳಪತಿಯಾಗಿದ್ದನು (ಒಡಕ. ೮೯). ೨. ನಾಯಕ ; ಮುಂದಾಳು : ಹೇಳದೆಯೆ ಕೇಳದೆಯೆ ದಳಪತಿಯು ನುಡಿದಂತೆ ಮಾಡುವವನಾವನೋ ಅವನೆ ಸತ್ಯಾಗ್ರಹಿ (ಬಾಂಜಜ. ೨೦-೧). [ ದಲ + ಪತ್ರಿ ]

**ದಲವಾದ್ಯ** (ನಾ). ಅನೇಕರು ಸೇರಿ ನುಡಿಸುವ ವಾದ್ಯಗಳ ಸಮೂಹ ; ವಾದ್ಯವೇಳ : ದಲವಾದ್ಯ(ಬ್ಯಾಂಡು)ವೂ ಬರಲಿಲ್ಲ. ಅಂತಃಪುರದ ಸ್ತ್ರೀಯರು ಅತ್ಯಂತ ಅಸಂತುಷ್ಟರಾದರು(ಇಪ್ಪಕ. ೪೧). [ ದಲ + ವಾದ್ಯ ]

**ದಲಾಯತ್** 'ದಲಾಯಿತ' ನೋ.

**ದಲಾಯಿತ,** ದಲಾಯತ್ (ನಾ). (ಬಿಲ್ಲೆ ಧರಿಸಿರುವ) ಆಳು ; ಸೇವಕ ; ದವಾಲಿ ಸಿಪಾಯಿ : ಕಷ್ಟಪಟ್ಟು ಚಾಕರಿಮಾಡುವಂಥ ದಲಾಯಿತರು ಮುಂತಾದ ಆಳುಗಳಿಗೆಲ್ಲಾ ಆರಕ್ಕೆ ಹೆಚ್ಚಿಲ್ಲ ಮೂರಕ್ಕೆ ಕಡಿಮೆಯಿಲ್ಲ ಹೀಗೆ ಸ್ವಲ್ಪ ಸ್ವಲ್ಪ ಸಂಬಳಗಳೇಯಿರುತ್ತವೆ (ಕಥಾಮ. IV, ೧೧೫). **ದಲಾಯತ್:** "ದಲಾಯಿತ, ದಲಾಯತ್" (ಮೈಗೆಜ. IV, ೭೭೭). [ < ಡಲಾಯಿತ ]

**ದಲಾಲ** 'ದಲ್ಲಾಳ' ನೋ.

**ದಲಾಲಿ** 'ದಲ್ಲಾಳಿ' ನೋ.

**ದಲಾಲಿಕೆ** (ನಾ). ಮಧ್ಯಸ್ಥಿಕೆ; ದಳ್ಳಾಳಿತನ: ಇವನ ದಲಾಲಿಕೆಯೇ ಅದಕ್ಕೆ ಕಾರಣ (ಹಹಸ. ೫೮). [ ದಲಾಲಿ (<ದಲ್ಲಾಳಿ) + – ಇಕೆ ]

**ದಲಿತ,** ದಳಿತ (ಗು). ೧. ಒಡೆದ ; ಸೀಳಿದ. ೨. ಅರಳಿದ ; ವಿಕಸಿತವಾದ. 'ದಲಿತಾಂಬುಜ' ಪರಾ. (ನಾ).೩. ಹಿಂದುಳಿದುದು : ಯಾವ ವರ್ಗವು ಇಂದಿನ ಪ್ರಚಲಿತ ವ್ಯವಸ್ಥೆಯಿಂದ ಅತ್ಯಂತ ದಲಿತವಾಗಿದೆಯೋ . . . ಅದೇ ವರ್ಗವು . . . ಜಾಗೃತಿಯನ್ನು ಪಡೆದುಕೊಳ್ಳಬಲ್ಲದು (ಮಾವಾದ. ೧೫೩). ೪. ಹಿಂದುಳಿದವನು; ದಮನಕ್ಕೆ ಒಳಗಾದವನು. 'ದಲಿತಜನ' ಪರಾ. **ದಳಿತ:** ೧. ಇಳಾಪ್ರಭುವೊಗೆದ ನುದಿತ ಕಾಯಪ್ರಭೆಯೊಗೆದಿರೆ ದಳಿತ ಶತ್ರುಗೋತ್ರಂ ಪುತ್ರಂ (ಪಂಪಭಾ. ೧-೧೨೭). ೨. ದಳಿತಕಮಲಚ್ಛಾಯಾಟೋಪಂ ಮನೋಜರಸಪ್ರಭಾವಳಯ ನಿಳಯಂ . . . ಸ್ನಿಗ್ಧಂ ವಿಳೋಕನಮೋಪಳಾ (ಪಂಪಭಾ. ೪-೭೭). ೫. [ಗಣಿತ] ಭಾಗಿಸುವುದು ; ಭಾಗಾಕಾರ : "ದಳಿತ, ಅರ್ದಿತ . . . (ಖಂ)ಡಿತ ಇಂತಿನಿತುಂ ಅರ್ಧಿಸೋದಕ್ಕೆ ಹೆಸರು" (ವ್ಯವಹಾ. ೧೧-೨೩); ಚತುಃಷಷ್ಟಿಗುಣಿತ ದ್ವಾದಶೋತ್ತರ ದ್ವಿಶತಗುಣ ಪಿಂಡಹೃತ ನದೀ ವಿಷ್ಕಂಭ ರಹಿತ ದಳಿತ ಮಧ್ಯಮ ಪರಿಧಿ ಕಚ್ಛಾದಿ ಗಂಧಮಾಲಿನ್ಯಾ ವಿಷಯಾ ಯಾಮುಮಕ್ಕುಂ (ತತ್ತ್ವಪ್ರ. ೧೬೫). [ ಸಂ. ]

**ದಲಿತಜನ,** ದಳಿತಜನ (ನಾ). ದಮನಕ್ಕೆ ಒಳಗಾದವರು ; ಶೋಷಿತ ಜನ ; ಆರ್ಥಿಕವಾಗಿ, ಸಾಮಾಜಿಕವಾಗಿ ಕೆಳವಂಟ್ಟದವರು : ಉಳ್ಳವರ ನಿರ್ದಯದ ಕಲ್ಲುಗಾಣದ ಪೀನಕೃತ್ಯದಲಿ ನಿರಿನಿಟಲು ಬಡವರೆದೆಯು, ಕ್ಷಾಮಡಾಮರ ಭೀಮಗದೆಯನಪ್ಪಳಿಸುತಿರೆ ನಿತ್ರಾಣವಾಗುತಿದೆ ದಲಿತಜನವು (ಭಾವಜೀ. ೧೨-೧೬) ; ಈ ಹೊಸೂರಿನಲ್ಲಿರುವ ದಲಿತಜನರ ಸ್ಥಿತಿ – ಗತಿಗಳು ಅತ್ಯಂತ ಶೋಚನೀಯವಾಗಿದ್ದವು. (ಹೊಸೂಹ. ೦೮). **ದಳಿತಜನ :** ದಳಿತಜನದ ಹಿತವನ್ನು ಲಕ್ಷಿಸದೆ . . . ಯಾಂತ್ರಿಕವಾಗಿ ಬಂಡವಾಳದ ಚಕ್ರವನ್ನು ತಿರುಗಿಸುತ್ತಿರುವ ವಿಜ್ಞಾನ ಸಂಸ್ಕೃತಿ (ಶಿಕ್ಷದ. ೩೯೭). [ ದಲಿತ + ಜನ ]

**ದಲಿತವರ್ಗ** (ನಾ). = ದಲಿತಜನ : ದಲಿತವರ್ಗದವರಿಗಾಗಿ ಶ್ರಮಿಸಬೇಕು (ಕೊನೆಭೇ. ೨೮೩). [ ದಲಿತ + ವರ್ಗ ]

**ದಲಿತಾಂಬುಜ,** ದಳಿತಾಂಬುಜ (ನಾ). ಅರಳಿದ ತಾವರೆ; ವಿಕಸಿತವಾದ ಕಮಲ. 'ದಲಿತಾಂಬುಜನೇತ್ರೆ' ಪರಾ. **ದಳಿತಾಂಬುಜ :** 'ದಳಿತಾಂಬುಜನೇತ್ರೆ' ಪರಾ. [ ದಲಿತ + ಅಂಬುಜ ]

**ದಲಿತಾಂಬುಜನೇತ್ರೆ,** ದಳಿತಾಂಬುಜನೇತ್ರೆ (ನಾ). ಅರಳಿದ ಕಮಲದಂತೆ (ಅಗಲವಾದ) ಕಣ್ಣುಳ್ಳವಳು ; ಆಯತಾಕ್ಷಿ : ಇಂದುಯುಗಂಗಳ ಮುಂದಂ ಬಂದು ಹರದ್ವಿತಯಂಗಳ್ ನಿಂದೊಡೆ ಚಿತ್ರಪದಂ ನಾಮಂ ದಳಿ[ಪಾಠಾಂ. ಳಿ]ತಾಂಬುಜನೇತ್ರೇ (ಛಂದೋಂಬು. ೨-೯೪). **ದಲಿತಾಂಬುಜನೇತ್ರೆ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ದಲಿತಾಂಬುಜನೇತ್ರಾ (ದಲಿತಾಂಬುಜ + ನೇತ್ರ + –) ]

**–ದಲೆ** (ಪ್ರ). ಭಾವನಾಮವಾಚಕ ಕೃದಂತ ಪ್ರತ್ಯಯ : 'ಆದಲೆ', 'ತವುದಲೆ', 'ಮರಳಂದಲೆ' ಪರಾ.

**ದಲ್ಲಗ** (ನಾ). ಒಬ್ಬಾತನ ಹೆಸರು : ದಲ್ಲಗ ಪೇಟ್ಟಯ್ಯನೆ ಪಾಲ × × (ಎಕ. II, ೯೦-೧ ; ಸು. 700). [ ? ]

**ದಲ್ಲಾಲಿ** 'ದಲ್ಲಾಳಿ' ನೋ.

**ದಲ್ಲಾಳ,** ದಲಾಲ, ದಳ್ಳಾಳ (ನಾ). ಮಾರುವವರು ಮತ್ತು ಕೊಳ್ಳುವವರ ನಡುವೆ ಮಧ್ಯಸ್ಥನಾಗಿ ಕೆಲಸ ಮಾಡಿ ಅದಕ್ಕಾಗಿ ಶುಲ್ಕ ಪಡೆಯುವವನು: ಕಮಿಷನ್ ಏಜೆಂಟ್; ವ್ಯಾಪಾರಗಾರರ ಸರಕನ್ನು ನಿರ್ದಿಷ್ಟ ಲಾಭಕ್ಕಾಗಿ ಮಾರಾಟಮಾಡಿಸುವವನು ; ದಳ್ಳಾಳಿ : ಮುಂಗಡವಾಗಿ (Option) ಒಪ್ಪಂದ ಮಾಡಿಕೊಳ್ಳುವ ತರಗಿನ ದಲ್ಲಾಳರು ಬೆಳೆಗೆ ಸಂಚಕಾರ ಕೊಡುವರು (ಹಟಪ್ರ. ೧೬೦). **ದಲಾಲ:** ಸ್ಥಿರ ಹವೆಯು ಹೊರಗಿನ ಹವೆಗೂ ರಕ್ತಕ್ಕೂ ನಡುವೆ ದಲಾಲನಂತೆ ಇರುತ್ತದೆ (ಮುಂಬಯಿ. ೬-೩೦೯); ದೇವದೈವಗಳ ಅನುಗ್ರಹಕ್ಕಾಗಿ . . . ದೇವರ ದಲಾಲರಾದ ವೈದಿಕರೂ, ಕಾಜಿಗಳೂ, ಪಾದ್ರಿಗಳೂ ಉತ್ಪನ್ನರಾಗುತ್ತಾರೆ (ಮಾವಾದ. ೭೩) ; ಹುಬ್ಬಳ್ಳಿ, ಮಿರ್ಜಿ ಈ ಗ್ರಾಮಗಳಲ್ಲಿಯು ಹುಂಡೀಸಾವಕಾರರ ದಲಾಲರು ಮಾತ್ರ ಇರುತ್ತಿದ್ದರು (ಕಥಾಗ. ೨೭೯). **ದಳ್ಳಾಳ :** ನಾನು ಹುಡುಗೀರನ್ನ ಹುಡುಕಿಕೊಂಡು ಬರೋ ದಳ್ಳಾಳ ಎಂದು ತಿಳಕೊಂಡರೆ ಮಾತ್ರ ನನಗೆ ಸಹಿಸೋದಕ್ಕೆ ಆಗೋದಿಲ್ಲ (ಮಾರ್ಗದ. ೧೩೭).
[ ←ಅರ.ಪಾರ. ದಲ್ಲಾಲ್ ; ಹಿಂ. ಮರಾ. ದಲಾಲ್, ದಲ್ಲಾಲ್ ]

**ದಲ್ಲಾಳಿ,** ದಲಾಲಿ, ದಲ್ಲಾಲಿ, ದಳ್ಳಾಳಿ (ನಾ). ೧. ವ್ಯಾಪಾರದಲ್ಲಿ ಕೊಡುವವರ ಹಾಗು ಕೊಳ್ಳುವವರ ನಡುವೆ ವ್ಯವಹರಿಸಿ ಅದಕ್ಕಾಗಿ ಪಡೆಯುವ ಶುಲ್ಕ ; ತರಗು. 'ದಲ್ಲಾಳಿತನ', 'ದಲ್ಲಾಳಿವಟ್ಟ' ಪರಾ. ೨. = ದಲ್ಲಾಳ : ಚನ್ನಬಸವಪ್ಪನ ಮಗ ರೇಶ್ಮೆ ದಲ್ಲಾಳಿ ವೀರ ಸೆಟಪ್ಪನ ಹೆಂಡತಿ ಗಂಗವ್ವನ ಭಕ್ತಿ (ಎಕ. XII, ಕುಣಿಗ. ೪೮-೨ ; 1898) ; ಅಗ್ಗವಾಗಿ ಕೊಂಡು ಲಾಭಕ್ಕೆ ಮಾರುವ ದಲ್ಲಾಳಿ ವರ್ತಕರ (ತರಗಿನ ಪೇಟೆಯ) ಗುಂಪು ಎಲ್ಲೆಲ್ಲಿಯೂ ತಾನೇ ತಾನು (ಹಟಪ್ರ. ೯). **ದಲಾಲಿ :** ೧. ಪಿತ್ರಾರ್ಜಿತ ಆಸ್ತಿಯು ಕಡಮೆಯಾಗಲು ಅವನು ಪ್ಯಾರಿಸ್‌ದಲ್ಲಿ ದಲಾಲಿಯ ವ್ಯವಹಾರ ಸಾಗಿಸುತ್ತಿದ್ದನು (ಮೊಪಾಸಾ. ೩ ಮುನ್ನುಡಿ) ; ಕಾತಪ್ಪ ದನಕರುಗಳ ವ್ಯಾಪಾರದಲ್ಲಿ ದಲಾಲಿ ಮಾಡುವ (ಆಕೋಳ. ೦೯). ೨. ಬಹಳ ಕುಯುಕ್ತಿಯ ದಲಾಲಿಗಳೂ ಇದ್ದಾರೆ (ಪ್ರವಾಇ. II, ೫೦೪) ; ದಲಾಲಿ ಭೀಮಣ್ಣ, ಕಿರಾಣಿಅಂಗಡಿ ರಾಮಣ್ಣ ಮತ್ತು ಆ ಸುಗೂರ ದೇಸಾಯರು ಇಂಥಾ ಜನರು ಒಟ್ಟು ನಿಲ್ಲಧಂಗ ಮಾಡಬೇಕು (ಆಪನಾ. ೭) ; ಈ ದಲಾಲಿಯ ಸಲುವಾಗಿ ನಾನು ನನ್ನ ಆತ್ಮನಿಗೆ ಎಷ್ಟು ಅನ್ಯಾಯ ಮಾಡಬೇಕಾಗುತ್ತಿತ್ತು (ಪ್ರೇಮಾಶ್ರ. ೨೫೫). **ದಲ್ಲಾಲಿ :** ೧. ಈ ಕಾರ್ಯದಲ್ಲಿ ತಮಗೆ ಯಶ ದೊರೆತಲ್ಲಿ ರತ್ನಗೋಲದ

ಬೆಲೆಯಲ್ಲಿ ಶೇಕಡಾ ಐದರಷ್ಟು ತಮಗೆ ದಲ್ಲಾಲಿ ಕೊಡಲು ನಮ್ಮ ರಾಯರು ಸಿದ್ಧರಿದ್ದಾರೆ (ರತ್ನಗೋ. ೨೭). **ದಳ್ಳಾಳಿ :** ೧. ಶೇಕಡಾ ೫ ರಂತೆ ದಳ್ಳಾಳಿ ಎಷ್ಟಾಗುತ್ತದೆಂದು ಗುಣಿಸಿಕೊಂಡನು (ಯೋಧಪು. ೨೪). ೨. ಸಾಮಾನು ಗಳನ್ನು ಮಾರಾಟ ಮಾಡಲು ಒಬ್ಬ ದಳ್ಳಾಳಿಯನ್ನು ನೇಮಿಸಿದ (ಪ್ರವಾಇ. II, ೨೦೮) ; ನ್ಯಾಯಾಲಯದ ದಳ್ಳಾಳಿಯನ್ನು ಕೇಳಿ ನೋಡಿ ಆತ ಗೌರ್ನರ ಮೇಲೆ ತಪ್ಪು ಹೊರಿಸ ತ್ತಾನೆ (ಪುನರು. ೨೪೫).

[ ←ಪಾರ. ದಲಾಲೀ, ದಲ್ಲಾಲೀ; ಹಿಂ. ದಲ್ಲಾಲಿ ; ಅರ. ದಲಾಲೀ; ಮರಾ. ದಲಾಲೀ ]

**ದಲ್ಲಾಳಿತನ$_1$**, ದಳ್ಳಾಳಿತನ (ನಾ). ಮಧ್ಯಸ್ಥಿಕೆ ; ಮಧ್ಯಸ್ಥಗಾರನ ವೃತ್ತಿ : (*). **ದಳ್ಳಾಳಿತನ :** ದಳ್ಳಾಳಿತನದಿಂದ ಆತನ ಜೀವನ ನಡೆಯು ತ್ತದೆ (ರೂಢಿ). [ ದಲ್ಲಾಳಿ + – ತನ ]

**ದಲ್ಲಾಳಿತನ$_2$** (ನಾ). ಧಾರ್ಷ್ಟ್ಯ ; ಮದ ; ಉನ್ಮತ್ತತೆ : ಉನ್ಮತ್ತ ಯೌವನಂ ಪೊಲ್ಲ ಮುನಿಸಿಂದ ಪೊಡವುಟ್ಟು ಪೊಳಲಂ ತನಗೆ ಮಾರ್ಮಲೆ ವರಿಲ್ಲವೆಂದು ದಲ್ಲಾಳಿತನದಿಂದ ದಂಡು ನಡೆದಂ ಧರಣಿಯೆಲ್ಲಮಾ ಬಲು ಭಾರಕಲ್ಲಾಡುವಂದದಿಂ (ಸಮ್ಯಕ್ತ್ವ. ೮-೨೫) ; ತಂದೆತಾಯಿಗಳರಸಿಗತಿ ಸಲಿಗೆವಂತರೆಂಬೊಂದು ದಲ್ಲಾಳಿತನದಿಂ ಲಂಡಪುಂಡರೊಳ್ ಮುಂದೆ ನೋಡದೆಯಾಡಿ ಕೊಟ್ಟುಕೊಂಡವರು ನೆಱೆಹೊಱೆಯವರು ನಗುವ ತೆಱದಿ ನಿಂದೆಗೊಳಗಾಗಿ (ಸಮ್ಯಕ್ತ್ವ. ೧೦-೩) ; ಒಳ್ಳಿತನುಣಲಿತ್ತು ಸಲಹು ತಿಪ್ಪೆವು ಮುಪ್ಪಿನಲ್ಲಿ ಸಾಕುವರೆಮ್ಮನೆಂದು ದಲ್ಲಾಳಿತನದಲ್ಲಿ ಹಾಱ ಹೋಹಿರಿ ಬಲು ಕಳ್ಳರಲ್ಲವೆ ಹೋಗಿರೆಂದಾ (ಭರತ. ೪೫-೧೦೯).

[ ದಲ್ಲಾಳಿ? + – ತನ ]

**ದಲ್ಲಾಳಿವಟ್ಟ** (ನಾ). ಮಧ್ಯಸ್ಥಿಕೆಯಿಂದ ಬರುವ ಲಾಭ;–ದಳ್ಳಾಳಿತನ ದಿಂದ ದೊರೆಯುವ ಕಮಿಷನ್ ; ತರಗಂ : ಅವರಿಗೆ ದಲ್ಲಾಳಿವಟ್ಟ (Brokerage) ಕೊಟ್ಟಲ್ಲಿ, ನಮಗೆ ಶೇರನ್ನು ಕೊಡಿಸುವುದಕ್ಕೆ, ಕೊಳ್ಳು ವುದಕ್ಕೆ ಅವರು ಸಹಾಯವಾಗುತ್ತಾರೆ (ಬಾಲಪ್ರ. III, ೧೫೭೩).

[ ದಲ್ಲಾಳಿ + ವಟ್ಟ$_1$ ]

**ದಲ್ಲಿಮರ** (ನಾ). ಒಂದು ಬಗೆಯ ಮರ : ದೊಡ್ಡ ತೊಪ್ಪೆಮರ, ದೊಡ್ಡಿ ಮರ, ಬಿಂದಾರಿಮರ, ದಲ್ಲಿಮರ, ಬಟ್ಟಗ (ಮೈಜಿಗಿ. ೪೫-೮೮೫).

[ ? + ಮರ$_1$ ]

**ದವ** (ನಾ). ೧. ಕಾಡಂ ; ಅರಣ್ಯ ; ವನ : "ಅಡವಿಯಲ್ಲಿಯುಂ ದವ ದಾವ ಎಂಬುದು" (ಹಲಾಯು. ೧೩೩-೧೩) ; "ವನದಲ್ಲಿ ದವ ದಾವಮೆಂಬುದು" (ಮಂಗರಾ. ೧೩೯-೭) ; ಆ ಮಾರನನಾ ದವದಗ್ನಿ ಬರ್ದುಂಕಲೀಗುಮೋ (ಆದಿಪು. ೯-೫೯). ೨. ಕಾಡಂಗಿಚ್ಚು ; ದಾವಾಗ್ನಿ : "ನಿಮಿರ್ದ ಕಾಂತಾರ ದಲ್ಲಿಯ ಕಿಚ್ಚು ದಾವಂ [ದವಂ] (ಮಂಗರಾ. ೧೪-೯) : "ವನ ಕೃಷ್ಣ ವರ್ತ್ಮಂಗೆ ದವನಾಮ" (ಕಶರ. ೫೦) ; ದವರೌದ್ರುಜ್ವಲನಾದ್ಭುತಂ ಹೃದಯ ದೊಳ್ ಶೋಕಾಗ್ನಿ ಕೈಗಣ್ಮಿ ಪೊಣ್ಮುವ ಕಿಚ್ಚಂ ನದಿಪಲ್ಕೆ ಬರ್ಪ ತೆಱದಿಂ ಕಣ್ಗಳಿಂದುಣ್ಮಿ ಪೊಣ್ಮುವ ನೇತ್ರಾಂಜನಮಿಶ್ರಬಾಷ್ಪಜಲಧಾರಾಬಿಂದುಗಳ್ ಕೂಡೆ (ಅಜಿಪು. ೧೦-೪೫) ; ದವರೂಪಂ ರಿಪುಕಾನನಕ್ಕೆ ಪವಿರೂಪಂ ಶತ್ರು ಶೈಳಕ್ಕೆ ಬಾಡವ ರೂಪಂ [ದ್ವಿ]ಷದರ್ಣ್ಣವಕ್ಕೆ (ಎಕ. VIII, ಸೊರಬ. ೧೪೦-೨೯ ; 1198) ; ಜವನೆಂಬ ವನಕೆ ದವನೆಂದೆನಿಪ ಕರ್ಗೊರಳನ ಭರ್ಗನ ಫಣಿ ಕಂಕಣನಂ ಚತುರರ್ಗೆಱೆಯುಂ ಪೊಗಳ್ದಂ ವರಗುರ್ಜರಭೂವರನಿರ ದೊಸೆದು (ಉದ್ಭದೇ. ೬-೨೨) ; ತದ್ರಿಪು ಮದದವಮಂ ನಂದಿಸಲ್ ಬರ್ಪ ಕಾರಂತಿರೆ ಬಂದಂ (ರಾಜಶೇ. ೬-೧೩). "ದವದಾವ ಶಬ್ದ ವೆರಡುಂ ಪ್ರವರ್ತಿಕುಂ ವನದೊಳಂ ವನೋತ್ಥಾಗ್ನಿಯೊಳಂ" (ವಸ್ತುಕೋ. ೧೨೦-೧೬). ೩. ಕಿಚ್ಚು ; ಬೆಂಕಿ ; ಅಗ್ನಿ : ರಿಪುವಿಪಿನ ದವ ಹರಿಶ್ಚಂದ್ರಭೂಪಾಲನ ಪ್ರಬಳ ಪ್ರತಾಪ ಶರಧಿಯ ಸುಳಿಯೊ ಹೇಳೆನಲಯೋಧ್ಯಾಪುರಂ ಮೆಱೆವು ತಿರ್ದುದು (ಹಚಕಾ. ೧-೩೬). ೪. ಒಂದು ಬಗೆಯ ಮರ : ಕಂಕೇಲಿ ಮೋಚಂ ದವಂ ನಳಿನ ತಾಳಮಿವಿಂತು ವೃಕ್ಷಮೆನಿಕುಂ (ನಾನಾರ. ೧೧೧).

[ ಸಂ. ]

**ದವಡ** 'ಧವಡ$_1$' ನೋ.

**ದವಡತನ** 'ಧವಡತನ' ನೋ.

**ದವಡಿಗ** (ನಾ). ಹುಂಬ : ತುಂಬಿದುದು ಹೆಣನೊಟ್ಟಲಲಿ ನೆಲನಂಬರಕೆ ಜಡಿದಿಟ್ಟನಾಕುವ ಡೊಂಬಿಗರ ದವಡಿಗರ ದಕ್ಕಡರಕ್ಕಸರ ಹನುಮ (ತೊರರಾ. ೫-೪-೨೨). [ ದವಡ (<ಧವಡ$_1$) + – ಇಗ ]

**ದವಡಿತಿ** (ನಾ). ೧. ಹುಂಬಹೆಣ್ಣು ; ಅವಿವೇಕಿಯಾದ ಹೆಣ್ಣು. ೨. ಕೆಟ್ಟನಡತೆಯ ಹೆಣ್ಣು ; ದಂಷ್ಟೆ ; ನೀಚೆ. 'ಅತಿದವಡಿತಿ' ಪರಾ.

[ ದವಡ (<ಧವಡ$_1$) + – ಇತಿ$_1$ (<–ಇತ್ತಿ) ]

**ದವಡೆ**, ಡವಡೆ$_2$, ಡವುಡೆ$_2$, ದಾಡೆ$_1$, ದೌಡೆ (ನಾ). ೧ ಒಸಡಂ ; ದಂತ ಪೀಠ : ತಾಲು, ಕಾಕುದಂ–೨ ದವಡೆಗಳು, ವಳದವಡೆ, ಹೊರ ದವಡೆ, ಕೆಳದವಡೆ, ಮೇಲಂದವಡೆ, ದಾಡೆ" (ಸಿದ್ಧಾಂಶಿ. ೧೯೫) ; ಸಮವಾದ ದವಡೆಗಳು (ಸೌಗಂಧಿ. ೨೬೯-೪); ಅವು (ರಥಾಶ್ವಗಳು) ದವಡೆಗಳನ್ನು ಕಚ್ಚಿ ಕೊಂಡು ರೋಷಾರುಣಲೋಚನಗಳಾಗಿ ಭೂಮಿಯಲ್ಲಿ ಬಿದ್ದು (ಕೃವಾಕ. ೧೬೦) ; ಕಸ್ತೂರೀಮೃಗವು ಸಾಧಾರಣ ಹಂದಿಯಷ್ಟು ಇರುತ್ತದೆ. ಅದರ ದವಡೆಗೆ ಕೋರೇಹಲ್ಲು ಇರುವವು (ಮುಂಬಯಿ. ೪-೩೧೨) ; ಬಡವನ ಸಿಟ್ಟು ದವಡೆಗೆ ಮೂಲ (ಗಾದೆ). ೨. ಕಪೋಲಭಾಗದಲ್ಲಿ ಹಿಂಭಾಗದಲ್ಲಿರುವ ಹಲ್ಲು : ವೀರಣ್ಣನ ಧೈರ್ಯಸಾಹಸಗಳು, ಮೃತ್ಯುವಿನ ದವಡೆಗಳೊಳಗೆ ನುಗ್ಗುವ ಕಲಿತನ ಇವುಗಳು ಈಚಣ್ಣನವರನ್ನು ರೋಮಾಂಚಗೊಳಿಸಿ ದುವು (ಹಾಹುತ್ತ. ೮೨) ; ಮೃತ್ಯುವಿನ ದವಡೆಗೇ ಸಿಕ್ಕಿದ್ದು ವಿಜಯಸಿಂಹನು ನಿರಪಾಯವಾಗಿ ತಪ್ಪಿಸಿಕೊಂಡನು (ರಾವಿಜ. ೧೩) ; ದವಡೆ ಹಲ್ಲುಗಳು ಗಟ್ಟಿಇವೆ (ರೂಢಿ). **ಡವಡೆ$_2$ :** (*). **ಡವುಡೆ$_2$ :** (*). **ದಾಡೆ$_1$ :** ೧. ಪಾರಿ ವಾಣದ ಸೊಪ್ಪಿನ ರಸ ಲೊಕ್ಕಿಸೊಪ್ಪಿನ ರಸ . . . ಕಲಸಿ ಗುಳಿಗೆಯಂ ಮಾಡಿ ದಾಡೆಯಲ್ಲಿರಿಸಿಕೊಂಡು ಬಂದರಸವಂ ನುಂಗಲು ೪ ತೆರದ ಅಜೀರ್ಣಂ ಕೆಟ್ಟು ದೀಪನವಹುದು (ಸಕವೈ. ೩೬೯). **ದೌಡೆ :** ೧. ಆಡಿ ಗೆಲ್ಲುವ ನಾಲ್ಕು ಯಿಮ್ಮಡಿ ಗಜ್ಜುಗವ ಕೂಡಿದ ಗೆಳೆಯರ ಕೂಡೆ ನೋಡಿ ಬಚ್ಚಿಡು ವರೆ ಮನೆಯಿಲ್ಲದಿರೆ ಬಾಲ ದೌಡೆಯೊಳಿಟ್ಟುಕೊಂಡಿಹನು (ಚಂದ್ರಹಾ. ೧-೩೪).

**ದವಡೆಗೆ ಬಲಿಯಾಗು** = ಬಾಯಿಗೆ ಸಿಕ್ಕು; ತುತ್ತಾಗು : ಭಾರಿಭಾರಿ ಆಸನಗಳು, ಮಂಚಗಳು, ಕನ್ನಡಿಗಳು ಸದ್ದುಮಾಡುತ್ತಾ ಬಂದು ಬೆಂಕಿಯ ದವಡೆಗೆ ಬಲಿಯಾದವು (ಆಶ್ರಮ. ೧೦೯). **ದವಡೆಯಹಲ್ಲು** = ದವಡೆ ೨ : ಎರಡೂ ದವಡೆಯ ಹಲ್ಲುಗಳು ಗಾಯದಲ್ಲಿ ಮೂಡಿದ್ದವು (ಕುಡಿಕೊ. ೪೪).

[ ದೇ.II ತಮಿ. ತವಟ್ಟೈ; ಮಲ. ಕಾಡಿ; ತುಳು. ದೌಡೆ; ತೆಲು. ದವುಡ ]

**ದವಡೆಸೆಳವು** (ನಾ). "ಅಗಿಯುವ ಸ್ನಾಯುಗಳು ಸೆಳವಿನಿಂದ ದವಡೆ ಗಳು ತೆರೆಯಲಾಗದಂತೆ ಮುಚ್ಚಿಕೊಂಡಿರುವ ಒಂದು ಬಗೆಯ ಧನುರ್ವಾಯು: ದವಡೆಸೆಳವು" (Locked Jaw. ಇಂಕನಿ).

[ ದವಡೆ + ಸೆಳವು ]

**ದವಣ** (ನಾ). ಸರಕು (?) : ಸ್ವದೇಶಿ ಪರದೇಶಿಯಿದಂ ಬಂದಂತಹ ದವಣ ಗದ್ಯಾಣ ನೂಱಕ್ಕೆ ಗದ್ಯಾಣಂವೊಂದಱೋಪಾದಿಯ ದವಣ ಆದಿದೇವರಿಗೆ ಸಲುವಂತಾಗಿ ಕೊಟ್ಟ ಶಾಸನ (ಎಕ. II, ೩೩೭-೩೨ ; 1288) ; ಕಬ್ಬಿಣದ ಮುದ್ದೆ ೧ ದವಣ ೧ ಕ್ಕೆ ಲ್ (ಎಕ. XI, ಹಿರಿಯೂ. ೮೮-೨೬ ; 1589).

[ ? ]

**ದವಣಂದಿ** (ನಾ). ಒಬ್ಬಾತನ ಹೆಸರು : ಶ್ರೀ ದವಣಂದಿ ಬಳರರ ಗುಡ್ಡ ಆಸು × × ಬಂದು ತೀರ್ತ್ಥವ ಬಂಧಿಸಿದ (ಎಕ. II ೪೯ : ಸು. 1000). 'ದಾವನಂದಿ' ಪರಾ. [ ? ]

**ದವಣಿ** 'ದಾವಣಿ$_1$' ನೋ.

**ದವಣಿಗ** (ನಾ). ವ್ಯಾಪಾರಿ (?) : ಶ್ರೀ ಮಲ್ಲೊಕ್ಕಿಗುಣ್ಡಿಯ ಜೋಳ ದಂಗಡಿಯ ದವಣಿಗ ಮಹಾಜನಂ ಶ್ರೀಮರುಳೇಶ್ವರ ದೇವರಿಗೆ ಅಂಗಡಿಯ ಲರವಾನಂಗೊಳ್ವ ಸಂಟ್ಟುಗ ಭತ್ತಮಂ ಕೊಟ್ಟರು (ಕಇ. II, ೧೦-೧೫ ; 1080). [ ದವಣ + – ಇಗ ]

**ದವತಿ** 'ದವುತಿ' ನೋ.

**ದವಥು** (ನಾ). ೧. ಕಿಚ್ಚು ; ಬೆಂಕಿ. ೨. ಕಾವು ; ಶಾಖ. ೩. ಸುಡುತ್ತಿ ರುವ ಜ್ವರ: (?). ೪. ನೋವು; ಯಾತನೆ. ೫. ಆಯಾಸ; ಬಳಲಿಕೆ: "ದವಥುಃ, ಪರಿತಾಪಃ – ಈ ಎರಡು ಬಟಲಿಕೆ" (ಹಲಾಯು. ೯೮-೪೪) ; "ಪರಿತಾಪಮೆನೆ ದವಥು ಬಟಲಿಕೆ" (ಮಂಗರಾ. ೧೧೩-೨). [ ಸಂ. ]

**ದವದಹನ** (ನಾ). ಕಾಡನ್ನು ಸುಡುವ ಕಿಚ್ಚು ; ಕಾಳ್ಗಿಚ್ಚು ; ದಾವಾ ನಲ: ನೃಪವೃಷಭನರಾತಿನಿಕರತರು ದವದಹನಂ (ಕವಿರಾ. ೩-೧೫೭) ; ದವದಹನಂ ಕಾನನಮಂ ತವಿಪಂತಿರೆ ಬಾಡವಾನಲಂ ವಾರಧಿಯಂ ತವಿ ಪಂತಿರೆ ಪವನಸುತಂ ತವಿಸಿದನಗಣಿತಮೆನಿಪ್ಪ ದಾನವ ಬಲಮಂ (ಪಂರಾಮಾ. ೧೩-೧೨೯). [ ದವ + ದಹನ ]

**ದವದಾಹ** (ನಾ). ಕಾಳ್ಗಿಚ್ಚಿನ ಉರಿ ; ದಾವಾಗ್ನಿಯ ಜ್ವಾಲೆ: ರಾಹು ವೆತ್ತಲು ಲಲಿತತಾರಾವ್ಯೂಹವೆತ್ತಲು ದಳ್ಳಿಸುವ ದವದಾಹವೆತ್ತಲು ನೀರಸದ ತೃಣರಾಶಿ ತಾನೆತ್ತ (ಕುಮಾ.ದ್ರೋ. ೧೭-೨೪).

[ ದವ + ದಾಹ ]

**ದವನ** (ನಾ). ಸುವಾಸನೆಯ ಎಲೆಗಳುಳ್ಳ ಒಂದು ಬಗೆಯ ಗಿಡ ; ಹಬ್ಬದ ಹೂ: "ಪುಷ್ಪಮೆನೆ ದವನನಾಮಂ" (ಮಂಗರಾ. ೪೧-೩೪) ; "ಹಬ್ಬದ ಹೂವೆನಲು ದವನ" (ಕಬ್ಬಿಕ್ಕ. ೨೨) ; ಮರುಗ ದವನಂದಳಂ ಶೈಲರುಹಂ ತಗರಂ ಖಿಜೋರಮೇಲೆಯಿವಂ ಕೊಂಡರೆ ನೆಲ್ಲಿ ಮೂಱುಮಡಿ ಯಾಗಿರೆ ಪೂರ್ವಕ್ರಮದಿನದು ಸುಗಂಧಾಮಳಕಂ (ಲೋಕೋಪ. ೭-೨೮) ; ಆ ತೋಂಟಮನಾರೊರ್ವ್ವರ್ಮ್ಮಾಡುವ ಮಾಲಗಾಱರ್ದ್ದೇವರ್ಗೆ ನಡೆಯಿಸುವ ಕಣಗಿಲೆಯ ಗಿಡುವಿರ್ಪ್ಪತ್ತು ... ದವನಂ ಮರುಗಿನ ಮಡಿಯೊಂದೊಂದ ಱಲಯ್ದು ಈ ಧರ್ಮ್ಮಮನಯ್ವತ್ತಱುವರುಂ ಕಾದು ನಡೆಯಿಸುವರ್ (ಸೌಇ. XI-i, ೧೦೮-೨೦ ; 1069) ; ಭವನವಾಸಿಗರ ಕರಂ ದವನದ ಮಡೆಯಂ ದಾಟಿಪೊಕ್ಕಂತೆ ಮಾಡಿ (ಧರ್ಮಾಮೃ. ೭-೯೫) ; ದವನದ ಸೀಗುರಿ ಗಳ ಪೊಣ್ಮುವ ಪೊಂಬಾಳೆಗಳ ಚಾಮರಂಗಳ . . . ವಿಚಕಿಲಕಾಯ ಕೇತು ದಂಡದ ಸತಿಯರ್ (ಗಿರಿಕ. ೭-೫೫) ; ಈ ವನಿತೆ ಗುರುಪೂಜೆಯಂ ಮಾಡಳೆ ದವನದಲ್ಲಿ (ಬಸವು. ೪೨-೧೧) ; ಬಾಳೆಯ ಹಣ್ಣು ದವನಗಳ ನೆರೆ ಜನಜಾಲ ದೇವನ ತೇರ ಮೇಲೆ ಲೀಲೆಯೊಳಗೆ ಸೂಸಿ ಗೋವಿಂದಯೆಂದೆಂಬಾಳಾಪ ಗಳೊಪ್ಪಿದುವು (ಕಂನವಿ. ೨೫-೧೦೮); ಶುಷ್ಕವಾದರೇನು ದವನ ಮೈಗಂಪನು ತರದೆ ಪವನ ? (ಗಂಗಾತ. ೬೮-೮).

ದವನದ ಹುಣ್ಣಿಮೆ=ಚೈತ್ರಶುದ್ಧ ಹುಣ್ಣಿಮೆ: ಚೈತ್ರಶುದ್ಧ ಹುಣ್ಣಿಮೆ ಯನ್ನು ವನಪೂರ್ಣಿಮಾ ಎನ್ನುತ್ತಾರೆ . . . ವನಪೂರ್ಣಿಮೆಗೆ ದವನದ ಹುಣ್ಣಿಮೆ ಎಂದು ಕನ್ನಡನಾಡಿನ ಹೆಸರು. ಆ ದಿವಸ ದೇವರಿಗೆ ದವನ ವನ್ನೇರಿಸಿ ಪಕ್ವಾನ್ನದ ನೈವೇದ್ಯ ಮಾಡುವರು (ಭಾಹಬ್ಬ. ೬೭).

[ ದೇ.॥ ತಮಿ. ತುಮಣ ; ತುಳು. ತೆಲು. ದವನ./ಹಿಂ. ಮರಾ. ದವಣಾ ]

**ದವನಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ ; ಕಾಡುಮಲ್ಲಿಗೆ (?): (ಪಂಡಿತ. ೮೮). [ <ದವ ? + ಮಲ್ಲಿಗೆ ]

**ದವನಿ** 'ದಾವಣಿ$_1$' ನೋ.

**ದವಲತ್** 'ದೌಲತ್ತು' ನೋ.

**ದವಲತ್ತು** 'ದೌಲತ್ತು' ನೋ.

**ದವಶಿಖಿ** (ನಾ). ಕಾಡಿನ ಕಿಚ್ಚು ; ದಾವಾನಲ : ದವಶಿಖಿಯಾಗಿ ದಳ್ಳಿಸುವ ಸಂಹರಣೋಗ್ರ ಸಮೀರನಾಗಿ (ಜಗವಿ. ೧೫-೨೨) ; ಬಗೆವನೆಯೊಳಿರ್ಪ ರತಿಪನನೊಗೆದತ್ಕುಚಾಗಿರಿಯ ವಿರಹಶಿಖಿ ದವಶಿಖಿ ಚುರ್ಚುಗುಮೆಂದು ಮುಖಮೃಗಾಂಕಂ ಮಿಗೆ ಸುಧೆಗಱೆವಂತೆ ಕಱೆದುದವಳಶ್ರುಜಲಂ (ರಾಜಶೇ. ೭-೮೩). [ ದವ + ಶಿಖಿ ]

**ದವಸ** (ನಾ). ಕಾಳು ; ಧಾನ್ಯ : "ಘಾಸಃ, ಯವಸಃ – ಈ ೨ ದವಸಂ" (ಹಲಾಯು. ೩೨-೩೭) ; "ಧಾನ್ಯಂ ದವಸಮುಕ್ಕು" (ಮಂಗರಾ. ೧೦೨-೩) ; ನೆಲ್ಲು ಜೋಳವು ಮೊದಲು ದವಸವನೆಲ್ಲವಂ ಸಂಗ್ರಹಿಸಿ (ಬಸವು. ೧೫-೧೨); ತುಪ್ಪ ಸಖರೆ ಬಾಳೆಹಣ್ಣು ಹಾಲು ಮೊಸರು ವೀಳೆಯ ದೀವಿಗೆ ೨ ಇ ಪ್ರಮಾಣಿನ ದವಸವನೂ ಕೊಟ್ಟು ನಡಸಿ ಬರಲುಳದು (ಸೌಇ. IX-ii, ೫೭೦-೮ ; 1534) ; ವೀಸದ ಕಾಸಿಗೆ ದವಸವ ನಾ ತಂದೆ ಕೂಸಿಗೆ ಸಾಲದು ಹೋಗೋ ದಾಸಯ್ಯ (ಪುರಂದ. ೧-೧೩೧-೩) ; ಸ್ವಾಸ್ತಿಪುರದಲಿ ಹೊಲ ಆರವಿನ ತೂಳಲ ಹೊಲ ದವಸವನು ದಾರೆನೆಱದು ಕೊಟ್ಟೆವು (ಎಕ. VI, ಕಡೂರು. ೨೫-೧೧ ; 1599) ; ಅವಧಾನಂಗಳಿಗ್ಯಾವೂರಾಯ್ತು ? ದವಸವು ನಮ್ಮಲ್ ಬಹು ಕ್ರಯವಾಯ್ತು (ನಾಪದ. ೨೦೪).

ದವಸ ಧಾನ್ಯ = ದವಸ ಮತ್ತು ಧಾನ್ಯ ; ಕಾಳು ಕಡಿ: ಈ ವರ್ಷ ಮಳೆಯ ಅಭಾವದಿಂದ ದುರ್ಭಿಕ್ಷ ಬಂದು ದವಸ ಧಾನ್ಯಗಳು ಕಡಿಮೆ ಆಗಿವೆ. (ರೂಢಿ).

[ ದೇ.॥ ತಮಿ. ತವಚ ; ತುಳು. ತೆಲು. ದವಸ./ಪ್ರಾ. ಜವಸ; ಸಂ. ಯವಸ ]

**ದವಸಗಿತಿ** (ನಾ). ಕಾಳು ಮಾರುವವಳು; ಧಾನ್ಯವನ್ನು ಮಾರು ವವಳು : ವಿಮಳ ಸತ್ತಿ ಪಂಡಿತರು ಪೂಜಾರಿ ಬಾಣಸಿಗಿತಿ ದವಸಗಿತಿ ಬ × × ತೋಟಿಗಂ ಸಂಕಿಮಯನೊಳಗಾಗಿ ಜೀರ್ಣೋದ್ಧಾರಕ್ಕಂ ವಿತ್ತಿ ಮೂವತ್ತು (ಎಕ. XII, ಗುಬ್ಬಿ. ೧೪-೬೩ ; 1140).

[ <ದವಸಿಗ + – ಇತಿ$_1$ (< – ಇತ್ತಿ) ]

**ದವಸಾದಾಯ** (ನಾ). ಧಾನ್ಯದ ರೂಪದಲ್ಲಿ ಬರುವ ವರಮಾನ, – ಆದಾಯ : ಸಕಲ ಸುವರ್ಣಾದಾಯ ದವಸಾದಾಯ ಮುಂತಾದ ಉತ್ಪತ್ಯವನೂ (ಎಕ. VI, ತರೀಕೆ. ೨೨-೪೮ ; 1681) ; ಸಕಲ ಸುವರ್ನಾ ದಾಯ ದವಸಾದಾಯ ಮುಂತಾದ ಆ ಸಕಲ ಸ್ವಾಮ್ಯವೂ ಸ್ವಾಮಿಯವರ ಶ್ರೀ ಭಂಡಾರಕ್ಕೆ ಸಲುವುದು (ಎಕ. XIV, ನಂಜನ. ೨೯೭-೨೪ ; 1720) ; ಸಕಲ ಸುವರ್ನಾದಾಯ ದವಸಾದಾಯ ಸಹ ಕಂಠಿ ಗು ೧೭ (ಮೈಆರಿ. ೧೯೨೮, ೪೫-೧೫ ; 1761). [ ದವಸ + ಆದಾಯ ]

**ದವಸಾಯ** (ನಾ). = ದವಸಾದಾಯಂ : ಶ್ರೀಮತ್ಪೆರ್ಗ್ಗಡೆ ಚಂಗದೇವಯ್ಯ × × [ಬ]ನವಾಸೆನಾಡ ದವಸಾಯದ[ಸುಂ]ಕಮಂ[ಖೇ]ಣೆಯುಲು ನಡೆವುತ್ತ (ಸೌಇ. XX, ೬೦-೧೩ ; 1088) ; ವೀಸಮುಮಂ ದವಸಾಯದೊಳ × × × ನಮುಮಂ ಬಿಟ್ಟ (ಎಕ. VII, ಶಿಕಾರಿ. ೧೩-೧೭; 1098) ; ಹುಟ್ಟಿದ ದವಸಾಯದ ದಸವಂದ ಮುಡೆ × × × ಱೆಯುಮ ದೇವಗೇರಿಯ ಲೊನ್ದು [ಮಾವಟೆ]ದೆಱೆಯುಮಂ ಬಿಟ್ಟರ್ (ಕಇ. IV, ೩೯-೩೦; 1111).

[ ದವಸ + ಆಯ$_7$ ]

**ದವಸಿಗ** (ನಾ). ಧಾನ್ಯ ಮಾರುವವನು ; ಕಿರಾಣಿ ವರ್ತಕ : ವೇದಾಂತದ ಸ್ವಯಂಪಾಕಿಸ್ವಾಮಿಗಳ್ಗೆ ಮತ್ತ ೧ ದವಸಿಗರಿಗೆ ಮತ್ತ ೧ ಹೂದೋಟದ ಮಾಲೆಗಾಱಗೆ ಕಮ್ಮ ೨೦ (ಎಕ. VII, ಶಿಕಾರಿ. ೧೮೫-೬೨ ; 1158) ; ಮತ್ತಂ ದವಸಿಗರ್ಗ್ಗೆ ಗಂಗನ ಗಳೆಯುಲು ಕಂಬವಱುವತ್ತು ಮತ್ತಂ ದೇವರ ನೈವೇದ್ಯಕ್ಕೆ . . . ಕೊಟ್ಟ ದತ್ತಿ (ಎಕ. VI, ತರೀಕೆ. ೪೫-೧೦೦ ; 1136) ; ತಂಬುಲಂ ಪಣ್ಯವಿಾತಂಗೆ, ತಂಬುಲಿಗಂ ಏವಂ ದವಸಿಗಂ ದೂಸಿಗಂ (ಶಬ್ದಾನು. ೪೦೫ ಪ್ರಯೋ). [ ದವಸ + – ಇಗ ]

**ದವಳ, ಧಾಳ್ವ** (ಗು.) ೧. ಬಿಳಿಯ ; ಬೆಳ್ಳಗಿನ. 'ದವಳಾರ' ಪರಾ. (ನಾ). ೨. ಪಂಚಮಹಾವಾದ್ಯಗಳಲ್ಲಿ ಒಂದು ; ಶಂಖ : ಶೃಂಗವಾದ್ಯವೆಂಬ ಕೊಂಬು ತಮ್ಮಟವೆಂಬ ಹಲಿಗೆ ಶಂಖವೆಂಬ ದ[ಪಾಠಾಂ. ಧ]ವಳ ಭೇರಿಯೆಂಬ ಬಾಜಾ ಜಯಘಂಟೆಯೆಂಬ ಜಾಗಟೆ ಇತ್ತೆಜದ ಪಂಚಮಹಾವಾದ್ಯಂಗಳಂ (ವಿವೇಕ. ೨೩೬). **ಧಾಳ್ವ :** ೩. ಬಿಳಿಯ ಬಣ್ಣ ; ಶ್ವೇತವರ್ಣ : ಉಚ್ಚೈಃಶ್ರವಂ ಧಾಳವಲ್ಲದೆ ನಾವು ಕಪ್ಪ ಮಾಡಲ್ಕೆ ಸಾಗದೆಂದರು ಕುವರರು (ತುರಂಗ. ೩-೨೪).

**ದವಳಾಂಕ ಭೀಮ** = ಒಂದು ಬಿರುದು: ಶ್ರೀ ವೀರಸದಾಶಿವರಾಯರ ಹಡಪದ ದವಳಾಙ್ಕ ಭೀಮ ಮಣಿನಾಗಪುರವರಾಧೀಶ್ವರ ಸಿಂಧುಗೋವಿಂದ ಸಿತಕರಗಂಡ, ಬರಿದ ಸರ್ವ್ವಾಂಗಹರಣ ತುರಕದಳವಿಭಾಡರಾದ . . . ವೆಂಕಟಾದ್ರಿನಾಯಕರ (ಮ್ಯಆರಿ. ೧೯೩೯, ೯-೧೮; 1569). [ <ಸಂ. ಧವಲ ]

**ದವಳಾರ$_1$** (ನಾ). ಬಿಳಿಯ ಹಾರ ; ಶುಭ್ರವಾದ ಮಾಲೆ: ಪೊಸ ಜಾದಿಯ ಪೂ ದವಳಾರವಟ್ಟಜಂ ಜನಿಯಿಸಲಂಚೆವಾಸುಗಳೊಳೋಪಳ ವೆರ್ಮೊಲೆವೆಂಕೆಯಿಂದದೇಂ ತನತನಗಿಕ್ಕಿ ಮೆಟ್ಟಿದುದೊ ಭೋಗಿಜನಂ ಶಿಶಿರಾತಿರೇಕವಂ (ಜಗವಿ. ೦೪-೦೯). [ ದವಳ + ಆರ್$_2$ ]

**ದವಳಾರ$_2$, ಧವಳಾರ$_1$** (ನಾ). ಬಿಳಿಯ ಬಣ್ಣದ ಮನೆ · ಸಣ್ಣ ಹಚ್ಚಿದ ಸೌಧ; ಶುಭ್ರವರ್ಣದ ನಿವಾಸ: "ಸುಧಾಧವಳಿತಂ, ಸೌಧಂ – ಈ ೨ ದವಳಾರಂ" (ಹಲಾಯು. ೩೯-೧೪೯) ; ತಾರಾಚಲಂಗಳಂತೆ ದೆಸೆಯಂ ಧವಲಿಸುವ ದವಳಾರಂಗಳಿಂ ಅಕೃತ್ರಿಮಭವನಂಗಳಂತೆ ಸಾರ್ವಭೌಮನಿಪ ಗೃಹವನಂಗಳಿಂ ನಿರತಿಶಯಮಿದು (ಮಲ್ಲಿಪು. ೨-೫೪) ; ಎನ್ನ ದವಳಾರ ಮದುಂ ತಾನಮೃತಮತಿಯ ಮಾಡಂ (ಯಶೋಚ. ೩-೩೩). **ಧವಳಾರ$_1$ :** ಚರಿಗೆವೊಕ್ಕಡವಿಯಂ ತೊಟಲ್ವನ್ನೆಗಂ ಪಿರಿದೊಂದು ಪೊಟಲುಂ ಧವಳಾರಂಗಳುಂ ನೆಲೆಯ ಮಾಡಂಗಳುಂ ಸೂಳೆಗೇರಿಗಳುಂ ದೇವಾಲಯಂಗಳು ಮಾನೆ ಕುದುರೆಗಳುಂ ಮಾನಸರ ಬರವುಮಂ ಪೋಗುವುಮಂ ಕಂಡು (ವಡ್ಡಾರಾ. ೬೯-೨೦) ; ಬನವೆತ್ತಂ ಧವಳಾರವಂಕದ ಕಳಂ ವೈಹಾಳಿ (ಎಇ. XIII, ೩೦೨-೧೦ ; 1125) ; ನೆಲ ಹುಟ್ಟಿದಂದಿನ ಧವಳಾರ ಧವಳಾರದೊಳಗೊಬ್ಬ ಸೂಳೆ ನೋಡಯ್ಯಾ ತಲೆಯಿಲ್ಲದಾತ ನಿಚ್ಚಕ್ಕೆ ಬಪ್ಪ ಕರುಳಿಲ್ಲದಾತ ಕುಂಟಣಿಯಾದ ನೋಡಯ್ಯ (ಅಪಡಂ. ೯೯-೪೪೫) ; ಚಂದ್ರಿಕೆಯನಿಳಿಪ ಧವಳಾರ ವೃಂದಂಗ[ ಳ ]ಂ ಇಂದ್ರನೀಲದ ಮಣಿಸ್ತಂಭನಿಳಯಂಗ[ ಳ ]ಂ . . . ತೋಱುತುಂ (ನಂಬಿರ. ೯-೯೦) ; ಧವಳಾಗಾರ – ಧ[ ಪಾಠಾಂ. ದ ] ವಳಾರ; ಭಾಂಡಾಗಾರ-ಭಂಡಾರ (ಶಮದ. ೨೯೫ ಪ್ರಯೋ).

[ <ಸಂ. ಧವಲಾಗಾರ ]

**ದವಳಾರ್ವ** 'ಧವಳಾರ್ವ' ನೋ.

**ದವಾಖಾನೆ** (ನಾ). ೧. ಔಷಧಿಗಳನ್ನು ಸಂಗ್ರಹಿಸಿಡುವ ಕೋಣೆ ; ಔಷಧಿಗಳನ್ನಿಡುವ ಮನೆ : (+). ೨. ಆಸ್ಪತ್ರೆ ; ಚಿಕಿತ್ಸಾಲಯ; ವೈದ್ಯಶಾಲೆ : ವಿಜಾಪುರದಲ್ಲಿ ಈಗ . . . ಹೈಸ್ಕೂಲು, ದವಾಖಾನೆ, ಪಂಚಕಚೇರಿ ಉಂಟು (ಮುಂಬಯಿ. ೪-೦೪೩) ; ಪಂಚರ ಹೊಂದದ ಹತ್ತಿರ ಅಟ್ಟದ ಮೇಲೆ ದವಾಖಾನೆ (ಪ್ರನಿ. ೬೯) ; ಆರೋಗ್ಯ ಕಾಯಲಿಕ್ಕೆ ಉತ್ತಮವ್ಯವಸ್ಥೆ ಬೇಕು. ಒಂದು ದವಾಖಾನೆ ಬೇಕು (ಅಶನಾ. ೨೦೮).

[ ←ಅರ. ಪಾರ. ಹಿಂ. ಮರಾ. ದವಾಖಾನಾ ]

**ದವಾಗ್ನಿ** (ನಾ)=ದವಶಿಖಿ: ಅಳುರ್ವ ದವಾಗ್ನಿಯವೊಲರ್ಕನುದಯಂಗೆಯ್ದಂ (ಕಾವ್ಯಸಾ. ೮೭೦ ಶೂದ್ರಕ) ; ಶಿವಲಿಂಗಾಂತ[ ಃ ]ಸ್ಥನಾಂದಂ ವಿಯತ್ ತ್ರಿಪುರಾರಣ್ಯ ದವಾಗ್ನಿ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ (ನಂಬಿರ. ೮-೪); ಪೇರಡವಿಗ್ಗೆದುವ ದವಾಗ್ನಿಯುಂ ತನ್ನ ಪ್ರತಾಪಂ ನೆಗಳ್ದ ನಡುವಗಲ ರವಿಯಂ ತನ್ನ ವೀರಪ್ರತಾಪಂ ತಿರಸ್ಕರಿಸೆ ವೃಷಕೇತು ರಿಪುಸೈನ್ಯಮಂ ಪೊಕ್ಕನು (ಜೈಮಿಭಾ. ೧೨-೦೫). [ ದವ + ಅಗ್ನಿ ]

**ದವಾನಲ** (ನಾ). ಕಾಡಂಕಿಚ್ಚು : ಹೊತ್ತಿ ದವಾನಲನುರಿದಾಗ ವನದೊಳು ಸುಟ್ಟ ಮೇಲುಳಿದುದೆಷ್ಟೆಂದು ಅಗ್ನಿಯ ಮ ರ ವೇ ರಿ ನೋಳ್ಪೊಂದು ಪರಿಯೊಳು ಹೂತ ಮುತ್ತುಗ ಮರವಿಹುದು (ಇಂಚಾಪ. ೧೦೯-೩೨).

[ ದವ + ಅನಲ ]

**ದವಾಲಿ** 'ಡವಾಲಿ' ನೋ.

**ದವಾಲಿಬಿಲ್ಲೆ** (ನಾ). ಸೇವಕರು ಧರಿಸುವ ಗುರುತಿನ ಬಿಲ್ಲೆ : ರೇಶಿಮೆಯ ಸೀರೆಯುಟ್ಟಿದ್ದ ಪರಿಚಾರಿಕೆ ಹೆಂಗಸೂ, ದವಾಲಿಬಿಲ್ಲೆ, ರುಮಾಲು ತೊಟ್ಟ ದರವಾನ . . . ಖಾನಸಾಮಾ ಮುಂತಾದ ಸಿಬ್ಬಂದಿಯೆಲ್ಲಾ ಈಗ ಮಾಯವಾಗಿದ್ದರೇನು ? (ಸಾಹೇಬ್. ೬).

[ ದವಾಲಿ (<ಡವಾಲಿ) + ಬಿಲ್ಲೆ ]

**ದವುತಿ, ದವತಿ, ದೌತಿ** (ನಾ). ಮಸಿಕುಡಿಕೆ ; ಶಾಯಿ ಕುಡಿಕೆ : "ದವುತಿ [ಪಾಠಾಂ. ದೌತಿ] ಮಸಿಪಾತ್ರೆಯಕ್ಕು" (ಮಂಗರಾ. ೧೦೫-೦೫). **ದವತಿ :** "ಮೇಳವಣಿ – ದವತಿ" (ಗಂಗಾಮ. ೨೬೩) ; ಅವನ ದವತಿಯೊಳಗೆ ಮಸಿ ಇದ್ದಿಲ್ಲ (ಮುಂಬಯಿ. ೦-೩೫). **ದೌತಿ :** ಷೋಡಶಿಯು ಎದ್ದು ನಿಂತಳು. ಎದುರಿಗೆ ದೌತಿ, ಟಾಕು, ಕಾಗದ ಇದ್ದವು (ಷೋಡಶಿ. ೧೦೫).

**ದವುತಿ ಕುಳ್ಳಿ** = ಮಸಿಕುಡಿಕೆಯನ್ನಿಡುವ ಚಿಕ್ಕ ಮೇಲುವಣಿ : (+).

[ ←ಅರ. ಪಾರ. ಹಿಂ. ದವಾತ್; ಮರಾ. ದವಾತ್, ದೌತ್ ]

**ದಶ** (ನಾ). ೧. ಒಂದು ಸಂಖ್ಯೆ ; ಹತ್ತು : ಬಿಸರುಹೋದ್ಭವಗಣಂ ರಸ ದಶಸ್ಥಾನದೊಳ್ (ಛಂದೋಂಬು. ೩-೨೪೮) ; ದಿಗ್ಗಜ ದಶಂಗಳದಟಿರ್ಪುದಾತಂಗೆ (ಶ್ರೀರಾಪಟ್ಟ. ೩೦-೫೨). 'ದಶಕಂಠ', 'ದಶರಥ' ಪರಾ. ೨. [ಗಣಿತ] ಹಲವು ಅಂಕಿಗಳಿರುವ ಸಂಖ್ಯೆಯಲ್ಲಿ ಬಲಗಡೆಯಿಂದ ಎಡಗಡೆಗೆ ಎಣಿಸುವಾಗ ಎರಡನೆಯ ಸ್ಥಾನ : ಏಕಂ ತು ಪ್ರಥಮಂ ಸ್ಥಾನಂ ದ್ವಿತೀಯಂ ದಶಸಂಜ್ಞಕಂ (ವ್ಯವಹಾ. ೮-೨). [ ಸಂ. ದಶನ್ ]

**ದಶಕ** (ಗು). ೧. ಹತ್ತರಿಂದ ಕೂಡಿದ. (ನಾ). ೨. ಹತ್ತುಪಟ್ಟು : ಖರ್ವ ಪದ್ಮ ಕ್ಷೋಣಿ ಶಂಖಂ ಕ್ಷಿತಿ ಕ್ಷೋಭ ಪೂರ್ವಮಪ್ಪಂಕೆಯಾದಿಗೆ ಮಹಾಶಬ್ದ ಬರೆ ತೋರ್ಪವಱ ದಶಕಂಗಳಕ್ಕೆಂತು ಚವ್ವೀಸ ತಾಣವರೆ ಸಂಖ್ಯೆಯಕ್ಕುಂ (ಮಂಗರಾ. ೧೦೫-೦೬). ೩. ಹತ್ತರ ಗುಂಪು. ೪. ಹತ್ತು ವರ್ಷಗಳ ಅವಧಿ,-ಕಾಲ ; ದಶಮಾನ: ಒಂದೆರಡು ದಶಕಗಳಿಂದಿತ್ತೀಚೆಗೆ ರಷ್ಯಾದೇಶದ ಆರ್ಥಿಕ ರಾಜಕೀಯ ಕ್ರಾಂತಿಗಳ ಪ್ರಕಾರವೂ ಅವರಿಗೆ ಅರಿವಾಗಿದೆ (ಐತಿಸಂ. iii, ಮೊದಲರಡುಮಾತು) ; ಈ ಭಾಷೆಯ ವ್ಯಾಕರಣ ಹಾಗೂ ಗದ್ಯಗಳನ್ನು ಕುರಿತು ಸಾಧಾರಣವಾದ ಕೆಲಸ ಈ ಶತಮಾನದ ಆಯದಿ ಒಂದೆರಡು ದಶಕಗಳಲ್ಲೇ ನಡೆಯಿತು (ದ್ರಾವಿವಿ. ೧೬೬). ೫. ಮಹಾಜನರಲ್ಲಿ ಒಬ್ಬೊಬ್ಬ ನಾಯಕನ ನೇತೃತ್ವದಲ್ಲಿ ಹತ್ತು ಹತ್ತು ಜನರಿರುವಂತೆ ವಿಭಜಿಸಿದ ಗುಂಪು : ಮೂಡಲು ಬ್ರಹ್ಮಬೆಂಚೆಯೊಳಗಣ ತೆಂಕಣ ಕುಱ್ಕೆಯಿಂ ಪಡುವಲು ದೋಣಮಯ್ಯನಾಯಕರ ದಶಕದ ಗುರುಜೆ ವಾಡದಿಂ ತೆಂಕಲೂಮ್ವರ್ಗಾರ್ಧಕವಂ ಧಾರಾಪೂರ್ವಕವಂ ಮಾಡಿ ಕೊಟ್ಟ ಕಿಸಮುತ್ತರು ನಾಲ್ಕು ಶ್ರೀಮತು ದೋಣಮಯ್ಯನಾಯ್ಕರ ದಶಕದ ಮಹಾಜನಗಳ್ಸಮ್ಮ ಹಸುಗೆಗೆ ಬಂದಾಲದ ಹಾಡವಂ ಧಾರಾಪೂರ್ವಕವಾಗಿ ಕೊಟ್ಟ ಕಂಬ ವೇಟ್ಪೂರುಮಂ ಶ್ರೀಮಪ್ಪುರ್ಪೊತ್ತಮ ಭಟ್ಟೋಪಾಧ್ಯಾಯರ ದಶಕದ ಮಹಾಜನಂಗಳ ಕ್ರಯ ಪರಿವರ್ತನೆಯಾಗಿ ಕೊಟ್ಟು (ಸೌಇಇ. IX-i, ೨೯೫-೨೦ ; 1172) ; ಬೀಚರಸಯ್ಯಂಗಳು ತ(ಂ)ಮ್ಮ ಸೆವ್ವಿನ ಒಂದು ವೃತ್ತಿಗೆ ಆ ದಶಕದ ಮಹಾಜನಂಗಳನೊಡಂಬಡಿಸಿ . . . ಧಾರಾ ಪೂರ್ಬ್ಬಕಂ ಮಾಡಿ ಕೊಟ್ಟರು (ಸೌಇಇ. IX-i, ೨೯೫-೨೫ ; 1172) ; ಕೇಳು ಧೃತರಾಷ್ಟ್ರಾವನಿಪ ನಿನ್ನಾಳು ತಲೆಕೆಳಗಾಯ್ತು ಭೀಮನ ಧಾಳಿ ಹೆಚ್ಚಿತು ಹೊಸತು ದಶಕದ ಮಸಕ ಮಿಗಿಲಾಯ್ತು (ಕುವ್ಯಾಕ. ೦೯-೦). ೬. ದಶಕರಿಗೆ ಎಂದರೆ ಹತ್ತು ಹತ್ತು ಜನರಿರುವಂತೆ ಮಾಡಿದ ಒಂದು

ಗುಂಪಿಗೆ ಸೇರಿದ ಭೂಮಿ. ಪಡುವಲು ಪೂಲಿಯಂ ದಶಕಂ ಬಡ[ಗಲು] ಪೆರ್ವ್ವಾಟ್ಟಿ ಬೇಲಿ ಬಸದಿಯ . . . ಬಿಟ್ಟರ್ (ಸೌಇಇ. XV, ೩೦–೪೯ ; 1146).

**ದಶಕರು** = ಹತ್ತು ಜನರು (?) : ಕಡುದುರುಳ ರಕ್ಕಸರು ಕೊಡು ಸಿರೂಪವ ಪೋಗಿ ಮೃಡಸ ಮರೆಬಿರ್ದಡಂ ಪಿಡಿದೆಳೆದು ತಪೆವೆನಲು ಹುಡುಗನಿನಿತ್ತಾಕೆ ದಶಕರು ಪೋಗಿ ಕರಚರಣ ಪಿಡಿದೆಳೆದು ತರ್ಪುದೆನಲು (ನವಮೋ. ೧೨–೩೮) : (ನವಮೋ. ೧೨–೩೯. ನೋ). [ಸಂ.]

**ದಶಕಂಠ** (ನಾ). ಹತ್ತು ಕಂಠಗಳನ್ನುಳ್ಳವನು; ರಾವಣ: ಭೂಚರ ವಿಯಚ್ಚ ರೇಶ್ವರರಂ ತನ್ನಡಿಗೆಱಗಿಸಿ ದಶಕಂಠಂ ಪಡೆದಂ ದೆಸೆವೆಣ್ಗೆ ಕೀರ್ತಿ ಮಣಿ ಕಂಠಿಕೆಯಂ (ಪಂರಾಮಾ. ೧೦–೦೫೬) ; ಅಸುರಪಾಠಕರೋವಿ ಕೈವಾರಿಸಲಂ ಮುಂದೆಯ್ದಂದ ದಶಕಂಠ (ಕೌಶಿರಾ. ೨೦–೨೨). [ದಶ + ಕಂಠ]

**ದಶಕಂಠವೈರಿ** (ನಾ). ರಾವಣನಿಗೆ ಶತ್ರುವಾದವನು : ರಾಮ : ದಶಕಂಠ ವೈರಿಯೊಳ್ ಪೊಣರ್ದು ಶೀರ್ಣತನುವಾಗಿ ಸೆಡೆದು (ಜಗವಿ. ೭–೯೪). [ದಶಕಂಠ + ವೈರಿ]

**ದಶಕಂಧರ** (ನಾ). = ದಶಕಂಠ : ಭೋಂಕನೆ ಕಂಡು ಸೀತೆ ದಶಕಂಧರನಂ ನೆಲೆವೆರ್ಚೆ ಶೋಕವಾತಂಕಮೊಡರ್ಚೆ (ಪಂರಾಮಾ. ೯–೧೦೯) ; ದಶಕಂಧರನ ಹತ್ತಹಿಪತಿಯ ಸಾವಿರ ತಲೆಗಳೆನಿಸಲ್ಕೆ ಸರಿಯೆ ನಿನ್ನಯ ತಲೆಯೊಡನೆ (ಬಸಪು. ೩೮–೬೩). [ದಶ + ಕಂಧರ]

**ದಶಕರಣ** (ನಾ). ಹತ್ತು ಇಂದ್ರಿಯಗಳು ; ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮಗಳೆಂಬ ಐದು ಜ್ಞಾನೇಂದ್ರಿಯ ಮತ್ತು ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಐದು ಕರ್ಮೇಂದ್ರಿಯ ಗಳು : ಉರು ಪರಾಕ್ರಮನರಮನೆಗೆ ದಶಕರಣಗಳು ಕನ್ನಡಿಯ ಸಾಲು ಗಳರವಿದೂರನ ಸದ್ವಿಹಾರಕೆ ಚಿತ್ರಮಂಟಪವು (ಹಸಾರ. ೫–೨೨). [ದಶ + ಕರಣ]

**ದಶಕಾಮಜವ್ಯಸನ** (ನಾ). ವಿಷಯಸುಖಾಭಿಲಾಷೆಯಿಂದಾಗುವ ಹತ್ತು ಬಗೆಯ ವ್ಯಸನಗಳು: "ದಶಕಾಮಜವ್ಯಸನಗಳು–೧ಮೃಗಯೆ; ೨. ದ್ಯೂತ; ೩. ದಿವಾನಿದ್ರೆ; ೪. ವ್ಯರ್ಥವಿಹಾರ; ೫. ವಿಷಯಲಂಪಟತ್ವ; ೬. ಮತ್ತತೆ; ೭. ನಾಟ್ಯ; ೮. ಗಾಯನ; ೯. ಕೇಳಿ; ೧೦. ಕಪಟ" (ನಾನಾಶ. ೩೦೨). [ದಶ + ಕಾಮಜ + ವ್ಯಸನ]

**ದಶಕಾಮಾವಸ್ಥೆ** (ನಾ). ಕಾಮದ ಹತ್ತು ಬಗೆಯ ಅವಸ್ಥೆಗಳು : "ದಶಕಾಮಾವಸ್ಥೆಗಳು –ಅಭಿಲಾಷೆ; ೨. ಚಿಂತೆ; ೩. ಸಂಸ್ಮೃತಿ; ೪. ವಿಭು ಗುಣಸ್ತುತಿ; ೫. ಸಂತಾಪನ; ೬. ಕ್ರಿಯಾದ್ವೇಷ; ೭. ವಿಕಲ; ೮. ಮೌನ; ೯. ಮೂರ್ಛೆ; ೧೦. ಮರಣ" (ನಾನಾಶ. ೩೦೨). P "ಅಭಿಲಾಷೆ ಚಿಂತೆ ಸಂಸ್ಮೃತಿ ವಿಭುಗುಣನುತಿ ತಾಪನಂ ಕ್ರಿಯಾದ್ವೇಷಂ ಸಂದಭಿಮಾನ ಚ್ಯುತಿ ಗಮನಂ ಕ್ಷಂಭಿತಾತ್ಮಾವಸ್ಥೆ ಮರಣಮಿಂವು ದಶಭೇದಂ" (ಶೃಂಗಾರ. ೪–೬೯). " i. ದೃಕ್ಸಂಗ, ಮನಸ್ಸಂಗ, ಸಂಕಲ್ಪ, ಜಾಗರ, ಕೃಶತೆ, ಅರತಿ, ಹ್ರೀತ್ಯಾಗ, ಉನ್ಮಾದ, ಮೂರ್ಛೆ, ಅಂತ. ii. ಅಭಿ ಲಾಷಾ, ಚಿಂತಾ, ಅನುಸ್ಮೃತಿ, ಗುಣಕೀರ್ತನೆ, ಉದ್ವೇಗ. ವಿಲಾಪ, ಉನ್ಮಾದ, ವ್ಯಾಧಿ, ಜಡತಾ, ಮರಣ." (ಶ್ರೀವತ್ಸ. ೪೩). [ದಶ + ಕಾಮ + ಅವಸ್ಥೆ]

**ದಶಕಾರ್ಯ** (ನಾ). [ವೀಶೈ] ಸದಾಚಾರದ ಕ್ಷಮೆ, ಶಾಂತಿ, ಸಂತೋಷ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಜ್ಞಾನ, ವೈರಾಗ್ಯ, ಭಸ್ಮಸೇವನೆ, ಸರ್ವಸಂಗನಿವೃತ್ತಿಗಳೆಂಬ ಹತ್ತು ಅಂಗಗಳು: ಹತ್ತು ಸನ್ಮಾರ್ಗವಂ ನಲಿದು ಕೇಳಾ ಕ್ಷಮಾ ಶಾಂತ ಸಂತೋಷ ಸತ್ಯಾಧಿಕಾಸ್ತೇಯದೊಡನೆ ಮಿಲಿತವಾ ಬ್ರಹ್ಮಚರ್ಯಂ ಜ್ಞಾನವೈರಾಗ್ಯ ಸಲೆ ಭಸ್ಮಸೇವನಂ ಸರ್ವಸಂಗ ನಿವೃತಿಯಲಘು ದಶಕಾರ್ಯ (ವೀಶೈಪು. ೭–೨–೧೧). [ದಶ + ಕಾರ್ಯ]

**ದಶಕುಲಧರ್ಮ** (ನಾ). [ಜೈನ] ಶ್ರಾವಕನು ಅನುಸರಿಸಬೇಕಾದ ಕ್ಷಮೆ, ಮಾರ್ದವ, ಆರ್ಜವ, ಸತ್ಯ, ಶೌಚ, ಸಂಯಮ, ತಪಸ್ಸು, ತ್ಯಾಗ, ಅಕಿಂಚನ್ಯ, ಬ್ರಹ್ಮಚರ್ಯಗಳೆಂಬ ಹತ್ತು ಬಗೆಯ ಧರ್ಮಗಳು: ಭಟ್ಟಾರಕರ್ ದಶಕುಲಧರ್ಮಮುಮಂ ದ್ವಾದಶಾನುಪ್ರೇಕ್ಷೆಯುಮಂ . . . ಕೇಳ್ದು (ಚಾವುಂಪು. ೮೩) ; ಉತ್ತಮ ಕ್ಷಮಾ ಮಾರ್ದವಾರ್ಜವ ಸತ್ಯಶೌಚ ಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯವೆಂಬೀ ದಶಕುಲ [ಪಾಠಾಂ. ಕುಶಲ]ಧರ್ಮದೊಳಂ (ಅಜಿಪು. ೭–೮ ವ). [ದಶ + ಕುಲ + ಧರ್ಮ]

**ದಶಕುಶಲಧರ್ಮ**, ದಶಕುಶಳಧರ್ಮ (ನಾ). ೧. = ದಶಕುಲಧರ್ಮ : ನವವಿಧ ಬ್ರಹ್ಮಚರ್ಯೋಪೇತನುಂ ದಶಕುಶಲಧರ್ಮನಿಪುಣನುಂ . . . ಆಗಿ (ಅಜಿಪು. ೩–೧ ವ). **ದಶಕುಶಳಧರ್ಮ: ೨.**= ದಶಧರ್ಮ: ದಶಕುಶಳ ಧ(ಂ)ಮ್ಮೋರ್ಪಾರ್ಜ್ಜಿತಾನೂನ ಪು(ಂ)ಣ್ಯಪುಂಜೋದಯ . . . ಕೀರ್ತ್ತಿ ಲತಿಕಾಕಂದರಪ್ಪ ಶ್ರೀಮತು ರುದ್ರಶಕ್ತಿಪಂಡಿತರ ಶಿಷ್ಯರು(ಸೌಇಇ. XI–ii, ೧೮೮–೧೩ : 1123 ?). [ದಶ + ಕುಶಲ + ಧರ್ಮ]

**ದಶಕುಶಳಧರ್ಮ** 'ದಶಕುಶಲಧರ್ಮ' ನೋ.

**ದಶಕೂಟ** (ನಾ). ನೆಲಗುಳ್ಳ, ಹೆಗ್ಗುಳ್ಳ, ಚಿತ್ರಮೂಲ, ನೆಗ್ಗಿಲು, ನರುವಲು, ಕುರುಚಿ, ಕಳ್ಳಂಗಡಲೆ, ಬೆಲ್ಲವತ್ತ, ವಿಷ್ಣುಕ್ರಾಂತಿ ಮತ್ತು ಅಲಸಂಧಿಗಳೆಂಬ ಹತ್ತು ಬಗೆಯ ಔಷಧದ್ರವ್ಯಗಳು: ಜ್ವರಕ್ಕೆ ದಶ ಕೂಟದ ಕಷಾಯ:–ನೆಲಗುಳ್ಳ, ಹೆಗ್ಗುಳ್ಳ . . . ಅಲಸಂಧಿ ಇವನ್ನು ಕಷಾಯ ಕಾಸಿ ಕೊಡುವುದು (ವಿಷ್ಯವಿ. ೧೯೩). [ದಶ + ಕೂಟ$_1$]

**ದಶಕೋಟಿ** (ನಾ). ೧. ಹತ್ತು ಕೋಟಿ: ದಶಕೋಟಿ ನಾರಾಯಣರಿಗೆ ಮರಣವ ಮಾಡುವುದ ನಾ ಬಲ್ಲೆನಾಗಿ (ಬಸವ. ೩೯೦). **೨.** ಸಂಖ್ಯೆಯಲ್ಲಿ ಬಲಗಡೆಯಿಂದ ಒಂಬತ್ತನೆಯ ಸ್ಥಾನ: ನವಮಂ ದಶಕೋಟಿಸ್ತು ದಶಮಂ ಶತಕೋಟಿಕಂ (ವ್ಯವಹಾ. ೮–೫). [ದಶ + ಕೋಟಿ$_1$]

**ದಶಗಣ** (ನಾ). [ವೀಶೈ] ಕನ್ನಮರಸಿ, ಕಾಮಲದೇವಿ, ಚೋಳವ್ವ, ಬೀಚಯ್ಯ, ಬೊಪ್ಪಲದೇವಿ, ಮಾಯಿದೇವ, ದೇವಯ್ಯ, ವೀರ ಘಂಟೆಯ ಮೈಲಾರಿ, ಸಿಂಗಿದೇವ, ದಶಗಣದ ಸಿಂಗಯ್ಯ ಎಂಬ ಹತ್ತು ಜನ ಶಿವಭಕ್ತರು: ಹರುಷದಿಂ ಪ್ರಮಥರು ರುದ್ರರುಂ ತೇರೆಸರನುರು ದಶಗಣಂಗಳಂ ಭಕ್ತಿಯಿಂದೊರೆದು ಕೇಳ್ದು ಕೃತಕೃತ್ಯರಾಗಿ (ಲಶಿಚಂ.೩೪–೩೫). [ದಶ + ಗಣ]

**ದಶಗಳ** (ನಾ).= ದಶಕಂಠ: ಲಲನೆ ಸೀತೆಯ ಬಿಡಿಸು ನೀ ದಶಗಳಗೆ ಹಿತವಹ ತನಯನಾದರೆ (ಕೌಶಿರಾ. ೨೮–೬೭). [ದಶ + ಗಳ$_2$ (= ಗಲ)]

**ದಶಗಾತ್ರವಿಧಿ** (ನಾ). (?) : ವೇದ, ಸ್ಮೃತಿ, ಪುರಾಣ ಮೊದಲಾದವುಗಳ ಸಮ್ಮತಿಯಂತೆ ಭರತನು ದಶಗಾತ್ರವಿಧಿಯನ್ನು ಮುಗಿಸಿದನು (ತುಳಸೀ. ೧೬೦). [ದಶ + ಗಾತ್ರ + ವಿಧಿ]

**ದಶಗುಣ$_1$** (ನಾ). ೧. ಹತ್ತುಪಟ್ಟು,–ಮಡಿ : ಅಯುತಂ ಸಹಸ್ರದಶಕಂ ಲಕ್ಷಂ ದಶಗುಣಮಯುತಂ (ವಸುಕೋ. ೧೦೩–೩೩). **೨.** [ಸಂಗೀತ] ಕೃತಿಗಳಲ್ಲಿರಬೇಕಾದ ಹತ್ತು ಗುಣಗಳು: ನಳಂ ಕೃತಂ ಪ್ರಸನ್ನಂ ವ್ಯಕ್ತಂ ಪೂರ್ಣಂ ಸಮಂ ಸುಕುಮಾರಂ ಸುರಕ್ತಂ ಶ್ಲಕ್ಷ್ಣಂ ಮಧುರಂ ವಿನಿಕೃಷ್ಟ ಮೆಂಬ ದಶಗುಣಂಗಳಿನೆಸೆವ ಗೀತಕಾದಿ ಶುದ್ಧಪ್ರಬಂಧಂಗಳೊಳಂ ಮಾತ್ರ ಕಾದಿ ದೇಶೀಪ್ರಬಂಧಂಗಳೊಳಂ (ಚಂದ್ರಪು. ೦೫–೬೨ ವ). [ದಶ + ಗುಣ]

**ದಶಗುಣ$_2$** (ನಾ). ಅಧಿಕೃತ ದಾಖಲೆ ಪತ್ರಕ್ಕೆ ಅಂಟಿಚೀಟಿಯನ್ನು ಅಂಟಿಸದೆ ಇರುವುದಕ್ಕಾಗಿ ತೆರಬೇಕಾಗುವ ದಂಡ: (+). [?]

**ದಶಗ್ರೀವ** (ನಾ).= ದಶಕಂಠ : ದಶಗ್ರೀವಂ ರಣರಸೋದ್ಗ್ರೀವನಾಗಿರ್ದನಾ ತ್ರಿಖಂಡಮಂಡಲಾಧಿಪತಿಯೊಳ್ (ಪಂರಾಮಾ. ೧೩–೩ ವ) ; ಹರಿಯಂತೆ ವನವಾಸಿಗಳು ದಶಗ್ರೀವನಂತಿರಲನಿಮಿಷಾರಿಗಳು . . . ನೆರೆದರವನೀಶ ನೋಲಗದೊಳು (ಹರಿಕಾ. ೫–೪). [ದಶ + ಗ್ರೀವ]

**ದಶಘ್ನ** (ನಾ).=ದಶಗುಣ೧: ಪ್ರಯುತಂ ದಶಲಕ್ಷಂ ಕೋಟಿ ತಾಂ ದಶಘ್ನಂ ನಿಯುತಂ (ವಸ್ತುಕೋ. ೦೦೩-೩೩). [ ಸಂ. ]

**ದಶದಲ,** ದಶದಳ (ನಾ). ಹತ್ತು ಎಸಳು: ಅಱುದಳದ ನಳಿನವನೂಱು ಕದ್ದಶದಲ [ಪಾಠಾಂ. ಳ]ಸರೋಜವನೊಂದಿ (ಬಸವು. ೩-೮). **ದಶದಳ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ ದಶ + ದಲ ]

**ದಶದಳ** 'ದಶದಲ' ನೋ.

**ದಶದಾನ** (ನಾ). ಹತ್ತು ಬಗೆಯ ದಾನ: "ದಶದಾನಗಳು – ೧. ಗೋ; ೨. ಭೂ; ೩. ತಿಲ; ೪. ಹಿರಣ್ಯ; ೫ ಆಜ್ಯ; ೬. ವಸ್ತ್ರ; ೭. ಭತ್ತ; ೮. ಬೆಲ್ಲ; ೯. ಬೆಳ್ಳಿ; ೧೦. ಉಪ್ಪು" (ನಾನಾಶ. ೩೦೨). [ ದಶ + ದಾನ ]

**ದಶದಿಕ್ಕು** (ನಾ). ಪೂರ್ವ, ಆಗ್ನೇಯ, ದಕ್ಷಿಣ, ನೈರುತ್ಯ, ಪಶ್ಚಿಮ, ವಾಯವ್ಯ, ಉತ್ತರ, ಈಶಾನ್ಯ, ಊರ್ಧ್ವದಿಶೆ ಮತ್ತು ಅಧೋದಿಶೆಗಳೆಂಬ ಹತ್ತು ದಿಕ್ಕುಗಳು: ಶ್ರೋತ್ರದಲ್ಲಿ ದಶದಿಕ್ಕುವೂ ಜಗವನಿಕ್ಷೇಪಿಸಿದ ಕುಕ್ಷಿಯಲ್ಲಿ ಅಕ್ಷಯನಗಣಿತನು (ಬಸವ. ೩೩೬); ಮನುಜದನುಜಾಮರ ಮಹೋರಗ ಜನ ತೃಣಪ್ರತಿಯಾಯ್ತು ದಶದಿಕ್ಕಿನ ಪುರಾಧಿಪರೆಡೆಗೆ ನಡೆದುದು ದಂಡು ಬಳಿಕ (ಕುರರಾ. ೧-೮-೩೦); ದಶದಿಕ್ಕುಗಳನವ್ವಳಿಪ ಕೇಸುರಿಯ ಚೂಣಿಗಳ . . . ಮುಕ್ಕುಳಿಸಿ ಮೊಗೆವ ಪೆರ್ಗಿಚ್ಚುಗಳ ವೆಂಕೆ ಮೇಲಿಕ್ಕಿದುದು (ಜೈಮಿಭಾ. ೦೩-೦೨).

[ ದಶ + ದಿಕ್ಕು ]

**ದಶದಿಶೆ** (ನಾ). ೧.=ದಶದಿಕ್ಕು. ೨. ಎಲ್ಲಕಡೆ; ಸುತ್ತಮುತ್ತು: ದಶದಿಶೆಗಳಿಂ ಮುತ್ತಿ ಬರುವ ಪ್ರಕೃತಿಗದಾರು ವಶನಾಗದಿಹ ನರನು? (ಮುಂಕುಳ. ೦೮೮). [ ದಶ + ದಿಶೆ ]

**ದಶದಿಸೆ** (ನಾ).=ದಶದಿಕ್ಕು: ಎಸೆದುವು ದಶದಿಸೆ ಪವನಂ ಕಸವಂ ಕಸಗಳೆದು ಮೆಲ್ಲಮೆಲ್ಲನೆ ತೀಡಿತ್ತು (ಶಾಂತಿಪು. ೨-೮೭). [ ದಶ + ದಿಸೆ (<ದೆಸ್ಸೆ) ]

**ದಶಧರ್ಮ** (ನಾ). ೧. ಹತ್ತು ವಿಧವಾದ ಧರ್ಮ: "ದಶಧರ್ಮಲಕ್ಷಣ– ಧೃತಿ; ೨. ಕ್ಷಮಾ; ೩. ದಮ; ೪. ಅಸ್ತೇಯಮ್; ೫. ಶೌಚ; ೬. ಇಂದ್ರಿಯನಿಗ್ರಹ; ೭. ಧೀ; ೮. ವಿದ್ಯಾ; ೯. ಸತ್ಯಮ್; ೧೦. ಅಕ್ರೋಧ" (ನಾನಾಶ. ೩೦೩). ೨.=ದಶಕುಲಧರ್ಮ: ಉತ್ತಮಕ್ಷಮಾಮಾರ್ದವಾರ್ಜವಸತ್ಯಶೌಚಸಂಯಮತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯಾಪರ್ಯಾಪ್ತ ದಶಧರ್ಮಂಗಳುಮಂ ಕೈಕೊಂಡು (ಆದಿಪು. ೬-೩೦ ವ); ಅಂತು ದಶರಥಂ ದಶಧರ್ಮನಿರತನಪ್ಪುದುಂ (ಪಂಪರಾಮಾ. ೭-೮ ವ). ೩. [ಜೈನ] ಭೈಕ್ಷ, ಅಸ್ತೇಯ, ಶೌಚ, ಅಪ್ರಮಾದ, ಅವ್ಯವಾಯ, ಭೂತದಯೆ, ಕ್ಷಮಾ, ಅಕ್ರೋಧ, ಗುರುಶುಶ್ರೂಷೆ, ಸತ್ಯ ಎಂಬ ಹತ್ತು ಧರ್ಮಗಳು: ಏಕೆಂದಱಿಯೆಂ ದಶಧರ್ಮಾಕಲಿತಕರಾಗ್ರನಾದನೆನಗಿದು ಚೋದ್ಯಂ (ಶಮದ. ೦೦೨ ಪ್ರಯೋ). [ ದಶ + ಧರ್ಮ ]

**ದಶಧರ್ಮಧರ** (ನಾ). = ದಶಧರ್ಮಧಾರಿ ೧: [ ತ್ರಿದಂಡರಹಿತರುಂ ತ್ರಿಶಲ್ಯವರ್ಜಿತರುಂ ಚತುಷ್ಕಷಾಯದೂರರುಂ . . . ದಶಧರ್ಮಧರರುಮಾಗಿ] ಗುರುಗಳಾಜ್ಞೆಯಿಂ ಗುರುಗಳನಗಲ್ದು ವಿಹಾರಿಸುತ್ತುಂ (ಧರ್ಮಾಮೃ. ೦೦-೦೧೯). [ ಸಂ. ]

**ದಶಧರ್ಮಧಾರ** (ನಾ). = ದಶಧರ್ಮಧಾರಿ ೧: ದಶಧರ್ಮಧಾರರಂ ಪುಷ್ಪಶರಾಟೋಪಪ್ರಹಾರರಂ ಮುನಿವರರಂ ಕುಶಲಮತಿಯಿಂದೆ ವೀತಾಂಕುಶನಪ್ಪ ಭೂಪನಂದು ಬಂದಿಸಿ (ನೇಮಿಪು. ೫-೯೬). [ ಸಂ. ]

**ದಶಧರ್ಮಧಾರಿ** (ನಾ). ೧. ಕ್ಷಮೆ, ಮಾರ್ದವ ಮೊದಲಾದ ದಶಧರ್ಮಗಳನ್ನು ಹೊಂದಿದವನು. ೨. ಹತ್ತು ಬಿಲ್ಲುಗಳನ್ನುಳ್ಳವನು. ೧, ೨: ಮುನಿನಾಥಂ ದಶಧರ್ಮಧಾರಿ ದೃಢಷಟ್ತ್ರಿಂಶದ್ಗುಣಂ ದಿವ್ಯಬಾಣನಿಧಾನಂ ನಿನಗಿಕ್ಷುಚಾಪಮಳಿನೀಜ್ಯಾಸೂತ್ರಮೇಕೊಂದೆ ಪೂವಿನ ಬಾಣಂಗಳವಯ್ದೆ ಹೀನನಧಿಕಂಗಾಕ್ಷೇಪಮಂ ಮಾಳ್ಪುದಾವ ನಯಂ ದರ್ಪಕ ಮೇಘಚಂದ್ರಮುನಿಯೊಳ್ ಮಾಣ್ ನಿನ್ನ ದೋರ್ದರ್ಪಮಂ (ಶಂರಾಮಾ. ೦-೩೦). [ ಸಂ. ದಶಧರ್ಮಧಾರಿನ್ ]

**ದಶಧಾತು** (ನಾ). ಮಳೆಯನ್ನು ಸೂಚಿಸುವ ಹತ್ತು ಲಕ್ಷಣಗಳು; ಸುರಧನು, ನೀರು, ಕದಿರು, ಅಭ್ರ, ಪರಿವೇಷ, ಮಿಂಚು, ಗುಡುಗು, ಶೀತ, ಶರದ ಮತ್ತು ಗಾಳಿ: ಇನ್ನು ದಶ (ಸಪ್ತ) ಧಾತುಗಳ ಪ್ರಯೋಗಂಗಳಂ ಪೇೞ್ವೆಂ:- ಸುರಧನು ನೀರ್ಗದಿರಭ್ರಂ ಪರಿವೇಷಂ ಮಿಂಚು ಮೊಗುಗು ಮುೞಿಯುಂ ಶೀತಂ ಶರದಂ ಗಾಳಿಯು ಮೆಂಬಿವು ಧರೆಯೊಳ್ ದಶಧಾತುವೞಿದು ಪೇೞ್ವುದು ಮೞೆಯಂ (ಚಿಟ್ಟಮ. ೮-೨೫). [ ದಶ + ಧಾತು ]

**ದಶಧ್ರುವ** (ನಾ). ೧. [ಅಶ್ವಶಾ] ಶಿರದಲ್ಲಿ ಎರಡು, ಅಳ್ಳೆಯಲ್ಲಿ ನಾಲ್ಕು, ನೊಸಲಲ್ಲಿ ಒಂದು, ಉದರದಲ್ಲಿ ಎರಡು, ಪ್ರೋಥದಲ್ಲಿ ಒಂದು ಇರುವ ಕುದುರೆಯ ಹತ್ತು ಸುಳಿಗಳು. ೨. ಈ ಹತ್ತು ಸುಳಿಗಳನ್ನು ಉಳ್ಳ ಕುದುರೆ: ಸಿರದೊಳೆರಡಿರಲಳ್ಳೆಯೊಳು ನಾಲ್ಕು ನೊಸಲೊಳೊಂದುದರದೊಳೆರಡು ಪ್ರೋಥಕೊಂದು ಸುೞಿ ಪುಟ್ಟಿತೋಱೆ ದಶಧ್ರುವಮಕ್ಕುಮಿಲ್ಲದಿರಲಧ್ರುವಂ (ಮಂಗರಾ. ೭೨-೦೮).

[ ದಶ + ಧ್ರುವ ]

**ದಶನ** (ನಾ). ೧. ಕಚ್ಚುವುದು; ಕಡಿಯುವುದು. ೨. ಹಲ್ಲು; ದಂತ: "ದಶನಃ, ದ್ವಿಜಃ, ದಂತಃ, ರದಃ,ರದನಃ–ಈ ೫ ಪಲ್ (ಹಲ್ಲು)"(ಹಲಾಯು. ೮೭-೩೭೩); ದಶನಕುಮುದ್ವತಿ ಪೊಱಪೊಣ್ಮೆ ನಗೆಮೊಗಂಬೆರಸು ನೃಪಂ . . . ಪೇೞೆನೆ ತದ್ವಾರ್ತೆಯನಾಗಳಱಿದಂ (ಶಾಂತಿಪು. ೬-೩೫); ದಶನಂ ನುಣ್ಮುತ್ತು ಮಿಗಿಲ್ಗಳ್ಪಿಡಂಗಿಡಿದೆತ್ತಂ ಪೊಳೆವಕ್ಷಿಗಳ್ ಸಲಿಲಮಂಗದ್ಯೋತಿ ತಾನಾಗೆ ಪಾಲ್ಗಡಲೆಂಬಂತಿರೆ ಸಿಂಧುರಾಜನೊಸೆದೇಳ್ತಂದಂ ಗಭೀರಾನ್ವಿತಂ (ರಾಜಶೇ. ೧೨-೧೦೦). [ ಸಂ. ]

**ದಶನಕಾಂತಿ** (ನಾ). ಹಲ್ಲುಗಳ ಹೊಳಪು; ದಂತಕಾಂತಿ: ಮಂದಸ್ಮಿತಂ ಪೊಣ್ಮೆ ಮಾನಿನಿ ಲಜ್ಜಾಪನತಾಸ್ಯಮಂ ದಶನಕಾಂತಿವ್ಯಾಜದಿಂ ಮುಚ್ಚಿದಳ್ (ಕಾದಂಪೂ. ೩೯೯). [ ದಶನ + ಕಾಂತಿ ]

**ದಶನಕ್ಷತ** (ನಾ). [ಕಾಮಶಾ] ಸ್ತ್ರೀಪುರುಷರು ಸಂಭೋಗಾವಸರದಲ್ಲಿ ಪರಸ್ಪರ ಶರೀರಗಳಲ್ಲಿ ಮಾಡುವ ಹಲ್ಲಿನ ಕಚ್ಚು; ದಂತಕ್ಷತ: ನೋವನೀವ ಬಗೆಯುಳ್ಳೊಡದೇವುದೊ ನಿನ್ನ ಬಾಹುಪಾಶದೊಳೆ ತೊಡರ್ಚೊಡರ್ಚು ದಶನಕ್ಷತಪೀಡೆಯಂ . . . ತಳೋದರೀ (ಮಲ್ಲಿಪು. ೭-೭೦). [ ದಶನ + ಕ್ಷತ ]

**ದಶನಘಟ್ಟನ** (ನಾ). ಹಲ್ಲು ಕಡಿಯುವಿಕೆ,-ಮಸೆಯುವಿಕೆ: ಆಮಂತ್ರಿತ ಡಾಕಿನೀ ದಶನಘಟ್ಟನ ಜಾತವಿಭೀಷಣಂ . . . ಇದೇನಗುರ್ವನೊಳಕೊಂಡಂದೊ ಕರ್ಣನ ಗೆಲ್ದ ಕೊಳ್ಗುಳಂ (ಪಂಪಭಾ. ೧೨-೧೨೦).

[ ದಶನ + ಘಟ್ಟನ ]

**ದಶನಚಯ** (ನಾ). ಹಲ್ಲುಗಳ ಸಾಲು; ದಂತಪಂಕ್ತಿ: ಮಿಸುಪ ಕುಸುಮಚಯಂಗಳನನುಕರಿಪುವೆಸೆವ ದಶನಚಯಂಗಳ್ (ಆದಿಪು. ೨-೩೭); ಭಾಸುರದಶನಚಯಂ ಕುಂದದೊಳ್ ಕುಂದನೆಂದುಂ ಪಡೆವನ್ನಂ ಯೌವನಶ್ರೀ ಪಡೆದುದು ನೃಪಪುತ್ರಾಂಗದೊಳ್ ನಾಡೆ ಚೆಲ್ವಂ (ಚಂದ್ರಪು. ೨-೨೩). [ ದಶನ + ಚಯ ]

**ದಶನಚ್ಛದ** (ನಾ). ಹಲ್ಲುಗಳನ್ನು ಮುಚ್ಚಿರುವುದು; ತುಟಿ; ಬಾಯ್ದೆರೆ: "ಅಧೋಭಾಗ ಸಮಾಸಹೀನ ದಶನಚ್ಛದ ಕೆಂಪಧರಾಖ್ಯ ಸಂತತಂ" (ನಾನಾರ. ೬೮); ದಶನಾಂಶುಗಳಂ ಮೆಲ್ಲನೆ ದಶನಚ್ಛದಮೃದುಪಲ್ಲವದಿಂ ಮುಱಿಸಿ ಮಾಣೆ ದೂತಂ ನುಡಿದಂ (ಆದಿಪು. ೦೪-೫೦).

[ ದಶನ + ಛದ ]

**ದಶನದ್ಯುತಿ** (ನಾ).=ದಶನಕಾಂತಿ : ಒಯ್ಯನಿರೆಂದು ತಿತಿಕ್ಷಾನ್ವಿತನನಾಕುಳಂ ನುಡಿಗುಮೆಸೆಯೆ ದಶನದ್ಯುತಿಗಳ್ (ಶಾಂತಿಪು. ೩-೯೦) ; ಕನಕಾದ್ರಿಯ ನೆಳಸುವ ನೂತನಚಂದ್ರಿಕೆಯಂತಿರೆಳಸೆ ದಶನದ್ಯುತಿಗಳ್ ಜನಪತಿಯಂ ನುಡಿದಂ ಮೆಲ್ಲನೆ ಮುಕುಳಿತ ಕರಸರೋಜಂ (ಪುಷ್ಪಪು. ೫-೨) ; [ ದಶನ + ದ್ಯುತಿ ]

**ದಶನನಿಚಯ** (ನಾ).=ದಶನಚಯ : ಸದ್ಭಾರ್ಜಿತೋಜ್ವಲ ದಶನನಿಚಯ ತಾಂಬೂಲಚರ್ವಣಭರಿತ ಕಪೋಲರುಂ . . . ಅಗಿ (ಜಗವಿ. ೪-೮೦). [ ದಶನ + ನಿಚಯ ]

**ದಶನಮಯೂಖ** (ನಾ).=ದಶನಕಾಂತಿ : ಹಿಮಾಂಶು ಹರಹಿದನೆಳೆಯ ಬೆಳುದಿಂಗಳನೆನಲು ಸುರರಿಪುಕುಲಾಂತಕನು ತೊಳಪ ದಶನಮಯೂಖತತಿ ಹೊಳೆಹೊಳೆಯೆ ನುಡಿದನು (ಕುಮ್ಯಾಉ. ೮-೭೨). [ ದಶನ + ಮಯೂಖ ]

**ದಶನರುಚಿ** (ನಾ).=ದಶನಕಾಂತಿ: ಅರಸಂ ಮುನಿಪತಿ ಪಾದಾಂಬುರುಹಕ್ಕತಿ ವಿಶದದಶನರುಚಿನಿಚಯಪರಂಪರೆಯಿಂ ಚಂದನಚರ್ಚಾವಿರಚನೆಯಂ ಮಾಟ್ಟಿ ತೆಱದಿನಂದಿಂತೆಂದಂ (ಚಂದ್ರಪು. ೩-೭೨). [ ದಶನ + ರುಚಿ ]

**ದಶನವಸನ** (ನಾ).=ದಶನಚ್ಛದ : ಸ್ಫುರಿಯಿಸದೆ ದಶನವಸನಾಂತರದಮಾ ರಕ್ತಂಗಳಾಗದೆನಸುಂ ಕಣ್ಗಳ್ . . . ಗೆಲ್ದನಿಂತುವರಿನೃಪಬಲಮಂ (ಕವಿರಾ. ೩-೦೨೨) ; ಮುಳಿದು ಘೂರ್ಣಮಾನಲೋಹಿತಲೋಚನಂ ದಶನನಿಪೀಡಿತ ದಶನವಸನನಸಿಧೇನುವಂ ಕಿೞ್ತು . . . ಇಱಿಯಲ್ ಪರಿವಾತಂ (ಆದಿಪು. ೨-೧೯ ವ). [ ದಶನ + ವಸನ ]

**ದಶನವಾಸ** (ನಾ).=ದಶನಚ್ಛದ. [ ಸಂ. ದಶನವಾಸಸ್ ]

**ದಶನಹತಿ** (ನಾ). ೧.=ದಶನಕ್ಷತ : (+). ೨. ಮಲ್ಲಯುದ್ಧದ ದೋಷಗಳಲ್ಲಿ ಒಂದು ; ಹಲ್ಲಿನಿಂದ ಕಚ್ಚುವುದು : ಕೆಳಂಬೊಕ್ಕು ನಿರಿಸುಗೆಯ್ದು ನಖಹತಿ ದಶನಹತಿ ಪಾದಪಾತ ಮುಷ್ಟಿಪಾತಮೆಂಬ ದೋಷಂಗಳಂ ಪೊರ್ದದ ನಾಲ್ಕುಂ ಸ್ಥಾನದೊಳಂ . . . ಪಲತೆಱದ ಪಾತಂಗಳೊಳಂ ನೆಱೆದು (ಚಂದ್ರಪು. ೫-೭೭ ವ). [ ದಶನ + ಹತಿ ]

**ದಶನಾಂಶು** (ನಾ).=ದಶನಮಯೂಖ : ಇಲ್ಲಿಯೊ ಪೇೞೆಂದು ಮಹೀವಲ್ಲಭ ದೂತಂಗೆ ನುಡಿದು ದಶನಾಂಶುಗಳಂ ಮೆಲ್ಲನೆ ದಶನಚ್ಛದದಪ್ಪುದು ಪಲ್ಲವದಿಂ ಮಱಸಿ ಮಾಣೆ ದೂತಂ ನುಡಿದಂ (ಆದಿಪು. ೧೪-೫೦); ಬಂದ ಬರವಾವುದೀ ಬರವಿಂದಂ ಚರಿತಾರ್ಥನಾದೆನಾನೆಲ್ಲಿಂದಂ ಬಂದಿರೆನ್ನೆ ನೃಪತಿ ನಾರದನೆಂದಂ ದಶನಾಂಶಂ ಕೆದಱೆ ಚಂದ್ರಾತಪಮಂ (ಪಂರಾಮಾ. ೩-೨೦); ಅಮರ್ದಿಂದರ್ಘ್ಯಮನಿತ್ತಪುದು ಮುಖೇಂದಂ ಮುನೀಂದ್ರ ಪದನಖೇಂದುಗನಿಷ್ಪಂತಮರೆ ದಶನಾಂಶು ನುಡಿದಂ ಕ್ರಮದಿಂ ಪ್ರಶ್ರಯನಿಯುಕ್ತ ಮಧುರೋಕ್ತಿಗಳಂ (ಚಂದ್ರಪು. ೫-೨೫). [ ದಶನ + ಅಂಶು ]

**ದಶನಾಡಿ** (ನಾ). ದೇಹದಲ್ಲಿರುವ ಇಡಾ, ಪಿಂಗಳಾ, ಸುಷುಮ್ನಾ, ಗಾಂಧಾರೀ, ಹಸ್ತಿಜಿಹ್ವಾ, ಪೂಷಾ, ಯಶಸ್ವಿನೀ, ಅಲಂಬುಷಾ, ಕುಹೂ, ಶಂಖಿನೀ ಎಂಬ ಹತ್ತು ನಾಡಿಗಳು : ಅರಿಯು ಇಡ್ಪಿಂಗಳ ಸುಷುಮ್ನವು ಅರಿಯು ಗಾಂಧಾರಿ ಹಸ್ತಿಜಿಹ್ವವು ಅರಿಯು ಪೂಷ ಯಶಸ್ವಿನಿಯು ಅಲಂಬುಷಾ ಕುಹೂ ಅರಿಯು ಶಂಖಿನಿಯಿಂತು ದಶನಾಡರಿಯಲಿಕೆ ದಶನಾಡಿ ನಾಮಿವು ಅರಿಯು ದಶನಾಡಿಗಳ ಸ್ಥಾನವ ವಿವರಿಪೆನುಯೆಂದ (ಜ್ಞಾನಸಿಂ. ೪-೭೪). [ ದಶ + ನಾಡಿ$_1$ ]

**ದಶನಾಮ** (ನಾ). ಹತ್ತು ಬಗೆಯ ಹೆಸರುಗಳು : ಫಲುಗುಣ ಬೋಳವಿಸೆ ನಿಂದಿರ್ದು ಕೈಮುಗಿದುತ್ತರನು ನಗುತ . . . ನಿಮ್ಮ ದಶನಾಮಾಳಿಯುನು ಪೇಳ್ದಲ್ಪಮತಿಯನು ತಿಳುಹಬೇಕೆಂದ (ಕುಮ್ಯಾವಿ. ೬-೪೫); P ಅರ್ಜುನನಿಗೆ ಅರ್ಜುನ, ಫಲ್ಗುನ, ಜಿಷ್ಣು, ಕಿರೀಟಿ, ಶ್ವೇತವಾಹನ, ಬೀಭತ್ಸು, ವಿಜಯ, ಕೃಷ್ಣ, ಸವ್ಯಸಾಚಿ ಮತ್ತು ಧನಂಜಯನೆಂಬ ಹತ್ತು ಬಗೆಯ ಹೆಸರುಗಳಿವೆ. [ ದಶ + ನಾಮ ]

**ದಶನೂತಿ** (ನಾ). ಒಂದು ಬಗೆಯ ಹುಣ್ಣು,-ವ್ರಣ (?) : ಅರಿದಳ, ಬೇವಿನ ಎಲೆ, ಇವಂ ನವಸಾರದಿಂದ ಅರೆದು ಪೂಸಲು ದಶನೂತಿ ಮಾಣ್ಗುಂ (ವಿವ್ರವಿ. ೧೩೬). [ ದಶ? + ನೂತಿ$_1$ ]

**ದಶನೌಘ** (ನಾ).=ದಶನ ಚಯ : ಹೃದಯುದಯಾಮೃತವಾಹಿನಿ ಪದನದಿ ಕಡೆಗೋಡಿವರಿದುದೆನೆ ನಿಜದಶನೌಘದ ವಿಶದಪ್ರಭೆ ಸಭೆಯಂ ಪುದಿಯೆ ಮಹೀವಧುಗೆ ವನಜಭವನಿಂತೆಂದಂ (ಜಗವಿ. ೧-೨೮). [ ದಶನ + ಓಘ ]

**ದಶಪವನ** (ನಾ). ದೇಹದಲ್ಲಿರುವ ಐದು ಪ್ರಾಣವಾಯುಗಳು ಮತ್ತು ಐದು ಉಪವಾಯುಗಳು : ನವಜೀವಗುಣಮಂ ಮಿಾಱೆ ನವಲಿಂಗಾನುಸಂಧಾನಮನಿಂಬುಗೊಳಿಸಿಯುಂ ದಶಪವನಧರ್ಮಮಂ ತೆಮರ್ದು ದಶನಾದ ವಿನೋದದೊಳ್ಮನಮಂ ಮೇಳಯಿಸಿಯುಂ (ವೃಷವಿ. ೫-೪೦ ವ). 'ದಶವಾರಂತ' ಪರಾ. [ ದಶ + ಪವನ$_2$ ]

**ದಶಪಾದಿ** (ನಾ). ಹತ್ತು ಪಾದಗಳುಳ್ಳ ಪ್ರಾಣಿ : "ಹತ್ತು ಪಾದಗಳ ವಲ್ಕವಂತ ಪ್ರಾಣಿ : ದಶಪಾದಿ" (Decapod. ೩೦೪೧). [ಸಂ. ದಶಪಾದೀ]

**ದಶಪೂರ್ವ** (ನಾ). [ಜೈನ] ಹತ್ತು ಧಾರ್ಮಿಕಗ್ರಂಥಗಳು ; ಉತ್ಪಾದಪೂರ್ವ, ಆಗ್ರಾಯಣೀಯ, ವೀರ್ಯಾನುವಾದಪ್ರವಾದ, ಅಸ್ತಿನಾಸ್ತಿಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಾಖ್ಯಾನ, ವಿದ್ಯಾನುವಾದ ಎಂಬ ಹತ್ತು ಗ್ರಂಥಗಳು. 'ದಶಪೂರ್ವಧರ' ಪರಾ. [ ದಶ + ಪೂರ್ವ ]

**ದಶಪೂರ್ವಧರ** (ನಾ). [ಜೈನ] ದಶಪೂರ್ವಗಳನ್ನು ಅಭ್ಯಾಸಮಾಡಿದವನು : ದಶಪೂರ್ವಧರರುಮೇಕಾದಶಾಂಗಧಾರಿಗಳುಮೆನಿಪ ಮುನಿಪದ ನಖದೀಪ್ತಿ . . . ಮಾಡುಗಘತಮೋ ವಿಘಟನಮಂ (ಮಲ್ಲಿಪು. ೧-೨೨); ನಾಲ್ಸಾಸಿರ್ವರ್ ದಶಪೂರ್ವಧರರುಂ ಎರಡು ಲಕ್ಕೆಯ ಪತ್ತು ಸಾಸಿರದ ನಾಲ್ನೂರ್ವರ್ ಶಿಕ್ಷಕರುಂ (ಚಂದ್ರಪು. ೧೫-೮೦ ವ). [ ಸಂ. ]

**ದಶಪೂರ್ವಿ** (ನಾ).=ದಶಪೂರ್ವಧರ: ದಶಪೂರ್ವಿಗಳೀವನುಪಮ ದಶವಿಧ ಸಮ್ಯಕ್ತ್ವಮಣಿಗಳೊಳ್ದಂಗೈಕಾದಶಧಾರಿಗಳೀವೇಕಾದಶನಿಳಯದ ಸಂಪದಂಗಳಕ್ಕೆಮಗೆಂದುಂ (ಪುಷ್ಪಪು. ೧-೧೫) ; ಕ್ರಮವಾಗಿ ದಶಪೂರ್ವಿಗಳಿಗೂ ಚೌದಹಪೂರ್ವಿಗಳಿಗೂ ಬೇರೆ ಬೇರೆಯಾಗಿ ನಮಸ್ಕರಿಸಲಾಗಿದೆ (ಜೈನಪ. ೧೯೧). [ ಸಂ. ದಶಪೂರ್ವಿನ್ ]

**ದಶಬಂಧ** (ನಾ). ೧. ನೀರಾವರಿಯ ಕೆರೆ, ಬಾವಿ ಮೊದಲಾದುವುಗಳ ಜೀರ್ಣೋದ್ಧಾರಕ್ಕಾಗಿ ಮೀಸಲಾಗಿರಿಸಿದ ತೆರಿಗೆಯ ಹತ್ತನೆಯ ಒಂದಂ ಭಾಗ. ೨. ಆ ಮೊತ್ತಕ್ಕೆ ಸಮನಾದ ಉತ್ಪನ್ನವುಳ್ಳ ಭೂಮಿ. ೩. ನೀರಾವರಿಯ ಕೆರೆ, ಕಾಲುವೆ, ಬಾವಿಗಳ ಜೀರ್ಣೋದ್ಧಾರ ಮಾಡುವವನು ಅವುಗಳಿಂದ ಸಾಗುವಳಿಯಾದ ಭೂಮಿಯ ಉತ್ಪನ್ನದ ಹತ್ತನೆಯ ಒಂದು ಭಾಗವನ್ನು ವಸೂಲು ಮಾಡ ಬಹುದಾದ ಅಧಿಕಾರ. ೪. ಆದಾಯದ ಹತ್ತನೆಯ ಒಂದಂ ಭಾಗಕ್ಕೆ ಸಮನಾದ ತೆರಿಗೆಯ ಹಣ : 'ದಶಬಂಧ' ಎಂಬುದಕ್ಕೆ ಸಂವಾದಿಯಾದ ಕನ್ನಡಪದ 'ಪತ್ತೊಂದಿ' (ಕಶಾಅ. ೩೭೦). 'ಧಶವಂದ' ಪರಾ. [ ಸಂ. ]

**ದಶಬಲ, ದಶಬಳ** (ನಾ). ೧. ದಾನ, ಶೀಲ, ಕ್ಷಮೆ, ವೀರ್ಯ, ಧ್ಯಾನ, ಪ್ರಜ್ಞೆ, ಬಲ, ಉಪಾಯ, ಪ್ರಣಿಧಿ, ಜ್ಞಾನಗಳೆಂಬ ಹತ್ತು ಬಗೆಯ ಸಾಮರ್ಥ್ಯ. ೨. ಈ ಹತ್ತು ಬಗೆಯ ಸಾಮರ್ಥ್ಯಗಳನ್ನುಳ್ಳವನು ; ಬುದ್ಧ : "ಬುದ್ಧನದ್ವಯವಾದಿ ದಶಬಲಂ . . . ಬೌದ್ಧಂ" (ಪಂಗಿರಾ. ೭-೨೩) ; ದಶಬಲನಾದ ಭಗವಂತನು ತನ್ನ ನಗರಕ್ಕೆ ಬರುವನೆಂಬುದನ್ನು . . . ವಿಶಾಖಾಕನ್ಯೆಯನ್ನು ಕರೆಕಳುಹಿ ಹೇಳಿದನು (ಹತ್ತುಮ. ೦೮). **ದಶಬಳ** : ೨. "ಬುದ್ಧಂ ಸಮಂತಭದ್ರಂ ಸಿದ್ಧಾರ್ಥಂ ಮುನಿ ತಥಾಗತಂ ಷಡಭಿಜ್ಞಂ ಶೌದ್ಧೋಧನಿ ದಶಬಳನತ್ಯುದ್ಧತಮದಮದನವಿಜಯಿ ಶಾಕ್ಯಂ ಸುಗತಂ" (ವಸ್ತುಕೋ. ೨-೧೧). [ ದಶ + ಬಲ ]

ದಶಬಳ 'ದಶಬಲ' ನೋ.

**ದಶಭುಜ** (ನಾ). ೧. ಹತ್ತು ತೋಳುಗಳು : ದಶಭುಜಂ ಪಂಚವಕ್ತ್ರಂ ತ್ರಿಣೇತ್ರದಿನೊಪ್ಪೆ (ನಂಬಿರ. ೭-೧೨೫): ಮೂಡಿದನು ಕೆಂಜೆಡೆಯು ಶಶಿಕಳೆಯು . . . ಪಂಚಮುಖದ ಎಡದ ಗಿರಿಜೆಯು ತಳಿತ ದಶಭುಜದ . . . ಕಾಶೀರಮಣ ವಿಶ್ವನಾಥಂ (ಹಚಕಾ. ೧೩-೧೯). ೨. ಶಿವ : ದಶಭುಜನ ಮನೋವಲ್ಲಭೆ . . . ಶಶಿಧರನಂ ನೆನೆದು ಕಳೆದಳಾ ಬೇಸಗೆಯುಂ (ಗಿರಿಕ. ೯-೩೦). ೩. [ರೇಖಾಗ] "ಹತ್ತು ಭುಜಗಳೂ ಕೋನಗಳೂ ಉಳ್ಳ ಸಮತಲಾಕೃತಿ : ದಶಾಶ್ರ ; ದಶಭುಜ ; ದಶಕೋನ" (Decagon. ಇಂಕನಿ). [ ದಶ + ಭುಜ ]

**ದಶಮ** (ಗು). ೧. ಹತ್ತನೆಯ. (ನಾ). ೨. ಹತ್ತನೆಯದು : ಸಂಖ್ಯಾವಾಚಿ ಪ್ರತ್ಯಯಾಂತಕ್ಕೆ ದ್ವಿತಯ, ತ್ರಿತಯ, ಚತುಷ್ಕ, ಪಂಚಕ, ಷಟ್ಕ, ಸಪ್ತಕ, ಅಷ್ಟಕ, ನವಮ, ದಶಮ – ಎಂದು ಪ್ರತ್ಯಯಂ ಪತ್ತಲೊಡಂ ಎಲ್ಲಕ್ಕಂ ವಿಭಕ್ತಿಯುಂ ಪತ್ತಿಸುವುದು (ಶಮದ. ೮೨ ಪ್ರಯೋ). ೩. ಹತ್ತನೆಯ ಸ್ಥಾನ : ಬಟಿಕ ನೆರೆದು ಯತಿ ದಶಮದೊಳೆ ತರತರದಿನೊಪ್ಪಿ ನಿಲೆ . . . ಕರಮೆಸೆವ ಕುಸುಮರಸನಿರತಿಶಯಮೆಂಬುದು ನಿತಾಂತಂ (ಛಂದೋಂಬು. ೩-೨೦೫). ೪. ಹತ್ತನೆಯ ಭಾಗ. [ ಸಂ. ]

**ದಶಮದಶೆ** (ನಾ). ಹತ್ತು ವಿಧವಾದ ಮದನಾವಸ್ಥೆಗಳಲ್ಲಿ ಕೊನೆಯದು; (ವಿರಹದ) ಹತ್ತನೆಯ ಅವಸ್ಥೆ ; ಮರಣ : ದಶಮದ[ಪಾಠಾಂ. ದೆ]ಶೆಗೆ ಪಕ್ಕಾಗದ ಮುನ್ನಂ ತಕ್ಕುದಂ ನೆಗಳಲ್ವೇಳ್ಕುಮೆಂದು ನುಡಿಯುಲೊಡಂ (ರಾಜಶೇ. ೭-೯೬ ವ). 'ದಶಮಾವಸ್ಥೆ' ಪರಾ. [ ದಶಮ + ದಶೆ ]

**ದಶಮಾಂಶ** (ನಾ). ೧. ಹತ್ತನೆಯ ಒಂದು ಭಾಗ : ಆದಿಯ ಮನ್ವಂತರದೊಳಶೀತಿ ಭಾಗಿ ಪಲ್ಯದೊಳಾ ಮನ್ವಂತರ ದಶಮಾಂಶಂ[ಪಾಠಾಂ. ಮಾಸಂ] ಮನ್ವಂತರಮಕ್ಕುಂ ಪ್ರಸೇನಜಿತ್ಪರ್ಯಂತಂ (ಪಂರಾಮಾ. ೧-೮೮). ೨. [ಗಣಿತ] ಏಕಸ್ಥಾನದ ಬಲಗಡೆ ಒಂದು ಬಿಂದುವನ್ನಿಟ್ಟು ಅಂಕಿಗಳನ್ನು ಬರೆದು ಹತ್ತನೆಯ ಭಾಗ, ನೂರನೆಯ ಭಾಗ ಎಂದು ಮುಂತಾಗಿ ಸೂಚಿಸುವ ಪದ್ಧತಿ; ದಶಮಾನ: ದಶಮಾಂಶಗಳು (ಡೆಸಿಮಲ್ಸ್) : ದಾಶಮಿಕ ಸಂಖ್ಯಾಕ್ರಮವನ್ನು ಪೂರ್ಣಾಂಕಗಳಿಗೆ ಬಲದಿಂದ ಎಡಕ್ಕೆ ಉಪಯೋಗಿಸುವಂತೆ, ಇದೇ ಕ್ರಮವನ್ನು ಬಿಡಿ ಸಂಖ್ಯೆಯ ಬಲಕ್ಕೆ ಉಪಯೋಗಿಸಿ, ಅಂಕಿಗಳನ್ನು ಹತ್ತರ, ನೂರರ, ಸಾವಿರದ, ಇತ್ಯಾದಿ ಭಾಗಗಳನ್ನಾಗಿ ವಿಭಾಗ ಮಾಡುವ ವಿಧಾನಕ್ಕೆ ದಶಮಾಂಶಪದ್ಧತಿ ಎಂದು ಹೆಸರು (ಕವಿಕೋ. I, ೪) ; ದಶಮಾನದ, ದಶಮಾಂಶದ, ದಶಾಂಶದ (Decimal. ಪತ್ರಿನಿ. ೨೯). [ ದಶಮ + ಅಂಶ ]

**ದಶಮಾನ** (ನಾ). ಹತ್ತು ಹತ್ತಾಗಿ ಎಣಿಸುವ ಪದ್ಧತಿ : ದಶಮಾನ ಪದ್ಧತಿ ; ದಶಮಾಂಶ, ದಶಾಂಶ (Decimal. ಪತ್ರಿನಿ. ೨೯). [ ದಶ + ಮಾನ ]

**ದಶಮಾರುತ** (ನಾ). ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ಪ್ರಾಣವಾಯುಗಳು ಮತ್ತು ನಾಗ, ಕೃಕರ, ಕೂರ್ಮ, ದೇವದತ್ತ, ಧನಂಜಯ ಎಂಬ ಐದು ಉಪವಾಯುಗಳು : ನೂರಿಪ್ಪತ್ತೇಳಧಿಕ ಮೂರಾರು ಸಾವಿರ ರೂಪದಿಂ ದಶಮಾರುತರೊಳಿದ್ದವರವರ ಪೆಸರಿಂದ ಕರೆಸುವನು (ಹಸಾರ. ೬-೧೧). [ ದಶ + ಮಾರುತ ]

**ದಶಮಾವಸ್ಥೆ** (ನಾ). ಹತ್ತು ವಿಧವಾದ ಮದನಾವಸ್ಥೆಗಳಲ್ಲಿ ಕೊನೆಯದು ; ಮರಣಸ್ಥಿತಿ : ಆಕೆ ದಶಮಾವಸ್ಥೆಗೆ ಪಕ್ಕಾಗದನ್ನೆಗಮಿದರ್ಕೆ ತಕ್ಕುದಂ ದೇವರ್ ಸಮಕಟ್ಟುವುದು (ಚಂದ್ರಪ್ರ. ೫-೧೩೬ ವ). 'ದಶಾವಸ್ಥೆ' ಪರಾ. [ ದಶಮ + ಅವಸ್ಥೆ ]

**ದಶಮಿ₁** (ನಾ). ಪ್ರತಿಯೊಂದು ಪಕ್ಷದ ಹತ್ತನೆಯ ದಿನ, – ತಿಥಿ : ಆ ಪಕ್ಷಂಗಳೊಳಗೆ ಅಗ್ನಿಯೇ ದೇವತೆಯಾಗುಳ್ಳ ಪಾಡ್ಯ . . . ಯಮನು ಅಧಿದೇವತೆಯಾದ ದಶಮಿ (ವಿವೇಕ. ೩೨೦). 'ವಿಜಯದಶಮಿ' ಪರಾ. ೨. ಮನುಷ್ಯನ ಜೀವಿತದ ಹತ್ತನೆಯ ದಶಮಾನ; ತೊಂಬತ್ತೊಂದನೆಯ ವರ್ಷದಿಂದ ನೂರನೆಯ ವರ್ಷ ಮುಗಿಯುವವರೆಗಿನ ಅವಧಿ. [ ಸಂ. ದಶಮೀ ]

**ದಶಮಿ₂** (ನಾ). (ಜೋಳ, ಸಜ್ಜೆ, ಗೋಧಿ, ಮೊದಲಾದುವುಗಳ) ಹಿಟ್ಟನ್ನು ಹಾಲಿನಲ್ಲಿ ಕಲಸಿ ಮಾಡುವ ರೊಟ್ಟಿ : ಎರಡು ನಾಯಿಗಳು . . . ಬಂದು ದಶಮಿಯ ಗಂಟಿನ ವಾಸನೆ ಬಡಿದು ಆ ಗಂಟಿಗೆ ಬಂದು ಗಂಟು ಬಿದ್ದವು (ನಿರಾಭ. ೯೦) : ಅತ್ತೆ ಮಾಡಿಕೊಟ್ಟ ದಶಮಿ, ಕೊರೆದ ಜುಣಕಾ, ನಾನು ಕುಟ್ಟಿದ ಖೊಬ್ರಿ ಚಟ್ನಿಪುಡಿ ಕಟ್ಟಿದೆ (ಕಪ್ಪುಹು. ೫೯) ಸಾಕಷ್ಟು ದಶಮಿ ಬುತ್ತಿ ಕಟ್ಟಿ ಗೋಸಂಗತಿ ಹೋಗು (ಬಾಂಡಾಯ. ೯) ; ಸ್ನಾನ ಮುಗಿಸಿ, ನಾಕು ದಶಮಿ, ಕಾರೆಳ್ಳಿನ ಹಿಂಡಿ . . . ಹೊಡೆದು (ದೀಪಹ. II, ೭). [ ←ಮರಾ. ದಶಮೀ ]

**ದಶಮಿಸ್ಥ** (ನಾ). ಜೀವಿತದ ಹತ್ತನೆಯ ದಶಮಾನವನ್ನು ತಲುಪಿದವನು; ತೊಂಬತ್ತು ವರ್ಷಕ್ಕೆ ಮೇಲ್ಪಟ್ಟ ವಯಸ್ಸಿನವನು; ಮುದುಕ: "ವೃದ್ಧಂ ಸ್ಥವಿರಂ ತಾಂ ವರ್ಷೀಯಂ ಪ್ರವಯಂ ಜೀರ್ಣಂ ಜರಾರ್ದಿತಂ ದಶಮಿಸ್ಥಂ" (ವಸುಕೋ. ೫೬-೨೭). [ ಸಂ. ]

**ದಶಮುಖ** (ನಾ). ೧. ಹತ್ತು ಮುಖಗಳು: ಒಂದು ಗೀಜಗನ ಉಪದೇಶದಿಂದ ಪೌಲಸ್ತ್ಯನೆಂದು ಹಡೆಯುನೆ ದಶಮುಖವ (ಬಸವ. ೩೫೬). ೨. ಹತ್ತು ಮುಖಗಳುಳ್ಳವನು ; ರಾವಣ : ದಶಮುಖನಗ[ಗ]ರಿಯಂತೆ ವಾನರಭಜ್ಯಮಾನ ತುಂಗಸಾಲಮುಂ (ಕಾದಂಪೂ. ೧೦೦) ; ಅವಲೋಕಿನೀವಿದ್ಯೆ ಮನದೊಡನೆ ಬಂದು ಬೆಸನಾವುದೆನೆ ದಶಮುಖನಿವರಾರೆಂಬುದಂ (ಪಂರಾಮಾ. ೯-೮೯ ವ); ದಶಮುಖನಲುಗಿಸಿದಷುಲಹರಾದ್ರಿಯ ಗುಂಪೆನಿತು (ಬಸಪು. ೧೯-೨೭). ೩. [ವೀಶೈ] ಐದು ಜ್ಞಾನೇಂದ್ರಿಯ ಮತ್ತು ಐದು ಕರ್ಮೇಂದ್ರಿಯಗಳ ಚಟುವಟಿಕೆ, – ಕ್ರಿಯೆ (?) : ಕುಲಮದಛಲಮದ ವಿದ್ಯಾಮದದವರ ತೋಱದಿರಾ ಅವರ ಆರೂಢ ಪದವಿಯನೆನಗೆ ತೋಱದಿರಾ . . . ಶಮೆ ದಮೆಯುಳಿದು ದಶಮುಖ ನಿಂದು ಲಿಂಗದಲಿ ಲೀಯವಾದವರನಲ್ಲದೆ ಎನಗೆ ತೋಱದಿರಾ (ಅವಚಂ. ೧೦೩-೪೭೪). [ ದಶ + ಮುಖ ]

**ದಶಮೂಲ** (ನಾ). ಮೂರೆಲೆಹೊನ್ನೆ, ಒಂದೆಲೆಹೊನ್ನೆ, ನೆಲಗುಳ್ಳ, ಹೆಬ್ಬಗುಳ್ಳ, ನೆಗ್ಗಿಲುಮುಳ್ಳು, ಬಿಲ್ವ, ಹೂಸಲಕ್ಕಿ, ಹೆಮ್ಮರ, ಶಿವನ್ನಿ, ಪಾದರಿಗಳೆಂಬ ಹತ್ತು ಔಷಧ ಮೂಲಿಕೆಗಳು : ದಶಮೂಲವೆಂದರೆ ಬೆಲ್ಲವತ್ತದ ಬೇರು, ನಱುವಲದ ಬೇರು, ಶಿವನಿಬೇರು, ಪಾದರಿಬೇರು, ಹೆಮ್ಮರದ ಬೇರು ಇವು ಮಹತ್ಪಂಚಮೂಲವೆನಿಸಿಕೊಂಬುವು. ಗುಳ್ಳ, ನೆಲಗುಳ್ಳ, ಎರಡೆಲೆ ಹೊನ್ನೆ, ಮೂಱೆಲೆ ಹೊನ್ನೆ, ನೆಗ್ಗಿಲು, ಇವು ಲಘುಪಂಚಮೂಲವೆನಿಸಿಕೊಂಬುವು. ಈ ಎರಡೂ ಕೂಡಿದರೆ ದಶಮೂಲವೆನಿಸಿಕೊಂಬುವು (ವೈದ್ಯಸಾ. I, ೬೩); ಬೆಲ್ಲವತ್ತದ ಬೇರು, ನರುವಲದ ಬೇರು, ಗುಳ್ಳದ ಬೇರು, ಪಾದರಿ ಬೇರು, ಶಿವನ್ನಿಬೇರು–ಇಂತೆಂಬ ಮಹಾಪಂಚಮೂಲ, ನೆಲಗುಳ್ಳ, ಹೆಗ್ಗುಳ್ಳ, ಎರಡೆಲೆ ಹೊನ್ನೆ, ಮೂರೆಲೆ ಹೊನ್ನೆ, ನೆಗ್ಗಿಲುಗಳೆಂಬ ಈ ಲಘುಪಂಚಮೂಲ ಕೂಡ ದಶಮೂಲವೆಂಬ ಈ ಬೇರುಗಳನ್ನು . . . ನಶ್ಯಂ ಮಾಡೆ ಸನ್ನಿಪಾತಂ ಮಾಣ್ಗುಂ (ಸಕಚಿ. ೧೪೦); P ಇದು ಲಘುಪಂಚಮೂಲ ಮತ್ತು ಮಹಾಪಂಚಮೂಲ ಎರಡೂ ಕೂಡಿ ಆದುದು. ಈ ಪಟ್ಟಿಯಲ್ಲಿ ವ್ಯತ್ಯಾಸವಿದೆ. [ ದಶ + ಮೂಲ ]

**ದಶಮೂಲಾರಿಷ್ಟ** (ನಾ). ಹತ್ತು ಔಷಧಿಮೂಲಿಕೆಗಳಿಂದ ತಯಾರಿಸಿದ ಔಷಧ : ವೈದ್ಯರು ದಶಮೂಲಾರಿಷ್ಟ ತೆಗೆದುಕೊಳಲು ಹೇಳಿದ್ದಾರೆ (ರೂಢಿ). 'ದ್ರಾಕ್ಷಾರಿಷ್ಟ' ಪರಾ. [ ದಶಮೂಲ + ಅರಿಷ್ಟ ]

**ದಶರಥ** (ನಾ). ೧. ಹತ್ತು ದಿಕ್ಕುಗಳಲ್ಲಿಯೂ ರಥಗಳನ್ನು ನಡೆಸಬಲ್ಲವನು. ೨. ಒಬ್ಬ ರಾಜನ ಹೆಸರು; ರಾಮನ ತಂದೆ: ಮನೋಜವದಿಂ ಪರಿದುದು ಪೂರ್ಣಮನೋರಥಂ ರಥಂ ದಶರಥನಾ (ಪಂರಾಮಾ. ೩-೫೮); ರಾಯ ದಶರಥನೃಪತಿಗಖಿಳೋಪಾಯಕುಶಲ ಸುಮಂತ್ರಕನು . . . ಋಷ್ಯಶೃಂಗ ಕಥೆಯ ವರ್ಣಿಸಿದ (ತೊರರಾ. ೦-೫ ಸೂಚನೆ). [ ದಶ + ರಥ ]

**ದಶರಥನಂದನ** (ನಾ). ದಶರಥ ಮಹಾರಾಜನ ಮಗ; ರಾಮ: ಹನುಮನನಟ್ಟಿದ ದಶರಥನಂದನ (ಕುರಾಸಾಂ. ೧೯-೮೦).
[ ದಶರಥ + ನಂದನ ]

**ದಶರಥಾತ್ಮಜ** (ನಾ). = ದಶರಥನಂದನ: ಲಲನೆಯೊಳು ಜಮದಗ್ನಿತನಯನೊಳು . . . ದಶರಥಾತ್ಮಜನೊಳತಿ ಕಪ್ಪಿನೊಳು ಬಿಳುದಿನೊಳು ರಾಮನೆನಿಸಿಕ್ಕು (ಮುಂಗಿರಾ. ೧೯೭-೯೦). [ ದಶರಥ + ಆತ್ಮಜ ]

**ದಶರಥಿ** (ನಾ). ಒಂದು ಬಗೆಯ ಅಲಂಕಾರ ವಸ್ತ್ರ; ಗೌರವಕ್ಕೋಸ್ಕರವಾಗಿ ಕೊಡಲ್ಪಡುವ ವಸ್ತ್ರ: ಕಾಲ ಕುಪ್ಪುಸದ ಕಬಾಯಿಯ ಕಟ್ಟಿದ ಮೇಲು ಕನ್ನಡ ದಶರಥಿಯ ಬಾಲುಗುಲಾಮರು ಮೆಚ್ಚಿದರು ಸುರುತಾಳನೋಲಗದೊಳಗೆಡೆವಿಡದೆ (ಕುರಾಸಾಂ. ೦೯-೫೭); ಡಿಳ್ಳಿಯ ಸುಲ್ತಾನನ ಆಸ್ಥಾನದಲ್ಲಿದ್ದ ಖಾನರು ಕಡಿದಾಬೆ, ಜವದಾಡೆ, ದಶರಥಿ, ದುಗುಲದ ವೈರಣೆ, ಸುಕ್ಕುಗುಪ್ಪಸ, ಏಕತಾಯಿಗಳಿಂದ ಅಲಂಕೃತರಾಗಿದ್ದರೆಂದು ತಿಳಿದು ಬರುತ್ತದೆ (ಕುಮಾಸಾಂ. ೩೬೦). [ ←ಅರೆ. ತಷರೀಫಾತ್ ]

**ದಶರೂಪ** (ನಾ). = ದಶರೂಪಕ. 'ದಶರೂಪಲಕ್ಷಣ' ಪರಾ.
[ ದಶ + ರೂಪ ]

**ದಶರೂಪಕ** (ನಾ). [ಕಾವ್ಯವಿಮ] ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ ಎಂಬ ಹತ್ತು ಬಗೆಯ ರೂಪಕಗಳು: ಸ್ವಸಂವೇದ್ಯವಾದ ಪರಮಾನಂದರೂಪವಾದ ರಸದ ಸವಿಯೇ ದಶರೂಪಕಗಳ ಫಲ (ದಶರೂ. ೪).
[ ದಶ + ರೂಪಕ ]

**ದಶರೂಪಲಕ್ಷಣ** (ನಾ). ಹತ್ತು ಬಗೆಯ ರೂಪಕಗಳ ಲಕ್ಷಣ: ನಾಟಕವುಂ ಪ್ರಕರಣವುಂ ಚಾರಣವುಂ ಭಾಣಮುಂ ಸಮವಕಾರಣಮುಂ ಡಿಮವುಂ ಈಹಾಮೃಗಮುಂ ವ್ಯಾಯೋಗಮುಂ ಪ್ರಹಸನವುಂ ವೀಥಿಯುಮೆಂಬ ದಶರೂಪಕಲಕ್ಷಣಮುಮಂ ಪಾತ್ರಸಂಕ್ರಮಣದೊಳ್ ನೆಱೆಯೆ ತೋಱಿ (ಅಜಿಪು. ೫-೩೦ ವ): P ಇಲ್ಲಿ 'ಅಂಕ'ದ ಬದಲು 'ಚಾರಣ' ಉಪಯೋಗವಾಗಿದೆ. [ ದಶರೂಪ + ಲಕ್ಷಣ ]

**ದಶಲಕ್ಷ** (ನಾ). ೧. ಹತ್ತು ಲಕ್ಷ: "ಪ್ರಯುತಂ ದಶಲಕ್ಷಂ" (ವಚು.ಕೋ. ೧೦೩-೩೩). ೨. ಸಂಖ್ಯೆಯಲ್ಲಿ ಬಲಗಡೆಯಿಂದ ಏಳನೆಯ ಸ್ಥಾನ: ಸಪ್ತಮಂ ದಶಲಕ್ಷಂ ತು ಅಷ್ಟಮಂ ಕೋಟಿರುಚ್ಯತೆ (ವ್ಯವಹಾ. ೮-೫). 'ಶತಲಕ್ಷ' ಪರಾ. [ ದಶ + ಲಕ್ಷ ]

**ದಶಲಕ್ಷಣ** (ನಾ). [ಜೈನ] ಮಾಘಚೈತ್ರ ಮತ್ತು ಭಾದ್ರಪದ ತಿಂಗಳ ಶುದ್ಧ ಪಂಚಮಿಯಿಂದ ಚತುರ್ದಶಿವರೆಗಿನ ಪರ್ವದಿನಗಳು; P ಇವುಗಳಲ್ಲಿ ಉತ್ತಮ, ಮಧ್ಯಮ, ಜಘನ್ಯವೆಂದು ಮೂರು ಬಗೆಗಳಿವೆ. ಈ ವ್ರತವನ್ನು ಹತ್ತು ವರ್ಷಗಳವರೆಗೆ ಮಾಡುವರು. ಈ ಅವಧಿಯಲ್ಲಿ ಜೈನಗೃಹಸ್ಥರು ಪೂಜೆ, ಪಠನ, ಉಪವಾಸ ವ್ರತಾಚರಣೆ, ದಶಲಕ್ಷಣಧರ್ಮಅಧ್ಯಯನ, ದಶಾಧ್ಯಾಯ ಸೂತ್ರಗಳ ಪಠನ ಇತ್ಯಾದಿಗಳಲ್ಲಿ ಸಮಯವನ್ನು ಕಳೆಯುವರು: ಜೈನ ದರ್ಶನವು ಆಧ್ಯಾತ್ಮಿಕ ಸಾಧನೆಗೆ ಸಹಾಯವಾಗುವಂತೆ ಅಷ್ಟಾಹ್ನಿಕ, ದಶಲಕ್ಷಣ ಮೊದಲಾದ ಪರ್ವದಿನಗಳನ್ನು ಕಲ್ಪಿಸಿ ಕೊಟ್ಟಿದೆ (ಜೈಸಪ. ೫೬೯).
[ ದಶ + ಲಕ್ಷಣ ]

**ದಶವಂದ** 'ದಶವಂಧ' ನೋ.

**ದಶವಂಧ, ದಶವಂದ, ದಶವನ್ನ, ದಸವಂದ, ಧಸವಂಧ** (ನಾ). ೧. = ದಶಬಂಧ ೧: ಪ್ರಭುಗಳ್ಗೆ ಅಳದು ಭೂಮಿಗೆ ನೂಱಕ್ಕೆ ಹತ್ತರೋಪಾದಿಯ ದಶವಂಧಮನಿಕ್ಕಿ . . . ಪರಮೇಶ್ವರ ದತ್ತಿಯಾಗಿ ಪಡೆದು (ಎಇ. XVI, ೪೮-೫೨; 1147). ೨. = ದಶಬಂಧ ೨: ಆತನ ಕಯ್ಯೊಳಂ ಧಾರಾಪೂರ್ವಕವಾಗಿ ಪಡೆದು ತಮ್ಮ ದಶವನ್ನದ ಗುಡ್ಡೆ ಪಾನ್ಯದಲ್ಲಿಬಿಟ್ಟ ದಯಿಕಾಲ ಮತ್ತರು ಮೂನೂಱಿಪ್ಪತ್ತಂಕದೊಳಂ (ಕಇಇ. ೯-೩-೩೦೦: 1062). **ದಶವಂದ:** ೧. ಮಾಣಿಯಾಯುಧ ಬೆರಸು ಮಣ್ಣಪವೇಱಿಲ್ಲಲ್ಲದಿನ್ನಿ ದೇಣ್ಣದೊಳಂ ಕವರ್ತ್ತೆಯೊಳವಪುತ್ರಿಕದ್ರವ್ಯದ ದಶವನ್ನದೊಳಂ ಪುಟ್ಟಿದ ದ್ರವ್ಯಮುಮಂ ಕಳಿ ಮದ್ದಳೆಯ ಪಣಮುಂ ದೇಯಿಂಗೆಱೆಗೆ (ಎಇ. XX, ೩೮-೪೦; 1012); ಬಹಿತ್ರದ ನಾರಣವೆರ್ಗ್ಗಡೆ ನಂದಾದೀವಿಗೆಗಮಷ್ಟವಿಧಾರ್ಚನೆಗವೊಂದು ಗಾಣಮುಮಂ ಹೇಱಿನ ಸುಂಕದ ದಶವಂದಮುಮಂ ಬಿಟ್ಟಂ (ಎಕ. IV, ನಾಗಮಂ. ೭೦-೫೮; 1178). 'ಪತ್ತೊಂದಿ' ಪರಾ. **ದಶವನ್ನ:** ೧. ಕೋಗಳಿನಾಡೊಳ್ . . . ದೇಗುಲಕಂ ಜಿನಾಲಯಕವಾರವೆಗಂ ಕೆಱೆ ಭಾವಿ ಸತ್ರಕಂ ರಾಗದೆ ತನ್ನ ಪನ್ನಯದ ಸುಂಕದೊಳಂ ದಶವನ್ನವಿಟ್ಟ ನಿಸ್ಸಾಗರಮುಳ್ಳಿನಂ ನೆಗರ್ದ(ಟ್ಟ) ಬಮ್ಮರಸಂ ಗುಣರತ್ನದಾಗರಂ (ಇಇ. XXX, ೦೦೭; 1108). **ದಸವಂದ:** ೧. ಆ ಊರಿಂಗೆ ಹಿರಿಯ ಕೋಲ ಮತ್ತರಂ ೫೦೦೦ ಗೌಡಿಂಗೆ ಮತ್ತರಂ ೧೨ ನೂರಕ್ಕೆ ಹತ್ತು ದಸವಂದ ಮೂಲಸ್ಥಾನದೇವರಿಂಗೆ ಮತ್ತರು ೨೦೦ (ಕೊಲ್ಹಾ. ಶಾ. ೩೭-೨೨; 1003); ತಮಗೆ ನಡೆವ ಕಿಱುಕುಳ ಸುಂಕದೊಳಗೆ ಬಿಲ್ಕಡೆಯ ಎಲೆಯ ಪೇಱಿಂಗೆ ದಸವನ್ನಮುಮಂ . . . ಬಿಟ್ಟ (ಎಕ. VII, ಶಿಕಾರಿ. ೦೩-೦೭; 1098); ಆ ಸ್ಥಳದಲು ಪುಟ್ಟಿದ ಪೊನ್ನಲು ಸುಂಕವೆಗ್ಗಡೆಗಳು ದಸವಂದವಂ ಬಿಟ್ಟರು (ಸೌಇಇ. IX-1, ೨೩೯-೨೦; 1142); ಕಾಡೆಱೆಯಂಗೆ ಪಡೆದುದಱೊಳು ದಸವಂದವನೀವೆನೆಂದು ಪರಸಿಯುಂ (ಪಸಾರ ೪೭೮). ೨. ಪಸರಿಸೆ ಸಮ್ಮತಿ ತನ್ನಯ ದಸವನ್ನದ ನೇಸಣಂಗಳೊಳ್ ಕೆಲವದರ್ಕ್ಕೆಸದೃಶ ನಿತ್ತಿತ್ತುದನೀ ವಸುಧೆಗೆ ನೆಗಟ್ವನ್ನು ಶಾಸನಂ ಬರೆಯಿಸಿದೊಂ (ಎಇ. IV ೭೪-೨೪; 945): ಈ ಭೂಮಿಯ ತೆಂಕಣ ಕಡೆಯಿಂನ್ನೇಸಱಲು ದಸವಂದಕೆ ಮತ್ತರ್ ಹತ್ತೊ[೦]ಭತ್ತು (ಸೌಇಇ. XX, ೦೪೪-೬೫; 1166): ಆ ಕೆಱೆಯ ಕೆಳನ ಗದೆಯ ಮೇಲೆ ನಿಮ್ಮ ದಸವಂದದ ಗದೆ ಸಹವಾಗಿ ವಿರಾಡಿಸಿ (ಎಕ. X, ಮುಳಬಾ. ೦೭೨-೦೪; 1496); ಗಾವುಣ್ಣಪೊಲದ ದಸವಂದದ ಭೂಮಿಯಲ್ಲಿ (ಬೊಂಕಶಾ. ೦೯೩೭, ಲಕ್ಷ್ಮೇಶ್ವರ. ೨೭-೦೭; ?). **ಧಸವಂಧ:** ೨. ಪಱಕಾಱ ಬಾ × × ಗಂಗೆ ಧಸವಂಧಮುಮಂ ಬಿಟ್ಟರ್ (ಎಇ. XVI, ೩೩೦-೩೪; 1077). [ <ಸಂ. ದಶಬಂಧ ]

**ದಶವಕ್ತ್ರ** (ನಾ). ಹತ್ತು ಮುಖಗಳನ್ನುಳ್ಳವನು; ರಾವಣ.
[ ದಶ + ವಕ್ತ್ರ ]

**ದಶವದನ** (ನಾ). = ದಶವಕ್ತ್ರ: ದಶವದನನೊನ್ಮೂಲನ ಭಯವಶದಿಂ ಕೈಲಾಸಲಕ್ಷ್ಮಿ ಬಂದಳೋ (ಕಾದಂಪೂ. ೬೩೫); ಸೀತೆಯಂ ಕಂಡು ಬನಮುಂ ಕಿಳ್ತು ತಾಗಿದ ನಿಶಾಟರಂ ಸದೆದು ಲಂಕೆಯನಂಬಿ ದಶವದನನಂ ಭಂಗಿಸಿ (ಜೈಮಿಭಾ. ೦೭-೩೪). [ ದಶ + ವದನ ]

**ದಶವನ್ನ** 'ದಶವಂಧ' ನೋ.

**ದಶವರೂಥ** (ನಾ). = ದಶರಥ ೨. 'ದಶವರೂಥಜ' ಪರಾ.
[ ದಶ + ವರೂಥ ]

**ದಶವರೂಥಜ** (ನಾ). ದಶರಥನಂದನ: ಬಿಲ್ವಿದ್ಯೆಯ ಕಲಿತನು ದಶವರೂಥಜನ ಕೈಚಳಕವೆಂಬಂತೆ (ಮೋಹತ. ೦೭-೮೦). [ ಸಂ. ]

**ದಶವಾಯು** (ನಾ). = ದಶಮಾರುತ: ದಶವಾಯುಂಗಳ ಸ್ಥಾನಂಗಳಾವುವೆಂದಡೆ ಗುಹ್ಯದಲ್ಲಿ ಅಪಾನವಾಯುಂ ನಾಭಿಯಲ್ಲಿ ಸಮಾನವಾಯು . . . ಜಿಹ್ವೆಯಲ್ಲಿ ಧನಂಜಯವಾಯುಂ (ಚನ್ನವ. ಕ. ೪೦೦-೮೩೯); ವಾಯು

ಒಂದಲ್ಲದೆ ದಶವಾಯುವಿಲ್ಲವೆಂದೆ (ಮೋಕ್ಷಮಾ. ೧-೧) : ದಶವಿಧೇಂದ್ರಿಯಗಳು ನಾನಲ್ಲ ದಶವಾಯುಗಳು ನಾವಲ್ಲ (ಮಹಾದೇ. ಕ. ೧೪೫-೩೪೦) : ತನ್ನ ರೂಪು ದಶವಾಯುಗಳ ಕೂಡಿ ದೆಸೆವರಿದು ಮುಂ ಮಲಗಳೆಸಕದಿಂ ತನುದುರ್ಗಮಂ ಬಲಿದುದು (ಮನೋವಿ. ೧-೦೪) : ದಶವಿಧೇಂದ್ರಿಯದ ದುರ್ಗುಣತತಿಯ ಸಂಹರಿಸಿ ದಶವಾಯುಗಳ ಚೇಷ್ಟೆಯಂ ಪೊರ್ದಲೀಯದಾ ದಶವಿಧದ ಪಾದೋದಕ ಪ್ರಸಾದ ಕ್ರಮಂಗಳನರುಪಿ ಶಿಷ್ಯಾಳಿಗೆ (ವೀಶೈಪು. ೩-೧೧-೨). [ ದಶ + ವಾಯು ]

**ದಶವಿ, ದಸವೆ, ದಸಿವೆಂ** (ನಾ). = ದಶಮಿ₁ : "ದಶಮಿಯನೆ ದಶವಿ" (ಕಶಿರ. ೫೦). **ದಸವೆ:** ದಶಮಿ, ದಸವೆ ; ಏಕಾದಶಿ, ಏಯಾರಸೆ (ಶಬ್ದಾನು. ೦೬೦ ಪ್ರಯೋ). **ದಸಿವೆ:** ದೋದಸೆ, ಏಕಾದಸೆ, ದಸಿವೆ . . . ಇಷ್ಟೆಲ್ಲ ಹೊರತಾಗಿದ್ದುವು (ಮುಂಗಾಪು. ೮೭). [ <ಸಂ. ದಶಮಿ ]

**ದಶವಿಧ** (ನಾ). ಹತ್ತು ತೆರ,–ಬಗೆ : ತನ್ನಣಂಗಂಗೆ . . . ದಶವಿಧದ ಧೂಪಮಂ ಸುಟ್ಟುಖಿಳಗ್ರಹ ಸೋಂಕದಂತೆ ಸಕಲೋಪಚಾರಂಗಳಿಂ ಸಲಹುತಿರ್ದಳು (ನವಮೋ. ೦೫-೫೭). [ ದಶ + ವಿಧ ]

**ದಶವಿಧಧರ್ಮ** (ನಾ). = ದಶಕುಲಧರ್ಮ : ಉತ್ತಮಕ್ಷಮಾದಿ ದಶವಿಧ ಧರ್ಮಮುಮಂ . . . ಶಬ್ದ ಸ್ಪರ್ಶನಾದಿ ಪಂಚೇಂದ್ರಿಯವಿಷಯ ವಿಚ್ಛಿತ್ತಿಯುಂ ತನ್ನೊಳುಂ ಸಚ್ಛನ್ನಮಾಗಿ (ಪುಷ್ಪಪು. ೦೪-೦೬ ವ). [ ದಶವಿಧ + ಧರ್ಮ ]

**ದಶವಿಧನಾದ** (ನಾ). (ತಪಸ್ಸನ್ನಾಚರಿಸುವಾಗ ಕೇಳಿ ಬರುವ) ಭ್ರಮರ, ಶಂಖ, ಮೃದಂಗ, ತಾಳ, ಘಂಟೆ, ವೀಣೆ, ಭೇರಿ, ದುಂದುಭಿ, ಸಮುದ್ರಘರ್ಜನೆ ಮತ್ತು ಮೇಘಘರ್ಜನೆಗಳೆಂಬ ಹತ್ತು ಬಗೆಯ ನಾದಗಳು: ದಶವಿಧನಾದಮಂ ಪದೆದುಕೇಳ್ವ ಸಮುಜ್ಜ್ವಳಬಿಂದುತೇಜಮಂ ಸ್ವಶುಭಚಿದಕ್ಷಿಯಿಂ ಬಿಡದೆ ನೋಳ್ಪ . . . ವಿಳಾಸಮಳುಂಬಮಾತನೊಳ್ (ಶಬಶಂ. ೨-೯೬) ; ಆ ವೀಣೆಯು ದಶವಿಧನಾದಗಳನ್ನೂ ನುಡಿಯುತ್ತದೆ. ಸಂಗೀತವಿದುಷಿಯಂತೆ ಬೇಕಾದ ರಾಗವನ್ನು ಹಾಡುತ್ತದೆ (ಮಹಾಇ. ೦೬೭). [ ದಶವಿಧ + ನಾದ₁ ]

**ದಶವಿಧಪಾದೋದಕ** (ನಾ). [ವೀಶೈ] ಪಾದೋದಕ, ಲಿಂಗೋದಕ, ಮಜ್ಜನೋದಕ, ಸ್ಪರ್ಶನೋದಕ, ಅವಧಾನೋದಕ, ಆಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕ, ಮತ್ತು ಸತ್ಕೋದಕಗಳೆಂಬ ಹತ್ತು ಬಗೆಯ ಪಾದೋದಕ,–ಪಾದತೀರ್ಥ : ಪ್ರಥಮದಲ್ಲಿ ಸ್ಪರ್ಶನವೆಂಬ ಸ್ಪರ್ಶನ ಗುಣದಿಂದೆ ಪಾದೋದಕ ದ್ವಿತೀಯದಲ್ಲಿ ಅಂಗಗುಣವಳಿಯಿತ್ತಾಗಿ ಲಿಂಗಮುಖದಿಂದ ಬಂದುದು ಲಿಂಗೋದಕ . . . ನವಮದಲ್ಲಿ ನಾಮ ಸೀಮೆಯಿಲ್ಲವಾಗಿ ನಿರ್ನಾಮೋದಕ ದಶಮದಲ್ಲಿ ಹುಸಿಯಿಲ್ಲ ನಿತ್ಕೋದಕ ಇಂತು ದಶವಿಧಪಾದೋದಕ [ಪಾಠಾಂ. ಉದಕ] (ಚನ್ನವ. ಕ. ೬೪೭-೦೪೪೦). [ ದಶವಿಧ + ಪಾದೋದಕ ]

**ದಶವಿಧಶ್ರವಣಧರ್ಮ** (ನಾ). = ದಶಕುಲಧರ್ಮ : ನವವಿಧಬ್ರಹ್ಮಚರ್ಯೋರ್ಜಿತನುಂ ಪರಿಗೃಹೀತ ದಶವಿಧಶ್ರವಣಧರ್ಮನುಂ (ಜಾವುಂಪು. ೫-೨೩). [ ದಶವಿಧ + ಶ್ರವಣ₂ + ಧರ್ಮ ]

**ದಶವಿಧಸತ್ಯ** (ನಾ). [ ಜೈನ ] ಹತ್ತು ಬಗೆಯ ಸತ್ಯ ; "ಸತ್ಯವು ಜನಪದ, ಸಮ್ಮತಿ, ಸ್ಥಾಪನಾ, ನಾಮ, ರೂಪ, ಪ್ರತೀತ್ಯ, ವ್ಯವಹಾರ, ಸಂಭಾವನಾ, ಭಾವ, ಉಪಮಾಗಳೆಂದು ಹತ್ತು ವಿಧವಾಗಿದೆ" (ಜೈನಪ. ೨೯೭) ; ನಾಮಸತ್ಯರೂಪಸತ್ಯಾದಿ ದಶವಿಧ ಸತ್ಯಮುಮಂ (ಪುಷ್ಪಪು. ೦೪-೦೭ ವ). [ ದಶವಿಧ + ಸತ್ಯ ]

**ದಶವಿಧಾತಿಶಯ** (ನಾ). [ಜೈನ] ೧. ತೀರ್ಥಂಕರನ ಜನ್ಮಕಾಲದಲ್ಲಿ ಆಗುವ ಹತ್ತು ಅತಿಶಯ ; ಅ ಮಲಮೂತ್ರರಹಿತ ಶರೀರ, ಬೆವರು ಇಲ್ಲದಿರುವುದು, ಬಿಳಿಯ ನೆತ್ತರು, ವಜ್ರವೃಷಭ ನಾರಾಚ ಸಂಹನನ, ಸಮಚತುರಸ್ರ ಸಂಸ್ಥಾನ, ಅದ್ಭುತರೂಪ, ಅತಿಸುಗಂಧ, ಸಾವಿರದೆಂಟು ಲಕ್ಷಣ, ಅಸಮಾನ ಬಲ ಮತ್ತು ಪ್ರಿಯವಚನ. ೨. ಕೇವಲ ಜ್ಞಾನದಿಂದ ಉಂಟಾಗುವ ಹತ್ತು ಅತಿಶಯಗಳು ; ಅ ಕಣ್ಣು ಮಿಂಟುಕಿಸದಿರುವುದು, ಉಗುರು ಮತ್ತು ಕೂದಲು ಬೆಳೆಯದಿರುವುದು, ಊಟ ಮಾಡದೆ ಇರುವುದು, ಮುಪ್ಪು ಬಾರದಿರುವುದು, ನೆರಳು ಬೀಳದಿರುವುದು, ನಾಲ್ಕು ಕಡೆ ನೋಡಿ ನಾಲ್ಕು ಕಡೆ ಮಾತನಾಡುವ ಶಕ್ತಿ, ಸುತ್ತಮುತ್ತ ನೂರು ಯೋಜನಗಳವರೆಗೆ ಸುಭಿಕ್ಷ, ಉಪಸರ್ಗ ಮತ್ತು ದುಃಖ ಆಗದಿರುವುದು, ಆಕಾಶಗಮನ ಮತ್ತು ಸಮಸ್ತ ವಿದ್ಯೆಗಳಲ್ಲಿ ನೈಪುಣ್ಯ. [ ದಶವಿಧ + ಅತಿಶಯ ]

**ದಶವಿಧಾವಸ್ಥೆ** (ನಾ). = ದಶಾವಸ್ಥೆ : ಕವಿಮುಖ್ಯರಜಿಗೆ ಲೋಕ ವ್ಯವಹಾರ ಪ್ರಚುರ ದಶವಿಧಾವಸ್ಥೆಗಳಂ (ಶೃಂಗಾರ. ೪-೬೮). [ ದಶವಿಧ + ಅವಸ್ಥೆ ]

**ದಶವಿಧೇಂದ್ರಿಯ** (ನಾ). ಶ್ರೋತ್ರ, ತ್ವಕ್ಕು, ಚಕ್ಷುಸ್ಸು, ಜಿಹ್ವೆ, ನಾಸಿಕಗಳೆಂಬ ಐದು ಜ್ಞಾನೇಂದ್ರಿಯಗಳು ಮತ್ತು ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಐದು ಕರ್ಮೇಂದ್ರಿಯಗಳು : ಆದಿಸಂಬಂಧವಪ್ಪ ಭೂತಂಗಳು ನಾನಲ್ಲ ದಶವಿಧೇಂದ್ರಿಯಂಗಳು ನಾನಲ್ಲ ದಶವಾಯುಗಳು ನಾನಲ್ಲ (ಮಹಾದೇ. ಕ. ೦೪೫-೩೪೦) ; ದಶವಿಧೇಂದ್ರಿಯದ ದುರ್ಗುಣತತಿಯ ಸಂಹರಿಸಿ . . . ದಶವಿಧದ ಪಾದೋದಕ ಪ್ರಸಾದಕ್ರಮಂಗಳನರುಪಿ ಶಿಷ್ಯಾಳಿಗೆ (ವೀಶೈಪು. ೩-೦೦-೨). [ ದಶವಿಧ + ಇಂದ್ರಿಯ ]

**ದಶವೈಕಾಲಿಕ** (ನಾ). [ಜೈನ] ಹದಿನಾಲ್ಕು ಅಂಗಬಾಹ್ಯಆಗಮಂಗಳಲ್ಲಿ ಏಳನೆಯದು ; ಅ ಇದರಲ್ಲಿ ಕಾಲ, ವಿಕಾಲಗಳ ನಿರೂಪಣೆ ಇದೆ : ಅಂಗಬಾಹ್ಯಂ ಸಾಮಾಯಿಕಮುಂ ಚತುರ್ವಿಂಶತಿಸ್ತವನಮುಂ ವಂದನೆಯುಂ . . . ದಶವೈಕಾಲಿಕೆಯುಂ . . . ಮಹಾಪುಂಡರೀಕಮುಂ ಅಶೀತಿಕೆಯುಂ ಎಂದು ಪದಿನಾಲ್ಕು ತೆಱಂ (ತತ್ತ್ವಸೂ. ೬೫) ; ದಶವೈಕಾಲಿಕೆಯೆಂಬುದು ನಿಯಮದಿಂ ದ್ರವ್ಯಕ್ಷೇತ್ರಕಾಲಭಾವಾಶ್ರಯದಿಂ ಪಂಚಾಚಾರ ವಿಧಿಯಂ ಉದಾಹರಿಸುಗುಂ (ತತ್ತ್ವಸೂ. ೬೫). [ ದಶ + ವೈಕಾಲಿಕ ]

**ದಶವ್ಯಾಕರಣ** (ನಾ). ಐಂದ್ರ, ಚಾಂದ್ರ, ಕಾಶಕೃತ್ಸ್ನ, ಕೌಮಾರ, ಶಾಕಟಾಯನ, ಸಾರಸ್ವತ, ಶಾಕಲ, ಆಪಿಶಲ, ಕಾತಂತ್ರ, ಮತ್ತು ಪಾಣಿನೀಯ ಎಂಬ ಹತ್ತು ವ್ಯಾಕರಣಗಳು: ಸಂಖ್ಯಾವಾಚಿ ಸಮಾಸಕ್ಕೆ– ಏಕಾಂಗ, ದ್ವಿಮುಖ . . . ನವನಿಧಿ, ದಶವ್ಯಾಕರಣ (ಶಮದ. ೮೨ ಪ್ರಯೋ). [ ದಶ + ವ್ಯಾಕರಣ ]

**ದಶಶತ** (ನಾ). ೧. ಹತ್ತು ನೂರು ; ಸಾವಿರ ; ಸಹಸ್ರ : "ಸಹಸ್ರಂ ದಶಶತಂ" (ವಸ್ತುಕೋ. ೦೨೩-೩೩) : ಸಲೆ ದಿನಂಪ್ರತಿಯಿಂದ ಗಂಗಾಮಳ ಸಲಿಲಮಂ ತಂದು ನಿರ್ಮಳಕಳಶದಶಶತದಿಂ ಶಿವಂಗಭಿಷೇಕಮಂ ಮಾಡಿ (ಬಸವು. ೪೩-೦೯) : ವಿಗತಸುಜ್ಞಾನಿಯಂ ಪರಿಪೋಷಿತಾಶಾಧೀನನಂ ದುಃಕೃತಯುತನನಪರಾಧ ದಶ[ ಪಾಠಾಂ. ಶತ ]ಶತನ ಎನ್ನನೇನಂ ಮಾಡಿಕೊಂಬೆನೊ (ಬಸವು. ೬೦-೫೭). ೨. ಹತ್ತು ಅಧಿಕವಾದ ಒಂದು ನೂರು ; ಒಂದುನೂರ ಹತ್ತು. ೩. ಅಸಂಖ್ಯ ; ಅಮಿತ. 'ದಶಶತಕರ', 'ದಶಶತಕಿರಣ' ಪರಾ. [ ದಶ + ಶತ ]

**ದಶಶತಕರ** (ನಾ). ೧. ಸಹಸ್ರ ಕಿರಣಗಳು : ತನ್ನ ದಶಶತಕರದಿ ಗಗನವೆಂದೆಂಬ ಜೇಗಟೆಯಿಂದ ಧರೆಗೆ ಡಂಗುರವೊಯ್ಯಲೆಂದಂದು ನಿಂದಿರ್ದನೋ ಎಂಬಂತೆ ರವಿಯುದಯಗಿರಿಗೆ ಬಂದಂ (ಸಿದ್ಧರಾ. ೨-೮). ೨. ಅಸಂಖ್ಯ ಕಿರಣಗಳನ್ನುಳ್ಳವನು ; ಸೂರ್ಯ : ಆ ಬದ್ದೆಗಂಗೆ ವೈರಿ ತಮೋಬಳ ದಶಶತಕರಂ ವಿರಾಜಿತವಿಜಯಶ್ರೀ ಬಾಹುಯುದ್ಧಮಲ್ಲಂ (ಪಂಪಭಾ. ೧-೩೦): [ ದಶಶತ + ಕರ₃ ]

**ದಶಶತಕಿರಣ** (ನಾ). = ದಶಶತಕರ ೨ : ನಿನ್ನ ದೊರೆಯನೆ ಮಗನಕ್ಕಂ ದಾಹ್ವಾನಂಗೆಯ್ಯಲೊಡಂ ದಲ್ ಧರೆಗಿೞಿದನಂಧು ದಶಶತಕಿರಣಂ (ಶಂಪಭಾ. ೧-೯೦). [ ದಶಶತ + ಕಿರಣ₁ ]

**ದಶಶತದಳ** (ನಾ). ಸಾವಿರ ಎಸಳುಗಳನ್ನುಳ್ಳದು ; ಸಹಸ್ರದಳ ಕಮಲ ; ತಾವರೆ : ಶತಮುಖಾಮರ ನತಚರಣದಶಶತದಳಂ . . . ಸಸ್ಮಿತವದನ ದಶಶತದಳಂ ಪ್ರತ್ಯಕ್ಷಮಾಗಿರ್ದು (ಬಸಪು. ೦೬-೨೬).

[ ದಶಶತ + ದಳ₂ (= ದಲ) ]

**ದಶಶತದ್ಯುತಿ** (ನಾ).=ದಶಶತಕರ ೧ : ಶತದಳಾಸದನತುಳ ತೇಜೋಜಿತ ದಶಶತದ್ಯುತಿ ವಿತತಿ ಸಸ್ಮಿತವದನ ದಶಶತದಳಂ ಪ್ರತ್ಯಕ್ಷಮಾಗಿರ್ದು (ಬಸಪು. ೦೬-೨೬). [ ದಶಶತ + ದ್ಯುತಿ ]

**ದಶಶತನೇತ್ರ** (ನಾ). ಸಾವಿರ ಕಣ್ಣುಗಳನ್ನುಳ್ಳವನು ; ಸಹಸ್ರಾಕ್ಷ ; ದೇವೇಂದ್ರ : "ಸುತ್ರಾಮಾಖ್ಯಂ ದಶಶತನೇತ್ರಂ ಕುಲಿಶಾಯುಧಂ . . . ಪಾಕನಮುಚಿ ಜಂಭದ್ವಿಷ್ಟಂ" (ವಸ್ತುಕೋ. ೬-೩೪). [ದಶಶತ + ನೇತ್ರ]

**ದಶಶತಪತ್ರ** (ನಾ).=ದಶಶತದಳ : ಪತ್ರವಾಹನನೇತ್ರ ದಶಶತಪತ್ರ ಸಂಚಯ ಮಿತ್ರಮಂಡಲ ಪತ್ರವಾಹನಪುತ್ರ . . . ಗುರುಸಿದ್ಧೇಶ ಮಾಂ ತ್ರಾಹಿ (ಬಸಪು. ೦೦-೫೬). [ ದಶಶತ + ಪತ್ರ ]

**ದಶಶಿರ** (ನಾ). ೧. ಹತ್ತು ತಲೆಗಳು : ತ್ರೇತೆಯುಲಿ ರಘುರಾಮನಾಮದಿ ಸೀತೆಯಂ ಹೋಗಾಡಿ ದಶಶಿರದಾತನಿಂ ಬ್ರಹ್ಮತಿಗೆ ಸಿಕ್ಕಿ ತೊಳಲ್ದ ಬಿಸುತಿರನೇ (ಬಸಪು. ೫೯-೩೯). ೨. ಹತ್ತು ತಲೆಗಳುಳ್ಳವನು ; ರಾವಣ : ಇವನೆ ರಾವಣನೆಂಬ ರಕ್ಕಸನಿವನೆ ದಶಶಿರನೆಂಬ ವೀರನು (ಕೌಶಿರಾ. ೨೦-೨೪) : ದಶರಥಾತ್ಮಜ ನೀನು ಲಂಕೆಯೊಳಸುರ ವೀರರು ಕುಂಭಕರ್ಣನು ದಶಶಿರನು ಮೊದಲಾದ ದುರ್ಜನರೆಲ್ಲರನು ಮಡುಹಿ (ರಾಮುಕ. ೨೦-೪) ; ದಶಶಿರಂ ತಪದಿಂದಲೆದ್ದೀಶಪದಯುಗಕೆ ಸಸಿನದಿಂ ನಮಿಸಲು (ಚಬಪು. ೮-೧) ; ದಿಗ್ಗಜದಶಂಗಳದಟರ್ಪುದಾತಂಗೆ ಮೇಣ್ ದಶಶಿರಂ ತಾನೆಂಬರಯ್ (ಶ್ರೀರಾಮಾ. ೩೦-೫೩). [ ದಶ + ಶಿರ₁ ]

**ದಶಸಾರ** (ನಾ). ೧. [ವೈದ್ಯ] ರೋಗನಿವಾರಕವಾದ ಹತ್ತು ಬಗೆಯ ಸತ್ತ್ವಪೂರ್ಣ ಔಷಧ ದ್ರವ್ಯ : ದಶಸಾರಪ್ರಯೋಗ–ಯಷ್ಟಿಮಧುಕ, ನೆಲ್ಲಿಕಾಯಿ, ದ್ರಾಕ್ಷಿಹಣ್ಣು, ಏಲಕ್ಕಿ, ಶ್ರೀಗಂಧ, ಇಪ್ಪೆಹೂವು, ಖರ್ಜೂರ, ಕೊತ್ತುಂಬರಿ, ದಾಳಿಂಬದ ಹಣ್ಣು ಇವನ್ನೆಲ್ಲಾ ಸಮಭಾಗ ಚೂರ್ಣಂಗೈದು ಇಪ್ಪರ ಸಮ ಸಕ್ಕರೆವೆರಸಿ ಉದಯದಲ್ಲಿ ಸೇವಿಸಲು ಸಕಲ ಪಿತ್ತವಿಕಾರಂ ಮಾಣ್ಗುಂ (ಸಕವೈ. ೦೪೩). 'ದಶಸಾರಚೂರ್ಣ' ಪರಾ. ೨. [ವೀಶೈ] (?): ನವಸಾರ ಅಷ್ಟಸಾರ ದಶಸಾರ ಪಂಚಸಾರ ಚತುಸ್ಸಾರಯೇಕಸಾರ ಯಿಂತಿವನತಿಗಳೆದ ಮಹಾಮಹಿಮನ ನಿಲವು ಲಿಂಗದಲ್ಲಿ ಸಂಪೂರ್ಣ (ಪದಗೋ. ೦೬೩-೧೨). [ ದಶ + ಸಾರ₃ ]

**ದಶಸಾರಚೂರ್ಣ** (ನಾ). [ವೈದ್ಯ] ದಶಸಾರವೆಂಬ ಔಷಧದ್ರವ್ಯ ಗಳಿಂದ ಮಾಡಿದ ಚೂರ್ಣ : ದಶಸಾರಚೂರ್ಣ–ಯಷ್ಟಿಮಧುಕ, ನೆಲ್ಲಿಚಿಟ್ಟು, ಶಿಲಾಧಾತು, ಕಿರುನೆಲ್ಲಿ, ಏಲಕ್ಕಿ, ಶ್ರೀಗಂಧ, ಇಪ್ಪೆಹೂವು, ಖರ್ಜೂರ, ದಾಳಿಂಬದ ಓಟೆ ಇವಂ ಸಮಭಾಗ ಚೂರ್ಣಮಂ ಮಾಡಿ, ಎಳನೀರು . . . ಯಾವುದರಲ್ಲಾದರೂ ಕಲಸಿಕೊಡಲು ಪೈತ್ಯದಿಂದಾದ ಸಕಲ ವ್ಯಾಧಿಯು ಪರಿಹರ (ಸಕವೈ. ೦೪೩). [ ದಶಸಾರ + ಚೂರ್ಣ₂ ]

**ದಶಸಾಹಸ್ರ** (ನಾ). ೧. ಹತ್ತು ಸಾವಿರ. ೨. [ಗಣಿತ] ಸಂಖ್ಯೆಯಲ್ಲಿ ಬಲಗಡೆಯಿಂದ ಐದನೆಯ ಸ್ಥಾನ : ಪಂಚಮಂ ದಶಸಾಹಸ್ರಂ ಷಷ್ಠಮಂ ಲಕ್ಷಮೇವ ಚ (ವ್ಯವಹಾ. ೮-೩). [ ದಶ + ಸಾಹಸ್ರ ]

**ದಶಸಿದ್ಧಿ** (ನಾ). ರಾಜಸಯೋಗದ ಅನೂರ್ಮಿಮತ್ತ್ವ, ದೂರಶ್ರವಣತ್ವ, ದೂರದರ್ಶಿತ್ವ, ಕಾಮರೂಪತ್ವ, ಪರಕಾಯಪ್ರವೇಶಿತ್ವ, ಸ್ವಚ್ಛಂದಮೃತ್ಯುತ್ವ, ದೇವತೆಗಳ ಮತ್ತು ದೇವಕನ್ನೆಯರ ಸಹಕ್ರೀಡೆಯನ್ನು ನೋಡಬಿಕೆ, ಯಥಾ ಸಂಕಲ್ಪಸಿದ್ಧಿ, ಅಪ್ರತಿಹತವಾದ ಆಜ್ಞಾಶಕ್ತಿಗಳೆಂಬ ಹತ್ತು ಬಗೆಯ ಸಿದ್ಧಿಗಳು : ಶುದ್ಧಬ್ರಹ್ಮದ ಸನ್ನಿಧಿಯಲಿವು ಇದ್ದಿಹವು ಮಹ ಅಷ್ಟಸಿದ್ಧಿಯು ಸಿದ್ಧ ಕೇಳ್ಸಾತ್ವಿಕವಿವು ರಾಜಸದ ದಶಸಿದ್ಧಿಯಿದ್ದಿಹವು ನಾ ಹೇಳ್ವೆ ಸಗುಣಾಗಿದ್ದ ಯೋಗದ ಮನೆಯೊಳಗೆ ಯಿವುಯಿದ್ದಿಹವು (ಜ್ಞಾಸಿಂ. ೨೦-೫೨). [ ದಶ + ಸಿದ್ಧಿ ]

**ದಶಾಂಗ** (ಗು). ೧. ಹತ್ತು ಅಂಗಗಳನ್ನುಳ್ಳ. (ನಾ). ೨. ಹತ್ತು ಅಂಗಗಳು ಅಥವಾ ಅಂಶಗಳು : ಪುರ ನಿಧಿ ಶಯ್ಯಾಸನ ರಾಜ್ಯರತ್ನ ವಾಹನ ವರೂಥಿನೀ ನಾಟ್ಯಸಭಾಪರಿಕರ ಸಹಿತಂ ಭರತೇಶ್ವರಂಗೆ ಸಮ ಸಂದುದೀ ದಶಾಂಗಂ ಭೋಗಂ (ಆದಿಪು. ೧೩-೫). ೩. ಧೂಪಹಾಕಲು ಬಳಸುವ ಹತ್ತು ಬಗೆಯ ಸುಗಂಧದ್ರವ್ಯಗಳು : "ದಶಾಂಗಗಳು – ಧೂಪ; ೨. ರಾಳ; ೩. ಚಂದನ; ೪. ಕರ್ಚೂರ; ೫. ಗೌಲ; ೬. ನಖ; ೭. ತುಂಗಿ; ೮. ಗುಗ್ಗುಲ; ೯. ಘೃತ; ೧೦. ಗಂಧ" (ನಾನಾತಿ. ೩೦೨) : ಎಸೆವ ಕಾಳಾಗರು ದಶಾಂಗಮಂ ಬೀಸಿ ರಂಜಿಸುವ ರತುನಾರತಿಯನೆತ್ತಿ (ಹದಕಾ. ಪರಿ. ೨೦೭-೬೭) ; ಗರ್ಭಗುಡಿಯಿಂದ ಹೂ, ಹಣ್ಣು, ನೈವೇದ್ಯ, ದಶಾಂಗ, ಗುಗ್ಗುಳ, ಸಾಂಬ್ರಾಣಿಗಳ ವಾಸನೆ ಬರುತ್ತಿದೆ (ಪಂಯಾತ್ರೆ. ೫೦) : ಹಾಲುಮಡ್ಡಿ ಕರ್ಪೂರ ಶಿಲಾರಸ ದೇವದಾರ ಲೋಲ ನಾಗರಮೋತಿ ಚಂದನ ಕರ್ಚುರ ರಾಳ ಗುಗ್ಗುಳದ ದಶಾಂಗ (ಸಿದ್ಧಪು. ೦೯-೩). ೪. [ಜೈನ] ಭೋಗಭೂಮಿಯ ಹತ್ತು ಕಲ್ಪವೃಕ್ಷಗಳು : ಮದ್ಯವಿಭೂಷಣ ವಸ್ತ್ರ ತೋದ್ಯ ಸ್ರಗ್ಭವನ ಭಾಜನಾಶನ ದೀಪಪ್ರೋದ್ಯಜ್ಜ್ಯೋತಿಸ್ಥಿತಿಯೊಳಮು ದ್ಯೋತಿಸೆ ತುದಿಯೊಳಂಗಮಿಂತು ದಶಾಂಗಂ (ಆದಿಪು. ೫-೩೦). 'ದಶಾಂಗ ಕಲ್ಪಕುಜ' ಪರಾ. [ ದಶ + ಅಂಗ₂ ]

**ದಶಾಂಗಕಲ್ಪಕುಜ** (ನಾ). [ಜೈನ] ಭೋಗಭೂಮಿಯ ನಿವಾಸಿಗಳಿಗೆ ಮದ್ಯಾಂಗ, ಭೂಷಣಾಂಗ, ವಸ್ತ್ರಾಂಗ, ತೂರ್ಯಾಂಗ, ಮಾಲ್ಯಾಂಗ, ಗೃಹಾಂಗ, ಭಾಜನಾಂಗ, ಭೋಜನಾಂಗ, ಜ್ಯೋತಿರಂಗ ಮತ್ತು ದೀಪಾಂಗಗಳೆಂಬ ಹತ್ತು ಬಗೆಯ ಭೋಗವಸ್ತುಗಳನ್ನು ಕೊಡುವ ಕಲ್ಪವೃಕ್ಷ : ಇದು ಶಾಲ್ಮಲಿಪಾದಪಮಿಂತಿದು ಜಂಬೂವೃಕ್ಷಮಿದುವೆ ಕುರುಭೂಮಿಗಳೊಪ್ಪಿದುವರ್ಧಚಂದ್ರನಾಕಾರದಿನಂಚಿತ ದಶಾಂಗಕಲ್ಪಕುಜ ನಿಳಯಂಗಳ್ (ಆದಿಪು. ೨-೨೬). [ ದಶಾಂಗ + ಕಲ್ಪಕುಜ ]

**ದಶಾಂಗಕಲ್ಪತರು** (ನಾ). = ದಶಾಂಗಕಲ್ಪಕುಜ : ಕುಸುಮ ಸ್ರಗ್ವಸನಾನ್ನ ಪಾನ ವಿವಿಧಾತೋದ್ಯಪ್ರಕಾಶ . . . ವಿಭೂಷಾನೀಕಮಂ ಕೊಟ್ಟು ಸಂತಸಮಂ ಮಾಡೆ ದಶಾಂಗಕಲ್ಪತರುಗಳ್ ಸ್ವರ್ಗಕ್ಕೆ ಸಂಸಾರಸಾರ ಸುಖಕ್ಕಗ್ಗಳಮೆನ್ನದಾ ಪ್ರಥಮಕಾಲ ಶ್ರೀಯನೇವಣ್ಣಿಪೆಂ (ಪಂರಾಮಾ. ೦-೬೬). [ ದಶಾಂಗ + ಕಲ್ಪತರು ]

**ದಶಾಂಗಭೋಗ** (ನಾ). [ಜೈನ] ಚಕ್ರವರ್ತಿಗಳಿಗೆ ಲಭಿಸುವ ಹತ್ತು ಬಗೆಯ ಭೋಗಗಳು ; "ದಿವ್ಯನಗರ, ಚತುರ್ದಶರತ್ನಗಳು, ನವ ನಿಧಿ, ಸೈನ್ಯ, ಭೋಜನ, ಭಾಜನ, ಶಯ್ಯಾ, ಆಸನ, ವಾಹನ, ನಾಟ್ಯ ಇವು ದಶಾಂಗಭೋಗಗಳು" (ಆದಿಪು. ಕೋಶ) ; ಈ ಪುರುಷ ರತ್ನಾಕರಂ ದಶಾಂಗಭೋಗದೊಳ್ ಕೂಡಿದಂ (ಆದಿಪು. ೬-೨೪ ವ) ; ಪದ್ಮಂ . . . ದಶಾಂಗಭೋಗಮನನುಭವಿಸಿ (ಜಾಪುಂಪು. ೨೮೦-೯) : ಏಕಚ್ಛತ್ರೀಕೃತ ಭಾರತವರ್ಷನುಂ . . . ನವನಿಧಿಸನಾಥ ಶ್ರೀನಿವಾಸನುಂ ದಶಾಂಗಭೋಗಸಂಗತನುಮಾಗಿ (ಚಂದ್ರಪು. ೬-೩೫ ವ).

[ ದಶಾಂಗ + ಭೋಗ ]

**ದಶಾಂಶ** (ನಾ). ೧. ಹತ್ತು ಅಂಶಗಳು ಅಥವಾ ಭಾಗಗಳು : (+). ೨. ಹತ್ತನೆಯ ಒಂದು ಭಾಗ : (+). ೩. [ಗಣಿತ] ಹತ್ತು ಹತ್ತಾಗಿ ಎಣಿಸುವ ಪದ್ಧತಿ ; ದಶಮಾನಪದ್ಧತಿ : ದಶಮಾನಪದ್ಧತಿ ; ದಶಮಾಂಶ, ದಶಾಂಶ (Decimal. ಪಶ್ರಿನಿ. ೨೯). [ ದಶ + ಅಂಶ ]

**ದಶಾನನ** (ನಾ). ೧. ಹತ್ತು ಮುಖಗಳು. 'ದಶಾನನತೆ' ಪರಾ. ೨. ಹತ್ತು ಮುಖಗಳನ್ನುಳ್ಳವನು; ರಾವಣ: ಜಲನಿಧಿಯಂ ಪಾಯ್ದೊರ್ವನೆ ನಿಲಿಕಿ ದಶಾನನನ ಪೊಟಲನಾ ಲಂಕೆಯನಾಕುಲಮಿಲ್ಲ ದಿಱಿದ(ದು) ನಿಂದಂ (ಕವಿರಾ. ೩-೧೯೦); ಸಿಂಹಪೀಠದಿನಿರದೆಟ್ಟಿನಸ್ಮಮಿತ ಪುಣ್ಯದಶಾನನನಾ ದಶಾನನಂ (ಪಂರಾಮಾ. ೯-೭೩); ರಾಘವಂ ಮಾಡಿದು ಪಹತಿಯಿಂ ದಶಾನನಂಗೆ ದಾಯವಂ ಪೇಳ್ದವನ ವಂಶಮಂ ಸವಱಿಸಿದ ಮಾಯಿಕಾರ್ತಿಯವೊಲ್ (ಜ್ಞಮಿಭಾ. ೯-೨೨). [ ದಶ + ಆನನ ]

**ದಶಾನನತೆ** (ನಾ). ಹತ್ತು ಮುಖಗಳನ್ನು ಹೊಂದಿರುವಿಕೆ: ಪದನಖದೊಳ್ ದಶಾನನತೆ ನಮ್ರನೃಪಾಳಿ ಮುಖಾಂಕದಿಂ ಜಯಾಸ್ಪದ ಭೂಜದಲ್ಲಿ ಷಣ್ಮುಖತೆ . . . ಚತುರ್ವ್ವದನತೆ ವಕ್ತ್ರದೊಳ್ ಚತುರವಾಣಿಯನೊಪ್ಪಿರಲೆನ್ತು ನೋರ್ಪ್ಪಡಭ್ಯುದಯಮನೆಯ್ದಿದತ್ತು ಪಲವುಂ ಮುಖದಿಂ ತವೆ ಕೀರ್ತ್ತಿಗಂಗನೊಳ್ (ಎಕ. VII, ಶಿವಮೊ. ೪-೮೪; 1122).
[ ಸಂ. ದಶಾನನತಾ ]

**ದಶಾನೀಕಿನಿ** (ನಾ). ಹತ್ತು ಅನೀಕಿನಿ; ಒಂದು ಅಕ್ಷೌಹಿಣಿ: ಈ ಅನೀಕಿನಿ ಎಂಬ ಬಲದ ಲೆಕ್ಕವನಿಕ್ಕಿ ದಶಾನೀ[ಕಿನಿ] ಮತ್ತೊಮ್ಮೆ ೧೧ಱಿಂದ ಗುಣಿಸಲು ಬಂದ ಲಬ್ಧ] ಆನೆ ೨೧೮[೭೦] ರಥ ೨೧೮೭೦ ಕುದಿರೆ ೬೫೬೧೦ ಕಾಲಾಳು ೧೦೯೩೫೦. ಇದು ೧ ಅಕ್ಷೌಹಿಣಿ ಬಲದ ವಿಂತವೆನಿಸುವುದು (ವ್ಯವಹಾ. ಅನು. ೧-೧೦) 'ಅನೀಕಿನಿ' ಪರಾ.
[ ದಶ + ಅನೀಕಿನಿ ]

**ದಶಾವಂತ** (ನಾ). ಭಾಗ್ಯವಂತ; ಸುದೈವಿ. [ ಸಂ. ದಶಾವತ್ ]

**ದಶಾವತಾರ** (ನಾ). ೧. (ವಿಷ್ಣುವಿನ) ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ಎಂಬ ಹತ್ತು ಅವತಾರಗಳು: ಅನಿಮೇಷಾದ್ಯವತಾರಂ ತನಗಾಯ್ತು ದಶಾವತಾರಂ (ಗದಾಯು. ೩-೪೪); ವಿಷ್ಣು ಬಲ್ಲಿದನೆಂಬೆನೆ ದಶಾವತಾರದಲ್ಲಿ ಭಂಗವಟ್ಟುದಕ್ಕೆ ಕಡೆಯಿಲ್ಲ (ಬಸವ. ೫೫೦); ಜಗತೀಮಣ್ಣನ ಪುಣ್ಡರೀಕ ನಯನಂ ಲಕ್ಷ್ಮೀಯುತಂ ಭೂರಿ ಸತ್ವಗುಣಾಧಾರನಿಳಾಧರಂ ವಿಬುಧಲೋಕಾಹ್ಲಾದನಂ ಪಾಪ ದೈತ್ಯಗಣಧ್ವಂಸಿ ದಶಾವತಾರವಿದಿತಂ ನಿತ್ಯಂ ವಿನತ್ಯನ್ವಿತಂ ಜಗದೊಳ್ ಕೇಶವದೇವನೊಲ್ದು ಕಳೆವಂ ಸ್ವಾತ್ಮಾನತಕ್ಲೇಶವಂ (ಎಕ. VI, ಕಡೂರು. ೬೬-೨೬; 1172). ೨. ಹತ್ತು ಅವತಾರಗಳನ್ನು ತಾಳಿದವನು; ವಿಷ್ಣು.

**ದಶಾವತಾರದ ಆಟ**=೧. (ಹೆಚ್ಚಾಗಿ) ವಿಷ್ಣುವಿನ ಹತ್ತು ಅವತಾರದ ಕಥೆಗಳನ್ನೇ ವಸ್ತುವಾಗಿ ಉಳ್ಳ ಆಟ; ಬಯಲಾಟ: (ಕ). ೨.=ದಶಾವತಾರಗಂಜೀಫು. **ದಶಾವತಾರ ಮೇಳ** = ೧. ಬಯಲಾಟವನ್ನಾಡುವವರ ಗುಂಪು, -ಮೇಳ. ೨. = ದಶಾವತಾರದ ಆಟ ೧.: ಅವರು ಆಡುವ ಕಥಾನಕಗಳು ಹೆಚ್ಚಾಗಿ ವಿಷ್ಣುವಿನ ದಶಾವತಾರಗಳಿಗೆ ಸಂಬಂಧಿಸಿದುದರಿಂದ, ಅವನ್ನು 'ದಶಾವತಾರಮೇಳ'ಗಳೆಂದೂ ಕರೆಯುವ ವಾಡಿಕೆಯುಂಟು (ಯಕ್ಷಬ. ೧೯). [ಸಂ.]

**ದಶಾವತಾರ ಗಂಜೀಫು** (ನಾ). (ವಿಷ್ಣುವಿನ) ಹತ್ತು ಅವತಾರಗಳ ಚಿತ್ರಗಳನ್ನುಳ್ಳ ಇಸ್ಪೀಟಾಟದ ರೀತಿಯ ಎಲೆಗಳಿಂದಾಡುವ ಆಟ.
[ ದಶಾವತಾರ + ಗಂಜೀಫು ]

**ದಶಾವಸ್ಥೆ** (ನಾ). ೧. ದೃಕ್‌ಸಂಗ, ಮನಸ್ಸಂಗ, ಸಂಕಲ್ಪ, ಜಾಗರ, ಕೃಶತೆ, ಅರತಿ, ಹ್ರೀಕ್ಷ್ಯಾ, ಉನ್ಮಾದ, ಮೂರ್ಛೆ ಮತ್ತು ಅಂತ ಗಳೆಂಬ ವಿರಹದ ಹತ್ತು ಅವಸ್ಥೆಗಳು: ಅಳುಪಿ ನೋಡಿದಡೊಂದು ಚಿಂತಿಸಿದಡೆರಡು ಸುಯ್ ಮೊಳೆಯೆ ಮೂಱು ಜ್ವರಂ ತೋಱಿದಡೆ ನಾಲ್ಕು ಮೆಯ್ಯಿಳುಪಲಯ್ದೂಟಮಂ ಬಿಡಲಾಱು ವಿಕಳವೆಡೆಗೊಳಲೇಳು ಕಡುಮೋನಮಂ ತಳೆಯಲೆಂಟತಿ ಮೂರ್ಛೆ ಮೂಡಲೊಂಬತ್ತು ತನು ವಳಿಯೆ ಹತ್ತಿವು ದಶಾವಸ್ಥೆ (ಹಜಕಾ. ೪-೪೩); ಎಱಗಿ ನೋಡುವುದೊಂದಱಲಿ ಎರಡಱಲಿ ಚಿಂತನೆ . . . ಮೇಣ್ ಹತ್ತಱಲಿ ಮರಣ ಇವು ದಶಾವಸ್ಥೆಗಳೆನಲು ಹೇಳುವವು ವಿರಹಿಜನರ್ಗೆ (ಬಸವು. ೩೫-೩೩); ನಿಟ್ಟಿಸಿ ನೋಡಿದ ಹೆಣ್ಗೆ ದಶಾವಸ್ಥೆ ಹುಟ್ಟುವುದಬಲೆ ಚಿತ್ರೈಸು (ಕಂಸವಿ. ೯-೪೯).
[ ಸಂ. ದಶಾವಸ್ಥಾ (ದಶನ್ + ಅವಸ್ಥಾ) ]

**ದಶಾವಸ್ಥೆಗೊಳ್** (ಕ್ರಿ). ವಿರಹದ ಹತ್ತು ಅವಸ್ಥೆಗಳಿಗೆ ಪಕ್ಕಾಗು; ವಿರಹತಾಪವನ್ನು ಅನುಭವಿಸು: ಸಖಿಯೇ ಬೆಳುದಿಂಗಳು ಬಿಸಿಲಾದವೇ . . . ದಶಾವಸ್ಥೆಗೊಂಡೆನು ಮಹಾಲಿಂಗ ಗಜೇಶ್ವರನುಳಿದಡೆ (ಸವಚ. ೭೩-೩೯೯). [ ದಶಾವಸ್ಥೆ + ಕೊಳ್[1] ]

**ದಶಾಸ್ಯ** (ನಾ). = ದಶಾನನ ೨: ಸಹಸ್ರಜಿಹ್ವೆಯೊಳಮುಜ್ಜಾಂಡಮಂ ಪುದಿದು ಬರ್ಪ ದಶಾಸ್ಯನ ವಹ್ನಿಬಾಣಮಂ . . . ತವಿಸಿದಂ ಹರಿ ವಾರುಣ ದಿವ್ಯಬಾಣದಿಂ (ಪಂರಾಮಾ. ೧೪-೧೬೦); ನರಕನಾತಂ ಲೋಕಸಂಹಾರ ಮೂರ್ತಿ ದಶಾಸ್ಯಾದಿಗಳಿಂ ಬಲಾಧಿಕಂ (ಜಗವಿ. ೧-೬೯).
[ ದಶ + ಆಸ್ಯ ]

**ದಶಾಸ್ಯಾಂತಕ** (ನಾ). ರಾವಣನನ್ನು ಸಂಹಾರಮಾಡಿದವನು; ರಾಮ: ಚಿರಂತನಕಾರ್ಯಂಗಳೊಳಂ ಹನೂಮಂತನಂತಪ್ಪನಂ ದಶಾಸ್ಯಾಂತಕಂ ದೂತನಾಗಿ ಕಳಿಪಿದಂ (ಪಂಚತಂ. ೩೩೮-೭). [ ದಶಾಸ್ಯ + ಅಂತಕ ]

**ದಶಾಹೀನ** (ನಾ). ೧. ನಿರ್ಭಾಗ್ಯ; ನತದೃಷ್ಟ. ೨. ಬತ್ತಿ ಇಲ್ಲದುದು. ೧, ೨: ದಿನದೀಪದಂತೆ ದಶಾಹೀನನು (ಗಾದೆ). [ ಸಂ. ]

**ದಶೆ** (ನಾ). ೧. ಅವಸ್ಥೆ; ಸ್ಥಿತಿ; ಇರುವಿಕೆ: ಸತ್ಯದುತ್ತರೋತ್ತರ ದಶೆ ಸತ್ಯದಾಯತಮಪ್ಪಮೃತೇಶ್ವರ ದಂಡನಾಯಕಂ (ಎಕ. VI, ತರೀಕೆ. ೪೫-೬೨; 1196); ಈ ಚಂದ್ರನೀ ಶುಕ್ಲಪಕ್ಷಮಾ ಶುಕ್ಲಪಕ್ಷಕೆ ಸೇರ್ವ ಮುನ್ನಮೆ ದಶಾನನನ ದಶೆ ಸೇರ್ವುದಾ ದಕ್ಷಿಣದ ದಿಶೆಗೆ (ಶ್ರೀರಾಮಾ. ೬೨೮-೨೪೦); ಸೃಷ್ಟಿಕಥೆ ಕಟ್ಟುಕಥೆ; ವಿಲಯಕಥೆ ಬರಿಯಕಥೆ ಹುಟ್ಟು ಸಾವುಗಳೊಂದೆ ಪುರುಳಿನೆರಡು ದಶೆ (ಮಂಕುತ. ೧೩೯). ೨. ಬಾಲ್ಯ, ಕೌಮಾರ್ಯ, ಯೌವನ ಮತ್ತು ವಾರ್ಧಕ್ಯಗಳೆಂಬ ಜೀವಿತದ ನಾಲ್ಕು ಅವಸ್ಥೆಗಳು. ೩. ಜೀವನದ ಅವಸ್ಥೆ; ಒಳ್ಳೆಯ ಅಥವಾ ಕೆಟ್ಟ ಸ್ಥಿತಿ. ೪. ಸುದೈವ; ಭಾಗ್ಯ. ೫. (ಒಳ್ಳೆಯ ಮತ್ತು ಕೆಟ್ಟ) ಕರ್ಮಗಳ ಫಲ; ಕರ್ಮಪರಿಪಾಕ: "ಕರ್ಮದ ಪರಿಪಾಕದಲ್ಲಿಯುಂ ದಶಾ ಎಂಬುದು" (ಹಲಾಯು. ೧೬೩-೧೩). ೬. (ಜನ್ಮನಕ್ಷತ್ರವನ್ನು ಅನುಸರಿಸಿ) ನವಗ್ರಹಗಳು ತಮ್ಮ ಚಲನೆಯಿಂದ ಮನುಷ್ಯನ ಜೀವನದ ಮೇಲೆ ಕಾಲ ಕಾಲಕ್ಕೆ ಬೀರುವ ಶುಭಾಶುಭ ಪ್ರಭಾವ, -ಪರಿಣಾಮ; ಗ್ರಹಗತಿ. ೭. ಮನಸ್ಸಿನ ಸ್ಥಿತಿ. ೮. ಬಟ್ಟೆಯ ಅಂಚು; ಕರೆ: "ವರ್ತಿಃ, ವಸ್ತಿಃ, ದಶಾ, ಸಿಚಃ – ಈ ೪ ಸೀರೆಯ ಕಱಿ" (ಹಲಾಯು. ೯೦-೩೯೭). ೯. ದೀಪದ ಬತ್ತಿ. ೧೦. ಹೊಸಬಟ್ಟೆ. ೧೧. ಕರ್ತವ್ಯ; ಧರ್ಮ. ೧೨. ಪೂರ್ವಕಾಲ; ಆದಿಕಾಲ. ೧೩. ಬಿಲ್ಲಿನ ಹೆದೆ; ಮೌರ್ವಿ. ೧೪. ಬಾಣ. ೧೫. ಮೊಲ. [ ಸಂ. ದಶಾ ]

**ದಶೆಮುಖಿ** (?) (ನಾ). (?): ಅವರು ಬಿಜಯಂಗೈವ ಸಮಯದಲವನ ತಳಿಗೆನಗೆಂದರಿರುವ ನವಸತಿಯಲಿ ಸಮಾಹಿತ ದಶೆಮುಖಿಯಲ್ಲಿರುತಿರಲೂ (ಅರಾಮಾ. ೩-೧೧-೮). [ ? ]

**ದಷ್ಟ** (ಗು). ೧. (ಹಾವು ಮೊದಲಾದುವುಗಳು) ಕಚ್ಚಿದ; ಕಡಿದ: ಉರಗನೌಡಿದೊಡದಱ ವಕ್ತ್ರದೊಳಿರದೆ ಮೇಣಾ ದಷ್ಟದೇಹದೊಳಿರದೆ ರುಧಿರವು ಪೋಪವೊಲು ದುಷ್ಟಾಧಿಕಾರಿಗಳ ಒರಸೊರಸಿನಿಂ ಜನಪದದ ಧನ ಹರಿವುದರಸಂಗಲಸಿದಾ ಪ್ರಜೆಗಿರದುಭಯ ಪಿಂಗುವುದೆನಱಿ (ಕುಮ್ಮಾಉ. ೩-೧೩). (ನಾ). ೨. (ಹಾವು ಮೊದಲಾದುವುಗಳು) ಕಡಿದವನು: ಗುಂಡಿಗೆಯ ನೀರನಭಿಮಂತ್ರಿಸಿ ತಳಿಯಲೊಡಂ ಕುಮಾರ್ಯಂ

ದಷ್ಟನಿಷ್ಟನಂ ಕಂಡಂತೆ ಭೋಂಕನೆರ್ದು ಕುಳ್ಳಿರ್ದನಂ ಕಂಡು (ಪಂಪಕಂ. ೦೦೩-೦೯); ಗೋಣಿಕೊಖಿಗಿರೆ ಮೂಗಿನೊಳ್ ನುಡಿಯೆ ಬಾಯ್ ಪೆಡೆ ದಷ್ಟನ ಸಾವು ನಿಶ್ಚಯಂ (ಲೋಕೋಪ. ೦೦-೯). ೩. (ಹಾವು ಮೊದಲಾದವುಗಳಿಂ) ಕಚ್ಚುವಿಕೆ ಮತ್ತು ಕಚ್ಚಿದ ಜಾಗ: "ಸರ್ಪ ಕಚ್ಚಿದುದು ದಷ್ಟವೆನಿಕ್ಕು" (ಮಂಗರಾ. ೦೧೩-೮): "ವಂದು ಹಲ್ಲು ನಟ್ಟ ಘಾಯ ದಷ್ಟವೆನಿಸಿಕೊಂಬದು" (ವಿಷಚಿ. ೮-೩). ೪. ತಿನ್ನುವುದಂ; ಊಟಮಾಡುವುದು: ಕಷ್ಟದಿಂ ಫಲವೇನು ಪೋದವರಿಗೀ ವನ್ನವಿಷ್ಟಮಪ್ಪುದೆ ನರಕ ಸಗ್ಗಮೆರಡರೊಳಲ್ಲಿ ದಷ್ಟವಾಗಿಹುದ ಕಂಡಿರ್ಪರಾರ್ ಲೋಕದೊಳು ಚಿತ್ತಚಾಂಚಲ್ಯಮಲ್ತೆ (ವೆಂಕಾರಾ. ೨-೩೩-೪೫).

[ಸಂ.]

**ದಷ್ಟತೆ** (ನಾ). (ಹಾವು ಮೊದಲಾದವುಗಳು) ಕಚ್ಚಿರುವ ಸ್ಥಿತಿ: ರತಿ ಮೂರ್ಛಿತೆ ಜೋಲ್ವ ದೇಹದಿಂ ಸೊಗಯಿಸಿದಳ್ ಭುಜಂಗ ಪರಿದಷ್ಟತೆಯಂ ತವೆ ಸೂಚಿಪಂದದಿಂ (ರಾಜಶೇ. ೦೦-೦೭೯). [ಸಂ. ದಷ್ಟತಾ]

**ದಷ್ಟದಂತ** (ನಾ). [ನಾಟ್ಯ] ಹಲ್ಲುಗಳಿಂದ ತುಟಿಯನ್ನು ಕಚ್ಚಿ ಭಾವಗಳನ್ನು ಸೂಚಿಸುವ ಒಂದು ಭಂಗಿ,-ಅಭಿನಯ; ☞ "ಅವುಡನ್ನು ಹಲ್ಲುಗಳಿಂದ ಕಚ್ಚುವುದು. ಕೋಪದಲ್ಲಿ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೨೮೦ ಗದ್ಯಾನುವಾದ): ಅವುಡೊಂದಲೊಡನೆ ದಷ್ಟಂ (ಲಾಸ್ಯರಂ. ೩-೯೦). [ದಷ್ಟ + ದಂತ$_1$]

**ದಷ್ಟಪುಷ್ಟ** (ಗು). ೧. ಯಥೇಚ್ಛವಾಗಿ ತಿಂದು, ಚೆನ್ನಾಗಿ ಬೆಳೆದ; ಗಟ್ಟಿಮುಟ್ಟಾದ: ಸಾಕಷ್ಟು ದಷ್ಟಪುಷ್ಟವಾಗಿದ್ದ ದೇಹದ ಉಲ್ಲಸದ ಮುಖಮುದ್ರೆಯ ಯುವಕ ಮಲ್ಲಾಪುರ (ನಾಪೂಲೀ. ೨೩); ಐಶ್ವರ್ಯದ ಕಡಲಿನಲ್ಲಿ ಮಿಂದು ದಷ್ಟಪುಷ್ಟವಾಗಿ ಬೆಳೆದಿತ್ತು ಆಕೆಯ ಶರೀರ (ಕೂನಥೀ. ೬೯). (ನಾ). ೨. ಗಟ್ಟಿಮುಟ್ಟಾದವನಂ; ಸಶಕ್ತ; ದೃಢಕಾಯ: ಅವರು ದಷ್ಟಪುಷ್ಟರಿದ್ದರಂ (ನಾಡಿಗೇ. ೨೦೩).

[←ಮರಾ. ಧಷ್ಟಪುಷ್ಟ./ಸಂ. ಧೃಷ್ಟಪುಷ್ಟ]

**ದಷ್ಟೆ** (ನಾ). (ಹಾವಿನಿಂದ) ಕಚ್ಚಿಸಿಕೊಂಡವಳು; ಕಡಿಸಿಕೊಂಡವಳು: ದಷ್ಟೆಯಂ ಕಾದಿರ್ದನೆಂದನೊರ್ವಂ . . . ವಂಚಿಸಿ ಕುಟಿಂದಂದೆನೆಂದನೊರ್ವಂ (ಸುಕುಮಾ. ೭-೦೫). [ಸಂ. ದಷ್ಟಾ]

**ದಸ್‌ಬೊಕ್ಸ** (ನಾ). (ಸೈನ್ಯಕ್ಕೆ ಸಂಬಂಧಪಟ್ಟ) ಹಣವಿಟ್ಟುಕೊಳ್ಳುವ ಅಧಿಕಾರ (?): ಶ್ರೀ ಚಾಮರಾಜೇಂದ್ರುವಡೆಯರವರ ಪಾದಸೇವಕನಾದ ಬಸಪ್ಪನವರ ಮಗ ದಸ್‌ಬೊಕ್ಸದ ನಂಜಪ್ಪನು ಈಶ್ವರಪ್ರೀತ್ಯರ್ಥವಾಗಿ ರಚಿಸಲ್ ಪಟ್ಟ ಕಟ್ಟೆ (ಮೈಆರಿ. ೦೯೩೭, ೫೫-೬: 1882).

[☞ ಇದು 'ದಸ್ತ್‌ಬೊಕ್ಕಸ' ಎಂಬುದರ ಅಪಲಿಖಿತವಿರಬಹುದು]

**ದಸ$_1$** (ನಾ). ಒಂದು ಅನುಕರಣ ಶಬ್ದ. 'ದಸಗುಂಡು' ಪರಾ.

**ದಸ$_2$**, ದಹ$_1$, ದ್ಯಾ, ದಾಹ$_1$ (ನಾ). ೧. ಹತ್ತು. 'ದಸಸಿರ' ಪರಾ. **ದಹ$_1$:** ೧. 'ದಹಕೋಟಿ' 'ದಹಲಕ್ಷ' ಪರಾ. ೨. [ಗಣಿತ] ಒಂದು ಸಂಖ್ಯೆಯಲ್ಲಿ ದಶಮಸ್ಥಾನದಲ್ಲಿರುವ ಅಂಕಿ: ಏಕಂ ದಹಂ ಶತಂ ಸಹಸ್ರಂ ದಶಸಹಸ್ರಂ . . . ಇಂತು ಚಪ್ಪೀಸ ತಾಣವರೆ ಸಂಖ್ಯೆಯಕ್ಕುಂ (ಮಂಗರಾ. ೦೦೫-೦೩). **ದ್ಯಾ:** ೧. 'ದಾಸಾವೀರ' ಪರಾ. **ದಾಹ$_1$:** ೧. ಉಗ್ಗಡಣೆ,-ಎಕ್ಕಂ, ದಾಹಂ, ಶತಂ, ಸಾವಿರ, ದಾಸಾವಿರ (ಪ್ರವಹಾ. ೮-೨೩); ಯಕ್ಕಂ, ದಾಹಂ, ಶತಂ, ಸಾವಿರ, ದಾಸಾವಿರ, ಲಕ್ಷ, ದಹಲಕ್ಷ . . . ಇವು ೩೨ ವುಘಡಣೆ ಹೆಸರುಗಳ್ (ಭಾಸ್ಕರ. ೦೦-೬).

[<ಪ್ರಾ. ದಸ. ದಹ./ಸಂ. ದಶನ್]

**ದಸಕ್$_1$** (ನಾ). ಒಂದು ಅನುಕರಣ ಶಬ್ದ: ಮುಂದಿನ ಪರಿಣಾಮವನ್ನು ಪೊನಸ್ಸಿನಲ್ಲಿ ತಂದರೆ ಎದೆಯು ದಸಕ್ಕೆನ್ನುವುದು (ಕುಲಸೀ. ೦೦೯); ಅವಳ ಎದೆ ದಸಕ್ಕೆಂದಿತು (ಒಡ್ಡಿಉ. ೮೬).

**ದಸಕ** (ನಾ).=ದಶಕ ೬: ಬಲ್ಲಗವುಡನ ವುಂಬಳಿಯು ಗದ್ದೆ ಗಣ್ಡಮುಡವೆಯ ಪಿಳ್ಳಿಯಪ್ಪನ ದಸಕದಿಂ ಪಡು[ವ]ಗದ್ದೆ ಕಂಬ ೫೦ ಆಲದ ಕೆಯಿ ಕಂಬ ೪೦೦ (ಎಕ. VI, ಕಡೂರು. ೩೪-೦೦; ?). [?]

**ದಸಕತು** 'ದಸಕತ್ತು' ನೋ.

**ದಸಕತುಮೊಹರ** 'ದಸಕತ್ತುಮೊಹರು' ನೋ.

**ದಸಕತ್ತು**, ದಸಕತು, ದಸ್ಕತಂ, ದಸ್ಕತ್ತು, ದಸ್ತಕತ್ತು (ನಾ). ೧. ಸಹಿ; ರುಜು; ಅಂಕಿತ: ದೇವಾಲಯಕ್ಕೆ ಸಹ ನಮ್ಮ ರುಜು ಮೊಹರು ಖಾಸ ದಸಕತ್ತಿನಿಂದ ಪ್ರತ್ಯೇಕವಾಗಿ ದಾನಶಾಸನಂಗಳಂ ಬರೆಸಿಕೊಟ್ಟು (ಎಕ. III, ಮೈಸೂರು. ೦-೦೦: 1822); ಪ್ರತ್ಯೇಕ ಪ್ರತ್ಯೇಕವಾಗಿ ದಾನಶಾಸನವನ್ನು ಬರೆಯಿಸಿ ಅವರವರ ದಸಕತ್ತು ಮಾಡಿಸಿಕೊಟ್ಟು (ಚಾಮುವಂ. I, ೩೦೮): ಶಬ್ದಮಾತ್ರದಿಂದಲೇ ಧೊರೆಗಳೆಂದೆನ್ನಿಸಿ ನಿರೂಪದ ದಸಕತ್ತುಗಳನ್ನು ಮಾತ್ರ ಮಾಡಿಸುತ್ತಾ . . . ಸಕಲ ಕಾರ್ಯಗಳನ್ನೂ ತಾವೇ ನಡೆಯಿಸುತ್ತಿದ್ದರು (ಚಾಮುವಂ. II, ೦೫೭). ೨. ಕೈಬರೆಹ; ಹಸ್ತಾಕ್ಷರ: (+). **ದಸಕತು:** ೧. 'ದಸಕತುಮೊಹರ' ಪರಾ. **ದಸ್ಕತು:** ೧. ಪಾಟಿಕೃಷ್ಣಯ್ಯನು ರಾಜಿ ತೀರ್ಮಾನದ ಅರ್ಜಿಗೆ ಸಾಕ್ಷಿ-ದಸ್ಕತು ಹಾಕಿದಾಗ ಅವನೂ ಸುಮಾರು ಮೂವತ್ತುವರ್ಷಕ್ಕಾದರೂ ಮೀರಿದವನಾಗಿರಬಹುದು (ಪಾತೀಸು. ೫); ಅರ್ಜಿಯ ಕೆಳಗಡೆ ದಸ್ಕತುಹಾಕಿ ಸಾಕ್ಷಿ ಹೇಳಬೇಕಾದ ಕರ್ತವ್ಯ ನನ್ನದು (ಕಾವೇರಿ. ೬೯). **ದಸ್ಕತ್ತು:** ೧. ಆ ಕಾಗದಕ್ಕೆ ದಸ್ಕತ್ತು ಮಾಡಿಕೊಡಿ ಎಂತ ಕೋಟೆಆರಸುಗಳು ತಮ್ಮ ಕೈಲಿ ಕೊಟ್ಟಾರು (ರಾಜೇಂದ್ರ. ೦೯); ದಸ್ಕತ್ತು ಹಾಕಿ ರಾಮರಾಯ ನೋಟೀಸು ಪಡಕೊಂಡ (ಕುರುಕು. ೮). **ದಸ್ತಕತ್ತು:** ೧. ಆ ನೌಕರರುಗಳ ದಸ್ತಕತ್ತುಗಳನು (ಕೈಬರಹ ಅಥವಾ ಹೆಬ್ಬೆಟ್ಟಿನ ಗುರುತುಗಳನ್ನು) ತೆಗೆದುಕೊಳ್ಳಬೇಕು (ಗ್ರಾಮಾಕ. ೬).

[← ಪಾರ. ಹಿಂ. ದಸಖತ್, ದಸ್ತಖತ್; ಮರಾ. ದಸಕತ್, ದಸ್ಕತ್, ದಸ್ಖತ್]

**ದಸಕತ್ತುಮೊಹರು**, ದಸಕತುಮೊಹರ, ದಸ್ಕತುಮೊಹರ (ನಾ). ಅಂಕಿತವನ್ನೊಳಗೊಂಡ ಮುದ್ರೆ; ರುಜುವಿನಿಂದ ಕೂಡಿದ ಮುದ್ರೆ: ಖಾವಂದರು ಕರಾರುನಾಮೆ ಬರಶಿ ದಸಕತ್ತುಮೊಹರ ಮಾಡಿಶಿ ಕೊಟ್ಟದ್ದರಿಂದಾ ಹೈದರಲ್ಲಿಖಾನರು ವಪ್ಪಿಕೊಂಡರು (ಹೈದರ. ೬೫); ತಸದೀಕಿಗೆ ದಸಕತ್ತುಮೊಹರು ಮಾಡಿಶಿರುವ ಪ್ರಕಾರ (ಎಕ. III, ತಿರುಮ. ೫೭-೩೦; 1855); ಅಪ್ಪಣೆಯಾದಂತೆ ನಿರೂಪ ಬರೆದು ಆ ನಕಲನ್ನು ಬರೆದುಕೊಂಡು ನಿರೂಪಕ್ಕೆ ಧೊರೆಗಳ ದಸಕತ್ತುಮೊಹರು ಮಾಡಿಸಿ (ಚಾಮುವಂ. ೦೩೯). **ದಸಕತುಮೊಹರ:** ಕೃಷ್ಣಾಯಂಬದಾಗಿ ದಸಕತುಮೊಹರಾ ಶ್ರೀಚಾಮರಾಜವಡೇರ ತನುಜ ಕೃಷ್ಣರಾಜವಡೇರುಯಂಬದಾಗಿ ಬಾಳಬಂದು ಅಕ್ಷರದಲು ಶಾಯಿ ಮೊಹರಾ ಮಾಡಿಯಿದೆ (ಎಕ. VI, ಕೊಪ್ಪ. ೪೮-೫೭; 1811). **ದಸ್ಕತುಮೊಹರ:** ಆ ರಾಜರು ಅಣೆ ಭಾಷೆ ಹಾಕಿ ಕರಾರುನಾಮಾ ದಸ್ಕತುಮೊಹರದಿಂದ ಬರಹದಲ್ಲಿ . . . ಬರೆಸಿ ಕಳುಹಿಸಿದರಿಂದ (ರಾಜೇಂದ್ರ. ೬). [ದಸಕತ್ತು + ಮೊಹರು]

**ದಸಕು** (ನಾ). (ಜೋಳ, ರಾಗಿ, ಗೋಧಿ ಮೊದಲಾದ) ಕಾಳುಗಳ ಮೇಲಿನ ತೆಳುವಾದ ಪದರ; ಹೊಟ್ಟು; ತೌಡು: ರಾಗಿಯಲ್ಲಿ ದಸಕು ಹೆಚ್ಚಾಗಿದೆ (ರೂಢಿ). [?]

**ದಸಗುಂಡು** (ಕ್ರಿ). ಉಬ್ಬಸಪಡು; ಏದುಸಿರು ಬಿಡು; "ತೇಕು" (ಜಾನಕೋ.೪). [ದಸ$_1$ + ಕುಂಡು$_1$ (<ಕೊಡು$_1$)]

**ದಸಧರ್ಮ** (ನಾ). = ದಶಧರ್ಮ ೨: ಶ್ರೀಮತು ರುಂದ್ರಶಕ್ತಿಪಂಡಿತರ ಶಿಷ್ಯರು ದಸಧರ್ಮ್ಮ ನಿರ್ಮ್ಮಿತರಪ್ಪ ಶ್ರೀಸೋಮೇಶ್ವರಪಂಡಿತರ ಶಿಷ್ಯರು (ಸೌಇಇ. XI-ii, ೦೪೮-೦೩; 1123). [<ಸಂ. ದಶಧರ್ಮ]

**ದಸಬುಸನೆ** (ಅ). ಅವಸರವಸರವಾಗಿ ; ಗಡಿಬಿಡಿಯಲ್ಲಿ : ಅಮ್ಮ . . . ದಸಬುಸನೆ ಅಪ್ಪನ ರೂಮಿಗೆ ಓಡಿದಳು (ಸ್ವಾಮಿಸ್ನೇ. ೦೫).

[ ದಸಬುಸ$_0$ + – ಅನೆ$_1$ ]

**ದಸಮಾಹೆ** (ನಾ). ಒಂದು ವರ್ಷದ ಕೆಲಸಕ್ಕಾಗಿ ಕೊಡುವ ಹತ್ತು ತಿಂಗಳ ಸಂಬಳ : (ಕ). [ ದಸ್$_2$ + ಮಾಹೆ ]

**ದಸರ** 'ದಸರಾ' ನೋ.

**ದಸರಾ**, ದಸರ, ದಸರೆ$_2$ (ನಾ). ೧. ಆಶ್ವೀನ ಶುಕ್ಲಪಕ್ಷ ಪಾಡ್ಯದಿಂದ ದಶಮಿಯುವರೆಗಿನ ಹತ್ತು ದಿನಗಳ ಹಬ್ಬ,–ಉತ್ಸವ : ದಸರಾ ರಜ ಬಂದಾಗ ನಿಮ್ಮ ಊರಿಗೆ ಬರುತ್ತೇನೆ (ರೂಢಿ). **ದಸರ:** ೧. ಕಣ್ಣು ಮೂಗಲಿ ನನ್ನ ಹೆಣ್ಣುಮಗಳು ಚೆಲುವೆ ಬಣ್ಣಕೆ ನನ್ನ ಸೊಸೆ ಚೆಲುವೆ ದಸರಕ್ಕೆ ಬನ್ನೀ ಮುಡಿವಾಗ ಮಗ ಚೆಲುವ (ಹಮುಪ. ೧೭–೦೬) ; ಸ್ವಂತಕ್ಕೆ ಹೊಸ ಮನೆಯೊಂದನು ಕಟ್ಟಿದೆ ಒಂಬತ್ತು ವರುಷದ ಹಿಂದೆ ಮನೆಯೊಕ್ಕಲಿಗೆ ಬಂದರೂರವರೊಲವಿಂದೆ ಅದೆ ಕಡೆ ದಸರವು ಎಂದೆ (ಇಂಚಾಪ. ೫೦–೪೦). **ದಸರೆ$_2$:** ೧. ದಸರೆಯು ಹಬ್ಬದಲ್ಲಿ ನಾವು ಪರಸ್ಪರ ಬನ್ನಿಯ ಎಸಳುಗಳನ್ನು ಕೊಡುತ್ತಾ, ಬಂಗಾರವನ್ನು ತೆಗೆದುಕೊಂಡು ಬಂಗಾರದಂತೆ ಇರೋಣ ಎನ್ನುವ ವಾಡಿಕೆಯಿದೆ (ರಂಗರೋ. ೧೧೩); ದಸರೆಯ ಬಿಡುವಿನಲ್ಲಿ ಹೀಗೆಯೇ ಅಡ್ಡಾಡುತ್ತಿರುತ್ತೇನೆ (ದಲಕು. ೩೪). ೨. ಆಶ್ವೀನಮಾಸ ಶುಕ್ಲಪಕ್ಷದ ದಶಮಿ ; ನವರಾತ್ರಿಉತ್ಸವದ ಕೊನೆಯ ದಿವಸ ; ವಿಜಯದಶಮಿ: "ದಸರೆ–ದಶಹರಾ = ಒಂದು ಹಬ್ಬ" (ತದ್ಭಕೋ. ೦೯).

[ ←ಮರಾ. ದಸರಾ./ಸಂ. ದಶಹರಾ ]

**ದಸರಿ,** ದಸರೆ$_1$, ದಸುರಿ (ನಾ). ಒಂದು ಬಗೆಯ ವಸ್ತ್ರ ; ರೇಷ್ಮೆವಸ್ತ್ರ : ದಸರಿ ಗಬ್ಬುಳನೀಲಿಗಂಧ ಸಂಧ್ಯಾರಾಗ ಕುಸುಮಿಯಾವಂಚೆ ದೋರಿಯ ನಾಗವಟ್ಟೆ ಪುಲ್ಲಿ ಸುವರ್ಣ ಪಳಿ ಮದವಿ ಮಂಜಿಷ್ಠೆ ದೇವಾಂಗವೆಂದು ಪಟಭೇದಮುಕ್ಕುಂ" (ಮಂಗರಾ. ೧೦೧–೩೮); ದಸ[ಪಾಠಾಂ. ಶ]ರಿಯ ಸೀರೆಗಳಂ ಸ್ನೇಹಸುಧಾಜಲ ಭೋಜನಂಗಳಂ ಪಾರ್ವಂ ಗೃಧ್ರುಸಮಾಸ್ಕಂ ಕಂಬಳ ಚರ್ಮ ಸಮೇತಂ ಘಟಗೃಹಾದಿಮದ್ರೇಕಾಣಂ (ಜಾತತಿ. ೦೯–೩೧) ; ಧಗ ಧಗಿಪ ಕೆಂಡಂಗಳಂ ಬಗಿಬಗಿದು ದಸರಿಯ ಪೊತ್ತಿಯುಲಿ ಬಿಗಿಬಿಗಿದು ಕರಯುಗಳಂಗಳಿಂ ತೆಗೆದೊಪ್ಪೆ ಥಲವೊಪ್ಪೆ ನೆಗಳನೇ ಶಿವಪಂಡಿತಂ (ಬಸಪು. ೫೫–೩೫) ; ಹಸುಗರ್ೂಳ ಹರಿವಾಣಗಳೊಳು ತುಂಬಿ ರಂಜಿಸುವ ರತ್ನಾರತಿವೆಳಗಿ ದಸರಿ ಪಟ್ಟಾವಳಿ ಚಿತ್ರವಸ್ತ್ರವ ನಿವಳಿಸಿದರಚ್ಯುತನಂಘ್ರಿಗಳಲಿ (ಮೋಹತ. ೪೩–೩೭) ; ಪಳಿ ಪಟ್ಟೆ ಪುಲ್ಲಿ ಚೀನಾಂಬರ ದಸರಿ ಗಬ್ಬುಳಗಂದಿ ಮೇಘವಣ್ಣಿಗೆಯಾ ತಲೆಯ ಮೇಲೆಲ್ಲರ್ಗೆ ಕಟ್ಟಿದರು ವಸ್ತ್ರದ ಮಳೆ ತಾನೆ ಕಱಿದುದೆಂಬಂತೆ (ಭರಚ. ೭೩–೧೦೩) ; ಸದ್ಭಕ್ತತತಿ ಕೆಂಡಮಂ ದಸರಿವಸ್ತ್ರದಿ ಕಟ್ಟೆ (ಸಿದ್ಧೇಪು. ೦೪–೧೩) ; ಎಷ್ಟು ಹೇಳಿದರೂ ಕೇಳೊಲ್ಲೊಕ್ಕಲಗಿತ್ತಿ ಹಾಸೆ ವಜ್ಜರದ ದಸರೀಯ (ಜಗೀತ. ೩೭). **ದಸರೆ$_1$ :** ದೇವರ ಚೈತ್ರಪವಿತ್ರಕೆಂದು ಕುಕ್ಕನೂರ ಮೂವತ್ತರೊಳಗೆಲ್ಲಿಯಾದೊಡಂ ಗುಡಿಯ ಬೀಡಿಗಂ ಅಡಕೆ ಮೆಣಸು ದಸರೆಯ ಮಳವೆ . . . ಕತ್ತ್ರಿಯುಲು ಕೋಣನಲು ಏನ ಹೇರಿ ಬಂದಡಂ . . . ಹತ್ತಕೊಂದು ದಶವಂದವಾಗಿ . . . ಧಾರಾಪೂರ್ವಕಂ ಬಿಟ್ಟೇ × × × (ಶಾಸಪ. ೪೪–೪ ; 12ನೆಯ ಶತ). **ದಸುರಿ:** ಪಸುಬೆಯಂಗಡಿ ಗಂಧಿಗರ ಪ್ರಸರದ ಮುಂದೆ ದಸುರಿ ಪಟ್ಟೆಯ ಮಳಿಗೆಗಳು ಹಸುರ ತಾಪತ್ತಿ ಸಕಲಾತಿಯ ಮಾಱುವ ರಸಿಕರೊಪ್ಪಿದರಂಗಡಿಯೊಳು (ಬಸಪು. ೧–೪೮).

[ <ಪ್ರಾ. ಟಸರ./ಸಂ. ತ್ರಸರ./ಇಂ. Tusser ]

**ದಸರಿದೊಡಕು** (ನಾ). ರೇಷಿಮೆಯ ದಾರದಲ್ಲಿ ಕಟ್ಟಿದ, ಬಿಚ್ಚಲು ಕಷ್ಟವಾದ ಗಂಟು ; "ರೇಶಿಮೆಯಂ ತೊಡಕಂ ; ಬಿಚ್ಚಬಾರದ ಗಂಟಂ" (ಶೂನ್ಯಸಂ. ಕೋಶ) : ಅಂತರಂಗದೊಳಗೆ ಅದೆ ಎಂದರೇನು ಹೇಳಾ ಮನಮುಟ್ಟಿ ಕಾಣಬಾರದು ಬಹಿರಂಗದಲ್ಲಿ ಅದೆ ಎಂದರೆ ಪೂಜಿಸುವನ್ನಕ್ಕರ ಕಾಣಬಾರದು ಸಾಕಾರವಲ್ಲದ ನಿರಾಕಾರಲಿಂಗವು ವ್ಯಾಕುಲವುಳ್ಳನ್ನಕ್ಕರ ಸಾಧ್ಯವಾಗದು ಎನ್ನ ಮನಧೊಳಗೆ ಘನವನನುಗೊಳಿಸಿ ತೋಱುವರಿಲ್ಲದ ಕಾರಣ ಎನ್ನ ಅಜಗಣ್ಣನಿಕ್ಕಿದ ದಸ[ಪಾಠಾಂ. ಶ]ರಿದೊಡಕಿಂಗೆ ಬೆಱಗಾದೆನು (ಶೂನ್ಯಸಂ. ೩೩–೨೧) ; ಅಲ್ಲಿಗಲ್ಲಿಗೆ ಮಂಡಲಂಗೊಂಡು ಕಂಡರಂ ದಸರಿದೊಡಕಾದ ತೊದಳ್ನುಡಿಯಿಂದಂ ಕರೆದು ಬಯ್ಯುತ್ತುಂ (ಬಾಧಪು. ೧೦–೦೩೯ ವ) ; ಎಲ್ಲಿ ಸಂಜನಿಸಿದುವು ನಿಮ್ಮೊಡಲಲ್ಲಿ ಪೇಳದ ದಸರಿದೊಡಕಿನ ಸೊಲ್ಲಿನಂಗವನೆನುತೆ ಕೇಳಿದಳಾಕೆಯಲ್ಲಮನ (ಪ್ರಭುಲೀ. ೧೨–೨೨).

[ ದಸರಿ + ತೊಡಕು$_2$ (<ತೊಡಂಕು$_2$) ]

**ದಸರಿಬಳ್ಳಿ** (ನಾ). ನೀರಿನ ಮೇಲೆ ಹಬ್ಬುವ ಒಂದು ಬಗೆಯ ಬಳ್ಳಿ : ಧಗಡಿಬಳ್ಳಿ, ದಸರಿಬಳ್ಳಿ, ಆಡಂಬುಬಳ್ಳಿ, ಯಡಾನಿಬಳ್ಳಿ (ಪ್ರುಕಿಗಿ. ೨೩–೪೨೪). [ ದಸರಿ$_0$ + ಬಳ್ಳಿ ]

**ದಸರೆ$_1$** 'ದಸರಿ' ನೋ.

**ದಸರೆ$_2$** 'ದಸರಾ' ನೋ.

**ದಸವಂದ** 'ದಶವಂಧ' ನೋ.

**ದಸವರ್ಮ** (ನಾ). ಒಬ್ಬಾತನ ಹೆಸರು : ಕಯ್ನೋಗೆವಡೆಯ ಬೆಳ್ಳಿಹ್ಳರ ದಸವರ್ಮ್ಮಗಾಯಿಗ ಕಾಗರತಿಯ ಮಹಾಜನಕ್ಕೆ ಸುವರ್ಣ್ಣದನಮಂ ಕೊಟ್ಟು (ಎಕ. VIII, ಸೊರಬ. ೫೭೦–೧೦ ; 951) ; ಆತನ ತಮ್ಮಂ ಭುವನಯ್ಕಮಲ್ಲನೆನಿಸಿದ ದಸವರ್ಮ್ಮದೇವ (ಸೌಇಇ. XX, ೦೯–೨೩ ; 1015). [ ಸಂ. ದಶವರ್ಮನ್ ]

**ದಸವೆ** 'ದಶಮಿ' ನೋ.

**ದಸಸಿರ** (ನಾ). ೧. ಹತ್ತು ತಲೆಗಳು : (ಕ). ೨. ಹತ್ತು ತಲೆಗಳನ್ನುಳ್ಳವನು : ಎರಡು ಪದಂಗಳಪಭ್ರಂಶಕ್ಕೆ – ಅಚ್ಛಸ್ಫಟಿಕ-ಅಚ್ಛವಳಿಕು , . . . ದಶಶಿರ–ದಸಸಿರ (ಶಮದ. ೨೮೯ ಪ್ರಯೋ). [ ದಸ + ಸಿರ$_2$ ]

**ದಸಳ** (ನಾ). ಉದುರಾಗಿರುವುದು (?) : ನುಗ್ಗೆ ಚಕ್ಕೋತ ಬಸಲೆಯಿಂ ಲವಣವೆರದೂ ದಸಳವಾಗಿರಲು ತೆಂಗಾಯ ತಿರುಳಂ ನೀಡಿ (ಲಿಂಗಪು. ೮–೩೬).

[ ? ]

**ದಸಿ** (ನಾ). ೧. (ಮರ, ಲೋಹ ಮೊದಲಾದುವುಗಳ) ಚೂಪಾದ ಗೂಟ ; ಶೂಲ: "ಆರೋಗ್ಯ ದಸಿ ವಶಗಳೊಳ್ ದಕ್ಕು" (ಶಬ್ದಮಂ. ೭೯) ; ಇಕ್ಷುಯಂತ್ರಂಗಳಿಂ ಪಿೞಿವುದುಂ ಬಸಿದ ದಸಿಯೊಳ್ ತೆಗೆವುದಂ ಕಬ್ಬುನದ ದಬ್ಬಣಂಗಳಂ . . . ಬೆರಲ್ಗಳೊಳಡಂಗೆ ಬೆಟ್ಟುವುದುಂ (ಸುಕುಮಾ. ೧೧–೪೭ ವ) ; ದೆಸೆದೆಸೆಗೆ ಸೀಳ್ದೀಡಾಡಿಯುಂ ಬಾಯೊಳಗೆ ದಸಿಯಂ ಪೆಟ್ಟಿಯುಂ (ಧರ್ಮಾಮೃ. ೩–೭೩) ; ತನಗಲ್ಲದಾದುದ ನಾಸಿಕ ವಾಸಿಸಿದಲ್ಲಿ ಅಲ್ಲಿಯೇ ದಸಿಯ ದಕ್ಕನೇಱಿಸುವೆನು (ವಚನಾ. I, ೦೨೭) ; ಎನಿತಡಗನೂಡೆಯುಂ ಬಾಯೂಡಿ ನಲಿಯದೆ ತಿಂಬಡಗಂ ಕೋಡಿಕೊಂಡಂ ಕಾಡುವ ಕೂಸಂ ದಸಿಯೊಳಸೆಯಿಱಿದು ಬಸಿಯಡಗಂ ಬಾಯೊಳ್ಗಿಡಿಮ ತಿನ್ನುತಿನ್ನೆಂದವುಡಂ ತಿಂಬ ತಾಯಿರಕ್ಕಸಿಯರುಮಂ (ಅರ್ಥನೀ. ೫–೪೦ ವ) ; ಎಸೆವ ಕೋಟೆಯ ತೆನೆಗಳಲಿ ಕಟ್ಟಿಸಿ ಪತಾಕೆಗಳಂ ಬಸಿದ್ಬಲುದಸಿಗಳಂ ಮಲಗಿಸಿ ಮರಂಗಳನಿರಿಸಿಯೆಡೆಗೆಡೆಗೆ (ಬಸಪು. ೦೭–೧೧) ; ಮುಂಗಿಲ ಮುಟ್ಟುವ ಕೋಟೆಯ ತೆನೆಯೆಡೆಯೆಡೆ ಹೊಗರೆದ್ದ ದಸಿಮೊನೆ ಶೂಲ ರಘುಗಝಗಿಸುವ ಹೇರಿಟ್ಟೆ ಮರುಳುಗೈಗಳುಗುಳುತಿರ್ದುವು ಕೆಂಗಿಡಿಗಳ (ಕಂಸವಿ. ೧೧–೦೩೦) ; ಲಕ್ಷ್ಮಣನಸಿ ದಸಿಯಾಯ್ತು ಗಡ ! (ರಾಮಾಶ್ವ. ೧೭೦–೫) ; ಆಗಳದ ಸುತ್ತ ಚೂಪುಮೊನೆಯ ದಸಿಗಳ ಎತ್ತರದ ಬೇಲಿಯಿತ್ತು (ಪುನರು. ೫೧೦) ; ಮುಳ್ಳು ತೆಗೆದು ದಸಿ ಹೆಟ್ಟಿದ ಹಾಗೆ (ಗಾದೆ). ೨. ಮುಳ್ಳು ; ಕಂಟಕ : ಕಡುಮುದದಿಂ ಧೂಪದ ಕಾವಡಿಯಂ ಪೊತ್ತಿರದೆ ಚೆಚ್ಚರಂ ಬರೆ ದಸಿ ಮೆಲ್ಲಡಿಯಂ ಕಟ್ಟುಗಿಯಲ್ಡೆಯುಡುಗಿ ಬಟಲ್ದಟಲ್ದನೋಹಿಲದೇವಂ (ಉದ್ಭಟ. ೧೧–೧೦೩) ; ನಿಲ್ಲದಾತನು ನಡೆಯೆ ಮೇಗಾಲಲ್ಲಿ ದಸಿ ಮೊನೆ

ದೋಣಿಲು (ಬಸಪು. ೪೩-೮೭) ; ಗಿರಿಯಿಂದ ಧೂಪವನು ತರುವ ನಡುಪಥದಲ್ಲಿ ಚರಣದೊಳಗೊಂದು ದಸಿ ಮುಱಿದು ಮಱುವೊನೆದೋಱಿ ನರ ಬಿಗಿದು ನಡೆಗೆಡಲು (ಪ್ರಾಭರಾ. ೧೭-೩೦); ನೂಕುವೆ ಕಕ್ಕುದಱಿ ಕೇತಕಿಸಳ ದಸಿಯಲಿ (ನಿಜಸಾಂ. ೩-೯೦) ; ಕಾಲೊಳು ಮೂಡಿದ ದಸಿ ಮುಳ್ಳುಗಳು ತಾಕಿ ಸೀಳಿದ ಮೈಗಾಯದಿಂದ . . . ಜನಜಾಲವೈದಿತು ದೆಸೆದೆಸೆಗೆ (ಕಂಸವಿ. ೧೧-೩೧). ೩. ಒಂದು ಬಗೆಯ ಬಾಣ : ಹಿಳಿಕು ಕವಲಂಬು ಬೋಳೆವಿದಿರೆಲೆ ಮಿಟ್ಟೆಯಾ ಮೊಳೆತೊಡಕು . . . ತಳುಕ ಚೌದಾರೆ ದಸಿ ಬಿಸುಗದಿರು ಸವಿವಾಯನೆಂಬ ನಾನಾಸರಳನು ಸೆಳೆದು ನೀಡಡಿಯಿಟ್ಟು (ಸೋಮಕ್ ೮-೨೭).೪. ಅಡಕೆ ಮತ್ತು ತೆಂಗಿನ ಗೊನೆ ಬಿಡುವ ಮುನ್ನ ಕಾಣಿಸಿಕೊಳ್ಳುವ ಚೂಪಾದ ಮೊಳಕೆ.–ಮೋತೆ: ಅಡಕೆತೋಟಕೆ ಗಿಲ್ಕೆ ಮಂಚದ ಬೀಗ ನಾನುಂಟು ಅಡಕೆ ದಸಿಯಾಗಿ ಎಲೆ ನಲ್ಲೆ ನೀನಂಟು ಬಾಳೆ ಸುಳಿಯಾಗಿ(ಹಳ್ಳಿಯ. ೫೪);ತೆಂಗಿನ ಮರ ದಸಿ ನೂಕಿದೆ (ರೂಢಿ).೫. ಮರದ ಕಂಬ: ಒಂದು ದಸಿ ನೆಡಿಸಿ ಇಲ್ಲೆ ಇವನ್ನ ಶೂಲಕ್ಕೆ ಏರಿಸು (ಚಿಕರಾ. ೩೫೧).

[ ದೇ. ॥ ತುಳು. ದಸಿ ]

**ದಸಿಕ (ನಾ).** ಶೂಲಕ್ಕೇರಿಸುವವನು : ಪೊಲೆಯರುಂ ಡೊಂಬರಾಗಿಯುಂ ದಸಿಕರಾಗಿಯುಂ . . . ಇಂದ್ರಾದಿ ದೇವರ್ಕಳ್ಗೆ ಕಿಂಕರರಾಗಿ ಬೆಸಕೆಯ್ವುತ್ತು ಮನೋದುಃಖರೂಪ ಅಸಾತಾವೇದನೀಯಮನನುಭವಿಸುವರು (ವಡ್ಡಾರ. ೪೯೨-೪) ; ಇಕ ಪ್ರತ್ಯಯಕ್ಕೆ–ಕರಿಕಂ, ಅಸಿಕಂ, ದಸಿಕಂ, ಬಾರಿಕಂ (ಶಮದ. ೨೦೩ ಪ್ರಯೋ). [ ದಸಿ + – ಇಕ ]

**ದಸಿಕು, ದಸಿಗೆ (ನಾ).** "ದಸಿ; ತಿವಿಗೋಲು" (ಪಂಪನಿ) : ದಸಿಕೊಂದಕ್ಕುಂ ಬೇಡಂಗಿಸಲ್ಕೆ ದೊರೆ ವ್ಯ ಗ ಮ ನೀ ಜಗಂಗಳನಳ್ಕಾಡಿಸುವ ಮದೀಯೋಗ್ರಾಸ್ತ್ರಂ ಪೆಸರ್ಗೊಳಲೇಂ ತನಗೆ ದೊರೆಯೆ ಖಳನಳವಱಿಯಂ (ಪಂಪಭಾ. ೮-೧೯). **ದಸಿಗೆ :** ಹೊಗೆ ಹಾಕಿ, ದಸಿಗೇಲಿ ಇರ್ದು, ತೆಗೆದ್ರು. ದಿಂಡೆ ಬರ್ಕ! (ಮಲೆಮ. ೭೮). [ <ದಸಿ ]

**ದಸಿಕೋಲ್** 'ದಸಿಗೋಲ್' ನೋ.

**ದಸಿಗಾಲ್ (ನಾ).** (?): ನೆಕ್ಕ ಕದಂಪು ಕ ೦ ಪಿ ಪ ಧ ರ ೦ ಮಿಗೆ ಕೆಂಪ ಡರ್ದಕ್ಷಿ ಬಿಟ್ಟ ಬಾಯ್ . . . ಅರ್ವಿಪ ಪುರ್ವು ಕೆ ಂ ಗ ದಿ ರ್ ಮಿಕ್ಕು ಮರಲ್ದ ದಾಡೆ ದಸಿಗಾಲ್ ಮಸಿಮೆಯ್ ಬಿಱುಸಾದ ಕೆಯ್ ಮರುಳ್ವಕ್ಕದ ನಿಟ್ಟೊಡಲ್ ಮಸೆದ ಕತ್ತಿಗೆ ಕಣ್ಬೊಲನಾದುವೆತ್ತಲುಂ (ವರ್ಧಪು. ೧೫-೩೪) [ ? ]

**ದಸಿಗೆ** 'ದಸಿಕು' ನೋ.

**ದಸಿಗೋಲ್, ದಸಿಕೋಲ್ (ನಾ).** ಚೂಪಾದ ತುದಿಯುಳ್ಳ ತಿವಿಯುವ ಕೋಲು ; ಚುಚ್ಚುವ ಕೋಲು: ದಸಿಕೋಲ್, ದಸಿಗೋಲ್ (ಶಬ್ದಾನು. ೩೩೪ ಪ್ರಯೋ). **ದಸಿಕೋಲ್ :** ಮೇಲಿನ ಪ್ರಯೋಗವನ್ನು ನೋಡಿ.

[ ದಸಿ + ಕೋಲ್$_1$ ]

**ದಸಿಮೆ** 'ದಶಮಿ' ನೋ.

**ದಸಿವೆಟ್ಟು (ಕ್ರಿ).** ಗೂಟವನ್ನು ಬಡಿ : ಮುಳ್ಳಂ ತೆಗೆದು ದಸಿವೆಟ್ಟಿದಂ [ಪಾಠಾಂ. ದಸಿಯ ಬಿಟ್ಟಂ]ತಾಯ್ತು (ಕಲ್ಲರ. ೨೪೦-೧೨).

[ ದಸಿ + ಬೆಟ್ಟು$_1$ ]

**ದಸುರಿ** 'ದಸರಿ' ನೋ.

**ದಸೆ, ಜಸೆ, ದೆಶೆ$_1$, ದೆಸೆ$_1$ (ನಾ).** ೧. ಗತಿ; ಅವಸ್ಥೆ ; ಸ್ಥಿತಿ : ರಾಮಲಕ್ಷ್ಮಣರ ಮಹಾಪ್ರಭಾವಮನದಂ ನೆಱೆ ಬಣ್ಣಿಸೆ ಕೇಳ್ದು ಖೇಚರಾಗ್ರಣಿ ಕಿಱಿದಾಯ್ತು ಸಮ್ಮ ದಸೆ ಕೇವಲರಲ್ಲರವರ್ ದಿಟಕ್ಕೆ ಕಾರಣಪುರುಷರ್ ತ್ರಿಖಂಡ ಭರತೋರ್ವಿಗೆ ವಲ್ಲಭರಾಗದಿರ್ಪರೇ (ಪಂರಾಮಾ. ೬-೮) ; ಗಿರಿಶ–ಗಿರಿಸ, ದಶಾ–ದಸೆ (ಶಮದ. ೨೫೩ ಪ್ರಯೋ). ೨. ಅದೃಷ್ಟ; ಸೌಭಾಗ್ಯ; ಸಂದೈವ: ದಸೆ ಬರುವಾಗ್ಗೆ ಹಸೇ ಮೇಲೆ ರತ್ನ ಬಿತ್ತು (ಗಾದೆ). **ಜಸೆ :** ೧. ಜವ್ವನದ ಜಸೆ[ಪಾಠಾಂ. ದೆಸೆ]ಗದೇಂ ಬಂದನೋ ಪಾರಿಜಾತಾಂಕುರ ಮಿಂದ್ರೋದ್ಯಾನದೊಳ್ ಬಳ್ವಳಮೆ ಬಳೆದು ಕೈವಂದವೋಲ್ ತೀರ್ಥನಾಥಂ (ಅನಂಪು. ೬-೨೦). **ದೆಶೆ$_1$ :** ೧. ಹಿಂದೆ ಬಡತನದಲ್ಲಿದ್ದರೂ, ಕೆಲಸವಾದ ಈಗೆರಡು ವರ್ಷಗಳಿಂದ ಗುಂಡಪ್ಪನ ಸಂಸಾರ ಸ್ವಲ್ಪ ಅನುಕೂಲ ದೆಶೆಗೆ ಬಂದಿತ್ತು (ಕೂನಕೇ. ೧೭). ೨. ಅವನಿಗೀಗ ಒಳ್ಳೆಯ ದೆಶೆ; ಮುಟ್ಟಿದ್ದೆಲ್ಲ ಚಿನ್ನವಾಗುತ್ತಿದೆ (ರೂಢಿ). **ದೆಸೆ$_1$ :** ೧. ಅನುವದಿಸಿದಪುದು ನುಡಿ ನುಡಿದನಿತುಮನೆನೆ ತೊದಳ ತೊದಳ ದೆಸೆಯಿಲ್ಲೆನೆ ಮಾತಿನ ಪಸುಗೆ ಪಸುಗೆವಡೆದತ್ತೆನೆ ನುಡಿದಂ ಮಧುರಮೃದುಗಭೀರಧ್ವನಿಯಿಂ (ಆದಿಪು. ೨-೧೧) ; ಏವದ ಮುಳಿಸಿನ ಕಾರಣಮಾವುದೊ ನೀಂ ನನ್ನ ತಾಯ ತಂದೆಯ ದೆಸೆಯಂ ಭಾವಿಸದೆ ಕರ್ಣ ನುಡಿವಂತಾವುದು ಸಮಕಟ್ಟುನಿನಗಮರಿಕೇಸರಿಗಂ (ಪಂಪಭಾ. ೨-೮೨) ; ಉಸಿರೆ ಗಡ ಸೀಮೆ ಬಾಟಿಸ್ತಿಯ ದೆಸೆಯೊಳ್ ಗಾಳಿಯೆ ಗಡದುವುಮದಱಿಸಕಂ ಭಾವಿಸುವೊಡೆ ಚಲತೆ ಗಡಿನ್ನೇವೆಸರ್ಗೊಂಡಪುದಣ್ಣ ನರರ ಚಿರಜೀವಿತೆಯಂ (ಚಂದ್ರಪು. ೨-೩೨). ೨. ಮಾರಮಥನನ ನೆರೆಯ ಹೊಕ್ಕರು ಬಿಡುವೆನೇ ನಿನ್ನ ಚೋರವಿದ್ಯದಲೋಡು ನೋಡುವೆ ತೀರಿತೆಲವೋ ನಿನ್ನ ದೆಸೆಯೆಂದಾರಿ ಬಾಣವ ಸೆಳೆದೊಡಸುರನ ಮರಣ ಸೂಚಿಸಿತು (ಕಾಶಿರಾ. ೩೭.೭೦).

**ದೆಸೆ ಕೂಡು** = ಅದೃಷ್ಟವುಂಟಾಗು : ದೆಸೆ ಕೂಡಿ ಬಂದರೆ ಹಿಡಿದ ಕೆಲಸವೆಲ್ಲಾ ಜಯವಾಗುತ್ತದೆ (ರೂಢಿ). [ <ಪ್ರಾ. ದಸಾ./ಸಂ. ದಶಾ ]

**ದಸ್ಕತು** 'ದಸಕತ್ತು' ನೋ.

**ದಸ್ಕತುಮೊಹರ** 'ದಸಕತ್ತುಮೊಹರು' ನೋ.

**ದಸ್ಕತ್ತು** 'ದಸಕತ್ತು' ನೋ.

**ದಸ್ತಐವಜ** 'ದಸ್ತಾವೇಜು' ನೋ.

**ದಸ್ತಕತ್ತು** 'ದಸಕತ್ತು' ನೋ.

**ದಸ್ತಕು (ನಾ).** ೧. ರ ಹ ದಾ ರಿ ಯ ಂ ಪರವಾನಿಗೆ : (ಸ್ಯಾಂಡರ್). ೨. ಹಾಜರಿ ಆಜ್ಞೆ : ಕರೆ ಆಜ್ಞೆ : (ಸ್ಯಾಂಡರ್).

[ ←ಪಾರ. ಹಿಂ. ಮರಾ. ದಸ್ತಕ್ ]

**ದಸ್ತಗಿರಿ (ನಾ).** ಸೆರೆ ಹಿಡಿಯುವುದು; ಬಂಧನ; ಕೈದು: ನ್ಯಾಯಾಧೀಶರು ಕೋಪಗೊಂಡು ಬಸಪ್ಪನ ದಸ್ತಗಿರಿಗಾಗಿ ವಾರಂಟನ್ನು ಹೊರಡಿಸಿದರು (ಪಂಜಪಂ. ೨೦೪) ; ಅವನು ದಸ್ತಗಿರಿಯಾದಾಗ ಅವನ ಬಳಿ . . . ಒಟ್ಟು ಸಾವಿರದೆಂಟುನೂರು ರೂಪಾಯಿಗಳಿದ್ದುವು (ವೀರಯೋ. ೨೦) ; ನ್ಯಾಯಾಧೀಶರು ಯಾವ ತಪ್ಪು ಮಾಡಿದರೂ ಅವರನ್ನು ವೈಸರಾಯ್ ಅಪ್ಪಣೆ ಇಲ್ಲದೆ ದಸ್ತಗಿರಿ ಮಾಡಕೂಡದು (ಪ್ರವಾಇ. II, ೪೮೩) ; ದಸ್ತಗಿರಿಯಾಗಲು ಮನಸ್ಸನ್ನು ಸ್ಥಿರಮಾಡಿಕೊಂಡಿರುವಿಯಾ ? (ದೇವೀಚಾ. ೧೩೦).

[ ←ಪಾರ. ದಸ್ತಗಿರೀ ; ಮರಾ. ದಸ್ತಗೀರ್ ]

**ದಸ್ತರ್‌ಹಾನು (ನಾ).** (ಮುಸಲ್ಮಾನರು) ಊಟದ ತಟ್ಟೆಗಳನ್ನಿಡಲು ಹಾಸುವ ಬಟ್ಟೆ : 'ಹತ್ತುಜನ ಒಂದು ದಸ್ತರ್‌ಹಾನಿನ ಮೇಲೆ (ಊಟದ ಚಾಪೆ) ಕುಳಿತು ಊಟ ಮಾಡುತ್ತಾರೆ (ಭಾರದ. ೪೧೫).

[ ←ಹಿಂ. ದಸ್ತರ್‌ಖಾನ್; ಪಾರ. ದಸ್ತರ್‌ಖ್ವಾನ್ ]

**ದಸ್ತಾವೇಜು, ದಸ್ತಐವಜ, ದಸ್ತೇವಾಜು, ದಸ್ತೈವಜು, ದಸ್ತೈವೇಜು (ನಾ).** ೧. ಪ್ರಮಾಣಭೂತವಾದ ಕಾಗದ ಪತ್ರ ; ಒಪ್ಪಿ ಸಹಿ ಮಾಡಿರುವ ಪತ್ರ ; ದಾಖಲೆ ; ಕರಾರುಪತ್ರ : ಪ್ರಮುಖ ಭಕ್ತಾದಿಗಳನ್ನು ಕರೆಯಿಸಿ ವಿಲ್ ದಸ್ತಾವೇಜು ಬರೆಯಿಸಿ ರಿಜಿಸ್ಟರ್ ಮಾಡಿಸಿದರು (ಗುರುಚ. ೧೩) ; ಕೋರ್ಟಿನಿಂದ ಸಾದರಾಗುವ ಸಮನುಗಳ, ಡಿಕ್ರಿಗಳ, ದಸ್ತಾವೇಜುಗಳ ನಕಲುಗಳ ಮೇಲೆ ಒತ್ತುವುದಕ್ಕಾಗಿ ಉಪಯೋಗಿಸಬೇಕು (ಗ್ರಾಮೂಕ. ೧೯) ; ಹೊಲ ಮಾರೋಕೆ ನನಗೆ ಅಧಿಕಾರ ಕೊಟ್ಟಿದೀಂತ ಒಂದು ದಸ್ತಾವೇಜಾದರೂ ಆಗಬೇಕು (ಬನಶಂ. ೭೫) ; ಐದುಸಾವಿರಕ್ಕೆ

ಒಳ್ಳೆಯ ಆಸ್ತಿಯೊಂದು ಕೈಸೇರಿದ ಹಾಗೆಯೇ ಎಂದು ಅಡವು ದಸ್ತಾವೇಜು ಮಾಡಿಸಿಕೊಂಡ ವಾಸುದೇವಯ್ಯ ಸಂತೋಷಪಟ್ಟಿದ್ದರು (ತ್ಯಾಗಮು. ೬೧). ೨. ರಸೀದಿ ; ಸಲ್ಲಿಕೆಚೀಟಿ ; ಪಾವತಿ : (ಙ). **ದಸ್ತಐವಜ :** ೧. ಅಧಿಕಾರಿಗಳು ಸಹಿ ಮಾಡಿದ ಚೆಕ್ಕುಗಳನ್ನು ಇತರ ದಸ್ತಐವಜಗಳನ್ನು ಮಾನ್ಯ ಮಾಡಬೇಕಾದ ಬಗ್ಗೆ ಅಧಿಕಾರವನ್ನು ಕೊಟ್ಟಿದೆ (ಬ್ಯಾಂಕಕ್ಕೈ. ೫೩). **ದಸ್ತೇವಾಜು :** ೧. ಬ್ಯಾಂಕುಗಳ ಪಾಸ್‌ಬುಕ್ಕು ಎಲ್ಲ ದಸ್ತೇವಾಜು ಟ್ರಂಕಿನಲ್ಲಿ ಹಾಕು (ಅರರೋ. ೫೧). **ದಸ್ತೈವಜು:** ೧. ನಿಮ್ಮ ಖಾವಂದರು ಈ ಮೇರೆ ದಸ್ತೈವಜು ಬರೆದು ಕಳುಹಿಸಿದಂತೆ (ರಾಜೇಂದ್ರ. ೬೫) ; ಪಂಚಾಯತರು . . . ವಿಚಾರಣೆಮಾಡಿ ದಸ್ತೈವಜು ಮುಂತಾದ ದಾಖಲೆಯೇನಾದರೂ ಇದ್ದರೆ ತರಿಸಿ ನೋಡಿ ತೀರ್ಮಾನ ಹೇಳುತ್ತಿದ್ದರು (ಮಹಾಪಂ. II, ೩೫) ; ಎಲ್ಲರ ವಯಸ್ಸಿನ ದಸ್ತೈವಜು ನನ್ನಲ್ಲಿಲ್ಲ (ದೇವದಾ. ೩೩). **ದಸ್ತೈವೇಜು :** ೧. ಸ್ರಿಷ್ಟನೆ ದಸ್ತೈವೇಜೆಂದು ತಿಳಿದು ನಿಜವಾದ ದಸ್ತೈವೇಜೆಂದು ಉಪಯೋಗಿಸಿದರೂ . . . ಶಿಕ್ಷೆಗೆ ಗುರಿಯಾಗು ವರು (ಗ್ರಾವಾಕ. ೬೫).

[ ←ಪಾರ. ಹಿಂ. ದಸ್ತಾವೇಜ್ ; ಮರಾ. ದಸ್ತಾಯವಜ್, ದಸ್ತಾವೇಜ್, ದಸ್ತೈವಜ್ ]

**ದಸ್ತು, ದಸ್ತೆ,** (ನಾ). ೧. ಇಸ್ಪೀಟಿಂ ಆಟದಲ್ಲಿ ಆಟಗಾರರಿಗೆ ಹಂಚಿದ ನಾಲ್ಕು ಎಲೆಗಳಂ,–ಒಂದಂ ಕೈ : (ಙ). ೨. ಇಪ್ಪತ್ತನಾಲ್ಕು, ಬರೆಯಂವ ಹಾಳೆಗಳ ಕಟ್ಟು : ೨೪ ಕಾಗದಗಳು ಅಂದರೆ ೧ ದಸ್ತು ಅಥವಾ ಕೊಯರ (ಮುಂಬವ್ಯಾ. ೧೩೯). **ದಸ್ತೆ :** ೩. ಸೈನ್ಯದ ತಂಕಡಿ ; ದಳ : ಮಹಾಮರಜಾಖಾನನ ದಸ್ತೆಯುವರು ನೂರುಲ್ ಆಪರಖಾನನ ದಸ್ತೆಯುವರು (ರಾಜೇಂದ್ರ. ೨೪೫) ; ಸ್ವಲ್ಪ ದೂರದಲ್ಲಿ ಕುದುರೆಗಳ ಖುರಪುಟ ಧ್ವನಿಯು ಕೇಳಿಬಂತು. ಅದು ಆಂಗ್ಲೇಯರ ದಸ್ತೆಯುದಾಗಿದ್ದಿತು (ಝಾರಾಣಿ. ೪೬೫). [ ←ಪಾರ. ದಸ್ತಾ, ದಸ್ತ್ ; ಹಿಂ. ಮರಾ. ದಸ್ತಾ ]

**ದಸ್ತೂರ** 'ದಸ್ತೂರಿ' ನೋ.

**ದಸ್ತೂರಿ, ದಸ್ತೂರ, ದಸ್ತೂರಂ, ದಸ್ತೂರಂ** (ವಾ). ೧. ಪದ್ಧತಿ ; ವಾಡಿಕೆ; ರೀತಿ; ಕ್ರಮಂ: ಜಮಾಮರ್ದಿಯಿಂದಲೂ ನಮ್ಮ ಸತ್ಯದಿಂದಲೂ ವಾಜಬಿ ವಿಚಾರದಿಂದಲೂ ನಮ್ಮ ಸರಕಾರದ ದಸ್ತೂರಿಯಿಂದ ಆ ಶೀಮೆಯ ಕದೀಂ ಖಾವಂದರ ಹವಾಲೆ ಮಾಡಿ ಇದ್ದೇವೆ (ರಾಜೇಂದ್ರ. ೧೦೪). ೨. (ಸೇವಕರಂ ತವ್ಮು ಯಂಜಮಾನರಿಗಾಗಿ ಮಸ್ತುಗಳನ್ನು ಕೊಂಡಂ ಕೊಂಡಾಗ ವ್ಯಾಪಾರಿಗಳು) ವಾಡಿಕೆಯಾಗಿ ಕೊಡುವ ಮಾಮೂಲಂ. (ಮೈಗೆಜಿ. IV, ೬೬೭). **ದಸ್ತೂರ :** ೩. ಬರವಣಿಗೆ ; ಕೈಬರಹ : ನಮ್ಮ ಮಾಸ್ತರ ವೆಂಕಣ್ಣನ ಕಡಿಂದ ಎರಡು ಅರ್ಜಿ ಬರಿಸಿ ಕಳಸತೀನಿ, ಒಟ್ಟಿಗೆಲ್ಲಾ ದಸ್ತೂರ ಅವರ ಬರೀತಾರ (ಗ್ರಾಮಾಯು. ೩೩೬). **ದಸ್ತೂರು :** (ಙ). **ದಸ್ತೂರು :** ೧. ಆಚಾರ ವಿಚಾರ ವಿಚಾರಣೆ ಮಾಡುವಲ್ಲು ಯಾವರ್ರು ವಡವೆ ತೆಗೆದುಕೊಂಡಿದ್ದವರ ವಿಚಾರಣೆ ಮಾಡಿ ಬರಮಾಡಿಕೊಳ್ಳುವಲ್ಲು ನೀಉ ಅಡಿಸಡಿಗಳ ಮಾಡದಂತೆ ಸಾಬಕ್ಕೂ ದಸ್ತೂರ್ರು ಪ್ರಕಾರಕ್ಕೆ ಸರ[ಪ] ರಾಸು ನಡ್ಸಿಕೊಂಡು ಬರ್ರುವದು (ಮೈಆರಿ. ೧೯೩೦, ೪೩-೨೭ ; 1812).

[ ←ಪಾರ. ಹಿಂ. ದಸ್ತೂರೀ, ದಸ್ತೂರ್; ಮರಾ. ದಸ್ತೂರ್, ದಸ್ತೂರೀ ]

**ದಸ್ತೆ** 'ದಸ್ತು' ನೋ.

**ದಸ್ತೇವಾಜು** 'ದಸ್ತಾವೇಜಂ' ನೋ.

**ದಸ್ತೈವಜು** 'ದಸ್ತಾವೇಜು' ನೋ.

**ದಸ್ತೈವೇಜು** 'ದಸ್ತಾವೇಜಂ' ನೋ.

**ದಸ್ತೂರು** 'ದಸ್ತೂರಿ' ನೋ.

**ದಸ್ಯು** (ನಾ). ೧. ರಾಕ್ಷಸರಲ್ಲಿ ಒಂದಂ ವರ್ಗ : ಉತ್ತರಾಶಯುಕಿಹುದು ದೇವರು ಚಿತ್ತವಿಸು ಧ್ರುವಾಕೂಲ್ಯವೆನಿಪ್ಪ ಉತ್ತಮದ ಸುಕ್ಷೇತ್ರವಲ್ಲಿಹು ದಖಿಳ ದಸ್ಯುಗಳ (ಕಾಶಿರಾ. ೧೫-೬೭). ೨. ಅನಾರ್ಯ ಜನಾಂಗದವನಂ; ಅನಾರ್ಯ ; ಮ್ಲೇಚ್ಛ : ಮುಂದೆ ದಸ್ಯುಗಳೇಳುವನು ಕ್ಷಣದಿಂದ ಕಾಶ್ಮೀರಕರ ಸಾಧಿಸಿ ಬಂದು ದಶಮಂಡಲದ ಲೋಹಿತರನು ವಿಭಾಡಿಸಿದ (ಕುವ್ಯಾಸ. ೩-೨೭) ; ಅಲ್ಲಿದ್ದ ಜನರೆಲ್ಲರನ್ನೂ ಒಟ್ಟಿಗೆ ದಸ್ಯುಗಳೆಂಬುದಾಗಿ ಆರ್ಯರು ಕರೆದರು (ಭಾಇಪ್ರ. ೨೪). ೩. ಕಳ್ಳ; ಚೋರ: ಐಕಾಗಾರಿಕಃ, ತಸ್ಕರಃ, ದಸ್ಯುಃ . . . ಪಾರಿಪಂಥಿಕಃ, ಸ್ತೇನಃ–ಈ ೧೦ ಕಳ್ಳಂ" (ಹಲಾಯು. ೫೭-೧೮೩); ಮುನಿಯಿಂದೆ ಲಕ್ಷ್ಮಣ ರಾಮರರಿಯುತಿರೆ ಮುಂದಿರ್ದ ಮಾರ್ಗದ ಮಹಾರಣ್ಯಗಹನಮಂ . . . ದಸ್ಯು ಕೈರಾತ ರುಧಿರಾಶನಪ್ರಿಯತೆಯಂ (ಶ್ರೀರಾಮಾ. ೧೭೮-೭೦) ; ಆಳುಗಳು ಆ ವನದಲ್ಲಿದ್ದ ದಸ್ಯುಗಳ ವಶಕ್ಕೆ ಈ ಬ್ರಾಹ್ಮಣನನ್ನು ಒಪ್ಪಿಸಲಾಗಿ ಆ ಕಳ್ಳರು . . . ಇವನನ್ನು ನಾವು ಮುಟ್ಟುವವರಲ್ಲ ಎಂದು ಹೇಳಿದರು (ನೀತಿಚಿ. XII, ೧೫). ೪. ಹಗೆ; ವೈರಿ; ಶತ್ರು: "ವಿರೋಧಿ ದಸ್ಯು ವಿಪಕ್ಷಂ . . . ವಿದ್ವಿಷಂ ವಿದ್ವಿಷ್ಟಂ" (ವಸುಕೋ. ೯೯-೧೦). ೫. ಭ್ರಷ್ಟ; ನೀಚ ; ದಂಷ್ಟ. [ ಸಂ. ]

**ದಸ್ಯುದಾರಿ** (ನಾ). ನೇರವಲ್ಲದ ದಾರಿ,–ಮಾರ್ಗ : ಅದೇನೋ ಅಪ್ಪಟ ದಸ್ಯುದಾರಿಯೆ ಆಗಿತ್ತು (ಮಲೆಮ. ೭೭೨). [ ದಸ್ಯು + ದಾರಿ ]

**ದಸ್ಯುಶಿಶು** (ನಾ). ಅನಾರ್ಯರ ಮಗಂ : ನಡೆದು ನೋಡಲ್ಕೆ ಕಾಣಿಸಿತೊಂದು ದಸ್ಯುಶಿಶು (ಶ್ರೀರಾಮಾ. ೨೨-೫೭೮). [ ದಸ್ಯು + ಶಿಶು ]

**ದಸ್ರ** (ನಾ). ೧. ಅಶ್ವಿನೀ ದೇವತೆಗಳಲ್ಲಿ ಒಬ್ಬ ; ದೇವತೆಗಳ ವೈದ್ಯ : "ನಾಸತ್ಯಾ. ಅಶ್ವಿನಾ, ದಸ್ರಾ, ದೇವಚಿಕಿತ್ಸಕೌ – ಈ ೪ ದೇವರ ವೈದ್ಯರ್" (ಹಲಾಯು.೧೫-೮೪); "ದಸ್ರರಶ್ವಿನಿಯರಾ ದಿವಿವೈದ್ಯರು"(ಮಂಗರಾ. ೭-೨೩). ೨. ಅಶ್ವಿನೀ ನಕ್ಷತ್ರಗಳಂ ; **P** ಅಶ್ವಿನೀ ದೇವತೆಗಳು ಅವಳಿ ಜವಳಿ ದೇವತೆಗಳಂ. ಇವರಲ್ಲಿ ಒಬ್ಬನಿಗೆ 'ದಸ್ರ' ಎಂದೂ ಮತ್ತೊಬ್ಬನಿಗೆ 'ನಾಸತ್ಯ' ನೆಂದೂ ಬೇರೆಬೇರೆ ಹೆಸರಿದೆ. ಆದರೂ 'ಅಶ್ವಿನೀ' ಎಂಬುದನ್ನು ಇಬ್ಬರಿಗೂ ಅನ್ವಯಿಸುವಂತೆ, 'ದಸ್ರ' ಶಬ್ದವನ್ನು ಇಬ್ಬರಿಗೂ ಅನ್ವಯಿಸಿ ಹೇಳುತ್ತಾರೆ.

**ದಸ್ರಾತ್ಮಜರ್** = ಅಶ್ವಿನೀ ದೇವತೆಗಳ ಮಕ್ಕಳಂ ; ನಕುಲ–ಸಹದೇವರಂ : ಸೊಕಮಿರ್ಕಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತನಿಂದ್ರತನಯಂ ದಸ್ರಾತ್ಮಜರ್ ದಂಡ ಮುಷ್ಟಿಕರರ್ ಶಸ್ತ್ರವಿಡಂಬಮೇವುದವರ್ಗಂ (ಗದಾಯು. ೩-೩೪). [ ಸಂ. ]

**ದಸ್ಸಾಲಾ** (ನಾ). ಹತ್ತು ವರ್ಷಗಳ ಅವಧಿ ; ದಶಕ : ಪೂರ್ಣಯ್ಯನವರ ಕಾರ್ಕರ್ದಿಯಲ್ಲಿ ದಸ್ಸಾಲಾ ಸರಾಸರಿ ವರ್ಷವೊಂದಕ್ಕೆ ೮೬ಕ್ಕಿ ಲಕ್ಷ ರೂಪಾಯಿ ಎಲ್ಲಾ ಬಾಬುಗಳಿಂದಲೂ ಒಟ್ಟು ಹುಟ್ಟುವಳಿಯಾದಂತೆ ತಿಳಿದು ಬಂದಿದೆ (ಮಹಾಪಂ. II, ೩೨) ; ಖಾವಂದರವರ ದೌಲತ್ತಿನ ಕಾಲ ಮೊದಲನೆಯ ದಸ್ಸಾಲಾದಲ್ಲಿ ಜಮೀನಿನ ವರಮಾನ ವರ್ಷಕ್ಕೆ ಸರಾಸರಿ ೬೫ಕ್ಕಿ ಲಕ್ಷ [ ← ಪಾರ. ದಹಸಾಲ್ ]

**ದಸ್ಸಿವ** (ನಾ). ಹತ್ತನೆಯಂ ಒಂದು ಅಂಶ,–ಭಾಗ (?) : ಬಿಜಯಿತ ಗಾವುಣ್ಡನ ಮಗಂ ಅಮ್ಮಡಿಗಾವುಣ್ಡಂ ನೊಳಂಬೆಯ ಗ್ವಾಮ್ರ್ಗಣ್ಡನ ಭಾಗದ ದಸ್ಸಿವ ಭಾಗಂಗೊಣ್ಡು ಕೆಱೆಯ ಕಟ್ಟಿಸಿದಂ (ಮೈಆರಿ. ೧೯೩೦, ೪೩-೭ ;994). 'ದಸಕ' ಪರಾ. [ ? ]

**ದಹ₁** 'ದಸ್₂' ನೋ.

**ದಹ₂** 'ದಗಾ' ನೋ.

**ದಹಕಿ** (ನಾ). (?) : ರಾಣಿ ಸಾಹೇಬರು ಕೊಟ್ಟ ಕವಲಿನ ಮೇರೆಗೆ ನಮಗೆ ಅವರಿಗೆ ಬರುವದಲ್ಲಿ ದಹಕಿ ಬರುವಂತೆಯೂ . . . ದೈವಕ್ಕೆ ಪ್ರತಿಯಾಗಿ ದಯೆ ಮಾಡಿಸಬೇಕು (ಜಾಮುಪಂ. ೨೨೧). [ ? ]

**ದಹಕೋಟಿ, ದಾಕೋಟಿ** (ನಾ). ಹತ್ತುಕೋಟಿ ; ದಶಕೋಟಿ : ದಶ ಸಹಸ್ರಂ ಲಕ್ಷಮಾ ದಹಲಕ್ಷಕೋಟಿ ದಹಕೋಟಿ ಶತಕೋಟಿಯ

ರ್ಬುದ ನ್ಯರ್ಬುದಂ . . . ಇಂತು ಚವ್ವೀಸ ತಾಣವರ ಸಂಖ್ಯೆಯಕ್ಕುಂ (ಮಂಗರಾ. ೧೦೫-೧೨) ; ಲಕ್ಷ ದಹಲಕ್ಷಾ ಕೋಟಿ ದಹೆಕೋಟಿ ಶತಕೋಟಿ ಅರ್ಬುದಾ . . . ಇವು ೩೨ ವುಘಡಣೆ ಹೆಸರುಗಳೂ (ಭಾಸ್ಕರ. ೧೧-೬). **ದಾಕೋಟಿ :** ಉಗ್ಗಡಣೆ–ಏಕ್ಕಂ, ದಾಹಂ, ಶತಂ, ಸಾವಿರ, ದಾಸಾವಿರ, ಲಕ್ಷ, ದಾಲಕ್ಷ, ಕೋಟಿ, ದಾಕೋಟಿ, ಶತಕೋಟಿ . . . ಪರಿಮಿತ, ಮಹಾಪರಿಮಿತ. ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೮-೨೩).
[ ದಹ$_1$ (<ದಸ್$_2$) + ಕೋಟಿ$_1$ ]

**ದಹನ** (ನಾ). ೧. ಸುಡಂವಿಕೆ ; ಉರಿಸುವಿಕೆ : "ಭರ್ಜನಂ ದಹನಮೆನಲು ಸುಡುಹಂ" (ಮಂಗರಾ. ೧೪-೯) ; ಸುವರ್ಣಪಾಷಾಣಮೆಂತು ಪಿಂಡೀಬದ್ಧ ದಹನ ತಾಪನ ತಾಡನ ಕ್ರಿಯೆಗಳಿಂ ಶುದ್ಧಲೋಹಮಕ್ಕುಮಂತೆ ಭವ್ಯನುಂ ಮನುಷ್ಯಭವಕ್ಕೆ ವಂದಲ್ಲಿ ಯುಕ್ತ್ಯಾಚಾರರಪ್ಪಾಚಾರ್ಯರಿಂ ಪೊರ್ದಿ . . . ಶ್ರಾವಕನಪ್ಪುದು (ಜೀವಸಂ. ೪-೬). ೨. ದಿಕ್ಪಾಲಕರಲ್ಲಿ ಒಬ್ಬ ; ಅಗ್ನಿ: "ಕೃಶಾನುವಗ್ನಿ ದಹನಂ ಹವ್ಯಾಶನಂ ವಹ್ನಿ ವಾಯುಸಖಿಂ . . . ಧೂಮಧ್ವಜಂ ಪಾವಕಂ" (ವಸ್ತುಕೋ.೭-೪೯); ಆ ನಾಗರ ಖಿಂಡಂಗಳುಮಂ ನಾಗರಖಿಂಡಮುಮನಳುರ್ದು ಕೊಂಡಂ ದಹನಂ (ಪಂಪಭಾ. ೫-೮೯) ; ಸುರಪತಿ ದಹನಂ ಧರ್ಮಂ ನಿರುತಿ . . . ಎಂಬ ದಿಕ್ಪಾಳರುಮಂ ದಶದಿಶೆಯೊಳಿರಿಸಿ (ಚಂದ್ರಪು. ೧೨-೧೧೩). ೩. ಶವವನ್ನು ಸುಡುವುದು ; ಅಂತ್ಯಸಂಸ್ಕಾರ: ಪೊರಮಟ್ಟಳರಮನೆಯಿನಾ ಮುದುಕಿ, ಮಸಣದೊಳ್ ದಹನದುಃಖದೊಳಿರ್ದರಾರುಂ ತಿಳಿಯದಂತೆ (ಶ್ರೀರಾಮಾ. ೧೨೦-೨೬೯). ೪. ಒಂದು ನರಕ : ದಹನ, ಆಸ್ರಹ್ರದ, ತೀಕ್ಷ್ಣಾಯಸ್ತಂಭ, ಶಕುನಿಪೊಯಹ್ರದ, ಮಹಾವರ್ತಕವೆಂಬೈದು ಮಂತ್ರಿನರಕಂಗಳೊಡಗೂಡಿ (ವಿವೇಕ. ೦೯೨). [ ಸಂ. ]

**ದಹನಂಗೊಳಿಸು** (ಕ್ರಿ). ಸುಡಂ ; ಉರಿಸಂ : ನಳಿನಾಸ್ತ್ರನಮಳತರಕಳೇವರವ . . . ದಹನಂಗೊಳಿಸಿ ಭಸ್ಮೀಕೃತಂ ಗೆಯ್ಯಲು (ನವಮೋ. ೬-೫೧).
[ ದಹನ + ಕೊಳ್$_1$ + – ಇಸು$_3$ ]

**ದಹನಕರ್ಮ** (ನಾ). ಸುಡಂವ ಕೆಲಸ; ದಹಿಸುವ ಕಾರ್ಯ: ಅರಿಪುರತ್ರಯ ದಹನಕರ್ಮಸ್ಫುರಣವಸ್ಮತ್ಕಾರ್ಯವದು ಗೋಚರಿಸಿತಲ್ಲಿಂ ಮೇಲಣಂಚಿ ತಾನುಚಿತ ಕೃತ್ಯವನು ಕರುಣಿ ನೀನೆ ಬಲ್ಲೆ (ಕುವ್ಯಾಕ. ೭-೪೪).
[ ದಹನ + ಕರ್ಮ ]

**ದಹನಕುಂಡ** (ನಾ). ಅಗ್ನಿಕುಂಡ: "ದಹನಕುಂಡ: ದಾಹಕ" (Incinerator. ಇಂಳನಿ). [ ದಹನ + ಕುಂಡ$_1$ ]

**ದಹನಕ್ರಿಯೆ** (ನಾ). (ಶವವನ್ನು) ಸುಡಂವ ಕ್ರಿಯೆ: ಜಲದಾನಕ್ರಿಯೆಯಂ ದೃಗ್ಜಲದಿಂ ಕೋಪಾಗ್ನಿಯಿಂದೆ ದಹನಕ್ರಿಯೆಯಂ ಕೆಳೆಯಂಗೆ ಮಾಡಿದಯ್ (ಗದಾಯು. ೫-೩೨) ; ದಹನಕ್ರಿಯೆ ಮುಗಿಸಿಕೊಂಡು ಬರುವಾಗ ಹೊತ್ತು ಮೀರಿತ್ತು (ರೂಢಿ). [ ದಹನ + ಕ್ರಿಯೆ ]

**ದಹನಜಿಹ್ವಾಂತಕ** (ನಾ). ದಕ್ಷನ ಯಂಜ್ಞಾಗ್ನಿಜ್ವಾಲೆಯನ್ನು ನಾಶಮಾಡಿದವನು ಶಿವ; (?): ಗಹನ ದಹನದೊಳಹಿತರಿಕ್ಕಲು ದಹನ ವಾಜಿತು ದಹಿಸಲಮ್ಮದೆ ದಹನಜಿಹ್ವಾಂತಕಶರಣನು ದಹನವೇಗುವುದು (ಬಸವು. ೪೯-೪೦). [ P ಇದು 'ದಹನಜಿಹ್ವಾಂಬಕ' ಎಂದಿರಬಹುದೇ ? ]

**ದಹನತಂತ್ರ** (ನಾ). ತಾಂತ್ರಿಕ ಸಿದ್ಧಿಮಂತ್ರಗಳಲ್ಲಿ ಒಂದು ; ತಂತ್ರಶಾಸ್ತ್ರದಲ್ಲಿ ಸಿದ್ಧಿಯನ್ನುಂಟುಮಾಡುವ ಮಂತ್ರಗಳಲ್ಲಿ ಒಂದು : ಶಾಬರ ತಂತ್ರ, ಶಾಕಿನೀತಂತ್ರ, ಡಾಕಿನೀತಂತ್ರ ... ದಹನತಂತ್ರ, ದರ್ಶನತಂತ್ರ, ಖನನತಂತ್ರ, ಬಂಧನತಂತ್ರ, ವಚನತಂತ್ರಾದಿ ತಾಂತ್ರಿಕ ಸಿದ್ಧಿಮಂತ್ರಂಗಳಂ (ವಿವೇಕ. ೮೧). [ ದಹನ + ತಂತ್ರ ]

**ದಹನಧರ್ಮ** (ನಾ). ಸುಡಂವ ಸ್ವಭಾವದವನು ; ಅಗ್ನಿ. 'ದಹನಧರ್ಮಾಂಬಕ' ಪರಾ. [ ದಹನ + ಧರ್ಮ ]

**ದಹನಧರ್ಮಾಂಬಕ** (ನಾ). ಸುಡಂವ ಕಣ್ಣು ; ಅಗ್ನಿನೇತ್ರ : ಘರ್ಮಾಂಶುಕಶತಕೋಟಿ ಸುಪ್ರಕಾಶನು ದಹನಧರ್ಮಾಂಬಕವ ತೆರೆವ ಸಮಯ ತಪಸಿಗೆ ಹಿಂಸೆಕರ್ಮ ತೆರವಲ್ಲೆಂದು . . . ಬಿಡಿಸದಾದಿರಿ ಯಕ್ಕಟಾ (ನವಮೋ. ೭-೨೬). [ ದಹನಧರ್ಮ + ಅಂಬಕ ]

**ದಹನಲೋಚನ** (ನಾ). ಅಗ್ನಿಯೇ ಕಣ್ಣಾಗಿ ಉಳ್ಳವನು ; ಶಿವ : ಅಹುದೆ ಇದಕೇನಾಯ್ತುವಂಗಾ ದಹನಲೋಚನನಡ್ಡಮೇ ಆಗ್ರಹಿಸಿಕೊಂಡಡೆ ಕೊಳಲಿ ಎನ್ನಧಿಕಾರವಂ ರುದ್ರ (ಬಸವು. ೪೦-೨೭).
[ ದಹನ + ಲೋಚನ ]

**ದಹನಸಂಸ್ಕಾರ** (ನಾ). ಸತ್ತವರನ್ನು ಬೆಂಕಿಯಿಂದ ಸುಡಂವ ಕರ್ಮ.
[ ದಹನ + ಸಂಸ್ಕಾರ ]

**ದಹನಾಕ್ರಾಂತ** (ಗುಂ). ೧. ಉರಿ ತಗುಲಿದ ; ಬೆಂಕಿಯಿಂದ ಆವರಿಸಿದ. (ನಾ). ೨. ಉರಿ ತಗುಲಿದುದು; ಬೆಂಕಿಯಿಂದ ಆವರಿಸಿದುದು : ಅಹಹಾ ! ನೋಡ ರಹಸ್ಯದೊಳ್ ಬಳಕಿವೆತ್ತೀ ಚಿತ್ರದಭ್ಯಾಸದಿಂ ದಹನಾಕ್ರಾಂತಮೆನಿಪ್ಪ ಮಂದಿರದವೋಲ್ ಕಾಣ್ಬಂ ಜನಾಕೀರ್ಣಮಾಂ (ಶಾಕುಂತ. ೬೪-೧೧೦). [ ದಹನ + ಆಕ್ರಾಂತ ]

**ದಹನಾರ್ಚಿ** (ನಾ). ಅಗ್ನಿಯ ಜ್ವಾಲೆ; ಉರಿಯ ನಾಲಗೆ : ಆಕಾಶಸ್ಫಟಿಕಾಂತರಿತ ದಹನಾರ್ಚಿಯಂತಾನುಮಚ್ಛಸಲಿಲವ್ಯವಹಿತಪದ್ಮರಾಗಮಣಿಯಂತಾನುಂ ತನ್ನ ಬೆಳಗೆ ಬೆಳಗಾಗೆ ಶುದ್ಧ ಗರ್ಭಾವಾಸದೊಳ್ ಜಿನಾರ್ಭಕಂ ಬಳೆಯೆ (ಶಾಂತಿಪು. ೯-೨೧); ಪತಿಯೊಡನೆನ್ನ ತಂಗೆ ದಹನಾರ್ಚಿಯೊಳೊಂದೆ ಮುಹೂರ್ತದೊಳ್ ದಿವೋದಿತತನುವಾದಳಿಂ ಪಿರಿಯನಪ್ಪ ದೞಿಂ ಪಿರಿದಪ್ಪ ದಾರುಣವ್ರತ ದಹನಾರ್ಚಿಯಿಂದನುದಿನಂ ತನುವಂ ತನುಮಾಡುತಿರ್ಪೆಂ (ಅಜಿಪು. ೧-೪೯). [ ದಹನ + ಅರ್ಚಿ ]

**ದಹನಾಶೆ** (ನಾ). ಆಗ್ನೇಯ ದಿಕ್ಕು : ಅಹಿಮಕರಂ ಪೊಡೆಯಿಸುವಂ ದಹನಾಶೆಗೆ ರಥಮನರುಣನಿಂ ದಿನಮುಖದೊಳ್ (ಲೀಲಾವ. ೯-೬).
[ ಸಂ. ದಹನಾಶಾ ]

**ದಹನೋಪಲ, ದಹನೋಪಳ** (ನಾ). ಸೂರ್ಯಕಾಂತಶಿಲೆ ; ಸ್ಫಟಿಕಶಿಲೆ. **ದಹನೋಪಳ :** "ಸ್ಫಟಿಕಃ, ಸೂರ್ಯಕಾಂತಃ,...ದಹನೋಪಳ ಈ ೪ ಸ್ಫಟಿಕಂ" (ಹಲಾಯು. ೨೯-೨೨). [ ದಹನ + ಉಪಲ ]

**ದಹನೋಪಳ** 'ದಹನೋಪಲ' ನೋ.

**ದಹರ** (ಗುಂ). ೧. ಸೂಕ್ಷ್ಮವಾದ. 'ದಹರಾಕಾಶ' ಪರಾ. (ನಾ). ೨. [ಯೋಗ] ಹೃದಯದಲ್ಲಿರುವ ಸೂಕ್ಷ್ಮವಾದ ಆಕಾಶ ; ಹೃದಯಾಕಾಶ : ಕೇಳು ದಹರದ ಕಮಲದಿಳೆಯಾದ್ಯಷ್ಟಪಮಾತೃಕೆಯಾ ಶೀಲವಿಡಿದು ಹಕಾರ ಮೊದಲಾ ಮೇಲಿಹ ಸಕಾರಾಂತರೂಪಂದಾಳಿ ತೋರೊದಪ್ಪದಳಗಳ ಕೀಲು ತಿಳಿಯೆಂದ (ಗಗತಾ. ೨೦-೬೭). [ ಸಂ. ]

**ದಹರಾಕಾಶ** (ನಾ). ಸೂಕ್ಷ್ಮವಾದ ಹೃದಯಾಕಾಶ : ಹೃದಯದೆಂಗುಷ್ಠಮಾತ್ರದ ದಹರಾಕಾಶ ಪದಮಧ್ಯದೆಡೆಯಲ್ಲಿ ಚಲಿಸದೆ (ಪರಬೋ. ೫-೧೧-೩) ; ಅರಿಯು ದಹರಾಕಾಶಲಕ್ಷಣ ನೆರಳ ತೈಲದಿ ನೋಡಿ ಮೇಲಿನಲಿರುವ ಮತ್ಸ್ಯವನೆಚ್ಚನರ್ಜುನ ಅದರ ತೆರನಂತೆ ತಿರುಹಿ ದೃಷ್ಟಿಯು ತನ್ನಲೇ ತಾ ನಿಲಿಸಿ ಅರ್ಥಾಕ್ಷಿಂದ ತಾನೆಯು ಗುರಿಯು ಲಕ್ಷಿಸಿಯಿಹುದೆ ದಹರಾಕಾಶ ಲಕ್ಷ್ಯಂದ (ಜ್ಞಾನಸಿಂ. ೨೦-೩); ದಹರಾಕಾಶದಲ್ಲಿ ಬೆಳಗುತ್ತಿರುವ ಜ್ಯೋತಿರ್ಲಿಂಗದ ಸಾಕ್ಷಾತ್ಕಾರವಾಗುವುದು (ಭಾರದ. ೨೫೧).
[ ದಹರ + ಆಕಾಶ ]

**ದಹರೋಪಾಸನೆ** (ನಾ). ದಹರಾಕಾಶದಲ್ಲಿರುವ ಸೂಕ್ಷ್ಮ ವಸ್ತುವಿನ ಅಂದರೆ ಪರಮಾತ್ಮನ ಉಪಾಸನೆ : ಛಾಂದೋಗ್ಯೋಪನಿಷತ್ತು . . . ಇದರಲ್ಲಿ . . . ದಹರೋಪಾಸನೆ, ಇಂದ್ರ ವಿರೋಚನರ ಉಪಾಖ್ಯಾನ ಮೊದಲಾದ ವಿಷಯಗಳಿವೆ (ಭಾರದ. ೩೮). [ ದಹರ + ಉಪಾಸನೆ ]

**ದಹಲಕ್ಷ, ದಾಲಕ್ಷ** (ನಾ). ಹತ್ತು ಲಕ್ಷ : "ಏಕಂ ದಹಂ ಶತಂ ಸಹಸ್ರಂ ದಶಸಹಸ್ರಂ ಲಕ್ಷಮಾ ದಹಲಕ್ಷ ಕೋಟಿ ದಹಕೋಟಿ ಶತಕೋಟಿಯಾರ್ಬುದನ್ಯರ್ಬುದಂ ... ಇಂತು ಚಪ್ಪೀಸ ತಾಣವರ ಸಂಖ್ಯೆಯಕ್ಕುಂ" (ಮಂಗರಾ. ೧೦೫-೧೨) ; ದಾಸಾವಿರ ಲಕ್ಷ ದಹಲಕ್ಷಾ ಕೋಟಿ ದಹಕೋಟಿ . . . ಇವು ೩೨ ವುಘಡಣೆ ಹಸರುಗಳೂ (ಭಾಸ್ಕರ. ೧೧-೬) ; ಇದನ್ನು ಇಪ್ಪತ್ತು ದಹಲಕ್ಷ ಅರ್ಹತರು ಕಡೆದರೆಂದು ಹೇಳುತ್ತಾರೆ (ಪ್ರವಾಇ. I, ೨೫೨). **ದಾಲಕ್ಷ** : ಏಕ್ಕಂ, ದಾಹಂ ... ಲಕ್ಷ, ದಾಲಕ್ಷ . . . ಪರಿಮಿತ, ಮಹಾ ಪರಿಮಿತ ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೮-೨೫).

[ ದಹ$_1$ (<ದಸ$_2$) + ಲಕ್ಷ ]

**ದಹಳೆ** (ನಾ). ಒಂದು ದೇಶದ ಹೆಸರು ; "ಚೇದಿರಾಜ್ಯ" (ಶಾಪಮಂ ೨೬೦ ಟಿಪ್ಪಣಿ) : ಪೊಗೆಯುತ್ತಿರ್ದ್ದ್ಪಪ್ಪದಿನ್ನುಂ ದಹಳೆ ಹಿಮವನಗಾರಣ್ಯಮಂ ಲಾಳನಿನ್ನುಂ ಪುಗಲೆನ್ನಿದ್ದರ್ಪ್ಪನಿನ್ನುಂ ನೆಲಸದೆ ತಿವ್ವಳಂ ಲಂಕೆಯಿಂ ತೆಂಕಲೋಡಲ್ ಬಗೆಯುತ್ತಿರ್ದ್ದರ್ಪ್ಪನ್ . . . ಎಂ ಬಲ್ಲಿದನೊ ಚಕಿತವಿದ್ವಿಷ್ಟ ನೆಂಬೀ ನೊಳಂಬಂ (ಪ್ರಾಲಿರಿ. ೧೮೨೮, ೬೫-೩೩ ; 1024 ?) ; (ಎಕ. VII, ಶಿಕಾರಿ. ೨೯೭-೮ ; 1080 ನೋ.) 'ಡಹಾಳ' ಪರಾ. [ ? ]

**ದಹಿಕ** (ಗು). ದೇಹಸಂಬಂಧವಾದ; ದೈಹಿಕ : ದಹಿಕ ದೈಶಿಕ ಕಾಲಿಕತ್ರಯ ಗಹನ ಕರ್ಮಗಳುಂಟು ಇದರೊಳು ವಿಹಿತ ಕರ್ಮಗಳರಿತು ನಿಷ್ಕಾಮಕನು ನೀನಾಗಿ (ಹರಾರ. ೯-೪).

[ P ಇಲ್ಲಿ 'ದೈಹಿಕ' ಎಂಬುದನ್ನು ಛಂದಸ್ಸಿಗಾಗಿ 'ದಹಿಕ' ಎಂದು ಮಾಡಿಕೊಂಡಿರಬಹುದು ]

**ದಹಿಸು** (ಕ್ರಿ). ೧. ಸುಡು ; ಉರಿಸು : ನಿನ್ನಂ . . . ದಹಿಸಲಿಲ್ಲೇತರ್ಕೆ ತಾನಗ್ನಿ ಪೇಟಿಲೆ ಪಾಪಾತ್ಮನೆ (ಕಾದಂಬು. ೫೭೪); ಕಡೆಗಾಲದೊಳು ಜಗವ ಮೊಗೆದು ದಹಿಸುವ ನಡುಗಣ್ಣ ಬೆಂಕಿಯಿಂದೊಗೆದು ನೆಗೆದೆಯ್ದ ಘುಡು ಘುಡಿಸಿ ವೀರೇಶ್ವರಂ ನೆರೆದ ದೇವರ ಹಿಂಡನಂಡಲೆದು ಮೊದಲಿಗರನು ಹುಡಿಗುಟ್ಟಿ (ಹರಿಶಾ. ೧೦-೪೪) ; ಅಹುದು ಸಂಜಯ ಶೋಕಶಿಖಿ ನೆಟ್ಟಿ ದಹಿಸಿತೆನ್ನನು ಬೆಂದ ವಸ್ತುಗೆ ದಹನವುಂಟೇ ಎಂಬ ನಾಣ್ನುಡಿ ನಮ್ಮೊಳಾದುದಲಾ (ಕುಮ್ವಾಶ. ೦-೬) ; ತನುಗಾತ್ರಿ ನಿನ್ನ ತಪಿಪಂ ಮನಸಿಜನಾವೆಗಮುಮೆನ್ನನಾದೊಡೆ ದಹಿಪಂ (ಶಾಕುಂತ. ೩೮-೬೮). ೨. ಉರಿದುಹೋಗು ; ಸುಟ್ಟುಹೋಗು: ನನ್ನ ಶತ್ರುಗಳು ಅಸೂಯಾಗ್ನಿಯಿಂದ ದಹಿಸಿಹೋಗುವವರು (ಹಂಗಾಳ್. ೬-೧೫). [ ದಹನ + – ಇಸು$_3$ ]

**ದಹ್ಯ** (ಗು). ಸುಡಬಹುದಾದ ; ಉರಿಸಬಹುದಾದ : ಅಸಂಶಯ ದಹ್ಯ ದಗ್ಧಮೆಕ್ಕು (ನಾನಾರ. ೧೩೪). [ ಸಂ. ]

**ದಳ್** (ನಾ). ಒಂದು ಅನುಕರಣ ಶಬ್ದ. 'ದಳ್ಪಿಸು', 'ದಳ್ಪುರಿ$_1$', 'ದಳ್ಪೆನ್' ಪರಾ.

**ದಳ$_1$, ದಡ$_4$** (ನಾ). ೧. ದಟ್ಟವಾದುದು ; ಸಾಂದ್ರವಾದುದು : ಘುಳುಘುಳಿಸುತೆಳ್ವ ಬೊಬ್ಬುಳಿಗಳಿಂ . . . ದಳದ ಪವಳದ ನಿಮಿರ್ದ ಕುಡಿಗಳಿಂ ತಡಿಗಳಿಂದಾ ಕಡಲ್ಕಣ್ಗೆಸೆದುದು (ಕ್ಷಮಿಭಾ. ೬-೩). **ದಡ$_4$** : ೨. ದೃಢತೆ : ನೀನು . . . ನಾಲ್ಕು ದಿನ ಹೆಟ್ಟಿಗೆ ಗಂಜಿ ಬಿದ್ದರೆ ದಡವಾಗುತ್ತಿದ್ದಿ (ರಾಜಾದೇ. ೬೩).

**ದಳಮಾಗು, ದಳವಾಗು** = ದಟ್ಟೈಸು ; ಸಾಂದ್ರವಾಗು : ಮದನ ಧನುರ್ಧರಂಗೆ ದೊಣೆಯಾದ ತಳಿರ್ ಸರಲಾದ ಪೂ ಬಸಂತದ ಮೊದಲಂಗ ಜಂಗೆ ದಳಮಾದೆಲೆ ಮುದ್ಗರಮಾದ ಕೆಯ್ ಬಸಂತದ ನಡು . . . ಅಗೆ ಸುಗ್ಗಿಯೆ ಮನೋಜನ ಕೆಯ್ಪಿಡಿಯಲ್ತೆ ಮಾಮರಂ (ಶಾಂತಿಪು. ೯-೬೫) ; ಕೆಂದಳದೊಂದು ಕೆಂಪು ಕಿಸುಸಂಜೆಯನಂಜಿಸೆ ಕರ್ಪುವೆತ್ತ ಕೇಸಂ ದಳವಾದ ಕಟ್ಟಿಲೆಯನೇಳಿಸೆ (ಕಬ್ಬಿಗಕಾ. ೧೩೦). [ ?./ತಮಿ. ತಳ ; ತೆಲು. ದಳ ]

**ದಳ$_2$** 'ದಲ' ನೋ.

**ದಳಂ** (ನಾ). ಒಂದು ಅನುಕರಣ ಶಬ್ದ : ಶ್ರೀ ಸೋಮನಾಥನ ಕುಮಾರ ನಾದಯ್ಯನೆಸಮಾಸುರದ ಮಹಿಮೆ ಮನದೊಳ್ಕಾಂಟಿ ಬೇರ್ವರಿದು ಕೇಸ[ಸು]ರಿಯವೊಲು ದಳಂ[ಪಾಠಾಂ. ಳಂ]ದಳ್ಳಿ[ಪಾಠಾಂ. ದಳೆಂದಳಿ] ಬಿರಿದು ಹೃದಯಮಂ ಸುಡೆ ಬೆಂದು ಕಂದಿ ನೊಂದು (ಸೋಮಚ. ೫-೧).

**ದಳಂಗಟ್ಟು** (ಕ್ರಿ). (?) : ಮಸಗಿದ ಕಡಲ ತೆರೆಗಳಂತೆ ತರತರದಿಂ ದಳಂಗಟ್ಟಿ ತೋರ್ಪ ತುರಗದಬಮಂ ಮುಂದಿಟ್ಟುಕೊಂಡು (ವರ್ಧಮಾ. ೪-೪೨ ವ); "ಸಾಲಾಗಿ ನಿಲ್ಲು" (?) (ವರ್ಧಮಾ. ಕೋಶ) :

[ ದಳ$_2$ (= ದಲ) + ಕಟ್ಟು$_1$ ]

**ದಳಂಗೊಳಿಸು** (ಕ್ರಿ). ಹೆಚ್ಚುಮಾಡು ; ಅಧಿಕಗೊಳಿಸು : ಸೌರಭಮಂ ದಳಂಗೊಳಿಸೆ ಬಣ್ಣದ ನುಣ್ಣನೆ ರಾತ್ರಿ ಮಾಳಿಕಾಕಾರೆ ತೊಡರ್ಚಿ ನಾರುಗಿದ ತಿಂಗಳ ತಣ್ಣದಿರಂ ನಮೇರು ಮಂದಾರದರಲ್ಗಳಂ ತನಗೆ ನೀಡಿದಳೆಂದೊಲ ವಿಂದೆ ನೋಡಿದಳ್ . . . ವಾರಿಜ ವಕ್ತ್ರೆ ಕೈರವ ವಿಮೋಚನೆ ಮಾಲೆಯಂ (ಅನಂಪು. ೪-೧೧೪). [ ದಳ$_1$ + ಕೊಳ್$^1$$_1$ + –ಇಸು$_3$ ]

**ದಳಂಬಡೆ** (ಕ್ರಿ). ೧. ದಪ್ಪವಾಗು ; ಸಾಂದ್ರವಾಗು : (೩). ೨. ಹೆಚ್ಚು ; ವೃದ್ಧಿಯಾಗು : ಕಳ್ಳೊಳಮುಮರ್ದಿನೊಳಂ ಪುಟ್ಟಿದ ಪೆಂಡಿರಂತೆ ಸೊಗಯಿಸುವ ಪಲರುಮೊಳ್ಪೆಂಡಿರೊಂದೆಡೆಯೊಳಿರ್ದು ಕಾಮದೇವನೆಂಬ ಬಳಮರ್ದುರ್ಕಾಬಿನ ಮಾಡಿದ ಮರ್ದಿನಂತೆ ಬಳೆದು ದಳಂಬಡೆದು ಮೂನೂಱುಱುವತ್ತು ಜಾತಿಯ ಕಳ್ಗಳಂ ಮುಂದಿಟ್ಟು ಮಧುಮಂತ್ರದಿಂ ಮಧುದೇವತೆಗಳನರ್ಚಿಸಿ (ಪಂಪಭಾ. ೪-೮೭ ವ); "ದಳಂಬಡೆದಂ,–ವೃದ್ಧಿಯಾಗಿ" (ಪಂಪದೀ. ೧೬೭); "ಗರಿಗಟ್ಟಿಕೊಳ್ಳು, ಬಲವಾಗಂ,ಸಾರವುಳ್ಳುದಾಗು" (ಪ್ರಭಣ್ಣ) ; ಬಳವದಪಾರ ವೇದರುತಿ ಗೇಯರವಂ ಪಟಹಸ್ವನಂ ಪುರೀ ಕಳಕಳದಿಂದಳಂ ಬಡೆದು . . . ದಿಗಿಭವ್ರಜ ಬೃಂಹಿತ ಭೂರಿನಾದದಿಂ ಜಳಧಿಯನಾಂತು ಘೂರ್ಣಿಪಿನವಾ 'ಗೃಹಮಂ ಪುಗುತಂದನಚ್ಯುತಂ (ಜಗವಿ. ೧೦-೧೫೦). 'ದಳವೇಱು$_1$' ಪರಾ. [ ದಳ$_1$ + ಪಡೆ$_1$ ]

**ದಳಗೆ** 'ದಳಿಗೆ$_1$' ನೋ.

**ದಳತೆರೆ** 'ದಳದೆರೆ' ನೋ.

**ದಳತ್ಕೈರವ** 'ದಲತ್ಕೈರವ' ನೋ.

**ದಳತ್ಕೋಕನದ** (ನಾ). ಅರಳುತ್ತಿರುವ ತಾವರೆ ; ವಿಕಸಿಸುವ ಕಮಲ. 'ದಳತ್ಕೋಕನದ ಜಠರ' ಪರಾ.

[ ಸಂ. ದಲತ್ಕೋಕನದ ]

**ದಳತ್ಕೋಕನದಜಠರ** (ನಾ). ಕಮಲವನ್ನು ನಾಭಿಯಲ್ಲಿ ಉಳ್ಳವನು ; ಕಮಲನಾಭ ; ವಿಷ್ಣು : ದಳತ್ಕೋಕನದಜಠರನಂ ನಿವ್ಯಾರ್ಕುಳಮಿಂತೆಂದು ಧರ್ಮತನಯಂ ನುಡಿದಂ (ಪಂಪಭಾ. ೯-೦೪).

[ ಸಂ. ದಲತ್ಕೋಕನದಜಠರ ]

**ದಳತ್ಪದ್ಮ** (ನಾ). ಅರಳುತ್ತಿರುವ ಕಮಲ,–ತಾವರೆ : ವಿಧುವಿಂದಂ ವಿಬುಧೋತ್ಕರ ಪ್ರಿಯಕರಂ . . . ದಳತ್ಪದದಿಂದಧಿಕ ಶ್ರೀನಿಳಯಂ ಸುಪುತ್ರನೊಗೆತರ್ಕುಂ ನಿಮ್ಮೊಳುರ್ವೀಶ್ವರಾ (ಪುಷ್ಪಪು. ೩-೧೨೨).

[ ಸಂ. ದಲತ್ಪದ್ಮ ]

**ದಳದಳ** (ನಾ). ಒಂದು ಅನುಕರಣ ಶಬ್ದ : ಆ ಹುಡುಗಿ ದುಃಖದಿಂದ ದಳದಳ ಕಣ್ಣೀರು ಸುರಿಸುತ್ತಾ ಬಂದಳು (ರೂಢಿ). 'ದಳದಳನೆ', 'ದಳದಳಿಸು' ಪರಾ.

**ದಳದಳನೆ** (ಅ). ದಳದಳ ಎಂದು ; ಸರಸರನೆ ; ವೇಗವಾಗಿ : ಆ ಅಯ್ದುಕ್ಕಿಯ ಮಾರಿತಂದೆಗಳು ಸಂತೋಷಚಿತ್ತರಾಗಿ ದಳದಳನೆ ಬಸವೇಶ್ವರನ ಅಂಗಳಕ್ಕೆ ಬಂದು (ಶೂನ್ಯಸಂ. ೨೬೨) ; ದಳದಳನಿಳಿತಹ ಸುಧೆಯನು ವಿದ್ಯುದ್ವಳಗವ ತೇಜಃಪುಂಜವ . . . ಮರೆಯದಿರೆಂದನು ವೇಶಿಕನು (ಯೋಗಾಂವಿ. ೪-೨೨); ಕಂಗಳಿಂದೋಡುತಿರೆ ದಳದಳನೆ ಹರ್ಷಾಶ್ರು

ವಾರಿಪೂರ (ರೇ ವ ಣ. ೭-೧೬) ; ಸರ್ವಾಂಗದೊಳ್ಪುಳಕದಗೆಯೊಗೆಯೆ ದಳದಳನೆ ಹರುಷಾಂಬುಧಾರಾಪ್ರವಾಹ ಕಂಗಳಿಂದಿಳಿವನ್ನಂ (ಮದೇಪು. ೧-೬) ; ಕಣ್ಣೀರು ದ ಳ ದ ಳ ನೆ ಇಳಿಯುಹತ್ತಿದವು (ಚಂದುಟಿ. ೩೦). 'ದಡಬಡನೆ', 'ಧಳಧಳನೆ' ಪರಾ. [ ದಳದಳ + – ಅನೆ$_1$ ]

**ದಳದಳಿತ** (ಗು). ದಳಬಿರಿದ ; ಅರಳಿದ ; ವಿಕಸಿತವಾದ : ವಳ್ಳಿಯ ಕತ್ತಲೆವಾಂಬನ ದಳದಳಿತ ಸಂಜೆಮಲ್ಲಿಗಳ ಪೂವೆಂಬನ ಬೆಳದಿಂಗಳಿಂದೆನೆ ಕಣ್ಬುಯಲ ಚಲುವನೀವುದರಸಿಯಕೆಚ್ಚೆಯೊಳು (ಮ್ಮಳಿ. ೧೯೩೮, ೯-೩೦ ; 1184). [ ಸಂ. ದಲದಲಿತ ]

**ದಳದಳಿಸು,** ದಳ್ದಳಿಸು (ಕ್ರಿ). ೧. ದಳ ದಳನೆ ಸುರಿ ; ಧಾರಾಕಾರವಾಗಿ ಹರಿ : ಎನ್ನ ತನಯುನನುಯ್ದಂ ರಾಕ್ಷಸನೆಂದಟ್ಟಳ್ ಧವಳೇಕ್ಷಣೆ ದಳದಳಿಸಿ ಸುರಿಯೆ ಬಾಷ್ಪಜಲಂಗಳ್ (ಪಂರಾಮಾ. ೮-೨೩). ೨. ಹೆಚ್ಚಾಗಿ ಹೊಳೆ; ತಳ ತಳಿಸಂ; ನಳನಳಿಸು: ತಳ್ತ ಮಾಧವೀಲತೆಯ ಜೊಂಪದಿನೊಳಗೆ ದಳದಳಿಸಿ ಪೊಳೆವೆಳದಳಿರ ಗೊಂದಣದಿನೊಂದಿ ಸಂದಣಿಸಿ ಸೌಂದರವಾದ ಮಾಕಂದ ಭೂರುಹಸಂದೋಹದೊಳಗೆ ಸುತ್ತಿ ಪತ್ತಿದ ತಳ್ತಶೋಕಾನೋಕಹಾನೀಕ ದೋಲಗಶಾಲೆಯಂ . . . ಪೊಕ್ಕು (ನೇಮಿಪು. ೧೩-೨೦ ವ) ; ಎಳದಳಿರ ತುಱುಗಲೊಳ್ ನೆಱೆ ದಳದಳಿಪೆಳವಾವಿನಳ್ಳಿಗೊಂಬಂ ತಳ್ಪೊಯ್ದು (ಕಾವ್ಯಾವ. ೨೧೨). **ದಳ್ದಳಿಸು : ೨.** ಬೆಳ್ದಿಂಗಳ ಪೊರೆವೊರೆಯೊಳ್ ದಳ್ದಳಿ [ ಪಾಠಾಂ. ಗಳ್ದಳಿ, ಗಟ್ಟಟ್]ಸದೆ ಮಿನುಕುತಿರ್ಪ ತಾರಾಳಿಯವೊಲ್ (ಅನಂಪು. ೫-೭೩). [ ದಳದಳ + – ಇಸು$_3$ ]

**ದಳದುಳ$_1$** (ನಾ). ಒಂದು ಅನುಕರಣ ಶಬ್ದ. 'ದಳದುಳನೆ' ಪರಾ.

**ದಳದುಳ$_2$** 'ದಟದುಟ' ನೋ.

**ದಳದುಳಕಾಱ,** ದಳದುಳಿಗಾಱ, ದಳವುಳಕಾಱ, ದಳವುಳಿಕಾಱ (ನಾ). ಸೂರೆಗೊಳ್ಳುವವನಂ ; ಕೊಳ್ಳೆ ಹೊಡೆಯುವವನಂ ; ಲೂಟಿ ಮಾಡುವವನಂ ; ದಾಳಿಕಾರ ; ಸೂರೆಗಾರ. 'ರಾಯಂದಳದುಳ ಕಾಱ' ಪರಾ. **ದಳದುಳಿಗಾಱ :** ದಳದುಳಿಗಾಱನೆನಿಪ ದಂತವಕ್ರನು (ಕರ್ಣಾವ್ಯ. ೫-೫). **ದಳವುಳಕಾಱ :** ಸದ್ಭಕ್ತಿ ಸೂಱೆಗಾಱಂ ಮುಕ್ತಿ ದಳವುಳಕಾಱನೆನಿಪ ಬಸವರಾಜಂ ಭಕ್ತರಂ ಕಂಡು (ಬಸರ. ೮-೪) ; ದಕ್ಷನ ಹೋಮ ದಳವುಳಕಾಱ ಹರ ನಿಸ್ಸೀಮದಲಿ ಪುರ ಮೂಱ ಗೆಲಿದನು ಸಲಹಿದನು ಸುರರ (ಕುವ್ಯಾಕ. ೨ ಸೂಚನೆ) ; ಮುಂದೆ ಮುಂದರಿರಾಯ ದಳವುಳಕಾಱ ಲಕ್ಷ್ಮಣನಿರ್ದನು (ತೊರರಾ. ೬-೨೦-೨೦) ; ದ್ರಾವಿಡ ಧರಣೀಶತಿಮಿರಮಾರ್ತಂಡನೆಱೆಯಾಂಧ್ರಮನ್ನೆಯದಳವುಳಕಾಱ ನೆಂದಿರದೆ ಪಾಡಿದರಂಗನೆಯರು (ಕಂನವಿ. ೮-೭೬). **ದಳವುಳಿಕಾಱ :** ಇದೆಲ್ಲಿಯ ಲಾವಣ್ಯದ ಲಾವುಲಿಗಂ ಜವ್ವನದ ಸೂಱೆಕಾಱಂ ಮನದ ಮಲ್ಲಳಿಕಾಱಂ ಚಿತ್ತದ ದಳವು[ಪಾಠಾಂ. ದು]ಳಿಕಾಱಂ ಬಂದಂ ಏಗುವೆನೇಗುವೆಂ (ನಂಬಿರ. ೧೩-೬೦). [ ದಳದುಳ$_2$ (<ದಟದುಟ) + – ಕಾಱ ]

**ದಳದುಳನೆ** (ಅ). ಸರಸರನೆ ; ವೇಗವಾಗಿ ; ಲಗುಬಗೆಯಿಂದ : ದಳದುಳನಾಗೆಳೆ ಕೂಡೆಂಟು ಮಂದಿ ಕೋಮಲೆಯರು ರಾಯನ ಮುಂದೆ ಜಲಕನ್ನಿಕಾನಾಟ್ಯಕೆಂದು ನಿಂದರು ಮಱು ಚೆಲುವನದೇನ ಬಣ್ಣಿಪೆನು (ಭರಜ. ೧೩-೯೩). [ ದಳದುಳ$_1$ + – ಅನೆ$_1$ ]

**ದಳದುಳವಾಯ್ತು** 'ದಟದಂಟವಾಯ್' ನೋ.

**ದಳದುಳಿ** 'ದಟದಂಟ' ನೋ.

**ದಳದುಳಿಗ,** ದಳವುಳಿಗ (ನಾ). = ದಳದುಳಕಾಱ : ಎಲೆಲೆ ನರನೋ ಸುಭಟಜೀವನದಳದು[ಪಾಠಾಂ. ವು]ಳಿಗನೋ (ಕುವ್ಯಾವಿ. ೭-೩೪); ಜನನಿಯ ಜಠರವ ವೇಷ್ಟಿಸಿ ದಳದುಳಿಗನವೊಲು ಗಡಬಡಿಸಿ (ಯೋಗಾಂವಿ. ೧-೪೪) ; ಕ್ಷಳ ಱಱ ಕುಳಗಳ ತಿಳಿವಿನಿಸಿಲ್ಲದೆ ಪಳಿಯಾದೊಂದೆರಡಾಯ್ಕುಳಿ ವಾತಿನ ಅಳಿಗಬ್ಬಿಗ ದಳದುಳಿಗರ್ ತಿಳಿಯಲಸಾಧ್ಯಮದೀ ಕಾವ್ಯಂ (ಪ್ರಭುಪು.೧-೪೯).

**ದಳವುಳಿಗ : ೧.** ಕಣ್ಣ ಮಂಗಳವಾದ ಕೈವಲ್ಯ ದಳವು[ಪಾಠಾಂ. ದು]ಳಿಗನ ಆ ಸತಿಯರೊಲಿದು ಬಲಗೊಂಡೆಱಗಿ (ಸಿದ್ಧರಾ. ೧-೫೭); ಒಳಗಾದಳೆನಗೆ ಬಾಲಕಿ ಕಾಮಭೂಪನ ದಳವುಳಿಗನ ದೆಸೆಯಿಂದ (ಅಂಜಚ. ೧೪-೨೨೭).

[ ದಳದುಳ$_2$ (<ದಟದುಟ) + – ಇಗ ]

**ದಳದುಳಿಗಾಱ** 'ದಳದಂಳಕಾಱ' ನೋ.

**ದಳದುಳಿಸು,** ದಳವುಳಿಸು (ಕ್ರಿ). ಆಕ್ರಮಿಸು; ದಾಳಿಮಾಡಂ; ಕೋಲಾ ಹಲಮಾಡಂ ; ಕ್ಷೋಭೆಗೊಳಿಸಂ ; ರಭಸದಿಂದ ಮಂನ್ನುಗ್ಗು : ತೆಂಕಮುಖವಾಗಿ ಧಾಳಿಕಾಱರು ದಳದುಳಿಸಿ [ಪಾಠಾಂ. ದಳದುಳದ] ಭೂಪಾಲಭೂಮಿಯ ಹೊಕ್ಕು ಗಂಗಾಕೂಲದಲಿ ಸಂಗಮದ ಸಾಗರಕಾಗಿ ವಹಿಲದಲಿ (ತೊರರಾ. ೪-೦೦-೧) ; ಮುಗುಳೆದ್ದು ಬಂದಾವಾಸದಲಿ ದಳದು [ಪಾಠಾಂ. ವು]ಳಿಸಿ ಶಕ್ರನ ಮುಱಿದು ಸುಮನಸರ ದೇಶದಿಂದಟ್ಟಿಯಟ್ಟ (ಅಕ್ರೂಚ. ೧-೮); ತಳುವದೆ ಬೆಟ್ಟದ ಚಾಮೇಂದ್ರ ಬಲಸಹ ದಳದುಳಿಸಿದನು ಹಂಚೆಯಕಿ (ಕಂನವಿ. ೩-೬೩). **ದಳವುಳಿಸು :** ಸರ್ವ ಸೈನಿಕವೆರಸಿ ನಿಂದಿರ ಲೊರ್ವನೇ ದಳವುಳಿಸಿ ದ್ರುಪದನ ನಿರ್ವಹಿಸಿ ತಾ ಹಿಡಿದು ಕಟ್ಟಿದ ನಿಮಿಷ ಮಾತ್ರದಲಿ (ಸಂಭಪ. ೦೮-೯೮) ; ನಿಲುಕಿ ಹೊಳೆದವು ನೇಣ ಸಡಿಲಿಸಿ ಕುಲಗಿರಿಯ ಹೆಡತಲೆಯಂನಡರಿದವು . . . ದಳವುಳಿಸಿದವು . . . ಮನೋವೇಗಾಯ್ಲವಾಜಿಯು ಥಟ್ಟ ನೂಕಿದರು (ಕುವ್ಯಾಭೀ. ೪-೫೨) ; ಮದಮುಖರಲ್ಲೆ ರಕ್ಕಸರು ಕೋಱಿದ ಮಹೋತ್ಪಾತವನು ಬಗೆಯದೆ ಕದನಕೋಲಾಹಳರು ದಳವುಳಿಸಿದರು ಧಾಳಿಯಲಿ (ತೊರರಾ. ೩-೫-೯).

[ ದಳದುಳ$_2$ (<ದಟದುಟ) + – ಇಸು$_3$ ]

**ದಳದೆರೆ,** ದಳತೆರೆ (ಕ್ರಿ). ಎಸಳಂಗಳನ್ನು ಬಿಚ್ಚು ; ಅರಳಂ ; ವಿಕಾಸ ವಾಗಂ : ಕಮಲಿನಿಯು ತಾನು ದರಹಸಿತವದನದಿಂದಿನಿಯನರುಣತೆ ಯಾಂತು ದಳದೆರೆದು ಬಿರಿದರಳ್ದು ಮೊರೆಯುತಿಹಳು (ವಿಸೀಗೀ. ೨೯-೧೬). **ದಳತೆರೆ :** ಹಿಂದೆ ಎಂದೂ ತಾನು ಅನುಭವಿಸದಿದ್ದ ವಿಶೇಷವಾದೊಂದು ಭಾವನೆ ಮನಸ್ಸಿನ ಸರೋವರದಲ್ಲಿ ದಳತೆರೆಯುತ್ತಿತ್ತು (ಅನಾಥ. ೪೮).

[ ದಳ$_2$ (=ದಲ) + ತೆರೆ$_1$ (<ತೆಱೆ$_1$) ]

**ದಳನ** 'ದಲನ' ನೋ.

**ದಳನಾಯಕ** (ನಾ). ದಳಪತಿ ; ಸೇನಾಪತಿ : ಬಳಿಕ ಹೊಂಕರಿಸುತಂಗಜನು ತೊಲಗಿ ದೂರದೊಳಿದ್ದ ಗುಣವಸಂತಕನೆಂಬ ದಳನಾಯಕನ ನೋಡಿ ನುಡಿದ (ಭರಜ. ೪೮-೯೫). [ ದಳ$_2$ ( = ದಲ) + ನಾಯಕ ]

**ದಳಪ** (ನಾ). = ದಳನಾಯಕ: ನೀಡಿರಿದು ಕಿಡಿಹಿದರ್ ದಳಪನಾ ಕ್ಷೋಭೆಯಿಂ ಬೆದರಿ ದಳಪಾರುತಿರಲು (ಜಿನಮು. ೮-೧೪). [ ಸಂ. ದಲಪ ]

**ದಳಪತಿ** 'ದಲಪತಿ' ನೋ.

**ದಳಪತಿತನ** (ನಾ). ಸೇನಾಪತಿತ್ವ ; ದಳದ ಮುಖಂಡತ್ವ : ಕಂಠೀರವ ನರಸೇಂದ್ರನಂದು . . . ಮುಂದಣ ದಳಪತಿತನವ ಲಿಂಗೇಂದ್ರನಿಗಂದು ಕೊಡುವೊಡುಜ್ಜುಗಿಸಿದ (ಕಂನವಿ. ೦೯-೯೫).

[ ದಳಪತಿ ( = ದಲಪತಿ) + – ತನ ]

**ದಳಬಳ** (ನಾ). ಒಂದು ಬಗೆಯ ಔಷಧಿ ಮೂಲಿಕೆ ; ಕಚೋರ : ದಳಬಳ (ಕಚೋರ)ದ ಹಸಿಗಡ್ಡೆಯ ರಸ ಒಂದು ಚಮಚೆಗೆ ಅಷ್ಟೇ ನೀರುಳ್ಳಿ ರಸ ಕೂಡಿಸಿ ಕೊಡುವುದು (ಮನೆಮ. ೧೪). [ ? ]

**ದಳಬೆಸ** (ನಾ). ದಳಗಳನ್ನು ಬಿಡಿಸುವ ಕಾರ್ಯ ; ಕಂಸುರಿಗೆಲಸ (?) : ಕರುಮಾಡಂ ರಮ್ಯಹರ್ಮ್ಯಚಳದಳವಿಗಳುಂಬಂ ಹಿ ಮಾದ್ರೀಂದ್ರ ಸಾನೂತ್ಕರಕಾಂತಂ ಬಳ್ಳಿಮಾಡಂಗಳ ಬಳಗಮದೇನೆಂಬ ಪೇಪುರ್ವದೇ ನೆಂಬಿರವಿಂದೊಳ್ಪಿಂಬದೇನೆಂಬ ದಳಬೆಸನದೇನೆಂಬ ವಿಕ್ಕೊಳ್ಳದೇನೆಂಬ ರಸಂಬೆತ್ತೊಳ್ಪದೇನೆಂಬಮಿತಗುಣಮದೇನೆಂಬ ಚಿತ್ರಪ್ರಪಂಚಂ (ಶಾಂತಿಪು. ೯-೧೪೮). [ ದಳ$_2$ (= ದಲ) + ಬೆಸ$_1$ ]

**ದಳಭವನ** (ನಾ). ಎಲೆವುನೆ ; ಪರ್ಣಕುಟಿ : ಲವನೆ ಕೇಳಾ ದಿನವನಾ ದಳಭವನದಲಿ ನೂಕಿದರು (ತೊರರಾ. ೨-೬-೨೭). [ ಸಂ. ದಲಭವನ ]

**ದಳಮಳ** (ನಾ). ತಂಬಿ ತಂಳಂಕುವುದಂ ; ಡವುಡವಿಂಸುವುದಂ : ವರ್ಷಾಕಾಲದಲ್ಲಿ ವನಜ್ಯೋತ್ಸ್ನೀ ಎಂಬ ಲತೆಯು ತನ್ನ ಪತ್ರರಾಶಿಯ ಬಾಹುಳ್ಯದಿಂದ ಹೇಗೆ ದಳಮಳಮಾಡುವುದೋ ಅವಳ ಶರೀರವೂ ಹಾಗೆ ಪೂರ್ಣತೆಯಿಂದ ದಳಮಳವಾಗುತ್ತಿದ್ದಿತಂ (ಕವಾಕುಂ. ೪೩). 'ಡಳಮಂಳ' ಪರಾ. [ ←ಮರಾ. ದಳಮಳ್ ]

**ದಳಮೋಟು** 'ದಳವೇಟು₁' ನೋ.

**ದಳವಡಿಗ** (ನಾ). ಸೈನ್ಯದಲ್ಲಿ ವ್ಯವಹರಿಸಂವವನಂ ; ಸೈನಿಕ; ಯೋಧ : ಮಣಿಮಯ ಹಜಾರದೊಳು ಬಿತ್ತರದ ದಳವಡಿಗರೊಡನೆ ಸೇನಾನಿಯರ ರಾಯ ರಾವುತರೊಗ್ಗಿನಲಿ (ನವಮೋ. ೨೭-೩೭). [ದಳವಡೆ + – ಇಗ]

**ದಳವಡೆ** (ನಾ). ಸೈನ್ಯದ ತಂಕಡಿ ; ಪಡೆ : ಗುರಿಕಾರ ನಾಯಕರು ದಳವಡೆಯ ಜಟ್ಟಿಗಳು ಕರಣಿಕರು ಕಣಜ ಬೋ ರಕ್ಕಸರಾಯಭಾರಿಗಳು . . . ಮುಂತಾದಯುಸಮುಸದ್ಭುಧಜನರು ಮು ಖ್ಯ ವಿ ನಿ ಯೋ ಗ ದೊಡ್ಡೋಲಗದ ಮಧ್ಯದಲೀ ಶಶಿವಂಶಿಯಂದದಿ ಸಮಸ್ತ ಪ್ರಭುವರನೆನಿಸಿ (ನವಮೋ. ೩-೨೫). ℗ ಇದಂ ಒಂದೇ ಅರ್ಥದ ಎರಡಂ ಶಬ್ದಗಳಂ ಸೇರಿ ಆಗಿರುವ ರೂಪ. [ ದಳ₂ ( = ದಲ) + ಪಡೆ₂ ]

**ದಳವಯ** 'ದಳವಾಯ್' ನೋ.

**ದಳವರಿ** (ಕ್ರಿ). ದಾಂಗುಂಡಿಯಿಡು ; ಹಬ್ಬು ; ವ್ಯಾಪಿಸಂ : ಗಳಬಳಿಪ ಗದ್ದದಂ ದಳವರಿವ ಮೋಹಲತೆ ತುಳುಕಿ ತುಂತುರುಗೆದರ್ವ ಘರ್ಮಂ (ಕೃಕವ. ೧-೬-೪). [ ದಳ₂ ( = ದಲ ) + ಪರಿ₂ ]

**ದಳವಾಡ** (ನಾ). ೧. ಸೇನಾಸಮೂಹ; ಪಡೆಯಂ ಸಾಲಂ ; ಸೈನ್ಯ : ಸಂಭ್ರಮದೆ ದಳವಾಡವೋಲೈಸೆ (ರೇವಣ. ೧೧೫-೩) ; ದಳವಾಡಸಹಿತ ಬೈಚಪ್ಪ ದುರ್ಗವ ಹೊಕ್ಕು ತಳುವದದಟ ಬಲಿಕೆಯನಂ ಬಳಸಿ ಬಳಸಿ ನೋಡಿ (ಕುರಾಸಾಂ. ೩೭-೫೦) ; ತಿರಂವಡಿಯ ರಾಜ್ಯಕೆ ಮನ್ನರನೂ ದಳವಾಡವನೂ ಕಳುಹಿಸಲಾಗಿ (ಸೌಇಇ. IX-ii, ೫೫೦-೧ ; 1532) ; ವಿಭೀಷಣ ಬಂದಿನ್ನು ಪೊಳಮೋಸಗೊಟ್ಟ ಕಾರಣದಿ ಕಳಿದುಳಿದವನ ಮರ್ದಿಸಿಯಲ್ಲದೆ ನಿನ್ನ ದಳವಾಡವೇನು ನೀನೇನಂ (ಮೋಹತ. ೪೦-೨೫) ; ಹೊಳೆವ ತ್ರಿಶೂಲಮುಮ್ಮೊನೆಯಿಂದೆ ಕೆಂಗಿಡಿಗಳನುಗುಳ್ದುರಿಯು ನಿಷ್ಠುರದಿ ದಳವಾಡ ದಹನವ ಮಾಡುತ್ತ ಹರಿಯುರಸ್ಥಲದಲ್ಲಿ ಬಂದು ಮೋಹಿಸಿತು (ಮೋಹತ. ೪೦-೬೬) ; ಆಗ ಕೌರವರಾಯ ಸರ್ವ ದಳದಾಡದಿಂದ ಮುತ್ತೈಯ್ಯನಿಂಗೆ ಸರಿಬಲವಾಗಿ ಬರಲು ಬಳಿಕಿತ್ತ ಕಳುಹಿದ ನರನ ಬೆಂಬಲಕೆ ಪಾಂಚಾಲಮತ್ಸ್ಯನಂ (ತುರಂಗ. ೪೭-೨೧). ೨. ಸೇನೆಯಂ ನೆಲೆ ; ಶಿಬಿರ ; ಪಾಳೆಯಂ : ಬಳಿಕಾ ಯುಧಿಷ್ಠಿರಂ ಭೀತಿಯನ್ನಪಹರಿಸಿ ತನ್ನ ದಳವಾಡ ದಿಂದಾ ತತುಕ್ಷಣ ಪೊರಡಲೊದರಿದವು ಭೇರಿ ನಿಸ್ಸಾಳಂಗಳುರವಣಿಯೊಳು (ತುರಂಗ. ೪೯-೧) ; ಮೆರೆವ ಮಣಿಕನಕಂಗಳನ್ನಿತ್ತು ಕು ರು ನೃ ಪ ನ ಸುಭಟರಂ ಕಳುಹಿಸಿದನು ಭರದೊಳೈತಂದವರು ಪೋದ ವೃತ್ತಾಂತ ಮನ್ನರುಪಿದರು ಕೌರವಂಗನಿಲಜನ ಮತವ ವಿಸ್ತರಿಸಿದರು ಕದನಕಂ ಬರಲಾಗ ಕೌರವರು ಸರ್ವ ದಳವಾಡದಿಂದ (ತುರಂಗ. ೩೪-೧೯).

[ ದಳ₂ ( = ದಲ) + ವಾಡ₂ ]

**ದಳವಾಯ್**, ದಳವಯ, ದಳವಾಯಿ, ದಟಿವಾಯ್, ದಟಿವಾಯಿ (ನಾ). ೧. ದಳನಾಯಕ ; ಸೇನಾಪತಿ : ಸುಲಿತಿಂದು ರಾಜ್ಯವನಿತಂ ನೀವೇಕೆ ತಾವೇತಕೆಂದುಳಿದರ್ಗೀಯಂದೆ ತಾನೆ ಕಾಲಯಮನಂತತ್ಕ್ರಮಂ ತಾಳ್ದಿದಾ ದಳವಾಯೋ ಬಳಿಮಾರಿಯ್ಯೆ (ಸೋಮೇಶ. ೬೪) ; ಆರಿಯರ ದಳವಾಯ ಕೂಚಿರಸನು ಎತ್ತಿ ಬಂದು ಎಣಿಕಲನುಯಿಜಿದು ಸೆಟಿ ಸೂಟಿಗೊಣ್ಣು ಹೋಹಲ್ಲಿ (ಎಕ. XII, ಪಾವಗ. ೪೮-೧ ; 1285?) ; ನೀವು ಕಟಕಾಚಾರ್ಯಪುತ್ರರು ನೀವಿರಲು ಕೃಪನಿರಲು ದಳವಾಯ್ ನಾವಹವೆ (ಕುವ್ಯಾಕ. ೧-೨೦) ; ಚತುರಂಗಬಲಸಹಿತವಾಗಿ ಬಲಾಹಕನೆಂಬ ದಳವಾಯಿಯನು ಕಳುಹಿಸಿ (ವಚಕಾ. ೮-೨೦) ; ಅವನ ದಳವಾಯ್ ದಧಿಕಿಸ್ ಎದೆಗೇಟಿ ನೆಟ್ಟು ಪಡಗಿಂದ ನೆಗೆದಾಲಿ ಮುಳುಗಿದನ್ (ಪಾರಸಿ. ೦೩-೩೦೬). **ದಳವಯು:** ೧. ಕರಿಮುಖಂ ದಳವಯಂ ಜ್ಯೋತಿಷಂ ರವಿ ಯಜ್ಞಪುರುಷ ಬಾಣಸಿಗ ಯಮ ತಳವಾಟ (ಲಶಿಚಂ. ೫-೦೩); ℗ ಇದಂ ಛಂದಸ್ಸಿಗಾಗಿ ಮಾಡಿಕೊಂಡ ರೂಪ. **ದಳವಾಯಿ:** ೧. ಬಲುಬಲಸಹಿತಲೆಮ್ಮಯ ದಳವಾಯಿ ಹಿಂದುಳಿದನಿಲ್ಲಿಲ್ಲ ಮುಖಿಗಳೆನೆ (ಸೊಬಸೋ. ೬-೨೦); ಬಾಗಿಲ ದಳವಾಯಿ ವೆಂಗಳರಾಜ ಹುಹಾ ಅರಸುಗಳು . . . ಕುಕ್ಕಸಮುದ್ರದ ಕೆಟಿಯ ಕಟ್ಟಿಸಿದರು (ಎಕ. VI, ಕಡೂರು. ೦೬೦-೬; 1542); ದಳವಾಯಿ ಚಂನ್ನಮ ನಾಯಕರ ಮಕ್ಕಳು ದಳವಾಯಿ ಕೃಷ್ಣಪ ನಾಯ[ಕ]ರೂ (ಸೌಇಇ. IX-i, ೬೦೫-೫ ; 1543) ; ಪೊಡವಿಪ ದಳವಾಯಿ ನಂಜರಾಜೇಂದ್ರ ತನ್ನೊಡೆಯನ ಕಾರ್ಯದೇಳಿಗೆಯ ಗಡಣವ ಚ ರಿ ತೆ ಯಾ ಗೊ ಲಿ ದು ಪೇಳಿಸಿದನು (ಕಂನವಿ. ೧-೨೪) ; ನಿಮ್ಮ ಮಗನಿಗೆ ದಳವಾಯಿಯಾಗುವ ಯೋಗವಿದೆ (ಡಂಗಾಳ್ಳಿ. ೪) ; ಎಳೆಗರು ಎತ್ತಲ್ಲ ದಳವಾಯಿ ದೊರೆಯಲ್ಲ ಮನೆಗೆ ಬಂದಳಿಯ ಮಗನಲ್ಲ (ಹಳ್ಳಿಪಾ. ೬೫). ೨. (ಹಿಂದಿನ ಮೈಸೂರಂ ಸಂಸ್ಥಾನದಲ್ಲಿ) ಪ್ರಧಾನಿ ; ಮಂಹಾಮಾತ್ಯ : △ **ದಟಿವಾಯ್** : ೧. ಏಟುಮ್ ಬಾಗಿಲೊಳೇಟ್ ದಟವಾಯ್ಗಳ್ ಏಟ್ ದಟವಾಯ್ಗಳನಿದಿರಿಸಿ ನಿಂದರ್ (ಅಂತಿಗೊ ೭-೦೨೬). △ **ದಟಿವಾಯಿ** : ೧. ದಟವಾಯಿ ರಾಮರಾಜಂ ಬಟಿಕೆಟಿಜಸದೊಡನೆ ವೆರಸಿಯಾಳ್ದನ ಸಿರಿಗಂದಟುಪಿಯುಳಿ ಯನೆನಿಸಿಯುಮೊಡನಟಿದಂ (ಚಕವಿ. ೨-೧೬).

[<ಸಂ. ದಲಪತಿ./ತಮಿ. ತಳಿವಾಯ್; ತುಳು. ತೆಲು. ದಳವಾಯಿ./ ಮರಾ. ದಳವಈ, ದಳವಾಯಾ, ದಳವೈ; ℗ ಸಂ. 'ಪತಿ' ಎಂಬುದು ಪ್ರಾ. 'ಪಈ' ಎಂದಾಗಿದ್ದು ದಲಪತಿ > ದಲಪಈ > ದಳವಯಿ > ದಳವಾಯಿ > ದಳವಾಯ್ ಎಂದು ಆಗಿರಬೇಕು ]

**ದಳವಾಯಿ** 'ದಳವಾಯ್' ನೋ.

**ದಳವಾಯಿತನ** 'ದಳವಾಯ್ತನ' ನೋ.

**ದಳವಾಯಿವರ್ಯ** (ನಾ). ದಳವಾಯಿಶ್ರೇಷ್ಠ : ದಳವಾಯಿವರ್ಯ, ಮುಂದಣ ಶ್ರೀಮನ್ಮಹಾರಾಜ ಮಹಾಸ್ವಾಮಿಯವರೆಂದು ನಿಷ್ಕೃಷ್ಟ ರಾಗಿರುವ ಈಗಳಿನ ಕಿರಿಯರಸ ಪಟ್ಟದ ಶ್ರೀರಾಜಒಡೆಯರವರ ಸನ್ನಿಧಾನವು ಒಡ್ಡೋಲಗಕ್ಕೆ ಬಿಜಯಮಾಡಿದೊಡನೆಯೇ ಆಸ್ಥಾನಿಕರೆಲ್ಲ . . . ನಮಸ್ಕರಿಸಿ ಗೌರವಿಸಿಕೊಳ್ಳಬೇಡವೆ ? (ಬಿಟ್ಟಆ. ೩೪-೧೧).

[ ದಳವಾಯಿ (<ದಳವಾಯ್) + ವರ್ಯ ]

**ದಳವಾಯ್ತನ**, ದಳವಾಯಿತನ (ನಾ). ೧. ಸೇನಾಪತಿಯಂ ಹುದ್ದೆ ; ಪ್ರಧಾನಿಯ ಹುದ್ದೆ,–ಅಧಿಕಾರ. ೨. ದಳವಾಯಿಯಂ ಕೆಲಸ : ಈ ಅಸಮಾಧಾನದಿಂದ ನಿನ್ನ ದಳವಾಯ್ತನದ ಜೀವನದ ಮೂಲಶಕ್ತಿಯೇ ಬೇರಳಿದು–ಪ್ರಳಯವಾಗಿ ಹೋಗುತ್ತಿದೆಯಹುದು! (ಬಿಟ್ಟಆ. ೩೪-೨೩). **ದಳವಾಯಿತನ:** ೧. ಖಂಡೇರಾಯನಿಗೆ ದಿವಾನಪದವಿಯೂ ಹೈದರನಿಗೆ ದಳವಾಯಿತನವೂ ಗೊತ್ತಾದವು (ಒಡಕ. ೬೬) ; ಪೂರ್ವಿಕರು ಒಬ್ಬರೂ ದಳವಾಯಿತನವಂ ನೇಮಕ ಮಾಡಲಿಲ್ಲ (ಮಹಾವಂ. I, ೪೬). ೨. ದಳ ವಾಯಿತನವು ವಿಪತ್ಕರವು (ಸುಗುಗಂ. ೧೧-೨೦).

[ ದಳವಾಯ್ + – ತನ ]

**ದಳವಿಡು** (ಕ್ರಿ). ಚಿಗುಂರು ; ಅಂಕುರಿಸಂ ; ಮೊಳೆ : ಹೊಳೆವ ಹೊಂಜಿಳೆ ಮೆಯ್ಯ ಸೊಬಗಿಯ ಕಳಶಕುಚವರೆದೋಱಿ ಹೃದಯದಿ ದಳವಿಡುವ ಮೋಹದೊಳಿ ಯುವನೆವೆಹಳಚದೀಕ್ಷಿಸಿ ಹಿಗ್ಗುವಂತೆ (ಕೃಕವ. ೩-೫-೩).

[ ದಳ₂ (= ದಲ) + ಇಡು₁ ]

**ದಳವುಳ** 'ದಟಿದಂಟಿ' ನೋ.

**ದಳವುಳಕಾಱ** 'ದಳದಂಳಕಾಱ' ನೋ.

**ದಳವುಳಿ** 'ದಟಿದಂಟಿ' ನೋ.

**ದಳವುಳಿಕಾಱ** 'ದಳದಂಳಕಾಱ' ನೋ.

**ದಳವುಳಿಗ** 'ದಳದಂಳಿಗ' ನೋ.

**ದಳವುಳಿಗೊಳ್** (ಕ್ರಿ). ಕಸಿ ; ದೋಚು ; ಸುಲಿಗೆಮಾಡು : ಅರೆಬರ ಧೃತಿಯುಂ ನೆಱೆ ಕವರುತ ಮತ್ಸರೆಬರ ಪೆಂಪಂ ದಳವುಳಿಗೊಳುತುಂ ಸ್ಮರ ಚಕ್ರೇಶನ ಸಲ್ಗೆಯ ಮದವತ್ಪ್ರಾಯಿತೆಯಿದ್ದಳು (ಜಯುಕಾ. ೫-೫೦).

[ ದಳವುಳಿ (<ದಟಿದುಟಿ) + ಕೊಳ್$_1$ ]

**ದಳವುಳಿಸು** 'ದಳದಂಳಿಸಂ' ನೋ.

**ದಳವೆತ್ತು** (ಕ್ರಿ). ದಂಡೆತ್ತು ; ದಂಡಂಸಹಿತವಾಗಿ ದಾಳಿಮಾಡಂ : ಅಲಂಬುಸ ಶ್ರುತಾಯುಗಳೂ ಸನ್ನದ್ಧರಾಗಿ . . . ಪಾಂಡವ ಬಲಗಳ ಮೇಲೆ ದಳವೆತ್ತಿ ಬಂದರು (ಕೃಪಾಭೀ. ೧೫೫).

[ ದಳ$_2$ ( = ದಲ) + ಎತ್ತು$_1$ ]

**ದಳವೇರು** 'ದಳವೇಱು$_2$' ನೋ.

**ದಳವೇಱಿಸು** (ಕ್ರಿ). ಹೆಚ್ಚಿಸು ; ವೃದ್ಧಿಗೊಳಿಸು : ನನಗಣೆಯುನರ್ಚಿಪಂತೆ ಚಂದ್ರಕಳೆಯುಂ ದಳವೇಱಿಪಂತೆ ಪುಣ್ಯಮುಂ ಪುಟವಿಡುವಂತೆ . . . ಹರನ ಮನೋರಥಮುಂ ಮದವೇಱಿಪಂತೆ ಪಾರ್ವತಿಗೆ ಸುವಾಸಿನಿಯರ್ ಸಿಂಗರಮಂ ಮಾಡಿ (ಗಿರಿಕ. ೧೦-೪೫ ವ) ; ಇನಿಯರ ಕಂತುರಾಗರಸಮಂ ದಳವೇಱಿಸುವಂತೆ . . . ಕೆಂದಳಿರ ಪೊಂಪುಳಿ ಪಪ್ಪುಕಮಾಯ್ತುಶೋಕೆಯೊಳ್ (ಅನಂಪು. ೬-೭೭). [ ದಳವೇಱು$_1$ + – ಇಸು$_3$ ]

**ದಳವೇಱು$_1$**, ದಳವೋಱು (ಕ್ರಿ). ೧. ದಟ್ಟವಾಗಂ ; ನಿಬಿಡವಾಗಂ ; ಸಾಂದ್ರವಾಗಂ : ಅಳಿಯ ಕಪ್ಪನು ನೀಲಮೇಘದಸಿತವನು . . . ಎಳೆದು ಕೊಂಡೊಡಗೂಡಿ ತುಳಿದು ಓಳಿದಬುಜಜಂ ಬೆಳಗು ಮುಳಂಗಲು ಬಳಿದನೋ ಬಯಲನೆಂದೆನಿಸಿ ದಳವೇಱಿತೊತ್ತರಿಸಿ ಮೋಡಗತ್ತಲೆ ಗಾಳಿ ಹನಿ ಮಿಂಚು ಮೊಳಗು ಸಹಿತ (ಸಿದ್ಧರಾ. ೭-೩೭) : ಪೊರೆ ಪೊರೆಯಾಗಿ ದಳವೇಱಿ ಬಹುಳತರ ಧವಳತೆಯನಾಂತ ಮುಗಿಲ ಮೊತ್ತಮೊತ್ತಲುಂ ಬಿತ್ತರಂಬಡೆಯೆ (ಜಾಧಪು. ೪-೩೭ ವ). ೨. ಹೆಚ್ಚಾಗಂ ; ವೃದ್ಧಿಹೊಂದು; ಏಳಿಗೆಯಾಗಂ : ಉತ್ಸವಕರಮೆನೆ ಬೆಳಪ ಶರತ್ಸಮಯದೊಳಿಂದುಕಾಂತಿ ದಳವೇಱುವವೋಲ್ ವತ್ಸಳರೆನಿಸುವ ಬುಧರಿನವುತ್ಸರರಿಂ ಕೃತಿ ಕೃತಾರ್ಥಮಕ್ಕುಮಮೋಘಂ (ಜಗವಿ. ೧-೧೧) ; ದಳವೇಱಿದುತ್ಸವದ ಹೆಚ್ಚುಗೆಯ ಬೀಜಮಂ ಬೆಳೆಸುವೈಸಲ್ಕೆಯಿಂತಾದನಿನ್ನಾವಾಗಳೆಳಸಿ ಮೊಲೆಯುಂಬನೋ (ಸೋಮಚ. ೧-೭೫); ಹೊಸಮೊಲುಮೆ ದಳವೇಱಿ ಸಲೆ ಪಸರಿಸಿ ಮಹದ್ಗುರುವಿನ ಚರಣ ಸಾರಸಯುಗವನಾನಂದಜಲದಿಂ ತೊಳೆದು (ಬಸಪು. ೪-೫೯) ; ಬೇಗುದಿಯ ದುಮ್ಮಾನ ದಳವೇಱಿದುದು ಹೇಱಿತು ಭೀತಿ ಭೂಪತಿಗೆ (ಕುವ್ಯಾಗ. ೦-೬೨). **ದಳವೋಱು** : ೨. ನೆಱೆಯೆ ನೆಗರ್ತೆವೆತ್ತುದು ನಿಯೋಗಮುಗುಂದಲೆಯಾಯ್ತು ತೇಜಮುಚ್ಚೆಱಿದುದು ಮಿಕ್ಕ ಬಿಚ್ಚತಿಕೆ . . . ದಳಮೋಱಿದುದಕ್ಕರಂ ಪಗಣ್ಣೆಱಿದುದು ಪೌರುಷಂ ಸಫಳವಾದುದು ಮಾನ್ಯತೆ ಮಾದಿರಾಜನೊಳ್ (ಸೌಇಇ. XI-11, ೦೪೭-೩೭ ; 1099). [ ದಳ$_1$ + ಏಱು$_1$ (<ಏಱ್$_1$) ]

**ದಳವೇಱು$_2$**, ದಳವೇರಂ (ಕ್ರಿ). ೧. ಅರಳು; ವಿಕಾಸಗೊಳ್ಳು; ವಿಕಸಿಸಂ : ವನಜಂಗಳ್ ದಳವೇಱಿ ಚೂತಲತೆಗಳ್ ನೀರೇಱಿ . . . ಬಂದುದು ವಸಂತಂ (ಧರ್ಮಾಮೃ. ೦೩-೦೦) ; ಅಳಿಯೆಱಗದನಿಲನಲುಗದ ರವಿಕರಂ ಪುಗದ ಸುಳಿಗೊಂಡು ದಳವೇಱಿ ಹಸುರಳಿದು ಬೆಳುಪುಳಿದ ಸುರುಚಿರ ಮೆನಿಪ್ಪ ಮಾಸಲ ಮೊಗ್ಗೆಯುಂ ಕೊಂಡು (ಬಸರ. ೩-೨೦). ೨. ಕಾಂತಿ ಹೊಂದಂ: ಮುಗುಳ ಮಾಲೆ ಸುಯ್ಯಕನೞುಗಂಪಿನೊಳಿರ್ಮಡಿ ಗಮ್ಮನಾಗೆ ಸೆಳ್ಳುಗುರ್ವರ್ಗಳಗಿಂದರಲ್ಗಳ ದಳಂ ದಳವೇಱಿ ಮದಾಳಿ ಮೆಲ್ಲಮೆಲ್ಲಗೆ ಸುತಿಗೂಡೆ ಕಂಕಣದ ನುಣ್ಚರದೊಳ್ . . . ಅಲರ್ಗಟ್ಟುಮೃದಂಗನಾಜನಂ (ವರ್ಧಪು. ೧-೬೪) ; ಬಾಗುತೆ ಬಲಿಯುತೆ ಪೊಳೆದಿನಿದಾಗುತೆ ದಳವೇಱು ತಿಡಿದಿಡಿದು ಹಿಗ್ಗುತೆ ಪಣ್ಣಾ [ಪಾಠಾಂ. ದಳವೇಱಿ ಹಿಗ್ಗುತ್ತವೆ ಹೊದಾ] ಗುತೆ ಕಾಯ್ಗಳ್ ಪೊಱಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಿರಿಕ. ೨-೫೦). ೩. ಉಬ್ಬು ; ಹಿಗ್ಗು ; ಸಂತಸಗೊಳ್ಳು ; ಉತ್ಸಾಹಗೊಳ್ಳು : ಮಾಂಗೊನರಂ ನಸುಗರ್ಚಿ ಸೊರ್ಕಿನಿಂ ತನು ದಳವೇಱಿ ಕಂಠವಿವರಂ ತೊವರೇಱಿ ಪಟುತ್ವವೇಱಿ ಕಾಮನ ನನೆಯಂಬುಗಳ್ ವಿರದಿಂವೃಂದದ ಮೆಲ್ಲಿರ್ದೆಯುಂ ಪುಗಲ್ . . . ಪುಗಲ್ಪುಗಲೆಂದುದು ಕೋಕಿಲವ್ರಜಂ (ಜಗವಿ. ೧೪-೩೮) ; ಪುಟವೆದ್ದು ಹೊಂಗುತಂ ದಳವೇಱಿ ಹಿಗ್ಗುತಂ ನಟ್ಟಿರ್ಪ ನೋಟದಿಂದೋಜೆಯಂ ಮಿಾಱುತಂ (ಬಸರ. ೩-೧೦೩) ; ತಲೆದಡವಿ ತರ್ಕವಿಸಿ . . . ಅಂಜದಿರೆಂದೆನ್ನೊಳು ನುಡಿಯೆ ಹಬ್ಬಿ ಹಸರಿಸಿ ದಳವೇಱುವೆನಾಂ (ಶಂಕಶಂ. ೭೧); ಇನಿಯಳ ಗರ್ಭದಂದವಂ ನೋಡಲ್ಬಿತ್ತಂ ದಳವೇಱುತ್ತಿರೆ ಬಂದಂದೊಳಪೊಕ್ಕಂ ತ್ತದೀಯ ಮಣಿಮಯ ಗೃಹಮಂ (ರಾಜಶೇ. ೪-೪೪). **ದಳವೇರು** : ೨. ನನ್ನ ಮಿದುಳು ದಳವೇರಿ ದಳ್ಳಿಸಿತು ಸ್ವರ್ಣದೀಪ್ತಿ ಇಳಿಯೆ ಮನದ ಕರಿನೆರೆಯ ಹುಳುಗಳೆಲ್ಲ ಹೊತ್ತೇರಿ ನಿದ್ದೆ ತಿಳಿಯೆ (ಅರಳು. ೧೯೧-೧). ೪. ಚಿಗುರು; ಎಲೆಬಿಡಂ; ಪಲ್ಲವಿಸಂ : ಬಿದುರು ಸಹ ಹೂ ಬಿಡುವುದುಂಟು. ಆದರೆ ಯಾವಾಗ ಅದು ದಳವೇರಿ ಹೂ ಬಿಟ್ಟೀತಂ ಇದರ ನಿಯಮವಿಲ್ಲ (ಇಪ್ಪಕ. ೨೮೦).

[ ದಳ$_2$ ( = ದಲ) + ಏಱು$_1$ (<ಏಱ್$_1$) ]

**ದಳಸಂಘಾತ** (ನಾ). ಪಡೆಯಂ ಒಡ್ಡು ; ಸೇನಾಜಾಲ : ಈತನೊಡ್ಡಿನ ಸಾರೆ ಸಂಗರಕಾತುಕೊಂಡದೆ ಕೃಪನ ದಳಸಂಘಾತವೊಂದಕ್ಷೋಣಿ ಸುಭಟರ ಸಾಲ ಮಧ್ಯದಲಿ (ಕುವ್ಯಾಭೀ. ೩-೦೨). [ದಳ$_2$ ( = ದಲ) + ಸಂಘಾತ ]

**ದಳಸರ**(ನಾ). ೧. ದಟ್ಟಣೆ; ಸಾಂದ್ರತೆ; ಹುಲುಸಂ: ಪೈರು ದಳಸರವಾಗಿ ಬೆಳೆಯಿತು (ರೂಢಿ). ೨. ಗಟ್ಟಿಮುಟ್ಟಾಗಿರುವಿಕೆ ; ದೇಹದಾರ್ಢ್ಯ : (ಸ್ಯಾಂಡರ್). ೩. ದರ್ಪ : ಅರಸನು ದಳಸರದಿಂದ ಆಳಿದನು (ರೂಢಿ).

[ ದಳ$_1$ + – ಸರ$_7$./ತುಳು. ತೆಲು. ದಳಸರಿ ]

**ದಳಸು**, ದಡಸಂ (ನಾ). ೧. ಮಂದವಾದಂದಂ ; ಗಟ್ಟಿಯಾದಂದು; ೨. ದಟ್ಟವಾದದಂ ; ಒತ್ತಾದಂದು : "ದಡಸಂ, ಸಾಂದ್ರ, ಒತ್ತು" (ಪ್ರಭಣ್ಣ). ರಾಗಿ ದಳಸಾಗಿ ಬೆಳೆದಿದೆ (ರೂಢಿ). ೩. ಗಟ್ಟಿಮುಟ್ಟಾಗಿರುವಿಕೆ; ದೃಢತೆ : (ಸ್ಯಾಂಡರ್). **ದಡಸು** : ೧. ಚಿನ್ನವು ವ್ಯವಹಾರದಲ್ಲಿ ಎಲ್ಲಕ್ಕೂ ಹೆಚ್ಚು ದಡಸಾದ ಪದಾರ್ಥವಿರುತ್ತದೆ (ಮುಂಬಯಿ. ೫-೩೪) ; ಇದು ವರ್ಣವೂ ಗಂಧವೂ ಇಲ್ಲದ್ದಾಗಿ ಎಣ್ಣೆಯಂತೆ ಸ್ವಲ್ಪ ದಡಸಾಗಿರುವುದು (ಮುಂಬಯಿ. ೬-೩೫). [ ದಳ$_1$ + – ಸು$_2$ ]

**ದಳಾದುಳಿ** 'ದಟಿದುಟಿ' ನೋ.

**ದಳಿ$_1$** 'ತಳಿ$_2$' ನೋ.

**ದಳಿ$_2$** (ನಾ). ೧. ಎಲೆ ; ಪತ್ರ : "ದಳಿ = ಪತ್ರಂ" (ಶಸುದ. ಪರಿ. ೨). ೨. (ಕರಾ) ತಡಿಕೆ ; ಮರದ ಸಲಕೆಗಳಿಂದ ಎಡೆ ಬಿಟ್ಟು ಮಾಡಿದ ಗೋಡೆ; ತಟ್ಟಿಗೋಡೆ: ಅದರ ಆಚಿನ ಚಾವಡಿ, ಅಡುಗೆಯ ಮನೆಗಳು, ನೀಲವಾದ ಲಾಯಗಳು. ಅವಕ್ಕೆ ಎದುರಿನ ದಳಿಯಿಂದ ಒಳಗಡೆ ಬೆಳಕು ಬರುತ್ತದೆ (ನಂಬಿನಾ. ೪). 'ತಟಿ$^3$', 'ದಳಿಕೋಣೆ' ಪರಾ.

[ ದೇ.೫ ತಮಿ. ತಟ್ಟೆ; ಮಲ. ತಟ; ತುಳು. ದಳಿ./ಸಂ. ದಲ ]

**ದಳಿಂಬ**, ದಣಬ, ದಣೆಂಬ, ದಣೆಬ, ದಣೆಬು, ದಣುಂಬ, ದಳಿವ (ನಾ). ೧. ಶುಭ್ರವಾದ ಬಟ್ಟೆ ; ದಂಕೂಲ ; ಮಡಿ : ವಿವಾಹಮಂಟಪದ ನೆಡುವಣ ಮಣಿಮಯ ವೇದಿಕೆಯ ಹಾಟಕಪೀಠದ ಮೇಲೆ ಪಾಸಿದ ದುಗುಲದ ದಳಿಂಬದೊಳಿರಿಸಿದಾಗಳ್ (ಆದಿಪು. ೪-೪೭ ವ); ತೀರ್ಥಜಲಂಗಳಂ

ಮಿಂದು ದಳಿಂಬವನುಟ್ಟು ಮುತ್ತಿನ ತೊಡಿಗೆಗಳಂ ತೊಟ್ಟು ದರ್ಭ ಶಯನದೊಳಿರ್ದು (ಪಂಪಭಾ. ೧-೧೧೮ ವ); ವಧೂಕಾಂತರಿರ್ವರುಮಂ ವಿವಾಹವೇದಿಕಾಮಧ್ಯದೊಳ್ ದಳಿಂಬದಿಂ ಪಚ್ಚವಡಿಸಿದ ಪಳಿಕಿನ ಪಟ್ಟವಣೆಯೊಳಿರಿಸಿ (ಚಂದ್ರಪು. ೬-೭೦ ವ); ಪರದಂ ಕೂಟಂ ಕಲಸಿ ಪಲವುಂ ಬಾಡುವೆರಸಿ ಕೂಟನೊಂದು ದಳಿಂಬದ ಕಪ್ಪಟದೊಳ್ ಕಟ್ಟಿ ಕೊಟ್ಟಡೆ (ಬಂಹರಿ. ೧೪-೩೦ ವ); ಪಾಸಿದ ದಳಿಂಬಮುಂಗುರ್ಗಳ ಕೇಸಡಿಗಳ ಚರಣಭೂಷಣಗಳ ರುಚಿಯಿಂ ಬಾಸಣಿಸಿ ಚಿತ್ರಪಟವಮಂ ಪಾಸಿದವೊಲಿರೆ (ಅನಂಪು. ೬-೫೪); ತಿಳಿನಗೆಯ ಮಣಿವಾರಿಯೊಳ್ ಮಿಂದಲಳಂಟ್ಟಳು ಮುಡಿ ಮುಳುಗೆ ಬಿಳಿ ದಳಿಂಬವಮಂ ಮಡಿಗೆ ನೂರ್ಮಡಿ ಮೆರೆಯೆ ಕಡುನೋಂಪಿ (ಶ್ರೀರಾಮಾ. ೮೬೧-೫೯). ೨. ಹಾಸಿಗೆ; ಶಯ್ಯೆ: ಗಂಧರ್ವಕನ್ಯಾಕರ ಗ್ರಹಣಪೂರ್ವಕಂ ಬಂದಾಕೆವೆರಸು ದಳಿಂಬದೊಳ್ಮಿಳ್ಳಿರ್ದು (ಕಾದಂಬ. ೫೨೦); ಅವನಿಪಾಲಕನಲರ್ಗಳ ತಲೆಗಿಂಬಿನಿಂದಮಲರ ಮಲಂಗಿಂದಲರ ದಳಿಂಬದಿನಿಂಬಾದಲರ್ವಾಸಿನ ಮೇಲೆ ಲೀಲೆಯಿಂ ಕುಳ್ಳಿರ್ದಂ (ಪಾರ್ಶ್ವಪು. ೯-೩೦). **ದಣಬ:** ೧. ಬಂದ ಸಂಕುಮಾರಕರುವೆರಸವ ಮಿಂದು ದಣಬವನುಟ್ಟು (ಪಶುಭಾ. ೬-೬). **ದಣಿಂಬ:** ೧. ತೊಳಗುವ ದಣಿಂಬಂಗಳಂ ಮೇಲೆ ಮಿಗೆ ಹಾಸಿ ಅಳಿಗಳಣಿಸುವ ಸುಪ್ರಸವಕುಲಮುಮಂ ಹಾಸಿ (ಬಾಹೂರ. ಹ. ೩೨೫-೧೨); ಮೊಳೆವ ಪುಳಕಂಗಳಾಭರಣವಮಂ ತೊಟ್ಟು ಸಂತಸದಣಿಂಬವನುಟ್ಟು (ಸಿದ್ಧರಾ. ೩-೪೦). ೩. ಮಡಿಯಾದ ಸೀರೆ; ಶುಭ್ರವಾದ ಸೀರೆ: ಚಾತುರ್ಥಿಕಾಸ್ನಾನವಮಂ ಮಾಡುತಂ ದಣಿಂಬವನುಟ್ಟಳು (ಚೇರಮ. ೩-೮); ಪರಿಮಳೋದಕದಿಂ ಜಳಕಂಬೆ ಒಕ್ಕು ದಣಿಂಬಮನುಟ್ಟು . . . ಸಡಗರದಿನೇಳ್ತಂದು ಶಿವಾಲಯಮಂ ಪೊಕ್ಕು (ವೃಷವಿ. ೯-೭೦ ವ). **ದಣಿಬ:** ೧. ಧೋತ್ರದ ದಣಿಬವನು ನಿಱಿವಿಡಿದು ಮಹಳದ ಮನೆಯ ಚೌಕದಲಿ ಮಣೆಗೆ ಮಂಡಿಸಿ ಕುಳ್ಳಿತುಂಬೌತಣದ ವಿದ್ಯವ ಬಲ್ಲಿರಲ್ಲದೆ ರಣವಿಚಾರದ ವಿದ್ಯೆ ನಿಮಗೇಕೆ (ಕುಮ್ಮಾವಿ. ೭-೧೨); ಸುಲಿದು ಪಲ್ಗಳ ಮಿಂದು ದಣಿಬದ ಸೀರೆಯನೊಲಿದುಟ್ಟು . . . ಅರ್ಚಿಸಿದಳು (ಕುರಾಸಾಂ. ೨೬-೧); ಉರೆ ಸಚೇಲಸ್ನಾನವಮಂ ಮಾಡಿ ದಣಿಬವನಂ ಧರಿಸಿ (ಮುಹಾಂತೇ. ೧೩-೧೫). ೨. ಪಾಸಿದ ದಣಿಬದೊಳಿಲ್ಲರು ಪಲ್ಯಂಕಾಸನದೊಳಗೊಲ್ದು ಕುಳಿತು ... ಭಾಸುರ ಸ್ತುತಿಯ ಮಾಡಿದರು (ಭರಜ. ೧೮-೮೩); ದುಗುಲ ಪಾಸಿದ ದಣಿಬದ ಮೇಲೆ ಮುದದಿಂ ಸುಗುಣದಂಪತಿಗಳೀರ್ವರನು ಅಗಣಿತಹರುಷದಿ ನಡಸಿದರು (ಅನಂಚ. ೭-೧೧೪). ೩. ಕೊಡಗೂಸು ವಾಗಳೆ ದಂತಧಾವನಗೆಯ್ದು ಮಿಂದೊಲವಾಂತು ದಣಿಬವನುಟ್ಟು ಭಸಿತವನಿಟ್ಟು ಫಾಳದಲಿ (ಬಸಪು. ೧೪-೫). **ದಣಿಬು:** ೧. ಉಟ್ಟ ದಣಿಬು ಸುಲಿಪಲ್ಬಿಟ್ಟ ನಿಡುಜಡೆ ಇಟ್ಟ ವಿಭೂತಿಯ ಬೊಟ್ಟು ಕಟ್ಟಿದ ಬಹುರಕ್ಷೆ ಹೊಸ ಪೊಂಜುರಿಗೆಯ ಕಟ್ಟಾಳು ಕಣ್ಗೆ ರಾಜಿಸಿದ (ಶ್ರೀಪಾಲ. ೮-೩೮). **ದಣುಬ:** ೧. ಆ ರಾಜಭವನದೊಳೊದಱುವ ಪರಿಚಾರಕಿಯರ್ ಕೆದಱುವ ಪೂವಲಿಗಳ್ . . . ಪಾಸುವ ದಣುಬಂಗಳ್ಪೂಸುವ ನೀರಾಜನಂಗಳ್ (ನಾಗಕು. ೫-೭೦ ವ). **ದಳಿವ:** ೧. ತೊಟ್ಟಿಕ್ಕುವಡಂ ಮರವಿಲ್ ಕಟ್ಟಿದ ಪಣೆಕಟ್ಟು ಬೇಂಟೆವಱಿ ದೊರೆಯೊಳೊಡಂಬಟ್ಟಸಿಯ ಸುರಗಿ ದಳಿವದ ತೊಟ್ಟಂಗಿಗೆ ತನ್ನೊಳಮರೆ ಬೇಂಟೆಯನೊರ್ವಂ ಬಂದು (ಪಂಪಭಾ. ೫-೩೬); "ಮೇಲುಹೊದಿಕೆ" (ಪಂಪದೀ. ೧೯೩).

[ ?₁/ತುಳು. ದಳಿಯ = ಮೈಲಿಗೆ ಕಳೆಯುವುದು, ಮಡಿಮಾಡುವುದು; ತೆಲು. ದಡಿಪ, ದಡಿಬ, ದಡಿಮ. ದಲಿವು = ಉತ್ತರೀಯ, ದುಪ್ಪಟಿ./ಪ್ರಾ. ತಲಿಮ,/ಸಂ. ತಲಿಮ ]

**ದಳಿಕೋಣೆ** (ನಾ). ಒಂದು ಪಾರ್ಶ್ವದಲ್ಲಿ ಗೋಡೆಯ ಬದಲು ಮರದ ಕಟಕಟೆ ಅಥವಾ ಕಟಾಂಜನವಿರುವ ಕೋಣೆ: (೬ಸಂಗ್ಹಾ. ೮೧).

[ ದಳಿ₂ + ಕೋಣೆ₂ (<ಕೋಣ್) ]

**ದಳಿಗವಟಿಗೆ** (ನಾ). ಒಂದು ನಾಡಿನ ಹೆಸರು: ಸ್ವಸ್ತಿಶ್ರೀ ಕನ್ನರ ಬಲ್ಲಹ ದಳಿಗವಟಿಗೆಯನಾಳೆ ಮರಗಲ್ಲಗಾಮುಣ್ಡನ ಮಗ ದವೋದೆಱ ಮಣ್ಣು ಲೋರವಿಮಿಕೆಗಾಳೊಳ್ಮಾದಿ ಪುಳಗಣ್ಣೊಳು ಸತ್ತು ಸಗ್ಗಿಯಾದಂ (ಎಕ. X (S), ಮುಳವ. ೧೮೭-೩; ಸು. 820). 'ದಡಿಗವಟಿ' 'ದಟಿಗವಾಡಿ' ಪಠಾ. [ ? ]

**ದಳಿಗೆ₁, ದಳಗೆ** (ನಾ). ೧. ಹೊಲಿಗೆ: ಅಂಗಿಗೆ ಒಂದು ದಳಿಗೆ ಹಾಕಿಸಿಕೊಂಡು ಬಾ (ರೂಢಿ). **ದಳಗೆ:** ೨. ಜೋಡಿಸಿ ಹೊಲಿದುದು; ಹೊಲಿಗೆಯ ರೇಖೆ: (೬). [ < ದಳಿ₁ ]

**ದಳಿಗೆ₂** (ನಾ). ಒಂದು ಬಗೆಯ ಪಾತ್ರೆ: ಧೂಪ – ಒಂದೆಲಗನಸೊಪ್ಪು, ಗಾಂಧಾರಿಸೊಪ್ಪು . . . ಆಡಿನ ಹಿಕ್ಕೆ ಇವುಗಳನ್ನೆಲ್ಲಾ ದಳಿಗೆಯಲ್ಲಿ ಹಾಕಿ . . . ಕುದಿ ಬರುವ ಹಾಗೆ ಕಾಯಿಸಿ ಆ ಹೊಗೆಯಿಂದುಬ್ಬೆಯ ಕಾಯಿಸಲು ವಾತಜ್ವರಂ ತೀರ್ಗುಂ (ಸಕವ್ಯ. ೬೯). 'ಅಳಗೆ₁', 'ಅಳಿಗೆ' ಪಠಾ.

**ದಳಿತ** 'ದಲಿತ' ನೋ.

**ದಳಿತಜನ** 'ದಲಿತಜನ' ನೋ.

**ದಳಿತಮರ್ಯಾದ** (ನಾ). ಮರ್ಯಾದೆ ಇಲ್ಲದವನು; ನೀತಿಯಿಲ್ಲದವನು; ಮಾನಗೇಡಿ: ಖಳನ ಧೂರ್ತನ ನಾಸ್ತಿಕನ ಚಂಚಳನ ಪರನಿಕ್ಷೇಪಹಾರಿಯ ದಳಿತಮರ್ಯಾದನ ಕೃತಘ್ನನ ಭರ್ತೃನಿಂದಕನ . . . ವಿಕಳವ್ರತನ ಲೋಕಾವಳಿಗಳಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ (ಕುಮ್ಮಾದ್ರೋ. ೮-೩೮).

[ ಸಂ. ದಲಿತಮರ್ಯಾದ (ದಲಿತ + ಮರ್ಯಾದಾ + –) ]

**ದಳಿತಮಾರ** (ನಾ). ಕಾಮನನ್ನು ನಾಶಮಾಡಿದವನು; ಮನ್ಮಥನನ್ನು ಗೆದ್ದವನು: ಜಯ ಜಿನೇಂದ್ರ ನತಸುರೇಂದ್ರ ದುರಿತದೂರ ದಳಿತಮಾರ (ಅಜಿಪು. ೭-೧೫ ರಗಳೆ). [ ಸಂ. ದಲಿತಮಾರ ]

**ದಳಿತಾಂಬುಜ** 'ದಲಿತಾಂಬುಜ' ನೋ.

**ದಳಿತಾಂಬುಜನೇತ್ರ** 'ದಲಿತಾಂಬುಜನೇತ್ರ' ನೋ.

**ದಳಿತಾಬ್ಜ** (ನಾ). ೧. ಅರಳಿದ ತಾವರೆ,-ಕಮಲ: ದಳಿತಾಬ್ಜಪ್ರಸರಂ ಸರಂ ಕುಸುಮಮಮಾಳಾರಾಮಮಾರಾಮಮಂ (ಜಗವಿ. ೨-೨). ೨. ಅರಳಿದ ಕಮಲಗಳನ್ನುಳ್ಳದು; ಬಿರಿದ ತಾವರೆಯಿಂದ ಕೂಡಿದುದು. ೧,೨: ಕೊಳಗಳ್ ದಳಿತಾಬ್ಜಂಗಳ್ ದಳಿತಾಬ್ಜಂಗಳ್ ಸಮೃದ್ಧಮಧುಗಳ್ . . . ಬನದೊಳ್ (ಕಾವ್ಯಾವ. ೬೨೬). [ ದಳಿತ (= ದಲಿತ) + ಅಬ್ಜ ]

**ದಳಿತೇಂದೀವರ** (ನಾ). ಅರಳಿದ ಕನ್ನೈದಿಲೆ: ಒಂದಿನಿತು ಧೈರ್ಯಮಂ ದಳಿತೇಂದೀವರನಯನೆ ತಾಳ್ದು (ಚಂದ್ರಪು. ೮-೯).

[ ದಳಿತ (= ದಲಿತ) + ಇಂದೀವರ ]

**ದಳಿತೇಕ್ಷಣೆ** (ನಾ). ತೆರೆದ ಕಣ್ಣುಳ್ಳವಳು; ಬಿಡಂಗಣ್ಣವಳು: ಬಿಮರ್ತುದು ತನುಶಶಿಮಣಿಶಲಾಕೆ ದಳಿತೇಕ್ಷಣೆಯಾ (ಲೀಲಾವ. ೭-೯೦).

[ ಸಂ. ದಲಿತೇಕ್ಷಣಾ (ದಲಿತ + ಈಕ್ಷಣ + –) ]

**ದಳಿಯಿಸು** 'ದಳಿಸು₁' ನೋ.

**ದಳಿವ** 'ದಳಿಂಬ' ನೋ.

**ದಳಿವಿಡಿ** (ಕ್ರಿ). "ಕೂಡಿಸು, ತೆತ್ತಿಸು, ಹತ್ತಿಸು, ಕಟ್ಟಿಸು" (ಆದಿಪು. ಕೋಶ): ಹಾರಾದ್ಯಾಭರಣಂಗಳಿನಾ ರೂಪಾಶ್ಚರ್ಯಮಾಗೆ ಮಾಣಿಕಚಟ್ಟಂ ನೀರಂಜಿಸಿ ದಳಿವಿಡಿದ ಮಹಾರತ್ನದ ದೊರೆಗೆಮಂದುದಾ ಸ್ತ್ರೀರತ್ನಂ (ಆದಿಪು. ೪-೪೨). [ ದಳಿ₀ (<ದಳಿ₁) + ಪಿಡಿ₁ ]

**ದಳಿಸು₁** (ಕ್ರಿ). ಅರಳು; ದಳ ಬಿಡು: ಇಂದು ಕೆಂದಾವರೆಯ ದಳ ದಳಿಸಿ ದಾಳಿಯಲಿ ಗಂಧದೌತಣ ಹೋಗಿ ಬರುವ ಜನಕೆ (ನಡಬಂ. ೨೦-೧).

[ ದಳ₂ (= ದಲ) + – ಇಸು₂ ]

**ದಳಿಸು₂, ದಳಿಯಿಸು** (ಕ್ರಿ). ೧. ನಾಶಮಾಡು; ಹಾಳುಮಾಡು: ಎನ್ನಂ ದಹಿಸಿ ದಳಿಸುವ ದವಾಗ್ನಿಗೆಯುನ್ನತಿಕೆಯು ಸತ್ತ್ವಮನಿರದೊದವಿಪ

. . . ಗಾಳಿ ಎನ್ನೊಳೆ ಪುಗೆ ಕೇಡೆನಗಿರದಪ್ಪುದು (ಜಯಕಾ. ೧೫-೨೭).
**ದಳಿಯಿಸು :** ೨. ಸೀಳಂ ; ಬಗಿ: ಅಸುಹೃತ್ಕರಿಯಂ ಹಲಿ ದಳಿಯಿಸು ವಂದುಚ್ಚಳಿಸಿ ಪುದಿದ ನೆತ್ತರ ಕೆಂಪಾಗಸದೊಳ್ ತೋಱುವುದಿನ್ನುಂ ಕಿಸು ಸಂಜೆಯ ನೆವದೆ ದಿವದ ರಾತ್ರಿಯ ಪುಗಿಲೊಳ್ (ಜಗವಿ. ೮-೪೪).

[ ದಳನ ( = ದಲನ) + – ಇಸು$_3$ ]

**ದಳೆ$_1$ (ಕ್ರಿ).** ೧. (ಮರದಲ್ಲಿ ಎಲೆ, ಹೂವು, ಹಣ್ಣು ಮೊದಲಾದುವು) ಒತ್ತಾಗಿ ಬೆಳೆ; ದಟ್ಟವಾಗಿ ಬೆಳೆ; ವಿಪುಲವಾಗು: ಮುಗಿಲ್ಗಳತಿ . . . ಪೆರ್ಮಳೆಯನು ಸೂಸದು ದಳೆದ ಪೂ ತಳಿರ್ಗಳಿಂಪಿನ ಸೊಂಪು ಮಾಸದು ತರುಗಳಲ್ಲಿ ಪಣ್ಕಾಯ್ಗಳಂ ಬೀಯಲೀಸದು ಸಮಸ್ತ ಋತುಸಮಯಂ ಗಳಚಲೇಂದ್ರತನುಜೆ ತಪಮಿರೆ ಬನದೊಳು (ಜೈಮಿಭಾ. ೧೬-೧೭). ೨. ಹೊಲಿಗೆ ಹಾಕು ; ಹೊಲಿ : ಸಕಲ ಶರೀರದಂಗಿಯ ಪೊಲಿದು ವಾಯುಃ ಕರ್ಮದೆಳೆಗಳನು ಸೇರಿಸಿಯೆ ದಳೆದಂಬರವನು ವಿಸ್ತಾರದಾಕಾಶವನು ಮಿಗೆ ಗೂಡಾರವಂ ಪೊಲಿದೆತ್ತಿದಂ ಕನಕಾದ್ರಿಕಂಬದೊಳು (ಶಂಕದಾ. ೪-೩೨). ೩. (ಮೈ ಮೇಲೆ ಸಿಡುಬು ಮುಂತಾದುವು) ಸಂರಿ : 'ತಳೆ$_1$' ಪರಾ. [ ದೇ.॥ ತಮಿ. ತಳೈ, ತಟೈ; ಮಲ.ತಟಿ ]
**ದಳೆ$_2$** 'ತಳೆ$_3$' ನೋ.
**ದಳೆ$_3$ (ನಾ).** ೧. ಎರಡು ಬಟ್ಟೆಗಳ ಅಂಚುಗಳನ್ನು ಜೋಡಿಸಿ ಹೊಲಿದ ರೇಖೆ ; ಕೂಡು ಹೊಲಿಗೆಯ ರೇಖೆ : (ಕ). ೨. ಗದ್ದೆಯ ಹಾಳೆ ; ಕಾಲುವೆ ದಂಡೆಯ ಗದ್ದೆ ಖ ೧ಕ್ಕೆ ದಳೆವೈನ ಮೊದಲ ದಳೆ ೧ಕ್ಕೆ ಸೀಳು ೩ಕ್ಕೆ ಖ ೪ ಸೀಳು ೩ಕ್ಕೆ ಖ ೪ ಮೂರನೆ ದಳೆ ಸೀಳು ೨ಕ್ಕೆ ಖ ೪ ನಾಲ್ಕನೆ ದಳೆ ಸೀಳು ೨ಕ್ಕೆ ಖ ೧೦ ಅಂತೂ ಸೀಳು ೧೦ಕ್ಕೆ ದಳೆ ೪ಕೆಖ ೧೦ (ಎಕ. XVI, ಚಿಕ್ಕನಾ. ೫೩-೧೬ ; 1639).

[ ದೇ.॥ ತಮಿ. ತಳೈ ]

**ದಳೆಕಟ್ಟು (ಕ್ರಿ).** (ಹಾಲು ಕರೆಯುವಾಗ) ಹಸು ಮೊದಲಾದುವುಗಳ ಕಾಲಿಗೆ ಹಗ್ಗವನ್ನು ಕಟ್ಟು : (ಕ್ಯಾಂಡರ್).

[ ದಳೆ$_2$ (< ತಳೆ$_3$) + ಕಟ್ಟು$_1$ ]

**ದಳೆಯಿಕ್ಕಿಸು (ಕ್ರಿ).** ದನದ ಕಾಲುಗಳಿಗೆ ಹಗ್ಗವನ್ನು ಕಟ್ಟಿಸು : ಕಱುವ ಕಟ್ಟುವ ಲಾಲಿಸುವ ಮೈದುಱಿಸಿ ದಳೆಯಿಕ್ಕಿಸುವ ಕಱುಗಳ ಕರೆಕರೆದು ಮುಂಡಾಡಿ ತಟ್ಟುವ . . . ಲೀಲೆಯಲಿ ಹರಿಯಿರೆ ಕಂಡನಕ್ರೂರ (ಅಕ್ರೂಚ. ೨-೫೨). [ ದಳೆಯಿಕ್ಕು (<ತಳೆಯಿಕ್ಕು) + – ಇಸು$_3$ ]
**ದಳೆಯಿಕ್ಕು** 'ತಳೆಯಿಕ್ಕು' ನೋ.
**ದಳೆಹಾಕು (ಕ್ರಿ).** = ದಳೆಕಟ್ಟು : ಈ ಹಸುವಿಗೆ ದಳೆಹಾಕದಿದ್ದರೆ ಹಾಲು ಕರೆಯಲು ಆಗುವುದಿಲ್ಲ. (ರೂಢಿ).

[ ದಳೆ$_2$ (<ತಳೆ$_3$) + ಹಾಕು (< ಪಾಯ್ಕು$_1$) ]

**ದಳ್ದಳಿ** 'ದಟ್ದಱಿ' ನೋ.
**ದಳ್ದಳಿಸು** 'ದಳದಳಿಸು' ನೋ.
**ದಳ್ಳಾಳ** 'ದಲ್ಲಾಳ' ನೋ.
**ದಳ್ಳಾಳತನ, ದಳ್ಳಾಳ್ತನ (ನಾ).** ೧. ಮಧ್ಯಸ್ಥನಾಗಿರುವಿಕೆ : ನಮ್ಮೂರಿನಲ್ಲಿ ಮೂರು ಅಂತಸ್ತಿನ ಜನರಿದ್ದರೆಂದು ಧಾರಾಳವಾಗಿ ಹೇಳಬಹುದು. ಒಂದು ಯಜಮಾನಿಕೆ, ಎರಡನೇದು ಆಳುತನ, ಮೂರನೇದು ಇವರಿಬ್ಬರ ದಳ್ಳಾಳತನ (ಹುಟ್ಟಿಹ. ೬೭). **ದಳ್ಳಾಳ್ತನ:** ೨. ದಲ್ಲಾಳಿಯ ವೃತ್ತಿ ; ಇನ್ನೊಬ್ಬರ ಮಾಲಿಗೆ ಗಿರಾಕಿಯನ್ನು ಹೊಂದಿಸಿಕೊಡುವ ಕೆಲಸ : ನಗರದೊಳಗಿನ ವ್ಯಾಪಾರ ಮಾತ್ರವಲ್ಲ, ಹೊರನಾಡುಗಳ ವ್ಯಾಪಾರೀ ದಳ್ಳಾಳ್ತನವೂ ಅವರಿಗಿತ್ತು (ಕಾಬಝಾ. ೭೫).

[ ದಳ್ಳಾಳ (< ದಲ್ಲಾಳ) + – ತನ ]

**ದಳ್ಳಾಳಿ** 'ದಲ್ಲಾಳಿ' ನೋ.
**ದಳ್ಳಾಳಿತನ** 'ದಲ್ಲಾಳಿತನ$_1$' ನೋ.
**ದಳ್ಳಾಳ್ತನ** 'ದಳ್ಳಾಳತನ' ನೋ.
**ದಳ್ಳಿಸು (ಕ್ರಿ).** ೧. ಉರಿಯೇಳು ; ಭುಗಿಲಿಡು ; ಪ್ರಜ್ವಲಿಸು ; ಧಗಧಗಿಸು : ನಿಶಾಚರಬಲಮಱಿಮಱಿಗಾದ ಕಾಡನಳುರ್ವ ಬೇಗೆಯ ದಳ್ಳುರಿಯಂತೆ ದಳ್ಳಿಸಿ ಕೊಳ್ಳೆಂದರಾತಿಬಲಮನಳುರೆ . . . ಬಂದು ತಾಗಿದಾಗಳ್ (ಪಂಪಭಾ. ೧೨-೭ ವ) ; ಅದ್ಭುತನಟನಿಟಿಲಾಲೋಲಕೀಲಾಕ್ಷಿಪೋಲ್ ದಳ್ಳಿಸೆ ಕೋಪಾರಕ್ತನೇತ್ರಂ (ಗದಾಯು. ೭-೩೦) ; ಶಿಶಿರೈಕ ನಿಧಾನಮಪ್ಪ ಚಂದನದೊಳೆ ಪುಟ್ಟಿ ಕಿಚ್ಚು ಸುಡದಿರ್ಪುದೆ [ ತತ್ತಶಮೈಕಕಾರಣಂ ವನನಿಧಿಯಾದೊಡೇ] ನುರಿಯದಿರ್ಪುದೆ ದಳ್ಳಿಸಿ ಬಾಡಬಾನಲಂ (ಕಾದಂಪೂ. ೫೪೦); ದಳ್ಳಿಸೆ ವಹ್ನಿಜ್ವಾಲೆ ದೀರ್ಣಾನನಕುಹರಸಹಸ್ರಂಗಳಿಂ . . . ಫಣಸಹಸ್ರಂಗಳಂ ಬಿರ್ಚಿ ಕಣ್ಗರ್ವಿಸಿ ವಜ್ರಾವರ್ತಚಾಪಂ ಪಡೆದುದು ಭಯಮಂ ಕಾಳಕಾಳಾಹಿರೂಪಂ (ಪಂರಾಮಾ. ೫-೭೪) ; ಘೃತಾಹುತಿಪಡೆದನಲನಂತೆ ಮಿಗೆ ದಳ್ಳಿಸಿದಂ (ಶಮದ. ೨೩೧ ಪ್ರಯೋ) ; ಒಡನೊಡನೆ ಕೈಮಾಡಿದನು ಕೈಗಡಿಯನಂಬಿನ ಧಾರೆ ದಳ್ಳಿಸಿ ಕಿಡಿಗೆದಱಿದವು ನೃಪನ ರಥಸಾರಥಿ ಹಯಾಳಿಯಲಿ (ಕುವ್ಯಾಶ. ೨-೫೭) ; ಉಕ್ಕಱುವ ಕೋಪಾಗ್ನಿ ದಳ್ಳಿಸಿ ದಿಕ್ಕುಗಳನಳ್ಳಿಱಿಯೆ ಲಕ್ಷ್ಮಣನೆಕ್ಕತುಳದಲಿ ಬಂದನು (ತೊರರಾ. ೨-೩-೦೦) ; ಕಡಲೊಡಲ ವಡಬಂ ಬಿಡದೆ ತೀಡುವ ಬಿಱುಗಾಳಿಯ ತೀಟದಿಂ ದಳ್ಳಿಸಲೊಡಮೊಡೆಗೊಂಡ ಬೆಟ್ಟುಗಳ್ ಕರಂ ಸೀಕರಿಪೋಗೆ ಪುಟ್ಟಿತಕ್ಕುಂ (ರಾಮಾಶ್ವ. ೨-೨೯). ೨. ಸುಡು ; ದಹಿಸು : ವಿಷಮನಹಿರಾಜನನಿತಱಿಂೞುಂಗುಳೆಯಾ ವಿಷಜ್ವಾಲೆಯಾ ಋಷೀಶ್ವರನ ದಳ್ಳಿಸಲಾಗಳು (ಪಾಸೋಪು. ೧೦-೨೦೬). ೩. ಕವಿ ; ಆವರಿಸು ; ಮುತ್ತು ; ವ್ಯಾಪಿಸು : "ಅಳುರ್ಕೆಯೆಂದುಂ ದಳ್ಳಿಸಿತೆಂದುಂ ಆವರಿಸಿದುದು". (ಕಶಸಾ ೬೬-೪೭೭) ; "ದಳ್ಳಿಸಿತೆಂದಳುರ್ಕೆಯೆಂದಾವರಿಸಿದುದಕೆ ಪೊಸನಾಮಮುಕ್ಕು" (ಕಬ್ಬಿಕೈ. ೫೨); ಇಂಚರಮಂ ವಿಪಂಚಿ ಮೆಱೆದತ್ತಿಲ್ಲೇಕೆ ತನ್ವಂಗಿ ನಿನ್ನ ಸಭಾಸದ್ಮದೊಳೇಕೆ ದಳ್ಳಿಸಿದುದಿಲ್ಲುತ್ತಾನ ವಂಶಸ್ವನಂ (ಮಲ್ಲಿಪು. ೪-೯) ೪. ಹೆಚ್ಚು ; ಉಕ್ಕೇರು ; ಉಕ್ಕು : ದಳ್ಳಿಸಿ ಕುಕಿಲುತ್ತುಂಬುಧಿಯುಲ್ಲೋಲಂ ನೆಗಟ್ ನಲಿದು ನರ್ತಿಸಿ ನಡೆದತ್ತಳ್ಳಾಡೆ ನೆಲಂ ಬಲಮುದು ಕೊಳ್ಳೆಂದು ಗುಹಾರವಂ ಪೊದಱ್ದೆಸೆವಿನೆಗಂ (ಆದಿಪು. ೧೩-೫೩) ; ಕೊಳ್ಳೆನೆ ಕೊಳ್ಳಿವೀಸೆ ಪಡೆಯುಂದೆರಡುಂ ದಿಗಧೀಶರೋಡಿದರ್ . . . ಎತ್ತಲುಂ ದಳ್ಳಿಸಿದತ್ತು ವೀರರಸವಾರಿಧಿವಾತಮಹಾಪ್ರಘಾತದಿಂ ನಿಲ್ಲದೆನಿಪ್ಪನಂ ರವಳಿ ಘೋಷಿಸೆ ಭೈರವಮಾದುದಾರಣಂ (ನೇಮಿಪು. ೧೦-೦೨೩) ; ತಿರ್ದುವಂ ಪ್ರಸರದ್ದಂತಿಯ ದಂತದೊಳ್ ಹರಿಯ ದಂಷ್ಟ್ರಾಲೇಖೆಯುಂ ಕಿಟ್ಟಿ ತೆತ್ತಿಸುವಂ ಲೀಲೆಯೊಳರ್ಧಚಂದ್ರಶರಮುಂ ಮಾಟ್ಟಟ್ಟಿಯಿಂದಣ್ಣು ದ[ಪಾಠಾಂ. ಮ]ಳ್ಳಿಸೆ ಸಿಂಹೀಶತನೇತ್ರದತ್ತಪತಿ ಶೋಕಾವ್ಯಂದಕಂ ವಿಂಧ್ಯಕಂ (ಅರ್ಧನೇ. ೩-೫೩). ೫. ಹೊಳೆ ; ಥಳಥಳಿಸು: ದಿವಿಜೇಂದ್ರಭವನಮೆಂಬೀ ನಿವಾಸದಿಂದತ್ತ ಮತ್ತೆ ಮೇಲಿರ್ದಪುದೆಂದವಗಯಿಪವೊಲಲ್ಲಿಯ ವಾತವಿಧೂತವಿನೂತಕೇತುಗಳ್ ದಳ್ಳಿಸುಗುಂ (ಸುಕುಮಾ. ೧೦-೪೯); ದಾಂಗುಡಿವಿಟ್ಟು ದಳ್ಳಿಸುವ ಕೆಂದಳದಿಂದೊಸೆದೆತ್ತಿ ಲಕ್ಷ್ಮಿ ಕಾಮಂಗೆ ಮಗಂಗೆ ಶೈಶವನಿರೀಕ್ಷಣಕೇಳಿಗೆ ನೇತ್ರಸೂತ್ರದಿಂ ದಿಂಗಡಲೆಂಬ ಸೆಜ್ಜೆವನೆಯೊಳ್ತೆರದೊಟ್ಟಿಲ ಮೇಲೆ ಕಂಬರಲ್ದಿಂಗಣೆಗಟ್ಟಿ ದಂತುದಯಶೈಲಶಿಖಂಡದೊಳಿಂದುಮಂಡಲಂ (ಮಲ್ಲಿಪು. ೭-೨೯). ೬. ಮಿಂಚಾಚು; ಮಿಂಬರಿಸು: ಅಳಿನೀಲೀಕಂಚುಕಂ ದಳ್ಳಿಸೆ ಮೊಲೆಯಲೆಪಿಂ ಕಯ್ಯೆಸೋಂಕಿಂದೆ ಕೆಂಪಂ ತಳೆದೊಪ್ಪಂಬೆತ್ತ ಪೊಂಬೆತ್ತದ ಸಳಿಗೆ ತಳಿರ್ಮಾಡಿದಂತಾಗೆ . . . ಎಸೆದು ಬಂದಳ್ ಪ್ರತೀಹಾರಿಯೊರ್ಬಳ್ (ಲೀಲಾವ. ೪-೭೩); "ನೂಕಲ್ಪಡಂ" (ಪ್ರಥಣ್ಣ). ೭. ಅದಿರು ; ಅಳ್ಳಾಡು ; ಅಲುಗು: ಸಿಡಿಲು ಹೊಡೆದಡೆ ಸಿಗುಱುದೋಱದ ಕಡುಹಿನಗ್ಗದ ಶೈಲನುಗ್ಗಿಯದಡಿಗೆ ದ[ಪಾಠಾಂ. ಧ]ಳ್ಳಿ ಸುವುದೆ (ತೊರರಾ. ೬-೨೭-೨೮).

೮. (ಆಲಂ) (ಕೋಪ, ಗರ್ವ, ಅಹಂಕಾರ ಮೊದಲಾದಂವುಗಳಿಂದ) ಕೆರಳಂ ; ಉರಿ ; "ಗರ್ವದಿಂದ ಮೆರೆ" (ಪಂಪನಿ) : ಆ ದುಶ್ಶಾಸನನಂ ಪೊರಳ್ಚಿ ರಣದೊಳ್ ಕೊಂದೀ ಮರುತ್ಪುತ್ರನಿಂತಾದಂ ದಳ್ಳಿಸೆ ನೋಡಿ ನೋಡಿ ಪ್ರದುವಾಟಿಂತಕ್ಕುಂ (ಪಂಪಭಾ. ೧೩-೮೮) ; ಬಸಿವ ರಕುತವ ಬಳಿದು ಖಾತಿಯ ಮಸಕದಲಿ ಕೈಮಟಿದು ಮಿಗೆ ದಳ್ಳಿಸುತ ಹೊಗರಿಡು ತೌಡುಗಚ್ಚುತ ಹುಬ್ಬುಗಳ ಬಲಿದು . . . ಪುನರಪಿ ಕಟಿದನಂಬುಗಳ (ಕುಮ್ಮಾಭೀ. ೯-೩೯). ೯. (ಆಲಂ) ಸಡಗರಿಸಂ ; ಸಂಭ್ರಮಿಸು ; ಅತಿ ಆನಂದಪಡು : ಗಿಳಿಗಳೊಳೆ ಗಳಪಿ ಮೊಟಿವಳಿಕುಳದೊಡನಾಳ್ಕಿಸಿ ಪುರುಳಿಯೊಡನೆಳಸಿ ನವಿಲ್ಗಳ ಬಳಗದೊಡನೆ ನರ್ತಿಸಿ ವಿಳಾಸಿನೀನಿವಹ ಮಾಗಳೀಂ ದಳ್ಳಿಸಿತೋ (ಆದಿಪು. ೧೧-೮೩). [ ದಳ್ + – ಇಸು₃ ]

**ದಳ್ಳಿಟಿ** (ಕ್ರಿ). ೧. ಶಿವಿ ; ಇರಿ ; ಚುಚ್ಚು : ಮುಗಿಲಂ ಮರಗಳ ತುದಿಗೋಡುಗಳೊಳೆ ದಳ್ಳಿಟಿದೊಡುದಿರ್ದ ಕೆದಟಿದ ಕಿಟುದಾರೆಗಳ್ಗನಿಪುವು ಕಾನನದೊಳೊಗುವಿಗೆ ಪರೆದಿರ್ದ ಪಿರಿಯ ನೆಲ್ಲಿಯ ಕಾಯ್ಗಳ್ (ಲೀಲಾವ. ೬-೩೪). ೨. ಕಾಂತಿ ಹೊಂದು ; ಶೋಭೆಯನ್ನು ಪಡೆ ; ಹೊಳೆ : ಏಟಿ ವಿಮಾನವುಂ ಕೃತಕಗಾಯಿಕೆಯರ್ ಧವಳಾಭ್ರಕೂಟದೊಳ್ ತೋಱುವ ಮಿಂಚಿನಂತೆ ಮುಗಿಲೊಡ್ಡೊಡೆದಿಬ್ಬಗಿಯಾಗಿ ನಿರ್ಭರಂ ಪಾಟಿ ಪತಾಕೆಗಳ್ ಮಗುಟ್ದು ಮಿಳ್ಳಿಸಿ ದಳ್ಳಿಟಿದಾಡೆ ಯಾನವೇಂ ಕೀಟಿದುದೋ ನಭಃಪ್ರಸ್ಮತಿಗಿಟ್ಟೆಡೆಯಾದುದೆಂಬಿನಂ (ಶಾಂತಿಪು. ೨-೮೩) : ಒಳ್ಳಾನೆಗೋಡಲಟಿಯದ ಬೆಳ್ಳಾಳವೊಲಗಿದು ಕಂಡು ಲಾವಣ್ಯರಸಂ ತಳ್ಳಂಕಂಗುಟ್ಟೆ ಮಿಳ್ಳಿಸಿ ದಳ್ಳಿಟಿದಾಡುವ ಜಿನೇಂದ್ರಶಿಶುವಂ ತಳೆದಿಂ (ಶಾಂತಿಪು. ೧೦-೮). 'ಅಳ್ಳಿಟಿ' ಪರಾ. [ ದಳ್ + ಇಟಿ₁ ]

**ದಳ್ಳುಬಾಟು** 'ತಳ್ಳವಾಟು₁' ನೋ.

**ದಳ್ಳುರಿ₁** (ಕ್ರಿ). ೧. ತೀವ್ರವಾಗಿ ಉರಿ ; ಭುಗಿಲಿಡಂ ; ಪ್ರಜ್ವಲಿಸು : ೨. (ಆಲಂ) ಕೊಬ್ಬಿನಿಂದ ಉರಿ ; ಗರ್ವದಿಂದ ಮೆರೆದಾಡಂ. ೧, ೨ : ಮೋಹದಿಂ ನೀಂ ಮಾಡಿದ ಪಲ್ಲವು ಪೊಲ್ಲಮೆಗಳಂ ಸ್ಮರಿಸಿರ್ದೊಡಂ ನೀಂ ಕೊರ್ವಿ ಗಾಳಿಯೊಳ್ಕೂಡಿದ ಕಿರ್ಚಿನಂತೆ ದಳ್ಳುರಿದು ಪೊಟಲೊಳಗೆ ಮುನ್ನಿನೆಡೆಗೀಗಳುಂ ಪಿರಿದಬ[ಬ್ಬ]ರಮುಂ ಮಾಡಿದೆ (ಧರ್ಮಾಮೃ. ೨-೯೯). [ ದಳ್ + ಉರಿ₁ ]

**ದಳ್ಳುರಿ₂** (ನಾ). ೧. ಭುಗಿಲಿಡುವ ಕಿಚ್ಚು ; ದೊಡ್ಡ ಉರಿ ; ಪ್ರಜ್ವಲಿಸುವ ಜ್ವಾಲೆ: "ದಳ್ಳುರಿಯುಂ ಪೇರುರಿಯುಂ ಘನಜ್ವಲಿತದೊಳು" (ಶಬ್ದಮಂ. ೧೩) ; ಮುಳಿಸಿನ ದಳ್ಳುರಿಗಳನುಗುಟುತ್ತುಂ ಚಕ್ರರತ್ನಮಂ ಬಗೆದು ಬೆಸಸಿದಂ ಭರತೇಶಂ (ಆದಿಪು. ೧೪-೧೧೫) ; ವಿಜಾತಿರೂಪಮಲ್ಲದ ವಿನತಾಸುತಂ ಮಿಳಿರ್ವ್ವ ದಳ್ಳುರಿಯಲ್ಲದ ವಹ್ನಿ ಕಾಳನಲ್ಲದ ಜವನಬ್ಧಿ ಮಧ್ಯಗತನಲ್ಲದ ಬಾಡಬಂ (ಕಇ. V, ೫೨-೧೮ ; 1087) ; ಸೋಂಕಿದ ಗಾಳಿ ದಳ್ಳುರಿವೊಲಾದುದು ಪೊಕ್ಕ ಸರೋವರಾಂಬು ಕಾಯ್ಪ್ಪಿಂ ಕುದಿದತ್ತು . . . ನಿಜಾಂಗತಾಪದಿಂ ಪಂಕರುಹಾಕ್ಷಿ ಕಾಮಶಿಖಿ ಪೆಣ್ಬರಿಜಂ ತಳೆದಂತೆ ತೋಟಿದಳ್ (ಕಾವ್ಯಸಾ. ೭೦೩) ; ಬಗೆದು ಧಂಧಗಧಗಧಗಂ ಘುಳುಘುಳೆಂ ದುಬ್ಬಿ ನೆಗೆದು ದಳ್ಳುರಿ ಬಳ್ಳಿವರಿದು ಕತ್ತಲಿಸಿ . . . ದಾವಾಗ್ನಿ ಮುತ್ತಿತ್ತು ನಾಲ್ದೆಸೆಯನಂ (ಹದಕಾ. ೧೦-೬); ಅರಗಿನರಸನ ಬಾಗಿಲಲಿ ದಳ್ಳುರಿಗೆ ತಡವೇ (ಕುಮ್ಮಾದ್ರೋ. ೫-೪೧) ; ಆ ದಳ್ಳುರಿಯ ಕೆಂಬೊಗೆಯು ಎತ್ತಲೂ ಚಿಮ್ಮಿ ಕಾಡ ದಾರಿಗರನ್ನು ಭೀತಿಗೊಳಿಸಿದೆ (ನೂರಜ. ೧). ೨. ಬಿಸಿ ; ಝಳ ; ತಾಪ ; ಶಾಖ: ಸಕಲದಿಗಂತರಂಗಳೊಳ್ ದಳ್ಳುರಿಯನುಗುಟ್ಟಿ ತೀವ್ರರಶ್ಮಿಜಾಲಮುಂ ಪಸರಿಸುತ್ತುಂ ನಿದಾಘಸಮಯ ಸಹಸ್ರಭಾನುಮಂಡಲಂ ಮಧ್ಯಾಹ್ನವರ್ತಿಯಾಗೆ (ಕಾದಂಬ. ೪೫೬) ; ನಾಸಿಕದುಸಿರ ದಳ್ಳುರಿ ಮೂಕುತಿ ಗಂಧಗ್ರಾಸ ಸಂತಾಗಿ ಮೆಯ್ಯೊಳಗೆ ಪೂಸಿದ ಸಿರಿಗಂದ ಕರಿಕಾದುದು (ಮೋಹತ. ೨೮-೧೬) ;

ದಳ್ಳುರಿಗರೋತ್ತಮ = ವಿಷಜ್ವಾಲೆಯುಳ್ಳ ಮಹಾಸರ್ಪ : ರಜ್ಜುವದೆತ್ತ ದಳ್ಳುರಿಗರೋತ್ತಮನೆತ್ತ ವಜ್ರವೆತ್ತಾಲಿಕಲ್ಲೆತ್ತ ಮಜ್ಜೀವಿತೇಶ್ವರನೆತ್ತ ನೀನೆತ್ತ ಕೇಳ್ ದುರ್ಜೀವಿ ತೆರಳೆಂದಳೊಲಿದು (ಮೋಹತ. ೭-೨೪); "ದಳ್ಳುರಿಯಂತೆ ಉರಿಯುತ್ತಿರುವ ವಿಷಜ್ವಾಲೆಯಿಂದ ಮಹಿಮೆಂ ಹೊಂದಿದ ಕೃಷ್ಣಸರ್ಪ (?)" (ಮೋಹತ. ಅಡಿಟಿ) . ದಳ್ಳುರಿಗೆಂಡ = ನಿಗಿನಿಗಿಕೆಂಡ ; ತಳಲುಗೆಂಡ : ಸಿರಿಖಂಡದನುಲೇಪ ತನುವಿಗತಿಶಯತಾಪ . . . ಪರಪಿದಸುಗೆಯ ತಳಿರ ತಂದ ದಳ್ಳುರಿಗೆಂಡ (ಸಾಂದಪು. ೮-೭೬). ದಳ್ಳುರಿ ಜ್ವಾಲೆ = ಧಗಧಗಿಸುವ ಉರಿಯ ನಾಲಗೆ : ಕಾಳುಕಿಚ್ಚಿದ್ದಡವಿಯನು ಕುಡಿನಾಲಗೆಯೊಳಳವಡಿಸಿ ದಳ್ಳುರಿಜ್ವಾಲೆ ತಗ್ಗಿದವೋಲು . . . ಸುರಪಾಲತನಯನ ತನಯನಸ್ತ್ರವಿಮಿಸಿದನು ರಣದೊಳಗೆ (ಕುಮ್ಮಾದ್ರೋ. ೬-೭೦). [ ದಳ್ + ಉರಿ₂ ]

**ದಳ್ಳುರಿತಿರುಳು** 'ದಳ್ಳುರಿದಿರುಳು' ನೋ.

**ದಳ್ಳುರಿದಿರುಳು, ದಳ್ಳುರಿತಿರುಳು** (ನಾ). ಉರಿಯುತ್ತಿರುವ ಬೆಂಕಿಯ ತಿರುಳಂ ; ಗಟ್ಟಿಕೆಂಡ : ಮುಳಿದು ಮಿಸೆಯ ಮುರಿದು ಹುಬ್ಬನು ಬಲಿದು ದಳ್ಳುರಿದಿರುಳನಕ್ಷಿಗಳೊಳಗೆ ಪಸರಿಸಿ ಘುಡುಘುಡಿಸಿ ರೋಮಾಳಿ ಸ್ಫನಿಮಿರೆ . . . ಭಾರ್ಗವದತ್ತಬಾಣಕೆ ನೀಡಿದನು ಕರವ (ಕುಮ್ಮಾದ್ರೋ. ೧೩-೫೧). ದಳ್ಳುರಿತಿರುಳು : ನೆರೆದುದಸುರರು ಕಾಲಕೂಟದ ಕರುವಿನೆರಕವೊ ಸಿಡಿಲ ದಳ್ಳುತಿರಿರುಳ ದಡ್ಡಿಯೊ ವಿಲಯಭೈರವನುಬ್ಬಟೆಯ ಪಡೆಯೊ . . . ಗಾಢಾಯ ತೇಜದ ದುರುಳ ದಾನವ ಭಟರು ಬಂದುದು ಕೋಟಿ ಸಂಖ್ಯೆಯಲಿ (ಕುಮ್ಮಾಅ. ೧೨-೨೯). [ ದಳ್ಳುರಿ₂ + ತಿರುಳು (<ತಿರುಳ್) ]

**ದಳ್ಳುರಿದುಱುಗಲು** (ನಾ). ಉರಿಯುತ್ತಿರುವ ಜ್ವಾಲೆಯ ಸಮೂಹ,– ಗುಂಪು ; ಜ್ವಾಲಾಸಮೂಹ : ಹೊಗೆಯನೊದೆದೊಳಬಿದ್ದು ಕಿಡಿಗಳ ನುಗಿದು ದಳ್ಳುರಿದುಱುಗಲನು ತನಿಬಿಗಿದು ಭೀಮನ ಥಡದ ಸುತ್ತಲು ಸೂಸಿ ತೆರೆಮಸಗೆ . . . ಉರವಣಿಸಿತಮಳಾಸ್ತ್ರ (ಕುಮ್ಮಾದ್ರೋ. ೧೯-೪೭); ಬಿಱುನಗೆಯಲಿಂದ್ರಾರಿ ದಳ್ಳುರಿದುಱುಗಲಿನ ಕೊಳ್ಳಿಗಳಲಿದ್ದ ಸೆಗೊಟಿಗ ದಂತಿರೆ ಕಟ್ಟಿದರು ಕಂಭದಲಿ ಹಳವಿಗೆಯ (ತೊರರಾ. ೫-೭-೧೦).

[ ದಳ್ಳುರಿ₂ + ತುಱುಗಲು (<ತುಱುಂಗಲ್) ]

**ದಳ್ಳುರಿಧಾರೆ** (ನಾ). ದಳ್ಳುರಿಯಂತೆ ಹೊಳೆಯುವ ಅಲಗಂ : ಸಾರಥಿಯ ಕೊಂದಲ್ಲದರ್ಜುನ ತೀರುವವನಲ್ಲೆನುತ ದಳ್ಳುರಿಧಾರೆಯಂಬೈದಱಿ ದೇವನನೆಸಲು (ಕುಮ್ಮಾದ್ರೋ. ೩-೫೪). [ ದಳ್ಳುರಿ₂ + ಧಾರೆ ]

**ದಳ್ಳೆನ್** (ಕ್ರಿ). 'ದಳ್' ಎಂದು ಶಬ್ದ ಮಾಡು: ಇವೆ ಕೋಪಾನಲಧೂಮ ಲೇಖೆಯೆನೆ ಪುರ್ವುರ್ವೆಟ್ಟು ಜರ್ವಲ್ ತಗುಳ್ದುವು . . . ಕೋಪಾನಲತಾಪದಿಂ ರಣರಸಂ ದಳ್ಳೆಂದು ಕಾಯ್ದುಕ್ಕುವಂತೆವೊಲಾಗಳ್ ಬೆಮರ್ಗಳ್ ಕಪೋಲತಲದೊಳ್ ತಳ್ಳೊಯ್ದುವಾ ದೈತ್ಯನಾ (ಪಂಪರಾಮಾ. ೯-೧೮) ; ನಿಶಾಚರನ ಕೋಪೋಗ್ರಾನಳಂ ಪೊತ್ತುತುಂ ಪೊಗೆಯುತ್ತುಂ ಕಿಡಿಗುಟ್ಟುತುಂ ಮಸೆಯುತುಂ ದಳ್ಳೆಂಬ ಭೋರೆಂಬ ಭುಗ್‌ಭುಗಿಲೆಂಬೇಟ್ಗೆಯ ನಾಂತು ಕೇಸುರಿಗಳಂ ಸೂಸಿತ್ತಗುರ್ವಪ್ಪಿನಂ (ಜಗವಿ. ೧೫-೯೦) ; ಜವದಿಂ ಬಂದುದು ದಳ್ಳೆನುತ್ತುರಿವ ಮೆಯ್ಯುಂ ಧೂಮದುರ್ಬೆಂಬ ಜರ್ಬುವ ಪುರ್ಬಂ . . . ರೌದ್ರಜ್ವರಂ ತಪ್ತಹೇಮವಿಭೂಷಂ ತ್ರಿಶಿರತ್ರಿಪಾದ ವರುಣಾಕ್ಷಂ ರೂಕ್ಷರಕ್ಷಾಯುಧಂ (ಜಗವಿ. ೧೮-೦೩). [ ದಳ್ + ಎನ್₁ ]

**ದಟದಟ, ದರದರ₁** (ನಾ). ಒಂದು ಅನುಕರಣ ಪದ: ದಟದಟ ಮೆಂದೆಟಿದು ಪುಯ್ಯಲಿಡೆಯಿಡೆ ಕೊಲ್ಗುಂ (ಅಜಿಪು. ೧೦-೨೮) ; ಧುಳುಧುಳುಂ ದೊಪ್ಪೆಂಬ ಗುಱುಗುಱು ಛಳಛಳಂ ಜೋಟಿಂಬ ದಟದಟ ದೊಳದೊಳೆಂಬೀ ಧ್ವನಿಗಳವನಿಗೆ ಭಯವನೀವುತಿರೆ (ಸಾನಂಚ. ೮-೦೩). ದರದರ₁ : ಕುರ್ಚಿಯನ್ನು ಕೈಗೆ ಎತ್ತಿಕೊಳ್ಳದೆ ದರದರ ಎಂದು ಎಳೆದು ನೆಲವನ್ನು ಗಾರು ಮಾಡಬೇಡ (ರೂಢಿ). 'ದರದರನೆ' ಪರಾ.

**ದಱದಱನೆ,** ದರದರನೆ (ಅ). (ಎಳೆದುಕೊಂಡು ಹೋಗುವಾಗ) ದರದರ ಎಂದು: ತಲೆನವಿರಂ ಪಿಡಿದು ದಱದಱನೆಟಿ³ದುಕೊಂಡು ಬಂದಂ (ವರ್ಧ್ಮಾಚ. ೧೧೭-೨೫); ದಱದಱನೆಟಿ³ಯೆಟಿ³ ಪಿಡಿಪಿಡಿ ತಱಿ³ತಱಿ³ . . . ಕೊಱಿ³ಕೊಱಿ³ಯೆಂದೊದಱಿ³ ಗಜಱಿ³ ಗರ್ಜಿಸಿ ಮುಳಿವರ್ (ಅಜಿಪು. ೧೧-೯); ಕಿಡಿಪೇಂ ಕರ್ಮಮನೊಳ್ಪಂ ಪಡೆವೆನೆನುತ್ತಿರಲಾತ್ಮನಾತ್ಮನ ಕಾಲಂ ಪಿಡಿದು ದಱದಱನೆ ಕರ್ಮಕ್ಕಳಿಪಿಂದೆಟಿ³ದೊಯ್ದು ನೂಂಕುಗುಂ ಸಂಸೃತಿಯೊಳ್ (ಸಮಪು. ೧೩-೫೨). **ದರದರನೆ :** ಹಿಂದೆ ಮುಂದೆ ನೋಡದೆ ದರದರನೆ ಎಳೆದೊಯ್ದರು (ರೂಢಿ). [ ದಱದಱ + – ಅನೆ$_1$ ]

**ದಳ** (ನಾ). ೧. ಬಲ ; ಸೈನ್ಯ ; ಪಡೆ : "ಪಡೆ, ಅಣಿ, ದಳಂ, ಒಡ್ಡು ಬಲಂ– ಈ ೫ ಸೇನೆ" (ಕಶಸಾ. ೧೪-೨೮೧); ಕೆದಱಿ³ ಚತುರ್ಬಲಂ ಬೆದಱಿ³ ತಳ್ತ ದಳಂ ಕೆಡೆದಟ್ಟಿ³ ತಟ್ಟಿ³ ಮಾಣದೆ ಪೆಱಗಿಟ್ಟು ಬಾಯ್ವಿಡೆ ಘಟಾಳಿ ಪಮಾಣದೆ ಪೆಣೆದಂ ಹರಂ ದಿಗಿಭದೊಳ್ ದಿಗಿಭಂ ಪೆಣೆವಂತೆ ಪಾರ್ಥನೊಳ್ (ಪಂಪಭಾ. ೮-೨೧); ನಾಲ್ಕುಂ ದಳಂ ನೂಂಕೆ ನುಗ್ಗುವೆಂ (ಕಬ್ಬಿಕಾ. ೧೫೪); ಊರವರ್ ಪುರದಿಂದಂ ಪೊಱಮಟ್ಟು ಪೊಕ್ಕು ದಳಮುಂ ನೆಗ್ಗುತ್ತೆ ನುಗ್ಗುತ್ತೆಯೊತ್ತರದೊಳ್ ಮುತ್ತಿದಿರಾಗೆ . . . ಶಿವಂ ಬಟ್ಟಾಡಿ ಬಿಟ್ಟೋಡಿದಂ (ಚಿಕವಿ. ೫-೨೨). ೨. ಕುದುರೆಗಳ ಪಡೆ ; ತುರಗಬಲ : "ದಳಂ = ತುರಂಗಬಲಂ, ಸಾ ಮಾ ನ್ಯ ಬ ಲ ಂ" (ಶಮದ. ಪರಿ. ೧). ೩. ಸೈನ್ಯದ ತುಕಡಿ ; ಸೈನ್ಯವಿಭಾಗ : "ತುರಂಗಬಲದೊಳಮಲ್ಪಬಲದೊಳಂ ದಳವೆಸರ್" (ಸಂಜೀವ. ೧೪).

**ದಳವೋಡೆಗಂಡ** = ಸೈನ್ಯವು ಓಡಿದಾಗಲೂ ಏಕಾಂಗಶೂರನಾಗಿ ಹೋ ರಾ ಡು ವ ವ ನು ; ಏಕಾಂಗಶೂರ ; ಒಂದು ಬಿರುದು : ಮಹಾಸಾಮನ್ತಂ ದಳವೋಡೆಗಣ್ಡನ್ದ್ರಮ್ಮಂಡಳಾಣ್ಮನುಜ್ಜನಿಭುಜಙ್ಗಂ ಶ್ರೀಮತ್ಪೊಸೂದ್ರಕಯ್ಯ (ಎಕ. XI, ಹೊಳಲ್ಕೆ. ೨೩-೭ ; 968).

[ P ಇದು ದ್ರಾವಿಡ ಶಬ್ದವೆಂದು ಕೆಲವರ ಅಭಿಪ್ರಾಯ ]

**ದಳಂಬಳನೆ** (ಅ). ಒಂದು ಅನುಕರಣಾವ್ಯಯ : ಸೀರ್ಪನಿ ಸಿಡಿಯೆ ತೆರೆ ಮಸಗೆ ಕೊಳಂ ತಳಮಳಮಾಗೆ ಮಿಾಂಗಳ್ ಮೊಯ್ಗರೆಯೆ ದಳಂಬಳನೆ ಕೈಕಾಲ್ಗಳೊಳೀಸುವ ಕಾವನ ಪಟ್ಟದಾನೆಗಳಂಬೋಲಾಡಿದರ್ ಬಾಲೆಯರ್ (ರಾಮಾಶ್ವ. ೧೨೩-೨೪). [ ದಳಂಬಳ$_0$ + – ಅನೆ$_1$ ]

**ದಳದುಳ,** ದಳದಂಳ$_2$, ದಳದುಳಿ, ದಳವುಳ, ದಳವುಳಿ, ದಳಾದುಳಿ, ದಳವುಳ (ನಾ). ೧. ಬಲವಾದ ಸುಲಿಗೆ ; ತುಂಬು ಸೂರೆ ; ಅಧಿಕವಾದ ಕೊಳ್ಳೆ ; ಹೆಚ್ಚಾದ ಲೂಟಿ : "ದಳದುಳಂ (ದಳವುಳಂ) = ಬಲ್ಸೂಱಿ³" (ಶಮದ. ಪರಿ. ೧) ; "ಬಲ್ಸೂಱಿ³ಯೊಳಂ ದಳದುಳವೆಂದೆನೆ" (ಕರ್ಣಾನಿ. ೮೨) ; ದಳದುಳವಾದುದಾಗಳಸಿಯೋಱಿ³ಸಿದೇ [ ಯೋ ] ಱಿ³ದು ಬಂದಿ ಬಂದಿ ದಂಡುಳಮೆಲೆ ದಂಡುಳಂ ಪಿಡಿದರಂಗನೆಯಂ ಪಿಡಿದೊಯ್ದರೆಂದು ತಲ್ಲಳಿ³ಸಿ (ಅನಂಪು. ೧೧-೭೩) ; ಗರಗರಿಕೆಯು ದಳದಂಳದ ಬಿಂಕದ ಬೀರರುಗ್ಗಡಣೆ ಪಿರಿದಾಗೆ . . . ಪಡೆ ನಡೆಯುತುಮಿರ್ದುದು (ರಾಮಾಶ್ವ. ೫೦-೮). **ದಳದುಳ$_2$ :** ೧. ಭಕ್ತಿದಳದುಳದಿಂದ ಬಂದಿಕಾಱರಾಗಿ ಬಂದು ಹೊಕ್ಕಡೆ ಬದನೆಯ ಕಾಯಿಗಳು ಬಾಣಲಿಂಗವಾಗವೆ ನಮ್ಮ ಬಸವಣ್ಣನ ದೃಷ್ಟಿ ತಾಗಲು (ಚನ್ನಬ. ಕ. ೮೯-೧೯೧) ; ಹುಸಿ ಕಳವು ದುಷ್ಕೃತಿ . . . ದಳದುಳ ನುಸುಳು ಹಿಂಸೆ ವಿವಾದ . . . ದೋಷಪ್ರಸರವಿಲ್ಲಾ ನೃಪನ ಕಾಲದೊಳ್ (ಜೀಮಂಚ. ೨-೫೨) ; ಬೆಳುಗವತೆಯ ನ್ಯಾಯಮಾಱಿಡಿ ಕಳವು ದಳದು[ಪಾಠಾಂ. ವು]ಳ ಬಂದಿ ಡಾವರ ಕೊಲೆ ಹುಸಿಗಳಿಲ್ಲಿವರ ರಾಜ್ಯದೊಳು (ಕುಮ್ಯಾಅ. ೧೪-೧೭) ; ಮರ್ಕಟರ ದಳದುಳದ ದೂಱಿ³ನ ದಕ್ಕಡೆಯತನ ಬಿದ್ದುದೈ ಕರ್ಣಕ್ಕೆ (ತೊರರಾ. ೪-೧೦-೧೭). ೨. ದಾಳಿ ; ಮುತ್ತಿಗೆ ; ಆ ಕ್ರ ಮ ಣ : ರಾಯಕುವರನ ಮದುವೆಗಬ್ಬದಳಾಯತಾಕ್ಷಿಯರನು ವಿಚಾರಿಸಿ ಹಾಯಿದನು ದಳದುಳದೊಳೊಂದು ವಿವಾಹಮಂಟಪಕೆ (ಕುಮ್ಯಾಅ. ೨-೩೨) ; ಗಿಳಿಯ ಹಿಂಡುಗಳೆತ್ತ ಗಿಡಿಗನ ದಳದುಳವು ತಾನೆತ್ತ ಭೀಮನ ಸುಳಿವು ಗಡ ಕಾಲೂಱುವವೆ ಕರಿಘಟೆಗಳೊಗ್ಗಿನಲಿ (ಕುಮ್ಯಾದ್ರೋ. ೨-೮೧). ೩. ಲೂಟಿ ಮಾಡುವ ಸೈನ್ಯ,–ದಳ : ಚರಣಗತಿಯಲಿ ಬಪ್ಪರಾ ಸರೋಜಾನನೆಯರೊಂಬತ್ತುಕೋಟಿ ಬರಲು ಅರಲ ಬಾಣ ಹೊಲಬುಗೆಡುವ ಕಾನನವೊ ಹಿಮಕರನ ಮ ನೆ ಗೊ ಲಿ ದು ದಾಳಿಯನಿಡುವ ದಳದುಳವೊ ವರತಪೋಧನರ ನಿಷ್ಠಾಮನಿಧಿಯಂ ಕಳುವ ಚೋರರೆನಲೆಯ್ತಂದರು (ಹಜಕಾ. ೩-೨೪). ೪. ಉತ್ಸಾಹ; ಸಡಗರ; ಸಂಭ್ರಮ: ಕವಿತೆ ಕಲ್ಪನಶಕ್ತಿ ವಿರಚಿಸುವಿಂದ್ರಜಾಲಗಳಲ್ಲವೆಯ್ ಕವಿಯು ಪಿಂತಣ ಜನ್ಮಕೋಟಿಯೊಡರ್ಚಿಯಾಳ್ಗೊಂಡನುಭವಂ ವಿವಿಧಕೃತಿ ಸಾಕ್ಷಿತೆ ತಪಂ ಸತ್ಯಾನುಸನ್ಧಾನಂಗಳಾನವನ ನೆನೆಪಿಂ ದಳದುಳದೆ ಸೌನ್ದರ್ಯಮನುವದಿಪುಜ್ಜುಗಂ (ಸ್ವಸಪ. ೧೮-೪೭). **ದಳದುಳಿ :** ೧. 'ದಳದುಳಿಗಾಱ' ಪರಾ. **ದಳವುಳ :** ೧. ಕಳವಿಂದೆ ಬಲ್ಪಿಂದೆ ದಳವುಳದಿನರ್ಥದಿಂ ಚೆಲುವೆಂಬ ತೊವಲ ಮಱಿ³ಗಱುವಿನಿಂದೆ ಪಲತೆಱದಿನಕಟ ಪರಲಲನೆಯರನೊಯ್ಯಲಾ ಪೊಲೆಮನದೆ ಕೆಡಿಸುವುದನೀಕ್ಷಿಸುವುದು (ಸಾನಂಚ. ೫-೧೮); ಹುಸಿ ನುಸುಳು ಡೊಳ್ಳಾಸ ಹಿಂಸಾವ್ಯಸನವಾಱಿಡಿ ಬಂದಿ ದಳವು[ಪಾಠಾಂ. ದು]ಳವಸುರಭಯ ದುರ್ಭಿಕ್ಷ ಎಂಬಿವರೆಸಕ ಹೊದ್ದದಯೋಧಿಪನ ಧರಣೀತಳಾಗ್ರದಲಿ (ತೊರರಾ. ೧-೩-೨೭). ೩. ಕಾಮನ ಕಾರಾಗಾರದೊಳಿರ್ಪಂತೆ ಕೇಳೀವನದೊಳಿರ್ಪ ಬಾಲಕಿಗೆ ಚಂದ್ರನ ದಾಳಿ ಅಳಿಗಳ ದಳವು[ಪಾಠಾಂ. ದು]ಳಂ ಬಸಂತನ ಬಂದಿ . . . ಶಿಶಿರೋಪಚಾರದ ದಂಡಣೆಯುಖಂಡಿತಮಾಗೆ (ಗಿರಿಕ. ೪-೧೧೮ ವ) ; ತಳಿತ ಝಲ್ಲರಿಗಳಿಗೆ ಗಗನದ ವಳಯುವೈದದು . . . ದಿಗುವಳಯುವಿಟ್ಟೆಡೆಯಾಗೆ ರಥಹಯ ದಳವುಳಕೆ ಕುರುಸೇನೆ ನಡೆದುದು ದೊರೆಯ ನೇಮದಲಿ (ಕುಮ್ಯಾದ್ರೋ. ೧-೪೫). **ದಳವುಳಿ.** 'ದಳವುಳಿಗ', 'ದಳವುಳಿಗೊಳ್' ಪರಾ. **ದಳಾದುಳಿ :** ೧. ಬಡವರೆಂದು ಮಱಿ³ ಮಗ್ಗುಲಲ್ಲಿ ಕೊಂಬುದು ತುಡುಗುಣಿ ಪ್ರಸಾದ ಸಜ್ಜುಮಜ್ಜನಲ್ಲಿ ಎಳೆದು ಸೆಳೆದುಕೊಂಬುದು ದಳಾ[ಪಾಠಾಂ. ಳ]ದುಳಿಪ್ರಸಾದ (ಚನ್ನಬ. ಕ. ೨೭೧-೫೭೭). **ದಳವುಳ :** ೧. "ದಳವುಳಂ ಬಲ್ಸೂಱಿ³" (ಸಂಜೀವ. ೩) ; ದಳವುಳವಾಱಿಡಿ . . . ಲಂಚಂ ಕಳವು ಪಿಸುಣ್ ಪಸವು ಬಱಂ ಪಱಿ³ವಱಿ³ ವಲಸೊಲಸು ಕುತ್ತುಮಿಲ್ಲಾ ನಾಡೊಳ್ (ಶಬ್ದಾನು. ೧೪೦ ವ್ಯಾಖ್ಯಾ). ೫. "ಅಬ್ಬರ ; ಗಲಾಟೆ" (ಪ್ರಭಣ್ಣ) : ಕಿವಿಗಂ ಪಳಂಚಲೆವ ಮಂಚದ ಶಕುನಿಯಂಚೆಯ ಗಿಳಿಯ ಪುರುಳಿಯ ಪಾರಿವದ ಕೊರಲುಲಿಯ ದಳವುಳವನಾಲಿಸಿ (ಜಂದ್ರಪು. ೮-೭೭ ವ); ಜವನ ದೂಱುಗಾಱರ ಜಂಗುಳಿ³ ನೇಣ ಶೂಲದ ಕರಗಸದ ಇಟ್ಟಿಯ ಕವೆಗೋಲ ಇಕ್ಕುಳಿ³ಯ . . . ಪರುಟವಣೆಯ ಸಡಗರದ ದಳವುಳದಿಂ ಬಂದು ಮುತ್ತಿ ಮುತ್ತಿ ಅಱಗುಲಿ ಜೀವಾತ್ಮನಂ ಸೆಱಿ³ವಿಡಿದತ್ತು ( ರಾಮಾಶ್ವ. ೭೯-೨೨) ; "ದಾಂಧಲೆ" (ರಾಮಾಶ್ವ. ಕೋಶ) ; "ಅಬ್ಬರ ; ಹಾವಳಿ" (ಪ್ರಭಣ್ಣ).

**ದಳದುಳಮಾಗು, ದಳದುಳವಾಗು** = ೧. ಸೂರೆಹೋಗು ; ಲೂಟಿಯಾಗು : ಮೊಳೆತುವೊಂದೊಂದು ನಕ್ಷತ್ರ ಕ್ಷತ್ರತ್ವದೊಂದಳವು ದಳದುಳಮಾಯ್ತು ಕಾಮಿಜನಕಂಗಜಂ ಗೆಲಿದನೀ ಜಗವ ಗಮನೋದ್ಯುಕ್ತನಾಗಿ ನೇಸಱ್ ಬೀಳಲೇವೇಳ್ವನು (ಚಬಪು. ೯-೫); ಕಾಳಲದೇವಿಯ ಕುಮಾರ ಪಾಣ್ಡ್ಯದೇವ ಮಹಾದೇವನವರು ದಳದುಳವಾಗಿ ಆ ಮರಕಾಲನ ಕೊಂದು ವಸ್ತು ವಾಹನವನು ಕೊಣ್ಡುದಕ್ಕೆ (ಎಕ. VI, ಚಿಕ್ಕಮ. ೩೭-೭ ; 1292) ; ದಳವು ದಳವುಳವಾಯ್ತು . . . ತನಿಸೊಕ್ಕಿ ದೆಸೆಪಟದುಳಿದು ಸೌಭದ್ರೇಯ ಭೃಂಗನ ಬಿಲುದನಿಯ ಭರವಂಜಿಸಿತು ಜಯಯುವತಿ ವಿರಹಿಗಳ (ಕುಮ್ಯಾದ್ರೋ. ೭-೩೧). **ದಳದುಳ ಮಾಡು** = ಲೂಟಿ ಮಾಡು : ಚರಲಿಂಗ ವಿಂತು ದಳದುಳ ಮಾಡೆ ಮುನ್ನಿರ್ದ ಸರಳ ಪೆಟ್ಟಿ ದ ರ ನ ಂ ಪೆರ್ಚಿ ತುಳ್ಕಾಡುತಿರೆ ಕರಮೆ ವರ್ಧಿಸುತಿರಲ್ಕೋಕುಲಂ (ಅರಾಚ. ೧೩-೪೫).

**ದೞದುೞವಾಯ್**, ದಳದುಳವಾಯ್ (ಕ್ರಿ). ದಾೞಿಮಾಡಿ ಸೂರೆಗೊಳ್ಳು, -ಕೊಳ್ಳೆಹೊಡೆ, -ಲೂಟಿಮಾಡು : ದೞದುೞವಾಯ್ದುವೋಲ್ ಸಕಲಸೈನ್ಯಯುತಂ ಭಲಿ ಚಂಡವರ್ಮನಾಗಳೆ ಮುೞಿದಂಗಭೂಪತಿಯ ಸತ್ವಮನೊರ್ವೆಯೆ ಸೂಱೆಗೊಂಡು (ದಶಕು. ೮ ೩೨೨) ; ನಿಶ್ಶಂಕಮಾಗಿರ್ಪ ತೆಲುಂಗಪಾಳೆಯಮಂ ದೞದುೞವಾಯ್ದು (ಚಿಕವಿ. ೨-೪೯). **ದಳದುಳವಾಯ್** : ತಾನು ಆರ ಮೇಲೆಯಾದರೂ ದಳದುಳವಾಯ್ದಾಗ ಕೈಸಾರ್ವ ದೇಶಕೋಶ ಧನಕನಕ ವಸ್ತ್ರಭೂಷಣ ಧಾನ್ಯಾದಿಗಳಲ್ಲಿ (ಬಿರುಗಂ. ೩೬-೧೫). [ ದೞದುೞ + ಪಾಯ್$_1$ ]

**ದೞಮುಖ** (ನಾ). ಸೈನ್ಯದ ಮುಂಭಾಗ ; ಚೂಣಿ.

ದೞಮುಖಧವಳ = ಸೇನೆಯ ಅಗ್ರಭಾಗದಲ್ಲಿ ಶೋಭಿಸುವವನು ; ಒಂದು ಬಿರುದು : ಗುಣಕ್ಕೆ ನಲ್ಲ ಗಣೇಶಂ, ದೞಮುಖಧವಳಂ, ದೞಮುಖಾದಿತ್ಯಂ, ರಾಯಕೋಳಾಹಳಂ ಈ ತೆಱದೆ ಬಿರುದಿನೊಳ್ ಏತ್ತಾನುಂ ಸಲ್ವುದು (ಶಮದ. ೧೭೪ ಪ್ರಯೋ). **ದೞಮುಖಾದಿತ್ಯ** = ಸೈನ್ಯದ ಅಗ್ರಭಾಗದಲ್ಲಿ ಸೂರ್ಯನಂತೆ ಪ್ರತಾಪಶಾಲಿಯಾದವನು ; ಒಂದು ಬಿರುದು : ಗುಣಕ್ಕೆ . . . ದೞಮುಖಾದಿತ್ಯಂ, ರಾಯಕೋಳಾಹಳಂ (ಶಮದ. ೧೭೪ ಪ್ರಯೋ). [ ದೞ + ಮುಖ ]

**ದೞವಡು** (ಕ್ರಿ). ಪಡೆಯಾಗು ; ದಳವಾಗು ; ಗುಂಪಾಗು : ಕಟ್ಟುಱದೊಳಿಟ್ಟಣಿಸಿ ಮುಟ್ಟಿ ನಡೆದಾರ್ಪಿಂ . . . ನೆಟ್ಟನಿನಿಸಂ ಪಿಮ್ಮೆಟ್ಟಿ ದೞವಟ್ಟಡರೆಯುಟ್ಟಳಿವರಂ ಕೈಗೊಟ್ಟು ಪುಯಿಲಿಟ್ಟರೆನೆ ದಿಟ್ಟತನಮೆಂತೋ (ಚಿಕವಿ. ೨-೪೩). [ ದೞ + ಪಡು$_1$ ]

△ **ದೞವಾಯ್** 'ದಳವಾಯ್' ನೋ.

△ **ದೞವಾಯಿ** 'ದಳವಾಯ್' ನೋ.

**ದೞವುೞ** 'ದೞದುೞ' ನೋ.

**ದೞಿಗವಾಡಿ** (ನಾ). ಒಂದು ಸ್ಥಳದ ಹೆಸರು : ಅಯ್ಯಪದೇವನ ಮಗಂ ಗನ್ನರಸಂ ದೞಿಗವಾಡಿಯ ಕುಱುಕ್ಷನ್ದಟ್ಟಿಯನಾಳುತ್ತಿರೆ (ಎಕ. IX, ಹೊಸಕೋ. ೧೧೧-೪; 997); ದೞಿಗವಾಡಿಯಾನ ವಿಕ್ರಮಚೋೞಮಣ್ಡಲದ ಮಣ್ಣೆನಾಡ ಕೇಸೂರ ಬಣ್ಣಕರ ಬಲಿವಙ (ಮೈಆರಿ. ೧೯೧೫, ೧೯-೬ ; 1050). 'ದೞಿಗವಟಿಗ' ಪರಾ. [ ದೞಿಗ$_0$ + ಪಾಡಿ$_2$ ]

**ದೞಿ** (ನಾ). ಒಂದು ವೃತ್ತಿಯ ಹೆಸರು (?) :

ದೞಿಯರು=(?): ಪೆರ್ಗ್ಗಡೆಯುಲ ಕವ್ವಿಚ್ಚರು ದೞಿಯರು ಕುರ[ಬ]ರು ಗಣಿಗರು ಪೆಮ್ಮದವರು ಆನಂದರು ಎನೆತ್ತರು ಸಾಕ್ಷಿ (ಇಆ. XIV, ೨೩೩-೫೯; ಸು. ೮ನೆಯ ಶತ). [ ? ]

**ದಟ್ಟೞಿ**, ದಳ್ದಳಿ (ನಾ). ಸಂಕೋಲೆ ; ಕೋಳ ; ಸರಪಣಿ : "ದಟ್ಟೞಿ= ಸಂಕಲೆ" (ಶಮದ. ಪರಿ. ೧) ; "ದಟ್ಟೞಿಯೆಂದು ಸಂಕಲೆಯೊಳಾಯ್ತು" (ಕರ್ಣಾನಿ. ೭೩). **ದಳ್ದಳಿ** : ಮುಳಿಸಿಂದಂ ಭೂತವೃಂದಂ ಕೊಳುಗುಳದೆಡೆಯೊಳ್ ಸಿಲ್ಕಿದಸ್ವಪ್ನರಂ ದಳ್ದಳಿಯಿಂ ಕಯ್ಕಾಲ್ಗೆ ಮತ್ತಾ ಜಠರಗಳಕೆ ತಂದಂತವಂ ಮೇಳಿಸುತ್ತುಂ . . . ಕಟ್ಟುತ್ತುಂ ಬಳಿಕ್ಕಂತವರ್ಗಳನೆಳತಂದೊಪ್ಪಿಸುತ್ತಿರ್ದುದೇಗಂ (ವೀರವಿ. ೧೨-೭೯). [ ? ]

**ದಾ$_1$** (ನಾ). ಒಂದು ಅನುಕರಣ ಶಬ್ದ : ದಾಯೆನೆ ನೋಡುವ ಕರೆದಯ್ಯಾಯೆನಲಾರ್ಪೆವ . . . ಮೆಯ್ಯುರಿದಾಯಿರವಿಂದತ್ತಲೆಸೆದಮತಿಯತಿಶಯಮಂ (ಮಹಾನೇ. ೬-೭); ಸೆಱಗಿನೊಳಗಡಗಿ ನೋಡುತಲಿದಾ[ಪಾಠಾಂ. ಬಾ]ಎನುತ ಚೈಮುಂಡಾಡಿ ಮುಂದಲೆವಿಡಿದು ಕುಣಿಕುಣಿದಾಡಿ (ಪ್ರಭುಲೀ. ೩-೨೯) ; ಬೇಡುವರ್ಕೆಯ್ಗಳೊಳ್ ಮೆಯ್ಗಳೊಳ್ ಬಾಯ್ಗಳೊಳಗಾಡಿಸುವ ರಾಯೆಂದುದಾಯೆಂದು ಬಾಯೆಂದು ಪಾಡುವರ್ . . . ಕುವರನಂ (ಜಬಪು. ೫-೨೬) ; ಪಡಿನೆಳಲಂ ಮಣಿಕುಟ್ಟಿಮದೆಡೆಯೊಳ್ ನಡೆ ನೋಡಿ ನೋಡಿ ದಾಯೆನುತಂ (ರಾಜಶೇ. ೩-೫೨).

**ದಾ$_2$** 'ದಸ$_2$' ನೋ.

**ದಾ$_3$** (ನಾ). [ಗಣಿತ] ಆಱು ಎಂಬ ಸಂಖ್ಯೆಯ ಸಂಕೇತ : "ದಾ, ಖರ . . . ವದನ ? ಇಂತಿನಿತುಂ ಒಕ್ಕೆ ಪೆಸರು" (ವ್ಯವಹಾ. ೧೦-೨೩). [ ? ]

**ದಾಂಗುಡಿ** 'ದಾಂಟುಂಗುಂಡಿ' ನೋ.

**ದಾಂಗುಡಿಬಿಡು** 'ದಾಂಗುಡಿವಿಡು' ನೋ.

**ದಾಂಗುಡಿಯಿಡು** (ಕ್ರಿ). ೧. ಕುಡಿ ಚಾಚು ; ಕುಡಿ ಹಬ್ಬು : ಬಿಸರುಹನೇತ್ರೆಯೊಳ್ನಡು ಪೊದಟ್ಟುದು ದಾಂಗುಡಿಯಿಟ್ಟು ಬಾಸೆ ನೀಳ್ದೆಸೆದುದು ಪಿಂಗಿ ಪೋದುದು ವಳಿತ್ರಿತಯಂ (ಪಂಚತಂ. ೧೮೪-೧೧) ; ಅಂಗಣದೊಳಗಾಡುವ ಭೂಮಿಾವರನಂಗನೆಯರ ದಿಟ್ಟಿವೆಳಗು ದಾಂಗುಡಿಯಿಡಲಿಕ್ಕಿದ ಹೊಸ ಮುತ್ತಿನ ರಂಗವಲ್ಲಿಯ ತೆಱನಹುದು (ಶ್ರೀಪಾಲ. ೨-೪). ೨. ಹಬ್ಬು; ವೃದ್ಧಿಯಾಗು ; ವ್ಯಾಪಿಸು ; ಮುಂದುವರಿ : ದಾಂಗುಡಿಯಿಟ್ಟುದಿಂಗಡಲ ಬೆಳ್ಪು ಕರಂ ಮೊಳೆಪೋದುದಿಂದುಕಾಂತಂಗಳ ಬೆಳ್ಪು ಮೂಡಿದುದು ನೆಯ್ದಿಲ ಬೆಳ್ಪು (ಲೀಲಾವ. ೨-೨೧) ; ಹೆಂಗಳು ಮತ್ತೆಂಟುದೆಸೆಗೆ ದಾಂಗುಡಿಯಿಟ್ಟು ಸಾಲ್ವಿಡಿದಾಗ ಶೃಂಗಾರಗಂಗೆ ಪರಿವವೊಲಾಡಿದರು (ಭರಜ. ೧೩-೯೮) ; ಆನಂದವಾರಾಶಿ ದಾಂಗುಡಿ [ಪಾಠಾಂ. ತಾಂಕುಡಿ, ತಾಂಗುಡಿ]ಯಿಟ್ಟುದು ಸಲೆ ಸೌಖ್ಯಮೋ ರೂಪನಾಂತು ನಡೆತಂದುದು (ಜಬಪು. ೨೦-೬) ; ವಿಜಯಾಂಶುವೃದ್ಧಿ ದಾಂಗುಡಿಯಿಡೆ ಧರ್ಮರಾಜ್ಯಮೆನಿಸುತ್ತಖಿಲಾವನಿಭಾಗಮಂ ಜಸಂಬಡೆದಿರೆ ಕೃಷ್ಣರಾಯನೆನಿಪೊಳ್ಸರೀಯರಸಿಂಗೆ ಸಂಗತಂ (ಚಿಕವಿ. ೨-೧೧) ; ಅಮರರ್ವೆರಸಿ ಬಳೆವುದು ಶಂಕರ ಲಲಿತಾಲಾಸ್ಯಂ . . . . ಹರಿವಾಣೀವಾದನಕನುಕೂಲಂ ದಾಂಗುಡಿಯಿಡುವೊಲು ಮಾಯಾಜಾಲಂ (ಗಣೇಶ. ೧೯-೪೯೦).

[ ದಾಂಗುಡಿ (<ದಾಂಟುಂಗುಡಿ) + ಇಡು$_1$ ]

**ದಾಂಗುಡಿವಡೆ** (ಕ್ರಿ). ಕುಡಿಯಿಡು ; ಬೆಳೆ : ಕಡುಚೆಲ್ವುವಡೆದು ಬಳಸಿಯುಮಂಡೆಯುಡುಗದೆ ಕಾಂತೆಯರ್ ನಯುಂಬಿಡದಿರೆ ದಾಂಗುಡಿವಡೆವ ಕಲ್ಪಲತೆಗಳ ನಡುವಣ ಕಲ್ಪಾವನೀಜಮಿರ್ಪಂತಿರ್ದಂ (ಸುಕುಮಾ. ೧೦-೧೧೧).

[ ದಾಂಗುಡಿ (<ದಾಂಟುಂಗುಡಿ) + ಪಡೆ$_1$ ]

**ದಾಂಗುಡಿವರಿ** (ಕ್ರಿ). ಕುಡಿ ಹಬ್ಬು ; ಮುಂದೆ ಚಾಚು : ಮರದಿಂದ ಮರಕ್ಕೆ ದಾಂಗುಡಿವರಿವೆಳಲತೆಯಂತೆ ನೀತಿಮಾಂಧಾತನೊಳಾವರಿಸಿರ್ದ ರಾಜವಿದ್ಯಾಧರನಲ್ಲಿಗೆ ರಾಜ್ಯಲಕ್ಷ್ಮಿ ನಿಲುಕಿದಳಾಗಳ್ (ಕಾದಂಪೂ . ೫೮೧).

[ ದಾಂಗುಡಿ (<ದಾಂಟುಂಗುಡಿ) + ಪರಿ$_1$ ]

**ದಾಂಗುಡಿವಿಡಿಸು** (ಕ್ರಿ). ವೃದ್ಧಿಯಾಗುವಂತೆ ಮಾಡು ; ಬೆಳೆಸು : ಆ ಎಲ್ಲ ಝರಿಗಳಿಂದ ತಮ್ಮ ಭಕ್ತಜೀವನದ ಬಳ್ಳಿಗೆ ನೀರುಣಿಸಿ ದಾಂಗುಡಿವಿಡಿಸಿದರು (ತವನಿ. ೧೬೧). [ ದಾಂಗುಡಿವಿಡು + -ಇಸು$_3$ ]

**ದಾಂಗುಡಿವಿಡು**, ದಾಂಗುಡಿಬಿಡು (ಕ್ರಿ). ಹಬ್ಬು ; ವ್ಯಾಪಿಸು ; ಮುಂದುವರಿ : ವಿಕಟಾಕ್ಷರಂಗಳೊಳ್ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂಗುಡಿವಿಡುವಂತೆ ನೀಟ್ದು ನಿಲೆ ಪೇಟ್ವುದು ನೀತಿನಿರಂತರ ಕ್ರಮಮಂ (ಕವಿರಾ. ೧-೧೪೮); ಅಂತು ತನ್ನ ತಾಂಡವಾರಂಭದೊಳಳವಿಗೞಿದ ರಾಗದಿಂ ನಿರ್ಮಿಸಿದ ಭುಜಶಾಖಾಸಹಸ್ರಂಗಳೊಳ್ ದಾಂಗುಡಿವಿಟ್ಟನಂಗಜಂಗಮಲತೆಗಳನನುಕರಿಸಿ ದೇವಗಣಿಕೆಯರಾಡುವಾಗಳ್ (ಆದಿಪು. ೭-೧೨೨ ವ) ; ಚಾಗದ ಕೀರ್ತಿವಲ್ಲಿ ದಾಂಗುಡಿವಿಡೆ (ಗದಾಯು. ೧೦-೫); ತಳಿವುದು ಮಾಂಸವಾರಿಯಂ ಸಸಿಗಳೊದವಿ ದಾಂಗುಡಿವಿಡುಗುಂ(ಲೋಕೋಪ. ೬-೭). **ದಾಂಗುಡಿಬಿಡು** : ಹೊಕ್ಕುಳ ಬಳ್ಳಿ ಹರಿದಂದಿನಿಂದಲೂ ನಡೆದಿದೆ ಸಂಯೋಗಕ್ಕಾಗಿ ನಿರಂತರ ತಪ: ದಾಂಗುಡಿಬಿಟ್ಟಿದೆ ವಾತ್ಸಲ್ಯದ ಬಯಕೆಯಾಗಿ (ಮೂರುದಾ. ೨೦೬) ; ಹೊಸಹರುಷಗಳ ಬಳ್ಳಿಗಳು ಕೊನರಿ ಕುಡಿಯೊಡೆದು ದಾಂಗುಡಿಬಿಡುವಂತಿಲ್ಲ (ಹಾಹುತ್ತ. ೯೯).

[ ದಾಂಗುಡಿ (<ದಾಂಟುಂಗುಡಿ) + ಬಿಡು$_1$ ]

**ದಾಂಟಿಸು₁**, ದಾಟಿಸು (ಕ್ರಿ). ೧. ಈ ಕಡೆಯಿಂದ ಆ ಕಡೆಗೆ ಹಾಯಿಸಂ; ಹಾರಿಸಂ; ನೆಗೆಸು: ತುರಗವನು ಮಡದಿಂದೊತ್ತಿ ದಾಂಟಿಸಿದನಾ ಮಹಾ ದ್ವಾರವನು (ರೇವಣ. ೯-೪) **೨.** ಆಚೆಗೆ ಒಯ್ಯು; ಕಡೆಹಾಯಿಸಂ; ತಟಹಾಯಿಸು; ಪಾರುಗಾಣಿಸು: ಸಂಸರಣಮಹಾಸಮುದ್ರಮನತೀವ ಸರೌದ್ರಮನೆಯ್ದೆ ದಾಂಟಿಸಿಂ ಕರುಣದಿನೆಮ್ಮಂ (ನೇಮಿಪು. ೧೪-೧೧೦); ಅದು ಸಂಸಾರಾಬ್ಧಿಯಂ ದಾಂಟಿಸುವುದದು ದುರಾಚಾರ ದುರ್ಬುದ್ಧಿಯಂ ಕೀಳ್ವುದು . . . ಲಿಂಗಾರೂಢನಂ ಮಾಡುವುದು ಶರಣಸಾಂಗತ್ಯವು (ರಕ್ಷಾಶ. ೫೭); ಸ್ವಕುಲದಖಿಲರಂ ಘೋರಭವವಾರ್ಧಿಯಿಂ ದಾಂಟಿಸುವನೆಂದು ಬೋಧಾಯನಸುಶಾಖೆಯುಂ ಲಿಗುಂ (ಪದ್ಮರಾ. ೧೧-೧೨೫); ವೆಸರುವಡೆದ ಮಧುರಸವಾಹಿನಿಯ ದಾಂಟಿಸಲು ಚಂದನಡೋಣಿಗಡರ್ದು (ವೋಹತ. ೫-೨೭). **೩.** ದಮನ ಮಾಡು; ನಿಗ್ರಹಿಸಂ: "ದಾಂತಃ, ದಮಿತಃ – ದಾಂಟಿಸಲ್ಪಟ್ಟುದು" (ಶಾಜಿರಾ. ೬). **೪.** ಮೀರಿಸು: ನಿಜಗಳನಿಕ್ಕಿ ದಾಂಟಿಸದೆ ದುಂಡಿಸುವಾಕೆಯುನೊತ್ತಿಗೊಳ್ಳದಂತೆಚೆಯದೆ ತೇವೆಗುಳ್ಳ ಬಳಿನೀರ್ಗಳನಗ್ಗದ ಪೆಣ್ಗೆ ಮೆಯ್ಯನೆಯ್ದುಚೆಯದೆ (ಲೀಲಾವ. ೨-೯೩). **೫.** ಮೀರಂ; ಅತಿಕ್ರಮಿಸು: ವ್ಯತ್ಯಯವ ಜವನ ಮಾರಿಯ ದಾಂಟಿಸುವ ವೇದಾಂತಿಗಳ ಪಾಟ ಶಿವನ ಪೊಸ ಕರವಾಳು . . . ಶಂಕರ ನೊಲುಮೆಯುಳ್ಳಾಳು (ಬಸಪು. ೬-೧೧). **ದಾಟಿಸು: ೨.** ನಾನು ಅವಳಿಗೆ ಊಟದ ಮನೆಯ ಹೊಸಲು ದಾಟಿಸಿ ಅಡಿಗೆಯ ಮನೆಯೊಳಕ್ಕೆ ಕರೆದುಕೊಂಡು ಹೋದೆ (ಚಂಗಾಳ್ಯ. ೧೩); ಎಲೈ ಅಗ್ನಿಯೆ . . . ನೀನೇ ಅನ್ನ ಸಾಧಕನು, ಪಾಪದಿಂದ ದಾಟಿಸತಕ್ಕವನು (ಶುಕ್ಲಾರ. ೨೫). **೬.** ಸಾಗಿಸು; ಕಳುಹಿಸಂ; ರವಾನಿಸು; **ಹೋಗುವಂತೆ ಮಾಡು:** ಸುಗ್ರೀವ ಹಾಯೆನುತೊದಱೆ ರಣದಲಿ ಜೀವವನು ದಾಟಿಸಿ [ಪಾಠಾಂ. ಡಾಳಿಸಿ, ಡಾಱಿಸಿ]ದನಾ ಧ್ವನಿಗೇಳಿಸಿತು ಕಿವಿಗೆ (ತೊರರಾ. ೪-೨-೨೮); ಸೂಟಿಯ ಬಾಣಗಳಿಂದಿಟ್ಟು ಜೀವವ ದಾಟಿಸಿದರು ಯಮಪುರಿಗೆ (ಕಂಸವಿ. ೧೮-೭೬); ಕನ್ಯಾದಾನವೆನ್ನುವುದು ಒಂದು ಕೈಯಿಂದ ಇನ್ನೊಂದು ಕೈಗೆ ದನಕರುಗಳನ್ನು ದಾಟಿಸಿದ ಹಾಗೆ (ವಚಭಾ. ೭೧); ದ್ರುಪದನು ರಾಜಾಧಿರಾಜನಾದ ತನಗೆ ಬಡಹಾರವರ ಗೆಳೆತನವೆಲ್ಲಿಯದೆಂದು ಅವನನ್ನು ಹೊರಗಣಿಂದ ಹೊರಕ್ಕೇ ದಾಟಿಸಿಬಿಟ್ಟನು (ನೀಗಟ್ಟು. ೧೧೪).

**ದಾಟಿಸಿಕೊಳ್** = ರಕ್ಷಿಸು; ಆಶ್ರಯ ಕೊಡಂ; ಕಾಪಾಡು: ದೈತ್ಯವಧೂಟಿಯ ಕರೆದು ತನ್ನೊಡನೆ ಸೂಟಿಯೊಳ್ ಸಾವಂತೆ ಕೆಯ್ಯ ಖಡ್ಗವನಿಕ್ಕಿ ದಾಟಿಸಿಕೊಂಡಳೆಲ್ಲರನು (ಮೋಹತ. ೩೩-೫೮).

[ ದಾಂಟು₁ + – ಇಸು₃ ]

**ದಾಂಟಿಸು₂** 'ತಾಂಟಿಸು' ನೋ.

**ದಾಂಟು₁**, ದಾಟು₁ (ಕ್ರಿ). ೧. ಹಾರು; ನೆಗೆ; ಜಿಗಿ; ಲಂಘಿಸಂ: "ದಾಂಟು–ಲಂಘನೇ" (ಶಮಧಾ); "ಲಂಘಿಸುವುದಕ್ಕೆ ದಾಂಟೆಂದು" (ಕಶರ ೧೨೫); ಸುಹೃಚ್ಛ್ರೋಕಾಂಧನಂ ಮಗುಟ್ದುಮರ್ತ್ಯಮಾರ್ಗದೊಳ್ ಪರಿಯುತ್ತಮೊರ್ವ ವೈಮಾನಿಕನಂ ಭರದಿಂ ದಾಂಟುವುದುಂ (ಕಾದಂಬ. ೭೦೪). **೨.** ಹಾಯ್ದು ಹೋಗಂ; ಮುಂದೆ ಸಾಗಂ; ತಟಹಾಯು; ಆಚೆಗೆ ಹೋಗು: ವಿಷಯಾಧಿಪತಿಗಳಪ್ಪರಸುಗಳೆಲ್ಲಂ ನೆರೆದಿರ್ದಲ್ಲಿಯಾರುಮಂ ಮೆಚ್ಚದೆ ದಾಂಟಿ ಪೋಗಿ ಕುಬೇರಕಾಂತಂಗೆ ಮಾಲೆಯಂ ಸೂಡಿದಳ್ (ಪದ್ಮಾರಾ. ೪೧-೪); ಭೀಮನಂ ಪೊಣರ್ದು ನೆಲಕ್ಕಿಕ್ಕಿ ಬೆನ್ನಂ ಮೆಟ್ಟಿ ದಾಂಟುವ ಮದಗಜದಂತೆ ಕೊಲಲೊಲ್ಲದೆ ದಾಂಟಿದಾಗಳ್ (ಪಂಪಭಾ. ೧೩-೪೦ ವ); ರುಧಿರಸ್ರೋತಂಗಳಂ ದಾಂಟಿದಾಂಟಿಭದೋರ್ನಿಲಲತಾಪ್ರತಾನವಿಪಿನವ್ರಾತಂಗಳೊಳ್ಸಿಲ್ಕಿಸಿಲ್ಕಿ (ಗದಾಯು. ೪-೪೭); ಗರಳಪುರದ ನದಿಯನು ದಾಂಟಿ ಬಲ ಸಹ ನೆಜೆಯರ್ಧರಾತ್ರಿಯೊಳಾಗ . . . ಅರಿತಂತ್ರವ ತಜೆದೊಟ್ಟಿದನು (ಕಂಸವಿ. ೩-೫೫). **೩.** ಬಿಟ್ಟು ಹೋಗು; ತೊರೆದಂ ಹೋಗು: ಉತ್ತರಗುಡದೆ ಜಲವೀಂಟಿದನು ದಾಂಟಿದುದಸು ಕಳೇಬರವ (ಕುಮ್ಯಾಭ. ೨೩-೨೧). **೪.** ಮೀರಂ; ಪಾಲಿಸದೆ ಇರು; ಅತಿಕ್ರಮಿಸಂ: ಸಪ್ತಸಮುದ್ರಂ ಕರೆಗಣ್ಮಿ ತನ್ನವಧಿಯಂ ದಾಂಟಿತ್ತು . . . ಎಂಬೊಂದು ಸಂದೇಹಮಂ ಪೊಸತಂ ಭೂಭುವನಕ್ಕೆ ಮಾಡಿದುದು ತತ್ಪನ್ನಾಹಭೇರೀರವಂ (ಪಂಪಭಾ. ೯-೯೪); ಯತಿಯೆಂಬುದು ಗಣನಿಯತಂ ಪ್ರತೀತಮುಸಿರ್ವಾಣವುಂತದಂ ದಾಂಟಲಾಗ್ಯ ಯತಿ ಕೆಡುಗುಂ ದಾಂಟಿದೊಡಾ ಯತಿ ಕೆಡೆ ಕವಿತಾಭಿಧಾನವೇನೆಸೆದಪುದೆ (ಛಂದೋಂಬು. ೧-೪೫); ರವಿ ಮಾಜೆಟ್ಟಳೆದಂ ವಿಯತ್ತಳಮನಾಶಾಸೀಮೆಯುಂ ದಾಂಟುವನ್ನೆವರಂ ತನ್ನ ಕರಂಗಳಿಂದೆನೆ ಪೆಱಂಗೇಂ ಪೊಗ್ಗೆ (ಪಂಪಾಪಟ. ೧-೩೯); ನಿಜೆಯನಿಕ್ಕಿ ದಾಂಟಿದರೆ ಅಂತೆನ್ನ ನಂಬಾಂ (ಬಸವ. ೫೦೧): ಉಟ್ಟ ನಿಜೆ ದಾಂಟಿದೊಡೆ ಕಚ್ಚುವುದೆ ದೈವವಂ ಮುಟ್ಟದೊಡೆ ಬೆರಳಂ ಹತ್ತುವುದೆ (ಸೋಮಶ. ೨-೪೦); ನಿಜೆಯ ದಾಂಟಲು ಕಚ್ಚುವುದೆ ಬಳಿನೀರ್ಗುಡಿಯಲೀಯುಂದರ ಉರಿವುದೆ (ಜೀವಂಜ. ೧೭-೫೭); ಅಣ್ಣನಾಜ್ಞೆಯ ಚಿತ್ತದಲಿ ನೀವ್ ದಾಂಟದಿಹುದಾರಣ್ಯವಾಸದಲಿ (ಕುಮ್ಯಾಭ. ಓರಿಉ. ೪-೫೯); ಉಟ್ಟ ಸೀರೆಯ ದಾಂಟು ಮುಟ್ಟನ್ನು ದೈವವ (ಅಮುಶಾಂ. ೩-೭೩); ಬಳಿನೀರ ಕುಡಿದು ನಿಜೆಯ ದಾಂಟ ಪುತ್ರೂದಿ ಬಳಸಂದಿನಿಯರ ಚಿತ್ತವನು ತಿಳಿಸಿ ಕಾಲ್ವಿಡಿದೊಡಗೂಡುವ ಗಳಿಸಾಳಿ ಬೆಲೆವೆಣ್ಣಳು (ಕುರಾಸಾಂ. ೨೮-೮೮). **ದಾಟು₁: ೨.** ಹಳುವ ದಾಟಲಿ ದ್ರುಪದನಂದನೆಯುಳಲಶಿಖಿಗಿಂಧನವಲೇ ಕುರುಕುಲದ ಕರಡದ ಬಣಬೆ ಕಾದುರುಹುವುದು ಕೇಳೆಂಧ (ಕುಮ್ಯಾಭ. ೨-೩೨); ದಾನದ ಕೈಯ ತೋಱೆಸಬೇಕು ಆದಱೆಂದ ನದಿಯ ದಾಟುತಿಯಪ್ಪ (ಪುರಂದ ೧-೧೮೦-೨೧); ಸೆಱೆ ತುಱು ಸಹಿತ ಸೋಸಲೆಯ ಕಡುವ ದಾಟ ಭರಿದು ಮಾರ್ಬಲಗೂಡಿ ಬಂದು (ಕಂಸವಿ. ೩-೫೭); ನೀನು ಇನ್ನು ಸಂಸಾರವೆಂಬ ಮಹಾಸಾಗರದೊಳಗಿಂದ ದಾಟಿಹೋಗತಕ್ಕವನು (ಮುಂಬಯಿ. ೪-೫೯); ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡ (ಗಾದೆ). **೮.** ಗತಿಸಂ; ಸಾಯು; ತೀರಿಹೋಗು; ಮುಗಿ; ಕೊನೆಗೊಳ್ಳು: ಅವನು ದಾಟಿಕೊಂಡನಂ (ಮುಂಬಯಿ. ೫-೧೯೯).

[ ದೇ. ೫ ತಮಿ. ತಾಣ್ಡು; ಮಲ. ತಾಣ್ಡು, ತಾಟ್ಟು; ತುಳು. ದಾಂಟು; ತೆಲು. ದಾಟು ]

**ದಾಂಟು₂** 'ತಾಂಟು' ನೋ.

**ದಾಂಟು₃**, ದಾಟು₃ (ನಾ). ೧. ನೆಗೆತ; ಜಿಗಿತ. 'ಮಾಱುದಾಂಟು' ಪರಾ. **೨.** ಹಾದಂಹೋಗಂವಿಕೆ; ಹಾಯಂಂವಿಕೆ: (೬). **೩.** ಹಬ್ಬುವಿಕೆ; ಚಾಚುವಿಕೆ. 'ದಾಂಟುಂಗುಡಿ' ಪರಾ. **೪.** (?): ಇಱೆಯೆ ಮುಸುಕಿಟ್ಟು ಬಾಗಿಲ ಬಱೆಯಾನೆ ಪರಿತಂದು ದಾ(ದ)ಂಟನೂರಿ(ಱ) ಸಿರೊ(ರೇ)ಜಂ ಬಿಡದೆ ನಡುಗುತ್ತು ಮೊಯ್ಯನೆ ಮಟೆಯಂ ಬೆಸಗೊಂಡೊಡಮಕ್ಕುಮಿದುಪೊಂದು ಮತಂ (ಜಟ್ಟಮ. ೧-೩೯). **ದಾಟು₂: ೨.** ಕರವಾಳೋನ್ನುಖ ಚಣ್ಡವಜ್ರಹತಿಯಂ ಬಿಳ್ದನ್ಯಮತ್ತೇಭ ಭೂವರದಿಂದುಣ್ಮುವ ರಕ್ತವಾಹಿನಿಯುಂವಂ ಕಣ್ಡಯ್ದು ಭೂತಬ್ರಜಂ ತ್ವರಿತಂ ಮುಣ್ಣದ ತೆಪ್ಪದಿಂ ಶಿರದಲಾಂಬು ಬದ್ಧದಿಂ ದಾಟು ಭೀಕರವಾಗಿರ್ದ್ದುದು ಬಿಟ್ಟದೇವನಿಱಿದತ್ಯುಗ್ರಾಜಿರಂಗಾಂಗಣಂ (ಎಕ. XVI (೩), ಚಿಕ್ಕನಾ. ೯೮-೪೪; 1169). **೫.** ದಾಟುವಂತಹ ಸ್ಥಳ,–ಎಡೆ: ಕೋಟೆಯಿದ್ದುದು . . . ಘೋಟಕದ ಮದಕರಿಯ ಕಂಡಿಯ ದಾಟುಗಳ[ಪಾಠಾಂ. ದ] ಹುಲಿ ಮುಖದ ವಂಕದ ಕೂಟದುರುವಿಲಾಸದ ವಿವಿಧರಚನೆಯಲಿ (ತೊರರಾ. ೫-೨-೪). **೬.** ಸಂಗ್ರಹ; ಅಡಕಗೊಳಿಸುವಿಕೆ. 'ದಾಟಂಕಥೆ' ಪರಾ. **೭.** ದೃಷ್ಟಿದೋಷ, ಕಾಲುಧೂಳು ಮುಂತಾದಂವುಗಳ ಪರಿಹಾರಕ್ಕಾಗಿ ನಿವಾಳಿಸಿ ಎಸೆದ ಪದಾರ್ಥಗಳನ್ನು ದಾಟುವುದರಿಂದ ಉಂಟಾಗುವ ಅನಾರೋಗ್ಯ. 'ಕಾಲುರಂಜು', 'ದಾಟುಂತೆಗೆ' ಪರಾ.

**ದಾಟಾಗು** = ನಿವಾಳಿಸಿ ಎಸೆದ ಪದಾರ್ಥಗಳನ್ನು ದಾಟಿ ಅನಾರೋಗ್ಯವುಂಟಾಗು; ಕಾಲುರಂಜು ಆಗು : ದಾಟು ತೆಗೆಯುವುದು : ದಾಟಾಗಿದ್ದರೆ, ಅಂದರೆ ಏನಾದರೂ ದೋಷದ ಕಾರಣ ತೊಡೆ ಅಥವಾ ಕಾಲು ಊದಿಕೊಂಡಿದ್ದರೆ . . . ಮಾಡುವ ಶಾಂತಿ (ನನ್ನೂರು. ಕೋಶ).
[ <ದಾಂಟು$_1$ ]

**ದಾಂಟುಂಗುಡಿ,** ದಾಂಗುಡಿ (ನಾ). ಉದ್ದವಾದ ಕುಡಿ ; ಚಾಚಿಕೊಂಡಿರುವ ಕಂಡಿ : "ದಾಂಗುಡಿಯೆಂದು ದಾಂಟುಂಗುಡಿಯೆಂಬರ್" (ಕಶಸಾ. ೨೭-೫೭೪) ; "ದಾಂಗುಡಿಯೆನ್ನಲ್ ನೆಟ್ಟನೆ ದಾಂಟುಂಗುಡಿ" (ಕವಿಕಂ. ೨೨೮) ; ಕಟಂಜನವನ್ನು ದಾಂಟುಂಗುಡಿಯನ್ನೆಂಬಂತೆ ಕಳೆದುಹೋಗಿ, ತಿರುಗಿ ನಿಂತು, ನಿಟ್ಟುಸಿರ್ಗೊಂಡು, ಹೊರಡಲನುವಾಗುತ್ತಿರುವನು (ಬಿಟ್ಟಅ. ೧೦೨-೦೪). **ದಾಂಗುಡಿ :** "ದಾಂಗುಡಿಯೆಂದು ದಾಂಟುಂಗುಡಿಯೆಂಬರ್" (ಕಶಸಾ. ೨೭-೫೭೪); "ದಾಂಗುಡಿಯೆನ್ನಲ್ ನೆಟ್ಟನೆ ದಾಂಟುಂಗುಡಿ" (ಕವಿಕಂ. ೨೨೮) ; ಸೋರ್ವ ಸೋನೆಯೊಳೆ ದಾಂಗುಡಿಯಿಂದೆಸೆದಿಪ್ಪುದವು (ಎಇ. XIII, ೩೩೧-೨೯ ; 929) ; ತಳ್ತು ಕಟ್ಟಿದ ಗುಡಿ ರಂಗವಲ್ಲಿಗಳೆ ದಾಂಗುಡಿಯಂತಿರೆ ಸೂಸೆ ಸೇಸೆಯುಂ ಸುದತಿಯರ್ (ಪಂಪಭಾ. ೫-೧೦೫) ; ಪಸರಿಸೆ ಸುತ್ತಲುಂ ಗುಡಿಯ ದಾಂಗುಡಿ ಮುತ್ತಿನ ರಂಗವಲ್ಲಿ ನಾಲ್ದೆಸೆಯೊಳಮರ್ಕೆವೆತ್ತ ಪಟಹಧ್ವನಿ (ಸುಕುಮಾ. ೧೦-೨೭) : ಗಜಿಕೆಯ ತೊಳಚಿಯ ದಾಂಗುಡಿಯುಂ ಚಿವುಂಟಿ (ರಾಮಾಶ್ವ. ೪೩-೧೭).
[ ದಾಂಟು$_1$ + ಕುಡಿ$_2$; P 'ದಾವುಕುಡಿ'ಯಿಂದಲೂ ಇದಕ್ಕೆ ನಿಷ್ಪತ್ತಿ ಹೇಳಬಹುದು ]

**ದಾಂಟುಗಳೆ** (ನಾ). ಹಳ್ಳವನ್ನು ದಾಟಲು ಹಾಕಿರುವ ಬಿದಿರಿನ ಕೋಲು, ಗಳು, ಬೊಂಬು ಇತ್ಯಾದಿ : ಕಾಡುಮೇಡುಗಳುಳಿದು ಪಾಡಿಗಳ ಬಳಿವಿಡಿದು ಕೋಡುಗಳ ದಾಂಟುಗಳೆಗಳ ತೂಗಿ ನಡೆದು (ಕಾಲೂರ. ೧೫೧-೩೩೦).
[ ದಾಂಟು$_1$ + ಗಳೆ (<ಗಟಿ$^3$) ]

**ದಾಂಟುಗೊಡು** (ಕ್ರಿ). ದಾಟಲು ಅವಕಾಶ ಕೊಡು : ಏಱುಗೊಂಡೆಕ್ಕಲನ ದಾಂಟುಗೊಟ್ಟು ಪಾವಿನ ಪೊಸವಗೆಯೊಂದು ಮಸಕದಿಂ ಕಿಡಿಕಿಡಿವೋಗಿ ಕುಡಿವರಿವ ವಿಾಸೆಯುಂ ತಿರ್ದುತ (ರಾಮಾಶ್ವ. ೮೫-೧೮).
[ ದಾಂಟು$_3$ + ಕೊಡು$_1$ ]

**ದಾಂಟುದಾಣ** (ನಾ). ದಾಟುವ ಸ್ಥಳ ; ಹಾಯ್ಗಡ : ದಾಂಟುದಾಣದಾಬಿರುವೊನಲ್ ಕಾಲ್ಗಡ್ಡವಾಗಿ ಕಣ್ಗಡ್ಡವಾದುದೊ ಮುಂದೆ ಕಾಳಿಂದಿಯಾ (ಶ್ರೀರಾಮಾ. ೦೩೮-೩೭೮). [ ದಾಂಟು$_1$ + ತಾಣ ]

**ದಾಂಟುಮರ** 'ದಾಂಟುಂಮರ' ನೋ.

**ದಾಂಟುವರ,** ದಾಂಟುಮರ, ದಾಟುಮರ (ನಾ). ೧. = ದಾಂಟುಗಳೆ : ತೆಪ ತ್ತ ಕಾಲ್ಗಳಿಂ ದಾಂಟುವರವಳೆದು (ಕಾಲೂರ. ೧೩೭-೨೯೬). **ದಾಂಟುಮರ :** ೧. ಹಿಂದೆ ಪೋಗುವುದೇಕೆ ದಾರಿಯಿದನುಂ ಬಲ್ಲೆನೆಂದಿರ್ಪ ದಾಂಟುಮರದೆಡೆಗೆ ನಡೆತಂದು (ಕಾಲೂರ. ೦೩೭-೨೯೫). **ದಾಟುಮರ :** ೨. ನೆಲಬಾವಿಯ ಮೇಲೆ ಅಡ್ಡವಾಗಿ ಹಾಸುವ ಗಳು : ದಾಟುಮರ ಮುರಿದು ಬಾವಿಯಲ್ಲಿ ಬಿದ್ದನು (ರೂಢಿ). [ ದಾಂಟು$_1$ + ಮರ$_1$ ]

**ದಾಂಡಗಾಯಿ** (ನಾ). ಪುಂಡುಗಾರಿಕೆ ; ಪುಂಡಾಟ : ಅಂತೆಯೇ ಪಡದಪ್ಪ ಕೊಟ್ಟ ಅರ್ಜಿ ನಾನಾನ ಪ ಕರಣದ ಬಗ್ಗೆ ಇರದೆ ದಾದಾ ತನ್ನ ಮೇಲೆ ಏರಿ ಬಂದು ದಾಂಡಗಾಯಿ ಮಾಡಿದ ಬಗ್ಗೆ ಇರಬೇಕು ಎಂದು ಅವರಿಗನಿಸಿತ್ತು (ಗ್ರಾಮಾಯ. ೧೧೩). 'ಕಾಟಕಾಯಿ' ಪರಾ.
[ ←ಮರಾ. ದಾಂಡಗಾಈ ]

**ದಾಂಡಪಟೆ** 'ದಾಂಡಪಟ್ಟೆ' ನೋ.

**ದಾಂಡಪಟ್ಟೆ,** ದಾಂಡಪಟೆ (ನಾ). ಒಂದು ಕೈಯ್ಯಲ್ಲಿ ಉದ್ದವಾದ ಕತ್ತಿಯನ್ನೂ ಮತ್ತೊಂದು ಕೆಯ ಲ್ಲಿ ಕೋಲನ್ನೂ ಹಿಡಿದು ಮಾಡುವ ಕಸರತ್ತು : ಕುಸ್ತಿಯಲ್ಲಿ ಅರ್ಜುನದಾಸನ ಕೈ ಮೇಲಾದರೆ, ದಾಂಡಪಟೆಯಲ್ಲಿ ರಾಜವರ್ಧನನ ಪರಿಶ್ರಮ ಹೆಚ್ಚು (ಪರಮೇ. ೨). **ದಾಂಡಪಟೆ :** ಚಿಕ್ಕಂದಿನಿಂದ ಗರಡೀ ಸಾಧಕ, ದಾಂಡಪಟೆ, ಕುಸ್ತಿ ಮುಂತಾದ ಶೌರ್ಯದ ಅಭ್ಯಾಸಗಳನ್ನು ಇವರು ಮಾಡುತ್ತಾರೆ (ಕಭಾಗ. ೦೦೪).
[ ←ಮರಾ. ದಾಂಡ್‌ಪಟ್ಟಾ ]

**ದಾಂಡಾಜಿನಿಕ** (ನಾ). ಮೋಸಗಾರ ; ವಂಚಕ; ಮಾಯಾವಿ: "ದಾಂಡಾಜ [ ಜಿ ] ನಿಕಃ, ಕುಹಕಃ, ಕಾಪಟಿಕಃ, ಜಾಲಿಕಃ, ಕೌಸೃತಿಕಃ, ಧೂರ್ತಃ, ವ್ಯಂಸಕಃ, ಮಾಯಾವೀ, ಮಾಯಿಕಃ, ಮಾಯೀ–ಈ ೧೦ ಮಾಯಾವಿ" (ಹಲಾಯು. ೫೮-೧೯೪). [ ಸಂ. ]

**ದಾಂಡಿ** (ನಾ). ಸಮುದ್ರತೀರದಲ್ಲಿ ಗುರುತಿಗಾಗಿ ನೆಟ್ಟ ಕಲ್ಲು : (ಕಿಸಂಗ್ರಾ. ೦೩೫). [ ದೇ. ‖ ತುಳು. ದಾಂಡಿ ]

**ದಾಂಡಿಗ,** ಧಾಂಡಿಗ (ನಾ). ೧. ಗಟ್ಟಿಗ ; ಕಟ್ಟುಮಸ್ತಾದ ಆಳು ; ಶಕ್ತಿವಂತ ; ಕಸುವುಳ್ಳವನು ; "ಬಲವುಳ್ಳ ದೊಡ್ಡ ಆಳು ; ಬಲವಂತ ; ಶಕ್ತಿವಾನ" (ಜಾನಕೋ. ೪): ಮನೆಯಲ್ಲಿ ಕರೆಯುವ ಎರಡು ಎಮ್ಮೆಗಳು, ಎರಡು ಹಸುಗಳು, ದುಡಿಯಲು ಇಬ್ಬರು ದಾಂಡಿಗರಾದ ಆಳುಗಳು (ಬಿಮರಿ. ೦೩೨). ೨. ಒರಟು ವ್ಯಕ್ತಿ ; ಅಸಂಸ್ಕೃತ ; ಹುಂಬ : ಕರೆಯದೇ ಮಾಡದೇ ನಾವಿಬ್ಬರು ದಾಂಡಿಗರು ಹೋದರೆ ಕತ್ತು ಹಿಡಿದು ತಳ್ಳಿಯಾರು (ಮಧುಸಂ. ೩೮). **ಧಾಂಡಿಗ :** ೧. ಧಾಂಡಿಗರಾದ ಯುವಕರೂ ಹೆದರುವ ಹುಲಿಗಳನ್ನು ನೀನು ಕೊಲ್ಲಲಾಪೆಯಾ ? (ಈಕಥ. ೦೫) ; ನಾನು ಬಹಳ ಚೆನ್ನಾಗಿ ಬೆಳೆದು ಧಾಂಡಿಗನಾಗಿದ್ದೆ (ಗರುಡಾ. ೮೩); ಅಲ್ಲೊಬ್ಬ ಧಾಂಡಿಗನು ಬಂದವರನ್ನೆಲ್ಲ ಭುಜದ ಮೇಲೆ ಕೂರಿಸಿಕೊಂಡು ನದಿಯನ್ನು ದಾಟಿಸುವನು (ದೇಶಾಂಕ. ೭೫). 'ದಡಿಗ$_2$' ಪರಾ. [ ←ಮರಾ. ದಾಂಡಗಾ ]

**ದಾಂಡಿಗತನ** (ನಾ). ಒರಟುತನ : ಅವನ ದಾಂಡಿಗತನದಿಂದ ಎಲ್ಲರಿಗೂ ಬೇಸರವಾಯಿತು (ರೂಢಿ). [ ದಾಂಡಿಗ + – ತನ ]

**ದಾಂಡು** (ನಾ). ೧. ಚಿಣ್ಣಿಕೋಲಾಟದಲ್ಲಿ ಚಿಣ್ಣಿಯನ್ನು ಹೊಡೆಯಲು ಬಳಸುವ ಕೋಲು. 'ಚಿಣ್ಣಿದಾಂಡು' ಪರಾ. ೨. ಕ್ರಿಕೆಟ್ ಮೊದಲಾದ ಆಟಗಳಲ್ಲಿ ಚೆಂಡನ್ನು ಹೊಡೆಯುವ ಸಾಧನ ; ಬ್ಯಾಟು : ಹೃತ್ಪಿಂಡ ಚೆಂಡು, ಬೆನ್ನೆಲುಬು ದಾಂಡು (ನಡಬಂ. ೧೦೨-೨೦) ; ಕ್ರಿಕೆಟ್ ಆಟದ ದಾಂಡು ; ಚಪ್ಪಟೆ ದಾಂಡು, ಬ್ಯಾಟು (Bat. ಇಂಕನಿ).
[ ←ಮರಾ. ದಾಂಡ್, ದಾಂಡಾ ]

**ದಾಂಡೆ** (ನಾ). (ಕರಾ) ಒಂದು ಬಗೆಯ ವಿಾನು. [ ? ]

**ದಾಂತ$_1$** (ನಾ). ದಕಾರದಲ್ಲಿ ಕೊನೆಗೊಳ್ಳುವ ಶಬ್ದ ; ಕೊನೆಯಲ್ಲಿ ದಕಾರವಿರುವಂತಹುದು : "ದಾಂತಕ್ಕೆ–ಆಬ್ದು (ಅಬ್ದು)–ಜಲಮಗ್ನೇ (ಮುಳುಗ )" (ಶಮದಾ). [ ದ$_1$ + ಅಂತ ]

**ದಾಂತ$_2$** (ಗು). ೧. ನಿಗ್ರಹಗೊಂಡ ; ದಮನವಾದ. ೨. ಪಳಗಿಸಿದ ; ಸಾಧುಗೊಳಿಸಿದ. (ನಾ). ೩. ಇಂದ್ರಿಯನಿಗ್ರಹ : ದಾಂತರಹಿತನ ನಶುಚಿಯುಂ ವಿಭ್ರಾಂತನುಂ . . . ಸಲಹು (ಬಸವು. ೨೨-೫೦). ೪. ಇಂದ್ರಿಯ ನಿಗ್ರಹವನ್ನು ಉಳ್ಳವನು : "ದಾಂತಃ, ದಮಿತಃ—ಇಂದ್ರಿಯನಿಗ್ರಹವುಳ್ಳವನಿಗೂ, ನಿಗ್ರಹಿಸಲ್ಪಟ್ಟ ಇಂದ್ರಿಯಕ್ಕು ಪೆಸರು" (ಸಿದ್ಧಾಂತಿ. ೩೪೯). ೫. ತಪಶ್ಚರ್ಯೆಯ ಮೂಲಕ ಇಂದ್ರಿಯಗಳನ್ನು ನಿಗ್ರಹಿಸಿದವನು; ತಪಸ್ಸಿನ ಕ್ಲೇಶವನ್ನು ಸಹಿಸಿಕೊಳ್ಳುವವನು : "ತಪದ ಬಾಧೆಯುಂ ಸೈರಿಸುವಾತನಂ ದಾಂತನೆಂಬುದು" (ಹಲಾಯು. ೬೬-೨೪೫) ; "ಸಂದ ತಪಬಾಧೆಯುಂ ಸೈರಿಸುವವಂ ದಾಂತನಕ್ಕು" (ಮಂಗರಾ. ೭೪-೪); ಸಮಜೀವಿಯಾಗಿ ದಾಂತನಾದವನಿಗೆ . . . ಉಪಶಾಂತನಾದಂಥವನಿಗೆ ಕ್ರೋಧವೆಲ್ಲಿಯದು ? (ಬುದ್ಧಪ. ೬೫) ; ದಾಂತನಲ್ಲದವನು ಲೋಕನಿಷ್ಠ ; ಬ್ರಹ್ಮನಿಷ್ಠನಲ್ಲ (ಭಾತತ್ತ್ವ. ೫೦೬). [ ಸಂ. ]

**ದಾಂತತೆ** (ನಾ). ಇಂದ್ರಿಯನಿಗ್ರಹ; ಸಂಯಮ: ದಾಂತತೆ ಎಂದರೆ ಮನಸ್ಸು ಮತ್ತು ಇಂದ್ರಿಯಗಳ ಸ್ವಾಭಾವಿಕವಾದ ಪ್ರವೃತ್ತಿಗೆ ತಾನು ಅಧೀನವಾಗದೆ, ತನ್ನ ಇಚ್ಛೆಯಂತೆ ಅವುಗಳನ್ನು ನಿಯಮಿಸುವುದು (ಭಾತತ್ತ್ವ. ಉಪೋದ್ಘಾತ. XIV). [ಸಂ. ದಾಂತತಾ]

**ದಾಂತಿ** (ನಾ). ೧. ಇಂದ್ರಿಯನಿಗ್ರಹ; ಸಂಯಮ: ದಾಂತಿಯೇ ಸುಖಭೋಗ ಮಾಯಾಶ್ರಾಂತಿಯೇ ಮಹಾತ್ಮೆಯಿವು ಋಷಿಸಂತತಿಗೆ ವರ್ತನವಲೇ ವೈದಿಕವಿಧಾನದಲಿ (ಕುವ್ಯಾಅ. ೫-೧೯); ನಿಮಗೆ ಐವತ್ತು ತುಂಬಿತು. ಈಗ ಮಡಿ ಮಂತ್ರ ಶಾಂತಿ ದಾಂತಿಗೆ ತಕ್ಕ ಕಾಲ (ದೀಪಮ. ೬೦-೫). ೨. ತಪಸ್ಸಿನ ಕಷ್ಟಗಳನ್ನು ಸಹಿಸಿಕೊಳ್ಳುವಿಕೆ. [ಸಂ.]

**ದಾಂದಣ** 'ದಣದಣ' ನೋ.

**ದಾಂದಲೆ** 'ಧಾಂದಲೆ' ನೋ.

**ದಾಂಧಣ** (ನಾ). ಒಂದು ಅನುಕರಣ ಶಬ್ದ: ನಟಿಸ ರಾಜನ ರಾಜಗೃಹದ ಮೇಲಾಕಾಶಘಟನೆಯೊಳದ್ಭುತವಾಗಿ ಝಟಿ ದಾಂಧಣ [ಪಾಠಾಂ. ದಾಂದಳ] ದಿಂದಿಮಿಕು ದಿಮ್ಮೆನೆ ಸುರಪಟಹನಿನಾದ ಕೇಳುತದ (ಭರತೇ. ೩-೧೧೧).

**ದಾಂಧಣರ್** (ನಾ). ಒಂದು ಅನುಕರಣ ಶಬ್ದ: ದಾಂಧಣರೆನುತ ಭೇರಿ ನವಪೊತ್ತು ಕಹಳಾದಿ ದುಂದುಭಿಧ್ವಾನ ದಶದಿಕ್ಕುಗಳನಾವರಿಸೆ (ಕೃಷ್ಣವಿ. ೨-೩೦).

**ದಾಂಧಲೆ** 'ಧಾಂದಲೆ' ನೋ.

**ದಾಂಧಳನೆ** (ಅ). ಒಂದು ಅನುಕರಣಾವ್ಯಯ: ಮೇರುವಿನ ಮೇಲೆ ಶಂಖಧ್ವನಿಸಹಿತ ಭೇರಿ ದಾಂಧಳನುಲಿವುದು (ಕೃಕವ. ೪-೯-೪).
[ದಾಂಧಳ$_0$ + – ಅನೆ$_1$]

**ದಾಂಪತ್ಯ** (ನಾ). ದಂಪತಿಗಳಾಗಿರುವಿಕೆ; ಗಂಡಹೆಂಡಿರಾಗಿರುವಿಕೆ; ದಂಪತಿಗಳ ಜೀವನ; ಇರವಿನೊಳರಿವಿನ ಮರುಳೇ ನಲವು... ನಿಮ್ಮಿ ದಾಂಪತ್ಯದೊಳಿದ ಕಾಂಚೆ ಅಸ್ತು ಅಸ್ತು ಸ್ವಸ್ತಿ ಸ್ವಸ್ತಿ ಎಂಬೆ (ಗಣೇಶ. ೫-೧೦೯); ಕೇವಲ ಬೌದ್ಧಿಕ ಮೈತ್ರಿಯೇ ಸಾಕಾದಲ್ಲಿ, ಬೇರೆ ಲಿಂಗಗಳು ಜೊತೆಗೂಡಿ ದಾಂಪತ್ಯವನ್ನು ಹೂಡುವುದೇ ಬೇಡ (ದೂರಸ. ೨೯); ದಾಂಪತ್ಯದ ನೊಗ ಕತ್ತಿನಿಂದ ಕಳಚಿ ಬಿತ್ತು (ಯೋಧಪು. ೯೪). [ಸಂ.]

**ದಾಂಪತ್ಯಜೀವನ** (ನಾ). ಗಂಡಹೆಂಡಿರ ಜೀವನ; ಸಂಸಾರ: ಒಮ್ಮೊಮ್ಮೆ ಈ ಪ್ರಣಯವು ದಾಂಪತ್ಯಜೀವನಕ್ಕಿಂತಲೂ ಬಾಧುರವಾದುದು (ಕನ್ನಜಾ. ೧೧೫). [ದಾಂಪತ್ಯ + ಜೀವನ]

**ದಾಂಪತ್ಯಧರ್ಮ** (ನಾ). ದಾಂಪತ್ಯ ಜೀವನದ ನಡೆವಳಿ,–ಆಚಾರ: ಗೃಹ ಪವಿತ್ರವಾಗಿರಲೆಂದು, ದಾಂಪತ್ಯಧರ್ಮದಲ್ಲಿ ಆನುಮಾನಿಕ ಕಾಲ್ಪನಿಕ ಕಲಂಕ ಕೂಡ ಲೇಶಮಾತ್ರವೂ ಸ್ಪರ್ಶಿಸದೆ ಇರಲೆಂದು, ಸಾಧ್ವಿಯರಾದ ಸ್ತ್ರೀಯರ ಈ ಮಿತಿಮೀರಿದ ಜಾಗರೂಕತೆಯಲ್ಲಿ ... ಒಂದು ಬಗೆಯ ಮಾಧುರ್ಯ ಉಂಟು (ಇಪ್ಪಕ. ೨೬೦). [ದಾಂಪತ್ಯ + ಧರ್ಮ]

**ದಾಂಪತ್ಯಪ್ರೇಮ** (ನಾ). ದಂಪತಿಗಳಲ್ಲಿರುವ ಪರಸ್ಪರವಾದ ಅನುರಾಗ,–ಪ್ರೀತಿ: ಶುದ್ಧ ದಾಂಪತ್ಯಪ್ರೇಮವೇನೆಂಬುದನ್ನು ನೀನು ಅರಿಯಲಾರದೆ ಹೋದೆ (ಹೂಸಕ್ಕ. ೧೦). [ದಾಂಪತ್ಯ + ಪ್ರೇಮ]

**ದಾಂಪತ್ಯಯೋಗ** (ನಾ). ದಾಂಪತ್ಯದ ಸಂಬಂಧ: ಇಲ್ಲವೋ ಪೆರ್ಗಡಿಯ ಪೆರ್ಮೆಯವರೊಡನೆ, ಪಂಬಲಿಸಲೇವುದಯ್ ದಾಂಪತ್ಯಯೋಗಮನ್? (ಬದ್ಧಪ್ರ. ೪೭-೧೦೨೪). [ದಾಂಪತ್ಯ + ಯೋಗ]

**ದಾಂಪತ್ಯವಿಚ್ಛೇದನ** (ನಾ). ದಂಪತಿಗಳು ಬೇರ್ಪಡುವಿಕೆ; ಗಂಡ–ಹೆಂಡಿರು ತಮ್ಮ ಪರಸ್ಪರ ಸಂಬಂಧವನ್ನು ರದ್ದುಪಡಿಸಿ ಬೇರೆ ಬೇರೆಯಾಗುವಿಕೆ; ಸೋಡಚೀಟಿ; ಘಟಸ್ಫೋಟ; ಪಾರೀಖತ್ತು (ಉಕ): ದಾಂಪತ್ಯ ವಿಚ್ಛೇದನಕ್ಕೆ ಅವಕಾಶವಿರುವ ವಿಚಾರ ಮುಂತಾದುವುಗಳ ಸಂಬಂಧವಾಗಿ ಹೊಸ ಕಾನೂನು ರಚನೆಯಾಗಿರುವುದರಿಂದ ಮಹಿಳೆಯರ ಸ್ಥಿತಿಯು ಉತ್ತಮವಾಗುವ ಸೂಚನೆಗಳು ತೋರುತ್ತಿವೆ (ಭಾರದ. ೩೯೨).
[ದಾಂಪತ್ಯ + ವಿಚ್ಛೇದನ]

**ದಾಂಪತ್ಯಸಂಬಂಧ** (ನಾ). ದಂಪತಿಗಳ ಸಾಂಸಾರಿಕ ಸಂಬಂಧ: ನಿಮ್ಮ ದಾಂಪತ್ಯಸಂಬಂಧವನ್ನು ವಿಚ್ಛೇದವಮಾಡುವುದು ಮಹಾಪಾತಕವೆಂತಲೂ ತಿಳಿದಿದ್ದೇನೆ (ಕಪಾಕುಂ. ೧೨೧). [ದಾಂಪತ್ಯ + ಸಂಬಂಧ]

**ದಾಂಬರು** 'ಡಾಮರ್$_2$' ನೋ.

**ದಾಂಭಿಕ** (ಗು). ೧. ಕಪಟದ; ವೇಷಧಾರಿಯಾದ. ೨. ಆಡಂಬರದ; ಜಂಬದ. (ನಾ). ೩. ವೇಷಧಾರಿ; ಕಪಟಿ; ಸೋಗಿನವನು: ದುರ್ವಿನೀತ ಬ್ರಾಹ್ಮಣ ಏಳು ಭಿಕ್ಷಾಜೀವಿ! ...ದಾಂಭಿಕ! (ಬಾಡಾಅ. ೮೩); ದುರ್ಗುಣಘರಟ್ಟ ಘಟ್ಟಿವಾಳಯ್ಯ ದಾಂಭಿಕರಿಗೆ, ನಾಮಧಾರಿಗಳಿಗೆ ... ಸಿಂಹಸ್ವಪ್ನವಾಗಿ ಉಳಿದಿದ್ದಾನೆ (ಶರಹ. ೩೭೫). [ಸಂ.]

**ದಾಕ** 'ಡಾಗು$_1$' ನೋ.

**ದಾಕಲು** 'ದಾಖಲೆ' ನೋ.

**ದಾಕಿಡು** (ಕ್ರಿ). ದೂರದೂರಕ್ಕೆ ಹೆಜ್ಜೆಹಾಕು; ದಾಟುಹೆಜ್ಜೆ ಹಾಕು: ಸಾಕಿಂದು ತಪಸಿಗೆಯ್ವುದುವರೊಡನೆಮಗಾಸೆಯೇಕೆಂದು ನಾವು ಜಾಱುವೆವು ದಾಕಿಟ್ಟು ಹತ್ತೆಂಟು ಹಜ್ಜೆಯ ತಾವೆಯ್ದಿ ತಾಕಿ ಕೈವಿಡಿದೊಯ್ದರೆಮ್ಮ (ಭರತೇ. ೭೦-೪೩). [ದಾಕು$_2$ + ಇಡು$_1$]

**ದಾಕು$_1$** 'ಡಾಗು$_1$' ನೋ.

**ದಾಕು$_2$** (ನಾ). ದೊಡ್ಡ ಹೆಜ್ಜೆ; ದಾಟು ಹೆಜ್ಜೆ: ಮೂಲೋಕವ ಚೋಟಿಕ್ಕುವಂತೆ ದಾಕೊಂದಟಿಗೊಳು ಕೋಟಿವಾರ್ಧಿಯ ಪಾಯ್ವ ನಿರಾಕು ಲೋನ್ನತಿಯಿರ್ದುದೊಳಗೆ (ಭರತೇ. ೭೪-೧೭). 'ದಾಪು' ಪರಾ. [?]

**ದಾಕುದಾರ** 'ಡಾಕ್ಟರು' ನೋ.

**ದಾಕುಹಾಕು** (ಕ್ರಿ). ಮೈಲಿ ಚುಚ್ಚು; ದೇವಿಹಾಕು; ಸಿಡುಬುಹಾಕು: ಮಗುವು ಹುಟ್ಟಿದ ನಾಲ್ಕು ತಿಂಗಳಿನಿಂದ ಹಿಡಿದು ಒಂದು ವರುಷದೊಳಗೆ ಕಡ್ಡಾಯವಾಗಿ, ಮೈಲಿಗೆ, ಕಾಲರಾ ... ಇತ್ಯಾದಿ ೧೮ ಬೇನೆಗಳಿಗಾಗಿ ದಾಕುಹಾಕುವ ಯೋಚನೆಯು ನಡೆದಿದೆ (ದೇವದೂ. ೨೫೨); ಜನ್ನರನು ದನದ ಮೈಲಿಯ ಬೊಕ್ಕೆಗಳ ಕೀವನ್ನು ತೆಗೆದು ಶಸ್ತ್ರದಿಂದ ಫಿಪ್ಸನ ಚರ್ಮದ ಮೇಲೆ ಗಾಯಮಾಡಿ ರಕ್ತದಲ್ಲಿ ಸೇರಿಸಿದನು. ಇದೇ ಮೊತ್ತ ಮೊದಲು ದಾಕುಹಾಕಿದ ಉದಾಹರಣೆಯು (ಮಾನಸ. ೪).
[ದಾಕು$_1$ (<ಡಾಗು$_1$) + ಹಾಕು (<ಪಾಯ್ಕು$_1$)]

**ದಾಕೋಟ** 'ದಹಕೋಟ' ನೋ.

**ದಾಕ್ತಾರ** 'ಡಾಕ್ಟರು' ನೋ.

**ದಾಕ್ಷ** (ಗು). ದಕ್ಷನಿಗೆ ಸಂಬಂಧಪಟ್ಟ. [ಸಂ.]

**ದಾಕ್ಷಾಯಣಿ** (ನಾ). ೧. ದಕ್ಷನ ಮಗಳು; ಸತೀದೇವಿ; ಪಾರ್ವತಿ; ಗೌರಿ: "ರುದ್ರಾಣೀ, ಶರ್ವಾಣೀ ... ದಾಕ್ಷಾಯಣೀ, ಶಿವಾ ... ಮೇನಕಾತ್ಮಜಾ – ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೪-೧೫); ದಕ್ಷನುದರದಲಿ ಸಂಭವಿಸಿದಳು ದಾಕ್ಷಾಯಣೀನಾಮದಿಂ (ಲಶಿಚಿಂ. ೧೩-೨); ನೀರೇಜಾಸನಸೂನು ದಕ್ಷನುಟಿ ಸದ್ದಾಕ್ಷಾಯಣೀದೇವಿಯಂ ... ಪಡೆದಂ (ಹಮ್ಮಿರ. ೨-೭). ೨. ಇಪ್ಪತ್ತೇಳು ನಕ್ಷತ್ರಗಳಲ್ಲಿ ಯಾವುದಾದರೂ ಒಂದು; P ದಕ್ಷಬ್ರಹ್ಮನಿಗೆ ವೀರಿಣಿ ಎಂಬುವಳಲ್ಲಿ ಹುಟ್ಟಿದ ಅಶ್ವಿನೀ ಮೊದಲಾದ ಇಪ್ಪತ್ತೇಳು ಜನ ನಕ್ಷತ್ರಕನ್ಯೆಯರು. ಇವರೆಲ್ಲಾ ಚಂದ್ರನ ಪತ್ನಿಯರು: "ಅಶ್ವಿನೀ ಮುಂತಾದ ೨೭ ನಕ್ಷತ್ರಗಳೂ ದಾಕ್ಷಾಯಣ್ಯಃ, ದಾಕ್ಷಾಯಣಿಯರೆನಿಸಲ್ಪಡುತ್ತವೆ" (ಸಿದ್ಧಾಂತಿ. ೩೦).
[ಸಂ. ದಾಕ್ಷಾಯಣೀ]

**ದಾಕ್ಷಾಯಣೀರಮಣ** (ನಾ). ೧. ಶಿವ. ೨. ಚಂದ್ರ: "ಇಂದುಃ, ಚಂದ್ರಃ . . . ವಿಧುಃ, ದಾಕ್ಷಾಯಣೀರಮಣಃ—ಈ ೨೧ ಚಂದ್ರನ ಪೆಸರ್" (ಹಲಾಯು. ೮-೪೨). [ ಸಂ. ]

**ದಾಕ್ಷಾಯ್ಯ** (ನಾ). ರಣಹದ್ದು ; ದೊಡ್ಡಹದ್ದು ; ಗೃಧ್ರ. [ ಸಂ. ]

**ದಾಕ್ಷಿಣಾತ್ಯ** (ಗು). ೧. ದಕ್ಷಿಣಕ್ಕೆ ಸಂಬಂಧಿಸಿದ: ಇದು ದಾಕ್ಷಿಣಾತ್ಯ ಕವಿಮಾರ್ಗಮುದಾರಮುದೀಚ್ಯದುರುವಿಶೇಷಣಯುತಮಪ್ಪುದು (ಕವಿರಾ. ೨-೭೯). (ನಾ). ೨. ದಕ್ಷಿಣ ಭಾರತದಲ್ಲಿ ವಾಸಿಸುವ ಜನ: ವಿಂಧ್ಯ ಪರ್ವತದ ದಕ್ಷಿಣದಲ್ಲಿರುವ ಪ್ರದೇಶವನ್ನು ದಕ್ಷಿಣಭಾರತವೆಂದು ಪರಿಗಣಿಸ ಬಹುದು. ಇಲ್ಲಿ ವಾಸಮಾಡುವ ಜನರು ದಾಕ್ಷಿಣಾತ್ಯರು (ಭಾರದ. ೩೯೫) ; ಆರ್ಯಸಂಸ್ಕೃತಿಯ ನಿಜವಾದ ರಕ್ಷಕರು ದಾಕ್ಷಿಣಾತ್ಯರು (ಋಕ್ಸಾರ. ೧೧೦ ಟೀಕೆ). ೩. [ಸಂಗೀತ] ಒಂದು ರಾಗದ ಹೆಸರು: ಕೌಶಿಕಿ, ವೇಳಾವಳಿ . . . ದಾಕ್ಷಿಣಾತ್ಯ [ಪಾಠಾಂ. ದಕ್ಷಿಣಾದಿತ್ಯ] . . . ಶಯ ಸೋದರಿಯೆಂಬ ಮೂವತ್ತುನಾಲ್ಕು ರಾಗಂಗಳೀ ಭಾಷಾಂಗದಿಂದ ಪುಟ್ಟಿದವು (ವಿವೇಕ. ೨೩೩). [ ಸಂ. ]

**ದಾಕ್ಷಿಣಾತ್ಯಕ** (ನಾ). [ಕಾವ್ಯವಿ] ದಕ್ಷಿಣಮಾರ್ಗ: ಮನದೊಳ ಗಾಗಳುಂ ನಿಜಸದಾ ಮುಳಿಸಂ ಗತರಾಗಮೋಹನೊಯ್ಯನೆ ಮುನಿ ನಾಥನೆಂಬ ವಚನಾಂತರವಿಂತಿದು ದಾಕ್ಷಿಣಾತ್ಯಕಂ (ಕವಿರಾ. ೨-೧೦೬). [ ಸಂ. ]

**ದಾಕ್ಷಿಣಾತ್ಯಪಾಠ** (ನಾ). ದಕ್ಷಿಣ ಭಾರತದಲ್ಲಿ ದೊರೆಯುವ ಪಾಠ: ಮಹಾಭಾರತಕ್ಕೆ ದಾಕ್ಷಿಣಾತ್ಯಪಾಠ, ಔತ್ತರೇಯಪಾಠವೆಂದು ಎರಡು ಪಾಠಗಳಿವೆ (ಭಾರದ. ೯೬). 'ಔತ್ತರೇಯಪಾಠ' ಪರಾ.

[ ದಾಕ್ಷಿಣಾತ್ಯ + ಪಾಠ ]

**ದಾಕ್ಷಿಣಾತ್ಯಸಂಗೀತ** (ನಾ). ದಕ್ಷಿಣ ಭಾರತದಲ್ಲಿ ಪ್ರಚುರವಾದ ಸಂಗೀತ; ಕರ್ಣಾಟಕ ಸಂಗೀತ: ಈಚೆಗೆ ದಾಕ್ಷಿಣಾತ್ಯಸಂಗೀತದಲ್ಲಿ ಹೆಚ್ಚಿನ ಪ್ರೋತ್ಸಾ ಹಗಳು ಅಂಕುರಿಸಿರುವಂತೆ ಕಾಣುತ್ತದೆ (ಸಂಗೀಜಂ. ೧೮೩).

[ ದಾಕ್ಷಿಣಾತ್ಯ + ಸಂಗೀತ ]

**೫ದಾಕ್ಷಿಣಾತ್ಯೆ** (ನಾ). ೧. ದಕ್ಷಿಣದೇಶದಲ್ಲಿ ವಾಸಿಸುವವಳು ಅಥವಾ ಹುಟ್ಟಿದವಳು. ೨. [ಸಂಗೀತ] ದಕ್ಷಿಣ ಭಾರತದಲ್ಲಿ ಪ್ರಚುರವಾದ ವೃತ್ತಿ,–ಪದ್ಧತಿ: ಮನಾವತಿಯುಂ ದಾಕ್ಷಿಣಾತ್ಯೆಯುಂ ಪಾಂಚಾಲಿಯುಂ ಮಾದ್ರ ಮಾಗಧಿಯುಮೆಂಬ ನಾಲ್ಕುಂ ವೃತ್ತಿಯುಮಂ (ಅಜಿಪು. ೫-೩೦ ವ). [ ಸಂ. ದಾಕ್ಷಿಣಾತ್ಯಾ ]

**ದಾಕ್ಷಿಣ್ಯ** (ಗು). ೧. ದಕ್ಷಿಣೆಗೆ ಸಂಬಂಧಿಸಿದ ; ಉಪಾಯನಕ್ಕೆ ಸೇರಿದ. (ನಾ). ೨. ದಕ್ಷಿಣೆಗೆ ಯೋಗ್ಯನಾದವನು: "ದಕ್ಷಿಣೀಯಃ, ದಕ್ಷಿಣಾರ್ಹಃ, ದಾಕ್ಷಿಣ್ಯಃ -೩ ದಕ್ಷಿಣೆಗೆ ಯೋಗ್ಯನಾದವನು, ಧಾರಾಳವಾಗಿ ಕೊಡತಕ್ಕವನು" (ಸಿದ್ಧಾಂತಿ. ೨೭೯). ೩. ಸಂಕೋಚ; ಭಿಡೆ: "ಬಿಡೆಯಮೆನಲ್ ದಾಕ್ಷಿಣ್ಯಂ" (ಚತುನಿ. ೨೦೨). ೪. ದಯೆ ; ಅನುಕಂಪ ; ಕರುಣೆ ; ಮರುಕ: ಅರಸುಗಳ್ ತಮಗೆನಿತುಂ ಸಮಚಿತ್ತಮಿಲ್ಲದಿರ್ದೊಡಂ ಸಮ್ಮುಖಕ್ಕೆ ಬಂದ ಪ್ರಾಣಿಮಾತ್ರಕ್ಕೆ ಪರಾಙ್ಮುಖರಾಗಲಾಗದು ದಾಕ್ಷಿಣ್ಯಂ ಬೇಟ್ಕುಮೆಂಬ ನೀತಿಯುಂಟು (ಪಂಚತಂ. ೩೩-೧೧) ; ಮನೆಯಲ್ಲಿ ಇಟ್ಟು ಕೊಂಡು ತೋರಿಸಿದ ಈ ಹೆಚ್ಚಿನ ದಾಕ್ಷಿಣ್ಯಕ್ಕೆ ಪ್ರತಿಯಾಗಿ ಅವನಿಂದ ಹೆಚ್ಚಿನ ಕೆಲಸವನ್ನು ಆದಾಯ ಮಾಡಿದರೆ ಸರಿ ಇಪ್ಪಕ. ೩೦೩). ೫. ಜಾಣ ತನ. ೬. ಸಾಮರ್ಥ್ಯ. ೭. ಇನ್ನೊಬ್ಬರ ಮನಸ್ಸನ್ನು ಅನುಸರಿಸಿ ನಡೆಯುವಿಕೆ ; ಇನ್ನೊಬ್ಬರಿಗೆ ನೋವಾಗದಂತೆ ನಡೆಯುವಿಕೆ ; ಸೌಜನ್ಯ: ಒದವಿದ ದಾಕ್ಷಿಣ್ಯಕ್ಕುಂ ವಿದಗ್ಧವೃತ್ತಿಗಂ . . . ಮೊದಲೆನಿಸಿದ ಸಕಲಗುಣಾಸ್ಪದರಂ ಜಗದೊಳಗೆ ಪಡೆವುದಸದಳಮಲ್ತೆ (ಕಾದಂಪೂ. ೪೦) ; ಕಾಮದಿಂ ಕೋಪದಿಂ ಕೂರ್ಪರ ದಾಕ್ಷಿಣ್ಯಂಗಳಿಂ . . . ದೇವ ನಿಮ್ಮಂ ಸ್ಮರಿಯಿಪ್ಪಂತಿತ್ತು (ರಕ್ಷಾಶ. ೬೦) ; ದಾಕ್ಷಿಣ್ಯಕ್ಕೆ ಬಸುರಾಗಿ ಹೆರೋಕೆ ತಾವಿಲ್ಲ (ಗಾದೆ). 'ಮುಖದಾಕ್ಷಿಣ್ಯ' ಪರಾ. ೮. ದಕ್ಷಿಣದೇಶಕ್ಕೆ ಸೇರಿದವನ . [ ಸಂ. ]

**ದಾಕ್ಷಿಣ್ಯಪರ** (ನಾ). ಸೌಜನ್ಯ ಸ್ವಭಾವದವನು ; ಇನ್ನೊಬ್ಬರ ಭಿಡೆ ಮುರವತ್ತಿಗೆ ಒಳಗಾಗುವವನು: ನ್ಯಾಯನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ ಲೋಕವಿರೋಧಿ ಶರಣನಾರಿಗಂಜುವನಲ್ಲ (ಬಸವ. ೭೫೩). [ ಸಂ. ]

**ದಾಕ್ಷಿಣ್ಯವಂತ** (ನಾ). ನಮ್ರತೆಯಿಂದ ಕೂಡಿದವನು: ಆತ ತುಂಬಾ ದಾಕ್ಷಿಣ್ಯವಂತ (ರೂಢಿ). [ ದಾಕ್ಷಿಣ್ಯ + – ವಂತ ]

**ದಾಕ್ಷಿಣ್ಯವರ್ತಿ** (ನಾ). ೧. ನಮ್ರತೆಯಿಂದ ವ್ಯವಹರಿಸುವವನು. ೨. ದಕ್ಷಿಣದೇಶದಲ್ಲಿ ವಾಸಿಸುವವನು ; ದಕ್ಷಿಣದೇಶದವನು. ೧, ೨: ವಿದ್ಯಾಧರರನ್ಭೋಜನರೆನಿಸರೆಲ್ಲರುಂ ದಾಕ್ಷಿಣ್ಯವರ್ತಿಗಳ್ತಿಳಿಯೆ ಲಂಕಾನಿವಾಸಿ ಗಳೆನಿಸರು (ಜೈಮಿಭಾ. ೨-೧೧). [ ಸಂ. ದಾಕ್ಷಿಣ್ಯವರ್ತಿನ್ ]

**ದಾಖಲ್** 'ದಾಖಲೆ' ನೋ.

**ದಾಖಲ** 'ದಾಖಲೆ' ನೋ.

**ದಾಖಲಾತಿ, ದಾಖಲಾತು, ದಾಖಲಾತೆ** (ನಾ). ೧. ಕಾಗದಪತ್ರ ; ದಫ್ತರು: ಪಿತೂರಿ ನಡೆಸಿದ್ದಾರೆಂದು ದಾಖಲಾತಿಗಳಿವೆ (ದಾಲತ್. ೧೪೭); ಅವನು ವಂಶಲಾಂಛನ ದಾಖಲಾತಿ ಇಲಾಖೆಯಲ್ಲಿದ್ದಾನೆ (ಪುನರು. ೩೨೯). ೨. ರುಜುವಾತು. ೩. ಪ್ರವೇಶ ; ಸೇರಿಸುವಿಕೆ: ಶಾಲೆಗೆ ಮಕ್ಕಳನ್ನು ದಾಖಲಾತಿ ಮಾಡಿಸುವರು (ರೂಢಿ). **ದಾಖಲಾತು:** (೩). **ದಾಖಲಾತೆ:** ೧. ಪಾರ್ಲಿಮೆಂಟಿನ ದಾಖಲಾತೆಗಳಲ್ಲಿ ನಾನು ಓದಿದ್ದೇನೆ (ಥೇಮ್ಸ್‌ಗಂ. ೬೦).

[ ದಾಖಲ್ (<ದಾಖಲೆ) + – ಆತಿ ]

**ದಾಖಲಾತು** 'ದಾಖಲಾತಿ' ನೋ.

**ದಾಖಲಾತೆ** 'ದಾಖಲಾತಿ' ನೋ.

**ದಾಖಲು** 'ದಾಖಲೆ' ನೋ.

**ದಾಖಲೆ, ದಾಕಲು, ದಾಖಲ್, ದಾಖಲ, ದಾಖಲು** (ನಾ). ೧. ಲೆಕ್ಕಕ್ಕೆ ಸೇರಿದುದು ; ಲೆಕ್ಕಕ್ಕೆ ಸಂದಾಯವಾದುದು: (೩). ೨. ಆಧಾರ ಪೂರ್ವಕವಾದ ಪ್ರಮಾಣಬದ್ಧವಾದ ಕಾಗದ ಪತ್ರಗಳಲ್ಲಿ ಸೇರಿಸಿದ ಒಕ್ಕಣಿಕೆ,–ನಮೂದು: ಅಗತ್ಯವಾದ ನೂತನ ಅಂಕಿ ಅಂಶಗಳನ್ನೂ ಹೊಸ ದಾಖಲೆಗಳನ್ನೂ ಅಳವಡಿಸಲು ಅವಕಾಶವಿರಬೇಕು (ಶಿಕ್ಷದ. ೩೭೫). ೩. (ಒಂದು ಸಂಗತಿಯನ್ನು ಸ್ಥಾಪಿಸುವುದಕ್ಕೆ ಪೂರಕ ವಾದ) ಲಿಖಿತ ; ರುಜುವಾತು ; ಪ್ರಮಾಣಬದ್ಧವಾದ ಕಾಗದ,– ಪತ್ರ ; ಸರ್ಕಾರಿ ದಫ್ತರದಲ್ಲಿ ನಮೂದಾದ ಕಾಗದ: ದೇವರಿಗೆ ನಿತ್ಯ ನೈಮಿತ್ತಿಕ ಪೂಜಾ ನಡಯೂ ಬಗ್ಯೆ ತಸದೀಕು ದಾಖಲೆಯು **ಮಾಡಿಸಿ** (ಎಕ. III, ತಿರುಮ. ೫೭-೩೧ ; 1855) ; ಗ್ರಾಮದ ಸರ್ವೆ ನಂಬರು ಒಂದು ಒಬ್ಬನ ಹೆಸರಿಗೆ ಪಟ್ಟೆಯಿರುತ್ತಾ ದಾಖಲೆಯಿಲ್ಲದೆ ಒಳ ಅನುಭವ ದಾರರು ಅನೇಕ ಮಂದಿ ಇರುತ್ತಾರೆ (ಭೂಮಿಅ. ೩೭) ; ಆ ಪಾದ್ರಿಯ ಪ್ರದೇಶದಲ್ಲಿ ಅದಕ್ಕೂ ಮೊದಲಿನ ಯಾವ ಕಾಲದ ದಾಖಲೆಗಳನ್ನೂ ಇಡಲಾಗಲಿಲ್ಲ (ಬೆಂಜನ್. ೧೦) ; ತೊರೆಯರು ಈಚೆಗೆ ಆ ಮಾರ್ಗವಾಗಿ ಹೋದ ದಾಖಲೆ ಇಲ್ಲ (ಕಲನೆ. ೨೦೫) ; ತನ್ನ ತಂದೆಯ ಆಸ್ತಿಯನ್ನು ವಿಲೇವಾರಿ ಮಾಡುವ ಹಕ್ಕಿದೆಯೆನ್ನುವುದಕ್ಕೆ ದಾಖಲೆಯೇನೂ ಸಿಕ್ಕಿಲ್ಲ ವಂತೆ (ಯೋಧಪು. ೩೭). ೪. ಸೇರುವಿಕೆ ; ಹಾಜರಾಗುವಿಕೆ: ಇಲ್ಲಿಗೆ ದಾಖಲೆಯಾದ ದಿನ ಹೇಗಿದ್ದನೋ ಹಾಗೇ ಇದ್ದ (ವೀರಯೋ. ೪). **ದಾಕಲು:** ೩. ವಿಷಯವನ್ನು ಸ್ಪಷ್ಟಪಡಿಸುವಂತಹ ದಾಕಲುಗಳೂ ಸಿಕ್ಕಿದವು (ರೂಢಿ). **ದಾಖಲ್:** ೪. ಮೂರು ಗಂಟೆಗೆ ದಾಖಲ್ ಆದನು ತಂಗಿವೂರಿನ ಒಳಗೆ (ಕರ್ಣಸಂ. ೮೪). **ದಾಖಲ:** ೩. ಮದ್ದುಗಿರಿ ಸರಕಾರ

ದಾಖಲ ರಿಯಾಸತ ಮೈಸೂರ ಚಿದಾನಂದ ಮದ್ದಗಿರಿ ಕಸಬೆ ಬೆಟ್ಟದ ಹಿಂದೆ ಸುತ್ತಾ ಅಡವಿಗಿಡಾ ಕಡದು (ಮೈಆರಿ. ೧೯೩೯, ೯೪-೩ ; 1813) ; ಊರಿನವರು ನಾವು ಎಂಟು ಹತ್ತು ಕುಳ, ತಿರುಪತಿ ವೆಂಕಟರಮಣಸ್ವಾಮಿ ಒಕ್ಕಲು; ಯಾವ ಕಾಲಕ್ಕೋ ದಾಖಲ ಆದದ್ದು (ಜಂಗೂಲಿ. ೮). **ದಾಖಲು:** ೩. ಆಸ್ತಿಯ ಮೇಲೆ ತನ್ನ ಹಕ್ಕನ್ನು ಸ್ಥಾಪಿಸುವುದಕ್ಕೆ ಸಾಕಷ್ಟು ದಾಖಲು ಗಳನ್ನೂ ಸಿದ್ಧಪಡಿಸಿದ್ದನು (ರೂಢಿ).

**ದಾಖಲೆದೂಖಲೆ** (ದ್ವಿರುಕ್ತಿ): ದಾಖಲೆದೂಖಲೆಗಳೇನೂ ಸಿಕ್ಕಿರಲಿಲ್ಲ (ರೂಢಿ). **ದಾಖಲಾಗು** = ೧. ನಮೂದಾಗು : ಹಿಂದಿನ ದಿನದ ವ್ಯಾಪಾರ ದಾಖಲಾಗದೆ ಇರುವುದು ಕಂಡು ಬಂತು (ಮರಳಿ ೧೫೪). ೨. ಸೇರು; ಒಳಪಡು : ಹುರುಳಿ ಶೀತ್ತೂರ ಮೂಗಣೆಗೆ ದಾಖಲಾಗಿಯಿರುವ ಮುಳು ಬಾಗಿಲೆಂಬ ಗ್ರಾಮ (ಮೈಆರಿ. ೧೯೩೪, ೫೨-೫; 1812). ೩. ಬರು ; ಹಾಜರಾಗು : ಭಾರಿ ಫೌಜು ಸಮೇತ ಬಂದು ಜಮಾಲಾಬಾದಿಗೆ ದಾಖಲಾದಲ್ಲಿ (ರಾಜೇಂದ್ರ. ೬೦); ಹೊಸದಾಗಿ ದಾಖಲಾಗುವವರು ದಾಖ ಲಾಗುತ್ತಿದ್ದರು (ದುಂಬಿಕ. ೧೬೫). **ದಾಖಲುಮಾಡು, ದಾಕಲುಮಾಡು, ದಾಖಲ್ಮಾಡು** = ಹಾಜರುಪಡಿಸು; ಮನವಿಮಾಡು ; ಪಟ್ಟಿಗೆ ಸೇರಿಸು ; ನಮೂದಿಸು : ಇದಕ್ಕೆ ತಪ್ಪಿದ್ದಲ್ಲಿ ನಿಮ್ಮ ಮೇಲೆ ಯೋಗ್ಯವಾದ ವ್ಯವ ಹರಣೆ ಹೂಡಿ ದಾವಾ ದಾಖಲುಮಾಡಲಾಗುವುದು (ಕುರುಕಾ. ೫); ಕಾರ್ಡಿನಲ್ಲಿ ಒಂದು ವಾರಕ್ಕೆ ಗೆರೆ ಎಳೆದು ಒಂದು ವಾರದ ರೇಶನ್ ಕೊಟ್ಟದಾಗಿ ದಾಕಲುಮಾಡಿ (ದೇಶಧು. ೬೭) ; ಮತ್ತೆ ಯಾವಾಗಲಾದರೂ ಅರ್ಜಿಯನ್ನು ದಾಖಲ್ಮಾಡುವ (ಘೂರಾಚಿ. ೧೦೭) ; ಗ್ರಾಮದ ಕೋರ್ಟಿ ನಲ್ಲಿ ದಾಖಲ್ಮಾಡಬಹುದಾದ ಯಾವುದಾದರೂ ವ್ಯಾಜ್ಯದಲ್ಲಿ ವಾದಿಯು . . . ವಿಚಾರಿಸಲ್ಪಡಬೇಕೆಂದು ಕೇಳಬಹುದು (ಗ್ರಾಮೂಕ. ೧೭): **ದಾಖಲೆ ಮಾಡಿಸು** = ದಾಖಲೆ ಪುಸ್ತಕದಲ್ಲಿ ಬರೆಯಿಸು,_ನಮೂದಿಸು ; ನೋಂದಣಿಮಾಡಿಸು : "ದಾಖಲೆಮಾಡು; ದಾಖಲೆಮಾಡಿಸು ; ರಿಜಿಸ್ಟರಿ ನಲ್ಲಿ ಬರೆ,-ಬರಸು. ರಿಜಿಸ್ಟರುಮಾಡು; ನೋಂದಣಿಮಾಡು" (Register. ಪತ್ರಿನಿ. ೬೮). **ದಾಖಲೆ ಮುರಿ** = ಹಿಂದಿನ ದಾಖಲೆಗಳನ್ನೆಲ್ಲ ಮೀರಿಸು ; ವಿಕ್ರಮವನ್ನು ಸ್ಥಾಪಿಸು : ದಾಖಲೆ ಮುರಿಯುವಂತಹ ಆಟವನ್ನು ಇಂದು ಅವನು ಆಡಿದನು (ರೂಢಿ). **ದಾಖಲೆ ಸ್ಥಾಪಿಸು** = ದಾಖಲೆ ಮುರಿ: ದಾಖಲೆ ಸ್ಥಾಪಿಸುವಂತಹ ಕಾರ್ಯವನ್ನು ಅವರು ಮಾಡಿ ತೋರಿಸಿದರು (ರೂಢಿ).

[ ←ಪಾರ. ಹಿಂ. ದಾಖಿಲ್, ದಾಖಿಲಾ; ಮರಾ. ದಾಖಲ್, ದಾಖಲಾ ]

**ದಾಖಲೆಗ್ರಾಮ** (ನಾ). ದೊಡ್ಡ ಗ್ರಾಮಕ್ಕೆ ಸೇರಿದಂತಿರುವ ಸಣ್ಣ ಗ್ರಾಮ ; ಉಪಗ್ರಾಮ : (ಕೈಸಾಗ. ೫೪೬). [ ದಾಖಲೆ + ಗ್ರಾಮ ]

**ದಾಖಲೆಪುಸ್ತಕ** (ನಾ). ನಿಗದಿಮಾಡಿದ ವಿಷಯಗಳನ್ನೊಳಗೊಂಡ ಕಾಗದ ಪತ್ರಗಳ ಹೊತ್ತಗೆ : "ದಾಖಲೆಪುಸ್ತಕ, ರಿಜಿಸ್ಟರು" (Register. ಪತ್ರಿನಿ ೬೮). [ ದಾಖಲೆ + ಪುಸ್ತಕ ]

**ದಾಗಡಿ** 'ದಾಗುಡಿ' ನೋ.

**ದಾಗದೂಜಿ, ದಾಗುದೂಜಿ** (ನಾ). ದುರಸ್ತಿಮಾಡಿಸುವಿಕೆ; ಜೀರ್ಣೋದ್ಧಾರ; ರಿಪೇರಿ : ಸರಕಾರದವರು ಇನ್ನೂ ಉಳಿದ ಇಮಾರತುಗಳ ದಾಗ ದೂಜಿಗಾಗಿ ವರ್ಷಕ್ಕೆ ೧೦೦೦ ರೂಪಾಯಿ ವೆಚ್ಚ ಮಾಡುತ್ತ ಬಂದದ್ದ ರಿಂದ ಈ ಹೊತ್ತಿಗೆ ಹಲಕೆಲವು ಇಮಾರತುಗಳು ಜೀವದಿಂದ ಉಳಿದಿರುತ್ತವೆ (ಕಭಾಗ. ೫೪೧); ಆಗಾಗ್ಗೆ ಛಾವಣಿ ವಗೈರೆ ದಾಗದೂಜಿ ಮಾಡಿಸದೆ ನೋಡಿ ಕೊಳ್ಳದೆ . . . ದವಸ ಕೆಟ್ಟು ಸರಕಾರಕ್ಕೆ ನಷ್ಟವಾದಲ್ಲಿ ಅದರ ಜವಾಬು ಅಮಿಲನು ಕೊಡಬೇಕಾದೀತು (ಮಹಾವಂ. II, ೭೩). **ದಾಗುದೂಜಿ:** (+).

[ ←ಮರಾ. ಡಾಗಡುಜೀ, ಡಾಗಡೋಜೀ, ದಾಗದುಜೀ, ದಾಗದೋಜೀ ]

**ದಾಗಿನೆ** 'ದಾಗೀನು' ನೋ.

**ದಾಗೀನ** 'ದಾಗೀನು' ನೋ.

**ದಾಗೀನು, ಡಾಗೀನು, ದಾಗಿನೆ, ದಾಗೀನ, ದಾಗೀನೆ** (ನಾ). ೧. ನಗ ; ಒಡವೆ ; ಆಭರಣ : ಮೈಮೇಲೆ ದಾಗೀನನ್ನು ಕೈಗೆ ಸಿಕ್ಕಷ್ಟಕ್ಕೆ ಒತ್ತೆಯಿಟ್ಟೋ, ಮಾರಿಯೋ ಜೂಜಾಡುವ ಜನ ಇನ್ನೂ ಕೆಲವರು (ದಿವಾಬ. ೩೯) ; ದಾಗೀನುಗಳನ್ನು ಕಟ್ಟಿಕೊಂಡು ಮಾಡುವದಾದರೂ ಏನು? (ಸ್ಮೃತಿಚಿ. ೨೦೪). **ಡಾಗೀನು :** ೧. ಧಾರೆಯ ಸೀರೆ ಡಾಗೀನು ಗಳನ್ನೆಲ್ಲ ತೆಗೆದಿಟ್ಟು . . . ಚಿನ್ನಮ್ಮ ಬೆಂಕಿ ಕಾಯಿಸಿಕೊಂಡಳು (ಮಲಿಮ. ೬೮೬). **ದಾಗಿನೆ :** ೧. ಇಡಲಿಕ್ಕೆ ದಾಗಿನೆಗಳಂತೂ ಕೇಳಲೇ ಬೇಡಿರಿ (ಮೋಹಿನೀ. ೧೩) ; "ಸ್ವಾಮಿ! ಈ ದಾಗಿನೆಯು ನನಗೆ ಒಪ್ಪುತ್ತದೆಯೇ?" ಎಂದು ಹಾಸ್ಯವದನದಿಂದ ಕೇಳಿದಳು (ವಾಗ್ಮೀವಿ. ೨೮೪). ೨. ವ್ಯಾಪಾರಿಗಳ ಬಳಿಗೆ ಕಳುಹಿಸುವ ಸರಕಿನ ಮೂಟೆ, ಹೊರೆ, ಕಟ್ಟು, ಪಿಂಡಿ ಮುಂತಾದುವು : ಮಾರಾಟಕ್ಕಾಗಿ ಬರುವ ಕಿರಾಣಿ ಜೀನಸಿನ ಮಜೂರಿ ಆಯಾಯ ಜೀನಸಿನ ದಾಗಿನೆಯ ಸ್ವರೂಪದ ಮೇಲಿಂದ ನಿಶ್ಚಯಿಸ ಬೇಕಾಗುತ್ತದೆ (ಮುಂಬವ್ಯಾ. ೧೩). **ದಾಗೀನೆ :** ೧. ಶಹಾಪುರದಂಥ ದೊಡ್ಡ ದೊಡ್ಡ ವ್ಯವಹಾರದ ಗ್ರಾಮದಲ್ಲಿ ಬಂಗಾರದ ಗಟ್ಟಿದಾಗೀನಗಳನ್ನು ವೊತ್ತಿ ಇಟ್ಟು ಬಹಳ ಹಣ ತಕ್ಕೊಂಡರೆ . . . ಬಡ್ಡಿಯಿಂದ ಹಣ ದೊರಿಯುತ್ತದೆ (ಕಭಾಗ. ೨೮೪). **ದಾಗೀನೆ :** ೧. ಒಬ್ಬ ಅಕ್ಕಸಾಲಿಗನು ದಾಗೀನೆಗಳನ್ನು ಮಾಡುವ ಒಂದು ಅಂಗಡಿಯನ್ನು ಇಟ್ಟಿದ್ದನು (ರಾಷಹಂ. ೪೯).

[ ←ಮರಾ. ದಾಗಿನಾ, ಡಾಗಿನಾ, ಡಾಗಿಣಾ ]

**ದಾಗೀನೆ** 'ದಾಗೀನು' ನೋ.

**ದಾಗುಡಿ. ದಾಗಡಿ, ಧಗಡಿ$_{2}$** (ನಾ). ನೀರಿನ ಮೇಲೆ ಹಬ್ಬುವ ಒಂದು ವಿಧವಾದ ಬಳ್ಳಿ : "ದಾಗುಡಿಯಧೋಮುಖಿ" (ಮಂಗರಾ. ೪೦-೩೩) ; "ದೀರ್ಘಕಾಂಡಾ-ದಾಗುಡಿ" (ಓಷಧಿ. ೭೬) ; ಕೆಂಪಿನ ಕಣಗಿಲೆಯಿಾಶ್ವರಿ ಕೆಂಪಿನಪಾಮಾರ್ಗ ದಾಗುಡಿಗಳೆಂಬಿವಱೊಳ್ ಸೊಂಪುಳ್ಳ ಬೇರ್ಗಳಂ ತಂದು (ಖಮದ. ೧೬-೧೪೭) ; ಕಿರುಗಡಸಿಗೆ, ನೈದಿಲಗೆಡ್ಡೆ, ದಾಗುಡಿಯ ಬೇರು ಇವುಗಳಂ ಪ್ರತ್ಯೇಕವಾಗಿ ಆಡಿನ ಹಾಲಿಂದ ಅರೆದು ಕುಡಿಯ ಕೊಡಿಸಲು ಆಡು, ಹೋತ, ಕುರಿ ಇವುಗಳ ವಿಷ ಪರಿಹರವಹುದು (ವೈದ್ಯಸಾ. II, ೨೦೯) ; ಹತ್ತಿಸೊಪ್ಪು ಒಂದು ಹಿಡಿ ... ದಾಗುಡಿಸೊಪ್ಪು ಒಂದು ಹಿಡಿ • ಇವಂ ಹಸುವಿನ ಹಾಲಲ್ಲಿ ಶರ್ಕರೆವೆರಸಿ ತೆಗೆದುಕೊಳ್ಳೆ ಹೆನ್ನೆತ್ತರು ಮಾಣ್ಗುಂ (ಸಕವೈ. ೧೯೭). **ದಾಗಡಿ :** ದಾಗಡೀ ಎಲೆ ಕಷಾಯದಲ್ಲಿ ಜೀರಿಗೆ, ಏಲಕ್ಕಿ, ಲವಂಗ, ಸಕ್ಕರೆ ಇವುಗಳ ಚೂರ್ಣವನ್ನು ಕಲಸಿ ಕುಡಿಯಲು ರಕ್ತವಾಂತಿ ಹರ (ಸಕವೈ. ಪರಿ. ೪೨೩); ಮದಿಯ ಹುಲ್ಲು ಆಪು ಬಹು ದಿವಸದ ದಾಗಡಿಯ ಬಳ್ಳಿಗಳನ್ನು . . . ಒಂದಾದರೂ ಪೂರ್ಣ ಜಲದ ಸೂಚನೆಯಾದ ಮೂಲಿಕೆಯ ಗಿಡಗಳು ಯಾವ ಸ್ಥಳದಲ್ಲಿ ಕಾಣುತ್ತವೆಯೋ ಅಂಥ ಸ್ಥಳದಲ್ಲಿ ಬಾವಿಯನ್ನು ತೆಗಿಸಬೇಕು (ಕೃಷಿಪ್ರ. ೯೯); ಗ್ವಾಡೀಯ ನೆಳ್ಳೀಲಿ ದಾಗಡಿಬಳ್ಳಿ ಹೆಣೆಯೂನ ನಾಡ ಧೂಳವನ ಮಾರಿ ಮ್ಯಾಲೆ (ಲೋಕಗೀ. ೧೫೭). **ಧಗಡಿ$_{2}$:** ಧಗಡಿಬಳ್ಳಿ, ದಸರಿಬಳ್ಳಿ, ಆಡಂಬು ಬಳ್ಳಿ, ಯಡಾನಿಬಳ್ಳಿ (ಮೈಜಿಗಿ. ೨೩-೪೨೪). [ ? ]

**ದಾಗುದೂಜಿ** 'ದಾಗದೂಜಿ' ನೋ.

**ದಾಗ್ದಾರು** 'ಡಾಕ್ಟರು' ನೋ.

**ದಾಘ** (ನಾ). ಉರಿ ; ತಾಪ ; ಬೇಗೆ ; ದಾಹ : ಮೋಘಮನಖಿಲ ಪರಿಗ್ರಹದಾಘಮನೀ ಕೈಕೆ ಬೇಡೆ ಧರೆಯುಂ ತೃಣದಿಂ ಲಾಘವಮೆನೆ ಬಗೆದು (ಪಂರಾಮಾ. ೬-೧೦೯) ; ಪರ್ವಿದುದತಿಶಯ ದೃಗ್ಗ್ಲಾನಿ ದಾಘಂ ನಿದಾಘಂ (ಜಗವಿ. ೧೭-೭೧) ; ಸಮುದ್ಭೂತಮಾಘಂ . . . ಜನಿತ ಜನಮನೋಗ್ಲಾನಿ ದಾಘಂ ನಿದಾಘಂ (ಚಂದ್ರಪ್ರ. ೯-೬೫). [ ಸಂ. ]

**ದಾಚಿನ** (ನಾ). ಹಲ್ಲಿಗೆ ಹಚ್ಚಿಕೊಳ್ಳುವ ಹಿಟ್ಟು; ಹಲ್ಲಿಟ್ಟು : ಎಸೆವ ಮುತ್ತನು ಪೋಲ್ವ ದಂತಪಂಕ್ತಿಗಳ್ಗೆ ಪೊಳ್ಪೆ ದಾಚಿನ ಸವರಿ ಚೆಲ್ವೆ ಕುರುಳನು ತಿದ್ದಿ (ಬಾಣಶ. ೧೦). 'ಜಾಚೇಲು' ಪರಾ.

[ ← ಮರಾ. ದಾಚ್ಛಣಾ, ದಾಥೇನಾ./ಸಂ. ದಂತಚ್ಛಾದನ ]

**ದಾಟ₁** 'ದಾಟಿ' ನೋ.

**ದಾಟ₂, ಧಾಟ₂** (ನಾ). ೧. ಕ್ರಮ ; ರೀತಿ ; ಶೈಲಿ ; ಧೋರಣೆ. ೨. ಸಂಗೀತದಲ್ಲಿನ ಸ್ವರಗತಿ, ಏರಿಳಿತ, ಲಯ, ಹಾಡಿನ ರೀತಿ, ಚಾಲು, ಕ್ರಮ ಇತ್ಯಾದಿ : ಅಂತದು ಪಾಡಿನ ಜೋಡಿನ ದಾಟಿಯೈಸೆ (ರಾಮಾಶ್ವ. ೮೮-೧೨) ; ದಾಸರ ದಾಟಿಯಲ್ಲಿ ಹಾಡುತ್ತಾ, ಬಂದ ಹಾದಿಗೆ ಸಂಪು ಇಲ್ಲವೆಂದು ಮನೆಯ ಹಾದಿ ಹಿಡಿದ (ಝುಣ್ಣುಹು. ೨೩). ೩. ಒಂದು ಶಾಸ್ತ್ರದ ರೂಢಿ,–ಸಂಪ್ರದಾಯ : (*). **ಧಾಟ₂ :** ೧. ಓಡಿ ಮತ್ತೆ ಹಿಂದಿನ ಧಾಟ ಗಿರಣಿಯ ಬಂಬು ಕರೆಯುವದು ಏಳು ! ಆಯಿತು ಏಳು (ಅರಳು. ೪೨೭-೨೩) ; ಅದರೊಳಗೆ ರನ್ನ ಮಹಾಕವಿಯ ವೀರಪಾಕ್ಯದ ಉದಾತ್ತ ಧಾಟಿ ಎದ್ದುಕಾಣುತ್ತದೆ (ರಾಜವ. ೫೯) ; ಅವಳು ಮಾತನಾಡಿದ ಧಾಟಿಗೆ ಆನಂದ ಹೆಚ್ಚಾಗಿ ಕುಳಿತ (ದೂಂಸ. ೭೭). ೨. ಸಂಗೀತಶಾಸ್ತ್ರ ವರಿಯದವರು ಹಳೆಯ ಧಾಟಿಗಳಲ್ಲಿ ಇನ್ನೂ ಸೊಗಸಾಗಿ ಕೀರ್ತನೆಗಳನ್ನು ಹಾಡುತ್ತಿರುವುದನ್ನು ಕೇಳಿದರೆ . . : ಈ ಸಂಪ್ರದಾಯವನ್ನು ಉಳಿಸಿ ಕೊಳ್ಳುವುದು ಉಚಿತವೆಂದು ತೋರುತ್ತದೆ (ಜಗದಾ. ೭೭) ; 'ಇಂದ್ರ ಚಾಪ'ದ ಪದ್ಯಗಳು ಸಾಂಗತ್ಯದ ಧಾಟಿಯಲ್ಲಿವೆ (ಇಂಚಾಪ. III ಅರಿಕೆ) ; ರಾಗದ ಸಾಟಿಗೆ ತೂಗ್ಯಾಡೊ ಧಾಟಿಗೆ ಒಲಿಧಾಡೊ ರೀತಿಗೆ ಹಾಡ್ಯಾನೊ ಗೀತಿಗೆ (ಗಂಗಾವ. ೩೨-೩) ; ಅರೆಮರೆವು ಮಾಡುವೀ ಬಂಧ ಯಾವುದೀ ಛಂದ ಯಾವುದೀ ಧಾಟಿ (ನಾದಲೀ. ೭೭-೧೯).

[ ?./ಮರಾ. ಧಾಟೀ./ತಮಿ. ತಾಟ್ಟಿ ]

**ದಾಟಿಸು** 'ದಾಂಟಿಸು₁' ನೋ.

**ದಾಟು₁** 'ದಾಂಟು₁' ನೋ.

**ದಾಟು₂** 'ದಾಂಟು₃' ನೋ.

**ದಾಟುಕಥೆ** (ನಾ). ಸಂಗ್ರಹಿಸಿದ ಕಥೆ ; ಕಥಾಸಂಗ್ರಹ ; ಕಥೆಯ ಸಾರಾಂಶ : (*). [ ದಾಟು₂ (< ದಾಂಟು₃) + ಕಥೆ ]

**ದಾಟುಗಾಲು** (ನಾ). ದೂರ ದೂರಕ್ಕೆ ಹಾಕುವ ಹೆಜ್ಜೆ ; ದಾಪುಗಾಲು: ಇಂದು ಆರ್ಟ್ ತನ್ನ ಕಳೆಯನ್ನೂ ನಾಚಿಕೆಯನ್ನೂ ತೊರೆದು, ನೃತ್ಯವನ್ನು ಮರೆತು ದಾಟುಗಾಲು ಹಾಕುತ್ತ ತಿರುಗುತ್ತಿದೆ (ನಿಬಂಧ. II, ೨೦೮).

[ ದಾಟು₂ (< ದಾಂಟು₃) + ಕಾಲು₁ (<ಕಾಲ್₁)]

**ದಾಟುಗೆರೆ** (ನಾ). ಒಂದನ್ನೊಂದು ಕತ್ತರಿಸುವ ಎರಡು ಗೆರೆಗಳ ಚಿಹ್ನೆ ; ಬಿಟ್ಟುಹೋದುದನ್ನು ತಿಳಿಸುವ ಚಿಹ್ನೆ ; ಕತ್ತರಿಚಿಹ್ನೆ (×) : ಆ ಮೇಲಿನ ಶಾಸನಗಳಲ್ಲಿ ಮತ್ತು ಹಸ್ತಪ್ರತಿಗಳಲ್ಲಿ ಬಿಟ್ಟುಹೋಗಿರುವ ಜಾಗವನ್ನು ನಾವು ಕಾಕಪಾದ, ಹಂಸಪಾದ ಎಂದು ಕರೆಯುವ ಚಿಕ್ಕದಾದ ನೆರೆಗೆರೆ ಅಥವಾ ಬಾಗಿದ ದಾಟುಗೆರೆ (Cross) ಗಳಿಂದ ಸೂಚಿಸಲಾಗಿದೆ (ಭಾರದ. ೨೦). [ ದಾಟು₂ (< ದಾಂಟು₃) + ಗೆರೆ (<ಗೆಱೆ) ]

**ದಾಟುತೆಗೆ** (ಕ್ರಿ). ದೃಷ್ಟಿದೋಷ, ಕಾಲಂಧೂಳಂ ಮುಂತಾದುವುಗಳ ಪರಿಹಾರಕ್ಕಾಗಿ ನಿವಾಳಿಸಿ ಎಸೆದ ಪದಾರ್ಥಗಳನ್ನು ದಾಟುವುದರಿಂದ ಉಂಟಾಗುವ ದೋಷವನ್ನು (ಅನಾರೋಗ್ಯವನ್ನು) ಪರಿಹರಿಸು,– ನಿವಾರಿಸು ; ಸೋಂಕುದೋಷವನ್ನು ಹೋಗಲಾಡಿಸು : ಸಂಜೆ ಆಯಿತೆಂದರೆ ಆಚಾರ್ರು ಕಂಕುಳಲ್ಲಿ ಸೀಸೆ ಇರುಕಿಕೊಂಡು ಮೇಲೊಂದು ಬಟ್ಟೆ ಹೊದೆದು . . . ಚೀಟು ಕಟ್ಟುವ, 'ದಾಟುತೆಗೆ' ಯುವ ಅಥವಾ ಅನ್ನ ತೆಗೆದುಹಾಕುವ ನೆಪದಲ್ಲಿ ಬುಂಡೇದಾಸನ ಪಡಸಾನೆ ಕಡೆಗೆ ಹೋಗಿ ಬರುತ್ತಿದ್ದರು (ನನ್ನೂರು. ೧೮೯). [ ದಾಟು₂ (<ದಾಂಟು₃) + ತೆಗೆ₁ ]

**ದಾಟುದೀಟು** (ನಾ). ಕುದುರೆಯನ್ನು ನಡೆಸುವ ಬಗೆಗಳಲ್ಲಿ ಒಂದು : ಪಲ್ಲಣಮಂ ಕಟ್ಟಿಯೇಱಿ . . . ಈಶ್ವರನ ದಕ್ಷತನಮಂ ತನ್ನೊಳಳ ವಡಿಸಿ ದಾಟುದೀಟು ಹೊಳಹು ಹೊಮ್ಮಚ್ಚುವಡೆ ಮೋಡಿ ಭವರಿ ಭಂಜನೆ ಅಳಿಲುಳಿತ ತವರ ತರಹಮೆಂಬ ನವೀನಗತಿಗಳೊಳು ತನ್ನ ಮನಮೆ ಹಯದ ತನುಗತಿಗಳಾದಂತೆ ವಾಹಕವಿನ್ನಾಣಂಗಳಂ ತೋಱುತ (ಪುಣ್ಯಾಸ್ರ. ೭-೫೦ ವ). [ ? ]

**ದಾಟುಬೊಕ್ಕೆ** (ನಾ). ದೃಷ್ಟಿದೋಷ, ಕಾಲುಧೂಳಂ ಮುಂತಾದುವುಗಳ ಪರಿಹಾರಕ್ಕಾಗಿ ನಿವಾಳಿಸಿ ಎಸೆದ ಪದಾರ್ಥಗಳನ್ನು ದಾಟುವುದ ರಿಂದ ಕಾಲಿನಲ್ಲಿ ಏಳುವ ಬೊಕ್ಕೆ : ದಾಟುಬೊಕ್ಕೆಯು ಅವನನ್ನು ಬಹಳ ಹೆಣಗಿಸಿತು (ರೂಢಿ). [ ದಾಟು₂ (<ದಾಂಟು₃) + ಬೊಕ್ಕೆ₁ ]

**ದಾಟುಮರ** 'ದಾಂಟುಮರ' ನೋ.

**ದಾಟುಹೊಲಿಗೆ** (ನಾ). ದೂರದೂರಕ್ಕೆ ಉದ್ದವಾಗಿ ಹಾಕಿದ ಹೊಲಿಗೆ; ದೂರದೂರಕ್ಕೆ ಟಾಕು ಹಾಕಿದ್ದು; "ಉದ್ದಹೊಲಿಗೆ" (ಜಾನಕೋ. ೪).

[ ದಾಟು₂ (< ದಾಂಟು₃) + ಹೊಲಿಗೆ (<ಪೊಲ್ಗೆ) ]

**ದಾಡನೆ** (ಅ). ಒಂದು ಅನುಕರಣಾವ್ಯಯ : ಓಡುತೋಡುತ ಹೋಗಿ ದಾಡನೆ ಬಿದ್ದೀತಾ ಜಂಕೆ ನೋಡಿ ನೋವಾಯಿತು ಯತೀಶಗೆ (ಸಿದ್ಧಪು. ೧೦-೧೭).

**ದಾಡದಾಡನೆ** (ದ್ವಿರುಕ್ತಿ) : ಗಾಢವಾದಿಂಚರದ ತಾಣದೆ . . . ದಾಡದಾಡನೆ ಹೊರಡುತಿಹ ಕಟುರವವನಾಲಿಪುದು (ರಘುವಂ. ೧೮೪-೧೩).

**ದಾಡಾಬಂಧ, ದಾಡೆಬಂಧ** (ನಾ). ೧. ದವಡೆಗಳನ್ನು ತೆರೆಯದಂತೆ (ಮಂತ್ರದಿಂದ) ಕಟ್ಟುವುದು ; ಒಸಡಿನ ಚಲನೆಯನ್ನು ಬಂಧಿಸಿ ಮಾತನಾಡದಂತೆ ಮಾಡುವುದು ; ಬಾಯಿ ಕಟ್ಟುವುದು : ದಾಡಾ ಬಂಧ . . . ಮಂತ್ರತಂತ್ರಸಿದ್ಧಿ ಇವೆಲ್ಲವ ಕಲಿತಡೇನೋ ಚೌಷಷ್ಟಿವಿದ್ಯಾ ಕಳಾವಿದನೆನಿಸಿಕೊಂಬನಲ್ಲದೆ ಲಿಂಗವಂತನೆನಿಸಿಕೊಂಬುದಿಲ್ಲ (ಮಡಿಮಾ. ೯೩-೭೦) ; ಉರಗನ ಬಿಡಲದು ಧರೆಯನಪ್ಪಳಿಸುತ . . . ತ್ವರಿತದಿಂ ಬರುತಿರೆ ದಾಡಾಬಂಧವನರಮಗ ಮಾಡಿ ಮಂತ್ರಿಸಲು (ಜ್ಞಾನಜ. ೨೩-೭೦). ೨. ಹಲ್ಲು ಕಚ್ಚಿರುವಿಕೆ ; ಒಂದು ಬಗೆಯ ಸ್ನಾಯುರೋಗ ; ಹಲ್ಲು ಕಚ್ಚು : ನಸ್ಯದ ಗುಣ–ನಸ್ಯವಂ ಮಾಡಲು ದಾಡಾಬಂಧ, ಕಪೋಲಸ್ತಂಭ . . . ಪರಿಹರಿಸುವುದು (ಸಕವೈ. ೨೭). **ದಾಡೆಬಂಧ :** ೨. ಸೂಚೀಮುಖರಸ:– ರಸ, ಗಂಧಕ . . . ದಾಡೆಬಂಧ, ಕಣ್ಣು ಮುಚ್ಚಿರುವುದು, ಧನುರ್ವಾತ, . . . ತ್ರಿದೋಷ, ಹದಿಮೂರುಪ್ರಕಾರದ ಸನ್ನಿವಾತ ಹರ (ವಿವೈವಿ. ೫೭).

[ ದಾಡಾ₀ (P <ಪ್ರಾ. ದಾಢಾ) + ಬಂಧ ]

**ದಾಡಾಬಂಧನ** (ನಾ). = ದಾಡಾಬಂಧ ೧ : ವೇದಾಗಮೋಕ್ತದಿಂದವರವರ ಮತವಂ ಖಂಡಿಸಿ, ದಾಡಾಬಂಧನವಾಗಿ ಬಂಧಿಸಿ, ಪೂರ್ವದ ಪುರಾತನರು ಸಮಸ್ತ ಸಮಯಮಂ ಸಂಹರಿಸಿದುದಂ ಪೇಳಲು (ಭೈರಸೂ. ೧೧).

[ ದಾಡಾ₀ (P <ಪ್ರಾ. ದಾಢಾ) + ಬಂಧನ ]

**ದಾಡಿ₁** (ನಾ). ಮುಖದ ಕೆಳಭಾಗದಲ್ಲಿರುವ ಕೂದಲು ; ಗಡ್ಡ ; ಶ್ರೀಧರನೊಳಗೆ ಆಪ್ತ ದಾಡಿಯ ವೀರರಿಂತು ಸಮ್ಮತಗೈದರು (ಜಿನಮು. ೧೦-೨) ; ಇಂಬಾದ ಎದೆಯು ಮೇಲೆ ಬಿಳಿದಾದ ದಾಡಿಯು ಹಾರುತ್ತಿತ್ತು (ಕೋಹಿನೂ. ೮೮). [ <ಪ್ರಾ. ದಾಢಿಆ./ಸಂ. ದಾಢಿಕಾ ]

**ದಾಡಿ₂** 'ದಾಡೆ₂' ನೋ.

**ದಾಡಿ₃** 'ಧಾಡಿ' ನೋ.

**ದಾಡಿಂಬ** (ನಾ). ಸಿಹಿಯಾದ ಕೆಂಪು ಕಾಳುಗಳನ್ನುಳ್ಳ ಒಂದು ಬಗೆಯ ಹಣ್ಣು ; ದಾಳಿಂಬೆ : ದಾಡಿಂಬದ ಹೂ ಮಾವಿನ ಬಿತ್ತಳೆಯ ಕರಿಕೆ ಶರ್ಕರೆಯಿನಿತಂ ಭಾವಿಸುವುದಕ್ಕಿಗಚ್ಚಿಂದೀವುದು ನಸ್ಯಮನೆ ರಕ್ತಪಿತ್ತಂ ವಿನಾಶಂ (ಕಲ್ಯಾಕಾ. ೫-೧೩). [ ಸಂ. ]

**ದಾಡಿಂಬೆ** (ನಾ). = ದಾಡಿಂಬ: "ಕರಕಃ, ದಾಡಿಮಃ– ೨. ದಾಡಿಂಬೇಗಿಡ, ನಾಳಿಂಬೇಗಿಡ, ದಾಳಿಂಬರೀ" (ಸಿದ್ಧಾಂತಿ. ೧೧೧). [ ಸಂ. ದಾಡಿಂಬ ]

**ದಾಡಿಮ** (ನಾ). = ದಾಡಿಂಬ: "ಕರಕಮೆನೆ ದಾಡಿಮಮೆನಲ್ಕೆ ದಾಳಿಂಬ ಮದು" (ಮಂಗರಾ. ೩೬-೧೭); "ಪೆಸರಕ್ಕು ದಾಡಿಮಕೆ ದಾಳಿಂಬವೆಂದು" (ಕಶಿರ. ೦೨೫); ಪರಿಪಕ್ವಫಲರಸಾಸ್ವಾದನೋತ್ಸುಕ ಶುಕಚಂಚು ಸಂಚಾರ ದಿನಲ್ಲೊಕ್ಕು ಕುಂಕುಮಂಬೊರೆದ ಕರ್ಪುರವಳುಕಂ ಕಿದಱಿ ದಂತಿರ್ದ ದಾಡಿಮಬೀಜರಾಜಿಯೊಳಂ (ಮಲ್ಲಿಪು. ೩-೩೩); ಬೀಡೆವಣ್ಣಂ ತುಱುಗಿರ್ದ ದಾಡಿಮಚಯಂ (ಜಗವಿ. ೨-೧೫); ನಸುಬಿರಿದ ಪರಿಪಕ್ವ ದಾಡಿಮವಸರ ದೊಳಗರವಟ್ಟಿಗೆಯ ದರಹಸಿತಪಂಕಜಗಳಿತಮಕರಂದದ ತಟಾಕದಲಿ (ಕುವ್ಯಾಲು. ೭-೩೪); ದಾಡಿಮದ ಬೀಜ ರತ್ನವಾದಾವೇ (ಗಾದೆ).

[ ಸಂ. ]

**ದಾಡಿಮಾಷ್ಟಕ** (ನಾ). ದಾಳಿಂಬೆಯಿಂದ ಮಾಡಿದ, ವೈದ್ಯಕ್ಕೆ ಉಪ ಯೋಗಿಸುವ ಒಂದು ಬಗೆಯ ಚೂರ್ಣ: ದಾಡಿಮಾಷ್ಟಕ–ತವಕ್ಷೀರ ೨ ವರಹ ತೂಕ . . . ಸಕ್ಕರೆ ಎಂಟು ಹಲ ಈ ರೀತಿಯಲ್ಲಿ ಕೂಡಿ ಚೂರ್ಣವ ಮಾಡಿ ಪ್ರತಿದಿನ ಉದಯದಲ್ಲಿ ಸೇವಿಸಲು ಸಕಲ ಗ್ರಹಿಣಿ ಹರ (ಸಕವೈ. ೩೩೩). [ ದಾಡಿಮ + ಅಷ್ಟಕ ]

**ದಾಡಿಮೀಫಳ** (ನಾ). ದಾಳಿಂಬೆ ಹಣ್ಣು: ಬಿರಿಕಿನೊಳೊಯ್ಯನೊಯ್ಯ ನರೆದೋಱುವ ಬಿತ್ತುಗಳಿಂ ವಿಳಾಸಮಾವರಿಸಿದ ದಾಡಿಮೀಫಳಮನೊಯ್ಯನೆ ಚುಂಬಿಸಿ ಬರ್ಪ ಕಾಂತನಂ ತರುಚರಕಾಂತೆ ಕಂಡು (ಪುಷ್ಪಪು. ೫-೮೭).

[ ಸಂ. ದಾಡಿಮೀಫಲ ]

**ದಾಡೆ₁** 'ದವಡೆ' ನೋ.

**ದಾಡೆ₂**, ದಾಡ್ಕಿ₂ (ನಾ). ೧. ಕೋರೆಯ ಹಲ್ಲು: "ಆಶೀಃ, ದಂಷ್ಟ್ರಾ—ಈ ೨ ಹಾವಿನ ದಾಡೆ" (ಹಲಾಯು. ೧೦೭-೨೦); ಮಗಂ ನಾಲ್ಕು ದಾಡೆವೆರಸು ಪುಟ್ಟಿದೊಡಾತಂಗೆ ತಾಯುಂ ತಂದೆಯುಂ ಚಾಣಾಕ್ಯನೆಂಬ ಪೆಸರನಿಟ್ಟರ್ (ವಡ್ಡಾರಾ. ೧೮೩-೮); ಮಸಿಯುಂ ಪುಂಜಿಸಿದಂತುಟಪ್ಪ ತನು ನೀಳಾಂಭೋಧರಂ ದಾಡೆಗಳ್ ಪೊಸ ಮಿಂಚುಗ್ರವಿಲೋಚನಂ ದಿವಿಜ ಗೋಪಂ ಕಾರೊ ಮೇಣ್ ಕಾಳ ರಕ್ಕಸನೋ ಪೇೞೆನೆ ಬಂದು ತಾಗೆ (ಪಂಪಭಾ. ೭-೨೭); ಪೊರೆದರೊ ನೆತ್ತರಿಂದೆನಿಪ ನಾಲಗೆಯಿಂ ಬಿಡೆ ಸಿಂಹಕೇಸರದವೊಲಿರ್ದ ದಾಡೆಗಳ ಕಾಂತಿಯನಾಂತ ವರಾಹಘಾತಜರ್ಝರ ತನುಗಳ್ನಿಜಕ್ರಮವನೊಯ್ಯನೆ ನಾಲಗೆಯಿಂದೆ ತೋಱುವಂತಿರೆ (ಕಾದಂಪೂ. ೦೬೭); ಮಿಱುಗುವ ದಾಡೆಯಿಂದಣೆದು ಪೆರ್ದರಿಯುಂ ಕರದಿಂದಮೆತ್ತುತುಂ . . . ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೧೧೧೩); ಪಸಿದು ಕನಲ್ದ ರಾಹುವಿನ ದಾಡೆಯ ಕೂರ್ಮೊನೆ ಸೋಂಕದೊರ್ಮೆಯುಂ ಕಿಸುಗದಿರೊಂದಿ ಕಂದಿ ಕಡಲೊಳ್ಪುಟದಾ ದ್ವಿಜರಾಜತೇಜಮಂ ಪಸಗೆಡಿಸಲ್ಕೆ (ಚಕವಿ. ೧-೬) ೨. ಹಲ್ಲು; ದಂತ. 'ದಾಡೆಗಡಿ' ಪರಾ. **ದಾಡ್ಕಿ₂**: ೧. ದಾಡಿಲಿ ಧರೆಯ ನೆತ್ತಿದ ವಿಜಯವಿಠಲ ನೋಡಿ ನಗುತಿಪ್ಪ ಮಾನವರಾಟಕ್ಕೆ (ವಿಸಾಸು. ೪೪-೪); ಮನವೆಂಬ ಕರ್ಮವನ್ನು ಸಂಕಲ್ಪವೆಂಬ ದಾಡಿಯಲ್ಲಿ ಸಂಚಿತ ಪ್ರಾ ಆಗಾಮಿ ಎಂಬ ಕರ್ಮ ತ್ರಯಂಗಳ ನವಗ್ರಹಿಸಿಕೊಂಡಿರುತ್ತಿಹು ದೆಂಬುದೀಗ ಕೋಡಗದಣಲಿನಲ್ಲಿ ಮೂರಗುಳ ಕಂಡೆನೆಂಬ ಶಬ್ದಕ್ಕರ್ಥ (ಮೋಳಿಮಾ. ೨೨೫-೭೭೮ ಟೀಕೆ). ೨. ಓಡಿನಂತಾಗೆ ಕೆರೆ ಭಾವಿಗಳ್ ನೀರಿಲ್ಲ ದಾಡಿಯಂ ಕಚ್ಚಿದರ್ಸಕಲ ಮನುಜರ್ ಬೇಸಗೆಯು ಬೇಗೆಯಿಂದ (ಮಹಾವಿ. ೧೪-೧೧೨). [ <ಪ್ರಾ. ದಾಢಾ./ಸಂ. ದಂಷ್ಟ್ರಾ ]

**ದಾಡೆಗಡಿ** (ಕ್ರಿ). ಹಲ್ಲು ಕಡಿ; ಹಲ್ಲು ಮಸೆ: ಆಗಳವರ ಸಂರಂಭಮಂ ಕಂಡು ರೋಷಾವೇಶಮಂ ಕೆಯ್ಕೊಂಡು ದಾಡೆಗಡಿದು ಮಾರ್ಮಲೆತು ಮಾಮುಸಕಂ ಮಾಸಗಿ ... ಅಟ್ಟಿಯಂ ಕೊಟಿದು ತಿಂದುದು ತೇಗಿದುದುಗ್ರ ಸೂಕರಂ (ಶಬಶಂ. ೪-೧೫ ವ) [ ದಾಡೆ₂ + ಕಡಿ₁ ]

**ದಾಡೆಗಳೆ** (ಕ್ರಿ). ಹಲ್ಲನ್ನು ಕೀಳು, –ತೆಗೆದುಹಾಕು: ದುರ್ಯೋಧನಂ ದಾಡೆಗಳೆದ ಕಾಳಿಕಸಂತೆಯುಂ ಕೋಡುಡಿದ ಮದಹಸ್ತಿಯಂತೆಯುಂ ನಖ ಮುಡಿದ ಸಿಂಹದಂತೆಯುಂ ಗಳಿತಗರ್ವನಾಗಿ ಪಾಂಡವರ ಮೊಗವಂ ನೋಡಲ್ ನಾಣ್ಚಿ (ಪಂಪಭಾ. ೭-೩೯ ವ). [ ದಾಡೆ₂ + ಕಳೆ₁ ]

**ದಾಡೆಗುಟ್ಟು** (ಕ್ರಿ). = ದಾಡೆಗಡಿ: ವರಾಹರೂಪದ ಮೂಕದಾನವಂ . . . ಬಾಯ್ಗೆಯ ದಿಗ್ಗಜಂ ಪೆಱಗಿಟ್ಟುವಾಂ[ತ]ರದೆ ತೊಟ್ಟನೆ ದಾಡೆಗುಟ್ಟೆ ಕಟಲ್ದು ತಾರಗೆಗಳ್ ನಭಂ ಬೆರ[ಸು] ಬಿಟ್ಟುವು (ಪಂಪಭಾ. ೮-೧೫); ಎಕ್ಕಲಂ ದಾಡೆಗುಟ್ಟುತ್ತಿರಡುಂ ಕಣ್ಣಿಂ ಸ್ಫುಲಿಂಗಂ ಸುರಿದಪುವೆನೆ ನೋಡುತ್ತೆ (ಗಿರಿಕೆ. ೧-೧೧೧); ದಾಡೆಗುಟ್ಟೆ ತಾಂ ತಾಗಲಿದಿರ್ಚೆ ಕೋಡುಡಿದ ಕಾಲನ ಸೈರಿಭದಂತೆ ಬರ್ಪನಂ (ರಾಜಶೇ. ೫-೯೦).

[ ದಾಡೆ₂ + ಕುಟ್ಟು₁ ]

**ದಾಡೆಬಂಧ** 'ದಾಡಾಬಂಧ' ನೋ.

**ದಾಡೆಯಾಡು** (ಕ್ರಿ). ದವಡೆಯನ್ನು ಆಡಿಸು; ಬಾಯಾಡು: ಆದು ಹಲ್ಲ ತಿಂಬಲ್ಲಿ ಕೋಡಗ ನೋಡಿ ಬಾಲವ ತಿಂದಿತ್ತು ಕೋಡಗ ದಾಡೆಯಾಡುವಾಗ ಬಳ್ಳಿ ಮಾತನಾಡಿದುದಿಲ್ಲಿ (ಮನುಗುಂ. ೪-೮೩).

[ ದಾಡೆ₁ (<ದವಡೆ) + ಆಡು₁ ]

**ದಾಣ**, ಡಾಣ, ಡಾಣ್ಯ, ಡಾಣೆ₁, ಧಾಣೆ₂, ದಾಣೆ₁, ದಾಣೆ₁ (ನಾ). ೧. ದವಸ; ಧಾನ್ಯದ ಕಾಳು: ದಾಣ ತುಂಬಿ ಕುದುರೆಯ ಬಾಯಿಗೆ ಕಟ್ಟುವ ದಾಣದ ಚೀಲ; ತೋಬರ(ರಿ) (Nose-bag. ಇಂಕನಿ). **ಡಾಣ:** (೩). **ಡಾಣ್ಯ:** ೨. ಕಡಲೆಹಿಟ್ಟಿನಿಂದ ಕರಿದು ಮಾಡುವ ಒಂದು ಬಗೆಯ ತಿನಿಸು: ಸ್ವಲ್ಪ ಹೊತ್ತಿನಲ್ಲೇ ಜಮಖಾನದ ಮೇಲೆ ಡಾಣಿ, ಮಂಡಕ್ಕಿಯ ರಾಶಿ ಇರುತ್ತಿತ್ತು (ಮುರಳಿ. ೨೫). **ಡಾಣೆ₁**: ೧, ೨: "ಡಾಣೆ – ಧಾನ್ಯ, ತಿನ್ನುವ ಪದಾರ್ಥ" (ಕಣ್ವಸಂ. ಕೋಶ). **ಧಾಣೆ₂**: ೨. ನಾನು ಹೊಟೆಲಲ್ಲಿ ಬಾಣಾಲೆಯ ಮುಂದೆ ಬೆವರು ಸುರಿಸುತ್ತಾ ಧಾಣೇ ತಿಕ್ಕಿ ತಿಕ್ಕಿ ಒಣಗೋದು! ಎಂದು ಭುಸುಭುಸಿದರು (ಶಶಿ. ೨೫). **ದಾಣೆ₁**: ೨. ತಪ್ಪುವದಿಲ್ಲಪ್ಪಾ ಎರಡು ಹೊತ್ತು ದಾಣಿ ತಿಂದ ಮೇಲೆ ತಿರಗತ್ಯೆತೆ ಮೇಗಲ ಓಣಿ (ಶರೀಫ. ೪೭-೨); ಈ ಬೂಂದಿನ ದಾಣೆಯನ್ನು ತೆಗೆದು ಕೊಂಡರೆ ಶರೀರಕ್ಕೆ ಆರೋಗ್ಯವಾಗಿರುವದು (ಕೃಷಿಪ್ರ. ೦೯೯); ಪುಗ್ಗೆ ದಾಣೆಯ ಆಸೆ ತೋರಿಸಿ ಮಾತನಾಡಲೆತ್ನಿಸಿದರೂ ಆಕೆ ಅವನೊಂದಿಗೆ ಮಾತನ್ನೂ ಆಡಲಿಲ್ಲ (ಗಂಗಾಗೌ. ೦೨೬). **ದಾಣೆ₁**: ೧. ಕುದುರೆ ದಾಣೆ ಬಗೆ ತೆರುವ ಭೂಮಿ ವಳಗೆ ಪಾಲಿಸಿಕೊಂಡದು (ಮೈಆರಿ. ೦೯೨೦, ೯೦-೧೨; 1706): ಒಳಗಿನ ಕಾಳುಗಳು ಸಣ್ಣದಿದ್ದದ್ದರಿಂದ ದಾಣೆಗಳು ಚಪ್ಪಟಾಗಿರು ತ್ತವೆ (ಮುಂಬವ್ಯಾ. ೫೦).

[ ←ಮರಾ. ದಾಣಾ; ಹಿಂ. ದಾನಾ./ಸಂ. ಧಾನಾ ]

**ದಾಣಧಡಿಯ** (ನಾ). ಬೊಜ್ಜು ದೇಹದವನು; ದಡಿಗ; ದಾಂಡಿಗ ದಾಣಧಡಿಯ ನೀನು! (ದುರಂನಾ. ೭೫).

[ ದಾಣ₀ (<ಧಾಣೆ₁) + ಧಡಿಯ ]

**ದಾಣಾ** 'ಧಾಣೆ₁' ನೋ.

**ದಾಣಿ₁** 'ದಾಣ' ನೋ.

**ದಾಣಿ₂** 'ಧಾಣೆ₁' ನೋ.

**ದಾಣೆ₁** 'ದಾಣ' ನೋ.

**ದಾಣೆ₂** 'ಧಾಣೆ₁' ನೋ.

**ದಾತ₁** 'ದಾತಾರ₁' ನೋ.

**ದಾತೃ₂** (ನಾ). ಕೊಡುವವನು; ದಾನಿ: ನಿರುತಂ ಸತ್ಕವಿಗೊರ್ವ ಗರ್ವಿಪುಸಿಯುತ್ತುಂ ಲೋಭಿಯಾಗಲ್ ನಿಜಂ ಧರೆಯೊಳ್ ದಾತರು ಪುಟ್ಟರೇ (ಸೋಮೇಶ. ೨೬); ದಾತೃ ಶಬ್ದದ ತಕಾರಕ್ಕೆ – ದಾತ (ಶಮುದ. ೪೪

ಪ್ರಯೋ) ; ನೀತಿವಿದನಾಚಾರಸಂಪನ್ನನುತ್ತಮಂ ದಾತನೆಂಬಿನಿಸು ಗುಣಮುಳ್ಳ ಕುವರಂ ನಿನ್ನನೀ ತಪ್ತತೈಲದೊಳಗೆಂತಕಟ ಬೀಳಿಸುವೆಂ (ಜೈಮಿಭಾ. ೧೦-೩೨). [ <ಸಂ. ದಾತೃ ]

**ದಾತ$_3$** (ಗು). ಕತ್ತರಿಸಿದ ; ಕೊಯ್ದ. [ ಸಂ. ]

**ದಾತವ್ಯ** (ಗು). ೧. ಕೊಡಬೇಕಾದ ; ಕೊಡುವ. ೨. ಕೊಡಲು ಅರ್ಹವಾದ : ಪ್ರವಿಲಸದ್ಗೀರ್ವಾಣದಾತವ್ಯ ಸಾಯಕ ಸಂಪೂರ್ಣ ಕಳಾಪ್ರವೀಣನಿಳಾಭಾರಕ್ಷಮಾಕ್ಷೂಣನಂ (ಪಂಪಭಾ. ೧-೧೩೪). [ ಸಂ. ]

**ದಾತಾರ$_1$, ದಾತ$_1$** (ನಾ). ೧. ಸ್ವಾಮಿ ; ಒಡೆಯ ; ಯಜಮಾನ : ಈ ಧರ್ಮಮಂ ಕೈಕೊಣ್ಡು ನಡೆಯಿಸುವ ದಾತಾರಂ ಮನ್ನೆಯ ಕಾಯಿಂಮ್ಮ (ಸೌಇಇ. XX, ೩೪-೨೨ ; 1053) ; ಹೊರೆದ ದಾತಾರಂಗೆ ಹಗೆವರ ಶಿರವನರಿದೊಪ್ಪಿಸುವೆನೆಂಬೀ ಭರದೊಳಿರ್ದನು (ಕುವ್ಯಾಉ. ೧೦-೧೪) ; ನೀನೆ ಕಟ್ಟಾಳೆಂಬರೀಗಳಿಂತಳಿದಪರೆ ದಾತಾರ ವೀರ ಸುಕುಮಾರ ಧೀರ (ಜೈಮಿಭಾ. ೧೩-೬೦). ೨. ವಾರಸುದಾರ ; ಸಂಬಂಧಪಟ್ಟವನು : ದಾತಾರರೇ ಇಲ್ಲವಂತೆ ಆ ಹೆಣಕ್ಕೆ (ಸಂಸ್ಕಾರ. ೯೯) ; ಅಲ್ಲವಾದರೆ ಮೂಡೋಡಿಯ ಆ ಚಿನ್ನದಂಥಾ ಭೂಮಿ, ಹಾಳುಬಿದ್ದು ದಾತಾರರಿಲ್ಲದೆ ಹೀಗೆ ಕಾಡು ಬೆಳೆಯುತ್ತಿತ್ತೇ ? (ಚಿಗುಕ. ೯೯). **ದಾತ$_1$ :** ೧. ಎನ್ನ ದಾತನೆ ಎನ್ನ ತಾತನೆ ಎನ್ನ ಭಕ್ತಿತ್ರಯನಿಧಾನವೆ . . . ಇಂದಡಗಿದ್ದೈ ನೀನು (ಬಸಪು. ೩೬-೩) ; ಆಳು ಕಟ್ಟಿದವನೆ ಅರಸು, ಕಾಳು ಇಕ್ಕಿದವನೆ ದಾತ (ಗಾದೆ). [ <ಸಂ. ಧಾತೃ ]

**ದಾತಾರ$_2$** (ನಾ). ಕೊಡುವವನು ; ದಾನಿ : ಪರಮಾತ್ಮನೇ ಕೊಡುವ ದಾತಾರನೆಂದು ಅರಿತು ಭೋಗಿಸಿ . . . ನಿಮಿಷ ಶಕಲಗಳ ಬಿಡದಿರಲು ಧನ್ಯವಹುದು (ಕಎಪು. ೫೨-೩) ; ದಾನಭಾಗಿಗಳೂ ದಾತಾರರೂ . . . ಇದ್ದರೆಂಬುದು . . . ನಿಶ್ಚಿತವಾಗಿದ್ದರೆ ಅಂಥ ಶಾಸನಗಳು ನಂಬಿಕೆಗರ್ಹವಲ್ಲ(ಕರ್ನಾಅ. ೧೦೪). [ ಸಂ. ದಾತೃ ]

**ದಾತೃ** (ಗು). ೧. ದಾನಮಾಡುವ ; ನೀಡುವ ; ಕೊಡುವ. (ನಾ). ೨. ಕೊಡುವವನು ; ದಾನಮಾಡುವವನು : ದಾನಲಕ್ಷಣಮಪ್ಪಡೆ ದಾತೃವೆಂದುಂ ದೇಯಮೆಂದುಂ ಪಾತ್ರಮೆಂದುಂ ತ್ರಿವಿಧಮಕ್ಕುಮಲ್ಲಿ ಶ್ರದ್ಧಾದಿ ಸಪ್ತಗುಣಸಂಪನ್ನಂ ದಾತೃವಕ್ಕುಂ (ಚಾವುಂಪು. ೨೨೬) ; ಭಕ್ತಿಜ್ಞಾನ . . , ಸಮಾಯುಕ್ತಂ ಸಪ್ತಗುಣಂ ಜೈನೋಕ್ತಿಯಿನಾ ದಾತೃವೆನಿಪ ಭವ್ಯಂಗಕ್ಕುಂ (ಚಂದ್ರಪು. ೩-೩೦) ; ಇಂದ್ರನು . . . ಅಯ್ಯಾ ದಾತೃವೆ, ನನಗೆ ಬಹು ಕಷ್ಟ ಸಂಭವಿಸಿರುವುದು, ನೀನು ಪರಿಹಾರ ಮಾಡಬೇಕೆಂದನು (ನೀತಿಚಿಂ. XIV, ೧೧) ; ದಾತೃ ರಾಜನಾಗಬಹುದು ; ನಾಡಿನ ಶ್ರೀಮಂತರಾಗಬಹುದು (ಸವತಿ. ೪೩). [ ಸಂ. ]

**ದಾತೃತ್ವ** (ನಾ). ದಾನಕೊಡುವ ಅಥವಾ ನೀಡುವ ಸ್ವಭಾವ ; ಔದಾರ್ಯ ; ಉದಾರತೆ ; ದಾನಪರತೆ. [ ಸಂ. ]

**ದಾತ್ಯೂಹ** (ನಾ). ಒಂದು ಬಗೆಯ ಜಲಪಕ್ಷಿ ; ನೀರುಕೋಳಿ : "ದಾತ್ಯೂಹಃ, ಜಳರಂಕುಃ – ಈ ೨ ಜಾಮುಹಂ" (ಹಲಾಯು. ೪೨-೯೬) ; "ಜಳರಂಕು ದಾತ್ಯೂಹಮೆನಲಾ ನಿರುಗನಕ್ಕು" (ಮಂಗರಾ. ೫೨-೧೧). [ ಸಂ. ]

**ದಾತ್ಯೂಹಕ** (ನಾ). = ದಾತ್ಯೂಹ : ಕೇಳಾಲಿಸದೊ ಕೂಗುತಿದೆ, ಆ ದರಿಯು ದುಮುಕುತಿಹ ವನನಿರ್ಝರದ ಮೊರೆಯ ಮೀರಿ ದಾತ್ಯೂಹಕಂ! (ಶ್ರೀರಾಮಾ. ೨೮೭-೧). [ ಸಂ. ]

**ದಾತ್ರ** (ನಾ). ಕುಡುಗೋಲು :"ಲವಿತ್ರಂ, ದಾತ್ರಂ–ಈ ೨ ಕುಡುಗೋಲ್" (ಹಲಾಯು. ೯೪-೪೨೩) ; "ದಾಳಿ ಲೂನಂ ಕೊಯ್ಲು ಕುತ್ತರಿ ಬಣಂಬೆ ಕುಡು(ಡಿ)ಗೋಲು ದಾತ್ರಂ ಲವಿತ್ರಮೆನಿಕ್ಕು" (ಮಂಗರಾ ೧೧೯-೨) ; ಕಂಸಪ್ರಭೃತಿದಿತಿಜರಂ ಕೊಲ್ವೆ ನಾನೆಂದು ಪೂರ್ಣಾಚ್ಯುತದೇವಂ ದೇವಕೀಗರ್ಭದೊಳುದಯಿಸಲೆಂದಿರ್ದನೆಂಬಂತಿದಂ ಪೇಟ್ದತಿಮಾತ್ರಂ ಪಾಂಡುಗಾತ್ರಂ ತಳರ್ದನಫಲತಾದಾತ್ರನಾ ಬ್ರಹ್ಮಪುತ್ರಂ (ಜಗವಿ. ೩-೪೪) ; ಉತ್ತಮಗುರುರಾಜದೇಶವಿಕರ್ಮಂ ಶುಭದಿಂ ಜತ್ತುಕದ ಕರ್ಮಲತೆಗಳನುತ್ತರಿಸುವ ದಾತ್ರಚಿತ್ರಮನುರಾಜೀಯಂ (ಹಮ್ಮೀರ. ೧-೪೭). [ಸಂ.]

**ದಾದ** (ನಾ). ೧. ಅಪ್ಪ; ತಂದೆ; ಜನಕ: ದಾದನೆದುರಿಗೆ ಬಂದು ಶಿಶುವದು ಪಾದಪದ್ಮಗಳನ್ನು ವಂದಿಸೆ ಮೋದಸಾಗರದಲ್ಲಿ ರಾಜನು ಮಜ್ಜನಂಗೈದ (ರಘುವಂ. ೨೭-೨೫). ೨. ಹಿರಿಯರನ್ನು ಅಥವಾ ಪೂಜ್ಯರನ್ನು ಗೌರವವಾಗಿ ಸಂಬೋಧಿಸುವಾಗ ಹೇಳುವ ಮಾತು . ಆಧಿ ದುಃಖಗಳಿಂದ ರಕ್ಷಿಸಿ ದಾದನೇ ಪರಿಪಾಲಿಸೆನ್ನನು (ರಘುವಂ.೭೮-೧೨). [ <ಸಂ. ತಾತ ]

**ದಾದರಾ, ದಾದ್ರ** (ನಾ). ೧. [ಸಂಗೀತ] ಒಂದು ಬಗೆಯ ತಾಳ ; ರೂಪಕತಾಳ : ನಮ್ಮ ದೇಶದ ಸಂಗೀತದಲ್ಲಿ ರೂಪಕ (ದಾದರಾ), ಆದಿ (ತ್ರಿವಟ), ಝಂಪೆ, ದ್ರುಪದ, ತ್ರಿವುಡೆ (ಧಮಾರ), ಧೂಮಾಳಿ ಎಕ್ಕಾ ಎಂಬ ಹಲವು ತಾಳಪದ್ಧತಿಗಳಿರುವುವು (ಬಾಲಪ್ರ. II, ೧೧೪೦). **ದಾದ್ರ :** ೨. ಒಂದು ಬಗೆಯ ಪ್ರೇಮಗೀತೆ : ಕೊನೆಗೆ ನೃತ್ಯಗಾರನು ಕುಳಿತು ಕೊಂಡು ಠುಮ್ರಿ, ಠಪ್ಪ, ದಾದ್ರ, ಗಜಲ್ ಮುಂತಾದ ಪ್ರೇಮಗೀತೆಗಳನ್ನು ಹಾಡಿ, ಅವಕ್ಕೆ ಅನುಗುಣವಾಗಿ ಅಭಿನಯ ಪ್ರದರ್ಶನ ಕೊಡುತ್ತಾನೆ (ಅಭಾನ್ಯ. ೯೧). [ ←ಹಿಂ. ಮರಾ. ದಾದರಾ ]

**ದಾದಿ, ದಾಯಿ** (ನಾ). ೧. ಸಾಕುತಾಯಿ ; ಮಕ್ಕಳನ್ನು ಸಾಕುವವಳು : "ಓತು ಸಾಕಿದ ಧಾತ್ರಿ ದಾದಿಯೆನಿಸಿಕ್ಕುಂ" (ಮಂಗರಾ. ೯೨-೦೨); ಜಿತಶತುವೆಂಬೊನರಸನಾತನರಸಿ ಇಳಾಮಹಾದೇವಿಯೆಂಬೊಳಾ ೭ರಸನ ದಾದಿ [ಪಾಠಾಂ. ಇರ್ವರ್ಗಂ ಮಗಳ್] ವಿನಯಮತಿಯೆಂಬೊಳಂತವರ್ಗಳಿಪ್ರ ವಿಷಯ ಕಾಮಭೋಗಂಗಳನನುಭವಿಸುತ್ತಂ ಕಾಲಂ ಸಲೆ (ವಡ್ಡಾರಾ. ೧೦೬-೧೬) ; ಅಬ್ಬೆ ದಾದಿ ಪರಿಚಾರಕರೀರಿಲ ಕಾಪು ಕಾಪೆ ಕೂರ್ತಿಟ್ಟವರಾತ್ಮಪುಣ್ಯಮೆ ವಿಪುಣ್ಯರನೋಳಿಯೆ ಕಾಪ್ಪ ಕಾಗುಮೇ (ಶಾಂತಿಪು. ೬-೧೦೬) ; ಆಗಳುಮಾದಂ ದಾದಿಗಾಯಾಸಮನೊಡರಿಪ ಮುದ್ದಾತ್ಮಜಂಗೆಂದು ತೋರ್ಕುಂ (ಕಾದಂಪೂ. ೩೫೮) ; ದಾದಿಯ ಸೆಱಗಂ ಪಿಡಿದು ನಡೆವಲ್ಲಿ ರಾಜವೀಥಿಯೊಳ್ ಸುಳಿವ ಜವ್ವನಿಗರಂ ಕಂಡು (ಗಿರಿಕ. ೩-೧೧೫ ವ). ೨. ತಾಯಿಗೆ ಬದಲಾಗಿ ಹಾಲುಕೊಟ್ಟು ಸಾಕುವ ಸೇವಕಿ ; ಹಾಲೂಡುವವಳು : ದಾದಿ ಪಸುಳೆಯುಂ ಪಾಲಂ ಕುಡಿಯಿಸಿದಳ್ (ಶಬ್ದಾನು. ೨೦೬ ಪ್ರಯೋ). ೩. ದಾಸಿ ; ಸೇವಕಿ ; ಆಳು ; **ತೊತ್ತು :** "ಆಳು, ತೊತ್ತು, ದಾದಿ, ದಾಸಿ, ದಾಸ, ಅಡಿಗ, ಲೆಂಕ" (ಕಂನುಹು. ೭೮) ; ಅಂತು . . . ಕಾಮಗ್ರಹಗೃಹೀತೆಯಾಗಿರೆ . . . ಗದ್ಗದಾಶ್ರು ಮೋಕ್ಷಮೂರ್ಛಾದಿ ನಾನಾ ವಿಕಾರಂಗಳನೊಡನೊಡನೆ ತೋಱುವುದುಮಾಕೆಯ ದಾದಿಯ ಮಗಳ್ ಚೂತಲತಿಕೆಯೆಂಬಳ್ ಕಂಡು (ಪಂಪಭಾ. ೪-೫೯ ವ) ; ತುಂಬಿಗುರುಳ ತುಱುಬಿಕ್ಕಿ ದಾದಿಯರು ನಿತಂಬಿನಿಯೊಡನೆ ಪೇಳಿದರು (ಮೋಹತ. ೯-೧೬) ; ದಾದಿಯರ ಮಾತಿನಿಂದ ಆ ವೃತ್ತಾಂತವನ್ನು ಯಥಾರ್ಥವಾಗಿ ತಿಳಿದು (ಕೃವಾಉ. ೨೯೦). ೪. ಆಸ್ಪತ್ರೆಯಲ್ಲಿ ರೋಗಿಗಳ ಸೇವೆಯನ್ನು ಮಾಡುವವಳು ; ನರ್ಸ್ : ಅನಲಾ ದಾದಿಯಾಗಿ ಬೆಳಗಾಂವಿಯ ಆಸ್ಪತ್ರೆಯನ್ನು ಸೇರಿದ ದಿನ ಜೀವಮಾನವೆಲ್ಲ ಹೊಸಹೊಸದಾಗಿ ಕಾಣಹತ್ತಿತು (ದಾದಿ. ೩). **ದಾಯಿ :** ೧. ಕುಮಾ[ರತ್ಯೆ] ಲಪದೇವರ ದಾಯಿ ಮೇಲಾಳಿಕೆಯ ಭೋಗಿಯಬ್ಬರಸಿಯ (ಕಇ. II. ೧೨-೩೭ ; 1114) ; ಕನ್ನಿ–ಗೆಳತಿ–ಮಡದಿ–ದಾಯಿ (ಹಾಡುಪಾ. ೪೧-೧೪), ೨. ದಾಯಿ ಹಾಲನೆ ನಂಬಿ ಬಾಯಾರಿ ಬಸವಳಿದು(ಗಿಳಿವಿಂ. ೩೫-೧). ೩. ಆಂ ದಾಯಿ, ಆಂ ಮರಂ (ಶಬ್ದಾನು. ೧೧೪ಪ್ರಯೋ). ೪. ಡಾಕ್ಟರು ಚೀಟಿ ಬರೆದು ದಾಯಿಯ ಕೈಯಲ್ಲಿ ಕೊಡುತ್ತಾನೆ (ಕಎಪು. ೪-೫೧).

[ <ಸಂ. ಧಾತ್ರೀ./ಪ್ರಾ. ಧಾತೀ./ಪಾರ.ದಾಯಹ್ ]

**ದಾದಿಕಾಱ** (ನಾ). ದಾದಿಯ ಕೆಲಸವುಾಡುವವನು; ಪರಿಚಾರಕ; ಸೇವಕ. 'ದಾದಿಕಾಱವೆಸ' ಪರಾ. [ ದಾದಿ + _ ಕಾಱ ]

**ದಾದಿಕಾಱವೆಸ** (ನಾ). ದಾದಿಯ ಕೆಲಸ: ಉಸುರೆ ದಿವಿಜೇಶ್ವರಂ ಪರಿವೆಸ ದಮರರ್ ದಾದಿಕಾಱವೆಸದವುರರದೇಂ ಬೆಸಗಲಿಗಳ್ ಬರ್ಪರೊ (ಅಜಿಪು. ೫-೭೬). [ ದಾದಿಕಾಱ + ಬೆಸ$_1$ ]

**ದಾದಿಗ** (ನಾ). ಒಬ್ಬಾತನ ಹೆಸರು: ಚೋಳಮಹಾರಾಜನ ಆಳ್ ದಾದಿಯನ್ ದಾದಿಗ ×× ಮಹೇಂದ್ರರೊಳ್ ನಡಿ ದಳವುಣ್ಣು (ಎಕ. X, ಗೋರೀಬಿ. ೭೫-೪; ಸು. 900). [ ? ]

**ದಾದಿತನ** (ನಾ). ಸಾಕಂತಾಯಿಯ ಕೆಲಸ: ತವ್ಮ ಆಶಾಶಿಶುಗಳು, ತವ್ಮ ಶಿಷ್ಯರ ದಾದಿತನದ ಒಲುಮೆಯಲ್ಲಿ ಬೆಳೆದು ಘಟ್ಟಘಟ್ಟಿಯಾಗುತ್ತಿದ್ದುದನ್ನು, ಕಣ್ಣಾರೆ ಕಂಡು ಕುಣಿದಾಡಿದರು (ಕಒಸಾ. V. ೬೬೩೪).

[ ದಾದಿ + _ ತನ ]

**ದಾದಿವೆಣ್** (ನಾ). ದಾದಿಯಾದ ಹೆಣ್ಣು; ಸೇವಕಿ: ಮಂಗಳಕಾಯ ನಡೆದ ಬಾಲನ ದಾದಿವೆಂಗಳು ಸಂರಕ್ಷಿಸಲು ಅಂಗಜ ರತಿದೇವಿಯರ ಸಂತಸ ತುಂಬಿ ತಿಂಗಳಾದುದು ಕುವಾರನಿಗೆ (ಮೋಹತ. ೧೭-೫೯).

[ ದಾದಿ + ಪೆಣ್ ]

**ದಾದು** (ನಾ). ೧. ಲಕ್ಷ್ಯ; ಗಮನ; ಕಾಳಜಿ; ಎಚ್ಚರ; ಸುತ್ತಲೂ ಅಷ್ಟೆಲ್ಲಾ ಜನರು ಓಡಾಡುತ್ತಿದ್ದಾರೆ, ನೋಡುತ್ತಿದ್ದಾರೆ. ಇವರಿಗೆ ಒಂದರ ದಾದೂ ಇಲ್ಲ (ಆಳನಿ. ೫೯); ಇಂಥಾ ಗೊಂದಲದಲ್ಲಿ ನವ್ಮ ದಾದು ಹೇಗೆ ಹತ್ತೀತರಿ ಮಾಸ್ತರ್? (ಪ್ರಣಸ. ೧೧). ೨. ಗಮನ ಕೊಡುವವನು; ವೇದವೇದದವಾದ ಭೇದ ಹುಟ್ಟಿಸಿ ಜಗಕೆ ದಾದು ಯಾರಿಲ್ಲ ಹೇಳುವುದಕ್ಕೆ ಬಸವಣ್ಣ ಭೇದ ಅಳುಕಿಸಿದ ಕುಲ ಕುಲಕೆ (ಕನ್ನಜಾ. ೨೪೧). ೩. ಯಜಮಾನ; ಒಡೆಯ. ೪. ಪ್ರಶಂಸೆ; ಮೆಚ್ಚಿಗೆ.

**ದಾದುಫಿರ್ಯಾದಿ, ದಾದ್‌ಫಿರ್ಯಾದಿ** = ೧. ವಾರಸುದಾರ; ಯಜಮಾನ; ಒಡೆಯ: ಈ ಆಸ್ತಿಗೆ ದಾದು ಫಿರ್ಯಾದೀನೇ ಇಲ್ಲ (ರೂಢಿ). ೨. ತಕರಾರು; ವಿಚಾರಣೆ: ಪಾರುಪತ್ಯವುಾಡುವಂಥಾವ ಮೊಕಸ್ತರು ಸಹ ನಿಮ್ಮ ಸುಖದುಃಖ ದಾದಫಿರ್ಯಾದಿ ವಿಚಾರಿಸದೆ (ರಾಜೇಂದ್ರ. ೧೨೫). **ದಾದುಮಾಡು**=ಲಕ್ಷ್ಯಕೊಡು; ಗಮನ ನೀಡು: ಪೋಲೀಸರಿಗೆ ಕಂಪ್ಲೇಂಟ್ ಕೊಟ್ಟರೆ ಯಾರೂ ದಾದು ಮಾಡಲಿಲ್ಲ (ಜ್ವಾಲಾಮೇ. ೧೩೧); ಅವಳು ತಿಳಿದುಕೊಂಡದ್ದರ ದಾಖಲೆಯನ್ನು ಕೂಡ ದಾದುಮಾಡದೆ ಹೊರಟ (ದೀಪಹ. II, ೯೮). **ದಾದು ಮುಟ್ಟು** =ತಕರಾರು ಹುಟ್ಟು,–ತಲಪು: ಸರಕಾರಕೂ ದಾದುಮುಟ್ಟಿ ಅದರ ವಿಚಾರ ಮಾಡೂತನಕ ಜನರನ್ನೇನು ಉಪವಾಸ ಕೊಲ್ಲೂದದ ಏನು? (ಜನಜೀ. ೧೧) **ದಾದುಹತ್ತು** = ದಾದುಮುಟ್ಟು: ಅಲ್ಲಿ ನವ್ಮ ದಾದು ಹತ್ತಲಿಕ್ಕಿಲ್ಲ (ಕಲಕು. ೨೮); ಸನ್ನಿಧಿಯ ತನಕ ದಾದು ಹತ್ತಲಿಲ್ಲ (ಕಥವಿ. II, ೩೪೧). [ ←ಪಾರ. ಮರಾ. ದಾದ್ ]

**ದಾದ್ರು** 'ದಾದರಾ' ನೋ.

**ದಾಧಿಕ** (ಗು). ೧. ಮೊಸರಿನಿಂದ ತಯಾರಿಸಿದ. (ನಾ). ೨. ಮೊಸರಿನಿಂದ ಮಾಡಿದ ಒಂದು ಬಗೆಯ ಖಾದ್ಯ: "ಮೊಸರೊಳೆ ಮಾಡಿದುದು ದಾಧಿಕಮೆಂಬುದು" (ಹಲಾಯು. ೫೪-೧೭೬). [ ಸಂ. ]

**ದಾಧಿಕ್ಯ** (ನಾ). = ದಾಧಿಕ: "ಎಲಿಕಾಯಿ ಮೊದಲಾದುವು ಮೊಸರಲ್ಲಿ ಕಲಿಸಿದೊಡೆ ದಾಧಿಕ್ಯಮೆಂದೆನಿಕ್ಕುಂ" (ಮಂಗರಾ ೭೪-೨). [ ಸಂ. ]

**ದಾನ** (ನಾ). ೧. ಕೊಡುಗೆ; ಕಾಣಿಕೆ; ಉಪಾಯನ: "ವಿಶ್ರಾಣನಂ, . . . ಉತ್ಸರ್ಗಃ, ಪ್ರದೇ(ಶ)ನಂ. ದಾನಂ–ಈ ೧೦ ಕುಡುವುದು" (ಹಲಾಯು. ೭೯-೨೭೫); ಅಂತು ಭವಿಷ್ಯ ದ್ವಿಜನ್ಮವರ್ಣಕಥ್ಯಯನಾಧ್ಯಾಪನ ದಾನ ಪ್ರತಿಗ್ರಹ ಯಜನಯಾಜನ ವಿಶಿಷ್ಟ ವೃತ್ತಿಯುಮಂ (ಆದಿಪು. ೮-೭೩ ವ); ಎತ್ತು ನಿಮ್ಮ ದಾನ ಬಿತ್ತು ನಿಮ್ಮ ದಾನ ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ (ದೇದಾವ. ೪೨-೮೨); ಕೊಡಬೇಕುತ್ತಮನಾದವಂಗೆ ಮಗಳಂ ಸತ್ಪಾತ್ರಕಂ ದಾನಮಂ (ಸೋಮೇಶ. ೭೯); ಹೊಱಗೆ ದಾನವ ಬೇಡಿದವರಂಟಿ ಕೊಟ್ಟು ಬೇಸಱದ ಮುಗುದರಸು ದೊರೆಕಿದನಲೇ ಎಂದು (ಹಕಕಾ. ೯-೭); ಸಿರಿ ಬಂದ ಕಾಲಕ್ಕೆ ಕರೆದು ದಾನವ ಮಾಡು (ಸರ್ವಜ್ಞ. ೬೦೬). ೨. ಸಾಮ, ದಾನ, ಭೇದ, ದಂಡಗಳೆಂಬ ಚತುರೋಪಾಯಗಳಲ್ಲಿ ಒಂದು: "ಕೊಟ್ಟು ಕೊಳ್ವುದು ದಾನಮೆನಿಸಿಕ್ಕು . . . ಸೈರಣೆ ಸಾಮಮಕ್ಕು ತಾವಿಂತಿವೆಯ್ದಿ ಮುಟ್ಟೆ ಚತುರೋಪಾಯಮಕ್ಕು" (ಮಂಗರಾ. ೭೯-೬); ಪಗೆಗೇನನಾದೊಡಂ ಕೊಟ್ಟಗಲದೆ ನೆಱೆ ನಂಟುಮಾಡಿಕೊಂಬುದು ದಾನಂ (ಹಮ್ಮಿರ. ೨-೧೨೧); ರಾಜ್ಯವನ್ನು ಪುನಃ ಪಡೆಯಲು ಸಾಮ ದಾನ ಮತ್ತು ಭೇದೋಪಾಯಗಳನ್ನು ಬಳಸಿ ವಿಫಲವಾದ ಮೇಲೆ ಯುದ್ಧಸನ್ನಾಹವಾಗುತ್ತದೆ (ಭಾರದ. ೯೯) ೩. ಮಂದವೇರಿದ ಆನೆಯ ಕುಂಭಸ್ಥಳದಿಂದ ಸುರಿಯುವ ಮದಜಲ; ಮದೋದಕ: ನಿನ್ನಯ ಸಂತಾನಮವಿಚ್ಛಿನ್ನಂ ಕ್ಷಿತಿಭಾರಧಾರಣೋಚಿತ ಗುಣಸಂಪನ್ನಮೆನಲ್ಕೆ ಗಟ್ಟಿಂ ಭೂಪೋನ್ನತ ದಿಙ್ನಾಗದಾನಂದಂದದಿನೆಂದುಂ (ಕಾದಂಪೂ. ೩೭೬). ೧, ೩: ಎನ್ನ ದಾನಮಿದಾಗಳುಂ ಮಧುಪಾಶ್ರಯಂ ಧರೆಗವ್ಯವಚ್ಛಿನ್ನ ದಾನಮಿದಾಗಳಿಂ ವಿಬುಧಾಶ್ರಯಂ ಗೆಲೆವಂದನೆನ್ನನ್ನಿಜೋನ್ನತಿಯಿಂದಮಿಾ ಪತಿಯೆಂದು ಮೆಚ್ಚಿ ವಿನಾಯಕಂ ತಾನ್ನಿಮಿರ್ಜುಗೆ ಕಬ್ಬಮಂ (ಪಂಪಭಾ. ೧-೭). ೪. ಪವಿತ್ರವಾದ ಜಲ,–ತೀರ್ಥ (?): ಏಕ್ಕವಿಂದೊಬ್ಬನಿಂದವಱ ಶವಮಂ ತರಿಸಿ ಸುಕ್ಕಿ ತನು ಮುರುಟಿದವಱೊಳು ದಾನವಂ ಚೆಲ್ಲಿ ಮಕ್ಕಳನಱುತೇಳೆ ಕರೆದಮೃತಕರದಿ ತಡವಲು ರೋಮ ಕೋಮಳಿಸಿತು (ಸಿದ್ಧರಾ. ೯-೨೦). [ ಸಂ. ]

**ದಾನಂಗುಡು** 'ದಾನಂಗೊಡು' ನೋ.

**ದಾನಂಗೊಡು,** ದಾನಂಗುಡು (ಕ್ರಿ). ದಾನಮಾಡಂ, – ಕೊಡು; ಸಮರ್ಪಿಸು: ನನ್ದಿಗುನ್ದರ್ಗೆ ದಾನಂಗೊಟ್ಟದು ಕೆಸುಗೊಳದ ಮಾಡನಂ ಒನ್ದಡುವುದುರ್ದೂರೊಳ್ (ಎಕ. IV, ಹೆಗ್ಗಡ. ೪-೩೬; ಸು. 750); ಸಾಸಿರ ಕವಿಲೆಯನಳಂಕಾರಸಹಿತಂ ಚತುರ್ವ್ವೇದ ಪಾರಗರಪ್ಪ ಸಾಸಿರ್ವ್ವರು ಬ್ರಾಹ್ಮಣರ್ಗ್ಗಂ ದಾನಂಗೊಟ್ಟ ಫಳಮಕ್ಕು (ಸೌಇಇ. XX, ೪೬-೪೩; 1072); ಈ ಧರ್ಮ್ಮಮನಾರೊಬ್ಬರು ಪ್ರತಿಪಾಲಿಸಿದವರಿಗೆ ವಾರಣಾಸಿಯಲು ಸಾಸಿರ ಕವಿಲೆಯಂ ಉತ್ತಮರಪ್ಪ ಬ್ರಾಹ್ಮಣರಿಗೆ ದಾನಂಗೊಟ್ಟ ಪುಣ್ಯವಕ್ಕು (ಸೌಇಇ. XX, ೬೫-೧೩; 1101). **ದಾನಂಗುಡು**: ತನ್ನೆಂದಂದದಿಂದೆ ನಡೆಯಿಸಿದಂ ದಾನಂಗುಡುವದೊಂದಲಂಪಿನ ಪೆಂಪಿಂ (ಆದಿಪು. ೧೫-೨೦).

[ ದಾನ + ಕೊಡು$_1$ ]

**ದಾನಗುಣ** (ನಾ). ದಾನ ಮಾಡುವ ಸ್ವಭಾವ; ಕೊಡುವ ಪ್ರವೃತ್ತಿ; ಔದಾರ್ಯ: ಚಂದ್ರಬಲವುಂ ಕೈವಾರದಿಂದಂ ತದಾನನಚಂದ್ರಂ ಕುಱೆ ದೇಸೆ ಪೊಚ್ಚಪೊಸತಾಯ್ತೆಂಬನ್ನೆಗಂ ಮಾಟಕ್ಕೆ ನೂತನಕಂದರ್ಪನನೂನದಾನಗುಣದಿಂ ಚಾಳುಕ್ಯಕಂದರ್ಪನಾ (ಗದಾಯು. ೧-೬); ಅತಿಶಯಮಾಯ್ತು ದಾನಗುಣಂ (ಎಕ. VI, ೪೫-೫೫; 1196); ದಾನಗುಣವಿಲ್ಲದನ ಸಿರಿಯುಭಿಮಾನವಿಲ್ಲದ ಭಾರ್ಯೆ . . . ಪ್ರವರ್ಧನವಹುದೆ ಲೋಕದೊಳು (ಬಸವು. ೩೭-೩೨). [ ದಾನ + ಗುಣ ]

**ದಾನಗೈ** (ಕ್ರಿ). ದಾನನೀಡು; ದಾನಮಾಡು: ಯಾಚಕಜನಂಗಳಿಗೆ ಬೇಡಿದಂದದಿ ದಾನಗೈದು (ನವಮೋ. ೨-೪೨).

[ ದಾನ + ಗೈ (<ಕೆಯ್$_1$) ]

**ದಾನಚಿಂತಾಮಣಿ** (ನಾ). ೧. ದಾನ ನೀಡುವುದರಲ್ಲಿ ಚಿಂತಾಮಣಿಯಂತಿರುವ ವ್ಯಕ್ತಿ; ಉದಾರವಾಗಿ ದಾನ ಕೊಡುವ ವ್ಯಕ್ತಿ: ಎನ್ನ ಅತಿಪ್ರೀತಿಯಿಂ ಧರ್ಮಚಿತ್ತಂ ವರದತ್ತಂ ದಾನಚಿಂತಾಮಣಿಯೆನಿಸಿ

ಯಶೋಭಾರವಂ ತಾಳ್ದಿ ನಿಂದಂ (ಅಜಿಪು ೧೨-೫) ; ನೋಡಿದಂಗನೆಯರ ನೇತ್ರ ಚಕೋರಕೆ ಕೂಡೊಪ್ಪುತಿಹ ಪೂರ್ಣಚಂದ್ರರೂಢಿಪ ದಾನಚಿಂತಾಮಣಿ ಜಯತೆಂದು ಪಾಡಿದರು (ಕಂನವಿ. ೮-೮೦) ; ಅದರಲ್ಲಿ ಬೇರೆ ದೊಡ್ಡ ದಾನಚಿಂತಾಮಣಿಯಂತೆ ಅವಳು (ಕಂಬಹು. ೫೨). ೨. ಅತ್ತಿಮಬ್ಬೆಗೆ ಇದ್ದ ಬಿರುದು: ಸಂದ ದಾನಚಿಂತಾಮಣಿ ತನ್ನದೊಂದು ಪಿತೃಭಕ್ತತೆಯುಂ ಮೆಚ್ಚಿಯಲ್ ಪುರಾಣಚೂಡಾಮಣಿಯುಂ ನಿರ್ಮಿಚಿದಳ್ (ಶಾಂತಿ ಪು. ಪರಿ. ೧) ; ಪರಮ ಶ್ರಾವಕಿ ನೀನೆ ದಾನಿಯೆ ವಲಂ ಶ್ರೀದಾನಚಿಂತಾಮಣಿ (ಅಜಿಪು. ೧೨-೭) ; ಮಹಾಸತೀರತ್ನಂ ಕುಳಪತ್ನಿಯಾಗಿ ಗುಣದಂಕಕಾರ್ತಿಯುಂ ಕವಿವರಕಾಮಧೇನುವುಂ ಕಟಕಪವಿತ್ರೆಯುಂ ಜಿನಧರ್ಮಪತಾಕೆಯುಮೆನಿಸಿದ ದಾನಚಿನ್ತಾಮಣಿಯ ಮಹಾಪ್ರಭಾವಮೇದೋರೆಂತೆನೆ (ಸೌಇಇ. XI-1, ೫೨-೧೮; 1007). [ ದಾನ+ಚಿಂತಾಮಣಿ ]

**ದಾನತೀರ್ಥಪ್ರವರ್ತಕ** (ನಾ). [ಜೈನ] ಚರ್ಯೆಗೆ ಬಂದ ಜೈನ ತಪಸ್ವಿಗೆ ಮೊದಲನೆಯ ಭಿಕ್ಷೆಯನ್ನು ನೀಡುವವನು (?): ಈ ಭವಕ್ಕಂಟನೆಯ ಭವದೊಳ್ ಭರತದೊಳ್ ನೀನಾದಿತೀರ್ಥಪ್ರವರ್ತಕನಾದಂದೀ ಶ್ರೀಮತಿ ದಾನತೀರ್ಥಪ್ರವರ್ತಕಂ ಶ್ರೇಯಾಂಸನಕ್ಕುಂ (ಅಜಿಪು. ೩-೧೩ ವ).
[ ದಾನ + ತೀರ್ಥ + ಪ್ರವರ್ತಕ ]

**ದಾನತೆ** (ನಾ). ೧. ಆನೆಯ ಕುಂಭಸ್ಥಳದಿಂದ ಮದಜಲ ಹರಿಯುವಿಕೆ. ೨. ಉದಾರತೆ; ಔದಾರ್ಯ ; ದಾತೃತ್ವ ; ದಾನಗುಣ. 'ಗಳಿತ ದಾನತೆ' ಪರಾ. [ ಸಂ. ದಾನತಾ ]

**ದಾನದಂತಿ** (ನಾ). ಮದೋದಕವನ್ನು ಸುರಿಸುತ್ತಿರುವ ಆನೆ ; ಮದ್ದಾನೆ : ನಿಜಗಮನಕ್ಕೆ ಮಚ್ಚರಿಪ ಮಂಥರಯಾನದ ದಾನದಂತಿಯುಂ . . . ಕನಸು ಪದಿನಾಱುಮನಂಬುಜವದನೆ ಕಂಡಳ್ (ಪುಷ್ಪಪು. ೯-೯೮)
[ ದಾನ + ದಂತಿ ]

**ದಾನಧಾರಾಂಬು** (ನಾ). ಸುರಿಸುತ್ತಿರುವ ಮದಜಲ : ದೆಸೆಯುಂ ಖಡ್ಗಾಂಶುಜಾಲ ಬೆಳಗೆ ಧರಣಿಯುಂ ದಾನಧಾರಾಂಬು ಜೌಗೇಱಿಸೆ ರೋದೋಭಾಗಮುಂ ಕೇತುತತಿ ಪುದಿಯೆ (ಚಂದ್ರಪು. ೧೦-೫೮).
[ ಸಂ. (ದಾನ + ಧಾರಾ + ಅಂಬು) ]

**ದಾನಧಾರೆ** (ನಾ). = ದಾನಧಾರಾಂಬು : ಆ ವನಂ . . . ದಾನಧಾರೆಯಂತೆ ಪುಂಡರೀಕ ಗಂಡಕಮಂಡಿತಮುಂ . . . ತತತಾಪಸಸಮುಚ್ಚಯಮಾಗಿಯುಮಶೋಕಸಂಗತಮೆನಿಸಿರ್ದುದು (ರಾಜಶೇ. ೫-೭೮ ವ) ; ಅಂತು ಇಱಿತರ್ಪ ಸೊವಡುಗುವ ದಾನಧಾರೆಯು . . . ಕಾರೊಡಲ ಪೇರಾನೆಗಳ (ರಾಮಾಶ್ವ. ೯೪-೪). [ದಾನ + ಧಾರೆ ]

**ದಾನನಂದನ** (ನಾ). ದಾನ ನೀಡಿ ಸಂತೋಷಪಡಿಸುವವನು; ಉದಾರಿ: ದಾನನಂದನ ಮಾನಾಮಾನಂ ಮಾನಿನೀ ಮನೋಮದನಂ (ಮದತಿ. ೬-೧೦).
[ ದಾನ + ನಂದನ ]

**ದಾನಪಟ್ಟೆ** (ನಾ).=ದಾನಪತ್ರ: ಕೊಂಡಪ್ಪ ವೊಡೆಯರು ತಿರುಮಲದೇವರಿಗೆ ಕೊಟ್ಟ ದಾನಪಟ್ಟೆ (ಸೌಇಇ. IX-ii, ೫೫೫-೧೪; 1533); ಮರಿಸಿದ್ದಗವುಡಗೆ ಬರಸಿಕೊಟ್ಟ ಭೂಸ್ವಾಸ್ಥೆ ದಾನಪಟ್ಟೆ ಕ್ರಮವೆಂತೆಂದರೆ (ಎಕ. XVI, ಚಿಕ್ಕನಾ. ೯೪-೮ ; 1746). [ ದಾನ + ಪಟ್ಟೆ$_3$ ]

**ದಾನಪತ್ರ** (ನಾ). ದಾನ ಕೊಟ್ಟದ್ದಕ್ಕಾಗಿ ಬರೆಸಿದ ದಾಖಲೆ : (Deed of gift. ಪಾರಿನಿ. ೨೭). [ ದಾನ + ಪತ್ರ ]

**ದಾನಪರ** (ನಾ). ೧. ದಾನ ಕೊಡುವುದರಲ್ಲಿ ನಿರತನಾದವನು. ೨. ಮದೋದಕವನ್ನು ಸುರಿಸುತ್ತಿರುವ ಆನೆ. ೧, ೨ : ದಾನಪರನಂ ನಿಜೋನ್ನತಮಾನನನಾರೂಢ ವಿಪುಳವಂಶನನಂತೊಂದಾನೆಯುನಪಾಯ ಪಂಕದೊಳೇನುಂ ತಳ್ವಿಲ್ಲದಿರ್ದುದಂ ಕಾಣಿಸಿದಂ (ಕವಿರಾ. ೩-೧೨೯).
[ ಸಂ. ]

**ದಾನಪರಾಯಣ** (ನಾ). ದಾನ ಮಾಡುವುದರಲ್ಲಿ ಬಹಳ ಆಸಕ್ತಿಯುಳ್ಳವನು. 'ದಾನಪರಾಯಣತೆ' ಪರಾ. [ ಸಂ. ]

**ದಾನಪರಾಯಣತೆ** (ನಾ). ದಾನ ಮಾಡುತ್ತಲೇ ಇರುವ ಗುಣ : ಇದಕ್ಕೆ ಭಾರತದೇಶದ ರಾಜರುಗಳ ದಾನಪರಾಯಣತೆ, ಜನರ ಪರೋತ್ಕರ್ಷ ಸಹಿಷ್ಣುತೆ, ತಾಳ್ಮೆ ಬಹುಮಟ್ಟಿಗೆ ಸಹಾಯಕವಾಗಿದ್ದವು (ಭಾರದ. ೧೦೪).
[ ಸಂ. ದಾನಪರಾಯಣತಾ ]

**ದಾನಪಾತ್ರ** (ನಾ). ದಾನ ತೆಗೆದುಕೊಳ್ಳಲು ಯೋಗ್ಯತೆ ಅಥವಾ ಅರ್ಹತೆಯುಳ್ಳವನು. [ ದಾನ +ಪಾತ್ರ ]

**ದಾನಪಾರಮಿತೆ** (ನಾ). [ಬೌದ್ಧ] ಸದಾಚಾರಗಳಲ್ಲಿ ಒಂದು ; ಅತ್ಯಧಿಕವಾಗಿ ದಾನಮಾಡುವಿಕೆ: ಪಾರಮಿತಾ ಎಂದರೆ ಪರಾಕಾಷ್ಠೆಯು, ಅಭ್ಯಾಸ ಸಮಾಪ್ತಿಯೆಂದರ್ಥ. ಇದರಲ್ಲಿ ದಯಾಪಾರಮಿತಾ, ದಾನಪಾರಮಿತಾ, ಶೀಲಪಾರಮಿತಾ ಮೊದಲಾದ ಸದಾಚಾರಗಳನ್ನು ಸಂಗ್ರಹಿಸಿರುವರು (ಹಿಂದಸಾ. ೪೦). [ ಸಂ. ದಾನಪಾರಮಿತಾ ]

**ದಾನಪ್ರವೃತ್ತಿ** (ನಾ). ದಾನಮಾಡುವ ಸ್ವಭಾವ ; ದಾನಗುಣ : ಆ ದಾನಪ್ರವೃತ್ತಿಯಿಂದಲೇ ಬಡವನಾಗಿ ನಾನು ನಿಮ್ಮ ಮರೆಹೊಕ್ಕಿರುವುದು (ಭಾರದ. ೪೦೯). [ ದಾನ + ಪ್ರವೃತ್ತಿ ]

**ದಾನಪ್ರಿಯೆ** (ನಾ). ದಾನಮಾಡುವುದರಲ್ಲಿ ಸಂತೋಷವನ್ನು ಹೊಂದುವವಳು ; ದಾನಮಾಡಲು ಆಶಿಸುವವಳು : ಕೊಡುಗೈಯವಳು : ಆ ಪ್ರಿಥ್ವೀವಲ್ಲಭನ ಮನಟ್ಟಿಯೆ ಹರಚರಣಯುಗಳಪುಟಪ್ರಿಯೆ ದಾನಪ್ರಿಯೆ ಮಾಳಲದೇವಿ (ಸೌಇಇ. XX, ೪೯-೨೮ ; 1076 ?).
[ ಸಂ. ದಾನಪ್ರಿಯಾ ]

**ದಾನಪ್ಲವ** (ನಾ). ಮದಜಲ ಪ್ರವಾಹ :ಮಾರ್ಗಾನೇಕ ತೋಯಾಶಯಮನುರುರಜಂ ಪೀಱಿ ದಾನಪ್ಲವಂ ಪೂರಿಸೆ ತೋಱಿತ್ತೆತ್ತಮಾದಂ ಹರಣ ಭರಣ ಚಾತುರ್ಯಮಂ ಚಾತುರಂಗಂ (ಚಂದ್ರಪು. ೧೦-೩೦).
[ ದಾನ + ಪ್ಲವ ]

**ದಾನಮಾರ್ಗ** (ನಾ). ದಾನದ ರೀತಿ,-ಕ್ರಮ: ಬಲ್ಲಿದಾಹಾರಭಯಶಾಸ್ತ್ರನ್ನಲ್ಲಿ ಭೇಷಜವೆಂಬವಿವು ಎಲ್ಲಕಾದಿಯ ದಾನಮಾರ್ಗಮನೀಶನೆನೆ ಮುನಿಪ (ಬಿಜ್ಜಪು. ೮೭-೫೩). [ ದಾನ + ಮಾರ್ಗ ]

**ದಾನಮುದ್ರೆ** (ನಾ). ವರ ಕೊಡುವುದನ್ನು ಸೂಚಿಸುವಂತೆ ತೆರೆದ ಅಂಗೈಯನ್ನು ಕೆಳಗೆ ತೋರಿಸುವ ಮುದ್ರೆ: ಉತ್ತರ ಅಂಕಣದಲ್ಲಿ ವಿಜಯನಗರ ಕಾಲದ ಲಕ್ಷ್ಮಿ, ನಾಲ್ಕು ಕೈಗಳಲ್ಲಿ ಅಭಯ, ಪದ್ಮ, ದಾನ ಮುದ್ರೆ ಹೊಂದಿರುವಳು (ಹೊಯ್ಸಶಾ. ೭೦). [ ದಾನ + ಮುದ್ರೆ ]

**ದಾನಮೂಲ** (ನಾ). ದಾನ ಕೊಡಬೇಕಾಗಿರುವ ಭೂಮಿಯ ಸಾಗುವಳಿಯ ಹಕ್ಕು : ಸರ್ವಪರಿಹಾರವಾಗಿ ದಾನಮೂಲಗಳನ್ನು ಪಡುಬಡಿಸಿ ದಾನಮೂಲವನ್ನು ಬಿಡಿಸಿ . . . ಧಾರೆಯೆರೆದು ಕೊಟ್ಟು (ಮ್ಯಆರಿ. ೧೯೩೪, ೨೭-೨೪ ; 1430). [ ದಾನ + ಮೂಲ ]

**ದಾನರಾಜಿ** (ನಾ). ೧. ದಾನದ ಸಮೂಹ ; ದಾನಪರಂಪರೆ. ೨. ಮದೋದಕದ ಧಾರೆ. ೧, ೨ : ಮಾನಸದ ಹೊಂದಾವರೆಯ ಸೆಳೆದು ಭಂಗಿಸುತದನು . . . ದಾನರಾಜಿಯನಂತೆ ಸಂತತವು ಮೆರೆಯುತಿಹ ಬಾಹುದಂಡಗಳವನ ಗಜಪತಿಗಳು (ಧ್ವನ್ಯಾಲೋ. ೯೧).
[ ದಾನ + ರಾಜಿ$_1$ ]

**ದಾನರುಚಿ** (ನಾ). ೧. ದಾನ ಕೊಡುವುದರಲ್ಲಿ ಇರುವ ಆಸಕ್ತಿ. ೨. ದಾನ ಕೊಡಲು ಆಸಕ್ತಿಯುಳ್ಳ ವ್ಯಕ್ತಿ ; ದಾನಮಾಡುವ ಅಪೇಕ್ಷೆಯುಳ್ಳ ವ್ಯಕ್ತಿ ; ಉದಾರಿ : ಕೇಳ್, ಸರಸಿ, ನೀಂ ಕರುಣೆ, ಧರ್ಮಮತಿ, ದಾನರುಚಿ ನಾಥನಿಲ್ಲದ ತರುಣಿಯಾಂ, ನನ್ನ ಬಾಳ್ ಬರಿಯ ಪಾಳ್ (ಶ್ರೀರಾಮಾ. ೨೦೭-೩೩೯). [ ದಾನ + ರುಚಿ ]

**ದಾನವ** (ನಾ). ದನುವಿನ ಪುತ್ರ; ದೈತ್ಯ; ರಾಕ್ಷಸ; "ಅಸುರಃ, ದಾನವಃ, ದೈತ್ಯಃ, ದೈತೇಯಃ . . . ಪಾತಾಲನಿಲಯಃ – ಈ ೮ ಅಸುರರ ಪೆಸರ್" (ಹಲಾಯು. ೩-೫); ರಣಾಂಗಣದಂತೆ ಚಮೂರ ಚಿತಪ್ರಹರಣ ವಿಶೀರ್ಣರೂಪಮುಂ ದಂತಿದಾನವವಿಲೀನಶಿಲೀಮುಖಮುಂ (ಚಂದ್ರಪ್ರ. ೫-೫೨ ವ); ದಾನವನೊಂದು ಸೆಱೆಯಿಂ ರಕ್ಷಿಸಯ್, ಎಂದು ಕೀಱಿದಳ್ (ರಾಮಾಶ್ವ. ೬೪-೪೦).

**ದಾನವಘರಟ್ಟ** = ರಾಕ್ಷಸರಿಗೆ ಅರೆಯಂಎವ ಕಲ್ಲಿನಂತಿರುವವನು; ರಾಕ್ಷಸರನ್ನು ನಾಶಗೊಳಿಸಿದವನು; ಕೃಷ್ಣ: ಕಟ್ಟುಗ್ರ ಕೋಪದಿಂದೈತಪ್ಪ ದಾನವಘರಟ್ಟನಂ ತಡೆದು ತಾವರ್ಣಧ್ವಜಂ ಕಾಳಗಂಗೊಟ್ಟನು (ಜೈಮಿಭಾ. ೨೫-೫೦). [ಸಂ.]

**ದಾನವಕುಲ** (ನಾ). ರಾಕ್ಷಸ ಜಾತಿ: ಕಾಳಾಯಸ ಬಾಣಾಳಿಗಳಿಂ ದಾನವ ಕುಲಕಾಳಯಮಮಂ ಕಾಳೆಯವನನಂ ಪೂಣ್ದೆಚ್ಚಂ (ಜಗವಿ. ೯-೩೭).
[ದಾನವ + ಕುಲ]

**ದಾನವಖಳ** (ನಾ). ನೀಚನಾದ ರಾಕ್ಷಸ: ಆ ರಾಮನಂ ಪೊತ್ತುಕೊಂಡ ಗಲುತ್ತುಂ ದಿಗಿಭಂಬರಂ ಬಳೆಯುತುಂ ನಾಕಂಬರಂ ಪಾಱುತುಂ ಗಗನಾ ಗ್ರುಂಬರವಿಂತು ದಾನವಖಳಂ ಪೋತಂದನಾಟೋಪದಿಂ (ಜಗವಿ. ೪-೫೩).
[ದಾನವ + ಖಳ$_1$ (= ಖಲ)]

**ದಾನವದಲ್ಲಣ** (ನಾ). ರಾಕ್ಷಸರಿಗೆ ಭಯಾನಕನಾದವನು: ಬಲ್ಲ ಬಹುಗುಣಭರಿತ ದಾನವದಲ್ಲಣ ಜಗನ್ನಾಥವಿಠಲನು ಸೊಲ್ಲ ಲಾಲಿಸಿ ಸ್ತಂಭದಿಂದಲಿ ಬಂದ (ಜಗದಾ. ೨೦). [ದಾನವ + ತಲ್ಲಣ (< ತಲ್ಲಟ)]

**ದಾನವಧ್ವಂಸಿ** (ನಾ). ೧. ರಾಕ್ಷಸರನ್ನು ನಾಶಗೊಳಿಸಿದವನು; ದೈತ್ಯರ ವೈರಿ. ೨. ಶ್ರೀರಾಮ: ಹಿಂದಿಪ್ಪ ತರಳನೆನ್ನ ಕುಮಾರ ಶಕ್ವರಿ ಸಿರಿಯ ನೀಗಿದ ಪಾಪಿಯೆಂದೆನೆ ಕರೆದು ಕಾಣಿಸು ಕಾವೆನೆಂದನು ದಾನವಧ್ವಂಸಿ (ಕೌಶಿರಾ. ೩೨-೩೩). ೩. ಶ್ರೀಕೃಷ್ಣ: ನೀಲಾಚಲನಿಕಾಯದ ಸೌಂದ ರಾಂಗದ ಕೌಸ್ತುಭಪ್ರಭೆಯಿಂದ ಕಾಂಚನರಥವನಿಳಿದನು ದಾನವಧ್ವಂಸಿ [ಪಾಠಾಂ. ದಾನವಾರಾತಿ] (ಕುವ್ಯಾಸ. ೮-೫೭). [ಸಂ. ದಾನವಧ್ವಂಸಿನ್]

**ದಾನವಪತಿ** (ನಾ). ೧. ರಾಕ್ಷಸರ ರಾಜ. ೨. ಯವನರ ಒಡೆಯ; ಸುಲ್ತಾನ: ಬಾದುರನು ದಾನವಪತಿಗೆ ಸಲಾಮನೊಲಿದು ಮಾಡುತಾನದೆ ನುಡಿದನಿಂತೆಂದು (ಕುರಾಸಾ. ೧೮-೭೮). [ದಾನವ + ಪತಿ$_2$]

**ದಾನವಮರ್ದನ** (ನಾ). ರಾಕ್ಷಸರನ್ನು ನಾಶಗೊಳಿಸಿದವನು: ಜಂಬೂದ್ವೀಪಂ ತಾನೆಸೆದುದು ವೃತ್ತತೆಯಿಂ ದಾನವಮರ್ದನನ ಕೂರ್ಮ ಮೂರ್ತಿಯ ತೆಱದಿಂ (ಜಗವಿ. ೧-೨೪). [ದಾನವ + ಮರ್ದನ]

**ದಾನವರಾಜ** (ನಾ). ರಾಕ್ಷಸರ ಒಡೆಯ; ದೈತ್ಯರ ಅಧಿಪತಿ: ಲಂಕಾ ನಗರಕ್ಕೆ ನಂದನವನಕ್ಕೆ ವಿನಾಶಮನೀವುದೆತ್ತಿದೇಂ ದಾನವರಾಜ ದುರ್ವಿಲ ಸಿತೋತ್ಕಟ ಸಂಕಟ ವೇಗವಾಗದೇ (ಪಂರಾಮಾ. ೧೧-೧೫೭).
[ದಾನವ + ರಾಜ]

**ದಾನವರಾಜಮಂತ್ರಿ** (ನಾ). ೧. ರಾಕ್ಷಸರಾಜನ ಮಂತ್ರಿ; ಶುಕ್ರ. ೨. ಶುಕ್ರಗ್ರಹ: ದಿನರಾಜ ತಾರಕರಾಜ ಕುಜ ಬುಧ ಜೀವ ದಾನವರಾಜ ಮಂತ್ರಿ ವಿಕರ್ತನೋದ್ಭವ ರಾಹು ಕೇತುಗಳು (ಬಸಪು. ೧೦-೩೦).
[ದಾನವರಾಜ + ಮಂತ್ರಿ]

**ದಾನವರಿಪು** (ನಾ). ೧. ದಾನವರ ವೈರಿ; ವಿಷ್ಣು. ೨. ಕೃಷ್ಣ: ಅನಱುವೆಂ ಪೃಥೆಯಱಿವಳ್ದಾನವರಿಪುವಱಿವನರ್ಜನಱಿವಂ . . . ನೀನಾರ್ಗೆಂದು (ಗದಾಯು. ೫-೧೮); ಕೌಸ್ತುಭಂದಾಳ್ದಿದನೀತಂ ಕೇವಲಂ ದಾನವರಿಪುವೆ ಪೆಱಂಗೆಲ್ಲಿತೀ ದಿವ್ಯರೂಪಂ (ಜಗವಿ. ೩-೨); ದಾನವರಿಪು ಚಕ್ರಂಗೊಳೆ ಕೌರವಾರಿ ಗದೆಗೊಳೆ ಪೊಣರ್ಕೆಗಾವಂ ನಿಲ್ವಂ (ಶಮದ. ೧೬೭ ಪ್ರಯೋ). [ದಾನವ + ರಿಪು]

**ದಾನವವಿದ್ಯೆ** (ನಾ). ರಾಕ್ಷಸವಿದ್ಯೆ; ಅಮಾನುಷವಾದ ನಡವಳಿಕೆ: ಹೆಣನನಱಸುತ ರಕುತಪಾನಕೆ ಸೆಣಸಿ ಶಾಕಿನಿ ಢಾಕಿನಿಯರೊಳು ಹೆಣಗಿ ಗೆಲುವುದೆಯಾಯ್ತು ದಾನವವಿದ್ಯೆ ಜಗವಱಿಯೆ (ಕುವ್ಯಾದ್ರೋ. ೧೫-೫೫).
[ದಾನವ + ವಿದ್ಯೆ]

**ದಾನವಸೂದನ** (ನಾ). = ದಾನವಧ್ವಂಸಿ ೩: ದಾನವಸೂದನನು ರವಿಸುತನ ಕಿವಿಯಲಿ ಬಿತ್ತಿದನು ಭಯವ (ಕುವ್ಯಾಉ. ೧೧-೩).
[ದಾನವ + ಸೂದನ]

**ದಾನವಸೇನೆ** (ನಾ). ರಾಕ್ಷಸರ ಪಡೆ; ದೈತ್ಯರ ಸೈನ್ಯ: ದಾನವಸೇನಾ ಕಾಲಕಲ್ಪಂಗಘವನನವದಾವಂಗೆ ರಕ್ಷಾರ್ಥಮೊಂದೊಂದವತಾರಂಗೆ ಯ್ದು ದೇವಂಗೆನುತ (ಜಗವಿ. ೧-೩೫). [ದಾನವ + ಸೇನೆ]

**ದಾನವಹಿ** (ನಾ). ದಾನಕೊಟ್ಟದ್ದಕ್ಕಾಗಿ ಬರೆಯಿಸಿದ ದಾಖಲೆ; ದಾನಪತ್ರ: ಮಂಹಾನಾಡಿನವರು ಕಲ್ಲೂರ್ರಾ ಕೆಂಪದಾಸ್ಯೆಯಿಗೆ ದಾನವಹಿ ಬರದ ಕೊಟ್ಟದ್ದು (ಎಕ. XVI, ಗುಬ್ಬಿ, ೬೪-೫೮; ಸು. 1672).
[ದಾನ + ವಹಿ]

**ದಾನವಾಂತಕ** (ನಾ). = ದಾನವಧ್ವಂಸಿ ೩: ದಾನವಾಂತಕನಾ ಯುಗ ದೊಳೇ ತಾನೊಗೆಯನೇ ಕೃಷ್ಣನೆಂಬಭಿಧಾನದಲಿ (ಬಸಪು. ೫೪-೩೩); ದಾನವಾಂತಕನುರವನೆಚ್ಚನು ಜೋಡನೊಡೆಬಗಿದು (ಕುವ್ಯಾಕ. ೨೩-೧೪).
[ದಾನವ + ಅಂತಕ]

**ದಾನವಾರಣ** (ನಾ). ೧. ದಾನಕೊಡಲು ಅಡ್ಡಿಪಡಿಸುವುದು. ೨. ಮದಜಲವನ್ನು ಸುರಿಸುತ್ತಿರುವ ಆನೆ; ಮದವೇರಿದ ಆನೆ. ೧, ೨: ಅರಣ್ಯದೊಳ್ದಾನವಾರಣಂ . . . ವಸಂತದೊಳ್ಮಾರಹಿತಮುಂಟಲ್ಲದಿಲ್ಲ ವಿಂವು ಮತ್ತಿಲ್ಲಿಯು ಧರ್ಮಜನ ನೆಲದೊಳು (ಜೈಮಿಭಾ. ೨-೮).
[ದಾನ + ವಾರಣ]

**ದಾನವಾರಾತಿ** (ನಾ). = ದಾನವರಿಪು: ನೀಲಾಚಲ ನಿಕಾಯದ ಸೌಂದರಾಂಗದ ಕೌಸ್ತುಭಪ್ರಭೆಯಿಂದ ಕಾಂಚನ ರಥವನಿಳಿದನು ದಾನವಾರಾತಿ [ಪಾಠಾಂ. ದಾನವಧ್ವಂಸಿ] (ಕುವ್ಯಾಉ. ೮-೫೭); ದಾನವಾರಾತಿಯಂ ನಿಜಭೃತ್ಯನಂ ಕರೆದು ... ಕೊಂದು ಬಾಯೆನೆ (ವೀಶೈಪು.೪-೧೧-೨೦). [ದಾನವ+ಅರಾತಿ]

**ದಾನವಾರಿ$_1$** (ನಾ). ೧. ರಾಕ್ಷಸರ ಶತ್ರು; ದೇವತೆ: ದಾರುದಾರುಣನಂ ದಾನವಾರಿವಾರಿತಲೋಕನಂ ಬಾರ ಬಾ ರಣಮುಂ ನೋಡಾ (ಕವಿರಾ. ೨-೧೩೦). ೨. ಇಂದ್ರ. ೩. ಶಿವ. ೪. ವಿಷ್ಣು; ಕೃಷ್ಣ: ಅಂದು ಮೊದಲಾಗಿ ತನ್ನಿಚ್ಛೆಯಿಂ ಚಂದ್ರಹಾಸಂ ದಾನವಾರಿಯಂ ಬಿಡದೆ ಬಾಲಕ್ರೀಡೆ ಯಿಂದುತ್ಸವಂಗಳಂ ಮಾಡಿ (ಜೈಮಿಭಾ. ೨೯-೬). [ದಾನವ + ಅರಿ$_6$]

**ದಾನವಾರಿ$_2$** (ನಾ). ಆನೆಯ ಮದೋದಕ: ಶಾಮಳಾಂಗಮಾಗಿ ತೀವಿ ತಳ್ತ ಭೃಂಗಬೃಂದದಿಂ . . . ವಾಮಮಾಗಿ ತಾಳ್ದ ಮಕರಂದ ದಾನವಾರಿಯಿಂ ಕಾಮಸಾಮಜೋಪಮಾನಮಾದುದೊಂದು ಮಾಮರಂ (ವೃಷವಿ. ೪-೩೮). [ದಾನ + ವಾರಿ$_2$]

**ದಾನವಿ** (ನಾ). ರಾಕ್ಷಸಿ: ದೋರೆಗರುಳಲಿ ದಾನವಿಯರೊಡಲೇಱು ಹತ್ತದೆ ಹಬ್ಬವಾಗದೆ ಭೂರಿ ಬೇತಾಳರಿಗೆ (ಕುವ್ಯಾವಿ. ೫-೨೫). [ಸಂ. ದಾನವೀ]

**ದಾನವಿಕ** (ಗು). ರಾಕ್ಷಸೀಯವಾದ; ಅಮಾನುಷವಾದ; ಕ್ರೂರವಾದ: ಜೈಲುಖಾನೆಯ ದಾನವಿಕ ನಿಷ್ಠುರತೆಯಿಂದಲೂ ಸೈನ್ಯನಿವಾಸದ ಸಶಸ್ತ್ರ ಭ್ರುಕುಟಿ ವಿಕ್ಷೇಪದಿಂದಲೂ ಪೃಥ್ವಿಯ ಮರ್ಮಾಂತಿಕ ಪೀಡೆ ಉತ್ತರೋತ್ತರ ದುಃಸಹವಾಗುತ್ತ ಹೋಗುತ್ತದೆ (ನಿಬಂಧ. I, ೯). [ಸಂ.]

**ದಾನವಿಘ್ನ** (ನಾ). ದಾನಕಾರ್ಯಕ್ಕೆ ಉಂಟುಮಾಡುವ ಅಡ್ಡಿ,– ವಿಘ್ನ: ಹಸ್ತಿನಾಪುರದೊಡೆಯನಪಾತ್ರನೆಂಬ ಮುನಿ ದಾನವಿಘ್ನದಿಂ ತಿರ್ಯಗ್ಗತಿಯೊಳು ಅಸಂಖ್ಯಾತ ಭವಂಗಳಂ ಬಂದು (ಪುಣ್ಯಾಸ್ರ. ೧೧-೩೦ ವ)
[ದಾನ + ವಿಘ್ನ]

**ದಾನವಿಧಾನ** (ನಾ). ದಾನಮಾಡುವ ಕ್ರಮ,-ರೀತಿ: ದಾನವಿಧಾನ[ಮುವಿ] ಬುಧರಲ್ಲಿ × × × ಸಲನ್ನದಾನಮನ್ನೆ × × × ಕೇಶಿಯಣ್ಣನೇನ್ಮಾನಿಸ × × ದಾನಸುರ (ಸೌಇಇ. XX, ೭೦-೩೩ ; 1108). [ ದಾನ + ವಿಧಾನ ]

**ದಾನವಿನೋದ** (ಗು). ದಾನಮಾಡಿ ಸಂತೋಷವನ್ನು ಹೊಂದುವ,-ಪಡೆಯುವ. 'ದಾನವಿನೋದವೃತ್ತಿ' ಪರಾ. (ನಾ). ೨. ದಾನ ಮಾಡುವುದರಲ್ಲಿ ಸಂತೋಷವುಳ್ಳವನು : ದಾನವಿನೋದನ ದಾನ ವರ್ಷದಿಂ ವಿಬುಧದ್ರುಮಕದಂಬಮುಂಕುರಿತಮಾಗೆಯುಂ (ಮಲ್ಲಿಪು ೮-೭೫).
[ ದಾನ + ವಿನೋದ ]

**ದಾನವಿನೋದವೃತ್ತಿ** (ನಾ). ದಾನ ಮಾಡುವುದರಿಂದ ಸಂತೋಷ ವನ್ನು ಹೊಂದುವ ಸ್ವಭಾವ :ಬಸವನ ಭಕ್ತಿಯುಂ ಬಸವರಾಜನ ದಾನ ವಿನೋದವೃತ್ತಿಯುಂ . . . ನಲಿದು ಕೇಳುತೆ . . . ಬರುತಿರ್ದರು (ಬಸರ. ೧೧-೧). [ ದಾನವಿನೋದ + ವೃತ್ತಿ₂ ]

**ದಾನವಿರಹಿತ** (ನಾ). ದಾನಕೊಡದವನು ; ಲೋಭಿ ; ಕೃಪಣ : ದಾನ ವಿರಹಿತರಾಗಿ ಜನಿಸಿದ ಮಾನವರು ದಾರಿದ್ರರು (ಕುವ್ಯಾಉ. ೪-೧೦೫).
[ ದಾನ + ವಿರಹಿತ ]

**ದಾನವೇಶ್ವರ**(ನಾ).=ದಾನವರಾಜ: ಆಡುತಿಹ ಶಿಶುವನು ಹೀನದಯದಿಂದೆ ಪಿಡಿದೆತ್ತಿಕೊಂಡುಯ್ದರ್ . . . ಪ್ರಹ್ಲಾದನಂ ದಾನವೇಶ್ವರನಾಜ್ಞೆಯಿಂ ಕಾಳರಕ್ಕಸರ್ಬಂದು ಕೈದುಡುಕಿದಂತೆ (ಜೈಮಿಭಾ. ೨೮-೩೦).
[ ದಾನವ + ಈಶ್ವರ ]

**ದಾನವ್ಯಸನಿ** (ನಾ). ದಾನ ಕೊಡುವುದರಲ್ಲಿ ಆಸಕ್ತಿಯುಳ್ಳ ವ್ಯಕ್ತಿ ; ದಾನ ಮಾಡುವುದೇ ಶೀಲವಾಗಿರುವವನು : ವಸುಮತಿ ವೆಸರನ್ವರ್ಥಂ ವಸುಧೆಗೆನಲ್ ಕಱೆದು ಪೊನ್ನ ಮುೞೆಯಂ ದಾನವ್ಯಸನಿ ದಶರಥನದೇಂ ಪೊಸಯಿಸಿದನೊ . . . ಉತ್ಸವಮಂ(ಪಂರಾಮಾ. ೩-೧೪೨) ; ನಿರ್ಮಳನಚಿತ್ತದ ಖಿತಿಯೊ ದಾನವ್ಯಸನಿಯೊಡವೆಗಳೊ (ಕುವ್ಯಾದ್ರೋ. ೧೯-೮). [ ದಾನ + ವ್ಯಸನಿ ]

**ದಾನವ್ರತ** (ನಾ). [ಜೈನ] ನಾಲ್ಕು ಶಿಕ್ಷಾವ್ರತಗಳಲ್ಲಿ ಒಂದು ; ದಾನ ಮಾಡುವ ವ್ರತ: ತೀವ್ರೋಪವಾಸಮುಂ ದಾನವ್ರತಮುಂ ನಿಖಿಲ ಸಮತೆಯುಂ ಸನ್ಯಾಸವ್ರಜನಮುಮೆಂಬಿವು ಶಿಕ್ಷಾವ್ರತವಿದು ನಾಲ್ಕುತೆಱ ನನೂನಾಗಮದೊಳ್ (ಶಾಂತಿಪು. ೧-೯೦); ☞ಇದಕ್ಕೆ ಅತಿಥಿ ಸಂವಿಭಾಗ ವೆಂದು ಹೆಸರು. [ ದಾನ + ವ್ರತ ]

**ದಾನಶಾಲೆ** (ನಾ). ದಾನವನ್ನು ನೀಡುವ ಮನೆ ; ಧರ್ಮಶಾಲೆ : ದಾನಶಾಲಾ-ದಾನಸಾಲೆ, ಪಟ್ಟಶಾಲಾ-ಪಟ್ಟಸಾಲೆ (ಶಮದ. ೨೮೯ ಪ್ರಯೋ).
[ ದಾನ + ಶಾಲೆ₃ ]

**ದಾನಶಾಸನ** (ನಾ). ದಾನ ಕೊಟ್ಟುದರ ವಿವರಗಳನ್ನು ತಿಳಿಸುವ ಶಾಸನ : ತಾಮ್ರಪಟಗಳು ಬಹುಮಟ್ಟಿಗೆ ದಾನಶಾಸನಗಳು (ಕಶಾಅ. ೩೫); ಮುಖ್ಯವಾಗಿ ದೇವಸ್ಥಾನಗಳಿಗೆ, ಮಠಗಳಿಗೆ . . . ಸಾರೋದ್ಧಾರವಾಗಿ ನಡೆಯಲೆಂದು ಹೊಲವನ್ನೋ ಹಣವನ್ನೋ ಮನೆಯನ್ನೋ ಆದಾಯದ ಒಂದು ಭಾಗವನ್ನೋ ಬಿಟ್ಟುಕೊಟ್ಟ ವಿಷಯವನ್ನು ಹೇಳುವ ಶಾಸನಗಳು ದಾನಶಾಸನಗಳು (ಕಶಾಅ. ೩೫). [ ದಾನ + ಶಾಸನ ]

**ದಾನಶೀಲ** (ನಾ). ದಾನಮಾಡುವ ಸ್ವಭಾವವುಳ್ಳವನು ; ಉದಾರಿ : ಲುಬ್ಧ ಶಿರೋಮಣಿಯಾದ ದುಷ್ಟಬುದ್ಧಿಗೂ ದಾನಶೀಲನಾದ ಸತ್ಯಕೀರ್ತಿಗೂ ದಿನಕ್ರಮವಾಗಿ ದ್ವೇಷವು ಹೆಚ್ಚಲಾರಂಭವಾಯಿತು (ಕವಿಕ. ೧).
[ ದಾನ + ಶೀಲ ]

**ದಾನಶೀಲತೆ** (ನಾ). ದಾನಮಾಡುವ ಸ್ವಭಾವ : ಕರ್ಣನು ತನ್ನ ದಾನ ಶೀಲತೆಯಿಂದ ಅತ್ಯಂತ ಖ್ಯಾತಿಯನ್ನು ಪಡೆದಿದ್ದನು (ನಿಟ್ಟೂಶಾಂ. ೧೦).
[ ಸಂ. ದಾನಶೀಲತಾ ]

**ದಾನಶೂರ** (ನಾ). ೧. ದಾನಮಾಡುವವರಲ್ಲಿ ಮಿಂಗಿಲಾದವನು,-ಗಟ್ಟಿಗ : ದಾನಶೂರರಲ್ಲಿಯೆ ರಣಶೂರರಲ್ಲಿಯೆ ವಿಭೋಗಿಗಳಲ್ಲಿಯೆ ಚಾಗಿವೃಂದವಲ್ಲಿಯೆ ಎನೆ ಸಾರಮೆಂಬಿನಗಮಾ ಮಹಿ ಪೋಲ್ವುದು ಭೋಗ ಭೂಮಿಯುಂ (ಪುಷ್ಪಪು. ೯-೧೭). ೨. ಕರ್ಣನಿಗೆ ಇದ್ದ ಬಿರುದು.

**ದಾನಶೂರಕರ್ಣ** = ದಾನಮಾಡುವುದರಲ್ಲಿ ಕರ್ಣನಂತಿರುವವನು ; ಕೊಡುಗೈಯವನು : ತನ್ನ ಹತ್ತಿರ ಇರುವುದನ್ನೆಲ್ಲಾ ಹಿಂದೆ ಮುಂದೆ ನೋಡದೆ ಕೊಡುವ ದಾನಶೂರಕರ್ಣ ಇವನು (ರೂಢಿ).
[ ದಾನ + ಶೂರ ]

**ದಾನಶೌಂಡ** (ನಾ). = ದಾನಶೂರ ೧ : ನವರತ್ನಾಭಿದೆಯಿಂ ಪ್ರತಿಷ್ಠೆ ಗೊಳಿಪಂದಾ ದಾನಶೌಂಡಂ ನೃಪಪ್ರವರಂ . . . ವಿಭುವಿಂ ನೇರ್ಪಟ್ಟುಮಾ ಗೋಪುರಂ ಸ್ತವನೀಯಂ ಮುಗಿಲೇಱಿ ಮಿಂಚಿ ಪೊಳೆಗುಂ (ಮ್ಯಸೂಮ. ೩-೮೨). [ ದಾನ + ಶೌಂಡ ]

**ದಾನಶೌರ್ಯ** (ನಾ). ದಾನಕೊಡುವುದರಲ್ಲಿ ಮಿಂಗಿಲಾಗಿರುವಿಕೆ,-ಗಟ್ಟಿತನ : ನಿನ್ನ ರಣವೀರ್ಯವನ್ನೂ, ದಾನಶೌರ್ಯವನ್ನೂ ನಾನು ಬಲ್ಲೆ (ವಚಭಾ. ೨೭೮). [ ದಾನ + ಶೌರ್ಯ ]

**ದಾನಸಾಗರಶ್ರಾದ್ಧ** (ನಾ). ಒಂದು ಬಗೆಯ ಶ್ರಾದ್ಧ; ☞ ಭೂಮಿ, ಆಸನ, ಮೊದಲಾದ ಹದಿನಾರು ಪದಾರ್ಥಗಳನ್ನು ಹದಿನಾರು ಸಂಖ್ಯೆಯಲ್ಲಿ ದಾನಮಾಡುವ, ಗೌಡದೇಶದಲ್ಲಿ ಪ್ರಸಿದ್ಧವಾಗಿರುವ ಒಂದು ಪಿತೃವಿಧಿ : ಹರೇಂದ್ರಕೃಷ್ಣ ಬಹದ್ದೂರ್ ಎಂಬುವರು ತಮ್ಮ ಅಜ್ಜಿಯ ದಾನಸಾಗರಶ್ರಾದ್ಧವನ್ನು ಮಾಡಿ ಸಾವಿರಾರು ಜನರಿಗೆ ಸಂತರ್ಪಣೆ ನಡೆಸಿದರು (ಬಂಕಿಮ. ೪೪೩). [ ದಾನಸಾಗರ? + ಶ್ರಾದ್ಧ ]

**ದಾನಸಾಲೆ** (ನಾ). = ದಾನಶಾಲೆ : ಆತನ ಮನೋನಯನವಲ್ಲಭೆ ಪ್ರತ್ಯಕ್ಷ ಕಲಿಕಾಲಗೌರಿ ಲಕ್ಷ್ಮೀಸಮನ್ವಿತೆ ಶ್ರೀಮತ್ಸ[ದ್ಭ]ಬ್ಬರಸಿಯುತ್ತರ್ಮ್ಮ ಬಸದಿಗೆ ದಾನಸಾಲೆಗೆ ಬಿಡಿಸೆ (ಸೌಇಇ. XI-i, ೩೮-೭ ; 950) ; ಪರಪದಂ ತದ್ಭವಮಾದ ಸಮಾಸಕ್ಕೆ-ಉತ್ತರದೇಶ-ಉತ್ತರದೇಸ . . . ದಾನಶಾಲಾ -ದಾನಸಾಲೆ (ಶಮದ. ೨೮೯ ಪ್ರಯೋ) ; ಪಾದರಕ್ಕೆ, ಪರಬೊಮ್ಮಂ, ದಾನಸಾಲೆ (ಶಬ್ದಾನು. ೫೯೭ ಪ್ರಯೋ). [ ದಾನ + ಸಾಲೆ₃ ]

**ದಾನಾಂತರಾಯ** (ನಾ). [ಜೈನ] ಮೋಕ್ಷ ಸಾಧಕರಿಗೆ ನಡುವೆ ಉಂಟಾ ಗುವ ವಿಘ್ನಗಳಲ್ಲಿ ಒಂದು ; ದಾನವನ್ನು ಮಾಡದಂತೆ ತಡೆಯುವ ಕರ್ಮ : ದಾನಾಂತರಾಯ-ದಾನ ಮಾಡಬೇಕೆಂದು ಇಚ್ಛೆ ಇದ್ದರೂ ಮಾಡಗೊಡದ ಕರ್ಮಪ್ರಕೃತಿ (ಜೈನಪ. ೩೭೭). [ ದಾನ + ಅಂತರಾಯ ]

**ದಾನಾಂಧ** (ಗು). (ಅಲಂ) ಮದವೇರಿದ ; ಮದದಿಂದ ಸೊಕ್ಕಿದ : ಕೃತವರ್ಮನಾತನ ಕೆಲದೊಳೊಂದಕ್ಷೋಹಿಣೀ ಬಲಂಬೆರಸು ಸುತ್ತಿಱಿದು ಕನಕದಂಡಮಂಡಿತ ವಿಚಿತ್ರಾತಪತ್ರಂಗಳ ನಡುವೆ ಮಣಿ ಮರೀಚಿ ಗಳ್ಪೊಳೆಯೆ ದಾನಾಂಧ[ಮು]ಯ್ವತ್ತು ಸಾವಿರ ಮದದಾನೆಬೆರಸು ನಾನಾ ವಾಹನಂಗಳನೇಱಿ ನಿಂದರ್ (ಪಂಪಭಾ. ರೈಸ್. ೧೦-೫೭ ವ) ; 'ಮದಾಂಧ' ಪರಾ. [ ದಾನ + ಅಂಧ ]

**ದಾನಾಂಬು** (ನಾ). ಮದೋದಕ ; ಮದಜಲ. 'ದಾನಾಂಬುಧಾರೆ' ಪರಾ. [ ದಾನ + ಅಂಬು₃ ]

**ದಾನಾಂಬುಧಾರೆ** (ನಾ). ಮದೋದಕ ಧಾರೆ : ಎರಡುಂ ಕಟದಿಂದೊಗೆ ದನವರತಂ ದಾನಾಂಬುಧಾರೆ ಮುಸಲಸ್ಥೂಲಂ ಸುರಿತರುತಿರೆ ಕರಿ ಕಟ್ಟಾ ಸುರಮಾದುದು ಕಣ್ಗೆ ಮೂಱುಕೈಯಾನೆಯವೋಲ್ (ಚಂದ್ರಪು. ೯-೮೯)
[ ದಾನಾಂಬು + ಧಾರೆ ]

**ದಾನಾನುಮೋದ** (ನಾ). ದಾನಮಾಡಲು ಕೊಡುವ ಒಪ್ಪಿಗೆ,-ಸಮ್ಮತಿ: ತನ್ಮುನಿಗಳ ಪಾದಪ್ರಕ್ಷಾಳನೋದಕದೊಳ್ ಪೊರಳ್ದು ಪುಷ್ಪವರ್ಷದ ಪೂಗಳೊಳ್ ಪುದಿದು ದಾನಾನುಮೋದ ಪ್ರಭಾವದಿಂದುಭಶಮುಭಾವಮಂ

ತಾಳ್ದಿ (ಆದಿಪು. ೫-೨ ವ) ; ಪ್ರಮದೆಯರಾ ನೃಪ ದಾನಾನುಮೋದದಿಂದಲ್ಲಿ ಬಂದು ಪುಟ್ಟಿದರೇನುತ್ತಮಮೊ ಮುನಿದಾನ ದಾನಾನುಮೋದ ಸುಕೃತಾಗ್ರಗಣ್ಯ ಪುಣ್ಯಮಗಣ್ಯಂ (ಶಾಂತಿಪು. ೬-೧೨೪).

[ ದಾನ + ಅನುಮೋದ ]

**ದಾನಿ$_1$** (ನಾ). ೧. ದಾನ ಮಾಡುವವನು : ವಾಚ್ಯಲಿಂಗಮೆಂದು ವಿಶೇಷ್ಯಾಧೀನಲಿಂಗಕ್ಕೆ – ನೇರಿದನಿವಂ . . . ಅಭಿಮಾನಿ, ದಾನಿ, ಸಾಧು (ಶಮದ. ೮೮ ಪ್ರಯೋ) ; ದಾನಿಗಳು ದುಷ್ಪಾತ್ರದಲಿ ಗುಣಮೌನಿಗಳು ಗರ್ವಿತರು ಮಿಥ್ಯಾಜ್ಞಾನಿಗಳು ಕಲಿಯುಗದ ಮನುಜರು (ಕುವ್ಯಾಆ. ೧೧-೩೪) ; ದಾನಿ ದಯಾಧರ್ಮಿ ಸಕಲ ಸುಕಲಾಕುಶಲಂ . . . ಭೂನಾಥನೆ ನಿನಗೆ ಪುತ್ರನಾದಪನೇಳ್ಳೆ (ಹಮ್ಮೀರ. ೨-೧೩) ; ದೀನ ನಾನು ಸಮಸ್ತ ಲೋಕಕೆ ದಾನಿ ನೀನು (ಹರಿಸಾ. ೪೯) ; ದೀನನ ಸಂಗಕ್ಕಿಂತಲೂ ದಾನಿಯ ಬಡಿದಾಟ ಲೇಸು (ಗಾದೆ). 'ಮಂಹಾದಾನಿ' ಪರಾ. ೨. (ಶತ್ರುಗಳನ್ನು ಕತ್ತಿಯಿಂದ) ಕತ್ತರಿಸಂಮವನಂ : ದಾನಿಯುಮಂ ಶೂರನುಮಂ ತಾನೆಟ್ಟಿಟುಕಿಂ ಗದಾನಿಲಂ (ಗದಾಯು. ೮-೩೩). [ ಸಂ. ದಾನಿನ್ ]

**ದಾನಿ$_2$**, ದಾನಂ (ನಾ). ೧. ಕರಂಡಕ : ಒಂದು ಕಾಜಿನ ದಾನಿ (Flask) ಯನ್ನು ತಂದು ಅದರಲ್ಲಿಷ್ಟು ನೀರನ್ನು ಹಾಕಿ ಕಾಯಿಸುವ (ಪಾಂಪ್ರ. II, ೬೩೯). ೨. ಹೂವು, ಊದುಕಡ್ಡಿ ಮುಂತಾದಂವನ್ನು ಸಿಕ್ಕಿಸುವ ಪಾತ್ರೆ : ಗೋಡೆಯ ಪಕ್ಕದಲ್ಲಿ ಸ್ವರ್ಣಪುತ್ತಳಿಗಳು ಹಸ್ತಗಳಲ್ಲಿ ಊದುಬತ್ತಿಯ ದಾನಿಗಳನ್ನು ಹಿಡಿದು ಆರಾಧಿಸುತ್ತ ನಿಂತಿರುವಂತೆ ಅಲಂಕರಿಸಲ್ಪಟ್ಟಿದ್ದಿತು (ಶ್ರೀರಾಯ. ೧೪೬). 'ಅತ್ತರುದಾನಿ', 'ಪನ್ನೀರಂದಾನಿ', 'ಪೀಕದಾನಿ' ಪರಾ. ದಾನು. 'ಊದದಾನಂ', 'ಪುಷ್ಪದಾನು' ಪರಾ. [ ←ಪಾರ. ಹಿಂ. ದಾನ್. / ಸಂ. ಧಾನೀ ]

**ದಾನಿ$_3$** (ನಾ). (ಕರಾ) "ಹಲಸಿನ ಬೀಜ" (ಸಿರಿಕೋ. ೨೫೧). [ ? ]

**ದಾನಿಗವುಂಡ** (ನಾ). ಒಬ್ಬಾತನ ಹೆಸರು : ಎಲವರದ ಕಥವಬೂರ ಮಾಯಗಾವುಣ್ಡರ ಮಗ × × ತಮ್ಮ ದಾನಿಗವುಣ್ಡ ಮಣ್ಣಿಕಲ್ಲ ಊಟಟಿವಿನೊಳ್ ಕಾದಿ ಸತ್ತಮ್ (ಎಕ. X, ಮುಳಬಾ. ೨೫೬-೭ ; ಸು. 1000). [ ದಾನಿ$_0$ + ಗವುಂಡ (<ಗಾಮುಂಡ) ]

**ದಾನು** 'ದಾನಿ$_2$' ನೋ.

**ದಾಪಿಡು** (ಕ್ರಿ). ದೊಡ್ಡ ಹೆಜ್ಜೆ ಹಾಕಂ ; ದಾಪುಕಾಲುಂ ಹಾಕು : ದೀಪದ ಕಲಿಯಾರ ಕಾಪಾಲಿಗುಡಿಯ ಕಂಡು ದಾಪಿಡುತಲಿ ಬಂದು ಗೋಪುರದಿ ನಿಂದು (ಶರಲೀ. ೩೫-೪). [ ದಾಪು$_1$ (<ಚಾಪು$_1$) + ಇಡು$_1$ ]

**ದಾಪು$_1$** 'ಚಾಪು$_1$' ನೋ.

**ದಾಪು$_2$** (ನಾ). ಅಡಗಿಕೊಳ್ಳುವ ಸ್ಥಳ ; ರಕ್ಷಣೆಯ ಜಾಗ : "(ಬೆನ್ನಟ್ಟಿ ಬರುವವರಿಂದ, ಅಪಾಯದಿಂದ ಅಥವಾ ತೊಂದರೆಯಿಂದ ತಪ್ಪಿಸಿಕೊಳ್ಳಲು ಅಡಗಿಕೊಳ್ಳುವ)ಮರೆ (ಯಸ್ಥಾನ) : ದಾಪು ; ಆಶ್ರಯ : ರಕ್ಷಣಸ್ಥಾನ" (Refuge. ಇಂಕನಿ). 'ತಾಪು' ಪರಾ.

[ ←ತುಳು. ತಾಪು, ದಾಪು = ಅಡಗಿಸಿಟ್ಟ ಸೈನ್ಯ ]

**ದಾಪು$_3$** (ಗುಂ). ಪಳಗಿಸಿದ; ಶಿಕ್ಷೆಮಾಡಿ ಸಿದ್ಧಪಡಿಸಿದ.

ದಾಪಿನಾನೆ = ಪಳಗಿಸಿದ ಆನೆ : ಅರಣ್ಯದಲ್ಲಿರುವ ಗಜಮಂ ದಾಪಿನಾನೆಗಳಿಂದ ವಂಚನೆಗೆಯ್ದು ಹಿಡಿತಂದು ಪಟ್ಟದಾನೆಯಂ ಮಾಡುವಂತೆ ನಾನು ವಿರಚಿಸುವ ಉಪಾಯಕೌಶಲ್ಯವು ಅವನಂ ತಾನಾಗಿ ಇಲ್ಲಿಗೆ ಬರುವಂತೆ ಮಾಡೀತು ಎಂದು ನಿಚ್ಚೈಸಿದನು (ಮುದ್ರಾಮಂ. ೨೧೪). [ ? ]

**ದಾಪುಗಾಲು** 'ಚಾಪುಗಾಲು' ನೋ.

**ದಾಪುನಡಗೆ** (ನಾ). ದೊಡ್ಡ ಹೆಜ್ಜೆಯ ನಡಗೆ ; ಮಾರು ನಡಗೆ : ಆವಳು ಏನೂ ಮಾತಾಡದೆ ಮಾರುಕ್ಷಣವೆ ತನ್ನ ದಾಪುನಡಗೆಯನ್ನು ಮತ್ತೆ ಮುಂದುವರಿಸಿದಳು (ಪುನರು. ೧೪೩). [ ದಾಪು$_1$ (<ಚಾಪು$_1$)+ ನಡಗೆ ]

**ದಾಪುಹಾಕು** (ಕ್ರಿ). ೧. ದೂರದೂರಕ್ಕೆ ಕಾಲಿಡಂ ; ದಾಪುಹೆಜ್ಜೆಯಿಂಡುಂ : ತರುಣ ರೈತನೊಬ್ಬ ಉದ್ದುದ್ದವಾಗಿ ದಾಪುಹಾಕುತ್ತ . . . ಬರುತ್ತಿದ್ದನು (ಪುನರು. ೨೭೬). ೨. ದೊಡ್ಡ ಹೆಜ್ಜೆಗಳಿಂದ ಅಳೆ : (೬).

[ ದಾಪು$_1$ (<ಚಾಪು$_1$) + ಹಾಕು (<ಪಾಯ್ಕು$_1$) ]

**ದಾಪುಹೆಜ್ಜೆ** (ನಾ). = ದಾಪುಗಾಲು : ಬಹಳ ಹೊತ್ತು ದಾಪುಹೆಜ್ಜೆಹಾಕುತ್ತ ತಿರುಗಾಡುತ್ತಿದ್ದನು (ಪುನರು. ೮೩).

[ ದಾಪು$_1$ (<ಚಾಪು$_1$) + ಹೆಜ್ಜೆ (< ಪಜ್ಜೆ) ]

**ದಾಬು** 'ಡಾಬು' ನೋ.

**ದಾಬೋಟ** 'ದಾಬೋಟಾ' ನೋ.

**ದಾಬೋಟಾ**, ದಾಬೋಟ (ನಾ). (ಉಕ) ಒಂದು ವಿಧವಾದ ಸಕ್ಕರೆ ; ಬೂರಾಸಕ್ಕರೆ : ದಾಬೋಟಾ ಸಕ್ಕರೆಗೆ (ಪಾನು. ೨೦, ಕಲಮು. ೩೨) (ಮುಂ‍ವ್ಯಾ. ಪ್ರಸ್ತಾವನೆ ೨೦). ದಾಬೋಟ : ದಾಬೋಟ ಚಿನ್ನಯಿ ಸಕ್ಕರಿ (ಮುಂಬವ್ಯಾ. ೧೨೩). [ ←ಮರಾ. ದಾಬೋಟಾ, ದಾಭೋಟಾ ]

**ದಾಬೋಲಿಕದಲಿ** (ನಾ). ಒಂದು ವಿಧವಾದ ನಾಣ್ಯ : ದುರ್ಗವು ಕೈವಶವಾದ ಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದ ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ : ೬,೪೦೦,೦೦೦ ಬೆಳ್ಳಿನಾಣ್ಯ . . . ೨,೫೦೦,೦೦೦ ದಾಬೋಲಿ ಕದಲಿ . . . ಚವುರಿ (ಚಿತ್ರಪಾ. ೧೦೩).

[ ?./ಮರಾ. ದಾಭೋಳೀ ಲಾರೀ = ದಾಭೋಳ್ ಎಂಬ ಸ್ಥಳದಲ್ಲಿ ಟಂಕಗೊಂಡ ನಾಣ್ಯ, ಹಳೆಯ ನಾಣ್ಯ ]

**ದಾಮ$_1$** (ನಾ). ನೆಲೆ ; ಆಶ್ರಯಂ ; ಬೀಡಂ ; ಮನೆ : ಮಹಾಕಾಲನ ದೆಸೆಯಿಂ ಈ ಮೆಯ್ವಳಿಯೆ ಸಂಸಾರದುಃಖಕೆ ನಾನು ಧಾಮಮಾಹೆನು (ಪೂಜ್ಯಚ. ೧೧-೪೧) ; ಭೂವನವ ಗೆಲ್ದ ಕಾಮನ ದಾಮದ ಮುಂದೆ ನವರತ್ನಕಂಭಗಳಿಂದ ಸವೆದ ತೋರಣವೆನಲೆಸೆವ ಗಣಿಕೆಯರ ನವಿಲುಯ್ಯಾಲೆ ನೋಡುತ ರಾಯ (ತರ್ಕಕಾ. ೪-೪೩). [ <ಸಂ. ಧಾಮನ್ ]

**ದಾಮ$_2$** (ನಾ). ೧. ಹುರಿ ; ಹಗ್ಗ ; ಕಣ್ಣಿ ; ಪಾಶ : "ಸಂಧಾನಂ, ದಾಮನೀ, ದಾಮ – ಈ ೩ ಕಣ್ಣಿ" (ಹಲಾಯು. ೪೬-೧೨೨) ; "ಸಂಧಾನಮನೆ ದಾಮಂಮೆನಿಕುಂ" (ಮಂಗರಾ. ೫೪-೬) ; "ಅಗ್ಗರಣೆ ದಾಮೆಂದು ದಾಮಂ" (ಕವಿಕಂ. ೨೫೦) ; ಲೋಕದ ಕಣ್ಗೆ ದಾಮಮಾದುವು ಸುಧೆಯಾದು ವೀಂಟುವ ಚಕೋರಿಗೆ ಚಂದ್ರನ ಚಾರುಕಾಂತಿಗಳ್ (ಲೀಲಾವ. ೨-೧೫) ; ವಿಗಡ ಬಸವಂ . . . ತೊಡರ್ದ ದಾಮಂಗಳೆಲ್ಲಂ ಪರಿದುವಗಡು ರಕ್ಕಸರ ಸೇನಾಶರಧಿಯಂ ಪೊಕ್ಕು ಕಲಕಿದನಂ (ಹಬಪು. ೪೪-೧೬). ೨. ನಡಂಪಟ್ಟಿ; ಡಾಬು ; ಒಡ್ಯಾಣ ; ಪೆಂಟಿಲೆ. 'ಕಾಂಚೀದಾಮಂ' ಪರಾ. ೩. ಹಾರ ; ದಂಡೆ : ಮಜ್ಜನ ಭೋಜನ . . . ಸುರಭಿ ಕುಸುಮ ದಾಮಾದಿಗಳಿಂ ಸಂತಸಂಬಡಿಸಿ (ಪಂಪಭಾ. ೪-೪೩ ವ) ; ನೇಮಿಸಿದ ಚಂಪಕಮುಕುಳ ದಾಮದ ಬಾಗಿಲ್ವಾಡದ ಬಗೆಗೊಳಿಪ ಧೂಪಾಮೋದದೊಳೆಸ್ಪುಟಿದ ದವನದ ಸೀಗುರಿಯುಂ . . . ಪಿಡಿದು ನಿಂದ ಯಂತ್ರಪುತ್ರಿಕೆಗಳ (ರಾಜಶೇ. ೧೩-೪೫ ವ). ೪. ಹಣೆಯ ಮೇಲೆ ಕಟ್ಟುವ ಹೂವಿನ ಮಾಲೆ, ಪಟ್ಟ, ಬಾಸಿಂಗ, ಇತ್ಯಾದಿ. ೫. [ಜ್ಯೋತಿ] ಏಳು ಸಂಖ್ಯಾಯೋಗಗಳಲ್ಲಿ ಒಂದು ; ಏಳು ಗ್ರಹಗಳೂ (ರಾಹು, ಕೇತುಗಳನ್ನು ಬಿಟ್ಟು) ಆರು ರಾಶಿಗಳಲ್ಲಿ ಸೇರಿರುವ ಯೋಗ; P ಈ ಯೋಗದಲ್ಲಿ ಹುಟ್ಟಿದವನು ದಾನಿ, ಪರೋಪಕಾರಿ ಮತ್ತು ಗೋಸಮೃದ್ಧಿಯುಳ್ಳವನಾಗಿರುತ್ತಾನೆಂಬ ನಂಬಿಕೆಯಿದೆ : ಸಪ್ತಗ್ರಹಂ . . . ಷಡಾವಾಸದೊಳ್ ನಿಲೆ ದಾಮಂ (ಜಾತತಿ. ೧೩-೫). 'ನಾಭಸಯೋಗ' ಪರಾ.

[ ಸಂ. ದಾಮನ್ ]

**ದಾಮಕ** (ನಾ). ಮಾಲೆ ; ಹಾರ : ಒಡವುಟ್ಟಿದ ತಳದಳಿಸುವ ತುಡುಗೆಯ ದುಗುಲದ ನಮೇರುದಾಮಕದೊಳ್ ಪಚ್ಚುಡಿದುದು ಪರಾರ್ಧ್ಯಕೂಟದ

ಬೆಡಂಗೊಡಂಬಟ್ಟುದಿರ್ವರಹಮಿಂದ್ರರೊಳಂ (ಶಾಂತಿಪು. ೯-೧೩೦); ಆವೋದವುದಿತ ಮಧುಕರದಾಮಕದೊಳ್ ನೀಲರತ್ನ ದಾಮಂ ಮಲ್ಲೀದಾಮಕದೊಳ್ ಮುಕ್ತಾಫಲದಾಮಂ ತಡವಾದುವೊಡನೆ ಮಣಿಮಂಡಪದೊಳ್ (ಪಂರಾಮಾ. ೫-೧೧೫). [ ಸಂ. ]

**ದಾಮುಗಂಟಿ** (ನಾ). ಕಡ್ಡಿಯಂಚಿನ ಅಥವಾ ಕಡ್ಡಿಯಂತಹ ಗೆರೆಗಳಿಂದ ಕೂಡಿದ ಸೀರೆ (?) : ಕುಸುಮಗಂಟಿಯು ವರ್ಣಾತ್ಮಾಗ ಸುವರ್ಣವು ದಸರಿದೋನಿಯು ದಾಮಗಂಟಿ (?) ಹಸುರು ಬಿಳಿಯ ಪಟ್ಟೆ ಬಾಣ ಗೆರೆಗಳೆಂಬ ಕುಶಲದ ಸೀರೆಯೊಪ್ಪಿದವು (ಅಮುಸಾಂ. ೪-೧೫).

[ ದಾಮು$_2$ + ಗಂಟಿ$_0$ ]

**ದಾಮುಡಿಗಟ** (ನಾ). ಒಂದು ಊರಿನ ಹೆಸರು (?) : ತೊಱಿನಾಡಯ ನೂರುಂ ನಾ × × × ಆಳೆ ದಾಮುಡಿಗಟಾ ಪೆರ್ಗ್ಗಡೆ × × × ಱಿಯುಂ ಪೊಗೆ ಭೋಗೆಯುಂ ಪಾರವಾರಿಯುಂ (ಎಕ. IV, ಹೆಗ್ಗಡ. ೯೩-೪; ಸು. 780). [ ದಾಮುಡಿ$_0$ + ಗಟ$_0$ (<ಗಟ್ಟ$_1$) ]

**ದಾಮುದೂಮ** 'ಧಾಮಂಧೂಮಂ' ನೋ.

**ದಾಮುನಿ** (ನಾ). ದನಕರುಗಳನ್ನು ಕಟ್ಟುವ ಹಗ್ಗ; ದಾವಣಿ ಹಗ್ಗ : "ಸಂಧಾ[ದಾ]ನಂ, ದಾಮುನೀ, ದಾಮು–ಈ ೩ ಕಣ್ಣಿ" (ಹಲಾಯು. ೬೩-೧೨೨); "ದಾಮುನಿಯೆನಲು ದಾವಣಿ" (ಮಂಗರಾ. ೦೧೯-೩).

[ ಸಂ. ದಾಮುನೀ ]

**ದಾಮುರಿಗ** (ನಾ). ಯೋಧ; ಭಟ : ತನ್ನನಾಳ್ವ ಪ್ರಭು ಮೇರಂ ಬೆಸಸೆ ದಾಮುರಿಗರನಟ್ಟಿ ಇಱಿದು . . . ಬಿಟ್ಟನ್ (ಎಕ. X, ಶ್ರೀನಿವಾ. ೫-೭; ಸು. 780). 'ಅಯ್ದಾಮರಿಗ', 'ಡಾವರಿಗ' ಪರಾ.

[ ದಾಮುರ$_0$ + –ಇಗ ]

**ದಾಮುಸಂಜನಿತ** (ನಾ). ದಾಮಯೋಗದಲ್ಲಿ ಹುಟ್ಟಿದವನು: ದಾಮುಸಂಜನಿತಂ ದಾನಿ ಪರೋಪಕಾರಿ ಪಶುಪಾಲಂ (ಜಾತತಿ. ೧೩-೧೭).

[ ದಾಮು$_2$ + ಸಂಜನಿತ ]

**ದಾಮೂಶಯ** 'ದಾಮೂಷೆ' ನೋ.

**ದಾಮೂಶಾಯಿ** 'ದಾಮೂಷೆ' ನೋ.

**ದಾಮೂಶೆ** 'ದಾಮೂಷೆ' ನೋ.

**ದಾಮೂಷಾ** 'ದಾಮೂಷೆ' ನೋ.

**ದಾಮೂಷೆ**, ದಾಮೂಶಯ, ದಾಮೂಶಾಯಿ, ದಾಮೂಶೆ, ದಾಮೂಷಾ, ದೌಮೂಷಾಯ (ನಾ). ೧. ತಕ್ಕ ಪ್ರಮಾಣ; ಸರಿಯಾದ ಪಾಲು : ಒಣಕ್ರಮದಲ್ಲಿ ಮೊದಲು ಸುಣ್ಣಕಲ್ಲನ್ನೂ ಮಣ್ಣನ್ನೂ ಅರೆದು ತಿರುಗುತ್ತಿರುವ ಒಣಗಿಸುವ ಯಂತ್ರಗಳಲ್ಲಿ ಒಣಗಿಸಿ ಸರಿಯಾದ ದಾಮೂಷೆಯಲ್ಲಿ ಬೆರಸುತ್ತಾರೆ (ಶಿಲ್ಪಶಾ. ೨೮೮). ೨. ದಿವಾಳಿಕೋರನ ಹಣ ಅಥವಾ ಆಸ್ತಿಯನ್ನು ಸಾಲ ಕೊಟ್ಟವರಿಗೆ, ಅವರು ಕೊಟ್ಟ ಸಾಲದ ಪ್ರಮಾಣಕ್ಕೆ ಅನುಸಾರವಾಗಿ ಹಂಚುವುದು. **ದಾಮೂಶಯ** : ೩. ಪ್ರಮಾಣ : ಭೂಮಿ ಮತ್ತು ಸಂಪತ್ತನ್ನು ದಾಮೂಶಯ ರೀತ್ಯಾ ಹಂಚುವುದು (ಐಶಿಸಂ. ೧೩೪); ಪಾಲುಗಾರರ ಓಟಿನ ಮೇಲೆ ಅಧಿಕಾರ ಪಡೆದ ಡಿರೆಕ್ಟರರು, ಇದು ಇಂತಿಷ್ಟು ದಾಮೂಶಯದಲ್ಲಿರಬೇಕು ಎಂದು ನಿರ್ಣಯಿಸುವರು(ಬಾಲಪ್ರ. III, ೧೩೭೨); ಗುಣಗಳ ದಾಮೂಶಯಕ್ಕೆ ತಕ್ಕಂತೆ ಆ ವ್ಯಕ್ತಿಗಳನ್ನು ಒಳ್ಳೆಯವರೆಂದೋ ಕೆಟ್ಟವರೆಂದೋ ಕರೆಯುತ್ತೇವೆ (ರಂಗವ. ೨೭೯). **ದಾಮೂಶಾಯಿ** : ೧. (ಕೃಸಗ. II, ೫೪೭). **ದಾಮೂಶೆ**: ೩. ಉಳಿದ ಅಂಶವು ಬೇರೆ ಬೇರೆ ಗಿರಾಕಿಗಳು ಕೊಂಡ ವಸ್ತುಗಳ ಮೌಲ್ಯದ ದಾಮೂಶೆಯಲ್ಲಿ ಅವರಿಗೇನೆ ಹಂಚಲ್ಪಡುವುದು (ಬಾಲಪ್ರ. II, ೮೯೩). **ದಾಮೂಷಾ** : ೧. ಹೆಚ್ಚುಕಡಮೆಯಾದ ಗೇಣಿಯನ್ನು ಅವರವರು ಸಾಗುವಳಿ ಜಮೀನಿನ ಆಧಾರದ ಮೇಲೆ ದಾಮೂಷಾ ಹಂಚಿಕೊಂಡು . . . ಗೇಣಿ ಕೊಡಲೇಬೇಕು (ಪ್ರಜಾಇ. II, ೪೭೫); ಸದರಿ ಖರ್ಚು ಯಾವ ಕಕ್ಷಿಗಾರರಿಂದ ಮತ್ತು ಯಾವ ದಾಮೂಷಾ ಮೇರಿಗೆ ಪಾವತಿಯಾಗತಕ್ಕದ್ದು–ಈ ವಿವರಗಳನ್ನೂ ನಮೂದಿಸತಕ್ಕದ್ದು (ಗ್ರಾಮಾಕ. ೩೨); ಪ್ರಾತಿನಿಧ್ಯವು ಗಣಿತಶಾಸ್ತ್ರ ಪ್ರಕಾರ – ಸಂಖ್ಯಾಪರಿಮಾಣಾನುಗುಣವಾಗಿ (ಪ್ರೊಪೋರ್ಷನಲ್ = ದಾಮೂಷಾ) ಇರಬೇಕೆಂಬುದು ಅವರ ಸಲಹೆ (ರಾಜ್ಯಶಾ. ೩೩೮); ಉಳಿದ ಭಾಗವನ್ನು ಸರಕಿನಲ್ಲಿ ಆಯಾ ರಾಷ್ಟ್ರಕ್ಕೆ ಇರುವ ಆಸಕ್ತಿಯ ದಾಮೂಷಾ (Proportion) ಆಧಾರದ ಮೇಲೆಯೂ ಹಂಚಿಕೊಂಡು ವಹಿಸುವುವು (ಅಂಕಸಂ ೧೯೦). **ದೌಮೂಷಾಯ** : ೧. ಹೈದರು ಸೋತುಹೋದ ಅನಂತರ ಯುದ್ಧಕ್ಕಾಗಿ ಅಡ್ಮಾನ್ಸು ಕೊಡುವ ಹಣವನ್ನು 'ದೌಮೂಷಾಯ' ಪ್ರಕಾರ ನನಗೆ ಕೊಡಿಸಿಕೊಟ್ಟು (ಜಾಮುವಂ. ೨೧೭).

[ ←ಹಿಂ. ದಾಮಾಸಾಹಿ; ಮರಾ. ದಾಮಾಶಾಈ, ದಾಮೂಶಾಹೀ ]

**ದಾಮಿಳಿ** 'ದಾವಣಿ$_1$' ನೋ.

**ದಾಮು** (ನಾ). ೧. ಮೌಲ್ಯ; "ಬೆಲೆ" (ಜಾನಕೋ. ೪). ೨. ಒಂದು ಬಗೆಯ ತಾಮ್ರದ ನಾಣ್ಯ : ಒಂದು ಕರೋರ ದಾಮುಗಳೆಂದರೆ ೨೫ ಸಾವಿರ ರೂಪಾಯಿಗಳು. ೧ ರೂಪಾಯಿಗೆ ೪೦ ದಾಮುಗಳು (ಅಕ್ಬರ. ೧೨೭ ಅಡಿಟಿ). 'ದ್ರಮ್ಮ' ಪರಾ. [ ←ಹಿಂ. ಮರಾ. ದಾಮ್ ]

**ದಾಮೋದರ** (ನಾ). ೧. ಹೊಟ್ಟೆಯ ಸುತ್ತ ಹಗ್ಗವುಳ್ಳವನು; ಹಗ್ಗದಿಂದ ಬಿಗಿದ ಹೊಟ್ಟೆಯುಳ್ಳವನು; ಕೃಷ್ಣ; **P** ಈ ಹೆಸರು ಶ್ರೀಕೃಷ್ಣನಿಗಷ್ಟೇ ಅಲ್ಲದೆ ಮಹಾವಿಷ್ಣುವಿಗೂ ಅನ್ವಯಿಸುತ್ತದೆ ಎಂಬುದಕ್ಕೆ ಆಧಾರಗಳಿವೆ. ಶ್ರೀಕೃಷ್ಣನು ಶೈಶವದಲ್ಲಿ ಬಹಳ ತುಂಟನಾಗಿದ್ದನು. ತಾಯಿಯಾದ ಯಶೋದೆಯು ಅವನ ತುಂಟತನವನ್ನು ತಾಳಲಾರದೆ ಅವನ ಹೊಟ್ಟೆಗೆ ಹಗ್ಗವನ್ನು ಸುತ್ತಿ ಒಂದು ಒರಳುಕಲ್ಲಿಗೆ ಕಟ್ಟಿಹಾಕಿದ್ದಳು. ಆದರಿಂದ ಶ್ರೀಕೃಷ್ಣನಿಗೆ ದಾಮವು (ಹಗ್ಗವು) ಉದರದಲ್ಲಿ (ಹೊಟ್ಟೆಯಲ್ಲಿ)ರುವವನು ಎಂಬ ಅರ್ಥದಲ್ಲಿ 'ದಾಮೋದರ' ಎಂಬ ಹೆಸರು ಪ್ರಸಿದ್ಧವಾಯಿತು ಎಂದು ಹರಿವಂಶದಲ್ಲಿ ಹೇಳಿದ್ದರೆ, ವಿಷ್ಣುಸಹಸ್ರನಾಮದ ಶಂಕರ ಭಾಷ್ಯದಲ್ಲಿ 'ದಮಾದಿ ಸಾಧನಗಳಿಂದ' 'ಉತ್' 'ಅರಾ' ಯಾವ ಉತ್ಕೃಷ್ಟವಾದ ಬುದ್ಧಿಯುಂಟಾಗುತ್ತದೆಯೋ ಆ ಬುದ್ಧಿಯಿಂದ ಗಮ್ಯನಾದವನು 'ದಾಮೋದರನೆಂದು' ಅಥವಾ ಲೋಕದಲ್ಲಿ ಅರ್ಥಪ್ರತಿಪಾದಕವಾದ ಎಲ್ಲಾ ಪದಗಳಿಗೂ ದಾಮವೆಂದು ಹೆಸರಿದ್ದು, ಆ ದಾಮಗಳು ಯಾರ ಉದರದಲ್ಲಿ ಅಡಕವಾಗಿವೆಯೋ ಅವನು 'ದಾಮೋದರ' ನೆಂದೂ ವಿವರಣೆ ಇದೆ : "ವಿಷ್ಣುಃ, ಕೃಷ್ಣಃ . . . ದಾಮೋದರಃ, ಶ್ರೀಧರ . . . ಗದಾಧರಃ–ಈ ೪೫ ನಾರಾಯಣನ ಪೆಸರ್" (ಹಲಾಯು. ೫-೨೫); ಹರಿ ಶೌರಿ . . . ಹೃಷೀಕೇಶನಚ್ಯುತನುಪೇಂದ್ರಂ ಬಭ್ರು ದಾಮೋದರಂ" (ಮಂಗರಾ. ೫-೧೭); ನಂದಗೋಪಂ ಪೊಱಪೊಱಲಿಂ ಬಂದು ಭಗ್ನವಾಗಿರ್ದ ಮಹಾಸ್ಕಂಧ ಶಾಖಾರ್ಜುನ ವಿಟಪಿಯುಮಂ ದರಸ್ಮಿತಭಿನ್ನೋಷ್ಠಪುಟನಾಗಿರ್ದ ದಾಮೋದರನುಮಂ ಕಂಡು (ಜಗವಿ. ೩-೩೮ ವ); ವೇದಶಾಸ್ತ್ರಾಗಮ ಶ್ರುತಿ ಸ್ಮೃತಿಯಾದಿಯಾದ ಶ್ಲೋಕ್ತಗಳ ದಾಮೋದರಂಬುಜಜಾತನೀಶ್ವರ ಮುಖ್ಯ ನಿರ್ಜರರು (ಶಂಕರಾ. ೮-೩೯); ಏನು, ಕಂಸಭೃತ್ಯನಾದ ದಾಮೋದರನು ನಿನಗೆ ಪುರುಷೋತ್ತಮನೋ (ಬಾಸನಾ. ೩೪). ೨. ದಪ್ಪಗಿರುವವನು; ಸ್ಥೂಲವಾಗಿರುವವನು. ೩. (ಆಲಂ) ಹೊಟ್ಟೆ ದಪ್ಪನಾಗಿರುವವನು; ಡೊಳ್ಳುಹೊಟ್ಟೆಯವನು : ಮಲೇರಿಯದ ಬಾಧೆಯಿಂದ ಎಲ್ಲರೂ ದಾಮೋದರರೇ (ಚಿಗುಕ. ೪೮). [ ದಾಮು$_2$ + ಉದರ ]

**ದಾಯ$_1$** (ನಾ). ೧. ಪಗಡೆಯಾಟದಲ್ಲಿ ಬೀಳುವ ಗರ ಅಥವಾ ಸಂಖ್ಯೆ; ಪಗಡೆಯ ಗರ : ಪಾಸಂಗೆಯುಂ ಪೊರಳ್ಚಿ ಮುನ್ನ ನೆತ್ತಮನಱಿಯದನಂ

ತವರ ದಾಯುವುನಾಡೆ (ಪಂಪಭಾ. ೬-೭೦ ವ) ; ನೆತ್ತವ ಭರದಿಂದಾಡುತ್ತಿರೆ ಖಿರೆ ಮುತ್ತುವ ದಾಯುಕ್ಕೃತ್ಸವಿಸ ತ್ತಿರೆ (ಉದ್ಧರ. ಹ. ೧೮೭-೧೮) ; ಚೌಕ ದುಗಣಿತ್ತಿಗ[ ಬಾರದು ]ನೆಂಬ ದಾಯವುಂ ಬಾರಿಸಿ ಬೇಡಿ ದಾಳಮುಳವ ಟ್ಟಿರೆ (ಪುಣ್ಯಾಸ್ರ. ೯-೧೮); ದಾಯ ಸೋತನು ಶಕುನಿ ಬೇಡಿದ ದಾಯ ತಹ ಹವಿ ಗೆಯುಲೊದಗಿದವಾಯುತದ ಕೃತ್ರಿಮುವಲೇ ಕೌರವರ ಸಂಕೇತ (ಕುಮ್ಯಾಸ. ೧೩-೫೦) ; ನೆತ್ತದ ಹಾಸಂಗಿ ಎತ್ತ ಬಿದ್ದರು ದಾಯ (ಸರ್ವಜ್ಞ. ೪೦೭). ೨. ಸಮಯ ; ಅವಕಾಶ ; ಅನುಕೂಲ ; ಸೌಕರ್ಯ : ದಾಯುವಿದು ತವಗೆಂದು ದೈತ್ಯನಿಕಾಯ ಬಂದು ರಸಾತಳಕೆ ಕುರುರಾಯ ನನು ಕೊಂಡೊಯ್ದು ತಿಳುಹಿದರು (ಕುಮ್ಯಾಅ. ೩೦-೬೩). 'ದಾಯಗಾಣು' ಪರಾ. ೩. ಹಂಚಿಕೆ ; ಉಪಾಯ ; ರೀತಿ; ಮಾರ್ಗ: ತಾಯಿ ಕಲಿಸಿದ ಬುದ್ಧಿಯೊದವಿನ ದಾಯುದಲಿ ಬಿನ್ನವಿಸೆ ರಾತ್ರಿಯು ಬೀಯವಾಗಲಿಯೆಂದು ಪತಿ ಸತಿಗಜುಪಲು (ಸಂಭವ. ೨೫-೪೭); ಮುಂದಣಿನ ಮುಂಗುಡಿಯ ದಾಯುಕೆ ದಾರಿ ಯಾವುದು ವೀರ ಹೇಳೆಂದ (ತೊರಲಾ. ೬-೧೧-೨) ; ಹಲವು ದಾಯವ ಬೇಳಿ ನಾ ವೋಗೆ ಬಾಲನ ಸಲಹಿದಳತಿಕಾಂಕ್ಷೆಯಲಿ ನಲಿದು (ಮೋಹಶ. ೧೩-೪೪). ೪. ಕುತಂತ್ರ ; ಕುಯುಕ್ತಿ: ನ್ಯಾಯುವ ತಿಳಿಯದ ಮಾಯವ ಮಾಡಿದೆ ದಾಯುವು ತಿಳಿಯಿತಂ ನನಗೆ (ಕಂಸವಿ. ೬-೧೮೧). ೫. ಚಾಡಿ ; ದೂರು : ರಾಘವಂ ಮಾಡಿದುಪಹತಿಯಿಂ ದಶಾನನಂಗೆ ದಾಯುವಂ ಪೇಳ್ದವನ ವಂಶಮಂ ಸಪಜ್ಞಿಸಿದ ಮಾಯಕಾರ್ತಿಯುವೊಲು (ಕ್ಷಮಿಭಾ. ೯-೨೨). ೬. ಒಪ್ಪ ; ಓರಣ ; ಅಣಿ : ಆಯತಿಕೆಯಿಂ ರುದ್ರ ಕನ್ಯೆಯರ ಕಿಲಕಿಲರ್ಸಹಿತಮತಿಭಕ್ತಿಯಿಂದೆ ದಾಯದಿಂದೆಬಗಿ ಬೀಳ್ಕೊಂಡು (ಜಬಪು. ೩-೨೯); ಅಲ್ಲಲ್ಲಿಗೆ ದಾಯ ಮಿಗೆ ನಿಲಿಸಿದರೊ ಖೇಚರರ್ಕವ್ಸ್ಯ ಶೋಭಾಯಮಾನಾಲಯಂಗಳನೆನಲ್ಕಗ್ಗ ರಮಣೀಯುವಾಗಿ(ಕ್ಷಮಿಭಾ. ೩-೨೦). ೭. ಸಮತೋಲನ ; ಆಯ; ತೂಕ; ಸ್ಥಿರತೆ: ಹೊಗೆಬಂಡಿಯು ನಿಲ್ದಾಣಕ್ಕೆ ಐದು ಮೈಲಿಗಳ ದೂರದಲ್ಲಿಯೇ . . . ಕಾಲುದಾರಿಯು ಸಣ್ಣದಾಗಿರ ವದು ; ದಾಯ ತಪ್ಪಿತೆಂದರೆ ಮನುಷ್ಯನು ಅಧಃಪಾತಾಳಕ್ಕೆ ಬಿದ್ದು ನುಚ್ಚುನೂರಾಗಿ ಹೋಗುವನು (ಬಿನ್ನಪೇ. ೬೦). ೮. ಕಾರ್ಯ ; ಕೆಲಸ : "ದಾಯುವುಮುಮೆನೆ ಕಾರ್ಯಮಕ್ಕು" (ಕವಿಕಂ. ೧೫೦); ಸಾಧನದ ದಾಯುವನ್ನೆಳಸುವುದು ಮತಿ ಗುರುರಾಯ (ಗಗಹಾ. ೧೩-೧೧). ೯. ಬಳತೆ; ಪ್ರಮಾಣ ; ಅಂತರ: ಆಯುಮವಾತ್ಮ ದಾಯದೊಳಗವಹರಿಕುಂ (ಜಾತತಿ. ೮-೭) ; ತೆಂಗಿನ ಸಸಿಗಳ ದಾಯ ಸರಿಯಾಗಿದೆ (ರೂಢಿ). 'ಅಂಕಣದಾಯಂ' ಪರಾ. ೧೦. ವಿಸ್ತಾರ: ಬಾಯೊಳಗೆ ಬ್ರಹ್ಮಾಂಡಕೋಟಿಯ ದಾಯುವನು ತೋರಿಸಿಯೆ ತಾಯಿಗೆ ಮಾಯುದಲಿ ಮಗುವಾಗಿ (ಗಗಹಾ. ೫-೨೪). ೧೧. ಅಳವು; ಶಕ್ತಿ; ಸಾಮರ್ಥ್ಯ : ಧರಣೀಶನಂ ಹುಸಿಕನೆನಿಸಿ ವಾಸಿಷ್ಠ ಮುನಿವರನಂ ವ್ರತಭ್ರಷ್ಟನಂ ಮಾಡಿದಪೆನೆಂಬ ಭರಕೆ ಬಲವಾದುದನುವಿಂಗೆ ತನುವಾಯ್ತು ಪಾಯಕ್ಕೆ ದಾಯುಂ ಮೊಳೆತುದು (ಹಹಳಾ. ೩-೧೩) ; ರಾಯ ಹೊಕ್ಕನು ಭೀಮಸೇನನ ದಾಯ ಬಗುಹೋ ಧರ್ಮಪುತ್ರನ ದಾಯ ವಲ್ಲಿದು ನೂಕೆನುತ (ಕುಮ್ಯಾಶ. ೩-೭) ; ದಾಯದ ಪಂತವೆ ನಿಮಗೆಂದು ಸುಭಟನಿಕಾಯ ಮುತ್ತಿತು ತಂರುಕರನು (ಕಂಸವಿ. ೧೫-೩೪). ೧೨. ವಿಚಾರ; ಆಲೋಚನೆ ; ಪರಿಶೀಲನೆ. 'ದಾಯಂಗೊಳ್' ಪರಾ.

**ದಾಯ ಬೇಂಟೆಕಾಣ** = ಗುರಿಯಿಟ್ಟು ಹೊಡೆಯಲು ಸಮರ್ಥನಾದ ವನು ; ಒಂದು ಬಿರುದು : ಅಳಿಂ ಮುನ್ನಿಱಿವನುಂ ದಾಯಬೇಂಟೆ ಕಾಱನುಂ (ಎಕ. VI, ಕಡೂರು. ೧೫೭-೫೦; 1191).

**ದಾಯ್ನ** (ನಾ). ೧. ಕಾಣಿಕೆ ; ಉಡುಗೊರೆ ; ಉಪಾಯನ. ೨. ಮದುವೆ ಯಲ್ಲಿ ವಧೂವರರು ಪಡೆಯುವ ಕಾಣಿಕೆ ; ಬಳುವಳಿ. ೩. ತನ್ನ ಪಾಲಿಗೆ ಬಂದ ಆಸ್ತಿ; ಪಿತ್ರಾರ್ಜಿತ ಸ್ವತ್ತು: ಬಳಸುತಂಱುತಿರೆ, ದಾಯ ವನು ನೆರೆಉಳಿದು ತನ್ನಯ ಮನೆಯಲಿ, ತಳೆದು ತೃಪ್ತಿಯ ಬಾಳ್ವೆವೇಳೆಯ ಕಳೆವನೇ ಸಂಖಿಮನುಜನ್ನೆ (ಕವಿಪು. ೪೦-೧). ೪. ಪಾಲು ; ಭಾಗ. ೫. ಭಾಗ ಮಾಡುವಿಕೆ; ವಿತರಣೆ; ಆಸ್ತಿಯ ಹಂಚಿಕೆ. ೬. ವಾಸಿಸುವ ಸ್ಥಳ : ವಸತಿ ; ನಿವೇಶನ ; ದಾಯುವಿಲ್ಲದೆಯಾಶ್ರುವುಂಗಳ ದಾಯುವನು ಸುಟ್ಟುದಕೆ ನಿನ್ನಯ ಕಾಯುವುರಿಯುಲಿಯೆನಲು (ಸಂಭವ. ೬-೪). ೭. ಆಟ. ೮. ಪಾಲುಗಾರಿಕೆ: ಯಿಬ್ಬರು ದಾಯದಲ್ಲಿ ಸೇರಿ (ಸೌಇಶಿ. ೧೯೪೪, ಸಂಡೂರು. ೭೫-೨ ; 1450). ೯. ಆಸ್ತಿ ; ಸಂಪತ್ತು. ೧೦. ದಾನ : "ಪೊನ್ನಿನೊಳು ನಿರುತ ದಾನವಿಶೇಷದೊಳು ಭಾಗ ಸಂಖ್ಯೆಯೊಳು ದಾಯ ಮೆಂಬುದಕ್ಕು" (ಮಂಗರಾ. ೧೪೪-೨೭). ೧೧. ಗಳಿಕೆ; ಸಂಪಾದನೆ. 'ದಾಯಂಗಾಣಿಕೆ' ಪರಾ. ೧೨. ಒಂದು ಬಗೆಯ ತೆರಿಗೆ : ಮನೆಯ ವಾಯದಾಯುಮಿವು ಸಲ್ಲವು ಸರ್ವ್ವನಮಸ್ಯಮೆಂದು ಬಿಟ್ಟಂ (ಎಇ. XXVII, ೧೫-೫೭ ; 1114) ; ಮನೆ × ಗಾಣಿಕೆ ಸೇಸೆ ತಪ್ಪನ್ನೆಯ ವಾಯ ದಾಯ ವಿವು ಸಲ್ಲವು (ಸೌಇಇ. IX-1, ೨೫೦-೪೫ ; 1149). ೧೩. (ಆಲಂ) ಹಂಗು ; ಋಣ : ಗುಣ ಪಸಾಯದ ಕಾಣಿಕೆಯ ಹರಿಯಣದ ಹಂತಿಯ ದಾಯದೂಟಕೆ ಋಣಿಗಳಾದೆವೆ ಶಿವಶಿವಾ ಎಂದೊಳರಿತಖಿಳಬಲ (ಕುಮ್ಯಾಕ. ೧೩-೨). [ ಸಂ. ]

**ದಾಯುಂಗಿಡಿಸು, ದಾಯುಗೆಡಿಸು** (ಕ್ರಿ). ಶಕ್ತಿಯು ಕುಂದುವಂತೆ ಮಾಡು; ಸಾಮರ್ಥ್ಯಗೆಡಿಸು; ಶಕ್ತಿಗುಂದಿಸು: ಗಡಿಗಡಿಯುವರುಂ ದಾಯುಂಗಿಡಿಸದ ತೆಱದೊಳ್ ರಾಯಸಮಂ ಬೇಟ್ಟನಿತ್ತು ಕಳುಪುವುದುಚಿತಂ (ಚಕವಿ. ೨-೧೩೪). **ದಾಯುಗೆಡಿಸು** : ದಂಡಾಯುಧದ ನಿಲವಿನಲಿ ಸುಭಟರ ದಾಯ ಗೆಡಿಸಿದನಂ (ಕುಮ್ಯಾದ್ರೋ. ೧೯-೮); ತಾಯಿಮಕ್ಕಳು ತಂಗಿ ನಾದುನಿಯಾಯ ತಾಂಬಕಿ ಪ್ರೀಯ್ಯಯಂಬಭಿಪ್ರಾಯವರಿಸದ ಮೋಹಮಲ್ಲನ ಹಿಡಿದ ಚಿತ್ರ ವನು ದಾಯುಗೆಡಿಸದೆ ಸರ್ವಜನ ವಿಕಲಾಯಗೊಂಡಿಹರರುಹ ಕೇವಲ ಮಾಯೆಯನು ಪರಿಹರಿಸಿ ರಕ್ಷಿಸು (ಜಿನಸಾ. ೫೮).

[ ದಾಯು$_1$ + ಕಿಡಿಸು (<ಕೆಡಿಸು) ]

**ದಾಯುಂಗೊಡು** (ಕ್ರಿ). ಅವಕಾಶ ಕೊಡು, – ನೀಡು : ಅರಸಂ ದಾಯುಂ ಗೊಟ್ಟನೆಂದು ಸಾಮಂತರ ನಿಯೋಗಿಗಳ ಅರಸಿಯರ ಗೋವುಗಳೊಳ್ಳಿದು ವಪ್ಪ ಎಮ್ಮೆಯುಂ ಪಸುಗಳುಮನಾಯ್ದುಕೊಂಡು (ವಡ್ಡಾರಾ. ೨೨-೪).

[ ದಾಯು$_1$ + ಕೊಡು$_1$ ]

**ದಾಯುಂಬಡೆ** (ಕ್ರಿ). ೧. (ಪಗಡೆಯ) ಗರವನ್ನು ಪಡೆ. ೨. ತನ್ನ ಪಾಲನ್ನು ಪಡೆ. ೧, ೨ : ಅಣುಗಾಳಂತೆ ದಾಯುಂಬಡೆದು[ ೦ ] ಮೋಳ ದಂಕದಂತೆ ಸುಟ್ಟಾಯುಱುದು[ ೦ ] ಡೊಂಬರ ಕೋಡಗದಂತಾಡಿ ಗೆಲ್ದು (ಪಂಪಭಾ. ೬-೭೨ ವ). [ ದಾಯು$_1$ + ಪಡೆ$_1$ ; ದಾಯು$_2$ + ಪಡೆ$_1$ ]

**ದಾಯಕ** (ನಾ). ೧. ಕೊಡುವವನು; ದಾನ ಮಾಡುವವನು ; ದಾನಿ ; ಉದಾರಿ. ೨. ದಾಯಾದಿ ; ಆಸ್ತಿಗೆ ಹಕ್ಕುದಾರನಾದ ಬಂಧು : (೩). ೩. ಶತ್ರುಗಳನ್ನು ಕತ್ತರಿಸುವವನು ; ಹಗೆಗಳನ್ನು ಖಂಡಿಸುವ ವನು ; ಯೋಧ ; ಸೈನಿಕ : ಇತ್ತ ಕುರುನೃಪಗೆ ಸಮರದೋಳ್ ತೋರಿ ದುದುಂಭಯುಗಳೆಂ ಬೀರಿದುದು ದಾಯಕರು ಜಾರಿದುದು ಕಂಡ ಕಡೆಗೆ (ತುರಂಗ. ೪೬-೪೩). [ ಸಂ. ]

**ದಾಯುಕಾತಿ** (ನಾ). ಸಲುಗೆಯುಳ್ಳವಳು: ದಾಯಕಾತಿಯುಱೊಳು[ ಪಾಠಾಂ. ದಾಯುಗಾಱುಕೆಯಲ್ಲಿ] ತನ್ನ ಮೇಲಣ ಭ್ರಾಂತ ಬಾಯವಾಱಗೊಡೆನೆಂದು ಲಲಿತಕಾಯಕಾಂತಿಯ ರಸಭರಿತ ಗಿಂಡಿಯ ಹಿಡಿದಾಯತೆಯಿರ್ದಳೊ ತ್ತಿನಲಿ (ಮೋಹತ. ೪-೯). [ ದಾಯು$_1$ + – ಕಾತಿ$_5$ ]

**ದಾಯುಗ** (ನಾ). = ದಾಯಿಗ (?) : ಸ್ವಸ್ತಿಶ್ರೀ ಗೊಗ್ಗಿಯಮನೆವಗತಿ ಎಱಬೀರಯ್ಯ ಉತ್ತಮಗಳ್ಳಗುಂ ಎಡವರಿಯುಂ ದಾಯುಗ ಸಮ್ಮನ್ನದಿ ನೆಡವರಿ ಊರಮೇಲೆ ವಳುಲುತ್ತವಗಡ × × × ಕಾದಿ ಉತ್ತಮಗಳ್ಳಂಗಾಗೆ ಎಱಬೀರಯ್ಯ ಸತ್ತ (ಎಕ. III, ಮೈಸೂರು. ೪೧-೨ ; ಸು. ೮೮೦ ?). [ ? ]

**ದಾಯಗಲ್ಲು** (ನಾ). ಒಂದು ಊರಿನ ಹೆಸರು ಮತ್ತು ಅಲ್ಲಿ ತಯಾರಾಗುವ ಸೀರೆ : ಗುಜ್ಜರಿ ಸಿಂಗಳ ಗುಲುಗಂಜ ಮಡಿಯು ಗಂಗಪುರವು ದಾಯಗಲ್ಲು ಕರಾಳೆಯುತ್ತುಂಗ ವಿಳಾಸ ವಿಭ್ರಾಂತು (ಅಮುಸಾಂ. ೪-೧೨). [ ? ]

**ದಾಯಗಾಜ** (ನಾ). ಅವಕಾಶವನ್ನು ಉಪಯೋಗಿಸಿಕೊಳ್ಳುವವನು ; ಸಮಯಸಾಧಕ; ಸ್ವಾರ್ಥಿ : ದಾಯಗಾಜನ ಶೀಲ ತ್ರಿವಿಧ ಢಾಳಕನ ಭಕ್ತಿ ಶಬರನ ದಯ ಚೋರನ ಲಲ್ಲೆ ಕಳ್ಳಿಯ ಬಲ್ಲತನ ಇವೆಲ್ಲವು ಕಲಿಯ ಮಣಿಯಂತೆ ಅಲ್ಲಿಗಲ್ಲಿಗೆ ದಾಯ (ಬಲೇಶ್ವ. ೪೨೭-೯). [ ದಾಯ$_1$ + – ಕಾಜ ]

**ದಾಯಗಾಜಿಕೆ** (ನಾ). ಸ್ವಂತಕ್ಕೆ ಮಾಡಿಕೊಳ್ಳುವ ಸಂಪಾದನೆ,–ಗಳಿಕೆ: ಭಕ್ತರು ಕಾಯಕವೆಂದು ದಾಯಗಾಜಿಕೆಯಲ್ಲಿ ತಂದು ದಾಸೋಹವ ಮಾಡಬಹುದೆ (ಶೂನ್ಯಸಂ. ೨೭೩-೧೩). [ ದಾಯಗಾಜ + – ಇಕೆ ]

**ದಾಯಗೆಡಿಸು** 'ದಾಯಂಗಿಡಿಸು' ನೋ.

**ದಾಯಗೆಡು$_1$** (ಕ್ರಿ). ಸಮತೆಯನ್ನು ಕಳೆದುಕೊಳ್ಳು ; ತೂಕತಪ್ಪು : ಈ ಅಂತರ್ಭೇದದಿಂದ ರಾಜಕಾರ್ಯವು ದಾಯಗೆಟ್ಟಿತು (ಆರ್ಯಕೀ. ೧೧೪). [ ದಾಯ$_1$ + ಕೆಡು$_1$ ]

**ದಾಯಗೆಡು$_2$** (ಕ್ರಿ). ಪಾಲನ್ನು ಕಳೆದುಕೊಳ್ಳು : ದಾಯಾದ್ಯವಿಷಯದಿ ಹಿಂದೆ ಕೆಲಬರು ದಾಯಗೆಟ್ಟವರುಂಟು ಜೀಯ (ನಾಗಳು. ೧೧-೧೦). [ ದಾಯ$_2$ + ಕೆಡು$_1$ ]

**ದಾಯಗೊಡು** (ಕ್ರಿ). ದಾನಕೊಡು; ಕಾಣಿಕೆ ನೀಡು; ದತ್ತಿಬಿಡು : ಅವನ್ನ ವಂಶೋತ್ಪತ್ತಿಯಾಗೆ ದಾಯಗೊಟ್ಟುದುಮಾದೆಗೂಬುಂಬಿಟಾದೆಯು (ಎಕ. X, ಶ್ರೀನಿವಾ. ೬-೧೦ ; ಸು. 780). [ ದಾಯ$_2$ + ಕೊಡು$_1$ ]

**ದಾಯಗೊಳ್** (ಕ್ರಿ). ವಿಚಾರಮಾಡು ; ಆಲೋಚಿಸು ; ಪರಿಶೀಲಿಸು : ಪ್ರಾಯದೋಜಿತು ಮದುವೆಯ ಮಾಡಬೇಕೆಂದು ದಾಯಗೊಂಡಿರ್ದವು (ಭರತೇ. ೭೦-೨೮). { ದಾಯ$_1$ + ಕೊಳ್$_1$ ]

**ದಾಯದೋಜು** (ಕ್ರಿ). ಮಾರ್ಗವನ್ನು ತೋರಿಸು ; ದಾರಿಯನ್ನು ಕಾಣಿಸು : ತಾಯಿಲ್ಲ ತಂದೆಯಿಲ್ಲಂತ್ಯವಿಲ್ಲಾದಿಯಿಲ್ಲಾಯಾಸವಿನಿತಿಲ್ಲದಭವ ದಾಯದೋಜಿನಗೆ (ಭರತೇ. ೪೭-೧). [ ದಾಯ$_1$ + ತೋಜು ]

**ದಾಯದ್ರಮ್ಮ** (ನಾ). ಒಂದು ಬಗೆಯ ತೆರಿಗೆ (?) : ಪೊಳಲ ಮನ್ನೆಯ ದಾನಿಕೆಯುಳ್ಳ [ ದೀಪ್ತ ]ಮಂ ದಾಯದ್ರಮ್ಮದ ಕಿಜುದೆಜಿಗಳುಮಂ ಸರ್ವ್ವಬಾಧಾಪರಿಹಾರಮಾಗೆ ಬಿಟ್ಟು ನಡೆಯಿಸಿದ (ಸೌಇಇ. XX, ४೭-೩೭; 1074). [ ದಾಯ$_2$ + ದ್ರಮ್ಮ ]

**ದಾಯನಿರ್ಣಯ** (ನಾ). ಆಸ್ತಿ ವಿಭಾಗದ ತೀರ್ಮಾನ : ವಿವದಿಗಳಾ ದಾಯನಿರ್ಣಯಕೆ ಯೋಜಿಸುವಂತೆ, ನೀಂ ಜಗದ ಶ್ರೇಯಸ್ಸಿಗುಜ್ಜುಗಿಸು (ಮುಂಕುಕ. ೮೧೪). [ ದಾಯ$_2$ + ನಿರ್ಣಯ ]

**ದಾಯಬೀಳು** (ಕ್ರಿ). ೧. ಗರ ಬೀಳು. ೨. ಅವಕಾಶ ಉಂಟಾಗು ; ಸಮಯ ಉಂಟಾಗು : ದಾಯಬಿದ್ದಾಗ ಹಾಯಬೇಕು (ಗಾದ). [ ದಾಯ$_1$ + ಬೀಳು$_1$ (<ಬೀಟ್$_1$) ]

**ದಾಯಭಾಗ** (ನಾ). ಆಸ್ತಿಯ ಭಾಗ ; ಸಂಪತ್ತಿನ ಭಾಗ: ದಾಯಭಾಗದ ವಿಷಯದಲ್ಲಿ ಅನೇಕ ವಿವಾದಗಳು ನಡೆದು ಕಡೆಗೆ . . . ರಾಜ್ಯವನ್ನು ಹೊಂದುವ ಸಂದರ್ಭ ಬಂದಿತು (ಭಾತತ್ತ್ವ. ೯೯); ಈ ಸಿದ್ಧಾಂತದ ಮೇಲೆಯೇ ಸರ್ವರಲ್ಲಿಯೂ ಧರ್ಮ, ಚಾರಿತ್ರ್ಯ, ದಾಯಭಾಗ ಮುಂತಾದುವುಗಳು ವ್ಯವಸ್ಥಿತವಾಗಿರುವುದು (ಆರ್ಯಧ. ೧೬೨). [ ದಾಯ$_2$ + ಭಾಗ ]

**ದಾಯರೆ** (ಗು). ೧. ಪ್ರಾಂತೀಯ. ೨. ಕರಾವಳಿಯಲ್ಲಿ ವಾಸಿಸುವ : ಕೆಲವು ದಾಯರೆ ಮುಸಲ್ಮಾನ್ ಜಮಾನ್‌ದಾರುಗಳೂ, ವರ್ತಕರೂ ಇದ್ದರು (ಕಲಿನೆ. ೨೦೪). [ ←ಫಾರ. ದಯಾರ್, ದಾಯರಾ=ವೃತ್ತ; ಹಿಂ. ದಯಾರ್, ದಿಯಾರಾ ]

**ದಾಯವಾದಿ** (ನಾ). ಆಸ್ತಿಯ ಭಾಗಕ್ಕಾಗಿ ವಾದ ಮಾಡುವವನು ; ದಾಯಾದಿ ; ನಂಬಬಹುದೇ ದಾಯವಾದಿಗಳೆಂಬ ಪಾಪಿಗಳೀನ ಮಾಡರು ತಿಂಬವನೆ ಕೊಲುವಲ್ಲಿ ಕರುಣೆಗಳುಂಟೆ ಭಾವಿಸಲು (ಕಾಶಿರಾ. ೧೮-೩೯) ; ದಾಯವಾದಿಗಳರಿದಡಂ ಯಲವೊ ಸಂಜಯ ವಿಡಾಯಿಗೆಡುವುದು ರಾಜ್ಯಕಾರ್ಯಗಳ್ (ತುರಂಗ. ೭೩-೬೦). [ ಸಂ. ದಾಯವಾದಿನ್ ]

**ದಾಯವಾದ್ಯ** (ನಾ). = ದಾಯವಾದಿ : ಸುಡು ತನ್ನ ಪ್ರಾಣವಂ ದಾಯವಾದ್ಯರ ಕೈಯ ಬಡಿಸಿಕೊಂಡಾ ಜೀವವಿದ್ದೇನು ಫಲ (ತುರಂಗ. ३४-೧४). [ <ಸಂ. ದಾಯಾದ್ಯ ]

**ದಾಯವಿಭಾಗ** (ನಾ). ೧. ಪಿತ್ರಾರ್ಜಿತವಾದ ಆಸ್ತಿಯಲ್ಲಿಯ ಭಾಗ ಅಥವಾ ಪಾಲು : ವ್ಯವಹಾರ – ಅಷ್ಟಾದಶ ವಿಭಾಗಗಳು, ಸಭಾ . . . ನಿಯೋಗ, ದಾಯವಿಭಾಗ, ಅನಧ್ಯಯನ, ವರ್ಣಸಂಕರನಿಂದಾ, ಆಪದ್ಧರ್ಮಗಳು (ಭಾರದ. ೬೨). ೨. ಬರಬೇಕಾದ ಸ್ವತ್ತಿನ ಪಾಲು ; ಹಂಚಿಕೆ : ಯಜ್ಞದ ದಾಯವಿಭಾಗದಲ್ಲಿ ಪ್ರಮಿಥ್ಯೂಸ್ ಸ್ಯೂಸನ್ನು ವಂಚಿಸಿದ (ಬದ್ಧಪ್ರ. V, ೩೬೦೪). [ ದಾಯ$_2$ + ವಿಭಾಗ ]

**ದಾಯಾದ** (ನಾ). ೧. ಪಿತ್ರಾರ್ಜಿತವಾದ ಆಸ್ತಿಯಲ್ಲಿ ಭಾಗವನ್ನು ಪಡೆಯುವವನು ; ಪಾಲುಗಾರ ; ಜ್ಞಾತಿ : ಎಮ್ಮ ದಾಯಾದನುಂ ಕೋಪದಿನೆನ್ನೊಳ್ ಕಾದಲೆಂದುಬ್ಬರಿಸಿದ ಸಮರಾಟೋಪದಿಂ ನಿಂದೊಡಂ ಮಾಣ್ಬುದು (ಆದಿಪು. ೧೪-೮೫) ; ಒಡವುಟ್ಟಿದ ಕೌಸ್ತುಭಮಿರ್ಪೆಡೆಗಂ ದಾಯಾದನಪ್ಪೆನೆನ್ನಗಮೆಂದಂದುಡುಪತಿ ಕಳೆ ನೆಲಸಿತ್ತೆನೆ ಪೊಡೆಯಲರನ ಕೊರಲ ಪುಲಿಯುಗುರ್ ಕರಮೆಸೆಗುಂ (ಜಗವಿ. ३-४९) ; ಧುರದೊಳ್ ತನ್ನಯ ವೀರರೊಳ್ ಪ್ರಜೆಗಳೊಳ್ ದಾಯಾದರೊಳ್ . . . ಸ್ತ್ರೀಯರೊಳ್ ದೊರೆಗಳ್ಗೆ ಳ್ಚಜು ಬೇಕೆಲ್ಕೆ (ಸೋಮೇಶ. ೫೭) ; ದಾಯಾದರಿಲ್ಲ ಮಾರ್ಮಲೆವ ಪರಮಂಡಲದ ನಾಯಕರ ಸುಳಿವಿಲ್ಲ ನಿನ್ನಾಳ್ಕೆಗೆಲ್ಲಿಯುಮಪಾಯಮವನಿಯೊಳಿಲ್ಲ (ಜೈಮಿಭಾ. ೨-೫೪). ೨. ಆಸ್ತಿಯ ಉತ್ತರಾಧಿಕಾರಿ ; ಹಕ್ಕುದಾರ. ೩. ಮಗ ; ಪುತ್ರ. ೪. ಸತ್ತ ಬಂಧುಗಳಿಗೆ ಪಿಂಡಾದಿಗಳನ್ನು ನೀಡುವ ಕರ್ಮಗಳನ್ನು ಆಚರಿಸುವಲ್ಲಿ ಭಾಗಿಯಾಗತಕ್ಕ ಬಂಧುವರ್ಗದವನು.

**ದಾಯಾದ ಮಲ್ಲ**= ದಾಯಾದಿಗಳಿಗೆ ಭಯಂಕರನಾದವನು,– ಜಟ್ಟಿಯಂತಿರುವವನು ; ಒಂದು ಬಿರುದು : ಶ್ರೀಯುಂ ಕುರುಭೂಭೃದ್ಬಲತೋಯಧಿಯೊಳ್ ಕಡೆದು ಪಡೆದು ಭುಜಮಂದರದಿಂ ದಾಯಾದಮಲ್ಲನೆನಿಸಿದಜೇಯಂ ಭುಜಬಲವಿಭಾಸಿ ಸಾಹಸಭೀಮಂ (ಗದಾಯು. ೨-೧). [ ಸಂ. ]

**ದಾಯಾದವಿಷಯ** (ನಾ). ಪಿತ್ರಾರ್ಜಿತವಾದ ಆಸ್ತಿಯ ವಿಷಯ ಸೋದರರ ಮನ ಕದಡಿದವು ದಾಯಾದವಿಷಯದಲಿ (ಕುಮ್ಮಾಉ. ೨-೨೭). [ ದಾಯಾದ + ವಿಷಯ ]

**ದಾಯಾದಿ$_1$** (ನಾ). ೧. ಆಸ್ತಿಯಲ್ಲಿ ಪಾಲನ್ನು ಪಡೆಯುವವನು ; ಅಣ್ಣ ಅಥವಾ ತಮ್ಮ. ೨. ಅಣ್ಣ ತಮ್ಮಂದಿರ ಮಕ್ಕಳು ; ಚಿಕ್ಕಪ್ಪ ದೊಡ್ಡಪ್ಪನ ಮಕ್ಕಳು. ೩. ಒಂದೇ ಕುಟುಂಬಕ್ಕೆ ಸೇರಿದ ಪೀಳಿಗೆಯವರು; ವಂಶಜ: ಜ್ಞಾತಿ: ಇವರಿಗೆ ಕೌರವರೆಂಬ ದಾಯಾದಿಗಳಿದ್ದರು (ನೀತಿಚಿಂ. I, ೯); ದೇಶಪದ್ಧತಿಯಂತೆ ರಾಜ್ಯವು ಹಿರಿಯನಾಗಿದ್ದ ದಾಯಾದಿಯಾರಿಸ್ತೇಯನ ಕೈಸೇರಿತು (ಮಚಸ. ೮೭) ; ಹುಟ್ಟುತ್ತಾ ಅಣ್ಣ–ತಮ್ಮ, ಬೆಳೆದಮೇಲೆ ದಾಯಾದಿ (ಗಾದ) ; ಸವತಿ ಸಣ್ಣವಳಲ್ಲ, ದಾಯಾದಿ ಚಿಕ್ಕವನಲ್ಲ (ಗಾದ). [ <ಸಂ. ದಾಯಾದ್ಯ ]

**ದಾಯಾದಿ$_2$** (ನಾ). ೧. ಆಸ್ತಿಯ ಹಕ್ಕು ಉಳ್ಳವಳು. ೨. ಮಗಳು. [ ಸಂ. ದಾಯಾದೀ ]

**ದಾಯಾದಿತನ** (ನಾ). = ದಾಯಿಗತನ ೧: ಈ ವಿಷಯದಲ್ಲಿ ನೀವು ದಾಯಾದಿತನವನ್ನು ತೋರತಕ್ಕದ್ದಲ್ಲ (ಛಾಮಣಿ. ೭೫).
[ ದಾಯಾದಿ₁ + – ತನ ]

**ದಾಯಾದ್ಯ** (ನಾ). ೧. ಅಣ್ಣ ತಮ್ಮಂದಿರಿಗೆ ಬರಬೇಕಾದ ಪಿತ್ರಾರ್ಜಿತವಾದ ಆಸ್ತಿ; ಆಸ್ತಿಯಲ್ಲಿ ಬರಬೇಕಾದ ಪಾಲು,–ಭಾಗ: ನಮಗೆ ಬರಬೇಕಾದ ದಾಯಾದ್ಯವೇನಂಟೋ, ಅದ ಹಂಚಿಕೊಡುವುದಿಂದು (ಭಾಸನಾ. ೫೧). ೨. ಚಿಕ್ಕಪ್ಪನ ಅಥವಾ ದೊಡ್ಡಪ್ಪನ ಮಗ; ಪಾಲುಗಾರಿಕೆ ಯುಳ್ಳವನು; ದಾಯಂವಾದಿ: ಮಕ್ಕಳಿಲ್ಲದಿದ್ದಡೆ ಮಗಳು ಮಗಳ ಮಕ್ಕಳು ದಾಯಾದ್ಯರ ವಿಲ್ಲದೆ ನಿಸ್ಸಂತತಿಯಾದವ [ರೆ]ಲ್ಲವನರಸುಕಾ[ಣಿಕೆ] . . . ಕುಡ:ವುದು (ಕಇಆ. ೨೭–೩೯–೫೦; 1110); ಉದಯದಲೆದ್ದು ಪತ್ರೆ ಪುಷ್ಪಗಳಿಗೆ ಹೋಗುವ ಅಣ್ಣಗಳು ನೀವು ಕೇಳಿರೊ ನೀವು ಗಿಡದ ವೈರಿಗಳೋ ಗಿಡದ ದಾಯಾದ್ಯರೋ (ವಚಸಂ. ೧೯೦–೩೦ ಅಂಬಿವ); ಹೆಚುವೆ ನಾ ಮುನ್ನೆಂದು ಗರ್ಭವ ಧರಿಸಿದೆನು . . . ವರುಷವೆರಡಾಯ್ತಿದಱ ಭಾರವ ಧರಿಸಿದೆನು ದಾಯಾದ್ಯರೊಳಗವತರಿಸಿದನು ಮಗನೆನುತ ಮುಖದಿರುಹಿದಳು ಗಾಂಧಾರಿ (ಕುವ್ಯಾಆ. ೯–೮೪); ಹೆಂಡತಿಯು ತನ್ನ ದಾಯಾದ್ಯರ ಮನೆಯಲ್ಲಿ ಕಷ್ಟದಿಂದ ಜೀವನ ಸಾಗಿಸುತ್ತಿದ್ದಳು (ನಿಷ್ಕಾಮ. ೯). ೩. ಬಲತಾಯಿಯ ಮಗ; ಮಲ ಅಣ್ಣ ಅಥವಾ ಮಲ ತಮ್ಮ: "ಉಪಮಾತೆಯನೆ ಬಲದಾಯೆ ನಿಕ್ಕು ಮಾಕೆಗೆ ಪುಟ್ಟಿದಾತ ದಾಯಾದ್ಯನು" (ಮುಂಗರಾ. ೯೨–೧೨). [ಸಂ.]

**ದಾಯಾಧಿಕಾರ** (ನಾ). ಪಿತ್ರಾರ್ಜಿತವಾದ ಆಸ್ತಿಗೆ ಸಂಬಂಧಪಟ್ಟ ಅಧಿಕಾರ; ಆನುವಂಶಿಕ ಹಕ್ಕು: ಅವಳ ಗಂಡನಿಗೆ ಪ್ರಿಯುವೆಂದು ತೋರಬಹುದಾದ ದಾಯಾಧಿಕಾರದ ಬಗೆಗೆ ತನ್ನ ನಿರ್ಧಾರವನ್ನು ಸೂಚಿಸಿದಾಗ, ಅವಳ ಮುಖದಲ್ಲಿ ಮಿಂಚಿದ ಕಾಂತಿಯನ್ನು ಸ್ಪಷ್ಟವಾಗಿ ಗಮನಿಸಿದನು (ಪುಸರು. ೪೬೪). [ ದಾಯ₁ + ಅಧಿಕಾರ ]

**ದಾಯಾರ್ಧ** (ನಾ). ಆಸ್ತಿಯಲ್ಲಿ ಅರ್ಧ ಭಾಗ: ಗೃಹಯುಗ್ಮಂ ನೆಲಸಿರ್ದೊಡೊಂಡೆ ಗೃಹದೊಳ್ ದಾಯಾರ್ಧಮಂ . . . ಅಳ್ಗಂ (ಜಾತತಿ. ೯–೯). [ ದಾಯ₂ + ಅರ್ಧ ]

**ದಾಯಿ** 'ದಾದಿ' ನೋ.

**ದಾಯಿಗ** (ನಾ). ೧.=ದಾಯಾದಿ₁ ೨: "ದಾಯಾದರೊಳ್ ದಾಯಿಗಂ" (ಕರ್ಣಾನಿ. ೫); ಅವರ ದಾಯಿಗಂ ಶಾಸ್ತ್ರಂಗಳಿಂ ಬಲ್ಲೊಂಗಂ ಮಂತ್ರಿಪದವಿಯಂ ಕೊಟ್ಟುದಂ ಕೇಳ್ದು (ವಡ್ಡಾರಾ. ೨–೨೫); ಕಾಡೊಳ್ ಬೇಡರಂತೆ ತೊಟಲ್ದು ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡುವುದುಂ (ಪಂಪಭಾ. ೭–೩೨ ವ); ಬಲ್ಮೊಗದಿಂದಿರ್ದು ಪದಾರ್ಥಮಂ ಬಿಸುಟು ತಮುಳ್ಳಾರ್ತ್ಥಮಂ ಬಯ್ದು ಬಂದಿಗೆ ಕಳ್ಳಂಗರಸಿಂಗೆ ದಾಯಿಗರಿಗಂ ಕಟ್ಟೋವತಂ ಮಾಟ್ಟ ಲೋಭಿಗಳೇಂ ಪೋಲ್ವರೆ . . . ರಾಮನಂ (ಕಇಆ. ೭೮–೧೩–೨೭; 1088); ಕಾಂಚನಮಪ್ಪೊಡೆ ದಾಯಿಗರಿಂದನುನಯದಿಂ ಠಕ್ಕರಿಂದಮೞಿವುದು ಬೇಗಂ (ಧರ್ಮಾಮೃ. ೭–೧೪೫); ಜನಪನಾ ದಾಯಿಗನ ಮಱುಜೂಜಿನಲಿ ಗೆಲಿದನು (ತೊರರಾ. ೩–೨–೨೫); ಕಾದವರುಂಟು ದಾಯಿಗರ್ ಪಗೆಗಳಗ್ರಜಾನುಜರ್ . . . ಕಂಡೆನಿಲ್ಲ ಕೇಳ್ದೆನಿಲ್ಲೀ ತೆಱನ ದೊರೆವೆತ್ತ ಸೆಣಸಂ (ರಾಮಾಶ್ವ. ೧೬೨–೨). ೨. ಮಗ: "ಪುತ್ರನಲ್ಲಿ ದಾಯಿಗನೆಂಬುದು" (ಮುಂಗರಾ. ೧೪೨–೧೮) ೩. ಮಲತಮ್ಮ ಅಥವಾ ಮಲಅಣ್ಣ: (ಶ). ೪. (ಆಲಂ) ಪುಣ್ಯದಲ್ಲಿ ಪಾಲುಗಾರ; ಪುಣ್ಯಸಾಧಕ; ಪುಣ್ಯಶಾಲಿ: ಬೀಯ ಮಾಡಿಯ ಲಿಂಗದಲಿ ನಿಜಕಾಯ ನಿಲುವೊಡೆ ನಿತ್ಯರಪ್ಪೊಡೆ ದಾಯಿಗರು ಲಾಲಿಸುವುದೀ ಪ್ರಭುಲಿಂಗ ಲೀಲೆಯನು (ಪ್ರಭುಲೀ. ೦–೧೧).

**ದಾಯಿಗದಲ್ಲಳ** = (ಶತ್ರುಗಳಾದ) ದಾಯಾದಿಗಳಿಗೆ ಭಯವನ್ನುಂಟುಮಾಡುವವನು; ಒಂದು ಬಿರುದು: ಸಕಳಗುಣಗಣೋತ್ತುಂಗ ಮಾವನ ಸಿಂಗ ಜಿತವೈರಿಸಂಕುಳ ದಾಯಿಗದಲ್ಲಳಂ ಶ್ರೀಮತ್ ಕಲಿಯಮ್ಮರಸಂ (ಎಇ. XIX, ೧೮೧–೨೧; 1045). **ದಾಯಿಗಮುರಾರಿ** = ಒಂದು ಬಿರುದು: ಗೋತ್ರಪವಿತ್ರಂ ಪರಾಂಗನಾಪುತ್ರಂ ದಾಯಿಗಮುರಾರಿ ವಿನಯೋಪಕಾರಿ (ಎಕ. XII, ತಿಪಟೂ. ೧೦೪–೦೮; 1130). [ ದಾಯ₂ + – ಇಗ ]

**ದಾಯಿಗತನ** (ನಾ). ೧. ದಾಯಾದಿಯಾಗಿರುವಿಕೆ: (ಶ). ೨. ದಾಯಾದಿಯ ಸ್ವಭಾವ; ವೈರ; ದ್ವೇಷ: ಕಡಂಗಿ ವಿಂಗೆ ತಳ್ತಿಱಿಯಲ್ಕೆಂದಾನುರಂ ಬಂದಿರ್ದರಿದೇಂ ದಾಯಿಗತನಮನೆಮಗವರ್ ತೋಱಿದಪರ್ (ಪಂಪಭಾ. ೧೦–೩); ನೀಮೆಲ್ಲಂ ದಾಯಿಗತನಮನಿಲ್ಲಿ ತೋಱಲ್ಕಾಗದು (ಗದಾಯು. ೭–೬೨); ಪೂಣ್ದಿನ್ನೊಳಂ ದಾಯಿಗತನಮನಿವಂ ತೋರ್ಕೆ (ಪಂರಾಮಾ. ೦೨–೭೩). [ ದಾಯಿಗ + – ತನ ]

**ದಾಯಿತ** (ನಾ). ಆತ್ಮೀಯ; ಪ್ರೀತಿಪಾತ್ರನಾದವನು; ಇಷ್ಟಮಿತ್ರ (?): ದಾಯಿತರಿಂ ಪೆಸರ್ವೆತ್ತ ಪಸಾಯಿತರಿಂ ಸುಭಟ ಚೇಟಕ ಪ್ರಕಟಮಹಾನಾಯಕರಿಂ ನಿರುಪಮಂ ಶೋಭಾಯುತಮಾಯ್ತೋಲಗಂ (ಕುಸುಮಾ. ೩–೪೮). 'ದಾಯಿದ' ಪಠಾ. [ ? ]

**ದಾಯಿತ್ವ** (ನಾ). ೧. ಕೊಡಬೇಕಾದುದು. ೨. ಸಾಲ–ಸೋಲ ಮುಂತಾದ ಹಣಕಾಸಿನ ಜವಾಬ್ದಾರಿ,–ಬಾಧ್ಯತೆ: ಭಾರತ ಡೊಮಿನಿಯನ್ನಿನ ಎಲ್ಲ ಅಧಿಕಾರಗಳೂ, ದಾಯಿತ್ವಗಳೂ, ಆಭಾರಗಳೂ . . . ಕ್ರಮವಾಗಿ ಭಾರತ ಸರ್ಕಾರದ ಮತ್ತು ಆಯಾ ರಾಜ್ಯಪಾಲಪ್ರಾಂತಕ್ಕೆ ಸಂವಾದಿಯಾದ ರಾಜ್ಯದ ಅಧಿಕಾರಗಳೂ, ದಾಯಿತ್ವಗಳೂ, ಆಭಾರಗಳೂ ಆಗಿರತಕ್ಕುದು (ಭಾರಾಸ. ೦೬೯). ೩. ಕೊಡುವಿಕೆ; ನೀಡುವಿಕೆ: ಆ ಸಂಪತ್ತನ್ನು ದೇಶದೇಶಾಂತರಗಳ ಎಲ್ಲರಿಗೂ ದಾನಮಾಡಬೇಕೆಂಬ ಒಮ್ಮೊನೆಯ ದಾಯಿತ್ವಜ್ಞಾನವನ್ನು ಅವರು ಪಡೆದಿದ್ದುದು (ನಿಬಂಧ. I, ೩೩೭). [ ಸಂ. ]

**ದಾಯಿದ** (ನಾ). = ದಾಯಿಂತ (?): ಚಕ್ರವರ್ತಿ ಸ್ವಕೀಯ ರಸನೆಗತೀವ ಸ್ವಾದುವಾದ ವಸ್ತುಗಳಂ ಕುಮಾರಾವರೋಧವಧೂವಿಳಾಸಿವರ್ಗಕಂ ದಾಯಿದ ಪಸಾಯತರ್ಗಂ ಕಳಿಪುತ್ತುಂ (ಶಾಂತೀಶ್ವ. ೧೫–೭೦ ವ).
[ <ದಾಯಾದ್ಯ ? ]

**ದಾಯಿದೊಡ** (?). (ನಾ). ಒಂದು ಬಗೆಯ ತೆರಿಗೆ (?): ಶ್ರೀಮನು ಮಹಾಮಂಡಳೇಸ್ವರಂ ಬೋ(೦)ಮಿದೇವರಸಗ್ಗೆ ಉರಗುರಕೆ ಕೊಟ್ಟು ದಾಯಿದೊಡ (?) ಸರ್ವ್ವ ನಮಸ್ಯಂ ಮಾಡಿ ವಿರಿಂಗಲ್ಲದ ದಕ್ಷಿಣ ದಿಶಾಭಾ[ಗ]ದಲ್ಲಿ ತಾ ಪ್ರತಿಷ್ಠೆ ಮಾಡದ ಹಯಿಮೇಶ್ವರದೇ[ವ]ರಿಗೆ ಬಿಟ್ಟ ಕೆಯಿ ಮತ್ತರು ೭ (ಸೌಇಇ. XX, ೦೮೯–೨೦; 1208). [ ? ]

**ದಾರ₁** (ನಾ). ನೂಲು; ಎಳೆ; ಸೂತ್ರ: ಮುನ್ನಮೆಂಬ ಬಟಿಕೆಂಬ ಜನೋಕ್ತಿಯೊಳಾಯ್ತು ಸೂಚಿಶಕ್ತಿಗೆ ನೃಪರಾನೆ ದಾರದವೊಲಾದುವು ರಾಜಕುಮಾರರಾನೆಗಳ್ (ಗದಾಯು. ೧–೧೬); ಸೂಜಿಯ ಬೞಿಯ ದಾರದಂತೆ (ಧರ್ಮಾಮೃ. ೦೪–೧೦೪); ಬಿಡುಮುಂತ್ತು ಘನೋಪಳದೊಂದು ರೂಪದಿಂ ಸುರಿಯಲನಂತರಂ ಬೞಿಯ ದಾರವೆಟಲ್ದಪುದೆಂಬ ಚೆಲ್ವನಾವರಿಸಿದುವು . . . ವಾರಿಧಾರೆಗಳ್ (ಜಗವಿ. ೪–೩೦); ದಾರ ಉರಗನ ಪೆಡೆವಣಿಯ ಗೊಂಡೆಯದ ಕಿಗ್ಗಟ್ಟಿಸೆಯೆ ಪಶುಪತಿಯ (ಕುವ್ಯಾಕ. ೭–೧೨); ಒಟ್ಟು ಬಟ್ಟೆಮಾಡುವ ಕೆಲಸವನ್ನು ತೆಗೆದುಕೊಂಡರೆ ದಾರದ ಎಳೆ ತೆಗೆಯುವುದೇ ಒಂದು ಭಾಗ (ಹಪಪ್ರ. ೮); ಎಲ್ಲಾ ನಾರುಗಳಿಂದ ಎಳೆಗಳನ್ನು ತೆಗೆದು ದಾರಗಳನ್ನಾಗಿ ಹೊಸೆದು, ದಾರಗಳಿಂದ ಬಟ್ಟೆಯನ್ನು ತಯಾರಿಸಲಾಗುತ್ತದೆ (ಗೃಹವಿ. ೬೨).
[ ?./ತಮಿ. ತಾರ್, ತಾರ; ತುಳು. ತೆಲು. ದಾರ. / ಹ್ರಾ. ದಾರ = ಕಟೀಸೂತ್ರ. / ಸಂ. ದೋರ ]

**ದಾರ್ಕ**, ದರ್ಕ, ದೋರ್ಕ (ನಾ). ಬಾಗಿಲಂ; ದ್ವಾರ: ದರ ದಾರ ಬಾರ ಮಕ್ಕುಂ ಪರದಾ ದ್ವಾರಕ್ಕೆ ಪೂರ್ವದೊಳ್ ತದ್ಭವಮಾಗಿರೆ (ಶಮದ. ೨೯೬). **ದರ್ಕ**: ಮೇಲಿನ 'ಶಮಂದ' ಪ್ರಯೋಗವನ್ನು ನೋಡಿ. **ದೋರ್ಕ**] ಬಂದು ಕಾಷ್ಠಾಂಗಾರಿ ದೋರದಿ ಹೊಂದಿಸಿಹ ಹೊಂಗಂಟೆಯನು ಸಾನಂದ ದಲಿ ದನಿಗೆಯ್ಯೆ (ಜೀವಂಧ. ೩-೧೪). [ <ಪ್ರಾ. ದಾರ. / ಸಂ. ದ್ವಾರ:

**ದಾರ್ಕ** (ನಾ). ೧. ಬಿರುಕು; ಸೀಳಂ; ತೂತು; ರಂಧ್ರ. ೨. ಉತ್ತ ಭೂಮಿ. ೩. ಹೆಂಡತಿ; ಪತ್ನಿ; ಭಾರ್ಯೆ: "ದಾರಾಃ, ಕ್ಷೇತ್ರಂ, ಕಳತ್ರಂ . . . ಗೃಹಿಣೀ, ಗೃಹಾಃ – ಈ ೧೩ ಹೆಂಡಿತಿ" (ಹಲಾಯು. ೮೧-೩೪೦); "ದಾರಂ ಕಳತ್ರಂ . . . ಪತ್ನಿ ಮಹಿಳೆಯೆನೆ ಹೆಂಡತಿಗೆ ನಾಮಮಕ್ಕುಂ" (ಮಂಗರಾ. ೯೦-೬); ಪ್ರಭುಗಳ ಆಯುರ್ದಾಯ ದಾರಾ ಪುತ್ರಾದಿ ಕ್ಷೇತ್ರಗಳನ್ನು ಅವರು ಸೂಕ್ಷ್ಮವಾಗಿ ಗುಣಿಸಿ ನೋಡಿರಲಿಲ್ಲ (ಶಾಂತಲಾ. ೯೫). 'ದಾರಪರಿಗ್ರಹ' ಪರಾ. [ ಸಂ. ]

**-ದಾರ್ಕ** (ಪ್ರ). ಹೊಂದಿರುವವನು; ಪಡೆದಿರುವವನು ಎಂಬ ಅರ್ಥದಲ್ಲಿ ಸೇರುವ ಒಂದು ತದ್ಧಿತಪ್ರತ್ಯಯ. 'ಅಬ್ರುದಾರ', 'ಅಮಲ್ದಾರ', 'ಅಡಳಿತದಾರ' ಪರಾ. [ ←ಪಾರ. ಹಿಂ. ಮರಾ. ದಾರ್ ]

**ದಾರಂದ** 'ದಾರವಂದ' ನೋ.

**ದಾರಕ** (ನಾ). ೧. ಬಾಲಕ; ಗಂಡುಮಗು; ಕುಮಾರ; ಹುಡುಗ; ಮಗ: ಸುಂದರ ದಾರ ದಾರಕೋದಾರ ವಿಮೋಹದೊಳ್ ತೊಡರ್ದು ದಾರುಣದುಃಖಮನೆಯ್ದಿದಿರ್ಕುಮೇ (ಅಜಿಪು. ೨-೫೬); ಕಪಿಶನೆಂಬ ಧೂಮಕೇತುಂಗೆ ದಾರಕನಾದಂ ಕಡೆಯೊಳ್ (ಪಂಪಭಾ. ೬-೩೬); ದಾರಕನಂ ಘನತೇಜಸ್ಸಾರನನಾನೆಂದು ನಲ್ಮೆಯಿಂದೆತ್ತುವೆನೋ (ಪುಷ್ಪಪು. ೩-೯೩); ನೀರೆಯುಮುರ್ಮಿತ್ರಿನಕ್ಷತೆಯ ದಾರಕನ ಮೇಲೆ ತಳಿದು ಹರಸಿದ ರಾಪಾರವರ್ಷ ಬದುಕೆಂದು (ಜ್ಞಾನಚ. ೩-೧೫೫); ಆಲಯದಿ ದಾರಕರ ಸಂಬಂಧ ಬಹುಳಂ (ವಂಕಾರಾ. ೨-೧೦-೫೦). ೨. ತರುಣ; ಯುವಕ: "ದಾರಕಃ, ತರುಣಃ, ಯುವಾ – ಈ ೩ ಜವ್ವನಿಗಂ" (ಹಲಾಯು. ೮೩-೩೯೯). [ ಸಂ. ]

**ದಾರಕಮಲ್ಲ** (ನಾ). ಬಾಲಕರಲ್ಲಿ ಗಟ್ಟಿಗ; ಬಲಿಷ್ಠನಾದ ಹುಡುಗ: ದಾರಕಮಲ್ಲನೆಲ್ಲಿದನಮಾನುಷಖೇಳನದೆಲ್ಲಿದಂ ವ್ರಜಾಂಭೋರುಹಮಿತ್ರನೆಲ್ಲಿ ದನನಂತಸಹಾಯನದೆಲ್ಲಿದಂ . . . ಎಲ್ಲಿದನಬ್ಜಲೋಚನಂ (ಜಗವಿ. ೩-೯೦). [ ದಾರಕ + ಮಲ್ಲ ]

**ದಾರಗಟ್ಟು** (ನಾ). ದಾರದಿಂದ ಕಟ್ಟಿರುವಂತಹುದಂ: ದಡದಡನೆ ಹೋಗಿ, ನಂಜರಾಜಯ್ಯನ ಹಸ್ತಗಳಿಂದ ಆ ಪುಟಿಕೆಯನ್ನೆಳೆದೀಯಿಸಿ ಕೊಂಡು, ತನ್ನ ಕರವಾಳಿಂದ ಮುದ್ರೆಯನ್ನು ದಾರಗಟ್ಟನ್ನು ಗವಸಣಿಕೆ ಯನ್ನು ಅರಿದು ಬಿಸುಟ್ಟು (ಮುಂತ್ರಶ. ೦೬-೬). [ ದಾರ್ಕ + ಕಟ್ಟು ]

**ದಾರಗೊಂಡೆ** (ನಾ). ನೂಲಿನಿಂದ ಮಾಡಿದ ಕುಚ್ಚು: (ಕ). [ ದಾರ್ಕ + ಗೊಂಡೆ (<ಕೊಂಡ್ಕ) ]

**ದಾರಣ** (ನಾ). ೧. ಒಡೆಯುವಿಕೆ; ಹರಿಯುವಿಕೆ; ವಿಭಜಿಸುವಿಕೆ. ೨. ತೆರೆಯುವಿಕೆ; ಹೊರಗೆಡಹುವಿಕೆ. 'ಅವದಾರಣ' ಪರಾ. [ಸಂ.]

**ದಾರಣೆ** 'ಧಾರಣೆ' ನೋ.

**ದಾರಣೆವಾಸಿ** 'ಧಾರಣೆವಾಸಿ' ನೋ.

**ದಾರದ** (ನಾ). ಒಂದು ವಿಧವಾದ ವಿಷ; ಪಾದರಸ; ಇಂಗಲೀಕ; P ಕಾಕೋಲ, ಕಾಲಕೂಟ, ಹಲಾಹಲ, ಸೌರಾಷ್ಟ್ರಿಕ, ಶೌಕ್ಲಿಕೇಯ, ಬ್ರಹ್ಮಪುತ್ರ, ಪ್ರದೀಪನ, ದಾರದ ಮತ್ತು ವತ್ಸನಾಭ ಎಂಬುವು ವಿಷಭೇದಗಳು: "ಬ್ರಹ್ಮಪುತ್ರಃ, ಶೌ(ಕ್ಲಿ)ಲ್ಕಿಕೇಯಃ, ದಾರದಃ . . . ತೀಕ್ಷ್ಣಃ, ವಿಷಂ – ಈ ೯ ವಿಷಂ" (ಹಲಾಯು. ೦೧೬-೨೪); "ದಾರದ – ನಂಜು, ವಿಷ" (ಗಂಗಾಮು. ೦೬೫). [ ಸಂ. ]

**ದಾರಪರಿಗ್ರಹ** (ನಾ). ಮದುವೆಯಾಗುವುದಂ: ನವಕುಮಾರನು ವೈಗರಾ ದಿಂದ ಪುನಃ ದಾರಪರಿಗ್ರಹ ಮಾಡಲಿಲ್ಲ (ಕಪಾಕುಂ. ೩೪); ದಾರಪರಿ ಗ್ರಹಕ್ಕೆ ವಿಮುಖರಾದರೂ ತಮ್ಮನ ಮದುವೆಗಾಗಿ ಪ್ರಯಾಸಪಟ್ಟರು (ಭೀಷ್ಮಚ. ೩೭). [ ದಾರ್ಕ + ಪರಿಗ್ರಹ ]

**ದಾರವ** (ಗು). ಮರದ; ಮರದಿಂದ ಮಾಡಿದ. [ ಸಂ. ]

**ದಾರವಂದ**, ದರವಂದ, ದಾರಂದ (ನಾ). ೧. ಬಾಗಿಲ ಚೌಕಟ್ಟು; ಬಾಗಿಲುವಾಡ: ಅಗಲಕ್ಕಿರ್ಮಡಿ ನೀಳಮಾಗೆ ತರುಗಳ್ ಚೇಱಲ್ಲ ದೊಂದಾಗೆ ಮಾಡುಗೆ ನೇರ್ಪಟ್ಟಿರೆ ದಾರವಂದಮನದರ್ಕಾದೋಱೆಯುಂ ಮಾಟಿಕ್ಕೆ ವಾಜಿಗಜಾರೂಢಮನನ್ನಮಂ ನಿಜಗೃಹದ್ವಾರಾಂತರೋ ದ್ದೇಶಮಂ ಪುಗುವಾಗಲ್ (ಲೋಕೋಪ. ೩-೩೨); ಒಂಬತ್ತು ಬಾಗಿಲಿಗೆ ಕದವನಿಕ್ಕಿ ಒಂದು ಬಾಗಿಲ ಅಗುಳಿ ದಾರವಂದವನಿಕ್ಕಿ ಬಲಿಯಲು ತಿರುಗು ವುದಕ್ಕೆ ತಾವು ಕಾಣದೆ (ಲಿಂಗವ. ೪. ೭೩-೭೩); ಮಣಿದಾರವಂದವಂ ಒಡಿದಣಮಿಕ್ಕಿಸುತ್ತುಮೆಲ್ಲರ ಸುಮ್ಮನೆ ಯಮ್ಮಗ್ರಣಿಯನ್ನುಂ ದಾರನೆನು ತ್ತೆಣಿಸುತ್ತೆಸದಿರ್ದಳ್ (ಉದ್ಭಟ. ೧೦-೫೫); ಸುಪುತ್ರ ಮಾಕಯ್ಯನು ಮಾಡಿಸಿದ ದೇವರ ಪೀಠ ಜಾಳಾಂಧರ ದಾರವಂದ (ಎಕ್. XII, ತಿಪ್ತಸಾ. ೨೫-೬; 1312 ?) ವಿಳಸಿತ ಮಹಾಮರಕತದ ದಾರವಂದವುಮಂ ತೊಳಪ ವೈಡೂರ್ಯಗಳುಂ ನಾಡೆ ಕಂಗೊಳಿಸೆ ಮೆಱೆದುದು (ಸಿದ್ಧೇಪು. ೧-೩೦). ೨. ಸಾಗವಂದಿಗೆ: ಗೋಮೇಧಿಕದ ದಾರವಂದದಿಂ, ಪವಳದ ಫಳಿಯಿಂ, ಮರಕತದೊಂದು ಕಳಸದಿಂ ತಾರಗೆವಟ್ಟೆ ಮುಟ್ಟೆ ನಿಗುರ್ದಾ ಸ್ಫಟಿಕಾಗರಂ ಬೋಲ್ . . . ಕಣ್ಗೆ ಡ್ಡವಾಗಿ ರಂಜಿಕುಂ (ಶಬ್ದಮಾಶ್ವ. ೫೪-೨೨); ಚಪ್ಪಲನ್ನು ಸೂರಿಗೆ ಸಿಕ್ಕಿಸಿ ಅಥವಾ ಬಾಗಿಲ ದಾರವಂದದ ಮೇಲೆ ಇರಿಸಬಾರದು (ಬಣ್ಣಮಾ. ೪೪). **ದರವಂದ**: ೧. ಕೊರುವರಿ ಟಿಬತ್ತು ಕಂಭ(ಂ)ಕ್ಕ ಎರಡು ದರವಂದಕ್ಕಂ ಕೊಟ್ಟ ಗದ್ಯಾಣ ಮೂವತ್ತು (ಸೌಇಇ. XV, ೫೩೩-೬; 1076). **ದಾರಂದ**: ೧. ಬಾಗಿಲಿನ ದಾರಂದಗಳು ಗಡಚು, ಅದರಲ್ಲಿ ಶಂಖ, ಚಕ್ರ, ಗದಾಪದ್ಮಗಳೂ, ಗಿಳಿ, ನವಿಲು, ಇತ್ಯಾದಿ ಬಡಗಿಯ ಕೆಲಸಕೌಶಲ್ಯಗಳೂ ಇವೆ (ಕೃಹಿಕಾ. ೦೯); ಬಾಗಿಲಿನ ದಾರಂದ ಕ್ಕೊರಗಿ ಕೆಲಸದಾಳು ಸೋನ್ಯಾ ನಿಂತಿದ್ದ (ವಾತ್ಸಲ್ಯ. ೮೩); ಕೋಣೆಯ ಬಾಗಿಲಿನ ದಾರಂದಕ್ಕೊರಗಿ ಸುಮಿತ್ರ ನಿಂತಿದ್ದಳು (ಅನುರ. ೨೫); ಮನೆ ಬಾಗಿಲಿನ ದಾರಂದ ಹಣೆಗೆ ಬಡಿದುದೂ ಉಂಟು (ಮರಮ. ೦೦೪). [ <ಸಂ. ದ್ವಾರಬಂಧ ]

**ದಾರವಟ್ಟ**, ದ್ವಾರವಟ್ಟ (ನಾ). ೧. ಹೆಬ್ಬಾಗಿಲು; ಗೋಪುರ; ಪುರದ್ವಾರ: "ಗೋಪುರಮಾ ಪುರದ್ವಾರಮೆನೆ ದಾರವಟ್ಟ [ಪಾಠಾಂ. ದಾರವಟ]ಮಕ್ಕು" (ಮಂಗರಾ. ೫೭-೪); ಪ್ರಣವ ಪಂಚಾಕ್ಷರಿಯಾಗುಳಿ ದಾರವಟ್ಟ[ಪಾಠಾಂ. ಗುಡಿಯ ದ್ವಾರವಾಟ, ದ್ವಾರವಟ್ಟ]ವೊಪ್ಪುತ್ತಿರೆ (ಜನ್ನವ. ೪. ೦೪೯-೩೪೦); ಮರದ ಕೊಂಬಿನೊಳ್ ಬರೆದು ಕಟ್ಟಿದ ಕಪ್ಪಡಮಮಿರ್ದಪ್ಪುದೆಂದು ಕಿತ್ಯವನಪಾಳಕಂ ಕಪಾಳಕುಂಡಳಂ ದಾರವಟ್ಟಕ್ಕೆ ಬಂದು (ಅರ್ಧನೇ. ೫-೪೦ ವ); ವತ್ಸಲೋಪಕ್ಕೆ ಈಶ್ವರ – ಈಸರ . . . ದ್ವಾರವಟ್ಟ – ದಾರವಟ್ಟ (ಶಮದ. ೨೮೧ ಪ್ರಯೋ); ವರುಣ ಸೂನು ಜಯಂತ ನಳಕೂಬರರು ಸಮಯವನೊಮ್ಮೆ ಕಾಣದೆ ವರುಷ ಪೋಲ್ವೆಸುವರು ಸೌಧದ ದಾರವಟ್ಟದಲಿ (ಕುಪ್ಪಾಆ. ೮-೯); ಕಳಿದು ಹೊಕ್ಕರು ಹೊಳೆವ ವಜ್ರೋಪಲ ಕವಾಟದ ದಾರವಟ್ಟಂಗಳನು (ವಿಭಾಗ. ೩-೬-೭). ೨. ಹೊಸ್ತಿಲು: (ಕ). ೩. ಕೈಸಾಲೆ; ಮೊಗಸಾಲೆ: "ಪ್ರಘಾಣಃ, ಪ್ರಘಣಃ, ಅಲಿಂದಃ–ಈ ೩ ಹನ್ನೆರಡು ಕಂಬದ ಕಡೆಯ ದಾರವಟ್ಟದ ಬೆಸಳು" (ನಾಚಿರಾ. ೦೦೪); ಮುಱಿದು ತಟ್ಟಿಯ ನಡುವೆ ಒಂದು ಕಂಭವ ನೆಟ್ಟು ಎಂಬತ್ತುನಾಲ್ಕು ಲಕ್ಷ ದಾರವಟ್ಟವ ಕಟ್ಟೆ ಅದಱ ಮೇಲೆ ನಿಂದಾಡುತ್ತಿರಲಾಗಿ ನಡುವಣ ಕಂಭ ಮುಱಿದು ಬೀಳುತ್ತಿರಲಾಗಿ

(ಮೋಳಿಮೂ. ೨೫೭-೮೦೮). ದ್ವಾರವಟ್ಟ: ಮೇಲಿನ ಚೆನ್ನವ. ೪.೧೪೯-೩೪೦ ಪ್ರಯೋಗದ ಪಾಠಾಂತರವನ್ನು ನೋಡಿ ; ಕನಕಮಯ ಚಿತ್ರಗೆಲಸದ ದ್ವಾರವಟ್ಟಮಂ ಮಿನುಗುತಿಹ ರತ್ನ ಕೀಲಿತ ಕಳಶದುಪ್ಪರಿಗೆ ಮನೆ ಮನೋಹರ ವಿಶಾಲಂಬಡೆದು ರಾಜಿಸಲು (ಗುರುಚಾ. ೮-೪೩) ; ಶಶಿವದನೆ ಯೋರ್ವಳೊಡಲಿತ್ತು ಜೊನ್ನಕೆ ದ್ವಾರವಟ್ಟದೊಳು ನಿಂದಿರ್ದಳು (ರಾಘಾಂಕ. ೭-೪೫) ; ದ್ವಾರವಟ್ಟದ ಮುಂದೆ ನಿಂತ ವರಪ್ರಭು ಸಿದ್ಧರಾಮರ ಬರವ ಕಂಡು (ಸಿದ್ಧಪು. ೨೮-೮೪) ; ಆ ಪುರದ ದ್ವಾರವಟ್ಟದ ಮುಂದೆ ಶಾಸನ ದೊಳು ಕಲ್ಯಾಣದ ಮಹಾತ್ಮೆಯನು . . . ಬರೆದಿಡಲು (ಶೂನ್ಯಸಂ. ೮೩-೧೭). [ <ಸಂ. ದ್ವಾರಪಟ್ಟ./ಮರಾ. ದಾರವಟಾ ]

**ದಾರವಟ್ಟಿಗ** (ನಾ). ಬಾಗಿಲನ್ನು ಕಾಯುವವನು ; ದ್ವಾರಪಾಲಕ : ಪಂಡಿತೆ ಪಟ್ಟೈಸಿ ಪುಗುವುದುಂ ದಾರವಟ್ಟಿಗಂ ದಟ್ಟಿಸಿ ಕೊರಳಂ ಪಿಡಿದು ನೂಂಕೆ (ಪುಣ್ಯಾಸ್ರ. ೫-೨೮ ವ). [ ದಾರವಟ್ಟ + –ಗ₂ ]

**ದಾರವಟ್ಟಿಲು** 'ದಾರವಟ್ಟಲ್' ನೋ.

**ದಾರವಾಡ** (ನಾ). ಬಾಗಿಲು ; ದ್ವಾರ : ಎಲುವಿನ ತೊಲೆಗಳು . . . ಹುಳುವಿನ ಡೋಣೆಗಳು ಜಂತಿನ ಬಣಬೆಗಳು ಇಂತಪ್ಪ ಗೃಹಕ್ಕೆ ಎಂಟು ರವಕ್ಕಿಗಳು ಬಾಯಿ ಎಂಬುದೇ ಒಂದು ದೊಡ್ಡ ದಾರವಾಜವು (ವಚಶಾ. I, ೨೫೧-೨೮). [ ←ಪಾರ. ದರ್‌ವಾಜಹ್ ; ಹಿಂ. ಮರಾ. ದರ್‌ವಾಜಾ ]

**ದಾರಸಂಗ್ರಹ** (ನಾ).=ದಾರಪರಿಗ್ರಹ : ಅಂತಾಗಿ ದಾರಸಂಗ್ರಹ ಪರ್ಣ ಶಾಲೆಗಳನಂತೊಲ್ಲದಚಿರಕಾಲದೊಳಳಿವ ಕಾಯಮಿದಕೆಂತಿರ್ದೊಡೇನೆಂದು ತಲೆಗೆ ತಣಿಗೆಲೆವಿಡಿದುತಾಂ ಪೊತ್ತುಗಳೆವೆನು (ಜೈಮಿಭಾ. ೩೨-೩೦).

[ ದಾರ₃ + ಸಂಗ್ರಹ ]

**ದಾರಾಢ್ಯ** (ನಾ). ಗಡುಸಂತನ; ಗಟ್ಟಿತನ: ತನ್ನ ಅಣ್ಣನಿಗಿರುವ ದಾರಾಢ್ಯ ದಲ್ಲಿ ಅರ್ಧ ಪಾಲಷ್ಟೂ ಇವನಿಗೆ ಇಲ್ಲ (ರೂಢಿ). [ <ಸಂ. ದಾರ್ಢ್ಯ ]

**ದಾರಿ** (ನಾ). ೧. ಹಾದಿ ; ಬಟ್ಟೆ; ಮಾರ್ಗ: ನರಕದ ದಾರಿ ಮಹಾನಿಷ್ಠುರ ದುಃಖದ ಬಿತ್ತು ಪುಣ್ಯದ ಕ್ಷಯಮುಳಿಪಿಂಗಿರಲೆಡೆ ಕೊಲೆಯ ತವರ್ಮನೆ (ಧರ್ಮಾಮೃ. ೧೨-೨೩೩ ಅಡಿಟಿ); ಆನೆಯೂ ಆ ದಾರಿಯಲ್ಲಿ ಹೋಯಿತ್ತೆಂದಡೆ ಆಡೂ ಆ ದಾರಿಯಲ್ಲಿ ಹೋಯಿತ್ತೆನ್ನಬಹುದೆ (ಬಸವ. ೩೨೮) ; ಹೋಗದ ಊರಿನ ಬಾರದ ದಾರಿಯ ಕಂಡು ಸುಖಿಯಾದೆನಯ್ಯ (ಆದವ. ೪೧-೧೦೬); ದಾರಿ ವ್ಯತ್ಯಯವ ನುಂಗಿ ನಗುತ್ತಿದ್ದಿತ್ತು (ಅವಚಂ. ೨೬-೧೦೧) ; ದಾರಿ ಯೊಳಿಡುಕುಚಿಳೊಳೋಣಿಯೊಳಾರವೆಗಳ ತಳದೊಳಂಗಡಿಗಳೊಳ್ . . . ಬೇರೂಱಿತು ಜಾರರನುಭವಂ ಕಳ್ತಲೆಯೊಳ್ (ಗಿರಿಕ. ೪-೮೩) ; ಆ ಬ್ರಹ್ಮ ಪುರಿಯ ಪಡುವಲು ದಾರಿಯಿಂ (ಎಇ. XIX, ೨೫-೫೩ ; 1245); ಸಾರತರ ಸುಕೃತವನು ಸಂಚಿಸಿ ಧೀರರೈದುವ ಸತ್ಯಲೋಕದ ದಾರಿಯೆಂಬಂದದಲಿ ಗಂಗೆಯ ಧಾರೆ ಮೆಱೆದಿಹುದು (ಕುವ್ಯಾಅ. ೭-೩೩) ; ದಾರಿ ಯಾವುದಯ್ಯ ವೈಕುಂಠಕ್ಕೆ ಹಾದಿ ತೋಱಿಸಯ್ಯ (ಪುರಂದ. ೨-೧೩೭ ಪಲ್ಲವಿ) ; ಊರಿಂಗೆ ದಾರಿಯನು ಯಾರು ತೋಱಿದರೇನು (ಸರ್ವಜ್ಞ. ೩೮); ಕನ್ನಡವೇ ತಾಯಿ ಕನ್ನಡವೇ ತಂದೆ ಕನ್ನಡವೇ ದಾರಿ ಮುಂದೆ (ಇಂಚಾಪ. ೮೦-೮೬) ; ಬಂದ ದಾರಿಗೆ ಸುಂಕವಿಲ್ಲ (ಗಾದೆ). ೨. ರೀತಿ; ಕ್ರಮ; ಉಪಾಯಂ: ಹಾಗಾದರೆ ಈ ಪಾಶದಿಂದ ಮುಕ್ತವಾಗುವ ದಾರಿಯಿಲ್ಲವೇ ? (ಧರ್ಮಸಾ. ೧೩೨). ೩. ನಡತೆ ; ನೀತಿ; ಶೀಲ ; ಆಚಾರ : ಕೆಟ್ಟ ಸಹವಾಸದಿಂದ ಅವನು ದಾರಿಯನ್ನು ತಪ್ಪಿದ (ರೂಢಿ); ಆ ಹುಡುಗನ ದಾರಿಯೇ ಸರಿಯಿಲ್ಲ (ರೂಢಿ). 'ದಾರಿದಪ್ಪು', 'ದಾರಿಬಿಡು' ಪರಾ. ೪. (ಆಲಂ) ಬರುವಿಕೆಯಂ ಅಥವಾ ಆಗಮನದ ಸಮಯ. 'ದಾರಿಕಾಯು' ಪರಾ. ೫. (?) : ಕ್ಷೀರಾಬ್ಧಿಯ ನೀರಲ್ಲದೆ ಧೀರನ ಮಜ್ಜನಕೆ ಪೆಱವು ನೀರ್ ತಗವೆಂದಾ ವಾರಾಶಿವರಂ ಸುರಜನ ದಾರಿ ಮನೋಹಾರಿ ನೀಳ್ದುವೆರಡುಂ ಕೆಲದೊಳ್ (ಆದಿಪು. ೭-೮೨).

**ದಾರಿ ಗುಂಟ, ದಾರಿಯ ಗುಂಟ** = ಹಾದಿಯುದ್ದಕ್ಕೂ : ದಾರಿಗುಂಟ ನಡೆಯುವುದು ನಿನ್ನ ಕೆಲಸವಲ್ಲವೇ ? (ಪರಪ. ೨೮) ; ದಾರಿಯ ಗುಂಟ ದೀಪವಾಗಬೇಕು (ಅಪನಾ. ೭). **ದಾರಿಗೆ ತರು** = ಒಳ್ಳೆಯ ನಡತೆಯನ್ನು ಕಲಿಸು ; ಪಳಗಿಸು : ಕೆಡುತ್ತಿರುವವನನ್ನು ದಾರಿಗೆ ತರಬೇಕಾಗಿದೆ (ರೂಢಿ). **ದಾರಿಗೆ ಬರು** = ಸರಿಯಾದ ರೀತಿಯನ್ನು ಅನುಸರಿಸು : ಆ ಮೂರ್ಖ ದಾರಿಗೆ ಬರಲಿಲ್ಲ (ವಚಭಾ. ೨೬೨). **ದಾರಿಗೆ ಹಚ್ಚು** = ವ್ಯವಸ್ಥೆಯನ್ನುಂಟು ಮಾಡು ; ಏರ್ಪಾಟುಮಾಡು : ನಾನವನಿಗೆ ನೀರು ಕುಡಿಯುವ ಪಾತ್ರೆ, ಒಂದಿಷ್ಟು ಫರಾಳ, ಹಾಸಿಗೆ, ಹೊದಿಕೆ ಕೊಟ್ಟು ದಾರಿಗೆ ಹಚ್ಚಿದೆ (ಸ್ಮೃತಿಚಿ. ೨೬೪). **ದಾರಿ ತಪ್ಪಿಸು** = ಮಾರ್ಗ ತಪ್ಪುವಂತೆ ಮಾಡು ; ಕೆಟ್ಟ ದಾರಿ ಹಿಡಿಯುವಂತೆ ಮಾಡು: ಅವನಿಗೆ ದಾರಿ ತಪ್ಪಿಸುವಂತಹ ಸ್ನೇಹಿತರೇ ಹೆಚ್ಚು ಮಂದಿ (ರೂಢಿ). **ದಾರಿಯ ತೆಗೆ** = ಹಾದಿಯನ್ನು ಮಾಡಿಕೊಳ್ಳು ; ಮಾರ್ಗವನ್ನು ತಿಳಿ : ಬಗಿದು ಹೊಕ್ಕರು ಮೆಳೆಗಳನು ಮಿಂಚುಗಳ ಕಂಬೆಳಗಿನಲಿ ದಾರಿಯ ತೆಗೆತೆಗೆದು ಸಾರಿದರು (ಕುವ್ಯಾಅ. ೯-೨೪). **ದಾರಿಯ ದೀಪ** = ಹಾದಿಯ ಬೆಳಕು ; ಮಾರ್ಗದರ್ಶನವನ್ನುಂಟುಮಾಡುವ ಪ್ರಭೆ: ಅವರು ದಾರಿಯ ದೀಪವಾದರು ಬಾಳಿಗೆ (ಇಂಚಾಪ. ೩-೫).

[ ದೇ.॥ ತಮಿ. ಆತರ್, ತಾರಿ, ತಾರೈ; ತುಳು. ತೆಲು. ದಾರಿ ]

**ದಾರಿಕ** (ನಾ). ಹಾದಿಯಲ್ಲಿ ಹೋಗುವವನು; "ದಾರಿಗ, ದಾರಿಹೋಕ" (ಜಾನಕೋ. ೪). [ ದಾರಿ + –ಕ₃ ]

**ದಾರಿಕಟ್ಟು** (ಕ್ರಿ). ಹಾದಿಗೆ ಅಡ್ಡ ಬರು; ಅಡ್ಡಗಟ್ಟು; ರಸ್ತೆಯಲ್ಲಿ ಬಂದು ತಡೆಯು: ಹಠಾತ್ತಾಗಿ ಕಳ್ಳರು ಬಂದು ದಾರಿಕಟ್ಟಿ ಮೇಲೆ ಬಿದ್ದು . . . ಕುಳಿತಿದ್ದ ಸುಂದರಾಂಗಿಯನ್ನು ಹೊರಕ್ಕೆ ಎಳೆದರು (ಭಾರವೀ. ೨).

[ ದಾರಿ + ಕಟ್ಟು₁ ]

**ದಾರಿಕಾಯು** (ಕ್ರಿ). (ಆಲಂ) (ಯಾವುದಾದರೂ ವಸ್ತು ಅಥವಾ ಯಾರಾದರೊಬ್ಬರ ಬರವನ್ನು) ಎದುರುನೋಡು,–ನಿರೀಕ್ಷಿಸು ; ಹಾದಿನೋಡು : ಎತ್ತಿನ ಬಂಡಿಯಿಳಿದು, ಬಸ್ಸಿನ ದಾರಿಕಾಯ್ದು, ಕಾರಿನಲ್ಲಿ ತೂರಿ, ಹಡಗ ಬಿಟ್ಟು ವಿಮಾನದಲಿ ಹಾರಿ ಗೋಲಗಳ ಮೇಲೆ ದಾಳಿಮಾಡಿದ್ದೇವೆ (ನೆಲಮು. ೩೧-೨೮); ಅವರೆಲ್ಲ ಗಪ್‌ಚಿಪ್ ಉಪಹಾರ ಮಾಡಿ ಬೇಗರ ದಾರಿ ಕಾಯುತ್ತಾ ಕುಳಿತರು (ಸ್ಮೃತಿಚಿ. ೨೫).

[ ದಾರಿ + ಕಾಯು₁ (<ಕಾ₁) ]

**ದಾರಿಕಾರ** 'ದಾರಿಕಾಱ' ನೋ.

**ದಾರಿಕಾಱ, ದಾರಿಕಾರ, ದಾರಿಗಾರ** (ನಾ). ಹಾದಿಯಲ್ಲಿ ಹೋಗುವವನು ; ಪಯಣಿಗ ; ಪಥಿಕ : ಊರಿಗೆಯ್ದಿದ ಮಾರಿ ಬೀರಸಟ್ಟಿಯ ಹೊಯ್ದು ದಾರಿಕಾಱರ ಗಾದೆಯಂತೆ (ಭರಚ. ೪೮-೯೪). **ದಾರಿಕಾರ** : ದಾರಿಕಾರರ ಹಾಗೆ, ನೀರಡಿಸಿ ಬೇಸಿಗೆಯ ನಡುಹಗಲಿನಲ್ಲಿ ನಡೆದು (ಸಖೀಗೀ. ೭೦-೩) ; ನೀರಡಿಸಿ ಬಂದನವನಾ ಜಗದ ದಾರಿಕಾರ (ನೆಲಮು. ೪೩-೧೭) ; ಮರೆಯದಿರು ರಾಜಕುವರ ಪಥದಿ ನೀನೊಬ್ಬನೇ ದಾರಿಕಾರ (ಸ್ವದರ್ಶಿ. ೨೯); ಸಂದರ್ಭ ಸಿಕ್ಕಿದಾಗಲೆಲ್ಲ ದಾರಿಕಾರರನ್ನು ಹಿಡಿದು ಕೊಳ್ಳೆ ಹೊಡೆಯುತ್ತ ಜೀವನ ಸಾಗಿಸಿದ್ದರು (ಅಕ್ರಮ. ೫೦). **ದಾರಿಗಾರ** : (ಕ).

[ ದಾರಿ + –ಕಾಱ ]

**ದಾರಿಕೆ** (ನಾ). ೧. ಕನ್ಯೆ; ಹೆಣ್ಣುಮಗಳು; ಹುಡುಗಿ: ನೀರ ಬೊಬ್ಬುಳಿಕೆ ಕಾಮನ ಬಿಲ್ಲು ಸಂಜೆಯೋಳಿತ್ತೋಱುವ ಕೆಂಪು ಪುಲ್ಲನಿಯ ದಾರಿಸಂಗಡ ದಾರಿಕೆಯರ ಚಿತ್ತದವೊಲು ಆರಯ್ಯಲೆಲ್ಲವಧ್ರುವವು (ಶಾಂತೀಶ. ೮-೮೯). ೨. ಸೂಳೆ ; ವೇಶ್ಯೆ ; ವಾರಾಂಗನೆ : ಘನತರಭೋಗಮುಂ ಗತಿಯ ವಕ್ರತೆಯುಂ ತೆಱಪಾಗೆ ಸಾರ್ದು ಮೆಲ್ಲನೆ ಪುಗುವಂದಮುಂ ನೆಱೆಯೆ ಭಾವಿಸಿ ಬಂದ ಭುಜಂಗನಂ ಭುಜಂಗನೆ ದಿಟಮೆಂದು ದಾರಿಕೆ ಮಯೂರಿಕೆ ಯಂದದಿನೇಂ ಕನಲ್ದಳೋ (ಚಂದ್ರಪು. ೮-೫೮). [ ಸಂ. ದಾರಿಕಾ ]

**ದಾರಿಕೆಳೆ** (ನಾ). ೧. ದಾರಿಯ ಸ್ನೇಹ; ಹಾದಿಯ ಗೆಳೆತನ. ೨. (ಅಲಂ) ತಾತ್ಕಾಲಿಕ ಸ್ನೇಹ ; ನಶ್ವರವಾದ ಸಂಬಂಧ : ಯಾರೆ ಮೋಹವನು ಸಂಸಾರದಿಂ ಭಯವೇನು ದಾರಿಕೆಳೆಯದು ನಿನಗೆ ? (ಮಂಕುತಿ. ೬೧೪).
[ ದಾರಿ + ಕೆಳೆ$_2$ ]

**ದಾರಿಗ** (ನಾ). = ದಾರಿಕಾಱ : ತೀರಲು ತೃಷೆ ನೀರು ತೀರಲು ಸಂತಾಪ ತೀರಲವರ ನೋಳ್ಪಾಸೆ ತೀರದೆ ನಿಂದಿರುತಿರೆ ಭೂರಿದಾರಿಗರಾ ವಾರಿಮಂಡಪಗಳೊಳು (ಅಂಜನ. ೨-೧೧೭); ನೀರಡಿಸಿ ಕಾಲ್ಗಳಱಿತವಾರೆಯ ಜಳವಿಲ್ಲ ಕೆಲವು ಕೆಱೆತೊಱೆಗಳೊಳಂ ನೀರೊಳ್ಳೆಗೊಳ ಕಾದುದು ದಾರಿಗರುಂ ಬಿಡದಂತುಱೆ ಬೀಳ್ವರ್ ನೆಳಲೊಳ್ (ಹಮ್ಮಿರ. ೪-೬೭) ; ಮಿಗೆ ಕುವರಗೆ ಶಶಿಪ್ರಭೆಯ ಚೆಲ್ವಿಕೆಯ ದಾರಿಗ ವೇಳ್ದನೆಂದನಾ ಮುನಿಪ (ಚಂಪ್ರಸಾಂ. ೭); ದಾರಿಗರೂರುಗರ್ನಾಡುಗರಿಹ ಪರಿವಾರ ವಿದ್ವಾಂಸರು ನೃಪರು ನೀರುಗಣ್ಣೊಳು ಹಗಲಿರುಳು ಗೋಳಿಟ್ಟರು (ಭರತ. ೭೮-೧೦೩) ; ರಸದಾಳಿಗರ್ಪುಗಳ ಸೋಗೆಗಳ ವಸುರುವ್ಪೊಗರಾಗಸಕೆ ಪರ್ವುತಿಹುದಾ ನಾಡೊಳೆಲ್ಲಿಯುಂ ದಾರಿಗರ ಕಣ್ಗೆ ಕೌತುಕವಾಗಲು (ಜೈಮಿಭಾ. ೭-೫).
[ ದಾರಿ + – ಗ$_2$ ]

**ದಾರಿಗಳ್ಳ** (ನಾ). ಮಾರ್ಗದಲ್ಲಿ ದರೋಡೆ ಮಾಡುವ ಕಳ್ಳ; ಹಾದಿಗಳ್ಳ: ದಾರಿಗಳ್ಳರ ಕೈಗೆ ಸಿಕ್ಕಿ ಅವರು ಹಣವನ್ನೆಲ್ಲಾ ಕಳೆದುಕೊಂಡಿದ್ದರು (ರೂಢಿ). [ ದಾರಿ + ಕಳ್ಳ$_1$ ]

**ದಾರಿಗಾಣ್** (ಕ್ರಿ). ೧. ದಾರಿಯನ್ನು ತಿಳಿ. ೨. ಉಪಾಯವನ್ನು ತಿಳಿ : ಅಕ್ಕ ಮಾತ್ರ ವಿಹ್ವಲಳಾಗಿ ದಾರಿಗಾಣದೆ ಒಳಗೆ ಓಡಿಬಂದು (ಕಮಲ. ೨೧೦).
[ ದಾರಿ + ಕಾಣ್ ]

**ದಾರಿಗಾಣಿಸು** (ಕ್ರಿ). ಮಾರ್ಗ ತೋರಿಸು; ದಾರಿತೋರಂ : ಎದೆಗೊಂಡು ದಾರಿಗಾಣಿಸುವ ಈ ವಾಗ್ಜ್ಯೋತಿ (ನಾಡೋಜ. ೩೭). [ ದಾರಿ + ಕಾಣಿಸು ]

**ದಾರಿಗಾರ** 'ದಾರಿಕಾಱ' ನೋ.

**ದಾರಿಗುಟಿಗ** (ನಾ). ಹಾದಿಯನ್ನು ಸವೆಸುವವನು; ದಾರಿಹೋಕ ; ಪಯಣಿಗ : ದಾರಿಗುಟಿಗಂ ಪಾರಿಪಂಥಿಕಃ (ಶಬ್ದಾನು. ೫೪೮ ವ್ಯಾಖ್ಯಾ).
[ ದಾರಿ + – ಕುಟಗ$_1$ ]

**ದಾರಿಗೆಡು** (ಕ್ರಿ). ಮಾರ್ಗತಪ್ಪು ; ದಾರಿ ತಿಳಿಯದಾಗಂ : ಬಿರುದರ್ ಕರಿಗಿಕ್ಕಿದ ಕಳ್ಳನಂತೆ ಜರಿಯ ಬೀರರ್ ದಾರಿಗೆಟ್ಟರಂತೆ ಬೆದಱಿ (ಧರ್ಮಾಮೃ. ೨-೬೯). [ ದಾರಿ + ಕೆಡು$_1$ ]

**ದಾರಿಗೊಳ್**, ದಾರಿಗೊಳ್ಳು (ಕ್ರಿ). ಹಾದಿಹಿಡಿ ; ಮಾರ್ಗಹಿಡಿ : ದಾರಿಗೊಂಡು ಹೋಹವರೆಲ್ಲ ನೀವು ಕೇಳಿರೇ (ಅವಚಂ. ೧೦೩-೪೬೯) ; ವೀರಕೋಪಾಟೋಪದಿಂ ಮದವಾರಣಂ ಬರೆ ಕಾಣುತಂ ಬಾಹೂರ ಬೊಮ್ಮಯ್ಯಂ ಬಗೆಯದಂಜದೆ ತೊಲಗದಿಂತು ದಾರಿಗೊಂಡೆಯ್ತರಲ ದುಗ್ರಾಕಾರದಿಂ ಮೇಲ್ವರಿಯೆ (ಬಸವು. ೨೨-೩೦). **ದಾರಿಗೊಳ್ಳು :** ಶಾಪವನಿತ್ತು ದೂರ್ವಾಸ ತನ್ನ ದಾರಿಗೊಂಡು ತಾನು ಹೋದಲ್ಲಿ (ಸಕಚ್ಛ. ೮).
[ ದಾರಿ + ಕೊಳ್$_1$ ]

**ದಾರಿಗೊಳ್ಳು** 'ದಾರಿಗೊಳ್' ನೋ.

**ದಾರಿಡು** (ಕ್ರಿ). ಸುರಿ ; ಹರಿ ; ಪ್ರವಹಿಸಂ ; ಧಾರಾಕಾರವಾಗಿ ಹರಿ : ಚೂತಫಲದಾಸಾರ ದಾಡಿಮಕಡರೆ ತದ್ರಸ ಕದಳಿಗಳ ಮೇಲೆ ದಾರಿಡಲು (ಜೀವಂಧ. ೨-೮) ; ಶೈಲದೆಡಬಲದೊಱತೆಯನೆ ಸುಕಪೋಲದಲಿ ದಾರಿಡುವ ಮದಜಲ ಧಾರೆಗಳ . . . ನೋಡಿದರು (ಕುವ್ಯಾಉ. ೧೦-೧೯).
[ ದಾರೆ$_2$ + ಇಡು$_1$ ]

**ದಾರಿತ** (ಗು). ಒಡೆದ ; ಭೇದಿಸಿದ ; ಸೀಳಿದ ; ಕತ್ತರಿಸಿದ ; ಹರಿದ : ದುಃಖಕ್ರಕಚದಾರಿತ ದಾರುದಾರುಣಕರುಣಾಕೃಷ್ಟಬಾಷ್ಪಜಲಲುಳಿತ ಲೋಚನಂ ಬಂದು ನೆಗವೆ (ಲೀಲಾವ. ೧೪-೬೯ ವ). [ ಸಂ. ]

**ದಾರಿತಪ್ಪು** 'ದಾರಿದಪ್ಪು' ನೋ.

**ದಾರಿತುಳಿ** (ಕ್ರಿ). ಹಾದಿಯಲ್ಲಿ ನಡೆದು ಸಾಗಂ,–ಮುಂದೆ ಹೋಗು ; ನಡೆ: ಬಿಸಿಲಿನಲ್ಲಿ ದಾರಿತುಳಿಯುವಾಗ ಅನೇಕ ವಿಧವಾದ ಆಲೋಚನೆಗಳು, ನೆನಪುಗಳು ಅವಳ ಮನಸ್ಸಿನಲ್ಲಿ ಸುಳಿಯುತ್ತಿದ್ದುವು (ದೂರಸ. ೯೮).
[ ದಾರಿ + ತುಳಿ$_1$ (<ತುಱಿ$_1$) ]

**ದಾರಿತೆಗೆ** 'ದಾರಿದೆಗೆ' ನೋ.

**ದಾರಿತೋರ್** 'ದಾರಿದೋಱು' ನೋ.

**ದಾರಿತೋರಿಕೆ** (ನಾ). ಮಾರ್ಗದರ್ಶನ : ನಾಗವರ್ಮನು ಕಾಣದ, ೮೦೦ ವರ್ಷಗಳ ಹೊಸ ಹಾಡುಕಟ್ಟುಗಳ ದಾರಿತೋರಿಕೆಯ ಮೇಲೂ, ಇಂಗ್ಲಿಷ್ ಛಂದಸ್ಸಿನ ಸ್ವಾತಂತ್ರ್ಯ ವೈವಿಧ್ಯ ಸೌಂದರ್ಯಗಳ ಪ್ರೇರಣೆಯ ಮೇಲೂ . . . ಸರಳರಗಳೆಯನ್ನೂ ಪ್ರಯೋಗಿಸುತ್ತಾ ಇದ್ದಾರೆ (ಕೈಪಿಡಿ. ೧೧೮).
[ ದಾರಿತೋರು (<ದಾರಿದೋಱು) + – ಇಕೆ ]

**ದಾರಿತೋರು** 'ದಾರಿದೋಱು' ನೋ.

**ದಾರಿತೋಱು** 'ದಾರಿದೋಱು' ನೋ.

**ದಾರಿದಪ್ಪು**, ದಾರಿತಪ್ಪು (ಕ್ರಿ). ೧. ಮಾರ್ಗವನ್ನು ಕಳೆದುಕೊಳ್ಳು ; ಹಾದಿತಪ್ಪು : ದಾರಿದ[ಪಾಠಾಂ. ತ]ಪ್ಪಿದೆವಱಿಸಿ ರಾಜದ್ವಾರವನು ಹೇಳೌ ಸ್ವಯಂಪ್ರಭೆ ಧಾರುಣೀಶನ ಹಗೆಯ ನಗರಕೆ ಹೋಗಬೇಕು (ತೊರವೆ. ೪-೧೦-೨೫); ದಾರಿದಪ್ಪಿದವರಿಗೆ ವಿಭ್ರಮ ತೋರಿದಂತೆ (ಚದಳ. ೨೪-೦೨). ೨. ಧರ್ಮಮಾರ್ಗವನ್ನು ಬಿಡಂ; ಅನ್ಯಾಯಕ್ಕೆ ಬೀಳಂ ; ಕೆಟ್ಟ ದಾರಿ ಹಿಡಿ : ದಾರಿದಪ್ಪಿದ ಮನುಷ್ಯನನ್ನು ಬಹಳ ಚಾತುರ್ಯದಿಂದ ದಾರಿಗೆ ತಂದುಕೊಂಡಳು (ರೂಢಿ). **ದಾರಿತಪ್ಪು :** ೧. ನನ್ನ ಭಾಗ್ಯ ದೇವತೆಯು ದಾರಿತಪ್ಪಿ ಬಂದಳೋ ಹೇಗೊ (ಚಿಜೀವ. ೦೬೪) ; ಬೋಳನು ದಾರಿತಪ್ಪಿ ನಡೆದಿದ್ದನು (ಕಾಲೂರ. ಕಥಾಸಾರ ೧೧).
[ ದಾರಿ + ತಪ್ಪು$_1$ ]

**ದಾರಿದೀಪ** (ನಾ). ೧. ಬೀದಿಗಳಲ್ಲಿ ಸಾಲಾಗಿ ಹಾಕಿರುವ (ವಿದ್ಯುಚ್ಛಕ್ತಿಯ) ದೀಪ : ಆ ಸಣ್ಣ ಹಳ್ಳಿಯಲ್ಲಿ ಇತ್ತೀಚೆಗೆ ದಾರಿ ದೀಪಗಳನ್ನು ಹಾಕಿದ್ದಾರೆ (ರೂಢಿ). ೨. (ಅಲಂ) ಬದುಕಿನ ಮಾರ್ಗದರ್ಶನ ಮಾಡುವ ಬೆಳಕು,–ದಾರಿಯನ್ನು ತೋರಿಸುವ ಬೆಳಕು: ಈ ವಿಚಾರ ಓಸಿಯನಸ್‌ಗೆ ದಾರಿದೀಪವಾಗಿ ಕಂಡಿತು (ಬದ್ಧಸ್ಪ. XVI ಪೀಠಿಕೆ) ; 'ಗೀತಾಂಜಲಿ' ಯಂಥ ಅಮೂಲ್ಯ ಗ್ರಂಥಗಳು ನಮ್ಮ ದಾರಿದೀಪವಾಗಬೇಕು (ಧರ್ಮಸಾ. ೯೩). [ ದಾರಿ + ದೀಪ$_2$ ]

**ದಾರಿದೆಗೆ**, ದಾರಿತೆಗೆ (ಕ್ರಿ). ೧. ದಾರಿಹಿಡಿ ; ಹೊರಡಂ : ಆ ಗಜದಿಂ ಪಲರುಂ ಸೀಱಿಸಿ ವಿಜಯೋದ್ಯೋಗಕ್ಕೆ ದಾರಿದೆಗೆದನಲಂಪಿಂ (ಚಕು. ೭-೧೦೪) ; ಆ ಪರ್ವತಾಗ್ರದ ಚಾರಣರು ಚದುರೆಯರು ಸಿದ್ಧರು ಮುಗ್ಧೆಯರು ಕಪಿಯ ಭೈರವಾಡಂಬರಕೆ ಬೆದಱಿದು ದಾರಿದೆಗೆದರು ಸುರಪುರಕೆ (ತೊರವೆ. ೪-೦೨-೨೧). **ದಾರಿತೆಗೆ :** ೨. ಹಾದಿಯನ್ನು ಕಂಡುಹಿಡಿ ; ಮಾರ್ಗವನ್ನು ಕಲ್ಪಿಸಂ : ಕಾದಿರಮಿಯಾ ಗಿಂಧರನ ಕಿವಿಯಲ್ಲಿ ಮೆಲ್ಲನೆ ಹೇಳಿದ : ಮಹಾರಾಜ, ಮನೋಹರಗೆ ಏನಾರ ದಾರೀತೆಗೀರಿ (ಪ್ರೇಮಾಶ್ರ. ೧೩). [ ದಾರಿ + ತೆಗೆ$_1$ ]

**ದಾರಿದೋಂಟ** (ನಾ). ಮಾರ್ಗದಲ್ಲಿರುವ ತೋಟ : ತರತರದ ಬಳ್ಳಿಗಿಡುಮರಗಳಿಂದಿಡಿದ ದಾರಿದೋಂಟಂಗಳಂ ಸೋವುತ್ತೆ ಕಣ್ ಕಿವಿಗಳೆಚ್ಚರಿಕೆಯಿಂ . . . ಪ್ರವೇಶಿಸಿದನಯ್ ತ್ರಿಕೂಟತ್ರಯವ್ಯಾಪಿಯಾ ದಶಗ್ರೀವಪುರದ ಪಾಪದ ಸಾಂದ್ರಕೇಂದ್ರಮಂ (ಶ್ರೀರಾಮಾ. ೪೪೭-೩೦).
[ ದಾರಿ + ತೋಂಟ ]

**ದಾರಿದೋಱು**, ದಾರಿತೋರ್, ದಾರಿತೋರು, ದಾರಿತೋಱು (ಕ್ರಿ). ಹಾದಿತೋರಂ ; ಮಾರ್ಗ ಕಾಣಿಸಂ; ಉಪಾಯಂ ತಿಳಿಸಂ; ಗತಿ

ಭೃಂಗಿಯು ವೀರಭದ್ರಾದಿ ಪ್ರಮಥರೋಲೈಪ ಸಮಯದೊಳು (ಬಸಪು. ೧-೫೩). ೨. ಕೃಷ್ಣನ ಸಾರಥಿ : ನಾಗಾರಿಕೇತನಂ ದಾರುಕಾನ್ವಿತಂ ವರೂಥಸ್ಥನಾಗಿ ಕುಶಸ್ಥಳಕ್ಕೆ ತಳರ್ದಂ (ಜಗವಿ. ೪-೫೩ ವ) ; ಘನ ಬಳಾಹಕ ಸೈನ್ಯ ಸುಗ್ರೀವನನು ನಿರ್ಮಳ ಮೇಘಪುಷ್ಪನನನುವಿನಲಿ ಹೂಡಿದನು ದಾರುಕ ಹೇಮಮಯ ರಥವ (ಕುವ್ಯಾಉ. ೭-೬) ; ಪಾಥೋರುಹಾಕ್ಷನಂ ದಾರುಕಂನಿಟ್ಟಿಸಿ ವರೂಥಮಂ ತಿರುಗಿಸಿದನು (ಜೈಮಿಭಾ. ೭-೫೬). ೩. ದೇವದಾರಂ ಮರ. ೪. ಮರ ; ಕಟ್ಟಿಗೆ ; ಕಾಷ್ಠ. 'ದಾರುಕಾಸನ' ಪರಾ. ೫. [ವೀಶೈ] ಪಂಚಾಚಾರ್ಯರಲ್ಲಿ ಒಬ್ಬ ; ಪಂಚಪೀಠಗಳಲ್ಲಿ ಒಂದಾದ ಉಜ್ಜಯಿನಿ ಪೀಠದ ಸ್ಥಾಪಕ. 'ದಾರುಕಪೀಠ' ಪರಾ.

[ ಸಂ. ]

**ದಾರುಕಪೀಠ** (ನಾ). [ವೀಶೈ] ಪಂಚಪೀಠಗಳಲ್ಲಿ ಒಂದು; ಉಜ್ಜಯಿನಿಯ ಪೀಠ : ಉಜ್ಜಯಿನಿಯಲ್ಲಿ ದಾರುಕಪೀಠವಿದೆ; ಬಾಳೆ ಹೊನ್ನೂರಿನಲ್ಲಿ ರೇಣುಕಪೀಠವಿದೆ (ರೂಢಿ).

[ ದಾರುಕ + ಪೀಠ ]

**ದಾರುಕರ್ಮ** (ನಾ). ಮರದ ಕೆಲಸ ; ಬಡಗಿಯ ಉದ್ಯೋಗ : ದಾರುಕರ್ಮ ವಾಸ್ತುವಿದ್ಯಾಪೂರ್ವಯಂತ್ರ ಪ್ರಯೋಗ ವಿ[ಷಾ]ಪಹರಣ ಸರಭೇದ ರತಿತಂತ್ರೇಂದ್ರ ಜಾಲ ವಿವಿಧ ವಿದ್ಯೆಗಳೊಳಂ . . . ಜಾಣ (?) [ನು]ಮಾಗಿ (ಪಂಪಭಾ. ೨-೩೪ ವ). [ದಾರು$_2$ + ಕರ್ಮ ]

**ದಾರುಕಾಸನ** (ನಾ). ಮರದ ಪೀಠ ; ಮರದ ಮಣೆ : ದಾರುಕಾಸನ ಭಾಗ್ಯಹಾನಿಯು (ಗಗಶಾ. ४-೨೨). [ ದಾರುಕ + ಆಸನ ]

**ದಾರುಕುಲ** (ನಾ). ಮರಗಳ ಸಮೂಹ : ಫಲವೀವ ವೃಕ್ಷಮಂ ಬಿಟ್ಟು ನೀರಸ ದಾರುಕುಲಕಾಲವಾಲಮಂ ತಿರ್ದಿಸಿ (ಅರಾಜ. ೧೨-೨೭).

[ ದಾರು$_2$ + ಕುಲ ]

**ದಾರುಜೀವನ** (ನಾ). (ಅಲಂ) ನೀರಸವಾದ ಜೀವನ ; ಸ್ವಾರಸ್ಯವಿಲ್ಲದ ಬಾಳು : ತಾವು ಅನೋನ್ಯವಾಗಿರದೆ, ಮಾತುಕಥೆ ಕೂಡ ಇಲ್ಲದೆ, ಮಸಣ ಮೌನದಿಂದ ದಾರುಜೀವನವನ್ನು ಜೀವಿಸುವುದು ಸಾವಿಗಿಂತ ಕಡೆ ! (ಬಂಕಿಮು. ೨೦೨). [ ದಾರು$_2$ + ಜೀವನ ]

**ದಾರುಣ** (ಗು). ೧. ಕ್ರೂರವಾದ ; ಭಯಂಕರವಾದ ; ಉಗ್ರವಾದ ; ಕಠಿಣವಾದ : ಮುನಿಜನಕಿಚ್ಚುವಿಘ್ನಂಗಳಂ ದಾರುಣ ದೈತ್ಯರ್ ಮಾಡೆ (ಪಂಪಭಾ. ४-೧೧) ; ಕನಕ ಶಾಂತಿ ತಪೋಧನನುಂ ಧ್ಯಾನಾನಲಸಂಧುಕ್ಷ ಮಾಣದಾರುಣದುರಿತಾರಣ್ಯನಾಗಿ ಯೋಗದೊಳಿರೆ (ಶಾಂತಿಪು. ४-೧೪ ವ) ; ವೀರರಸಂ ಬವರಿಸುಗುಮುದಾರೋತ್ಸಾಹ ಪ್ರವೃತ್ತಿ ಕಾರಣ ಕಾರ್ಯಂ ದಾರುಣ ರೋಷಾವೇಶ ವಿಕಾರಭವಂ ರೌದ್ರಮೆಂಬ ರಸಮದು ನೆಗಳ್ಗುಂ (ಕಾವ್ಯಾವ. ೮೦೭). (ನಾ). ೨. ಭಯಂಕರವಾದುದು ; ಕ್ರೂರ ವಾದುದು ; ಕಠಿಣವಾದುದು : ಕಾನನಂ ಕಣ್ಗೆ ದೂರಕೆ ನುಣ್ಪು ದೋರ್ದಡಂ ಬಾಳ್ಕೆಗತಿ ದಾರುಣಂ (ಶ್ರೀರಾಮಾ. ೮೮-೨೮೭). ೩. ಕ್ರೂರಿ ; ಹಿಂಸಿಸುವವನು ; ನಿಷ್ಕರುಣಿ ; ನಿರ್ದಯಿ : ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ ಸತ್ಪೂಜಿತಂ ದಾರುಣಂ ವೈದ್ಯವಿದಂ ತಕ್ಷೋಪಜೀವ್ಯಂ (ಜಾತತಿ. ೧೭-೧೭) ; ಓಹೋ ಹೋ ಹಾ ಮಾಣ ದಾರುಣ ಮಾಣೆಂದೊ ಱಲುತ್ತೆ ಬೀಟ್ಟ ತವೆ ಪೀರ್ದಂ ಪೂತನಾಜೀವಮಂ (ಜಗವಿ. ೩-೨४) ; ನಾನೆ ದಾರುಣನೆಂದಿದೇತಕೆ ಬೀಗುವೆ ಸುಮ್ಮನೆ ಓ ಹಾಲಾಹಲವೆ (ಇಂಜಾಪ. ೨೨೧-४೫). ४. ಕ್ರೂರತನ ; ಉಗ್ರತೆ ; ನೋವು : ದಾರುಣದ ಕರ್ಮ ನಿಯತಿಯನಿನಿತು ಶಿಥಿಲಿಪುದು ಕಾರುಣ್ಯದಿಂ ದೈವ (ಮಂಕುಕ. ೫೦४). ೫. ಒಂದು ನರಕದ ಹೆಸರು : ಬಳಿಕ ಕುಂಭೀಪಾಕ ಸುಪಾಕ ಪ್ರಮುಖ ದಾರುಣ ಅಂಗಾರಕಮೆಂಬೈದು ಮಂತ್ರಿ ನರಕಂಗಳಿಂ ಸೇರಿ ತರಳತಾರ ವೆಂಬರಸುನರಕವಿಹುದು (ವಿವೇಕ. ೧೮೦). [ ಸಂ. ]

**ದಾರುಣತೆ** (ನಾ). ಉಗ್ರತೆ ; ಕ್ರೌರ್ಯ ; ಭಯಂಕರತೆ : ದೈವದ ದಾರುಣತೆಯುಮಂ ಶೋಕೋದ್ರೇಕಮುಮಂ ದುಃಖದ ದುಸ್ಸಹತೆ ಯುಮಂ ಪದಾರ್ಥದನಿತ್ಯತೆಯುಮಂ ಭಾವಿಸಿ ನೋಡಿ (ಕಾದಂಪೂ. ४೫೨).

[ ಸಂ. ದಾರುಣತಾ ]

**ದಾರುಣಮುಖ** (ನಾ). ಕ್ರೂರವಾದ ಮುಖವುಳ್ಳವನು ; ಅತ್ಯಂತ ಕಟುವಾಗಿ ಮಾತನಾಡುವವನು : ವಿದ್ವತ್ಸಭಾಮಧ್ಯದೊಳ್ ಕಾಳೋ ಗ್ರೋರಗನಂತೆ ದಾರುಣಮುಖರ್ ದುಷ್ಟರ್ ಖಳರ್ ದುರ್ಮುಖರ್ ದೋಷಾನ್ವೇಷಣರಪ್ಪವರ್ ಪಟಿದೊಡೇವಂ ಮಾಟ್ಪರೇಗೆಯ್ಯರೋ (ಸುಕುಮಾ. ೧-४೭). [ ದಾರುಣ + ಮುಖ ]

**ದಾರುಣವಡೆ** (ಕ್ರಿ). ಉಗ್ರತೆಯನ್ನು ಹೊಂದು ; ಕ್ರೂರವಾಗು ; ಸೊಗಯಿಪ ಸತಿಯತಿಕಾರ್ಶ್ಯಂದಳೆದೊಪ್ಪಿದಳು ದಾರುಣವಡೆದ ನಿದಾಘ ಸಮಯ ಕಾಸಾರದ ಭಂಗಿಯುಮಂ ಸಿತಪಕ್ಷಂ ತೀರಿದ ನಿರ್ಮಲಶಶಿಬಿಂಬದ ಭಂಗಿಯುಮಂ ನೆನೆಯಿಸುತ (ಜಯುಕಾ. ४-೩೨). [ ದಾರುಣ + ಪಡೆ$_1$ ]

**ದಾರುದಾರುಣ** (ನಾ). ಮರದ ಹಾಗೆ ಒರಟಾದುದು : ದಾರುದಾರುಣನಂ ದಾನವಾರಿವಾರಿತಲೋಕನಂ ಬಾರಬಾರಣಮಂ ನೋಡಾ ಸಾರಸಾರಾಂಬು ದಾಭಮಂ (ಕವಿರಾ. ೨-೧೩೦) ; ಮಕರಂದನರಸನವಸ್ಥೆಯುಂ ಕಂಡು ದುಃಖ ಕ್ರಕಚದಾರಿತ ದಾರುದಾರುಣ ಕರುಣಾಕೃಷ್ಟ ಬಾಷ್ಪಜಲಲುಳಿತಲೋಚನಂ ಬಂದು ನೆಗಪೆ (ಲೀಲಾವ. ೧४-೬४ ವ). [ ದಾರು$_2$ + ದಾರುಣ ]

**ದಾರುಪಾಶವಿಧಿ** (ನಾ). ಹಗ್ಗದಿಂದ ಮರಕ್ಕೆ ಕಟ್ಟುವ ಕ್ರಮ (?) : ಅಪರಾಜಿತ ಮಹಿಪಸಮದ ದ್ವಿಪಂಗಳಂ ಪಿಡಿಯಲವನಿನಾಥನ ಸೇನಾಧಿಪನ ತಲೆವಿಲ್ಲ ದಲ್ ದಾರುಪಾಶವಿಧಿಯಾಯ್ತು ಬಂದು ಕಾಣ್ಬನ್ನೆವರಂ (ಶಾಂತಿಪು. ೧೧-೧४). [ ದಾರು$_2$ + ಪಾಶ + ವಿಧಿ ]

**ದಾರುಪಂದಿ** (ನಾ). ಒಂದು ಬಗೆಯ ಹಂದಿ ; ಕಾಡುಹಂದಿ : ಉಡುವು ಹೆಬ್ಬಾವು ಮುಂಗುರಿ ದಾರುಪಂದಿಯು ಕಡವೆ ಕೆನ್ನಾಯಿ ಕೊಂಡಗುರಿಯ್ (ಮಾದೇಸಾಂ. ೧-೫೮). [ ದಾರು$_2$ + ಪಂದಿ ]

**ದಾರುಹರಿದ್ರೆ** (ನಾ). ಮರದರಿಸಿನ ; ಅಂಬೆಹಳದಿ : "ಪೀತದ್ರುಃ, ಕಾಲೇಯಕಃ . . . ದಾರುಹರಿದ್ರಾ, ಪರ್ಜನೀ–೭ ಮರದರಿಸಿನ, ಕಸ್ತೂರಿ ಅರಿಸಿನವೆಂದು ಕೆಲವರನ್ನುವರು" (ಸಿದ್ಧಾಂತಿ. ೦೩೫).

[ ಸಂ. ದಾರುಹರಿದ್ರಾ ]

**ದಾರುಹಸ್ತ** (ನಾ). ಮರದ ಸೌಟು ; ಹುಟ್ಟು ; ಸಟ್ಟುಗ ; ಮರದ ಚಮಚ : " ದರ್ವೀ, ತರ್ದೂಃ, ಖಜಿಕಾ, ದಾರುಹಸ್ತಃ–ಈ ४ ಸಟ್ಟುಗಂ" (ಹಲಾಯು. ೫೨-೧೫೭) ; "ಖಜಿಕೆ ದರ್ವೀ ದಾರುಹಸ್ತಂ ದ್ರುತಂ ಹುಟ್ಟೆನಿಕ್ಕು" (ಮಂಗರಾ. ೬೧-೧೮). [ ದಾರು$_2$ + ಹಸ್ತ ]

**ದಾರುಹಸ್ತಕ** (ನಾ). = ದಾರುಹಸ್ತ : "ತಂಡೂಃ, ದಾರುಹಸ್ತಕಃ – ೨ ಕೈಬಟ್ಟ ಪೆಸರುಗಳು. ಮರದ ಸೊಟಕ ; ಮರದ ಸೌಟು" (ಸಿದ್ಧಾಂತಿ. ೨೮४). [ ದಾರು$_2$ + ಹಸ್ತಕ ]

**ದಾರೆ$_1$** (ನಾ). ೧. (ನೀರು) ಧಾರೆಯಾಗಿ ಹರಿಯುವಿಕೆ ; ಧಾರಾಕಾರ ವಾಗಿ ಬೀಳುವಿಕೆ : ಧಕಾರಕ್ಕೆ ದಕಾರಂ – ಧಾರಾ – ದಾರೆ ; ಧೂಪ – ದೂಪ (ಶಮದ. ೨೫೫ ಪ್ರಯೋ); ಜೀರದಲಿ ನೆಟಿ ತುಂಬಿದಂತಿರೆ ಪೂರವಿಸಿ ಬುದಿಲೆನಿಸಿ ಭಸಿತದ ದಾ[ಪಾಠಾಂ. ಧಾ] ರೆ ಪೊಜಮಡೆ ಜೀಕರ್ಳವೆಯಲಿ ಚಿಮ್ಮಿದಂತಾಯ್ತು (ಬಸಪು. ४४-೧೫). 'ಅಳಂದಾರೆ' ಪರಾ. ೨. ಪ್ರಧಾನ ವಾದ ಗೆರೆ ; ಪ್ರಮುಖ ಗೆರೆ ; ಮುಖ್ಯವಾದ ಗೀಟು ; ಅಂಚು : ಮೇಲಣ ವಟ್ಟಕ್ಕೆ ಎಂಟು ದಾರೆಯ ವಿಣಂ ಮುಱಿದು ಗರಿಗೆಪಟ್ಟ ವರ್ತುಳಾಕಾರದಿಂ ಶುದ್ಧವ ಮಾಡಿ (ಸರ್ವವ. ೧೨೦-೬೦೭). ೩. ಕತ್ತಿಯ ಅಲಗು,–ಅಂಚು : ಕಂತು ಪೊಡೆದೊಡೆ ಮುನೀಶ್ವರ ಕಠಿನಮನಕಾಂತಂ ದಾರೆಗಳು ಮುಱಿದಲಗುಗಳಯುಕ್ಕುಗಳ ಬಳಗವೊ . . . ಎನಿಸಿ

(ಹಚಕಾ. ೩-೨೭). ೪. [ಅಶ್ವಶಾ] ಕುದುರೆಯ ನಡಗೆಯ ಐದು ರೀತಿಗಳಲ್ಲಿ ಒಂದು: ತುರಗವನೇರಿ ದಾರೆಗಳಿಂದ [ ಕೋರಿಪ ? ] ಪರಿಪರಿ ವಿಡಾಯದಿಂದ ತಿರುಗಿಸುವನು (ಗೋಮಟೇ. ೨-೨೦). 'ದಾರೆಗತಿ' ಪರಾ. [ <ಸಂ. ಧಾರಾ ]

**ದಾರೆ** (ನಾ). ಹೆಂಡತಿ ; ಪತ್ನಿ : ದಶರಥನೃಪಂ, ತನ್ನವೊಲೆ ನಾರುಮುಡಿಯುಟ್ಟು ನೋಂಪಿಗೆ ನಿಂದ ದಾರೆಯುರ್ವೀಶಸಿ ತನುಜಾತಕಾಮೇಷ್ಟಿಯಂ ಕೈಕೊಂಡು (ಶ್ರೀರಾಮಾ. ೧೧-೨೯೯). [ ಸಂ. ದಾರ ]

**ದಾರೆ** (ನಾ). ಒಂದು ಬಗೆಯ ಸಸ್ಯ : "ಉಪಹಾರಿ – ದಾರೆ, ಹೀರೆ" (ಓಷಧಿ. ೧೭). 'ದಾಹೀರೆ' ಪರಾ. [ ? ]

**ದಾರೆಕಟ್ಟು** (ನಾ). ೧. ಮಾಮಾಚಾರದ ವ್ಯವಹಾರಗಳಲ್ಲಿ ಒಂದು ; ಕತ್ತಿಯ ಬಾಯಿ ಚಲಿಸದಂತೆ ನಿಲ್ಲಿಸುವ ಒಂದು ತಂತ್ರದ ಸಾಧನೆ ; ಖಡ್ಗಸ್ತಂಭನ. ೨. ಹಾಗೆ ನಿಲ್ಲಿಸುವ ಕ್ರಿಯೆ: ಆತನು ಮಂತ್ರ, ತಂತ್ರ . . . ದಾರೆಕಟ್ಟು, ಮೊನೆಕಟ್ಟೆಂಬ ಕುವಿದ್ಯದಿಂ ಗೆಲುವೆನೆಂದು ಬಂದವನ . . . ನಿವಾರಿಸಿ (ಭೈರಸೂ. ೩೬೬). [ ದಾರೆ$_0$ + ಕಟ್ಟು$_2$ ]

**ದಾರೆಗಡಗ** (ನಾ). (ವಿವಾಹ ಸಮಯದಲ್ಲಿ) ಹೆಣ್ಣಿಗೆ ಧಾರೆಯೆರೆಯುವ ಮುನ್ನ ತೊಡಿಸುವ ಕಡಗ: ದಾರೆಗಡಗ ಮೇವುರ ಪೊಸರನ್ನದ ಚಾರುತರದ ಸೂಡಗವನು ನಾರಿಯ ಕರಯುಗದೊಳಂದು ಸತಿಯರು ಸೇರಿಸಿದರು ನಲವಿನಲಿ (ಅಂಜಚ. ೮-೬೫) ; ಗಿಳಿದಾಲಿ ತೋಳಬಂದಿ ದಾರೆಗಡಗಂ . . . ತೊಂಡಿಲ್ಗಳಿಂದಲಂಕೃತೆಯಾದ . . . ಕನ್ನಿಕೆಯುಂ . . . ಪಸೆಯ ಜಗಲಿಗೆ ಬಿಜಯಂಗೆಯ್ದುತಮಿರ್ಪಿನಮಾಗಳ್ (ಹಾಲಾಸ್ಯ. ೪-೯-೬೪ ಪ). [ ದಾರೆ$_1$ + ಕಡಗ$_1$ ]

**ದಾರೆಗತಿ** (ನಾ). [ಅಶ್ವಶಾ] ಕುದುರೆಯ ನಡಗೆಯ ಐದು ರೀತಿಗಳಲ್ಲಿ ಒಂದು: ದಾರೆಗತಿ ಲಯ ಪೊಯ್ದು ಕಾಯಕ್ಷಂ ತಿತಿಕ್ಷೆ ಚಿತನೆರಿ ತುರ(ಗ?) ಸಮಾನಂ ಭಾರಿಕೊಸಿ ಮುಷ್ಟಿಭಾಗಂ ವ್ಯೂಹಂ ನಿವರ್ತನೆ ಪದಂ ಯತಿ ಗಾತ್ರವೆ ವಿಮಾರ್ಗಂ (ಮದಶಿ. ೧-೨೦). [ ದಾರೆ$_1$ + ಗತಿ ]

**ದಾರೆಗಿಂಡಿ** (ನಾ). ೧. ನೀರು, ಹಾಲು ಮೊದಲಾದ ದ್ರವಪದಾರ್ಥಗಳನ್ನು ಹೊರಸೂಸಲು ಸೊಂಡಿಲಂತಹ ಆಕಾರವಿರುವ ಗಿಂಡಿ ; ಸೊಂಡಿಮಿಳ್ಳೆ (ಉಕ). ೨. ನೀರು ಕುಡಿಯುವ ಪಾತ್ರೆ. [ ದಾರೆ$_1$ + ಗಿಂಡಿ ]

**ದಾರೆಬಟ್ಟಲು** 'ದಾರೆವಟ್ಟಲ್' ನೋ.

**ದಾರೆವಟ್ಟಲ್**, ದಾರವಟ್ಟಲು, ದಾರೆಬಟ್ಟಲು, ದಾರೆವಟ್ಟಲು (ನಾ). ಜರಡಿ ; ಚಾಳನಿ ; ಒಂದರಿ ; "ಚಾಲನಿ, ತಿತವು" (ನಾಚಿರಾ. ೬). **ದಾರವಟ್ಟಲು**: ದಾ[ಪಾಠಾಂ. ಧಾ]ರವಟ್ಟಲ ತೆಱದಿ ನಿನ್ನ ಕುಮಾರಿ ಕಸವನೆ ಹಿಡಿಯೆ ನೀನವಿಚಾರಿಯಾದ್ಯೆ ರಾಜಪುತ್ರ ಸಮಾಜವನು ಬಿಸುಟು (ಸಾಳ್ವಭಾ. ೧೮-೬೨). **ದಾರೆಬಟ್ಟಲು**: ರಸವನ್ನು ತ್ಯಜಿಸಿ ಕಸವನ್ನು ಹಿಡಿಯುವ ದಾರೆಬಟ್ಟಲಂತಹ ಜನರಿಗೆ, ದುರಾಸೆಯುಳ್ಳವರಿಗೆ . . . ಎಂದಿಗೂ ಸೊಗಸುವುದಿಲ್ಲವೆಂದೂ ಚಂದ್ರಕವಿಯ ಸ್ಪಷ್ಟವಾದ ಅಭಿಪ್ರಾಯ (ಶಂಕಶ. XLV ವಿಮರ್ಶೆ). **ದಾರೆವಟ್ಟಲು**: ಮೋಕ್ಷದ ಬಗೆಗಾಣ್ಬವರ್ಗೆ ಸೊಗಯಿಪ್ಪುದಿದಲ್ಲದೆ ದಾರೆ[ಪಾಠಾಂ. ದಾರ]ವಟ್ಟಲಂದದಿ ರಸಮಂ ಬಿಡುತ್ತೆ ಕಸಮಂ ಪಿಡಿದಿರ್ಪ ದುರಾಸೆಯರ್ಗೆ . . . ಸೊಗಯಿಪ್ಪುದೆ (ಶಂಕಶ. ೭). [ ದಾರೆ$_1$ + ಬಟ್ಟಲ್ ]

**ದಾರೆವಟ್ಟಲು** 'ದಾರೆವಟ್ಟಲ್' ನೋ.

**ದಾರೆಹುಳಿ**, ಧಾರೆಹುಳಿ (ನಾ). (ಕರಾ) ಒಂದು ಬಗೆಯ ಮರ ಮತ್ತು ಅದರ ಹಣ್ಣು: ಕಮರಿಕೆ: ಕಮರಕ್‌ಮರ, ಕಮರಾಕ್ಷಿ, ದಾರೆಹುಳಿ (ಮೃಶಿಗಿ. ೧೧-೧೮೪). **ಧಾರೆಹುಳಿ**: ಧಾರೆಹುಳಿ ಉಪ್ಪಿನಕಾಯಿ (ರೂಢಿ). [ ←ತುಳು. ದಾರೆಪುಳಿ ]

**ದಾರೇಷಣ** (ನಾ). ಹೆಂಡತಿಯನ್ನು ಬಯಸುವಿಕೆ ; ಸಂಸಾರಿಯಾಗುವ ಅಪೇಕ್ಷೆ : ಪ್ರಕೃತಿಯು–ಮೂರು ಪರಿಚ್ಛೇದ ಸ್ವರೂಪಳು, ಸತ್ವ ಪರಿಚ್ಛೇದ, ರಜಃ ಪರಿಚ್ಛೇದ, ತಮಃ ಪರಿಚ್ಛೇದವೆಂದು ಈ ಮೂರರಲ್ಲಿ ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ರೂಪಗಳಿಂದ ಶ್ರೀ ಪರಮಾತ್ಮನು ವಾಸ ಮಾಡುವನು. ದಾರೇಷಣ, ಪುತ್ರೇಷಣ, ವಿತ್ತೇಷಣವೆಂಬ ಈಷಣತ್ರಯದಲ್ಲಿ ಆತ್ಮ, ಅಂತರಾತ್ಮ, ಪರಮಾತ್ಮನೆಂಬ ರೂಪತ್ರಯಗಳಿಂದ ವಾಸಮಾಡುವನು (ಹಸಾರ ೨೪-೧೧ ಟೀಕು). [ <ಸಂ. ದಾರೈಷಣ ]

**ದಾರೊಕ್ಕಲು** (ನಾ). ಸಂಬಳದಾಳುಗಳನ್ನು ಇಟ್ಟು ವ್ಯವಸಾಯ ಮಾಡುವ ಒಕ್ಕಲು ; ದೊಡ್ಡ ಒಕ್ಕಲು. 'ಕೂಡೊಕ್ಕಲು' ಪರಾ. [ ದಾರು$_0$ + ಒಕ್ಕಲು(<ಒಕ್ಕಲ್) ]

**ದಾರ್ಢ್ಯ** (ನಾ). ೧. ಗಟ್ಟಿಯಾಗಿರುವಿಕೆ ; ಬಿಗಿಯಾಗಿರುವಿಕೆ ; ಗಡುಸು. ೨. ಧೈರ್ಯ; ಬಲ ; ಶಕ್ತಿ : ತನುವೊಳ್ ದಾರ್ಢ್ಯಂ ಸಮುಂತೊಪ್ಪುವಾ ಸುಖ ಪೂರ್ವಾರ್ಜಿತ ಪುಣ್ಯಮೆ (ಸೋಮೇಶ. ೩೬). ೩. ಸ್ಥಿರವಾದುದು ; ದೃಢವಾದುದು. 'ಧರ್ಮದಾರ್ಢ್ಯ' ಪರಾ. [ ಸಂ. ]

**ದಾರ್ವ** (ಗು). ಮರದ ; ಮರದಿಂದ ಮಾಡಿದ. [ ಸಂ. ]

**ದಾರ್ವಾಘಾಟ** (ನಾ). ಮರಕುಟುಕ ಪಕ್ಷಿ : "ಶತಪತ್ರಕಃ, ದಾರ್ವಾಘಾಟಃ – ೨ ಮರಕುಟಕನ ಹಕ್ಕಿ" (ಸಿದ್ಧಾಂತಿ. ೧೫೮). [ ಸಂ. ]

**ದಾರ್ವಿ** (ನಾ). ಮರದರಿಸಿನ ; ದಾರುಹರಿದ್ರ : "ಸದಾಯುಗತ–ದಾರ್ವಿ" (ಓಷಧಿ. ೧೭೪). [ ಸಂ. ದಾರ್ವೀ ]

**ದಾರ್ವಿಕೆ** (ನಾ). ೧. ಮರದರಿಸಿನದಿಂದ ಮಾಡಿದ ಕಾಡಿಗೆ ಅಥವಾ ಕಣ್ಕಪ್ಪು ; ರಸಾಂಜನ : "ದಾರ್ವಿಕಾ, ಕ್ವಾಥೋದ್ಭವಂ, ತುತ್ಥಂ, ರಸಾಂಜನಂ, ರಸಗರ್ಭಂ, ತಾರ್ಕ್ಷ್ಯಶೈಲಂ – ೬ ರಸಾಂಜನದ ಹೆಸರುಗಳು" (ಸಿದ್ಧಾಂತಿ. ೧೩೯). ೨. ಒಂದು ಬಗೆಯ ಸಸ್ಯ ; ಎತ್ತುನಾಲಿಗೆ ಗಿಡ ; ಗೋಜಿಹ್ವೆ : "ಗೋಜಿಹ್ವಾ, ದಾರ್ವಿಕಾ – ೨ ಎತ್ತುನಾಲಗೆ ಗಿಡದ ಹೆಸರುಗಳು" (ಸಿದ್ಧಾಂತಿ. ೧೩೯). [ ಸಂ. ದಾರ್ವಿಕಾ ]

**ದಾರ್ಶನಿಕ** (ಗು). ೧. ತತ್ವಜ್ಞಾನಕ್ಕೆ ಸಂಬಂಧಿಸಿದ : ಈಸ್ಕಿಲಸ್ಸಿನ ಕೃತಿಗಳಲ್ಲಿ ಈ ಪ್ರಶ್ನೆ . . . ದಾರ್ಶನಿಕತರ್ಕವಾಗಿ ಎತ್ತಿ ಕಾಣದಿದ್ದರೂ ಅದನ್ನು ಗುರುತಿಸಲಾಗದಷ್ಟು ಅಸ್ಪಷ್ಟವಾಗಿಯೂ ಇಲ್ಲ (ಬಧ್ಯಪ್ರ. LXVI ಟೀಕೆ). (ನಾ). ೨. ದರ್ಶನಗಳನ್ನು ತಿಳಿದವನು ; ತತ್ವಜ್ಞಾನಿ ; ವೇದಾಂತಿ: ದಾರ್ಶನಿಕನು ನೀರನ್ನು ಶೋಧಿಸಿ ಕುಡಿಯುವನು (ಭಾರದ, ೧೮೩) ; ಆದ್ದರಿಂದಲೇ ಆತ್ಮಶಕ್ತಿ, ಆತ್ಮವಿಶ್ವಾಸ . . . ಇತ್ಯಾದಿಗಳಿಗೆ ಕೆಲವು ದಾರ್ಶನಿಕರು ಮಹತ್ವದ ಸ್ಥಾನವನ್ನು ಕೊಟ್ಟಿರುವುದು (ಶಿಕ್ಷದ. ೪೫೯) ; "ನಮ್ಮ ಇರವಿನ ಅರಿವು ನಮಗೆ ಪ್ರತಿಕ್ಷಣದಲ್ಲಿಯೂ ಆಗುತ್ತಿರುತ್ತದೆ . . . ಅದರ ಅಸ್ತಿತ್ವದಲ್ಲಿ ನಮಗೆ ಸಂದೇಹವೇ ಇಲ್ಲ" ವೆಂದು ಹಲವು ದಾರ್ಶನಿಕರು ಹೇಳುತ್ತಿರುತ್ತಾರೆ (ಜೀವಾತ್ಮ. ೪೭); ಆಧುನಿಕ ಮಹಾವಿಜ್ಞಾನಿಗಳನ್ನು ದಾರ್ಶನಿಕರ ಸಾಲಿಗೇ ಸೇರಿಸಬೇಕೆಂದೆನ್ನಿಸುತ್ತದೆ (ಹುಕ್ಸ್ಲಾರ. ೬ ಟೀಕೆ). ೩. [ಜೈನ] ನೈಷ್ಠಿಕ ಶ್ರಾವಕರಲ್ಲಿಯ ಹನ್ನೊಂದು ತರಗತಿಗಳಲ್ಲಿ ಮೊದಲನೆಯ ತರಗತಿಯವನು : ಇಂತು ದಾರ್ಶನಿಕಂ ವ್ರತಿಕಂ ಸಾಮಯಿಕಂ ಪ್ರೋಷಧೋಪವಾಸಂ ಸಚ್ಚಿತ್ತವಿರತಂ ರಾತ್ರಿಭುಕ್ತಂ ಬ್ರಹ್ಮಚಾರಿ ಆರಂಭನಿವೃತ್ತಂ ಪರಿಗ್ರಹವಿರತಂ ಅನುಮತಿವಿರತಂ ಉದ್ದಿಷ್ಟವಿರತಂ ಎಂದು ಶ್ರಾವಕಸ್ಥಾನಂ ಪನ್ನೊಂದಕ್ಕುಂ (ಧರ್ಮಾಮೃ. ೫-೧೪೭) ; ದಾರ್ಶನಿಕ – ಇವನು ನೈಷ್ಠಿಕ ಶ್ರಾವಕರಲ್ಲಿ ಮೊದಲನೆಯ ತರಗತಿಯವನು (ಜೈನಪ. ೪೬೭). [ ಸಂ. ]

**ದಾರ್ಶನಿಕವಾಣಿ** (ನಾ). ತತ್ವಜ್ಞಾನಿಗಳ ಮಾತು ; ದಾರ್ಶನಿಕರ ನುಡಿ : ಈ ದಾರ್ಶನಿಕವಾಣಿಗಾದರೂ ಅದರ ದಾರ್ಶನಿಕಶಕ್ತಿ ಹಾಗು ದಾರ್ಶನಿಕ ಅಭಿವ್ಯಕ್ತಿಗಳಿಗನುಗುಣವಾಗಿ ಬೇರೆ ಬೇರೆ ಶ್ರೇಣಿಗಳಿರುತ್ತದೆ (ಪ್ರಬಂಧ. ೧೨೫). [ ದಾರ್ಶನಿಕ + ವಾಣಿ$_1$ ]

**ದಾಷ್ಟಾರ್ಂತಿಕ** (ಗು). ೧. ದೃಷ್ಟಾಂತದೊಡನೆ ಕೂಡಿದ ; ದೃಷ್ಟಾಂತದಿಂದ ವಿವರಿಸಲ್ಪಟ್ಟ.(ನಾ). ೨. ದೃಷ್ಟಾಂತದಿಂದ ಸ್ಥಿರಪಡಿಸಿದುದು: ಜ್ಞಾನದ ಕರ್ಮವು ಇಲ್ಲದಿದ್ದರೂ 'ಅದು ಯೋಚಿಸಿ ನೋಡೀತು' (ತದ್ವೈಷಿಕ) ಎಂದು ಕರ್ತೃತ್ವನ್ನು ಹೇಳಬಹುದಾಗಿದೆ. ಆದ್ದರಿಂದ ದೃಷ್ಟಾಂತ ದಾಷ್ಟಾರ್ಂತಿಕಗಳಿಗೆ ಹೋಲಿಕೆ ಇಲ್ಲದೆ ಇಲ್ಲ (ಬ್ರಹ್ಮಭಾ. ೫೪).
[ಸಂ.]

**ದಾಲ** (ನಾ).೧. ಒಂದು ವಿಧವಾದ ಕಾಡಂಜೇನು. ೨. ವಂಕರಂದ ; ಪುಷ್ಪಪರಾಗ. [ಸಂ.]

**ದಾಲಕ್ಷ** 'ದಹಲಕ್ಷ' ನೋ.

**ದಾಲಚಿನಿ** 'ದಾಲಚಿನ್ನಿ' ನೋ.

**ದಾಲಚಿನ್ನಿ, ದಾಲಚಿನಿ, ದಾಲಚಿನ್ನೆ, ದಾಲ್ಚಿನ್ನಿ, ದಾಲ್ಚಿನ್ನೆ** (ನಾ). ಸಾಂಬಾರಿಗೆ ಬಳಸುವ ಮಸಾಲೆಯ ಸಾಮಾನುಗಳಲ್ಲಿ ಒಂದು ; ಮಸಾಲೆಚಕ್ಕೆ ; ಲವಂಗ ಪಟ್ಟೆ : ಸಿಂಹಲ ದ್ವೀಪದಲ್ಲಿ ದಾಲಚಿನ್ನಿ, ಮೆಣಸು ಮುಂತಾದ ಮಸಾಲೀ ಸರಕುಗಳು . . . ಬಹಳ ಆಗುತ್ತವೆ (ಮುಂಬಯಿ. ೪-೨೦೦) ; ಸೀಮೆಸುಣ್ಣದ ಪುಡಿ ೨ ತೊಲ . . . ದಾಲಚಿನ್ನಿ ೧ ತೊಲ-ಇವುಗಳನ್ನೆಲ್ಲಾ ಚೆನ್ನಾಗಿ ಪುಡಿಮಾಡಿ . . . ಎರಡಾವೃತ್ತಿ ಕುಡಿಸುವುದು (ಗ್ರಾಮಾಕ. ೧೨೪). **ದಾಲಚಿನಿ :** ಲೋಭಾನ, ಕಾಚು . . . ದಾಲಚಿನಿಯ ಎಣ್ಣೆ, ಗುಲಾಬನೀರು ಮುಂತಾದವುಗಳು (ಮುಂಬಪ್ರಾ. ೯೯). **ದಾಲಚಿನ್ನೆ :** ದಾಲಚಿನ್ನೆ ಅಡವಿಯಲ್ಲಿ ಸಾಧಾರಣ. ಬಹಳ ಎತ್ತರವಾಗುವುದಿಲ್ಲ. ಕಾಯಿಗಳಿಂದ ಎಣ್ಣೆ ಹೊರಡುತ್ತದೆ. ಅದು ಔಷಧಕ್ಕೆ ಬರುತ್ತದೆ (ಕಭಾಗ. ೪೦). **ದಾಲ್ಚಿನ್ನಿ :** ಜಾಯಿಕಾಯಿ, ಏಲಕ್ಕಿ . . . ದಾಲ್ಚಿನ್ನಿ, ಲವಂಗಪತ್ರೆ . . . ಚೂರ್ಣಿಸಿ ಜೇನುತುಪ್ಪದಲ್ಲಿ ಕಲಿಸಿ ತೆಗೆದುಕೊಳಲು ಬಹುಮೂತ್ರ ಕಲ್ಲುಕಟ್ಟು ಸಹ ಮಾಣುವವು (ಸಕವ್ಯ. ೫೦೦ ಪರಿ) ; ಕ್ರಿ.ಪೂ. ೧೫ನೆಯ ಶತಮಾನದ ಈಜಿಪ್ಟ್ ಶಿಲಾಶಾಸನಗಳಲ್ಲಿ ಕಂಡುಬರುವ ಲವಂಗಪಟ್ಟೆ ಅಥವಾ ದಾಲ್ಚಿನ್ನಿ ಮಲಬಾರಿನಲ್ಲಿ ಉತ್ಪನ್ನವಾಗುವ ವಸ್ತುವನ್ನೇ ಪ್ರಾಯಶಃ ಸೂಚಿಸುತ್ತದೆ (ದಭಾಇ. ೩೨). **ದಾಲ್ಚಿನ್ನೆ :** ಸಿಂಹಳ ದ್ವೀಪದಲ್ಲಿ ದಾಲ್ಚಿನ್ನೆಯ ಗಿಡಗಳು ಬಹಳ (ಮುಂಬಯಿ. ೩-೬೩).
[←ಪಾರ. ಹಿಂ. ದಾರ್ಚೀನೀ ; ಮರಾ.ದಾರುಚಿನೀ, ದಾಲ್‌ಚೀನೀ]

**ದಾಲಚಿನ್ನೆ** 'ದಾಲಚಿನ್ನಿ' ನೋ.

**ದಾಲಿಮ** (ನಾ). = ದಾಳಿಂಬ. [ಸಂ.]

**ದಾಲುಮರ** (ನಾ). ಒಂದು ಬಗೆಯ ಮರ : ಹೆಸವ . . . ಕವಲು, ಗಂಡಗರಿಗೆ, ದಾಲುಮಂರ, ಅರಸಿನಬೂರುಗ (ನಮ್ಮನು. ೨೪೭).
[ದಾಲು? + ಮರ$_1$]

**ದಾಲ್ಚಿನ್ನಿ** 'ದಾಲಚಿನ್ನಿ' ನೋ.

**ದಾಲ್ಚಿನ್ನೆ** 'ದಾಲಚಿನ್ನಿ' ನೋ.

**ದಾವ$_1$** 'ದಾವುದು' ಪರಾ.

**ದಾವ$_2$** (ನಾ). ೧. ಕಾಡಂ ; ಅಡವಿ ; ಕಾನನ : "ಅಡವಿಯುಲ್ಲಿಯುಂ, ದವ, ದಾವ ಎಂಬುದು" (ಹಲಾಯು. ೧೩೩-೧೩) ; ಭವದಾವದಲ್ಲಿ ತೊಳಲುವ ಜೀವರಿಗೆ ಸದಾ ಶಿವಪಥವ ತೋರ್ಪ ಗುರುವರ್ಯ ಬಿನ್ನಪವನವಧರಿಪುದೀಗ (ಅನುಸಾ. ೨-೧-೨). ೨. ಕಾಡುಗಿಚ್ಚು ; ಕಾಳ್ಗಿಚ್ಚು ; ಕಾಡಂಬೇಗೆ : "ವನವಹ್ನಿಃ, ದವಃ, ದಾವಃ-ಈ ಮೂರು ಕಾಳ್ಕಿಚ್ಚು" (ಹಲಾಯು ೧೩-೬೦); "ನಿಮಿರ್ದ ಕಾಂತಾರದಲ್ಲಿಯು ಕಿಚ್ಚು ದಾವಂ [ದವಂ]" (ಮಂಗರಾ. ೧೪-೯) ; ಶಾಶ್ವತನವತರಿಸಿರ್ದಂ ಗದಾಶಂಖಚಕ್ರಾಂಕಿತಹಸ್ತಂ ವಾಸುದೇವಂ ದನುಜವಿಪಿನದಾವಂ,ಸಮಸ್ತಪ್ರಭಾವಂ (ಜಗನಿ. ೨-೧೦೦). ೩. ಕಿಚ್ಚು ; ಬೆಂಕಿ ; ಶಾಖ. [ಸಂ.]

**ದಾವಂತ** 'ಧಾವಂತ' ನೋ.

**ದಾವಂತಬಡಿಸು** (ಕ್ರಿ). ಗಾಸಿಪಡಿಸು ; ಬಳಲಿಸು ; ಆಯಾಸವನ್ನುಂಟುಮಾಡು : ದಾವಂತಬಡಿಸಿ ದೇಹವನು ಪಸಿದಿರಲೇಕೆ ಶ್ರೀವರನನಂತನಾಮದೊಳು (ತಿರುಕ. ೭-೩೦).
[ದಾವಂತಬಡು (<ಧಾವಂತಪಡು) + -ಇಸು$_3$]

**ದಾವಂತಬಡು** 'ಧಾವಂತಪಡು' ನೋ.

**ದಾವಡಸು** (ಕ್ರಿ). ಬಾಯಾರು ; ನೀರಡಿಕೆಯುಂಟಾಗು : ಮೃಗವನ್ನು ಕಾಣದಿರಲು ಬಳಲಿ ಬಸವಳಿದು ದೂವಡಿಸಿ [ದಾವಡಸಿ] ನೀರು ಕಾಣದಳಲಿಯರಸುತ್ತಿರಲು (ತುರಂಗ. ೩೪-೪೭).
[ದಾವು$_1$ <ದಾಹ) + ಅಡಸು]

**ದಾವಣ$_1$** (ನಾ). ಚಪ್ಪರ ; ಹಂದರ : ಪಾದರಿಯ ನೆಲವಾಡಂಗಳೊಳಂ ದವನದ ದಾವಣಂಗಳೊಳಂ ಮಲ್ಲಿಗೆಯ ಮನೆಗಳೊಳಂ ಕಪ್ಪುರದ ಸೊದೆಯೊಳಂ ಸೊಂಪುವಡೆದ ಕಂಪಿನ ಪೊಬುಲೆಂಬ ಬೀಡು ಬಗೆಗೊಳಿಸುತಿರ್ಪುದು (ಕಬ್ಬಿಕಾ. ೧೧೫); ದುರ್ಗಶಿಕ್ಷೇಶಕರಮಪ್ಪ ಮುದ್ರಂ ದೇವತೆಗೆಂದುಂ ಮಂತ್ರಸಿಧ್ಯರ್ಥಮಾಗಿಯುಂ ಮನೆ ಕೊಟ್ಟಗೆ ದಾವಣ ರಾಶಿ ತೋಂಟಂ ಮೊದಲಾದುವನರ್ಚಿಸಲೆಂದುಂ ಮನವಚನಕಾಯದಿಂ ಮಾಡಲಾಗದು ಮಾಡಿಸಲಾಗದು ಮಾಡುವನ್ನಗೊಡಂಬಡಲಾಗದು (ಜಸಾರ. ೨೯೮). 'ಕಾವಣ' ಪರಾ.
[ದೇ.॥ ತಮಿ. ತಾವಳ ; ತೆಲು. ತಾವಲ = ನಿವಾಸ, ವಾಸಸ್ಥಾನ]

**ದಾವಣ$_2$** (ನಾ). ಒಬ್ಬಾತನ ಹೆಸರು : ಸಿರದ ದವೆಟಿಯರ ಮಗ ದಾವಣಗವುದದೆ ಮಂಹಾ ಜನಕ್ಕೆ ಕೊಟ್ಟುದು ಶಾಲೆ (ಎಕ. VII, ಶಿಕಾ೦. ೪೫ (b)-೩೩; ಸು. 890 ?). [<ದೇವಣ್ಣ]

**ದಾವಣ$_3$** 'ದಾಹಣೆ' ನೋ.

**ದಾವಣಪೇರುಂದವ್ವ** (ನಾ). ಒಬ್ಬಾಕೆಯ ಹೆಸರು : ಇ ಧಮ್ಮದಿ ದಾವಣಪೇರುನ್ದವ್ವಜ್ಗ್ಗ ಕೊಟ್ಟೊದು ಐಗುಳ ಕಟನಿ ಪರಿಹಾರ (ಎಕ. X,ಶ್ರೀನಿವಾ. ೬-೧೩ ; ಸು. 780). [ದಾವಣ$_2$ + ಪೇರುಂದವ್ವ$_2$]

**ದಾವಣಿ$_1$, ಡಾಣಿ$_1$, ಡಾವಣ, ಡಾವಣೆ, ಡಾವಣಿ, ಥಾವಣೆ, ದವಣೆ, ದವನಿ, ದಾವಿಳಿ, ದಾವುಣಿ** (ನಾ). ೧. (ದನಕರುಗಳನ್ನು ಸಾಲಾಗಿ ಕಟ್ಟುವ) ಹಗ್ಗ ; ಹುರಿ ; ಪಾಶ : "ದಾವಿಳಿಯೆನಲು ದಾವಣಿ" (ಮಂಗರಾ. ೧೧೯-೩) ; ದಾವಣಿ[ಪಾಠಾಂ. ಣೆ]ಯೊಳ್ಕಟ್ಟಿರ್ದಾ ಜೀವಧನವುದೊಂದೆ ಮುಗ್ಗುಲಿಂದಿರದೊಡವಿನ್ನೇವೇಟ್ಟುದಧಿಕಮೆನಿಸುವ ಜೀವಧನಮನೆಂದು ಸೇಸೆದಳಿವವರ್ಮೂರ್ಧರ್ (ಸಮುಪ ೩೬೨-೩೮ ಅನುಬಂಧ. ೧); ಅವ ಕುಲದಲಿ ಪುಟ್ಟಲಿ ಪರವೆಣ್ಗಳ ಭಾವಿಸನಾವನವನಿಗೆ ದೇವರು ಸರಿಯಲ್ಲ ನರಪಶುಗಳ ಬಲು ದಾವಣಿಯವನೆ (ಕುರಾಸಾಂ. ೦-೯೪) ; ಕಾವು ಗೋಚರವಾಗದಿರೆ ಕೋಪ ಪೆಗ್ಗಳಿಸಿ ತೀವಿ ಭದುರೋಪಮಿತ ಶಬ್ದವೇಧಿಯ ತೆಗೆದು ದಾವಣಿಯನಿಟ್ಟು [ಪಾಠಾಂ. ರಾವವನ್ನರಿದು] ಕೊಂದಪೆನೆನಲು ಭಾವವನ್ನರಿದು ಯಕ್ಷಿಣಿಯು ಜವದಿ ಮಯಂಬರಿದು (ವಂಕಾರಾ. ೦-೦೨-೪೨); ಕೊರಳ ದಾವಣಿಗೆ ಕುಣಿಕೆ ಬೇಕು ಕವಲೆತ್ತಿಗೂನು ಕಣಿಕೆ (ಅರಳು. ೨೯೨-೭); ಪುಂಡಿ ನಾರಿನ ಹಗ್ಗ ಹೊಸೆಯುವುದು, ಎತ್ತು ದನ ಕಟ್ಟುವ ದಾವಣಿ ತಿರುಪುವುದು (ಮಲಿಮು. ೭೦). ೨. ಕಟ್ಟು ; ಬಂಧನ: ಹೊಟ್ಟೆಯ ಪಾಡಿಗೆ ದುಡಿಯುವ ದಾವಣಿಯಲಿ ಸಿಕ್ಕಿ ಚಲಿಸುತ್ತಿಹೆ ದಿಟ ನಿನಗಾ ಸಂಕುಲ ಪಂಕ್ತಿಯ ಬಕಪಕ್ಷಿ (ಅನಿಕೇ. ೪೭-೧೧); ನಾವಾದರೂ ಅರಸರ ದಾವಣಿಯಲ್ಲಿ ಸೇರತಕ್ಕವರೆ (ಮುಭಾರ. ೩೦). ೩. ಸಾಲು ; ಪಂಕ್ತಿ : ಆಟಾಟಗೆ ಬಲ್ಲಾಳನ ದಾಟಿಯಂ ದಾವಣಿಯು ತುರಗ ದಟ ಖುರಹತಿಯಿಂ ಪೇಟಿ ಪೆಸರಿಲ್ಲದಂತಿರೆ ಪಾಟಾದುವು ವೈರಿದುರ್ಗಮೆನಿತೊಳವನಿತುಂ (ಯಕೋಜ. ೧-೦೪) ; ಧರಣೀದೇವರನುಂ ಸತ್ಕರಿಸಿ ತಿಲಭೂರತ್ನರಂಕ್ಕದಲ್ಲಿ ಥಾ[ದಾ[

ವಣಿ[ಪಾಠಾಂ. ಳಿ]ಯ ಸುರಭಿಗಳನಖಿಳ ವಂಹಾವಿಭವಸಹಿತಚಿದು ಧಾರೆಯನಾವರಾಂಬಂಧಿಯಿತ್ತನು (ನಿಭಾಗ. ೧೦-೭೮-೨). ೪. ಗುಂಪು; ನೆರವಿ; ಸಮೂಹ: ಭೈರವನ ತೆತ್ತಿಗರ ದಾವಣಿಯೊಳಣ್ಣನ ಮತ್ತವಾರಣ ಭೀಮಸೇನನನಿತ್ತ ನೋಡ್ದ ಮಗನೆ ಕುರುಕುಲಕೇಣಿರಾಜನನು (ಕುಮಾ.ಭೀ. ೨-೧೩); ದೇವ ನೀ ಭಹನೆಂದು ಬಂದರು ದಾವಣಿಯ ಹವಣಚಿದು ಬಳಿಕ ಮಹಾವಿಲಾಸದೊಳೊಪ್ಪವಿಟ್ಟರು ತಮ್ಮ ನಗರಿಗಳ (ಕುಮಾ.ವಿ. ೧೦-೪೭). ೫. ದನಗಳನ್ನು ಕಟ್ಟುವ ಸ್ಥಳ; ಕೊಟ್ಟಿಗೆ: ಇನ್ನು ಛತ್ರಕ್ಕೆ ಹೋಗಿ ಊಟ ತೀರಿಸಿಕೊಂಡು ನಮ್ಮ ದಾವಣಿಯ ಹತ್ತಿರ ಹಿಂತಿರುಗಿ ಬಂದು . . . ಕುಳಿತುಕೊಂಡೆವು (ಹಂಗಾಳ್. ೩೫೩). **ದಾಣಿ₁**: (ಕ). **ದಾವಣ**: ೧. ಅನಿಯುಳ್ ಹಾವಣಮೊಡ್ಡುವೊನ್ (ಎಪಿ. IX, ೧೮-೧೦; ೪೦೦). **ದಾವಣಿ**: ೨. ಕಣಿಗಳೋ ಕಲ್ಪಾಂತ ವಹ್ನಿಯ ಡೊಣೆಗಳೋ ಹಾಳಾಹಳದ ದಾವಣಿಗಳೋ ನಾವಚಿಯೆವು (ಕುಮಾ.ಕ. ೨೦-೯); ಹ್ಯಾವರಿಕೆ ಸಂಸಾರ ದಾವಣಿಯ ನಡುವೆ ಕೊರಳಾವಲಿಗೆ ಸಿಗಬಿದ್ದು ವಿಡಂಬಿತಿಪ್ಪ ಜೀವಾಧವುನು ನಿನ್ನ ಮೆಚ್ಚಿಸಲಾಪನೆ (ವಿನೋ.ಸು. ೩೦-೧). **ಡಾವಣಿ**: ೧. ವಾರುವಗಳ ಡಾವಣಿ ನೇಣ್ಗಳ ಬಲು ಬೀರುಗುಣಿಕೆಗಳ ಪಚಿದು ಕೇರಿ ಕೇರಿಯೊಳು ತಿಮ್ಮಿಚ್ಚಿಯೊಳಗೆ ಸಲೆ ತಾಚುವಮಾಜಾಗಿಯೋಡಿದುವು (ಕಂಪವಿ. ೦೫-೯೦). **ಧಾವಣಿ**: ೩. 'ಧಾವಣಿಗಿರಿ' ಪರಾ. **ದವಣೆ**: ೫. ಇನ್ನು ಈ ಮನೆಯೊಳಗೆ ಮಲಗಿಕೊಂಡರೆ ದನದ ದವಣಿಯೊಳಗೆ ಮಲಗಿದ ಹಾಗೆ (ಪ್ರಬಾಪ. ೨೦). **ದವನಿ**: ೫. ತಾರಕ್ಕ ಕಟ್ಟೆಯ ಮೇಲಿಂದ ಒಮ್ಮೆಲೇ ಕೆಳಗುರುಳಿ ಬಿದ್ದಳು ದನಗಳನ್ನು ಕಟ್ಟುವ ದವನಿಯಲ್ಲಿ (ನಿಸರ್ಗ. ೩೪೮). **ದಾಮಿಳಿ**: ೧. "ದಾಮಿಳಿ ಯೆನಲು ದಾವಣಿ" (ಮಂಗರಾ. ೦೧೯-೩). **ದಾಮಣಿ**: ೧. ಎರಿದನು ಕೈಯೊಡನೆ ಖಳನೇಳ್ನೂರು ಘಂಟೆಯ ರಥವ ಮದಕರಿ ಮೂರು ಸಾವಿರ ಸೇರಿದವು ದಾಮಣಿಯ ನೊಗಗಳಲಿ . . . ಹದಿನಾರು ಸಾವಿರ ಬಂಡಿಯಲಿ ನೂಕಿದಂವು (ಅಂಬಿಕಾ. ೦೯-೩೦). [ <ಸಂ. ದಾಮನೀ ]

**ದಾವಣಿ₂**, **ಧಾವಳಿ** (ನಾ). ಲಂಗವುಟ್ಟ ಹೆಣ್ಣುಮಕ್ಕಳು ಧರಿಸುವ ಮೇಲುಹೊದಿಕೆ: ವೈಷ್ಣವಭಕ್ತರು ಅವಳ ದಾವಣಿಯ ಸೆರಗು ಮಾತ್ರ ಪರಮಾತ್ಮನ ಮೇಲಿರುವುದನ್ನು ಕಂಡರು (ಭಕ್ತಮೀ. ೯೨). **ಧಾವಳಿ**: ಪಟೇಲರ ಮಗ ನನ್ನನ್ನು ದುರುಗುಟ್ಟಿ ನೋಡಿ ನಾನು ಹೊದ್ದಿದ್ದ ಧಾವಳಿಯನ್ನು ಕಿತ್ತೆಸೆದ (ಗೋಪುರ. ೩೫); ಕಾಲಿನ ಕಿರಿಗೆಜ್ಜೆಗಳಿಂದ ಹಿಡಿದು ತಲೆಯ ಮೇಲೆ ಹೊದೆದಿದ್ದ ಧಾವಳಿಯವರೆಗೆ ಎಲ್ಲವೂ ಸ್ಥಳೀಯ ಉಡುಗೆಯೇ ಆಗಿದ್ದಿತು (ಘೂರಾತಿ. ೯೦).

[ ←ಪಾರ. ದಾಮನೀ; ಹಿಂ. ದಾಮನ್ = ಸೆರಗು, ಅಂಚು ]

**ದಾವಣಿ₃** 'ದಾಹಣಿ' ನೋ

**ದಾವಣಿಗಟ್ಟು₁**, **ದಾವಣಿಕಟ್ಟು** (ಕ್ರಿ). ೧. ಸಾಲಾಗು; ಸಾಲುಗಟ್ಟು: ದಾವಣಿಗಟ್ಟಿದ ಮಧುಕರಜೀವಧನಕ್ಕಿಕ್ಕುವಂತೆ ಮೇಪಂ ಸಖಿ ಲೀಲಾವತಿಯ ಪಂತಿಗುರುಳೊಳ್ ಪೂವಿನ ಕೇಸರದ ರಜಮನೊರ್ವಳ್ ತಳಿದಳ್ (ಲೀಲಾವ. ೦೨-೬೦). ೨. ಸಾಲಾಗಿ ಕಟ್ಟು; ಮಾಲೆಗಟ್ಟು: ಮಚಿಮಿಾಂಗಳ ದಾವಣಿಗಟ್ಟಿದವೋಲ್ ಬೆಳ್ದಿಂಗಳ ಹಕ್ಕಿಯ ಹಸುಳೆಗಳ ದಾವಣಿಗೆಯ ಮುಸುಕಿದವೋಲ್ . . . ಕುವರನ ಲಾವಣ್ಯಾಂಗ ಮನಡರ್ದುವು ಪುರಸತಿಯರ ಕಣ್ಗಳ ಬೆಳಗು (ಜಯಚಿಾ. ೦೦-೫೫). **ದಾವಣಿಕಟ್ಟು**: (ಕ). [ ದಾವಣಿ₁ + ಕಟ್ಟು₁ ]

**ದಾವಣಿಗಟ್ಟು₂** (ನಾ). (ಹೂವನ್ನು) ಸಾಲಾಗಿ ಕಟ್ಟಿರುವಂತಹುದು; ಮಾಲೆ: ನನೆಯಂ ದಾವಣಿಗಟ್ಟಂ ಕಟ್ಟುತ್ತಿನಿಯಗೊರ್ಪ್ಪಿಸಿ ಕೊಡುವ ಪೂಲಿತ್ತವರ್ನಿತೆಯರಾ ಪೂವಿನ ಪೇಟೆಯೊಳ್ಪಾಸಿಗವುಂ ವಿಟರ್ಗೆ (ಜಯಚಾ. ೦-೫೪). [ ದಾವಣಿ₁ + ಕಟ್ಟು₂ ]

**ದಾವಣಿಗುಚಿ** (ನಾ). ಹಗ್ಗದಿಂದ ಸಾಲಾಗಿ ಕಟ್ಟಿದ ಕುರಿ: ನಿನ್ನಸಿ ಮುಖದಿಂ ದಾವಣಿಗುಚಿಯಂ ತಚಿದೊಡೆ ದೇವಿ ಶುಭೇತರವಿನಾಶವುಂ ದಯೆಗೆಯ್ಗುಂ (ಯಶೋಚ. ೩-೦೩). [ ದಾವಣಿ₁ + ಕುಚಿ₃ ]

**ದಾವಣಿಗೂಂಟ** (ನಾ). ಹಗ್ಗ ಬಿಗಿಯಲು ಹೊಡೆಯುವ ಗೂಟ: ದಾವಣಿಗೂಂಟವುಂ ಪೊಡೆವ ಕಾಟ್ಕುರುಳಂ ಪರಿದಾಯ್ದು ಪೇರ್ಗಳಂ ತಾವಚಿದೊಟ್ಟಿಲೊಟ್ಟುವ . . . ಆಡುವ ದೋಲಿಗರಿಂದೆಸೆದಂ ವಣಿಗ್ವರಂ (ದಶಕು. ೯-೭೮). [ ದಾವಣಿ₁ + ಗೂಂಟ ]

**ದಾವಣಿಗೆ** (ನಾ). = ದಾಹಣಿ: ದಾವಣಿಗೆಯೊಳ್ ಕುಟ್ಟಿ (ಲಕ್ಷ್ಮಿಭಾ. ೭-೭-೭). [ ದಾವಣಿ₃ (<ದಾಹಣಿ) + -ಗೆ ]

**ದಾವಣಿಗೆಡಹು** (ಕ್ರಿ). ಸಾಲಿನಲ್ಲಿ ಉರುಳಿಸು: ಮಗಧನ ಹೆಣನ ದಾವಣಿ[ಣಿ]ಗೆಡಹಿದನು ಸಮರರಂಗಭೂಮಿಯಲಿ (ಕುಮಾ.ದ್ರೋ. ೭೮೩ ಪು. ೨೮೦).

[ ದಾವಣಿ₁ + ಕೆಡಹು (<ಕೆಡಪು) ]

**ದಾವಣಿಗೊಳ್** (ಕ್ರಿ). ಗುಂಪುಗೂಡು; ಒಟ್ಟಾಗು: ದಾವಣಿ[ಪಾಠಾಂ. ಗಾವಳಿ]ಗೊಂಡೆಚಿಗಿದ ಭೃಂಗಾವಳಿಯಂ ಸೋವಲ್ (ಲೀಲಾವ. ೦೩-೭೭).

[ ದಾವಣಿ₁ + ಕೊಳ್₁ ]

**ದಾವಣಿಸುಳಿ** (ನಾ). ಕೊರಳಿನ ಹತ್ತಿರ (ಹಗ್ಗ ಕಟ್ಟುವ ಬಳಿ) ಇರುವ ಸುಳಿ: ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ, ದಾವಣಿ ಸುಳಿ . . . ಕೋರಬಗ್ರಿ, ಕೊಪ್ಪಲ್ಲು ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೆ ಸುಳಿ ಇರೋದ ತಕ್ಕಾಲಾ (ಹುಟ್ಟಿಹ. ೦೩೯).

[ ದಾವಣಿ₁ + ಸುಳಿ₂ (<ಸುಟ್ಟಿ₂) ]

**ದಾವಣೆ** 'ದಾಹಣಿ' ನೋ.

**ದಾವತಿ** 'ಧಾವತಿ' ನೋ.

**ದಾವತಿಗೊಳ್** 'ಧಾವತಿಗೊಳ್' ನೋ.

**ದಾವತಿಪಡಿಸು** (ಕ್ರಿ). ಸಂಕಟವನ್ನುಂಟುಮಾಡು; ಆಯಾಸಗೊಳಿಸು:

[ ದಾವತಿಪಡು (<ಧಾವತಿಬಡು) + -ಇಸು₃ ]

**ದಾವತಿಪಡು** 'ಧಾವತಿಬಡು' ನೋ.

**ದಾವತಿಬಡು** 'ಧಾವತಿಬಡು' ನೋ.

**ದಾವತಿವೆಟು** (ಕ್ರಿ). ಬಳಲಿಕೆಯನ್ನು ಹೊಂದು; ಶ್ರಮಪಡು: ದಾವತಿವೆತ್ತುವಂದ ಋತುಪರ್ಣನ್ನಪಂ ಪುರದೊಳ್ ನಿರಂತರಂ ಶೀವಿದ ವಾರ್ತೆಯಂ ಪಲಬರಿಂ ತಿಳಿವಂತಿರೆ ಕೇಳ್ದು (ನಳಚಂ. ೭೪೪).

[ ದಾವತಿ (<ಧಾವತಿ) + ಪೆಟು₁ ]

**ದಾವತಿಹಿಡಿ** (ಕ್ರಿ). ಕೆಲಸವನ್ನು ಪ್ರಾರಂಭಿಸು; ಕಾರ್ಯೋನ್ಮುಖನಾಗು: ಮಾಳೂನನ್ನು ನೋಡಿ ಮುಂಗೈ ತಗುಲಿಸಿ ಕೆಳದನಿಯಲ್ಲಿ ಕೇಳಿದನು "ದಾವತಿ ಹಿಡಿಯಲಾ?" (ಪವನ. ೦೩).

[ ದಾವತಿ (<ಧಾವತಿ) + ಹಿಡಿ₁ (<ಪಿಡಿ₁) ]

**ದಾವದಗ್ಧ** (ಗುಂ). ಕಾಳ್ಗಿಚ್ಚಿನಿಂದ ಸುಟ್ಟ: ಎನೆ ದಾವದಗ್ಧಗಿರಿ ನೂತನ ಜಳದಜಳಂಗಳಿಂದಮಾಚುವವೋಲ್ ಭೋಂಕನೆ ಭರತನನಾಚಿಸಿದಂ ಮುನಿವಿನುತ ಗಣಾಧಿನಾಥವಚನಾಮೃತದಿಂ (ಆದಿಪು. ೦೭-೬೦).

[ ದಾವ₂ + ದಗ್ಧ ]

**ದಾವದಹನ** (ನಾ). ಕಾಡಿನ ಕಿಚ್ಚು; ಕಾಳ್ಗಿಚ್ಚು: ಮದನದಾವದಹನಂ ತಳ್ತಿರ್ದಪುದಿಲ್ಲ ನಿನ್ನಂ (ಕಾದಂಪೂ. ೫೪೯). [ ದಾವ₂ + ದಹನ ]

**ದಾವಧೂಮ** (ನಾ). ಕಾಡಂಕಿಚ್ಚಿನ ಹೊಗೆ: ಅಪು(ವಿ)ಗೆಯ ಕಿಚ್ಚಿನಂತೆ ದಾವಧೂಮ [ಪಾಠಾಂ. ಧಾವುಧೂಮ] ವಾದಂತೆ ಆವ ಓಡ ಸುಟ್ಟನೆಂದ ಚಿಯೆನವ್ವಾ (ಸರ್ವಜ್ಞ. ೭೫-೧೦೫). [ ದಾವ₂ + ಧೂಮ ]

**ದಾವಪಾವಕ** (ನಾ). = ದಾವದಹನ: ದಾವಪಾವಕಂ ಬಳಸೆ ಸುರುಳ್ದ ಬಾಳ ಸಹಕಾರಮಹೀರುಹಂ (ಆದಿಪು. ೨-೫೪); ದಾವಪಾವಕಜಾ ಳೆಯಂ

ಕಂಡ ವನಶಿಖಂಡಿಯಂತೆಯುಂ ಗರುಡಚಂಚುವಂ ಕಂಡ ಕಂಚುಕೀಂದ್ರನಂತೆಯುಂ ಭಯಂಗೊಂಡು (ಪುಷ್ಪಪು. ೧೩-೨೬ ವ).

[ ದಾವ$_2$ + ಪಾವಕ ]

**ದಾವಯ್ಯ** (ನಾ). ಒಬ್ಬಾತನ ಹೆಸರು: ಸ್ವಸ್ತಿ ಶ್ರೀ ದಾವಯ್ಯನ ಕಿಱಿಯ ನಾರಾಯಣಂ ರಾಜಾಶ್ರಯ ವಿಣ್ಣಗರ ದೇವರ್ಗ್ಗೆ ತನ್ನ ಪಡುವಣ ತೋಂಟ್ಟ ಕಟನಿಯಲ್ (ಎಕ. XIV, ಮಳವ. ೧೨೫-೦ ; ಸು. 1014).

[ <ದೇವಯ್ಯ ]

**ದಾವರ** 'ಡಾವರ' ನೋ.

**ದಾವರಂಗ** (ನಾ). ಒಂದು ಸ್ಥಳದ ಹೆಸರು: ದಾವರಙ್ಗದ ದೊದಿಪನ್ನಿಗಲಿಯು ಕಿಲ್ಲೂರು ಕಬೂರುವೊಳನಿಕೆ (ಎಕ. XII, ತಿಪಟೂ. ೧೦-೩; ಸು. 920 ?). [ ? ]

**ದಾವರಿಸು** 'ಡಾವರಿಸು' ನೋ.

**ದಾವಶಿಖಿ** (ನಾ). = ದಾ ವ ದ ಹ ನ: ಉಗ್ರಾರಿವಂಶಲತಾವಲ್ಲರಿಗಳ್ಗೆ ದಾವಶಿಖಿವೊಲ್ಮೆಯ್ದೋಱ (ಪಂಪಭಾ. ೩-೩೩) ; ರತ್ನಶಿಲಾಗೃಹವುಂ ಸಿಡಿಲಂತಿರೆ ಧವಲಹಾರವುಂ ದಾವಶಿಖಿವೊಲಳುರ್ದುದು ದ ಹ ನ ೦ (ಪಂರಾಮಾ. ೧೦-೧೪೧). [ ದಾವ$_2$ + ಶಿಖಿ ]

**ದಾವಾ, ದಾವೆ$_1$** (ನಾ). (ವ್ಯವಹಾರಕ್ಕೆ ಸಂಬಂಧಿಸಿದ) ವ್ಯಾಜ್ಯ ; ಮೊಕದ್ದಮೆ ; ಕಟ್ಲೆ: ವಾದಿಯು ದಾಖಲ್ಮಾಡಿದ ದಾವಾಕ್ಕೆ ಪ್ರತಿವಾದಿಯ ಉತ್ತರವೂ ಅದಕ್ಕೆ ವಾದಿಯ ಜವಾಬೂ . . . ಕೋರ್ಟಿಗೆ ದಾಖಲಾಗುತ್ತಿದ್ದುವು (ಮುಹಾವಂ. II, ೪೫). **ದಾವೆ$_1$** : ಕೋರ್ಟಿನಲ್ಲಿ ದಾವೆಗಳನ್ನು ಹಾಕಿದರೆ ಆ ದಾವೆಗಳ ತೀರ್ಮಾನ ಪ್ರತಿವಾದಿಗೆ ಬರೆದು ಕೊಟ್ಟ ಪತ್ರದ ಆಧಾರದ ಮೇಲೆ ಆಗುತ್ತದೆ (ಪ್ರಪಾಇ. I, ೩೮೭); ಆಸ್ತಿ, ಸಂವಿದೆಗಳು, ಅಧಿಕಾರಗಳು, ದಾಯಿತ್ವಗಳು, ಆಭಾರಗಳು ಮತ್ತು ದಾವೆಗಳು (ಭಾಧಾನ. ೦೭೯) ; ರೆಗ್ಯುಲೇಷನಿನ ೭ನೆಯ ಪ್ರಕರಣದ ಮೇರೆ ದಾವೆಗಳನ್ನು ವಿಚಾರಿಸುವ ಬಗ್ಗೆ . . . ಹೆಸರುಗಳು ಸೇರಿರತಕ್ಕದ್ದು (ಗ್ರಾಮಾಕ. ೧೧).

**ದಾವಾ ಅರ್ಜಿ** = ಕೋರ್ಟಿನಲ್ಲಿ ತಗಾದೆ ಹೂಡಲು ಕೊಡುವ ಅರಿಕೆ: ವಾದಿಯು ತನ್ನ ದಾವಾ ಅರ್ಜಿಯಲ್ಲಿ ಅಂಥಾ ಮನುಷ್ಯನನ್ನು ನೇಮಿಸಿದ್ದರೆ . . . ಆತನಿಗೆ ತಿಳಿಸತಕ್ಕದ್ದು (ಗ್ರಾಮಾಕ. ೧೭). **ದಾವಾದಾಖಲೆ** = ತಗಾದೆಯ ಅರಿಕೆಯನ್ನು ದಾಖಲು ಮಾಡಿಸುವುದು: ಲಿಖಿತ ಮೂಲಕವಾಗಿ ದಾವಾದಾಖಲೆಯನ್ನು ಪಡೆದು ಅದಕ್ಕೆ ಉತ್ತರ ಪ್ರತ್ಯುತ್ತರಗಳನ್ನು ಬರೆಸುವ ಪದ್ಧತಿಯಿರಲಿಲ್ಲ (ಮುಹಾವಂ.II, ೨೮). **ದಾವಾ ಮಾಡು, ದಾವೆ ಮಾಡು** = ನ್ಯಾಯಾಲಯದಲ್ಲಿ ವ್ಯಾಜ್ಯ ಹೂಡು: ಸೆಟ್ಟಿ ದಾವಾ ಮಾಡವನೆ (ಮಾಂಗಲ್ಯ. ೧೯) ; ವಕೀಲರ ಮನೆಗೆ ಹೋಗಿ ಕೋರ್ಟಿನಲ್ಲಿ ದಾವೇ ಮಾಡಬೇಕೇ (ಮೋಹಿನೀ. ೧೨೪). **ದಾವಾ ಸೊತ್ತು** = ತಗಾದೆಯಲ್ಲಿರುವ ಭೂಮಿ; ವ್ಯಾಜ್ಯದಆಸ್ತಿ: (ಕ). **ದಾವಾ ಹಾಕು, ದಾವ ಹಾಕು**= ಕೋರ್ಟಿನಲ್ಲಿ ವ್ಯಾಜ್ಯ ಹೂಡು ; ಮೊಕದ್ದಮೆ ನಡೆಸು: ನಿಮ್ಮ ತಂದೆಯವರ ಮೇಲೆ ದಾವಾ ಹಾಕಿ ಬಿಟ್ಟೇನು(ಹನ್ನೊಂದ. ೫೧); ಕಂಪನಿಯ ಡೈರೆಕ್ಟರುಗಳಲ್ಲಿ ಯಾರ ಮೇಲಾದರೂ ದಾವಾ ಹಾಕಿ ಸಾಲದ ಪೂರ್ತಿ ಹಣವನ್ನು ಅವರಿಂದ ವಸೂಲುಮಾಡಿಕೊಳ್ಳಬಹುದು (ಹಣಪ್ರ. ೧೨೯ ಅಡಿಟ); ಕೋರ್ಟಿಗೆ ಹೋಗಿ ಕಳಸಯ್ಯನ ಮೇಲೆ ದಾವಾ ಹಾಕಿದ (ಗಂಗಾಳ. ೩೩). **ದಾವೆ ಹೂಡು** = ದಾವಾ ಹಾಕು: ನನಗೆ ನಾಳೆ ದಾವೆ ಹೂಡಬೇಕಾಗಿ ಬರುತ್ತದೆ (ಪ್ರಕಾಶ. ೧೪೭) [ ←ಅರ. ಹಿಂ. ಮರಾ. ದಾವಾ ]

**ದಾವಾಗ್ನಿ** (ನಾ). ೧. = ದಾವದಹನ: ತೀವ್ರ ದಾವಾಗ್ನಿವೊಲುರಿದಪು ದುರ್ಬೀತಳಂ (ಸುಕುಮಾ. ೪-೧೩) ; ದಾವಾಗ್ನಿಯುನೆಟ್ಟಿಱಪ ಮಹಾವಾಯುವಿನಂತೆ ತಮ್ಮ ಮನದಳಿಪಂ ನಾನಾ ವಿಧ ದುರಾಗಮೋಕ್ತಿಗಳಾವಗಮೊಟ್ಟಿರಿಸೆ (ವರ್ಧಪು. ೧೧-೪೨) ; ಅಡವಿವಿಡಿದೋಡುತಿಹ ಗಜಂ ದಾವಾಗ್ನಿ ತನುವೊತ್ತು ಬೀದಿವರಿವಂತಿರ್ದುದು (ಹಜಕಾ. ೫-೩೬) ; ಇಡಿದ ಧೂಳಿಯು ಧೂಮರಾಶಿಯ ಪಡೆ ವಿರಾಟನ ಮಗನ ಕಂಗಳಿಗೊಡನೊಡನೆ ದಾವಾಗ್ನಿಯಂತಿರೆ ತೋಱಿತಿದಿರಿನಲಿ (ಕುಮಾವಿ. ೬-೩) ; ಅವಳ ಮನಸ್ಸಿನಲ್ಲಿ ಯಾವುದೊ ದಾವಾಗ್ನಿ ಎದ್ದಿದೆ (ಶಾಂತಲಾ. ೨೬೬). ೨. ಪಂಚಾಗ್ನಿಗಳಲ್ಲಿ ಒಂದು: ಗ್ರೀಷ್ಮಾದಿ ರೂಪಕಾಲಾಗ್ನಿ ಆತಪರೂಪ ಸೂರ್ಯಾಗ್ನಿ ಪುಷ್ಯಾಭಿವ್ಯಕ್ತರೂಪ ಸೂರ್ಯಕಾಂತಾಗ್ನಿ ವೇಣ್ವಭಿವ್ಯಕ್ತ ದಾವಾಗ್ನಿ ದೇಹಾಂತರ್ಗತ ಉದರಾಗ್ನಿಗಳೆಂಬ ಪಂಚಾಗ್ನಿಗಳು (ವಿವೇಕ. ೧೪೪).

[ ದಾವ$_2$ + ಅಗ್ನಿ ]

**ದಾವಾದಾರ, ದಾವೆದಾರ** (ನಾ). ವ್ಯಾಜ್ಯ ಹೂಡಿದವನು: ಕೋರ್ಟಿನ ಕೊನೆಯ ತೀರ್ಮಾನದ ಮೇರೆಗೆ ದಾವಾದಾರನೇ ಜಾಮೀನು ತೆರಬೇಕಾಯಿತು (ರೂಢಿ). **ದಾವೆದಾರ** : (ಕ). [ ದಾವಾ + – ದಾರ$_4$ ]

**ದಾವಾನಲ, ದಾವಾನಳ** (ನಾ). = ದಾವದಹನ: "ಬನಬೆಂಕಿಯೆ ದಾವಾನಲಂ" (ಕವಿಕಂ. ೫೮) ; ಮಹಾಸ್ಮರವಿಷಿನದಾವಾನಲ ಕೃಪಾವನಧಿ ಬಲಿದುರುಶೃಂಗಿಯಾದಂದವೊ (ಏಕೋಶು. ೨-೬). **ದಾವಾನಳ** : ಆತ್ಮಜರಿನಾದ ಕುಲಾಪವಾದ ಪರಾಭವದ ದಾವಾನಳದಿಂ . . . ಚಿಂತಾಂತರಂಗನುಮಾಗಿ (ಸುಕುಮಾ. ೨-೦೦ ವ) ; ಲಲಿತ ಚಂದ್ರಿಕೆಗೇಕೆ ದಾವಾನಳನ ಖಾಡಾಖಾಡಿ (ಕುವ್ಯಾದ್ರೋ. ೪-೪೮) ; ಲಲಿತನಿರ್ಮಲಚಂದ್ರಕಾಂತದ ಶಿಲೆಯ ಹತ್ತಿರೆ ಲತೆಯ ದಾವಾನಳನು ಕೊಳಲಾ ಜ್ವಾಲೆಯಾ ಶಿಲೆಯೊಳಗೆ ತೋರ್ಪಂತೆ (ಪ್ರಭುಲೀ. ೭-೨೫). [ ದಾವ$_2$ + ಅನಲ ]

**ದಾವಾನಲಚೂರ್ಣ** (ನಾ). ಒಂದು ವಿಧವಾದ ಚೂರ್ಣ : ದಾವಾನಲ ಚೂರ್ಣ–ಹಿಂಗು, ವಾಯುವಿಳಂಗ, ಪಂಚಲವಣ, ಕರ್ಕಾಟಕ ಶೃಂಗಿ, ತಾರೇಕಾಯಿ, ನೆಲ್ಲೀಚಟ್ಟು, ತ್ರಿಕಟುಕ, ಚವ್ಯ, ಚಿತ್ರಮೂಲ, ಮೋಡಿ, ಕೊನ್ನಾರಿಗೆಡ್ಡೆ, ಕಟುಕರೋಹಿಣಿ, ಕರೀಜೀರಿಗೆ, ಬಿಳೀಜೀರಿಗೆ, ಕೊಡಸಿಗೆ ಬೀಜ, ಚಂಗಲ್ವಕೋಷ್ಟ, ಹೆಗ್ಗುಳ್ಳ, ನೆಲಗುಳ್ಳ, ತಿಗಡೆ, ಗಜಹಿಪ್ಪಲಿ, ಸಿಹಿಹಾಲೆಬೇರು, ವಿಷಖಿದ್ದಿ, ಈಶ್ವರೀಬೇರು, ಗಂಟುಭಾರಂಗಿ, ಯವಕ್ಷಾರ, ಸರ್ಜಕ್ಷಾರ, ಬಳಿಗಾರ, ಅರಿಸಿನ, ಮರದರಿಸಿನ ಇವನ್ನು ಸಮಾಂಶ ಚೂರ್ಣಮಾಡಿ ಬೆಲ್ಲ ಅಥವಾ ಜೇನು ತುಪ್ಪದೊಡನೆ ತೆಗೆದುಕೊಳ್ಳಲು ಕಾಸ ಶ್ವಾಸ, ಅಜೀರ್ಣ, ವಾತತಿಮಿರ, ತ್ರಿದೋಷಶೂಲೆ, ಸಹ ಪರಿಹಾರವಾಗುವುವು (ಸಳವ್ಯ. ಪರಿ. ೪೩೬).

[ ದಾವಾನಲ? + ಚೂರ್ಣ$_2$ ]

**ದಾವಾನಳ** 'ದಾವಾನಲ' ನೋ.

**ದಾವಾರಿ** (?). (?): ವೃಷಗ ವೃಶ್ಚಿಕಗಮನ ದಾವಾರಿ ಕಂಸವುಂ ತೊಲೆಯದಿರ್ಪ (ಏಕೋಶು. ೨). [ ? ]

**ದಾವು$_1$** 'ಡಾಹ' ನೋ.

**ದಾವು$_2$** (ನಾ). ಹಗ್ಗ ; ಹುರಿ; ರಜ್ಜು: "ತಳ್ಳೆಂದುಂ ದಾವೆಂದುಂ ಅಗ್ಗರಣೆಯೆಂದುಂ ರಜ್ಜು" (ಕಶಸಾ. ೩೦-೩೪೦) ; ದಾವಿನ್ನಡುವಂ ತೊಡರ್ಚಿ ದೃಢವಾಗಲುಲೂಖಲದಲ್ಲಿ ಕಟ್ಟಿ ಪೋಗಿನ್ನು . . . ನೋಟಪ್ಪೆನೆಂಬುದುಂ (ಜಗವಿ. ೩-೩೭) ; ದಾವುಂ–ದಾವು (ಶಮದ. ೨೭೮ ಪ್ರಯೋ) ; ಮುನ್ನೇಂ ಕಟ್ಟದೆ ಮಾಣ್ದರೇ ಕಡೆವ ದಾವಿಂದೆನ್ನಂ (ಅಪ್ರತಿ. ೪೪-೨೩) ; ಎನ್ನೀ ಅಬೆ ಮೆಯ್ಯುಂ ಬಾವಿ ದಾವುಗಳ್ಗೊಟ್ಟಿಸಿ ಎನ್ನಿನಿಯನಂ ಮುಗುಟ್ದುಂ ಕಾಣಲಕ್ಕುಮೆಂದೊಡೇವೆನ್ನೆ (ರಾಮಾಶ್ವ. ೪೨-೧). [ <ಸಂ. ದಾಮನ್ ]

**ದಾವುಣಿ** 'ದಾವಣಿ$_1$' ನೋ.

**ದಾವುದು** (ಸ). ರೂಪಗಳು (ಪುಂ. ಸ್ತ್ರೀ ಬಹುವ) ದಾರು$_1$, (ವಿಶೇ) ದಾವ$_1$. ಪ್ರಶ್ನಾರ್ಥಕ ಸರ್ವನಾಮ: ದಾವುದು ದಾರಿ ಆ ಊರಿಗೆ (ರೂಢಿ).

ದಾರು₁ = ಅದು ಯಾರಂ ; "ಯಾರಂ" (ಜಾನಕೋ. ೪) : ದಾರಿಗೆ ದಾರು ಮತ್ತಿಲ್ಲ ದೃಢ ಸೇರಿತು ಮನವವು ಮನೆ ಮನೆಯೊಳಗೆಲ್ಲ (ಪುರಂದ. ೦-೬೩-೬): ಅಂತರಂಗದ ಒಳಗೆ ಭ್ರಾಂತಿ ಬಿಡಿಸುವ ಎಮ್ಮ ಅಂತು ದಾರಿಗು ತಿಳಿಯದಂಥ ಎಮ್ಮ (ಪುರಂದ. ೨-೫೫-೩): ದಾರೊಡೆಯನೊ ದಾರ್ವತ್ರನೊ ನೀರೆ ಇವಳ ಸೊಬಗಿದೇನೊ (ರತ್ನಾ.ಕ. ೩೦) : ಈ ಮತ್ತೊಬ್ಬ ನಾಲ್ಕನೇ ಸ್ತ್ರೀಯು ದಾರಪ್ಪಾ? (ಉರಾಜ. ೦೪); ಸೋರುತಿಹುದು ಮನೆಯ ಮಾಳಿಗಿ ದಾರು ಗಟ್ಟ ಮಾಳ್ಪರಿಲ್ಲ ಕಾಳಕತ್ತಲೆಯೊಳಗೆ ನಾನು ಮೇಲಕೇರಿ ಮೆಟ್ಟ ಲಾರೆ (ಶರೀಫ. ೦೯-೦) : ಎಲ್ಯೆ ಭಗವತಿಯರಿರಾ ! ನೀವು ದಾರು ? (ಮುಂಬಯಿ. ೪-೩೯೯). ದಾವ₁= ಅದು ಯಾವ; "ಯಾವ" (ಜಾನಕೋ. ೪); ನಿನ್ನ ಶೀಲ ಸೌಂದರ್ಯವನು ಧರೆಯೊಳಗೆ ವರ್ಣಿಸುವ ಕವಿಯು ದಾವಾ (ವಾದಿಕೀ. ೪-೦); ಈಗ ಆ ರಾಜನು ದಾವ ಕಾರ್ಯದಲ್ಲಿ ಆಸಕ್ತನಾಗಿದ್ದಾನೆ (ಉರಾಜ. ೪೩). 'ಆವುದು', 'ಯಾವುದು' ಪರಾ.

[ <ಅದು₁ + ಆವುದು ]

ದಾವೆ₁ 'ದಾವಾ' ನೋ.

ದಾವೆ₂ (ನಾ). ೧. ಹಗ್ಗ (?) : ನಿನ್ನಯ ನಣ್ಪಿ ದಲೆಂದು ತಂದ ಹುಟ್ಟ ಗೆಯಂಬಿದೇಟಿನ್ನೊಳಂಗಟಿದು ಸೇದೆಯ ಜಾವಿಯೊ ಬಂದ ದಾವೆ[ಪಾಠಾಂ. ತಾವಿ]ಯೋ (ಲೀಲಾವ. ೨-೧೦೦). ೨. (?): "ದಾವೆ[ಪಾಠಾಂ. ರಾವೆ]ಯೆನೆ ಸಾವೆಯಕ್ಕುಂ" (ಮಂಗರಾ. ೩೬-೧೮). [ ? ]

ದಾವೆದಾರ 'ದಾವಾದಾರ' ನೋ.

ದಾಶ (ನಾ). ೧. ಬೆಸ್ತರವನು ; ಮೀನಂಗಾರ : ಆ ಮೀನನೊರ್ವಂ ಜಾಲಗಾಱಂ ಜಾಲದೊಳ್ ಪಿಡಿದಲ್ಲಿಗರಸಪ್ಪ ದಾಶನಲ್ಲಿಗುಯ್ದು ತೋಱೆ ದೊಡೆ (ಪಂಪಭಾ. ೦-೬೮ ವ). ೨. ಆಳಂ ; ದಾಸ ; ಸೇವಕ : ಮಹಾ ಬಲಶಾಲಿಯಾದ ಜರಾಸಂಧನು, ಕೃಷ್ಣನು ದಾಶನೆಂದು ಅವನೊಡನೆ ಯುದ್ಧಕ್ಕೆ ಹೋಗಲಿಲ್ಲ (ವಚಭಾ. ೮೩). 'ದಾಶಾರ್ಹ' ಪರಾ. [ ಸಂ. ]

ದಾಶಮಿಕ (ಗು). ಹತ್ತನೆಯ ; ಹತ್ತು ಹತ್ತಾಗಿ ಎಣಿಸಿದ ; ಹತ್ತು ಹತ್ತು ಹಿಡಿದು ಹೋಗುವ : "ದಾಶಮಿಕ, ದಶಮಲವ" (Decimal. ಪಾರಿಸಿ. ೨೬). [ ಸಂ. ]

ದಾಶಮಿಕಪದ್ಧತಿ (ನಾ). [ಗಣಿತ] ಹತ್ತು ಹತ್ತರಂತೆ ಏರುತ್ತಾ ಅಥವಾ ಇಳಿಯುತ್ತಾ ಹೋಗುವ ಎಣಿಕೆಯ ಕ್ರಮ : ಈತನ ಸಲಹೆಗಳ ಪ್ರಕಾರವೇ, ದಾಶಮಿಕಪದ್ಧತಿಯು ಜಾರಿಗೆ ಬಂದಿತು (ಗಣಜ. ೦೫೮).

[ ದಾಶಮಿಕ + ಪದ್ಧತಿ ]

ದಾಶರಥಿ (ನಾ). ದಶರಥನ ಮಗ ; ಶ್ರೀರಾಮ : ರತ್ನ ಪ್ರದೀಪಮಯ ಮಾಯ್ತು ತಮಮೆಲ್ಲಮುಂ ರಘುಜಪ್ರತಾಪಮಯಮಾಯ್ತು ಮೂಜಗ ಮೆಲ್ಲಮುಂ ದಾಶರಥಿ ರಾಜ್ಯಮಂ ಪಾಲಿಸೆ (ಜೈಮಿಭಾ. ೦೮-೦೨). [ ಸಂ. ]

ದಾಶಾರ್ಹ (ನಾ). ೧. ದಶಾರ್ಹನ ವಂಶದವನು; ಯದುವಂಶದವನು. ೨. ಕೃಷ್ಣ. [ ಸಂ. ]

ದಾಶಾಳ 'ದಾಸವಣ' ನೋ.

ದಾಶಿವಾಳ 'ದಾಸವಣ' ನೋ.

ದಾಷ್ಟಿಕ₁ 'ದಾರ್ಷ್ಟೀಕ' ನೋ.

ದಾಷ್ಟಿಕ₂ (ನಾ). ಹಾವು ಕಚ್ಚಿದವನು : ಇಲ್ಲಿಯ ಇರುಳೀ ದಾಷ್ಟಿಕಂಗೆ ಜಾವಮಿರಿಮೆಂದು ಪೇಟ್ದು ಪೋದಂ (ವಡ್ಡಾರಾ. ೦೪-೨೩). [ ಸಂ. ]

ದಾಷ್ಟಿಕತನ (ನಾ). ಎದೆಗಾರಿಕೆ ; ದಿಟ್ಟತನ ; ಕೆಚ್ಚು : ದಾಷ್ಟಿಕತನಗೆಟ್ಟು ದರಹಾಸಮುಖಿ ಪರಿವೇಷ್ಟಿಸಿದವಳ ಸೌಂದರದಿ ಚೇಷ್ಟಿಪ ವೇಶ್ಯಾ ಭುಜಂಗರ ಮಧುಪಾನಗೋಷ್ಠಿಯ ಸೊಬಗನೀಕ್ಷಿಸಿದ (ಮೋಹತ. ೦೯-೯೬); ಅವಳು ಹಳ್ಳಿಯ ಹೆಣ್ಣಾದುದರಿಂದ ಅಷ್ಟೊಂದು ದಾಷ್ಟಿಕತನವುಳ್ಳವ ಳಾಗಿರಲಿಲ್ಲ (ಮೂಲಾನ. ೦೫). [ ದಾಷ್ಟಿಕ₁ (<ದಾರ್ಷ್ಟೀಕ) + -ತನ ]

ದಾರ್ಷ್ಟೀಕ, ದಾಷ್ಟಿಕ₁ (ನಾ). ೧. ಎದೆಗಾರಿಕೆ ; ಧೈರ್ಯ ; ದಕ್ಷತೆ : ಜಾಣತನ ದಾರ್ಷ್ಟೀಕ ದೇಹತ್ರಾಣ ನಡೆನುಡಿಗಳಲಿ ಸಕಲ ಪ್ರಾಣಿಗಳಲತ್ಯಧಿಕ ನಾಗಿರುತಿರ್ದು (ನಿಭಾಗ. ೦೦-೦೩-೮) : ಮನದೊಳು ಕಳವಳಗೊಳುತ ಕೇಳಿದಡೆಯೇನು ದಾರ್ಷ್ಟೀಕವೆಂದು ತೋರುವುದೊ (ಸೌಗಂಧಿ. ೨೫೯-೦೫). ೨. ದಕ್ಷನೂ ಪ್ರಭಾವಶಾಲಿಯೂ ಆದವನು : (ಕ). ೩. ಒರಟ ; ನಿರ್ಲಜ್ಜ. ದಾಷ್ಟಿಕ₁: ೧. ಆದರಲ್ಲಿ ಅಭಿರುಚಿಯಿಲ್ಲದಿದ್ದರೂ ಇದೆಯೆಂದು ಸಾಧಿಸುವ ದಾಷ್ಟಿಕ ಅವರಲ್ಲಿತ್ತು (ನಾಡಿಗೇ. ೧) ; ಕಲಾವಿದರಲ್ಲಿ ದಾಷ್ಟಿಕ ವಿಲ್ಲದಿರುವುದರಿಂದಲೋ ಅವರಿಗೆ ತಕ್ಕ ಪ್ರೋತ್ಸಾಹವಿಲ್ಲದಿರುವುದ ರಿಂದಲೋ ಈ ಪದ್ಧತಿಗಳು ಅಷ್ಟು ಪ್ರಖ್ಯಾತವಾಗಿಲ್ಲ (ಭಾರದ. ೫೬೩).

ದಾಷ್ಟಿಕವಾಗು = ದೃಢತೆ ಹೊಂದು; ಗಟ್ಟಿಯಾಗಿರು: ಹುಡುಗನಿಗೆ ವಿದ್ಯೆಯ ಹಂಬಲವಿದೆ. ದಾರ್ಷ್ಟೀಕವಾಗಿದ್ದಾನೆ (ಹತ್ತುಮು. ೧೦೩).

[ <ಸಂ. ಧಾರ್ಷ್ಟ್ಯಕ ]

ದಾಸ (ನಾ). ೧. ಆಳು ; ತೊತ್ತು; ಊಳಿಗದವನು; ಸೇವಕ : "ದಾಸಃ, ದಾಸೇರಕಃ–ಈ ೨ ಕೊ (ಟ್ಟಿ)ತ್ತಿನ ಮಗಂ" (ಹಲಾಯು. ೬೦-೨೦೦) : ಕಾಳಿದಾಸಂಗೆ ದಾಸರೆನಿಪರ್ ಕವಿಗಳ್ (ಜಗವಿ. ೦-೯); ಈಶ ನಿಮ್ಮ ದಾಸರ ದಾಸಿಯ ದಾಸ[ಪಾಠಾಂ. ಸಿ] ನಾನಯ್ಯ (ಬಸವ. ೩೪೦) : ದಾಸನ ಮಾಡಿಕೋ ಎನ್ನ ಸ್ವಾಮಿ ಸಾಸಿರ ನಾಮಂದ ವೆಂಕಟರಮಣ (ಪುರಂದ. ೦-೯ ಪಲ್ಲವಿ) ; ದಾಸನಾಗಿಹ ಕೂಸು ಮೊರೆಯಿಡಲಾ ಸಮಯಕ್ಕೆತಂದು (ಗಗತಾ. ೦೯-೨೬). ೨. ವೈಷ್ಣವ ಪಂಥದ ಭಕ್ತ ; ಹರಿದಾಸ ; ದಾಸಯ್ಯ ; ದಾಸಕೂಟಕ್ಕೆ ಸೇರಿದ ವ್ಯಕ್ತಿ: ಅಷ್ಟವಿಧಾರ್ಚನೆ ಮಠಪತಿ ದಾಸ ವೈಷ್ಣವ ರಾಹಾರದಾನಕಂ ಬಿಟ್ಟ ದತ್ತಿ (ಎಕ. XIV, ನಾಗಮಂ ೦೪೦-೬೭ ; ಸು. 1224) ; ದಾಸರ ನಿಂದಿಸಬೇಡ ಮನುಜ ಹರಿದಾಸರ ನಿಂದಿಸಬೇಡ (ಪುರಂದ. ೦-೦೦ ಪಲ್ಲವಿ) ; ದಾಸನೆಂತಾಗುವೆನು ಧರೆಯೊಳಗೆ ನಾನು ವಾಸುದೇವನಲ್ಲಿ ಲೇಶಭಕುತಿಯು ಕಾಣೆ (ಪುರಂದ. ೪-೦೬೫ ಪಲ್ಲವಿ) ; ದಾಸರು ಬಂದಾರ ಮದುವಿಗೆ (ಲೋಕಗೀ. ೨೫) ; ಹರಿದಾಸರಲ್ಲಿ ದಾಸರು, ವ್ಯಾಸರು ಎಂದು ಎರಡು ವಿಧ (ಭಾರದ. ೩೦೦). ೩. ಒಂದು ಜಾತಿ ; P ಸಾಮಾನ್ಯವಾಗಿ ಇವರು ಒಂದು ಕಡೆ ನಿಲ್ಲದೆ ಊರಿಂದೂರಿಗೆ ಸಂಚಾರಮಾಡುತ್ತಾ ಕೀರ್ತನೆ, ಭಜನೆ ಮುಂತಾದುವುಗಳಿಂದ ಹೊಟ್ಟೆ ಹೊರೆದು ಕೊಳ್ಳುವರು : ದಾಸರು . . . ಇವರಲ್ಲಿ ತಿರುಮಲದಾಸರೆಂತಲೂ ಗಂಡುದಾಸರೆಂತಲೂ ಯೆರಡು ಪೊಳಭೇದಗಳಿವೆ (ಕಭಾಗೆ. ೨೦೭). ೪. ಮೀನಂಗಾರ; ಬೆಸ್ತ: ನುತ ದಾಸಾನ್ವಯ ನಾಯಕಸುತ ನಾನೆನಗಿದಿರ ದಾರುಮಿಲ್ಲಂ ಜಗದೊಳ್ (ಹಾಲಾಸ್ಯ. ೪-೯-೫೨).

ದಾಸಮಕ್ಕಳು = ಆಳುಮಕ್ಕಳು ; ತೊತ್ತಿನ ಮಕ್ಕಳು ; ಭಕ್ತರು : ಶ್ರೀ ಭೇರುಂಡೇಶ್ವರ ದೇವರ್ಗ್ಗೆ . . . ಸಮಸ್ತಪ್ರಜೆ ದಾಸಮಕ್ಕಳು ತಂಮ . . . ಕೊಟ್ಟ (ಎಕ. VII (S), ಶಿಕಾರಿ. ೩೫೪; ಸು. 1250). ದಾಸರ ಆಟ, ದಾಸರಾಟ = ದಾಸರು ಆಡುವ ನಾಟಕ ; ಬಯಲಾಟದ ಒಂದು ಪ್ರಕಾರ : ದಾಸರ ಆಟ ಆಟವಲ್ಲ ದೋಸೆಯ ಊಟ ಊಟವಲ್ಲ (ಗಾದೆ); ಅವನು 'ದಾಸರಾಟ' ನೋಡುವುದಕ್ಕೆಂದು ಪಕ್ಕದ ಹಳ್ಳಿಗೆ ಹೋಗಿದ್ದನು (ರೂಢಿ). ದಾಸರ ಪದ = ದಾಸರುಗಳ ಹಾಡು; ಹರಿದಾಸರ ಕೀರ್ತನೆ: 'ದಾಸರ ಪದದಲ್ಲಿ ತಪ್ಪಿಲ್ಲ, ತಂಗಡೀ ಹೂವಿನಲ್ಲಿ ವಾಸನೆಯಿಲ್ಲ' ವೆಂದು ಹರಿದಾಸರನ್ನು ನಿಂದಿಸುವವರ ವಾಗ್ಬಂಧನವಾಗುತ್ತದೆ (ಕಭವಿ. II, ೦೨೫). ದಾಸರ ಸಾನಿ = ವೇಶ್ಯಾವೃತ್ತಿಯ ಮಹಿಳೆ : "ದೇವದಾಸಿ. ಕಸಬಿ" (ಜಾನಕೋ. ೪). ದಾಸಾನುದಾಸ = ಅಡಿಯಾಳು ; ಸೇವಕರ ಸೇವಕ : ಅವಳನ್ನು ಕ್ಷಣಮಾತ್ರವೂ ಎದುರಿಸಲಾರದೆ ಮಿಥಿಮಾರಿ ಮೋಹಗೊಂಡು ದಾಸಾನುದಾಸನಾಗಿ ಅವಳಿಗೆ ಶರಣು ಬಿದ್ದ (ಯೋಧಪು. ೪೯). [ ಸಂ. ]

ದಾಸಕಟ್ಟು 'ದಾಸರಿಕಟ್ಟು' ನೋ.

**ದಾಸಕೂಟ** (ನಾ). ಹರಿದಾಸರ ಪಂಥ : ದಾಸಪಂಥ; ವೈಷ್ಣವ ಪಂಥದ ಭಕ್ತರ ಕೂಟ : ಶ್ರೀ ಪುರಂದರದಾಸರಾಯರಿಂದ ಸ್ಥಾಪಿತವಾದ ದಾಸ ಕೂಟವು . . . ಪುನಃ ಉದ್ಧೃತವಾಯಿತು (ವಿದಾಕ್ಕ. ೫ ೬೮೪); ದಾಸಪಂಥ ಅಥವಾ ದಾಸಕೂಟ ಬಂದದ್ದು ಇವರ ಕಾಲದಲ್ಲೇ (ಭಾರದ. ೨೯೩) : ಪುರಂದರದಾಸರದ್ದು ಒಂದು ಕೂಟ; ಅದು 'ದಾಸಕೂಟ'; ನಮ್ಮಂಥವರದ್ದು ಮತ್ತೊಂದು ಕೂಟ; ಇದು ವ್ಯಾಸಕೂಟ! (ಹೇಮುಕೂ. ೧೬೨). 'ವ್ಯಾಸಕೂಟ' ಪರಾ. [ ದಾಸ + ಕೂಟ$_1$ ]

**ದಾಸಗಾವುಂಡ** (ನಾ). ಒಬ್ಬಾತನ ಹೆಸರು : ವಲ್ಯಣಗಾವುಂಡನುಂ ಸತ್ಯಣನುಂ ದಾಸಗಾವುಂಡನುಂ ಮಾಚಿಸೆಟ್ಟಿಯುಂ (ಕಇಅ. ೧೦೫-೧೧-೨೦ ; 1067). [ ದಾಸ + ಗಾವುಂಡ(<ಗಾಮುಂಡ) ]

**ದಾಸಗಿತ್ತಿ** (ನಾ) ದಾಸನ ಹೆಂಡತಿ ; (+). [ ದಾಸ + – ಗಿತ್ತಿ ]

**ದಾಸಗೆಲಸ** (ನಾ). ಆಳು ಮಾಡುವ ಕೆಲಸ ; ಸೇವಕವೃತ್ತಿ ; ಸೇವೆ : ಒಸಗೆಯಾಯಿತ್ತೆನ್ನ ದಾಸ [ಪಾಠಾಂ. ದಾಸಿ] ಗೆಲಸಕೆ ಬದುಕಿದೆ ನಾನೆನುತ ತಾಂ ಅಸಮ ಜಂಗಮುದರುಶನಾಪೇಕ್ಷತೆಯೊಳೆಯ್ದುಂದು (ಬಸಪು. ೨೧-೬).
[ ದಾಸ + ಕೆಲಸ ]

**ದಾಸಡಿ** (ನಾ). ಒಬ್ಬಾತನ ಹೆಸರು : ವಳ್ಳಿಗ್ರಾಮೆಯರ ದಾಸಡಿಯುಂ ಅಮಲಿಯರ ದೇವಡಿಯುಂ ವೆದೆವಳ್ಳಿಯರಾ ದೇವಡಿಯುಂ ಅಲಂವಳ್ಳಿಯರಾ ರವಿಚನ್ದನುಂ (ಎಕ. VII, ಶಿಕಾರಿ. ೧೫೪-೬ ; ಸು. 685).

**ದಾಸಣ** 'ದಾಸವಣ' ನೋ.

**ದಾಸತ್ವ** (ನಾ). ದಾಸನಾಗಿರುವಿಕೆ ; ಗುಲಾಮತನ ; ಸೇವಕತನ. ೨. ಹರಿದಾಸನಾಗುವಿಕೆ ; ದಾಸಯ್ಯನಾಗುವಿಕೆ : ವ್ಯರ್ಥವಲ್ಲವೇ ಜನುಮ ವ್ಯರ್ಥವಲ್ಲವೇ . . . ದಾಸರೊಡನೆ ಆಡದವನ ದಾಸರ ಕೂಡೆ ಪಾಡದವನ ದಾಸರ ಕೊಂಡಾಡದವನ ದಾಸತ್ವ ಪೊಂದದವನ (ಪುರಂದ. ೩-೧೯೩-೫) ; ಜಗನ್ನಾಥದಾಸರು ದಾಸತ್ವ ವಹಿಸುವುದಕ್ಕೆ ಮುಂಚೆ ಸಂಸ್ಕೃತ ಶಾಸ್ತ್ರಾಭ್ಯಾಸಬಲದಿಂದ ಆಚಾರ್ಯರ ರೀತಿಯನ್ನು ನಡೆಸುತ್ತ ಬಂದರು (ಕಮಪಾಂ. ೯೫). ೩. ಶಿವಶರಣನಾಗುವಿಕೆ : ದಾಸತ್ವ ವೀರ ದಾಸತ್ವ ಭೃತ್ಯತ್ವ ವೀರಭೃತ್ಯತ್ವ ಸಮಯಾಚಾರತ್ವ ಸಕಲಾವಸ್ಥಾತ್ವಂಗಳೆಂಬ ಷಡ್ವಿಧ ಸಜ್ಜನತ್ವಯುಕ್ತನಾಗಿ . . . ಜಗತ್ಪೂಜ್ಯನಪ್ಪಾತನೇ ವೀರಶೈವನಪ್ಪ (ವಿವೇಚ. ೧೧). [ ಸಂ. ]

**ದಾಸದೀಕ್ಷೆ** (ನಾ). ಹರಿದಾಸನಾಗುವುದಕ್ಕೆ ಪಡೆಯಬೇಕಾದ ದೀಕ್ಷೆ : ನೀವು ದಾಸದೀಕ್ಷೆಯನ್ನು ಸ್ವೀಕರಿಸಿ, 'ಪುರಂದರದಾಸ'ರೆಂಬ ಅಭಿಧಾನದಿಂದ ಪ್ರಸಿದ್ಧರಾಗಿರಿ (ಹೇಮುಕೂ. ೭೬). [ ದಾಸ + ದೀಕ್ಷೆ ]

**ದಾಸನೂರ್** (ನಾ). ಒಂದು ಊರಿನ ಹೆಸರು : ಅಲ್ಲಿಂದ ಬಡಗಲು ಪೊಟುಯೂರ ಬೆದಿರೂರ ದಾಸನೂರ ಮುಕ್ಕೂಟ ಸಂಧಿಯಲು (ಪ್ಯುಅರಿ. ೧೯೨೫, ೧೧೫-೪೭ ; 684). [ <ದಾಸ + ಊರ್ ]

**ದಾಸಪಂಕ್ತಿ** (ನಾ). = ದಾಸಕೂಟ : ಪುರಂದರದಾಸರು ದಾಸಪಂಕ್ತಿಯಲ್ಲಿ ಶ್ರೇಷ್ಠರಾದವರಾದರೂ ದಾಸಪರಂಪರೆ . . . ನರಹರಿತೀರ್ಥರಿಂದ ಬೆಳೆದು ಬಂದಿರುವುದು ಚಾರಿತ್ರಿಕವಾಗಿ ಕಾಣುತ್ತದೆ (ಭಾರದ. ೨೯೩).
[ ದಾಸ + ಪಂಕ್ತಿ ]

**ದಾಸಪಂಥ** (ನಾ). = ದಾಸಕೂಟ : ದಾಸಪಂಥ ಅಥವಾ ದಾಸಕೂಟ ಬಂದದ್ದು ಇವರ ಕಾಲದಲ್ಲೆ (ಭಾರದ. ೨೯೩).
[ ದಾಸ + ಪಂಥ$_2$ (<ಪಂತ$_3$) ]

**ದಾಸಪಟ್ಟೆ** (ನಾ). ದಾಸಯ್ಯಗಳು ಹಾಕಿಕೊಳ್ಳುವ ನಾಮ : ಕೆಂಬರು ಹಣೆಯ ದಾಸಪಟ್ಟೆಯ ಮೇಲೆ, ಅಲಂಕಾರಾರ್ಥವಾಗಿ ಇಳಿಬಿಟ್ಟಿದ್ದ ಗೆಜ್ಜೆಯ ಕುಚ್ಚಿನಿಂದ ಗಲಿರುಗಲಿರೆಂದು ಕಿಂಕಿಣಿನಾದ ಹೊಮ್ಮುತ್ತಿತ್ತು (ಮಲಮ. ೪೨೨). [ ದಾಸ + ಪಟ್ಟೆ$_1$ ]

**ದಾಸಪದವಿ** (ನಾ). ಹರಿದಾಸನ ಸ್ಥಾನ : ನಿಮ್ಮನ್ನು ಎಂತೋ ಅಂತೆಯೇ ಆತನನ್ನೂ ದಾಸಪದವಿಯಿತ್ತು ಅನುಗ್ರಹಿಸಿದ್ದೇವೆ (ಹೇಮುಕೂ. ೯೩).
[ ದಾಸ + ಪದವಿ ]

**ದಾಸಪದ್ಧತಿ** (ನಾ). ಗುಲಾಮಗಿರಿ : ದಾಸಪದ್ಧತಿ (ಗುಲಾಮಪದ್ಧತಿ), ಸಹಗಮನ . . . ಕಾಲಕ್ರಮದಲ್ಲಿ ಹೇಗೋ ಆಚರಣೆಗೆ ಬಂದವು (ಭಾರದ. ೩೮೬). [ ದಾಸ + ಪದ್ಧತಿ ]

**ದಾಸಪರಂಪರೆ** (ನಾ). ಹರಿದಾಸರ ಸಂಪ್ರದಾಯ : ದಾಸಪರಂಪರೆ ಶ್ರೀಮನ್ಮಧ್ವಾಚಾರ್ಯರ ಕಾಲದಿಂದ ಆರಂಭವಾಗಿ ನರಹರಿತೀರ್ಥರಿಂದ ಬೆಳೆದು ಬಂದಿರುವುದು ಚಾರಿತ್ರಿಕವಾಗಿ ಕಾಣುತ್ತದೆ (ಭಾರದ. ೨೯೩).
[ ದಾಸ + ಪರಂಪರೆ ]

**ದಾಸಬಣಜಿಗ** (ನಾ). ಬಣಜಿಗರಲ್ಲಿ ಭಕ್ತಿಪಂಥಕ್ಕೆ ಸಂಬಂಧಪಟ್ಟಿರುವ ಒಂದು ಪಂಗಡ : ಹರಿದಾಸ ದಾಸಬಣಜಿಗರಿಂದ ಬಸ್ತಿಗಳ ಕೀಳಿಸುತ ತರಿಸೊಂದು ಕೆರೆಯನ್ನು ವಿಸ್ತಾರದಿಂ ಮಾಡಿಸದಕೆ ರಾಮಾನುಜರ ಕೆರೆಯೆಂದು ಪೆಸರನಿಟ್ಟು (ಅಜಾಕವಿ. ೨೭-೯).
[ ದಾಸ + ಬಣಜಿಗ (<ಬಣಂಜಿಗ) ]

**ದಾಸಭಾವ** (ನಾ). ೧. ಆಳಿನ ಮನೋಭಾವ ; ಕಿಂಕರ ಭಾವ : ಒಪ್ಪವಾಯಿತು ದಾಸಭಾವದೊಳಿಪ್ಪ ಭಾವವೆನುತ್ತ ನಿಂಬಿಯನಪ್ಪಿ ಮುಂಡಾಡುತ್ತ (ಬಸಪು. ೨೪-೮೭). [ ದಾಸ + ಭಾವ$_2$ ]

**ದಾಸಮಾರ್ಗ** (ನಾ). ಸಾಧಕನು ಸೇವಾಮನೋವೃತ್ತಿಯಿಂದ ಪರವನ್ನು ಸಾಧಿಸುವ ಭಕ್ತಿಮಾರ್ಗ : ದಾಸಮಾರ್ಗದಲ್ಲಿ ಸಾಧಕನು ದೇವಸ್ಥಾನಗಳಲ್ಲಿ ಶಿವಾರ್ಚನೆಗೆ ಸಲಕರಣೆಗಳನ್ನೊದಗಿಸಿ . . . ಸಾಲೋಕ್ಯ ಪದವಿಯನ್ನು ಹೊಂದುವನು (ಭಾರದ. ೨೧೭). [ ದಾಸ + ಮಾರ್ಗ ]

**ದಾಸಯ್ಯ** (ನಾ). ೧. ವಿಷ್ಣುವಿನ ಆರಾಧಕ ; ದಾಸ : ಊರಿಗೆ ಬಂದರೆ ದಾಸಯ್ಯ ನಮ್ಮ ಕೇರಿಗೆ ಬಾ ಕಂಡ್ಯ ದಾಸಯ್ಯ (ಕಂದ. ೨-೮೭ ಪಲ್ಲವಿ) ; ನಾಗಾರಾಧನೆಯಲ್ಲಿ ಪಾತ್ರವಹಿಸುವ 'ವೈದ್ಯರು' ಅಂತಹ ವ್ಯಾವಸಾಯಿಕ ಜನಗಳು 'ದಾಸಯ್ಯ'ಗಳ ವರ್ಗ ಅಂಥದು (ಜಾನಗೀ. ೧೧). ೨. ಊರಿಂದೂರಿಗೆ ದೇವರ ಹೆಸರಿನಲ್ಲಿ ಪ್ರಯಾಣ ಮಾಡುತ್ತಾ ಸಾಗುವವನು: ಸಾವಿರ ಬಾರಿ ಗೋವಿಂದ ಎನ್ನಬಹುದು ಒಬ್ಬ ದಾಸಯ್ಯಗೆ ಭಿಕ್ಷೆ ನೀಡೋದು ಕಷ್ಟ (ಗಾದೆ). ೩. ಒಬ್ಬಾತನ ಹೆಸರು :ಬಿಟ್ಟಿಯಗನ ಪೆರ್ಗ್ಗಡೆ ದಾಸಯ್ಯನ ಮಗಂ ಭೀಮಯ್ಯಂ (ಎಕ, VIII, ಸೊರಬ. ೫೩೦-೯; 967). ೪. (ಆಲಂ) ನಿರ್ಗತಿಕ : ಬೀದಿಯ ದಾಸಯ್ಯನನ್ನು ಮದುವೆಯಾಗಲು ಒಪ್ಪಿಕೊಂಡಳು (ರೂಢಿ). [ ದಾಸ + ಅಯ್ಯ$_1$ ]

**ದಾಸರ** 'ದಾಸರಿ' ನೋ.

**ದಾಸರಕಬ್ಬು** 'ದಾಸರಿಕಬ್ಬು' ನೋ.

**ದಾಸರಹಾವು** 'ದಾಸರಿಹಾವು' ನೋ.

**ದಾಸರಿ, ದಾಸರ** (ನಾ). ಹರಿದಾಸ ; ದಾಸಯ್ಯ : ದೀವಟಿಗೆಯವನ ಪಕ್ಕದಲ್ಲಿ ಬಲಗಡೆ ದಾಸರಿಯೊಬ್ಬನು ಹಳದಿನಾಮವೊಂದನ್ನಿಟ್ಟು ಕೈಲಿ ಜಾಗಟೆ ಬಡಿಯುತ್ತ ಆಗಾಗ್ಗೆ ಶಂಖವೂದುತ್ತ ಹೋಗುತ್ತಿರುವನು (ಪಂಯಾತ್ರೆ. ೫೦). ದಾಸರ : 'ದಾಸರಕಬ್ಬು', ದಾಸರಹಾವು' ಪರಾ.
[ ?./ತಮಿ. ತಾಚರಿ, ತೆಲು. ದಾಸರಿ./ಸಂ. ದಾಸೇರ = ದಾಸಿಯ ಮಗ ; ಸೇವಕ, ಆಳು ]

**ದಾಸರಿಕಬ್ಬು, ದಾಸಕಬ್ಬು, ದಾಸರಕಬ್ಬು** (ನಾ). ದಾಸರ ನಾಮದಂತೆ ಉದ್ದ ಗೆರೆಗಳನ್ನು ಉಳ್ಳ ಕಬ್ಬು ; ಪಟಾವಳಿ ಕಬ್ಬು : ದಾಸರಿಕಬ್ಬಿಗೆ ಪಟಾವಳಿಯೆಂದೂ ಹೆಸರು (ರೂಢಿ). ದಾಸಕಬ್ಬು : ನಮ್ಮ ದೇಶದಲ್ಲಿ ರಸದಾಳಿ ದಾಸಕಬ್ಬುಗಳು ಹೆಸರಾದುವು (ಜಾಲಚಿತ್ರ. II, ೬೪೯) : ಹೆಗಲ ಮೇಲೆ ಒಂದು ತಕ್ಕಮಟ್ಟಿಗೆ ದೊಡ್ಡದೆ ಆದ ದಾಸಕಬ್ಬಿನ ಹೊರೆ ಇತ್ತು

(ಮಲಿಮ. ೪೨೩). **ದಾಸರಕಬ್ಬು :** ಅವುಗಳಲ್ಲಿ ರಸದಾಳಿಕಬ್ಬು ಎಂದರೂ ದಾಸರಕಬ್ಬು ಎಂದರೂ ಒಂದೇ (ಕೃಷಿಪ್ರ. ೧೮೨).

[ ದಾಸರಿ + ಕಬ್ಬು₂ (< ಕರ್ಬು₁) ]

**ದಾಸರಿಹಾವು,** ದಾಸರಹಾವು (ನಾ). ಹಣೆಯಮೇಲೆ ಬಿಳಿಯ ನಾಮದ ಪಟ್ಟೆಯಂತಿರುವ ಗುರುತುಳ್ಳ ಒಂದು ಬಗೆಯ ಹಾವು; ಹೆಬ್ಬಾವು: (ಕ). **ದಾಸರಹಾವು :** (ಕ). [ ದಾಸರಿ₁ + ಹಾವು (< ಪಾವು₁) ]

**ದಾಸವಣ** ದಾಶಾಳ, ದಾಶಿವಾಳ, ದಾಸಣ, ದಾಸವಾಣ, ದಾಸವಾಳ, ದಾಸಳ, ದಾಸಾಣ, ದಾಸಾಳ, ದಾಸಿವಣ, ದಾಸಿವಾಣ, ದಾಸಿವಾಳ (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು: "ರುದ್ರ ಪುಷ್ಪಂ, ಜಪಾ–ಈ ೨ ದಾಸವಣಂ" (ಹಲಾಯು. ೩೫-೫೪) ; ದಾಸವಣ [ಪಾಠಾಂ. ದಾಸಣ] ದಂಡೆಯುಂ ತೋರದೀಡೆಯಾಡಿದಂತೆ ದೆಸೆದೆಸೆಗೆ ಕೆದಱಿದ ಕಂಡದಿಂಡೆಗಳುಂ . . . ಪಾಱುವ ನೆತ್ತರ ಸುಟ್ಟುರೆಗಳುಮತಿ ಭಯಂಕರಾಕಾರಮಾಗೆ (ಪಂಪಭಾ. ೧೧-೧೪೦ ವ). **ದಾಶಾಳ:** ಈ ಪರೀಕ್ಷೆಯ ಸಲುವಾಗಿ ನೀಲವರ್ಣದ ಗೋಕರ್ಣ ಎಂಬ ಹೂವನ್ನಾಗಲಿ ಕೆಂಪು ದಾಶಾಳದ ಹೂವನ್ನಾಗಲಿ ತಂದು . . . ಇಡಬೇಕು (ಮುಂಬಯಿ. ೬-೩೩). **ದಾಶಿವಾಳ :** ಕೆಂಪು ದಾಶಿವಾಳ ಬಿಳಿಯ ದಾಶಿವಾಳ ಚಂಡುದಾಶಿವಾಳ . . . ಇರವಂತಿಗೆ ಇವುಗಳಲ್ಲಿ ಕೆಲವು ಕೊಲ್ಲಿಗಳನ್ನು ಕೆಲವು ಉಂಟುಗಳನ್ನು ಮಾಡಿ ಹಚ್ಚಬೇಕು (ಕೃಷಿಪ್ರ. ೨೦೦). **ದಾಸಣ :** "ಜಪಾರುದ್ರಮೆನೆ ದಾಸಣಂ" (ಮಂಗರಾ. ೩೮-೨೪) ; ಸೂರೆ ದಾಸಣ [ಪಾಠಾಂ. ದಾಣ]ಮುಂ ಮುಳ್ವತ್ತರಿಗೆಯೆನಿಪ್ಪವಱ ಬೇರ್ಗಳೊಳ್ ಮೆಚ್ಚಿದುದಂ ಕೊರಲೊಳ್ ಕಟ್ಟುಗೆ ಬರ್ಕುಂ . . . ಶಿಶುವಿನ ಪಲ್ಗಳ್ (ಲೋಕೋಪ. ೯-೧೮೫); ಕೇತಕಿಯೆಸಳ ಕೂರಲಗು ದಾಸಣದ ಗೊಂಡೆಯಂ ನನೆಗಣೆಗಳಂ ತಳೆದ ಸಂಪಗೆಯ ಬಿರಿಮುಗುಳ ಮೂಡಿಗೆ ತುಂಬಿಗಳ ರವದ ನಾರಿ . . . ಬೆರಸಿ ಮನ್ಮಥನೆಸೆದನು (ಸಿದ್ಧರಾ. ೪-೬೪) ; ಕೆದಱಿದ ನೆಣದ ಹಸರ ರಂಜಿಸಸಿದುದು ರಣದೇವತೆ ಮೆಚ್ಚಿ ರಾಮಗೆ ಕಱಿದ ದಾಸಣದ ಪೂವಿನ ಮಳೆಯಂತೆ (ಕುರಾಸಾಂ. ೪೩-೧೧೧) ; ಮಿನುಪ ಪಸಿವಣಿಯು ದಾಸಣದ ಸನ್ನಿಧಿಯಳಿಯೆ ಘನಕಾಂತಿಮಯವೆನಿಸಿ ಬೆಳಗುತಿರುವಂತೆ (ಕೃಕವ. ೧೨೩-೧೬-೨). **ದಾಸವಾಣ :** ತಿಲಕ ಸರಸಿಜ ದಾಸವಾಣ ಕುವಲಯ . . . ಅಲರ್ಗಳಿರುತಿಹವೆಮ್ಮ ಮೈಯೊಳಗೆ (ಅಜಾ೯ವಿ. ೧೬-೩೫). **ದಾಸವಾಳ :** ದಾಸವಾಳ, ಮೂಲಂಗಿ, ಹತ್ತಿ ಮುಂತಾದ ಹೂವುಗಳಲ್ಲಿ ಸಾಮಾನ್ಯವಾಗಿ ಪುಷ್ಪತಲ ಕೋನಾಕಾರವಾಗಿ ಉಬ್ಬಿಕೊಂಡಿದೆ (ಸಸ್ಯಶಾ. ೫೫). **ದಾಸಳ:** "ಓಡ್ರಪುಷ್ಪ, ಜಪೆ – ದಾಸ[ಪಾಠಾಂ.ಸಾ]ಳ" (ನಾಚಿರಾ. ೯) ; ಕೆಂದಾವರೆಯ ದಾಸಳ [ಪಾಠಾಂ. ಣ]ದ ಪೂವಿನ ವರ್ಣದ ಸಂಪದದಿಂ ಮದದಿಂ ಮುದದಿಂ ದೊಪ್ಪಿತ್ತು ಚಂದ್ರಬಿಂಬವಿಡಂಬಂ (ಗಿರಿಕ. ೪-೯೮). **ದಾಸಾಣ:** "ರುದ್ರ ಪುಷ್ಪಂ, ಜಪಾಪುಷ್ಪಂ–ಈ ೨ ದಾಸಾಣ" (ನಾಚಿರಾ. ೧೦೯); ಪಳುಕಿನೊಳು ತೋರ್ಪ ಕೆಂಬೆಳಗು ಪುಸಿ ದಾಸಾಣ (ಅನುಶಾ. ೬-೩-೭) ; ಸಿರಿಗಂಧಂ ಜಾಜಿ ದಾಸಾಣ ಸೇವಂತಿಗೆ . . . ಇರ್ಕುಂ (ಹಮ್ಮೀರ. ೬-೪೬); ದಾಸಾಣದ ಮೊಗ್ಗೆಯನಾದರೂ ಚಿಲುಕೀರೆಯ ಬೇರನಾದರೂ ಅಕ್ಕಿಗಚ್ಚಿನಿಂದ ಅರೆದು ಜೇನುತುಪ್ಪ ಬೆರಸಿ ಕುಡಿಯ ಕೊಡೆ ಗರ್ಭಿಣಿಸ್ತ್ರೀಯರಿಗೆ ಕೆಂಪಾದ ಪ್ರದರ ಹರವಹುದು (ವೃದ್ಯಸಾ. I, ೪೭೩). **ದಾಸಾಳ :** "ನವಮಾಲಿಕಾ – ಮೊಲ್ಲೆ, ದಾಸಾಳ, ಜಾಜಿ" (ಓಷಧಿ. ೮೪); ದಾಸಾಳದಲರ [ಪಾಠಾಂ. ದಾಸಳದಲರಂ] ಕುಂಕುಮಕೇಸರದ ಬೆಳರ್ತ ಬಣ್ಣದಂತಿರೆ ರಕ್ತ ಸೂಸಿ ತುದಿಗಿವಿಯ ನೊತ್ತಿದೊಡಾ ಸಿಸು ಪದಿನೆಂಟು ವರ್ಷಂ ನೆಱೆ ಬಾಳ್ಗುಂ (ಅಶ್ವಶಾ. ೬-೭೦) ; ಸಂಜೆಗೆಂಪು-ದಾಸಾಳ ಬಣ್ಣದವನಾಗಿ ನೀನು ಮೆರುಗಿ (ಮೇಘದೂ. ೧೦-೩೬) ; ನಮ್ಮ ಮೈಯೊಳಗಣ ರಕ್ತವೂ ಕೆಂಪು, ದಾಸಾಳದ ಹೂವೂ ಆದರಂತೆ (ಮುಂಬಯಿ. ೦-೧೨). **ದಾಸಿವಣ :** ಎಱೆಯ ಸಿತ ಪ್ರಯುತಾಸವಮಂ ಪೊಯ್ಗೆ ವೆರ್ಗೆಯ ಪಾಲಂ ದಾಸಿವಣದ ಪೂ ಬಿಳಿದಕ್ಕುಂ (ಲೋಕೋಪ. ೯-೫೦). **ದಾಸಿವಾಣ :** ಕೆಂಪು ಸುತ್ತು ದಾಸಿವಾಣದ ಹೂವಿನಂತೆಯೂ ಯಿಂತು ಯಂಟು ಬಗೆ ಹೊಳವಿನ ರತ್ನವು ಕ್ಷತ್ರಿಯ ಜಾತಿಯಾದ ಕುರುವಿಂದವೆಂದು ತಿಳಿಯತಕ್ಕದ್ದು (ಸೌಗಂಧಿ. ೩೬೬-೧೪). **ದಾಸಿವಾಳ :** ಹೊಳೆಯ ನಡುಕುರುವದೊಳು ದಾಸಿವಾಳದ ಪುಷ್ಪದಿಂದ ಲಿಂಗಾರ್ಚನೆಯನಾಸರದೆ ಮಾಡುತಿರೆ (ಗುರುಚಾ. ೮-೬೫).

[ ದೇ. ‖ ತುಳು. ದಾಸನ, ದಾಸಾನೊ, ದಾಸಾಳೊ ; ತೆಲು. ದಾಸನ ]

**ದಾಸವರ್ಣ** (ನಾ). ನಾಲ್ಕು ವರ್ಣಗಳಲ್ಲಿ ಒಂದು ; ಶೂದ್ರವರ್ಣ 'ದಸ್ಯು'ವೆಂದೂ 'ದಾಸವರ್ಣ'ದವನೆಂದೂ ಅವರು ಕರೆಯುವ ಈ ಶತ್ರುವಿನೊಡನೆ ಹೋರಾಡುವಾಗ ಅವರಿಗೆ ಜಯಗಳಿಸಿ ಕೊಡುವುದಕ್ಕೆ ಇಂದ್ರನಂಥ ಶೂರನಾದ ದೇವತೆಯೇ ಹೆಚ್ಚು ಪ್ರಿಯನಾದನು (ಭಾರದ. ೨೦).

[ ದಾಸ + ವರ್ಣ ]

**ದಾಸವಾಙ್ಮಯ** (ನಾ). = ದಾಸಸಾಹಿತ್ಯ: ದಾಸವಾಙ್ಮಯದ ಬೆಳವಣಿಗೆಯಲ್ಲಿ ಚಾರಿತ್ರಿಕವಾಗಿ ನಾಲ್ಕು ಹಂತಗಳನ್ನು ಗುರುತಿಸಬಹುದು (ಜಗದಾ. ೫೦).

[ ದಾಸ + ವಾಙ್ಮಯ ]

**ದಾಸವಾಣ** 'ದಾಸವಣ' ನೋ.

**ದಾಸವಾಳ** 'ದಾಸವಣ' ನೋ.

**ದಾಸವೂಳಿಗ** (ನಾ). ಆಳಿನ ಕೆಲಸ : ದಾಸವೂಳಿಗಕ್ಕೆ ಯಾರೂ ಇಲ್ಲವೆಂದು . . . ಹೇಳಲಾಗಿ (ಮೈಅರಿ. ೧೯೨೯, ೭-೯ ; 1673).

[ ದಾಸ + ಊಳಿಗ (< ಊೞಿಗ) ]

**ದಾಸಸಾಹಿತ್ಯ** (ನಾ). ಕನ್ನಡ ಸಾಹಿತ್ಯಪರಂಪರೆಯಲ್ಲಿ ಹರಿದಾಸರು ರಚಿಸಿದ, ಸಂಗೀತ ಪ್ರಧಾನವಾದ ಸಾಹಿತ್ಯರೂಪ; ದಾಸರ ಪದಗಳು: ದಾಸಸಾಹಿತ್ಯ ಭಕ್ತಿಮಾರ್ಗದ ಸಾಹಿತ್ಯದಲ್ಲಿ ಒಂದು ಮಹತ್ವದ ಸ್ಥಾನವನ್ನು ಪಡೆದಿದೆ (ಭಾರದ. ೩೦೦) ; ದಾಸಸಾಹಿತ್ಯದಲ್ಲಿಶಬ್ದಗಳ ಜೋಡುಕಟ್ಟು ಬಹು ಸುಂದರವಾಗಿದೆ (ಜಗದಾ. ೭೦). [ ದಾಸ + ಸಾಹಿತ್ಯ ]

**ದಾಸಳ** 'ದಾಸವಣ' ನೋ.

**ದಾಸಾಣ** 'ದಾಸವಣ' ನೋ.

**ದಾಸಾವಿರ** (ನಾ). ಹತ್ತು ಸಾವಿರ : ಏಕ್ಕಂ, ದಾಹಂ, ಶತಂ, ಸಾವಿರ, ದಾಸಾವಿರ, ಲಕ್ಷ, ದಾಲಕ್ಷ . . . ಪರಿಮಿತ, ಮಹಾಪರಿಮಿತ–ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೮-೨೫) ; ದಾಸಾವಿರ, ಲಕ್ಷ, ದಹಲಕ್ಷ . . . ಇವು ೩೨ ಪುಘಡಣೆ ಹೆಸರುಗಳು (ಭಾಸ್ಕರ. ೦೧-೭).

[ ದಾ₂ (< ದಸ₂) + ಸಾವಿರ ]

**ದಾಸಾಳ** 'ದಾಸವಣ' ನೋ.

**ದಾಸಿ** (ನಾ). ೧. ಹೆಣ್ಣಾಳು ; ಸೇವಕಿ ; ತೊತ್ತು ; ಪರಿಚಾರಿಕೆ : ದಾಸಿಯ ವರ್ಗದಲ್ಲಿಪ್ಪೆನು ಶಿವಶರಣರ ಮನೆಯಲ್ಲಿ (ಬಸವ. ೪೭೨) ; ಅರವಿಂದಗಂಧಿಯ ದಾಸಿ ತಾನೆಯಿತಂದವರ್ಗಳಿಗಱುಹಿದಳು (ಬಸಪು. ೪೧-೨೪). ೨. ಸೂಳೆ ; ವೇಶ್ಯೆ. ೩. ಒಂದು ಬಗೆಯ ಗಿಡ : "ನೀಲೀ, ರಿಘಂಟೀ, ಬಾಣಾ, ದಾಸೀ, ಆರ್ತಗಳಃ–೫. ಕರೀ ಹುವ್ವುಳ್ಳ ಗೋರಂಟದ ಹೆಸರುಗಳು" (ಸಿದ್ಧಾಂತಿ. ೧೨೯). [ ಸಂ. ದಾಸೀ ]

**ದಾಸಿಕೆ** (ನಾ). ಸೇವಕತನ ; ದಾಸನಾಗಿರುವಿಕೆ : ಲಿಂಗಾಂಗ ಸಂಬಂಧ ಘಟಿಸಿದ ಶರಣ ತನುಮನ ಪ್ರಾಣೇಂದ್ರಿಯಗಳು ಮೊದಲಾದ ಅಜ್ಞಾನ ಪ್ರಪಂಚಿನ ವರ್ತನೆಯ ಆಸೆ ನಿವೃತ್ತಿಯಾಗಿತ್ತೆಂಬುದೀಗ ಹೊತ್ತ ದಾಸಿಕೆ ಹುಸಿಯಾಯಿತ್ತೆಂಬ ಶಬ್ದಕ್ಕರ್ಥ (ಗುಪ್ತಮಂ. ೧೫-೧೮೭): ನಾಸಿಕವನುಳ್ಳವನು ಹೋಗಲೆ ದಾಸಿಕೆಯ ನಮ್ಮಸುರರೊಳಗೆ ವಿನಾಶವಡೆದವನೊಬ್ಬ ನೀನೇ ಸಾರು ಹೋಗೆಂದ (ಪ್ರಹ್ಲಾಚ. ೧೧-೨೧). [ ದಾಸ + – ಇಕೆ ]

**ದಾಸಿಗ** (ನಾ). (?) : ದೇಸಿಗನಪ್ಪನಂ ಭಯದಿ ನೋಡುವನಂ ಕರಮಂಜಿ ದಾತನಂ ದಾಸಿಗನಲ್ಲದಾತನನಣಂ ಧನಹೀನನನಂಜಿ ಕಾಗುಮೆಂಬಾಸಿಯೊಳಂ ಚಿಯೆಂದು ಪುಲುಗರ್ಚಿದನಂ ಕೊಲಲಾಗದೆಂಬವಂ ಪೇಸದೆ ಪಾಳಿವುಳ್ಳ ನಿನಿತುಳ್ಳ ಮೃಗಂಗಳನೆಂತು ಕೊಲ್ವನೋ (ಪಸಾರ. ೨೯೮).

[P ಇದು 'ದೇಸಿಗ' ಎಂಬುದರ ಅಪಲಿಖಿತವಿರಬಹುದೆ ? ]

**ದಾಸಿಗೆ** (ನಾ).=ದಾಸಿಕೆ (?) : ಶ್ರೀಸಂಕರದೇವರ ನಂದಾದೀವಿಗೆಗೆ . . . ಸಂಕರದಾಸಿಎ ಕೊಟ್ಟ ದಾಸಿಗೆ ಸುಂಕದ ಹೆಗ್ಗಡೆ ಬೊಪ್ಪಡೆ ಒಳಗಾಗಿ ಸುಂಕ ಆಯದಾಯ ಸಮಸ್ತವು ಸ್ವವಾಧಿ ಧಾರಾಪೂರ್ವಕ ಮಾಡಿಬಿಟ್ಟರು (ಎಕ. III, ಮೈಸೂರು. ೮-೦೪ ; 1175). [ <ದಾಸಿಕೆ ? ]

**ದಾಸಿಪತ್ರ** (ನಾ). ಊಳಿಗ ; ಸೇವೆ : ಬೀರಮ್ಮನ ಕುಲಮನಿತುಂ ದಾಸಿಪತ್ರಕ್ಕೆ ನಿಂದರ್ (ಸೌಇಇ. XX, ೪೯-೨೫ ; 1076 ?).

[P ಇದು 'ದಾಸಿಪಾತ್ರ' ಎಂಬುದರ ಅಪಲಿಖಿತವಿರಬಹುದು ]

**ದಾಸಿವಣ** 'ದಾಸವಣ' ನೋ.

**ದಾಸಿವಾಣ** 'ದಾಸವಣ' ನೋ.

**ದಾಸಿವಾಳ** 'ದಾಸವಣ' ನೋ.

**ದಾಸೀಪುತ್ರ** (ನಾ). ದಾಸಿಯ ಮಗ ; ತೊತ್ತು : ದಾಸೀಪುತ್ರನಾಗಲಿ ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದ ಬಳಿಕ ಸಾಕ್ಷಾತು ಶಿವನೆಂದು ವಂದಿಸಿ ಪೂಜಿಸಿ ಪಾದೋದಕ ಪ್ರಸಾದವ ಕೊಂಬುದೆ ಯೋಗ್ಯ (ಬಸಹ. ೪೦).

[ ಸಂ. ]

**ದಾಸೀಸುತ** (ನಾ). ತೊತ್ತಿನ ಮಗ ; ಸೇವಕಿಯ ಮಗ : "ಗೋಪ್ಯಃ, ದಾಸೀಸುತಃ–ಈ ೨ ತೊಟ್ಟಿನ ಮಗಂ" (ಹಲಾಯು. ೮೨-೩೮೭). [ ಸಂ. ]

**ದಾಸು** (ನಾ). ಸೇವಕ ; ದಾಸ : ದೇವರಿಗೆ ಹೂವಿನ ದಂಡೆಯ ಕಟ್ಟುವ ದಾಸುಗಳು ತಿರುಮಾಳದಾಸನು ಹಿರಿಯದಾಸನು (ಎಕ. X, ಮಾಲೂರು. ೩-೨೨ ; 1431). [ <ದಾಸ ]

**ದಾಸೆ** (ನಾ). ಮಚ್ಚೆ : ಆ ಕೋಣನ ಮಂಡದ ಮೇಲೆ ಸೂರ್ಯಪಾನ ಹೂವಿನಂತೆ ಬಿಳಿ–ಹಳದಿ ಕೂದಲಿನ ದೊಡ್ಡ ದಾಸೆ (ಮಚ್ಚೆ)ಯಿತ್ತು (ಕಂಬಹು. ೪೫). [ ? ]

**ದಾಸೆಯ** (ನಾ). ಒಬ್ಬಾತನ ಹೆಸರು (?) : ಶ್ರೀ ಸಿದ್ಧೇಶ್ವರದೇವರ ಪಾದಾರಾಧಾಕರುಮಪ್ಪ ನಾಡಿಗ ದಾಸೆಯನ ಮಗಂ ಬಾರಿಕೆ ಬಿದ್ದ ಮನು ತನಗಂ ಮುಕ್ತಿಪದಾರ್ತ್ಥವಾಗಿ . . . ಸುರಲೋಕಪ್ರಾಪ್ತನಾದಂ (ಎಕ. VII, ಶಿವಮೊ. ೩೮-೩ ; ?). [ <ದಾಸಯ್ಯ ]

**ದಾಸೆಯನಾಯಕ** (ನಾ). ಒಬ್ಬಾತನ ಹೆಸರು : ಎಲವಟ್ಟಿಯ ದಾಸೆಯ ನಾಯಕನ ನಿಸಿದ್ಧಿಯಪ್ಪ ಭೂಮಿಯಿದು (ಎಕ. VII. ಶಿವಮೊ. ೫೮-೫; ?).

[ ದಾಸೆಯ + ನಾಯಕ ]

**ದಾಸೇಯ** (ನಾ). ಸೇವಕ ; ಆಳು : ನಿನ್ನಂತಹ ಪ್ರಧಾನನಾದರೆ, ಬ್ರಹ್ಮ ಸಭೆಯೂ ದೀನದಾಸೇಯ ಸ್ತುತಿಪಾಠಕರ ಸಂತೆಯಾಗುವುದು (ಮಂತ್ರಶ. ೨೦-೧೩). [ ಸಂ. ]

**ದಾಸೇರ** (ನಾ).=ದಾಸೇಯ : "ಭೃತ್ಯಃ, ದಾಸೇರಃ, ದಾಸೇಯಃ, ದಾಸಃ . . . ಪರಿಚಾರಕಃ – ೧೧ ಬಂಟನ ಪೆಸರು, ಚಾಕರಿಯವನು" (ಸಿದ್ಧಾಂತಿ. ೩೦೨). [ ಸಂ. ]

**ದಾಸೇರಕ** (ನಾ). ೧. ಪರಿಚಾರಿಕೆಯ ಮಗ ; ತೊತ್ತಿನ ಮಗ ; ಆಳು ; ಸೇವಕ: "ದಾಸಃ, ದಾಸೇರಕಃ–ಈ ೨ ತೊ(ಟ್ಟಿ)ತ್ತಿನ ಮಗಂ" (ಹಲಾಯು. ೬೦-೨೦೦) ; ಅಂತಃಪುರದಾಸೇರಕನನೇಱ ಕಿಂಚಿದಾಕುಂಚಿತಾಗ್ರ ತರ್ಜನೀ ನಿಶಿತಾಂಕುಶನಂತಃಪುರಪ್ರಮದವನಪ್ರವಿಷ್ಟನಾಗಿ (ಆದಿಪು. ೮-೪೦ ವ) ; ಈ ಸಕಲ ಧರೆಯನುಗ್ರಭೂಜಾಸಿಯೊಳಳವಡಿಸಿ . . . ರಿಪುದಾರಕರಂ ದಾಸೇರಕರೆನೆ ಪೊಡರ್ಪುಗಿಡೆ ನಡೆಯಿಸಿದಂ (ಪಂರಾಮಾ. ೨-೬೦) ; ಒರ್ವ ಭಕ್ತಂ ವೃಥಾ ಗೃಹಗೃಹಕ್ಕೆ ಮುಂಕೊಂಡು ದಾಸೇರಕನ ಪೊಂಗಿನಿಂ ಪೋಗಿ (ಕೊಟ್ಟೂಬ. ೧೬-೭೬). ೨. ಒಂಟೆ : "ದಾಸೇರಕಃ, ಕ್ರಮೇಳಕಃ, ಉಷ್ಟ್ರಃ, ಮಯಃ, ರವಣಃ, ಕರಭಃ, ಶೃಂಖಳಕಃ – ಈ ೭ ಒಟ್ಟೆ" (ಹಲಾಯು. ೪೭-೦೨೫) ; ಅಂತಕನ ದೆಸೆಗೆ ದಾಸೇರಕವನೇಱ ಪೋಪಂ (ಜೈಮಿಭಾ. ೨೪-೪೬). [ ಸಂ. ]

**ದಾಸೊತ್ತು** (ನಾ). ಶಕ್ತಿ ; ತಾಕತ್ತು ; ಸಾಮರ್ಥ್ಯ : ಬಾಯೊಳ್ಳಸಂಗವು ನ್ನಾಡಿದರೆ ದಾಸೊತ್ತು ಸಾಲದ್ಯೆ ತನಗೆಂದನು (ತುರಂಗ. ೮೫-೨೦). [?]

**ದಾಸೋಗ** (ನಾ). ಜಂಗಮ ಭೋಜನ ; ಪುಣ್ಯಸಂಪಾದನೆಗಾಗಿ ಜಂಗಮರಿಗೆ ಮಾಡುವ ಊಟದ ಸಮಾರಾಧನೆ : ಊರಲ್ಲಿಯ 'ದಾಸೋಗ'ದಲ್ಲಿ ಅವರಿಗೆ ಅನ್ನದ ವ್ಯವಸ್ಥೆ ಮಾಡಿಯೋ ವಾರದ ಮನೆಗಳಲ್ಲಿ ಕೆಲವರನ್ನು ಕಳಿಸಿಯೋ ಅವರ ಉಪಜೀವನ ಸಾಗಿಸುತ್ತಿದ್ದರು (ಮುಗಿಮು. ೭): ಆಗ ಭಿಕ್ಷಾನ್ನಗಳಿಂದ ತೃಪ್ತವಾಗುತ್ತಿದ್ದ ಶಿಷ್ಯರು ಈಗ ಆ ಅನ್ನವನ್ನು 'ದಾಸೋಗ'ದಲ್ಲಿ ವಾರದ ಮನೆಗಳಲ್ಲಿಯೂ ಪಡೆಯುತ್ತಿದ್ದಾರೆ (ಹಬ್ಬಬ. ೧೯೪) ; ನಿಮ್ಮಂತ ಕುಡುಕರಿಗೆಲ್ಲಿಂದ ತರಲಿ ಕೂಳು ? ಇಲ್ಲೇನು ದಾಸೋಗ ನಡೆಯುತ್ತದೆಯೇ (ಶವಸ. ೭). [ <ದಾಸೋಹ ]

**ದಾಸೋಹ** (ನಾ). ೧. ನಾನು ದಾಸನೆಂಬ ಭಾವನೆ : ಪ್ರಸಾದಲಿಂಗ ಭಕ್ತನಾದೊಡೆ ದಾಸೋಹವಿಲ್ಲದಿರಬೇಕು (ಆದವ. ೮-೦೨) ; ಸಂಕಟವೆ ಇಲ್ಲದವಗೆ ವೆಂಕಟನು ಬೇಕೆ ಸಂತೋಷವುಳ್ಳವಗೆ ದಾಸೋಹವೇಕೆ ? (ಗಚೀಶ. ೭೦-೦೨). ೨. = ದಾಸೋಗ : ಯಾ ಮಠದಲ್ಲಿ ಕಟ್ಟಿಸಿದ ಅಡಿಗೆ ಮನೆ ಉಗ್ರಾಣದ ಮನೆಯೂ ಈ ತೋಟದ ಸ್ವಾಮಿಯ ದಾಸೋಹಕ್ಕೆ ಸಲುವದು (ಎಕ. XVI, ಕುಣಿಗ. ೪೯-೪೦ ; ಸು. 1480) ; ಬೆಳಸು ದವಸಗಳನ್ನು ಮಠದ ದಾಸೋಹಕ್ಕೆ ಕೊಡುತ್ತಾನೆ (ಕನ್ನಜಾ. ೫). ೩. [ವೀಶೈ] ಕಿಂಕರಭಾವದಿಂದ ಮಾಡುವ ಗುರು ಲಿಂಗ ಜಂಗಮ ಸೇವೆ: ಅಯ್ಯಾ ನಿಮ್ಮ ಶರಣರ ದಾಸೋಹಕ್ಕೆ ಎನ್ನ ತನು ಮನ ಧನವಲಸದಂತೆ ಮಾಡಯ್ಯ (ಬಸವ. ೪೫೮) ; ನಿಮ್ಮ ಜಂಗಮವನುದಾಸೀನವ ಮಾಡಿ ದಾಸೋಹವಿಲ್ಲದ ಅತಿದೂಷಕದ್ರೋಹಿ ನಾನಯ್ಯ (ಉರಿವ. ೩೩-೩೮) ; ಸವಿನಯಂಗಳ ಮೇಟಿ ದಾಸೋಹವನಲರ್ಚುವ ಚೇಟಿ ವೃತ್ಯ್ಕುವ ಜವನ ಮಾರಿಯ ದಾಟಿ ವೇದಾಂತಾದಿಗಳ ವಾಟಿ (ಬಸಪು. ೬-೦೦). [ <ದಾಸ ಅಹಂ ]

**ದಾಸೋಹಂ** (ನಾ). ನಾನು ದಾಸನೆಂಬ ಭಾವನೆ: ಸೋಹಮನ್ನಬೇಡೆಲೊ ದಾಸೋಹಮೆಂದು ಪೇಳೆಲವೊ (ಪುರಂದ. ೧-೧೬೫-೧) ; ಸೋಹಂ ಎಂದಡೆ ಅಂತರಂಗದ ಗರ್ವ ಶಿವೋಹಂ ಎಂದಡೆ ಬಹಿರಂಗದ ಅಹಂಕಾರ ಈ ಉಭಯವನಳಿದು ದಾಸೋಹಂ ಎಂದಡೆ ಪರಮಪದವು (ಅಖಂಡೇ. ೮೧-೬೧).

[P ಸಂಸ್ಕೃತದಲ್ಲಿ 'ದಾಸಃ ಅಹಂ' ಎಂಬುದು ಒಂದು ವಾಕ್ಯ. ಕನ್ನಡದಲ್ಲಿ ಇದು ಒಂದು ಪದವಾಗಿ ಬಳಕೆಯಾಗಿದೆ]

**ದಾಸೋಹಂಭಾವ** (ನಾ). ದಾಸನ ಭಾವನೆ; ಭಕ್ತಭಾವ: ಸರ್ವಪದಾರ್ಥಗಳನ್ನೂ ಶಿವನಿಗರ್ಪಿಸುವ ಸಮರ್ಪಣಕ್ರಿಯೆಯಲ್ಲಿ ಮಾತ್ರ 'ದಾಸೋಹಂ' ಎಂದರೆ, ನಾನು ಶಿವನ ದಾಸನು ಎಂದು ಸರ್ವಾಚರಣೆಯನ್ನು ನೆರವೇರಿಸತಕ್ಕದು, ಹೀಗೆ ಆಚರಿಸುವುದೇ ದಾಸೋಹಂಭಾವವು (ಶಿವಾಸೂ. ೧೨೦) ; ದಾಸೋಹಂಭಾವಮನುಳಿದಾ ಸೋಹಂಭಾವದೆಡೆಗಾ ಮನಮಿಕ್ಕದೆ ನೀಂ ಲೇಸನೊಡರ್ಚಿದೆ ಭಲರೆ (ವೃಷವಿ. ೨೫-೪೨) ; ದಾಸೋಹಂಭಾವವನೆ ಕರುಣಿಸಿ ಬದುಕಿಸಯ್ಯ (ಅಖಂಡೇ. ೮೧-೬೧). [ ದಾಸೋಹಂ + ಭಾವ ]

**ದಾಸೋಹತನ** (ನಾ). ದಾಸನಾಗಿರುವಿಕೆ ; ಸೇವಾವೃತ್ತಿ : ಹದುಳಿಗರು ದಾಸೋಹತನದಲಿ ವಿದಿತಕಾಮಕ್ರೋಧಲೋಭಾಸ್ಪದವಿರಹಿತರ ವರ್ಗಳಿರವಂ ಕೇಳು (ಬಸಪು. ೨೪-೪೨); ಬೇಡಿದವರಿಗೆ ಬೇಡಿತನು ಕೈಗೂಡಿಸುವ ದಾಸೋಹತನದಲಿ ಮಾಡುತಿರ್ದನು (ಪ್ರಭುಲೀ. ೯-೨೭).

[ ದಾಸೋಹ + – ತನ ]

**ದಾಸೋಹಭಾವ** (ನಾ). = ದಾಸೋಹಭಾವನೆ: ಈಚೀಚೆಗೆ ಜನರಲ್ಲಿ ದಾಸೋಹಭಾವ ಕಡಮೆಯಾಗುತ್ತಿದೆ (ರೂಢಿ). [ ದಾಸೋಹ + ಭಾವ₂ ]

**ದಾಸೋಹಭಾವನೆ** (ನಾ). ಭಕ್ತಭಾವ; ದಾಸನ ಭಾವ : ವ್ಯಜನರಹಿತನು ಲಿಂಗಜಂಗಮ್ಮಭಜನಶೀಲನೆನಲ್ಕೆ ಭಕ್ತವ್ರಜದೊಳಗೆ ದಾಸೋಹಭಾವನೆಯಿಂದ ಪೆಂಪೆಸೆದು (ಬಸಪು. ೩೦-೩). [ ದಾಸೋಹ + ಭಾವನೆ ]

**ದಾಸೋಹಿ** (ನಾ). [ವೀಶೈ] ದಾಸನೆಂಬ ಭಾವದಿಂದ ಸೇವಾಪ್ರವೃತ್ತಿಯಲ್ಲಿ ತೊಡಗಿರುವವನು ; ಕಿಂಕರಭಾವವುಳ್ಳವನು; ಭಕ್ತ : ಮನದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪನೊಬ್ಬ ದಾಸೋಹಿ (ಬಸವ. ೮೦೩) ; ವೇಷ ನಿರ್ವಯಲಾಗಿ ಆಶೆ ರೋಷವ ಬಿಟ್ಟು ದಾಸೋಹಿಯಾಗಿದ್ದರೆ ಗೊಹೇಶ್ವರಲಿಂಗವು ತಾನೇ (ಅವಹಂ. ೨೦೫-೯೨೨) ; ಮುಂದ ನೆನೆಸದೆ ದಿನದಿನಕೆ ಪರಮಾಯು ಸಲೆ ಸಂದುದೆನಿಪಾ ದೃಢತೆ ನೆಲಗೊಂಡು ಚರಲಿಂಗಕಂದಂದಿಗೇನುವಂ ವಂಚಿಸದೆ ಮಾಡುತಿಹ ದಾಸೋಹಿ ಸದ್ಭಕ್ತನು (ಶಿವಗೀ. ೦೫-೫೯) : ಬೆಂದುದನು ಬಿತ್ತಿ ಬೆಳೆದುಂಬ ದಾಸೋಹಿ ಇಂದುಧರನಕ್ಕು (ಸರ್ವಜ್ಞ. ೭೦೦). [ ದಾಸೋಹ + – ಇ₃ ]

**ದಾಸೋಹಿತನ** (ನಾ).=ದಾಸೋಹತನ: ಕುಸುಮಶರನುಪಟಳಕೆ ನೊಂದು ಬಂದವನಲ್ಲ . . . ನಿನ್ನ ದಾಸೋಹಿತನವಾ ವಸುಧೆಯೊಳು ಹಿಸುಕಿ ಪಸರಿಸೆ ಬಂದೆನು (ಸಿದ್ಧೇಪು. ೧೧-೩೫). [ ದಾಸೋಹಿ + – ತನ ]

**ದಾಸ್ತಾನು** (ನಾ). ಸಂಗ್ರಹ; ಶೇಖರಣೆ; ಶೇಖರಿಸಿಟ್ಟ ಸಾಮಾನು,–ಸರಕು : ದಾಸ್ತಾನುಗಳ ಲೆಕ್ಕ ಸರಿಯಾಗಿಲ್ಲವೆಂದು ಎರಡು ಮೂರು ಸಾರೆ ಆಡಳಿತದವರು ರಾಮಕೃಷ್ಣಯ್ಯನಿಗೆ ಎಚ್ಚರಿಕೆ ಕೊಟ್ಟಿದ್ದರು (ರಂಗವ. ೨೬೨): ಗ್ರಾಮನೌಕರರಲ್ಲೂ ದಾಸ್ತಾನನ್ನು ಇಡುತ್ತಿದ್ದೆ (ಕಲಿನ. ೨೪೦) ; ಮುಂದಿನ ಓಟಿನ ಬೇಟೆಯ ಕಾಲದಲ್ಲಿ ಈ ಕಸವೇ ಕೈಮಾಡಿ ತೋರಿಸೋ ದಾಸ್ತಾನು (ಮಾಮನಿ. ೭೭) : ಸ್ವಲ್ಪ ದವಸ, ದಾಸ್ತಾನು ಇಟ್ಟುಕೊಂಡಿದ್ದಾರೆ (ದೌಲತ್. ೨೪೭). [ ←ಮರಾ. ದಾಸ್ತಾನ್; ಪಾರ. ದಾಶ್ತನ್ ]

**ದಾಸ್ತಾನಿಡು** (ಕ್ರಿ). ಸಂಗ್ರಹಿಸಿ ಇಡಂ; ಕಾಯ್ದಿಡಂ: ಅಕ್ಕಿಯನ್ನು ಬಹಳ ಆರೋಗ್ಯಕರಸ್ಥಿತಿಯಲ್ಲಿ ದಾಸ್ತಾನಿಡಬೇಕು (ಅಡುಸಾ. ೭೪). [ ದಾಸ್ತಾನು + ಇಡು₁ ]

**ದಾಸ್ಯ** (ನಾ). ೧. ಸೇವಕತನ ; ಆಳುತನ; ಗುಲಾಮಗಿರಿ ; ಅಧೀನತೆ: ನಮ್ಮಲ್ಲಿಯ ಮನೋಜಾಡ್ಯ, ಸ್ವಾರ್ಥ . . . ನಮ್ಮ ದಾಸ್ಯಕ್ಕೆ ಕಾರಣವಾಗಿವೆ (ಧರ್ಮಸಾ. ೫೨) ; ದ್ವೈತವೇದಾಂತದಲ್ಲಂತೂ ಮುಕ್ತನಿಗೆ ಪರಮಾತ್ಮನ ದಾಸ್ಯವು ಮುಕ್ತಿಯಲ್ಲೂ ತಪ್ಪುವಂತಿಲ್ಲ (ಶಕ್ತಿವಿ. ೦೯). ೨. ನವವಿಧವಾದ ಭಕ್ತಿಗಳಲ್ಲಿ ಒಂದು ; ದಾಸನೆಂಬ ಭಾವದಿಂದ ಮಾಡುವ ಭಕ್ತಿ : "ಶ್ರವಣಂ, ಕೀರ್ತನಂ, ವಿಷ್ಣೋಃಸ್ಮರಣಂ, ಪಾದಸೇವನಂ, ಅರ್ಚನಂ, ವಂದನಂ, ದಾಸ್ಯಂ, ಸಖ್ಯಂ, ಆತ್ಮನಿವೇದನಂ" ಎಂಬ ೯ ವಿಧ ಭಕ್ತಿಯಿಂದ ಪರಮಾತ್ಮನನ್ನು ಭಜಿಸುತ್ತಾ (ಹಸಾರ. ೨೦-೫೦ ತಾತ್ಪರ್ಯ). [ಸಂ.]

**ದಾಸ್ಯದೀಕ್ಷೆ** (ನಾ). ಸೇವಕನಾಗುವಿಕೆ ; ಗುಲಾಮಗಿರಿ : ಎಮ್ಮಂ ಗೆಲ್ದು ದಾಸ್ಯದೀಕ್ಷೆಯನೀಯೆ ಪೂಣ್ದು ತರಿಸಂದು ಬೀಡುಬಿಟ್ಟಹರಲ್ಲಿ (ಶ್ರೀರಾಮಾ. ೫೫೫-೯೭). [ ದಾಸ್ಯ + ದೀಕ್ಷೆ ]

**ದಾಸ್ಯಪದ್ಧತಿ** (ನಾ). ಮನುಷ್ಯರನ್ನು ಕೊಂಡುಕೊಂಡು ಆಳಾಗಿ ದುಡಿಸಿಕೊಳ್ಳುವ ಪದ್ಧತಿ ; ಗುಲಾಮಗಿರಿಯ ಪದ್ಧತಿ : ಅನಾಗರಿಕ ದಾಸ್ಯಪದ್ಧತಿಯ ಅವನತಿಗೆ ಅದು ನಾಂದಿಯಾಗಿತ್ತು (ಪುನರು. ೨೬೨). [ ದಾಸ್ಯ + ಪದ್ಧತಿ ]

**ದಾಸ್ಯಶೃಂಖಲೆ** (ನಾ). ಆಳುತನದ ಬಂಧನ; ಗುಲಾಮಗಿರಿಯ ಬೇಡಿ,–ಸರಪಣಿ : ವಿಶ್ವಬಂಧು ಪ್ರವಿಮಾತ್ಮನಿಗೆ ಉಂಟಾದ ಈ ದಾಸ್ಯಶೃಂಖಲೆ ಘೋರಶಿಕ್ಷೆ ವೇದನೆಯ ತೀಕ್ಷ್ಣತೆ ವಿಶ್ವಪ್ರಕೃತಿಯಲ್ಲಿ ತಳಮಳದ ಹೊನಲೆಬ್ಬಿಸಿತು (ಬದ್ಧಪ್ರ. XVI ೩೬೮೪). [ ದಾಸ್ಯ + ಶೃಂಖಲೆ ]

**ದಾಹ₁** 'ದಸ್ಯ' ನೋ.

**ದಾಹ₂** (ನಾ). ೧. ಉರಿ ; ಕಿಚ್ಚು. ೨. (ಮನಸ್ಸಿನ) ತಾಪ ; ಬೇಗೆ : ಅರಿಗನ ಬೇಟದೊಂದೆ ಪೊಸಬೇಟದ ಕೇಸರಿಯಿಂದಮೆಯ್ದೆ ದಳ್ಳುರಿನೆಗೆದಂದು . . . ಕೆಳದಿಯರನದಿಪುತ್ತಿರೆ ನೋಡೆ ದಾಹಮೊತ್ತರಿಸಿದುದೊಂದು ಪೊನ್ನ ಸಲಗಿರ್ಪವೊಲಿರ್ದುದು ಮೆಯ್ ಸುಭದ್ರೆಯಾ (ಪಂಪಭಾ. ೩-೮). ೩. ನೀರಡಿಕೆ ; ಬಾಯಾರಿಕೆ ; ತೃಷ್ಣೆ : ಜಾಹ್ನವಿಯೊಳಾಳ್ದಂಗೆ ದಾಹಮೆತ್ತಣದು (ಜೈಮಿಭಾ. ೦೯-೩೦) ; ತೃಷ್ಣೆಯೆಂದೊಡಂ, ದಾಹಮೆಂದೊಡಂ, ಬಾಯಾರಿಕೆಯೆಂದೊಡಂ ನೀರಡಿಕೆಯೆಂದರಿವುದು (ಸಕವೈ. ೨೮೨) : ನನಗೆ ಬಹಳ ದಾಹ ಆಗಿದೆ (ಮುನಿಮಾ. ೧೦೭). ೪. ತೀಕ್ಷ್ಣವಾದ ಆಕಾಂಕ್ಷೆ ; ತೀವ್ರವಾದ ಅಭೀಪ್ಸೆ. [ ಸಂ. ]

**ದಾಹಕ** (ಗು). ೧. (ವಸ್ತುಗಳನ್ನು) ದಹಿಸುವ ; ಸುಡುವ. 'ದಾಹಶಕ್ತಿ' ಪರಾ. (ನಾ). ೨. ಬೆಂಕಿ ; ಅಗ್ನಿ : ದಾಹಕದೊಳಂ ನೆಲೆಯಹ ಪ್ರಾಕಾಶತಮುಮೆನಿಸಿಯಲ್ಲಿಯುಂ ಶಿಖಿಯಂಶದಿಂ ಪ್ರಕಾಶದೊಲವಾಗಿ ಲೋಹಾಂಶದಿಂ ಪ್ರಕಾಶ್ಯಮುಮವಾಗುತಲೆ (ವೀಶೈಪು. ೫-೪-೦೭). [ಸಂ.]

**ದಾಹಕಶಕ್ತಿ** (ನಾ). ಸುಡುವ ಸತ್ವ ; ದಹಿಸುವ ಶಕ್ತಿ : ತೇಜಸ್ಸಿನಲ್ಲಿ ದಾಹಕಶಕ್ತಿಯೂ, ವಾಯುವಿನಲ್ಲಿ ಚಲನಶಕ್ತಿಯೂ . . . ಸ್ವಾಭಾವಿಕವಾಗಿ ನೆಲೆಸಿರುವುದನ್ನು . . . ಕಾಣಬಹುದಾಗಿದೆ (ಶಕ್ತಿವಿ. ೩೦). [ ದಾಹಕ + ಶಕ್ತಿ ]

**ದಾಹಗೊಳ್ಳು** (ಕ್ರಿ). ಬಾಯಾರಿಕೆಯನ್ನು ಹೊಂದು : ದಾಹಗೊಂಡಿದ್ದ ನಾಲಗೆಗೆ ಎಳನೀರು ಬಹಳ ರುಚಿಯಾಗಿ ಕಾಣಿಸಿತು (ರೂಢಿ). ೨. ತೀಕ್ಷ್ಣವಾದ ಬಯಕೆಯನ್ನು ಹೊಂದು : ಸಂಪೂರ್ಣವಿಷಯವನ್ನು ತಿಳಿಯುವವರೆಗೆ ದಾಹಗೊಂಡ ಅವರ ಮನಸ್ಸು ತಣಿಯುವುದಿಲ್ಲ (ರೂಢಿ). [ ದಾಹ₂ + ಕೊಳ್ಳು₁ (<ಕೊಳ್₁) ]

**ದಾಹಜ್ವರ** (ನಾ). ೧. ತೀವ್ರವಾದ ಉಷ್ಣದಿಂದ ಉಂಟಾಗುವ ಜ್ವರ : ಜೇನಿಕರ್ಪೂರ, ಯಷ್ಟಿಮಧುಕ . . . ಅಕ್ಕಿಗಟ್ಟಿನಿಂದರೆದು ಕುಡಿಯೆ ದಾಹಜ್ವರ ಪರಿಹಾರವಾಗುವುದು (ಸಕವೈ. ೭೭) : ನಾಭಿ ೭ ಭಾಗ, ಗಂಧಕ ೬ ಭಾಗ, ಉಮ್ಮತ್ತದ ಬೀಜ ೪ ಭಾಗ . . . ರಸದಲ್ಲಿ ಮರ್ದಿಸಿ ಹೆಸರುಗಾತ್ರದ ಗುಳಿಗೆಯಂ ದಾಹಜ್ವರಕ್ಕೆ ಕೊಡುವುದು (ವಿಷವೈ. ೯೭). ೨. (ಅಲಂ) ವಿರಹ ಜ್ವರ : ವಾರಿಜ ಮಳಯಜ ಮಳಯಸವಿಮಾರಣಂ ಚಂದ್ರಾಂಶು ಚಂದ್ರಕಾಂತ ದ್ರವಕರ್ಪೂರ ಮೃಣಾಲಾದಿಗಳುಂ ಬಾರಿಸಲಾಱವೆ ದಲವನೆ ದಾಹಜ್ವರಮಂ (ಆದಿಪು. ೨-೦೩); ದಾಹಜ್ವರಮುರಿಯುತ್ತಿರಲ್ ಚಂದನದ್ರವ್ಯಾದಿ ಶೀತಲಕ್ರಿಯೆಯುಂ ಸಂತಾಪಮಂನೆಂತುಂ ಆಱಿಸಲಾಱದೆ ಇರೆ (ಚಾವುಂಪು. ೦೩). [ ದಾಹ₂ + ಜ್ವರ ]

**ದಾಹಜ್ವರಕಲ್ಕ** (ನಾ). ದಾಹಜ್ವರವನ್ನು ನಿವಾರಿಸಲು ತಯಾರಿಸಿದ ಔಷಧದ್ರವ್ಯ : ದಾಹಜ್ವರಕಲ್ಕ – ಕೇದಿಗೆ ಬೀಳಿನ ರಸದಲ್ಲಿ ನೆಲದಾಳವನ್ನರೆದು ಕುಡಿಯೆ ದಾಹಜ್ವರ ಪರಿಹಾರವಾಗುವುದು (ಸಕವೈ. ೭೭). [ ದಾಹಜ್ವರ + ಕಲ್ಕ ]

**ದಾಹಣೆ, ದಾವಣ₃, ದಾವಣೆ₃, ದಾವಣೆ** (ನಾ). ರಾಕ್ಷಸರ ಕತ್ತಿ ; ದೊಡ್ಡ ಕತ್ತಿ: "ರಕ್ಕಸಗತ್ತಿಯೊಳೆ ದಾಹಣೆಯೆನಲ್ಪಡೆಗುಂ" (ಕರ್ಣಾನಿ. ೦೫). **ದಾವಣ₃** : ದೇವಸತ್ರವದ ವಜ್ರಾಂಗಿ ಸೀಸಕ ಮೇಲಾವರಿಸಿದ ಲೋಚು ಸುರಗಿ ದಾವಣ ಕರಣನಿಗ್ರಹವೆನೆ (ವರ್ಧಚ.೦೧-೯೫). **ದಾವಣೆ₃**: 'ದಾವಣಗೆ' ಪರಾ. **ದಾವಣೆ** : ಕೊಡಲಿ ಕತ್ತಿ ಕುಡುಗೋಲು . . . ಕೊಂತ ದಾವಣೆ ಮೊದಲಾದಾಯುಧಂಗಳ್ (ಶ್ರಾವಕಾ. ೦೫೦-೧೦). 'ಡಾಕಿನಿ' ಪರಾ. [ ? ]

**ದಾಹನ** (ನಾ). ೧. ಸುಡಿಸುವುದು ; ದಹಿಸುವಂತೆ ಮಾಡುವುದು. 'ದಾಹನಕರ್ಮ' ಪರಾ. ೨. ಬರೆಯೆಳೆಯುವುದು ; ಬರೆ ಹಾಕು

ವುದು : ತಾಂತ್ರಿಕ ವೈದಿಕವೆಂಬೆರಡು ಪೂಜಾಭೇದಂಗಳಂ ಶೋಷಣ ದಾ [ಪಾಠಾಂ. ದ]ಹನ ಪ್ಲಾವನಗಳೆಂಬ ಮೂಱು ಕ್ರಿಯೆಗಳಂ (ವಿವೇಕ. ೦೦೩). ೩. ಒಂದು ಬಗೆಯ ಆಯುಧ ವಿಶೇಷ: ಬಿಲ್ಲು ತೀರು . . . ದಾಹನ ಶಲಲೀ ಭಲ್ಲ . . . ಮಾಯೂರಿ, ಖೇಟಕ ಮುಂತಾದ ಶತ್ರುಜಯಾತ್ಮ ರಕ್ಷಾಧಿಸಾಧನ ವಿಶೇಷಂಗಳಿಂದಲುಂ (ವಿವೇಕ. ೨೬೨). [ಸಂ.]

**ದಾಹನಕರ್ಮ** (ನಾ).=ದಹನಕರ್ಮ: ನೂತನ ಮನೋಜನಾ ಖಳಪತಿಯ ಮರ್ದಿಸಲು . . . ದಾಹನಕರ್ಮವಂ ಗೈಸಿ (ನವಮೋ. ೦೩-೫). [ದಾಹನ + ಕರ್ಮ]

**ದಾಹನಿವಾರಣೆ** (ನಾ). ನೀರಡಿಕೆಯನ್ನು ಹೋಗಲಾಡಿಸಿಕೊಳ್ಳುವುದು; ಬಾಯಾರಿಕೆಯನ್ನು ಪರಿಹರಿಸಿಕೊಳ್ಳುವುದು : (+). [ದಾಹ₂ + ನಿವಾರಣೆ]

**ದಾಹರೋಗಿ** (ನಾ). ನೀರಡಿಕೆಯಿಂದ ಬಳಲುತ್ತಿರುವ ರೋಗಿ : ಪಿತ್ತರೋಗಿ, ಜ್ವರರೋಗಿ, ಹಸಿದವನು, ದಾಹರೋಗಿ . . . ಮೋಹ ರೋಗಿ ಇವೇ ಮೊದಲಾದ ರೋಗವುಳ್ಳವರು ಮರ್ದನಕ್ಕೆ ಅಯೋಗ್ಯರು (ಸಕವೈ. ೩೦). [ದಾಹ₂ + ರೋಗಿ]

**ದಾಹಿಕಾಶಕ್ತಿ** (ನಾ). ಸುಡುವ ಶಕ್ತಿ ; ದಹಿಸುವ ಸಾಮರ್ಥ್ಯ : ಸತಿಯ ವಿಶುದ್ಧಾಚಾರಂ ಹುತಾಶನ ಪ್ರಬಲದಾಹಿಕಾಶಕ್ತಿಯುಮಂ ಪ್ರತಿಬಂಧಿಸಿ ದುದು ಚೋದ್ಯಮೆ (ಪಂರಾಮಾ. ೦೬-೨೯). [ಸಂ.]

**ದಾಹಿಣೆ** (ನಾ). (ವಿರಹವೆಂಬ) ದಾಹದಿಂದ ಬಳಲುತ್ತಿರುವವಳು ; ತಾಪದಿಂದ ನೋಯುತ್ತಿರುವವಳು : ಅವರೆಲ್ಲ ಅಲ್ಲಿ ಬಂದು ಸುವಾಸನೆಯ ನೀರಿನ ಸಾಗರವನ್ನೇ ನಿರ್ಮಿಸಿದ್ದರು ! ಆದರೂ ಆ ದಾಹಿಣೆಯು ತಾಪ ತಣಿಯುತ್ತಿರಲಿಲ್ಲ (ಕಂಬಹು. ೯೦). [?]

**ದಾಹಿಸು** (ಕ್ರಿ). ದಹಿಸು ; ಸುಡು ; ತಾಪವನ್ನುಂಟುಮಾಡು : ವಿಜಯಪಟಹಮಂ ಪೊಯ್ಸಿ ಕೋಳ್ಕೊ[ಡೆಯಂ] ಬೆಳಸಿ ಬೀಡಂ ಬಿಟ್ಟರ್ದು ವಿಶ್ವಾವಸು ಮೊದಲಾಗೆ ಸತ್ತ ನಾಯಕರಂ ದಾಹಿ [ಪಾಠಾಂ. ಜಾನಿ]ಸ ವೇಟ್ಟು (ಬಂಹರಿ. ೭-೭೦ ವ); ದುಃಖಸೌಖ್ಯದ ತಾರತಮ್ಯತೆಯಂ ಉಸುರಂ ಪಸರಣವಿಲ್ಲದೆ ಎನ್ನುಬ್ಬಸದ ಭೀತಿಯ ಬೇಗೆ ಮಿಗೆ ದಾಹಿಸುವುದೈ ಕಾರುಣ್ಯ ನಿಧಿಯೆಂದೊರಲಿದಳು (ಕುವ್ಯಾಸ. ೦೯-೦೨೮) : ಬಲು ಝಳದ ರಥವಾಡಿ ಯನಟ್ಟಿದನು ದೆಸೆದೆಸೆಗೆ ದಾಹಿಸಲು ನೆಳಲು ಹೊಗಿಸಿದನೆಲ್ಲರನು ಜಕ್ಕುಲಿಸಿ ಜಗವನು ಸುರಿದು ಬಿಸಿಲನು ಬೆಳೆಯಿಸಿದನು ಗ್ರೀಷ್ಮಋತು ಬೆದಱಿಸಿ ಜಗತ್ರಯವ (ನಿಭಾಗ. ೦೦-೦೮-೨). [ದಾಹ₂ + – ಇಸು₃]

**ದಾಹೀರೆ** (ನಾ). ಒಂದು ಬಗೆಯ ಔಷಧಿ ಸಸ್ಯ : "ಕನಕಪುಷ್ಪಿ–ದಾಹೀರೆ, ನೆಲದಾಳು ಹೊನ್ನಾವರೆ" (ಒಷಧಿ. ೨೬). [?]

**ದಾಹೋತ್ತರ** (ನಾ). ಬೆಂಕಿಯಲ್ಲಿ ಸುಟ್ಟು ಶುದ್ಧವಾದುದು ; ಪುಟ ವಿಟ್ಟು ತೆಗೆದುದು : ಮಾದ್ರಿ ಪಾಂಡುರಾಜನೊಡನೆ ದಾ [ಪಾಠಾಂ. ಡಾ] ಹೋತ್ತರದಂತೆ (?) ಕೀರ್ತಿಗೆ ಕುಲದೊಳಂ ಚಲದೊಳಮಾ[ವ] ಕಂದುಂ ಕುಂದುಮಿಲ್ಲದೆ ತನ್ನೊರೆಗಂ ದೊರೆಗಮಾರುಮಿಲ್ಲೆನಿಸಿದಾಗಳ್ (ಪಂಪಭಾ. ೨-೨೬ ವ) ; ದಾಹೋತ್ತರಮಪ್ಪ ಪೊನ್ನ ಪೊಳೆಪಂ ಗೆಲೆವಂದುದು ಕಾಂತಿ ಕಾಂತೆಯಾ (ಅಜಿಪು. ೨-೩೭). [ಸಂ.]

**ದಾಳ₁, ಢಾಳ₃** (ನಾ). ಪಗಡೆಯಾಟದಲ್ಲಿ ಗರಕ್ಕಾಗಿ ಉರುಳಿಸುವ ಆಟದ ಸಾಧನ: ಚೌಕ ದುಗನಿದ್ದುಗನಿತ್ರಿಗನೆಂಬ ದಾಯವಂ ಪೋರಿಸಿ ಬೇಡಿದ ದಾಳಮುಳವಟ್ಟರೆ (ಪುಣ್ಯಾಸ್ರ. ೪-೦೮) ; ಆಗಳಾ ಪಕ್ಷಿಗಳು ನಿನ್ನಯ ರಾಜ್ಯಭೋಗವನು ಬೇಗದಿಂದಪಹರಿಸಿಕೊಂಡನ ಭಾಗದಾ ದಾಳಗಳು ತಿಳಿಯೆಂದಾಗಸದೊಳಡಗಿದುವು ವಿಸ್ಮಯವಾಗೆ ನಿಮಿಷದಲಿ (ನಳಚ. ೫-೫); ಕುರಿತ ನೆತ್ತಗಳಂ ಬೀಳದೆ ದಾಳಗಳು ಪರಾಙ್ಮುಖವಾಗಿ ಬೀಳುವುದನ್ನು ತಿಳಿದಿದ್ದರೂ (ಕೃವಾಉ. ೩) ; ಈ ಗಾಂಧಾರರಾಜನು ದಾಳಗಳ ಮೋಸ ದಿಂದೆಸೆಯುತ್ತ, ಗರ್ವದಲಿ ನಗುತಿಹನು (ಭಾಸನಾ. ೩೨). **ಢಾಳ₃** : ಢಾಳದ ಬೆಂಬಱಿವಿಡಿದು ಛಡಾಳಿಸೆ ದೃಗ್ರುಚಿ ಸುಧರ್ಮಸುತಗೆ . . . ಧರಣೀಪಾಲಕನೊಡನೊಲ್ದು ಲೆತ್ತವಾಡುತ್ತಿಸೆದಳ್ (ಉದ್ಭಟ. ೦೧-೦೬) : ತಿಳಿಹಿದ ದ್ಯೂತಕೌಶಲವ . . . ವರಗ್ರಹದ ದಶಚೌಕವೆರಡಱ ಪರಿಯ ಢಾಳವು ತನಗೆ ಬೀಳುವ ಲಕ್ಷಭೇದನವ (ಸಂಭಪ. ೨೭-೨೦).

ದಾಳ ಹಾಕು = ೧. (ಪಗಡೆಯ ಆಟದಲ್ಲಿ) ನೆತ್ತವನ್ನು ಹಾಕು. ೨. ಆಟ ಮೊದಲುಮಾಡು ; ನಿರ್ಧಾರದ ಹೆಜ್ಜೆಯಿಡು : ಚನ್ನವ್ವನು ದಾಳ ಹಾಕಿ ಬಿಟ್ಟಳು (ಮುನಿಮಾ. ೦೩೯). [?]

**ದಾಳ₂, ಢಾಳ₄** (ನಾ). ಒಂದು ವಾದ್ಯ ವಿಶೇಷ (?) : ಎರಡು ವೇಳೆ ನಡೆಯುತ್ತಿದ್ದ ದಾಳ ದಮಾಣ ಭೇರಿ ಮುಂತಾದ ಓಲಗಗಳಿಗೆ ಈಗ ದಿಳ್ಳಿ ಯಿಂದ ಬಂದ ನವಪತ್ರನ್ನು ಪ್ರತಿದಿನದಲ್ಲಿಯೂ ನಾಲ್ಕುವೇಳೆ ನಡೆಯು ವಂತೆ ಕಟ್ಟಳೆ ಮಾಡಿದರು (ಚಾಮುವಂ. ೦೩೮); ಎರಡು ವೇಳೆ ದಾಳ ದಮಾಣ ಭೇರಿ ಮುಂತಾದ ಓಲಗಗಳಿಗೆ ಈಗ ದಿಳ್ಳಿಯಿಂದ ಬಂದ ನೌಬತ್ತನ್ನು ಪ್ರತಿನಿತ್ಯದಲ್ಲಿಯೂ ನಾಲ್ಕುವೇಳೆ ನಡೆಸುವಂತೆ ಕಟ್ಟಳೆ ಮಾಡಿ ದರು (ಮಹಾವಂ. I, ೦೪೬) ; ರೇಮಟಿ ವೆಂಕಟಾದ್ರಿನಾಯಕನಂ ಸೋಲಿಸಿ ಅವನ ದಾಳ ದಮಾಣ ಅಂದಳಾದಿಗಳಂ ಸೂರೆಗೊಂಡ ಅದ್ವಿತೀಯ ಶೂರ (ಸುಗುಗಂ. ೦೩೫-೫) ; ನಾಯಕನು ದಾಳ, ದಮಾಣ, ಅಂದಳ ಮುಂತಾದವು ಗಳಿಂದೊಡಗೂಡಿ ಶ್ರೀರಂಗಪಟ್ಟಣಕ್ಕೆ ಹೋಗುತ್ತಿದ್ದಾಗ ಚಾಮರಾಜ ಒಡೆಯರು ಆತನನ್ನು ಕಾಳಗಕ್ಕೆ ಕರೆದರು (ಒಡಕ. ೦೦). **ಢಾಳ₄** : ಢಕ್ಕಾನಿನಾದದಿಂ ಢಾಳ ಢವಳಂಧ್ರ ಢಕ್ಕೆ ತನ್ನೊಡನೆ ಮಾರಾಂತ ಢಕ್ಕಾದಿ ಯಾದ ಮೂರ್ಧರ್ಕಳ ದಢಕ್ಕನಳಿದ ಹರಿ ಜಯತು (ಶತಸಾಂ. ೭೦-೫೬). 'ದವಳ' ಪರಾ. [?]

**ದಾಳಕ** (ನಾ). ಅರಿದಾಳ ; ಹರಿತಾಲ : ಸಿರಿಕಂಡಂ ರುಜೆ ಮಾಂಸಿ ನಟ್ಟಿಮಧುಕಂ ವಕ್ರಂ ಹರಿದ್ರಾದ್ವಯಂ ಸಿರಿಸಂ ದಾ(ತಾ)ಳಕಮೇಲೆಯೆಂಬಿ ನಿತುಮಂ ಶೀತಾಂಬುವಿಂ ಪೂಸೆ ಸಂಹರಿಕು ... ಜ್ವರಮಸ್ತ್ರಪ್ರಹರವ್ರಣಂ ಗಳೆನಿಟೀ ದೋಷಂಗಳಂ (ಲೋಕೋಪ. ೯-೦೬೩). [<ಸಂ. ತಾಲಕ]

**ದಾಳಾದಾಳಿ** 'ದಾಟಾದಾಟಿ' ನೋ.

**ದಾಳಾದೂಳಿ** 'ದಾಟಾದಾಟಿ' ನೋ.

**ದಾಳಾಧೂಳಿ** 'ದಾಟಾದಾಟಿ' ನೋ.

**ದಾಳಿ** 'ದಾಟಿ' ನೋ.

**ದಾಳಿಂಬ, ಡಾಡಿಮ, ಡಾಲಿಮ, ಡಾಳಿಂಬ, ಡಾಳಿಂಬೆ, ಡಾಳಿಂಬ್ರ, ಡಾಳಿಮ, ದಾಳಿಂಬರ, ದಾಳಿಂಬರಿ, ದಾಳಿಂಬೆ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ದಾಳಿಂಬೆ : ೧. "ದಾಡಿಮ ಮೆನಲ್ ದಾಳಿಂಬಮದು" (ಮುಂಗರಾ. ೩೭-೦೭); "ದಾಳಿಂಬಮೆ ದಾಡಿಮಂ" (ಚತುನಿ. ೦೯); "ಆ ದಾಡಿಮಕ್ಕೆ ದಾಳಿಂಬವಾಯ್ತು" (ಸಂಜೀವ. ೩೦) : ಪೊಸ ಕೆಂದಳಿರ್ಗಳ ದಾಳಿಂಬಸಾರವುಂ ಕಟ್ಟಿ ತನ್ನ ಬಣ್ಣದೊಳದು ರಂಜಿಸೆ (ಶಾಂತಿಪು. ೮-೦೬), ಆ ಪೊದಱ ನೊದಲೊಳೊದವಿ ಬೆಳೆದು ಬೀಗಿ ತಮ್ಮಿಂ ತಾವೆ ಬಿರಿದು ಬಿರಿವಟ್ಟು ಸುರಿವ ದಾಳಿಂಬದ ಪಣ್ಣಳ ತನಿರಸದ ಪರಿಪೊನಲೆ ಪರಿನೀರಾಗೆ (ಪಂಚತಂ. ೦೦೭-೦೫) : ಮಲ್ಲಿಗೆಯಲ್ಲದೆ ಸಂಪಗೆಯಲ್ಲದೆ ದಾಳಿಂಬಮಲ್ಲದೊಪ್ಪುವ ಚೆಂದೆಂಗಲ್ಲದೆ ಮಾವಲ್ಲದೆ ಕೌಂಗಲ್ಲದೆ ಗಿಡುಮರ ಗಳೆಂಬುವಿಲ್ಲಾ ನಾಡೊಳ್ (ಕಬ್ಬಿಕಾ. ೨೦) : ಇಂಬಿಲ್ಲ ಪಲ್ಗಿರಿದುಸಿರುವ ಪೋಲ್ಪಲಿಸಿ ದಾಳಿಂಬದ ಮರಗಳೊಪ್ಪಿಹುವು (ಕಂಸವಿ. ೫-೮೦) ; ಮೈ ಮುರಿದು ಬಿರಿದ ದಾಳಿಂಬದಂತೆ ಜೀವನದ ಪ್ರಭೆಯು ನುಗ್ಗಿ (ಅರಳು. ೪೬೨-೦೭) ; ದಾಳಿಂಬ–ಈ ಎಲೆಯಂ ನೀರಲ್ಲಿ ಅರೆದು ಕುಡಿಯೆ ಮೈಲೆ ರೋಗ ಗುಣ (ವಿಪ್ಪವಿ. ೫). **ಡಾಡಿಮ** : ೧. "ಡಾಡಿಮ–ಡಾಳಿಮಂ, ಕರಕ" (ನಾಚಿರಾ. +). **ಡಾಲಿಮ** : (+). **ಡಾಳಿಂಬ** : (+). **ಡಾಳಿಂಬೆ** : (+).

ಡಾಳಿಂಬ್ರ: (ಕ). ಡಾಳಿಮ: ೧. 'ಡಾ ಡಿ ಮ' ಉಲ್ಲೇಖಕ್ಕೆ ಕೊಟ್ಟಿರುವ 'ನಾಚಿರಾ'. ಕಿ. ಪ್ರಯೋಗವನ್ನು ನೋಡಿ. **ದಾಳಿಂಬರ:** ೧. ಸೂರ್ತಿ ಚವಾಳಾಮಣದ ಕಿವ್ಮತ್ತು ಇರತಕ್ಕ ಜೀನಸಗಳು ೧, ಅಕ್ಕಲಖಾರ . . . ೧೦೫, ದಾಳಿಂಬರದ ತೊಗಟೆ (ಮುಂಬವ್ಯಾ. ೧೨೪). **ದಾಳಿಂಬರಿ :** ೧. "ಕರಕಃ, ದಾಡಿಮಃ–೨ ದಾಡಿಂಬೇಗಿಡ, ನಾಳಿಂಬೇಗಿಡ, ದಾಳಿಂಬರೀ ಗಿಡ" (ಸಿದ್ಧಾಂತಿ. ೧೦೧). **ದಾಳಿಂಬೆ :** ೧. ನಿಂಬೆ . . . ದಾಳಿಂಬೆ, ಅಂಜೂರ–ಇವೇ ಮುಂತಾದ ಹಲವು ಹಣ್ಣುಗಿಡಗಳನ್ನು ತೋಟಗಳಲ್ಲಿ ಬೆಳೆಯಬಹುದು (ವ್ಯವಮು. ೫೮). ೨. ಮೊರಸು ಒಕ್ಕಲಿಗರಲ್ಲಿ ಒಂದು ಪಂಗಡ : (ಎಸವ್ಯು. XV, ೨೪೩).

**ದಾಳಿಂಬದ ಚೂರ್ಣ, ದಾಳಿಂಬಾದಿ ಚೂರ್ಣ** = ದಾಳಿಂಬೆಯಿಂದ ತಯಾರಿಸಿದ ಚೂರ್ಣ : ದಾಳಿಂಬದ ಚೂರ್ಣ–ದಾಳಿಂಬದ ಕಾಯಿ ತೊಕ್ಕು, ಮಾವಿನ ಬೀಜ . . . ಚೂರ್ಣಿಸಿ ಮೊಸರಿನಲ್ಲಿ ಕಲಸಿ ಕೊಡಲು ಸರ್ವಾತಿಸಾರ . . . ಕೆಡುಗುಂ (ಸಕವೈ. ೩೨೮) : ದಾಳಿಂಬಾದಿ ಚೂರ್ಣ–ದಾಳಿಂಬದ ಕಾಯಿ ತೊಕ್ಕು, ಮಾವಿನ ಬೀಜ . . . ಚೂರ್ಣವ ಮಾಡಿ ಎಮ್ಮೆಯ ಕಟ್ಟುಮೊಸರಿನಲ್ಲಿ ಸೇವಿಸೆ ರಕ್ತಾತಿಸಾರ, ಆಮಾತಿಸಾರ ಹೊಟ್ಟೆಶೂಲೆ ಸಹ ಪರಿಹರ (ಸಕವೈ. ೩೧೨). **ದಾಳಿಂಬದ ಪಂಚಾಂಗ** = ದಾಳಿಂಬೆಯ ಮರದ ಐದು ಅಂಗಗಳು (ಹೂ, ಎಲೆ, ಕಾಯಿ, ತೊಗಟೆ, ಹಣ್ಣು): ದಾಳಿಂಬದ ಪಂಚಾಂಗ ಬಿಳು ಸಾಸುವೆ ತೈಲದೊಳಟ್ಟು ಯೋನಿಗೆ ಪೂಸುವುದು (ಕಾಮಶಾ. ೧೧–೨೭೪). **ದಾಳಿಂಬಾದಿವಟಕ** = ದಾಳಿಂಬೆ, ಬಿಲ್ವಪತ್ರೆಹೀಚು ಮೊದಲಾದುವುಗಳಿಂದ ಮಾಡಿದ ಗುಳಿಗೆ : ದಾಳಿಂಬಾದಿವಟಕ–ದಾಳಿಂಬಪಂಚಕ, ಬಿಲ್ವಪತ್ರೆಹೀಚು . . . ಮುಳ್ಳುಕೊಗ್ಗಿಬೇರಿನ ಪಟ್ಟೆ ಇವು ಸಮಭಾಗವಾಗಿ ಎಮ್ಮೆಮೊಸರಿಂದರೆದು . . . ಗುಳಿಗೆಯಂ ಮಾಡಿ ಒಣಗಿಸಿ ಜೇನುತುಪ್ಪದಿಂದ ಒಂದು ಗುಳಿಗೆಯಂ ತೆಗೆದುಕೊಳ್ಳಲು ಹೊಟ್ಟೆಬೇನೆ ನಿಲ್ಲುಗುಂ (ಸಕವೈ. ೩೪೬).

[ <ಪ್ರಾ. ದಾಡಿಮ, ದಾಲಿಮ./ಸಂ. ದಾಡಿಂಬ, ದಾಡಿಮ, ದಾಲಿಮ ]

**ದಾಳಿಂಬಗೆ** (ನಾ). (?): ದಾಳಿಂಬದ ಕಿಱುನನೆಗಳ್ ದಾಳಿಂಬ [ಪಾಠಾಂ. ಬಿ]ಗೆ ಮೆಱೆಯೆ ಮುಗುಳ ಮುತ್ತಿನಲೊರ್ವಳ್ ಬಾಳಕಿ ಪಂಚಶರಂಗೊಯ್ದೀಳಿಸಿದಳ್ ಪಂಚಶರನ ಶರಪರಿಣತಿಯಿಂ (ಅನಂಪು. ೬–೨೦). [ ? ]

**ದಾಳಿಂಬರ** 'ದಾಳಿಂಬ' ನೋ.

**ದಾಳಿಂಬರಿ** 'ದಾಳಿಂಬ' ನೋ.

**ದಾಳಿಂಬವಣ್** (ನಾ). ದಾಳಿಂಬೆಯ ಹಣ್ಣು : ಬಕ್ಕೆವಲಸುಗಳ ಪಣ್ಗೊನೆಗಳಂ ಬಿತ್ತುಗಳ ಮೆಕ್ಕಸಂ ಬಿರಿದ ದಾಳಿಂಬವಣ್ಗೊನೆಗಳಂ ಮುಕ್ಕಣ್ಣನೆಡೆಗೆ ವನಪಾಲಕಂ ಪೊರಿಸಿಕೊಂಡೈತಂದನು (ಚಬಪು. ೪೫–೨೯); ವನಪಾಲು ಕಾಣ್ಕೆಗೈದಂ . . . ದಾಳಿಂಬವಣ್ಣಂ ಸುರಯಿಯನುರು ಚಾಂಪೇಯಮಂ (ರಾಜಶೇ. ೧೦–೨). [ ದಾಳಿಂಬ + ಪಣ್₃ ]

**ದಾಳಿಂಬಾಷ್ಟಕ** (ನಾ). = ದಾಡಿಮಾಷ್ಟಕ : ದಾಳಿಂಬಾಷ್ಟಕ–ತವಕ್ಷೀರ ಗಳ ತೂಕ, ಏಲಕ್ಕಿ ಗರ ತೂಕ . . . ಚೂರ್ಣಿಸಿ . . . ಜೇನುತುಪ್ಪದಿಂ ಸೇವಿಸಲು . . . ಕ್ಷಯರೋಗ ಸಹ ಮಾಣ್ಗುಂ (ಸಕವೈ. ೩೨೮).

[ ದಾಳಿಂಬ + ಅಷ್ಟಕ ]

**ದಾಳಿಂಬೆ** 'ದಾಳಿಂಬ' ನೋ.

**ದಾಳಿಕಾಱ** 'ದಾಟಿಕಾಱ' ನೋ.

**ದಾಳಿಕ್ಕು** (ಕ್ರಿ). ದಾಳಿಯಿಡು; ಮುತ್ತು: ಬಲುಬೇಡವಡೆ ಕಡಗಿ ಹರಕರಿಸಿ ನಡೆಯೆ ಕೈಮಿಕ್ಕು ಹೇರಡವಿ ಗೋಳಿಡಲು ದಾಳಿಕ್ಕಿದಂ ನಿಜದೇಶಜನವನಧಿಕುಮುದಸಖನು (ಹಜಕಾ. ೫–೧೪). [ ದಾಳಿ (<ದಾಟಿ) + ಇಕ್ಕು ]

**ದಾಳಿಗ** (ನಾ). ದಾಳಿ ಮಾಡುವವನು ; ಆಕ್ರಮಣಗಾರ : ಇತ್ತಲಸುರನ ದಾಳಿಗರ್ ಸೆಱೆಸೂಱೆಗಳನಿತ್ತ ರಾಜ್ಯದ ಜನಂ ಪೊಱಬಾಗಿಲೊಳ್ ಮೊಱೆಯಿಡುತ್ತಿರಲ್ ಕೇಳ್ದು (ಚಬಪು. ೪೮–೦೩) ; ಕೋಟೆಯನ್ನು ಬಲಾಧಿಕನಾಗಿರುವ ಪ್ರಚಂಡ ಶತ್ರುದಾಳಿಗನಿಂದ ತಾನೇ ಹೇಗೆಯಾದರೂ ಕಾಪಿಟ್ಟು ಉಳಿಹಿಕೊಳ್ಳಬೇಕಾಗಿರುವ ಭಾರಣೆಯ ಭಾರವನ್ನೂ (ಚಿಟ್ಯಅ ೬೨–೨೦). [ ದಾಳಿ (<ದಾಟಿ) + –ಇಗ ]

**ದಾಳಿಡು** 'ದಾಟಿಯಿಡು' ನೋ.

**ದಾಳಿಯಿಡಿಸು** (ಕ್ರಿ). ಆಕ್ರಮಣಮಾಡಿಸು ; ದಾಳಿಯಿಡುವಂತೆ ಮಾಡು ; ಧಾಳಿ ಮಾಡಲು ಅನುಮತಿಯನ್ನು ಕೊಡು : ಸುಡಿಸು ಕೈಲಾಸಮಂ ಕೆಡಿಸು ಹರಸಾಸಮಂ ತಡೆಸದೆನ್ನಂ ದಾಳಿಯಿ [ಪಾಠಾಂ. ಇ] ಡಿಸು ಬೇಗದೊಳು (ಚಬಪು. ೪೬–೨೨).

[ ದಾಳಿಯಿಡು (<ದಾಟಿಯಿಡು) + –ಇಸು₃ ]

**ದಾಳಿಯಿಡು** 'ದಾಟಿಯಿಡು' ನೋ.

**ದಾಳಿವರಿ, ಧಾಳಿವರಿ, ಧಾಟಿವರಿ** (ಕ್ರಿ). ದಾಳಿಮಾಡು; ಮುತ್ತಿಗೆಹಾಕು: ಪ್ರಾಣವಿಲ್ಲದ ಸೇನೆ ಪದ್ಮಸಂಖ್ಯೆಯು ಕೋಟಿ ದಾಳಿವರಿದುದು ಎಂಟು ಜಾವದೊಳಗೆ ಜಾಲಗಾಱನ ಕೈಯು ಮಾಣಿಕ್ಯ ಸಿಕ್ಕದೆ ಆಳಿಗೊಂಡಿತ್ತು ಜಗವ ಬೇಳುಮಾಡಿ (ಸರ್ವವ. ೮೯–೪೯೫). **ಧಾಳಿವರಿ :** ಅಲ್ಲಿಗಲ್ಲಿಗೆ ಧಾಳಿವಂದವರೆಲ್ಲರನು ನೆಱೆ ಕೊಲ್ವುದು (ನಿಘಾಗ. ೭–೨–೬). **ಧಾಟಿವರಿ :** ಸಾನ್ತರನ ಮೇಲೆ ಮೂಕರಸಂ ಧಾಟಿಟ್ಟಲ್ಲಿ ನಾಗಾರ್ಜುನಯ್ಯನ ಮಗಂ ಮನ್ನೆಯ ನಾಗವರ್ಮ್ಮಂ ತಾನುಂ ಧಾಟಿವರಿದಲ್ಲಿ ಸತ್ತು ಸುರಲೋಕಕ್ಕೆ ಸನ್ದಂ (ಎಕ. VII, ಶಿಕಾರಿ. ೨೨೦–೧೨ ; 1015).

[ ದಾಳಿ (<ದಾಟಿ) + ಪರಿ₂ ]

**ದಾಳಿವರಿಸು** (ಕ್ರಿ). ದಾಳಿಮಾಡಿಸು ; ದಾಳಿಮಾಡಲು ಕಳಿಸು : ಶಾದುಲ್ಲ ಖಾನನ ಪೌಜುಪೆರಸು ಸುಬೇದಾರ ಲಿಂಗಪ್ಪನಂ ಮಾಯಾವಿಗಳ ಸೀಮೆಯ ಮೇಲೆ ದಾಳಿವರಿಸಲು (ಕೆಳನೃ. ೧೦–೭೧). [ ದಾಳಿವರಿ + –ಇಸು₃ ]

**ದಾಳಿವೂ** (ನಾ). (?) : ಮುನಿಗಣೇಶ್ವರರೊಡನೆ ದಾಳಿವೂಗೊಯ್ವೊಡನೆ ಮರ್ಪ ಗೋಳಾಂಗೂಳಂಗಳುಮಂ ನೋಡಿ (ಪಂಪಭಾ. ೧–೧೧೫ ವ) : "ದಾಳಿವೊಗೊಯ್ವ = ದಾಳಿಹೂವನ್ನು ಕೊಯ್ಯುವ" (ಪಂಪದೀ. ೪೪).

[ ? ]

**ದಾಳಿಹೋಗು** 'ದಾಟಿವೋಗು' ನೋ.

**ದಾಳೆಯ** (ನಾ). ಒಂದು ಬಗೆಯ ಪಾತ್ರೆ ; ಕುಡಿಯುವ ಪಾತ್ರೆ (?) : ಮಗಮಗಿಸುವ ಕಂಪೊದವಿರ್ಪ ತಕ್ರಮಂ ತೀವಿದ ದಾಳೆಯುಮಂ ಮೃಗಾಕ್ಷಿಯರ್ತಂದಿಟ್ಟರ್ (ಶಾಂತೀಶ್ವ. ೦೫–೭೦). 'ತಾಲಿ₂' ಪರಾ.

[ <ಸಂ. ಸ್ಥಾಲೀ ? ]

**ದಾಳೆಸಿಂಪು** (ನಾ). (ಕರಾ) ಒಂದು ಬಗೆಯ ಮೀನು.

[ ದಾಳೆ ? + ಸಿಂಪು₁ ]

**ದಾಟಾದಾಟಿ, ದಾಳಾದಾಳಿ, ದಾಳಾದೂಳಿ, ದಾಳಾಧೂಳಿ, ಧಾಳಾಧೂಳಿ, ಧಾಟಾಧಾಟಿ** (ನಾ). ೧. ವೇಗ; ರಭಸ: ದಾಟಾದಾಟಿಯಿ ಬಂದು ಪ್ರತಿಪಾಲಪುರಮಂ ಪೊಕ್ಕು (ಧರ್ಮಾಮೃ. ೧೧–೧೨೭). ೨. ಪರಸ್ಪರ ಆಕ್ರಮಣ: ಮುಟ್ಟಾಮುಟ್ಟಿ, ಹಲ್ಲಾಹಲ್ಲಿ, ದಾಟಾದಾಟಿ, ದೆಕ್ಕಾದೆಕ್ಕಿ, (ಹಾಣಾಹಾಣಿ) ಹಣಾಹಣಿ (ಶಮದ. ೧೮೫ ಪ್ರಯೋ). **ದಾಳಾದಾಳಿ :** ೩. ಆಕ್ರಮಣ ; ಮುತ್ತಿಗೆ : ಮನ್ಮಥನಳಿದೊಡೆ ಮತ್ತೆ ದಾಳಾದಾಳಿ ಮಾಡುವೆನು (ವರ್ಧಜ. ೧೨–೩೯); ಧರ್ಮಯುದ್ಧದ ದಾಳಾದಾಳಿಯಲ್ಲಿ ಕದನ ಮಿತ್ತು, ದೈವವಶದಿಂದ ಸೋಲ್ತು (ಚಿಟ್ಯಅ. ೧೩೩–೧೮). **ದಾಳಾದೂಳಿ:** (ಕ). **ದಾಳಾಧೂಳಿ :** ೩. ಬಿಡದೆ ದೆಖ್ಖಾದೆಖ್ಖಿಯಲಿ ಧೃತಿಗೆಡದೆ ದಾಳಾಧೂಳಿಯಲಿ ಬಲುಗಡಿಯ ಖಾಡಾಖಾಡಿಯಲಿ ಕಾದಿದರು ಕಡುಹಿನಲಿ (ತೊರರಾ. ೬–೪೭–೫೬). **ಧಾಳಾಧೂಳಿ :** ೧. ಇಱಿತಕಂಜದಿರಂಜದಿರು ಕೈ ಮಱೆಯದಿರು ಕಲಿಯಾಗೆನುತ ಬೊಬ್ಬಿಱಿದು ಧಾಳಾಧೂಳಿಯಲಿ ತಾಗಿದನು

ಕಲಿಕರ್ಣ (ಕುವ್ಯಾ.ಕ. ೧೩-೨೮). ೩. ಕಾಳೆಗದೊಳಿಟ್ಟೊರಸಿ ಬಾಣನ ತೋಳ ತಟಿವಂದಾಯ್ತು ಧಾ[ಪಾಠಾಂ. ದಾ]ಳಾಧೂಳಿಯಾಹವವಿಂದುವೌಳಿಯೊಳೆಮಗೆ ಮುಳಿಸಿನಲಿ (ಕುವ್ಯಾ.ಉ. ೧-೩೮) ; ಬೆರಸಿ ಧಾಳಾಧೂಳಿಯಲಿ ಬೊಪ್ಪರಿಸಿ ಖಾಡಾಖಾಡಿಯಲಿ . . . ಕಾದಿತು ಸೇನೆ ಸೇನೆಯಲಿ (ತೊರರಾ. ೬-೩೮-೩). ೪. ಅಬ್ಬರ ; ಆರ್ಭಟೆ ; ಜೋರು : ದುಗನ ಹಾಯಿಕು ತನಗೆ ಹಾಯ್ಕುತ್ತಿಗನವೆಂಬಬ್ಬರದ ಹಾಸಂಗಿಗಳ . . . ತಳಸಾರಿಗಳ ಧಾ[ಪಾಠಾಂ. ದಾ]ಳಾಧೂಳಿ ಮಸಗಿತು (ಕುವ್ಯಾ.ಸ. ೧೩-೩೦). ೫. ಸಡಗರ ; ಸಂಭ್ರಮ : ಹೇಳಲೇನದನಶ್ವಮೇಧದ ಬೇಳುವೆಯ ಸಂಭ್ರಮದ ಧಾಳಾಧೂಳಿಯಲಿ ಶಿವಿದಾಡಿದವು ಜಿಹ್ವೆಗಳು ಹುತವಹನ (ತೊರರಾ. ೧-೭-೪೮); ಪ್ರೇಮಸಂಕೇತಗಳನೆಂದು ಧಾಳಾಧೂಳಿಯಿಂದ ಕುಣಿದೆನು ನಾನು ವ್ರಾತ್ಯಶುಕ ದಂತೆ ಮಾಮರನ ಚಿಗುರನ್ನು ಕನಸಿನಲ್ಲಿಯೆ ಕಂಡು ಕಣ್ಮುಚ್ಚಿ ಕುಕಿಲುತಿಹ ತರುಣಪಿಕದಂತೆ (ಸಖೀಗೀ. ೫೫-೫) ; ನಲಿವಿನ ನಲಿನವು ತಾನೇ ತಾನಾಗಿಯೇ ಬಿಚ್ಚಿ ಏಳ್ಮಡಿ ಧಾಳಾಧೂಳಿಯ (ಜ್ಯೋತ್ಯಾಲ ೫೩-೪).

**ಧಾಟಾಧಾಟಿ :** ೧. ತಪೋಧನರ ದೇವತಾರಾಧನೆಗೆ ಕಾಲಾತಿಕ್ರಮ ಮಾಗಲೀಯದೆ ಧಾಟಾಧಾಟಿಯಲ್ಲಿ ಬರ್ಪ ಪರಿಚಾರಕರ ನೆರವಿಯುಮಂ ಕಂಡು (ಪಂಚತಂ. ೧೧೭-೧೧).

**ದಾಳಾದೂಳಿಯಾಗು, ದಾಳಾಧೂಳಿಯಾಗು** = ಆಕ್ರಮಣಕ್ಕೆ ಒಳಗಾಗು ; ನಾಶವಾಗು : ಈ ರಂಗಪ್ಪನ ದಾಳಿ ಹೊರಟುದೆಂದರೆ ಕನ್ನಡದೊಳಗಿನ ತಂಟೆಗಾರರೆಲ್ಲ ದಾಳಾದೂಳಿಯಾಗುವರು (ನಡದಾ. I, ೪೩೭) ; ಏನು ಮಾಡಿದರೂ ಕಾಲಗತಿಯಲ್ಲಿ ಎಲ್ಲವೂ ದಾಳಾಧೂಳಿಯಾಗುತ್ತದೆ (ದೇಕನ್ನ. ೧೪೦).

[ <ದಾಟಿ./P ಕೆಲವು ವೇಳೆ ಇವುಗಳು 'ದಾಟಿ' ಶಬ್ದದ ದ್ವಿರುಕ್ತಿಯಾಗಿಯೂ ಬಳಕೆಯಾಗಿರಬಹುದು]

**ದಾಟಿ, ಡಾಳಿ$_2$, ದಾಟೆ$_1$, ದಾಳಿ, ಧಾಳಿ, ಧಾಟಿ (ನಾ).** ಲಗ್ಗೆ; ಮುತ್ತಿಗೆ ; ಆಕ್ರಮಣ : "ಅವಸ್ಕಂದಃ, ಪ್ರಪಾತಃ – ಈ ೨ ದಾಟಿ" (ಹಲಾಯು. ೭೪-೨೯೮) ; "ಪ್ರಪಾತಮದವಸ್ಕಂದಮೆನೆ ದಾಟಿ [ಪಾಠಾಂ. ಧಾಳಿ]" (ಮಂಗರಾ. ೮೫-೨೭) ; ದಾಟಿ ಬಂದುದೆಂದಂಜಿ ತ್ರಸ್ತಾಭಿಭೂತನಾಗಿಯೋಡಲ್ (ಪದ್ಮಾರಾ. ೧೬೩-೧೨); ಘನದ ಕರಗಿದುದನಟಿದಪಘನದ ವಿಳಾಸಮನದೆಂತು ನಂಬುವುದೋ ಘನಾಘನದಿಂದಮಟಿಯಲಾದುದು ಘನಾಘನಂ ಜವನ ದಾಟಿಗಿಲ್ಲೆಂಬಿನಿತಂ (ಆದಿಪು. ೪-೬೫); ಅಲ್ಲಿಗೆ ನಿಟ್ಟಾಲಿಯಾಗಿ ದಾಟಿಯನಿಟ್ಟು ಮುಟ್ಟೆವಂದು ಬಾಯ್ಮಾಡಿ ಧೃಷ್ಟದ್ಯುಮ್ನಶಿಖಂಡಿ ಚೇಕಿತಾನ ಯುಧಾಮನ್ಯೂತ್ತಮೌಜಸರಂ ಕೊಂದು (ಪಂಪಭಾ. ೧೩-೧೦೭ ವ) : ಇವಳ ಕಟಾಕ್ಷಮೆನ್ನೆರ್ದೆಯನಂರ್ಚಿಪುದೀಕೆಯ ರೂಪು ದಾಟಿಯೊಳ್ ಕವಿದಪುದು (ಧರ್ಮಾಮೃ. ೧೩-೧೦೪) ; ಆ ಟಾಟಿಗೆ ಬಲ್ಲಾಳನ ದಾಟಿಯು ದಾವಣಿಯ ತುರಗದಲಿ ಖುರಹತಿಯಿಂ ಪೇಟೆ ಪೆಸರಿಲ್ಲದಂತಿರೆ ಪಾಟಾದುವು ವೈರಿದುರ್ಗಮೆನಿತೊಳವನಿತುಂ (ಯಶೋಚ. ೧-೧೪) ; ಕೈಲಾಸಕ್ಕಲಂಪಾಂತು ಚೇರಮನೇಂ ದಾಟಿಯನಿಕ್ಕನೇ (ಉದ್ಭಟ. ೧೨-೨೪). **ಡಾಳಿ$_2$ :** ಬಂದುದಾ ಸಚಿವಸಿದ್ಧಂಗೆ ಸ್ವರ್ಗದ ಡಾಳಿ[ಪಾಠಾಂ. ಧಾಳ] ನಿಂದು ದೇಹವನಳೆದುದಲ್ಲಿ ರೋಗದ ಕೇಳಿ (ಬಸರ. ೫-೧೪೭). **ದಾಟೆ$_1$ :** ಕೋಟಿ ಕೋಟ್ಯಾವಧಿಕವಾಗಿ ಭವಾಟಿಯಲಿ ವಾಸನಾಪರಿಪಾಟಿಯೇ ಪ್ರಾಬಲ್ಯಮಂ ತಮ್ಮೊಳಗೆ ತಾವೈದಿ ದಾಟೆಯಂ ಮಾಡುವವು (ವಿವೇಚ. ೫-೩೨). **ದಾಳಿ :** ಗಗನತಳಂಬರಂ ನೆಗೆದ ಧಾಳಿಯ ಧೂಳಿಗೆ ಬೆಚ್ಚಿರ್ದ ದಾಳಿಗಂ ತೆಗೆದು ವನಾನ್ತಮಂ ಪುಗೆ (ಸೌಇಇ. XI-ii, ೧೪೭-೧೦ ; 1099); ದಾಳಿಯನಿಟ್ಟಟಿಯಟ್ಟ ಪಾಂಡ್ಯನಂ ಚಾಳಿಸಿ (ಮ್ಯಅರಿ. ೧೯೩೦, ೧-೩೫ ; ಸು. 1180) ; ಕಾಮನ ಕಾರಾಗಾರದೊಳಿರ್ಪಂತೆ ಕೇಳೀವನದೊಳಿರ್ಪ ಬಾಲಕಿಗೆ ಚಂದ್ರನ ದಾಳಿ . . . ಶಿಶಿರೋಪಚಾರದ ದಂಡಣೆಯಖಂಡಿತವಾಗೆ (ಗಿರಿಕ. ೪-೧೧೮ ವ); ರಘುಗರ್ಘುಗಿಸಿ ಹೊಳೆಹೊಳೆವ ಬಾಯ್ಧಾರೆಗಳ ಬೆಳಗಿನ ದಾಳಿ ಧೀಂಕಿಡೆ ಮೊಗೆದವರ್ಜುನನಂಬು ರಿಪುಚತುರಂಗ ಜೀವನವ(ಕುವ್ಯಾ.ಭೀ.೮-೫೦); ಮಾಂಸದ ಸವಿಗೆ ಗಂಟಲ ಗಾಳವನು ವಿಗೆ ಕಚ್ಚಿ ದುಷ್ಟನ ದಾಳಿಗೊಳಗಹ ಮಾನಿನಂತಿರೆ ವಿಷಯಸುಖಿಗಳೆಗೆ ಲೋಲರಾದರು (ಪ್ರಭುಲೀ. ೧೩-೬೦); ಕಾಳಗಗೈದನ್ನರಬಲೆಯ ತಹುದೆಂದು ದಾಳಿಯ ಬಿಡುವವೆ ನಾವು (ಭರತ. ೫೭-೬೭) : ಮೇಲಕ್ಕೆದುವ ಬಾಣಗಳ ದಾಳಿಯೊಪ್ಪಿದುದು (ಕಂನವಿ. ೧೨-೨೦). **ಧಾಳಿ :** ಧಾಳಿಯೊಳಂಧ್ರನಂ ಪಿಡಿದಪೆಂ ಮಗಧೇಶನನಿಕ್ಕಿ ಮೆಟ್ಟಿಪೆಂ (ಸೌಇಇ. XI-i, ೫೨-೧೪ ; 1907); ದಿನಪನ ಧಾಳಿ ರಾತ್ರೀಶನ ಮೇಲೆ ಪಾಳಿಯವೆರಸು ಬಪ್ಪುದು (ಅಂಜಚ. ೮-೧೪೨); ಧಾಳಿ ಬಾರದ ಮುನ್ನ ಧರ್ಮವ ಗಳಿಸಿರೊ (ಪುರಂದ. ೧-೧೪-೨); ತರಣಿಯ ಕಿರಣದ ಧಾಳಿಗೆ ಕತ್ತಲೆಯುರವಣೆ ಮೆಟಿವುದೆ (ಕಂನವಿ. ೩-೧೭). **ಧಾಟಿ :** "ಧಾಟಿ ಧಾಟಿ" (ಸಂಜೀವ. ೧೯) ; ಬಟ್ಟೆಕಟಿಯ ಧಾಟಿಗೆ ಮುಟಿಯುವಡದ ಪೊಲನ ಕೊಳ್ವೆನೆನ್ದು ಬನ್ದೊಡ್ಡಿ ನಿನ್ದಾನೆಂಬ ವಹಾತಂ ಕೇಳ್ದು (ಸೌಇಇ. XI-i, ೨೧-೬; 893).

**ದಾಳಿ ಹೊರಡು** = ಆಕ್ರಮಣಕ್ಕೆ ಸಿದ್ಧವಾಗಿ ಹೋಗು : ನೀನೂ ಚತುರಂಗಬಲಸಮೇತನಾಗಿ ವಿರಾಟನ ಮೇಲೆ ದಾಳಿಹೊರಟು ಹಸುಗಳನ್ನು ಹಿಡಿತರುವುದು ಯುಕ್ತವು (ಕ್ಷಾವಿ. ೫೪). **ದಾಟಿ ಮಾಡು, ಧಾಳಿ ಮಾಡು, ಧಾಳಿಮಾಡು** = ಮುತ್ತು ; ಆಕ್ರಮಿಸು : ಎಟ್ಟಬಟ್ಟೆ ಕಾಟ್ಬಟ್ಟೆಯೊಳ್ ತಳರ್ವರ್ ಗಂಡರ ಗಂಡ ಪಾಂಡ್ಯಸತಿಯರ್ ನೀಂ ದಾಟಿ ಮಾಟ್ಪನ್ನೆಗಂ (ಅಪ್ರತಿ. ೪೬-೭) ; ಪೊಟಲಂ ಲೀಲೆಯೊಳ್ ದಾಟಿಮಾಟ್ಕುಂ (ಚಕವಿ. ೩-೫೪) ; ಹಡಗ ಬಿಟ್ಟು ವಿಮಾನದಲಿ ಹಾರಿ ಗೋಲುಗಳ ಮೇಲೆ ದಾಳಿಮಾಡಿದ್ದೇವೆ (ನಲಮು. ೩೧-೨೮): ಧಾಳಿಮಾಡುವೆ ವರುಣಲೋಕವ ಹಾಳುಮಾಡುವೆನು (ಕಾಶಿರಾ. ೧೫-೪೧); ಅಂಗದೇಶವ ಧಾಳಿಮಾಡುವರ ಕಟಕಟ ಸೆಟಿಸೂಟಿಗಳ ಪಿಡಿದು ಕಾಳುಮಾಡುವರು (ಹರಿಸಾ. ೯೦). **ಧಾಳಿಯನಿಕ್ಕು**=ದಾಳಿಮಾಡು; ಮುತ್ತಿಗೆ ಹಾಕು:ತ್ರಿಭುವನ ಗಿರಿಯರಸು ತ್ರೈಲೋಕಪಟ್ಟಣಕ್ಕೆ ಧಾಳಿಯನಿಕ್ಕಿದರು (ಸರ್ವವ. ೧೫೩-೬೩೦) ; **ಧಾಟಿಯನಿಡು, ಧಾಳಿಯನಿಡು**=ದಾಳಿಯನಿಕ್ಕು: ಇಟಿಯನಿಟ್ಟರಿಧರಿತ್ರೀಪಾಳರ ಸಂಪತ್ತಿಯೆಲ್ಲಮಂ ತಂದೊಡೆ (ಬಾಧಪು. ೨-೨೦) : ಪಡೆವಳ ಗಂಗಿಮಯ್ಯ ಬೆಳಗವರ್ತ್ತಿಯ × × × ಮೇಲೆ ಧಾಳಿಯನಿಟ್ಟಳೆವಳಿದು ಪಲರಳಿವಿನಲು ತನ್ನ ಪರಿಚ್ಛೇದಿಸಿ (ಎಕ. VII, ಶಿವಮೊ. ೫೬-೨೫ ; 1125).

[ ದೇ.೫?/ ಪ್ರಾ. ಧಾಡೀ./ ಸಂ. ಧಾಟೀ ]

**ದಾಟಿಕಾಱ, ದಾಳಿಕಾಱ, ಧಾಳಿಕಾರ (ನಾ).** ಮುತ್ತಿಗೆ ಹಾಕುವವನು; ಆಕ್ರಮಣ ಮಾಡುವವನು ; ಲೂಟಿ ಹೊಡೆಯುವವನು ; ದರೋಡೆ ಮಾಡುವವನು : ಬಣ್ಣದಿಂ ಮದುವೆಯಂ ದಾಟಿಕಾಱರಿಂದರಸುಗಳಂ . . . ಅಟಿವಂತೆ (ಧರ್ಮಾಮೃ. ೯-೬೮). **ದಾಳಿಕಾಱ :** ದಾಳಿಕಾಱಂಗೆ ಧರ್ಮವುಂಟೆ ಕಂಗಳಿಗೆ ಕರುಳುಂಟೆ (ಅವಚಂ. ೩೨-೦೧೪) ; ಏಳು ವ್ಯಾಸನವೆಂಬ ದಾಳಿಕಾಱರು ಕರವಾಳ ಜಡಿದು . . . ನುಡಿದರು ಕಡೆಗಾಲದ ಸಿಡಿಲಿನಂದದೊಳು (ತ್ರಿಪುಸಾಂ. ೧೫೨). **ಧಾಳಿಕಾರ :** ಧಾಳಿಕಾರರಿಗೆ ಸ್ವಾಭಾವಿಕವಾದ ಜಲಮಾರ್ಗವು ದೊರೆಯಲಿಲ್ಲ (ದಭಾಇ. ೩) : ಭಾರತೀಯರು ಮುಸಲ್ಮಾನ್ ಧಾಳಿಕಾರರ ಆಕ್ರಮಣಗಳಿಂದ ನರಳುತ್ತಿದ್ದರು (ಭಾರದ. ೫೨೮). [ ದಾಟಿ + – ಕಾಱ ]

**ದಾಟಿಗಿಱು (ಕ್ರಿ).** ಆಕ್ರಮಣವೆಂದು ಭಾವಿಸು : ಪೂಗಳಿಂ ಕೆದಱುವ ಧೂಳಿ ಪಾಡುವ ಮದಾಳಿ ಪೊದಟ್ದಲರೋಳಿಯೆಂಬಿನಂ ಮದನನ ದಾಟಿಗೆತ್ತು ಸುಗಿದಿರ್ಪುದು ಪಾಂಥಜನಂ ನಿರಂತರಂ (ಪುಷ್ಪಪು. ೨-೨೦).

[ ದಾಟಿ + ಗಿಱು ]

**ದಾಟಿಡು** 'ದಾಟಿಯಿಡು' ನೋ.

**ದಾಟಿಪೊಗು** (ಕ್ರಿ). ಆಕ್ರಮಣಕ್ಕಾಗಿ ಪ್ರವೇಶಿಸು ; ಮುತ್ತಲು ಬರು : ಭವನವಾಸಿಗರಂ ಕರಂ ದವನದ ಮಡಿಯುಂ ದಾಟಿಪೊಕ್ಕಂತೆ ಮಾಡಿ (ಧರ್ಮಾಮೃ. ೭-೯೫). [ ದಾಟಿ + ಪೊಗು (<ಪುಗು) ]

**ದಾಟಿಯಿಡು, ದಾಳಿಡು, ದಾಳಿಯಿಡು, ದಾಟಿಡು, ಧಾಳಿಡು, ಧಾಳಿಯಿಡು, ಧಾಟಿಡು** (ಕ್ರಿ). ಏರಿಹೋಗು ; ಮುತ್ತಿಗೆಯಿಡು ; ಲಗ್ಗೆ ಹಾಕು ; ಆಕ್ರಮಣಮಾಡು : ದಾಟಿಯಿಡುವಂಗಂದಂಬರಂ ತ್ಯಾಗಿಗಂ ಭಾಸ್ವದ್ದೇವಗಣಂಗಳೆಂದಜಿದು ಪೇೞಲ್ಲಲ್ಲಿಗೆ (ಛಂದೋಂಬು. ೧-೪೩) : ಪುಳಿಂದರೆವಿಷ್ಣಾ ವಿಷಯಕ್ಕೆ ದಾಟಿಯಿಡಲುಜ್ಜುಗದಿಂದಿರೆ (ಪು ಷ್ಪ ಪು. ೩-೧೨೬) ; ದೇವವಲ್ಲಭನ ಪತ್ತನಕೀಗಳೆ ದಾಟಿಯಿಟ್ಟು . . . ಇರುಳೆಡೆಗಾಳೆಗಕ್ಕೆ ನಡೆವಂತೆಪೊಲಿರ್ದುದು ದಾವಪಾವಕಂ (ದಶಕು. ೨-೧೦೫); ಆಕೆಯ ಭರ್ತಾರನಾಕ್ಲೇಶಮಂ ಕೇಳಿಯಲ್ಲಿಗೆ ದಾಟಿಯಿಟ್ಟು ಕಾಲನೊಳ್ಕಾದಿ ಗೆಲ್ದವನಂ ಕಟ್ಟಿ ಆ ಬ್ರಾಹ್ಮಣಿಯುಂ ತಂದಂ (ಧರ್ಮಪ. ೪-೨೦ ವ). **ದಾಳಿಡು :** ಕಾದಬೇಕೆಂದಿಳೆಯ ರಾಜಾಳಿಯುಂ ಕೂಡಿ ದಾಳಿಟ್ಟು . . . ಪೆರ್ಬಡೆ ನಡೆದುದು (ಭಾವಚಿಂ. ೮-೬). **ದಾಳಿಯಿಡು :** ದಾಳಿಯಿಟ್ಟರು ಹರಿದು ದಿಕ್ಕಿನ ಮೂಲೆಯುವರಂಜಿದರು (ನಳಚ. ೯-೨೦) ; ಪ್ರಪಂಚದ ಯೋಚನೆಗೆ ಇನ್ನೆಲ್ಲೂ ಸ್ಥಳವಿರದೆ ಅವನೆಡೆಗೇ ದಾಳಿಯಿಡುವಂತಿತ್ತು (ರೂಪಸ. ೪). **ದಾಟಿಡು :** "ದಾಟಿಡು (ದಾಟಿ + ಇಡು) – ದೂರ ಧಾವನೇ (ನುಗ್ಗಿಹೋಗು)" (ಶಮಧಾ) ; "ದಾ [ಪಾಠಾಂ. ಧಾ ] ಟಿಡುವಗಂಬರ ಸೋಲ್ತವಂಗೆರವಿ ಬಯಸ್ಸುವಗೆ ಸ್ವರ್ಗಗಣವುಂ ಪೇಳಲುಚಿತಮಕ್ಕುಂ" (ಮಂಗರಾ. ೦೦೭-೨೧); ಕೊಲ್ಲೆಂಬ ಘೋರಸ್ವನಂ ಪೊಣ್ಮರೆ ವನ್ಯಪ್ರಾಣಿಗಳ್ಗಂತಕನ ಪಡೆಯೆ ದಾಟಿಟ್ಟಪೋಲ್ ಬೇಡರಿರ್ದರ್ (ಜಗವಿ. ೦೬-೧೫); ಬೇಂಟೆಗೆ . . . ಪೊಱಮಟ್ಟು ಕಾಳಂ ದಾಟಿಟ್ಟು ಗಹನದುರ್ಗಮಂ ನಿರ್ಘೃಣವೃತ್ತಿಯಿಂ ಮುತ್ತುವಂತೆ ಮುತ್ತಿ (ಪಾರ್ಶ್ವಪು. ೧೨-೭೫ ವ) ; ಮುದ್ದುಮೊಗದಿಂ ಪೂರ್ಣೇಂದುಬಿಂಬಕ್ಕೆ ದಾಟಿಡುವಂತೆಲ್ಲರ ಧೈರ್ಯಮಂ ಮೊಲೆಯ ಬಿಣ್ಪಿಂ ನುರ್ಗಿ ನೂಂಕಲ್ಕೆ (ಅನಂಪು. ೮-೬); ಕಾಯ್ದು ದಾಟಿಡುಘವೊಲಾ ಬನಕ್ಕೆ ನಡೆತಂದುದು ಪೆಂಡಿರ ತಂಡಂ (ಕಬ್ಬಿಗಕಾ. ೯೨). **ಧಾಳಿಡು :** ಅರಿನೃಪತಿಗಳಂ ಧಾಳಿಟ್ಟು ಕೊಲ್ಗುಮವನೀಪಾಳಂ ತ್ರೈಳೋಕ್ಯಮಲ್ಲನಾಹವಮಲ್ಲಂ (ಸೌಇಇ. IX-ii, ೦೦೨-೬ : 1046) ; ಕಾಮನ ಹೆಸರನಡಗಿಸಲು ಧಾಳಿಡುವ ಪಡೆಯೊ (ಸಿದ್ಧರಾ. ೨-೪೦) ; ಪ್ರಾಗ್ಜ್ಯೋತಿಷಕೆ ಧಾಳಿಟ್ಟನಲ್ಲಿ ಮಹಾತಿಬಲನವನೊಡನೆ ಬಲುಹಾಯ್ದು ಜರ್ನನ ಸಮರ (ಕುವ್ಯಾಸ. ೩-೦೮) ; **ಧಾಳಿಯಿಡು :** ಧಾಳಿಯಿಟ್ಟೆಯ್ದಿ . . . ಪಾಣ್ಡ್ಯನಂ ಖಣ್ಡಿಸಲ್ . . . ಬಂದಂ (ಸೌಇಇ.XX, ೪೯-೦೯ : 1076 ?) ; ದಿವಿಜರ ಹಿಂಡು ಗೋಳಿಡೆ ಧಾಳಿಯಿಟ್ಟನು ಚಂಡ ಗಾಂಡೀವಿ (ಕುವ್ಯಾಅ. ೨೦ ಸೂಚನೆ) ; ಆ ದುರಾಗ್ರಹಿ ಧಾಳಿಯಿಟ್ಟನು ಧೂರ್ಜಟಿಯ ಗಿರಿಗೆ (ತೊರರಾ. ೧-೮-೩೧). **ಧಾಟಿಡು :** ಸಾನ್ತರನ ಮೇಲೆ ಮೂಕರಸಂ ಧಾಟಿಟ್ಟಲ್ಲಿ ನಾಗಾರ್ಜ್ಜುನಯ್ಯನ ಮಗಂ ಮನ್ನೆಯ ನಾಗವರ್ಮ್ಮ ತಾನುಂ ಧಾಟಿವರಿದಲ್ಲಿ ಸತ್ತು ಸುರಲೋಕಕ್ಕೆ ಸನ್ದಂ (ಎಕ. VII, ಶಿಕಾರಿ ೨೨೦-೦೦; 1015). [ ದಾಟಿ + ಇಡು$_1$ ]

**ದಾಟಿವೋಗು, ದಾಳಿಹೋಗು** (ಕ್ರಿ). ೧. ಆಕ್ರಮಣಕ್ಕಾಗಿ ಹೊರಡು: ಚರಪುರುಷರನಟ್ಟಿ ಬೇಗಂ ದಾಟಿವೋಗಿ ಜಲಕ್ರೀಡೆಯಾಡುವನನಿಱಿದು (ವಡ್ಡಾರಾ. ೦೬೬-೧). **ದಾಳಿಹೋಗು :** ೨. ದಾಳಿಗೆ ಈಡಾಗು : ದಾಳಿ ಹೋದ ಆಳಿನ ಉಸುರಿನಲ್ಲಿ ಒಂದು ವೇಣು ಹುಟ್ಟಿತ್ತು (ಕೋಲಶಾಂ. ೩೭-೨೬). [ ದಾಟಿ + ಪೋಗು$_1$ ]

**ದಾಟಿಸಾಂತರ** (ನಾ). ಒಬ್ಬಾತನ ಹೆಸರು : ದಾಟಿಸಾನ್ತರನ ಮಗಂ ಸಾನ್ತರಾಯ ರಾಜ್ಯಂಗೆಯೆ (ಎಕ. VIII, ಸಾಗರ. ೦೦೦-೩ ; 986 ?). [ ದಾಟಿ$_0$ + ಸಾಂತರ$_0$ ]

**ದಾಟಿಸಿಂದ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀದಾಟಿಸಿನ್ದರ್ ಜಯಮೆಮ್ಬ ಸವತ್ಸರದ ಉತ್ತರಾಯಣ ಸಂಕ್ರಾನ್ತಿ ಅನ್ದು ನಾಲ್ಗಣ್ಡಗದ ಬೆದೆಮಣ್ಣನ್ ಕೌಣ್ಡಿನ್ಯಗೋತ್ರದ ದೇವದತ್ತರ್ಗ್ಗೆ ಇತ್ತಾರ್ (ಎಕ. XVI, ಪಾವುಗ. ೦೧-೧ : 754). [ ದಾಟಿ$_0$ + ಸಿಂದ$_2$ ]

**–ದಿ** (ಪ್ರ). ಒಂದು ಕೃದಂತ ಭಾವನಾಮ ಪ್ರತ್ಯಯ. 'ಇಟ್ಟಿದ್ದಿ', 'ಬಿಡದಿ' ಪರಾ.

**ದಿಂ** (ನಾ). ಒಂದು ಅನುಕರಣ ಶಬ್ದ : ಸುಮ್ಮಾನದಿಂದ ಪಟ್ಟಂಡದ ದೊರೆಗಳ ತಮ್ಮವರನೆ ಮಾಡಿಕೊಂಡು ದಿಮ್ಮೆಂಬ ವಾದ್ಯಕೋಟಿಗಳಲ್ಲಿ ದೊರೆ ನೋಡಿ ಬಿಮ್ಮನುತೆಯ್ತರುತಿರ್ದ (ಭರಜ. ೪೯-೭೦); 'ದಿಮಂಗ್ಗಡಂ', 'ದಿಮ್ಮಿಡಂ', ಪರಾ.

**ದಿಂಕ** (ನಾ). ಹೇನಿನ ಮೊಟ್ಟೆ,–ತತ್ತಿ ; ಸೀರು. [ ಸಂ. ]

**ದಿಂಕಿಕ್ಕು** (ಕ್ರಿ). ನೆಗೆ ; ಚಿಮ್ಮು : ಮುಂದೆ ದಿಂಕಿಕ್ಕುವ ಹುಲ್ಲೆಮಿಂಡನದು ಕಂಡುಱೆ ಲಂಘಿಸಿ ಪಾಯ್ದು ನೆತ್ತರಿಂ ಸೊಕ್ಕಿರುತಿರ್ಪ ಪೆರ್ಬುಲಿಯು ನೊರ್ವನೆ ಪೊಯ್ದು (ನಳಚಂ. ೭೭). [ ದಿಂಕು (<ಧೀಂಕು) + ಇಕ್ಕು]

**ದಿಂಕಿಡಿಸು** (ಕ್ರಿ). ಮುಸುಕು ; ಆವರಿಸು ; ಆಕ್ರಮಿಸು : ಪಟುಪಾಠಕರ ನಿರವಧಿರವಂಗಳ ಕೋಳಾಹಳಮೆಲ್ಲಮೊಮ್ಮೊದಲೊಳ್ ಭೋರೆಂದು ಸೆಗೆದು ದೆಸೆಯಂ ಮುಸುಂಕಿ ದಿಂಕಿಡಿಸುತ್ತುಮಿರೆ (ಬಾಧಪು. ೧೩-೭ ವ). [ ದಿಂಕಿಡು (<ಧೀಂಕಿಡು) + –ಇಸು$_3$ ]

**ದಿಂಕಿಡು** 'ಧೀಂಕಿಡು' ನೋ.

**ದಿಂಕು** 'ಧೀಂಕು' ನೋ.

**ದಿಂಕುಗೊಳ್** (ಕ್ರಿ). ನೆಗೆದು ಚುಚ್ಚು ; ಹಾರಿ ಬಂದು ತಿವಿ : ನಡುವ ಸರಲ್ಗೆ ಮೆಯ್ಯೊಳಗಡಂಗುವ ಸಂಕುಗೆ ದಿಂಕುಗೊಳ್ವ ಕಕ್ಕಡೆಗಿದಿರುರ್ಚ ವಿಟ್ಟಿಗಿದಿರಾನೆಯ ಕೋಟ್ಕಳ ಕೋಳ್ಗೆ ನೊಂದು ಬಾಯ್ವಿಡದೆ . . . ಬಿಟ್ಟುಮಿರ್ದ ನೆಲೆಯಿಂ ಕೆಲವುನ್ನದ ಗಂಧಸಿಂಧುರಂ (ಪಂಪಭಾ. ೧೦-೯೪) ; "ದಿಂಕುಗೊಳ್ವ = ಹಾರಿ ಬರುವ" (ಪಂಪದೀ. ೩೭೦). [ ದಿಂಕು (<ಧೀಂಕು) + ಕೊಳ್$_1$ ]

**ದಿಂಕುವಾಱು** (ಕ್ರಿ). (ಸಂತೋಷದಿಂದ) ನೆಗೆದಾಡು ; ಕುಣಿದಾಡು ; ಪುಟಿಹಾರು : ಕುಸುಮಾಸ್ತ್ರನೆಚ್ಚೊದೆದು ಪುಟ್ಟಿಸಿ ರಾಗದಿನುರ್ವಿ ದಿಂ[ಪಾಠಾಂ. ಧಿಂ] ಕುವಾಱಿದಪನೆನಿಪ್ಪನಂ ಸ್ಮರಜಸಾಧ್ವಸದಿಂ ದಿಗಿಲ್ಲೆಂದು ಗೂಡುವಾಯಲ್ದುದು ನೃಪಕನ್ನೆಗಾಗಳೆರ್ದೆ ನೋಡಲೊಡಂ ಮನಃಮಂಶ ಮೇರುವಂ (ವರ್ಧಪು. ೬-೧೩). [ ದಿಂಕು (<ಧೀಂಕು) + ಪಾಱು$_1$ ]

**ದಿಂಗು** 'ಧಿಂಗು' ನೋ.

**ದಿಂಗುವಿಡಿ** (ಕ್ರಿ). (?) : ಶಿಲೆಯೊಳಗಿಪ್ಪ ಕುಲಾಲ ಬೆಳಗಿ ತೊಳಗುವ ಆ ಮಲಿನರ ಮುಖವ ಕಂಡು ಮತ್ತೆ ದಿಂಗುವಿಡಿಯಲೇಕೋ ದಿಂಗುವಿಡಿದು ಭಂಡರಾದ ಲೆಂಡರಿಗೇಕೋ ಲಿಂಗದ ಸುದ್ದಿ (ಮೋಳಿಮಾ. ೧೮೪-೬೯೩). [ ದಿಂಗು$_0$ + ಪಿಡಿ$_1$ ]

**ದಿಂಟೆ** 'ತಿಟ್ಟು$_3$' ನೋ.

**ದಿಂಡ$_1$, ಡಿಂಡಲ, ಡಿಂಡಿಗ, ದಿಂಡಗ, ದಿಂಡಲ, ದಿಂಡಲು$_1$, ದಿಂಡಿಗ$_1$, ದಿಂಡಂಗ, ದುಂಡಿ$_3$, ದುಂಡಿಗ, ದುಂದುಲು** (ನಾ). (ಚೆನ್ನಾಗಿ ಉರಿಯುವ ಗಟ್ಟಿಯಾದ) ಒಂದು ಬಗೆಯ ಮರ,– ವೃಕ್ಷ : ದಿಂಡ ತಂಡಸ (ರೇವಣ. ೩೭-೧೩) ; ಒಪ್ಪುವಮಳ ಸಿರಿಖಂಡದಿಂ ದಿಂಡದಿಂ ಪಿರಿವಿಡಿಯೆ ನಿಗುರ್ದ ಹೆತ್ತೇಗದಿಂ ತೇಗದಿಂ ಕಾನನಂ ಕಣ್ಗೆಸೆದುದು (ರಾಘುಚ. ೧೭-೫೪) : ತುಂಬುರ ಬನ್ನಿ ಗೊಟ್ಟಕ್ಕಿ ದಿಂಡ (ರುಕ್ಮಾಂಗ. ೯-೩೬). **ಡಿಂಡಲ :** ಶೋಣಕ = ಡಿಂಡಲಮರ (ಗಂಗಾಮ. ೩೦೦). **ಡಿಂಡಿಗ :** ಡಿಂಡಿಗ, ಬೆಜ್ಜಲು (ಮೃಜಿಗಿ. ೭-೦೧೯). **ದಿಂಡಗ :** (+). **ದಿಂಡಲ :** ಆಲಮಾ ಬಸರಿ ದಿಂಡಲ [ಪಾಠಾಂ. ದಿಂಡಂ] ತಂಡಸಂ ನೆಲ್ಲಿ ಜಾಲಮಾ

ಹೊನ್ನರಳಿ . . . ಮೊದಲಾದ ವೃಕ್ಷಂಗಳಿಂ ವನಮೆಸೆದುದು (ಚಬಪು. ೫೩-೧೮); ಅತ್ತಿ ಮತ್ತಿ ಮಧುಕಂ ಮಗ್ಗಾರೆ ಪಚ್ಚಾರಿ ದಿಂಡ [ಪಾಠಾಂ. ಡಿ] ಲವಾಲಂ ಬೆಳವಿಂಗಳಂ ಪುಣಿಸೆ ಜಾಲಂ (ರಾಜಶೇ. ೫-೫೬); ಕಾರಾ ಚಮಂಕೋಲೆ ದಿಂಡಲ . . . ಎಕ್ಕೆ ಮೊದಲಾದುರ್ವೀರುಹಂ ರಾಜಿಕುಂ (ಯಾದಚಂ. ೪-೪೫); ದಿಂಡಲ(ಧಾವರಾ) . . . ಬನದೊಳಗೆ ಇಮಾರತಿಗೆ ಬರುವ ಹಾಗೆ ಎತ್ತರವಾಗಿ ಬೆಳೆಯುತ್ತದೆ. ಕಟ್ಟಿಗೆ ಬೆಳ್ಳಗೆ, ಬಿರುಸು, ಜಿಗುಟುಳ್ಳದ್ದು (ಕಥಾಗೆ. ೪೧). **ದಿಂಡಲು₁:** ತಗ್ಗಿಬೇರು . . . ದಿಂಡಲಬೇರು, ಹೆಗ್ಗುಳದ ಬೇರು, ಶುಂಠಿ ಇವಂ ಕಷಾಯವಿಕ್ಕಿ ಕೊಡಲು ಸಕಲ ಸನ್ನಿದೋಷವು ಪರಿಹರ (ಸಕವೈ. ೧೭೪). **ದಿಂಡಿಗ₁:** ಮರಗಳು: ಹೆಸವ, ಹೆಬ್ಬಲಸು . . . ದಿಂಡಿಗ, ಬೂರಗ (ನಮ್ಮನು. ೨೩೭). **ದಿಂಡುಗ:** ದಿಂಡುಗ = "ದಿಂಡದ ಮರ" (ಶ್ರುಭಣ್ಣ). **ದುಂಡಿ₂:** "ಮಂಡೂಕಪರ್ಣ, ಪತ್ರೋರ್ಣಃ, ನಟಃ, ಕಟ್ವಂಗಃ, ಡುಂಡುಕಃ – ಈ ೫ ದುಂಡಿಗಿಡುವಿನ ಪೆಸರು" (ನಾಚಿರಾ. ೧೧೮); **ದುಂಡಿಗ:** ಹಾಲೆ ತಾಳಂಕೋಲೆ ದಿಂಡ ದುಂಡಿಗ ಬೋರೆ . . . ಪೇರಿಪ್ಪೆ ತುಪ್ಪೆಗೆಳೆರ್ಪುವು (ನಂದಿಮಾ. ೧೧-೩೬). **ದುಂದುಲು:** "ಶ್ಯೋನಾಕ – ದುಂದುಲು" (ಓಷಧಿ. ೧೭೨)

[ ← ತೆಲು. ದುಂಡಿಕ, ದುಂಡಿಗ, ದುಂಡಿಲ, ದುಂಡುಗ, ದುಂದಿಲ ]

**ದಿಂಡ₂** (ನಾ). ಒಂದಂ ಬಗೆಯಂ ಹೂವಿನ ಬಳ್ಳಿ ; ಗಿರಿಕರ್ಣಿಕೆ: "ಗಿರಿಕರ್ಣಿಕೆಯು ದ ಪ ರಾ ಜ ತ ಂ ದಿಂಡ [ಪಾಠಾಂ. ದಿಂದ]ವುದು" (ಮಂಗರಾ. ೩೪-೧೧). [ ←ತೆಲು. ದಿಂಟೆನ ]

**ದಿಂಡ₃** 'ದಿಂಡು' ನೋ.

**ದಿಂಡ₄, ಡಿಂಡ** (ನಾ). ೧. ಸೊಕ್ಕಿದವನು; ಉದ್ಧತ: ಅವಳನ್ನು ನಿಂದಿಸಿದ ದಿಂಡರನ್ನು ನಿಪಾತ ಮಾಡಿಬಿಡುವೆನೆಂದು ಭಾಷೆಯನ್ನು ಕೊಟ್ಟು . . . ಮನೆಗೆ ಮರಳಿದನು (ವಾಗ್ಮೀವಿ. ೫೬). ೨. (ದೇವರಂತೆ) ಶಕ್ತ; ಸಮರ್ಥ; ಅಧಿಕ ಬಲಶಾಲಿ: ನಿನ್ನನತ್ಯಾದರದಿಂ ದೇವನೆ ದಿಂಡನೆ ಯೆಂದೊಡೆ ದೇವಂ ನೀನೆಂತದೆಂತು ದೊಡ್ಡಿದನಪ್ಪೈ (ಧರ್ಮಾಮೃ. ೯-೧೧೬); ದೇವರನೆತ್ತ ಬಲ್ಲನವರೊತ್ತಿನ ದಿಂಡರನೆತ್ತ ಬಲ್ಲ (ಶಕಕ. ೭೦). ತಲೆ ಮೇಲೆತ್ತಿ ನೋಡಿದಾಗ ದೇವರೂ ಕಾಣಿಸಲಿಲ್ಲ ದಿಂಡರೂ ಕಾಣಿಸಲಿಲ್ಲ (ಕಥಾಮಂ. IV, ೧೦೦). **ಡಿಂಡ:** ೧. ಬಂಧು ಬಳಗ ಕಂಡು ಬಿಡಿಸಿ ಕೊಂಬರಾರೊ ಡಿಂಡ ಯಮನ ದೂತರೆಳೆಯೆ (ಕನಕ. ೫೦-೧).

[ ದಿಂಡು + – ಅ₆ ]

**ದಿಂಡಗ** 'ದಿಂಡ₁' ನೋ.

**ದಿಂಡತನ** 'ದಿಂಡಂತನ' ನೋ.

**ದಿಂಡಲ** 'ದಿಂಡ₁' ನೋ.

**ದಿಂಡಲು₁** 'ದಿಂಡ₁' ನೋ.

**ದಿಂಡಲು₂** (ನಾ). (ಉಕ) ಪ್ರಸ್ತ; ಶೋಭನ. 'ಮರುದಿಂಡಲು' ಪರಾ. [ ? ]

**ದಿಂಡಾಳು** (ನಾ). ಶಕ್ತಿಶಾಲಿ; ಬಲಶಾಲಿ: ದಿಂಡಾಳುಗಳನ್ನು ಕರೆದರೆ ಮಿಂಡಾದ ಕೆಲಸವು ಆಗುತ್ತದೆ (ಗಾದೆ). [ ದಿಂಡು+ಆಳು₃ (<ಆಳ್₃) ]

**ದಿಂಡಿ₁** (ನಾ). ಬಾಳೆಯೆಲೆಯಲ್ಲಿ ಅಗ್ರವನ್ನು ಕತ್ತರಿಸಿ ತೆಗೆದ ಹಿಂದಿನ ಭಾಗ. 'ಅಗ್ರ' ಪರಾ. [ <ದಿಂಡು ]

**ದಿಂಡಿ₂** (ನಾ). ೧. ಭಜನೆಯಂ ಮೇಳ,–ಮೆರವಣಿಗೆ: ಒಂದು ದಿನ ಟಿಳಕರು ಕೆಲ ಕ್ರಿಸ್ತೀಯರೊಡನೆ ತಿರುಗಾಡ ಹೋದಾಗ ಅತ್ತಣಿಂದ ಒಂದು ಭಜನೆಯ ಮೇಳ (ದಿಂಡೀ) ಬಂತು (ಸ್ಮೃತಿಚಿ. ೩೩೮). 'ದಿಂಡೀಯಾತ್ರೆ' ಪರಾ. ೨. ದೇವಾಲಯಂಗಳಲ್ಲಿ ಪ್ರಾಕಾರದ ಒಳಭಾಗದಲ್ಲಿ ಭಜನೆಯೊಂದಿಗೆ ಎಳೆಯುವ ಚಿಕ್ಕ ತೇರಂ; ಸಣ್ಣ ಉತ್ಸವ.

ದಿಂಡಿನುತ್ಸವ = ದೇವಾಲಯಂಗಳಲ್ಲಿ ದೇವರಿಗೆ ನಡೆಸುವ ಚಿಕ್ಕ ತೇರಿನ ಉತ್ಸವ,–ರಥೋತ್ಸವ: ಬಳಿಕಾಗ ದಶಮಿಯ ದಿಂಡಿನುತ್ಸವ ದಲಿ ನಳಿನಾಕ್ಷ ಪಕ್ಷಿತುರಂಗ ಘಳಿಲನೆ ಸರ್ವಸಃಭ್ರಮದ ಬೀಜುತ್ಸಲಾ ಪೊಳಲೊಳು ಮೆಱೆಯುತ್ತೆಂದ (ಕಂಸವಿ. ೯-೫೯).

[ ←ಮರಾ. ದಿಂಡೀ ]

**ದಿಂಡಿಗ₁** 'ದಿಂಡ₁' ನೋ.

**ದಿಂಡಿಗ₂** (ನಾ). ಒರಟನಾದವನು; ಉದ್ಧತ. 'ದಿಂಡಿಗತನ' ಪರಾ.

[ ದಿಂಡ₄ + – ಇಗ ]

**ದಿಂಡಿಗಗಾಮುಂಡ** (ನಾ). ಒಬ್ಬಾತನ ಹೆಸರು: ಗಾದಿಯರ ದಿಣ್ಣಿಗ ಗಾವುಂಣ್ಡರುಮೆನ್ನುವರು × × × ವಂಗರು ಪಲ್ಲಭಗಾವುಂಣ್ಡರುಂ (ಎಕ. II, ೩೫-೭; ಸು. 800). [ ದಿಂಡಿಗ₀ + ಗಾಮುಂಡ ]

**ದಿಂಡಿಗತನ** (ನಾ). ಒರಟುಸ್ವಭಾವ; ಉದ್ಧಟತನ: ನೀನು ಶುದ್ಧ ಪೋಕರಿ ಹುಡುಗಿ! ತೊಂಡೆದ್ದ ದಿಂಡಿಗತನದ ಪುಂಡಹೆಣ್ಣು! (ಮಂತ್ರಶ. ೨೪-೦೭). [ ದಿಂಡಿಗ₂ + – ತನ ]

**ದಿಂಡಿಗರ** (ನಾ). ಒಬ್ಬಾತನ ಹೆಸರಂ: ಪೃಥಿವೀ ಕೊಂಗುಣಿ ಮಹಾ ರಾಜಾಧಿರಾಜ ಬಾಣವಂಶೋತ್ಪವ ಶ್ರೀದಿಂಡಿಗರರ್ಕಟ್ಟಿಪ್ಪುನಾಡುಸಾಸಿರ ದೊಟ್ಟಾಟು ಮಾನಾಳುತ್ತಿಟ್ಟು (ಪ್ರಾಆರಿ. ೧೯೨೭, ೧೦೮-೪೦; ಸು. 726).

[ ದಿಂಡಿಗ₀ + ಅರ₄ ]

**ದಿಂಡಿಯ** 'ದಿಂಡೆಯಂ' ನೋ.

**ದಿಂಡೀಯಾತ್ರೆ** (ನಾ). ಭಜನೆಯ ಮೇಳದೊಂದಿಗೆ ಹೊರಡುವ ಯಾತ್ರೆ: ಹೊರಡು ಪಂಡರಪುರದ ತನಕ ದಿಂಡೀಯಾತ್ರೆ ಆ ಸೇತು ಹಿಮಗಿರಿಗೆ ಹಡದಿ ಹಾಸು (ನಲಮು. ೧೯-೫). [ ದಿಂಡಿ₂ + ಯಾತ್ರೆ ]

**ದಿಂಡೀರಪಿಂಡ** (ನಾ).=ಡಿಂಡೀರಪಿಂಡ: ಕಣ್ಣೂಗ್ಗಣಾಬ್ಧಿಚಂದ್ರನವಿಣ್ಣತ ಸುತವೂ ವಿಭಾಸಿ ಖಣ್ಣಿತ ಮದನಂ ದಿಣ್ಡೀರಪಿಣ್ಡ ಸುರವೇದಣ್ಡಯಶಟ್ಟ ಣ್ಡನರ್ಹಣಾನ್ದಿ ಮುನೀಂದ್ರ (ಶಾಇಇ. XX. ೧೮-೨೮ :980).

[ <ಸಂ. ಡಿಂಡೀರಪಿಂಡ ]

**ದಿಂಡು, ದಿಂಡ₃, ದಿಡ್ಡು** (ನಾ). ೧. (ಬಟ್ಟೆ, ಸೌದೆ ಮೊದಲಾದವು ಗಳ) ಗಂಟು; ಪಿಂಡಿ; ಕಟ್ಟು; ಹೊರೆ: ಬಳಗಜವಳಿಗೆಂದು ಬಂದ ಚೀನದುಕೂಲದ ಹಾರಾವಳಿಯು ಪಲವು ದಿಂಡುಗಳುಮಂ ಯಾಚಕ ಕೋಟಿಗೆ ಬೇಡಿದುದನೀಯಲೆಂದು ಪೂಜಿಸಿದ ಪೊನ್ನರಾಶಿಯುಮನನಂತ ಮತಿ ನೋಡಿ (ಧರ್ಮಾಮೃ. ೩-೨೫೨); ಹಂಸಾವಳಿ ಗಜಾವಳಿ ಮೊದಲಾದ ಪಟ್ಟಾವಳಿಯ ದಿಂಡುಗಳಂ ತರಿಸಿ (ಬಸರ. ೮-೧೨); ವಿವಿಧ ರತ್ನಾಭರಣ ಕಾಂಚನ ನವದುಕೂಲದ ದಿಂಡಿನಲಿ ಬುಧನಿವಹ ದಣಿದುದನಂತ ಕೃಪಣಾನಾಥಜನಸಹಿತ (ಕುವ್ಯಾಸ. ೧-೧೮); ಎಣ್ಣೆಯುನಡೆಕಿರೋ ಸೀರೆಗಳ ದಿಂಡನು ಬಿಡಿಸಿರೋ ತೋದುಡಿಸಿರೋ ತಡವೇನು ಬೇಗೆನುತ . . . ನಿಡಿಯ ಬಾಲವ ಸುತ್ತುತಿರ್ದರು (ತೊರರಾ. ೫-೮-೮); ಪುಲಿದೊಗಲ ಪೊಱೆ ಜೇನುತುಪ್ಪದ ನಳಿಗೆ ಮೇಣದ ಮುದ್ದೆ ಆನೆಯ ತಲೆಯ ಮುತ್ತಿನ ಪುಡಿಕೆ ಚಮರೀವಾಲಗಳ ದಿಂಡು (ಸಾಳ್ವಭಾ. ೦೬-೬); ದೇವಾಂಗ ಚಿತ್ರಾವಳಿ ಸುವರ್ಣಾವಳಿಯ ವಸನದ ದಿಂಡನರ್ಪಿಸಿದ (ಅಕ್ರೂಚ. ೮-೪೦). ೨. ಒತ್ತಾಗಿ ಕಟ್ಟಿರುವ ಹಾರ,–ದಂಡೆ: ಸುಮದಂಡೆಗಳ ಮಾಲತಿಯ ಕುಸುಮ ನವಪರಿಮಳದ ಬಂಡುಳ್ಳ ದಿಂಡುಗಳ ಮೊನೆ ಮಲ್ಲಿಗೆಯ ಬೀಡು ತುರಾಯಿಗಳ ಸೊಬಗು (ಚತುಪು. ೧-೫-೫೩). 'ದಿಂಡುಕಟ್ಟು' ಪರಾ. ೩. ಮರದ ಕಾಂಡ,–ತಾಳಂ: "ಪ್ರಕಾಂಡ, ಸ್ಕಂಧ–ಮರದ ಮೊದಲಿಂದ ಕೊಂಬುಪರ್ಯಂತರವಿರ್ದ ನಡುವಣ ದಿಂಡು" (ನಾಚಿರಾ. ೬). ೪. (ಬಾಳೆಯ) ಕಾಂಡ ಅಥವಾ ದಂಟಿನೊಳಗಿರಂವ ಭಾಗ: ಅಪೂರ್ವಂಗಳಾಗಿ ತೊಳಗುವ ಕಿಱುದೊಡೆಗಳುಡುವದರ್ದನ್ನಮಾರೂಢ

ಸರ್ವಜ್ಞನ ದೊಡ್ಡ ಮಾರ್ಗಂಗಳೆಳವಾಟಿಯ ದಿಂ[ಪಾಠಾಂ. ದಂ]ಡಿನೊಳ್ ಸಾಣೆಗಟ್ಟಿದಂತಾದುವು (ಪಂಪಭಾ. ೨-೩೯೧) ; ದೊರೆಕೊಳೆ ಬಾಟೆಯ ದಿಂಡಿನ ತಿರುಳೊಳ್ ಮತ್ಸ್ಯಾಕ್ಷಿ ಮೂಲಮಂ ಸುಣ್ಣಮುಮಂ ಬೆರಸಿ (ಲೋಕೋಪ. ೮-೧೯) ; ಮುಱಿವೆಂ . . . ಬಾಟೆಯ ದಿಂಡಂ ಮುಱಿವಂತೆ ಕಾವನಾನೆಯ ಕೊಂಬಂ (ಕಬ್ಬಿಕಾ. ೨೪೪). ೫. ಕೋಲು; ದಂಡ: ಖಂಡಣೆಗೆಯ್ದು ಕಾರ್ಮುಕದರ್ಧಭಾಗದ ದಿಂಡನೆ ತಿರುಹಿ ಮನ್ಮಥನ ಮಂಡೆಯ ಮೇಲೆ ಗಟ್ಟಿಸಲೊಡ್ಡಿಕೊಳಲು ಕೋದಂಡವಿಕ್ರಮ ಯಾಯ್ತು ಕರದೆ (ಮೋಹತ. ೧೨-೬೪). ೬. ತುಂಡು; ಚೂರು: ಮಂಡಿಸಿತು ನೊರೆರಕುತ ಕರುಳಿನ ಜೊಂಡು ಮಸಗಿತು ಕಡಿದ ಖಂಡದ ದಿಂಡು ತೇಲಿತುದು . . . ಕಾಲಾಂತಕನ ಹೆಬ್ಬಳಸು ಹುಲುಸಾಯ್ತು (ಕುಮಾ.ಭೀ. ೯-೧೩). ೭. (ಕುಂಟೆ ಮೊದಲಾದ ಉಪಕರಣಗಳಿಗಾಗಿ ಉಪಯೋಗಿಸುವ) ಮರದ ತುಂಡು,–ಕೊರಡು: "ದಿಂಡು–ಕುಂಟೆಯ ದಿಂಡು ; ಕೂರಿಗಿಯ ದಿಂಡು ; ಕಟ್ಟಿಗೆಯ ತುಂಡು . . . ಗಳೇದ ಸಾಮಾನ" (ಜಾನಕೋ. ೫). ೮. ಕಟ್ಟಡಗಳ ತಳಪಾಯಕ್ಕೆ ಉಪಯೋಗಿಸುವ ಕಲ್ಲು,–ದೊಡ್ಡದಾದ ಗುಂಡುಕಲ್ಲು: ಚವುಕಮಾದ ವಜ್ರದ ದಿಂಡುಗಳ್ (ಸೌಗಂಧಿ ೩೩೮-೫) ; ಕಲ್ಲಿನ ದಿಂಡುಗಳನ್ನು ಕೂಚ ಗಳನ್ನು ತುಂಬಿದ ಗಾಡಿಗಳನ್ನು ಎಳೆಯುವ ಕುದುರೆಗಳ, ತಂದುದನ್ನು ಗಾಡಿಗಳಿಂದ ಇಳಿಸಿಕೊಳ್ಳುವ ಸಲಗಗಳ ಸಂಖ್ಯೆ ಹೆಚ್ಚು ಕಡಿಮೆ ದುಡಿಯುವ ಮಂದಿಗಿಂತ ಕಡಿಮೆಯೇನಿರಲಿಲ್ಲ (ಸವತಿ. ೭೮). ೯. ಚಿನ್ನ ಮುಂತಾದ ಲೋಹಗಳ ಗಟ್ಟಿ: ಪೋಗಲಣ್ಮದೆ ಚಿನ್ನದ ದಿಂಡಿರ್ದೆಡೆಯಂ ಪೊಕ್ಕು ಮೇಲೊಂದು ಚಿನ್ನದ ದಿಂಡಂ ತೆಗೆದುಕೊಂಡು (ಧರ್ಮಾಮೃ. ೧೨-೬೩). ೧೦. ಅಂಚು; ದಡ; ದಂಡೆ. 'ದಿಂಡುಕಟ್ಟು' ಪರಾ. ೧೧. (ಹಣ್ಣು, ಕಾಳು ಮೊದಲಾದವುಗಳ) ಒಳಭಾಗ; ತಿರುಳು: ಉಂಡೆಗುಂಬಳ ಕಾಯು . . . ತೊಟ್ಟಿನ ಬಳಿಯ ತೋಡಿ ಗುಂಡಿಯಂ ಮಾಡಿ ಸೆರೆಗತ್ತಿಯೊಳು ಮತ್ತದಱ ದಿಂಡುಮಂ ಪೂರಿಸಿದ ಬಿತ್ತಮಂ ನೆಟಿದದಱೊಳಿನಿಸಿಲ್ಲದಂತೆ ತೆಗೆದು (ಸೂಪಶಾ. ೫-೨೩). ೧೨. ಶರೀರ; ಒಡಲು; ದೇಹ; ಮೈ: ಲಿಂಗವ ಕೈಯಲ್ಲಿ ಹಿಡಿದು ಅವರಂಗದಿಚ್ಛೆಯ ನುಡಿದು ತನ್ನ ದಿಂಡ ಹೊರೆಯಲೇಕೋ (ಮೋಳಿಮಾ. ೧೦೫-೪೧೭) ; ದಿಂಡುದಿರಿಸಿ [ಪಾಠಾಂ. ದಿಂಡುರಿಸಿದ] ತಲೆ ಖಂಡಿಸಿ ಹೊಯ್ಯುತ ಸೆಂಡಾಟಮನಾ ತಲೆಗಳಿನಾಡುತ ಮುಂಡಂಗಳ ನೆಲೆಯೊಳುಯಾಡಿಸುತಿರ್ದ[ಪನಂದಾ] ನಟನಂತೆ (ಕುಮುಆ. ೮-೪೯). ೧೩. ರುಂಡವಿಲ್ಲದ ದೇಹ; ಮುಂಡ: "ಅಟ್ಟೆ, ಧಡ" (ಕಂಸುಹು. ೭೮). ೧೪. ಗಟ್ಟಿಯಾದ ಭಾಗ; ಗಡುಸಾದ ಭಾಗ; ಅಪಕ್ವವಾದ ಭಾಗ: ಅನ್ನ ಸರಿಯಾಗಿ ಬೆಂದಿಲ್ಲ, ಇನ್ನೂ ದಿಂಡಿದೆ (ರೂಢಿ); ಹಾಲು ಒಡೆದರೆ ನೀರು ಬೇರೆ, ದಿಂಡು ಬೇರೆಯಾಗುತ್ತದೆ (ರೂಢಿ). ೧೫. ಸ್ಥೂಲವಾದುದು; ದಪ್ಪವಾದುದು: ಚೆಂಡಿನಂದದಿ ಬಿಗಿದ ಮಾಂಸದ ದಿಂಡು ಮೊಲೆಗಳು ಮುಖವು ಶ್ಲೇಷ್ಮದ ಜೊಂಡು (ಅಮೃತ. ೨-೮೧) ; ಗೂಳಿಯ ಹಿಣಿಲಂತಿರೆ ಹೆಗಲವರಿಗೆ ಮುಂಡಿಯ ಮುಟ್ಟುವ ತೋಳ್‌ದಿಂಡು (ಅಹಲ್ಯಾ. ೯೭-೨೧). 'ದಿಂಡುಕ' ಪರಾ. ೧೬. ಬಾಳೆಯ ದಿಂಡಿನಿಂದ ಮಾಡಿದ ಪಲ್ಯ,–ತಾಳಿದ: ಇಂದು ನಮ್ಮ ಮನೆಯಲ್ಲಿ ದಿಂಡು ಮಾಡಿದ್ದರು (ರೂಢಿ). ೧೭. ಪುಷ್ಟಿಕರವಾದುದು; ಪುಷ್ಟಿದಾಯಕವಾದುದು: ಗೋಧಿಯು ಅಕ್ಕಿಗಿಂತ ದಿಂಡಾದ ಆಹಾರಧಾನ್ಯ (ರೂಢಿ). ೧೮. ಮೂಲಸತ್ತ್ವ,–ಸಾರ; ಒಳ ತಿರುಳು: ಶೈವಕರುಣಾಂಶುಗಳ ಎಳೆಬಿಡಿಸುವೆಸಕದೆಳಾ ದಿಂಡಿನೀ ಜೀವಾತ್ಮವನೆ ಮರೆವೆಯೆಂತು ? (ಮಲಿದೇ. ೩೯-೮). ೧೯. ಬಲ; ಕಸುವು; ಶಕ್ತಿ. 'ದಿಂಡಾಳು' ಪರಾ. ೨೦. ಧೈರ್ಯ; ದಿಟ್ಟತನ. 'ದಿಂಡುಗೆಡು' ಪರಾ. ೨೧. ಗರ್ವ; ಸೊಕ್ಕು; ಅಹಂಕಾರ: ಒಂದಿನಂ ಮುಚ್ಚಂಜೆ ಹಸಿಮಣ್ಣೆನುಂಡೆ, ಗುದ್ದುವೊರುವೊಡ್ಡನನು ಸಂತೆಯಲಿ ಕಂಡೆ, ನಾಲಗೆಯ ನಾಲದುಲಿಯಿಂ ಗೊಜಗಿತಿಂತು–'ಮೆಲ್ಲನೆಲೆ ತಟ್ಟಣ್ಣ ! ನನ್ನೊಳೀ ದಿಂಡೇ ?' (ಗೀವಿಂ. ೧೨೦-೨೭). ೨೨. ಬೂಚು; ಬಿರಡೆ (?): ಬಳೆಯ ಕುಪ್ಪಿಗೆಗೆತ್ತು . . . ಅದರ ಬಾಯಿಗೆ ಬಳಹದ ದಿಂಡನಿಕ್ಕಿ ವಜ್ರಗಾರೆಯಂ ಮಾಡಿ (ವಾತಾಚಿ. ೩೯-೪). ದಿಂಡ೩: ೧೩. ನಿನ್ನ ರುಂಡವನ್ನು ದಿಂಡದಿಂದ ಬೇರೆ ಮಾಡದೆ ಫಾಕ್ಸನು ಎಂದೂ ಬಿಡಲಿಕ್ಕಿಲ್ಲ (ಅಂಬಿಕ. ೧೧೨) ; ತಾನು ಅವನ ರುಂಡವನ್ನು ದಿಂಡದಿಂದ ಬೇರೆ ಮಾಡಿದ್ದು (ಮನಬಿ. ೧೬೦) ; ಪ್ರತಿಯೊಂದು ನಾಟಕದಲ್ಲಿ ಕೆಲವು ದಿಂಡಗಳೂ ಹಲವು ದೌಗಿಗಳೂ ಬರುತ್ತಿದ್ದವು (ಜನನಾ. VII ಪ್ರಸ್ತಾವನೆ). ೨೧. 'ದಿಂಡತನ' ಪರಾ. ದಿಡ್ಡು: ೨೩. ಹಸುವಿನ ಕೊರಳಿಗೆ ಕಟ್ಟುವ ಗುದಿ,–ಗುದ್ದಿ: (ಸ್ಯಾಂಡರ್). ೨೪. (ಆಲಂ) ಹೊರೆ; ಭಾರ: ದೊಡ್ಡ ಧ್ಯೇಯವನ್ನು ಕಟ್ಟಿಕೊಂಡಿರುವ ನನಗೆ ಕೊರಳಿಗೆ ಅವಳು ಒಂದು ದಿಡ್ಡಾಗುವ ಬದಲಾಗಿ ಈಗ ನನ್ನ ಅಬಾಧಿತಸ್ವಾತಂತ್ರ್ಯವೇ ನನಗೆ ದೊಡ್ಡದು (ನಿಷ್ಕಾಮ. ೧೧೧).

**ದಿಂಡಾಗು, ದಿಡ್ಡಾಗು**=೧.(ಕೊಂಬೆಯಿಲ್ಲದ ಮರದಂತೆ)ಬೋಳಾಗು; ಬರಿಗೈಯಾಗು; ಹುರುಳಿಲ್ಲದಾಗು: ಕಂಡು ಸತ್ಕರಿಸಿ ಮುನಿ ಮಧುರ ವಚನದಲಿ ಮುಂಕೊಂಡಾ ಭರದ್ವಾಜಸುತನೊಳಿಂತೆಂದನೀ ಮಂಡಲವ ಭೂಸುರರ್ಗಿತ್ತೆವೆಮಗೇನುಂಟು ಭಾಗ್ಯವೀಯಲ್ಕೆ ನಿಮಗೆ ದಿಂಡಾದೆ ಧನಹೀನನಿಂದೇನು ಭಾರಿ ಕೋಡಂಡವೊಂದಿದೆ (ಲಕ್ಷ್ಮಭಾ. ೨೮-೩೦). ೨. ಸೊಕ್ಕೇರು; ಮದವೇರು: "ಪರ್ವತೀತಿ ದಿಂಡಾದವುದೆಂಬುದು ; ಹಾರ್ಬ್ಬಿಗ=ಮಂದಂ" (ಕಾಶಕ್ಯ. ೩೦). ೩. ಭರ್ತಿಯಾಗಂ; ಗಡದ್ದಾಗು; ಪುಷ್ಟವಾಗು: ಮಲ್ಲಣ್ಣನಿಗೆ ಹೊಟ್ಟೆಗೆ ತುಂಬ ದಿಂಡಾಗಿತ್ತು (ಮಲ್ಲಿ. ೧೪). ೪. ಹೊರೆಯಾಗಂ; ಭಾರವಾಗು: ದೊಡ್ಡ ಧ್ಯೇಯವನ್ನು ಕಟ್ಟಿಕೊಂಡಿರುವ ನನಗೆ ಕೊರಳಿಗೆ ಅವಳು ಒಂದು ದಿಡ್ಡಾಗುವ ಬದಲಾಗಿ ಈಗ ನನ್ನ ಅಬಾಧಿತಸ್ವಾತಂತ್ರ್ಯವೇ ನನಗೆ ದೊಡ್ಡದು (ನಿಷ್ಕಾಮ. ೧೧೧) **ದಿಂಡಿನ ಕೋಸಂಬರಿ**=ಬಾಳೆಯ ದಿಂಡಿನಿಂದ ತಯಾರಿಸಿದ ಕೋಸಂಬರಿ: ದಿಂಡಿನ ಕೋಸಂಬರಿ ಬಹಳ ರುಚಿಯಾಗಿರುತ್ತದೆ (ರೂಢಿ). **ದಿಂಡಿನ ಪಲ್ಯ**=ಬಾಳೆಯ ದಿಂಡಿನಿಂದ ಮಾಡಿದ ಪಲ್ಯ,–ತಾಳಿದ: ಹಾಗಲಕಾಯಿ ಗೊಜ್ಜು, ದಿಂಡಿನ ಪಲ್ಯ ಗೋಚರಿಸಲಿಲ್ಲವಲ್ಲ (ಬಾಳಹೊ. ೪೫) ; ತಿಥಿಯ ದಿನ ದಿಂಡಿನ ಪಲ್ಯ ಮಾಡುತ್ತಾರೆ (ರೂಢಿ). **ದಿಂಡಿನ ಹುಳಿ**=ಬಾಳೆಯ ದಿಂಡಿನಿಂದ ತಯಾರಿಸಿದ ಹುಳಿ,–ಮೇಲೋಗರ: ದಿಂಡಿನ ಹುಳಿಯೆಂದರೆ ನನಗೆ ಬಹಳ ಇಷ್ಟ (ರೂಢಿ). **ದಿಂಡು ಜಡಿ**=ಗುಂಪನ್ನು ಚದರಿಸು: ಮೆಲ್ಲಡಿ ತಡವಾಗಿ ದಿಂಡುಜಡಿವುಜ್ಜುಗದಿಂ ದನಿಯೆತ್ತಿ ಮುಂ ತೊದಳ್‌ನುಡಿಗೊಳೆ ಲೀಲೆಯಿಂದೆಱಗೆ ಶಾಳಿವನಕ್ಕೆ ಶುಕಾಳಿ (ಸೂಕ್ತಿಸು. ೪-೭೦).

[ದೇ.॥ ಮಲ. ತಿಣ್ಣು ; ಕೊಡ. ದಿಣ್ಣೀ ; ತುಳು.ದಿಂಡು ; ತೆಲು. ದಿಂಡು, ದ್ರಿಂಡು./ಮರಾ. ದಿಂಡ್ ]

**ದಿಂಡುಕ**(ನಾ). ೧. ಸ್ಥೂಲ ಶರೀರವುಳ್ಳವನು; ಸ್ಥೂಲದೇಹಿ; "ಟೊಣಪ" (ಕಂಸುಹು. ೮೫) : ಉಕ ಪ್ರತ್ಯಯಕ್ಕೆ – ಕಟ್ಟುಕಂ . . . ಬೊಂದುಕಂ, ದಿಂಡುಕಂ (ಶಮದ. ೨೦೫ ಪ್ರಯೋ) ; ಬೊಂದುಕಂ, ದಿಂಡುಕಂ (ಶಬ್ದಾನು. ೪೪೧ ಪ್ರಯೋ). ೨. ಭಯವೂ ವಿವೇಕವೂ ಇಲ್ಲದ ಒರಟು ಮನುಷ್ಯ: "ತುಂಟ, ಪೋರ, ಪೋಕರಿ, ಅಗಡ" (ಕಂಸುಹು. ೮೫).

[ ದಿಂಡು + – ಉಕ (< – ಉಗು) ]

**ದಿಂಡುಕಟ್ಟು (ಕ್ರಿ)**. ೧. (ಹೂವಿನ) ದಂಡೆಯನ್ನು ಕಟ್ಟು ; ಹಾರವನ್ನು ಕಟ್ಟು: ಗುಡ್ಡದ ಮೇಲಕ್ಕಾದರೂ ಹೋಗಿ ಹೂಕೊಯ್ದುಕೊಂಡು ಬಾ ದಿಂಡುಕಟ್ಟಿಕೊಡ್ತೇನೆ (ನಿಶಿಊ.೭) ೨. (ಪಾತಿ, ಮೊದಲಾದವುಗಳಿಗೆ)

ಅಂಚನ್ನು ಕಟ್ಟು; ದಂಡೆಯನ್ನು ಮಾಡು: ಅವರು ಹೂಗಿಡಗಳ ಪಾತಿಗಳಲ್ಲಿ ಸರಿಯಾಗಿ ನೀರು ನಿಲ್ಲುವಂತೆ ದಿಂಡುಕಟ್ಟಿದ್ದಾರೆ (ರೂಢಿ). ೩. (ಬಟ್ಟೆ ಮೊದಲಾದುವುಗಳ) ಅಂಚನ್ನು ಕಟ್ಟು; ಕರೆಕಟ್ಟು: ಅವರು ಸೀರೆಯ ಸೆರಗಿಗೆ ದಿಂಡುಕಟ್ಟುತ್ತಿದ್ದಾರೆ (ರೂಢಿ).

[ ದಿಂಡು + ಕಟ್ಟು$_1$ ]

**ದಿಂಡುಕಾಱ** (ನಾ). ಶಕ್ತಿಶಾಲಿ; ಬಲಶಾಲಿ: ನಡೆವಳಿಕಾಱಂ, ದಿಂಡುಕಾಱಂ, ಬಿಲ್ಕಾಱಂ (ಭಾಷಾಭೂ. ೭-೧೭೧ ಉದಾ). [ ದಿಂಡು + – ಕಾಱ ]

**ದಿಂಡುಗ** 'ದಿಂಡ$_1$' ನೋ.

**ದಿಂಡುಗಲ್ಲು** (ನಾ). ಮನೆಯ ತಳಪಾಯಕ್ಕೆ ಹಾಕುವ ಕಲ್ಲು; ಕಲ್ಲಿನ ದಿಂಡು: ಮನೆಯ ತಳಪಾಯಕ್ಕಾಗಿ ದಿಂಡುಗಲ್ಲುಗಳನ್ನು ರಾಶಿಮಾಡಿದ್ದರು (ರೂಢಿ). [ ದಿಂಡು + ಕಲ್ಲು (<ಕಲ್$_3$) ]

**ದಿಂಡುಗವಿ** (ಕ್ರಿ). ದಿಟ್ಟತನದಿಂದ ಮೇಲೆಬೀಳು; ಸೊಕ್ಕಿನಿಂದ ಆಕ್ರಮಿಸು: ದಿಂಡುಗವಿವನ ಬಾಯೊಳಗೆ ದೋರ್ದಂಡವನು ನೂಕಿದನು (ನಿಭಾಗ ೧೦-೩೦-೧೬). [ ದಿಂಡು + ಕವಿ$_1$ ]

**ದಿಂಡುಗುಂಡಿಗೆ** (ನಾ). ೧. ಸೊಕ್ಕಿನಿಂದ ಕೂಡಿದ ಎದೆ, –ಹೃದಯ. ೨. ಸೊಕ್ಕು; ಗರ್ವ: ತುರುಕರ ದಿಂಡುಗುಂಡಿಗೆಯ ಹಿಂಡಿದ ನಿನ್ನಯ ಬಾಹುದಂಡಮಂ ಪೊಗಳ್ವೆನೆ? (ಗೀವಿಂ. ೫೨-೮).

[ ದಿಂಡು + ಗುಂಡಿಗೆ$_1$ ]

**ದಿಂಡುಗೆಡಪು, ದಿಂಡಂಗೆಡಹು** (ಕ್ರಿ). ೧. ರಾಶಿರಾಶಿಯಾಗಿ ಬೀಳಿಸು, –ಕೆಡಹು: ಕರಚಂಡಾಘಾತದೊಳ್ ತೊಂಡುಗೆಡದ ತುರಗದಱಂಗಳುಂ ಬಱಸಿಡಿಲ ಬಳಗಂ ಚಂದಣದ ಪೆರ್ಮರಗಾಡುಂ ದಿಂಡುಗೆಡಪಿದಂತಿರ್ದುವು (ಅನಂಪು. ೦೪-೭ ವ); ಭದ್ರಾವತೀಶ್ವರನ ಸುತನ ಸೈನ್ಯಂ ನಡೆದು ಬಂದಾ ವೃಕೋದರನ ಮುತ್ತಿದೊಡವನ್ನಿಜಗದಾದಂಡಮಂ ಕೊಂಡು ದಿಂಡುಗೆಡಪಿದೊಡೆ . . . ಚೆಗಾದರು (ಜೈಮಿಭಾ. ೪-೫೬). **ದಿಂಡುಗೆಡಹು:** ೨. ದಿಂಡುರುಳುವಂತೆ ಕೆಡಹು; ಕೆಳಕ್ಕೆ ಉರುಳಿಸು: ಬಂಡವ ತುಂಬಿದ ಹಸುಬೆ ಕೊಂಡವನ ನುಂಗಿತ್ತು, ಆ ಚೀಲದ ಮದ್ದ ನುಂಗಿದವನ ಕಂಡವ ನೊಡೆದು ದಿಂಡುಗೆಡಹಿತ್ತು, ತನುವ (ಮೋಟ್ಗೀಮಾ. ೨೧೩-೭೯); ಚೆಂಡಿತನವನು ಮಾದು ಮಿಗೆ ಕೈಕೊಂಡು ಫಲುಗುಣನೆಸಲಿ ತನುವನು ದಿಂಡುಗೆಡಹಲಿ ಬಳಿಕ ಗೆಲುವಿರಿ ಕೌರವೇಶ್ವರನ (ಕುವ್ಯಾಭೀ. ೭-೩೬); ತೊಂಡ ದೈತ್ಯರ ಬಸುಱ ಬಗಿಬಗಿ ದಿಂಡುಗೆಡಹೋ . . . ಎನುತ ಮರ್ಕಟತಂಡ ಕವಿದುದು (ಕಾಶಿರಾ. ೩೨-೧೬); ದಿಂಡುಗೆಡಹುವೆನಿವನ ನೆಂದಾ ಉದ್ದಂಡನು ಕೊಬ್ಬಿಱಿದೇಱ (ನೇಮಿಸಂ. ೧೩-೩೩). ೩. ಅಡ್ಡ ಬಿದ್ದು ನಮಸ್ಕರಿಸು; ಸಾಷ್ಟಾಂಗವೆರಗು: ಶಂಭು ನೆಲಸಿದನಾತ ನಿದಿರಿನಲಿ ಕಂಡು ಪುರುಷಾಮೃಗ ಶರೀರವ ದಿಂಡುಗೆಡಹಿತು (ಕುವ್ಯಾಸ. ೬೧೩. ೭-೩೦). [ ದಿಂಡು + ಕೆಡಪು ]

**ದಿಂಡುಗೆಡಹು** 'ದಿಂಡಂಗೆಡಪು' ನೋ.

**ದಿಂಡುಗೆಡು** (ಕ್ರಿ). ಧೈರ್ಯಗೆಡು; ಅಂಜು; ಹೆದರು: ಅವುಗಳಿಂದ ಅವನು ದಿಂಡುಗೆಡಲಿಲ್ಲ (ಪ್ರಮಹ. ೪೧). [ ದಿಂಡು + ಕೆಡು$_1$ ]

**ದಿಂಡುಗೆಡೆ** (ಕ್ರಿ). ೧. ಉರುಳಿ ಬೀಳು; ಕುಸಿದು ಬೀಳು: ಗಂಡನುಳ್ಳಮ್ಮನ ಒಡೆವೆರೆದಾತ ನರಕದಲ್ಲಿ ದಿಂಡುಗೆಡೆದಿಪ್ಪನೈ (ದೇದಾವ. ೩೨-೫೬); ದಿಂಡುಗೆಡೆಯಲಿ ಮೇರು ಮೇದಿನಿ ನಿಲಲಿ ವಿತಳದಲಿ (ಕುವ್ಯಾಭೀ. ೭-೨೭); ದಿಂಡುಗೆಡೆದುದು ನೆಲಕೆ ರಕ್ಕಸ ದಿಂಡೆಯನ ಕೌಕುಳದ ರಕುತದ ಮುಂಡವು (ತೊರರಾ. ೧-೧೧-೧೮); ದಿಂಡುಗೆಡೆದು ಪಶ್ಚಿಮವಾರಿಧಿಯೊಳು ಖಂಡ ಶಶಾಂಕನಳಿಯೆ (ಜಯುಕಾ. ೦೪-೯೦); ಗಾಳಿಗೆ ಬಾಱ ದಿಂಡುಗೆಡೆವಂತೆ ಕಾಲಾಳ್ಗಳ್ ಕೆಡೆದುವು (ರಾಮಾಶ್ವ. ೧೩೦-೧೬). ೨. ಸಾಷ್ಟಾಂಗ ಬಿದ್ದು ನಮಸ್ಕರಿಸು; ಅಡ್ಡಬೀಳು: ಕಂಡು ಪೊನ್ನಾಂಬಲನ ಶ್ರೀಪಾದ ಯುಗಳವಮಂ ದಿಂಡುಗೆಡೆದಪ್ಪಿಕೊಂಡನು ಹರನ ಚರಣವಮಂ (ಸಾಮೂರ. ೭೮-೧೪); ಕಂಡು ಮೈಯ್ಯಿಕ್ಕಿಸಿದನತಿಥಿಗೆ ದಿಂಡುಗೆಡೆದನು (ಸಂಭಪ. ೧೦-೧೮); ಕಾಣ್ಕೆಯಂ ಮುಂದಿರಿಸಿ ದಿಂಡುಗೆಡೆದ್ದು ಮುಗುಳಿಱಗಲು (ಚಬಪು. ೫೬-೫೦). [ ದಿಂಡು + ಕೆಡೆ$_1$ ]

**ದಿಂಡುಡಿಗೆ** (ನಾ). ೧. ಗುಂಡಗೆ ಸುತ್ತಿರುವ ಬಟ್ಟೆ: ಪೆಂಡತಿಯ ನುಡಿಗೇಳಿ ಶಾಟಿಯಂ ಕಟಿತಟದಿ ದಿಂಡುಡಿಗೆಯಂಗೈದು ಭೃಗ್ವಂಗಿರಾಭ ನಡೆಗೊಂಡು ರಘುವೀರನರಮನೆಯ ಬಾಗಿಲ್ಗಳಂ ಕಳಿದು ಮುದದಿಂದ ಪೊಕ್ಕು (ವೆಂಕಾರಾ. ೨-೧೧-೫೦). ೨. (ಆಲಂ) ಅಸ್ತವ್ಯಸ್ತವಾದ ಬಟ್ಟೆ; ಅವಸರದಲ್ಲಿ ಸುತ್ತಿಕೊಂಡ, ಮುದುರಿರುವ ವಸ್ತ್ರ: ಅಗಲಸುರೆಯುರಾ ಪುರೋತ್ತರಭಾಗದಲಿ ಹೊರವಂಟು ರಣಕಿದಿರಾಗಿ ದಿಂಡುಡಿಗೆಯಲಿ ಕೆದರಿದ ಕೇಶಭಾರದಲಿ ಜಾಗಜಾಗದಿ ನಿಂದು ಗುಂಪುಗಳಾಗಿ ಪತಿಸುತ ಸೋದರಾದಿ ವಿಯೋಗದುಃಖದೊಳೊರಲಿದರು (ಅನಂರಾ. ೬-೧೭-೨).

[ ದಿಂಡು + ಉಡಿಗೆ$_1$ (<ಉಡುಗೆ) ]

**ದಿಂಡುತನ, ದಿಂಡತನ** (ನಾ). ಸೊಕ್ಕು; ಗರ್ವ; ಅಹಂಕಾರ: ದಿಂಡುತನದಲಿ ಕೊಂಡು ಗದುಗವ ಕೊಂಡವೋಲಿಲ್ಲೇನು ಸಾಗದು ರಂಡೆಯರೆ ಹೋಗೆಂದು ನುಡಿದನು ನಗುತ ಕೌರವನು (ಜಿನಭಾ. ೭-೫). **ದಿಂಡತನ:** ಕಟ್ಟಬೇಕು ಕಾಟದೆಮ್ಮೆ ಅದಱ ಹಯನ ಎಷ್ಟಾದರು ಉಣಬೇಕು . . . ಚಂಡಿತನವೆಂಬ ಹಿಂಡಿ ಇಡಬೇಕು ದಿಂಡತನವೆಂಬ ಪೆಂಡೆ ಮೇವು ಪುಂಡತನವೆಂಬೊ ಹಿಂಡಿ ರುಬ್ಬಿಡಬೇಕು (ಪುರಂದ. ೨-೫೫-೨); ಕೊಂಡೆಯರ ಮಾತ ಕಿವಿಗೊಂಡು ಕುಲವನಿಕ್ಕಿ ದಿಂಡತನದಿ ಕೆಡದಿರು (ಪಾರ್ತಿಸು. ೧೦೩).

[ ದಿಂಡು + – ತನ ]

**ದಿಂಡುದರಿ** 'ದಿಂಡುದಱಿ' ನೋ.

**ದಿಂಡುದಳಿರು** (ಕ್ರಿ). (ಆಲಂ) ಅಧಿಕವಾಗು; ಹೆಚ್ಚಾಗು: ಕಂಡು ದೂರದಲಾ ಮುಕುಂದನಖಂಡಮೂರ್ತಿಯನು ಕೈಕೊಂಡವಂತರ್ಭಾನವನು ಬಹಿರಂಗವೃತ್ತಿಗಳು ದಿಂಡುದಳಿತುದು ಪುಳಕ (ನಿಭಾಗ. ೧೦-೬೨-೩೮).

[ ದಿಂಡು + ತಳಿರು$_1$ (<ತಳಿರ್$_1$) ]

**ದಿಂಡುದಱಿ, ದಿಂಡುದರಿ** (ಕ್ರಿ). ತುಂಡುಮಾಡು; ಚೂರುಮಾಡು: ದಿಂಡುದಱಿದನು ಶ್ರಾವಕರನೇರಂಡವನವಂ ಪೊಕ್ಕ ಮದವೇತಂಡದಂದದಿ (ಬಸಪು. ೫೦-೬೯); ದಿಂಡುದಱಿದನು ದಾನವರ ಕಡಿಖಂಡಮಯ ಮಾಯ್ಸುವನಿ ರಕುತದ ದೊಂಡೆಗೆಸಱನೊಳದ್ದು ದಗಣಿತ ರಥಗಜಾಶ್ವಚಯ (ಕುವ್ಯಾಕ. ೭-೩೦); ಚಂಡದೇವತೆಗಳನಾರಾಧಿಸಿದಳು ದಿಂಡುದಱದು ಕುಱಗಳನು (ಕುರಾಸಾಂ. ೨೬-೬); ದಿಂಡುದಱದಹಿತರಂ ಭೀಷ್ಮನಂ ಕೊಂದನು (ಜೈಮಿಭಾ. ೨೪-೧೬); ದಿಂಡುದಱದು ಕೆಡಹಿದ ಸಾಲ ಕೊಲ್ಲಾರ ಬಂಡಿಗಳೆಸೆದುವಾ ಧುರದೆ (ಕಂಸವಿ. ೧೫-೭೬). **ದಿಂಡುದರಿ:** ಇಂದ್ರನ ಮಗ ಅರ್ಜುನ ಭೀಷ್ಮಾದಿ ವೈರಿಗಳನ್ನು ದಿಂಡುದರಿದ (ಬಿದುರ. ೧೦೩).

ದಿಂಡುದಱದಱ = ಕಾಂಡವನ್ನು ಕತ್ತರಿಸುವಂತೆ ಕತ್ತರಿಸು, –ತರಿ: ದಿಂಡುದಱದಱದವನ ಸೇನೆಯ ಹಿಂಡ ಬಱಕೈದವನ ಕೊಂದನು (ಸಂಭಪ ೨೬-೦೨೦). [ ದಿಂಡು + ತಱ$_1$ ]

**ದಿಂಡುದಿರುಹು** (ಕ್ರಿ). ೧. ಸುತ್ತಲೂ ತಿರುಗು: ಕೊಂಡನಾ ತುರಗವ ನದಾಕ್ಷಣ ಗಂಡುಗಲಿ ಮನವಳುಕದಾಗಳು ದಂಡೆಯಿದು ಲೇಸೆನುತ ಮಿಗಿಲಿಕೆ ತುರಗ ಖುರಗಳಲಿ ದಿಂಡುದಿರುಹುತ್ತಿರಲು (ಸಂಭಪ ೩-೦೪). ೨. ಸುತ್ತು; ಹುರಿಮಾಡು: ಕಣ್ಣಲಿ ಕೆಂಡವನು ಕಾಱುತ್ತ ಗರ್ಜಿಸಿ ಕೆದಱ ಮೀಸೆಗಳ ದಿಂಡುದಿರುಹುತ್ತುಗಿದು ಸಮರಕೆ ಗಂಡುಗಲಿ ಹೊಱವಂಟನು (ನಿಭಾಗ. ೧೦-೬೬-೧೯). ೩. ಸುತ್ತಲೂ ತಿರುಗಿಸು: ಗಂಡುಗಲಿ ಬರಲವನ ಹಸ್ತವ ದಿಂಡುದಿರುಹುತ ಗದೆಯುಲಿಟ್ಟನು ದಾನವಧ್ವಂಸಿ (ನಿಭಾಗ. ೧೦-೭೦-೨೩). [ ದಿಂಡು + ತಿರುಹು (<ತಿರಿಪು$_1$) ]

**ದಿಂಡುಮಗುಟ್** (ಕ್ರಿ). (ದೇಹ) ಹಿಮ್ಮೆಟ್ಟಿ ಬೀಳು; ಉರುಳಿ ಬೀಳು; ದಿಂಡುಗೆಡೆ : ಮದಹಸ್ತಿಮಸ್ತಕಂಗಳನೋಸರಿಸಿ ರಥಮಂ ಪರಿಯಿಸುವ ರಥಚೋದಕರುಂ ರಥಚೋದಕರ ಬಿಟ್ಟ ಬಾಯ್ **ಬಿಟ್ಟಂ**ತಿರೆ ತಮ್ಮ ಕರುಳ್ಗಳೊಳ್ ತವೆ ತೊಡರ್ದು ಕೀಟಂ ಕರ್ಚಿ ದಿಂಡುಮಗುಟ್ದು ಕೆಡೆವ ಜಾತ್ಯಶ್ವಂಗಳುಂ (ಪಂಪಭಾ. ೧೦-೧೧೬ ವ). [ ದಿಂಡು + ಮಗುಟ್ ]

**ದಿಂಡುರುಳ್**, ದಿಂಡುರುಳು (ಕ್ರಿ). ೧. ಮರದ ಕಾಂಡದಂತೆ ನೆಲದ ಮೇಲೆ ಉರುಳು : ಗಂಡೇಳ್ವ ಭೂತಮುತ್ಪ್ರೇತಜಾತಂಗಳಿಂ ದಿಂಡುರುಳ್ವ ಪೊರಳ್ವ ನೆರಳ್ವ ಪರಾಕ್ರಮಿಗಳಿಂ . . . ತದ್ರಣಾಂಕಣಮೆಸೆದುದು (ಜಿಬಪು. ೧೬-೨೦). **ದಿಂಡುರುಳು** : ೧. ಅಟಿಯಲಣಂ ಬಂದುದಿಲ್ಲೆತ್ತಲುಂ ದಿಂಡುರುಳುತ್ತಿರ್ಪನ್ಯಸೈನ್ಯಂಗಳ ತಲೆಗಳೆ ಕಾಣಲ್ಕೆ ಬಂದತ್ತದೆತ್ತಂ (ಜಂದ್ರಪು. ೫-೧೦೯) ; ಸಾಲ್ವನಳವಳಿದನು ದಿಂಡುರುಳಿತಾತನ ಚತುರ್ಬಲಂ (ಜೈಮಿಭಾ. ೭-೬೨) ; ಖಂಡೆಯುಗಳ ಪೆಟ್ಟಿನೊಳಗೆ ಗುರಾಣೆಗಳ್ತುಂಡಿಸಿ ತಲೆ ಸೀಳಾಗಿ ಖಂಡಿಸಿ ಸಿಂಗಾಡಿ ದೊಣೆಯುಂಬು **ಪುಡಿ**ಯೆದ್ದು ದಿಂಡುರುಳಿತು ಪಾನರಾಜಿ (ಕಂಸವಿ. ೧೪-೭೪) ; ಚಂಡ ಖಗಮೃಗರವಕೆ ಬೆದಱುತ ದಿಂಡುರುಳಿ **ಪೊ**ರಳುತ್ತಲಿರ್ದರು ನಾರಿಯರು ಬನದಿ (ಕೃಕರ್ಣಾ. ೩-೮೩). ೨. ಮೈಯನ್ನು ಉರುಳಿಸುತ್ತಾ ದೇವರಿಗೆ ಪ್ರದಕ್ಷಿಣೆ ಹಾಕು; ಉರುಳುಸೇವೆ ಮಾಡು : ಸ್ವಾಮಿಗೆ ದಿಂಡುರುಳುವ ಸೇವೆಯನ್ನು ಮಾಡುವವರೆಷ್ಟೋ ಮಂದಿ (ರೂಢಿ).

**ದಿಂಡುರುಳು ಸೇವೆ** = ಶರೀರವನ್ನು ಉರುಳಿಸುತ್ತಾ ದೇವರಿಗೆ ಪ್ರದಕ್ಷಿಣೆ ಹಾಕುವ ಸೇವೆ ; ಉರುಳುಸೇವೆ : ಅವರು ದೇವರಿಗೆ ದಿಂಡುರುಳು ಸೇವೆಯನ್ನು ಒಪ್ಪಿಸುವ ಹರಕೆ ಹೊತ್ತಿದ್ದಾರೆ (ರೂಢಿ).

[ ದಿಂಡು + ಉರುಳ್$_1$ ]

**ದಿಂಡುರುಳಿಕೆ** (ನಾ). ದೇಹವನ್ನು ಉರುಳಿಸಿ ಪ್ರದಕ್ಷಿಣೆ ಹಾಕುವಿಕೆ : ಒಲ್ಲೆನೆಂದೇಕೆನ್ನುವನು ? ದಿಂಡುರುಳಿಕೆ ಹಾಕುತ್ತಾನೆ ದಿಂಡುರುಳಿಕೆ (ಹುಚ್ಚಾಟ. ೬೨). [ ದಿಂಡುರುಳು (<ದಿಂಡುರುಳ್) + – ಇಕೆ ]

**ದಿಂಡುರುಳಿಚು** 'ದಿಂಡುರುಳ್ಚು' ನೋ.

**ದಿಂಡುರುಳು** 'ದಿಂಡುರುಳ್' ನೋ.

**ದಿಂಡುರುಳ್ಚಿಸು** (ಕ್ರಿ). ಮರದ ಕೊರಡು ಉರುಳುವಂತೆ ಉರುಳಿಸು : ಗಜರಾಜಿಯುಂ ದಿಂಡುರುಳ್ಚಿಸಿ ತೇರ್ಗಳಂ ಛತ್ರ ಚಾಮರಾಳಿಗಳ್ವೆರಸಿ ನಿಟ್ಟೊರಸಿ . . . ಸವಱಿದುದು ಸುಭಟರಂ ಮತ್ತಗಜವು (ಜಿಬಪು. ೨೮-೨೪). [ ದಿಂಡುರುಳ್ಚು + – ಇಸು$_3$ ]

**ದಿಂಡುರುಳ್ಚು**, ದಿಂಡುರುಳಿಚು (ಕ್ರಿ). ೧. ಮರದ ಕೊರಡು ಉರುಳುವಂತೆ ಉರುಳಿಸು: ಮಿಕ್ಕ ಮಿಡಾಱ **ಪೊಕ್ಕಱಿ**ದಟ್ಟಿಯುಂ ಮುಟ್ಟಿ ಮುಱಿದು ಮುಂಡಮಂ ದಿಂಡುರುಳ್ಚಿ ರುಂಡಮಂ ಸೆಂಡಾಡಿ (ರಾಮಾಶ್ವ. ೧೪೪-೧೦). ೨. (ಅಲಂ) ಸೋಲಿಸು ; ಹತೋಟಿಗೆ ತರು : ದಿಂಡುರುಳ್ಚಿದೆವಾಳ್ದಗಿದಿರಾದರಂ ಸುಕೋದಂಡರೂಪಿಂ ಸ್ವಾಮಿಹಿತಕಿನ್ನು ತಮ್ಮೊಳುದ್ದಂಡತೆಯು ಬಿರುದೆತ್ತಿತೆನೆ ಸೋಗೆವಸುರ ಕಬ್ಬಿನ ಕೊಬ್ಬು ಕಣ್ಗೆಸೆದುದು (ಜಿಬಪು. ೧೧-೧೦); ಮೂಜಗವನ್ನೆದೆ ಕುಸುಮಾಸ್ತ್ರದಿಂ ದಿಂಡುರುಳ್ಚುವ ಶಂಬರಾರಿಗಿದಿರಾರೆನಲು (ಜೈಮಿಭಾ. ೨೨-೨೦). **ದಿಂಡುರುಳಿಚು** : ೨. ಕವಿದರು ಕದಳಿಯನು ಮದಕರಿಯು ತೊತ್ತುಳದುಳಿದವೊಲು ದಿಂಡುರುಳಿಚಿದರಗಕೋಟಿಯನು ಶತಮನ್ಯುವಂದದಲಿ (ಕುಮ್ಯಾಭೀ. ೪-೬೩).

[ ದಿಂಡು + ಉರುಳ್ಚು ]

**ದಿಂಡುರ್ಚಿ** (ನಾ). ದಿಟ್ಟೆ ; ಉದ್ಧತೆ (?) : ಕೂಡೆ ಕುಣಿಯುತ್ತುಂ ಬಂದು ಸಲ್ಲನ್ನಮಾಹರಚೇಳಕ್ರಿಯೆ ಭೂಪನಂ ಸುಲಿದುಕೊಂಡರ್ ಪಾಯ್ದು ದಿಂಡು[ಪಾಠಾಂ. ದು]ರ್ಚಿಯರ್ (ಅನಂಪು. ೫-೬). 'ದಂಡುಱುಂಬೆ' ಪರಾ. [ ? ]

**ದಿಂಡುಪಾಯ್** (ಕ್ರಿ). ಪರಾಕ್ರಮದಿಂದ ಮೇಲೆ ನುಗ್ಗು ; ರಭಸದಿಂದ ಮೇಲೆ ಬೀಳು : ಅಲಗನೊಯ್ಯನೆ ಕಿತ್ತಡೆ ಕಂಡು ದಿಂಡುಪಾಯ್ದೆತ್ತಿದ ಹಂದಿಯುಂ ಮುಳಿದು ಕುತ್ತಿದನೊತ್ತಿದನಾ ವನೇಚರಂ (ಸೂಕ್ತಿಸು. ೩-೧೩೨); ವೈರಿಕ್ಷಿತಿಪನ ಭಟರಂ ದಿಂಡುಪಾಯ್ದೆಚ್ಚು ಬೇಗಂ (ದಶಕು. ೭-೭೦) ; ಮುಂಗಾಲ್ಗಳಂ ನೆಗಪಿ ನಿಲ್ವ . . . ದುಂಡಿಪ ದಿಂಡುಪಾ[ಪಾಠಾಂ. ಪಾ]ಯ್ವ ಬವರಿವರಿವ ಚಮ್ಮಟಿಗೆಗೆ ಚಳಿಯದ ಕಡಿಯಾಣಮಂ ಕೈಕೊಳದ ಬಗೆಯಂ ಬಗೆದಂತೆ ಕಂಡು (ರಾಜಶೇ. ೬-೧೧ ವ) ; ಪಿರ್ಬರಿಯೊಳೆ ಸುತ್ತಿ ಪಾಯತಿಕೆಯಿಂ ಮಿಗೆ ನರ್ತಿಪ ದಿಂಡುಪಾಯಲುಪ್ಪರಿಪ . . . ವಾಹಳಿತನಂ ಬಗೆಗೊಂಡುದು ಮಂತ್ರಿಪುತ್ರನಾ (ರಾಜಶೇ. ೧೩-೮೨).

[ ದಿಂಡು + ಪಾಯ್$_1$ ]

**ದಿಂಡುವಿಡಿ** (ಕ್ರಿ). ಗುಂಪುಗೂಡು : "ಎಕ್ಕೆಕ್ಕನೆ ದಿಂಡುವಿಡಿದು ಬಪ್ಪುದು ದಕ್ಕುಂ" (ರನ್ನಕಂ. ೩). [ ದಿಂಡು + ಪಿಡಿ$_1$ ]

**ದಿಂಡೆ$_1$** 'ತಿಟ್ಟು$_3$' ನೋ.

**ದಿಂಡೆ$_2$** (ನಾ). ದುಷ್ಟ ಸ್ವಭಾವದವಳು ; ಉದ್ಧತೆ ದಿಂಡೇರಿಗುಂಟು ಜಗಭಂಡರಿಗುಂಟು ಅಂಡಲೆವರಿಗಿಲ್ಲವೀ ಕಾಲ (ಪುರಂದ. ೧-೧೨೦-೧) ; ಮತೊತ್ತಮ[ವೆ]ರ್ದ ದಿಂಡೆಯರತಿಹಾಸ್ಯದಿಂದಲಿ ಮುತ್ತೈದೆ ಮುಂಡೆಯಾದಳು ಕೇಳು ರಾಯ(ಮೋಳಿಪು. ೪-೨೨); ಗಂಡನೊಲುಮೆಗು ಸುತರಹಡೆಯಲು ಬಂದು ಭೂತಾಹುತಿಗೆ ಪೇಸದ ದಿಂಡೆಯರ ಚರ್ಯವನು ತಿಳಿಯದರಾರು(ಜಿರಾಮಾ. ೩೪೮-೪೪) ; ನಿಮಗೆಲ್ಲ. . .ಕುತ್ತಿಗೆ ಅವುಚಿ ಹಿಡಿಯಬೇಕಿತ್ತು . . . ಅವನು ಹೇಳೋದೂ ಹೀಗೆ. ನೀನೂ ಸೊಕ್ಕಿದ ದಿಂಡೆ, ಹೀಗೆಯೇ ಹೇಳುವಿಯಲ್ಲ ! (ಜೀವಮ. ೬೫) ; ಎನ್ನನು ಗುದ್ದಿ ನಡೆದಳಾ ದಿಂಡೆ ಕಡು ಮುಳಿದು ಮುನಿದು (ಪಲಾನ. ೪೯-೮) ; ಗಂಡನ ಮನೆಯವರು ನುಡಿದರೆ ಮರುನುಡಿಯಬಾರದು ದಿಂಡೆ ಎಂದೆನಿಸಿಕೊಳ್ಳಲೇಬಾರದು (ನಂಬಿನಾ. ೧೧).

[ ದಿಂಡ$_4$ + – ಎ$_2$ ]

**ದಿಂಡೆ$_3$** (ನಾ). ೧. ದುಷ್ಟ ; ಉದ್ಧತ : ಈ ಹುಡುಗನು ಬಾಲ್ಯದಿಂದಲೂ . . . ಓದುಬರಹದಲ್ಲಿ ಇಷ್ಟವಿಲ್ಲದೆ ದಿಂಡೆಯಾಗಿ ತಿರುಗುತ್ತಿದ್ದನು (ನೀತಿಚಿಂ. II, ೧೧); ಅದಕ್ಕೇನು ಧಾಡಿ ? ದಿಂಡೆ ದುಣ್ಣ ದಾಂಡಿಗ ನಾಯಿ! (ಮುಳಿಮ. ೭೨೫) ; ದುಷ್ಟರಾಗಿದ್ದ ಕೆಲವು ಪಾಳಯಗಾರರು . . . ಹೆಂಗಸರಿಗೆ ಅನೇಕ ಅವಮಾನಗಳನ್ನು ಮಾಡುತ್ತಾ ದಿಂಡೆಯಾಗಿದ್ದ ಕಾರಣ ಪಾಳಯಗಾರ ಎಂಬ ಶಬ್ದವು ದುಷ್ಟನಾದ ಪ್ರಮುಖ ಎಂಬುದಾಗಿ ಪ್ರಯೋಗಿಸುವಷ್ಟು ನೀಚವಾದ ರೂಢಿಯನ್ನು ಸಹಾ ಒಳಗೊಂಡಿದೆ (ಪಾಳಗಾ. ೩). ೨. ದಡಿಯ ; ದಾಂಡಿಗ. 'ದಿಂಡೆಗ' ಪರಾ.

**ದಿಂಡೆಯ ಮತ** = ೧. ದುಷ್ಟನ ಮತ ; ಉದ್ಧತನ ಅಭಿಪ್ರಾಯ. ೨.ಲೌಕಿಕವಾದ; ಚಾರ್ವಾಕಮತ : ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿಯಾದೆವೆಂಬ ದಿಂಡೆಯ ಮತದ [ಪಾಠಾಂ. ಮಾತಿನ] ಹಿರಿಯರುಗಳೆಲ್ಲ ಕೇಳಿರೋ (ಮೋಳಿಮಾ. ೬೨-೨೫೫). [ ದೇ.॥ತುಳು. ದಿಂಡೆ ]

**ದಿಂಡೆ$_4$** (ನಾ). (?) : ಒಂದು ಶಿಲೆಯೊಡೆದು ಮೂಱಾದ ಭೇದವ ನೋಡಾ ಒಂದು ಶಿಲೆ ಶೂಲ ಕಪಾಲ ದಿಂಡೆ ಡಮರುಗ ರುಂಡಮಾಲೆ ಐದು ತಲೆ ತಲೆಯೊಳಗೊಬ್ಬಳು ತೊಡೆಯೊಳಗೊಬ್ಬಳು ಇಂತೀ ಕಡುಗಲಿಯ ದೇವನೆಂದೆಂಬರು ನೋಡಾ (ಮೋಳಿಮಾ. ೧೧೫-೪೫೨) ; ಬೇಡುವ ಭಂಡನ ಕೊಡದೆ ಹೋರುವ ಲಂಡನ ಉಭಯದ ದ್ರವ್ಯವ ತಂದು ಅಲ್ಲಿ ಉಂಡು ಸುಖಿಯಾದೆಹೆನೆಂಬ ಉಭಯಭಂಡನ ದಿಂಡೆ ಕೆಡೆಯದು (ಸರ್ವವ. ೭೮-೪೩೧). [ ? ]

**ದಿಂಡೆಗ** (ನಾ). ದಡಿಯ ; ದಾಂಡಿಗ : ಗಂಡನಾ ಕೈ ಬಾಯ ಮಂತ್ರಿಸಿ ದಿಂಡೆಗರು ಕಟ್ಟಿದರು ಬಳಿಕೀ ಗಂಡನೇ ಗಂಡನೊಯೆನುತ ಮತ್ತೊಂದ ನೆಣಸಿದಳು (ಸಾಳ್ವಭಾ. ೫-೫೨). [ ದಿಂಡೆ$_3$ + – ಗ$_2$ ]

**ದಿಂಡೆಗಾರ** 'ದಿಂಡೆಗಾಱ' ನೋ.

**ದಿಂಡೆಗಾಱ,** ದಿಂಡೆಗಾರ (ನಾ). ದಂಷ್ಟ ; ಉದ್ಧತ : ಕಂಡ ಕಲ್ಲುಗಳಿಗೆ ಕೈಮುಗಿದು ಸಾಕಾದೆ ದಿಂಡೆಗಾಱರ ಮನೆಗೆ ಬಲು ತಿರುಗಿದೆ ಶುಂಡಾಲ ನಂತೆನ್ನ ಮತಿ ಮಂದವಾಯಿತ್ತೆ (ಪುರಂದ. ೧-೩೫-೧). **ದಿಂಡೆಗಾರ :** ತುಂಟ, ಪೋರ . . . ದಿಂಡೆಯ, ದಿಂಡೆಗಾರ . . . ಕೂಳ, ಗೂಳಿ (ಕಂನುಹು. ೮೫). [ ದಿಂಡ$_3$ + – ಕಾಱ ]

**ದಿಂಡೆತನ** (ನಾ). "ತುಂಟಾಟ ; ಪೋಕರಿತನ" (ಪ್ರಭಣ).
[ ದಿಂಡ$_3$ + – ತನ ]

**ದಿಂಡೆಬಸವಿ** (ನಾ). ದಂಷ್ಟೆ ; ಗಯ್ಯಾಳಿ : ಮನೇಲ್ಲಿರೋ ದಿಂಡೆಬಸವೀನೆ ಮನೇ ಅಡಕೇನೆಲ್ಲ ಕದ್ದು ಸಾಬರಿಗೆ ಕೊಟ್ಟು ಕೊಬ್ರಿ ಬೆಲ್ಲ ತಿಂತಾ ಕೂತ್ರೇ ಆ ಅರಿಯದ ಹುಡುಗನಿಗೆ ಯಾಕೆ ಸುಮ್ಮನೆ ಹೊಡೀತೀಯಾ ? (ಮಲೆಮ. ೪೯೯). [ ದಿಂಡ$_2$ + ಬಸವಿ ]

**ದಿಂಡೆಯ,** ದಿಂಡಿಯ (ನಾ). ೧. ದಂಷ್ಟ ; ದಂಗುಳ ; ಉದ್ಧತ : ಮಂಡಲವದಿಲ್ಲವಾ ಮಂಡಲೇಶ್ವರರಿಲ್ಲ . . . ಕೊಂಡೆಯರುಮಿಲ್ಲ ದಿಂಡೆಯರುಮಿಲ್ಲ (ಸಾನಂಜ. ೫-೨೩) ; ಕೊಂಡೆಯನ ದಿಂಡೆಯನ ಲಂಡನಂ ಬಂಡನಂ ವಿಷಯಿಯಂ . . . ತಾಮಸದೇಹಿಯಂ (ಸಿದ್ಧೇಪು ೬-೯೮) ; ಆ ದುರುಳರು ಖುಲ್ಲ ದಿಂಡೆಯರಿಂದೆಬಿನನವಂ ಮಾಡಿಸಿದೊಡಲ್ಲಿ ವೃಷಭೇಶ್ವರಂ ಪ್ರತ್ಯಕ್ಷಮಾಗೆ (ರಾಭಸ. ೧೯-೬೮) ; ದಿಂಡೆಯನಿವಂ ನಮ್ಮ ಶಿಷ್ಯರ ತಂಡದೊಳಗಿರಬೇಡವೆನುತಂ ಪೊಱಮಡಿಸಿದನವನ (ಶಂಕದಾ. ೧೩-೬೬); ಭಂಡಗಳ ನುಡಿಯುಂಬ ದಿಂಡೆಯನ ಹಿಡಿತಂದು ಖಂಡಿಸಿರಿ (ಸರ್ವಜ್ಞ. ೧೨೫೦). ೨. ಸ್ಥೂಲದೇಹಿ ; ದಡಿಯ ; ದಡಿಗ : ಆ ಗುಹಾಸುರ ದಿಂಡೆಯನ ಕಡೆಯಿಱಿದು ಶೂಲಿಯ ಮಂಡನವ ಕೈಕೊಂಡು ಕೊಂದನು ಕೋಟಿಶಾಸ್ತ್ಯಜನ (ಸಂಭಪ. ೨೬-೧೨೯). ೩. ಶೂರ ; ಪರಾಕ್ರಮಿ : ಮಂಡಳಿಕ ರುದ್ದಂಡನಾಯಕರು ಸಾಮಂತ ದಿಂಡೆಯರು ಅಧಿಕಾರಿ ಸಜ್ಜನರು ರಾಯರುಂ (ಸಿದ್ಧರಾ. ೮-೬೧) ; ದಿಂಡೆಯಂ ಪಲವಂಗದಿಂ ದೆನ್ನಸುವ ಕೊಂಡಲ್ಲದಿರನೆಂದು ನಿರ್ಧರಿಸಿ ವಿಜಯಕೋದಂಡಮಂ ದನಿಮಾಡುತಿದಿರಾಗಿ ನುಡಿಸಿದಂ ಮಧುರವಚನಂಗಳಿಂದೆ (ಚಬಪು. ೩೯-೩೯) ; ಅರುವತ್ತು ಸಾವಿರ ಮಹಾದಿಂಡೆಯರು ಜನಿಸಲಿ ವಿದರ್ಭೆಗಂ (ತುರಂಗ. ೩೦-೩೩). ೪. ಸೇವಕ ; ಆಳು; ಊಳಿಗದವನು: ನಿನ್ನ ಚಮ್ಮಾವುಗೆಯ ಹೊತ್ತು ಬರುವ ಬೋವರ ಲೆಂಕನಯ್ಯ ನಿನ್ನ ಪಡುಗವ ಹಿಡಿವ ದಿಂಡೆಯಯ್ಯ (ಘನವ. ೮-೫); ☞ ಇದಂ 'ದಿಂಡೆಯನಯ್ಯ' ಎಂಬುದರ ಅಪಲಿಖಿತ ವಿರಬಹುದು. **ದಿಂಡಿಯ :** ೩. ಸಂದ ಜಗಳ ಕಾಳಗದಂತೆ ಕಯಿ ಮುಟಿ ಕೊಂಡಾಡುವರು ದಿಂಡಿಯರು (ತರ್ಕಕಾ. ೧-೯೭).
[ ದಿಂಡ$_3$ + –ಅ$_7$ ]

**ದಿಂಡೆಯತನ** (ನಾ). ೧. ಗರ್ವ ; ಸೊಕ್ಕು ; ಉದ್ಧಟತನ : ಹಾಗಲ್ಲದೆ ದಿಂಡೆಯತನದಿಂದ ಹೋರಿ ಮಕ್ಕಳಿಗೆ ಸಂದೇಹತನವ ಕಟ್ಟಬಹುದೆ (ಏಲೇಶ್ವ. ೭೧) ; ದಿಂಡೆಯತನದೊಳಾಡಿ ಹೋಗಿ ನಾಣ್ಚಿದೆ ಸಿರಿಯ ಗಂಡ ಗರ್ವವನುಡುಗು ನಮ್ಮೊಳೆಂದೆನೆ (ವೀಶೈಪು. ೬-೦-೨೩) ; ಭೂತಹಿತರೆನಿಸಿ ಬಂದಿವರ ದಿಂಡೆಯತನಂಗಳಂ ನೋಡಲನುಚಿತವೆಂದು ಮುನ್ನಿರ್ದ ನಿಜರೂಪಿನಿಂ ಮಂಡಿಸಿ ದಯಾಲೋಕನದಿ ನೋಡೆ (ಗುರುಚಾ. ೩-೫) : ದಿಂಡೆಯತನಂ ಮಿಕ್ಕು ನಮ್ಮವರ್ಗಂ ತೊಲಗದಂಡಲೆದು ಕೊರಚಾಡು ಪರ್ಗಡಾ ತಮ್ಮ ಗುರು ಪಂಡಿತನೆನುತ್ತೆ ಬರಿದಬ್ಬರಿಸಿ ಪೇಳುವರ್ನಿರ್ಬುದ್ಧಿ ಶೂದ್ರರೊಡನೆ (ಕೊಟ್ಟೂಬ. ೩-೯). ೨. ಶೌರ್ಯ ; ಪರಾಕ್ರಮ ; ದಿಟ್ಟತನ : ನಸೆಮಾಡಿ ಹಾದರಕೆ ಹೊಕ್ಕು ಜಾರತ್ವದೊಂದೆಸಕದಿಂ ಬಾಳ್ದು ದಿಂಡೆಯತನದೆ ಕೆಲವು ರಕ್ಕಸರನುಱೆ ಕೊಂದು (ಚಬಪು. ೫೨-೩೦).
[ ದಿಂಡೆಯ + – ತನ ]

**ದಿಂಡೆವೆಣ್** (ನಾ). ೧. ಉದ್ಧತಳಾದ ಹೆಣ್ಣು. ೨. (ಆಲಂ) ಏರುಂಜವ್ವನೆ : ದುಂಡುಮಲ್ಲಿಗೆ ಮುಂಡಿದು ಕೊಳಲನೂದಿ ಪಾಡುತ ದಿಂಡೆವೆಂಗಳ [ಪಾಠಾಂ. ಹಿಂಡುವೆಣ್ಗಳ] ಮುದ್ದುಮುಖದ ಸೊಬಗ ನೋಡುತ ಭಂಡು ಮಾಡಿ ಬಾಲೆಯರೊಡನೆ ಸರಸವಾಡುತ (ಪುರಂದ. ೨-೮೨-೧). [ ದಿಂಡ$_2$ + ಪೆಣ್ ]

**ದಿಂಡೋಡಿಗ** (ನಾ). ಬಿದ್ದು ಓಡುವವನು ; ಹೇಡಿ (?) : ಬೋಡದಲೆ ಬರಿಗೈಯ ಮಲಿನವ ಗೂಡಿಸಿದ ನಿಜವಸನವೀ ದಿಂಡೋಡಿಗನೆ ನೀನಾರು ಯಿಾ ಚೆಲ್ವಿಕೆಯನೇನಿಂತು ಮಾಡಿಕೊಂಡ್ಯೆ (ಜಿನಭಾ. ೫೭-೫೯).
[ ದಿಂಡು + ಓಡಿಗ ]

**ದಿಂಪ** (ನಾ). (ಕರಾ) ಏತದಲ್ಲಿ ನೀರನ್ನು ಮೇಲಕ್ಕೆತ್ತುವಾಗ ನೆಲಕ್ಕೆ ತಾಗುವ ಭಾಗ: ದಿಂಪದ ಕೆಳಗೆ ನಿಲ್ಲಬೇಡ ತಮ್ಮ, ದಿಂಪದ ಕಲ್ಲು ಹರಿದು ಬಿದ್ದೀತು (ರೂಢಿ). [ ? ]

**ದಿಂಬ$_1$** 'ದಿಬ್ಬ$_1$' ನೋ.

**ದಿಂಬ$_2$** (ನಾ). ಒಂದು ಜಾತಿ,–ಪಂಗಡ (?) : ದಿಂಬರ ಸೋಮಕ ಗಉಂಡನ ಮಕ್ಕಳು ರಾಮಗಉಂಡ ಮಂಚೆಗಉಂಡ . . . ಯಿಂತೀ ಅನಿಬರು (ಎಕ. III, ಮಳವ. ೭೦–೭ ; 1158 ?). [ ? ]

**ದಿಂಬು$_1$** 'ದಿಬ್ಬ$_1$' ನೋ.

**ದಿಂಬು$_2$** (ನಾ). ೧. (ಬೆನ್ನು, ತಲೆಗಳಿಗೆ) ಆಸರೆಯಾಗಿ ಇಟ್ಟುಕೊಳ್ಳುವ ಒರಗು,–ಮೆತ್ತೆ : ಒರಗಿ ದಿಂಬಿನ ಮೇಲೆ ದಕ್ಷಿಣಕರವ ಮೊಣಕಾಲಿನೊಳು ನಿಡಿದಾಗಿರಿಸಿ (ಜಿನಭಾ. ೨೭-೩೫); ಅಲ್ಲಿ ಬಹು ಬೆಲೆಯ ರತ್ನಗಂಬಳಿಗಳಾಗಲಿ ರೇಷ್ಮೆ ದಿಂಬುಗಳಾಗಲಿ ಇರಲಿಲ್ಲ (ನಗೆಹೊ. ೧೦೭) ; ಅದರ ಇಕ್ಕಡೆಗಳಲ್ಲೂ ದಿಂಬುಗಳು ಇಡಲ್ಪಟ್ಟಿದ್ದವು (ಬಾಅಳ. ೩೯); ಅಂಗಡಿಯಲ್ಲಿ ದಿಂಬಿಗೊರಗಿ ಕುಳಿತಿದ್ದ ನಿರ್ಮಲಸೆಟ್ಟಿಗೆ ಅದರ ಅರಿವಿದ್ದ ಹಾಗಿರಲಿಲ್ಲ (ಗಿರಿನ. ೧೧). ೨. (ಆಲಂ) ಆಧಾರ ; ಆಸರೆ : ಹೀಗೆ ನಂಬಿಗೆಯನ್ನೆ ದಿಂಬು ಮಾಡಿಕೊಂಡು ವ್ಯವಹಾರವು ಬಿದ್ದುಕೊಂಡಿದ್ದರೆ ಆ ಮಾತು ಬೇರೆ (ವೃದ್ಧರಾ. ೭ ಮುನ್ನುಡಿ). 'ತಲೆದಿಂಬು' ಪರಾ. [ <ಇಂಬು$_1$ ]

**ದಿಕಾಮಲಿ** 'ಡಿಕಮಲಿ' ನೋ.

**ದಿಕ್ಕ** (ನಾ). ಹೊಲೆಯರಲ್ಲಿ ಒಂದು ಒಳಪಂಗಡ : ಭೈರ, ದಿಕ್ಕ – ಎಂದು ಹಲವಾರು ಒಳಪಂಗಡಗಳ ಹೊಲೆಯರು ಬೆಂಗೂರಲ್ಲಿ ಇದ್ದಾರೆ (ದಂಬಸಾ. ೧೯) : ದಟ್ಟ ದಿಕ್ಕಾ! ಮಾರಿ ಮುಂಡಾಳ! ಹುಟ್ಟು ಹೊಲೆಯಾ! ಪೋಲಾ ! ಚಂಡ ಚಂಡಾಳ (ಕಎಪು. ೫೭). [ ದೇ.॥ ತುಳು. ದಿಕ್ಕ ]

**ದಿಕ್ಕಟ** (ನಾ). [ಸಂಗೀತ] ತಾಳವನ್ನು ಸೂಚಿಸುವ ಒಂದು ಅನುಕರಣ ಶಬ್ದ : ಝಿಂ ಝಿಂ ಖಿಟ್ಟಟ ನಟ ಖಿಟ್ಟೆನುತಂ ತಂದ್ರುಂ ದಿಕ್ಕಟ ದಿಕ್ಕಟ ಮೆನುತಂ (ತಿರುನಾ. ದೇ. ೨೨೨-೧೧).

**ದಿಕ್ಕನೆ** (ಅ). ಒಂದು ಅನುಕರಣಾವ್ಯಯ ; ಇದ್ದಕ್ಕಿದ್ದಂತೆ ; ಕೂಡಲೆ: ಆ ನಾಯಕಿಯಿರ್ದವರೆ ಕಾಣುತ ದಿಕ್ಕನೆ ದಿಟ್ಟದೆಱೆದೆನುತಂ ಹುಸಿದ ಳದೊರ್ವಳ್ ಚದುರೆ (ಜಯುಕಾ. ೧೪-೬೦) ; ಅಕ್ಕ ನಾಗಲೆಯರು ಚಿಕ್ಕ ದಣಾಯಕರು ದಿಕ್ಕನೆ ಬಂದು (ಕೋಡಚ. ೨-೪೫). [ ದಿಕ್$_0$ + – ಅನೆ$_1$ ]

**ದಿಕ್ಕರಿ** (ನಾ). ೧. ಎಂಟು ದಿಕ್ಕುಗಳಲ್ಲಿಯೂ ಭೂಮಿಯನ್ನು ಹೊತ್ತಿರುವುದೆಂದು ನಂಬಲಾದ ಐರಾವತವೇ ಮೊದಲಾದ ಎಂಟು ಆನೆಗಳಲ್ಲಿ ಒಂದು ; ದಿಗ್ಗಜ : ದಿಕ್ಕರಿವೋಲ್ ಕೃಷ್ಣಂ ಮುಱಿದಿಕ್ಕಿ ನೆಲಕ್ಕುರ್ದು ಬಿರ್ದು ಕಂಸಂ ಮಣ್ಣಂ ಮುಕ್ಕಿದಪನೆಂದು ಪೇೞ್ದು ಪಳಕ್ಕುಮೆಂ (ಅರ್ಧನೇ. ೭-೩೯) : ದಿಕ್ಕರಿ ಕರ್ಣಕೋಟರದೊಳುಕ್ಕಿ . . . ಮಿಕ್ಕ ಜಗತ್ತ್ರದೇಶಮಂ ಮುಕ್ಕಳಿಸಿತ್ತು (ಚಂದ್ರಪು. ೧೧-೨): ಬಂಧಿಸಿ ಧರೆಯ ದಿಕ್ಪಾಲಕರ ದಿಕ್ಕರಿಯ ಸುತ್ತುಮುತ್ತಿನಲಿರಿಸಿ (ಗಗತಾ. ೫-೨೨). ೨. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ. [ ಸಂ. ದಿಕ್ಕರಿನ್ ]

**ದಿಕ್ಕರಿಕರ** (ನಾ). ದಿಕ್ಕಿನ ಆನೆಯ ಅಥವಾ ದಿಗ್ಗಜದ ಸೊಂಡಿಲು : ಅಂತು ದಿಕ್ಕರಿಕರಾನುಕಾರಿಗಳಪ್ಪ ನಿಜಭುಜಸ್ತಂಭಂಗಳಿಂ ಕುರುಕುಲ ಮಹೀಶನ ಕದಳೀಸ್ತಂಭಂಗಳನನುಕರಿಸುವ ತೊಡೆಗಳನುಡಿದು . . . ಕುರುಕುಲಾಂತಕಂ ಮಾಮಸಕಂ ಮಸಗಿ (ಗದಾಯು. ೮-೩೭ ವ) ; ಆಗಳತಿ ಭಕ್ತಿಯಿಂದೆಱಗುವಂತೆಱಗುವಿಭಪತಿಯ ಮೇಗಣ್ಗೆ ದಿಕ್ಕರಿಕರಾನುಕಾರಿ ನಿಜಭುಜಾದಂಡಂಗಳಂ ನೀಡಿ ಶಚೀದೇವಿಯಿಂ ತೆಗೆದು . . . ಎತ್ತಿ ಕೊಂಡು (ಪುಷ್ಪಪು. ೧೦-೧೯ ವ). [ ದಿಕ್ಕರಿ + ಕರ್ಕ ]

**ದಿಕ್ಕರಿನಿಚಯ** (ನಾ). ಐರಾವತವೇ ಮೊದಲಾದ ಎಂಟು ಆನೆಗಳು ; ದಿಗ್ಗಜಗಳ ಗುಂಪು,-ಸಮೂಹ : ದಿಕ್ಕರಿನಿಚಯಂ ಬೆರ್ಚಲ್ . . . ದಿವಿಜರ ಕಿವಿಯಂ ಜಕ್ಕುಲಿಸಿ ನೆಗೆದು ಭುವನಮನೊಕ್ಕಲಿಸಿದುದಾ ಗಭೀರ ಭೇರೀನಾದಂ (ನೇಮಿಪು. ೧೧-೮೪) [ ದಿಕ್ಕರಿ + ನಿಚಯ ]

**ದಿಕ್ಕಾಪಾಲು** 'ದಿಕ್ಕು' ಪರಾ.

**ದಿಕ್ಕಾಮಲ್ಲಿ** 'ಡಿಕಮಲಿ' ನೋ.

**ದಿಕ್ಕಾಲಬದ್ಧ** (ಗು). ದೇಶಕಾಲಗಳಿಗೆ ಪರಿಮಿತವಾದ,-ಬದ್ಧವಾದ : ಈ ಶಬ್ದಸೃಷ್ಟಿಯ ಹೊರಮೈಯು ದಿಕ್ಕಾಲಬದ್ಧಸ್ವರೂಪದ್ದೆನಿಸಿದರೂ, ಅದರ ಅಂತಸ್ಥ ಅರ್ಥವು ದಿಕ್ಕಾಲಗಳ ಪರಿಮಿತಿಯನ್ನು ಮೀರಿ ನಿಲ್ಲಬಲ್ಲು ದಾಗಿದೆ (ಕರ್ಣಾಟ. ೯) ; ಸಂಸ್ಕೃತಿಯ ಪರಿಣತಗಳ ಸಮೀಕ್ಷೆಯಲ್ಲಿ, ದಿಕ್ಕಾಲ ಬದ್ಧ ಪರಿಸ್ಥಿತಿಯಲ್ಲಿ ಕಾಣಿಸಿಕೊಂಡ ಯಾವ ನಡೆವಳಿ ನುಡಿವಳಿಯೂ ತಿರಸ್ಕಾರಾರ್ಹವಲ್ಲ (ಕರ್ಣಾಟ. ೨೦೫). [ ಸಂ. ]

**ದಿಕ್ಕಾಲಾತೀತ** (ಗು). ೧. ದೇಶ ಕಾಲಗಳ ಪರಿಮಿತಿಯನ್ನು ಮೀರಿದ : ಚಿತ್ತೈಕಾಗ್ರದ ಸಾಧನದಿಂದ ದಿಕ್ಕಾಲಾತೀತ ಅಖಂಡಿತ ಸನಾತನ ಸತ್ವದಲ್ಲಿ ವಿಲೀನವಾಗುವ ದಾರಿ (ಕರ್ಣಾಟ. ೩೮). (ನಾ). ೨. ದೇವರು ; ಪರಮಾತ್ಮ. [ ಸಂ. ]

**ದಿಕ್ಕು** (ನಾ). ೧. ದಿಸೆ; ದೆಸೆ: "ದೆಸೆಗೋಂಟೆನಲ್ ದಿಕ್ಕಕ್ಕು" (ಅಬ್ಬಿಕ್ಕ. ೧೫); "ಗೋಂಟು ದೆಸೆ ದಿಕ್ಕೆಂಬುದಕ್ಕು ದಿಶಾನಾಮದೊಳ್ ಸಂತತಂ" (ಶಬ್ದಮಂ. ೧೪) ; ದಿಕ್ಕನಿತುಂ ತೋಱುದುವು (ಕಾವ್ಯಾವ. ೧೯೫) ; ದಿಕ್ಕಿನೊಳಂ ವಿಯತ್ತಲದೊಳಂ ಗಿಡಿದಂತಿರೆ ನಿಂದ ದೇವಲೋಕಕ್ಕತಿವಿಸ್ಮಯಂ ನೆಗೞೆ (ಅನಂಪು. ೫-೨೭) : ಇಂಬಿನ ರವವೆಂಟುದಿಕ್ಕಿನ ಹೊರಿಗೆಯು ಮುಂಬರಿ ದೊಡನೆ ಪರಿದುದು (ಕಂನವಿ. ೧೦-೨೪). ೨. ಗತಿ ; ಆಶ್ರಯ ; ನೆಲೆ ; ಆಧಾರ : ಅವ ಪರಿಯಲಿ ನಿನ್ನನಲ್ಲದೆ ಭಾವದೊಳು ಮತ್ತೊಂದನಱಿ ಯೆನು ದೇವ ದಿಕ್ಕಾರುಂಟೆನಗೆ (ಬಸಪು. ೧೩-೫) ; ಗತಸೂನುವಿವನೆಂದೆನ್ನ ಹೊಗಿಸರು ಸ್ವರ್ಗವನು ಸುರರು ಏನು ಮಾಡುವೆನೇನು ದಿಕ್ಕೆನಗೇನು ಹದನೆಂದಳಲಿ (ತೊರರಾ. ೧-೪-೪) ; ಇನ್ನು ಮುಂದೆ ಮಾವಯ್ಯನೇ ನಿನಗೆ ದಿಕ್ಕು (ಹೊಸಕ್ಕ. ೨೭). ೩. ದೇಶ ; ಸೀಮೆ ; ನಾಡು: ದಿಕ್ಕುಗಳೆಲ್ಲಮಂ ನೆಱೆಯೆ ಸಾಧಿಸಿ ಕಪ್ಪಮನೆಯ್ದೆ ಕೊಂಬೆನು (ಬಾಧಪು. ೨-೧೭). ೪. ದಾರಿ ; ಮಾರ್ಗ : ಅವನಿಗೆ ಗಾಬರಿಯಿಂದ ದಿಕ್ಕೇ ಕಾಣದಾಗಿದೆ (ರೂಢಿ). ೫. [ಜೈನ] ಪೃಥ್ವಿ, ಜಲ, ತೇಜಸ್ಸು, ವಾಯು, ಮನಸ್ಸು ಮತ್ತು ದಿಕ್ಕುಗಳೆಂಬ ಆರು ದ್ರವ್ಯಗಳಲ್ಲಿ ಒಂದು : ಪೃಥ್ವಿ ಜಲ ತೇಜಸ್ಸು ವಾಯು ಮನಸ್ಸು ಎಂಬ ಐದು ದ್ರವ್ಯಗಳು ಪುದ್ಗಲ ದಲ್ಲಿ ಸೇರಿದುವು, ದಿಕ್ಕು ಎಂಬುದು ಸೂರ್ಯನ ಉದಯಾಸ್ತಗಳಿಂದ ಆಕಾಶದಲ್ಲೇ ಸೇರಿತು (ಹಿಂದಸಾ. ೮೦). ೬. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : "ಅಷ್ಟ, ವಸು, ದಂತಿ, ದುರಿತ, ಕರ್ಮ, ದಿಸೆ, ದಿಕ್ಕು . . . ದಿಗ್ದಂತಿ ಇಂತಿನಿತುಂ ಲೆಕ್ಕೆ ಪೆಸರು" (ವ್ಯವಹಾ. ೧೦-೩೦).

**ದಿಕ್ಕು ದಿಕ್ಕು** = (ದ್ವಿರುಕ್ತಿ) : ವಾರುವಗಳಿಗೆ ಹೊಯ್ದುವು ಗುಡಿಗಳು ಮದವಾರಣಗಳಿಗೆ ಗುಡಿಗಳು ಓರಣದಿಂದೆತ್ತಿದವು ದಿಕ್ಕುದಿಕ್ಕಿನೊಳು (ಕುರಾಸಾಂ. ೧೯-೫೧). **ದಿಕ್ಕ ಮುರಿ**=ದಿಕ್ಕಾಪಾಲಾಗು: ಶತ್ರುಗಳು ದುರ್ಗ ದವರ ಏಟನ್ನು ತಡೆಯಲಾರದೆ ದಿಕ್ಕ ಮುರಿದು ಓಡಿದರು (ಚಿತ್ರಪಾ. ೫೩). **ದಿಕ್ಕಾಗು** = ನೆರವಾಗು ; ಆಶ್ರಯವಾಗು : ಅಕ್ಕರವ ತೊಡೆದಿಹುದು ಮುಕ್ಕಣ್ಣಗಳವಲ್ಲ ರಕ್ಕಸನು ಸೀತೆ ಒಯ್ವಾಗ ಆರಾರು ದಿಕ್ಕಾಗಲಿಲ್ಲ (ಸರ್ವಜ್ಞ. ೮೫೩) ; ತೀರ್ಥಹಳ್ಳಿಯೊಳೋದುವಂದವರೆಲ್ಲರು ನೆರವಿತ್ತರೆನಗೆ ದಿಕ್ಕಾಗಿ (ಇಂಜಾಪ. ೧೫-೩೫). **ದಿಕ್ಕಾಪಾಲಾಗು** = ದಿಕ್ಕು ದಿಕ್ಕಿಗೆ ಚೆದರು; ಚೆಲ್ಲಾಪಿಲ್ಲಿಯಾಗು : ಬಿರುಗಾಳಿಗೆ ಸಿಕ್ಕ ಹಡಗುಗಳು ದಿಕ್ಕಾಪಾಲಾದುವು (ಪ್ರವಾಇ. II, ೨೨೭) ; ಖಂಡೇರಾಯನ ಸೈನ್ಯವೆಲ್ಲವೂ ಈ ರೀತಿಯಲ್ಲಿ ದಿಕ್ಕಾಪಾಲಾಯಿತು (ಒಡಕ. ೯೪); ಕಳ್ಳರೆಲ್ಲರೂ ದಿಕ್ಕಾಪಾಲಾಗಿ ಪಲಾಯನ ಮಾಡಿದರು (ಚಾರವೀ. ೩). **ದಿಕ್ಕಾಪಾಲು** = ದಿಕ್ಕು ದಿಕ್ಕಿಗೆ ಚೆದರುವಿಕೆ ; ಚೆಲ್ಲಾಪಿಲ್ಲಿ : ಅಂಗಳದ ಬೆಳೆಸಿದ್ದ . . . ಕರಿತುಳಸಿ ಬಳಿನಿತ್ಯಪುಷ್ಪ ಎಲ್ಲ ದಿಕ್ಕಾಪಾಲು (ನವ್ಯಧ್ವ. ೭-೧). **ದಿಕ್ಕಾಮುಕ್ಕು** = ದಿಕ್ಕಾಪಾಲು : ಕಕ್ಕಾಬಿಕ್ಕಿ ಜಗಳದ ಸೊಕ್ಕು ಜಗಳವು ದಿಕ್ಕಾಮುಕ್ಕು (ಡಂಡೋಲಿ. ೧೪). **ದಿಕ್ಕು ತೋಚು** = ದಾರಿಕಾಣು ; ಉಪಾಯಗಾಣು : ಊಟ ಮಾಡುತ್ತಿದ್ದ ರಾಜನು ದಿಕ್ಕುತೋಚದೆ ಹೆಂಡತಿಯ ಸಹಾಯದಿಂದ ಕಿಟಕಿಯ ಮೂಲಕ ತಪ್ಪಿಸಿಕೊಂಡು ಹೋದನು (ಬಂಕಿಮ. ೧೮೩). **ದಿಕ್ಕುದಿವಾಣಿ, ದಿಕ್ಕು ದಿವಾನಿ, ದಿಕ್ಕುದಿವಾಳಿ** = ೧. (ಪ್ರಯಾಣದ) ಗುರಿ : ಆಯಾಸದಿಂದ ಕಾಲುಗಳನ್ನು ಎಳೆಯುತ್ತ ನಡೆಯುತ್ತಿದ್ದ ಪ್ರಾಣೇಶಾಚಾರ್ಯರಿಗೆ ಬಹಳ ಹೊತ್ತು ತನ್ನ ದಿಕ್ಕುದಿವಾಣಿ ಲಕ್ಷ್ಯಕ್ಕೇ ಬರಲಿಲ್ಲ (ಸಂಸ್ಕಾರ. ೯೫). ೨. ಆಶ್ರಯ; ನೆಲೆ : ದಿಕ್ಕುದಿವಾಳಿಯಿಲ್ಲದ ಗೊಂದಲದಲ್ಲಿ ಸ್ವಾಮಿನಾಥ ಬದುಕಿದ್ದೇ ಹೆಚ್ಚು (ಸ್ವಾಮಿಮಿಸ್ಟೆ. ೦೨೦) ; ದಿಕ್ಕುದಿವಾಳಿಯಿಲ್ಲದ ಭಿಕಾರಿ ಗಳನ್ನು ಹಿಡಿದು ಗುಲಾಮರನ್ನಾಗಿ ಮಾಡುತ್ತಾನೆ (ಪ್ರವಾಇ. II, ೪೦೪): ೩. ದಾರಿ ; ಮಾರ್ಗ : ಕಾಶಿಯ ದಿಕ್ಕುದಿವಾನಿ ತಿಳಿದು ಪ್ರಯಾಣ ಬೆಳೆಸಿದರು (ಕರುಕ. ೪೪). **ದಿಕ್ಕು ದೆಸೆ** = ೧. ಆಸರೆ; ನೆಲೆ; ಆಧಾರ. ಮಿಕ್ಕಾದವರ ಹೆಣ್ಣು ಹೊನ್ನು ಮಣ್ಣನವರೆಂದು ದಿಕ್ಕು ದೆಸೆ ಎಂದು ಅಂಗೀಕರಿಸಿದಡೆ ಭಕ್ತರು ಸತ್ಯರಿಗೆ ಮುನ್ನವೆ ಹೊಱಗೆ (ಏಲೇಶ್ವ. ೫೦) ; ಬ್ರಹ್ಮೋಕ್ತ ಸಕಲಪ್ರಾಣಿಗಳಿಗೆಯ್ದೆ ನೀವೆಯಲ್ಲಾ ದಿಕ್ಕುದೆಸೆಯುಂ ಭಾವದೊಳು ಕರುಣಾರಸಂ ಮಿಗೆ ದೇವ ನೀನೆಮಗಭಯಮಂ ಕೊಟ್ಟೋವಿ ಸಲಹೆನುತ (ಬಸಪು. ೨೮-೭೭). ೨. ಪೂರ್ವಾಪರ ವಿಷಯ : ನಮ್ಮ ಪ್ರಯಾಣ ಹೊರಟಿರುವುದು ಕಾಶಿಗೆ. ನೀವು ಜೊತೆಗೆ ಬಂದದ್ದು ಸಂತೋಷ. ಆದರೆ ನಿಮ್ಮ ದಿಕ್ಕು ದೆಸೆ ತಿಳಿಯಲಿಲ್ಲ ? (ಹೊಸಕ್ಕ. ೩೩). [< ಸಂ. ದಿಶ್ ]

**ದಿಕ್ಕುಂಜ** (ನಾ). ದಿಕ್ಕುಗಳ ಸಮೂಹ : ಹಾರ ನೀಹಾರಾರುಚಿ ಬ್ಯಾ ಭಾಸಿಕೀ[ರ್ತಿ]ದ್ಯುತಿಧವಳಿತ ದಿಕ್ಕುಂಜ ಚೌವೇದಿ ಭಟ್ಟ (ಕಇಅ. ೭೮-೧೩-೧೧ ; ಸು. 1088). [ ಸಂ. ]

**ದಿಕ್ಕುಂಜರ** (ನಾ).=ದಿಗ್ಗಜ : ಅರ್ತಿಸುವಂಗೆ ಸಲ್ವನಮಿತಂ ದಂಡೇಶ ದಿಕ್ಕುಂಜರಂ (ಎಕ. VI, ತರೀಕೆ. ೯೫-೭೮ ; 1196) ; ಬಿಜ್ಜಳರಾಯನಿಂದೆ ಪಡೆದಂ ದಂಡೇಶ ದಿಕ್ಕುಂಜರಂ (ಬಸರ. ೭-೧); ಉದಿತ ಮದೋದ್ರೇಕನಲ್ಲದ ರಾಜದಿಕ್ಕುಂಜರನುಂ . . . ದಶಾನನಾನ್ವಂಗತಪ್ರಾಭವನಲ್ಲದ ಪುಣ್ಯ ಜನೇಶ್ವರನುಮೆನಿಸಿ (ಪುಷ್ಪಪು. ೩-೨೦ ವ). [ ಸಂ. ]

**ದಿಕ್ಕುಂಭಿ** (ನಾ).=ದಿಗ್ಗಜ : ಕುಳಭೂಭೃತ್ಕೂಟದೊಳ್ ಮಾಣಿಕದೆಳಮಿಸಿ ಲೆಂತಂತೆ ದಿಕ್ಕುಂಭಿಕುಂಭಸ್ಥಳದೊಳ್ಸಿಂದೂರಮೆಂತಂತೆ . . . ಪರ್ವಿತ್ತು ರಾಗಾವಿಳಮಪ್ಪಂತುರ್ವಿಯೆಲ್ಲಂ ದಶರಥವಸುಧಾಧೀಶತೇಜಃಪ್ರಕಾಶಂ (ಪಂರಾಮಾ. ೩-೧೩). [ ಸಂ. ದಿಕ್ಕುಂಭಿನ್ ]

**ದಿಕ್ಕುಗೆಡು, ದಿಕ್ಕೆಡು** (ಕ್ರಿ). ೧. ಗತಿಗೆಡು; ಆಶ್ರಯ ತಪ್ಪು; ಕಂಗೆಡು. ದಿಕ್ಕುಗೆಟ್ಟೆನನಾಥಬಂಧುವೆ ರಕ್ಷಿಸೆನುತಿರಲು (ಕಾಶಿರಾ. ೩೭-೧೭) ; ಮೊದಲೇ ತಾಯಿಯನ್ನು ಕಳೆದುಕೊಂಡು ನಾನು ದಿಕ್ಕುಗೆಟ್ಟಿದ್ದೆ

(ಬದುಜ. ೩೨) ; ದಿಕ್ಕುಗೆಟ್ಟ ಬಡಜನ, ರೆವಿನ್ಯೂಇನ್ಸ್‌ಪೆಕ್ಟರು ಕೃಷ್ಣಮೂರ್ತಿ ಹಾಗೂ ಗುರುರಾಜರಾಯರ ಬಳಿ ಹೋಗಿ ಗೋಳನ್ನು ಹೇಳಿಕೊಳ್ಳುತ್ತಿದ್ದರು (ಮರಳಿ. ೧೨). ೨. ರೀತಿತಪ್ಪು ; ಕ್ರಮತಪ್ಪು ; ಮಾರ್ಗತಪ್ಪು: ದಿನದಿನ ಯಾವುದೋ ಗುರಿ ತಪ್ಪಿ ಸಾಗುತ ದಿಕ್ಕುಗೆಟ್ಟಿದೆ ಈ ಮನ (ವಿಜದ. ೫೪-೬). **ದಿಕ್ಕೆಡು :** ೧. ಕಾಡು ಬಿದ್ದು ದಿಕ್ಕೆಟ್ಟು ಓಡಿಹೋದರು (ದೇವೀಚಾ. ೩೨) ; ದಿಕ್ಕೆಟ್ಟು ಹೊರಟಿತ್ತು ಗೋಡೆಯಲ್ಲಿ ತಿಗಣೆಯಾ ಗುಂಪು (ಚಂದ್ರಮಾ. ೨೪-೭) ; ಅತಿ ಸ್ವಲ್ಪಕಾಲದಲ್ಲಿಯೇ ಖಂಡೇರಾಯನ ದಿಕ್ಕೆಟ್ಟ ಸೈನ್ಯವು ಚದರಿ . . . ಶರಣಾಗತರಾಗಿಯೂ ಆದರು (ಒಡೆಕ. ೯೩) ; ದಾರಿ ಕಾಣದ ಪಥಿಕನಂತೆ ದಿಕ್ಕೆಟ್ಟು ಕುಳಿತು ಬಿಟ್ಟಿದ್ದಳು (ತೇವೋಡ. ೧೫). [ ದಿಕ್ಕು + ಕೆಡು₁ ]

**ದಿಕ್ಕುಗೇಡಿ, ದಿಕ್ಕೇಡಿ, ದಿಗ್ಗೇಡಿ** (ನಾ). ಮಾರ್ಗ ಅಥವಾ ಬಗೆಯನ್ನು ಕಂಡುಕೊಳ್ಳಲಾರದ ವ್ಯಕ್ತಿ ; ಕಂಗೆಟ್ಟ ವ್ಯಕ್ತಿ : ಹತ್ತಾರು ವರುಷದ ಹಿಂದಿನ ನೆನಹೊಂದು ಚಿತ್ತದೊಳೊತ್ತುವುದೆಂದು ದಿಕ್ಕುಗೇಡಿಯ ಹಾಗೆ ಏನೊಂದು ತೋಚದೆ ಬವಳಿಗೊಂಡಳು ನಲ್ಲೆ ಬರಿದೆ (ಇಂಚಾಪ. ೫೨-೪೬). **ದಿಕ್ಕೇಡಿ :** ಯಾವುದಕ್ಕೂ ಗತಿಯಿಲ್ಲದ . . . ದಿಕ್ಕಿಲ್ಲದ 'ದಿಕ್ಕೇಡಿ' ನೀನು (ಬರಹಾ. ೧೩೩). **ದಿಗ್ಗೇಡಿ :** ಸ್ಮಶಾನದಲ್ಲಿ ಅಂಡಲೆಯುತ್ತ ದಿಗ್ಗೇಡಿಯಾದ ಭಾರತಮಾತೆಯ ಸೇವೆಗಾಗಿ ನ ರ ಹ ರಿ ಯು ಮುನ್ನಡೆದಿದ್ದ (ಸಮುಜೀ. ೭೭೬). [ ದಿಕ್ಕು + ಕೇಡಿ₁ ]

**ದಿಕ್ಕುಗೇಡು** (ನಾ). ಮಾರ್ಗ ತಪ್ಪುವಿಕೆ ; ಕ್ರಮ ತಪ್ಪುವಿಕೆ : ಈಗ ಬಗೆಗದಡಿನ ವೇಗಕ್ಕೆ ಸಂಚಳಿಸಿ, ಸನ್ಯಾಸದ ಕಾಲಾಟಕ್ಕೆ ಸಿಲ್ಕಿ, ದಿಕ್ಕುಗೇಡಿಗೆ ದಕ್ಕುಬಿದ್ದು, ಸುವ್ಯಕ್ತವೂ ಆವಶ್ಯಕವೂ ತಪ್ಪದುದೂ ಸುಲಭವೂ ಎಂದು ಭಾಸವಾಗುವ ತೀರ್ಕಣೆಯನ್ನು ಬಾಯ್ದುಡುಕಿ, ಆ ಪೋಣವುಲ್ಲೊಡನೆ . . . ಸೂಚಿಸುವುದೂ ಈ ಮಹಾಸಭೆಗೆ ಅವಿನಯದ ಪುನರುಕ್ತವಹುದು (ಮುಂತ್ರಶ. ೭೨-೨೦). [ ದಿಕ್ಕು + ಕೇಡು ]

**ದಿಕ್ಕುತಪ್ಪಿಸು** (ಕ್ರಿ). ದಿಗ್ಭ್ರಮೆಂಗೊಳಿಸು ; ದಾರಿ ಕಾಣದಂತೆ ಮಾಡು ; ತಪ್ಪುದಾರಿಗೆ ಒಯ್ಯು : ನದಿಯ ಉಯಿಲು ಅಂಗರನನ್ನು ದಿಕ್ಕುತಪ್ಪಿಸುತ್ತಿತ್ತು (ಹೊಸಕ್ಷಿ. ೬೩). [ ದಿಕ್ಕುತಪ್ಪು + -ಇಸು₃ ]

**ದಿಕ್ಕುತಪ್ಪು** (ಕ್ರಿ). ದಿಗ್ಭ್ರಮೆಯಾಗು ; ದಾರಿ ತೋರದಂತಾಗು. 'ದಿಕ್ಕುತಪ್ಪಿಸು' ಪರಾ. [ ದಿಕ್ಕು + ತಪ್ಪು₁ ]

**ದಿಕ್ಕುಮಾರ** (ನಾ). = ದಿಕ್ಪಾಲಕ : ವಜ್ರಬಾಹುಕುಮಾರು ವಾರಣಾವ್ರ ನೇಟದಿಂ ದಿಗ್ವಾರಣವಂ ದಿಕ್ಕುಮಾರರೇಱುವ ತೆಱದಿಂ (ಪಂರಾಮಾ. ೨-೯) [ ಸಂ. ]

**ದಿಕ್ಕುವಾಯ್** (ಕ್ರಿ). ದಿಕ್ಕುದಿಕ್ಕಿಗೆ ಓಡು ; ದಿಕ್ಕಾಪಾಲಾಗು ; ಚದರು: ವಿಷ್ಣು ತರಹರಿಸದೋಡಿದನಜಂ ಮಾಯವಾದನಾ ಸುರಪಮುಖ್ಯರು ದಿಕ್ಕುವಾಯ್ದರೆನಲಱುವುವನ ಚರಣಾಂಬುಜಕ್ಕೆ ಶರಣು (ಲಶಿಚಂ. ೧೭-೧೮). [ ದಿಕ್ಕು + ಪಾಯ್₁ ]

**ದಿಕ್ಕುಸೂಚಿ** (ನಾ). ದಿಕ್ಕನ್ನು ತೋರಿಸುವ ಸಾಧನ ; ಮಾರ್ಗವನ್ನು ಕಾಣಿಸುವ ಉಪಕರಣ : ಅವನು ನಿರೀಕ್ಷಿಸಿದ್ದ ಕಡೆಯೇ ವಿದ್ರೋಹದ ಕಿಡಿ ಹಾರಿತ್ತು. ಅದು ಅವನ ಪಾಲಿಗೆ ಒಂದು ದಿಕ್ಕುಸೂಚಿಯಾಗಿತ್ತು (ರಾಜ್ಯೋದ. ೧೫೫). [ < ದಿಕ್ಸೂಚಿ ]

ದಿಕ್ಕೆಡು 'ದಿಕ್ಕುಗೆಡು' ನೋ.

ದಿಕ್ಕೇಡಿ 'ದಿಕ್ಕುಗೇಡಿ' ನೋ.

**ದಿಕ್ಚಕ್ರ** (ನಾ). ೧. ದಿಕ್ಕುಗಳ ಪರಿಧಿ, - ವಲಯ. ೨. ಭೂಮಂಡಲ ; ಜಗತ್ತು : ನಭಮಂ ಸಂಜೆಮುಗಿಲ್ ಪಗಿಲ್ತ ತೆಱದಿಂ ತಳ್ಪೊಯ್ಯೆ ಭೂ ಷಾ ಮ ಣಿ ಪ್ರ ಭೆ ದಿಕ್ಚಕ್ರಮುನಚ್ಚಜೊನ್ನಮೆಳಸಿತ್ತೆಂಬನ್ನೆಗಂ ತುಂಬೆ (ಚಂದ್ರಪು. ೬-೬೯). [ ಸಂ. ]

**ದಿಕ್ತಟ** (ನಾ). ದಿಕ್ಕಿನ ತುದಿ ; ದಿಗಂತ ; ದಿಕ್ಪ್ರದೇಶ : ವಿರಾಜಿತಕೀರ್ತಿಶ್ರೀಯಂ ದಿಕ್ತಟದೊಳ್ ತಳೆದು (ಸುಕುಮಾ. ೬-೧); ಆ ಶಿಶುವಿನಟ್ಟಿ ತೆಕ್ಕನೆ ತೀವಿತ್ತನಿತುಂ ದಿಕ್ತಟಮಂ ಭೋರೆನೆ ಶಂಕಾಕುಳಿತಮಪ್ಪಿನಂ ಭುವನಜನಂ (ಜಗವಿ. ೩-೧೨) ; ಸ್ಫಟಿಕಲಿಂಗಸ್ಫುಟಮರೀಚಿಗೆ ಚಟುಲ ಭಾಸ್ಕರ ಕರಪಟಲವನು ಘಟಿಸದಡಗಲು ದಿಕ್ತಟಂಗಳೊಳಾವರಿಸಲೊಡನೆ (ಬಸಪು. ೫೦-೬೦) ; ದಿಕ್ತಟದ ದೂರದೊಳಯೋಧ್ಯಾಪುರದ ಮೇಘಚುಂಬಿತ ಸೌಧಗೋಪುರಂಗಳ ಪಂಕ್ತಿ ಪ್ರಾಭಾತಸುಂದರಾರುಣಹೇಮಕಾಂತಿಯೊಳ್ ಮಿರುಮಿರುಗಿ ಕರೆದು ಕಾಣ್ಬನ್ನೆಗಂ (ಶ್ರೀರಾಮಾ. ೧೦೫-೧೪೦). [ ಸಂ. ]

**ದಿಕ್ಪತಿ** (ನಾ). ದಿಕ್ಕಿನ ಒಡೆಯ, - ಪ್ರಭು ; ದಿಕ್ಪಾಲ : ದೆಸೆದೆಸೆಗೋಡಿ ದನ್ನಕರಿ ದಿಕ್ಕರಿಯಾದುದರಾತಿಭೂಭುಜಪ್ರಸರಮೆ ದಿಕ್ಪತಿ ಪ್ರ ಸ ರ ಮಾದುದು ವೈರಿಬಲಂ (ಗದಾಯು. ೧-೫೪) ; ಶತಮುಖ ಹುತವಹ ಯಮ ನೈರುತಿ ವರುಣ ಮರುತ್ಕುಬೇರ ಶೂಲಧರರ್ ದಿಕ್ಪತಿಗಳವರೆಣ್ಬರುಂ (ವಸ್ತುಕೋ. ೯-೪೮). [ ಸಂ. ]

**ದಿಕ್ಪತ್ರ** (ನಾ). ದಿಕ್ಕುಗಳ ಭಾಗ, - ಪ್ರದೇಶ : ಅಲ್ಲಿ ಮೊದಲ ದೇವತೆ ಜಯಾದೇವಿಯೆಂಬುದು ಮತ್ತೊರ್ವಳು ವಿಜಯಾದೇವಿಯೆಂಬುದು . . . ಈ ನಾಲ್ವರುಂ ದಿಕ್ಪತ್ರಂಗಳ ದೇವತೆಗಳು (ಪ್ರತಿಷ್ಠಾ. ೯-೦). [ ಸಂ. ]

**ದಿಕ್ಪರಿವೃಢ** (ನಾ). ೧. ದಿಕ್ಕುಗಳ ಮೇಲಿನ ಒಡೆತನ, - ಪ್ರಭುತ್ವ : ಸುರಕುಜಮಂ ಪಳಂಚಲೆವ[ದಾ]ವ ಗುಣಂ ಸಲೆ ಸಂದ ವಜ್ರಪಂಜರಮನ ನಾರತಂ ಪಳಿವುತಿರ್ಪುದು ... ತನ್ನ ಗಂಭೀರಗುಣಂ ಸಮನ್ನು ದಿಕ್ಪರಿವೃಢ ದೇಳ್ಗೆಯಂ ನಗುವುದುದ್ಧಗುಣ [ಕ]ಲಿ ಕನ್ನಭೂಪನ (ಸೌಇಇ. XX, ೫೦-೧೪; ?). ೨. ದಿಕ್ಕುಗಳ ಒಡೆಯ, - ಪ್ರಭು : ಕರೆಸಿದನು ನಿಜನಗರಿಗಾ ನಿರ್ಜರ ನಿಕರವಾ ಸತಿಯರಾ ದಿಕ್ಪರಿವೃಢರು ಕೊಂಡಾಡಿತೆನ್ನನು (ಕುಪ್ಪಾಉ. ೧೦-೨೯). [ ಸಂ. ]

**ದಿಕ್ಪಾರ** (ನಾ). ದಿಕ್ಕುಗಳ ಎಲ್ಲೆ, - ಸೀಮೆ : ಶಿವಿರಾಭ್ಯುತ್ಥಿತ ಕಾಹಳಾ ಘನರವಂ ಮುಟ್ಟಿತ್ತು ದಿಕ್ಪಾರಮಂ (ಚಂದ್ರಪು. ೧೧-೧೪). [ ಸಂ. ]

**ದಿಕ್ಪಾಲ** (ನಾ). ದಿಕ್ಕಿನ ಒಡೆಯ, - ಪ್ರಭು : ಗಾಳಿ ದೈವವಿದೆಂಬಡಂ ದಿಕ್ಪಾಲನಾಗಿಂತೊಂದು ದಿಕ್ಕಿನ ಮೂಲೆಯಲಿ ತಾನಿಹನೆ (ಬಸಪು. ೫೪-೧೨) ; ಕಂಡು ಬಲ್ಲಾ ಎನಲು ಪವನಜ ತೊಂಡ ರಾವಣ ನುಡಿದನೆಲವೊ ಕಂಡ; ನಾ ಬಲ್ಲಂತೆ ನೀ ಮುನ್ನಾವ ದಿಕ್ಪಾಲ (ಕಾಶಿರಾ. ೨೨-೧೨). [ ಸಂ. ]

**ದಿಕ್ಪಾಲಕ** (ನಾ). = ದಿಕ್ಪಾಲ : ದೇವ ದಿಕ್ಪಾಲಕರು ವಸುಗಳು . . . ಕಮಲಜ ರಾಮರಾದರು ಪೂಜಿಸಲಿಬೇಕೀ ಮಹಾಗಣಪತಿಯನು (ಗಗಶಾ. ೫-೦೦). [ ಸಂ. ]

**ದಿಕ್ಪಾಲಕನಗರ** (ನಾ). ದಿಕ್ಪಾಲನ ಪಟ್ಟಣ, - ರಾಜಧಾನಿ; P "ದಿಕ್ಪಾಲಕ ನಗರಗಳು: (I) ಅಮರಾವತಿ, ತೇಜೋವತಿ, ಸಂಯಮಿನಿ, ನಯನವತಿ, ಅಂಭೋವತಿ, ಭೋಗವತಿ, ಅಲಕಾವತಿ, ರೌಪ್ಯವತಿ (ಯಪೂರ. ೪೮೫). (II) ಅಮರಾವತಿ, ತೇಜೋವತಿ, ಸಂಯಮ, ರಕ್ಷೋವತಿ, ಶುದ್ಧಿ ವಂತಿ, ಗಂಧವತಿ, ಮಹೋದಯ, ಯಶೋವತಿ (ವಿಚಿಂ. ೪-೩೪೨, ೩೪೩). (III) ಅಮರಾವತಿ, ತೇಜೋವತಿ, ಸಂಯಮನಿ, ಕೃಷ್ಣಾಂಗನೆ, ಶ್ರದ್ಧಾವತಿ, ಗಂಧವತಿ, ಮಹೋದಯೆ, ಯಶೋವತಿ (ಭಾಗ. ಅ. ೧೭ ಸ್ಕಂದ ೫ ಶ್ರೀಮದ್ಭಾಗವತವು iv-೮೭)" (ಶ್ರೀವತ್ಸ. ೧೯೯). [ ದಿಕ್ಪಾಲಕ + ನಗರ ]

**ದಿಕ್ಪಾಲತನ** (ನಾ). ದಿಕ್ಕಿನ ಆಧಿಪತ್ಯ, - ಒಡೆತನ : ಕಾಲ ನಡುಗಿದನನಿತಱಲಿ ದಿಕ್ಪಾಲತನವನು ಬಿಸುಟು ನಿರುತಿಯ ಮೇಲೆ ಮೇಲಲ್ಲಿಂದ ನಡೆದಾಕರಿಸಿದನು ಧನವ (ತೊರರಾ. ೧-೮-೩೩). [ ದಿಕ್ಪಾಲ + -ತನ ]

**ದಿಕ್ಪುರ** (ನಾ). = ದಿಕ್ಪಾಲಕನಗರ : ದಿಕ್ಪುರಗಳಾ ವಿಗಡಜಂಝಾಮಾರುತ ನೊಡನೆ ಪಾರ್ದು ಗಗನಾಂಗಣದಿ ಸುಳಿಗೊಂಡಿರೆ (ನವಮೋ. ೬-೭). [ಸಂ.]

**ದಿಕ್ಪ್ರದರ್ಶನ** (ನಾ). ಸ್ಥೂಲ ಪರಿಚಯಂ,-ನಿರ್ದೇಶನ: ಸ್ಥೂಲ ನಿರ್ದೇಶ; ದಿಕ್ಪ್ರದರ್ಶನ (Adumbration. ಇಂಕನಿ) ; ಇಲ್ಲಿ ಅದರ ದಿಕ್ಪ್ರದರ್ಶನವನ್ನು ಮಾತ್ರ ಮಾಡುತ್ತೇವೆ (ಧ್ವನ್ಯಾಲೋ. ೬೬). [ ಸಂ. ]

**ದಿಕ್ಪ್ರಸರ** (ನಾ). ದಿಕ್ಕುಗಳ ಸಮೂಹ,-ಗುಂಪು : ಲಸದಗುರು ಸುರಭಿ ಸಾರಪ್ರಸರಂ ನವಧೂಪಧೂಮಮುಮರಾದ್ರಿಯನಾಗಸಮಂನಮರೇಂದ್ರರಂ ದಿಕ್ಪ್ರಸರಮನೇಂ ಪುದಿದು ನಿಲೆ ಪುದುಂಗೊಳಿಸಿದುದೋ (ಶಾಂತಿಪು. ೧೦-೩೩) ; ಈ ವಿಖ್ಯಾತಿ ಸಮಸ್ತ ದಿಕ್ಪ್ರಸರಗರ್ಭಂ ನೋಟಕ್ಕೊಡೆಂಬನ್ನೆಗಂ ತ್ರೈವಿದ್ಯಶ್ರುತಕೀರ್ತಿದೇವನೆಸೆದಂ (ಚಂದ್ರಪು. ೧-೨೪). [ ಸಂ. ]

**ದಿಕ್ಶಿರ** (ನಾ). ದಿಕ್ಕಿನ ಶಿರ,-ಅಗ್ರಭಾಗ : ಬಹುವಾದ್ಯರವ ದಿಕ್ಶಿರವೊಡೆಯೆ ಸೂಳ್ಪಿಸೆ ಮೇಳೈಸಿದನು ಮೋಹರವ (ಕುಮಾವ್ಯಾ. ೨೨-೩). [ ಸಂ. ]

**ದಿಕ್ಕುಂಡಾಲ** (ನಾ). = ದಿಗ್ಗಜ : ನಡುಗಿದುದು ಬ್ರಹ್ಮಾಂಡ ಪೊಡವಿ ಜಡಿಯಲು . . . ವಂಡಿದವಡಿಗಳನು ದಿಕ್ಕುಂಡಾಲಗಳುಮಿರದೆ ಕಡಲೇಳು ಕೂಡಿದವು (ನವಮೋ. ೧೨-೬೨). [ ಸಂ. ]

**ದಿಕ್ಸಂಧಿ** (ನಾ). ದಿಕ್ಕುಗಳ ಜೋಡಣೆ ; ದಿಕ್ಕುಗಳ ಸೇರುವೆ,-ಕೂಟ : ದಂಧಣಂ ಧಳಧಳಧಳಂಧಳಧ್ವನಿಗೆ ದಿಕ್ಸಂಧಿಗಳ್ ಸಡಿಲಲ್ . . . ಜಗದೊಳಗಂಧಕಾಸುರನ ಭೇರೀರವಂ ಪೊಣ್ಮಿದುದನೇನೆಂಬೆನದ್ಭುತವನು (ಚೆಬಸು. ೪೭-೩೦). [ ಸಂ. ]

**ದಿಕ್ಸೂಚನೆ** (ನಾ). = ದಿಕ್ಪ್ರದರ್ಶನ : ನಾವು ಮೇಲೆ ತೋರಿಸಿರುವುದು ಕೇವಲ ಅವುಗಳ ದಿಕ್ಸೂಚನೆ (ಧ್ವನ್ಯಾಲೋ. ೧೭). [ಸಂ. ದಿಕ್ಸೂಚನಾ]

**ದಿಕ್ಸೂಚಿ** (ನಾ). ೧. (ನಾವಿಕರು) ಮಾರ್ಗ ಅಥವಾ ದಿಕ್ಕನ್ನು ತಿಳಿಯಲು ಉಪಯೋಗಿಸುವ ಉಪಕರಣ; ಉತ್ತರಮುಖಿ; ಕಾಂತಧ್ರುವ ಸೂಚಿ : ನಾವಿಕರಿಗೆ ದಿಕ್ಕನ್ನು ತಿಳಿಯಲು ಅತ್ಯಂತ ಉಪಯೋಗಕರವಾಗಿ ದಿಕ್ಸೂಚಿ ಅಥವಾ ಉತ್ತರಮುಖಿ (Compass) ಎಂಬ ಹೆಸರಿನಿಂದ ಈ ಉಪಕರಣವು ಬಹಳ ದಿನಗಳಿಂದಲೂ ಬಳಕೆಯಲ್ಲಿದೆ (ಭೌತವಿ. ೩೧೦) ; ಈ ಸ್ವಪ್ನಜೀವಿಗಳು ದಿಕ್ಸೂಚಿಯನ್ನು ಸಹ ಬಯಸದೆ ತೇಜಸ್ಸಾಗರದಲ್ಲಿ ಯಾತ್ರೆ ಹೊರಡುತ್ತಾರೆ (ಯೋಧಪು. ४३). ೨. ಮಾರ್ಗವನ್ನು ಕಾಣಿಸುವ ಸಾಧನ ; ಮಾರ್ಗದರ್ಶಿ : ಅದರ ಶಬ್ದಾರ್ಥವೇ ಅದರ ಅಂತರಾರ್ಥವನ್ನು ತಿಳಿಸುವ ದಿಕ್ಸೂಚಿಯಾಗಿದೆ (ತತ್ವಪ್ರಾ. ೬೨); ಅಲೆ ಅಲೆಯಾಗಿ ಹೊಮ್ಮಿಬರುವ ರಚನೆಗಳನ್ನು ಸರಿಯಾದ ದಾರಿಯಲ್ಲಿ ಕೊಂಡೊಯ್ಯಲು ದಿಕ್ಸೂಚಿಯಂತಿದೆ ತಂಬೂರಿ ಮತ್ತು ಅದರ ಶ್ರುತಿ (ಭಾರದ. ೩೬೬). [ ಸಂ. ದಿಕ್ಸೂಚಿನ್ ]

**ದಿಕ್ಸ್ವಸ್ತಿಕ** (ನಾ). ೧. [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು ; "ಎಡಗಡೆ, ಬಲಗಡೆ, ಮುಂದೆ, ಹಿಂದೆ ಈ ನಾಲ್ಕು ಕಡೆಗಳಲ್ಲೂ ಕೈಗಳ ಜೊತೆಯಲ್ಲಿ ಕಾಲುಗಳನ್ನೂ ಚಲಿಸುತ್ತ, ಕೈ ಮತ್ತು ಕಾಲುಗಳನ್ನು ಪುನಃ ಪುನಃ ಸ್ವಸ್ತಿಕದಂತೆ ನಿಲ್ಲಿಸುವುದು" (ಲಾಸ್ಯರಂ. ೨೮೯ ಗದ್ಯಾನುವಾದ); P "ತಲಪುಷ್ಪಪುಟ, ಲೀನ, ವಿವರ್ತಿತ, ವಲಿತೋರು, ಮಂಡಲಸ್ವಸ್ತಿಕ, ವಕ್ಷಸ್ವಸ್ತಿಕ, ಆಕ್ಷಿಪ್ತರೇಚಿತ, ಅರ್ಧಸ್ವಸ್ತಿಕ, ದಿಕ್ಸ್ವಸ್ತಿಕ, ಪೃಷ್ಠಸ್ವಸ್ತಿಕ, ಸ್ವಸ್ತಿಕ, ಅಂಚಿತ, ಅಪವಿದ್ಧ, ಸಮನಖ, ಮತ್ತ, ಸ್ವಸ್ತಿಕರೇಚಿತ, ನಿಕುಟ್ಟಕ, [ಅರ್ಧನಿಕುಟ್ಟಕ], ಕಟೀಭಿನ್ನ, ಕಟಿಸಮ, ಭುಜಂಗತ್ರಾಸಿತ, [ಅ]ಲಾತ, [ವಿ]ಕ್ಷಿಪ್ತಾಕ್ಷಿಪ್ತ, [ನಿ]ಕುಂಚಿತ, ಘೂರ್ಣಿತ, ಊರ್ಧ್ವಜಾನು, ಅರ್ಧರೇಚಿತ, ಮತ್ತಲ್ಲಿ, ಅರ್ಧಮತ್ತಲ್ಲಿ, ರೇಚಕನಿಕುಟ್ಟ, ಲಲಿತ, ವಲಿತ, ದಂಡಪಕ್ಷ, ಪಾದಾಪವಿದ್ಧ, ನೂಪುರ, ಭ್ರಮರ, ಛಿನ್ನ, ಭುಜಂಗತ್ರಸ್ತರೇಚಿತ, ಭುಜಂಗಾಂಚಿತಕ, ದಂಡರೇಚಿತ, ಚತುರ, ಕಟಿಭ್ರಾಂತ, ವ್ಯಂಶಿತ, ಕ್ರಾಂತ, ವೈಶಾಖರೇಚಿತ, ವೃಶ್ಚಿಕ, ವೃಶ್ಚಿಕನಿಕುಟ್ಟಕ, ವೃಶ್ಚಿಕರೇಚಿತ, ಲತಾವೃಶ್ಚಿಕ, ಆಕ್ಷಿಪ್ತ, ಅರ್ಗಲ, ತಲವಿಲಾಸಿತ, ಲಲಾಟತಿಲಕ, ಪಾರ್ಶ್ವನಿಕುಟ್ಟಕ, ಚಕ್ರಮಂಡಲ, ಉರೋಮಂಡಲ, ಆವರ್ತ, ಕುಂಚಿತ, ಡೋಲಪಾದ, ವಿವೃತ್ತ, ವಿನಿವೃತ್ತ, ಪಾರ್ಶ್ವಕ್ರಾಂತ, ನಿಶುಂಭಿತ, ವಿದ್ಯುದ್ಭ್ರಾಂತ, ಅತಿಕ್ರಾಂತ, ವಿಕ್ಷಿಪ್ತ, ವಿವರ್ತ, ಗಜಕ್ರೀಡಿತ, ಗಂಡಸೂಚೀ, ಗರುಡಪ್ಲುತ, ತಲಸಂಸ್ಫೋಟಿತ, ಪಾರ್ಶ್ವಜಾನು, ಗೃಧ್ರಾವಲೀನಕ, ಸೂಚೀ, ಅರ್ಧಸೂಚೀ, ಸೂಚೀವಿದ್ಧ, ಹರಿಣಪ್ಲುತ, ಹರಿವೃತ್ತ, ದಂಡಪಾದ, ಮಯೂರಲಲಿತ, ಪ್ರೇಂಖೋಲಿತ, ಸನ್ನತ, ಸರ್ಪಿತ, ಕರಿಹಸ್ತ, ಪ್ರಸರ್ಪಿತ, ಅಪಕ್ರಾಂತ, ನಿತಂಬ, ಸ್ಖಲಿತ, ಸಿಂಹಕ್ರೀಡಿತ, ಸಿಂಹಾಕರ್ಷಿತ, ಅವಹಿತ್ಥ, ನಿವೇಶ, ಏಲಾಕ್ರೀಡಿತ, ಜನಿತ, ಉಪಸೃತ, ತಲಸಂಘಟ್ಟಿತ, ಉದ್ವೃತ್ತ, ವಿಷ್ಣುಕ್ರಾಂತ, ಲೋಳಿತ, ಮದಸ್ಖಲಿತ, ಸಂಭ್ರಾಂತ, ವಿಷ್ಕಂಭ, ಉದ್ಘಟ್ಟಿತ, ಶಕಟಾಸ್ಯ, ಊರೂದ್ವೃತ್ತ, ವೃಷಭಕ್ರೀಡಿತ, ನಾಗಾಪಸರ್ಪಿತ, ಗಂಗಾವತರಣ —ಈ ನೂಱೆಂಟು ಕರಣಂಗಳ್" (ಲಾಸ್ಯರಂ. ೯-೯೩ ವ) : ಎಡಬಲದ ಮುಂತು ಪಿಂತುಗಳೆಡೆಯೊಳ್ ಕೈ ಬೆರಲ್ಗಳೊಡನೆ ಕಾಲ್ಗಳ್ ಚಲಿಸುತ್ತಡಿಗಡಿಗೆ ಸ್ವಸ್ತಿಕಮುವಾದಡೆ ದಿಕ್ಸ್ವಸ್ತಿಕಮೆನಿಪ್ಪ ಕರಣಮುದಕ್ಕುಂ (ಲಾಸ್ಯರಂ. ೯-೩೦). ೨. [ಜೈನ] ಒಂದು ಸಭಾಭವನದ ಹೆಸರು: ವೈಜಯಂತಿಯೆಂಬ ದಿವ್ಯಪ್ರಾಸಾದಮುಂ ದಿಕ್ಸ್ವಸ್ತಿಕಮೆಂಬ ಸಭಾಭೂಮಿಯುಂ (ಆದಿಪು. ೧೫-೩ ವ); ಸರ್ವತೋಭದ್ರನಾಮಗೋಪುರಂಗಳಿಂದಂ ವೈಜಯಂತಿಯೆಂಬ ಪ್ರಾಸಾದದಿಂದಂ ದಿಕ್ಸ್ವಸ್ತಿಕಮೆಂಬ ಸಭಾಭವನದಿಂ ನಂದ್ಯಾವರ್ತಪ್ರಕಾಶಮೆಂಬ ಶಿಬಿರನಿವೇಶಂಗಳಿಂದಂ (ಶಾಂತಿಪು. ೧೧-೮೪ ವ) ; ಮಣಿಮಯಾಕೃತ್ರಿಮ ಚೈತ್ಯಗೃಹರುಚಿರಮೆನಿಪ . . . ದಿಕ್ಸ್ವಸ್ತಿಕದ ನಂದೆಯುಂ ನಂದನದ ನಂದೋತ್ತರೆಯುಂ (ಚಂದ್ರಪು. ೧೧-೧೨೨ ವ). [ ಸಂ. ]

**ದಿಖಾವು, ಡಿಕಾವು** (ನಾ). ಆಡಂಬರ ; ಡೌಲು ; ಜರ್ಬು : ಆ ಜನಗಳ ಜುಬ್ಬ, ಚಳನ, ಪೇಠಗಳ ವಿಜೃಂಭಣೆಯಿಂದ ವಾಸ್ತವಕ್ಕೆ ಮೀರಿದ ದಿಖಾವು ಇತ್ತು (ಕಲಿಸೆ. ೧೯೧). **ಡಿಕಾವು** : ಅಷ್ಟರಲ್ಲಿ ಡಿಕಾವಾಗಿ ಉಡುಪು ಧರಿಸಿದ ಸಹಾಯಾಧಿಕಾರಿ . . . ಬಂದನು (ಪುನರು. ೨೨೪). [ ←ಹಿಂ. ಮರಾ. ದಿಖಾಊ ]

**ದಿಗಂತ** (ನಾ). ಭೂಮಿಯೂ ಆಕಾಶವೂ ಸೇರಿರುವ ಹಾಗೆ ಕಾಣುವ ದಿಕ್ಕಿನ ಕೊನೆಯ ಭಾಗ,-ತುದಿ; ಕ್ಷಿತಿಜ ; ದಿಶಾಂತ : ಬಾಳುಡಿ ಪಾಱ ಬೀೞ್ ಪಗಲುಳ್ಕದವೋಲ್ ರುಧಿರಂ ದಿಗಂತಮಂ ಮೇಳಿಸಿ ಕೊರ್ವಿ ಕಲ್ಪದವಸಾನದ ಸಂಜೆಮುಗಿಲ್ಗಳಂದಮಂ ಪಾಳಿಸೆ (ಪಂಪಾಮಾ. ೧೩-೬೩) ; ಸರಸಭಕ್ತಸಮೇತ ಸುವ್ರತಚರಿತಲೋಲ ವಿಧೂತಕಾಲ ಸ್ಥಿರ ದಿಗಂತಯಶೋವಿಶಾಲಪ್ರಹತಭವಮಾಲ (ಬಸಪು. ೩೮-೭೬) ; ವನಘನ ರಾಶಿಯಾಶಾದಿಗಂತದೊಳ್ ವರ್ಷದಾರ್ಶೀರ್ವಾದಮುದ್ರೆಯಿಂದೇರ್ದುದೆನೆ ಬಂದನೋಲಗಕೆ ವಿಶ್ವಾಮಿತ್ರಮುನಿವರಂ (ಶ್ರೀರಾಮಾ. ೨೮-೮).

ದಿಗ್ದಿಗಂತ = ದಿಕ್ಕು ಮತ್ತು ದಿಗಂತ: ಮೊಗಮೆತ್ತಿ ಪಂಚವಟ ಕುಟಜರಾಜಿಯ ನೆತ್ತಿಯಂ ನೋಡಿ ಕೊರಳೆತ್ತಿ ಕೂಗಿದನ್, ದಿಗ್ದಿಗಂತೋದ್ಭವಂ ಮರುದನಿ ಮೊಳಗುವಂತೆ (ಶ್ರೀರಾಮಾ. ೨೫೫-೬೨೨) ; ಉಪನಿಷತ್ತುಗಳು . . . ದಿಗ್ದಿಗಂತಗಳನ್ನು ಪಾವನಗೊಳಿಸುವ ಭಕ್ತಿರಸದ ಅಮರವಾಹಿನಿ (ಭಾರದ. ೩೪) ; ದಿಗ್‌ದಿಗಂತದಲಿ ಹಣಿಸಿ ಬಾ ಚರಾಚರಗಳಿಗೆ ಉಣಿಸಿ ಬಾ ಇಳಿದು ಬಾ ತಾಯಿ ಇಳಿದು ಬಾ (ಗಂಗಾತ. ೬೭-೮).

[ ಸಂ. ]

**ದಿಗಂತಗ** (ನಾ). [ಛಂದ] ಅತ್ಯುಕ್ತಿಯೆಂಬ ಛಂದಸ್ಸಿನಲ್ಲಿ ಹುಟ್ಟಿದ ಒಂದು ವೃತ್ತ ; ಪ್ರತಿಸಾಲಿನಲ್ಲಿಯೂ ಒಂದು ಲಘು ಮತ್ತು ಒಂದು ಗುರು ಬರುವ ನಾಲ್ಕುಸಾಲಿನ ವೃತ್ತ: ಅಗೋಪಗಂ ದಿಗಂತಗಂ (ಛಂದೋಂಬು. ೨-೩೪). [ ಸಂ. ]

**ದಿಗಂತರ** (ನಾ). ೧. ದಿಕ್ಕುಗಳ ಮಧ್ಯಭಾಗ ; ಆಕಾಶ ; ಗಗನ : ಛತ್ರ ಚಾಮರ ಪತಾಕಾಕೀರ್ಣಗಗನಮಂಡಳಮುಂ ಪಟಹಕಹಳಾದಿಧ್ವನಿಬಧಿರಿತ ದಿಗಂತರನುಮಾಗಿ ರಾವಣಂ ಕಾದಲ್ ಪೋಪುಮಡುವುದುಂ (ಚಾವುಂಪು. ೩೧೩) ; ಸಕಳದಿಗನ್ತರಪ್ರವರ್ತಿತಕೀರ್ತ್ತಿ (ಸೌಇಇ. XX, ೪೬-೧೪ ; 1072). ೨. ದಿಕ್ಕು; ದೆಸೆ : ನೀನೇ ಹೋಹುದೈ ನಿನಗಾವುದಭಿಮತವಾ ದಿಗಂತರಕೆ (ಕುವ್ಯಾಸ. ೧೩-೭೫). [ ಸಂ. ]

**ದಿಗಂತರಕ್ಷಿತ** (ನಾ). [ಜೈನ] ಲೋಕಾಂತಿಕ ದೇವರುಗಳಲ್ಲಿ ಒಂದು ಒಳಭೇದದ ಹೆಸರು : ಗರ್ದತೋಯತುಷಿತಾಂತರದೊಳ್ ನಿರ್ಮಾಣ ರಜೋದಿಗಂತರಕ್ಷಿತರುಂ ತುಷಿತಾವ್ಯಾಬಾಧಾಮಧ್ಯದೊಳ್ ಆತ್ಮರಕ್ಷಿತ ಸರ್ವರಕ್ಷಿತರುಂ . . . ಅರಿಷ್ಟಸಾರಸ್ವತಮಧ್ಯದೊಳ್ ಅಶ್ವವಿಶ್ವರುಂ ಇರ್ಪರ್ (ತತ್ತ್ವಪ್ರ. ೨೨೨) ; ನಿರ್ವಾಣರಜಸ್ಸಿಗ್ದಶರ್ ಇರ್ಪತ್ತ್ರಮೂಱು ಸಾಸಿರದ ಇರ್ಪತ್ತ್ರಮೂವರ್ ದಿಗಂತರಕ್ಷಿತಾಮರರಿರ್ಪತ್ತೈದುಸಾಸಿರದ ಇರ್ಪತ್ತೈದು (ತತ್ತ್ವಪ್ರ. ೨೨೩). [ ಸಂ. ]

**ದಿಗಂತರಾಳ** (ನಾ). ದಿಕ್ಕುಗಳ ಮಧ್ಯಭಾಗ,-ಒಳಭಾಗ ; ಆಕಾಶ : ಮತ್ತಮಧುಕರನಿಕರಝಂಕಾರಪರೀತದಿಗಂತರಾಳದೊಳ್ (ಶಾಂತಿಪು. ೧೦-೭೭ ಪ) ; ದಟ್ಟಿಸಿ ಪೊಡೆವ ನಾನಾವಾದ್ಯರವಗಳು ಮುಟ್ಟಿ ದಿಗಂತ ರಾಳವನು (ತ್ರಿಪುಸಾಂ. ೧೬-೧೮೦). [ ಸಂ. ದಿಗಂತರಾಲ ]

**ದಿಗಂತರೋಪಗತ** (ಗು). ದಿಗಂತರವನ್ನು ಮುಟ್ಟಿದ ; ದಿಕ್ಕಿನ ಕೊನೆಗೆ ಹೋದ : ನಿರೀಕ್ಷಿಸಿ ನಿಕೃಷ್ಟದುಷ್ಟಗಣರಂ ಗತಪ್ರಜ್ಞ[ರ]ಂ ನಿರಂತರ ದಿಗಂತರೋಪಗತ ದುರ್ಯಶಃಪ್ರಾಪ್ತರಂ (ಸುಕುಮಾ. ೨-೧೮).

[ ದಿಗಂತರ + ಉಪಗತ ]

**ದಿಗಂತವ್ಯಾಪ್ತ** (ಗು). ದಿಕ್ಕು ದಿಕ್ಕಿಗೂ ವ್ಯಾಪಿಸಿದ,-ಹರಡಿದ : ಮೊರೆದು ಹೊಯ್ಯುವ ಮಳೆಯಿಂದ ಕೂಡಿದ ಪ್ರಚಂಡಮಾರುತವು ಎದ್ದು ದಿಗಂತವ್ಯಾಪ್ತವಾಗಿದ್ದಿತು (ಕಪಾಕುಂ. ೩). [ ದಿಗಂತ + ವ್ಯಾಪ್ತ ]

**ದಿಗಂಬರ** (ನಾ). ೧. ಬೆತ್ತಲೆಯಾಗಿರುವುದು ; ನಗ್ನತೆ ; ದಿಗಂಬರತ್ವ : ಮಂಗಳವೇ ಮಜ್ಜನವೆನಗೆ . . . ದಿಗಂಬರವೇ ದಿವ್ಯಾಂಬರವೆನಗೆ (ಮಹಾದೇ. ಬ. ೩೭-೭೮) ; ಜಡೆ ಬೋಳು ಲೋಚು ದಿಗಂಬರವನ್ನು ಅಳವಡಿಸಿಕೊಂಡು ನಟಿಸುವ ಅಣ್ಣಗಳಿರಾ ನಿಮ್ಮ ಜಡೆ ಯಾವುದು ಬೋಳಾವುದು ಲೋಚವಾವುದು ದಿಗಂಬರವಾವುದು (ಅಖಂಡೇ. ೧೩೭-೧೦೦೮). ೨. ಆಕಾಶವೇ ಬಟ್ಟೆಯಾಗುಳ್ಳವನು; ಬೆತ್ತಲೆಯಾಗಿರುವವನು ; ನಗ್ನ : ಸತಿಯನುಳಿದತಿದಿಗಂಬರನಾಗಿ ಮುಕ್ತಕೇಶಿತನಾಗಿ ನರಕಪಾಲದೊಳು ಸುರೆಯೆಱೆದು ಕುಡಿಯುತ ತೆಂಕಮುಖವಾಗಿ ಹೋಹೆಂ (ಹಡಕಾ. ೨-೨೨); ನಳ . . . ರಾಣಿಯು ಕೂಡಿಕೊಳುತ್ತ ಕಾನನವ ಪೊಕ್ಕು ದಿಗಂಬರನಾಗಿ ಭಿಕ್ಷವಮಂ ಬೇಡನೆ (ಕಟಿಕೆಂ. ೬೩) ; ಆಗ ಈತನು ದಿಗಂಬರ ನಾಗಿದ್ದನು (ಭಾರದ. ೧೬೮). ೩. ಭೈರವ ; ಶಿವ ; ಮಹೇಶ್ವರ : “ಘೋರವಮೂರ್ತಿಯು ಖಡ್ಗಹಸ್ತಂ ದಿಗಂಬರಂ ಭೈರವನ ಪೆಸರಕ್ಕು” (ಮಂಗರಾ. ೫-೧೫) ; ದಿಗಂಬರನ ಶರಣಗುರ್ಡುಗೆಗೊಟ್ಟು ಸಿಂಗರದತ್ತ ಮನಂ ಸೆಳೆದಾಭರಣಂಗಳ ಪೆಟ್ಟಿಗೆಯುಂ ತರಿಸಿ (ಬಸರ. ೮-೦೬). ೪. ಅಂಧಕಾರ ; ತಮಸ್ಸು. ೫. ಆಗಸ ; ಗಗನ ; ಆಕಾಶ : ತೊಳತೊಳಗೆ ದಿಗಂಬರಮಂ ಬೆಳಗುವ ರುಚಿಯಿರ್ದುಮೇನೊ ಸಕಲಜನಾಂತಸ್ಥಳಮಂ ತಮ್ಮಾ ದಯದೊಳಳಱಿಸಿದರೆ[ತಮ್ಮುದಯದೊಳ್ ಬೆಳಗಿದರೀ] ರವಿಗಳೆ ಮಗೆ ಕವಿಗಳೆ ಮಂದ್ಯರ್ (ಧರ್ಮನಾ. ೧-೩೫). ೬. [ಜೈನ] ತಪೋದೀಕ್ಷೆಯನ್ನು ಪಡೆದ ಜೈನಸಂನ್ಯಾಸಿ ; ಸವಣ : “ಸಾಧು ನಿರ್ಗ್ರಂಥರಾ ನಗ್ನಾಟರು ಜೈನರ್ ದಿಗಂಬರರ್ ಜೀವಕರ್” (ಮಂಗರಾ. ೭೭-೧); ಪೋಗಿ ದಿಗಂಬರನಂ ಪರಮಾಗಮಪಂಕೋವಿದನನಮಿತಗುಣವಾರಿಧಿಯಂ ರಾಗ ದ್ವೇಷಂಗಳ್ನನಗಾಗದನಂ ಕಂಡು ನಿಲ್ವುದುಂ ತನ್ನನಿಪಂ (ಸುಕುಮಾ. ೩-೦೭); ವೈದಿಕಗ್ರಂಥಗಳಿಂದ ದಿಗಂಬರರು ಶ್ರಮಣರು . . . ಇರುತ್ತಿದ್ದರೆಂದು ತಿಳಿದು ಬರುವುದರಿಂದ ಈ ಸಂಪ್ರದಾಯವು ಅನಾದಿ ಕಾಲದ್ದು ಎಂದು ತಿಳಿಯ ಬಹುದು (ಹಿಂದಸಾ. ೭೨). ‘ದಿಗಂಬರದೀಕ್ಷೆ’ ಪರಾ. ೭. ಜೈನರ ಒಂದು ಪಂಥ : ಈ ಸಂಪ್ರದಾಯದಲ್ಲಿ ದಿಗಂಬರ, ಶ್ವೇತಾಂಬರ ಎಂಬ ಪ್ರಭೇದವಿದ್ದರೂ . . . ಈ ಗ್ರಂಥಗಳು ಸರ್ವಸಮ್ಮತಗಳಾಗಿರುವುವು (ಹಿಂದಸಾ. ೭೮) : ಜೈನರ ಪ್ರತಿಮೆಗಳು ಕೆಲವು ಶ್ವೇತಾಂಬರಪಂಕ್ತಿಗೆ ಸೇರಿದವು, ಮತ್ತೆ ಕೆಲವು ದಿಗಂಬರಪಂಕ್ತಿಗೆ ಸೇರಿದವು (ಭಾರದ. ೫೦೩); ಶ್ವೇತಾಂಬರ ದಿಗಂಬರರೆಂದು ಎರಡು ಪಂಗಡಗಳಾಗಿ ಒಡೆದದ್ದು . . . ಭದ್ರಬಾಹುವಿನ ಕಾಲದಲ್ಲಿ (ಕಪಾಅ. ೬೯). [ ಸಂ. ]

**ದಿಗಂಬರತ್ವ** (ನಾ). ಬೆತ್ತಲೆಯಾಗಿರುವಿಕೆ ; ನಗ್ನತೆ : ಮಹಾತ್ಮರುಗಳು ಮಾತ್ರ ಈಗ ದಿಗಂಬರತ್ವವನ್ನು ಸ್ವೀಕರಿಸಿ ಅದರ ಪವಿತ್ರತೆಯನ್ನು ಸಾರಿದ್ದಾರೆ (ಭಾರದ. ೧೮೫). [ ಸಂ. ]

**ದಿಗಂಬರದೀಕ್ಷೆ** (ನಾ). [ಜೈನ] ಸಂನ್ಯಾಸದೀಕ್ಷೆ : ವಿಶಾಖಭೂತಿಯೊಡನೆ ವಿಶ್ವನಂದಿಯುಂ ದಿಗಂಬರದೀಕ್ಷೆಯಂ ಕೆಯ್ಕೊಂಡಂ (ಶಾಂತಿಪು. ೭-೫೮ ವ).

[ ದಿಗಂಬರ + ದೀಕ್ಷೆ ]

**ದಿಗಂಬರಮುದ್ರೆ** (ನಾ). [ಜೈನ] ಬೆತ್ತಲೆಯಾಗಿರುವಿಕೆ ; ಬಟ್ಟೆಯನ್ನು ಧರಿಸದಿರುವಿಕೆ; ನಗ್ನತೆ: ಜೈನದೀಕ್ಷೆಯ ಕೊನೆಯ ಹಂತವಾದ ದಿಗಂಬರ ಮುದ್ರೆಯು ವಿಷಯದಲ್ಲಿ ಜನರು ಅರಿವಿಲ್ಲದೆ ಲಘುವಾಗಿ ಮಾತನಾಡುವುದುಂಟು (ಭಾರದ. ೧೮೫). [ ದಿಗಂಬರ + ಮುದ್ರೆ ]

**ದಿಗಂಬರರೂಪ** (ನಾ). ನಗ್ನರೂಪ ; ಬೆತ್ತಲೆಯ ಸ್ಥಿತಿ : ಆದಿತೀರ್ಥಕರ್ತಾರನ ದಿಗಂಬರರೂಪಮಂ ಕಾಣಲೊಡಂ ಶ್ರೀಮತಿಯಾದ ಭವದೊಳ್ ವಜ್ರಜಂಘನುಂ ತಾನುಮಿರ್ದ ಸರ್ಪಸರೋವರದೊಳ್ ಚಾರಣಯುಗಳಕ್ಕೆ ವಿಧಿಪೂರ್ವಕಂ ಮಹಾದಾನಮನಿತ್ತು (ಆದಿಪು. ೯-೧೩೦ ವ).

[ ದಿಗಂಬರ + ರೂಪ ]

**ದಿಗಂಬರಲೀಲೆ** (ನಾ). ೧. ಆಕಾಶದ ಶೋಭೆ. ೨. [ಜೈನ] ಬೆತ್ತಲೆಯಾಗಿರುವ ಸಂನ್ಯಾಸದ ಶೋಭೆ. ೧, ೨ : ತವೆ ತವುದೊಡ್ಡು ರಾಜಿಸಲೊಡರ್ಚೆ ದಿಗಂಬರಲೀಲೆ ಪುಟ್ಟೆ ಭೂಭುವನಜನಕ್ಕೆ ದರ್ಶನವಿಶುದ್ಧತೆ . . . ಜಿನಂ ಸಿವಿಗೆಯನೇಱುವಂತುದಯಶೈಲಮನೇಱಿದ ನಂಬುಜಪ್ರಿಯಂ (ಪುಷ್ಪಪು. ೧೩-೭೦). [ ದಿಗಂಬರ + ಲೀಲೆ ]

**ದಿಗಂಬರವಿಳಾಸ** (ನಾ). [ಜೈನ] ಬೆತ್ತಲೆಯಾಗಿರುವ ಸಂನ್ಯಾಸದ ಶೋಭೆ: ದಿಗಂಬರವಿಳಾಸಮಂ ಬಯಸುಕೆ ತೀರ್ವಿನಂ ತಾಳ್ದಿದಂ ಯುಗಂಧರ ಮಹಾಮುನೀಂದ್ರ ಪದಪಂಕಜೋಪಾಂತದೊಳ್ (ಆದಿಪು. ೩-೫೭).

[ ದಿಗಂಬರ + ವಿಳಾಸ ( = ವಿಲಾಸ) ]

**ದಿಗಂಬರವೇಷ** (ನಾ). = ದಿಗಂಬರತ್ವ : ಸಮರತಸೌಖ್ಯದೊಳ್ ಸತಿ ದಿಗಂಬರವೇಷಮನಾಂತು . . . ತನ್ನನೋರಮಣನ ಹೃನ್ನಿಧಾನಮನು ಪಾರ್ಜಿಪ ಯೋಗಿನಿಯಂತಿರೊಪ್ಪಿದಳ್(ಕಾವ್ಯಸಾ. ೭೭೫).[ದಿಗಂಬರ+ವೇಷ]

**ದಿಗಂಬರಿ**$_1$ (ನಾ). ನಗ್ನರೂಪದಲ್ಲಿರುವ ಸಂನ್ಯಾಸಿ : ಉಡು ಏಕಾಂತ ನಿವಾಸಿಯೆ ತೋಳ ದಿಗಂಬರಿಯೆ ಎತ್ತು ಬ್ರಹ್ಮಚಾರಿಯೆ ಬಾವುಲು ತಲೆಕೆಳಗಾಗಿರ್ದೊಡೆ ತಪಸ್ವಿಯೆ (ಸಮಾವ. ೨೦-೭೭). [ < ಸಂ. ದಿಗಂಬರ ]

**ದಿಗಂಬರಿ**$_2$ (ನಾ). ನಗ್ನಳಾಗಿರುವವಳು ; ಬೆತ್ತಲೆಯಾಗಿರುವವಳು : ಕನಕಪುತ್ಥಳಿಗೆ ಶಶಿಗಲ್ಲೊಪ್ಪವಿಟ್ಟು ತತ್ಕೊಳದ ಪರಿವೇಷದೊಳು ನಿಲಿಸಿ ದೊಲು ಹೆಟ್ಟಿಗೆಯ ರಂಗದೆಳೆವೆಳಗಿನಲಿ ದಿಗಂಬರಿಯರಂತೆ ಪರಿಶೋಭಿಸುತಿರೆ (ನವಮೋ. ೧೦-೫೭). [ ಸಂ. ದಿಗಂಬರೀ ]

**ದಿಗಂಬರೆ** (ನಾ). ಬೆತ್ತಲೆಯಾದವಳು ; ನಗ್ನೆ : ತನಿವೇಟದಲಿ ತಾಮಸಿ ದಿಗಂ[ಪಾಠಾಂ. ನಿಶಾಂ, ನಿರಂ]ಬರೆಯಾಗಿ ನಲಿದಪ್ಪಿದಳು ನಿಜಪತಿಯ (ತೊರರಾ. ೫-೩-೪). [ <ಸಂ. ದಿಗಂಬರೀ ]

**ದಿಗಡುದಿಮ್ಮಿ** (ನಾ). ಸೊಕ್ಕಿದವಳು ; ಕೊಬ್ಬಿದವಳು ; ಸ್ವೇಚ್ಛಾವೃತ್ತಿಯುಳ್ಳವಳು : ಆ ದಿಗಡುದಿಮ್ಮಿ ಸುನಂದಾ . . . ಅವಳ ದೆಸೆಯಿಂದ ಕೆಟ್ಟು ಹೋಗಿ ಬಿಟ್ಟಿದ್ದನಾತ (ಬಾಳಿಬಿ. ೫೩).

[ ದಿಗಡು$_0$ (←P ಹಿಂ. ಮರಾ. ಧೀಂಗಡ್) + ದಿಮ್ಮಿ$_0$ ]

**ದಿಗಣ, ಜಿಗಣ, ದಿಗಿಣ** (ನಾ). ಮದ್ದಳೆಯ ಶಬ್ದಕ್ಕೆ ಸರಿಯಾಗಿ ಕುಣಿಯುವ ಕುಣಿತ. **ಜಿಗಣ:** ತಾಳಮದ್ದಲೆ ಜಿಗಣಕ್ಕೆ ಸರಿಯಾಗಿ ಕುಣಿತಹಾಕಿ . . . ನಲಿಯುವುದು ಒಂದು ಭಾಗ (ಹುಟ್ಟಿಹ. ೮೩). **ದಿಗಿಣ:** 'ನನ್ನ ವೇಷ ಚಂದ . . . ನನ್ನ ದಿಗಿಣ ಬಲ' ಎಂದು ಬರಿದೆ ಆವರವರೇ ಅದನ್ನು ಕೊಚ್ಚಿಕೊಂಡರೆ ಸಾಕೇನು ? (ಸ್ವಸ್ವಹೊ. ೧೩೭).

**ದಿಗಣ ಹಾಕು** = ಮದ್ದಳೆಯ ತಾಳಕ್ಕೆ ಸರಿಯಾಗಿ ಕುಣಿ : ಇವೆಲ್ಲ ಒಂದು ಕುಣಿತವೋ ? ಬರಿದೆ ಕುಣಿದರೆ ಸರಿಯೆ ; ಇವಕ್ಕೆ ಗತ್ತು ಬೇಕೇ ? ಇದೆಲ್ಲ ಬರಿದೆ ದಿಗಣ ಹಾಕುವುದು (ಹಹಸ. ೩೫). [ ? ]

**ದಿಗದಿಗನೆ** (ಅ). ಒಂದು ಅನುಕರಣಾವ್ಯಯ ; ಬೇಗಬೇಗನೆ ; ರಭಸದೊಡನೆ : ದಿಗಿದಿಗಿ [ ದಿಗದಿಗ ] ನೊಡನಿದಿರಾಗಿ ಬಹಳು ನಸುನಗುತ ರಾಯನನಪ್ಪುವಂತೆ ಭುಗಿಲನೆ ತಿರುಗುವಳರಸನೊಳ್ಮುನಿದಡ್ಡ ಮೊಗವಿಕ್ಕಿ ಹೋಹಳೆಂಬಂತೆ (ಭರಚ. ೧೩-೭೫); ದಿಗಿದಿಗಿ [ ದಿಗದಿಗ ] ಮೆಯ್ದುಂಬು ಕಡೆಯ ಬಾಗಿಲ ಸಾರ್ದು (ಭರಚ. ೪೭-೪೧). [ ದಿಗದಿಗ$_0$ + –ಅನೆ$_1$ ]

**ದಿಗಧಿಪ** (ನಾ). ದಿಕ್ಕಿನ ಒಡೆಯ,– ದಿಕ್ಪಾಲಕ : ಸ್ತಂಬೇರಮನೆಂಟು ಮನೊತ್ತಂಬದೆ ದಿಗಧಿಪರೊಳೀಟ್ಟುಕೊಂಡು . . . ಖಳಂ ಶಿಕ್ಷಿಸಿದಂ (ಜಗವಿ. ೧೧-೮೧) ; ದಿಗಧಿಪರಂ ತೆರಳ್ಚುವೆವೊ ನಾಗನಿವಾಸದ ಶೇಷನಂ ಬರಲ್ ತೆಗೆವೆವೊ ... ಬಗೆಮಿಗೆ ಪೇಟಿವೆಂಬ ಕಡುಪಂ ತಳೆದಿರ್ದವಿಳಾಧಿನಾಯಕಾ (ದಶಕು. ೪-೧೭). [ ಸಂ. ]

**ದಿಗಧೀಶ** (ನಾ). = ದಿಗಧಿಪ : ಮಹಿಳಾಸಹಿತಂ ವಾಹನಸಹಿತಂ ಸಂಗೀತಸಹಿತಮತಿಶುದ್ಧಮನಸ್ಸಹಿತಂ ನಿಜವಿವಿಧಾಯುಧಸಹಿತಂ ನಿಬವೇಟ್ಟು ನೆಲೆಯೊಳಿರೆ ದಿಗಧೀಶರ್ (ಶಾಂತಿಪು. ೧೦-೩೨) ; ದಿಗಧೀಶರ್ ಜಗದೀಶರೊಳ್ ಪೊಲಗಿಡಲ್ ದಿಗ್ದಂತಿಗಳ್ ಸೈನ್ಯದಂತಿಗಳೊಳ್ ಪಲ್ಲಟವಾಗಲ್ (ಜಗವಿ. ೧೫-೮೦); ಆಯೆಡವಂಕ ಬಲವಂಕದಿ ಕೇಶವಾಂಬುಜಪುತ್ರರಿಂದ್ರಾಗ್ನಿಯಮ ನಿರುತಿ ಪಾಶಧರರನಿಲವಿತ್ತಪನೀಶನೆಂಬ ದಿಗಧೀಶರಿರ್ದರು (ಸಿದ್ಧರಾ. ೧-೧೮). [ ಸಂ. ]

**ದಿಗಧೀಶಕಾಂತೆ** (ನಾ). ದಿಕ್ಕಿನ ಒಡೆಯನಾದವನ ಸತಿ,–ಕಾಂತೆ ; P ಶಚೀದೇವಿ, ಸ್ವಾಹಾ ಮತ್ತು ಸ್ವಧಾ, ಶ್ಯಾಮಲಾದೇವಿ, ದೀರ್ಘಾದೇವಿ, ಋದ್ಧಿ ಮತ್ತು ವಾರುಣಿ, ಅಂಜನಾ, ಋದ್ಧಿ, ಶಿವೆ–ಇವರು ಕ್ರಮವಾಗಿ ಅಷ್ಟದಿಕ್ಪಾಲಕರ ಪತ್ನಿಯರು : ದಿಗಧೀಶಕಾಂತೆಯರ್ ಮಿಂದೊಗೆದಾಗಳ್ತಂದು ಕೇಶಸಂಸ್ಕಾರಕ್ಕಾವಗಮಂತೆ ಧೂಪವರ್ತಿಯೆ ಪೊಗೆದತ್ತೆನಿಸಿ ದೆಸೆದೆಸೆಯೊಳೆಸೆದತ್ತು ತಮಂ (ಪಾರ್ಶ್ವಪು. ೧೦-೧೩).

[ ದಿಗಧೀಶ + ಕಾಂತೆ ]

**ದಿಗಧೀಶಪದವಿ** (ನಾ). ದಿಕ್ಪಾಲಕನ ಅಧಿಕಾರ : ಧನಕ್ಕೊಡೆಯಂ ಕುಬೇರನಾಗಿ ಮೆಚಿದಿರ್ಪುದೆಂದು ದಿಗಧೀಶಪದವಿಯಿತ್ತು . . . ಭಕ್ತರಂ ಪೊರೆಯುತಿರ್ದಂ (ಅದ್ಭುತ. ೧೯-೯). [ ದಿಗಧೀಶ + ಪದವಿ ]

**ದಿಗರ್** 'ದಿಗರು' ನೋ.

**ದಿಗರ್‌ಜವಾಬು** 'ದಿಗರುಜವಾಬು' ನೋ.

**ದಿಗರ** 'ದಿಗರು' ನೋ.

**ದಿಗರು, ಡಿಗರು, ದಿಗರ್, ದಿಗರ, ದಿಗುರು** (ನಾ). ೧. ಪ್ರತಿಯಾಗಿ ಹೇಳುವುದು ; "ಎದುರುವಾದಿಸುವುದು ; ವಾದ" (ಜಾನಕೋ. ೫). 'ದಿಗರುಜವಾಬು' ಪರಾ. **ಡಿಗರು:** ೨. "ಸೊಕ್ಕು ; ಗರ್ವ" (ಜಾನಕೋ. ೭೩). **ದಿಗರ್:** (ಗು). ೩. ಅನ್ಯ; ಬೇರೆಯಾದ: (ಕ). **ದಿಗರ:** ೩. ದಿಗರ ತಾಲ್ಲೂಕಿಗೆ ಹೋಗಿರುವ ರೈತರು . . . ಜಿರಾಯಿತು ಕೆಲಸದಲ್ಲಿಡಬೇಕು (ಮುಹಾಮಂ. II, ೬೨). **ದಿಗುರು:** ೧. 'ದಿಗುರುತ್ತರ' ಪರಾ. [ ← ಪಾರ. ಮರಾ. ದಿಗರ್ ; ಹಿಂ. ದಿಗರ್, ದಿಗಾರ್ ]

**ದಿಗರುಜವಾಬು, ದಿಗರ್‌ಜವಾಬು** (ನಾ). ಎದುರುತ್ತರ ; "ವಿರುದ್ಧ ಮಾತಾಡುವುದು" (ಜಾನಕೋ. ೫). **ದಿಗರ್‌ಜವಾಬು:** ವಿಪ್ರಲಂಭಃ, ವಿಸಂವಾದಃ – ೨ ವಿಪರೀತವಾಗಿ ನುಡಿಯುವದು ಅಂದರೆ ಕ್ರಮತಪ್ಪಿ ಮಾತಾಡುವದು, ಅಥವಾ ದಿಗರ್‌ಜವಾಬು ಕೊಡುವದು (ಸಿದ್ಧಾಂತಿ. ೬೯).

[ ದಿಗರು + ಜವಾಬು ]

**ದಿಗವಲೋಕನ** (ನಾ). ಎಲ್ಲಾ ದಿಕ್ಕುಗಳನ್ನು ನೋಡುವುದು. 'ದಿಗವಲೋಕನಗೃಹ' ಪರಾ. [ ಸಂ. ]

**ದಿಗವಲೋಕನಗೃಹ** (ನಾ). ಎಲ್ಲಾ ದಿಕ್ಕುಗಳನ್ನೂ ನೋಡಲಾಗುವಂತೆ ಕಟ್ಟಿದ (ಎತ್ತರವಾದ) ಮನೆ : ಗಿರಿಕೂಟಮೆಂಬ ದಿಗವಲೋಕನಗೃಹಮುಂ ವರ್ಧಮಾನಮೆಂಬೀಕ್ಷಣಪ್ರಿಯ ಪ್ರೇಕ್ಷಾಗೃಹಮುಂ (ಆದಿಪು. ೧೫-೩ ವ) ; ದಿಕ್‌ಸ್ವಸ್ತಿಕಮೆಂಬ ಸುಧಾಭೂಮಿಯುಂ ಸುವಿಧೆಯೆಂಬ ಚಕ್ರಮುಮಮಾಯಷ್ಟಿಯುಂ ಗಿರಿಕೂಟಮುಮೆಂಬ ದಿಗವಲೋಕನಗೃಹಮುಂ (ಅಜಿಪು. ೧೦-೧ ವ). [ ದಿಗವಲೋಕನ + ಗೃಹ ]

**ದಿಗಟಿ** (ನಾ). ಒಂದು ಮನೆತನದ ಹೆಸರು; ಸ್ವಸ್ತಿಶ್ರೀದಿಗಟಿರ ಬೆಸುಗಿ ಕೊಟ್ಟದು ಗೋಸಹಸ್ರ ನಾಲ್ಕುಕೇರಿಗೆ ನೆಚಿಯ ಗೋಸ[ ಹ ]ಸ್ರಂ (ಎಕ. VII, ಶಿಕಾರಿ. ೪೫-೨೦ ; ಸು. 890 ?). [ ? ]

**ದಿಗಾರ** (ನಾ). [ಅಶ್ವಶಾ] ಕುದುರೆಗೆ ಬರುವ ಒಂದು ಬಗೆಯ ಬೇನೆ,–ಶೂಲೆ : ನಾಲ್ಕನೆಯ ಜಾವದ ಶೂಲೆಗೆ ದಿಗಾರವೆಂಬುದು (ಅಶ್ವಟೀ. ೧೦೩-೧೧). [ ? ]

**ದಿಗಾಳಿ** (ನಾ). ದಿಕ್ಕುಗಳ ಗುಂಪು,–ಸಾಲು : ವಾಜಿ ಸಿಂಧುರ ರಥವೃಂದ ಮಾರ್ಭಟಿಸಿ . . . ಪೋರ್ದುದು ಭೂಮಿ ದಿಗಾಳಿ ಕಂಪಿಸೆ (ಹಮ್ಮೀರ. ೩-೪೧). [ ಸಂ. ದಿಗಾಲಿ ]

**ದಿಗಿಣ** 'ದಿಗಣ' ನೋ.

**ದಿಗಿಭ** (ನಾ).=ದಿಗ್ಗಜ ೧ : ದಿಗಿಭ ನಿಭಂಗಳಪ್ಪ ಸಮರದ್ವಿರದಂಗಳ ಯುದ್ಧಕೇಳಿಯುಂ ಬಗೆಗೊಳೆ ನೋಡಲುಂ ನೆಗಟ್ದ ಮಲ್ಲರುಮಂ ಪಿಡಿದೊತ್ತಿ (ಆದಿಪು. ೮-೪೮) ; ಜ್ಯಾರಾವಕ್ಕಗಿದಳ್ಕಿ ಬಳ್ಕಿ ದಿಗಿಭಂ ಕೋದಂಡದೊಳ್ಪ್ಪಡಿಕೊಂಡಾರುತ್ತುಂ ನಿಶಿತಾಸ್ತ್ರದಿಂದಿಸೆ (ಪಂರಾಮಾ. ೧೩-೧೨೦) ; ಜಲಧಿ ಮೇರೆಯನೊದೆದು ಹಾಯಲಿ ನೆಲನನಿಳುಹಲಿ ದಿಗಿಭವಿಸಮಂಡಲಕೆ ಕಾಳಿಕೆಯಿಡಲಿ ನಡೆದಾಡಲಿ ಕುಲಾದ್ರಿಗಳು (ಕುಮ್ಯಾವಿ. ೭-೨೩). [ ಸಂ. ]

**ದಿಗಿಭೇಂದ್ರ** (ನಾ). ದಿಗ್ಗಜಗಳಲ್ಲಿ ಶ್ರೇಷ್ಠವಾದುದು ; ಐರಾವತ : ನೆಗಟ್ದಮರನಗೇಂದ್ರಮನಾ ದಿಗಿಭೇಂದ್ರಂ ಪೊರ್ದಿದಲ್ಲಿ ಸುರತರುರ್ಯರವಂ ನೆಗಟ್ಚೆನೆಗಂ ಕನಕಾದ್ರಿಗೆ ಖಗಾದ್ರಿ ಸಂತಸದೆ ಬಿರ್ದುವಂದಂತಿರ್ದಂ (ಅಜಿಪು. ೪-೨೭). [ದಿಗಿಭ + ಇಂದ್ರ ]

**ದಿಗಿಲ್, ದಿಗಿಲು** (ನಾ). ೧. ಒಂದು ಅನುಕರಣ ಶಬ್ದ. 'ದಿಗಿಲನೆ' ಪರಾ. ೨. ಹೆದರಿಕೆ ; ಭಯ ; "ಜಜ್ಜರಿತ ಧೈರ್ಯ" (ಚತುನಿ. ಕ. I, ೬೪). **ದಿಗಿಲು :** ೨. ಪುಟ್ಟ ದಿಗಿಲುರದಲ್ಲಿ ನಯನಗಳಿಟ್ಟು ನೋಡುಂಗಾಂಗ ಭಸಿತದಿ ಕಟ್ಟಿದುರುಲಿಂಗವನು ಕಂಡಳು (ಬಿಜ್ಜಪು. ೯೪-೧೭) ; ಹಿರಿತನಕೂ ಕೆಳೆತನವೇ ಮಿಗಿಲು ಇದರೊಳಿಲ್ಲ ಔಚಿತ್ಯದ ದಿಗಿಲು (ಗಣೇಶ. ೨-೨೮) ; ಇನ್ನು ಅವನಿಗೆ ಯಾರ ದಿಗಿಲೂ ಇಲ್ಲ (ಆರ್ಯಕ. ೧೪).

೩. ದಿಗ್ಭ್ರಮೆ ; ದಂಗು ; ಕಕ್ಕಾವಿಕ್ಕಿ. 'ದಿಗಿಲುಗೊಳು' ಪರಾ.

**ದಿಗಿಲುಭುಗಿಲಾಗು** = ಗಾಬರಿಯುಂಟಾಗು ; ತಳಮಳವಾಗು : ಗೌರಿಗೆ ಎದೆಯಲ್ಲೆಲ್ಲಾ ದಿಗಿಲುಭುಗಿಲಾಯಿತು (ನಡದಾ. II, ೮೯೨).

[ ದೇ.॥ ತಮಿ. ತಿಕಿಲ್, ತಿಕಿರ್ ; ತುಳು. ದಿಗಿಲ್ ; ತೆಲು. ದಿಗುಲು ]

**ದಿಗಿಲನೆ** (ಅ). ದಿಗಿಲ್ ಎಂದು : ಪಗಲು ಕಡೆಗಾಣೆ ತಮವೆಂಬ ಗಿಡುಗಂ ಗಳ್ಕಿ ಖಗದ ಮಱಿಗಳು ಬಿಗುತೆರ್ೞಿಡಿ ಮನೆ ಮನೆಯ ಗೂಡುಗಳ ಪೊಕ್ಕೆದ ದಿಗಿಲನುರಿಯಲಂತ್ಕದ ಗುಣವ ಸಾರುತಸ್ಪೃಶ್ಯಮಾಗಿ ಪೊಗವೆಯ್ದೆ ಹೊತ್ತಿ ಹೊಗೆವಂತುರಿಯುತಿರ್ಪ ದೀವಗಳ ಸಂತೈಸಲ್ಕೆತಂದಂದದಿಂ ಪೂರ್ವ ನಗದಗ್ರದೊಳಗುದಯವಾದನಾ ತರಣಿ (ಧಾವಜಂ. ೭-೧೪). 'ಧಿಗಿಲನೆ' ಪಠಾ. [ ದಿಗಿಲ್ + – ಅನೆ$_1$ ]

**ದಿಗಿಲಾನ್** (ಕ್ರಿ). ಭಯವನ್ನು ಹೊಂದು ; ಹೆದರು : ದಿಗಿಲಾಂತು ಪತ್ರೋಪಹಾರವ ತಂದಿತ್ತರವಗೆ (ಪೋಹತ. ೧೯-೭೨); ವಿಗಡವಾಗಿದೆ ನಿನ್ನ ಪಯಣಕ್ಕೆಯೆನ್ನದೆ ದಿಗಿಲಾಂತುದೀ ಗಳಿಗೆಯೊಳು ಅಗಲಿದೊಡೆಂತು ಜೀವಿಪೆನು (ಪೋಹತ. ೨೮-೪೯). [ ದಿಗಿಲ್ + ಆನ್$_1$ ]

**ದಿಗಿಲಿಸು** (ಕ್ರಿ). ೧. ಶೋಭಿಸುವಂತೆ ಮಾಡು ; ವಿಜೃಂಭಿಸುವಂತೆ ಮಾಡು; ಮೆರೆಸು (?) : ಬಂದನೊಲವಿಂ ಗೊರವ ಕುಂಕುಮ ಗಂಧದನು ಲೇಪನದ ಕೊರಳೊಳಗೊಂದಿದೊಚ್ಚ ರಗವಡೆಗಳ ಕಂಬಳಿಯ ಕುಪ್ಪಸದ ಚಂದದಿಂ ಪೀಲಿಯ ಚವುರ ಛತ್ರಂ ದಿಗಿಲಿಸುತೆ ತುರಗಗಮನದಿ ಮುಂದೆ ನುಡಿಸುವ ಢಕ್ಕೆಗಳ ಕೊಂಬುಗಳ ರವ ಮೊಳಗೆ (ಶಂಕರದಾ. ೧೩-೩೩) ; "ಅಲ್ಲಾಡಿಸು" (ಶಂಕರದಾ. ಕೋಶ). ೨. (?) : ಸಚ್ಚಿದಾನಂದೈಕ ಭಕ್ತರು ನಿಚ್ಚಳದಿ ಹರಶರಣರ್ಗೆತಂದುಚ್ಚವದಿ ಗಣಪರ್ವಗಳ ಮಾಡಿದರು ತಮ ತಮಗೆ ಅಚ್ಚರಿಯವಹ ಸಂಭ್ರಮಂಗಳ ಸಚ್ಚರಿತ ದಿಗಿಲಿಸುತೆ ಲಿಂಗದಿ ಬೆಚ್ಚುತಾನಂದಾರ್ಣವದೊಳೋಲಾಡುತೊಪ್ಪಿದರು (ಶಂಕರದಾ. ೫-೨೮) ; "ದಂಗಾಗುವಂತೆ ವರ್ಣಿಸು" (ಶಂಕರದಾ. ಕೋಶ).

[ ದಿಗಿಲ್$_0$ + – ಇಸು$_3$ ]

**ದಿಗಿಲು** 'ದಿಗಿಲ್' ನೋ.

**ದಿಗಿಲುಗನಸು** (ನಾ). ಗಾಬರಿಗೊಳಿಸುವ ಕನಸು : ಹಗಲುಗನಸುಗಳು ದಿಗಿಲುಗನಸುಗಳು ಬರಲು ಜಾತ್ರೆಗಾಗಿ ಹೃದಯ ಹೃದಯಗಳ ಕೂಡಲಾಗು ವುದು ದೇವಯಾತ್ರೆಗಾಗಿ (ಸೂರ್ಯಪಾ. ೩೪-೧೧).

[ ದಿಗಿಲು (<ದಿಗಿಲ್) + ಕನಸು ]

**ದಿಗಿಲುಗೊಳ್**, ದಿಗಿಲುಗೊಳು, ದಿಗಿಲುಗೊಳ್ಳು (ಕ್ರಿ). ೧. ಹೆದರು ; ಅಂಜು ; ಭಯಪಡು. 'ದಿಗಿಲುಗೊಳಿಸು' ಪಠಾ. **ದಿಗಿಲುಗೊಳು :** ೨. ದಿಗ್ಭ್ರಮೆಗೊಳ್ಳು; ದಿಕ್ಕು ತೋಚದಂತಾಗು. ದುಗುಡದಿಂ ಬಳಲು ವನು! ಹೇರನಿಳಿಸಿದೆಯಾ? ದಿಗಿಲುಗೊಳುವನು! ನೀನು ದಾರಿ ತಿಳಿಸಿದೆಯಾ? (ಕಎಪು. ೩೭-೧). **ದಿಗಿಲುಗೊಳ್ಳು :** ೧. ಮುಗಿಲ ಚರಿತೆಯ ಕೇಳಿರಿ ! ಮೊಗವ ಕಂದಿಸಿ ನುಡಿಯ ನಂದಿಸಿ ದಿಗಿಲುಗೊಳ್ಳಲು ಬೇಡಿರಿ (ಕಎಪು. ೩೦-೧೪) ; ನಾನು ದಿಗಿಲುಗೊಂಡು ತಕ್ಷಣ ಎದ್ದು ಕಛೇರಿಗೆ ಬಂದೆ (ನಾಪೂರೀ. ೩೮). ೨. ಗಿರಿಯ ದಿಗಿಲುಗೊಂಡು ಕಂಬದಂತೆ ನಿಂತುಕೊಂಡಿದ್ದ (ಮುಙ್ಮಹೆ. ೯೦) ; ಆದಿನಾಥ ದಿಗಿಲುಗೊಂಡು ಪ್ರಶ್ನಿಸಿದ (ಅಶ್ರಮ. ೧೨).

[ ದಿಗಿಲು (<ದಿಗಿಲ್) + ಕೊಳ್$_1$ ]

**ದಿಗಿಲುಗೊಳಿಸು** (ಕ್ರಿ). ಹೆದರಿಕೊಳ್ಳುವಂತೆ ಮಾಡು ; ಭಯಪಡು ವಂತೆ ಮಾಡು : (೬). [ ದಿಗಿಲುಗೊಳ್ + – ಇಸು$_3$ ]

**ದಿಗಿಲುಗೊಳು** 'ದಿಗಿಲುಗೊಳ್' ನೋ.

**ದಿಗಿಲುಗೊಳ್ಳು** 'ದಿಗಿಲುಗೊಳ್' ನೋ.

**ದಿಗಿಲುಬಡಿ** (ಕ್ರಿ). ಹೆದರಿಕೆಯಾಗು ; ಭಯವುಂಟಾಗು : ರಂಗಣ್ಣನಿಗೆ 'ಇದು ಏನೋ ಪೇಚೀ ಬಂತು' ಎಂದು ದಿಗಿಲುಬಡಿದರೂ ತೋರಗೊಡ ಲಿಲ್ಲ (ಅಪನಾ. ೧೩). [ ದಿಗಿಲು (<ದಿಗಿಲ್) + ಬಡಿ$_1$ ]

**ದಿಗಿಲುಬೀಳು** (ಕ್ರಿ). ಗಾಬರಿಯುಂಟಾಗು ; ಅಂಜಿಕೆಯಾಗು ; ಭಯ ವಾಗು : ಅದು ಕೋಣವೋ ಬ್ರಹ್ಮರಾಕ್ಷಸವೋ ಎಂದು ಅವನಿಗೆ ದಿಗಿಲು ಬಿತ್ತು (ಕಂಬಹು. ೫೧). [ ದಿಗಿಲು (<ದಿಗಿಲ್) + ಬೀಳು$_1$ (<ಬೀೞ್$_1$) ]

**ದಿಗಿಲುಹಾರು** (ಕ್ರಿ). ದಿಗ್ಭ್ರಮೆಯಾಗು ; ಗಾಬರಿಬೀಳು : ಐದು ನಿಮಿಷ ಕ್ಕೊಂದು ರೈಲು ಬರುವ ಗದ್ದಲ ನೋಡಿಯೇ, ನನಗೆ ದಿಗಿಲುಹಾರಿದೆ (ಅಳನಿ. ೧೧೯). [ ದಿಗಿಲು (<ದಿಗಿಲ್) + ಹಾರು$_2$ (<ಪಾಱು$_1$) ]

**ದಿಗಿಲೆನ್** (ಕ್ರಿ). ಹೌಹಾರು ; ಭಯಪಡು : ಸ್ಮರಜಸಾಧ್ವಸದಿಂ ದಿ[ಪಾಠಾಂ. ಧಿ]ಗಿಲೆಂದು ಗೂಡುವಾಯ್ದುದು ನೃಪಕನ್ನೆಗಾಗಳೆರ್ದೆ ನೋಡಲೊಡಂ ಮನುವಂಶಮೇರುವಂ (ವರ್ಧಪು. ೬-೧೩) ; ದಿಗಿಲೆಂದಿತ್ತು ವಿಯೋಗಿ ವೃಂದ ಹೃದಯಂ ವಾಸಂತಿಕಾವಾಸದೊಳ್ (ಗಿರಿಶ. ೭-೩೮) ; ಬಸವಯ್ಯ ಹೊಗಳುತಿರಲ್ ಹದನಱಿದೆದೆ ದಿ[ಪಾಠಾಂ. ಧಿ]ಗಿಲೆನುತ್ತಾ ಕಿನ್ನರಯ್ಯನು ಮುಗಿದ ಕೈಗಳುವೆರಸಿ ಪರಿತಂದ (ಬಸಪು. ೨೯-೩೨) ; ಕಾಂತರಾಲಿಂಗನ ದೊಳು ಪೊಂಚಿರ್ದ ಕಾಮಿನಿಯರೆದೆ ದಿ[ಪಾಠಾಂ. ಧಿ]ಗಿಲೆನಲ್ (ಪ್ರಮಿಥಾ. ೨೭-೨೪). [ ದಿಗಿಲ್ + ಎನ್$_1$ ]

**ದಿಗಿಲೇಳು** (ಕ್ರಿ). ದಿಗಿಲ್ ಎಂದು ಏಳು ; ರಭಸದಿಂದ ಏಳು : ದಿಗಿಲೆದ್ದ ಗಾಳಿಗಳ ಬಿಗಿದಿಟ್ಟು ಹಗಲ ಹಗಲಿನ ಮೇಲೆಯೊಂದು ಕಾಲನ್ನಿಟ್ಟು ಮುಗಿಲಿ ನೊಳು ಮುಗಿಯದಂತಾಗಿ ಮೇಲಕೆ ಸಾಗಿ ನಿಂತೆಯೊ ವಿರಾಟನಾಗಿ (ಗರಿ. ೯-೧೩). [ ದಿಗಿಲ್ + ಏಳು$_1$ (<ಏೞ್$_1$) ]

**ದಿಗೀಶ** (ನಾ). = ದಿಕ್ಪತಿ : ಶ್ರೀಶಭಾಷಾಧೀಶರುಂ ದೇವೇಶ ಮುಖ್ಯ ದಿಗೀಶರುಂ . . . ಯೋಗಾಚಾರ್ಯರುಂ ನೆರೆದೋಲಯಿಸುತಿರಲು (ಬಸಪು. ೨೪-೪೮). [ ಸಂ. ]

**ದಿಗೀಶ್ವರ** (ನಾ). = ದಿಕ್ಪತಿ : ಸರವೆತ್ತಿ ಪಾಡುವೈದೆಯರ ಗಾನಂ ದಿಗೀಶ್ವರರ ಕಿವಿಗಾನಂದಮಂ ಕಱೆಯೆ (ಚಬಪು. ೬-೫೪). [ ಸಂ. ]

**ದಿಗುಜಾತ** (ನಾ). ದಿಕ್ಕುಗಳ ಗುಂಪು, –ಸಮೂಹ : ಭೂತಳವನಂಬರವನಾ ದಿಗುಜಾತವನು ಬೆಳಗುತ್ತ ಸುಜನವ್ರಾತವೀಕ್ಷಿಸಲ್ಕೆದಿಶೀ ಪುನರ್ಭವದ ಸಂಸ್ಥಿತಿಯ (ನಿಭಾಗ. ೬-೧೧-೨೭). [ <ಸಂ. ದಿಗ್ಜಾತ ]

**ದಿಗುಜಾಲ** (ನಾ). = ದಿಗುಜಾತ : ಸೂಳು ವಿಗಲಿಲ್ಲರಿದವುರು ನಿಸ್ಸಾಳ ಕೋಟಿಗಳುದಯದಲಿ ದಿಗುಜಾಲ ಜರಿಯಲು . . . ನಡೆದುದು ಸೇನೆ ರವಿನಂದನನ ನೇಮದಲಿ (ಕುವ್ಯಾಕ. ೨-೨). [ <ಸಂ. ದಿಗ್ಜಾಲ ]

**ದಿಗುಡು** 'ತಿಗುಡು$_1$' ನೋ.

**ದಿಗುತಟ** (ನಾ). = ದಿಕ್ತಟ : "ದಿಗುತಟ – ದಿಕ್ತಟ – ದಿಗಂತ" (ತದ್ಭಕೋ. ೧೯) ; ಪೂರ್ಣಶಶಿಮಂಡಲದವೊಲು ತನುಕಾಂತಿ ತಿವಿದುದು ನಿಖಿಳ ದಿಗು ತಟವ (ಕುವ್ಯಾಕ. ೮-೧೯) ; ಹತ್ತು ದಿಗುತಟ ತುಂಬೆ ರಾಯರ ಮೊತ್ತ ಗಟ್ಟಿದ ಸೇನೆ ಸಹಿತವೆಯೆತ್ತಿ ಬಂದುದು ಜನಕಭೂಪನ ರಾಜಮಂದಿರಕೆ (ಕಾಶಿರಾ. ೨-೮). [ <ಸಂ. ದಿಕ್ತಟ ]

**ದಿಗುದಂತಿ** (ನಾ). = ದಿಗ್ಗಜ ೧ : ಅಗುರ್ವ್ವರ್ವೆತ್ತು ಪೋಲ್ವುದು ದಿಗು ದಂತಿಯುಂ ವಿಜಯಕಾರಣವಣ್ಣನ ಗಂಧವಾರಣ (ಎಕ. VII, ಚನ್ನಗಿ. ೩೯-೩೨ ; 1149) ; ಕೀರ್ತ್ತಿಯಪ್ಪದಿಗುದಂತಿಪರೀತ ಮಹೀತಳಾಗ್ರದೊಳು (ಎಕ. XV, ಅರಸೀ. ೨೧೭-೪೭ ; 1232) ; ಪ್ರಳಯಜಲನಿಧಿಯಂತೆ ದಳ ಬರಲಿಳೆ ಕುಸಿಯೆ ಕಮಠಂಗೆ ಮೇಲುಸುರುಲಿಯೆ ದಿಗುದಂತಿಗಳು ಮೊಣ ಕಾಲೂರಿ ಮನಗುಂದೆ (ಕುವ್ಯಾಉ. ೧೧-೪೦). [ <ಸಂ. ದಿಗ್ದಂತಿನ್ ]

**ದಿಗುನಿಚಯ** (ನಾ). ದಿಕ್ಕುಗಳ ಗುಂಪು, –ಸಮೂಹ : ತನುರುಚಿ ವಿಶದ ದಿಂದಾವರಿಸಿ ದಿಗುನಿ[ಪಾಠಾಂ. ಪ್ರ]ಚಯದೊಳು ಥಳಥಳಿಸಿ ಬೆಳಗಿದುದೇನ ಬಣ್ಣಿಸುವೆ (ಬಸಪು. ೮-೧೧). [ <ಸಂ. ದಿಙ್ನಿಚಯ ]

**ದಿಗುಪಾಲ** (ನಾ). ದಿಕ್ಕಿನ ಒಡೆಯ, –ಪ್ರಭು ; ದಿಕ್ಪಾಲ : ಧ್ಯಾನದಲಿ ಕೈಮುಗಿದು ಶಂಕರ ನೀನೆ ಗತಿಯೆಂದೆನುತಲಾ ಶಶಿ ಭಾನು ದಿಗುಪಾಲರಿಗೆ ನಮಿಸುತ ಕೇಳಿ ನೀವೆಂದ (ಕುವ್ಯಾಅ. ೩-೨೮). [ <ಸಂ. ದಿಕ್ಪಾಲ ]

**ದಿಗುಪಾಲಕ** (ನಾ). = ದಿಗುಪಾಲ : ದಿಗುಪಾಲಕರು ನಿಜಮಂದಿರಕೆ ಸರಿದರು (ಕುವ್ಯಾಅ. ೧೩-೦೨). [ <ಸಂ. ದಿಕ್ಪಾಲಕ ]

**ದಿಗುಬಂಧನ** (ನಾ). ೧.=ದಿಗ್ಬಂಧನ ೧. ೨. (ಪ್ರಾಣಿಗಳಿಗೆ ಓಡಿ ಹೋಗಲು ಅವಕಾಶವಿಲ್ಲದಂತೆ) ಎಲ್ಲ ಕಡೆಗಳಿಂದಲೂ ಅಡ್ಡಿ ಮಾಡುವಿಕೆ,–ನಿರ್ಬಂಧಪಡಿಸುವಿಕೆ: ಎಡೆಗೊಡದು ಬೇಂಟೆ ದಿಗುಬಂಧನಂ ಮಾಡು ಕಾಡೊಡೆಯುನಂ ನೋಸು ಸೊಕ್ಕಿನ ಧೂಪವಮಂ ಬೀಸು (ಹದಳ. ೫-೨೯). [ <ಸಂ. ದಿಗ್ಬಂಧನ ]

**ದಿಗುಬಲಿ** (ನಾ). = ದಿಗ್ಬಲಿ ೨: ತಿಳಿಯದೊಡಲಂ ಕಡಿಕಡಿದು ದಿಗುಬಲಿಯನೀಯಲೆ ನೋಡುವಂ (ಬಸಪು. ೪೫-೨೮); ಅವರ ತನುವನು ಯುದ್ಧರಂಗದಲಿ ದಿಗುಬಲಿಯ ಕೊಡಿಸುವೆನು (ಕುವ್ಯಾಆ. ೮-೭); ನಿಃಶಂಕರಹ ಮೂವರನು ದಿಗುಬಲಿಯ ಕೊಡುವೆನೆಂದೆನುತ (ಕೌಶಿರಾ. ೩೯-೪೨); ಅವನಂ ಸೀಳ್ದು ದಿಗುಬಲಿಯನೀಯಬೇಕಲ್ಲದೆ ಬಾಳ್ವುದೇ ಕೆನುತಿಂದ್ರನಂ ವೃತ್ರಜಂಭರಾರ್ದೆಚ್ಚರೆಂದು (ಚಬಪು. ೪೯-೧೫).
[ <ಸಂ. ದಿಗ್ಬಲಿ ]

**ದಿಗುಬಲಿಗೊಡು** (ಕ್ರಿ). ೧. ದಿಕ್ಕುಗಳಿಗೆ ಬಲಿಯನ್ನು ಕೊಡು. ೨. (ಆಲಂ) ಚೂರುಚೂರಾಗುವಂತೆ ಕಡಿದು ಎಸೆ,–ಬಿಸುಡು: ಅಡವಿಯಲಿ ಹಿಂದೆಮ್ಮ ತಂದೆಯ ಕೆಡಹಿದಾತನೆ ಸಿಕ್ಕಿದೆಯಲಾ ಕಡಿದು ದಿಗುಬಲಿಗೊಡುವೆ ಬಿಡೆ ಬಿಡೆ ಹೋಹೆಯೆನ್ನೆತ್ತ . . . ಎನುತಸುರ ರಾಮನನೆಚ್ಚ ಮೂದಲಿಸಿ (ಕೌಶಿರಾ. ೩೫-೨೮); ನೆಱಿ ನಿಮ್ಮ ನೆನೆಯ ಲೊಲ್ಲದ ಕುಱಿಮನವಮಂ ಸುಡುವೆಸಡುವೆ ದಿಗುಬಲಿಗೊಡುವೆಂ (ಶಂಕಕಂ. ೦೬). [ ದಿಗುಬಲಿ + ಕೊಡು$_1$ ]

**ದಿಗುಬಲಿಯಿಕ್ಕು** (ಕ್ರಿ).=ದಿಗುಬಲಿಗೊಡು ೨: ಹೊಕ್ಕು ಹಗೆಗಳ ಹೊಯ್ದು, ದಿಗುಬಲಿಯಿಕ್ಕಿ ನನ್ನಯ ಹರುಷಜಲಧಿಯನುಕ್ಕಿಸಲು ಬೇಕು (ಕುವ್ಯಾಭೀ. ೦-೩೨). [ ದಿಗುಬಲಿ + ಇಕ್ಕು ]

**ದಿಗುಭಾಗ** (ನಾ). ದಿಕ್ಕಿನ ಭಾಗ; ದೆಸೆ: ಮೇರುಪರ್ವತದ ದಕ್ಷಿಣ ದಿಗುಭಾಗದ ಭರತಕ್ಷೇತ್ರದೊಳು (ಇಆ. XII, ೯೭-೦೪; 1187); ಆಗಳಾವುದು ನೆಲನು ನಭ ದಿಗುಭಾಗವೆಲ್ಲಿಯದೆನಲು ಕಣೆಗಳು ತೂಗಿ ತುಱುಗಿದವರಿಭಟನ ಕರಿಘಟೆಯ ಮೈಗಳಲಿ (ಕುವ್ಯಾಕ. ೨-೧೯).
[ <ಸಂ. ದಿಗ್ಭಾಗ ]

**ದಿಗುಭ್ರಮೆ** (ನಾ). ದಿಕ್ಕುತೋಚದಿರುವಿಕೆ; ಗಾಬರಿ: ರಣಮಹೀಸಂತ ಮಸಶಾಂತೇಕ್ಷಣರು ದಿಗುಭ್ರಮೆಯಲಿ ಸ್ವಕೀಯ ಕ್ಷಣನವನು ರಚಿಸಿದರು (ಕುವ್ಯಾದ್ರೋ. ೦೫-೩೦). [ <ದಿಗ್ಭ್ರಮೆ ]

**ದಿಗುಮಂಡಲ** (ನಾ). = ದಿಙ್ಮಂಡಲ: ಉದ್ದಂಡ ಪದಹತಿಗಿಳೆ ಚಲಿಸಿ ದಿಗುಮಂಡಲಂ ಕಿವುಡಾಗೆ ಬಹುವಾದ್ಯಧ್ವನಿಗಳಿಂದ (ಬಸಪು. ೫-೧೪); ಇಳಿದುದೀ ಕಣನೊಳಗೆ ದಿಗುಮಂಡಲದ ಸಂಧ್ಯಾರಾಗವೆನೆ ಪರಿದಳಿತ ಚತುರಂಗದಲಿ ಮಸಗಿದುದರುಣಜಲರಾಶಿ (ಕುವ್ಯಾದ್ರೋ. ೦೫-೩೭).
[ <ಸಂ. ದಿಙ್ಮಂಡಲ ]

**ದಿಗುಮತಿ** (ನಾ). ೧. (ಹಡಗಿನಲ್ಲಿ ಬಂದ) ಸರಕನ್ನು ಇಳಿಸುವಿಕೆ. ೨. ಆಮದು ಮಾಡಿಕೊಳ್ಳುವಿಕೆ: ಇತರ ದೇಶಗಳಿಂದ ಬರುವ ಸರಕುಗಳು (ದಿಗುಮತಿ)–ಹತ್ತಿಯಿಂದ ತಯಾರಾಗುವ ಬಟ್ಟೆಗಳೂ . . . ಉಪ್ಪು ಎಣ್ಣೆ (ಭೂಗೋಳ. ೩೯). 'ಎಗುಮತಿ', 'ಎಗುಮತಿ ದಿಗುಮಂತಿ' ಪರಾ.
[ ←ತೆಲು. ದಿಗುಮತಿ ]

**ದಿಗುಮುಖ** (ನಾ).=ದಿಙ್ಮುಖ. 'ದಿಗುಮುಖಂಗಿಡಿಸು' ಪರಾ.
[ <ಸಂ. ದಿಙ್ಮುಖ ]

**ದಿಗುಮುಖಂಗಿಡಿಸು** (ಕ್ರಿ). ದಿಕ್ಕುಗಳನ್ನೆಲ್ಲ ಮುಚ್ಚು; ದಿಕ್ಕುಕಾಣದಂತೆ ಮಾಡಂ: ಬಂದ ಮಳೆಯೊಳು ಕವಿದ ಕತ್ತಲೆ ಕರಂ ಹೆಚ್ಚಿ ಸಂದಣಿಸಿ ದಿಗುಮುಖಂಗಿಡಿಸಿ ಜಗಮಂ ಮುಚ್ಚಿ (ಇಕರ. ದೇ. ೫೨-೨).
[ ದಿಗುಮುಖ + ಕಿಡಿಸು (<ಕೆಡಿಸು) ]

**ದಿಗುರು** 'ದಿಗರು' ನೋ.

**ದಿಗುರುತ್ತರ** (ನಾ). ಎದುರಂತ್ತರ; ಒರಟು ಉತ್ತರ; ಸೊಕ್ಕಿನಿಂದ ಕೊಡಿದ ಉತ್ತರ: ಅದಕ್ಕವನು ದಿಗುರುತ್ತರವ ಕೊಟ್ಟುದರಿಂದ ಹುಮಾ ಯೂನನು ಗುಜರಾಥವನ್ನೊಳನುಗ್ಗಲಿಕ್ಕೆ ಹೊರಟನು (ಮೋಬಾದ. ೩೭).
[ ದಿಗುರು (<ದಿಗರು) + ಉತ್ತರ ]

**ದಿಗುವಳಯ**, **ದಿಗ್ವಳೆಯ**(ನಾ). = ದಿಗ್ವಲಯ: ಕಲಿಗಳುಬ್ಬಿನ ರೋಷ ತಾಮಸ ತುಳುಕಿತೆನೆ ದಿಗುವಳಯದಲಿ ಕುಡಿವೆಳಗ ಕುಡಿಕುಡಿದವದರುತಿರ್ದುದು ತಿಮಿರಲತೆ ಜಗವ (ಕುವ್ಯಾದ್ರೋ. ೧೫-೩೭); ಇಳಿದರಂದಾ ದುರ್ಗವ ದಿಗುವಳಯ ಬೆಸಲಾದಂತೆ (ತೊರರಾ. ೭-೧೭-೦೦). **ದಿಗ್ವಳೆಯ**: ಪದ್ಮಾವತೀಲಬ್ಧ ವರಪ್ರಸಾದಂ ಯಶಸ್ಸುಧಾಧವಳಿತ ದಿಗ್ವಳೆಯನುಂ ... ಶ್ರೀಮನ್ಮಹಾಮಣ್ಡಳೇಶ್ವರಂ ಪೂಂಡೂ [ರ] ಪಲ್ಲವರಸರ್ (ಕಇಆ. ೪೦-೫೮-೧೨; 1087). [ <ಸಂ. ದಿಗ್ವಲಯ ]

**ದಿಗುವಿಜಯ** (ನಾ).=ದಿಗ್ವಿಜಯ ೧: ಭುಜಪರಾಕ್ರಮಚಕ್ರಿಯನು ದಿಗಂ ವಿಜಯವಿಕ್ರಮಚಕ್ರಿಯನು ನೃಪ ಸೃಜಿಸಿದನು ನಿಜಮಹಿಮೆಯಲಿ ದಶರಥ ಮಹೀಪತಿಯ (ತೊರರಾ. ೧-೩-೧೩). [ <ಸಂ. ದಿಗ್ವಿಜಯ ]

**ದಿಗ್ಗಜ** (ನಾ). ೧. ಎಂಟು ದಿಕ್ಕುಗಳಲ್ಲಿಯೂ ಭೂಮಿಯನ್ನು ಹೊತ್ತಿರುವ ಐರಾವತವೇ ಮೊದಲಾದ ಎಂಟು ಆನೆಗಳಲ್ಲಿ ಒಂದು; ᑭ ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ ಮತ್ತು ಸುಪ್ರತೀಕ ಇವು ಅಷ್ಟ ದಿಗ್ಗಜಗಳು: "ಐರಾವತಂ . . . ಸುಪ್ರತೀಕಮೆನೆ ಪರಿವಿಡಿಯ ದಿಗ್ಗಜಂ" (ಮಂಗರಾ. ೧೭-೦೮); ಅಹಿಪತಿ ಪೆಡೆಯಂ ಬಿರ್ಚಿದಂ ದಿಗ್ಗಜಂ ಭೋರೆನೆ ದಾನಾಸಾರಮಂ ಸೂಸಿದುವು ಕಮಠನುಂ ತೂಗಿದಂ ಹರ್ಷದಿಂದಂ (ಜಗವಿ. ೩-೪); ನೂಕಿದನು ಭಗದತ್ತನನಿಬರ ಮೇಲೆ ದಿಗ್ಗಜವ (ಕುವ್ಯಾದ್ರೋ. ೩-೪೦); ದಿಗ್ಗಜಗಳು ಭೂಮಿಯನ್ನು ಅಷ್ಟದಿಕ್ಕುಗಳಲ್ಲಿಯೂ ಹೊತ್ತು ಕೊಂಡಿರುವುವು (ಜ್ಯೋತಿರ್ವಿ. ೧೦). ೨. (ಆಲಂ) ಪಾಂಡಿತ್ಯ, ಬಹು ಶ್ರುತತ್ವ, ಪರಾಕ್ರಮ ಮೊದಲಾದಂವುಗಳಲ್ಲಿ ಖ್ಯಾತಿಯನ್ನು ಹೊಂದಿದ ವ್ಯಕ್ತಿ; ಉದ್ದಾಮ ವ್ಯಕ್ತಿ: ಅವರು ಕನ್ನಡದ ದಿಗ್ಗಜಗಳಲ್ಲಿ ಒಬ್ಬರು (ರೂಢಿ). ೩. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ: ಅಷ್ಟ, ವಸು, ಗಜ, ದಿಗ್ಗಜ . . . ದಿಗ್ದಂತಿ ಇಂತಿನಿತುಂ ಎಕ್ಕೆ ಹೆಸರು (ವ್ಯವಹಾ. ೧೦-೧). [ ಸಂ. ]

**ದಿಗ್ಗಜರಾಜಿ** (ನಾ). ದಿಗ್ಗಜಗಳ ಗುಂಪು,–ಸಮೂಹ; ಐರಾವತವೇ ಮೊದಲಾದ ಎಂಟು ಆನೆಗಳು: ಶಿದಿಪೋಲ್ ದಿಗ್ಗಜರಾಜಿ ಗೋಣ್ಮುಸಿದು ವಕ್ತ್ರಶ್ವಾಸಮಂ ಬೀಱುತಿರ್ದುದು . . . ಖಳನೃಪಾಲಾಕ್ಷೌಹಿಣೀಭಾರದಿಂ (ಜಗವಿ. ೦-೩೦). [ ದಿಗ್ಗಜ + ರಾಜಿ$_1$ ]

**ದಿಗ್ಗನೆ** (ಅ). ತಕ್ಷಣ; ಕೂಡಲೆ: ಒರ್ವಳೆ ದಿಗ್ಗನೆಯಿಂದೆ ಬಂದಳೀ ತರುಣಿ ಬನಕ್ಕೆ (ಅನಂಪು. ೭-೧೩); ಇವರನ್ನು ಕಂಡು ದಿಗ್ಗನೆದ್ದನು (ಮುನಿಮಾ. ೧೫೦); ನಮ್ಮ ಪೂರ್ವದ ಪರಾಕ್ರಮಿಗಳು ದಿಗ್ಗನೇಳುವರು (ಬಿಟ್ಟಹೂ. ೯೦).
[ ದಿಗ್$_0$ + – ಅನೆ$_1$ ]

**ದಿಗ್ಗವಿಗೆ** (ನಾ). ಒಂದು ಊರಿನ ಹೆಸರು: ಆ [ಹೊ]ಲಂ ನಾಗವಾವಿಯ ದಿಗ್ಗವಿಗೆಯ ಅಱಲೂರ ಎಡೆವಾ ಅನದ [ಕೆ]ಳಗೆ ಭಟ್ಟಾದರ್ಶನ ವ್ಯಾಖ್ಯಾತೃಗೆ ಮತ್ತರು ೩೫ ನ್ಯಾಸವ್ಯಾಖ್ಯಾತೃಗೆ ಮತ್ತರು ೩೦ ಪ್ರಭಾಕರ ವ್ಯಾಖ್ಯಾತೃಗೆ ಮತ್ತರು ೪೫ (ಕಇಆ. ೬-೨-೨೦೩; 1058). [ ? ]

**ದಿಗ್ಗೇಡಿ** 'ದಿಕ್ಕುಗೇಡಿ' ನೋ.

**ದಿಗ್ವೃತ** (ಗು). ದಿಕ್ಕುಗಳನ್ನು ಮುಚ್ಚಿದ,–ತಾಗಿದ: ವಿಲಸದ್ಧವಳ ಸಮ್ಯಗ್ಸನತರ ವಿಯದ್ಧರಾಖಿಳ ದಿಗ್ವಿ[ಗ್ವೃ]ತಯಶೋರಾಶಿ ಭಕ್ತ ಸಮುದ್ಧರಣ ಬಸವ (ಬಸಪು. ೩೮-೧). [ ಸಂ. ]

**ದಿಗ್ಘಿಗೆ** (ನಾ). ಕೆರೆ ; ಕೊಳ ; ಸರೋವರ: ಎಸೆದಿಪ್ಪುದೊ ಸೇವ್ಯಮಾಗಿ ನಾನಾವಿಧಮಪ್ಪ ಚಿತ್ರವಿಚಿವಂಟಿಗೆ ದಿಗ್ಘಿಗೆ ನಾಲ್ಕು ನನ್ದನಂ ಬಾವಿ ತಟಾಕಮುಗ್ಗಿಟ[ಗ]ಯಾರವೆ [ವಿಷ್ಣು]ಗೃಹಂ ಶಿವಾಲಯಂ (ಕಇ. V, ೧೨-೪೦ : 1080). [ <ಪ್ರಾ. ದಿಗ್ಘಿಆ./ಸಂ. ದೀರ್ಘಿಕಾ ]

**ದಿಗ್ಜಯ** (ನಾ). = ದಿಗ್ವಿಜಯ ೧. 'ದಿಗ್ಜಯಂಗೆಯ್' ಪರಾ. [ ಸಂ. ]

**ದಿಗ್ಜಯಂಗೆಯ್** (ಕ್ರಿ). ದಿಗ್ವಿಜಯವನ್ನು ಮಾಡು : ವನಿತಾಸಂಕುಳ ಮಿಂಬುಕೆಯ್ಯೆ ನಿಜತೇಜಂ ದಿಗ್ಜಯಂಗೆಯ್ಯೆ . . . ಕೃಷ್ಣನ ಕಾರುಣ್ಯ ಮನಪ್ಪುಕೆಯ್ದುದರಸುಗೆಯ್ದಂ ಲೀಲೆಯಿಂದಾಹುಕಂ (ಹಗವಿ. ೬-೨). [ ದಿಗ್ಜಯ + ಕೆಯ್$_1$ ]

**ದಿಗ್ಜಯೋದ್ಯಮ** (ನಾ). ದಿಕ್ಕುಗಳನ್ನು ಗೆಲ್ಲುವ ಕಾರ್ಯ; ದಿಗ್ವಿಜಯದ ಪ್ರಯತ್ನ: ಆತನ ದಿಗ್ಜಯೋದ್ಯಮಮನಾಂ ಮಿಗೆ ಪೇಳ್ವೊಡೇನೊ (ಪುಷ್ಪಪು. ೩-೧೯). [ ದಿಗ್ಜಯ + ಉದ್ಯಮ ]

**ದಿಗ್ದಂತಿ** (ನಾ). ೧.=ದಿಗ್ಗಜ ೧ : ಪವನಾಗಾರಿಯನಾಂತ ದಂತಿಶಿಶುವೋಲ್ ದಿಗ್ದಂತಿಯೊಳ್ ಪೋರ್ದ ಹೀನನವೋಲ್ (ಶಾಂತಿಪು. ೫-೨೭) ; ಆ ಗಂಭೀರ ದಿಗ್ದಂತಿ, ತೊರೆದು ಗಾಂಭೀರ್ಯಮಂ, ತರಳಚಂಚಲಚಿತ್ತದಿಂ ಬೀದಿ ವರಿವುದಯ್ ದೆಸೆದೆಸೆಗೆ (ಶ್ರೀರಾಮಾ. ೯೫-೪೭೨). ೨. = ದಿಗ್ಗಜ ೨ : ಕನ್ನಡ ನಾಡಿನ ಇಬ್ಬರು ಹಿರಿಯ ದಿಗ್ದಂತಿಗಳಿಂದ ನನಗಾಗಿರುವ ಮಹೋಪಕಾರವನ್ನು ಕೃತಜ್ಞತೆಯಿಂದ ಕರ ಜೋಡಿಸಿ ಸ್ಮರಿಸುತ್ತೇನೆ (ಸವತಿ. XV ಪ್ರಸ್ತಾವನೆ). ೩. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : ವ್ಯೋಮದ್ವಯಂ ಮುಂತೆ ದಿನೇಶ ಪಾವಕರ್ ತಾಮೊಂದಿ ದಿಗ್ದಂತಿಯೊಳಾಗೆ ವಿಶ್ರಮಂ (ಛಂದೋಂಬು. ೨-೦೨೯). [ ಸಂ. ದಿಗ್ದಂತಿನ್ ]

**ದಿಗ್ದಂತಿಯೂಥ** (ನಾ). ದಿಗ್ಗಜಗಳ ಗುಂಪು,-ಸಮೂಹ: ದಿಗ್ದಂತಿ ಯೂಥಕ್ಕೆ ಚಿಬ್ಬುಮನುದ್ಯಾನವನಕ್ಕೆ ಪೂದುಱುಗಲಂ ... ಮೆಯ್ವೆರ್ಚಿಸಲ್ ಸಾಲ್ದು ತಳ್ತಮದೋರ್ಮಿದುರ್ದುರದೀರ್ಣಕೀರ್ಣಪವನಾಂಭಃಶೀಕರಂ ಶ್ರೀಕರಂ (ಪುಷ್ಪಪು. ೧೦-೩೩). [ದಿಗ್ದಂತಿ + ಯೂಥ ]

**ದಿಗ್ದರ್ಶಕ** (ಗು). ೧. ದಾರಿತೋರಿಸುವ ; ಮಾರ್ಗದರ್ಶನ ಮಾಡುವ. (ನಾ). ೨. ನಾಟ್ಯ, ನಾಟಕ,ಚಲನಚಿತ್ರ ಮೊದಲಾದುವುಗಳನ್ನು ನಿರ್ದೇಶಿಸುವವನು ; ಸೂಚನೆಗಳನ್ನು ಕೊಡುವವನು : ದಿಗ್ದರ್ಶಕ ಹಾಗೂ ಕಲಾವಂತರು ಒಬ್ಬರಿಗೊಬ್ಬರು ಪೂರಕವಾಗಿರುವರು (ಪ್ರಬಂಧ. ೩೯). 'ನಾಟ್ಯದಿಗ್ದರ್ಶಕ' ಪರಾ. [ ಸಂ. ]

**ದಿಗ್ದರ್ಶನ** (ನಾ). ೧. ದಿಕ್ಕುಗಳನ್ನು ತೋರಿಸುವುದು. ೨. ನಾಟ್ಯ, ನಾಟಕ, ಚಲನಚಿತ್ರ ಮೊದಲಾದುವನ್ನು ನಿರ್ದೇಶಿಸುವುದು. ೩. ಸ್ಥೂಲವಾದ ನಿರೂಪಣೆ,-ವಿವರ : ಅದರ ದಿಗ್ದರ್ಶನವು ಮಾತ್ರ ನಮಗೆ ದೊರೆತಿದೆ (ಕವನಿ. ೯೩) ; ಆ ಉತ್ತರದ ದಿಗ್ದರ್ಶನವನ್ನು ಮಾತ್ರ ಮಾಡುವೆವು (ವಚರ. ೪೯). ೪. ಉತ್ತರಮುಖಿ ; ದಿಕ್ಸೂಚಿ. [ ಸಂ. ]

**ದಿಗ್ದಾಹ** (ನಾ). ದಿಕ್ಕುಗಳಲ್ಲಿ ಅಸ್ವಾಭಾವಿಕವಾಗಿ ಬೆಂಕಿ ಕಾಣಿಸಿಕೊಳ್ಳುವ ಉತ್ಪಾತ; ಅಪಶಕುನಗಳಲ್ಲಿ ಒಂದು; ☞ ಈ ರೀತಿ ಕಾಣಿಸಿಕೊಳ್ಳುವ ಬೆಂಕಿಯು ರಾಜಭಯ, ದೇಶನಾಶ ಮುಂತಾದುವನ್ನು ಸೂಚಿಸುತ್ತದೆ ಎಂಬ ನಂಬಿಕೆಯಿದೆ : ರಜಮುಂ ದಿಗ್ಧೂಮಮುಂ ಸಂದಣಿಸೆ ಪರುಷವಾತಾಹತಿ ಪ್ರೋಚ್ಚಳತ್ಸಾಮಜ ಸೇನಾಕುಂಭಸಿಂದೂರಮುಂ ಮೊದವಿದ ದಿಗ್ದಾಹಮುಂ ಕೂಡೆ (ಆದಿಪು. ೧೪-೮೯). [ ಸಂ. ]

**ದಿಗ್ದೇಶ** (ನಾ). ದಿಕ್ಕುಗಳ ಪ್ರದೇಶ,-ಭಾಗ : ಪಕ್ಷಿರಾಜನ ತೀಕ್ಷ್ಣದಕ್ಷಿಯೋಲ್ ನೋಡಿದನು ಕಣ್ಣಟ್ಟಿ ದಿಗ್ದೇಶಮಂ (ಶ್ರೀರಾಮಾ. ೧೫೭-೧೪೮). [ ಸಂ. ]

**ದಿಗ್ದೇವತೆ** (ನಾ). ದಿಕ್ಕಿನ ದೇವತೆ : ದೆಸೆದೆಸೆಯೆನಿತಕ್ಕಂ ದರಹಸಿತಾನನೆ ವಳಯದಂತೆ ಸೊಗಯಿಪ ಪದ್ಮಾದಿ ಸರೋವರಂಗಳೊಳ್ ಪಳಯಿಸಿದ ರಿವರ್ ದೇವ ಪೆಸರೆ ದಿಗ್ದೇವತೆಯರ್ (ಅನಂಪು. ೪-೬೪). [ ಸಂ. ದಿಗ್ದೇವತಾ ]

**ದಿಗ್ಧ** (ಗು). ೧. ಲೇಪನ ಮಾಡಿದ ; ಬಳಿದ ; ಲೇಪಿಸಿದ: "ಉಪಲಿಪ್ತಂ ದಿಗ್ಧಂ" (ವಸ್ತುಕೋ. ೦೦೫-೪೦) ; ಪರಮಶಿವಭಕ್ತನಾ ವಿಷ್ಣುವೆಂತೆನಲ್ ಭಸ್ಮ ದಿಗ್ಧಾಂಗಂ ತ್ರಿಪುಂಡ್ರಾಂಕಿತೋಕ್ತಸ್ಥಲಂ (ಪದ್ಮರಾ. ೧೧-೩೬೦) ; ವ್ಯಾಧ ವಿಷದಿಗ್ಧಬಾಣಕ್ಕುರುಳಿ ಬೀಳಲ್ಕೆ ಪೆಣ್ಣಾನೆ ತಾಂ ಗಂಡಾನೆ ಸೊಂಡಿಲಿಂದದನಪ್ಪಿ (ಶ್ರೀರಾಮಾ. ೬೭-೩೭೩). ೨. ಬೆಳೆದಿರುವ ; ವೃದ್ಧಿ ಹೊಂದಿರುವ. (ನಾ). ೩. ವಿಷವನ್ನು ಬಳಿದ ಬಾಣ : "ದಿಗ್ಧಃ, ಲಿಪ್ತಃ – ೨ ವಿಷಾಕ್ತೇ, ನಂಜು ಪೂಸಿದ ಕೋಲು, ವಿಷ ಬಳಿಯಲ್ಪಟ್ಟ ಸರಳು, ವಿಷಬಾಣ" (ಸಿದ್ಧಾಂತಿ. ೨೬೩). ೪. ಎಣ್ಣೆ ; ತೈಲ. ೫. ಬೆಂಕಿ ; ಅಗ್ನಿ. [ ಸಂ. ]

**ದಿಗ್ಧವ** (ನಾ). = ದಿಕ್ಪಾಲ : ಇವನಿಂದಂ ಕಣ್ಣೆನೇಳುಂ ಕಡಲ ಕಡೆಯನೇಳುಂ ಕುಭೃತ್ಕೂಟಮಂ ದಿಗ್ಧವದಂತಿವ್ರಾತಮಂ (ಎಕ. VII, ಶಿವಮೊ. ೬೪-೪ ; 1112 ?). [ ಸಂ. ]

**ದಿಗ್ಧಿಕೆ** (ನಾ). ಒಂದು ಬಗೆಯ ಸಸ್ಯ; ನೆಲಗುಳ್ಳ: "ದಿಗ್ಧಿಕಾ –ನೆಲಗುಳ್ಳ" (ಓಷಧಿ. ೭೫). [ ? ]

**ದಿಗ್ಧೂಮ** (ನಾ). ದಿಕ್ಕುಗಳಲ್ಲಿ ಅಸ್ವಾಭಾವಿಕವಾಗಿ ಕಾಣಿಸಿಕೊಳ್ಳುವ ಹೊಗೆ : ರಜಮುಂ ದಿಗ್ಧೂಮಮುಂ ಸಂದಣಿಸೆ ಪರುಷವಾತಾಹತಿ ಪ್ರೋಚ್ಚಳತ್ಸಾಮಜ ಸೇನಾಕುಂಭಸಿಂದೂರಮುಮೊದವಿದ ದಿಗ್ದಾಹಮುಂ ಕೂಡೆ . . . ದೆಸೆ ಬರ್ಪಂತೆ ಬಂದೊಡ್ಡಿ ನಿಂದಂ (ಆದಿಪು. ೧೪-೮೯). 'ದಿಗ್ದಾಹ' ಪರಾ. [ ಸಂ. ]

**ದಿಗ್ಬಂಧ** (ನಾ). ೧. ತಡೆಯುವಿಕೆ ; ನಿರ್ಬಂಧ ; ನಿಗ್ರಹ. ೨. ಜಪ ಹೋಮಾದಿ ಕರ್ಮಗಳಲ್ಲಿ ಮಾಡಬೇಕಾದ ಒಂದು ಆಂಗಿಕ ಕ್ರಿಯೆ: ಕಾಯ ದಿಗ್ಬಂಧ ಪ್ರಣಾಮ ವಿಧೇಯವರ್ಜನೆ ಯೋಗಸಿದ್ಧಿ ನಿಕಾಯ ನಾಲ್ಕರ ಇಂದ್ರಿಯ ಸ್ಥಿತಿಗತಿಯನಾರೈದು ಆಯುವನು ವಿವರಿಸುತ (ಕುಮಾರಾಮ. ೪-೩೫). [ ಸಂ. ]

**ದಿಗ್ಬಂಧನ** (ನಾ). ೧. ಕೇಡನ್ನು ತಡೆಯುವುದಕ್ಕಾಗಿ ಮಂತ್ರಶಕ್ತಿಯಿಂದ ಮಾಡುವ ದಿಕ್ಕುಗಳ ಬಂಧನ: ಮಂತ್ರಸಿದ್ಧಿಸೂಚಕವಾದ ಮಾತೃಕಾಚಕ್ರ, ಸರ್ವತೋಭದ್ರ, ಕೂರ್ಮಚಕ್ರ, ದಿಗ್ಬಂಧನ, ರಕ್ಷಾಯಂತ್ರಾದಿಗಳ ಕ್ರಮವನರುಹಿತು (ವಿವೇಕ. ೮೦) ; ಅಸುರ ಮಾಯಾಮಂತ್ರಮಂ ಜಪಿಸಿ ಫಣಿಯೊಳಂ ಭಸಿತಮನು ಧರಿಸಿ ದಿಗ್ಬಂಧನಗಳೈದು (ನವಮೋ. ೨೬-೦೩). ೨. ಅಂಗಾಂಗಗಳ ಚಲನವಿರದಂತೆ ಮಂತ್ರಶಕ್ತಿಯಿಂದ ಬಂಧಿಸುವಿಕೆ. ೩. (ಎಲ್ಲಾ ಕಡೆಯಿಂದಲೂ ಉಂಟಾದ) ನಿರ್ಬಂಧ,-ಇಕ್ಕಟ್ಟು : ಸನ್ನಿವೇಶದ ದಿಗ್ಬಂಧನದಿಂದ, ಅಂದು ನನ್ನ ಕೈಕಾಲು ಕಟ್ಟಿದ್ದವು (ನಿಕಊ. ೧೧೮). [ ಸಂ. ]

**ದಿಗ್ಬಲಿ** (ನಾ). ೧. ದಿಕ್ಕುಗಳಿಗೆ ಕೊಡುವ ಬಲಿ ; ಮನೆಯ ಮುಂದೆ ದಿಕ್ಕುಗಳಿಗೆ ಅನ್ನವನ್ನು ಎಸೆದು ಮಾಡುವ ಬಲಿ; ಬಲಿಕೊಟ್ಟ ಪ್ರಾಣಿಯ ಮಾಂಸದ ತುಂಡುಗಳನ್ನು ಹಾಗೂ ರಕ್ತವನ್ನು ಅಥವಾ ಕೆಂಪುಬಣ್ಣದ ಅನ್ನವನ್ನು ದೇವಾಲಯ ಹಾಗೂ ಹಳ್ಳಿಯ ಸುತ್ತಲೂ ದಿಕ್ಕುಗಳಿಗೆ ಬಲಿಯೆಂದು ಚೆಲ್ಲುವಿಕೆ : ಗೃಹಪ್ರವೇಶದ ಸಂದರ್ಭದಲ್ಲಿ ಮನೆಯ ಯಜಮಾನರು ಗೃಹಶಾಂತಿಗಾಗಿ ದಿಗ್ಬಲಿಯನ್ನು ಕೊಟ್ಟರು (ರೂಢಿ). ೨. (ಆಲಂ) ಕೊಂದು ಬಿಸುಡುವಿಕೆ : ತನ್ನವರಿಗಕ್ಷೋಣಿ ರಕ್ಕಸರ ತಲೆಗಳನರಿದು ದಿಗ್ಬಲಿಯ ಕೊಟ್ಟನಂತುಗ್ರದಿಂದ (ವೀಶೈಪು. ೨-೧೧-೯). [ ಸಂ. [

**ದಿಗ್ಬಲಿಗೆದರು** (ಕ್ರಿ). ದಿಕ್ಕುದಿಕ್ಕಿಗೆ ಎಸೆ ; ದಿಕ್ಕಾಪಾಲಾಗಿ ಬಿಸುಡಂ : ಆ ಭಿಕಾರಿ ರಾಯನನ್ನೂ ಅವನ ಜನರನ್ನೂ ತುಂಡುತುಂಡಾಗಿ ಕತ್ತರಿಸಿ, ದಿಗ್ಬಲಿಗೆದರಿ, ಅಳ್ಳಾಡಿಸಿ ಧ್ವಂಸ ಮಾಡಿಬಿಡುವನು (ಮಂತ್ರಶ. ೪೭-೧೨).
[ ದಿಗ್ಬಲಿ + ಕೆದರು (<ಕೆದಱ್$_1$) ]

**ದಿಗ್ಭರಿತ** (ಗು). ದಿಗಂತವನ್ನು ತುಂಬಿದ,–ವ್ಯಾಪಿಸಿದ :ಕುಮಾರಸ್ವಾಮಿ ಗಂದು ಬಿತ್ತರಿಸಿದಂ ವೇದಾಂತಶಾಸ್ತ್ರಮಂ ದಕ್ಷಿಣಾಮೂರ್ತಿ ದಿಗ್ಭರಿತಕೀರ್ತಿ (ವೀಶೈಪು. ೫-೨೦-೧೮). [ ಸಂ. ]

**ದಿಗ್ಭವ** (ನಾ). ದಿಕ್ಕಿನಿಂದ ಹುಟ್ಟಿದುದು ; ವೈಹಾಯಸ, ಭೌಮ, ದಿಗ್ಭವ, ಸೈನ್ಯಜ, ಗೃಹೋದ್ಭೂತಗಳೆಂಬ ಐದು ರೀತಿಯ ಉತ್ಪಾತಗಳಲ್ಲಿ ಒಂದು : ವೈಹಾಯಸ ಭೌಮ ದಿಗ್ಭವ ಸೈನ್ಯಜ ಗೃಹೋದ್ಭೂತಂಗಳೆಯ್ದು ತೆಱದುತ್ಪಾತಂಗಳೊಡನೊಡನೆ ನೆಗೆದುಪ್ಪುಗಳ್ (ಶಾಂತಿಪು. ೬-೧೦೬,ವ). 'ದಿಗ್ದಾಹ' ಪರ್ಯಾ. [ ಸಂ. ]

**ದಿಗ್ಭ್ರಮೆ** (ನಾ). ದಾರಿ ಅಥವಾ ಮಾರ್ಗ ತಪ್ಪಿಹೋದ ಸ್ಥಿತಿ; ಉಪಾಯ ತೋರದ ಸ್ಥಿತಿ; ವಿಸ್ಮಯ ; ಗಾಬರಿ : ಇನಮಂಡಲಕೆ ದಿಗ್ಭ್ರಮೆಯಾಯ್ತು ನಭದಲಿ ಸುಳಿವ ಸುರರ ವಿಮಾನತತಿ ಚೆಲ್ಲಿದವು ದೆಸೆದೆಸೆಗೆ(ಕುಮಾವ್ಯಾ. ೩೦-೨೯); ಯಾವ ದಿಕ್ಕಿನಲ್ಲಿಯೂ ಏನೇನೂ ಕಾಣುತ್ತಿರಲಿಲ್ಲ ನಾವಿಕರಿಗೆ ದಿಗ್ಭ್ರಮೆಯುಂಟಾಗಿದೆಯೆಂದು ಗೊತ್ತಾಯಿತು (ಕಪಾಕಾಂ.೩).
[ ಸಂ. ದಿಗ್ಭ್ರಮ ]

**ದಿಗ್ಭ್ರಮೆಗೊಳಿಸು** (ಕ್ರಿ). ಬೆರಗುಗೊಳಿಸು ; ವಿಸ್ಮಯವನ್ನುಂಟುಮಾಡು: ಕುಂಚವನ್ನಾಡಿಸುವುದರಲ್ಲಿ ಅಜಂತಾ ಕಲಾಕಾರರ . . . . ನಿರ್ಮಾಣತಂತ್ರ ವಿಶ್ವದ ಎಲ್ಲಾ ಕಲಾವಿಮರ್ಶಕರನ್ನು ದಿಗ್ಭ್ರಮೆಗೊಳಿಸಿದೆ (ಭಾರದ. ೩೨೫). [ ದಿಗ್ಭ್ರಮೆ + ಕೊಳ್$_1$ + – ಇಸು$_3$ ]

**ದಿಗ್ಭ್ರಮೆಹಿಡಿಸು** (ಕ್ರಿ). ಗಾಬರಿಗೊಳಿಸು ; ವಿಸ್ಮಯತರು : ಭಿನ್ನ ಭಿನ್ನ ಪ್ರಭಾವಗಳ ಅಲೆಗಳು ಸ್ವಾಮಾನ್ಯರಿಗೆ ದಿಗ್ಭ್ರಮೆಹಿಡಿಸುವಂತೆ ಹೊಯ್ದಾಡುತ್ತಿವೆ (ಶಿಕ್ಷದ. ೬೯).
[ ದಿಗ್ಭ್ರಮೆ + ಹಿಡಿಸು (<ಪಿಡಿಯಿಸು) ]

**ದಿಗ್ಭ್ರಾಂತ** (ಗು). ೧. ದಿಕ್ಕು ತೋಚದಂತಹ; ಗಾಬರಿಗೊಂಡ. (ನಾ). ೨. ಗಾಬರಿಗೊಂಡವನು; ದಿಗ್ಭ್ರಮೆಗೊಳಗಾದವನು : ಅಲ್ಲಮಪ್ರಭು ಒಂದು ಕ್ಷಣ ಆಗಿಹೋದ ಅಪಘಾತಕ್ಕೆ ಮರುಗಿ ದಿಗ್ಭ್ರಾಂತನಾಗಿ ಶೋಕಿಸುತ್ತಾನೆ (ಶೂನ್ಯಕು. ೧೩೯) ; ವೈತರಣೀ ನದಿಯ ಪರಿಸರ. ಅದನ್ನು ನೋಡಿ ಮುನಿ ದಿಗ್ಭ್ರಾಂತನಾಗುತ್ತಾನೆ (ನಡದಾ. I, ೫೪೦). [ ಸಂ. ]

**ದಿಗ್ಭ್ರಾಂತಿ** (ನಾ). = ದಿಗ್ಭ್ರಮೆ. [ ಸಂ. ]

**ದಿಗ್ಭ್ರಾಮಿತ** (ನಾ). ಗದಾಯುದ್ಧದ ವರಸೆಗಳಲ್ಲಿ ಒಂದು: ವಿಳಂಬಿತ ವಾಕುಂಚಿತಮಾಸ್ಫೋಟಿತಮಾಕ್ಷಿಪ್ತಮುದ್ಭ್ರಾಮಿತಂ ದಿಗ್ಭ್ರಾಮಿತಂ . . . . ಎಂಬೆಂಟುಂ ತೆಱದ ಪ್ರಹರಣಂಗಳೊಳಂ ಅತಿಪರಿಚಿತರಾಗಿ ವೈಶಾಖಸ್ಥಾನದೊಳ್ ನಿಂದು (ಗದಾಯು. ೮-೧ ವ). 'ಉದ್ಭ್ರಾಮಿತ' ಪರ್ಯಾ.
[ ಸಂ. ]

**ದಿಗ್ರದನಿ** (ನಾ). = ದಿಗ್ಗಜ೧ : ಮದಧಾರಾವೃಷ್ಟಿ (ಪಂಕಂ) ಮಸಗಿಸೆ ನೆಲನಂ ಘೋಷಘೋಂಟಾರವಂ ದಿಗ್ರದನೀಶ್ರೋತ್ರಕ್ಕೆ ಸಂಪಾದಿಸೆ ಬಧಿರತೆಯಂ. . . ಬಂದುದಂದನ್ಯಚಕ್ರಕ್ಕಿದು ಕಲ್ಪಾಂತಾಭ್ರಮೆಂಬಂತುದಿತವಿಪುಮನೋದ್ವೈನ್ಯಮುಗ್ರೇಭಸೈನ್ಯಂ (ಪುಷ್ಪಪು. ೫-೯). [ ಸಂ. ದಿಗ್ರದನಿನ್ ]

**ದಿಗ್ರಮಣ** (ನಾ). ದಿಕ್ಕಿನ ಒಡೆಯ,–ಪ್ರಭು ; ದಿಕ್ಪತಿ : ವಿಗ್ರಹಸಮಯ ನಿಗ್ರಹ ಹಿತಾನುಗ್ರಹಗರಳಭುಗ್ರಸನನುತದಿಗ್ರಮಣ ಶೈವಾಗ್ರಗಣ್ಯವುದಗ್ರಬಲಶೌರ್ಯ . . . ಭಕ್ತಿಸಮಗ್ರ ಬಸವೇಶ (ಬಸಪು. ೫೪-೮೭); ದಿಗ್ರಮಣನುತಪಾದಶತಪತ್ರ ಫಣಿಯಗ್ರಸೂತ್ರ ಧಾವಳ್ಯಗಾತ್ರಾ . . . ವಾಗ್ರಚನೆಯಿಂದ ಕೃತಿಯ ನಡಸುಗೆ ಪೊಲಿದು (ನವಮೋ. ೩-೧). [ ಸಂ. ]

**ದಿಗ್ರಾಜಿ** (ನಾ). ಎಲ್ಲ ದಿಕ್ಕು : ಬನಮಂ ಕೆಂದಳಿರಿಂದೆ ಬಾಸಣಿಸುತಂ ದಿಗ್ರಾಜಿಯಂ ಬಂದ ಮಾವಿನ ಕಂಪಿಂದಮೆ ಪೂಸುತಂ (ಕಾದಂಸಂ. ೭೪೦).
[ ಸಂ. ]

**ದಿಗ್ವರ** (ನಾ). = ದಿಗ್ರಮಣ : ಉರ್ಕಳಿದರ್ ದಿಗ್ವರರಂಜಿದರ್ ದಿವಿಜರುರ್ವೀಧ್ರಪ್ರಜಂ ಸೀಳ್ದುದು (ರಾಜಶೇ. ೫-೩೬) ; ಪೂಮಳೆಯು ಸುರಿಯೆ ದೇವಾಸುರಹರಿಯಜಮನುಮುನಿಗರುಡಗಾಂಧರ್ವದಿಗ್ವರರು (ಭೃಂಗಸೂ. ೧೫೫). [ ಸಂ. ]

**ದಿಗ್ವಲಯ, ದಿಗ್ವಳಯ** (ನಾ). ದಿಕ್ಕುಗಳ ಆವರಣ,–ಪ್ರದೇಶ : ಧುರಧೀರ ನುಗ್ಗೆಹಳ್ಳಿಯ ರಾಯ ಭೂವರನ ಪರಮಪ್ರಧಾನ ಸುಕಲಾಪ್ರವೀಣಂ ಕೀರ್ತಿಭರಿತ ದಿಗ್ವಲ [ ಪಾಠಾಂ. ಳ ] ಯಂ (ಕಬ್ರಿ ಕೈ. ೧೦೦).
**ದಿಗ್ವಳಯ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ ಸಂ. ]

**ದಿಗ್ವಳಯ** 'ದಿಗ್ವಲಯ' ನೋ.

**ದಿಗ್ವಳೆಯ** 'ದಿಗುವಳಯ' ನೋ.

**ದಿಗ್ವಾಚಕ** (ನಾ). [ವ್ಯಾಕ] ದಿಕ್ಕನ್ನು ತಿಳಿಸುವ ಶಬ್ದ : ಉಕಾರಾಂತ ದಿಗ್ವಾಚಕಂಗಳ್ಗೆತ್ವಮಕ್ಕುಂ (ಶಮದ. ೧೧೯ ವೃತ್ತಿ) ; ಪೂರ್ವಪದವಾಗಿ ಬರುವ ಪಿಂದು, ಮುಂದು, ಪೆಱಗು, ಒಳಗು ಮೊದಲಾದ ದಿಗ್ವಾಚಕಗಳಿಗೆ ಸಾಮಾನ್ಯವಾಗಿ ಅಂತ್ಯಾಕ್ಷರವು ಲೋಪವಾಗಿ ಅವುಗಳ ಪ್ರಕೃತಿರೂಪ ಬರುತ್ತದೆ (ಕೈಪಿಡಿ. ೩೭). [ ಸಂ. ]

**ದಿಗ್ವಾಚಿ** (ನಾ).= ದಿಗ್ವಾಚಕ : ಅಲ್ಲಿಯೊಳೆಂಬಿವು ದಿಕ್ಕೆಡೆಗೆಲ್ಲಂ ದಿಗ್ವಾಚಿಯಪ್ಪ ದಂತಕ್ಕಲ್ಮತ್ವಲ್ಲಿಯುದಂತಕ್ಕತ್ವಂ ಬಲ್ಲರ ಮತದಿಂ ವಿಕಲ್ಪವಿಧಿ ಸಪ್ತಮಿಯೊಳ್ (ಶಮದ. ೧೧೯). [ ಸಂ. ದಿಗ್ವಾಚಿನ್ ]

**ದಿಗ್ವಾರಣ**(ನಾ).= ದಿಗ್ಗಜ೧: ರಣಪಟಹರವಂ ದಿಗ್ವಾರಣ ಕರ್ಣಾಭ್ಯರ್ಣಮಂ ಪಳಂಚಲೆಯೆ (ಪಂಧಾಮಾ. ೧೦-೫೦) ; ದಿಗ್ವಾರಣದ ಮಱಿಯುಂಬುದೇ ಬಂದೂರುವಂದಿಯ ಮೊಲೆಯನು (ಬಸಪು. ೧೧-೧೧). [ ಸಂ. ]

**ದಿಗ್ವಾಸ$_1$** (ನಾ). ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು: ಹದಿನೆಂಟುಗುಳ ಮೊದಲಾಗಿ ಒಂದಂಗುಳ ಪರ್ಯಂತಮಾದ ಪರಿಮಾಣಕ್ರಮವಿಡಿದು ಜಾತಿವಾಸ, ಸುಜಾತಿವಾಸ, ಸುಕುಮಾರಿಕಾವಾಸ, ಪಕ್ಷಿವಾಸ, ಭುವನಾವಾಸ, ಶ್ವೇತವಾಸ, ಆದಿತ್ಯವಾಸ, ರುದ್ರವಾಸ, ಹರಿವಾಸ, ದಿಗ್ವಾಸ, ನಿಧಿವಾಸ, ಋಷಿವಾಸ, ಕುಮಾರವಾಸ, ಅಘೋರವಾಸ, ಬ್ರಹ್ಮವಾಸ, ತ್ರಿಪುರವಾಸ, ಶಿವಶಕ್ತಿವಾಸ, ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವಱಿತು (ವಿವೇಕ. ೨೩೭). P ಕೊಳಲಿನ ಧ್ವನಿಪ್ರಭೇದವೆಂದು ಭರತಕೋಶದಲ್ಲಿ ಹೇಳಿದೆ. [ <ಸಂ. ದಿಗ್ವಾಂಶ ]

**ದಿಗ್ವಾಸ$_2$** (ನಾ). ೧. ದಿಕ್ಕನ್ನು ಬಟ್ಟೆಯಾಗಿ ಉಳ್ಳವನು ; ನಗ್ನ. ೨. ದಿಗಂಬರ ; ಶಿವ. ೩. ದಿಗಂಬರನಾದ ಜೈನ ಭಿಕ್ಷು,–ಜೈನ ಸಂನ್ಯಾಸಿ : "ನಗ್ನಾಟಃ, ದಿಗ್ವಾಸಾಃ, ಕ್ಷಪಣಃ, ಶ್ರಮಣಃ . . . ಸಾಧುಃ– ಈ ೧೦ ಸವಣರ ಪೆಸರ್" (ಹಲಾಯು. ೫೭-೧೯೯). [ ಸಂ. ದಿಗ್ವಾಸಸ್ ]

**ದಿಗ್ವಿಜಯ** (ನಾ). ೧. ಎಲ್ಲ ದಿಕ್ಕುಗಳಲ್ಲಿರುವ ರಾಜ್ಯಗಳನ್ನು ಗೆಲ್ಲುವುದು : ಆದಿವಂಶಾವತಾರಸಂಭವಂ ರಂಗಪ್ರವೇಶಂ . . . ಇಂದ್ರಪ್ರಸ್ಥಪ್ರವೇಶಂ ಅರ್ಜುನದಿಗ್ವಿಜಯಂ . . . ಅರ್ಜುನಾಭಿಷೇಕಂ ಪೆಱವುಮುಪಾಖ್ಯಾನ ಕಥೆಗಳೊಳವೊಂದುಂ ಕುಂದಲೀಯದೆ ಪೇಟ್ದಿಂ (ಪಂಪಭಾ. ೧೪-೫೨ ವ) ; ವಸಂತದೊಳ್ ಮಾವು ಬಂದುದು ಶರದೊಳ್ ದಿಗ್ವಿಜಯಮುಚಿತಂ (ಶಮದ. ೧೩೩ ಪ್ರಯೋ) ; ಹಸನಾಯ್ತು ದಿಗ್ವಿಜಯದೊಳ್ ಗೊರವನೆಂದು ಪಾಲಿಸಿದೆವವನೇ ಜಗತ್ಕರ್ತೃ ಗಡವೆನುತಾಗ . . . ಒಡನೊಡನೆ ಗರ್ಜಿಸಿದನು (ಚಬಪು. ೪೭-೧೯) ; ನಿನ್ನಾಳ್ಕೆಗೆಲ್ಲಿಯುಮುಪಾಯಮವನಿಯೊಳಿಲ್ಲವಿನ್ನು ದಿಗ್ವಿಜಯವಿಲ್ಲವಸರದ ಬೇಂಟೆಯಿಲ್ಲ (ಜೈಮಿಭಾ.

೨-೫೪) ; ಪೂರ್ವಪದ್ಧತಿವಿಡಿದು ಪಾಳ್ವ ದಿಗ್ವಿಜಯ ಹಯಮೇಧ ಮೊದಲಾದುವಂ ತೋರೆದು (ಶ್ರೀರಾಮಾ. ೯-೨೪೩) ; ಪ್ರಭುವು ಹೀಗೆ ದಕ್ಷಿಣ ಪೂರ್ವದೇಶಗಳ ದಿಗ್ವಿಜಯವನ್ನು ಪೂರ್ಣಗೊಳಿಸಿದರು (ಶಾಂತಲಾ. ೧೫೪). ೨. [ಜೈನ] ಐಯ್ವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು: ದಿಗ್ವಿಜಯ ಚಕ್ರಾಭಿಷೇಕ ಸಾಮ್ರಾಜ್ಯ . . . ನಿರ್ವೃತಿಯೆಂಬಯ್ವತ್ತು ಮೂಱು ಗರ್ಭಾದಿ ನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳುಂ (ಆದಿಪು. ೧೫-೧೫ ವ) ; ದಿಗ್ವಿಜಯಮುಂ ಚಕ್ರಾಭಿಷೇಕಮುಂ ಸಾಮ್ರಾಜ್ಯಮುಂ . . . ಅಯ್ವತ್ತುಮೂಱು ಗರ್ಭಾನ್ವಯ ಕ್ರಿಯೆಯೊಳ್ (ಚಾವುಂಪು. ೨೦೨). 'ದೀಕ್ಷೆ' ಪರಾ. [ ಸಂ. ]

**ದಿಗ್ವಿತತಿ** (ನಾ). ದಿಕ್ಕುಗಳ ಗುಂಪು,—ಸಮೂಹ ; ಎಲ್ಲ ದಿಕ್ಕುಗಳು : ಆಱೆಕೆಯ್ದನೆಂದು ದಶಮುಖ ಕುಲದೇವತೆಯ ಪುಯ್ಯಲಿಡುವವೋಲ್ ದಿಗ್ವಿತತಿಯನಾವರಿಸಿದತ್ತು ಭೇರೀನಾದಂ (ಪಂರಾಮಾ. ೧೪-೧೨೫). [ಸಂ.]

**ದಿಗ್ವಿರತಿ** (ನಾ). = ದಿಗ್ವ್ರತ : ದಿಗ್ವಿರತಿಯುಂ ದೇಶವಿರತಿಯುಂ ಅನರ್ಥ ದಂಡವಿರತಿಯುಮೆಂದಿವು ಗುಣವ್ರತಂ ಮೂಱು ಭೇದಮಕ್ಕುಂ (ಪಸಾರ. ೩೧೧). [ ಸಂ. ]

**ದಿಗ್ವಿವರ** (ನಾ). ದಿಕ್ಕುಗಳ ಒಳಭಾಗ,—ಅವಕಾಶ ; ದಿಗಂತರ : ಅಂತು ಚತುರಂಗಸೇನೆ ಯುಗಾಂತಕರವ ವರ್ಣವಾರವಂ ಘನರವಮೆಂಬಂತಾಗೆ ತಾಗೆ ದಿಗ್ವಿವರಾಂತರವಂ (ಶಾಂತಿಪು. ೧೦-೧೩೦). [ ಸಂ. ]

**ದಿಗ್ವ್ರತ** (ನಾ). [ಜೈನ] ಶ್ರಾವಕನ ವ್ರತಗಳಲ್ಲಿ ಒಂದು; ಒಂದು ಮೇರೆಯನ್ನು ಇಟ್ಟುಕೊಂಡು ಅದಷ್ಟೇ ಸ್ಥಳದಲ್ಲಿಯೇ ವಿಹರಿಸುವೆನೆಂದು ಮಾಡಿಕೊಳ್ಳುವ ನಿಯಮ,—ವ್ರತ : ಮಿಗಿಲಾಗಿರೆ ಸೀಮೆಯನವಧಿಗುಯ್ವುದುಂ ಮಱೆದು ಮೊದಲ ಪವಣಂ ಪೆಱತಂ ಬಗೆವುದುಮೂರ್ಧ್ವಾಧಸ್ತಿರ್ಯಗ್ಗತಿಕ್ರಮಮುಂ ವ್ಯತಿಕ್ರಮಂ ದಿಗ್ವ್ರತದೊಳ್ (ವರ್ಧಮಾ. ೭-೧೩); ದಿಗ್ವ್ರತ . . . ನಾಲ್ಕೂ ದಿಕ್ಕುಗಳಲ್ಲಿರುವ ನದಿ, ಪರ್ವತ ಮೊದಲಾದುವುಗಳ ಮೇರೆಯನ್ನು ಗೊತ್ತುಮಾಡಿ ಅವನ್ನು ದಾಟಿ ಆಮರಣವೂ ಹೋಗುವುದಿಲ್ಲವೆಂದು ನಿಶ್ಚಯ ಮಾಡುವುದು (ಜೈನಧ. ೬೯). [ ಸಂ. ]

**ದಿಙ್ನಾಗ** (ನಾ). ೧. = ದಿಗ್ಗಜ೧ : ದಿಙ್ನಾಗಯುದ್ಧಕ್ಕೆ ಕೃತ್ರಿಮಾರ್ಗಳಾಬಂಧಮೆಂಬಳವನೊಳಕೊಂಡ ಹಿಮವದ್ವಿಜಯಾರ್ಧ ನೀಲನಿಷಧ ಮಹೀಧರಂಗಳಂ ಪೋಲ್ತು (ಶಾಂತಿಪು. ೩-೧೯ವ) ; ಶೇಷನಂ ಪೊಸೆವ ದಿಙ್ನಾಗಂಗಳಂ ಪೊಯ್ದು ಘೀಳಿಡಿಪ . . . ಉಡುಸಂತಾನಮನಾದುರ್ದಿಚರ್ಪ ಗಣಗಳ್ ಬಂದರಾನಂದದಿಂ (ಗಿರಿಕ. ೦೦-೭೪). ೨. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : ವಸು ಕರಿ ದಿಙ್ನಾಗಂ . . . ವಾರಣ ಮಾರಯೆಯೆಂಟಕ್ಕೆ ನಾಮಮಿದು (ವ್ಯವಹಾ. ೯-೩೦). [ ಸಂ. ]

**ದಿಙ್ನಾಥ** (ನಾ). = ದಿಕ್ಪಾಲ : ನೆಲನಂ ಘಟ್ಟಿಸೆ ಕಮಠನ ಬೆನ್ನೆಲು ನೆಗ್ಗಲ್ತಿರುಪಿನ ಗಾಳಿಗೆ ದಿಙ್ನಾಥರ್ನೆಲೆದಪ್ಪಲು ಠಕ್ಕಿಸಿ ಭೂಷೆಯನವಧರಿಸವ ಧರಿಸೆಂದಂ ಪಟುಭಟನು (ವೀರೇಜ. ೨-೧೧). [ ಸಂ. ]

**ದಿಙ್ನಿಕರ** (ನಾ). ದಿಕ್ಕುಗಳ ಸಮೂಹ,—ಗುಂಪು : ದಿಙ್ನಿಕರಕ್ಕೆ ಪರ್ಚಿ ಕಡುಕರ್ಬೊಗೆಯುಂ ಕಿಡಿಯುಂ ನೆಗಟ್ದಿ ದಾವಾಗ್ನಿ ಕವಲ್ದು ಪರ್ವೆ (ನಳಚಂ. ೫೮೪). [ ಸಂ. ]

**ದಿಙ್ಮಂಡಲ, ದಿಙ್ಮಂಡಳ** (ನಾ). ದಿಕ್ಕುಗಳ ಸಮೂಹ,—ಗುಂಪು: ಅಱಿಯರೆನ್ನನು ಶಕ್ರನೆಂದೇ ತಱುಬಿ ದಿಙ್ಮಂಡಲವ ಮುಸುಕಿದರಿಱಿತಕಂಜದ ದಿಟ್ಟನಾವನು ಸುರರ ಥಟ್ಟನಲಿ (ಕುಮಾಭಾ. ೧೨-೩೭). ದಿಙ್ಮಂಡಳ : ನಿರ್ವರ್ತಿತಜನ್ಮಾಭಿಷೇಕನನೇಕದುಂದುಭಿಬಧಿರಿತ ಸಕಳದಿಙ್ಮಂಡಳನಾಖಂಡಳ ನಮರಸಮಿತಿವೆರಸಯೋಧ್ಯಾಪುರಕ್ಕಭಿಮುಖನಾದಾಗಳ್ (ಅಜಿಪು. ೭-೧೦೬ ವ). [ ಸಂ. ]

**ದಿಙ್ಮಂಡಳ** 'ದಿಙ್ಮಂಡಲ' ನೋ.

**ದಿಙ್ಮಾತ್ರ** (ನಾ). ಹೀಗಿರುವುದಂ—ಎಂದು ಮಾತ್ರ ಹೇಳುವ ವಿವರಣೆ ; ಸ್ಥೂಲ ನಿರ್ದೇಶ,—ಪರಿಚಯ: ಶ್ರವಣಸುಖಮೆಂದೆ ದಿಙ್ಮಾತ್ರವರ್ಣನಂಗೆಯ್ವನುಂತದೇನೆನ್ನಳವೇ (ಆದಿಪು. ೦೯-೫೦). [ ಸಂ. ]

**ದಿಙ್ಮುಖ** (ನಾ). ದಿಕ್ಕಿನ ಮುಖ,—ಮುಂಭಾಗ : ನಾನಾ ರತ್ನಮಯಂಗಳುಮಪ್ರತಿಹತ ಪ್ರಭಾದ್ಯೋತಿತದಿಙ್ಮುಖಂಗಳುಮಪ್ಪ ಕಲ್ಪವೃಕ್ಷಂಗಳ್ (ಆದಿಪು. ೫-೩೦ ವ) ; ಕಂಡೆಂ . . . ಆಖಂಡಲ ದಿಙ್ಮುಖದೆ ಬಂದು ಸರ್ವಗ್ರಾಸಂಗೊಂಡತ್ತಪರಾದಿತ್ಯನ ಮಂಡಲಮಂ (ಗದಾಯು. ೧-೨೭) ; ಕೆಂಪುವಿಡಿದಡಗುವಿನನುದಯಿಪಿಂದು ಸಲೆ ಮೂಡಿಲೊಪ್ಪಿದುವುಭಯ ದಿಙ್ಮುಖಗಳು (ಹಚಕಾ. ೪-೭೮). [ ಸಂ. ]

**ದಿಙ್ಮೂಢ** (ನಾ). ದಿಕ್ಕು ತೋಚದವನು ; ಗಾಬರಿಗೊಂಡವನು ; ದಿಗ್ಭ್ರಮೆ ಹಿಡಿದವನು ; ದಿಗ್ಭ್ರಾಂತ : ಅವಿವೇಕಾತ್ಮತೆಯಿಂದೆ ಮೆಯ್ಯಱಿಯದಾಂ ದಿಙ್ಮೂಢನಾಗಿರ್ದನಿನ್ನೆವರಂ (ಸುಕುಮಾ. ೧೨-೧೫) ; 'ಸಾನಿ'ಯನ್ನು ಮನೆಗೆ ಊಟಕ್ಕೆ ಕರೆತಂದ ದೇಸಾಯರು ಜಾನಕಿಬಾಯರ ಪ್ರವೇಶದಿಂದ ದಿಙ್ಮೂಢರಾಗುತ್ತಾರೆ (ಸಮಜೀ. ೭ ಪೀಠಿಕೆ) ; ಅವಿನಾಶರಿಗೆ ಕೂಡಲೆ ಏನೂ ತೋರದೆ, ದಿಙ್ಮೂಢರಾಗಿ ನೋಡುತ್ತಿದ್ದು "ನೀವು ಹೇಳುತ್ತಿರುವುದಾದರೂ ಏನು?" ಎಂದು ಕೇಳಿದರು (ಶೀಪ್ರಶ್ನೆ. ೫೫) ; ಮುಂಗಾರಿನ ಮುಂಗೋಪಕೆ ಬಾನೇ ದಿಙ್ಮೂಢ (ನೆಲಮು. ೭-೧೧) ; ಲೋಕಮಾನ್ಯರ ಬಗೆಗೆ ಯೋಚಿಸಿದಾಗಲೆಲ್ಲ ಅವರನ್ನು ರಾಜಕಾರಣಿಯೆಂದು ಕರೆಯಬಹುದೆ . . . ತತ್ತ್ವಜ್ಞಾನಿಗಳೆಂದು ಉದ್ಘೋಷಿಸಬಹುದೆ ? — ಎಂದೆಲ್ಲ ದಿಙ್ಮೂಢರಾಗುತ್ತೇವೆ (ಧರ್ಮಸಾ. ೦೨೮). [ ಸಂ. ]

**ದಿಟ**₁ (ನಾ). ೧. ನಿಜ ; ಸತ್ಯ ; ವಾಸ್ತವ : "ನನ್ನಿ, ನಿಕ್ಕುವಂ, ನಿಸದಂ, ಸಾಜಂ, ನನಸು, ದಿಟಾ — ಈ ೬ ಸತ್ಯಂ" (ಕಶಸಾ. ೧೩-೨೫೪) ; ಅಂ ದಿಟಮಾಗಿ ಶಲ್ಯನಳವಂ ನೆಱೆ ಮುನ್ನಱಿದಿರ್ದುಮೆನ್ನ ತಪ್ಪಿಂದಿರನೇಕೆ ಕಾದಿಸುವೆಂ (ಪಂಪಭಾ. ೧೩-೩೨) ; ಸಟೆ ದಿಟವೆಂಬುವೆರಡುವಿಡಿದು ನಡೆವುದೀ ಲೋಕವೆಲ್ಲವು (ಮಹಾದೇ. ಬ. ೫೬-೧೪೦) ; ಶಿವನಾದೊಡೇಂ ಪುಸಿ ದಿಟಕ್ಕೆ ನಿಲ್ವುದೆ ಜಗದೊಳ್ (ಗಿರಿಕ. ೯-೧೧೭) ; ಕುರುರಾಯನಾಡಿತು ದಿಟವೆನುತ ಹೊಗರಂಬ ಹೊದೆಗೆದಱೆ ನೋಯಿಸಿದನುರವಣಿಸಿ ಪರಿತಹ ನಾಯಕರನು (ಕುಮಾದ್ರೋ. ೧-೫೮) ; ಪರಿಕಿಸೆ ಲೋಕದೊಳಗಾ ಸರಸಿಜಾಕ್ಷಿಯ ಬಗೆಗೆ ಸರಿ ದೊರೆಯಿಲ್ಲವಿದು ದಿಟವು (ನಳಚ. ೨-೫) ; ಪುಸಿಯುಂ ದಿಟಂ ವಿಷಮು ನಮೃತಂ ಪುಣ್ಯಮಾ ಪಾಪವ ಸಲೆ ತೆವರುವಂತೆ ಪರವಾದಮಂ ಗೆಲ್ದು (ಚಬಪು. ೩-೨೮). ೨. ಪರವಸ್ತು ; ಪರಮಾತ್ಮ ; ಪದವಾಕ್ಯವಿದರಾಗ ವಾದಗ ಱೆಯ ಬಿಟ್ಟು ಒದವಿಪರು ದಿಟದರಿವ (ಮುಂಕುಕ. ೪೧).

**ದಿಟ**₂ 'ದಿಟಂ' ನೋ.

**ದಿಟಂ, ದಿಟ**₂ (ಅ). ನಿಶ್ಚಯವಾಗಿಯೂ ; ನಿಜವಾಗಿಯೂ ; ಸತ್ಯವಾಗಿಯೂ : ಎಸೆವ ಸಾನಂದಕದಿಂ ದಿಟನುಮರ್ದ ಪಾರಿಜಾತದ ವಿಟಪಿಗೆ ಕೌಸ್ತುಭದ ಸುತ್ತು ಸೊಗೆಯಿಪ ತೆಱದಿಂ (ಶಾಂತಿಪು. ೩-೪೩) ; ಪುತ್ರಮುಖಾಬ್ಜಾಲೋಕನ ಮಾತ್ರದೊಳಂ ಪಿತೃ ತಪಕ್ಕೆ ಪೋಕುಂ ಚಿತ್ರಂ ಪುತ್ರಂ ಮುಮುಕ್ಷುದರ್ಶನ ಮಾತ್ರದೆ ಜಿನದೀಕ್ಷೆಯಂ ದಿಟಂ ಕೈಕೊಳ್ಗುಂ (ಸುಕುಮಾ. ೯-೧೧೧) : ನೋಡ ಮರುಳ್ಗಳೆ ದಿಟಂ ಮಾಡುವುದೆಗ್ಗಲ್ತೆ ನಿನ್ನನಟ್ಟಿರೊಳಾಂ ಮುದ್ದಾಡಿಸೆ ಮುನಿಸನ್ನಿಧಿಯೊಳ್ಕಾಡಿದುದಂ ಧಾಂದಸಿಕ್ಕೆಯೊಂದೊದವಿಂದಂ (ಧರ್ಮಾಮೃ. ೩-೨೫೭) : ದೇವ ದಿಟಂ ನಿಮ್ಮಯ ಚೇತೋವೃತ್ತಿಯ ತೆಱದಿನೀ ಸರೋವರಸಲಿಲಂ ಪಾವನಮೆನಸುಂ ಸ್ವಚ್ಛಂ (ಕುಸುಮಾ. ೯-೪೦). **ದಿಟ**₂ : ದೇವ ನೀ ದಿಟ ಕೊಲುವಡೆಯು ನಾ ಸಾವೆನೇ (ಕುಮಾಭೀ. ೬-೪೩) ; ಲೇಸನಾಡಿದೆ ಕರ್ಣ ದಿಟ ನೀನೀಸು ಸಮ್ಯಜ್ಞಾನಿಯೆಂಬುದನೀಸು ದಿನ ನಾವಱಿಯೆವೈ (ಕುಮಾದ್ರೋ. ೦-೩೦) ; ನೋಡಿರೈ ಪರಿವಾರ ಮನುಜನ ಬೀಡು ಕರ ಸೋಜಿಗವು ದಿಟ (ಕಾಶಿರಾ.

೧೭-೧೭) ; ಆವ ಬಲು ಬಿಲು ಜಾಣತನದ ಮಹಾವಿಚಿತ್ರ ಪ್ರೌಢಿಯೋ ದಿಟ ದೇವನಲ್ಲಾ ಮೇಲೆ ದೈತ್ಯಾಂತಕನಲಾ ರಣಕೆ (ತೊರರಾ. ೦-೧೧-೧೮).

ದಿಟದಿಟ, ದಿಠದಿಠಂ (ದ್ವಿರುಕ್ತಿ) : ಹಲವು ವೇದ ಪುರಾಣ ಶಾಸ್ತ್ರವ ತಿಳಿದು ನೀ ಮರುಳಾದೆ ದಿಟದಿಟ ಕೊಲುವರೇ ಸಿರಿಯಂದದವಳನು ಧರ್ಮವೇ ನಿನಗೆ (ಕಾಶೀಶಾ. ೩೭-೦೮); ಯಿಂತೆರಡಱ ಬೆಂಗೆ ಪುಣ್ಯ ಪಾಪಂಗಳುಂ ಪೂರ್ದುರ್ದ್ದಿ ಕೊಂಡೊಯ್ವುದು ತಪ್ಪದು ದಿಠದಿಠಂ ಸತ್ಯಂಗಂಡಿರೇ (ಎಇ. XXIII, ೧೯೪-೦೮ ; 1265). [ <ದಿಟ$_1$ ]

**ದಿಟಕರಿಸು** (ಕ್ರಿ). ಪ್ರತ್ಯಕ್ಷವಾಗಿ ತೋರು. – ಕಾಣು ; ಸಾಕ್ಷಾತ್ಕಾರವಾಗು : ಘಟದಲ್ಲಿ ಆತ್ಮ ದಿಟಕರಿಸುವುದಿಲ್ಲ ಎಂದು ಅಱಿದ ಮಾತ್ರೆ (ಮನುಗುಂ. ೨೬೫-೭೪) ; ವಾಯು ಅಡಗಿದ ವಾರಿಧಿಯಂತೆ ಅಸು ಅಡಗಿದ ಘಟಚಿಹ್ನದಂತೆ ದಿಟಕರಿಸು ಗುಡಿಯು ಗುಮ್ಮಟನಾಥನ ಅಗಮ್ಯೇಶ್ವರ ಲಿಂಗದಲ್ಲಿ ಪರಿಪೂರಿತವಾಗಿರು (ಮನುಗುಂ. ೨೬೨-೯೩).

[ <ದಿಟ$_1$ + – ಇಸು$_3$ ]

**ದಿಟಪುಟ** (ನಾ). ೧. ವ್ಯಕ್ತವಾದುದು ; ಸ್ಪಷ್ಟವಾದುದು. ೨. ಸತ್ಯ ; ನಿಜ : ಕಟಕದೊಳು ತ್ರಿಪುರಾರಿಯಂ ದಿಟಪುಟದಿ ಕರದೋ ಎಂದೆನಿಸಿದು ತ್ಕಟದ ಭಕ್ತನು ಕಿನ್ನರಯ್ಯನು (ಬಸವು. ೨೮ ಸೂಚನೆ) ; ನಾವ್ ದಿಟಪುಟವ ನುಡಿದರೆ ಖಾತಿಯಾದುದೆ ನಿಮ್ಮ ಚಿತ್ತದಲಿ (ಕುವ್ಯಾದ್ರೋ. ೮-೬೫) ; ನಿಮ್ಮ ಮಾತು ದಿಟಪುಟವು ಸ್ಫಟಿಕ ಅದಕಿಲ್ಲ ಬೇರೆ ತಂತ್ರ (ನೆಲಮು. ೩೫-೯). ೩. ಪರಮ ಸತ್ಯ ; ಪರವಸ್ತು ; ಶಾಶ್ವತವಾದುದು ; ಸ್ಥಿರವಾದುದು ; ಸತ್ಯವಾದುದು : ದಿಟಪುಟವನಶಿಗಳಿದು ಸಟೆಯ ಬಯಸುವರೆ (ಶೂನ್ಯಸಂ. ೨೫-೧೦) ; ಎಷ್ಟು ಪಟುಭಟರಾದರೂ ಸ್ಫಟಿಕದ ಮಱಿಯಲ್ಲಿ ಅಡಗಬೇಕು ದಿಟಪುಟವನಱಿದಡೂ ಗುರು ಕೊಟ್ಟ ನಿಟಿಲ ಲೋಚನನು ಘಟಿಸಬೇಕು (ಮೋಳಿಮಾ. ೨೦-೮೨) ; ಹುಸಿಯು ಮಾಯಾ ತಮಕ್ಕೆ ದಿಟಪುಟ ದಿವಾಕರ ಎನ್ನೊಡೆಯ (ಸಿದ್ಧೇವ. ४೧-೧೧೦).

ದಿಟಪುಟಮಾಗು, ದಿಟಪುಟವಾಗು = ವ್ಯಕ್ತವಾಗು ; ಸ್ಪಷ್ಟವಾಗು : ದಿಟಪುಟಮಾದ ಬಹುಲಾಕೆಯೊಳತಿಮಧುರವಾಗೆ ಕರ್ತರಿ ಸಮಗರ್ತರಿಯರ್ಧಗರ್ತರಿ ಮೊದಲಾದನೇಕ ಶಬ್ದಸಂಪಾದನದಿಂ ಸನ್ನೆಗೆಯ್ದು ತೋರ್ಪುದುಂ (ಮಹಾನೇ. ४-೫೫ ವ) ; ಪ್ರವ್ಯಕ್ತಯತಿ ಪ್ರಯೋಗತ್ವಂ= ದಿಟಪುಟವಪ್ಪ (ವ್ಯಕ್ತವಹ ಕಾಳಾಸಮನುಳ್ಳುದು) ಜಾತಿಯಂ ಬಾಜಿಪುದುಂ (ನೀತಿವಾ. ೩೦-೧೦). [ <ದಿಟ$_1$ ]

**ದಿಟಪುಟಗೆಡು** (ಕ್ರಿ). ನಿಜಾಂಶ ತಿಳಿಯದಿರು ; ಸತ್ಯ ತಿಳಿಯದಿರು : ದಿಕ್ಕಾರು ದೆಸೆಯಾರು ದಿಟಪುಟಗೆಟ್ಟೆನು ಹಿಕ್ಕಿ ಹೇಳ್ವೊಡೆ ಹಿತರಿಲ್ಲ ಅಕ್ಕಱಿಂ ರಂಗನೆ ಗತಿಯೆಂದಿರುವಳನಕ್ಕಟಕ್ಕಟ ಕಾಣ್ಬುದೆಂದೊ (ಶತಸಾಂ. ೩೫-೦೫).

[ ದಿಟಪುಟ + ಕೆಡು$_1$ ]

**ದಿಟಪುಟವೆಱು** (ಕ್ರಿ). ಸತ್ಯವನ್ನು ಹೊಂದು ; ಸಾಕ್ಷಾತ್ಕಾರವನ್ನು ಪಡೆ: ಟಕ್ಕುಟವಳಿ ಕಟವಟವಟವಾಟವ ಬಿಟ್ಟಕ್ಕಱಿಂ ದಿಟಪುಟವೆತ್ತು ಟಕ್ಕನುಳಿದು ತಟ್ಟತಟ್ಟನೆ ಜಪಿಸಲೆಂಟಕ್ಷರಕಾಗಿ ಮೆಯ್ದೋರ್ಪೆ (ಶತಸಾಂ. ೭೦-೫೩).

[ ದಿಟಪುಟ + ಪೆಱು$_1$ ]

**ದಿಟಮಾತು** ‘ದಿಟವಾತು’ ನೋ.

**ದಿಟವಂತ** (ನಾ). ನಿಜವನ್ನು ಆಡುವವನು ; ಸತ್ಯಮಾರ್ಗದಲ್ಲಿ ನಡೆಯುವವನು ; ಸತ್ಯವಂತ : "ಸೇದ್ಧಾ, ಸೇಧಕಃ, ಸಿದ್ಧಃ, ಸಿದ್ಧವಾನ್- ಈ ೪ ದಿಟವಂತಂ" (ಕಾಶಕ್ಕ. ೧೮೮). [ ದಿಟ$_1$ + – ವಂತ ]

**ದಿಟವಾತು**, ದಿಟಮಾತು (ನಾ). ನಿಜವಾದ ಮಾತು.–ನುಡಿ: "ದಿಟವಾ [ಪಾಠಾಂ. ಮಾ]ತು ಸೂನೃತವಕ್ಕು" (ಮಂಗರಾ. ೨೫-೧). **ದಿಟಮಾತು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ ದಿಟ$_1$ + ಮಾತು$_1$ ]

**ದಿಟ್ಟ$_1$**, ಧಿಟ್ಟ (ಗು). ೧. ಧೈರ್ಯದಿಂದ ಕೂಡಿದ ; ಧೀರತನವುಳ್ಳ : ಅಪ್ಪಮದಗಳೆನಿಪಟ್ಟಳೆಗಳು ಮೂಱು ಪಟ್ಟಣದಪ್ಪದಿಕ್ಕಿನೊಳು ಮುಟ್ಟಬಾರದು ಹರಿಹರಬೊಮ್ಮರಾದಿಯ ದಿಟ್ಟ ಮಹಾಪುರುಷರಿಗೆ (ತ್ರಿಪುಸಾಂ. ४-೯೭). ೨. ಉದ್ಧಟತನದ ; ಸೊಕ್ಕಿನ : ದಿಟ್ಟ ಹೆಂಗಸೆ ನೃಪರ ಬಸುಱಲಿ ಹುಟ್ಟಿ ನೀ ಹೋಗೆಂದು ಶಾಪವ ಕೊಟ್ಟನು (ಕುವ್ಯಾಆ. ಓರಿಇ. ೩೩-೨४). ೩. ಗಟ್ಟಿಮುಟ್ಟಾದ ; ಬಲವಾದ : (+). (ನಾ). ೪. ಧೈರ್ಯಶಾಲಿ; ಧೀರವ್ಯಕ್ತಿ ; ಸಮರ್ಥ ; ಸಾಹಸಿ : ಜನವಾಕ್ಯಾಂಬುಧಿಯುಮನುಱದೀಸುವೆನೆಂಬ ದಿಟ್ಟರೆಮ್ಮಿಂ ಪೆಱರಾರ್ (ಧರ್ಮಾಮೃ. ೧-೫೨) ; ಎಲೆ ಮಱಿಯ ನೀರ ಸುಟ್ಟ ಬೂದಿಯದು ಪೂಜಿಸಿ ಸಿದ್ಧಿಗಳ ಗುದ್ದಾಟಕ್ಕೊಳಗಾದವರ ಕಡೆಮೆಟ್ಟ ಬಿಟ್ಟಿಪ್ಪನ್ನೆ ಬೆಟ್ಟಜೆಪತಿ ದಿಟ್ಟ ಕಪಿಲಸಿದ್ಧ (ಸಿದ್ಧವ. ೪. ४೫-४೮೨) ; ದಿಟ್ಟ ನೀನಹೆ ಪುಂಡರೀಕಯಸುತ ಬಲು ಬಟ್ಟ ಸರಳುಗಳ ತೊಟ್ಟು ಕಟ್ಟಾಳುಗಳಧಿರಾಜನೆಸಲು (ಅಂಜಪ. ೬-೧೪೩) ; ದಿಟ್ಟನೈ ಗುರುಸೂನು ಶಿವ ಜಗಜಟ್ಟಿಯಲ್ಲಾ (ಕುವ್ಯಾಕ. ೧४-೨೨) ; ಅಂದು ಕಾಳಿಂಗನ ಪೆಡೆಯ ತುಳಿದ ದಿಟ್ಟ ನಂದನ ಕಂದ ಮುಕುಂದ ಕಾಣಮ್ಮ (ಪುರಂದ. ೨-೭೦-೧) ; ಸ್ವಭಾವತಃ ನಾನು ದಿಟ್ಟಳಿದ್ದೇನೆ (ಹೇಮಂತ. ೨೭೦). ೫. ಧೃಷ್ಟ ; ಸೊಕ್ಕಿದವನು ; ಕೊಬ್ಬಿದವನು ; ಉದ್ಧಟ : ಕಟ್ಟತುರಿದೆಸೆ ನಾಲ್ಕಱಲಿ ಬೆನ್ನಟ್ಟಿ ಹೊಯ್ದುದು ಬಿನುಗುಗಳ . . . ದಿಟ್ಟರುರಿದುದು ವೀರರಸುಗಳು ಬಿಟ್ಟರಭವ ದ್ರೋಹಿಗಳಂ ನೆಱೆ ಕೆಟ್ಟ ಕೇಡಿಂಗಾರು ಮಱುಗುವರು (ಕುವ್ಯಾಕ. ೭-४೧) ; ಎಲೆ ದಿಟ್ಟ, ನಗುವೆಯ ನನ್ನ ಎನಗೇತಕೆಯೋ ಮದುವೆಯ ಬನ್ನ ! (ಗಣೇಶ. ೫-೧೧೭). **ಧಿಟ್ಟ** : ೧. ಧಿಟ್ಟ ಜೀವಿಗಳ ಭಂಗದ ಬರಿಯಂತರಂಗ (ವಿಸೀಗೀ. ೩-೧೦) ; ನಟ್ಟ ಕಂಬದ ಹಾಗೆ ಧಿಟ್ಟವೀರನಿರಬೇಕು (ಗಾದೆ). ೪. ವೃಥಾ ಕೆಡೆನುಡಿಯ ನುಡಿದರೆ ಧಿ[ಪಾಠಾಂ. ದಿ]ಟ್ಟನೆಂಬರೆ ವೀರರಾದವರು (ಕುವ್ಯಾದ್ರೋ. ೧೫-೬೭) ; ಧಿಟ್ಟ ಕೇಳು ನಿರುತರವು ಕೈಗಟ್ಟ ನಿಂದೂಳಿಗವನೆಸಗಲು ನಿಟ್ಟಸನು ಪರಮಾತ್ಮ (ಗಗಶಾ. ೦೨-೭೮).

ಧಿಟ್ಟವನಾಡು = ಉದ್ಧಟತನದಿಂದ ಮಾತನಾಡು ; ಸೊಕ್ಕಿನಿಂದ ಮಾತನಾಡು : ಹಿರಿದು ದಿಟ್ಟವನಾಡಿ ಸಕಲರ ಮೆಚ್ಚಿಪುದುರುತರ ಮೌಖರ್ಯದೋಷ (ಪೂಜ್ಯಪ. ೬-೩೫).

[ <ಪ್ರಾ. ಧಿಟ್ಟ./ ಸಂ. ಧೃಷ್ಟ ]

**ದಿಟ್ಟ$_2$** (ನಾ). ದೃಢಸ್ಥಿತಿ ; ನೆಲೆ : ಹುಟ್ಟಿದುದು ದೇವಾಂಗನಾಜನ ನೆಟ್ಟನೆಯದೀರೇಳುಲೋಕದ ದಿಟ್ಟವನು ನಿರ್ಮಿಸಲಿಕಾಯ್ತು ಮನುಜವರ್ಗದಲಿ ಹುಟ್ಟಿದವರೊಂದೊಂದು ಕೆಲಸವ ನೆಟ್ಟನಾಶ್ರಯಿಸಿದರು (ಸಂಭಪ. ೫-೩೦) ; ಅವಶ್ಯವಾದ ಪತ್ರವ್ಯವಹಾರ ನಡೆದು ಒಂದು ದಿಟ್ಟವನ್ನು ಮುಟ್ಟುವುದಕ್ಕೆ ಇನ್ನು ಎರಡು ಅಥವಾ ಮೂರು ತಿಂಗಳು ಆಗಬಹುದು (ಚಿಕರಾ. ೩೭೫). [ <ತಿಟ್ಟ$_3$ ]

**ದಿಟ್ಟಂಗೊಳಿಸು** (ಕ್ರಿ). ದೃಢಪಡಿಸು ; ಸ್ಪಷ್ಟಪಡಿಸು : ವಸಂತಕನೀ ಕೇರಿಯೊಳ್ ತಿರುಗಿ ಪರಿಣತನಾದುದಱಿಂದೆಯುಮೆಮಗೆ ಹಿತಪರನಾದುದಱಿಂದೆಯುಂ ... ಇದೊಂದು ನೆವದೊಳ್ ದಿಟ್ಟಂಗೊಳಿಸಿದನೆಂದಾಲೋಚಿಸಿ (ಚಿಕವಿ. ೬-೭೭ ವ). [ ದಿಟ್ಟ$_2$ + ಕೊಳ್$_1$ + – ಇಸು$_3$ ]

**ದಿಟ್ಟಂಜಮಾಬಂದಿ** ‘ಡಿಟ್ಟಂಜಮಾಬಂದಿ’ ನೋ.

**ದಿಟ್ಟಗಾರ** (ನಾ). ಧೈರ್ಯಶಾಲಿ ; ಧೀರ : (+).

[ ದಿಟ್ಟ$_1$ + – ಗಾರ (< – ಕಾಱ) ]

**ದಿಟ್ಟತನ**, ಧಿಟ್ಟತನ (ನಾ). ೧. ಧೈರ್ಯ ; ಸಾಹಸ : "ಕಡ್ಡಮೆನಲ್ ದಿಟ್ಟತನಂ[ಪಾಠಾಂ. ನಹಂ]" (ಚತುನಿ. ೩೮) ; ದಾನವರ ಘಟ್ಟಣೆಗೆ ನಿಲುವರ ನಾನು ಕಾಣೆನು ದಿಟ್ಟತನದಲಿ ತಾನೆ ನಿಂದನು ಕೌರವೇಂದ್ರನು ಸಕಲಬಲ ಸಹಿತ (ಕುವ್ಯಾದ್ರೋ. ೧೫-೫೨) ; ಅವನ ದಿಟ್ಟತನವ ಸುರಮಂತಿ ಕಂಡು

ನೀನಾರ ದೂತಂ ನಮ್ಮ ಪುರಕದೇಂ ಕಾರಣಂ ಬಂದೆ . . . ಪೇಳೆಂದು ಬೆಸಗೊಳಲ್ (ಜಬಪು. ೨೩-೨೦); ಆ ಭೂಪನ ದಿಟ್ಟತನಕೆ ಸರಿಯುಂಟೆ (ಕಂನವಿ. ೧೮-೩೩). ೨. ಧಾರ್ಷ್ಟ್ಯ; ಉದ್ಧತಿಕೆ: ಹರಹರಾ ನೀನಿಷ್ಟು ರಾವಣನೊಳಿಯದೆ ಅಷ್ಟವಿಧಾರ್ಚನೆ ಷೋಡಶೋಪಚಾರವಮಂ ಮಾಡಿಹೆನೆಂಬ ವರ ದಿಟ್ಟತನವ ನೋಡಾ (ಅವಜಂ. ೧೮೫-೮೩೩); ಪಟ್ಟಣದೊಳು ಜನ ಕೊಟ್ಟ ಹಣವನೆಡೆವೆಟ್ಟು ಬಾಹಿರವಟ್ಟವೆಂದು ದಿಟ್ಟತನದೆ ಪೆಸರಿಟ್ಟು ವಟ್ಟವ ಕೊಂಬ ಸೆಟ್ಟಿಗಳಿರುತಿಹರಲ್ಲಿ (ಅಂಜಜ. ೩-೮೩). ೩. ಶೌರ್ಯ; ಬಲ; ಶಕ್ತಿ; ದಾರ್ಢ್ಯ: ಬೆಟ್ಟುಗಳ ರಟ್ಟೆಯಂ ಕುಟ್ಟಿದಮರಾಪತಿಯ ದಿಟ್ಟತನವಂ ನೋಳ್ಪೆನೆಂದು . . . ಬಂದುದೋ (ಹಡಕಾ ಪರಿ ೨೦೪); ಭೀತಿ ಬಿಗಿದುದು ದಿಟ್ಟತನದನುಘಾತುಗೆಟ್ಟುದು (ಕುವ್ಯಾಕ. ೩-೨೫); ಬೆಟ್ಟದ ಚಾಮೇಂದ್ರನೆನೆ ರಿಪುಭೂಪರ ಪಟ್ಟದಂಗನೆಯರ ಗರ್ಭ ಉಟ್ಟುಳುಕಿಗೆ ಬಂದು ಕರಗುವುವುವಾತನ ದಿಟ್ಟತನವದೇವೇಳ್ವೆ (ಕಂನವಿ. ೩-೪೮). ಧಿಟ್ಟತನ: ೧. ಧಿ[ಪಾಠಾಂ. ದಿ]ಟ್ಟತನ ಪೊಳ್ಳಾಯ್ತು ಶೌರ್ಯದ ಘಟ್ಟಿ ಕರಗಿತು (ಕುವ್ಯಾಭೀ. ೮-೬೨); ಶ್ರದ್ಧೆಯೊಡನೆ ಮಾತ್ರ ಅವನ ಧಿಟ್ಟತನ ನಡೆಯುತ್ತಿತ್ತು (ಪ್ರೇಮಾಶ್ರ. ೨೪೬). ೨. ಈ ಧಿಟ್ಟತನವು ಸಹನವಾಗಲಿಲ್ಲ (ಸಮಜೀ. ೪೦). [ ದಿಟ್ಟ$_1$ + – ತನ ]

**ದಿಟ್ಟಪಡಿಸು** (ಕ್ರಿ). ದೃಢಪಡಿಸು; ಖಚಿತಪಡಿಸು: ಚಿಕ್ಕವರಾದಾಗ್ಯೂ ವಿವೇಕಶಾಲಿಗಳು ಕಾರ್ಯಗಳನ್ನು ದಿಟ್ಟಪಡಿಸುವರು (ಕಥಾಮಂ. IV, ೧೦). [ ದಿಟ್ಟ$_2$ + ಪಡಿಸು ]

**ದಿಟ್ಟಮನುಷ್ಯ** (ನಾ). = ದಿಟ್ಟಗಾರ: ಮೇಜರ್ ಬಟ್ಲರನು ಮೊದಲಿನಿಂದಲೂ ದಿಟ್ಟಮನುಷ್ಯ (ಮಹಾತ್ಮಾ. ೬೬). [ ದಿಟ್ಟ$_1$ + ಮನುಷ್ಯ ]

**ದಿಟ್ಟವಾಳ** (ನಾ). ಧೈರ್ಯಶಾಲಿ; ಧೀರ: ಅಸಮಸಗೆ ಮೈಯಳುಕದೆಬಗುವ ಹುಸಿವ ಜಾಱುವ ಹೊಳೆವ ಹಣುಗುವ ಬೆಸುವ ಬಿಡಿಸುವ ದಿಟ್ಟ [ಪಾಠಾಂ. ಟ್ಟ]ವಾಳರು ಹೊಕ್ಕು ಹೆಣಗಿದರು (ಕುವ್ಯಾಸ. ೨-೦೦೫). [ ದಿಟ್ಟ$_1$ + – ವಾಳ$_1$ ]

**ದಿಟ್ಟಸೊಕ್ಕು** (ನಾ). ಅಧಿಕವಾದ ಸೊಕ್ಕು, ಉದ್ಧಟತನ: ನಿನ್ನ ಈ ಬಿರುಸಿನ ಗಡಸನ್ನು ಸೆಡಕನ್ನು ಬಲ್ಮೆಯಿಂದಿಳಿಹಿ, ಮನ್ಮಥನಿಗಲರಲೊಲ್ಲದ ನಿನ್ನ ಅಶಾಸಿತಯವ್ವನಕ್ಕುಳ್ಳ ದಿಟ್ಟಸೊಕ್ಕನ್ನು ತಿದ್ದಿ ತಿಳಿಯಿಸಿಕೊಂಡು (ಮಂತ್ರಶ. ೫೮-೨೪). [ ದಿಟ್ಟ$_1$ + ಸೊಕ್ಕು$_4$ (< ಸೊರ್ಕು$_2$) ]

**ದಿಟ್ಟಾಯ್ಲ** (ನಾ). ಧೀರ; ಸಾಹಸಿ. 'ದಿಟ್ಟಾಯ್ಲತನ' ಪರಾ. [ ದಿಟ್ಟ$_1$ + –ಆಯ್ಲ (< –ಆಯಿಲ$_2$) ]

**ದಿಟ್ಟಾಯ್ಲತನ** (ನಾ). ಧೀರತನ; ಸಾಹಸ: ಧನು ಮುಱಿಯೆ ದಿಟ್ಟಾಯ್ಲತನವೀತನಲಿ ಸಾಕಿನ್ನೆನುತ ಗುರುನಂದನನು ಮುಱಿದನು ಹೊಗರುವೊರೆಯ ಹೊತ್ತ ದುಗುಡದಲಿ (ಕುವ್ಯಾಕ. ೧೪-೩೦). [ ದಿಟ್ಟಾಯ್ಲ + – ತನ ]

**ದಿಟ್ಟಿ, ದಿಷ್ಟಿ$_1$** (ನಾ). ೧. ಕಣ್ಣು; ನೇತ್ರ: "ಅಚ್ಚಿ, ಅಲಿ, ದಿಟ್ಟಿ–ಈ ೩ ನಯನಂ" (ಕಶಸಾ. ೨೧-೪೨೫); ಮೆಯ್ಯೆಲ್ಲಂ ದಿಟ್ಟಿಗಳಾದೊಡಿಂದ್ರನೆನಿಸ ಲ್ಯಾರ್ತಂ ಮಹೇಂದ್ರಾಂತಕಂ (ಕಾವ್ಯಸಾ. ೫೫೦ ಶೂದ್ರಕ); ಆಗಸದೊಳಗೊಂದು ಮಹೀಭಾಗದೊಳಿನ್ನೊಂದು ದಾಡೆಯಾಗಿರೆ ವನದಿಂ ಬೇಗಂ ಬರ್ಪಳ ದಿಟ್ಟಿಗಳಾಗಳೆ ಪತ್ತಿದುವು ಗೆಂಟಱಿಸೊಳ್ ಮಾರುತಿಯಂ (ಪಂಪಭಾ. ೩-೦೩); ಮರಲ್ದ ದಿಟ್ಟಿ ಕತ್ತರಿಮೊನೆಗೊಂಡೆಟಲ್ವ ಕಿವಿ ಸೂಚಿಸಿದಪ್ಪುದು ಸೋಲ್ದ ಭಾವಮಂ (ಕಾದಂಪೂ. ೬೫೦); ನಟ್ಟ ದಿಟ್ಟಿಗಳ್ವೆರಸು ನಿನ್ನನೆ ನೋಡುತ್ತುಮಿರ್ಕುಮಪ್ಪೊಡೆ (ಪಂಚತಂ. ೧೬೬-೦೨); ಕಿವಿಗಳೆಳ(ಟ)ಲ್ದು ತೂಱುವೊಡೆ ಮೆಯ್ ಬಿಗಿದಪ್ಪೊಡೆ ದಿಟ್ಟಿ ನೆತ್ತಿಗೇಱು ವೊಡದಱಿಂದೆ ಕಣ್ ಗುಟಿದು ತೋಱಿದೊಡೆಚ್ಚುಗೆ ಪಟ್ಟ ಸೂ[ತ್ರಭಸ್ಮ]ವಂ (ಲೋಕೋಪ. ೯-೨೦೫); ಹತ್ತೆಸಾರ್ದೆಯ್ದು ಕಣ್ಣೊಡೆದಿರ್ದುದಂ ಕಂಡು . . . ದಿಟ್ಟಿಯಿಂತೀಕಾಯ್ತು ಉರಿದೆ ನಾಂ ಉರಿದೆ ನಾಂ ಎನ್ನೊಡೆಯನೇ ಸೈರಿಸಲ್ಕಾಪೆನೇ ... ಎಂದು (ಕಣ್ಣ.ರ. ದೇ. ೦೪೬-೮); ಪಱಿದಿಟ್ಟ ದಿಟ್ಟಿಯ ಬಳಿಕೊರ್ವನ ಕಾಲ ಮುಱಿದಿಟ್ಟ ನಿಟ್ಟೆಲುಗಳನು ನಿಱಿನಿಟಲೆಂಬಂತೆ ಕಿತ್ತು ಮಸ್ತಕವನು ತಿಱಿಕಲ್ಲನಾಡಿ ಬೊಬ್ಬಿಱಿದ (ವೋಹತ. ೧೨-೩೭). ೨. ದೃಷ್ಟಿ; ನೋಟ: "ದಿಟ್ಟಿಯೆಂದನೆ ದೃಷ್ಟಿಯಕ್ಕು" (ಕಶರ. ೫೦); ತಾಂ ಪಿಂಗದೆ ನಟ್ಟ ದಿಟ್ಟಿಯನವಂ ಕಿಟಲೆಂದನುಗೆಯ್ದು ತೂಗಿದಂ (ಆದಿಪು. ೧೨-೦೫); ಪದಪಿಂ ನಟ್ಟರೆ ದಿಟ್ಟಿಯಂ ತೆಗೆದೆನೆಂತೆಂತಾನುಮುದ್ವೇಗದಿಂ (ಕಾದಂಪೂ. ೭೭೩); ಬೆಟ್ಟವುದೊಂದು . . . ದಿಟ್ಟಿಗೆಡೆಯಾದುದು ಕರ್ಪುರವಿಲ್ಲನಾ (ಕಬ್ಬಿಕಾ ೨೨೦). ೩. ಕೆಟ್ಟ ಪರಿಣಾಮವನ್ನುಂಟುಮಾಡುವ ನೋಟ; ಕಣ್ಣೆಂಜಲು; ದೃಷ್ಟಿದೋಷ: ಕಟ್ಟುಗೆ ಕೊರಲೊಳ್ ಸೀರೆಯ ಪೊಟ್ಟಣಿ(ಳ)ಮಂ ಮಾಡಿ ಧಾನ್ಯಸಮೇತಂ ನೋಡಲ್ ದಿಟ್ಟಿಗಳಾಗವು ವಾಜಿಗಂ (ಅಶ್ವಶಾ. ೮-೧೮); ಅಮರಗಣದಿಂ ದಿಟ್ಟಿಯಾದಪುದು ಮತ್ತುನತಂಗೆಂದು ಗಿರಿರಾಜತನುಜೆ ಮಮತೆಯಿಂ ತದ್ಗರ್ಭರಕ್ಷಣಕೆ ಬರೆವ ಕಾಳಿಮಲೇಖೆಯೋ . . . ಎನಲ್ ಕಪ್ಪದರ್ದ ನಿಡುಬಾಸೆ ಕಣ್ಗೆಸೆದುದು (ಜಬಪು. ೪-೧೨). ೪. ಲಕ್ಷ್ಯ; ಗಮನ: ತಳಿರ ಕಳಿಕೆಯ ಪೊಸ ಪೂವಿನ ಮೇಗೆ ದಿಟ್ಟಿಯಾಗಿರೆ ವನಜಾನನೆಯರ್ ವಿಳಾಸವನವಂ ಪೊಕ್ಕರ್ (ಆದಿಪು. ೧೧-೬೪); ಎಲೆ ಆದಿತ್ಯ! ನಿನ್ನ ಕುಲವಧುವಿವಳ್ . . . ಅಂತದಱಿಂ ಇವಳೊಳ್ ದಿಟ್ಟಿಯಿರ್ಕೆ (ರಾಮಾಶ್ವ. ೩೯-೮). ದಿಷ್ಟಿ$_1$: ೩. 'ದಿಷ್ಟಿಬೊಟ್ಟು', 'ದಿಷ್ಟಿಮಣಿಸರ' ಪರಾ.

ದಿಟ್ಟಿಗೆವರ್ = ಕಣ್ಣಿಗೆ ಬೀಳು: ದಿಟ್ಟಿಗೆವರೆ ಬಂಧವಿಧಂ ಕಟ್ಟಿದ ಪಲತೆಱದ ಮಣಿಯ ಸೂಸಕದ ನೆಟಿಲ್ (ಚಂದ್ರಪು. ೬-೪೬). ದಿಟ್ಟಿಗೊಟ್ಟು = ದೃಷ್ಟಿಗೆ ಬೀಳು: ಎನ್ನಾ ಪೆಂಡತಿಯಂ ಜಾನಕಿಯಂ ರಕ್ಕಸಂ ರಾವಣಂ ಕಳ್ದುಯ್ದಂ ಆದೊಡಂತಾ ದುಟ್ಟಂ ದಿಟ್ಟಿಗೊಟ್ಟದನಿಲ್ಲಂ (ಅದ್ಭುತ. ೩೬-೦೨). ದಿಟ್ಟಿ ಮೂಱಱ ದೇವ = ಮಂರೂರು ಕಣ್ಣುಗಳುಳ್ಳವನು; ಮುಕ್ಕಣ್ಣ; ಶಿವ: ದಿಟ್ಟಿ ಮೂಱಱ ದೇವನಂ ಕಂಡು ಕಾಣದ ಜ್ಞಾನಿಗಳೆನುತ್ತ ಬಾಯ ಬಿಟ್ಟು ಪಲಬುವರು (ವೀಶೈಪು. ೨-೯-೨೭). ದಿಟ್ಟಿ ಮೂಱಱರಸ = ದಿಟ್ಟಿ ಮೂಱಱದೇವ: ದಿಟ್ಟಿ ಮೂಱ[ ಮೂಱಱ ]ರಸಂ ನಾರಾಯಣ ಪ್ರಿಯಂ ಕಾಮಾರಿಯಾರೋಗಣೆಗೆ ನಡೆತಂದು (ಗಿರಿಕ. ೦೦-೪೮ ಪ). [ < ಸಂ. ದೃಷ್ಟಿ ]

**ದಿಟ್ಟಿಗ** (ನಾ). ನೋಡುವವನು; ನೋಟಕ; ಪ್ರೇಕ್ಷಕ: ಆ ಹುರವ ನಿಟ್ಟಿಪ ದಿಟ್ಟಿಗರ ಬಗೆಗೆ . . . ಕಲಧೌತರೌಪ್ಯಗಳ ಸೌಧಸಮಾಜ ರಾಜಿಪುವು (ಮದೇಪು. ೨-೩೮). [ ದಿಟ್ಟಿ + – ಗ$_2$ ]

**ದಿಟ್ಟಿಗರ್ಪು** (ನಾ). ಕಣ್ಣೆಂಜಲಾಗದಿರಲು (ಗಲ್ಲ, ಹಣೆಗಳ ಮೇಲೆ) ಇಡುವ ಕಪ್ಪು, – ಕಾಡಿಗೆ; ದೃಷ್ಟಿ ತಾಗದಿರಲು ಇಡುವ ಕಪ್ಪು; ಬೊಟ್ಟು; ದೃಷ್ಟಿಬೊಟ್ಟು: ಸುಱಿಗುರುಳೊಳ್ಪೊಸಲ್ ಮಿಸುಪ ಸಾದಿನ ಬೊಟ್ಟು ಪೊದಟ್ದ ಗಲ್ಲದೊಳ್ ತೊಳಗುವ ದಿಟ್ಟಿಗರ್ಪು . . . ಮನಂಗೊಳೆ (ಚಕವಿ. ೩-೫೨). [ ದಿಟ್ಟಿ + ಕರ್ಪು$_1$ ]

**ದಿಟ್ಟಿಗಿಡಿಯ** (ನಾ). ಕಣ್ಣಿನಲ್ಲಿ ಬೆಂಕಿಯುಳ್ಳವನು; ಕಿಡಿಗಣ್ಣ; ಶಿವ: ದಿಟ್ಟಿಗಿಡಿಯನೊಲು ತದ್ಭಕ್ತರಾ ನಿಂದೆಯಿಂ ರಾಘವಂಗಾಯ್ತು ಕೇಡು (ರಾಘಜ. ೪-೨೦); ಮುಟ್ಟಬಾರದ ಕಿಚ್ಚ ನುಂಗಲು ಹೊಟ್ಟೆ ಬೇಯದೆ ಮಹಾಣ್ಣುದೇ ಇದ ದಿಟ್ಟಿಗಿಡಿಯಂ ಬಲ್ಲನೆನುತಲಿ ಮಱುಗಿದಳು ರಮಣಿ (ಶಂಕರದಾ. ೭-೦೭). [ ದಿಟ್ಟಿ + ಕಿಡಿ + – ಅ$_7$ ]

**ದಿಟ್ಟಿಗೆಡು** (ಕ್ರಿ). ಕಂಗೆಡು; ದಿಕ್ಕುಗಾಣದಂತಾಗು: ಚಿಂತಿಪ ಸುಯ್ವ ಜಾನಿಸುವ ಕಂದುವ ಕುಂದುವ ದಿಟ್ಟಿಗೆಟ್ಟುವಿಭ್ರಾಂತಿಪ ಲಜ್ಜೆಯಂ ಮಱೆವ ಕೊಳ್ವುಗದಾಪ್ತರ ಮಾತಂಗೇಳದಿರ್ಪಂತುಟನೊಲ್ದಗಲ್ದವರೊಳಾಗಿಪರಂಗನೆಯರ್ಕಳೀ ಜರಾಕಾಂತೆ ನರಂಗೆ ತಾನಗಲದಾಗಿಪಳೀಂ ವಿಪರೀತವೃತ್ತಿಯೋ

(ಪುಷ್ಪಪು. ೧೩-೩೮) : ಪೊಡೆವುರಳ್ವಂ ನಿಬ್ಬನಳಲುಮಂ ಬಳಲುವಂ ಬಟ್ಟ ಯೊಳ್ದಿಟ್ಟಿಗೆಟ್ಟು (ಜ್ಞಮಿಭಾ. ೦೯-೩೦) : [ ದಿಟ್ಟಿ + ಕೆಡು$_1$ ]

**ದಿಟ್ಟಿಗೊಡು** (ಕ್ರಿ). ದೃಷ್ಟಿಕೊಡು ; ನೋಡು : ಉದಯದೊಳೂರ ನಟ್ಟ ನಡುವಿರ್ದಿನನತ್ತಲೆ ದಿಟ್ಟಿಗೊಟ್ಟು ಪಾಣದೆ ಶುನಕಂಗಳೊಳ್ವಡವನೀಪತಿ ಗಕ್ಕುಮಪಾಯಂ (ಲೋಕೋಪ. ೦೩-೩೦). [ ದಿಟ್ಟಿ + ಕೊಡು$_1$ ]

**ದಿಟ್ಟಿಗೊನೆ** (ನಾ). ಕಡೆಗಣ್ಣು ; ಕಟಾಕ್ಷ ; ಅಪಾಂಗ : ಕಟ್ಟರ್ದ ಹಾರಾದಿ ಗಳ್ಪಱಿದುದಿರ್ವಪೋಲ್ ದಿಟ್ಟಿಗೊನೆಗಳ ಕಾಂತಿ ಸೂಸುತಿರೆ (ಜ್ಞಮಿಭಾ. ೩೩-೩೨). [ ದಿಟ್ಟಿ + ಕೊನೆ ]

**ದಿಟ್ಟಿಗೊನೆವೆಳಗು** (ನಾ). ಕಡೆಗಣ್ಣಿನ ಕಾಂತಿ,-ಬೆಳಗು : ಆದಿಪುರುಷನ ದಿಟ್ಟಿಗೊನೆವೆಳಗ ಸೋಂಕಿನಿಂ ಭೂದೇವತೆಗೆ ಸಾತ್ವಿಕಂ ತನುವಿನೊಳ್ ಸ್ವೇದಾಂಬುವುಣ್ಮೆ ಪುಳಕಂ ಪೊಣ್ಮೆ ರಾರಾಜಿಪಂದವೋಯೆಂಬ ಪಾಂಗಿಂ (ಪದ್ಮರಾ. ೬-೭೩). [ ದಿಟ್ಟಿಗೊನೆ + ಬೆಳಗು$_2$ ]

**ದಿಟ್ಟಿಗೊಳ್, ದಿಟ್ಟಿಗೊಳ್ಳು** (ಕ್ರಿ). ಕಣ್ಣಿಗೆ ಬೀಳು ; ಕಾಣು ; ದೃಷ್ಟಿಗೆ ಸಿಗು. 'ದಿಟ್ಟಿಗೊಳಿಸು' ಪರಾ. **ದಿಟ್ಟಿಗೊಳ್ಳು** : ಕಟ್ಟದರು ಸಾಗರವ ಕಲುಮರಮುಟ್ಟನಲಿ ಸುರನರಭುಜಂಗರ ದಿಟ್ಟಿಗೊಳ್ಳದ ದುರ್ಗವನು ಕೆಡಹಿದರು ಕದನದಲಿ (ತೊರರಾ. ೬-೦೯-೪). [ ದಿಟ್ಟಿ + ಕೊಳ್$_1$ ]

**ದಿಟ್ಟಿಗೊಳಿಸು** (ಕ್ರಿ). ೧. ದೃಷ್ಟಿಗೆ ಬೀಳು ; ಕಾಣಿಸಿಕೊಳ್ಳು : ಬೆಳ್ದಾವರೆ ಯೊಳೆಱಗಿದಳಿಕುಲಂ ಗಗನಾಗ್ರದೊಳ್ದಿನದಿನಕ ಬೆಳೆವ ಚಂದ್ರಕಲೆ ಕನಕಾದ್ರಿ ಯೊಳ್ದಿಟ್ಟಿಗೊಳಿಸುವಸಿತಾಂಬುದಂ ರಾರಾಜಿಸುವ ತೆಱದೊಳು (ಜ್ಞಮಿಭಾ. ೦೮-೩೫). ೨. ದೃಷ್ಟಿಯನ್ನು ಆಕರ್ಷಿಸು ; ಮನೋಹರವಾಗು ; ಕಣ್ಸೆಳೆ : ನಿಟ್ಟೈದೆಯರ್ ಕರೆತಂದಾ . . , ಸೌಂದರವತಿಯುಂ ದಿಟ್ಟಿ ಗೊಳಿಪ್ಪ ಕಟ್ಟಾಣಿಮುತ್ತುಗಳೆಳವಟ್ಟ ಮೆಟ್ಟಕ್ಕಿ ಗೂಡೆಗಳೊಳುದ್ಭಟಾಂಕಂ ಬೆಸಸುರ್ವೀಸುರತತಿ ಸಂಭ್ರಮದಿಂದಂ ನಿಲಿಸೆ (ಉದ್ಭಟ. ೮-೩೬ ಪ).

[ ದಿಟ್ಟಿಗೊಳ್ + -ಇಸು$_3$ ]

**ದಿಟ್ಟಿಗೊಳ್ಳು** 'ದಿಟ್ಟಿಗೊಳ್' ನೋ.

**ದಿಟ್ಟಿತಾಗು** (ಕ್ರಿ). ದೃಷ್ಟಿತಾಗು ; ಕಣ್ಣೆಂಜಲಾಗಂ : ದಿಟ್ಟಿತಾಗುಗುಮೆಂದು ಕತ್ತುರಿಯ ಗೆರೆಯುನಱಿಯುಟ್ಟಿ (ಪದ್ಮರಾ. ೩-೨೮).

[ ದಿಟ್ಟಿ + ತಾಗು$_1$ (<ತಾಂಕು$_1$) ]

**ದಿಟ್ಟಿತೀವು** (ಕ್ರಿ). ಕಣ್ಣುತುಂಬು ; ಕಣ್ಣಿಗೆ ತೃಪ್ತಿಯಾಗು : ದಿಟ್ಟಿತೀವಲು ನೋಳ್ಪ ಜನಕೆ ತಾನಭಿಮುಖಂ ಮುಟ್ಟುವರ ಮುದ್ದು ಮುದ್ದಾಡಿಪರ ನಿಜಸುಖಂ (ಬಸರ. ೦-೦೪೦). [ ದಿಟ್ಟಿ + ತೀವು ]

**ದಿಟ್ಟಿದಂಡೆ** (ನಾ). ದೃಷ್ಟಿದೋಷ ಪರಿಹಾರಕ್ಕಾಗಿ ಧರಿಸುವ ಆಭರಣ ದಂತಹ ದಂಡೆ : ಕಡಗ ಕಂಕಣ ಸೂಡಗ ಹೊನ್ನ ಬಳೆ ಬಂದಿ ಖಡೆಯ ಪೆಂಡೆಯ ದಿಟ್ಟಿದಂಡೆ (ಕುರಾಶಾಂ. ೧-೧೦೬) : ಅರಳೆಲೆ ಮಾಗಾಯಿ ಪುಲಿ ಯುಗುರುಡೆನೂಲು . . . ದಿಟ್ಟಿದಂಡೆ ಮೆಱೆಯಲಾ ತರುಣನೆಸೆದನು (ಕುರಾಶಾಂ. ೮-೭೭). [ ದಿಟ್ಟಿ + ದಂಡೆ$_1$ ]

**ದಿಟ್ಟಿದಾಹಕ** (ನಾ). ಕಣ್ಣಿನಲ್ಲಿ ಬೆಂಕಿಯುಳ್ಳವನು ; ಅಗ್ನಿನೇತ್ರ ; ಶಿವ : ದಿಟ್ಟಿದಾಹಕನ ಮಸ್ತಕ ಮುಱಿವಂದದಿ ಮೆಟ್ಟಿ ಕೆಂಗಿಡಿಗಳ ಕಱಿದು ಪುಟ್ಟಿಸಿ ಹೃದಯಸಂತಾಪವ ತಪವನೆಬ್ಬಟ್ಟುವೆನೆಂದನಬ್ಜಾರಿ (ಮೋಹತ. ೬-೨೦).

[ ದಿಟ್ಟಿ + ದಾಹಕ ]

**ದಿಟ್ಟಿದೆಱೆ** (ಕ್ರಿ). ಕಣ್ಣನ್ನು ತೆರೆ,-ಬಿಡು : ಮೆಲ್ಲನೆ ದಿಟ್ಟಿದೆಱೆದು ವಸಂತ ತಿಲಕೆಯ ನಿಟ್ಟಿಸಿಯೆ ಕಾಣದೆ ವಿಕಲನಾದನು ವಣಿಗ್ವರನು (ಸಾಳ್ವಭಾ. ೧೭-೩೩). [ ದಿಟ್ಟಿ +ತೆಱೆ$_1$ ]

**ದಿಟ್ಟಿದೋಸ** (ನಾ). ಕಣ್ಣೆಂಜಲಂ ; ದೃಷ್ಟಿದೋಷ : ದಿಟ್ಟಿದೋಸಂ ತಟ್ಟದಂತೆರಡುಂ ಮೆಲ್ಲದಂಪುಗಳೊಳಿಟ್ಟ ಕಾಡಗೆಬೊಟ್ಟುಂ (ಜಿಕವಿ. ೪-೮೮ ಪ). [ ದಿಟ್ಟಿ + ದೋಸ ]

**ದಿಟ್ಟಿನಡು** (ಕ್ರಿ). ೧. ದೃಷ್ಟಿಯಿಡು ; ಎವೆಯಿಕ್ಕದೆ ನೋಡು ; ಕಣ್ಣಿಟ್ಟು ನೋಡು : ಧಿಗಿಲನೆ ಮಾನಂ ಬೆದಱಿ ಪರವೆ ಕಾಣುತ್ತಲ್ಲಿ ಮಿಗೆ ದಿಟ್ಟನ[ಪಾಠಾಂ. ಯಿ]ಟ್ಟು ನೋಡುತ್ತಿರಲ್ಕಂತಲ್ಲಿ (ನಂಬಿರ ೯-೧೧೨). ೨. ದೃಷ್ಟಿತಾಗು; ಕಣ್ಣೆಂಜಲಾಗು: ಮಡದಿ ರನ್ನೆಯ ಸಿರಿಮುಡಿಗರಿಸಿನಡ ಪಾವುಡೆಯ ಬಂಧಿಸಿ ಕೆಲರ್ದಿಟ್ಟನಡದಂತೆ ಹಣೆಗೆ ಕಪ್ಪಿನ ಬೊಟ್ಟನಿಟ್ಟರು (ಮೋಹತ. ೧೭-೪೪). [ ದಿಟ್ಟಿ + ನಡು$_1$ ]

**ದಿಟ್ಟಿಬಿಸ** 'ದಿಟ್ಟಿವಿಸ' ನೋ.

**ದಿಟ್ಟಿಬೊಂಬೆ** (ನಾ). ಕಣ್ಣೊಳಗಿನ ಬೊಂಬೆ,-ಹಾಹೆ,-ಪಾಪೆ : ದಿಟ್ಟಿ ಬೊಂಬೆಗಳು ವಸಂತದೊಳಗೆ ಕೋಲ ನೆಟ್ಟನೆ ಪೊಡೆವಂದದೊಳು (ಶ್ರೀಪಾಲ. ೪-೧೨೬). [ ದಿಟ್ಟಿ + ಬೊಂಬೆ ]

**ದಿಟ್ಟಿಬೊಟ್ಟು, ದಿಷ್ಟಿಬೊಟ್ಟು** (ನಾ). ದೃಷ್ಟಿದೋಷ ತಾಗಬಾರ ದೆಂದು ಕೆನ್ನೆ ಅಥವಾ ಗಲ್ಲದ ಮೇಲೆ ಇಡುವ ಬೊಟ್ಟು,-ಗುರುತು: ಎಳೆಗಲ್ಲದೊಳಿಟ್ಟ ದಿಟ್ಟಿಬೊಟ್ಟಂ ಕೆಳೆಗೊಂಡೊಪ್ಪುವ ಪಚ್ಚೆಗನ್ನವಚ್ಚಂ (ಜಿಕವಿ. ೩-೪೪) ; ಮೆಲ್ಲದಂಪುಗಳೊಳಿಟ್ಟ ಕತ್ತುರಿಯ ದಿಟ್ಟಿಬೊಟ್ಟಂ (ಜಿಕವಂ. ೭೫-೧೭). **ದಿಷ್ಟಿಬೊಟ್ಟು** : ಘರ್ಮೋದಕದಿ ತನುವ ಪ್ರಕ್ಷಾಳಿಸಿ ದಿಷ್ಟಿಬೊಟ್ಟಿಟ್ಟು (ನವಮೋ. ೧೧-೪೮).

[ ದಿಟ್ಟಿ + ಬೊಟ್ಟು$_2$ (<ಬಟ್ಟ$_1$) ]

**ದಿಟ್ಟಿವಾರಿ, ದಿಟ್ಟಿವಾರೆ** (ನಾ). ಕಣ್ಣಳವು ; ಕಣ್ಣಳತೆ ; ದೃಷ್ಟಿಪಥ ; ಕಣ್ಬೊಲ (?) : ದಿಟ್ಟಿವಾರಿಯು ಧೀರರೆ ಪಾಂಡರ ಗಣಿಕೆಯರ ವೀರರ ಹರಿವಾಣದಾಯುದ ಲೆಂಕರ ಬಿಂಕದಂಕಕಾಱರ ಮಾಸಾಳ್ಗಳ . . . ಒತ್ತರದ ತಿಂಥಿಣಿಯನೊತ್ತರಿಸಿ (ಬಸರ. ೬-೨೦) ; "ತನಗೂ ದೇವರಿಗೂ ನಡುವೆ ಬಂದವರನ್ನು ಕತ್ತರಿಸುತ್ತೇನೆಂಬ ಪ್ರತಿಜ್ಞೆ" (ಬಸರ. ಕೋಶ) ; ದಿಟ್ಟಿ[ಪಾಠಾಂ. ದಿಠಿ. ದ್ರಿಷ್ಟಿ]ವಾರಿಯು ಮೇಳದಾಲೋಚನೆಗಳೊಳಳವಟ್ಟು ಹತ್ತೈದು ಗಣನಾಥರ್ವೆರಸಿ ತನ್ನ ಪಟ್ಟದಂಗನೆ ಸಹಿತ ಸುಖದ ಸುಗ್ಗಿಯ ಮೇಲೆ ಶೂಲಿ ಪರಿಣಾಮವಿರಲು (ಸೋಮುಚ. ೧-೩೪) ; ದಿಟ್ಟಿ[ಟ್ಟಿ] ವಾರಿಯೊಳುಳ್ಳ [ಪಾಠಾಂ. ದಿಟ್ಟಗಾಂಬನಿತೆಡೆಯ] ನೀರೆಲ್ಲವಂ ಕೆಡಿಸಿ ಮುಟ್ಟಿ ನಾನಾ ಕ್ರೂರವ್ಯಗವಾಗಿ ಬಂದಡ್ಡಗಟ್ಟಿ ಗರ್ಜಿಸುತ ಮಾಯಾ ವೇಷದಿಂದೊಡನೆ ಬಾದ ವಿಶ್ವಾಮಿತ್ರನು (ಹರಿಶ. ೯-೩೨) ; ಇರದೆ ನಿಜವುಸುರಾಟದೆಡೆಯೊಳು ಹರಿಯ ದರ್ಪವನಳಿದು ಕಾಯ್ದುದರು ಕರುಣಿಯುಭವನ ದಿಟ್ಟಿವಾರಿಯು ಪೋಲಗದೊಳೊಪ್ಪೆ (ಸಾನಂಚ. ೯-೨೬). **ದಿಟ್ಟಿವಾರೆ** : ಕಡುಗಿದರೆ ಕಾಲಂಗೆ ಬಿರುದಿನ ತೊಡರನಿಕ್ಕುವ ಜವನ ದಾಡೆಯ ತುಡುಕುವಗ್ಗದ ವೀರರೆಸೆದುದು ದಿಟ್ಟಿವಾರೆಯಲಿ (ಕುವ್ಯಾಊ. ೮-೪೩). [ ದಿಟ್ಟಿ + ವಾರಿ? ]

**ದಿಟ್ಟಿವಾರೆ** 'ದಿಟ್ಟಿವಾರಿ' ನೋ.

**ದಿಟ್ಟಿವಿಸ, ದಿಟ್ಟಿಬಿಸ** (ನಾ). ೧. ಕೆಟ್ಟ ಪರಿಣಾಮವನ್ನುಂಟುಮಾಡುವ ಕಣ್ಣು ; ಕೆಟ್ಟಕಣ್ಣು : (+). ೨. ಕೆಟ್ಟಕಣ್ಣಿನಿಂದ ಉಂಟಾಗುವ ಪರಿಣಾಮ ; ಕಣ್ಣೆಂಜಲು : "ದಿಟ್ಟಬಿ(ವಿ)ಸ-ದೃಷ್ಟಿವಿಷ = ಕಣ್ಣೆಂಜಲು" (ಶದ್ಮಕೋ. ೦೯) : ರಾಜ್ಯವಿಭವೋದಯದಿಂದೆ ವಿರಾಜಿಪಂಗೆ ದಿಟ್ಟಿವಿ ಸಮು[ಪಾಠಾಂ.ಪ]ಮಪ್ಪುದೆಂದು ಪದಪಿಂ ಪ್ರಭೂಸೂನುಗೆ ತಾನೆ ರಕ್ಕೆ ಗಟ್ಟುವ ತೆಱದಿಂದೆ ಕಟ್ಟಿದನಿಳಾಪತಿ ತನ್ನಧಿರಾಜಪಟ್ಟಮಂ (ಚಂದ್ರಪು. ೬-೧೦೨). **ದಿಟ್ಟಿಬಿಸ** : ೩. ಹಾವು : ಎರಡು ಪದಂಗಳಪಭ್ರಂಶಕ್ಕೆ-ಅಚ್ಚ ಸ್ಫಟಿಕ-ಅಚ್ಚವಳಿಕು . . . ದೃಷ್ಟಿವಿಷ-ದಿಟ್ಟಿಬಿಸ, ದಿಟ್ಟಿವಿಸ (ಶಮದ. ೨೮೯ ಪ್ರಯೋ). [ ದಿಟ್ಟಿ + ವಿಸ ]

**ದಿಟ್ಟಿವೆಳಗು** (ನಾ). ಕಣ್ಣಿನ ಕಾಂತಿ,-ಬೆಳಗು,-ಪ್ರಕಾಶ: ದಿಟ್ಟಿವೆಳಗಿನಿಂ ನಿವಳಿಸುವಂತೆಯುಂ ಕಣ್ಣೊಳಗಿಟ್ಟು ಮುಚ್ಚುವಂತೆಯುಂ ಬಗೆಯೊಳ ತೆಗೆದಪ್ಪುವಂತೆಯುಂ ಅಕ್ಷೂಣಲಕ್ಷಣಲಕ್ಷಿತಂಗಳಪ್ಪ ಪುತ್ರಸಂಗಪ್ರತ್ಯಂಗಂ

ಗಳಂ ನೀಡುಂ ಭಾವಿಸಿ ನೋಡಿ (ಚಂದ್ರಪು. ೬-೧೧೫ ವ) ; ಅಂಗನೆಯ ರ ದಿಟ್ಟವೆಳಗು . . . ಹೊಸಮುತ್ತಿನ ರಂಗವಲ್ಲಿಯ ತೆಱನಹುದ (ಶ್ರೀಪಾಲ. ೩-೪). [ ದಿಟ್ಟ + ಬೆಳಗು₂ ]

**ದಿಟ್ಟಸರ** (ನಾ). (ಕುದುರೆಯ ಕೊರಳಿಗೆ ತೊಡಿಸುವ) ಒಂದು ಬಗೆಯ ಆಭರಣ: ಇಕ್ಕಿದ ಪಕ್ಕರಕ್ಕೆ ನಿಡುಗಱಲ್ಲಿ ತೊಡಂಕುವ ತೋರಗೊಂಡೆಯುಂ ಸೆಕ್ಕಿದ ಖಂಡೆಯುಂ ಬಿಗಿದ ಬಿಲ್ ಪೊದೆದುಂಬಿದ ಬೋಳೆಯುಂಬು ಕಂದಕ್ಕ ಮರ್ದಿಟ್ಟ ದಿಟ್ಟಸರ ಪೊಂಬಲೆಗಳ್ ಮೊಗರ್ದಬವೊಂದು ಪೊಂಬಕ್ಕಿಯ ತೊಕ್ಕು ಮೆಯ್ಗ್ಗರೆಯ ಬಾಸಿಗದಿಂ ಮೆಱೆದತ್ತು ಸಪ್ತಿಗಳ್ (ಚಿಕವಿ. ೩-೯೭). [ ದಿಟ್ಟ + ಸರ₄ ]

**ದಿಟ್ಟಸಲಿಸು** (ಕ್ರಿ). ಕಣ್ಣುಹಾಯಿಸು ; ನೋಡು : ಹೊಗುಹೊಗುತ ಹೊರಬರುವ ಮಾನುಷ್ಯವಾಹಿನಿಯ ಕಲ್ಲೋಲಲೀಲೆಯೊಳು ದಿಟ್ಟಸಲಿಸಿ ಶುಖ ಜಾಗಟೆ ದನಿಯು ಕೈವಾರದೊಳು ನಾಮದುಗ್ಗಡಣೆಯಿರಿವಿನೇರುವೆ ಯಾಲಿಸಿ (ಮಲದೇ. ೪೭-೭). [ ದಿಟ್ಟ + ಸಲಿಸು ]

**ದಿಟ್ಟಿಸು** (ಕ್ರಿ). ೧. ನೋಡಂ ; ಅವಲೋಕಿಸು ; ದೃಷ್ಟಿಸು : ಎಡನಂ ಬಲನಂ ದಿಟ್ಟಸುತೆ ನಿಂದು ನಿಲ್ಲದೆ ನಿಟ್ಟೋಟದೊಳೋಡಿತೆಸೆವ ಮಸಕದ ಶಶಕಂ (ಗಿರಿಕ. ೧-೮೭) ; ದಿಟ್ಟಪರೆ ದಿಟ್ಟಗಳಿಗಚ್ಚರಿ ಹುಟ್ಟ ಪೊಸ್ಸುಕ್ಕಿದಡೆ ಹರುಷಂಬಟ್ಟು ಭೂಪಂ ಬಸವರಸನಂ ಕೀರ್ತಿಸುತಮಿರಲು (ಬಸಪು. ೧೧-೧೫) ; ಅಕ್ಕಟಾಂದಾಲಿಂಗಿಸಿ ದಿಟ್ಟಸಿ ಬೊಟ್ಟಾಡಿ . . . ಪುಷ್ಪ ಪರಿಮಳದಂತೆ ನಾ ನೀನುಭಯವಿಲ್ಲದಂತೆ ಕೂಡೆನ್ನ ಪ್ರಾಣೇಶನೇ (ಘನಪ. ೩-೧) ; ಅವಿದ್ಯೆಯು ದಿಟ್ಟಪರೆ ಭಾವಾನುಸಾರದಿ ತೋರುತಿಹಳು (ಗಗಹಾ. ೧೪-೧೪). ೨. ಹುಡುಕಂ : ಕುಟ್ಟೆಂಬ ನುಡಿ ವ್ರೀಹಿಯೊಳ್ಳಲ್ಲದೆ ಬೇರೆ ದಿಟ್ಟಸಲಾ ನಾಡೊಳಿಲ್ಲ (ಕಂನವಿ. ೨-೧೫). 'ನಿಟ್ಟಿಸು' ಪರಾ.

ದಿಟ್ಟಿಸಿ ನೋಡು = ಎವೆಯಿಕ್ಕದೆ ನೋಡು : ಚಂದನೆಯ ಚಂದಮಂ ಸೆಟ್ಟಿತಿ ದಿಟ್ಟಿಸಿ ನೋಡಿ (ವರ್ಧಪು. ೧೫-೫೩ ವ) ; ದಿಟ್ಟಿಸಿ ನೋಡದವೆ ಯಿಕ್ಕದಿಹ ಕಣ್ಣು ದಕ್ಕಾಲಿಯೆಂದು ನಿರ್ಮಲ ದೇಹಮಂ ರಸವಟಿತು ಬೆಳೆದಂಗವೆಂದು . . . ದೂರದಿಂದೆ ದೀವಿಗೆವಿಡಿದು ದಿಟ್ಟಿಸಿದರು (ಸಿದ್ಧರಾ. ೨-೪) ; ಅಸುರೆ ದಿಟ್ಟಿಸಿ ನೋಡಿದಳು ಶಿಶುವ (ಕುವ್ಯಾಸ. ೨-೪೪); ಅವಳನ್ನೇ ಒಮ್ಮೆ ದಿಟ್ಟಿಸಿ ನೋಡಿದ (ಹಾಹುತ್ತ. ೬೭).

[ ದಿಟ್ಟ + -ಇಸು₂ ]

**ದಿಟ್ಟಿಹತ್ತು** (ಕ್ರಿ). ದೃಷ್ಟಿತಾಗು ; ಕಣ್ಣೆಂಜಲಾಗು : ಮುಟ್ಟಲು ಮಾಸುವದು ದಿಟ್ಟಿಹತ್ತೀತೆಂದು ಬಟ್ಟೇಡತಿದ್ದೆ ಭಸಿತದ ಹಣಿಮೇಲೆ ಸುಟ್ಟು ಹೋಗಲೆಂದು ಕೆಟ್ಟಗಣ್ಣು (ಸಿದ್ಧಪು. ೪-೯೪).

[ ದಿಟ್ಟ + ಹತ್ತು₁ (<ಪತ್ತು₁) ]

**ದಿಟ್ಟಿಹಾಯಿಸು** (ಕ್ರಿ). ದೃಷ್ಟಿಬೀರು ; ನೋಡು : ದುಷ್ಟಬುದ್ಧಿ ಅತ್ತಿತ್ತ ದಿಟ್ಟಿಹಾಯಿಸದೆ ಶ್ರೀಮದ್ಗಾಂಭೀರ್ಯಕ್ಕೆ ಊನ ಬರಬಾರದೆಂಬಂತೆ . . . ಮುಂಬರಿಯುತ್ತಾನೆ (ಚಂದ್ರಸ. ೬).

[ ದಿಟ್ಟ + ಹಾಯಿಸು (<ಪಾಯಿಸು) ]

**ದಿಟ್ಟೆ₁** (ನಾ). ೧. ದಿಟ್ಟತನವುಳ್ಳವಳು ; ಧೈರ್ಯಶಾಲಿನಿ : ತುಂಬ ಒಳ್ಳೆಯ ಹುಡುಗಿ; ದಿಟ್ಟೆ (ದೀಪದ. ೦೪೮). ೨. ಉದ್ಧಟೆ ; ಗಡಸುಗಾತಿ: ದಿಟ್ಟೆಯರು ಕುಟಿಲೆಯರು ಕುಹಕದ ಘಟ್ಟಿಯರು ಲಟ್ಟಿಯರು (ಬಸಪು. ೪೦-೫೭) ; ಅರರೆ ಹೆಂಗಸು ದಿಟ್ಟೆ ಮೋನದೊಳಿರಲಿದಾವಂತರವು ರಾಯನ ಹೊರೆಯಲೀ ಬಾಯ್ಬಡಿಕತನ ಗರುವಾಯಿಯೇಯೆನಲು (ಕುವ್ಯಾವಿ. ೩-೩೭). ೩. ಚದುರೆ ; ಜಾಣೆ : ಹೊಳೆವುತಿದ್ದರು ಮನಸಿಜನ ಮಾಸಾಳುಗಳಂತೆ ದಿಟ್ಟೆಯರು (ಭರತ. ೧೩-೯೧); ಮುಟ್ಟಿದರೆ ಕಂದದಿರದಿವಳ ಸುಕುಮಾರತನು ದಿಟ್ಟೆಯರದೆಂತೊ ನವಕುಂಕುಮವನೀಗ ನುಂಪಿಟ್ಟರು (ಜೈಮಿಭಾ. ೩೦-೭).

[ ದಿಟ್ಟ₁ + -ಎ₂ ]

**ದಿಟ್ಟೆ₂** (ನಾ). ದೃಷ್ಟಿ (?) : ದಿಟ್ಟೆ ಮುರಿವಲ್ಲಿ ಕಡುಪಿನೊಳ್ ಮುರಿದ ಯಿಲ್ಲಿಲ್ಲಿಯ ಬಿನ್ನಣವನ್ನೆಱೆಯೆ ಕಲ್ಪದೆ ಬೀರರ ಬೀರನಂ ಗಿಡೆಗಳಾಭರಣನಂ ನೋಡಿ ಕಲ್ತಾ (ಎಕ. II, ೧೩೩-೧೫೭ : 982).

[ P ಇದು 'ದಿಟ್ಟ' ಎಂಬುದರ ಅಪಲಿಖಿತವಿರಬಹುದು ]

**ದಿಟ್ಟೆದೆ** (ನಾ). ಧೈರ್ಯದಿಂದ ಕೂಡಿದ ಮನಸ್ಸು,–ಹೃದಯ : ನಿಮ್ಮ ದಿಟ್ಟೆದೆಯ ಸಾಹಸದ ಸ್ವಾಮಿನಿಷ್ಠೆಯಿಂದ ತಪ್ಪಿಸಿ ಕಾಪಾಡಿಕೊಂಡು ಬರುತ್ತ . . . ಪಾವನರಾಗಿರುವ ಶೂರರ ಮನೆತನದವರು ನೀವು (ಮಂತ್ರಶ. ೫೦-೧೭). [ ದಿಟ್ಟ₁ + ಎದೆ (<ಎರ್ದೆ) ]

**ದಿಡ, ಧಡ₃** (ಗು). ೧. ದೃಢವಾದ ; ಬಲವಾದ: ದೃಢ, ದಿಡ (ಶಬ್ದಾನು. ೧೯೩ ಪ್ರಯೋ). (ನಾ). ೨. ದೃಢತೆ ; ಸ್ಥಿರತೆ; ಬಲ : "ದಿಡ (ದುಡ) ದೃ ಢ = ಸ್ಥಿ ರ ತೆ " (ತದ್ಭಕೋ. ೦೯) ; ಭೀತಿಯನೆದೆಯೊಳಿನ್ನಿಡಸಲ್ಲ ನಂಬುವುದಿದನು ದಿಡವಾಗಿ (ರಾಮಾಸಂ. ೩-೧-೩೦). ೩. ಸತ್ಯ ; ನಿಜ : ಮೃಡನರೆಯೆ ಮಗಳ ಮುಡಿಯಂ ಕೊಯ್ದು ಕೊಡೆ ಮದುವೆಯೆಡೆ ಯೊಳಾ ಬೀಯಗಮ್ಮರ್ಳಿದು ಕಾದುವ ಫೌಜು ದಿಡದೊಳು ತುಱುಂಬ ನಾದಂತೆ ತೊಂಡಲು ಸಹಿತ ಹಿಡಿದಳ್ಳಿಯಾಗಿದೆಯಲಾ (ವೀಶೈಪು. ೮-೩-೮). ೪. ಭರವಸೆ ; ನಂಬಿಕೆ. 'ದಿತಂದಳೆ' ಪರಾ. ೫. ದೃಢವಾದುದಂ ; ಗಟ್ಟಿಯಾದುದು ; ಮನಮುಟ್ಟುವಂತಹುದು : ನಾಡೆ ಮುನ್ನರಿತ ಪಾಠವನು . . . ದಿಡವೊ[ವ]ಪ್ಪುವೊಲು ಪಾಡು (ಕಿರೀಟೀ. ೩-೧೫). ೬. ಶಾಶ್ವತ ವಾದುದು : ತಂಬೂರಿ ಶ್ರುತಿಗೆ ಸೀತಾರ ಜತಿಗೆ ದಿಡದಾದಿ ಮಿಟಿ ದಾಟ ಕುಂಭಿನಿಯ ತುಂಬಿ ಅಂಬರವ ತುಂಬಿ ತುಂಬಿಸಿದಳೆಂಥ ಲಹರಿ (ಗಂಗಾತ. ೧೦೯-೧೫). **ಧಡ₃**: ೭. ಗಟ್ಟಿಮುಟ್ಟಾದುದು; ಶಕ್ತಿಯುತ ವಾದುದು: ಕೈಕಾಲು ಧಡವಿದ್ದರೆ ಯಾರಾದರೂ ಕೇಳಿಯಾರು(ಸ್ತ್ರೀಚ. ೨೦೭) : ಪಾಪ ಮುಂಕಿ ! ಕೈಕಾಲು ಧಡಾ ಇಲ್ಲಾ ! (ಧರ್ಮಸಿ. ೦೩೮).

[ <ಸಂ. ದೃಢ ]

**ದಿಡಂದಳೆ** (ಕ್ರಿ). ದೃಢತೆಯನ್ನು ಹೊಂದು; ಭರವಸೆಯನ್ನು ಹೊಂದು: ಅಗಲದೀಕ್ಷಿಸುತಿರ್ಪಿನಂ ತ ದ ವ ಜ್ಞೆ ಯಿಂ ಖಲಚೋಳನಾ ಸ್ಥಗಿತ ಸೇನೆಯುದೆಯ್ದು ವೇಗದೆ ಲೂಟಿಸುತ್ತಿರೆ ನಾಡನಾ ಜಗತಿಯಾಳ್ವನದೆಲ್ಲಮಂ ನಡೆ ಕೇಳ್ದು ಸುಂದರಪಾದದೊಳ್ ಮಿಗೆ ದಿಡಂದಳೆಯುತ್ತಹೋ ಹರ ಶಂಭುವೆಂದತಿ ಕೋಪದಿಂ (ಹಾಲಾಸ್ಯ. ೩-೮-೪೪). [ ದಿಡ + ತಳೆ₁ ]

**ದಿಡಕಿ, ದಿಡಕೆ** (ನಾ). ಹಸು, ಕರುಗಳು ಗುಟುರುಂ ಹಾಕುವುದನ್ನು ಸೂಚಿಸುವ ಶಬ್ದ. **ದಿಡಕೆ.**

ದಿಡಕಿ ಹಾಕು = ಗುಟುರುಹಾಕು : ಒಂದು ಅರೆಗಳಿಗೆ ತಡವಾದರೂ ಕಾಲು ಕೆದರುತ್ತ ದಿಡಕಿ ಹಾಕಿ (ಒದರುತ್ತ) 'ಅಂಬಾ' ಎಂದು ಕೂಗುವಳು ಬನಶಂಕರಿಯನ್ನು (ಸುವಸಂ. ೬೭). ದಿಡಕಿ ಹೊಡೆ = ದಿಡಕಿ ಹಾಕು : ಕೋಟೆ ಬಸವಣ್ಣ ದಿಡಕಿ ಹೊಡೆಯುತ್ತ ಎದ್ದು ಬಂದು (ಬೆಳುಮು. ೫೨).

ದಿಡಕೆ 'ದಿಡಕಿ' ನೋ.

ದಿಡಗು 'ದಿಡುಗು₁' ನೋ.

**ದಿಡಗೊಳ್ಳು** (ಕ್ರಿ). ಬಲವಾಗಂ ; ದೃಢಗೊಳ್ಳು : (೩).

[ ದಿಡ + ಕೊಳ್ಳು₁ (<ಕೊಳ್₁) ]

**ದಿಡುಗು₁, ದಿಡಗು** (ನಾ). ೧. ಜಲಪಾತ ; ಧಬಧಬೆ : ದಿಡುಗೋ ಗುಡುಗೋ ಜೋಗ ಪ್ರಪಾತ (ಮುಕ್ತಕಂ. ೭೦-೮) ; ದಿಡುಗದೊ ಗುಡುಗುಡು ಗುಡುಗುತಿದೆ (ಉಯ್ಯಾಲೆ. ೭೭-೩). **ದಿಡಗು** : ೨. ಜೋರು; ರಭಸ : ಕಡಗವಿಲ್ಲದ ಕೈಯೂ ದಿಡಗವಿಲ್ಲದ ಹೊಳೆಯು ಹಡದವ್ವ ಇಲ್ಲದ ತವರಿಗೆ ಹೋದರ ನಡುದಾರ್ಯಾಗ ವಸ್ತ್ರ ಹೋದ್ಹಾಂಗ (ಜನಗೀ. ೫೫). ೩. (ಆಲಂ) ಉತ್ಸಾಹ : ರಾಮೋತ್ಸವಸಮಯದಲ್ಲಾತೂ ಅವನ ದಿಡಗು ಯಾರಿಗೂ ಇರುತ್ತಿರಲಿಲ್ಲ (ರಾಗಿಣಿ. ೧೩೩).

**ದಿಡುಗು₂** (ನಾ). ಹಿಂಡು ; ಸಮೂಹ (?): ಇಡೆ ಬಡಿಕೋಲೊಳು ತೊಡರಿ ತೆಪ್ಪನೆ ಬೀಳಲೊಡನೆದ್ದು ಪರಿವ ಮಱಿಗಳ ದಿಡುಗುಗಾಣುತ ಲಿದಿರಡಸಿ ತಿವಿದು ನೂಂಕಿ ಕೆಡಹಿದನೋರ್ವ ಲುಬ್ಧಕನು (ಭೈರವೇ. ೩-೨೦).

[ ? ]

**ದಿಡ್ಡಣಿಗೆವಡೆ** (ನಾ). ಒಂದು ವಿಧವಾದ ವಡೆ : ಅರೆದ ಕಡಲೆ ಹೆಸರು ಉದ್ದ ಸರಿಗೂಡಿಸದೆ[ದ] ಮೆಣಸುಳ್ಳಿ ಶುಂಠಿಗಳನುದ್ದಿಟ್ಟ ಹೂರಣಕ್ಕಾ ಕಣಿಕದೊಡೆಯುಮಂ ಹೊದ್ದಿಸಿಯವಂ ತುಪ್ಪದೊಳು ಪಾಕಂ ಮಾಡೆ ದಿಡ್ಡಣಿಗೆವ[ಪಾಠಾಂ. ಯೊ]ಡೆವೆಸರಾದುದು (ಸೂಪಶಾ. ೧-೬೬).

[ ದಿಡ್ಡಣಿಗೆ ? + ವಡೆ ]

**ದಿಡ್ಡಿ, ದಡ್ಡಿ₃, ದಿಡ್ಡೆ₂** (ನಾ). ೧. ಹೆಬ್ಬಾಗಿಲಲ್ಲಿ ಅಥವಾ ಅದರ ಪಕ್ಕದಲ್ಲಿ ಅದಂ ತೆರೆಯದಿರಲಾಗ ಉಪಯೋಗಿಸುವಂತಹ ಸಣ್ಣ ಬಾಗಿಲು,–ಕಿಂಡಿ : ಪದಿನಾಱುದಿಡ್ಡಿ ಬತ್ತೀಸಬಿಲದ್ವಾರ ವಿಧುಮಿತ್ರ ದುಪಲದಿಂ ಬಿಗಿದ ರುಧಿರಾಪುರದಾಳುವೇರಿಯ ಸೌಭಾಗ್ಯದುದಯವನೇನ ಬಣ್ಣಿಸುವೆ (ಮೋಹತ. ೨೦-೧೪) ; ಕೊತ್ತಳದ ಹುಲಿಮುಖದ ದಿಡ್ಡಿಗಳ ಸರಿಸದೊಳ್ ಪಕ್ಷಿದರ್ ಸಾಲ ನಿಚ್ಚಣಿಕೆಗಳ ಮೇಲೆ (ಜಬಪು ೪೨-೩೫) ; ನಾಲ್ಕುವೇದವೇ ನಾಲ್ಕುದ್ವಾರಮಾಗೊಪ್ಪುಗುಂ ನಾಲ್ಕು ಪದ ಬೀದಿ ಪದಿನೆಂಟು ವಿಭವಂ ದಿಡ್ಡಿ (ಪ್ರಭುಪು. ೨-೧೪); ನೀರ ತುಂಬುವ ದಿಡ್ಡಿಯೊಳ ಸುರಂಗದ್ವಾರ ತೋಱಿತು ಕಣ್ಗೆ ಕೌತುಕವ (ಕಂನವಿ. ೧೧-೧೩೬) ; ಶೃಂಗಾರದ ತೋಟದ ದಿಡ್ಡಿಯಲ್ಲಿ ಹೊರಟು ಅವನ ಸಮೀಪಕ್ಕೆ ಹೋಗುವಾಗ ದಾರಿಯಲ್ಲಿ ಯೋಚಿಸಿದೆನು (ವಚಕಾ. ೩೪) ; ನಗರದ ಪಶ್ಚಿಮ ದಿಡ್ಡಿಯಿಂದ ಹಾದುಹೋಗುತ್ತಾ (ಜೀನಾಬಾ. ೩೩). ೨. ಹಿತ್ತಿಲು ; ಮನೆಯ ಹಿಂಭಾಗ : ಗಿರಿಜಾನ ಮನೆಯ ದಿಡ್ಡಿಯಲ್ಲಿ ಒಂದು ಏಳು ಮಕ್ಕಳ ತಾಯಿಯ ಶಿಲಾಪ್ರತಿಮೆ ಇತ್ತು (ದೀಪಹ. II, ೪೪೬). **ದಡ್ಡಿ₃**: ೧. ಹೊಗಿಸಬೇಡಾರುವನು ಕರ್ಣಾದಿಗಳು ಮೊದಲಾಗೆಂದು ದಡ್ಡಿಯನುಗುಳುಗಂಡಿಯ ಕಾಹಕೊಟ್ಟನು ತನ್ನ ಬೇಹವರ (ಕುವ್ಯಾಅ. ೨೦-೧೭). **ದಿಡ್ಡೆ₂**: ೧. ಕೆ[ತ]ಱಿದುದು ದಾರಿವೆಂಚಿಯೆರ್ದೆ ಕಮ್ಮರಗಲ್ ಮೊಲೆಯೆತ್ತುಗುಂಡು ನಾಣ್ದೆಱಿಯೆಸೆವೂರ ದಿಡ್ಡೆ ಮೊಗಮೋಜನ ಕನ್ನಡಿ ಪಾದವಟ್ಟಿ ಗೋಲ್ (ಕಾವ್ಯಸಾ. ೧೦೦೩); ಎಲೆಲೆ ಸೇರಿದರಗಳ ದಿಡ್ಡೆಯಂ ಸುಮನಸರ್ ಚಲಿಸದಿರಿಯೆಂದಸಿ ಮುಸುಂಡಿ ಮುದ್ಗರ ಗದಾವಳಿಯಿಂದೆ ಬೊಬ್ಬಿಱಿದು ಹೂಣಲಿಡುತಿರ್ದರಾ ಸುರಭಟರ್ ಸುರಭಟರನು (ಜಬಪು. ೪೨-೨೬) ; ಕಿಱುದಿಡ್ಡೆಗಳಿಂದ ಚೋರಗಂಡಿಗಳಿಂದ ವರವಜ್ರದರ್ಗಳದಿಂದ ಅರಿರಾಯರ ಹಮ್ಮು ಹಾರಿಸುತಾ ಕೋಂಟೆ ಮೆಱೆದುದು (ಜ್ಞಾನಜ. ೧-೦೨೩).

[ ದೇ.॥ ತಮಿ. ತಿಟ್ಟೈ = ಕಿಟಕಿ ; ತುಳು. ಜಡ್ಡಿ ; ತೆಲು. ದಿಡ್ಡಿ ]

**ದಿಡ್ಡಿಬಾಗಿಲು** (ನಾ). = ದಿಡ್ಡಿ ೧ : ಊರು ದಿಡ್ಡಿಬಾಗಿಲಿನ ಸೂರಿನ ಕೆಳಗಡೆ ಬಿಳಿಯ ಹಲಗೆಯ ಮೇಲೆ ಕರಿಯ ಬಣ್ಣದಲ್ಲಿ ಈ ರೀತಿ ಬರೆದಿದ (ಮಲೆನಾ. ೨೩) ; ದಿಡ್ಡೀಬಾಗಿಲ ಮೇಲೆತ್ತರದಲಿ ಬಿರುದನಿ ಬೀರುತ್ತ ದಿಗಿಲೆರಚುತ ಬಲ್‌ಬುರುಜುಗಳಿದ್ದವು (ನಾಪದ. ೧೬೯) ; ಸತ್ಯಪ್ಪನ ತಾಳ್ಮೆಗೆಡಿತನ ಅವಳನ್ನು ಅಪ್ಪುಬೇಗ ತಾಯ್ಯನದ ದಿಡ್ಡಿಬಾಗಿಲಲ್ಲಿ ನೂಕುತ್ತಲಿತ್ತು (ನಡದಾ. II, ೮೯೨).

[ ದಿಡ್ಡಿ + ಬಾಗಿಲು (<ಬಾಗಿಲ್) ]

**ದಿಡ್ಡು** 'ದಿಂಡು' ನೋ.

**ದಿಡ್ಡೆ₁** 'ತಿಟ್ಟು₃' ನೋ.

**ದಿಡ್ಡೆ₂** 'ದಿಡ್ಡಿ' ನೋ.

**ದಿಢೀರ್** (ಅ). ಒಂದು ಅನುಕರಣಾವ್ಯಯ ; ಒಮ್ಮಿಂದೊಮ್ಮೆಲೆ ; ತಕ್ಷಣದಲ್ಲಿ ; ಆ ಕ್ಷಣದಲ್ಲಿ : ಹೇಳದೆ ಮಾಡದೆ ದಿಢೀರಂತ ಬಂದರು (ರೂಢಿ); P ಇದರೊಂದಿಗೆ ಅನೇಕ ಶಬ್ದಗಳಂ ಸೇರಿ, 'ತಕ್ಷಣದಲ್ಲಿ ತಯಾರಾಗುವ ಪದಾರ್ಥ' ಎಂಬ ಅರ್ಥದಲ್ಲಿ ಅನೇಕ ಹೊಸ ಶಬ್ದಗಳು ಬಳಕೆಗೆ ಬಂದಿವೆ. ಉದಾ. ದಿಢೀರ್ ಇಡ್ಲಿ, ದಿಢೀರ್ ಕಾಫಿ, ದಿಢೀರ್ ಜಿಲೇಬಿ, ದಿಢೀರ್ ದೋಸೆ ಇತ್ಯಾದಿ.

**ದಿಣೆ** 'ದಿಣ್ಣೆ' ನೋ.

**ದಿಣ್ಣೆ, ತೆಣೆ, ದಿಣೆ, ದಿನ್ನೆ** (ನಾ). ೧. ತೆವರು ; ದಿಬ್ಬ ; ಬೋರೆ : ಪೇರೊಟ್ಟಿಯ ತುಟ್ಟಲೆ 'ಎರೆ ಪಡಿಯೆ ಗೊನಸು ಭೂಮಿಲ್ಲಣಿಸೆಯ ಬಬ್ಬಾಗಿಲ ಹುಸಗೂರ ದ್ವಿಸನ್ದಿ ನಡಿಯೆ ಪಡುವ ನೋಡಿ ಮಣಲದಿಣ್ಣೆ . . . ಮೂಡನದಿ ಕೊಲದ ಗುಣ್ಣಿಯೆ ಕೂಡಿತ್ತು (ಎಕ. III, ನಂಜನ. ೧೨೨-೨೦ ; 266 ? ಕೃಶಾ) ; ಅತಿವೇಗದೊಳಿರ್ದು ನಾಲ್ಕೆರಡಾಳುದ್ದದ ದೊಂದು ಕಾಣಲ್ ಬಪ್ಪ ದಿಣ್ಣೆ[ಪಾಠಾಂ. ಡಿಣೆ, ದಿಣೆ]ಯಂ ಗಳಗಳನೇಱಿ ಕಣಿಗಿಲೆಯ ಸೊಪ್ಪಂ ಓಡಿದು ಸಿಂಹಧ್ವನಿಯಿಂ ಶಿವದಿಟ್ಟು (ನಂಬಿರ. ೬-೧೦೬) ; ನಿ ಱ ನಿ ಱ ದು ತೆರೆಯಿಱಿದು ಕಿಱುಮಱಲದಿಣ್ಣೆಯೊಳ್ ಪರಿವ ಬರಿಪೊನಲೆಸೆದುವೋರೊಂದು ತಾಣದೊಳ್ (ಅನಂಪು. ೯-೧೭ ರಗಳೆ); ಪರಿವಡೆದ ಪೊಱಮಾಱೆಂಬ ಮಣಲದಿಣ್ಣೆ ನೀಱೆಯರ ಬಲ್ಲಹನೆಂಬ ನೀರ್ವಕ್ಕಿಯ ಕಾಲಾಟಕ್ಕೆಡೆಗುಡೆಯುಂ (ಕಬ್ಬಿಕಾ. ೧೨೩) ; ಬೆಟ್ಟಕ್ಕಿಂತಲೂ ಚಿಕ್ಕದಾದರೆ ಗುಡ್ಡ, ದಿಣ್ಣೆ, ತಿಟ್ಟು . . . ತೆವರು ಎಂಬ ಹೆಸರುಗಳು ಬರುತ್ತವೆ (ಭೂಗೋಳ. ೧೧). ೨. ಕಟ್ಟೆ ; ವೇದಿಕೆ : ಜೂದಿನ ದಿಣ್ಣೆ [ಪಾಠಾಂ. ದಿಂಟೆ]ಯೊಳ್ ಜೂದಾಡಿ ಗೆಲ್ದು ಕೈಕೊಂಡ ಪೊನ್ನ ರಾಸಿಗಳ (ಕಬ್ಬಿಕಾ. ೪೪). ೩. ರಾಶಿ ; ಗುಂಪು ; ಸಮೂಹ : ಮುಸವು ಮೌನದಲಿ ಹೆಪ್ಪುಗೊಂಡಿರಲು ಮಂಜು ದಿಣ್ಣೆಯಂತೆ (ಅರಳು. ೪೦೪-೧೧). **ತೆಣೆ** : ೨. ಚಿನ್ನಮ್ಮ ತೆಣೆಯ ಮೇಲೆ ಕೂತುಕೊಂಡು ವಾಡಿನ ನೆರಳು ತುಳಸಿಯ ಕಟ್ಟೆಯನ್ನು ದಾಟಿ ತೆಣೆಯ ಹತ್ತಿರಕ್ಕೆ ಬರುವುದನ್ನೇ ಕಾಯುತ್ತಾ ಕುಳಿತಳು (ಮಲಿಮ. ೮೮) ; ಆಬೋಲೀನ . . . ದೇಗುಲ ಹೊಕ್ಕು ಪಡಸಾಲೆಯ ತೆಣೆಯೊಂದರಲ್ಲಿ ಹಾಯಾಗಿ ಕುಳಿತಳು (ಆಬೋಲೀ. ೧೫) ; ಸಿದ್ಧಣ್ಣನು ತೆಣೆಯ ಮೇಲೆ ನಿಂತು, ಬಗ್ಗಿ ಭಕ್ತಿಯಿಂದ ಗೌಡರಿಗೆ ನಮಸ್ಕರಿಸಿದನು (ಪಂಜಪಂ. ೫೦). **ದಿಣೆ** : ೧. ಇಸಾನದೆ ಬದಣೆಗುಪ್ಪೆಯ ದಾಸನೂರ ಪೊಟ್ಟುದ ತ್ರಿಸಂಧಿಯ ತಟಾಕಮೆ ಕೊಡಿಗಟ್ಟೆ ಚಿಣ್ಣಮಿಕ್ಷಮೆ ಕೆಂತಱಿಮ್ಬಿನ ದಿಣೆ ಇಂ ಪೂರ್ಬ್ಬದೆ ಕೂಡಿತ್ತು ಸೀಮಾಂತರಂ (ಎಕ. I, ೧-೩೦:466) ; ಕಾಲುವೆಯ ಪಡುವಣ ದಿಣೆಯಾಗಿದ್ದುದನು ಆ ದೇವರ ಶ್ರೀವೈಷ್ಣವರಿಗೆ ಮಾಱಿಕೊಂಡು (ಮ್ಯಾಆರಿ. ೧೯೪೬, ೩೦-೧೨ ; 1314). **ದಿನ್ನೆ** : ೧. ಕೆಂಬರೆಯ ಸ್ರೋತ ವರಲ ದಿನ್ನೆ ಪ್ರಾಪ್ಯ ತಥಾತು ದಕ್ಷಿಣ ಗ್ರಾಮ (ಇಆ. VIII, ೯೫-೩; 444 ಕೃಶಾ); ಮುನೇಶ್ವರನ ಗುಡಿಯವರೆಗೂ ನಿರ್ಜನವಾದ ದಿನ್ನೆ, ಕೊರಕಲು ಪ್ರದೇಶ (ಊರುಕ. ೧೩೦); ದಿನ್ನೇ ಮೇಲೆ ಮಳೆ ಹೊಯ್ದುದ್ರೆ ಹಳ್ಳಕ್ಕೇ ಬರುವುದು (ಗಾದೆ). 'ದಿಂಟೆ' ಪರಾ.

[ ದೇ.॥ ತಮಿ. ತಿಣ್ಣೈ ; ಮಲ. ತಿಣ, ತಿಣ್ಣ ; ತುಳು. ತಿಣೆ, ದಿಣ್ಣೆ ತೆಲು. ತಿನ್ನೆ, ದಿಣ್ಣೆ ]

**ದಿತ** (ಗು). ೧. ಕತ್ತರಿಸಿದ ; ತುಂಡುಮಾಡಿದ. (ನಾ). ೨. ಕತ್ತರಿಸಿದುದು : "ದಾತಂ ಲೂನಂ ದಿತಮಱಿಗೆ" (ವಸ್ತುಕೋ. ೧೦೬-೪೯) ; "ಛಿನ್ನಂ . . . ದಿತಂ, ಛಿತಂ, ವೃಕ್ಣಂ – ೮ ಕುಯ್ಯಲ್ಪಟ್ಟದ್ದು, ಕತ್ತರಿಸಲ್ಪಟ್ಟದ್ದು" (ಸಿದ್ಧಾಂತಿ. ೩೦೩). [ ಸಂ. ]

**ದಿತಿ** (ನಾ). ಕಶ್ಯಪನ ಹೆಂಡತಿಯರಲ್ಲಿ ಒಬ್ಬಳು ; ದೈತ್ಯರ ತಾಯಿ : "ದೈತ್ಯರ ತಾಯಿ ದಿತಿ, ದೇವರ್ಕಳ ತಾಯಿ ಅದಿತಿ, ದಾನವರ ತಾಯಿ ದನು, ನಾಗರ್ಕಳ ತಾಯಿ ಖದ್ರೂಃ ಎಂಬುದು" (ಹಲಾಯು. ೨೦-೧೦೯) ; "ಅಸುರರಂ ಪಡೆದಾಕೆ ದಿತಿಯೆಂದೆನಿಕ್ಕುಂ" (ಮಂಗರಾ. ೭-೨೪) ; "ದಿತಿಃ– ದಕ್ಷನ ಮಗಳ್, ಕಶ್ಯಪನ ಹೆಂಡತಿ, ರಕ್ಕಸನ ತಾಯಿ" (ಕಾಶಕ್ಕ. ೧೪೬). 'ದಿತಿಜ' ಪರಾ. [ ಸಂ. ]

**ದಿತಿಜ** (ನಾ). ೧. ದಿತಿಯ ಮಗ ; ದೈತ್ಯ : ''ಸುರವೈರಿಗಳು ದಾನವರು ನಾಗಲೋಕವಂದಿರರು ದಿತಿಜರು ಶುಕ್ರಶಿಷ್ಯರಸುರರು ಪೂರ್ವಸುರರೆನಲು ದೈತ್ಯರು" (ಮಂಗರಾ. ೩-೯). ೨. ನಿರರುತಿ ; ನೈಋತ್ಯ ದಿಕ್ಕಿನ ಅಧಿಪತಿ : ದಿವಿಜವಾರವರನುಂ ದಹನನಾ ರವಿತನೂಜಂ ಧೀರದಿತಿಜಂ ವಿನುತ ನೀರನಿಲಯಂ ಪೃಥುಸವಿಾರನಸಘಂ . . . ಸೇರಿ ನೆರೆದೊಪ್ಪಿರೆ ಕೃಪಾರಸಸಮುದ್ರನಗಜಾರಮಣನುಜ್ಜ್ವಳ ಪುರಾರಿ ಮೆ ಱೆ ದಿ ರ್ದ ೯ ೦ (ರಾಜಶೇ. ೦೪-೯೮). [ ಸಂ. ]

**ದಿತಿಜಕುಲ, ದಿತಿಜಕುಳ** (ನಾ). ದೈತ್ಯರ ಕುಲ,_ವಂಶ : ತನಗೆ ಕೊಟ್ಟ ಕೋಡಿಂಗೊಡಂಬಟ್ಟು ದಿತಿಜಕುಲದಾವಾನಲನುಮನರಾತಿಕಾಲಾನಲನು ಮನನಲನಿಷ್ಟಾರ್ಥಸಿದ್ಧಿಯಕ್ಕುಮೆಂದು ಪರಸಿ (ಪಂಪಭಾ. ೫-೭೭ ವ). **ದಿತಿಜಕುಳ :** ನಸು ಕಿನಿಸದೆ ಮಿಗೆ ಕಿನಿಸಿ ದಿತಿಜಕುಳದವದಹನಂ ಮುಳಿದು ತನಗರ್ಘ್ಯಮೆತ್ತಿದ ತಳಿಗೆಯೊಳಿಡೆ ತಿಱಿದ ತೆಱದ ತಲೆ ಪಱಿದಾಗಳ್ (ಪಂಪಭಾ. ೬-೭೩). [ ದಿತಿಜ + ಕುಲ ]

**ದಿತಿಜಕುಳ** 'ದಿತಿಜಕುಲ' ನೋ.

**ದಿತಿಜಾರಿ** (ನಾ). ರಾಕ್ಷಸರ ವೈರಿ ; ಕೃಷ್ಣ : ದಿತಿಜಾರಿಯು ಭೈಕೃತದೊಡನೆ ತಗುಳ್ದುನ್ಮದುದು ಕೆರಳ್ದಿಭೇಂದ್ರುದ ಗಳಬ್ಯಂಹಿತವ೦೦ ಮದಧಾರಾ ರಘಾತ್ಯೃತಮುಂ (ಜಗವಿ. ೬-೫೦). [ ದಿತಿಜ + ಅರಿ₆ ]

**ದಿತಿಜೇಜ್ಯ** (ನಾ). ದೈತ್ಯರಿಗೆ ಪೂಜ್ಯನಾದವನು ; ದೈತ್ಯರ ಗುರು; ಶುಕ್ರ: ದಿತಿಜೇಜ್ಯಾಲಯ ಲಗ್ನದೊಳ್ ಮಹಿಸುತತ್ರಿಂಶಾಂಶಕಂ ನಿಂದೊಡಲ್ಲಿ ತುಷಾರದ್ಯುತಿ ಕೂಡಿದಂದಸತಿ .·. . ಶಶೀಜ್ಯಾಂಶದೊಳ್ ಸದ್ಗುಣಾನ್ವಿತೆ ಯಕ್ಕುಂ (ಜಾತತಿ. ೨೨-೪). [ ಸಂ. ]

**ದಿತಿತನೂಭವ** (ನಾ).=ದಿತಿಜ ೧ : "ದನುಜರ್ ದೈತೇಯರ್ ದಿತಿತನೂಭವರ್ ಪೂರ್ವದೇವರಸುರರ್ ಪಾತಾಳನಿವಾಸಿಗಳ್ ಸುರದ್ವಿಷರೆನೆ ದೈತ್ಯರ್ ಶುಕ್ರಶಿಷ್ಯರಾರ್ಗವುದ್ಯರ್" (ವಸ್ತುಕೋ. ೬-೩೨).

[ ದಿತಿ + ತನೂಭವ ]

**ದಿತಿನಂದನ** (ನಾ).=ದಿತಿಜ ೧ : ದಿತಿನಂದನರ ಪತಿಯು ನೇಮದಿಂದೋರ್ವ ಸತಿ ರತಿಗೆ ಕೊಡಲಸಿಧಾರೆಯಲ್ಲಿ ಮೆಲ್ಲನೆ ಸೀಳೆ ಅತಿ ಚೆಲ್ವ ಶಿಶು ಮತ್ಸ್ಯ ಗರ್ಭದಲ್ಲಿರೆ ನೋಡಿ . . . ಬಲು ಮೋಹವುಂಟಾಗೆ (ಪ್ರಾಭರಾ. ೧೧-೩೩).

[ ದಿತಿ + ನಂದನ ]

**ದಿತಿಸುತ** (ನಾ).=ದಿತಿಜ ೧ : ದಿತಿಸುತರಂ ಕಂಸಾದ್ಯರನತಿಬಳರಂ ಕೊಲ್ವೆ ನಿಱಿಪುವೆಂ ಭೂಭರವುಂ (ಜಗವಿ. ೧-೭೯). [ ದಿತಿ + ಸುತ ]

**ದಿದ್ದ** (ನಾ). (?) : ಕಣಿಕವುನಾಜ್ಯದಿಂ ತೊಡೆದು ಮೋದಿಸಿ ದಿದ್ದವು ಮಾಗೆ ಪೊಯ್ದು ಬಲ್ಮಣೆತನದಿಂದವೊತ್ತಿ ಮಿದಿದು (ಲೋಕೋಪ. ೮-೧೫); "ದಿದ್ದಮುಮಾಗೆ = ಚೆನ್ನಾಗಿ ಗಟ್ಟಿಯಾಗಿ" (ಲೋಕೋಪ. ಟೀಕು).

[ ? ]

**ದಿಧಿಲ್, ದಿಧಿಲು** (ನಾ). ಒಂದು ಅನುಕರಣ ಶಬ್ದ : ದೊಪ್ಪ ಧೊಗಪ್ಪೆನೆ ದಿಧಿಲ್ಬ್ಬಿಧಿಲ್ಲೆನೆ ಗದೆಗಳ್ ಸೊಪ್ಪುಸೊವಡಪ್ಪಿನಂ ಸೂಟ್ಟಿಪ್ಪದೆ ಕಡುಕೆಯ್ದು ಪೊಯ್ದುರೊರ್ವರನೊರ್ವರ್ (ಗದಾಯು. ೮-೧೧). **ದಿಧಿಲು :** ಕಡೆದರುಱೆ ದಿಧಿಲು ಬುದ್ಬುಧಿಲೆಂಬ ರವದಿಂದ (ವೀಶೈಪು. ೩-೧೬-೨೩).

**ದಿಧಿಲು** 'ದಿಧಿಲ್' ನೋ.

**ದಿಧಿಷು** (ನಾ). ೧. (ಯಾವುದೇ ವಸ್ತುವನ್ನು) ದೊರಕಿಸುವ ಪ್ರಯತ್ನ. ೨. ಗಂಡ; ಪತಿ. ೩. ಮೊದಲನೆಯ ಗಂಡನಿಂದ ವಿಚ್ಛೇದನ ಪಡೆದವಳನ್ನು ಮದುವೆಯಾದವನು; ಎರಡನೆಯ ಪತಿ: "ದಿಧಿಷುಃ, ತಸ್ಯಾಃ, ಪತಿಃ-- ಮದುವೆಯಾಗಿದ್ದವಳನ್ನು ಪುನರ್ವಿವಾಹ ಮಾಡಿಕೊಂಡವನ ಹೆಸರುಗಳು" (ಸಿದ್ಧಾಂತಿ. ೦೭೩). ೪. ಕುಮಾರಿ ವಿಧವೆ ಯಾಗಿದ್ದು ಎರಡನೆಯ ಸಲ ಮದುವೆಯಾದವಳು. [ ಸಂ. ]

**ದಿಧಿಷೂ** (ನಾ). ೧. ಕುಮಾರಿ ವಿಧವೆಯಾಗಿದ್ದು ಮರುವಿವಾಹವಾದವಳು: "ಪುನರ್ಭೂಃ, ದಿಧಿಷೂಃ, ದ್ವಿಃಊಢಾ-ಎರಡು ಸಾರಿ ಮದುವೆಯಾದವಳ ಹೆಸರುಗಳು" (ಸಿದ್ಧಾಂತಿ. ೦೫೦) ; "ಪುನರ್ಭೂಃ, ದಿಧಿಷೂಃ- ಈ ೨ ಮಱುವಾಟವಳ್" (ಹಲಾಯು.೮೦-೩೩೦) ; "ದಿಧಿಷೂ [ಪಾಠಾಂ. ದಿಗ್ಧಿಭು] ಪುನರ್ಭೂವೆನಲು ಮಱುವಾಳ ಕಾಂತೆಯಕ್ಕುಂ" (ಮಂಗರಾ. ೯೯-೩). ೨. ತಂಗಿ ಮದುವೆಯಾಗಿದ್ದರೂ ತಾನು ಇನ್ನೂ ಮದುವೆಯಾಗದಿರುವವಳು. ೩. ಅಕ್ಕನಿಗಿಂತ ಮೊದಲೇ ಮದುವೆ ಯಾದವಳು. 'ದಿಧಿಷೂಪತಿ' ಪರಾ. [ ಸಂ. ]

**ದಿಧಿಷೂಪತಿ** (ನಾ). ೧. ಅಕ್ಕನಿಗೆ ಮದುವೆಯಾಗುವ ಮುಂಚೆ ಅವಳ ತಂಗಿಯನ್ನು ಮದುವೆಯಾದವನು : ಪಿರಿಯಳ್ಗೆ ಮುನ್ನಮೇ ಕಿಱಿ ಯಳಂ ಮದುವೆಯಾದ ದಿಧಿಷೂಪತಿಗಳುಂ (ಧಾರಶಾಂ. ೨೪೫-೩೪). ೨. ಸಹೋದರನು ಮೃತನಾದರೆ, ಅವನ ಪತ್ನಿಯಲ್ಲಿ ರಮಿಸುವವನು.

[ ದಿಧಿಷೂ + ಪತಿ₂ ]

**ದಿನ್ಇಲಾಹಿ** 'ದೀನ್ಇಲಾಹಿ' ನೋ.

**ದಿನ** (ನಾ). ೧. ಸೂರ್ಯನು ಬೆಳಗುವಷ್ಟು ಕಾಲ ; ಹಗಲು ; ದಿವಸ : "ದಿವಸಂ ದಿನಂ ದಿವಾಹಂ ದ್ಯು ವಾಸರಂ ಘಸ್ರಮೆನೆ ಪಗಲ್" (ವಸ್ತುಕೋ. ೧೫-೪) ; ದಿನದೊಳ್ ಸಜಳತೆಯಿಂ ಮತ್ಸ್ಯನಳಿನಮುಂ ಮತ್ತೆ ಮಿರುಳೊಳುನ್ನಿದ್ರತೆಯಿಂದೆನಸುಂ ಚಕೋರ ಕುಮುದಮುನನುಕರಿಸಿದುದಾ ವಿಯೋಗವಿಧುರೆಯ ಕಣ್ಗಳ್ (ಚಂದ್ರಪ್ರ. ೫-೦೨೫). ೨. ಒಂದು ದಿವಸ ; ಒಂದು ಹಗಲು, ಒಂದು ರಾತ್ರಿಗಳಿಂದ ಕೂಡಿದ ಕಾಲ ; ಇಪ್ಪತ್ನಾಲ್ಕು ಗಂಟೆಗಳ ಕಾಲ ; ; ಎಂಟು ಜಾವ : ದಿನವು ಬೇಱಿಲ್ಲ ತಿರುನಾಳೆ ದಿನವಾ ಪುರಕೆ ಮನವು ಬೇಱಿಲ್ಲ ಶಿವಭಕ್ತಿ ಮನವಾ ಪುರಕೆ (ತಿರುರ. ದೇ. ೩-೦೪) ; ದಿನಮೆಲ್ಲಂ ನಿಯಮವ್ರತಕ್ಕೆ (ಶಾಂತೀಶ್ವ. ೨-೧೧) ; ಝಾವವೆಂಟಾಗೆ ವಗಲಿರುಳಿಂದಱುವತ್ತುಘಳಿಗೆಯೊಂದುದಿನವಹುದು (ವಿವೇಕ. ೩೨೦). ೩. ತಿಥಿ; ಶ್ರಾದ್ಧ : ದಿನದ್ದ (ಉತ್ತರಕ್ರಿಯೆ) ತಯಾರಿ ನಡಸೀದಿ ಕಾಣಸ್ತೇತಿ ? (ನಿಸರ್ಗ. ೦೨೨). 'ತದ್ದಿನ', 'ದಿನಕರ್ಮ' ಪರಾ. ೪. ಆಡಳಿತದ ಅವಧಿ ಅಥವಾ ಅಧಿಕಾರದ ಸಮಯ : ರಾಮಾಭಟರ ಅಯ್ಯನವರ ಕಾರ್ಯ್ಯಕ್ಕೆ ಕರ್ತರಾದ ಲಕುಮ ರಪಯ್ಯನವರ ದಿನದಲು (ಎಕ. X (8), ಕೋಲಾರ. ೨೭೭-೩ ; 1540). 'ಕಾರಕರ್ದಿ' ಪರಾ. ೫. ಪಡಿತರ ; ರೇಷನ್ನು : ನೆರೆದಿರುವ ಜನರೆಲ್ಲರ ರೇಷನ್‌ಕಾರ್ಡುಗಳನ್ನು ಸಂಗ್ರಹಿಸಿ ಒಬ್ಬೊಬ್ಬರನ್ನೇ ಕರೆದು ಅವರಿಗೆ ದಿನ ಕೊಡಿಸುತ್ತಿದ್ದರು (ಮರಳಿ. ೦೨). ೬. ಯೋಗ್ಯವಾದ ಕಾಲ ; ಹದಗಾಲ ; ತತು : ದಿನ ಹೋಗಿ ಮಳೆಗಾಲವೇ (ಗಾದೆ). ೭. [ಗಣಿತ] ಮೂವತ್ತು ಎಂಬ ಸಂಖ್ಯೆಯ ಸಂಕೇತ : "ದಿನವೆನಲು ಮೂವತ್ತು" (ಮಂಗರಾ. ೧೦೪-೯).

**ದಿನಂದಿನ, ದಿನದಿನ, ದಿನದಿನಂ, ದಿನಾದಿನಾ, ದಿನೇದಿನೇ** (ದ್ವಿರುಕ್ತಿ) = ೧. ಆಯಾದಿನ ; ಅಂದಂದು ೨. ಪ್ರತಿದಿನ; ಪ್ರತಿನಿತ್ಯ : ತನುವನೆಲ್ಲ ವನೆಯ್ದೆ ಪೊಸಚಂದನವುದಾಗಲು ತೇದು ತೇದಿಂತನುನಯದಿ ದಿನದಿನದ ನೇಮಂ ತಪ್ಪದರ್ಪಿಸುವೆ (ಬಸಪು. ೨೭-೩) ; ಪಾಡಿವದೆಳವೆಱೆ ಪುಣ್ಣವಿಂ ವರೆಗಂ ರೂಡಿಸಿ ದಿನದಿನದಪ್ಪದೆ ಕಲೆಯೊಳ್ ಕೂಡಿ ಬಳೆದು ಕುವಲಯ ಕತ್ಯಾನಂದಮನೀವಂದದೊಳು (ಜಯಕಾ. ೨-೬೫) ; ದಿನದಿನ ಶನಿ ಕಾಡಿದರೆ ಬಾಳೋದು ಯಾವಾಗ ? (ಗಾದೆ). ೧, ೨ : ದೇಶವಿದೇಶೀಯ ರಾಜಕೀಯಗಳನ್ನು ಕುರಿತು ದಿನಂದಿನದ ವಾರ್ತೆಗಳನ್ನು ತಿಳಿದುಕೊಳ್ಳುತ್ತಾನೆ (ಒಂಟದ. ೨೫೫). ೩. ದಿನದಿಂದ ದಿನಕ್ಕೆ ; ದಿನ ಕಳೆದಂತೆ ; ದಿನ ಕ್ರಮೇಣ: ಗೆರೆನಗೆಯ ಕಿರಿಯೊಡಲ ಪಸುಳೆದಿಂಗಳ್ ದಿನಂದಿನದಿನಂ ಬಳೆ ವಂತೆ(ಶ್ರೀರಾಮಾ. ೧೭-೪೩೫) ; ದಿನೇದಿನೇ ನಶಿಸತೊಡಗಿರುವ ಈ ಜನಾಂಗ

ಗಳ ಭಾಷೆಗಳನ್ನು ಕುರಿತು ಹೆಚ್ಚು ಸಂಶೋಧನೆ ನಡೆಯುವುದು ಅಗತ್ಯ (ದ್ರಾವಿವಿ. ೨೦೩); ಚಿಂತೆಯಿಂದ ದಿನೇದಿನೇ ಆತ ಕುಂದುತ್ತಿದ್ದಾನೆ (ಕಟುಕ. ೬೭). ೪. ಪ್ರತಿದಿನವೂ ; ದಿನನಿತ್ಯವೂ : ಮಲಗಿಕೋ ಹೋಗು, ದಿನಾ ದಿನಾ ನಾನು ಹೇಳಬೇಕೆ (ಸಣ್ಣಕ. X, ೧೫). **ದಿನ ಎಣಿಸು** = (ಜೀವನದ ಕೊನೆಯಲ್ಲಿ) ಸಾವಿನ ದಿನವನ್ನು ಎದುರು ನೋಡು ; ಕಡೆಗಾಲವನ್ನು ನಿರೀಕ್ಷಿಸು : ಅವರು ತೀರ ಅನಾರೋಗ್ಯದಿಂದ ದಿನ ಎಣಿಸುವ ಸ್ಥಿತಿಗೆ ಬಂದಿದ್ದಾರೆ (ರೂಢಿ). ***ದಿನಂದಪ್ಪದೆ** = ಒಂದು ದಿನವನ್ನೂ ಬಿಡದೆ ; ಪ್ರತಿನಿತ್ಯವೂ : ಇರ್ಪವೆಮ್ಮಯ ಮನಂ ಬಂದೆಡೆಗಳೊಳ್ ಪೋಗಿ ಬರ್ಪವು ದಿನಂದಪ್ಪದೆ (ಜಬಪು. ೪೭-೧೭). **ದಿನಂಪ್ರತಿ** = ಪ್ರತಿದಿನ ; ಪ್ರತಿನಿತ್ಯ : ದಿನಂಪ್ರತಿಯೊಳಾ ಬಾಲೆಯತ್ಯಂತ ಪ್ರಯತ್ನದಿ ಜನ್ನಿಗೆಯ ಹಾಲಂ ಕಱೆದು ಕಾಸಿ ಕ್ಷಿಪ್ರದಿಂದಂ ತಂದುಕೊಡಲು (ಬಸಪು. ೧೪-೨೩) ; ದಿನಂಪ್ರತಿ ಸಭೆಗಳಾಗುತ್ತಿದ್ದವು (ಉರ್ದುಪಾ. ೧೮) ; ವಾರಕ್ಕೆ ೩-೪ ಸರ್ತಿ ಅಪಸ್ಮಾರ ಬಡಿದರೆ ಸಾಕಷ್ಟು ಔಷಧಿಗಳನ್ನು ದಿನಂಪ್ರತಿ ಬಿಡದೆ ಕೊಟ್ಟು, ಮೂರ್ಛೆ ಬರದಂತೆ ಮಾಡಬಹುದು (ಮನೋಸಂ. ೪೬). **ದಿನ ಕೂಡಿಬರು** = ಒಳ್ಳೆಯ ಸಮಯ ಹೊಂದಿಬರು ; ಅದೃಷ್ಟ ಒದಗು: ಯಾವುದಕ್ಕೂ ದಿನ ಕೂಡಿಬರಬೇಕು (ರೂಢಿ). **ದಿನ ಕೂಡು** = (ಶುಭಕಾರ್ಯ ಮುಂತಾದುವಕ್ಕೆ) ದಿನ ಹೊಂದಿಕೆಯಾಗು,–ಸೇರು : ಅವನ ಜಾತಕಕ್ಕೆ ದಿನ ಕೂಡಲಿಲ್ಲ (ರೂಢಿ). **ದಿನ ಕೇಳು**=(ಶುಭಕಾರ್ಯ ಮೊದಲಾದುವುಗಳಿಗಾಗಿ) ಒಳ್ಳೆಯ ದಿನವನ್ನು ವಿಚಾರಿಸು ; ತಿಥಿ, ನಕ್ಷತ್ರಗಳನ್ನು ವಿಚಾರಿಸು : ಅವರು ಜೋಯಿಸರ ಬಳಿಗೆ, ಮಗಳ ಮದುವೆಗೆ ದಿನ ಕೇಳಲು ಹೋಗಿದ್ದಾರೆ (ರೂಢಿ). **ದಿನಕ್ರಮವಾಗಿ** = ದಿನಕ್ರಮೇಣ : ಲುಬ್ಧಶಿರೋಮಣಿಯಾದ ದುಷ್ಟಬುದ್ಧಿಗೂ ದಾನಶೀಲನಾದ ಸತ್ಯಕೀರ್ತಿಗೂ ದಿನಕ್ರಮವಾಗಿ ದ್ವೇಷವು ಹೆಚ್ಚಲಾರಂಭವಾಯಿತು (ಕವಿಕ. ೧). **ದಿನಕ್ರಮೇಣ** = ದಿನದಿಂದ ದಿನಕ್ಕೆ ; ದಿನ ಕಳೆದಂತೆ: ದಿನಕ್ರಮೇಣ ಅವರ ಸ್ಥಿತಿ ಸುಧಾರಿಸಿತು (ರೂಢಿ). **ದಿನಗಟ್ಟಲೆ, ದಿನಗಟ್ಲೆ** = ೧. ಪ್ರತಿದಿನ ; ದಿನನಿತ್ಯ : ಅವರು ದಿನಗಟ್ಟಲೆಯಲ್ಲಿ ತೀರ ಸಾಮಾನ್ಯ ಉಡುಪು ಧರಿಸುತ್ತಾರೆ (ರೂಢಿ) ; "ದಿನಗಟ್ಲೆ–ನಿತ್ಯ ; ದಿನಾಲು" (ಜಾನಕೋ. ೫). ೨. ಹಲವು ದಿನಗಳವರೆಗೆ : ದಿನಗಟ್ಟಲೆ ಉಪವಾಸ ಮಾಡುವುದು ಮೈಗೆ ಒಳ್ಳೆಯದಲ್ಲ (ರೂಢಿ). **ದಿನಗಳ ಮೇಲೆ ಬೀಳು** = ಹಲವು ದಿನಗಳ ಕಾಲ ಬೇಕಾಗು ; ತುಂಬ ದಿನಗಳ ಸಮಯ ಹಿಡಿ : ಹೀಗೆ ಮೊದಲಿನ ದಾಖಲೆಯನ್ನು ಕೊಟ್ಟು ಬರಿಯುವದರಿಂದ ತಕ್ಷಣವೇ ಖರೀದಿಯಾಗದೆ ದಿನಗಳ ಮೇಲೆ ಬೀಳುವದು (ಮುಂಬವ್ಯಾ. ೬೯). **ದಿನ ಗೊತ್ತುಮಾಡು**=ದಿನ ನಿಶ್ಚಯಿಸು : ಮದುವೆಗೆ ಅಂದೇನೆ ದಿನ ಗೊತ್ತುಮಾಡಿದರು (ರೂಢಿ). **ದಿನ ತಪ್ಪಿ ದಿನ**=ದಿನಬಿಟ್ಟು ದಿನ : ಪೀನಸಕ್ಕೆ :–ಅರಿದಳ . . . ಚಿತ್ರಮೂಲದ ತಿಗಡು, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಈ ಚೂರ್ಣದಲ್ಲಿ ಹೊಗೆ ದಿನತಪ್ಪಿ ದಿನ ಕೊಟ್ಟು ಸಬಸಿಗೆಸೊಪ್ಪಿನ ಎಸರಲ್ಲಿ ಊಟಕ್ಕೆ ಇಕ್ಕುವುದು (ವಿವೈವಿ. ೦೦೧). **ದಿನ ತಳ್ಳು**=ದಿನ ನೂಕು : ಅವರು ಕಷ್ಟದಿಂದ ದಿನ ತಳ್ಳುತ್ತಿದ್ದಾರೆ (ರೂಢಿ). **ದಿನ ತುಂಬು**=ಗರ್ಭಿಣಿಗೆ ನವಮಾಸ ಪೂರ್ಣವಾಗು,–ಹೆರಿಗೆಯ ಕಾಲ ಸಮೀಪವಾಗು: ಆಗ ನನಗೆ ಎರಡನೆಯ ಬಸಿರು. ದಿನ ತುಂಬಿತ್ತು (ಸ್ಮೃತಿಚಿ. ೮೫) ; ರಮಾಬಾಯಿ ದಿನ ತುಂಬಿದ ಬಸುರಿ (ಶ್ರೀರಂಗ. ೧೮). **ದಿನದಂತೆ** = ಎಂದಿನಂತೆ ; ಪ್ರತಿನಿತ್ಯದ ಹಾಗೆ : ಗಂಡುಹೆಣ್ಣು ದಿನದಂತೆ ಎದ್ದು ದಿನದಾಟವಾಡುತಿರಲು ನಿನ್ನೆ ನಾಳೆಗಳ ಸಂಧಿಯಲ್ಲಿ ಜನ ನೋಟ ನೋಡುತಿರಲು (ಸೂರ್ಯಪಾ. ೩೪-೫). **ದಿನ ದಾಟು**=ದಿನ ಮೀರು : ಅವನು ದಿನ ದಾಟಿ ಬಂದರೆ ಏನೂ ಮಾಡಲಾಗುವುದಿಲ್ಲ (ರೂಢಿ). **ದಿನದಿನಕೆ, ದಿನದಿನಕ್ಕೆ** = ೧. ಪ್ರತಿದಿನಕ್ಕೆ ; ಆಯಾಯಾ ದಿನಕ್ಕೆ ; ದಿನನಿತ್ಯಕ್ಕೆ : ದಿನದಿನಕೆ ಪಡಿಯಂ ಕೊಡುವನುಮಯಿನಿಯನಾ ನಂಬ್ಯಣ್ಣಗೀಗಳು ಜನವಱಿಯೆ ಪಡಿಯಂ ಕೊಡುವನೀ ಕಿನ್ನರಯ್ಯಂಗೆ (ಬಸಪು. ೨೯-೧೧) ; ಮನವೊಲಿದು ಪರ್ಬಂಗಳಂ ದಿನದಿನಕೆ ಮಾಡಿಹೆನು (ಬಸಪು. ೪೮-೧೬). ೨.=ದಿನಕ್ರಮೇಣ : ಲತಾಂಗಿಯ ಜಠರವದು ದಿನದಿನಕೆ ನುಣ್ಪುಂ ಪೆಂಪುಮಿಂಪು ಕೊನರ್ದು ಬಲಿದೊಂಬತ್ತುತಿಂಗಳು ತುಂಬಿ (ಬಸಪು. ೩-೪) ; ಮೆಱೆದುದವರಭ್ಯುದಯ ದಿನದಿನಕೆ (ತೊರರಾ. ೧-೮-೮೨) ; ಅವಳಲ್ಲಿ ದಿನದಿನಕ್ಕೆ ಒಳ್ಳೆಯ ಗುಣಗಳು ಬೆಳೆಯುತ್ತಿದ್ದವು (ಸಣ್ಣಕ. X, ೧೭); ಕಾದಂಬಿನಿಯು ದಿನದಿನಕ್ಕೆ ದುರ್ಜ್ಞೇಯಳಾಗುತ್ತ ಹೊರಟಂತೆ, ಯೋಗಮಾಯೆ ಅವಳ ಮೇಲೆ ಅಷ್ಟಷ್ಟು ಕುಪಿತಳಾಗಹತ್ತಿದಳು (ಇಪ್ಪಕ. ೨೩). **ದಿನದೊಳಗೆ ಬೀಳು** = ದಿನ ತುಂಬು : ಆಕೆಗೆ ಎರಡನೆಯ ಬಸಿರು ದಿನದೊಳಗೆ ಬಿದ್ದಿದೆ (ರೂಢಿ). **ದಿನ ನಡೆ**=ಜೀವನ ನಡೆ ; ಬದುಕು ಸಾಗು: ಅವರ ಸಂಪಾದನೆಯಲ್ಲಿ ದಿನ ನಡೆಯುವುದೇ ಕಷ್ಟವಾಗಿದೆ (ರೂಢಿ). **ದಿನನಿತ್ಯ** = ಪ್ರತಿದಿನ ; ಪ್ರತಿನಿತ್ಯ : ಬಹುಮಂದಿ ಸುಳಿವರು ಸುಗುಣ ಸಂಪನ್ನರು ದಿನನಿತ್ಯ ನೂರಾರುಜನರು (ಇಂಜಾಪ. ೧೫೦-೩೯) ; ಅವಳ ಆಲೋಚನೆಗಳು ಅವಾಸ್ತವ ಪ್ರಪಂಚದ ದಿನನಿತ್ಯದ ಸಮಸ್ಯೆಗಳ ಜಟಿಲತೆಯಿಂದ ಒಡಗೂಡಿರುತ್ತಿದ್ದುದರಿಂದ ಅವಳ ಮನಸ್ಸು ಆ ಹೊರೆಯಿಂದಲೇ ಕುಗ್ಗಿ ಹೋಗಿ ಕಲ್ಪನೆಯ ಕುದುರೆಗಳನ್ನೇರಲಾರದಂತಾಗಿದ್ದವು (ಕುಸುಸಂ. ೦೧). **ದಿನ ನಿಶ್ಚಯಿಸು** = (ಶುಭಕಾರ್ಯಗಳಿಗೆ) ದಿನವನ್ನು ಗೊತ್ತುಮಾಡು ; ಮುಹೂರ್ತವನ್ನು ನಿಶ್ಚಯಮಾಡು : ದಿನ ನಿಶ್ಚಯಿಸಿದ. ಊರಿಗೆ ಮರಳಿದ (ಕುಡಿಕೂ. ೨೨೭). **ದಿನ ನೂಕು** = (ನೆಮ್ಮದಿಯಿಲ್ಲದೆ) ಜೀವನವನ್ನು ಸಾಗಿಸು ; (ಕಷ್ಟದಿಂದ) ದಿನಗಳನ್ನು ಕಳೆ : ಅವರು ಮಗನ ನಿರೀಕ್ಷೆಯಲ್ಲೇ ದಿನ ನೂಕುತ್ತಿದ್ದಾರೆ (ರೂಢಿ). **ದಿನ ನೋಡು** = ದಿನ ನಿಶ್ಚಯಿಸು : ಅವರು ಮಗಳ ಮದುವೆಗೆ ದಿನ ನೋಡುತ್ತಿದ್ದಾರೆ (ರೂಢಿ). **ದಿನಪಡಿ** = ಅತಿಥಿ ಮುಂತಾದವರಿಗೆ ಅಡಿಗೆ ಮಾಡಿಕೊಂಡು ಊಟ ಮಾಡುವುದಕ್ಕಾಗಿ ಕೊಡುವ ಒಂದು ದಿನಕ್ಕಾಗುವಷ್ಟು ಅಕ್ಕಿ, ಬೇಳೆ ಮುಂತಾದ ಪದಾರ್ಥಗಳು,–ಸ್ವಯಂಪಾಕದ ಸಾಮಗ್ರಿ : ನಮ್ಮ ಮನೆಗೆ ಬಂದ ಶಾಸ್ತ್ರಿಗಳು ಸ್ವಯಂಪಾಕದ ವ್ರತವನ್ನು ಪಾಲಿಸುವವರಾದ್ದರಿಂದ ಅವರಿಗೆ ದಿನಪಡಿ ಕೊಟ್ಟೆವು (ರೂಢಿ). 'ಅಕ್ಕಿಪಡಿ' ಪರಾ. **ದಿನ ಬರು** = ಕಾಲ ಒದಗು; ಸಮಯ ಸನ್ನಿಹಿತವಾಗು : ದಿನ ಬಂದಾಗ ಎಲ್ಲವೂ ನಡೆದುಹೋಗುತ್ತವೆ (ರೂಢಿ). **ದಿನ ಬಿಟ್ಟು ದಿನ**= ೧. ಕ್ರಮವಾಗಿ ಒಂದು ದಿನವನ್ನು ಬಿಟ್ಟು ಮತ್ತೊಂದು ದಿನ : ನನ್ನ ಹೆಂಡತಿ ತಾನೂ ಮೂರು ಕಾಸು ಗಳಿಸ್ತೇನೆ ಅಂತ, ದಿನ ಬಿಟ್ಟು ದಿನ ನನ್ನ ಜೊತೆಗೆ ಸೌದೆಗೆ ಬರ್ತಾಳೆ (ಸಣ್ಣಕ. VII, ೫೨); ಈ ಔಷಧಿಯನ್ನು ದಿನ ಬಿಟ್ಟು ದಿನ ತೆಗೆದುಕೊಳ್ಳಬೇಕು (ರೂಢಿ). ೨. ದಿನದಿಂದ ದಿನಕ್ಕೆ; ದಿನಕ್ರಮೇಣ: ಯಾಕೋ ಏನೋ ನನ್ನ ಮರವೆ ; ದಿನ ಬಿಟ್ಟು ದಿನ ಹೆಚ್ಚಾಗುತ್ತಿದೆ (ಮರಮ. ೨೫). **ದಿನಬೆಳಗೂ** = ೧. ಪ್ರತಿದಿನವೂ; ಪ್ರತಿನಿತ್ಯವೂ : ದಿನಬೆಳಗೂ ನಿಮ್ಮಂಥವರೇ ಬರಲಿ ಅಂತಾ ನಾವು ದೊಡ್ಡ ಮಳಿಗೆ ಬಾಗಿಲು ತೆರೆದುಕೊಂಡು ಕುಳಿತಿದ್ದೀವಿ ಅಲ್ಲವೆ ? (ಹೇಮುಕೂ. ೦೩) ; ಇನ್ನು ದಿನಬೆಳಗೂ ಇದೇ. ಹೆದರಿ ಏನು ಪ್ರಯೋಜನ ? (ಕಮನೆ. ೧೬೧). ೨. ದಿನವೆಲ್ಲ ; ಇಡೀದಿನ ; ದಿನಪೂರ್ತಿ ; ಅಹೋರಾತ್ರಿ : ದಿನಬೆಳಗೂ ರಾಮಾಯಣ ಕೇಳಿ, ರಾಮನಿಗೂ ಸೀತೆಗೂ ಏನಾಯಿತು ಎಂದಂತೆ (ಗಾದೆ). **ದಿನ ಮಾಡು** = ಪಿತೃಕಾರ್ಯವನ್ನು ಮಾಡು ; ಶ್ರಾದ್ಧವನ್ನು ನಡೆಸು : ಮಗನು ಪರದೇಶದಲ್ಲಿದ್ದುದರಿಂದ ತಂದೆಯ ದಿನಮಾಡಲು ಸಾಧ್ಯವಾಗಲಿಲ್ಲ (ರೂಢಿ). **ದಿನ ಮೀರು** = ಅವಧಿ ಮೀರು ; ಗಡುವು ಕಳೆದುಹೋಗು : ಸಬ್ಬಸಿಗೆ ಘೃತ . . . ದಿನ ಮೀರಿ ನೆರೆಯದ ಕನ್ನೆಯರು ಸೇವಿಸೆ ಋತುವಹರು (ಸಕವೈ. ೧೨೫). **ದಿನಮೋಕು ಮಾಡು** = ಕಾಲವನ್ನು ತಳ್ಳು; ತಡಮಾಡು; ಕಾಲವಂಚನೆ ಮಾಡು : ದಿನಮೋಕುಮಾಡುತ್ತ ನಡೆದದ್ದಲ್ಲದೆ ಅವರನ್ನು

ಮುರಿಯುವುದಕ್ಕೆ ಸಂಬಳದ ದಂಡಾಳುಗಳನ್ನು . . . ಕೂಡಿಸ ಹತ್ತಿದನು (ಇಂಗ್ಲಂಡ. ೪೯) ; ಅವನು ನನ್ನ ಹಣವನ್ನು ಕೊಡದೆ ದಿನವೇಕು ಮಾಡುತ್ತಿದ್ದಾನೆ (ರೂಢಿ). **ದಿನರಾತ್ರಿ** = ಹಗಲುರಾತ್ರಿ ; ದಿನಪೂರ್ತಿ; ಅಹೋರಾತ್ರಿ : ಅವರು ಕೆಲಸವನ್ನು ಬೇಗ ಮುಗಿಸಬೇಕೆಂದು ದಿನರಾತ್ರಿ ಮಾಡುತ್ತಿದ್ದಾರೆ (ರೂಢಿ). **ದಿನ ಲೆಕ್ಕಹಾಕು** = ದಿನ ಎಣಿಸು : ಅವರು ಬದುಕುವ ಆಸೆಯನ್ನೇ ಬಿಟ್ಟು ದಿನ ಲೆಕ್ಕ ಹಾಕುತ್ತಿದ್ದಾರೆ (ರೂಢಿ). **ದಿನವಹಿ** : = ೧. ಪ್ರತಿದಿನ ; ಪ್ರತಿನಿತ್ಯ; ದಿನಾಲು: ಯದುಗಿರೀಶಗೆ ನಮಿಸಲೋಸುಗ ಮುಂದದಿ ದಿನವಹಿ ಬರ್ಪ ಶಕ್ರನ ಕುದುರೆಗಳ ಪಸುರೊಗರು ಗಿರಿಮನೆಗಳಲಿ ಪಸರಿಸಲು (ಅರ್ಜಾವಿ. ೨೮-೧೪) ; ಅವಳು ದಿನವಹಿ ಬರುವ ಹೊತ್ತೂ ಇದೇ (ಜಿಳಜೀ. ೨೫) ; ಹುಟ್ಟಿದ ಮಗು ದಿನವಹಿ ೧೯–೨೦ ಗಂಟೆ ನಿದ್ದೆ ಮಾಡುತ್ತವೆ (ಗೃಹವಿ. ೧೧೨); ದಿನವಹಿ ಕನಿಷ್ಠಪಕ್ಷ ಆರುಆಣೆಗಳನ್ನಾದರೂ ಸಂಪಾದಿಸುತ್ತಿದ್ದಾರೆ (ಭಾಗ್ಯಶಿ. ೫೦). ೨. = ದಿನರಾತ್ರಿ : ಅವರು ದಿನವಹಿ ಮಾತನಾಡಿದರೂ ಆಯಾಸಗೊಳ್ಳುವುದಿಲ್ಲ (ರೂಢಿ). **ದಿನವಾಗು** = ದಿನ ತುಂಬು : ಆಕೆಗೆ ದಿನವಾಗಿದೆ (ರೂಢಿ). **ದಿನವಿಳಿ** = ಹೊತ್ತು ಇಳಿ ; ಸಾಯಂಕಾಲವಾಗು : ನನ್ನ ಕೆಲಸ ಮುಗಿಯುವ ವೇಳೆಗೆ ದಿನವಿಳಿಯುವ ಹೊತ್ತಾಯಿತು (ರೂಢಿ). **ದಿನವೇರು** = ಹೊತ್ತು ಏರು ; ಬೆಳಗಿನ ಸಮಯ ಮೀರು : ಬೇಸಿಗೆಕಾಲದಲ್ಲಿ ದಿನವೇರಿದಂತೆ ಬಿಸಿಲ ಬೇಗೆ ಹೆಚ್ಚು (ರೂಢಿ). **ದಿನ ಶುದ್ಧಿ ನೋಡು** = ಆಯುಷ್ಯಕರ್ಮ ಮೊದಲಾದ ಕಾರ್ಯಗಳಿಗೆ ಒಳ್ಳೆಯ ದಿನವನ್ನು ನೋಡು : ಆಚಾರ್ಯರು ಇಂದು ದಿನಶುದ್ಧಿ ನೋಡಿದ್ದಾರೆ (ರೂಢಿ). **ದಿನ ಸರಿ** = ಕಾಲ ಹೋಗು ; ಸಮಯ ಕಳೆ ; ದಿನವು ಕಳೆದುಹೋಗು : ದಿನ ಸರಿದಂತೆ, ಕೆಂಪಿಯ ಹೆಸರಿಲ್ಲದ ಬೇನೆ, ಪ್ರಬಲಿಸಿತು (ಕುಡಿಕೂ. ೨೮೭). **ದಿನ ಸಾಗು** = ಬದುಕು ನಡೆ ; ಜೀವನ ಸಾಗು : ಕಷ್ಟವೋ ಕಾರ್ಪಣ್ಯವೋ ದಿನ ಸಾಗುತ್ತಿದೆ (ರೂಢಿ). **ದಿನ ಹಾಕು** = ಕಾಲ ತಳ್ಳು ; ಬದುಕು ಸಾಗಿಸು ; ಜೀವನ ನಡೆಸು . ಇಂದು ನಾಳೆ ಎಂದು ದಿನ ಹಾಕುತ್ತ ಸಾವಿನ ಬಾಗಿಲಿಗೆ ಬಂದು, ಅಲ್ಲಿಂದ ಚಂಗನೆ ತಪ್ಪಿಸಿಕೊಂಡು ಹೋಗಬಹುದೆಂದರೆ ಸಾಧ್ಯವಿಲ್ಲ (ಬಾಳಬ. ೨೧) ; ಸಾಕಷ್ಟು ಮರೆ ಬಿಟ್ಟು ಅದನ್ನು ಪ್ರಯೋಗ ಮಾಡಿದರೆ ಅದರ ಸ್ವಾರಸ್ಯ ಇನ್ನೂ ಹೆಚ್ಚುವದೆಂದು ನಂಬಿ ನಾವು ದಿನ ಹಾಕುತ್ತಿದ್ದೆವು (ಮೇದಿಮಾ. ೧೨). **ದಿನ ಹೇಳು** = ಪಂಚಾಗ ಹೇಳು ; ಜ್ಯೋತಿಷ್ಯವನ್ನು ಹೇಳು : ನಮ್ಮೂರ ಜೋಯಿಸರು ಚೆನ್ನಾಗಿ ದಿನ ಹೇಳುತ್ತಾರೆ (ರೂಢಿ). **ದಿನ ಹೋಗು**= ವಯಸ್ಸಾಗು: ಬಿದ್ದಿಯಬೇ ಮುದುಕಿ ನೀ ದಿನ ಹೋದಾಕಿ, ಬಲು ಜೋಕಿ (ಶರೀಫ. ೩೩-೨). **ದಿನಾ** = ದಿನಾಗಲೂ : ಮುದುಕಿ . . . ದಿನಾ ಬರುವುದಾದರೆ ಬಾ, ಮಿಠಾಯಿ ನಿನಗೆ ಬೇಕಾದಷ್ಟು ಕೊಡುತ್ತೇನೆ, ಎಂದಳು (ಸಣ್ಣಕ. X, ೫೨); ದಿನಾ ಹೀಗೆ ಮಾಡ್ತೀಯವ್ವ (ದೂಬಿಟ್ಟ. ೫).

**ದಿನಾಗಲೂ, ದಿನಾಲು, ದಿನಾಲೂ** = ಪ್ರತಿದಿನ ; ಪ್ರತಿನಿತ್ಯ : ಅವರು ದಿನಾಗಲೂ ನಮ್ಮ ಮನೆಗೆ ಬರುತ್ತಾರೆ (ರೂಢಿ) ; ನೀವು ದಿನಾಲು ಉದ್ಯಾನಕ್ಕೇಕೆ ಬರುವುದಿಲ್ಲ (ಮಂದಾಕಿ. ೩೭) ; ದಿನಾಲು ಆ ವಿಗ್ರಹಗಳಿಗೆ ಹೂಗಾರ ಶಿವಪ್ಪನು ಪೂಜೆ ಸಲ್ಲಿಸುತ್ತಾನೆ (ಹಬ್ಬಿಬ. ೯) ; ನೀನು ದಿನಾಲು ಸಾಲೆಯ ಆಟದ ಬಯಲಿನಲ್ಲಿರುವ ಬನ್ನಿಯ ಗಿಡದ ಹತ್ತಿರ ಬರುತ್ತಿರು (ರಂಗರೋ. ೧೭೫) ; ಇವರನ್ನೆಲ್ಲ ನಾವು ದಿನಾಲು ನಮ್ಮ ಸುತ್ತಮುತ್ತು ಕಾಣಬಹುದು (ಗೊತ್ತುಗು. ೧೩) ; ಮನೆಯವರು ದಿನಾಲೂ ಒಂದಲ್ಲ ಒಂದು ರೀತಿಯಿಂದ ಆ ಹುಡುಗನ ಮತ್ತು ಅವರ ಮನೆಯವರ ಗುಣಗಾನ ಮಾಡಿದ್ದೂ ಮಾಡಿದ್ದೇ (ಸುವಸಂ. ೦೪). [ ಸಂ. ]

**ದಿನಂಗಳೆ,** ದಿನಕಳೆ, ದಿನಗಳಿ, ದಿನಗಳೆ (ಕ್ರಿ). ೧. ಕಾಲವನ್ನು ಕಳೆ ; ಸಮಯವನ್ನು ಕಳೆ : ಇಂತೀ ನರಾಮರಲೋಕಾವನಕೀರ್ತನೀಯ ಗಳೆನಿಪ್ಪನ್ಯೋನ್ಯಕೃತ್ಯಂಗಳಿಂ ಮರಳಲ್ ನೂರುಯುಗಂ ದಿನಂಗಳೆದು ನಿರ್ವಾಣಂದದಿಂ ಬಾಳಿರ್ದೈ (ಶಾಕುಂತ. ೧೧೫-೧೯೭). **ದಿನಕಳೆ** : ೨. ಬದುಕನ್ನು ಸಾಗಿಸು ; ಜೀವನವನ್ನು ನಡೆಸು : ಎಲ್ಲೋ ಹೇಗೋ ದಿನ ಕಳೆಯುವುದು, ಎಂದು ಯೋಚಿಸಿಕೊಂಡರು (ಸಣ್ಣಕ. X, ೫೦). **ದಿನಗಳಿ:** ೩. ಕಾಲ ಕಳೆದುಹೋಗು ; ಅವಧಿ ಮೀರಿ ಹೋಗು : ಸತಿ ಸಂತತಿಗೆ ಬಯಸಿ ದಿನಗಳಿ[ಪಾಠಾಂ. ಳಿ]ದುದಿನ್ನಿಲ್ಲ ಋತುಸಮಯಮೆಂದೆನಗೆ ಪೇಳ್ದೊಡಲ್ಲಿರ್ದೆನು (ಜೈಮಿಭಾ. ೧೧-೨೯). **ದಿನಗಳೆ** : ೩. ಮೇಲಿನ 'ಜೈಮಿಭಾ ಪ್ರಯೋಗದ ಪಾಠಾಂತರವನ್ನು ನೋಡಿ.

[ ದಿನ + ಕಳೆ$_2$ (<ಕಟು$_1$) ]

**ದಿನಕರ** (ನಾ). ೧. ಹಗಲನ್ನು ಉಂಟುಮಾಡುವವನು ; ಸೂರ್ಯ ; ಆದಿತ್ಯ : "ಆದಿತ್ಯಃ, ಸವಿತಾ . . . ದಿನಕರಃ, ಸೂರಃ, ಅಂಶುಮಾಲೀ . . . ತ್ರಯೀತನುಃ–ಈ ೪೭ ಆದಿತ್ಯನ ಪೆಸರ್" (ಹಲಾಯು. ೭-೩೫); ಧರಾಧಿಪಾ ನಿನ್ನನ್ನಂ ವಿತತಯಶನಿಲಯ ತಾರಾಪತಿ ದಿನಕರ ಸದೃಶತೇಜ ನೆಂಬುದುಮುಂಟೇ (ಕವಿರಾ. ೩-೮೪) ; ದಿನಕರನಸ್ತಮಸ್ತಕಮನಾಸೆವಡಲ್ ಬಗೆದಪ್ಪನೇಕೆ (ಪಂಪಭಾ. ೧೧.೧೪೫) ; ದಿನಕರ ಹಿಮಕರ ನಕ್ಷತ್ರ ನಿಖಿಲ ತಾರಾಗ್ರಹಂಗಳತ್ಯಾಗ್ರಹದಿಂ ಕನಕಮಹೀಧರಮಂ ನಿಚ್ಚನಿಚ್ಚಮೋರಂತೆ ಸಂತತಂ ಬಲವರ್ಕುಂ (ಸುಕುಮಾ. ೧೧-೬೦) ; ಮತ್ತಮಲ್ಲಿ ಮನಸಿಜನ ಬಿಲ್ಲ ಜೇಜದಿಂ ಬೆಳೆಯದಿಕ್ಷುದಂಡವಿಲ್ಲ . . . ದಿನಕರನ ಕರದ ಕಮಳದೊಡ ವುಟ್ಟದ ಕಮಳವನಂಗಳಿಲ್ಲ (ಪುಷ್ಪಪು. ೯-೨೦ ವ). ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ: ದಿನಕರರೆಡೆಯೊಳ್ ಯತಿ ನಿರ [ ಪಾಠಾಂ. ಯ] ತಂ (ಛಂದೋಂಬು. ೨-೧೯೫). [ ಸಂ. ]

**ದಿನಕರತನಯ** (ನಾ). ೧. ಸೂರ್ಯನ ಮಗ. ೨. ಕರ್ಣ : ದಿನಕರತನಯನ ದುಶ್ಶಾಸನನ ವಿಯೋಗದೊಳಮಿಂದುವರೆಗಂ ನೋವಿಲ್ಲೆನಗಹಿತರೊಡನೆ ಸಂಧಿಗುಡೆನೆ ನೊಂದೆಂ (ಗದಾಯು. ೬-೭). ೩. ಶನಿ. ೪. ಸುಗ್ರೀವ. ೫. ಯಮ. [ ದಿನಕರ + ತನಯ ]

**ದಿನಕರತೇಜ** (ನಾ). ಸೂರ್ಯನ ಕಾಂತಿ,–ಪ್ರಕಾಶ : ದಿನಕರತೇಜಮುಂ ಕ್ರಮದಿನೊಯ್ಯನೆ[ಯುಷ್ಣದ]ದತ್ತ ದಕ್ಷಿಣಾಯನದೊಳ್ . . . ಶಾಂತಿ ನಾಥನ ವಿತತಪ್ರತಾಪಶಿಖಿ ಕಣ್ಗೊಳೊಳ್ಕೆ (ಶಾಂತಿಪು. ೧೧-೬).

[ ದಿನಕರ + ತೇಜ$_1$ ]

**ದಿನಕರಯ್ಯ** (ನಾ). ಒಬ್ಬಾತನ ಹೆಸರು : ಎರೆಯೂರ ದಿನಕರಯ್ಯ ಸೆಟ್ಟಿಯ ಲಿಕಿತಂ (ಎಕ. IV, ಎಳಂದೂ. ೨೫-೧೫ ; ಸು. 925 ?).

[ ದಿನಕರ + ಅಯ್ಯ$_1$ ]

**ದಿನಕರಸುತ** (ನಾ). ೧. ಸೂರ್ಯನ ಮಗ. ೨. ಕರ್ಣ : ದಿನಕರಸುತ ವಚನಂ ರಾಮನೇಸು ಕಂಡರಿಸಿ ಕಲ್ಲೊಳಿಟ್ಟಕ್ಕರಮೆಂಬಿನೆಗಮೆಸೆದಪುದು ನೃಪಶಾಸನಮೆನಿಸುವ ನನ್ನಿ ನನ್ನಿನಾರಾಯಣನ (ಅಜಿಪು. ೧೨-೨೫). ೩. ಶನಿ. ೪. ಸುಗ್ರೀವ. ೫. ಯಮ. [ ದಿನಕರ + ಸುತ ]

**ದಿನಕರಾತ್ಮಜೆ** (ನಾ). ಸೂರ್ಯನ ಮಗಳು ; ಯಮುನಾನದಿ : "ಕಾಳಿಂದೀ, ದಿನಕರಾತ್ಮಜಾ, ಯಮುನಾ–ಈ ೩ ಯಮುನೆ" (ಹಲಾಯು. ೧೧೧–೫೨). [ ಸಂ. ದಿನಕರಾತ್ಮಜಾ ]

**ದಿನಕರೋಪಲ** (ನಾ). ಸೂರ್ಯಕಾಂತ ಶಿಲೆ : ಹರಿಮಣಿಯುಚಿ ಯೊಳ್ಪುಗುತ್ತಿರೆ ವಿಧುಂತುದಂ ವೃತ್ತತೆವೆತ್ತ ದಿನಕರೋಪಲಮಿದು ಭಾಸ್ಕರಬಿಂಬಮೆಂದು ಬಂದಾ ಗರಣದ ಸಮಯದೆ ಪಿಡಿವುದದಂ (ರಾಜಶೇ. ೬-೨೨). [ ದಿನಕರ + ಉಪಲ ]

**ದಿನಕರ್ಮ** (ನಾ). ಸತ್ತವರಿಗೆ ಮಾಡುವ ಉತ್ತರಕ್ರಿಯೆ ; ಅಪರ ಕರ್ಮ ; ಪಿತೃಕರ್ಮ : ದಿನಕರ್ಮಗಳು ಮುಗಿದೊಡನೆ (ಮುನಿಮಾ. ೩೦).

[ ದಿನ + ಕರ್ಮ ]

**ದಿನಕಳೆ** 'ದಿನಂಗಳೆ' ನೋ.

**ದಿನಕೂಟ** (ನಾ). [ಜ್ಯೋತಿ] ವಿವಾಹೋಪಯುಕ್ತವಾದ ದ್ವಾದಶ ಕೂಟಗಳಲ್ಲಿ ಒಂದು; ೯ ಕನ್ಯೆಯ ನಕ್ಷತ್ರದಿಂದ ವರನ ನಕ್ಷತ್ರದ ವರೆಗೆ (ಎರಡೂ ಸೇರಿ) ಒಂಬತ್ತೊಂಬತ್ತಾಗಿ ಎಣಿಸುವಾಗ–೨,೪, ೬,೮,೯ ಆದರೆ ದಿನಕೂಟವಿದೆಯೆಂದು ತಿಳಿಯಬೇಕು: ದಿನಕೂಟ ಇಲ್ಲದಿದ್ದರೂ ಗಣಕೂಟ ಚನ್ನಾಗಿದೆಯಲ್ಲ (ರೂಢಿ). [ದಿನ + ಕೂಟ$_1$]

**ದಿನಕೃತ್ತನೂಭವ** (ನಾ). ೧. ಸೂರ್ಯನ ಮಗ. ೨. ಕರ್ಣ: ದಿನಕೃತ್ತನೂಭವಂಗತಿಘನದಾನಿಗೆ . . . ಅವನಿಯೊಳದಟರಾರ್ ದೊರೆ ಪೇಟಿಂ (ನೇಮಿಪು. ೧೦-೩೩೦). ೩. ಶನಿ. ೪. ಸುಗ್ರೀವ. ೫. ಯಮ. [ಸಂ.]

**ದಿನಕೃತ್ತು** (ನಾ). ಸೂರ್ಯ; ಆದಿತ್ಯ; ದಿನಕರ: ಹತವೈರಿ ಕ್ಷತ್ರಚಕ್ರಂ ಭಯಚಕಿತ ಜಗದ್ವೀರಚಕ್ರಂ ವಿನಮ್ರಕ್ಷಿತಿಚಕ್ರಂ ದೀಪದೀಪ್ತಿ ಪ್ರತಿಹತ ದಿನಕೃಚ್ಚಕ್ರ ತೀವ್ರಾಂಶು ಚಕ್ರಂ (ಆದಿಪು. ೧೪-೩). 'ದಿನಕೃತ್ತನೂಭವ' ಪರಾ. [ಸಂ. ದಿನಕೃತ್]

**ದಿನಕೃದ್ಬಿಂಬ** (ನಾ). ಸೂರ್ಯನ ಬಿಂಬ: ದಿನಕೃದ್ಬಿಂಬ ಸ್ಫುರದ್ದರ್ಪಣ ಕಲಿತ ಕರಾಳ ತ್ರಿಶೂಲಂ . . . ಕಾಣಲಾದತ್ತದಾಗಳ್ (ಕಾದಂಬ. ೨೬೮). [ಸಂ.]

**ದಿನಕೃದ್ರಥ** (ನಾ). ಸೂರ್ಯನ ರಥ: ರಥಮಂ ನುರ್ಗೊತ್ತುತೆ ಸಾರಥಿಯಂ ತೊಡೆವಿಡಿದಿಭಂ ನಭಕ್ಕೆಡೆ ದಿನಕೃದ್ರಥದೊಳಗೆ ಬಿಳ್ದು ತತ್ಸಾರಥಿಯೆನಿಸಿದನ ವನನೂರು (ರಾಜಶೇ. ೬-೬೬). [ಸಂ.]

**ದಿನಕೃನ್ಮಂಡಲ, ದಿನಕೃನ್ಮಂಡಳ** (ನಾ). =ದಿನಕೃದ್ಬಿಂಬ: ದಿನಕೃನ್ಮಂಡಲ ಮುರ್ವಿಯೊಳ್ ನೆಲಸಿತೋ (ಧರ್ಮಾಮೃ. ೮-೧೦೪). **ದಿನಕೃನ್ಮಂಡಳ**: ಚಳಿಯಿಸಲಮರಾಚಲಮಂ ತುಳುಂಕಲಂಭೋನಿಧಾನಮಂ ದಿನಕೃನ್ಮಂಡಳ ಮನಿಳಿಗಿಟಿಪಲೆಂದಾಜಲಂಪಟಂ ದೆಸೆಗೆ ಮಸಗಿದಂ ದನುಜೇಂದ್ರಂ (ಪಂರಾಮಾ. ೧೩-೧೩೩). [ಸಂ.]

**ದಿನಕೃನ್ಮಂಡಳ** 'ದಿನಕೃನ್ಮಂಡಲ' ನೋ.

**ದಿನಗಂಡ** (ನಾ). ದಿನಕ್ಕೊಮ್ಮೆ ಅಥವಾ ದಿನೇ ದಿನೇ ಬರುವ ದೊಡ್ಡ ತೊಂದರೆ,–ವಿಪತ್ತು: ಹಿಂದೂಗಳ ಪಾಲಿಗೆ ಈ ಯವನರ ದಬ್ಬಾಳಿಕೆ ದಿನಗಂಡ ಕ್ಷಣಗಂಡಗಳಾಗಿವೆ (ರಾಜ್ಯೋದ. ೧೩೦). 'ಕ್ಷಣಗಂಡ' ಪರಾ. [ದಿನ + ಗಂಡ$_3$]

**ದಿನಗಣನೆ** (ನಾ). ಪ್ರತಿದಿನದ ಗಣನೆ,–ಲೆಕ್ಕ: ದಿನಗಣನೆ ಹದಿನೆಂಟು ಕೋಟಿಯ ಕನಕವಂದಿನ ದಿನದಿ ಚೆಲ್ಲಿದನನುಪಮಿತ ಧನರತುನ ಭಂಡಾರ ವನು ತೆಗೆತೆಗೆಸಿ ಮನದಣಿಯೆ ಯಾಚಕರಗಿತ್ತುದನೆನಗೆ ಬಣ್ಣಿಸಲಳವೆ (ಕುಮಾ್ರ. ೮-೧೮). [ದಿನ + ಗಣನೆ]

**ದಿನಗಳಿ** 'ದಿನಂಗಳಿ' ನೋ.

**ದಿನಗಳೆ** 'ದಿನಂಗಳೆ' ನೋ.

**ದಿನಗೂಲಿ** (ನಾ). ೧. ಒಂದು ದಿನದ ಕೆಲಸಕ್ಕೆ ಕೊಡುವ ಕೂಲಿ; ಚೆಂಗೂಲಿ: ದಿನದ ಲೆಕ್ಕ ಮಾಡಿದರೆ ದಿನಗೂಲಿ ಆಯ್ತು (ಸಣ್ಣ.ಕ. IX, ೯೫): ಅವರು ದಿನಗೂಲಿ ಕೊಟ್ಟು ಕೆಲಸ ಮಾಡಿಸುತ್ತಾರೆ (ರೂಢಿ). ೨. ಪ್ರತಿದಿನವೂ ಮಾಡುವ ಕೂಲಿ ಕೆಲಸ; ಒಂದು ದಿನದ ಕೆಲಸಕ್ಕೆ ಅಂದೇ ಕೂಲಿಯನ್ನು ಪಡೆಯುವ ಕೆಲಸ: ನೀನು ಬಂದು ಇಲ್ಲಿ ದಿನ ಗೂಲೀನಾ ಮಾಡಿದ್ದು? (ಸಣ್ಣ.ಕ. IX, ೯೫); ಅವನು ದಿನಗೂಲಿಯಿಂದ ಜೀವನ ನಡೆಸುತ್ತಾನೆ (ರೂಢಿ). ೩. ಪ್ರತಿದಿನವೂ ಕೂಲಿಕೆಲಸ ಮಾಡುವ ವನು: ಅವನೊಬ್ಬ ದಿನಗೂಲಿ (ರೂಢಿ). [ದಿನ + ಕೂಲಿ$_1$]

**ದಿನಚರಿ$_1$** 'ದಿನಚರಿಯು' ನೋ.

**ದಿನಚರಿ$_2$** (ಅ). ಪ್ರತಿದಿನವೂ; ದಿನಂಪ್ರತಿ: ಬಳಿಕಿಮ್ಮಾವಿನ ಪಣ್ಣತ್ತಾ ಆರಗಿಳಿಯಂ ದಿನಚರಿ ಬರವೇಳುತ್ತುಂ ಕಳುಹಿ ಕಮಲಲೋಚನೆ ತನ್ನಯ ಮನದೊಳಗಿಂತೆಣಿಸಿದಳು (ಜಯನೃ. ೨-೩೫). [<ದಿನಚರಿಯ]

**ದಿನಚರಿಯು, ದಿನಚರಿ$_1$** (ನಾ). ೧. ಪ್ರತಿದಿನವೂ ಮಾಡುವ ಕೆಲಸ,–ಆಚರಣೆ: ಇನಿತುಮನು ತಪ್ಪದೆ ನಡೆಸಲಾ ಜನಪನಾರೋಣೆಗೆ ಸುಖ ಸಂಜನಿಸುವುದು ದಿನಚರಿಯದಿಂದವನೀಶ ಕೇಳೆಂದ (ಕುಮಾ್ರ.ಉ. ೩-೬೧). **ದಿನಚರಿ$_1$**: ೧. ಸಂಶೋಧನಾಕಾರ್ಯಗಳಲ್ಲಿ ಮಗ್ನರಾದವರಿಗೆ ದಿನಚರಿಯ ಕೆಲಸಗಳೇ ಹೆಚ್ಚಾದರೆ ಅವರಿಂದ ಆಗಬೇಕಾದಷ್ಟು ಉಪಯುಕ್ತಕಾರ್ಯ ವಾಗುವುದಿಲ್ಲ (ಸಸ್ಮ.ಕ. ೬೨); ಶ್ರೀಧರನ ದಿನಚರಿಯಲ್ಲಿ ಆತ ಅತ್ಯಂತ ಪ್ರಯಾಸಪಟ್ಟು ಮಾಡುತ್ತಿದ್ದ ಕೆಲಸ, ತನ್ನ ಆಫೀಸಿಗೆ ಹೋಗುವ ಸಿದ್ಧತೆ (ವಾತ್ಸಲ್ಯ. ೨೭); ಹೀಗಾದಲ್ಲಿ ನಮ್ಮ ದಿನಚರಿಯನ್ನು ಘಂಟೆಗಳಿಗೆ ಹೊಂದಿಸಿ ಕೊಂಡು ಕೆಲಸ ಮಾಡಬೇಕಾದರೆ, ನಾವೆಲ್ಲರೂ ಖಗೋಳಜ್ಞರಾಗಬೇಕಾಗು ತ್ತದೆ (ನಕ್ಷತ್ರ. ೫೪); ಇವರ ಸ್ನಾನ ಪಾನ, ಉಡುಗೆ ತೊಡಿಗೆ, ಊಟ, ನಿದ್ದೆ, ಆಟ ಪಾಠ–ಇವೆಲ್ಲಾ ದಿನಚರಿಗಳಿಗೆ ಈ ಮನೆಯಲ್ಲಿ ಆಸ್ಪದವಿರು ತ್ತದೆ (ಗೃಹವಿ. ೧೫೨). ೨. ದಿನವೂ ಮಾಡುವ ಕೆಲಸ ಮುಂತಾದು ವನ್ನು ಬರೆದಿಡುವ ಪುಸ್ತಕ; ದಿನವಹಿ; ಡೈರಿ: ಕೆಲವಾರು ಘಟನಾವಳಿ ಗಳನ್ನು ಪ್ರಸಿದ್ಧ ಸಂಗೀತಗಾರರ ದಿನಚರಿಗಳಿಂದಲೇ ಆರಿಸಿಕೊಂಡಿದ್ದೇನೆ (ಸಂಗೀತ. vi ಪೀಠಿಕೆ); ನನ್ನ ದಿನಚರಿಯಲ್ಲಿ ಮೂಡಿದೆ ಕವಿಯು ಹಾಡಿದ ಚೌಪದಿ (ನಲಮು. ೫೨-೩೦); ಬಹುಮಟ್ಟಿಗೆ ಆತನ ದಿನಚರಿಯಿಂದ ತೆಗೆದದ್ದು (ನನ್ನಜೊ. ೪೪).

ದಿನಚರಿ ಪುಸ್ತಕ = (ಅಂದಂದಿನ ವ್ಯಾಪಾರ ಒಂದೊಂದನ್ನೂ ಅದು ಆದ ಹಾಗೆಲ್ಲ ಬರೆದುಕೊಂಡು, ಅದನ್ನು ಯಾವಯಾವ ಜಮಾ ಖರ್ಚು ಬಾಬಿಗೆ ಸೇರಿಸಬೇಕೆಂಬುದನ್ನು ನಮೂದಿಸುವ ಪುಸ್ತಕ: "ದಿನಚರಿಪುಸ್ತಕ; ರೋಜುಪುಸ್ತಕ "(Journal. ಪತ್ರಿನಿ. ೪೮) [<ಸಂ. ದಿನಚರ್ಯಾ]

**ದಿನಚರ್ಯೆ** (ನಾ). = ದಿನಚರಿಯು ೧: ಭೋಜರಾಜಸಂಹಿತೆಯಲ್ಲಿ ದಿನ ಚರ್ಯೆ, ಅರಸುಗಳು ಪ್ರತಿನಿತ್ಯವೂ ನಡೆವ ಕಟ್ಟಳೆ, ಪ್ರಭಾತದರ್ಶನ ಯೋಗ್ಯ (ಸಕವ್ಯ. ೨೮). [ಸಂ. ದಿನಚರ್ಯಾ]

**ದಿನಚಲನ**(ನಾ). ಒಂದು ದಿನದ ಚಲನೆ; ದೈನಂದಿನ ಚಲನೆ: ಭೂಮಿಯು ೨೪ ಘಂಟೆಗಳಲ್ಲಿ ಒಂದು ಸಲ, ಆಡುವ ಬುಗುರಿಯಂತೆ, ತನ್ನ ಸುತ್ತಲೂ ತಾನೇ ಹೊರಳುತ್ತದೆ. ಈ ಚಲನೆಗೆ ಭೂಮಿಯ "ದಿನಚಲನ (Diurnal Motion)" ಎಂದು ಹೆಸರು (ಭೂಗೋಳ. ೩). [ದಿನ + ಚಲನ]

**ದಿನದೀಪ** (ನಾ). ೧. ಹಗಲಿನಲ್ಲಿ ಹಚ್ಚಿದ ದೀಪ: ದಿನದೀಪದಂತೆ ದಶಾ ಹೀನನು (ಗಾದೆ). ೨. ಸೂರ್ಯ. [ದಿನ + ದೀಪ$_2$]

**ದಿನನಾಥ** (ನಾ). ೧. ಹಗಲಿನ ಒಡೆಯ; ಸೂರ್ಯ: ಅಮರಾನೀಕದ ಸುತ್ತು ಪೋಲೆ ದಿನನಾಥಾವಂಧ್ಯಸಂಧ್ಯಾಭ್ರವಿಭ್ರಮಮಂ ವಾಹನ ದೇವದಂತಿ ಶಿರದೊಳ್ ಕೂರಂಕುಸಂ ಚಾರಣಕ್ರಮದಿಂದಾದಜುಮತ್ತು ನಾಲ್ಕು ಪೊಳೆಪಿಂ ಕಣ್ಗೊಪ್ಪೆ (ಶಾಂತಿಪು. ೪-೧೧೬); ದಿನನಾಥಂ ಮಿಥುನರ್ಕ್ಷ ದೊಳ್ ನೆಲಸೆ ವಿದ್ಯಾಪಾರಗಂ ಜ್ಞಾನಿ ಧನ್ಯನೆನಿಕ್ಕುಂ (ಜಾತತಿ. ೧೭-೧೫). ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ: ತ್ರಿದಶ ಚಂದ್ರಗಣತ್ರಯಮಾಗಲೆ ಧಾತ್ರಿ ಮಾರುತ ಯುಗ್ಮಲಗಂಗಳಾ ಪದ ದೊಳೊಂದಿರೆ ವಿಶ್ರಮಣಂ ದಿನನಾಥಸ್ಥಾನದೊಳಾಗೆ (ಛಂದೋಂಬು. ೨-೧೮೯). [ದಿನ + ನಾಥ]

**ದಿನನಾಯಕ** (ನಾ).=ದಿನನಾಥ ೧: ದಿನನಾಯಕನಪರದಿಗಂಗನೆಯೊಳ್ಮೆರೆದು ದಿತರಾಗದಾದಂ (ಕವಿರಾ ೩-೩೪). [ದಿನ + ನಾಯಕ]

**ದಿನಪ** (ನಾ). ೧. ಸೂರ್ಯ; ರವಿ: ದಿನಪಂ ತೋರ್ಪಂ ಮಧ್ಯಂದಿನ ದೊಳ್ ತೇಜದ ಪೊಡರ್ಪಂ (ಗದಾಯು. ೧-೨೦); ಎನ್ನುದಯಮನಾನಿಂ ತಡೆದಿರ್ಪುದು ಪದನಲ್ತೆಂದು ದಿನಪನುದಯಂಗೆಯ್ದಂ (ಪಂರಾಮಾ. ೧೩-೯೪); ಜಗದಲಿ ದಿನಪನಿದಿರಲಿ ದಿಟ್ಟತನವೇ ತಮದ ಗಾವಳಿಗೆ

(ಕುವ್ಯಾವಿ. ೫-೧೪). ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ: ಕರಿ ದಿನಪ ರಾಜ ರಾವಣಕರ ಪರಿಸಂಖ್ಯಾಕ್ಷರಂ ಪೊದಟ್ಟಿಸೆಯೆ ಗಣಾಂತರಿತಂ ಪದಚತುರೂರ್ಧ್ವಗಂ (ಛಂದೋಂಬು. ೩-೨೧೫). ೩. [ಛಂದ] ಅಕ್ಷರಗಣಗಳಲ್ಲಿ ಒಂದು ; ಜಗಣ(ು–ು): ಕೋಕನದವೈರಿ ದಿನಪಂಗಾ ಕಡೆಗೆ ವಾಯು ಬರೆ ಕೇಳಾ ಕಮಲಲೋಚನೆ ಪೆಸರ್ನಾಕಿಗನಿನಾದುದಯಂ (ಛಂದೋಂಬು. ೨-೧೦೦). [ಸಂ.]

**ದಿನಪಕುಲ** (ನಾ). ಸೂರ್ಯನ ವಂಶ,–ಕುಲ: ದಿನಪಕುಲತಿಲಕನೇಕಾಂತ ದೊಳ್ನಗರಶೋಧನೆಯಂ ಚಾರರೊಳೋರ್ವನಂ ಕರೆಸಿ ಕೇಳ್ದನಿಂತು (ಜೈಮಿಭಾ. ೧೮-೪೧). [ದಿನಪ + ಕುಲ]

**ದಿನಪತಿ** (ನಾ). ಸೂರ್ಯ; ದಿನಕರ ; ದಿನಪ : "ಪ್ರಭುವುಂ ದಿನಪತಿಯುಂ ಪಿನರ್" (ಪಸು.ಕೋ. ೧೧೮-೪) ; ದಿನಪತಿಯುಂ ದಿನಮುಂ ಬಿಡದನು ಬಂಧದಿನಗಲದಂತೆ ಪೊಲ್ . . . ಪದಪಿಂದಮೊರ್ವರೊರ್ವರ ನಗಲರ್ (ಕಾದಂಪೂ. ೪೪೦) ; ದಿನಪತಿ ಇಳಿದನಪರಾಂಬುಧಿಗೆ (ಕುವ್ಯಾಉ. ೧೦-೨೪). [ದಿನ + ಪತಿ₃]

**ದಿನಪತಿವಾರ** (ನಾ). ಭಾನುವಾರ ; ಆದಿತ್ಯವಾರ : ಸಿತಪಕ್ಷದ ಪಂಚಮಿ ದಿನಪತಿವಾರಂ . . . ನೆಗಟ್ದುದೀ ಮತ್ಕೃತಿ (ಆದಿಪು. ೧೬-೭೭). [ದಿನಪತಿ + ವಾರ₃]

**ದಿನಪತ್ರಿಕೆ** (ನಾ). ದಿನವೂ ಬರುವ ಪತ್ರಿಕೆ ; ದೈನಂದಿನ ವೃತ್ತಪತ್ರಿಕೆ : ದಿನಪತ್ರಿಕೆಯಲ್ಲಿ ದುಡಿಯುವವನಾದುದರಿಂದ ಸಾಮಾನ್ಯ ರಾಜಕೀಯ ವಿಚಾರಗಳು ತಿಳಿದೇ ತಿಳಿಯುತ್ತವೆ (ಒಂಟಿದ. ೨೫೫) ; ದಿನಪತ್ರಿಕೆಯವರು ಬಂದು ಇವನ ಆತ್ಮಕಥೇನ ಕೇಳಿದರು (ವೀರಯೋ. ೨೧). [ದಿನ + ಪತ್ರಿಕೆ]

**ದಿನಪಾಂಶು** (ನಾ). ಸೂರ್ಯಕಿರಣ : ಭುಗುಭುಗನುರ್ಚಿಪಾಯ್ದು ಸಲೆ ದೇಹರಸಂ ಬಿಡುತೋಡಿತೆಲ್ಲಿಯುಂ ಮೊಗರಸಮೋಡಿತಿಲ್ಲ ದಿನ ಪಾಂಶುಗ[ಳ]ಟ್ಟೆ ಶರೀರಯಷ್ಟಿ ತೊಟ್ಟಗೆ ಕಡುಗಂದಿ ಕುಂದೆ ಬಡವಾದುದು (ಸುಕುಮಾ. ೧೨-೪೦). [ದಿನಪ + ಅಂಶು]

**ದಿನಬಳಕೆ** (ನಾ). ೧. ಪ್ರತಿನಿತ್ಯದ ಬಳಕೆ,–ಉಪಯೋಗ ; ದಿನನಿತ್ಯದ ಪ್ರಯೋಜನ : ಈ ಸೀರೆ ದಿನಬಳಕೆಗೆ ಬರುವುದಿಲ್ಲ (ರೂಢಿ). ೨. ಪ್ರತಿ ದಿನವೂ ಬಳಸುವಂತಹುದು ; ದಿನನಿತ್ಯದ ಉಪಯೋಗದಲ್ಲಿರುವಂತಹುದು : ಶರೀಫರು ಜನಪದ ಕವಿ ; ಜನರ ದಿನಬಳಕೆಯ ಮಾತುಗಳಲ್ಲಿ ಪದ ಕಟ್ಟಿ ಹಾಡಿದ ಕವಿ (ಶರೀಫ. I ಮೊದಲಮಾತು); ಅವನ ಬಾಯಲ್ಲಿ ಸಾವು ದಿನಬಳಕೆಯ ಮಾತಾಗಿದೆ (ಹೊಸಕ್ಕ. ೧೯೭) ; ಹೃದಯಸ್ಪರ್ಶಿಯಾಗುವ ಆವರಣವನ್ನು ಕಲ್ಪಿಸುವ ಶಕ್ತಿ ದಿನಬಳಕೆಯ ಗದ್ಯಕ್ಕೆ ಸಾಲದು (ಜಗದಾ. ೭೨). ೩. (ಅಲಂ) ತೀರ ಪರಿಚಿತವಾದುದು : ದಿನಬಳಕೆಯ ಮನೆಯಂಗಳದಲ್ಲೂ ಕವಿ ಚೆಲುವನ್ನು ಕಂಡು ನಲಿವನ್ನು ಪಡೆಯುತ್ತಾನೆ (ಸೌಂದಸ. ೨೪) ; ದಿನಬಳಕೆಯಲಿ ನಿನ್ನ ಚೆಲುವು ಮಾಸದು, ಬಲ್ಲೆ; ವರುಷವೆಲ್ಲ ವಸಂತ ನೀನೆರಿಯದೊಲವೆ (ಶಿಲಾಲ. ೮೫-೭). [ದಿನ+ಬಳಕೆ]

**ದಿನಬಾಳ್ವೆ** 'ದಿನಬಾಟ್ವಿ' ನೋ.

**ದಿನಬಾಟ್ವೆ**, ದಿನಬಾಳ್ವೆ (ನಾ). ಒಂದು ದಿನದ ಬಾಳ್ವೆ,–ಜೀವಮಾನ ; ಕ್ಷಣಿಕವಾದ ಬದುಕು : ಇನ್ ನಿನ್ನ ದಿನಬಾಟ್ವೆ ಪುಟಗಳ್ಗೆ ಕಳ್ದುಗುಡು ಪೋಗು ದೇವಮಾನ್ಯಂಗಳನ್ (ಬದ್ಮಶ್ರ. ೬-೧೦೨). **ದಿನಬಾಳ್ವೆ:** ಪಂಸುಪ್ಕರೆಲ್ಲ ಅವನ ಕಣ್ಣಿಗೆ ದಿನಬಾಳ್ವೆಯ ಹುಳುಗಳು (ಬದ್ಮಶ್ರ. XLVI ಮುನ್ನುಡಿ). [ದಿನ + ಬಾಟ್ವೆ]

**ದಿನಭತ್ಯ** (ನಾ). ಒಂದು ದಿನದ ಕೆಲಸಕ್ಕೆ(ಆಯಾ ದಿನವೇ)ಕೊಡಲಾಗುವ ಭತ್ಯ,–ಪ್ರತಿಫಲ ; ದಿನಗೂಲಿ : ಆ ಸಾಲ ತೀರುವವರೆಗೆ ದಿನಭತ್ಯದಿಂದಲೇ ಹಣ ಮುರಿದು ಕೊಡುತ್ತಿದ್ದನೆಂತಲೂ ಸಾರ್ಜೆಂಟ್ ನೆಕ್ಸಲ್ದೋವನಿಗೆ ವಿವರಿಸಿದನು (ಪುನರು. ೫೦೬). [ದಿನ + ಭತ್ಯ]

**ದಿನಮಣಿ** (ನಾ). ಸೂರ್ಯ : "ಆದಿತ್ಯಃ, ಸವಿತಾ . . . ದಿನಮಣಿಃ, ಭಾಸ್ವಾನ್ . . . ತ್ರಯಿತನುಃ–ಈ ೪೭ ಆದಿತ್ಯನ ಪೆಸರ್" (ಹಲಾಯು. ೭-೩೫) ; ಧರ್ಮಾತ್ಮಜಂ . . . ಏಂ ತೇಜದಿಂ ರಾಜಿಸಿರ್ದನೊ ಚಿತ್ರಂ ನರಲೋಕದೊಳ್ ದಿನಮಣಿ ದ್ವೈರಾಜ್ಯಮಾಯ್ತೆಂಬಿನಂ (ಜಗವಿ. ೧೭-೧೩); ಆ ದಿನಮಣಿಯ ಮಗನುಂದ್ದಂಡ ಕರ್ಣನ ಕಂಡಳಾ ಕುಂತಿ (ಕುವ್ಯಾಉ. ೧೦ ಸೂಚನೆ) ; ದಿನಮಣಿಗೆ ಮುನ್ನಿನ ಮಣಿಹವಾಯಿತು ತ್ರಿಣಯನಿಲಯ ದಲಡಗಿ ಹಗಲನು ಕಳೆದ ಹನುಮಂತ (ತೊರೆರಾ. ೧೦-೦೭). [ದಿನ + ಮಣಿ₃]

**ದಿನಮಧ್ಯ** (ನಾ). ದಿನದ ಮಧ್ಯದ ಅವಧಿ,–ಕಾಲ ; ಮಧ್ಯಾಹ್ನ : ಆ ಬಳಿಕ ದಿನಮಧ್ಯದ ಊಟವನ್ನು (Lunch) ಮುಗಿಸಿಕೊಂಡು . . . ರಾಕ್‌ಫೆಲರ್ ಪ್ರತಿಷ್ಠಾನದ ಮಹಾಸೌಧಕ್ಕೆ (Rockfeller Centre) ಹೋಗಿ ಶ್ರೀ ೧–ಅವರನ್ನು ಕಂಡೆ (ನಂಟರು. ೦೦೯). [ದಿನ + ಮಧ್ಯ₁]

**ದಿನಮಾನ** (ನಾ). ೧. ಒಂದು ದಿನದ ಅವಧಿ,–ಕಾಲ ; ಒಂದು ದಿನದ ಪ್ರಮಾಣ ; ಇಪ್ಪತ್ತನಾಲ್ಕು ಗಂಟೆಗಳ ಸಮಯ : ದಿವಸ್ಪತಿಯು ದಿನಮಾನದಿಂಬೆಳದಲಸಿ ಪಶ್ಚಿಮದ ಸತಿಯಲ್ಲಿಗೈದಿ ಮಲಗಿದನೊ...ಎಂಬ ತೆರದಿ ರವಿಯಸ್ತಮಿಸಲು (ನವಮೋ. ೧೭-೭). ೨. ಕಾಲ ; ಸಮಯ ; ಅವಧಿ : ಎಚ್ಚರ ಮುಂದಣ ದಿನಮಾನ ಕೆಟ್ಟೀತು ಹುಯ್ಯಲೊ ಡಂಗುರವಾ (ಎಬಕಾ. ೦೦೯-೨) ; ಇಂಥ ಅತ್ಯುಷ್ಣ ದಿನಮಾನದ ಮಧ್ಯಾಹ್ನದಲ್ಲಿ ಸಹ ಜಯಪಾಲನು ಮನೆಯಲ್ಲಿರಲಿಲ್ಲ (ಜಯಂತ. ೧೫೭) ; ನೋಡ್‌ನೋಡ್ತ ದಿನಮಾನಾ ಅಡಾಡ್ತ ಆಯುಷ್ಯ ನಡದದ ನಡದದ (ಗರಿ. ೧೦೦-೧). ೩. ಪ್ರತಿನಿತ್ಯ ; ಪ್ರತಿದಿನ : ತಿರುಮಲದೇವರಿಗೆ ನಂದಾದೀಪ್ತಿಗೂ ದಿನಮಾನಾ ವೆಚಕು ಬಸವರಸವೊಡೆಯರು ಧಾರಾಪೂರ್ವ[ಕ]ವಾಗಿ ಧಾರೆಯನೆರೆದು ಕೊಟದು (ಸೌಇಇ. IX–ii, ೪೭೭-೧೨ ; 1506) [ದಿನ + ಮಾನ]

**ದಿನಮಾಳಿಕೆ** (ನಾ). ದಿನಗಳ ಸರಣಿ,–ಸಾಲು : ಆ ದೇವಿ . . . ಮಂಟಿಗಾಲದ ದಿನಮಾಳಿಕೆಯಂತೆ ವಿದೂರಿತರಜೋಪ್ರಜೆಯುಂ ಪ್ರಭಾಕರ ಪ್ರಭೆಯಂತೆ ಪ್ರತಿಧ್ವಸ್ತ ತಮಃಪ್ರಕರೆಯುಮೆನಿಪಳ್ (ಚಾಧಪು. ೨-೫೯ ವ). [ದಿನ + ಮಾಳಿಕೆ (= ಮಾಲಿಕೆ)]

**ದಿನಮುಖ** (ನಾ). ಹಗಲಿನ ಪ್ರಾರಂಭದ ಕಾಲ ; ಮುಂಜಾವ ; ಪ್ರಾತಃಕಾಲ; ಹೊತ್ತಾರೆ: ದಿನಮುಖದೊಳ್ ಸಂಚರಿಸುವ ವನಕರಿಗಳ ಕರ್ಣತಾಳಗಂಭೀರತರಧ್ವನಿಗಳೆಸಿ ರಾಗದಿಂ ಸೋಗೆನವಿಲ್ಗಳ್ ಪಿಂಡು ನಲಿದು ನರ್ತಿಸಿತಾಗಳ್ (ಕಾಂದಪೂ. ೦೪೯) ; ಪರೆದುದು ಸಂಧ್ಯಾರುಚಿ ಮೊಯ್ಗುರೆದುದು ತಾರಾಳಿ . . . ನೆರೆದುದು ಚಕ್ರಾಹ್ವಯದ್ವಯಂ ದಿನಮುಖದೊಳ್ (ಚಂದ್ರಪ್ರ. ೮-೧೦೦); ಇಂದ್ರದಿಙ್ಮಂಡಲದಿ, ಪೂರ್ವವಧು ಇನಿತು ಕಣ್ದೆರೆದಂತೆ, ದಿನಮುಖದ ಕೆಂಗಾಂತಿ ಕುಡಿವರಿದುದು (ಚಿತ್ರಾಂಗ. ೭-೦೯೩). [ದಿನ + ಮುಖ]

**ದಿನರಾಜ** (ನಾ). ಸೂರ್ಯ : ತೇಜದಿಂ ದಿನರಾಜ ತಾರಕರಾಜ ಕುಜ ಬುಧ ಜೀವ ದಾನವರಾಜಮಂತ್ರಿವಿಕರ್ತನೋದ್ಭವ ರಾಹುಕೇತುಗಳು ಓಜೆಯೊಳು . . . ರಾಜೇಶಾನರೋಲೈಸೆ (ಬಸಪು. ೧೦-೩೦). [ದಿನ + ರಾಜ]

**ದಿನವರ್ತನೆ** (ನಾ). ಅರ್ಚಕರು ಹಾಗೂ ಜೋಯಿಸರಿಗೆ ಬರುವ ದಿನದ ಭತ್ಯ ಅಥವಾ ದಕ್ಷಿಣೆ : (ಕ). [ದಿನ + ವರ್ತನೆ]

**ದಿನವಹಿ₁** (ನಾ). ದಿನಚರಿಯ ಪಟ್ಟಿ ಅಥವಾ ಪುಸ್ತಕ ; ಡೈರಿ : ಆ ದಿವಸದ ತೀರ್ವಿಕೆಯನ್ನು ದಿನವಹಿಗೆ ಬರಿಸಿ ಕೋರ್ಟು ಬರಖಾಸ್ತೆಂದು ಹುಕುಂ ಮಾಡಿದನು (ಕಥಾಮಂ. IV, ೮೫). [ದಿನ + ವಹಿ]

**ದಿನವಹಿ₂** 'ದಿನ' ಪರಾ.

**ದಿನವ್ರತ** (ನಾ). [ಜೈನ] ಕೆಲವು ದಿನಗಳವರೆಗೆ ಮಾಡುವ ವ್ರತ (?) : ಮುನಿವಾಸಕಡಿಯಿಟ್ಟು ಮುನಿಗಳಿಗೆಲ್ಲ ವಂದನೆಗೆಯ್ದು ನಬಲೆಯರ್ವರಸಿ ದಿನವ್ರತ ದಿಗ್ವ್ರತ ಮಿತಪರಿಗ್ರಹವ ಮತ್ತನಶನವ್ರತವ ಕೈಕೊಂಡು (ಭರತ. ೧೭-೬೦) ; ಆ ಜಿನಮುನಿಗಳ ಸಮಕ್ಷದಲ್ಲಿ ಆ ವನಜಮುಖಿಯರು ದಿನವ್ರತ, ದಿಗ್ವ್ರತ, ಮಿತಪರಿಗ್ರಹವ್ರತ, ಅನಶನವ್ರತ ಇವುಗಳನ್ನು ಕೈಕೊಂಡರು (ಮಾಮಲ್ಲಿ. ೧೨೭). [ ದಿನ + ವ್ರತ ]

**ದಿನಸಾವ್ಕ** (ನಾ). ತಡ; ಸಾವಕಾಶ; ದಿನಗಳನ್ನು ತಳ್ಳುವುದು: ಅಪಸ್ಮಾರ ಬೆಣಗು ಮಹೋದರ ಕಾಯಿಲೆ ಇವಕ್ಕೆ ಆದಿಯಲ್ಲಿ ದಿನಸಾವ್ಕ ವಿಲ್ಲದೆ ಶೀಘ್ರದಲ್ಲಿಯೇ ಪ್ರತೀಕಾರ ಮಾಡುವುದು. ದಿನಸಾವ್ಕ ಮಾಡಿದರ ಅಸಾಧ್ಯವಹವು (ವೈದ್ಯಸಾ. I, ೩೬). [ ದಿನ + ಸಾವ್ಕ ]

**ದಿನಸಿ** 'ಜಿನಸು' ನೋ.

**ದಿನಸು** 'ಜಿನಸು' ನೋ.

**ದಿನಸ್ವಾಮಿ** (ನಾ). ಸೂರ್ಯ: ಮೂಡುತ್ತಿದ್ದ ದಿನಸ್ವಾಮಿಗೆ ಕೈಮುಗಿ ಯುತ್ತಾ ನಕ್ಕು ಹೇಳಿದನು ಗುತ್ತಿ (ಮಲೆ. ೨೬೧). [ ದಿನ + ಸ್ವಾಮಿ ]

**ದಿನಹರಣ** (ನಾ). ತಡಮಾಡುವುದು ; ದಿನ ಕಳೆಯುವುದು : ಆ ರಾಜರು ಇಂದು ನಾಳೆ ಕೊಡುತ್ತೇವೆಯೆಂತ ದಿನಹರಣ ಮಾಡಿದರಿಂದ (ರಾಜೇಂದ್ರ. ೧೧). [ ದಿನ + ಹರಣ₂ ]

**ದಿನಾಂಕ** (ನಾ). ದಿನದ ಸಂಖ್ಯೆ ; ತಾರೀಖು ; ತೇದಿ : ದಿನಾಂಕ ನನಗೆ ಚೆನ್ನಾಗಿ ನೆನಪಿದೆ (ಹೊಸಕ್ಕ. ೭) ; ಜಗದೀಶಚಂದ್ರಬೋಸರು ೧೮೫೮ರ ನವೆಂಬರ್ ೩೦ನೇ ದಿನಾಂಕ ಪೂರ್ವಬಂಗಾಳದ ಡಾಕ್ಕಾಜಿಲ್ಲೆಯ ಫರೀದ್‌ಪುರದಲ್ಲಿ ಜನಿಸಿದರು (ಸಸ್ಯಕ. ೯೩). [ ದಿನ + ಅಂಕ₂ ]

**ದಿನಾಂತ** (ನಾ). ಹಗಲಿನ ಕಡೆಯ ಭಾಗ; ಸಂಜೆ: "ದಿನಾಂತಃ, ಸಾಯಂ– ೨ ಸಾಯಂಕಾಲದ ಹೆಸರು" (ಸಿದ್ಧಾಂತಿ. ೩೪) ; ದಿನಾಂತಂಬರೆಗಂ ತಡೆದು ಬಟ್ಟೆಕೆಲ್ಲಿಯುಂ ನಿಲ್ಲದೆ . . . ಬಂದು (ಪಂಚತಂ. ೮೯-೧೧) ; ದಿನಾಂತದೊಳ ಗಣ್ಯಪುಣ್ಯಲಾವಣ್ಯಸಂಪನ್ನೆಯಪ್ಪ ಕನ್ನೆಯುಂ ತನಗಾಟಿಸಿ ಬಂದೊಡವೊಲ್ಲದೆ ಮೊಟಿಗೊಂಡು ಕಟ್ಟಿಪಿದ ಧನದೇವನ ಸಮಾನಮಾವನುಮಿಲ್ಲ (ಸುಕುಮಾ. ೬-೨೭ ವ). [ ದಿನ + ಅಂತ₂ ]

**ದಿನಾಚರಣೆ** (ನಾ). ದಿನವನ್ನು ಆಚರಿಸುವುದು : ನಾವು ಹೊಸವರ್ಷದ ದಿನಾಚರಣೆಯಲ್ಲಿ ನಮ್ಮ ನಾಯಿಯು ಉಪಾಯಗಳನ್ನು ತೋರಿಸಲು ಅವಕಾಶ ಕೊಡುತ್ತೀರಾ ? ಎಂದು ಕೇಳಿದ (ಶಾಲೆಮ. ೧೯೯); **P** ಯಾವುದಾದರೊಂದು ಘಟನೆಯ ಅಥವಾ ವ್ಯಕ್ತಿಯ ಸ್ಮರಣೆಗಾಗಿ ನಿರ್ದಿಷ್ಟ ದಿನಾಂಕವಂದು ನಡೆಸುವ ಆಚರಣೆ. ಉದಾ : ಮಕ್ಕಳ ದಿನಾಚರಣೆ, ಸ್ವಾತಂತ್ರ್ಯ ದಿನಾಚರಣೆ ಇತ್ಯಾದಿ. [ ದಿನ + ಆಚರಣೆ ]

**ದಿನಾದಿ** (ನಾ). ದಿನದ ಮೊದಲು ; ಪ್ರಾತಃಕಾಲ. [ ದಿನ + ಆದಿ₂ ]

**ದಿನಾಧಿನಾಯಕ** (ನಾ). = ದಿನಪ ೧ : ನಲ್ಲರಗಲ್ಕೆಯಿಲ್ಲದೆಡೆಯನ್ನರಮಯುಕ್ಕೆ ದಿನಾಧಿನಾಯಕಂ ಸಲ್ಲದ ತಾಣಮಂಗಜಶರಾಹತಿ ಪೊರ್ದದ ದೇಶ ಮುಳ್ಳೊಡಂತಲ್ಲಿಯೆ ಮಾಟ್ಕೆ ಮಜ್ಜನಮಂ (ಚಂದ್ರಪ್ರ. ೮-೭). [ ದಿನ + ಅಧಿನಾಯಕ ]

**ದಿನಾಧಿಪ** (ನಾ). = ದಿನಪ ೧ : ಸತತಂ ಬುಧಾವಸಥನಾಗಿ ದಿನಾಧಿಪನಂತೆ ತೀವ್ರನಲ್ಲದೆ . . . ಸಂದನಿಳಾತಳಾಗ್ರದೊಳ್ (ಸುಕುಮಾ. ೯-೮೩) ; ಕಟ್ಟಲೆ ಪಿರಿದಾದೊಡಮೇಂ ವಾರ್ತಲೆಯೆ ದಿನಾಧಿಪಂಗೆ (ಪಂರಾಮಾ. ೧೧-೨೩೫). [ ದಿನ + ಅಧಿಪ ]

**ದಿನಾಧಿಪಕ್ಷೇತ್ರ** (ನಾ). [ಜ್ಯೋತಿ] ಸೂರ್ಯನ ರಾಶಿ; ಸಿಂಹರಾಶಿ : ಹಿಮಾಂಶುಗೃಹದೊಳ್ ಸುರೇಜ್ಯನಿರೆ . . . ದಿನಾಧಿಪಕ್ಷೇತ್ರದೊಳ್ ಚಮೂಪತಿ ಕುಳೀರ ಸಂಸ್ಥ ಫಲಭಾಗಿಯುಂತಾ ನರಂ (ಜಾತತಿ. ೧೭-೨೮). [ ದಿನಾಧಿಪ + ಕ್ಷೇತ್ರ ]

**ದಿನಾಧಿಪತಿ** (ನಾ). = ದಿನಪ ೧ : ದಿನಾಧಿಪತಿಯೇಟ್ ನಿಂದ ರಥಮಂ ನಭೋವೀಥಿಯೊಳ್ ಘನಾಘನ ಕದಂಬಕಂ ಬಳಸುವಂದದಿಂ (ಚಂದ್ರಪ್ರ. ೬-೨೯). [ ದಿನ + ಅಧಿಪತಿ ]

**ದಿನಾಧೀಶ** (ನಾ). = ದಿನಪ ೧. 'ತರುಣದಿನಾಧೀಶ' ಪರಾ. [ ದಿನ + ಅಧೀಶ ]

**ದಿನಾರು** 'ದೀನಾರ' ನೋ.

**ದಿನಾವಸಾನ** (ನಾ). = ದಿನಾಂತ. [ದಿನ + ಅವಸಾನ]

**ದಿನಿಸು** 'ಜಿನಸು' ನೋ.

**ದಿನೇಂದ್ರ** (ನಾ). = ದಿನಪ ೧. 'ದಿನೇಂದ್ರಕಾಂತ' ಪರಾ. [ ದಿನ + ಇಂದ್ರ ]

**ದಿನೇಂದ್ರಕಾಂತ** (ನಾ). = ದಿನಕರೋಪಲ : ದಿನೇಂದ್ರಕಾಂತಾನಂತಮಣಿ ಗಣಖಚಿತಲಾಲಿತ್ಯಸಾಂದ್ರರಮ್ಯಸ್ಥಾನಮಂಟಪ ಚಂದ್ರಕಾಂತದ ಕುಟ್ಟಿಮ ದೊಳಗಜೇಂದ್ರನಿರ್ದನು ರತ್ನಮಯ ಸಿಂಹಾಸನದ ಮೇಲೆ (ಬಸವು. ೦-೪೦). [ ದಿನೇಂದ್ರ + ಕಾಂತ₂ ]

**ದಿನೇಶ** (ನಾ). ೧. ಸೂರ್ಯ ; ಆದಿತ್ಯ : ಬಾಳ ದಿನೇಶಬಿಂಬದ ನೆಟಲ್ ಜಲದೊಳ್ ನೆಲಸಿತ್ತೊ (ಪಂಪಭಾ. ೧-೯೭) ; ದಿನೇಶನೊಳಂಬಿನೊಳು ಪಕ್ಷಿಯೊಳು ಗೃಹದೊಳಮುಮರರೊಳು ಖಗಮೆನಿಕ್ಕುಂ (ಮಂಗರಾ. ೧೪೯-೪೭) ; ಸೀಸಕವೆ ರವಿಕಾಂತವಾಗಿ ದಿನೇಶನನು ಕೆಣಕಿದವೊಲಿಂದವನೀಶ ನೀತನ ನಂಬಿ ಕೆಟ್ಟನು (ಕುವ್ಯಾಕ. ೯-೧೪). ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ : ಶರ್ವಂ ವಿಶ್ರಮಣಂ ದಿನೇಶರೆಡೆಯೊಳ್ ನಿಲ್ಕುಂ (ಛಂದೋಂಬು. ೨-೧೭೪). ೩. [ಛಂದ] ಒಂದು ಅಕ್ಷರಗಣ ; ಜಗಣ (U–U) : ವ್ಯೋಮದ್ವಯಂ ಮುಂತೆ ದಿನೇಶ ಪಾವಕರ್ ತಾವೊಂದಿ ದಿಗ್ದಂತಿಯೊಳಾಗೆ ವಿಶ್ರಮಂ (ಛಂದೋಂಬು. ೨-೧೨೯). [ ದಿನ + ಈಶ ]

**ದಿನೇಶಗೃಹ** (ನಾ). [ಜ್ಯೋತಿ] ಸೂರ್ಯನ ರಾಶಿ ; ಸಿಂಹರಾಶಿ : ಇರೆ ಧಾತ್ರೀತನಯಂ ದಿನೇಶಗೃಹದೊಳ್ . . . ಕ್ಲೇಶಸಹಿಷ್ಣು ನಿಸ್ವನೆನಿತುಂ (ಜಾತತಿ. ೧೭-೨೦). [ ದಿನೇಶ + ಗೃಹ ]

**ದಿನೇಶತನಯ** (ನಾ). ೧. ಸೂರ್ಯನ ಮಗ. ೨. ಕರ್ಣ : ನುಡಿ ನಿನಗಂ ದಿನೇಶತನಯಂಗಮದೆನ್ನಯ ಪಕ್ಕದಾದೊಡಂ ಮಿಡುಕದೆ ಕೇಳ್ವೆನಲ್ಲಿ ಸಮನಿರ್ವರುಂ (ಪಂಪಭಾ. ೧೩-೨೮). ೩. ಶನಿ. ೪. ಸುಗ್ರೀವ. ೫. ಯಮ. [ ದಿನೇಶ + ತನಯ ]

**ದಿನೇಶವಂಶ** (ನಾ). ಸೂರ್ಯನ ಕುಲ,–ವಂಶ ; ದಿನಪಕುಲ : ಸಲೆ ನಿಲೆ ದಿನೇಶವಂಶದ ಲಕ್ಷ್ಮಿ ನೆಲಸಿರ್ಪ ಜಲಜದೆಸಳ್ಗಳೊ (ಹರಿಕಾ. ೦-೩೮). [ ದಿನೇಶ + ವಂಶ ]

**ದಿನೇಶಹಯ** (ನಾ). . ಸೂರ್ಯನ (ಏಳು) ಕುದುರೆ ; **P** ಗಾಯತ್ರೀ, ಬೃಹತೀ, ಉಷ್ಣಿಕ್, ಜಗತೀ, ತ್ರಿಷ್ಟುಪ್, ಅನುಷ್ಟುಪ್, ಪಂಕ್ತಿ ಇವು ಛಂದೋರೂಪವಾದ ಸೂರ್ಯನ ರಥದ ಏಳು ಕುದುರೆಗಳು. ೨. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : ಸುರಪುರೇಂದು ದಿವಸಾಧಿಪಾಗ್ನಿಗಳ್ ಬರೆ ದಿನೇಶಹಯದೊಳ್ ವಿರಾಮಮಾಗಿರೆ . . . ನಿರುಪಮಂ (ಛಂದೋಂಬು. ೨-೧೩೦). [ ದಿನೇಶ + ಹಯ ]

**ದಿನೇಶೋದಯ** (ನಾ). ಸೂರ್ಯನ ಉದಯ ; ಹೊತ್ತು ಹುಟ್ಟುವುದು : ಪಂಚವಟಿಯೊಳ್ ದಿನೇಶೋದಯದ ಶಾದ್ವಲದ ಪಸುರ್ಗರುಕೆಯೊಳ್ ತೃಣಸುಂದರಿಯ ಮೂಗುತಿಯ ಮುತ್ತು ಪನಿಯಂತೆ ಮಿರುಮಿರುಗಿ ಮೆರೆವ ಹಿಮಬಿಂದುವುಂ (ಶ್ರೀರಾಮಾ. ೫-೧೧೩). [ ದಿನೇಶ + ಉದಯ ]

**ದಿನ್ನ** (ನಾ). ಭಾರ ; ಒಜ್ಜೆ : ದಡಕೋಲ್ ಕೆಳಗುಂ ಮೇಲುಂ ದಿನ್ನದಿಂ ಹಗುರಿಂದೆಯುಂ ಸರಿಯಿಂ ಸರಿಯಪ್ಪಂತೆ ಮೆಯ್ಯುಮುಣ್ಬೆಂದವಪ್ಪುದು (ಸೌನಂದ. ೧೪-೫). [ <ತಿಣ್ಣ ]

**ದಿನ್ನೆ** ‘ದಿಣ್ಣೆ’ ನೋ.

**ದಿಪುತ** ‘ದೀಪುತ’ ನೋ.

**ದಿಪ್ಪ** ‘ದಪ್ಪ$_1$’ ನೋ.

**ದಿಬ್ಬ$_1$, ದಿಂಬ$_1$, ದಿಂಬು$_1$, ದಿಬ್ಬು, ದಿಬ್ಬೆ$_1$** (ನಾ). ಎತ್ತರವಾದ ಪ್ರದೇಶ ; ತಿಟ್ಟು ; ದಿಣ್ಣೆ ; ತೆವರು ; ಬೋರೆ : ಹುಲ್ಲು ಹೂವು ಆದರೇನು, ಹಬ್ಬದುಬ್ಬಿನಲ್ಲಿವೆ; ದಿಬ್ಬಗಳನು ತಬ್ಬಲೆಂದು ಎಲ್ಲ ನೆಲಕು ಹಬ್ಬಿವೆ (ಸಖೀಗೀ. ೭೭-೫) ; ದಿಬ್ಬಗಳ ಮೇಲೆಯೂ ಗುಡ್ಡಗಳ ಮೇಲೆಯೂ ಮೇಯಲಿಕ್ಕೆ ಹೋಗುತ್ತವೆ (ಮುಂಬಯಿ. ೩-೧೧); ಅತ್ತ ಕಾಣುತ್ತಿರುವುದೇ ಮಹಾನವಮಿಯ ದಿಬ್ಬ (ಹೇಮಕೂ. ೨೦) ; ಊರ ಮುಂದಿನ ಸೀಮೆಯ ಬನ್ನಿಯ ದಿಬ್ಬಕ್ಕೆ ಎಲ್ಲರೂ ಸಾಗಿ ಬರುವರು (ಕನ್ನಡ. ೧೬೧) ; ದಿಬ್ಬಗಳ ಮೇಲೆ ಬಗೆಬಗೆಯ ಮರಗಿಡಗಳು . . . ಬೆಳೆದು ಆಕಾಶವನ್ನು ಚುಂಬಿಸುತ್ತಾ ನಿಂತಿದ್ದವು (ಮಗಮೂಂ. ೩೪). **ದಿಂಬ$_1$** : ೧. ಈ ಕಲ್ಲಿಗೆ ತೆಂಕಲು ಗುರುವನಪುರದ ಯೆಲ್ಲೆ ಕಲ್ಲಿನ ಬಳಿಯ ದಿಂಬದಲ್ಲಿ ನೆಟ್ಟ ಕಲ್ಲು ೧ (ಎಕ. XIV, ಮೈಸೂರು. ೧೧೭-೩೩ ; 1664) ; ತೆಂಕ ನಡದು ಭೂತಾಳೆ ದಿಂಬದ ತಿಟ್ಟು ತೋರಣಕ್ಕೆ . . . ಪಡುವ ಮುಖವಾಗಿ ತಿದ್ದಿದ ಕಲ್ಲು ೧ (ಎಕ. III, ತಿರುಮ. ೩೩-೬೫೩ ; 1748). ೨. ಏರಿ ; ದಡ ; ತೀರ : ದೇಗುಲದ ಕೆರೆಯ ಕೆಳಗೆ ಕಚ್ಚವಿಯುಂಗೆ ದಿಂಬದೊಳೆ ಬಿಟ್ಟ ಗಟ್ಟಿ ಗಳೆಯ ಮತ್ತರ್ ೩ (ಎಕ. VII, ಶಿಕಾರಿ. ೧೦-೧೫ ; 1032) ; ಪರಿವಾ ಸರಸ್ವತಿಯ ದಿಂಬದೋಳ್ ಪರ್ನಶಾಲೆಯ ರಚಿಸಿಕೊಂಡು ತಪಸಂ ಮಾಡುತಿರುತಿರ್ದಳು (ತುರಂಗ. ೮೪-೬). **ದಿಂಬು$_1$** : ೧. ಬಡಗಣ ದಿಂಬಿನ ನೀರ್ವರಿ ಚಿಕ್ಕ ಬಣಜಿಗನ ಕೆಱೆಯ ಬಡಗಣ ಕೋಡಿ (ಎಕ. VII, ಶಿವಮೊ. ೪-೭೭ ; 1122). **ದಿಬ್ಬು** : ೧. ಯಾವ ರಾಸುಗಳಾಗಲಿ . . . ಬಚ್ಚಲು ಮೊಹರಿಗಳ ಮೇಲೂ ಕಟ್ಟೆ ದಿಬ್ಬುಗಳ ಮೇಲೂ ಅಥವಾ ಪಕ್ಕಗಳಲ್ಲಿಯೂ . . . ಮೇಯುತ್ತಿರುವ ಕಾಲದಲ್ಲಿ ಹಿಡಿದು . . . ತೊಂಡುವಾಡೆ ದೊಡ್ಡಿಗೆ ದಾಖಲ್ಮಾಡಬೇಕು (ಗ್ರಾಮಾಕ. ೧೦೭) **ದಿಬ್ಬೆ$_1$** : ೧. ಹಳ್ಳಿಗೆ ಹೋದ ಬಟ್ಟೆಯ ದಿಬ್ಬೆಯ ಸಾರಣ ಹುಲು ಮಾಡಿಯ ಗಡಿ (ಎಕ. II, ೩೯೭-೪೩ ; 1179 ?).

[ ದೇ.॥ ತಮಿ. ತಿಪ್ಪೈ ; ತೆಲು. ದಿಬ್ಬ ; ಪರ್ಜಿ. ಡಿಬ್ಬ ; ಕುಇ. ಡೆಪ ; ಕುವಿ. ದೆಬ್ಬೆ ]

**ದಿಬ್ಬ$_2$** ‘ದಿಬ್ಯ’ ನೋ.

**ದಿಬ್ಬಣ** ‘ಬಿರ್ದಿನ’ ನೋ.

**ದಿಬ್ಬಣಂಬೋಗು** (ಕ್ರಿ). (ವಂದುಮಕ್ಕಳೊಡನೆ) ಮೆರವಣಿಗೆ ಹೊರಡು: ಮದುವಣಿಗನಿಲ್ಲದೆ ದಿಬ್ಬಣಂಬೋಪೆನೆಂಬಂತೆ ಬಟ್ಟೆಯ ಱಯದೆ ಪೊಲಂಬಿಗನಪ್ಪೆನೆಂಬಂತೆ (ಧರ್ಮಾಮೃ. ೪-೫೦).

[ ದಿಬ್ಬಣ (<ಬಿರ್ದಿನ) + ಪೋಗು$_1$ ]

**ದಿಬ್ಬಣಿಗ, ನಿಬ್ಬಣಿಗ** (ನಾ). ವಂದುವೆಯ ಮೆರವಣಿಗೆಯಲ್ಲಿ ಹೊರಡುವವನು ; ಬೀಗರ ಗುಂಪಿನವನು : ನೊರೆಯ ಪಾಲ್ಸಕ್ಕರೆಯೆ ದಿಬ್ಬಣಿಗರಿಗೆ ಮೊಗೆದೀಂಟಲೆಱೆದರು (ಕಾಶಿರಾ. ೨-೭೯) ; ನೆರೆದ ನರೇಂದ್ರರೆಲ್ಲರು ದಿಬ್ಬಣಿಗರಾಗೆ ಧರೆಯೆಲ್ಲ ಕೊಂಡಾಡುವಂತೆ ವರಸುತೆ ರೋಹಣಿಯನು ವಸುದೇವ ಭೂವರಗೆ ಮದುವೆ ಮಾಡಿದನು (ನೇಮಿಶಂ. ೧೨-೧೦೪); ವರನಲಾ ಸಾಕ್ಷಾತ್ ವಿಶ್ವಂಭರನು ವಧುವೆ ಲಕ್ಷುಮಿ ದಿಬ್ಬಣಿಗರು ವಿರಿಂಚಿ ಭವೇಂದ್ರ ಮುಖ್ಯಾಮರರು ಭೂವರರು (ನಿಭಾಗ. ೧೦-೬೦-೪೭); ಸುರರು ದಿಬ್ಬಣಿಗರಿಂದ್ರನು ಸೇವಕ ಶಚಿ ವಿರಚಿಸುವಳು ಮಂಗಲವ (ಜಂಪ್ರಸಾಂ. ೨೫-೧೦೫); ಯಾರು ಹೊರಡದಿದ್ದರೂ ದಿಬ್ಬಣಿಗರು ಹೊರಡಬೇಡವೆ? (ಮುರಮ. ೩); ದಿಬ್ಬಣಿಗರು ಬಾಯಾರಿ ಮೇಲುಸಿರು ಬಿಟ್ಟರೂ . . . ಧಾರೆಯ ಸಮಯವನ್ನು ಬದಲಿಸುವಂತಿಲ್ಲ (ಹಾಚಿಕ. ೧೭). **ನಿಬ್ಬಣಿಗ** : ಗುರುವೆ ತೆತ್ತಿಗನಾದ ಲಿಂಗವೆ ಮದವಳಿಗನಾದ ನಾನು ಮದವಳಿಗೆಯಾದೆನು ವಸುಧೆಯ ಭಕ್ತರೆಲ್ಲರು ನಿಬ್ಬಣಿಗರಾದರು (ಮಹಾದೇ. ಬ. ೧೧೪-೨೫೮) ; ಸ್ವಯಂಬರಕ್ಕೆ ನೆರೆದರಸು ಮಕ್ಕಳೆಲ್ಲಂ ನಿಬ್ಬಣಿಗರಾಗೆ ರೋಹಿಣಿಯೊಳ್ ಮದುವೆ ನಿಂದು (ಅರ್ಧನೇ. ೬-೪೭ ವ) ; ಮುದದಿಂ ಕೂರ್ತೊಡವಂದ ನಿಬ್ಬಣಿಗರಂ ಸಂಗೀತ ಸಾಹಿತ್ಯ ಕೋವಿದರಂ . . . ಪದಪಿಂ ಪಂಕ್ತಿಗಳಾಗಿ ಕುಳ್ಳಿರಿಸಿದರ್ ವಾಕ್ಯೋಪಚಾರಂಗಳಿಂ (ನಳಚಂ. ೪೩೫) ; ಆ ರಥವನೊಡನೇಱ ಕಂಸನುದಾರಮತಿ ತಂಗಿಯನು ಕಳುಹುತ ಭೂರಿ ವಿಭವದಲಂದು ನಡೆದನು ನಿಬ್ಬಣಿಗರೊಡನೆ (ನಿಭಾಗ. ೧೦-೨-೪) ; ಅಂತರಂತರವಱದು ಬಂದ ನಿಬ್ಬಣಿಗರ್ಗನಂತವಾಗಿರ್ದ ಪಡಿಬೀಡಾರವುಂ ತೋಱ (ಚಬಪು. ೩೭-೬).

[ ದಿಬ್ಬಣ (<ಬಿರ್ದಿನ) + – ಇಗ ]

**ದಿಬ್ಬು** ‘ದಿಬ್ಬ$_1$’ ನೋ.

**ದಿಬ್ಬೆ$_1$** ‘ದಿಬ್ಬ$_1$’ ನೋ.

**ದಿಬ್ಬೆ$_2$** ‘ದಿಬ್ಯ’ ನೋ.

**ದಿಬ್ಯ, ದಿಬ್ಬ$_2$ ದಿಬ್ಬೆ$_2$,** (ಗು). ೧. ಮನೋಹರವಾದ ; ಶ್ರೇಷ್ಠವಾದ ; ಉತ್ತಮವಾದ: ಶ್ರೀಗೋಕರ್ಣ್ಣ (ಕರ್ಣ) ದೇವರ ದಿಬ್ಯ ಶ್ರೀಪಾದಪದ್ಮಾರಾಧಕರುಂ ಪರಬಳಸಾಧಕರುಂ (ಎಇ. XXVII, ೧೬೧-೧೭; 1225). (ನಾ). ೨. ಮನೋಹರವಾದುದು ; ಶ್ರೇಷ್ಠವಾದುದು : ಅದು ದಿಬ್ಯಮದು ಸೇಬ್ಯಮದು ಸೌಮ್ಯಮದು ಸುಖಾಧಾರಸಂಸಾರಸಾರಂ (ಸುಕುಮಾ. ೧೨-೫೧). ೩. ಸಾಕ್ಷಿ, ಪುರಾವೆ, ಆಧಾರಗಳಿಲ್ಲದೆ, ಮಾನುಷ ಪ್ರಮಾಣಗಳಿಂದ ಅಪರಾಧಗಳನ್ನು ನಿರ್ಣಯಿಸಲು ಸಾಧ್ಯವಾಗದಿದ್ದಾಗ ಪ್ರಯೋಗಿಸುತ್ತಿದ್ದ ದಿವ್ಯ ಪರೀಕ್ಷೆ: ಆರೋಪಿತನು ಬೆಂಕಿ ಮುಂತಾದ ಪ್ರಮಾಣ ವಸ್ತುಗಳನ್ನು ಮುಟ್ಟಿ ಸತ್ಯವನ್ನು ಸಿದ್ಧಪಡಿಸಬೇಕಾದ ಉಗ್ರಪರೀಕ್ಷೆ. ☞ ಆರೋಪಿತನಿಗೆ ಪ್ರಮಾಣವಸ್ತುವಿನಿಂದ ಹಾನಿಯಾದರೆ ಅಪರಾಧಿಯೆಂದೂ, ಹಾನಿಯಾಗದಿದ್ದರೆ ನಿರಪರಾಧಿಯೆಂದೂ ತೀರ್ಮಾನವಾಗುತ್ತಿದ್ದಿತು. ಇವು ಸಪ್ತದಿವ್ಯಗಳು, ನವದಿವ್ಯಗಳು ಮತ್ತು ದಶದಿವ್ಯಗಳು ಎಂದು ಬೇರೆಬೇರೆ ಅಭಿಪ್ರಾಯಗಳಿವೆ. ಧಟ (ತಕ್ಕಡಿ), ಅಗ್ನಿ, ಜಲ, ವಿಷ, ಕೋಶ (ಬೊಗಸೆ), ತಂಡುಲ (ಅಕ್ಕಿ), ತಪ್ತಮಾಷಕ (ಕಾಯಿಸಿದ ಚಿನ್ನದ ನಾಣ್ಯ), ಫಾಲ (ಲೋಹದ ಪಟ್ಟಿ) ಮತ್ತು ಧರ್ಮಜ (ಧರ್ಮದಿಂದ ಉಂಟಾದುದು) ಇವು ಪ್ರಮಾಣಭೂತವಾದ ಒಂಬತ್ತು ಬಗೆಯ ದಿವ್ಯಗಳು. ೧. ಧಟ (ತಕ್ಕಡಿ) : ಶಾಸ್ತ್ರೋಕ್ತವಾದ ರೀತಿಯಿಂದ ತಕ್ಕಡಿಯೊಂದನ್ನು ನಿರ್ಮಿಸಿ ಪೂಜೆಮಾಡಿ, ತಕ್ಕಡಿಯ ಒಂದು ಕಡೆ ಆರೋಪಿಯನ್ನು ಕುಳ್ಳಿರಿಸಿ, ಮತ್ತೊಂದು ಕಡೆ ಇಟ್ಟಿಗೆಗಳನ್ನಿಟ್ಟು ಸಮತೂಕ ಮಾಡಿಕೊಳ್ಳಬೇಕು. ಅನಂತರ ಅವನನ್ನು ಕೆಳಗಿಳಿಸಿ ಮತ್ತೊಮ್ಮೆ ತಕ್ಕಡಿಯನ್ನು ಪೂಜಿಸಿ, ಪ್ರಾರ್ಥಿಸಿ ಅವನನ್ನು ಕುಳ್ಳಿರಿಸಬೇಕು. ಆಗ ಆರೋಪಿಯು ಕುಳಿತಿರುವ ತಟ್ಟೆಯು ಮೇಲಕ್ಕೆ ಹೋದರೆ ಅವನು ನಿರ್ದೋಷಿಯೆಂದೂ, ಕೆಳಕ್ಕೆ ಬಂದರೆ ದೋಷಿಯೆಂದೂ ನಿರ್ಣಯಿಸುವುದು. ೨. ಅಗ್ನಿ : ಆರೋಪಿಯ ಬೊಗಸೆಯಲ್ಲಿ ಏಳು ಅರಳಿಯ ಎಲೆಗಳನ್ನಿಟ್ಟು, ಅವುಗಳನ್ನು ಏಳು ದಾರಗಳಿಂದ ಅಂಗೈ ಪೂರ್ತಿ ಸುತ್ತಿದ ಬಳಿಕ ಅಗ್ನಿಯನ್ನು ಪ್ರಾರ್ಥಿಸಿ ಕೆಂಪಗೆ ಕಾದ ಕಬ್ಬಿಣದ ಗುಂಡನ್ನು ಅವನ ಬೊಗಸೆಯಲ್ಲಿಡಬೇಕು. ಅವನು ಅಲ್ಲಿ ಬರೆದಿರುವ ಏಳು ಮಂಡಲಗಳನ್ನು ನಿಧಾನವಾಗಿ ದಾಟಿಕೊಂಡು ಹೋಗಿ ಕಬ್ಬಿಣದ ಗುಂಡನ್ನು ಕೆಳಗಿಟ್ಟಾಗ ಅವನ ಕೈ ಸುಡದೆ ಇದ್ದರೆ ನಿರ್ದೋಷಿಯೆಂದೂ ಸುಟ್ಟರೆ ದೋಷಿಯೆಂದೂ ನಿರ್ಣಯಿಸುವುದು. ೩. ಜಲ: ಆರೋಪಿಯು, ನೀರಿನಲ್ಲಿ ನಿಂತಿರುವ ಒಬ್ಬ ಕಟ್ಟುಮಸ್ತಾದ ಮನುಷ್ಯನ ಕಾಲನ್ನು ನೀರಿನಲ್ಲಿ

ಮುಳುಗಿ ಹಿಡಿದುಕೊಂಡಿರಬೇಕು. ಕೂಡಲೆ ದಡದಲ್ಲಿರುವ ಬಿಲ್ಲುಗಾರನು ದಡದಲ್ಲಿಯೇ ದೂರದಲ್ಲಿ ನಿಂತಿರುವ ಮತ್ತೊಬ್ಬ ವ್ಯಕ್ತಿಯ ಕಡೆಗೆ ಬಾಣವನ್ನು ಬಿಟ್ಟ ಮೇಲೆ ಆ ಮತ್ತೊಬ್ಬ ವ್ಯಕ್ತಿಯು ತನ್ನ ಬಳಿಗೆ ಬಂದ ಬಾಣವನ್ನು ತೆಗೆದುಕೊಂಡು ಆರೋಪಿಯು ನೀರಿನಲ್ಲಿ ಇರುವ ಬಳಿಗೆ ವೇಗವಾಗಿ ಬಂದಾಗ, ಆರೋಪಿಯು ಇನ್ನೂ ನೀರಿನಲ್ಲಿ ಮುಳುಗಿಯೇ ಇದ್ದರೆ, ಆತ ನಿರ್ದೋಷಿಯೆಂದೂ ಇಲ್ಲದಿದ್ದರೆ ದೋಷಿಯೆಂದೂ ನಿರ್ಣಯಿಸುವುದು. ೪. ವಿಷ: ಸಂಬಂಧಪಟ್ಟ ಪೂರ್ವ ವಿಧಿಗಳನ್ನು ಮಾಡಿದ ನಂತರ ಆರೋಪಿಯು ದೇವರನ್ನು ಪ್ರಾರ್ಥಿಸಿ ವಿಷವನ್ನು ಪಾನಮಾಡಬೇಕು. ಯಾವ ತೊಂದರೆಯೂ ಆಗದೆ ವಿಷವು ಜೀರ್ಣವಾದರೆ ಅವನು ನಿರ್ದೋಷಿಯೆಂದೂ ಇಲ್ಲದಿದ್ದರೆ ದೋಷಿಯೆಂದೂ ನಿರ್ಣಯಿಸುವುದು. ೫. ಕೋಶ (ಬೊಗಸೆ): ಸೂರ್ಯನೇ ಮೊದಲಾದ ಉಗ್ರದೇವತೆಗಳ ಪ್ರತಿಮೆಗಳನ್ನು ಪೂಜಿಸಿ, ಅಭಿಷೇಕ ಮಾಡಿದ ನೀರಿನಲ್ಲಿ ಮೂರು ಬೊಗಸೆಯನ್ನು ಆರೋಪಿಗೆ ಕುಡಿಯಿಸಬೇಕು. ಅವನಿಗೆ ಹದಿನಾಲ್ಕು ದಿನಗಳೊಳಗೆ ಯಾವ ವಿಪತ್ತೂ ಒದಗದಿದ್ದರೆ ಅವನು ನಿರ್ದೋಷಿಯೆಂದೂ, ಒದಗಿದರೆ ದೋಷಿಯೆಂದೂ ನಿರ್ಣಯಿಸುವುದು. ೬. ತಂಡುಲ (ಅಕ್ಕಿ): ಒಂದು ಮಣ್ಣಿನ ಪಾತ್ರೆಯಲ್ಲಿ ಬೆಳ್ಳಗಿರುವ ಅಕ್ಕಿಕಾಳುಗಳನ್ನು ಹಾಕಿ ದೇವರ ಅಭಿಷೇಕದ ನೀರಿನಲ್ಲಿ ಒಂದು ರಾತ್ರಿ ನೆನೆಯಿಸಿ, ಮರುದಿನ ಬೆಳಗ್ಗೆ ಆರೋಪಿಯು ಸೂರ್ಯನ ಎದುರಿಗೆ ನಿಂತು ಆ ಅಕ್ಕಿಯನ್ನು ಅಗಿದು, ಒಂದು ಭೂರ್ಜಪತ್ರ ಅಥವಾ ಅರಳಿಯ ಎಲೆಯ ಮೇಲೆ ಉಗಿಯುವಂತೆ ಮಾಡಬೇಕು. ದವಡೆಗೆ ಘಾಸಿಯಾಗಿದ್ದು ಅಕ್ಕಿ ಕಾಳುಗಳು ರಕ್ತಸಿಕ್ತವಾಗಿದ್ದರೆ ಮತ್ತು ಕೈಕಾಲುಗಳು ನಡುಗುತ್ತಿದ್ದರೆ ಅವನು ದೋಷಿಯೆಂದೂ ಇಲ್ಲದಿದ್ದರೆ ನಿರ್ದೋಷಿಯೆಂದೂ ನಿರ್ಣಯಿಸುವುದು. ೭. ತಪ್ತಮಾಷ (ಕಾಯಿಸಿದ ಚಿನ್ನದ ನಾಣ್ಯ): ಕಬ್ಬಿಣ, ತಾಮ್ರ ಮೊದಲಾದ ಲೋಹದ ಅಥವಾ ಮಣ್ಣಿನ, ನಾಲ್ಕು ಅಂಗುಲ ಎತ್ತರದ ಒಂದು ಪಾತ್ರೆಯಲ್ಲಿ ಎಣ್ಣೆ ಅಥವಾ ತುಪ್ಪವನ್ನು ಕುದಿಯುವಂತೆ ಕಾಯಿಸಿ, ಅದರೊಳಗೆ ಒಂದು ಮಾಷ (ಚಿನ್ನದ ನಾಣ್ಯ)ವನ್ನು ಹಾಕಬೇಕು. ಆರೋಪಿಯು ಅದನ್ನು ತನ್ನ ಕೈಗಳಿಂದ ಹೊರಗೆ ತೆಗೆದಾಗ ಅವನ ಕೈಗೆ ಯಾವ ಬಾಧೆಯೂ ಉಂಟಾಗದಿದ್ದರೆ ಅವನು ನಿರ್ದೋಷಿಯೆಂದೂ ಉಂಟಾದರೆ ದೋಷಿಯೆಂದೂ ನಿರ್ಣಯಿಸುವುದು. ೮. ಫಾಲ (ಲೋಹದ ಪಟ್ಟಿ) : ಹಿಂದಿನಂತೆ ಕುದಿಯುವ ಎಣ್ಣೆ ಅಥವಾ ತುಪ್ಪದ ಪಾತ್ರೆಗೆ, ಎಂಟು ಅಂಗುಲ ಉದ್ದ ಹಾಗೂ ನಾಲ್ಕು ಅಂಗುಲ ಅಗಲದ ಕಬ್ಬಿಣದ ಪಟ್ಟಿಯನ್ನು ಹಾಕಬೇಕು. ಆರೋಪಿಯು ತನ್ನ ಕೈಗಳಿಂದ ಅದನ್ನು ಹೊರಗೆ ತೆಗೆದಾಗ ಕೈಗೆ ಏನೂ ಬಾಧೆಯಾಗದಿದ್ದರೆ ನಿರ್ದೋಷಿಯೆಂದೂ, ಆದರೆ ದೋಷಿಯೆಂದೂ ನಿರ್ಣಯಿಸುವುದು. ಕೆಲವು ಸ್ಮೃತಿಗಳಲ್ಲಿ ನಾಲಿಗೆಯಿಂದ ನೆಕ್ಕಬೇಕೆಂದು ಹೇಳಿದೆ. ೯. ಧರ್ಮಜ (ಧರ್ಮದಿಂದ ಉಂಟಾದುದು): ಎರಡು ಪಟ್ಟಿಕೆಗಳನ್ನು ತೆಗೆದುಕೊಂಡು, ಒಂದರಲ್ಲಿ 'ದೋಷಿ' ಎಂದೂ ಮತ್ತೊಂದರಲ್ಲಿ 'ನಿರ್ದೋಷಿ' ಎಂದೂ ಬರೆದು ಎರಡನ್ನೂ ಒಂದು ಕುಂಭದಲ್ಲಿ ಹಾಕಿ ಕುಂಭವನ್ನು ಪೂಜಿಸಿ ಆರೋಪಿಯು ಕೈಯಿಂದ ಒಂದು ಪಟ್ಟಿಕೆಯನ್ನು ಎತ್ತಿಸಬೇಕು. ಅದರಲ್ಲಿ 'ದೋಷಿ' ಎಂದಿದ್ದರೆ ದೋಷಿಯೆಂದೂ, 'ನಿರ್ದೋಷಿ' ಎಂದಿದ್ದರೆ ನಿರ್ದೋಷಿಯೆಂದೂ ನಿರ್ಣಯಿಸುವುದು. ಇವೆಲ್ಲವೂ ಯಾಜ್ಞವಲ್ಕ್ಯಸ್ಮೃತಿಯ ವ್ಯವಹಾರ ಕಾಂಡದ ದಿವ್ಯಪ್ರಕರಣದಲ್ಲಿ ನಿರೂಪಿತವಾಗಿವೆ. ಇವಲ್ಲದೆ ಈಚೆಗೆ ಕೆಲವರು 'ತುಲಸಿ'ಯನ್ನೂ ಇವುಗಳ ಜೊತೆಗೆ ಸೇರಿಸಿ ದಶದಿವ್ಯಗಳು ಎಂದು ಹೇಳುತ್ತಾರೆ. ೪. ಆಣೆ; ಪ್ರಮಾಣ: ಏನ ಬೇಡಿದುದನೀವನಾಗಿ ನಂಬಿಗೆಯುಳ್ಳ ಶಿವಭಕ್ತಂಗೆ ಇದೇ ದಿಬ್ಯ (ಬಸವ. ೨೩೬) ; ಇನ್ನೂ ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ (ಬಸವ. ೩೨೨). **ದಿಬ್ಬ₂:** ೧. ಕಿವಿಗಿನಿದಪ್ಪ ದಿಬ್ಬ ಸವಿಗಬ್ಬಮಂನೋದಿಸುತಿರ್ಪರ್ ಕಣ್ಗಳಿ... ಕರಿಸೆ ರಸಂಗಳಂ ನಟಿಪ ನಾಟಕಮಂ ನೆರೆ ನೋಡುತಿರ್ಪರ್ . . . ವಿವಿಧ ವಿನೋದದಿಂ ಕಳೆಗುಮಪ್ರತಿಮಂ ಸೊಗದಿಂದೆ ಕಾಲಮಂ (ಚಕವಿ. ೫-೦೫೮). ೪. ದಿವ್ಯದ ಪರೀಕ್ಷೆಗೆ ಉಪಯೋಗಿಸುವ ಕಾಯಿಸಿದ ಕಬ್ಬಿಣ, ಎಣ್ಣೆ ಇತ್ಯಾದಿ ಪ್ರಮಾಣ ವಸ್ತು : ದಿಬ್ಬವ ಕೈದುಡುಕಿದೊಡೆ ಕೈ ಬೇವುದಲ್ಲದೆ ಮೈ ಬೇಯದು ಒಲಿದವರನಗಲಿದರೆ ಸರ್ವಾಂಗವು ಬೇವುದವ್ವಾ (ಗಣಭಾ. ೧೦-೭). **ದಿಬ್ಬೆ₃ :** ೩. ಕುಲಗಿರಿ ಕಾಯ್ದ ಕರ್ಬುನದ ಬೆಟ್ಟುವೊಲಿರ್ದುವು ಧಾತ್ರಿ ಕಾದ ಕಾವಲಿಯವೊಲಿರ್ದುದಂಬುನಿಧಿ ದಿಬ್ಬೆಗೆ ಕಾಸಿದ ತೈಲದಂದದಿಂ ತಲೆದಳೆದುಕ್ಕುತಿರ್ದುವು (ಸೂಕ್ತಿಸು. ೧೦-೧೦೧). ೪. ಗಂಡ ಪೆಂಡಿರು ತಾವು ನಿರ್ದೋಷರೆಂದೆಡೆಗೊಂಡು ದಿಬ್ಬೆಗೆ ಕೈಯನಿಕ್ಕಿ ಕೆಂಡವ ಪಿಡಿದು ತಂದೀವಂತೆ ಕೊಟ್ಟಳು ಗಂಡಗೊರ್ವಳು ಮಾಣಿಕವನು (ಭರತೇ. ೫-೪೮).

**ದಿಬ್ಯದ ತೊಲೆ** = ದಿವ್ಯದ ಪರೀಕ್ಷೆಯಲ್ಲಿ ಪ್ರಮಾಣವಸ್ತುವಾಗಿ ಬಳಸುವ ತಕ್ಕಡಿ : "ಧಟ – ದಿಬ್ಯದ ತೊಲೆ" (ನಾಚಂರಾ. ೬).

[ <ಸಂ. ದಿವ್ಯ ]

**ದಿಬ್ಯಂಬಿಡಿ** (ಕ್ರಿ). (ಕಾಯಿಸಿದ ಕಬ್ಬಿಣ, ಅಗ್ನಿ ಮುಂತಾದ ಪ್ರಮಾಣ ವಸ್ತುಗಳನ್ನು ಮುಟ್ಟಿ) ಪ್ರಮಾಣ ಮಾಡು; ದಿವ್ಯವನ್ನು ಹಿಡಿ : ತನ್ಮೃಗಶಾಬಾಕ್ಷಿಯು ಕಂಪು ತಟ್ಟಿ ಮಧುಪಂಬೋಲ್ ಸೋಲ್ತು ಕಂಡೊಲ್ದು ನಲ್ಮೆಗೆ ದಿಬ್ಯಂಬಿಡಿವಂತೆವೋಲ್ ಪಿಡಿದು (ಪಂಪಭಾ. ೦-೭೦).

[ ದಿಬ್ಯ + ಪಿಡಿ₁ ]

**ದಿಬ್ಯಗತಿ** (ನಾ). ಶ್ರೇಷ್ಠವಾದ ಗತಿ,-ಪದವಿ ; ಉತ್ತಮವಾದ ಸ್ಥಾನ 'ದಿಬ್ಯಗತಿವೆಱು' ಪರಾ. [ <ಸಂ. ದಿವ್ಯಗತಿ ]

**ದಿಬ್ಯಗತಿವೆಱು** (ಕ್ರಿ). ಶ್ರೇಷ್ಠವಾದ ಪದವಿಯನ್ನು ಹೊಂದು ; ಸ್ವರ್ಗವನ್ನು ಪಡೆ: ವಿಸ್ತರ ದೇವಾನಕವಣ್ಣೆ ದಿಬ್ಯಗತಿವೆತ್ತಂ ಧಾತ್ರಿ ಭಾಪ್ಪೆಂಬಿನಂ(ಶಾಇಇ. XX. ೨೪೮-೨೯ ; 1228). [ ದಿಬ್ಯಗತಿ + ಪೆಱು₁ ]

**ದಿಬ್ಯದೇಹ** (ನಾ). ಶ್ರೇಷ್ಠವಾದ ಶರೀರ; ಉತ್ತಮವಾದ ಮೈ : ಮುನ್ನೆ ಕುಂಕುಮಪಂಕಿತಮಪ್ಪ ದಿಬ್ಯದೇಹದೊಳ್ ಬೆಮರ ಬಿಂದುಗಳಂ ಕಂಡು ನೆತ್ತರೆಂದು ಬಗೆದು ಮೂರ್ಛೆಗೆ ಸಲ್ವಾಕೆಯ ಈಗಳ್ ಮಗನಂ ಪೋಟ್ಟು ತಿಂದಪ್ಪುಯ್ (ವಡ್ಡಾರಾ. ೪೮-೨೨). [ <ಸಂ. ದಿವ್ಯದೇಹ ]

**ದಿಬ್ಯಸಭೆ** (ನಾ). ಶ್ರೇಷ್ಠವಾದ ಸಭೆ; ಉತ್ತಮವಾದ ಗೋಷ್ಠಿ : ಮುನ್ನೆ ನೀನ್ . . . ಪೆಂಡವಾಸದಗ್ಗಳದ ಸೂಳೆಯರ್ಕಳಿಂದಂ ಪರಿವಾರದಿಂದಮಿಂತಪ್ಪ ದಿಬ್ಯಸಭೆಯಿಂದಂ ಪರಿವೇಷ್ಟಿತನಾಗಿ ಆಟಪಾಟ ವಿನೋದುಗಳಿಂದಿರ್ಪಾತನಯ್ (ವಡ್ಡಾರಾ. ೦೩೯-೨೪). [ <ಸಂ. ದಿವ್ಯಸಭಾ ]

**ದಿಬ್ಯಾಹಾರ** (ನಾ). ಶ್ರೇಷ್ಠವಾದ ಆಹಾರ ; ಉತ್ತಮವಾದ ಆಹಾರ : ಮತ್ತಮ್ಮಿತೋಪವಮಪ್ಪ ದಿಬ್ಯಾಹಾರಮನುಣ್ಬಾತನಯ್ ಈಗಳ್ ಕಪ್ಪೆಗಳುಂ . . . ಮೊದಲಾಗೊಡೆಯ ಜೀವರಾಶಿಗಳಂ ಕೊಂದು ತಿನ್ಪೆಯಾದಯ್ (ವಡ್ಡಾರಾ. ೦೪೦-೩). [ <ಸಂ. ದಿವ್ಯಾಹಾರ ]

**ದಿಮುಡಿ** 'ದಮ್ಮಡಿ₁' ನೋ.

**ದಿಮಾಕು, ಧಿಮಾಕು** (ನಾ). ೧. ಜಂಬ; ಸೊಕ್ಕು; ಗರ್ವ; ಅಹಂಕಾರ : ಇವರ ದಿಮಾಕನ್ನು ಮುರಿಯದಿದ್ದರೆ ನಾನು ಸರಸಿಯೇ ಅಲ್ಲ (ಕಾಗಕ. ೭೩) ; ದಿಮಾಕಿನ ಮಾತನಾಡ್ತಾ ಕುಳಿತಿದ್ದ (ತಂದಕೋ. ೧೪೮) ; ರೇವಕ್ಕನ ದಿಮಾಕು ಇವರ ಮುಂದೆ ಮಾತ್ರ ಹಡೆಯುತ್ತಿರಲಿಲ್ಲ (ಬೆಳುಮ. ೩೦) ; ಬಹಳ ಹೆಚ್ಚಾಯಿತು ಈ ದಿಮಾಕು (ಈಪಸೊ. ೦೪); ಅವಳಿಗೆ ಯಾವಾಗಲೂ

ದಿವಾಕು ! ನಾನೆ ಯಾವಾಗಲೂ ಸೋಲಬೇಕೇನು? (ಮಲಿಮ. ೪೪೭). **ಧಿವಾಕು :** ೧. ಗಂಡ ಬಿಟ್ಹೋಗಿದ್ರೂನೂ ಎಂಥ ಧಿವಾಕು ! (ಬನಶಂ. ೨೪೩); ರೊಕ್ಕದ ಧಿವಾಕಿನ್ಯಾಗ ನಿಮ್ಮ ಮಗಾ ಇನ್ನೊಮ್ಮೆ ಹಿಂಗ ಮಾಡಿದರ ಬಿಕ್ಕಿ ನೀರ ಬೇಡಲಾಕಿಲ್ಲ ತಿಳೀತ ? (ನಡದಾ. I, ೨೯೦). ೨. ಡೌಲು ; ಠೀವಿ ; ಬೆಡಗು ; ವೈಯಾರ : ಬೀದಿಹೋಕರ ಕಡೆಗೆ ಕಣ್ಣು ಹಾರಿಸುತ್ತ ಧಿವಾಕಿನಿಂದ ತಮ್ಮ ಆಸನಗಳಲ್ಲೊರಗಿ ಕುಳಿತಿದ್ದ . . . ಬಂಡಿಗಾಡರು– ಇವರೆಲ್ಲ ಚೆನ್ನಾಗಿ ತಿಂದುಂಡವರಂತೆ ಕಾಣುತ್ತಿದ್ದರು (ಪುನರು. ೩೦೯) ; ಬಿಂದಿಗೆಯನ್ನು ಸೊಂಟದ ಮೇಲೆ ಇರಿಸಿಕೊಂಡು ಊರ ಮುಂದಿನ ಭಾವಿಗೆ ಧಿವಾಕಿನಿಂದ ಹೊರಟಳು (ಮಗಮೂಂ. ೧೦೭).

[ ←ಅರ. ದಿಮಾಗ್, ದಿಮಾಘ್; ಹಿಂ. ದಿಮಾಖ್, ದಿಮಾಗ್; ಮರಾ. ದಿಮಾಖ್ ]

**ದಿಮಿ (ನಾ).** ಒಂದು ಅನುಕರಣ ಶಬ್ದ : ಧಿಳಿಧಿಮಿದ್ಧಿಮಿ ಘುಳ್ಳು ನೆಳ್ಳುಂ ಘಣಿಲು ಘಣ್ ಘಣ್ ಘಣ್ ಧಂ ಧಗಂ ಘುಳುಘುಳು ಛಟಿಲ್ ಛಟಿಲೆಂಬ ಕಟಿಪಟ ನಿಟಿಲು ನಿಱಿಲೆಂಬ . . . ಧ್ವನಿಗಳವನಿಗೆ ಭಯುವನೀವುತಿರೆ (ಸಾನಂಚ. ೮-೧೩). 'ದಿಮಿಗುಡು' ಪರಾ.

ದಿಂದಿಮಿ, ದಿಮಿದಿಮಿ (ದ್ವಿರುಕ್ತಿ) = ೧. ನೃತ್ಯ, ಸಂಗೀತಗಳ ತಾಳವನ್ನು ಸೂಚಿಸುವ ಒಂದು ಅನುಕರಣ ಶಬ್ದ : ದಿಂದಿಮಿ ದಣ್ಣ ತೂದಿಗಿದಿಮಿಕು ದಿಮ್ಮೆಂದು ನಾನಾ ವಿಧದಲ್ಲಿ . . . ಸುರದುಂದುಭಿ ರವವ ಹಾಡಿದರು (ಭರಚ. ೧-೯೫). ೨. ಗಲಾಟೆ ; ಗದ್ದಲ : ಒಳಗೆ ನಿಂತು ಪಟಗುಟ್ಟಿ ಬೇಸತ್ತ ಸುಬ್ಬಕ್ಕ ಹೊರಕಟ್ಟೆಗೆ ಬಂದು ಕುಳಿತು ಊರಿನಲ್ಲಿನ ದಿಮಿದಿಮಿಯನ್ನು ನೋಡುತ್ತ ಮೂಗಿಗೆ ಬೆರಳಿಟ್ಟರು (ದಾಕೂಟ. ೧೦೭).

**ದಿಮಿಕಿಟ(ನಾ).** ಕಣಿತದತಾಳವನ್ನು ಸೂಚಿಸುವ ಅನುಕರಣ ಶಬ್ದ : (೬).

**ದಿಮಿಗುಡು (ಕ್ರಿ).** ದಿಮಿ ಎಂದು ಸದ್ದುಮಾಡು : ಆಕಾಶದಲ್ಲಿ ದುಂದುಭಿಯ ನಾದವು ದಿಮಿಗುಟ್ಟಹತ್ತಿತು (ತುಳಸೀ. ೩೪).

[ ದಿಮಿ + ಕುಡು$_1$ (<ಕೊಡು$_1$) ]

**ದಿಮಿದಿಮಿಸು (ಕ್ರಿ).** = ದಿಮಿಗುಡು : ವರ್ಗವು ದಿಮಿದಿಮಿಸುವಂತೆ ಬಲವಂತನು ಕೂಗಿದನು (ರಕ್ತಧ್ವ. ೧೫೭). [ <ದಿಮಿ + – ಇಸು$_3$ ]

**ದಿಮಿಸಾಲೆ** 'ದಂಮ್ಮಿಸಾಲು' ನೋ.

**ದಿಮ್ಗುಡು (ಕ್ರಿ).** ದಿಮ್ ಎಂದು ಶಬ್ದವಾಗು : ಜಗ್ಗಲಿಗೆ ಮೊದಲಾದ ದಿಮ್ಗುಡುವ ವಾದ್ಯಗಳನ್ನು . . . ಹಿಡಿದು ಜನರು ಗುಂಪಿಟ್ಟು ಹಾಡಿ ಕುಣಿಯುವರು (ಕನ್ನಜಾ. ೩೦). [ ದಿಂ + ಕುಡು$_1$ (<ಕೊಡು$_1$) ]

**ದಿಮ್ಮ (ನಾ).** ಒಂದು ಬಗೆಯ ವಾದ್ಯ : ಮದ್ದಲಿ, ದಿಮ್ಮ, ದಪ್ಪು, ದುಂದುಭಿ, ತಾಳ, ಚೈಯಾಕ (ಚೆಳ್ಳಂಕ), ಡೊಳ್ಳು, ಜಗ್ಗಲಿಗೆ ಮೊದಲಾದವುಗಳ ಸಂಜೋಡಣೆ ಮಾಡಿ . . . ಕುಣಿಯುತ್ತಾರೆ (ಕನ್ನಜಾ. ೨೯) ; ಕಣೆ, ದಿಮ್ಮ ಮೊದಲಾದ ವಾದ್ಯಗಳನ್ನುನುಡಿಸುತ್ತ ಮಳೆಯ ಭವಿಷ್ಯವನ್ನು ಜನಪದದಲ್ಲಿ ಸಾರುವುದನ್ನು ನೋಡಿ ಮನಗಾಣಬಹುದು (ಕನ್ನಜಾ. ೧೬೦).

**ದಿಮ್ಮಗೆ (ಅ).** ೧. ಗಟ್ಟಿಯಾಗಿ ; ಬಲವಾಗಿ ; ದೃಢವಾಗಿ : ರೊಟ್ಟಿ ದಿಮ್ಮಗಿದೆ (ರೂಢಿ) ; ಪಾತ್ರೆಯನ್ನು ದಿಮ್ಮಗೆ ಹಿಡಿದುಕೊ (ರೂಢಿ). ೨. "ಜೋರಾಗಿ ; ರಭಸದಿಂದ" (ಪ್ರಭಣ್ವ). [ <ದಿಮ್ಮಿತು + – ಅಗೆ$_3$ ]

**ದಿಮ್ಮಡಿ** 'ದಮ್ಮಡಿ$_1$' ನೋ.

**ದಿಮ್ಮದಿರುಗ, ದಿಮ್ಮುದಿರುಗ (ನಾ).** ಸುಮ್ಮನೆ ತಿರುಗುವವನು,– ಸುತ್ತಾಡುವವನು : ಅವನೊಬ್ಬ ದಿಮ್ಮದಿರುಗ, ಯಾವ ಕಾರ್ಯಕ್ಕೂ ಬಾರದವನು (ರೂಢಿ). **ದಿಮ್ಮುದಿರುಗ :** ಹಡೆದವರ ತಲೆಗೆ ಮರಳು ಚೆಲ್ಲಿದ್ಯಂತೆ ಮಂಡದೇರ ಕೂಡ್ಯಾಡಿ ಕಲಿತ್ಕೆಲ್ಲೊ ಬೆಡಗ ದಿಮ್ಮುದಿ [ಪಾಠಾಂ. ದ] ರುಗ ಸೊಕ್ಕಿ ಮೊರುಗ ಬಿಡು ಎನ್ನ ಸೆಱಗ (ಕನಕ. ೫೫-೩). [ ದಿಮ್ಮದಿರುಗು + – ಅ$_7$ ]

**ದಿಮ್ಮದಿರುಗು, ದಿಮ್ಮುದಿರಂಗು$_1$ (ಕ್ರಿ).** ೧. ಸುಮ್ಮನೆ ತಿರುಗು,– ಸುತ್ತು. ೨ (ಆಲಂ) ವ್ಯಥಾ ಶ್ರಮಿಸು: ಸುಮ್ಮನೆ ಘನಮುಕ್ತಿ ಸುಖವನು ಬಯಸುತ ದಿಮ್ಮುದಿರುಗಿ ಸಾಯದಿರು ಮಂದ ಮನುಜಾ (ಕೈಕವ. ೫-೭೫ ಪಲ್ಲವಿ). **ದಿಮ್ಮುದಿರುಗು$_1$** ೧. 'ದಿಮ್ಮುದಿರಂಗ' ಪರಾ.

[ <ದಿಮ್ಮನೆ + ತಿರುಗು$_1$ ]

**ದಿಮ್ಮನೆ (ಅ).** ೧. ಇದ್ದಕ್ಕಿದ್ದಂತೆ ; ಥಟ್ಟನೆ : ದಿ [ಪಾಠಾಂ. ಧಿ] ಮ್ಮನೆ ನಿಂದು ಭುಗಿಲೆಂದನು ಕಿರೀಟ (ಕುಮ್ಯಾಸ. ೩-೮) ; ದಿಮ್ಮನೆಯೆದ್ದು ಪೋಗುವಳ ತೆಕ್ಕೆಯಿಂ ಪಿಡಿದಪ್ಪಿ (ನವಮೋ. ೯-೩೮); ಶ್ರೀ ರಾಮಚಂದ್ರಮಂ ದಿಮ್ಮನೆಟ್ಟು ದಿಗ್ಭ್ರಮೆಯಿಂ ಕಣ್ಗೆಟ್ಟು ಚಿಂತಾಪರವಶತೆಯಿಂ ನಡೆಗಂಬಂ ಬರ್ಪುದೆನೆ ಬಂದು (ರಾಮಾಶ್ವ. ೧೯-೧೯) ; ದಿಮ್ಮನೆದ್ದಳು ಬೆಳ್ಳಿ ತಾಯಿ ಕೈ ಪಿಡಿಯೆ (ಕಾಲೂರ. ೧೬೭-೩೭೯). ೨. ರಭಸದಿಂದ; ಜೋರಾಗಿ : ಎತ್ತಿ ಹಾಯ್ಕುದ ಹೆಣನುಮಂಬರದತ್ತಲಿದ್ದು ನೆಲಕ್ಕೆ ದಿಮ್ಮನೆ ಕೆಡೆಯೆ ಸಭೆ [ಪಾಠಾಂ. ಲಿರ್ದುದು ಕೆಡೆಯಲಾಗಳೆ ಸಭೆ ನಡುಗಿ] ಬೆದಱೆ (ಬಸಪು. ೨೨-೪೩); ದಿಮ್ಮನೆ ಶಿರಂ ನೆಲಕೆ ಬೀಳೆ (ಗುರುಜಾ. ೮-೬೩). ೩. ಸುಮ್ಮನೆ ; ಮೌನವಾಗಿ : ತಡವಮಾಡಿ ಬಂದನೆಂದತ್ತಳು ಬೈದಳು ಸುಯ್ದಳು ಸಿಟ್ಟುಮಾಡಿದಳು ದಿಮ್ಮನೆ ಕುಳಿತಳು ಹುಬ್ಬನು ಮುರಿದಳು ವಂತ್ತೆದ್ದು ಅಬ್ಬರಿಸಿದಳು (ಇಂಚಾಪ. ೧೬೮-೩೭). 'ಧಿಮ್ಮನೆ' ಪರಾ. [ ದಿಂ + – ಅನೆ$_1$ ]

**ದಿಮ್ಮಿ$_1$ (ನಾ).** ೧. ದಿಣ್ಣೆ; ತಿಟ್ಟು; ಎತ್ತರವಾದ ಪ್ರದೇಶ : (೬). ೨. ಮರದ ದಿಂಡು,–ತೊಲೆ : ಆನೆ ದೊಡ್ಡ ಮರದ ದಿಮ್ಮಿಯನ್ನು ಸೊಂಡಿಲಲ್ಲಿ ಹಿಡಿದು . . . ಹೋಯಿತು (ಪ್ರವಾಇ. II, ೦೫೯) ; ದೊಡ್ಡ ದೊಡ್ಡ ಮರದ ದಿಮ್ಮಿಗಳನ್ನು ಸಾಗಿಸಿಕೊಂಡು ಹೋಗಿ ಮಹಾರಾಜರಿಗೆ ಒಪ್ಪಿಸಿದರು (ಬೈಸರ್ವ. ೧೪) ; ದಿಮ್ಮಿಗಳನ್ನ ಸೈಜುಮಾರು ಗರಗಸದಿಂದ ನಾವು ಮೊದಲು ಕುಯ್ದು ಹಾಕಬೇಕು (ಚಂಗೂಲಿ. ೦೦೩). ೩. ಕೆಸರು ; ಬದಿ ; "ಉಬ್ಬಲ" (ಜಾನಕೋ. ೫). ೪. ಕವಚ ; ಅಂಗಿ : "ತನುತ್ರಂ . . . ಉರಚ್ಛದಃ, ಕಟಕಃ, ಜಾಗರಃ, ಕವಚಃ ೭. ಎದೆಗೆ ರಕ್ಷಕವಾದ ತೊಗಲ ದಿಮ್ಮಿಗೂ ಪಾದರಕ್ಷೆಗೂ ಪೆಸರುಗಳು" (ಸಿದ್ಧಾಂತಿ. ೨೨೦).

[ ದೇ.: ತೆಲು. ದಿಮ್ಮ; ಪರ್ಜಿ. ದೆಮ್ಮ ]

**ದಿಮ್ಮಿ$_2$** 'ದಂಮ್ಮಿ' ನೋ.

**ದಿಮ್ಮಿಡಿ** 'ದಿಮ್ಮುಹಿಡಿ' ನೋ.

**ದಿಮ್ಮಿಡು (ಕ್ರಿ).** ದಿಮ್ ಎಂದು ಶಬ್ದವುಂಟಾಗುವಂತೆ ಮಾಡು : ದಿಮ್ಮಿಡುವ ಘಣಾಘಣಾ ಎಂಬ ಗಂಟೆಯ ರವಕ್ಕೆ ಬೆರ್ಮೆಗೊಳುತ (ದಾಸಪ. ೬. ೫೩-೪). [ ದಿಂ + ಇಡು$_1$ ]

**ದಿಮ್ಮಿತು, ದಿಮ್ಮಿತ್ತು (ನಾ).** ೧. ಗಟ್ಟಿಯಾದುದು ; ದಪ್ಪನಾದುದು ; ಭಾರವಾದುದು : ನಿಮ್ಮ ಕಂಥೆಗೆ ಕೌಪಕೆಣೆಯೆನಲಮ್ಮೆನಾದಡೆಯವರಲ ಪಾಡಿನ ದಿಮ್ಮಿತಪ್ಪಾ ಕಂಥೆಯಂ ಕೌಪೀನಮಂ ಕೊಟ್ಟು (ಬಸಪು. ೨೭-೪೪). ೨. ಹೊರೆ ; ಭಾರ : ತಂಬಿರ್ದ ಬಂಡಿಗೆ ಪೊಱಂ ದಿಮ್ಮಿತೇ (ಹರಿಕಾ. ೮-೨೭). ೩. ಹಿರಿದಾದುದು ; ಘನವಾದುದು ; ಶ್ರೇಷ್ಠವಾದುದು ; ದೊಡ್ಡದು : "ದಿಮ್ಮಿತೆನಲ್ಕೆ ದೊಡ್ಡಿತು" (ಕರ್ಣಾನಿ. ೧೭) ; ತಂತುಹಾರುವನಲ್ಲ ಸಾಕ್ಷಾತ ಬೊಮ್ಮನಪ್ಪನು ಆಗಿ ಬುಧರೊಳು ದಿಮ್ಮಿತಪ್ಪಖಿಳಾಗಮಜ್ಞನು (ಬಸಪು. ೫೫-೩೩) ; ಅವನ ಮೈಸೋಂಕೆಲ್ಲವುಂ ದಿಮ್ಮಿತಪ್ಪೊಡನಾಟವವನಿರವೆ ಯೋಗವಾತಂ ಮಾತನಾಡಿರ್ದುದೆ ಪಲಂ ಧ್ಯಾನಂ (ಪದ್ಮರಾ. ೧೩-೪೦) ; ಇನಿತೊಂದು ಪೆರ್ಮೆಯ ಕ್ಷೇತ್ರದೊಂದು ಮೈಮೆ ದಿಮ್ಮಿತು (ರಾಮಾಶ್ವ. ೮೨-೨೭). ೪. ಕಷ್ಟಕರವಾದುದು; ಕಠಿಣವಾದುದು: ಗರ್ವವ ನೆಮ್ಮಿದರೆ ತದ್ಗರ್ವದಿಂದುಱೆ ದಿಮ್ಮಿತಹುದಾ ಕಾರ್ಯ (ಕುಮ್ಯಾಉ. ೪-೮೭). **ದಿಮ್ಮಿತ್ತು :** ೨. ಬಳ್ಳಿಗೆ ಕಾಯಿ ದಿಮ್ಮಿತ್ತೇ (ಬಸವ. ೭೦).

ದಿಮ್ಮಿದ = ೧. ದೊಡ್ಡತನದ ; ದೊಡ್ಡಸ್ತಿಕೆಯ : ಕಾಕ ನುಡಿಯದೆ ಸುಮ್ಮನಿರಿ ನೀವೇಕೆ ದಿಮ್ಮಿದ ವಾಕ್ಯ ವಸ್ತುವಿವೇಕ ನಿಮಗೆಲ್ಲಿಯದು ನೀವು ಸುಮಾರ್ಗಬಾಹಿರರು (ಶಂಕೆದಾ. ೧೫-೧೦). ೨. ಹಿರಿಯನಾದವನಂ; ಪ್ರೌಢ ; ಶ್ರೇಷ್ಠ : "ಸ್ಪೈದರೆಂದುಂ, ದಿಮ್ಮಿದರೆಂದುಂ, ಗಹನರೆಂದುಂ, ನೇಱಿದರೆಂದುಂ-ಈ ೪ ಪಿರಿಯರ್ಗೆ ಪೆಸರ್" (ಕಶಸಾ. ೧೭-೩೩೨) ; ಪಾಡೆ ಚಿರಂಟಿಯರ್ಪರಸೆ ದಿಮ್ಮಿದರ್ . . . ಸತಿಗೂಡಿ ತದುದ್ಭಟ ರಾಜಕುಂಜರಂ ಕೂಡೆ ವಿವಾಹಮಂಟಪಕೆ ಮೆಲ್ಲನೆ ಬಂದನ ನೂನರಾಗದಿಂ (ಉದ್ಭಟ. ೮-೭೦) : ದಿಮ್ಮಿದರಕ್ಕರಕ್ಕಱಿವರೊಳ್ ನಂಡಿಯೊಳ್ ಕಡುಜಾಣರ್ (ಕಬ್ಬಿಕಾ. ೧೦) ; ಎಲೆ ದೇವ ಬೆಟ್ಟದಂತಪ್ಪ ದಿಮ್ಮಿದನಣುಗಿ ಸಲುಗೆಯೊಗಿರ್ದವಳನೆನ್ನನೊತ್ತಿದೆ ಯೆಡದ ಕಲಕೆ (ವೀಶೈವು. ೩-೩೦-೧); ದಿ [ಪಾಠಾಂ. ನಿ]ಮ್ಮಿದರ್ ಗುಜುಗುಜಿಸದಿರಿಮತುಳರುದ್ರಗಣಮುಮ್ಮಸಗಬೇಡೆಂದು . . . ಭರಾಭರಿಗಳಂ ಮಾಡುತಿರ್ದರತಿಭಕ್ತಿಯಿಂದೆ (ಜಬಪು. ೨-೨೬) ; ಗಿರಿಶಭಕ್ತಿಯ ಶಿಶುವಂ ದಿಮ್ಮಿದರಲ್ಲೆನೆ ಕಡುಪಿಂದಾಂ ಮುಡಿಪಿದೆ ನೆನ್ನವೋಲ್ ಕೃತಘ್ನರುಮೊಳರೇ (ರಾಜಶೇ. ೧೪-೨೪). ೩. ಗಟ್ಟಿಗ ; ಪರಾಕ್ರಮಿ; ಬಲಶಾಲಿ: ನಿಮ್ಮ ರಾಯನ ಪೊರೆಯ ಪರಿವಾರದೊಳ್ಳೇವೆ ದಿಮ್ಮಿದರೊ ಮತ್ತೆ ಕಲಿರೊಳರೂ (ಜೈಮಿಭಾ. ೪-೨೨). ೪. ತಿಳಿದವನಂ ; ಬಲ್ಲಿದ : ರತ್ನಪರೀಕ್ಷೆಯ ಮಾಡುವ ಅಣ್ಣಗಳೆಲ್ಲ ದಿಮ್ಮಿದರಯ್ಯಾ (ಸಿದ್ಧವ. ೬೦-೩೩೪); ದಿಮ್ಮಿದರಮ್ಮವ್ಮನೆ ಹೊರೆಯಣುಗಿಂದೆವ್ಮಯ್ಯಾ ದಮ್ಮಯ್ಯಾ ನಿಮ್ಮಯ ಸೊಮ್ಮಯ್ಯಾರಯ್ಯುಮೆನಲ್ಕೆ (ಉದ್ಭಟೇ. ೭-೪೭) ; ಕ್ಷತ್ರಿಯರ್ಗೆ ದಿಮ್ಮಿದರೊಳ್ ಪೊಣರ್ಕೆ ಸಲ್ಲದೆಂದುಂ ಮೇಣ್ ಆದರೊಳಂ ಇಕ್ಷ್ವಾಕು ಕುಲದವರ್ಗೆಮಗೆ ದೋಸಂ ತಟ್ಟುವುದೆಂದು ಪೇಟಿ (ಅದ್ಭುತ. ೩೨-೨೨) ; ದಿಮ್ಮಿದರಳ್ಕರ್ ಶರೀರದೆಡರ್ಗಳ್ಗೆಂದುಂ (ನೀತಿಮಂ. ೦-೨೯); ದಿಮ್ಮಿದರಪ್ಪ ಕಬ್ಬಿಗರಿಂ ಕನ್ನಡನುಡಿಯೊಳ್ಪರಿವರ್ತನಂಗೆಯಿಸಿ ತನ್ನ ಪೆಸರಿಂದೊಂದು ಕರ್ಣಾಟಕನಾಟಕಸಭೆಯಂ ಕಲ್ಪಿಸಿದಂ (ಮರಾಠ. ೬-೩೮). ೫. ಹೊರೆಯಾದವನಂ ; ಭಾರವಾದವನು (?) : ಅನಾಥೆಯನು ಕರುಣಿಸಿ ನೋಡದದೆ ಅಟಿ ಕಂಡೆ ತುಂದೆ ಕಣ್ಣಂಗೆ ದಿಮ್ಮಿದನೆಯೆನೆ ಬೆಟಗಾಗಿದೇ ನೆನಲು ತಾನೆಯಾಯ್ತಾಗ ಮತ್ತಱಿಯದಂದದಲೆನ್ನ ಬೆಸಗೊಂಡಪಂ ನೋಡಿರಯ್ಯ ಎನುತೊಱಲ್ದತ್ತಳು (ಸಿದ್ಧರಾ. ೯-೩೦).

**ದಿಮ್ಮಿತ್ತು** 'ದಿಮ್ಮಿತಂ' ನೋ.

**ದಿಮ್ಮಿಸಾಲು** 'ದುಮ್ಮಿಸಾಲು' ನೋ.

**ದಿಮ್ಮು** (ನಾ). ೧. ತಲೆ ತಿರುಗುವಿಕೆ ; ತಲೆಸುತ್ತು ; ಬವಳಿ. 'ದಿಮ್ಮು ಹಿಡಿ', 'ದಿಮ್ಮೇರು' ಪರಾ. ೨. ತಿಳಿಗೇಡಿತನ ; ಹುಚ್ಚು ; ಮರುಳಂತನ: ಆಡುವ ಆಟ ತಪ್ಪಿ ಅದು ಆಡದವನ ಮನಸಿಗೆ ಕಿಂಕರದೋಱದ ಮತ್ತೆ ಕೊಡಬೇಕೆಂಬ ಮತ್ತೆ ಆ ಲಾಗು ಬಂದಿತ್ತೆಂಬ ದಿಮ್ಮುಮನುಜರುಗಳಿಗೆ ಹೇಳುವದುಂಟೆ (ಮೋಕ್ಷಮಾ. ೮೮-೩೫೦). ೩. ಒಣ ಅಭಿಮಾನ ; ಹೆಮ್ಮೆ ; ಜಂಭ: ಸೊಕ್ಕಿನವನಲ್ಲದಿದ್ದರೂ ತನ್ನ ದಿಮ್ಮಿನಲ್ಲಿರುವನು (ನಿರಾಶ. ೭೮) ; ನಾವು ನಿರಕ್ಷರಸ್ಥರಾದರೂ ಪಂಡಿತರೆನಿಸಿಕೊಳ್ಳಬೇಕೆಂಬ ದಿಮ್ಮು (ಕಯಾತ್ರ. ೫೭); ತಲೆಯ ದಿಮ್ಮು ಇಳಿಸೀಕು ಸುಮ್ಮನೇ ನೀ ಸಟೆದರೆ ತಾಗಿ (ಸೂರ್ಯಪಾ. ೩೮-೧೫).

[ ದೇ.॥ ತೆಲು. ದಿಮ್ಮು, ದಿಮ್ಮ ]

**ದಿಮ್ಮುದಿರುಗ** 'ದಿಮ್ಮದಿರುಗ' ನೋ.

**ದಿಮ್ಮುದಿರುಗು₁** 'ದಿಮ್ಮದಿರುಗಂ' ನೋ.

**ದಿಮ್ಮುದಿರುಗು₂** (ನಾ). ಸುಮ್ಮನೆ ಸಂತ್ತುವಿಕೆ, -ತಿರಂಗಂವಿಕೆ : ಸೂತಿ ವಾಯು ಗರ್ಜಿಸಿ ಕೋಟಿ ಸಿಡಿಲಂತೆ ಪೊಡೆಯೆ ದಿಗ್ಭ್ರಾಂತಿಯಿಂ ದಿಮ್ಮುದಿರುಗೊಡೆಯುತೆ . . . ನೆಲಕ್ಕಧೋಮುಖಮುರುಳಿ ಚೀತರಿಸುವಂ (ಕೈಕವ. ೨-೪-೩). [ <ದಿಮ್ಮದಿರುಗು ]

**ದಿಮ್ಮುದೆಗೆ** (ಕ್ರಿ). ಅಹಂಕಾರ ಪಡು ; ಹೆಮ್ಮೆಪಡು (?) : ನಮಿಸಿ ದಿಮ್ಮುದೆಗೆಯದಿರ್ಪ ಕ್ರಮವಱಿದವಾತ್ಮರಳ್ಕಿ ನಮಿಸಿಯಕ್ಕನುರುನವಿರಾಗದಿರವ ಪೊಗಳುತ (ಮದೇಪು. ೨೨-೪೭). [ ದಿಮ್ಮು + ತೆಗೆ₁ ]

**ದಿಮ್ಮುಹತ್ತು** (ಕ್ರಿ). ಬವಳಿ ಹತ್ತು ; ದಿಮ್ಮೇರು : (ಕ).

[ ದಿಮ್ಮು + ಹತ್ತು₁ (<ಪತ್ತು₁) ]

**ದಿಮ್ಮುಹಿಡಿ, ದಿಮ್ಮಿಡಿ** (ಕ್ರಿ). ೧. = ದಿಮ್ಮುಹತ್ತು : ಘುಮ್ಮಿಡುವ ಬಿಲುದನಿಗೆ ಲೋಕವು ದಿಮ್ಮುಹಿಡಿವಂದದಲಿ ಜರಿದುದು (ಕೋಗಯ. ೧೦-೧೯) ; ತಲೆ ದಿಮ್ಮುಹಿಡಿದಿದೆ (ರಕ್ತಧ್ವ. ೧೭೦). **ದಿಮ್ಮಿಡಿ :** ಮೂಗಿನೊಳಂ ಬಾಯೊಳಂ ನೆತ್ತರು ಸುರಿಯುತ ತಲೆ ದಿಮ್ಮಿಡಿದು ನಡುಗಿ (ಕಗವಿ. ೯೪-೧ ; ವಿಷ್ಣುಪು). [ ದಿಮ್ಮು + ಹಿಡಿ₁ (<ಪಿಡಿ₁) ]

**ದಿಮ್ಮೆನ್ನು** (ಕ್ರಿ). ತಲೆಸುತ್ತು ಬರು ; ಬವಳಿ ಬರು : ತೀವ್ರಸಂತಾಪದಿಂದ ತಲೆ ದಿಮ್ಮೆನ್ನತೊಡಗಿತ್ತು (ಗಂಮಾಯ. ೯೨).

[ ದಿಮ್ಮು + ಎನ್ನು (<ಎನ್₁) ]

**ದಿಮ್ಮೇರು** (ಕ್ರಿ). ತಲೆಸುತ್ತಿ ಬರು ; ಬವಳಿ ಹತ್ತು ; ದಿಮ್ಮುಹತ್ತು : (ಕ). [ ದಿಮ್ಮು + ಏರು₁ (<ಏಱ್₁) ]

**ದಿಮ್ಮೇಳು** (ಕ್ರಿ). = ದಿಮ್ಮುಹತ್ತು : ಒಮ್ಮನವೆರಸಿ ತಪೋನ್ನತಿವಡೆದಿರ್ದ ನಿರ್ವಾಣಾತ್ಮಕ ಶಿವನೊಡಲ ದಿಮ್ಮೇಳೆ ಹೊಯ್ವೆನೆಂದೆನುತ ಮಂದಾನಿಲ ಕಮ್ಮಲರ್ಗೋಲಗೆ ನಡಿದ (ಮೋಹತ. ೬-೨೩).

[ ದಿಮ್ಮು + ಏಳು₁ (<ಏೞ್₁) ]

**ದಿರಸು, ದಿರಿಸಂ, ದಿರಂಸು, ದಂರಸಂ** (ನಾ). ಉಡುಪು ; ಉಡಂಗೆ : ದರ್ಬಾರಿಗಾಗಿ ಬಹು ಬೆಲೆಬಾಳುವ ದಿರಸನ್ನು ಹೊಲಿಸಿದ್ದನು (ಚಿತ್ರಕೊ. ೫೩) ; ದಿರಸು ಹೇಗೇ ಅಂತೀರಿ ? (ಸುವಸಂ. ೫೨) ; ಅರಸನ ಮಕವಂಲ್ಲಿನ ದಿರಸೆಲ್ಲ ಹರಿಹರಿದು ಮಗುವಿನ ಅಂಗೀಕಂಲಾವೀ ಮಾಡಿಬಿಟ್ಟರು (ಕರ್ಣಾಸಂ. ೧೦೦) ; ನಾಯಕನು ದಿರಸು ಒಪ್ಪಿಸಿಕೊಂಡು ಬಂದ (ಮಲ್ಲಿ. ೫೨) ; ಅವರೆಲ್ಲರಿಗೂ ಅಂಗರೇಕು ದಿರಸುಗಳೂ . . . ಈಟಿ ಭಲ್ಲೆಗಳಂ ಸರಪರಾಜು ಮಾಡಲ್ಪಟ್ಟಿದ್ದವು (ಶ್ರೀರಾಯ. ೧೧೭). **ದಿರಿಸು :** ಇವನ ದಿರಿಸು - ಡೌಲು - ಮೋಜುಗಳಿಗೆ ಸಂಪೂರ್ಣ ಮರುಳಾದವನೆಂದರೆ ಬಲರಾಮ (ಮಾಮನೆ. ೧೪). **ದಿರುಸು :** ಆ ದೀಪಗಳನ್ನು ಹೊತ್ತವರೂ ಸಿಪಾಯಿಗಳಂತೆ ಕದನದ ದಿರುಸನ್ನೇ ಹಾಕಿಕೊಂಡು ಕೈದುಗಳನ್ನು ಹಿಡಿದಿದ್ದಾರೆ (ಛಾಟೀಮು. ೩೭). **ದುರಸು** (ಉಕ) : ಹೊಟ್ಟೆಗೆ ಗತಿಯಿಲ್ಲ ಕಿಸೆಯಲ್ಲಿ ಕಾಸಿಲ್ಲ ದುರಸು ನೋಡಿದರೆ ಕೋಟಿ ಸಾವುಕಾರನದು (ಗಾದೆ).

[ ←ಇಂ. Dress ]

**ದಿರಿಸು** 'ದಿರಸಂ' ನೋ.

**ದಿರುಸು** 'ದಿರಸಂ' ನೋ.

**ದಿರ್ಬಲ್ಲ** (ನಾ). ಒಂದಂ ಊರಿನ ಹೆಸರು : ಕೋಟಗಾವುಣ್ಡನುಂ ಮಾದಿಗಾವುಣ್ಡನ ಸಹಿತ ದಿರ್ಬಲ್ಲ ಮಾದರ[ ನುಂ ] (ಸಾಇಇ. XI-1, ೭-೨೨ ; 837). [ ? ]

**ದಿರ್ರನೆ** (ಅ). ಸರಕ್ಕನೆ ; ಬೇಗನೆ ; ಶೀಘ್ರವಾಗಿ : ಶೀಘ್ರದಲೆಡಬಲಕೆ ದಿರ್ರನೆ ತಿರುಗಿ ಮದವ್ವಡುಗ ಬಳಲಿಸಿ ಸಿಂಗದಂದದಿ ಬೆಂಗೆ ಲಂಘಿಸಿದ (ಸಾಳ್ವಭಾ. ೧೭-೧೪). [ ದಿರ್₀ + -ಅನೆ₁ ]

**ದಿಲ್** (ನಾ). ಹೃದಯ ; ಮಂನಸ್ಸು : ಈ ಮಾತು ಕೇಳಿ ನಮ್ಮ ದಿಲ್ ಬಹಾಳ ಖುಷ ಆಗಿದಾವ್ (ಮೋಹಿನೀ. ೭೦).

[ ←ಪಾರ. ಹಿಂ. ಮರಾ. ದಿಲ್ ]

**ದಿಲ್‌ಗಾರ** (ನಾ). ಸ್ಥಿರಹೃದಯಂವುಳ್ಳವನು ; ಎದೆಗಾರ ; ಧೈರ್ಯಶಾಲಿ : ನಮ್ಮ ಜನ ಎಂಥಾ ದಿಲ್‌ಗಾರರು ಅನ್ನೋದು ಈ ಬಿಳೀಜನದ ಮನಸ್ಸಿಗೆ ಬರಬೇಕಂ (ಮಲ್ಲಿ. ೫೩). [ ದಿಲ್ + -ಗಾರ (< -ಕಾಱ) ]

**ದಿಲ್‌ಗೀರು** (ನಾ). ವಿಷಾದ ; ಖೇದ ; ಖಿನ್ನತೆ : ಈಗ ಅವರು ತಮ್ಮ ಹುಕುಂ ಪ್ರಕಾರ ಹೊರಟು ರವಾನೆ ಆಗುತ್ತಾ ಇದ್ದಾರೆ. ಆದ್ದರಿಂದ ನಮ್ಮ ಮನಸಿಗೆ ಬಹಳ ದಿಲ್‌ಗೀರು ಆಗುತ್ತಾ ಇದೆ (ರಾಜೇಂದ್ರ. ೧೦೮).
[ ←ಫಾರ. ಹಿಂ. ಮರಾ. ದಿಲ್‌ಗೀರ್ = ವಿಷಾದವುಳ್ಳ ]

**ದಿಲ್‌ದಾರ್**, ದಿಲ್‌ದಾರ (ಗು). ೧. ಉದಾರನಾದ ; ಔದಾರ್ಯವುಳ್ಳ : ರಾವಜೀಕಾಕಾ ಮಾತ್ರ ದಿಲ್‌ದಾರ್ ಮನುಷ್ಯರು (ದೀಪಹ. I, ೩೩). **ದಿಲ್‌ದಾರ** : (ನಾ). ೨. ಸಹೃದಯಂ; ರಸಿಕ. 'ದಿಲ್‌ದಾರತನ' ಪರಾ. [ ←ಫಾರ. ಹಿಂ. ಮರಾ. ದಿಲ್‌ದಾರ್ ]

**ದಿಲ್‌ದಾರ** 'ದಿಲ್‌ದಾರ್' ನೋ.

**ದಿಲ್‌ದಾರತನ** (ನಾ). ಸಹೃದಯತೆ ; ರಸಿಕತೆ : ಸೂರ್ಯನಿಗು ಏನೊ ದಿಲ್‌ದಾರತನ; ಅವನ ಮೋರೆ ತಿವಿದರು ಮೋಡ ನಕ್ಕು ನಡೆದ (ಹಂಡಮ. ೪೮-೨೨). [ ದಿಲ್‌ದಾರ (<ದಿಲ್‌ದಾರ್) + – ತನ ]

**ದಿಲ್‌ಭರವಸಾ** (ನಾ). ಮನಸ್ಸಿಗೆ ಧೈರ್ಯ ತುಂಬುವ ಮಾತು ; ಉತ್ತೇಜನ ; ಆಶ್ವಾಸನೆ : ಕೌಲಿಗೆ ಬಂದಂಥವರಿಗೆ ಕೌಲುಸಂಬಿಗೆ ಕೊಟ್ಟು, ದಿಲ್‌ಭರವಸಾ ಹೇಳಿ, ಬಂದು ಬಸ್ತು ಮಾಡಿಕೊಂಡು, ಈಶ್ವರ್ಯೆಯೂನು ಇರುತ್ತಿದ್ದಲ್ಲಿ . . . ಪಟ್ಟಣದಲ್ಲಿ ಫಿರಂಗಿ ಆವಾಜು ಬಂದಾಯಿತು (ರಾಜೇಂದ್ರ. ೯೭).
[ ←ಮರಾ. ದಿಲ್‌ಭರವಸಾ, ದಿಲ್‌ಭರೋಸಾ ]

**ದಿಲ್‌ರುಬಾ**, ದಿಲ್‌ರೂಬಾ, ದಿಲ್ರುಬಾ (ನಾ). ಒಂದು ಬಗೆಯ ತಂತ್ರೀವಾದ್ಯ : ಆ ಖಾನನಿಗೆ 'ದಿಲ್‌ರುಬಾ' ಕೇಳುವ ಹುಚ್ಚು ಬಹಳ (ರಾಜಯೋ. ೬೭) ; ಇಂಡಿಯಾದಲ್ಲಿ ಮುಖ್ಯವಾದುವು . . . ತಬಲ, ದಿಲ್‌ರುಬಾ ಮೊದಲಾದುವು (ಇಸ್ಲಾಂಸಂ. ೧೩೬). **ದಿಲ್‌ರೂಬಾ** : ದಿಲ್‌ರೂಬಾ ಔತ್ತರೇಯ ಸಂಗೀತದಲ್ಲಿ ಹೆಚ್ಚು ಉಪಯೋಗವಾಗಿರುವ ವಾದ್ಯ (ಸಂಗೀಜಂ. ೧೧೮). **ದಿಲ್ರುಬಾ** : ಅನಂತರದ ಸ್ಥಾನವು ಸಾರಂಗ, ದಿಲ್ರುಬಾ, ಇಸ್ರಾಜ್ ಮೊದಲಾದುವುಗಳಿಗೆ ಸೇರುವುದು (ಖಾಲಪ್ರ. II, ೧೧೦೭).
[ ←ಫಾರ. ಹಿಂ. ಮರಾ. ದಿಲ್‌ರುಬಾ = ಪ್ರಿಯಕರ, ಪ್ರೇಮಿ ]

**ದಿಲ್‌ರೂಬಾ** 'ದಿಲ್‌ರುಬಾ' ನೋ.

**ದಿಲಾಸು** (ನಾ). ಸಾಂತ್ವನ ; ಆಶ್ವಾಸನೆ : ನಿಯೋಗಿಗಳಂ ಕಳುಹಿರಲ ವರ್ಗಳಂ ಮನ್ನಿಸಿ ದಿಲಾಸನಿತ್ತು ರಾಯಸವಂ ಬರೆಸಿ (ಕಳನ್ನ. ೧೧-೭೬) ; ಆವುದೊಂದು ಕಳ್ಚುಕವಾವಿರ್ಪೆವೆಂದು ಧೈರ್ಯಂ ಪೇಳ್ದು ದಿಲಾಸನಿತ್ತುಚಿತಾಭರಣಾಂಬರಾದಿಗಳಿಂ ಪಿರಿದು ಸನ್ಮಾನಿಸಿ . . . ಬೀಳ್ಕೊಟ್ಟನು (ಕಳನ್ನ. ೧೧-೫೩). [ ←ಹಿಂ. ಮರಾ. ದಿಲಾಸಾ ]

**ದಿಲಿಪ್ಪ** (ನಾ). ಒಬ್ಬಾತನ ಹೆಸರು : ದಿಲಿಪ್ಪನು ನರಸಿಙ್ಗನು ಸತ್ತಕ್ಕ ಸಗ್ಗಕೆ ಪೋದರ್ (ಎಕ. XII, ಶಿರಾ. ೫೯-೩ ; ಸು. 920)
[ <ಸಂ. ದಿಲೀಪ ]

**ದಿಲ್ರುಬಾ** 'ದಿಲ್‌ರುಬಾ' ನೋ.

**ದಿವ** (ನಾ). ೧. ದೇವಲೋಕ ; ಸ್ವರ್ಗ : "ನಾಕಂ ತ್ರಿವಿಷ್ಟಪಂ ದಿವಮೆಂದಿಂತಿದು ತಾನಮರ್ತ್ಯಭವನಂ" (ವಸ್ತುಕೋ. ೬-೩೦) ; ಹರಿ ತನ್ನ ದಕ್ಷಿಣೇಂದ್ರರ್ವೆರಸು ಶಚೀದೇವಿವೆರಸು ಲೋಕೇಶ ಜನಂಬೆರಸು ದಿವದಿಂದ ಮಿಲ್ಲಿಗೆವರಲೊಡಮಾ ಭವದೊಳಂತೆ ಮುಕ್ತಿಗೆ ಸಲ್ವರ್ (ಆಪು. ೫-೪೯) ; ತೆಱೆದವನೆ ದಿವದ ಪಡಿಗಳ್ ತೆಱೆದುವಪದೇನರಿದೆ ಜೈನಪದಸೇವನೆಯಿಂ (ಸುಕುಮಾ. ೯-೧೯) ; ಅರಸಂ ದಿವಕ್ಕೆ ಸಂದಂ ಕಡೆಯೊಳ್ (ಪಂಪಭಾ. ೧೧-೧೩೦). ೨. ಆಕಾಶ ; ಗಗನ : ದಿವಕ್ಕವಯವದಿಂದಡರೆ ನೋಡಿದಂ ಯುವರಾಜಂ (ಆದಿಪು. ೧೬-೪೨) ; ಕೋಂಟೆಯ ಚೆಲ್ವು ಪೊಗಟಲರಿದೆನಿಸಿರೆ ನೆಗೆದುದು ಮಿಳಿರ್ವ ಪತಾಕಾವಳಿ ದಿವಮನೆಯ್ದೆ (ಪಂಪಭಾ. ೪-೯ ವ) ; ದಿವಮಂ ಜಕ್ಕುಲಿಪ ವರೂಥ ವೈಜಯಂತಿಗಳ ಪೊಯ್ಲೊಳ್ (ಜಗವಿ. ೧೮-೪೬) ; ರಾತ್ರಿಯುಂ ಬೆಳಗಲಿರ್ದ ಪೂರ್ಣೇಂದುವಿನಂತೆ ದಿವಮುಂ ಧವಳಿಸಲಿರ್ದ ಸಹಸ್ರಕರನಂತೆ ಇರ್ದಪಂ (ನಂಬಿರ. ೪-೧೮). ೩. ಹಗಲು ; ದಿನ : "ವಾಸರಮುಹದ್ಮುದಿನಂ ದಿವಂ ಘಸ್ರಮಾ ದಿವಸಮೆನೆ ಹಗಲ ಪೆಸರೆನಿಕ್ಕುಂ" (ಮಂಗರಾ. ೨೦-೬) ; ಇದು ದಿವಮೋ ರಾತ್ರಿಯೊ ಮೇಣಿದು ದುಃಖಮೊ ರುಜೆಯೊ ಕಳವಳಮೊ ಪೇಟ್ (ಕಾದಂಪೂ. ೭೮೬). ೪. [ಛಂದ] ಒಂದು ಅಕ್ಷರಗಣ ; ನಗಣ (UUU) : ಶ್ವಸನೇಂದುಜ್ವಲನಂ ದಿವಂ ಧರೆ ಜಲಂ ದೈತ್ಯಾದಿ ಕಾಮಾಂತಕ ಪ್ರಸರೋದ್ಯದ್ಗಣದಿಂ ತ್ರಯೋದಶಯುತಿ ಪ್ರಸ್ತಾರಮಾಗಿದೊರ್ಕೆ ಡೆ . . . ಮತ್ತೇಭವಿಕ್ರೀಡಿತಂ (ಛಂದೋಂಬು. ೨-೦೭೫).

**ದಿವನೇಱು** = ಸ್ವರ್ಗಸ್ಥನಾಗು ; ದಿವಂಗತನಾಗು : ಬೂವಯ್ಯನ ಮಂಗಂ ಬದಿಯಾಯ್ತು ತಂಬುಯನಿಕ್ಕಿಸಿ ಕಾದಿ ಸತ್ತು ದಿವನೇಱಿದ (ಎಕ. II, ೩೯೪-೧೨ ; 884 ?). **ದಿವವೈದ್ಯರು** = ಅಶ್ವಿನೀದೇವತೆಗಳು ; ಸ್ವರ್ಗದಲ್ಲಿಯ ವೈದ್ಯರು : "ದಸ್ರರಶ್ವಿಯರಾ ದಿವವೈದ್ಯರು" (ಮಂಗರಾ. ೬-೨೩). [ ಸಂ. ]

**ದಿವಂಗತ** (ಗು). ಸ್ವರ್ಗಕ್ಕೆ ಸಂದ ; ಸ್ವರ್ಗಸ್ಥನಾದ ; ಮೃತನಾದ : ಹಳಗನ್ನಡ ಸಾಹಿತ್ಯದೊಳಗಿನ ದುರಂತವಿನ್ಯಾಸದ ವಿಲಾಸವನ್ನು ಎತ್ತಿ ತೋರಿಸಿದ ಶ್ರೇಯಸ್ಸು ದಿವಂಗತ ಶ್ರೀಮಾನ್ ಶ್ರೀಕಂಠಯ್ಯನವರಿಗೆ ಸಲ್ಲುವುದು (ಸಾಹಿಸ. ೧೧೭) ; ದಿವಂಗತ ಲಾಲಾಲಜಪತರಾಯರು ಇಂಥ ಶಿಕ್ಷಣ ನಮ್ಮ ಜನಾಂಗದ ಪುರೋಭಿವೃದ್ಧಿಗೆ ನೆರವಾಗುವುದಿಲ್ಲವೆಂದು ಸಾರಿ . . . ಎಚ್ಚರಿಸಿದರು (ಶಿಕ್ಷದ. ೩೮೧). [ ಸಂ. ]

**ದಿವಕುಜ** (ನಾ). ದೇವಲೋಕದ ವೃಕ್ಷ ; ಕಲ್ಪವೃಕ್ಷ : ಬಿಟ್ಟು ಇವ ಕನಕಾದಿ ದಶವಿಧ ಒಟ್ಟನೊಳು ಜೀವನಿಗೆ ಹಿತವೆಂಬುಟ್ಟ ತೊರದಾಹಾರ ಧಾನದಿ ಪಡೆವ ದಿವಕುಜವ (ಬಿಜ್ಜಪು. ೮೮-೫೪). [ ದಿವ + ಕುಜ ]

**ದಿವಟಿ** 'ದೀವಟಿಗೆ' ನೋ.

**ದಿವರಾಜ** (ನಾ). ಸ್ವರ್ಗಕ್ಕೆ ಒಡೆಯನಾದವನು,– ರಾಜನಾದವನು ; ಇಂದ್ರ : ದಿವರಾಜಸನ್ನಿಭ ಯುವರಾಜನೆಯ್ತಂದನವಧಾನ ಸ್ವಾಮಿ ಪರಾಕು (ಭರತ. ೫೮-೫೦). [ ದಿವ + ರಾಜ ]

**ದಿವರಾತ್ರಿ** (ನಾ). ಹಗಲು ಮತ್ತು ರಾತ್ರಿ : ದ್ವಯವಿಡಿದುದಕ್ಕೆ ಎರಡಿಲ್ಲದೆ ವಿಾಡಿಲ್ಲವಾಗಿ ಜಗವನಱಿವುದಕ್ಕೆ ದಿವರಾತ್ರಿಯಲ್ಲದೆ ವಿಾಱ ತೋಱಲಿಲ್ಲವಾಗಿ (ಮೋಳಿಮಾ. ೧-೧) ; ತನ್ನ ತಾನಱಿದ ಎಚ್ಚಱಿಕೆಯಲ್ಲಿ ಅಹುದು ಅಲ್ಲವೆಂಬುದ ಕುಱುಹುದೋಱ ದಿವರಾತ್ರಿಯಲ್ಲಿ ಉಭಯಕ್ಕೂ ದೃಕ್ಕು ಸರಿಗಾಬುದಾಗಿ ಲಕ್ಷವ ಬಿಟ್ಟು ನಿರ್ಲಕ್ಷವ ಕಂಡು ನಿಶ್ಚಯವಾಯಿತ್ತೆಂಬುದಕ್ಕೆ ಸೂಚನೆ (ಮೋಳಿಮಾ. ೧೮೯-೭೦೧) ; ತವರೂರ ಮಱಿಯಿಸಿ ನಿದ್ರೆಯ ತೊಱಿಯಿಸಿ . . . ನಮ್ಮ ದಿವರಾತ್ರಿಯೆನ್ನದೆ ಸುಖದೊಳೋಲಾಡಿಸುವವ ಗಡ (ಭರತ. ೬-೩೯). [ ದಿವ + ರಾತ್ರಿ ]

**ದಿವರಾತ್ರೆ** (ನಾ). = ದಿವರಾತ್ರಿ : ದಿವರಾತ್ರಯೊಳಂ ಶಿವಶಿವಶಿವಯೆಂಬೀ ನೆನಹನೆನಗೆ ಕೊಟ್ಟರೆ ತಾರಾ ರವಿ ಶಶಿ ನಭವುಳ್ಳನಕಂ ನಿಮಗೇಱುವೆನಾಂ (ಶಂಕಕಂ. ೨೭). [ ದಿವ + ರಾತ್ರೆ ]

**ದಿವಶೀಅಮಾವಾಸ್ಯೆ**, ದೀವಸಿ ಅಮಾವಾಸ್ಯೆ (ನಾ). (ಉಕ) ಆಷಾಢ ಬಹುಳ ಅಮಾವಾಸ್ಯೆ ; ನಾಗರ ಅಮಾವಾಸ್ಯೆ ; ಭೀಮನ ಅಮಾವಾಸ್ಯೆ : ನಿನ್ನ ಮನೆಯಲ್ಲಿ ಹಳೆಯದಾದ, ಆಳತೆಗೆ ಬಾರದ ಬಟ್ಟೆ ಗಳಿದ್ದರೆ ಕೊಡು ನೋಡೋಣ ! ಇಂದು ದಿವಶೀ ಅಮಾವಾಸ್ಯೆ (ಸ್ಮೃತಿಚಿ. ೪೯೨). **ದೀವಸಿ ಅಮಾವಾಸ್ಯೆ** : ಆಷಾಢ ಬಹುಳ ೩೦ನೆಯ ತಿಥಿಯನ್ನು ದೀವಸಿ (ಅಮಾವಾಸ್ಯೆ) ಎನ್ನುತ್ತಾರೆ (ಭಾಹಬ್ಬ. ೯೮) ; P ಶ್ರಾವಣ ಶುಕ್ಲ ಐದನೆಯ ದಿನವಾದ ನಾಗಪಂಚಮಿಯ ಕೊನೆಯಲ್ಲಿ ಬರುವ ಅಮಾವಾಸ್ಯೆಯನ್ನು ನಾಗರಅಮಾವಾಸ್ಯೆಯೆನ್ನುತ್ತಾರೆ. ಮದುವೆ

ಯಾದ ಹೆಣ್ಣುಮಕ್ಕಳು ದಿವಶೀ ಎಂಬ ದೇವತೆಯನ್ನು ಅಂದು ಪೂಜಿಸುವುದರಿಂದ ಇದಕ್ಕೆ ದಿವಶೀ ಅಮಾವಾಸ್ಯೆಯೆಂಬ ಹೆಸರೂ ಬಳಕೆಯಲ್ಲಿದೆ. [ ದಿವಶೀ(P ← ಮರಾ. ದಿವಶೀ) + ಅಮಾವಾಸ್ಯೆ ]

**ದಿವಸ** (ನಾ). ೧. ಬೆಳಗಿನಿಂದ ಸಾಯಂಕಾಲದವರೆಗಿನ ಅವಧಿ ; ಹಗಲು : "ದಿವಸಃ, ದಿವಾ, ದಿನಂ . . . ಘಸ್ರಃ – ಈ ೭ ಹಗಲ್" (ಹಲಾಯು. ೧೮–೨೦೭) ; "ವಾಸರಮಹ ದ್ಯು ದಿನಂ ದಿವಂ ಘಸ್ರಮಾ ದಿವಸ ಮೆನೆ ಹಗಲ ಪೆಸರೆನಿಕ್ಕುಂ" (ಮಂಗರಾ. ೨೦–೬). ೨. ಹಗಲು ಮತ್ತು ರಾತ್ರಿ ಕೂಡಿದ ಒಂದು ದಿನ ; ಇಪ್ಪತ್ನಾಲ್ಕು ಗಂಟೆಗಳ ಅವಧಿ : ಪ್ರಶಸ್ತ ದಿವಸವಾರನಕ್ಷತ್ರಮುಹೂರ್ತದೊಳ್ ಮುಂಜಿಬಂಧನಕ್ರಿಯೆಯಂ ಮಾಡಿದ ಬಳಿಕ್ಕೆ (ವಡ್ಡಾರಾ. ೬೩–೨೦) ; ದಿವಸಂಗಳ್ ವಿಧುಬಿಂಬಚುಂಬಿತ ನಭೋಭಾಗಂಗಳಾದಂದು (ಆದಿಪು. ೧೨–೨೨) ; ಆ ಕೀರ್ತಿಧರ ನರೇಂದ್ರನೊಂದು ದಿವಸಂ . . . ಒಡ್ಡೋಲಗದೊಳಿರ್ಪುದುಂ (ಶಂರಾಮಾ. ೨–೨೯ ವ) ; ಒಂದು ತಿಂಗಳು ಬಿಟ್ಟು ಹೆಚ್ಚಿಗೆ ದಿವಸ ರಕಮು ನಿಂತರೆ (ಮುಂಬವ್ಯಾ. ೨೨ ಪ್ರಸ್ತಾವನೆ) ; ದಿವಸಕ್ಕೆ ತಕ್ಕ ದವಸವಾಗುವುದು (ಗಾದೆ). ೩. ತಿಥಿ : ಅಲ್ಲಿಂ ಬಳಿಯಂ ತಲೆಯಂ ಕಿರಿಯಿಸಿ ದಿವಸಮನಲಸದೆ ಬೆಸಗೊಳ್ವನಂತು ಗಾವಿಲನಕ್ಕುಂ (ಕವಿರಾ. ೩–೧೯೫).

ದಿವಸಂಬರಂ = ದಿನಗಳವರೆಗೂ : ಜಿನಭವನದೊಳೆಂಟು ದಿವಸಂಬರಂ ಮಹಾಮಹಮೆಂಬ ಜಿನಮಹಿಮೆಯುಂ ಮಹಾವಿಭೂತಿಯಿಂ ಮಹಾಬಳಂ ಮಾಡಿ (ಆದಿಪು. ೨–೪೬ ವ). ದಿವಸ ಕೇಳು=ಶುಭ ಅಥವಾ ಅಶುಭದಿವಸವನ್ನು ವಿಚಾರಿಸು : ದಿವಸ ಕೇಳಿ ಲಗ್ನವನ್ನು ಇಡಿಸಬೇಕು (ರೂಢಿ).

[ ಸಂ. ]

**ದಿವಸಕರ** (ನಾ). ೧. ಸೂರ್ಯ ; ದಿನಕರ : ದಿವಸಕರಂ ಉದಯಗಿರಿ ಶಿಖರವಿಶೇಷವಿಭೂಷಣಂ ತಮೋರಿಪುಬಳಮಂ ಪ್ರವಿಲೀನಂ ಮಾಡಿದಂ (ಕವಿರಾ. ೩–೫೭) ; ದಿವಸಕರಾದರ್ಶನ ಬದ್ಧವಿವರ ನವವನಜದೊಳೆಡೆವಡೆಯದ ವರಕೈರವಮಿತ್ರಕಿರಣದಂತವಳ ವಚನಂ (ಶಾಂತಿಪು. ೫–೧೪೫). ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ : ವನಧಾತ್ರೀ ಚಕ್ರಂ . . . ಪದದ ಕಡೆಯೊಳ್ ಚೆಲ್ವನಾಳ್ದೆಯ್ದೆ ನಿಲ್ಕುಂ ವಿಶ್ರಾಮಂ ದಿವಸಕರನೊಳ್ (ಛಂದೋಂಬು. ೨–೧೬೨). [ ಸಂ. ]

**ದಿವಸಕರೋದಯ** (ನಾ). ಸೂರ್ಯೋದಯ: ದಿವಸಕರೋದಯಂ ತಡೆದ ಪೂರ್ವದಿಶಾರಮೆ ಮರ್ವು ಕೊರ್ವಿ ತೋರುವ ತೆಱದಿಂದೆ ಮುನ್ನೆ ತನು ಕಾಂತಿ ಕಟಲ್ವುದು (ಪುಷ್ಪಪು. ೩–೧೦೦). [ ದಿವಸಕರ + ಉದಯ ]

**ದಿವಸಪತಿ** (ನಾ). ಹಗಲಿನ ಒಡೆಯ,–ಪ್ರಭು; ಸೂರ್ಯ: ಪಾವಕ ದಿವಸಪತಿ ಹಿಮಕರರೆ ಕಣ್ಣುಗಳು (ಪ್ರಭುಲಿ. ೨–೧೦). [ದಿವಸ + ಪತಿ]

**ದಿವಸಮುಖ** (ನಾ). ಪ್ರಾತಃಕಾಲ ; ಹಗಲಿನ ಪ್ರಾರಂಭಕಾಲ ; ದಿನ ಮುಖ : "ಪ್ರತ್ಯೂಷಂ ದಿವಸಮುಖಂ ಪ್ರಾತಃಕಾಲ್ಯವುಷಃಸಮಯಂ ಪ್ರಭಾತಮದು ಗೋಸರ್ಗಂ" (ವಸ್ತುಕೋ. ೧೫–೪). [ ದಿವಸ + ಮುಖ ]

**ದಿವಸವಲ್ಲಭ** (ನಾ). = ದಿವಸಪತಿ : ರಿಪುಸುಭಟನಂ ಮೂಱು ಬಾಣದೊಳೆಚ್ಚು ದಿವಸವಲ್ಲಭನ ಮಂಡಲದಲ್ಲಿಗೈದಿಸಿ ಪಚಾರಿಸಿ ಜಱಿದು ಕೂಡೆ ಬೊಬ್ಬಿಱಿದನು (ಜೈಮಿಭಾ. ೨೩–೨೦). [ ದಿವಸ + ವಲ್ಲಭ ]

**ದಿವಸವಿರಾಮ** (ನಾ). ಹಗಲಿನ ಕೊನೆ ; ಸಾಯಂಕಾಲ; ಸಂಜೆ : ದೋಷಾಭಿಸಂಧಿ ದಿವಸವಿರಾಮದೊಳ್ ಅವ್ಯವಸ್ಥೆ ಜಡಾಶ್ರಯದೊಳ್ . . . ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨–೧ ವ).

[ ದಿವಸ + ವಿರಾಮ ]

**ದಿವಸವ್ಯಾಪಾರ** (ನಾ). ದಿನದ ವ್ಯವಹಾರ,–ಕೆಲಸ,–ನಡವಳಿಕೆ : ದಿವಸವ್ಯಾಪಾರಮಂ ತೀರ್ಚಿವಂತು ತದಧಿಕೃತ ಜನಂಗಳುಮನಲಸಿಕೆಯಾಗದಂತು . . . ಕಳಿಪಿ (ಚಂದ್ರಪು. ೫–೧೨೨ ವ). [ ದಿವಸ + ವ್ಯಾಪಾರ ]

**ದಿವಸಾಂತ** (ನಾ). ಹಗಲಿನ ಕೊನೆ; ಸಾಯಂಕಾಲ: "ದಿವಸಾಂತವಪ್ಪಿರುಳು ಸಾಯಂಕಾಲಮೆನಿಕು" (ಮಂಗರಾ. ೨೦–೭). [ದಿವಸ + ಅಂತ್ಯ]

**ದಿವಸಾಂಧ** (ನಾ). ೧. ಹಗಲು ಹೊತ್ತಿನಲ್ಲಿ ಕುರುಡಾದಂದು. ೨. ಗೂಬೆ: ಸಮಸ್ತ ವಾಯಸನಿಕಾಯಮುಮಂ ನೆರಪಿಕೊಂಡು ದಿವಸಾಂಧನಪ್ಪರಿ ಮರ್ದನನಂ ನಮ್ಮ ತಂದೆಯಪ್ಪರವಿಂದಮಿತ್ರನಂ ಬಲದಿಂ ಕಾದಿ ಕೊಂದೆವಪ್ಪೊಡೆ ಸುಖದಿಂ ಬಾಳ್ವೆವು (ಪಂಚತಂ. ೨೦೭–೧೩).

[ ದಿವಸ + ಅಂಧ ]

**ದಿವಸಾಧಿಪ** (ನಾ). ೧. ಸೂರ್ಯ. ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ : ಪವಮಾನ ಚತುಷ್ಕಯುತಂ ಯತಿಯುಂ ದಿವಸಾಧಿಪರೊಳ್ ನಿಲೆ ವ ಸ್ತು ಕ ವಿ ಪ್ರ ವ ರ ಸ್ತು ತ ಮ ಪ್ಪ ದು ತೋಟಕಂ (ಛಂದೋಂಬು. ೨–೧೨೬). [ ದಿವಸ + ಅಧಿಪ ]

**ದಿವಸಾವಸಾನ** (ನಾ). ಹಗಲಿನ ಕೊನೆ; ಸಾಯಂಕಾಲ : [ಸುಯೋಧನಂ] . . . ತದ್ದಿವಸಾವಸಾನ ಸಮಯದೊಳ್ ಪ್ರಾಣವಿಸರ್ಜನೋನ್ಮುಖನಾದಂ (ಗದಾಯು. ೯–೩೪ ವ) ; ದಿವಸಾವಸಾನದೊಳ್ ಪೆರ್ಚುವಂತೆ ತವುದೊಡ್ಡು ಪೆರ್ಚಿದತ್ತು . . . ಉತ್ಕಟಕೋಪಂ (ವರ್ಧಪು. ३–೧೭).

[ ದಿವಸ + ಅವಸಾನ ]

**ದಿವಸಾಷ್ಟಕ** (ನಾ). ಎಂಟು ದಿನಗಳು: ರಸವೃತ್ತಿಯ ನೃತ್ತಮಂ ಪ್ರವರ್ತಿಸಿ ಮಗುಟ್ದು ಪ್ರಕಾರದಿನನುಷ್ಠಿಸಿದಂ ದಿವಸಾಷ್ಟಕಂಬರಂ (ಚಂದ್ರಪು. ೪–೬೯).

[ ದಿವಸ + ಅಷ್ಟಕ ]

**ದಿವಸೇಂದ್ರ** (ನಾ). ಹಗಲಿನ ಒಡೆಯ,–ಪ್ರಭು ; ಸೂರ್ಯ ; ಆದಿತ್ಯ : "ರವಿ ಮಾರ್ತಂಡಂ . . . ದಿವಸೇಂದ್ರಂ ಬ್ರಧ್ನನಂಶು . . . ತರಣಿ ಸಪ್ತಾಶ್ವನಾದಿತ್ಯನಕ್ಕುಂ" (ವಸ್ತುಕೋ. ೧೧–೬೪); ದಿವಸೇಂದ್ರನಂತೆ ಸತತಂ ಭುವನವ್ಯಾಪ್ತಪ್ರತಾಪನಂಭೋನಿಧಿಯಂತವಿಕಳಗಾಂಭೀರ್ಯಯುತಂ (ವರ್ಧಪು. ೧–೬೮) ; ದಿವಸೇಂದ್ರನ ಕಿರಣದಂತೆ ಪರಮಾತ್ಮನ ಪರಿಣಾಮದಂತೆ ಲೋಕದಾಲೋಕದಂತೆ . . . ನಳನಳಿಸಿ ಬಳೆಯುತಿರ್ದಳ್ (ಗಿರಿಕ. ೩–೬೯ ವ). [ ದಿವಸ + ಇಂದ್ರ ]

**ದಿವಸೇಂದ್ರಾತ್ಮಜ** (ನಾ). ೧. ಸೂರ್ಯನ ಮಗ. ೨. ಶನಿ: ಚಾಂದ್ರಿಯೊಳೊಡಗೂಡಿದ ದಿವಸೇಂದ್ರಾತ್ಮಜನಿಂ ಮಹೇಂದ್ರಜಾಲಜ್ಞಂ (ಜಾತತಿ. ೧೫–೪). ೩. ಯಮ. ೪. ಸುಗ್ರೀವ. ೫. ಕರ್ಣ.

[ ದಿವಸೇಂದ್ರ + ಆತ್ಮಜ ]

**ದಿವಸೇಂದ್ರಾನ್ವಯ** (ನಾ). ಸೂರ್ಯನ ವಂಶ; ರವಿವಂಶ: ದಿವಸೇಂದ್ರಾನ್ವಯ ಸೋಮಾನ್ವಯ ಯದುಕುಲ ರಾಜಾಧಿರಾಜನ್ಮಕಂ . . . ನೆರೆದುದ ಶೇಷಂ ಪ್ರಪೂಜಾಭಿಲಾಷಂ (ಜಗವಿ. ೧೭–೧೫).

[ ದಿವಸೇಂದ್ರ + ಅನ್ವಯ ]

**ದಿವಸೇಂದ್ರಾಲಯ** (ನಾ). [ಜ್ಯೋತಿ] ಸೂರ್ಯನ ಮನೆ; ಸಿಂಹರಾಶಿ: ದಿವಸೇಂದ್ರಾಲಯದೊಳ್ ಬುಧಂ ನೆಲಸೆ . . . ಜ್ಞಾನಹೀನಂ ಪರಾಭವ ಯುಕ್ತಂ (ಜಾತತಿ. ೧೭–೨೪). [ ದಿವಸೇಂದ್ರ + ಆಲಯ ]

**ದಿವಸೇಶ** (ನಾ). ಹಗಲಿನ ಒಡೆಯ ; ಸೂರ್ಯ : ದಿವಸೇಶ ರಾತ್ರೀಶಾಧಿಕ ಗ್ರಹ ತಾರಕಾವಳಿಯಧೀಶ ಸಕಲ ಮುನೀಶರುಂ . . . ನೆರೆದೋಲಯಿಸುತಿರಲು (ಬಸಪು. ೨೪–೪೮). [ ದಿವಸ + ಈಶ ]

**ದಿವಸ್ಪತಿ** (ನಾ). ೧. ಸ್ವರ್ಗದ ಒಡೆಯ; ಇಂದ್ರ: "ಪುರುಹೂತಂ ಮಘವಂ ದಿವಸ್ಪತಿ . . . ವಾಸವಂ" (ವಸ್ತುಕೋ. ೬–೩೩). ೨. ಹಗಲಿನ ಒಡೆಯ; ಸೂರ್ಯ : ದಿವಸ್ಪತಿಗೆ ಪ್ರತಾಪಮಂ ಸುರಪತಿಗೆ ಭೋಗಮಂ ರತಿಪತಿಗೆ ಮೂಲೋಕವಾವರಿಸುವ ರೂಪಂ ಸರಿತ್ಪತಿಗೆ ಗಂಭೀರತೆಯನು ಸ್ವಾಹಾಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ . . . ಎಮಗಿಷ್ಟಸಿದ್ಧಿಯಂ ಮಾಳ್ಕೆ (ಹದಳಾ. ೧–೧) [ ಸಂ. ]

**ದಿವಾಂಧ** (ನಾ). ೧. = ದಿವಸಾಂಧ ೧ : ನಾವೆಲ್ಲರುಂ ರಾತ್ರ್ಯಂಧರುಮ ವರೆಲ್ಲರುಂ ದಿವಾಂಧರುಮಪ್ಪುದರಿಂ ಸಂಧಾನಮೆಂತುಮಾಗಲಱಿಯದು (ಪಂಚತಂ. ೩೩೧-೨೧). ೨. = ದಿವಸಾಂಧ ೨ : ಪರಪುಟ್ಟನಿಂಗದಿರ್ವಕ್ಕಿ ಬಾನಾಡಿ ಹಿಂಗುರು ದಿವಾಂಧಂ (ಕುಮಾರವ್ಯಾ. ೪-೧೯೮). [ ದಿವ + ಅಂಧ ]

**ದಿವಾಂಧಕಿ** (ನಾ). ಸುಂಡಿಲಿ. [ ಸಂ. ದಿವಾಂಧಕೀ ]

**ದಿವಾಂಧತೆ** (ನಾ). ಹಗಲು ಹೊತ್ತು ಕಣ್ಣು ಕಾಣದಿರುವುದು : (Day blindness. ಪಾರಿಸಿ. ೨೬). [ ಸಂ. ದಿವಾಂಧತಾ ]

**ದಿವಾಕರ** (ನಾ). ೧. = ದಿವಸಕರ ೧ : ದಿವಾಕರರ್ ವ್ಯಾಕೃತಿಸಾವಿು ಗಳ್ನೋಲ್ ದಿವಕ್ಕೆ ಪನ್ನಿರ್ವರೆ ಮುಖ್ಯರಾದರ್ (ಕಾವ್ಯಾವ. ೧೩); (ಶಮದ. ೯ ಪ್ರಯೋ ನೋ); ಉದಯ ಗಿರೀಂದ್ರ ಮಧ್ಯದೊಳನೂನ ಸಹಸ್ರ ಕರಂಗಳಿಂದವಭ್ಯುದಯಮನುಂಟುಮಾಡಲೊಗೆದಿರ್ದ ದಿವಾಕರನಂತೆ ... ನಂಬಿಯಣ್ಣನೊಪ್ಪಿದಂ (ನಂಬಿರ. ೪-೩); ಮುನಿಸಮುದಾಯ ಸಮೇತಂ ವಿನೇಯಜನವನಜವನದಿವಾಕರನಂತಾ ಮುನಿಪನುಪದಾಸಮಂ ಪರ್ವ ನಿಮಿತ್ತಂ ತಳೆದು (ಯಶೋಧ. ೧-೪೬). ೨. = ದಿವಸಕರ ೨ : ದಿವಾಕರಾ ಕಾಶ ದಿನೇಶ ಪಾವಕರ್ ಸುವಿಶ್ರಮಂ ಬಂದಿರೆ ಸಪ್ತಸಂಖ್ಯೆಯೊಳ್ ಸವಿಸ್ತರಂ ನಿಲ್ಕಿರೆ ಸಂದುದಿಂತುದಾತ್ತವಂಶೆ ವಂಶಸ್ಥಮೆನಿಪ್ಪನಾಮದಿಂ (ಛಂದೋಂಬು. ೨-೧೨೮). [ ಸಂ. ]

**ದಿವಾಕರಣಂದಿ** (ನಾ). ಒಬ್ಬಾತನ ಹೆಸರು; P ಜೈನರ ಒಬ್ಬ ಪ್ರಸಿದ್ಧ ಮುನಿಯ ಹೆಸರು : ಉಭಯಸಿದ್ಧಾನ್ತಚೂಡಾಮಣಿಗಳುಂ ತ್ರೈವಿದ್ಯ ದೇವರುಮೆನಿಸಿದ ಶ್ರೀದಿವಾಕರಣನ್ದಿಸಿದ್ಧಾನ್ತರತ್ನಾಕರ ದೇವರ ಶಿಷ್ಯರ್ (ಎಕ. VIII, ನಗರ. ೫೬-೯೦ ; ಸು. 1077). [ ದಿವಾಕರ + <ನಂದಿ ]

**ದಿವಾಕರತನಯ** (ನಾ). ೧. ಸೂರ್ಯನ ಮಗ. ೨. ಕರ್ಣ : ಎಲೆ ದಿವಾಕರತನಯ ನಿನ್ನಯ ಕುಲವನಱಿಯೆಯಲಾ (ಕುಮಾರವ್ಯಾ. ಉ. ೧೧-೫). ೩. ಶನಿ. ೪. ಯಮಂ. ೫. ಸುಗ್ರೀವ. [ ದಿವಾಕರ + ತನಯ ]

**ದಿವಾಕೀರ್ತಿ** (ನಾ). ೧. ನಾಯಿಂದ ; ಕ್ಷೌರಿಕ; P ರಾತ್ರಿ ಕ್ಷೌರವು ನಿಷಿದ್ಧವಾದುದರಿಂದ ಹಗಲು ಹೊತ್ತಿನಲ್ಲಿ ಮಾತ್ರ ಕರೆಯಲ್ಪಡು ವವನು : "ಕ್ಷುರಮರ್ದೀ, ದಿವಾಕೀರ್ತಿಃ, ಚಂಡಿಳಃ, ನಾಪಿತಃ – ಈ ೪ ನಾವಿದಂ" (ಹಲಾಯು. ೯೬-೪೬೫). ೨. ಹೊಲೆಯ ; ಚಂಡಾಲ : "ದಿವಾಕೀರ್ತಿ ಪೊಲೆಯನುಂ ನಾಪಿತನುಂ" (ವಸ್ತುಕೋ. ೧೩೮-೬೧). ಬಡಗಿಯು ಅಕ್ಕಸಾಲಿಯು ಧ್ವಜಕಾರನು ಕಾಣಕರ ಸೂನು ಇವರೆಲ್ಲಾ ದಿವಾಕೀರ್ತಿ ಸಮರು (ಕುಕಸ. ೨೩). ೩. ಚಮ್ಮಾರ : "ಪೊಲೆಯಂ ಕ್ಷೌರಕ ಚರ್ಮಕೃತ್ತ್ರಯ ದಿವಾಕೀರ್ತ್ಯಾಹ್ವಯಂ" (ನಾನಾರ. ೧೫೩). ೪. ಗೂಬೆ ; ಉಲೂಕ. [ ಸಂ. ]

**ದಿವಾಕೀರ್ತಿಕ** (ನಾ). = ದಿವಾಕೀರ್ತಿ ೧ : ಕುಂಭಕಾರ ಸ್ವರ್ಣಕಾರ ವರ್ಧಕಿ ಕಾರುಕ ವಸ್ತ್ರಶೋಧಕ ದಿವಾಕೀರ್ತಿಕ ಮುಂತಾದ ನಾನಾ ಕೈವಾಡ ಕರಣ ಚಮತ್ಕಾರವಿಶಾರದರಾದ ನಾನಾವಿಧ ಜಾತಿಜನರ್ಗಾಸ್ಪದ ನಿವೇಶನಂಗಳಂ ಕಲ್ಪಿಸಿ (ಕಳನ್ನ. ೬-೨). [ ಸಂ. ]

**ದಿವಾಚರ** (ನಾ). ೧. ಹಗಲಿನಲ್ಲಿ ಮಾತ್ರ ಸಂಚರಿಸುವ ವ್ಯಕ್ತಿ : ರಾತ್ರಿಂಚರರು ಕಿರಿಚುತ್ತ ಅಲೆಯುವುದಕ್ಕೆ ಹೊರಟರು. ದಿವಾಚರರು ನಿದ್ರಾವಶರಾದರು (ವಚಭಾ. ೩೧೪). ೨. ಚಂಡಾಲ ; ಹೊಲೆಯ. [ ಸಂ. ]

**ದಿವಾಣ, ದಿವಾನ್, ದಿವಾನ್ನ, ದಿವಾನು, ದೀವಾಣ** (ನಾ). ೧. ರಾಜ ಸಭಾಗೃಹ ; ಸಭಾಸ್ಥಾನ ; ದರ್ಬಾರು ; ಚಾವಡಿ : ದಿವಾಣದೊಳ್ ಮಂತ್ರಿಯಿರೆ . . . ಕಂಡು (ಲಶಿಚಂ. ೩೨-೬೨); ರಾಮನಾಥ ದಂಡಾಧಿಪ ಗೂಡಿ ದಿವಾಣಕೆ ಬಂದು (ಕುರಾಸಾಂ. ೧೧-೧೨); ಬಾಣಾಸುರ ಬೊಂಬಾವುಗೆ ವೆರಸಿ ದಿವಾಣವ ಪುಗಲೊಡರ್ಚಿದನು (ಮೋಹತ. ೨೦-೫೯); ತನ್ನೊಡಲಕಾಣ ಲೀಯದೆ ಹೊಕ್ಕಳು ಕೃಷ್ಣರಾಯ ದಿವಾಣ ದ್ವಾರಂಗಳನುಳಿದು (ಮೋಹತ. ೨೯-೩೬); ದಿವಾಣದ ಯಕ್ಕಟಿಗರೆಱಿಯ ಹನುಮನಂ ಕರೆದು (ಪ್ರಭುಪು. ೬-೬೮); ಸಮಸ್ತ ವಾಣಿಜರಯಂಗಡಿಸಾಲು ಪ್ರಜೆಯು ಪರಿವಾರವಾಳಿಯ ವಿಕ್ಕಿ ಕಾಯ್ದು ರಂಬುಜದಳವಿಶಾಲನೇತ್ರನ ದಿವಾಣಮನುಯತಿಜಾಗ್ರದಿಂ ವೀರಭಟರು (ನವಮೋ. ೨೯-೬೬). ೨. ಆಡಳಿತಾಧಿಕಾರಿ ; ಕಾರಭಾರಿ : ಈಗಿನ ಶ್ರೀಗಳು ಮಠದ ದಿವಾಣರಿದ್ದಾಗ ನನ್ನ ಮಗಳು ಬಂದು ಶ್ಲೋಕ ಅಂದು ತೋರಿಸಿದಳು (ಅಶ್ವಮೇ. ೭). ೩. ಮುಖ್ಯಮಂತ್ರಿ ; ವಜೀರ : ಪೂರ್ಣಯ್ಯನವರು ಮೈಸೂರಿನ ಮೊದಲನೆಯ ದಿವಾಣರು (ರೂಢಿ). ೪. ತಾಲೂಕಿನ ಕಂದಾಯದ ಕೆಲಸ ನೋಡಿಕೊಳ್ಳುವ ಅಧಿಕಾರಿ. ೫. ಸರ್ಕಾರ. ೬. ಸರ್ಕಾರದ ಬೊಕ್ಕಸ ; ರಾಜ್ಯಾಧಿಕಾರಕ್ಕೆ ಸೇರಿ ದುದು : "ದಿವಾಣ – ಸರ್ಕಾರ (ರೆವಿನ್ಯೂ) ಬೊಕ್ಕಸ" (ಚಿತ್ರಪಾ. ಅನುಬಂಧ. ೨); ಆತನ ಮನೆ ವಿಟ್ಲಪುರದಲ್ಲಿ ಯಿದ ಕಾರಣ ದಿವಾಣದ ರಸ್ತಿನ ಹಣವನು ಯೆಲೆಕಂಬಾವಿಯವರ ಮನೆಯೊಳಗೆ ಯಿಡಲಾಗಿ (ಎಕ. XI, ಮೊಳಕಾ. ೨೫-೪೦ ; 1665). ೭. ಒಂದು ಬಗೆಯ ಆಸನ ; ಸೋಫಾ : ಅವರು ತುಂಬಾ ಬಳಲಿದ್ದ ಕಾರಣ ಮನೆಗೆ ಹಿಂತಿರುಗಿದವರೇ ದಿವಾಣದಲ್ಲಿ ಒರಗಿದರು (ರೂಢಿ). **ದಿವಾನ್** : ೩. ಸೂಪ್ರಿನ್‌ಟೆಂಡ್ಯಾಂಟ್ ಕೇಪಟನ್ ಲೇಹಾರಡಿ ಸಾಹೆಬರವರ ದಿವ್ಸದಲ್ಲು ದಿವಾನ್ ಪೂಂನಪು ಯಿಾ ಬೊಪು ಕ ವಿಾನಾಕ್ಷ್ಮಿಯ ಸಹ ಸೂಕ್ಷ್ಮನವಾಗಿ ವಿರಚಿಶಿ ಪೊಪ್ಸಿಸ್ತ ಬೆಳಿಪೀಠ (ಎಕ. I (R), ೨೪-೩ ; 1839). 'ದಿವಾನ್ ಕಚೇರಿ' ಪರಾ ದಿವಾನ : ೨. ಇಂಗ್ಲೀಷರು ಆಗ ಬಂಗಾಳದ ದಿವಾನರಾಗಿದ್ದರು (ಬಂಕಿಮ. ೨೬೨). ೩. ಒಂದು ಸಲ ಮೈಸೂರು ದಿವಾನರು ಬಂದು ಇಲ್ಲಿಯ ಸೊಬಗನ್ನು ನೋಡಿ (ಹುಟ್ಟಹ. ೬೦). **ದಿವಾನು** : ೮. ರಾಜ್ಯಸಭೆ : ದಿವಾನನ್ನು ಎಂದರೆ ರಾಜ್ಯಸಭೆಯನ್ನು ಕೂಡಿಸಬೇಕೆಂದು . . . ಅವಿಾರ ಅಪ್ಪಣೆ ಮಾಡಿದನು (ನಗೆಹೊ. ೧೫೦). **ದೀವಾಣ** : ೧. ದೀವಾಣವು ದೀವದ ಮೃಗ ವಾಸವು ಪಾವನತರದ ಹಜಾರ ಜಾವಗಳನು ಸೂಚಿಪ ಘಳಿಯಾರದ ಭಾವ ವನದನೇನೆಂಬೆ (ಅಂಜನ. ೧೨-೩೮). ದೀವಾಣದೊಳು ಕುಳ್ಳಿರ್ದ ಕುಮಾರರು ದೇವರಾಜನ ವಿಭವದೊಳು ಸಾ ವ ಧಾ ನ ದೊ ಳಾ ಳ ನೋಡುತಿರಲು ಬಂದರಾ ವಹಿಲದೊಳತಿರಥರು (ಅಂಜನ. ೬-೭೭).

[ ←ಮರಾ. ದಿವಾಣ್, ದಿವಾನ್ ; ಅರ. ಪಾರ. ದೀವಾನ್ ; ಹಿಂ. ದಿವಾನ್, ದೀವಾನ್ ]

**ದಿವಾಣಖಾನೆ, ದಿವಾನ್‌ಖಾನೆ, ದಿವಾನಖಾನ, ದಿವಾನಖಾನೆ** (ನಾ). ಭೇಟಿಯಾಗಲು ಬಂದವರನ್ನು ಸ್ವಾಗತಿಸಿ ಕುಳ್ಳಿರಿಸುವ ಸ್ಥಳ ; ಮನೆಯ ಮುಂಭಾಗದ ಹಜಾರ,–ಕೊಠಡಿ : ದಿವಾಣಖಾನೆಗೆ ಹೋಗಿ ಎಲ್ಲರ ಊಟದ ವ್ಯವಸ್ಥೆಗೆ ಹುಕುಂ ಬಿಟ್ಟನು (ಹೂಬಿಸಿ. ೪೨); ಇದು ಜಗನ್ನಾಥಸ್ವಾಮಿಯ ದಿವಾಣಖಾನೆ, ಅದು ಅನ್ನಪೂರ್ಣಾದೇವಿಯ ಭಂಡಾರ (ಬರಿಬಾ. ೮೩). **ದಿವಾನ್‌ಖಾನೆ** : ೧. ನಾವು ಸುಸಜ್ಜಿತವಾದ ದಿವಾನ್ ಖಾನೆಯಲ್ಲಿ ನಾಲ್ಕೂವರೆ ಘಂಟೆ ಆಗುವುದನ್ನೂ ವಿಶ್ವೇಶ್ವರಯ್ಯ ನವರು ಬರುವುದನ್ನೂ ನಿರೀಕ್ಷಿಸುತ್ತಾ ಕುಳಿತೆವು (ನಂಟರು. ೮೯). ೨. ರಾಜ ಸಭಾ ಗೃಹ ; ಓಲಗಶಾಲೆ : ದ್ವಾರಪಾಲಕನು ಮಹಾರಾಜರವರ ದಿವಾನ್ ಖಾನೆಯೊಳಗೆ ವೈಷ್ಣವಿಯನ್ನು ಕರೆದೊಯ್ದನು (ಶ್ರೀರಾಯ. ೬೩). **ದಿವಾನಖಾನ** : ೨. ಗುತ್ತಿಗೆಯ ಕ್ರಮವೆಂತೆಂದರೆ ನಂಮ ದಿವಾನಖಾನ × ಹ × ಯರ (ಎಕ. III (R), ಗುಂಡ್ಲುಪೇ. ೪೬-೮; 1549). **ದಿವಾನಖಾನೆ** : ೧. ರಾಯರ ಮನೆಯ ದಿವಾನಖಾನೆಯನ್ನು ನೋಡಬಾರದೆ ! (ಅಲಿಮ. ೨೫); ಆ ದಿವಾನಖಾನೆಯಲ್ಲೊಂದು ಸೋಫವೂ, ಅದರ ಮುಂದೊಂದು ಮೇಜೂ ಇದ್ದುವು (ಪುನರು. ೩೩೭).

[ ←ಮರಾ. ದಿವಾಣ್‌ಖಾನಾ ; ಪಾರ. ಹಿಂ. ದೀವಾನ್‌ಖಾನಾ ]

**ದಿವಾಣಗಿರಿ,** ದಿವಾನಗಿರಿ (ನಾ). ಮಂತ್ರಿಪದವಿ ; ಮಂತ್ರಿಯ ಕೆಲಸ,- ಅಧಿಕಾರ : (ಕ). **ದಿವಾನಗಿರಿ :** ಸಂಸ್ಥಾನಗಳಲ್ಲಿ ಮಠದ ಶಿಷ್ಯರು ದಿವಾನಗಿರಿ ಮೊದಲಾದ ಮಹಾಪದವಿಗಳನ್ನು ವಹಿಸಿದ್ದ ಕಾಲ (ಕಥವಿ. II, ೨೦೫) ; ಏಕಾಂಬರ ಮುದಲಿಯಾರರು ಈ ಪ್ರಾಂತ್ಯವನ್ನು ಆಳುತ್ತಿದ್ದ ನವಾಬರಲ್ಲಿ, ದಿವಾನಗಿರಿ ನಡಸಿ ತುಂಬಾ ಆಸ್ತಿ ಮಾಡಿದರು (ಪ್ರತಾಪ. ೧). [ ←ಮರಾ. ದಿವಾಣ್‌ಗಿರೀ ]

**ದಿವಾಣಚಾವಡಿ** (ನಾ). = ದಿವಾಣ ೧ : ಕುಸುಕ ಹಜಾರ ದಿ[ಪಾಠಾಂ. ದೆ]ವಾಣ ಚಾವಡಿ ಪೊಸಕಿಸುಂಗಲ್ಲ ಹರ್ಮ್ಯತತಿಗಳಿಂ . . . ರಾಜಿಸಿದುದಂದಾ ರಾಜನಿಳಯ (ರಾಮವಿ. ೩-೧೨೬) ; ಕುಸುಮ ಹಜಾರ ದಿವಾಣಚಾವಡಿ ಹೊನ್ನ ಕುಸುರಿವೆಸಳ ಮಾಡಗಳ ವಿಸರವೆಸೆಯಲರವಮನೆ ಕಣ್ಗೆ ರಾರಾಜಿಸುತಿಹುದೇನ ಬಣ್ಣಿಪೆನು (ಕುರಾಸಾಂ. ೫-೫). [ ದಿವಾಣ + ಚಾವಡಿ ]

**ದಿವಾಣಹಜಾರ** (ನಾ). = ದಿವಾಣ ೧ : ಮುಗಿಲ ಮುಟ್ಟುವ ದಿವಾಣ ಹಜಾರವು ಸೊಗಸಿನ ಚಿತ್ರ ಚವಡಿಯೂ (ಜಿನಚ. ೭-೭೦). [ ದಿವಾಣ + ಹಜಾರ₁ ]

**ದಿವಾಣಿ,** ದಿವಾನಿ (ಗು). ೧. ಆಸ್ತಿಪಾಸ್ತಿಗಳಿಗೆ ಸಂಬಂಧಪಟ್ಟ; ಸಿವಿಲ್ ಬಾಬತ್ತಿಗೆ ಸೇರಿದ ; ದಂಡ್ಯಾಪರಾಧವಲ್ಲದ ; ತಕ್ಸೀರಿಲ್ಲದ : ಇವನು ಮಹತ್ವದ ದಿವಾಣೀ, ಫೌಜದಾರೀ ವ್ಯಾಜ್ಯಗಳನ್ನು ತೀರಿಸುವನು (ಕಾರವ. ೬೬). **ದಿವಾನಿ** (ನಾ). ೨. ಕಂದಾಯವನ್ನು ವಸೂಲುಮಾಡುವ ಹಕ್ಕು : ಬಂಗಾಳದ ಕೆಳಗಿನ ರಾಜ್ಯಗಳ ಕಂದಾಯವನ್ನು ವಸೂಲು ಮಾಡುವ ಹಕ್ಕು (ದಿವಾನಿ) ೧೭೬೫ ರಲ್ಲಿ ಇಂಗ್ಲಿಷರ ವಶವಾಯಿತು (ಭೂಗೋಳ. ೪೨). ೩. ಸಚಿವ; ಮಂತ್ರಿ : ವಜೀರ ಪಟಾಣದಿರ್ವಾನಿಯರೆಡ ಬಲದೊಳಗೆ ಜೇನಪುಟ್ಟಂತೆ ಮುಸುಕಿ ಬಲ ಬರುತಿದೆ ನೀವೆಚ್ಚರೆನುತ ಬಿನ್ನೈಸೆ (ಸೌಂದಕಾ. ೫-೭). [ ←ಮರಾ. ದಿವಾಣೀ; ಪಾರ. ಹಿಂ. ದಿವಾನೀ ]

**ದಿವಾಣಿಅದಾಲತ್** (ನಾ). =ದಿವಾಣಿಕೋರ್ಟು: ಬೇರೆಯವರಿಗೆ ನೇಕಾರನು ತನ್ನ ಬಟ್ಟೆಗಳನ್ನು ಮಾರಿದರೆ ದಿವಾಣಿ ಅದಾಲತ್ (ನ್ಯಾಯ ಕಚೇರಿ) ದಲ್ಲಿ ಅವನ ಮೇಲೆ ವ್ಯಾಜ್ಯ ಹೂಡುತ್ತಿದ್ದರು (ಜಾದಿಜಾ. ೪೪). [ ದಿವಾಣಿ + ಅದಾಲತ್₀ (<ಅದಾಲತು) ]

**ದಿವಾಣಿಕಜೆ** (ನಾ). ದಿವಾಣಿ ವ್ಯಾಜ್ಯ ; ಆಸ್ತಿಪಾಸ್ತಿಗೆ ಸಂಬಂಧಪಟ್ಟ ವ್ಯಾಜ್ಯ : ದಿವಾಣೀಕಜ್ಜೆಗಳನ್ನು ಮುಸಲ್ಮಾನ ಅಥವಾ ಹಿಂದೂಶಾಸ್ತ್ರಗಳ ಆಧಾರದಿಂದ ಅವರವರ ಜಾತಿಯ ಪ್ರಕಾರ, ತೀರ್ಪುಮಾಡುವಂತೆ ಏರ್ಪಡಿಸಿದ್ದನು (ಹಿಂದುಇ. ೧೭೬). [ ದಿವಾಣಿ + ಕಜ್ಜೆ ]

**ದಿವಾಣಿಕೋರ್ಟು** (ನಾ). ಆಸ್ತಿಪಾಸ್ತಿಗೆ ಸಂಬಂಧಿಸಿದ ವ್ಯಾಜ್ಯಗಳನ್ನು ನಿರ್ಣಯಿಸುವ ನ್ಯಾಯಾಲಯ ; ಸಿವಿಲ್‌ಕೋರ್ಟು : ದಿವಾಣಿ ಕೋರ್ಟಿನ ಬೆಲೀಫರು ಜಪ್ತಿಯ ವಾರಂಟನ್ನೂ ತುರಂಗ ವಾರಂಟನ್ನೂ ಕೈಯಲ್ಲಿ ಹಿಡಕೊಂಡು ಎಡತಾಕುತ್ತಾರೆ (ಮೋಹಿನೀ. ೫). [ ದಿವಾಣಿ + ಕೋರ್ಟು ]

**ದಿವಾಣಿಬಾಬು** (ನಾ). ಆಸ್ತಿಪಾಸ್ತಿಗೆ ಸಂಬಂಧಿಸಿದ ವಿಷಯ : ಕೊಂಡುಕೊಳ್ಳುವ ವ್ಯವಹಾರ, ಕರಾರುಪತ್ರ, ದಾನಕೊಡುವುದು, ಪಿತ್ರಾರ್ಜಿತ ಸೊತ್ತಿನ ಬಾಧ್ಯಸ್ಥಿಕೆ ಮುಂತಾದ "ದಿವಾಣಿ" ಬಾಬುಗಳ ಬಗ್ಗೆ ಕಾಯದೆಗಳಾಗಿದ್ದವು (ಹಿಂದುಇ. ೬೨). [ ದಿವಾಣಿ + ಬಾಬು₁ ]

**ದಿವಾನ್** 'ದಿವಾಣ' ನೋ.

**ದಿವಾನ್‌ಕಚೇರಿ,** ದಿವಾನ್ ಕಛೇರಿ (ನಾ). ಸಿವಿಲ್ ಬಾಬತ್ತಿನ ವಿಷಯಗಳನ್ನು ನಿರ್ಣಯಿಸುವ ಕಚೇರಿ: ೧೮೧೩ ಇಸವಿ ದಾಖಲಪ್ಪರ ಕಂನಡಿ ಹಿರಣ್ಣಪ್ಪ ದಿರ್ವಾಕಚೇರಿ ಹಜೂರು (ಮೈಅರಿ. ೧೯೨೯, ೯೪-೪ ; 1813). **ದಿವಾನ್‌ಕಛೇರಿ :** ಕಛೇರಿಗಳು-೧ ದಿರ್ವಾ ಕಛೇರಿ . . . ೧೮ ಜಿಲ್ಲೋ ಕಛೇರಿ (ಮಹಾವಂ. II, ೩೮). [ ದಿವಾನ್ (<ದಿವಾಣ) + ಕಚೇರಿ ]

**ದಿವಾನ್‌ಕಛೇರಿ** 'ದಿವಾನ್‌ಕಚೇರಿ' ನೋ.

**ದಿವಾನ್‌ಖಾನೆ** 'ದಿವಾಣಖಾನೆ' ನೋ.

**ದಿವಾನ** 'ದಿವಾಣ' ನೋ.

**ದಿವಾನಖಾನ** 'ದಿವಾಣಖಾನೆ' ನೋ.

**ದಿವಾನಖಾನೆ** 'ದಿವಾಣಖಾನೆ' ನೋ.

**ದಿವಾನಗಿರಿ** 'ದಿವಾಣಗಿರಿ' ನೋ.

**ದಿವಾನಾ** (ಗು). ಮೂರ್ಖನಾದ ; ಪೆದ್ದ ; ಹುಚ್ಚಾದ : (ಕ). [ ←ಪಾರ. ಹಿಂ. ದೀವಾನಾ; ಮರಾ. ದಿವಾಣಾ, ದಿವಾನಾ ]

**ದಿವಾನಾಡಿ** (ನಾ). ಶರೀರದ ಎಡಭಾಗದಲ್ಲಿರುವ ನಾಡಿ: ಈ ಸ್ತ್ರೀಪುರುಷ ನಾಡಿಗಳಿಗೆ ದಿವಾನಾಡಿಗಳೆಂತಲೂ, ರಾತ್ರಿನಾಡಿಗಳೆಂತಲೂ ವ್ಯವಹಾರ ಉಂಟು (ಹಸಾರ. ೪-೩ ತಾತ್ಪರ್ಯ). 'ಪುರುಷನಾಡಿ' ಪಠಾ. [ ಸಂ. ]

**ದಿವಾನಿ** 'ದಿವಾಣಿ' ನೋ.

**ದಿವಾನು** 'ದಿವಾಣ' ನೋ.

**ದಿವಾಬಲಿ** (ನಾ). ಹಗಲಿನಲ್ಲಿ ಬಲಿಷ್ಠವಾದುದು: ಅಲನಾ ವೃಶ್ಚಿಕ ತಾಳಿ ಕುಂಭ ಹರಿಗಳ್ ಶೀರ್ಷೋದಯಂಗಳ್ ದಿವಾಬಲಿಗಳ್ (ಜಾತತಿ. ೧-೩೯). [ ಸಂ. ದಿವಾಬಲಿನ್ ]

**ದಿವಾಮಧ್ಯ** (ನಾ). ದಿನದ ಮಧ್ಯದ ಅವಧಿ; ಮಧ್ಯಾಹ್ನ. [ ಸಂ. ]

**ದಿವಾಮೈಥುನ** (ನಾ). ಹಗಲಿನಲ್ಲಿ ನಡೆಸುವ ಸಂಭೋಗ: ದಿವಾಮೈಥುನ ದಿವಾನಿದ್ರೆಗಳಂ ಮಾಡಲಾಗದಂ (ವಿವೇಕ. ೧೫೦); ವಿವಾಹವಾದ ಸ್ತ್ರೀಯಲ್ಲೂ ದಿವಾಮೈಥುನವನ್ನು ಈ ನೆಲೆಯ ಗೃಹಸ್ಥನು ಬಿಡುತ್ತಾನೆ (ಭಾರದ. ೧೮೪). [ ಸಂ. ]

**ದಿವಾಮೈಥುನವಿರತ** (ನಾ). [ಜೈನ] ಹಗಲಿನಲ್ಲಿ ನಡೆಸುವ ಸಂಭೋಗ ಅಥವಾ ಅದರ ಬಯಕೆಯನ್ನು ನಿಷೇಧಿಸುವ ವ್ರತವನ್ನು ಕೈಗೊಂಡವನು : ದರ್ಶನಿಕಃ ದರ್ಶನೀಕನೆಂದು ಅರ್ಥ ಅನಂತರದಲ್ಲಿ ವ್ರತಿಕಃ ವ್ರತಿಕನೆಂದು . . . ದಿವಾಮೈಥುನವಿರತಃ ದಿವಮೈಥುನವಿರತವೆಂಬೀ ಸಚ್ಚಿತ್ತದಲ್ಲಿಯೆಯಿಹುದು (ಸಾಗಾಧ. ೫೯-೨). [ ದಿವಾಮೈಥುನ + ವಿರತ ]

**ದಿವಾಮೈಥುನ ವಿರತಿ** (ನಾ). [ ಜೈನ ] ಹಗಲಿನಲ್ಲಿ ಸಂಭೋಗವನ್ನು ಅಥವಾ ಅದರ ಬಯಕೆಯನ್ನು ನಿಷೇಧಿಸುವ ವ್ರತ : ದಿವಾಮೈಥುನವಿರತಿ:-ಇಲ್ಲಿ ಮೈಥುನ ಶಬ್ದಕ್ಕೆ ವಿಶಾಲವಾದ ಅರ್ಥವಿದೆ. ಮೈಥುನವೆಂದರೆ ಕೇವಲ ಕಾಯಿಕ ಭೋಗವೆಂದಿಷ್ಟೇ ಅಲ್ಲ . . . ಮನ ವಚನಗಳು ಶುದ್ಧವಾಗಿರುವ ಉದ್ದೇಶದಿಂದ ದಿವಾಮೈಥುನವಿರತಿಯನ್ನು ಜೈನಶಾಸ್ತ್ರಗಳು ಒತ್ತಿ ಹೇಳುತ್ತಿವೆ (ಜೈನಪ. ೪೭೨). [ ದಿವಾಮೈಥುನ + ವಿರತಿ ]

**ದಿವಾರಾತ್ರ** (ನಾ). = ದಿವಾರಾತ್ರಿ. [ ಸಂ. ]

**ದಿವಾರಾತ್ರಿ** (ನಾ). ೧. ಹಗಲು ಮತ್ತು ರಾತ್ರಿ: ದಿವಾರಾತ್ರಿಯುಳ್ಳನ್ನಬರೆ ಎನ್ನ ಮನ ಜಿಹ್ವೆ ನೇತ್ರಂಗಳಿಗೆ ಬಂಧನಂಗಳೆಂಬಿವು ಮುಂದುಗೆಡುವವಯ್ಯ (ಘನವ. ೩-೧) ; ಅಂದು ಮೊದಲಾಗಿ ಮಾಲಿನಿ ದಿವಾರಾತ್ರಿಯೊಳ್ಕುಂದದೆ ಕೃತಾಂತನಂ ನಾನಾವಿಧಾನಗಳಿಂದೆ ಪೂಜಿಸುತಿರ್ದಳು (ಜೈಮಿಭಾ. ೨೭-೧೭). ೨. ಹಗಲು ಅಥವಾ ರಾತ್ರಿ : (ಕ). 'ದಿವರಾತ್ರಿ' ಪಠಾ. [ <ಸಂ. ದಿವಾರಾತ್ರ ]

**ದಿವಾವಸಾನ** (ನಾ). = ದಿವಸಾಂತ. [ ದಿವ + ಅವಸಾನ ]

**ದಿವಾಸ್ವಾಪ** (ನಾ). ಹಗಲಿನಲ್ಲಿ ಮಾಡುವ ನಿದ್ದೆ ; ಹಗಲುನಿದ್ದೆ : ಶ್ರೀ ಪದ್ಮದೊಳೊದವೆ ಮನಸ್ತಾಪಂ ಪುಟ್ಟಿದುದೊ ತಮಗೆ ರುಜೆಯಾಯ್ತೊ ದಿವಾಸ್ವಾಪ[ಪಾಠಾಂ. ದಿವಸ್ವಾಪ]ದಿನೆನೆ ನಯಮಿಟಿದವೊಲೊಪ್ಪಿದುವು ಮಧುಪಪ್ರವೇಶದೊಳ್ ಕುಮುದಂಗಳ್ (ಲೀಲಾವ. ೯-೮೭). [ ಸಂ. ]

**ದಿವಾಳಿ₁**, ದೀವಳಿ (ನಾ).=ದೀಪಾವಳಿ: "ದಿವಾಳಿ (ದಿವಳಿ)–ದೀಪಾವಲೀ" (ತದ್ಭಕೋ. ೧೯) : ನಿವಾಳಿಗೆ ತಂದ ಬಟ್ಟೆ ಕಟ್ಟಿಗೆ ಆದರೆ ದಿವಾಳಿಗೆ ಏನು ಮಾಡ್ತ್ಯಾನು? (ಗಾದೆ). **ದೀವಳಿ:** ದೀವಳಿಯ ಚತುರ್ದಶಿಗಳೊಳಾವಗಮಲು ಗಗನವೆಲ್ಲವಮಂ ಮಾಡಿಸಿಕೊಂಡಾ ವಾಸರದೊಳು ಕಟ್ಟಿದೊಡೇವೇಟ್ಬ್ಬದೆ ಭೂತರಕ್ಷೆಯೆಂಬವರ್ಮುರ್ಘರ್ (ಸಮಪ. ೩೭೮–೧೩ ಅನುಬಂಧ).

[ <ಸಂ. ದೀಪಾವಲೀ ]

**ದಿವಾಳಿ₂** (ನಾ). ೧. ಎಲ್ಲವನ್ನೂ ಕಳೆದುಕೊಂಡು ದಾರಿದ್ರ್ಯಕ್ಕೆ ಗುರಿಯಾದವನಂ; ಪಾಪರು; ನಿರ್ಗತಿಕ; ನಾದಾರಿ (ಉಕ) : ಧನವಿದ್ದರೂ ಕೊರಗುವ ಸ್ಥಿತಿಗೂ ದಿವಾಳಿಯು ಕೊರಗುವ ಸ್ಥಿತಿಗೂ ವ್ಯತ್ಯಾಸವುಂಟೇ (ಜೀವಾತ್ಮ. ೨೭೩). ೨. ಅತಿಯಾದ ಖರ್ಚು; ದುಂದುಗಾರಿಕೆ: ಅಂದು ಸೇತುರಾಮನಿಗೆ ದಳ್ಳಾಳಿಗಳಿಂದ ವಿಶೇಷ ಹಣವು ಸಿಕ್ಕಿದ್ದಿತು. ಅದರ ದಿವಾಳಿಯಲ್ಲಿ ಮದಿರಾಪಾನ ಅಧಿಕವಾಯಿತು (ಜಯಂತ. ೩೭೩).

**ದಿವಾಳಿ ಎಬ್ಬಿಸು** = ಏನೂ ಉಳಿಯದಂತೆ ಮಾಡು : ಮನೆಯನ್ನು ಗುಡಿಸಿಬಿಡಲು ನನಗೆ ಯಾವಾಗ ಅವಕಾಶವಾದೀತು ಎಂಬುದೇ ಟಿಳಕರ ಚಿಂತೆ. ನಾನು ಹೊರಬಿದ್ದೆನೋ, ಅವರು ದಿವಾಳಿ ಎಬ್ಬಿಸಿದರೇ. ಆಮೇಲೆ ನನ್ನ ಶಂಖವಾದ್ಯ! (ಸ್ವಾ.ಚಿ. ೩೦೯). **ದಿವಾಳಿ ಏಳು** = ಎಲ್ಲವನ್ನೂ ಕಳೆದುಕೊಂಡು ದಾರಿದ್ರ್ಯಕ್ಕೆ ಗುರಿಯಾಗು; ಪಾಪರಾಗು : ಆತ ಯಾವುದೋ ವ್ಯವಹಾರದಲ್ಲಿ ಸಿಲುಕಿಕೊಂಡು ದಿವಾಳಿ ಏಳುವ ಸ್ಥಿತಿಗೆ ಬಂದ (ರೂಢಿ). **ದಿವಾಳಿ ತೆಗೆ** = ೧. ಪೂರ್ಣ ದಾರಿದ್ರ್ಯಕ್ಕೊಳಗಾಗು; ನಿರ್ಗತಿಕವಾಗು : ಕನ್ನಡ ಕಂಪನಿ ದಿವಾಳಿ ತೆಗೆಯುವ ಸ್ಥಿತಿಗೆ ಬಂದು (ನಾಪೂಲೀ. ೧೬೧). ೨. = ದಿವಾಳಿ ಎಬ್ಬಿಸು : ಇದರ ವ್ಯವಹಾರವನ್ನೆಲ್ಲ ಸೆಕ್ರೆಟರಿಯು ಕೈಗೊಪ್ಪಿಸಿಬಿಟ್ಟರೆ ಎಲ್ಲ ದಿವಾಳಿ ತೆಗೆದು ಬಿಟ್ಟಾಳು (ಬದುಜ. ೧೪೧). **ದಿವಾಳಿದಾಸ** = ನಿರ್ಗತಿಕ; ದರಿದ್ರ : ಅವನೇನೋ ದಿವಾಳಿದಾಸ ನಿರಬಹುದು (ವಿಧಿವ್ಯ. ೩೦). **ದಿವಾಳಿಯಾಗು** = ದಿವಾಳಿ ತೆಗೆ ೧ : ಇಂದು ಶ್ರೀಮಂತರಾಗಿದ್ದವರು ನಾಳೆ ದಿವಾಳಿಯಾಗುವುದೂ ಇದೆ (ವಿಧಿವ್ಯ. ೯೧); ಇಂದೋ ನಾಳೆಯೋ ದಿವಾಳಿಯಾಗುವ ಕಾರ್ಖಾನೆ ಅದು (ಸಾವಿಸ. ೩); **ದಿವಾಳಿಹನುಮ** = "ದುಂದುಗಾರ" (ಜಾನಕೋ. ೫).

[ ←ಮರಾ. ದಿವಾಳೂ, ದಿವಾಳೇ; ಹಿಂ. ದಿವಾಲಾ ]

**ದಿವಾಳಿಖೋರ** (ನಾ). ೧. ದರಿದ್ರ; ನಿರ್ಗತಿಕ; ಪಾಪರಾದವನು; ನಿಮ್ಮಲ್ಲಿ ದಯೆಯನ್ನು ಕಂಡು ನಾನು ಯಾವ ಗಾಳಿಗೋಪುರವನ್ನೂ ಕಟ್ಟಲಾರೆ ಅಥವಾ ನಿಮ್ಮನ್ನು ದಯಾಶೂನ್ಯ ದಿವಾಳಿಖೋರರನ್ನಾಗಿಯೂ ಮಾಡಲಾರೆ (ಜಯಂತ. ೪೭೮). ೨. ದುಂದುವೆಚ್ಚ ಮಾಡುವವನಂ; ದುಂದುಗಾರ : (ಕಿ). [ ←ಮರಾ. ದಿವಾಳಖೋರ್ ]

**ದಿವಾಳಿತನ** (ನಾ). ಸಾಲ ತೀರಿಸಲಾಗದಿರುವುದು; ಪಾಪರಾಗುವುದು : ದಿವಾಳಿತನ ಮತ್ತು ಶೋಧಾಕ್ಷಮತೆ (ಭಾಧಾನ. ೨೯೪).

[ ದಿವಾಳಿ₂ + –ತನ ]

**ದಿವಿ** (ನಾ). ೧. ಸ್ವರ್ಗ; ದೇವಲೋಕ : ಕೊಟ್ಟಿಗೆ ಮನೆಯಲ್ಲಿ ಅಟ್ಟವು ದಿವಿಯಲ್ಲ ಘಟ್ಟವು ಮೇರು ತಾನಲ್ಲ (ಇಂಚಾಪ. ೧೧೧–೪೨); ಓ ದಿವ್ಯ ಚೇತನೆಗಳೆ . . . ಬುವಿಗೆ ದಿವಿಯ ತನ್ನಿ! (ಅನಿಕೇ. ೨೧–೬). ೨. ಗಗನ; ಆಕಾಶ: ಇಂದುರುಚಿ ಬಲಿದುದೊ ಹರಸ್ಮೇರಂ ದಿವಿಯೊಳಾಕಾರವಾಯ್ತೊ ಹಿಮಂದಳೆದುದೋ ಕಠಿಣಮಂ ಸುಧೆ ಬೆಳೆದಚಲವಾಯ್ತೊ . . . ಎನೆ ರಜತಾದ್ರಿ ರಂಜಿಪುದು (ಬಸಪು. ೧–೩೮); ಭರತನು ಮೇಣು ಮುಂದಲೆವಿಡಿದು ನೆಲಕಪ್ಪಳಿಸಿ ಚಿಮ್ಮಿದ ದಿವಿಗೆ ಮಂದರೆಯಾ (ಅನಂರಾ. ೨–೩–೨೫). ೩. ದಿನ; ಹಗಲಂ. ೪. [ಗಣಿತ] ಸೊನ್ನೆ ಎಂಬುದರ ಸಂಕೇತ: ಗಗನಾಂಬರ ದಿವಿಯು ಶೂನ್ಯಂ (ಭಾಸ್ಕರ. ೭೪–೬). [ <ಸಂ. ದಿವ ]

**ದಿವಿಜ** (ಗು). ೧. ಸ್ವರ್ಗದಲ್ಲಿ ಹುಟ್ಟಿದ,– ಜನಿಸಿದ; ದೇವಲೋಕಕ್ಕೆ ಸಂಬಂಧಿಸಿದ; ಶ್ರೇಷ್ಠವಾದ. 'ದಿವಿಜಕಂಜ' ಪರಾ. (ನಾ). ೨. ಸ್ವರ್ಗದಲ್ಲಿ ಹುಟ್ಟಿದವನು; ದೇವತೆ: ದಿವಿಜನೋ ಫಣಿನಾಯಕನೋ ಮನೋಭವನಿವಂ ಕರಮೊಪ್ಪಿದಂ (ಕವಿರಾ. ೧–೧೪೦); ಪೆಂಪಿನ ಜಿತಶತ್ರುವುಂ ವಿಜಯಸೇನೆಯುಮಿರ್ವರೆ ಪುಣ್ಯಭಾಜನರ್ ಎಂದು ದಿವಿಜರೆಲ್ಲಂ ಪೊಗಟ್ದು (ಅಜಿಪು. ೪–೧೯ ವ); ವನಜಜ ಬನ್ನಿಂ . . . ಪದಾವನತಿ. ಯಿನೇಟ್ ಮಹೇಂದ್ರ ದಿವಿಜರ್ ಪುಗೆ ಬಾರಿಸವೇಡೆನುತ್ತೆ . . . ಸುಪ್ತಿಯೊಳ್ ಕನವರಿಸುತ್ತುಮಿರ್ಪ ಹರಿ ಗೋಪಿಗೆ ವಿಸ್ಮಯಮಂ ನೆಗಟ್ಚಿದಂ (ಜಗವಿ. ೩–೫೮). ೩. [ಛಂದ] ಒಂದು ಅಕ್ಷರಗಣ; ನಗಣ (ഺ ഺ ഺ): ದಿವಿಜ ದಿನಾಧಿಪ ಭಾನು ಶೀತಕರಾಗ್ನಿಯೆಂದಿವು ನೆರೆದಿಂಬೆನೆ ಬಂದೊಡಾ ಯತಿ ಹತ್ತಱತ್ತವತರಿಸಿದೊಡಮಂಬುಜಾಯತಲೋಚನೇ ನವನಲಿನಂ (ಛಂದೋಂಬು. ೨–೧೫೭). [ ಸಂ. ]

**ದಿವಿಜಗ್ಗಟವಲ್ಲಹ** = ಒಂದು ಬಿರುದು : ಒಗಬಳ್ಳಿಯುಳಿಱಿದು ವಿಟಿಲ್ದಂ ಗುಣಶೀಲರಾಣೆದ ಸೀ × × ಪೊಟ್ಟರಾವ ಕೊವಳಾಟ ಮಹೇಸ್ವರ ದಿವಿಜಗ್ಗಟವಲ್ಲಹ ಪೆಂಮಾಳ್ವಟ್ (ಎಕ. XVI, ತುಮಕೂ. ೯೧–೧೮ ; ಸು. 775). [ ಸಂ. ]

**ದಿವಿಜಕಲ್ಪಲತೆ** (ನಾ). [ಛಂದ] ಒಂದು ಅರ್ಧಸಮವೃತ್ತದ ಹೆಸರು: ಪಾವಕಾಮರಗಣಾನಲಂ ಲಗಂ ದಿವಿಜಚಂದ್ರಕುಮುದಾರಿ ಪಾವಕಂ ಭಾವಿಸುತ್ತುಮಿರೆ ಕೋಮಲಾಂಗಿಯೇ ದಿವಿಜ [ಪಾಠಾಂ. ಕೋಮಲೋಕ್ತಿ ಸಂಭವಿಸೆ] ಕಲ್ಪಲತೆಯಾಯ್ತು ನಾಮದಿಂ (ಛಂದೋಂಬು. ೩–೩೦೮). [ ದಿವಿಜ + ಕಲ್ಪಲತೆ ]

**ದಿವಿಜಕಾಂತೆ** (ನಾ). ದೇವತಾಸ್ತ್ರೀ; ಅಪ್ಸರೆ : ಅವಯವಶೋಭೆಯಿಂ ದಿವಿಜಕಾಂತೆಯರಂ ಮಿಗುವೀ ವಿಲಾಸಿನೀನಿವಹದ ವಕ್ತ್ರದೊಳ್ಸರಸಿಜಂ . . . ನೇತ್ರದೊಳ್ ಕುವಳಯಮಲ್ತೆ ಮಚ್ಚರಿಸುತಿರ್ಪುವು (ಮಲ್ಲಿಪು. ೬–೯೨)

[ ದಿವಿಜ + ಕಾಂತೆ ]

**ದಿವಿಜಕುಜ** (ನಾ). (ಕೇಳಿದುದನ್ನು ನೀಡುವುದೆಂದು ನಂಬಲಾದ) ದೇವಲೋಕದ ವೃಕ್ಷ; ಕಲ್ಪವೃಕ್ಷ: ದಿವಿಜಕುಜಂಗಳಾರವೆಗಳಾದುವು ಸಿದ್ಧರಸಂ ತಟಾಕವಾದುವು (ಪಂರಾಮಾ. ೩–೧೧೯); ದಿವಿಜಕುಜಂಗಳ್ ಪುಟ್ಟಿದುವು (ವರ್ಧಪು. ೭–೨೦); ದಿವಿಜಕುಜದೇಳ್ಗೆ ಕೀಳ್ಪಡೆ ಸುವಸ್ತ್ರಮಣಿಭೂಷಣಂಗಳಂ ಪಡೆದಿತ್ತಂ (ರಾಜಶೇ. ೧೨–೯೯). [ ದಿವಿಜ + ಕುಜ ]

**ದಿವಿಜಕುಜಾತ** (ನಾ). = ದಿವಿಜಕಂಜ : ಸಕಳಫಳೈಶ್ವರ್ಯದಿಂ ಲೋಕಮಂ ರಕ್ಷಿಸುತ್ತಿರ್ಕ್ಕು ಪೂರ್ಣ್ನಚೇತೋರಥಯುತಂ ಕಮಳಾಕಲ್ಪವಲ್ಲೀವಿಳಾಸಾವಸಥಂ ಶ್ರೀವಿಷ್ಣುದಂಡಾಧಿಪ ದಿವಿಜಕುಜಾತಂ (ಎಕ. V, ಬೇಲೂರು. ೧೭–೨೭ ; 1136). [ ದಿವಿಜ + ಕುಜಾತ ]

**ದಿವಿಜಕ್ಷ್ಮಾಜ** (ನಾ). = ದಿವಿಜಕುಜ: ಪತಾಕಾನ್ವಿತಂಗಳ್ದಿವಿಜಕ್ಷ್ಮಾಜಪ್ರಸೂನಪ್ರಸರ ಸರಯುತಂಗಳ್ಮಹಾಪುಷ್ಪಕಂಗಳ್ (ರಾಜಶೇ. ೧೪–೧೧೬).

[ ದಿವಿಜ + ಕ್ಷ್ಮಾಜ ]

**ದಿವಿಜಖೇಟಕ** (ನಾ).=ದಿವಿಜಪುರ : ಸವಯಸ ದಿವಿಜಖೇಟಕ ನವಪೇಟಕ ನಿಕರಮಗಲದಿರಲಬ್ಧಿಯ ಮೇರುವ ಕೆಲದ ಗಿರಿಕದಂಬಕದವಜ್ಞೆಯಂ ಪೋಲ್ತುದಾ ಕುಮಾರನ ಕೆಲದೊಳ್ (ಶಾಂತಿಪು ೧೦–೮೧).

[ ದಿವಿಜ + ಖೇಟಕ ]

**ದಿವಿಜಗಜ** (ನಾ). ದೇವಲೋಕದ ಆನೆ; ಐರಾವತ: "ಐರಾವಣಮಭ್ರಮುದ್ವಿಪವ್ಯೈರಾವತಮಭ್ರಮೂಪ್ರಿಯಂ ದಿವಿಜಗಜಂ" (ವಸ್ತುಕೋ. ೭–೩೭); ದಿವಿಜಗಜಂ ಸೆಚ್ಚರದಿಂದವೆಟ್ಟುದು (ಜಗವಿ. ೧೬–೧೩೮): ದಿವಿಜಗಜಾಗ್ರದೊಳಿರ್ದುಂ ಭುವನಾಗ್ರದೊಳಿರ್ದನೆನಿಸಿದಂ (ಚಂದ್ರಪು. ೧೨–೧೬೫).

[ ದಿವಿಜ + ಗಜ ]

**ದಿವಿಜಚಾಪ** (ನಾ). ಕಾಮನ ಬಿಲ್ಲು; ಇಂದ್ರಚಾಪ : ದಿವಿಜಚಾಪವೆಂತಂತುಟಿ ಭವವಿಭವಾಭಿಜಾತ್ಯಮೆಂತುಮನಿತ್ಯಂ (ಸುಕುಮಾ. ೧೨-೨೭).
[ ದಿವಿಜ + ಚಾಪ ]

**ದಿವಿಜಜನ** (ನಾ). ದೇವಲೋಕದ ಜನ; ದೇವತೆಗಳ ಸಮೂಹ : ದಿವಿಜಜನಸೇವಿತಂ ಭುವನವಂದ್ಯಮಾಹ್ಲಾದಿತತ್ರಿಲೋಕಂ (ಆದಿಪು. ೧೦-೫೮); ನಿನಗನ್ವರ್ಥಂ ಶ್ರೀಧರವಿನುತಾಹ್ವಯಮೆಂದು ಪೊಗಟ್ದುದಾ ದಿವಿಜಜನಂ (ಚಂದ್ರಪು. ೪-೬೮). [ ದಿವಿಜ + ಜನ ]

**ದಿವಿಜತಟನಿ** (ನಾ). ದೇವಲೋಕದ ನದಿ; ದೇವಗಂಗೆ : ಅರ್ಜುನನ ತಲೆಯನಾತನ ಸುತಂ ಕೊಚ್ಚಿ ಕೆಡಹಲಿ ತಿಂಗಳಾಚಿಕಾಹವದೊಳೆಂದುಚ್ಚರಿಸಿ ಶಾಪಮಂ ಕೊಟ್ಟಡಗಿದಳ್ಜಲದ ಮಧ್ಯದೊಳ್ದಿವಿಜತಟನಿ (ಜೈಮಿಭಾ. ೯-೩೨). [ ದಿವಿಜ + ತಟನಿ ]

**ದಿವಿಜತನಯ** (ನಾ). ೧. ಇಂದ್ರನ ಮಗ. ೨. ಅರ್ಜುನ : ದಿವಿಜತನಯಂಗೆ ಮುಖ್ಯಂ ರವಿಜಂಗಂದಾದನೆನಗೆ ಕಣ್ಣೊಳ್ ಕಾಣಂ ಕಿವಿಯೊಳ್ ಕೇಳಂ ಕಾಣ್ಬಂದವೆಂತು ಕೇಳ್ವಂದುಮೆಂತು ತಲೆಯಿಲ್ಲದರಂ (ಗದಾಯು. ೫-೩೬). ೩. ಜಯಂತ. ೪. ವಾಲಿ.
[ ದಿವಿಜ + ತನಯ ]

**ದಿವಿಜತುರಂಗ** (ನಾ). ದೇವಲೋಕದ ಕುದುರೆ; ಇಂದ್ರನ ಪಟ್ಟದ ಕುದುರೆ; ಉಚ್ಚೈಶ್ರವಸ್ಸು : "[ ತುರಗಮು ]ದುಚ್ಚೈಶ್ರವಸಮುದುಮೆ ದಿವಿಜತುರಂಗಂ" (ವಸ್ತುಕೋ. ೬-೩೬). [ ದಿವಿಜ + ತುರಂಗ$_1$ ]

**ದಿವಿಜತೆ** (ನಾ). ದೇವತೆಯಾಗಿರುವಿಕೆ : ದೇವಲೋಕದಲ್ಲಿ ಹುಟ್ಟಿರುವಿಕೆ; ದೈವತ್ವ : ದಿವಿಜತೆಯಿಂ ದಿವಸಂಗಳ ಪಮಣಿಯುಲ್ಪಾರದಾದೊಡಂ ಸೊಗಯಿಸಿ ತೋರ್ಪಮಯುಮದಿಂದಂ ಪದಿನೆಂಟು ಬರಿಸದಾಕೃತಿಯಿನಬ್ಜಮುಖಿ ಕಣ್ಗೆಸೆದಳ್ (ಕಾದಂಪೂ. ೬೮೧); ದಿವಿಜತೆಯ ಮೂರ್ತಿಯೆ ಮೆಯ್ಯಿಕ್ಕುವುದು ತಾನೆ ಗಡ ಮಾಣ್ದುದದು ಚೆಲ್ವಲ್ತೆಂದವನ ಮನುಜತೆಯ ತನು ನೋಟ್ಪವರೊಳ್ ಮಾಣಿಸಿದುದಾದಮೆಮೆಯಿಕ್ಕುವುದಂ (ಚಂದ್ರಪು. ೪-೮೩). [ ಸಂ. ದಿವಿಜತಾ ]

**ದಿವಿಜದಲ್ಲಣ** (ನಾ). ದೇವತೆಗಳಿಗೆ ಹೆದರಿಕೆಯನ್ನುಂಟುಮಾಡುವವನು; ದೇವತೆಗಳನ್ನು ತಲ್ಲಣಗೊಳಿಸುವವನು : ದಿವಿಜದಲ್ಲಣ ಜೀಯ ಕಾದುವನಿವನು ಸಾವನ್ನವರ ಸವೆಯನು ಸಮರದಲಿ ನಿಪುಣ (ಕೌಶಿರಾ. ೩೧-೨೨).
[ ದಿವಿಜ + ತಲ್ಲಣ (<ತಲ್ಲಟ) ]

**ದಿವಿಜದೀರ್ಘಿಕೆ** (ನಾ). ದೇವಲೋಕದ ನದಿ; ಗಂಗಾ ನದಿ : ಅಂತು ಪಾತಾಳಮೂಲಂಬರಂ ಮುಳುಗಿ ದಿವಿಜದೀರ್ಘಿಕೆಯೊಳ್ ಮುಳುಗಿ ನೆಗೆವ ಅಭ್ರಮೂಪತಿಯಂತೆ ನೆಗೆಯಲೊಡಂ (ಚಂದ್ರಪು. ೫-೪೩ ವ). [ ದಿವಿಜ + ದೀರ್ಘಿಕೆ ]

**ದಿವಿಜಧುನಿ** (ನಾ). ದೇವಲೋಕದ ನದಿ; ಗಂಗಾನದಿ : ಸ್ಫುರಿಪಾಭದಾನದಿಯುತ್ತರಗಿರಿಯೆಲ್ಲಮನತಿಕ್ರಮಿಸಿ ಬಳಿಕೆ ಪೊನಲ್ವರಿದು ಕುರುಮಹದೊಳ್ ಸಾಗರಮಂ ಕೂಡಿದುರು ದಿವಿಜಧುನಿಯಂತೆಸೆಗುಂ (ವಿಷ್ಣುಪು. ೬-೬೧).
[ ದಿವಿಜ + ಧುನಿ ]

**ದಿವಿಜಧೇನು** (ನಾ). (ಕೇಳಿದುದನ್ನು ಕೊಡುವುದೆಂದು ನಂಬಲಾದ) ದೇವಲೋಕದ ಹಸು; ಕಾಮಧೇನು : ಶರಣ ಪೊರಟದ ಬಂಕತಂದೆಗೆ ಕೊಟಡು ಕೊನರ್ದು ನಿಮಿರ್ದುಪೊಲು ಅಚ್ಚರಿಯ ದಸರಯ್ಯಗಳ ದಿವ್ಯಶಿರೋದಿವಿಜಧೇನು ಕರದ ಕಟುಗಳನೀದಪೊಲು (ಬಸ್ವ. ೩೮-೪೦).
[ ದಿವಿಜ + ಧೇನು ]

**ದಿವಿಜನದಿ** (ನಾ). = ದಿವಜಧುನಿ : ದಿವಿಜನದೀತರಂಗಧವಳಂ ನಿಜನಿರ್ಮಲಕೀರ್ತಿವಲ್ಲಿ ಭೂಭುವನಮನಾವಗಂ ಪುದಿವಿನಂ . . . ತಳೆದಂ ಸರಸ್ವತೀಶ್ರವಣವಿಭೂಷಣಪ್ರಥಿತವಾಗ್ವಿಭವಂ ಕವಿತಾಮನೋಹರಂ (ಪಂರಾಮಾ. ೧೨-೯೯); ದಿವಿಜನದಿಯ ಕೈರವಂಗಳ ಕುಟ್ಮಳಾವಳಿಗಳೋ ಮಿಸುಪ ತೋರ ಮಲ್ಲಿಗೆಯರಳಿನಿಂ ವಿಷ್ಣುಪದವನೊಲಿದಾರಾಧಿಸಿದಳೋ ನಿಶಾನಾರಿ ಎನೆ ತರಳತಾರಾಳಿ ಕಣ್ಗೆಸೆದುದು (ಹಚಕಾ. ೩-೭೯).

ದಿವಿಜನದಿಯಾತ್ಮಜ = ಗಂಗೆಯ ಪುತ್ರ; ಭೀಷ್ಮ : ದಿವಿಜನದಿಯಾತ್ಮಜಗೆ ನಗುತಸುರಾರಿಯಿಂತೆಂದ (ತಿಮ್ಮಕಾಂ. ೨-೪೫). [ ದಿವಿಜ + ನದಿ ]

**ದಿವಿಜನದೀಸೂನು** (ನಾ). ಗಂಗೆಯ ಪುತ್ರ; ಭೀಷ್ಮ : ಕವಲಂಬುಂ ತಲೆಗಿಂಬಿನ ಕವುಳುಡೆ ಶರಮುಂಚವೆರಸಿದರಲೆಯ ಹಾಸಂಬಿವು ಬಾಣಗಣದಿನೆಸೆದಿರೆ ದಿವಿಜನದೀಸೂನು ಶಸ್ತ್ರಶಯನದೊಳಿರ್ದಂ (ಗದಾಯು. ೫-೩೯).
[ ಸಂ. ]

**ದಿವಿಜನಾಯಕ** (ನಾ). ದೇವತೆಗಳ ಒಡೆಯ,-ಪ್ರಭು; ದೇವೇಂದ್ರ : ಮಂದರಶೈಲಮಂ ದಿವಿಜನಾಯಕನೆಯ್ತರೆ . . . ಪಾಂಡುಕದಿನಾ ಗಿರಿರಾಜವಿಲಾಸಮುಟ್ಟಿಯಂ ತಂದುದು (ಶಾಂತಿಪು. ೫-೨). [ ದಿವಿಜ + ನಾಯಕ ]

**ದಿವಿಜನಿಕಾಯ** (ನಾ). ದೇವತೆಗಳ ಗುಂಪು,-ಸಮೂಹ : ದಿವಿಜನಿಕಾಯದ ಜಯಜಯರವದಿಂದಂ . . . ಎಸೆದುದು ಸಮವಸರಣ ದುಂದುಭಿನಿನದಂ (ಆದಿಪು. ೧೪-೧೩೬) [ ದಿವಿಜ + ನಿಕಾಯ ]

**ದಿವಿಜನಿವಾಸ** (ನಾ). ದೇವತೆಗಳ ವಾಸಸ್ಥಾನ; ಸ್ವರ್ಗ : ದಿವಿಜನಿವಾಸಂಗಳ ದಿವಿಜವಿಟಪಿಗಳ . . . ವಿಶೇಷಸುಖಮನೊಸೆದನುಭವಿಸುತುಮಿರೆ ಪಲವು ಕಾಲಮಂತಾ ದಿವಿಜಂ (ವರ್ಧಪು. ೧೦-೫೫). [ ದಿವಿಜ + ನಿವಾಸ ]

**ದಿವಿಜಪತಿ** (ನಾ). = ದಿವಿಜನಾಯಕ : ಕಂಡಂ ದಿವಿಜಪತಿ ತನ್ನ ಮುನ್ನಿನ ಭವಮಂ (ಶಾಂತಿಪು. ೬-೧೯); ಅದು ಗುಹ್ಯಕೋಪಗತಸಂಪದಮೆಂದಕುಲೀನಮೆಂದು ಬಹುವಿಷಧರಮೆಂದೊದವಿದ ಮಹತ್ತ್ವದಿಂದಿಟಿಪುದು ಧನಪತಿ ದಿವಿಜಪತಿ ಫಣಾಪತಿಪುರಮಂ (ಪುಷ್ಪಪು. ೨-೩೩). [ ದಿವಿಜ + ಪತಿ$_2$ ]

**ದಿವಿಜಪದ** (ನಾ). ೧. ಸ್ವರ್ಗ; ದೇವಲೋಕ. ೨. ಆಕಾಶ; ಗಗನ : ಶ್ರವಣಭೂಷಣದಿಂದೆ ಹಸ್ತಾಭರಣದಿಂದೆ ದಿವಿಜಪದಮೆಸೆವಂತೆ ಕುಂತಳಶ್ರೀಯ ವೈಭವದಿಂದೆ ರಮಣೀಯಕಾಂಚೀಪ್ರದೇಶದಿಂ ಭೂಭಾಗವೊಪ್ಪುವಂತೆ . . . ವಿಷಯಂ ಕಂಗೊಳಿಸಿರ್ದಳು (ಜೈಮಿಭಾ. ೩೧-೧೦).
[ ದಿವಿಜ + ಪದ$_2$ ]

**ದಿವಿಜಪುರ** (ನಾ). ೧. ದೇವತೆಗಳ ಪಟ್ಟಣ; ಅಮರಾವತಿ : ೨. = ದಿವಿಜ ೩ : ದಿವಿಜಪುರ ಯುಗಯುಗದೆ ನಿಲಲನಿಲಂ ಶೀತಕರ ಶ್ರಿತೆಯುಂ ಕಡೆಯೊಳ್ ಭವನಿರೆ ಕರಿಗಿರಿಗಣನೆಗಳೊಳಗಂ ತಟ್ಟಿಸೆಗುಂ ಪದವಿಶ್ರಮಣಂ (ಧಂದೋಂಬು. ೨-೧೯೬). [ ದಿವಿಜ + ಪುರ$_2$ ]

**ದಿವಿಜಪುರಿ** (ನಾ). ಇಂದ್ರನ ನಗರ; ಅಮರಾವತಿ : ಸರಳನೊಂದನೆ ತೊಡಚುಶಚ್ಚೊಡೆ ತರಳಿತಗಣಿತಬಾಣಮಂಬಿನ ಶರಧಿಮೇರೆಯನೊಡೆದು ಬರುತಿರೆ ದಿವಿಜಪುರಿಗೆನುತ (ಸಂಭಪ. ೨೦-೮೬). [ ದಿವಿಜ + ಪುರಿ$_6$ ]

**ದಿವಿಜಪೇಟಕ** (ನಾ). ದೇವತೆಗಳ ಸಮೂಹ : ಬಂದುದು ದೇವ ದಿವಿಜ ಪೇಟಕಮನಿತುಂ (ಆದಿಪು. ೯-೧೦). [ ದಿವಿಜ + ಪೇಟಕ ]

**ದಿವಿಜಭವನ** (ನಾ). ದೇವತೆಗಳ ವಾಸಸ್ಥಾನ; ಸ್ವರ್ಗ : ದಿವಿಜಭವನಕ್ಕೆ ಹಾ ದಾನವೇಂದ್ರ ನೀನತಿಥಿಯಾದೆ (ಪಂರಾಮಾ. ೧೪-೧೯೯).
[ ದಿವಿಜ + ಭವನ ]

**ದಿವಿಜಮಂತ್ರಿ** (ನಾ). ದೇವತೆಗಳ ಮಂತ್ರಿ; ಬೃಹಸ್ಪತಿ : "ಅಂಗಿರಸ ಸುರೇಜ್ಯಂ ಧಿಷಣಂ ಗೀಃಪತಿ ದಿವಿಜಮಂತ್ರಿ ವಾಚಸ್ಪತಿ ಮತ್ತಾಂಗಿರಸಂ ವಾಕ್ಪತಿ ಜೀವಂ ಗುರುವೆಂಬಿನಿತುಮಿವು ಬೃಹಸ್ಪತಿನಾಮಂ" (ವಸ್ತುಕೋ. ೧೩-೭೩). [ ದಿವಿಜ + ಮಂತ್ರಿ ]

**ದಿವಿಜಮಹೀಜ** (ನಾ). ದೇವಲೋಕದ ವೃಕ್ಷ; ಕಲ್ಪವೃಕ್ಷ : ದಿವಿಜಮಹೀಜಮುಂ ಮನುಜನುಯ್ವೊಡೆ ಸೈರಿಸೆ ಪುಟ್ಟುಗುಂ ಪರಾಭವಂ (ಜಗವಿ. ೧೮-೬೧). [ ದಿವಿಜ + ಮಹೀಜ ].

**ದಿವಿಜರಾಜ** (ನಾ). ದೇವತೆಗಳ ಒಡೆಯಂ,-ಇಂದ್ರ : ದಾದಿಯುವಾ ಸುಕುಮಾರಿಕೆಗಾದರದಿನವಂತಿನಾಥನಂ ತೋಱಿದಳಿಂದೂದಯಕಾಂತನ ನಹಿತನಿಷೂದನನಂ ದಿವಿಜರಾಜಲೀಲಾಸ್ಪದನಂ (ಶಾಂತಿಪು. ೫-೧೧೭); ನವಂಗೀ ದಿವಿಜರಾಜನಿಂ ಪ್ರಯೋಜನಮಿಲ್ಲ (ಜಗವಿ. ೪-೭೭ ವ).
[ ದಿವಿಜ + ರಾಜ ]

**ದಿವಿಜರಾಯ** (ನಾ). = ದಿವಿಜರಾಜ : ಇಳಿದು ರಥವನು ದಿವಿಜರಾಯನ ನಿಳಯವನು ಹೊಕ್ಕನು (ಕುಮ್ಯಾಅ. ೭-೮೩). [ ದಿವಿಜ + ರಾಯ ]

**ದಿವಿಜವಧು** (ನಾ). ದೇವತಾಸ್ತ್ರೀ ; ಅಪ್ಸರೆ : ಶಿವಶಿವ ದಿವಿಜವಧುಗಳ ತೋಳ ತೆಕ್ಕೆಗೆ ಒಡಲನಿತ್ತನು (ಕುಮ್ಯಾದ್ರೋ. ೨-೭೪). [ ದಿವಿಜ + ವಧು ]

**ದಿವಿಜವಧೂಟಿ** (ನಾ). = ದಿವಿಜವಧು : ದಿವಿಜವಧೂಟಿಯುರಧರಚ್ಛವಿ ಕುಂಕುಮಪಂಕದಿಂದೆ ಕೇಕರರೋಚಿಃಪ್ರವಿಮುಳಮುಳಯುರುಹಸ್ಮಿತ ಧವಳಾ ಕ್ಷತಕುಸುಮವಿಸರದಿಂದರ್ಚಿಸುವರ್ (ಪಾರ್ಶ್ವಪು. ೧೭-೫೦).
[ ದಿವಿಜ + ವಧೂಟಿ ]

**ದಿವಿಜವನಿತೆ**(ನಾ).=ದಿವಿಜವಧು: ದಿವಿಜವನಿತಾಸವಿಭ್ರಮಧವಳಾಪಾಂಗಮೆ ನಿಜಾಯುರಂಭೋನಿಧಿಯಂ ತವೆ ಪೀರ್ದುದೆನಿಸೆ (ಆದಿಪು. ೫-೯೯)
[ ದಿವಿಜ + ವನಿತೆ ]

**ದಿವಿಜವಲ್ಲಭ** (ನಾ). = ದಿವಿಜನಾಯಕ : ತದ್ದಿವಿಜವಲ್ಲಭಂ ಶ್ರೀಧರನಂ ನಿಪುಣಂ ಪೂಜಿಸಿದಂ (ಆದಿಪು. ೫-೯೮). [ ದಿವಿಜ + ವಲ್ಲಭ ]

**ದಿವಿಜವಿಮಾನ**(ನಾ). ೧. ದೇವಲೋಕದ ವಿಮಾನ; ಪುಷ್ಪಕ. ೨.[ಜೈನ] ಸ್ವರ್ಗದ ಒಂದು ವಿಭಾಗ; ೲ ದೇವತೆಗಳಂ ವಾಸಿಸುವ, ಒಂದೊಂದು ಜಿನಮಂದಿರವಿರಂವ ಇಂದ್ರಕ, ಶ್ರೇಣೀಬದ್ಧ, ಪ್ರಕೀರ್ಣಕಗಳೆಂಬ ಮೂರು ಪ್ರಕಾರದ ಎಂಬತ್ತುನಾಲ್ಕುಲಕ್ಷ ಐವತ್ತೇಳಂಸಾವಿರದ ಮೂವತ್ತುಮೂರು ಸ್ಥಾನಗಳಂ : ದಿವಿಜವಿಮಾನಂ ಮಾಡದವಿವು ಮಾಡಿದುವೆಂಬ ಭೇದಮಲ್ಲದೆ ಚೆಲ್ವಿಂ ನವರತ್ನರಚನೆಯಿಂ ಭೇದವಿಲ್ಲ ತತ್ಪುರದ ಭವನಮನಿತನಿತಱೊಳಂ (ಪಂರಾಮಾ. ೧-೧೨೩). 'ವಿಮಾನ' ಪರಾ. [ ದಿವಿಜ + ವಿಮಾನ ]

**ದಿವಿಜಶರಾಸನ** (ನಾ). = ದಿವಿಜಚಾಪ: ನವರತ್ನದ ಪಂಜರದೊಳ್ ದಿವಿಜ ಶರಾಸನದ ಮಱಿಯನಿರಿಸಿದವೊಲ್ ಸುತ್ತುವ ಸೋಗೆಯ ಸುತ್ತಿ ನೊಳಾಡುವ ಕೇಕಿಯ ಭಂಗಿ ಲೋಕಮಂ ಸೋಲಿಸುಗುಂ (ಯಶೋಚ. ೩-೩೭). [ ದಿವಿಜ + ಶರಾಸನ ]

**ದಿವಿಜಸಿಂಧು** (ನಾ). = ದಿವಿಜನದಿ. [ ದಿವಿಜ + ಸಿಂಧು ]

**ದಿವಿಜಸ್ತ್ರೀ** (ನಾ).=ದಿವಿಜವಧು : ದಿವಿಜಸ್ತ್ರೀಜಘನಾಭಿರಾಮರಶನಂ . . . ಚಿತ್ರೋದ್ಯತ್ಪವೀಚಾರಸಾರವಿನೋದಂಗಳಿನಂದದೇಂ ನಲಿದನೋ ಕಲ್ಪಾ ಮರಂ ಕಲ್ಪದೊಳ್ (ಸುಕುಮಾ. ೯-೩೫). [ ದಿವಿಜ + ಸ್ತ್ರೀ ]

**ದಿವಿಜಾಂಗನೆ** (ನಾ). = ದಿವಿಜವಧು: ದಿವಿಜಾಂಗನೆಯರ ವಿಳಸಿತ ಧವಳಾ ಪಾಂಗ ಪ್ರಭಾಲಸಚ್ಚಂದ್ರಿಕೆ ಪರ್ವೆ ವಿಯತ್ತಳದೊಳ್ (ವರ್ಧಪು. ೧೨-೫೩); ದಿವಿಜಾಂಗನೆಯರ್ ನರ್ತಿಪರ್ . . . ಅಭಿನಯ್ಸು ತ್ತಂ ನವ ನಾಟ್ಯರಸಾಧಿದೇವತೆಯರೆಂಬಿನೆಗಂ (ಪಾರ್ಶ್ವಪು. ೧೭-೬೩).
[ ದಿವಿಜ + ಅಂಗನೆ ]

**ದಿವಿಜಾಂಗರಕ್ಷ** (ನಾ). ದೇವತೆಗಳ ಮೈಗಾವಲಿನವನು,-ಅಂಗರಕ್ಷಕ : ಆ ಕುಮಾರರಂ ಸುಂದರಿಯರ್ ನಯಂಬೆರಸು ಸೋಂಕಿರೆ ತನ್ನೊಡನಿಂದ್ರ ನಾಜ್ಞೆಯಿಂದಂ ದಿವಿಜಾಂಗರಕ್ಷರಿರೆ (ಶಾಂತಿಪು. ೯-೫೯).
[ ದಿವಿಜ + ಅಂಗರಕ್ಷ ]

**ದಿವಿಜಾಂಗರಕ್ಷಕ** (ನಾ). = ದಿವಿಜಾಂಗರಕ್ಷ: ದಿವಿಜಾಂಗರಕ್ಷಕರುಮಂ ಸುರ ಲೋಕಕ್ಷೀರಪಯೋರಸಂಗಳುಮಂ . . . ನಿಯೋಜಿಸಿ (ಶಾಂತಿಪು. ೧೧-೮೦ ವ). [ ದಿವಿಜ + ಅಂಗರಕ್ಷಕ ]

**ದಿವಿಜಾಂಶಕೆ** (ನಾ). ದಿವಿಜಾಂಶವುಳ್ಳವಳಂ ; ದೇವಾಂಶ ಸಂಭೂತೆ : ಅನೂನದಾನ ಮೃದುವಾಕ್ಯಮಹಾಮಹಿಮಾತಿಶಕ್ತಿ ಸೌಂದರತರಪುಷ್ಪ ವಸ್ತ್ರವರಭೂಷಣೆ . . . ಪತಿಭಕ್ತಿಯಾಗೆ ದಿವಿಜಾಂಶಕೆಯೆಂದಱ್ (ಮದತಿ. ೩-೧). [ ಸಂ. ದಿವಿಜಾಂಶಕಾ ]

**ದಿವಿಜಾಚಳ** (ನಾ). (ಚಿನ್ನದ್ದೆಂದು ನಂಬಲಾದ) ದೇವತೆಗಳ ಬೆಟ್ಟ ; ಮೇರುಪರ್ವತ : ದಿವಿಜಾಚಳಮಂ ಪೊರ್ದುವ ನವಗ್ರಹಂಗಳ ವಿಳಾಸಮಂ ಕೀಟ್ಟಡಿಸಲ್ ನವರತ್ನಘಟಂಗಳ್ಳಿರೆದುವು (ಮಲ್ಲಿಪು. ೦೨-೧೪೦).
[ ದಿವಿಜ + ಅಚಳ ( = ಚಲ) ]

**ದಿವಿಜಾದ್ರಿ** (ನಾ). = ದಿವಿಜಾಚಳ : ದಿವಿಜಾದ್ರಿ ವಿರಾಜಿಸಿದುದು ಸುವರ್ಣ ವಿಭ್ರಮದೆ (ಶಾಂತೀಶ್ವ. ೧೪-೮೪); ಎಸೆವುದು ಸತ್ಸಂತಾನಯುತಂ ದಿವಿಜಾದ್ರಿ ಸಮಾನೀಕೃತ ಸಹಜಕವಿಸರೋವರಹಂಸಂ (ಪುಷ್ಪಪು. ೨-೧).
[ ದಿವಿಜ + ಅದ್ರಿ ]

**ದಿವಿಜಾಧಿನಾಥ** (ನಾ). = ದಿವಿಜರಾಜ : ಆ ದಿವಿಜಾಧಿನಾಥಮತದಿಂ ಸ್ಪನಿತಾಮರಬ್ಯಂದವಂದು ಗಂಧೋದಕವೃಷ್ಟಿಯಂ ಸುರಿವರ್ (ಶಾಂತಿಪು. ೧೨-೨೨). [ ದಿವಿಜ + ಅಧಿನಾಥ ]

**ದಿವಿಜಾಧಿಪ** (ನಾ). = ದಿವಿಜರಾಜ: ಆ ದಿವದಿಂದಮಸಾರತೆವಾ ದಿವಿಜಾಧಿಪನೆ ಬೆಸಸೆ ಪೂವಂ ದೇವಂಗಾದರದಿನಡಕೆ (ಅಜಿಪು. ೫-೭೫) : ಆ ದಿವಿಜಾಧಿಪರ್ ಸುರಿವ ಪಂಚಮಪಾರ್ಥಿಯ ಪಾಲ್ ವಿಲೋಚನಾಹ್ಲಾದಿ ಮುಸುಕುಂಕೆ . . . ಮೆಱೆದಂ ಭುವನೈಕಮಂಗಳಂ (ಅನಂಪು. ೫-೫೯).
[ ದಿವಿಜ + ಅಧಿಪ ]

**ದಿವಿಜಾಧಿವಾಸ** (ನಾ). ದೇವತೆಗಳ ವಾಸಸ್ಥಾನ ; ಸ್ವರ್ಗ : "ನಾಕಂ ದಿವಿಜಾಧಿವಾಸಮುಂ ಘನಪಥಮುಂ . . . ತಾನಕ್ಕುಂ (ವಸ್ತುಕೋ. ೧೨೦-೨೦). [ ದಿವಿಜ + ಅಧಿವಾಸ ]

**ದಿವಿಜಾಧೀಶ** (ನಾ).=ದಿವಿಜರಾಜ : ದಿವಿಜಾಧೀಶನ ಕೊಟ್ಟ ಶಕ್ತಿಯನದಂ ಕರ್ಣಂ ನರಂಗೆಂದು ಬಯ್ದಿವನಿಂದಿಂದಟಿವೆಯ್ದೆವಂದೊಡದಱಿಂದಿಂದಾ ತನಂ ಕೊಂದಂ (ಪಂಪಭಾ. ೧೨-೧೭). [ ದಿವಿಜ + ಅಧೀಶ ]

**ದಿವಿಜಾಧೀಶ್ವರ** (ನಾ). = ದಿವಿಜರಾಜ : ದಿವಿಜಾಧೀಶ್ವರನೊರ್ವನೆ ಪವಿತ್ರ ನಾದನೆ ಪವಿತ್ರಮಾಯ್ತುಮರನಗಂ (ಅಜಿಪು. ೪-೭೫).
[ ದಿವಿಜ + ಅಧೀಶ್ವರ ]

**ದಿವಿಜಾನಕ** (ನಾ). ದೇವತೆಗಳ ಭೇರಿ ; ದೇವದುಂದುಭಿ : ದಿವಿಜಾನಕ ರವದೊಳ್ಬೆಚ್ಚಿವಭಕ್ಕಂ ಬೆರಸು ದಿವ್ಯಪುಷ್ಪಕವತ್ತುತ್ಸವದೆ . . . ಬಂದತ್ತಾ ಗಳ್ (ಶ್ರೀಪುವಿ. ೪೭-೧೮). [ ದಿವಿಜ + ಆನಕ ]

**ದಿವಿಜಾನೋಕಹ** (ನಾ). ದೇವಲೋಕದ ವೃಕ್ಷ ; ಕಲ್ಪವೃಕ್ಷ : ದಿವಿಜಾ ನೋಕಹ ಕಾಮಧೇನುಗಳೆ ದಿವ್ಯಾವಾಸ ದಿವ್ಯಾನ್ನ ದಿವ್ಯವಿಲೇಪಾದ್ಯಭಿ ವಾಂಛೆಯಂ ಶಿಬಿರದೊಳ್ ತಂದಿತ್ತುವಂದಿಂದಿರಾಘವನಾಜ್ಞಾಪಿಸೆ (ಜಗವಿ. ೧೭-೭೭). [ ದಿವಿಜ + ಅನೋಕಹ ]

**ದಿವಿಜಾಪಗೆ** (ನಾ).=ದಿವಿಜಧುನಿ : ದಿವಿಜಾಪಗಾತಟದುಪವನದೊಳಿರ್ನೃಪ ವನಕ್ಕುಪದ್ರವಕಾರಿಯಾಗಿ ನೆಲಂ ಮೂರಿವಿಟ್ಟಂತೆ ಬಿಟ್ಟಿರ್ದಜಾತಶತ್ರು ವನವನತೋತ್ತಮಾಂಗನಾಗಿ ಕಂಡು (ಪಂಪಭಾ. ೯-೮೭ ವ) ; ದಿವಿಜಾಪಗೆ ಯಂ ತಾಳುತ್ತವೆ ದಿವದೆ ವಿಭಕ್ತರಶ್ಮಿಯಾಗಲ್ ತಾರಾನಿವಹವ ನಡೆಯಿಂಪ ಪರಿವಹ ಪವನನ ಮಾರ್ಗವಿದು ವಿಷ್ಣುವಿಕ್ರಮಪೂತಂ (ಶಾಕುಂತ. ೧೦೦-೦೭೯). [ ಸಂ. ದಿವಿಜಾ + ಆಪಗಾ ]

**ದಿವಿಜಾಮಾತ್ಯ** (ನಾ). =ದಿವಿಜಮಂತ್ರಿ : ತೊಲೆಯೊಳು ದೈತ್ಯಾಮಾತ್ಯಂ ನಿಲೆ ದಿವಿಜಾಮಾತ್ಯಕಾತ್ಯ ತುಂಗೋದಯದೊಳ್ ನಿಲೆ ವೃಷಭದೊಳುಡು ನಾಥಂ ನಿಲೆ ಪುಟ್ಟಿದ ಮನುಜನವನಿಪಾಲಕನಕ್ಕುಂ (ಜಾತತಿ. ೦೨-೦೭).
[ ದಿವಿಜ + ಅಮಾತ್ಯ ]

**ದಿವಿಜಾರಾಧ್ಯ** (ನಾ). ದೇವತೆಗಳಿಗೆ ಪೂಜ್ಯನಾದವನಂ; ದೇವತೆಗಳಿಂದ ಆರಾಧಿಸಲ್ಪಡುವವನು ; ಜಿನ : ದಿವಿಜಾರಾಧ್ಯನ ನಿಂದ ಮುನ್ನಡಿಗೆ ವಾನವ್ಯಂತರರ್ ಮೊಟ್ಟಿರಪ್ಪವಿಧಾಭ್ಯರ್ಚನಮಂ (ಅನಂಪು. ೯-೯೬); ದಿವಿಜಾರಾಧ್ಯಜಿನಾರ್ಭಕಾವತರಣಕ್ಕತ್ಯಂತಯೋಗ್ಯಂ (ಶಾಂತೀಶ್ವ. ೧೩-೨೩೦). [ ದಿವಿಜ + ಆರಾಧ್ಯ ]

**ದಿವಿಜಾರಿ** (ನಾ). ದೇವತೆಗಳ ಶತ್ರು; ದೈತ್ಯ ; ರಕ್ಕಸ. [ ದಿವಿಜ + ಅರಿ ]

**ದಿವಿಜಾವಾಸ** (ನಾ). ದೇವತೆಗಳ ಆವಾಸಸ್ಥಾನ; ದೇವಲೋಕ: ದಿವಿಜಾವಾಸದೊಳುಳ್ಳ ದಿವ್ಯಫಳಪುಷ್ಪೋದ್ಗಂಧಿಗಂಧಾದಿವಸ್ತುವನೊಂದೊಂದನೆ ಕೊಂಡು (ವರ್ಧಮಾ. ೧೧-೧೧). [ ದಿವಿಜ + ಆವಾಸ ]

**ದಿವಿಜಾಶಾಗಿರಿ** (ನಾ). ಪೂರ್ವದಿಕ್ಕಿನ ಬೆಟ್ಟ; ಉದಯಾಚಲ: ದಿವಿಜಾಶಾಗಿರಿಕೂಟಕೇಸರಿ ವಿಯನ್ಮಂದಾಕಿನೀಹಂಸೆ . . . ಅನಂಗಮಂಗಳ ವಧೂಟೀದರ್ಪಣಂ ತಾನಿದೆಂಬ ವಿಲಾಸಕ್ಕೆ ನಿವಾಸವಾಯ್ತುದಯದೊಳ್ ಪೀಯೂಷರುಙ್ಮಂಡಲಂ (ಅನಂಪು. ೭-೮೨). [ ಸಂ. ]

**ದಿವಿಜಾಶೆ** (ನಾ). ಪೂರ್ವದಿಕ್ಕು. 'ದಿವಿಜಾಶಾಗಿರಿ' ಪರಾ. [ ಸಂ. ದಿವಿಜಾಶಾ ]

**ದಿವಿಜಾಶ್ವ** (ನಾ). ದೇವಲೋಕದ ಕಂದುರೆ. 'ದಿವಿಜಾಶ್ವತ್ಥಾಮ' ಪರಾ. [ ಸಂ. ]

**ದಿವಿಜಾಶ್ವತ್ಥಾಮ** (ನಾ). ದೇವಲೋಕದಲ್ಲಿ ಹುಟ್ಟಿದ ಕಂದುರೆಯಂ ಕೆನೆತ,–ಹೇಷಾರವ : ದಿವಿಜಾಶ್ವತ್ಥಾಮದೊಳೀ ಭುವನಂಗಳ್ ನಡುಗೆ ಶಿಶು ಸರಂಗೆಯ್ದೊಡೆ ನಕ್ಕವಯವದೆ ಕುಂಭಸಂಭವನಿವನಶ್ವತ್ಥಾಮನೆಂದು ಪೆಸರಿಡೆ ನೆಗಟ್ಟಂ (ಪಂಪಭಾ. ೨-೪೪). 'ಅಶ್ವತ್ಥಾಮ' ಪರಾ. [ ಸಂ. ದಿವಿಜಾಶ್ವತ್ಥಾಮನ್ ]

**ದಿವಿಜಾಸನ** (ನಾ). ದಿವ್ಯವಾದ ಪೀಠ; ಉತ್ತಮವಾದ ಆಸನ : ಮಾಗಧನಂ . . . ಮುನ್ನಮಿಕ್ಕಿದ ದಿವಿಜಾಸನದೊಳ್ ಬಟ್ಟಿಯಂ ಕುಳ್ಳಿರ್ದನ ನೆಂದಂ ತೊಳಗಿ ಬೆಳಗೆ ದಶನದ್ಯುತಿಗಳ್ (ಶಾಂತಿಪು. ೧೦-೧೭೮). [ ದಿವಿಜ + ಆಸನ ]

**ದಿವಿಜೆ** (ನಾ). ದೇವಲೋಕದಲ್ಲಿ ಹುಟ್ಟಿದವಳಂ ; ದೇವತಾಸ್ತ್ರೀ ; ದಿವಿಜವಧು : ಸಪ್ತಮಾತೃಕೆಯರ ದಿವಿಜೆಯರ ಸಿದ್ಧಕರ್ನಿಕೆಯರ ಮಹಾಶಕ್ತಿಗಳ ವಂಗಡವೋಲಯಿಸುತಿರಲು (ಬಸವು. ೧೦-೩೦). [ ಸಂ. ದಿವಿಜಾ ]

**ದಿವಿಜೇಂದ್ರ** (ನಾ). ದೇವತೆಗಳ ಒಡೆಯ; ದೇವೇಂದ್ರ: ನಡೆ ನೋಡಲ್ ದಿವಿಜೇಂದ್ರನೆಯ್ದೆ ಪೊಗಟಲ್ . . . ನಾವಾರ್ಪಮೆ[ಮೆಂತು]ಮೆಂದು ವಿಬುಧರ್ ಮೌನವ್ರತಂಗೊಂಡರ್ (ಶಾಂತಿಪು. ೯-೧೫೭); ನತ ದಿವಿಜೇಂದ್ರಾಹೀಂದ್ರ ವಾಸುಪೂಜ್ಯ ಜಿನೇಂದ್ರಾ (ಸುಕುಮಾ. ೪-೪೪). [ ದಿವಿಜ + ಇಂದ್ರ ]

**ದಿವಿಜೇಂದ್ರತನಯ** (ನಾ). ೧. ಇಂದ್ರನ ಮಗ. ೨. ಅರ್ಜುನ : ದಿವಿಜೇಂದ್ರತನಯ ಕೇಳು (ಜೈಮಿಭಾ. ೩೦-೨೪). ೩. ಜಯಂತ. ೪. ವಾಲಿ. [ ದಿವಿಜೇಂದ್ರ + ತನಯ ]

**ದಿವಿಜೇಂದ್ರಾವಾಸ** (ನಾ). ಇಂದ್ರನ ವಾಸಸ್ಥಾನ ; ಇಂದ್ರಲೋಕ : ದಿವಿಜೇಂದ್ರಾವಾಸದೊಳ್ ಮುನ್ನೊಡನೆ ದಿವಿಜಭೋಗಂಗಳಂ ಭೋಗಿಸಿರ್ದೀ ಭವದೊಳ್ ಬಂದು (ಆದಿಪು. ೪-೭೦). [ ದಿವಿಜೇಂದ್ರ + ಆವಾಸ ]

**ದಿವಿಜೇಂದ್ರೇಭ** (ನಾ). ಇಂದ್ರನ ಆನೆ ; ಐರಾವತ : ದಿವಿಜೇಂದ್ರೇಭಕ್ಕೆ ಮೂವತ್ತೆರಡೆ ಮೊಗಂ (ಪುಲ್ಲಿಪು. ೧೨-೨೦); ದಿವಿಜೇಂದ್ರೇಭದ ಬೆಂಗೆ ವಂದು ವಿನಯ ಪ್ರಾಧಾನ್ಯಮಾನ್ಯೋಕ್ತಿಯಿಂ ಭವನೇಂದ್ರಾದ್ಯಮರೇಂದ್ರಂ ಕಳಿಪಿ (ಅನಂಪು. ೫-೧೦೦). [ ದಿವಿಜೇಂದ್ರ + ಇಭ ]

**ದಿವಿಜೇಜ್ಯ** (ನಾ). ದೇವತೆಗಳಿಂದ ಪೂಜಿಸಲ್ಪಡುವವನು; ದೇವತೆಗಳ ಗುರು ; ಬೃಹಸ್ಪತಿ : ದಿವಿಜೇಜ್ಯಂಗೆ ಶನೈಶ್ಚರಂ . . . ಉದಾಸೀನಂ ಗ್ರಹಾನೀಕದೊಳ್ (ಜಾತತಿ. ೨-೧೫). [ ಸಂ. ]

**ದಿವಿಜೇಶ್ವರ** (ನಾ). ದೇವತೆಗಳ ಒಡೆಯ ; ಇಂದ್ರ : ಆ ದಿವಿಜೇಶ್ವರಂಗೆ ಸತ್ಯಭಾವಾರ್ಯೆ ಸುಪ್ರಭೆಯೆಂಬ ದೇವಿಯಾದಳ್ (ಶಾಂತಿಪು. ೭-೨೯ ವ). [ ದಿವಿಜ + ಈಶ್ವರ ]

**ದಿವಿಜೋರ್ವೀಜ** (ನಾ). ದೇವಭೂಮಿಯಲ್ಲಿ ಹುಟ್ಟಿದ ಮರ ; ದೇವಲೋಕದ ವೃಕ್ಷ ; ಕಲ್ಪವೃಕ್ಷ : ಆ ಜಾಯಾದ್ವಯಕಂ ಕ್ಷಿತಿರಾಜಂಗವು ಪೂರ್ವತುಂಗಜಂಗಮದಿವಿಜೋರ್ವಿಜವಿವೆನೆ ಪುಟ್ಟಿದರ್ ಅಪರಾಜಿತನ ಮನಂತವೀರ್ಯನುಂ ಪ್ರಿಯತನಯರ್ (ಶಾಂತಿಪು. ೧-೭೭). [ ದಿವಿಜ + ಉರ್ವೀಜ ]

**ದಿವಿಜೋರ್ವೀಧರ** (ನಾ). (ಚಿನ್ನದ್ದೆಂದು ನಂಬಲಾದ) ದೇವತೆಗಳ ಬೆಟ್ಟ ; ಮೇರುಪರ್ವತ : ದಿವಿಜೋರ್ವೀಧರ ಕರ್ಣಿಕಾವಿಳಸಿತಂ . . . ರಾ ರಾ ಜಿ ಕು ಂ ಲವಣಾಂಭೋಧಿಸರೋವರಪ್ರಥಿತಜಂಬೂದ್ವೀಪ ನೀರೇರುಹಂ (ಅನಂಪು. ೧-೭೩). [ ದಿವಿಜ + ಉರ್ವೀಧರ ]

**ದಿವಿಜೋರ್ವೀರುಹ** (ನಾ). = ದಿವಿಜೋರ್ವೀಜ : ದಿವಿಜೋರ್ವೀರುಹಮಿತ್ತ ದೇವರ ಮನೋವ್ಯಾಪಾರದಿಂದಾದ ದೇವವಿಮಾನಂ . . . ಎಂಬಿನೆಗಂ ಸ್ವಯಂವರಗೃಹಂ ಕಣ್ಗೆಂ ಬೆಡಂಗಾದುದೋ (ಪಂರಾಮಾ. ೫-೩೫). [ ದಿವಿಜ + ಉರ್ವೀರುಹ ]

**ದಿವಿನಾಯಕ** (ನಾ). = ದಿವಿಜಪತಿ. [ ದಿವಿ + ನಾಯಕ ]

**ದಿವಿಭಾಗ** (ನಾ). ಗಗನ; ಆಕಾಶ : ಮೇರುವಿನ ಬಣ್ಣಮಂ ಪಿಡಿದ ದಿವಿಭಾಗಮಂ ಜನವನೆಚ್ಚರಿಪಂತೆ[ಪಾಠಾಂ. ದಿವಿಜರ ಭೋಗಮಜನ ಗುಣ ಮೆಚ್ಚರಿಸೆ]ಕೆಂಧೂಳಿ ಮಸಗಿತಾಗ (ಜೈಮಿಭಾ. ೧೨-೭). [ ದಿವಿ + ಭಾಗ ]

**ದಿವಿರ** (ನಾ). ಲೇಖಕ ; ಲಿಪಿಕಾರ : ದಬೀರ್ (=ಲೇಖಕ) ಎಂಬ ಪಾರಶೀ ಶಬ್ದ ದಿವಿರ, ದಿವೀರ ಎಂಬ ರೂಪಕಗಳಲ್ಲಿ ಕ್ರಿ.ಶ. ೭–೮ನೆಯ ಶತಮಾನಗಳಲ್ಲಿ ಲಿಖಿತವಾದ ಕೆಲವು ವಲಭೀಶಾಸನಗಳಲ್ಲಿ ದೊರೆಯುತ್ತದೆ (ಕನ್ನಸಂ. ೪೭). 'ದಬೀರ' ಪರಾ. [ ಪಾರ. ಹಿಂ. ದಬೀರ್ ]

**ದಿವಿರಪತಿ** (ನಾ). ಶ್ರೇಷ್ಠನಾದ ಲೇಖಕ ; ಉತ್ತಮನಾದ ಲಿಪಿಕಾರ : ಕ್ರಿ. ಪೂ. ನಾಲ್ಕನೆಯ ಶತಮಾನಕ್ಕಾಗಲೇ ಲೇಖಕವೃತ್ತಿಯವನನ್ನು ಲಿಪಿಕಾರ ಅಥವಾ ಲಿಬಿಕಾರ ಎಂದು ಕರೆದಿದೆ. ಕ್ರಿ.ಶ. ಏಳು ಮತ್ತು ಎಂಟನೆಯ ಶತಮಾನಗಳಲ್ಲಿ ಅವನನ್ನು ದಿವಿರಪತಿ ಎಂದು ನಿರ್ದೇಶಿಸಲಾಗಿದೆ (ಭಾರಪ. ೧೮). [ ದಿವಿರ + ಪತಿ ]

**ದಿವಿಷನ್ಮಣಿ** (ನಾ). (ಬೇಡಿದುದನ್ನು ಕೊಡುವುದೆಂದು ನಂಬಲಾದ) ದೇವಲೋಕದ ಮಣಿ ; ಚಿಂತಾಮಣಿ : ಉತ್ತಮ ಪುಣ್ಯದೇಟಿಗೆಯಿಂ ಮಹಿಯೊಳೆ ಸತ್ಯವಿತ್ತದಿವಿಷನ್ಮಣಿ ಸಾರ್ಗುಮದೀಗುಮದ್ಭುತಾವಹೆ ಸುಖಿಮಂ (ಶಬಶಂ. ೫-೭೦). [ ಸಂ. ]

**ದಿವೇಶ** (ನಾ). = ದಿವಿಜರಾಜ : "ಪುರುಹೂತಂ ಮಘವಂ . . . ದಶಶತನೇತ್ರಂ ಕುಲಿಶಾಯುಧಂ ಋಭುಕ್ಷು ದಿವೇಶಂ" (ವಸ್ತುಕೋ. ೭-೩೪). [ ದಿವ + ಈಶ ]

**ದಿವೈಶ್ವರ್ಯ** (ನಾ). ಸ್ವರ್ಗದ ಐಶ್ವರ್ಯ : ತ್ರಿಶದ್ದೇವೇಂದ್ರಂ ಮಣಿಚೂಳನೆಂಬ ಪೆಸರಿಂ ಪೆತ್ತಂ ದಿವೈಶ್ವರ್ಯಮಂ (ಶಾಂತಿಪು. ೭-೭೩). [ ದಿವ + ಐಶ್ವರ್ಯ ]

**ದಿವೋದ್ಭೂತ** (ನಾ). ಸ್ವರ್ಗದಲ್ಲಿ ಹುಟ್ಟಿದುದಂ : ಧೃತನಿರಯಜಾರ್ಯವರಚರಮತನು ದಿವೋದ್ಭೂತನನಪವರ್ತ್ಯಾಯುಷ್ಯಸ್ಥಿತರುಂಟಿದ ಸಕಲ ತತ್ವಪ್ರತತಿಗಳುಪಸಂಹೃತಾಪವರ್ತ್ಯಾಯುಷ್ಯರ್ (ಸು ಕು ಮಾ. ೮-೧೪). [ ದಿವ + ಉದ್ಭೂತ ]

**ದಿವೌಕ** (ನಾ). ದೇವತೆಗಳ ಮನೆ ; ಸ್ವರ್ಗ ; ದೇವಲೋಕ : ಪೋ ಪೋ ಪುಗಲ್[ಪುಗಲಿ]ತ್ತತ್ತ ದಿವೌಕದಿಂ ಪೊಱಗೆ ನಿಲ್ ನಿಲ್ ಓಂಗು ನೀನೆಂಬ ದಂದುಗದಿಂ ದೇವರ ದಂಡಧಾರರೆರಡುಂ ಪಕ್ಷಂಗಳೊಳ್ ಸಾಱೆ (ಶಾಂತಿಪು. ೧೦-೨೪). [ ಸಂ. ದಿವೌಕಸ್ ]

**ದಿವೌಕಸ** (ನಾ). ಸ್ವರ್ಗವನ್ನೇ ಮನೆಯಾಗಿ ಉಳ್ಳವನು ; ದೇವತೆ : "ದಿವೌಕಸರ್ ದೇವರ್ಕಳ್" (ವಸ್ತುಕೋ. ೬-೩೦) ; ಆ ಕುಮಾರವಿಯೋಗ ವಹ್ನಿಗೆ ಯಾಕೆಯುಳಲು ಸ ಮಾ ರ ಮಾ ಯ್ತು ದಿವೌಕಸರ ಸಮ್ಮೇಳವೇ ಪುರುಷಾರ್ಥ ತನಗೆಂದ (ಕುಮಾ.ದ್ರೋ. ೭-೧೮) ; ನಲಿದು ನಡೆತರುತೊಂದು ವಿಪಿನದ ಸಲೆ ಸೊಬಗ ಕಂಡಲ್ಲಿ ನಿಂತಾ ಸುಲಭವನವನು ನಿಟ್ಟಿಸುತಲಿರ್ದರಾ ದಿವೌಕಸರು (ಸನತ್ಕು. ೧೭-೧೩). [ ಸಂ. ]

**ದಿವ್ಯ** (ಗು). ೧. ಸ್ವರ್ಗದಲ್ಲಿ ಹುಟ್ಟಿದ ; ಸ್ವರ್ಗದ ; ಸ್ವರ್ಗೀಯ. 'ದಿವ್ಯಕರಿ', 'ದಿವ್ಯನಗ' ಪರಾ. ೨. ಮನೋಹರವಾದ; ರಮಣೀಯವಾದ: ದಿವ್ಯಲೇಪನಭಾಸ್ವದ್ದಿವ್ಯಾಕೃತಿಯುಂ ಧ ರಿ ಯಿ ಸಿ ದಿವ್ಯಗಭೀರೋಕ್ತಿಯಿಂದಮಾಗಳ್ ಪೇೞ್ದಂ (ಜಗವಿ. ೪-೮೧). ೩. ಶ್ರೇಷ್ಠವಾದ; ಉತ್ತಮವಾದ : ದಾನವರಿಪು ಭಂಜಿಸೆ ನಿಜದಿವ್ಯವಿಶಿಖದಿಂ ದೆಸೆಗೆ ಮಸಗಿದಂ ದಶವದನಂ (ಪಂರಾಮಾ. ೧೪-೧೬೨) ; ಅಂಜಲಿ ನೀಡಿ ದಿವ್ಯಪಾಯಸಪೂರ್ಣಪಾತ್ರೆಯಂ ವಿನಯದಿಂ ಕೊಂಡು (ಶ್ರೀರಾಮಾ. ೧೪-೩೭೪). 'ದಿವ್ಯಕಳೆ' ಪರಾ. ೪. ಆಕಾಶದಲ್ಲಿರುವ ; ಆಕಾಶದಿಂದ ಉಂಟಾದ,–ಹುಟ್ಟಿದ. ೫. ಅದ್ಭುತವಾದ ; ಆಶ್ಚರ್ಯಕರವಾದ. 'ದಿವ್ಯಾಂಜನ' ಪರಾ. (ನಾ). ೬. ಶ್ರೇಷ್ಠವಾದುದು ; ಉತ್ತಮವಾದುದು : ಮರಕತನಗಂ ದಿವ್ಯಂ ಮರ್ತ್ಯೋತ್ತಮಾಕೃತಿಯೆಂಬಿನಂ ವಿರಚಿಸಿದನಂತಾದಿಬ್ರಹ್ಮಂ (ಆದಿಪು. ೧೪-೪೪) ; ವನನಿಧಿಯೊಳೆನಗೆ ಕೆಯ್ಸಾರ್ದನಿತಂ ವಸ್ತುಗಳನುೞಿಪ ದೋ ಲ ಗಿ ಸಿ ದೆ ನಿ ನ್ನೆ ನ ಗ ದು ವೆ ದಿವ್ಯಂ (ಶಾಂತಿಪು. ೧೦-೧೭೭). ೭. ಮನೋಹರವಾದುದು ; ರಮಣೀಯವಾದುದು. ೮. ಅತಿಮಾನುಷವಾದುದು; ಅತೀಂದ್ರಿಯವಾದುದು; ಅಲೌಕಿಕವಾದುದು: ಪ್ರತ್ಯಕ್ಷವು ಲೌಕಿಕ, ದಿ ವ್ಯ ವೆಂ ದು ಎರಡು ಪ್ರಕಾರ . . . ದಿವ್ಯವು ಭ ಗ ವ ದ ನು ಗ್ರ ಹ ದಿಂ ದ ಬರತಕ್ಕ ಯೋಗಿ ಪ್ರತ್ಯಕ್ಷ (ಹಿಂದಸಾ. ೨೪೧) ; 'ಪ್ರಕೃತಿ'ಯಲ್ಲಿ 'ಉತ್ತಮ', 'ಮಧ್ಯಮ', 'ಅಧಮ' ಮತ್ತು 'ದಿವ್ಯ', 'ಮಾನುಷ' ಇವೇ ಮೊದಲಾದ ಭೇದಗಳಿವೆ (ಧ್ವನ್ಯಾಲೋ. ೧೪೬). ೯. ಶ್ರೇಷ್ಠನಾದವನು ; ಉತ್ತಮ ವ್ಯಕ್ತಿ : ಜನಧರ್ಮದ ಪೆರ್ಮೆಗೆ ರಾಗಿಸರೆ ಭವ್ಯರಱಿವಿನ ದಿವ್ಯರ್ (ಶಾಂತಿಪು. ೧೨-೩೭). ೧೦. ದೈವ ; ದೇವತೆ : ಎನ್ನ ತಮ್ಮಂದಿರ್ಗನಿತಂ ಮಾಡಿದ ದಿವ್ಯಮಾ ದಿವ್ಯಮಕ್ಕು-ಮೆಂದದಱ ಬೆಸಗೊಂಡುದರ್ಕೆಲ್ಲಂ ಮಱುಮಾತುಗುಡುವುದುಂ ಮೆಚ್ಚಿ ತನ್ನ ಸ್ವರೂಪಮಂ ತೋಱೆ (ಪಂಪಭಾ. ೮-೪೭ ವ). ೧೧. ಬೆಂಕಿ ಮೊದಲಾದ ಪ್ರಮಾಣವಸ್ತುಗಳನ್ನು ಮುಟ್ಟಿ ಪ್ರಮಾಣಿಸಬೇಕಾದ ಉಗ್ರಪರೀಕ್ಷೆ; ನಿಶ್ಚಿತವಾದ ಸಾಕ್ಷಿ, ಆಧಾರಗಳಿಲ್ಲದಾಗ ಅಪರಾಧವನ್ನು ನಿರ್ಣಯಿಸಲು ಮಾಡುವ ಉಗ್ರಪರೀಕ್ಷೆ: ದೋಷಿ ಪಿಡಿವಂತೆ ದಿವ್ಯದ ಕಾಸಿದ ಕುಟುಮಂ . . . ಪಿಡಿದು ಸಾಸಿಗನವಿವೇಕಿ ಸೀತೆಯಂ ದಶಕಂಠಂ (ಪಂರಾಮಾ. ೯-೧೦೧) ; ಉರಿಯ ಹಾಳಾಹಳದ ದಿವ್ಯಮಂ ಗೆಲಿದನು (ಸಿದ್ಧರಾ. ೧-೧೦) ; ಕಂಡರನಾಸೆಗೆಯ್ವೊಡೆನ್ನಿನಿಯನ ಮೂರ್ತಿ ದಿವ್ಯವದಱಿಂ ನಳನಿರ್ಕೆ ನಟರ್ ತೊಲಂಗುಗೆಂದನುಪಮಮಾಲೆಯಂ ನೆಗಪಿದಳ್ (ನಳಚಂ. ೪೦೧). 'ದಿಬ್ಯ' ಪರಾ. ೧೨. ರುಚಿಯಾದುದು ; ಸ್ವಾದು : ಅವರ ಮನೆಯಲ್ಲಿ ಬೀಗರೂಟ ಬಹಳ ದಿವ್ಯವಾಗಿತ್ತು (ರೂಢಿ). ೧೩. [ಶೈವ] ಶೈವಾಗಮಗಳಲ್ಲಿ ಒಂದು ವಿಧ : ಶೈವಾಗಮಗಳು . . . ಬೋಧಕ – ಬೋಧ್ಯ ಸಂಬಂಧದಲ್ಲಿ "ಪರ, ಮಹಾ, ಅಂತರಾಳ, ದಿವ್ಯ ದಿವ್ಯಾದಿವ್ಯ, ಅದಿವ್ಯ" ಗಳೆಂದು ಆರು ಬಗೆಯಾಗಿದೆ (ಭಾರದ. ೭೩). ೧೪. [ಸಂಗೀತ] ರಾಗಗಳಲ್ಲಿ ಒಂದು : ಮಧು ಮಾಧವಿ ಶಂಕರಾಭರಣ . . . ದಿವ್ಯ[ಪಾಠಾಂ. ದಿವಿ] . . . ಕರ್ಣಾಟ ಬಂಗಾಳವೆಂಬಿಪ್ಪತ್ತು ರಾಗಂಗಳೇ ರಾಗಾಂಗದಿಂದುದಿಸಿದವು (ವಿವೇಕ. ೨೪೯).

ದಿವ್ಯಮಾಡು = ಅದ್ಭುತವಾದುದನ್ನು ಮಾಡು : 'ಏನು ದಿವ್ಯಮಾಡಿದಳು ? ಎಂದು ಯಾರಾದರೂ ಕೇಳಬಹುದು (ನಿರಾಭ. ೪೨). [ ಸಂ. ]

**ದಿವ್ಯಂಬಿಡಿ** (ಕ್ರಿ). = ದಿಬ್ಯಂಬಿಡಿ : ಕೆಲರ್ ನೆತ್ತರೊಳ್ ಮಿಂದು ತಮಗೆ ದೋಷಮಿಲ್ಲೆಂದದರ್ಕೆ ದಿವ್ಯಂಬಿಡಿವಂತೆ ನಂಬಿಸಲ್ ಚ ಲಂ ಬಿ ಡಿ ದು ನಿಂದಾಂತರ್ (ಶಾಂತಿಪು. ೪-೩೦ ವ) ; ನಲ್ಮೆಗೆ ದಿವ್ಯಂಬಿಡಿದಳೊ ಪೇೞಿಂ (ಚಂದ್ರಪು. ೫-೧೩೦). [ ದಿವ್ಯ + ಪಿಡಿ$_1$ ]

**ದಿವ್ಯಕರಿ** (ನಾ). ಸ್ವರ್ಗದ ಆನೆ ; ಐರಾವತ : ಅಕಳಂಕಾನನಮಿಂದುವಂಗೆಲೆ ಧರಾಭಾರಾವಹಂ ಬಾಹುದಿವ್ಯಕರಿಶ್ರೀಕರಮುಂ ಕರಂ ಜಱಿಯೆ (ರಾಜಶೇ. ೩-೩). [ ದಿವ್ಯ + ಕರಿ$_4$ ]

**ದಿವ್ಯಕಳೆ** (ನಾ). ದೈವಿಕವಾದ ತೇಜಸ್ಸು ; ಶ್ರೇಷ್ಠವಾದ ಕಾಂತಿ : ಅವರ ದಿವ್ಯಕಳೆಯೇ ಅವರು ಮಹಾತ್ಮರೆಂಬುದನ್ನು ಸೂಚಿಸುತ್ತದೆ (ರೂಢಿ). [ ದಿವ್ಯ + ಕಳೆ$_6$ (= ಕಲೆ$_3$) ]

**ದಿವ್ಯಕಾಂತೆ** (ನಾ). ದೇವತಾಸ್ತ್ರೀ ; ದಿವಿಜೆ : ಅಂತು ದಿವ್ಯಕಾಂತೆಯರೊಡರ್ಚಿದ ಪವಿತ್ರೀಕರಣಚೈತ್ರಾಗಮುಂ ಜಗತ್ತ್ರಿತಯಾಂಬಿಕೆಯ ತನುಲತೆಗೆ ಕುಸುಮೋದ್ಗಮನಸಮಯಮುಂ ತರಲೊಡಂ (ಅನಂಪು. ೪-೯೨ ವ). [ ದಿವ್ಯ + ಕಾಂತೆ ]

**ದಿವ್ಯಕ್ಷೇತ್ರ** (ನಾ). ಶ್ರೇಷ್ಠವಾದ ಸ್ಥಳ ; ಪುಣ್ಯಕ್ಷೇತ್ರ : ಅಡಿಗಡಿಗೆ ಸ್ಥಾನನಿಧಿ ಅಡಿಗಡಿಗೆ ದಿವ್ಯಕ್ಷೇತ್ರ (ಬಸವ. ೮೫೩). [ ದಿವ್ಯ + ಕ್ಷೇತ್ರ ]

**ದಿವ್ಯಗಜ** (ನಾ). = ದಿವ್ಯಕರಿ : ವನಲತೆಯಾದ ಕಲ್ಪಲತೆ ವನ್ಯಮಹೀರುಹಮಾದ ಕಲ್ಪನಂದನತರು . . . ಚರದ್ವನಗಜಮಾದ ದಿವ್ಯಗಜಮೆಂಬುದನಾ ನೆಲನುಂಟುಮಾಡುಗುಂ (ಶಾಂತಿಪು. ೯-೧೩೪). [ ದಿವ್ಯ + ಗಜ ]

**ದಿವ್ಯಗಾನ** (ನಾ). ಮನೋಹರವಾದ ಹಾಡು,– ಗಾಯನ : ನಿನ್ನಿಚ್ಛೆ ಬಂದಾಗ ಶಾಂತಿ ತರುವೆ ದಿವ್ಯಗಾನವನೂದಿ ಸಂತೈಸುವೆ ಎದೆ ಮನಸು ದೇಹಗಳ ಹಗುರಗೈವೆ (ದ್ರಾಕ್ಷದಾ. ೧೦-೧೯). [ ದಿವ್ಯ + ಗಾನ$_2$ ]

**ದಿವ್ಯಗಾಯನ** (ನಾ). ೧. ಮನೋಹರವಾದ ಹಾಡುಗಾರಿಕೆ,– ಸಂಗೀತ. ೨. ಸ್ವರ್ಗಲೋಕದ ಹಾಡುಗಾರ ; ಗಂಧರ್ವ : (*). [ ದಿವ್ಯ + ಗಾಯನ ]

**ದಿವ್ಯಚಕ್ಷು** (ನಾ). ೧. ಚರ್ಮಚಕ್ಷುಸ್ಸಿನಿಂದ ನೋಡಲಾಗದ ವಸ್ತುವನ್ನು ನೋಡುವ ಚಕ್ಷುಸ್ಸು ; ಜ್ಞಾನದೃಷ್ಟಿ : ತುರಂಗತ್ವಮೆನಗೆ ಮೂಡಿದೊಡಮೆನ್ನ ಕೆಳೆಯನೊಡಗೂಡಿ ಕಾಲಮುಂ ಕಳಿಪುವಂತು ನಿನ್ನ ದಿವ್ಯಚಕ್ಷುಗಳಿಂ ನೋಡಿ ಬೆಸಸೆಂಬುದುಂ (ಕಾದಂಬ. ೭೦೮) ; ಶ್ರೀಕೃಷ್ಣನು ಅರ್ಜುನನಿಗೆ ದಿವ್ಯಚಕ್ಷುಗಳನ್ನು ದಯಪಾಲಿಸಿ ತೋರಿಸಿದ ವಿಶ್ವರೂಪಕ್ಕಿಂತಲೂ ತತ್ತ್ವತಃ ಬೇರೇನೂ ಅಲ್ಲ (ಪ್ರಬಂಧ. ೯೨). ೨. ದಿವ್ಯಜ್ಞಾನವುಳ್ಳವನು ; ದಿವ್ಯದೃಷ್ಟಿಯುಳ್ಳವನು : ಮಹಾತ್ಮಾ ಗಾಂಧಿಯಂಥ ದಿವ್ಯಚಕ್ಷುಗಳು ದೇಶದಲ್ಲಿ ಸಹಸ್ರ ವರುಷಗಳಿಗೊಮ್ಮೆ ಜನಿಸಬಹುದು (ರೂಢಿ). [ ದಿವ್ಯ + ಚಕ್ಷು ]

**ದಿವ್ಯಚಿತ್ತ** (ನಾ). ೧. ಶುದ್ಧವಾದ ಅಂತರಂಗ; ಪ ವಿ ತ್ರ ವಾ ದ ಮನಸ್ಸು : ದಿವ್ಯಚಿತ್ತದೊಳವಧಾರಿಸು (ಆದಿಪು. ೮-೧೧) ; ಇದಂ ದಿವ್ಯಚಿತ್ತದೊಳವಧರಿಸಿ ಯುಕ್ತತರ ವಿಚಾರದೊಳ್ ನೆಗೞ್ವುದು (ಶಾಂತಿಪು. ೧೦-೧೦೨ ವ). ೨. ಶುದ್ಧವಾದ ಅಂತರಂಗವುಳ್ಳವನು ; ಪವಿತ್ರವಾದ ಮನಸ್ಸುಳ್ಳವನು : ನಡೆ ನೋಡಿ ನೋಡಿ ಜಿನಚಂದ್ರಂ ದಿವ್ಯಚಿತ್ತಂ ಮಹೋತ್ತಮಸತ್ತ್ವಂ ವಿಭು ಕಮ್ಮಗಿರ್ಪುದುಮಳುತೊರ್ಪುದೆಂಬಿನಿಂದೆಚ್ಚಂ (ಶಾಂತಿಪು. ೪-೪೮). [ ದಿವ್ಯ + ಚಿತ್ತ ]

**ದಿವ್ಯಚ್ಛಾಯೆ** (ನಾ). ರಮಣೀಯವಾದ ಬಿಂಬ,-ಛಾಯೆ : ಪೊಳೆವೆಳನೇಸರುಂ ಸೆಟೆಗೆಯ್ವ ಮಣಿಕುಟ್ಟಿಮಭೂಮಿಭಾಗದೊಳಮಮಿತವಿಕ್ರಮದೇವನ ದಿವ್ಯಚ್ಛಾಯೆ ಪ್ರತಿಬಿಂಬಿಸೆ (ಶಾಂತಿಪು. ೯-೩೩ ವ).
[ಸಂ.ದಿವ್ಯಚ್ಛಾಯಾ]

**ದಿವ್ಯಜಾತಿ** (ನಾ). [ಜೈನ] ಪಾರಿವ್ರಾಜ್ಯಲಕ್ಷಣಗಳನ್ನು ತಿಳಿಸುವ ಜಾತಿ ಎಂಬ ಸೂತ್ರಪದದ ನಾಲ್ಕು ವಿಭಾಗಗಳಲ್ಲಿ ಒಂದು; ಈ ಜಾತಿಯಲ್ಲಿ ದಿವ್ಯ, ವಿಜಯ, ಪರಮ ಮತ್ತು ಅನುಪಮ ಎಂದು ನಾಲ್ಕು ವಿಭಾಗಗಳಿವೆ. ದಿವ್ಯಜಾತಿಯಿಂದ ಅಹಮಿಂದ್ರತ್ವವುಂಟಾಗುತ್ತದೆ. ವಿಜಯ ಜಾತಿಯಿಂದ ಚಕ್ರವರ್ತಿತ್ವವುಂಟಾಗುತ್ತದೆ. ಪರಮಜಾತಿಯಿಂದ ಆರ್ಹಂತ್ಯವುಂಟಾಗುತ್ತದೆ ಮತ್ತು ಅನುಪಮ ಜಾತಿಯಿಂದ ಸಿದ್ಧತ್ವವುಂಟಾಗುತ್ತದೆ : ದಿವ್ಯಜಾತಿಯಿಂದಹಮಿಂದ್ರತ್ವಮುಂ . . . ಪಡೆಯಲಕ್ಕುಂ (ಚಾವುಂಪು. ೨೨೮). [ದಿವ್ಯ + ಜಾತಿ]

**ದಿವ್ಯಜೀವನ** (ನಾ). ಶ್ರೇಷ್ಠವಾದ ಜೀವನ; ಉತ್ತಮವಾದ ಬಾಳು: ದುಡಿದು ಕಟ್ಟಿದ ದಿವ್ಯಜೀವನ ಕ್ಷಣಿಕವಾದರು ಪಾವನ! (ವಿಜದ. ೧೬-೩).
[ದಿವ್ಯ + ಜೀವನ]

**ದಿವ್ಯಜೀವಿ** (ನಾ). ಶ್ರೇಷ್ಠವಾದ ಜೀವನವನ್ನು ನಡೆಸುವ ವ್ಯಕ್ತಿ: ಮಾನವ ಪ್ರೇಮ, ನೀತಿ-ನಿಷ್ಠೆ . . . ಅದಕ್ಕೆ ಮಾದರಿಯಾಗಿ ಉನ್ನತ ಶರಣಮಾರ್ಗದಲ್ಲಿರುವ ದಿವ್ಯಜೀವಿಗಳ ಅನುಭಾವ ಗೋಷ್ಠಿ, ಇದು ಅವರ ಹಿರಿಗನಸಾಗಿತ್ತು (ಕರ್ನಾಕ. ೩೬). [ದಿವ್ಯ + ಜೀವಿ₁]

**ದಿವ್ಯಜೋತಿ** (ನಾ).=ದಿವ್ಯಜ್ಯೋತಿ ೧: ಮಿಣುಮಿಣುಗುವ ಸಾಲು ದಿವ್ಯಜೋತಿಗಳಾ ಭವನವ ತೀವಿಕೊಂಡಿರಲು (ಕಂನವಿ. ೮-೮೩). [ದಿವ್ಯ + ಜೋತಿ]

**ದಿವ್ಯಜ್ಞಾನ** (ನಾ). ಉತ್ಕೃಷ್ಟವಾದ ಜ್ಞಾನ; ಅಲೌಕಿಕವಾದ ಜ್ಞಾನ,-ತಿಳುವಳಿಕೆ : ಐಕ್ಯನ ಸಮರಸಭಕ್ತಿಯನೊಳಕೊಂಡು ತೋರುತ್ತಿಹುದು ಮಹಾಲಿಂಗವೆಂಬುದೀಗ ದಿವ್ಯಜ್ಞಾನವೆಂಬ ಶಬ್ದಕ್ಕರ್ಥ (ಅಣಿಮಾ. ೭೫-೫೦); ವಂಶಾಲಂಕಾರನಾದ ದಿವ್ಯಜ್ಞಾನವುಳ್ಳ ಪುತ್ರನನ್ನು ನಿಷ್ಕಾರಣಕ್ಕಾಗಿ ವಧಿಸಿ, ತಾನು ಮಹಾಪಾತಕಿಯೂ ಕುಲದ್ರೋಹಿಯೂ ಆದೆನೆಂಬುದು ಅವನ ಮನಸ್ಸಿಗೆ ಚೆನ್ನಾಗಿ ಗೋಚರವಾಯಿತು (ಕಲಾಧ. ೭೪).
[ದಿವ್ಯ + ಜ್ಞಾನ]

**ದಿವ್ಯಜ್ಞಾನಿ** (ನಾ). ಉತ್ಕೃಷ್ಟವಾದ ಜ್ಞಾನವನ್ನು ಉಳ್ಳವನು; ಅಲೌಕಿಕ ವಸ್ತುಜ್ಞಾನವನ್ನುಳ್ಳವನು : ದಿವ್ಯಜ್ಞಾನಿಗಳನಲ್ಲಿರ್ದರಂ ಕಂಡು . . . ಅವರ ವಚನದಿನಾತ್ಮೀಯ ಪಿತೃಮರಣಮುಮನಾತನ ನರಕಗತಿಗಮನಮುಮನರಿದು (ಆದಿಪು. ೨-೧೪ ವ) ; ಅನಱಿವೆಂ . . . ದಿವ್ಯಜ್ಞಾನಿ ಸಹದೇವನಱಿವಂ ನೀನಾರ್ಗೆಂದಾರುಮಱಿಯರಂಗಾಧಿಪತೀ (ಗದಾಯು. ೫-೧೮) ; ಈ ಆತ್ಮ ಮೇಲು ಮೇಲಕ್ಕೇರಿ ಪರಿಪೂರ್ಣತೆಯನ್ನು ಪಡೆದಂತೆಲ್ಲ ದಿವ್ಯಜ್ಞಾನಿಗಳ (ಪೈಗಂಬರ್) ಮತ್ತು ದೇವದೂತರ ಅವಸ್ಥೆ ಬರುತ್ತದೆ (ಇಸ್ಲಾಂಸಂ. ೨೨೫). [ಸಂ. ದಿವ್ಯಜ್ಞಾನಿನ್]

**ದಿವ್ಯಜ್ಯೋತಿ** (ನಾ). ೧. ಲೋಕೋತ್ತರವಾದ ಬೆಳಕು,-ಕಾಂತಿ : ದೇವರ್ಕಳ ದಿವ್ಯಮೌಳಿಮಣಿಮಾಲಾದೀಪ್ತಿಯುಂ . . . ಜಿನೇಂದ್ರತನು ದಿವ್ಯಜ್ಯೋ [ಪಾಠಾಂ. ದ್ಯೋ] ತಿಯುಂ ಧಾಟಿಯಿಟ್ಟು ವಿಯಚ್ಚಕ್ರದೊಳಿಕ್ಕಿ ಮೆಟ್ಟಿದುವನಂತಾರ್ಕಪ್ರಭಾಚಕ್ರಮಂ (ಮಲ್ಲಿಪು. ೧೩-೧೭೩) ; ಅವರ ದಿವ್ಯಜ್ಯೋತಿಯೂ, ಅವರು ಬೋಧಿಸಿರುವ ತತ್ತ್ವೋಪದೇಶಗಳೂ . . . ಭಾರತೀಯರಿಗೆಲ್ಲಾ ಪ್ರಕಾಶವನ್ನು ಕೊಡುತ್ತವೆ (ಶಾಂಪಜೀ. ೭೫). ೨. ದೇವರು; ಪರಮಾತ್ಮ: "ಅಕ್ಷರ" ವೆಂದು ಪ್ರಶಂಸಿತವಾಗಿರುವ ದಿವ್ಯಜ್ಯೋತಿಯೆ ಸಕಲ ಜಗತ್ತಿಗೂ ಮೂಲ (ಭುಕ್ಕಾರ. ೫೩ ಪೀಠಿಕೆ) : ತುಳುವದ ಜನಸಾಮಾನ್ಯರಿಗೆ ಈ ಭೂತಗಳು 'ದಿವ್ಯಜ್ಯೋತಿ' ಗಳಾಗಿದ್ದವು ಎಂದೂ ಹೇಳಬಹುದು (ತುಳಿವಾ. ೨೫೩). [ದಿವ್ಯ + ಜ್ಯೋತಿ]

**ದಿವ್ಯತನು** (ನಾ). ದೈವಿಕವಾದ ದೇಹ; ಪವಿತ್ರವಾದ ದೇಹ; ಶ್ರೇಷ್ಠವಾದ ಶರೀರ : ನೀಲಮಣಿಕುಟ್ಟಿಮಭೂತಳದರ್ಪಣೈಕಬಿಂಬದೊಳಹಮಿಂದ್ರದಿವ್ಯತನು ಬಿಂಬಿಸೆ (ಶಾಂತಿಪು. ೯-೧೨೨) ; ಆರತಿಯೆತ್ತಿದಳಾಭವನ ದಿವ್ಯತನುಗೆ ಶಚಿ (ಅನಂಪು. ೫-೮೫). [ದಿವ್ಯ + ತನು]

**ದಿವ್ಯತಪೋಧನ** (ನಾ). ಶ್ರೇಷ್ಠ ತಪಸ್ವಿ : ಆ ದಿವ್ಯತಪೋಧನನಕ್ಷೋದಂ ಧ್ಯಾನಿಸಿದನನಿತುಮಂ ಕ್ರಮದಿಂ . . . ಅನುಪ್ರೇಕ್ಷೆಗಳಂ (ಶಾಂತಿಪು. ೯-೧೦೦). [ದಿವ್ಯ + ತಪೋಧನ]

**ದಿವ್ಯತೆ** (ನಾ). ದೇವನಾಗಿರುವಿಕೆ; ದೇವತ್ವ : ರಹಸ್ಯವನ್ನರಿತು ಮಾಡಿದ ಕರ್ಮವು ದಿವ್ಯತೆಯನ್ನುಂಟುಮಾಡಿ ಪಾಪದಿಂದ ವಿಮುಕ್ತಿಗೊಳಿಸುವದು (ಧರ್ಮಸಾ. ೧೧೭) ; ಜಗದೆಲ್ಲ ಐಶ್ವರ್ಯ ಪದವಿ ಹಿರಿಹೆಮ್ಮೆಗಳು ಉಂಟಾದರೇಂ ಬರತೆ ದಿವ್ಯತೆಯ ಸೊಬಗು! (ದ್ರಾಕ್ಷಿದಾ. ೫೦-೨೦).
[ಸಂ. ದಿವ್ಯತಾ]

**ದಿವ್ಯದರ್ಶನ** (ನಾ). ಶ್ರೇಷ್ಠವಾದಂದರ ಕಾಣ್ಕೆ; ಸಾಕ್ಷಾತ್ಕಾರ ಪರಮಾತ್ಮಸ್ವರೂಪದ ದಿವ್ಯದರ್ಶನವನ್ನು ಜೀವನು ಹೇಗೆ ಪಡೆಯುವನೆಂಬುದನ್ನು ದರ್ಶನಭಾಗವು ತಿಳಿಸುತ್ತದೆ (ಶಕ್ತಿವಿ. ೨೦).
[ದಿವ್ಯ + ದರ್ಶನ]

**ದಿವ್ಯದೃಷ್ಟಿ** (ನಾ). ಅತೀಂದ್ರಿಯ ದೃಷ್ಟಿ; ಅಸಾಧಾರಣವಾದ ಪ್ರಜ್ಞೆ: ಯೋಗದ ಬಲಮುಣ್ಮೆ ಪೊಣ್ಮೆ ನಿಲೆ ಪುತ್ರವರಾರ್ಥಿಗಳಾಗಿ ತನ್ನ ಕಟ್ಟಿದಿರೊಳ್ ನಿಂದರಂ ನಯದೆ ನೋಡೆ ಮುನೀಂದ್ರನಧಿ ವ್ಯದೃಷ್ಟಿಮಂತ್ರದೊಳೆ ಪೊದಟ್ಟುದಾ ಸತಿಯರಿರ್ವರೊಳಂ ನವಗರ್ಭವಿಭ್ರಮಂ (ಪಂಪಭಾ. ೧-೮೫): ಅನನ್ಯೆ, ಅವ್ಯಯೆ ಎಂದು ಮುನಿಗಳಿಟ್ಟ ಪೆಸರ್. ಎನ್ನಿರವನೊಂದುಱಿಯದಱಿಯಲ್ವೇಟ್ಕುಮಾದೊಡೆ, ದಿವ್ಯದೃಷ್ಟಿಯಿಂ ನೋಟ್ಪುದು (ಅದ್ಭುತ. ೫೩-೨೦) ; ಋಷಿಗಳು ತಮ್ಮ ದಿವ್ಯದೃಷ್ಟಿಯಿಂದ ಕಂಡ ದೇವತಾ ಮೂರ್ತಿಗಳನ್ನು ಸ್ಥೂಲಪದಾರ್ಥಗಳಿಂದ ಮಾಡಿ ತೋರಿಸುವ ಸಾಮರ್ಥ್ಯ ಹೊಂದಿದ್ದ ಶಿಲ್ಪಿಗಳು . . . ಸಮಾಜದಲ್ಲಿದ್ದರೆಂದು ನಂಬುವುದು ಸಹಜವೇ ಆಗಿದೆ (ಭಾರಶಿ. ೫೦೯) ; ಭಗವತಿತನ ಸದ್ಯದ ಜೀರ್ಣಶಕ್ತಿಗೆ ಅನುಗುಣವಾಗುವಂತಹ ಕೋಮಲಾಹಾರ ಎಲ್ಲಿ ದೊರಕಬಹುದೆಂಬುದನ್ನು ಮಹಾಮೌದ್ಗಲ್ಯಾಯನನು ತನ್ನ ದಿವ್ಯದೃಷ್ಟಿಯಿಂದ ಕಂಡುಕೊಂಡನು (ಹತ್ತುಮು. ೦೦೯). [ದಿವ್ಯ + ದೃಷ್ಟಿ]

**ದಿವ್ಯದೇಹ** (ನಾ). = ದಿವ್ಯತನು : ಸಹಜವಿಭೂಷಣಪ್ರತತಿಪಲ್ಲವಮಿಲ್ಲದ ದಿವ್ಯದೇಹ (ಶಾಂತಿಪು. ೯-೩೪). [ದಿವ್ಯ + ದೇಹ]

**ದಿವ್ಯದ್ಯೋತಿ** (ನಾ). ಲೋಕೋತ್ತರವಾದ ಕಾಂತಿ,-ಬೆಳಕು: ದೇವರ್ಕಳ ದಿವ್ಯಮೌಳಿಮಣಿಮಾಲಾದೀಪ್ತಿಯುಂ . . . ಜಿನೇಂದ್ರತನು ದಿವ್ಯದ್ಯೋ[ಪಾಠಾಂ. ಜ್ಯೋ]ತಿಯುಂ ಧಾಟಿಯಿಟ್ಟು ವಿಯಚ್ಚಕ್ರದೊಳಿಕ್ಕಿ ಮೆಟ್ಟಿದುವನಂತಾರ್ಕಪ್ರಭಾಚಕ್ರಮಂ (ಮಲ್ಲಿಪು. ೧೩-೧೭೩).
[ದಿವ್ಯ + ದ್ಯೋತಿ₁]

**ದಿವ್ಯದ್ವಿಪ** (ನಾ). ೧. ಶ್ರೇಷ್ಠವಾದ ಆನೆ. ೨. ದೇವಲೋಕದ ಆನೆ. ೧, ೨ : ನೀರಾಟಕೆಂದೆಯ್ದಿ ಸಾರ್ದಿರೆ ದಿವ್ಯದ್ವಿಪಮಿಂಬುಗೊಂಡು ಜಳಮಂ ರಂಭಾದಿಗಳ್ಸೇವಿಸುತ್ತಿರೆ . . . ನಿರ್ಜರ ಗಂಗಾನದಿ ತಾನಿದೆಂಬ ತೆಱದಿಂ ಕಾವೇರಿ ಕಾಣ್ಬೊಪ್ಪುಗುಂ (ರಾಜಶೇ. ೨-೪). [ದಿವ್ಯ + ದ್ವಿಪ]

**ದಿವ್ಯಧ್ವನಿ** (ನಾ). ೧. ಶ್ರೇಷ್ಠವಾದ ಮಾತು; ಪವಿತ್ರವಾದ ನುಡಿ: ಕೇಳಿದಿರೊ ದಿವ್ಯಧ್ವನಿ ಜೀವದ ಣಮೋಕಾರ ಕನ್ನಡದ ಟಂಕಾರ (ಜೀವಲ. ೫೯-೯). ೨. [ಜೈನ] ಸಮವಸರಣಸಮಯದಲ್ಲಿ ಅರ್ಹಂತನಿಗೆ ಪ್ರಾಪ್ತವಾಗುವ ಅಸಾಧಾರಣಪರಿಣಾಮವುಳ್ಳ ಮಾತಿನ ಶಕ್ತಿ : ಆ ತ್ರಿಲೋಕತಿಲಕಂಗೆ ದಿವ್ಯಧ್ವನಿ ನೆಗಟ್ಟುದು (ಆದಿಪು. ೬-೨೪ ವ) ; ಬೆಸಸಿದನಘಾರಿ ದಿವ್ಯಧ್ವನಿಯಿಂ (ಶಾಂತಿಪು. ೭-೮೫). [ದಿವ್ಯ + ಧ್ವನಿ]

**ದಿವ್ಯನಗ** (ನಾ). ೧. ದೇವಲೋಕದ ವೃಕ್ಷ; ಕಲ್ಪವೃಕ್ಷ : ವಿತರಣದಿಂದೆ ದಿವ್ಯನಗವುಂ ನಗಮುಂ ಘನಧೈರ್ಯದಿಂದೆ ವಿಶ್ರುತಯಶದಿಂದೆ ಪದ್ಮರಿಪುವಂ ರಿಪುವಂ . . . ಜಯಿಸಿರ್ದನುದಾತ್ತವೈಭವಂ (ರಾಜಶೇ. ೪-೧೧೧). ೨. ದೇವತೆಗಳ ಬೆಟ್ಟ; ಮೇರುಪರ್ವತ. [ ದಿವ್ಯ + ನಗ$_4$ ]

**ದಿವ್ಯನಿಧಾನ** (ನಾ). ೧. ಶ್ರೇಷ್ಠವಾದ ನಿಧಿ,_ಧನ. ೨. ಶ್ರೇಷ್ಠತೆಗೆ ಆಕರವಾಗಿರುವವನು : ಶ್ರೀ ಶಾಂತೀಶಂ ತ್ರಿಜಗದಧೀಶಂ ಕೇವಳವಿಬೋಧವಿನಿರೋಧಪದಾರ್ಥಶೇಷರೂಪನಮರನರೇಶಸಭಾವೃತನುದಾತ್ತ ದಿವ್ಯನಿಧಾನಂ (ಶಾಂತಿಪು. ೧೨-೧). [ ದಿವ್ಯ + ನಿಧಾನ ]

**ದಿವ್ಯನಿನಾದ** (ನಾ). ಶ್ರೇಷ್ಠವಾದ ಮಾತು : ಪೊದಟ್ದುದರ್ಹನ್ಮುಖೇಂದು ದಿವ್ಯನಿನಾದಂ (ಶಾಂತಿಪು. ೬-೫೮). [ ದಿವ್ಯ + ನಿನಾದ ]

**ದಿವ್ಯಪ್ರಭಾವ** (ನಾ). ೧. ಅಲೌಕಿಕವಾದ ಪರಿಣಾಮ ; ದೇವಲೋಕದ ಪರಿಣಾಮಂ : ಅಂತು ದಿವ್ಯಪ್ರಭಾವದಿಂ ಸಕಳರ್ತುಕಸೌಂದರ್ಯಮುಮಂ ಬೇೞ್ವೇೞ್ ತೋಱುವ ರಾಜ್ಯಲಕ್ಷ್ಮೀವಲ್ಲಭಂ ವನಲಕ್ಷ್ಮಿಯಂ ನೋಡುವಾಗಳ್ (ಆದಿಪು. ೧೧-೯೧ ವ). ೨. ಶ್ರೇಷ್ಠವಾದ ಶಕ್ತಿಯಿಂದ ಕೂಡಿದವನಂ : ಈ ಗಿರಿದುರ್ಗಮುಂ ದಾಂಟಿ ಬಂದ ಬಲ್ಲಾಳ್ ದಿವ್ಯನಕ್ಕೆ ದಿವ್ಯಪ್ರಭಾವನಕ್ಕುಮಮೋಘನಕ್ಕುಂ (ಆದಿಪು. ೧೩-೫೭ ವ).
[ ದಿವ್ಯ + ಪ್ರಭಾವ ]

**ದಿವ್ಯಪ್ರಾಸಾದ** (ನಾ). ಭವ್ಯವಾದ ಮಂದಿರ ; ಉತ್ತಮವಾದ ಉಪ್ಪರಿಗೆಯ ಮನೆ : ಸರ್ವತೋಭದ್ರಮೆಂಬ ಗೋಪುರದೊಳಂ ಕೂಡಿದ ವೈಜಯಂತಿಯೆಂಬ ದಿವ್ಯಪ್ರಾಸಾದಮುಂ ದಿಕ್ಸ್ವಸ್ತಿಕಮೆಂಬ ಸಭಾಭೂಮಿಯುಂ (ಆದಿಪು. ೧೫-೩ ವ). [ ದಿವ್ಯ + ಪ್ರಾಸಾದ ]

**ದಿವ್ಯಪ್ರೇಮ** (ನಾ). ದೇವರೊಡನೆ ಇರುವ ಪ್ರೀತಿ ; ದೈವಿಕವಾದ ಪ್ರೇಮ : ಗಂಡಸಿಗೂ ಹೆಂಗಸಿಗೂ ಇರುವ ಸಂಬಂಧ ಪ್ರಕೃತಿಗೂ ಪುರುಷನಿಗೂ (ದೇವರಿಗೂ) ಇರುವಂಥಾದ್ದು. ಸ್ತ್ರೀ ಪುರುಷರ ಪ್ರೇಮ ಹೀಗಿದ್ದರೆ ಅದು ದಿವ್ಯಪ್ರೇಮವಾಗುತ್ತದೆ (ಇಸ್ಲಾಂಸಂ. ೨೮೦).
[ ದಿವ್ಯ + ಪ್ರೇಮ ]

**ದಿವ್ಯಭಾಷೆ** (ನಾ). ೧. ದೇವಭಾಷೆ : ಆವುದೋ ದಿವ್ಯಭಾಷೆಗಳ ಸಂದೇಶವನು ಕೊಡಲೆಂದು, ಮಡಿಮಡಿದು ಮೇಲೇರುತಿವೆ (ನಲ್ಮೆ. ೫೬-೨೨). ೨.=ದಿವ್ಯಧ್ವನಿ ೨ : ದಿವ್ಯಭಾಷೆ ಸುರತೂರ್ಯರವಂ ಪೂಮೞೆ ಕೇಸರಿಪೀಠಂ ಭಾಮಂಡಳಮೆಸೆಯೆ ನೆಗೞ್ದನಾದಿಜಿನಂ (ಚಾವುಂಪು. ೧) ; ಆವರಿಸಿರ್ದಘಾತಿಘನಕಾಂಡಪಟಂ ಪೆಱಪಿಂಗೆ ದಿವ್ಯಭಾಷಾವಧುವಿಂಗೆ ರಾಘವಯತಿಪ್ರವರಂ ವರನಾಗೆ (ಪಂರಾಮಾ. ೧೬-೬೮). [ದಿವ್ಯ + ಭಾಷೆ]

**ದಿವ್ಯಭೋಗ** (ನಾ). ಸ್ವರ್ಗಸುಖ ; ಉತ್ಕೃಷ್ಟವಾದ ಭೋಗ : ಅಂತು ದಿವ್ಯಭೋಗ ಸಂಪತ್ಪರಂಪರಾಪರಿಗತನಾಗಿ (ಆದಿಪು. ೬-೧೭ ವ).
[ ದಿವ್ಯ + ಭೋಗ ]

**ದಿವ್ಯಮಂತ್ರ** (ನಾ). ಶ್ರೇಷ್ಠವಾದ ಉಪದೇಶ; ಪವಿತ್ರವಾದ ಬೋಧೆ ಸಲಹಿದೊಡೆಯನ ದಿವ್ಯಮಂತ್ರವ ಕಲಿಸಿದಾಚಾರ್ಯನನು ಅನುವರದೊಳಗೆ ತಲೆಗಾಯಿದನ . . . ಮಱೆದವನಿಳಿದನ್ನೆ ಕುಲಕೋಟಿಸಹಿತ ಮಹಾಂಧ ನರಕದಲಿ (ಕುಮಾವ್ಯಾ. ೩-೪೨); ಧರ್ಮವೇ ಜಯವೆಂಬ ದಿವ್ಯಮಂತ್ರ ಮರ್ಮವನಱಿತು ಮಾಡಲು ಬೇಕು ತಂತ್ರ (ಪುರಂದ. ೨-೭೫ ಅನುಪಲ್ಲವಿ).
[ ದಿವ್ಯ + ಮಂತ್ರ ]

**ದಿವ್ಯಮಾನುಷ** (ನಾ). ದೇವಾಂಶಸಂಭೂತನಾದ ವ್ಯಕ್ತಿ; ದೇವತ್ವವನ್ನು ಪಡೆದ ಮನುಷ್ಯ: ಬೌದ್ಧಶಿಲ್ಪದಲ್ಲಿ, ನಮುಗೆ, ಯಮಾಂತಕ, ಜಂಭಳ, ಸಂವರ ಮುಂತಾದ ಸಂರಕ್ಷಕ ದೇವತಾವಿಗ್ರಹಗಳೂ . . . ನಾಗಾರ್ಜುನ, ಪದ್ಮಸಂಭವ ಮುಂತಾದ 'ದಿವ್ಯಮಾನುಷ'ರ ಮೂರ್ತಿಗಳೂ ಲಬ್ಧವಾಗುತ್ತವೆ (ಭಾರದ. ೫೧೫). [ ದಿವ್ಯ + ಮಾನುಷ ]

**ದಿವ್ಯಮುನಿ** (ನಾ). ಶ್ರೇಷ್ಠನಾದ ಮುನಿ,-ತಪಸ್ವಿ: ಮನದೊಳ್ ಸೋಲ್ತು ಮುನೀಂದ್ರನಾಕೆಯೊಡಲೀ ದುರ್ಗಂಧಪೋಪಂತೆ . . . ಮಾಡಿ . . . ಕೂಡುವೆಡೆಯೊಳ್ ಜ್ಞಾನಸ್ವರೂಪಂ ಮಹಾಮುನಿಪಂ ಪುಟ್ಟಿದನಂತು ದಿವ್ಯಮುನಿಗಳ್ಗೀಗೆಯ್ದೊಡಂ ತೀರದೇ (ಪಂಪಭಾ. ೧-೬೯).
[ ದಿವ್ಯ + ಮುನಿ$_3$ ]

**ದಿವ್ಯಮೂರ್ತಿ** (ನಾ). ಶ್ರೇಷ್ಠವಾದ ಸ್ವರೂಪ ; ರಮಣೀಯವಾದ ರೂಪ : ಪರಮೌದಾರಿಕ ದಿವ್ಯಮೂರ್ತಿ ವಸನಾಳಂಕಾರ ಮಂದಾರಶೇಖರರಮ್ಯಂ ಧೃತಯೌವನಂ (ಆದಿಪು. ೮-೫) ; ತನ್ನ ಶರೀರದ ಕೇಡಂ ಬಗೆಯದೆ ಮಹಾತಪದೊಳ್ನಿಗಱ್ದೊಡೆ ದಿವ್ಯಮೂರ್ತಿಯುಂ ವಿಜಯಮೂರ್ತಿಯುಂ ಪರಮಮೂರ್ತಿಯಂ ಅನುಪಮಮೂರ್ತಿಯುಮಂ ಪಡೆಯಲಕ್ಕುಂ (ಚಾವುಂಪು. ೨೨೯). [ ದಿವ್ಯ + ಮೂರ್ತಿ ]

**ದಿವ್ಯಮೂಲ** (ನಾ). ೧. ದೇವಾಂಶದ ಆದಿ ; ದೇವಮೂಲ : ಈ ಬುದ್ಧ್ಯಾತ್ಮಕ ಆತ್ಮ ಅಭೌತವಾಗಿದ್ದು ಆದಿಕಾರಣವಾದ ದಿವ್ಯಮೂಲದಿಂದ ಬಂದದ್ದು (ಇಸ್ಲಾಂಸಂ. ೨೨೫). ೨. ಒಂದು ಬಗೆಯ ಬೇರು : ಶೈತ್ಯ ಸೌರಭ್ಯ ಮಾಂದ್ಯಮೆಂಬ ತ್ರಿವಿಧಮುದಸಮೃದ್ಧವಾದ ಪನ್ನೀರು . . . ದಿವ್ಯಮೂಲ ಪರಿಮಳಮೃಗ ಕರ್ಪೂರವೃಕ್ಷ ಹಿಮಾದಿ ಸಂಪರ್ಕದಿಂ ರಮ್ಯವಾದ ಮಂದಮಾರುತಸ್ಪರ್ಶನದಿಂದಪೇಕ್ಷಣೀಯಮಾಗಿರ್ಕುಂ (ವಿವೇಕ. ೨೦೩). [ ದಿವ್ಯ + ಮೂಲ ]

**ದಿವ್ಯರೂಪ** (ನಾ). ಅಲೌಕಿಕವಾದ ರೂಪ ; ಅತ್ಯಂತ ಸುಂದರವಾದ ರೂಪ : ಈತಂ ಕೇವಲಂ ದಾನವರಿಪುವೆ ಪೆಱಂಗೆಲ್ಲಿತೀ ದಿವ್ಯರೂಪಂ (ಜಗವಿ. ೩-೨); ವಿಶ್ವರೂಪಂ . . . ತನ್ನ ದಿವ್ಯರೂಪಮನಡಂಗಿಸಿ (ಜಗವಿ. ೩-೬ ವ). [ ದಿವ್ಯ + ರೂಪ ]

**ದಿವ್ಯಲಿಂಗಿಭಟಾರ** (ನಾ). ಒಬ್ಬಾತನ ಹೆಸರು: ಶ್ರೀ ದಿವ್ಯಲಿಂಗಿಭಟಾರರ್ಗ್ಗೆ ಸೂದ್ರಕಯ್ಯಂ ಕಾಲ್ಗೆಱೆಯೆ (ಎಕ. XI, ಹೊಳಲ್ಕೆ. ೨೩-೧೬; ೯೬೮). [ ದಿವ್ಯಲಿಂಗಿ$_0$ + ಭಟಾರ (<ಭಟಾರ) ]

**ದಿವ್ಯವಚನ** (ನಾ). ಅಲೌಕಿಕವಾದ ಮಾತು; ಪವಿತ್ರವಾದ ನುಡಿ : ದಿವ್ಯವಚನಮರೀಚಿಮಾಲಿರೋಚಿರ್ನಿಚಯ ತ್ರಿಜಗಚ್ಚೂಡಾಮಣಿಯಂ . . . ಎನಿತಾನುಂ ಸ್ತುತಿಗಳಿಂ ಸ್ತುತಿಯಿಸಿ (ಶಾಂತಿಪು. ೯-೬೯ ವ) ; ವಿಯತ್ತಳದೊಳಿರ್ದ ಚಂದ್ರಮಂ ತನ್ನ ದಿವ್ಯವಚನದಿನಾಱಿಸಿದುದುಮಂ ನೀನುಂ ಕಾದಂಬರಿಯುಂ ಕೇಳ್ದಿರ್ (ಕಾದಂಬ. ೬೨೩) ; ತಾಲ್ವೋಷ್ಠವ್ಯಾಪಾರ ವಿರಹಿತಮುಮಪ್ಪ ದಿವ್ಯವಚನಾಮೃತಮುಮಂ (ಅಜಿಪು. ೬-೧೫ ವ).
[ ದಿವ್ಯ + ವಚನ ]

**ದಿವ್ಯವತಿ** (ನಾ). [ಸಂಗೀತ] ಮಧ್ಯಮಗ್ರಾಮದಲ್ಲಿ ಹುಟ್ಟುವ ಹತ್ತು ರಾಗಗಳಲ್ಲಿ ಒಂದು: ಗಾಂಧಾರಿ ರಕ್ಷೋಗಾಂಧಾರಿ . . . ದಿವ್ಯವತಿ . . . ಕೌಶಿಕಿಯೆಂಬ ಹತ್ತು ರಾಗಂಗಳು ಮಧ್ಯಮಗ್ರಾಮದಿಂ ಪುಟ್ಟಿದವು (ವಿವೇಕ. ೨೩೩). 'ಗ್ರಾಮ' ಪರಾ. [ ಸಂ. ದಿವ್ಯವತೀ ]

**ದಿವ್ಯವಧು** (ನಾ). ದೇವತಾಸ್ತ್ರೀ ; ದಿವಿಜೆ: ಜತ್ತವಟ್ಟದ ಮಣಿಯಂತದೇಂ ಪದುಳಮಾದುದೊ ದಿವ್ಯವಧೂಕದಂಬಕಂ (ಆದಿಪು. ೭-೧೨೫).
[ ದಿವ್ಯ + ವಧು ]

**ದಿವ್ಯವಪು** (ನಾ). ದಿವ್ಯವಾದ ದೇಹ ; ಕಾಂತಿಯುತವಾದ ದೇಹ,-ಶರೀರ: ಪಳುಕಿನ ಪಾಪೆಯನಮರ್ದಿಂ ಕೊಳೆದಂತೊರ್ಮೊಟಿದ ದಿವ್ಯವಪು . . . ಏಂ ವಿಳಾಸಮಂ ತಾಳ್ದಿದುದೋ (ಆದಿಪು. ೬-೩೯).
[ ದಿವ್ಯ + ವಪು ]

**ದಿವ್ಯವರುಷ** (ನಾ). ದೇವತೆಗಳ ಒಂದು ವರ್ಷ ; ಮನುಷ್ಯರ ಒಂದು ವರ್ಷವೆಂದರೆ ದೇವತೆಗಳ ಒಂದು ದಿವಸವೆಂಬ ಲೆಕ್ಕದಿಂದ ದಿವ್ಯವರುಷ ನಮ್ಮ ಮುನ್ನೂರರುವತ್ತು ವರ್ಷಗಳ ಅವಧಿ. ಅದರಲ್ಲಿ

ಉತ್ತರಾಯಣವೇ ಹಗಲು, ದಕ್ಷಿಣಾಯನವೇ ರಾತ್ರಿ : ಅಜನುದರದೊಳು ದಿವ್ಯವರುಷಸಾಹಸ್ರ ನೀರಜನಯನ ನೀನಿರಲ್ಕೆ (ವೀಕೃಪು. ೩-೫-೩೫) ; ಮಾಣದೀರ್ವರು ದಿವ್ಯವರುಷಪರಿಯಂತವಕ್ಷೀಣಯುದ್ಧಂ ಮಾಡಿ (ವೀಕೃಪು. ೩-೧೩-೧೦). [ ದಿವ್ಯ + ವರುಷ ]

**ದಿವ್ಯವಸನ** (ನಾ). ಉತ್ತಮವಾದ ಬಟ್ಟೆ ; ಶ್ರೇಷ್ಠವಾದ ವಸ್ತ್ರ : ಕ್ಷೌಮದುಕೂಲಾದಿ ದಿವ್ಯವಸನ ವಿವಿಧಪ್ರಾವರಣವಿಶೇಷಂಗಳುಂ (ಆದಿಪು. ೧೫-೩ ವ). [ ದಿವ್ಯ + ವಸನ ]

**ದಿವ್ಯವಾಣಿ** (ನಾ). ದೇವರ ಮಾತು ; ಅಶರೀರವಾಣಿ; ದಿವ್ಯಧ್ವನಿ: ಗೌರೀ ಮಂದಿರದಲ್ಲಿ ನಿನಗೆ ಕೇಳಿದ ದಿವ್ಯವಾಣಿ ಸುಳ್ಳಾಗುವುದುಂಟೇ ? (ಗುರುಪ. ೯೪) ; ವೇದವಲ್ಲಿ ಕಣ್ಣನ್ನು ಅರ್ಧಮುಚ್ಚಿ ಯಾವುದೋ ದಿವ್ಯವಾಣಿ ಕೇಳುತ್ತಿರುವವರಂತೆ ಸಂತೃಪ್ತರಾದರು (ನೀಡನೆ. ೨). [ ದಿವ್ಯ + ವಾಣಿ$_1$ ]

**ದಿವ್ಯವಿಧಿ** (ನಾ). ದೇವತೆಗಳು ಮಾನವರಿಗೆ ಮಾಡಿರುವರೆಂದು ನಂಬಲಾದ ನಿಯಮ ; ದೈವದ ನಿಯಮ : ಸೆಳೆವೊಂದು ದಿವ್ಯವಿಧಿಯಿಂದ ಜಗವೆಲ್ಲ ಬೇರೆ ಇರಲಾರದೆಯೆ, ಮಾರದೆಯೆ, ಸೇರುವುವು: ನೀನೇಕೆ ಬೇರೆ ಇರುವೆ ? (ಇಂಗೀತ. ೪೬-೭). [ ದಿವ್ಯ + ವಿಧಿ ]

**ದಿವ್ಯವಿಷ್ಟರ** (ನಾ). ಶ್ರೇಷ್ಠವಾದ ಆಸನ, -ಪೀಠ : ಕರಮಿಂಬಾಗಿರೆ ಚಾಮರಯುಗ್ಮಮದಾಗಳೆ ನಿಲೆ ದಿವ್ಯವಿಷ್ಟರಂ ಮಣಿಖಚಿತಂ (ಆದಿಪು. ೧೪-೧೧೭). [ ದಿವ್ಯ + ವಿಷ್ಟರ ]

**ದಿವ್ಯಶಕ್ತಿ** (ನಾ). ಅದ್ಭುತವಾದ ಶಕ್ತಿ ; ಅಸಾಧಾರಣವಾದ ಶಕ್ತಿ : ದಿವ್ಯಶಕ್ತಿಪ್ರಭಾವದಿಂದ ಮಾನುಷಾರಣ್ಯಂಗಳ ಮಹಾದ್ರುಮಂಗಳಂ ತರಿಸಿ ನಡಿಸಿ (ಆದಿಪು. ೧೩-೫೨ ವ) ; ದೇವರು ಉಂಟುಮಾಡಿದ ಸೃಷ್ಟಿಯು ಆತನ ದಿವ್ಯಶಕ್ತಿ ಜ್ಞಾನಗಳ ಕನ್ನಡಿಯಾಗಿದೆ (ಮುಂಬಯಿ. ೪-೭೦). [ದಿವ್ಯ+ಶಕ್ತಿ]

**ದಿವ್ಯಶಯ್ಯೆ** (ನಾ). ಉತ್ತಮವಾದ ಹಾಸಿಗೆ, -ಶಯ್ಯೆ : ಲೌಕಿಕಶಾಸ್ತ್ರನಿವರ್ತನಂ ಬೆರಸು ಪಲವುಂ ತೆಱದ ಪಱಿಗಳುಂ . . . ದಿವ್ಯಶಯ್ಯಾಸನ ನಾನಾ ಸದನಂಗಳುಂ (ಆದಿಪು. ೧೫-೩ ವ) ; ಜಯಲಕ್ಷ್ಮೀನಿಭೆಯಪ್ಪ ಸೂಟರಸಿಗಂ ಭೂಪಂಗಮಾ ದಿವ್ಯಶಯ್ಯೆಯಿನೇಟಲ್ಕಿದೆ ಪೊಟ್ಟು (ಶಾಂತಿಪು. ೧೦-೧೫೭). [ ದಿವ್ಯ + ಶಯ್ಯೆ ]

**ದಿವ್ಯಶರೀರ** (ನಾ). ೧. ಕಾಂತಿಯುತವಾದ ದೇಹ : ಕೊಳೆ ನೋಡುವ ಕಣ್ಗಳಸುಂಗೊಳೆ ದಿವ್ಯಶರೀರಮಂತುಮಲ್ಲದೆಯುಂ ತಾಂ ತೊಳತೊಳತೊಳಗೆ ನಿಶಾಕರವಿಳಂಬಿಯಾಯ್ತು ಮಿತವಿಕ್ರಮಪ್ರಭೆ ದಿವದೊಳ್ (ಶಾಂತಿಪು. ೯-೩೫). ೨. ಕಾಂತಿಯುತವಾದ ದೇಹವನ್ನುಳ್ಳವನು : ಅಂತರ್ಚಿಸಿ ಪೊಡಮಟ್ಟು ಪರಮೌದಾರಿಕದಿವ್ಯಶರೀರನುಂ . . . ಅಪ್ಪ ತೀರ್ಥಂಕರ ಕುಮಾರಂಗೆ (ಶಾಂತಿಪು. ೧೦-೫೭ ವ). [ ದಿವ್ಯ + ಶರೀರ ]

**ದಿವ್ಯಸಂಭವ** (ನಾ). ೧. ದೈವಾಂಶದಿಂದ ಕೂಡಿದವನು : ಸ್ಥಿತ ಭೌಮೋತ್ತರದೇಯಸ್ಥಿತಿ ಬೆಸದೊಳ್ ಗರ್ಭಸಂಭವಕ್ಕಭಿಮತದುನ್ನತ ದಿವ್ಯಸಂಭವರ್ಗನುಚಿತಮೆಂಬರಿತೀಶ ನಿಮಗೆ ಪೇೞ್ವುಪದೇಶಂ (ಶಾಂತಿಪು. ೧೦-೯೭). ೨. ದೈವಾಂಶದಿಂದ ಹುಟ್ಟಿದುದು; ಅಯೋನಿಜ : ಬಲ್ಲರಿಗೆ ದಿವ್ಯಸಂಭವಮಲ್ಲದೆ ದೊರೆ ಗರ್ಭಸಂಭವಂಗಳ್ಗಿಲ್ಲೆಲ್ಲಿಯುಮೆನೆ ಪಿರಿದುಂ ತಲೆವಲ್ಲಿದುವಱುವತ್ತು ಸಾಸಿರಂ ಮದಕರಿಗಳ್ (ಶಾಂತಿಪು. ೧೦-೧೧೭).
[ ದಿವ್ಯ + ಸಂಭವ ]

**ದಿವ್ಯಸಂಯೋಗ** (ನಾ). ದೇವತೆಗಳ ಸಂಪರ್ಕ, -ಒಡನಾಟ : ಅಂತು ದಿವ್ಯಸಂಯೋಗದೊಳಿರ್ವರುಂ ಗರ್ಭಮಂ ತಾಳ್ದರ್ (ಪಂಪಭಾ. ೧-೮೫ ವ).
[ ದಿವ್ಯ + ಸಂಯೋಗ ]

**ದಿವ್ಯಸಾಹಸ್ರವರ್ಷ** (ನಾ). ದೇವಮಾನದ ಸಹಸ್ರವರ್ಷ: ನಾರದಂ ದಿವ್ಯಸಾಹಸ್ರವರ್ಷ ಪರ್ಯಂತಮಭ್ಯಾಸಿಸುತಿರ್ದು . . . ನೈಪುಣ್ಯಮಂ ಪಡೆದಂ (ಅದ್ಭುತ. ೨೫-೭). [ ದಿವ್ಯ + ಸಾಹಸ್ರ + ವರ್ಷ ]

**ದಿವ್ಯಸುಖ** (ನಾ). ದೇವಲೋಕದ ಭೋಗ ; ಸ್ವರ್ಗಸುಖ: ಮಹೇಂದ್ರಾಮರೇಶ್ವರನಭೂತೋಪಮ ದಿವ್ಯಸುಖಮನನುಭವಿಸಿ (ಶಾಂತಿಪು. ೯-೧೨೪ವ); ಮಹೇಂದ್ರಾಮರಂ ಮೂವತ್ತುಮೂಱು ಸಾಗರೋಪಮ ಯುಷ್ಯಂಬರಮನನ್ಯಸಾಮಾನ್ಯದಿವ್ಯಸುಖಮನನುಭವಿಸುತ್ತುಮಿರೆ (ಶಾಂತಿಪು. ೯-೧೬೧ ವ).
[ ದಿವ್ಯ + ಸುಖ ]

**ದಿವ್ಯಸೌಂದರಿ** (ನಾ). ದೇವಲೋಕದ ಸುಂದರಿ ; ಸುರಸುಂದರಿ : ಉನ್ಮದ ಭೃಂಗಮಾಲಿಕಾರವಮುಖರೀಕೃತಾಮ್ರವನಶೋಭಿತಮಾಶ್ರಿತ ದಿವ್ಯಸೌಂದರೀನಿವಹನಿಕೀರ್ಣಚಂಪಕವನಂ ಕರಮೊಪ್ಪುಗುಂ (ಆದಿಪು. ೧೩-೭೦). [ ದಿವ್ಯ + ಸೌಂದರಿ ]

**ದಿವ್ಯಸ್ತುತಿ** (ನಾ). ದಿವ್ಯಶಕ್ತಿಯುಳ್ಳವರಂ ಮಾಡಿದ ಸ್ತೋತ್ರ, -ಹೊಗಳಿಕೆ, -ಸ್ತುತಿ : ವೇದದಱಿಕೆಗಳಡಗದು [ಪಾಠಾಂ. ಜಸುವು. ] ಪನಿಷದಾದಿದಿವ್ಯಸ್ತುತಿಯು ಗಡಣಿಗೆ ಹೋದ ಹೊಲಬಳವಡದ ಮುನಿಗಳ ಮುಖಕೆ ಮನಗುಡದ ಕಾದಿ ಕಡಗುವ ತಾರ್ಕಿಕರು . . . ನಿಜವನಱಿಯದನಾದಿಸಿದ್ಧನ ಬರವ ಕಂಡನು ಬಾಗಿಲಲಿ ವಿದುರ (ಕುಮಾವ್ಯಾ. ಉ. ೮-೯).
[ ದಿವ್ಯ + ಸ್ತುತಿ ]

**ದಿವ್ಯಸ್ನಾನ** (ನಾ). ವಾಯವ್ಯ, ವಾರುಣ, ದಿವ್ಯ, ಮಾನಸ, ಆಗ್ನೇಯಗಳೆಂಬ ಐದು ವಿಧವಾದ ಸ್ನಾನಗಳಲ್ಲಿ ಒಂದು ; ಬಿಸಿಲಿನಿಂದ ಕೂಡಿದ ಮಳೆಯಲ್ಲಿ ಮಾಡುವ ಸ್ನಾನ : ದಿವ್ಯಸ್ನಾನ ವಾರುಣಸ್ನಾನ ವಾಯುವ್ಯಸ್ನಾನ ಮಾನಸಸ್ನಾನ ಆಗ್ನೇಯಸ್ನಾನವೆಂಬ ಪಂಚವಿಧಸ್ನಾನಂಗಳೊಳಗೆ (ವಿವೇಕ. ೧೪೫) ; ಬಿಸಿಲಿನಿಂದ ಕೂಡಿದ ಮಳೆಯಿಂದ ಮಾಡುವುದೇ ದಿವ್ಯಸ್ನಾನವು (ಅಷ್ಟಾವಿ. ೪). [ ದಿವ್ಯ + ಸ್ನಾನ ]

**ದಿವ್ಯಸ್ಪರ್ಶ** (ನಾ). ದೈವಿಕವಾದ ಅನುಭವ ; ಸಾಕ್ಷಾತ್ಕಾರವಾದ ಅನುಭವ : ಅತ್ತ ಹೊರಳಲು ಸ್ಪರ್ಶ ಇತ್ತ ಹೊರಳಲು ಸ್ಪರ್ಶ ಎತ್ತೆತ್ತಲು ಸ್ಪರ್ಶ ದಿವ್ಯಸ್ಪರ್ಶ (ನನಲ್ಲ. ೧೫-೧೩). [ ದಿವ್ಯ + ಸ್ಪರ್ಶ ]

**ದಿವ್ಯಸ್ಮಿತ** (ನಾ). ಮನೋಹರವಾದ ಮುಗುಳ್ನಗೆ : ನಗುತಿಹ ದೇವರ ದಿವ್ಯಸ್ಮಿತವೆನೆ ಮಳೆಬಿಸಿಲಿದೊ ಮಲೆ ಮೇಲುಗಡೆ (ಮಾಂದಳಿ. ೫೮-೭).
[ ದಿವ್ಯ + ಸ್ಮಿತ ]

**ದಿವ್ಯಹಂಸ** (ನಾ). ೧. ಶ್ರೇಷ್ಠವಾದ ಹಂಸಪಕ್ಷಿ. ೨. ಶ್ರೇಷ್ಠನಾದ ಸಂನ್ಯಾಸಿ. ೧, ೨ : ತ್ರಿಭುವನಗುರುಪರಿನಿಷ್ಕ್ರಮಣಕಲ್ಯಾಣ ಶಾರದಾಗಮ ಪ್ರತೀಕ್ಷಣ ದಿವ್ಯಹಂಸರುಂ ಬ್ರಹ್ಮಕಲ್ಪಾಂತ ನಿವಾಸಿಗಳುಮಪ್ಪ ಸಾರಸ್ವತಾದಿತ್ಯ . . . ಅರಿಷ್ಟರೆಂಬೆಣ್ಬರುಂ ಲೋಕಾಂತಿಕದೇವರ್ ಬಂದು (ಆದಿಪು. ೯-೭೦ ವ). 'ಪರಮಹಂಸ' ಪರಾ. [ದಿವ್ಯ+ಹಂಸ]

**ದಿವ್ಯಾಂಗ** (ನಾ). ೧. ದೈವಿಕವಾದ ಶರೀರ : ದ್ವಾವಿಂಶತ್ಯಂಬುಧಿ ಮಿತ ಜೀವಿತಮುಂ ಮೂಱು ಮೊಳದ ದಿವ್ಯಾಂಗಮುಮಾ ದೇವಂಗಾಯ್ತು (ಆದಿಪು. ೬-೧೭): ಅಂಗನೆಯ ಸರ್ವಾಂಗವಂ ದಿವ್ಯಾಂಗಮಾಗಿರಲೀಯಲಾ ಲಲಿತಾಂಗಿ ಸರ್ವಾಂಗದೊಳಱಗಿ ವಂದಿಸುತ ಮುಂದಿರಲು (ಬಸವ. ೫೭-೭೦). ೨. ಮನೋಹರವಾದ ದೇಹ : ಮಡದಿಯ ದಿವ್ಯಾಂಗವೇಂ ಮನಂಗೊಳಿಸಿದುದೊ (ರಾಜಶೇ. ೩-೧೬). [ ದಿವ್ಯ + ಅಂಗ$_2$ ]

**ದಿವ್ಯಾಂಗದಳೆ** (ಕ್ರಿ). ಸುಂದರವಾದ ದೇಹವನ್ನು ಹೊಂದು, -ತಳೆ : ಅಂಗನೆಯಂಗದ ಕಾಮಂ ಮುನ್ನಿನನಂಗತೆಯಂ ಪರಿಹರಿಸಿ ಬಳಿಕ ದಿವ್ಯಾಂಗಂದಳೆದೊಪ್ಪಂಬಡೆದಂದದಿಂ (ಜಯಕಾ. ೨-೫೮).
[ ದಿವ್ಯಾಂಗ + ತಳೆ$_1$ ]

**ದಿವ್ಯಾಂಗನೆ** (ನಾ). ದೇವಲೋಕದ ಸ್ತ್ರೀ : ದಿವ್ಯಾಂಗನಾಭಾವಾಪಾಂಗ ನಿರೀಕ್ಷಣಾಮೃತಕೃತಾನಂಗೋತ್ಸವಂ (ಆದಿಪು. ೨-೬) : ದಿವ್ಯಾಂಗನೆ ನೋಡಿದಳ್ ತೆಗುಳ್ದು ಚಂದ್ರಾಪೀಡ ಭೂಪಾಲನಂ (ಕಾದಂಪೂ. ೬೮೮)
[ ಸಂ. ದಿವ್ಯಾಂಗನಾ ]

**ದಿವ್ಯಾಂಗಿ** (ನಾ). ದಿವ್ಯಾಂಗವನ್ನು ಹೊಂದಿರುವವಳು : ಮಿಗಿಲೆನಿಸಿ ನಡೆದಳು ದೇವನರ್ಧಾಂಗಿ ನಿರುಪಮುಚಿದಂಬುಜಪತಂಗಿ ದಿವ್ಯಾಂಗಿ ಶಂಕರ ವಿಲಸದಂತರಂಗಿ (ವೀಶೈಪು. ೩-೨-೨೬). [ ಸಂ. ದಿವ್ಯಾಂಗೀ ]

**ದಿವ್ಯಾಂಜನ** (ನಾ). ಕಣ್ಣಿಗೆ ಅದ್ಭುತಶಕ್ತಿಯನ್ನು ನೀಡುವ ಅಂಜನ,-ಲೇಪನದ್ರವ್ಯ,-ಕಾಡಿಗೆ : ಮರುಜವಣಿ . . . ಸಂತೋಷಣ ದಿವ್ಯಾಂಜನ . . . ಸಿದ್ಧಲೇಪಾದಿ ಸುವಸ್ತುಗಳನೇಕವಾಗಿ ಅಲ್ಲಿಯಣ ಶಿವಭಕ್ತರಿಗೆ ಸುಕೃತಾನುರೂಪದಿಂದಾನಂದಕರಗಳಾಗಿರ್ಕುಂ (ವಿವೇಕ. ೨೦೦).

[ ದಿವ್ಯ + ಅಂಜನ ]

**ದಿವ್ಯಾಂಬರ** (ನಾ). ಉತ್ತಮವಾದ ಬಟ್ಟೆ,-ಉಡುಪು : ಬಾಡದ ಬಾಸಿಗ ಮುಡಿ ಚೆಲ್ವೋಡದ ದಿವ್ಯಾಂಬರಂ ಮನಂಗೊಳೆ (ಆದಿಪು. ೭-೪೦); ಮಣಿಭೂಷಣದಿವ್ಯಾಂಬರಗಣಂಗಳಂ ತಣಿಯೆ ಕೊಟ್ಟು (ಶಾಂತಿಪು. ೧೧-೧೦೩) ; ಮಂಗಳವೇ ಮಜ್ಜನವೆನಗೆ . . . ದಿಗಂಬರವೇ ದಿವ್ಯಾಂಬರವೆನಗೆ (ಮಹಾದೇ. ಬ. ೩೬-೭೮). [ ದಿವ್ಯ + ಅಂಬರ ]

**ದಿವ್ಯಾಂಬು** (ನಾ). ಪವಿತ್ರವಾದ ನೀರು ; ದೇವಲೋಕದ ನೀರು : ಅಚ್ಛಸ್ಫಟಿಕಕಳಶಮಂ ತೀವಿ ದಿವ್ಯಾಂಬುವಿಂ ನಾಕಜನಾಥಂ ಮಜ್ಜನಕ್ಕೆತ್ತಿದ ತೆಱದೆ ಸುಧಾಸೂತಿ ಕಣ್ಗೆಡ್ಡವಾದಂ (ಆದಿಪು. ೧೨-೮).

[ ದಿವ್ಯ + ಅಂಬು₃ ]

**ದಿವ್ಯಾಕಾರ** (ನಾ). ೧. ಸುಂದರವಾದ ರೂಪ,_ಆಕಾರ : ಮಾಯಾದೇವಿ ಲೋಕತ್ರಯಜನನಿ ಮದಾಜ್ಞಾಸಮುತ್ಪನ್ನೆಯುಷ್ಮತ್ಕಲೆ ದಿವ್ಯಾಕಾರದಿಂ ಪುಟ್ಟುಗೆ (ಜಗವಿ. ೨-೫೮). ೨. ಸುಂದರವಾದ ರೂಪವನ್ನುಳ್ಳವನು : ಮಹಾಪ್ರಮಾಣಪುರುಷನುಂ ಮಹಾಪುರುಷಲಕ್ಷಣೋಪೇತನುಂ ದಿವ್ಯಾಕಾರನುಮೆನಿಸಿದ ಮಹಾನುಭಾವಂ (ಕಾದಂಪೂ. ೯೩೬).

[ ದಿವ್ಯ + ಆಕಾರ₂ ]

**ದಿವ್ಯಾಕಾರೆ**(ನಾ). ಸುಂದರವಾದ ರೂಪವನ್ನುಳ್ಳವಳು: ಒರ್ವಳತ್ಯುತ್ತಮ ದಿವ್ಯಾಕಾರೆ ಕುಳ್ಳಿರ್ದತನುಹರನನಾರಾಧಿಸುತ್ತಿರ್ದಳಾಗಳ್ (ಕಾದಂಪೂ. ೬೫೯). [ ದಿವ್ಯಾಕಾರ + - ಎ₂ ]

**ದಿವ್ಯಾಕೃತಿ** (ನಾ). ೧. ಸುಂದರವಾದ ರೂಪ,-ಆಕಾರ : ದಿವ್ಯಾಲಂಕಾರ ದಿವ್ಯಲೇಪನ ಭಾಸ್ವದ್ದಿವ್ಯಾಕೃತಿಯುಂ ಧರಿಯಿಸಿ (ಜಗವಿ. ೪-೮೧). ೨.ಸುಂದರವಾದ ರೂಪವನ್ನು ಉಳ್ಳವನು: ಶ್ರೀ ಕುರುಭೂಮಿಭವಂ ದಿವ್ಯಾಕೃತಿ ಜಿನಚಂದ್ರದೇವನಿರೆ (ಶಾಂತಿಪು. ೭-೧). [ ದಿವ್ಯ + ಆಕೃತಿ ]

**ದಿವ್ಯಾಗಮ** (ನಾ). ೧. ಶ್ರೇಷ್ಠವಾದ ಆಗಮ, ೨. ವಾತುಲ, ಉತ್ತರವಾತುಲ, ಕಾಲಜ್ಞಾನ, ಪರಾಜಿತ, ಸರ್ವಾಗಮ, ಸರ್ವಾಷ್ಟಾಗಮ, ಶ್ರೇಷ್ಠಾಗಮ, ದಿವ್ಯಾಗಮ, ಶುದ್ಧಾಗಮ, ಮಹದಾಗಮ, ವಿಶ್ವಾಸಾಗಮ ಮತ್ತು ವಿಶ್ವಾತ್ಮಕಾಗಮವೆಂದು ವಾತೂಲಾಗಮದ ಹನ್ನೆರಡು ಭೇದಗಳಲ್ಲಿ ಒಂದು: ವಾತೂಲ ಉತ್ತರವಾತೂಲ ಕಾಲಜ್ಞಾನ ಪರಾಜಿತ . . . ದಿವ್ಯಾಗಮ ಶುದ್ಧಾಗಮ . . . ವಾತೂಲಾಗಮದ ದ್ವಾದಶ ಭೇದಂಗಳು (ವಿವೇಕ. ೭೬). [ ದಿವ್ಯ + ಆಗಮ ].

**ದಿವ್ಯಾಜ್ಞೆ** (ನಾ). [ಜೈನ] ಪಾರಿವ್ರಾಜ್ಯಲಕ್ಷಣಗಳನ್ನು ತಿಳಿಸುವ ಆಜ್ಞೆ ಎಂಬ ಸೂತ್ರಪದದ ಮೂರು ಬಗೆಗಳಲ್ಲಿ ಒಂದು; P ದಿವ್ಯಾಜ್ಞೆ, ವಿಜಯಾಜ್ಞೆ ಮತ್ತು ಪರಮಾಜ್ಞೆ ಎಂಬ ಮೂರು ಬಗೆಗಳಲ್ಲಿ ಮೊದಲನೆಯದು. ದಿವ್ಯಾಜ್ಞೆಯಿಂದ ದೇವತೆಗಳನ್ನು ವಶೀಕೃತರನ್ನಾಗಿ ಮಾಡಿಕೊಳ್ಳಬಹುದು: ನಿಜಾಜ್ಞಾಭಿಮಾನಪರಿತ್ಯಾಗದಿಂ ಮೌನವ್ರತಧಾರಿಯಾಗಿ ತಪದೊಳೆಸಗಿದೊಡೆ ದಿವ್ಯವಿಜಯಪರಮಜ್ಞಾನ ಪ್ರಾಪ್ತಿಯಕ್ಕುಂ ಅಲ್ಲಿ ದಿವ್ಯಾ[ಪಾಠಾಂ. ದೇವಾ]ಜ್ಞೆಯೆಂಬುದು ದೇವೇಂದ್ರ ಪುಣ್ಯದಿಂ ದೇವರ್ಕಳಂ ವಶೀಕೃತಂ ಮಾಬ್ಬುದು (ಚಾವುಂಪು. ೨೫೦).

[ ದಿವ್ಯ + ಅಜ್ಞೆ ]

**ದಿವ್ಯಾದಿವ್ಯ** (ನಾ). [ಶೈವ] ಶೈವಾಗಮದ ಆರು ಬಗೆಗಳಲ್ಲಿ ಒಂದು : ಶೈವಾಗಮಗಳು . . . ಬೋಧಕ – ಬೋಧ್ಯಸಂಬಂಧದಲ್ಲಿ "ಪರ, ಮಹಾನ್, ಅಂತರಾಳ, ದಿವ್ಯ, ದಿವ್ಯಾದಿವ್ಯ, ಅದಿವ್ಯ"ಗಳೆಂದು ಆರು ಬಗೆಯಾಗಿವೆ (ಭಾರದ. ೭೩). [ ಸಂ. ]

**ದಿವ್ಯಾನಂದ** (ನಾ). ಪರಮಾನಂದ; ಬ್ರಹ್ಮಾನಂದ : ಜೀವನದಲ್ಲಿ ದಿವ್ಯತ್ವವನ್ನು ಪ್ರಕಾಶಪಡಿಸಿ ದಿವ್ಯಾನಂದದ ಅನುಭವವನ್ನು ಪಡೆಯಲು ಯಾವ ಸಿದ್ಧತೆಗಳು ಅತ್ಯವಶ್ಯವೊ ಆ ನಿಯಮಗಳು ಜೀವನಕ್ಕೆ ಮಾರ್ಗದರ್ಶಕವಾಗಿವೆ (ಮುಕ್ಕಾರ. ೮೮ ಟೀತಿಕೆ). [ ದಿವ್ಯ + ಆನಂದ ]

**ದಿವ್ಯಾನುಭವ** (ನಾ). ಶ್ರೇಷ್ಠವಾದ ಅನುಭವ : ಈ ದಿವ್ಯಾನುಭವಕ್ಕೆ ಏನನ್ನರ್ಪಿಸಿದರೂ ಕಡಿಮೆ (ಸಮಜೀ. ೨೨೩). [ ದಿವ್ಯ + ಅನುಭವ ]

**ದಿವ್ಯಾನುಭಾವ** (ನಾ). ೧. = ದಿವ್ಯಾನುಭೂತಿ. ೨. ಅಸಾಧಾರಣ ಸಾಮರ್ಥ್ಯವುಳ್ಳವನು ; ಮಹಾನುಭಾವ : ಮತ್ತಮಾ ದಿವ್ಯಾನುಭಾವಂ ಐರಾವತಗಜಕುಂಭಸ್ಫಾರಣವಿಶ್ಲಥವಿಕಾಸಿಕೇಯೂರಂ ಕೇಯೂರದೊಳೊರಸೆ . . . ಇರ್ಪನರ್ಹದಾಸ್ಥಾಯಿಕೆಯೊಳ್ (ಶಾಂತಿಪು. ೫-೧೫೨ ವ).

[ ದಿವ್ಯ + ಅನುಭಾವ ]

**ದಿವ್ಯಾನುಭೂತಿ** (ನಾ). ಅತೀಂದ್ರಿಯವಾದ ಅನುಭಾವ; ಪರಮಾನಂದ: ಸೌಂದರ್ಯಕ್ಕೆ . . . ನಮ್ಮಲ್ಲಿ ದಿವ್ಯಾನುಭೂತಿಯನ್ನು ಉಂಟುಮಾಡುವ ಶಕ್ತಿಯಿದೆ (ಸೌಂದಸ. ೯೦). [ ದಿವ್ಯ + ಅನುಭೂತಿ ]

**ದಿವ್ಯಾನ್ನ** (ನಾ). ಉತ್ತಮವಾದ ಅನ್ನ ; ಶ್ರೇಷ್ಠವಾದ ಅನ್ನ : ಹಂಸೆಯ ತುಪ್ಪುಳ ಹಾಸಿನ ಮೇಲೆ ಬಿಜಯಂಗೆಯ್ಸಿ ದಿವ್ಯಾನ್ನ ದಿವ್ಯಫಳ ದಿವ್ಯಾಮೃತರಸಂಗಳನೂಡಿ ದಿವ್ಯಾಭರಣ ದಿವ್ಯವಸ್ತ್ರಂಗಳಿಂದಲಂಕರಿಸಿ (ನಂಬಿರ. ೨-೩೮); ಶಾಲಿಯ ದಿವ್ಯಾನ್ನ ಸದ್ಯೋಘೃತಗಳ ಲೋಲಾಕ್ಷಿಯರು ಬಡಿಸಿದರು (ಕಂನವಿ. ೮-೮೫). [ ದಿವ್ಯ + ಅನ್ನ₈ ]

**ದಿವ್ಯಾಪಗೆ** (ನಾ). ದೇವಲೋಕದ ನದಿ ; ಗಂಗೆ : ಸಂಧ್ಯಾವಂದನಾದಿಗಳ ಮಾಡಿ ಸುಮ್ಮಾನದಿಂ ಪಿತೃದೇವತೆಗಳ ತೋಷಣೆಗೊಳಿಸಿ ಸಾನಂದದಿಂದ ಕೃತಕೃತ್ಯರಾಗುತೆ ನುತಿಸಿ ದಿವ್ಯಾಪಗೋತ್ತಮೆಯನು (ವೆಂಕಾರಾ. ೧-೦೪-೮೩). [ ಸಂ. ದಿವ್ಯಾಪಗಾ ]

**ದಿವ್ಯಾಭರಣ** (ನಾ). ಶ್ರೇಷ್ಠವಾದ ಆಭರಣ,-ಒಡವೆ : ಸುರಭಿಕುಸುಮದಾಮಂ ಬಾಡಿನೀರೋಡೆ ದಿವ್ಯಾಭರಣರುಚಿ ಗಳಸ್ತೋದಸ್ತಸೂರ್ಯಾಂಶುಗಳ್ತೋಲಿರೆ ಮಸುಳೆ ನಿಜಾಂಗಂ (ಶಾಂತಿಪು. ೭-೩೮).

[ ದಿವ್ಯ + ಆಭರಣ ]

**ದಿವ್ಯಾಯುಧ** (ನಾ). ಶ್ರೇಷ್ಠವಾದ ಆಯುಧ : ದಿವ್ಯಾಯುಧಂಗಳಂ ಗೆಲೆ ದಿವ್ಯಾಯುಧಮಸುರವಡೆಯನನಿಲತನೂಜಂ . . . ಪಿಶಾಚವಡೆಗೆ ಬಾಣಸುಗೆಯ್ದಂ (ಪಂಪಭಾ. ೧೩-೦೩೧). [ ದಿವ್ಯ + ಆಯುಧ ]

**ದಿವ್ಯಾರ್ಚನೆ** (ನಾ). ೧. ಶ್ರೇಷ್ಠವಾದ ಪೂಜೆ ; ಉತ್ಕೃಷ್ಟವಾದ ಅರ್ಚನೆ: ದಿವ್ಯಾರ್ಚನೆಯೊಳೆ ಮೆಚ್ಚಿದಂ ಭಕ್ತಿಯುಂ ಚಕ್ರನಾಥಂ (ಆದಿಪು. ೦೬-೨). ೨. ಮಂತ್ರ, ಪುಷ್ಪ ಮೊದಲಾದ ಶ್ರೇಷ್ಠವಾದ ಪೂಜಾಸಾಧನ : ಸಹಸ್ರನಾಮಾಂಕಿತ ಸ್ತುತಿಗಳಿಂ ಸ್ತುತಿಯಿಸಿ ದಿವ್ಯಾರ್ಚನೆಗಳಿಂದರ್ಚಿಸಿ (ಆದಿಪು. ೦೫-೨೧ ವ). [ ದಿವ್ಯ + ಅರ್ಚನೆ ]

**ದಿವ್ಯಾಲಂಕಾರ** (ನಾ). ಶ್ರೇಷ್ಠವಾದ ಅಲಂಕಾರ,-ಆಭರಣ : ದಿವ್ಯಾಲಂಕಾರ ದಿವ್ಯಲೇಪನ ಭಾಸ್ವದ್ದಿವ್ಯಾಕೃತಿಯುಂ ಧರಿಯಿಸಿ (ಜಗವಿ. ೪-೮೧) ; ಸರ್ವರಿಗೂ ಆಚಾರವೇ ದಿವ್ಯಾಲಂಕಾರವೆನಿಸಿದೆ (ಶಕ್ತಿವಿ. ೮೩).

[ ದಿವ್ಯ + ಅಲಂಕಾರ ]

**ದಿವ್ಯಾಲಾಪ** (ನಾ). ಉತ್ಕೃಷ್ಟವಾದ ಮಾತು ; ಉಚಿತವಾದ ನುಡಿ : ದಿವ್ಯಾಲಾಪದಿಂದಾಗ ಸೂತನಾ ಮುನಿಗಳಿದಿರಿನೊಳು ಶರಭನ ಪೊಗಳಿದ (ವೀಶೈಪು. ೩-೬-೪೬). [ ದಿವ್ಯ + ಆಲಾಪ ]

**ದಿವ್ಯಾವತಾರ** (ನಾ). ಶ್ರೇಷ್ಠವಾದ ಅವತಾರ ; ಆ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ ಮತ್ತು ವಾಮನ ಎಂಬ ವಿಷ್ಣುವಿನ ಮೊದಲ ಐದು ಅವತಾರಗಳಿಗೆ ದಿವ್ಯಾವತಾರ ಎಂದು ಹೆಸರು : ಮೊದಲಿನ ಐದು ದಿವ್ಯಾವತಾರಗಳು (ಭಾರದ. ೧೪೫). 'ಪೂರ್ಣಾವತಾರ' ಪರಾ. [ ದಿವ್ಯ + ಅವತಾರ ]

**ದಿವ್ಯಾವಧಿ** (ನಾ). [ಜೈನ] ಶ್ರೇಷ್ಠವಾದ ಅವಧಿಜ್ಞಾನ ; ತ್ರಿಕಾಲ ಗಳಲ್ಲಿ ನಡೆದ, ನಡೆಯುವ, ನಡೆಯಬಹುದಾದುದನ್ನು ತಿಳಿಯುವ ಜ್ಞಾನ : ಆಕಾರೋಪಲಕ್ಷಿತದಿಂದತ್ಯಾಸನ್ನಭವ್ಯನೆಂದು ನಿಶ್ಚಯಿಸಿ ದಿವ್ಯಾವಧಿಯುಂ ಪ್ರಯೋಗಿಸಿ ನೋಡಿ (ಸುಕುಮಾ. ೩-೮). 'ಅವಧಿಜ್ಞಾನ' ಪರಾ. [ ದಿವ್ಯ + ಅವಧಿ ]

**ದಿವ್ಯಾವಧಿಬೋಧ** (ನಾ). [ಜೈನ] ಶ್ರೇಷ್ಠವಾದ ಅವಧಿಜ್ಞಾನವನ್ನು ಹೊಂದಿರುವವನು : ನಿವ್ಯಾಜವಿಖ್ಯಾತನೆಂದಾ ದಿವ್ಯಾವಧಿಬೋಧರಱಿದು ತಪಮಂ ಕೊಟ್ಟರ್ (ಸುಕುಮಾ. ೩-೩೫). 'ಅವಧಿಬೋಧ' ಪರಾ. [ ದಿವ್ಯಾವಧಿ + ಬೋಧ ]

**ದಿವ್ಯಾಶ್ರಮ** (ನಾ). (ಋಷಿಗಳ) ಪವಿತ್ರವಾದ ಆಶ್ರಮ,-ವಾಸಸ್ಥಾನ : ಅಧ್ಯಯನಕಾಲದ ಬ್ರಹ್ಮಚರ್ಯಾವಸ್ಥೆ ಋಷಿಗಳ ದಿವ್ಯಾಶ್ರಮದಲ್ಲಿ (ಋಗ್ವಾರ. ೮೮ ಟೀಕೆ). [ ದಿವ್ಯ + ಆಶ್ರಮ ]

**ದಿವ್ಯಾಶ್ವ** (ನಾ). ಉತ್ತಮವಾದ ಕುದುರೆ ; ಶ್ರೇಷ್ಠವಾದ ಕುದುರೆ : ತುರಗಾಸುರನ ಪಡೆದೋರ್ಕೆಯಂತಿರ್ದ ದಿವ್ಯಾಶ್ವಂಗಳ ಕಟ್ಟುವ ದೀರ್ಘ ಪಟಮಂಡಪಂಗಳಿಂದಮತಿಮನೋಹರವಾದ (ಶಾಂತಿಪು. ೧೧-೧೪೭ ವ). [ ದಿವ್ಯ + ಅಶ್ವ ]

**ದಿವ್ಯಾಸ್ತ್ರ** (ನಾ). ದೇವತಾಮಂತ್ರಗಳಿಂದ ಅಭಿಮಂತ್ರಿಸಿ ಬಿಡುವ ಬಾಣ : ಆ ದಿವ್ಯಾಸ್ತ್ರಂಗಳಂ ಸಾಧಿಸಲೆ ನೆಗೞ್ದ ಪಾರಾಶರಂ ಪೇೞ್ ಮುನ್ನಂ ಪೋದಂ (ಪಂಪಭಾ. ೮-೩೦) ; ಆರ್ ವೀರಾಗ್ರೇಸರನಪ್ಪ ಮಾರುತಿಯ ದಿವ್ಯಾಸ್ತ್ರಕ್ಕೆ ಮೆಯ್ಯಾನ್ಪರ್ಚುವರ್ (ಪಂಪರಾಮಾ. ೧೩-೧೨೦). [ ದಿವ್ಯ + ಅಸ್ತ್ರ ]

**ದಿವ್ಯಾಹಾರ** (ನಾ). ಶ್ರೇಷ್ಠವಾದ ಆಹಾರ ; ಒಳ್ಳೆಯ ಆಹಾರ : ಮಹಾಕಲ್ಯಾಣಕಾರಮೆಂಬ ದಿವ್ಯಾಹಾರಮುಂ ಅಮೃತಗರ್ಭಂಗಳೆಂಬ ಸದ್ಯೋಘೃತಮುಂ . . . ಅಮೃತರಸಾಯನಮೆಂಬ ಪಾನಮುಂ (ಆದಿಪು. ೧೫-೩ ವ) ; ಉರ್ವರಾಸ್ಯತಿಲಕನಪ್ಪ ಮೇಘರಥನರೇಂದ್ರನುಪ[ವಾ]ಸದ ಮೇಗೆ ದೊರೆಕೊಂಡುತ್ತಮಪಾತ್ರದಾನದ ಸಂತಸದಿಂ ತಣಿದು ದಂ ಪುನರುಕ್ತಂ ಮಾಳ್ಪಂತೆ ದಿವ್ಯಾಹಾರಮಂ ಪಾರಿ ಸುಖಮಿರೆ (ಶಾಂತಿಪು. ೯-೯೫ ವ). [ ದಿವ್ಯ + ಆಹಾರ ]

**ದಿವ್ಯೋಕ್ತಿ** (ನಾ). ೧. ದೇವತೆಗಳ ಮಾತು ; ಭವಿಷ್ಯನುಡಿಯುವುದು : ದೈವಪ್ರೇರಣೆಯ, ದಿವ್ಯೋಕ್ತಿಯ, ಮನುಷ್ಯರೂಪದ (ಅಥವಾ ಇತರ) ವಾಹಕ (Oracle. ಇಂಕನಿ). ೨. ಉತ್ತಮವಾದ ಮಾತು,-ನುಡಿ. [ ದಿವ್ಯ + ಉಕ್ತಿ ]

**ದಿವ್ಯೋಪದೇಶ** (ನಾ). ಶ್ರೇಷ್ಠವಾದ ಉಪದೇಶ,-ಬೋಧೆ : ಮುನ್ನಂ ನಿನ್ನನೆನ್ನಲ್ಲಿಗೆ ಬರಿಸಿದ ದಿವ್ಯೋಪದೇಶಂ ಸಮಂತಿದು ಮುನ್ನಂ ನಿನ್ನ ತತ್ತ್ವಕ್ಕೆಳಸಿದ ಹಿತಮಂ ಮಾಡಿದಾ ಜೋಯಿಸಂ ಬಂದುದು ಕೈಕೊಳ್ ನಿನ್ನ ಚಿತ್ತಂ ಬಯಸುವ ವಿಲಸನ್ನೂತ್ನಸಜ್ಞಾನರತ್ನಂ (ಸುಕುಮಾ. ೪-೨). [ ದಿವ್ಯ + ಉಪದೇಶ ]

**ದಿವ್ಯೌಷಧ** (ನಾ).=ದಿವ್ಯೌಷಧಿ: ದಿವ್ಯೌಷಧಮೆನಿಸಿದೌಷಧರ್ಧಿ ಕೆಯ್ಯೊಳಿಕ್ಕಿದ ನೀರಸಂ ಮೃದುರಸಾಯನಮಪ್ಪ ರಸರ್ಧಿಯಳ್ಕದುಬಳರ್ಧಿಯುಂಡಂ ಮಿಕ್ಕನ್ನಮಿದಾರ್ಸ್ಪದಮುಂಟು ಕಟಕಕ್ಕಮೆನಿಸುವ ಕ್ಷೀಣರ್ಧಿಯಿಂತು ಸಪ್ತರ್ಧಿಯುಂ ಮುನಿ ತಾಳ್ದಿದಂ (ಅನಂಪು. ೪-೩೦). [ ದಿವ್ಯ + ಔಷಧ ]

**ದಿವ್ಯೌಷಧಿ** (ನಾ). ಶ್ರೇಷ್ಠವಾದ ಔಷಧಿ ; ಪರಿಣಾಮಕಾರಿಯಾದ ಔಷಧಿ : ಆ ಪ್ರಸ್ತಾವದೊಳ್ ಫಲಪಾಕ ವಿರಾಮಂಗಳಪ್ಪ ಗರ್ಭಷಷ್ಠಿ ವ್ರೀಹಿಯವಗೋಧೂಮಾದಿ ಮಹೌಷಧಿಗಳುಮಂ ತಿಳಾತಸೀಕುಸುಂಭಾದಿ ದಿವ್ಯೌಷಧಿಗಳುಮಂ (ಚಾವುಂಪು. ೩೩-೬) ; ಅಮಿತಾಯುಷ್ಯಂ ದೊರೆಕೊಂಡ ಮನುಷ್ಯಂಗಖಿಳಮಂತ್ರದಿವ್ಯೌಷಧಿ ಸಿದ್ಧಿ . . . ದೊರೆಕೊಳ್ಗುಂ (ಜಾತಕ. ೮-೧೬). [ ದಿವ್ಯ + ಔಷಧಿ ]

**ದಿವ್ಯೌಷಧಿಗ** (ನಾ). ಶ್ರೇಷ್ಠವಾದ ಔಷಧಿಗಳನ್ನು ಕೊಡುವವನು ; ಪರಿಣಾಮಕಾರಿಯಾದ ಔಷಧಿಗಳನ್ನು ಕೊಡುವವನು : ಜೀವವ ತೊಱೆದವರನೆಬ್ಬಿಸುವ ದಿವ್ಯೌಷಧಿಗ ನೀನಲ್ಲ (ತೊರರಾ. ೬-೪೧-೪೮). [ ದಿವ್ಯೌಷಧಿ + -ಗ₂ ]

**ದಿಶಾಂತ** (ನಾ). ದಿಕ್ಕಿನ ಕೊನೆಯ ಭಾಗ ; ದಿಗಂತ. [ ಸಂ. ]

**ದಿಶಾಂತರ** (ನಾ). ದಿಕ್ಕುಗಳ ಮಧ್ಯಭಾಗ,- ಪ್ರದೇಶ : ನಿಜರೂಪ ವಿಜಿತ ಮಕರಧ್ವಜನಖಿಳದಿಶಾಂತರಪ್ರತಿಷ್ಠಿತ ಕೀರ್ತಿಧ್ವಜನದನಾಳ್ವಂ (ಚಂದ್ರಪು. ೬-೬). [ ಸಂ. ]

**ದಿಶಾಂತರಯಶ** (ನಾ). ದಿಕ್ಕುದಿಕ್ಕುಗಳಲ್ಲಿಯೂ ಕೀರ್ತಿಯನ್ನು ಗಳಿಸಿದವನು : ಧರ್ಮದ ಮೇರುಗಳ್ದಿಶಾನ್ತರಯಶರುತ್ತಮರ್ (ಸೌಇಇ. XX, ೫೭-೧೩ ; 1084). [ ದಿಶಾಂತರ + ಯಶ ]

**ದಿಶಾಕರಟಿ** (ನಾ). ಎಂಟು ದಿಕ್ಕುಗಳಲ್ಲಿಯೂ ಭೂಮಿಯನ್ನು ಹೊತ್ತಿರುವುದೆಂದು ನಂಬಲಾದ ಐರಾವತವೇ ಮೊದಲಾದ ಎಂಟು ಆನೆಗಳಲ್ಲಿ ಒಂದು; ದಿಗ್ಗಜ : ವಸುಂಧರೆ ನಿಲ್ವನ್ನೆವರಂ ದಿಶಾಕರಟಿ ಕರ್ಣಾಸ್ಫಾಲನಂ ಮಾಡುಗುಂ (ಪಂರಾಮಾ. ೬-೧೪೮). [ ಸಂ. ದಿಶಾಕರಟಿನ್ ]

**ದಿಶಾಕರಿ** (ನಾ). ೧.=ದಿಶಾಕರಟಿ. ೨. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : ಸುರಪತೀಶಕರಾಗ್ನಿಮಾರುತಭಾನುಯುಗ್ಮಗಣಂಗಳಿಂ ಪರದೊಳೊಪ್ಪೆ ಹಿಮಾಂಶುಶೇಖರನಿರ್ದು ವಿಶ್ರಮಣಂ ದಿಶಾಕರಿಯೊಳಾಗಿರೆ ಸಂದುದಿಂತಿದು . . . ನಾಮದಿಂ ತರಳಂ (ಛಂದೋಂಬು. ೨-೧೭೧). [ ಸಂ. ದಿಶಾಕರಿನ್ ]

**ದಿಶಾಗಜ** (ನಾ). ೧.=ದಿಶಾಕರಟಿ: ಮೇರುವನೊತ್ತಿ ಕೀೞ್ವೊಡೆ ಪಯೋಮಯಮಾಯ್ತೊ ನಭಂ ನೆಲಕ್ಕನಾಧಾರತೆಯಿಂದೆ ಬಿಟ್ಟುದೊ ದಿಶಾಗಜರಾಜಿಯ ವಾರಿಕೇಳಿಕಾಸಾರಮೊ . . . ಎನೆ ಕೌತುಕಮಾಯ್ತು ಮಹಾಸರೋವರಂ (ಚಂದ್ರಪು. ೫-೩೮). ೨. = ದಿಶಾಕರಿ ೨ : ಏಗಳುಂ ಯತಿ ದಿಶಾಗಜದೊಳ್ ನಿಂದಾಗಳ್ಗೆ ದಿವಿಜೇಂದು ಹರಸಂಯೋಗಮಾಗಿರೆ . . . ಸ್ವಾಗತಂ ನೆಗೞ್ದ ನಾಕಿಗನಿಂದಂ (ಛಂದೋಂಬು. ೨-೧೧೯). [ ಸಂ. ]

**ದಿಶಾಘಾಟ** (ನಾ). ದಿಕ್ಕಿನ ನೆಲೆ : ನೆಲನಿಲ್ಲಿಂದಿತ್ತಲಿಲ್ಲೆಂಬಿನಮನಿತೆ ದಿಶಾಘಾಟಮೆಂಬನ್ನೆಗಂ ಕಟ್ಟಲೆ ಚಂದ್ರಾದಿತ್ಯತೇಜಕ್ಕದಿರದಿದಿರನೊಡ್ಡಿರ್ದುದೆಂಬನ್ನೆಗಂ ಕಟ್ಟಲಿಸುತ್ತಿರ್ದತ್ತು (ಪಂರಾಮಾ. ೭-೧೨೩). [ ಸಂ. ]

**ದಿಶಾಚಕ್ರ** (ನಾ). ದಿಕ್ಕುಗಳ ಪರಿಧಿ ; ದಿಕ್ಚಕ್ರ : ಪ್ರಭಾಪ್ರಜ್ವಳಿತದಶದಿಶಾಚಕ್ರಂ . . . ಇರ್ದತ್ತೊಳಪುಗದೆ ಪುರೋಪಾಂತದೊಳ್ (ಆದಿಪು. ೧೪-೩) ; ಚಕ್ರಾಕಾರದಿನೊಗೆವ ದಿಶಾಚಕ್ರದಿಂ ಸ್ಫುರದ್ವಿಸ್ಫುಲಿಂಗದಿನುರಿಲಿಂಗಮಿರ್ಪಂತಿರ್ದ ಸಕಲಕುಲಾಚಲಚಕ್ರದಿಂ (ಗದಾಯು. ೮-೨೦ ವ) : ದೀಕ್ಷಾಗುರುಂ ಧರ್ಮದ್ರೋಹಚಕ್ರಂ ಸುಗಿದು ಪುಗೆ ದಿಶಾಚಕ್ರಮಂ ತನ್ನಭಾಗ್ರೇಸರಮೇಸುದ್ಯೋತದಿಂ ಬಾಸಣಿಸಿದುದೊ ವಿಯಚ್ಚಕ್ರಮಂ ಧರ್ಮಚಕ್ರಂ (ಮಲ್ಲಿಪು. ೧೪-೨೫೩). [ ಸಂ. ]

**ದಿಶಾದಂತಿ** (ನಾ). = ದಿಶಾಕರಟಿ : ದಿಶಾದಂತಿಗಳ್ಬರೆಗಂ ತಂದೆಯ ಕೀರ್ತಿಯೇಂ ಬಳೆದುದೋ (ಗದಾಯು. ೧-೧೨) ; ತ್ರಿದಶರ್ ಬಾಜಿಪ ದಿವ್ಯತೂರ್ಯರವಮಂ ನಿಷ್ಕಂಪಕರ್ಣಂಗಳಾಗಿ ದಿಶಾದಂತಿಗಳಾಲಿಪಲ್ಲಿ (ಪುಷ್ಪಪು. ೧೦-೧೧). [ ಸಂ. ದಿಶಾದಂತಿನ್ ]

**ದಿಶಾಧಿಪ** (ನಾ). ದಿಕ್ಕಿನ ಒಡೆಯ,-ಪ್ರಭು ; ದಿಕ್ಪಾಲಕ: ಸುರರಾಜನಗ್ನಿ ಕಾಲಂ ನಿರುತಿ ವರುಣನಾ ಮರುತಂ ಕುಬೇರನೀಶಂ ದಿಶಾಧಿಪರು (ಮಂಗರಾ. ೧೭-೧೮) ; ಆವ ದಿಶಾಧಿಪರತ್ತ ನಡೆಯಲು ಆವ ಹಗೆಗಳಲಿ ಸಪ್ತಾಂಗವ ಹಿಡಿಯಲು ಬೆಸಸುವೊಡೇಳೇಳಿಲೆ ಸುಕುಮಾರ (ಹಡಕಾ. ೧೨-೩೦ ರಗಳೆ). [ ಸಂ. ]

**ದಿಶಾಧೂಮ** (ನಾ). ದಿಕ್ಕುಗಳಲ್ಲಿ ಕಾಣಿಸಿಕೊಳ್ಳುವ ಬೆಂಕಿಯ ಹೊಗೆ; ದಿಗ್ಧೂಮಂ: ಧೂಮಮಯಮಾದ ದಿಶಾಧೂಮಂ ಕವಿದಂತಾಭೀಳಮಾಗೆ (ಶಾಂತಿಪು. ೭-೯೮ ವ). [ ಸಂ. ]

**ದಿಶಾಪಟ** (ನಾ). ೧. (ಶತ್ರುಗಳನ್ನು) ದಿಕ್ಕುದಿಕ್ಕಿಗೆ ಚೆದರುವಂತೆ ಮಾಡುವಿಕೆ ; ದಿಕ್ಕಾಪಾಲು ಮಾಡುವಿಕೆ. ೨. = ದಿಶಾಪಟಮಲ್ಲ : ರಥಕ್ಕೆ ದಾನವಕುಲದಿಶಾಪಟ ಕೃಷ್ಣ ಬಿಜಯಂಗೈದನೊಲವಿನಲಿ (ಕುಮ್ಯಾಉ. ೭-೮); ಭಾಪು ಪಾಂಡವಬಲದಿಶಾಪಟ ರಾಯಮದನಪ್ರಳಯಹರ ಭಾಪೆಂದು ಹೊಗಳಿತು ವಂದಿಸಂದೋಹ (ಕುಮ್ಯಾಕ. ೩೬-೪೮). [ ಸಂ. ]

**ದಿಶಾಪಟಮಲ್ಲ** (ನಾ). (ಶತ್ರುಗಳನ್ನು) ದಿಕ್ಕುದಿಕ್ಕಿಗೆ ಚೆದರಿಸುವವನು,-ದಿಕ್ಕಾಪಾಲು ಮಾಡುವವನು : ಪೊದೆದ ದುಗುಲಂ ರಣನಿಶಾಟಗಣ ದಿಶಾಪಟಮಲ್ಲನ ಚೆಲ್ವಿನ ಬೆಳ್ವಟ್ಟೆಯಂ ಪಟೆಯೆ (ರಾಮಾಶ್ವ. ೧೩೯-೧೨). [ ದಿಶಾಪಟ + ಮಲ್ಲ ]

**ದಿಶಾಪಟ್ಟ** (ನಾ). ೧. (ಶತ್ರುಗಳನ್ನು) ದಿಕ್ಕುದಿಕ್ಕಿಗೆ ಚೆದರುವಂತೆ ಮಾಡುವಿಕೆ. ೨. = ದಿಶಾಪಟಮಲ್ಲ : ಕುರುವಂಶದಿಶಾಪಟ್ಟನುಂ ಸಂಧ್ಯಾರಾಗಸನ್ನಿಕಾಶ ದುರ್ನಿರೀಕ್ಷ್ಯಕಟಾಕ್ಷವಿಕ್ಷೇಪಲಕ್ಷಿತನುಂ . . . ದುರ್ಯೋಧನವಿಶೇಷಣಾನ್ವೇಷಣಾರ್ಥಂ ಮಾಮಸಕಂ ಮಸಗಿ (ಗದಾಯು ೬-೨೬ ವ). [ ಸಂ. ]

**ದಿಶಾಪರಿಧಿ** (ನಾ). ದಿಕ್ಕುಗಳ ಆವರಣ,-ಪ್ರದೇಶ ; ದಿಗ್ವಲಯಂ : ಪರಿಣತ ಗಂಧಶಾಲಿವನ ಗಂಧದಿನುಲ್ಲಸಿತಾಂಬುಜಾಕರೋತ್ಕರನವಗಂಧದಿಂ ಪ್ರಚುರಚಂದನನಂದನ ಗಂಧದಿಂ ದಿಶಾಪರಿಧಿಯನೆಯ್ದೆ ಬಾಸಣಿಸುತಿರ್ಪುದು (ಚಂದ್ರಪು. ೩-೧೧). [ ಸಂ. ]

**ದಿಶಾಬಲಿ** (ನಾ). ದಿಕ್ಕುಗಳಿಗೆ ಕೊಡುವ ಬಲಿ ; ದಿಗ್ಬಲಿ. [ ಸಂ. ]

**ದಿಶಾಭಿತ್ತಿ** (ನಾ). ದಿಕ್ಕುಗಳ ಪ್ರದೇಶ ; ದಿಗಂತಪ್ರದೇಶ : ಕೈತಪ್ಪಿ ಬಿಟ್ಟಂಜನಂ ಕೆದಱಿತ್ತೆಂಬಿನಮುರ್ಬಿ ಮರ್ಬು ಪರಿದತ್ತೆತ್ತಂ ದಿಶಾಭಿತ್ತಿಯೊಳ್ (ದಶಕು. ೩-೩೩). [ ಸಂ. ]

**ದಿಶಾಪ್ರಸರ** (ನಾ). = ದಿಶಾವಳಯ : ದಿಶಾಪ್ರಸರಂ ಕವಿವಂತೆ ನೂಂಕಲೌವ್ವಳಿಸುವ ಗಂಧಸಿಂಧುರಘಟಾಳಿಗೆ ಬೊಬ್ಬಿಱಿದು ನೂಂಕಿದನಗ್ಗದ ಪಟ್ಟದಾನೆಯಂ (ಎಕ. VI, ತರೀಕೆ. ೪೫-೪೪ ; 1196). [ ಸಂ. ]

**ದಿಶಾಮಂಡಲ** (ನಾ). ೧. ದಿಕ್ಕುಗಳ ಸಮೂಹ,-ಗುಂಪು: ಇದಱೊಳ್ ಶ್ವೇತಾತಪತ್ರಸ್ಥಗಿತದಶದಿಶಾಮಂಡಲಂ ರಾಜಚಕ್ರಂ ಪುದಿದಟ್ಟಾಡಿತ್ತು . . . ಸಾಮಾನ್ಯಮೆ ಬಗೆಯೆ ಭವತ್ಕೇಶಪಾಶಪ್ರಪಂಚಂ (ಪಂಪಭಾ. ೧೨-೧೫೬). ೨. ದಿಕ್ಕುಗಳ ವಲಯ ; ದಿಙ್ಮಂಡಲ : ಮುಂಕೊಂಬ ಮಂದಿ ಕುದುರೆಗೆ ಧರಾಮಂಡಲಂ ಸಂಕುಲದ ವಾದ್ಯಧ್ವನಿಗೆ ದಿಶಾಮಂಡಲಂ . . . ಸಂಕೋಚಮೆನೆ ಬಂದು ಪಿಡಿದು ಪಾರ್ಥನ ತುರಗಮಂ ಕಟ್ಟಿ ಬಳಸಿ ಪದ್ಮವ್ಯೂಹವಾಗಿ ನಿಂದಾರ್ದುದಾ ಸೇನೆ (ಜೈಮಿಭಾ. ೧೨-೯). [ ಸಂ. ]

**ದಿಶಾಮಾತಂಗ** (ನಾ). =ದಿಶಾಕರಟಿ : ಅರರೆ ನಡೆದುದಂ ಸೇನೆ ಕುಲಗಿರಿಯೆರಡು ಕೂರುಮ ಫಣಿಪರಿಬ್ಬಿಬ್ಬರ ದಿಶಾಮಾತಂಗಗಳ ಹದಿನಾಱನಳವಡಿಸಿ (ಕುಮ್ಯಾಭೀ. ೧-೫೦). [ ಸಂ. ]

**ದಿಶಾಮೂಢ** (ನಾ). ದಿಗ್ಭ್ರಮೆಗೊಂಡವನು ; ದಾರಿತೋಚದವನು ; ದಿಕ್ಕುಗೆಟ್ಟವನು; ದಿಙ್ಮೂಢ : ಸಾಗರಸೇನಮುನಿವರರ್ದಿಶಾಮೂಢರಾಗಿ ಪೊಲಗೆಟ್ಟಿರ್ದಂದು (ಚಾವುಂಪು. ೧೯೫). [ ಸಂ. ]

**ದಿಶಾವರ** (ನಾ). ೧. ದಿಕ್ಕು ; ದೆಸೆ ; ದಿಕ್ಕಿನ ಆವರಣ : ಸೌರಾಷ್ಟ್ರ ಗೌಡ ವಿಷಯಂ ಮೊದಲಾಗಿಯುತ್ತರದಿಶಾವರದರಸುಮಕ್ಕಳೆಲ್ಲರುಮಂ . . . ಶ್ರೀಪಾದಾರಾಧನ ದೀಕ್ಷೆಯ ಕೈಕೊಳ್ವಿಸೆ (ಸೌಇಇ. XX, ೪೬-೩೬ ; 1072) ; ಶ್ರೀಮತ್ತ್ರಿಭುವನಮಲ್ಲದೇವರು ಭೋಜನ ಮೇಲೆ ಪಶ್ಚಿಮ ದಿಶಾವರಕ್ಕೆತ್ತಿದಲ್ಲಿ (ಸೌಇಇ. XX, ೬೪-೩ ; 1100) ; ಉತ್ತರದ ಪೂರ್ವದ ಪರಮತೀರ್ಥವ್ರಾತವನು ವಿಸ್ತರಿಸಿ ಸಾಗರತೀರದಲಿ ದಕ್ಷಿಣದಿಶಾವರಕೆ ತಿರುಗಿದನು (ಕುಮ್ಯಾಆ. ೧೯-೧೩). ೨. ದಿಕ್ಕುಗಳ ಒಡೆಯಂ; ದಿಕ್ಪತಿ : ಆ ವಿಗಡರಡಿಗಡಿಗೆ ತಾಟಿಪ ರಾವರಭಸದ ಬೊಬ್ಬೆಗಳಿಗೆ ದಿಶಾವರರು ನಡನಡುಗೆ (ಬಸಪು. ೫-೪೦). [ ಸಂ. ]

**ದಿಶಾವಲೋಕನ, ದಿಶಾವಳೋಕನ** (ನಾ). ಎಲ್ಲಾ ದಿಕ್ಕುಗಳ ಕಡೆಗೂ ನೋಡುವುದು ; ದಿಗವಲೋಕನ: ಸಪ್ತತಳಪ್ರಾಸಾದದ ಮೇಲಿರ್ವರು ವಿಷ್ಟಪರಿವಾರಸಹಿತಂ ದಿಶಾವಲೋ[ಪಾಠಾಂ. ಳೋ]ಕನಂಗೆಯ್ಯುತ್ತಂ ಸುಖಸಂಕಥಾವಿನೋದದಿಂದಿರ್ಪನ್ನೆಗಂ (ವಡ್ಡಾರಾ. ೪೩-೫) ; ನಳಿನಕೇತುವುಂ ಪ್ರಾಸಾದದುಪರಿಮಭೂಮಿಯೊಳ್ ಇರ್ದು ದಿಶಾವಲೋಕನಂಗೆಯ್ಯುತ್ತಿರೆ (ಶಾಂತಿಪು. ೯-೧೨ ವ). **ದಿಶಾವಳೋಕನ** : ಒಂದು ದಿವಸಂ ಕರುಮಾಡದ ಮೇಗಣ ನೆಲೆಯೊಳಿರ್ದರಸಂ ದಿಶಾವಳೋಕನಂಗೆಯ್ಯುತ್ತಿರ್ದಾತಂ ಬೆಟ್ಟದ ಮೇಗಾ ತಪಮಿರ್ದ ಋಷಿಯರಂ ಕಂಡು (ವಡ್ಡಾರಾ. ೧೬೦-೧೮). [ ಸಂ. ]

**ದಿಶಾವಳಯ** (ನಾ). ದಿಕ್ಕುಗಳ ಆವರಣ ; ದಿಗ್ವಲಯಂ : ಎಡೆಗಿಱಿದೆತ್ತಲುಂ ನಡೆವ ದಂತಿಘಟಾಳಿಯಿನೆತ್ತಮೋದುದಾವೆಡೆಯದು ಪೇೞ್ ದಿಶಾವಳಯಮೆಂಬಿನಮಾದುದದೊಂದು ವಿಸ್ಮಯಂ (ಆದಿಪು. ೧೨-೬೨). [ ಸಂ. ದಿಶಾವಲಯ ]

**ದಿಶಾವಳಿ** (ನಾ). ದಿಕ್ಕುಗಳ ಸಮೂಹ,-ಗುಂಪು : ಅತ್ತ ಕಱವೆಂಬಿನ ಬಲ್ಸರಿಯಿಂದಮಾ ದಿಶಾವಳಿ ಮಸುಳ್ದಂತು ನೀಳ್ದಪುದು (ಪಂಪಭಾ. ೧೧-೧೧) ; ಇದೆ ಬಹಳ ಭೂಕಂಪವದುಭುತವಿದೆ ದಿಶಾವಳಿ ಧೂಮಕೇತುಗಳಿದೆ ಪತಾಕಾಭಂಗವಿದೆ ವಿಪರೀತ ಪರಿವೇಶ ಇದು ಸಮಾಹಿತವಲ್ಲ (ಕುಮ್ಯಾವಿ. ೭-೩). [ಸಂ. ದಿಶಾವಲಿ ]

**ದಿಶಾವಳೋಕನ** 'ದಿಶಾವಲೋಕನ' ನೋ.

**ದಿಶಾಸಿಂಧುರ** (ನಾ). = ದಿಶಾಕರಟಿ : ಬುಧಜನದೊದವಿರ್ದಾಪತ್ಕುಧರಮನೌದಾರ್ಯ ವಜ್ರದಿಂ ಪೊಯ್ದು ಯಶೋಂಬುಧಿಯೊಳವಗಾಹಮಿರಿಸಿದನ ಧನರ ನಿಧಿ ಮಾಧವಂ ದಿಶಾಸಿಂಧುರಮಂ (ಶಾಪಮಂ. ೧೪೬೧ ; 1151). [ ಸಂ. ]

**ದಿಶಾಸ್ಥಗಿತ** (ನಾ). ದಿಕ್ಕುಗಳನ್ನು ಮುಚ್ಚಿದುದು,-ಆವರಿಸಿದುದು : ದಿನನಾಥ ರಥಪ್ರಸ್ಥಾನಪಾಂಸುವೆನಿಸಿ ದಿಶಾಸ್ಥಗಿತಂ ರಂಜಿಸಿತ್ತು ಸಂಧ್ಯಾರಾಗಂ (ಮಲ್ಲಿಪು. ೭-೧೦೫). [ ಸಂ. ]

**ದಿಶಾಳಿ** (ನಾ). = ದಿಶಾವಳಿ : ಸಕಲ ದಿಶಾಳಿಯಂ ಪುದಿದ ಶಾಳಿವನಂ ಶಶಿಕಾಂತನಿರ್ಗತೋದಕನವನಾಳಿಕೇರ ಜಲಪೂರಸಿತೇಕ್ಷುರಸ ಪ್ರವಾಹಮಾತ್ರಕಮೆನೆ ಸಂತತಂ ಬೆಳೆಯೆ (ಮಲ್ಲಿಪು. ೨-೧೬) : ಶಾಳಿಗಳಂ ಬಹು ಪರಿಮಳಶಾಳಿಗಳಂ ನಿಕಟಕುಮುದ ಸೌಗಂಧ್ಯಕೃತಾಶಾಳಿಗಳಂ ರುಚಿನಿಚಿತ ದಿಶಾಳಿಗಳಂ ಬೆಳೆವ ನೆಲನೆ ಪೊಲನಾ ನೆಲದೊಳ್ (ಪುಷ್ಪಪು. ೨-೧೪). [ ಸಂ. ದಿಶಾಲಿ ]

**ದಿಶೆ** (ನಾ). ೧. ದಿಕ್ಕು ; ದೆಸೆ ; ನಿಟ್ಟು : "ಹರಿದಾಶೆದಿಕ್ಕಕುಭಾಕಾಷ್ಠೆಗೋ ದಿಶೆಯೆನಲು ದಿಕ್ಕಿಂಗೆ ನಾಮಮಕ್ಕುಂ" (ಮಂಗರಾ. ೧೭-೧೮). ಅಂತೆಳೆಯುಂ ದಿಶೆಯುಂ ನಭಮುಂ ತನ್ಮಯಮಾಗೆ ನಡೆವ ಪಡೆವೆರಸೆಟ್ಟಂದಂ ತಾ ನೃಪತಿ ರಥಾವರ್ತಾಂತಿಕದೊಳ್ ಬೀಡುವಿಟ್ಟಂ (ವರ್ಧಪು. ೮-೧೮). ೨. ರೀತಿ ; ಮಾರ್ಗ : ಈ ದಿಶೆಯಲ್ಲಿ ಉಪಯುಕ್ತಬರಹಗಳಿಂದ ಹೆಚ್ಚಿನ ಮಾಹಿತಿ ನೀಡಿದರು (ದ್ರಾವಿವಿ. ೪೩೦) ; ಪ್ರೇಮದ ಎರಡು

ದಿಶೆಗಳು ಏಕಸೂತ್ರವಾಗಿ ಹೋಗಿವೆ (ಬಾಣಅ. ೪೦೦). ೩. [ಗಣಿತ] ಹತ್ತು ಎಂಬ ಸಂಖ್ಯೆಯ ಸಂಕೇತ: "ದಿಶಿ [ಶ] ಹತ್ತು" (ಮಂಗರಾ. ೧೦೪-೮). ೪. ಎಂಟು ಎಂಬ ಸಂಖ್ಯೆಯ ಸಂಕೇತ: ಕುಶಂ ವಾರ್ಧಿಪರ್ಯಾಯ ಮಕ್ಕುಂ ವಿರಾಮಂ ದಿಶಾಸಂಖ್ಯೆಯಕ್ಕುಂ (ಛಂದೋಂಬು. ೨-೧೨೭). [ಸಂ. ದಿಶಾ]

**ದಿಶೇಂದ್ರ** (ನಾ). ದಿಕ್ಕುಗಳ ಒಡೆಯ; ದಿಕ್ಪಾಲ: ಪಟಹ ಡಿಂಡಿಮ ಶಂಖ ತಾಳಕಹಳಾಬಹುಳನಾದಬಧಿರೀಕೃತದಿಶೇಂದ್ರಂ ಸಿಂಹಳೇಂದ್ರಂ ಸಾಂದ್ರ ಹರ್ಷಮನಾಂತು ನಡೆದು (ರಾಜಶೇ. ೬-೧೩೭ ವ). [ಸಂ.]

**ದಿಶೇಭ** (ನಾ). = ದಿಶಾಕರಟಿ: ಅತಿ ದಿಶೇಭ[ಪಾಠಾಂ. ವಿತತದಿನಿಭ] ಶಿರೋಜಮೌಕ್ತಿಕತತಿಮರೀಚಿಯನನುಕರಿಸಿ (ಬಸಪು. ೨೭-೯). [ಸಂ.]

**ದಿಶ್ಯ** (ಗು). ೧. ದಿಕ್ಕಿಗೆ ಸಂಬಂಧಿಸಿದ. ೨. ಒಂದು ನಿರ್ದಿಷ್ಟವಾದ ದಿಕ್ಕಿನಲ್ಲಿ ಸ್ಥಿತವಾದ. (ನಾ). ೩. ದಿಕ್ಕುಗಳಲ್ಲಿ ಹುಟ್ಟಿದ ವಸ್ತು: "ದಿಶ್ಯಂ (ದಿಗ್ಭವ) ದಿಕ್ಕುಗಳಲ್ಲಿ ಹುಟ್ಟಿದ ವಸ್ತುವಿನ ಹೆಸರು" (ಸಿದ್ಧಾಂತಿ. ೨೭). [ಸಂ.]

**ದಿಷ್ಟ** (ಗು). ೧. ತೋರಿಸಿದ; ಕಾಣಿಸಿದ: ನಂದಿಕೇಶ್ವರ ಭೃಂಗಿ ನಾಟ್ಯ ನಮ್ಮ ಲಿಂಗನ ಮುಂದೆ ಇದಕ್ಕೆ ದಿಷ್ಟ ದೀವಿಗೆ ನಮ್ಮ ಲಿಂಗನ ಮುಂದೆ (ಬಸವ. ೮೬೫). ೨. ಭದ್ರಪಡಿಸಿದ; ಸ್ಥಿರಪಾದ. (ನಾ). ೩. ನಿಯಮ ಕ್ಕೊಳಗಾಗುವಿಕೆ; ನಿಷ್ಠೆಗೊಳಗಾಗುವಿಕೆ: ದಿಷ್ಟದ ದೂರ್ವಾಸನನತಿ ದುಷ್ಟಾಸುರನಾರಿ ನೆರೆದಳ್ (ಹಮ್ಮಿ.ರ. ೬-೪೦). ೪. ಗುರಿ; ಉದ್ದೇಶ. ೫. ಆಜ್ಞೆ; ಆದೇಶ. ೬. ನಿಯುಕ್ತಿ; ನಿಯೋಜನೆ. ೭. ದೈವ; ವಿಧಿ; ಅದೃಷ್ಟ: "ಯಮ ನಿಯತಿ ದಿಷ್ಟ ವಿಧಿ ನಾಮಮಯಾನಯ ರೂಪಮಂತದಕ್ಕುಂ ದೈವಂ" (ವಸ್ತುಕೋ. ೧೦-೫೫). ೮. ಕಾಲ; ಸಮಯ: "ದಿಷ್ಟಮೆನೆ ಕಾಲಮಕ್ಕುಂ" (ಮಂಗರಾ. ೧೯-೪). [ಸಂ.]

**ದಿಷ್ಟಿ$_1$** 'ದಿಟ್ಟಿ' ನೋ.

**ದಿಷ್ಟಿ$_2$** (ನಾ). ೧. ಹರ್ಷ; ಸುಖ; ಸಂತೋಷ. ೨. ವಿಧಿ; ಭಾಗ್ಯ; ಅದೃಷ್ಟ: "ದಿಷ್ಟಿ ಸುಖಾನಂದ ದೈವವಚನಮದಕ್ಕುಂ" (ವಸ್ತುಕೋ. ೧೩೦-೭೨). ೩. ಒಂದು ಅಳತೆ,-ಪರಿಮಾಣ; ಎಂಟು ಅಂಗುಲಗಳ ಅಳತೆ. ೪. ಗೊತ್ತುಪಡಿಸುವುದು; ನಿಯೋಜಿಸುವುದು. [ಸಂ.]

**ದಿಷ್ಟಿಬೊಟ್ಟು** 'ದಿಟ್ಟಿಬೊಟ್ಟು' ನೋ.

**ದಿಷ್ಟಿಮಣಿಸರ** (ನಾ). ದೃಷ್ಟಿ ತಾಗದಿರಲೆಂದು ಹಾಕಿರುವ ಮಣಿಗಳ ಸರ,- ಆಭರಣ: ದಿಷ್ಟಿಮಣಿಸರವನ್ನು ಶುಚಿಗೊಳಿಸಿ ಹಾಕಿದ್ದಳು (ಮಲಿಮ. ೮೧). [ದಿಷ್ಟಿ$_1$ (<ದಿಟ್ಟಿ) + ಮಣಿಸರ]

**ದಿಸಾಪಟ್ಟ** (ನಾ). = ದಿಶಾಪಟಮಲ್ಲ: ಕೊಯತೂರ ತುಳಿವ ಹೆಂಜೆಱು ದಿಸಾಪಟ್ಟ ಸಂಗ್ರಾಮ ಜತ್ತಲಟ್ಟ (ಎಕ. II, ೧೪೩-೩೭; 1131); ಗಿರಿ ದುರ್ಗಮಲ್ಲಪಶ್ಚಿಮರಾಯ ಭೋಜದೇವ ದಿಸಾ[ಶಾ]ಪಟ್ಟ ಶ್ರೀಮತು ಪ್ರತಾಪಚಕ್ರವರ್ತ್ತಿ ಸಿಂಗಣದೇವ (ಎಇ. XXX, ೩೭-೬; 1220). [<ಸಂ. ದಿಶಾಪಟ್ಟ]

**ದಿಸಾವಳಿ** (ನಾ). ದಿಕ್ಕುಗಳ ಸಮೂಹ: ಎಲೆಲೆ ಜಲನಿಧಿಯೆ ಗೋತ್ರಾ ಚಳಮೆ ದಿಸಾವಳಿಯೆ ವೈರಿ ದೆಸೆಗೆಟ್ಟು ಬರಲ್ ಪೊಳಕೊಳ್ಳದಿರೊಳ ಕೊಳ್ಳದಿರೊಳಕೊಳ್ಳದಿರೆಂದು ಭೇರಿ ಸಾಱಿದುದಾಗಳ್ (ಸೌಇಇ. XX, ೪೯-೧೭; 1076 ?). [ℙ ಇದು 'ದಿಶಾವಳಿ' ಎಂಬುದರ ಅಪಲಿಖಿತವಿರಬಹುದು]

**ದಿಸೆ** 'ದೆಸ್ಸೆ' ನೋ.

**ದಿಳೀಪಯ್ಯ** (ನಾ). ಒಬ್ಬಾತನ ಹೆಸರು; ℙ ನೊಳಂಬ ವಂಶದ ಒಬ್ಬ ರಾಜನ ಹೆಸರು: ಶ್ರೀಮದ್ದಿಳೀಪಯ್ಯಂ ಪ್ರಿಥುವೀರಾಜ್ಯಂಗೆಯ್ಯುತ್ತಿರೆ (ಎಕ. X, ಮುಳಬಾ. ೫೧-೧; ಸು. 950?). [ದಿಳೀಪ$_0$ + ಅಯ್ಯ$_1$]

**ದಿಳ್ಳ** 'ಢಿಳ್ಳ' ನೋ.

**ದಿಳ್ಳಿಸು** 'ಡಿಳ್ಳಿಸು' ನೋ.

**ದೀಂಕಿಡು** 'ಧೀಂಕಿಡು' ನೋ.

**ದೀಂಕು** 'ಧೀಂಕು' ನೋ.

**ದೀಂಟು** 'ತಿಟ್ಟು$_3$' ನೋ.

**ದೀಂಟೆ** 'ತಿಟ್ಟು$_3$' ನೋ.

**ದೀಕೆ** (ನಾ). = ದೀಕ್ಷೆ ೧: ಅದ್ವಿತ್ವದ ಕಕಾರಕ್ಕೆ-ದೀಕ್ಷಾ-ದೀಕೆ; ಪರೀಕ್ಷಾ-ಪರಿಕೆ(ಶಮದ. ೨೮೨ ಪ್ರಯೋ); ದೀಕ್ಷೆ, ದೀಕೆ; ಕ್ಷೇಪಣ, ಕೇವಣ (ಶಬ್ದಾನು. ೧೫೫ ಪ್ರಯೋ). [<ಸಂ. ದೀಕ್ಷಾ]

**ದೀಕ್ಷಾಕರ್ಮ** (ನಾ). ವ್ರತ; ನಿಯಮ: ದಾನಧರ್ಮಪರೋಪಕಾರ ವಿಧಾನದೀಕ್ಷಾಕರ್ಮನಿಷ್ಠರು ಮಾನನೀಯರಲೇ ಮಹೀಪತಿ ಕೇಳು (ಕುವ್ಯಾಉ. ೪-೨೯). [ಸಂ.]

**ದೀಕ್ಷಾಕ್ರಮ** (ನಾ). (ವ್ರತಾಚರಣೆ ಮೊದಲಾದ) ನಿಯಮಂಗಳ ಅನುಷ್ಠಾನದ ಕ್ರಮ,-ವಿಧಾನ: ಶೈವಾಗಮಾನುಷ್ಠಾನ ಮಾಡಲು ಅಧಿಕಾರ ಪಡೆಯುವ ಮಾನವನಿಗಾಗಿ . . . ದೀಕ್ಷಾಕ್ರಮವು ಶಾಖಾ, ಸೂತ್ರ, ಗೋತ್ರಪರಂಪರೆಯಲ್ಲಿ . . . ವಿವಿಧ ರೂಪಗಳಿಂದ ನಿರೂಪಿತ ವಾಗಿದೆ (ಭಾರದ. ೭೩). [ಸಂ.]

**ದೀಕ್ಷಾಗುರು** (ನಾ). ಉಪದೇಶ ಮಾಡುವ ಗುರು; ಸಂನ್ಯಾಸ, ವ್ರತ, ನಿಯಮವೇ ಮೊದಲಾದ ದೀಕ್ಷೆಗಳನ್ನು ಕೊಡುವ ಅಧಿಕಾರವುಳ್ಳ ಗುರು: ಗುರುಗೆ ವಿದ್ಯಾಗುರು ಸಂಭವಿಸಂ ದೀಕ್ಷಾಗುರು ಸಂಭವಿಸನುಮೆನೆ ತನಗೆ ತಾನೆ ಗುರುವಾಗಿರ್ಪಂ (ಅಜಿಪು. ೫-೭೯); ಸಕಲ ದೇವ ದೀಕ್ಷಾಗುರು . . . ಅಗ್ನಿಯೊಳುಷ್ಣಂ ಪುಗುವಂತೆ ಶಿವಲಿಂಗದೊಳ್ ಪುಗಲ್ (ನಂಬಿರ. ೮-೨); ಬಾಹುಬಲಿಸಿದ್ಧಾನ್ತಿ ದೇವರೆ ದೀಕ್ಷಾಗುರುಗಳ್ (ಮ್ಯಾಆರಿ. ೧೯೨೯, ೧೪-೨೦; 1236). [ಸಂ.]

**ದೀಕ್ಷಾಗ್ರಹಣ** (ನಾ). ೧. ವ್ರತನಿಯಮ ಸ್ವೀಕಾರ: ದೀಕ್ಷಾಗ್ರಹಣ ಮಾಡದ ಆಗಮಾನುಷ್ಠಾನವು . . . ನಿರರ್ಥಕ (ಫಲಪ್ರದಗಳಾಗುವುದಿಲ್ಲ) ಗಳಾಗುವುದೆಂಬುದು ಆಗಮದ ಸಿದ್ಧಾಂತ (ಭಾರದ. ೭೩). ೨. [ಜೈನ] ಸಂನ್ಯಾಸ ದೀಕ್ಷೆಯ ಸ್ವೀಕಾರ; ಸಂನ್ಯಾಸವನ್ನು ಹೊಂದುವಿಕೆ: ಅಂತು ದೀಕ್ಷಾಗ್ರಹಣಾನಂತರ ಸಮಯಸಮುತ್ಪನ್ನಸಪ್ತರ್ಧಿಜ್ಞಾನ ಚತುಷ್ಟಯಂ ಪ್ರಥಮಗಣಧರನಾದಂ (ಆದಿಪು. ೧೦-೪೭ ವ); ಆಕೆಯ ಪರಿಚ್ಛೇದಿಸಿದ ಬಗೆಯ ಸಮಕಟ್ಟಂ ಬಗೆದಱಿದು ದೀಕ್ಷಾಗ್ರಹಣಪೂರ್ವಕಂ ಸಂನ್ಯಸನಪ್ರತ್ಯಾಖ್ಯಾನಮಂ ಕೊಟ್ಟಾರ್ಯಿಕಾಪ್ರಧಾನೆಯರಂ ಕರೆದು ನೀಮಿವರಂ ನೋನಿಸಿಮೆಂದೊಡೆ (ಬಂಹರಿ. ೧೦-೩೦ ವ). [ಸಂ.]

**ದೀಕ್ಷಾಚಾರ್ಯ** (ನಾ). = ದೀಕ್ಷಾಗುರು: ಕರ್ಣಾಟಕ ಕಾವ್ಯಲಕ್ಷಣ ದೀಕ್ಷಾ ಚಾರ್ಯಂ (ಹಚಕಾ. ಪರಿ ೩೩೦). [ℙ ಇದು 'ಶಿಕ್ಷಾಚಾರ್ಯ' ಎಂದು ಇರಬಹುದೆ?]

**ದೀಕ್ಷಾತ್ರಯ** (ನಾ). [ವೀಶೈ] ವೇಧೆ, ಮಂತ್ರ ಮತ್ತು ಕ್ರಿಯೆಗಳೆಂಬ ಮೂರುವಿಧವಾದ ದೀಕ್ಷೆಗಳು: ಗುರುವು ಶಿಷ್ಯನ ಶರೀರತ್ರಯದಲ್ಲಿರುವ ಮಲತ್ರಯಗಳನ್ನು ದೀಕ್ಷಾತ್ರಯದಿಂದ ಸುಟ್ಟು, ಆ ಶರೀರತ್ರಯದಲ್ಲಿ ಲಿಂಗತ್ರಯಗಳ ಸಂಯೋಗವನ್ನುಂಟುಮಾಡುವನು (ಶಿವಾಸೂ. ೭೪); ಮೂರು ಶರೀರಗಳಲ್ಲಿ ಸಂಬಂಧಿಸಿರುವ ಆಣವಾದಿ ತ್ರಿಮಲಗಳನ್ನು ಗುರುವು ವೇಧಾದಿ ದೀಕ್ಷಾತ್ರಯದಿಂದ ಪರಿಹರಿಸಿ, ಇಷ್ಟ ಪ್ರಾಣ ಭಾವವೆಂಬ ಲಿಂಗತ್ರಯಗಳನ್ನು ದೇಹತ್ರಯದಲ್ಲಿ . . . ಪ್ರತಿಷ್ಠಿಸುವನು (ಶತಕ. ೧೭ ವಿಚಾರ); ಮಲತ್ರಯಗಳನ್ನು ವೇಧಾ, ಮಂತ್ರ, ಕ್ರಿಯೆಗಳೆಂಬ ದೀಕ್ಷಾತ್ರಯ ದಿಂದ ಸುಟ್ಟು . . . ಮಂತ್ರಶರೀರಿಯೆನಿಸುವನು (ಅಷ್ಟಾವಿ. ೧). 'ಕ್ರಿಯಾದೀಕ್ಷೆ' ಪರಾ. [ಸಂ.]

**ದೀಕ್ಷಾಧ್ಯಯನ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು; ಸಂನ್ಯಾಸವನ್ನು ಸ್ವೀಕರಿಸುವುದು: ದೀಕ್ಷಾಧ್ಯಯನಮುಂ ಜಿನರೂಪತ್ವಮುಂ . . . ಅಪ್ಪಯ್ವತ್ತುಮೂಱು ಗರ್ಭಾನ್ವಯಕ್ರಿಯೆಯೊಳು (ಚಾವುಂಪು. ೨೨೯). 'ದೀಕ್ಷೆ' ಪರಾ. [ಸಂ.]

**ದೀಕ್ಷಾನ್ವಯಕ್ರಿಯೆ**(ನಾ). [ಜೈನ] ದೀಕ್ಷೆಯನ್ನು ಗುರುವಿನಿಂದ ಸ್ವೀಕರಿಸಿ ಅಧ್ಯಯನ ಪ್ರಾರಂಭಮಾಡುವುದು; ℙ ಇದರಲ್ಲಿ ೪೮ ಕ್ರಿಯೆಗಳಿವೆ: ೧. ದೀಕ್ಷಾನ್ವಯ ಕ್ರಿಯೆ ಅಥವಾ ಅವತಾರ ಕ್ರಿಯೆ : " ಅಹಿಂಸಾ ಪರಮೋ ಧರ್ಮಃ "ಎಂಬ ತತ್ತ್ವವನ್ನು ಪ್ರತಿಪಾದಿಸುವ ಜೈನಸಿದ್ಧಾಂತವೇ ಆತ್ಮಕಲ್ಯಾಣಕ್ಕೆ ಶ್ರೇಷ್ಠವಾದ ಸಾಧನವೆಂದು ನಂಬಿ, ಅರ್ಹರಾದ ಜೈನಾಚಾರ್ಯರಿಂದ ಜಿನದೀಕ್ಷೆಯನ್ನು ಪಡೆಯುವುದು. ೨. ವೃತ್ತಲಾಭ: ಅಂದಿನಿಂದಲೆ ಗುರುಗಳ ಪಾದಕಮಲಗಳಿಗೆ ಎರಗಿ ವಿಧಿಪೂರ್ವಕವಾಗಿ ವ್ರತಗಳನ್ನು ಕೈಗೊಳ್ಳುವುದು. ೩. ಸ್ಥಾನಲಾಭ: ಅವನಿಗೆ ಉಪವಾಸ ಮಾಡಿಸಿ ಜಿನಾಲಯದಲ್ಲಿ ಜಿನಪ್ರತಿಮೆಗೆ ಅಭಿಮುಖವಾಗಿ ಕುಳ್ಳಿರಿಸಿ ಅವನ ಮಸ್ತಕವನ್ನು ಸ್ಪರ್ಶಮಾಡಿ "ನೀನು ಈ ದೀಕ್ಷೆಯಿಂದ ಪವಿತ್ರನಾದೆ" ಎಂದು ಅನುಗ್ರಹಿಸಿ, ಶೇಷಾಕ್ಷತೆಯನ್ನು ಕೊಟ್ಟು, ಪಂಚನಮಸ್ಕಾರ ಮಂತ್ರಗಳನ್ನು ಉಪದೇಶಮಾಡಿ, ಪಾರಣೆಗೆ ಅನುಮತಿಯನ್ನು ಕೊಡುವುದು. ೪. ಗೃಹಣಕ್ರಿಯೆ : ಇದುವರೆಗೆ ತನ್ನ ಮನೆಯಲ್ಲಿ ಪೂಜಿಸುತ್ತಿದ್ದ ಹಿಂದಿನ ಸಂಪ್ರದಾಯದ ದೇವತಾಪ್ರತಿಮೆಗಳನ್ನು ತೆಗೆದುಹಾಕಿ ಜೈನ ಸಂಪ್ರದಾಯದ ದೇವತೆಗಳನ್ನು ಪೂಜಿಸಲು ಪ್ರಾರಂಭಿಸುವುದು. ೫. ಪೂಜಾರಾಧ್ಯಕ್ರಿಯೆ : ಪೂಜೆ ಮತ್ತು ಉಪವಾಸಗಳ ಜೊತೆಯಲ್ಲಿಯೆ ದ್ವಾದಶಾಂಗಗಳ ಅರ್ಥವನ್ನು ಶ್ರವಣ ಮಾಡುವುದು. ೬. ಪುಣ್ಯಯಜ್ಞಕ್ರಿಯೆ : ತನ್ನಂತೆಯೆ ಇರುವವರೊಂದಿಗೆ ಕೂಡಿ ಹದಿನಾಲ್ಕು ಪೂರ್ವವಿದ್ಯೆಗಳ ಅರ್ಥವನ್ನು ಜಿಜ್ಞಾಸೆಮಾಡುತ್ತಾ ಪುಣ್ಯವನ್ನು ವೃದ್ಧಿಪಡಿಸಿಕೊಳ್ಳುವುದು. ೭. ದೃಢಚರ್ಯೆ : ಜೈನ ಮತದ ಧರ್ಮಗ್ರಂಥಗಳನ್ನು ವ್ಯಾಸಂಗಮಾಡಿ ಜ್ಞಾನಾಭಿವೃದ್ಧಿಗೆ ಸಹಾಯಕವಾದ ಇತರ ಗ್ರಂಥಗಳನ್ನು ವ್ಯಾಸಂಗಮಾಡುವುದು. ೮. ಉಪಯೋಗಿತೆ : ಮೇಲಿನ ಸಾಧನೆಗಳನ್ನು ಸಾಧಿಸಿ ಪರ್ವದಿನದ ಉಪವಾಸದ ಕೊನೆಯಲ್ಲಿ ಅರ್ಥಾತ್ ರಾತ್ರಿಸಮಯದಲ್ಲಿ ಪ್ರತಿಮಾಯೋಗಧಾರಣೆಮಾಡುವುದು (ಆಹಾರತ್ಯಾಗ ಮಾಡಿ ಒಂದೇ ಸ್ಥಳದಲ್ಲಿ ನಿಂತುಕೊಂಡು ತಪಸ್ಸುಮಾಡುವುದು). ೯. ಉಪನೀತಿ : ದೇವತಾಗುರುಗಳ ಸನ್ನಿಧಿಯಲ್ಲಿ ಜೈನಸಂಪ್ರದಾಯದಂತೆ ಶ್ವೇತ ವಸ್ತ್ರ, ಯಜ್ಞೋಪವೀತಗಳನ್ನು ಧರಿಸುವುದು. ಗೋತ್ರ ಮತ್ತು ನಾಮಧೇಯಗಳನ್ನು ಜೈನಪದ್ಧತಿಯಂತೆ ಬದಲಾಯಿಸುವುದು. ಹೀಗೆ ಶ್ರಾವಕದೀಕ್ಷೆಯನ್ನು ಹೊಂದುವುದು. ೧೦. ವ್ರತಚರ್ಯೆ : ಶ್ರಾವಕಾಚಾರವನ್ನು ಚೆನ್ನಾಗಿ ಅಭ್ಯಾಸ ಮಾಡುವುದು ಹಾಗು ಅನುಷ್ಠಾನಕ್ಕೆ ತರುವುದು. ೧೧. ವ್ರತಾಚರಣಕ್ರಿಯೆ : ಹೀಗೆ ಅಭ್ಯಾಸಮಾಡಿದ ಶ್ರಾವಕನು ಗುರುಗಳ ಸನ್ನಿಧಿಯಲ್ಲಿ ವಿಧ್ಯುಕ್ತ ಕ್ರಮದಿಂದ ಸ್ನಾತಕನಂತೆ ಬೇರೆ ವೇಷಭೂಷಣಗಳನ್ನು ಧರಿಸುವುದು. ೧೨. ವಿವಾಹಕ್ರಿಯೆ : ಜೈನಮತಕ್ಕೆ ಸೇರುವ ಮೊದಲು ಮದುವೆ ಮಾಡಿಕೊಂಡಿದ್ದಾದರೆ ಅವಳನ್ನೂ ಜೈನದೀಕ್ಷೆಯಿಂದ ಸಂಸ್ಕರಿಸಿ ಜೈನಸಂಪ್ರದಾಯದಂತೆ ಪುನರ್ವಿವಾಹಮಾಡಿಕೊಳ್ಳುವುದು. ೧೩. ವರ್ಣಲಾಭಕ್ರಿಯೆ : ಗೃಹಸ್ಥನಾದಮೇಲೆ ಜೈನ ಮಹಾಜನರ ಅನುಮತಿಯನ್ನು ಗಳಿಸಿ ಅವರೊಂದಿಗೆ ಭೋಜನ ಪ್ರತಿಭೋಜನ ಸಂಬಂಧ ಬೆಳೆಸುವುದು. ಇವೇ ಮೊದಲಾದ ವ್ಯವಹಾರವನ್ನು ತಾನೂ ಅವರಲ್ಲಿ ಒಬ್ಬನಂತೆ ನಡೆಸಲು ಪೂರ್ಣಾವಕಾಶವನ್ನು ಪಡೆಯುವುದು ; ಜೈನಜಾತಿಗೆ ಸೇರಿ ವ್ಯವಹರಿಸಲು ಕುಲವೃದ್ಧರ ಒಪ್ಪಿಗೆ ಪಡೆಯುವುದು. ೧೪. ಕುಲಚರ್ಯೆ : ಜೈನರ ಆಚಾರ ವ್ಯವಹಾರಗಳನ್ನು ಪರಿಪಾಲಿಸುತ್ತಾ ನಿಷ್ಠರಾದ ಜೈನರಂತೆ ದೇವಪೂಜೆ ಮೊದಲಾದ ಷಟ್ಕರ್ಮಗಳನ್ನು ಆಚರಿಸುವುದು. ೧೫. ಗೃಹೇಶಿತೃಕ್ರಿಯೆ : ತನ್ನ ಸದಾಚಾರಾದಿ ಸದ್ಗುಣಗಳಿಂದ ಗೃಹಸ್ಥರ ಮುಖ್ಯಸ್ಥನಾಗುವುದು. ೧೬. ಪ್ರಶಾಂತತಾ ಕ್ರಿಯೆ : ನಾನಾ ವಿಧವಾದ ಉಪವಾಸ ಮೊದಲಾದುವುಗಳಿಂದ ವಿರಕ್ತಿಯನ್ನು ಪಡೆಯುವುದು. ೧೭. ಗೃಹತ್ಯಾಗಕ್ರಿಯೆ : ಗರ್ಭಾನ್ವಯ ಕ್ರಿಯೆಯಲ್ಲಿ ಹೇಳಿರುವಂತೆಯೆ ಮಕ್ಕಳಿಗೆ ಗೃಹಕೃತ್ಯವನ್ನು ವಹಿಸಿ ಮನೆಬಿಟ್ಟು ಹೊರಡುವುದು. ೧೮. ದೀಕ್ಷಾದ್ಯಕ್ರಿಯೆ : ತಪೋವನದಲ್ಲಿ ಏಕವಸ್ತ್ರಧಾರಣೆಮಾಡುವುದು. ೧೯. ಜಿನರೂಪತಾಕ್ರಿಯೆ : ವಸ್ತ್ರತ್ಯಾಗ ಮಾಡಿ ದಿಗಂಬರನಾಗುವುದು. ಇಲ್ಲಿಂದ ಮುಂದಿನ ಉಳಿದ ಮೌನಾಧ್ಯಯನವೃತ್ತಿಯಿಂದ ಅಗ್ರನಿರ್ವೃತಿಯವರೆಗಿನ ಇಪ್ಪತ್ತೊಂಬತ್ತು ಕ್ರಿಯೆಗಳು ಸ್ವಲ್ಪವೂ ವ್ಯತ್ಯಾಸವಿಲ್ಲದೆ ಗರ್ಭಾನ್ವಯ ಕ್ರಿಯೆಯಲ್ಲಿ ಹೇಳಿರುವಂತೆಯೇ ಇವೆ. 'ದೀಕ್ಷೆ' ಪರಾ : ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಗಳುಮಂ . . . ಅಱಿಪಿ (ಆದಿಪು. ೧೫-೧೬ ವ) ; ಮತ್ತಮೈವತ್ತುಮೂಱು ಗರ್ಭಾಧಾನಾದಿ ಗರ್ಭಾನ್ವಯ ಕ್ರಿಯೆಗಳುಮಂ ನಾಲ್ವತ್ತೆಂಟವತಾರಾದಿ ದೀಕ್ಷಾನ್ವಯಕ್ರಿಯೆಗಳುಮಂ (ಚಾವುಂಪು. ೪೭) ; ಸದ್ದೃಷ್ಟಿ ಶಾಂತಚಿತ್ತಂ ದೀಕ್ಷೆಯಂ ಕೈಕೊಳ್ವನ್ನೆಗಮೇಕಾದಶಾಧಿಕಧರನಾಗಿ ದೀಕ್ಷಾಗ್ರಹಣೋದ್ಯುಕ್ತನಾಗಿರ್ಪಡದು ದೀಕ್ಷಾನ್ವಯಕ್ರಿಯೆ (ಚಾವುಂಪು. ೨೩೪). [ಸಂ. ದೀಕ್ಷಾನ್ವಯಕ್ರಿಯಾ]

**ದೀಕ್ಷಾಪ್ರಧಾನ** (ನಾ). ಮಂತ್ರಗ್ರಹಣ, ಸಂನ್ಯಾಸವೇ ಮೊದಲಾದ ದೀಕ್ಷೆಗಳನ್ನೇ ಪ್ರಧಾನವಾಗಿ ಉಳ್ಳುದು : ಆಗಮಗಳು ದೀಕ್ಷಾಪ್ರಧಾನವಾದ ಆತ್ಮಾರ್ಥ-ಪರಾರ್ಥಗಳೆಂಬ ಎರಡು ವಿಧವಾದ ಭಗವದುಪಾಸನೆಯ ಆಚರಣೆಗೂ ಆಶ್ರಯವಾಗಿರುವುದು ಸ್ಪಷ್ಟವಾಗುತ್ತದೆ (ಭಾರದ. ೭೧).

[ಸಂ.]

**ದೀಕ್ಷಾಬ್ರಹ್ಮಚಾರಿ** (ನಾ). [ಜೈನ] ಬ್ರಹ್ಮಚರ್ಯದೀಕ್ಷೆಯನ್ನು ಪಡೆದವನು : ದೀಕ್ಷಾಬ್ರಹ್ಮಚಾರಿಯೆಂಬೊಂ ವೇಷಮೊಂದುಮಿಲ್ಲದಾಗಮಾಭ್ಯಾಸಂಗೆಯ್ದು ಗೃಹಸ್ಥನೊಳ್ನೆಗಟ್ದಂ (ಚಾವುಂಪು. ೨೪೭).

[ಸಂ. ದೀಕ್ಷಾಬ್ರಹ್ಮಚಾರಿನ್]

**ದೀಕ್ಷಾವಸ್ತ್ರ** (ನಾ). ಮದುವೆ, ವ್ರತ, ನಿಯಮಗಳ ಪಾಲನೆಯನ್ನು ಸ್ವೀಕಾರಮಾಡುವ ಸಮಯದಲ್ಲಿ ಉಡುವ ವಸ್ತ್ರ : ದೀಕ್ಷಾವಸ್ತ್ರವನ್ನು ವರನಿಗೆ ಕನ್ಯೆಯ ಸೋದರಮಾವನು ಉಡಿಸುವ ಪದ್ಧತಿಯಿದೆ (ಆರ್ಯಧ. ೧೩೨). [ಸಂ.]

**ದೀಕ್ಷಾವಿಧಜ್ಞ** (ನಾ). ಯಜ್ಞಯಾಗಾದಿಗಳ ನಿಯಮವನ್ನು ಅರಿತವನು : ಸೇವಕರು ಮಂತ್ರಿಪ್ರಕರ ದೀಕ್ಷಾವಿಧಜ್ಞರು ಪೂಜನಾರ್ಥರು . . . ಬಂದು (ಬಸಪು. ೫೮-೧೫). [ಸಂ.]

**ದೀಕ್ಷಾವಿಧಿ** (ನಾ). ಯಜ್ಞಯಾಗಾದಿಗಳಲ್ಲಿ ಆಚರಿಸಬೇಕಾದ ನಿಯಮ, -ಕ್ರಮ, -ವಿಧಾನ : ಗುರು ದೀಕ್ಷಾವಿಧಿಗಳ್ಗೆ ಮಂತ್ರಿ ಹಿತಕಾರ್ಯಾಳೋಚನಕ್ಕೆ . . . ಮೇಳದಾಳ್ ಪರಿಹಾಸಕ್ಕೆನಿಸಿರ್ದನೆಂತು ಮಱಿಮಂ ದುರ್ಯೋಧನಂ ಕರ್ಣನಂ (ಗದಾಯು. ೫-೩೪). [ಸಂ.]

**ದೀಕ್ಷಾಸಂಸ್ಕಾರ** (ನಾ). [ವೀಶೈ] ಶಿಷ್ಯತ್ವವನ್ನು ಪಡೆಯುವ ಸಂಸ್ಕಾರ ; ಶಿಷ್ಯನಾಗಿ ಹೊಂದುವ ಸಂಸ್ಕಾರ : ಈ ಬಗೆಯ ಗುರು ಶಿಷ್ಯ ಸಮಾಗಮದಿಂದ ಶಿಷ್ಯನಲ್ಲಿ ಮಹತ್ಪರಿಣಾಮವುಂಟಾಗಿ ವಿವೇಕೋದಯವಾಗುತ್ತದೆ. ಇಂತಹ ಸಮಾಗಮಕ್ಕೆ ಶಕ್ತಿವಿಶಿಷ್ಟಾದ್ವೈತ ವೇದಾಂತದಲ್ಲಿ ದೀಕ್ಷಾಸಂಸ್ಕಾರವೆನ್ನುತ್ತಾರೆ (ಶಕ್ತಿವಿ. ೮೪). [ಸಂ.]

**ದೀಕ್ಷಾಸಂಸ್ಕೃತ** (ನಾ). [ವೀಶೈ] ದೀಕ್ಷಾ ಸಂಸ್ಕಾರವನ್ನು ಹೊಂದಿರುವವನು; ಮಂತ್ರೋಪದೇಶದಿಂದ ಸಂಸ್ಕರಿಸಲ್ಪಟ್ಟವನು: ಜೀವನು ದೀಕ್ಷಾಸಂಸ್ಕೃತನಾಗಿ ಭಕ್ತನಾದ ಮೇಲೆ ಶಿವನ ಅರ್ಚನೆಯಲ್ಲಿ ನಿರತನಾಗುವನು (ಶಕ್ತಿವಿ. ೧೦೦). [ಸಂ.]

**ದೀಕ್ಷಾಸ್ನಾನ** (ನಾ). [ಕ್ರೈಸ್ತ] ಕ್ರೈಸ್ತರು ದೀಕ್ಷೆಕೊಡುವುದಕ್ಕೆ ಮೊದಲು ಪವಿತ್ರವಾದ ನೀರಿನಿಂದ ಮಾಡಿಸುವ ಸ್ನಾನ: (ಕ್ರೈಸ್ತರ) ಶುದ್ಧಿಸಂಸ್ಕಾರದಲ್ಲಿ ಅಥವಾ ಮತಕ್ಕೆ ಸೇರಿಸಿಕೊಂಡು ನಾಮಕರಣ ಮಾಡುವಾಗ, ಮಾಡಿಸುವ ಸ್ನಾನ, ಸಂಪ್ರೋಕ್ಷಣೆ: ದೀಕ್ಷಾಸ್ನಾನ; ಜ್ಞಾನಸ್ನಾನ (Baptism. ಇಂಕನಿ). [ಸಂ.]

**ದೀಕ್ಷಿತ** (ನಾ). ೧. ಒಂದು ಕಾರ್ಯವನ್ನು ಮಾಡಿ ಮುಗಿಸಬೇಕೆಂಬ ದೃಢಸಂಕಲ್ಪವನ್ನು ಸ್ವೀಕಾರಮಾಡಿದವನು; ವ್ರತವನ್ನು ಹಿಡಿದವನು: ದಿವಿಜೇಜ್ಯಂ ನಿಲೆ ಜನ್ಮಲಗ್ನಗೃಹದೊಳ್ ಪ್ರಾಜ್ಞಂ . . . ಧರ್ಮದೊಳ್ ದೀಕ್ಷಿತಂ (ಜಾತತಿ. ೧೮-೧೧); ಆರ ದಳಪದು ಧುರಪಲಾಯನ ಚಾರು ದೀಕ್ಷಿತರಾಯ್ತು ಫಲುಗುಣ ಧಾರುಣೀಪತಿಯಾಣೆ ಹೇಳೆಂದಸುರರಿಪು ನುಡಿದ (ಕುವ್ಯಾಕ. ೧೪-೬); **ದುಷ್ಟಶಿಕ್ಷಣದೀಕ್ಷಿತರ** ರಾಮಲಕ್ಷ್ಮಣರ ಕೋದಂಡಠಂಕಾರಮಂತ್ರಚಿಚ್ಛಕ್ತಿಯ ಶರಾಘಾತಕಳಿದನ್ ಸುಬಾಹು (ಶ್ರೀರಾಮಾ. ೩೫-೧೮೯). **೨. ಯಾಗವನ್ನು ಮಾಡುವವನು:** "ಯಷ್ಟಾ, ಯಜಮಾನಃ, ಆದೇಷ್ಟಾ, ದೀಕ್ಷಿತಃ, ವ್ರತೀ, ಇಜ್ಯಾಶೀಲಃ, ಯಾಯಜೂಕಃ, ಯಜ್ವಾ, ಯಾಸುತೀವಳಃ – ಈ ೯ ಯಾಗ ಮಾಡುವಾತಂ" (ಹಲಾಯು. ೬೯-೨೬೭); "ಯಜಮಾನನಿಜ್ಯಾಗಮಾವ್ರತಿಯಜ್ವನಾ ದೀಕ್ಷಿತನೆನಿಕ್ಕು" (ಮಂಗರಾ. ೭೭-೧೪); ಅರಸಂ ದೀಕ್ಷಿತನಿಲ್ಲಿ ಋತ್ವಿಜರುಮೆಮ್ಮಾ ನಾಲ್ವರುಂ (ಗದಾಯು. ೮-೪೬). **೩. ಸೋಮಯಾಗವನ್ನು ಮಾಡಿದವನು; ಸೋಮಯಾಜಿ:** "ಸೋಮಯಾಗವ ಮಾಡಿದಾತನಾದಡೆ ದೀಕ್ಷಿತನೆನಿಸುಗು" (ನಾಚಿರಾ. ೦೨೬); ℙ **ಈ ಯಾಗವನ್ನು ಮಾಡಿದವರ ಮನೆತನಕ್ಕೂ ಈ ಹೆಸರುಂಟು. ೪. ಶಿಷ್ಯ:** "ಮೌಖಂ ದೀಕ್ಷಿತನಂತೇವಾಸಿ ಶಿಷ್ಯನೆನಿಕುಂ ಛಾತ್ರಂ" (ವಸ್ತುಕೋ. ೫೭-೩೩).
[ಸಂ.]

**ದೀಕ್ಷಿತತನ** (ನಾ). **ಯಾಗವನ್ನು ಮಾಡುವಿಕೆ; ದೀಕ್ಷಿತನಾಗಿರುವಿಕೆ:** ಕರಿಯ ಚರ್ಮದ ಹೊದಕೆಗಳ ನಿಡುಗರುಳ ಸವ್ಯಪವಿತ್ರಸೂತ್ರದ . . . ದಕ್ಷಿಣಕರದ ಕತ್ತಿಯಲಾಭಿಚಾರಾಧ್ವರದ ದೀಕ್ಷಿತತನವ **ಕೈಕೊಂಡನು** ದಶಗ್ರೀವ (ತೊರರಾ. ೬-೪೮-೧೩). [ದೀಕ್ಷಿತ + –ತನ]

**ದೀಕ್ಷಿಸು** (ಕ್ರಿ). ಉಪದೇಶವನ್ನು ಕೊಡು,–ನೀಡು: ಬಹಿರಂಗದಲ್ಲಿ ಶ್ರೀಗುರುಲಿಂಗವಾಗಿ ದೀಕ್ಷಿಸಿ [ಪಾಠಾಂ. ಉಪದೇಶಮಂ ಕೊಟ್ಟು]ರಕ್ಷಿಸಿದೆ . . . ಜಂಗಮಲಿಂಗವಾಗಿ ಅವಗುಣಂಗಳೆಲ್ಲವನೂ ಕಳೆದು ಶಿಕ್ಷಿಸಿ ರಕ್ಷಿಸಿದೆ (ಉರಿಪ. ಕ. ೮೨-೧೩೬). [ದೀಕ್ಷೆ + – ಇಸು$_3$]

**ದೀಕ್ಷೆ** (ನಾ). ೧. ಮದುವೆ, ಉಪನಯನ, ವ್ರತ, ಮುಂತಾದ ಪವಿತ್ರ ಕಾರ್ಯಕ್ಕಾಗಿ ಆರಂಭದಲ್ಲಿ ನಡೆಸುವ ಸಂಸ್ಕಾರ. ೨. ವ್ರತ; ನಿಯಮ: ಕಟ್ಟಬೇಕೀ ನಾಡ ತೊಟ್ಟು ಹೊಸದೀಕ್ಷೆಯನು ಕಷ್ಟಗಳ ಕಂಕಣವ ಕೈಗೆ ಕಟ್ಟಿ (ನೆಲಮು. ೧೯-೧೫); ದೀಕ್ಷೆ, ಯೋಗ, ಯಾಗ, ಜಪ, ಧ್ಯಾನ ಮೊದಲಾದವುಗಳು ಜ್ಞಾನವಿಕಾಸಕ್ಕೆ ಕಾರಣವಾಗಿರುವ ಕರ್ಮಗಳು (ಭಾರದ. ೨೧೫). ೩. ಉಪದೇಶವನ್ನು ನೀಡುವುದು; ಮಂತ್ರೋಪದೇಶ: ಎಮ್ಮ ಜೋಯಿಸಮೆಮ್ಮಂತಪ್ಪ ರೂಪಿನ ಋಷಿಯರ್ಗಲ್ಲದೆ ಪೇಟಲುಂ ಕಲಲುಮಾಗದೆಂದೊಡೆ ಅಂತಪ್ಪ ದೀಕ್ಷೆಯಂ ದಯಗೆಯ್ಯೆಮೆಂದು ಬೇಡಿದೊಡೊಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು (ವಡ್ಡಾರಾ. ೬-೧); ಆ ಭಟ್ಟಾರಕರ್ ದಯೆಗೆಯ್ದು ದೀಕ್ಷೆಯೆಂಬ ಕಲ್ಪಲತೆಯ ಫಲದಿಂದಮೃತಪದವಿಯಂ ಪಡೆದಂ (ಆದಿಪು. ೫-೧೩ ವ). ೪. ನಿರ್ಧಾರ; ಶಪಥ; ಪ್ರತಿಜ್ಞೆ: ದೀಕ್ಷೆಯಂ ಕೈಕೊಂಡು ಹಠಮೂರ್ತಿಯಾಗೀಕೆ ಪೊಕ್ಕಳಾ ಕೋಪಗೃಹಮಂ (ಶ್ರೀರಾಮಾ. ೬೬-೩೨೭). ೫. (ಹೆಂಡತಿಯು ಗರ್ಭಿಣಿಯಾದಾಗ, ಬೇರೆ ವ್ರತಗಳನ್ನು ಕೈಕೊಂಡ ಸಂದರ್ಭದಲ್ಲಿ) ಮುಂಡನ ಮಾಡಿಸಿಕೊಳ್ಳದಿರುವುದು. 'ದೀಕ್ಷೆ ಬಿಡು' ಪರಾ. ೬. [ಜೈನ] ಐವತ್ತಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು; ಸಂನ್ಯಾಸವನ್ನು ಸ್ವೀಕರಿಸುವುದು; ಸಂನ್ಯಾಸಸ್ವೀಕಾರ; ℙ ೫೩ ಗರ್ಭಾನ್ವಯ ಕ್ರಿಯೆಗಳು. ೧. ಆಧಾನ: ಋತುಮತಿಯಾದ ಧರ್ಮಪತ್ನಿಯಲ್ಲಿ ಗರ್ಭಾಧಾನ; ನಿಷೇಕ. ೨. ಪ್ರೀತಿ: ಗರ್ಭವತಿಯಾದ ಮೂರನೆಯ ತಿಂಗಳಲ್ಲಿ ಮಾಡುವ ಜಿನಪೂಜೆ. ೩. ಸುಪ್ರೀತಿ: ಗರ್ಭಾಧಾನವಾದ ಐದನೆಯ ತಿಂಗಳಲ್ಲಿ ಮಾಡುವ ಸಂಸ್ಕಾರ. ಅಗ್ನಿಸಾಕ್ಷಿಕವಾಗಿ ಅರ್ಹದ್ಬಿಂಬಸನ್ನಿಧಿಯಲ್ಲಿ ನೆರವೇರಿಸುವ ವಿಧಿ. ೪. ಧೃತಿ: ಏಳನೆಯ ತಿಂಗಳಲ್ಲಿ ಮೇಲಿನಂತೆಯೆ ಮಾಡುವ ಸಂಸ್ಕಾರ; ವಿಶೇಷ. ೫. ಮೋದ: ಒಂಬತ್ತನೆಯ ತಿಂಗಳಲ್ಲಿ ಮಾಡುವ ಸಂಸ್ಕಾರ. ಗರ್ಭರಕ್ಷೆಗಾಗಿ ಗರ್ಭಿಣಿಗೆ ರಕ್ಷಾಬಂಧವನ್ನು ಮಾಡುವುದು. ೬. ಪ್ರಿಯೋದ್ಭವ: ಮಗು ಹುಟ್ಟಿದಾಗ ಮಾಡುವ ಶಾಸ್ತ್ರೀಯವಾದ ವಿಧಿ; ಜಾತಕರ್ಮ. ೭. ನಾಮಕರ್ಮ: ಮಗು ಹುಟ್ಟಿದ ಹನ್ನೆರಡು ದಿನಗಳ ನಂತರ ಮಾಡುವ ವಿಧಿ; ಹೆಸರಿಡುವ ವಿಧಿ; ನಾಮಕರಣ. ೮. ಬಹಿರ್ಯಾನ: ಮಗು ಹುಟ್ಟಿದ ಎರಡು, ಮೂರು ಅಥವಾ ನಾಲ್ಕನೆಯ ತಿಂಗಳಲ್ಲಿ ಅನುಕೂಲವಾದ ಶುಭದಿವಸ ಮಗುವನ್ನು ಪ್ರಸೂತಿಗೃಹದಿಂದ ಹೊರಕ್ಕೆ ಕರೆದುಕೊಂಡು ಹೋಗುವುದು; ಉಪನಿಷ್ಕ್ರಮಣ. ೯. ನಿಷದ್ಯೆ: ಶಿಶುವನ್ನು ಉತ್ತಮವಾದ ಆಸನದ ಮೇಲೆ ಕುಳ್ಳಿರಿಸಿ ಸಿದ್ಧಾರ್ಚನೆ ಮೊದಲಾದ ವಿಧಿಗಳನ್ನು ನೆರವೇರಿಸುವುದು. ೧೦. ಅನ್ನಪ್ರಾಶನ: ಏಳು ಅಥವಾ ಎಂಟನೆಯ ತಿಂಗಳಲ್ಲಿ ಮಗುವಿಗೆ ಅನ್ನ ತಿನ್ನಿಸುವ ವಿಧಿ. ೧೧. ವ್ಯುಷ್ಟಿ: ಮಗುವಿನ ಮೊದಲನೆಯ ವರ್ಷದ ಹುಟ್ಟಿದ ಹಬ್ಬ. ೧೨. ಕೇಶಾವಾಪ: ಶುಭದಿನದಲ್ಲಿ ಮಗುವಿಗೆ ಜುಟ್ಟು ಬಿಡಿಸುವುದು; ಚೌಲ. ೧೩. ಲಿಪಿ ಸಂಖ್ಯಾನ ಸಂಗ್ರಹ: ಐದನೆಯ ವರ್ಷದಲ್ಲಿ ಅಕ್ಷರಾಭ್ಯಾಸವನ್ನು ಮಾಡಿಸುವ ವಿಧಿ. ೧೪. ಉಪನಯನ: ಗರ್ಭಾಷ್ಟಮದಲ್ಲಿ ಮಾಡುವ ಸಂಸ್ಕಾರ; ಮುಂಜಿ. ೧೫. ವ್ರತಚರ್ಯೆ: ಜೈನಸಂಪ್ರದಾಯದಂತೆ ಮಾಡುವ ಬ್ರಹ್ಮಚರ್ಯಾನುಷ್ಠಾನ. ೧೬. ವ್ರತಾಚರಣ: ವಿದ್ಯಾಭ್ಯಾಸ ಮುಗಿದ ಮೇಲೆ ಅಂದರೆ ಹನ್ನೆರಡು ಅಥವಾ ಹದಿನಾರು ವರ್ಷಗಳಾದ ಮೇಲೆ ಮಾಡುವ ವ್ರತ; ಮಧುಮಾಂಸಾದಿಗಳನ್ನು ಬಿಟ್ಟು ಶುದ್ಧಜೀವನ ನಡೆಸುವುದು. ೧೭. ವಿವಾಹ: ಅನುರೂಪಳಾದ ಕನ್ಯೆಯನ್ನು ಮದುವೆಯಾಗುವುದು. ೧೮. ವರ್ಣಲಾಭ: ಮದುವೆಯಾದ ಮೇಲೆ ತಂದೆಯ ಅನುಮತಿಯಂತೆ ಬೇರೆ ಸಂಸಾರಮಾಡುವುದು ಮತ್ತು ತಂದೆಯು ಕೊಟ್ಟ ದಾಯಭಾಗವನ್ನು ತೆಗೆದುಕೊಂಡು ಸ್ವತಂತ್ರನಾದ ಗೃಹಸ್ಥನಾಗುವುದು. ೧೯. ಕುಲಚರ್ಯೆ: ಗೃಹಸ್ಥನಾಗಿ ತನ್ನ ಕುಲಾಚಾರವನ್ನು ಅನುಸರಿಸುವುದು. ೨೦. ಗೃಹೀಶಿತಾ: ತನ್ನ ಮಾದರಿಯಾದ ನಡವಳಿಕೆಯಿಂದ ಗೃಹಸ್ಥರಲ್ಲಿ ಗಣ್ಯನೆನಿಸಿಕೊಳ್ಳುವುದು. ೨೧. ಪ್ರಶಾಂತಿ: ವಂಶೋದ್ಧಾರಕನಾದ ಮಗನನ್ನು ಪಡೆದು, ಅವನು ಸಮರ್ಥನಾದ ಮೇಲೆ ಸಂಸಾರವನ್ನು ಅವನಿಗೆ ವಹಿಸಿ ತಾನು ಸಂಸಾರದಿಂದ ನಿವೃತ್ತನಾಗುವುದು. ೨೨. ಗೃಹತ್ಯಾಗ: ತನ್ನ ಧನ, ಭೂಮಿ, ಮೊದಲಾದ ಸಂಪತ್ತನ್ನು ಕೊಡಬೇಕಾದವರಿಗೆ ಕೊಟ್ಟು ಆತ್ಮಕಲ್ಯಾಣಸಾಧನೆಗಾಗಿ ಮನೆ ಬಿಟ್ಟು ಹೊರಡುವುದು. ೨೩. ದೀಕ್ಷಾದ್ಯ: ದೀಕ್ಷೆಯನ್ನು ಸ್ವೀಕರಿಸು

ವುದಕ್ಕೆ ಮೊದಲು ಏಕವಸ್ತ್ರಧಾರಣೆ ಮೊದಲಾದ ನಿಯಮಗಳನ್ನು ತಾಳುವುದು. **೨೪.** ಜಿನರೂಪತೆ: ಬಟ್ಟೆ ಮೊದಲಾದ ಎಲ್ಲ ಪರಿಗ್ರಹವನ್ನು ತ್ಯಾಗಮಾಡಿ ಜಿನರೂಪವನ್ನು ಅಂದರೆ ದಿಗಂಬರತ್ವವನ್ನು ಪಡೆಯುವುದು. **೨೫. ಮೌನಾಧ್ಯಯನ ವೃತ್ತಿ :** ಉಪವಾಸಾನಂತರದ ಪಾರಣೆ ಸಮಯದಲ್ಲಿ ಮೌನನಿಯಮವನ್ನು ತಾಳುವುದು ಹಾಗೂ ಶಾಸ್ತ್ರಾಭ್ಯಾಸವನ್ನು ಮೌನವಾಗಿ ಮಾಡುವುದು. **೨೬.** ತೀರ್ಥಕೃದ್ಭಾವನೆ : ತೀರ್ಥಂಕರ ಸ್ಥಾನದ ಭಾವನೆಗಳನ್ನು ಅಭ್ಯಾಸಮಾಡುವುದು; ಸಮ್ಯಗ್ದರ್ಶನ, ವಿಶುದ್ಧಿ, ಮೊದಲಾದ ಲಕ್ಷಣಗಳನ್ನು ಹೊಂದುವುದು. **೨೭.** ಗುರುಸ್ಥಾನಾಭ್ಯುಪಗಮ: ತನ್ನ ಪಾಂಡಿತ್ಯ, ಸಾಧನೆ ಮೊದಲಾದ ಗುಣಗಳಿಂದ ಶಿಷ್ಯಸಂಗ್ರಹವಾಗಿ ಗುರುಸ್ಥಾನವನ್ನು ಪಡೆಯುವುದು. **೨೮.** ಗಣೋಪಗ್ರಹಣ : ತನ್ನನ್ನು ಆಶ್ರಯಿಸಲು ಬಂದ ಮುನಿಸಂಘವನ್ನು ಪೋಷಿಸುತ್ತಾ ಜ್ಞಾನಾರ್ಥಿಗಳಿಗೆ ಜ್ಞಾನವನ್ನು, ದೀಕ್ಷಾರ್ಥಿಗಳಿಗೆ ದೀಕ್ಷೆಯನ್ನು, ಧರ್ಮಾರ್ಥಿಗಳಿಗೆ ಧರ್ಮವನ್ನು ನೀಡುತ್ತಾ ಮುನಿಗಣವನ್ನು ಪೋಷಿಸುವುದು. **೨೯.** ಸ್ವಗುರುಸ್ಥಾನಾವಾಪ್ತಿ : ಹೀಗೆ ಮುನಿಗಣಕ್ಕೆ ಪೋಷಕನಾಗಿದ್ದು ತನ್ನ ಗುರು ಅಲಂಕರಿಸಿದ್ದ ಸ್ಥಾನವನ್ನು ಅಲಂಕರಿಸುವುದು. **೩೦.** ನಿಸ್ಸಂಗತ್ವಾತ್ಮಭಾವನೆ : ಯೋಗ್ಯನಾದ ಶಿಷ್ಯನನ್ನು ಪರಿಗ್ರಹಿಸಿ ತನ್ನ ಕರ್ತವ್ಯಭಾರವನ್ನು ಆತನಿಗೆ ವಹಿಸಿ ತಾನು ನಿಸ್ಸಂಗನಾಗಿ ತನ್ನ ಆತ್ಮವು ಎಲ್ಲಾ ಬಗೆಯ ಪರಿಗ್ರಹದಿಂದಲೂ ಬಿಡುಗಡೆ ಹೊಂದಿದೆ ಎಂಬ ಭಾವನೆಯನ್ನು ಸಾಧಿಸುವುದು. **೩೧.** ನಿರ್ವಾಣಸಂಪ್ರಾಪ್ತಿ: ಈ ರೀತಿಯ ಆತ್ಮಸಂಸ್ಕಾರವನ್ನು ಮಾಡಿಕೊಂಡು ಸಲ್ಲೇಖನವ್ರತವನ್ನು ಕೈಗೊಳ್ಳಲು ಧ್ಯಾನಕ್ಕಾಗಿ ಪ್ರಯತ್ನಿಸುವುದು. **೩೨.** ಯೋಗನಿರ್ವಾಣ ಸಾಧನೆ : ಆಹಾರವನ್ನು ಹಾಗೂ ಶರೀರವನ್ನು ಬಿಡಲಿರುವವನಾಗಿ ಸಮಾಧಿಯಿಂದ ಮನಸ್ಸಿನಲ್ಲಿ ಪರಮಾನಂದವನ್ನು ಸಾಧಿಸುವುದು. **೩೩.** ಇಂದ್ರೋಪಪಾದ ಕ್ರಿಯೆ: ಹೀಗೆ ಸಮಾಧಿಯಿಂದ ಪ್ರಾಣಪರಿತ್ಯಾಗಮಾಡಿ, ಇಂದ್ರನಾಗಿ ಅಣಿಮಾದ್ಯಷ್ಟಮಸಿದ್ಧಿಗಳನ್ನೂ ಸಂಪೂರ್ಣ ಯೌವನವನ್ನೂ ಪರಮಾನಂದವನ್ನೂ ಪಡೆಯುವುದು. **೩೪.** ಇಂದ್ರಾಭಿಷೇಕ: ಬಳಿಕ ಜನ್ಮಾಂತರಜ್ಞಾನವನ್ನು ಪಡೆದು ದಿವ್ಯಸಿಂಹಾಸನಾರೂಢನಾಗಿ, ದೇವತೆಗಳಿಂದ ಅಭಿಷಿಕ್ತನಾಗಿ ಕಿರೀಟ ಕುಂಡಲಾದಿಗಳನ್ನು ಧರಿಸಿ ಶೋಭಿಸುವುದು. **೩೫.** ವಿಧಿದಾನ : ತನಗೆ ನಮಸ್ಕರಿಸುತ್ತಿರುವ ದೇವತೆಗಳನ್ನು ಸತ್ಕರಿಸಿ ಅವರವರ ಸ್ಥಾನದಲ್ಲಿ ಅವರವರನ್ನು ನೇಮಿಸುವುದು. **೩೬.** ಸುಖೋದಯ : ಹೀಗೆ ಸನ್ಮಾನಿತರಾದ ದೇವತೆಗಳಿಂದ ಸುತ್ತುವರಿಯಲ್ಪಟ್ಟವನಾಗಿ ಬಹುಕಾಲ ದಿವ್ಯಸುಖವನ್ನು ಅನುಭವಿಸುವುದು. **೩೭.** ಇಂದ್ರತ್ಯಾಗ: ಹೀಗೆ ಇಂದ್ರಪದವಿಯನ್ನು ಅನುಭವಿಸಿ, ಅಲ್ಲಿ ತನ್ನ ಆಯುಸ್ಸು ಮುಗಿಯುತ್ತಾ ಬಂದುದನ್ನರಿತು ತನ್ನನ್ನು ಓಲೈಸುತ್ತಿರುವ ದೇವತೆಗಳನ್ನು ಬೀಳ್ಕೊಟ್ಟು ನಿರಾತಂಕವಾಗಿ ಇಂದ್ರಪದವಿಯನ್ನು ತ್ಯಾಗ ಮಾಡುವುದು. **೩೮.** ಇಂದ್ರಾವತಾರ: ಭೂಲೋಕದಲ್ಲಿ ಜನಿಸಿ ಬೇಗನೆ ಸಿದ್ಧಿಯನ್ನು ಪಡೆಯಬೇಕೆಂಬ ಆಸಕ್ತಿಯಿಂದ ಅರ್ಹತ್ಪೂಜೆಯನ್ನು ಮುಗಿಸಿ ಜನಿಸುವುದು. ಆಗ ಆತನ ತಾಯಿಗೆ ಹದಿನಾರು ಬಗೆಯ ಶುಭಸ್ವಪ್ನಗಳಾಗುತ್ತವೆ. **೩೯.** ಹಿರಣ್ಯಜನ್ಮತೆ : ಚಕ್ರವರ್ತಿಯ ಮನೆಯಲ್ಲಿ ಪಟ್ಟದ ರಾಣಿಯ ಗರ್ಭದಲ್ಲಿ ಅವತರಿಸುವುದು. ಹೀಗೆ ಅವತರಿಸುವುದಕ್ಕೆ ಮುಂಚಿನ ಆರು ತಿಂಗಳಿಂದಲೇ ಕುಬೇರನು ಸುವರ್ಣವೃಷ್ಟಿಯನ್ನು ಕರೆಯುವನು ಅಲ್ಲದೆ ಇನ್ನೂ ಅನೇಕ ಶುಭಶಕುನಗಳುಂಟಾಗುವುವು. ಹೀಗೆ ಹಿರಣ್ಯ (ಚಿನ್ನ) ದ ಮಳೆಯಿಂದ ಸೂಚಿಸಲ್ಪಡುವ ಜನ್ಮ. **೪೦.** ಮಂದರೇಂದ್ರಾಭಿಷೇಕ : ಹೀಗೆ ಹುಟ್ಟಿದ ಜಿನಶಿಶುವನ್ನು ದೇವತೆಗಳು ಮಂದರಪರ್ವತಕ್ಕೆ ತೆಗೆದುಕೊಂಡು ಹೋಗಿ ಕ್ಷೀರಸಮುದ್ರದ ನಿರ್ಮಲವಾದ ಹಾಲಿನಿಂದ ಅಭಿಷೇಕಮಾಡುವುದು. **೪೧.** ಗುರುಪೂಜೆ : ಜಿನಕುಮಾರನಿಗೆ ಯಾವ ಗುರುವಿನಿಂದಲೂ ಉಪದೇಶವಾಗದಿದ್ದರೂ ಸ್ವತಃ ಸರ್ವಜ್ಞನಾದುದರಿಂದ ಇಂದ್ರಾದಿಗಳು ಜಗದ್ಗುರುವೆಂದು ಪೂಜಿಸುವುದು. **೪೨.** ಯೌವರಾಜ್ಯ : ಸಕಾಲದಲ್ಲಿ ತಂದೆಯಿಂದ ಯುವರಾಜಪಟ್ಟವನ್ನು ಪಡೆದು ರಾಜ್ಯಕ್ಕೆ ಉತ್ತರಾಧಿಕಾರಿಯಾಗುವುದು. **೪೩.** ಸ್ವರಾಜ್ಯ : ಬಳಿಕ ತಂದೆ ಕೊಟ್ಟ ರಾಜ್ಯಭಾರವನ್ನು ವಹಿಸಿಕೊಂಡು ಸಾಮಂತರಾಜರಿಂದ ಓಲೈಸಲ್ಪಡುವುದು. **೪೪.** ಚಕ್ರಲಾಭ: ನಿಧಿ ಹಾಗು ರತ್ನಗಳ ಪ್ರಾಪ್ತಿಯಾದ ಮೇಲೆ ರಾಜರೆಲ್ಲರೂ ಚಕ್ರವರ್ತಿಪದವಿಯಲ್ಲಿ ಅಭಿಷೇಕ ಮಾಡಿ ಪೂಜಿಸುವುದು. **೪೫.** ದಿಗ್ವಿಜಯ : ಚಕ್ರರತ್ನವನ್ನು ಪಡೆದ ನಂತರ ಅದನ್ನು ಮುಂದಿಟ್ಟುಕೊಂಡು ನಾಲ್ಕು ಸಮುದ್ರಗಳ ಮಧ್ಯವರ್ತಿಯಾದ ಭೂಮಿಯನ್ನು ಕೈವಶಪಡಿಸಿಕೊಳ್ಳುವುದು. **೪೬.** ಚಕ್ರಾಭಿಷೇಕ : ಚಕ್ರರತ್ನವನ್ನು ಮುಂದಿಟ್ಟುಕೊಂಡು ರಾಜಧಾನಿಯನ್ನು ಪ್ರವೇಶಿಸಿದ ನಂತರ ವಿಜೃಂಭಣೆಯಿಂದ ನಡೆಯುವ ಸಾಮ್ರಾಜ್ಯಪಟ್ಟಾಭಿಷೇಕ. **೪೭.** ಸಾಮ್ರಾಜ್ಯ : ಭೂಮಂಡಲಾಧಿಪತ್ಯವನ್ನು ಪಡೆದು ದುಷ್ಟಶಿಕ್ಷಣ, ಶಿಷ್ಟಪರಿಪಾಲನೆಯನ್ನು ಮಾಡುತ್ತಾ ಧರ್ಮದಿಂದ ರಾಜ್ಯಪರಿಪಾಲನೆಮಾಡುವುದು. **೪೮.** ಪರಿಷ್ಕ್ರಮಣ (ನಿಷ್ಕ್ರಾಂತಿ) : ರಾಜ್ಯವನ್ನು ಬಹುಕಾಲ ಪರಿಪಾಲಿಸಿದ ನಂತರ ಯಾವುದೋ ಒಂದು ಕಾಲದಲ್ಲಿ ವಿರಕ್ತಿಯುಂಟಾಗಿ, ಜ್ಯೇಷ್ಠಪುತ್ರನಿಗೆ ರಾಜ್ಯಭಾರವನ್ನು ವಹಿಸಿ, ಹೇಳಬೇಕಾದುದನ್ನು ಹೇಳಿ ಮನೆಯನ್ನು ತ್ಯಜಿಸಿ ಹೊರಡುವುದು. **೪೯.** ಯೋಗಸಂಗ್ರಹ : ಸರ್ವಸಂಗಪರಿತ್ಯಾಗ ಮಾಡಿ ಕಠಿನವಾದ ತಪಸ್ಸನ್ನು ಆಚರಿಸುತ್ತಾ ಬಾಹ್ಯಾಂತರಂಗಗಳ ಮಲವನ್ನು ನೀಗಿ ಕೇವಲಜ್ಞಾನವನ್ನು ಪಡೆಯುವುದು. ಜ್ಞಾನ ಮತ್ತು ಧ್ಯಾನದ ಸಂಯೋಗವೇ ಯೋಗ. ಅದರಿಂದ ಅತಿಶಯವಾದ ತೇಜಸ್ಸನ್ನು ಪಡೆಯಬಹುದು. **೫೦.** ಆರ್ಹಂತ್ಯಕ್ರಿಯೆ : ಕೇವಲಜ್ಞಾನವು ಉಂಟಾದ ಮೇಲೆ ಕೆಲವು ಬಹಿರಂಗ ಪವಾಡಗಳು ಉಂಟಾಗುವುವು. ಇಂತಹ ಪ್ರಾತಿಹಾರ್ಯಾಷ್ಟಕ (ಎಂಟು ಪವಾಡಗಳು) ಮೊದಲಾದ ವಿಭೂತಿಗಳ ಆವಿರ್ಭಾವ. **೫೧.** ವಿಹಾರಕ್ರಿಯೆ : ಧರ್ಮಚಕ್ರವನ್ನು ಮುಂದಿಟ್ಟುಕೊಂಡು ಭೂಮಂಡಲದಲ್ಲಿ ವಿಹರಿಸುವುದು. **೫೨.** ಜನರ ಅನುಗ್ರಹಕ್ಕಾಗಿ ಮಾಡುತ್ತಿದ್ದ ತೀರ್ಥಾಟನೆಯನ್ನು, ಸಮವಸರಣವನ್ನು(ಧರ್ಮೋಪದೇಶಕ್ಕಾಗಿಏರ್ಪಾಡುಮಾಡುತ್ತಿದ್ದ ಸಭೆಯನ್ನು) ತ್ಯಜಿಸುವುದು. **೫೩.** ಅಗ್ರನಿರ್ವೃತಿ : ಹೀಗೆ ಎಲ್ಲಾ ಯೋಗಗಳನ್ನು ಬಿಟ್ಟು ಅಘಾತಿಕರ್ಮಗಳನ್ನು ನಾಶಮಾಡಿದ ಜಿನಸ್ವಾಮಿಯು ಸ್ವಭಾವವಾಗಿಯೇ ಉತ್ಪನ್ನವಾಗುವ ಸತತೋರ್ಧ್ವಗತಿಯನ್ನು ಪಡೆದು ಉತ್ಕೃಷ್ಟವಾದ ಮೋಕ್ಷಸ್ಥಾನವನ್ನು ಪಡೆಯುವುದು. ಹೀಗೆ ಒಟ್ಟು ಐವತ್ತುಮೂರು ಗರ್ಭಾನ್ವಯಕ್ರಿಯೆಗಳು : ಮತ್ತಂ ದ್ವಾದಶಾಂಗದೊಳ್ ಪೇಟ್ದ ಆಧಾನ . . . ದೀಕ್ಷಾಜಿನರೂಪ ಮೌನಾಧ್ಯಯನವೃತ್ತಿ . . . ಅಗ್ರನಿರ್ವೃತಿ ಎಂದು ಅಯ್ವತ್ತುಮೂಱುಂ ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಮಂ (ಆದಿಪು. ೧೫-೧೫ ವ) ; ದೀಕ್ಷೆಯನೀವುದೆನುತ್ತೆ ಮುಮುಕ್ಷುಗೆ ಬಿನ್ನವಿಸೆ . . . ಸಾಕ್ಷಾನ್ಮೋಕ್ಷಮಾರ್ಗಮೆನಿಪ ದಿಗಂಬರದೀಕ್ಷೆಯಂ ಕೈಕೊಂಡು (ಪಾರ್ಶ್ವಪು. ೮-೯೯) ; ಸಂಸಾರಭೀರುತ್ವದಿಂ . . . ದೀಕ್ಷೆಯಂ ಕೆಯ್ಕೊಂಡು

(ಪುಷ್ಪಪು. ೯-೭ ವ). 'ದೀಕ್ಷಾನ್ವಯಕ್ರಿಯೆ' ಪರಾ. ೭. [ವೀಶೈ] ಗುರುವು ಶಿಷ್ಯನಿಗೆ ಅನುಗ್ರಹಿಸುವ ಮನಸ್ಸಂಸ್ಕಾರ ವಿಶೇಷ: ದೀಯತೇ ಎನೆ ಲಿಂಗಸಂಬಂಧ ತತ್‌ಕ್ಷಣಂ ಕ್ಷೀಯತೇ ಎನೆ ಮಲತ್ರಯ ಹರಣವದಱಿಂದ ದೀಯತೇ ಕ್ಷೀಯತೇ ಎಂಬುಭಯಪದಯೋಗವೇ ದೀಕ್ಷೆಯೆಂದೆನಿಪುದು (ಲಶಿಚಂ. ೫೨-೮); ಯಾವುದರಿಂದ ಶಿಷ್ಯನಿಗೆ ಲಿಂಗ ಸಂಬಂಧವು ಪ್ರಾಪ್ತವಾಗುವುದೋ . . . ಮತ್ತು ಅವನ ಮಲತ್ರಯವು ನಿವರ್ತಿಸಲ್ಪಡುವುದೋ . . . ಅದು ದೀಕ್ಷೆಯೆಂದು ಹೇಳಲ್ಪಡುವುದು (ಶಿವಾಸೂ. ೭೧-೭೮ ಟೀಕೆ); ಶಿವಾರ್ಚನಾದಿ ಕರ್ಮಗಳಲ್ಲಿ ಯೋಗ್ಯತೆ ಯನ್ನು ಉಂಟುಮಾಡುವುದಾಗಿಯೂ . . . ಮಲತ್ರಯಗಳನ್ನು ನಾಶ ಮಾಡುವುದಾಗಿಯೂ ಇರುವುದೇ ದೀಕ್ಷೆಯೆನಿಸಿಕೊಳ್ಳುವುದು (ಅಷ್ಟಾವಿ. ೧).

[ ಸಂ. ದೀಕ್ಷಾ ]

**ದೀಕ್ಷೆಗುಡು** (ಕ್ರಿ). [ಜೈನ] ಸಂನ್ಯಾಸದ ದೀಕ್ಷೆಯನ್ನು ಕೊಡು,– ನಿಯಮವನ್ನು ನೀಡು: ಕರಮೊಳ್ಪಿದನಿವನೆಂದೊರ್ವರ ಶಿಷ್ಯನನೂಱು ತೋಱೆ ನುಡಿದೊಯ್ಯನೆ ಮಾಣ್ದಿರದೊಯ್ದು ದೀಕ್ಷೆಗುಡುವಂ (ಧರ್ಮಾಮೃ. ೫-೧೦೦). [ ದೀಕ್ಷೆ + ಕುಡು$_1$ (<ಕೊಡು$_1$) ]

**ದೀಕ್ಷೆಗೆಯ್** (ಕ್ರಿ). ೧. [ಜೈನ] ಸಂನ್ಯಾಸದೀಕ್ಷೆಯನ್ನು ಸ್ವೀಕಾರ ಮಾಡು: ಇಂತೀಯೆರಡುಂ ಧರ್ಮದೊಳಾವುದಂ ಕೈಕೊಳಲಾರ್ಪುದದಂ ಕೈಕೊಂಡು ನೆಗಟ್ದುದು ಮೇಗಳ ಭವಂಗಳೊಳ್ ಚಕ್ರವರ್ತಿತ್ವಮುಮಂ ಪಡೆದನುಕ್ರಮದಿಂ ದೀಕ್ಷೆಗೆಯ್ದು ಭುವನತ್ರಯಸ್ವಾಮಿಯಾಗಿರ್ದು (ಬಂಹರಿ. ೧೦-೧೦ ವ). ೨. [ವೀಶೈ] ಲಿಂಗಧಾರಣೆ ಮಾಡಿಸು: ಪುತ್ರಂಗೆ ತ್ರಿವಿಧ ದೀಕ್ಷೆಗಳಿಂ ತ್ರಿಲಿಂಗಗಳ ನಲಿದು ತ್ರಿವಿಧಾಂಗಂಗಳೊಳು ಪ್ರತಿಷ್ಠಿಸಿ ಶರಣ ಕುಲಕೀ ಪ್ರಕಾರದೊಳ್ ದೀಕ್ಷೆಗೆಯ್ಕೆಂದು ಕೃಪೆಯೊಳ್ ನಿರೂಪಿಸುವನೋ ಪೇಳೆನಲ್ ಮೊದಲ ಲಿಂಗವನೆ ದೀಕ್ಷೆಯಿನಿತ್ತನು (ಚೆಬಪು. ೫-೨೪).

[ ದೀಕ್ಷೆ + ಕೆಯ್$_1$ ]

**ದೀಕ್ಷೆಗೊಳ್** (ಕ್ರಿ). ೧. (ಯಾಗದ ಆರಂಭದಲ್ಲಿ ನಡೆಸುವ) ಸಂಸ್ಕಾರ ವನ್ನು ಹೊಂದು,–ಪಡೆ: ದೀಕ್ಷೆಗೊಂಡಿರ್ಪನಣ್ಣದೇವಂ ತಾನುಮನ್ನೆಗಂ ವ್ರತಿಯಾಗಿ ಪೆಣೊಳ್ಪೆರೆಯೆನು (ಜೈಮಿಭಾ. ೧೭-೧೭). ೨. ವ್ರತಧಾರಿ ಯಾಗು; ನಿಯಮವನ್ನು ಸ್ವೀಕರಿಸು. ೩. [ಜೈನ] ಸಂನ್ಯಾಸವನ್ನು ಹೊಂದು,–ಪಡೆ: ತನ್ನದೀತೀರದ ಜಿನಾಗಾರದೊಳಿರ್ದ ಶತಕೇತುಗಳೆಂಬ ಗಣಧರಸ್ವಾಮಿಗಳ ಸಮಕ್ಷದೊಳ್ ದೀಕ್ಷೆಗೊಂಡಲ್ಲಿಯೆ ನಿಂದರ್ (ಪುರಾಮಾ. ೭-೭ ವ). [ ದೀಕ್ಷೆ + ಕೊಳ್$_1$ ]

**ದೀಕ್ಷೆಪಡೆ** (ಕ್ರಿ). ವ್ರತ ತೊಡು; ನಿರ್ಧಾರ ಕೈಗೊಳ್ಳು: ಪರಂಪರೆ ತೈಲ ಹೀರಿ, ಹೊಸಬತ್ತಿಯಲಿ ಸ್ವಂತಬೆಳಕು ಹಿಡಿದು ಎದೆಹಣತೆಯಲಿ ಸಲಿಸು ಶ್ರದ್ಧಾಂಜಲಿಯ ಅವನ ಹೊಂಗನಸುಗಳ ದೀಕ್ಷೆಪಡೆದು (ನೆಲಮು. ೫೦-೧೫); ನಾವೆಲ್ಲರಾ ನಾಯಕನ ದಳದಿ ದೀಕ್ಷೆಪಡೆದು, ವಿಶಾರಿ ಬಳಸುವ ಬನ್ನಿ ಬುದ್ಧಿಯನು ಶ್ರದ್ಧೆಯನು (ಇಂಗೀತ. ೧೦೫-೧೫). [ ದೀಕ್ಷೆ+ಪಡೆ$_1$ ]

**ದೀಕ್ಷೆಬಿಡು** (ಕ್ರಿ). ವ್ರತನಿಮಿತ್ತವಾಗಿ ಕ್ಷೌರ ಮಾಡಿಸಿಕೊಳ್ಳದಿರು; ಕೂದಲು ಬೆಳೆಸು: ಇದೇನು? ದೀಕ್ಷೆ ಬಿಟ್ಟಿದ್ದೀರಿ? (ರೂಢಿ).

[ ದೀಕ್ಷೆ + ಬಿಡು$_1$ ]

**ದೀಕ್ಷೆಬೀಳ್** (ಕ್ರಿ). [ಜೈನ] ಸಂನ್ಯಾಸವನ್ನು ಸ್ವೀಕರಿಸು: ಸ್ವಸ್ತಿ ಶ್ರೀಪುರುಷ ಮಹಾ × × × ಪೃಥುವಿರಾಜ್ಯ ಕೆಯೆ ಅರಟ್ಟ × × ರಮ್ಮಗ ನ್ದಿರ್ ಸಿಜ್ಗಂ ದೀಕ್ಷೆಬೀಳಾದು ಅರಟ್ಟಿ ತೀರರ್ ಕುಡಲೂರದ ಗೊಟ್ಟೆ ಮಡಿ ಒಡೆಯಂಬರಾಳ್ವಿತೆಯ (ಎಕ. III, ಮೈಸೂರು. ೨೫-೩; ಸು. 750).

[ ದೀಕ್ಷೆ + ಬೀಳ್$_1$ (<ಬೀೞ್$_1$) [

**ದೀಕ್ಷೆಬೆಳಸು** (ಕ್ರಿ).=ದೀಕ್ಷೆಬಿಡು: "ಏನು, ದೀಕ್ಷೆ ಬೆಳಸಿದ್ದೀರಿ?" (ಗಾಳಿಪ. ೭೭). [ ದೀಕ್ಷೆ + ಬೆಳಸು$_1$ (<ಬೆಳೆಯಿಸು) ]

**ದೀಕ್ಷೆಯಿಕ್ಕು** (ಕ್ರಿ). ಉಪದೇಶಮಾಡು: ನೋಡುವವರೊಳ್ ಮನಂ ಬಯಸು ವಂತಿರೆ ನಲ್ಮೆ ತುಳುಂಕೆ ಬಿಂಕದಿಂ ನೋಡುವುದು . . . ಇತ್ತು ಕೂಡುವ ರೊಳಿಲ್ಲದ ಬೇಟಮನುಂಟುಮಾಡೆ ನೀಂ ಕೂಡುವುದೆಂದು ಮುತ್ತ ಮುದು ಗುಂಟಣಿ ಪುತ್ರಿಗೆ ದೀಕ್ಷೆಯಿಕ್ಕಿದಳ್ (ಜಗವಿ. ೧೭-೧೨೫); (ಸೂಕ್ತಿಸು. ೮-೯೩೧ ನೋ). [ ದೀಕ್ಷೆ + ಇಕ್ಕು ]

**ದೀಕ್ಷೆವಹಿಸು** (ಕ್ರಿ). ಯಾಗದ ಯಜಮಾನನಾಗು; ಯಾಗ ಮಾಡುವ ಕಾರ್ಯವನ್ನು ಕೈಕೊಳ್ಳು: ಕೃಷ್ಣ, ನಿನ್ನ ದಯೆಯಿಂದ ಈ ಭೂಮಿ ಯೆಲ್ಲವೂ ನನ್ನ ವಶವಾಗಿದೆ . . . ಈಗ ರಾಜಸೂಯಯಾಗವನ್ನು ನಡೆಸಬೇಕೆಂದಿದ್ದೇನೆ; ನೀನು ಇದರಲ್ಲಿ ದೀಕ್ಷೆವಹಿಸು (ವಚಭಾ. ೪೦).

[ ದೀಕ್ಷೆ + ವಹಿಸು ]

**ದೀಕ್ಷೋಪವಾಸ** (ನಾ). [ಜೈನ] ಯಾವುದಾದರೂ ವ್ರತಕ್ಕಾಗಿ ಮಾಡುವ ಉಪವಾಸ: ವಿನಯಂಧರಭಟಾರರ ಪಕ್ಕದೆ ತಪಂಬಟ್ಟು ದೀಕ್ಷೋಪವಾಸ ತ್ರಿರಾತ್ರಂಗೆಯ್ದು ಶರೀರಸಂಧಾರಣನಿಮಿತ್ತಂ ಚರಿಗೆ ಪೊಕ್ಕೊಡೆ (ವಡ್ಡಾರಾ. ೬೮-೨೪); ಆ ಮುನೀಂದ್ರೋತ್ತಮಂ ತ್ರಿರಾತ್ರಂ ದೀಕ್ಷೋಪವಾಸಂಗೆಯ್ದು . . . ಅನಗಾರವೇಳೆಯೊಳ್ ಪಾದಿರಾಭಿಧಾನ ಪುರಕ್ಕೆ ಚರಿಗೆಗೆ ವರೆ (ಶಾಂತಿಪು. ೧೧-೧೦೭). [ ಸಂ. ]

**ದೀಡ**, ದೀಡು$_2$ (ನಾ). ಒಂದೂವರೆ: ಈಗಂತೂ ವರ್ಷ ದೀಡವರ್ಷ ಆತು ಮುಂಬೈಯಾಗ ಇದ್ದಾನ (ದೀಪಹ. II, ೩೫); ಇಂದು ದೀಡತಾಸಿನ ಮೇಲೆ ಮಲಗಿದೆ (ಸ್ವಪ್ನದ. ೧೦೭); ಒಂದು ಲಕ್ಷ ಜನರು ಹತರಾಗಿ ದೀಡಲಕ್ಷ ಸೈನಿಕರು ಸೆರೆ ಸಿಕ್ಕಿದ್ದರಿಂದ ಅಶೋಕನು ... ಉದಾಸೀನನೂ ಪಶ್ಚಾತ್ತಾಪ ದಗ್ಧನೂ ಆದನು (ಹಿಂದುಇ. ೪೩). **ದೀಡು$_2$**: ಏನಂದ್ರು ದೀಡು ಸಾವಿರ ತಗೊಂಡು ಹೋಗಿ ಕಿಸೇದಾಗ ಹಾಕಿದಿವಿ (ಧನಂಜ. ೫೭).

**ದೀಡನಮಸ್ಕಾರ** = ದೇವರಿಗೆ ಹರಕೆ ಹೊತ್ತು ತೇರಿನ ಹಿಂದಿನಿಂದ ಬೀದಿಗುಂಟ ದಂಡವತ್ ನಮಸ್ಕಾರ ಹಾಕುತ್ತಾ ಹೋಗುವುದು; P ಒಂದು ಸಲ ದಂಡವತ್ ನಮಸ್ಕಾರ ಹಾಕಿ ಆ ಸ್ಥಳದಿಂದಲೇ ಕೈಯಲ್ಲಿ ಹಿಡಿದ ಕೋಲಿನಿಂದ ದೇಹದ ಒಂದೂವರೆ ಭಾಗದಷ್ಟು ಉದ್ದವಾಗುವಲ್ಲಿಗೆ ಗೆರೆ ಎಳೆದು, ಮತ್ತೆ ಆ ಗೆರೆಯಿಂದ ಹೀಗೆಯೇ ನಮಸ್ಕಾರವನ್ನು ಮುಂದುವರಿಸಿಕೊಂಡು ಹೋಗುವುದು. ಇದೊಂದು ಬಗೆಯ ಹರಕೆ. **ದೀಡುಗೇಣು** = ಒಂದೂವರೆ ಗೇಣು: ಗೇಣು ದೀಡುಗೇಣು ಒಡ್ಡು ಇಟ್ಟು . . . ನೀರು ನಿಲ್ಲುವ ಹಾಗೆ ಸಿದ್ಧಮಾಡಿ (ಕೃಷಿಪ್ರ. ೫೪). **ದೀಡುತಿಂಗಳು** = ಒಂದೂವರೆ ತಿಂಗಳು: ದೀಡು ತಿಂಗ ಳಾಗಿತ್ತು – ತಡೆದು ಹೊರಗೆ ಕುಳಿತೆಳು (ಸುವರ್ಣ. ೫೧).

[ <ಪ್ರಾ. ದಿವಡ್ಢ./ಮರಾ. ದೀಢ್; ಹಿಂ. ಡೇಢ್ ]

**ದೀಡಪಂಡಿತ** (ನಾ). ಪಂಡಿತನೆಂದು ತಿಳಿದುಕೊಂಡಿರುವ ಮೂರ್ಖ; ಪಂಡಿತಮನ್ಯ: ಹಳ್ಳಿಗಳಿಗಿಂತ ಪಟ್ಟಣಗಳಲ್ಲಿ ಇಂತಹ ಹಠವಿರ್ಯರಾದ ದೀಡಪಂಡಿತ ಸಂಖ್ಯೆಯು ಮಿತಿಮೀರಿರುತ್ತದೆ (ಬ್ರಹ್ಮಜೀ. ೧೭); ಆ 'ದೀಡಪಂಡಿತರು' ನನ್ನಂತಹ ಚಪ್ಪಲಿಗಳನ್ನು ಕಳೆದುಕೊಂಡಿದ್ದರೆ ಹೇಳುತ್ತಿದ್ದೆ (ಮುಂಗಾಪು. ೭). [ ದೀಡ + ಪಂಡಿತ ]

**ದೀಡಿ** (ನಾ). ವಕ್ರತೆ; ವ್ಯಂಗ್ಯ; ಕೊಂಕು: ಗಂಡಿಲ್ಲದಿರುವುದು ಮುಂಡೇರ ಗುರುತಂತ ಮನೆಮಾರು ಹಾಳು ದೇಗುಲಂತ ದೀಡಿಯ ನುಡಿದು ತಮ್ಮೂರಿಗೆ ಹಾರ್ಯಾವ (ಕನ್ನಜಾ. ೩೪೦); ನಾ ಹೀಂಗ ದೀಡಿ ಮಾತಾಡಿಸಿ ಕೊಂಡಿಲ್ಲಾ ಅಂದೆ (ಹೊಸಂಸಾ. ೧೧೦); ದೀಡೀಮಾತು ಸಾಕು ನಾ ಹೇಳಿದ್ದು ನೀ ಕೇಳಲಿಕ್ಕೇ ಬೇಕು (ಧನಂಜ. ೧೯). [ ←ಮರಾ. ತೀಡ್ ]

**ದೀಡು$_1$** (ನಾ). ಆಶ್ರಯ; ನೆಲೆ; ಬೀಡು (?): ಪಾತಕಂಗಳ ಬೀಡು ಸ್ಮೃತಿ ಮೃತಿ ಸೂತಕಂಗಳ ದೀಡು . . . ಈ ರಚನೆಯಿಂ ಸ್ಥೂಲ ತನುವಿದು ನೀರ ಬೊಬ್ಬುಳಿಯಂತೆ ಕ್ಷಣಿಕಂ (ಗಗತಾ. ೧೦-೩೮). [<ಈಡು4]

**ದೀಡು₂** 'ದೀಡ' ನೋ.

**ದೀಡು₃** (ನಾ). ಅಡವು ; ಒತ್ತೆ ; ಈಡಂ : ಪಿತ್ರಾರ್ಜಿತವಾಗಿ ಬಂದಿದ್ದ ಚಿರಸ್ವತ್ತುಗಳೆಲ್ಲ ದೀಡಾಗಿದ್ದವು (ಮಲೆಮ. ೩೦೯) ; ಒಂದು ಪದಾರ್ಥ ವನ್ನು ಒತ್ತೆ ಇಟ್ಟು ಅದಕ್ಕೆ ತಕ್ಕ ಹಣವನ್ನು ತೆಗೆದುಕೊಳ್ಳುವುದು ದೀಡು ಎಂದಾಗಿದೆ (ನಮ್ಮನು. ೧೩೪) ; ಸ್ಥಿರಚರ ಸೊತ್ತುಗಳನ್ನು ಹಲವು ವಿಧದಲ್ಲಿ ಖಾತರಿ ಮಾಡಲಾಗುವುದು. ಅವುಗಳಲ್ಲಿ ದೀಡು, ಭೋಗ್ಯ, ವೈಸಾಲಪತಂ ಹೆಚ್ಚು ಬಳಕೆಯಲ್ಲಿದೆ (ಗಂಗಾಳ. ೯೦). 'ಈಡು₁' ಪರಾ.

**ದೀಡು ಮಾಡು** = ಅಡವು ಇಡು ; ಈಡುಮಾಡು : ಏನಾದರೂ ದೀಡು ಮಾಡಿದರೆ ಹಣ ಕೊಡ್ಬೇಕು (ಬೆಳುಮ. ೮೯). [ ←ಇಂ. Deed ]

**ದೀಡುಪತ್ರ** (ನಾ). ಅಡವು ಇಟ್ಟದ್ದಕ್ಕೆ ದಾಖಲೆಯಾಗಿ ಬರೆದು ಕೊಡುವ ಪತ್ರ ; ಅಡಮಾನ ಪತ್ರ : ಕ್ರಯಪತ್ರ, ದೀಡುಪತ್ರ ಮುಂತಾದುವುಗಳನ್ನು ಮಾಡಿಸಲಿಚ್ಛಿಸಿದ ತಾಲ್ಲೂಕಿನ ಜನರೆಲ್ಲರೂ ಭಟ್ಟ ರನ್ನು ಆಶ್ರಯಿಸುತ್ತಿದ್ದರು (ಪಂಜಪಂ. ೫). [ ದೀಡು₃ + ಪತ್ರ ]

**ದೀಡೆ** (ನಾ). ಒಂದೂವರೆಯ ಮಗ್ಗಿ : ಕಾಲು, ಅರ್ಧ, ಪೌಣೆ, ಸವ್ವಾ, ದೀಡೆ, ಅಡೀಚೆಗಳನ್ನು ಕಂಠಪಾಠ ಮಾಡಿಸಿದ್ದರು (ಗಾಳಿಪ. ೧೭೮). [ ←ಹಿಂ. ಡೇಢಾ ]

**ದೀದಿವಿ** (ಗು). ೧. ಪ್ರಕಾಶಿಸುವ; ಹೊಳೆಯುವ. (ನಾ). ೨. ಹೊಳಪು; ಪ್ರಕಾಶ. ೩. ಅಗ್ನಿ. ೪. ಗುರು ; ಬೃಹಸ್ಪತಿ. ೫. ದೇವಲೋಕ ; ಸ್ವರ್ಗ. ೬. ಮೋಕ್ಷ. ೭. ಅನ್ನ : "ಅಂಧಃ . . . ದೀದಿವಿಃ, ಅನ್ನಂ, ಓದನಂ, ಭಿಸ್ಸಾ, ಅಶನಂ, ಆಹಾರಃ–ಈ ೯ ಕೂಟ್" (ಹಲಾಯು. ೫೬–೧೬೪). [ ಸಂ. ]

**ದೀದೀ** (ನಾ). ಹಿರಿಯ ಸಹೋದರಿ ; ಅಕ್ಕ : ಸ್ವಾನ್ಲಿಯನ್ನು ದೀದೀ (ಅಕ್ಕ) ಎಂತಲೂ ಕರೆಯುತ್ತಿದ್ದಳು (ಸಸ್ಯಕ. ೪೪). [ ←ಹಿಂ. ದೀದೀ ]

**ದೀಧಿತಿ** (ನಾ). ೧. ಹೊಳಪು; ಪ್ರಕಾಶ; ಕಾಂತಿ: ಸರಸಿರುಹವಿಂದುದೀಧಿತಿ ಪರಾಜಿತಶ್ರೀವಿಲಾಸಮಿಾ ನಿನ್ನ ಮುಖಂ (ಕವಿರಾ. ೩–೭೦) ; ಮಿಱುಗುವ ರತ್ನಭಿತ್ತಿಗಳ ದೀಧಿತಿಯಂ ನಿಜದೇಹದೀಪ್ತಿಗಳ್ ಮಱಸೆ (ಆದಿಪು. ೨–೬೨) ; ಪಳುಕಿನ ಪಾದಪೀಠಂ . . . ತನ್ನ ಕೇಸಡಿಯ ಕೆಂಪಿ ನೊಳುಜ್ಜ್ವಲಚಿತ್ರಭಿತ್ತಿ ನಿಸ್ತುಳ ನಿಜ ಮೌಕ್ತಿಕಾಭರಣ ದೀಧಿತಿಯಿಂ ತೆರೆ ಸುತ್ತಿದಂತೆ ಕಣ್ಗೊಳಿಸೆ (ಮಲ್ಲಿಪು. ೩–೯೭) ; ನಾಸಾಗ್ರದ ಮುತ್ತಿನ ಮಣಿ ರದನಚ್ಛದದೀಧಿತಿ ಪುದಿಯೆ ಕೆಂಪನಾಳ್ದೊಲೆಸೆಗುಂ (ರಾಜಶೇ. ೧೨–೭೯). ೩. ಕಿರಣ ; ಕದಿರು : "ಕರಮುಸ್ರಮಂಶುವಸುರೋಚಿ ದೀಧಿತಿ ಮರೀಚಿ ರುಚಿ ದ್ಯುತಿ ಪ್ರಗ್ರಹಂ ದೀಪ್ತಿ . . . ಪ್ರದ್ಯೋತಮಾ ರಶ್ಮಿ" (ಮಂಗರಾ. ೧೧–೩); ಹಿಮಕರನಾತ್ಮಶೀತರುಚಿಯಂ ದಿನನಾಯಕನುಷ್ಣದೀಧಿತಿಕ್ರಮಮಂ . . . ಉತ್ತಮ ಕುಲಶೈಲಮುನ್ನತಿಯನೀಳಿದವಾಗೆ ಬಿಸುಟಿಟ್ಟೊಡಂ ಬಿಸು[ಟ್ಕೆಮ] ಬಿಸುಡೆಂ ಮದೀಯ ಪುರುಷವ್ರತಮೊಂದುಮನೀಗಳ್ (ಪಂಪಭಾ. ೧–೮೩) ; ಅನುಮಿಸಿದುದು ರಜತಾಚಲದನರ್ಘ್ಯಮಣಿವಿಕಟ ಕೂಟಮಂ ದಶರಥರಾಮನ ಮಣಿಮಯಮಕುಟಂ ಕಾಮನ ಬಿಲ್ಲಂ ಬೀಱಿ ಬೇಱಿ ನಿಜ ದೀಧಿತಿಗಳ್ (ಪಂರಾಮಾ. ೫–೧೩೪). [ ಸಂ. ]

**ದೀನ್‌ಇಲಾಹಿ**, ದಿನ್‌ಇಲಾಹಿ (ನಾ). ವಿವಿಧ ಮತಗಳ ಆಧ್ಯಾತ್ಮಿಕ ಮತ್ತು ತಾತ್ವಿಕ ಸಂಪ್ರದಾಯಗಳನ್ನು ಸಮನ್ವಯಿಸಿಕೊಳ್ಳುವಂತೆ ಅಕ್ಬರನಿಂದ ಸ್ಥಾಪಿಸಲ್ಪಟ್ಟ ಒಂದು ಮತ : ಈ ಎಲ್ಲವುಗಳ ಜೊತೆಗೆ, ಸೂರ್ಯಪೂಜಾಪ್ರಧಾನವಾದ ಅಕ್ಬರ ಚಕ್ರವರ್ತಿಯ 'ದೀನ್ ಇಲಾಹಿ' ಎಂಬ ಹೊಸಧರ್ಮವೂ ಒಂದು (ಭಾರದ. ೪೬೦). **ದಿನ್‌ಇಲಾಹಿ** : ಅವರೊಳಗಿನ ವೈರವು ಶಾಂತವಾಗಲೆಂದು "ದಿನ್ ಇಲಾಹಿ" ಎಂಬ ಹೊಸ ದೊಂದು ಪಂಥವನ್ನು ತೊಡಗಿದನು (ಬಾಲಪ್ರ. III, ೧೨೩೩). [ ←ಅರ. ದೀನ್ ಏ ಇಲಾಹೀ = ದೇವರ ಧರ್ಮ ]

**ದೀನ್‌ದಾರ್** (ನಾ). ಮುಸಲ್ಮಾನ ಧರ್ಮದಲ್ಲಿ ನಿಷ್ಠೆಯುಳ್ಳವನು : ಮೊದಲಿನಿಂದಲೂ ಹಿಂದುಗಳನ್ನು ಮುರಿದು ದೀನ್‌ದಾರ್ ಜನರು ಪ್ರಬಲ ವಾಗುತಾ ಬರುತಿದಾರೆ (ಚಿತ್ರಪ್ರಾ. ೮೪). [ ←ಅರ. ಹಿಂ. ದೀನ್‌ದಾರ್ ]

**ದೀನ** (ಗು). ೧. ದೈನ್ಯದಿಂದ ಕೂಡಿದ ; ಶೋಚನೀಯ ಸ್ಥಿತಿಯ ; ಮರುಕ ಹುಟ್ಟಿಸುವಂತಹ; ಅನುಕಂಪವನ್ನುಂಟು ಮಾಡುವ. 'ದೀನ ದೃಷ್ಟಿ' ಪರಾ. ೨. ಬಡತನದ ; ದಾರಿದ್ರ್ಯದ ; ಬಡವನಾದ. 'ದೀನ ಜನ' ಪರಾ. ೩. ದುಃಖಕ್ಕೆ ಈಡಾದ ; ಖಿನ್ನವಾದ ; ಸಂಕಟಕ್ಕೆ ಗುರಿಯಾದ. 'ದೀನಾನನ' ಪರಾ. ೪. ಹಾಳಾದ ; ನಾಶವಾದ. ೫. ದುರಾಶೆಯ ; ಅತ್ಯಾಸೆಯ ; ಲೋಭದಿಂದ ಕೂಡಿದ. ೬. ಭಯ ಗೊಂಡ ; ಹೆದರಿದ. 'ದೀನಧ್ವನಿ', 'ದೀನಭಾವ' ಪರಾ. ೭. ದುರ್ಬಲವಾದ. ೮. ನಮ್ರ ; ವಿನೀತ. (ನಾ). ೯. ಬಡವ ; ದರಿದ್ರ : ದೀನ ನಾನು ಸಮಸ್ತಲೋಕಕೆ ದಾನಿ ನೀನು (ಹರಿಸಾ. ೪೯). ೧೦. ದುಃಖ ; ಸಂಕಟ : ಮಾನಿಸರೊಳ್ಪುಂ ಬಾಟುಮ[ದೇನೊ]ಪ್ಪಮ ದೇನಸಾರವಿಸ್ತಾರಮದೇಂ ಮಾನಮದೇಂ ವಿಪುಳಮದೇಂ ದೀನಮದೇಂ ಸ್ತೋಕಸುಖಮದೇನಧ್ರುವಮೋ (ಶಾಂತಿಪು. ೯–೧೦೨). ೧೧. ಜಿಪುಣ ; ಲೋಭಿ : "ಕದರ್ಯಃ, ದಿ(ಹಿ)ೀನಃ, ಕೀನಾಶಃ . . . ಈ ೫ ಲೋಭಿ" (ಹಲಾಯು. ೫೭–೧೯೨) ; "ದೀನಂ ಕದರ್ಯಂ ಲೋಭಿ ಕೀನಾಶನಕ್ಕುಂ" (ಮಂಗರಾ. ೬೮–೭) ; "ಲೋಭನ್, ಲೋಭಕಃ, ಲುಬ್ಧಃ, ಲುಬ್ಧವಾನ್, ಈ ೪ ದೀನಂ" (ಕಾಶಕ್ಕ. ೨೦೭) ; ದೀನಂ ದಾನವಿಧಾನಮಾಣಿಗೆ ಮನಂದಪ್ಪನೇ ಸತ್ತ್ವಹೀನಂ ಶಾಂತಿ ಸುಖೋಕ್ತಿಗೇಳ್ವನೆ (ವೃಷವಿ. ೧೨–೩೪) ; ದೀನನ ಸಿರಿಗಿಂತ ದಾನಿಯ ಬಡತನ ಮೇಲು (ಗಾದೆ).

**ದೀನದಯಾಪರ**=ಬಡವರ ವಿಷಯದಲ್ಲಿ ದಯೆಯಿಂದ ಕೂಡಿರುವ ವ್ಯಕ್ತಿ : ದೀನದಯಾಪರಳಾದ ಆ ಸ್ತ್ರೀರತ್ನವು . . . ಅವನ ಪದವಿಯನ್ನು ಅವನಿಗೆ ಹಿಂತಿರುಗಿ ಕೊಡಬೇಕೆಂದು ಪ್ರಾರ್ಥಿಸತೊಡಗಿದಳು (ಕವಿಕ. ೪೦). **ದೀನದಲಿತ, ದೀನದಳಿತ** = ನಿರ್ಗತಿಕ ಮತ್ತು ಶೋಷಣೆಗೆ ಒಳಗಾದ ವನು : ನೀವು ಸೆರೆಮನೆಗಳಿಗೆ ಹೋಗಿ ತ್ಯಾಗ ಮಾಡಿದ್ದು . . . ಸರ್ವಜನರ ಹಿತಕ್ಕಾಗಿ; ದೀನದಲಿತರ ಉದ್ಧಾರಕ್ಕಾಗಿ (ಪಂಜಪಂ. ೧೮೩) ; ದೀನದಲಿತರಿಗೆ ಕೊಡುಗೈವೀರನಾಗಿ ವಿಶ್ವಾನುಕಂಪ ತೋರಿರುವೆ (ದಾನಚಿಂ. ೨೧) ; ಆತ ದೀನದಳಿತರ ಸಂಕಟವನ್ನು ಪರಿಹಾರ ಮಾಡುತ್ತಾನೆ (ತತ್ತ್ವಪ್ರಾ. ೫೬೨). [ ಸಂ. ]

**ದೀನಜನ** (ನಾ). ೧. ಬಡತನದಿಂದ ಕೂಡಿದ ಜನ ; ನಿರ್ಗತಿಕ ಜನ : ದೀನಜನ ದಾರಿದ್ರ್ಯ ಫಣಿಕುಲ ವೈನತೇಯನಾ ನಿಶ್ಚಲಿತ ಸುಮ್ಮಾನದಲಿ ಷೋಡಶ ಮಹಾದಾನಗಳ ವಿರಚಿಸಿದ (ತಿಮ್ಮಶಾಂ. ೦–೯). ೨. ತಿಳಿವಳಿಕೆ ಯಿಲ್ಲದ ಜನ; ಪಾಮರ ಜನ: ಮಾನಿಸರೊಳ್ಪುಂ ಬಾಟುಮ[ದೇನೊ]ಪ್ಪ ಮದೇಂ . . . ದೀನಮದೇಂ ಸ್ತೋಕಸುಖಮದೇನಧ್ರುವಮೋ ಎಂದು ದೀನಜನ ದುರ್ಲಭಬುದ್ಧಿಯಪ್ಪ ಪ್ರಿಯಮಿತ್ರೆ ತನ್ನಂತರಂಗದೊಳ್ ಬಗೆದು (ಶಾಂತಿಪು. ೯–೧೦೨ ವ). [ ದೀನ + ಜನ ]

**ದೀನತನ** (ನಾ). ೧. ವಿನಯ; ನಮ್ರತೆ; ದೈನ್ಯ. ೨. ಬಡತನ; ದಾರಿದ್ರ್ಯ. ೩. ದುಃಖ; ಸಂಕಟ. ೪. ಜಿಪುಣತನ; ಲೋಭ : "ಲುಬ್ಧಿಃ, ಲುಬ್ಧಂ, ಲೋಭನಂ, ಲೋಭನೀಯಂ–ಈ ೪ ದೀನತನಂ" (ಕಾಶಕ್ಕ. ೨೦೭) ; ದೀನ ತನದಲಿ ದ್ರವ್ಯ ಗಳಿಸಬೇಡ ದೀನನಾಥನ ನೀ ಮರೆಯಬೇಡ (ಪುರಂದ. ೫–೧೧೧–೧); ಆನೆಗಂಜಿಕೆಯೇಕೆ ದಾನಿಗೆ ದೀನತನವೇಕೆ ಜ್ಞಾನಿಗೆ ಹೀನತನ ವೇಕೆ (ಸರ್ವಜ್ಞ. ೪೪೩). [ ದೀನ + – ತನ ]

**ದೀನತೆ** (ನಾ). ೧. ಕೃಶತೆ ; ದುರ್ಬಲತೆ ; ಅಶಕ್ತತೆ : ಪಗೆನೆಯ್ದಿಲ್ ನಗು ವಂತು ದೀನತೆ ದಿನಕ್ಕಪ್ಪಂತು ಕೂರ್ಪಂಬುಜಂ ಸುಗಿವಂತಾಯ್ತು ಸಖಂಗೆ ಕಾಲವಶದಿಂ ತೇಜಃಕ್ಷಯಂ (ಪುಷ್ಪಪು. ೬–೪೦). ೨. ದೈನ್ಯಭಾವನೆ ;

ವಿನಯಂ : ಕಾನನದಿ ಮಲ್ಲಿಗೆಯುಂ ಮೌನದಿಂ ಬಿರಿದು ನಿಜಸೌರಭವ ಸೂಸಿ ನಲವಿಂ ತಾನೆಲೆಯ ಪಿಂತಿರ್ದು ದೀನತೆಯ ತೋರಿ ಅಭಿಮಾನವನು ತೊರೆದು ಕೃತಕೃತ್ಯತೆಯ ಪಡೆವಂತೆ(ನಿವೇದ ೪೯-೧೧). [ ಸಂ. ದೀನತಾ ]

**ದೀನತ್ವ** (ನಾ). ಬಡತನ; **ಕಂದುಂಬಿಕೆ** : ಕನತ್ಕನಕಾಂಭೋಜನಿಭಾನನಕ್ಕೆ ಪಿರಿದುಂ ದೀನತ್ವಮಂ . . . ಚಿತ್ತಕ್ಕೆ ಸಂತಾಪಮಂ ನಿನಗಂ ಮಾಡಿದ ನಾವನಾತನೆ ವಲಂ ಗಂಧೇಭವಿದ್ಯಾಧರಂ (ಪಂಪಭಾ. ೪-೬೪). [ ಸಂ. ]

**ದೀನದನಿ** (ನಾ). ಅನುಕಂಪೆಯಿಂದ ಕೂಡಿದ ದನಿ : ಕಾಕಘೂಕಾದಿ ಗರ್ಗರರವವ ನೀಕರಿಸುವ ದೀನದನಿಯಿಂದ ಮೊಚಿಯಿಡಲೋಕರಿಸುಗು ದೆಸೆ ರವವ (ವರ್ಧಚ. ೮-೯೭). [ ದೀನ + ದನಿ₁ ]

**ದೀನದೃಷ್ಟಿ** (ನಾ). ಅನುಕಂಪನೀಯವಾದ ದೃಷ್ಟಿ ; ಅಸಹಾಯಕವಾದ **ನೋಟ** : ಅವಳು ಮಾತೆತ್ತಲಿಲ್ಲ. ದೀನದೃಷ್ಟಿಯಿಂದ ಮುದುಕಿಯನ್ನೇ ನೋಡುತ್ತಾ ಕುಳಿತಿದ್ದಳು (ಹಳ್ಳಹಾ. ೧೧೩). [ ದೀನ + ದೃಷ್ಟಿ ]

**ದೀನಪಾಲನೆ** (ನಾ). ಬಡವರನ್ನು ಕಾಪಾಡುವಿಕೆ ; **ಬಡವರ ಪಾಲನೆ** : ದೀನಪಾಲನೆಯ ಭರದಲ್ಲಿ ಜಮೀನುದಾರಿಯನ್ನೇ ಕಳೆದುಕೊಳ್ಳಬೇಕೆಂದು ಇದರರ್ಥವಲ್ಲ (ಪ್ರೇಮಾಶ್ರ. ೧೭). [ ದೀನ + ಪಾಲನೆ ]

**ದೀನಭಾವ** (ನಾ). ೧. ದೈನ್ಯಕ್ಕೆ ಒಳಗಾಗಿರುವೆನೆಂಬ ಭಾವ : ಜನಕ ರಾಜನ ಪುತ್ರಿಯೆ ತ್ವರೆಮಾಡು ತ್ವರೆಮಾಡು. ಇನ್ನು ಮೇಲೆ ನನ್ನ ಆಜ್ಞೆ ಯಿಂದ ಈ ದೀನಭಾವವಮಂ ಬಿಟ್ಟು ವೇಗದಿಂ ಬಂದು ಸಂತಾಪಹರವಾದ ಸ್ಪರ್ಶವುಳ್ಳ ನಿನ್ನ ಹಸ್ತದಿಂ ಸ್ಪರ್ಶಿಸಿ ನನ್ನ ಪುತ್ರನಾದ ಈ ರಾಮಭದ್ರನಂ ಜೀವವಂತನಂ ಮಾಡು (ಕಗವಿ. ೧೧೮ ಉತ್ತರಾ). **೨. ತೊಂದರೆ ; ಕ್ಲೇಶ ; ಕಷ್ಟ ; ಆರ್ತತೆ** : ಮುನಿರಾಜ ಸಂಸಾರಭಯದಿಂ ದೀನಭಾವವಮಂ ತಾಳ್ದಿದೆಮ್ಮನುದ್ಧರಿಸೆ ನಿಮಗಮಂತೆಯೆಂದು ತನ್ನ ಹೃದಯದ ಪರಿಚ್ಛೇದ ಮೆನೆ ನಿಲೆ ನುಡಿದು (ಚಂದ್ರಪು. ೯-೪೦ ವ). [ ದೀನ + ಭಾವ₂ ]

**ದೀನವಾಣಿ** (ನಾ). ದುಃಖದಿಂದ ಕೂಡಿದ ಸ್ವರ,-ಧ್ವನಿ : ಕಂಡವದೂ ದೂಳಿನಲಿ ಎರಡು ಕರಿತತ್ತಿ ! ಬಾಗಿದೆನ್ನಯ ಕಿವಿಗೆ ಕೇಳಿಸಿತು ಕೋಗಿಲೆಯ ದೀನವಾಣಿ (ಕೋಗಿಲೆ. ೪-೯೯). [ ದೀನ + ವಾಣಿ₁ ]

**ದೀನಸು** 'ಜಿನಸು' ನೋ.

**ದೀನಾನನ** (ನಾ). ೧. ದುಃಖದಿಂದ ಕೂಡಿದ ಮುಖ; ಬಾಡಿದ ಮುಖ. **೨.** ಬಾಡಿದ ಮುಖವುಳ್ಳವನು: ನದೀತನೂಜ ಭಾರದ್ವಾಜ ಕೃಪರವಿರಳ ಬಾಷ್ಪವಾರಿದುರ್ದಿನ ದೀನಾನನರಾಗಿರೆ (ಪಂಪಭಾ. ೩-೮ ವ).
[ ದೀನ +ಆನನ ]

**ದೀನಾರ, ದಿನಾರಂ** (ನಾ). ೧. ಪ್ರಾಚೀನ ಕಾಲದಲ್ಲಿದ್ದ ಒಂದು ಚಿನ್ನದ ನಾಣ್ಯ,-ಸುವರ್ಣದ ಒಂದು ನಾಣ್ಯ : ಪರಸೇನನೆಂಬೊಂ ಜೂದಾಡಿ ಯಕ್ಷಧೂರ್ತನೆಂಬೊಂಗೆ ಸಾಸಿರ ದೀನಾರವಮಂ ಸೋಲ್ತು ಸೋಲಮಂ ಕುಡಲಾಱದೆ ಅರಸನಾಣೆಯುಂ ಮಿಕ್ಕು ಪೋಪ[ನ್] (ವಡ್ಡಾರಾ. ೧೪-೫) ; ಒಂದು ಕೋಟಿ ದೀನಾರವುನಾ ವ್ಯಾಗನಯನೆ ಕೊಟ್ಟು ಕೊಂಡಳ್ ನೆಗಟ್ತೆವೆತ್ತಿರ್ದ ರತ್ನ ಮು ಯು ಕ ೦ ಬ ಳ ಮ ೦ (ಸುಕುಮಾ. ೧೦-೧೧೪) ; ಒಯ್ಯಿಮೆನೆ ದೀನಾರವಮಂ ದಿನಂಪ್ರತಿ ಸಾಸಿರಿಂತು ಪರ್ವ ದಿನದೊಳ್ ಪತ್ತು ಸಾಸಿರಂ ಎಂಬೀ ಗಣನೆಯಿಂ . . . ತರಿಸೆ (ನೇಮಿಪು. ೪-೫೫ ವ) ; ಮಹಮೂದನಿಗೆ ೭ ಲಕ್ಷ ಸುವರ್ಣ ದೀನಾರಗಳು . . . ೨೦೦ ಮಣ ಬಂಗಾರದ ಗಟ್ಟಿಗಳು . . . ದೊರೆತವು (ಹಿಂಮುಸ. ೨೯); ಒಂದು ದೀನಾರಕ್ಕೆ ಐವರು ಪೊಕ್ಕರಂತೆ ವ್ಯಾಪಾರವಾಯಿತು (ಭಾಇಪ್ರ. ೩೪೭). **೨.** ಚಿನ್ನದ ಆಭರಣ. **೩.** ಚಿನ್ನದ ಒಂದು ತೂಕ. **ದಿನಾರು: ೧.** ದೇವಸ್ಥಾನದಲ್ಲಿ ಸಿಕ್ಕಿದ ಸಾಮಾನುಗಳ ಬೆಲೆ ಇಪ್ಪತ್ತುಸಾವಿರ ಸಾವಿರ ದಿನಾರುಗಳಿಗಿಂತಲೂ ಹೆಚ್ಚಾಗಿತ್ತು (ಪ್ರವಾಇ. I, ೩೨೪).
[ ಸಂ. ದೀನಾರ./ಪಾರ. ದಿನಾರ್, ದಿನ್ನಾರ್ <ಗ್ರೀಕ್. ದಿನೇರಿಯಸ್ ]

**ದೀನಾರ್ಥಿ** (ನಾ). ಕಷ್ಟದಲ್ಲಿರುವ ಯಾಚಕ : ದೀನಾರ್ತ್ಥಿಗಂ ಬಡ ವರ್ಗ್ಗಂ[ದ]ಗ್ಗಿತ್ತು ಕೀರ್ತಿವಡೆದ × × × (ಶಾಇ. XX, ೬೦-೨೭ ; 1108). [ ದೀನ + ಅರ್ಥಿ₂ ]

**ದೀನಾಲಾಪ** (ನಾ). ದುಃಖದಿಂದ ಕೂಡಿದ ನುಡಿ : ಅವನಾಡಿದ ದೀನಾ ಲಾಪಗಳನ್ನು ಕೇಳಿ . . . ಸಮಾಧಾನ ಪಡಿಸಿದನು (ಕವಿಕ. ೪೦).
[ ದೀನ + ಆಲಾಪ ]

**ದೀನಾಸ್ಯೆ** (ನಾ). ದುಃಖದಿಂದ ಬಾಡಿದ ಮುಖವುಳ್ಳವಳು : ದೀನಾಸ್ಯೆ ಜನನಿ ಬಂದೆನಿತಾನುಂ ಪೊಟ್ಟಿರ್ದು ಮನೆಗೆ ಪೋದಳ್ (ಕಾದಂಪೂ. ೮೭೧).
[ ಸಂ. ದೀನಾಸ್ಯಾ ]

**ದೀನೆ** (ನಾ). ಅನುಕಂಪೆಗೆ ಅರ್ಹಳಾದವಳು : ದೀನೆಯುಂತಾದಳು ಮನ ದೊಳು ಕಸಿವಿಸಿಗೊಂಡಳು ನೊಂದಳು ಸೊರಗಿ (ಇಂಚಾಪ. ೪೩-೩).
[ ಸಂ. ದೀನಾ ]

**ದೀಪ₁**, ದೀಪು, ದೀವ₂, ದೀವಿ₁ (ನಾ). ನೀರಿನಿಂದ ಸುತ್ತುವರಿದ ಭೂಭಾಗ; **ದ್ವೀಪ**: ಮೇರುವೆ ಮಧ್ಯದೊಳ್ ನೆಲಸೆ ಸುತ್ತಿಱದಿರ್ಪುದು ಜಂಬುದೀಪಮಂ ಕ್ಷಾರಪಯೋಧಿ (ಅನಂಪು. ೧-೬೨) ; ವತ್ವಲೋಪಕ್ಕೆ – ಈಶ್ವರ – ಈಸರ . . . ದ್ವೀಪ – ದೀಪ, ದೀವಿ (ಶಮದ. ೨೮೦ ಪ್ರಯೋ); ಲಕ್ಷ್ಮಿಯವೊಲೊಪ್ಪಮನಾಳ್ದುದು ದೀಪವಮಾವಗಂ (ಬಾಧಪು. ೧-೬೪). **ದೀಪು** : ಯುರಡು ವಕೀಲರ ನೇಮಕಮಾಡಿ, ಫರಾಶೀಸರ ದೀಪಿನಲ್ಲಿ ಹುಕುಂ ಮಾಡಿ ಕಳುಹಿಸಿದರು (ರಾಜೇಂದ್ರ. ೮೦). **ದೀವ₂** : ದ್ವೀಪಂ– ದೀವಂ (ಶಮದ. ನ. ೨೯೬ ಪ್ರಯೋ). **ದೀವಿ₁** : "ದೀವಿ (ದೀಪ)– ದ್ವೀಪ" (ತದ್ಭಕೋ. ೧೯); ಮಿಸುಪುಪ್ಪುಗಡಲ ಮಧ್ಯದೊಳುದ್ದಾ ಮತೆಯುಂ ಪಡೆದೊಪ್ಪುವ ಜಂಬೂನಾಮದ ದೀವಿ ಕರಂ ನಯನಾನಂದ ಮನಿರದೊದವಿಸಿತು (ಜಯುಕಾ. ೧-೩೦) ; ಬಾವಿಯೊಳಗೆ ಕಪ್ಪೆ ಬಾಳ್ವಂತೆ ನಾವೊಂದು ದೀವಿಯೊಳಿದ್ದವರ್ಕೆಸೆ (ಭರಚ. ೨೫-೬೭) ; ಈ ಜಂಬೂ ದ್ವೀಪಕೆ ತೆಂಕಲ್ಗೆ ಲಂಕೆಯೆಂಬೊಂದು ದೀವಿಯಿರ್ಕುಂ (ಅದ್ಭುತ. ೨೮-೨೨).

ದೀಪದೀಪ, ದೀವದೀವ (**ದ್ವಿರುಕ್ತಿ**) : ದೀಪದೀಪವ ತೊಳಲಿ ಕರ್ಮ ಕಳಾಪದಲಿ ಕುದಿಕುದಿದು ನಾನಾ ರೂಪಿನಿಂದಾರ್ಜಿಸುವ ಧರ್ಮದ ಗೊಡವೆ ತಾನೇಕೆ (ಕುಮಾರಾ. ೩-೯) ; ಪೆರ್ವಡಗುಗಳಿಂ ಬಂದ ದೀವದೀವದ ಮೇಲಾದೊಡವುಗಳಂ ಬೇಹರಿಸಲ್ಗಡೆಣಿಪ ವಣಿಜರುಲಿವಬ್ಬರವಮಂ ಪಳಿಗುಂ (ಮರಾಚ. ೧೨೮-೨೫). [<ಪ್ರಾ. ದೀಪ, ದೀವ./ಸಂ. ದ್ವೀಪ]

**ದೀಪ₂** (ನಾ). ೧. ದೀವಿಗೆ ; **ಸೊಡರಂ** : ವಿನಮ್ರಕ್ಷಿತಿಚಕ್ರಂ ದೀಪ [ಪಾಠಾಂ. ಪ್ರ]ದೀಪ್ತಿ ಪ್ರತಿಹತದಿನಕೃಚ್ಚಕ್ರ ತೀವ್ರಾಂಶುಚಕ್ರಂ . . . ಇರ್ದತ್ತೊಳಪುಗದೆ ಪುರೋಪಾಂತದೊಳ್ ಚಕ್ರರತ್ನಂ (ಆದಿಪು. ೧೪-೩) ; ಅಂತು ನೋಡೆ ನೋಡೆ ಗಾಳಿ ತೀಡಿದ ದೀಪರೂಪದಂದದಿಂ ಶಾರದನೀರ ದಾಕಾರದಂದದಿಂದದೃಶ್ಯಾಕಾರನಾಗಿ (ಸು ಕು ಮಾ. ೧೦-೮ ವ) ; ದೀಪ ಮನೊಯ್ಯನಾರಿಸಿ . . . ಚಾಪಲನೇತ್ರೆಯೊರ್ವಳುಪವಲ್ಲಭನೊಳ್ ಸೊಗಸುಣ್ಮೆ ಕೂಡಿದಳ್ (ಉದ್ಭಟ. ೧೦-೧೦೪) ; ಗಿರಿಜ ಕೂರು ಹಾಕುತ್ತಿದ್ದ ದೀಪವನ್ನು ಬಾಯಿಂದ ಗಾಳಿಹಾಕಿ ಆರಿಸಿದಳು (ಪದ್ಮಸ. ೪೦). **೨. ಬೆಳಕಿನ ಕುಡಿ ; ಬೆಳಕು** : "ಬೆಳಕೆನೆ ದೀಪಂ" (ರನ್ನಕಂ. ೫).

ದೀಪ ಆರಿಸು = ದೀಪವನ್ನು ನಂದಿಸು ; ದೀಪ ಕಳೆ : ರೂಮಿನ ದೀಪ ಆರಿಸಿ ಬಾಗಿಲನ್ನು ಮುಂದೆಳೆದುಕೊಂಡು ಶೇಖರನ ಬಳಿಗೆ ಬಂದ (ದೂಬೆಟ್ಟ. ೧೫); ದೀಪ ಆರಿಸಿ ಮಲಗಿಕೊಳ್ಳಿ (ದೂಬೆಟ್ಟ. ೩೨). ದೀಪ ಉರಿಸು = ಸೊಡರನ್ನು ಬೆಳಗುವಂತೆ ಮಾಡು ; ದೀಪ ಹತ್ತಿಸು : ಪಕ್ಕನೆ ಒಳಗಿನ ಎಣ್ಣೆ ಖರ್ಚಾದರೆ, ದೇವರ ದೀಪ ಉರಿಸುವಾಗ ನೆನಪಾಗಿ, ಯಾರ್ಯಾರನ್ನೋ ಬೇಡುವ ಪ್ರಸಂಗ ಬರುತ್ತಿತ್ತಲ್ಲಾ ಎ ನಿ ಸಿ ತು (ಮರಮು. ೨೫) ; ಹೊತ್ತು ಮುಣುಗಿದ ಮೇಲೆ ಚೋಮನ ಗುಡಿಸಲಲ್ಲಿ

ದೀಪ ಉರಿಸಿದವರಿಲ್ಲ (ಜೋಮುದು. ೧೦). **ದೀಪ ಕಂತಿಸು** = ಸೊಡರನ್ನು ಆರಿಸಂ,– ನಂದಿಸಂ : ಹಳ್ಳಿಗಳಲ್ಲಿ ಏಳು, ಎಂಟು ಗಂಟೆಗೆಲ್ಲಾ ದೀಪ ಕಂತಿಸಿ ಬಿಡುತ್ತಾರೆ (ರೂಢಿ). **ದೀಪ ಕಚ್ಚಿಸು** = ಸೊಡರನ್ನು ಬೆಳಗಿಸು : ದೇವರ ಮುಂದಿನ ದೀಪ ಕಚ್ಚಿಸಿ ಕಡ್ಡಿ ಬೆಳಗು (ರೂಢಿ). **ದೀಪ ಕಚ್ಚು** = ದೀಪ ಕಚ್ಚಿಸು : ಜೋಪಾನವಾಗಿ ಮಕ್ಕಳನ್ನು ರೈಲಿಗೆ ಮುಟ್ಟಿಸಿ ದೀಪ ಕಚ್ಚ್ಯೋ ಹೊತ್ಗೆ ಬಂದು ಬಿಡ್ತೀ ಅಲ್ಲವೇನೋ (ಸಣ್ಣಕ. X, ೨೨). **ದೀಪ ಕಳೆ** = ದೀಪ ಕಂತಿಸು : ರಾಧಕ್ಕ ಅದೇ ಆಗ ಊಟ ಉಡಿಗೆ ಮುಗಿಸಿಕೊಂಡು ದೀಪ ಕಳೆದಿದ್ದರು (ಗಂಗಾಸಾ. ೪೫). **ದೀಪ ತುಂಬು** = ದೀಪ ಕಂತಿಸಂ: ಹಳ್ಳಿಯು ಜನ ಬೆಳಗಿನ ಜಾವ ಏಳುವುದರಿಂದ ರಾತ್ರಿಯು ಹೊತ್ತು ಬೇಗನೆ ದೀಪ ತುಂಬಿ ಮಲಗಿ ಬಿಡುತ್ತಾರೆ (ರೂಢಿ). **ದೀಪ ತೆಗೆ** = ದೀಪ ಕಂತಿಸು : ಮಲಗುವ ಮುಂಚೆ ದೀಪ ತೆಗೆದು ಮಲಗು (ರೂಢಿ). **ದೀಪದ ಎಣ್ಣೆ, ದೀಪದೆಣ್ಣೆ** = ೧. ದೀಪಕ್ಕೆ ಬಳಸುವ ಹಿಪ್ಪೆ ಎಣ್ಣೆ, ಹರಳೆಣ್ಣೆ, ಹೊಂಗೆಯೆಣ್ಣೆ ಮುಂತಾದಂವು : 'ನೀವು ಕೊಡುವುದೇಕೆ–ಕಳೆದ ವರ್ಷದಿಂದ ದೀಪದ ಎಣ್ಣೆಯಿಂದ ಹಿಡಿದು ಪ್ರತಿಯೊಂದಕ್ಕೂ ನಾನು ಕೊಡುತಿದ್ದೇನಲ್ಲ' ಎಂದರು (ಮರಮ. ೨೩೩) ; ಸಂತೆಗೆ ಹೋಗಿ ದೀಪದ ಎಣ್ಣೆ ತರಬೇಕು (ರೂಢಿ). **೨.** ಸೀಮೆಎಣ್ಣೆ : "(ಪೆಟ್ರೋಲಿಯಂ, ಕಲ್ಲಿದ್ದಲು, ಪ್ಯಾರಫಿನ್, ಮೊ. ಗಳಿಂದ ಬಟ್ಟಿಯಿಳಿಸಿ ತೆಗೆದ) ದೀಪದೆಣ್ಣೆ; ಕೆರೋಸೀನ್ ಎಣ್ಣೆ ; ಸೀಮೆಯೆಣ್ಣೆ" (Kerosene. ಇಂಕನಿ). **ದೀಪದ ಕಂಭ, ದೀಪದ ಕಂಬ** = ದೀಪಕಂಭ ೧ : ಬೆಸ್ತರು ದೀವಟಿಗೆಯವರು ದೀಪದ ಕಂಭದವರು ಇವರಿಗೆಲ್ಲಾ ಗೊತ್ತುಗಾರರನ್ನೂ ಶಾನುಭೋಗರನ್ನೂ ನೇಮಿಸಿದರು (ಚಾಮುವಂ. ೧೦–೧೩೭) ; ನನ್ನ ಹಾಡನ್ನು ಯಾರು ಕೇಳುತ್ತಾರೆ! ಬಡಹಳ್ಳಿಗಳು, ಗಿಡಬಳ್ಳಿಗಳು, ದೀಪದ ಕಂಬಗಳು (ಹುಚ್ಚುಹು. ೧೭). **ದೀಪದ ಕಡ್ಡಿ** = ಸೊಡರನ್ನು ಹಚ್ಚುವ ಕಡ್ಡಿ ; ಬೆಂಕಿಕಡ್ಡಿ : ಸದರಿ ಮದ್ದಿನ ಜೀನಸುಗಳು ಮತ್ತು ದೀಪದ ಕಡ್ಡಿಗಳು ... ಎರಡು ದಿವಸ ಮಾತ್ರ ರೇಲ್ವೆದವರು ಏರಿಸುತ್ತಾರೆ (ಮುಂಬವ್ಯಾ. ೨೨೦). **ದೀಪದ ಕುಡಿ** = ದೀವಿಗೆಯಂ ಜ್ವಾಲೆ,– ಶಿಖೆ : ಉರಿಯುವ ಬತ್ತಿಯ ತುದಿಯಲ್ಲಿ ಕರಿ ಕಟ್ಟಿಕೊಂಡರೆ ಅದನ್ನು ತೊಡೆದು ಹಾಕಿ ದೀಪದ ಕುಡಿ ಮತ್ತಷ್ಟು ಉಜ್ವಲವಾಗಿ ತೊಳಗಿ ಬೆಳಗಲೆಸಗುವಂತೆ (ಕಾನೂರು. ೬೩೨) ; ದೀಪದ ಕುಡಿಯನ್ನು ಸ್ವಲ್ಪ ದೊಡ್ಡದು ಮಾಡು (ರೂಢಿ). **ದೀಪದ ಪೆಟ್ಟಿಗೆ** = ಸೊಡರನ್ನು ಹೊತ್ತಿಸುವ ಕಡ್ಡಿಗಳ ಪೆಟ್ಟಿಗೆ ; ಬೆಂಕಿಪೊಟ್ಟಣ : ಮದ್ದಿನ ಜೀನಸು ಪಟಾಕ್ಷಿ ಮತ್ತು ಫಾಯಿರ್ ಬಾಕ್ಷ ಅಂದರೆ ದೀಪದ ಪೆಟ್ಟಿಗೆ (ಮುಂಬವ್ಯಾ. ೩೮ ಪ್ರಸ್ತಾವನೆ). **ದೀಪದ ಮಲ್ಲಿ** = ಎರಡುಂ ಕೈಗಳಲ್ಲಿಯೂ ಹಣತೆಗಳನ್ನು ಹಿಡಿದಿರಂವ ಹೆಂಗಸಿನ ಲೋಹದ ವಿಗ್ರಹ; P ದೇವತಾವಿಗ್ರಹದ ಎರಡೂ ಪಕ್ಕಗಳಲ್ಲಿಯೂ ಇಂತಹ ಎರಡು ಪ್ರತಿಬಿಂಬಗಳನ್ನು ಇರಿಸುವುದಂಟುಂ : ಎಲೆಲೆ! ದೀಪದ ಮಲ್ಲಿ, ಎದೆಯು ಕತ್ತಲೆಯಲ್ಲಿ ಪದುಮದೀಪವ ಹಿಡಿದು ಬಾಗಿ ನಿಂತು ಕವಿಗಿನಿತೆ ಬೆಳಕಿಲ್ಲಿ ಎಂಬ ಕಿರುನಗೆಯಲ್ಲಿ (ದೀಪಮ. ೧೯–೧); ಕಲ್ಲಾಗಿ ನಿಂತಿರುವ ಹೆಣ್ಣು, ದೀಪದ ಮಲ್ಲಿ ಬಿಲ್ಲುಬಾಣವ ತೊಟ್ಟು ಹೊರಟವನ ಗುರಿಯೆಲ್ಲಿ ? (ನೆಲಮು. ೬೨–೧೩). **ದೀಪದ ಮಾರಾಯಿ** = ಒಂದುಂ ಕ್ಷುದ್ರ ದೇವತೆಯು ಹೆಸರಂ: ಕೊಳ್ಳಿ ಪಚ್ಚಿಸಿಕೊಂಬ ದೀಪದ ಮಾರಾಯಿ ಎಲ್ಲರು ದಾಟುವ ಹೊಸ್ತಲು . . . ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು (ವಿಸಾಸು. ೫೮–೨). **ದೀಪದ ಮೊಗ್ಗು** = ಬೆಳಕಿನ ಕುಡಿ : ಇರುಳೆದೆಯು ಪದಕದಂತುರಿವ ದೀಪದ ಮೊಗ್ಗು ತಲೆದೂಗಿ ತೆಪ್ಪಗಾಯಿತು (ದೀಪಮ. ೪೫–೩);ದೀಪದ ಮೊಗ್ಗನ್ನು ಸ್ವಲ್ಪ ದೊಡ್ಡದು ಮಾಡು (ರೂಢಿ). **ದೀಪದ ಹುಳು** = ಸೊಡರಿನಿಂದ ಆಕರ್ಷಿತವಾಗುಂವ ರೆಕ್ಕೆಯಂ ಹುಳುಂ ; ಪತಂಗ : ಗರ್ಭಗುಡಿಯುಲಿ ಪಣತಿ ಉರಿದಿದೆ ನಿರಾತಂಕ ಬಂದು ಬಡಿದರು ನೂರು ದೀಪದ ಹುಳು ! (ದೀಪಧಾ. ೩೮–೫) ; ದೀಪದ ಹುಳುಗಳು ಹೆಚ್ಚಾಗಿದೆಯಾದ್ದರಿಂದ ಇಂದು ಮಳೆ ಖಂಡಿತಾ ಬರುತ್ತದೆ (ರೂಢಿ). **ದೀಪ ದೊಡ್ಡದು ಮಾಡು** = ೧. ಸೊಡರಿನಿಂದ ಪ್ರಕಾಶವನ್ನು ಹೆಚ್ಚುಮಾಡು: 'ಏನು ? ಏನು ?' ಎಂದು ಕೇಳುತ್ತ ಸೀತಮ್ಮ ದೀಪ ದೊಡ್ಡದು ಮಾಡಿ ಎದ್ದರು (ಬಾಳಗಿ. ೧೨೦); ದೀಪ ದೊಡ್ಡದು ಮಾಡಿ ಆಕೆಯ ಹಾಸಿಗೆಯನ್ನು ತಾನೇ ಪಡಸಾಲೆಗೆ ತಂದು . . . "ಇನ್ನು ಭಯವಿಲ್ಲ ಮಲಗು" ಎಂದರು (ದೇವಹಂ. ೧೦೧). **೨.** ಸೊಡರನ್ನು ಆರಿಸಂ,–ನಂದಿಸಂ : ಆ ರಾತ್ರಿ ಅಪೂರ್ವ ದೀಪ ದೊಡ್ಡದು ಮಾಡಿ ಮಲಗಿದನು (ಇಪ್ಪಕ. ೫೮) ; ದೀಪ ದೊಡ್ಡದು ಮಾಡಿ ಮಲಗು (ರೂಢಿ). **ದೀಪ ಬೆಳಸು** = (ವಂಶದ ವಿಷಯದಲ್ಲಿ) ಅಭಿವೃದ್ಧಿ ಪಡಿಸು; ಏಳಿಗೆ ಹೊಂದುವಂತೆ ಮಾಡಂ : ನೀನೇ ಮನೆಬಿಟ್ಟು ಹೋದರೆ ಇಲ್ಲಿ ದೀಪ ಬೆಳಸೋರು ಯಾರು? (ಜೀಉಮ. ೨೩೦). **ದೀಪ ಮಾಡು** = ಬೆಳಕು ಮಾಡು : ಮೆಲ್ಲನೆ ಪಕ್ಕದಲ್ಲಿದ್ದ ಜಿಗ್ಗು ಒಟ್ಟಿ ಜ್ವಾಲೆ ಹೊಮ್ಮುವಂತೆ ಮಾಡಿ, ತೊರಂಗಲ ಎಣ್ಣೆ ಹಾಕಿದ್ದ ಹಣತೆಯ ಬತ್ತಿಯನ್ನು ಹೊತ್ತಿಸಿ ದೀಪ ಮಾಡಿದನು (ಮಲೆಮ. ೨೦೯). **ದೀಪ ಮುಟ್ಟಿಸು** = ಸೊಡರನ್ನು ಹತ್ತಿಸಂ : ಸಂಜೆಯಾಯಿತು. ದೀಪ ಮುಟ್ಟಿಸಿ ಓದಲು ಕುಳಿತುಕೋ (ರೂಢಿ). **ದೀಪವನೆತ್ತು** = ಆರತಿಮಾಡಂ : ನಿನಗೆ ಧೂಪವನಿಕ್ಕುವಲ್ಲಿ ನಾ ಭಾವಿ ನೀ ನಿರ್ಭಾವಿ ನಿನಗೆ ದೀಪವನೆತ್ತುವಲ್ಲಿ ನಾ ಜ್ಯೋತಿ ನೀನು ಬೆಳಗು (ಮೋಳಿಮಾ. ೩೬–೧೫೧). **ದೀಪವುರಿ, ದೀಪ ಉರಿ** = ಸೊಡರಂ ಬೆಳಗಂ: ನೀರಡಿಕೆಯ ದೀಪವುರಿಯುತಿದೆ ಕವಿತೆಯ ತುಟಿಯಲಿ ಸಣ್ಣಗೆ (ಶಿಲಾಲ. ೪೨–೪) ; ಒಂದೊಂದು ಸಾರಿ ರಾತ್ರಿ ಎರಡು ಅಥವಾ ಮೂರು ಗಂಟೆಯವರೆಗೂ ಅವನ ಕೊಠಡಿಯಲ್ಲಿ ದೀಪವುರಿಯುತ್ತಿತ್ತು (ಕಾನೂರು. ೫೩೦) ; ತನ್ನ ಮರವೆಯಿಂದ, ಮನೆಯ ದೀಪ ಉರಿಯದಂತಾಗುತ್ತಿತ್ತಲ್ಲ (ಮರಮ. ೨೫). **ದೀಪ ಹಚ್ಚಿಸು** = ದೀಪ ಕಚ್ಚಿಸಂ : ರಾತ್ರಿ ಒಂದು ಹೊತ್ತಿನಲ್ಲಿ . . . ದೀಪ ಹಚ್ಚಿಸಿ ನೋಡುತ್ತಾಳೆ—ಮೂರು ಗಂಟೆ (ತಾಯಿಕ. ೮೩). **ದೀಪ ಹಚ್ಚು** = ೧. ಸೊಡರು ಬೆಳಗಂ: ತುಪ್ಪದೊಳ್ಬೆರೆಸಿದ ಮೂಱು ಬತ್ತಿಯನಿಟ್ಟು ಒಪ್ಪುವ ದೀಪಕೆ ದೀಪ ಹಚ್ಚಿತಪ್ಪದೆ ಸಕಲ ಪಾಪಗಳ ಸಂಹರಿಸುವ ಅಪ್ಪ ವಿಠಲನ ಪಾದಕ್ಕೆ ಬೆಳಗುವ (ಪುರಂದ. ೧–೨೨೭–೨) ; ಹೊಲೆ ಕಳೆದ ಮೇಲೆ ಸಮಿಾಪ ಹೋಗಬಹುದು ; ದೀಪ ಹಚ್ಚಬಹುದು (ಕುಡಿಕೂ. ೧೭); ತುಟೀ ಮೇಲೆ ದೀಪ ಹಚ್ಚಿದ ಹಾಗೆ (ಗಾದೆ). **೨.** = ದೀಪ ಬೆಳಸು : ನಮ್ಮ ಮನೆ ದೀಪ ಹಚ್ಚಿದೋರು ನೀವು (ಚಂದಕೋ. ೨೧೫). **ದೀಪ ಹತ್ತಿಕೊಳ್ಳು** = ಸೊಡರು ಬೆಳಗು : 'ಇಂಟರ್‌ವಲ್'ನಲ್ಲಿ ದೀಪ ಹತ್ತಿಕೊಂಡಿತು (ದೂಬಟ್ಟ. ೧೦೮). **ದೀಪ ಹಾಕು** = ದೀಪ ಹೊತ್ತಿಸು : ವಿಮಲೆ ಕೂಗಿಕೊಂಡು ದಿಗ್ಗನೆ ಎದ್ದಳು-ದೀಪ ಹಾಕಿದಳು (ಬದುಚ್ಕ. ೧೪೦). **ದೀಪ ಹೊತ್ತಿಸು** = ಸೊಡರನ್ನು ಬೆಳಗಿಸಂ: ಸರೋಜ ದೀಪ ಹೊತ್ತಿಸಿ, ಒಲೆ ಹಚ್ಚಲು ಅಡಿಗೆಯ ಮನೆಗೆ ಹೋದಳು (ತಾಯಿಕ. ೨೮೨). [ ಸಂ. ]

**ದೀಪ$_3$** (ನಾ). (?) : ದೀಪದ ನಿಂದ್ರುವಾರುಣಿಯ ಪಣ್ಣೊಳೆ ತೀವುಗೆ ಪಾರದಾಖ್ಯಮುಂ ದೀಪದಿನ ಪ್ರಸಿದ್ಧಿಯೊಳೆ ಪನ್ನೆರಡಪ್ಪ ದಿನಂಗಳಿರ್ದುದಂ ಲೋಪಮದಾಗದಂತಿರೆ ಸುರಕ್ಷಿತಮಾದುದಱೊಂದೆ ಬೀಜ ನಿಷ್ಪಾಪಮ ನಿಟ್ಟು ನೀಂ ಗಣಕೆಯುಗ್ರದೊಳಂ ತಿಳಿಪಲ್ಕಮಾಕ್ಷಣಂ (ಖಮದ. ೧೧–೪೭) ; ದೀಪದೆ ನಂಬಿರಲ್ಕಿದಱ ನಾಲ್ಕುದಿನಂಗಳೊಳಲ್ಲದಂದು ನಿಷ್ಪಾಪನೆಯಾದೊಡಂ ಗ್ರಹಣದಂದನುರಾಗದೆ ತಂದು ಮೌನಿ ನಿಷ್ಪಾಪಮೆನಿಪ್ಪ ಬಂಜೆ ಮಡುವಾಗಲ ಗೆಡ್ಡೆಯನಂತೆ ಸಣ್ಣಿಸಲ್ ತಾಪಿತ ತಾಮ್ರದೊಳ್ತಗಡನದ್ದುಗೆ ಕಾಸುಗೆಯಂತದಱೊಳ್ (ಖಮದ. ೧೬–೧೪೪). [ ? ]

**ದೀಪಕ** (ಗುಂ). ೧. ಪ್ರಕಾಶಗೊಳಿಸುಂವ ; ಬೆಳಗುಂವ. ೨. ಅಂದಗೊಳಿಸುವ ; ಸೊಗಸುಗೊಳಿಸುಂವ. ೩. ಉದ್ರೇಕಿಸುಂವ ; ಉತ್ತೇಜಿಸುವ. ೪. ಪಚನಕ್ರಿಯೆಯನ್ನು ಹೆಚ್ಚಿಸುವ ; ಪಾಚಕ. (ನಾ). ೫. ದೀಪ ; ದೀವಿಗೆ. ೬. ಉರಿಯುಂವ ಅನಿಲದ ದೀಪಗಳಲ್ಲಿ

ಜ್ವಾಲೆಗೆ ಆಕಾರವನ್ನು ಕೊಡುವ ಭಾಗ ; ಜ್ವಾಲಕ : ದೀಪಕದ (Burner) ಮೇಲೆ ಚಿಮಣಿಯನ್ನು ಹಾಕುವುದೂ ಇದೇ ಉದ್ದೇಶದಿಂದ (ಭೌತವಿ. ೨೯೪). ೭. ಬೆಳಕನ್ನು ಉಂಟುಮಾಡುವಿಕೆ; ದೀಪ ಹೊತ್ತಿಸುವುದು. ೮. ವಿವರಣೆ; ವರ್ಣನೆ. 'ವಾಕ್ಯದೀಪಕ' ಪರಾ. ೯. [ಸಂಗೀತ] ಒಂದು ರಾಗದ ಹೆಸರು; ಈ ರಾಗವನ್ನು ಹಾಡಿದರೆ ಜ್ಯೋತಿಗಳು ತಾವಾಗಿ ಹತ್ತಿಕೊಳ್ಳುತ್ತವೆ ಎಂಬ ನಂಬಿಕೆ ಇದೆ: ಗುಂಡಕ್ರಿಯಾ ಮತ್ತು ಶ್ರೀರಾಗಗಳು ಕಲ್ಲನ್ನು ಕರಗಿಸುವುದು ... ದೀಪಕರಾಗವು ಬೆಂಕಿ ಹತ್ತಿಸುವುದು . . . ಮುಂತಾದ ಭಾವನೆಗಳೂ ಅದರ ಕಥೆಗಳೂ ಇವೆ (ಭಾರಡ. ೫೪೪); ತಮ್ಮ ಗಾಯನವೈಖರಿಯಿಂದ 'ದೀಪಕ' ರಾಗ ಹಾಡಿ ಜ್ಯೋತಿ ಬೆಳಗುವಂತೆಯೂ . . . ಮಾಡಿದ ತಾನ್‌ಸೇನರ ಕಥೆಗಳನ್ನು ಕೇಳದವರಿಲ್ಲ (ಸಂಗೀಚಂ. ೨೦೩). ೧೦. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು; ಪ್ರಸ್ತುತ ಮತ್ತು ಅಪ್ರಸ್ತುತ ವಸ್ತುಗಳಲ್ಲಿ ಒಂದೇ ಧರ್ಮವಿದೆ ಎಂದು ವರ್ಣಿಸುವುದು: ಜಾತಿಕ್ರಿಯಾಗುಣದ್ರವ್ಯಾತಿಶಯಯಿವಿಶೇಷಿಯಪ್ಪ ಪದಮೊರ್ಬುಳಿ ನಿಂದೀ ತೆಱದಿನುಟಿದ ಕಾವ್ಯಸಮೇತಿಗಮುಪಕಾರ ಯೋಗ್ಯ ದೀಪಕಮಕ್ಕುಂ (ಕವಿರಾ. ೩-೫೩); ವರ್ಣ್ಯಮಾದ ವಸ್ತು ಗಮವರ್ಣ್ಯಮಾದ ವಸ್ತುಗಮೊಂದು ಧರ್ಮಮನ್ವಿತಮಪ್ಪಂತೆ ಪೇೞ್ವುದು ದೀಪಕಮೆನಿಪುದು (ಅಪ್ರತಿ. ೫೭-೨). ೧೧. [ನಾಟ್ಯ] ಒಂದು ಬಗೆಯ ನೃತ್ಯ. 'ದೀಪಕನೃತ್ಯ' ಪರಾ. [ಸಂ.]

**ದೀಪಕಂಬ** 'ದೀಪಕಂಭ' ನೋ.

**ದೀಪಕಂಭ,** ದೀಪಕಂಬ (ನಾ). ೧. ಸೊಡರುಗಳನ್ನು ಹೊಂದಿಸಿ ಮಾಡಿದ ಲೋಹ ಮುಂತಾದ ಕಂಬ: ಸಲೆ ಪದಕಮಂ ಮಾೞ್ಪ ಸತಿ ದೀವಳಿಗೆಯಲು ಹೊಸ ದೀಪಕಂಭಂ[ಪಾಠಾಂ. ಬಂ]ಗಳನುಮಾ ರಮಣಂಗೆ ಮಾಡಿಸಿ ಎತ್ತಿಸಿದಳಲ್ಲ (ಬಸವು. ೪೨-೧೨). ೨. ದೀಪದ ಹಣತೆಯನ್ನಿಡಲು ಮಾಡಿದ ಮರದ ಕಂಬ. 'ತಾಣದೀವಿಗೆ' ಪರಾ. **ದೀಪಕಂಬ :** ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ದೀಪ₂ + ಕಂಭ]

**ದೀಪಕಣಗಿಲು** (ನಾ). ಒಂದು ಬಗೆಯ ಕಣಿಗಿಲು ಗಿಡ ಮತ್ತು ಅದರ ಹೂವು: ಊರ ಮುಂದೆ ಒಂದು ದೊಡ್ಡ ಕೊಣ. ಕೊಣದ ಸುತ್ತು ದೀಪಕಣಗಿಲು ಹೂವಿನ ಒಂದೆರಡು ಮರಗಳು (ನನ್ನೂರು. ೭).

[< ದೇವಗಣಗಿಲು]

**ದೀಪಕನೃತ್ಯ** (ನಾ). [ನಾಟ್ಯ] ಭಕ್ತಿರಸಪೂರ್ಣವಾದ ಜಾನಪದಗೀತೆ ಹಾಗೂ ಕೆಲವು ವಾದ್ಯಗಳೊಂದಿಗೆ ಸಾಗುವ ಒಂದು ಬಗೆಯ ನೃತ್ಯ: ಮಹಾರಾಷ್ಟ್ರದ ಕೊಂಚ ಮುಂದುವರಿದ ಜನತೆಯದೆನ್ನಲಾದ ನೃತ್ಯಗಳಲ್ಲಿ ದೀಪಕನೃತ್ಯ ಹೆಚ್ಚು ಪ್ರಚಾರದಲ್ಲಿದೆ (ಭಾರಜಾ. ೧೧೨).

[ದೀಪಕ + ನೃತ್ಯ]

**ದೀಪಕಲಿಕೆ,** ದೀಪಕಳಿಕೆ (ನಾ). ದೀಪದ ಕುಡಿ,-ಶಿಖೆ: ಲಲನಾನಿಕಾಯ ನಿವಳಿತ ನೀರಾಜನ ದೀಪಕಲಿ[ಪಾಠಾಂ. ಳಿ]ಕಾ ಪ್ರತಿಫಳಿತಮೌಳಿ ಮಾಣಿಕ್ಯನುಂ . . . ಆಗಿ (ಚಂದ್ರಪು. ೮-೨೪ ವ). **ದೀಪಕಳಿಕೆ :** ನೀರಾಜನ ದೀಪಕಳಿಕಾ ಶ್ರೇಣೀಶೋಣಾಂಶು ಬಾಲಾತಪಪ್ರಸರಪಿಶಂಗಮುಂ (ಜಗವಿ. ೪-೮೨ ವ); ಅಱಿವೆಂಬ ದೀಪಕಳಿಕೆಗೆ ಬಿಱುಗಾಳಿ ಗುತೊದ? ಬಣಬೆಗೆ ಕಿಡಿ ಪೆರ್ಮಱವೆಯ್ಯುಮೆಯ್ಸಿರಿ ಪಾತಕದೆಱಿದಿಟ್ಟಪಯಸದ ಬೆಟ್ಟು ಕಾಮನ ಕೆಯ್ತಾಂ (ಶಾಂತೀಶ್ವ. ೩-೬೨); ಕಂತುರಾಜನ ಸಮ್ಮೋಹದೀಪಕಳಿಕೆಯಂತೆ ಕಮನೀಯಕಾಯಕಾಂತಿಸಂತತಿಯಿಂದುಜ್ವಳಿಸುತ್ತುಮಿರ್ದ . . . ಶೃಂಗಾರ ವತೀ ದೇವಿಯಂ ಕಂಡು (ಬಾಘಪು. ೧೧-೮೭ ವ).

[ದೀಪ₂ + ಕಲಿಕೆ₂]

**ದೀಪಕಳಾಪ** (ನಾ). ಸೊಡರುಗಳ ಸಮೂಹ,-ಗುಂಪು: ದೀಪಕಳಾಪಮಂ ತಳೆದು ಬಾಲಿಕೆಯರ್ಬರೆ ಸುತ್ತಿ ಮುತ್ತಿ ತಾರಾಪತಿ ತಾರೆಗಳ್ವೆರಸು ಮಂದರಮಂ ಬಲಗೊಳ್ವ ಮಾಟ್ಕೆಯಿಂ . . . ಅದೇಂ ಬಲಗೊಂಡನೊ ಭಕ್ತಿಪೂರ್ವಕಂ (ಪಂರಾಮಾ. ೬-೨೭). [ದೀಪ₂ + ಕಳಾಪ (= ಕಲಾಪ₂)]

**ದೀಪಕಳಿಕೆ** 'ದೀಪಕಲಿಕೆ' ನೋ.

**ದೀಪಕಾಲಂಕಾರ** (ನಾ). = ದೀಪಕ ೧೦: ಪಾರ್ವರ್ ಪಳನುಡಿವುರುಳಂ ಪೆರ್ವಲೆಯಂ ಪರದರೊಕ್ಕಲಿಗರನುಮೆಳಸಂ ಪರ್ವಿದ ಸೈಪಿನ ದೊರೆಗಳ್ ಸಾರ್ವರ್ ಚಿಕದೇವರಾಯನಡಿದಾವರೆಯಂ ಇದಱೊಳ್ 'ದೊರೆಗಳ್ ಚಿಕದೇವರಾಯನಡಿಯಂ ಸಾರ್ವರ್.' ಎಂಬ ವರ್ಣ್ಯಮಾದರ್ಥಮಂ ಅವರ್ಣ್ಯರಾದ ಪಾರ್ವರ್ ಮುಂತಾದವಱೊಳನ್ವಿತಮಾಗಿ ಪೇೞ್ದುದಱಿಂ ದೀಪಕಾಲಂಕಾರಂ (ಅಪ್ರತಿ. ೫೮-೮); ಪ್ರಸ್ತುತ ಮತ್ತು ಅಪ್ರಸ್ತುತ ವಸ್ತುಗಳಲ್ಲಿ ಒಂದೇ ಧರ್ಮವಿದೆ ಎಂದು ವರ್ಣಿಸಿದರೆ ಅದು ದೀಪಕಾಲಂಕಾರವಾಗುತ್ತದೆ (ಕೈಪಿಡಿ. ೨೬೧). [ದೀಪಕ + ಅಲಂಕಾರ]

**ದೀಪತೋರಣ** (ನಾ). ದೀಪಗಳ ಮಾಲೆ,-ತೋರಣ: ಮನೆಮನೆಯ ಮೇಲೆ ಗೋಪುರದ ಭುವನೇಶ್ವರಿಯ ಪರಿಜನಾವರಿಸಿ ಝಗಝಗಿಸಿದುವು, ಮಳೆಬಿಲ್ಲಿನೋಕುಳಿಯನೆರಚಿ, ಬಣ್ಣ ಬಣ್ಣದ ದೀಪತೋರಣಂ (ಶ್ರೀರಾಮಾ. ೪೪೮-೮೩). [ದೀಪ₂ + ತೋರಣ]

**ದೀಪದಾನ** (ನಾ). ೧. ದುರ್ದಾನಗಳಲ್ಲಿ ಒಂದು; ಉತ್ತರಕ್ರಿಯೆಯ ಸಂದರ್ಭದಲ್ಲಿ ಮಾಡುವ ಒಂದು ಬಗೆಯ ದಾನ. ೨. ಮಲೆನಾಡಿನಲ್ಲಿ ಪ್ರಚಲಿತವಿರುವ ಒಂದು ಪದ್ಧತಿ; ಪರಸ್ಥಳದಿಂದ ಬಂದು ಮನೆ ಮನೆಗಳಿಗೆ ದೀಪವನ್ನು ಹಚ್ಚಿಕೊಟ್ಟು ಹೋಗುವ ಪದ್ಧತಿ.

[ದೀಪ₂ + ದಾನ]

**ದೀಪದಾನಿ** (ನಾ). ಬೆಳಕನ್ನು ದಾನಮಾಡಿದವನು : ದಾರಿಗಾಣದ ಕಣ್ಗೆ ಹೆದ್ದಾರಿಯಾಗಿದ್ದೆ ಓ ಕವೀಂದ್ರ ! ಆಧುನಿಕನಿಗೆ ಗುರುವು, ನವ್ಯಕಗೆ ದೀಪದಾನಿ ಓ ಋಷೀಂದ್ರ (ಚಂತನ. ೭೦-೫). [ಸಂ. ದೀಪದಾನಿನ್]

**ದೀಪದಿನ** (ನಾ). ಶಂಕ್ಲಪಕ್ಷ: ದೀಪದ ನಿಂದ್ರವಾರುಣಿಯ ಪಣ್ಣೊಳೆ ತೀವುಗೆ ಪಾರದಾಖ್ಯಮಂ ದೀಪದಿನಪ್ರಸಿದ್ಧಿಯೊಳೆ ಪನ್ನೆರಡಪ್ಪ ದಿನಂಗಳಿರ್ದಾದಂ ಲೋಪಮದಾಗದಂತಿರೆ ಸುರಕ್ಷಿತಮಾದುದಱೊಂದೆ ಬೀಜ ನಿಷ್ಪಾಪಮ ನಿಟ್ಟು ನೀಂ ಗಣಕೆಯಗ್ರದೊಳಂ ತಿಳಿಪಲ್ಕಮಾಕ್ಷಣಂ (ಖಮದ. ೧೧-೪೭).

[ದೀಪ₂ + ದಿನ]

**ದೀಪದ್ಯುತಿ** (ನಾ). ದೀವಿಗೆಯ ಪ್ರಕಾಶ,-ಕಾಂತಿ: ರತಿನಾಟಕಾಭಿನಯಮಂ ಕೃತಕೃತ್ಯಂ ಮಾಡಿ ರಯ್ಯಮಾಗಿರೆ ದೀಪದ್ಯುತಿ ಯುವತಿಯರೊಳ್ ನಿದ್ರಾವತಾರವಾದತ್ತು ಮೂಡವೆಳಗಪ್ಪಾಗಳ್ (ಜಗವಿ. ೧೭-೧೩೭).

[ದೀಪ₂ + ದ್ಯುತಿ]

**ದೀಪದ್ರಾಕ್ಷಿ** (ನಾ). = ದೀಪದ್ರಾಕ್ಷೆ ೧ : "ಪಟಕಾ – ದೀಪದ್ರಾಕ್ಷಿ, ಚವ್ಯ" (ಓಷಧಿ. ೯೧). [ದೀಪ₁ + ದ್ರಾಕ್ಷಿ]

**ದೀಪದ್ರಾಕ್ಷೆ** (ನಾ). ೧. ಒಣಗಿದ ದ್ರಾಕ್ಷಿಹಣ್ಣು: (+). ೨. ಒಂದು ಬಗೆಯ ದ್ರಾಕ್ಷಿಯ ಬಳ್ಳಿ: "ಅಮೃತಾ–ಅಮರದುವಳ್ಳಿ . . . ಮದ್ಯ, ದೀಪದ್ರಾಕ್ಷೆ. . . ಕೋಟಿಕುಟುಮ"(ಓಷಧಿ. ೪); ಕಳಿತ ಬಾಳೆಯ ಹಣ್ಣು ಖರ್ಜೂರದ ತನಿವಣ್ಣು . . . ದೀಪದ್ರಾಕ್ಷೆಗಳ ಹಣ್ಣನೊಂದಾಗಿ ಕೂಡಿ ತುಪ್ಪದೊಳು ಕಲಸಿ (ಸೂಪಶಾ. ೧-೩೦). [ದೀಪ₁ + ದ್ರಾಕ್ಷೆ]

**ದೀಪಧಾರಿ** (ನಾ). ಕೈಯಲ್ಲಿ ಸೊಡರನ್ನು ಹಿಡಿದು ಮುಂದೆ ಹೋಗುವವನು; ಬೆಳಕನ್ನು ತೋರುವವನು: ಹಗಲು ಸತತೋದ್ಯೋಗಿ, ಇರುಳಂ ಕಿಂದರಜೋಗಿ ನಿದ್ದೆ ಎಲ್ಲೊ ಯಕ್ಷಲೋಕಸಂಚಾರಿ, ಇವನೆಳೆಯ ಕಂಗಳಲಿ ಹೊಳೆವ ತಿಂಗಳ ಬೆಳಕು ದಿನದ ದಾರಿಯೊಳೆಮಗೆ ದೀಪಧಾರಿ (ದೀಪಧಾ. ೫೮-೧೭). [ಸಂ. ದೀಪಧಾರಿನ್]

**ದೀಪಧ್ವಜ** (ನಾ). ದೀಪದ ಕಂಬ: ಕೋ[ಟೆ]ಯು ದೀಪಧ್ವಜ [ತಾಂ] ಸೀಗಿರಿ ದಾರಿಸುವೆ × × × [ಜ]ಗದೇಕದೀಪಂ ಕಳಂ ಬಲದ ಸಲೆ ಕಟ್ಟಿರೆಂಬಂ ದಾಗದು [ಮೆ] ಸಿಡಿವ ಮನ್ನಣೆಯ ಬೆಳ್ಳಿಯ ಬಟ್ಟಲ ತಂಬುಲಂ ಜಯಂಗೊ × ಪಡೆದಂ (ಸೌಇಇ. XX, ೩೦-೮ ; 1044).

[ ದೀಪ₂ + ಧ್ವಜ ]

**ದೀಪನ** (ಗು). ೧. ಪ್ರಕಾಶಗೊಳಿಸುವ ; ಹೊತ್ತಿಸುವ ; ಉದ್ದೀಪನ ಗೊಳಿಸುವ. ೨. ಜೀರ್ಣಶಕ್ತಿಯನ್ನು ಹೆಚ್ಚು ಮಾಡುವ ; ಜೀರ್ಣ ಗೊಳಿಸುವ. (ನಾ). ೩. ಹೊತ್ತಿಸುವುದು ; ಉರಿಯುವಂತೆ ಮಾಡುವುದು ; ಪ್ರಕಾಶಗೊಳಿಸುವಿಕೆ : ಒಂದೊಂದು ಅರ್ಥದಿಂದ ದೀಪನಗೊಂಡಿದೆ (ಚಿತ್ರಸ್ವ. ೧೨ ಮುನ್ನುಡಿ). ೪. ಜೀರ್ಣಶಕ್ತಿಯನ್ನು ಹೆಚ್ಚಿಸುವಿಕೆ : ಲಂಘನವು ದೀಪನ ಪಾಚನಗಳನ್ನುಂಟು ಮಾಡಿ . . . ಜ್ವರ ಶ್ಲೇಷ್ಮ ಮುಂತಾದ ವ್ಯಾಧಿಗಳನ್ನು . . . ಪರಿಹರಿಸುವುದು (ಸಕವೈ. ೨೮). [ ಸಂ. ]

**ದೀಪನಗವಳ** (ನಾ). (ಕಾಮವನ್ನು) ಉದ್ದೀಪನಗೊಳಿಸುವ ತಾಂಬೂಲ ; ಉತ್ತೇಜಕವಾದ ತಂಬುಲ : ದೀಪನಗವಳವಿದೆನುತ ಚೆಂದುಟಿಯ ಪ್ರಾಣೋಪನ ಬಾಯೊಳಿಕ್ಕುವರು (ಮೋಹತ. ೧೮-೯೯).

[ ದೀಪನ + ಕವಳ₂ ( = ಕವಲ) ]

**ದೀಪನಗೈ** (ಕ್ರಿ). ಪ್ರಕಾಶವನ್ನು ಹೆಚ್ಚಿಸು,- ಉದ್ದೀಪಿಸು ; ಬೆಳಗಿಸು : ಆಗಾಮಿಕ ಶ್ಯಾಮಲ ಆನಂದವ ಭೂದೇವಿಯ ಅಂತಃಕರಣದಲಿ ದೀಪನ ಗೈದೈತರುತಿಹನು (ಪಾಂಚಜ. ೨೩-೧೪). [ ದೀಪನ + ಗೈ (<ಕೆಯ್$_1$) ]

**ದೀಪನಚೂರ್ಣ** (ನಾ). ಜೀರ್ಣಶಕ್ತಿಯನ್ನು ಹೆಚ್ಚಿಸುವ ಔಷಧಿಯ ಹುಡಿ ; ಪಾಚಕಚೂರ್ಣ: ಅರ ದೀಪನಚೂರ್ಣಬಲದಲಿ ವೀರರುದ್ರನು ಜಗವ ನುಂಗುವನು (ಕುಮಾದ್ರೌ. ೧೦-೩೨).

[ ದೀಪನ + ಚೂರ್ಣ₂ ]

**ದೀಪಮಾನೆಯ** (ನಾ). ದೀಪಕ್ಕಾಗಿ ಕೊಟ್ಟ ಕೊಡುಗೆ (?): ದೀಪ ಮಾನೆಯ ಕೊಟ್ಟ ಧೂಪಮಾನೆಯ ಕೊಟ್ಟ ಸೋಪಾನ ಕಟ್ಟಿ ಭೀಮೆಯೊಳು ಇಳಿಯುದಕೆ ಸೋಪಾನವಮಾನೆ ವತನಿತ್ತ (ಕನ್ನಜಾ. ೩೦೬).

[ ದೀಪ₂ + ಮಾನೆಯ (<ಮನ್ನೆಯ) ]

**ದೀಪಮಾಲೆ$_1$** (ನಾ). ೧. ದೀಪಗಳ ಸಾಲು. ೨. ದೀಪಗಳನ್ನು ಹಚ್ಚಿ ತೂಗಿಬಿಡುವ, ತ್ರಿಕೋಣಾಕಾರದ ಕಟ್ಟನ್ನು ಮೇಲ್ಭಾಗದಲ್ಲಿ ಹೊಂದಿರುವ ಕಂಭ : ನೆಗಟ್ದುತ್ತುಂಗ ಶಿವಾಲಯಪ್ರತತಿಯಾದಿ ತ್ಯಾಲಯಂ ಸಾಲೆ ವಿಷ್ಣುಗೃಹಂ ಬುದ್ಧವಿಹಾರ ಮಹಾಭವನಂ ನಾಗಾ ಲಯಂ ಬಾವಿ [ದಿ]ಗ್ಗಿಗೆ ಶತ್ರಂ ಕೆಱೆ ದೀಪಮಾಲೆಯೆನೆ ನಾನಾ ಧರ್ಮ್ಮಮಂ ಮಾಡಿಸಲ್ (ಸೌಇಇ. XX, ೯೯-೩೯; 1076 ?) ; ಮಂಗಳ ವಾದ್ಯಮುದ್ಘರವಮುಣ್ಮುವ ಮಿಂಚದು ದೀಪಮಾಲೆಯುತ್ತುಂಗಪಯೋದ ಮಿಟ್ಟ ತೆರೆ ತೋರಣಮಿಂದಿರವಿಲ್ಲುವೃಷ್ಟಿಯೇ ಸಂಗತಧಾರೆಯಾಲಿವರ ಲೊಪ್ಪುವ ಮುತ್ತಿನ ಸೇಸೆಯಾಗೆ (ರಾಜಶೇ. ೮-೧೧೮).

ದೀಪಮಾಲೆಯ ಕಂಬ=ದೀಪಾಲೆಕಂಭ ೨: ಗುಡಿಯ ಮುಂದಿನ ದೀಪ ಮಾಲೆಯ ಕಂಬದತ್ತ ಮೊಮ್ಮಗಳನ್ನು ಕರೆದು ತಂದಳು (ಗಂಗಾಸಾ. ೧೩) ; ಎದ್ದೇಳುತಿದೆ ಮುಂದೆ ದೀಪಮಾಲೆಯ ಕಂಬ ಉದಯವಾಗಲಿ ಒಳಗೆ ಚೈತ್ಯಬಿಂಬ (ನಲಮು. ೪-೧೬). [ ದೀಪ₂ + ಮಾಲೆ ]

**ದೀಪಮಾಲೆ$_2$** (ನಾ). ಒಂದು ಬಗೆಯ ಸಸ್ಯ : ದೀಪಮಾಲೆ – ಸಣ್ಣಗಿಡ : ದೊಡ್ಡ ಬಿಳಿ ಹೂಗಳಾಗುತ್ತವೆ. ಕಟ್ಟಿಗೆ ಬಿಳಿದು, ಸಣ್ಣಯೆಳೆಯುಳ್ಳದ್ದು (ಕಭಾಗ. ೪೧). [ ←ಮರಾ. ದೀಪಮಾಳ್ ]

**ದೀಪವರ್ತಿ** (ನಾ). ದೀಪದ ಬತ್ತಿ ; ಸೊಡರಿನ ಕುಡಿ : ಉಟಿದ ಸಮ ಸ್ತೋರ್ವಿಗಳ್ನಿಮ್ಮಂಘ್ರಿಯುಗಕ್ಕೆಱಗುಗುಂ ಸ್ಫುರದ್ದೀಪವರ್ತಿ ನಿಧಿಗೆಱಗುವ ಪೋಲ್ (ಶಾಂತಿಪು. ೧೦-೧೨೦) ; ನಿದಾಘದ ದೀಪ [ಪಾತಾಂ. ಪ್ರಿ] ವರ್ತಿ ಯೊಳ್ ಕಾಸೆ ತೆರಳ್ದ ಪಿಂಜರಿಯವೋಲ್ ಕಿಸುಸಂಜೆ ತೆರಳ್ವಿನಂ ಪಟಂಗಾಸಿನ ಪೊನ್ನಗಂಟೆಯವೊಲೊಪ್ಪಿದುದುದ್ಗತ ಭಾನುಮಂಡಲಂ (ಅಜಿಪು. ೬-೭೦) ; ಯೌವನವನವಸನ್ತಲಕ್ಷ್ಮಿ ಸೌಭಾಗ್ಯನಿಧಾನದೀಪವರ್ತ್ತಿ (ಸೌಇಇ. XX, ೯೬-೧೪ ; 1072) ; ದೀಪವರ್ತಿ ನಿಧಿಗೆಱಗುವವೊಲ್ ಗುಣ ನಿಧಿಗೆ ರಾಜಲೋಕದ ಮಣಿಮಯಮಕುಟಂಗಳನಿತುಮೇನೆಱಗಿದುವೋ (ಮಲ್ಲಿಪು. ೮-೧೬೮); ಮೂಲಸ್ಥಾನದ ದೇವರ್ಗ್ಗೆ ಖಣ್ಡಸ್ಫುಟಿತ ಜೀರ್ನ್ನೋ ದ್ಧಾರ ದೀಪವರ್ತ್ತಿ ನಿವೇದ್ಯಕ್ಕೆನ್ದು . . . ಧಾರಾಪೂರ್ವ್ವಕಂ ಮಾಡಿ ಬಿಟ್ಟ ಕೆಯಿ (ಸೌಇಇ. XX, ೮೦-೪೫; 1120) ; ಜಯ ದಿವಿಜಕಿರೀಟ ದೀಪ ವರ್ತಿ ನಿಧಾನಾ (ಚಂದ್ರಪು. ೭-೭) ; ಎಱಗಿದಳಿಂದ್ರಕಾಂತೆ ಶುಭರತ್ನ ಮನಾಂತ ನಿಧಾನಲಕ್ಷ್ಮಿಗೊಲ್ದೆಱಗುವ ದೀಪವರ್ತಿಯವೊಲಾನತಕಂಧರೆ ಸಾಮರಾಗದಿಂ (ಅನಂಪು. ೫-೧೨); P ನಿಧಿಯಿದ್ದ ಕಡೆಗೆ ದೀಪದ ಕುಡಿ ವಾಲುವುದೆಂಬ ನಂಬಿಕೆ ಇದೆ. [ ದೀಪ₂ + ವರ್ತಿ ]

**ದೀಪವಿಕಲ್ಪ** (ನಾ). ದೀಪದಂತೆ ಇರುವಂತಹುದು: ನೆಗಟೆ ಮೇಣುದಿತ ನಿರ್ಮಳಕೀರ್ತಿವಿತಾನಮಂ ಜಗದಗಾಧವಿವರೋದರ ದೀಪವಿಕಲ್ಪಮಂ ಕೂಡೆ ಪೇಟ್ದ ನುತಕಾವ್ಯಮಂ (ಕವಿರಾ. ೩-೨೨೨). [ ದೀಪ₂ + ವಿಕಲ್ಪ ]

**ದೀಪಶಿಖ** (ನಾ.) ಸೊಡರಿನ ಬೆಂಕಿ : ನಿನ್ನಂಗರಮ್ಯತಾ ದೀಪಶಿಖ ಪಾರ್ಥನ ವಿರಾಗದ ಪತಂಗಮಂ, ಶೂನ್ಯತೆ ಸಮೀರನಂ ಸೆಳೆವಂತೆ, ಸೆಳೆಸೆಳೆದು ಸುಟ್ಟುರಿಸಿ ಜಾಜ್ವಲ್ಯಮಪ್ಪಂತೆವೋಲ್ ನೆಗಳ್ದಪೆಂ (ಚಿತ್ರಾಂಗ. ೨೯-೮೦೦). [ ದೀಪ₂ + ಶಿಖ ]

**ದೀಪಶಿಖೆ** (ನಾ). ಸೊಡರಿನ ಕುಡಿ,-ಶಿಖೆ : ರೂಪವೇದನಾ ವಿಜ್ಞಾನ ಸಂಜ್ಞಾನ ಸಂಸ್ಕಾ (ಸಾ) ರಂಗಳೆಂಬಯ್ದು ಸ್ಕಂಧಂಗಳ್ ದೀಪಶಿಖಾ ರೂಪದಿಂ ಕ್ಷಣವಿಳಂಬಿಗಳ್ (ಶಾಂತಿಪು. ೮-೧೪೩ ವ) ; ಸ್ವಲ್ಪ ಕಾಲದಲ್ಲೇ ಅವರಂಗಜೇಬನು ದೀಪಶಿಖೆಯಿಂದ ಸಮುದ್ರವನ್ನು ಶೋಷಣಮಾಡುವುದೂ ಬಾಯಿಯ ಉಸಿರಿನಿಂದ ತಪನರಶ್ಮಿಯನ್ನು ಅಳಿಸುವುದೂ ಮನುಷ್ಯನಿಗೆ ಸಾಧ್ಯವಾದ ಕೆಲಸವಲ್ಲವೆಂದು ತಿಳಿದುಕೊಂಡನು (ಕೋಹಿನೂ. ೩).

[ ದೀಪ₂ + ಶಿಖೆ ]

**ದೀಪಸ್ತಂಭ** (ನಾ). ೧. = ದೀಪಕಂಭ ೧ : ಕರವತಿಗೆ ಹೊಂಗಳಸ ಹೊಂಗೊಪ್ಪರಿಗೆ ದೀಪಸ್ತಂಭ . . . ವೈಡೂರಿಯದ ಪಡಿಗವ ಚರರು ತಂದೊಟ್ಟಿದರು ಬಂಡಿಗೆ ಭಾರಸಂಖ್ಯೆಯಲಿ (ಕುಮಾಗ. ೪-೧೫). ೨. ಹಬ್ಬದ ದಿನಗಳಲ್ಲಿ ಹಚ್ಚಿಡುವ ದೀಪಗಳಿಗೆ ಆಧಾರವಾಗಿ ನಿಲ್ಲಿಸಿದ, ದೇವಸ್ಥಾನದ ಮುಂದಿನ ಕಲ್ಲಿನ ಕಂಭ ; ದೀಪಮಾಲೆಕಂಬ : ಮಾವು ಹೂವಿನ ತೇರು, ಹೊಂಗೆ ತುಂಬಿದ ಬಸುರಿ – ಉರಿವ ದೀಪಸ್ತಂಭವಗೊ ಬೂರಲ (ದೀಪಧಾ. ೬-೧೮). [ ದೀಪ₂ + ಸ್ತಂಭ ]

**ದೀಪಸ್ಪರ್ಶನ** (ನಾ). ಸೊಡರು ಹತ್ತಿಸುವುದು : ದೀಪಸ್ಪರ್ಶನಮಾದ ವರ್ತಿ ನಿಮಿಷಕ್ಕಾ ದೀಪರೂಪಂ ಸಮಂತಾ ಪೊತ್ತೆಯ್ದುವವೊಲ್ . . . ಅಮಿತತೇಜಂ ಹೃದ್ಯವಿದ್ಯಾವಿಳಾಸೋಪೇತಾತ್ಮಕನಾದನಾ ಮುನಿಯ ತನ್ಮಾಹಾತ್ಮ್ಯಮಿನ್ನೆಂತುಟೋ (ಶಾಂತೀಶ್ವ. ೪-೧೦೨).

[ ದೀಪ₂ + ಸ್ಪರ್ಶನ ]

**ದೀಪಾಂಕುರ** (ನಾ). ಸೊಡರಿನ ಕುಡಿ ; ದೀಪಕಲಿಕೆ : ಧೂಪಧೂಮಾ ಮೋದಿತಾಭ್ಯಂತರದೊಳಲಘುತರ ವಿಳಸದರುಣಮಣಿ ದೀಪ್ರದೀಪಾಂಕುರ ದೊಳಮರ ನರವಿಮಾನಾಪಹಾಸವಾಸಗೃಹದೊಳ್ . . . ಆತ್ಮೀಯ ಪ್ರಾಣೇಶ್ವರಿ ಸಹಿತಂ ಸುಖಸುಪ್ತನಾಗಿ (ವರ್ಧಮಾ. ೫-೨ ವ); ನಿನ್ನೊಳಿವಳ ಗೇವುದೆಂದು ತೇಜೋನಿಳಯಂ ಮನ್ನಿಸನೆನೆ ಜನನಿಯ ಕೈಯಿನ್ನಿಮಿರ್ವಂ ಓಡಿಯಲೆಂದು ದೀಪಾಂಕುರಮಂ (ಮಲ್ಲಿಪು. ೧೩-೫೬).

[ ದೀಪ₂ + ಅಂಕುರ ]

**ದೀಪಾಂಕುರಂಗೈ** (ಕ್ರಿ). ಸೊಡರಿನ ಕಂಡಿಯನ್ನು ಹೊತ್ತಿಸು ; ದೀಪ ಹಚ್ಚು : ಬಾಳ್ವೆಯ ಸೊಡರ್ ತಾನಾರ್ವ ಮುನ್ನಮಿನ್ನೊಂದು ಬತ್ತಿಯು ಕುಡಿಗೆ ದೀಪಾಂಕುರಂಗೈದು ಪೊತ್ತಿಸದೆ ಪೋದೊಡಾಂ ನೆಲದರಿಕೆ ನೇಸರ್ಬಳಿಗೆ ಕಳ್ತಲೆಯನಡಕಿ ಪೋದಂತುಟಲ್ತೆ ? (ಶ್ರೀರಾಮಾ. ೮-೨೧೫).
[ ದೀಪಾಂಕುರ + ಗೈ (<ಕೆಯ್$_1$) ]

**ದೀಪಾಂಗ** (ನಾ). [ಜೈನ] ಮದ್ಯಾಂಗ, ಭೂಷಣಾಂಗ, ವಸ್ತ್ರಾಂಗ, ತೂರ್ಯಾಂಗ, ಮಾಲ್ಯಾಂಗ, ಗೃಹಾಂಗ, ಭಾಜನಾಂಗ, ಭೋಜನಾಂಗ, ಜ್ಯೋತಿರಂಗ ಮತ್ತು ದೀಪಾಂಗಗಳೆಂಬ ಹತ್ತು ವಿಧವಾದ ಕಲ್ಪವೃಕ್ಷಗಳಲ್ಲಿ ಒಂದು ; ದೀಪಗಳನ್ನು ಒದಗಿಸುವ ಕಲ್ಪವೃಕ್ಷ : ಸೊಗಯಿಸುವುವು ದೀಪಾಂಗ ಜ್ಯೋತಿರಂಗ ಕಲ್ಪಕುಜಂಗಳ್ (ಆದಿಪು. ೫-೪೦) ; ದೀಪಾಂಗಮೆಂಬುದು ನಿಜಭವನಾಭ್ಯಂತರ ಸಮಸ್ತವಸ್ತು ಪ್ರಕಾಶನಪರಂಗಳಪ್ಪ ಪ್ರದೀಪವಿಶೇಷಂಗಳನೀವುದು (ಚಾವುಂಪು. ೯); ವಸನಾಂಗಾತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗಾನ್ನಾಂಗ . . . ದಶಕಲ್ಪಕುಜಂ (ಚಂದ್ರಪು. ೩-೩೪). 'ದಶಾಂಗಕಲ್ಪಕಂಜ' ಪರಾ.
[ ದೀಪ$_2$ + ಅಂಗ$_2$ ]

**ದೀಪಾಂಗಕುಜ** (ನಾ). = ದೀಪಾಂಗ : ತಳದಳಿಸಿ ತೊಳಗಿ ಬೆಳಗುವ ವಿಳಸನ್ಮಣಿಕಿರಣಶಿಖಿಯ ಬಳಗದ ಬೆಳಗಂ ತಳೆದೆಸೆವ ತಾಣದೀವಿಗೆಗಳನ ವರ್ಗೀಗುಂ ಪ್ರದೀಪ ದೀಪಾಂಗಕುಜಂ (ಶಾಂತಿಪು. ೬-೧೧೭).
[ ದೀಪಾಂಗ + ಕುಜ ]

**ದೀಪಾಂಗವೃಕ್ಷ** (ನಾ). = ದೀಪಾಂಗ : ವಸ್ತ್ರಾಂಗವಿಭೂಷಣಾಂಗ ವಿಕಸನ್ಮಾಲ್ಯಾಂಗ ದೀಪಾಂಗವೃಕ್ಷದ ದಿವ್ಯಾಂಬರದಿಂದಲಂಕರಣದಿಂ ಪೂಮಾಲೆಯಿಂದ . . . ಪೂಜಿಸಿದನಿಂದ್ರಂ ತತ್ಪಿತೃದ್ವಂದ್ವಮಂ (ಪುಷ್ಪಪು. ೧೨-೧೩).  [ ದೀಪಾಂಗ + ವೃಕ್ಷ ]

**ದೀಪಾಗ್ನಿ** (ನಾ). ಸೊಡರಿನ ಉರಿ ; ಹಣತೆಯ ಜ್ವಾಲೆ : ಒಂದೆರಡು ಕುದಿಗೊಮ್ಮೆವೊಂದೊಂದಳಗೆಗೆಟಿದುವೊಂದು ಹವಣಾಗಿ ಹೊಗೆಯಿಲ್ಲದಿಹ ದೀಪಾಗ್ನಿಯಿಂದಮೊಂದಂದದೊಳು ಸಟ್ಟುಗವಿಡಿದು ತೊಳಸಿ ತಟುಪಿ ನೆಮ್ಮೆಯ ಹಾಲನು ಒಂದಿನಿಸು ಹೊತ್ತಿಸದೆ ನಾಲ್ಕೊಂದೆನಿಸಿ ಕಾಸಲು (ಸೂಪಶಾ. ೩-೨) ; ಮಣಿಶಿಲೆ, ಗಂಧಕ . . . ಇವಂ ಕೂಡಿ ಒಂದು ದಿನ ದೀಪಾಗ್ನಿಯಿಂದಟ್ಟು . . . ಜೇನುತುಪ್ಪದಿಂದಾರು ತಿಂಗಳು ಕೊಳ್ಳಲು ಸಕಲ ಸನ್ನಿಪಾತ, ಸಮಸ್ತ ಕುಷ್ಠರೋಗ ಸಹ ಮಾಣ್ಗುಂ (ಸಕವೈ. ೧೭೪).
[ ದೀಪ$_2$ + ಅಗ್ನಿ ]

**ದೀಪಾನನ** (ನಾ). ದೀಪದ ಮುಖ,-ಕುಡಿ : ಮಾನನಿಧಿಯೇ ಸರ್ವರಶಿ ಕಾಲದಲ್ಲಿ ದೀಪಾನನದೊಳಿಪ್ಪೆಯಾಗಿದು ನಿನಗೆ ನಿಂದೆಯಲ್ಲೆಂದನಂತಾ ಮುರಾರಿ (ವೀಶೈಪು. ೩-೧೯-೨೬).  [ ದೀಪ$_2$ + ಆನನ ]

**ದೀಪಾರತಿ**, **ದೀಪಾರ್ತಿ** (ನಾ). ೧. (ಅನೇಕ ಸೊಡರುಗಳಿಂದ ಕೂಡಿರುವ) ಮಂಗಳಾರತಿ ಮಾಡುವ ಸಾಧನ. ೨. ಅನೇಕ ದೀಪಗಳಿಂದ ಕೂಡಿದ ಆರತಿ ; ಅನೇಕ ದೀಪಗಳನ್ನು ಹತ್ತಿಸಿ ಮಾಡುವ ಆರತಿ: ಕೋಪದಲ್ಲಿ ಶಿವಕಳೆಯುದ ಕರಡಿಗೆಯಂನೆ ಮುಚಿದ ಧೂಪಗುಂಡಿಗೆಯುನೊಡೆದ ದೀಪಾರತಿಯು ನಂದಿಸಿದ ಒಪ್ಪ ಪರಿಯಾಣದೋಗರವ ತುಡುಕಿದ ಪಾಪಕರ್ಮ ... ನಿಮ್ಮ ಶರಣ (ಬಸವ. ೯೦೦); ದಶಾಂಗಾಮಿಳಿತ ಧೂಪವನಿತ್ತು ದೀಪಾಂತಿಯನೆತ್ತುವನು (ಬಸಪು. ೩೧-೨೨) ; ದೇವನಿಗೆ ಮತ್ತೆ ಹೊಸ ದೀಪಾರತಿಯನ್ನು ಬೆಳಗಿದನು (ಶಾಂತಲಾ. ೨೯೯). **ದೀಪಾರ್ತಿ** : ೨. ಮಲ್ಲಿಕಾರ್ಜುನಸ್ವಾಮಿ ಗುಡಿಯಲ್ಲಿ ದೀಪಾರ್ತಿ ಸಮಯದಲ್ಲಿ ಬಹಳ ಜನ ಸೇರಿದ್ದರು (ರೂಢಿ).  [ ದೀಪ$_2$ + ಆರತಿ$_1$ ]

**ದೀಪಾರಾಧನೆ** (ನಾ). (ದೇವತೆಗಳಿಗೆ) ಸೊಡರುಂಗಳನ್ನು ಹತ್ತಿಸಿ ಮಾಡುವ ಆರಾಧನೆ ; ಜ್ವಾಲೆಗಳನ್ನು ಬೆಳಗಿಸಿ ನಡೆಸುವ ಪೂಜೆ : ಕಾರ್ತಿಕದ ಪುಣ್ಯವೆಯ ದೀಪಾರಾಧನೆಗೆ ಪಾಲಿಸ್ತೆವು (ಎಕ. IV (R), ಎಳಂದೂ. ೧೮-೧೨ ; 1510) ; ಶ್ರೀ ನಂಜುಡೇಶ್ವರಸ್ವಾಮಿಯವರ ಮಹಾ ಸನ್ನಿಧಾನಕ್ಕೆ ಅಂಗರಂಗ ವೈಭೋಗ ಪಡಿತರ ದೀಪಾರಾಧನೆ ನಂದಾದೀವಿಗೆ ನೈವೇದ್ಯ . . . ವರ್ಷ ವರ್ಷವೂ ಸಲಿಗೆಯೊಪ್ಪಿಸುವ ದೇವದಾಯದ ಕಾಣ್ಕೆ (ಬಿರುಗಂ. ೨೭-೭).  [ ದೀಪ$_2$ + ಆರಾಧನೆ ]

**ದೀಪಾರ್ಚಿ** (ನಾ). ಸೊಡರಿನ ಉರಿ,-ಜ್ವಾಲೆ : ಕಿಡೆ ನಿಶ್ಶೇಷಮಘಾತಿ ಪಜ್ಜಳಿಸೆ ತನ್ನಂಟುಂ ಗುಣಂ ಕೂಡೆ ನೇರ್ಪಡೆ ದೀಪಾರ್ಚಿಗಳಂತಿ ರೂರ್ಧ್ವಗತಿ ಮೂಱುಂ ಲೋಕದಿಂ ಮೇಲೆ ಬೆಳ್ಗೊಡೆಯಿರ್ಪಂತೆವೊಲಿರ್ದ ಸಿದ್ಧನಿಲಯಕ್ಕಾನಂದದಿಂ ಪೋಗಿ (ಪಂರಾಮಾ. ೧೬-೮೨) ; ಸಮಸ್ತ ಜೀವಾದಿ ಪದಾರ್ಥಂಗಳುಂ ಶರೀರೇಂದ್ರಿಯ ಬುದ್ಧಿಗಳುಂ ದೀಪಾರ್ಚಿಗಳವೋಲ್ ಕ್ಷಣದಿಂ ಮೇಲೆ ನಿಲ್ಲುವಲ್ಲೆಂದು ಕ್ಷಣಿಕೈಕಾಂತವಾದಮಂ ಪಿಡಿಯುಚ್ಚು ವಿಡಿದು ನುಡಿವ ಬೌದ್ಧನೇಕಾಂತಮಿಥ್ಯಾತ್ವಮುಂ (ಪಸಾರ. ೪).
[ ದೀಪ$_2$ + ಅರ್ಚಿ ]

**ದೀಪಾರ್ತಿ** 'ದೀಪಾರತಿ' ನೋ.

**ದೀಪಾಲಂಕಾರ** (ನಾ). ಅನೇಕ ಸೊಡರಂಗಳಿಂದ ಮಾಡುವ ಅಲಂಕಾರ; ದೀಪೋತ್ಸವ: ದೀಪಾವಳಿಯ ದೀಪೋತ್ಸವವನ್ನೂ ನಾಚಿಸುತ್ತಿತ್ತು ಅಂದಿನ ರಾತ್ರಿಯ ದೀಪಾಲಂಕಾರ (ಹೇಮುಕೂ. ೭).  [ ದೀಪ$_2$ + ಅಲಂಕಾರ ]

**ದೀಪಾಲೆಕಂಭ** (ನಾ). ೧. ದೀಪಗಳ ಸಾಲು. ೨. ದೀಪಗಳ ಸಾಲನ್ನು ಹೊಂದಿರುವ ತ್ರಿಕೋಣಾಕಾರದ ಕಟ್ಟನ್ನು ಮೇಲ್ಭಾಗದಲ್ಲಿ ಉಳ್ಳ ಕಂಬ: ಹಳ್ಳಿಗಳ ಉತ್ಸವಗಳಲ್ಲಿ ದೀಪಾಲೆಕಂಭಗಳನ್ನು ಬೆಳಗುತ್ತಾರೆ (ರೂಢಿ).
[ <ದೀಪಮಾಲೆ + ಕಂಭ ]

**ದೀಪಾವಳಿ** (ನಾ). ೧. ದೀಪಗಳ ಸಾಲು,-ಸಮೂಹ : ಬೆಳಗುವ ಮಣಿಮಯ ಲಲಿತೋಜ್ವಲ ದೀಪಾವಳಿಯ ಬೆಳಗನಲ್ಲದೆ ಮನೆಯೊಳ್ ಬೆಳಗುವ ತೊಳಗುವ ಸೊಡರ್ಗಳ ಬೆಳಗಂ ಕನಸಿನೊಳವಾಗಿಯುಂ ಕಂಡಱಿಯಂ (ಸುಕುಮಾ. ೧೦-೧೦೭) ; ದೀಪಾವಳಿಗಳೆಸೆದವಖಿಳ ಗೃಹಾವಳಿಯೊಳ್ (ಸೂಕ್ತಿಸು. ೮-೧೮೭); ಗಿಡಗಂಟಿ ಮೈಮನಕೆ ಹೊನ್ನೆ ಹುಳಗಳ ಮಿಣುಕು-ಚಲಿಸುತಿಹ ದೀಪಾವಳಿ (ನಲಮು. ೪೦-೧೧). ೨. ಕಾರ್ತಿಕ ಶುದ್ಧ ಪಾಡ್ಯದ ದಿನ ಬಲಿಚಕ್ರವರ್ತಿಯ ಹೆಸರಿನಲ್ಲಿ ಆಚರಿಸುವ ಹಬ್ಬ ; ಸಾಲು ಸಾಲಾದ ದೀಪಗಳಿಂದ ಮನೆ, ದೇವಾಲಯ ಮೊದಲಾದಂವುಗಳನ್ನು ಅಲಂಕರಿಸುವ ಹಬ್ಬ : ಸಂದ ಬಾದುಬೆ ದೀಪಾವಳಿ ಕಾರಪುಣ್ಣಮೆಯೆನಿಪ್ಪೀ ಮೂಱು ಪರ್ವಂಗಳೊಳ್ (ಸೌಇಇ. XI-i, ೫೨-೬೬ ; 1007) ; ಆ ದಿನ ಜ್ಞಾನಸೂರ್ಯನಾದ ಸ್ವಾಮಿಯು ಕಣ್ಮರೆಯಾದುದರಿಂದ ರಾತ್ರಿಯೆಲ್ಲವೂ ಜನತೆ ದೀಪಗಳನ್ನು ಹೊತ್ತಿಸಿಕೊಂಡು ಸ್ವಾಮಿಯ ಪೂಜೋತ್ಸವಗಳಲ್ಲಿ ನಿರತರಾಗಿದ್ದರು. ಇದಕ್ಕೆ ದೀಪಾವಳಿ ಹಬ್ಬವೆಂದು ಹೆಸರಾಯಿತು (ಭಾರದ. ೧೬೨) ; ದೇಶದಲ್ಲಿ ದೀಪಾವಳಿಯ ದಿನವಿದೆಂದು ಶಾಶ್ವತದಿ ಹರಸಿದೆವು ಬಾಲಕರು ಬಂದು (ಕಎಪು. ೦೫-೧) ; ದೀಪಾವಳಿಯ ಅರ್ಥವೇನೋ-ಕಾರ್ತೀಕಮಾಸದಲ್ಲಿ ಎಲ್ಲೆಲ್ಲೂ ದೀಪಗಳನ್ನು ಹಚ್ಚಿ, ಹೊಳೆಯ ದೀಪವನ್ನು ತೇಲಿ ಬಿಡುವುದೇಕೋ ಅರ್ಥವಾಗುವುದಿಲ್ಲ (ಬಂಕಿಮು. ೪೪೦).
[ ದೀಪ$_2$ + ಆವಳಿ$_1$ (= ಅವಲಿ) ]

**ದೀಪಾವಳಿಕೆ** (ನಾ). = ದೀಪಾವಳಿ ೨ : ದೀಪಾ[ವಳಿಕೆ]ಯ ನಿವೇದ್ಯಕ್ಕಾಗಿ ದಂಣಾಯಕರು××× ಣಗಳು ಮುಗಲೂರ ರಾಜ್ಯಾಧಿಪತ್ಯವನು ಮಾಡುತ್ತಾ (ಸೌಇಇ. IX-ii, ೪೩೪-೧೫ ; 1450).  [ ಸಂ. ದೀಪಾವಲಿಕಾ ]

**ದೀಪಾಳಿ** (ನಾ). = ದೀಪಾವಳಿ ೧ : ರಣ ಮಹೀಮಂಡಲದ ಭೈರವಗಣದ ದೀಪಾಳಿಯೊ ಮಹೇಶನ ಹಣೆಯ ಹುತವಹನಟ್ಟಹಾಸವೊ (ತೊರರಾ. ೬-೩೭-೩) : ಮಸುಳಿದುದು ಕಾಂತಿ ದೀಪಾಳಿಗಳ್ಗೆ (ಶ್ರೀರಾಮಾ. ೪೪೦-೧೩೦).
[ ದೀಪ$_2$ + ಆಳಿ$_4$ (= ಆಲಿ$_4$) ]

**ದೀಪಾಳಿಗೆ,** ದೀವಳಿಗೆ, ದೀವಾಳಿಗೆ, ದೀಹಳಿಗೆ (ನಾ). ೧. = ದೀಪಾವಳಿ ೧ : "ದೀವಳಿಗೆ (ದೀಪಾಳಿಗೆ, ದೀವಾಳಿಗೆ)–ದೀಪಾವಲಿಕಾ = ದೀಪಮಾಲೆ" (ತದ್ಭಕೋ. ೧೯). ೨. = ದೀಪಾವಳಿ ೨ : ಗಾಣವೆಯಿಲಿಗೆ ಕೊಣ್ಣೆ ಮುಟ್ಟಿಗೆ ಪಡಿಯುಳಿ ಯಜ್ಞದಲೊನ್ದು ಗದ್ಯಾಣ . . . ಅಯ್ದು ಪಣಂ ಮದುವೆಯುಲಿರಡು ಪಣಂ ಮಣಿಯುಲೊನ್ದು ಪಣಂ ಬಾದುಬೆ ಕಾರಪುಣ್ಣಮಿ ದೀಪಾಳಿಗೆ ಮೂಱು ಪರ್ವ್ವದೊಳಂ ಪ್ರತ್ಯೇಕವೊನ್ದು ಗದ್ಯಾಣ (ಎಇ. XX, ೬–೩೫ ; 1012) ; ಆವಳಿಕೆಗೆ–ದೀಪಾವಳಿಕಾ = ದೀಪಾಳಿಗೆ (ಶಮದ. ೨೯೫ ಪ್ರಯೋ). **ದೀವಳಿಗೆ :** ೧. ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. ೨. ಕುಂಟಣಿಯುಂ ಕೂರ್ಮೆಯುಂತೆ ಪಶುವಿನ ಕರೆಹದಂತೆ ದೀವಳಿಗೆ ಯೂಟವಂತೆ . . . ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೬–೧೨೨) ; ಹರಿಯ ಲೆಂಕರುಗಳಿಂಡೆಯ ಹಬ್ಬ ವೆಂದಾಡುವರು ಬಹಳ ದೀಪಗಳನಳ್ಳಿಯಿಂದಂ ಬೆಳಗುತಿರಲು ದೀವಳಿಗೆ ಯಾದುದು ಕಣಾ (ವೀಶೈವ ೩–೧೧–೧೬) ; ಉಂಡದ್ದೇ ಉಗಾದಿ ಮಿಂದದ್ದೇ ದೀವಳಿಗೆ (ಗಾದೆ). ೩. ಹಬ್ಬ ; ಪರ್ವ ; ಉತ್ಸವ : ಓಪಳಿ ಕೂರ್ಮೆ ಗೆಟ್ಟೆನಗೆ ನೀನೇನಾನುಮೊಂದೇವಮುಂ ಮನದೊಳ್ ಮಾಡಿದೊಡಂದ ದೀವಳಿಗೆಯುಂ ಮಾನಾಮಿಯುಂ ಮಾಡೆನೇ (ಪಂಪಭಾ. ೪–೯೩). **ದೀವಾಳಿಗೆ:** ೧. ದೀವಳಿಗೆ, ದೀವಾಳಿಗೆ. ಉಭಯತ್ರಾಪಿ ದೀಪಾವಳಿಕಾ (ಶಬ್ದಾನು. ೩೭೮ ವ್ಯಾಖ್ಯಾ). **ದೀಹಳಿಗೆ.**

**ದೀವಳಿಗೆಯ ಕಟ್ಟಲೆ** = ದೀಪಾವಳೀ ಅಮಾವಾಸ್ಯೆ : ದೀವಳಿಗೆಯ ಕಟ್ಟಲೆಯೊಳ್ ದೀವಿಗೆಗಳು ಬೆಳಪ ತೆಱದೆ ಕಲಿಕಾಲದ ಮಿಥ್ಯಾವ್ರತ ತಮಿಸ್ರರಪ್ಪ ಜನಾವಳಿಗಳ ನಡುವೆ ಬೆಳಗುತಿರ್ಪರ್ಜೈನರ್ (ಸಮಪ. ೬–೮೮). **ದೀವಳಿಗೆಯ ಪರ್ಬ, ದೀವಳಿಗೆ ಹಬ್ಬ, ದೀಹಳಿಗೆಯ ಹಬ್ಬ** = ದೀಪಾವಳಿ ೨ : ದೀವಳಿಗೆಯ ಪರ್ಬದಂದು ಸೊಡರ್ವತ್ತಿಸುವ ನೆವದೊಳ್ ನಮಗ ಪಾಯಮಂ ಬಗೆವರಕ್ಕುಮೆಂದಱಿದು (ಬಂಹರಿ. ೧೦–೩೯ ವ) ; ಗಂಗೇಗೌರೀ ಹಬ್ಬ ಮುಂದೆ ದೀವಳಿಗೆ ಹಬ್ಬ ಎಂದೀಗೆ ಬಂದೀತೆ ಶಿವರಾತ್ರಿ (ನನ್ನೂರು. ೪೧) ; ಭೋಜನ ಕಾಣಿಕೆ ದೀಹಳಿಗೆಯ ಹಬ್ಬಕೆ (ಸೌಇಎ. ೧೯೩೨, ಉಡುಪಿ. ೨೮೨–೧೫ ; 1432). **ದೀವಳಿಗೆಯ ಪರ್ವ** = ದೀಪಾವಳಿ ೨ : ದೀವಳಿಗೆಯ ಪರ್ವದನ್ದು (ಹೈಆರಿ. ೧೯೩೬, ೨೭–೨೯ ; 872).

[ <ಸಂ. ದೀಪಾವಲಿಕಾ ]

**ದೀಪಿಕಾಂಕುರ** (ನಾ). ಸೊಡರಿನ ಕುಡಿ, – ತುದಿ : ನಾಡೆ ಪೊದಳ್ದು ನೀಳ್ದವರ ಸುಯ್ಗಳ ಗಾಳಿಯೊಳೊಯ್ಯನೊಯ್ಯನಳ್ಳಾಡುವುದಾಯ್ತು ತತ್ಸುರತಮಂದಿರದುಜ್ವಳ ದೀಪಿಕಾಂಕುರಂ (ಪಂಪಭಾ. ೩–೮೩). [ ಸಂ. ]

**ದೀಪಿಕಾಗೃಹ** (ನಾ). ಗಂಹೆ (?) : ಪರಮ ಯೋಗೀಂದ್ರಾ ಪರ್ವತದ ಶಿಖರಾಗ್ರದೊಳಗೊಂದು ದೀಪಿಕಾಗೃಹದಲ್ಲಿ ಚಿರಕಾಲವಿರ್ದು (ಸಾರಂಗ. ೩೧). [ ಸಂ. ]

**ದೀಪಿಕೆ** (ನಾ). ೧. ಸೊಡರು ; ದೀವಿಗೆ : ನೋಡಿ ನಾಣ್ಚಿ ತಲೆಯಂ ತೆಗೆ ವಂತಿರೆ ಪಾತ್ರಮಧ್ಯದೊಳ್ ತೆಗೆದುದುಗಿರ್ದುವೊಳ್ಗುಡಿಗಳಂ ರತದೀಪಿಕೆ ಗಳ್ ನಿಶಾಂತದೊಳ್' (ಲೀಲಾವ. ೩–೧೮) ; ನಿನ್ನ ಕಟಾಕ್ಷಿ ಮಂತ್ರಮೊನಗೆಚ್ಚ ಶರಾವಳಿ ಪುಷ್ಪಸಂಚಯಂ ನಿನ್ನ ಸರೋಷವೀಕ್ಷಣದ ದೀಧಿತಿ ದೀಪಿಕೆ ಯರ್ಚನೋಚಿತಂ (ಶಬಶಂ. ೫–೪೧). ೨. ಬೆಳಕು ; ಕಾಂತಿ ; ಪ್ರಕಾಶ. ೩. (ಅಲಂ) ಮಾರ್ಗದರ್ಶಿಕೆ ; ವ್ಯಾಖ್ಯಾನ ರೂಪವಾದ ವಿವರಣ ಗ್ರಂಥ ; ಟೀಕಾಗ್ರಂಥ : ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್ಯನಿಂ ರಚಿತವಾದ ಪಂಪಭಾರತ ದೀಪಿಕೆಯೆಂಬ ಟೀಕೆಯೊಳ್ ಚತುರ್ದಶಾಶ್ವಾಸಂ ಸಂಪೂರ್ಣಂ (ಪಂಪದೀ. ೫೭೯). [ ಸಂ. ದೀಪಿಕಾ ]

**ದೀಪಿತ** (ಗು). ೧. ಪ್ರಕಾಶಗೊಳಿಸಿದ ; ಸ್ಪಷ್ಟವಾಗಿ ತಿಳಿಸಿದ : ಅಕ್ಷಯದ ಧರ್ಮಾರ್ಥಕಾಮವಿಮೋಕ್ಷ ದೀಪಿತ ಮಾರ್ಗಸಂತತ ಲಕ್ಷಣ ಸ್ಥಾಪಿತ ಸಮುನ್ನತಮಹಿತಸಿತಕೀರ್ತಿ (ಬಸವು. ೪೬–೩). ೨. ರೇಗಿದ ; ಉದ್ರೇಕ ಗೊಂಡ : ಕೋಪದೀಪಿತರೂಪನಾಗಿಯುಂಮಾಪತಿಪ್ರತಿಮಂ ಪ್ರತಾಪಾ ಟೋಪದಿಂದಿಂತೆಂದನು (ಬಸವು. ೫೪–೨). [ ಸಂ. ]

**ದೀಪಿಸು** (ಕ್ರಿ). ೧. ಹೊಳೆ ; ಪ್ರಕಾಶಿಸು : ಅವಿಚಲನದನುವೆ ಮನ ಮಾದುದೋ ಘನ ಕಾತರವೆ ಕರಂ ಕಣ್ಗಳಾದುವೊ ಸಾತ್ವಿಕವೆ ದೀಪಿಸುವ ತೊಡಿಗೆಯಾದುದೋಯೆನೆ ಪರವಶೀಭೂತನಾಗಿ (ಪದ್ಮರಾ. ೬–೩೬) ; ತಾರಾ ಪಥವನಳ್ಳಿಱಿವ ಕನಕಕಳಶಂಗಳಿಂ ದೀಪಿಸುತೆ . . . ದಿವ್ಯಲಿಂಗನಾಲಯು ವೆಸೆದುದು (ಸಿದ್ಧೇಪು. ೨–೨೩) ; ರಾಜೇಂದ್ರನಾಸ್ಥಾನದಲ್ಲಿ ದಿನಕರನಂದದಿಂ ದೀಪಿಸುತ್ತಿರುವ ನವರತ್ನ ಸಿಂಹಾಸನಾರೂಢನಾಗಿ (ಸೌಗಂಧಿ. ೪–೪). ೨. ಪ್ರಕಾಶಗೊಳಿಸಂ ; ಸ್ಪಷ್ಟವಾಗಿ ತಿಳಿಯುಂವಂತೆ ಮಾಡಂ : ಒಂದೊಂದು ಉಪಮೆ ಉಪಮಾನದ ಸ್ಥಿತಿ ವಿಶೇಷವನ್ನು ದೀಪಿಸುವಾಗ ನಯಸೇನನ ಈ ಸಾದೃಶ್ಯಲಕ್ಷ್ಮಿ ತನ್ನೆಲ್ಲ ಬೆಡಗಿನಿಂದ ಸುಳಿಯುತ್ತಾಳೆ (ತವನಿ. ೯೨). [ ದೀಪನ + – ಇಸು₃ ]

**ದೀಪು** 'ದೀಪ₁' ನೋ.

**ದೀಪುತ,** ದಿಪುತ (ಗು). ಹೊಳೆಯುಂವ ; ಪ್ರಕಾಶಿಸುಂವ ; ತೇಜಸ್ಸಿನಿಂದ ಕೂಡಿದ : ಕೀರ್ತಿ ಅಪಕೀರ್ತಿ ನಿನ್ನದು ಕಾಣೊ ದೀಪುತಮೂರ್ತಿ ವಿಜಯ ವಿಠಲ ಎನ್ನಾಳುವ ಸ್ವಾಮಿ (ಮೋಕ್ಷದೀ. ೧೧–೮). **ದಿಪುತ :** ಚಪಲನಯನ ತಿಮ್ಮ ವಿಜಯವಿಠ್ಠಲ ಸದಾ ದಿಪುತನಾಗಿ ತನ್ನ ಭಕ್ತರ್ಗೆ ಭಜಕರಿಗೆ ಪೊಳೆವನು (ಕೀರ್ತನು. ೯೦) ; ತಪನಾಬ್ಜವಂಶದಲಿ ದಿಪುತರಾದವರನೆ ಕೃಪವನಧಿ ಹರಿಪೊಲಿವಾ (ವಿಪಕೀ. ೨ ಪಲ್ಲವಿ). [ <ಸಂ. ದೀಪ್ತ ]

**ದೀಪೋತ್ಸವ** (ನಾ). ಸಾಲಂ ಸಾಲಾಗಿ ದೀವಿಗೆಗಳನ್ನು ಬೆಳಗಿಸಿ ಮಾಡಂವ ಉತ್ಸವ : ಹೂದಿಂಗಳ್ಸೈತರಲ್ಕೊಸಗೆಯಿಂ ಬನದೇವಿ ದೀಪೋತ್ಸವಂಗೈವಳ್ (ಶ್ರೀರಾಮಾ. ೧೪೦–೪೦೯) ; ಆ ರಾತ್ರಿ ನಿಮ್ಮ ಮನೆಯಲ್ಲಿ ದೀಪೋತ್ಸವ (ಹೊಸಕ್ಕ. ೭) ; ಅವರ ಕಚೇರಿಗಳೆಂದರೆ ಕೀರ್ತಿಯ ದೀಪೋತ್ಸವಗಳಂತಿದ್ದುವು (ಸಂಗೀತ. ೨೬). [ ದೀಪ₃ + ಉತ್ಸವ ]

**ದೀಪ್ತ** (ಗು). ೧. ಪ್ರಕಾಶಮಾನವಾದ ; ಹೊಳೆಯುಂವ : ಬಳಿಕ ಯೋಜನಗಂಧಿಯಲಿ ಮಕ್ಕಳುಗಳವತರಿಸಿದರು ದೀಪ್ತಜ್ವಲನತೇಜರು ಕಲ್ಪಭೂಜರು ಹಿಮಕರಾನ್ವಯಕೆ (ಕುವ್ಯಾಅ. ೨–೩೦). ೨. ಉರಿಯುಂವ ; ಜ್ವಲಿಸುವ. 'ದೀಪ್ತತಪ', 'ದೀಪ್ತಶಿಖರ' ಪರಾ. ೩. ಉರಿಯುವಂತೆ ಮಾಡಿದ ; ಹೊತ್ತಿಸಿದ. (ನಾ). ೪. ಹೊಳಪಿನಿಂದ ಕೂಡಿದುದಂ ; ಕಾಂತಿಯುಂತವಾದುದಂ : ಅದೆಲ್ಲವೂ ಈ ದರ್ಶನದಿಂದ ದೀಪ್ತವಾಗಿರು ತ್ತದೆ (ಸೌಂದಶ. ೪೦) ; ಪ್ರತಿಭೆಯಿಂದ ದೀಪ್ತವಾದ ಕಾವ್ಯವ್ಯಾಪಾರದ ಉಳಿವಿಗೆ ಇವು ಮುಖ್ಯವಾಗಿ ಬೇಕು (ಕಾವ್ಯಕು. ೧೨). ೫. ಹಗಲಂ ; ಬೆಳಕು : ಧಾರುಣಿ ನಡುಗುವುದಂ ಘೊಳ್ಳೆನಲ್ದೀಪ್ತದೊಳ್ಳಳ್ಳುಗಳೂಳು ತ್ತಿರ್ಪುದಂ . . . ಕಂಡು ತವ್ಮೊಳ್ಬಗೆದರ್ ನೈಮಿತ್ತಿಕರ್ನಾಳಿನ ಕದನದೊಳಕ್ಕುಂ ದಶಾಸ್ಯಂಗಪಾಯಂ (ಪಂರಾಮಾ. ೧೪–೧೨೨). ೬. ಕಾಮಿಕ, ಯೋಗಜ, ಅಚಿಂತ್ಯ, ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಸಾಹಸ್ರ, ಅಂಶುಮಾನ್, ಸಂಪ್ರಭೇದ, ವಿಜಯ, ನಿಶ್ವಾಸ, ಸ್ವಾಯಂಭುವ, ಅನಲ, ವೀರ, ರೌರವ, ಮಕುಟ, ವಿಮಲ, ಚಂದ್ರಜ್ಞಾನ, ಬಿಂಬ, ಪ್ರೋದ್ಗೀತ, ಲಲಿತ, ಸಿದ್ಧ, ಸಂತಾನ, ಶರ್ವ, ಪಾರಮೇಶ್ವರ, ಕಿರಣ, ವಾತುಲಗಳೆಂಬ ಇಪ್ಪತ್ತೆಂಟು ಬಗೆಯ ಶೈವಾಗಮಂಗಳಲ್ಲಿ ಒಂದಂ : ಕಾಮಿಕ . . . ಅಜಿತ, ದೀಪ್ತ, ಸೂಕ್ಷ್ಮ . . . ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಭಾರದ. ೭೨). 'ಕಾಮಿಕ' ಪರಾ. ೭. ಪೂರ್ವದಿಕ್ಕು : ಮರಸರ್ಪಂ ಮೂಡೆ ಮೂಡಲ್ ನೃಪತಿಗೆ ಪಡುವಲ್ ಮರ್ತ್ಯವರ್ಗಕ್ಕೆ ತೆಂಕಲ್ ಧರಣೀ ಭೃದ್ದಂಡನಾಥಾಗ್ರಣಿಗೆ ಬಡಗಲಂತಾ ಪುರೋಧಂಗಪಾಯಂ ದೊರೆ

ಕೊಳ್ಗುಂ ಸುತ್ತಲುಂ ತೋಱಿದೊಡೆ ಜನಪಗಂ ನಾಡೆಯುಂ ಭೀತಿಯೆತ್ತುಂ ಪಿರಿದಕ್ಕುಂ ಶಾಂತದೊಳ್ ತೋರ್ಪೊಡೆ ನೃಪತಿಜಯಂ ದೀಪ್ತದೊಳ್ ಭೂಪನಾಶಂ (ಲೋಕೋಪ. ೪-೪೦). 'ದೀಪ್ತದಿಕ್ಕು' (ಲೋಕೋಪ. ಟೀಕೆ).
[ ಸಂ. ]

**ದೀಪ್ತತಪ** (ನಾ). [ಜೈನ] ಶರೀರದಲ್ಲಿ ಕಾಂತಿ ಹೆಚ್ಚುವಿಕೆ; ತಪಸ್ಸಿನಿಂದ ಯೋಗಿಗಳಿಗೆ ಉಂಟಾಗುವ ಋದ್ಧಿಗಳಲ್ಲಿ ಒಂದು; P ಇದರಿಂದ ಯೋಗಿಗೆ ಮನಸ್ಸು, ವಾಕ್ಕು, ಕಾಯಗಳು ಬಲಗೊಂಡು, ಸೂರ್ಯನಿಗೆ ಸಮಾನವಾದ ಪ್ರಕಾಶ, ಅಂದರೆ ಶರೀರಕಾಂತಿಯುಂಟಾಗುತ್ತದೆ: ಪೊಂಪುೞಿವೋಯ್ತು ದೀಪ್ತತಪಮೆಂಬಿನಮರ್ಕಕರಂಗಳತ್ತಮಿತ್ತಂ ಪುದಿದುಷ್ಣರಶ್ಮಿ ಪುರುಷಾಕೃತಿಯಂತಿರೆ . . . ತಂ[ದುದಂ]ದು ಬರ್ದೂಂ ಪರೆದಿರ್ದವೋಲ್ ಮುನಿಗೆ ಕಲ್ನೆಲೆ ಬಲ್ನೆಲೆಯುಂ ನಿದಾಘದೊಳ್ (ಶಾಂತಿಪು. ೯-೧೦೮); ಶರೀರದ ಕಾಂತಿ ಪೆರ್ಚುವುದುಂ ದೀಪ್ತತಪಮೆಂಬುದುಂ (ಶ್ರಾವಕಾ. ೯೪-೨೨).
[ ದೀಪ್ತ + ತಪ$_3$ ]

**ದೀಪ್ತಶಿಖರ** (ನಾ). ಉರಿಯುವ ಶಿಖರ: ಅಪರಜಲಧಿಯೊಳುರಿವ ವಡಬನ ದೀಪ್ತಶಿಖರದೊಳೞಿಗುವಂತೆ ಪತಂಗಮಂಡಲವಿಳಿದುದಂಬರವ (ಕುಮಾರ್ಯೋ. ೩-೭೦). [ ದೀಪ್ತ + ಶಿಖರ ]

**ದೀಪ್ತಶಿಖೆ** (ನಾ). ಉರಿಯುವ ದೀಪದ ಕುಡಿ,-ಶಿಖೆ: ಮನುಷ್ಯತ್ವದ ಗಭೀರತಮ ಆಕಾಂಕ್ಷೆಯ ದೀಪ್ತಶಿಖೆಯ ಸಮ್ಮುಖದಲ್ಲಿ ಯಾವನನ್ನು ಅವನು ಅಂದು ಕಾಣುತ್ತಿರುವನೋ ಆತನು ನರೋತ್ತಮನು (ನಿಬಂಧ. I, ೪). [ ದೀಪ್ತ + ಶಿಖೆ ]

**ದೀಪ್ತಾಗಮ** (ನಾ).=ದೀಪ್ತ ೬: ಮತ್ತಮಾ ಸಿದ್ಧಾಂತಭೇದಂಗಳಾವಾವವೆಂದೊಡೆ ಕಾಮಿಕಾಗಮ . . . ದೀಪ್ತಾಗಮ ಸೂಕ್ಷ್ಮಾಗಮ ವಾತೂಲಾಗಮವೆಂಬವಿಪ್ಪತ್ತೆಂಟು ದಿವ್ಯಾಗಮಂಗಳಕ್ಕು (ವಿವೇಕ. ೬೮). 'ಕಾಮಿಕಾಗಮ' ಪಠಾ. [ ದೀಪ್ತ + ಆಗಮ ]

**ದೀಪ್ತಿ** (ನಾ). ೧. ಪ್ರಕಾಶ; ಬೆಳಕು; ಹೊಳಪು; ಕಾಂತಿ: "ವರ್ಚಃ . . . ದೀಪ್ತಿಃ . . . ಪ್ರಭಾ, ರಶ್ಮಿಃ – ಈ ೧೧ ದೀಪ್ತಿ" (ಹಲಾಯು. ೧೨-೬೫): ವಿನಮ್ರಕ್ಷಿತಿಚಕ್ರಂ ದೀಪದೀಪ್ತಿಪ್ರಶಿಹತದಿನಕೃಚ್ಚಕ್ರ ತೀವ್ರಾಂಶುಚಕ್ರಂ . . . ಇರ್ದತ್ತೊಳಪುಗದೆ ಪುರೋಪಾಂತದೊಳ್ ಚಕ್ರರತ್ನಂ (ಆದಿಪು. ೧೪-೩); ನುಡಿದರೆ ಮುತ್ತಿನ ಹಾರದಂತಿರಬೇಕು ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು (ಬಸವ. ೮೦೨); ದೀಪಕ್ಕೆ ದೀಪ್ತಿಗೆ ಭೇದವುಂಟೇ ಅಯ್ಯಾ (ಮಹಾದೇ. ಬ. ೭೩-೧೮೧); ದೀಪ್ತಿಯನುಳಿದುವು ಭಗಣಂ ಸುಪ್ತಜನಂ ನಿದ್ರೆದಿಳಿದುದಿದೆ ಕೋಕಂ ತನ್ನಾಪ್ತನನಱಸುತ್ತಿರುಳ ಸಮಾಪ್ತಿ ಕರಂ ಹತ್ತೆ ಸಾರ್ದುದು (ಗಿರಿಜೆ. ೪-೭೬೦). ೨. ದೀವಿಗೆ; ದೀಪ: "ಆ ದೀವಿಗೆ ಜ್ಯೋತಿ ದೀಪ್ತಿ ಗೃಹಭಾನುವಕ್ಕು" (ಮಂಗರಾ. ೭೦-೧೮); ಜೀವಂ ತೊಲಗಿದೊಡಲಿಂಗೆ ತೈಲವಿಂಗಿದ ದೀಪ್ತಿಗುಂದಕವಱಿತ ಘನತತಾಕಕ್ಕೆ . . . ನೆಟ್ಟನೆ ಜೋಡಿಯಾದುದಾ ಪುರಜನಂ ಪರಿಜನಂ ಜನಪತಿ ಹರಿಶ್ಚಂದ್ರ ನೆಲ್ಲವಂ ಮುನಿಗಿತ್ತರಣ್ಯಕ್ಕೆ ನಡೆವಾಗಲು (ಹಚಕಾ. ೯-೨೪). ೩. ಕಿರಣ; ಕದಿರು; ರಶ್ಮಿ: "ಕರಮುಸ್ರಮಂಶು...ದೀಪ್ತಿ ಘೃಷ್ಟಿ...ಪ್ರದ್ಯೋತಮಾರಶ್ಮಿ" (ಮಂಗರಾ. ೧೧-೩); ದಿನಕರನುದಯಿಸಲೊಡಮೇಂ ದಿನದೀಪ್ತಿಗಳೊಡನೆ ಬಂದು ನೆಲೆಸುವವೊಲ್ ಪ್ರಾಕ್ತನ ಜನ್ಮವಿದ್ಯೆಗಳ್ ಬಂದನಿತುಂ ನೆಲಸಿದವು ಸಕಲ ವಿದ್ಯಾನಿಧಿಯೊಳ್ (ಅಜಿಪು. ೫-೬೪). ೪. (ಸೆಳೆದಂಬಿಟ್ಟ ಬಾಣದ) ವೇಗ,-ತೀವ್ರತೆ: "ದೀಪ್ತಿಃ, ವೇಗಃ, ತೀವ್ರತಾ – ಈ ೩ ಅಂಬಿನ ವೇಗಂ" (ಹಲಾಯು. ೭೭-೩೦೬); "ಅಂಬುಗಳ ವೇಗಮದು ದೀಪ್ತಿಯೆನಿಕುಂ" (ಮಂಗರಾ. ೮೭-೩೫); ಪ್ರಾಪ್ತರ ಕಳುಹಲೆದ್ದನು ತಾಯ ಮನೆಗತಿ ದೀಪ್ತಿಯೊಳಾ[ಪಾಠಾಂ. ದೀಪ್ತದೊಳಾ] ನಮಿರಾಜ (ಧರಜ. ೩೭-೪೨). ೫. ಆಕಾಶದಿಂದ ಕೆಳಗೆ ಬೀಳುವ ತೇಜಃಪುಂಜ ವಸ್ತು; ಉಲ್ಕೆ: (ಕ). ೬. [ಕಾವ್ಯಮೀ] ಸಹೃದಯನ ಮನಸ್ಸಿನಲ್ಲಿ ಉಂಟಾಗುವ ಭಾವವಿಸ್ತಾರ,-ವ್ಯಾಪಕತೆ,-ಭಾವತೀವ್ರತೆ,-ಭಾವೋದ್ರೇಕ: ಕಾವ್ಯದಲ್ಲಿರುವ 'ರೌದ್ರ' ಮೊದಲಾದ ರಸಗಳು ದೀಪ್ತಿಯನ್ನು ಹೆಚ್ಚಾಗಿ ಉಂಟು ಮಾಡುತ್ತವೆ (ಧ್ವನ್ಯಾಲೋ. ೭೧); ಸಹೃದಯನ ಮನಸ್ಸಿನ ವಿಕಾಸ, ವಿಸ್ತಾರ, ಉಜ್ವಲತೆಗಳು ದೀಪ್ತಿಯೆನಿಸುತ್ತವೆ (ಧ್ವನ್ಯಾಲೋ. ೭೧ ಅಡಿಟಿ).
[ ಸಂ. ]

**ದೀಪ್ತಿಕೆ** (ನಾ). ದೀವಿಗೆ; ದೀಪ: ಗೃಹಸಮುಚಿತದೊಳ್ ತೊಳಗಿ ಬೆಳಗಿದುವು ದೀಪ್ತಿಕೆಗಳ್ (ಸೂಕ್ತಿಸು. ೮-೧೫೫). [ ಸಂ. ದೀಪ್ತಿಕಾ ]

**ದೀಪ್ತಿದಾನಂಗೆಯ್** (ಕ್ರಿ). ಬೆಳಕನ್ನು ನೀಡು,-ಕೊಡು: ದೀಪಮಿನ್ನೊಂದು ದೀಪಕೆ ದೀಪ್ತಿದಾನಂಗೆಯ್ವುದೆನೆ (ಶ್ರೀರಾಮಾ. ೫೮೯-೧೪೯).
[ ದೀಪ್ತಿ + ದಾನ + ಕೆಯ್$_1$ ]

**ದೀಪ್ತಿನ್ಯಾಯ** (ನಾ). ಒಂದು ಬಗೆಯ ನ್ಯಾಯ; P ನಾಟಕದಲ್ಲಿ ಶೃಂಗಾರಾದಿ ರಸಗಳನ್ನು ಉದ್ದೀಪನ (ಪರಿಪೋಷ)ಗೊಳಿಸುವ ವಸಂತಋತು, ಚಂದ್ರೋದಯ ಮೊದಲಾದ ಉದ್ದೀಪನ ವಿಭಾವಗಳಂತೆ ಒಂದು ವಿಷಯವನ್ನು ಉದ್ದೀಪಿಸುವ ನ್ಯಾಯ: ಆಯಿತೆಮ್ಮವತಾರವೀ ರಾಮಾಯಣದ ನಾಟಕಕೆ ದೀಪ್ತಿನ್ಯಾಯದವೋಲ್ (ತೊರರಾ. ೧-೦೭-೧೭). [ ದೀಪ್ತಿ + ನ್ಯಾಯ ]

**ದೀಪ್ತಿಮಂತ** (ಗು). ಕಾಂತಿಯಿಂದೊಡಗೂಡಿದ; ಪ್ರಜ್ವಲಿಸುವ: ಅವನ ದೀಪ್ತಿಮಂತವಾದ ಮಿಂಚಿನಂಥ ಆತ್ಮವನ್ನು ನನ್ನಲ್ಲಿ ಹಿಡಿದಿಡುವುದು ಶಕ್ಯವೇ (ಮುಕ್ತಿ. ೯). [ ಸಂ. ದೀಪ್ತಿಮತ್ ]

**ದೀಪ್ತೌಷಧಿ** (ನಾ). ತೀಕ್ಷ್ಣವಾದ ಔಷಧಿ; ಹೆಚ್ಚು ಪರಿಣಾಮವನ್ನುಂಟುಮಾಡುವ ಔಷಧಿ: ಆ ಪ್ರಸ್ತಾವದೊಳ್ ಫಲಪಾಕವಿರಾಮಂಗಳಪ್ಪ ಗರ್ಭಷಷ್ಠಿವ್ರೀಹಿಯವಗೋಧೂಮಾದಿ ಮಹೌಷಧಿಗಳುಂ ತಿಲಾತಸೀ ಕುಸುಂಭಾದಿ ದೀಪ್ತೌ[ಪಾಠಾಂ. ಪ್ತೌ]ಷಧಿಗಳುಂ ಯಾವನಾಳ ಕಂಗು ಕೋದ್ರವಾದಿ ಸರ್ವೌಷಧಿಗಳುಂ (ಆದಿಪು. ೮-೬೧ ವ). [ ದೀಪ್ತ + ಔಷಧಿ ]

**ದೀಪ್ಯ** (ನಾ). ೧. ನೀರಂಹಿಪ್ಪಲಿ. ೨. ಓಮ; ವಾದಕ್ಕಿ. ೩. ಜೀರಿಗೆ.
[ ಸಂ. ]

**ದೀಪ್ರ** (ಗು). ೧. ಹೊಳೆಯುವ; ಪ್ರಕಾಶಿಸುವ: ಧೂಪ ಧೂಮಾವೋದಿತಾಭ್ಯಂತರದೊಳಲಘುತರ ವಿಳಸದರುಣಮಣಿ ದೀಪ್ರ ದೀಪಾಂಕುರದೊಳಮರನರವಿಮಾನಾಪಹಾಸವಾಸಗೃಹದೊಳ್ . . . ಆತ್ಮೀಯ ಪ್ರಾಣೇಶ್ವರಿ ಸಹಿತಂ ಸುಖಸುಪ್ತನಾಗಿ (ವರ್ಧಮಾ. ೫-೨ ವ). ೨. ತೀವ್ರವಾದ; ಉಜ್ವಲವಾದ: ಹರಿ ಹರ ಹಿರಣ್ಯಗರ್ಭರೆನುರವಣೆಯಿಂ ಗೆಲ್ದ ಕಾಮನಂ ದೀಪ್ರತಪೋಭರದಿಂದುರಿಪಿದರೆನೆ ಬಿತ್ತರಿಸದರಾರ್ ವೀರಣಂದಿ ಸೈದ್ಧಾಂತಿಕರಂ (ಪಂಪಾಮಾ. ೧-೨೭); ದೀಪ್ರಸುವರ್ಣವಪ್ರವಿಪುಳಪ್ರಭೆಗಳ್ ಬಳೆದುಂಟುಮಾಡೆ ಸೂರ್ಯಪ್ರಭೆಯುಕ್ಕಿದುಕ್ಕನಿರುಳುಂ ಪಗಲುಂ . . . ಶುಭ್ರಸೌಧ ಪ್ರಭೆಗಳ್ ಶಶಿಪ್ರಭೆಯ ಮಾಡಿದ ಮಾಟಮನುಂಟುಮಾಡೆ (ಅರ್ಧನೇ. ೨-೭೯). (ನಾ). ೩. ಪ್ರಕಾಶಮಾನವಾದುದು; ಕಾಂತಿಯುತವಾದುದು: ಪರಿಖಾತ್ರಿತಯಕ್ಕೆ ಚತುಶ್ಶರಾಸನಾಂತರದೆ ಸುರಶರಾಸನಭಾಭಾಸುರಮೊಪ್ಪಿ ತೋಱುಗುಂ ಪಂಚರತ್ನಪಾಂಶೂಚ್ಚದೀಪ್ತಿದೀಪ್ರಂ ವಪ್ರಂ (ಆದಿಪು. ೬-೧೦೩). ೪. ಬೆಂಕಿ; ಅಗ್ನಿ. [ ಸಂ. ]

**ದೀರ್ಕ** (ನಾ). ಒಂದು ಬಗೆಯ ಹಣ್ಣು: ಹಲಸಿನಹಣ್ಣೋ ದೀರ್ಕನ ಹಣ್ಣೋ ಮಾವಿನಹಣ್ಣೋ ಕಲ್ಲುಸಂಪಿಗೆಹಣ್ಣೋ ಕುಯ್ಯುವುದು, ಉರುಳು ಒಡ್ಡಿ ಹುಂಡುಕೋಳಿ . . . ಹಿಡಿಯುವುದು, ಮೊದಲಾದ . . . ಸಾಹಸಗಳಲ್ಲಿ ತಿಮ್ಮಪ್ಪ ಅಣ್ಣನೊಡನೆ ಭಾಗಿಯಾಗಿ ಸಂತೋಷಪಟ್ಟಿದ್ದನು (ಮಲೆಮ. ೫೬೩). [ ? ]

**ದೀರ್ಘ** (ಗು). ೧. ಉದ್ದವಾದ ; ನೀಳವಾದ. 'ದೀರ್ಘಕೇಶ' ಪರಾ. (ನಾ). ೨. ನೀಳವಾದುದು ; ಉದ್ದವಾದುದು ; ಲಂಬವಾದುದು : "ಸಮುದಗ್ರಮುನ್ನತಂ ತುಂಗಮುಚ್ಛ್ರಿತಂ ಪ್ರಾಂಶು ದೀರ್ಘಮುಚ್ಚಂ" (ವಸ್ತುಕೋ. ೧೦೪-೩೭) : "ದೀರ್ಘಮಾಯತಂ ನೀಳಕ್ಕೆ ಪೆಸರೆನಿಕ್ಕುಂ" (ಮಂಗರಾ. ೧೩೩-೨೪). ೩. [ವ್ಯಾಕ] ಉಚ್ಚಾರಣೆಗೆ ಎರಡು ಹ್ರಸ್ವಾಕ್ಷರಗಳಷ್ಟು ಕಾಲವನ್ನು ತೆಗೆದುಕೊಳ್ಳುವ ಸ್ವರ ಮತ್ತು ಅಂಥ ಸ್ವರಸಹಿತವಾದ ವ್ಯಂಜನ : ಗಜ ದೀರ್ಘಂ ಬಿಂದು ವೃಷಭ ವೆಂ{ವ್ಯಂ}ಜನ ಶರಭಂ (ಛಂದೋಂಬು. ೧-೪೭ ಅಡಿಟ) ; ಸ್ವರ ಸಂಜ್ಞೆಕಂಗಳವರ್ದೊಂದಿರೆ ಮುಂದೆ ವಿಕಲ್ಪದಿಂ ದ್ವಿತೀಯೆಗೆ ದೀರ್ಘಂ ದೊರೆಕೊಳ್ಗುಮೆಲ್ಲಿಯುಮನುಂ ಪುರಾತನೋಕ್ತಿಗಳಂತದಲ್ಲಿ ಯಥೇಷ್ಟಂ (ಕಾವ್ಯಾವ. ೧೩೪) : ಕ್ರಮದಿಂ ಹ್ರಸ್ವಕ್ಕಂ ಹ್ರಸ್ವಮೊದವೆ ದೀರ್ಘಕ್ಕೆ ದೀರ್ಘಮೊದವೆ ತಗುಳ್ಗುಂ ಸಮಸಂದಾ ಯುಗಳಂಗಳೊಳ್ . . . ಸವರ್ಣವಿಧಾನಂ (ಶಮದ. ೭) : ವಿದಿತ ಸಮಾನಂಗಳ ಪೂರ್ವದಕ್ಕರಂ ಹ್ರಸ್ವಮದಱ ಪರದಕ್ಕರಮಂತದು ದೀರ್ಘಂ (ಶಮದ. ೯); ಸ್ವರಗಳಲ್ಲಿ ಹ್ರಸ್ವವೆಂದೂ, ದೀರ್ಘವೆಂದೂ ಎರಡು ವಿಧ (ಶಬ್ದಾದ. ೧). ೪. [ಛಂದ] ಉಚ್ಚಾರಣೆಯಲ್ಲಿ ಎರಡು ಮಾತ್ರೆಗಳ ಕಾಲವನ್ನು ತೆಗೆದುಕೊಳ್ಳುವ ಅಕ್ಷರ ; ಗುರು (–) : ಉಚ್ಚಾರಣೆಯಲ್ಲಿ ಎರಡು ಮಾತ್ರಾಕಾಲ ತಗಲುವಂಥದು ದೀರ್ಘ (ಸಂಶೋಧ. ೧೦೩). ೫. [ಸಂಗೀತ] ಇಪ್ಪತ್ತೆರಡು ವಿಧವಾದ ಶ್ರುತಿಗಮಕಗಳಲ್ಲಿ ಒಂದು: ಸ್ಫುರಿತ ಪ್ರಮಿತ ದೀರ್ಘ ಲಲಿತ . . . ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕಗಳಿಂತಲುಂ (ವಿವೇಶ. ೨೪೮). 'ಶ್ರುತಿ' ಪರಾ. ೬. [ಸಂಗೀತ] (?) : ಆ ರಾಗಂಗಳಂ ಪಾಡುವಲ್ಲಿ ಗ್ರಾಮವರ್ಜ್ಯಂಗಳಂ ತೊಱೆದು ಜನ್ಯಜನಕಂಗಳಂ ಬಳ್ಳಿಗೊಳಿಸಿ . . . ಮಂದ್ರ ಮಧ್ಯ ವೇಗ ಕುಂಚನ ಉಚ್ಚರಾನನ ಸ್ತಂಭನ ದೀರ್ಘಭೇದಗಳಿಂ ರವವಿಕಲ್ಪಗಳಂ ತೋಱಿ (ವಿವೇಶ. ೨೫೨).

**ದೀರ್ಘವಾಗು** = ದೊಡ್ಡದಾಗು ; ಉದ್ದವಾಗು : ಸೂರ್ಯೋದಯದಿಂದ ಸೂರ್ಯಾಸ್ತಮದವರೆಗೆ ಕಾಲಮಾನ ಕೆಲವು ತಿಂಗಳು ಕಡಮೆ ಕೆಲವು ತಿಂಗಳು ದೀರ್ಘವಾಗಿ ಇರುವುದಕ್ಕೆ ಈ ಓರೆಯೇ ಕಾರಣ (ಆಕಾಶ. ೧೭) ; ಅವರ ಉಪನ್ಯಾಸವು ದೀರ್ಘವಾಗಿತ್ತು, ಆದರೆ ಸ್ವಾರಸ್ಯವಾಗಿರಲಿಲ್ಲ (ರೂಢಿ). [ ಸಂ. ]

**ದೀರ್ಘಕಂಠ** (ನಾ). ೧. ಉದ್ದವಾದ ಕುತ್ತಿಗೆಯುಳ್ಳುದು. ೨. ಬಕ. ೩. ಜಿರಾಫೆ ಎಂಬ ಹೆಸರಿನ ನಕ್ಷತ್ರರಾಶಿ : ಧ್ರುವನಕ್ಷತ್ರಕ್ಕೂ ವಿಜಯಸಾರಥಿಗೂ ಮಧ್ಯೆ ಇರುವ ಕ್ಷೀಣಕಾಂತಿ ನಕ್ಷತ್ರಗಳ ರಾಶಿಯು ಕಮೆಲೊಪಾರ್ಡಲಿಸ್ ಅಂದರೆ ಜಿರಾಫೆ. ಇದನ್ನು ನಾವು ದೀರ್ಘಕಂಠನೆಂದು ಗುರುತಿಸಿದ್ದೇವೆ (ನಕ್ಷತ್ರ. ೩೦). [ ದೀರ್ಘ + ಕಂಠ ]

**ದೀರ್ಘಕರ** (ನಾ). ೧. ಉದ್ದವಾದ ತೋಳು; ಆಜಾನುಬಾಹುವಾದ ಕೈ. ೨. ನೀಳವಾದ ಸೊಂಡಿಲು. ೧, ೨ : ನಿಜಾಭ್ಯುದಯನಿವೇದ ದೀರ್ಘಕರಮೊಪ್ಪೆ ಜಗತ್ಪ್ರಿಯನಾದ ದೇವನಂಕದ ಗಣನಾಯಕಂ (ಗದಾಯು. ೧-೧೦). [ ದೀರ್ಘ + ಕರ$_3$ ]

**ದೀರ್ಘಕಾಲ** (ನಾ). ಬಹಳ ಕಾಲ ; ಹೆಚ್ಚುಕಾಲ : ಪ್ರರೂಢಮೆಂಬುದು ದೀರ್ಘಕಾಲಪ್ರವೃತ್ತಮುಮನಾದ್ಯನಿಧನಮುಪ್ಪ ಧರ್ಮಂ (ಚಾವುಂಪು. ೭); ಲೋಕವ್ಯಾಪಾರವೆಲ್ಲ ತನ್ನ ಪಾಲಿಗೆ ಸ್ತಬ್ಧವಾಯಿತೇನೋ ಎಂಬಂತೆ ದೀರ್ಘಕಾಲ ಅಮ್ಮಿ ಮಲಗಿದ್ದಳು (ಬನಶಂ. ೧೯೮).

[ ದೀರ್ಘ + ಕಾಲ ]

**ದೀರ್ಘಕಾಲಿಕ** (ಗು). ಹೆಚ್ಚು ಕಾಲದವರೆಗೆ ಇರುವ ; ಬಹಳ ಕಾಲದ: ದೀರ್ಘಕಾಲಿಕ ಯೋಜನೆಗೆ ಹೆಚ್ಚು ಹಣವನ್ನು ನಿರೀಕ್ಷಿಸಬಹುದು (ರೂಢಿ).

[ ಸಂ. ]

**ದೀರ್ಘಕೇಶ** (ನಾ). ೧. ಉದ್ದವಾದ ಕೂದಲು : ಗಂಡಸರು ದೀರ್ಘಕೇಶವನ್ನು ಹಿಂದೆ ಗಂಟುಹಾಕಿ ಪಟ್ಟವನ್ನು ಸುತ್ತಿಕೊಳ್ಳುತ್ತಿದ್ದರು (ಭಾರದ. ೦೩). ೨. ಉದ್ದವಾದ ಕೂದಲನ್ನುಳ್ಳುದು : ಸ್ನಿಗ್ಧಕೃಷ್ಣಬಹುಲದೀರ್ಘಕೇಶನುಂ . . . ಸಪ್ತದ್ವಾಸ್ಥಿ ತನುವುಪ್ಪ ವಿಜಯ ಪರ್ವತ ಗಜೇಂದ್ರಂ ಬಂದು ಮುಂದೆ ನಿಲ್ವುದುಂ (ಆದಿಪು. ೧೨-೫೬ ವ).

[ ದೀರ್ಘ + ಕೇಶ ]

**ದೀರ್ಘಕೇಶಿ** (ನಾ). ಉದ್ದವಾದ ಕೂದಲುಳ್ಳವನು : ಹಿಪ್ಪಿಗಳು ದೀರ್ಘಕೇಶಿಗಳು (ರೂಢಿ). [ ಸಂ. ದೀರ್ಘಕೇಶಿನ್ ]

**ದೀರ್ಘಕೋಶಿ** (ನಾ). = ದೀರ್ಘಕೋಶಿಕೆ. [ ಸಂ. ದೀರ್ಘಕೋಶೀ ]

**ದೀರ್ಘಕೋಶಿಕೆ** (ನಾ). ಒಂದು ಬಗೆಯ ದೊಡ್ಡ ಜಿಗಣೆ: "ದುರ್ನಾಮಾ, ದೀರ್ಘಕೋಶಿಕಾ–೨ ಆನೆಗಳ ರಕ್ತವನ್ನು ಹೀರಲುಳ್ಳ ದೊಡ್ಡ ಜಿಗಣೆ ಪೆಸರು. ಅಂದರೆ ಹೆಜ್ಜಿಗಣೆ" (ಸಿದ್ಧಾಂತಿ. ೮೪). [ ಸಂ. ದೀರ್ಘಕೋಶಿಕಾ ]

**ದೀರ್ಘಗೊಳಿಸು** (ಕ್ರಿ). ೧. ಉದ್ದವಾಗುವಂತೆ ಮಾಡು; ವಿಸ್ತರಿಸು; ಬೆಳಸು : ಈ ವಿಷಯದಲ್ಲಿ ಕಾಲವನ್ನು ದೀರ್ಘಗೊಳಿಸುವುದು ತರವಲ್ಲ (ರೂಢಿ). ೨. [ಛಂದ] ಅಕ್ಷರವನ್ನು ಎರಡುಮಾತ್ರೆಗಳ ಕಾಲಕ್ಕೆ ಅಳವಡಿಸು,—ಗುರುವನ್ನಾಗಿ ಮಾಡು : ಎರಡನೆಯ ಸಾಲಿನಲ್ಲಿ "ಸಿಡಿಲು" ಎಂಬುದಕ್ಕೂ ಇದೇ ನಾಲ್ಕುಮಾತ್ರೆಯ ಕಾಲ; ಇಲ್ಲಿಯ ಮೂರು ಲಘುಗಳಲ್ಲಿ ಯಾವುದನ್ನು ಅರ್ಥ ಕೆಡದಂತೆ ದೀರ್ಘಗೊಳಿಸುವುದು ? (ಸಮಾಲೋ. ೨೦೭). [ದೀರ್ಘ + ಕೊಳ್$_1$ + –ಇಸು$_3$]

**ದೀರ್ಘಜೀವಿ** (ನಾ). ಬಹಳ ಕಾಲ ಜೀವಿಸುವಂತಹುದು ; ಚಿರಂಜೀವಿ: ತುರಗದ ಕಿವಿಯುಂ ಪಾಳಿಸಿ ಸುರಗೋಪಚ್ಛಾಯೆಯಿಂದಮರುಣಜಲಂ ಪಾಯ್ತುರುತಿರೆ ದೀರ್ಘಜೀವಿ ನೆತ್ತರ್ ಸುರಿಯದ ಕಿವಿಯಿಂದಮಲ್ಪಜೀವಿತನಕ್ಕುಂ (ಅಶ್ವಶಾ. ೫-೨೫). [ ದೀರ್ಘ + ಜೀವಿ$_1$ ]

**ದೀರ್ಘತಮವೃತ್ತ** (ನಾ). [ರೇಖಾಗ] ಒಂದು ಶಂಕುವನ್ನು ಅದರ ಆಧಾರಕ್ಷೇತ್ರಕ್ಕೂ ಮೈಗೂ ಇರುವ ಕೋನಕ್ಕಿಂತ ಹೆಚ್ಚಾದ ಕೋನದಲ್ಲಿ ಒಂದು ಸಮಕ್ಷೇತ್ರದಿಂದ ಕತ್ತರಿಸಿದರೆ ಉಂಟಾಗುವ ವಕ್ರರೇಖೆ : ಬೈಸಿಕಲ್ ಲಾಂದ್ರದಿಂದ ನೆಲದ ಮೇಲೆ ಬಿದ್ದಿರುವ ಬೆಳಕಿನ ಪರಿಧಿಯು ದೀರ್ಘತಮವೃತ್ತಕ್ಕೆ ಉದಾಹರಣೆ (ಭೌತವಿ. ೩೫).

[ ದೀರ್ಘತಮ$_0$ + ವೃತ್ತ ]

**ದೀರ್ಘತರವೃತ್ತ** (ನಾ). [ರೇಖಾಗ] ಶಂಕುವಿನ (ಓರೆಯ) ಪಕ್ಕಕ್ಕೆ ಸಮಾನಾಂತರವುಳ್ಳ ಯಾವುದಾದರೊಂದು ಸಮತಲಕ್ಷೇತ್ರದಿಂದ ಆ ಶಂಕುವನ್ನು ಕತ್ತರಿಸಿದರೆ ಆಗುವ ಸಮತಲ ವಕ್ರರೇಖೆ ; ಪರವಲಯ : ಒಂದು ಕಲ್ಲನ್ನು ಓರೆಯಾಗಿ ಮೇಲಕ್ಕೆಸೆದರೆ ಅದರ ಪಥವು ದೀರ್ಘತರವೃತ್ತವಾಗಿರುವುದು (ಭೌತವಿ. ೩೫). [ದೀರ್ಘತರ$_0$ + ವೃತ್ತ]

**ದೀರ್ಘತುಂಡಿ** (ನಾ). ೧. ಉದ್ದವಾದ ಮೂತಿಯುಳ್ಳುದು; ನೀಳವಾದ ಮುಖವುಳ್ಳುದು. ೨. ಸೊಂಡಿಲಿ. [ ಸಂ. ದೀರ್ಘತುಂಡೀ ]

**ದೀರ್ಘತೆ** (ನಾ). ಉದ್ದವಾಗಿರುವಿಕೆ ; ನೀಳವಾಗಿರುವಿಕೆ.

[ ಸಂ. ದೀರ್ಘತಾ ]

**ದೀರ್ಘತ್ರಿಭುಜೆ** (ನಾ). [ರೇಖಾಗ] ಸಮದ್ವಿಭುಜ ತ್ರಿಭುಜ: ಇದ್ದೆಸೆಯ ಭುಜವು ಸಮವಿರೆ ಮಧ್ಯವ ತಾನಳೆದು ಉಳಿದ ಭುಜವೊಂದನು ವಾನ್ತರ್ಧಿಸಿ ಗುಣಿಸಲುಂ ಕಂಬವು ನಿರ್ಧರದಿಂ ದೀರ್ಘತ್ರಿಭುಜೆಗಕ್ಕುಂ ನಿರುತಂ (ಕ್ಷೇತ್ರಗ. ೧೨-೧೦). [ ದೀರ್ಘ + ತ್ರಿಭುಜೆ ]

**ದೀರ್ಘದಂಡಪ್ರಣಾಮ** (ನಾ). (ಕೋಲಿನಂತೆ) ಉದ್ದವಾಗಿ ಭೂಮಿಯ ಮೇಲೆ ಮಲಗಿ ಮಾಡುವ ನಮಸ್ಕಾರ ; ಸಾಷ್ಟಾಂಗ ನಮಸ್ಕಾರ : ಶೀನಪ್ಪನಾಯಕ ದೀರ್ಘದಂಡಪ್ರಣಾಮಗಳನ್ನು ಮಹಾಪ್ರಭುಗಳಿಗೆ ಅರ್ಪಿಸಿ . . . ಹೊರಬಿದ್ದ (ಹೇಮಕೊ. ೧೭). [ ದೀರ್ಘ + ದಂಡಪ್ರಣಾಮ ]

**ದೀರ್ಘದರ್ಶಿ** (ನಾ). ೧. ಮುಂದಾಲೋಚನೆಯುಳ್ಳವನು. ೨. ಭೂತ ಮತ್ತು ಭವಿಷ್ಯತ್ತನ್ನು ಕುರಿತು ಯೋಚಿಸುವವನು; ಹಿಂದು ಮುಂದು ಕುರಿತು ಆಲೋಚಿಸುವವನು: ರಾಜರ್ಷಿಯಾ ದೀರ್ಘ ದರ್ಶಿಯಾ ಸಮದರ್ಶಿ ತಾಂ ಸಮಬುದ್ಧಿಯಿಂ ದರ್ಪದಿಂ ಪಾಲಿಸಿರ್ದನು ರಾಜ್ಯಮಂ (ಶ್ರೀರಾಮಾ. ೬-೧೭೫). ೩. ವಿವೇಕಿ; ಬುದ್ಧಿವಂತ. [ ಸಂ. ದೀರ್ಘದರ್ಶಿನ್ ]

**ದೀರ್ಘದರ್ಶಿನಿ** (ನಾ). ಮುಂಬರುವುದನ್ನು ಕುರಿತು ಆಲೋಚಿಸುವ ವಳು; ಮುಂದಾಲೋಚನೆಯುಳ್ಳವಳು: ಮೂರ್ಛೆವೋದತ್ತಿಗೆಯ ನೋಡಿ ಸೌಮಿತ್ರಿ "ಅಗ್ರಜನೆ, ದೀರ್ಘದರ್ಶಿನಿ ದಿಟಂ ಆ ಕೈಕೆ!" ಎಂದಾರ್ಭಟಿಸಿ ಬಾಣಮಂ ಪೂಡಿ ರಯುವನೆಚ್ಚನ್ ರಾಕ್ಷಸಾಕೃತಿಗೆ (ಶ್ರೀರಾಮಾ. ೧೮೦-೧೪೭). [ ಸಂ. ದೀರ್ಘದರ್ಶಿನೀ ]

**ದೀರ್ಘದೃಷ್ಟಿ** (ನಾ). ೧. ಮುಂದಾಲೋಚನೆ; ದೂರದೃಷ್ಟಿ. ೨. ವಿವೇಕ; ಮುಂಜಾಗ್ರತೆ. ೩. ಮುಂದೆ ನಡೆಯುವುದನ್ನು ತಿಳಿಯುವ ಶಕ್ತಿಯುಳ್ಳವನು; ದೂರದೃಷ್ಟಿಯುಳ್ಳವನು: "ಮುಂದರಿವವನು ದೀರ್ಘದೃಷ್ಟಿಯೆಂಬುದು" (ಹಲಾಯು. ೬೩-೩೨೦); "ದೀರ್ಘದೃಷ್ಟಿಯೆನೆ ಮುಂದರಿವವಂ" (ಮಂಗರಾ. ೭೦-೧೯); ಪ್ರಜೆಗಳು . . . ಬಿರುಗಣ್ಣಿಳ ದೀರ್ಘದೃಷ್ಟಿಯಿಂದೀಕ್ಷಿಸುತ್ತ (ಸುಗುಗಂ. ೮೫-೫). 'ದೀರ್ಘದರ್ಶಿ' ಪರಾ. [ ದೀರ್ಘ + ದೃಷ್ಟಿ ]

**ದೀರ್ಘದೇಹಿ** (ನಾ). ೧. ದೊಡ್ಡ ಶರೀರವುಳ್ಳವನು; ಗಾತ್ರ ವಾಗಿರುವವನು; ಮಹಾಕಾಯ: ರಕ್ಕಸರನಿಬರೆಲ್ಲರುಂ ದೀರ್ಘ ದೇಹಿಗಳ್ವೆಕ್ಕಸದ ಕೋಪಿಗಳ್ (ಜೈಮಿಭಾ. ೦೬-೨೨). ೨. ಹೆಗ್ಗಣ: "ದೀರ್ಘದೇಹೀ, ಮೂಷಿಕಾ–೨ ಹೆಗ್ಗಣಗಳ ಹೆಸರು" (ಸಿದ್ಧಾಂತಿ. ೧೩೭). [ ಸಂ. ದೀರ್ಘದೇಹಿನ್ ]

**ದೀರ್ಘದ್ವೇಷ** (ನಾ). ಬಹಳ ಕಾಲದಿಂದಿರುವ ವೈರ; ಬದ್ಧವೈರ: ದೀರ್ಘದ್ವೇಷವಂ ಮಾಡಲಾಗದು (ವಿವೇಕ. ೦೫೦); ದೀರ್ಘದ್ವೇಷವು ನಮ್ಮ ಹಳ್ಳಿಯವರಿಗೆ ಸ್ವಲ್ಪವೂ ಬೇಕಾಗಿರಲಿಲ್ಲ (ಹುಟ್ಟಿಹ. ೮೦). [ ದೀರ್ಘ + ದ್ವೇಷ ]

**ದೀರ್ಘದ್ವೇಷಿ** (ನಾ). ಬಹಳ ಕಾಲದಿಂದ ವೈರವುಳ್ಳವನು; ಬದ್ಧವೈರಿ. [ ಸಂ. ದೀರ್ಘದ್ವೇಷಿನ್ ]

**ದೀರ್ಘಧನು** (ನಾ). ಉದ್ದವಾದ ಬಿಲ್ಲು: ಪೇರುರಂ ಕಟಿಯ ನಡು ಕೊಬ್ಬಿದ ಪೆಗಲು ಪಿಡಿದ ಕೂರಂಬು ದೀರ್ಘಧನುವೆರಸಿ ನೆರೆದುದಂ ಕಾನನಾರಿಗಳೆನಿಪ್ಪ ಶಬರಾಧಿಪರು (ಹಚಕಾ. ೫-೨). [ ದೀರ್ಘ + ಧನು ]

**ದೀರ್ಘನಾಡಿ** (ನಾ). ಶರೀರದ ಒಂದು ನಾಡಿಯ ಹೆಸರು: ಮಯೂರ ನಾಡಿ ... ದೀರ್ಘನಾಡಿ ... ಸಂಕೋಚ ನಾಡಿ ಇಂತೀ ನಾಡಿಗಳೊಳಗಾದ ಶರೀರದಲ್ಲಿ ತೋರುವ ನಾಡಿ ಜೀರ್ಣಪರ್ಣದಂತೆ (ಶರಜ. ೪೮೦). [ ದೀರ್ಘ + ನಾಡಿ$_1$ ]

**ದೀರ್ಘನಿದ್ರಿತ** (ನಾ). ಮರಣ ಹೊಂದಿದವನು; ಸತ್ತವನು: ಕೆಲವು ಕಾಲದಿನಾತನ ತಂದೆ ಮಹಾದ್ರುಮಂ ದೀರ್ಘನಿದ್ರಿತನಪ್ಪುದುಂ ಕಚದ್ರುಮಂ ರಾಜಪದವಿಯೊಳ್ ನಿಂದು (ಶಂಜಕಂ. ೨೭-೨೨). [ ಸಂ. ]

**ದೀರ್ಘನಿದ್ರೆ** (ನಾ). ಸಾವು; ಮರಣ: "ನಿಧನಂ, ನಾಶಃ, ಮೃತ್ಯುಃ . . . ದೀರ್ಘನಿದ್ರಾ–ಈ ೧೨ ಸಾವು" (ಹಲಾಯು. ೦೦೩-೬); "ಮೃತ್ಯು ಮರಣಂ ದೀರ್ಘನಿದ್ರೆ . . . ಎನೆ ಸಾವಕ್ಕು" (ಮಂಗರಾ. ೧೧೭-೩); ಈಗಳ್ ನಿನಗಿಂತೀ ದೀರ್ಘನಿದ್ರೆಯುಂ ಮಾಡಿದನೇ (ಗದಾಯು. ೫-೨೦); ಮಚಿದೊಜಗಿದಂತಲ್ಲಿ ದೀರ್ಘನಿದ್ರೆಯೊಳಿರಲು ಹೊಚಗೆ ಶಶಿಧರನಿತ್ತ ಹಸಿದೆನೆಂದೆನುತಿರಲು (ಇಳೆರ. ದೇ. ೫೪-೦೭); ಯಮಧರ್ಮರಾಜನು ಅವನಿಗೆ ದೀರ್ಘನಿದ್ರೆ ತಂದಿದ್ದಾನೆ (ವಚಭಾ ೩೪೪). [ದೀರ್ಘ + ನಿದ್ರೆ]

**ದೀರ್ಘಪೃಷ್ಠ** (ನಾ). ಹಾವು: "ಆಶೀವಿಷಃ, ದೀರ್ಘಪೃಷ್ಠಃ–ಈ ೨ ನಿಮಿರ್ದ ಪಾ(ಹಾ)ವು" (ಹಲಾಯು. ೦೦೫-೧೯). [ ದೀರ್ಘ + ಪೃಷ್ಠ ]

**ದೀರ್ಘಪ್ರಜ್ಞ** (ನಾ). ಆಳವಾಗಿ ಆಲೋಚನೆ ಮಾಡುವವನು; ಮುಂದಾಲೋಚನೆ ಮಾಡುವವನು: ಅಡಕಿತಲ್ಲಿಯು ಧನ ಪಯೋಧಿಯ ಕಡೆಯ ಕೋಟೆಯ ಮುಚಿಯಲವನೆದೆಯೊಡೆದು ದೀರ್ಘಪ್ರಜ್ಞನಿತ್ತನು ಬೇಹ ವಸ್ತುಗಳ (ಕುವ್ಯಾಸ. ೪-೪). [ ದೀರ್ಘ + ಪ್ರಜ್ಞ ]

**ದೀರ್ಘಪ್ರಣಾಮ** (ನಾ).=ದೀರ್ಘದಂಡಪ್ರಣಾಮ: ಸೇಟ ಗಿರಿದಾಸರು ದೀರ್ಘಪ್ರಣಾಮ ಹಾಕಿದರು (ಕಂಬಹು. ೯೩). [ ದೀರ್ಘ + ಪ್ರಣಾಮ ]

**ದೀರ್ಘರೋಗ** (ನಾ). ಬಹಳ ಕಾಲದ ರೋಗ; ಹಳೆಯ ಖಾಯಿಲೆ: ನಾಲಗೆಯು ಅತಿದೀರ್ಘವಾಗಿಯಾದರೂ ಅತಿಗಿಡ್ಡನಾಗಿಯಾದರೂ ಇದ್ದರೆ ದೀರ್ಘರೋಗದಿಂದ ಮರಣವೆಂದರಿವುದು (ಸಕವ್ಯ. ೧೪). [ ದೀರ್ಘ + ರೋಗ ]

**ದೀರ್ಘರೋಷಿ** (ನಾ). ಬಹಳ ಕಾಲ ಕ್ರೋಧವನ್ನಿಟ್ಟುಕೊಂಡಿರುವ ವನು: ಜ್ಞಾತಿ ಬಹಿಷ್ಕೃತಂ ವ್ಯಸನಿ ದೈವಪರಂ ಶಿಶು ದೀರ್ಘರೋಷಿ ಸತ್ಯೇತರನಸ್ಥಿರಂ . . . ಎನಿಪ ನರಪನೊಳೆಂದುಂ ವಿಜಿಗೀಷುಗಳಪ್ಪ ಮಹೀಭುಜರೆಂದುಂ ಸಂಧಿ ಮಾಡರ್ (ಶಂಜಕಂ. ೨೨೦-೭). [ ಸಂ. ದೀರ್ಘರೋಷಿನ್ ]

**ದೀರ್ಘಲಲಿತ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು: ಸರಿತ ಪ್ರಮಿತ ದೀರ್ಘ ಲಲಿತ . . . ದೀರ್ಘ ಲ [ಪಾಠಾಂ. ಲಾ]ಲಿತ . . . ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕ ಗಳೆಂತಲುಂ (ವಿವೇಕ. ೨೪೮). 'ಶ್ರುತಿ' ಪರಾ. [ ದೀರ್ಘ + ಲಲಿತ ]

**ದೀರ್ಘವರ್ತುಲ** (ನಾ). ಅಂಡಾಕಾರವಾದ ವೃತ್ತ; ದೀರ್ಘವಾದ ಗೋಳ: ಅದರ ಎಲೆಗಳು ದೀರ್ಘವರ್ತುಲಾಕಾರ (ಮುಂಬಯಿ. ೪-೫೪). [ ದೀರ್ಘ + ವರ್ತುಲ ]

**ದೀರ್ಘವೃಂತ** (ನಾ). ಉದ್ದವಾದ ಕಾಂಡವನ್ನುಳ್ಳುದು; ಹೆಮ್ಮರ: "ಮಂಡೂಕಪರ್ಣಃ . . . ದೀರ್ಘವೃಂತಃ, ಕುಟನ್ನಟಃ, ಶೋಣಕಃ, ಅರಲುಃ–೧೨ ಹೆಮ್ಮರದ ಹೆಸರುಗಳು" (ಸಿದ್ಧಾಂತಿ. ೦೨೫). [ ದೀರ್ಘ + ವೃಂತ ]

**ದೀರ್ಘವೃತ್ತ** (ನಾ). ಅಂಡಾಕಾರದ ಸುತ್ತು,–ಗೋಳ: ಭೂಮಿಯು ಸೂರ್ಯನ ಸುತ್ತು ತಿರುಗುವ ಹಾದಿಯು, ಸರಿವೃತ್ತಾಕಾರವಾಗಿರದೆ, ದೀರ್ಘವೃತ್ತವಾಗಿದೆ (ಬಾಲಪ್ರ. I, ೩೦೦); ದೀರ್ಘವೃತ್ತ (Ellipse) ವು ಭಾರತೀಯರಿಗೆ ವೇದಗಳ ಕಾಲದಲ್ಲಿಯೇ ತಿಳಿದಿತ್ತು (ತತ್ತ್ವಪ್ರಾ. ೪೭೦). [ ದೀರ್ಘ + ವೃತ್ತ$_1$ ]

**ದೀರ್ಘವ್ಯಾಧಿ** (ನಾ).=ದೀರ್ಘರೋಗ: (Chronic Complaint. ಇಂಕನಿ). [ ದೀರ್ಘ + ವ್ಯಾಧಿ ]

**ದೀರ್ಘಶಯನ** (ನಾ). = ದೀರ್ಘನಿದ್ರೆ. 'ದೀರ್ಘಶಯನಂಗೆಯ್' ಪರಾ. [ ದೀರ್ಘ + ಶಯನ ]

**ದೀರ್ಘಶಯನಂಗೆಯ್** (ಕ್ರಿ). ಸಾವನ್ನು ಹೊಂದು; ಮರಣವನ್ನು ಹೊಂದು: ಏರ್ಗಳಿಂದೊರ್ಗುಡಿಸಿ ಸಾರಥಿ ಬಿಳಲ್ಕೆ ಕೆನ್ನೀರ್ಗಾರಿ ದೀರ್ಘಶಯನಂಗೆಯ್ಯೆ ಕುದುರೆಗಳ್ನೆಗೋಲ ಪೋರ್ಗಳಾ ನೃಪನಂಗ ದೊಳ್ಕಾಣಿಸಿದುವು ಜಾಳಂಧ್ರದಂತೆ (ಜೈಮಿಭಾ. ೪-೩೫). [ ದೀರ್ಘಶಯನ + ಕೆಯ್$_1$ ]

**ದೀರ್ಘಶ್ಮಶ್ರು** (ನಾ). ನೀಳವಾದ ಗಡ್ಡ,–ದಾಡಿ: ಗಂಡಸರು ದೀರ್ಘಕೇಶ ವನ್ನು ಹಿಂದೆ ಗಂಟುಹಾಕಿ ಪಟ್ಟವನ್ನು ಸುತ್ತಿಕೊಳ್ಳುತ್ತಿದ್ದರು ಮತ್ತು ದೀರ್ಘಶ್ಮಶ್ರು ಬೆಳಸಿ ಮೀಸೆಯನ್ನು ಮಾತ್ರ ತೆಗೆಸುತ್ತಿದ್ದರು (ಭಾರದ. ೧೩). [ ದೀರ್ಘ + ಶ್ಮಶ್ರು ]

**ದೀರ್ಘಶ್ರುತಿ** (ನಾ). ನಿಡಿದಾದ ನಾದ ; ಬಹುದೂರದವರೆಗೆ ಕೇಳಿಸುವಂತಹ ನಾದ : ನಾತಿದೂರದೊಳೊಂದು ಪೊಣ್ಮಿದುದು, ಸೀಳ್ವ ಪೋಲ್ ವನ್ನನಿಶ್ಶಬ್ದಮಂ ದೀರ್ಘಶ್ರುತಿಯ ಸೀಳ್ (ಶ್ರೀರಾಮಾ. ೫೧-೧೬೯). [ ದೀರ್ಘ + ಶ್ರುತಿ ]

**ದೀರ್ಘಶ್ವಾಸ** (ನಾ). ನಿಟ್ಟುಸಿರು : ಅಲಘ್ವಂತರಪರಿವೇದನಾವಿಹ್ವಲಿತಕಂಠಗತಾತ್ಮನೂರ್ಧ್ವಸ್ಖಲಿತ ದೀರ್ಘಶ್ವಾಸನಿದ್ದನು ಕೌರವರ ರಾಯ (ಕುವ್ಯಾ.ಗ. ೧೧-೨). [ ದೀರ್ಘ + ಶ್ವಾಸ ]

**ದೀರ್ಘಸತ್ರ** (ನಾ). ೧. ಬಹು ಸಮಯದವರೆಗೆ ನಡೆಯುವ ಯಾಗ ; ಸೋಮಯಜ್ಞ : ಋಷಿಗಳು ಮತ್ತು ರಾಜರ್ಷಿಗಳು ಮಾಡುತ್ತಿದ್ದ ದೀರ್ಘಸತ್ರಯಾಗಗಳಲ್ಲಿ ಸೂತರು ಈ ಪುರಾಣಗಳನ್ನು ಹೇಳುತ್ತಿದ್ದರು (ಭಾರದ. ೧೩೮). ೨. ಬಹುಕಾಲ ಯಾಗ ಮಾಡುವವನು. [ ದೀರ್ಘ + ಸತ್ರ ]

**ದೀರ್ಘಸುಮಂಗಲಿ** (ನಾ). ಬಹುಕಾಲ ಐದೆಯಾಗಿರುವವಳು ; ಬಹುಕಾಲ ಗಂಡನನ್ನು ಹೊಂದಿರುವವಳು ; ಮುತ್ತೈದೆ : ಬ್ರಾಹ್ಮಣರಿಗೂ ಮುದುಕರಿಗೂ ಅತ್ತೆಮಾವಂದಿರಿಗೂ ನಮಸ್ಕರಿಸಿ, ಅವರಿಂದ 'ದೀರ್ಘಸುಮಂಗಲಿಯಾಗು' ಎಂದು ಆಶೀರ್ವಾದ ಪಡೆದಳು (ಪಠಭಾ. ೧೬೯). [ ಸಂ. ದೀರ್ಘಸುಮಂಗಲೀ ]

**ದೀರ್ಘಸೂತ್ರ** (ನಾ). ೧. ತಡಮಾಡುವವನು ; ಸಾವಕಾಶವಾಗಿ ಕೆಲಸ ಮಾಡುವವನು ; ಜಡ ; ಆಲಸಿ : "ಅಳಸಂ ಮಂದಂ ಜಡಂ ಮಂಥರನೆನಿ[ಪನವನುಂ] ಶೀತಲಂ ದೀರ್ಘಸೂತ್ರಂ" (ವಸ್ತುಕೋ. ೧೧೧-೧೧). ೨. ಉದ್ದವಾದ ಎಳೆಗಳುಳ್ಳುದು, ೧, ೨ : ಎಳೆಯುಳ ನಳಿತೋಳುಂ ದುದಳಿಪೆನೆನುತ್ತೆಳಸಿ ತಳೆಯುದಳಿಂ ಜಲದೊಳ್ಳುಗಿತು ಮೃಣಾಳಮಿಷ್ಟಮನಿಳೆಯೊಳ್ಳೆ ದೀರ್ಘಸೂತ್ರನೇಂ ಪಡೆದಪನೇ (ರಾಜಶೇ. ೭-೪೧). [ ದೀರ್ಘ + ಸೂತ್ರ ]

**ದೀರ್ಘಸೂತ್ರಿ** (ನಾ). ಸಾವಕಾಶವಾಗಿ ಕೆಲಸ ಮಾಡುವವನು; ವಿಳಂಬಿ : "ದೀರ್ಘಸೂತ್ರೀ, ಜಡಕ್ರಿಯಃ-ಈ ೨ ತಡೆದು ಗೆಯ್ವವಂ" (ಹಲಾಯು. ೬೩-೨೨೮) : ದೀರ್ಘಸೂತ್ರಿಗಳಿವರ ಸಂಗದಿಂ ಕಿಡುವುದೆ ದಿಟಂ ಕವ್ವ ಕಜ್ಜಂ (ಶ್ರೀರಾಮಾ. ೩೧೨-೨೧). [ ಸಂ. ದೀರ್ಘಸೂತ್ರಿನ್ ]

**ದೀರ್ಘಸ್ವರ** (ನಾ). [ವ್ಯಾಕ] ಉಚ್ಚಾರಣೆಗೆ ಎರಡು ಹ್ರಸ್ವಾಕ್ಷರಗಳಷ್ಟು ಕಾಲವನ್ನು ತೆಗೆದುಕೊಳ್ಳುವ ಸ್ವರ : ಉಚ್ಚಾರಣೆಗೆ ಹೆಚ್ಚು ಕಾಲ ಬೇಕಾಗುವ ಆ, ಈ, ಊ, ೠ, ಏ, ಓ ಎಂಬುವಕ್ಕೆ ದೀರ್ಘಸ್ವರಗಳೆಂದೂ ಹೆಸರು (ಮಧ್ಯಕು. ೧೩). [ ದೀರ್ಘ + ಸ್ವರ ]

**ದೀರ್ಘಾಕಾರ** (ನಾ). ೧. ಎತ್ತರವಾದ ಆಕಾರ. ೨. ಎತ್ತರವಾದ ಆಕಾರವುಳ್ಳವನು : ಕಫಾತ್ಮಂ ದೀರ್ಘಾಕಾರಂ ಸುಬುದ್ಧಿ ಮೇದಸ್ವಿರಂ ನಸುಕೆಂಚತಲೆಯವಕ್ಕುಂ ಜೀವಂ (ಜಾತಕ. ೨-೨೩). [ ದೀರ್ಘ + ಆಕಾರ ]

**ದೀರ್ಘಾಕ್ಷರ** (ನಾ). = ದೀರ್ಘ ೩ : ಉಭಯಮಾತ್ರಂ = ಎರಡು ಮಾತ್ರೆಯನುಳ್ಳುದು, ದೀರ್ಘಂ = ದೀರ್ಘಾಕ್ಷರಂ (ಅಪ್ಪುದು) (ಶಮದ. ೧೧ ಟೀಕೆ). [ ದೀರ್ಘ + ಅಕ್ಷರ ]

**ದೀರ್ಘಾದೇಶ** (ನಾ). [ವ್ಯಾಕ] ಒಂದು ಸ್ವರಕ್ಕೆ ಪ್ರತಿಯಾಗಿ ಮತ್ತೊಂದು ದೀರ್ಘಸ್ವರವು ಬರುವುದು : ತುದಿಯೊಳ್ ದೀರ್ಘಾದೇಶಂ ಪೊದಟ್ಟು ಷಷ್ಠೀವಿಭಕ್ತಿಗೆರೆಬರ ಮತದಿಂ ಪುದಿದಿರ್ಕುಂ (ಕಾವ್ಯಾವ. ೧೩೬). [ ದೀರ್ಘ + ಆದೇಶ ]

**ದೀರ್ಘಾಯಿತ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು : ಸ್ಫುರಿತ . . . ದೀರ್ಘಾಯಿತ [ಪಾಠಾಂ. ದೀರ್ಘಿತ] . . . ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕಗಳೆಂತಲುಂ (ವಿವೇಕ. ೨೪೮). 'ಶ್ರುತಿ' ಪರಾ. [ ಸಂ. ]

**ದೀರ್ಘಾಯು** (ನಾ). ೧. ಹೆಚ್ಚು ಕಾಲ ಬದುಕಿರುವಿಕೆ ; ಬಹಳ ಕಾಲದ ಬಾಳು: ಮಾಡುಗೆ . . . ಈಶನಿಷ್ಟಸುಖಮಂ ದುರ್ಗಂಗೆ ದೀರ್ಘಾಯುಮಂ (ಪಂಚತಂ. ೧-೮) ; ಕುಡುಗೆ ಕಂದರ್ಪಂಗೆ ದೀರ್ಘಾಯುಮಂ (ಲೀಲಾವ. ೩-೭೧) ; ಎಮಗೀ ಯುಗಕೆ ನೀವಲ್ಲದೆ ದೀರ್ಘಾಯುವಂ ಕೊಡುವವನ ದಾವಂ ವೇಮನಾರಾಧ್ಯ (ಬಸಪು. ೯೬-೪೧) ; ಮಿಗೆ ದೀರ್ಘಾಯುವಿರೆ ಮುನಿದು ಕಲಿ ಜವರಾಯಂ ಕೊಲಲಾಜಂ (ಹಮ್ಮಿರ. ೮-೨೮). ೨. ಹೆಚ್ಚು ಕಾಲ ಬದುಕಿರುವವನು : ದೊರೆಕೊಂಡುದಧಿಯೋಗಂ ನರಪತಿ ದೀರ್ಘಾಯು ವಿಭವಸಂಯುತನಭಯಂ ನಿರುಜಂ ಸುಖಾನ್ವಿತಂ ಜಿತವಿರೋಧಿ ಕಾನೆನಿಸಿ ವರ್ತಿಕುಂ (ಜಾತಕ. ೧೪-೧೧); ಭಾವಿಸಿ ಪರಸಿದಡೆ ದೀರ್ಘಾಯುವಾಗಿರೆ ಕರುಣಿಸಬೇಕು (ಬಸಪು. ೯೬-೧೭). [ ಸಂ. ]

**ದೀರ್ಘಾಯುಷಿ** (ನಾ). = ದೀರ್ಘಾಯು ೨ : ಹಿರಿಯರು ದೀರ್ಘಾಯುಷಿಯಾಗು ಎಂದು ಆಶೀರ್ವದಿಸಿದರು (ರೂಢಿ). [ ಸಂ. ದೀರ್ಘಾಯುಷೀನ್ ]

**ದೀರ್ಘಾಯುಷ್ಯ** (ನಾ). = ದೀರ್ಘಾಯು ೧ : ವಜ್ರವೃಷಭ ನಾರಾಚಾಸ್ಥಿ ಸಂಧಿಬಂಧಮುಂ . . . ಲಕ್ಷಸಮಾಸಮಿತಾನಪವರ್ತಿತ ದೀರ್ಘಾಯುಷ್ಯಮುಂ ತನಗನುಸಂಗತಮಾಗೆ (ಶಾಂತಿಪು. ೧೧-೭೪ ವ) ; ಪ್ರಾತಃಕಾಲದಲ್ಲಿ ಏಳದೆ ಬಹಳ ಹೊತ್ತಿನ ತನಕ ಮಲಗಿ ನಿದ್ದೆ ಮಾಡುವವರು ದೀರ್ಘಾಯುಷ್ಯವನ್ನೂ ಘನತೆಯನ್ನೂ ಪಡೆಯಲಾರರು (ಮುಂಬಯಿ. ೪-೧೯೧). [ ದೀರ್ಘ + ಆಯುಷ್ಯ ]

**ದೀರ್ಘಾಯುಸ್ಸು** (ನಾ). ೧. = ದೀರ್ಘಾಯು ೧ : ದೀರ್ಘಾಯುಸ್ಸಿಗಾಗಿ ಪ್ರಾರ್ಥನೆಯಿದ್ದರೂ ಐಹಿಕವಾದ ಪಾರ್ಥಿವಜೀವನವೆ ಶಾಶ್ವತವೆಂದು ಅವರು ಅರಿಯಲಿಲ್ಲ (ಋಕ್ಸಾರ. ೮೦ ಟೀಕೆ). ೨. ಕಾಗೆ. ೩. ಮಾರ್ಕಂಡೇಯ. [ ಸಂ. ದೀರ್ಘಾಯುಸ್ ]

**ದೀರ್ಘಾಲೋಚನೆ** (ನಾ). ಆಳವಾದ ಯೋಚನೆ,-ಚಿಂತನೆ : "ಏನೇ ಮಂಗ್ಲೀ . . . ಭಾಳ ದೀರ್ಘಾಲೋಚನೆ ಮಾಡ್ತಾ ಇರೋ ಹಾಗಿದೆ!" ಎಂದು ನಗೆಯಾಡಿದನು (ಸರ್ವಮಂ. ೩೧೯) : ಹೂವಯ್ಯ . . . ತಾನು ಸೀತೆಮನೆಯಲ್ಲಿ ಕೇಳಿದ ಒಂದು ವಿಚಾರವನ್ನು ಕುರಿತು ದೀರ್ಘಾಲೋಚನೆ ಮಾಡತೊಡಗಿದ್ದನು (ಕಾನೂರು. ೫೫೯). [ದೀರ್ಘ + ಆಲೋಚನೆ ]

**ದೀರ್ಘಾವಧಿ** (ನಾ). ಬಹಳ ಕಾಲ,-ಅವಧಿ : ಈ ಕೆಲಸಕ್ಕೆ ದೀರ್ಘಾವಧಿ ಬೇಕು (ರೂಢಿ).

**ದೀರ್ಘಾವಧಿ ಬೆಳೆ**=ಬೆಳೆಯುವುದಕ್ಕೆ ಹೆಚ್ಚು ಕಾಲ ತೆಗೆದುಕೊಳ್ಳುವ ಬೆಳೆ : ಈಗ ಬಳಕೆಗೆ ಬಂದಿರುವ ಹೊಸ ಬೇಸಾಯ ಪದ್ಧತಿಯಿಂದ ದೀರ್ಘಾವಧಿ ಬೆಳೆಗಿಂತ ಅಲ್ಪಾವಧಿ ಬೆಳೆಗೆ ಪ್ರೋತ್ಸಾಹ ಹೆಚ್ಚಿದೆ (ರೂಢಿ). **ದೀರ್ಘಾವಧಿ ಯೋಜನೆ** = ಹೆಚ್ಚು ಕಾಲ ತೆಗೆದುಕೊಳ್ಳುವ ಯೋಜನೆ : ಪಂಚವಾರ್ಷಿಕಯೋಜನೆಯ ಜೊತೆಗೆ ದೀರ್ಘಾವಧಿಯೋಜನೆಗಳು ಅಗತ್ಯವೆಂಬುದನ್ನು ನಾವು ಮನಗಂಡಿದ್ದೇವೆ (ರೂಢಿ). **ದೀರ್ಘಾವಧಿ ಸಾಲ** = ಹೆಚ್ಚು ಕಾಲದವರೆಗೆ ಕಂತುಗಳನ್ನು ವಿಸ್ತರಿಸಿದ ಸಾಲ ; ವಾಯಿದೆ ಹೆಚ್ಚು ಇರುವ ಸಾಲ : ಬ್ಯಾಂಕುಗಳು ರೈತರಿಗೆ ಅಲ್ಪಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ಒದಗಿಸುತ್ತವೆ (ರೂಢಿ).

[ ದೀರ್ಘ + ಅವಧಿ ]

**ದೀರ್ಘಿಕೆ** (ನಾ). ೧. ಉದ್ದವಾದ ಕೊಳ : ಕುಂದದೆ ಪೆರ್ಚುವ ತೋಯದಿಂದಮಾ ನಗರದ ಬಾವಿಪೊಕ್ಕರಣೆ ದೀರ್ಘಿಕೆ . . . ಪಳ್ಳಮೊಳವೆಂಬ ಜಲಾಶಯಮಿಂತು ಸುತ್ತಲುಂ (ಪುಷ್ಪಪು. ೨-೫೪) ; ಬಗರಗೆ ದೀರ್ಘಿಕೆ ಹೊಕ್ಕರಣೆಯ ಬಾವಿ . . . ಪೂಗೊಳನಿಲ್ಲದ ನಗರವಿಲ್ಲಾ ನಾಡೊಳಗೆ (ರಾಮವಿ. ೨-೨೬). ೨. ಸರಸ್ಸು ; ಕಲ್ಯಾಣಿ ; ಪುಷ್ಕರಿಣಿ : "ವಾಪಿ ದೀರ್ಘಿಕೆ ಪರಿಖಾತಂ ದೇವಖಾತಮಕ್ಕುಮುಖಾತಂ" (ವಸ್ತುಕೋ. ೨೪-೧೫): ಶತಸಹಸ್ರಮುಖಾವಹ ಜಾನುದಘ್ನ ದೀರ್ಘಿಕಾಂಭಃಕುಲ್ಯಾಪ್ರವಾಹಂ

ಗಳಂ ಜಲದುರ್ಗಂಗಳಿಂದೆ ನೂಂಕಿ ಕಡಿಡಿಯುಂ (ಆದಿಪು. ೮-೪೧ ವ) : ಏನಂ ಪೇಟ್ವುದೊ ಸಿರಿಯುದ್ಯಾನಿಯನೆಣ್ಣೆಯೊಳ್ ತೀವಿ ದೀರ್ಘಿಕೆಗಳವಂತಾ ನೃಪತಿ ನಿಚ್ಚಲಯುಷ್ಮಜಾನೆಯನವಗಾಹವಿರಿಸುವಂ ಬೋದನದೊಳ್ (ಪಂಪಭಾ. ೧-೧೭) ; ಕೈರವ ಪುಂಡರೀಕ ಪುಂಡಷಂಡದಿನೆಸೆದಿರ್ಪ ದೀರ್ಘಿಕೆಗಳಿಂದ ಮನೋಹರವಾಗಿ ಕುಕ್ಕನೂರುದಿತಯಶೋವಿಧಾನದಿನಳಂಕೃತವಾದುದು ಭೂಮಿಭಾಗದೊಳು (ಶಾಸಪ. ೮೨; 1138). ೩. ನದಿ : ಪಾವನ ಮಲಪ್ರಹರಿಯೆಂಬ ದೀರ್ಘಿಕೆ ಪರಿದಳ್ಳಿ ಜೀವಿಗಳಿಗೊಲಿದು (ಗುರುಚಾ. ೧-೦೫). [ ಸಂ. ದೀರ್ಘಿಕಾ ]

**ದೀರ್ಘೀಕರಣ** (ನಾ). ೧. ವಿಸ್ತರಿಸುವುದು ; ಲಂಬಗೊಳಿಸುವುದು : "ಉದ್ದವಾಗುವುದು ; ಉದ್ದ ಮಾಡುವುದು ; ದೀರ್ಘೀಕರಣ ; ಲಂಬನ" (Elongation. ಇಂಕನಿ). ೨. [ವ್ಯಾಕ] ದೀರ್ಘಸ್ವರ ಪ್ರಯೋಗ ; ಸ್ವರವನ್ನು ಎಳೆದು ಉಚ್ಚರಿಸುವುದು : 'ದೇಗುಲಮಾನ್, ಏಜಿದಾಂ', ತಪ್ಪಾದ' ಈ ತರದ ದೀರ್ಘೀಕರಣವು ಎಲ್ಲಿಯೂ ಇಲ್ಲ (ಕಸಾಚ. ೬೭).
[ ಸಂ. ]

**ದೀರ್ಘೋಕ್ತಿ** (ನಾ). [ವ್ಯಾಕ] ದೀರ್ಘಸ್ವರದ ಪ್ರಯೋಗ: ಸಂಬೋಧನೆ ದೀರ್ಘೋಕ್ತಿಯೊಳಿಂಬಾಗಿರೆ ಬರ್ಕುಂ (ಕವಿರಾ. ೨-೨೫).
[ ದೀರ್ಘ + ಉಕ್ತಿ ]

**ದೀರ್ಘೋಚ್ಛ್ರಿತ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು : ಸ್ಫುರಿತ . . . ದೀರ್ಘೋಚ್ಛ್ರಿತ . . . ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕಗಳಿಂತಲುಂ (ವಿವೇಕ. ೨೪೮). 'ಶ್ರುತಿ' ಪರಾ.
[ ದೀರ್ಘ + ಉಚ್ಛ್ರಿತ ]

**ದೀರ್ಘೋದ್ಯೋಗ** (ನಾ). ೧. ಬಹುಕಾಲದವರೆಗೆ ಮಾಡುವ ಕೆಲಸ ; ಸಂತತವಾಗಿ ಮಾಡುವ ಕಾರ್ಯ. ೨. ಸಂತತವಾಗಿ ಮಾಡುವ ಪ್ರಯತ್ನ : ನಿತ್ಯಜೀವನದಲ್ಲಿ ಯಶಸ್ಸು ದೊರೆಯುವುದು ತಾಳ್ಮೆ, ದೀರ್ಘೋದ್ಯೋಗಗಳಿಂದಲೇ ಹೊರತು ಜಾದುವಿನ ಕಳ್ಳದಾರಿಯಿಂದಲ್ಲ (ಕಥಳ. ೧೦೨). [ ದೀರ್ಘ + ಉದ್ಯೋಗ ]

**ದೀರ್ಣ** (ಗು). ೧. ಒಡೆದ ; ಸೀಳಿದ. ೨. ಹೆದರಿದ ; ಭಯಗೊಂಡ. ೩. ತೆರೆದ ; ಬಿರಿದ. 'ದೀರ್ಣಾನನ' ಪರಾ. [ ಸಂ. ]

**ದೀರ್ಣಾನನ** (ನಾ). ತೆರೆದ ಬಾಯಿ : ರಸನಾಶಂಪಾಶತಂ ಸಂಚಳಿಸೆ ವುದಿಯೆ ಫೂತ್ಕಾರವಾ ಶಾಂತಮಂ ದಳ್ಳಿಸೆ ವಹ್ನಿಜ್ವಾಲೆ ದೀರ್ಣಾ [ಪಾಠಾಂ. ನಾಗಾ] ನನ ಕುಹರಸಹಸ್ರಂಗಳಿಂ ಕಣ್ಗಳಿಂದೆಣ್ದೆಸೆಗಂಗಾರಂಗಳೆತ್ತಂ ಕೆದಱೆ ಫಣಸಹಸ್ರಂಗಳಂ ಬಿರ್ಚಿ ಕಣ್ಗವಿಸಿ ವಜ್ರಾವರ್ತಚಾಪಂ ಪಡೆದುದು ಭಯಮಂ ಕಾಳಕಾಳಾಹಿರೂಪಂ (ಪಂರಾಮಾ. ೫-೭೪).
[ ದೀರ್ಣ + ಆನನ ]

**ದೀವ$_1$, ದೀಹ** (ನಾ). ೧. ಬೇಟೆಯಲ್ಲಿ ಕ್ರೂರಮೃಗಗಳನ್ನು ಆಕರ್ಷಿಸುವುದಕ್ಕಾಗಿ ಬಳಸುವ ಪ್ರಾಣಿ; ಬೇಟೆಗೆ ಉಪಯೋಗಿಸಲು ಪಳಗಿಸಿದ ಪ್ರಾಣಿ : ಅಮೃತಮತಿ ಗಡ ಯಶೋಧರನ ಮನಃಪ್ರಿಯೆಯಾಕೆ ದೀವವಾಗೆ ಪುಳಿಂದಂ ಸುಮನೋಬಾಣಂ ತದ್ಭೂರಮಣನನೊಲಿವಂತೆ ಗೋರಿಗೊಳಿಸುತ್ತಿರ್ಕುಂ(ಯಶೋಚ. ೨-೯). ೨. ಸಾಕಿದ ಪ್ರಾಣಿ. ದೀಹ: ೨. ವೃಕ ಶಾರ್ದೂಲ ಕೇಸರಿ ಕದಲಿ ಕಳಭ ಕ್ರೋಡ ಖಿಳಿ ಲೂಲಾಯ ಸಾರಂಗ ಮದದ ರಹಿಯಲಿ ಮಾನಿಸರು ಸೋಂಕಿದೊಡೆ ಸೆಡೆಯವು ಹೊಲನ ಹೊದಜಿಕ್ಕಿದವು ದೀಹದ ಹಿಂಡಿನಂತಿರೆ (ಕುವ್ಯಾಳ. ೧೩-೧೭). ೩. ಆಕರ್ಷಣೆಯ ಸಾಧನ ; ಮೋಹವನ್ನುಂಟುಮಾಡುವ ಸಾಧನ: ಎನ್ನ ಪಸರಿಸಿದ ಚಿತ್ರಪಟವೆಂಬ ದೀಹಕ್ಕೆ ಖೇಚರ ಭೂಚರಯುವಮೃಗಂಗಳೆಳಸಿ ಬಂದು (ಆದಿಪು. ೩-೮೭ ವ) ; ಜಾಲಗಾಜನ ಕೈಯ ದೀಹ [ಪಾಠಾಂ. ವ]ದಂತೆ ಬಾಲೆಯರ ಮನದ ಸೋಲುವೆಯಂತೆ ಇಂತಿವರನಳವಾಡಿಸಿಕ್ಕಿಸುವ ಪೋಲಿಗಾಜಿಗೆಲ್ಲಿಯದೋ ಸತ್ಯ (ಮೋಹಿಮಾ. ೬೫-೨೬೪)-; ಚರಿಸುವ ವಿಟರ ಕರಣವೆಂಬ ಖಗವಿಂಡಿಗಿರದೊಡ್ಡಿದ ದೀಹವೆನಲು ಮೆಱೆದುದು ಸೂಳೆಗೇರಿಯ ಸಾಲು (ಕಂನವಿ. ೬-೯೨).

ದೀವದ ಖಗಮೃಗ = ಸಾಕಿದ ಪಕ್ಷಿ ಮತ್ತು ಪ್ರಾಣಿ : ಉಡುಪಾನನೆಗಿಂತೆಯ್ದಿದ ನೋವಪಳಡಪ ಡವಕೆ ಕೈಪಿಡಿ ಕೌಳುಡೆ ತೊಡವುಡಿಗೆ ಚಮರ ಸೀಗುರಿ ಬಿಜ್ಜಣ ಮುಡಿವೂ ಕರಗಂಬೊತ್ತ ಮಡದಿಯರ್ಗಂ ದೀವದ ಖಗಮೃಗಕಂ ಬಿಡದಡಿಸಿತು ತರುಮೂಲಮನೊಂದಿದ ಕಡುನೋವಾ ಶಾಖಾ ಸಂತತಿಗಿರದೆಯ್ದುವ ಮಾಳ್ಕೆಯೊಳು (ಜಯುಕಾ. ೨-೪೧). ದೀವದ ನವಿಲ್, ದೀಹದ ನವಿಲ್ = ೧. ಹೆಣ್ಣುನವಿಲನ್ನು ಹಿಡಿಯಲು ಉಪಯೋಗಿಸುವ ನವಿಲು. ೨. ಸಾಕಿದ ನವಿಲು; ಮಯೂರ: ಕಾಮ ಕಾಳೋರಗಲೇಖೆಯಂತೆ ನಿಮಿರ್ವ ನೀಲಮಣಿಸ್ತಂಭದುನ್ಮುಖ ಮಯೂಖಲೇಖೆಯಂ ಕರ್ದುಂಕುವ ದೀವದ ನವಿಲ್ಗಳುಂ . . . ಅತಿ ರಮಣೀಯಮಾಗೆ (ಪಂರಾಮಾ. ೩-೭೫ ವ) ; ಹರಿನೀಲಮಣಿಯ ಸೂಸಕದ ನೆಟಿಲ್ಗಳನಸಿತಾಹಿಗಳೆಂದೊಸೆದೆಳಸುವ ದೀಹದ ನವಿಲ್ಗಳೊಪ್ಪುಗುಮವ ಜಿರೊಳ್ (ಜಗವಿ. ೯-೦೨೮). ದೀವದ ಪುಲ್ಲೆ, ದೀವದ ಹುಲ್ಲೆ, ದೀಹದ ಪುಲ್ಲೆ, ದೀಹದ ಹುಲ್ಲೆ = ಬೇಟೆಯಲ್ಲಿ ಮೃಗಗಳನ್ನು ಆಕರ್ಷಿಸುವುದಕ್ಕಾಗಿ ಬಳಸುವ ಜಿಂಕೆ,-ಚಿಗರೆ : ಆ ವನಿತೆಯರ್ ಮನೋಜನ ದೀವದ ಪುಲ್ಲೆಗಮನಂಗರಾಜನವರಾಜ್ಞೀಮಾಸಕ್ಕಂ ದೊರೆ (ಶಾಂತಿಪು. ೩-೧೯) ; ಮನೋಜನ ದೀವದ ಪುಲ್ಲೆಗಳೆನಿಸಿದುವು ನೆರೆದ ಪೆಂಡಿರ ತಂಡಂ (ಸುಕುಮಾ. ೧೧-೨೧) ; ಒಲವಿಂದೆಯ್ದಿ ಪರಿವ ದೀವ [ಪಾಠಾಂ. ಹ]ದ ಹುಲ್ಲೆಗಳನಾ ಲಲನೆ ನೋಡಿದಳು (ಕುರಾಸಾಂ. ೭-೫೭) : ಕರತಳದೊಳ್ ತೀವಿದ ಮರಕತಮುದ್ರಿಕೆಯ ಪಸುರ್ವೆಳಗುಗಳನಾ ಪಸುರ್ಪುಲ್ಲೆಗೆತ್ತು ಮುಸುಂಡಿನೊಳಾರಯ್ವ ದೀಹ[ಪಾಠಾಂ. ವ]ದ ಪುಲ್ಲೆಯ ಕೊಣಸುಗಳ್ಗೆ ಪುಲ್ಲೆಸಟಂ ಸೆಟಿದು ನೀಡುತಂ (ಲೀಲಾವ. ೪-೦೭ ವ); ನಗಿಸುವ ಕೋಡಗಂ ನೆರೆದು ನೋಡುವ ದೀಹದ ಹುಲ್ಲೆ ಸೋಗೆಯಂ ನೆಗಪಿ ತುಡುಂಕಿ ಮೆಟ್ಟುವ ನವಿಲ್ (ಸೂಕ್ತಿಸು. ೧೧-೭೪). ದೀವದ ಬೇಂಟೆ = ಪಕ್ಷಿ, ಪ್ರಾಣಿಗಳನ್ನು ಆಕರ್ಷಣೆಯಾಗಿ ಒಡ್ಡಿ, ಅವುಗಳ ಆಸೆಯಿಂದ ಬರುವ ಇತರ ಪ್ರಾಣಿಗಳನ್ನು ಬೇಟೆಯಾಡುವಿಕೆ ; ಬೇಟೆಯಲ್ಲಿ ಒಂದು ವಿಧ : ದೀವದ ಬೇಂಟೆಯಂ ಬಿನ್ನಪಂಗೆಯ್ವೊಡೆ ಕಟಿವು[ ಮು ]ಟಿವುಂ ಕಾಪುಂ ಮೋಪುಂ . . . ಆನೆ ಬಲ್ಲೆಂ (ಪಂಪಭಾ. ೫-೪೩ ವ). ದೀವದ ಮೃಗ = ಬೇಟೆಯಲ್ಲಿ ಕ್ರೂರಮೃಗಗಳನ್ನು ಆಕರ್ಷಿಸುವುದಕ್ಕಾಗಿ ಬಳಸುವ ಪ್ರಾಣಿ : ಹಾಸದ ಕುನ್ನಿ ದೀವದ ಮೃಗಂ ಬಲೆ ಪೆರ್ವಡಿ . . . ಎಂಬೀ ಸಮಕಟ್ಟು ಪಾಪದೆಱೆವೆಟ್ಟು ಜಳಸ್ಥಳಪಾರದಿಂ ಕ್ರಿಯೋಲ್ಲಾಸಮನುಂಟುಮಾಡಿ ಪೊಜಮಟ್ಟುದು ಬೇಂಟೆಗೆ ಲುಬ್ಧಕವ್ರಜಂ (ಪುಷ್ಪಪು. ೫-೯೯). ದೀವದ ರಾಜಹಂಸೆ=ಸಾಕಿದ ಅರಸಂಚೆ : ಲೀಲಾಲಸಗಮನಮಂ ಗಜಗಮನೆಯರ್ಗುಪದೇಶಂಗೆಯ್ವ ದೀವದ ರಾಜಹಂಸೆಗಳುಮಂ . . . ಕೊಟ್ಟು ಪಂಡಿತೆಯುಮನೊಡಮೋಪಂತು ಮಾಡಿ (ಆದಿಪು. ೪-೫೪ ವ). ದೀವದ ರಾಯ = ಬೇಟೆಯಾಡುವ ಸಾಧನವಾಗಿ ಬಳಸುವ ಪ್ರಾಣಿಗಳಂತೆ ಸೆರೆಯಲ್ಲಿಟ್ಟ ರಾಜ ; ಇತರ ರಾಜರನ್ನು ಶರಣಾಗತರಾಗಿ ಮಾಡಲು ಸೆಳೆಯಾಗಿ ಮಾಡಿಕೊಂಡ ರಾಜ: ಕದಪಂ ಪೊಯ್ವನ್ನುದ ಕೈಗೋಳಿಸಿ ತಿವುಳನಂ ಗಣ್ಡುದೊತ್ತಾಳ್ದನೊತ್ತಂಬದೆ ಮೂಗಿಟ್ಟೇಜಿದಂ ಮಾಳವನನಿರದೆ ಸಜಿಟ್ಟಂಬಿನಂ ಮೆಟ್ಟಿ ಸಿಟ್ಟಿಕ್ಕಿದನಂಗಾಧೀಶನಂ ರಾಯರನೆ ಬದಿಮೊಲಂಗೊಣ್ಡು ತನ್ನದತ್ತಿಯಿಂ ದೀವದ ರಾಯಮಮ್ಮಾಡಿ ಕಾರಾಗೃಹದೊಳಿರಿಸಿದಂ (ಮೈಆರಿ. ೧೯೨೯, ೬೫-೧೯ ; 1031). ದೀವದ ಹರಿಣ = ದೀವದ ಪುಲ್ಲೆ : ಪಚ್ಚೆಯ ಜಗಲಿಯ ಚೆಲ್ವಿಂಗೆ ಕಣ್ದೆಱವಿಯಾದಂತೆ ತೆಱಂಬೊಳೆವ ದೀವದ ಹರಿಣಗಳ ಲೋಚನಪ್ರತಿಬಿಂಬಗಳುಂ . . . ಅತಿ

ರಮಣೀಯವಪ್ಪಾಗೆ (ಪಂಪಭಾ. ೩-೭೩ ವ). ದೀವದ ಹುಲಿ, ದೀಹದ ಪುಲಿ, ದೀಹದ ಹುಲಿ = ಬೇಟೆಯಲ್ಲಿ ಇತರ ಮೃಗಗಳನ್ನು ಆಕರ್ಷಿಸಲು, ಸೆರೆಯಾಗಿ ಒಡ್ಡಲು ಉಪಯೋಗಿಸುವ ಹುಲಿ : ಗಿಡಗ ದೀವ[ಪಾಠಾಂ. ಹ] ದ ಹುಲಿ ಸಾಳುವ ಕರಿ ಕೋಣ ಹಿಡಿಯೆರಲೆಯ ಮೊತ್ತವನು ತಡೆಯದೆ ಕೊಂಡೆಯ್ತಂದರು ಬೇಟೆಯ ಕಡುಗಲಿಗಳು (ಕುರಾಶಾಂ. ೨೭-೪೪); ಸಾಹಸದ ಬೇಟೆಯಾಡಲ್ ತೋಹಿನೊಳಂ ನಿಂದು ಬೇಡರಾಡಂಬರದಿಂ ದೀಹದ ಪುಲಿಗಳ್ಗನಿರಿಸುತೆ ಸೋಹಿದರ್ (ಹಮ್ಮೀರ. ೪-೪೨) ; ಲಂಘಿಸಿ ನೆಲನನೊದೆದು ಪುಟನೆಗೆದು ಗರ್ಜಿಸುತ ಬರೆ ಹೆದಱಿ ಕಂಗೆಟ್ಟು ಡೆಂಡಣಿಸಿ ಸರಳಿಸುವ ಹರಿಣಂಗಳಂ ವೋದಿ ಮುಱಿದಟ್ಟಿ ಕೆಡಹಿದವು ದೀಹದ ಹುಲಿಗಳು (ಹಚಕಾ. ೫-೩೧). ದೀಹದ ಸಾಳುವ = ಪಕ್ಷಿಗಳ ಬೇಟೆಗೆ ಪಳಗಿಸಿ ಉಪಯೋಗಿಸುವ ಪಕ್ಷಿ ; ಡೇಗೆ : ಬೋಳಿಗಳ ಮಿಟ್ಟೆಗಳ ದೀಹದ ಸಾಳುವನ ಗಳೆಯಂಟುಗಳ ಶಬರಾಳಿ ಬಂದುದು ಪರ್ಣಶಾಲೆಗೆ (ತೊರರಾ. ೩-೩-೩).

[ <ಪ್ರಾ. ದೀವಿಅ./ಸಂ. ದೀಪಕ./ತೆಲು. ದೀವು, ದೀಮು ]

**ದೀವ₂** 'ದೀಪ₁' ನೋ.

**ದೀವ₃**, ದೀವಿ₂ (ನಾ). ದೀವಿಗೆ ; ಸೊಡರು ; ದೀಪ : "ದೀವ-ದೀಪ = ಸೊಡರು" (ಶಬ್ದಕೋ. ೧೯) ; ದೀವಶಬ್ದೋ ದೀಪವಚನಃ (ಶಬ್ದಾನು. ೪೪೦ ವ್ಯಾಖ್ಯಾ). **ದೀವಿ₂** : 'ದೀವಿಜಾಲ' ಪರಾ.

[ <ಪ್ರಾ. ದೀವ./ಸಂ. ದೀಪ ]

**ದೀವ₄** (ನಾ). ೧. ಮೀನು ಹಿಡಿಯುವವನು; ಬೆಸ್ತ: "ಧೀವಃ, ಧೀವರಃ= ದೀವಂ" (ಕಾಶಕ್ಕ. ೫೨) ; ಸನ್ಯಾಸಿಯೊಬ್ಬಂ ದೀವನರಸಿಯಂ ಹೋಗು ಶಿರ್ದೊಮ್ಮೆ ಬಂದ ಗಾವಳಿಗೆ ಹೆದಱಿ ಬಂಜಣಿಗೆಯೊಳಗಡಗಲಾ ದೀವ ನಱಿಯದೆ ಸುರಿದ ಸುರೆಯಿಂದ ಸತ್ತವಂ ಭಾವಿಸಲು ಲಿಂಗವಾದ ವಿಭಾಂಡೇಶನಂ ಕಂಡನಂದವನೀಶನು (ಹಚಕಾ. ೧೦-೪೩) ; ಮೀನನ್ನು ಹಿಡಿದು ಜೀವಿಸುತ್ತಿದ್ದವರು ದೀವರು (ಕಡಾಅ. ೪೪೨) ; ದೀವರ ಹೆಂಗಸರ ಕಳ್ಳನೋಟ, ಯಾರಾರೋ ಹಬ್ಬಿಸಿದ್ದ ಸುದ್ದಿ . . . ಇವೆಲ್ಲ ಅವಳ ಸಾವಿಗೆ ಕಾರಣವಾಗುತ್ತವೆ (ಅಬೋಲೀ. ii ಮುನ್ನುಡಿ). ೨. ಬೇಡ ; ಶಬರ : ಕಣುವೆ ಕಾವ ದೀವರಿಗೆ ಅರಮನೆಯವರ ಮುಖಾಂತ್ರ ವಿಂಗಡದಲೂ ಸಲುವದು (ಎಕ. VIII, ತೀರ್ಥಹ. ೯೪-೨೩ ; 1632).

[ <ಸಂ. ಧೀವನ್ ]

**ದೀವ₅** (ನಾ). (?) : ಅವುದು ಬಾಗಿದುದುಮಧಿಕ ಬಸನಂ ಕೇವಲಮಾಗೆ ನೆಗೆವುದು ಚಿತಾವಯವಂ ದೀ[ಪಾಠಾಂ. ದಿ]ವದಿಂ ನಿಂದು ಸಿತಗನಂ ನುಡಿದುವು ಭಾವಿಸೆ ಬಗೆಗೊಳದಾರ ಕೊರ್ಣದಿಯಂ (ಕವಿರಾ. ೩-೧೫೦). [?]

**ದೀವಗಾಱ** (ನಾ). ಪ್ರಾಣಿಗಳನ್ನು ಆಕರ್ಷಣೆಯಾಗಿ ಒಡ್ಡಿ ಅವುಗಳ ಆಸೆಯಿಂದ ಬರುವ ಇತರ ಪ್ರಾಣಿಗಳನ್ನು ವಂಚಿಸಿ ಬಲೆಗೆ ಕೆಡಹು ವವನು ; ದೀವದ ಮೃಗಗಳ ಸಹಾಯದಿಂದ ಬೇಟೆಯಾಡುವವನು: ಮನೋಜನೆಂಬ ದೀವಗಾಱನ ಪುಲ್ಲೆಗಳಂತೆ ತಂತಮ್ಮ ಮನೆಯ ಮುಂದಣ ಪಚ್ಚೆಯ ಜಗಲಿಗಳೊಳಂ . . . ತಂಡತಂಡದೆ ನೆರೆದಿರ್ದ ಪೆಂಡವಾಸ ದೊಳ್ವೆಂಡಿರಂ ಕಂಡು (ಪಂಪಭಾ. ೪-೮೪ ವ). [ ದೀವ₁ + - ಕಾಱ ]

**ದೀವಟ** 'ದೀವಟಿಗೆ' ನೋ.

**ದೀವಟಕಳ್ಳ** 'ದೀವಟಿಗೆಕಳ್ಳ' ನೋ.

**ದೀವಟಿಗ**, ದೀವಟ್ಟಿಗ (ನಾ). ದೀಪವನ್ನು ಹಿಡಿಯುವವನು ; ಪಂಜು ಹಿಡಿಯುವ ವೃತ್ತಿಯವನು : ಕರ್ಗತ್ತಲೆಯೊಳೆಡೆಯಾಡುತಡಹೆದಂತೆ ತನಗೆ ತಾಂ ದೀವಟಿಗನಾದನೊ . . . ಎಂದೆನಿಸಿ ಮೆಱೆದನಚಳಿತ ಸಿದ್ಧನು (ಸಿದ್ಧರಾ. ೭-೩೯) : ಅಟಿಗ ಪ್ರತ್ಯಯಕ್ಕೆ-ಕೊಲ್ಲಟಿಗಂ, ದೀವಟಿಗಂ, ಮಾವಟಿಗಂ (ಶಮದ. ೨೦೪ ಪ್ರಯೋ) : ರವಿಶಶಿಗಳೊಪ್ಪುವ ದೀವಟಿಗರು (ತೊರರಾ. ೧-೮-೬೩) : ದೀವಟಿಗರು ಕೊಟ್ಟಗೆಯರು ವರತುರಗಾವಳಿಗಳ ನೆಱೆ ಪಿಡಿವ ಕೋವಿದನಿವಹ ಗಜಾರೋಹಕರ ಗೃಹ ಶೀವಿಹುವಾ ಪಟ್ಟಣದೆ (ಕಂಸವಿ. ೬-೫೭); ಇಬ್ಬರು ದೀವಟಿಗರು . . . ಅವರವರ ಮನೆ ಮುಟ್ಟ ಹೋಗಿ ತಲಪಿಸಿದರು (ಸವತಿ. ೪೨). **ದೀವಟ್ಟಿಗ** : ತೆಗಸು ಚೂಣಿಯ ಬಲವ ದೀವಟ್ಟಿಗರ ಕರೆಕರೆ ತೈಲಪೂರ್ಣದ ತೂಗಲ ಕುನಿಕಲ ಬಂಡಿ ಕವಿಯುಲಿ ಕೋಟಿ ಸಂಖ್ಯೆಯಲಿ (ಕುಮಾರವ್ಯಾ. ೧೫-೩೨); P ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ.

[ ದೀವ₃ + -ಅಟಿಗ; P ಇದನ್ನು ದೀವಟಿಗೆ + - ಅ₇ ಎಂದೂ ಬಿಡಿಸಬಹುದು. ]

**ದೀವಟಿಗೆ**, ದಿವಟಿ, ದೀವಟಿ (ನಾ). ಪಂಜು ; ಹಿಲಾಲು : "ಪಂಜುಃ = ದೀವಟಿಗೆ" (ಕಾಶಕ್ಕ. ೬೫) : ಕಾಂತಿಯಿಂದಂಗಡಿಗಳೊಳ್ ಸರ್ವಜನತಾ ಗೃಹಾಂತದೊಳ್ ದೊರೆದೊರೆಗಳೋಲಗದೊಳೊಪ್ಪಿದುವನಂತದೀಪಂ ದೊಡ್ಡದೀವಟಿಗೆಗಳ್ ನಭದ ನಕ್ಷತ್ರಜಾಲದಂತೆ (ಚಬಪು. ೪೮-೩೨) : ದೆಸೆದೆಸೆಗಳ ಬೆಳಗುತ ದೀವಟಿಗೆಗಳೆಸೆದುವು (ಕಂಸವಿ. ೮-೨೨) ; ದೀವಟಿಗೆ ಗಳನ್ನು ಹಿಡಿದುಕೊಂಡು ಹೋಗಿ ನೆಲಮಾಳಿಗೆಗಳನ್ನೆಲ್ಲಾ ಹುಡುಕಿದರು (ಶ್ರೀರಾಯ. ೧೩೦) ; ದಾಸಿಯರು ಕೈಯ ದೀವಟಿಗೆಗಳಿಗೆ ಗುಗ್ಗುಳವನ್ನೆರಚಿ ಉರಿ ಮಾಡಿದರು (ಸವತಿ. ೪) ; ದೀವಟಿಗೆ ಮುಂದೆ ದೀಪವೇ (ಗಾದೆ). **ದಿವಟಿ** : ಕರದ ದಿವಟಿ ಹಿಲಾಲುಗಳ ಭಾಸುರ ಜಗಂಜ್ಯೋತಿಗಳ ಕಾಂತಿಸ್ಫುರಿತ ಸೂರ್ಯಜ್ಯೋತಿಗಳ ಸಾಲುಗಳು ಬೆಳಬೆಳಗೇ (ಅನಂರಾ. ೧-೨೪-೩೫). **ದೀವಟಿ** : 'ದೀವಟಿಕಳ್ಳ' ಪರಾ; P ದಿವಟಿ, ದೀವಟಿ ಎರಡೂ ಶಬ್ದಗಳು 'ದೀವಟಿಗೆ' ಎಂಬುದರ ಸವಕಳಿ ರೂಪವಿರ ಬಹುದೆ ?

ದೀವಟಿಗೆಯವ = ದೀವಟಿಗ : ಚಾವಡಿಯ ಕಾವಲ್ಗಾರರು ನೀಱುಗಂಟಿ ದೀವಟಿಗೆಯವ . . . ಕಂದಾಚಾರದವರು ಕಳ್ಳಬಂಟರು ಅವರು ಇವರು-ಎಲ್ಲಾಗ್ರೂವೆ, ಸೇನಾಯಮುದ್ರೆ, ಕಡತದ ಕಾಣಿಕೆ . . . ಅದು, ಇದು-ಎನ್ನುತ ಎಲ್ಲಾವನ್ನೂ ಸಲ್ಲಿಸಿಕೊಳ್ಳುತ್ತಾರೆ (ಬಿಟ್ಟಿಅ. ೧೫೫-೭೦): ಆಟದ ವನಿಗೆ ದೀವಟಿಗೆಯವನ ಮೇಲೇ ಕಣ್ಣು (ಗಾದೆ).

[ ?./ಸಂ. ದೀಪವರ್ತಿಕಾ./ಮರಾ. ದಿವಟೀ./ ತೆಲು. ದೀವಟಿ, ದೀವಟೀ, ದಿವ್ವಟಿ ]

**ದೀವಟಿಗೆಕಳ್ಳ**, ದೀವಟಿಕಳ್ಳ (ನಾ). ಬೆಂಕಿ ಹೊತ್ತಿಸಿ ಅದರ ದೆಸೆ ಯಿಂದಾದ ಅವಸ್ಥೆಯಲ್ಲಿ ಕಳ್ಳತನ ಮಾಡುವವನು; ಪಂಜು ಹಿಡಿದು ಸೂರೆ ಮಾಡುವ ಕಳ್ಳ; ಪಂಜುಗಳ್ಳ: ಹಿಂದೆ ದೀವಟಿಗೆ ಕಳ್ಳರ ಹಾವಳಿ ಬಹಳವಾಗಿತ್ತು (ರೂಢಿ). **ದೀವಟಿಕಳ್ಳ** : (ಕ).

[ ದೀವಟಿಗೆ + ಕಳ್ಳ₁ ]

**ದೀವಟಿಗೆಮಾನ್ಯ** (ನಾ). ದೀವಟಿಗರಿಗೆ ಕೊಟ್ಟ ಉಂಬಳಿ,-ವೃತ್ತಿ; ದೀಪ ಹಿಡಿಯುವವರಿಗೆ ಉಪಯೋಗಕ್ಕಾಗಿ ಕೊಟ್ಟ ಭೂಮಿ : (ಕ).

[ ದೀವಟಿಗೆ + ಮಾನ್ಯ ]

**ದೀವಟಿಗೆವೆಣ್** (ನಾ). ದೀಪವನ್ನು ಹಿಡಿಯುವವಳು; ದೀಪವನ್ನು ಹಿಡಿಯುವ ಸೇವಕಿ: ಕಾಳಾಂಜಿ ಕುಂಚ ಹಡಪ ಪಾವುಗೆ ರತ್ನದಾಲವಟ್ಟವು ಬೊಂಬಾಳ ಸಾಲ ದೀವಟಿಗೆವೆಣ್ಗಳು ಭೂಪನಿದಿರಿನೊಳ್ ಮೇಳದೊಳೆಸೆ ದರರ್ಥಿಯಲಿ (ಕಂಸವಿ. ೮-೫೦). [ ದೀವಟಿಗೆ + ವೆಣ್ ]

**ದೀವಟಿಗೆ ಸಲಾಂ**, ದೀವಟಿಗೆ ಸಲಾಮು (ನಾ). ಪ್ರತಿದಿನ ಸಾಯಂ ಕಾಲ, ರಾಜ, ಗುರು ಮತ್ತು ಇತರ ಶ್ರೇಷ್ಠಪುರುಷರುಗಳ ಅಥವಾ ದೇವತಾವಿಗ್ರಹಗಳ ಮುಂದೆ ಉರಿಯುತ್ತಿರುವ ಪಂಜು ಗಳನ್ನಾಡಿಸಿ ಗೌರವ ಸೂಚಿಸುವ ಒಂದು ಆಚರಣೆ : ಪಟ್ಟದಾನೆ ಕುದುರೆಗಳು ನದೀತೀರಕ್ಕೆ ಹೋಗಿ ಅಲ್ಲಿ ಆಗತಕ್ಕ ಪೂಜೆ ದೀವಟಿಗೆ ಸಲಾಂ

ಮೊದಲಾದುದನ್ನು ನೆರವೇರಿಸಿಕೊಂಡು ಬರುತ್ತಲಿರುವ ಸಮಯದಲ್ಲಿ ದೊರೆಗಳವರಿಗೆ ದೀವಟಿಗೆಸಲಾಂ ಆದ ನಂತರ (ಮಹಾಪಂ. I, ೩೬); ಆ ಕಂಬಕ್ಕೆ ಈಗಲೂ ಮಹಾಪೂಜೆ ವೇಳೆ, ದೀವಟಿಗೇಸಲಾಂ ಮಾಡಿ ಮಹಾಪೂಜೆಗೆ ಆಮಂತ್ರಣ ಕೊಡುವ ಪದ್ಧತಿ ಇದೆ (ತುಳುನಾ. ೧೧೯).

**ದೀವಟಿಗೆಸಲಾಮು :** (೩). [ ದೀವಟಿಗೆ + ಸಲಾಂ ]

**ದೀವಟಿಗೆಸಲಾಮು** 'ದೀವಟಿಗೆಸಲಾಂ' ನೋ.

**ದೀವಟಿಗೆಸೇವೆ** (ನಾ). ಪಂಜುಗಳಿಂದ ನೀವಳಿಸಿ ಸಲ್ಲಿಸುವ ಸೇವೆ: ನೋಡ ಬನ್ನಿರೊ ಜನರು ಶ್ರೀಕೃಷ್ಣನ ಜೋಡು ದೀವಟಿಗೆ ಸೇವೆ (ಪುರಂದ. ೨-೪೨ ಪಲ್ಲವಿ); ದೀವಟಿಗೆಸೇವೆಯಾದ ನಂತರ ದೇವರ ಮೆರವಣಿಗೆ ಹೊರಡುತ್ತದೆ (ರೂಢಿ). [ ದೀವಟಿಗೆ + ಸೇವೆ$_1$ ]

**ದೀವಟ್ಟಿಗ** 'ದೀವಟಿಗ' ನೋ.

**ದೀವಬ್ಬರಸಿ** (ನಾ). ಒಬ್ಬಾಕೆಯಂ ಹೆಸರು: ಶ್ರೀವಧು ಧರೆ ಪೋಟಲ್ಗೋರಾವ ನ್ರಿಪಜ್ಜಗ್ರಮಹಿಷಿ ಭುವನಾಂಬಿಕೆ ವಾಗ್ದೇವಿಯರ ದೊರೆಯೆನಿಸಿದ ದೀವಬ್ಬರಸಿಯರ ದೊರೆಗೆಟ್ಟರ್ ಪೆಱರೊಳರೆ (ಎಕ. X, ಮುಳಬಾ. ೩೮-೩; ಸು. 890). [ ದೀವಬ್ಬೆ + ಅರಸಿ ]

**ದೀವಬ್ಬೆ** (ನಾ). ಒಬ್ಬಾಕೆಯಂ ಹೆಸರಂ: ಸ್ವಸ್ತಿ ಶ್ರೀಮದ್ ಸಕರರ ಸೂಳೆಯಬ್ಬೆಯ ಮಗಳ್ದೀವಬ್ಬೆ ಮಾಡಿಸಿದ ತೂಮ್ಬು (ಎಕ. IX (S), ಚನ್ನಪ. ೨೮೬-೨; 886). [ ದೀವ$_0$ + ಅಬ್ಬೆ$_1$ ]

**ದೀವರಿಗೆ** (ನಾ). ಒಂದಂ ಬಗೆಯಂ ಸಸ್ಯ: ದೇವಗರಿಗೆ . . . ದೀವರಿಗೆ, ಕಾಡುಜೀರಕ (ಮೈಜಿಗಿ. ೩೮-೭೫). [ ? ]

**ದೀವಸ, ಧೀವಸ** (ನಾ). ೧. ಬುದ್ಧಿಗೆ ಸಂಬಂಧಿಸಿದುದಂ; ಆಲೋಚನೆ; ಅಭಿಪ್ರಾಯ. ೨. ಧೈರ್ಯ; ಕೆಚ್ಚು: ಇರುಳಳಿದೀ ದಿವಸವ ದೀವಸಂ ಮಾಳ್ಪ ತರಣಿ ತರಣಿಗಂಬರವನು ವಿರಚಿಸಿದಬ್ಬರುಹನ ಪರಿಕಿಸದಿಂತು ಪರಶಿವನೇಕೆ ಪೆತ್ತನೊಯೆಂದ (ಸೊಬಸೋ. ೨೩-೫೬): ಇನಿಸುಂ ಚೊಕ್ಕಳಿಕೆಯ ದೀವಸಮೋಸರಿಸದೆ ತಕ್ಕಳಿಯದೆ ತದ್ಧೀರೋದಾತ್ತಂ ಮೇರುವಿನಂತಿರ್ದಂ (ಜಯುಕಾ. ೧೬-೧೫). **ಧೀವಸ :** ೨. "ಧೀವಸಮಂ ದೆನಲುಸಿರ್ದಂ ಧೈರ್ಯಾರ್ಥಮಂ" (ಚತುನಿ. ೧೦೭). ೩. ನಿಷ್ಠೆ; ದಾರ್ಢ್ಯ: ದೇಶಿಯನಾಡಿದಳು ಪರವೆನಾಚಿ ವಲ್ಮೀಕನಾಥನ ಮುಂಬಿನೊಳು ರಸಿಕರೆದೆಯನಲ್ಲಾಡಿಸುತ ಯತಿಜನದ ಧೀವಸವನೀಡಾಡುತ (ಸೌಂದಪು. ೮-೧೧). ೪. ಉದ್ಧಟತನ; ಧಾರ್ಷ್ಟ್ಯ: ಕೊಡಲು ಹುಸಿದಡವಿಗಟ್ಟಿ ಬೈಚಿಟ್ಟು ನೆಂಬುದನಿಂತು ಎಸೆವ ವೇದಂಗಳೊಳು ಕೀಳಿ ಪೊಗಳುವಡರಿದು ನಿನ್ನ ಧೀವಸವೆಂದನು (ಹಚಕಾ. ೨-೧೮). [ <ಸಂ. ಧೀವಶ ]

**ದೀವಸಂಗೆಡು** (ಕ್ರಿ). ಧೈರ್ಯಗೆಡಂ: ಬಗೆದನಂದು ಪೂರ್ವಾಚಲದೊಳು ಆವರಿಸಿ ಜಗವ ದಶದಿಶೆಯ ಮುದ್ರಿಸಿದ ತಮ ದೀವಸಂಗೆಟ್ಟೋಡೆ ಮುಂಚೂಣಿಯೊಳ್ಪದ್ಮಿನೀವಲ್ಲಭಂ (ಕೊಟ್ಟೂಲ. ೩-೩).

[ ದೀವಸ + ಕೆಡು$_1$ ]

**ದೀವಸಿ, ಧೀವಸಿ** (ನಾ). ದಿಟ್ಟ; ಸಾಹಸಿ; ಶೂರ: ದೊರೆಗಳೊಡನೀ ಥಟ್ಟಿಗೊಬ್ಬನೆ ನಿಲುವೆನೆಂದನದಾವ ಸತ್ವನಿಧಿ . . . ಈ ಪರಿ ಮುಟ್ಟಿ ದೀವಸಿಯಾವನೆಂದುದು ನಿಖಿಳ ಪರಿವಾರ (ಕುಪ್ಮಾಗ. ೫-೪೪). **ಧೀವಸಿ :** ಬಿರುದಭಟರೌಕಿದರು ರಾಯನ ಧುರದ ಧೀವಸಿಗಳು ನಿಹಾರದಲುರವಣಿಸಿದರು ಶಲ್ಯನಂಬಿನ ಮಳೆಯ ಮನ್ನಿಸದೆ (ಕುಪ್ಮಾಶ. ೩-೪೨).

[ <ಸಂ. ಧೀವಶಿನ್ ]

**ದೀವಸಿಅಮಾವಾಸ್ಯೆ** 'ದಿವಶೀಅಮಾವಾಸ್ಯೆ' ನೋ.

**ದೀವಸಿಕೆ** (ನಾ). ಧೈರ್ಯ; ಸಾಹಸ: ಬಿಸಿಲು ಮಳೆ ಚಳಿಗಳಿಗೆ ಸಲೆ ಸ್ಥೈರಿಸುವ ದೇಹವೆ ನಿನ್ನದಿದು ದೀವಸಿಕೆಗಾವಂಜುವೆವು [ಪಾಠಾಂ. ಧೀವಸತನಕ್ಕಾವಂಜುವೆವು] (ತೊರರಾ. ೨-೩-೩೫). [ ದೀವಸ + – ಇಕೆ ]

**ದೀವಸಿಗ, ಧೀವಸಿಗ** (ನಾ).=ದೀವಸಿ: ದೇವ ದನುಜ ನರೋರಗರ ಸುಭಟಾವಳಿಯೊಳಿವನಂತೆ ಧೈರ್ಯದ ದೀವಸಿಗರುಂಟೇ ವಿಚಾರಿಸಲೆಂದನಸುರೇಂದ್ರ (ತೊರರಾ.೬-೨೦-೫೬):"ಜಾಗರೂಕನಾದವನು, ಎಚ್ಚರಿಕೆಯುಳ್ಳವನಂ, ಸಾಹಸಿ" (ಪ್ರಭಣ್ಣ$_1$); ಆವ ದೀವಸಿಗನ ಆಟಪಾಟ ಕೂಟಗಳಲ್ಲಿ ಕಲೆತು, ಆ ನಿಶ್ಚಿಂತಸ್ಥಿತಿಯ ಉತ್ಸವದ ಆನನ್ದದ ಅನ್ನಸ್ವತ್ವದಿಂದ ಜೀವಿಸಿದ್ದೆವೋ, ಆ ಕಂಠೀರವನು . . . ತಪ್ಪಿಸಿಕೊಂಡು . . . ಬದುಕಿಕೊಂಡನು (ವಿಗರ. ೩೪-೧೨). **ಧೀವಸಿಗ :** ಹ್ಞಾವಾಡಿಗನನು ಗೆಲುವೆನೆನುತಲಿ ಧೀವಸಿಗ ತಿರುಗಿದನು ಪುನರಪಿ ತಾಯ ಮಂದಿರಕೆ (ಪ್ರಹ್ಲಾಚ. ೪-೬). [ ದೀವಸ + –ಇಗ ]

**ದೀವಳಿ** 'ದಿವಾಳಿ$_1$' ನೋ.

**ದೀವಳಿಗೆ** 'ದೀಪಾಳಿಗೆ' ನೋ.

**ದೀವಾಣ** 'ದಿವಾಣ' ನೋ.

**ದೀವಾಳಿಗೆ** 'ದೀಪಾಳಿಗೆ' ನೋ.

**ದೀವಾಳೀಚರಧವಳ** (ನಾ). ಒಂದಂ ಬಿರುದು (?) : ಸೋಮೇಶ್ವರ ದಾಸಿಯಾಶ್ರಿತಜನಕಲ್ಪವೃಕ್ಷಂ ದೀವಾಳೀಚರಧವಳಂ (ಎಇ. XII, ೨೬೯-೧೧; 1040). [ ? ]

**ದೀವಿ$_1$** 'ದೀಪ$_1$' ನೋ.

**ದೀವಿ$_2$** 'ದೀವ$_3$' ನೋ.

**ದೀವಿ$_3$** (ನಾ). (?) : "ವಂಕಿಯನೆ ದೀವಿ[ಪಾಠಾಂ. ದಿವ] ಮೇದರಕತ್ತಿಯಕ್ಕು" (ಮಂಗರಾ. ೧೧೩-೮). [ ? ]

**ದೀವಿಕರೆ** (ನಾ). ದ್ವೀಪದ ತಡಿ,–ತೀರ: ದೀವಿಕರೆಯುರೆಗಳಿನ್ ಮೊಳಗೆ ಮಾರುಲಿಗಳ್ ಬೆದರಿ, ಎದೆಗುಂದಿ, ಪೆಚ್ಚಾದರೆಮ್ಮವರು ಕೇಳ್ದೊಡನೆ! (ಪಾರಸಿ. ೧೫-೩೫೪). [ ದೀವಿ$_1$ (<ದೀಪ$_1$) + ಕರೆ$_4$ ]

**ದೀವಿಗೆ** (ನಾ). ಸೊಡರಂ; ದೀಪ: "ಆ ದೀವಿಗೆ ಜ್ಯೋತಿ ದೀಪ್ತಿ ಗೃಹ ಭಾನುವಕ್ಕು" (ಮಂಗರಾ. ೬೧-೧೮); ದೀವಿಗೆಗಳ್ ಜಲಕ್ಕನೆಕ್ಕೆಕ್ಕೆಯಿನಿಟ್ಟಳಂಬೆಳಗುತಿರ್ದುವೆರಟ್ಟಿಸೆಯೊಡ್ಡಣಂಗಳೊಳ್ (ಪಂಪಭಾ. ೧೨-೫); ದೀವಿಗೆಗಳಂ ಪಿಡಿದು ದೀಪಧಾರಿಣಿಯರ್ವಂದು (ಕಾದಂಉ. ೩೨೨); ಕೊಸಗಿನ ಪೂವಿನೊಪ್ಪು ಸುರಹೊನ್ನೆಯ ಪುಷ್ಪದ ಚೆಲ್ವು . . . ರಂಜಿಸೆ ವನದೇವಿಯರ್ ನಲಿದು ಮನ್ಮಥರಾಜನ ಬರ್ಪುದಕ್ಕೆ ರಾಗಿಸಿ ಮನಮೊಲ್ದು ಪೊತ್ತಿಸಿದ ದೀವಿಗೆಯಂದದಿನೊಪ್ಪಿ ತೋಱುಗುಂ (ಧರ್ಮಾಮೃ. ೧೩-೧೩); ಸುಖಕ್ಕೆ ತುಂಬಿದ ದೀವಿಗೆ ಮನೆಯೆಲ್ಲವ ಸುಟ್ಟಂತೆ ಆನು ಮಾಡಿದ ಭಕ್ತಿ ಎನಗಿಂತಾಯಿತ್ತು (ಬಸವ. ೬೯೦); ಪಲವುಂ ದೀವಿಗೆಗಳ್ . . . ಒಪ್ಪೆ ತಿರ್ದುವಾ ಮನೆವಮನೆಯೊಳ್ (ಗಿರಿಕ. ೪-೮೦); ಎರಡು ಬಲದಲಿ ಪಿಡಿದ ದೀವಿಗೆ ನಂದಿದವು (ಕುಪ್ಮಾದ್ರೋ. ೧೬-೭).

ದೀವಿಗೆಯೆಣ್ಣೆ = ದೀಪ ಉರಿಸಲಂ ಬಳಸುವ ಹರಳೆಣ್ಣೆ, ಎಳ್ಳೆಣ್ಣೆ, ಹೊಂಗೆಯೆಣ್ಣೆ ಮೊಂತಾದಂವು: (೩). [ < ಸಂ. ದೀಪಿಕಾ ]

**ದೀವಿಗೆಗಂಬ** (ನಾ).=ದೀಪಕಂಭ ೧: ಮಿಗೆ ರಮ್ಯವಡೆದ ಹೊಂಬರಿಯಣ ತಳಿಗೆ ತಂಬಿಗೆ ಗಿಂಡಿ ಗಿಣ್ಣಲುಗಳನು ನಗೆಮೊಗದರ್ಪಣ ಹಂಸೆ ಪುತ್ತಳಿಯ ದೀವಿಗೆಗಂಬಗಳನಿತ್ತನೊಲಿದು (ಮೋಹತ. ೧೫-೧೮).

[ ದೀವಿಗೆ + ಕಂಬ$_1$ (< ಕಂಭ) ]

**ದೀವಿಗೆವಿಡಿ** (ಕ್ರಿ). ದೀಪವನ್ನು ಹಿಡಿ: ಉಸಿರನಾರೈದು ನಿರ್ಜೀವನೆಂದೆಂದು ಶಂಕಿಸಿ ನೋಡಲಮ್ಮದೊಯ್ಯನೆ ದೂರದಿಂದೆ ದೀವಿಗೆವಿಡಿದು ದಿಟ್ಟಿಸಿದರು (ಸಿದ್ಧರಾ. ೨-೪). [ ದೀವಿಗೆ + ಪಿಡಿ$_1$ ]

**ದೀವಿಜಾಲ** (ನಾ). ದೀಪಗಳ ಸಾಲಂ,–ಶ್ರೇಣಿ,–ಸಮೂಹ: ತಳತಳಿಪ ದೀವಿಜಾಲಮಂ ಸಂದಳಿಸಿರೆ (ಬೊಂಕಶಾ. ೧೯೪೫, ಬಂಕಾಪುರ. ೨೬-೪; 1076). [ ದೀವಿ$_2$ (<ದೀವ$_3$) + ಜಾಲ$_1$ ]

**ದೀವಿನಾಡು** (ನಾ). ದ್ವೀಪದ ಪ್ರದೇಶ: ಕೇಳಿ ಬಲ್ಲೆವು ಲಂಕೆಯಂ ತೆಂಕಣದ ಕಡಲ ನಡುವಣ ದೀವಿನಾಡಂ (ಶ್ರೀರಾಮಾ. ೩೯೬-೩೯೪). [ ದೀವಿ₁ (<ದೀಪ₁) + ನಾಡು ]

**ದೀವಿಸು** (ಕ್ರಿ). ಆಶೀರ್ವದಿಸಂ; ಆಶೀರ್ವಾದ ಮಾಡಂ; ಹರಸು: "ಎಲ್ಲ ಭಕ್ತರೇ ನಿಮಗೂ ಮಹಿಳೇಶ್ವರಿಗೂ ಶಿವಾನುಗ್ರಹಮುಂಟಾಗಲಿ" ಎಂದು ದೀವಿಸಿದರು (ಪುರಾವಿ. ೧೬೭). [ ← ತೆಲು. ದೀವಿಂಚು ]

**ದೀವಿಹಲಸು** (ನಾ). ಒಂದು ಬಗೆಯ ಹಲಸು; ಸೀಮೆಹಲಸು; ದ್ವೀಪದ ಹಲಸು: ಸೀಮೆಹಲಸು, ದೀವಿಹಲಸು, ರೊಟ್ಟೀಹಲಸು (ಮೃಶಿಗಿ. ೯-೧೭೦); ಆಲೂಗಡ್ಡೆ . . . ಬಾಳೆಕಾಯಿ, ದೀವಿಹಲಸು, ಹಲಸಿನ ಕಾಯಿಯ ಸೊಳೆ ಇತ್ಯಾದಿಗಳನ್ನೂ ಈ ರೀತಿ ಕರಿಯಬಹುದು (ಅಡುಶಾ. ೯೦). [ ದೀವಿ₁ (<ದೀಪ₁) + ಹಲಸು (<ಪನಸು) ]

**ದೀಹ** 'ದೀವ₁' ನೋ.

**ದೀಹಳಿಗೆ** 'ದೀಪಾಳಿಗೆ' ನೋ.

**ದೀಹಾರ** (ನಾ). ದೀಹದ ಮೃಗಗಳನ್ನು ಇಡುವ ಜಾಗ,-ಸ್ಥಳ: ಇದು ದೀಹಾರದ ಗೇಹದಂತೆ ಹರಿಣೀರಮ್ಯಂ ಗೃಹಗ್ರಾಮದಂತುದಿತಕ್ರೋಡ ವಿಭಾಸಿ ಕೋಶಗೃಹದಂತಪ್ಪಾಪದಾಧಿಷ್ಠಿತಂ ಕದನೋರ್ವೀತಳದಂತೆ ದಾರುಣಚಮೂರಾವಸ್ಥಿತಕ್ಷೋಭಿತಂ ಮದವತ್ಕುಂಜರಗಾತ್ರದಂತೆ ವಿಳಸದ್ಭೂಪ್ರಭಾವಿಭ್ರಮಂ (ಪುಷ್ಪಪು. ೫-೬೮): "ದೇಹಾರ (ದೇವಾರ ಎಂದಿರಬಹುದು)" (ಪುಷ್ಪಪು. ಅಡಿಟಿ). [ ದೀಹ (<ದೀವ₁)+<ಆಗಾರ ]

**ದು, ದೂ** (ನಾ). ಎರಡು ಎಂಬ ಸಂಖ್ಯೆ: ಏಕದ್ವಿತ್ರಿ ಚತುಃ ಶಬ್ದಾಕೃತಿಗೆಕ್ಕ ದುತಿಚೌಗಳಾದೇಶಂಗಳ್ (ಶಮದ. ೩೯೦). 'ದಂಗುಣ', 'ದಂಗ್ಗಾಣಿ' ಪರಾ. ದೂ: "ದು (ದೂ)-ದ್ವಿ=ಎರಡು" (ತದ್ಭಕೋ. ೩೦). 'ದೂಜಾವ' ಪರಾ. [ <ಸಂ. ದ್ವಿ ]

**ದುಂ** (ನಾ). ಒಂದು ಅನುಕರಣ ಶಬ್ದ: ದುಡುಹೆಂಬ ದುಮ್ಮೆಂಬ . . . ಖಣಿಲೆಂಬ ಕಟಲೆಂಬ ದನಿ (ವೀಶೈಪು. ೨-೦೦-೮); 'ದುಂ' 'ದುಂ' ಎಂಬ ಸಪ್ಪಳ ಮಾಡುವ ವಾದ್ಯಗಳನ್ನು ಬಾರಿಸಿ ಹಾಡುವ ವಾಡಿಕೆಯು ಮೊದಲಿನಿಂದಲೂ ಬಂದಿದೆ (ಕನ್ನಜಾ. ೯೩).

**ದುಂಕಿ** (ನಾ). (ಕರಾ) ಗಾಣವನ್ನು ಎಳೆಯುವಾಗ ಗಾಣದ ಮರಕ್ಕೆ ಸಮತೋಲನ ಬರುವಂತೆ ಮಾಡಲು ಗಾಣದ ಮರದ ಮೇಲೆ ಇಡುವ ಭಾರ: ಹೂಡಲಿಕ್ಕೆ ಬರದ ಎತ್ತು ಗಾಣಕ್ಕೆ ಕಟ್ಟಿದರೆ ದುಂಕಿ ಎಳೆದೀತೇ (ರೂಢಿ). [ ? ]

**ದುಂಡಂಕಿ** 'ದುಂಡಂಕೆ' ನೋ.

**ದುಂಡಂಕೆ, ದುಂಡಂಕಿ** (ನಾ). ಪೂರ್ಣ ಅಂಕಿ; ಬಟುವು ಸಂಖ್ಯೆ: ಕೃಪಣತನ ಇಲ್ಲಿಯೂ ಬಿಡಲಿಲ್ಲವೊ? ದುಂಡಂಕಿ ಹೇಳಬೇಕು (ಗಾಳಿಪ ೨೨). **ದುಂಡಂಕಿ**: ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದಾಗಲೆಲ್ಲ ಸಾಮಾನ್ಯವಾಗಿ ದುಂಡಂಕಿ ಹಾಕುತ್ತಾರೆ (ರೂಢಿ). [ ದುಂಡು₁ + ಅಂಕೆ₄ ]

**ದುಂಡಂಚು** (ನಾ). ಸೀರೆ, ಪಂಚೆ ಮೊದಲಾದವುಗಳ ದಪ್ಪವಾದ ಅಂಚು,-ಗುಂಡಂಚು,-ದುಂಡಾಕಾರವಾಗಿರುವ ಅಂಚು.

ದುಂಡಂಚಿನ ಪಂಚೆ = ಗುಂಡಂಚಿನ ದೋತರ: ದುಂಡಂಚಿನ ಪಂಚೆ ಉಟ್ಟುಕೊಂಡು ಜರೀಶಲ್ಯ ಹೊದ್ದುಕೊಂಡು ರಾಯರು ಹೊರಟರು(ರೂಢಿ). ದುಂಡಂಚಿನ ಸೀರೆ =ದಪ್ಪದಾದ ಅಂಚಿನ ಸೀರೆ; ಗುಂಡಂಚಿನ ಸೀರೆ: ದುಂಡಂಚಿನ ಸೀರೆ ತುಂಬಾ ಬಾಳಿಕೆ ಬರುತ್ತದೆ (ರೂಢಿ).

[ ದುಂಡು₁ + ಅಂಚು₂ ]

**ದುಂಡಕ್ಕಿ** (ನಾ). ೧. ಗುಂಡಗಿರುವ ಅಕ್ಕಿ: ಹಂಡಕ್ಕಿ ದುಂಡಕ್ಕಿ ದುಂಡು ರಾಜಣದಕ್ಕಿ . . . ನೆಲ್ಲಕ್ಕಿ ಬಂದವೆ ನಮ್ಮ ಅರಮನೆಗೆ (ನಾಪದ. ೧೧೫). ೨. ನುಚ್ಚಾಗದ ಅಕ್ಕಿ. [ ದುಂಡು₁ + ಅಕ್ಕಿ₁ ]

**ದುಂಡಗೆ₁** (ನಾ). ಒಬ್ಬಾತನ ಹೆಸರು (?): ಪುತ್ತೂರುಡೆ ಶಿವವಾರವಮ್ಮಂ ದುಣ್ಣಗೆಗ್ಗಂ ನಲ್ಲತ್ತೂರೊಡೆ ಒಗ್ಗಮನೆ ಬಳೆಗವುಂ ಆಯ್ದೂಮ್ಮು ಮೆದ ಕಟನಿಯು ಎಟ್ಟೂಮ್ಮು ಬಾಳೆತೊಟ್ಟಪ್ಪಟ್ಟು ಬೃಹ್ಮದೇಯಂ ಕೊಟ್ಟೋದು (ಎಕ. X, ಕೋಲಾರ. ೨೩೦-೩; ಸು. 800 ?). [ ? ]

**ದುಂಡಗೆ₂** (ಅ). ೧. ಗುಂಡಾಗಿ; ವರ್ತುಲಾಕಾರವಾಗಿ: ಪೃಥ್ವಿ . . . ಗೋಲವದೆ ಅಂದರೆ ಕಿತ್ತಳೇ ಹಣ್ಣಿನಂತೆ ದುಂಡಗದೆ (ಮುಂಬಯಿ. ೪-೬೪); ದಪ್ಪಗೆ, ದುಂಡಗೆ, ಏನನೂ ಒಂದನು ಉರುಳಿಸಿಕೊಂಡವ ತಂದ. ದಪ್ಪಗೆ, ನುಣ್ಣಗೆ, ದುಂಡಗೆ ಇರುವುದು, ಅಜ್ಜ ಇದೇನೆಂದು ಕೇಳಲು ಬಂದ (ಇಂಗೀತ. ೩೨-೦೧). ೨. ತುಂಬಿಕೊಂಡಿರುವಂತೆ; ದಪ್ಪವಾಗಿ: ದುಂಡಗೆ ಇರುವ ತೆನೆಗಳ ಭಾರದಿಂದ ಜೋಳದ ದಂಟುಗಳು ತಲೆಯನ್ನು ಬೊಗ್ಗಿಸಿವೆ (ಮುಂಜುಕ. ೨). ೩. ಬೋಳಾಗಿ. 'ದುರುದುಂಡಗೆ' ಪರಾ.

ದುಂಡಗಿಡು=ಗಂಟುಮಾಡು; ದೊಡ್ಡ ಮೊತ್ತವಾಗಿಸು: ಹೊಟ್ಟೆನೆತ್ತಿ ಕಟ್ಟಿ ನಾವು ದುಡ್ಡನ್ನು ದುಂಡಗಿಡುತ್ತೇವೆ (ಜಮಿನ್ನಾ. ೧೯). ದುಂಡಗೆ ಮಾಡು = ಕೂಡಿಡು; ಪೇರಿಸಿಡು: ಆಟವು ಮುಗಿಯುತ್ತ ಬಂದಿತು. ರೂಪಾಯಿಗಳನ್ನು ದುಂಡಗೆ ಮಾಡಹತ್ತಿದರು (ಕೂತಕಾ. ೨೩).

[ ದುಂಡು₁ + -ಅಗೆ₃ ]

**ದುಂಡನೆ** (ಗು). ದುಂಡಗಿರುವ; ದಪ್ಪನಾದ: ಪಕ್ಕದ ಕುರ್ಚಿಯ ಪೀಠದಿ ಸುಖದಾಸನವಂ ಕೊಂಡಿಹ ಮಾಟದಿ ದುಂಡನೆ ಕಾಲ್ಗಳ ಮೇಲಿಕ್ಕಿಟ್ಟು ಹೊಟ್ಟೆಯ ಮೇಗಡೆ ಸೊಂಡಿಲನಿಟ್ಟು (ಗಣೇಶ.೨-೩೩). [ದುಂಡು₁+-ಅನೆ₁]

**ದುಂಡರಳ್ಗಡಲೆ** (ನಾ). ದುಂಡಗೆ ಹುರಿದು ಉಪ್ಪು ಕಾರ ಬೆರಸಿದ ಕಡಲೆ; ಉಪ್ಪುಗಡಲೆ (?): ಸಂಡಿಗೆ ಸಂಭಾರಗಡಲೆ . . . ದುಂಡರಳ್ಗಡಲೆ ಭಕ್ಷ್ಯಗಳ ಬಡ್ಡಿಸಿಕೊಳುತುಂಡರು ನೆಟಿ ಸೊಕ್ಕುವನಕ (ಮೋಹತ. ೦೮-೮೭). [ ದುಂಡು₁ + ಅರಳ್₃ + ಕಡಲೆ ]

**ದುಂಡರಿಸು** (ಕ್ರಿ). (ಉಕ) ಹೊಟ್ಟೆ ತೊಳಸು; ಹೊಟ್ಟೆಯಲ್ಲಿ ಮರಳಿದಂತಾಗು: ಅವಳಿಗೆ ಹೊಟ್ಟೆದುಂಡರಿಸಿತು, ಕಾರಿಬಿಟ್ಟಳು (ರೂಢಿ).

[ <ದುಂಡು₁ + -ಇಸು₃ ]

**ದುಂಡಾಪು** (ನಾ). ದುಂಡಾಗಿರುವ ಒಂದು ಬಗೆಯ ಅಪುಹುಲ್ಲು: "ತೃಣಚ್ಛದಃ - ದುಂಡಾಪಿನ ಹುಲ್ಲು" (ಓಷಧಿ. ೭೨); "ದೀರ್ಘನಾಳಂ- ದುಂಡಾಪು" (ಓಷಧಿ. ೭೭); "ಪೇಲವ-ಮುಸ್ತೆ, ದುಂಡಾಪು" (ಓಷಧಿ. ೦೦೩).

[ ದುಂಡು₁ + ಅಪು₁ ]

**ದುಂಡಾಮ** (ನಾ). ಒಂದು ಬಗೆಯ ಸಸ್ಯ: "ಅನಾಹ್ವಯಃ-ದುಂಡಾಮ" (ಓಷಧಿ. ೬). [ ದುಂಡು₁ + ಆಮ₂ ]

**ದುಂಡಾವರ್ತಿ** (ನಾ). ೧. ಪುಂಡತನ; ಪುಂಡಾಟಿಕೆ: ಅಂಥಾ ದುಂಡಾವರ್ತಿಯವರೇನು ನಮ್ಮವರು (ಮಾಮನಿ. ೧೬೫); ಅದ್ದಿ ಬಂದರೆ ದುಂಡಾವರ್ತಿಯ ಹೆಸರಿನಲ್ಲಿ ಪೋಲೀಸಿನವರ ಸಹಾಯ ಪಡೆಯಬಹುದು (ಗಂಗಾಳ. ೩೪). ೨. ಪುಂಡಾಟಿಕೆ ಮಾಡುವವನು; ಪುಂಡ: ತಮಸಾವನದಿಂದ ಮುಂದೆ ಪ್ರಯಾಣ ಮಾಡಿ ಜಾಲಂಧರನಾಡಿಗೆ ಬಂದೆವು. ಇಲ್ಲಿಯ ಜನ ದುಂಡಾವರ್ತಿಗಳು (ಪ್ರವಾಇ. I. ೨೦೭). [ ದುಂಡು₂ + <ವೃತ್ತಿ₁? ]

**ದುಂಡಿ₁** (ನಾ). ೧. ಹೆಂಗಸು; ಸ್ತ್ರೀ: ಗಂಡಗೆ ತಕ್ಕಂಥ ದುಂಡೀರು ಬರುತಾರೆ ಗಂಡನ ಮಡದೀ ನಡಿ ಮುಂದೆ (ನಾಪದ. ೨೭). ೨. ಮೈತುಂಬಿಕೊಂಡಿರುವವಳು; ಚೆಲುವೆ: ದುಂಡಿ ನಿನ್ನಯ ಕೈಯ ತೋಟು ನೀನುಂಡೂಟ ಕಂಡ ಕನಸ ಹೇಳುವೆನು (ನೇಮಿಸಂ. ೨೦-೫೫): ದುಡುದುಡನೆಯ್ತಂದು ದುಂಡಿಯರಾ ಚೆಲ್ವರೊಡೆಯನ ಚೆಲ್ವ ನೋಡಿದರು (ಭರತ. ೨೦-೬೪): ದುಂಡೀ ನಿನ ಗಂಡ ಪ್ರಚಂಡ ಉದ್ದಂಡ ದನುಜರ ಗಂಟಲಗಾಣ (ಶ್ರೀಕೃಪಾ. ೭೭); ಕೈ ತಾರೆ ದುಂಡೀ ಕೈ ನೋಡಿ ಕಣಿಯಾನು ಹೇಳ್ತೀನಿ (ಹುಟ್ಟಿಹ. ೪೩). [ ←ತೆಲು. ದುಂಡಿ ]

**ದುಂಡಿ₂** (ನಾ). ಗುಂಡಗಿರುವ ಕಲ್ಲು ; ಕಲ್ಲುಗುಂಡು : ದುಂಡಿಯು ಹೊಟಿಸಲಿ ಗುಂಡಿಯು ಕೂಡಲಿ ಹೆಂಚೆ ಕಲ್ಲಿನೊಳಿಟ್ಟು ಕೊಲಲಿ ಖಂಡವ ಕೊಯ್ಯೆ ಸಾಲವ ತಿದ್ದದಿರುಯೆಂದು ಮೊಂಡ ಹೇಳಿದ ಮಗನೊಡನೆ (ಅಮುಸಾಂ. ೩-೧೩೦) : ನೆಲದ ಹೊಟ್ಟೆ ಬದುಕ ನೋಡು ಗಟ್ಟಿಗಲ್ಲು ಓಟ್ಟು ಮಟ್ಟಿ ಪದರು ಗುಂಡು ದುಂಡಿ ಬಂಡೆ (ಮೂರ್ತಿಕಾ. ೧೩-೩) ; ತಣ್ಣೀರಿನ ಮಣ್ಣುಹರವಿಯಲ್ಲ, ಕಾದ ಕಬ್ಬುನದ ಕೆಂಡದ ದುಂಡಿ ! ಕೆಂಗೆಂಡದ ಹೆದ್ದುಂಡಿ ! (ತುಂಗಭ. ೧೧೯) ; ಪೂಜಾರಿಯು ತನ್ನ ಎರಡೂ ಕೈಗಳಿಂದ ಆ ದುಂಡಿಯನ್ನು ಎತ್ತುವನು (ಗಂಗಾಸಾ. ೧೪); ಭಿಲ್ಲರು . . . ಶತ್ರುಗಳ ಮೇಲೆ ಒಗೆಯುವುದಕ್ಕೆ ದೊಡ್ಡ ದೊಡ್ಡ ದುಂಡಿಗಳು ಇಟ್ಟುಕೊಂಡು . . . ಸಿದ್ಧರಾಗಿದ್ದರು (ಸಕ್ಕಸಾ. ೮೦). [ <ದುಂಡು₁ ]

**ದುಂಡಿ₃** 'ದಿಂಡ₁' ನೋ.

**ದುಂಡಿಗ** 'ದಿಂಡ₁' ನೋ.

**ದುಂಡಿಗು** (ನಾ). ೧. ಬೇಲಿಗೆ ಹಾಕಲು ಉಪಯೋಗಿಸುವ ಮೊನೆಯಾದ ಎಲೆಗಳನ್ನುಳ್ಳ ಒಂದು ಬಗೆಯ ಸಸ್ಯ: (+). [ ? ]

**ದುಂಡಿಗೆ** (ನಾ). (?): ಅರಸರ ದುಣ್ಣಿಗೆವೆರಸಿಟ್ಟ ಪೊನ್ನ ಕೆಯ್ದುಟಿಯಪ್ಪಂ ಗೊಪ್ಪಿಸಿಮನ್ನು ತನ್ನು ಭಗವನ್ತರ ಕಯ್ಯಳಾನತಿ ಕೊಟ್ಟು (ಎಕ III, ನಂಜನ. ೭೮-೧೩ ; ಸು. 900). [ ? ]

**ದುಂಡಿಜೆ** (ನಾ). ಚದುರಂಗ ಅಥವಾ ಪಗಡೆಯಾಟದ ಕಾಯಿ : "ದುಂಡಿಜೆಯುಮಂ ಬಿಸುಗೆ ಸಾರಿಯೆಂದಕ್ಕು" (ಕಬ್ಬಿಕ್ಕೈ. ೮೦) : "ದುಂಡಿಜೆಯುಂ ಬಿಸುಗೆಯೆನೆ ಸಾರಿ" (ಶಬ್ದಮಂ. ೪೦). [ ? ]

**ದುಂಡಿಸು** (ಕ್ರಿ). ೧. ಗುಂಡಾಗುವಂತೆ ಮಾಡು; ಸುತ್ತು: ಕಡುವೇಗದಿಂದ ಲಂಘಿಸುತ ಬಾಲವನು ತಾನೊಡನೆ ದುಂಡಿಸುತ ಬಾಯ್ದೆರೆದು (ಜ್ಞಾನಜ. ೧೧-೫೭). ೨. ವರ್ತುಲಾಕಾರವಾಗಿ ಚಲಿಸು; ಸುತ್ತುಹಾಕು; ತಿರುಗು: ಹಿಂದೆ ಮೆಟ್ಟುವ ಕೆಲಕೆ ಚಿಮ್ಮುವ ದುಂಡಿಸಿ ನೆಗೆವ . . . ಸುಕಳಾಶ್ವಮಂ ಬೇಗದಿಂ ಬೆಂಗವಾಯ್ದು (ಗಿರಿಕ. ೨-೧೧೫ ವ) ; ಲೀಲೆ ಕಾಲಾದಂತೆ ತಿರುಗಿ ಬಂದಾಡುತುಂ ದುಂಡಿಸಿ ಪುಟಂ ನೆಗೆದು ಪೆರ್ಚಿ ಪೊರೆಯೇಱುತುಂ . . . ಇಂತು ಮಧ್ಯಾಹ್ನಪರ್ಯಂತವರ್ಚಿಸಿ (ಸಾಮರ. ಹ. ೨೫೦-೧೪): "ಪ್ರದಕ್ಷಿಣೆ ಹಾಕು" (ಸಾಮರ. ಹ. ಕೋಶ) ; ಹೊಳೆವ ದುಂಡಿಸುವೊತ್ತುವೆತ್ತುವ ಮಲೆವ . . . ಕಡವುಗಳ ಬಿಡದಲಲಿಸುವ ಸೂಕಳಕೆಯಂ ಕೈಕೊಂಡುದಾ ತುರಗಂ (ಕುಮುರಾ. ೩-೭೦); ಮಿಡಿವ ಕಡೆಗಣಿಸಿ ಪಾರ್ವ ದುಂಡಿಪ ದಿಂಡು ವಾಯ್ವ ... ಕೈಕೊಳದ ಬಗೆಯಂ ಬಗೆದಂತೆ ಕಂಡು (ರಾಜಶೇ. ೭-೧೦ ವ). ೩. ಚಲಿಸು; ಹೊರಳು; ಚಂಚಲವಾಗು : ತೊಂಡು ಮಿಕ್ಕುದು ಮುಖರಸಂ ಜವ್ವನಂ ಮಸಗೆ ದುಂಡಿಸಲ್ತೊಡಗಿದವು ಕಂಗಳೆರಡುಂ ದೆಸೆಗೆ ... ನವಯುವ್ವನಂ ಪೇಱುತಿರೆ (ನಿಂಬರ.ಕ.೨೧೭-೭೦). ೪. ವಕ್ರವಾಗಿ ಚಲಿಸು ; ಅಂಕುಡೊಂಕಾಗಿ ಚಲಿಸು ; ನುಣುಚಿಕೊಳ್ಳು : ಕಂಡುದು ಮೃಗಮಲ್ಲಿ ಭಯಗೊಂಡುದು ಪೆಪ್ಪಳಿಸುತದಿರುತೋಡಲ್ಕೆ ಕರಂ ದುಂಡಿಸುತಿರ್ದಪುದಂ ದುರುಚಂಡಾಸ್ತ್ರದಿನಚಲ ಶಬರನಿಸೆ ಕಾನನದೊಳ್ (ಗಿರಿಕ. ೧-೯೦). ೫. ಮೈ ತುಂಬಿಕೊಂಡಿರು; ದಷ್ಟಪುಷ್ಟವಾಗಿರು: ನಿಱುಗಳನಿಕ್ಕಿ ದಾಂಟಿಸದೆ ದುಂಡಿಸುವಾಕೆಯನೊತ್ತೆಗೊಳ್ಳದಂತೆಱಿಯದೆ . . . ಮತ್ತೆ ಪೇಸಿ ಪೆಱರಪ್ಪದಪೋಲ್ ಸ್ಮರಭೈರವಂಗೆ ಪೆಣ್ಗುಱಿಗಳನಿಕ್ಕದೊಂದೆರಡನೇಂ ಮಿಟವೃತ್ತಿಗೆ ಮುಯ್ವನಾಂಪುದೇ (ಲೀಲಾವ. ೨-೯೩) ; ದುಂಡಿಸಿ ಬಿಂಕದಿಂ ಬಿಗಿದ ಪೆರ್ಮೊಲೆಗಳ್ (ಕಾವ್ಯಸಾ. ೩೬೩) : ಕಿರುಜವ್ವನದ ಕನ್ನೆವೆಣ್ಣ ದುಂಡಿಸಿದ ನುಣ್ಪಿನ ಮೆಯ್ಯೊಬಗು (ಮಂತ್ರಶ. ೮೮-೧೮). ೬. ಒಟ್ಟಾಗು ; ದಟ್ಟಯಿಸು ; ಗುಂಪಾಗು : ಗುಂಡು ಹಾರತಾವ ಬಂಡೇವು ತೂರತಾವ ಮುಂಡ ಬಾಗಿ ಜನತಂಡ ನಿಂತ ದೊರೆಸದರ ಮೆಟ್ಟಲು ದುಂಡಿಸಿ ಕೀರಿಟ್ಟು ನುಡಿ ಕಾಳಿ ಹೆಬ್ಬಾಗಿಲಕ (ಲೋಕಗೀ. ೩೦೦). [ ದುಂಡು₁ + – ಇಸು₃ ]

**ದುಂಡು₁** (ನಾ). ೧. ಚೆಂಡಿನಂತೆ ಗುಂಡಾಗಿರುವುದು,–ಬಟುವಾದುದು; ವೃತ್ತಾಕಾರವಾಗಿರುವುದು : ದುಂಡು ಉಕ್ಕಿನ ದಪ್ಪ . . . ೨॥ ಇಂಚಿನ ತನಕ ಇರುತ್ತದೆ (ಮುಂಬವ್ಯಾ. ೧೧೭). ೨. ವರ್ತುಲ; ಮಂಡಲ; ವೃತ್ತ: ಆ ವರ್ತುಲದ ಸುತ್ತ ಇನ್ನೊಂದು ದೊಡ್ಡ ದುಂಡು ಸುತ್ತಿ, ಈಗ ಮೊದಲಿನದು ಚಿಕ್ಕದಾಯಿತಲ್ಲ ಎಂದನಂತೆ ! (ಪ್ರಹಾರ. ೯). ೩. ಒಂದು ಬಗೆಯ ಟೊಳ್ಳಾದ ಕೈಬಳೆ ; ಕಡಗ : (+). ೪. ಸ್ಥೂಲವಾದುದು ; ತುಂಬಿಕೊಂಡಿರುವುದು; ದಷ್ಟಪುಷ್ಟವಾದುದು : ಆನೆಯು ಮೆಯ್ಯುಟ್ಟು ದುಂಡು (ಮುಂಬಯ. ೪-೨೨).

**ದುಂಡಾಗು** = ದಷ್ಟಪುಷ್ಟವಾಗು ; ದಪ್ಪವಾಗು : ಕೆಲವು ಮಕ್ಕಳಿಗೆ ಏನು ತಿನ್ನಿಸಿದರೂ ಅವು ದುಂಡಾಗುವುದಿಲ್ಲ (ರೂಢಿ). **ದುಂಡಾಡು** = ಹಾಲಿನಿಂದ ತುಂಬಿಕೊಳ್ಳು ; ಕಾಳಾಗು : ಭತ್ತ ದುಂಡಾಡುತ್ತಿವೆ (ರೂಢಿ). **ದುಂಡು ತಗಡು** = ವರ್ತುಲಾಕಾರದ ಲೋಹದ ಹಾಳೆ : ಆ ದೀಪದ ಬೆಳಕಿನ ದಾರಿಯಲ್ಲಿ, ಸುಮಾರು ಮೂವತ್ತು ರಂಧ್ರಗಳಿಂದೊಡಗೂಡಿದ ಒಂದು ದುಂಡು ತಗಡನ್ನಿಟ್ಟಿರುತ್ತಾರೆ (ವಿಜ್ಞಾವಿ. ೯೮).

[ ದೇ.॥ ತುಳು. ದುಂಡು, ದೊಂಡಿ ]

**ದುಂಡು₂** (ನಾ). ಧೂರ್ತ: ವಿಂಡ ದುಂಡು [ಪಾಠಾಂ. ಡಿ] ಗಳರ್ಥಿಕಾಱರು ಗಂಡಿಗರು ಗರ್ವಿತರು . . . ಖಂಡೆಯದ ಕಲಿಕೆಗಳ ತರಳರ ತಂಡ ಕೂಡಿತು (ತೊರರಾ. ೫-೫-೦೪). [ ←ತೆಲು. ದುಂಡಗ = ಧೂರ್ತಕೃತ್ಯ ]

**ದುಂಡುಕಡಗ** (ನಾ). = ದುಂಡು₁ ೩ : (+). [ ದುಂಡು₁ + ಕಡಗ ]

**ದುಂಡುಕರ** (ನಾ). ಒಂದು ಬಗೆಯ ಮರ ; ಅಳಂಗಿ : (+). [ ? ]

**ದುಂಡುಕಳ್ಳಿ** 'ದುಂಡುಗಳ್ಳಿ' ನೋ.

**ದುಂಡುಕೆ** (ನಾ). ಒಂದು ಬಗೆಯ ಸಸ್ಯ : "ಝುಡೂಕ — ದುಂಡುಕೆ" (ಓಷಧಿ. ೭೪). [ ? ]

**ದುಂಡುಗಳ್ಳಿ**, ದುಂಡುಕಳ್ಳಿ (ನಾ). ಒಂದು ಬಗೆಯ ಕಳ್ಳಿ: (+). **ದುಂಡು ಕಳ್ಳಿ:** (ಪಂಡಿತ. ೮೪). [ ದುಂಡು₁ + ಕಳ್ಳಿ₂ ]

**ದುಂಡುಗಾಮುಂಡ** (ನಾ). ಒಬ್ಬಾತನ ಹೆಸರು : ಶ್ರೀವುರದಾ ದುಣ್ಡುಗಾಮುಣ್ಡರಾ ತೋಣ್ಡದಾ ಪಡುವಾಯೊನ್ದು ತೋಣ್ಡ (ಎಕ. IV, ನಾಗಮಂ. ೮೫-೭೭ ; 776). [ ದುಂಡು₁ + ಗಾಮುಂಡ ]

**ದುಂಡುತಗಸಿ** (ನಾ). ಒಂದು ಬಗೆಯ ಅಗಸೆ : ಸೊಪ್ಪುಗಳು : ಅಗಸೆ ... ಬಿಳೀಸಾಸಿವೆ, ಕಾರೇ, ದುಂಡುತಗಸಿ, ಸಕೋಟೆ (ನಮ್ಮನು. ೨೩೭).

[ ದುಂಡು₁ + ತಗಸಿ (< ತಗಚೆ) ]

**ದುಂಡುದಂಡೆ** (ನಾ). ದುಂಡಾದ ಮಾಲೆ; ಗುಂಡಾಗಿ ಕಟ್ಟಿರುವ ಹಾರ : ಸಂಪಗೆಯ ದುಂಡುದಂಡೆಗಳುಂ ಮಲ್ಲಿಗೆಯ ದಂಡೆಯುಂ ಕೆಳೆಗೊಳಿಪಂತಿಂಪಡರೆ ತೋಳ್ಗೆ ಮೌಕ್ತಿಕದಿಂ ಪುದಿದುರು ಬಾಹುಪೂರಮಂ ಪದೆದಿತ್ತಳ್ (ರಾಜಶೇ. ೮-೨೩). [ ದುಂಡು₁ + ದಂಡೆ₁ ]

**ದುಂಡುದೋಳು** (ನಾ). ತುಂಬಿದ ತೋಳು; ಶಕ್ತಿಯುತವಾದ ಬಾಹು : ಚೆಂಡಾಡಿದಂತೆ ಕುಂಭವನೆತ್ತಿ ಗಜಗಳ ಸುಂಡಿಲ ನಗುವ ಚೆಲ್ವಿಕೆಯ ದುಂಡುದೋಳೆತ್ತಿ, ಸ್ವಾಮಿಯ ಮೇಲೆ ಸುರಿವನಖಂಡಿತದಮೃತಧಾರೆಗಳಾ (ಭರತ. ೧೭-೯೮) ; ಇಳೆಯ ಸೋಂಕುವ ದುಂಡುದೋಳು ಬೆಳಗುತ ಪಾತಾಳದ ಫಣಿಪನ ಫಣಾವಳಿಯ ರತ್ನವ ಪಳಚಿದುವು (ಕಂನವಿ. ೨೦-೨೩).

[ ದುಂಡು₁ + ತೋಳು (<ತೋಳ್) ]

**ದುಂಡುಬಳೆ** (ನಾ). = ದುಂಡು₁ ೩ : (+). [ ದುಂಡು₁ + ಬಳೆ₃ ]

**ದುಂಡುಭ** (ನಾ). ನೀರು ಹಾವು ; ಒಳ್ಳೆ : "ದುಂಡುಭಂ ರಾಜಳನೆನಲೊಳ್ಳೆಗಕ್ಕು ನಾಮಮುಂ" (ಮಂಗರಾ. ೧೧೮-೩). [ ಸಂ. ]

**ದುಂಡುಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ; ಗುಂಡುಮಲ್ಲಿಗೆ ; ಮಾಧವಿ : "ದುಂಡುಮಲ್ಲಿಗೆಯುಂ ಮದನಿಯುಕ್ಕುಂ" (ಮಂಗರಾ.

೩೮-೨೪) : "ವೃತ್ತಮಲ್ಲಿಕಾ–ದುಂಡುಮಲ್ಲಿಗೆ" (ಒಷಧಿ. ೧೫೮) : ಓಜೆಯಿಂ ದುಂಡುಮಲ್ಲಿಗೆಯ ಪದಕವನಿತ್ತು ಮರುಗದೊಡ್ಡಣಿಗಳಿಂ ಗಜಚರ್ಮಮಂ ತೊಡಿಸಿ (ಪುಷ್ಪರ. ೧೦-೮) ; ಎಳೆವರೆಯುದ ಪುರುಷನನೆಳೆವೆಂಗಳು ನಲಿದಪ್ಪಿ ದೊಂದು ವಿಲಾಸ ಎಳೆಮಾವನಪ್ಪಿದ ದುಂಡುಮಲ್ಲಿಗೆಗಳಂತಿಳಿಗೊಪ್ಪುತಿಹುದು (ಭರತ. ೭-೭) ; ಕತ್ತುರಿ ಸೇವಂತಿಗೆ ದುಂಡುಮಲ್ಲಿಗೆ ಮೊತ್ತದ ಜಾಜಿ ಸಂಪಗೆಯು ಇತ್ತರದಲಿ ಮಾಲೆಗಟ್ಟಿ ಮಾಡುವ ಹೆಂಗಳಿರ್ತಿಯನೇನ ಬಣ್ಣಿಸುವೆ (ಕಂಠವಿ. ೬-೮೨) ; ಮಾಧವೀಪುಷ್ಪವನ್ನು (ದುಂಡುಮಲ್ಲಿಗೆ) ಧರಿಸುವುದರಿಂದ ವಾತ ಶ್ಲೇಷ್ಮಗಳು ನಾಶವಾಗುವುವು (ಸಕವ್ಯ. ೪೪).

**ದುಂಡುಮಲ್ಲಿಗೆಗೋಲು** = ಗುಂಡು ಮಲ್ಲಿಗೆ ಹೂವಿನ ಬಾಣ ; (ಮನ್ಮಥನ) ಹೂಬಾಣ : ಮಂಡಳಿಸಿರ್ದ ಮಾನಿನಿರನ್ನೆಯರ ನೋಡಿ ಕಂಡ ನಿಪ್ಪಾಮಾತುರರು ದುಂಡುಮಲ್ಲಿಗೆಗೋಲು ತಾಗಲು ತಪಗೆಟ್ಟು ಬೆಂಡಾದರತಿವಿರಹದಲಿ (ಮೋಹತ. ೪೧-೨೨). [ ದುಂಡು$_1$ + ಮಲ್ಲಿಗೆ ]

**ದುಂಡುಮುಖಿ** (ನಾ). ಗುಂಡಗಿರುವ ಮುಖ : ಬಟ್ಟತಲೆ, ದುಂಡು ಮುಖ, ಕಿವಿಯವರೆಗೂ ಕಣ್ಣು, ಇಷ್ಟಾಗಿ ಶಾಸ್ತ್ರಕ್ಕೆ ಹೆತ್ತು ಕೂದಲು (ದೀಪಮು. ೪೧-೨೨). [ ದುಂಡು$_1$ + ಮುಖ ]

**ದುಂಡುಮುಡಿ** (ನಾ). ಗುಂಡಾಗಿ ಕಟ್ಟಿದ ತುರುಬು,–ಗಂಟು : ಹೊಸ ಹೊಂಗೇದಗೆಯೆಸಳ್ಗಳ್ ನವಶಸ್ತ್ರತತಿ ದುಂಡುಮುಡಿಯೆ ಪೀಲಿಯ ಪಳಿಯಿಗೆಯೆನೆ ತೊಂಡದುಟಿಯು ತರುಣೀರತ್ನದ ಸುಣ್ಣಂಡೆ ಮನೋಭವನೇಱುವ ಪೂದೇರಂದದಿನೊಪ್ಪಿದುದು (ಜಯುಕಾ. ೫-೭).

[ ದುಂಡು$_1$ + ಮುಡಿ$_3$ ]

**ದುಂಡುಮುತ್ತು** (ನಾ). ಗುಂಡಾಗಿರುವ ಮುತ್ತು, – ಮೌಕ್ತಿಕ : ತಂಡ ತಂಡದಿ ಹೊಱವಳಯದಿ ಡಿಂಡೀರಪಾಂಡುರ ಶಂಖಪ್ರವಾಳ ದುಂಡು ಮುತ್ತುಗಳಿಂದೆ ಮೇರೆಯಬ್ಧಿಯ ಕೊರಲ್ದಂಡೆಯಂತಿರ್ದುದೇನೆಂಬೆ (ಮೋಹತ. ೨-೭) : ದುಂಡುಮುತ್ತಿನ ರತ್ನ ಕೇವಣಿಸಿದ ಹೊನ್ನ ತೊಂಡಲ ಸೂಡಿದು ಮುದದಿ ಖಂಡೇಂದುಮುಖಿಕೆ ಕತ್ತುರಿಯಿಟ್ಟು (ಮೋಹತ. ೧೩-೬೫). [ ದುಂಡು$_1$ + ಮುತ್ತು$_5$ ]

**ದುಂಡುಮೇಜು** (ನಾ). ವರ್ತುಲಾಕೃತಿಯ ಮೇಲ್ಮೈಯುಳ್ಳ ಮೇಜು; ವರ್ತುಲಾಕಾರದ ಮೇಜು: ಕಾಫೀಭವನದ ಸುಂದರವಾದ ಕೈದೋಟದಲ್ಲಿ ಒಂದು ದುಂಡುಮೇಜಿನ ಸುತ್ತಲೂ ನಾವು ಕುಳಿತಿದ್ದೆವು (ಚೆಂದುಟ. ೪೦).

**ದುಂಡುಮೇಜಿನ ಪರಿಷತ್ತು, ದುಂಡುಮೇಜು ಪರಿಷತ್ತು**="ಎಲ್ಲ ಸದಸ್ಯರಿಗೂ ಸಮಾನ ಗೌರವವಿರುವ ಸಮ್ಮೇಳನ; ಮಂಡಲ ಗೋಷ್ಠಿ ; ದುಂಡುಮೇಜಿನ ಪರಿಷತ್ತು" (Round table conference. ಇಂಕನಿ) : ಬಳಿಯ ಹೊಂಡದ ದುಂಡುಮೇಜು ಪರಿಷತ್ತಿನಲಿ ಕಪ್ಪೆಗಳು ಚಪ್ಪಾಳೆ ತಟ್ಟಿ ಜಗಿದಾಡುತಿವೆ ತಮ್ಮ ಪಕ್ಷವೆ ಕೊನೆಗೆ ಗೆದ್ದ ಹಾಗೆ! (ದೀಪಧಾ. ೧೦-೧೭). **ದುಂಡುಮೇಜಿನ ಸಭೆ** = ದುಂಡುಮೇಜಿನ ಪರಿಷತ್ತು : ೧೯೩೧ರಲ್ಲಿ ಇಂಗ್ಲೆಂಡಿನಲ್ಲಿ ನಡೆದ ದುಂಡುಮೇಜಿನ ಸಭೆಯಲ್ಲಿ ಗಾಂಧೀಜಿ ಪಾಲ್ಗೊಂಡಿದ್ದರು (ರೂಢಿ). [ ದುಂಡು$_1$ + ಮೇಜು ]

**ದುಂಡುಮೊಗ** (ನಾ). = ದುಂಡುಮುಖ : ದುಂಡುಮೊಗ ತಿದ್ದಿ ಬೆಳೆದಿತ್ತು (ರಕ್ತರ್ಧ. ೩೩೦). [ ದುಂಡು$_1$ + ಮೊಗ ]

**ದುಂಡುರುಪೆ**, ದುಂದುರುಪೆ (ನಾ). ಒಂದು ಬಗೆಯ ಸಸ್ಯ : "ಅಶ್ವತ್ಥ ಫಲಾ – ದುಂಡುರುಪೆ" (ಒಷಧಿ. ೭) : "ಡೋಲಾಫಲ, ಹಿಪ್ಪೆ, ಎಸಗ, ದುಂಡುರುಪೆ, ಹೆಮ್ಮರ" (ಒಷಧಿ. ೬೪). **ದುಂದುರುಪೆ** : "ದೋಲಾಫಲಃ– ಎಲವ, ದುಂದುರುಪೆ" (ಒಧಿ. ೮೦) ; "ಟುಂಡುಕ ದುಂದುರುಪೆ" (ಅಕಾನಿ. ೧೧-೭) : ಅಡವಿ ಹಾಗಲದ ಗೆಡ್ಡೆ ದುಂದುರುಪೆ ಗೆಡ್ಡೆ [ಪಾಠಾಂ. ದುಮ್ಮಲಪಿ ಗಡ್ಡೆ] . . . ಅರೆದು ಕೊಟ್ಟು ಬಿಸಿನೀರಂ ಕುಡಿಯಿಸೆ ಚೆನ್ನಾಗಿ ವಿರೇಚನ ಮಕ್ಕು (ಸಕವ್ಯ. ೨೯೯). [ ? ]

**ದುಂಡುಸಂಪಿಗೆ** (ನಾ). ಒಂದು ಬಗೆಯ ಗುಂಡಾದ ಸಂಪಿಗೆ : ಪುಷ್ಪವೃಕ್ಷಗಳಲ್ಲಿ ದೊಡ್ಡ ವೃಕ್ಷಗಳಾಗ ತಕ್ಕ ಸುಂದರ ಪುಷ್ಪಗಿಡಗಳು ಸಂಪಿಗೆ ವನ ಸಂಪಿಗೆ . . . ದುಂಡುಸಂಪಿಗೆ ಇವುಗಳೆಲ್ಲ ಬೀಜಗಳಾಗಿವೆ (ಕೃಷಿಪ್ರ. ೨೦೦). [ ದುಂಡು$_1$ + ಸಂಪಿಗೆ (< ಸಂಪಗೆ) ]

**ದುಂಡುಸಮುದ್ರ** (ನಾ). ಒಂದು ಸ್ಥಳದ ಹೆಸರು ; ಉತ್ತರ ಪೂರ್ವ್ವಸ್ಯಾನ್ದಿಶಿ ಕಳವ್ಟಿತ್ತಿಗಟ್ಟು ಇಮಾನ್ಯಾನ್ಯಾನಿ ಕ್ಷೇತ್ರಾನ್ತರಾಣಿ ದತ್ತಾನಿ ದುಣ್ಡುಸಮುದ್ರದಾ ವಯಲುಳ್ಕಿಱುದಾಱಾಮೆಗೆ ಪಡಿಕ್ಕಣ್ಣಾಗಂ ಮಣ್ಣಂ ಪಟಿಯಾ ಎರೆನಲ್ಲೂರಾ ಉಪ್ಪಾರ್ಟು ಒಕ್ಕಣ್ಣಾಗ (ಎಕ. IV, ನಾಗಮಂ. ೮೫-೬೫ ; 776). [ ದುಂಡು$_1$ + ಸಮುದ್ರ$_1$ ]

**ದುಂಡುಳಿ** (ನಾ). ಗುಂಡಗಿರುವ ಉಳಿ,–ಚಾಣ.

[ ದುಂಡು$_1$ + ಉಳಿ$_5$ ]

**ದುಂಡುಱುಂಬೆ** 'ದಂಡುಱುಂಬೆ' ನೋ.

**ದುಂಡುಱುವೆ** (ನಾ). ಅತಿಶಯವಾದ ತಾಪ : ಬೆಂಡಾದಳಂಗಜಾತನ ನೋಡಲವನಸ್ತ್ರ ಕೊಂಡವು ಕುಚದ ಮಧ್ಯದಲಿ ದುಂಡುರು[ಱು]ವೆ [ಪಾಠಾಂ. ದಿಂಡುರುಮೆ]ಯ ಮಾಡುತಿರಲುಚ್ಚರಿಸಿದಳು ಕೆಂಡಗಣ್ಣನ ಮಂತ್ರಮುಯುವ (ಮೋಹತ. ೨೯-೪೯).

[ ದುಂಡು$_1$ + ಉಱುವೆ (<ಉಱುಬೆ) ]

**ದುಂದಕಾರ** (ನಾ). ಕಗ್ಗತ್ತಲೆ ; ಅಂಧಕಾರ : ಗಾಳಿ ಉಕ್ಕಿ ಒದರಿತಾಗ, ಗಿಡದ ಸಾಲು ಅದುರಿತಾಗ, ಅತ್ತ ಇತ್ತ ಅಂಧಕಾರ, ನೋಡಿದತ್ತ ದುಂದಕಾರ (ನನಲ್ಲ. ೮೩-೧೨).

[ ←ಮರಾ. ಧುಂದಕಾರ್ ; ಹಿಂ. ಧುಂಧುಕಾರ್ ]

**ದುಂದಾಗು$_1$** 'ದುಂದು$_1$' ಪರಾ.

**ದುಂದಾಗು$_2$** 'ದುಂದು$_3$' ಪರಾ.

**ದುಂದು$_1$** (ನಾ). ೧. ಮಿತಿಯಿಲ್ಲದೆ ಖರ್ಚು ಮಾಡುವುದು ; ಅಗತ್ಯವಲ್ಲದ ಹೆಚ್ಚು ವೆಚ್ಚ ; ಪೋಲು ಮಾಡುವಿಕೆ : ವ್ಯರ್ಥವೇದೆನಿಪುದಲ ಸೃಷ್ಟಿಯುಲಿ ಬಹುಭಾಗ ? ಅರ್ಥವೇಂ ಕ್ರಿಮಿಕೀಟಕೋಟಿ ರಚನೆಯುಲಿ ? ಕರ್ತನಾಲೋಚಿಸದ ದುಂದಿನವನೆಂಬ ನುಡಿಯರ್ಥದೃಷ್ಟಿಯು ವಿವರ (ಮಂಕುಕ. ೭೭) ; ಇನ್ನೂ ನಿಮಗೆ ದುಂದುಖರ್ಚಿನ ಚಟ ಬಿಟ್ಟಿಲ್ಲ (ಮಹಾಗ. ೩೫೪). ೨. ದುಂದುಗಾರ : ಬಂಗಾರದ ತಗಡಿನಲಿ ಬರೆದಿಡಬೇಕಾದ ಪದ್ಯ, ಕಲ್ಲಿನಲ್ಲಿ ಕಟೆದಿಟ್ಟರು ನಮ್ಮ ದುಂದು ಕಲೋಪಾಸಕರು (ಸಾಹಿವಿ. ೩೯). ೩. ಆಡಂಬರ ; ಪ್ರದರ್ಶನ ; ವೈಭವ ; ಡಂಬ : ದುಂದಿಗಾಗಿ ನೂರಾರು ರೂಪಾಯಿ ಪೋಲುಮಾಡುವ ಜನ ನಮ್ಮ ಬಳಗದ ಬಗ್ಗೆ ಮೂಗುಮುರಿದರು (ಜೀವನ. ೨ ಅರಿಕೆ).

**ದುಂದಾಗು$_1$** = ವೈಭವದಿಂದ ಕೂಡಿರು : ಏನು ದುಂದಾತು ನಿನ್ನಿನ ಮೇಜವಾನಿ (ಎತ್ತಿಕ್ಕೈ. ೨೭). **ದುಂದಾಟ** = ದುಂದು$_1$ : (ಕಿ). **ದುಂದು ಮಾಡು** = ೧. ವೃಥಾ ಖರ್ಚುಮಾಡು ; ಪೋಲು ಮಾಡು ; ಹಾಳು ಮಾಡು : ಮೂಱು ದಿನದೊಳಗೆ ದುಂದು ಮಾಡಿದ ಕಾರಣದೊಳಿಂದು ಘನಪುಣ್ಯವಾಯ್ತನ್ನದಾನದಿಂದೆನ್ನ ಮನಕೆ ಬರ್ಪಂತೆ ದೃಷ್ಟಂದೋಱಿ ಕೊಡಿಯುಂದನು (ವೀಶೈಪು. ೪-೧-೩೭); ಸಿಕ್ಕಾಪಟ್ಟೆ ದುಡ್ಡು ದುಂದುಮಾಡುವುದು ಸೈನಿಕರ ಪ್ರತಿನಿತ್ಯದ ಹವ್ಯಾಸವಾಗಿತ್ತು (ಪುನರು. ೬೨) : ಅವರ ಆಸ್ತಿಯ ಅರ್ಧಪಾಲನ್ನೆಲ್ಲ ನೀನು ದುಂದು ಮಾಡಿ ಕಳೆದೆ. ಉಳಿದ ಅರ್ಧ ಜುಗಾರಿ ಆಡಿದೆ . . . ಜನರು ನಗುವಂತಾಯಿತು (ಮುಂಗಾಮು. ೪). ೨. ವೈಭವದಿಂದ ಕೂಡು ; ಆಡಂಬರವನ್ನು ಹೊಂದು : ಹತ್ತ ಬಲ್ಲವರಿಗೆ ಕತ್ತಿಯು ಕೊಡುವೆನ ಹತ್ತಿ ಮಂಟಪ ಬಿಗಿರೆಂದ ಮಲಸಜ್ಜ ದುಂದುಮಾಡಿ ಮಣ್ಣ ಕೊಡಿರೆಂದ (ಲೋಕಗೀ. ೨೦೦).

[ ದೇ.೫ ತುಳು. ದುಂದು ]

**ದುಂದು$_2$** (ನಾ). ೧. ಒಂದು ಬಗೆಯ ಚರ್ಮವಾದ್ಯ. ೨. ಕೃಷ್ಣನ ತಂದೆ; ವಸುದೇವ. [ ಸಂ. ]

**ದುಂದು$_3$** (ನಾ). ಮಾದಕ ವಸ್ತುವಿನಿಂದ ಉಂಟಾಗುವ ಅಮಲು,–ಮತ್ತು: ಬಯ್ದಾಡುತ ಸುಮ್ಮ ಸುಮ್ಮ ಬಿದ್ದಿಹನಗೊ ಅಣ್ಣ, ತಮ್ಮ ಕುಡಿದು ದುಂದು ಕಂದಮ್ಮ (ಅರಳು. ೧೩೦–೧೭).

**ದುಂದಾಗು$_1$** = ಅಮಲೇರು; ಮತ್ತು ಬರು,–ಉಂಟಾಗು: ನೀವು ಕುಡಿದು ದುಂದಾಗಿದ್ದರೂ ನನಗೆ ಸಿಟ್ಟು ಬರುತ್ತಿದ್ದಿಲ್ಲ! (ದೇವದಾ. ೯೫); ಇವರು ಹೀಗೆ ದುಂದಾಗಿ ಬಿದ್ದಿರುವುದನ್ನು ನೋಡಿದರೆ (ಕುರಿಹಿಂ. ೧೦೭). [ ← ಮರಾ. ಧುಂದ್ ]

**ದುಂದುಗಾರ** (ನಾ). ಮಿತಿಯಿಲ್ಲದೆ ಖರ್ಚುಮಾಡುವವನು; ಹಣ ಪೋಲು ಮಾಡುವವನು: ದುಂದುಗಾರರು ಈ ಹೊತ್ತು ದೊರೆತ ಸಂಪತ್ತಿಯನ್ನು ಈ ಹೊತ್ತೇ ಆದಷ್ಟು ಪ್ರಕಾರದಿಂದ ಭೋಗಿಸಲಿಕ್ಕೆ ಹವಣಿಸುತ್ತಾರೆ (ಮುಂಬಯಿ. ೫–೨೪೮); ದುಂದುಗಾರ ಚಂದಿರನು ಇಣಿಕಿದನು ಬೆಳಕೆ ಸಾಲದಾಗಿ ರಸಿಕ ನೀತಿಯಲಿ ಬೆರೆಸಿ ಬಳಸುವನು ತಮವ ಸಾಲವಾಗಿ (ಅರಳು. ೪೦೪–೫); ನೀನು ಬಹಳ ದುಂದುಗಾರನಾಗಿ ತೋರುತ್ತಿ (ಕಥಾಮಂ. IV, ೪); ದುಂದುಗಾರರಿಗೆ ಎಷ್ಟು ಸಂಪಾದನೆಯಾದರೂ ಬಡತನ ತಪ್ಪುವುದಿಲ್ಲ (ನೀತಿಚಿಂ. IX, ೩೨). [ ದುಂದು$_1$ + –ಗಾರ(< –ಕಾಱ) ]

**ದುಂದುಗಾರತನ** (ನಾ). ಮಿತಿಯಿಲ್ಲದೆ ಖರ್ಚುಮಾಡುವಿಕೆ: (ಕ). [ ದುಂದುಗಾರ + –ತನ ]

**ದುಂದುಗಾರಿಕೆ** (ನಾ). ೧. =ದುಂದುಗಾರತನ: ತಮ್ಮ ದುಂದುಗಾರಿಕೆಯ ಬಗ್ಗೆ ಅವರಿಗೆ ಸಂತೋಷ (ನನ್ನಜೊ. ೮೧); ನಾನೂ ಮೊದಲಿನಿಂದ ದುಂದುಗಾರಿಕೆಯಲ್ಲಿ ಬೆಳೆದವಳು (ಕುಂಕುಮ. ೮); ಹೀಗೆ ದುಂದುಗಾರಿಕೆ ಕಲಿತರೆ ಈಗ ಪರವಾಗಿಲ್ಲವಾದರೂ ಮುಂದೆ ಕಷ್ಟವೆನಿಸೀತು (ಬಾಡಿಬ. ೭೭). ೨. ಯಥೇಚ್ಛವಾಗಿರುವಿಕೆ; ಹುಲುಸಾಗಿರುವಿಕೆ; ಎರಚಾಟ; ಸುಗ್ಗಿ: ರಸ್ತೆಯ ಎರಡು ಕಡೆಗಳಲ್ಲೂ ಹುಚ್ಚುಹುಚ್ಚಾಗಿ ಹಸುರಿನ ದುಂದುಗಾರಿಕೆಯನು ನೋಡುತ್ತಾ ಅವನು ಪ್ರಯಾಣ ಮಾಡುತ್ತಿದ್ದ (ದೂರಸ. ೦೫೭). [ ದುಂದುಗಾರ + –ಇಕೆ ]

**ದುಂದುಗಾರ್ತಿ** (ನಾ). ಮಿತಿಯಿಲ್ಲದೆ ಖರ್ಚುಮಾಡುವವಳು; ವ್ಯರ್ಥವಾಗಿ ಪೋಲು ಮಾಡುವವಳು: ನಾನೆಂದೂ ದುಂದುಗಾರ್ತಿಯಲ್ಲ (ಕುಂಕುಮ. ೯೩). [ ದುಂದುಗಾರ + –ತಿ$_1$ (<–ಇತ್ತಿ) ]

**ದುಂದುಗೆಡಿಸು** (ಕ್ರಿ). ಅಪವ್ಯಯ ಮಾಡಿ ಕಳೆದುಕೊಳ್ಳು; ಪೋಲು ಮಾಡು: ಮನೆ ಮಾರು ಮಾಡಿ ನೆಮ್ಮದಿಯಾಗಿ ಬಾಳದಿಂತಲೆವನೇತಕೆ ಬೆಸದರೊಡನೆ, ಹರೆಯವನೇಕೆ ಮರಳಿನೊಂಟಿಯೊಲಿಂತು ದುಂದುಗೆಡಿಸುವನು (ಗೊಲ್ಲಥಾ. ೨–೪೦). [ದುಂದು$_1$ + ಕೆಡಿಸು$_1$ ]

**ದುಂದುತನ** (ನಾ).=ದುಂದುಗಾರತನ: ಅವನ ದುಂದುತನವೇ ಅವನಿಗೆ ಮುಳುವಾಯಿತು (ರೂಢಿ). [ ದುಂದು$_1$ + –ತನ ]

**ದುಂದುಬಾಳು** (ನಾ). ದುಂದರಹಾಳುತನದ ಬದುಕು; ವ್ಯರ್ಥವಾಗಿ ಖರ್ಚುಮಾಡುವ ಜೀವನ: ಇತರ ಸಹೋದ್ಯೋಗಿಗಳಂತೆ ಅವನೂ ದುಂದುಬಾಳನ್ನು ಬದುಕಲು ಸಿದ್ಧನಾದನು (ಪುನರು. ೬೨). [ ದುಂದು$_1$ + ಬಾಳು$_2$ (<ಬಾೞ್$_2$) ]

**ದುಂದುಬೀಳು** (ಕ್ರಿ). ಹೆಚ್ಚಾಗು; ಮಿತಿಮೀರು: ಗಂಗಿ ಗೌರಿ ಜಗಳ ದುಂದುಬಿದ್ದಾವಂದ ಅಂಗಳದ ಕಲ್ಲ ಶಿವ ಮೆಟ್ಟಿ ಕೇಳ್ಯಾನ ಗಂಗಿ ನಿನ ಬಾಯಿ ಬಲುಬಾಯಿ (ಕನ್ನಜಾ. ೧೦೬). [ ದುಂದು$_1$ + ಬೀಳು$_1$ (<ಬೀೞ್$_1$) ]

**ದುಂದುಭಿ$_1$** (ನಾ). =ದುಂದುಮೆ ೨: 'ದುಂದುಭಿಗಳು' ಕನ್ನಡಿಗರಿಗೇನು ಅಪರಿಚಿತವಲ್ಲ. ಶಿವಶರಣರು ತಮ್ಮ ಕಾಲಜ್ಞಾನದ ಹಾಡುಗಳನ್ನು ಹೋಳಿಯ ದುಂದುಭಿಯಲ್ಲಿ ಹಾಡಿದ್ದಾರೆ . . . 'ದುಂದುಭಿ' ಹಾಗು 'ದುಂದುಮಿ' ಇವು ಎರಡೂ ಬಾಜನಗಬ್ಬಗಳಿದ್ದರೂ, ಹಾಡುವ ತಾಳ, ಲಯ, ಗತಿ, ರಾಗ ಮೊದಲಾದವುಗಳು, ಬೇರೆಬೇರೆ ಇವೆ (ಕನ್ನಜಾ. ೯೩). [ <ದುಂದುಮಿ ]

**ದುಂದುಭಿ$_2$** (ನಾ). ೧. ಒಂದು ಬಗೆಯ ಚರ್ಮವಾದ್ಯ; ದೊಡ್ಡ ಭೇರಿ; ನಗಾರಿ: "ಪಿರಿದಪ್ಪ ಭೇರಿ ದುಂದುಭಿ" (ವಸ್ತುಕೋ. ೭೯–೨೭); "ರವ ಮಿಕ್ಕ ಹಜಿ ದುಂದುಭಿಯೆನಿಕ್ಕು" (ಮಂಗರಾ. ೬–೨೦); ದುಂದುಭಿ ಗಭೀರನಿನದಂ . . . ಜಿನಚರಣಕಮಲಭೃಂಗಂ ಪಂಪಂ (ಆದಿಪು. ೧–೩೩); ದುಂದುಭಿಗಭೀರರವ ಸುರದುಂದುಭಿಗಳ್ಗಗನತಳದೊಳೆಸೆದಪುವು (ಅಜಿಪು. ೮–೧೩); ಮೊರಜೆಯೆ ದುಂದುಭಿ ಶಂಖ ಕಹಳಾ ಪರಮ್ಮದಂಗಾದಿಗಳು . . . ದೇವ ಹೊಱವಂಟ (ಕುಮ್ಯಾಉ. ೭–೫); ದುಂದುಭಿಗಳು ಧಂಧಣರೆನುತಿರೆ . . . ಬಿಟ್ಟನು ಪಾಳೆಯವ (ಕುರಾಸಾಂ. ೧೭–೩೦); ರಕ್ತಕಲಿತ ದುಂದುಭಿ [ಪಾಠಾಂ. ಮಿ]ಯಂತೆ ಸ್ವನಸ್ನಿಗ್ಧಹರ್ಯಕ್ಷತನುಜಶ್ಮಶ್ರುಪ್ರವರಮೆನಿಪ ಶುಭಲಕ್ಷಣಂ ದಿವ್ಯಭೂಷಾಯುಕ್ತ ಲೋಹಿತಾನನದ ಸೊಬಗು (ವೆಂಕಾರಾ. ೧–೮–೩೩). ೨. ಅರುವತ್ತು ಸಂವತ್ಸರಗಳಲ್ಲಿ ಐವತ್ತಾರನೆಯದು: ದುಂದುಭಿಸಂವತ್ಸರೋದ್ಭವಂ . . . ಸುರದುಂದುಭಿ ಪತಿ ಚರಣಕಮಲಭೃಂಗಂ ಪಂಪಂ (ಆದಿಪು. ೧–೩೩); ಮತ್ತಮಾ ವರುಷಮೇ ಪ್ರಭವ ವಿಭವ . . . ದುಂದುಭಿ ರುಧಿರೋದ್ಗಾರಿ ರಕ್ತಾಕ್ಷಿ ಕ್ರೋಧನ ಅಕ್ಷಯಮೆಂದಱುವತ್ತು ತೆಱನಾಗಿಹುದು (ವಿವೇಕ. ೩೨೦). ೩. ಪಗಡೆಯಾಟದಲ್ಲಿ ಬೀಳುವ ಇತ್ತಿಗದ ಗರ. ೪. ವಾಲಿಯಿಂದ ಹತನಾದ ಒಬ್ಬ ರಾಕ್ಷಸನ ಹೆಸರು: ನೀಂ ಪೇಳ್ದುದಿದೆ ಕಣಾ ನಿನ್ನಗ್ರಜಂ ಕೊಂದು ಬಿಸುಟ ದುಂದುಭಿ? (ಶ್ರೀರಾಮಾ. ೨೯೮–೩೭೪); ಕಿಷ್ಕಿಂಧಕಾಂಡ ಬ್ರಹ್ಮಾಂಡ, ದುಂದುಭಿ ಹೆಣದ ಸುತ್ತಲೂ ಮರ್ಕಟೋತ್ತಮರ ಎದೆ ದುಂದುನೃತ್ಯ (ಚಂಡಮ. ೨೨–೬). [ ಸಂ. ]

**ದುಂದುಭಿಧ್ವನಿ** (ನಾ). ಭೇರಿಯ ಶಬ್ದ,–ಸ್ವರ: ಗಂಭೀರಾಯುತ ದುಂದುಭಿಧ್ವನಿ ರಥ ಜ್ಯಾ ದೀರ್ಘರಾವಂಗಳುಂ . . . ದಿಗಂತಂ ತಾಗೆ (ಹರಿವ್ಶಾರ. ೩–೧೨). [ ದುಂದುಭಿ$_2$ + ಧ್ವನಿ ]

**ದುಂದುಭಿನಾದ** (ನಾ). = ದುಂದುಭಿಧ್ವನಿ: ದುಂದುಭಿನಾದಮಾಪೂರಿಸೆ ದಿಕ್ತಟಮಂ (ಶಂರಾಮಾ. ೧೭–೬೯). [ ದುಂದುಭಿ$_2$ + ನಾದ$_1$ ]

**ದುಂದುಭಿನಿನಾದ** (ನಾ).=ದುಂದುಭಿಧ್ವನಿ: ದುಂದುಭಿನಿನಾದಮುಖರಂ ಮಂದಾರನಮೇರುವಿಕಚಕುಸುಮಾಸಾರಂ ಸಂದಿಸೆ ಕೇವಲಿಪೂಜೆಗೆ ಬಂದತ್ತು ಚತುರ್ನಿಕಾಯ ದೇವನಿಕಾಯಂ (ಪಂರಾಮಾ. ೮–೩೦); ದುಂದುಭಿನಿನಾದವಾದಂತೆ ಪಂಪನ ವಾಗ್ಝರಿ ದುಮ್ಮಿಕ್ಕಿತು! (ದಾನಚಿಂ.೦೩). [ ದುಂದುಭಿ$_2$ + ನಿನಾದ ]

**ದುಂದುಭಿನಿಸ್ವನ** (ನಾ). = ದುಂದುಭಿಧ್ವನಿ: ದುಂದುಭಿನಿಸ್ವನಂ ನೆಗಳೆ . . . ತನ್ನ ನಂದನನಂಗಂದನುರಾಗದಿಂ ಪರಸಿ ಕಟ್ಟಿದನೊಲ್ದಧಿರಾಜಪಟ್ಟಮಂ (ತ್ರಿಪುವಿ. ೧೯–೩೦). [ ದುಂದುಭಿ$_2$ + ನಿಸ್ವನ ]

**ದುಂದುಭಿಪದ** (ನಾ). ಹರೆಯೊಂದಿಗೆ ಹಾಡುವ ಹಾಡು; ಹೋಳೀ ಪದ: ಚಾಲುಕ್ಯರ ಪೂರ್ವದಲ್ಲಿಯೇ ನಮ್ಮಲ್ಲಿ ವರ್ಣಕಸಾಹಿತ್ಯವಿತ್ತು . . . ಶೃಂಗಾರಿಕ ದುಂದುಭಿಪದಗಳು, ಹೆಣ್ಣುಮಕ್ಕಳು ಹೇಳುವ ತ್ರಿಪದಿಯೊಳಗಿನ ಒನಕೆವಾಡುಗಳು (ಸಾಹಿವಿ. ೮೩); ದುಂದುಭಿಪದಗಳ ಚೆಂದಾಗಿ ಕೇಳಿರಿ (ಕನ್ನಜಾ. ೯೪). [ ದುಂದುಭಿ$_2$ + ಪದ$_2$ ]

**ದುಂದುಭಿರವ** (ನಾ).=ದುಂದುಭಿಧ್ವನಿ: ವಿಮೋಹವ್ಯಗಮಂ ಮಿಥ್ಯಾಕಂದರದೊಳ್ ಬೆದಱುಟ್ಟುವ ದುಂದುಭಿರವದಂತಿರೊಗೆಯೆ ಗಂಭೀರರವಂ (ಯಶೋಚ. ೪–೨೨); ಧಂಧಂಧಮೆಂಬುವಾ ಭೇರಿ ದುಂದುಭಿರವಕೆ ನಡುಗೆ ಗಿರಿವನಗುಹಾಕಿಷ್ಕಿಂಧೆ (ಶ್ರೀರಾಮಾ ೨೯೬–೩೨೦). [ದುಂದುಭಿ$_2$ + ರವ]

**ದುಂದುಮಿ** 'ದುಂದುಮೆ' ನೋ.

**ದುಂದುಮಿಪದ** (ನಾ).=ದುಂದುಭಿಪದ : "ದುಂದುಮಿಪದ=ಹೋಳಿಯ ಅಶ್ಲೀಲ ಹಾಡು"(ಜಾನಕೋ. ೬). [ದುಂದುಮಿ (<ದುಂದುಮೆ)+ಪದ$_2$]

**ದುಂದುಮಿಸು** 'ದುಮುದುಮಿಸು' ನೋ.

**ದುಂದುಮೆ,** ದುಂದುಮಿ, ದುಂದುವೆ (ನಾ). ೧. ಹರೆ; ಡಂಗುರ : ಸುರದುಂದುಮೆಱೆಸೆಯುತ್ತಿರೆ ಸುರಕನ್ನೆಯರೊಲ್ದು ಚಾಮರಂಗಳನಿಕ್ಕಲ್ ಕರಮೆಸೆವ ಸುರವಿಮಾನದೊಳಿರಲುಯ್ದರ್ ಕೇತಮಲ್ಲನಾಯಕನಸುವಂ (ಎಕ. V, ಚನ್ನರಾ. ೨೦೩-೧೪: ಸು. 1200). 'ದುಂದುಮೆಗೇಳ್' ಪರಾ. ೨. ಹರೆಯ ಧ್ವನಿಯೊಡನೆ ಹಾಡುವ ಹಾಡು; ಒಂದು ಬಗೆಯ ಬಾಜನಗಬ್ಬ : ಈ ದೀರ್ಘವಾದ ದುಂದುಮೆ ಬಹುಮಟ್ಟಿಗೆ ಕಾವ್ಯದ ಸರಣಿಯನ್ನೂ ಸ್ವಾರಸ್ಯವನ್ನೂ ಪಡೆದಿದ್ದು ತನ್ನ ಗುರಿಯನ್ನು ಸಾಧಿಸಿದೆ ಎನ್ನಬಹುದು (ಕುಮೂಸಾಂ. ೨೩೬). **ದುಂದುಮಿ :** ೨. 'ದುಂದುಮಿ'ಯು ಹೋಳಿಯ ಪದದ ಒಂದು ಉತ್ಕೃಷ್ಟವಾದ ಕುಸುಕು (ಕನ್ನಜಾ. ೯೩). **ದುಂದುವೆ :** ೧. ಅಸಿಯ ಗಸಣಿಯುಂ ದೂವೆಯ ಬೆವಸವುಂ ದುಂದುವೆಯ ದಂದುಗಂ ಮಾಡಿ (ಎಕ. XI, ಮೊಳಕಾ. ೨೦-೪೧ ; 1278 ?).

**ದುಂದುಮೆಗಾಲ** (ನಾ). ವೈಭವದ ಕಾಲ; ಉಚ್ಛ್ರಾಯ (?) : ತನ್ನೊಡನಿಂದ್ರನಾಜ್ಞೆಯಿಂದಂ ದಿವಿಜಾಂಗರಕ್ಷಕರಿರೆ ಮಾಸರಮಾರದನೆಯ್ದೆ ಬಣ್ಣಿಪರ್ ದುಂದುಮೆಗಾಲಮಂ ಘನರಥಾವನಿಪಾಲನ ರಾಜ್ಯಕಾಲಮಂ (ಶಾಂತಿಪು. ೯-೫೯) : ಗುರು ಕನ್ನೆಗೆ ಬಂದಿರೆ . . . ಧರ್ಮಕ್ಕೆಱಗಿರ್ಪರ್ ಮನುಜರೆಯ್ದೆ ದುಂದುಮೆಗಾಲಂ (ಅಟ್ಟಮ. ೧೨ ೧೪೪).

[ ದುಂದುಮೆ$_0$ + ಕಾಲ ]

**ದುಂದುಮೆಗೇಳ್** (ಕ್ರಿ). ದುಂದುಮೆಯೆಂಬ ಹಾಡಿನಲ್ಲಿ ಹಾಡಿರುವುದನ್ನು ಕೇಳು : ಧರೆಯೊಳಗಿಂತೀ ನಗರದ ಪರದರ್ ಸಂಪನ್ನರೆಂದು ದುಂದುಮೆಗೇಳ್ದಂ (ಸುಕುಮಾ. ೧೦-೧೧೭) [ ದುಂದುಮೆ + ಕೇಳ್ ]

**ದುಂದುರುಪೆ** 'ದುಂಡುರುಪೆ' ನೋ.

**ದುಂದುಲು** 'ದಿಂಡ$_1$' ನೋ.

**ದುಂದುವೆ** 'ದುಂದುಮೆ' ನೋ.

**ದುಂದುವೆಚ್ಚ** (ನಾ). ಅತಿಯಾಗಿ ಮಾಡುವ ಖರ್ಚು : ಅಷ್ಟೊಂದು ದುಂದುವೆಚ್ಚಕ್ಕೆ ದುಡ್ಡು ಎಲ್ಲಿಂದ ಬರುತ್ತಿತ್ತೋ ಹೇಳುವಂತಿರಲಿಲ್ಲ (ಪುನರು. ೬೨) ; ಶ್ರೀಮಂತರು ದುಂದುವೆಚ್ಚ ಮಾಡುವುದರಲ್ಲಿ ಸ್ಪರ್ಧೆ ನಡೆಸುತ್ತಾರೆ (ಪ್ರವಾಇ. I. ೨೦೭). [ ದುಂದು$_1$ + ವೆಚ್ಚ ]

**ದುಂದುವೈಭವ** (ನಾ). ಮಿತಿಮೀರಿದ ಖರ್ಚಿನಿಂದ ಕೂಡಿದ ವೈಭವ,- ಶ್ರೀಮಂತಿಕೆ : ಸುಲಭವಾಗಿ ಸಂಪಾದಿಸಿದ ಬಟ್ಟಹಣದ ಮಾಲೀಕತ್ವವನ್ನು ಸೂಚಿಸುವ ದುಂದುವೈಭವ ಆ ವಾತಾವರಣದಲ್ಲಿ ತುಂಬಿ ತುಳುಕುತ್ತಿತ್ತು (ಪುನರು. ೨೦೦). [ ದುಂದು$_1$ + ವೈಭವ ]

**ದುಂದುಱು** (ನಾ). ತಲೆಯಲ್ಲಿ ಹುಣ್ಣಾಗಿ ಹುಳುಗಳು ಸೇರಿಕೊಳ್ಳುವ ಒಂದು ಬಗೆಯ ರೋಗ : ಕೋಷ್ಠಮನೆ ಪುರಿದರೆದು ತಿಳತ್ತೈಳಮನೆಱೆದಱೆವೊರಸಿದಂದು ದುಂದುಱು ಕಿಡುಗುಂ(ಲೋಕೋಪ. ೯-೫೬); "ಮಂಡೆಯ ಒಳಗಣ ಪುಱು" (ಲೋಕೋಪ. ಟೀಕ) ; ಅರಗಾಮಳಕಫಳಂ . . . ಯೆಕ್ಕೆಇವಂ ಕೊಂಡರೆದಿಂಬಾಗಿರೆ ಪೂಸುಗೆ ಶಿರೋವ್ರಣಂ ತರ್ದು ದುಂದುಱೆಂಬಿ [ಪಾಠಾಂ. ತುಱೆಯೆಂಬಿ]ವು ಕಿಡುಗುಂ (ಲೋಕೋಪ. ೯-೫೮). [ ? ]

**ದುಂದುಱುಂಬೆ** 'ದಂಡುಱುಂಬೆ' ನೋ.

**ದುಂಪ** (ನಾ). ಮರ, ಗಿಡ ಮುಂತಾದುವುಗಳ ಅಡಿಭಾಗ; ಬೇರು: (೬).

[ ದೇ.॥ ತೆಲು. ದುಂಪ ]

**ದುಂಪದೂಳಿ,** ದುಂಪಾದೂಳಿ (ನಾ). ೧. ದೂಳಿಪಟ; ನಾಶ: ಮೊರಸರ ಗಂಡನು ಪರಬಲ ದುಂಪದೂಳಿ . . . ಮೊದಲಾದ ಬಿರುದಿನಾನೆಗಳೈದಿದವು (ಕಂನವಿ. ೩-೪೨). **ದುಂಪಾದೂಳಿ :** ೨. ಮನಸ್ಸಿಗೆ ಬಂದಂತೆ ವ್ಯಯಮಾಡುವುದು ; ದುಂದುವೆಚ್ಚ : ನಿಮ್ಮಪ್ಪನ ಮನೆಯಿಂದ ಬರುವಾಗ ಒಂದು ಗಾಡಿ ರಂಗವಲ್ಲಿಯನ್ನು ಹೇರಿಸಿಕೊಂಡು ಬಂದವಳಿಗಿಂತಲೂ ಹೆಚ್ಚಾಗಿ ದುಂಪಾದೂಳಿ ಮಾಡುತೀಯೆ (ಮಾಮರಾ. ೮೧).

[ ←ತೆಲು. ದುಮಾದೂಳಿ = ಅಧಿಕವಾದ ಧೂಳು ]

**ದುಂಪರಾಷ್ಟ್ರ,** ದುಮ್ಮರಾಷ್ಟ್ರ (ನಾ). ಒಂದು ಬಗೆಯ ಸಸ್ಯ : "ಏಲಾಪರ್ಣೀ, ಸುವಹಾ, ರಾಸ್ನಾ, ಯುಕ್ತರಸಾ–ಳ ಸಣ್ಣ ದುಂಪರಾಷ್ಟ್ರ, ರಾಷ್ಟ್ರ" (ಸಿದ್ಧಾಂತಿ. ೧೨೬). ದುಂಪರಾಷ್ಟ್ರ, ನೀಲಿದೇರು . . . ಕಷಾಯ ವಿಟ್ಟು ಕೊಡಲು ವಿಷಮಶೀತಜ್ವರ ಗುಣಮಕ್ಕುಂ (ಸಕವ್ಯ. ೧೦೭). **ದುಮ್ಮರಾಷ್ಟ್ರ :** ಶುಂಠಿ, ದುಮ್ಮರಾಷ್ಟ್ರ, ಹಾಲೆಬೇರು . . . ಕಷಾಯಮಿಕ್ಕಿ ಕೊಡಲು ವಿಷಮಶೀತಜ್ವರ ಗುಣಮಕ್ಕುಂ (ಸಕವ್ಯ. ೦೦೭).

[ ದುಂಪ + ರಾಷ್ಟ್ರ./ತಮಿ. ತುಮ್ಬರಾಷ್ಟ್ರಕ; ತೆಲು. ದುಂಪರಾಷ್ಟ ]

**ದುಂಪಾದೂಳಿ** 'ದುಂಪದೂಳಿ' ನೋ.

**ದುಂಪು,** ದುಂಬು, ದುಂಬೆ$_2$, ದುಂಪು$_1$, ದುಮ್ಮು$_2$ (ನಾ). ಮಣ್ಣು ; ಮರಳು ; ಧೂಳು : ಕಡುಘಲದಿ ರಾಕ್ಷಸರು ಕಪಿಗಳ ತಡೆಗಡಿದು ಡೆಂಕಣಿ ಮಕರದಿಬ್ಬಿಗಳಿಡುವ ಕೈಗುಂಡು ಕವಣಿನ ಲಗ್ಗೆ ದುಂಪುಗಳ . . . ಬಡಿವ ಕೊಡತಿಗಳೊಡನೆ ಘಾತಿಸಿ ಕೆಡಹುತಿರ್ದರು ನಾಲ್ಕು ದೆಸೆಯೊಳು ವೀರ ಬೊಬ್ಬೆಯಲಿ (ಅನಂರಾ. ೫-೮-೪೯). ೨. (ಆಲಂ). ಮಣ್ಣೆರಚುವುದು ; ಮಸಿ ಬಳಿಯುವುದು : ಗುಂಪು ಸರಿಸವತಿಯರು ಗುಪಿತದಲಿ ನಗುತಿಹರು ದುಂಪು ಮಳಿತಲ್ಲ ಅನ್ಯಾಯವಿದು ಸಲ್ಲ (ಶ್ರೀಕೃಪಾ. ೪೦). **ದುಂಬು :** ೧. "ಧೂಸು ; ಧೂಳು" (ಜಾನಕೋ. ೬). **ದುಂಬೆ$_2$ :** ೧. ಮೇಲಿದ್ದ ಧೂಳು ದುಂಬೆಗಳನ್ನೆಲ್ಲ ಪೊರಕೆಯಿಂದ ಬಡಿದು ಹೋಗಲಾಡಿಸಿದರು (ಮೂಲಾನ. ೧೦೮). **ದುಪ್ಪು$_1$ :** ೩. (ಕರಾ). ಮಣ್ಣಿನ ಚಿಕ್ಕ ಹಂಡಿ. **ದುಮ್ಮು$_2$ :** ೧. 'ದುಮ್ಮಸಗು' ಪರಾ.

[ ದೇ.॥ ತಮಿ. ತುಮ್ಪು ; ತೆಲು. ದುಮು, ದುಮ್ಮು ]

**ದುಂಬಾಬಾಟು** (?). (?) : ಭಕ್ತಜನಾಭಿವೃದ್ಧಿ ರಾಯಭಾಟ ಶೃಂಗಾರ ಹಾರಮಂ ನೀತಿಗಾರ ದುಂಬಾಬಾಟು ನವನೀತಿರಾಯ . . . ಬುಕಣ್ಣನವರು (ಎಕ. III, ಮಳವ. ೪೩-೫ : 1394).

**ದುಂಬಾಲ** 'ದುಂಬಾಲು' ನೋ.

**ದುಂಬಾಲಗೊಳ್** (ಕ್ರಿ). =ದುಂಬಾಲು ಬೀಳು: ಕೊರಳ ಲಿಂಗ ಹರಿಯಲು ಛಲದಿಂದ ಲಿಂಗವ ಕೇಳದೆ ಮಲೆತು ಪೋಗಲು ಲಿಂಗ ದುಂಬಾಲಗೊಂಡಿತು (ಬಿಜ್ಜರಾ. ೧೦-೧೬೭) ; ಪೋಗಲೀಸದೆ ಬಿಡೆನೆಂದು ದುಂಬಾಲಗೊಂಡು ಅಕಳಂಕ ಮಂತ್ರಿ ತಾ ಬಸವನ (ಬಿಜ್ಜರಾ. ೧೨-೮೦).

[ ದುಂಬಾಲ (<ದುಂಬಾಲು) + ಕೊಳ್$_1$ ]

**ದುಂಬಾಲಬೀಳು** 'ದುಂಬಾಲುಬೀಳು' ನೋ.

**ದುಂಬಾಲು,** ದುಂಬಾಲ (ನಾ). ೧. ಹಿಂಭಾಗ ; ಹಿಂಬದಿ. ೨. (ಆಲಂ) ಅಂಗಲಾಚಿ ಬೇಡಿಕೊಳ್ಳುವಿಕೆ ; ಒತ್ತಾಯಪಡಿಸುವಿಕೆ : "ನನ; ಇಪ್ಪತ್ತೈದನೆಯ ಮಗನಿಗೆ ಚಿಕ್ಕಕತೆಗಳ ಸ್ಪರ್ಧೆಯಲ್ಲಿ ಹದಿನೇಳನೇ ಬಹುಮಾನ ದೊರೆತಿದೆ. ಆ ಕತೆಯನ್ನಿಷ್ಟೆ ಓದಿಹೋಗಿ, ಮೂವತ್ತೇ ಪುಟಗಳ ಚಿಕ್ಕ ಕತೆ" ಎಂದಿನ್ನೊಬ್ಬರ ದುಂಬಾಲು (ಹುಚ್ಚುಹು. ೨೮). 'ದುಂಬಾಲು ಬೀಳು' ಪರಾ. **ದುಂಬಾಲ :** ೨. "ಬೆನ್ನು ಹತ್ತುವುದು; ಒಂದೇ ಸವನೆ ಗಂಟು ಬೀಳುವುದು" (ಜಾನಕೋ. ೭). 'ದುಂಬಾಲ ಬೀಳು' ಪರಾ.

[ ←ಪಾರ. ದುಂಬಾಲಾ; ಮರಾ. ದುಂಬಾಲಾ, ದುಮಾಲಾ ]

**ದುಂಬಾಲುಬೀಳು,** ದುಂಬಾಲಬೀಳು (ಕ್ರಿ). ಅಂಗಲಾಚಿ ಬೇಡಿಕೊಳ್ಳು ಒತ್ತಾಯಪಡಿಸು : ದುಂಬಾಲುಬಿರ್ದಱಗಿ ತಱುಬಿದಂತುರುಬಿರ್ದರು (ಪರಶು. ೨೯-೩೧) ; ಅತ್ತೆಯು ಈಗಾಗಲೇ ಸಾಮಾನಿನ ವ್ಯವಸ್ಥೆಗೆ

ದುಂಬಾಲು ಬಿದ್ದಿದ್ದಾಳೆ (ಅಶೋಕ. ೭೯) ; ಹೋಗುವ ಮುಂಚೆ ಮದುವೆಯಾಗೆಂದು ದುಂಬಾಲು ಬಿದ್ದಳು (ಹೊಸಕ್ಷಿ. ೨೩೮). **ದುಂಬಾಲಬೀಳು :** ತನ್ನ ತಾನೆ ದುಂಬಾಲಬಿದ್ದ ಕವಿನೆರಳ ದೂಗು ನೂಗು (ಅರಳು. ೩೫೫-೧೧): ಹೀಗೇಕೆ ದುಂಬಾಲಬಿದ್ದಿರುವಿ ಅಕ್ಕಾಜಿ ? (ಹೇಮಂತ. ೭೦); ಪಾಠ ಹೇಳಿದ ಸಂಬಳವನ್ನು ೧-೨ ತಿಂಗಳು ಕೊಡದಿದ್ದರೂ ಕೆಟ್ಟಿಯೇನು ದುಂಬಾಲ ಬೀಳುತ್ತಿರಲಿಲ್ಲ (ದಾಸಹು. ೬೬) ; ಅವನು ಸಾಹೇಬರಿಗೆ ದುಂಬಾಲ ಬಿದ್ದನು (ಸ್ಕೂಲಮಿ. ೬೩). [ ದುಂಬಾಲು + ಬೀಳು$_1$ (<ಬೀಟ್$_1$) ]

**ದುಂಬಿ** 'ತುಂಬಿ$_1$' ನೋ.

**ದುಂಬಿಗುರುಳು** 'ತುಂಬಿಗುರುಳ್' ನೋ.

**ದುಂಬಿವಣ್ಣ** (ನಾ). ದುಂಬಿಯ ಬಣ್ಣ ; ಕಪ್ಪುಬಣ್ಣ : ಮುಗುಳು ನಗೆಯನ್ನು ಸೂಸುತ್ತಿದ್ದ ದುಂಬಿವಣ್ಣದ ಅವಳ ಕಣ್ಣುಗಳನ್ನು ನೋಡಿದಾಗ ಅವನ ಹೃದಯದಲ್ಲಿ ಸಂತೋಷೋನ್ಮಾದ ಉಕ್ಕುತ್ತಿತ್ತು (ಪುನರು. ೬೬).
[ ದುಂಬಿ (<ತುಂಬಿ$_1$) + ಬಣ್ಣ$_1$ ]

**ದುಂಬಿಹುಳು** (ನಾ). (ದುಂಬಿಯ ಜಾತಿಗೆ ಸೇರಿದ) ಒಂದು ಬಗೆಯ ದಪ್ಪ ಕೀಟ; ಗುಂಗಿಹುಳು: ತೆಂಗು-ಇದು ಧ್ರುವವೈರು ಎನಿಸಿಕೊಳ್ಳುತ್ತದೆ . . . ಇದಕ್ಕೆ ಮುಖ್ಯವಾದ ಶತ್ರು ದುಂಬಿಹುಳು (ವ್ಯವಮು. ೫೫).
[ ದುಂಬಿ (<ತುಂಬಿ$_1$) + ಹುಳು$_2$ (<ಪುೞು$_1$) ]

**ದುಂಬು** 'ದುಂಪು' ನೋ..

**ದುಂಬೆ$_1$** 'ತುಂಬಿ$_1$' ನೋ.

**ದುಂಬೆ$_2$** 'ದುಂಪು' ನೋ.

**ದುಃಕಲಹ** (ನಾ). ಕೆಟ್ಟ ಕಲಹ,-ಜಗಳ. [ ಸಂ. ]

**ದುಃಕವಿ** (ನಾ). ಕೆಟ್ಟ ಕವಿ : ಸತ್ಕವಿ ರುಷಿಕುಲೋದ್ಭವಂ ನರನುತಿಯವನೆ ದುಃಕವಿ (ವೀಶ್ಯಪು. ೭-೨-೧೯). [ ಸಂ. ]

**ದುಃಕಳೇವರ** (ನಾ). ಕೆಟ್ಟ ಶರೀರ : ಕಡುಗಪ್ಪುಮೆನಿಪ್ಪ ದುಃಕಳೇವರಮಿದ ನೊಳ್ಳಿತೆಂಬರಜ್ಞವಿಲ್ಲದವರ್ (ಸಮುಶ. ೬-೩೪). [ ಸಂ. ದುಃಕಲೇವರ ]

**ದುಃಖ** (ನಾ). ೧. ಕಳವಳ ; ನೋವು ; ಬಾಧೆ ; ವೇದನೆ : "ಆಬಾಧಾ, ವೇದನಾ, ದುಃಖಂ, ಆರ್ತಿಃ, ಪೀಡಾ, ವ್ಯಥಾ-ಈ ೬ ದುಃಖಂ" (ಹಲಾಯು. ೦೦೩-೮) ; "ಅವಬಾಧೆ ವೇದನೆ ವ್ಯಥೆ ಪೀಡೆಯಾರ್ತಿಯೆಂಬಿವು ದುಃಖಮೆನಿಸಿಕ್ಕು" (ಮಂಗರಾ. ೧೧೬-೨); ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತಂಗಳೆಂಬಯ್ದುಂ ತೆಱದ ದುಃಖಂಗಳೊಳ್ (ಆದಿಪು. ೫-೮೮ ವ); ವೀರಸುತಜನನಿಗೀ ಗಾಂಧಾರಿಗೆ ದುಃಖಶತಜನನಿಪೆಸರಾಯ್ತಾಗಳ್ ಕೌರವಪತಿ ದುಃಖಮಹಾಭಾರಮನಾಂತಾಯಸಕ್ಕೆ ಗುಱಿಯಾದು ದೞಿಂ (ಗದಾಯು. ೮-೫) ; ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ ಕೂಡಲಸಂಗಮದೇವ (ಬಸವ. ೧೨೪). ಈ ಜಗದೊಳ್ ಮಿತ್ರವಿಪತ್ತಿಗಾರ ಬಗೆಯುಂ ದುಃಖಕ್ಕೆ ಪಕ್ಕಾಗದೇ (ಪುಷ್ಪಪು. ೬-೪೦): ರೊಕ್ಕ ಎರಡಕ್ಕು ದುಃಖ ಕಾಣಕ್ಕ (ಪುರಂದ. ೨-೪೮ ಪಲ್ಲವಿ) ; ದುಃಖದ ಮೇಲೆ ಸುಖ, ಸುಖದ ಮೇಲೆ ದುಃಖ (ಗಾದೆ). ೨. ಕಷ್ಟ : ತೊಂದರೆ ; ಕ್ಲೇಶ : "ದುಃಖದೊಳು ತನ್ನಿಂದ ವಿಪಾರಿರ್ದರೊಳತ್ಕಯುಮೆನಿಕ್ಕು" (ಮಂಗರಾ. ೧೧೨-೨೦) ; ಈ ದುಃಖಂ ತನಗೇಕೆ ಪೇೞಾ (ಧರ್ಮಾಮೃ. ೪-೮೨) ; ಏನು ಬಂತೋ ದುಃಖ, ಏನು ಬಂತೋ ರೋಷ, ಕ್ರೂರಮನಸನು ಮಾಡಿ ಬೀರಿದಳು ಬದುಕ! (ಇಂಗೀತ. ೬೩-೨೪).

ದುಃಖಕೊಡು = ತೊಂದರೆ ಕೊಡು ; ಕ್ಲೇಶವನ್ನುಂಟು ಮಾಡು : ಅನ್ಯರಿಗೆ ದುಃಖಕೊಡುವುದು ತರವಲ್ಲ (ರೂಢಿ). **ದುಃಖದ ಕೂಳು** = ಸತ್ತವರ ಮನೆಯಲ್ಲಿ ಅವರ ಬಂಧುಗಳು ಹತ್ತು ದಿನದವರೆಗೆ ತಂದಿಡುವ ಆಹಾರ : ಸತ್ತವರ ಮನೆಗೆ ಅಕ್ಕಪಕ್ಕದ ಮನೆಯ ನೆಂಟರಿಷ್ಟರೂ ದುಃಖದ ಕೂಳೆಂದು ಅಟ್ಟ ಅಡಿಗೆಯನ್ನು ಹತ್ತುದಿನಗಳವರೆಗೂ ತಂದಿಡುತ್ತಿದ್ದರಂತೆ (ಹುಟ್ಟುಹ. ೬೪). **ದುಃಖಮಾಡು** = ೧. ವೇದನೆಯನ್ನುಂಟುಮಾಡಂ ; ಬಾಧೆ ಪಡಿಸು. ೨. ದುಃಖಿಸು; ಶೋಕಿಸಂ.
[ ಸಂ. ]

**ದುಃಖಂಗೆಯ್** (ಕ್ರಿ).=ದುಃಖಂಬಡು: ಗಾಂಧಾರಿ ತನ್ನ ಪುತ್ರಿನ ಮಕ್ಕಳಂ ನೆನೆದು ದುಃಖಂ ಮಿಱುಕಳಿಸಿ ದುಃಖಂಗೆಯ್ಯೆ (ಗದಾಯು. ೮-೩ ವ).
[ ದುಃಖ + ಕೆಯ್$_1$ ]

**ದುಃಖಂಬಡು**, ದುಃಖಪಡು, ದುಃಖಬಡು (ಕ್ರಿ). ಬಾಧೆಯನ್ನು ಅನುಭವಿಸು ; ವ್ಯಥೆಪಡು : ಪಾಪಮಂ ಪೊರ್ದಿ ನಾರಕಬಾಧೆಗೊಳಗಾಗಿ ಪಲಕಾಲಂ ದುಃಖಂಬಡುವರ್ (ಧರ್ಮಾಮೃ. ೪-೩೮). **ದುಃಖಪಡು :** ಕನಸಿನ ಪೊನ್ನ ಕಾಣದೆ ದುಃಖಪಡುವರೆ (ಕುವ್ಯಾದ್ರೌ. ೭-೨೮) ; ಯುದ್ಧದಲ್ಲಿ ಹಗೆಗಳ ಬಾಣದಿಂದ ಲಕ್ಷ್ಮಣನು ಮೂರ್ಛೆಹೋದದ್ದೂ ಅಣ್ಣನಾದ ರಾಮನು ದುಃಖಪಟ್ಟದ್ದೂ ಸರಿಯಷ್ಟೆ (ನೀತಿಚಿಂ. VIII, ೧೭); ಹೆತ್ತ ತಂದೆ ತಾಯಿಗಳನ್ನು ಕಳೆದುಕೊಂಡಂತೆ ದುಃಖಪಟ್ಟರು ಜನರು (ಶಾಂತಲಾ. ೨೦). **ದುಃಖಬಡು :** ಜನನಮರಣಂಗಳಿಂದೆ ದುಃಖಬಡುತಿರ್ಪುವು ನೋಡಾ ಸಕಲ ಪ್ರಾಣಿಗಳು (ಅಖಂಡೇ. ೧೬೦-೨೩). [ ದುಃಖ + ಪಡು$_1$ ]

**ದುಃಖಕರ** (ಗು). ೧. ನೋವನ್ನುಂಟು ಮಾಡುವ ; ತೊಂದರೆ ತರುವಂತಹ.(ನಾ). ೨. ಯಾತನೆಯನ್ನುಂಟುಮಾಡುವುದು; ವ್ಯಥೆಯನ್ನು ಉಂಟುಮಾಡುವುದು : ಪಂಚಕೋಶದ ಮೇಳದಿಂ ಜಡದೃಶ್ಯ ದುಃಖಕರಾಳಿಯಿಂದಲಶುದ್ಧತರದಿಂದಿರದ ನಿತ್ಯದೊಳು ಜಾಳಿಸಿದ ದೇಹ (ಸದ್ಗುರು. ೪-೮) ; ಇದು ತುಂಬಾ ದುಃಖಕರವಾದದ್ದು (ವಚಭಾ. ೧೨೦).
[ ಸಂ. ]

**ದುಃಖಕಾತರೆ** (ನಾ). ವೇದನೆಯಿಂದ ಕಳವಳಗೊಂಡವಳು : ಅಕ್ಕ ಅವನಿಂದು ಮಹಾರೌದ್ರ ಸಂಕಟಕೆ ಸಿಲುಕುವನು ಎಂದರಿತು ದುಃಖಕಾತರೆಯಾಗಿ ನಿನ್ನ ಬೇಡಲು ಓಡಿ ಬಂದೆ (ಚಂದ್ರಸ. ೨). [ ದುಃಖ + ಕಾತರೆ ]

**ದುಃಖಗೊಳ್** (ಕ್ರಿ). = ದುಃಖಂಬಡು : ದುಃಖಗೊಳದಿರು ತಾವವುದು ಗುಡುಗು ಅಳಲವೇಡೇಳು (ಬಸವು. ೪೫-೫೩). [ ದುಃಖ + ಕೊಳ್$_1$ ]

**ದುಃಖಗ್ರಸ್ತೆ** (ನಾ). = ದುಃಖಿತೆ : ನೀವೆಲ್ಲಾ ನೆನೆದುಕೊಳ್ಳುವಷ್ಟು ದುಃಖಗ್ರಸ್ತೆ ನಾನಲ್ಲವೇ ಅಲ್ಲ (ಪತಿ. ೪೯). [ ಸಂ. ದುಃಖಗ್ರಸ್ತಾ ]

**ದುಃಖಜೀವನ** (ನಾ). ವ್ಯಥೆಯಿಂದ ಕೂಡಿರುವ ಬಾಳು ; ಕಷ್ಟದ ಬದುಕು : (ಕ). [ ದುಃಖ + ಜೀವನ ]

**ದುಃಖಜೀವಿ** (ನಾ). ಸಂಕಟದ ಬದುಕನ್ನು ಸಾಗಿಸುವವನು ; ವ್ಯಥೆಯಿಂದಕೂಡಿ ಬದುಕುವವನು: ಆ ದುಃಖಜೀವಿಯಂ ಕಂಡಾ ದೊರೆಯ ಮುಮುಕ್ಷುಗಂ ನಿರೀಕ್ಷಿಸಲೊಡನಂದಾದುದು ಬಾಷ್ಪಪ್ರಸರಂ (ಸುಕುಮಾ. ೪-೬೨). [ ದುಃಖ + ಜೀವಿ$_1$ ]

**ದುಃಖತ್ರಯ** (ನಾ). ಆಧ್ಯಾತ್ಮಿಕ, ಆಧಿದೈವಿಕ ಮತ್ತು ಆಧಿಭೌತಿಕಗಳೆಂಬ ಮೂರು ಬಗೆಯ ಕ್ಲೇಶಗಳು : ತನಯ ಕೇಳಾಲಸ್ಯ ರೋಗಗಳನುಗತದ ದುಃಖತ್ರಯಂಗಳು . . . ದರುಶನ ಭ್ರಾಂತಿಯಶ್ರದ್ಧೆಗಳು ವಿಘ್ನಗಳು (ಅಮೃತ. ೬-೮೮). 'ತಾಪತ್ರಯ' ಪರ್ಯಾ.
[ ದುಃಖ + ತ್ರಯ ]

**ದುಃಖದ** (ನಾ). ಕ್ಲೇಶವನ್ನುಂಟುಮಾಡುವಂತಹುದು : ಸಂಸಾರಂ ತೀವ್ರತರ ದುಃಖದಂ ನಾಳೀವ್ರಣ ಸದೃಶಂ ಶರೀರಿಗದ ಕಿಡೆ ನೆಗೞಿಂ (ಶಾಂತಿಪು. ೭-೭) ; ಪಲ್ಲವ ಸವಿಪಲ್ಲವ ಪೇೞಯ್ಯೋ ದುರ್ವಿರೋಹಮೊಂದೆ ದುಃಖದಮಲ್ತೆ (ಉಶಾರ. ೨೫೦). [ ಸಂ. ]

**ದುಃಖನಿವಾರಣೆ** (ನಾ). ವ್ಯಥೆಯನ್ನು ಇಲ್ಲದಂತೆ ಮಾಡುವಿಕೆ,-ಪರಿಹರಿಸುವಿಕೆ : ಅವರ ದುಃಖನಿವಾರಣೆಯಾಗುವಂತೆ ಏನಾದರೊಂದು ಪರಿಹಾರವನ್ನು ಸೂಚಿಸಬೇಕು (ರೂಢಿ). [ ದುಃಖ + ನಿವಾರಣೆ ]

**ದುಃಖಪಡಿಸು** (ಕ್ರಿ). ವ್ಯಥೆ ಪಡುವಂತೆ ಮಾಡು ; ಸಂಕಟವನ್ನುಂಟು ಮಾಡು : ಆಕೆಯನ್ನು ದುಃಖಪಡಿಸುವುದು ತರವಲ್ಲ (ರೂಢಿ). [ ದುಃಖಪಡು (<ದುಃಖಂಬಡು) + – ಇಸು$_3$ ]

**ದುಃಖಪಡು** 'ದುಃಖಂಬಡು' ನೋ.

**ದುಃಖಬಡು** 'ದುಃಖಂಬಡು' ನೋ.

**ದುಃಖಭಾಜನ** (ನಾ). ವ್ಯಥೆಗೆ ಪಾತ್ರನಾದವನು ; ಸಂಕಟವನ್ನು ಹೊಂದಿದವನು : ಮತ್ತೇನುಂ ಮಾಣದೆ ದುಷ್ಟವಾಜಿ ತರೆ ಬಂದೀ ಬಾವಿಯೊಳ್ ಬಿಟ್ಟು ಬಂದಾನಿಂತೊರ್ವನೆ ದುಃಖಭಾಜನನೆನಿಪ್ಪಂತಾಯ್ತುದೇಂ ಕರ್ಮವೋ (ಜೀವಸಂ. ೫೮-೧೩). [ ದುಃಖ + ಭಾಜನ ]

**ದುಃಖಭಾಜನೆ** (ನಾ). ಸಂಕಟವನ್ನು ಹೊಂದಿದವಳು ; ದುಃಖಕ್ಕೆ ಗುರಿಯಾದವಳು : ಆರ್ಯಪುತ್ರನೆ, ದುಃಖಭಾಜನೆಯಾದ ನನ್ನನ್ನು ಆಮೇಲೆ ಹೇಗೆ ಸ್ಮರಿಸಿದೆ ? (ಶಾಕುಂತ. ೧೧೦-೮). [ ಸಂ. ದುಃಖಭಾಜನಾ ]

**ದುಃಖಭೋಗ** (ನಾ). ಕಷ್ಟವನ್ನು ಅನುಭವಿಸುವುದು ; ಸಂಕಟದ ಅನುಭವ : ಅವಳಿಗೂ ದುಃಖಭೋಗವೆಂಬ ಶಿಕ್ಷಣವಾಗಬೇಕಾಗಿತ್ತೆಂದು ತೋರುತ್ತದೆ (ಬಂಕಿಮ. ೬೦). [ ದುಃಖ + ಭೋಗ ]

**ದುಃಖಮಿಶ್ರ** (ನಾ). ಸಂಕಟದಿಂದ ಕೂಡಿರುವುದು : ಸುಖಾನುಭವ ಮತ್ತು ದುಃಖಾನುಭವ ಇವೆರಡೂ ಸೇರಿ ಇಪ್ಪತ್ತೊಂದು. ಇವುಗಳೆಲ್ಲಾ ದುಃಖಮೂಲವಾಗಿಯೂ ದುಃಖಮಿಶ್ರವಾಗಿಯೂ ದುಃಖ ಸಾಧನವಾಗಿಯೂ ಇರುವುದರಿಂದ ವಿವೇಕಿಗಳಿಗೆ ದುಃಖಮಯ (ಹಿಂದಸಾ. ೧೧೬). [ ದುಃಖ + ಮಿಶ್ರ ]

**ದುಃಖಮೂಲ** (ನಾ). ಸಂಕಟಕ್ಕೆ ಕಾರಣವಾದುದು : ಇವುಗಳೆಲ್ಲಾ ದುಃಖಮೂಲವಾಗಿಯೂ ದುಃಖಮಿಶ್ರವಾಗಿಯೂ ದುಃಖಸಾಧನವಾಗಿಯೂ ಇರುವುದರಿಂದ ವಿವೇಕಿಗಳಿಗೆ ದುಃಖಮಯ (ಹಿಂದಸಾ. ೧೧೬). [ ದುಃಖ + ಮೂಲ ]

**ದುಃಖರಾಗ** (ನಾ). ಶೋಕಪೂರ್ಣವಾದ ರಾಗ ; ಕರುಣೆಯನ್ನು ಉದ್ದೀಪಿಸುವ ರಾಗ : ಮೃದುವಾಗಿ ದುಃಖರಾಗವನೆತ್ತಿ ನುಡಿಸಿದೆನು, ಮೃದುವಾಗಿ ಹಾಡಿದೆನು ಕರುಣಕಥೆಯ (ಕಂಗೀತ. ೪೮-೨೦). [ ದುಃಖ + ರಾಗ ]

**ದುಃಖವಾದ** (ನಾ). ಜೀವನವು ದುಃಖಮಯವೆಂಬ ಸಿದ್ಧಾಂತ : ಭರತ ಖಂಡದಲ್ಲಿ ಬೌದ್ಧದರ್ಶನವೊಂದರಲ್ಲಿಯೇ 'ದುಃಖವಾದ'ದ ವಿಶಿಷ್ಟ ಪ್ರತಿಪಾದನೆ ಕಂಡುಬರುತ್ತದೆ (ಶ್ರೀಷ.ಪ್ರ. ೩೯). [ ದುಃಖ + ವಾದ$_2$ ]

**ದುಃಖವಿಹ್ವಳ** (ನಾ). ವೇದನೆಯಿಂದ ಕಳವಳಿಸುತ್ತಿರುವವನು ; ಸಂಕಟದಿಂದ ಪರಿತಪಿಸುತ್ತಿರುವವನು : ಅಲ್ಲಿಯೆ ನಿಂದು ದುಃಖವಿಹ್ವಳನೆದೆದೋಱಿ ನೂಂಕಿ ಕುಡುತುಂ ಕರುಣಂ ಪಿರಿದಾಗಿ ಪಿಂಬಗಲ್ ಕಳೆವಿನಮಿರ್ದನಾ ಪರಮಯೋಗಿ (ಸುಕುಮಾ. ೮-೬೩). [ ದುಃಖ + ವಿಹ್ವಳ (= ವಿಹ್ವಲ) ]

**ದುಃಖವೆರಸು** (ಕ್ರಿ). ಸಂಕಟಪಡು ; ಯಾತನೆಪಡು : ನಲ್ಲನನಱಸುತಲಿ . . . ಚಂದ್ರಮುಖಿ ಬಂದಳು ದುಃಖವೆರಸಿ (ಮೋಹತ. ೩೭-೫೦). [ ದುಃಖ + ಬೆರಸು$_1$ ]

**ದುಃಖಶತ** (ನಾ). ಅನೇಕ ಕಷ್ಟ : ತನಯಶತಮಾದುದಲ್ತೆನಗನಿವಾರಿತ ದುಃಖಶತಮೆ ತಾನಾದುದು (ಪಂಪಭಾ. ೧೪-೮) ; ವೀರಶತಜನನಿಗೀಗಾಂಧಾರಿಗೆ ದುಃಖಶತ[ಪಾಠಾಂ. ಶತದುಃಖ]ಜನನಿವೆಸರಾಯ್ತಾಗಳ್ (ಗದಾಯು. ೮-೫). [ ದುಃಖ + ಶತ ]

**ದುಃಖಶಮನ** (ನಾ). ೧. ನೋವನ್ನು ಉಪಶಮನಗೊಳಿಸುವುದು. ೨. ಯಾತನೆ ಕೊನೆಗಾಣುವುದು,–ಮುಗಿಯುವುದು : (ಶ). [ ದುಃಖ + ಶಮನ ]

**ದುಃಖಸಮುದಯ** (ನಾ). ವ್ಯಥೆಯ ಉತ್ಪತ್ತಿ; ದುಃಖ ತಲೆದೋರುವಿಕೆ : ಇದು ದುಃಖಸಮುದಯ ಎಂಬ ಆರ್ಯಸತ್ಯ. ಕಾಮತೃಷ್ಣೆ, ಭವತೃಷ್ಣೆ, ವಿಭವತೃಷ್ಣೆ ಎಂಬ ಮೂರು ಬಗೆಯ ತೃಷ್ಣೆಗಳಿಂದ ದುಃಖ ತಲೆಯೆತ್ತುತ್ತದೆ (ಭಾರದ. ೧೯೭). [ ದುಃಖ + ಸಮುದಯ ]

**ದುಃಖಸಾಧನ** (ನಾ). ವ್ಯಥೆಗೆ ಕಾರಣ ; ಯಾತನೆಗೆ ಕಾರಣವಾದುದು : ಇವುಗಳೆಲ್ಲಾ ದುಃಖ ಮೂಲವಾಗಿಯೂ ದುಃಖಮಿಶ್ರವಾಗಿಯೂ ದುಃಖ ಸಾಧನವಾಗಿಯೂ ಇರುವುದರಿಂದ ವಿವೇಕಿಗಳಿಗೆ ದುಃಖಮಯ (ಹಿಂದಸಾ. ೧೧೬). [ ದುಃಖ + ಸಾಧನ ]

**ದುಃಖಹೇತು** (ನಾ) ಸಂಕಟಕ್ಕೆ ಕಾರಣವಾದುದು ; ಯಾತನೆಗೆ ನಿಮಿತ್ತವಾದುದು : ಅವುದು ಸುಖಮೆಂದೆಳಸುವನಾ ವಸ್ತುವೆ ದುಃಖಹೇತು (ಮಲ್ಲಿಪು. ೯-೭೩) ; ಅಜ್ಞಾನವೇ ದುಃಖಹೇತುವಾದ ಸಂಸಾರದ ಬೀಜ (ಭಾರದ. ೦೨೩). [ ದುಃಖ + ಹೇತು$_1$ ]

**ದುಃಖಾಂಜಲಿ** (ನಾ). (ಅಲಂ) (ಶೋಕದಿಂದ ಸುರಿಸುವ) ಕಣ್ಣೀರಿನ ತರ್ಪಣ : ರಾಜಮಾತೆಯವರ ಈ ಅನಿರೀಕ್ಷಿತ ಮರಣಕ್ಕೆ ದುಃಖಾಂಜಲಿಯನ್ನು ಅರ್ಪಿಸಿ . . . ತಬ್ಬಲಿಗಳಂತೆ ಗೋಳಾಡಿ ಹೋದರು (ಶಾಂತಲಾ. ೧೮೦). [ ದುಃಖ + ಅಂಜಲಿ ]

**ದುಃಖಾಂತ** (ಗು). ೧. ವೇದನೆಯಲ್ಲಿ ಕೊನೆಗೊಳ್ಳುವ ; ವ್ಯಥೆಯಿಂದ ಮುಗಿಯುವ. 'ದುಃಖಾಂತನಾಟಕ' ಪರಾ. (ನಾ). ೨. ವೇದನೆಯ ಕೊನೆಗೊಳ್ಳುವಿಕೆ; ಸಂಕಟದ ಮುಗಿವು: ದುಃಖಾಂತವೇ ಪರಮಪುರುಷಾರ್ಥ, ದುಃಖಾಂತ ಎಂದರೆ ಪಾರಮೈಶ್ವರ್ಯಪ್ರಾಪ್ತಿ (ಭಾಶತ್ತ. ೭೨೫). ೩. ಶೋಕಪೂರ್ಣವಾದ ಮುಕ್ತಾಯ; ದುರಂತದಿಂದ ಕೊನೆಗೊಳ್ಳುವಿಕೆ : ಈ ದುಃಖಾಂತದ ಸಂಬಂಧವಾಗಿ ಗ್ರಂಥಕರ್ತನು ಒಂದು ಆಶಂಕೆಯನ್ನು ಎತ್ತಿ[ಮೊದಲ ಮುದ್ರಣದಲ್ಲಿ] ಹೀಗೆ ಸಮಾಧಾನ ಹೇಳಿದ್ದಾನೆ (ಬಂಕಿಮ. ೦೬೭). ೪. ದುಃಖದಲ್ಲಿ ಮುಗಿಯುವ ಕಥಾನಕ; ಟ್ರಾಜಿಡಿ ; ದುರಂತಕಥೆ : ಇಂದು ರುದ್ರನಾಟಕವೆಂದರೆ ಅದು ದುರಂತವೋ, ದುಃಖಾಂತವೋ ಆಗಿರಲೇಬೇಕೆಂದು ನಮ್ಮ ಅಭಿಪ್ರಾಯವಾಗಿದೆ (ಅರಿಕಾ. ೧೬೪). [ ದುಃಖ + ಅಂತ$_2$ ]

**ದುಃಖಾಂತನಾಟಕ** (ನಾ). ವೇದನೆಯಲ್ಲಿ ಕೊನೆಗೊಳ್ಳುವ ನಾಟಕ : ದುಃಖಾಂತನಾಟಕಗಳು ನಮ್ಮ ಸಾಹಿತ್ಯದಲ್ಲಿ ಹೆಚ್ಚಾಗಿಲ್ಲ (ರೂಢಿ). [ ದುಃಖಾಂತ + ನಾಟಕ ]

**ದುಃಖಾಕುಲ, ದುಃಖಾಕುಳ** (ನಾ). ವ್ಯಥೆಯಿಂದ ಕೂಡಿದವನು ; ಸಂಕಟದಿಂದ ಕೊರಗುವವನು: ಇತ್ತಲಿರ್ವರುಂ ದುಃಖಾಕುಲರ್ ವೈಕುಂಠನೊಳಿಂತೀ ಪರಿಯುಂ ನಿರ್ಧರಿಪುದೆಂದು ಗಳ್ಕನೆ ವೈಕುಂಠಕೆಯ್ತಂದರಲ್ (ಅದ್ಭುತ. ೧೩-೪) ; ಆದರೆ ಅದು ಸಹ ಅಸಾಧ್ಯವೆಂದು ತೋರಿದಾಗ, ಆವನು ದುಃಖಾಕುಲನಾದನು (ಪುನರು. ೨೯೦). **ದುಃಖಾಕುಳ** : ಅದು ವಾಯುವೇಗದಿಂ ಬಂದರಸನ ಚರಣದೊಳು ಬಿದ್ದು ದುಃಖಾಕುಳನಾಗುತ್ತ (ನಂಬಿರ. ೬-೧೫೦). [ ದುಃಖ + ಆಕುಲ ]

**ದುಃಖಾಕುಳ** 'ದುಃಖಾಕುಲ' ನೋ.

**ದುಃಖಾಧಿಕೆ** (ನಾ). ಅಧಿಕವಾದ ಸಂಕಟ ; ಬಹಳ ಕಷ್ಟ : ದುರ್ಗಂಧೆ ದುರ್ವರ್ಣೆ . . . ಪಾಪಕ್ಕೆ ಪಕ್ಕಾಗಿ ದುಃಖಾಧಿಕೆಯಿಂ ಸಂಸಾರಕೂಪಾರದೊಳನವರತಂ ನೀಡುಮೋಲಾಡುತಿರ್ದಳ್ (ಸುಕುಮಾ. ೫-೨೦). [ P ಇದು 'ದುಃಖಾಸಿಕೆ'ಯೆಂಬುದರ ಅಪಲಿಖಿತವಿರಬಹುದು ]

**ದುಃಖಾನ್ವಿತ** (ಗು). ೧. ಯಾತನೆಯಿಂದ ಕೂಡಿದ ; ನೋವಿನಿಂದ ಕೂಡಿದ. (ನಾ). ೨. ಯಾತನೆಯಿಂದ ಕೂಡಿದವನು; ನೋವಿನಿಂದ ಕೂಡಿದವನು; ದುಃಖಿ : ಅರಿನೀಚಕ್ಷ್ಕದೊಳೊಂದಿ ನಿಂದೊಡೆ ದರಿದ್ರಂ ಬಂದು ಕೂಡಿರೆ ದುಃಖಾನ್ವಿತಂ (ಜಾತತಿ. ೧೫-೯). [ ದುಃಖ + ಅನ್ವಿತ ]

**ದುಃಖಾರ್ತ** (ನಾ). ಶೋಕದಿಂದ ಕೂಡಿದವನು; ವೇದನೆಯಂನ್ನನುಭವಿಸುತ್ತಿರುವವನು: . ಇರೆ ಧಾತ್ರೀತನಯಂ . . . ಕುಂಭೋದಯದೊಳ್ ತೊಟಿಲ್ವನಿಧನಂ ದುಃಖಾರ್ತನುಗ್ರಂ ಶತಂ (ಜಾತತಿ. ೧೭-೨೦); ಪ್ರಾಣಿಗಳ್ದುಃಖಾರ್ತರಾಗಿ ಬಂದು ಬೇಡಿದೊಡೆ ತನಗುಳ್ಳ ವಸ್ತುವಂ ಕುಡದೆ ಕೆಡೆನೋಡುವವನಧಿಕನೆ (ಜೈಮಿಭಾ. ೨೪-೨೦).
[ ದುಃಖ + ಆರ್ತ₃ ]

**ದುಃಖಾರ್ತೆ** (ನಾ). = ದಂಃಖಿತೆ: ಆ ನಾರಿ ದುಃಖಾರ್ತೆಯಾಗಲಂತಃಪುರದ ವಿಮಾನಾಕ್ಷಿಯರ್ಕೂಡೆ ರೋದಿಸಲ್ವೆರ್ಚಿತು ವಿಷಾದರವಮರಮನೆಯೊಳು (ಜೈಮಿಭಾ. ೫೩-೫೦). [ ದುಃಖ + ಆರ್ತೆ ]

**ದುಃಖಿ** (ಗುಂ). ೧. ವ್ಯಥೆಯಿಂದ ಕೂಡಿದ; ಸಂಕಟಪಡುವ. (ನಾ). ೨. ಬಾಧೆಯಂನ್ನು ಅನುಭವಿಸುವವನು; ನೊಂದವನು: ಕ್ಷಿತಿಜನೊಳೊಂದಿದ ಗುರುವಿಂ ನೇತಾರಂ ಮಿತ್ರಪುತ್ರನಿಂ ದುಃಖಿ . . . ಭೃಗುಸುತನಿಂ ಪರದಾರಶೀಲನೆನಿಕುಂ ಮನುಜಂ (ಜಾತತಿ. ೦೫-೩); ಜೀವನುಂ ಮೃತದುಃಖಿ ಅಮೃತುಂ ದೇವನಾ ಜೀವನುಮಶುದ್ಧನು ದೇವನತಿ ಶುದ್ಧನು (ಬಸವು. ೫೦-೨೯): ಇಳೆಯೊಳೆನ್ನಂದದಲಿ ಬೇಟಿನ್ನೊಳರೆ ದುಃಖಿಗಳು (ತೊರರಾ. ೬-೪೫-೪): ದೇವ ಮಾಡುವುದಿರಲಿ, ನಾವು ಮಾಡುವ ಹಿಂಸೆ, ಅದೆ ನರಕಹಿಂಸೆ! ದುಃಖಿಗಳ, ಪಾಪಿಗಳ ನಾವು ಧಿಕ್ಕರಿಸುವೆವು (ಇಂಗೀತ. ೬೫-೦೮); ದುಃಖಿಗೆ ನೆರಂ ದುಃಖಿ (ಶ್ರೀರಾಮಾ. ೨೭೭-೩೭೪).
[ ಸಂ. ದುಃಖಿನ್ ]

**ದುಃಖಿತ** (ಗುಂ). ೧. ಕೊರಗುವ; ಸಂಕಟಪಡುವ; ನೊಂದ. (ನಾ). ೨. = ದಂಃಖಿ ೨: ತಾವು ಪರದುಃಖ ದುಃಖಿತರೆಂದು ತಿಳಿದೇ ತಮ್ಮಲ್ಲಿಗೆ ಬಂದಿರುವೆನು (ಬಿನ್ನಬೀ. ೬೬). [ ಸಂ. ]

**ದುಃಖಿತೆ** (ನಾ). ವ್ಯಥೆಯನ್ನು ಹೊಂದಿರುವವಳು; ಸಂಕಟದಲ್ಲಿರುವಾಕೆ: ನವಿರ್ಗಳ್ ಕವಲುಂ ಕಡುಗೆಂಪುಂ ಪಲವುಮಪ್ಪ ಮುಸುಡುಮುಮುವಮಾಗೆ ದುಃಖಿತೆಯುಕ್ಕುಂ (ಲೋಕೋಪ. ೧೧-೫೯). [ ಸಂ. ದುಃಖಿತಾ ]

**ದುಃಖಿನಿ** (ನಾ). = ದಂಃಖಿತೆ: ನಾನು ಅತ್ಯಂತ ದುಃಖಿನಿ (ಬಿನ್ನಬೀ. ೬೬).
[ ಸಂ. ದುಃಖಿನೀ ]

**ದುಃಖಿಸು** (ಕ್ರಿ). ವ್ಯಥೆಪಡು; ಸಂಕಟಗೊಳ್ಳು; ಯಾತನೆ ಹೊಂದು: ಎಯ್ದದ ದುರ್ಗತಿಗಳನಿರದೆಯ್ದಿ ಕರಂ ಸೇದೆವಟ್ಟು ದುಃಖಿಸಿ (ಸಮುಪ. ೩-೫೮); ದೆಸೆದೆಸೆಗೆ ಹೇಸಿಕೆಯು ನಾತವಧಿಕ ಭಯಂಕರವು ಪಸರಿಸಲು . . . ಅಕಟಕಟಾ ಎನುತ ದುಃಖಿಸುತ ಮೂಗುಗಳಂ ಹಿಡಿದುಕೊಳುತುಗುಳುತಗಲ್ದಿರಲು (ಬಸವು. ೪೭-೫೯); ತ್ರಿವಿಧ ತಾಪದಲಾನು ಬಳಲಿಯೆ ತೊಳಲಿ ದುಃಖಿವೆ (ಗಗತಾ ೨-೨೬). [ ದುಃಖ + – ಇಸು₃ ]

**ದುಃಖೋತ್ತರಣ** (ನಾ). ಯಾತನೆಯಿಂದ ಪಾರುಗಾಣಿಸುವವನು; ದಂಃಖನಿವಾರಣೆ ಮಾಡುವವನು: ದೀನಾರ್ತದುಃಖೋತ್ತರಣ ನೀ ದೀನಾರ್ತದುಃಖಿತೆಯಾನು ಜಗವಟಿಯೆ (ಕುವ್ಯಾಸ. ೦೪-೧೨೫).
[ ದುಃಖ + ಉತ್ತರಣ ]

**ದುಃಖೋಪಚಯ** (ನಾ). ಅತಿಶಯವಾದ ಸಂಕಟ: ಈ ವೈಭವಫಲವ ಪುತ್ರರಿಗೆ ಬಹು ದುಃಖೋಪಚಯವೆಂದು ಅವನಿಪತಿ ವೈರಾಗ್ಯದಲಿ ರಾಜ್ಯವನು ಬಿಸುಟು . . . ಹೊಱವಂಟ (ಕುವ್ಯಾಸ. ೨-೩೬).
[ ದುಃಖ + ಉಪಚಯ ]

**ದುಃಖೋಪಶಮನ** (ನಾ). = ದಂಃಖಶಮನ ೧: ಶೋಕಾಕ್ರಾಂತರಾದರಂ ನಾರಾಯಣಂ ಸಂತೈಸಿ ಕೊಂದರ್ ಕೊಲೆ ಸಾವರೆಂಬುದು ಜಗದ್ವ್ಯಾಪಾರ ಮಿಾಶ್ವರನಿಚ್ಛೆಯಿಂದೆ ನೆಗಟ್ಗುವೆಂದು ದಂಃಖೋಪಶಮನಂ ಮಾಡಿದೊಡೆ (ಪಂಪಭಾ. ೦೪-೦೦ ವ): ಜ್ಞಾನವೇ ದುಃಖೋಪಶಮನಕ್ಕೂ ಬಂಧನಿವಾರಣಕ್ಕೂ ಕಾರಣ (ಭಾರದ. ೦೨೨). [ ದಂಃಖ + ಉಪಶಮನ ]

**ದುಃಖೋಪಾತ್ತ** (ನಾ). ಯಾತನೆಯಂನ್ನು ಉಂಟುಮಾಡುವುದು; ಸಂಕಟವನ್ನು ತರುವಂತಹುದು: ಸುಖವಿಂದು ದಂಃಖೋಪಾತ್ತಮಿದೆಂದಱಿವುಗುವಮಾ ಪರಮಂಕವಿಪ್ರಧಾನರಾ ಕಾವ್ಯಂಗಳ್ (ಕವಿರಾ. ೧-೦೪).
[ ದುಃಖ + ಉಪಾತ್ತ ]

**ದುಃಚಿಹ್ನೆ** (ನಾ). ಕೆಟ್ಟ ಶಕುನ; ದುಷ್ಟ ಲಕ್ಷಣ. [ ಸಂ. ]

**ದುಃಪಕ್ವ** (ಗುಂ). ಸರಿಯಾಗಿ ಅಡಂಗೆಯಾಗದೆ ಇರುವ, –ಬೇಯಂದಿರುವ. 'ದಂಃಪಕ್ವಾನ್ನ' ಪರಾ. [ ಸಂ. ]

**ದುಃಪಕ್ವಾನ್ನ** (ನಾ). ೧. ಸರಿಯಾಗಿ ಬೇಯಂದೆ ಇರುವ ಅನ್ನ. ೨. [ಜೈನ] ಐದು ಭೋಗೋಪಭೋಗ ಅತಿಚಾರಗಳಲ್ಲಿ ಒಂದಂ; ಬೇಯಂದ ಅಥವಾ ಸೀದ ಆಹಾರ ತಿನ್ನುವುದು: ಕ್ರಮದಿಂ ಸಚಿತ್ತ ಸಂಬಂಧವಂತೆ ಸಮ್ಮಿಶ್ರಮಭಿಷವಂ ದುಃಪಕ್ವಾನ್ನಂಗಳತಿಕ್ರಮುಮಾ ಭೋಗೋಪಭೋಗಪರಿಮಿತ ಗತಿಯೊಳ್ (ಸುಕುಮಾ. ೬-೨೪).
[ ದುಃಪಕ್ವ + ಅನ್ನ₃ ]

**ದುಃಪ್ರಣಿಧಾನ** (ನಾ). ಕೆಟ್ಟ ಆಚರಣೆ; ದಂರ್ವರ್ತನೆ: ವ್ಯಂತರಾದಿಗಳುಂ ಮುನ್ನಮತ್ಯುಗ್ರ ತಪೋಧನರ್ಗೆ ಅಗ್ರುಪೂಜೆಯಂ ಮಾಟ್ಪರೆಂಬುದು ಪುಸಿಯಲ್ಲದೊಡೆ ಈಗಳೆಮ್ಮಂದಿಗರ್ಗೆ ಏಕೆ ಮಾಡರೆಂಬ ದುಃಪ್ರಣಿಧಾನವಿರಹಿತಚಿತ್ತನೆನಿಪ ಮುನಿಪತಿಗೆ ಸತ್ಕಾರ ಪುರಸ್ಕಾರ ಪರೀಕ್ಷಹ ಜಯವಂಕ್ಕುಂ (ತತ್ತ್ವಸೂ. ೩೩೬). [ ಸಂ. ]

**ದುಃಪ್ರತೀತಿ** (ನಾ). ≡ ದಂಷ್ಪ್ರತೀತಿ ೨: ಎರಡಂ ಪದಂಗಳ ನಡುವೆ ಬೇಱೊಂದು ದಂಃಪ್ರತೀತಿ [ಪಾಠಾಂ. ದುಷ್ಪ್ರತೀತಿ] ಪುಟ್ಟುವೊಡೆ ಸಂಧಿಯಂ ಮಾಡಲಾಗದು (ಶಮದ. ೬೨ ವೃತ್ತಿ). [ ಸಂ. ]

**ದುಃಪ್ರಾಪಂಚಿಕ** (ಗುಂ). ಕೆಟ್ಟ ಇಹಲೋಕಕ್ಕೆ ಸಂಬಂಧಿಸಿದ: ಮಂಗಳೋದಯಂಲಿಂಗ ಕರಕಳಸಂಗತಸ್ಥಿತಿಯಂ ತಿಳಿಹಿಯಾ ಸಂಗದುಃಪ್ರಾಪಂಚಿಕಾಶಾ ಬಂಧವಂ ಪಱಿದು (ಬಸವು. ೪೯-೩೩), [ ಸಂ. ]

**ದುಃಶೀಲ** (ಗುಂ). ≡ ದಂಶ್ಶೀಲ ೧: ಸಾಲವಂ ಕೊಳ್ಳನು ಕೊಡನು ದುಃಶೀಲ [ಪಾಠಾಂ. ದುಶ್ಶೀಲ] ಭವಿಗಳ ಕೈಯಂಲೆನುತಂ (ಬಸವು. ೬೦-೧೭). [ ಸಂ. ]

**ದುಃಶ್ರಾವ್ಯ** (ಗುಂ). ≡ ದಂಶ್ಶ್ರಾವ್ಯ: ದಂಃಶ್ರಾವ್ಯ [ಪಾಠಾಂ. ನಿಸ್ಸಾರ] . . . ಕಾಲಹೀನವೆಂಬ ಹದಿನೈದು ಸ್ವರದೂಷಣಂಗಳಂ ತೊಱೆದು (ವಿವೇಕ. ೨೫೭). [ ಸಂ. ]

**ದುಃಶ್ರುತಿ** (ನಾ). ಕೆಟ್ಟವಿಷಯಂಗಳನ್ನು ಕೇಳುವುದು, –ತಿಳಿಯುವುದು: ದುಃಶ್ರುತಿ–ಮನಸ್ಸು ಕಲುಷಿತವಾಗುವಂತಹ ಗ್ರಂಥಗಳನ್ನು ಓದುವುದನ್ನೂ ಓದಿಸುವುದನ್ನೂ ಮಾಡಬಾರದು (ಜೈನಪ. ೪೬೯). 'ದಂಶ್ಶ್ರುತಿ' ಪರಾ.
[ ಸಂ. ]

**ದುಃಸಂಗ** (ನಾ). ≡ ದಂಸ್ಸಂಗ. [ ಸಂ. ]

**ದುಃಸಂತತಿ** (ನಾ). ≡ ದುಸ್ಸಂತತಿ. [ ಸಂ. ]

**ದುಃಸಂಧಿ** (ನಾ). ≡ ದಂಸ್ಸಂಧಿ. [ ಸಂ. ]

**ದುಃಸಹ** (ನಾ). ≡ ದಂಸ್ಸಹ ೨: ಶಿವಪಾರನ ಆಯುಷ್ಯವು ದುಃಸಹವಾದ ವಿಪತ್ತುಗಳಲ್ಲಿಯೇ ಕಳೆದು ಹೋಯಿತಂ (ಕರ್ನಾಟ. ೦೬೬). [ ಸಂ. ]

**ದುಃಸಾಧ್ಯ** (ನಾ). ≡ ದಂಸ್ಸಾಧ್ಯ: ದುಃಸಾಧ್ಯ ಸಂಭಾವ್ಯವೆಂಬ ಸೊಲ್ಲಿನ ಗುಲ್ಲು ಗುಡುಗಾಡುತಿದೆ (ಉಯ್ಯಾಲೆ. ೨೭-೦). [ ಸಂ. ]

**ದುಃಸ್ಥಿತಿ** (ನಾ). ≡ ದಂಸ್ಥಿತಿ: ಬಸವ ಶರಣನೆ ದುಃಸ್ಥಿತಿ [ಪಾಠಾಂ. ದುಸ್ಥಿತಿ] ಗಳತ್ತತ್ತಲೋಡುವುವು (ಬಸವು. ೦-೨೬): ಸತ್ಪುರುಷಾಗ್ರಣಿಯೊಬ್ಬನು ಉತ್ತಮಸ್ಥಿತಿಯಿಂದ ದುಃಸ್ಥಿತಿಗೆ ಗುಱಿಯಾಗುವ ದೃಶ್ಯವು ರಂದ್ರವಾಗಲಾರದು (ಅರಿಕಾ. ೦೭೦); ಹೃದಯತಾಪದಿ ದೀನವಂಸನಾಗಿ, ದುಃಸ್ಥಿತಿಯ ನಾಂತಾ ನೃಪೇಂದ್ರನಂ ಕಾಣಾತಾ ಕೇಕಯಕುಲೀನೆಯಾಕುಲೆಯಾದಳೆದೆಗರಗಿ (ಶ್ರೀರಾಮಾ. ೬೦-೪೬೦). [ ಸಂ. ]

**ದುಃಸ್ಥಿತಿಪ್ರೇರಕ** (ನಾ). ದುರವಸ್ಥೆಗೆ ಪ್ರೇರಿಸುವವನು; ಚಾಡಿಕೋರ : "ದುಃಸ್ಥಿತಿ [ ಪಾಠಾಂ. ದುಸ್ಥಿತಿ ] ಪ್ರೇರಕಂ ಚಹಡಂ" (ಮಂಗರಾ. ೬೨-೨೩). [ ದುಃಸ್ಥಿತಿ + ಪ್ರೇರಕ ]

**ದುಃಸ್ಪರ್ಶ** (ನಾ). ≡ದುಸ್ಪರ್ಶ ೨: "ದುಃಸ್ಪರ್ಶ [ಪಾಠಾಂ. ದುಸ್ಪರ್ಶ] ಮೆನೆ ತುರುಚೆಯುಕ್ಕುಂ" (ಮಂಗರಾ. ೪೪-೪೪). [ ಸಂ. ]

**ದುಃಸ್ಪರ್ಶೆ** (ನಾ). ≡ದುಸ್ಪರ್ಶೆ. [ ಸಂ. ದುಃಸ್ಪರ್ಶಾ ]

**ದುಃಸ್ಮೃತಿ** (ನಾ). ಕೆಟ್ಟ ನೆನಪು: ಮಳ್ಗಸಗಿದಾ ದುಃಸ್ಮೃತಿಯು ನಿಧಿಗೆ ಬೆಂದಿರುಹಿ ... ರಾಜ್ಯಭಾರವ್ರತದಿ ನಿಂದನಯ್ ಭರತನನಿಶಂ ಶ್ರೀರಾಮ ಸಂಕ್ಷೇಮ ಚಿಂತನಾಪ್ರಾರ್ಥನೆಗೆ ತೆತ್ತು ತನ್ನಾತ್ಮವುಂ (ಶ್ರೀರಾಮಾ. ೧೬೩-೬೩೪). [ ಸಂ. ]

**ದುಃಸ್ವಪ್ನ** (ನಾ). ≡ ದುಸ್ವಪ್ನ : ಕ್ರೂರ ದುಃಸ್ವಪ್ನ ಜೀಡನ ಪೀಡನೆಗೆ ಸಿಲ್ಕಿ ನಡುನಡುಗುತೊದ್ದಾಡಿದತ್ತು ಮಂಥರೆಯೊಡಲ್, ಬಲೆಗೆ ಬಿಳ್ದೊಂದು ಪುಳುವಂತೆ (ಶ್ರೀರಾಮಾ. ೫೯-೧೪೬). [ ಸಂ. ]

**ದುಃಸ್ವಪ್ನದರ್ಶನ** (ನಾ). ಕೆಟ್ಟ ಕನಸನ್ನು ಕಾಣುವುದು,-ನೋಡುವುದು: ಬಂದಯೋಧ್ಯಾನಗರಮಂ ಪೊಕ್ಕು ದುಃಸ್ವಪ್ನ[ಪಾಠಾಂ. ದುಸ್ಸ್ವಪ್ನ]ದರ್ಶನ ಕರ್ಷಣಾರ್ಥವಾಗಿ . . . ಶಾಂತಿಕ್ರಿಯೆಗಳಂ ನೆಗಟ್ದು (ಆದಿಪು. ೧೫-೪೮ ವ). [ ದುಃಸ್ವಪ್ನ + ದರ್ಶನ ]

**ದುಃಸ್ವಪ್ನಶಾಂತಿ** (ನಾ). ಕೆಟ್ಟ ಕನಸನ್ನು ಕಂಡಿದ್ದಕ್ಕಾಗಿ ನಡೆಸುವ ಶಾಂತಿ: ಮರುದಿನ ಬೆಳಗ್ಗೆ ತನ್ನ ತಾಯ ಬಳಿಗೆ ಹೋಗಿ ರಾಣಿಯ ದುರ್ವರ್ತನೆಯನ್ನು ಒಂದು ಕನಸಿನ ನೆವದಿಂದ ಸೂಚಿಸಲು, ಅವಳು ಅದರ ತಾತ್ಪರ್ಯವನ್ನು ಅರಿತುಕೊಳ್ಳದೆ, ದುಃಸ್ವಪ್ನಶಾಂತಿಗಾಗಿ ಮಾರಿಗೆ ಬಲಿ ಕೊಡಬೇಕೆಂದು ಹಠ ಹಿಡಿಯುವಳು (ಕಾವ್ಯಸ. ೬೩). [ ದುಃಸ್ವಪ್ನ + ಶಾಂತಿ ]

**ದುಃಸ್ವರ** (ನಾ). ≡ದುಸ್ವರ ೨: ಸುಭಗ ದುರ್ಭಗ ಸುಸ್ವರ ದುಃಸ್ವರ ಆದೇಯ . . . ತೀರ್ಥಕರನಾಮ ಮೆಂದಿಂತಲ್ಲಿ ಗತಿನಾಮಂಕರ್ಮಂ ಚತುರ್ವಿಧಮಕ್ಕುಂ (ಗೊಮ್ಮಸಾ. ೩-೭) : ಸ್ಥಾವರ ಸೂಕ್ಷ್ಮ . . . ದುಃಸ್ವರ ಅನಾದೇಯ ಅಯಶಸ್ಕೀರ್ತಿ ನಾಮಕರ್ಮಮೆಂದಿಂತು ನಾಮಕರ್ಮದುತ್ತರಪ್ರಕೃತಿಗಳು ತೊಂಭತ್ತಮೂರುಂ ನೂರ ಮೂರುಂ ಮೇಣಪ್ಪುವು (ಗೊಮ್ಮಸಾ. ೪-೨); ಮನೋಜ್ಞ ಸ್ವರನಿರ್ವರ್ತನಂ ಭವತಿ ದುಃಸ್ವರನಾಮ (ಗೊಮ್ಮಸಾ. ೬-೬). [ ಸಂ. ]

**ದುಕಾನ** 'ದುಕಾನು' ನೋ.

**ದುಕಾನು, ದುಕಾನ** (ನಾ). ಅಂಗಡಿ; ವ್ಯಾಪಾರಸ್ಥಳ: ಅಲ್ಲಿ . . . ದುಕಾನು ನಡೆಯುತ್ತದೆ (ಮುಂಬಪ್ರಾ. ೨೧); ಓಗಿತ್ತು ಮರಿ, ಬೈಸಿಕಲ್ಲು ಏರಿ ಗ್ಯಾರೇಜೂ, ಸರಾಯಿ ದುಕಾನು ಎಲ್ಲಾನೂ ಸುತ್ತಿಕೊಂಡು ಬಂತು (ಬೆಂಗಬ. ೧೫೭). **ದುಕಾನ**: ಚಹಾ – ಕಾಫಿ ಫರಾಳ ದುಕಾನದ ಪತ್ರೆಗಳ ಕೆಳಗೆ ನಿಂತು ಹನಿಗಳಿಂದ ಪಾರಾದರೂ ಒಳಗಿನ ಹೊಗೆ ಅವರ ಕಣ್ಣೊಳಗಿಂದ ನೀರು ತರಿಸಿತು (ಮುಗಿಮು. ೪) ; ದುಕಾನಗಳು ಹೊಸದಾಗಿ ಮಾಡಿದ್ದರಿಂದ ಅಲ್ಲಿಯ ಅಡತಿ ಖರ್ಚು ತೆಗೆದುಕೊಳ್ಳುವ ಸಂಬಂಧವಾಗಿ . . . ಈ ಪುಸ್ತಕದ ಕಡೆಯಲ್ಲಿ ಬೇರೆಯಾಗಿ ದಾಖಲ ಮಾಡಿರುತ್ತೇವೆ (ಮುಂಬಪ್ರಾ. ೫ ಪ್ರಸ್ತಾವನೆ). [ ←ಪಾರ. ಹಿಂ. ಮರಾ. ದುಕಾನ್ ]

**ದುಕಾನುದಾರ** (ನಾ). ಅಂಗಡಿಯುವ; ಅಂಗಡಿಕಾರ : (೬). [ ದುಕಾನು + – ದಾರ$_4$ ]

**ದುಕಾರು** (ನಾ). ಎರಡು ಮಳೆ ; ಹಿಂಗಾರು ಹಾಗು ಮುಂಗಾರು : "ದುಕಾರು = ಹಿಂಗಾರು ಮುಂಗಾರು ಮಳೆ" (ಜಾನಕೋ. ೬). [ ದು + ಕಾರು$_2$ (<ಕಾರ್$_2$) ]

**ದುಕೂಲ** (ನಾ). ೧. ರೇಷ್ಮೆ ಬಟ್ಟೆ ; ಪಟ್ಟೆವಸ್ತ್ರ : "ದುಕೂಲಂ ಕ್ಷೌಮಂ ಈ ೨ ದು (ಗು)ಕೂಲಂ" (ಹಲಾಯು. ೯೦-೩೯೫) ; ತನ್ಮಹೀವಿಲಾಸಿನಿಯ ಮೇಲ್ಹೊಂಡ ದುಕೂಲಮುಮನರ್ಹತ್ಪರಮೇಶ್ವರನ ವಿಶದಯಶಃಪುಂಜಮನುನಂಕರಿಸಿ . . . ದಕ್ಷಿಣೋತ್ತರ ಶ್ರೇಣಿಗಳ್ಗೆ ರಾಜಧಾನಿಗಳಾಗಿರ್ದ . . . ಪೊಟಲ್ಗಳನೊಳಕೊಂಡು (ಆದಿಪು. ೧-೬೨ ವ) ; ದುಕೂಲದೊಂದು ಮಡಿವಾಸಿನ ಮಾಟ್ಕೆವೊಲಾಯ್ತು (ಪಂಪಭಾ. ೫-೧೭) ; ತತ್ಸುತಂ ಬಳೆದು ಬಾಗದ ಬೀರದ ಪೆರ್ಮೆಯಿಂ ದಿಶಾಭಿತ್ತಿಯನೆಂಟನೆಯ್ದೆ ತೆರೆಸುತ್ತಿದನಾತ್ಮಯಶೋದುಕೂಲದಿಂ (ಪಂರಾಮಾ. ೨-೫೭) : ದುಕೂಲವರಾನುಲೇಪನವ ಪರಿಹರಿಸಬೇಡೊಲವಿನಲಿ ಪತಿಕರಿಸು (ಕುವ್ಯಾಗ. ೫-೩೯). ೨. (ಉತ್ತಮವಾದ) ವಸ್ತ್ರ,-ಉಡುಪು: ತಾವರೆಯ ನೂಲ ದುಕೂಲಮನುಟ್ಟು ಪರಾಗದ ತಿಲಕಮನಿಕ್ಕಿ (ನಂಬಿರ. ೧೦-೬೨) ; ಮಾಸುಳಿಸಿದ್ದ ದುಕೂಲ ರದನದೊಳೆಸೆವ ಹಾವಸೆ ... ಉದಯಾಸ್ತಮಯಕಾಲದಲಿ ಎಸೆವ ನಿದ್ರಾಂಗನೆಯೊಳೊಂದಿರೆ ಬಿಸಜಲೋಚನನಾದೊಡೆಯು ವರ್ಜಿಸುವಳವರನು ಭಾಗ್ಯಸಿರಿ (ಕುವ್ಯಾಉ. ೩-೫೭) : ಅವಳು ಉಟ್ಟ ದುಕೂಲ ಸಹ ಜಾರಿ ಮೈಯ ಅಂಗಗಳು ಕಾಣಿಸುತ್ತಿದ್ದರೂ ಅವಳಿಗದರ ಪರಿವೆಯಿಲ್ಲ (ಕುಸುಸಂ. ೨೨೭). [ ಸಂ. ]

**ದುಕೂಲಚೇಲ** (ನಾ). ರೇಷ್ಮೆಯ ವಸ್ತ್ರ,-ಬಟ್ಟೆ : ಇದು ಮೇಲ್ಹೊಂಡ ದುಕೂಲಚೇಲಮೆನೆ ತದ್ಭೂಮಧ್ಯಮಾಂತೊಪ್ಪುತಿರ್ಪುದು ನೀಳಾಚಳಚೂಳಿಕಾವರಸರಃಸಂಜಾತೆಯುಂ (ಪುಷ್ಪಪು. ೨-೭). [ ದುಕೂಲ + ಚೇಲ$_1$ ]

**ದುಕೂಲವಸನ** (ನಾ). ರೇಷ್ಮೆಯ ವಸ್ತ್ರ,- ಬಟ್ಟೆ : ದುಕೂಲವಸನಂ ಫೇನೋದ್ಗಮಂ ಮಲ್ಲಿಕಾ ಸ್ಮಿತದಾಮಂ ತೆರೆಮಾಲೆಯಾಗಿ ವಿಮಳ ಕ್ಷೀರಾರ್ಣವಶ್ರೀಯನಾ ಶತಪತ್ರಾನನೆ ಪೋಲ್ತು ಬೆಳ್ಪಸದನಂಗೊಂಡೇಂ ಮನಂಗೊಂಡಳೋ (ಪುಷ್ಪಪು. ೯-೯೪). [ ದುಕೂಲ + ವಸನ ]

**ದುಕೂಲವಸ್ತ್ರ** (ನಾ). ರೇಷ್ಮೆಯ ಬಟ್ಟೆ: ದುಕೂಲವಸ್ತ್ರದ ಗುಣ – ಇದು ಸಣ್ಣ ಕೆಲಸದ ವಸ್ತ್ರವಾಗಿಯೂ, ಮಹಾಲಕ್ಷ್ಮಿಗೆ ಪ್ರೀತಿಕರವಾಗಿಯೂ . . . ಸ್ತ್ರೀಯರುಗಳಿಗೆ ವಶ್ಯಕರವಾಗಿಯೂ ಇರುವುದು. ಇದು ದುಕೂಲ ವಸ್ತ್ರದ ಗುಣ (ಸಕಪ್ರ. ೩೪). [ ದುಕೂಲ + ವಸ್ತ್ರ ]

**ದುಕೂಲವಿತಾನ** (ನಾ). ರೇಷ್ಮೆಬಟ್ಟೆಯ ಮೇಲ್ಕಟ್ಟು ; ಪಟ್ಟೆವಸ್ತ್ರದ ಮೇಲ್ಚಪ್ಪರ: ಅದು ಪೊಸ ಪೊನ್ನ ಘಂಟೆಯ ದುಕೂಲವಿತಾನದ ಮೌಕ್ತಿಕ ಪ್ರಲಂಬದ . . . ರಮ್ಯಜಾಳಮಾರ್ಗದ ವಿಳಸತ್ಕವಾಟದವಿಚಿತ್ರವಿಭೂತಿಗೆ ಜನ್ಮಮಂದಿರಂ (ಪುಷ್ಪಪು. ೨-೯೩). [ ದುಕೂಲ + ವಿತಾನ ]

**ದುಕೂಲಾಂಬರ** (ನಾ). ರೇಷ್ಮೆಯ ಬಟ್ಟೆ; ಪಟ್ಟೆ ವಸ್ತ್ರ: ಪೊಸ ಮುತ್ತಿನ ತಂಡಿಗೆ ಪೊದಟ್ದಿಸೆಯೆ ದುಕೂಲಾಂಬರಂ ನಿಜಾಂಗದೊಳಂ ಸಂದೆಸೆದಿರೆ (ಪಂಪಭಾ. ೨-೬೮) : ಮಳರಹಿತ ದುಕೂಲಾಂಬರವಿಳಸಿತೆ ನಿಡಿಯಳ್ ಸಗೌರರುಚಿ ಘಟಮಂ ಚಕ್ಕಳಮಂ ಪಿಡಿದಿರ್ಪಳ್ (ಜಾತತಿ. ೧೯-೧೮). [ ದುಕೂಲ + ಅಂಬರ ]

**ದುಕುಲಾಂಬರೆ** (ನಾ). ರೇಷ್ಮೆಯ ವಸ್ತ್ರವನ್ನು ಧರಿಸಿದವಳು : ಕೇವಲ ಧವಳಾಭರಣೆಯಂ ದುಕೂಲಾಂಬರೆಯುಂ ಕೆಲದೊಳ್ ನಿಲೆಯುಂ ಜ್ಯೋತ್ಸ್ನಾವಿಲಾಸದೊಳ್ ಬಗೆದೆನಿಲ್ಲ ನಲ್ಲಳನಿನಿಸಂ (ಕವಿರಾ. ೩-೯೩). [ ಸಂ. ದುಕೂಲಾಂಬರಾ (ದುಕೂಲ + ಅಂಬರ + –) ]

**ದುಕ್ಕ** (ನಾ). ವ್ಯಥೆ; ಯಾತನೆ: "ದುಕ್ಕ (ದುಗುಡ) – ದುಃಖ" (ತದ್ಭಕೋ. ೨೦) ; ತನುವನಿಳೆಗೀಡಾಗಿ ಮತ್ತಳ್ದು ಬಿಳ್ದು ಹೊರಳುತ್ತೆ ದುಕ್ಕದ ಕಡಲೊಳೀಸಾಡುವಂತಿರ್ದಳು (ಭಾವಜಿಂ. ೮-೨೭) ; ಮಕ್ಕಳ ಪಡೆಯದ ಮಡದಿಯ ಸಂಸಾರ ದುಕ್ಕದ ಮಡುವಿನಂತಿರ್ದ ಹೊಕ್ಕುಳು ಗುಣ್ಪುಗೆಟ್ಟುದು ಪೊಡಲೊಳು ಶಿಶು ತೆಕ್ಕನೆ ತೀವಿ ಜೀವಿಸಲು (ಮೋಹತ. ೧೭-೭); ಮಕ್ಕಳಿಲ್ಲವು ಎಂದು ಅಕ್ಕಮಲ್ಲಮ್ಮನು ದುಕ್ಕವ ಬಸವರಸಗರುಪಲು ಕಾಶಿಯ ಮುಕ್ಕಣ್ಣನೊಲಿದ (ಸರ್ವಜ್ಞ. ೫) ; ಮಕ್ಕಳಿದ್ದರೇನಕ್ಕ ದುಕ್ಕ ಕಳೆದಾವೇನ ? (ಕನ್ನಬಾ. ೮೦) ; ರೊಕ್ಕಕ್ಕೆ ಕಡಿಮೆಯಾದರೆ ದುಕ್ಕಕ್ಕೂ ಕಡಿಮೆಯೇ (ಗಾದೆ). [ <ಪ್ರಾ. ದುಕ್ಕ./ಸಂ. ದುಃಖ ]

**ದುಕ್ಕಂಡ** (ನಾ). ಎರಡು ಹೋಳುಗಳನ್ನು ಕೂಡಿಸಿದುದು ; ಜೋಡಿ: ಅಯ್ಯಂ ಬಟುವಟಿಯಿತ್ತ ನಲ್ದೊಡವುಗಳೊಳ್ . . . ದುಕ್ಕಂಡದ ಪಿಂಡುಗಂಕಣಂ ಮಾಳವಿಗಾ ಜಕ್ಕಸರಂ ನಿನ್ನರಸಿಗೆ (ರಾಮಾಶ್ವ. ೩೮-೧೭). [ < ಪ್ರಾ. ದುಃಖಂಡ./ಸಂ. ದ್ವಿಖಂಡ]

**ದುಕ್ಕಡಿ** 'ದುಕ್ಕಡಿ' ನೋ.

**ದುಕ್ಕಡಿಸು** (ಕ್ರಿ). ಸಂಕಟವನ್ನು ನೆನೆಸಿಕೊಂಡು ದುಃಖಪಡು; ಬಿಕ್ಕಳಿಸು: ರತ್ನ . . . ಕೈಗಳ ಮಧ್ಯೆ ತಲೆಯನ್ನಿಟ್ಟು ಅಳಲಾರಂಭಿಸಿದಳು. ದುಕ್ಕಡಿಸಿ ಕೊಂಡು ಅತ್ತಳು (ಅವತಂ. ೧೩೬). [ ದುಕ್ಕ + ಅಡಿಸು$_0$ (< ಅಡಸು) ]

**ದುಕ್ಕಪಡು** (ಕ್ರಿ). ವ್ಯಥೆಪಡು; ದುಃಖಿಸು: ನಿನ್ನಾಳ್ದನೆನ್ನಯ ತಪಗೆಡಿಸಿದ ಕಾರಣದಿಂದೆ ಕಿಡಿ ಸುರಿವಕ್ಷಿಯಿಂದುಱುಹಿದೆ ನೀ ದುಕ್ಕಪಡಬೇಡವೆಂದು ಪೇಳಿದನು (ಪೋಹಚ. ೮-೨೯). [ ದುಕ್ಕ + ಪಡು$_1$ ]

**ದುಕ್ಕವೆರಸು** (ಕ್ರಿ). ದುಃಖದಿಂದ ಕೂಡು ; ದುಃಖಿಸು ; ವ್ಯಥೆಪಡು : ಅಕ್ಕರು ಬಲೆಗೆ ಸಿಕ್ಕಿದ ಸತಿಗೋಸುಗ ದುಕ್ಕವೆರಸಿ ಮುಖಬಾಡಿ ಮಿಕ್ಕ ಮಾತಿನ್ನೇಕೆ ಹರಣದ ಹಂಗಿಲ್ಲ ದುಕ್ಕವೆರಸಿ ಕಪೋತಕನು (ಕಪೋತ. ೧೫-೫೬). [ ದುಕ್ಕ + ಬೆರಸು$_1$ ]

**ದುಕ್ಕಿ** (ನಾ). = ದುಃಖಿ ೨ : "ದುಃಖೀ–ದುಕ್ಕಿ" (ಶಾಶಕ್ಕ. ೨೮೯); ನೀಚೋಕ್ತಿಯಂ ದನಿಯಿನು ಕೇಳಿ ತಲೆಗುತ್ತಿ ಲೋಚನ ತಪ್ತವಾರಿಯನು ಭೂಚಕ್ರದೊಳು ಹರಿಸುವ ದುಕ್ಕಿಯ ಕಂಡು (ಮೋಹಚ. ೧೧-೧೪). [ < ಸಂ. ದುಃಖಿನ್ ]

**ದುಕ್ಕಿತ** (ನಾ) ನೊಂದವನು ; ದುಃಖಿತ : ರಾಮು ಸಿಕ್ಕದೆ ಪೋಪನೆನುತ ಮಾತಾಪಿತರತಿ ದುಕ್ಕಿತರಾಗಿರುತಿರಲು (ಅಬ್ಬಲೂ. ೨-೭೪). [ < ಸಂ. ದುಃಖಿತ ]

**ದುಕ್ಕಿತೆ** (ನಾ). = ದುಃಖಿತೆ : ಏಕಾಂತರಾಮನ ಚಿತ್ರದೊಳಗೆ ನಿಂದು . . . ಮುಕ್ಕಣ್ಣ ಮೂರ್ಛೆಯ ಮಾಡಿಸುತಿರಲಾಗ ದುಕ್ಕಿತೆಯಾದೊ ಪದ್ಮಮ್ಮ (ಅಬ್ಬಲೂ. ೨-೫೯). [ < ಸಂ. ದುಃಖಿತಾ ]

**ದುಕ್ಕಿಸು** (ಕ್ರಿ). = ದುಃಖಿಸು : "ಖಿದ್ಯತೇ = ದುಕ್ಕಿಸಿದಪಂ" (ಶಾಶಕ್ಕ. ೨೦೧); ತಕ್ಷವಿಲೋಮ ಸೌಖ್ಯವ ಕಂಡು ಯತಿಗಳು ಭಕ್ಷ್ಯವ ತೊಱೆದು ದುಕ್ಕಿಪರು (ಮೋಹಚ. ೧೮-೫೦); ಮನದಲ್ಲಿ ತಾಂ ದುಕ್ಕಿಸುತರರೆ ಅಕ್ಕಟ ಕಣ್ಣ ನೀರ್ಮುರ್ಕ್ಕುಳಿಸುತಲೆನ್ನ ದಿಕ್ಕಿಲ್ಲದವಳಂತೆ ದಿಟ್ಟಿಸಿದುದನು ನಾನೆಂತು ಮರೆಯುವೆನು (ಶಾಕುಂತ. ೪೫ ಅಡಿಟ).

**ದುಕ್ಕದುಕ್ಕಿಸು** (ದ್ವಿರುಕ್ತಿ): ಜಾನಕಿ ದುಕ್ಕದುಕ್ಕಿಸಿ ಅತ್ತಳು (ಮುತ್ತಿನದ. ೪೮). [ ದುಕ್ಕ + – ಇಸು$_3$ ]

**ದುಕ್ಕುಡಿ, ದುಕ್ಕಡಿ** (ನಾ). ೧. ಕಡಿವಾಣ: ತುರಗಕೆ ದುಕ್ಕುಡಿಯನಿಕ್ಕಿದರು ತಿರುಹಿದರೆರಡು ವಾಘೆಯಲಿ (ಕುವ್ಯಾಅ. ೧೮-೭). ೨. ಲಗಾಮು (?): ಬರಿಗಡಗ ಕೀಳ್ಕಂಬಿ ದುಕ್ಕುಡಿ [ಪಾಠಾಂ. ದುಕ್ಕಡಿ, ದಿಕ್ಕಡಿ] . . . ತುರಗ ವದನದಲೊಪ್ಪಿರಲು (ಕುವ್ಯಾಭೀ. ೪-೪೮). **ದುಕ್ಕಡಿ :** ೨. ದುಕ್ಕಡಿ ಕಬ್ಬಿಗಳಿಕ್ಕಿ ಕಡಿವಾಣ ಸಿಕ್ಕಿಸಿ ಮರುತವ ಸೆಳದೂ (ದೇವಾಂಪು. ೫-೨೬೩). [ ? ]

**ದುಕ್ಕುಳಿಸು** (ಕ್ರಿ). ಬಿಕ್ಕಳಿಸು : ದುಕ್ಕುಳಿಸುತಳುತಮುವರಜೆ ಚಕ್ಕನೆ ದಾಯಾದ್ಯರೆಸಗಿದಂದಮನುಳಿಯದೆ ಕಕ್ಕಸವೆನಿಸಲ್ ಪೇಳಲ್ ದಕ್ಕಡಿಗರಿ ದಕ್ಕದಾರೆ ತಾವೆನುತಮವಂ (ಹಾಲಾಸ್ಯ. ೭-೭-೩೦). [ < ದುಕ್ಕಡಿಸು ? ]

**ದುಖಾಪತು** (ನಾ). ಹಿಂಸಾಕೃತ್ಯ ; ಅತ್ಯಾಚಾರ ; ಹಿಂಸೆ ; ಕೋಟಲೆ : ಸನ್ ೧೮೮೫ರ ಅಖೇರವರೆಗೆ ಮುಗಿಯುವ ಒಂಬತ್ತು ವರ್ಷಗಳಲ್ಲಿ ೨೧೭ ಖೂನಗಳು . . . ೨೨೧ ಭಾರೀ ದುಖಾಪತುಗಳು, ೭೨೭ ದರೋಡೆ, ಕಳವು ... ಆದವು(ಕಭಾಗಿ. ೩೪೨). [ ← ಮರಾ. ದುಖಾಪತ್ ]

**ದುಗ, ದುಂಗೆ, ದೂಗ** (ನಾ). ೧. ಎರಡರ ಜೊತೆ; ಯುಗ್ಮ : ಪ್ರತ್ಯಯಾಂತಕ್ಕೆ – ದ್ವಿಕ – ದುಗ ; ತ್ರಿಕ – ತಿಗ (ಶಮದ. ೨೯೦ ಪ್ರಯೋ); ಸಂಭುದೇವನ ಮನೆಗಂ ಪಡುವಣ ನಟ್ಟ ಕಲುನಿಡುವಾಗಿಲ ಇಪ್ಪತ್ತೊಂದಱು ದುಗವೊಂಬತ್ತುಕ್ಕೆ ಮನೆಯುನೂ (ಎಕ. III, ತಿರುಮ. ೨೭-೩೦; 1290). ೨. ಲೆತ್ತದ ಆಟದಲ್ಲಿ ಎರಡರ ಗರ : ಬಿಡು ತಿಗದುಗ ಪಂಚಿಯನೊಡ್ಡಡಸಿದ ಚಾರಿಯನೆ ಪೊಯ್ದು ಗುಣಸಾರ್ಯದುಗ್ಗಡದಿಂ ತ್ರಿಗುಣೆಪುದೆನಿಪ್ಪ ನುಡಿ ನೆಗಟಲ್ ಲೆತ್ತವಾಡಿದರ್ ದಂಪತಿಗಳ್ (ಉದ್ಭಟ.೧೦-೧೫) ; ದುಗನ ಹಾಯಿಕು ತನಗೆ ಹಾಯ್ಕಿತ್ತಿಗನವೆಂಬಬ್ಬರದ...ಧಾಳಾಧೂಳಿ ಮಸಗಿತು (ಕುವ್ಯಾಸ.೧೩-೫೦). ದುಗನು ಪಂಚಕ ಬಾರ . . . ಬೇಡಿದಡಲ್ಲಿ ಬೀಳ್ವುದು ವಿಗಡ ಪುಷ್ಕರ ನೃಪನ ಗೆಲಿದನು ಹಲಗೆಯೊಂದರಲಿ(ನಳಚ. ೪-೨೯) : ದುಗ ನಿನ್ನದು ಬಾರ ನನ್ನದು (ಸೌಂದಕಾ. ೪-೫೪); ಆದರವರಿಗೆ ಬೀಳಬೇಕಾದ್ದುದು ಒಂದು ದುಗ (ಜೀವಯಾ. ೦೩). 'ಇರ್ದಂಗ' ಪರಾ. **ದುಗೆ :** ೨. 'ಇದ್ದುಗೆ' ಪರಾ. **ದೂಗ :** ೨. ದುಗಂ, ದೂಗಂ ; ತಿಗಂ, ತೀಗಂ (ಶಬ್ದಾನು.೩೭೮ ಪ್ರಯೋ).

**ದುಗದ ಗದ್ಯಾಣ** = ಎರಡು ಗದ್ಯಾಣ (?) : ಆ ಪೆರುಮಾಳೆ ದೇವ ದನ್ನಾಯಕರ ಕೈಯಲು ಮೊದಲು [ದು] ಗದ ಗದ್ಯಾಣ ಎರಡ ಕೊಣ್ಡರಾಗಿ . . . ಬಾಲಶಿಕ್ಷೆ ಉಪಾಧ್ಯರ ಜೀವಿತಕ್ಕೆ ಪಂಷಂಪ್ರತಿ ತಂಮ ತಂಮ ಮಕ್ಕಳು ಮಕ್ಕಳು ತಪ್ಪದೆ ಎಂದೆಂದಿಂಗಂ ಕೊಡುತ್ತ ಬಹರು (ಎಕ. III; ತಿರುಮ. ೨೭-೪೦ ; 1290). **ದುಗ ಬೀಳು** = (ಪಗಡೆಯಾಟದಲ್ಲಿ) ಎರಡರ ಗರ ಬೀಳು : ಎಂಟು ಭಾರಿಗಾಂ ದುಗ ಬಿದ್ದು ತಾರಿಹೇಂ . . . ಜೂಜ, ಗಾರಿಕೆಯಲಿ (ಪರಶು. ೪-೫೦) ; ಮರುಗಿನ್ನು ಫಲವೇನು ದುಗ ಬಿರ್ದ ಬಳಿಕೆಂದು ಹಲುಬಿದಂ ಜಮದಗ್ನಿಯು (ಪರಶು. ೨೫-೫). [ < ಪ್ರಾ. ದುಗ./ಸಂ. ದ್ವಿಕ ]

**ದುಗದೆ** 'ದಂಗ್ದೆ' ನೋ.

**ದುಗರ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಅಯನಯ ನಾಡಾಳೆ ದುಗರಂ ಇಯೂರಾಳೆ (ಎಕ. VIII, ಸೊರಬ. ೩೮೦-೧ ; ಸು. 1015). [ ? ]

**ದುಗಮಾತು** (ನಾ). ಚಮತ್ಕಾರದ ಮಾತು ; ಶ್ಲೇಷಾರ್ಥದ ನುಡಿ ; ಹದಿರುನಂಡಿ : ಬಗಿಮಾತು ಮೆಲ್ವಾತು ನಗೆಮಾತು ನಲ್ವಾತು ದುಗಮಾತು ದುರುಸುಮಾತುಗಳ ಸೊಗಸುಮಾತೆರೆಮಾತು ಸೊಗಮಾತುಗಳಿಂದ ಸೊಗಸ ಕಿವಿಗೆ ಸೂಸುವುದು (ಚಿಕವಿ. ೬-೫೭ ಸಾಂಗತ್ಯ). [ ದುಗ + ಮಾತು$_1$ ]

**ದುಗಾರಗ** (?). (?) : ಸೆಲಬಿಳ್ಳಿ ಬಿಳ್ಳಿ ಲಳ್ಳಿ ದ×ಸಿಗರ ಸಹ್ವ ದುಗಾರಗ ಗುಱಿ×ಜ್ಞು (ಎಕ. XVI, ಶಿರಾ. ೧೨೩-೪೦ ; 788). [ ? ]

**ದುಗಿಚೇರಕ್ಕ** (ನಾ). ಒಬ್ಬಾತನ ಹೆಸರು : ಸೇನೆಯುಂ ತಿಲಮನಿಱಿಯೆ ದುಗಿಚೇರಕ್ಕನಟ್ಟಿ ಸತ್ತನ್ (ಎಕ. X, ಚಿಂತಾಮ. ೧೨೪-೪ ; ಸು. 890). [ ದುಗಿಚೇರ$_0$ + ಅಕ್ಕ$_1$ ]

**ದುಗಿದುಗಿ** 'ದುಗುದುಗಿ' ನೋ.

**ದುಗುಡ** (ನಾ). ೧. ದುಃಖ ; ಉಮ್ಮಳ : "ಉಮ್ಮಳಮೆಂದೊಡೆ ದುಗುಡ" (ಭಾರನಿ. ೧೧-೩೮) ; ದುಗುಡವಾಯ್ತು ರಥಾಂಗಮಿಥುನಕೆ ನೆಗೆವಳಿಕುಳದ ಮೊರಹು ನಿಂದಿತು (ಬಸಪು.೧೧-೪೭); ಮುನಿಗಳಜನ್ಮಪನಂದನನ ದುರ್ಭರದ ದುಗುಡದ ದಂದುಗವನಪಹರಿಸಿ ಬಿಜಯಂಗೈದರಾಶ್ರಮಕೆ (ತೊರರಾ. ೧-೪-೧೩); ಕೊಡನ ಕುವರನೆಂತು ಪೇಟ್ವುದುಂ ರಾಮಂಗೆ ದುಗುಡಮಿರ್ಮಡಿಯಾದುದು (ರಾಮಾಶ್ವ. ೦೩-೦೮); ನಡೆವೆನೇ ಎನ್ನಡೆದ ದಾರಿಯೆಲ್ಲದಱಿನ್ ಬಲ್ ದುಗುಡ ದಾರಿಯನ್ (ಅಂತಿಗೊ. ೫೩-೧೧೩೪) ; ನಗುವಾತ್ಮ ಪರಿಮಳವ ಪಸರಿಸುವ ಕುಸುಮ ದುಗುಡಪಾತ್ರವ ಕಡೆದು ಸತ್ತ್ವಪೆತ್ತುವ ಮಂತು ಬಗೆದೆರಡನುಂ ಭುಜಿಸು (ಮಂಕುಕ. ೪೩೪); ಒಂದೆಡೆಗೆ ದುಗುಡದ ಹೊರೆ. ಇನ್ನೊಂದೆಡೆಗೆ ಯೋಚನೆಯ ಕಸಿವಿಸಿ (ನಿರೀಕ್ಷೆ. ೦೫೯) ೨. ಚಿಂತೆ ; ಯೋಚನೆ : "ದುಗುಡಮೆನಲ್ ಚಿಂತೆಯು" (ಭಾರನಿ. ೦೮); ನಿರ್ಣಯವನಱಿಯದ ಮನವೇ ದುಗುಡವನಾಹಾರಂಗೊಂಡೆಯಲ್ಲ (ಅವಚಂ.. ೪೫-೧೧) : ನಿದ್ದೆಗೆಯ್ ತಂದೆ ಇನ್ನಾವ ದುಗುಡಂ ಬೇಡ

(ಕಣ್ವ.ರ. ದೀ. ೧೩೩-೭) ; ಕುಮುದಿನಿ ತಲೆವಾಗಿ ದುಗುಡವಂ ತಳೆದಿರ್ದಳ್ (ದಶಕು. ೮-೧೩೫); ಬಾಲನಿವನೆನ್ನದಿರು ದುಗುಡವ ತಾಳಲಾಗದು ಬೊಪ್ಪ (ಕುಮಾ.ದ್ರೋ. ೮-೪) ; ಲಲನೆಗೇತಕೆ ದುಗುಡವಾರುಮ್ಮಳಿಕೆಯನು ಮಾಡಿದರು (ಪ್ರಭುಲೀ. ೫-೭೭) ; ಆದರೆ ನನ್ನ ಮನಸ್ಸಿನ ದುಗುಡವೇನೂ ಶಾಂತವಾದಂತಾಗುವುದಿಲ್ಲ (ಶ್ರೀರಾಯ. ೨೬೩). ೩. ಆತಂಕ ; ಭಯ ; ಭೀತಿ : ಮದನಂಗೆ ಚಿಂತೆ ಮಾಯೆಗೆ ದುಗುಡ . . . ಅಜ್ಞಾನಕ್ಕೆ ತಲ್ಲಣಂ ತಲೆದೋಱಲು (ಸಿದ್ಧರಾ. ೧-೪೭) ; ಹಡಪ ಬಾಹಿಯ ಚಮರಧಾರಿಗರ ದೊರೆಗಳುಳಿದರು ಬೆದಱೆ ರಥದಲಿ ಕರಿಗಳಲಿ ವಾರುವದಿನಿಳಿಗುಪ್ಪರಿಸಿದರು ಹರಿಹಿನಲಿ ಹಾಯ್ದರು ಹೊತ್ತ ದುಗುಡದಲಿ (ಕುಮಾ.ಗ. ೧-೦೪). ೪. ಆಯಾಸ; ಬಳಲಿಕೆ: ಭೂಪತಿಯ ದುಗುಡವನು ತೊಳೆದರು ರಾಗರಸ ಲಹರಿಯಿಂದನಾಮಿಕಸತಿಯರು (ಹರಿಕಥಾ. ೭-೬); ಮಳೆಯಿರಲಿ, ಚಳಿಯಿರಲಿ, ಗಾಳಿಯಿರಲಿ. ಮೈಯಲ್ಲಿ ದುಗುಡವಿರಲಿ–ಏನಾದರೂ ಈ ಕಾರ್ಯಕ್ರಮಕ್ಕೆ ವಿಘ್ನ ಬಾರದು (ಗಂಗಾಸಾ. ೧) ; ನಳಿನಿಯ ದುಗುಡ ಕಾಫಿ ಕುಡಿದ ಬಳಿಕವೂ ಕಡಿಮೆಯಾಗಿರಲಿಲ್ಲ (ನಡೆದಾ. II, ೯೪೯).

ದುಗುಡಮೋಱೆಗ=ಅಪ್ರಸನ್ನತೆಯಿಂದ ಕೂಡಿದ ಮುಖವುಳ್ಳವನು; ದುರ್ಮುಖ : ಸುಗುಣವಿದ್ಯವ ಕಲ್ತು ಸಂಮುಖಿಗೆ ತೋಱಲು ಹಗಲು ಕನ್ನಡಿಯ ನೋಳ್ಪಂತೆ ದುಗುಡಮೋಱೆಗರಿಗೆ ತೋಱಲು ರಾತ್ರಿಯೊಳಗೆ ಮುಕುರವ ನೋಡಿದಂತೆ (ಭರತ. ೦೩–೯೯).

[<ಪ್ರಾ. ದುಗ್ಗಡ=ಕಷ್ಟಸಾಧ್ಯವಾದ./ಸಂ. ದುರ್ಘಟ]

**ದುಗುಡಭಾರ** (ನಾ). ವ್ಯಥೆಯ ಹೊರೆ ; ಕಳವಳದ ಭಾರ : ಭೀಷ್ಮನ ಬೀಳುಕೊಂಡುತ್ಸವದ ಹರುಷದಲೊಮ್ಮೆ ಗಂಗಾಭವಗೆ ತಪ್ಪಿದ ದುಗುಡಭಾರದಲೊಮ್ಮೆ ಚಿಂತಿಸುತ . . . ಶಿಬಿರವನು ಹೊಕ್ಕರು (ಕುಮಾ.ಭೀ. ೧೦–೪೩) ; ಅಗಿವ ಚಿಂತೆಯೊಳರಸ ಕದನದ ದುಗುಡಭಾರದಲಿರಲು . . . ನಸುನಗುತೆದ್ದನಭಿಮನ್ಯು (ಕುಮಾ.ದ್ರೋ. ೮–೩೪) ; ಏತಕೀ ಬದುಕೆಂಬ ತೆಱನಲಿ ರೀತಿ ತಪ್ಪಿ ದಶಾಸ್ಯನಿದ್ದನು ದುಗುಡಭಾರದಲಿ (ಕಾಶಿರಾ.೧೯–೨).

[ದುಗುಡ + ಭಾರ]

**ದುಗುಡಶೃಂಗಾರ** (ನಾ). ದುಃಖಸೂಚಕವಾದ ಉಡಿಗೆ ತೊಡಿಗೆ,– ವೇಷಭೂಷಣ : ಹಾರವ ಹಱಿದಿಕ್ಕುತ ಕಸ್ತೂರಿಬೊಟ್ಟುರದ ಗಂಧವನು ನೀರಿನಿಂದ ತೊಳೆದು ಮೈಲಿಗೆಯುಟ್ಟು ದುಗುಡಶೃಂಗಾರವನನುಕರಿಸಿದಳು (ನಿಜಶಾಂ.೩–೧೪೫). [ದುಗುಡ + ಶೃಂಗಾರ]

**ದುಗುಡಸಿಂಗರ** (ನಾ). = ದುಗುಡಶೃಂಗಾರ : ತೆಗೆದರು ವಸ್ತ್ರಭೂಷಣವ . . . ಮೃಗನಾಭಿಯ ನಾದಿ ಪೂಸಿದು ಪಣೆಯಲಿ ದುಗುಡಸಿಂಗರ ಮೆಱೆವಂತೆ (ಬೋಹಿತ. ೨೮–೫) ; ಅಗಣಿತ ಬಲವಿಲ್ಲ ವಾದ್ಯರಂಜನೆಯಿಲ್ಲ ಸೊಗಸಿನಲಂಕಾರವಿಲ್ಲ ದುಗುಡಸಿಂಗರದಿಂದ ಬಂದರಯೋಧ್ಯಾನಗರಿಯ ಹೊಕ್ಕರಾ ನೃಪರು (ಭರತ. ೭೯–೧೨) ; ಕನಕರಾಜನು ಕಾಂತಿರಾಜ ಮುಂತಾದ ವೈದುನರೆಲ್ಲ ದುಗುಡಸಿಂಗರದಿ ವನಿತೆಯರಂದರಮನೆಯೊಳಪೊಗಲು ಭಾವನ ಸಭೆಗೆಯ್ದಿದರ್ದಾವು (ಭರತ. ೭೯–೫೭).

[ದುಗುಡ + ಸಿಂಗರ]

**ದುಗುಡಿಸು** (ಕ್ರಿ). ದುಃಖಿಸು ; ಚಿಂತಿಸು : "ಬುಂಥಯತಿ – ದುಗುಡಿಸಿದಪುದು" (ಕಾಶಕ್ಕ. ೨೭೫). [ದುಗುಡ + – ಇಸು₃]

**ದುಗುಣ** (ಗು). ೧. ಎರಡರಷ್ಟಾದ ; ಇಮ್ಮಡಿಯಾದ. (ನಾ). ೨. ಎರಡು ಪಟ್ಟು ; ಇಮ್ಮಡಿ ; ದುಪ್ಪಟ್ಟು : ಅರುಂಧತಿಗೆ ತೊಣೆ . . . ಸೀತೆಗೆ ದುಗುಣಂ ವಿಚಾರಿಸಲ್ಕನಕಬ್ಬೆ (ಎಕ. VIII, ಸಾಗರ, ೦೦೩–೩೫ ; 1039) ; ಪೂರ್ವಪದಂ ತದ್ಭವಮಾದುದರ್ಕೆ – ಗ್ರಾಮರಸ– ಗಾವರಸ . . . ದ್ವಿಗುಣ–ದುಗುಣ (ಶಮದ. ೨೫೧ ಪ್ರಯೋ) : ಪಂಕಜಮಿತ್ರನುಂ ಧನುಗೆ ಬರ್ಪಮಮಾಸೆಯೊಳ್(ಳ್)ೀ ನಿಮಿತ್ತದಿಂ ಕುಂಕುಮ ಶಂಖ ವಿದ್ರುಮ ಸುಮೌಕ್ತಿಕವಂ ಒಡಿದಾಱುತಿಂಗಳೊಳ್ ಭೋಂಕನೆ ಮಾಱೆ ಕೊಳ್ಗೆ ದು(ದ್ವಿ)ಗುಣದ್ಧಿ[ಪಾಠಾಂ. ದ್ವಿಗುಣವೃದ್ಧಿ]ಯಾನೀಗುಂ (ಜಟ್ಟಮು. ೬–೨೫) ; ಹೊಗಳಲನುಪಮ ಸೈನ್ಯವಿಂತೀ ದುಗುಣ [ಪಾಠಾಂ. ದ್ವಿಗುಣ]ವಂಥಾಸುರರ ಸೇನೆಗೆ ತ್ರಿಗುಣವಿದು ರಾವಣನ ಮೋಹರಕೆ (ಕುಮಾ.ವಿ. ೬–೭೦). ೩. ಎರಡು ಬಾರಿ ; ಎರಡು ಸಲ : ಲಂಘಿದಿರುಂ ಬಱಿಯಿಂ ಪಾಸುಂ ಪೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂ ತಿಗಟಮುಂ ಪರಿದು (ಗದಾಯು. ೬–೨೮ ವ); ತೇನ ತೇನಂ ತಿವಿದು ದಾನೊಳೀಡಾಡುವ ದುಗುಣ ತಿಗುಣಂ ತಿಱಿದು ದೆಸೆವಲಿಗೆಯ್ವ . . . ಮದಗಜಂಗಳುರಿಪಙ್ತಿದಟ್ಟಗೆಯೊಟ್ಟಲಂತಿರ್ದುವು (ಅನಂಪು. ೧೪–೭ವ). ೪. ಲೆತ್ತದಾಟದಲ್ಲಿ ಎರಡರ ಗರ ; ದುಗ : ಕೊಂದೆನೆಂದೋ ಎನ್ನ ಸಾರಿಯನಿಂದು ದುಗುಣವನಿಕ್ಕಿ ಗೆಲಿದವೆನೆಂದೊ ನೀಕಾರಣದ ಹಾಸ್ಯವದಾವುದು . . . ಎನಲೊಲವಿಂದ ನೆತ್ತವನುಡುಗಿ ಭೂಪತಿ ಮತ್ತೆ ನಗುತೆಂದ (ಬಸವು. ೪೩–೦೫) ; ದುಗುಣಕಿಕ್ಕಿದನರಸನಾಟಿಗೆ ತೆಗೆದನವ ಮೂಱೆಂದು ನಾಲ್ಕಕ್ಕುಗಿದನವನಿಪನೈದ ಕಳೆದನು ಬಹಳವನು ಶಕುನಿ (ಕುಮಾ.ಸ. ೧೪–೪).

[ದು + ಗುಣ]

**ದುಗುಣೆ** (ನಾ). ಎರಡು ಪಟ್ಟು ; ಇಮ್ಮಡಿ.

ದುಗುಣೇದಕ್ಷಿಣೆ = ಎರಡುಪಟ್ಟು ಸಂಭಾವನೆ; ಇಮ್ಮಡಿ ದಕ್ಷಿಣೆ : ಯಾಕೆ ಭಟ್ಟರೇ ! ದುಗುಣೇ ದಕ್ಷಿಣೆ ದೊರೆಯಿತೇ ? (ಸಾಹಿವಿ. ೫೨).

[<ಪ್ರಾ. ದುಗುಣಿಅ./ಸಂ. ದ್ವಿಗುಣಿತ]

**ದುಗುಣೆಜುಲ್ಮಾನೆ** (ನಾ). ಎರಡರಷ್ಟು ದಂಡ; ಎರಡು ಪಟ್ಟು ಜುಲ್ಮಾನೆ : "ದ್ವಿಪಾದ್ಯಃ, ದ್ವಿಗುಣೋ ದಂಡಃ – ಎರಡರಷ್ಟು ದಂಡ ತೆಗೆದುಕೊಳ್ಳುವುದಕ್ಕೆ ಹೆಸರು. ದುಗುಣೆ ಜುಲ್ಮಾನೆ" (ಸಿದ್ಧಾಂತಿ. ೨೦೯).

[ದುಗುಣೆ + ಜುಲ್ಮಾನೆ (<ಜುರ್ಮಾನೆ)]

**ದುಗುಣಿಸು** (ಕ್ರಿ). ೧. ಎರಡಂ ಪಟ್ಟು ಮಾಡು. ೨. (ಆಲಂ) ಚೆನ್ನಾಗಿ ಎಣಿಕೆಮಾಡು,–ಪರಿಶೀಲಿಸು : ಬಲ್ಲ ಜ್ಞಾನಿಗಳು ಮನದಲ್ಲಿ ದುಗುಣಿಸಿ ನೋಡಿ . . . ಎಲ್ಲಿ ನೋಡಲು ವಿಶ್ವಮೂರ್ತಿ ತಾ ಪೊಳೆವ (ತೀರ್ಥಮು. ೩೮–೫). [ದುಗುಣ + – ಇಸು₃]

**ದುಗುದುಗಿ**, ದುಗಿದುಗಿ (ನಾ). ೧. ಸಂಕಟ ; ತಳಮಳ : ಗದುಗಿನ ದುಗುದುಗಿಯು ಕಲ್ಪನೆ ಎಳ್ಳಷ್ಟೂ ಇಲ್ಲದ ಇವರು ಏನು ಆರಾಮವಾಗಿ ಇದ್ದಾರಲ್ಲ (ವೈನಿ. ೩೨೮). ೨. ಹೆದರಿಕೆ ; ಭೀತಿ : ಎಲ್ಲಿ ಸಿಟ್ಟಿಗೆ ಬರ್ತಾನೊ, ರಂಬಾಟ ಸುರುವು ಆಗ್ತದೊ ಅಂತ ದುಗುದುಗಿ ! (ಪುರುಷ. ೬೯). 'ದುಗಡುಗಿ' ಪಠಾ. ದುಗಿದುಗಿ : ೧. ಈ ೪೦ ವರ್ಷಗಳಲ್ಲಿಯ ಮೊದಲಿನ ೭ ವರ್ಷಗಳು ಮಾತ್ರ ದುಗಿದುಗಿಯಲ್ಲಿ ಕಳೆದು ಹೋದುವು (ಇಂಗ್ಲಂಡ. ೨೩೪).

[←ಹಿಂ. ದುಗದುಗೀ ; ಮರಾ. ದುಗದುಗೀ, ಧುಗಧುಗೀ]

**ದುಗುಧವಾರ್ಧಿ** (ನಾ). = ದುಗ್ಧವಾರಿಧಿ : ದೇವಾಸುರರು ಮಥಿಸಲು ದು ಗು ಧ ವಾ ರ್ಧಿ ಯ ಲಾ ಳು ವಾ ಬ ಲು ನ ಗ ವ ನಾಂತನನಂತಮಹಿಮನತಿ ಕೂರ್ಮ ರೂಪದಲಿ (ನಿಘಾಗ. ೨–೩–೨). [<ಸಂ. ದುಗ್ಧವಾರ್ಧಿ]

**ದುಗುಪಯಣ** (ನಾ). ಪಯಣದ ಮೇಲೆ ಪಯಣ : ಪಿಲ್ಲಿ ಕಾಲೋಳ್ ಚೆಲ್ಲೀದ ನೆಗ್ರೋಳೇ ಎಲ್ಲಿಗ್ಹೊರಟವ್ವಾ ದುಗುಪಯಣಾ – ಬಂಡ್ಹೊಳೆ ರಾಜಾಬೀದೀಲಿ ಏಭೋಗಾ (ಹುಟ್ಟಿಹ. ೫೭). [ದುಗು + ಪಯಣ₁]

**ದುಗುಬಿನ್ನಾಣತ್ತಿ** (ನಾ). (?) : ಕಂಬಳಿಂಗುಳ ತೆಱನೂ ದುಗುಬಿಂನಾಣತ್ತಿ ಆ ತೆಱಿಂಗೆ (ಸೌಇಎ. ೦೯೬೨, ಉಡುಪಿ. ೩೦೮–೦೮ ; 1293). [ ? ]

**ದುಗುಲ₁**, ದುಂಗುಳ (ನಾ). ೧. ರೇಷ್ಮೆ ಬಟ್ಟೆ ; ಪಟ್ಟೆವಸ್ತ್ರ : "ದುಕೂಲಮೆ ದುಗುಲಂ" (ಚತುನಿ. ೧೩) ; ಕರವೆರಸಿದ ಪೊಸದುಗುಲದ ತೆರಳ್ಕೆವೆತ್ತುಡೆ . . . ಕಟ್ಟಿದ ಪೊಂಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೋ

(ಆದಿಪು. ೪-೩೬): ಪಚ್ಚೆಯ ಹಾರದ ತೋರಣಂಗಳಂ ದುಗುಲದ ಗುಡಿಗಳಂ ಕಟ್ಟಿ[ಸಿ] (ಪಂಪಭಾ. ೩-೪೦ ವ): ಬಟಿಕ್ಕೆ ಮುಚ್ಚುಗೊಟ್ಟಂ ಕೊಟ್ಟೊಳ್ದುಡುಗೆಗಳನುಟ್ಟು ದುಗುಲಮನೆಡೆಯುಱದಾ ಮುನಿನಿವೇದಕಂಗೆ ನೃಪೇಂದ್ರಂ (ಶಾಂತಿಪು. ೧-೮೩) ; ದುಗುಲದ ಗುಡಿಗಳ ಬೆಂಬಿಡಿದು ಗಾಳಿ ತಣ್ಪಿಡಿದು ಶೀಡೆ (ಪಂರಾಮಾ. ೧೨-೨೫) ; ದುಗುಲದ ಪಲ್ಲವದುಡೆನೂಲ ಗಂಟೆಗಳ ಪುದಿವನಾಂತು ಬಾಲ್ಯಶ್ರೀಕೇಳಿಗೃಹಾಗ್ರತೋರಣದ ಶಾಖೆಗಳೆನಿಸಿದುವ ಮಳಕೋಮಳೋರುಗಳವಳಾ (ವರ್ಧಪು. ೯-೨೦); ಹೆಚ್ಚು ನೀರೆಱದಿಟ್ಟು ತೊಟ್ಟಿಲೊಳೊಚ್ಚಱಗ ದುಗುಲದಲಿ ಹೊಕ್ಕುಳ ಮುಚ್ಚಿ (ಪ್ರಭುಲೀ. ೩-೨೬); ಪಟ್ಟು ಪಟ್ಟಾವಳಿ ದುಗುಲದ ಮೇಲ್ಕಟ್ಟು ... ಕಟ್ಟಾಣಿ ಮುತ್ತಿನ ಕುಚ್ಚುಗಳಿಂದ ದಿಟ್ಟಗೆಸೆಯಿತು ಚಪ್ಪರವು (ಜೀವಂಸಾಂ. ೯-೩೫) ೨. ಪಟ್ಟೆಯ ಉಡಿಗೆ ; ರೇಷ್ಮೆಯ ಉಡುಪು: ಸುಲಿಪಲ್ ಮಿಂಚಿನ ಗೊಂಚಲುಟ್ಟ ದುಗುಲಂ ಗಂಗಾನದೀ ಫೇನಂ ... ಎಂಬೊಂದು ಪಂಬಲ ಬಂಬಲ್ಗೆ[ಡೆ]ಯಾಗೆ ಬೆಳ್ಪಸದನಂ ಕಣ್ಗೊಪ್ಪಿತು (ಪಂಪಭಾ. ೧-೧೩೭) ; ಸೊಗಯಿಪ ದುಗುಲದ ಸೆಱಗಂ ಪೊಗಕ್ಕೆ ತೆಗೆದಾಗಳಿರದೆ ಗೋಟಿಟ್ಟಿಟ್ಟಳ್ (ಕಾದಂಪೂ. ೯೫೮) ; ಅಂತು ಬಂದು ಪೊಗಸಾಲೆಯೊಳ್ ಮೆಯ್ಯಿಕ್ಕಿ ಪೊಗಸುತ್ತಿನ ದುಗುಲದ ಬಿನ್ನಪದ ಸೆಱಗನಧರಪಲ್ಲವಕ್ಕೆ ತೆಗೆದು (ಪಂರಾಮಾ. ೨-೨ ವ); ಮೆಱೆವ ಚಿತ್ರಗ ನಾನಾ ಬಗೆ ದುಗುಲವ ವಿರಚಿಸುತಿಹ ಸೇಲಿಗರ ... ಚಿಪ್ಪಿಗಗೇರಿಯಿಹುವು (ಕಂನವಿ. ೬-೫೫). ೩. ವಸ್ತ್ರ ; ಬಟ್ಟೆ: "ಹುಟ್ಟಗೆ, ದುಗುಲಂ, ಪಟ್ಟಣಗೆ, ಉಳ್ತುಡಿಗೆ–ಳ ವಸನಕ್ಕೆ ಪೆಸರ್" (ಕಶಸಾ. ೬೩-೩೯೨); ಕರ್ಪೂರ ಪಲ್ಲವರಸದಿನಧಿವಾಸಿಸಿದ ತಾವರೆಯ ನೂಲ ದುಗುಲಂಗಳುಂ ... ತಳಿರಲೆಗಳೊಳಂ ಪೊಸವೂಗಳೆಸಟ್ಗಳೊಳಂ ಸಮೆದ ಬಿಜ್ಜಣಿಗೆಗಳುಮಂ ಪೆಱವಂ ಪಲತೆಱದ ಶಿಶಿರೋಪಚಾರಂಗಳಂ ಮಾಟ್ಪ ಪರಿಜನಂ (ಕಾದಂಉ. ೨೦೬). ದುಗುಳ : ೧. ದೂಪಿಸಿದ ಬಿಳಿದುಗುಳನುಟ್ಟನುಲೇಪನಂಗಳ ಹೂಸಿ . . . ಇದಿರಾಯ್ತು ನೃಪಕಟಕ (ಕುವ್ಯಾಗ. ೧-೨೬).

[ <ಪ್ರಾ. ದುಗುಲ್ಲ./ಸಂ. ದುಗೂಲ ]

**ದುಗುಲ$_2$** (ನಾ). ವರಹದ ಅಥವಾ ಪಗೋಡದ ಹದಿನಾರನೆಯ ಒಂದು ಭಾಗ: (ಶಿಸಂಗ್ಲಾ. ೧೬೭). [ ? ]

**ದುಗುಲನಿವಾಳಿ** (ನಾ). ಉಟ್ಟ ಸೀರೆಯ ಸೆರಗಿನಿಂದ ಇಳಿತೆಗೆಯುವುದು. –ನಿವಾಳಿಸುವುದು: ಮೊಗವೆಲ್ಲ ನಗೆ ತನುವೆಲ್ಲ ಪುಳಕ ಕಣ್ಗೊಳಗುವ ಬಾಷ್ಪಗಳಿಂದ ಸಾರಿ ದುಗುಲನಿವಾಳಿಯಿಟ್ಟತ್ತೆಯ ಪಚ್ಚೆಗೆ ಬಗೆ ಮೆಚ್ಚಿ ನೊಸಲಿಟ್ಟರವರು (ಭರಚ. ೪೬-೭೯). [ ದುಗುಲ$_1$ + ನಿವಾಳಿ$_1$ ]

**ದುಗುಲವಾಸು** (ನಾ). ೧. ರೇಷ್ಮೆಯ ತಲ್ಪ,–ಹಾಸಿಗೆ. ೨. ರೇಷ್ಮೆ ಬಟ್ಟೆಯನ್ನು ಹೊದಿಸಿದ ಹಸೆಮಣೆ,–ಪೀಠ: ನವರತ್ನಖಚಿತ ಮಂಟಪದೊಳು ರಾಜಿಸುವವಿರಳ ದುಗುಲವಾಸಿನಲಿ ತವಕದೆ ಕೈದುಗಳಂ ಬಿಟ್ಟು ದುರ್ಗಾಸ್ತವವ ಜಪಿಸಿದನೇವೇಳ್ವೆ (ಕಂನವಿ. ೨೨-೨೫).

[ ದುಗುಲ$_1$ + ಪಾಸು$_2$ ]

**ದುಗುಳ** 'ದುಗುಲ$_1$' ನೋ.

**ದುಗೂಲ** (ನಾ). ೧. ರೇಷ್ಮೆ ವಸ್ತ್ರ: ಮಿಂಚುವೆತ್ತ ಸುಲಿಪಲ್ಗಳವಟ್ಟ ದುಗೂಲವೊಪ್ಪೆ ಬೆಳ್ವಸದನಮಂತದೇನೆಸೆದುದೋ ಪರಿಪೂರ್ಣ ಸುಧಾಂಶುವಕ್ತ್ರೆಯಾ (ಸುಕುಮಾ. ೯-೧೧೪). ೨. ನುಣುಪಾದ ವಸ್ತ್ರ. ೩. ಉತ್ತಮವಾದ ಬಟ್ಟೆ ; ನಯವಾದ ವಸ್ತ್ರ. [ ಸಂ. ]

**ದುಗೆ** 'ದುಗ' ನೋ.

**ದುಗ್ಗ$_1$** (ನಾ). ಕೋಟೆ ; ದುರ್ಗ: ದುರ್ಗ – ದುಗ್ಗ (ಶಬ್ದಾನು. ೧೫೩ ಪ್ರಯೋ): ಭಾಗಿಸಿಯುಗ್ಗಡದ ಘನವರ್ಗಮೂಲವನಱದೊಡೀ ಭವದಾಹಗ್ಗ ಹೆಱದೇಱುವನೆ ಮುಕ್ತಿಯ ದುಗ್ಗವನು (ಪ್ರಹ್ಲಾಚ. ೭-೧೯).

[ <ಪ್ರಾ. ದುಗ್ಗ./ಸಂ. ದುರ್ಗ ]

**ದುಗ್ಗ$_2$** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀಮತು ಕೊಙ್ಗಣಿ ಮಾಧವಶ್ಚೈವ ... ದುಗ್ಗಶ್ಚ ಶಿವಮಾರಸ್ತಥೈವಚ ಕೊಂಗುಣಿ ಪೃಥುವೀರಾಜ್ಯಂಕೆಯೆ (ಮೈಆರಿ. ೧೯೩೦, ೩೬-೩; ಸು. 800). [ <ಸಂ. ದುರ್ಗಾ ]

**ದುಗ್ಗಣಿಸು** ( ಕ್ರಿ). ಎರಡು ಪಟ್ಟಾಗಂವಂತೆ ಮಾಡಂ ; ಇಮ್ಮಡಿಸು : ಏನಾದರೂ ಇತ್ಯರ್ಥಕ್ಕೆ ಬರಬೇಕೆಂದು ಯತ್ನ ದುಗ್ಗಣಿಸುತ್ತಾರೆ (ಕಲನೆ. ೧೦೯). [ <ದ್ವಿಗುಣಿಸು ]

**ದುಗ್ಗತಿಗವುಂಡಿ** (ನಾ). ಒಬ್ಬಾಕೆಯ ಹೆಸರು : ದುಗ್ಗತಿಗವುಣ್ಡಿಯ ಮಗಂ ನಾಗತಿ ಸಾಲತ್ತಿಯ [ತು]ಱುಗೊಳ ಸತ್ತಂ (ಸೌಇಇ. XX, ೧೪-೩ ; 878).

[ ದುಗ್ಗತಿ? + ಗವುಂಡಿ (<ಗಾವುಂಡಿ) ]

**ದುಗ್ಗಪ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಅಯ್ಯಪದೇವ ಪ್ರಿಥುವೀರಾ × × × ನೊಳಲ್ಸತ್ತ ಮಾಡಿಸಿದಂ ದುಗ್ಗಪ (ಎಕ. IX, ಹೊಸಕೋ ೧೪-೪ ; ಸು. 900 ?). [ ದುಗ್ಗ$_2$ + ಅಪ (<ಅಪ್ಪ$_1$) ]

**ದುಗ್ಗಬ್ಬೆ** (ನಾ). ಒಬ್ಬಾಕೆಯ ಹೆಸರು : ಶ್ರೀ ಸಂಗಮಜ್ಜದ ಮೆಮ್ಮಗಳ್ ಮಲ ಕೆರಿ ಒಡಯ ದುಗ್ಗಬ್ಬೆ ತುಮ್ಬು ಮಾಡಿಸಿದಾಳ್ (ಎಕ. X (8), ಮುಳಬಾ. ೩೦೮-೦ ; 9 ನೆಯ ಶತ). [ ದುಗ್ಗ$_2$ + ಅಬ್ಬೆ$_1$ ]

**ದುಗ್ಗಮಯ್ಯ** (ನಾ). ಒಬ್ಬಾತನ ಹೆಸರು: ದುಗ್ಗಮಯ್ಯನ ಮಗ ಪೋಚಯ್ಯ ಬೆಸಗೆಯ್ದ (ಎಕ. IV, ಹುಣಸೂ. ೬೪-೧೨ ; 976).

[ ದುಗ್ಗ$_2$ + <ಅಮ್ಮ$_1$ + ಅಯ್ಯ$_1$ ]

**ದುಗ್ಗಮಾರ** (ನಾ). ಒಬ್ಬಾತನ ಹೆಸರು: ಭಿಪೊಮ್ಮ ಕೂರಾಳಗದ ಆಳರೊಳೆ ಕೊಣವಿರು ಗಜ್ಗ ದುರದುಲ್ ದುಗ್ಗಮಾರರ ಪಡೆ ಒಟ್ಟ ಎಱದು ಬಿಟ್ಟಿ (ಎಕ. IX, ದೇವನ. ೬೭-೪ ; ಸು. 780) ; ಸ್ವಸ್ತಿಶ್ರೀಮನ್ ವಿಣ್ಣಗೋವರಸರ್ × × ದುಗ್ಗಮಾರರ್ ಸೇನೆ ಮಗ × × × ನಾಲ್ವದಿನ್ವರ್ ಕಸಪ್ರ × × × ಪೊನ್ಪೊಱ ಬಿಟ್ಟದು (ಎಕ. X, ಚಿಂತಾಮ. ೧೨೬(b)-೨ ; ಸು. 800) ; ಆ ಮನಿಯನಾಡು ಮೂವತ್ತುಂ ದುಗ್ಗಮಾರಂ × × × ನಾಳುತ್ತಿರೆ (ಎಕ. X, ಮುಳಬಾ. ೨೪೮-೩ ; ಸು. 860 ?). [ ದುಗ್ಗ$_2$ + ಮಾರ ]

**ದುಗ್ಗಮಾರ ಎಱೆಯಪ್ಪ, ದುಗ್ಗಮಾರೆಱೆಅಪ್ಪ** (ನಾ). ಒಬ್ಬಾತನ ಹೆಸರು. **P** ಗಂಗ ಶ್ರೀ ಪುರಂಪನ ಮಗನ ಹೆಸರು : ದುಗ್ಗಮಾರ ಎಱೆಯಪ್ಪನ್ಕುವಳಾಲನಾಡುಮೂನೂಱುಂ ಗಙ್ಗಱು ಸಾಸಿರಮುಂ ಮಾಳುತ್ತಿರೆ (ಎಕ. X,ಮುಳಬಾ. ೨೫೫-೪ ; ಸು. 750) ; **ದುಗ್ಗಮಾರೆಱೆಅಪ್ಪ** : ದುಗ್ಗಮಾರೆಱೆಅಪ್ಪೋ ಕುವಳಾಲನಾಡು ಮೂನೂಱುಂಗಂಗಱು ಸಾಸಿರಮುಂಮಾಳೆ (ಎಕ. X, ಮುಳಬಾ. ೮೦-೫೪ ; 767) ; ಶ್ರೀ ಪೆರ್ಮ್ಮನಡಿಗಳ್ ನವರಾಜ್ಯಂಗೆಯೆ ದುಗ್ಗಮಾರೆಱೆ ಅಪ್ಪೊಮ್ಮಿಗೆ ಎಟ್ಟರೆ ಮುನಿದು (ಎಕ. XI, ಚಳ್ಳಕೆ. ೮-೦ ; ಸು. 810 ?).

[ ದುಗ್ಗಮಾರ + ಎಱೆಯಪ್ಪ$_2$ ]

**ದುಗ್ಗಮಾರೆಱೆಅಪ್ಪ** 'ದುಗ್ಗಮಾರಎಱೆಯಪ್ಪ' ನೋ

**ದುಗ್ಗಯ್ಯ** (ನಾ). ಒಬ್ಬಾತನ ಹೆಸರಂ : ಕೊತ್ತಮಜ್ಗಲದ ದುಗ್ಗಯ್ಯ ಬರೆದ . . . ಆದಿಯಮ್ಮ ಕಲ್ಲ ನಿಱಸಿದ (ಎಕ. V, ಚನ್ನರಾ. ೨೬೨-೨೬ ; 971) ; ಪಡುವಣ ಸಿನ್ದ ಪಸಲಂ ಎಡಕೊಳಗೇರಿಯ ದುಗ್ಗಯ್ಯಂ ನಾರಾಯಣಸ್ವಾಮಿಗೆ ಬಿಟ್ಟಂ (ಎಕ. III (R), ನಂಜನ. ೨೪೯-೧೦ ; ಸು. 10 ನೆಯ ಶತ). [ ದುಗ್ಗ$_2$ + ಅಯ್ಯ$_1$ ]

**ದುಗ್ಗಶರ್ಮ** (ನಾ). ಒಬ್ಬಾತನ ಹೆಸರು : ಭಾರದ್ವಾಜ ಗೋತ್ರ ದುಗ್ಗಶರ್ಮ್ಮಣ ಏಕ್ಕಂಶಃ (ಇಆ. VII, ೧೮೮-೪೦; 668). [ ದುಗ್ಗ$_2$ + ಶರ್ಮ ]

**ದುಗ್ಗಾಣಿ** (ನಾ). ೧. ಎರಡು ಕಾಣಿ ; ಕಡಮೆ ಬೆಲೆಯ ಒಂದು ತಾಮ್ರದ ನಾಣ್ಯ : ಸುಟ್ಟ ಬಾಳೆಯ ಕಾಯನರೆದ ಸಂಪಳಗೆ ಸರಿಗಟ್ಟ . . . ಕಲಸಿ ದುಗ್ಗಾಣಿಯಂದದಿ ಮಾಡಿ ತುಪ್ಪದೊಳಗೆ ಅಟ್ಟುಕೊಂಡು

(ಸೂಕ್ತಿಸು. ೪-೭೭) ; ಕೇಣಿಯನಿತ್ತು ತನ್ನೊಡಲನೊಪ್ಪಿಸಿ ನಾಡ ವಿಟರ್ಗೆ ಪೊಂದ ದುಗ್ಗಾಣಿಗೆ ಲಕ್ಕಜೀವದಭಿಮಾನವನಂಗಡಿಯುಲ್ಲಿ ಕಳ್ಳ ಕಿಳ್ಳಾಣಿಯು ಮುದ್ರೆಯಂತಿಹ ಪರಕ್ಕುರೆ ಸಲ್ಲದ ವೇಸಿಗರ್ಥಮಂ ಪ್ರಾಣಮನಿಕ್ಕಿಯಕ್ಕಟ ವೃಥಾ ಕೆಡುವಂ ಕೆಡುಕಂ (ನೀತಿಸಾ. ೭೯೪) ; ಹೊರಗೆ ನೋಡಿದರೆ ದುಗ್ಗಾಣಿಗೆ ಸಲ್ಲನೆಂದು ಪರರಿಂದೆಣಿಸಿಕೊಂಡು ನಗಬೇಕು ಪ್ರೀತಿಯಿಂದ (ಜಗದಾ. ೧೩೦) ; ಮನಪೊಲಿದು ಕೊಟ್ಟ ದುಗ್ಗಾಣಿಯೇ ಸ್ವತ್ವಂ (ಕವಿಪು. ೧೬-೧೪). ೨. ಹಣ ; ದುಡ್ಡು : ದುಗ್ಗಾಣಿ ಬಲು ಕೆಟ್ಟದಣ್ಣ (ಪುರಂದ. ೪-೧೦೩-೩). ೩. ಕಡಮೆ ಬೆಲೆಯದು : ನೀನು ದುಗ್ಗಾಣಿ ಕಿಮ್ಮತ್ತಿನವಳು ! ನೀನು ಹೀಗೆ, ನೀನು ಹಾಗೆ ಎಂಬುದಾಗಿ ಒಬ್ಬರನ್ನೊಬ್ಬರು ಉದ್ಧಾರವಮಾಡಹತ್ತಿದರು (ಕುಂಬಳ. ೪) ; ನಮ್ಮಂಥ ದುಡ್ಡು, ದುಗ್ಗಾಣಿಯ ಜನರೆದುರಿಗೆ ಹಾಡುವಳೇ (ಕನ್ನಾಬ. ೬೮) ; ದುಗ್ಗಾಣಿಯ ಮುಂಡೇ ಹತ್ತಿರ ದುಡ್ಡಿನ ದೋಸೆಗೆ ಹೋದ (ಗಾದೆ). [ ದು + ಕಾಣಿ₁ ]

**ದುಗ್ಗಿ₁** (ನಾ). ದೋಣಿ ; ನಾವೆ : "ಜೋಗಂ ಪರೀತಂ ನಿಮಂಜರಂ ದುಗ್ಗಿಯೋಡಂ ದೋಣಿಯೆಂದೆನಲ್ ನಾವೆಯಕ್ಕುಂ" (ಮಂಗರಾ. ೧೩೦-೪) ; ಎಡೆಯಾಡುತಿಹ ದೋಣಿ ದುಗ್ಗಿ ಕಪ್ಪಲು ದೊಡ್ಡ ಹಡಗುಗಳಿರವ ನೋಡಿದನು (ಭರಜ. ೨೩-೯೬).

**ದುಗ್ಗಿ₂** 'ದುರ್ಗಿ₁' ನೋ.

**ದುಗ್ಗಿ₃** (ನಾ). (?) : ಚಿಪ್ಪನ ಕಟ್ಟದಲು ಅರಹಟದ ಬಂಮಿಸಟ್ಟಿಯಿಂ ಬಡಗಲು ಗದ್ದೆ ಕಂಮವಱುನೂಱು ದುಗ್ಗಿ ಮೇಗೆಯ್ಯ ಮೂಱು ಮತ್ತರು ... ೨ ಮನೆ ಬಡ ವಾಗಿಲು ಮುಸ್ತನ್ನದೇವರ್ಗ್ಗೆ (ಸೌಇಇ. IX-1, ೩೯೦-೩೮ ; 11 ನೆಯ ಶತ). [ ? ]

**ದುಗ್ಗು₁** (ನಾ). ಒಂದು ಬಗೆಯ ಸಸ್ಯ : ಓಡಿಹಿಡಿಕೆ ದುಗ್ಗು, ದುಗ್ಗುಗಣಿಕೆ . . . ಪುಡಿ ಮಾಡಿ ಇಂಗು, ಸೈಂಧವ . . . ಸಹ ಎಱೆದು, ಬಿಸಿನೀರ ಕೊಳ್ಳೆ ಅಂಡಜದ ಕಾಟ ಮಾಣ್ಗುಂ (ವಿಷ್ವವಿ. ೧೯೬). [ ? ]

**ದುಗ್ಗು₂** (ನಾ). ಕತ್ತರಿಸಿದ ಮೇವು : "ದುಗ್ಗು = ಕೊರೆದ ಮೇವು" (ಜಾನಕೋ. ೬). [ ? ]

**ದುಗ್ಗುನಿ** (ನಾ). ಒಂದು ಸ್ಥಳದ ಹೆಸರು : ದುಗ್ಗುನ್ಯ ವಿಸ್ವಕರ್ಮ್ಮಾರ್ಯ್ಯ . . . ದತ್ತಮು ಕೊಟ್ಟರ್ (ಮ್ಯಆರಿ. ೧೯೩೩, ೩೮-೧೨ ; 791 ?). [ ? ]

**ದುಗ್ಗೆ** 'ದುರ್ಗಿ₁' ನೋ.

**ದುಗ್ಧ** (ಗು). ೧. (ಹಾಲನ್ನು) ಕರೆದ ; ಹಿಂಡಿದ. (ನಾ). ೨. ಹಾಲು ; ಕ್ಷೀರ : "ಕ್ಷೀರಂ ದುಗ್ಧಂ ಪಾಲ್" (ವಸ್ತುಕೋ. ೯೨-೧) ; ಅದು ಕಾರಣದಿಂ ಆಧಾರ ದೋಷದಿಂ ದುಗ್ಧಕ್ಕೆ ರಸವಿಪರ್ಯಯಮಪ್ಪವೊಲ್ (ತತ್ತ್ವಪ್ರ. ೭೨) ; ಕರಮೆ ಮುನಿ ದುಗ್ಧದಧ್ಯಾದಿ ರಸಂಗಳನೆಯ್ದೆ ತೊಱೆದು (ಚಂದ್ರಪು. ೧೧-೧೧) ; ಪುಳಿ ಮುಟ್ಟಿದ ದುಗ್ಧದಂತೆ ನೀರ್ ಮುಟ್ಟಿದ ಜೇನೆಯ್ಯಂತೆ (ಯಶೋಚ. ೨-೫೯) ; ಏಕೆ ಸಂತಸಮನೊಡರ್ಚೆಯೆನ್ನ ಮನದಂಬೆಗೆ ಪೇಟ್ ದರಹಾಸದುಗ್ಧದಿಂ (ಪುಷ್ಪಪು. ೩-೬೯) ; ಕುಡಿ ಮೊದಲೊಳೀ ದುಗ್ಧಮಂ ತರುವಾಯ ತಿನಲೀವೆನೀ ಹೊಚ್ಚಹೊಸ ಹಣ್ಗಳಂ (ಶ್ರೀರಾಮಾ. ೧೫೬-೧೦೭). ೩. ಕೆಲವು ಮರಗಳಲ್ಲಿ ಒಸರುವ ರಸ, ದ್ರವ. 'ದುಗ್ಧತರು' ಪರಾ. [ ಸಂ. ]

**ದುಗ್ಧಕಂಠ** (ನಾ). (ಹಾಲು ಕುಡಿಯುವ) ಹಸುಳೆ ; ಮಗು ; ಬಾಲಕ : ಕೆಮ್ಮನೆ ಭಯರಸಮಂ ತಾಳ್ದುವೈ ಲಕ್ಷ್ಮಣಂ ಸಂಗರದೊಳ್ ಪೌಲಸ್ತ್ಯನಂ ಗೆಲ್ದಪನೆ ರಣರಸೋತ್ಕಂಠನಂ ದುಗ್ಧಕಂಠಂ (ಪಂಪರಾಮಾ. ೧೨-೬೫).

[ ದುಗ್ಧ + ಕಂಠ ]

**ದುಗ್ಧಜಳಭೇದನ** (ನಾ). ೧. ಹಾಲು ಯಾವುದು ಮತ್ತು ನೀರು ಯಾವುದು ಎಂದು ಬೇರ್ಪಡಿಸಿ ಅರಿಯುವುದು : ಕವಿರಾಜಹಂಸನಱಿ ಪಂತೆವೊಲೇನಱಿಯಲ್ಕೆ ಯೋಗ್ಯನೇ ಚತುರಕವಿಪ್ರತಾನರಚಿತಾದ್ಯಕೃತಿಪ್ರಕರೈಕ ಪಾತ್ರಸಂಸ್ಥಿತಗುಣದೋಷ ದುಗ್ಧಜಳಭೇದನಮಂ ಕವಿನಾಮಧಾರಕಂ (ಚಂದ್ರಪು. ೧-೩೮). ೨. (ಆಲಂ) ಉತ್ತಮ ಮತ್ತು ಅಧಮವಾದುದನ್ನು ಬೇರ್ಪಡಿಸಿ ಅರಿಯುವುದು.

[ ದುಗ್ಧ + ಜಳ₂ (= ಜಲ₂) + ಭೇದನ ]

**ದುಗ್ಧತಪಃಫಲೆ** (ನಾ). ತಪಸ್ಸಿನ ಸಂಪೂರ್ಣ ಫಲವನ್ನು ಪಡೆದವಳು : ದಗ್ಧಕಾಮೆ ಓ ದುಗ್ಧತಪಃಫಲೆ ಶುದ್ಧೆ ನಿರ್ಮುಕ್ತೆ (ಅಹಲ್ಯೆ. ೧೦೦).

[ ಸಂ. ದುಗ್ಧತಪಃಫಲಾ ]

**ದುಗ್ಧತರು** (ನಾ). ಆಲ, ಅತ್ತಿ, ಅಶ್ವತ್ಥ, ಗೋಣಿ ಮತ್ತು ಇಪ್ಪೆಯೆಂಬ ಹಾಲ್ಮರಗಳು : "ಔದುಂಬರಂ ದುಗ್ಧತರುವೆನಲತ್ತಿ" (ಮಂಗರಾ. ೩೫-೧೩).

[ ದುಗ್ಧ + ತರು₂ ]

**ದುಗ್ಧದ್ರುಮ** (ನಾ). = ದುಗ್ಧತರು : ಅರವಿಂದಪ್ರಿಯನಿಂದೆ ಕೆಚ್ಚು ಶಶಿಯಿಂ ಸ್ನಿಗ್ಧಂ ಸದುಗ್ಧದ್ರುಮಂ ಧರಣೀನಂದನನಿಂ ಸಕಂಟಕ ಕಟುತ್ವಂ ಸೌಮ್ಯನಿಂ ನಿಷ್ಫಲಂ ಗುರುವಿಂದಂ ಸಫಲಂ ಭೃಗುಪ್ರಭವನಿಂ ಪುಷ್ಪಾನ್ವಿತಂ ಸೌರಿಯಿಂ ಪರುಷಂ ತತ್ತರುವಿಂಗೆ ಪೂರ್ವಗದಿತ ಸ್ಥಾನಸ್ಥರಾದಂದವರ್ (ಜಾತತಿ. ೫-೧೧). [ ದುಗ್ಧ + ದ್ರುಮ ]

**ದುಗ್ಧಧಾರೆ** (ನಾ). ಹಾಲನ್ನು ಸುರಿಯುವುದು ; ಹಾಲಿನ ಪ್ರವಾಹ : ಆ ದುಗ್ಧಧಾರೆ ಕರವಿಂಬುದುದು ಜಿನಮಸ್ತಕಾಗ್ರದೊಳ್ (ಆದಿಪು. ೭-೮೭) ; ಮೇಣ್ ತತ್ಕ್ಷಾಂತೆ ಲಂಚಂಗುಡಲ್ ಪದೆಪಿಂದಟ್ಟದ ಹಾರೆಯುಪ್ಪಿ ಸುಭಗಂಗೀ ಸ್ವಾಮಿಗೆಂಬಂತಿರೊಪ್ಪಿದುದಿಂದ್ರಚ್ಯುತ ದುಗ್ಧಧಾರೆ ಸವನಪ್ರಾರಂಭಸಂರಂಭದೊಳ್ (ಪುಷ್ಪಪು. ೧೧-೫). [ ದುಗ್ಧ + ಧಾರೆ ]

**ದುಗ್ಧಪಥ** (ನಾ). (ಅಸಂಖ್ಯಾತ ನಕ್ಷತ್ರಗಳು ಬಹು ಒತ್ತಾಗಿರುವುದರಿಂದ) ಆಕಾಶದಲ್ಲಿ ಹಾಲು ಚೆಲ್ಲಿದಂತೆ ಸಂತ್ಯುವರಿದು ಕಾಣುವ ತೇಜಃಪುಂಜ ; ಕ್ಷೀರಪಥ : ಇವುಗಳಲ್ಲಿ ಕೆಲವು ಬಿಡುತಾರೆಗಳು, ಇನ್ನು ಕೆಲವು ಅವಳಿ (Twin) ಸೂರ್ಯರು, ಕೆಲವು ಹೊಗೆಯ ರಾಶಿಯಂತೆ ಕಾಣುವ ದುಗ್ಧಪಥ(Milky Way)ಗಳು (ಬಾಲಪ್ರ. I, ೨೪೨).

[ ದುಗ್ಧ + ಪಥ ]

**ದುಗ್ಧಪಾನ** (ನಾ). ಹಾಲನ್ನು ಕುಡಿಯುವುದು : ಕಳಿದ ತರಣಿಯ ಕಿರಣದಲಿ ನಿರ್ಮಲಿನ ಜಲದಲಿ ದುಗ್ಧಪಾನಗಳಲಿ . . . ಆಯುಷ್ಯಾಭಿವೃದ್ಧಿಯ ಬೆಳವಿಗೆಗಳಹವು (ಕುವ್ಯಾಉ. ೩-೫೫). [ ದುಗ್ಧ + ಪಾನ₂ ]

**ದುಗ್ಧಪಾಷಾಣ** (ನಾ). ಬಿಳಿಯ ಬಣ್ಣದ ಕಲ್ಲು ; ಹಾಲುಗಲ್ಲು ; ಅಮೃತಶಿಲೆ : "ಗೋಮೇಧಸನ್ನಿಭಃ – ದುಗ್ಧಪಾಷಾಣ" (ಓಷಧಿ. ೫೦) ; "ವಜ್ರಾಭಃ–ದುಗ್ಧಪಾಷಾಣ" (ಓಷಧಿ. ೦೪೬). [ ಸಂ. ]

**ದುಗ್ಧಫೇನ** (ನಾ). ೧. ಹಾಲಿನ ನೊರೆ. ೨. ಹಾಲಿನ ಕೆನೆ. ೩. ಒಂದು ಬಗೆಯ ಸಸ್ಯ : "ಗೋಜಾಪರ್ಣೀ – ದುಗ್ಧಫೇನ" (ಓಷಧಿ. ೫೦).

[ ಸಂ. ]

**ದುಗ್ಧಫೇನಿ** (ನಾ). = ದುಗ್ಧಫೇನ ೩ : "ಲೂತಾರೀ–ದುಗ್ಧಫೇನಿ" (ಓಷಧಿ. ೧೯೩) ; "ವ್ರಣಕೇತುಃ–ದುಗ್ಧಫೇನಿ" (ಓಷಧಿ. ೨೪೯).

[ ಸಂ. ದುಗ್ಧಫೇನೀ ]

**ದುಗ್ಧಲವ** (ನಾ). ಹಾಲಿನ ಹನಿ, – ತೊಟ್ಟು : ಉರದೊಳ್ ಹಾರಂಗಳ ನೊಳ್ಗುರುಳ್ಗಳೊಳ್ ಚಿನ್ನಪೂಗಳಂ ಪೋಲ್ತು ಮನೋಹರಮಾದುದಮರಕಾಂತೆಯರುರದೊಳ್ ಕುರುಳೊಳ್ ತಗುಳ್ದ ದುಗ್ಧಲವಂಗಳ್ (ಆದಿಪು. ೭-೯೨). [ ದುಗ್ಧ + ಲವ ]

**ದುಗ್ಧವಾರಿಧಿ** (ನಾ). ಹಾಲಿನ ಕಡಲು ; ಕ್ಷೀರಸಮುದ್ರ : ಜಳಶಯನ ನವತರಿಸುವುದಂ ತಿಳಿದಲ್ಲಿಂ ಮುನ್ನ ದುಗ್ಧವಾರಿಧಿತಳ್ಪಚ್ಛಳದಿಂದವತರಿಸಿತ್ತು ನಿಳಯದೊಳಿನೆ ಧವಳತಲ್ಪಮೆಸೆದುದನಲ್ಪಂ (ಜಗವಿ. ೨-೭೪).

[ ದುಗ್ಧ + ವಾರಿಧಿ ]

**ದುಗ್ಧವಾರ್ಧಿ** (ನಾ). = ದುಗ್ಧವಾರಿಧಿ : ಅದಂ ಸುತ್ತಿ ದುಗ್ಧವಾರ್ಧಿಗೆಣೆಯಾದಗಟ್ಟ್ ಸೊಗಯಿಸಿರ್ಕುಮಚ್ಚಾಂಬುವಿಂ (ಶಾಂತಿಪು. ೯-೧೪೫) ; ಸುತ್ತಿ ತಳ್ತ ಸುದತೀಜನೇಕ್ಷಣೋದಾತ್ತಕಾಂತಿ ನವದುಗ್ಧವಾರ್ಧಿಯಂತೆತ್ತಮುರ್ವೆ . . . ಬರ್ಪಳೊಪ್ಪಿದಳ್ (ರಾಜಶೇ. ೮-೫೭). [ ದುಗ್ಧ + ವಾರ್ಧಿ ]

**ದುಗ್ಧಸಾಗರ** (ನಾ). = ದುಗ್ಧವಾರಿಧಿ : ಪರಮ ಜಿನಾಭಿಷೇಕವಿಧಿ ಶೀರದು ಕೂಪಜಲಂಗಳಿಂ . . . ಸರಿಜ್ಜಲದಿನಿಲ್ಲಿಗೆವೇಟ್ಟುದಗಾಧ ದುಗ್ಧಸಾಗರ ಜಲಮೊಂದು ನಾಕಪತಿ ಪೇಟ್ (ಅಜಿಪು. ೮-೪೫) ; ಹರಿಯ ಕಾರುಣ್ಯ ಸಂಜೀವನಂ ಪಾಂಡವರ್ಗಿರಲದೇಗೆಯ್ದುದಾಪಿತ್ತ. ಮಣಿ ದುಗ್ಧಸಾಗರಕಜ ಕ್ಷೀರವಂ ಬೆರಸಿದುಪಕಾರವಮಹುದು (ಜೈಮಿಭಾ. ೨೪-೩೮).

[ ದುಗ್ಧ + ಸಾಗರ₁ ]

**ದುಗ್ಧಸಿಂಧು** (ನಾ).=ದುಗ್ಧವಾರಿಧಿ : ನಿನ್ನಣುಗಗಂದನಂ ಕೈಬಿಡದಿರಯ್ಯೋ ಕೃಪಾದುಗ್ಧಸಿಂಧುವೇಯೆಂದೊಜಿಲುತೆ (ಪದ್ಮರಾ. ೭-೩೨) ; ಬರಿ ಮುಗ್ಧ ಹಾಸ, ಕಣ್ದೆರೆಯೆ ದುಗ್ಧಸಿಂಧು ! ಸಂಜೆಗಿರಣ ನೆಯ್ದಿರುವ ಕಾವಿ ಆ ಮೋಘಲಿಂಗಕೆಂದು (ನೆಲಮು. ೩೪-೧೯). [ ದುಗ್ಧ + ಸಿಂಧು ]

**ದುಗ್ಧಾಂಬುಧಿ** (ನಾ). = ದುಗ್ಧವಾರಿಧಿ: ಆತನ ತಮ್ಮಂ ಸಂದ ವಿಭು ಪುನ್ನಮಯ್ಯನಿದಂ ದುಗ್ಧಾಂಬುಧಿಯನೆಯ್ದೆ ಪರಿಯಿಸಿ ನೆಗಟ್ದಂ (ಶಾಂತಿಪು. ೧೫-೬೨) ; ತೀರ್ದುದು ದುಗ್ಧಾಂಬುಧಿ ಮೇರು ಪೀಠಮೆನೆ ಮಿಂದುಂ ಚೆಣ್ಣಂ (ಅನಂಪು. ೫-೯೯) ; ದುಗ್ಧಾಂಬುಧಿಯೊಳ್ ಜನಿಸುವ ಮುಗ್ಧೇಂದು ಕಳಾವಿಳಾಸದಂತೆ . . . ಮೆಜೆದಳಿಸೆವ ನಿದ್ರಾಭರದಿಂ (ದಶಕು. ೮-೨೯೦); ಆನಂದದುಗ್ಧಾಂಬುಧಿಯೊಳೆ ಮುಳುಗುತ್ತೇಳ್ದವೊಲ್ ಕಂಪವಮಾ ಜುಮ್ಮನೆ ರೋಮಾಂಚಂಗಳುಂ ಸಂಜನಿಸೆ (ರಾಜಶೇ. ೩-೧೧೩).

[ ದುಗ್ಧ + ಅಂಬುಧಿ ]

**ದುಗ್ಧಾಂಬುರಾಶಿ** (ನಾ).=ದುಗ್ಧವಾರಿಧಿ : ಸುರಜಲದಂಗಳ್ ದುಗ್ಧಾಂಬುರಾಶಿಯೊಳ್ ಪೀರ್ದು ಬಂದ ನೀರ್ಗಳನೆತ್ತಂ ಸುರಿದುವು ಜನಾರ್ಭಕಾಚಲಶಿರದೊಳ್ ಜಲದಂಗಳಂತು ನಗದೊಳ್ ಸುರಿಗುಂ (ಆದಿಪು. ೭-೮೯).

[ ದುಗ್ಧ + ಅಂಬುರಾಶಿ ]

**ದುಗ್ಧಾಂಭೋರಾಶಿ** (ನಾ). = ದುಗ್ಧವಾರಿಧಿ : ಭಾಸುರಕೈಲಾಸನಗಕ್ಕೆ ಸಂದ ದುಗ್ಧಾಂಭೋರಾಶಿ ಶುಂಭತ್ಸುಧಾಕರಬಿಂಬಕ್ಕೆಣೆಯಾದ ಸುಂದರತೆಯಿಂದಂ (ಸುಕುಮಾ. ೧೨-೬೮). [ ದುಗ್ಧ + ಅಂಭೋರಾಶಿ ]

**ದುಗ್ಧಾಬ್ಧಿ** (ನಾ). = ದುಗ್ಧವಾರಿಧಿ : ಪಸರಿಸಿ ದುಗ್ಧಾಬ್ಧಿಜಳ ಪ್ರಸರ ಮನೊಡವೇಟ್ ಬಂದು ಕಜೆವುವು ಮೋಘಪ್ರಸರಂಗಳಲ್ಲಿಯೆನೆ ರಸ ಮೊಸರ್ವುವು ಪ್ರೇಂದ್ರೇಕ್ಷುವಾಟಕೋಟಿಗಳದಟಿಗಳ್ (ಆದಿಪು. ೧-೫೯) ; ದುಗ್ಧಾಬ್ಧಿಯೊಳ್ ನೂತ್ನ ರತ್ನಾಂಕುರವವಾ ಗೋತ್ರಾದ್ರಿಯೊಳ್ ಸಿಂಗದ ಸಿಸು ಬಳೆವೊಂದಂದದಿಂ . . . ಬಳೆದಂ ಭಾರತೀಭಾಳನೇತ್ರಂ (ಚಂದ್ರಪು. ೩-೧೧೩) ; ಜಲಧಿಯೊಳು ದುಗ್ಧಾಬ್ಧಿ ತೀರ್ಥಾವಳಿಗಳೊಳು ಸುರನದಿ (ತೊ ರಾ ಉ. ४-೧೩೦) ; ಭುವನ ಸಂಭ್ರಮದೊಡನೆ ತಾಯಿರ್ದೆಗೆ ಪಾಲುರ್ಕಿಬರಲೊಂದಿರುಳ್, ಕನಸಿನೊಳ್, ದುಗ್ಧಾಬ್ಧಿಯಂ ಕಂಡು ನಲಿದಳ್ ದೇವಿ ಕೌಸಲ್ಯೆ (ಶ್ರೀರಾಮಾ. ೧೫-४೧೭). [ ದುಗ್ಧ + ಅಬ್ಧಿ ]

**ದುಗ್ಧಾಭಿಷೇಕ** (ನಾ). ಹಾಲಿನ ಅಭಿಷೇಕ ; ಹಾಲನ್ನು ತಲೆಯ ಮೇಲೆ ಎರೆಯುವುದು : ಬರಿಸಿದಂ ನೆನೆದು ಸುರಧೇನುವಂ ವಾಲ್ಮೀಕಿ . . . ದುಗ್ಧಾಭಿಷೇಕವಂ ಮಾಡಿಸಿದನಾ ರಾಘವೇಶ್ವರಂಗೆ (ಜೈಮಿಭಾ. ೨೦-೫೨).

[ ದುಗ್ಧ + ಅಭಿಷೇಕ ]

**ದುಗ್ಧಾರ್ಣವ** (ನಾ).=ದುಗ್ಧವಾರಿಧಿ: ದುಗ್ಧಾರ್ಣವ ಫೇನಪಾಂಡುರತೆಯಂ ಕಯ್ಕೊಂಡು ಬೆಳ್ದಿಂಗಳಂತಿರೆ ತೋಜೆತ್ತೆಸೆವುತ್ತರೀಯವಸನಂ ರಾಜೇಂದ್ರ ಚಂದ್ರಾಂಕನಾ (ಕಾದಂಪೂ. ೨೮) ; ಮಿಸುಗುವ ತಾರಕಾದ್ರಿರುಚಿಯಿಂ ದುಗ್ಧಾರ್ಣವ ಫೇನರೋಚಿಯಿಂ ... ಮಿಗಿಲಾಗಿ ಪರ್ವಿ ರಂಜಿಸುವುದು ಕೀರ್ತಿ ಧಾತ್ರಿಯೊಳಗುಜ್ವಳದಿಂ ದಯಸಿಂಹಭೂವನಾ (ಎಕ. V. ಮಂಜರಾ. ೧೮-೩೦ ; 1095) ; ಲವಣಾರ್ಣವಮಂ ದುಗ್ಧಾರ್ಣವದೊಳ್ದೆರೆ ಮಾಲೆ ಮುಸುಕಿದಂತಿರೆ (ಜಗವಿ. ४-೬೦). [ ದುಗ್ಧ + ಅರ್ಣವ ]

**ದುಗ್ಧಿ** (ನಾ). ಒಂದು ಬಗೆಯ ಸಸ್ಯ; ಹಾಲುತೊಟ್ಟಿನ ಗಿಡ: "ಜೀವ್ಯಾ-ಹಾಲೆ, ಗೋರಕ್ಷ, ದುಗ್ಧಿ, ಅಣಲೆ" (ಒಷಧಿ. ೬೨). [ ಸಂ. ದುಗ್ಧೀ ]

**ದುಗ್ಧಿಕ** (ನಾ). ಒಂದು ಬಗೆಯ ಸಸ್ಯ ; ಹಾಲಂತೊಟ್ಟಿನ ಗಿಡ : ಕಡಹಾಲೆ ಬಳ್ಳಿ, ದುಗ್ಧಿಕ (ಮೃಶಿಗಿ. ೫೨-೧೦೫೦); ಮಾಧೀಫಲ, ದುಗ್ಧಿಕ, ಮೇಕೆಕೊಂಬು ಬಳ್ಳಿ (ಮೃಶಿಗಿ. ೫೯-೧೧೬೮). [ ಸಂ. ದುಗ್ಧಿಕಾ ]

**ದುಗ್ಧಿಕೆ** (ನಾ). ೧. ಒಂದು ಬಗೆಯ ಸಸ್ಯ ; ಹಾಲುತೊಟ್ಟಿನ ಗಿಡ : "ಕ್ಷೀರಿಕಾ, ದುಗ್ಧಿಕಾ ಈ ೨ ಅಕ್ಕಿ ಹೊಡೆ" (ನಾಚಿರಾ. ೦೦೯-೭). ೨. ಒಂದು ಬಗೆಯ ಬಳ್ಳಿ; ಸೋರೆಬಳ್ಳಿ : "ತುಂಬೀ, ಅಲಾಬೂ, ದುಗ್ಧಿಕಾ-ಈ ೩ ಸೋರೆ" (ಹಲಾಯು. ೩೫-೫೭); "ಆ ತುಂಬಿ ದುಗ್ಧಿಕೆಯಲಾಬುವೆನೆ ಸೋರೆಯೆನಿಕುಂ" (ಮಂಗರಾ. ४४-४೬) ೩. ಸಾವೆ, ರಾಗಿ, ಜೋಳ ಮೊದಲಾದ ಧಾನ್ಯಗಳ ಇನ್ನೂ ಬಲಿಯದ ಕಾಳು; ಹಾಲುಗಾಳು ; ಬೆಳಸೆ : "ಬೆಳುವಸೆ ದುಗ್ಧಿಕಾಖ್ಯಮಕ್ಕುಂ" (ಮಂಗರಾ. ೧೦೦-೬).

[ ಸಂ. ದುಗ್ಧಿಕಾ ]

**ದುಗ್ಧೆ**, ದುಗದೆ (ನಾ). ೧. ಅನುಮಾನ ; ಶಂಕೆ ; ಸಂಶಯ : ಮನದೆಕ್ಕರದಿ ಮಾರ್ಕಂಡೇಯ ದಶರಥನ ತನಯರ ಮಹಾನಾಟಕವ ವಿವರಿಸಿದನೆಮತನುಜ ಭೀಮಾರ್ಜುನ ಯಮಳರ ದ್ರುಪದಾತ್ಮಜೆಯ ದುಗ್ಧೆಯಡಗುವ ತೆರದೊಳು (ಲಕ್ಷ್ಮಭಾ. ೩-೩೦-೫). ೨. ಹಿಂಜರಿಯುವಿಕೆ ; ಹಿಂದೆಗೆಯುವುದು. ೩.ದ್ವೇಷ ; ಹಗೆತನ. **ದುಗದೆ**: ೪. ಅಸೂಯೆ. ಹೊಟ್ಟೆಕಿಚ್ಚು : (೩). 'ದುಬ್ಧಿ' ಪರಾ.

[ ←ಮರಾ. ದುಗ್ಧಾ ]

**ದುಗ್ಧೋದಧಿ** (ನಾ).=ದುಗ್ಧವಾರಿಧಿ: ಅನವದ್ಯ ಜಿನಾಗಮವಿದ್ಯನಿದ್ಧ ದುಗ್ಧೋದಧಿ ಧೌತಕೀರ್ತಿವಿಶದಂ ಭರತಾವನಿರಾಜಪೂಜಿತಂ (ಶಾಂತಿಪು. ೧-೨೯) : ಆ ದಿಗಂತಮೆಲ್ಲಮಂ ದುಗ್ಧೋದಧಿಧವಳದೀರ್ಘಂಗಳಪ್ಪ ಪಾಂಗಾವಲೋಕನದಿಂ ತೇಂಕಾಡಿಸುತ್ತುಂ (ಕಾದಂಬ. ೨೦೦) ; ಮೂಲೋಕ ದರ್ಪಣವಾಗಿ ದುಗ್ಧೋದಧಿಯೊಳೆಸೆವುದು ಶ್ರೀಗಧೀಶನ ನಗರ (ಕುಮ್ವಾ ಆ. ೭-೫೨). [ ದುಗ್ಧ + ಉದಧಿ ]

**ದುಗ್ಧೋದಧಿತಲ್ಪ** (ನಾ). ಹಾಲಿನ ಸಮುದ್ರವನ್ನೇ ಹಾಸಿಗೆಯಾಗಿ ಹೊಂದಿರುವವನು ; ವಿಷ್ಣು : ಲಕ್ಷ್ಮಿ ನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕ . . . ಎಂದೆನಿಪ್ಪ ದುಗ್ಧೋದಧಿತಲ್ಪನಂ ನರನ ಭಿಮ್ಮತಿಗೆಯ್ವುದು ಧಾರ್ಷ್ಟ್ಯಮಲ್ಲವೇ (ಜಗವಿ. ೧-೨೦).

[ ದುಗ್ಧೋದಧಿ + ತಲ್ಪ ]

**ದುಗ್ಮೊನೆಲ್ಮಲ್ಲಿ** (ನಾ). ಒಂದು ಸ್ಥಳದ ಹೆಸರು (?) : ಇಗ್ಗಇಲ್ಲೂರು ದುಗ್ಮೊನೆಲ್ಮಗಲ್ಲಿಗಟಿಜ್ಜವಾಗಿಲು . ಸಜಿಮು ಎಟ್ಟುಣ್ಣೆ ಪರವೂರು ಕೂಡಲೆ ಇನಿತುಮಂ ಪೊಲಮೇರೆ ಸಹಿತಮಿತ್ತನ್ (ಎಕ. IX. ಬೆಂಗಳೂ. ೮೩-೯ ; ಸು. 890). [ ? ]

**ದುಚ್ಚೌಕ** (ನಾ). ನೆತ್ರದಾಟದಲ್ಲಿ ನಾಲ್ಕರ ಎರಡು ಗರ: ಪದಮಂ ಮೋಕ್ಷ ಚತುಷ್ಟಯಮಂ ಬಯಸದೆ ದುಚ್ಚೌಕವನಾಡುವ ತನಿಸೊಕದೊದವಂ ಮುದಮನೆರಳ್ಕಯ್ಯಂದಿತ್ತಿದ್ದುಗವಾಡುವವನು (ಉದ್ಭಟದೇ. ೨೫-೧೩).

[ ದು + ಚೌಕ₂ ]

**ದುಜಾವ**, ದೂಜಾವ (ನಾ). ಎರಡು ಜಾವ,-ಯಾಮ : "ದುಜಾವ (ದೂಜಾವ)-ದ್ವಿಯಾಮ" (ತದ್ಭಕೋ. ೨೦) ; ದೂಜಾವಂ, ದುಜಾವಂ, ದ್ವಿಯಾಮಂ (ಶಬ್ದಾನು. ೩೭೭ ಪ್ರಯೋ). **ದೂಜಾವ**: ಮೇಲಿನ 'ಶಬ್ದಾನು' ಪ್ರಯೋಗವನ್ನು ನೋಡಿ. [ ದು + ಜಾವ₁ ]

**ದುಟದುಟನೆ** (ಅ). ದಂಟದುಂಟ ಎಂಬ ಶಬ್ದದೊಡನೆ: ಖಾತಿಯಿಂ ದುಟದುಟನೆ ಉರುಳೆ ತಲೆಯುಂ ಹೊಡೆದ ಕೊಡಲಿಯಿಂ (ಇಂದಿರ. ದೇ. ೧೦೫-೦೭); ತಲೆ ದುಟದುಟನೆ ಉ[ಪಾಠಾಂ. ತೊಟ್ಟನುಡಿದು]ರುಳೆ ಪೊಯ್ದನಾ ತಂದೆಯುಂ (ಚಂದ್ರೇರ. ದೇ. ೨೫೦-೧೯).

[ ದುಟದುಟ್ಟ$_0$ + – ಅನೆ$_1$]

**ದುಟ್ಟ** (ಗು). ೧. ಕೆಟ್ಟ; ದುಷ್ಟ: ಸಾಮಂತರ ಗಣ್ಡಂ . . . ಜಗದಾಳು ದುಟ್ಟಸಾವಂತರ ನಿಟಲ್ದ ಮುಟಿಪಂ (ಎಕ್. XI, ದಾವಣ. ೧೧೫-೭; 1148 ?) : ದುಟ್ಟ ದೈತ್ಯರು ಬಂದು ಕವಿದರು ರಣರಂಗದಿಟ್ಟ ಕುವರಾರನ ಮೇಲೆ (ಮೋಹತ. ೩೪-೨೨); ದುಟ್ಟ ರಕ್ಕಸಂ ರಾವಣಂ . . . ಪರ್ಣ ಶಾಲೆಯಿಂ ಸೀತೆಯಂ ಕಳ್ದು ಲಂಕೆಯತ್ತಲ್ ಕೊಂಡುಯ್ದಂ (ಅದ್ಭುತ. ೩೪-೧೯). (ನಾ). ೨. ನೀಚ; ಕೆಟ್ಟವನು: "ದುಟ್ಟನೆಂದು ದುಷ್ಟಂ" (ಶಬಸಾ. ೨೭-೫೬೩); "ದುಟ್ಟಂ ತಾಂ ದುಷ್ಟನಕ್ಕು" (ಕವಿಕಂ. ೨೨೪); ದುಟ್ಟನೀ ತೆಱದಿಂದೆ ಎಕ್ಕಲನಾಗಿರಲು ಕಂಡು (ಸಾವಂಚ. ೮-೨೦); ಆ ಷಕಾರಕ್ಕೆ ಟತ್ವಂ—ಅಂಗುಷ್ಠ–ಉಂಗುಟ್ಟ, ಉಂಗುಟ . . . ದುಷ್ಟ–ದುಟ್ಟ (ಶಮದ. ೨೪೩ ಪ್ರಯೋ); ಕಟ್ಟುಗ್ರವೆಂಬುದತಿತಪವ ತೆರಳುವ ರೊಳಂ ಗಟ್ಟಸೆಂಬುದು ರಜಕರೊಳು ಧೌತವಸನವಂ ಕಟ್ಟೆಂಬುದುಂ ಧಾನ್ಯರಸದೊಳ್ಳಲ್ಲದೆ ಬೇರೆ ದುಟ್ಟರಿಲ್ಲಾ ನಾಡೊಳು (ಪ್ರಭುಪು. ೩-೧೧).

**ದುಟ್ಟರ ಗಂಡ** = ದುಷ್ಟರನ್ನು ಸದೆಬಡಿಯುವವನು; ಒಂದು ಬಿರುದು: ದುಟ್ಟರ ಗಣ್ಡಂ ನನ್ನಿಯ ಗಂಗಂ ಜಯದುತ್ತರಂಗಂ . . . ಗಂಗಪೆರ್ಮ್ಮಾಡಿದೇವರ್ಗ್ಗಜ್ಜವಾಡಿ ತೊಂಭತ್ತಱುಸಾಸಿರಮಂ ಬಾಳ್ಯೇಳಿಸಿ (ಎಕ್. VII, ಶಿವಮೊ. ೧೧-೨೦; 1085 ?); ದುಟ್ಟರ ಗಣ್ಡ ಭುಜಬಳ ಗಂಗಪೆರ್ಮ್ಮಾಡಿ ದೇವರು . . . ರಾಜ್ಯಂಗೆಯ್ಯುತ್ತುಮಿರೆ (ಎಕ್. VII, ಶಿವಮೊ. ೫೦-೧೧; 1108 ?); ಶೌಚ ಗಾಂಗೇಯ ಮಂಡಲಿಂಗಾವ ದುಟ್ಟರ ಗಂಡನಾಳಿಂಮುನ್ನಿಱಿವನಯ್ಯನ ಸಿಂಗನಾವಾಡಿ ಸಮಸ್ತ ಪ್ರಸಸ್ತಿ ಸಹಿತಂ (ಸೌಇಇ. IX-I, ೨೬೦-೯; 1134). [ <ಸಂ. ದುಷ್ಟ ]

**ದುಟ್ಟಗುದುರೆ** (ನಾ). ಅಗಡು ಕುದುರೆ; ಪಳಗದ ಕುದುರೆ; ಕೆಟ್ಟ ಕುದುರೆ: ಅದು ಮಗುವಿನ ಮರಣಕ್ಕೆ ಕಾರಣವಾಗುವಂತಹ ದುಟ್ಟ ಗುದುರೆಯಲ್ಲ (ಸವತಿ. ೨೪೯). [ ದುಟ್ಟ + ಕುದುರೆ ]

**ದುಟ್ಟಗೊರವ** (ನಾ). ದುಷ್ಟನಾದ ಯತಿ: ಈಗಳ್ ಸಿವನೆಂಬ ದುಟ್ಟ ಗೊರವಂ . . . ನಿಮ್ಮಡಿಗಳುಮಂ ಮಱೆದು ಲೆಕ್ಕಿಸದೆ ಮೇಲೆ ಬಿಟ್ಟ ಪಾವುಂ ನೇವಾಳವಾಗೆ ವ್ಯೆಯ್ಯಱಿಯದಿರ್ಪಂ (ಕಬ್ಬಿಗಕಾ. ೦೧೫).

[ ದುಟ್ಟ + ಗೊರವ ]

**ದುಟ್ಟತನ** (ನಾ). ಕೆಟ್ಟತನ; ನೀಚತನ: ಮನಸಿನ ದುಟ್ಟ[ಪಾಠಾಂ. ದುಷ್ಟ] ತನವನು ಬಿಡಿಸುತ . . . ಬ್ರಹ್ಮದ ಬಟ್ಟೆಯನು ಹಿಡಿದವರೆ ನೆಱೆ ತತ್ವಾಧಿ ಕಾರಿಗಳು (ಅಮೃತ. ೧-೨೨): ಅಂತಹ ದುಟ್ಟತನ ಅವರಲ್ಲಿ ಕಾಣದು ಒಡೆಯ (ಸವತಿ. ೧೬೩). [ ದುಟ್ಟ + – ತನ ]

**ದುಟ್ಟತಳಕ್ಕ** (?) (ನಾ). (?): ಕಟ್ಟಾಯದ ಕಣ . . . ನನ್ನಿಯಂ ತವರೂರ್ ನೆಟ್ಟನೆನಿಸಿದ ಜಸಂ ನೇರ್ಪಟ್ಟರೆ ನಿಟ್ಟಾಯುಮಕ್ಕೆ ದುಟ್ಟತಳಕ್ಕಂ [ಪಾಠಾಂ. ತಳಕ್ಕುಂ, ತುಳುಂಕ್ಕುಂ] (ಕಾವ್ಯಾವ. ೨೨೯). [ ? ]

**ದುಟ್ಟಬಿದಿ** (ನಾ). ಕೆಟ್ಟ ದೈವ; ದುಷ್ಟ ವಿಧಿ: ಎಲೆ ದುಟ್ಟಬಿದಿ, ನಿಸದವಿಂ ಜಲಜೋದರನಾಣೆ ಪೆಣ್ಗಳಂ ಸೃಷ್ಟಿಸದಿರ್ (ಸುಗುಗಂ. ೭೮-೧೭). 'ದುಟ್ಟವಿಧಿ' ಪರಾ. [ ದುಟ್ಟ + ಬಿದಿ ]

**ದುಟ್ಟಮದ್ದು** (ನಾ). (ಇತರರಿಗೆ ಕೆಡುಕನ್ನುಂಟುಮಾಡಲು) ಆಹಾರದಲ್ಲಿ ಸೇರಿಸಿ ಹಾಕುವ ವಿಷ; ಇಕ್ಕುಮದ್ದು; ಕೈಮ್ಮಸಕ: ನಾವು ಹೇಳುತ್ತಿದ್ದೇವೆ, ಕುವರನನ್ನು ಯಾರೋ ದುಟ್ಟಮದ್ದಿಗೆ ಈಡುಮಾಡಿರುವ ರೆಂದು (ಸವತಿ. ೨೩೭). [ ದುಟ್ಟ + ಮದ್ದು$_1$ (<ಮರ್ದು) ]

**ದುಟ್ಟಮಾಯೆ** (ನಾ). (ಈ ಲೋಕ ಸತ್ಯವೆಂಬ) ಕೆಡುಕನ್ನುಂಟು ಮಾಡುವ ಭ್ರಾಂತಿ,–ಮಾಯೆ,–ಮಿಥ್ಯೆ: ದುಟ್ಟಮಾಯೆಯ ಸಿಟ್ಟು ಗುಟ್ಟಿನವೊಟ್ಟಿಲಂ ನೆಱೆ ಸುಟ್ಟು . . . ವಿರಾಜಿಪ ದಿಟ್ಟ ಬಸವಯ್ಯಾ (ಪ್ರಭುಪು. ೧-೨೦). [ ದುಟ್ಟ + ಮಾಯೆ ]

**ದುಟ್ಟವಿಧಿ** (ನಾ). =ದುಟ್ಟಬಿದಿ: ದುಟ್ಟವಿಧಿ, ನಮ್ಮ ಮುಂದ ನಿನಗೆ ಬೇಡ ವೇಕೆ! ಹೆರರ ನಲಿವಿಗೆ ನಲಿವ ಸಿರಿ ಬಾರದೇಕೆ? (ನಡೆದಾ. I, ೪೬೦).

[ ದುಟ್ಟ + ವಿಧಿ ]

**ದುಟ್ಟೆ** (ನಾ). ನೀಚ ಸ್ತ್ರೀ; ಕೆಟ್ಟವಳು; ದುಷ್ಟೆ: ದುಟ್ಟೆಯರಾದ ಪಾಣ್ಬೆಯರ ಗೊಂದಣ ಸಂದಣಿಸಿರ್ದುದು (ವೀರವಿ. ೬-೩೦).

[ <ಸಂ. ದುಷ್ಟಾ ]

**ದುಡ** (ನಾ). ಮಣ್ಣಿನ ಪಾತ್ರೆ; ಗುಡಾಣ: ನಿಮ್ಮನ್ನಿರೋ ಕಾಳುಕಡ್ಡಿ, ಹುರುಳಿ, ಹುಚ್ಚೆಳ್ಳು ಏನಾರಾ ನಿಮ್ಮ ದುಡದಲ್ಲಿರೋದ ಕೊಟ್ಟು ಕಳ್ಸಿ (ಹುಟ್ಟಿಹ. ೧೩೭) [ ←ಮರಾ. ದುಡ ]

**ದುಡಕಿ** (ನಾ). ಎತ್ತು, ಕುದುರೆ ಮೊದಲಾದವುಗಳ ವೇಗವಾದ ನಡಿಗೆ,–ಚುರುಕಾದ ಓಟ: ರೇಚಿತ – ಕುದುರೆ ದುಡಕಿಯ ನಡಿಗೆ (ಗಂಗಾಮು. ೨೭೪). [ ←ಮರಾ. ದುಡಕೀ ]

**ದುಡದುಡನೆ** 'ದುಂಡುದುಂಡನೆ' ನೋ.

**ದುಡನ** (ನಾ). ಮಾಂಸ (?): ಶ್ರೀವಾದಿಗ ಹೋಚನ ಶ್ರೀಕರನ ಕೊಡಗಿಯ ಗದ್ದೆಕೊಳಗಕ್ಕೆ ಅಳಿಹಿದವನು ಹೆಣಬಾ ಅಕ್ಕಿಯನು ನಾಯ ದುಡನವನು ತಿಂದವರು (ಮ್ಮಆರಿ. ೧೯೩೨, ೫೦-೮; 18 ನಯ ಶತ). [ ? ]

**ದುಡಿ$_1$** (ಕ್ರಿ). ೧. ಕಷ್ಟಪಟ್ಟು ಕೆಲಸಮಾಡು; ಶ್ರಮಿಸು; ಹೆಣಗು: ಹಾಸಿ ದುಡಿದರೆ ತನಗುಂಟು ತನ್ನ ಪ್ರಮಥರಿಗುಂಟು (ಬಸವ. ೩೩೪); ಅತಿಲಜ್ಜೆ ಗೆಟ್ಟನ್ಯರಾಳಾಗಿ ದುಡಿದು ದಾವತಿಗೊಂಡು ಧನವನಾರ್ಜಿಸಿ ಹರಿಶ್ಚಂದ್ರ ಭೂಪತಿ . . . ಸುತನ ಕರೆಯೆಂದಡೇನೆಂಬೆಂ (ಹಕಾ. ೧೩–೨೧); ಬಿಡುವವಮ್ ಈ ಬಾಳ್ ಅದೇಕೆಂಬ ಚರ್ಚೆಯ; ನಾವು ದುಡಿವಮ್ ಅದು ಪೆಂಪುಗೊಳೆ (ಮಂಕುಕ. ೮೧೯); ದುಡಿಯೋ ಎತ್ತು ಮಡಿದು ಬಿತ್ತು (ಗಾದೆ). ೨. (ದುಡಿತದಿಂದ) ಸಂಪಾದಿಸು; ಗಳಿಸು: ವ್ಯಾಪಾರಿಗೆ ಹಣವೂ ವಿಶೇಷವಾಗಿ ದುಡಿದು ಕೊಟು ಯಿವರಲ್ಲಿ ಪ್ರಮುಖರಾಗಿ (ಹೈದರ. ೧೦೯); ಅಪ್ಪನೆನಗೆ ಕೊಟ್ಟುದಲ್ಲ, ಗಂಡನಿದುಂ ಕೊಂಡನಲ್ಲ, ಆಕಟ ನಾನೆ ದುಡಿದೆನಲ್ಲ ಮೆಯ್ಯ ಮುರಿತದಿಂ? (ಗೀಪಿಂ. ೭೬-೪೦); ಇಷ್ಟು ದಿನಗಳೂ ದುಡಿದು ನಿನ್ನನ್ನು ಸಾಕಿ ಸಲಹಲು ನಾನು ಬೇಕಾಗಿದ್ದಿತು. ಈಗ ಸುಖ ಅನುಭವಿಸಲು ಅವಳು (ಸುಂದರ. ೮೫).

**ದುಡಿದುಡಿ** (ದ್ವಿರುಕ್ತಿ): ನುಡಿದು ಬೇಸತ್ತಾಗ ದುಡಿದುಡಿದು ಸತ್ತಾಗ ಜನಕ ಹಿಗ್ಗಿನ ಹಾಡು ನೀಡುವಂವ (ಗಱಿಗೀ. ೪೭-೧). [ ದೇ. ■ ತುಳು. ದುಡಿ ]

**ದುಡಿ$_2$** 'ತುಡಿ' ನೋ.

**ದುಡಿ$_3$** (ನಾ). ಒಂದು ಬಗೆಯ ಚರ್ಮವಾದ್ಯ: ಕರಿಯನೂ ಒಳಗಿದ್ದ ತನ್ನ 'ದುಡಿ'ಯನ್ನು ಹೊರಗೆ ತಂದಿದ್ದ (ರಕ್ತರೂ. ೩೪); ಹಿಡಿದ ದುಡಿ, ಎತ್ತಿದ ಕೈ, ತುಂಬಿದ ಆವೇಶ! ಎಲ್ಲವೂ ಇದ್ದಕ್ಕಿದ್ದಂತೆಯೇ ಇವೆ. ಆದರೆ 'ಚೋಮ'ನಿಲ್ಲ! (ಚೋಮದು. ೧೧೧); ದಕ್ಷಿಣಕನ್ನಡಜಿಲ್ಲೆಯ ಕೊರಗರು ದುಡಿಯ ನಾದಕ್ಕೆ ಕುಣಿಯುವ ನೃತ್ಯಗಳು ವಿಶಿಷ್ಟವಾಗಿವೆ (ಆಭಾಸ್ಯ. ೧೧೧); ದುಡಿ ಎಂಬ ಚರ್ಮವಾದ್ಯವನ್ನು ಬಡಿಯುತ್ತ, ಹಾಡುತ್ತ, ಕುಣಿಯುವುದು ಕೊಡಗರ ವಾಡಿಕೆ (ಜಾನಗೀ. ೪೯).

[ ದೇ. ■ ತಮಿ. ತುಟ; ಮಲ. ತುಡಿ; ತುಳು. ದುಡಿ ]

**ದುಡಿಕೆ** (ನಾ). ೧. ದುಡಿಯುವಿಕೆ; ಪರಿಶ್ರಮ. ೨. ಸಂಪಾದನೆ; ಗಳಿಕೆ: "ದುಡಿಕೆ = ಕೂಲಿ; ಕೆಲಸ; ಪಗಾರ" (ಜಾನಕೋ. ೬).

[ ದುಡಿ$_1$ + – ಕೆ ]

**ದುಡಿಗೆ** (ನಾ). ಒಂದು ಬಗೆಯ ಸಸ್ಯ : ದುಡಿಗೆಯ ಕಾಯಿ ಎರದ ಹಣ್ಣು ಕುರುಟಿಗೆ ಹಣ್ಣು . . . ಎಲ್ಲಾ ಕಂದಮೂಲ ಕದಿರ ಶಾಕ ಪುಷ್ಪ ಫಲಾದಿಗಳಂ (ಶಾಸ್ತ್ರಟೀ. ೫೫-೪). [ ? ]

**ದುಡಿತ$_1$** (ನಾ). ೧. ದುಡಿಯುವಿಕೆ ; ಕೆಲಸ ; ಕಾರ್ಯ : ಈ ದುಡಿತದ ಪರಿಣಾಮದಿಂದಲೋ ಎಂಬಂತೆ ಅವರ ಮೂರನೆಯ ಹೆರಿಗೆ ತೊಂದರೆಯಿಂದಲೇ ಆಯಿತು (ಹಬ್ಬಿಬ. ೨೯) ; ಆ ಸಂಶೋಧನಾ ಮಂದಿರವು . . . ಭಾರತೀಯ ವಿಜ್ಞಾನ ಸಂಶೋಧನೆಗಳ ದುಡಿತದ ಹೆಗ್ಗುರುತಾಗಿಯೂ ಇತ್ತು (ಸಸ್ಯಕ. ೧೩೦) ; ದುಡಿತದಲ್ಲಿ ವಾಸುದೇವ ಭಟ್ಟರಿಗೆ ಸರಿಸಾಟಿಯಾಗಿದ್ದಳು (ಭ್ರಾಂತಿಸು. ೧) ; ದುಡಿತವು ದುಡ್ಡಿನ ತಾಯಿ (ಗಾದೆ). ೨. ಸಂಪಾದನೆ ; ಗಳಿಕೆ ; ಉತ್ಪನ್ನ : ದುಡಿತ ಹೋಯಿತು ಮಗೆಯ ಮಳೆಪೋಲ್ (ಕಎಪು. ೧೯-೨೨) ; ಹಿರಿಯರಿಂದ ಬಂದ ಸಂಪತ್ತಿಗೆ . . . ತಂತಮ್ಮ ದುಡಿತವನ್ನೂ ಕೂಡಿಸಿ ಅದನ್ನು ಓರಂತೆ ಹಿಗ್ಗಿಸುತ ಬರಬೇಕು (ಮೂರುಉ. ೭ ಎರಡು ಮಾತು) ; ಯಾರ ಹಂಗೂ ಇಲ್ಲದೆ ತನ್ನ ದುಡಿತದಿಂದ ಹಾಯಾಗಿ ಬಾಳುತ್ತಿದ್ದಳು (ಮುಕ್ತಿಮು. ೬). [ ದುಡಿ$_1$ + – ತ$_2$ ]

**ದುಡಿತ$_2$** ‘ತಂಡಿತ’ ನೋ.

**ದುಡಿತಗಾರ** (ನಾ). ದಂಡಿಯುವವನು; ಶ್ರಮಂದ ಕೆಲಸ ಮಾಡುವವನು (ಪ್ರಾಚೀನ ಸ್ಪಾರ್ಟಾ ರಾಜ್ಯದಲ್ಲಿ ಸ್ವತಂತ್ರಪ್ರಜೆಗೂ ಗುಲಾಮನಿಗೂ ಮಧ್ಯದರ್ಜೆಯಲ್ಲಿದ್ದ) ಒಂದು ತರಗತಿಯ ಸ್ವತಂತ್ರನಲ್ಲದ ಉಳುಮೆಯ ಜೀತಗಾರ ; ಸ್ವತಂತ್ರನಲ್ಲದ ದುಡಿತಗಾರ (Helot. ಇಂಕನಿ).
[ ದುಡಿತ + – ಗಾರ (< – ಕಾಱ) ]

**ದುಡಿಮೆ** (ನಾ). ೧. ದುಡಿತ ; ಕಾಯಕ : “ತಂಕಃ–ದುಡಿಮೆ” (ಕಾಶಕ್ಕ. ೮) ; ದುಡಿಮೆಯ ಉತ್ಸಾಹ ಮತ್ತೆ ಮನಸ್ಸಿನಲ್ಲಿ ಮೂಡುವುದು (ವಾತ್ಸಲ್ಯ. ೨೮) ; ದೇವರು ಒಂದು ಹೊತ್ತಿನ ಅನ್ನಕ್ಕೆ ದುಡಿಮೆ ಕೊಟ್ಟರೂ ನನಗೆ ತೃಪ್ತಿ (ಪದ್ಮಸ. ೨೫೯) ; ವಿದ್ಯಾರ್ಥಿಗಳ ವ್ಯಕ್ತಿತ್ವವು ವೃದ್ಧಿಯಾಗುವುದಕ್ಕೆ ದುಡಿಮೆಯೇ ಅತ್ಯಾವಶ್ಯಕ (ಕ್ರಿಯಾಶಿ. ೫೮). ೨. ಗಳಿಸುವುದು ; ಸಂಪಾದಿಸುವುದು. ೩. ಗಳಿಕೆ; ಸಂಪಾದನೆ: ನಾನು ಭಿಕಾರಿ, ದುಡಿಮೆಯಿಲ್ಲದ ಭಿಕಾರಿ . . . ಗಂಗಾಧರ ಕಿರುಚುತ್ತಲೆ ಇದ್ದ (ಮುಂಗಾಮು. ೩೦)
[ ದುಡಿ$_1$ + – ಮೆ$_1$ ]

**ದುಡಿಮೆಗಾರ** (ನಾ). ದಂಡಿತಗಾರ ; ದಂಡಿಯುವವನು : ನಾನೂ ದುಡಿಮೆಗಾರನಾಗಬೇಕು (ಬೆಳುವು. ೮).
[ ದುಡಿಮೆ + – ಗಾರ (< – ಕಾಱ) ]

**ದುಡಿಮೆಟ್ಟು** (ಕ್ರಿ). ದಂಡಿಯನ್ನು ಬಾರಿಸು : ಅವನಿಗೆ ಸಾವೂ ಒಂದೇ, ಹುಟ್ಟೂ ಒಂದೇ ; ಹಗಲೂ ಒಂದೇ, ರಾತ್ರಿಯೂ ಒಂದೇ. ಕುಡಿಯುವುದು ; ದುಡಿಮೆಟ್ಟುವುದು (ಜೋಮುದು. ೬). [ ದುಡಿ$_3$ + ಮೆಟ್ಟು$_1$ ]

**ದುಡಿಸೀರೆ** (ನಾ). ಒಂದು ಬಗೆಯ ಸೀರೆ : ದಡಿಸೀರೆ ದುಡಿಸೀರೆ ಪೊಸ ಸೀರೆಗಳನುಟ್ಟು (ಸಿದ್ಧಕಾ. ೮-೧೨). [ ದುಡಿ ? + ಸೀರೆ$_2$ ]

**ದುಡಿಸು** (ಕ್ರಿ). ಕೆಲಸ ಮಾಡಿಸು ; ದಂಡಿಯುವಂತೆ ಮಾಡು : ಬಹುಸಂಖ್ಯೆಯ ಜನರು ಬಡವರಾಗಿ, ಅತ್ಯಂತ ಬಡವರಾಗಿ ಇರಬೇಕಾಗುತ್ತದೆ. ಮತ್ತು ಅಲ್ಪಸಂಖ್ಯೆಯ ಜನರು ಅವರಿಂದ ದುಡಿಸಿ ಹಣವಂತರಾಗುವ ಅವಸರವಿರುತ್ತದೆ (ಪ್ರಕಾಶ. ೭೨).

ದುಡಿಸಿಕೊಳ್ಳು = ೧. ತನಗಾಗಿ ಇನ್ನೊಬ್ಬರಿಂದ ಕೆಲಸ ಮಾಡಿಸಿಕೊಳ್ಳು. ೨. (ಪದಗಳನ್ನು) ಹೆಚ್ಚು ಅರ್ಥವತ್ತಾಗುವಂತೆ ಬಳಸು : ಅರ್ಧಸತ್ಯಗಳನ್ನು, ವಿಕೃತದೃಷ್ಟಿಕೋಣಗಳನ್ನು, ನಿರುತ್ತರವಾದಿತ್ವವನ್ನೂ ‘ಪೋಕ್ರಿ’ತನವನ್ನು ಅವರು ಚೆನ್ನಾಗಿ ದುಡಿಸಿಕೊಂಡಿದ್ದಾರೆ (ಗಾಳಿಪ. XI, ಮುನ್ನುಡಿ). [ ದುಡಿ$_1$ + – ಇಸು$_3$ ]

**ದುಡುಂ** (ನಾ). ಒಂದು ಅನುಕರಣ ಶಬ್ದ : ಹುಡುಗ ದುಡುಮ್ಮೆಂದು ನೀರೊಳಗೆ ಧುಮುಕಿದ (ರೂಢಿ).

ದುಡುಂ ಪ್ರವೇಶ = ಮುಂದಾಲೋಚನೆಯಿಲ್ಲದೆ ಕೆಲಸದಲ್ಲಿ ಪ್ರವೇಶ ಮಾಡುವುದು ; ವಿಚಾರಮಾಡದೆ ಕೆಲಸವನ್ನು ಕೈಗೊಳ್ಳುವುದು ; ದುಡುಕುತನ : (ಈ).

**ದುಡುಂಬಿಱ್** ‘ದುಡುಮ್ಮಿಱ್’ ನೋ.

**ದುಡುಕ** (ನಾ). ವಿಚಾರ ಮಾಡದೆ ಮುನ್ನುಗ್ಗುವವನು ; ದುಡುಕುವ ಸ್ವಭಾವದವನು: ಭೀಮನೆಂಬವ ದುಡುಕನೀ ಸುತ್ರಾಮಸುತ ಸೈರಣೆಯ ಮನದವನು (ಕುವ್ಯಾಅ. ಓರಿಇ. ೪-೬೦). [ ದುಡುಕು$_2$ + – ಅ$_7$ ]

**ದುಡುಕಿ** (ನಾ). ೧. ದುಡುಕು ಸ್ವಭಾವದ ವ್ಯಕ್ತಿ : ಶೂರನೂ, ರಾಮಭಕ್ತನೂ ಸ್ವಲ್ಪ ದುಡುಕಿಯೂ ಆದ ಲಕ್ಷ್ಮಣನ ಪಾತ್ರವು . . . ಸರ್ವರ ಹೃದಯಕ್ಕೂ ಪ್ರಿಯವಾಗಿದೆ (ಭಾರದ. ೯೦). ೨. ಉದ್ಧಟ ವ್ಯಕ್ತಿ.
[ ದುಡುಕು$_2$ + – ಇ$_3$ ]

**ದುಡುಕು$_1$** (ಕ್ರಿ). ೧. ಮುಂದಾಲೋಚನೆಯಿಲ್ಲದೆ ಕೆಲಸಮಾಡು ; ಆತುರದಿಂದ ವರ್ತಿಸು ; ವಿಚಾರಮಾಡದೆ ಮುನ್ನುಗ್ಗು : ಮುಕ್ತಿಯ ಮಂಚಿಸೆ ಮುಕ್ತಿಯ ಹುಡುಕಿದೆ ತತ್ತ್ವವಿಚಾರದ ಗಲಭೆಗೆ ದುಡುಕಿದೆ (ಪಾಂಚಜ. ೫೯-೧೩): ಚಿರಂತನದ ಪಥಿಕ ನಾನು ಹೊರಟೆ ತಿರುಳ ಹುಡುಕುತ ನೆರಳಿನಂತೆ ಹುರುಳಿನಲ್ಲಿ ಕರಗಿದರೂ ದುಡುಕುತ (ಅರಳು. ೪೪-೨೦) ; ಜೀವನದಲ್ಲಿ ಅವರು ಎಲ್ಲೂ ದುಡುಕಿರಲಿಲ್ಲ (ಮಹಾತ್ಮಾ. ೨೦); ದುಡುಕಿದರೆ ಆಕೆಯು ಆತ್ಮಹತ್ಯವನ್ನಾದರೂ ಮಾಡಿಕೊಳ್ಳಬಹುದು (ರಾವಿಜ. ೪೦). ೨. “ಹುಂಬತನ ಮಾಡು” (ಜಾನಕೋ. ೬). ೩. ಉದ್ಧಟತನದಿಂದ ವರ್ತಿಸು ; ದುಷ್ಟತನದಿಂದ ವರ್ತಿಸು : (ಈ). ‘ತಂಡುಂಕು$_1$’ ಪರಾ.
[ ದೇ. ॥ ತುಳು. ತೆಲು. ದುಡುಕು ]

**ದುಡುಕು$_2$** (ನಾ). ೧. ಆಲೋಚನೆ ಮಾಡದೆ ಮುನ್ನುಗ್ಗುವುದು : ಈ ಪರಿಯೊಳ್ ದುಡುಕಿನಿಂ ಪೋದೊಡೆ ಅವಶ್ಯಮಾಗಿ ಪಶ್ಚಾತ್ತಾಪಮಪ್ಪುದು (ಮಿತ್ರಗೋ. ೮೫) ; ತುಂಗಳಮಾಸ್ತರರ ದುಡುಕಿಗೆ ನಾವೊಂದು ಪಾಠ ಕಲಿಸಿದಂತಾಗುವುದು (ರಂಗರೋ. ೨೫) ; ಶಿವಮ್ಮಾವಧಾನಿ, ಇದೇನೀ ದುಡುಕು ? (ತುಂಗಭ. ೧೮) ; ಮಡಕೆ ಮಾರುವವನಿಗೆ ದುಡುಕಿನ ಗವುಜಿ ಯಾಕೆ? (ಗಾದೆ). ೨. ಆತುರ ; ಅವಸರ : ಬಾಲಗೆ ದೊರಕಿತು ಪುಣ್ಯೋದಯದಿ ಸಾಲಿಗ್ರಾಮಶಿಲೆಯು ಕೈಯ ದುಡುಕಿಲಿ ತೆಕ್ಕೊಂಡನು ಹರುಷದಿ ಲಕ್ಷ್ಮೀನಾರಾಯಣ ಮೂರುತಿಯು (ಚಂದ್ರಹಾ. ೧-೩೩) ; ಖಿಡಕೀಲೆ ಉಡಿಯಕ್ಕಿ ಹಾಕಿದರವ್ವಾ ಒಳ್ಳೆ ದುಡುಕಿಲೆ ಮುಂದಕೆ ನೂಕಿದರವ್ವಾ (ಶರೀಫ. ೨೧-೫) ; ದುಡುಕು ಇದ್ದವಗೆ ಬಡಿತ ತಪ್ಪದು (ಗಾದೆ). ೩. ಉದ್ಧಟತನ : ಗುಡ್ಡ ಬೆರಳೊಳೆತ್ತಿ ದೊಡ್ಡಗೋವ್ಗಳ ಕಾಯ್ದು . . . ದುಡುಕು ಮಾಡಿ ಹಾಲುಮಡಕೆಗಳ ಒಡೆದು ಹಡಗನೇಱ ಬಂದು ಉಡುಪಿಲಿ ಇದ್ದನೆ (ಪುರಂದ. ೨-೩೨-೪).

ದುಡುಕಿನಾಳ್ = ದುಡುಕುವ ಸ್ವಭಾವದವನು; ವಿಚಾರ ಮಾಡದೆ ಕೆಲಸಕ್ಕೆ ಕೈಹಾಕುವವನು : ಈಗಡಿನ ಕೇಡುಗಳ ಕುಱಿತಾರಯಲ್, ದುಡುಕಿನಾಳ್, ನೀನ್, ತಕ್ಕ ಕಾಲದಲೆ ತಟ್ಟಿಗೆ ನಡೆದುಕೊಳ್ (ಬದ್ಮಪ್ರ. ೫೩-೧೧೫೫). [ <ದುಡುಕು$_1$ ]

**ದುಡುಕುತನ** (ನಾ). ಆಲೋಚನೆ ಮಾಡದೆ ಮುನ್ನುಗ್ಗುವುದು : ನಿನ್ನ ಪವಿತ್ರಪ್ರಾಣವನ್ನು ಅಗ್ನಿದೇವನಿಗೆ ದುಡುಕುತನದಿಂದ ( ರ್ಪಿಸದಿರು (ಹಿಂಕಿರು. ೬೩).

ದುಂದುಡುಕುತನ (ದ್ವಿರುಕ್ತಿ) : ಲಕ್ಷ್ಮಿ ಅಂತಹವಳಲ್ಲ. ಆಕೆಗೆ ದುಂದುಡುಕುತನವು ಇಲ್ಲ. ಆಕೆಯ ಸ್ವಭಾವವತಿಶಾಂತವು(ಲಕ್ಷ್ಮೀಪ್ರ. ೪೮).
[ ದುಡುಕು$_2$ + – ತನ ]

**ದುಡುಕುದೋರು** (ಕ್ರಿ). ಅವಸರ ಪಡು ; ಆತುರಪಡು : ನಡತೆ ನುಡಿತೆಗಳಿಂದ ಪಿರಿದಹ ದುಡುಕುದೋರಲು ಪುತ್ರಮೋಹವು ಪಡೆದರಿಗೆ ಪರ್ಯಾಯಮೆಸೆವುದೆ (ಗಗತಾ. ೧೦-೭).
[ ದುಡುಕು₂ + ತೋರು (<ತೋಱು) ]

**ದುಡುಕುಪ್ರವೃತ್ತಿ** (ನಾ). ದುಡುಕಿನಿಂದ ನಡೆದುಕೊಳ್ಳುವಿಕೆ ; ದುಡುಕು ಪ್ರವೃತ್ತಿ ಅವರಲ್ಲಿ ಇರಲಿಲ್ಲ (ಮಹಾತ್ಮಾ. ೧೩).
[ ದುಡುಕು₂ + ಪ್ರವೃತ್ತಿ ]

**ದುಡುಕುಬುದ್ಧಿ** (ನಾ). ತಕ್ಕಷ್ಟು ಆಲೋಚನೆ ಮಾಡದೆ ಮುನ್ನುಗ್ಗುವ ಸ್ವಭಾವ : (ಕ). [ ದುಡುಕು₂ + ಬುದ್ಧಿ ]

**ದುಡುಕುಹೆಮ್ಮೆ** (ನಾ). ದುಡುಕುತನದಿಂದ ಉಂಟಾದ ಗರ್ವ: ದೊರೆಗಳ ದೊರೆ ಚಕ್ರಿಯೆನಿಸಿ ದರ್ಪವೃಷನು ಮೆರೆದನು : ಈಗಳದನು ದುಡುಕು ಹೆಮ್ಮೆ ದೂಳ್ಗೊದೆದುದೊ ಅರಿಯನು (ಪಾರಸಿ. ೯-೧೫೭).
[ ದುಡುಕು₂ + ಹೆಮ್ಮೆ (<ಪೆರ್ಮೆ) ]

**ದುಡುಕೆಸಗು** (ಕ್ರಿ). ಆಲೋಚಿಸದೆ ಕಾರ್ಯಮಾಡು ; ಅವಸರಪಡು : ಬೆಲೆವೆಣ್ಗಳ ಪೆರ್ಗಡೆ ನೀಂ ಕಲೆಯಱುತುರವಣಿಸಿ ಬಿರುದು ಬೊಜಗರ ಬಿಂಕಂ ತೊಲಗೆ ದುಡುಕೆಸಗಿ ಕೆಕ್ಕಲಗೆಲೆವಂದವನಿಂದು ಸವಿಯಲಿಂ ದೇಟ್ರಿಂದೆಂ (ಚಿಕವಿ. ೬-೨೭೬). [ ದುಡುಕು₂ + ಎಸಗು₁ ]

**ದುಡುಗುಟ್ಟು** (ಕ್ರಿ). ಬಡಿದುಕೊಳ್ಳು ; ನಡುಗು ; ಸ್ಪಂದಿಸು : ಒಡನೆ ಕೈಮುಗಿದು ಪೆಣ್ಣುಗಳೆಲ್ಲ ಪೋದರು ದುಡುಗುಟ್ಟುವೆದೆಯ ಬಲ್ಪಿಡಿದು (ಭರತೇ. ೪೮-೧೦೪). 'ದಡಗುಟ್ಟು₁' ಪರಾ.
[ <ದುಡುದುಡು + ಕುಟ್ಟು₁ ]

**ದುಡುದುಡನೆ, ದುಡದುಡನೆ** (ಅ). ದುಡುದುಡು ಎಂಬ ಶಬ್ದದೊಡನೆ: ದುಡುದುಡನೋಡಿ ಬರುತಿರ್ಪ ಬೇಡನಾಕಾರಮಂ ನೋಡಿದಂ ರೂಢೀಶನು (ಹಡಕಾ. ೬-೧೮) ; ದುಡುದುಡನೆಯ್ದುಂದು [ಪಾಠಾಂ. ದಡದಡನೆಯ್ದುಂದು] ದುಂಡಿಯರಾ ಚೆಲ್ವರೊಡೆಯನ ಚೆಲ್ವ ನೋಡಿದರು (ಭರತೇ. ೨೧-೭೪). **ದುಡದುಡನೆ** : ಮಡದಿಯ ತಾನೆತ್ತಿಕೊಂಡು ದುಡದುಡನಡಿಯಿಟ್ಟು ಶಕುನಿ ಮಂಚದ ಮೇಲೆ ಮಡಗಿಕೊಂಡನು ರಾಜಮೋಹಿ (ಭರತೇ. ೪೨-೧೫೦). 'ದಡದಡನೆ' ಪರಾ. [ ದುಡುದುಡು + – ಅನೆ₁ ]

**ದುಡುದುಡಿಕೆ** (ನಾ). ಬಳಲಿಕೆ ; ಆಯಾಸ : ತಾಯ್ ನೊಂದು ಬಳಲುತ್ತ ತಾಯ ದೇಹಕ್ಕಲ್ಲಿ ದುಡುದುಡಿ[ಪಾಠಾಂ. ಡು]ಕೆಯಾಗುತಿರೆ ಬಾಯಳಿವುತೆನ್ನಸುಗೆ ಸಂದೇಹವಾಗುತಿರೆ ಇಂತು ನಾನಾ ವಿಧದ ಕಂಟಕಮುಮಂ ಕಳೆದು (ಪಿಂಡೋರ. ಹ. ೫೦೦-೧೭). [ ? ]

**ದುಡುದುಡು** (ನಾ). ಒಂದು ಅನುಕರಣ ಶಬ್ದ : ಹಿಡಿಹಿಡಿಹಿಡಿಯೆಂದು ಪುರಂದರವಿಠಲನ ದುಡುದುಡು ದುಡುದುಡನೇ ಓಡುತ . . . ಮೆಲ್ಲನೆ ಪಿಡಿಯಲು ಬಿಡಿ ಬಿಡಿ ಬಿಡಿ ದಮ್ಮಯ್ಯ ಎನ್ನುತ (ಪುರಂದ. ೨-೭೨-೩) ; ಬಸ್ಸಿನ ಬುಡದಿಂದೆದ್ದು ಬಂದು ಸಿದ್ದಣ್ಣ ದುಡುದುಡು ಹೊರಟ (ಬೆಂಗಟ. ೧೧೪).

**ದುಡುಮ, ದುಂಬ** (ನಾ). ೧. ದಷ್ಟಪುಷ್ಟವಾಗಿರುವವನು ; ದಾಂಡಿಗ : ಈ ದುಡುಮ ಕೆಲಸಮಾಡುವುದರಲ್ಲಿ ತುಂಬಾ ಮೈಗಳ್ಳ (ರೂಢಿ). **ದುಬ್ಬ:** ೧ : (ಕ). ೨. ಮಂಕ ; ಮೂಢ : ಆ ದುಬ್ಬನಿಗೆಲ್ಲಿ ಕಂಡೀತು ಬಿಡ್ರೋ (ಬೆಳುಮ. ೮). 'ಡುಮ್ಮ' ಪರಾ.
[ ದುಡುಮು₂ (<ದುಮ್ಮು₁) + – ಅ₆ ]

**ದುಡುಮಿ, ದಡಮಿ, ದುಬ್ಬಿ₁** (ನಾ). ೧. ದಷ್ಟಪುಷ್ಟವಾಗಿರುವವಳು ; ದಢೂತಿ ಹೆಂಗಸು : ದುಡುಮಿಯಾದ ಅವಳ ನಡಗೆಯೂ ನಿಧಾನ (ರೂಢಿ). ೨. (?) : ಒಡೆಯ ಕೈಲಾಸಪುರಕ ಕೈವಲ್ಯವಾದಂತ ದುಡುಮಿ ಕಲ್ಯಾಣಿ ಬಾರ ಒರಳಕ್ಕಿ ಪಾಡುನು (ಲೋಕಗೀ. ೨೦). **ದಡಮಿ:** ೧. ಏಳು ವರ್ಷದ ಅವಳ ಮಗಳು . . . ಕೆಂಗೂದಲ ದಡಮಿಯು ಸೆರಗು ಹಿಡಿದುಕೊಂಡು ನಿಂತಿದ್ದಳು (ಪುನರು. ೧೯೩). **ದುಬ್ಬಿ₁** : (ಕ). [ ದುಡುಮ + – ಇ₂ ]

**ದುಡುಮು₁** (ಕ್ರಿ). ಸಶಬ್ದವಾಗಿ ಬೀಳು ; ರಭಸದಿಂದ ಧುಮುಕು : ಮೇಲಕೆ ಪುಟನೆಗೆವ ದುಡುಮ್ಮಿಗಾವೊಲೊಯ್ವ ಅಗುಳ್ದ ತೇಲುವ ನೀರಾಟವೆಸೆದರಾ ಬಗಸೆಗಂಗಳ ಭಾವೆಯರು (ಶ್ರೀಪಾಲ. ೫-೫೩) ; ಬೀಳ್ವ ವೇಳುವ ಕೈದುಗಳನೀಡಾಡುವ ತೇಲುವ ಸುಳಿಯೊಳು ಸುಳಿವ ಆಳುವ ದುಡುಮುವ ಯಾಸುವ ಭಟರ ಹೇರಾಳದಿ ನದಿ ಹೂಳಿದುದು (ನಾಗಕು. ೧೫-೬೦). 'ದುಡುಮ್ಮಿಱು' ಪರಾ. [ <ದುಡುಂ ]

**ದುಡುಮು₂** 'ದುಮ್ಮು₁' ನೋ.

**ದುಡುಮ್ಮನೆ** (ಅ). ೧. ದುಡುಂ ಎಂಬ ಶಬ್ದದೊಡನೆ : ಅವಳು ದುಡುಮ್ಮನೆ ನೀರಿಗೆ ಬಿದ್ದುಬಿಟ್ಟಳು (ರೂಢಿ). ೨. ಇದ್ದಕ್ಕಿದ್ದಂತೆ ; ಕೂಡಲೆ ; ತಕ್ಷಣ : ಎದುರಾಳಿಗಳನ್ನು ವಿರೋಧಿಸಿ ದುಡುಮ್ಮನೆ ಪರಾಜಯಗೊಳಿಸುವ ಒಂದು ನೂತನ ಚಾಕಚಕ್ಯವಿದೆ ಅವರಲ್ಲಿ (ರಾಜಪ. ೮೧).
[ ದುಡುಂ + – ಅನೆ₁ ]

**ದುಡುಮ್ಮಿಱು, ದುಡುಂಬಿಱು** (ಕ್ರಿ). (ನೀರಿನಲ್ಲಿ) ಧುಮುಕಿ ಅಥವಾ ಕೈಯಿಂದ ಹೊಡೆದು ಶಬ್ದಮಾಡು : ಒಳಪೊಕ್ಕು ದುಡುಮ್ಮಿಱಿದಾಡ ಲೀಸಲಗ್ಗಲಿಸಿದಲಂಪಿನಿಂ ಬಗೆದುದಂದು ಜನಂ ಘನಚಂದ್ರಿಕಾಂಬುವಂ (ಅಜಿಪು. ೬-೪೫) ; ಹಂಸೆಗಳ ಕ್ರೇಂಕಾರವೇ ಕಹಳೆಗಳ್ಗಳಿರ್ವ ನೀರೊಳ್ದುಡುಮ್ಮಿಱುವ ಮಾನ್ಗಳ ರವಂ ತಂಬಟಂ (ಚೇರಮ. ೭-೫೦) ; ನಲಿದು ದುಡುಮ್ಮಿಱುವುತ ತೇಂಕಾಡುತ ನಲಿದಾಡುತ (ಚಂಪ್ರಸಾಂ. ೦೭-೨೦೫). **ದುಡುಂಬಿಱು** : ಅಲ್ಲಿಯೋಲಾಡಿಸಲವನಾನಂದದಿಂದೀಸಿ ದುಡುಂಬಿಱಿದು ಕುಡಿದು ನೋಡಿ (ಪುಣ್ಯಾಸ್ರ. ೯-೩೭ ಪ). [ ದುಡುಂ + ಇಱು₁ ]

**ದುಡುಮ್ಮು** (ನಾ). ಒಂದು ಅನುಕರಣ ಶಬ್ದ : ದೊಗಹು ಧೊಕ್ಕು ದುಡುಮ್ಮು . . . ಗರಿಗರಿಲೆಂಬ ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳ್ (ಗಿರಿಜೆ. ೬-೬೮).

**ದುಡುಹು** (ನಾ). ಒಂದು ಅನುಕರಣ ಶಬ್ದ : ದು[ಪಾಠಾಂ. ಧು]ಡುಹೆಂಬ ಧುಮ್ಮೆಂಬ ಘೋರೆಂಬ ಭೋರೆಂಬ ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟೆ (ಇಹರ. ದೇ. ೪೨-೨) ; ಹೊಡದನಾ ಕೊಡಲಿಯಿಂ ತಲೆ ಮುಂಡ ವೆರಡಲ್ಲಿ ದುಡುಹು ದುಮ್ಮೆಂದು ಬಿದ್ದವು (ವೀಶೈಪು. ೩-೧೩-೩೮).

**ದುಡ್ಡಸ್ತ** (ನಾ). ಹಣವುಳ್ಳವನು ; ಐಶ್ವರ್ಯವಂತ : ಅವನೊಬ್ಬ ಭಾರಿ ದುಡ್ಡಸ್ತ (ರೂಢಿ). [ ದುಡ್ಡು₁ + – ಸ್ತ ]

**ದುಡ್ಡಸ್ಥ** (ನಾ). = ದುಡ್ಡಸ್ತ: ದುಡ್ಡಸ್ಥರಿಗೇ ಈಗಿನ ಕಾಲದಲ್ಲಿ ಮರ್ಯಾದೆ (ರೂಢಿ). [ ದುಡ್ಡು₁ + – ಸ್ಥ ]

**ದುಡ್ಡು₁** (ನಾ). ೧. ಒಂದು ತಾಮ್ರದ ನಾಣ್ಯ: ಇಪ್ಪತ್ತು ದುಡ್ಡಿಗೆ ಸೇರು ತೀರ್ಥವ ಒಪ್ಪದಲಿ ಕ್ರಯಮಾಡಿ ಕೊಡಿಸುವ (ಪುರಂದ. ೧-೧೧೯-೨) ; ಪಿಂದೆ ರಘುರಾಮಂಗೆ ಕಾಡ ಕಪಿಗಳು ಕೂಡಿಯೊಂದು ದುಡ್ಡಾದರೊಂ ಸಂಬಳವು ಮಿಲ್ಲದೇ ಬಂದು ಸೇರಿದ ತೆರದಿ (ಅರ್ಜಾವಿ. ೨೭-೧೮). ೨. ಮೂರು ಕಾಸು ; ಕಾಲಾಣೆ ; ಒಂದು ಬಿಲ್ಲೆ(ಉಕ) : ಮಧುಮತಿಯ ಕಿಸೆಯಲ್ಲೊಂದು ದುಡ್ಡು ಇತ್ತು (ಹೂಬಿಸಿ. ೩) : ಪಂಡಿತರಿಗೆ ನಾಲ್ಕು ದುಡ್ಡ ಕೊಡಲಿಕ್ಕೆ ಇಷ್ಟೇಕೆ ಜೀನತನ?(ಅಶೋಕ. ೪). ೩. ನಾಲ್ಕು ಕಾಸು: ಎಲೇ ಎಡ್ಡ ಪ್ರಾಣಿಗಳಿರಾ ಅಡ್ಡದಾಸೆಗೆ ದುಡ್ಡಿನ ಲಾಭವ ಕಳೆವರೇ (ಅಖಂಡೇ. ೬೩-೧೭) ; ನಾಲ್ಕು ಕಾಸು ಒಂದು ದುಡ್ಡು, ಮೂರು ದುಡ್ಡು ಒಂದ ಆಣೆ, ಹದಿನಾರಾಣೆ ಒಂದು ರೂಪಾಯಿ– ಇದು ಹಿಂದಿನ ಕೋಷ್ಟಕ (ರೂಢಿ). ೪. ಹಣ ; ರೊಕ್ಕ : ದುಡ್ಡು ಕೂಡಿಟ್ಟು ಬಳಿದು ಹೋಗುವಾಗ ಬಳಲಿ, ಬಳಲಿ ಆಳವಾರಿಗೆ ಬಂದೆ (ಪುರಂದ. ೨-೫೨-೧) ; ಅಳತೆ ತೂಗುವಿಕೆಯಲ್ಲಿ ನೀ ಸತ್ಯವಂತನುಮೆನಿಸಿಕೊಂಡೊಳ್ಳೆಮಾತಿಂದ ಮಾರು ದುಡ್ಡೋಗದಂತೆ

(ಅಜ್ಞಾವಿ. ೩೦-೩೫); ಬ್ಯಾರಿಗಳಿಗೆ ಎರಡಾಣೆ ದುಡ್ಡೆಣಿಸಿ ಹೊರಟರು (ಮುಂಗಾಮು. ೧); ಬ್ಯಾಂಕಿನಲ್ಲಿ ದುಡ್ಡಿಟ್ಟವರೆಲ್ಲರೂ ದುಡ್ಡಿದ್ದವರೇ (ಹುಚ್ಚುಹು. ೭೧); ದುಡ್ಡಿದ್ದವನೇ ದೊಡ್ಡಪ್ಪ (ಗಾದೆ). **೫.** ಒಂದು ದಂಡ್ಡಿನ ತೂಕ: ಅನ್ನಶುದ್ಧಿಗೆ ತುಪ್ಪ ದಿ೧ಕ್ಕೆ ದುಡ್ಡು ತೂಕದಲ್ಲು ಸೇ೧೫ಕ್ಕೆ ಕ್ರಯ (ಎಕ. VI, ಶೃಂಗೇರಿ. ೧೧–ಪುಟ ೩೭೩ ; 1652).

**ದುಡ್ಡಿನ ಚೀಲ** = ಹಣದ ಚೀಲ ; ಥೈಲಿ ; ಹಮ್ಮಿಣಿ : ತಿಂಗಳ ಕೊನೆಯಾದ್ದರಿಂದ ದುಡ್ಡಿನ ಚೀಲ ಖಾಲಿಯಾಗಿಬಿಟ್ಟದೆ (ರೂಢಿ). **ದುಡ್ಡಿನ ಡಬ್ಬಿ** = ಹಣವಿಡುವ ಡಬ್ಬ: ಅಜ್ಜಿಯ ದುಡ್ಡಿನ ಡಬ್ಬಿಯಲ್ಲಿ ಬರೀ ಚಿಲ್ಲರೆ ಕಾಸೇ ತುಂಬಿದೆ (ರೂಢಿ). **ದುಡ್ಡುಕಾಸು** = ಹಣ; ಧನ : ದುಡ್ಡು ಕಾಸನು ಕೂಡಿಹಾಕಲು ಹೋಗಿ ಹಡಗ ಸೇರಿಕೊಂಡ (ಇಂಗೀತ. ೫೩-೭). **ದುಡ್ಡುತಿನ್ನು** = ಇನ್ನೊಬ್ಬರ ಹಣವನ್ನು ನೀತಿಗೆ ವಿರುದ್ಧವಾಗಿ ಬಳಸಿಕೊಳ್ಳು.– ದುರುಪಯೋಗ ಪಡಿಸಿಕೊಳ್ಳು.– ಅಪಹರಿಸು : ಹುಲ್ಲು ತರುವಾಗ ಆಳುಮನುಷ್ಯ ದುಡ್ಡುತಿನ್ನುತ್ತಿದ್ದ. ಹೀಗಾಗಿ ಆ ಕೆಲಸ ನನಗೆ ಒಪ್ಪಿಸಲಾಯಿತು (ಸ್ಮೃತಿಚಿ. ೯೦). **ದುಡ್ಡುದುಗ್ಗಾಣಿ** = ದುಡ್ಡುಕಾಸು : ಅವನು ಬಹಳ ಕಷ್ಟಪಟ್ಟು ಒಂದಿಷ್ಟು ದುಡ್ಡುದುಗ್ಗಾಣಿ ಸೇರಿಸಿಟ್ಟಿದ್ದಾನೆ (ರೂಢಿ). **ದುಡ್ಡು ನುಂಗು** = ದುಡ್ಡುತಿನ್ನು : ಬೇರೊಬ್ಬರ ದುಡ್ಡು ನುಂಗುವಂತಹ ಹೀನಕಾರ್ಯ ಮತ್ತೊಂದಿಲ್ಲ (ರೂಢಿ). **ದುಡ್ಡು ಹೊಡೆ** = ದುಡ್ಡು ತಿನ್ನು: ಈ ವ್ಯವಹಾರದಲ್ಲಿ ದಳ್ಳಾಳಿ ಸಾಕಷ್ಟು ದುಡ್ಡು ಹೊಡೆದಿದ್ದಾನೆ (ರೂಢಿ).

[ ದೇ.॥ ತಮಿ. ಮಲ. ತುಟ್ಟು; ತುಳು. ತೆಲು. ದುಡ್ಡು; ಕೊಡ. ದುಡ್ಡಿ ]

**ದುಡ್ಡು₂** 'ದೊಡ್ಡು' ನೋ.

**ದುಢುಂ** (ನಾ). ಒಂದು ಅನುಕರಣ ಶಬ್ದ. 'ದಂಢುವಿಮ್ಮಿಟ' ಪರಾ.

**ದುಢುಂದಾಳಿ** (ನಾ). ಇದ್ದಕ್ಕಿದ್ದಂತೆ ಮಾಡುವ ಆಕ್ರಮಣ,– ಮುತ್ತಿಗೆ: ಶ್ರೀಮನ್ನ ನಂಜರಾಜಯ್ಯನ ದುಢುಂದಾಳಿಯು ಕೊಳ್ಳೆಯಲ್ಲಿ ನಿರ್ಮೂಲವಾಗಿ ಹೋಗುವರು (ಮಂತ್ರಶ. ೪೭-೭). [ ದುಢುಂ+ದಾಳಿ(<ದಾಟಿ) ]

**ದುಢುಂಬಿಟಿ** 'ದುಢುವಿಮ್ಮಿಟಿ' ನೋ.

**ದುಢುಮಿಟಿ** 'ದಂಢುವಿಮ್ಮಿಟಿ' ನೋ.

**ದುಢುಮ್ಮನೆ** (ಅ). ದಂಢಂ ಎಂಬ ಶಬ್ದದೊಡನೆ: ಅನುಕರಣಕ್ಕೆ– ಖಣಿಲ್ಲನೆ . . . ದುಢುಮ್ಮನೆ[ಪಾಠಾಂ. ದುಢುಮ್ಮನೆ, ಧಟಮ್ಮನೆ] (ಶಮುದ. ೧೪ ಪ್ರಯೋ); ಅನುಕರಣಾವ್ಯಯಗಳು – ಗಟಗಟ . . . ಖಟಿಲನೆ, ದುಢುಮ್ಮನೆ, ಇತ್ಯಾದಿ (ಕೃಷಿಡಿ. ೫೩). [ ದುಢುಂ + – ೯ ನೆ₁ ]

**ದುಢುಮ್ಮಿಟಿ**, ದಂಢಂಬಿಟಿ, ದುಢುವಿಂಟಿ (ಕ್ರಿ).= ದುಡುವಿಮ್ಮಿಟಿ : ಅಂತು ತನ್ನೊರೆಗಳ್ವೆರಸು ದುಢುಮ್ಮಿಟಿದೋಲಾಡುವಲ್ಲಿ (ಶಾಂತಿಪು.೮-೩೮ವ). **ದುಢುಂಬಿಟಿ**: ವಿಕಲ್ಪಬಿಂದುಗೆ–ಕದಂಪು, ಕದಪು . . . ದುಢುಂಬಿಟಿದಂ. ದುಢುಮಿಟಿದಂ (ಶಮುದ. ೩೭ ಪ್ರಯೋ). **ದುಢುಮಿಟಿ**: ಮೇಲಿನ ಶಮುದ. ಪ್ರಯೋಗವನ್ನು ನೋಡಿ. [ ದುಢುಂ + ಇಟಿ₁ ]

**ದುಣಕಲು** (ನಾ). (ಉಕ). ಕೊಟ್ಟಿಗೆಯಲ್ಲಿ ದನಗಳಿಗೆ ಹುಲ್ಲು ಹಾಕುವ ಜಾಗ : ಗೋಂತಂ. [ ? ]

**ದುಣ್ಣ** (ನಾ). ೧. ದಪ್ಪವಾಗಿರುವುದು ; ದಪ್ಪಪುಷ್ಪವಾಗಿರುವುದು. **೨.** ದಪ್ಪವಾಗಿರುವವನು : "ಮಾವತಿ = ದಪ್ಪವಾದಪಂ ; ಮಾವಃ = ದುಣ್ಣಂ" (ಶಾಶಕ್ಕ. ೫೩). (ಗು). ೩. ಸ್ಥೂಲವಾದ ; ದಪ್ಪವಾದ : ಅದಕ್ಕೇನು ಧಾಡಿ ? ದಿಂಡೆ ದುಣ್ಣ ದಾಂಡಿಗ ನಾಯಿ (ಮಲೆಮ. ೭೨೫).

[ ದೇ.॥ ತುಳು. ದುಣ್ಣ, ದುನ್ನ ]

**ದುಣ್ಣರ** (ನಾ). ೧. ಕೆಟ್ಟವನು. **೨.** ಯಮ : ದುಣ್ಣರನು ಬಂದೆನ್ನ ಸುಣ್ಣ ಗುದಿಯೊಳಗದ್ದಿ ಬಿಣ್ಣತ್ತುವೆಟ್ಟಗಳ ಪೊಟಿಸಿದವನು (ಪ್ರಭುಪು. ೩-೧೦೦).

[ <ಸಂ. ದುರ್ನರ ]

**ದುತಯ**, ದೂತಯಂ (ನಾ). ಎರಡರ ಜೊತೆ,— ಜೋಡಿ : ದೂತಯಂ, ದುತಯಂ, ದ್ವಿತಯಂ (ಶಬ್ದಾನು. ೩೭೭ ಪ್ರಯೋ). **ದೂತಯ** : ಮೇಲಿನ ಪ್ರಯೋಗವನ್ನು ನೋಡಿ. [ <ಸಂ. ದ್ವಿತಯ ]

**ದುತಾರ್** (ನಾ). ಎರಡು ತಂತಿಗಳುಳ್ಳ ಒಂದು ಬಗೆಯ ವಾದ್ಯ : ಆ ತಂಬೂರಿಯ ಝುಂಕಾರಕ್ಕೆ ಅನುವಾದಿಯಾಗಿ ಒಂದು ದುತಾರ್ ಬಾಜಿಸುತ್ತಿತ್ತು (ನಗೆಹೂ. ೬೩). [ ←ಹಿಂ. ದುತಾರಾ ]

**ದುತೀಯ**, ದೂತೀಯ(ನಾ). ಎರಡನೆಯದು; ದ್ವಿತೀಯ: ದೂತೀಯಂ, ದುತೀಯಂ, ದ್ವಿತೀಯಂ (ಶಬ್ದಾನು. ೩೭೭ ಪ್ರಯೋ). **ದೂತೀಯ** : ಮೇಲಿನ ಪ್ರಯೋಗವನ್ನು ನೋಡಿ. [ <ಸಂ. ದ್ವಿತೀಯ ]

**ದುತೂಂಬುರ್** (ನಾ). ಒಂದು ಊರಿನ ಹೆಸರು : ಅಸ್ಯ ಗ್ರಾಮಸ್ಯ ಪೂರ್ವ್ವದಿಕ್ಕೀಮಾನಿ ದುತೂಂಬುರ್ಪ್ವಳ್ಳಂ ದಕ್ಷಿಣತಃ ಪರದಗೆಟಿಪಳ್ಳಂ ಪಶ್ಚಿಮತಮ್ಮಮುನ್ನೆಗುಂಡಿಪಳ್ಳಂ (ಮೈಆರಿ. ೧೯೪೪, ೧೫-೪೦ ; ಸು. 725).

[ ? ]

**ದುತ್ತಂಡಿಕೆ** (ನಾ). ದೌರ್ಜನ್ಯ : ದುತ್ತಂಡಿಕೆಯೊಳು ತನಗಿದಿರಾದ ಮನ್ನೆಯರ ತೊತ್ತಳಂದುಳಿದು ನಿರ್ವಂಶಮಂ ಮಾಡುವೆನೆನುತ್ತ ಕೋಪಾರೂಢನಾಗಿ (ಸಮ್ಯಕ್ತ್ವ. ೨-೯). 'ಉದ್ದಂಡಿಕೆ' ಪರಾ.

[ ದುತ್ತಂಡ₀ (P ← ಪ್ರಾ. ದುತ್ತುಂಡ) + – ಇಕೆ ]

**ದುತ್ತಾರಿ** (ನಾ). ೧. ಕಸೂತಿ ಕೆಲಸ ಮಾಡಿದ ಮಸ್ಲಿನ್ ಬಟ್ಟೆ : (ತ). **೨.** ತೆಳ್ಳನೆಯ ಹತ್ತಿಬಟ್ಟೆಯಿಂದ ಮಾಡಿದ ಒಂದು ಬಗೆಯ ಉಡುಪು : ಕುಪ್ಪಸ ಚಲ್ಲಣಪೊಪ್ಪುವ ಪೈಠಣೆ ಸುಪ್ಪತ್ತಿಗೆ ದುತ್ತಾರಿ[ಪಾಠಾಂ. ಗಾಸಿ]ಗಳನು . . . ಹೊಲಿವುತ ಚಿಪ್ಪಿಗರಿರ್ದರೊಂದೆಸೆಯ (ಅಬ್ಬಲೂ. ೩-೯೦). [ ದೇ.॥ ತಮಿ. ತುತ್ತಾರಿ ]

**ದುತ್ತುರ** 'ದುತ್ತೂರ' ನೋ.

**ದುತ್ತೂರ**, ದುತ್ತುರ, ಧುತ್ತೂರ (ನಾ). ಮದ್ದುಗುಣಿಕೆ ; ಉಮ್ಮತ್ತಿ : "ದುತ್ತೂರಂ ಕಾಂಚನಮುನ್ಮತ್ತಂ" (ವಸ್ತುಕೋ. ೩೯-೩೭) ; ದುತ್ತೂರರಸಂ ಲವಣಮೆಂಬಿವಂ ನೆಲದಾಟಿರೊಳ್ ಚಾರಿಸಿ ಪೂಸುಗೆ (ಲೋಕೋಪ. ೯-೧೦೦); ದು[ಪಾಠಾಂ. ದ]ತ್ತೂರ ಬಿತ್ತಿನಲ್ಲಿ ಕಲ್ಪತರು ಹುಟ್ಟಿ ಕಲ್ಪತರುವಿನ ಅಗ್ರದಲ್ಲಿ ಇಟ್ಟಿಯ ಹಣ್ಣಾಯಿತ್ತು (ಅಟಿಮಾ. ೧೫೭-೫೯೯); ದುತ್ತೂರದ ಹೂವಿನಂತೆಸೆವ ಹೆಗ್ಗಾಳೆಯ ಮೊಗವಿನಂತೆಯಾವಗಂ ಸರ್ವಮುಮನೊಳಕೊಂಡು ಶುಭ್ರವರ್ಣವಿರಳ ತನ್ನ ತಾನೇ ವಿವೇಕಿಸಿ ನೋಡಿ (ವೀಶೈಪು. ೮-೨೦-೧೬). **ದುತ್ತುರ**: ದುತ್ತುರವ ಸವಿದುದೋ ತಲೆ ಪಿತ್ತಂ ಹಿಡಿದುದೋ ಮನಕ್ಕೆ ಹಲವು ದೆಸೆಯಂ ಸುತ್ತುತಿದೆ (ಶಂಕಕಂ. ೦೦). **ಧುತ್ತೂರ** : ಕನಕಾಭಿಧಾನ ಸಾಮ್ಯದೆ ಜನಿಯಿಪುದುನ್ಮತ್ತವೃತ್ತಿಯಂ ಧುತ್ತೂರಂ ಕನಕಮೆತಾಂ ತತ್‌ಕ್ಷಣದೊಳ್ ಜನಿಯಿಪುದಚ್ಚರಿಯೆ ಜನದ ಮನದೊಳ್ ಮದಮಂ (ಚಂದ್ರಪು. ೧೦-೧೨೦). 'ದತ್ತೂರ' ಪರಾ.

[ <ಸಂ. ಧುಸ್ತೂರ, ಧುಸ್ತುರ ]

**ದುದುಗೆಟಿ** (ನಾ). ಒಂದು ಊರಿನ ಹೆಸರು : ನೊಟಮ್ಮನೊಳ್ ಕಾದಿ ರಾಚೆಯಗಬ್ಬ ಸತ್ತೊಡೆ ಪೆರ್ಮ್ಮಾಡಿಯು ಎಟಿಯಪ್ಪನು ಬಿಟ್ಟು ಇಗ್ಗಲಿನುಂ ದುದುಗೆಟಿಯುಮುಮಂ ಕಲ್ನಾಡುವಡೆದ ಸ್ಥಿತಿ ಯಾವುದೆನ್ನೊಡೆ (ಎಕ. III, ನಂಜನ. ೧೩೯-೩ ; ಸು. 10 ನೆಯ ಶತ). [ ? + ಕೆಟಿ³ ]

**ದುದ್ದಿಕೆ** (ನಾ). ಒಂದು ಬಗೆಯ ಸಸ್ಯ : ಉಪ್ಪಿನ ರಸಗಾಯಿ ದುದ್ದಿಕೆ ಸೋರೆಯ ಕಾಯಿ . . . ಮೊದಲಾಗಿ ಆಗಮದೊಳು ನಿಷಿದ್ಧಮಪ್ಪೆಲ್ಲಾ ಕಂದಮೂಲ ಕರೀರ ಶಾಖಾಶಾಕಪುಷ್ಪಫಲಾದಿಗಳಂ ಕೊಳ್ಳದುದು (ಪಸಾರ. ೩೦೭) ; ಬೆಣ್ಣೆ ಕಳವಿಗೆ ಕಾಯಿ ಕರಜಿಗೆಯು ಹಣ್ಣು ದುದ್ದಿಕೆಯ ಕಾಯಿಗಳು (ದ್ವಾದಶಾ. ೧೫೫-೨೫೯). 'ದುಗ್ಧಿಕ' ಪರಾ.

[ < ದುಗ್ಧಿಕೆ ]

**ದುದ್ದು₁**, ದಂದ್ದೆ (ನಾ). ಸೌತೇಕಾಯಿ, ಕುಂಬಳಕಾಯಿ ಮೊದಲಾದವುಗಳ ಒಳಗಿರುವ (ಬೀಜವುಳ್ಳ) ಮೆದುವಾದ ಭಾಗ,- ತಿರುಳು : ಕುಂಬಳಕಾಯ . . . ಬೀಜಮಂ ಮತ್ತದಱ ದುದ್ದುಮಂ ಚೆನ್ನಾಗಿ ತೆಗೆದು ಹಾಕಿ . . . ಕರಿಬೇವುಮಂ ಹಾಕಿ ಮುಗುಳ್ವದನಾಗುವಂತಡುವುದು (ಸೂಪಶಾ. ೫-೧೮) ; ಬೂದಿಗುಂಬಳದಕಾಯ ನಡುವೆ ಕತ್ತರಿಸಿ ಒಳಗಣ ಬಿತ್ತು, ದುದ್ದುಗಳ ತೆಗೆದು ಹಾಕಿ ಬೆಲ್ಲವ ಪುಡಿಮಾಡಿ . . . . . . ಕೊಡಲು ಹುಚ್ಚುಪಿತ್ತ, ಹುಚ್ಚು ದಾಹ ಸದ್ಯಃ ಶಮನವಹುದು (ವೈದ್ಯಸಾ. I. ೬೬) ; ಕುಂಬಳದ ಹಣ್ಣಿನ ತೊಕ್ಕು ಒಳಗಣ ದುದ್ದು ಬಿತ್ತಣಗಳ ಸಹ ತೆಗೆದು . . . ಹುರಿದು ಚೂರ್ಣವ ಮಾಡಿ(ಸಕವೈ. ೩೩೫). **ದುದ್ದೆ :** ನಿಂಬೆಹಣ್ಣಿನ ಬೀಜ ದುದ್ದೆ ಸಹ ತೆಗೆದು ಶುಂಠಿ, ಹಿಪ್ಪಲಿ ಸಹ ಇವನ್ನೆಲ್ಲ ಅರೆದು . . . ತೆಗೆದುಕೊಳ್ಳಲು ವಿರೇಕವಹುದು (ಸಕವೈ. ೩೦೩). [ **ದೇ.॥** ತಮಿ. ತುತಿಯು, ತುತ್ತುರು = ತಾವರೆಯ ಬೀಜಕೋಶ; ತೆಲು. ದುದ್ದು = ತಾವರೆಯ ಬೀಜಕೋಶ ]

**ದುದ್ದು₂** 'ದದ್ದು₂' ನೋ.

**ದುಂದ್ದೆ** 'ದುದ್ದು₁' ನೋ.

**ದುದ್ಧೀಗ್ರಾಮ** (ನಾ). ಒಂದು ಹಳ್ಳಿಯ ಹೆಸರು. **P** ಈಗಿನ ಕೊಲ್ಲಾಪುರದ ಬಳಿಯ ದೂದಗಾವ : ಪೂರ್ವತಃ ದುದ್ಧೀಗ್ರಾಮೋನಾಮ ಗ್ರಾಮಃ (ಇಆ. XVI, ೩೪-೬೫ ; 1009). [ ದುದ್ಧೀ₀ + ಗ್ರಾಮ ]

**ದುದ್ರುಮ** (ನಾ). ಹಸಿರು ಈರುಳ್ಳಿ ; "ಉಳ್ಳೀಗಡ್ಡೆ" (ಗಂಗಾಮ. ೧೬೮). [ ಸಂ. ]

**ದುಧಿರ** (ಗು). ಭಯಂಕರವಾದ ; ಘೋರವಾದ : ಮದನನಂ ಕಾಲನಂ ತ್ರಿಪುರಮಂ ತಿಂದುಗಿದು ದುಧಿರ ಭಿಕ್ಷುಕನ ಶುಕ್ರಾಕ್ಷಿಯಸ್ತ್ರಾಚಲದ ತುದಿಯೊಳ್ (ಬಕೋಪು. ೪-೪೬). [ < ಸಂ. ದುಧ್ರ ]

**ದುನಿಯಾ** (ನಾ). ಜಗತ್ತು ; ಪ್ರಪಂಚ ; ಲೋಕ : ತಮ್ಮ ಕೀರ್ತಿ ಈ ದುನಿಯಾ ಮೇಲೆ ಬಹಳ ದೊಡ್ಡದಾಗುವ ಹಾಗೆ . . . ಸಾಹೇಬರವರಿಗೆ ತಿಳಿಯ ಹೇಳಿ ಇದ್ದೇವೆ (ರಾಜೇಂದ್ರ. ೧೮೫). [ ←ಅರ. ಪಾರ. ಹಿಂ. ಮರಾ. ದುನಿಯಾ ]

**ದುಪ್** (ನಾ). ಒಂದು ಅನುಕರಣ ಶಬ್ದ. 'ದುಪ್ಪನೆ' ಪರಾ.

**ದುಪಟ** 'ದುಪ್ಪಟಿ' ನೋ.

**ದುಪಟಿ** 'ದುಪ್ಪಟಿ' ನೋ.

**ದುಪಿಕಿ** (ನಾ). ವರ್ಷದಲ್ಲಿ ಸಿಗುವ ಎರಡು ಬೆಳೆ : ಇದು ಫಲವತ್ತಾದ ದುಪಿಕಿಭೂಮಿ (ರೂಢಿ). [ ←ಮರಾ. ದುಪಿಕೀ ]

**ದುಪುದುಪು** (ನಾ). ಒಂದು ಅನುಕರಣ ಶಬ್ದ : ಅಡಕಿದ್ದ ಮೂಟೆಗಳೆಲ್ಲ ದುಪುದುಪು ಎಂದು ಕೆಳಕ್ಕೆ ಬಿದ್ದುವು (ರೂಢಿ).

**ದುಪ್ಪಟ** 'ದುಪ್ಪಟಿ' ನೋ.

**ದುಪ್ಪಟಿ**, ದುಪಟ, ದುಪಟಿ, ದುಪ್ಪಟ, ದುಪ್ಪಟೆ, ದುಪ್ಪಟ್ಟ, ದುಬಟಿ, ದುವಟ, ದುವ್ವಟ, ದುವ್ವಟ್ಟ, ದೂಪಟ, ದೂವಟ, ದೂವಟಿ, ದೂವಾಟ (ನಾ). ೧. ಹೊದೆಯಲು ಅಥವಾ ಹಾಸಲು ಉಪಯೋಗಿಸುವ ಸಾಮಾನ್ಯವಾಗಿ ಎರಡು ಪದರಗಳನ್ನುಳ್ಳ ಬಟ್ಟೆ, - ವಸ್ತ್ರ ; ಚಾದರ ; ಹಚ್ಚಡ : "ದ್ವಿಪಟೀ = ದುಪ್ಪಟೀ" (ಕಾಶಕ್ಕ. ೩೭೯) : ಒಮ್ಮೆ ಒಬ್ಬ ಗೃಹಸ್ಥಳು ಮಹಮ್ಮದನಿಗೆ ಒಂದು ದುಪ್ಪಟಿಯನ್ನು ತಂದು ಕೊಟ್ಟಳಂತೆ (ಪೈಗಂಬ. ೫೮) ; ನಾನು ಹೊದ್ದಿದ್ದ ಹಚ್ಚಡ ದುಪ್ಪಟಿ ಆಯಿತು (ಕಥಾಮಂ. IV, ೮೩) ; ಮಾಡೋನು ಕಂಬಳಿಯವನು ದೂರೋದು ದುಪ್ಪಟಿಯವನನ್ನು (ಗಾದೆ). ೨. ಹೊದೆದುಕೊಳ್ಳುವವಸ್ತ್ರ; ಉತ್ತರೀಯ ; ವಲ್ಲಿ : "ವಲ್ಲೀ = ಬಳ್ಳಿಯುಂ, ದುಪ್ಪಟಿಯುಂ"(ಕಾಶಕ್ಕ. ೧೦೩) ; ದುಪ್ಪಟಿಗಳನ್ನೆಲ್ಲ ಸುತರ್ಗೆ ತರಿಸಿಕೊಟ್ಟನು (ಭರಜ. ೪೬-೧೩೩) ; ನಳರಾಜನು . . . ನವರತ್ನಾಭರಣವಂ ತೊಟ್ಟು ಅಪರಂಜಿ ಸರಿಗೆ ದುಪ್ಪಟಿಯಂ ಹೊದ್ದು (ಯನಳ. ೬೩) ; ತಾನು ಹೊದ್ದಿದ್ದ ದುಪ್ಪಟಿಯನ್ನು ತೆಗೆದು ತಲೆಗೆ ಸುತ್ತಿಕೊಂಡುದಾಯಿತು (ನವನೀ. ೨೧). ೩. ಉಡುವ ಬಟ್ಟೆ, - ವಸ್ತ್ರ : ಅಸುಗೆದಳಿರ ದುಪ್ಪಟಿಯಂ ಪಾಡಱುದುಟ್ಟು ಪುಳಿಂದ ಪುರಂಧ್ರಿಯರೊಪ್ಪವಡೆದರಲ್ಲಿ (ಜಯಕಾ. ೧೫-೩೮). **ದುಪಟ :** ೨. ಜೋಡಿಯ ಮೇಲೆ ಕಿಮ್ಮತ್ತು ಆಗತಕ್ಕ ಕಪಡಾ ಜೀನಸಗಳು. ೧. ಧೋತ್ರ ಜೋಡು . . . . ೨. ದುಪಟ ಮುಂತಾದವುಗಳು (ಮುಂಬಪ್ರಾ. ೧೪೧) : ಮೊದಲು ಮೂರು ವರುಷ ವರುಷಕ್ಕೆ ಹತ್ತು ರೂಪಾಯಿ, ಊಟ, ಬಟ್ಟೆ – ಅಂದರೆ ಒಂದು ದುಪಟ, ಒಂದು ದಟ್ಟಿ (ಬೆಸ್ತಕ. ೩೭). **ದುಪಟಿ :** ೧. ಹಗಲಿನ ಸಭೆಯೇನೋ ಚದರಿದೆ ; ಆದರೂ ಅಲ್ಲಿ ಅದರ ಬಿಳಿಯ ದುಪಟಿ ಹಾಸಿದೆ (ನಿಬಂಧ. II, ೨೦೭). ೨. ಚಂದ್ರಕಾಂತಿಯ ದುಪಟಿಯನ್ನು ಚಂದದಿಂದಲಿ ಪೊದ್ದನು (ಗೋಹಾಡು. ೬-೨೯). **ದುಪ್ಪಟ :** ೧. "ಹಚ್ಚಡಂ ದುಪ್ಪಟಾಖ್ಯಂ" (ಮಂಗರಾ. ೧೦೧-೨೮). ೨. ಲಾಲಿತ ಚೆಂಬಾವುಗೆ ಮೆಟ್ಟ ಮೃದುವೆತ್ತ ಸಾಲಿಯ ದುಪ್ಪಟವಾಳ್ದು ಸೋಲಿಸಿ ತೊಲಗಿ ಪೋದವನ ನಿಟ್ಟಿಸುವ ಸಲ್ಲೀಲೆಯಿಂದೆದ್ದಳಾ ಕುವರಿ (ಮೋಹತ. ೨೮-೬) ; ಕಟ್ಟಾಣಿ ಮುತ್ತು ತೆತ್ತಿಸಿದುಡಿಗೆಯೊಳಳವಟ್ಟ ಮೆಱೆದ ದುಪ್ಪಟದೆ ಸೃಷ್ಟಿಗೆ ನರರೂಪ ನರಸಿಂಹನ ಪೋಲ್ವಷ್ಟು ಮೆಱೆದ ನರಸೇಂದ್ರ (ಕಂನವಿ. ೨೪-೭೩) ; ಚೀಣಾ ಚಕ್ರವರ್ತಿಯವರು ಕೊಟ್ಟ ಅಪೂರ್ವವಾದ ರೇಷ್ಮೆ ದುಪ್ಪಟ ಅದನ್ನು ಕೊಡುತ್ತೇನೆ (ಆರ್ಯಕ. ೫). **ದುಪ್ಪಟೆ :** ೧. ಮಲಗಿದ್ದ ರಾಗಪ್ಪ, ತಾನು ಹೊದೆದಿದ್ದ ದುಪ್ಪಟೆಯನ್ನು ಎಳೆದುಕೊಂಡೇ ಓಡಿ ಬಂದ (ವಂಶವೃ. ೪೧೫). **ದುಪ್ಪಟ್ಟ :** ೧. ಸಂದೂಕದ ಬೀಗದ ಕೈ, ಹಾಸಿಗೆಯ ಮೇಲಣ ದುಪ್ಪಟ್ಟ, ವೀಳೆಯದ ಸುಣ್ಣ, ಗ್ಲಾಸಿನ ನೀರು (ಬಂಕಿಮ. ೯೯). ೨. ರಾಮರಾಯನು ಎದ್ದು ಅಂಗರೇಕೆ ರುಮಾಲುಗಳನ್ನು ಧರಿಸಿಕೊಂಡು, ದುಪ್ಪಟ್ಟಾವನ್ನು ಹೊದ್ದುಕೊಂಡು . . . ಹೊರಟನು (ಶ್ರೀರಾಯ. ೧೭೮). **ದುಬಟಿ :** ೧. ಮಗು ದುಬಟಿಯನ್ನು ಹೊದ್ದುಕೊಂಡು ಮಲಗಿತ್ತು (ರೂಢಿ). ೨. ಚಿನ್ನದ ದುಬಟಿಯನ್ನು ಹೊದ್ದು ತೆರೆಯಿಂದ ಹೊರಟು (ಸೌಪರಿ. ೪-೨೦). **ದುವಟ :** ೨. ಪಟಪಲ್ಲವ ಛತ್ರ ಚಮರ ಝುಲ್ಲರಿಗಳ್ದುವಟ[ಪಾಠಾಂ. ಗಳ್ದುವ್ವಟ್ಟೆ] ಜಗಜಗಿಪ ಜೋಡುಗಳು ಛಟಛಟಧ್ವನಿಯಿಂದೆ ಬಿಸಿಯ ಕೆಂಗಿಡಿಗಳು ಪುಟನೆಗೆದುವು ನಭಸ್ತಳಕೆ (ಮೋಹತ. ೪೦-೩೮); ಸೂಧನವಿಲಾಸನಂ ಪುಷ್ಪದಿಂ ರಚಿತಂ ತಾ ದುವಟಮಂ ಪೊದಿಸುತ (ಲಿಂಗಪು. ೨೮-೨೭). **ದುವ್ವಟ :** ೧. ಹಾಸುಮಂಚದ ಮೇಲೆ ಲೇಸಪ್ಪ ದುವ್ವಟವ [ಪಾಠಾಂ. ದುಪ್ಪಟವ] ಹಾಸಿ ಕರಚರಣಗಳನೊತ್ತಿ ನಿಮಿಷಕ್ಕೆ ಮೋಸ ಮಾಡುವರು ಯತಿಗಳ (ಗುರುಬೋ. ೧-೯೫) ; ಮಾಸಲಿಂ ತೊಳೆಯೆ ಮಡಿಯಾದ ದುವ್ವಟದಂತೆ . . . ನೆಲ ಹೇಸುವಂದದ ನಡೆಯ ನುಳಿದು ಸಚ್ಚರಿತಮಂ ತಳೆದು ಮಯನೊಪ್ಪಿರ್ದನು (ಸಮ್ಯಕಾ. ೧೦-೨೦). ೨. ಬಿಳಿಯ ಪಟ್ಟೆಯನುಟ್ಟು ದುವ್ವಟದ ಹಚ್ಚಡವನಳವಡಿಸಿ ಸಾಲಂಗಿಯಂ ತೊಟ್ಟು . . . ಸೌಂದರಂ ವನಕೆ ಪೊಱಮಟ್ಟನು (ಸೌಂದಪು. ೧೦-೧೧) ; ಆನಂದರಸ ದೇವಗಿರಿ ಕೊಂದಿ ಬಿಳಿದಿನದೇನವಣ್ಣವೆ ದುವ್ವಟ [ಪಾಠಾಂ. ಪಾಟ] ಗಳ (ಅಮುಸಾಂ. ೪-೧೭). ೩. ಉರ ತುಂಬಿ ಮೆಱೆವ ಕಂಚುಕ ಕಾಲ ಕುಪ್ಪಸ ಮಿಱುಪ ದುವ್ವಟದ[ಪಾಠಾಂ. ದುವ್ವಪದ] ನಿಱಿಗಳ . . . ಚೆಲ್ವ ತುರುಕನಾರಿಯರೊಪ್ಪಿದರು (ಕಂನವಿ. ೨೧-೮೩). **ದುವ್ವಟ್ಟ :** ೨. ನಾರಿಯಂಗಗಂಧರಸಮನಾಂತ ದುವ್ವಟ್ಟ[ಪಾಠಾಂ. ಟ]ಮದಲ್ಲದೆ ತಾಳದ . . . ನಲ್ಲನೊಪ್ಪಿದಂ (ಯಾದಚಂ. ೩-೧೧೩). **ದೂಪಟ :** ೪. ರೇಷ್ಮೆಯ ಬಟ್ಟೆ ; ಪಟ್ಟೆವಸ್ತ್ರ : ಪದೆದು ದೂಪಟದ ಜವಕೆಗಳ ನಲವಿನಿಂ ತೊಟ್ಟು (ಅರಾಜ. ೬-೩). **ದೂವಟ :** ೨. ಹೊದೆದ ದೂವಟವ ನಿವಾಳಿಯಿಟ್ಟೊಡನೊಂದ ಹೊದೆವುತ ನೃಪ ತನ ತಾಯ ಇದಿರಲ್ಲಿ

ಸಾಷ್ಟಾಂಗವೆಱಗಲು (ಭರಜ. ೪೬-೪೩) ; ಚಾರುತರ ಪಂಚಾಮೃತಂಗಳಿಂ ದಭಿಷೇಕಗೈದು ದೂವಟವ ಪೊದಿಸಿ (ಸಿದ್ಧೇಪು. ೯-೬೦) : ರಂಭೆ ಶ್ವೇತಂಗೆ ನಿಜರಮಣೀಯಮಾಗಿ ಪನ್ನೀರೊಳಂ ಮಜ್ಜನಂಬೊಗಿಸಿ ದೂವಟವ ಪೊದಿಸಿ (ಪ್ರಭುಪು. ೩-೯೧). ೪. ಎಳೆವೆಣ್ಣಾಡಲ್ ನಿಱಿಯ ಪಿಡಿದ ದೂವಟವೂ ಪೇಳಿನಲು ಬೆಳ್ಮಗಿಲೆಸೆದವು (ಜೀರಮ. ೮-೩) : ಶುಭ್ರ ದೂವಟವ ಸ್ಮರಬಾಣಗಱಿಯಂತೆ ನಿಱಿವಿಡಿದುಡಿಸಿದರ್ ದರಹಾಸಮುಖಿಗೆ (ಮೋಹತ. ೨೩-೧೩) : ನಡುವ ಬಳಸಿ ಬಂದ ದೂವಟದೊಲ್ಲಿ ತನ್ನೆಡದ ತೋಳೊಳು ಸುತ್ತಿ ನಿಮಿರೆ . . . ನಡೆತಂದನಾ ಮೋಡಿಕಾಱ (ಭರಜ. ೩೯-೧೪) ; ನಲ್ಲಳಂಗಗಂಧಂ ಬಗೆಗೊಂಡ ದೂವಟಮನಲ್ಲದೆ ತಾಳದ . . . ಕಾಂತ ನೊಪ್ಪಿದಂ (ರಾಜಶೇ. ೧೧-೬೦). **ದೂವಟಿ :** ೪. ದೂವಟಿಯುಡ ಸುತ್ತಿ ಚಾವಡಿಯೊಳಹೊಕ್ಕು ಭೂವರನೆಡೆಗೆಯ್ದುವಾಗ (ಭರಜ. ೫೭-೧೩). **ದೂವಾಟ :** ೨. ವೀರೇಶ ನೀಂ ಸೌಂದರ್ಯ ದೂವಾಟಮಂ ತೊಳೆದು ಪೊದಿಸು (ಪ್ರಭುಪು. ೬-೬೦).

[ ದೇ.॥ ತಮಿ. ತುಪ್ಪಟ್ಟಿ, ತುಪ್ಪಟ್ಟಾ; ಮಲ. ತುಪ್ಪಟ್ಟಿ, ತುಪ್ಪಟ್ಟಾವು; ತುಳು. ದುಪ್ಪಟ, ದುಪ್ಪಟಿ; ತೆಲು. ದುಪ್ಪಟಿ, ದುಪಟ, ದುಪ್ಪಟ./ ಮರಾ. ದುಪಟಾ, ದುಪಟ್ಟಾ : ಹಿಂ. ದುಪಟಾ, ದುಪಟೀ, ದುಪಟ್ಟಾ, ದುಪ್ಪಟ್ಟೀ ]

**ದುಪ್ಪಟೆ** 'ದುಪ್ಪಟಿ' ನೋ.

**ದುಪ್ಪಟ್ಟ** 'ದುಪ್ಪಟಿ' ನೋ.

**ದುಪ್ಪಟ್ಟು** (ನಾ). ಎರಡರಷ್ಟು ; ಇಮ್ಮಡಿ : ಮಧ್ಯಾಹ್ನ ಕೆಲಸಕ್ಕೆ ಹೋದಾಗ ಕತ್ತೆಗಳು ಮುಂಜಾವಿನಕಿಂತ ದುಪ್ಪಟ್ಟಾಗಿದ್ದವು (ಮಣಿದಿಮ. ೧೭೦) ; ಯಾವ ಅಂಚೆಚೀಟಿಯೂ ಇಲ್ಲದ ಪತ್ರಗಳ ಮೇಲೆ ಇಲಾಖೆ ಯವರು ದುಪ್ಪಟ್ಟು ದಂಡ ವಸೂಲಿ ಮಾಡುತ್ತಾರೆ (ಕವಿಕೋ. I, ೬೫) : ಇಂದಿಗೆ ಹಣ ಉಳಿಸಿಕೊಂಡು ನಾಳಿಗೆ ದುಪ್ಪಟ್ಟು ಕಳೆಯುವುದು ಎಂಥ ವ್ಯವಹಾರಜ್ಞಾನ ? (ಸುಳಿವು. ೮೦) : ಈ ಅಂಗಡಿಯ ಮೇಲೆ ನಾ ಸುರಿಸಿದ ಬೆವರಿನ ಅರ್ಧದಷ್ಟನ್ನು ನನ್ನ ಮಗ್ಗದ ಮೇಲೆ ಸುರಿಸಿದ್ದರೆ ಇದರ ದುಪ್ಪಟ್ಟು ಗಳಿಸುತ್ತಿದ್ದೆ (ಮೂರುದಾ. ೭೧) ; ದುಪ್ಪಟ್ಟಿದ್ದ ರಕಮು ಅರ್ಧ ಕ್ಕಿಳಿಸುವದೂ ಬಡ್ಡೀದರ ಕಡಿಮೆ ಮಾಡುವುದೂ ಇವೆಲ್ಲ . . . ಉಳಿತಾಯವೇ ಎಂದನು (ದಾಸಹು. ೩೮). [ ದು + ಪಟ್ಟು₂ ]

**ದುಪ್ಪಡಿ** (ನಾ). (?) : ನಿಯತ ದ್ವಿತ್ವಕ್ಕೆ-ಪಪ್ಪುಕಂ . . . ಟಿಪ್ಪರಂ, ದುಪ್ಪಡಿ (ಶಮದ. ೩೬ ಪ್ರಯೋ). [ ? ]

**ದುಪ್ಪನೆ** (ಅ). 'ದುಪ್' ಎಂಬ ಶಬ್ದದೊಡನೆ : (ಶ).

[ ದುಪ್ + - ಅನೆ₁ ]

**ದುಪ್ಪಳ**, ದುಬ್ಬುಳಿ, ದೊಬ್ಬುಳಿ (ನಾ). ೧. ಮನೆಯ ಒಂದು ಭಾಗ: ಪಾದರಿಯ ಪಟ್ಟಸಾಲೆಯೊಳಂ ಬಂದ ಮಾವಿನ ಬಳ್ಳಿವಾಡದೊಳಂ ತಳಿತ ಪಚ್ಚಕರ್ಪೂರಬಾಳೆಯ ಸುಳಿಗಳಿಂದೊಪ್ಪುವ ದುಪ್ಪಳಗಳಿಂದಂ . . . ಗುಜ್ಜುಮಾವಿನ ಸಜ್ಜೆವನೆಗಳಂ ಚೆಲ್ವಾಗಿರೆ (ನಾಗಕು. ೩೦-೫೫ ವ). **ದುಬ್ಬುಳಿ :** ೨. ಮೇಲಿನ ಮಹಡಿ,-ಉಪ್ಪರಿಗೆ ; "ಸಿರಿಯ ಕರುವಾಡ ವೈಭವದಿಂದ ಕೂಡಿದ ಉಪ್ಪರಿಗೆ" (ಪ್ರಭಣ) ; ಕನಕಮಯಮಾಟಾ ಕೂಟಂಗಳಿಂದೇಳಂತಾದಿಯಾದಿ ದ್ವಾದಶ ಷೋಡಶ ನೆಲೆಯ ದುಬ್ಬುಳಿ ಗಳಿಜ್ಜಾ [ ಚ್ಚಾ ] ಲಿನಲಿ ವಿಭ್ರಾಜಮಾನದ ಜನಭವನಂಗಳೆಸೆದಿರ್ಪುವು (ಆದಿಪ. ೫-೭). **ದೊಬ್ಬುಳಿ :** ೨. "ದೊಬ್ಬುಳಿ [ ಪಾಠಾಂ. ದುಬ್ಬುಳಿ] ಸಿರಿಯ ಕರುವಾಡ" (ಕಬ್ಬಿಕ್ಕಿ. ೧೨). [ ? ]

**ದುಪ್ಪಿ**, ದುಪ್ಪೆ (ನಾ). ೧. ಒಂದು ಬಗೆಯ ಜಿಂಕೆ : ಎಕ್ಕಲನ ಪೊಕ್ಕಿರಿದು ದುಪ್ಪಿ ಸಾರಂಗಕುಂ ಕುಕ್ಕುರಗಳಂ ಬಿಡುತೆ (ಪರಶು. ೩೧-೩೩). **ದುಪ್ಪೆ :** ೨. ಕವಲೊಡೆದಿರುವ ಕೊಂಬುಗಳನ್ನುಳ್ಳ, ಚುಕ್ಕೆಗಳುಳ್ಳ ಜಿಂಕೆ ; ಸಾರಂಗ : ಕರುಳ್ಗಳ ವಗೆಯುತ ನಾಯ್ಗಳ ಬಿಗಿಯುತ ದುಪ್ಪೆಯು ಜಗಿಯುತ ಶಬರರು ವಗರಿಸಿ ಕಾಡಿನ ಮೃಗಗಳನೆಲ್ಲವನು (ಹಮಚ. ೧೮). 'ಚುಕ್ಕೆದುಪ್ಪಿ' ಪರಾ.

[ ದೇ.॥ ತೆಲು. ದುಪ್ಪಿ ; ಕೊಲಾ. ಡುಪ್ಪಿ ; ಗೊಂಡಿ. ಡುಪ್ಪಲ್ ]

**ದುಪ್ಪು₁** 'ದುಂಪು' ನೋ.

**ದುಪ್ಪು₂** (ನಾ). (?) : ಒಪ್ಪೀಸಿದೇನು ನಿನಗೆ ದುಪ್ಪೀನ ಶೀಕ್ಷಕೆ ಎನುತಾಲಿ ಯಿಂದುಮತಿಗೆ ಜನಪಾನು ಪೇಳುತಾಗ (ಹಮಚ. ೧೯೯). [ ? ]

**ದುಪ್ಪೆ** 'ದುಪ್ಪಿ' ನೋ.

**ದುಪ್ಪೆಗೆಣಸು** (ನಾ). ಒಂದು ಬಗೆಯ ಗಡ್ಡೆ,-ಗೆಣಸು : ದುಪ್ಪೆಗೆಣಸು, ಹೆಬ್ಬು (ಮೃಜಿಗಿ. ೩೦-೫೯೩). [ ದುಪ್ಪೆ? + ಗೆಣಸು (<ಗೆಟಸು) ]

**ದುಪ್ರತಿ** (ನಾ). ಮೊದಲಿನ ಪ್ರತಿಯಂತೆಯೇ ಸಿದ್ಧಪಡಿಸಿದ ಇನ್ನೊಂದು ಪ್ರತಿ ; ನಕಲು ; ಪ್ರತಿರೂಪ: (ಒಂದು ಪತ್ರದ ಅಥವಾ ದಸ್ತೈವಜಿನ) ದುಪ್ರತಿ, ನಕಲು (ಅಸಲಿನಂತೆಯೇ ಕಾನೂನಿನ ಅಂಗೀಕಾರವುಳ್ಳದ್ದು) (Duplicate. ಇಂಕಣಿ). [ ದು + ಪ್ರತಿ ]

**ದುಫಸಲ್** (ನಾ). ಒಂದು ಜಮೀನಿನಲ್ಲಿ ವರ್ಷಕ್ಕೆ ಎರಡು ಬೆಳೆ ತೆಗೆಯುವುದು : (ಕೃಷಗೆ. II, ೫೪೭). [ ದು + ಫಸಲ್ ]

**ದುಬಟಿ** 'ದುಪ್ಪಟಿ' ನೋ.

**ದುಬದುಬ** (ನಾ). ಒಂದು ಅನುಕರಣ ಶಬ್ದ : (ಶ).

**ದುಬಾರಿ** (ಗು). ೧. ಎರಡರಷ್ಟು; ಇಮ್ಮಡಿ; ಎರಡು ಪಟ್ಟು. 'ದುಬಾರಿ ಕೆಲಸ' ಪರಾ. ೨. ಅತಿಯಾದ ; ಹೆಚ್ಚಾದ ; ಅಧಿಕವಾದ : ದುಬಾರಿ ಬಡ್ಡಿ ಹಾಕುವುದರಲ್ಲಿಯೂ ನಿಸ್ಸೀಮರು (ಪ್ರವಾಇ. II, ೩೩೨) ; ಅತ್ತ ಕಡೆ ಬರುತ್ತಿದ್ದ ದುಬಾರಿ ಬಡ್ಡಿಗಾರರನ್ನು ಕಂಡ ಕೂಡಲೇ ಜನ ಓಡಿ ಹೋದ ದ್ದರ ಕಾರಣವನ್ನು ತಿಳಿದುಕೊಂಡನು (ನಗಹೊ. ೯೯). 'ದುಬಾರಿ ಬೆಲೆ' ಪರಾ. (ನಾ). ೩. ಹೆಚ್ಚು ಬೆಲೆಯುಳ್ಳದು ; ತುಟ್ಟಿ : ಅರ್ಜಿ ಹಾಕಿಕೊಂಡರೆ ಎಲ್ಲವೂ ಸರಿಹೋಗುತ್ತದಂತೆ. ಆದರೆ ಅದು ದುಬಾರಿಯ ಕೆಲಸವಂತೆ (ಪುನರು. ೧೯೪) : ಅನುಭವಶಾಲಿಯ ಶುಲ್ಕ ದುಬಾರಿಯುದಲ್ಲಿ ರಿಯಾಯಿತಿಯಿಲ್ಲ (ಇಂಚಾಪ. ೧೦೮-೩೯). ೪. (ಆಲಂ) ಅಪಾಯಕಾರಿಯಾದ ವ್ಯಕ್ತಿ (?) : ದುರಾತ್ಮಚಾರಿಯಂ ದುಬಾರಿಯಂ ದೃಷ್ಟಪಾಂಡ್ಯರಾಜನುತ್ಕನಿಷ್ಠಕರ್ಮದಲ್ಲಿ ತಾಂ ಸ್ಪಷ್ಟಮಾಗಲಿಟ್ಟು ಕಾಯ್ದು ನಷ್ಟಱಿಂದೆ ಪೆರ್ಚದೇ (ಹಾಲಾಸ್ಯ. ೩-೩-೯೧).

[ ←ಪಾರ. ದುಬಾರಾ, ದೋಬಾರಾ ; ಮರಾ. ದುಬಾರ್, ದುಬಾರಾ, ದುಬಾರೀ ; ಹಿಂ. ದುಬಾರಾ, ದೋಬಾರಾ./ತುಳು. ದುಬಾರಿ ]

**ದುಬಾರಿಕೆಲಸ** (ನಾ). ೧. ಎರಡು ಪಟ್ಟು ಕೆಲಸ; ಎರಡರಷ್ಟು ಕಾರ್ಯ: ಹೊಲಕ್ಕೆ ಮಡಿಕೆಯ ಹೊಡಿಯುವುದೇತಕ್ಕೆ ದುಬಾರಿಕೆಲಸವೆಂದು ವೈಗಳ್ಳತನದಿಂದ . . . ಅಷ್ಟಕ್ಕೆ ಸಂತುಷ್ಟರಾಗುತ್ತಾರೆ (ಕೃಷಿಪ್ರ. ೫೦). ೨. ಬಹಳ ಖರ್ಚು ಉಂಟಾಗುವ ಕೆಲಸ : ಈಗಿನ ಕಾಲದಲ್ಲಿ ಮನೆ ಕಟ್ಟಿಸುವುದು ಬಹಳ ದುಬಾರಿಕೆಲಸ (ರೂಢಿ). ೩. (ಆಲಂ) ಅಪಾಯ ಕಾರಿಯಾದ ಕೆಲಸ ; ಹೆಚ್ಚು ತೊಂದರೆಯುಳ್ಳ ಕೆಲಸ : ನೀವೇನೂ ಶಾಶ್ವತವಾಗಿ ಮುಖಂಡರಾಗಿ ಉಳಿಯುವುದಕ್ಕಾಗುವುದಿಲ್ಲ. ಆದ್ದರಿಂದ ದುಬಾರಿ ಕೆಲಸಕ್ಕೆ ಕೈಹಾಕಬೇಡಿ (ಪಂಜಪಂ. ೧೭೮). [ ದುಬಾರಿ + ಕೆಲಸ ]

**ದುಬಾರಿಖರ್ಚು** (ನಾ). ಬಹಳ ಹೆಚ್ಚಾದ ವ್ಯಯ,-ವೆಚ್ಚ : ಬೆಲಿ ಏರಿಕೆಯ ಈ ಕಾಲದಲ್ಲಿ ದುಬಾರಿಖರ್ಚನ್ನು ಮಾಡಬಾರದು (ರೂಢಿ).

[ ದುಬಾರಿ + ಖರ್ಚು (<ಕರ್ಚು₄) ]

**ದುಬಾರಿಬೆಲೆ** (ನಾ). ಹೆಚ್ಚಾದ ಕಿಮ್ಮತ್ತು ; ಬಹಳವಾದ ಕ್ರಯಂ : ಇಂದಿನ ರೇಷನ್ ಮತ್ತು ಸಾಮಾನು ದುಬಾರಿಬೆಲೆ ಕಾಲದಲ್ಲೂ . . . ದೋಸೆಗಳನ್ನು ಆರುಕಾಸಿಗೊಂದರಂತೆ ಮಾರುವ ಏರ್ಪಾಡು ಮಾಡಿದ್ದೇನೆ

(ನಾಡಿಗೇ. ೨೪೬) ; ಆರುತಿಂಗಳು ಹೇಗೋ ಕಾಲ ಹಾಕಿ, ಇನ್ನಾರುತಿಂಗಳು ದುಬಾರಿಬೆಲೆ ಕೊಟ್ಟು ಸಾಮಾನುಗಳನ್ನು ಕೊಂಡು ಸಂಸಾರ ಸಾಗಿಸಬೇಕು (ನನ್ನೂರು. ೩೦೭). [ ದುಬಾರಿ + ಬೆಲೆ ]

**ದುಬಾರಿವೆಚ್ಚ** (ನಾ). = ದುಬಾರಿ ಖರ್ಚು: ದುಬಾರಿವೆಚ್ಚದ ಯಜ್ಞ ಯಾಗಾದಿಗಳ ನೆರವಿಲ್ಲದೆಯೇ ವ್ಯಕ್ತಿಯು . . . ಪರತತ್ತ್ವವನ್ನು ಕುರಿತು ಧ್ಯಾನಮಾಡಿ ಸಾಮೀಪ್ಯವನ್ನು ಸಾಧಿಸಬಹುದು (ತತ್ತ್ವಶಾ. ೧೫೪).
[ ದುಬಾರಿ + ವೆಚ್ಚ ]

**ದುಬಾರಿಸು** (ಕ್ರಿ). (?): ಸುಬಾಹುಸಯುನಾಂತರಂ ಹನುಮನುತ್ಕಸನ್ನಾಸಿಕಂ ದು[ಪಾಠಾಂ. ದೂ]ಬಾರಿಸದ ಸತ್ಕುಚಾಂತರಮಿವ್ವೆದು ದೀರ್ಘಂ ವಲಂ (ಹಾಲಾಸ್ಯ. ೧-೧೩-೩೬). [ ? + – ಇಸು₃ ]

**ದುಬಾಷಿ** 'ದುಂಭಾಷಿ' ನೋ.

**ದುಬಾಸಿ** 'ದುಂಭಾಷಿ' ನೋ.

**ದುಬುದುಬು** (ನಾ). ಒಂದು ಅನುಕರಣ ಶಬ್ದ: ಇದ್ದಕ್ಕಿದ್ದಂತೆ ದುಬುದುಬು ಎಂದು ಮಳೆ ಬೀಳಲು ಆರಂಭವಾಯಿತು (ರೂಢಿ).

**ದುಬ್ಧಿ** (ನಾ). ೧. ಸಂಶಯ; ಹೊಯ್ದಾಟ: ದುಬ್ಧಿಮೂಲಗಳಡಗಿ ದಧ್ಯಾತ್ಮ ಸ್ವಾರಸ್ಯಲಬ್ಧಿಮಂ ತಿಳಿದಿರ್ಪ ಯೋಗಾಢ್ಯರಿಂಗೆಯುಪಲಬ್ಧಿ ಯಿಂದುಣಬಡಿಸಿ ಸೌಖ್ಯದಿಂದನಿಬರಂ ಪೊಂಗಿಸಿದನಿಂಗಡಲೊಲು (ಪರಶು. ೧೬-೧೧). 'ದುಗ್ದೆ' ಪರಾ. ೨. ನಿರಾಶೆ; ಚಿಂತೆ; ದುಃಖ. 'ದುಬ್ಧಿ ಗೊಳ್ಳು' ಪರಾ. ೩. ಹೊಟ್ಟೆಕಿಚ್ಚು; ಅಸೂಯೆ. 'ದುಬ್ಧಿಪಡು' ಪರಾ. [ ←ಹಿಂ. ದುಬಧಾ, ದುಬಿಧಾ, ದುಬಿಧ./ಸಂ. ದ್ವಿವಿಧ ]

**ದುಬ್ಧಿಗೊಳ್ಳು** (ಕ್ರಿ). ಹತಾಶನಾಗು; ವ್ಯಥೆಪಡು; ಬೇಗುದಿಗೊಳ್ಳು: ತನ್ನ ಸಂದಿಗ್ಧಪರಿಸ್ಥಿತಿಗಾಗಿ ತೀರ ದುಬ್ಧಿಗೊಂಡಂತೆ 'ಅಲ್ಲಾ' ಎಂದು ನಿಟ್ಟುಸಿರಿಡುತ್ತಾ . . . ಕೈ ಚಾಚಿದ (ನನ್ನರ. ೪೯).
[ ದುಬ್ಧಿ + ಕೊಳ್ಳು₁ (<ಕೊಳ್₁) ]

**ದುಬ್ಧಿಪಡು** (ಕ್ರಿ). ಹೊಟ್ಟೆಕಿಚ್ಚು ಪಡು; ಕರುಬು; ಮತ್ಸರಿಸು: ಕಮಲಮ್ಮ ಅವರ ಜೀವನ ನೋಡಿ ಗಂಭೀರಮುಖ ಮಾಡಿಕೊಂಡು ನಿಲ್ಲುತ್ತಿದ್ದಳು . . . ಲಕ್ಷ್ಮಂದೇವಿ ಮಾತ್ರ ಒಳಗೇ ದುಬ್ಧಿಪಡುತ್ತಿದ್ದಳು (ತಾಯಿಕ. ೩೬). [ದುಬ್ಧಿ + ಪಡು₁ ]

**ದುಬ್ಬ** 'ದಂಡಂಮ' ನೋ.

**ದುಬ್ಬಗಾಣಿಸು** (ಕ್ರಿ). ಪ್ರಕಟಪಡಿಸು; ವ್ಯಕ್ತಗೊಳಿಸು: ಒಬ್ಬಳ ಮೇಲೆ ತನಗೆ ಸೋಲವಿದ್ದರು ದುಬ್ಬಗಾಣಿಸನದ ನುಡಿದು ಒಬ್ಬ ಪುರುಷನೊಬ್ಬ ಸತಿಯೊಳಿಪ್ಪಂತಿಹನುಬ್ಬಸವಿಲ್ಲದೆಲ್ಲರೊಳು (ಭರತೇ. ೫-೯೭).
[ <ತುಬ್ಬು₃ + ಕಾಣಿಸು ]

**ದುಬ್ಬಿ₁** 'ದಂಡುಮಿ' ನೋ.

**ದುಬ್ಬಿ₂** (ನಾ). ದೊಡ್ಡಪಾತ್ರೆ; ಕೊಪ್ಪರಿಗೆ: ಸರ್ಬನಾಶಕನೆಂಬನೊಬ್ಬನು ದುಬ್ಬಿಯಲಿ ಜನಿಸಿದನು ಕೌರವನು (ಸಂಭಪ. ೧೫-೭೪).
[ ದುಬ್ಬು (<ದುಮ್ಮು₁) + – ಇ₃ ]

**ದುಬ್ಬು** 'ದುವಮ್ಮು₁' ನೋ.

**ದುಬ್ಬುಳಿ** 'ದಂಪ್ಪಳ' ನೋ.

**ದುಬ್ಬುಳುಕ** (ನಾ). (?): ಸರಕಾರಕ್ಕೆ ರುಜು ಇಲ್ಲದೆ ರೈತನಾಗಬಾರದು ಅದೇಕೆಂದೊಡೆ ಇಪ್ಪುಳ್ಳಾತನೇ ಪಾಚ್ಚಾ ರೈತ ಇಲ್ಲದಾತ ದುಬ್ಬುಳುಕ ಎಂದನಯ್ಯಾ ನಿಮ್ಮ ಶರಣ (ವಚಸಂ. ೭೦-೭೧). [ ? ]

**ದುಬ್ಬೆಸನ** (ನಾ). ಕೆಟ್ಟಚಾಳಿ; ದುಷ್ಟವ್ಯಸನ: ಹುಸಿವ ಕನಲ್ವ ಬಯ್ವ . . . ಬೇಸಟಿಗೊಲೊಂದಿದೆವೆಂಬ ಕೂಡೆ ದುಬ್ಬೆಸನದೊಳಿಕ್ಕಿ ದೇವರನವಂ ತವೆ ತಿಂಬ ತಪಸ್ವಿಯಲ್ಲಿ ಹೋಲಿಸುವುದೆ . . . ಹರಿಸಕ್ತಿದೇವನನ್ (ಶಇ. IV, ೧-೯೧ ; 1204). [ <ಸಂ. ದುರ್ವ್ಯಸನ ]

**ದುಭಾಷಿ** ದುಬಾಷಿ, ದುಬಾಸಿ (ನಾ). ೧. ಭಾಷಾಂತರ ಮಾಡಿ ಹೇಳುವ ವ್ಯಕ್ತಿ.– ತಿಳಿಸುವ ವ್ಯಕ್ತಿ: ಅವರಿಗೆ ದುಭಾಷಿಯು ಕೆಲಸ ಮಾಡುವ ಮೊದಲನೆಯ ಪ್ರಸಂಗ ಇಲ್ಲಿಯೇ ಬಂದಿತು (ಕರವೀ. ೨೦೬). **ದುಬಾಷಿ**: ೧. ನೆಕ್ಲದೋವ್ ದುಬಾಷಿಯಾದನು (ಪುನರು. ೫೭೮) ; ಅಂಥಾ ಭಾರೀ ದುಬಾಷಿಗಳು ಯಾರಾದರೂ ಸಿಕ್ಕಿದರೆ . . . ನಾನೂರು ವರಹ ಸಂಬಳ ವನ್ನು ಕೊಟ್ಟು ಅವರನ್ನು ಇರಿಸಿಕೊಳ್ಳೋಣವು (ಮುಸುಗ. ೪೫) ; ಸಂದರ್ಭದಲ್ಲಿ ನೀವು ನಮ್ಮ ದುಬಾಷಿಗಳಾಗಿದ್ದರೆ ಚೆನ್ನಾಗಿರುತ್ತಿತ್ತು (ಕೃಷ್ಣಭೂ. ೨೦೪). **ದುಬಾಸಿ**: ೧. "ದುಬಾಸಿ–ದ್ವಿಭಾಷಿ" (ತದ್ಭಕೋ. ೭೦); "ಅರ್ಥ ವಿವರಣೆ ಮಾಡುವವನು; ವ್ಯಾಖ್ಯಾಕಾರ. ಬೇರೆ ಬೇರೆ ಭಾಷೆ ಗಳನ್ನಾಡುವವರ ಮಾತನ್ನು ಒಬ್ಬರಿಂದೊಬ್ಬರಿಗೆ ಬಾಯಿಮಾತಿನಲ್ಲಿ ಭಾಷಾಂತರ ಮಾಡಿ ಹೇಳುವವನು; ದುಬಾಸಿ" (Interpreter. ಇಂಕನಿ). ೨. ಎರಡು ಭಾಷೆಗಳನ್ನು ಬಲ್ಲ ವ್ಯಕ್ತಿ: ಯಿಲಿ ಕಾವಲು ದುಬಾಸಿಮುಗನ ಪಂಶಸ್ಥರದೂ (ಎಕ. XIV, ಶ್ರೀರಂಗ. ೧೮೭-೨೦ ; 1863).
[ ←ಹಿಂ. ಮರಾ. ದುಭಾಷೀ./ಸಂ. ದ್ವಿಭಾಷಿನ್ ]

**ದುಮಗುಟ್ಟು** 'ದುಮಂಗುಟ್ಟು' ನೋ.

**ದುಮಚಿ**, ಧುಮ್ಮುಚಿ (ನಾ). ಕುದುರೆಯ ಜೀನಿನ ಹಗ್ಗ,–ಬಾರು: ೧ ಸಿಂಹದ ತಲೆ ೧೮ ದುಮಚಿ ಗುಬ್ಬಿ ೨ ಯಿದರ ಕೆಳಗಣ ಪಟ್ಟಿ (ಎಕ. XIV, ನಂಜನ. ೩೯೩-ಪುಟ ೧೪೩ ; 1847). **ಧುಮ್ಮುಚಿ**: ಅವನ ಘೋಟಕಂ ಗಳ್ಗೆಂದುಂ ಧುಮ್ಮುಚಿಯನಿಕ್ಕಗಿಸಿ ಪರಿಯಮ್ಮಾಡಿಸಿ ತದ್ವಕೀಲಿಯಂ ಮಾಣಿಸಿದಂ (ಕಳನ್ನ. ೯-೩೩).
[ ← ಪಾರ. ದುಮ್ಮಾ; ಹಿಂ. ಮರಾ. ದುಮಚೀ ]

**ದುಮದುಮಿಸು** 'ದುಮುಂದುಮಿಸು' ನೋ.

**ದುಮಾನ₁** 'ದುಮ್ಮಾನ' ನೋ.

**ದುಮಾನ₂** (ನಾ). ಒಂದು ಬಗೆಯ ಡೇರೆ: ಹಲವು ಬಣ್ಣದ ಮುಗಿಲಾಗಸ ದಿಂದೇತಕಿಳಿದುಮೀ ಧರೆಗೆಂದೆನಿಸಿ ತಳಿತುವು ದೂಸು ದುಮಾನ ಗುಡಾರವಾ ಬಲದೊಳು ತಿಂತಿಣಿಯಾಗಿ (ನಾಗಕು. ೧೫-೧೦೮) ; ಮಹಾಶೂರರಂ ಕಡಿದವರಾನೆ ಕುದುರೆ ಬೊಕ್ಕಸ ದೂಸು ದುಮಾನ ಬಿರುದು ಮುಂತಾದವಂ ಕೊಂಡು (ಸಕವ್ವ. ೩ ಪ್ರಸ್ತಾವನೆ). 'ದುಮ್ಮಳ್ಳ' ಪರಾ. [ ? ]

**ದುಮಾಲಿ** (ನಾ). ೧. ಸರ್ಕಾರ ಮತ್ತು ಖಾಸಗಿ ವ್ಯಕ್ತಿ ಈ ಇಬ್ಬರ ಆಳ್ವಿಕೆಗೆ ಒಳಪಟ್ಟ ಗ್ರಾಮ ಅಥವಾ ಜಮೀನು: ದುಮಾಲೀ ಭೂಮಿಗಳ ಪರಭಾರೆ ಜಮಾಖರ್ಚು ಬಿಟ್ಟು ಆ ವರ್ಷದ ಪೊಟ್ಟು ಆದಾಯ ೩೩೮೭೦೩ ರೂಪಾಯಿ (ಕಭಾಗ. ೩೯೦). ೨. ಖಾಸಗೀ ಒಡೆತನಕ್ಕೆ ಸೇರಿದಂದು ಇನಾಂಗ್ರಾಮ: ಆರದಲ್ಲಿ ೧೨೦೪ ಗ್ರಾಮಗಳಿದ್ದವು; ಅವು ಗಳಲ್ಲಿ ಸರಕಾರೀ ೧೦೦೩, ದುಮಾಲಿ ೨೦೧ (ಕಭಾಗ. ೩೬೯).
[ ← ಮರಾ. ದುಮಾಲಾ; ಪಾರ. ದುಬಾಲ್ ]

**ದುಮಿಕ್ಕು** 'ದುಮ್ಮಿಕ್ಕು' ನೋ.

**ದುಮು** (ನಾ). (ಕೋಪ, ಅಸಂತುಷ್ಟಿಯನ್ನು ಸೂಚಿಸುವ) ಒಂದು ಅನುಕರಣ ಶಬ್ದ. 'ದುಮುಗುಟ್ಟು' ಪರಾ.
ದುಮುದುಮು (ದ್ವಿರುಕ್ತಿ): "ದುಮುದುಮು = ಉರಿಯುವುದು, ರೇಗುವುದು" (ಜಾನಕೋ. ೬) ; ಹಗಲೆಲ್ಲ ದುಮುದುಮು ಉರೀತಿರತಾನ (ರಂಗರೋ. ೩೩).

**ದುಮುಕ**, ದೂಮುಕ (ನಾ). ಎರಡು ಮುಖಗಳಿಂದ ಕೂಡಿದುದು: ದೂಮುಕಂ, ದುಮುಕಂ, ದ್ವಿಮುಖಂ (ಶಬ್ದಾನು. ೩೭೭ ಪ್ರಯೋ). **ದೂಮುಕ**: ಮೇಲಿನ ಪ್ರಯೋಗವನ್ನು ನೋಡಿ. [ <ಸಂ.ದ್ವಿಮುಖ ]

**ದುಮುಕದುಂಡಿ** (ನಾ). (?): ಕಸಮಾರಿಗೇಕೆ ದುಮುಕದುಂಡಿ ? (ಗಾದೆ)
[ ? ]

**ದುಮುಕು** 'ದುಮ್ಮಿಕ್ಕು' ನೋ.

**ದುಮುಗುಟ್ಟು**, ದುಮುಗುಟ್ಟು (ಕ್ರಿ). ೧. ಊದಿಕೊಳ್ಳು ; ದದ್ದರಿಸು ; ಉಬ್ಬು: ಜ್ವರದಿಂದ ಅವಳ ಮುಖ ದುಮುಗುಟ್ಟುತ್ತಿದೆ (ರೂಢಿ). ೨. ಸಿಡುಗುಟ್ಟು; ಅಸಂತುಷ್ಟಿ ತೋರು; ಮುಖಗಂಟಿಕ್ಕು; ಸಿಂಡರಿಸು: ಬೆಳಗಿನಿಂದ ಹುಬ್ಬುಗಂಟಿಕ್ಕಿ ದುಮುಗುಟ್ಟುತ್ತಲೆ ಇದ್ದಳು (ನಡದಾ. II. ೯೪೨) ; ಬೆಳಗಿನ ಮೋಡಗಳು, ಕೋಪ ಬಂದ ಮನುಷ್ಯ ಮಾತನಾಡಲಾಗದೆ ಹೋದರೆ ಹೇಗೆ ದುಮುಗುಟ್ಟುತ್ತ ದುಪ್ ಎಂದುಕೊಂಡಿರುತ್ತಾನೋ ಹಾಗಿದ್ದುವು (ನಿಬಂಧ. II. ೧೮೩) : ಯಾವಾಗಲೂ ದುಮುಗುಟ್ಟುತ್ತ ಇರುವುದೇಕೆ ? (ಸ್ವಾಮಿನ್ನೀ. ೫೭). **ದುಮಗುಟ್ಟು** : ೨. "ದುಮಗುಟ್ಟು = ಸಿಟ್ಟಾಗು ; ಉರಿ" (ಜಾನಕೋ. ೭). [ ದುಮು + ಕುಟ್ಟು$_1$ ]

**ದುಮುದುಮನೆ** (ಅ). ದುಮುದುಮು ಎಂಬ ಶಬ್ದದೊಡನೆ : ಅಲ್ಲಿಯ ವರೆಗೆ ಅವನ ಹೃದಯದಲ್ಲಿ ಹೊರಗಂಡಿ ಕಾಣದೆ ಮಡುಗೊಂಡಿದ್ದ ಪ್ರೇಮ ಪ್ರವಾಹ ದ್ವಾರ ತೆರೆದಂತಾಗಿ ದುಮುದುಮನೆ ಹರಿಯಲಾರಂಭಿಸಿತು (ಪುನರು. ೪೯೪). [ <ದುಮು + – ಅನೆ$_1$ ]

**ದುಮುದುಮಿಸು**, ದುಂದುಮಿಸು, ದುಮದುಮಿಸು (ಕ್ರಿ). ೧.=ದುಮು ಗುಟ್ಟು ೨ : ಕೋಪವೇ ದುಮುದುಮಿಸುತ್ತಿರುವ ಮೊಗದವರು . . . ನೆರೆದರು (ಬಿದುಕಿ. ೧೩೪). ೨. ಆವರಿಸು ; ಇಡುಗು ; ತುಂಬು : ಜಯ ಘೋಷವು ರಾಜಾಂಗಣದಲ್ಲಿ ನೆರೆದ ಸಂದಣಿಯಿಂದೆದ್ದು ಮೂರು ಬಾರಿ ಬಾಂದಳವನ್ನು ದುಮುದುಮಿಸಿತು (ವೀರಬಂ. ೭೩) ; ಗದ್ದಲದಿಂದ ದುಮು ದುಮಿಸಿದ ಪಡಸಾಲೆ ಬರಿದಾಯಿತು (ಗಂಮೂಯಿ. ೮೭). **ದುಂದುಮಿಸು** : ೨. ಇಷ್ವಾಗುವಲ್ಲಿ ಮೇಲಿನ ಧರ್ಮಶಾಲೆಯ ಪರಿಸರದಿಂದೆದ್ದ ಗುಲ್ಲು ಬಾಂದಳವನ್ನು ದುಂದುಮಿಸಿತು (ವೀರಬಂ. ೫೧). **ದುಮದುಮಿಸು** : ೩. ಪ್ರತಿಧ್ವನಿಸು ; ಅನುರಣನವಾಗು : ನನ್ನ ಕಿವಿಯಲ್ಲಿ ಹಾಗೆ ದುಮ ದುಮಿಸುವಂತಿದೆ ಆ ಭಜನೆ (ಸ್ಮೃತಿಚಿ. ೪೫೭). [ <ದುಮು + – ಇಸು$_3$ ]

**ದುಮ್ಮಜಲು** (ನಾ). ಎರಡಂತಸ್ತಿನ ಕಟ್ಟಡ : ಹೂಂ. ದುಮ್ಮಜಲಾಗೇದ. ತೆಳಗ ಮೋಟಾರಖಾನಿ, ಮ್ಯಾಲೆ ಸರ್ವಿಸ ಕಂಪನಿಯ ಆಫೀಸು (ದಾಸಹು. ೯).
[ ದು + ಮಜಲು./ಮರಾ. ದುಮಜಲಾ, ದುಮಜಲೀ ]

**ದುಮ್ಮತಿ** 'ದುರುಮತಿ' ನೋ.

**ದುಮ್ಮನ** 'ದುಮ್ಮಾನ' ನೋ.

**ದುಮ್ಮರಾಸ್ಮೆ** 'ದುಷ್ಪರಾಸ್ಮೆ' ನೋ.

**ದುಮ್ಮಸ** (ನಾ). ಒಂದು ಬಗೆಯ ಸಿಹಿಯ ತಿನಿಸು : ಆಕಳ ಹಾಲಾಗ ದುಮ್ಮಸ ಮಾಡ ಪರಡಿ ಸವತೀ ಬೀಜ ಪಾಯಸ ಮಾಡ (ಮಲ್ಲಿಗೆ. ೮೩).
[ ? ]

**ದುಮ್ಮಸಾಲೆ** 'ದುಮ್ಮಿಸಾಲು' ನೋ.

**ದುಮ್ಮಳ$_1$** (ನಾ). ಕಳವಳ ; ಚಿಂತೆ ; ದುಗುಡ: ಕರ್ಮವ ಮಾಡುವಲ್ಲಿ ಆ ಕರ್ಮದ ಮರ್ಮವನರಿಯಬೇಕು ಆ ಮರ್ಮದ ಮರ್ಮವನರಿವಲ್ಲಿ ಉಮ್ಮಳ ದುಮ್ಮಳವೆಂಬ ಸುಖಸುಮ್ಮಾನವೆಂಬ ಉಭಯವಡಗಿದಲ್ಲಿ ಪ್ರಾಣ ಲಿಂಗ ಸಂಬಂಧ (ಮೋಳಿಮಾ. ೭೫-೦೪) : ಒಡನೆ ದುಮ್ಮಳ ತವಿಸುವಂತೆ . . . ಲಲನೆ ಪರವೆಗೆ ಸೌಂದರಾಧಿಪನ ಕಂದಿತ್ತು ಸಲಹೈಯ್ಯು (ಸೌಂದಪು. ೮-೬೯). [ <ಉಮ್ಮಳ ]

**ದುಮ್ಮಳ$_2$** (ನಾ). ಒಂದು ಬಗೆಯ ಡೇರೆ : ಗುಡಿ ದುಮ್ಮಳ ಚಂಪೆಯ ಗೂಡಾರ ಗಡಣಿಸೆ ತರತರದಿಂ ಬಿಡೆ ಕೆಲಕೆಲವೆಡೆಯೊಳು ಚೀನ ಮಹಾ ಚೀನದ ದೇವಾಂಗದ ತಾವಿಗಳಾ (ಕುಮುರಾ. ೧೭-೨೫) ; ಗುಡಿ ಗೂಡಾರ ಚೆಲ್ವಂಗಡಿ ಚೌರಿಗೆ ಚಂಪೆ ತಿವುರಿ ದುಮ್ಮಳವಿಮವಡಿಸೊಂದಡಸಿದ ಪಸುರಿಂ ಕಪ್ಪಿಂ ಕಡುಗೆಂಪಿಂ ಮೆಱೆದುದವನ ಪೊಱವೀಡು ಕರಂ (ಬಾಧಪು. ೧೦-೧೯). 'ದುಮಾನ್ನ' ಪಠಾ. [ ? ]

**ದುಮ್ಮಾನ**, ದುಮಾನ$_1$, ದುಮ್ಮನ (ನಾ). ೧. ಮನಸ್ಸಿನ ಉಮ್ಮಳ ; ಚಿತ್ತಕ್ಷೋಭೆ: ಏನುಮಂ ಕಾಣದೋರಂತೆ ಮಱುಪಟ್ಟು ದುಮ್ಮಾನವೊಡಲಂ ತೀವಿ ತುಳುಕಾಡುತಿರಲು ರಿಪುಭೂನಾಥಶರಧಿವಡಬಾನಲಂ ಮಱೆದು ಚಿಂತಾಚಿತ್ರನಿರುತಿರ್ದನು (ಹಡಕಾ. ೬-೫೮) : ದುಮ್ಮಾನಂ ತೀರ್ದೊಡೆನಗೆ ರಿಪುಜಯೋಪಾಯಮಾವುದು (ದಶಕು. ೨-೬೫ ವ) ; ಕೆತ್ತ ದುಮ್ಮಾನದಲಿ ದ್ರೌಪದಿಯುತ್ತಮೆಯಲಾ ದೃಢಪತಿವ್ರತೆಗೆತ್ತಣದು ಪರಿಭವವಿದೆಂದಸುರಾರಿ ಚಿಂತಿಸಿದ (ಕುವ್ಯಾಸ. ಒರಿಣ. ೧೫-೧೩೪) ; ಆಗ ಬಿಜ್ಜಳಂ ದುಮ್ಮಾನದಿಂ ಕುಳ್ಳಿರೆನಲು (ಚಬಪು. ೭-೨೫) ; ಕಾತರಿಸಿ ಕಳೆಗುಂದಿ ದುಮ್ಮಾನದಿಂ ಪೊಕ್ಕ ನಂತಃಪುರಕೆ ಪುತ್ರವುಗುವಹಿಪನಂತೆ (ಜೈಮಿಭಾ. ೧೮-೯೭) : ಆದರೆ ದುಮ್ಮಾನಕ್ಕೆ ಒಳಗಾಗಿದ್ದ ವ್ಯಕ್ತಿಯು ಹುಡುಗಾಟಕೆಯು ಇಲ್ಲವೆ ಬಡಿ ವಾರದ ಮೇಳಕ್ಕೆ ಅರ್ಹತೆ ಪಡೆದಿರಲಿಲ್ಲ (ಹೇಮಂತ. ೭೮). ೨. ದುಃಖ ; ದುಗುಡ ; ಅಳಲು ; ಚಿಂತೆ : "ಬೇಸಮ, ದುಮ್ಮಾನಂ, ಉಮ್ಮಳಂ – ಈ ೩ ಚಿಂತೆ" (ಕಶಸಾ. ೧೨-೨೨೭); ಕತ್ತಲೆಯಲ್ಲಿ ಗತಿಯು ಕಾಣದೆ ದುಮ್ಮಾನ ನೆಲೆಗೊಂಡಿತ್ತು ಸುಮ್ಮಾನ ಹೋಯಿತ್ತು (ಅವಹಂ. ೪೦-೪೭೦) ; ಕಂದ ನುಡಿ ದುಮ್ಮಾನ ಬೇಡೆನ್ನಾಣೆನುತ ಸಂತೈಸಿದನು ಮಗನ (ಕುವ್ಯಾಸ. ೧೭-೧೭) ; ಕಳೆಗುಂದಿದೆ ವದನ ದುಮ್ಮಾನವಾರಿಂದಾಯ್ತು (ತೊರಭಾ. ೬-೨೭-೬೪) ; ಮನೆಮನೆಗಳಿಗೆ ದುಮ್ಮಾನವಡಸಿತು (ಸವತಿ. ೨೦೧) ; 'ಈ ಪ್ರಾಸಾದದಲ್ಲಿ ನನಗೆ ಪುಣ್ಯಭಾಗದ ಲಭ್ಯವಿಲ್ಲ' ಎಂದು ದುಮ್ಮಾನ ಹೊಂದಿ ಒಂದು ಕಡೆ ಅಳುತ್ತಾ ನಿಂತಳು (ಹತ್ತುಮು. ೫೩). ೩. ಕಷ್ಟ ; ಹಿಂಸೆ ; ತೊಂದರೆ ; ಕೇಡು : ಭೂನಾಥ ಬೆಟ್ಟದ ಚಾಮೇಂದ್ರ ಬಹು ದುಮ್ಮಾನವಿತ್ತನ್ನ ರಿಪುಗಳಿಗೆ (ಕಂಕವಿ. ೩-೮೧); ಒಡಲಿನಬ್ಬರವೇನು? ಅತುಮದ ನಾಣ್ಚೇನು? ಪೊಡವಿಗಿದೆ ದುಮ್ಮಾನ (ಮಂಕುಕ. ೧೯೧); ಬಿಲದೊಡತಿ ನಾನಿಂತು ಅಳಿಯೆ, ಬಲು ದುಮ್ಮಾನ ಕುಲಕೆ ಬಹುದನುಮಾನ ಬೇಡ, ತಿಳಿಯುವಮ್ಮಾ ! (ಕವಪು. ೩೩-೩). ೪. ಅವಮಾನ; ಅಪಮಾನ : ಅಖಿಳ ಧರಣೀಪಾಲಕರ ದುಮ್ಮಾನವನು ಪಾಂಚಾಲದೇಶವ ಕಳೆದು ಹೊಕ್ಕರು ತಮ್ಮ ನಗರಿಗಳ (ಕುವ್ಯಾ ಆ. ೧೭-೧) ; ಮುದಿ ತುಂಬುರಂಗೆ ಸಮ್ಮಾನಮಪ್ಪೆಡೆಯೊಳೆನಗೆ ದುಮ್ಮಾನಮಾದುದು ಗಡ ! (ಅದ್ಭುತ. ೨೦-೯): ನೆಲಗಟ್ಟನ್ನು ನೀರೆಂದು ಭ್ರಮಿಸಿ ತಾನು ಉಟ್ಟಿದ್ದ ಬಟ್ಟೆಯನ್ನು ಮುದುರಿಕೊಂಡನು. ಅದು ನೀರಲ್ಲ ವೆಂದು ತಿಳಿದಾಗ ದುಮ್ಮಾನದಿಂದ ಮುಖ ತೋರಿಸದೆ ಮುಂದೆ ಹೋದನು (ವಚಭಾ. ೮೭). ೫. ಅಸಮಾಧಾನ ; ಅಸಂತುಷ್ಟಿ : ಒಮ್ಮೆ ನಿನ್ನೊಳಗೆ ಪತಿಯ ಬಗೆ ದುಮ್ಮಾನವಾಗೆ ... ಸುಮ್ಮನಿಹುದು ಗುಣವಮ್ಮ (ಶಾಕುಂತ. ೫೭ ಅಡಿಪದ್ಯ). **ದುಮಾನ$_1$** : ೨. ಸುಮಾನ ಹೋಗಿ ದುಮಾನವಾಯಿತು ಮತ್ತೆ ಜನಪತಿಗೆ (ಪ್ರಭುಲೀ. ೧೦-೨೨). **ದುಮ್ಮನ** : ೨. "ದುಮ್ಮನ – ದುರ್ಮನಸ್ = ವ್ಯಥೆ" (ತದ್ಭಕೋ. ೨೦) ; ಕಿಱಿದನುರಾಗಮುಂ ಕಿಱಿದು ದುಮ್ಮನಮುಂ ... ಸೆಱೆವಿಡಿದೆನ್ನ ವಲ್ಲಭೆಯ ಮುದ್ದುಮೊಗಂ ವ್ಯಭಿಚಾರ ವಿಶ್ರಮಂ ಮೆಱೆದಪುದೋ ದಿನಾಗಮುದ ರಾತ್ರಿವಿರಾಮದ ಪದ್ಮದಂದದಿಂ (ಅರ್ಧನೇ. ೧-೧೧೧) ; ವಿಜಯವಿಠ್ಠಲ ಮಹಮೂರುತಿ ಘಮ್ಮನದಿಂದಲಿ ಬಂದು ದುಮ್ಮನವ ಕಳೆವ (ವಿಸಾಸು. ೩೩-೨).
[ <ಪ್ರಾ. ದುಮ್ಮಣ./ಸಂ. ದುರ್ಮನಸ್ ]

**ದುಮ್ಮಾನಗೊಳು** (ಕ್ರಿ). ಚಿಂತಿಸು ; ಬೇಗುದಿಗೊಳ್ಳು : ತನ್ನ ಮನದಲ್ಲಿ ದಕ್ಷ ದುಮ್ಮಾನಗೊಳುತ ಮಿಗೆಯನ್ನಪಾನಾದಿ ಭೋಗಗಳ ಕೊಳ್ಳದೆ ಮಗಳ ಮನ್ನಿಸುತ್ತಿತ್ತುದಕೆ ಫಲವಲಾ (ಚತುಪು. ೩-೮-೧೮).
[ ದುಮ್ಮಾನ + ಕೊಳು ( <ಕೊಳ್$_1$ ) ]

**ದುಮ್ಮಾನತತಿ** (ನಾ). ದುಗುಡದ ಸಮೂಹ : ಒಡನೆ ಸುರರಿಗೆ ಹತ್ತಿತ್ತೆ ದುಮ್ಮಾನತತಿ ನರನಾಥ ಕೇಳೆಂದ (ಅಂಬಿಕಾ. ೭-೪೯).
[ ದುಮ್ಮಾನ + ತತಿ$_2$ ]

**ದುಮ್ಮಾನವಮನ** (ನಾ). ಚಿಂತೆಯಿಂದ ಕೂಡಿದ ಮನಸ್ಸುಳ್ಳವನಂ; ಯೋಚನೆಯಿಂದ ತುಂಬಿದವನು : ದೇವಿಯರಿರವು ತನ್ನಯ ಕಂಗಳಿಗೆ ಗೋಚರಿಸುವುದು ದುರ್ಲಭವೆನುತ ದುಮ್ಮಾನವಮನನಾದ (ತೊರರಾ. ೫-೩-೫). [ ದುಮ್ಮಾನ + ಮನ$_1$ ]

**ದುಮ್ಮಾನವಡು** (ಕ್ರಿ). ವ್ಯಥೆಪಡಂ; ದುಃಖಹೊಂದಂ: ಬೊಮ್ಮನೇ ಸಂಸೃತಿಯ ಕಟ್ಟಿಕೊಂಡುತ್ಸಹಿಸೆ . . . ಜನ್ಮ ಸಾಕೆನುವುದೇಂ ? ದುಮ್ಮಾನವಡುವುದೇಂ (ಮಂಕುಕ. ೨೬೨). [ ದುಮ್ಮಾನ + ಪಡು$_1$ ]

**ದುಮ್ಮಾನಿಸು** (ಕ್ರಿ). ಕಳವಳದಿಂದ ಕೂಡಿರು : ದೂರದಲಿ ದುಮ್ಮಾನಿಸಿದ ವದನಾರವಿಂದವ ಕಂಡು . . . ಶೌರಿಗಾಯ್ತುವಮಾನವಿದೆಲೇ ಮಾರಿ ಗುತ್ತವವೆನುತ ಬಂದನು ಮಾರುತನ ಮಗನು (ಕುಮ್ಮಾಉ. ೧೧-೨). [ ದುಮ್ಮಾನ + – ಇಸು$_3$ ]

**ದುಮ್ಮಿ, ದಿಮ್ಮಿ$_2$** (ನಾ). ೧. ಒಂದು ಬಗೆಯ ಚರ್ಮವಾದ್ಯ. ೨.=ದುಮ್ಮಿಸಾಲು : ನೀರಾಜನಪದಂಗಳಂ ದುಮ್ಮಿಯ ಪದಂಗಳಂ ಪಾಡುತೊಸೆದು (ಆರಾಜ. ೧-೨೫) ; ದುಮ್ಮಿಸಾಲು ಕಾಮನಿಂಗೆ ದುಮ್ಮಿ ತಜ್ಜನಕನಿಂಗೆ ನೆಮ್ಮಿ ಭಜಿಸಿ ನಿಜವನರಿತು ಕಾಮಹರನನು (ಕವಿಚ. III, ೮೦ ; ಕಾಮವಿಡಂಬನ). **ದಿಮ್ಮಿ$_2$ :** ೧. ಕಲಾವಿದರು ದಿಮ್ಮಿಯನ್ನು ಕೈಯಲ್ಲಿ ಹಿಡಿದು ಕುಣಿತಕ್ಕೆ ಸಿದ್ಧರಾಗುತ್ತಿದ್ದಾರೆ (ರೂಢಿ). 'ದಂಂದುಮೆ' ಪರಾ. [ <ದುಂ./ತುಳು. ದಿಮ್ಮ ]

**ದುಮ್ಮಿಕ್ಕು, ದುಮಿಕ್ಕು, ದುಮುಕು, ಧುಮುಕಂ, ಧುಮ್ಮಿಕ್ಕು** (ಕ್ರಿ). ೧. ಕೆಳಗೆ ಹಾರು,–ನೆಗೆ ; ಎರಗು : ಕೂಪನಿರೀಕ್ಷಣಂಗೆಯ್ದಲ್ಲಿ ಸಿಸುವಂ ಕಂಡು ವಾತ್ಸಲ್ಯದಿಂ ನೆಲೆಗೊಡದ ವಿಷಮಯಮುಪ್ಪ ಭಾವಿಯಂ ದು[ಪಾಠಾಂ. ಧು]ಮ್ಮಿಕ್ಕೆ (ಜೀವಸಂ. ಪರಿ. ೧-೨೫೭) ; ಕೆಱೆಗಳಲ್ಲಿ ದು[ಪಾಠಾಂ. ಧು]ಮ್ಮಿಕ್ಕಿ ಮುಳುಗುತ ಸಱಿಗಳಂ ತಾಪದರುತಂ ಪಿರಿ ದೊಱಲುತಳುತಂ . . . ಅಖಿಳ ಜೈನರು ಹೊರಳುತಿರಲು (ಬಸಪು. ೫೨-೧೫) ; ಹಕ್ಕಿಗಳರಸ ಜೀಮೂತವಾಹನಗೆ ದುಮ್ಮಿಕ್ಕಿದೊಲೆಱಗಿ ರಕ್ಕಸನ ಸಿಕ್ಕಿಸಿ ತಲೆಮುಱಿವಂತೊದ್ದು ನೆಲದೊಳಗಿಕ್ಕಿದ (ಮೋಹತ. ೧೨-೯೪); ಇಳೆಯ ಮೇಗಣ್ಗೆ ದುಮ್ಮಿಕ್ಕಿ . . . ದಕ್ಷನಂ ತುಡುಕಿ ಕಡುಪಿಂ ಕೆಡಪಿ ಗೋಣ್ಗೊಱೆದ ವೀರಭದ್ರಂ (ನಂದಿಮಾ. ೦-೮) ; ತಲೆಗೆದರಿ . . . ತಿಲಪಿಷ್ಟಮಂ ಮೆಲುತ ತೈಲಪಾನದಿ ತಾಪ ನಿಲದೆಂದು ದು[ಪಾಠಾಂ. ಧು] ಮ್ಮಿಕ್ಕಿದಂ ಗೋಮಯಹ್ರದಕ್ಕೆಂದು ಕಂದಿದಾನನದಿ ಪಿತನು (ವೆಂಕಶಾರಾ. ೨-೨೪-೩೨). ೨. ಹೊರಸೂಸು ; ಹೊರಹೊಮ್ಮು ; ಪ್ರಕಟಪಡಂ : ಕಂಡಳವಳೀ ರಾಜಚಂದ್ರಮನ ದೂರದಲಿ ದು[ಪಾಠಾಂ. ಧು]ಮ್ಮಿಕ್ಕಿದುದು ದೃಢವೈರ ದರುಶನವಮಾತ್ರದಲಿ (ತೊರರಾ. ೩-೪-೭) ; ದುಂದುಭಿನಿನಾದವಾದಂತೆ ಪಂತನ ವಾಗ್ಝರಿ ದುಮ್ಮಿಕ್ಕಿತು (ದಾನಚಂ. ೧೩). **ದುಮಿಕ್ಕು :** ೧. ಮುಗಿಲನೆತ್ತಿ ದು[ಪಾಠಾಂ. ಧು]ಮಿಕ್ಕಿ ಪೆರ್ಗದಹುಗಳನೊಡೆಬಡಿ (ಬಸಪು. ೫೭-೩೭). **ದುಮುಕು :** ೧. "ಎಸೆವುದುಂ ದುಮುಕೆನಲ್ ಲಂಘನಕೆ" (ಶಶರ. ೧೨೫) ; ಧರ್ಮಸ್ರಾವಕೇಂದ್ರನು ಮುಂದೆ ಬಸದಿಯನೀಱಿ ದು[ಪಾಠಾಂ. ಧು]ಮುಕಿದನು (ಬಸಪು. ೫೨-೦೭) ; ಪ್ರಾಣಸ್ಪಂದನವು ನಿಂತುಬಿಟ್ಟರೂ ಸಾವು ದುಮುಕ ಸಲ್ಲ ಉಸಿರು ಹಿಂಗಿಯೂ . . . ಆತ ಬದುಕಬಲ್ಲ (ಅರಳು. ೨೧೯-೧೫) ; ದುಮುಕಿದರೆ ದುಃಖ ಹೋದೀತೆ ? (ಗಾದೆ). ೩. ಧಾವಿಸು ; ನುಗ್ಗು ; ಮುನ್ನುಗ್ಗು : ಅವುಗಳನ್ನು ನೋಡಿ ಮನಸ್ಸು ಚಕಿತವಾಗಿ ಸಂಶೋಧನೆಗೆ ದುಮುಕುವುದು (ಕನ್ನಜಾ. ೧೩೦). ೪. ದಂಡುಕು ; ವಿಚಾರವಿಲ್ಲದೆ ಪ್ರವೇಶಿಸು : ಯಾವ ಕೆಲಸವೇ ಆಗಲಿ, ಹಿರಿಯರ ಸಲಹೆಯನ್ನು ಕೇಳದೆ ಒಂದೇ ಸಲ ದುಮುಕಬಾರದು (ರೂಢಿ). **ಧುಮುಕು :** ೧. ಮಡುವ ಧುಮುಕಿ ಕಾಳಿಂಗನ ಪಿಡಿದು ಹೆಡೆಯ ಮೇಲೆ ಕುಣಿದಾಡುತ್ತಿರೆ (ಪುರಂದ. ೧-೯೭-೪) ; ಅವನು ಪೌಳಿಯಿಂದ ಧುಮುಕಿ ಹುಡುಗಿಯರ ಹಿಂದೆ ಓಡಿದನು (ಮಲೆನಾ. ೧೯೯). ೩. ಹೆಜ್ಜೆಯಿಟ್ಟಲ್ಲೆಲ್ಲ ಜೋಲಿ ಹಿಡಿದಿದೆ ಮಣ್ಣು ಧುಮುಕುತಿದೆ ನೀರು (ನೆಲಮು. ೩೦-೩) ; ಅದು ತಕ್ಷಣವೇ ಬೊಗಳುವುದನ್ನು ನಿಲ್ಲಿಸಿ ತಿಂಡಿಗಾಗಿ ಧುಮುಕುತ್ತಿತ್ತು (ಶಾಲಮ. ೧೯೮). ೪. ಹಲವು ಮಕ್ಕಳು ಪ್ರಶ್ನೆಯನ್ನೂ ಸಮಸ್ಯೆಯನ್ನೂ ಅರ್ಥಮಾಡಿಕೊಳ್ಳದೆಯೇ ಇತ್ಯರ್ಥಪಡಿಸಲು ಧುಮುಕುವರು (ಶಿಕ್ಷದ. ೫೪೫). **ಧುಮ್ಮಿಕ್ಕು :** ೧. ಜೀವವಂ ತ್ಯಜಿಸುವೆನೆನುತ್ತಂ ಬಾವಿಯೊಳು ಧುಮ್ಮಿಕ್ಕಿ ಬಿದ್ದಂತಾತನಂ ಹಿಡಿದು (ಬಸಪು. ೦೩-೯); ರಥದಿಂ ಪೊಡವಿಯೊಳು ಧು[ಪಾಠಾಂ. ದು]ಮ್ಮಿಕ್ಕಿದನು (ಕುಮ್ಮಾಭೀ. ೭-೩೫); ಧುಮ್ಮಿಕ್ಕಿದನು ಧರೆಗೆ (ತೊರರಾ. ೩-೨-೨೨); ಕಲ್ಲಱೆಗಳ ಮೇಲೆ ಧುಮ್ಮಿಕ್ಕೆ ನೃತ್ಯವನಾಡುವಂತೆ (ಮೋಹತ. ೧೯-೭೪) ; ಪುಗುವೆನಂಗುಷ್ಠಮಾತ್ರದಿ ಕೇಳು ಘೋರತರ ಮೊಗವನೆಂದೆನುತ ಧುಮ್ಮಿಕ್ಕಿ ವದನವ ಪೊಕ್ಕು (ವೆಂಕಶಾ. ೫-೦-೫೦) ; ದಿನವನಿತೆ ಧುಮ್ಮಿಕ್ಕೆ ಪಶ್ಚಿಮ ಸಮುದ್ರಕ್ಕೆ, ಚಿಮ್ಮಿದುವು ರತ್ನಾಳಿ ತಳದಿಂ ನಭೋಂಗಣಕೆ (ಶ್ರೀರಾಮಾ. ೨೬೦-೮೭೭) ; ಆವ ಸಾಗರಕೆಲ್ಲಿ ಹೋಗಿ ಸೇರುವುದೊ ! ಆವ ಕಡೆ ಧುಮ್ಮಿಕ್ಕುತೆಲ್ಲಿ ಸುಳಿಯುವುದೊ! (ವಿಸೀಗೀ. ೯-೦೭). ೪. ಏಕಾಏಕಿ ಧುಮ್ಮಿಕ್ಕಬಾರದು. ಸಾವಧಾನವಾಗಿ ಮೆಲ್ಲಮೆಲ್ಲನೆ ಕಾರ್ಯವನ್ನೆಸಗಬೇಕು (ಕುರುಕಾ. ೧೨೯). [ ದೇ.೫ ತುಳು. ದುಮುಕು; ತೆಲು. ದುಮುಕು, ದುಮುಕ್ಕು ]

**ದುಮ್ಮಿಸಲೆ** 'ದುಮ್ಮಿಸಾಲಂ' ನೋ.

**ದುಮ್ಮಿಸಾಲು, ದಿಮಿಸಾಲೆ, ದಿಮ್ಮಿಸಾಲು, ದಂಮ್ಮಸಾಲೆ, ದಂಮ್ಮಿಸಲೆ, ದುಮ್ಮಸಾಲೆ** (ನಾ). ವಾದ್ಯದ ಸಂಗತಿಯೊಡನೆ ಹಾಡುವ ಒಂದು ಬಗೆಯ ಹಾಡು : ದುಮ್ಮಿಸಾಲು ಕಾಮನಿಂಗೆ ದುಮ್ಮಿ ತಜ್ಜನಕನಿಂಗೆ ನೆಮ್ಮಿ ಭಜಿಸಿ ನಿಜವನರಿತು ಕಾಮಹರನನು (ಕವಿಚ. III, ೮೦; ಕಾಮವಿಡಂಬನ). **ದಿಮಿಸಾಲೆ :** ಇಲ್ಲಿನ ಮೂಲನಿವಾಸಿಗಳ ಒಂದು ಬಳಗದವರು ಮನೆಮನೆಗೆ ಬರುತ್ತಾರೆ. ಅವರು ಸ್ವಂತ ಬೇಸಾಯಗಾರರಲ್ಲ. ಅವರಲ್ಲಿ ಒಬ್ಬಾತ . . . 'ದಿಮಿಸಾಲೆ' ಎಂಬ ಪಲ್ಲವಿಯುಳ್ಳ ಒಂದು ಹಾಡನ್ನು ಹಾಡುತ್ತಾನೆ. ಸಾಲೆ, ಶ್ಯಾಲಿ ಅಕ್ಕಿಯ ಹೆಸರಾದುದರಿಂದ ಪೂರ್ವದ ಕೃಷಿಯ ಸಂಸ್ಕಾರಕ್ಕೆ ಸಂಬಂಧಿಸಿದುದು ಎಂದು ಊಹಿಸಬಹುದು (ಜಾನಗೀ. ೮೪); ಕುಂದಾಪುರದ ಕಡೆ ಹಾಡುವ ದಿಮಿಸಾಲೆ ಹಾಡಿನ ಕೊನೆಗೆ 'ಕಾಮನ ಭೀಮನಾ ಹೋಳಿಯ ಹಬ್ಬ' ಎಂಬ ಸೊಲ್ಲು ಬರುತ್ತದೆ (ಜಾನಗೀ. ೮೫). **ದಿಮ್ಮಿಸಾಲು :** ದಿಮ್ಮಿಸಾಲೆನ್ನಿ ಚಿಕ್ಕ ತಮ್ಮಗಳಿರಾ (ವಾದಿಕೀ. ೬೦ ಪಲ್ಲವಿ). **ದುಮ್ಮಸಾಲೆ :** ನಲಿದು ಮುಡುಮಿಕ್ಕಿ ಗುಮ್ಮಡಿಗೆಲವಂ ಪೆರ್ಗರಡಿಯಂತೆ ಕುಪ್ಪಿಕ್ಕಿ ಕರಂ ಕೆಲವಂ ಕಣ್ಣಪ್ಪಂ ಮುಂದಲೆ ದುಱುಬಿಂ ದುಮ್ಮಸಾಲೆಯೆನುತಂ ಕೆಲವಂ ಪಿರಿದುಂ ಕೊಂಬು ಕೊಳಲ್ ವಹೌವರಿಗಳ ನುಣ್ಚರಮನಾಸ್ಯದೊಳ್ ತೋಱುತ್ತ (ತ್ರಿಪುವಿ. ೨೭-೧೫೭). **ದಂಮ್ಮಿಸಲೆ :** ಮುಂದೆ ತುಱುಬಂ ಕಟ್ಟಿ ದುಮ್ಮಿ [ಪಾಠಾಂ. ದುಂಬಿ] ಸಲೆಯಾಡುತಂ ಧುಂದಧುಂದದ ಬೇಡರಾಟಮಂ ತೋಱುತಂ (ಕಣ್ಣರ. ದೇ. ೦೩೯-೯). **ದುಮ್ಮಿಸಾಲೆ :** "ದುಂದಂವಿಂ; ಹೋಳಿಯಂ ಹಾಡಂ; ಕಾಲಜ್ಞಾನ ಪಲ್ಲವಿ" (ಜಾನಕೋ. ೭). ೨ 'ದಿಮ್ಮಸಾಲೆ' ಎಂದು ಕೊನೆಯಾಗುವ ಹಾಡಂಗಳನ್ನು ಹಾಡುವವನಿಗೂ ಈ ಹೆಸರು ಉಪಯೋಗವಾಗುತ್ತದೆ. ಶ್ರೀರಂಗಪಟ್ಟಣದ ಕಡೆಯಲ್ಲಿ 'ಬಿಸಿಲು ಮಾರಮ್ಮ'ನ ಗಂಡ ಎಂಬ ಅರ್ಥದಲ್ಲಿ ಇದನ್ನು ಬಳಸುತ್ತಾರೆ. [ ದುಮ್ಮಿ + ಸಾಲು$_3$ (<ಸಾಲ್$_2$) ]

**ದುಮ್ಮಿಸಾಲೆ** 'ದುಮ್ಮಿಸಾಲು' ನೋ.

**ದುಮ್ಮಿಸು** (ಕ್ರಿ). ಬಿಗಿದುಕೊಂಡಿರು; ಸಿಂಡರಿಸು; ಅಸಮಾಧಾನವನ್ನು ಸೂಚಿಸು : ಮಾತಾಡದೆ ಮುಖ ದುಮ್ಮಿಸಿಕೊಂಡಿದ್ದರೆ ಯಾಕೆ ವಹತಾಡ್ತೀವಿ ಹೇಳಿ (ನಿಂದನ. ೨೭). [ ದುಮ್ಮು$_1$ + – ಇಸು$_3$ ]

**ದುಮ್ಮು₁**, ಡುಂಬ್ಬ, ಡುಂಬ್ಬು, ಡುಮ್ಮಿ, ಡುಮ್ಮು, ದುಂಡುವುಂ₂, ದುಬ್ಬು (ನಾ). ೧. ದಪ್ಪನಾಗಿರುವುದು ; ಬೊಜ್ಜುಬೊಜ್ಜಾಗಿ ಬೆಳೆದಂದು : ಹೊಟ್ಟೆಗೆ ಹಾಕುತ್ತಿದ್ದುದು ಗಂಜಿ ನೀರಾದರೂ ಆ ಮರಿ ದುಮ್ಮುದುಮ್ಮಾಗಿ ಬೆಳೆಯಿತು (ಮಲಮ. ೭). ೨. **ಹೊಟ್ಟೆ** : ದುಮ್ಮಿನಿಂದ ಹಮ್ಮು ಕಳಕೊಂಡ (ಗಾದೆ). **ಡುಬ್ಬ** : ೩. ಮೇಲಕ್ಕೆ ಉಬ್ಬಿಕೊಂಡಿರುವುದಂ ; ಉಬ್ಬಿದುದು : ಅಂಗಿಯು ಮೇಲೆ ಎದ್ದು ನಿಂತಿದ್ದ ಡುಬ್ಬದ ಮೇಲೆ ಕೈ ಆಡಿದ (ಬಳಜೀ. ೮೯). ೪. ಒಂಟೆ, ಗೂಳಿ ಮೊದಲಾದಂವುಗಳ ಬೆನ್ನಿನ ಮೇಲಿರುವ ಉಬ್ಬು, ಮೇಲಕ್ಕೆದ್ದಿರುವ ದುಂಡನೆಯ ಭಾಗ : ವಿುರಜಿಯು ಒಂಟೆಯ ಡುಬ್ಬದಂತಹ ಮಹಾ ವೀಥಿಯಲ್ಲಿ ಟ್ರಕ್ಕು ಏರಿ ಇಳಿದಾಗ ಜೋಕಾಲಿಯ ಜೀಕು ಕೊಡುತ್ತಿತ್ತು (ದೀಪಹ. II, ೩೯೪) ; ಯಾವ ಡುಬ್ಬ (ಹಿಣಿಲು) ವೃಷಭದ ಕಾಂತಿಯನ್ನು ವೃದ್ಧಿಗೊಳಿಸುವುದೊ ಆ ಡುಬ್ಬವು ಆಕಳಿಗಿಲ್ಲ (ಕಮಳ. ೭೩). ೫. **ಬೆನ್ನು** ; **ಶರೀರದ ಹಿಂಬದಿ** : ನೀನು ನನ್ನ ಡುಬ್ಬವನ್ನು ಹಿಡಿದುಕೊಂಡು ಬಾ, ನಾನು ನಿನ್ನನ್ನು ಆಚೇ ದಂಡೆಗೆ ಸುರಕ್ಷಿತವಾಗಿ ಒಯ್ಯುವೆನು (ಅಂಬಿಕ. ೧೧೯) ; ಗುರುಗಳು ಹೊರಗೆ ಹೋಗುವುದೊಂದೇ ತಡ . . . ಇಳಿಜಾರು ಮೇಜು, ವಿದ್ಯಾರ್ಥಿಗಳ ಡುಬ್ಬ ಮುಂತಾದುವುಗಳ ಮೇಲೆ ಸಪ್ಪಳ ಹೊರಡುತ್ತಿತ್ತು (ರಕ್ತಧ್ವ. ೧೩೭). **ಡುಬ್ಬು** : (೬). **ಡುಮ್ಮಿ** : (ಗು). ೬. ದಪ್ಪವಾದ ; ಉಬ್ಬಿದ : ಏನು ಮಾಟ ಶಿವ ಡುಮ್ಮಿ ಡುಮ್ಮಿ ಹೊಟ್ಟೆ (ಪಲಾನ. ೬೦-೭). **ಡುಮ್ಮು** : ೧. ನೋಡುವುದಕ್ಕೆ ಡುಮ್ಮು ಡುಮ್ಮಾಗಿದ್ದರೂ ಶಕ್ತಿ ಮಾತ್ರ ಸ್ವಲ್ಪವೂ ಇಲ್ಲ (ರೂಢಿ). **ದುಡುಮ್ಮು₂** : ೧. 'ದುಡುಮ' ಪರಾ. **ದುಬ್ಬು** : ೧. 'ದುಬ್ಬ' ಪರಾ.

**ದುಮ್ಮು₂** 'ದುಂಪು' ನೋ.

**ದುಮ್ಮೆಸಗು** (ಕ್ರಿ). ದೂಳೆಬ್ಬಿಸು ; ನಾಶಮಾಡು : ಮಕುಟವ ಚಿಮ್ಮಿದವು ಮುಮ್ಮುಖದಿ ಕವಚವ ನೆಮ್ಮಿದವು ದುಮ್ಮೆಸಗಿ ಮಹಿಷಾಸುರನ ಶರಜಾಲ (ಅಂಬಿಕಾ. ೨೩-೨೩). [ ದುಮ್ಮು₂ (<ದುಂಪು) + ಎಸಗು₁ ]

**ದುಮ್ಮೇಳು** (ಕ್ರಿ). ರಭಸದಿಂದ ಏಳು; ಒಮ್ಮೆಲೆ ಮುನ್ನುಗ್ಗು : ಇಕ್ಕಿರ್ದ ಚೀಲಗಳ್ದುಮ್ಮೆದ್ದು ಫಲಗಳಂ ಮುಕ್ಕಲದ ನಾರಿಗುಸುರಲ್ವೇಕು ಭೂಪ ನಿಮ್ಮಕ್ಕಳಿಗೆ ಬಹಳ ಬಲವಿದ್ದೇನು ದೈವಬಲವಿಲ್ಲ (ತುರಂಗ. ೫೪-೩೮) ; ಧಾಳಿಯಿಟ್ಟುದು ಸೇನೆ ಕರಿಘಟೆ ತುರಂಗಚಯ ಹೊಳೆದವು ಕಡುಹಿನೋಳ್ದುಮ್ಮೆದ್ದು ನೂಕೆ (ತುರಂಗ. ೭೩-೨೦). [ ದುಂ + ಏಳು₁ (<ಏೞ್₁) ]

**ದುಯಂ** 'ದುಯ್ಯಂ' ನೋ.

**ದುಯಂತರಾಘಂಟೆ** (ನಾ). ಎರಡನೆಯ ಮೆಟ್ಟಲಿನ ಘಂಟೆ : ರಥದ ಅಲಂಕಾರಕ್ಕೆ . . . ಆವಲುತರಾಘಂಟೆಗಳೂ × × × ೫೨ ದುಯಂತರಾ ಘಂಟೆಗಳೂ × × × ೧೩೪ ಸಿಯಂತರಾಘಂಟೆಗಳೂ (ಎಕ. XIV, ನಂಜನ. ೨೯೨—ಪುಟ. ೧೪೨ ; 1847).

[ ದುಯಂ (<ದುಯ್ಯಂ) + <ತರ₃ + ಘಂಟೆ ]

**ದುಯನೃತ್ಯ** (ನಾ). [ನಾಟ್ಯ] ದ್ರುತಗತಿಯ ಒಂದು ಬಗೆಯ ನೃತ್ಯ : ಮೇಘಕುಮಾರರಾಜನ ಆಸ್ಥಾನದಲ್ಲಿ ದುಯನೃತ್ಯ, ವಿಲಂಬಿತನೃತ್ಯ, ಆರ್ಭಟನೃತ್ಯ, ವಿಭವನೃತ್ಯ ಮುಂತಾದ ನಾಟ್ಯಗಳು ಅಭಿನಯಿಸಲ್ಪಡು ತ್ತಿದ್ದುವೆಂದು ಉಕ್ತವಾಗಿದೆ (ಭಾರದ. ೫೩೦).

[ ದುಯ₀ (P ← ಪ್ರಾ. ದುಅ) + ನೃತ್ಯ ]

**ದುಯ್ಯಂ**, ದುಯಂ, ದೂಯಂ (ಗು). ೧. ಎರಡನೆಯ ಗಣನೆಯ,— ದರ್ಜೆಯ : ಅವ್ವಲು ದುಯ್ಯಂ ಶೀಯ್ಯಂ ಭೂಮಿಗೆ ಕೃಷ್ಣರಾಜ ಖಂಡಗ ಭೂಮಿಗೆ ಯಿಷ್ಟು ಖಂಡಗ ದವಸಾ ಯೆಂಬದಾಗಿ ಡವಲು ಕಟ್ಟಿ (ಮಹಾವಂ. II, ೭೦) ; ಜೂನಿಯರ್ (Junior) ಎಂದರೆ ದುಯ್ಯಂ ಕವಿಶಾಷನರೆಂದೂ ಹೀಗೆ ಇಬ್ಬರು ಕವಿಶಾಷನರನ್ನು . . . ನೇಮಿಸಿದರು (ಮಹಾವಂ. II, ೯೪). **ದುಯಂ** : ೧. 'ದುಯಂಪ್ರತಿ' ಪರಾ. ೨. ಕೈ ಕೆಳಗಿನ ; ಅಧೀನ : ಆ ಕಾಲದಲ್ಲಿ ರಾಯಚೂರಿನಲ್ಲಿ ದುಯಂ ತಾಲ್ಲೂಕು ದಾರ (Assistant Commissioner) ನಾಗಿದ್ದ ಮುಸಲ್ಮಾನ ಅಧಿಕಾರಿ ೩. ಯೊಬ್ಬನು . . . ದರ್ಶನಕ್ಕೆ ಬಂದನು (ಕಭವಿ. II, ೩೮೦). (ನಾ). (ಅಂತಸ್ತು ಅಥವಾ ಯೋಗ್ಯತೆಯಲ್ಲಿ) ಎರಡನೆಯ ದರ್ಜೆ (೬). : **ದೂಯಂ** : ೪. ಎರಡನೆಯದು : ಅವ್ವಲ್, ದೂಯಂ, ಸೀಯಂ, ಚಾರಂ ನಾಲ್ಕನು ಹೇಳುವರಂತೆಲೋ ಸೀಯಂ ನಂಬರು ದೂಯಂ ಮಾಡುವ ಸಬೂಬ್ ಜವಾಬ್ ನೋಡೆಲೋ (ನಾಪದ. ೧೪೦).

[ ←ಪಾರ. ದುಯುವ್ವ್ ; ಮರಾ. ದುಯ್ಯಮ್, ದಾಯಮ್ ]

**ದುಯ್ಯಂಖಿಸ್ತು** (ನಾ). ಎರಡನೆಯ ಕಂತು : ಬದಸ್ತೂರು ದುಯ್ಯಂಖಿಸ್ತು ಮಾರ್ಗಶಿರ ಲಾಗಾಯ್ತು . . . ಐವಜು ಕಾರ್ತಿಕ ಮಾರದ ಭತ್ತ ಕಾಡಾರಂಭ ಮಹಾಸೂಲು ಆಗುತ್ತಾ ಇದೆ (ಮಹಾವಂ. II, ೭೭).

[ ದುಯ್ಯಂ + ಖಿಸ್ತು (<ಕಿಸ್ತು) ]

**ದುಯ್ಯಂಪ್ರತಿ** (ನಾ). ಎರಡನೆಯ ಪ್ರತಿ ; ನಕಲು : ಆ ಬಗ್ಗೆ ಇನ್‌ಸ್ಪೆಕ್ಟರು ಹಿಂದೆ ಕಳಿಸಿದ್ದ ದಾಖಲೆಗಳು ಕಛೇರಿಯಲ್ಲಿ ದೊರೆಯದ್ದರಿಂದ ದುಯ್ಯಂ ಪ್ರತಿಗಳನ್ನು ಮಾಡಿ ಕಳಿಸಬೇಕೆಂದೂ ಆಜ್ಞೆಮಾಡಿದ್ದರು (ರಂಗಕ. ೧೭೩).

[ ದುಯ್ಯಂ + ಪ್ರತಿ ]

**ದುಯ್ಯಂಬಾರ್‌ಕಛೇರಿ** (ನಾ). ಅಠಾರಾ ಕಛೇರಿಯ ಹದಿನೆಂಟು ಇಲಾಖೆಗಳಲ್ಲಿ ಒಂದು : ತಾಲ್ಲೂಕುಗಳೂ ಮತ್ತು ಈ ಗಡಿಗಳ ಒಟ್ಟು ವಿಚಾರಣೆ ಮಾಡುವುದಕ್ಕೋಸ್ಕರ . . . ೬. ಫೌಜುದಾರಿ (ತುಕಡಿ) ಗಳೂ ಸ್ಥಾಪಿತವಾದುವು. ಅದರ ವಿವರ :—ಕಛೇರಿಗಳು—೧. ದಿವಾನ್ ಕಛೇರಿ . . . ೧೪. ದುಯ್ಯಂಬಾರ್ ಕಛೇರಿ, ೧೫. ಜಿನಶಿ ಕಛೇರಿ (ಮಹಾವಂ. II, ೩೯) 'ಅಠಾರಾಕಛೇರಿ' ಪರಾ.

[ ದುಯ್ಯಂಬಾರ್? + ಕಛೇರಿ (<ಕಚೇರಿ) ]

**ದುರ್-** (ಉಪ). ಕೆಟ್ಟದ್ದನ್ನು ಸೂಚಿಸುವ ಸಂಸ್ಕೃತದ ಒಂದು ಉಪಸರ್ಗ; P ಸಂಸ್ಕೃತ ಶಬ್ದದ ಸಾದೃಶ್ಯದ ಮೇಲೆ ರೂಪಿತವಾದ ಕನ್ನಡ ಶಬ್ದಗಳಿಗೆ ಈ ಉಪಸರ್ಗವನ್ನು ಬಳಸಲಾಗುತ್ತದೆ. 'ದುರ್ನಡತೆ', 'ದುರ್ನಡೆ' ಪರಾ. [ <ಸಂ. ದುಸ್ ]

**ದುರ**, ದುಱ, ಧುರ₁ (ನಾ). ಯುದ್ಧ; ಕಾಳಗ : ದುರದುಳ್ ದುಗ್ಗಮಾರರ ಪಡೆ ಒಟ್ಟೆ ಎಱಿದು ಬಿಟ್ಟ (ಎಕ. IX, ದೇವನ. ೭೩-೩೪ ; 780) ; ದುರ ದೊಳ್ ಕಾಯ್ದು ಕಡಂಗಿ ಪೊಂಗಿ ಮಲೆದೋರಂತಿಟ್ಟನೆಯ್ದಿಂದ (ಎಇ. XVIII, ೧೭೨-೫ ; 985) ; ಅವದಿರ ದುರದ ಸಿಂಹಧ್ವಾನದಬ್ಬರ ಮೆರೆಯ ಲೀಕ್ಷಿಸಿ ನುಡಿದನಸುರಾರಾತಿಯಿದಿರಿನಲಿ (ಕೋಗಯು. ೧೦-೨೭). △ **ದುಱ** : ಅನೇಕಬಲಸಮೇತನಾಗಿ ಯಿದಿರಾಗಿ ನಡದು ಕಾದಿದಲ್ಲಿ [ದಳದ ತ]ನಗೆ ಅಟ್ಟಗಳು ಭಟ್ಟಗಳಾಗ ಖಂಡ ತುಂಡಗಳಂ ಮಾಡಿ ವೀರಮಂ ದುಱದಲ್ಲಿ ತಂನ ದಳವಿನಿ × × ರಿದ (ಕಇ. I, ೭೩-೧೫ ; 1481). **ಧುರ₁** : "ಸಮಿತಿ ಸಂಗ್ರಾಮಂ ರಣಂ . . . ಧುರಂ ವಿಗ್ರಹಂ . . . ಸಂಖ್ಯಮೆಂದೆನಲು ಕಾಳೆಗಕೆ ನಾಮಮಕ್ಕುಂ" (ಮಂಗರಾ. ೮೫-೨೮); ಧುರದೊಳ್ ನಿಮ್ಮಡಿಯುಂ ಗೆಲಲಱಿಯರು ಮಾ ಪಾಂಡುಸುತರ್ಗಂ (ಪಂಪಭಾ. ೧೨-೫೫) ; ಧುರ ದೊಳ್ಗ್ರೀನುಗ ಭೂಪನಿಂನ ನಿಸಿತಾಸ್ತ್ರಾಘಾತದಿಂ ಸತ್ತ ಭೂಪರ ಪೆಂಡಿರ್ ಬಿಸುಸುಯ್ಯೆ (ಎಕ. VIII, ಸಾಗರ. ೧೦೯-೩೪ ; 1042) ; ಧುರದೊಳ್ ಮಯನಾತನುಮಂ ವಿರಥಂ ಮಾಟ್ಟುದುಂ (ಪಂಚಾಮೃ. ೧೪-೧೩೮) ; ನೀನೇ ಧುರವ ಜಯಿಸಿದೆನೆನ್ನು (ಕುಮ್ಮಾವಿ. ೯-೩). [ <ಸಂ. ಉದರ /ತೆಲು. ದುರ; P ಸಂ. ಧುರ್ ಎಂಬುದರಿ ದಲೂ ಇದರ ನಿಷ್ಪತ್ತಿಯನ್ನು ಹೇಳಬಹುದು]

**ದುರಂಗಿ** (ಗು). ೧. ಎರಡು ಬಣ್ಣಗಳನ್ನು ಉಳ್ಳ : ಕಂಬಿ ಕಂಬಿಯೊಳು ಬಂದಿಳುಹಿದ್ದ ಕೋಟಿ ಕಾಕಂಬಿಯ ರಸವನೆಱದನು ಬಿಂಬಕೆ ಹೊಳೆವ

ದುರಂಗಿಯ ಪೈರಣೆಯಿಂಬುಗೊಂಡಂತಿದ್ದುದಾಗ (ಭರಜ. ೧೬-೭೭) ; ಮೆಱೆವ ದುರಂಗಿ ಪಟ್ಟೆಯು ಗದ್ದುಗೆಯೊಳು ರಸಿಕೆ ಕುಳಿತ ಭಾವಮಿಹುದು (ಜ್ಞಾನಜ. ೧೮-೧೪೫). ೨. ಎರಡು ಪಕ್ಕಗಳಲ್ಲೂ ಬೇರೆ ಬೇರೆ ಬಣ್ಣವನ್ನು ಹೊಂದಿದ. [ ←ಪಾರ. ಹಿಂ. ಮರಾ. ದುರಂಗೀ ]

**ದುರಂಜಿ** (ನಾ). ೧. ಒಂದು ಬಗೆಯ ಹಣ್ಣು ; ಸೀತಾಫಲ : ಸೀತಾಫಲ, ಅಮೃತಫಲ, ದುರಂಜೀಹಣ್ಣು (ಮೃಜಿಗಿ. ೭-೧೨೩). ೨. ಮುಳ್ಳು ರಾಮಫಲ : (ಕ). 'ತುರಂಜಿ' ಪರಾ. [ ? ]

**ದುರಂತ** (ಗು). ೧. ಕೊನೆಯಿಲ್ಲದ ; ಎಂದಿಗೂ ಮುಗಿಯದ : ಘೋರ ದುರ್ಗತಿಯಂ ಪೊಕ್ಕು ದುರಂತದುಃಖಮನುಣಲ್ವೇಡ (ಆದಿಪು. ೩-೫೬) ; ಮೋಕ್ಷದ ಬಟ್ಟೆಗಟ್ಟಿ ಬಿಡದಾಱಡಿಗೊಳ್ವ ದುರಂತದುಷ್ಟಕರ್ಮಕ್ಷುಭಿತೋಗ್ರತಸ್ಕರರ ದುಷ್ಟರ . . . ಕ್ಷತಿ ಮಾಡಲಾರ್ಪ ತಪದೊಳ್ಪಿನ ತೆಳ್ಪಿನ ಸಾಧುವರ್ಗಮಾಗಕ್ಷಯಸೌಖ್ಯಮಂ (ಜೀವಸಂ. ೧-೫) ; ಬಹು ದುಸ್ಸಹ ಕಠಿಣತರ ಕ್ರೂರ ಭಯಂಕರ ದುರಂತ . . . ತೀವ್ರವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷಾಲೇಶಮೆಂದೆನಿಸಿ (ವಿವೇಕ. ೧೯೪). ೨. ದುಃಖದಲ್ಲಿ ಕೊನೆಗೊಳ್ಳುವ ; ದುಃಖಾಂತವಾದ : ಪದ್ಮಾವತಿಯ ದುರಂತವಿವಾಹಕ್ಕೆ ಕೇಶವನ ಮೋಹವೂ ಅದೇ ವೇಳೆಗೆ ಸ್ವಾಮಿಗಳ ಆಗಮನವೂ ಕಾರಣವಾಗುತ್ತದೆ (ಸಮುಜೀ. ೩೩ ಟೀಕೆ). 'ದುರಂತನಾಟಕ' ಪರಾ. (ನಾ). ೩. ಕೊನೆಯಿಲ್ಲದುದು : ಭೀಮನ ನರನಕುಲಸಹದೇವ ಸಾತ್ಯಕಿ ಧರಣಿಪನ ದ್ರೌಪದಿಯ ಚಿಂತೆ ದುರಂತವಾಯ್ತೆಂದ (ಕುವ್ಯಾಕ. ೨೭-೨೭). ೪. ದುಃಖಪೂರ್ಣವಾದ ಮುಕ್ತಾಯ ; ದುಃಖದಲ್ಲಿ ಕೊನೆಗೊಳ್ಳುವಿಕೆ ; ದುಃಖಾಂತ : ಆತ್ಮಯಾತ್ರೆಯ ಮಹಾಜ್ಯೋತಿರ್ಮಹದ್ದರ್ಶನಂ ಲಭಿಸಿದಾತಂಗದೇಂ ಗುರುತರಾನಂದಕರ ಗುಹ್ಯಮಾಗುವುದೇನೊ ದೇಹಯಾತ್ರೆಯ ದುರಂತಂ ? (ಶ್ರೀರಾಮಾ. ೧೧೯-೨೦೪). ೫. ದುರ್ಘಟನೆ ; ಅಪಘಾತ : ಒಗ್ಗಟ್ಟಿನಿಂದ . . . ಸಮಾಜದಲ್ಲಿ ಅಂದಂದು ಒದಗುತ್ತಿರುವ ದುರಂತಗಳೂ ನಿಂತಾವು (ಶಿಕ್ಷದ. ೨೬) ; ಅವರ ಆರ್ಥಿಕ ಪರಿಸ್ಥಿತಿಯ ದುರಂತವನ್ನು ಯಾರು ವಿಚಾರಿಸಬೇಕು ? (ಹಬ್ಬಿಬ. ೧೪೯) ; ಈ ಕಾವ್ಯದಲ್ಲಿ ಕಿತ್ತೂರ ದುರಂತವೂ ಬರುವುದಿಲ್ಲ (ಕನ್ನಜಾ. ೯೪). [ ಸಂ. ]

**ದುರಂತಃಕರಣ** (ನಾ). ಕೆಟ್ಟ ಮನಸ್ಸಿನವನು : ದುರುಳರೆನ್ನವದಿರು ದುರಂತಃಕರಣರಾವ್ (ಕುವ್ಯಾಸ. ೧೫-೪೯). [ ಸಂ. ]

**ದುರಂತಕತೆ** (ನಾ). ದುಃಖದಲ್ಲಿ ಮುಗಿಯುವ ಕತೆ ; ದುರಂತದಲ್ಲಿ ಕೊನೆಗೊಳ್ಳುವ ಕತೆ : ಜೀವಕಳೆ ಧರಿಸಿ ತಂತಾನೆ ಹೆಣೆದು ನಿಲ್ಲುತ್ತದೆ- ಆ ಇಡಿಯ ದುರಂತಕತೆ ನನ್ನ ಕಣ್ಣ ಮುಂದೆ (ಆದೋಲೀ. ೧೩).
[ ದುರಂತ + ಕತೆ ]

**ದುರಂತಕಥೆ** (ನಾ). = ದುರಂತಕತೆ : ಮೂಲತಃ ಉರ್ವಶೀ–ಪುರೂರವರ ಪ್ರಣಯಕಥೆ ದುರಂತಕಥೆ (ಕಾವ್ಯಸ. ೧೯). [ ದುರಂತ + ಕಥೆ ]

**ದುರಂತಘಟನೆ** (ನಾ). ದಾರುಣವಾದ ಸಂಗತಿ ; ಸಂಕಟಕರವಾದ ಘಟನೆ ; ದುಃಖಪ್ರಸಂಗ : ಅಂಥ ರುದ್ರಪ್ರಸಂಗದಲ್ಲಿಯೇ ಇನ್ನೊಂದು ದುರಂತಘಟನೆಯೂ ಸಂಭವಿಸುತ್ತದೆ (ಧರ್ಮಸಾ. ೧೪೦).
[ ದುರಂತ + ಘಟನೆ ]

**ದುರಂತಚಿಂತೆ** (ನಾ). ಕೊನೆಯಿಲ್ಲದ ಚಿಂತೆ : ಸಾಕು ಮಗನೆ ದುರಂತ ಚಿಂತೆಯಿದೇಕೆ . . . ಪಾಲಿಸು ಸಕಲಭೂತಳವ (ಕುವಾ ಅ. ೨೧-೩೩) ; ಕೆಟ್ಟಕೇಡದನೇನ ಹೇಳುವೆನಾ ಜಯದ್ರಥನ ಬೆಟ್ಟದಿಂದುರುಳುವೆನೊ ಹಾಸಱೆಗಟ್ಟ ಹೊಗುವೆನೊ ಮಾಡುವನೆನುತ ಅಡಿಯಿಟ್ಟನಂತಃಕಲುಷಚಿತ್ತ ದುರಂತಚಿಂತೆಯಲಿ (ಕುವ್ಯಾಅ. ೨೨-೪೨).
[ ದುರಂತ + ಚಿಂತೆ ]

**ದುರಂತಚಿತ್ರ** (ನಾ). ೧. ದುರಂತಪೂರ್ಣವಾದ ಘಟನೆಯ ದೃಶ್ಯ : ಪಂಡಿತ ಜವಹರಲಾಲರು ಪಂಜಾಬಿಗೆ ಹೋಗಿದ್ದವರು ಬಂದು ನಮ್ಮ ಪಾರ್ಟಿ ಮೀಟಿಂಗ್‌ನಲ್ಲಿ ಅಲ್ಲಿನ ದುರಂತಚಿತ್ರವನ್ನು ವಿವರಿಸಿದರು (ದಿಲ್ಲಿಪ. ೫೦). ೨. ದುಃಖಪೂರ್ಣವಾದ ಘಟನೆಯ ಚಿತ್ರಣ,- ನಿರೂಪಣೆ. [ ದುರಂತ + ಚಿತ್ರ ]

**ದುರಂತನಾಟಕ** (ನಾ). ದುಃಖದಲ್ಲಿ ಮುಕ್ತಾಯವಾಗುವ ನಾಟಕ ; ಶೋಕದಲ್ಲಿ ಕೊನೆಗೊಳ್ಳುವ ನಾಟಕ ; ರುದ್ರನಾಟಕ : ಪಾಶ್ಚಾತ್ಯರಿಗೆ ದುರಂತನಾಟಕವು ಕೇವಲ ಕಲೆಯ ಬೆಡಗಲ್ಲ. ಅದು ಆತ್ಮಸಂಸ್ಕಾರದ ಸಾಧನ, ಜೀವನ ಸಾರದ ಸಾಕ್ಷಾತ್ಕರಣ (ಕಾವ್ಯಸ. ೧).
[ ದುರಂತ + ನಾಟಕ ]

**ದುರಂತಪರಾಕ್ರಮ** (ನಾ). ಕೊನೆಗಾಣಿಸಲು ಅಸಾಧ್ಯವಾದ ಶೌರ್ಯವುಳ್ಳವನು ; ಸೋಲಿಸಲು ಅಸಾಧ್ಯವಾದ ಪರಾಕ್ರಮವುಳ್ಳವನು ; ಮಹಾಶಕ್ತಿಶಾಲಿ : ಸೈನ್ಯ ಮಹೋದಧಿಯ ಮಧ್ಯದಲಿ ಮೆಱೆವವನಾ ದುರಂತಪರಾಕ್ರಮನು ಗಂಗಾಕುಮಾರಕನು (ಕುವ್ಯಾಭೀ. ೩-೭).
[ ದುರಂತ + ಪರಾಕ್ರಮ ]

**ದುರಂತರ** (ನಾ). ಕಡಿಮೆಯಾದ ಅಂತರವುಳ್ಳುದು ; ನಡುವೆ ಕಡಿಮೆ ಜಾಗವುಳ್ಳುದು ; ದಟ್ಟವಾದುದು : ಅರಸನ ವರೂಥಮಂ ತುರಗಂಗಳ್ ತರುಗಳಿಂ ದುರಂತರಮಪ್ಪರಣ್ಯಮಾರ್ಗದೊಳ್ ತಮ್ಮಿಚ್ಛೆಯಿಂ ಕೊಂಡೋಡಿ ಪೋಗೆ (ದಶಕು. ೨-೩೬ ವ). [ ಸಂ. ]

**ದುರಂತಸಾಹಿತ್ಯ** (ನಾ). ದುಃಖಾಂತದ ವಸ್ತುವನ್ನುಳ್ಳ ವಾಙ್ಮಯ : ದುರಂತಸಾಹಿತ್ಯವು . . . ಕನ್ನಡದಲ್ಲಿ ಹನ್ನೊಂದನೆಯ ಶತಮಾನದ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿದ್ದಿತೆನ್ನುವುದು ತುಂಬಾ ಅಭಿಮಾನದ ಸಂಗತಿ (ಸಾಹಿಸ. ೧೦೭). [ ದುರಂತ + ಸಾಹಿತ್ಯ ]

**ದುರಂತೋದ್ವೇಗ** (ನಾ). ಕೊನೆಯಿಲ್ಲದ ತಳಮಳ,- ಆತಂಕ : ತತ್ಪಿತೃದ್ವಂದ್ವದ ಮನಕೆ ಸಮಾಕಾರಸಂಪದ್ವರಾಲಾಭದುರಂತೋದ್ವೇಗಮಂ ನೀಡಿದನತಿತರ ನಿರ್ಬಂಧದಿಂ ಪದ್ಮಸದ್ಮಂ (ಚಂದ್ರಪ್ರ. ೫-೯೭).
[ ದುರಂತ + ಉದ್ವೇಗ ]

**ದುರಕ್ಷರ** (ನಾ). (ಆಲಂ) ಕೆಟ್ಟ ಹಣೆಯ ಬರಹ : ಸರಸಿರುಹಸಂಭವಕೃತದುರ[ಪಾಠಾಂ. ರಾ]ಕ್ಷರವಿನಿಯುತ ನಿರಾಸಕಮಹಾನಿರುಪಮಿತ ಮಹಿಮಾಢ್ಯನಂ ಪ್ರೌಢನನಮೌಢ್ಯನನು . . . ಕೊಂಡಾಡಿ (ಬಸಪು. ೪೬-೭೧).
[ ಸಂ. ]

**ದುರಗಲಿ, ಧುರಗಲಿ** (ನಾ). ಕಾಳಗದಲ್ಲಿ ಶೂರನಾದವನು ; ರಣಧೀರ : ದುರಗಲಿ ಕಂಸನುದ್ಧತಸಾಹಸವ ಕೇಳಿ ಹರಿವ ಹಾವುರಿವ ಕಿಚ್ಚುಗಳ ಭರದಿಂದಡಗುವುವು (ನೇಮಿಸಂ. ೧೪-೮) : ದುರಗಲಿಯೆಯೆನ್ನ ಪ್ರೀತಿಯ ಸಲಿಸು ನೀನೆಂದು ವಿರಹದಿಂದೂರ್ವಶಿಯು ನುಡಿಯೆ (ಪ್ರಭುಪು. ೫-೮೭) ; ದುರಗಲಿ ಕಂಠೀರವ ನರಸೇಂದ್ರಭೂವರನೊಪ್ಪಿದನು ಸೊಬಗಿಂದ (ಕಂಸವಿ. ೮-೪೬). **ಧುರಗಲಿ** : ಎತ್ತಾನುಮಿ[ದುರ್ಮಿಱೆವಂ]ದೋಡಿಱೆವ ಧುರಗಲಿಗಳುಮಂ . . . ನೋಡಿ [ವಿಸ್ಮಯಂಬಟ್ಟು] (ಗದಾಯು. ೯-೩೪ ವ) : ಧುರಗಲಿ ಚೋಳನ ಪಟ್ಟದ ಕರಿವರನಾ ನೀಲಗಿರಿಯ ನಿರ್ಝರಜಲದಂತಿರೆ ಗಂಡಯುಗಳದಿಂದಂ ಪರಿವ ಮದಾಂಬುಗಳಿನೆಸೆದುದದನೇವೊಗಳ್ವೆಂ (ತ್ರಿಪುವಿ. ೨೨-೧೬) ; ಗರ್ಜನಕ್ಕಿಳಿ ನಡುಗೆ ಮಹಾಹವಮನೆಸಗಿದರ್ ಧುರಗಲಿ[ಪಾಠಾಂ. ದುರಗಲಿ, ಧುರಕಲಿ]ಗಳ್ (ಶಬಶಂ. ೪-೭೭). [ ದುರ + ಕಲಿ₂ ]

**ದುರಗಲಿತನ** (ನಾ). ಯುದ್ಧದಲ್ಲಿ ತೋರುವ ಪರಾಕ್ರಮ,- ಶೌರ್ಯ : ಆತನ ದಳಪತಿ ಮನ್ನೆಯರುಗಳ ದುರಗಲಿತನವ ಪೇಳಿದನು (ಕಂಸವಿ. ೧೧-೭೨) ; ಆತನ ಸೈನಿಕರು ದುರಗಲಿತನದಿಂದ ಹೋರಾಡಿ . . . ತುರುಕರ ಸೈನ್ಯವನ್ನು ತರಿದು ತೂರಿದರು (ಕವೀರ ೧೦೪). [ ದುರಗಲಿ + –ತನ ]

**ದುರಗುಟ್ಟು** 'ದಂರುಗುಟ್ಟು' ನೋ.

**ದುರಗೆ** (ನಾ). ಒಂದು ಬಗೆಯ ಸಸ್ಯ : (ಪ್ರುಜಿಗಿ. ೭೭-೧೫೮೩). [ ? ]

**ದುರಘ** (ನಾ). ಮಹಾ ಪಾಪ,-ಪಾತಕ; ದುಷ್ಕರ್ಮ: ಜಾನಕಿ ಮೂರ್ಛಿತೆಯಾಗೆ ದಶಾನನನನುಕಂಪೆ ಪುಟ್ಟಿ ಕರುಣಿಸಿ ತನ್ನಂ ತಾನೆ ಪಟಿದುಟಿದು ಕರ್ಮಾಧೀನ ಸಮುತ್ಪನ್ನದುರಘದುಷ್ಪರಿಣತಿಯಂ (ಪಂರಾಮಾ. ೧೪-೧೧೧) ; ದುರಘವಿಷವೃಕ್ಷಮೂಲೋತ್ಕರಮಂ ಕೀಲ್ವಂತೆ ಕಿಲ್ತಂ . . . ಕುಟಿಳ ಕುಂತಳಕುಳಮಂ (ನೇಮಿಪು. ೧೩-೩೭). [ ಸಂ. ]

**ದುರತ್ಯಯ** (ಗು). ೧. ಅಧೀನಮಾಡಿಕೊಳ್ಳಲು ಕಷ್ಟವಾದ ; ಅಜೇಯವಾದ (ನಾ). ೨. ಅಧೀನಮಾಡಿಕೊಳ್ಳಲು ಕಷ್ಟವಾದುದು; ಅಜೇಯವಾದುದು : ಗೋಪಿಯರೀಕ್ಷಿಸೆ ಕೃಷ್ಣನಾರ್ದು ತಳಶಬ್ದ ದುರತ್ಯಯನಸುರವೃಷಂಗಭಿಮುಖತೆಯಿನೆಯ್ದಿದಂ (ಜಗವಿ. ೫-೩೭) ; ಈ ಪಥವು ಕ್ಷುರಧಾರೆಯಂತೆ ನಿಶಿತವೆಂದೂ ದುರತ್ಯಯ ಎಂದರೆ ಅಡಿಯಿಡುವದು ತುಂಬ ಕಷ್ಟಕರವೆಂದೂ ವರ್ಣಿಸಲ್ಪಟ್ಟಿದೆ (ಮಹಾಯೋ. ೭೯).

[ ಸಂ. ]

**ದುರದುರ₁** 'ದುರು' ಪರಾ.

**ದುರದುರ₂** (ನಾ). ಮುಂಚ್ಚುಮರೆ: ಈ ಬಂಧುಗಳಿಬ್ಬರೂ ಇಂದಿನ ಕಾಲದ ಹುಡುಗರು. ಯಾವ ಮಾತುಗಳೂ ಅವರ ಬಾಯಲ್ಲಿ ಬರುವಾಗ ದುರದುರವಿಲ್ಲ, ಬಾಧೆ ಸಂಕೋಚ ಇಲ್ಲ (ಇಪ್ಪಕ. ೨೪೨).

[ ←ಹಿಂ. ದುರಾದುರೀ ]

**ದುರದುರನೆ** 'ದಂರುದಂರನೆ' ನೋ.

**ದುರದೃಷ್ಟ** (ನಾ). ಕೆಟ್ಟ ಅದೃಷ್ಟ ; ದುರ್ದೈವ ; ದೌರ್ಭಾಗ್ಯ : ನನ್ನ ಹುಟ್ಟನ್ನು ಹಿಡಿದಂಟಿದ ದುರದೃಷ್ಟಕ್ಕೆ ನೊಂದೆನಲ್ಲದೆ ನಿಮಗಲ್ಲ (ವೀರಬಂ. ೯೪); ಬರುವಾಗ ದುರದೃಷ್ಟ ಬೇಗನೆ ಬರುವುದು ಧಾವಿಸಿ ಕುದುರೆಯನೇರಿ ಬೀಳ್ಕೊಂಡು ಹೋಹಾಗ ಮೆಲ್ಲನೆ ಹೋಹುದು ಹೋಹಂದು ಅದು ಪಾದಚಾರಿ (ಇಂಜಾಪ. ೧೭೨-೪೭). [ ಸಂ. ]

**ದುರದೃಷ್ಟಶಾಲಿ** (ನಾ). ಹೀನ ಅದೃಷ್ಟವುಳ್ಳವನಂ ; ಭಾಗ್ಯಹೀನ : ಕೆಲವರು ಮಾತ್ರ ತನ್ನಂತಹ ದುರದೃಷ್ಟಶಾಲಿಗಳು (ಏಳಜೀ. ೧೭೪).

[ ಸಂ. ದುರದೃಷ್ಟಶಾಲಿನ್ ]

**ದುರಧ್ವ** (ನಾ). ೧. ಕೆಟ್ಟದಾರಿ:"ವ್ಯಧ್ವಃ, ದುರಧ್ವಃ, ವಿಪಥಃ, ಕದಧ್ವಾನ್, ಕಾಪಥಃ ಈ ಕೆಟ್ಟದಾರೀ; ಸೀಳುಹಾದಿ" (ಸಿದ್ಧಾಂತಿ. ೫೭). ೨. ಅಸಭ್ಯವಾದ ಮಾರ್ಗ ; ಗಾಂಭೀರ್ಯವಿಲ್ಲದ ರೀತಿ. [ ಸಂ. ]

**ದುರನ್ನ** (ನಾ). ದೋಷಪೂರ್ಣವಾದ ಆಹಾರ: ಸಲೆ ನಿಜವೃತ್ತಿಯನುಳಿದು ದುರನ್ನವ ನಲಿದುಂಡು ಹೊಟ್ಟೆಯ ಹೊರೆಯುತಲಿ (ಪುರಂದ. ೫-೧೪೨-೨); ದುರನ್ನವೆಂದರೆ ಅನ್ನದ ಅಥವಾ ಪದಾರ್ಥದ ದೋಷದಿಂದಲೇ ತಿನ್ನಬಾರದಾದುದು. ಗಿಣ್ಣುಹಾಲು, ಫಲಕ್ಕೆ ಬಂದ ಹಸುವಿನ, ಎಮ್ಮೆಯ ಹಾಲು . . . ಇತ್ಯಾದಿಗಳು (ಆಯುರ್ಧ. ೨೦೮). [ ಸಂ. ]

**ದುರಪದ, ಧ್ರುಪದ**(ನಾ). ನರ್ತನಕ್ಕೆ ಹೊಂದಿಕೊಳ್ಳುವ ಒಂದು ಬಗೆಯ ಹಾಡು : ಅಡಿಗಡಿಗೆ ದುರಪದವನೊಯ್ಯನೆ ನುಡಿಸು ಲಿಂಗಾದೇವಿ ಕೋಳಲಂ ನುಡಿಸು ಚಂಗಳೆ ತಾಳಧರಿ ನೀನಾಗು ಭೋಗಾಯಿ (ಬಸಪು. ೧೨-೪೨). **ಧ್ರುಪದ** : ಅದರ ನೀಳವಾದ ಜೋಲುಬಾಲ ಧ್ರುಪದಗಾನದ ಆಲಾಪದಂತೆ ... ವಿಲಾಸಮಾಡುವುದು (ಗಾಳಿಪ. ೮). 'ದ್ರುಪದ' ಪರಾ.

[ <ಸಂ. ಧ್ರುವಪದ./ತೆಲು. ದುರುಪದ = ತ್ವರಿತಗತಿಯಿಂದ ಮಾಡುವ ಪಾದವಿನ್ಯಾಸ ]

**ದುರಭರ** (ಗು). ಸಹಿಸಲು ಕಷ್ಟವಾದ ; ತಾಳಲಾಗದ ; ಅತಿಶಯಂವಾದ : ದುರ[ಪಾಠಾಂ. ರು]ಭರದ ಜವ್ವನದಲ್ಲಿ ತೋರಣದೆ(ದ)ಲೆಯಂತೆ ಮಹಾಲಿಂಗ ಗಜೇಶ್ವರನ ನೆರೆವ ಭರದಿಂದ ಅಳಿಕವೃದ್ಧಿಯಾಗಿದ್ದಳಲ್ಲಾ (ಸರ್ವವ. ೬೮-೩೭೦) ; ಭೂತ ಶರೀರದೊಳು ಬಿದ್ದು ಬೆಂಬೀಳುವವನಲ್ಲ ದುರಭರದ[ಪಾಠಾಂ. ದುರಾಭವದ, ದುರುಬರದ, ಧುರಾಭರದ] ಕಾಮುಕತ್ತಲೆಯು ಕಳದುಳದ ಕಲಿ ಪಿರಿದಪ್ಪ ಮಾಯೆಯ ಗೆಲಿದ ನಿರೋಧವಿಲ್ಲದೆ (ಶಿವಗೀ. ೨೭-೧೦೮). [ <ಸಂ. ದುರ್ಭರ ]

**ದುರಭಿಪ್ರಾಯ** (ನಾ). ೧. ಕೆಟ್ಟ ಉದ್ದೇಶ; ದುಷ್ಟ ಆಶಯ,-ಭಾವನೆ: ಅದರಿಂದ ಮಹಾಪ್ರಭುಗಳ ಬಗ್ಗೆ ಯಾವ ಬಗೆಯ ದುರಭಿಪ್ರಾಯವೂ ಮೂಡಲಾರದು (ನಗಹೊ. ೨೩೮). ೨. ದುಷ್ಟಬುದ್ಧಿಯುಳ್ಳವನು ; ಕೆಟ್ಟವ್ಯಕ್ತಿ : ದುರಭಿಪ್ರಾಯನೆ ಖೇಚರಾನ್ವಯದ ಶುದ್ಧಾಚಾರಮಂ ಬಿಟ್ಟು . . . ಪರದಾರಪ್ರಿಯನಾದ ಪಾತಕನೆ (ಪಂರಾಮಾ. ೧೪-೯೮).

[ ಸಂ. ]

**ದುರಭಿಮತ** (ನಾ). ೧. = ದುರಭಿಪ್ರಾಯಂ. ೨. ಕೆಟ್ಟ ಅಭಿಪ್ರಾಯಂ ಉಳ್ಳವನಂ ; ನೀಚ ಮನಸ್ಸುಳ್ಳವನಂ : ದುರಭಿಮತದುಷ್ಪೂರ್ವರೆನ್ನ ಕುಮಾರರಭಿಧಾನ (ಕುವ್ಯಾಸ. ೧೫-೪೯). [ ಸಂ. ]

**ದುರಭಿಮಾನ** (ನಾ). ಕೆಟ್ಟ ಅಹಂಕಾರ ; ಒಣಹೆಮ್ಮೆ : ದುರಭಿಮಾನಮಂ ಕೈಕೊಂಡಿರಲ್ ಪಸಿದು ಸಾಪಾದಪುದು (ಪಂಚತಂ. ೨೬೯-೧); ಗನ್ನಗತಕಂಗಳ ನೆಲೆಗಳಾ ದುರಭಿಮಾನೋನ್ನತಂಗಳು ಪಾರಸತಿಗಳ ಮನಸುಗಳು (ಬಸಪು. ೪೧-೭೭) ; ಎಷ್ಟೋ ಜನರು ದುರಭಿಮಾನದಿಂದ . . . ಎರಡನೆಯವರ ಅಪರಾಧಗಳನ್ನು ಕ್ಷಮಿಸುವುದಿಲ್ಲ (ಮುಂಬಯಿ. ೪-೮೫). [ ಸಂ. ]

**ದುರಭಿಮಾನಿ** (ನಾ). ಒಣಹೆಮ್ಮೆಯಿಂದ ಕೂಡಿದವನು: "ವಿದಗ್ಧಂಮನ್ಯನವಂ ದುರಭಿಮಾನಿ ಮತ್ತಂ ಕ್ಷೀಬಂ" (ವಸ್ತುಕೋ. ೧೦೦-೧೪).

[ ಸಂ. ದುರಭಿಮಾನಿನ್ ]

**ದುರಭಿಸಂಧಿ** (ನಾ). ಕೆಟ್ಟ ಅಭಿಪ್ರಾಯ,-ಉದ್ದೇಶ ; ದುರುದ್ದೇಶ : ಕ್ರೋಧಮೂರ್ಛಿತನಾಗುತಾರೋಪಣಂಗೆಯ್ವೆ ನೀಂ ಭ್ರಾತೃವತ್ಸಲ ಭರತನಿಗೆ ದುರಭಿಸಂಧಿಯಂ (ಶ್ರೀರಾಮಾ. ೧೫೯-೧೪೭); ಯುಧಿಷ್ಠಿರನು ದುರ್ಯೋಧನನ ದುರಭಿಸಂಧಿಯನ್ನು ತಿಳಿದಿದ್ದರೂ ... ಆ ಮನೆಯಲ್ಲಿ ಇಳಿದು ಜೋಕೆಯಿಂದಿದ್ದನು (ಭೀಷ್ಮಕ. ೭೪) ; ತನ್ನನ್ನೆ ರಾಜನಾಗಿರೆಂದು ಬೇಡಿಕೊಳ್ಳುತ್ತಿರುವಂಥ ಜನರ, ದುರಭಿಸಂಧಿ ಅರ್ಥವಾಗುತ್ತದೆ (ಸುವರ್ಣ. ೧೮೮) ; ಅವನ ಹೃದಯದ ನಿಗೂಢ ದುರಭಿಸಂಧಿ, ಅಷ್ಟು ಶೀಘ್ರವಾಗಿ ಕೈಗೂಡುತ್ತದೆ ಎಂದು ಅವನು ಭಾವಿಸಿರಲಿಲ್ಲ (ಮಲಮ. ೭೯೫) [ ಸಂ. ]

**ದುರಭಿಹಿತ** (ನಾ). ಇಷ್ಟವಾಗದ ಹೇಳಿಕೆ ; ಹಿತವನ್ನುಂಟುಮಾಡದ ನಂಡಿ : ದೂತನ ದುರಭಿಹಿತಂಗಳಂ ಭೂಪಾಲನೇಳಿಲಂಗೇಳ್ದು ಮಂದಸ್ಮಿತ ಮುಖಸರೋಜಂ ಯುವರಾಜನಂ ನಿರೀಕ್ಷಿಪ್ಪುದುಂ (ಚಂದ್ರಪು. ೯-೧೦೭ ವ).

[ ಸಂ. ]

**ದುರಭ್ಯಾಸ** (ನಾ). ಕೆಟ್ಟ ಚಟ, - ಅಭ್ಯಾಸ : ಶ್ವೇತವರ್ಣೀಯರು ನಮ್ಮ ಮೇಲೆ ಅಪಪ್ರಚಾರ ಮಾಡುವ ದುರಭ್ಯಾಸ ಇಟ್ಟುಕೊಂಡಿದ್ದಾರೆ (ನಾಡಿಗೇ. ೧೭೩) ; ತರಕಾರಿ ಇಂತಹುದೆ ಎಂದು ಹೇಳುವುದು ಕಷ್ಟವಾಗುವ ಮಟ್ಟಿಗೆ ಬಣ್ಣ, ವಾಸನೆಗಳನ್ನು ರೂಪಾಂತರ ಮಾಡುತ್ತಿರುವ ದುರಭ್ಯಾಸ ಹೋಗಬೇಕು (ತರಬಿ. ೬೧). [ ಸಂ. ]

**ದುರಭ್ಯಾಸಿ** (ನಾ). ಕೆಟ್ಟಚಟವುಳ್ಳವನು ; ದುಷ್ಟಚಾಳಿಯುಳ್ಳವನು : ವಿದ್ಯಾರ್ಥಿಗಳೆಲ್ಲ . . . ಸಿಗರೇಟು ಸೇದುವ ದುರಭ್ಯಾಸಿಗಳಾಗಿದ್ದಾರೆ (ರಂಗರೋ. ೧೨೫). [ ಸಂ. ದುರಭ್ಯಾಸಿನ್ ]

**ದುರವಗಾಹ** (ಗು). ೧. ಅಳೆಯಲು ಅಸಾಧ್ಯವಾದ ; ಆಳವನ್ನು ಅಳೆಯಲಾಗದ. (ನಾ). ೨. ತಿಳಿಯಲು ಕಷ್ಟವಾದುದಂ ; ಕಷ್ಟಗ್ರಾಹ್ಯವಾದುದು: ಇಷ್ಟ ಬಂದಂತೆ ಪದಕಲ್ಪನೆಗಳನ್ನು ಮಾಡಿಕೊಳ್ಳುತ್ತಾ ಬರಲು ಅವು ಇತರ ಮಾಂಡಲಿಕರಿಗೆ ದುರವಗಾಹಗಳಾದಂತೆ (ಕಸಾಪ. I, ೫೯-೧೯೦೯). [ ಸಂ. ]

**ದುರವಗಾಹ್ಯ** (ನಾ). ತಿಳಿಯಲು ಕಷ್ಟವಾದುದು; ವ್ಯಾಪ್ತವಾದ ಅರ್ಥವುಳ್ಳುದು: ಸೌಂದರ್ಯ, ಸೌಂದರ್ಯಾನುಭವ ಎನ್ನುವುದು ತುಂಬ ದುರವಗಾಹ್ಯ (Abstract) ವಾದ ಸಂಗತಿ (ಸೌಂದಸ. ೧ ಮೊದಲ ಮಾತು). [ ಸಂ. ]

**ದುರವಸ್ಥೆ** (ನಾ). ೧. ದುಸ್ಥಿತಿ ; ಸಹ್ಯವಲ್ಲದ ಸಂದರ್ಭ ; ಹೀನಸ್ಥಿತಿ : ಮೊದಲೇ ಕ್ರೋಧಿಯುಂ ಹೆಂಡಮುಂ ಹುಳಿತುದುಂ ತಾನೀಂಟಿರಲ್ ಬಾಲದಾತುದಿಯುಂ ತಾಗಿಸೆ ಚೇಳುಂ ಪೋಣ್ ಪಿಡಿದಿರಲ್ ದುಷ್ಟಗ್ರಹಂ ಮತ್ತದುಂ ಒದಗಿರ್ಪ ದುರವಸ್ಥೆಯುಂ ವಿವರಿಸಲ್ಕೆಂತಪ್ಪುದೈ (ನೀಸಾರಾ. ೭೫-೪೨) ; ತಾನು ಶಾನುಭೋಗರ ಮಗನಾಗಿಯೂ ಈ ದುರವಸ್ಥೆ ಬಂದದ್ದು ವಿಚಿತ್ರವೆಂದವನಿಗೆ ಅನ್ನಿಸಹತ್ತಿತ್ತು (ರಂಗರೋ. ೧೮೨) ; ಒಡನೆ ಆತನ . . . ತಂಗಿಯು ಹಾಸಿನ ಬಳಿಗೆ ಹೋಗಿ ಆಕೆಯು ದುರವಸ್ಥೆಯನ್ನು ಕಂಡನು (ಕಾಲೂರ. ೧೨ ಕಥಾಸಾರ). ೨. ಅವ್ಯವಸ್ಥೆ ; ಚೆಲ್ಲಾಪಿಲ್ಲಿಯಾಗುವಿಕೆ. [ ಸಂ. ದುರವಸ್ಥಾ ]

**ದುರವಾಪ** (ನಾ). ಹೊಂದಲು ಅಶಕ್ಯವಾದುದು ; ಪಡೆಯಲು ಅಸಾಧ್ಯವಾದುದು : ಹರಿಣಧರನೊಳ್ ವಿಷಂ ಮಲಯರುಹದೊಳನಲಾರ್ಚಿ ನಿನ್ನ ವದನೋದರದೊಳ್ ಪರುಷತರವಚನಮಪ್ಪುದು ದುರವಾಪಂ (ಕವಿರಾ. ೩-೭೯). [ ಸಂ. ]

**ದುರವಾರ್ತೆ** (ನಾ). ಕೆಟ್ಟವರ ಸಂದ್ದಿ ; ದುರ್ಜನರ ಸಹವಾಸ : ಶ್ರೀವಿಜಯವಿಠ್ಠಲ ಎನಗೆ ಸಜ್ಜನಸಂಗಯಿತ್ತು ದುರವಾರ್ತೆ ಬಿಡಿಸೊ (ಕೋಳ್ಪದೀ. ೫೦-೩). [ <ಸಂ. ದುರ್ವಾರ್ತಾ ]

**ದುರಸು** 'ದಿರಸು' ನೋ.

**ದುರಸ್ತಿ** 'ದುರಸ್ತು' ನೋ.

**ದುರಸ್ತಿಪಡಿಸು** (ಕ್ರಿ). ೧. ಸರಿಮಾಡಿಸು ; ರಿಪೇರಿಮಾಡಿಸು : ಮನೆಯ ಕೆಳಭಾಗದ ನಾಲ್ಕು ಸಂಸಾರಗಳನ್ನೂ ಬಿಡಿಸಿ ದುರಸ್ತಿಪಡಿಸಿ, ತಾವೆಲ್ಲಾ ಅಲ್ಲಿಯೇ ವಾಸವಾಗಬೇಕು (ರಂಗವ. ೩೪). ೨. ಸರಿಮಾಡು ; ರಿಪೇರಿ ಮಾಡು : ಅವಳೂ ರಸ್ತೆ ದುರಸ್ತಿಪಡಿಸುವವರ ತಂಡಕ್ಕೆ ಸೇರಿದವರು (ರಕ್ತರೂ. ೬೦). [ ದುರಸ್ತಿ (<ದುರಸ್ತು) + ಪಡಿಸು ]

**ದುರಸ್ತು, ದುರಸ್ತಿ, ದುರುಸ್ತಿ, ದುರುಸ್ತು** (ಗು). ೧. ಸರಿಯಾಗಿರುವ; ಒಳ್ಳೆಯ ಸ್ಥಿತಿಯಲ್ಲಿರುವ. (ನಾ). ೨. ಸರಿಪಡಿಸುವಿಕೆ; ಸಂಧಾರಣೆ; ರಿಪೇರಿ ; ಜೀರ್ಣೋದ್ಧಾರ : ಈಶ್ವರ ಸಂ॥ ವೃಷ್ಯ ಬ ೬ ಲ್ಲು ಬಾಗಲು ಕೋಟೆ ಸಹಾ ದುರಸ್ತು (ಎಕ. XVI, ಮಧುಗಿ. ೧೩೪-೪ ; ?) ; ಅವರ ಸಂತತ ಪ್ರಯತ್ನದಿಂದಲೇ ಊರಿನ ದೊಡ್ಡಕೆರೆ ದುರಸ್ತಾಗಿ, ಜನರು ಭತ್ತದ ಮುಖ ನೋಡುವಂತೆ ಆಯಿತು (ಊರುಕ. ೭೩) : ಮೇಗ್ರಳ್ಳಿ ಹತ್ತಿರ ಹಳೇ ಹೆದ್ದಾರಿ ಇನ್ನೂ ದುರಸ್ತಾಗಿರಲಿಲ್ಲ (ಮಲಿಮು. ೧೭೬) : ಈ ಬೆತ್ತಲೆ ಶರೀರದ ಮನೆಗೆ ಆಗಬೇಕಾದ ದುರಸ್ತು ಬಹು ಕಡಮೆ (ಪ್ರವಾಇ. I, ೬೬). **ದುರಸ್ತಿ** : ೨. ಮೋಟರ ದುರಸ್ತಿ ಎಲ್ಲಿಗೆ ಬಂತು ನೋಡಿ ಬರತೀನಿ (ಎತ್ತಿಕ್ಕೆ. ೫೯). **ದುರುಸ್ತಿ** : ೨. ಮನೆಯ ದುರುಸ್ತಿ ನಡೆಯುತ್ತಿತ್ತು (ನಾಚಿಕ. ೬). **ದುರುಸ್ತು**: ೨. ಈ ಎಲ್ಲ ನರಗಳು ಜೀರ್ಣವಾಗುವುದರಿಂದ, ಅವುಗಳ ದುರುಸ್ತಿಗೆ ರಕ್ತವು ಆಹಾರವನ್ನು ಕೊಂಡೊಯ್ದು ಒಪ್ಪಿಸಬೇಕಾಗುವುದು (ಬಾಲಪ್ರ. I, ೫೪೮).

**ದುರಸ್ತು ಮಾಡಿಸು, ದುರಸ್ತಿ ಮಾಡಿಸು, ದುರುಸ್ತಿ ಮಾಡಿಸು** = ಸರಿಪಡಿಸು ; ಜೀರ್ಣೋದ್ಧಾರ ಮಾಡಿಸು : ಮಾರ್ಗವನ್ನು . . . ದುಂಡುಸಾಗಿ ಬರುವ ಹಾಗೆ, ದುರಸ್ತು ಮಾಡಿಸಬೇಕು (ರಾಜೇಂದ್ರ. ೬೬) ; ಅಗಳಿ ಮುರಿದಿರಬೇಕೆಂದೂ ಎಷ್ಟು ನೆನಪು ಕೊಟ್ಟರೂ ಶಿವನು ಅದನ್ನು ದುರಸ್ತಿ ಮಾಡಿಸಿರಲಿಕ್ಕಿಲ್ಲ (ಪ್ರಹಾರ. ೪) ; ತಮ್ಮ ಹಳೆಯ ಮನೆಯನ್ನು ದುರಸ್ತಿ ಮಾಡಿಸಿದ್ದಾಗಿತ್ತು (ದುಂಬನಾ. ೩೬) ; ನಾನು ಇದನ್ನು ದುರಸ್ತಿಮಾಡಿಸಲಿಕ್ಕೆ ಕೊಡತೀನಿ (ರಕ್ತಧ್ವ. ೫೨).

**ದುರಸ್ತು ಮಾಡು, ದುರಸ್ತಿ ಮಾಡು, ದುರುಸ್ತು ಮಾಡು**=ಸುಧಾರಣೆ ಮಾಡು ; ಕೆಟ್ಟುಹೋದುದನ್ನು ತಿದ್ದಿ ಸರಿಪಡಿಸು : ಹಳೆಯ ಪುಸ್ತಕಗಳನ್ನು ದುರಸ್ತು ಮಾಡುವಾಗ ಅಂಚುಗಳನ್ನು ಕತ್ತರಿಸಬೇಕಾಗುವುದು (ಮುದ್ರಕ. ೩೬) ; ಪೌರಸಭೆಯು ವಿಶಾಲರಸ್ತೆಗಳನ್ನು ದುರಸ್ತು ಮಾಡುತ್ತ . . . ನಗರ ರಕ್ಷಣೆಗಾಗಿ ಪೋಲೀಸ್ ಸ್ಟೇಷನ್ನುಗಳನ್ನು ಏರ್ಪಡಿಸಿದ್ದಿತು (ಭಾರದ. ೧೧) ; ಏಳೆಂಟು ಸೈಕಲುಗಳು ಒಳಗಿದ್ದುವು. ಒಂದೆರಡನ್ನು ಹುಡುಗರು . . . ದುರಸ್ತಿ ಮಾಡುತ್ತಿದ್ದರು (ನಿಸುಕ. ೧) ; "ನೇರ್ಪಡಿಸು, ದುರುಸ್ತುಮಾಡು, ರಿಪೇರಿಮಾಡು" (Repair. ಪತ್ರಿನಿ. ೭೯) ; ನಿದ್ರೆಯಲ್ಲಿ ರಕ್ತವು, ಸವೆದ ಅವಯವಗಳನ್ನೆಲ್ಲ ಅವುಗಳಿಗೆ ಬೇಕಾಗುವ ಪದಾರ್ಥಗಳನ್ನು ಪೂರೈಸಿ ದುರುಸ್ತುಮಾಡುತ್ತದೆ (ಮುಂಬಯಿ. ೫-೧೭೩).
[ ←ಪಾರ. ಹಿಂ. ಮರಾ. ದುರುಸ್ತ್, ದುರುಸ್ತೀ ]

**ದುರಹಂಕಾರ** (ನಾ). ಕೆಟ್ಟ ಗರ್ವ ; ಅನುಚಿತವಾದ ಜಂಬ : ಸಂತತಾಘಸಹಾಯಿಗನನಶ್ರಾಂತ ದುರಹಂಕಾರಯುತನನಂತನಿರ್ವಕಾಪ್ರಪರಾಧಿಯನಧಿಕಕೋಪಿಯನು . . . ಸಲಹು ಮದಗರ್ವಮಂ ಹರಿಸಿ (ಬಸವು. ೨೨-೫೦) ; ದುರಹಂಕಾರವಿತ್ತು ಕರಿಯವ್ವನ ವಾಣಿಯಲ್ಲಿ (ಬರಹಾ. ೧೨೯). [ ಸಂ. ]

**ದುರಹಂಕಾರಿ** (ಗು). ೧. ಅತಿಯಾದ ಹೆಮ್ಮೆಯಿಂದ ಕೂಡಿದ ; ಅನುಚಿತವಾದ ಜಂಬವುಳ್ಳ : ನನ್ನ ದುರಹಂಕಾರಿ ಮನಸ್ಸಿಗೆ . . . ಉನ್ಮತ್ತಗ್ಲಾನಿಯಂತೆ ಆಗಿದ್ದಿತು (ಹೇಮಂತ. ೨೬೯). (ನಾ). ೨. ಬಹಳ ಸೊಕ್ಕಿನ ವ್ಯಕ್ತಿ ; ಅತಿ ಹೆಮ್ಮೆಯಿಂದ ಕೂಡಿದ ವ್ಯಕ್ತಿ : ಅವನೊಬ್ಬ ದುರಹಂಕಾರಿ (ರೂಢಿ). [ ಸಂ. ದುರಹಂಕಾರಿನ್ ]

**ದುರಹಂಕೃತ** (ನಾ). ಬಹಳ ಸೊಕ್ಕಿನವನು ; ಅತಿ ಹೆಮ್ಮೆಯ ವ್ಯಕ್ತಿ : ದೃಢಭಕ್ತಿನಿಷ್ಠಾಹೀನನಂ ದುರಹಂಕೃತನನಭಿಮಾನಶೂನ್ಯನಂ . . . ಅಪರಾಧದಶಶತನ ಎನ್ನನೇನಂ ಮಾಡಿಕೊಂಬೆನೊ (ಬಸವು. ೬೦-೫೬).
[ ಸಂ. ]

**ದುರಾಕೃತ** (ನಾ). ದುಷ್ಕರ್ಮ ; ಪಾಪ : ಲತೆಗಳ್ ಪುಷ್ಪ ಫಲಂಗಳಂ ತಳೆವುದಂ ಪಾಣ್ಡುರ್ಪೋ ಮದ್ದುರಾಕೃತದಿಂದೆಂದು ತೊಳಲ್ವುದೆನ್ನಯ ಮನಂ ನಿರ್ಣೈಸದೇನೊಂದುಮಂ (ಶಾಕುಂತ. ೬೩-೧೦೯). [ ಸಂ. ]

**ದುರಾಕ್ರಮಣ** (ನಾ). ನ್ಯಾಯವಲ್ಲದ ಮುತ್ತಿಗೆ ; ಅನ್ಯಾಯದಿಂದ ಮೇಲೆ ಬಿದ್ದು ದಾಳಿ ಮಾಡುವುದು : ಶತ್ರುದಾಳಿ ; ದುರಾಕ್ರಮಣ ; ಅತಿಕ್ರಮಣ (Inroad. ಇಂಕನಿ). [ ಸಂ. ]

**ದುರಾಗತ** (ನಾ). ೧. ಕೆಟ್ಟ ಉದ್ದೇಶ ; ಹೀನವಾದ ಅಪೇಕ್ಷೆ : ಪ್ರೀತಿಯಿಂ ಮನೆಗೆ ಕರೆದೊಯ್ದಲ್ಲರಂ ತೋಷಗೊಳಿಸಲೆಂದನುನಯದಿ ಪೇಳ್ದನಲ್ಲದೆ ದುರಾಗತಮಲ್ಲ ಪೇಳ್ದಪೆಂ ಕೇಳು ಸೊಲ್ಲ (ವೆಂಕಾರಾ. ೨-೩೪-೧೨). ೨. ಕೆಡುಕು ; ಕೆಟ್ಟ ಕೆಲಸ ; ಪಾಪ ; ಹೀನಕಾರ್ಯ : ಆತ್ಮಹತ್ಯವನ್ನು ಮಾಡಿಕೊಂಡರೆ . . . ಪರದಲ್ಲಿ ನರಕಪ್ರಾಪ್ತವಾಗುವುದು ಖಂಡಿತವೆಂದು ತಿಳಿ ; ದುರಾಗತಕ್ಕೆ ಪ್ರವೇಶಿಸಬೇಡ (ನೀತಿಚಿಂ. XIII, ೬) ; ದುರದೃಷ್ಟಕ್ಕೆ ದುಷ್ಟರೂ ಇದ್ದಾರೆ. ದುರಾಗತವನ್ನೂ ಮಾಡುತ್ತಾರೆ, ಧರ್ಮವಚನವನ್ನೂ ದುರುಪಯೋಗಪಡಿಸುತ್ತಾರೆ (ಆರ್ಯಧ. ೧೬೪). ೩. ಅನ್ಯಾಯವಾಗಿ ಕಿತ್ತುಕೊಳ್ಳುವುದು ; ಅಪಹರಣ. [ ಸಂ. ]

**ದುರಾಗ್ರಹ** (ನಾ). ೧. ಮೊಂಡುತನದಿಂದ ಹಿಡಿದ ಪಟ್ಟನ್ನು ಬಿಡದಿರುವುದು; ಅಭಿಪ್ರಾಯವನ್ನು ಬದಲಾಯಿಸದಿರುವುದು; ಮೂರ್ಖತನದಿಂದ ಕೂಡಿದ ಹಟ ; ಹಠಮಾರಿತನ : ಇಂದಿವರ ದುರಾಗ್ರಹವು ನಿಂತು ಮನ್ನಿಸಿ ಕಳೆವೆಂ (ಅನಂಪು. ೬-೩೫) ; ನಿನಗಿನ್ನೀ ದುರಾಗ್ರಹ ಬೇಡ ನಿನಗಳಿವಾದೊಡೀ ಕುರುವಂಶವಳಿವುದು (ಕುವ್ಯಾಅ. ೨೧-೩೫) ; ಮಾರೀಚ ಮನದಲಿ ಘಸಣಿಗೊಳುತಿರ್ದನು ಕಣಾ ರಾಕ್ಷಸಕುಲಾಧೀಶ್ವರನ ದುಶ್ಚರಿತದ ದುರಾಗ್ರಹಕೆ (ತೊರರಾ. ೩-೮-೧) : "ನಾನು" ಎಂಬುದೊಂದು ಜ್ಞೇಯ

ವಸ್ತು . . . ಎಂದು ಕೆಲವರ ಆಗ್ರಹ. ಇದು ದುರಾಗ್ರಹ (ಜೀವಾತ್ಮ. ೮); ಅಗ್ರಹಾರಕ್ಕೆ ಹೋದರೂ ದುರಾಗ್ರಹ ಬಿಡಲಿಲ್ಲ (ಗಾದೆ). **೨. ಹಠವಾದಿ ; ಮೊಂಡ :** ಆಗ್ರಹದಿಂ ಬಾರಿಪುದು ದುರಾಗ್ರಹನನಕಾರ್ಯವಾರ್ಗಯುಕ್ತನಂ . . . ಸಚಿವಂ ನೃಪನಂ (ಪಂಚತಂ ೧೧೭-೩). **೩. ಅತಿಯಾದ ಕೋಪ :** ಅವಳೇನೋ ಮಾತನಾಡಬೇಕೆಂದು ಪ್ರಯತ್ನಿಸುತ್ತಿರುವಷ್ಟರಲ್ಲಿ ಆ ಮಾತುಗಳಿಗೆ ಕಿವಿಗೊಡದೆ ದುರಾಗ್ರಹಾವೇಶದಿಂದ . . . ಕೊಂದು ಹಾಕಿದನು (ಕವಿಕ. ೫೩). [ ಸಂ. ]

**ದುರಾಗ್ರಹಿ** (ನಾ). ಕೆಟ್ಟ ಹಠವುಳ್ಳವನು ; ಛಲವಾದಿ ; ಇನ್ನೊಬ್ಬರ ಅಭಿಪ್ರಾಯವನ್ನು ಒಪ್ಪದ ವ್ಯಕ್ತಿ ; ಶತಮೊಂಡ : ಆ ದುರಾಗ್ರಹಿ ಲೋಕಜನಪರಿವಾದಪದನಿರ್ಭೀತನಕ್ಷವಿನೋದಕದಃಮಮಗ್ನನೊಡ್ಡಿದನಾ ಧನಂಜಯುನ (ಕುವ್ಯಾಸ. ೧೪-೧೮) ; ಆ ದುರಾಗ್ರಹಿಯಿಳಿದನಸುರಾಂತಕನ ಜಠರದಲಿ (ಕುವ್ಯಾಅ. ೧೯-೨೮) ; ಆ ದುರಾಗ್ರಹಿ ಧಾಳಿಯಿಟ್ಟನು ಧೂರ್ಜಟಿಯ ಗಿರಿಗೆ (ತೊರರಾ. ೧-೮-೩೧). [ ಸಂ. ದುರಾಗ್ರಹಿನ್ ]

**ದುರಾಚರಣ** (ನಾ). ೧. ಕೆಟ ನಡವಳಿಕೆ ; ದುಷ್ಟತನದ ವ್ಯವಹಾರ : ಕೆಲಕಾಲಕ್ಕಾತನ ದುರಾಚರಣಕ್ಕಾಂ ಕೊಕ್ಕರಿಸುತ್ತಿರೆ (ಶಾಂತಿಪು. ೬-೬೨). ೨. ಕೆಟ್ಟ ನಡವಳಿಕೆಯುಳ್ಳವನು; ದುಷ್ಟ : ಕುಂಭಕಾರಕಟಕಮೆಂಬುದು ಪೊಟಲುಂಟಲ್ಲಿ ಚಂಡಕೌಶಿಕನೆಂಬೊಂ ಪಾರ್ವಂ ದುರಾಚರಣಂ ಆತನ ಭಾರ್ಯೆ ಸೋಮಶ್ರೀಯೆಂಬೊಳ್ (ಶಾಂತಿಪು. ೬-೨೫ ವ). [ ಸಂ. ]

**ದುರಾಚರಣೆ** (ನಾ). = ದುರಾಚರಣ ೧. [ ಸಂ. ದುರಾಚರಣ ]

**ದುರಾಚಾರ** (ನಾ). ೧. ಕೆಟ್ಟ ನಡವಳಿಕೆ ; ಕೆಟ್ಟಚಾಳಿ : ದುರ್ವರ್ತನೆ ; ದುರಾಚಾರದಲ್ಲಿ ನಡೆವರು ಕನ್ನಡಿ ಎನಗೆ (ವಚಸಂ. ೬೧೨-೬) ; ಎಲ್ಲಿಯದು ಬಂದುದು ದುರಾಚಾರವೆಂದೆನುತೆ (ಕನ್ನ.ರ. ದೇ. ೧೩೩೩-೨೩) ; ಯಮವೆಂದರೆ ಬಿಡತಕ್ಕದ್ದು ; ಅದು ಹಿಂಸೆ ಅಸತ್ಯ ಸ್ತೇಯ ದುರಾಚಾರ ಪರಿಗ್ರಹ ಎಂದು ಐದು ಪ್ರಕಾರ (ಹಿಂದಸಾ. ೧೧೫) ; ಅರಬ್ಬಿಯವರಲ್ಲಿ ಅನೇಕ ದುರಾಚಾರಗಳಿದ್ದವು (ಕ್ಷಮುಹ. ೧೧೯) ; ಮಾಡೋದು ದುರಾಚಾರ ಮನೇ ಮುಂದೆ ವೃಂದಾವನ (ಗಾದೆ). ೨. ಕೆಟ್ಟ ನಡತೆಯುವನು : ದುರಾಚಾರಿ : "ದುರಾಚಾರನಂ ಶಿಕ್ಷಿದಾನನೆಂಬುದು" (ಹಲಾಯು. ೬೭-೨೫೦). [ ಸಂ. ]

**ದುರಾಚಾರಿ** (ಗು). ೧. ಕೆಟ್ಟ ನಡತೆಯ ; ನೀತಿಗೆಟ್ಟ ; ವಿಷಯ ಲಂಪಟನಾದ. (ನಾ). ೨. ಕೆಟ್ಟ ನಡತೆಯವನು ; ನೀತಿಗೆಟ್ಟವನು : ಕ್ರೂರಾತ್ಮಂ ವಂಚಕನವಿಚಾರಿ ದುರಾಚಾರಿ ಬಗೆಯದುಯ್ದಪನೆನ್ನಂ (ಪಂಚಾಮಾ. ೬-೧೧೩) ; ದುರ್ವ್ಯಸನಿ ದುರಾಚಾರಿಯೆಂದೆನಿಸದಿರಯ್ಯಾ ಎನ್ನ ಲಿಂಗವ್ಯಸನಿ ಜಂಗಮಪ್ರೇಮಿಯೆಂದೆನಿಸಯ್ಯಾ (ಬಸವ. ೩೬೨) ; ದುರಾಚಾರಿಯು ಲೋಕದಲ್ಲಿ ನಿಂದಿತನೆನಿಸುತ್ತಾನೆ (ಭಾರದ. ೫೩). ೩. ಕೆಟ್ಟ ನಡವಳಿಕೆಯುಳ್ಳದು : ಕೃತಘ್ನನುಂ ದುರಾಚಾರಿಯುಮಪ್ಪಿದು ಮರಳಿ ನಾಯೆ ಅಕ್ಕುಂ (ಪಂಚತಂ. ೨೬೨-೫೧ ಅಡಿಟಿ). [ ಸಂ. ದುರಾಚಾರಿನ್ ]

**ದುರಾಚಾರಿಣಿ** (ನಾ). = ದುರಾಚಾರೆ : ದುರಾಚಾರಿಣಿಯಾದ ನನ್ನನ್ನು ಕಂಡು ದೇವರಿಗೆ ಸಿಟ್ಟು ಬಂದಿತು (ಛಾಹಟ್ಟ. ೧೭೯). [ ಸಂ. ದುರಾಚಾರಿಣೀ ]

**ದುರಾಚಾರೆ** (ನಾ). ಕೆಟ್ಟ ನಡವಳಿಕೆಯುಳ್ಳವಳು : ವಿಷಯವಿಷವಲ್ಲಿಯಂ ಪೆರ್ಚಿಸುವ ಜಳಧಾರೆ ಸಾಧುತ್ವಮಂ ಕೆಡಿಸಿ ನಡಸುವ ದುರಾಚಾರೆ (ಕಾದಂಪೂ. ೫೫೩);ಎಲೆ ದುರಾಚಾರೆಯುಹ ಮೂರ್ಖೆಯುಹ ಪಂಡಿತಸ್ತ್ರೀಯುಹ ಸೂಚೀಮುಖಿ (ಪಂಚತಂ. ೨೧೨-೧೯). [ ಸಂ.ದುರಾಚಾರಾ ]

**ದುರಾಜ್ಞೆ** (ನಾ). ಕೆಟ್ಟ ಆಜ್ಞೆ ; ಅವಿವೇಕದ ಅಪ್ಪಣೆ : ಒಂದು ಹುಲಿಯು . . . ಪ್ರಭುವಿನ ದುರಾಜ್ಞೆಯನ್ನು ನಡೆಯಿಸಿದ ತಪ್ಪಿಗೋಸುಗ ತಕ್ಕ ಶಿಕ್ಷೆಯನ್ನು ಮಾಡಿ ಹೋಯಿತು (ಕವಿಕ. ೮). [ ಸಂ. ದುರಾಜ್ಞಾ ]

**ದುರಾಢ್ಯ** (ನಾ). ಬಡವ ; ದರಿದ್ರ. 'ಧನಾಢ್ಯ' ಪರಾ. [ ಸಂ. ]

**ದುರಾತ್ಮ** (ನಾ). ನೀಚ ವ್ಯಕ್ತಿ ; ದುರುಳ ; ದುಷ್ಟ : ದುರಾತ್ಮಾ ಎನ್ನನೊದೆದ ನಿನ್ನ ಕಾಲ್ಗಳಂ ಜನ್ಮಾಂತರದೊಳಂ ನಾಯುಂ ನರಿಯುಮಾಗಿಯಪ್ಪೊಡಂ ಕೊಂದು ಮಕ್ಕಳ್ವೆರಸು ತಿಂಬೆಂ (ವಡ್ಡಾರಾ. ೮-೧೯) ; ಪರಚಕ್ರಮೆ ಕಯ್ಗೆವರಲ್ ಕರಚಕ್ರಂ ಪೂಣ್ದು ಪೋದ ಬೇಗದೊಳೆ ಪರಂಪರೆವೋದ ನಾತನನ್ನೆಂದಿರದಾನಂದಿತ ವಿಶಾಖನಂದಿ ದುರಾತ್ಮಂ (ಶಾಂತಿಪು. ೭-೫೬) ; ಇಷ್ಟವಂಚಕನೇ ದುರಾತ್ಮನೆ ಕಷ್ಟನೇ ಕಾರ್ಪಣ್ಯಭಾವನೆ ಕಪಟಮಾನಸನೆ (ಬಸವು. ೧೫-೨೦) ; ದೊರೆಗಳೊಲಿದೀವ ಕಜ್ಜಂ ಸಮಾಪದ ದುರಾತ್ಮರಿಂ ಕಿಡದೆ ಮಾಣ್ದಪುದೆ (ಜೈಮಿಭಾ. ೨೩-೨೫). [ ಸಂ. ದುರಾತ್ಮನ್ ]

**ದುರಾತ್ಮಕ** (ನಾ). ಕೆಟ್ಟ ಮನಸ್ಸುಳ್ಳವನು; ದುರುಳ; ದುಷ್ಟ : ದುರಾತ್ಮಕರೆನ್ನನೆಳದೊಯ್ದು ಬೀಳಿಸುವರಗ್ನಿಯಲಿ (ಕುವ್ಯಾವಿ. ೩-೯೯) ; ಈ ದುರಾತ್ಮಕನ ಶಿರವನರಿವೆನು (ಕುವ್ಯಾಕ. ೨೫-೩೬). [ ಸಂ. ]

**ದುರಾತ್ಮಿಕೆ** (ನಾ). ಕೆಟ್ಟ ಮನಸ್ಸಿನವಳು ; ದುಷ್ಟೆ : ಎಲೆ ಎಲೆ ದೋಷದೂಷಿತೆ ದುರಾತ್ಮಿಕೆ . . . ಎನುತ್ತಲೆದುಲಿದಾಕೆಯಂ ನಿಳಯದಿಂ ಪೊಱಗಿಕ್ಕಿ ನಿರೀಕ್ಷಿಪಾಗಳ್ (ವೃಷವಿ. ೯-೫೭). [ ಸಂ. ದುರಾತ್ಮಿಕಾ ]

**ದುರಾತ್ಮೆ** (ನಾ). =ದುರಾತ್ಮಿಕೆ: ದುರ್ವ್ಯಸನೆ ದುರಾತ್ಮೆಯಪ್ಪ ವಧು ಸಜ್ಜನಮೇ (ಮದಶಿ. ೯೮-೭). [ ಸಂ. ದುರಾತ್ಮಾ ]

**ದುರಾದೃಷ್ಟ** (ನಾ). ದುರದೃಷ್ಟ ; ಹೀನ ಅದೃಷ್ಟ : ಅದು ನಮ್ಮ ದುರಾದೃಷ್ಟ (ದೇವಹಂ. ೨೦೦). [ <ಸಂ. ದುರದೃಷ್ಟ ]

**ದುರಾಧರ್ಷ** (ಗು). ತಡೆಯಲು ಅಸಾಧ್ಯವಾದ; ಅಡಗಿಸಲು ಕಷ್ಟವಾದ: ಉದ್ಧತದುರಾಧರ್ಷ ಹರ್ಷೋನ್ನತದೊಳಳಿನೀಲವೇಣಿ ಮುಂತಪ್ಪ ಕಜ್ಜವನೊಪ್ಪಮೆನಲುಸುರ್ದಳೀವೇಳ್ವೆನು (ವಂಕಾರಾ. ೨-೮-೮). [ ಸಂ. ]

**ದುರಾಪ** (ಗು). ೧. ಜಯಿಸಲು ಕಷ್ಟವಾದ ; ಗೆಲ್ಲಲು ಸಾಧ್ಯವಾಗದ. ೨. ಬಳಿ ಸಾರಲು ಕಷ್ಟವಾದ. (ನಾ). ೩. ಪಡೆಯಲು ಕಷ್ಟಕರವಾದದ್ದು ; ಹೊಂದಲು ಅಸಾಧ್ಯವಾದದ್ದು : ಪಗೆವಂಗಂ ಕೆಳೆಯಂಗಮಾರ್ದ್ರಮತಿಯುಂ ತ್ವನ್ಮೂರ್ತಿ ತೀರ್ಥೇಶ ಮಾಡುಗುವಾಳೋಚಿಸೆ ನಿನ್ನ ತತ್ತ್ವಮ[ವಿ]ಸಂವಾದಂ ದುರಾಪಂ ಗುಣಾಬ್ಧಿಗಭೀರಂ ಭವದೀಯಮೆಂದು . . . ಬಂದಿಸಿದನಾ ಪಾವೇಭಕಂಠೀರವಂ (ಶಾಂತಿಪು. ೮-೧೫೮). [ ಸಂ. ]

**ದುರಾಪಾಸ್ತ** (ನಾ). ೧. ಪರಿಹರಿಸಲು ಅಶಕ್ಯವಾದದ್ದು. ೨. ಅಸಾಧ್ಯವಾದದ್ದು : ಉದರಂಭರಣವೆ ದುರಾಪಾಸ್ತವಾಗಿರಲು ಯಂತ್ರಗಳನ್ನು ಕೊಳ್ಳಲಿಕ್ಕೆ ದ್ರವ್ಯವೆಲ್ಲಿ ? (ಜ್ಯೋತಿಶ್ಯ. ೨೦) ; ಸಾವಿರಾರು ರೂಪಾಯಿ ವೆಚ್ಚದ ಈ ಪರಿಹಾರಕಾರ್ಯವು ಖಾಸಗಿ ಜನರಿಗೆ ದುರಾಪಾಸ್ತವಾದದ್ದು (ಕರವೀ. ೦೦೩) ; ಸೇಕ್ಸ್‌ಪೀಯರನ ವಾಣಿಗೆ ಚಲನೆಯನ್ನು ಕೊಟ್ಟಂಥ ಶಕ್ತಿಯನ್ನು ಸದ್ಯದ ಮಾನವ ಮನಸ್ಸು ದೊರಕಿಸುವುದೆಂದರೆ ದುರಾಪಾಸ್ತವಾದುದಾಗಿದೆ (ಪ್ರಬಂಧ. ೧೩೦) ; ಈ ರೀತಿ ಇವುಗಳ ತಳಕು ಬೀಳುವುದು ದುರಾಪಾಸ್ತವು. ತಳಕು ಬಿದ್ದ ಕ್ಷಣವೆ ಮುಕ್ತಿಯ ಕ್ಷಣ ಎನ್ನಬಹುದು (ಯಾತ್ರಿಕ. ೬೭). [ ಸಂ. ]

**ದುರಾಭಿಮಾನ** (ನಾ). =ದುರಭಿಮಾನ : ಅರ್ಜುನನು ನಿಜಸೂನು ಮಡಿಯೆ ದುರಾಭಿಮಾನನೆಂದನು (ಕುವ್ಯಾದ್ರೋ. ೮-೫೮). [ < ಸಂ. ದುರಭಿಮಾನ ]

**ದುರಾರಾಧ್ಯ** (ಗು). ೧ ಒಲಿಸಲು ಸುಲಭವಲ್ಲದ; ಸಂತೋಷಪಡಿಸಲು ಕಷ್ಟವಾದ: ಈ ದುರಾರಾಧ್ಯ ದೇವತೆಯನ್ನು ಒಲಿಸಿಕೊಳ್ಳುವ ವಿಸ್ಯಾಸದಲ್ಲಿ ಈ ಮಗನು ಬಹುಶಃ ಮುಂದಿನ ಜೀವನದ ಮೊದಲ ಪಾಠಗಳನ್ನು ಮೈಗೂಡಿಸಿಕೊಂಡಾನೊ ಏನೊ (ಗಾಳಿಪ. ೧೦). (ನಾ). ೨. ಒಲಿಸಲು ಅಸಾಧ್ಯನಾದ ವ್ಯಕ್ತಿ. [ ಸಂ. ]

**ದುರಾರಾಧ್ಯೆ** (ನಾ). ಮೆಚ್ಚಿಸಲು ಅಸಾಧ್ಯವಾದವಳು ; ಸುಲಭವಾಗಿ ಒಲಿಯದವಳು : ತಾಮಸಿ ದುರಾರಾಧ್ಯೆಯಪಯಶಮದೇಂ ನೆನೆದ ಮನದಿ ಕುಲಗೇಡಿತನವ (ವಂಕಾರಾ. ೨-೬-೧೫). [ ಸಂ. ದುರಾರಾಧ್ಯಾ ]

**ದುರಾರೋಹ** (ನಾ). ಹತ್ತಲು ಕಷ್ಟವಾದುದು,-ಅಸಾಧ್ಯವಾದುದು : ಆ ಮರನಂ . . . ದುರಾರೋಹಮುಮಪ್ಪೊಡಂ ಬಗೆಯದೆ ಬಳಸಿದ ಬಳ್ಳಿವಿಡಿದಡರ್ದೇಱೆ (ಕಾದಂಪೂ. ೧೭೬). [ ಸಂ. ]

**ದುರಾಲಂಭ** (ನಾ). ಒಂದು ಬಗೆಯ ಸಸ್ಯ: "ತೊರೆಯುಂಗುಳಂ ದುರಾಲಂಭ [ಪಾಠಾಂ. ಬ]ಮೆನಿಸಿಕ್ಕು" (ಮಂಗರಾ. ೩೬-೧೭). [ ಸಂ. ದುರಾಲಂಭಾ ]

**ದುರಾಲಭ$_1$** (ನಾ). = ದುರಾಲಭೆ : ಭದ್ರಮುಸ್ತೆ, ದುರಾಲಭ . . . ಇವುಗಳ ಕಷಾಯವಿಕ್ಕಿ ಸೇವಿಸೆ ಪಿತ್ತಜ್ವರ ಪರಿಹಾರವಾಗುವುದು (ಸಕಪ್ಪ. ೭೯). [ ಸಂ. ದುರಾಲಭಾ ]

**ದುರಾಲಭ$_2$** (ಗು). ೧. ಹಿಡಿದುಕೊಳ್ಳಲು ಕಷ್ಟವಾದ ; ನಿರ್ವಹಿಸಲು ಅಶಕ್ಯವಾದ. ೨. ಮುಟ್ಟಲು ಯೋಗ್ಯವಲ್ಲದ. ೩. ಪಡೆಯಲು ಕಷ್ಟವಾದ. [ ಸಂ. ]

**ದುರಾಲಭೆ** (ನಾ). ಒಂದು ಬಗೆಯ ಸಸ್ಯ ; ತೀಟಕಸಂಧಿ ; ತುರುಂಚೆ : "ಕಪಿಕಚ್ಛು ದುರಾಲಭೆ ತುಱುಚಿ" (ವಸ್ತುಕೋ. ೩೬-೨೦) ; ಜಳದಂ ಶುಂಠಿ ದುರಾಲಭೆ ಗುಳೂಚಿಯೆಂಬಿನಿತುಮಂ ಕಷಾಯಂಗೊಂಡಾಗಳೆ ಕುಡಿಯೆ ವಾತದೋಷಂ ಸಲೆ ವಿಷಮಜ್ವರಂ ದಿನತ್ರಯಕ್ಕುಪಶಮಿಕುಂ (ಲೋಕೋಪ. ೯-೧೬). [ ಸಂ. ದುರಾಲಭಾ ]

**ದುರಾಲಾಪ** (ನಾ). ೧. ಕೆಟ್ಟಮಾತು ; ನಿಂದೆ; ಬಯ್ಗುಳಂ; ದೂಷಣೆ: ಪಾಪಕರ್ಮವೆ ಧರ್ಮ ಉಲಿವ ಪ್ರಲಾಪನೆಯೆ ಜಪವಾಡುವ ದುರಾಲಾಪವೇ ಮಂತ್ರವು ನಿನಗೆ (ಬಸವು. ೯೦-೯). ೨. ಶಪಿಸುವುದು ; ಶಾಪ. [ ಸಂ. ]

**ದುರಾಲೋಕನ** (ಗು). ಕಣ್ಣು ಕುಕ್ಕುವ ; ಕಣ್ಣು ಕೋರೈಸುವ : ಸನತ್ಕುಮಾರಮಾಹೇಂದ್ರಪತಿಗಳಿಂದ್ರಾಯುಧೋಪಮಾನಪರಾರ್ಧ್ಯಮಣಿ ಮಯೂಖಮಾಳಿಕಾದುರಾಲೋಕನನಕ್ಷತ್ರಮಾಳಾಕಳಾಪಕಕ್ಷಂಗಳಪ್ಪ ಪಕ್ಷಗಜಂಗಳ ನೇಱಿ . . . ಚಾಮರಂಗಳನಿಕ್ಕೆಯುಂ (ಶಾಂತಿಪು. ೧೦-೧೩ ವ). [ ಸಂ. ]

**ದುರಾಲೋಚನೆ** (ನಾ). ಕೆಟ್ಟ ಯೋಚನೆ; ದುಷ್ಟ ವಿಚಾರ: ದುರಾಲೋಚನೆಯಲ್ಲ, ದೂರಾಲೋಚನೆ! (ನಟಸಾ. ೨೫೨) ; ನೀವು ದುರಾಲೋಚನೆಗಳನ್ನು ಮಾಡುತ್ತಿದ್ದೀರಿ (ವಚಭಾ. ೧೦೩).
[ ಸಂ. ದುರಾಲೋಚನ ]

**ದುರಾಲೋಚಿಸು** (ಕ್ರಿ). ಕೆಟ್ಟ ಯೋಚನೆ ಮಾಡು ; ದುಷ್ಟ ವಿಚಾರ ಮಾಡು : ಆದರೆ ರೈತನು ದುರಾಲೋಚಿಸಿ ನಾನು ಇವರಿಗೆ ಈ ಗುಟ್ಟು ಹೇಳಿಬಿಟ್ಟರೆ ಇವರೇ ತಿಂದು ಹಾಕಿಬಿಡುತ್ತಾರೆ . . . ಎಂದುಕೊಂಡು (ಪಂಚಾಮ್ನ. ೭೯). [ ದುರಾಲೋಚನೆ + – ಇಸು$_3$ ]

**ದುರಾಶೆ** (ನಾ). ಕೆಟ್ಟ ಅಪೇಕ್ಷೆ ; ದುಷ್ಟ ಬಯಕೆ; ಅತಿಯಾಸೆ: ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ ದುರಾಶೆಯಿಂದ ಬಂದುದು ಅನರ್ಪಿತ (ವಚಸಂ. ೨೬೨-೬೨) ; ದುರಾಶೆ[ಪಾಠಾಂ. ಸೆ]ಯಂ ಪೊತ್ತು . . . ಅಭವನಂ ಪೊಗಳದಳಿವರನೇನನೆಣಿಸುವೆನು (ಬಸವು. ೧-೩೬) ; ಇದು ಕೌರವರಿಗೆ ಅಂತ್ಯಕಾಲ . . . ದುರಾಶೆ ಬೆಳೆಯುತ್ತಿದೆ (ವಚಭಾ. ೯೬). [ ಸಂ. ದುರಾಶಾ ]

**ದುರಾಶೆಗಾರ** (ನಾ). ಕೆಟ್ಟ ಆಸೆಯನ್ನುಳ್ಳವನು : (ಕಿ).
[ ದುರಾಶೆ + – ಕಾರ$_1$ (<– ಕಾಱ) ]

**ದುರಾಸದ** (ಗು). ೧. ಜಯಿಸಲು ಅಶಕ್ಯವಾದ; ಗೆಲ್ಲಲು ಕಷ್ಟವಾದ (ನಾ). ೨. ಜಯಿಸಲು ಅಸಾಧ್ಯನಾದವನಂ ; ಸೋಲಿಸಲು ಆಗದವನು ;ಅಜೇಯ: ಕುರಗಾಕೃತಿ ಕೃಷ್ಣಾಜಿನಪರೀವೃತಂ . . . ದುರಾಸದು ಸಿಂಹಮಧ್ಯದ್ರೇಕ್ಕಾಣಂ (ಜಾತಕಿ. ೧೯-೧೪) ; ತಾಳವನದೊಳತಿದುರಾಸದನಾದ ಖರಾಕಾರನಾದ ಧೇನುಕಾಸುರನನ್ನು ಲೀಲೆಯಿಂದ ಮರ್ದಿಸಿ (ಕಗವಿ. ೭೭; ವಿಷ್ಣುಪು). [ ಸಂ. ]

**ದುರಾಸೆ** (ನಾ). ಕೆಟ್ಟ ಬಯಕೆ ; ದುಷ್ಟ ಆಸೆ ; ಅತಿಯಾಸೆ : ದುರಾಸೆ ಮುಂದುಗೊಂಡು . . . ಪರರೊಡವೆಯ ಅಪಹರಿಸುವ ಸೆಟ್ಟಿ ಮುಂತಾದ ಸಮಸ್ತ ಕಳ್ಳರ ಮಕ್ಕಳ ಕಾಡಿ ಬೇಡಿ (ಮಧಿಮಾ. ೪೭-೬೪) ; ಮಕ್ಕಳು ಜಿಪುಣರಾಗಬಹುದು ; ದುರಾಸೆಗೂ ತುತ್ತಾಗಬಹುದು (ಶಿಕ್ಷದ. ೭೫).
[ <ಸಂ. ದುರಾಶಾ ]

**ದುರಾಹರ** (ನಾ). ಕೆಟ್ಟ ಆಹಾರ ; ನಿಷಿದ್ಧವಾದ ಆಹಾರ : ಸದಾಚಾರವ ಬಿಟ್ಟು ಹೀನರೊಡನಾಡಿ ದುರಾಹರಗೊಂಡಿರುತ್ತನಾಚಾರಕೆ ಸಂದು ಶೂದ್ರಕನೆನಿಪ್ಪ ಪೆಸರ್ ನೆಲೆಗೊಂಡು ವೀರರೊಳ್ ಸೇರನೆ (ರಚಿಕೆಂ. ೭).
[ <ಸಂ. ದುರಾಹಾರ ]

**ದುರಾಹವರಂಗ** (ನಾ). ಕಾಳಗ ಮಾಡಲು ಕಷ್ಟವಾದ ಯುದ್ಧರಂಗ ; ಹೋರಾಡಲು ಅಸಾಧ್ಯವಾದ ಕಾಳಗದ ಕಣ: ಅರಿಗೆ ದುರಾಹವರಂಗಾಂತರದೊಳಭೀತಂ ನಿಜಾರಿಸಮಿತಿಗಳಿಂದಂ ನೆರೆದ ಜಯಂಗೊಂಡಾಗಡೆ ಸುರಾಂಗನಾಸುರತವಿಷಯಸುಖಮಂ ಕೊಟ್ಟಂ (ಕವಿರಾ. ೩-೧೫೫).
[ ಸಂ. ]

**ದುರಿಂದ್ರಿಯಸುಖ** (ನಾ). ಪಂಚೇಂದ್ರಿಯಂಗಳಿಂದ ಉಂಟಾಗುವ ಕೀಳಾದ ಸೌಖ್ಯ : ದುರಿಂದ್ರಿಯಸುಖಕೆ ಕೊಕ್ಕರಿಕೆ ಪುಟ್ಟೆ ನಿರ್ವೇಗದಿಂ ನಿರಿಂದ್ರಿಯಸುಖಕ್ಕೆ ನಾಡೆ ಮನವಿಟ್ಟು (ಸುಕುಮಾ. ೧೦-೩೧).
[ ಸಂ. ]

**ದುರಿಚ್ಛೆ** (ನಾ). ಕೆಟ್ಟ ಬಯಕೆ,-ಅಪೇಕ್ಷೆ : ತನ್ನ ಸಂಗಡ ಎರಡನೇ ವ್ಯಕ್ತಿಯನ್ನು ಪಾಪಪಂಕದಲ್ಲಿ ಎಳೆಯುವ ದುರಿಚ್ಛೆಯು ಉತ್ಪನ್ನವಾದ ಕೂಡಲೇ ಮಾತ್ರ ಅವಶ್ಯವಾಗಿ ಅಪಘಾತ ಮಾಡಿಕೊಳ್ಳಬೇಕು (ಬ್ರಹ್ಮಜೀ. ೯೪).
[ ಸಂ. ದುರಿಚ್ಛಾ ]

**ದುರಿತ** (ನಾ). ೧. ಪಾಪ ; ಪಾತಕ : "ದುರಿತದೊಳು ದುಃಖದೊಳು ಮತ್ತೆ ಭವಮಾಲೆಯೊಳಘಾಖ್ಯಮಕ್ಕುಂ" (ಮಂಗರಾ. ೧೫೦-೫೦) ; ದುರಿತಘನತಿಮಿರದಶಶತಕಿರಣಮತಿಪ್ರೀತಿಕರಣಮಖಿಳವಿನೇಯೋದ್ಧರಣಂ (ಆದಿಪು. ೧೪-೩೪) ; ಭವಬಂಧನ ದುರಿತಂಗಳ ಗೆಲುವೊಡೆ ಓಂ ನಮಃಶಿವಾಯ ಶರಣೆಂದೊಡೆ ಸಾಲದೆ (ಬಸವ. ೭೯) ; ಪರೆವುದು ದುರಿತತಮಿಸ್ರಂ . . . ಯಶೋಧರಚರಿತಕಥಾಶ್ರವಣಮೆಂಬ ಚಂದ್ರೋದಯದೊಳ್ (ಯಶೋಚ. ೧-೨೬); ಅಗಡು ಮಾಡಿದ ನಿಮ್ಮ ಮಕ್ಕಳ ವಿಗಡತನಕಂಜಿದರೊ ದುರಿತದ ಸೊಗಡಿಗಂಜಿದರೊ ಪೃಥಾಸುತರೆಂದಳಿಂದುಮುಖಿ (ಕುಮ್ಮಾಸ. ೧೫-೪೭) ; ಬಿರುದ ಗಳಿಸಲಿಕೆಸಪ, ಹೆಸರ ಪಸರಿಸಲೆಸಪ ದುರಿತಗಳ್ಗಿಣೆಯುಂಟೆ (ಮಂಕುಕ. ೬೫೭). ೨. ಕೇಡು ; ಅಪಾಯ : ಶುಭಗ್ರಹಂ ಸಕಲ ದುರಿತಮಂ ಪರಿಹರಿಕುಂ (ಜಾತಕಿ. ೭-೧೪) : ಕಂಸ ನಿನ್ನ ಜಾವಮಾತ್ರಗಳೆಂದೊಡಾವ ದುರಿತಂಗಳುಮೆಮ್ಮೊಳಿ ಪೊರ್ದಲಂಜುಗುಂ (ಜಗವಿ. ೭-೬೦); ನಿನ್ನಡಿಸೋಂಕಿನೊಳಖಿಲದುರಿತಗಳ ಸನ್ನಾಹವ ಸದೆದಟ್ಟಿ . . . ಎಳ್ಗಿವೆತ್ತಿಹೆನು (ಹದಿಬ. ೧-೩೬). ೩. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : ದುರಿತ . . . ವಾರಣಮಾರಯೆಯೆಂಟಕ್ಕೆ ನಾಮಮಿದು (ವ್ಯವಹಾ. ೯-೮) ; ಮದಹಸ್ತಿ ದುರಿತ ವಸು ಫಣಿ ನಾಗಂ . . . ಯೆಂಟರ ಪೆಸರು (ಭಾಸ್ಕರ. ೭೪-೩) ; P ಎಂಟು ಎಂಬ ಈ ಸಂಕೇತಾರ್ಥದ ವಿವರಣೆಗಳಲ್ಲಿ ಸ್ಪಷ್ಟತೆ ಕಂಡುಬರುವುದಿಲ್ಲ. [ ಸಂ. ]

**ದುರಿತಕಾರಿ** (ನಾ). ಪಾಪಮಾಡುವವನು ; ಪಾತಕಿ : ಕರವಾಳಕದಿರದಿಹ ದುರಿತಕಾರಿಯ ಹೃದಯ ಕರುಣೆಯಿಂ ಕರಗಿತೊ (ಮಂಕುಕ. ೨೯೬).
[ ಸಂ. ದುರಿತಕಾರಿನ್ ]

**ದುರಿತಕ್ಷಮಿತ** (ನಾ). ಪಾಪವನ್ನು ಕ್ಷಮಿಸುವವನಂ : ಮಂಗಳಚರಿತ ದುರಿತಕ್ಷಮಿತ ರಾಘವ ವಿಶ್ವಪೂಜಿತ . . . ರಕ್ಷಿಸು ನಮ್ಮನನವರತ (ಹರಿಸಾ. ೪). [ <ಸಂ. ದುರಿತಕ್ಷಮಿತೃ ]

**ದುರಿತಘರಟ್ಟ** (ನಾ). ಪಾಪವನ್ನು ಪುಡಿಮಾಡುವವನು,-ನಾಶಮಾಡುವವನು ; ಪಾಪನಾಶಕ : ಭಕ್ತರ ಮನಂಗಳ ಘಟ್ಟಿಯಂ ನೋಡಲ್ಕೆ ದುರಿತಘರಟ್ಟನುಂ ತಾಂ ಬಂದು ಬೇಡಿದನು (ಬಸಪು. ೨೩-೨೪).
[ ದುರಿತ + ಘರಟ್ಟ ]

**ದುರಿತದಲ್ಲಣ** (ನಾ). ಪಾತಕವನ್ನು ನಾಶಗೊಳಿಸುವವನು: ದುರಿತದಲ್ಲಣ ದುಷ್ಟಮರ್ದನ ಪರಮಸುಖದಿಂದತ್ತಲಿರೆ (ಶೌಶಿಂಾ. ೩೮-೧).
[ ದುರಿತ + ತಲ್ಲಣ (<ತಲ್ಲಟ) ]

**ದುರಿತದೂರ** (ನಾ). ಪಾತಕಕ್ಕೆ ಹೊರತಾದವನು ; ಪಾಪವಿಲ್ಲದವನು : ಜಯ ಜಿನೇಂದ್ರ ನತಸುರೇಂದ್ರ ದುರಿತದೂರ ದಳಿತಮಾರ (ಅಜಿಪು. ೭-೧೫ ವ). [ ದುರಿತ + ದೂರ ]

**ದುರಿತಬಂಧನ** (ನಾ). ಪಾಪದ ಬಂಧನ,-ಸಂಬಂಧ : ದೇವಪೂಜೆಯ ಮಾಟ ದುರಿತಬಂಧನದೋಟ . . . ಜಂಗಮಾರ್ಚನೆಯ ಮಾಟ ಕೂಡಲ ಸಂಗನ ಕೂಟ (ಬಸವ. ೧೭೭). [ ದುರಿತ + ಬಂಧನ ]

**ದುರಿತಭಾಜನ** (ನಾ). ಪಾಪಕ್ಕೆ ಆಶ್ರಯನಾದವನು ; ಪಾಪಿ : ನರಕಕರ್ಮವ ಮಾಡಿ ಇಹದೊಳು ದುರಿತಭಾಜನನಾಗಿ ಕಡೆಯಲಿ ಪರಕೆ ಬಾಹಿರನಾಗಿ ನಾನಾಯೋನಿಯೊಳು ಸುಳಿದು ಹೊರಳುವನುವನು ಕೃಷ್ಣದೇವನು ಕರುಣಿಸಿದನೇ (ಕುವ್ಯಾಭೀ. ೩-೨೯). [ ದುರಿತ + ಭಾಜನ ]

**ದುರಿತಯುತ** (ಗು). ೧. ಪಾಪದಿಂದ ಕೂಡಿದ. (ನಾ). ೨. ಪಾಪದಿಂದ ಕೂಡಿದವನು ; ಪಾತಕಿ : ದುರಿತಯುತನಾಗಿ ಗಮ್ಮನೆ ನರಕಕ್ಕೆಟಿಯಲ್ಕೆ ಬಗೆವ ಜೀವಾಳಿಗಮುರ್ವರೆಯೊಳ್ ಕುತತ್ತ್ವರುಚಿ ತಾಂ ದೊರೆಕೊಳ್ಗುಂ (ಧರ್ಮಾಮೃ. ೧೦-೯೧). [ ದುರಿತ + ಯುತ ]

**ದುರಿತವರ್ತಿ** (ನಾ). ಪಾಪದಲ್ಲಿ ಸುತ್ತುವಂತಹುದು,-ತೊಳಲುವುದು : ಚತುರಶೀತಿಲಕ್ಷಪ್ರಮಾಣ ಯೋನಿಮುಖಂಗಳೊಳಾವರ್ತನ ಪರಿವರ್ತನದಿಂ ದುರಿತವರ್ತಿಯಾಗಿ ನಮೆವ ಸಂಸಾರಿ ಜೀವಕ್ಕೆ (ಸುಕುಮಾ. ೫-೩೨ ವ).
[ ಸಂ. ದುರಿತವರ್ತಿನ್ ]

**ದುರಿತವಶ** (ನಾ). ಪಾಪದ ಪ್ರಭಾವ: ದುರಿತವಶದಿಂದೆ ತಿಟ್ಟನೆ ತಿರಿಯದೆ ಸುಖನಿಳಯಮಪ್ಪ ಮುಕ್ತಿಶ್ರೀಯೊಳ್ ನೆರೆದಿರ್ಪೆನೆಂಬ ಭವ್ಯಂ (ಧರ್ಮಾಮೃ. ೧-೭೭). [ ದುರಿತ + ವಶ ]

**ದುರಿತವಿಜಯ** (ನಾ). ಪಾಪವನ್ನು ಗೆಲ್ಲುವಿಕೆ : ದಿವಿಜನಿಕಾಯದ ಜಯಜಯರವದಿಂದಂ ದುರಿತವಿಜಯಮಂ ತಮಗೆ ಮಹೋತ್ಸವದಿನಟಿಪುತ್ತುಮಿದಿರ್ಗೊಳ್ವವೊಲೆಸೆದುದು ಸಮವಸರಣ ದುಂದುಭಿನಿನದಂ (ಆದಿಪು. ೧೪-೧೩೭). [ ದುರಿತ + ವಿಜಯ ]

**ದುರಿತವಿನಾಶ** (ನಾ). ಪಾಪದ ನಿವಾರಣೆ ; ಪಾಪನಾಶ : ಈ ಶರೀರದೊಳ್ ಘಾತ್ಯಘಾತಿ ದುರಿತವಿನಾಶಮುಮನಂತಚತುಷ್ಟಯಮುಂ ಕೇವಲಲಬ್ಧಿಲಾಭಮುಮಪ್ಪುದನಱಿದು (ಶಾಂತಿಪು. ೧೦-೧೨೧ ವ).
[ ದುರಿತ + ವಿನಾಶ ]

**ದುರಿತವಿಪಾಕ** (ನಾ). ಪಾಪದ ಫಲ; ದುಃಖ ; ನೋವು : "ದುರಿತವಿಪಾಕಂ ಯಾತನ ಗುರುವೇದನೆ ದುಃಖಮಾರ್ತಿ ಪೀಡೆಯಸಾತಂ" (ವಸ್ತುಕೋ. ೨೦-೧೧). [ ದುರಿತ + ವಿಪಾಕ ]

**ದುರಿತವ್ರಜ** (ನಾ). ಪಾಪದ ಸಮೂಹ ; ಪಾತಕದ ರಾಶಿ,-ಗುಂಪು: ದುರಿತವ್ರಜಮೊರ್ಮೆಯೆ ಬೆದಱಿ ಕೆದಱಿ ಕಿಡುಗುಮಮೋಘಂ (ಜಿನಾಲಿ. ೪-೪). [ ದುರಿತ + ವ್ರಜ ]

**ದುರಿತವ್ರಾತ** (ನಾ). = ದುರಿತವ್ರಜ : ದುರಿತವ್ರಾತಲತಾಕೃಪಾಣಿ ವಿಸರದ್ದುರ್ಬೋಧ ರೋಧಸ್ವಿನೀತರಣದ್ರೋಣಿ (ಚಂದ್ರಪು. ೧-೧೨); ದುರಿತವ್ರಾತದ ಮಾತು ಸಲ್ಲದಿರವೇಟತ್ತತ್ತ ಭವ್ಯರ್ಕಳಂ ಬರವೇಟ್ಚೆಚ್ಚರಮಿತ್ತಲಿತ್ತಲೆನುತುಂಕೈಸನ್ನೆಗೆಯ್ವಂತಿರೆ (ಅನಂಪು. ೧೦-೨೩). [ ದುರಿತ + ವ್ರಾತ ]

**ದುರಿತಸಂಕುಳ** (ನಾ). = ದುರಿತವ್ರಜ : ಶ್ರೀವಿಭೂತಿಯನೊಲಿದು ಧರಿಸಿರೆ ಭವವನು ಪಱಿವುದು ದುರಿತಸಂಕುಳವನೊರಸುವುದು (ಮುಹಾದೇ. ಬ. ೯೩-೨೦೯). [ ದುರಿತ + ಸಂಕುಳ (= ಸಂಕುಲ) ]

**ದುರಿತಸಂಹರಣ** (ನಾ). ಪಾಪವನ್ನು ಪರಿಹಾರಮಾಡುವುದು,-ನಾಶಮಾಡುವುದು : ಇದು ಸದಾಯುಃಕೀರ್ತಿವರ್ಧನ . . . ಪದುಮನಾಭನ ಚರಿತ ಪಾವನ ದುರಿತಸಂಹರಣ (ಶೌಶಿಂಾ. ೪೪-೫೮).
[ ದುರಿತ + ಸಂಹರಣ ]

**ದುರಿತಹರ** (ಗು). ೧. ಪಾಪವನ್ನು ನಿವಾರಣೆ ಮಾಡುವ; ಪಾತಕವನ್ನು ಪರಿಹರಿಸುವ : ಇದು ಪುಣ್ಯಕ್ಷೇತ್ರಮಿಾ ಇರ್ದುದೆ ದುರಿತಹರಕ್ಷೇತ್ರಮಿಾ ಮೆಯ್ಯೊಳೀ ತೋರ್ಪುದೆ ಸಿದ್ಧಕ್ಷೇತ್ರಮೆಂದಾದರದಿನಿವರ್ಗೆ ತೋರ್ಪಂತುಟಾಗಿರ್ದುದು (ಸುಕುಮಾ. ೯-೪೭). (ನಾ). ೨. ಪಾಪವನ್ನು ಕಳೆಯುವುದು,-ಪರಿಹರಿಸುವುದು : ನಿಜತತ್ತ್ವಂ ದುರಿತಹರಂ ನಿಜತತ್ತ್ವಮೆ ತಪ್ಪದಪ್ಪುದಾರ್ಯಾಷಟ್ಕಂ (ಪಸಾರ. ೪೫೭). ೩. ಪಾಪವನ್ನು ನಿವಾರಣೆ ಮಾಡುವವನು,-ಪರಿಹರಿಸುವವನು. ೪. ಶಿವ : ವರದ ಶಂಕರ ಭಕ್ತ ಶಂಕರ ದುರಿತಹರ ನಿಖಿಳೈಕರಕ್ಷಣ . . . ಮಮ ರಕ್ಷ (ಬಸಪು. ೨-೧೭). ೫. ಜಿನ: "ದುರಿತಹರನಕ್ಷಯಂ ವೀತರಾಗನರ್ಹಂ ಜಿನೇಶ್ವರಂ ತೀರ್ಥಕರಂ" (ವಸ್ತುಕೋ. ೨-೭) [ ಸಂ. ]

**ದುರಿತಹರಣ** (ನಾ). ೧. = ದುರಿತ ವಿನಾಶ : ಆ ಜಿನಪುರಾಣಮುಮನಮರೀಜನ ಮೃದುಮಧುರನಿನದಗೀತಮುಮಂ ರಾರಾಜಿತಮಂ ತ್ರಿಜಗಜ್ಜನಪೂಜಿತಮಂ ಪೇೞ್ ದುರಿತಹರಣಮುಮರಿದೇ (ಶಾಂತಿಪು. ೧-೧೫). ೨. ಪಾಪವನ್ನು ನಾಶಮಾಡುವವನು : ಬಗೆದಂದಮಪ್ಪ ತನು ಬಗೆವುಗೆಯುಂ ಬಗೆದಂದಮಪ್ಪಕೆಯ್ತುಂ ಚಿತ್ತಂ ಬುಗೆಯುಂ ಪ[ವು]ಪ್ಪದ ದೇವರ್ ತೆಗೆದರ್ ಕಿಱಿಕಿಱಿದೆ ದುರಿತಹರಣನ ಬಗೆಯಂ (ಶಾಂತಿಪು. ೧೦-೮೮). [ ಸಂ. ]

**ದುರಿತಾತ್ಮಕ** (ನಾ). ಪಾಪದಿಂದ ಕೂಡಿದವನು ; ಪಾತಕಿ ; ಪಾಪಿಷ್ಠ : ವಿಕಳ ಕುರುನೃಪರೊಳಗೆ ದುರಿತಾತ್ಮಕರ ಕಾಣೆನು ನಿನ್ನ ಸರಿಹೋಲಿಕೆಗೆ (ಕುವ್ಯಾಕ. ೧೭-೫). [ ಸಂ. ]

**ದುರಿತಾರಿ** (ನಾ). ಪಾಪಕ್ಕೆ ಶತ್ರು,-ಹಗೆ : ಬಾಹೂರಬೊಮ್ಮಯನೆಂಬ ಭಕ್ತನು . . . ವಿಕಾರದೂರನು ಸಾರಭಕ್ತಶರೀರಿ ದುರಿತಾರಿ (ಬಸಪು. ೨೨-೨೩). [ ದುರಿತ + ಅರಿ$_6$ ]

**ದುರಿತಾಸಹಿಷ್ಣು** (ನಾ). ಪಾಪವನ್ನು ಸಹಿಸದಿರುವವನು: ದುರಿತಾಸಹಿಷ್ಣು ಸುತಪಶ್ಚರಿಷ್ಣು . . . ಗುಣಗಣಾಲಂಕರಿಷ್ಣುವೆನೆ ನೆಗಟ್ದನುದಯಚಂದ್ರಮುನೀಂದ್ರಂ (ಚಂದ್ರಪು. ೧-೨೮). [ ದುರಿತ + ಅಸಹಿಷ್ಣು ]

**ದುರಿದೂಬಲು** (ನಾ). (?) : ಪೊಳಗೆರೆ ಕೂಹೆಯ ಕಾಲ ಹಾಕಿಕೊಂಡು ಪಡುವಲಾಗಿ ತಿರಿಗಿದ್ದು ಬಡಗಲಾಗಿ ತಿರಿಗಿ ಪಡುವಲಾಗಿ ತಿರುಗಿ ಬಡಗಲಾಗಿ ತಿರುಗಿದ ದುರಿದೂಬಲಾಗಿ ಕರಿಯ ಕಲ್ಲ ಮೇಲೆ ಹಾದು (ಎಕ.III, ತಿರುಮ. ೬೨-೩೦೨ ; 1622). [P ಇದು 'ಉರಿದೂಬಲಾಗಿ' ಎಂಬುದರ ಅಪಲಿಖಿತವಿರಬಹುದೇ ?]

**ದುರಿಯಶ** 'ದುರುಯಶ' ನೋ.

**ದುರಿಸೆ** (ನಾ). ಒಂದು ಬಗೆಯ ಹಕ್ಕಿ (?): ದುರಿಸೆ ಗಿಳಿ ಪರ್ದು ಮರವಂ ಮರಕುಟಿಗಂ ಪ್ರಚಲೆ ಬುಱುಗಿ ಹಸುಬಂ ಪುಣವುಲ್. (ಸೂಕ್ತಿಸು. ೩-೧೪೭).
[ ? ]

**ದುರೀಷಣೆ** (ನಾ). ೧. ಶಪಿಸುವುದು ; ಶಾಪ. ೨. ಕೆಟ್ಟ ಕಣ್ಣು.
[ ಸಂ. ದುರೀಷಣಾ ]

**ದುರು₁** (ನಾ). ಕಣ್ಣಿನಿಂದ ವ್ಯಕ್ತವಾಗುವ ಸಿಟ್ಟನ್ನು ಸೂಚಿಸುವ ಒಂದು ಅನುಕರಣ ಶಬ್ದ. 'ದುರುಗುಟ್ಟು' ಪರಾ.

ದುರುದುರು, ದುರದುರ₁ (ದ್ವಿರುಕ್ತಿ) : ಇವತ್ತು ದುರುದುರು ಉರಕೋತಾ ಮಾರಿ ಗಂಟ ಹಾಕಿಕೊಂಡ ಹೊರಟರು (ಗಂಗಾಸಾ. ೮೪) ; ಕೋಪಗೊಂಡ ಅವನು ತಲೆಯನ್ನೆತ್ತಿ ಹಕ್ಕಿಯನ್ನು ದುರುದುರು ನೋಡುತ್ತಲೇ . . . ಹಕ್ಕಿ ಬೆಂದು ಬಿತ್ತು (ನೀಗಟ್ಟು. ೩೦) ; ವೈದ್ಯನು ಮತ್ತೆ ಮೇಲೆದ್ದು, ತಲೆಯಲ್ಲಾಡಿಸಿ . . . ದುರುದುರು ದಿಟ್ಟಿಯ ನೀಲಿಗಣ್ಣುಗಳನ್ನು ಮುಚ್ಚಿದನು (ಪುನರು. ೪೪೮) ; ಈ ಮಾತನ್ನು ಕೇಳಿದ ಕೆಲ ಜನರು ಆ ಜ್ಞಾನಿಯ ದುರದುರ ನೋಡಿದರು (ಕವಿಸೋ. ೭-೩).

**ದುರು₂** (ನಾ). ದಟ್ಟವಾದುದು ; ಅತಿಶಯವಾದುದು ; ಹೆಚ್ಚಳ. 'ದುರುದುಂಡಗೆ', 'ದುರುದುಂಬೆ₁' ಪರಾ. [ <ತುಳು ಗುತ್ತು₃ ]

**ದುರುಕ್ತ** (ಗು). ೧. ತಪ್ಪಾಗಿ ಹೇಳಿದ ; ಯೋಗ್ಯವಲ್ಲದ ರೀತಿಯಲ್ಲಿ ಹೇಳಿದ. ೨. ಕಠಿಣವಾಗಿ ಆಡಿದ ; ಬಿರುಸಾಗಿ ಹೇಳಿದ. (ನಾ). ೩. ಅಯೋಗ್ಯವಾದ ಮಾತು; ಅನುಚಿತವಾದ ನುಡಿ ; ಕೆಟ್ಟ ಮಾತು: ಸ್ಥಿರವರ್ಥಶೂನ್ಯಮೆಂಬುದು ದುರುಕ್ತಮಿದನಿಂತು ಪೇಟ್ಗೊಡೆಲ್ಲಂ ಪೀನಂ ಮರುಳಂ ಮದಿರಾಪರವಶಶರೀರನುಂ ಪೇಳ್ಗುಮಱಿವನಾವಂ ಪೇಟ್ಗಂ (ಕವಿರಾ. ೧-೭೯); ದುರುಕ್ತಮತ್ಯಂತ ದೋಷಮಕ್ಕುಂ ಕೃತಿಯೊಳ್ (ಕಾವ್ಯಾವ. ೪೮೨) : ನೀಂ ನುಡಿವೈ ದುರುಕ್ತಮಂ (ಪಾರ್ಶ್ವಪು. ೨-೮೫). ೪. ಕಠಿಣವಾದ ನುಡಿ; ಬಿರುಸಾದ ಮಾತು. ೫. ನಿಂದಾಸ್ಪದವಾದುದು. [ ಸಂ. ]

**ದುರುಕ್ತಿ** (ನಾ). ೧. ಕೆಡುನುಡಿ ; ಕೆಟ್ಟ ಮಾತು: ಅಂತಾ ದುರಾತ್ಮನ ದುರುಕ್ತಿಗೆ ಜನಕಸುತೆ ಕಡುಮುಳಿದು (ತೊರಾಮಾ. ೯-೧೮೦ ವ) ; ಬೇಗೆಯೊಳಗಣ ಮಿಡುಚೆಗಳ ತೆಱದಿ ವ್ಯಕ್ತ ಉರಿದೇ ಹೋಹಿರಲ್ಲದೆ ಶಕ್ತಿಯುಂಟೇ ನಿಲಲು ನಿಮ್ಮ ದುರುಕ್ತಿಗಳು ಬೇಡಿನ್ನು ಕೆಡುವಿರಿ (ಬಸಪು. ೫೭-೨೪). ೨. ತಿರಸ್ಕಾರದ ಮಾತು ; ನಿಂದೆ ; ತೆಗಳಿಕೆ ; ಬಯ್ಗುಳು : ಎನ್ನ ಮುಂತಣಿಂ ತೊಲಗಿ ಪೋಗೆಂದ ದಶಮುಖನ ದುರುಕ್ತಿಗೆ ವಿಭೀಷಣಂ ಕೋಪಾಗ್ರಹಾವೇಶಮನಪ್ಪುಕೆಯ್ದು (ತೊರಾಮಾ. ೦೪-೧೩ ವ). ೩. ಪರುಷವಾದ ನುಡಿ ; ಕಟಕಿ ; ಕಠಿಣವಾದ ಮಾತು : ದನುಜಂ ದುರ್ಗಿಯ . . . ಉಗ್ರದುರುಕ್ತಿಯಂ ನೆನೆದಿದೇನಾಶ್ಚರ್ಯಮೆಂದು (ಜಗವಿ. ೩-೧೮) ; ವಿರೋಧಿಯ ಶರಹತಿಗೆ ಬೆಂಡಾಗನಿವನ ದುರುಕ್ತಿಶರಹತಿಗೆ ಅರಸ ಬಳಲಿದನು (ಕುವ್ಯಾಕ. ೧೨-೩೦) ; ಕಟಕಿಯಿದೇಂ ಪುಳಿಂದ ಬಿಡು ನಿನ್ನ ದುರುಕ್ತಿಯಂ (ಶಬಶಂ. ೪-೩೩). [ ಸಂ. ]

**ದುರುಗಮುರುಗಿ,** ದುರುಗುಮುರುಗಿ (ನಾ). ದುರ್ಗಾದೇವತೆಯ ಅಥವಾ ಮಾರಮ್ಮನ ಉಪಾಸಕರಲ್ಲಿ ಒಂದು ಬಗೆ; P ಇವರು ದಪ್ಪವಾಗಿರುವ ಹಿಡಿಯುಳ್ಳ ಮತ್ತು ಸಣ್ಣ ತುದಿಯುಳ್ಳ ಒಂದು ಬಗೆಯ ಚಾವಟಿಯಿಂದ ತಮ್ಮ ತೋಳುಗಳನ್ನು ಸುತ್ತುವಂತೆ ದೇಹಕ್ಕೆ ಹೊಡೆದುಕೊಳ್ಳುತ್ತಾರೆ : ನನ್ನ ಜೀವದ ಬೆನ್ನೇರಿ ಬಂತು ಸೊಳ್ಳೆಗಳ ದಂಡು . . . ಅಲ್ಲೊಮ್ಮೆ ಇಲ್ಲೊಮ್ಮೆ ಕೈ ಮೈ ಬಡಿದುಕೊಳ್ಳುವುದಕ್ಕಿಂತ ಹೆಚ್ಚಾಡವನ್ನೇ ಹಗ್ಗ ಮಾಡಿ ದುರುಗಮುರುಗಿಯ ಹಾಗೆ ಪ್ರಯೋಗಿಸಲೆ (ನಡೆದಾ. III, ೨೦೭೭). **ದುರುಗುಮುರುಗಿ :** ಹಾವಾಡಿಗರು, ಗೊಂದಲಿಗರು, ಡೊಂಬರು, ದುರುಗುಮುರುಗಿಗಳು, ಮಸಣದ ಹಲಗೆ ಕುಟ್ಟುವರು, ಎಲ್ಲರೂ ಸಂದಣಿಸಿ ಒಂದಾಗಿ ಇರುವವರ ತಾಳ್ಮೆಯ ಪರೀಕ್ಷೆಯನು ಮಾಡುವರೋ ? (ಅರಳು. ೩೫೪-೧೧).

[ <ದುರ್ಗಿ₁ + <ಮುರಿಗೆ ? ]

**ದುರುಗಿ** 'ದುರ್ಗಿ₁' ನೋ.

**ದುರುಗುಟ್ಟು,** ದುರಗುಟ್ಟು (ಕ್ರಿ). ನಟ್ಟ ಕಣ್ಣಿನಿಂದ ನೋಡು ; ಕೆಕ್ಕರಿಸು ; ದಿಟ್ಟಿಸಿ ನೋಡು : ಅವನು ತನ್ನ ಹೆಂಡತಿಯನ್ನೇ ನೆಟ್ಟನೋಟದಿಂದ ದುರುಗುಟ್ಟಿಕೊಂಡು ನೋಡುತ್ತಿದ್ದನು (ಪುನರು. ೧೮೧) ; ರಾಯರು ಸುಮ್ಮನೆ ದುರುಗುಟ್ಟಿಕೊಂಡು ಸ್ವಲ್ಪ ಹೊತ್ತು ಆಕಾಶವನ್ನು ನೋಡಿದರು (ರಾಯಕ. ೯೭) : ದುರುಗುಟ್ಟುವ ಕಣ್ಣುಗಳಿಂದ ತಂದೆಯನ್ನೇ ನೋಡುತ್ತಾ, ಬಿದ್ದಿದ್ದ ತಂಗಿಯನ್ನು ಉಪಚರಿಸಲು ಆರಂಭಿಸಿದ (ವಾತ್ಸಲ್ಯ. ೨೮೪) ; ತಗುಣೆಯದು ಹಾಗಲ್ಲ. ಇದರ ಸಂಸ್ಪರ್ಶವಾಯಿತೆಂದರೆ ಚರ್ಮಕ್ಕೆ ಕಾದ ಸೂಜಿ ಚುಚ್ಚಿದಂತಾಗುತ್ತದೆ . . . ದೇಹದ ಆ ಭಾಗದಲ್ಲೂ ಅದರ ಸುತ್ತಮುತ್ತಲೂ ದುರುಗುಟ್ಟುವ ಕೆಂಪುಬಣ್ಣ ಹೊಮ್ಮಿ . . . ಊದಿಕೊಳ್ಳುತ್ತದೆ (ನಂಟರು. ೪೫). **ದುರಗುಟ್ಟು :** ಒಳ್ಳೊಳ್ಳೆ ಉಡುಪನ್ನು ಉಡುವ ಯುವತಿಯರನ್ನು ನೀನೇಕೆ ದುರಗುಟ್ಟಿ ನೋಡುವುದು ? (ನವನೀ. ೩) ; ಜಿರಗುಟ್ಟುವ ದುರಗುಟ್ಟುವ ಕತ್ತಲೋ ಕತ್ತಲೇ (ಅರಳು. ೩೭-೩). [ ದುರು₁ + ಕುಟ್ಟು₁ ]

**ದುರುಗುಮುರುಗಿ** 'ದುರುಗಮುರುಗಿ' ನೋ.

**ದುರುಡಿ** (ನಾ). ಬಿದಿರಿನಿಂದ ತಯಾರಿಸಿದ ಬುಟ್ಟಿ : ಬೀಗುತೊಳ್ಳಾಕೆಂತ ಈಡಗಿಮನಿಯ ಕೊಟ್ಟೆ ಬಾನದ ದುರುಡಿ ಬಗಲಾಗ ಅವರಣ್ಣಾ ನೀಡಾಕಿಲ್ಲೆಂದು ಕಸಗೊಂಡ (ಲೋಕಗೀ. ೫೩) ; ರೊಟ್ಟಿ ದುರುಡಿಯನ್ನು ನೆಲಕ್ಕೆ ಅಪ್ಪಳಿಸಿ ನುಡಿದಳು ರತ್ನ (ನಿಸರ್ಗ. ೫೫); ಹಂದರದೊಳಗಿಂದ ಹೋಳಿಗೆಯ ದುರುಡಿಯನ್ನು ತಕ್ಕೊಂಡು ಹೋಗುತ್ತ ಹೆಂಗಸರಿಗೆ ಚಂದ್ರವ್ವ ಹೇಳಿದಳು (ಅಕೋಕ. ೭). [ ?./ಮರಾ. ದುರಡೀ ]

**ದುರುದುಂಡಗೆ** (ಅ). ಪೂರ್ತಿ ಬೆತ್ತಲೆಯಾಗಿ : ಥೂ ! ನೀ ಬೆತ್ತಲೆ ಮಲಗ್ತೀಯೇನೆ . . . ದುರುದುಂಡಗೆ ? (ಮಲಮ. ೭೭೦).

[ ದುರು₂ + ದುಂಡಗೆ₂ ]

**ದುರುದುಂಡಿ** 'ದುಱುದುಂಡಿ' ನೋ.

**ದುರುದುಂಬಿ₁** 'ದುಱುದುಂಬಿ' ನೋ.

**ದುರುದುಂಬಿ₂** 'ದುರುದುಂಬೆ₂' ನೋ.

**ದುರುದುಂಬಿಗ** 'ದುಱುದುಂಬಿಗ' ನೋ.

**ದುರುದುಂಬಿತನ** 'ದುಱುದುಂಬಿತನ' ನೋ.

**ದುರುದುಂಬಿಯಾಟ** (ನಾ). ತುಂಟಾಟ : ಅಂಚೆಗಾಲಿಡುವ ದುರುದುಂಬಿಯಾಟದಾನಂದದೊಳ್ಪಿ ಜಸಮಾತೆ ನೋಡಿ ನಲಿಯಲು (ಜಿನಮು. ೪-೨).

[ ದುರುದುಂಬಿ₁ (<ದುಱುದುಂಬಿ) + ಆಟ ]

**ದುರುದುಂಬೆ₁** (ನಾ). ಮೈತುಂಬಿಕೊಂಡಿರುವವಳು ; ಸುಂದರಿ ; ನವಯೌವನೆ : ರಥದಿಂದಾ ಕುಂಭಿನಿಗಿಯಿಳಿದರ್ಜುನಗೆ ದುರುದುಂಬೆಯರು ಆರತಿಯ ಬೆಳಗಿದ ಸಂಭ್ರಮವನೇವೇಳ್ವೆನು (ಜಿನಭಾ. ೪೬-೧೭).

[ ದುರು₂ + ತುಂಬು₃ + – ಎ₂ ]

**ದುರುದುಂಬೆ₂,** ದುರುದುಂಬಿ₂ (ನಾ). ಕೆಟ್ಟ ತುಂಬಿ; ದುಷ್ಟ ಭ್ರಮರ: ಕರುವಾಡದಲಿ ದುರುದುಂಬೆಯುಂದದೊಳಾಡುತೆಸೆದರು ಪುರದ ಕಾಂತೆಯರು (ಜಿನಭಾ. ೪೩-೧೧) : ರಮಣನೈದಲು ಹೊಚ್ಚಿ ಪಡಿಗಳಿಗಮರಿಸಿದ ಜತುಮುದ್ರೆಯೊಲು ಆಕ್ರಮಿಸಿದವು ದುರುದುಂಬೆ ಸಲೆ ಪದ್ಮಾಳಿಗಳಿಗೆಲ್ಲಾ (ಜಿರಾಮಾ. ೬೦೪-೮). **ದುರುದುಂಬಿ₂ :** ಈ ದುರುದುಂಬಿಯಿಂದ ಬಾಧೆಪಡುವ ನನ್ನನ್ನು ರಕ್ಷಿಸಿ (ಶಾಕುಂತ. ೧೧-೧೫).

[ <ದುರ್ + ದುಂಬಿ₁ (<ತುಂಬಿ₁) ]

**ದುರುದುರನೆ,** ದುರದುರನೆ (ಅ). ಕೋಪ ಹೊಮ್ಮುವ ಕಣ್ಣಿನ ನೋಟದಿಂದ ಕೂಡಿ ; ಕ್ರೋಧ ಸೂಸುವ ದೃಷ್ಟಿಯೊಡನೆ : ತನಗಲ್ಲದರ ಕಾಕುಮಾಡುವನೋಡುವ ದುರುದುರನೆ ಸತಿಯರಸಫ (ಪ್ರತಿಲ. ೨-೭೮);ಕೈಕೆಯು ಜನಪನನು ದುರುದುರನೆ ನಿಟ್ಟಿಸಿ ಕೆರಳಿಯುಸಿರಿದಳು (ರಾಮಾಸಂ. ೨-೨-೫೫). **ದುರದುರನೆ :** ಕುಮಾರಿಯು ಅವನನ್ನು ದುರದುರನೆ ನೋಡುತ್ತಿರುವಳು (ಆರ್ಯಕ. ೭೭) ; ಅವನನ್ನು ದುರದುರನೆ ನೋಡುತ್ತ . . . ಮುಂದೆ ಸಾಗಿದರು (ರಕ್ತರೂ. ೧೭). [ <ದುರು₁ + – ಅನೆ₁ ]

**ದುರುದುರಿಸು₁** 'ದುಱುದುಱಿಸು' ನೋ.

**ದುರುದುರಿಸು₂** (ಕ್ರಿ). ದುರುಗುಟ್ಟಿ ನೋಡು; ಚೆನ್ನಾಗಿ ದಿಟ್ಟಿಸಿ ನೋಡು: ನನ್ನವಳ ಸೂಜಿಗೆಲಸದ ಹಸುವ ದುರುದುರಿಸಿ ಸಹಜದಲಿ ಹುಲಿಯೆಂತ ಹೇಳಬಹುದು ಅವಳ ಹಾಡನು ಕೇಳಿ ಹಿಟ್ಲರನ ಪಡೆ ಯೆಚ್ಚರೇ ತಪ್ಪಿ ಬೀಳಬಹುದು (ಪಲಾನ. ೪೦-೧).

[ <ದುರು₁ + – ಇಸು₃ ]

**ದುರುದ್ದೇಶ** (ನಾ). ಕೆಟ್ಟ ಗುರಿ,–ಹಂಚಿಕೆ; ಹೀನ ಬಯಕೆ: ಪ್ರಾಣಾಪಹರಣದ ದುರುದ್ದೇಶದಿಂದ ಅವಳು ಪ್ರೇರಿತಳಾಗಿದ್ದಳೆಂಬುದಕ್ಕೆ ಸಾಕಷ್ಟು ರುಜುವಾತಿಲ್ಲ (ಪುನರು. ೨೦೪). [ಸಂ.]

**ದುರುಧುರಾಯೋಗ** (ನಾ). [ಜ್ಯೋತಿ] ಜನನಕಾಲದಲ್ಲಿ ಸೂರ್ಯನ ಹೊರತು ಇತರ ಎಲ್ಲಾ ಗ್ರಹಗಳೂ ಚಂದ್ರನಿಗೆ ದ್ವಿತೀಯ ಮತ್ತು ದ್ವಾದಶಸ್ಥಾನದಲ್ಲಿರುವುದರಿಂದ ಉಂಟಾಗುವ ಒಂದು ಯೋಗ: ಇನವರ್ಜ್ಯಂ ಕ್ಷಿತಿಜಾದಿಗಳ್ ಹಿಮಮಯೂಖಂಗಂತ್ಯದೊಳ್ ಕೂಡಿದಂ ದನಫಾಯೋಗವುದಕ್ಕುಂ ... ಅನಂತರಂ ದುರುಧುರಾಯೋಗಂ (ಜಾತ. ೧೪-೧). [ಸಂ.]

**ದುರುಪಯೋಗ** (ನಾ). ೧. ತಪ್ಪು ಉದ್ದೇಶಕ್ಕೆ ಬಳಸುವುದು; ಕೆಟ್ಟ ಉದ್ದೇಶಕ್ಕೆ ಉಪಯೋಗಿಸುವುದು: ಭಾಷೆ ಕಲಿತ ಮಾನವವ್ಯಕ್ತಿ ಬರಿಯ ಮಾತಿನ ದುರುಪಯೋಗದಿಂದಲೇ ಇನ್ನೊಬ್ಬರ ಮನಸ್ಸನ್ನು ಎಷ್ಟೊಂದು ಕೆಡಿಸಬಲ್ಲದು? (ಮೂರುದಾ. ೧೨೯); ಅಧಿಕಾರದ ದುರುಪ ಯೋಗ . . . ಜನರ ದುಃಖದಾರಿದ್ರ್ಯಗಳನ್ನು ಕುರಿತು ಅವರು ಮಾತಾಡು ತ್ತಿದ್ದರು (ಪುನರು. ೩೮೨). ೨. (ಮತ್ತೊಬ್ಬರ ಹಣವನ್ನು) ಸ್ವಂತಕ್ಕೆ ಉಪಯೋಗಿಸುವುದು: ಹಿಂಗ ಸಾರ್ವಜನಿಕ ಹಣದ ದುರುಪಯೋಗ ಮಾಡಿಕೊಂಡ (ಆಪನಾ. ೩). [ಸಂ.]

**ದುರುಬುದ್ಧಿ** (ನಾ). ಕೆಟ್ಟ ಬುದ್ಧಿ; ದುಷ್ಟತನ: ದುರುಬುದ್ಧಿಗಳನೆಲ್ಲ ಬಿಡಿಸೊ ನಿನ್ನ ಕರುಣಾಕವಚವೆನ್ನ ಹರಣಕ್ಕೆ ತೊಡಿಸೊ (ಪುರಂದ. ೧-೯-೧).

[<ಸಂ. ದುರ್ಬುದ್ಧಿ]

**ದುರುಮತಿ, ದುಮ್ಮತಿ** (ನಾ). ಕೆಟ್ಟ ಬುದ್ಧಿ; ಕುಮತಿ: ಪರವಾದರದಲಿ ಕರುಣ ಎನ್ನ ಮೇಲೆ ಹರಹಿ ದುರುಮತಿಯ ಪರಿಹರಿಸುವುದು (ವಿದಾಕ್ಯ. ೬೭ ಅನುಪಲ್ಲವಿ). **ದುಮ್ಮತಿ:** "ದುಮ್ಮತಿ– ದುರ್ಮತಿ" (ತದ್ಭಕೋ. ೨೦).

[ <ಸಂ. ದುರ್ಮತಿ ]

**ದುರುಮದ** (ನಾ). ಕೆಟ್ಟ ಗರ್ವ,–ಸೊಕ್ಕು: ಕಣ್ಣಲ್ಲಿ ಕಂಡ ಸರುವ ವಿಷಯ ಗಳಿಗೆ ಹರಿಯುತ ದುರುಮದದ ಸೊಕ್ಕಿ . . . ಬರಿದೆ ಕೆಡುವೆನಯ್ಯ (ಕೃಕವ. ೦-೧೭-೩). [ <ಸಂ. ದುರ್ಮದ]

**ದುರುಯಶ, ದುರಿಯಶ** (ನಾ). ಅಪಕೀರ್ತಿ; ದುಷ್ಕೀರ್ತಿ; ಕೆಟ್ಟ ಹೆಸರು: ಮುಱಿದುದಿದು ಗಂಧರ್ವಬಲ ... ಬಱಿಯ ದುರುಯಶವುಳಿದು ದರಸಂಗೆ (ಕುವ್ಯಾಅ. ೧೪-೪೨). **ದುರಿಯಶ:** ಲಜ್ಜೆಗೆ ನೆಲೆಯ ಮಾಡಿದ ಹೂಡಿದೈ ದುರಿಯಶವನೆನಗೆಂದ (ಕುವ್ಯಾಭೀ. ೭-೩೯).

[<ಸಂ. ದುರ್ಯಶಸ್]

**ದುರುವಚನ** (ನಾ). ಕೆಟ್ಟ ಮಾತು; ಹೊಲಸು ನುಡಿ: ಮದಿರಾಪಾನವುದ ವಿಹ್ವಲರು ದುರುವಚನಂ[ಪಾಠಾಂ. ದುರ್ವಚನಂ]ಗಳಲಿ ತಮ್ಮೊಳಗೆ ಬೈದಾಡಿದರು (ನಿಭಾಗ. ೩-೨-೪೮). [<ಸಂ. ದುರ್ವಚನ]

**ದುರುವೆ** 'ದೂವೆ' ನೋ.

**ದುರುಸು₁, ತುರುಸು, ದುಱುಸು** (ನಾ). ೧. ರಭಸ; ವೇಗ; ತೀವ್ರತೆ: (ಸ್ಯಾಂಡರ್). ೨. "ಕೆಲಸದ ಭಾರವನ್ನು ಚುರುಕಾಗಿ ನೀಗಿಸುವುದು" (ಜಾನಕೋ. ೭). ೩. ಪೈಪೋಟಿ; ಸ್ಪರ್ಧೆ. 'ದುರುಸುಮಾತು' ಪರಾ. **ತುರುಸು:** ೧. ಒಮ್ಮೊಮ್ಮೆ ಈ ಹರಟೆ ಒಳ್ಳೆ ತುರುಸಿನದಾಗಿರುತ್ತಿತ್ತು (ಸ್ವರ್ಗಜಾ. ೭); ಇದರ ಗುಣ ದೋಷಗಳನ್ನು ಕುರಿತು ಪಂಡಿತವಲಯದಲ್ಲಿ ತುರುಸಿನ ಚರ್ಚೆ ಇಂದಿಗೂ ಮುಂದುವರೆದಿದೆ (ಗ್ರಂಥಾಲ. ೫೯); ಹೆಣ್ಣಿನ ಸ್ಥಾನಮಾನಗಳನ್ನು ಕುರಿತು ಮೂವರಲ್ಲಿಯೂ ಒಳ್ಳೆ ತುರುಸಿನ ಚರ್ಚೆ ಯಾಗಿತ್ತು (ಕಮನಿ. ೭). ೩. ಆವಳಿಗಾಗಿ ಯಾರು ಯಾರಲ್ಲಿ ತುರುಸು ಬಿದ್ದಿದೆಯೋ (ಅಶೋಕ. ೧೨೩); ವ್ಯಾಪಾರಸ್ಥರು ತಮ್ಮ ತಮ್ಮೊಳಗಿನ ತುರುಸನ್ನು ತಡೆಯಲು . . . ಗುತ್ತಿಗೆಗಳನ್ನು ಮಾಡಿಕೊಳ್ಳುತ್ತಾರೆ (ತಕ್ಕಡಿ. ೧೦೭). △ **ದುಱುಸು:** ೪. ಬಿಗಿ; ದೃಢತೆ: ಆಲಿಸಿ ಚಿಕದೇವಕ್ಷ್ಮಾಪಾಲನ ರಾಯಸದ ದುಱುಸನಹಿತಮಹೀಪರ್ ಸೋಲದೆ ತಮ್ಮಯ ರಾಣಿಯ ರೋಲೆಗಳಂ ಕಳುಪಿ ಬಲಿತರೆಂದಿನ ತೆಱದೊಳ್ (ಅಪ್ರತಿ. ೭೯-೮೯).

[ ದೇ.॥ ತಮಿ. ತುರುಚು; ತೆಲು. ದುರುಸು ]

**ದುರುಸು₂** (ನಾ). (ಕರಾ). ಒಂದು ಬಗೆಯ ಸಿಡಿಮದ್ದು

[←ತುಳು. ದುರುಸು, ದುರ್ಸು]

**ದುರುಸುಮಾತು** (ನಾ). ಪೈಪೋಟಿಯ ಮಾತು; ಸ್ಪರ್ಧೆಯ ನುಡಿ ನಗೆಮಾತು ನಲ್ಮಾತು ದುಗಮಾತು ದುರುಸುಮಾತುಗಳ ಸೊಗಸುಮಾತಲೆಮಾತು ಸೊಗಮಾತುಗಳಿಂದ ಸೊಗಸ ಕಿವಿಗೆ ಸೂಸುವುದು (ಚಿಕವಿ. ೬-೫೬ ಸಾಂಗತ್ಯ).

[ ದುರುಸು₁ + ಮಾತು₁ ]

**ದುರುಸ್ತಿ** 'ದುರಸ್ತಿ' ನೋ.

**ದುರುಸ್ತು** 'ದುರಸ್ತು' ನೋ.

**ದುರುಹಿಕೆ** (ನಾ). ಮೋಸ; ದ್ರೋಹ. 'ಸ್ವಾಮಿದುರುಹಿಕೆ' ಪರಾ.

[ <ದ್ರೋಹ + – ಇಕೆ ]

**ದುರುಳ** (ಗು). ೧. ದುಷ್ಟವಾದ; ಕ್ರೂರವಾದ: ಗಿರಿಯ ಶಿಖರವನೇಱಿ ಕೆಡೆವೆನೊ ದುರುಳ ಮದಕರಿಗುಂತು ಮಾಡಿವೆನೊ (ಬಸಪು. ೬೦-೫೮); ದುರುಳ ಹಿರಣ್ಯಕನ ಸೀಳ್ದೆ (ಪುರಂದ. ೪-೧೬೦-೧೯). ೨. ತೀಕ್ಷ್ಣವಾದ; ಉಗ್ರವಾದ. 'ದುರುಳಗರಳ' ಪರಾ. (ನಾ). ೩. ದುಷ್ಟ; ಕೆಟ್ಟವನು: ದುರುಳರು ದೌಷ್ಟ್ಯದಿ ಮರುಳರು ಮೌಢ್ಯದಿ ನಯಗೆಡೆ, ಹದ್ದಿನೊಳಿಡಲಾಯ್ತು (ಅಹಲ್ಯ. ೩೦-೭). ೪. ಮೋಸಗಾರ; ಧೂರ್ತ; ಕಪಟಿ: "ದುರುಳರೆನಲ್ಧೂರ್ತರೆಂಬರು" (ಚತುನಿ. ೮೪); ದುರುಳರನೊಕ್ಕಲಿಕ್ಕಿ ಮಱುವೊಕ್ಕರ ರಕ್ಷಿಸಿ . . . ಶಾಸನಂಗಳಂ ಬರಸಿ ಬುಧರ್ಗೆ ಬಿತ್ತರಿಸಿದಂ ಜಸಮುಂ ಯುವರಾಜಚಂದ್ರಮಂ (ಕಾದಂಪೂ. ೬೧೩); ನೆರವಿಗಳೆಲೇ ಮಿಂಡಗೊರವ ಹೋಹರೆ ಕಂಡು ಅಕ್ಕುವಳೆ ಪತಿಹಿತವೆ ನಿನಗೆಲೆ ಮರುಳ್ಳರಳ ಚಿಕ್ಕನೆ ದು[ಪಾಠಾಂ. ಮ]ರುಳ ನಿನ್ನ ವಶವಲ್ಲವೆಲೆ ಮರುಳ (ಇಹರ. ದೇ. ೩೮-೧೦); ದುರುಳರಾಡುವ ಹೊಳ್ಳುನುಡಿಗಳು ಗುರುವರಭಿಮತವಲ್ಲ(ಕುವ್ಯಾಉ. ೫-೧೭); ದುರುಳರಿಬ್ಬರಿಗಿತ್ತರತಿನಿಷ್ಠುರದ ಶಾಪವನು (ತೊರರಾ. ೦-೮-೧೮); ವರಕೃತಿಯುಕ್ತಿಯನಱಿಯದ ದುರುಳಂಗಂ ಜಱಿದು ಮೆಱೆವುದುಚಿತಂ ನಿಚಿತಂ (ಹವ್ಯಿ.ರ. ೧-೧೭). ೫. (ಆಲಂ) ಹೋರಾಟಗಾರ: ಕಲಿಕರೆದು ಮೂದಲಿಸಿ ಕಡುಹಿನ ದುರುಳರುಬ್ಬಿನ ಮೇಲೆ ಹೊಕ್ಕಬ್ಬರಿಸಿ ಹೊಯಿದರು (ಕುವ್ಯಾಭೀ. ೪-೨೮). [ ದೇ.॥ ತುಳು. ದುರುಳ./ಮರಾ. ದುರಳ ]

**ದುರುಳಗರಳ** (ನಾ). ತೀಕ್ಷ್ಣವಾದ ವಿಷ: ತಾಯಿಯುಳ್ಳಡೆ ದುರುಳಗರಳವ ನೇಕೆ ಸುತನಂ ಕುಡಿಯಲೀಸುವಳು (ಬಸಪು. ೦೩-೮).

[ ದುರುಳ + ಗರಳ ( = ಗರಲ) ]

**ದುರುಳತನ** (ನಾ). ೧. ದುಷ್ಟತನ; ನೀಚತನ: ಆರುಪನೊಳ್ಳೆನೆಂದು ಅರಣ್ಯಕ್ಕೆ ಹೋಹುದು ಕಾರ್ಯವಲ್ಲ ದುರುಳ [ಪಾಠಾಂ. ಳು]ತನ (ಸಮಾವ. ೧೪-೫೨); ದುರುಳತನದಲಿ ಜೈನರೆಲ್ಲರು ನೆರೆದು ನಮ್ಮೂರೊಳು ಮಹೇಶನ ಗೊರವನಿರ್ದಹನೋರ್ಬನಂ ತಗುಳ್ವೆಂದವೆಂದೆನುತ (ಬಸಪು. ೫೦-೫೪); ದುರುಳತನವಿದು ಬೇಡ ಖುಲ್ಲರ ನೆರವಿಯೊಳಗಾಡಿದೊಡೆ ತಪ್ಪದು ನರಕ (ಕುವ್ಯಾಉ. ೯-೫೦); ತಮ್ಮ ಕೇಳೀ ದು[ಪಾಠಾಂ. ಮ]ರುಳತನ ಬೇಡ

(ತೊರರಾ. ೩-೩-೩೦). ೨. ಮೋಸಗಾರಿಕೆ ; ವಂಚಕತನ : ನಿನ್ನ ಮಕ್ಕಳ ದುರುಳತನಕಂಜುವನೆ ಮುರರಿಪುವೆಯೆಂದನಾ ವಿದುರ (ಕುವ್ಯಾ.ಉ. ೯-೫೩) ; ದರ್ವೀಕರಾರಿವಾಹನನೆ ಪಿತನಾಗಿಯುಂ ಕರ್ಪುವಿಲ್ಲಂ ಕಪರ್ದಿಯ ಕಣ್ಗಳಿಂದುರಿದುದಿಲ್ಲವೇ ದುರುಳತನದಿ (ಸಮ್ಮಿಕಾ. ೧೦-೪) ; ಇತ್ತ ತನ್ನ ಮನೆಗೆ ಮರಳಿದ ಊರ್ವಶಿ ಚಿತ್ರಸೇನನನ್ನು ಕರಸಿ ಪಾರ್ಥ ಮಾಡಿದ ದುರುಳತನವನ್ನು ವಿವರಿಸಿ ದೂರಿದಳು (ಭಾಮುತಿ. ೧೨೭). ೩. ಕೆಡಂಕು ; ಕೇಡು : ಅರಸ ಮೃತಸಂಜೀವಿನಿಯು ಬಲುಹಿರಲು ಬಹಳವ್ಯಾಧಿ ಮಾಡುವ ದುರುಳತನ ತಾನೇನು (ಕುವ್ಯಾ.ದ್ರೋ. ೧೦-೪೪). ೪. ತುಂಟಾಟ: ದುರುಳ ತನವುಳ್ಳ ಈ ಬಾಲಕನಲ್ಲಿ ನನ್ನ ಮನಸ್ಸು ಆಸೆಪಡುವುದು (ಶಾಕುಂತ. ೧೦೫-೦೪). [ ದುರುಳ + – ತನ ]

**ದುರುಳತ್ವ** (ನಾ). ಹೋರಾಟಮಾಡುವಿಕೆ; ಸೆಣಸಾಟ. 'ರಣದಂರಂಳತ್ವ' ಪರಾ. [ ದುರುಳ + – ತ್ವ ]

**ದುರುಳು** (ನಾ). ಕೆಡುಕು : ದುರುಳ ನುಡಿದನ ನಾಲಗೆಯ ನಿಡುಸೆರೆಯ ಬಿಡಿಸುವೆ (ಕುವ್ಯಾ.ಕ. ೧೩-೩೦) ; ಇದಾವ ಕುಚೋದ್ಯಕ್ಕೆ ದುರುಳಿಗೆ ಹೋದೆಯೆ, ಪುನಃ ? (ಟಿಟ್ಟಿ.ಅ. ೦೪-೦೯). [ ದುರುಳ + – ಉ$_4$ ]

**ದುರುಳುತನ** (ನಾ). ದುಷ್ಟತನ ; ನೀಚತನ : ಕೆರಳಿದರೆ ಕಾಳಹ ದು ಭೀಮನ ದುರುಳು [ಪಾಠಾಂ. ದುರುಳು, ದುರುಳ]ತನವೀ ಕೌರವೇಂದ್ರನ ಹುರುಳು [ಪಾಠಾಂ. ಡು] ಹುರಿಯೇಱುವುದು ಮತವಲ್ಲೆಂದನಂಧನೃಪ (ಕುವ್ಯಾ.ಆ. ೧೭-೩೩) ; ಯಾರಾದರೂ ಸೈನಿಕರು ದುರುಳುತನದಿಂದ ಅಗ್ರ ಹಾರದ ನಿವಾಸಿಗಳ ಮೇಲೆ ಕೈಮಾಡಿದರೆ ... ಶಿರಚ್ಛೇದ ಮಾಡಿಸುತ್ತಿದ್ದನು (ಶ್ರೀರಾಯ. ೩೧೯). [ ದುರುಳು + – ತನ ]

**ದುರುಳೆ** (ನಾ). ಕೆಟ್ಟ ಹೆಂಗಸು ; ಕೆಡುಕಿ ; ದುಷ್ಟೆ : ದುರುಳೆಯರು ಕಷ್ಟೆಯರು ವಂಚಕಿಯರು ಜಗಳಗಂಟಿಯರು (ಬಸಪು. ೪೦-೫೩) ; ದುರುಳೆ ಭವಾನಿಯು ಬಿರುದೆಂದು ಕವಡೆಯ ಸರ ಕಂಠದಲಿ ಕಟ್ಟಿ (ಪುರಂದ. ೪-೫೦-೭). [ ದುರುಳ + – ಎ$_2$ ]

**ದುರೂಪೆ** (ನಾ). ಕುರೂಪಿ ; ಅಂದಗೇಡಿಯಾದವಳು : ನೀಳನೆಂಬ ಮಾದೆಗಂಗಂ ಕೇಶಿಯೆಂಬ ಮಾದೆಗಿಗಂ ಮಗಳ್ ದುರೂಪೆ ದುರ್ವರ್ಣೆ ದುರ್ಗಂಧೆ . . . ಪೊಲತಿಯಾಗಿ ಪುಟ್ಟಿ (ವಡ್ಡಾರಾ. ೯-೭). [ ಸಂ. ದುರೂಪಾ ]

**ದುರೂಹ** (ಗು). ೧. ಕಲ್ಪಿಸಲುಂ ಕಷ್ಟವಾದ,-ಕ್ಲಿಷ್ಟವಾದ ; ಗಹನ ವಾದ : ಪ್ರಪಂಚದ ಅನೇಕ ದುರೂಹಸಮಸ್ಯೆಗಳನ್ನು ವಿಚಾರಮಾಡಲು ಪ್ರಯತ್ನಿಸುತ್ತಿದ್ದೆ (ನಿಬಂಧ. II, ೫೦). ೨. ಕಲ್ಪಕತೆಯಿಲ್ಲದ ; ಕಲ್ಪನಾ ಸೌಂದರ್ಯವಿಲ್ಲದ: ಈ ಎರಡು ಕವಿತೆಗಳಲ್ಲಿ ಯಾವ ಗುಣವೂ ಇಲ್ಲ ; ಇವು ನೀರಸ, ದುರೂಹ ಮತ್ತು ಬಾಲಕಸುಲಭವಾದ, ಅಸಾರವಾದ, ಮಾತುಗಳಿಂದ ತುಂಬಿವೆ (ಬಂಕಿಮು. ೩೩). (ನಾ). ೩. ಕ್ಲಿಷ್ಟವಾದುದು : ಒಂದು ಮಾತ್ರ ಉಪಾಯವುಂಟು. ಅದು ಅತ್ಯಂತ ದುರೂಹ (ಇಪ್ಪಕ. ೧೫೭). [ ಸಂ. ]

**ದುರೂಹತೆ** (ನಾ). ಜಟಿಲತೆ ; ಕ್ಲಿಷ್ಟತೆ : ಅವನು ಎಷ್ಟು ಸುಲಭವಾದ ಸಾಧನವನ್ನು ಅವಲಂಬಿಸುವುದಕ್ಕೆ ಹೋಗುತ್ತಾನೋ ಅಷ್ಟೂ ಅಷ್ಟು ದುರೂಹತೆಯಲ್ಲಿ ಸಿಕ್ಕಿ ಹಾಕಿಕೊಳ್ಳುತ್ತಾನೆ (ನಿಬಂಧ. II, ೪೩೪). [ ಸಂ. ದುರೂಹತಾ ]

**ದುರೂಹೆ** (ನಾ). ಸರಿಯಲ್ಲದ ಅನುಮಾನ ; ಕುತರ್ಕ ; ತಪ್ಪಾಗಿ ಊಹಿಸುವುದು : ಈ ನಾಣ್ಯಗಳನ್ನು ನಾನೇಕೆ ಉಳಿಸಿಕೊಂಡೆ ಎಂಬುದು ನನ್ನ ಮಿತ್ರರಿಗೊಂದು ಸಮಸ್ಯೆಯಾಗಿದೆ ಯಾರಿಗೂ ದಾಟಸಲಾರದೆ ಹೀಗೆ ಉಳಿಸಿರಬೇಕೆಂಬ ದುರೂಹೆಯನ್ನು ಅವರು ಮಾಡಿಕೊಂಡಿರಬೇಕು (ಗಾಳಿಪ. ೦೫೦). [ಸಂ. ದುರೂಹ]

**ದುರೂಹ್ಯ** (ಗು). ಕಲ್ಪನೆಗೆ ಅಸಾಧ್ಯವಾದ ; ಭಾವಿಸಲಾಗದ : "ಗಣಿಸ ಲಾಗದಷ್ಟು (ಅತಿದೊಡ್ಡದಾದ) ಅಗಣ್ಯ ; ಮೊದಲೇ ಗಣಿಸಲು, ಎಣಿಸಲು, ಸಾಧ್ಯವಾಗದ ; ದುರೂಹ್ಯ" (Incalculable. ಇಂಕನಿ). [ ಸಂ. ]

**ದುರೇಷಣೆ** (ನಾ). ೧. ಶಾಪ ; ಶಪಿಸುವುದು. ೨. ಕೆಟ್ಟ ಕಣ್ಣು. [ ಸಂ. ದುರೇಷಣಾ ]

**ದುರೋದರ** (ನಾ). ೧. ಜೂಜು ; ದ್ಯೂತ : ಆ ದುರೋದರವ್ಯತಿಕರ ದೊಳ್ಪರಾಭವಿಸಿ ಕೃಷ್ಣೆಯನುಯ್ದುಪರಾಧಿಯಲ್ಲಿದಂ ಕೃತಕಸಭಾಪ್ರವೇಶ ಕರನಲ್ಲಿದನೋ ಸುಯೋಧನಂ (ಗದಾಯು. ೭-೩೯). ೨. ಜೂಜಿನ ಪಣ ; ಬಾಜಿ : "ದ್ಯೂತಕರಂ ದ್ಯೂತಪಣಂ ದ್ಯೂತಮೆನಿಪ್ಪುವು ದುರೋದರೋಪಾ ಖ್ಯಾನಂ" (ವಸ್ತುಕೋ. ೧೩೩-೮೮). ೩. ಜೂಜುಗಾರ. [ ಸಂ. ]

**ದುರೋದರಕ್ರೀಡೆ** (ನಾ). ಜೂಜಾಟ : ದುರೋದರಕ್ರೀಡಾರಾಗಿಣಿಯರುಂ ಚಿತ್ರಕರ್ಮಚತುರೆಯರುಂ ಸುಭಾಷಿತಪಠನಪರಿಣತೆಯರುಮೆನಿಸಿದ ಕನ್ನಿಕೆಯ ರೊಡನೆ ... ಬಿಜಯಂಗೆಯ್ದಂ (ಕಾದಂಉ. ೭೫). [ ದುರೋದರ + ಕ್ರೀಡೆ ]

**ದುರೌಷಧ** (ನಾ). ಕೆಟ್ಟ ಔಷಧ ; ದಂಷ್ಟ್ರರಿಣಾಮವನ್ನುಂಟುಮಾಡುವ ಮದ್ದು : ಪತಿ ಬಸದಕ್ಕು ಮಿಸ್ತು ತಮಗೆಂದು ದುರೌಷಧಮಂ ಪ್ರಯೋಗಿಪ ಕೃತಕೆಯರ್ (ಸೌಇಇ. XX, ೨೪೮-೪೫ ; 1229). [ ಸಂ. ]

**ದುರ್ಗ** (ಗು). ೧. ಸೇರಲು ಅಸಾಧ್ಯವಾದ ; ಪ್ರವೇಶಿಸಲು ಅಶಕ್ಯ ವಾದ; ದುರ್ಗಮವಾದ. (ನಾ). ೨. ಪ್ರವೇಶಿಸಲು ಅಶಕ್ಯವಾದುದು; ದುರ್ಗಮವಾದುದು : ಕಾಲಿಡುವಡಿದು ದುರ್ಗವೆನುತಾ ಸಾಲ ಬಿಟ್ಟನು (ಕುವ್ಯಾ.ಕ. ೧೧-೩೪). ೩. ಏಳು ರಾಜ್ಯಾಂಗಗಳಲ್ಲಿ ಒಂದು ; ಕೋಟೆ : ದುರ್ಗಂಗಳಂ ಪಾಟಿಸ್ಕೊಳಿಸುತಮುಟವೀವ್ರಾತಮಂ ಚೂರ್ಣಿಸುತ್ತಂ . . . ಆತ್ಮೀಯ ಸೈನ್ಯೋತ್ಕರದಿಂದಂ ರಾಜವರ್ಗಂ ಬೆರಸಿರೆ ಪೊಱಮಟ್ಟಂ ಮಹೀ ಭೃನ್ಮಹೇಂದ್ರಂ (ಕಾದಂಪೂ. ೭೧೩) ; ಇಂತಪ್ಪ ವಿಧಮಪ್ಪ ದುರ್ಗಂಗಳೊಳಂ ನಮ್ಮಾಶ್ರಯಿಸಿದ ದುರ್ಗಕ್ಕೆ ದುರ್ಗಗುಣಮಿಲ್ಲ (ಪಂಚತಂ. ೨೦೭-೪) ; ಜನಪಂ ತನ್ನ ಭುಜಪ್ರತಾಪದಿಂ . . . ಭಂಡಾರದಿಂ ದುರ್ಗದಿಂ ಘನ ಸಪ್ತಾಂಗವಿಳಾಸಮಂ ಪಡೆದು (ದಶಕು. ೦-೪೯) ; ದುರ್ಗದಿಂದ ತಪ್ಪಿಸಿ ಕೊಂಡು ಹೋಗುವ ಆಲೋಚನೆಗಳಲ್ಲವೂ ನಡೆದಿವೆಯೆ ? (ರಾವಿಜ. ೩೦) ; ದುರ್ಗದಲ್ಲಿರುವವನಿಗೆ ಮಾರ್ಗದ ಗೊಡವೆ ಯಾಕೆ ? (ಗಾದೆ). 'ದುರ್ಗ ಪಂಚಕ', 'ಸಪ್ತಾಂಗ' ಪರಾ. ೪. (ನಡೆದಾಡಲು ಅಸಾಧ್ಯವಾದ) ಅಡವಿ,-ಕಾಡು : "ದುರ್ಗಂ ದುರ್ಗಮ ವಿಪಿನಂ" (ವಸ್ತುಕೋ. ೦೩೫-೪೩); "ಕಾನನಂ ದುರ್ಗಮೆಂದೆನೆ ಸತ್ರಮೆಂದೆನಲಡವಿಗಭಿಧಾನಮಕ್ಕುಂ" (ಮಂಗರಾ. ೪೫-೪೯). ೫. ಪಟ್ಟಣ ; ನಗರ : "ದುರ್ಗಮೆನೆ ನಗರಮೆನೆ ಪಟ್ಟಣಂ" (ಮಂಗರಾ. ೫೭-೩). ೬. ಬೆಟ್ಟ ; ಗುಡ್ಡ. 'ದುರ್ಗಾಗ್ರ' ಪರಾ. ೭. ಕನ್ನಡದ ಒಬ್ಬ ಕವಿ ; ದುರ್ಗಸಿಂಹ : ವಸುಧೆಯೊಳಗೆ ಸತ್ಪುರುಷನೆನಿಸಿ ಮೆಱೆವಂ ದುರ್ಗಂ (ಪಂಚತಂ. ೩೧೧-೮). [ ಸಂ. ]

**ದುರ್ಗಂಧ** (ಗು). ೧. ಕೆಟ್ಟ ವಾಸನೆಯುಳ್ಳ ; ದುರ್ವಾಸನೆಯನ್ನು ಹೊಂದಿದ. (ನಾ). ೨. ಕೆಟ್ಟವಾಸನೆ ; ದುರ್ನಾತ ; ದುರ್ವಾಸನೆ : ಮುನೀಂದ್ರನಾಕೆಯೊಡಲೀ ದುರ್ಗಂಧಪೋಪಂತೆ ಯೋಜನಗಂಧಿತ್ವ ಮನಿತ್ತು (ಪಂಪಭಾ. ೦-೭೯) ; ಸುಗಂಧ ದುರ್ಗಂಧವ ಕಳೆದು ಧೂಪಾರತಿಯ ಮಾಡುವೆನಯ್ಯಾ (ಅಂಬಿವ. ೪೦೩-೦೦೫) ; ನೆತ್ತರು ಸತ್ತ ತೊಗಲ ನರಂಗಳತಿ ದುರ್ಗಂಧವಾಗಳು ನಾರ್ವ ಬಾತೊಡಲ . . . ಹೇಸಿಕೆಯು ನಾತವಧಿಕ ಭಯಂಕರವು (ಬಸಪು. ೪೭-೫೮) ; ಕೊಱೆದ ಕದಪುಗಳ ವ್ರಣದ ದುರ್ಗಂಧದ ಮಹಾಭೀಷಣದ ರಕ್ಕಸಿ ಬಂದಳಾ ರಾವಣನ ರಚಿತ ಸಭಾಂತರಾಳಕೆ (ತೊರರಾ. ೩-೭-೧೨). ೩. ಕೆಟ್ಟವಾಸನೆ ಬರುವ ವಸ್ತು. ೪. ಈರುಳ್ಳಿ. ೫. ಮಾವಿನ ಮರ. ೬. ಒಂದು ಬಗೆಯ ಸಸ್ಯ : "ಪೂತಿಕಂದ–ಇಂಗುಳ, ವಾಕುಚಿ, ದುರ್ಗಂಧ" (ಓಷಧಿ. ೧೧೧). [ ಸಂ. ]

**ದುರ್ಗಂಧವಾಸ** (ನಾ). ಒಂದು ನರಕದ ಹೆಸರು : ಮತ್ತಂ ತುಷಾಗ್ನಿ ಕ್ರಿಮಿಸಂಘ ಅಮೇಧ್ಯಪ್ರತಿಷ್ಠ ಮೂತ್ರಕೂಪ ದುರ್ಗಂಧವಾಸಗಳೆಂಬೈದು ಮಂತ್ರಿನರಕಗಳ್ (ವಿವೇಕ. ೧೯೩). [ ದುರ್ಗಂಧ + ವಾಸ, ]

**ದುರ್ಗಂಧೆ** (ನಾ). (ದೇಹದಲ್ಲಿ) ಕೆಟ್ಟವಾಸನೆಯುಳ್ಳವಳು,-ದುರ್ವಾಸನೆಯುಳ್ಳವಳು : ದುರೂಪೆ ದುರ್ವರ್ಣೆ ದುರ್ಗಂಧೆ . . . ಪೊಲತಿಯಾಗಿ ಪುಟ್ಟಿ (ವಡ್ಡಾರಾ. ೯-೬) ; ದುರ್ಗಂಧೆ ದುರ್ವರ್ಣೆ ಜಾತ್ಯಂಧಕಿ . . . ಎನಿಸಿದ ಪಾಪಕ್ಕೆ ಪಕ್ಕಾಗಿ (ಸುಕುಮಾ. ೫-೨೦). [ ಸಂ. ದುರ್ಗಂಧಾ ]

**ದುರ್ಗಗುಣ** (ನಾ). ಕೋಟೆಗೆ ಇರಬೇಕಾದ ಲಕ್ಷಣ ; ದುರ್ಗಕ್ಕಿರಬೇಕಾದ ಗುಣ ; P ಅಂತರ್ದ್ವೀಪ, ಮಹಾಸ್ಥಳ (ಜಲದುರ್ಗದ ಭೇದ), ಗಂಹ್ಯ, ಪ್ರಸ್ತರ (ಗಿರಿದುರ್ಗದ ಭೇದ), ಉದಕಸ್ತಂಭ, ವೈರಿಣೆ (ಸ್ಥಳದುರ್ಗದ ಭೇದ), ಕರ್ದಮೋದಕ, ಸ್ತಂಭನಗಹನ (ವನದುರ್ಗದ ಭೇದ) ಇವು ದುರ್ಗಕ್ಕಿರಬೇಕಾದ ಎಂಟು ಬಗೆಯ ಲಕ್ಷಣಗಳು : ಇಂತಷ್ಟವಿಧಮಪ್ಪ ದುರ್ಗಂಗಳೊಳಂ ನವ್ಯಾಶ್ರಯಿಸಿದ ದುರ್ಗಕ್ಕೆ ದುರ್ಗಗುಣಮಿಲ್ಲ (ಪಂಚತಂ. ೨೦೬-೪). 'ದುರ್ಗಪಂಚಕ' ಪರಾ. [ ದುರ್ಗ + ಗುಣ ]

**ದುರ್ಗತ** (ಗು). ೧. ಬಡತನದ ; ದಾರಿದ್ರ್ಯವುಳ್ಳ. ೨. ಭಾಗ್ಯಹೀನವಾದ ; ಹೀನ ಅದೃಷ್ಟವುಳ್ಳ. ೩. ವ್ಯಥೆಗೊಂಡ ; ದುಃಖಗೊಂಡ ; ದುಃಖಪೂರಿತವಾದ. ೪. ಕಷ್ಟದಲ್ಲಿ ಸಿಲುಕಿದ ; ತೊಂದರೆಗೀಡಾದ. (ನಾ). ೫. ಬಡವ ; ದರಿದ್ರ : "ಕ್ಷುದ್ರಃ, ದರಿದ್ರಃ, ಅಕಿಂಚನಃ, ದುರ್ವಿಧಃ, ದುಸ್ಥಃ, ದುರ್ಗತಃ–ಈ ೬ ಬಡವಂ" (ಹಲಾಯು. ೫೬-೯೩). ೬. ದುಸ್ಥಿತಿಯಲ್ಲಿರುವವನು. [ ಸಂ. ]

**ದುರ್ಗತಿ** (ನಾ). ೧. ಕೆಟ್ಟ ಅವಸ್ಥೆ ; ದುರ್ದೆಶೆ ; ಕಷ್ಟ : ಪಾಪದಿಂದಿನಿತು ನಿಕೃಷ್ಟ ದುರ್ಗತಿಗಳೊಳ್ ಬಲವಂದುದನೀಗಳಾಗಿಯುಂ ನೆನೆದು ನಿರಾಕುಳಂ ಬಗೆದು ಭಾವಿಸು ನಿನ್ನ ಭವಾಂತರಂಗಳಂ (ಸುಕುಮಾ. ೫-೨೯) ; ಬ್ರಹ್ಮಹತ್ಯ ಭ್ರೂಣಹತ್ಯ ವೈತರಣಿ ದುರ್ಗತಿ ಪಂಚಮಹಾಪಾತಕದಿಂದಧಿಕ ನೋಡಾ ಅಳುಪಿ ಭವಿಯೊಡನುಂಡರೆ ಭಕ್ತನಲ್ಲಾ (ಬಸವ. ೬೬೦). ೨. ದಾರಿದ್ರ್ಯ ; ಬಡತನ. 'ದುರ್ಗತಿಕ' ಪರಾ. ೩. ದುರದೃಷ್ಟ ; ದೌರ್ಭಾಗ್ಯ. ೪. ನರಕ : "ನಿರಯಂ ಶ್ವಭ್ರಂ ದುರ್ಗತಿ ನರಕಂ" (ವಸ್ತುಕೋ. ೨೦-೧೧) ; "ಓತು ದುರ್ಗತಿ ನಿರಯಮೆನೆ ನರಕಮಕ್ಕುಂ" (ಮಂಗರಾ. ೧೧೬-೧) ; ಆಸೆ ಮೋಹವು ದುರ್ಗತಿಗಳ ನಿವಾಸವೆಂಬುದನೆಱಿಯಲಾ (ಬಸವು. ೪೦-೪೭); ನಿರಪರಾಧಿಯನ್ನು ದೂರಿದರೆ ತನ್ನ ಶ್ರೇಯಸ್ಸು ಹಾಳಾಗುವುದಲ್ಲದೆ ದುರ್ಗತಿ ಬರುತ್ತದೆ! (ಪಚಭಾ. ೭೯). [ ಸಂ. ]

**ದುರ್ಗತಿಕ** (ನಾ). ಬಡವ ; ದರಿದ್ರ : "ಅಧನಂ ದುರ್ಗತಿಕಂ ದುರ್ವಿಧನೆಂದೞಿಗಿಲ್ಲದಂ ದರಿದ್ರಂ ನಿಸ್ವಂ" (ವಸ್ತುಕೋ. ೬೩-೬೬). [ ಸಂ. ]

**ದುರ್ಗತಿವಡೆ** (ಕ್ರಿ). ೧. ದುರ್ದೆಶೆಯನ್ನು ಪಡೆ. ೨. ನರಕವನ್ನು ಪಡೆ : ಪುರುಷನೊಳು ಶಿವಭಕ್ತಿಯಿಲ್ಲದೆ ತರುಣಿ ಶಿವಭಕ್ತಿಯೊಳಿರುತ ತತ್ಪುರುಷನಂ ಮಾಱಿದ ತರುಣಿ ದುರ್ಗತಿವಡೆಯಳೆಂದು (ಬಸವು. ೩೨-೨೪).
[ ದುರ್ಗತಿ + ಪಡೆ, ]

**ದುರ್ಗತಿವೋಗು** (ಕ್ರಿ). ೧. ಅನಿಷ್ಟಕ್ಕೆ ಗುರಿಯಾಗು ; ದುರ್ಗತಿಗೆ ಈಡಾಗು : ಎಲೆ ಗಾಂಪ ಸಮಸ್ತ ನಂಟರಂ ಮಡದಿಯನಿಷ್ಟರಂ ಕಿಡಿಸಿ ದುರ್ಗತಿವೋಗದೆ ಬರ್ಪುದೆಂದು ನಿಗ್ಗಡಿತನದಿಂ ಸಬಾಂಧವಜನಂ ತೆಗೆದಪ್ಪಿದರಾ ಮುನೀಂದ್ರನಂ (ಧರ್ಮಾಮೃ. ೮-೮೮). ೨. ನರಕವನ್ನು ಸೇರು. [ ದುರ್ಗತಿ + ಪೋಗು, ]

**ದುರ್ಗನ್ಕೆಱೆ** (ನಾ). ಒಂದು ಕೆರೆಯ ಹೆಸರು: ಪ್ರಥಮಮ್ ದುಗ್ಗನ್‌ಕೆಱೆ ಮೂಡ್ಡೈ ಕಡೆಗೋಡೆ ಎ ಸಂಗವೋಯರಾ ಕೆಱೆ (ಪ್ರಾಚೀ. ೧೯೧೪, ೧೨-೧೬ ; 819). [ <ದುರ್ಗ + ಕೆಱೆ ]

**ದುರ್ಗಪಂಚಕ** (ನಾ). ಐದು ಬಗೆಯ ದುರ್ಗಗಳು,-ಆಕ್ರಮಿಸಲು ಕಷ್ಟಸಾಧ್ಯವಾದ ಸ್ಥಳಗಳು ; ಜಲದುರ್ಗ, ಗಿರಿದುರ್ಗ, ವನದುರ್ಗ, ಸ್ಥಳದುರ್ಗ ಮತ್ತು ಈರಿಣದುರ್ಗ ಎಂಬ ಐದು ದುರ್ಗಗಳು : ಅವಯವದಿಂದೞಿಗುಂ ಪಂಚವಿಧಾಹಿತವರ್ಗದುರ್ಗಪಂಚಕಮಂ ಶಾತ್ರವಮಂತ್ರಪಂಚಕಮನೊಪ್ಪುವ ತತ್ಪ್ರಭುಮಂತ್ರಶಕ್ತಿಗಳ್ ತೀವ್ರಂಗಳ್ (ಶಾಂತಿಪು. ೨-೪೭) ; ಪೃಥ್ವೀಪಾಲ ಭೂಪಾಲಂ . . . ಷಡ್ಬಲಬಲಿಷ್ಠನುಂ ದುರ್ಗಪಂಚಕ ಸಮಗ್ರನುಂ . . . ಆಗಿರ್ಪಂ (ಚಂದ್ರಪ್ರ. ೯-೧೧೭ ವ). 'ದುರ್ಗಗುಣ' ಪರಾ. P ದುರ್ಗಗಳು ಎಷ್ಟು ಬಗೆಯವು ಎಂಬುದರ ಬಗ್ಗೆ ನಿರ್ದಿಷ್ಟವಾದ ಸಂಖ್ಯೆಯಿಲ್ಲ. ಉಪಲಬ್ಧವಾದ ವಿವರಗಳು ಈ ರೀತಿಯಿವೆ. "ದುರ್ಗ–೪ ; ಜಲದುರ್ಗ (ಜಾಲಕಂ), ಗಿರಿದುರ್ಗ (ಪಾರ್ವತಂ), ಸ್ಥಳದುರ್ಗ (ಧಾನ್ವನಂ), ವನದುರ್ಗ (ವನಜಂ) (ಪಂಚತಂ. ೧೯೯ ಶ್ಲೋ). ದುರ್ಗ–೫ : ಉದಕ, ಪರ್ವತ, ವೃಕ್ಷ, ಈರಿಣ, ಧನ್ವ (ಬೃಹಸ್ಪತಿ–ಭಾಗ–೪–೧೮–೩೦ ವ್ಯಾ). ದುರ್ಗ–೬ : ಧನ್ವದುರ್ಗ, ಮಹೀ–, ಗಿರಿ–, ಮನುಷ್ಯ–, ಮೃದ್–, ವನ–(ಮಹಾಭಾ. ರಾಜಧರ್ಮ–ಶಕದು. VI, ೧೮೬; ಆಪ್ಟೆ). ದುರ್ಗ–೭ : (ಅ). ಜಲದುರ್ಗ, ವನ–, ಗಿರಿ–, ಕೃತಕಾವನೀ–, ಸಾಲ–, ಸೇನಾ–, ಮಂತ್ರ–(ವಿಚಿಂ. ೨೮೪). (ಆ). ಗಿರಿ, ವನ, ಜಲ, ರಥ, ದೇವ, ಪಂಕ, ಮಿಶ್ರ (ಭಾರಸಂ. ೨೮೪). ದುರ್ಗ–೮ : ಅಂತರ್ದ್ವೀಪ, ಮಹಾಸ್ಥಳ–ಈಯೆರಡು ಜಲದುರ್ಗಭೇದ ; ಗುಂಹ್ಯಾಖ್ಯ, ಪ್ರಸ್ತರ–ಈ ಯೆರಡು ಗಿರಿದುರ್ಗಭೇದ ; ಉದಕಸ್ತಂಭ, ವೈರಿಣೆ–ಈಯೆರಡು ಸ್ಥಲ ದುರ್ಗಭೇದ; ಕರ್ದಮೋದಕ, ಸ್ತಂಭನಗಹನ–ಈ ಯೆರಡು ವನದುರ್ಗಭೇದ (ಪಂಚತಂ. ಪು. ೨೧೫)". (ಶ್ರೀವತ್ಸ. ೨೦೨). [ ದುರ್ಗ + ಪಂಚಕ ]

**ದುರ್ಗಪ್ರಾಕಾರ** (ನಾ). = ದುರ್ಗಪ್ರಾಚೀರ : ದುರ್ಗ್ಗಪ್ರಾಕಾರದ ಗೋಡೆಯನ್ನು ಸೇರಿ . . . ಮೂರ್ಛಿತನಾಗಿ ಬೀಳುತ್ತಿರುವನು (ಸುಗುಗಂ. ೧೨೦-೬).
[ ದುರ್ಗ + ಪ್ರಾಕಾರ ]

**ದುರ್ಗಪ್ರಾಚೀರ** (ನಾ). ಕೋಟೆಯ ಗೋಡೆ,-ಪ್ರಾಕಾರ,-ಪೌಳಿ : ದುರ್ಗಪ್ರಾಚೀರದ ಈ ದಿಕ್ಕಿನಲ್ಲಿಯೂ ದೌರ್ಬಲ್ಯ ಕಂಡುಬರಲಿಲ್ಲ (ಇಪ್ಪಕ. ೩೬೯). [ ದುರ್ಗ + ಪ್ರಾಚೀರ ]

**ದುರ್ಗಭೂಮಿ** (ನಾ). ದುರ್ಗವಿರುವ ಪ್ರದೇಶ ; ಕೋಟೆಯ ಜಾಗ : ಮೂಱುಕೋಟಿ ಗೋಮಂಡಳಂಗಳಿಂದಮಿಪ್ಪತ್ತೆಣ್ಛಾಸಿರ ದುರ್ಗಭೂಮಿಗಳಿಂದಂ ನೊಱು ಕುಕ್ಷಿನಿವಾಸಂಗಳಿಂದಂ (ಶಾಂತಿಪು. ೧೧-೮೪ ವ).
[ ದುರ್ಗ + ಭೂಮಿ ]

**ದುರ್ಗಮ** (ಗು). ೧. ಸಂಚರಿಸಲು ಅಶಕ್ಯವಾದ,-ಕಷ್ಟವಾದ ; ಪ್ರವೇಶಿಸಲಾಗದ ; ಹಾದು ಹೋಗಲಾರದ : ಆಗಳಾ ಪರ್ವತಮನೇಱಿ ದುರ್ಗ ದುರ್ಗಮಮಾರ್ಗಮಂ ನೋೞ್ಪೆನೆಂದು ಬಗೆದು (ಚಂದ್ರಪ್ರ. ೫-೬೮ ವ) ; ಸುಗ್ರೀವನಿಹನೈ, ಗುಹಾವಾಸಿ ತಾನಾಗಿ . . . ದುರ್ಗಮ ಋಶ್ಯಮೂಕದಲಿ (ಶ್ರೀರಾಮಾ. ೨೬೭-೩೬೩). ೨. ತಿಳಿಯಲು ಅಶಕ್ಯವಾದ,-ಅಸಾಧ್ಯವಾದ. ೩. ಹೊಂದಲಾಗದ; ಪಡೆಯಲಾಗದ. ೪. ಗೆಲ್ಲಲು ಅಸಾಧ್ಯವಾದ : ದುರ್ಗಮಮ್ಮೆರಿಜಯಕ್ಕಿದು ಮಾರ್ಗಂ ನಿಜಮೆಂದು ಮಾನಸಾರನ್ನಪಾಲಂ . . . ಅರಣ್ಯ ದೊಳಿರ್ದಂ (ದಶಕು. ೧-೬೫). (ನಾ). ೫. ಸಂಚರಿಸಲು ಅಶಕ್ಯವಾದುದು : ದುರ್ಗಮಮಪ್ಪಾ ಪಥದೊಳ್ ನಿರ್ಗಹನದಿನಂದು ಪೋಗಿ ಕಂಡು (ನೇಮಿಪು. ೯-೧೦೦). ೬. ಕಷ್ಟವಾದುದು ; ಅಸಾಧ್ಯವಾದುದು : ಮಹಾಭೋಗಂ ಪೊಕ್ಕಂ ಪುರಮನದೇ ಗಹನಮೊ ಪವನಜಂಗೆ ದುರ್ಗಮಮುಂಟೇ (ಪಂಪರಾಮಾ. ೧೧-೬೬). [ ಸಂ. ]

**ದುರ್ಗರತ** (ನಾ). ಅರಣ್ಯದಲ್ಲಿರುವವನಂ : ಇರೆ ಧಾತ್ರೀತನಯಂ ದಿನೇಶ ಗೃಹದೊಳ್ ಸ್ವಲ್ಪಾಂಗನಾಸೂನು ದುರ್ಗರತಂ ಕ್ಲೇಶಸಹಿಷ್ಣು ನಿಸ್ವನೆನಿಕ್ಕುಂ (ಜಾತತಿ. ೧೭-೨೦). [ ದುರ್ಗ + ರತ ]

**ದುರ್ಗಸಂಚರ** (ನಾ). ೧. ಸಂಚರಿಸಲು ಕಷ್ಟವಾದುದು ; ಇಕ್ಕಟ್ಟಾದ ದಾರಿ. ೨. ನದಿ, ಕಂದಕ, ಬೆಟ್ಟ, ಕೋಟೆ ಮೊದಲಾದುವನ್ನು ದಾಟಲು ಮಾಡಿರುವ ಕಟ್ಟೆ, ಸೇತುವೆ ಮುಂತಾದುವು; ಹಾಯ್ಗಡ: "ಸಂಕ್ರಮಃ, ದುರ್ಗಸಂಚರಃ–೨ ಹೊಳೆ, ಕಂದಕ, ಬೆಟ್ಟ ಮುಂತಾದ ದುರ್ಗಗಳನ್ನು ಸುಲಭವಾಗಿ ದಾಟುವ ಕಟ್ಟೆ, ಸೇತುವೇ ಮುಂತಾದ ಗಮನ ಸಾಧನದ ಪೆಸರು" (ಸಿದ್ಧಾಂತಿ. ೩೭೪). [ ದುರ್ಗ + ಸಂಚರ ]

**ದುರ್ಗಸೌರಣೆ** (ನಾ). ಕೋಟೆಯನ್ನು ಸಜ್ಜುಮಾಡುವುದು,–ಸಿದ್ಧಗೊಳಿಸುವುದು : ದಳವಾಡ ಸಹಿತ ಬೈಚಪ್ಪ ದುರ್ಗವ ಹೊಕ್ಕು . . . ನೋಡಿ ದುರ್ಗಸೌರಣೆಯನಂದಲಸದೆ ಮಿಗೆ ಮಾಡಿಸಿದನು (ಕುರಾಸಾಂ. ೩೭-೫೦). [ ದುರ್ಗ + ಸೌರಣೆ (<ಸಂವರಣೆ) ]

**ದುರ್ಗಾಗ್ರ** (ನಾ). ಬೆಟ್ಟದ ತುದಿ,–ಶಿಖರ : ಕೋಕಸಸ್ ಬಟಿಯಾ ದುರ್ಗಾಗ್ರದ ಮೇಲ್ ನಿನ್ನಟಿಪಾಡಿಗೆ ನರಲ್ವರೆವರುಂ (ಬದ್ಧಪ್ರ. ೨೩-೪೮೧). [ ದುರ್ಗ + ಅಗ್ರ$_1$ ]

**ದುರ್ಗಾಶ್ರಯವಿಗ್ರಹ** (ನಾ). ೧. ಕೋಟೆಯ ಆಶ್ರಯದಿಂದ ಯುದ್ಧ ಮಾಡುವವನಂ. ೨. ಪಾರ್ವತಿಗೆ ಆಶ್ರಯವಾದ ದೇಹವುಳ್ಳವನು. ೧, ೨ : ಅಧಿಗತಸ್ವಾಮಿ ಸಂಪತ್ಸಮೋದಿತನಾಗಿಯುಂ ದುರ್ಗಾಶ್ರಯ ವಿಗ್ರಹನಲ್ಲದ ವಿಭೂತಿಭೂಷಿತನುಂ . . . ಸಮವರ್ತಿಯಾಗಿಯುಂ ಕೃತಾಂತನಲ್ಲದ ಧರ್ಮರಾಜನುಂ . . . ಎನಿಸಿ ದೇವತಾಸ್ವರೂಪನಾದಂ (ಪುಷ್ಪಪು. ೩-೨೧ ವ).

[ ಸಂ. (ದುರ್ಗ + ಆಶ್ರಯ + ವಿಗ್ರಹ; ದುರ್ಗಾ + ಆಶ್ರಯ + ವಿಗ್ರಹ) ]

**ದುರ್ಗಾಷ್ಟಮಿ** (ನಾ). ಆಶ್ವಯುಜಮಾಸದ ಶುಕ್ಲಪಕ್ಷದ ಎಂಟನೆಯ ದಿನ ; ᑭ ನವರಾತ್ರಿಯಲ್ಲಿ ನಡೆಯುವ ವಿಶೇಷವಾದ ದುರ್ಗಾ ಪೂಜೆಯ ದಿನ ಮತ್ತು ಉತ್ಸವ : ಓಬಲ, ನಾಳೆ ದುರ್ಗಾಷ್ಟಮಿ (ಸುಗುಗಂ. ೭೮-೧) ; ಎಂಟನೆಯ ದಿವಸ ದುರ್ಗಾಷ್ಟಮಿ (ಭಾಹಬ್ಬ. ೧೩೨).

[ ಸಂ. ದುರ್ಗಾಷ್ಟಮೀ ]

**ದುರ್ಗಾಸ್ತವ** (ನಾ). ಕಾಳಿಕಾದೇವಿಯ ಸ್ತೋತ್ರ,–ಸ್ತುತಿ: ದುರ್ಗಾಸ್ತವವ ಜಪಿಸಿದ ವರಘೃತೋದನನವರುಧಿರಮಾಂಸೋಪಹಾರಂಗಳಲಿ ಪೂಜಿಸಿದ (ಶುಮ್ಯಾದ್ರೋ. ೯-೨). [ ಸಂ. ]

**ದುರ್ಗಿ$_1$**, ದುಗ್ಗಿ$_2$, ದುಗ್ಗೆ, ದುರುಗಿ (ನಾ). ೧. ಪಾರ್ವತಿಯ ಹೆಸರುಗಳಲ್ಲಿ ಒಂದು ; ದುರ್ಗಾದೇವತೆ : "ಗಿರಿಜೆ ರುದ್ರಾಣಿ . . . ದುರ್ಗಿ ಚಾಮುಂಡಿ ಶರ್ವಾಣಿ ಶಿವೆಯುಮೆಯೆನಲು ಗೌರಿಯಕ್ಕುಂ" (ಮಂಗರಾ. ೪-೧೨) ; ಭಗವತಿಯುಂ ಚಂಡಿಯುಂ ದುರ್ಗಿಯುಂ . . . ಎನಿಸುಗೆ ಪೂಜೆಕ್ಕೆ ಮಾಂಸಾದಿ ನಾನಾಬಲಿಯಿಂ ದೇವರ್ ನರರ್ ತ್ವಚ್ಚರಣ ಕಮಲಮಂ ಶ್ರೀಜಯಶ್ರೀನಿಮಿತ್ತಂ (ಜಗವಿ. ೨-೫೮) ; ಮಾನಸಾರ ನೃಪಾಲಂ ದುರ್ಗಿಯನುಪಾಸ್ತಿಗೆಯ್ಯುತ್ತ . . . ಅರಣ್ಯದೊಳಿರ್ದಂ (ದಶಕು. ೧-೭೫) ; ರಕ್ತಬೀಜಾಸುರನಂ ಭಕ್ಷಿಸುವುದಕ್ಕೆ ಬಾಯ್ದೆರೆದಿರ್ದಾ ವರದುರ್ಗಿಯ ಪಲ್ಗಳವೊಲ್ ಪಿರಿದುಪ್ಪರಗೋಂಟೆದೆನೆಗಳೊಪ್ಪಿದವು (ಹಮ್ಮೀರ. ೧-೬೧). ೨. ಜನಸಾಮಾನ್ಯರು ಗ್ರಾಮದೇವತೆಯೆಂದು ಪೂಜಿಸುವ ಒಂದು ಕ್ಷುದ್ರದೇವತೆ : ದುರ್ಗಿ ಮಾರಿಯು ಚಂಡಿಯುಗ್ಗದ ಶಕ್ತಿಗಳು ಸದ್ಗುಣ ಸತ್ಯ ಮುಸುಕಿಹರ ಮುಟ್ಟವು (ಸರ್ವಜ್ಞ. ೯೦). **ದುಗ್ಗಿ$_2$** : ೧. ಅಗ್ಗಿಗಣ್ ಚೆಲ್ವ ನೊಸಲೊಳಗೆ ಥಳಥಳಿಸುತಿರೆ ದುಗ್ಗಿಗರೆ ಮೆಯ್ಯನೊಲವಿಂ ಸಲಿವುತ್ತಿತ್ತಂ (ಚೀರಮ. ೭-೩೯). **ದುಗ್ಗೆ** : ೧. "ದುಗ್ಗೆ (ದುಗ್ಗಿ)–ದುರ್ಗಾ" (ತದ್ಭಕೋ. ೨೦). **ದುರುಗಿ**: ೧. 'ರಣದುರುಗಿ' ಪರಾ.

ದುರ್ಗವ್ವ, ದುರಗವ್ವ = ದುರ್ಗಾದೇವಿ : ದುರ್ಗವ್ವನ ಗುಡಿಯಲ್ಲಿ ಕೇರಿಯವರೆಲ್ಲ ಸೇರಿ ಭಜನೆ ಮಾಡಿದ ತರುವಾಯ . . . ಮಾದನ ಮೈಯಲ್ಲಿ ದೇವಿಯ ಸಂಚಾರವಾಯಿತು (ನೀನಮು. ೩೦) ; "ದುರಗವ್ವ = ದುರ್ಗಾದೇವತೆ ; ತಂಬೆಳಗಮ್ಮ, ಗ್ರಾಮದೇವತೆ" (ಜಾನಕೋ. ೭). **ದುರ್ಗಿಬೇನೆ, ದುರ್ಗವ್ವನ ಬೇನೆ**=ಕಾಲರಾ ರೋಗ: (ಕ್ರ).

[ <ಸಂ. ದುರ್ಗಾ ]

**ದುರ್ಗಿ$_2$** (ನಾ). ಒಂದು ಬಗೆಯ ಚಿನ್ನದ ನಾಣ್ಯ : ಇತರ ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು, ಯಾವವೆಂದರೆ :–೧ ಗಬರು . . . ೧ ದುರ್ಗಿ, ೧ ಇಕ್ಕೇರಿ (ಚಿತ್ರಶಾ. ೧೦೪) ; ಮಲಾಪಹಾರಿಯ ದಕ್ಷಿಣದಲ್ಲಿ, ೧೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡೆಯುತ್ತಿದ್ದವು. ಅವುಗಳ ವಿವರ–೧ ಗಜಪತಿ . . . ೬ ದುರ್ಗಿ, ೭ ಜಮುಶೇರೀ (ಕಭಾಗ. ೨೮೦).

**ದುರ್ಗೀವರಹ** = ದುರ್ಗಿ$_2$ : ಎರಡು ಲಕ್ಷದ ನಾಲ್ವತ್ತೆಂಟು ಸಹಸ್ರದ ಮುನ್ನೂರ ಅರುವತ್ತುನಾಲ್ಕು ದುರ್ಗೀವರಹಗಳ ಲೆಕ್ಕವು ಮಹಾಸ್ವಾಮಿಯವರಿಗೆ ಅಳವುಗೊಟ್ಟು ನಿರ್ಧಾರಿತವಾಗಿದೆ (ವಿಗಡ. ೧೮-೧೩). [ <ದುರ್ಗ ]

**ದುರ್ಗುಣ** (ನಾ). ಕೆಟ್ಟ ಗುಣ ; ದುಷ್ಟ ಸ್ವಭಾವ : ದೇವ ಎನ್ನೊಳ್ಪ ದುರ್ಗುಣಂಗಳು ಸಾವಿರವೊಳವು ಮನ್ನಿಸು (ಬಸವು. ೩೮-೨೬); ದುರ್ಗುಣಂಗಳ ನಾನು ಮಱಿಮಾಡಿಕೊಂಡು ಶರಣನೆಂದು ವಚನಂಗಳ ಹಾಡಿದರೆ ತಿಂಗಳ ಬೆಳಕಿನ ಸಿರಿಯಂ ಕಂಡು ನಾಯಿ ಹರುಷಂಗೊಂಡು ಬಳ್ಳಿಟ್ಟು ಬೊಗುಳಿದಂತಾಯಿತು (ಘನವ. ೩೬-೨೮) ; ಕೇವಲ ಅಡಿಯ ಕೆಳಗೆ ಇರುವುದರಿಂದಲೆ ಮೆಟ್ಟಿಗೆ ಈ ಮರ್ಯಾದೆ ಬಂದಿತೆ ? ಹಾಗೆನಿಸುವುದಿಲ್ಲ. ಅದಕ್ಕೊಂದು ದುರ್ಗುಣವಿದೆ (ದೇಶನ್ಕೆ. ೧೪೬) ; ಅಜ್ಞಾನವೇ ದುರ್ಗುಣ (ಮುಂಬಯಿ. ೪-೧೮೨). [ ಸಂ. ]

**ದುರ್ಗುಣವತಿ** (ನಾ). ಕೆಟ್ಟಗುಣವುಳ್ಳವಳು ; ದುಷ್ಟೆ : ನಾನು ಕ್ರೂರ ಸ್ವಭಾವದವಳೆಂದೂ ದುರ್ಗುಣವತಿಯೆಂದೂ . . . ನಿನ್ನ ಹೆಂಡತಿಯು ಪ್ರಪಂಚವನ್ನೆಲ್ಲಾ ಸಾರುತ್ತಿರುವಳು (ಲಕ್ಷ್ಮೀಪ್ರ. ೧೨೭).

[ ಸಂ. ದುರ್ಗುಣವತೀ ]

**ದುರ್ಗುಣಿ** (ನಾ). ದುಷ್ಟಗುಣವುಳ್ಳ ವ್ಯಕ್ತಿ; ಕೆಟ್ಟ ಗುಣವನ್ನು ಹೊಂದಿದ ವ್ಯಕ್ತಿ : ದುರ್ಗುಣಿ ದುರಾಚಾರಿಯಯ್ಯ ನಾನು (ಅಖಂಡೇ. ೯೬-೧೪).

[ ಸಂ. ದುರ್ಗುಣಿನ್ ]

**ದುರ್ಗೆ** (ನಾ). ಪಾರ್ವತಿಯ ಹೆಸರಂಗಳಲ್ಲಿ ಒಂದಂ ; ದುರ್ಗಾದೇವತೆ: "ಉಮೆ ಪಾರ್ವತಿ ಕಾತ್ಯಾಯನಿ ಹಿಮವತ್ಸುತೆ ಚಂಡಿ ದುರ್ಗೆ . . . ಕಾಳಿಯೆಂಬಿವಂಬಿಕೆಯ ಪೆಸರ್" (ವಸ್ತುಕೋ. ೩-೧೬) ; ನಿಂದಳಗಣಿತ ನಾಮರೂಪಗಳಿಂದ ಭಕುತರಿಗಿಷ್ಟಸಿದ್ಧಿಯನಂದೊಲಿದು ಕರುಣಿಸುತ ದುರ್ಗೆ ದುರಂತಗುಣದುರ್ಗೆ (ನಿಭಾಗ. ೧೧-೪-೨೬). ೨. ಒಂದು ಮಂತ್ರದ ಹೆಸರಂ : ಸಪ್ತಮಾತೃಕಾ ದುರ್ಗಾ ಕಾಳೀ ಬಗಳಾ ಬಾಲಾ ಲಲಿತಾ ಶೂಲಿನ್ಯಾದಿ ಮಹಾಮಂತ್ರಂಗಳಂ . . . ತಿಳಿದಿರಲಕ್ಕುಂ (ವಿವೇಕ. ೮೧).

[ ಸಂ. ದುರ್ಗಾ ]

**ದುರ್ಗೇಶ್ವರ** (ನಾ). ಕೋಟೆಯ ಅಧಿಪತಿ,–ಒಡೆಯ : ರಾಜ್ಯದ ಕ್ಷೇಮಾಭ್ಯುದಯಗಳನ್ನು ಬೆಸಗೊಳ್ಳುವಂತೆ ನಮ್ಮ ದುರ್ಗೇಶ್ವರನು ಆಣತಿ ಮಾಡಿದ್ದಾನೆ (ಸುಗುಗಂ. ೧೬-೪). [ ದುರ್ಗ + ಈಶ್ವರ ]

**ದುರ್ಗ್ರಾಹ** (ಗು). ೧. ಹಿಡಿಯಲು ಕಷ್ಟವಾದ: ಅತುಳೋತ್ತಾಲ ತಿಮಿಂಗಿಳ ಪ್ರಬಳಪಕ್ಷೋದ್ಧೂತವಾತಪ್ರಕಂಪಿತ ಕುತ್ಕೀಲ ಸಮಗ್ರದುರ್ಗ್ರಾಹಘನ ಗ್ರಾಸಗ್ರಹವ್ಯಗ್ರವಿಸ್ತೃತ ವಕ್ತ್ರೋದರಭಾಗ ಭೂರಿ ಕಮಠ ಪ್ರಕ್ಷುಬ್ಧಕಲ್ಲೋಲ ಕಲ್ಪಿತಕೋಲಾಹಲಕಲ್ಪಕಾಲರಭಸ ಪ್ರಸ್ಪರ್ಧಿಯಂ ವಾರ್ಧಿಯಂ (ಕಾವ್ಯಸಾ. ೭೫). ೨. ತಿಳಿಯಲು ಕಷ್ಟವಾದ. ೩. ಹೊಂದಲು ಅಶಕ್ಯವಾದ.

(ನಾ). ೪. ಕೆಟ್ಟ ಗ್ರಹ ; ಕ್ರೂರಗ್ರಹ : ಇದರ ಜೊತೆಗೆ, ನನ್ನ ದುರ್ಗ್ರಹವು . . . ಎತ್ತಿ ಕಟ್ಟಿದೆ (ನಿಬಂಧ. II, ೫). [ ಸಂ. ]

**ದುರ್ಘಟ** (ಗು). ೧. ಸೇರಿಸಲು ಅಶಕ್ಯವಾದ. ೨. ಕ್ರೂರವಾದ; ಕಠೋರವಾದ : ಆ ಘಟದೊಳಗೆ ಕೈದುಡುಕಿ ಪಟುದುರ್ಘಟ ಗರಳ ಧರನಂ ಪಿಡಿಪಿಡಿದು ತೆಗೆವ ಸಮಯದಲಿ (ಬಸವು. ೫೧-೬೦). (ನಾ). ೩. ಸೇರಿಸಲು ಅಶಕ್ಯವಾದುದು ; ಹೊಂದಿಸಲು ಕಷ್ಟವಾದುದು : ದುರ್ಘಟವೆನಿಪ ಮೋಹರದ ಬಲುಸಂಘಟನೆಯನು ತೋಱುವೆನು ಚಿಂತಿಸ ಬೇಡ ನೀನೆಂದ (ಕುವ್ಯಾದ್ರೋ. ೮-೬೫). ೪. ಸಂಚರಿಸಲು ಕಷ್ಟವಾದುದು : ಅಟವಿಯ ಮಹಾಘೋರಗಹ್ವರಂ ಮುಂದೆ ದುರ್ಘಟವಾಗೆ ನಡನಡುಗಿ ಭೀತಿಯಿಂ ಸೀತೆ ಸಂಕಟದಿಂದೆ ರಾಮನಾಮಂಗಳಂ ಜಪಿಸುತ (ಜೈಮಿಭಾ. ೧೯-೧೧) ; ಈ ದುರ್ಘಟವಾದ ಕಾರಡವಿಯೊಳ್ ಋಷಿಗಳ ಪುಣ್ಯಾಶ್ರಮಮುಂಟೆ ! (ರಾಮಾಶ್ವ. ೩೯-೪) ; ಅದನ್ನು ಪ್ರವೇಶಿಸುವದು ಅತ್ಯಂತ ದುರ್ಘಟವಾಗಿತ್ತು (ತುಳಸೀ. ೨೬೫). ೫. ಕಷ್ಟಕರವಾದುದು ; ಕಠಿಣವಾದುದು : ನುಡಿವನತಿದುರ್ಘಟದ ಭಾಷೆಯನೊಡನೆ ತದ್ಭಾಷೆಯ ಕೊಱತೆ ನೆಱೆಯಿಸುವನೀಗಳ್ಕೆ (ಬಸವು. ೩೬-೧೩). ೬. ಮಾಡಲು ಅಸಾಧ್ಯವಾದುದು ; ಸಾಧಿಸಲು ಕಷ್ಟವಾದುದು,-ಅಶಕ್ಯವಾದುದು : ಆರಯೆ ದುರ್ಘಟವೆನ್ನ ಮನೋರಥವೆಂದಲಸಗವುನೆ ಮನದೊಳ್ ಪಿರಿದುಂ ದೂಱಿಸಲ್ (ಚಂದ್ರಪು. ೩-೬೭) ; ತಾಂ ಕೊಂಡ ಬೆಲೆ ಪಲ್ಲಟಿಸಿ ಮರಳಿದ ಛಂದದಲಿ ದುರ್ಘಟವೆನಿಪ ಗುರುಭಕ್ತಿಯಿಂತಹದು (ಬಸವು. ೩೯-೧೮) ; ಎಂಥ ದುರ್ಘಟವಾದರೂ ಮನ್ಮಥನ ಕೈಯಲ್ಲಿ ಆಗದ ಕಾರ್ಯವಿಲ್ಲ (ವಚಕಾ. ೨೯). ೭. ಕ್ರೂರವಾದುದು : ನಮ್ಮ ಬನದಲಿ ದಾನವರ ದುರ್ಘಟದ ದುರ್ನಯವಲ್ಲಲಾಯೆನುತ ಆ ನರೇಂದ್ರ . . . ಬೆಸಗೊಂಡ ನವರುಗಳ (ಕುವ್ಯಾಅ. ೩೩-೨೩). [ ಸಂ. ]

**ದುರ್ಘಟನೆ** (ನಾ). ೧. ಕೆಟ್ಟ ಪ್ರಸಂಗ ; ಕೆಟ್ಟ ಸನ್ನಿವೇಶ : ಒಂದು ದೊಡ್ಡ ದುರ್ಘಟನೆಯೇ ಆಗಿಹೋಯಿತು (ಭಾರತಿ. ೭೭); ಓದಿನ ದಿನದೊಳು ನಡೆದ ದುರ್ಘಟನೆಯ ಬಣ್ಣಿಪೆ (ಇಂಜಾಪ. ೩೦-೭೭). ೨. ಅನಾಹುತ ; ವಿಪತ್ತು : ನೀನು ಮಲಗುತ್ತಲೆ ನಿದ್ದೆ ಮಾಡಿಬಿಡುತ್ತಿ. ಆಗ ನಿನಗೊಂದು ದುರ್ಘಟನೆ ಅಥವಾ ಅಪ್ಪರ ಮರಣ ಇತ್ಯಾದಿಗಳೇನಾದರೂ ಕೇಳಿ ಬಂದರೆ ಆಗ ನಿನ್ನ ಅವಸ್ಥೆಯೇನು ? (ಜೀವಾತ್ಮ. ೧೩೪). [ ಸಂ. ದುರ್ಘಟನಾ ]

**ದುರ್ಜನ** (ಗು). ೧. ಕೆಟ್ಟ ; ಅಧಮ ; ನೀಚ. 'ದುರ್ಜನಸಂಗ' ಪರಾ. (ನಾ). ೨. ಕೆಟ್ಟ ಮನುಷ್ಯ; ನೀಚ ; ದುರುಳ : "ಖಳನುಗ್ರಂ ಪಾಪಿ ದುಷ್ಟಾತ್ಮಕ (ನವನೆ) ಶಠಂ ದುರ್ಜನಂ ತಾನನಾರ್ಯಂ" (ವಸ್ತುಕೋ. ೧೦೦-೧೧) ; ಮೇದಿನಿಯಂ ಕೆಯ್ಕೊಳ್ ಪದನಾದುದು ಜಿನದೀಕ್ಷೆಗೆನಗೆ ಮಗನೇ ಎನೆ ನಿಮ್ಮಾದುದನಪ್ಪಂ ದುರ್ಜನನಾದುದನಪ್ಪಂತು ಕಲ್ತನೇ ಜಿನಮತಮಂ (ಶಾಂತಿಪು. ೭-೫೮) ; ದುರ್ಜನರ ಸಂಗ ಬೇಡವಯ್ಯಾ (ಬಸವ. ೧೧೯) ; ಪುಟ್ಟಿಸಿದ[ನದೇ]ಕೆಯೊ ಬಿದಿ ನಿಟ್ಟುರದಿಂ ಲೋಕದೊಳಗೆ ದುರ್ಜನನಂ (ಪುಷ್ಪಪು. ೧-೫೧); ಗುಣಮಂ ಕಂಡೊಡೆ ದುರ್ಜನಂ ಬಗೆವನಲ್ಲಂ ದೋಷಮಂ ಕಂಡ ಸದ್ಗುಣಿವೊಲ್ (ಸೂಕ್ತಿಸು. ೧-೬೩) ; ಮುಂದೆ ದುರ್ಜನ ಮಿತ್ರನಾದುದಱಿಂದ ಸಜ್ಜನರೊಡನೆ ಹಗೆ ಲೇಸೆಂದು ದಿಲ್ಲಾ (ಬಸವು. ೫೯-೫೧). ೩. ನಿಂದಕ : ಮುನಿದೊಡೆ ರಾಗದಿಂದೊಸೆದೊಡಂ ಕಡುಪೊಲ್ಲದಱಿಂದಮಂಜಿ ದುರ್ಜನಪರಮೇಶ್ವರರ್ಗಱಿದ್ದು ಕೈಮುಗಿವೆಂ ಬಲಗೊಂಡು ಭಕ್ತಿಯಿಂ (ಧರ್ಮಾಮೃ. ೧-೫೧). 'ದುರ್ಜನಿಸು' ಪರಾ. [ ಸಂ. ]

**ದುರ್ಜನತೆ** (ನಾ). ಕೆಟ್ಟತನ ; ದೌರ್ಜನ್ಯ ; ಹೀನವಾದ ನಡವಳಿಕೆ : ದುರ್ಜನತೆಯಿಂದೆ ಪಡೆದು ದುರ್ಜನನಂ ಕಮಲಗರ್ಭಂ (ಸೂಕ್ತಿಸು. ೧-೪೦). [ ಸಂ. ದುರ್ಜನತಾ ]

**ದುರ್ಜನಸಂಗ** (ನಾ). ಕೆಟ್ಟ ಸಹವಾಸ,-ಒಡನಾಟ: ದುರ್ಗ್ಗಾಣಿ ಎಂಬುದು ದುರ್ಜನಸಂಗ (ಪುರಂದ. ೪-೧೧೩ ಪಲ್ಲವಿ). [ ದುರ್ಜನ + ಸಂಗ₂ ]

**ದುರ್ಜನಿಕ್ಕೆ** (ನಾ). = ದುರ್ಜನತೆ: ಕೈಯುತ್ತಿ ದುರ್ಜನಿಕ್ಕೆಗೆ ಪೊಯ್ಮದ ದುರ್ಜನರೊಳಮ್ಮ ಕೂಡಿರವೇಡ (ಧರ್ಮಾಮೃ. ೨-೧೩). [ ದುರ್ಜನ + – ಇಕ್ಕೆ₂ (< – ಇಕೆ) ]

**ದುರ್ಜನಿಸು** (ಕ್ರಿ). ಕೆಟ್ಟವನೆಂದು ಹೇಳು ; ನಿಂದಿಸು ; ದೂಷಿಸು : ಪಂಚೇಂದ್ರಿಯಮನತಿನಿಗ್ರಹಂ ಮಾಡಿದಾ ಮುನಿಗಳೀ ಕಾಲಕ್ಕಪೂರ್ವ ಮಂತವರ ದುರ್ಜನಿಸಿದೊಡೆ ಜನ್ಮಜನ್ಮಾಂತರಕೆ ದೋಷ ಸಂಜನಿಸದೇ ಬಿಡದು (ಸಮ್ಯಕ್ತ್ವಕೌ. ೧೧-೫೨). [ ದುರ್ಜನ + – ಇಸು₃ ]

**ದುರ್ಜಯ** (ಗು). ೧. ಗೆಲ್ಲಲಾಗದ ; ಅಜೇಯ ; ಅಜಿಂಕ್ಯ. (ನಾ). ೨. ಅಜೇಯವಾದುದು: ಅರ್ಜುನ ಶರವಿದ್ಯೆ ವಿವರಿಸೆ ದುರ್ಜಯವಲಾ ಗರುವತನದಲಿ ಗರ್ಜಿಸಿದೊಡೇನಹುದು (ಕುವ್ಯಾವಿ. ೬-೪೨). ೩. ಅಜೇಯನಾದವನು : ಬಂದನೀತಂ ಪೆಱನಲ್ಲಂ ದುರ್ಜಯಂ ಕೌರವಕುಳನಳಿನೀಕುಂಜರಂ ಭೀಮಸೇನಂ (ಪಂಪಭಾ. ೧೩-೭೭) ; ಧುರದೊಳ್ ದುರ್ಜಯನಾರ್ಗಮೆನ್ನನುಜಂ (ಪಂರಾಮಾ. ೯-೯೮) ; ದುರ್ಜಯನಿವಂ ನಿನಗೆ ಸಾಧ್ಯನಲ್ಲೆಂದು ಹರಿ ಗರ್ಜಿಸಿದನಾ ಪಾರ್ಥನಂ (ಜೈಮಿಭಾ. ೧೩-೩೦); ಕಾಲನೇಮಿಗೆ ಮಕ್ಕಳಾಗಿಯೂ ದುರ್ಜಯರಾಗಿಯೂ ಇರುವ ರಾಕ್ಷಸರುಂಟಷ್ಟೆ (ಶಾಕುಂತ. ೯೭-೧೩). ೪. ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬ. [ ಸಂ. ]

**ದುರ್ಜಾತ** (ಗು). ೧. ಕೆಟ್ಟ ಮುಹೂರ್ತದಲ್ಲಿ ಹುಟ್ಟಿದ. ೨. ದುಃಖಭರಿತ; ಗೋಳಿನ; ಸಂಕಟಕ್ಕೀಡಾದ. ೩. ಕೆಟ್ಟ; ದುಷ್ಟತನದ. (ನಾ). ೪. ನೀಚ ; ಅಸಭ್ಯ : ಓತು ತನ್ನಯ ಪೊರೆಯೊಳಿಹ ಕಾಮಾತುರಾಂಧನ ನಧಿಕಪಾಪಸಮೇತನಂ ದುರ್ಜಾತನಂ ತತ್ಶ್ವೇತನಂ ನೋಡಿ ಆ ತರುಣಿ . . . ಚಿಂತಾಜಾತಚೇತಸೆಯಾಗೆ (ಬಸವು. ೫೧-೪). [ ಸಂ. ]

**ದುರ್ಜೇಯ** (ಗು). ೧. ಜಯಿಸಲು ಕಷ್ಟವಾದ ; ಗೆಲ್ಲಲಾಗದ. (ನಾ). ೨. ಜಯಿಸಲು ಕಷ್ಟವಾದುದು: ಅತ್ಯಂತ ದುರ್ಜೇಯವಾದ ವಜ್ರಾವರ್ತ, ಸಾಗರಾವರ್ತ ಎಂಬ ಎರಡು ಬಿಲ್ಲುಗಳಲ್ಲೊಂದನ್ನು ರಾಮನು ಎತ್ತಿ ಮುರಿಯಬಲ್ಲನಾದರೆ, ರಾಮನಿಗೆ ಸೀತೆಯನ್ನು ಕೊಡಬಹುದು (ಸಾಹಿಸ. ೮೪). [ ಸಂ. ]

**ದುರ್ಜ್ಞೇಯ** (ಗು). ೧. ತಿಳಿಯಲು ಅಶಕ್ಯವಾದ; ಗ್ರಹಿಸಲು ಕಷ್ಟವಾದ: ಆ ಪ್ರಯತ್ನಮಿಂತಾದುದರ್ಯ್ ದುರ್ವಾರ ದುರ್ಜ್ಞೇಯ ದುರ್ವಿಧಿಯ ಲೀಲೆಯಿಂ (ಶ್ರೀರಾಮಾ. ೧೦೯-೨೪೭). (ನಾ). ೨. ತಿಳಿಯಲಶಕ್ಯವಾದುದು ; ಗ್ರಹಿಸಲು ಕಷ್ಟವಾದುದು : ಪರಮೇಶನ ಗಟಿಗೆ ಗಟಿಗೆಯ ಪೊಸತೆನಿಪ್ಪ ಲೀಲೆ ಎಮ್ಮನ್ನರ್ಗೆ ದುರ್ಜ್ಞೇಯಂ ಅಂತಿರೆಯುಂ ಬಲ್ಲಂತೊರೆವೆಂ ಕೇಳ್ (ರಾಮಾಶ್ವ. ೧೧೯-೨೩). ೩. ತಿಳಿಯಲು ಅಶಕ್ಯವಾದ ವ್ಯಕ್ತಿ : ಕಾದಂಬಿನಿಯು ದಿನದಿನಕ್ಕೆ ದುರ್ಜ್ಞೇಯಳಾಗುತ್ತ ಹೊರಟಂತೆ, ಯೋಗಮಾಯೆ ಅವಳ ಮೇಲೆ ಅಷ್ಟಷ್ಟು ಕುಪಿತಳಾಗ ಹತ್ತಿದಳು (ಇಪ್ಪಕ. ೨೩). [ ಸಂ. ]

**ದುರ್ನಯ** (ನಾ). ೧. ದುರ್ನೀತಿ ; ಕೆಟ್ಟ ನೀತಿ : ನಯಮಂ ನಂಬುವೊಡೆನ್ನ ಪೇಟ್ವ ಸತಿಯಂ ಕೈಕೊಂಡನಂತಲ್ಲ ದುರ್ನಯಮಂ ನಚ್ಚುವೊಡೆನ್ನನುಗ್ರರಣದೊಳ್ ಮೇಣ್ ಮಿಱಿ ಪಾರ್ಕೊಂಡಂ (ಪಂಪಭಾ. ೧-೭೭). ೨. ಕೇಡು ; ಕೆಡುಕು: ನಿನ್ನ ದುರಾಗ್ರಹದಿಂದೇನಾನುಮೊಂದು ದುರ್ನಯಮಾಗದಿರದು (ಪಂಚತಂ. ೩೩-೫). ೩. [ಜೈನ] ದೋಷಯುಕ್ತವಾದ ವಾದ ; ವಸ್ತುವಿನ ಏಕದೇಶವನ್ನು ಮಾತ್ರ ಗ್ರಹಿಸುವಿಕೆ : ಪ್ರಮಾಣ ನಯಗಳ ಮೂಲಕ ವ್ಯವಹಾರವನ್ನೂ ವಾದವನ್ನೂ ಮಾಡಬೇಕೆಂದು ಉಪದೇಶ. ಘಟೋಸ್ತ್ಯೇವ ಎಂದು ಹೇಳಬಾರದು, ದುರ್ನಯವಾಗುತ್ತದೆ (ಹಿಂದಸಾ. ೭೭). 'ದುರ್ನಯಂ' ಪರಾ. [ ಸಂ. ]

**ದುರ್ದಮ** (ಗು). ನಿಯಂತ್ರಿಸಲು ಅಶಕ್ಯವಾದ; ಹತೋಟಿಗೆ ತರಲು ಕಷ್ಟವಾದ : ನಿಜ್ಜೈಕಂ ದೋರ್ಬಳಂ ಶತ್ರುದುರ್ದಮಚಾತುರ್ಬಳ ನಾಶವುಂ ಪಡೆಯೆ ಚಾರಿತ್ರಂ ನಯಂ ಶೌರ್ಯಮಾದವೆ ತನ್ನೊಳ್ ದಳವೇಱಿದತ್ತೆನಿಸಿದಂ ಶಕ್ತಿತ್ರಯಾಧೀಶ್ವರಂ (ಚಂದ್ರಪು. ೨-೯) : ದುರ್ದಮ ನಿಯಂತ್ರ ವಿಧಿ ತಾಂ ತಂದೊಡ್ಡಿದೀ ಮಹತ್ಕ್ಲೇಶಮಂ ಬುದ್ಧಿಯಿಂ ಪರಿಹರಿಸೆ ಯತ್ನಗೈ (ಶ್ರೀರಾಮಾ. ೧೧೭-೧೫೪). [ ಸಂ. ]

**ದುರ್ದಮತೆ** (ನಾ). ನಿಗ್ರಹಿಸಲಾಗದಿರುವಿಕೆ : ಜಯಿಸಲಾಗದಿರುವಿಕೆ : ಬಯ್ಯುಟ್ಟ ವಿಶೋಧಿ ದುರ್ದಮತೆಯಿಂ ಮೋಹಾಧಿರಾಜಂಗನಾದರನಾದಂ ದೊರೆಯಲ್ಲರೆಂದು ಮುಳಿದರ್ಕೋಪಕ್ಕಘಧ್ವಂಸಿಯಾ (ಶಾಂತಿಪು. ೮-೧೧೭) : ಪಿಂತೆ ನಾಮೆನಿತೊ ಸೂಳ್ ಕಂಡಿರ್ಪೆವಾತನ ಚಂಡವಿಕ್ರಮದ ದುರ್ದಮತೆಯಂ (ಶ್ರೀರಾಮಾ. ೨೯೬-೩೨೦). [ ಸಂ. ದುರ್ದಮತಾ ]

**ದುರ್ದಮನೀಯ** (ಗು). ನಿಗ್ರಹಿಸಲು ಅಶಕ್ಯವಾದ; ಅಧೀನಗೊಳಿಸಲು ಅಸಾಧ್ಯವಾದ : ಅವನಿಗೆ ಅವಳಲ್ಲಿ ದುರ್ದಮನೀಯವಾದ ಪ್ರಣಯ ಉಂಟಾಯಿತು (ಬಂಕಿಮ. ೧೫೩). [ ಸಂ. ]

**ದುರ್ದಮ್ಯ** (ಗು). ೧. = ದುರ್ದಮನೀಯ : ಗಣಪತಿರಾಯರಿಗೂ ಕೃಷ್ಣ ರಾಯರಿಗೂ ಇದೊಂದು ದೈವದ ದುರ್ದಮ್ಯ ದುರ್ಘಟನೆಯೆಂದು ಬಲವಾಗಿ ಎನಿಸಿದ್ದಿತು (ಸಮಜೀ. ೧೧೪೧); ಪರಿವಾರದಾ ಸಂಸಾರಭಾರಬಂಧನವಿಹುದೆ ದುರ್ದಮ್ಯ, ನಿಸ್ಸೀಮ . . . ಕವಿ ವೈನತೇಯನ ಮಹಾಪಕ್ಷ ವಿಸ್ಫಾಲನೆಗೆ ? (ಶ್ರೀರಾಮಾ. ೧೨೭-೨೪). (ನಾ). ೨. ಅಧೀನಗೊಳಿಸಲು ಅಸಾಧ್ಯವಾದುದು : ಶಿಷ್ಟಾಚಾರವನ್ನು ಪಾಲಿಸುವ ಹಂಬಲವು ಅವನಲ್ಲಿ ದುರ್ದಮ್ಯವಾಗಿತ್ತು (ಸಮಜೀ. ೮೯೭). [ ಸಂ. ]

**ದುರ್ದರ್ಶ** (ಗು). ೧. ನೋಡಲು ಅಸಹ್ಯವಾದ; ಜಂಗುಪ್ಸೆಯನ್ನುಂಟು ಮಾಡುವ : ವೃಷಭನ ಅನಿಮಿತ್ತರೋಷಾವೇಶ ವಿಷಮತೆಗಮಾ ಜರಾ ದುರ್ಬಲ ಬಲೀವರ್ದ ದುರ್ದರ್ಶಮರಣಾಯಾಸ ಪರಿಣತಿಗಂ ವಿಸ್ಮಯಂ ಬಟ್ಟು (ಚಂದ್ರಪು. ೨-೨೯ ವ) ; ಅಯ್ಯೋ ಈ ದುರ್ದರ್ಶ ಸಂಕಟಾಕೃತಿ ಯೇಕೆ ? (ಶ್ರೀರಾಮಾ. ೧೭೪-೩೪೦). (ನಾ). ೨. ಕಾಣಲು ಕಷ್ಟ ವಾದುದು; ಅಸಹ್ಯವಾದುದು: ಅಂತರಂಗವನೆಲ್ಲ ಬಿಚ್ಚಿ ತೋರಿಪನಾರು . . . ಗಂಟಿಗಳು ಗಂಟುಗಳು ಮುಡಿವುಮುಡಿವುಗಳಲ್ಲಿ ಸ್ವಂತಕೇ ದುರ್ದರ್ಶ (ಮಂಕುಕ. ೧೯೪). ೩. ನೋಡಲು ಆಗದುದು; ಕಣ್ಣು ಕೋರೈಸು ವಂತಹುದು : ನಿಷ್ಠುರಗರಳರಸಾರ್ದ್ರಸ್ಫುರಜಿಹ್ವದರ್ವೀಕರದುರ್ದರ್ಶಂ . . . ಮನಕ್ಕದ್ಭುತರಸದೊದವಂ ತಂದುದಂದೊಂದಗೇಂದ್ರಂ (ಚಂದ್ರಪು. ೫-೬೭). ೪. ಘೋರವಾದ ಆಕೃತಿಯುಳ್ಳ ವ್ಯಕ್ತಿ : ಇನ್ನುಮಿವರಲ್ಲದೆ ಮಹಾಬ್ರಹ್ಮರಾಕ್ಷಸರ್ಮುನ್ನಿನ ಯುಗಂಗಳವರಿರ್ದಪರ್ಪಿರಿಯರ್ಸಮುನ್ನತ ವಟದ್ರುಮನಿವಾಸಿಗಳನೇಕಪುರುಷಾದಕರ್ದುರ್ದರ್ಶರು (ಜೈಮಿಭಾ.೧೭-೨೯). [ ಸಂ. ]

**ದುರ್ದಶೆ** (ನಾ). ಕೆಟ್ಟ ಸ್ಥಿತಿ; ದುರವಸ್ಥೆ; ದುರ್ದೈವ : ಭರತಖಂಡದ ಸಾಮಾಜಿಕ ಸ್ಥಿತಿ ಬಹಳ ದುರ್ದಶೆ ಹೊಂದಿತು (ಹುಕ್ಕಾರ. ೧೧೪ ಪೀಠಿಕೆ) ; ಬೀರನಿಗೆ ಮಾತ್ರ ದುರ್ದಶೆ ಹಿಡಿದಿತ್ತು (ಮುಂಗಾಮ. ೬೧) ; ಸ್ವಾತಂತ್ರ್ಯ ದೊರೆಯುವುದಕ್ಕೆ ಮುಂಚೆ ನಮ್ಮ ದೇಶದ ದುರ್ದಶೆಯನ್ನು ಕುರಿತು ವಿಪುಲವಾಗಿ ಹುಟ್ಟಿದ ಕವನಗಳನ್ನು ತೆಗೆದುಕೊಳ್ಳಿ (ಕಾವ್ಯಕು. ೧೦). [ ಸಂ. ದುರ್ದಶಾ ]

**ದುರ್ದಾಂತ** (ಗು). ೧. ಅಡಗಿಸಲಾಗದ; ಪಳಗಿಸಲಾಗದ; ಹಠಮಾರಿ ಯಾದ : ಈ ದೊಡ್ಡ ದುರ್ದಾಂತ ಪ್ರಾಣಿಪಿಂಡ ಸೊಂಡಲೆತ್ತಿಕೊಂಡು ಘೀಳಿಡುತ್ತ ಬರುವುದನ್ನು ನೋಡಿಯೂ (ನಿಬಂಧ. II, ೨೦೯). (ನಾ). ೨. ಅಡಗಿಸಲಾಗದುದು : ಈ ಅನ್ಯಾಯದ ಸೇಡು ತೀರಿಸಿಕೊಳ್ಳಬೇಕೆಂಬ ದುರ್ದಾಂತವಾದ ರೊಚ್ಚು ಅಸಹಾಯವಾಗಿ . . . ನನ್ನ ಎದೆಯ ಒಳಗಿನ ಯಾವುದೋ ಒಂದು ಪಾರ್ಶ್ವದಲ್ಲಿ ಭುಸುಗುಟ್ಟುತ್ತ ಕುಳಿತ್ತಿತ್ತೆಂದು ಕಾಣುತ್ತದೆ (ಗಾಳಿಪ. ೭೪). ೩. ಸೊಕ್ಕಿನವನು; ದುರಹಂಕಾರದ ವ್ಯಕ್ತಿ: ಈ ದುರ್ದಾಂತನಾದ ವೈದ್ಯನು ನನಗಿಂತಲೂ ಉಚ್ಚ ತರಗತಿಯ ಪಿಶಾಚ ನಾಗಿರಬೇಕು (ಚಿನ್ನಬೀ. ೨೫) ; ಅವರು ತೋರಿಸಿದ ಕಳಂಕರಹಿತವಾದ ವೀರತ್ವವನ್ನು ದುರ್ದಾಂತರಾದ ಪಠಾನರಾಗಲಿ ಜೀಯಷುಗಳಾದ ಮೊಗಲ ರಾಗಲಿ ತೋರಿಸಲಾರದೆ ಹೋದರು (ಆರ್ಯಕೀ. ೨೪) ; ಹರಲಾಲನು ತುಂಬ ದುರ್ದಾಂತ; ತಂದೆಗೆ ಅವಿಧೇಯ (ಬಂಕಿಮ. ೬೫). [ ಸಂ. ]

**ದುರ್ದಾನ** (ನಾ). ೧. ಸ್ವೀಕರಿಸಲು ಯೋಗ್ಯವಲ್ಲದ ದಾನ; ಮರಣ ಮುಂತಾದ ಅಶುಭಸಮಯಗಳಲ್ಲಿ ತೆಗೆದುಕೊಳ್ಳುವ ತಿಲ, ಎಣ್ಣೆ, ಹತ್ತಿ, ಕುಂಬಳ, ಕಬ್ಬಿಣ, ಎಮ್ಮೆ ಇತ್ಯಾದಿ ದಾನ. "ತಿಲ, ತೈಲಘಟ, ಕಾರ್ಪಾಸ, ಲೋಹದಂಡ, ಕೂಷ್ಮಾಂಡ" (ಶ್ರೀವತ್ಸ. ೨೦೩); ಹೀನತ್ವ ದಿಂದ ತುಚ್ಛರ ಕೈಲಿ ಹಿಡಿದ ದುರ್ದಾನದ ಪಾಪಂಗಳು ಭಾನುಬಿಂಬವ ಕಂಡ ಹಿಮದಂತೆ ತೊಲಗುವ ಆನಂದವ್ರತಕೆ ಸರಿಯೆನ್ನಬಹುದೆ (ಪುರಂದ. ೫-೧೪೭-೧); ಒಂದು ಕ್ಷಣ ತೀಕ್ಷ್ಣವಾಗಿ ನೋಡಿ ದುರ್ದಾನ ತೆಗೆದುಕೊಂಡವ ರಂತೆ ಆಚೆಗೆ ಹೊರಟುಹೋದರು (ಕೀಲುಗೊಂ. ೨೦೮) ; ದುರ್ದಾನ ಹಿಡಿದ ಬ್ರಾಹ್ಮಣನಂತೆ ನಿಂತಲ್ಲಿಂದ ಕಂಬಿಕೀಳುತ್ತಾನೆ (ನಾಡಿಗೇ. ೬೫) : ಶ್ಯಾಮಲೆಯು ದುರ್ದಾನ ಹಿಡಿದವಳಂತೆ ಬಂದು ನನಗೆ ನಮಸ್ಕಾರ ಮಾಡಿ (ಚಿತ್ರಕೂ. ೧೧೭). ೨. ಇಷ್ಟವಿಲ್ಲದೆ ಕೊಟ್ಟ ಕೊಡುಗೆ : ನೀನೊಪ್ಪಿ ಕೇಳಿಂದೊಡಾಂ ಕೇಳ್ದೆನಯ್, ನಿನ್ನ ಗೋಳಿಡುವುದಂ ಕಂಡು ಕೊಳ್ಳೆಂದೆನಾ ದುರ್ದಾನಮಂ (ಶ್ರೀರಾಮಾ. ೬೩-೫೨೦). [ ಸಂ. ]

**ದುರ್ದಾಹ** (ನಾ). ಅನಗತ್ಯವಾದುದನ್ನು ಪಡೆಯಬೇಕೆಂಬಾಸೆ ; ಅತಿಯಾಸೆ : ಕೆಲವರು ಕೊನೆ ಮೊದಲೇ ಇಲ್ಲದ ದುರ್ದಾಹಕ್ಕೋಸ್ಕರಗಾಗಿ ಅತಿಯಾಗಿ ಸಂಗ್ರಹವನ್ನು ಮಾಡುತ್ತಾ ಹೋದರೆ . . . ಹೀನರು ದುರದೃಷ್ಟದವರೂ ಆದ ಜೀವಿಗಳ ಜೀವಿಕೆಯನ್ನು ಅಪಹರಿಸಿಕೊಂಡಂತಾಗು ವುದು (ಆರ್ಯಧ. ೮೫). [ ಸಂ. ]

**ದುರ್ದಿನ** (ನಾ). ೧. ಕೆಟ್ಟ ದಿನ; ಕಷ್ಟದ ದಿವಸ : ಬಾಳಿದವು ಬಹು ಕಾಲ ಇಲ್ಲಿ, ಹೊಳೆವ ಸಿರಿದಿನಗಳಲಿ, ದುರ್ದಿನಗಳಲ್ಲಿ (ಇಂಗೀತ. ೯೭-೬) ; ದೇಶಕ್ಕೇ ಎಂತಹ ದುರ್ದಿನವಿದು (ಶಾಂತಲಾ. ೩೦೨). ೨. ಮೋಡ ಮುಚ್ಚಿಕೊಂಡಿರುವುದರಿಂದ ಸೂರ್ಯನು ಕಾಣದ ದಿವಸ; ಮೋಡದಿಂದ ಮುಚ್ಚಿದ ದಿನ; ಮಳೆಗಾಲದ ದಿನ: "ಓರಂತೆ ಮುಚ್ಚಿ ಮುಸುಕಿದ ಧಾರಾಧರಮಾದ ದುರ್ದಿನಂ ಘನತಿಮಿರಂ" (ವಸ್ತುಕೋ. ೧೧-೬೧) ; ಮತ್ತಕೋಕಿಲಲೋಲ್ಲಾಸಿತಶೀಕರೋದ್ದಾಮದುರ್ದಿನ ವನ ಮಾನೆಯ್ದೆವಂದು (ಪಂಪಭಾ. ೫-೧೦ ವ) ; ಕೋಗಿಲೆಗಳೆಡೆವಿಡದುಗುರ ಮೊನೆಯೊಳ್ಳುಱಿಯೆ ಸುರಿವ ಸಹಕಾರಫಲರಸದ ಸೋನೆಗಳಿಂ ದುರ್ದಿನಂ ಮಾಸಗಿದಂತೆಯುಂ (ಕಾದಂಪೂ. ೧೦೦೦) ; ದುರ್ದಿನಮಡಂಗೆ ಸುದಿನಂ ಪೊರ್ದಲ್ಕಬುಂಬರಾವನೀತಳಮೆಲ್ಲಂ ತಾಳ್ದುದೊ ವಿಮಲತೆಯಂ (ಉದ್ಭಟ ೧೦-೪) ; ದುರ್ದಿನಂ ದ್ರುವರೂಪಿಯಾಗಿ ಕರಕರೆಯ ಕರೆದುದನಿಶಂ ದೂರ ಮಾದುದು ದಿನಪದರ್ಶನಂ (ಶ್ರೀರಾಮಾ. ೩೪೨-೫೦). ೩. ಮೋಡ; ಮೇಘ : "ದುರ್ದಿನವಭ್ರತಿಮಿರಮೆನೆ ಮೋಡಮೆಂದೆನಿಸಿಕ್ಕು" (ಮಂಗರಾ. ೧೩-೪). ೪. ಮಳೆ; ವರ್ಷ : ಇಂದುಬಿಂಬವಿಗಳದಮೃತಬಿಂದು ದುರ್ದಿ ನಾರ್ದ್ರಚಂದನಾನ್ವಿತಮುಂ (ಪಂಪಭಾ. ೪-೧೮ ವ) ; ರೂಪಿನ ವಿಲಾಸದ ಚೆಲ್ವಿನ ವೈಶ್ಯರಾಜಗೇಹಾಂಗಣಮೊಪ್ಪುಗುಂ ಕರಿಮದೋತ್ಕಟಕರ್ದಮ ದುರ್ದಿನಾಂಗಣಂ (ಸುಕುಮಾ. ೧೦-೫೪). ೫. ಕಗ್ಗತ್ತಲೆ; ಅಂಧಕಾರ : ಅನವರತಗಳನ್ಮದದುರ್ದಿನಾನನಂ ವರ್ಷಜಳಸಮನ್ವಿತಮುಂಭೋದನಿನಾದಂ ಭದ್ರಮನಂ ಮನೋಜವಂ ಚತುರಶೀತಿಲಕ್ಷಪ್ರಮಿತಂ (ಆದಿಪು. ೧೧-೨೯). [ ಸಂ. ]

**ದುರ್ದೀಪ್ತ** (ನಾ). ಒಂದು ನರಕದ ಹೆಸರು : ಮಂತ್ರಿನರಕಂಗಳಿಂ ಕ್ರೂರವಾಗಿ ದುರ್ದೀಪ್ತವೆಂಬರಸುನರಕವಿಹುದು (ವಿವೇಕ. ೦೯೪). [ ಸಂ. ]

**ದುರ್ದುಂಡಿ** 'ದಂಡುದುಂಡಿ' ನೋ.

**ದುರ್ದೆಶೆ** 'ದುರ್ದೆಸೆ' ನೋ.

**ದುರ್ದೆಸೆ, ದುರ್ದೆಶೆ** (ನಾ). = ದುರ್ದಶೆ : ನಿನ್ನದು ಇಷ್ಟು ದುರ್ದೆಸೆ ಆಗಿರುವದು ಎಂಬ ಆಭಾಸವನ್ನು ಕೂಡ ಸ್ವಲ್ಪವೂ ಪ್ರಕಟಪಡಿಸಿರಲಿಲ್ಲ (ಇಪ್ಪಕ. ೨೭೦). **ದುರ್ದೆಶೆ :** ರಾಮನಿಂದ ಇಂಥ ದುರ್ದೆಶೆಯು ಪ್ರಾಪ್ತವಾಯಿತಲ್ಲವೆ (ಕಗವಿ. ೧೦೯ ಉರಾಜ): ಜೀವನದ ದುರ್ದೆಶೆಯು ಅಲ್ಲಿ ತಾಂಡವವಾಡುತ್ತಿತ್ತು (ಮುಕ್ಕು. ೦೩೦). [ < ಸಂ. ದುರ್ದಶಾ ]

**ದುರ್ದೇವತೆ** (ನಾ). ಕೆಟ್ಟದೈವ ; ಕ್ಷುದ್ರದೇವತೆ : ಅಮಳಕಮಲವನ್ನು ಕೆಂಗಣಿಗಲೆಯ ಹೂಗಳೊಡನೆ ಬೆರಸಿ ದುರ್ದೇವತೆಗಳಿಗೆ ಪೂಜೆ ಮಾಡಿದೆ ನೀನು! (ಬಿಟ್ಟಿಅ. ೦೩-೦೯). [ ಸಂ. ದುರ್ದೇವತಾ ]

**ದುರ್ದೈನ್ಯ** (ನಾ). ಕನಿಕರ ತೋರಿಸಲು ಅರ್ಹವಾದ ಹೀನ ಪರಿಸ್ಥಿತಿ ; ಅತಿದೀನವಾದ ಅವಸ್ಥೆ : ಜಯಂತನ ದುರ್ದೈನ್ಯದ ರೂಪವನ್ನು ನೋಡಿ ಕಪಿಲಾ ಮರಮರ ಮರುಗಿದಳು (ಜಯಂತ. ೨೫೫). [ ಸಂ. ]

**ದುರ್ದೈವ** (ನಾ). ದುರದೃಷ್ಟ ; ದೌರ್ಭಾಗ್ಯ ; ದುರ್ವಿಧಿ : ದುರ್ದೈವದಿಂದೊಮ್ಮೆ ದುಸ್ತರಕೂಪಕೆ ಸಿಂಹವು ಬಿದ್ದರು ಭರದೆ ಮದಗಜಕುಂಭವಿದಾರಣಕಾರ್ಯಕೆ ಮನವಿಡುವುದನು ಮಾಣುವುದೆ (ಇಂಚಾಪ. ೭೨-೪೮) ; ನಮ್ಮ ದುರ್ದೈವಕ್ಕೆ ನಮಗೆ ಯಾರೂ ಇಲ್ಲದೆ ಹೋದರಲ್ಲ (ಶಾಂತಲಾ. ೩೪೮): ಶಕುಂತಲೆಯ ದುರ್ದೈವದ ಪರಮಾವಧಿಯನ್ನು ಕಾಣಲು ನಾವು ಐದನೆಯ ಅಂಕಕ್ಕೆ ಹೋಗಬೇಕು (ಧರ್ಮಸಾ. ೭೦). [ ಸಂ. ]

**ದುರ್ದೈವಿ** (ನಾ). ಅದೃಷ್ಟಹೀನ ವ್ಯಕ್ತಿ ; ಭಾಗ್ಯಹೀನ ವ್ಯಕ್ತಿ : ಒಬ್ಬ ದುರ್ದೈವಿಯಾದ ತರುಣನು ಅಮರಪುರದ ರಾಜಧಾನಿಯ ಸಮೀಪಕ್ಕೆ ಪೂರ್ವದಿಕ್ಕಿನಿಂದ ಬಂದನು (ಮಂಜುಕ. ೩) ; ದುರ್ದೈವಿಯಾದ ನನ್ನನ್ನು ಹಾಗೆಯೇ ಮುಕ್ತಳಾಗಲು ಬಿಡದೆ ತಾವು ಬಂದು ಜೀವದಾನ ಮಾಡಿದಿರಿ (ಕಮಕು. ೦೧೦). [ ಸಂ. ದುರ್ದೈವಿನ್ ]

**ದುರ್ದೋಷ** (ನಾ). ತೀವ್ರವಾದ ಪಾಪ, – ಪಾತಕ : ದುರ್ದೋಷಕಾನನಾನಲರೂಪಸುಕ್ಷೀರ ವಾರ್ಧಿನಿಷಂಗ . . . ಮಹೇಶ ಸಲಹು (ನವಮೋ. ೮-೧). [ ಸಂ. ]

**ದುರ್ಧರ** (ಗು). ೧. ಹೊರಲು ಅಶಕ್ಯವಾದ ; ಅನುಭವಿಸಲು ಕಷ್ಟವಾದ ; ಭರಿಸಲಾಗದ. ೨. ನಿರ್ವಹಿಸಲು ಕಷ್ಟವಾದ ; ಸಾಧಿಸಲು ಅಶಕ್ಯವಾದ ; ಪೂರೈಸಲು ಅಸಾಧ್ಯವಾದ : ಸ್ಫುರದಾಶಾಜ್ವಳನಂ ದುರ್ಧರಸುತಪಸ್ತೀರ್ಥವಾರಿಪರಿಷೇಕದಿನೆಂತಿರೆ ಕಿಡುಗುಂ ಭೋಗಾಜ್ಯೋತ್ಕರಪಾತದಿನೆಂತುಮಂತದೇಂ ಮಬ್ಬುಗುಮೋ (ಚಂದ್ರಪು. ೨-೪೩) ; ಅರಸಿ ಕೀರ್ತಿಸುತಡಿಗಡಿಗೆ ತನ್ನರಸನೊಡನಿಂತೆಂದಳತಿದುರ್ಧರತಪಃಪರಿಪೂರ್ತಿಯಾಗಲು ಸಲಿಸಿ ಭಕ್ತಿಯಲಿ (ಬಸವು. ೪೪-೪೨). ೩. ಹತೋಟಿಗೆ ತರಲು ಆಗದ ; ಅಂಕೆಯಲ್ಲಿಡಲು ಅಸಾಧ್ಯವಾದ. ೪. ಜರುಗಲು ಕಠಿಣವಾದ ; ಕಾರ್ಯಸಾಧ್ಯವಲ್ಲದ ; ಸಂಭವಿಸಲು ಕಷ್ಟವಾದ. ೫. ಸ್ವೀಕರಿಸಲು ಯೋಗ್ಯವಲ್ಲದ : ಸಂವೇಗವ್ಯುತ್ಪನ್ನೆಯಂ ದುರ್ಧರಕುಮಂತ ನಗೋದ್ಭಿನ್ನೆಯಂ . . . ನಾಗಶ್ರೀ ಕನ್ನೆಯಂ (ಸುಕುಮಾ. ೭-೪೮). ೬. ಉಗ್ರವಾದ ; ದಾರುಣವಾದ : ನಿರುಪಮಾಸ್ತ್ರಪ್ರೌಢಿಯನು ದುರ್ಧರಶಿಲೀಮುಖಸರ್ಗಬಂಧಸ್ಫುರಣವನು ಹಿಂದೀಸುದಿನ ಕಾಣೆನು ರಣಾಗ್ರದಲಿ (ಕುಮಾಕ. ೨-೪೮). ೭. ಅಪಾಯಕಾರಿಯಾದ : ಚಂಡರುಚಿಯೆಂಬೊಂ ದೈತ್ಯನತ್ಯಂತದುರ್ಧರ ಜನ್ಮಾಂತರವೈರದಾರುಣವ [ಮ]ನಂ . . . ಕಂಡಂ ಶನಿ ಕಾಣ್ಬವೊಲ್ ಕುವರನಂ (ಚಂದ್ರಪು. ೫-೪). ೮. ಎದುರಿಸಲಾಗದ ; ಪ್ರತಿಭಟಿಸಲು ಕಷ್ಟವಾದ : ದುರ್ಧರವಿಕ್ರಮನುರುತರದೋರ್ದಂಡಸಹಾಯನಿರ್ಭಯನೆಂದುಮಜೇಯಂ . . . ಸಿಂಗಂ (ಪಂಚತಂ. ೮೭-೦೯) : ಅದಟನತಿಪ್ರಚಂಡಬಲನೆನ್ನದೆ ದುರ್ಧರದೋಸ್ಸಹಾಯದಿಂ ಕದನಧುರೀಣಂ . . . ಜವನಂತೆ ನಿಂದಂ (ಪಂರಾಮಾ. ೮-೨೩) ; ದುರ್ಧರಸಮರಜಯಪ್ರೌಢಿತಾರೂಢದೋಶ್ಶೌರ್ಯದೆ ಶೂರಾರಾತಿಸಂದೋಹಮನೆಬಿಗಿಸಿ ನಿತ್ಯೋದಯಮಾನಹೃತ್ಸಮ್ಮದನಿರ್ದಂ ಸೌಖ್ಯಸೀಮಂ (ಚಂದ್ರಪು. ೫-೧೩೯). (ನಾ). ೯. ಉಗ್ರವಾದುದು ; ದಾರುಣವಾದುದು : ಹರಿಯ ಕೈಯಲು ಹೋಗದಿಹ ದುರ್ಧರದ ಕುಷ್ಟವನಂತಪ ಹರಿಸಿ ಪೊರೆಯನೇ ದಂಡಿಯನುಮೇಶನು (ಬಸವು. ೫೪-೭೦). ೧೦. ಪೀಡೆ; ಹಿಂಸೆ : ಮಾರಿಯ ಮೂರಿಯಾಟದೆಡೆಯೆಂಬಾಗಳೆಂತು ಜೀವಿಪರಕಟ ಮನೆಯವರ ದುರ್ಧರದೊಳವನಿಪನ ಸತಿ ಪುತ್ರರು (ಹಡಿಕಾ. ೦೨-೨). ೧೧. ಪ್ರತಿಭಟಿಸಲು ಆಗದವನು ; ಪರಾಕ್ರಮಿ : ಬಿರುದಿನದಟನಂ ಗೇನೂಳಾಬಮ್ಮರ್ಸನಂ ದುರ್ದ್ಧರನಂ ಕೊನ್ದಂಗಧರ್ಮಮತಿಭುಜವಿಜಯ ಶ್ರೀಕನೋ ಲೋಕಭೂಪಂ (ಕಇಅ. ೯-೩-೨೯೪ ; 1062) ; ಇಸೆ ಪೊಯ್ಯೆ ತಳ್ತಿಬಿಯೆ ತಳ್ತೀಸಾಡಿದಂ . . . ಧನುರ್ಧರಧುರೀಣಂ ದುರ್ಧರಂ ಲಕ್ಷ್ಮಣಂ (ಪಂರಾಮಾ. ೧೪-೧೬೭) ; ಹದಿನಾಱುಸಾವಿರ ವರಮಹಾರಥರೊಗ್ಗಿನಲಿ ದುರ್ಧರ ಸುಶರ್ಮನು ಧಾಳಿಯಿಟ್ಟನು ತೆಂಕದೆಸೆಗಾಗಿ (ಕುಮಾವಿ. ೪-೩೫). [ ಸಂ. ]

**ದುರ್ಧರುಷ** (ಗು). ೧. ಎದುರಿಸಲಾಗದ ; ಪ್ರತಿಭಟಿಸಲಾಗದ : ಮುರಮಥನ ಕೆಲ್ಲೈಸಿ ನೋಡಿದನುರುಭಯಂಕರಚಕ್ರವನು ದುರ್ಧರುಷಧಾರಾಲೂಯಮಾನ ನಿಶಾತಚಕ್ರವನು (ಕುಮಾಭೀ. ೬-೩೦). ೨. ಭಯಾನಕವಾದ ; ಭಯಂಕರವಾದ : ಈ ಮಹಾ ದುರ್ಧರುಷ ದೈತ್ಯಸ್ತೋಮವಳಿದುದು ಕಂಸ ಕೇಳುದ್ದಾಮ ಬಾಲಕ್ರೀಡಯಿಂದವೆ ಕೊಂದರವರೆಂದ (ನಿಭಾಗ. ೧೦-೩೧-೧೨). [ < ಸಂ. ದುರ್ಧರ್ಷ ]

**ದುರ್ಧರ್ಷ** (ಗು). ೧. ಎದುರಿಸಲಾಗದ ; ಆಕ್ರಮಣ ಮಾಡಲು ಕಷ್ಟವಾದ ; ಪ್ರತಿಭಟಿಸಲಾಗದ. ೨. ಭಯಂಕರವಾದ ; ಘೋರವಾದ : ತಮ್ಮ ಅಮಿತ ಪರಾಕ್ರಮವನ್ನು ಕೇಳಿ ರಾಜಪುತಾನ ಮಹಾರಾಷ್ಟ್ರ ದೇಶಗಳಲ್ಲಿರುವ ದುರ್ಧರ್ಷ ಹಿಂದೂರಾಕ್ಷಸರು ಭಯದಿಂದಲೂ ವಿಷಾದದಿಂದಲೂ ಮೃತಪ್ರಾಯರಾಗಿದ್ದಾರೆ (ಕೋಹಿನೂ. ೩೫). ೩. ಉದ್ಧತ ; ಸೊಕ್ಕಿನಿಂದ ಕೂಡಿದ. ೪. ಅಪಾಯಕಾರಿಯಾದ. ೫. ತಡೆಯಲಾಗದ ; ಸಹಿಸಲಸಾಧ್ಯವಾದ. (ನಾ). ೬. ಎದುರಿಸಲು ಅಸಾಧ್ಯನಾದವನು : ದುರ್ಧರ್ಷನೇ . . . ಆಶೀರ್ವಾದ ಮಾಡು ಎಂದು ಬೇಡಿದನು (ಭೀಷ್ಮಜ. ೧೬೯). [ ಸಂ. ]

**ದುರ್ನಡತೆ** (ನಾ). ಕೆಟ್ಟ ವ್ಯವಹಾರ, – ನಡವಳಿಕೆ ; ದುರ್ವರ್ತನೆ : ಇಂಥ ದುರ್ನಡತೆಯನ್ನು ಮನಸ್ಸಿನಲ್ಲಿ ಇರಿಸಲಾಗದು ಎಂದು ಆತನಿಗೂ ಹೇಳಿ (ಬತ್ತೀಪು. ೫೦) ; ಅನಂತ ದುರ್ನಡತೆಗಳಿಂದ ನಡೆಯುತ್ತ . . . ಕೆಲವು ಅದ್ವೈತಿಗಳು ಅನಾಚಾರಿಗಳಾಗಿ ವರ್ತಿಸುವರು (ಕೃಷಿಪ್ರ. ೨೬೭) ; ನಿಮ್ಮ ದುರ್ನಡತೆ ಅಸಹನೀಯವಾಗುತ್ತಿದೆ (ನಟಸಾ. ೭೩೫). [ ದುರ್ + ನಡತೆ ]

**ದುರ್ನಡೆ** (ನಾ). = ದುರ್ನಡತೆ : ಅವನಿಗೆ ಯಾತಕೀ ದುರ್ನಡೆಯು ಬೇಡೆನಲ್ (ಕದಂಪು. ೦೫-೩೫). [ ದುರ್ + ನಡೆ ]

**ದುರ್ನಯ** (ನಾ). ೧. ಕೆಟ್ಟ ನಡತೆ ; ದುರಾಚಾರ : ಋಷಿಜನಂಗಳಿಗೇನಪಾಯವೊ ನಮ್ಮ ಬನದಲಿ ದಾನವರ ದುರ್ಘಟದ ದುರ್ನಯವಲ್ಲಲಾ (ಕುಮಾಅ. ೨೨-೨೩) : ಭಯಭಕ್ತಿಸ್ಪೃಹೆವೆತ್ತು ನೋಳ್ಪ ನಯನಂ ರೋಷಾರುಣಾವೇಶ ದುರ್ನ[ಪಾಠಾಂ. ರ್ಣ]ಯಕಿಂಬಾಯ್ತು ಪದಾಬ್ಜಪೂಜನಕೆ ಪಕ್ಕಾಗಿರ್ದ ಕೆಯ್ ಕೆಯ್ದುಪಂ ರೆಯದಿಂ ತಾಳ್ದಿದಿರಾಂತುದು (ಶಬಶಂ. ೪-೧೩೩). ೨. ಅಶುಭಸೂಚನೆ ; ಅಪಶಕುನ ; ದುರ್ನಿಮಿತ್ತ :

ಪುಟ್ಟಿದುದಾ ಸತಿಗೆ ದಕ್ಷಿಣಾಕ್ಷಿಸ್ಪಂದಂ . . . ಆಗಳಾ ದುರ್ನಯಕೆ ಸೀತೆ ಭಯಸ್ಥೆಯಾಗಿ (ಶಂರಾಮಾ. ೧೫-೬೫ ಪ); ಅನೇಕ ವೈಹಾಯಸೋತ್ಪಾತಂಗಳಾಗೆ ಕಂಡು ಜಯಮುನಿಮುಗರಿಗೆ ಪಿರಿದುಂ ಭಯಮುಂ ಪೇಟ್ದಪುವಿವೆಂದು ನಡೆದಂ . . . ದುರ್ನಯಮೆ ಸುನಯಮೆನಿಸುಗುಮೆ ಮಲಂ (ಚಂದ್ರಪು. ೬-೧೭). **೩. ಅನೀತಿ :** ಅಲರ್ವೋದ ಲತೆಗಂಡ ವಿರಹಿವೋಲಾದುದು ದುರ್ನಯದ ಕಾಣ್ಕೆಗೆನ್ನಯ ಚಿತ್ತಂ (ಯಶೋಚ. ೪-೧೦). **೪.** ಕುಮಂತ; ದುಷ್ಟಮತ : ನೆಱಿವಂ ತಾಳ್ದಿದಪಾಸ್ತ ದುರ್ನಯ ತಮೋಬಂಧಂ ಶ್ರುತಸ್ಕಂಧವಾದಱಿಂದಂ ಗಣನಾಯಕರ್ಸಮುಚಿತ ಭವ್ಯಶ್ರೇಣಿಗವ್ಯಾಜದಿಂದಱಿಯಲ್ಕಾಲ್ಕನುಯೋಗವಾದುದು (ಆದಿಪು. ೧-೩೯). **೫.** ದುಷ್ಟ ಕೃತ್ಯ,—ಕಾರ್ಯ : ಪೊಯ್ದಂ . . . ಕೋಪದಿನೈದುಂ ದುರ್ನಯಕ್ಕೈದೆಡೆಯನುರುಗದಾದಂಡದಿಂ ಭೀಮಸೇನಂ (ಗದಾಯು. ೮-೧೯). 'ದುರ್ಣಯಂ' ಪಾಠ. [ ಸಂ. ]

**ದುರ್ನಯವರ್ತಿ** (ನಾ). ಕೆಟ್ಟ ನಡತೆಯುಳ್ಳವನು ; ದುರಾಚಾರಿ : ಅಯಶೋಮೂರ್ತಿಗಳಕಿ ದುರ್ನಯವರ್ತಿಗಳನೂನ ಸಪ್ತವ್ಯಸನಾಶ್ರಯರ್ (ಸುಕುಮಾ. ೨-೨೨). [ ಸಂ. ದುರ್ನಯವರ್ತಿನ್ ]

**ದುರ್ನಯೋಕ್ತಿ** (ನಾ). ಅನೀತಿಯ ಮಾತಂ : ಸ್ಮಯಮೆರ್ದೆವುಗೆ ಕಿವಿವುಗೆ ದುರ್ನಯೋಕ್ತಿ ಕೊಲೆಗೆಯ್ದೆ ತನ್ನ ಬಗೆಯಿಂ ತತ್ಕಾಂತೆಯೊಳಳುಪಿ ನೆರೆದೊಡೇಂ ಕಯ್ಪೆಯುಣ್ಬರಂ ರಸಮೆ ಬಾರಿಕುಂ ಕೆಮ್ಮನಿರಿಂ (ಶಾಂತಿಪು. ೬-೭೭). [ ದುರ್ನಯ + ಉಕ್ತಿ ]

**ದುರ್ನರ** (ನಾ). ಕೆಟ್ಟ ವ್ಯಕ್ತಿ : ಪರಮಗುರುಪದಮಂ ಪಿಡಿದು ದುರ್ನರರ ಕಾಲ್ಗಳಿಗೆಱಗುವಂಗತಿನರಕವಲ್ಲಾ ಪೂರ್ವಭವಸಂಸ್ಕಾರರಹಿತಂಗೆ (ಬಸವು. ೩-೪೭) : ಧರ್ಮವಂ ದುರ್ನರರು ತಪ್ಪುವರಲ್ಲದೇ ಶಂಕರನ ಭಕ್ತರು ತಪ್ಪುವರೆ (ಬಸವು. ೨೮-೩೪). [ ಸಂ. ]

**ದುರ್ನಾತ** (ನಾ). ಕೆಟ್ಟ ವಾಸನೆ ; ದುರ್ಗಂಧ : ಅದರ ದುರ್ನಾತ ಅಸಾಧ್ಯವಾಗಿ, ಪಾತ್ರೆ ಬೆಳಗುತ್ತಿರುವವರ ಮೇಲೆಯೂ ಸ್ನಾನಮಾಡುವವರ ಮೇಲೆಯೂ ಬರುತ್ತದೆ (ಚಿತ್ರಕ. ೧೧) : ನನಗೆ ಮಾತ್ರ ಆ ದುರ್ನಾತವನ್ನು ಸಹಿಸಲಾಗುತ್ತಿರಲಿಲ್ಲ (ಪಾತರ. ೭೨). [ ದುರ್ + ನಾತ್ಯ ]

**ದುರ್ನಾಮ** (ನಾ). ೧. ಕೆಟ್ಟ ಹೆಸರು ; ಅಪಕೀರ್ತಿ ; ಅಪಖ್ಯಾತಿ : ಪರಿಚಿತರಾದವರೇ ಆಡಿಕೊಳ್ಳುತ್ತಾರೆಂದು ಅಪರಿಚಿತರಾದವರು ಕೂಡ ನಂಬಿಕೊಂಡು ದುರ್ನಾಮವನ್ನು ಎಲ್ಲೆಲ್ಲಿಯೂ ಬಿತ್ತರಿಸುವರು (ಬಿನ್ನಬೇ. ೩೦). **೨. ದೊಡ್ಡ ಜಾತಿಯ ಜಿಗಣೆ :** "ದುರ್ನಾಮಾ, ದೀರ್ಘಕೋಶಿಕಾ—೨ ಆನೆಗಳ ರಕ್ತವನ್ನು ಹೀರಲುಳ್ಳ ದೊಡ್ಡ ಜಿಗಣೆ ಹೆಸರುಗಳು. ಅಂದರೆ ಹೆಜ್ಜಿಗಣೆ" (ಸಿದ್ಧಾಂತಿ. ೮೪). ೩. ಮೂಲವ್ಯಾಧಿ.
[ ಸಂ. ದುರ್ನಾಮನ್ ]

**ದುರ್ನಾಮಕ** (ಗು). ೧. ಕೆಟ್ಟ ಹೆಸರನ್ನು ಹೊಂದಿದ. (ನಾ). ೨. ಮೂಲವ್ಯಾಧಿ. [ ಸಂ. ]

**ದುರ್ನಾಲಗೆ, ದುರ್ನಾಲಿಗೆ** (ನಾ). ಕೆಟ್ಟ ಮಾತನಾಡುವ ನಾಲಿಗೆ : ದುರ್ನಾಲಗೆಯಿಂದ ಹೊರಡುವುದೆಲ್ಲಾ ಬರಿಯ ಕೆಟ್ಟ ಮಾತುಗಳೇ (ರೂಢಿ). **ದುರ್ನಾಲಿಗೆ :** ಅವರ ದುರ್ನಾಲಿಗೆಗೆ ಹೆದರಿ ಸುಮ್ಮನಾಗಬೇಕು (ರೂಢಿ).
[ ದುರ್ + ನಾಲಗೆ ]

**ದುರ್ನಾಲಿಗೆ** 'ದುರ್ನಾಲಗೆ' ನೋ.

**ದುರ್ನಿಮಿತ್ತ** (ನಾ). ೧. ಅನಿಷ್ಟದ ಸೂಚನೆ ; ಕೆಡುಕಿನ ಸೂಚನೆ ; ಅಪಶಕುನ : ಭಯಮುಂ ಚಿತ್ತಕೊದವಿಸಿ ಬಲಗಣ್ ಕೆತ್ತಲ್ ಮೊದಲಿಕ್ಕಿತು ದುರ್ನಿಮಿತ್ತಸೂಚಕಮಾಗಳ್ (ಕಾದಂಪೂ. ೮೮೮) ; ಮೇಲೆ ನೆಗಳುವ ದುರ್ನಿಮಿತ್ತವನಾಲಿಸಿದರು (ಕುವ್ಯಾಸ. ೧೩-೧) ; ನೋಡು ಲಕ್ಷ್ಮಣ ದುರ್ನಿಮಿತ್ತಂಗಳಂ ಪಥದೊಳು ಡಿಳ್ಳಮಾದಪುದೀಗಳೆನ್ನ ಮನಂ (ಜೈಮಿಭಾ. ೧೯-೩) ; ಇಂತೆಡೆವಿಡದೆ ತಲೆದೋಱುವ ದುರ್ನಿಮಿತ್ತಂಗಳ್ಗೆ ರಾಜಂ ಪಿರಿದುಂ ಕೊರಗಿ . . . ಬನದೊಳ್ ಚರಿಸುತಿರೆ (ರಾಮಾಶ್ವ. ೬೬-೧೧). **೨.** ಸಲ್ಲದ ನೆಪ ; ಸುಳ್ಳು ಸಬೂಬು. [ ಸಂ. ]

**ದುರ್ನಿರೀಕ್ಷಣ** (ನಾ). ನೋಡಲು ಕಷ್ಟವಾದುದಂ ; ಕಣ್ಣು ಕೋರೈಸುವುದಂ : ಅಂತರದೊಳತಿ ದುರ್ನಿರೀಕ್ಷಣದಿಂ ತಿರುಗುವ ಪುರತ್ರಯವನು . . . ಸುಟ್ಟನಲಾ (ಬಸವು. ೫೪-೫೪) : ದುರ್ನಿರೀಕ್ಷಣವಾದುದರಸ ಕೇಳದನೆನಗೆ ವರ್ಣಿಸುವೊಡರಿದು ಕೂರಂಬುಗಳ್ಗಂಬರದೊಳಿಂಬಿಲ್ಲಮೆಂಬೊಲಾಯ್ತು (ಜೈಮಿಭಾ. ೭-೬೦) : ಮಿಂಚಿನ ಪೊಗರ್ನಭೋಮಂಡಲವನಂಡಲೆಯಲಾಕ್ಷಣಂ ದುರ್ನಿರೀಕ್ಷಣವಾಗಲ್ (ಜೈಮಿಭಾ. ೧೨-೧೯). [ಸಂ.]

**ದುರ್ನಿರೀಕ್ಷ್ಯ** (ಗು). ೧. ನೋಡಲು ಕಷ್ಟವಾದ; ಕಣ್ಣು ಕೋರೈಸುವ: ಸಂಧ್ಯಾರಾಗಸನ್ನಿಕಾಶದುರ್ನಿರೀಕ್ಷ್ಯ ಕಟಾಕ್ಷವಿಕ್ಷೇಪಲಕ್ಷಿತನುಂ (ಗದಾಯು. ೬-೨೬ ಪ). (ನಾ). **೨.** ನೋಡಲು ಕಷ್ಟವಾದುದಂ; ಕಣ್ಣು ಕೋರೈಸುವಂತಹುದಂ : ಇದು ಪಗೆವರುಳ್ಳುದಂ ತೋಱಿದಪುದು ನಿನಗರಿನೃಪರ್ಕಳಿಲ್ಲದೊಡಿಂತಿರ್ಪುದೆ ದುರ್ನಿರೀಕ್ಷ್ಯಮಿನಱುಂಬದಂತೆ ಪಜ್ಜಳಿಸಿ ಬಾಗಿಲೊಳ್ ಪುರವರದಾ (ಆದಿಪು. ೧೪-೧೩). [ ಸಂ. ]

**ದುರ್ನಿವಾರ** (ನಾ). ದಮನ ಮಾಡಲು ಆಗದುದಂ ; ಹತ್ತಿಕ್ಕಲು ಕಷ್ಟವಾದುದು; ನಿವಾರಿಸಲಾಗದುದು: ಆಗಲಾ ದುರ್ನಿವಾರವಾದ ಈಟಿಯು ತನ್ನ ಮಗನ ಮೇಲೆ ಬಂದ ಮಾತ್ರವೇ (ಮುಂಬಯಿ. ೬-೧೦೦) : ಹೆರವರ ಕೈಯಲ್ಲಿಯ ವಸ್ತುವನ್ನು ಪಡೆದುಕೊಂಡು ಪರೀಕ್ಷಿಸುವ ಇಚ್ಛೆ ಇವರಿಗೆ ದುರ್ನಿವಾರವಾಗುತ್ತದೆ (ಗಾಳಿಪ. ೩೨); "ಮತ್ತ" ಎನ್ನುವಾಗ "ಮತ್ತರಂತೆ ಅಸಮಂಜಸಕಾರಿಗಳು, ದುರ್ನಿವಾರಗಳು" ಎಂದು ಮುಂತಾಗಿ ವ್ಯಂಗ್ಯಾರ್ಥ ಪರಂಪರೆ (ಧ್ವನ್ಯಾಲೋ. ೫೭). [ ಸಂ. ]

**ದುರ್ನಿವಾರ್ಯ** (ನಾ). = ದುರ್ನಿವಾರ : ಅತಿಮಾನುಷವಾದ ದುರ್ನಿವಾರ್ಯವಾದ ದುರ್ವಾಸಶಾಪವೆಂಬ ಬಾಹ್ಯಯಂತ್ರಸಾಧನದಿಂದ ಕವಿ ತನ್ನ ಕೆಲಸ ಮಾಡಿಸಿಕೊಳ್ಳಬೇಕಾಯಿತು (ಸಂನಾಟ. ೧೫೨). [ ಸಂ. ]

**ದುರ್ನಿಶೆ** (ನಾ). ೧. ಕೆಟ್ಟ ರಾತ್ರಿ; ಕಷ್ಟಕರವಾದ ರಾತ್ರಿ. **೨.** ಮಳೆ ಸುರಿಯುವ ರಾತ್ರಿ : ಮಳೆ ಮೊದಲಿನಂತೆ ಜೋರಾಗಿ ಸುರಿಯದಿದ್ದರೂ ನಿಂತು ನಿಂತು ಸುರಿಯುತ್ತಾ ರಾತ್ರಿಯನ್ನು ದುರ್ನಿಶೆಯನ್ನಾಗಿ ಮಾಡಿತ್ತು (ಮಲೆಮ. ೯೯೩). [ ಸಂ. ದುರ್ನಿಶಾ ]

**ದುರ್ನೀತ** (ಗು). ೧. ಕೆಟ್ಟ ನಡತೆಯುಳ್ಳ ; ದುರ್ವರ್ತನೆಯುಳ್ಳ. **೨.** ಅಶಿಕ್ಷಿತವಾದ. (ನಾ). **೩.** ದುರಾಚಾರ; ಕೆಟ್ಟನಡತೆ; ದುರ್ವರ್ತನೆ. **೪. ಕೆಟ್ಟ ನಡತೆಯುಳ್ಳವನಂ ; ಅನ್ಯಾಯದ ನಡವಳಿಕೆಯುಳ್ಳವನಂ:** ಜಾತರೂಪವ ತೊಟ್ಟು ಭೂತೇಶನಾಗಿ ದುರ್ನೀತನ ಗೆಲಬೇಕೆಂದು ಆತುರದಿಂದ ಕೌತುಕವಹ ಬಲವನು ಜಾತರೂಪನು ಕೂಡಿಸಿದನು (ತ್ರಿಪುಸಾಂ. ೧೦-೧೦೬) ; ಕಡುದುರುಳರಂ ಧೂರ್ತರಂ ಬಗ್ಗಡೆಯರಂ ದುರ್ನೀತರಂ ನಾಣ್ಗೆಡಿಕರಂ . . . ವ್ಯಾಕುಳರನತಿಕ್ರಮಿಪೆವೆತ್ತು ಕಾಯ್ (ಬಸವು. ೩೮-೬೦).
[ ಸಂ. ]

**ದುರ್ನೀತಿ** (ನಾ). ೧. ಕೆಟ್ಟ ನಡತೆ ; ದುರಾಚಾರ : ದುರ್ನೀತಿಯ ಹಕ್ಕಿ ಹಾಸ್ಯದ ಹೊಲಂ ಮರುಳಾಟದ ಮಂದಿರಂ . . . ನೋಡಲೆಸೆದತ್ತು ಸದಾಗಣಿಕಾಪ್ರತೋಳಿ ತಾಂ (ಹಮ್ಮೀರ. ೨-೯೨) ; ದುರ್ಬುದ್ಧಿ ದುರ್ನೀತಿಯುಳ್ಳವನಯ್ಯ ನಾನು (ಅಖಂಡೇ. ೯೬-೧೪) ; ಮಲೆತು ದುರ್ನೀತಿಯಲಿ ನಿನ್ನ ರಾಜರು ಕೆಟ್ಟು, ಹಿಡಿದು ಸಂಕಲೆಯಟ್ಟು ಜಗ್ಗಿಸಲು ಬರಲು (ಇಂಗೀತ. ೨೮-೧೫). **೨.** ಅನೀತಿ; ಅನ್ಯಾಯಂ: ಅವನಾಳ್ವ ಭುವನದೊಳಗೆ . . . ದುರ್ನೀತಿ ದುಸ್ಸಂಗ ದುಸ್ಥಿತಿ ದುರಾಚಾರವಿಲ್ಲ (ಹಡಕಾ. ೨-೧೧) : ದುರ್ನೀತಿಯಲಿ ವಧಿಸುವರೆ ನೀನೀ ಬ್ರಾಹ್ಮಣೋತ್ತಮನ (ಬಸವು. ೫೩-೪೩).
[ ಸಂ. ]

**ದುರ್ನೆವ** (ನಾ). ಸುಳ್ಳು ಸಬೂಬು; ಸಲ್ಲದ ನೆವ: (+).
[ ದುರ್ + ನೆವ ]

**ದುರ್ನೋಟ** (ನಾ). ಕೆಟ್ಟ ದೃಷ್ಟಿ,-ನೋಟ. [ ದುರ್ + ನೋಟ ]

**ದುರ್ಬಲ** (ಗು). ೧. ಬಲಹೀನವಾದ; ಚೈತನ್ಯವಿಲ್ಲದ; ತ್ರಾಣವಿಲ್ಲದ. (ನಾ). ೨. ಬಲಹೀನನಾದವನು; ಶಕ್ತಿಯಿಲ್ಲದವನು: ತನ್ನ ಮೆಯ್ಯೊಳ್ ಬಲನೆನಿಪ್ಪರಸು . . . ಮಹಾವೀರಸೈನ್ಯಂ ನಿಜಪ್ರಿಯಂ ಕೂಡಿ ಸಪ್ತಾಂಗಸಂಪನ್ನನೆನಿಸುವ ರಾಜನಕ್ಕುಮಿನಿತಿಲ್ಲದಿಹ ರಾಜ ದುರ್ಬಲನೆನಿಕ್ಕುಂ (ಮಂಗರಾ. ೮೦-೧೦). ೩. ಬಲಹೀನವಾದುದು: ಒಂದು ಪ್ರಾಣಿಯಿಂದ ಮತ್ತೊಂದು ಪ್ರಾಣಿಗೆ ಜೀವನ. ದುರ್ಬಲವು ಸಬಲಕ್ಕೆ ಆಹಾರ (ವಚಧಾ. ೩೨೯). [ ಸಂ. ]

**ದುರ್ಬಲಗೊಳ್** (ಕ್ರಿ). ಶಕ್ತಿಹೀನವಾಗು; ಸತ್ವವಿಲ್ಲದಂತಾಗು. 'ದುರ್ಬಲಗೊಳಿಸು' ಪರಾ. [ ದುರ್ಬಲ + ಕೊಳ್$_1$ ]

**ದುರ್ಬಲಗೊಳಿಸು** (ಕ್ರಿ). ಶಕ್ತಿಹೀನವಾಗುವಂತೆ ಮಾಡು; ಶಿಥಿಲಗೊಳಿಸು: ಆಮ್ಲಗಳು ಹತ್ತಿಯ ಬಟ್ಟೆಗಳನ್ನು ದುರ್ಬಲಗೊಳಿಸುವುದು (ಗೃಹವಿ. ೬೨). [ ದುರ್ಬಲಗೊಳ್ + -ಇಸು$_3$ ]

**ದುರ್ಬಲತೆ** (ನಾ). ಶಕ್ತಿಹೀನತೆ; ದೌರ್ಬಲ್ಯ: 'ಡಿ' ಜೀವಾತಿನ ಕೊರತೆಯಿರುವ ಮಕ್ಕಳು . . . ಯಾವಾಗಲೂ ಸಂಕಟ, ನರಗಳ ದುರ್ಬಲತೆ, ಅತಿನಿದ್ರೆಗಳಿಗೊಳಗಾಗುತ್ತಾರೆ (ಆಚುಸಾ. ೬೫). [ ಸಂ. ದುರ್ಬಲತಾ ]

**ದುರ್ಬಲಿ** (ನಾ). ಶಕ್ತಿಹೀನನಾದವನು; ದುರ್ಬಲನಾದವನು: ಸೋತ ದುರ್ಬಲಿಗೆ ಸಲ್ಲುವುದು ನಮ್ಮನುಕಂಪೆ ನೀತಿ ನಿಂದೆಯೊಳಿರದು (ಮುಂಕುಕ. ೨೮೦). [ ಸಂ. ದುರ್ಬಲಿನ್ ]

**ದುರ್ಬಹ** (ನಾ). ಹೊರಲು ಕಷ್ಟವಾದುದು; ಬಹಳ ಭಾರವಾದುದು: ವರ ಕೂರ್ಮಾಂಗಮಹೀಶ್ವರಂಗಮಖಿಳಾಶಾದಂತಿಗಂ ದುರ್ಬ್ಬಹಂ ಪಿರಿದು ಭೂಭಾರಮೆಂದು ತನ್ನ ಭುಜದೊಳ್ . . . ತಾಳ್ದಿದನ್ (ಎಕ. VI, ಕಡೂರು. ೧೨೯-೧೮; 1218). [ <ಸಂ. ದುರ್ವಹ ]

**ದುರ್ಬಾಯಿ** (ನಾ). ಕೆಟ್ಟ ಮಾತನಾಡುವ ಬಾಯಿ.
[ ದುರ್ + ಬಾಯಿ$_1$ (<ಬಾಯ್) ]

**ದುರ್ಬಿಣಿ** 'ದುರ್ಬೀನು' ನೋ.

**ದುರ್ಬಿನೀತ** (ನಾ). ಒಬ್ಬಾತನ ಹೆಸರು: ನೊಟಿಪಯ್ಯನ ಮಗಂ ಅಜ್ಕಯ್ಯನ ಬೆಸದಲ್ ದುರ್ಬ್ಬಿನೀತನ ಮುನ್ತೆ . . . ಕಾದಿ ಸತ್ತು ಸ್ವರ್ಗ್ಗದಲಿಬ್ದ (ಎಕ. XII, ಮದ್ಗಿರಿ, ೨೭-೧೪; ಸು. 950).
[ <ಸಂ. ದುರ್ವಿನೀತ ]

**ದುರ್ಬೀಜ** (ನಾ). ೧. ಕೆಟ್ಟ ಬೀಜ. ೨. ವ್ಯಭಿಚಾರಕ್ಕೆ ಹುಟ್ಟಿದವನು.
[ ಸಂ. ]

**ದುರ್ಬೀನಿ** 'ದುರ್ಬೀನು' ನೋ.

**ದುರ್ಬೀನು, ದುರ್ಬಿಣಿ, ದುರ್ಬೀನಿ** (ನಾ). ದೂರದ ವಸ್ತುಗಳು ಹತ್ತಿರದಲ್ಲಿದ್ದಂತೆ ಮತ್ತು ಹೆಚ್ಚು ಗಾತ್ರವಾಗಿ ಕಾಣುವಂತೆ ಮಾಡುವ ಒಂದು ಬಗೆಯ ಸಲಕರಣೆ; ದೂರದರ್ಶಕಯಂತ್ರ: ಗ್ಯಾಲಿಲಿಯೊನು . . . ದುರ್ಬೀನು ಎಂಬ ಯಂತ್ರವನ್ನು ರಚಿಸಿ, ಅದರಿಂದ ಆಕಾಶದೊಳಗಿನ ಗ್ರಹ ನಕ್ಷತ್ರಗಳನ್ನು ನೋಡಹತ್ತಿದನು (ಮುಂಬಯಿ. ೫-೨೨೪); ಹೈದರನು ದುರ್ಬೀನು ಹಾಕಿ ನೋಡಿ . . . ಮಲ್ಲಾಪುರದ ಬಳಿ ಡೇರೆ ಹಾಕಿಸಿಕೊಂಡು ನಿಂತನು (ಚಿತ್ರಪಾ. ೮೨); ಎಲ, ಎನಗಿಡುತಿಹೆ ದುರ್ಬೀನ ಎನ್ನ ನುಡಿಸೆ ನಿನಗಿಲ್ಲ ಸಮಾನ (ಗಣೇಶ. ೬-೧೪೩). **ದುರ್ಬಿಣಿ:** ಆ ದೋಣಿಯನ್ನು ಪರೀಕ್ಷಿಸುವುದಕ್ಕೋಸ್ಕರ ಅವನು ದುರ್ಬಿಣಿ ಹಚ್ಚಿ ನೋಡಲಾಗಿ (ಮುಂಬಯಿ. ೬-೧೫೨); ಬೆಟ್ಟ ಗುಡ್ಡಗಳು ಇದ್ದಲ್ಲಿ ಅಂತಹ ಪ್ರದೇಶವನ್ನು ಅಳೆಯುವಾಗ ... ಥಿಆಡೋಲೈಟ್ ಎಂಬ ದುರ್ಬಿಣಿ ಇವುಗಳನ್ನು ಉಪಯೋಗಿಸಬೇಕಾಗುವುದು (ಭೂಮಿಅ. ೧೩); ತುಳಸಿ ತನ್ನ ಹೃದಯದ-ಕಣ್ಣಿನ ದುರ್ಬಿಣಿ ಹಿಡಿದು . . . ನಿಂತಿದ್ದಾಳೆ (ದೀಪಹ. II, ೩೯೯). **ದುರ್ಬೀನಿ:** ನೀನು ಎಂದಾದರೂ ದುರ್ಬೀನಿಯನ್ನು ನೋಡಿದ್ದೀಯಾ (ಮುಂಬಯಿ. ೫-೧೪೫).
[ ←ಮರಾ. ದುರಬೀನ, ದುರಬೀಣ, ದುರ್ಬಿಣ, ದುರ್ಬೀಣ, ದುರ್ಬೀನ; ಹಿಂ. ದುರಬೀನ್, ದೂರಬೀನ್; ಪಾರ. ದೂರ್ಬೀನ್ ]

**ದುರ್ಬುತನ** (ನಾ). ಮೂರ್ಖತನ; ಮೌಢ್ಯ; ಅಜ್ಞಾನ (?): ಕೌರವಾಧೀಶ ಮುಂದರಿಯದೇ ದುರ್ಬುತನದಿಂದ ಕೆಟ್ಟು ಹೋದಂದವಾಯ್ತಲ್ಲಾ ಎನುತ್ತ ಬಿಸುಸುಯ್ದು ಬಳಿಕಿಂತು ಬಿನ್ನಪಗೆಯ್ದನು (ಸಮ್ಯಕೌ. ೮-೨೩).
[ ದುರ್ಬು? + -ತನ ]

**ದುರ್ಬುದ್ಧಿ** (ನಾ). ೧. ಕೆಟ್ಟ ಬುದ್ಧಿ; ದುಷ್ಟಮನಸ್ಸು: ಬಿಡು ದುರ್ಬುದ್ಧಿಯನು (ವಿಷ್ಣುಪು. ೧-೫-೪೩); ದುರ್ಬುದ್ಧಿಯಂ ನಿನಗದಾರ್ ಪೇಳ್ದರೀ ಕುಲಕೆ ಹಾಲಾಹಲವನೆರೆವ ಮತಿಯಂ (ಶ್ರೀರಾಮಾ. ೭೧-೧). ೨. ಮೂರ್ಖತನ; ಅವಿವೇಕ: ಮೋಹಧನಮಂ ಮುಂದಿಟ್ಟು ದಲ್ ತೃಷ್ಣೆ ಲಂಪಟಿ ಬೆನ್ನಿಂ ಬಿಡದೊಲ್ಲೆವೊಲ್ಲೆಮೆನೆಯುಂ ದೂದಟ್ಟಿ ದುರ್ಬುದ್ಧಿಯಂ (ಶಾಂತಿಪು. ೭-೬೭); ನೀವು ಬೆಸಸಿದ ಪರಿಯೊಳಿವ್ಮ ಮನಂಗಳೊಳಗಾವರಿಸಿದತಿ ದುರ್ಬುದ್ಧಿ ಫಲವಿಲ್ಲ (ಬಸವು. ೩೪-೧೦). ೩. ಕೆಟ್ಟ ಹಂಚಿಕೆ,-ಉಪಾಯ: ಹರಿಶ್ಚಂದ್ರರಾಯನುನ್ನತಿಯನಳಿಪಾರ್ವುಳ್ಳದೊಂದು ದುರ್ಬುದ್ಧಿಯಂ ನೆನೆದನು (ಹಚಕಾ. ೩-೧೦). ೪. ಕೆಟ್ಟ ಬುದ್ಧಿಯುಳ್ಳವನು: ಆಲಸ್ಯಂ ದುರ್ಬುದ್ಧಿ ಕುಶೀಲಂ . . . ಎನಿಪ್ಪವನೆ ನೀಲಲೇಶ್ಯೆಯ ಜೀವಂ (ಪಸಾರ. ೪೧೪).

**ದುರ್ಬುದ್ಧಿಯಾಗು** = ಅವಿವೇಕಿಯಾಗು: ಒಬ್ಬರಿಗೂ ಹುಟ್ಟದೆ ಅಯೋನಿಯಲ್ಲಿ ಬಂದು ದುರ್ಬುದ್ಧಿಯಾದವಳನೇನೆಂಬೆನಣ್ಣಾ (ವಚಸಂ. ೫೭೫-೧). [ ಸಂ. ]

**ದುರ್ಬುಧ** (ಗು). ೧. ಮೂರ್ಖತನದ; ದಡ್ಡತನದ. ೨. ಕೆಟ್ಟಬುದ್ಧಿಯಿಂದ ಕೂಡಿದ. (ನಾ). ೩. ಮೂರ್ಖ; ದಡ್ಡ: ದುರ್ಬುಧರಿಗೆಯಾಪ್ತದಾಲೋಚನೆಯ ಪೇಳ್ವನೆ ಮೂರ್ಖನು (ಸಪಮೋ. ೧೨-೨೯). ೪. ತಪ್ಪು ಹುಡುಕುವವನು; ದೋಷಾನ್ವೇಷಕ; ಛಿದ್ರಾನ್ವೇಷಿ; ಕುಕವಿ: ಪರಿಕಿಪೊಡವಿಚಾರಿ ಸಿತೇತರಗತಿಯಾದಂ ಪ್ರಭಂಜನಪ್ರಿಯನತಿನಿಷ್ಠುರ ಜಿಹ್ವನುಪರ್ಬುಧನಂತಿರೆ ದುರ್ಬುಧನಾರೊಳೊಂದಿ ಪಡೆಯಂ ನೋವಂ (ಚಂದ್ರಪು. ೧-೪೨). [ ಸಂ. ]

**ದುರ್ಬೆಸನಿ** (ನಾ). ಕೆಟ್ಟ ಬಯಕೆಯುಳ್ಳವನು; ಲಂಪಟ: ಒಸಗೆಗ ಮುತ್ಸಾಹಕ್ಕಂ ಸಸಿಯುದಯಂ ರಂಜಿಪಂತೆ ಕಳ್ಳಂಗಂ ದುರ್ಬೆಸನಿಗಮಾತೆಱದಿಂ ರಂಜಿಸಲಕ್ಕುಮೆ (ಧರ್ಮಾಮೃ. ೪-೨೯). [ ದುರ್ + ಬೆಸನಿ ]

**ದುರ್ಬೋಧ** (ನಾ). ೧. = ದುರ್ಬೋಧನೆ. ೨. ಕೆಟ್ಟ ಉಪದೇಶವನ್ನು ಮಾಡುವವನು: ದುರ್ಬೋಧರಂ ಕೂಡಿಕೊಂಡು ಸುತ್ತ ಸುಳಿದು (ಬಿಂದೋರ. ಹ. ೫೦೨-೨೪). [ ಸಂ. ]

**ದುರ್ಬೋಧಕ** (ನಾ). ೧. ಅನೀತಿಯನ್ನು ಬೋಧಿಸುವವನು; ಚುಚ್ಚಿಕೊಡುವವನು: ಇದಿರುಗಾಣದೆ ಕೊಲೆಗೆ ನಿರ್ಬಂಧದಲಿ ಬೆಸಸುವ ಕೃಷ್ಣನಕಟಾ ಮದಮುಖನೊ ದುರ್ಬೋಧಕನೊ ವಂಚಕನೊ (ಕುಮ್ಯಾಭೀ. ೩-೨೮). ೨. ದಡ್ಡ; ಅವಿವೇಕಿ: ಏನುವನರಿಯದ ಲೋಕು ದುರ್ಬೋಧಕಂ ಕವಿಯೆನಿಸೆ ಕುಂದೇ ಮಹಾಕವಿಗೆ (ಹಚಕಾ. ೧-೨೪). [ ಸಂ. ]

**ದುರ್ಬೋಧನೆ** (ನಾ). ವಂಚನೆ ಮಾಡಬೇಕೆಂದು ತಿಳಿಸುವಿಕೆ; ಕೆಟ್ಟ ಉಪದೇಶ; ದುಷ್ಟ ಸಲಹೆ: ಪರಿಪರಿಯ ಕುಹಕಮಂ ಪಣಿದು ದುರ್ಬೋಧನೆಯನೆರೆದಳೇಕಾಂತದೊಳ್ (ವೆಂಕಾರಾ. ೨-೫-೧).
[ ಸಂ. ದುರ್ಬೋಧನ ]

**ದುರ್ಬೋಧೆ** (ನಾ). = ದುರ್ಬೋಧನೆ: ದುರ್ಬೋಧೆಯುಂ ಬೇಱೆ ಪುಟ್ಟಿಸುಗುಂ (ಮಲ್ಲಿಪು. ೧-೨೬); ನಿಗಮವಿರಹಿತಶೂನ್ಯದುರ್ಬೋಧೆಗಳಿಗೊಲಿದು . . . . ಭಸಿತವಂ ಪೂಸಲೊಲ್ಲದ ಪಾಪಚಿತ್ತರಿರಾ (ಬಸಪು. ೫೦-೪೮); ದುರ್ಬೋಧೆಗಳ ನಾನಾಚಂದದಲಿ ಬೋಧಿಸಿ . . . ಸುಯೋಧನಂಗಾನಂದವೆನಿಸಿ ಕಳಿಂಗಲೋಕವ ಕೊಂದನೈ (ಕುವ್ಯಾಅ. ೮-೫೪); ದುರ್ಬೋಧೆಗೊಳಗಾಗಿ ನೀಂ ಕುಲಗೇಡಿಯಾಗದಿರ್ (ಶ್ರೀರಾಮಾ. ೬೧-೧೦). [ಸಂ. ದುರ್ಬೋಧ]

**ದುರ್ಬೋಧ್ಯ** (ನಾ). ತಿಳಿಯಲು ಅಸಾಧ್ಯನಾದವನು; ಅರಿಯಲು ದುಸ್ಸಾಧ್ಯನಾದವನು: ಮೊದಮೊದಲಿಗೆ ಶಶಿಭೂಷಣನಾದರೂ ಅದೇ ಬಗೆಯಾಗಿ ದುರ್ಬೋಧ್ಯನಾಗಿದ್ದನು (ಇಪ್ಪಳ. ೮೬). [ಸಂ.]

**ದುರ್ಭಂಗ** (ನಾ). ಅಧಿಕವಾದ ಕೇಡು: ಗರ್ಭಗಳ ಸೀಳ್ದವರ ಕೊಬ್ಬುಗಳ ಕೊರಕೊರದು ದುರ್ಭಂಗವನು ಮಾಳ್ಪೆ ಹಬ್ಬಗಳ ನಾನು (ಕರಿಕ. ೫೦-೧). [ಸಂ.]

**ದುರ್ಭಗ** (ಗು). ೧. ಅದೃಷ್ಟಹೀನವಾದ; ದುರದೃಷ್ಟದ. ೨. ಕುರೂಪಿಯಾದ; ಅವಲಕ್ಷಣದ. (ನಾ). ೩. ದುರದೃಷ್ಟ; ದುರ್ದೈವ: ದಾರಿದ್ರ್ಯದುರ್ಭಗಾಪಗತಿತಾಪತ್ರಯಾದ್ಯೋರುಭೀತಿಗಳಂ ಕೆಡಿಸಿ (ಪದ್ಮರಾ. ೧೧-೮೬). ೪. ಸಹಿಸಲು ಆಗದುದು; ತಾಳಲು ಕಷ್ಟವಾದುದು; ಅಹಿತವಾದುದು: ಹೇಮಂತಮಿಷ್ಟಋತು ತಾನೈಸೆ . . . ಸುಭಗನನ್ನಿ ದುರ್ಭಗವೈಸೆ ನೆಳಲ್ ನೀರ್‌ಗಳೆರಡುಂ (ಶ್ರೀರಾಮಾ. ೨೦೧-೧೯೮). ೫. ದುರದೃಷ್ಟಶಾಲಿ: ನಗುವರೆಱಿಯದ ದುರ್ಭಗರು ಯೋಗಿಗಳ ಕುಲದೇವತೆಯು ನಿಜಲೀಲೆಗಳ ವೀಕ್ಷಿಸೆ (ನಿಭಾಗ. ೩-೫-೧೦). ೬. [ಜೈನ] ಎಪ್ಪತ್ತೆರಡು ಬಗೆಯ ನಾಮಪ್ರಕೃತಿಗಳಲ್ಲಿ ಒಂದು; P "ಈ ಕರ್ಮೋದಯದಿಂದ ಒಬ್ಬನಲ್ಲಿ ರೂಪ ಲಾವಣ್ಯವಿದ್ದರೂ ಇತರರ ಮನಸ್ಸಿನಲ್ಲಿ ಆತನ ವಿಷಯವಾಗಿ ಅಪ್ರೀತಿ ಉಂಟಾಗುತ್ತದೆ" (ಆದಿಪು. ಕೋಶ): ಸುಭಗದುರ್ಭಗಪ್ರತ್ಯೇಕಶರೀರಾಯಶಸ್ಕೀರ್ತ್ಯನಾದೇಯನಿರ್ಮಾಣಪರ್ಯಾಪ್ತಿನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೯ ವ); ಅಸ್ಥಿರ ಶುಭ ಸುಭಗದುರ್ಭಗ ಸುಸ್ವರ . . . ತೀರ್ಥಕರನಾಮಮೆಂದಿಂತಲ್ಲಿ ಗತಿನಾಮಕರ್ಮಂ ಚತುರ್ವಿಧಮಕ್ಕುಂ (ಗೊಮ್ಮಸಾ. ೩-೭). 'ನಾಮಕರ್ಮಪ್ರಕೃತಿ' ಪರಾ. [ಸಂ.]

**ದುರ್ಭಗತ್ವ** (ನಾ). ದುರದೃಷ್ಟ; ದುರ್ದೈವ; ದಾರಿದ್ರ್ಯ: ಸಮವಾಯುಂ ಮನುಜತ್ವಮಾದೊಡಮಘವ್ಯಾಪಾರದಿಂ . . . ಅಲ್ಪಾಯುಷ್ಯಮುಂ ದುರ್ಭಗತ್ವಮುಮಾತಂಕಕಳಂಕಮುಂ ಸಮನಿಕುಂ ಸಂಸಾರಿಗವ್ಯಾಕುಲಂ (ಸುಕುಮಾ. ೫-೩೫). [ಸಂ.]

**ದುರ್ಭಗನಾಮಕರ್ಮ** (ನಾ). = ದುರ್ಭಗ ೬: ದುರ್ಭಗನಾಮಕರ್ಮ: ರೂಪಾದಿ ಗುಣಗಳು ಚೆನ್ನಾಗಿ ಇದ್ದರೂ ಕೂಡ ಅನ್ಯರಿಂದ ಪ್ರೀತಿಸಲ್ಪಡದಂತೆ ಆಗುವ ಅರ್ಥಾತ್ ದ್ರೋಹಕ್ಕೆ ಕಾರಣವಾಗುವ ದೇಹನಿರ್ಮಿತಿಯು ಈ ಕರ್ಮಪ್ರಕೃತಿಯಿಂದ ಉಂಟಾಗುವುದು (ಜೈನಪ. ೩೭೬).

[ದುರ್ಭಗ + ನಾಮಕರ್ಮ]

**ದುರ್ಭಗವನಿತೆ** (ನಾ). = ದುರ್ಭಗೆ ೧: ಅನುಭವಿಸುವ ಜನಮುಂ ನೆಟ್ಟನೆ ಪಡೆಯದೆ ಬಱಿದೆ ಕಿಡುವ ವಿವಿಧ ಫಲಂಗಳ್ ನೆನೆಯಿಸಿದುವಲ್ಲಿ ದುರ್ಭಗವನಿತೆಯ ರಮಣೀಯರೂಪಯೌವನದೊದವಂ (ಪುಷ್ಪಪು. ೫-೮೮).

[ದುರ್ಭಗ + ವನಿತೆ]

**ದುರ್ಭಗೆ** (ನಾ). ೧. ಪತಿಗೆ ಇಷ್ಟವಿಲ್ಲದವಳು; ಗಂಡನಿಗೆ ಬೇಡವಾದವಳು: ದುಶ್ಚರಿತೆ ದುರ್ಭಗೆ ದುರ್ಮತಿ ದುಷ್ಟೆ . . . ದುರಾತ್ಮೆಯಪ್ಪ ವಧು ಸಜ್ಜನಮೋ (ಮದತಿ. ೮-೭). ೨. ಅದೃಷ್ಟಹೀನಳಾದ ಹೆಂಗಸು; ಭಾಗ್ಯಹೀನೆ: ರೋಮಶಮಲ್ಪತರಂ ಭಗವಾದೊಡಾಕೆ ದುರ್ಭಗೆಯಕ್ಕುಂ (ಲೋಕೋಪ. ೧೧-೫೩). ೩. ಸಿಡುಕಿ; ಕೋಪಿಷ್ಠೆ; ಮುಂಗೋಪಿ. ೪. ಗಂಡನನ್ನು ಕಳೆದುಕೊಂಡವಳು; ವಿಧವೆ. [ಸಂ. ದುರ್ಭಗಾ]

**ದುರ್ಭಯ** (ನಾ). ಕಳ್ಳರಿಂದ ಅಥವಾ ದುಷ್ಟಮೃಗಗಳಿಂದ ಉಂಟಾಗುವ ಹೆದರಿಕೆ,-ಭೀತಿ: ಕೆಡಿಸಿದೆಯಲಾ ತಮ್ಮ ದುರ್ಭಯ [ಪಾಠಾಂ. ದುರ್ಧರ, ದುರ್ಭರ] ದಡವಿಯಲಿ ಭಯಭರಿತವನಿತೆಯು ಬಿಡುವರೇ ಯಕಟಕಟ (ತೊರರಾ. ೩-೧೧-೭). [ಸಂ.]

**ದುರ್ಭರ** (ಗು). ೧. ತಾಳಲಾಗದ; ತ್ರಾಸದಾಯಕವಾದ: ಚಟುಲ ದುರ್ಭರ [ಪಾಠಾಂ. ವ] ಭೂರಿಕರ್ಮೋತ್ಕಟಘಟವಹಿತ್ರವನಳವಡಿಸಿ ಪಟುಭವಾಂಬುಧಿಯೊಳು ತಿರುಗಿಸುವ ವೈಶ್ಯನುಂ ತಾನೆ (ಬಸಪು. ೨೧-೨೬); ಹರವೀರ್ಯವಹ್ನಿಮುಖದಿಂದ ಹರಿಮುಖ್ಯರುಂ ಧರಿಸಿ ದುರ್ಭರವುರುಷ ಗರ್ಭಬಾಧೆಯನು ಶಂಕರನಿರೂಪಂಬಡೆದು ಸರವಣದೊಳುದ್ಗಾರಿಸಲ್ ಕಂದನುದಯವಾಗೆ (ಗುರುಬಾ. ೪-೩೨); ದೇವದೇವರೆ ನೋಡೆ ಹಿಂಜರಿವಂಥ ಚೆಲುವಿನ ಓಜದೊಳ್ – ಬಲ್‌ತಪದ ದುರ್ಭರ ತೇಜದೊಳ್ (ಅಹಲ್ಯ. ೧೦೭-೧೦). ೨. ತುಂಬಲು ಕಷ್ಟವಾದ; ಭರ್ತಿಮಾಡಲು ಅಸಾಧ್ಯವಾದ. ೩. ಸಲಹಲು ಅಶಕ್ಯವಾದ; ಸಂರಕ್ಷಣೆ ಮಾಡಲು ಕಷ್ಟವಾದ. (ನಾ). ೪. ಹೊರಲಾಗದುದು; ಅತಿ ಭಾರವಾದುದು: ಇಂದು ದುರ್ಭರವೆನಿಸಿದರ್ಭಕನಿಂದೆ ಧರಿಸಲ್ಪಟ್ಟ ಗರ್ಭವು ಮಂದಕಕ್ಕಟ ಗರ್ಭವಾಯಿತು (ಬಸಪು. ೩-೧೬).

ದುರ್ಭರವಾಗು = ತ್ರಾಸದಾಯಕವಾಗು: ಬಾಗಿಲಿಗೆ ಬೀಗ ಜಡಿದು ನಾನು ಏಕಾಕಿಯಾದಾಗ ನನ್ನ ಮನೋಯಾತನೆ ದುರ್ಭರವಾಯಿತು (ಪುನರು. ೩೮೯). [ಸಂ.]

**ದುರ್ಭವ** (ನಾ). ಕೆಟ್ಟ ಜನ್ಮ; ನೀಚವಾದ ಹುಟ್ಟು: ದುರ್ಭವ ಕ್ಷಯಕರ ನಗಭಾರ್ವಿರ್ಭವಂ ನಿರ್ಭಿನ್ನಭಾವಂ ನಿರ್ಭರಾಶಾಪಾಶಮೋಚನ ಕರ್ಮಕರ್ಮಾರನು (ಬಸಪು. ೫೩-೩); ಶ್ರೀ ಗುರುವೆಯೆನ್ನ ದುರ್ಭವದ ಭೀತಿಯನೆಲ್ಲ ನೀಗಿ ನಿಜಸುಖದ ಸಾಮ್ರಾಜ್ಯಪದವಿಯನಿತ್ತೆ (ನವಮೋ. ೧-೫).

[ಸಂ.]

**ದುರ್ಭಾಗ್ಯ** (ನಾ). ದುರ್ದೈವ; ದುರದೃಷ್ಟ: ದುರ್ಭಾಗ್ಯವಶತಃ, ಅವಳು ಸರ್ವಾಂಗಸುಂದರಿಯಾಗಿರಲಿಲ್ಲವಾಗಿ ನಾವು ತಟಸ್ಥರಾದೆವು (ಕಪಾಳುಂ. ೪೩). [ಸಂ.]

**ದುರ್ಭಾವ** (ನಾ). ಕೆಟ್ಟ ಆಲೋಚನೆ; ದುಷ್ಟ ಯೋಚನೆ: ಅದನೆಂತು ಬಣ್ಣಿಪೆಂ ದುರ್ಭಾವ ವಿಸರಮುಂ (ಬಿಂದೋರ. ಹ. ೫೦೫-೧೦); ಭೂವರಂ ಭವಿಯೊಡನೆ ಸುಬ್ರತಶೈವನಂ ಸರಿಮಾಡುವುದು ದುರ್ಭಾವವೆನ್ನದೆ ಮದಿಸಿ ಕೊಲಲೆಂದವನ ಹೆಣನೊಡನೆ ಧರಣಿಪಾಲಕನಾಗ ಕಳುಹಿದಡೆ (ಬಸಪು. ೫೩-೪೫); ಮಾನಸದೊಳವಳು ಚಿಂತಿಸುತಿರಲ್ಕದ ಕಂಡು ದಾನವನ ದುರ್ಭಾವಕಂ ಮುನಿದು ಪೋಪಂತೆ ಭಾನು ಪಶ್ಚಿಮದಿಯಸ್ತಮಿಸಲು (ನವಮೋ. ೯-೨೦); ಕಸ ಕಡ್ಡಿ ಅಡ್ಡಿ ಬಂದೊಳಚರಂಡಿಯ ನೀರು ಮೇಲಕೆ ಉಕ್ಕುವವೋಲೆ ಹಳೆಯ ದುರ್ಭಾವಗಳೊತ್ತಡದೊಳು ನೂರು ಕೊಳೆ ಕಾಂತೆ ಬಂದಿವೆ ಮೇಲೆ (ಇಂಚಾಪ. ೦೮೩-೪). [ಸಂ.]

**ದುರ್ಭಾವಚಾರಿ** (ನಾ). ಕೆಟ್ಟ ಭಾವದಿಂದ ಕೂಡಿದವನು; ದುಷ್ಟತನದ ನಡವಳಿಕೆಯುಳ್ಳವನು: ವೈಕುಂಠನಂ ಕಂಡು ಬೊಮ್ಮನಂತಾಗಳಾಲೋಕಿಸುತ್ತುಗ್ರದಿಂ ನುಡಿದನತಿಶಯದಹಂಕಾರಿ ದುರ್ಭಾವಚಾರಿ (ವೀಶೈಪು. ೬-೧-೧೨). [ಸಂ. ದುರ್ಭಾವಚಾರಿನ್]

**ದುರ್ಭಾವತ್ರಯ** (ನಾ). [ವೀಶೈ] ಭಾವತ್ರಯಕ್ಕೆ ವಿರುದ್ಧವಾದ ಜ್ಞಾನವಿಕೃತಿ, ವರ್ತನವಿಕೃತಿ ಮತ್ತು ಮೋಹನವಿಕೃತಿಗಳೆಂಬ ಮೂರು ದುರ್ಭಾವಗಳು: ಭಾವತ್ರಯಂಗಳ ಬಣ್ಣಗೆಡಿಸಿ ದುರ್ಭಾವ

ತ್ರಯಂಗಳ ದೂರ ಮಾಡಿ ಮನತ್ರಯಂಗಳ ಮರ್ದನ ಮಾಡಿ (ಅಖಂಡೇ. ೧೯೪-೦೪); ಜ್ಞಾನವಿಕೃತಿಭಾವ, ವರ್ತನವಿಕೃತಿಭಾವ, ಮೋಹನವಿಕೃತಿಭಾವ ಇಂತಿವು ದುರ್ಭಾವತ್ರಯಂಗಳು (ವಚಶಾ. II, ೧೨೯).
[ದುರ್ಭಾವ + ತ್ರಯ]

**ದುರ್ಭಾವನೆ** (ನಾ). ಕೆಟ್ಟ ಆಲೋಚನೆ; ದುಷ್ಟ ಭಾವನೆ: ಪಾಟಿಸಿ ದುರ್ಭಾವನೆ ಲಕ್ಷ್ಮೀವಲ್ಲಭಂ ಪೊಲ್ಲದು ತಡೆದೊಡದಕ್ಕಿನ್ನೆಗಂ ಕೆಮ್ಮಗಿರ್ದಂ ದನವದ್ಯೋದ್ಯೋಗನಾಗಳ್ ಪಿಡಿದು ದೃಢರಥಂಗೆಂದನಾ ರಾಜರಾಜಂ (ಶಾಂತಿಪು. ೯-೧೦೩). [ಸಂ. ದುರ್ಭಾವನಾ]

**ದುರ್ಭಾಷಣ** (ನಾ). = ದುರ್ಭಾಷೆ: ಇಂತೆಂದ ದೂತನ ದುರ್ಭಾಷಣಮಂ ಕೇಳ್ದು (ಪಾರ್ಶ್ವಪು. ೧೩-೧೯ ವ); ಮೇಘವತಿಯ ದುರ್ಭಾಷಣಗಳನ್ನು ಸುಮ್ಮನೇ ಸಹನ ಮಾಡಿಕೊಳ್ಳುತ್ತಿದ್ದಳು (ಮಂಜುಳ. ೧೨೯). [ಸಂ.]

**ದುರ್ಭಾಷೆ** (ನಾ). ಕೆಟ್ಟ ಮಾತು; ಕಠಿಣವಾದ ನುಡಿ; ದೂಷಣೆ: ನುಡಿದಹನು ದುರ್ಭಾಷೆಗಳನಡಿಗಡಿಗೆ ಶಿವನಿಂದೆಯನುಸುರ್ವ ಬಗ್ಗಡೆಯನು ಕೊಲಲಹುದು (ಬಸವಪು. ೫೭-೨೯). [ಸಂ. ದುರ್ಭಾಷಾ]

**ದುರ್ಭಿಕ್ಷ** (ನಾ). ೧. ಬರ; ಕ್ಷಾಮ: ವೈರಾಗ್ಯ ಅಗ್ನಿ . . . ದುರ್ಭಿಕ್ಷ ಅತಿವೃಷ್ಟಿ ಅನಾವೃಷ್ಟಿಗಳೆಂಬೆಂಟುಂ ಪೀಡನಮೆಂಬುದಕ್ಕುಂ (ಪಂಚತಂ. ೮೦-೯); ದುರ್ಭಿಕ್ಷದೊಳು ಚಾರಿತ್ರಕ್ಕೆ ಶಿಥಿಲತ್ವವಾದೊಡೆ (ಶಸಾರ. ೪೦೪); ದುರ್ಭಿಕ್ಷದಲಿ ಸಲಹಿದನ ಜಲದೊಳಾಳ್ದನನೆತ್ತಿದನ . . . ಮುಳಿದವನೀವನ್ನೆ ಕುಲಕೋಟಿಸಹಿತ ಮಹಾಂಧನರಕದಲಿ (ಕುಮಾವ್ಯಾ. ೩-೪೨); ವರವುಂಟರಸ ಕೇಳ್ ದುರ್ಭಿಕ್ಷ ಡಾಮರ ಬಾಧೆ ಪೇದಗಳು ಇರದವೊಲು ತನ್ನುನಿಪನಿರ್ದೂರ್ವರೆಯೊಳು (ತೊರವೆರಾ. ೧-೫-೨೪); ದೇಶದಲ್ಲಿ ಕ್ಷೋಭೆ ದುರ್ಭಿಕ್ಷಗಳುಂಟಾಗಿ, ಪ್ರಜೆಗಳೂ ಧರ್ಮಬಾಹಿರರಾಗುತ್ತಾರೆ (ಶಾಂತಲಾ. ೨೦೦). ೨. ಕೊರತೆ; ಅಭಾವ; ದುರ್ಭಿಕ್ಷದಲ್ಲಿ ಅಧಿಕಮಾಸ (ಗಾದೆ).

**ದುರ್ಭಿಕ್ಷ ಬೀಳು**=ಬರಗಾಲವಾಗು; ಕ್ಷಾಮವುಂಟಾಗು: ದೇಶದೊಳಗೆ ದುರ್ಭಿಕ್ಷ ಬಿದ್ದು ಕಾಳು ಬಹಳ ತುಟ್ಟಿಯಾದವು (ಮುಂಬಯಿ. ೪-೭೫).
[ಸಂ.]

**ದುರ್ಭೇದ** (ಗು). ೧. ವಿಭಾಗಿಸಲು ಕಷ್ಟವಾದ; ಬೇರೆ ಮಾಡಲು ಕಷ್ಟವಾದ. (ನಾ). ೨. ಭೇದಿಸಲಾಗದುದು; ಒಡೆಯಲಾಗದುದು: ಕಾದಲೆನ್ನಳವಲ್ಲ ಬಲ ದುರ್ಭೇದವಿದು (ಕುಮಾವ್ಯಾ. ದ್ರೋ. ೪-೩೨). ೩. ತಿಳಿಯಲು ಕಷ್ಟವಾದುದು: ಆದುದೇ ನೆಲೆ ಕುರುಪತಿಗೆ ದುರ್ಭೇದವಿದು ಮೆಚ್ಚುಂಟು ನಿಮಗೆನಲಾ ದುರಾತ್ಮಕರೆಬ್ಬಿಹಿದರು (ಕುಮಾವ್ಯಾಗ. ೪-೫೦). ೪. ಭೇದೋಪಾಯ; ದುಷ್ಟ ಉಪಾಯ; ಕುತಂತ್ರ: ಮೇದಿನೀಶಂ ಸಮಯಿಗಳ ದುರ್ಭೇದದಿಂ ತಾನಾಗಳತಿಕುಪಿತೋದಿತಾನನನಾಗುತಂ ಬಾಚಯ್ಯಗಿಂತೆಂದ (ಬಸವಪು. ೫೩-೭೫). [ಸಂ.]

**ದುರ್ಭೇದ್ಯ** (ಗು). ಒಡೆಯಲು ಕಷ್ಟವಾದ; ದೃಢವಾದ: ವೃಂದಾವನ ತಟದೊಳ್ ಗೋವೃಂದಾವನವಾಂಛೆಯಿಂದೆ ಮನೆಗಟ್ಟಿದನಾ ನಂದಂ ಕೃತಗೋಪಜನಾನಂದಂ ದುರ್ಭೇದ್ಯಕಟಕರುಚಿ ರುಜಿಪಿನಂ (ಜಗವಿ. ೩-೭೭).
[ಸಂ.]

**ದುರ್ಭೋಜನ** (ನಾ). ಸಾತ್ವಿಕವಲ್ಲದ ಆಹಾರದ ಭೋಜನ,-ಊಟ: ದುರ್ಭೋಜನ ಮಾಡಿದವರ ದೌರ್ಮನಸ್ಯದಂತೆ ಏನೋ ದುಗುಡ ಎಲ್ಲೆಲ್ಲೂ ದುಮುದುಮುಗುಟ್ಟುತ್ತಿದೆ (ಮಹಾಂ. ೨೯೫). [ಸಂ.]

**ದುರ್ಮಂತ್ರ** (ನಾ). ೧. ಕೆಟ್ಟ ಸಲಹೆ,-ಉಪದೇಶ: ಸಾಂಗವಹುದೇ ಕಡೆಗೆ ದುರ್ಮಂತ್ರಗಳೆನುತೈಸಬಿಲಿ ಸರ್ವಜನಗಳಚ್ಚರಿವಟ್ಟು ನೋಡಲು (ಬಸವಪು. ೫೦-೪೦); ಯತಿ ಕೆಡುಗು ದುಸ್ಸಂಗದಲಿ ಭೂಪತಿ ಕೆಡುಗು ದುರ್ಮಂತ್ರದಲಿ [ಪಾಠಾಂ. ತ್ರಿಯಲಿ] (ಕುಮಾವ್ಯಾಉ. ೩-೧೦೯). ೨. ಅನಿಷ್ಟಕಾರಕವಾದ ಮಂತ್ರ; ಕೇಡುಕನ್ನುಂಟುಮಾಡುವ ಮಂತ್ರ: ಅಬಿನೆಯ ಮಂತ್ರಮಂ ಬಂದು ಪಂಚವಿಧಮಕ್ಕುಮವಱೊಳ್ . . . ಉಟಿದವೆಲ್ಲಂ ಪ್ರಾಣಿಮಾರಣಹೇತುಗಳ್ ದುರ್ಮಂತ್ರಂಗಳೆಂದಱಿಗೆ (ಜಾವುಂಪು. ೨೨೦). ೩. ದುಷ್ಟ ಯುಕ್ತಿ,-ಉಪಾಯ: ಹೊಲತಿಯರಾಗಿ ಕೆಲಸಾರಿ ನಿಂದು ಬೆಸನಾವುದೆನಲು ಜನಪತಿ ಹರಿಶ್ಚಂದ್ರ ಬಂದು ನಮ್ಮಯ ತಪೋವನದೊಳೈದನೆ ಹೋಗಿ ಸರ್ವಬುದ್ಧಿಗಳೊಳಾತನ ಮರುಳುಮಾಡುತಿರಿ ಹೋಗಿಯೆಂದಟ್ಟಿದಂ ದುರ್ಮಂತ್ರ ಬಲವಂತನು (ಹರಿಶ್ಚಾ. ೭-೨). [ಸಂ.]

**ದುರ್ಮಂತ್ರಿ** (ನಾ). ೧. ಕೆಟ್ಟ ಸಚಿವ; ದುಷ್ಟನಾದ ಮಂತ್ರಿ: ದುರ್ಮರ್ಷಣನೆಂಬ ದುರ್ಮಂತ್ರಿ ನೀನಿರೆ ಕನ್ಯಾರತ್ನಂ ಪೆಜರ ಕೈಗೆ ಪೊಗಲು ತಕ್ಕುದಲ್ಲೆನೆ (ಜಾವುಂಪು. ೫೭); ನಿನ್ನಂತಪ್ಪ ದುರ್ಮಂತ್ರಿಯ ಕಾರಣದಿಂ ಪಿಂಗಳಕಂಗೆ ಧರ್ಮಹಾನಿಯುಂ . . . ಪ್ರಾಣಹಾನಿಯುಮಾಗಲಿರ್ದುದು (ಪಂಚತಂ. ೧೭೮-೧); ಯತಿ ಕೆಡುಗು ದುಸ್ಸಂಗದಲಿ ಭೂಪತಿ ಕೆಡುಗು ದುರ್ಮಂತ್ರಿಯಲಿ [ಪಾಠಾಂ. ತ್ರದಲಿ] (ಕುಮಾವ್ಯಾಉ. ೩-೧೦೯). ೨. ಚುಚ್ಚಿ ಕೊಡುವವನು; ದುಷ್ಟಬೋಧನೆ ಮಾಡುವವನು: ಉರಗನಲಿ ನದಿಯಲಿ ಸಖಿಯರಾತುರಿಯದಲಿ ದುರ್ಮಂತ್ರಿಯಲಿ ದುಶ್ಚರಿತನಲಿ ವಿಶ್ವಾಸಿಸೆಯಲೇ ಭೂಪ ಕೇಳೆಂದ (ಕುಮಾವ್ಯಾಸ. ೧-೫೯).
[ಸಂ. ದುರ್ಮಂತ್ರಿನ್]

**ದುರ್ಮತ** (ಗು). ೧. ಕೆಟ್ಟ ಅಭಿಪ್ರಾಯದ; ದುಷ್ಟತನದ. (ನಾ). ೨. ಅಯೋಗ್ಯವಾದ ಮತ,-ತತ್ತ್ವ; ದುಷ್ಟಸಿದ್ಧಾಂತ: ನಿಗುರುವ ದ್ವೈತಕ್ರಿಯಾಮಾಯೆಗಳ ದುರ್ಮತದಿಂದ ಸದ್ವಿದ್ಯೆಗೆ ಪರಶಿವನ ಭಜನೆಯಿಲ್ಲದನಾಮಿಕರುಗಳೆರಾ (ಬಸವಪು. ೫೦-೪೮); ದುರ್ಮತಾಂಬುಜಮತ್ತವಾರಣ ಕಿನ್ನರೇಶಾ . . . ಎಂದು ಪಲುಂಬಿ ಪಳಯಿಸಿ (ವೃಷವಿ. ೨೪-೧೩).
[ಸಂ.]

**ದುರ್ಮತಿ** (ಗು). ೧. ಕೆಟ್ಟ ಬುದ್ಧಿಯ; ದುಷ್ಟಬುದ್ಧಿಯನ್ನುಳ್ಳ. ೨. ಮೂರ್ಖತನದ; ಅಜ್ಞಾನದ; ದಡ್ಡತನವನ್ನುಳ್ಳ. (ನಾ). ೩. ಕೆಟ್ಟ ಬುದ್ಧಿ: ಬಗೆಯೊಳ್ ತನಗಹಿತಮನಾರ್ ಬಗೆದೊಡಮಾಗಳೆ ಕೃತಾಸ್ತ್ರನವರಿದಿರೊಳ್ ತೊಟ್ಟಗೆ ನಿಂದು ಕೆಡಿಸುಗುಂ ಪ್ರಜೆ ಬಗೆ ಕಿಡೆ ದುರ್ಮತಿಯಿ[ಯು]ನಿಂತು ಪಿರಿಯರುಮೊಳರೆ (ಶಾಂತಿಪು. ೫-೦೨೩); ದುರ್ಮತಿಯಿಂ ದುರ್ಜನದೊಳ್ ದುರಾಚರಿತರೊಳ್ ನಿರ್ಧರ್ಮರೊಳ್ ಕೂಡಿ ಸನ್ಮತಮಂ ಬಿಟ್ಟು (ಧರ್ಮಾಮೃ. ೦೩-೦೫೫); ಕರ್ಮತಾರಕ ಕಾಣೊ ನಿಶ್ಚಯವೀ ಮಾತು ದುರ್ಮತಿಯನು ಬಿಟ್ಟು ಮರ್ಮವನಱಿತರೆ (ಪುರಂದ. ೪-೧೯೮ ಅನುಪಲ್ಲವಿ). ೪. ಕೆಟ್ಟ ಬುದ್ಧಿಯುಳ್ಳ ವ್ಯಕ್ತಿ; ದುಷ್ಟವ್ಯಕ್ತಿ: ದುರ್ಭಗೆ ದುರ್ಮತಿ . . . ದುರಾತ್ಮೆಯಪ್ಪ ವಧು ಸಜ್ಜನಮೇ (ಮುದತಿ. ೮-೭); ದುರ್ಮತಿ ಧಾತ್ರನಿಂ ನಿನಗೆ ದುಸ್ಥಿತಿ ಸಾರ್ದುದು (ಪಂಪಾರಾಮಾ. ೧೪-೧೯೫); ಥಳಥಳಿಪ ಪದಾರ್ಥವನೇಂ ಗಳ ಕಾಣ್ಬನೆ ದೋಷದೃಷ್ಟಿ ದುರ್ಮತಿ ಗಡದೇಂ ಶಿಳಿವನೆ ಗುಣಸಂತತಿಯಂ (ಪುಷ್ಪಪು. ೧-೪೭); ಕಾಯಿರೇ ಸರ್ವಾಪರಾಧಿಗಳ ಪಿಸುಣರಂ ದುರ್ಮತಿಗಳಂ ಸ್ವೈರಿಸಿ ಸುಕೃತರಂ ಮಾಡಿ ಎಮ್ಮುವನಸಮುಮಹಿಮೋದ್ದಾರೆಸೂರಸುಧೀಜನಾಧಾರ (ಬಸವಪು. ೩೨-೬೨); ದುರ್ಲಭನಾರು ದುಸ್ಸಹನಾರು ದುರ್ಮತಿ ಯಾರು ಧರ್ಮಜ ತಿಳಿಯ ಹೇಳೆಂದ (ಕುಮಾವ್ಯಾಅ. ೧೩-೫೭). ೫. ಮೂರ್ಖತನ; ಅವಿವೇಕ. ೬. ಮೂರ್ಖತನವುಳ್ಳವನು; ಅವಿವೇಕಿ: ಜರೆ ಯೌವನ ಕ್ರಮಭಿಘಾತಮೆನುತ್ತಿರೆ ಕಂಡು ಕೇಳ್ದುಂ ಗಡ ಪರಿವರ್ತಿಸರಾತ್ಮಹಿತದೊಳತಿ ದುರ್ಮತಿಗಳ್ (ಚಂದ್ರಪು. ೨-೩೭); ಕರ್ಮಕಿಂಕರರಾದ ಕಾಮ್ಯಫಲಾಭಿಲಾಷರಿಗೆ ಬ್ರಹ್ಮವಿದ್ಯಾಭ್ಯಾಸದಲಿ ಮನ ನೆಮ್ಮದದಱಿಂದಾತ್ಮಸುಖವದು ದುರ್ಮತಿಗಳಿಗೆ ದೂರವಾಗಿಹುದಱಿಸಿ ನೋಡಿದರೆ (ಅಮೃತ. ೧-೪೪). ೭. ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬ; ದುರ್ಯೋಧನನ ತಮ್ಮ: ದುರ್ಯೋಧನನಂ ಮುಂತಿಟ್ಟು ಯುಯುತ್ಸು ದುಶ್ಶಾಸನ . . . ದುರ್ಮತಿ

. . . ಮೊದಲಾಗಿ ನೂರ್ವರುಂ ಬಂದು (ಪಂಪಭಾ. ೨-೭೦ ವ). **೮.** ಅರುವತ್ತು ಸಂವತ್ಸರಗಳಲ್ಲಿ ಐವತ್ತನೆಯಂದುಂ : ಮಾರಲಿ ಪೆಮ್ಮಣ್ಣನವರು ದುರ್ಮ್ಮತಿಸಂವತ್ಸರದ ವೈಶಾಖ ಬಹುಳ ಪಂಚಮಿ ಆದಿತ್ಯ ಮಗ ಮಾದಿಗವುಡಂಗೆ ಧರ್ಮ್ಮ ಸಲುವಂತಾಗಿ ಕೊಟ್ಟ ಕೊಡಗೆ (ಎಕ. III, ಮಳವ. ೧೦೭-೫ ; 1321) ; ಮತ್ತಮಾ ವರುಷವೇ ಪ್ರಭವ ವಿಭವ . . . ದುರ್ಮತಿ ದುಂದುಭಿ ರುಧಿರೋದ್ಗಾರಿ ರಕ್ತಾಕ್ಷಿ ಕ್ರೋಧನ ಅಕ್ಷಯುಮೆಂದಱುವತ್ತು ತೆಱನಾಗಿಹುದು (ವಿವೇಕ. ೩೨೧). [ ಸಂ. ]

**ದುರ್ಮದ** (ಗು). ೧. ಅಮಲೇರಿದ ; ಉನ್ಮತ್ತವಾದ ; ಮದಿಸಿದ. (ನಾ). ೨. ದುರಹಂಕಾರ ; ಕೆಟ್ಟ ಹೆಮ್ಮೆ,-ಹಮ್ಮು : ಅದಱೊಳ್ ಸಾಮ್ರಾಜ್ಯಸೌಖ್ಯೋಲ್ಲಸಿತಹೃದಯನಿರ್ಪಂ ಧರಾಧೀಶ್ವರಂ ದುರ್ಮದಭೂಭೃತ್ಪಾತಿಖಡ್ಗಾಶನಿವಿಳಸನಮೇಘಾಗಮಂ (ಚಂದ್ರಪು. ೧-೦೫೨) ; ಬಾಧಿಸುವ ಹೃಷೀಕಸಂಚಯಮನಳ್ಕಿಸಿ ದುರ್ಮದಮೆಂಟನಿಕ್ಕಿ ಬಂಧಿಸಿ . . . ಭಕ್ತಿಯೊಳಾಂ ಪಿಡಿವೆಂ ಮೃಡಾಂಘ್ರಿಯಂ (ಶಬಶಂ. ೨-೯೦) ; ದುರ್ಜನದ ದುರ್ಮದವ ಮುರಿಯಿರೇಳಿ (ವಿಸೀಗೀ. ೪೨-೧೬) ; ಅವನ ದುರ್ಮದ ಯಾವ ನಯುಕ್ಕೂ ಬಗ್ಗದಿರಲು ಕೃಷ್ಣನು . . . ಶಾಪವನ್ನು ಕೊಟ್ಟ ಕಥೆ ಈ ನಾಟಕದ ಕಥಾವಸ್ತು (ಅಗ್ರಹ. V ಮುನ್ನುಡಿ). ೩. ಉನ್ಮತ್ತನಾದವನಂ ; ಮದಿಸಿದವನಂ ; ದುರಹಂಕಾರಿ. ವಿದ್ವಿಷದಿಭರದನಸ್ತಂಭಲೀಲಾಸಮುತ್ಪಾಟನಕಾಂಕ್ಷಾದುರ್ಮದಂ ದುರ್ಜಯರಿಪುನೃಪಶೌರ್ಯೋನ್ನಮನ್ಮಸ್ತಕಾವರ್ಜನವಾಂಛಾದುರ್ಧರಂ (ಆದಿಪು. ೧೪-೧೯) ; × × × ಧರೆಗೆ ವಕ್ತ್ರಂ ವಚಶ್ರೀಯಂ ಬಣ್ಣಾರದ ಸದ್ಮಂ ತಂನ × × × ಬೆನಲು ದುರ್ಮ್ಮದರೊಳು ಕಾಳೀಯ ದಣ್ಣಾಧಿಪಂ (ಸೌಇಇ. XX, ೧೦೭-೨೫ ; 1138). **೪.** ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬ ; ದುರ್ಯೋಧನನ ತಮ್ಮ : ಈತ ದುರ್ಯೋಧನ ಮಹೇಶ್ವರನು . . . ಈತ ದುರ್ಮದನೀತ ಚಿತ್ರಕನೀತಗಳು ಕುರುವಂಶದಲಿ ವಿಖ್ಯಾತರು (ಕುಮ್ಮಾಅ. ೦೩-೫೧). [ ಸಂ. ]

**ದುರ್ಮನ** (ನಾ). ೧. ಕ್ಷೋಭೆಗೊಂಡ ಮನಸ್ಸು ; ಮನಸ್ತಾಪ : ಮನಸಿಜ ಕೇಳಣ್ಣ ನಿನಗೆನಗಿಂದು ದುರ್ಮನದಿಂದ ಜಗಳವಪ್ಪುದಕೆ ಘನವೇನು ಹೇಳು (ಭರಜ. ೫೧-೭೦). ೨. ಕೆಟ್ಟ ಉದ್ದೇಶ ; ದುಷ್ಟಬುದ್ಧಿ ; ದುರುದ್ದೇಶ : ದುರ್ಮನದಿ ನೀವ್ ಬಾಳ್ವುದಲ್ಲದೆ ನಿರ್ಮಲರ ಮನ ಕಲಕಿ ದೋಷಕೆ ಮರ್ಮಿಗರು ನೀವಾದಿರಿ (ಬಿಜ್ಜಪು. ೧೦೬-೭೦). ೩. ಕೆಟ್ಟ ಮನಸ್ಸನ್ನುಳ್ಳವನು ; ದುಷ್ಟ : ಹಿಡಿದು ಸತ್ಯಾಹಿಂಸೆಯಸ್ತ್ರಗಳ ದುರ್ಮನರ ಕೆಡೆದ ಕದನಕಪಾಲಿ (ಅಮತಂ. ೩೯-೧೩). ೪. ಖಿನ್ನವಾದುದು ; ದುಃಖಿಗೊಂಡಿರುವುದು : ತಿನುತುಂ ನಿಸ್ಸಾರಮಪ್ಪ ಕೂಳೆವುಲ್ಲಂ ದುರ್ಮನನಾಗಿ ಕೆದಱಿ ಬಾಲಮನನವರತಂ ಕೆಳಱಿ ಪತಿಗೆ ಜಯಮಂ ಮಾಟ್ಕುಂ (ಅಶ್ವಶಾ. ೪-೫೫). [ ಸಂ. ದುರ್ಮನಸ್ ]

**ದುರ್ಮನೀಷಿ** (ನಾ). ತಿಳಿಗೇಡಿ ; ಬುದ್ಧಿಗೇಡಿ : ಕಾಪುರುಷ ಪೆಂಡತಿಯ ಪ್ರೇಮಮಂ ಗಳಿಸುವರೆ ಸದ್ಗುಣಾರಾಮನಾ ರಾಮನಟ್ಟಿದ ದುರ್ಮನೀಷಿ ಬದುಕಿದನೆಂತು ಚಿರಕಾಲಮೆಂದು ಜನರು ಸೀಮೆಯೊಳಗಾಡದುಳಿದಪರೆ (ವೆಂಕಾರಾ. ೨-೬-೪೫). [ ಸಂ. ದುರ್ಮನೀಷಿನ್ ]

**ದುರ್ಮರಣ** (ನಾ). ಅಸ್ವಾಭಾವಿಕವಾದ ಸಾವು ; ಹಿಂಸೆಗೊಳಗಾದ ಅವಸಾನ : ಈ ಪಾಪಕರ್ಮನಪ್ಪ ದುಷ್ಪುತ್ರನಿಂ ನಿನಗಿಂತಪ್ಪ ದುರ್ಮರಣಂ ಸಮನಿಸಿದುದು (ಪಂಚತಂ. ೧೭೮-೧) ; ದುರ್ಮರಣವಟ್ಟ ಶೂದ್ರನನು ಸಂಸ್ಕರಿಸುವವರಾವಲ್ಲ (ಹಚಕಾ. ೧೨-೨೦) ; ತರುಣಿ ನೀ ಹೆಸರಿಸಿದವಿವು ದುರ್ಮರಣಸಾಧನವಮಲದರ್ಭಾಸ್ತರಣವಿದು ಪಾವನವಲಾ (ಕುಮ್ಮಾಅ. ೨೧-೧೯) ; ಎಲೆ ಮಗಳೆ ನಿನ್ನಯ ದೂಸರಿಂದೆಮಗೆ ನೆಲಸಿತ್ತು ದುರ್ಮರಣ (ಕರ್ನಾಕ. ೭೧). [ ಸಂ. ]

**ದುರ್ಮರ್ಷಣ** (ಗುಃ). ೧. ಸಹಿಸಿಕೊಳ್ಳಲು ಅಶಕ್ಯವಾದ,-ಅಸಾಧ್ಯವಾದ ; ಹತೋಟಿಯಲ್ಲಿಡಲಾಗದ ; ಅಂಕೆಯಲ್ಲಿಡಲು ಅಸಾಧ್ಯವಾದ. (ನಾ). ೨. ಹತೋಟಿಯಲ್ಲಿಡಲಾಗದವನು. ೩. ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬ ; ದುರ್ಯೋಧನನ ತಮ್ಮ : ಕುರುನರೇಂದ್ರ ದುರ್ಮರ್ಷಣನೇಂ ನುಡಿಯಿಸುವನೊ ದುಷ್ಕರ್ಣಂ ನುಡಿಯಿಸುವನೊ ನೀನುಮ ಸಿರದಿರ್ಪುದೆ ಮಗನೇ (ಗದಾಯು. ೩-೮೧). [ ಸಂ. ]

**ದುರ್ಮಲ** (ಗು). ೧. ಅಶುದ್ಧವಾದ ; ಹೊಲಸಾದ : ಕೇರಿ ಕೇರಿಯೊಳಿರುವ ದುರ್ಮಲವಾರಿಯೊಳು ಶುಚಿಗೈಸಿ (ಬಿಜ್ಜಪು. ೧೦೩-೯೯). (ನಾ). ೨. ಕೊಳಕು ; ಹೊಲಸು : ಏಕ ಪರಮಾನಂದಮೂರ್ತಿಗನೇಕ ದುರ್ಮಲ ದುಷ್ಟ ದುಷ್ಕರ್ಮಾಕೃತಿಗಳವರೇಂ ಸಮಾನವೆ ಆಗಮೋಕ್ತಿಯಲಿ (ಬಸಪು. ೫೪-೨೦) ; ತೇಲಿದನವನ್ ದುರ್ಮಲದ ಜಲಧಿಯಲಿ (ಶ್ರೀರಾಮಾ. ೧೦೪-೧೧೩) ; ನಿನ್ನ ಸೌಂದರ್ಯದ ಮಱೆಯಲ್ಲಿರುವ ವಿಷಯಾಸಕ್ತಿಯ ದುರ್ಮಲವನ್ನು ಬದಿಗಿರಿಸಿ . . . ಸೌಂದರ್ಯವನ್ನು ಉಪಾಸಿಸುವ ಮಹಾಶಕ್ತಿಯನ್ನು ಶ್ರೀ ಗುರುವು ನನಗೆ ಅನುಗ್ರಹಿಸಿದ್ದಾನೆ (ಚಿತಸ. ೮೧). ೩. [ವೀಶೈ] ಮಲತ್ರಯಂವುಳ್ಳವನು : ನಿರ್ಮಲಂ ನೀಂ ದುರ್ಮಲಂ ನಾಂ . . . ನೀಂ ಪಶುಪ ನಾಂ ಪಶುವು (ಬಸಪು. ೨೨-೭೦). [ ಸಂ. ]

**ದುರ್ಮಲತ್ರಯ** (ನಾ). [ವೀಶೈ] ಆಣವ, ಮಾಯಾ ಮತ್ತು ಕಾರ್ಮಿಕವೆಂಬ ಮೂರು ವಿಧವಾದ ಮಲಗಳು : ಧಾರುಣಿಯೊಳಗೆ ದುರ್ಮಲತ್ರಯದೂರರಾಗಿರುತಿಪ್ಪ ನಿರ್ಮಳಸಾರದೇಹಂ ನಿಜವಲಾ (ಬಸಪು. ೫೭-೮೪). [ ದುರ್ಮಲ + ತ್ರಯ ]

**ದುರ್ಮಲಿನ** (ಗು). ತೀರ ಅಶುದ್ಧವಾದ ; ಕೊಳಕಾದ : ಸಹಜಭಕ್ತರ್ಗೆ ಒಲವಿನೆತ್ತುವ ಕೈಗಳಂ ದುರ್ಮಲಿನ ಕರ್ಮಚರ ದ್ವಿಜಾತರ್ಗಲಸದೆತ್ತುವದಧಮಜಾತರ್ಗಧಮಜಾತವಲಾ (ಬಸಪು. ೩-೪೭). [ ಸಂ. ]

**ದುರ್ಮಲ್ಲಿಕೆ** (ನಾ). [ಕಾವ್ಯಮೀ] ಹದಿನೆಂಟು ಬಗೆಯ ಉಪರೂಪಕಗಳಲ್ಲೊಂದು ; "ಇದರಲ್ಲಿ ನಾಲ್ಕು ಅಂಕಗಳು. ಕೈಶಿಕೀ ಭಾರತೀ ವೃತ್ತಿಗಳು ; ಗರ್ಭಸಂಧಿಯಿಲ್ಲ ; ಕಥೆಯಲ್ಲಿ ಬರುವ ಜನರು ನಾಗರಿಕರು ; ಹೀನನಾಯಕ ; ಮೊದಲನೆಯ ಅಂಕದಲ್ಲಿ ವಿಟಕ್ರೀಡೆ ; ಇದು ಆರು ಗಳಿಗೆಯಾಗುತ್ತದೆ ; ಮೂರನೆಯ ಅಂಕದಲ್ಲಿ ಪೀಠಮರ್ದನವಿಲಾಸ ; ಇದು ಹನ್ನೆರಡು ಗಳಿಗೆಯಾಗುತ್ತದೆ. ನಾಲ್ಕನೆಯದರಲ್ಲಿ ನಾಗರಿಕನ ಕ್ರೀಡೆ, ಇದು ಇಪ್ಪತ್ತು ಗಳಿಗೆಯಾಗುತ್ತದೆ" (ಸಂನಾಟ ೩೫) : ೧. ನಾಟಿಕಾ. ೨. ತ್ರೋಟಕ. ೩. ಗೋಷ್ಠೀ. ೪. ಸಟ್ಟಕ. ೫. ನಾಟ್ಯರಾಸಕ. ೬. ಪ್ರಸ್ಥಾನ. ೭. ಉಲ್ಲಾಪ್ಯ. ೮. ಕಾವ್ಯ. ೯. ಪ್ರೇಂಖಣ. ೧೦. ರಾಸಕ. ೧೧. ಸಂಲಾಪಕ. ೧೨. ಶ್ರೀಗದಿತ. ೧೩. ಶಿಲ್ಪಕ. ೧೪. ವಿಲಾಸಿಕಾ. ೧೫. ದುರ್ಮಲ್ಲಿಕಾ. ೧೬. ಪ್ರಕರಣೀ. ೧೭. ಹಲ್ಲೀಶ. ೧೮. ಭಾಣಿಕಾ – ಎಂದು ಉಪರೂಪಕಗಳು ಹದಿನೆಂಟು ವಿಧ (ಸಂನಾಟ. ೩೨). [ ಸಂ. ದುರ್ಮಲ್ಲಿಕಾ ]

**ದುರ್ಮಾಂಸ** (ನಾ). ದೇಹದಲ್ಲಿ ಅಸ್ವಾಭಾವಿಕವಾಗಿ ಬೆಳೆಯುವ ಕೆಟ್ಟ ಮಾಂಸ : ದುರ್ಮಾಂಸದೋಷವೊ ನೀಲಿಗಣ್ಣೋ ಮಾಱಮೆಯೊ ಕಣ್ಣುಕಿಲವೋ ಅರಿಯೋ (ಬಸಪು. ೧೮-೬೬). [ ಸಂ. ]

**ದುರ್ಮಾಯ** (ನಾ). ಒಂದು ಸ್ಥಳದ ಹೆಸರು : ದುರ್ಮ್ಮಾಯಗ್ರಾಮೇ ಗೃಹವಸ್ತುನಾಸಾರ್ದ್ಧಂ ಷಣ್ಣಿವರ್ತ್ತನೀ ಆಸನ್ದಿವಿಷಯೇ ಕಞ್ಜಗ್ರಾಮೇ ಚತುರ್ತ್ಥವರ್ತ್ತನೀ (ಮ್ಯಾಆರಿ. ೧೯೪೩, ೧-೪ ; ಸು. 500). 'ದುರ್ಮೆ' ಪಠಾ. [ ? ]

**ದುರ್ಮಾರಿ** (ನಾ). ಕೆಟ್ಟ ದೇವತೆ ; ದುಷ್ಟಳಾದ ಮಾರಿ : ದೇಶವೆಲ್ಲ ಯುದ್ಧದ ದುರ್ಮಾರಿಯ ನಾಟ್ಯರಂಗವಾಗಿತ್ತು (ಘಾಟೀಮು. ೪೦). [ ದುರ್ + ಮಾರಿ₂ ]

**ದುರ್ಮಾರ್ಗ** (ನಾ). ೧. ಸಂಗಮವಲ್ಲದ ದಾರಿ ; ಕಠಿಣವಾದ ಹಾದಿ : ಹರಿಯ ಸೇವಕರ ಬರವಂ ಕಾಣುತಾ ವಿಂಧ್ಯಗಿರಿಯ ದುರ್ಮಾರ್ಗಮುಂ ಸನ್ಮಾರ್ಗಮಾಯ್ತು (ಜೈಮಿಭಾ. ೧೦-೯). ೨. ತಪ್ಪುಮಾರ್ಗ; ಸರಿಯಲ್ಲದ ರೀತಿ : ಧರೆಯೊಳಿದು ದುರ್ಮಾರ್ಗಮೆನಿಸದು ಹರನಿಮಿತ್ತವಿದೆಂಬ ಭಾವನೆ ಯಿರಲಧರ್ಮೋಧರ್ಮ ತಾನೆಂದುದು ಶಿವನ ವಾಕ್ಯ (ಬಸಪು. ೩೦-೨೪) ; ದುರ್ಮಾರ್ಗಂಗಳಲಿ ವರ್ತಿಸುವುದೆಲ್ಲಂ ಮಂಗಳಾಂಚಿತರತ್ನವಿರೆ ಗಾಜಂ ಧರಿಸುವಂತೆ (ಬಸಪು. ೬೦-೪೪). ೩. ಕೆಟ್ಟವನು ; ದುಷ್ಟಮಾರ್ಗದಲ್ಲಿ ನಡೆಯುವವನು : ದುರ್ಮಾರ್ಗನಾದ ವನಬೀರಸಿಂಗನು . . . ಕೊಲ್ಲುವುದಕ್ಕೆ ಬರುತಿದಾನೆ (ನೀತಿಚಿಂ. XV, ೫) ; ಆ ದುರ್ಮಾರ್ಗನ ಆಡಳಿತಕ್ಕೆ ಸಿಕ್ಕಿ . . . ಪ್ರಜೆಗಳೂ ಧರ್ಮಬಾಹಿರರಾಗುತ್ತಾರೆ (ಶಾಂತಲಾ. ೨೦೦).

[ ಸಂ. ]

**ದುರ್ಮಾರ್ಗಿ** (ನಾ). ಕೆಟ್ಟ ಮಾರ್ಗ ಹಿಡಿದವನು ; ದುರಾಚಾರಿ ; ದುಷ್ಟ : ದುರ್ಮಾರ್ಗಿಗಳ ಕೊಲೆಗಡಿಕರಾ ವಿನಯದಿಂ ತನ್ನೆಡೆಯೊಳೊಲಿದಿರಿಸಿಕೊಂಡು (ವೀಶೈಪು. ೨-೭-೩೮) ; ಅಳಿಯ ದುರ್ಮಾರ್ಗಿಯಾಗಿ ನಿಮ್ಮ ಮಗಳನ್ನು ನೀವೇ ಇಟ್ಟುಕೊಳ್ಳಿ – ಎಂದು ಮನೆಯಲ್ಲಿ ದೂಡಿಬಿಟ್ಟು ಹೋಗುತ್ತಾನೋ – ಎಂಬ ಭಯಗಳೂ ಸಂಕಟಗಳೂ ಆಕೆಯನ್ನು ಕಾಡಿದುವು (ಮಹಾಗ. ೩೨೦). [ ಸಂ. ದುರ್ಮಾರ್ಗಿನ್ ]

**ದುರ್ಮಿಲ, ದುರ್ಮಿಳ** (ನಾ). ೧. ದೊರೆಯಲು ಕಷ್ಟಸಾಧ್ಯವಾದುದು; ದುರ್ಲಭ : ಬೋರಾನೆಂಬ ದುರ್ಮಿಲವಾದ ಅಧಾತುರೂಪ ಮೂಲತತ್ತ್ವದಿಂದ ಟಂಕಣಕಾರ (ಬಿಳಿಗಾರ) ಹುಟ್ಟುತ್ತದೆ (ಮುಂಬಯಿ. ೬-೧೫) ; ಕವಿತ್ವ ಹಾಗೂ ಚಿತ್ರಕಲೆಯ ಸಂಯೋಗವು ಬಹಳೇ ದುರ್ಮಿಲ (ಪ್ರಬಂಧ. ೧೦೨). **ದುರ್ಮಿಳ :** ೧. ಇಂಥ ದುರ್ಮಿಳವಾದ ರಾಜಕನ್ಯೆಯನ್ನು ಎರಡನೆಯವರ ಮನಸಿಗೆ ವ್ಯಥೆಯನ್ನುಂಟುಮಾಡುವುದಕ್ಕಾಗಿಯೇ ಬ್ರಹ್ಮನು ನಿರ್ಮಿಸಿರಬಹುದೆಂದು ಕಾಣುತ್ತದೆ (ಮುಂಜುಳ. ೧೭). (ಗು). ೨. ದುರ್ಲಭವಾದ ; ಅಪರೂಪವಾದ : ಎಂಥ ಮಹಾವೈದ್ಯನ ಬಹುಬೆಲೆಯ ದುರ್ಮಿಳತೈಲಕ್ಕೂ ಇವರ ರೋಗ ಹಿಮ್ಮೆಟ್ಟಲು ಹಿಂತೆಗೆಯುತ್ತದೆ (ಇಪ್ಪಳ. ೩೬೨) ; ಇದಕ್ಕೂ ಪೂರ್ವದಲ್ಲಿ ಇಂಥ ದುರ್ಮಿಳ ವಸ್ತುಗಳನ್ನು ನಾನೆಲ್ಲಿಯೂ ಕಂಡಿರಲಿಲ್ಲ (ಕಳ್ಳಕಾ. ೩೦).

[ ಸಂ./ಹಿಂ. ದುರ್ಮಿಲ ; ಮರಾ. ದುರ್ಮಿಲ, ದುರ್ಮಿಳ ]

**ದುರ್ಮಿಳ** 'ದುರ್ಮಿಲ' ನೋ.

**ದುರ್ಮುಖ** (ಗು). ೧. ಅಸಹ್ಯವಾದ ಮುಖವುಳ್ಳ. ೨. ಕೆಟ್ಟ ಮಾತನಾಡುವ; ನಿಂದಿಸುವ ; ತೆಗಳುವ. (ನಾ). ೩. ಅಪ್ರಿಯವಾಗಿ ಮಾತನಾಡುವವನು ; ದುರ್ಭಾಷೆಯನ್ನಾಡುವವನು ; ನಿಂದಕ : "ದೋಷಗ್ರಾಹಿ ಪುರೋಭಾಗಿ ದುರ್ಮುಖಂ ಮುಖರನವಂ" (ವಸ್ತುಕೋ. ೧೦೦೧-೧೭); "ಕೆಡೆನುಡಿವವಂ ದುರ್ಮುಖಂ ಮುಖರನೆನಿಸಿಕ್ಕು" (ಮಂಗರಾ. ೬೧-೨೦) ; ದುಸ್ಸಹ ದುರ್ಮುಖ ದುರ್ವಿದಗ್ಧ ದುರ್ಜನನೆನಿಸಿರ್ದ ದುಷ್ಕೃತಿಗೆ ಭಕ್ತಿಯೊಳೆತ್ತುವೆನಗ್ರಪೂಜೆಯಂ (ಸೂಕ್ತಿಸು. ೧-೨೯). ೪. ಘೋರವಾದ ಮುಖವುಳ್ಳುದು ; ಅಸಹ್ಯವಾದ ಮುಖವುಳ್ಳುದು : ದಿವಸಾಂಧಂಗವಲಕ್ಷಣಂಗೆ . . . ಅತಿದುರ್ಮುಖಂಗೆ . . . ಈವುದೆ ಖಗೋದ್ಯಚ್ಚಕ್ರವರ್ತಿತ್ವಮಂ (ಪಂಚತಂ. ೨೨೭-೭). ೩, ೪ : ಕಾಳೋಗ್ರೋರಗನಂತೆ ದಾರುಣಮುಖರ್ ದುಷ್ಟರ್ ಖಳರ್ ದುರ್ಮುಖರ್ . . . ಏನಂ ಮಾಟ್ಟುರೇಗೆಯ್ಯರೋ (?) (ಸುಕುಮಾ. ೧-೪೭). ೫. (ಬೋಧನೆಗೆ) ಗಮನ ಕೊಡದವನು ; (ಉಪದೇಶಕ್ಕೆ) ಸಂಮುಖನಲ್ಲದವನು : ನಿಮ್ಮಾ ಕುಮಾರರಪ್ಪೊಡೆ ಯೌವನಮದೋನ್ಮತ್ತರುಂ ದುರ್ಮುಖರುಂ ಚಂಚಳಚಿತ್ತರುಮಾಗಿರ್ದಪರ್ (ಪಂಚತಂ. ೧೭-೯). ೬. ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬ ; ದುರ್ಯೋಧನನ ತಮ್ಮ : ದುರ್ಯೋಧನನಂ ಮುಂತಿಟ್ಟು . . . ದುರ್ಮುಖ ದುಷ್ಕರ್ಣ . . . ಮೊದಲಾಗಿ ನೂರ್ವರುಂ ಬಂದು (ಪಂಪಭಾ. ೨-೬೦ ವ). ೭. ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತೊಂಬತ್ತನೆಯದು.

[ ಸಂ. ]

**ದುರ್ಮುಖಿ** (ನಾ). ೧. ಕೆಟ್ಟ ಮುಖವುಳ್ಳವಳು ; ಕುರೂಪಿ. ೨. ಕಠಿಣವಾಗಿ ಮಾತನಾಡುವವಳು ; ನಿಂದಕಿ. ೩. = ದುರ್ಮುಖ ೭ : ಮತ್ತಮಾ ವರುಷವೇ ಪ್ರಭವ ವಿಭವ . . . ಮನ್ಮಥ ದುರ್ಮುಖಿ . . . ಕ್ರೋಧನ ಅಕ್ಷಯವೆಂದರುವತ್ತು ತೆರನಾಗಿಹುದು (ವಿವೇಕ. ೩೨೦); ಪ್ರಾರಂಭವಾಗಿದೆ ದುರ್ಮುಖಿಯ ನಿರುತ್ಸಾಹದ ಕಾಲುಹಾದಿ (ಶಿಲಾಲ. ೪೫-೫); [ಸಂಸ್ಕೃತದಲ್ಲಿ; ಸಂವತ್ಸರವೆಂಬ ಅರ್ಥದಲ್ಲಿ 'ದುರ್ಮುಖಿ' ಎಂಬ ರೂಪವಿಲ್ಲ. ಆದರೆ ವ್ಯವಹಾರದಲ್ಲಿ ಈ ಅರ್ಥದಲ್ಲಿ 'ದುರ್ಮುಖಿ' ಎಂದೇ ಇದೆ. ೨, ೩ : ಮನೆ ಸಲೆ ಹೇವಿಳಂಬಿ ಸಹಕಾರಿ ವಿಕಾರಿ . . . ನಿಜವಲ್ಲಭೆ ದುರ್ಮುಖಿಯೆಂದೊಡೆ ಪೆಂಪಿನ ವಿಭವಂ ಪ್ಲವಂಗದವೊಲಾದುದು ಮನ್ಮಥ ಚಿತ್ರಭಾನುವಿಂ (ಸೂಕ್ತಿಸು. ೮-೪೩).

[ ಸಂ. ದುರ್ಮುಖೀ ]

**ದುರ್ಮುದ್ರೆ** (ನಾ). ಕೆಟ್ಟ ಚಿಹ್ನೆ,–ಮುದ್ರೆ; ಅಪಲಕ್ಷಣವಾದ ಲಾಂಛನ: ಚರ್ಮದುರ್ಮುದ್ರೆಗಳನೇ ಶಿವಧರ್ಮವರ್ಜ್ಯರ್ಗೆ ಧರಿಸುವುದುಚಿತವೇ ಹೇಳು (ಬಸಪು. ೩-೪೮). [ ಸಂ. ದುರ್ಮುದ್ರಾ ]

**ದುರ್ಮುಹೂರ್ತ** (ನಾ). ಕೆಟ್ಟ ಘಳಿಗೆ ; ಅಶುಭ ಸಮಯ ; ಪ್ರಶಸ್ತವಲ್ಲದ ಕಾಲ: ಮಂಥರೆಯು ಕೈತವಕೆ ತುತ್ತಾದರೆಲ್ಲರುಂ . . . ನೀನಿಲ್ಲದಾ ದುರ್ಮುಹೂರ್ತದಲಿ ! (ಶ್ರೀರಾಮಾ. ೧೧೭-೧೨೮); ಆ ದುರ್ಮುಹೂರ್ತ ಹತ್ತಿರವಾಗ್ತಿರೋದು (ವೀರಯೋ. ೪). [ ಸಂ. ]

**ದುರ್ಮೂರ್ತ್ರಗರ್ತ** (ನಾ). ಒಂದು ನರಕದ ಹೆಸರು : ಪರ್ವತಯುಗಳ ಘಟ್ಟನ ಪರ್ವತಕ್ಷುರಧಾರೆ ದುರ್ಮೂರ್ತ್ರಗರ್ತ ವಿಷ್ಟಾಗರ್ತ ಚಿತ್ರಹಿಂಸೆಯಂಬೈದು ಮಂತ್ರಿನರಕಂಗಳು . . . ಇಹುದು (ವಿವೇಕ. ೧೯೧).

[ ಸಂ. ]

**ದುರ್ಮೆ** (ನಾ). ಒಂದು ಸ್ಥಳದ ಹೆಸರು : ಸಂಬನೂರ ನಾಗಣನ್ಡಪಿರಿಯಯ್ಯಂಗಳುಂ ದುರ್ಮೆಯ ನಾಗದೇವಭಟಾರರುಂ . . . ಸಾಕ್ಷಿ (ಎಕ. XI, ಚಿತ್ರದು. ೭೪-೩೦ : 968). 'ದುರ್ಮಾಯು' ಪರಾ. [ ? ]

**ದುರ್ಮೇಧ** (ನಾ). ಮಂದಬುದ್ಧಿಯುಳ್ಳವನು ; ದಡ್ಡ ; ಮೂರ್ಖ : ಸಾಧಿಸುವಡರಿದಾತ್ಮತತ್ತ್ವವಿಬೋಧಂ . . . ದುರ್ಮೇಧರಿಗೆ ದುಷ್ಟರಿಗೆ (ನಿಭಾಗ. ೩-೧೪-೪೦) ; ಸಾರಿಪುತ್ರ ಮೌದ್ಗಲ್ಯಾಯನರನ್ನು ಕಂಡ ಕೂಡಲೇ ದುರ್ಮೇಧನಾದ ದೇವದತ್ತನು ಅವರು ಕೂಡ ಬುದ್ಧನ ಸಂಘವನ್ನು ತ್ಯಜಿಸಿ ತನ್ನ ಹಿಂದೆ ಬಂದರೆಂದೇ ಭ್ರಮಿಸಿದನು (ಹತ್ತುಮು. ೯೮).

[ ಸಂ. ದುರ್ಮೇಧಸ್ ]

**ದುರ್ಮೇಧೆ** (ನಾ). ಅವಿವೇಕಿಯಾದವಳು: ಅಮಿತವೈಭವದ ದುರ್ಮೇಧೆ ಸಿರಿಯುಡಸೆ ಪರರನೆಂತು ಅರಿದಪಳೆ (ವೆಂಕಾರಾ. ೨-೯-೭).

[ ದುರ್ಮೇಧ + – ಎ ]

**ದುರ್ಮೋಹ** (ನಾ). ೧. ಕೆಡುಕನ್ನುಂಟುಮಾಡುವ ಮಾಯೆ,–ಅಜ್ಞಾನ; ಮೂರ್ಖತನ : ಸರ್ವೋತ್ತಮರ್ಸರ್ವಸಾಧುಗಳೋರಂತೆ ಕಟಲ್ಚುಗೆಮ್ಮ ಮನದಿಂ ದುರ್ಮೋಹಸಂದೋಹಮಂ (ಆದಿಪು. ೧-೫) ; ಕಿಡಿಸಿ ದುರ್ಮೋಹಮಂ ಪೋಗಿ ಧರ್ಮಪ್ರಿಯರೆಂಬಾಚಾರ್ಯರಂ ಬಂದಿಸಿ ಗಳಿತಮದಂ ದೀಕ್ಷೆಗೊಂಡೆಯ್ದಿ . . . ಅಘಮಂ ಗೆಲ್ದು ನಿರ್ಮೋಹನಾದಂ (ಶಾಂತಿಪು. ೯-೧೪) ; ದುರ್ಮೋಹದಿಂ ಸಜ್ಜನೋಪಾಲಂಭಾವಿಳನಾಗಿ ನಿಲ್ಲದೊಡಲಂ ನಂಬಲ್ಕನಂದರ್ಪುದೇ (ಮಲ್ಲಿಪು. ೯-೬೦) ; ದುರ್ಮೋಹ ಮಹಾತಿಮಿರಗತರ್ . . . ನರಕಗತಿಯಂ ಪಡೆವರ್ (ಶಾಂತೀಶ್ವ. ೯-೮೧).

೨. ಎಚ್ಚರ ತಪ್ಪುವಿಕೆ ; ಮೂರ್ಛೆ. ೩. ಅತಿಯಾಗಿ ಮರುಳಾಗುವುದು,-ಮಾರು ಹೋಗುವುದು : ಎನಗೀ ದುರ್ಮೋಹದುದ್ಯೋಗಮಿಂತೇನಾನೊಂದನೊಡರ್ಚಿತಿಂತಿದು (ಕಾದಂಪೂ. ೬೨೪). ೪. ಅವಸರ ; ಆತುರ. "ಮೂರ್ಛೆಯೊಳ್ ಮೋಹದಲ್ಲಿ ಮುಸುಕಿದಜ್ಞಾನದೊಳ್ ದುರ್ಮೋಹಮೆಂದೆನಿಕು" (ಮಂಗರಾ. ೧೪೮-೨೪) ; "ಮೋಹಮೂರ್ಛಾವೇಗಂ ಕಡುಮೂರ್ಖಮಜ್ಞತೆಗಳುಂ ದುರ್ಮೋಹಮಕ್ಕುಂ" (ನಾನಾರ. ೧೫೭). [ ಸಂ. ]

**ದುರ್ಮೋಹಿ** (ನಾ). ೧. ಕೆಟ್ಟದ್ದಕ್ಕೆ ಮರುಳಾಗುವವನು ; ದುರಾಶೆಯುಳ್ಳವನು : ದುರ್ಮೋಹಿ ವಿಶ್ವಾಮಿತ್ರ ಪಾಪಿ ಇನ್ನಾದೊಡಂ ಸತಿಯ ಕೊಲೆಯುಂ ನಿಲಿಸಲು ಹೋಹುದೇನೆಂದೋವಿ ಬೇಡಿಕೊಳುತುಂ (ಹಚಕಾ. ೧೩-೧೩). ೨. ವಿಷಯಲಂಪಟ : ದುರ್ಬುದ್ಧಿಯಾದ ಒಬ್ಬ ದುರ್ಮೋಹಿಯಿಂದ ಇನ್ನೂ ಅರಳದ ಮೊಗ್ಗಿನಂತಿದ್ದ ಎರಡು ಜೀವ ಬಾಡಿ ಹೋಯಿತಲ್ಲ! (ಕಲ್ಲಿಕಾ. ೧೨೨). [ ಸಂ. ದುರ್ಮೋಹಿನ್ ]

**ದುರ್ಯಶ** (ನಾ). ಅಪಯಶಸ್ಸು; ಅಪಕೀರ್ತಿ: ಕೆಟ್ಟ ಹೆಸರುಂ: ಶುಭಚರಿತ ತದೀಯಾನೂನ ವಂಶಾಧಿಪತ್ಯಪ್ರಭವನೆಯದಱಿಂದೀ ದುರ್ಯಶಕ್ಕೆಂತು ನೋಂತೈ (ಶಾಂತಿಪು. ೩-೭೬) ; ದೊರೆಯಾದುದು ದುರ್ಯಶದೊಳ್ ಪೊರೆಯದ ಚರಿತಂ ಪುರಾಣಪುರುಷಚರಿತದೊಳ್ (ಗದಾಯು. ೧-೧೬) ; ಕಾಮವ್ಯಾಮೋಹದಿನಾಶಾಮುಖಮಂ ಪುದಿಯೆ ದುರ್ಯಶಃಪಟಹರವಂ (ಪಂರಾಮಾ. ೧೪-೧೧೬) ; ಕುಲದೊಳೊಬ್ಬನು ಜನಿಸಿ ವಂಶವನಳಿದನಕಟ ಕಟೆಂಬ ದುರ್ಯಶವುಳಿವುದಲ್ಲದೆ ಲೇಸಗಾಣೆನು (ಕುವ್ಯಾವಿ. ೨-೩೨).

[ ಸಂ. ದುರ್ಯಶಸ್ ]

**ದುರ್ಯಶಸ್ಸು** (ನಾ). = ದುರ್ಯಶ : ಧರ್ಮನಂದನಂ ದುರ್ಯೋಧನನ ದುರ್ಯಶಸ್ಸಿಗೆ ತಲೆವಾಗಿ (ಗದಾಯು. ೬-೪೦ ವ). [ ಸಂ. ದುರ್ಯಶಸ್ ]

**ದುರ್ಯೋಗ** (ನಾ). ೧. ಕೆಟ್ಟ ಸನ್ನಿವೇಶ ; ಅಶುಭಸಮಯ : ಇಂಥ ಘೋರತರ ದುರ್ಯೋಗದ ಆ ಸಮರಾತ್ರಿಯಲ್ಲಿ ಒಬ್ಬ ಹದಿನೈದು ಹದಿನಾರು ವರ್ಷ ವಯಸ್ಸಿನ ಕುಮಾರಿಕೆಯು . . . ಓಡುತ್ತೋಡುತ್ತ ಸಾಗಿದ್ದಳು (ಅಂಬಿಕೆ. ೩). ೨. [ಜ್ಯೋತಿ] ಜಾತಕನಿಗೆ ಕಷ್ಟವನ್ನುಂಟು ಮಾಡುವ ತಿಥಿ, ವಾರ, ನಕ್ಷತ್ರ, ಗ್ರಹಾದಿಗಳ ಸೇರುವಿಕೆ,-ಕೆಟ್ಟ ತಿಥಿ ವಾರಾದಿಗಳ ಮಿಲನ : ಈ ಮಗು ದುರ್ಯೋಗದಲ್ಲಿ ಹುಟ್ಟಿದೆ, ಶಾಂತಿ ಮಾಡಿಸಿ (ರೂಢಿ). [ ಸಂ. ]

**ದುರ್ಯೋಧನ** (ನಾ). ೧. ಯುದ್ಧದಲ್ಲಿ ಎದುರಿಸಲಾಗದವನು ; ಅಜೇಯನಾದವನು. ೨. ಕೌರವರಲ್ಲಿ ಹಿರಿಯವನು ; ಧೃತರಾಷ್ಟ್ರನ ಹಿರಿಯ ಮಗ : ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ . . . ಧರ್ಮದೊಳ್ ನಿರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ (ಪಂಪಭಾ. ೧೪-೬೪); ದೆಸೆದೇವತೆಗಳ್ಗೆ ಜಪಾಪ್ರಸೂನಮಂ ರಕ್ತಬಲಿಯುಮಂ ತಾಮೆ ಕುಡುವಂತೆಸೆದಿರ್ದರೊ ಕಡೆಗಣ್ಣೊಳ್ ಪಸರಿಸೆ ಕಡುಗೆಂಪು ಭೀಮದುರ್ಯೋಧನರಾ (ಗದಾಯು. ೮-೩) ; ಭೀಮದುರ್ಯೋಧನರ ಸೆಣಸಿನ ತಾಮಸಿಕೆ ಹೆಚ್ಚಿದುದು (ಕುವ್ಯಾಆ. ೬ ಸೂಚನೆ). 'ಸುಯೋಧನ' ಪರಾ. ೧, ೨: ಕಿಱಿಯಂದಂದಿತ್ತ ದುರ್ಯೋಧನನೆನಿಸಿದ ವಿಕ್ರಾಂತಮೇನಾದುದು (ಪಂಪಭಾ. ೧೩-೭೭) ; ಜಳದೊಳ್ಮೀನಿರ್ಪವೊಲ್ನೀಂ ಕೊಳದೊಳೆ ಮುೞುಗಿರ್ದ್ದಕ್ಕಟಾ ಕೋಡ ಸೇಡಿಂಗೊಳಗಾದೈ ನಿನ್ನ ದುರ್ಯೋಧನವೆಸರ್ಗಿದು ಲಜ್ಜಾಕರಂ (ಗದಾಯು. ೭-೧೩). [ ಸಂ. ]

**ದುರ್ಲಂಘ್ಯ** (ಗು). ೧. ದಾಟಲು ಅಶಕ್ಯವಾದ,-ಅಸಾಧ್ಯವಾದ : ಅಭ್ರಂಕಷಶಿಖರಿಶಿಖರದುರ್ಲಂಘ್ಯಮಪ್ಪ ಗಿರಿದುರ್ಗದ ಪೆಂಪುಮಂ . . . ಒಳಕೊಂಡು (ಆದಿಪು. ೧೩-೫೭ ವ). (ನಾ). ೨. ದಾಟಲುಂ ಅಸಾಧ್ಯವಾದುದಂ : ಲಂಕೆಯುಂ ಸುತ್ತಿದೆ ಮಹಾಶರಧಿ ; ದುರ್ಲಂಘ್ಯಮಾರ್ಗೆಯುಂ (ಶ್ರೀರಾಮಾ. ೩೨೫-೧೬೦). ೩. ಒಂದು ಊರಿನ ಹೆಸರು ; ನಳಕೂಬರನ ರಾಜಧಾನಿ : ನಿನಗಮೆನಗಂ ದುರ್ಲಂಘ್ಯಪುರದೊಳ್ ಕೂಟಮಪ್ಪಂತು ಮಾಡೆನೆ (ಪಂರಾಮಾ. ೧೦-೧೯೨ ವ). [ ಸಂ. ]

**ದುರ್ಲಕ್ಷ** (ನಾ). ಅಲಕ್ಷ್ಯ ; ಗಮನಕೊಡದಿರುವಿಕೆ ; ಕಡೆಗಣಿಸುವುದು: ಬುದ್ಧಿಮಂದರು ಯಾವ ಭಾಷೆಯೇನು ಎಂಬ ದುರ್ಲಕ್ಷದಲ್ಲಿರುತ್ತಾರೆ (ವಿಜಾಮಂ. ೧೮). [ ಸಂ. ]

**ದುರ್ಲಕ್ಷಣ** (ಗು). ೧. ಕೆಟ್ಟ ಚಿಹ್ನೆಯುಳ್ಳ. (ನಾ). ೨. ಕೆಟ್ಟ ಚಿಹ್ನೆ,-ಲಾಂಛನ. ೩. ಕೆಟ್ಟ ನಡತೆ ; ದುಷ್ಟ ನಡವಳಿಕೆ. ೪. [ಕಾವ್ಯಮೀ] ಹದಿನೆಂಟುಂ ಬಗೆಯ ಕಾವ್ಯದೋಷಗಳಲ್ಲಿ ಒಂದು ; ಅಗತ್ಯವಾದ ಗುಣಗಳಿಲ್ಲದಿರುವುದು,-ಲಕ್ಷಣವಿಲ್ಲದಿರುವಿಕೆ ; P ಅಸದರ್ಥ, ವಿಪರೀತಕಲ್ಪನೆ, ಅಭವ್ಯ, ದುಷ್ಕರ, ಗ್ರಾಮ್ಯ, ನೀರಸ, ಅಪ್ರೌಢತೆ, ಅಪ್ರತೀತಿವಚನ, ದುಸ್ಸಂಧಿ, ವಿಶ್ಲೇಷ, ನಷ್ಟಸಮಾಸ, ನಯನಾಶ, ರೀತಿವಿಫಲ, ದುರ್ಲಕ್ಷಣ, ಹಾಸ್ಯವಾಕ್, ವಿಷಮ, ಅಸೌಮ್ಯ ಮಂತ್ರ್ಯ ಅನೋಜೆ ಎಂಬುವು ಕಾವ್ಯದಲ್ಲಿ ಅಷ್ಟಾದಶ ದೋಷ: ಅಸದರ್ಥಂ . . . ದುರ್ಲಕ್ಷಣಂ ಹಾಸ್ಯವಾಗ್ವಿಷಮಾಸೌಮ್ಯ ಮನೋಜೆಯೆಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೧-೪೬ ಅಡಿಪದ್ಯ). ೫. [ಕಾವ್ಯಮೀ] ದೋಷಪೂರ್ಣವಾದ ಕಾವ್ಯ : ಅಷ್ಟಾದಶಸ್ಥಳವಿವರ್ಣನಂ ಕೇಳಿಸಿ[ದಿ]ನಿತುಳ್ಳ ಕೃತಿ ನವ್ಯಕಾವ್ಯಮೆನಿಕ್ಕುವಿಲ್ಲದಿರೆ ದುರ್ಲಕ್ಷಣಂ (ಮಂಗರಾ. ೧೦೬-೧೭). [ ಸಂ. ]

**ದುರ್ಲಕ್ಷಿಸು** (ಕ್ರಿ). ಕಡೆಗಣಿಸು ; ಅಲಕ್ಷ್ಯಮಾಡು ; ಲೆಕ್ಕಿಸದಿರು : ದೇಹವನ್ನು ದುರ್ಲಕ್ಷಿಸಿದರೆ ಅಭ್ಯಾಸ ಹಾಳಾಗುತ್ತದೆ (ರಂಗರೋ. ೧೯೫).

[ ದುರ್ಲಕ್ಷ + – ಇಸು$_3$ ]

**ದುರ್ಲಕ್ಷ್ಯ** (ಗು). ೧. ನೋಡಲು ಕಷ್ಟವಾದ; ಕಾಣಲಾಗದ: ಸರ್ವಾಂಗೀಣ ಮೌಕ್ತಿಕಾಭರಣಕಿರಣಾಕೀರ್ಣ ಸುವರ್ಣದುರ್ಲಕ್ಷ್ಯ [ಪಾಠಾಂ. ಕ್ಷ] ಹರಿಚಂದನಾಂಗರಾಗೆಯುಂ . . . ಆಗಿ (ಆದಿಪು. ೭-೨೬ ವ). (ನಾ). ೨. ಉದಾಸೀನತೆ ; ಅಲಕ್ಷ್ಯ. ೩. ಕೆಟ್ಟ ಗುರಿ,-ಉದ್ದೇಶ. [ಸಂ.]

**ದುರ್ಲಭ** (ಗು). ೧. ಹೊಂದಲು ಅಶಕ್ಯವಾದ ; ಪಡೆಯಲು ಅಸಾಧ್ಯವಾದ. ೨. ವಿರಳವಾದ ; ಅಪರೂಪವಾದ ; ಅಪೂರ್ವವಾದ : ಆ ಮಹಿಪಂ ಪೊಱಮಟ್ಟನಂತೆ ಸತ್ಪುರುಷರದೇಕೆ ಬಂಜೆವಡಿಪರ್ ಗಡ ದುರ್ಲಭಕಾಲಲಬ್ಧಿಯಂ (ಚಂದ್ರಪು. ೨-೫೭). ೩. ಉತ್ತಮವಾದ ; ಶ್ರೇಷ್ಠವಾದ ; ಪ್ರಶಸ್ತವಾದ. (ನಾ). ೪. ಕಷ್ಟವಾದುದು ; ಕಠಿಣವಾದುದು: ಸೊಲ್ಲಲಭಿಮಾನಂ ಗೃಹಿತಮನನಲ್ಲದಾ ತತ್ತ್ವವನಱಿಯಲಿದು ದುರ್ಲಭವು (ಬಸಪು. ೨೯-೧೩) ; ಕಟು ಬಲುಮೆಯ ಮೇಲೆ ವಿಷಯವನ್ನು ಅವರ ಮೇಲೆ ಹೇರಿದಂತಾಗಿ ಅವರಿಗೆ ಜಿಗುಪ್ಸೆ ಹುಟ್ಟುತ್ತದೆ. ಕಲಿವು ದುರ್ಲಭವಾಗುತ್ತದೆ (ಶಿಕ್ಷದ. ೨೧೪). ೫. ಅಪರೂಪವಾದುದು ; ವಿರಳವಾದುದು : ಭೋಂಕನೆ ಪೇಟ್ವ ಜೋಯಿಸಮದಾರ್ಗಂ ಮರ್ತ್ಯರೊಳ್ ದುರ್ಲಭಂ (ಸುಕುಮಾ. ೩-೨೦) ; ತರುಣತ್ವದುರ್ಲಭಂಗಳ್ ಪರಿಣತಿಸುಖದಂಗಳೆನಿಪ ಸತ್ಕ್ರಿಯೆಗಳನಾ ಧರಣೀಶಸುತಂ ಪಲಿತಾಂಕುರಮಿಲ್ಲದ ವೃದ್ಧನಂದದಿಂದಾಚರಿಪಂ (ಚಂದ್ರಪು ೨-೨೦) ; ಸುಖ ಸುಲಭ, ಆದರ ಹದ ದುರ್ಲಭವು ಎನುವ ರೀತಿಯು ರಮ್ಯ (ಉಯ್ಯಾಲೆ. ೨೩-೯). ೬. ಅಪರೂಪನಾದವನು ; ಸಾಮಾನ್ಯವಾಗಿ ಲಭಿಸದಿರುವವನು : ಅಲ್ಲಮಪ್ರಭುವೆಂಬ ಸಂಯಮಿವಲ್ಲಭಂ ಲೋಕಪ್ರಪಂಚಕೆ ದುರ್ಲಭಂ (ಬಸಪು. ೮-೧) ; ದುರ್ಲಭನಾರು ದುಸ್ಸಹನಾರು ದುರ್ಮತಿಯಾರು ಧರ್ಮಜ ತಿಳಿಯ ಹೇಳೆಂದ (ಕುವ್ಯಾಆ. ೧೩-೫೭) : ದುರ್ಲಭನೀಶನಂತವನನೆಂತುಂ ಕಾಣ್ಬೆನೆಂದಿರ್ಪೆ ನೀಂ ಗಡ (ಶಬಶಂ. ೨-೮೫). [ ಸಂ. ]

**ದುರ್ಲಲಿತ** (ಗು). ಸರಳವಲ್ಲದ : ಏಕೆ ಬೆಸಗೊಳ್ಳಬಲೆ ಸುತರವಿವೇಕ ವಿಷಮುಗ್ರಹವಿಕಾರವ್ಯಾಕರಣದುರ್ಲಲಿತದುಷ್ಕೃತವೀ ಪ್ರ ಳಾ ಪ ವಿ ದು (ಕುವ್ಯಾಸ. ೧೬-೧೨). [ ಸಂ. ]

**ದುರ್ಲವ** (ನಾ). ಒಂದು ಬಗೆಯ ಸಸ್ಯ : ಬಳ್ಳಿದುರುಬ, ದುರ್ಲವ (ವ್ಯಾಜಿಗಿ. ೪-೬೯). [ ? ]

**ದುರ್ಲಿಖಿತ** (ನಾ). ಕೆಟ್ಟ ಬರಹ; ಕಷ್ಟವನ್ನು ಸೂಚಿಸುವ ಲಿಪಿ: ಹಣೆಯಂ ದುರ್ಲಿಖಿತವನಾಕ್ಷಣಕೊರಸಿ (ಗುರುಬೋ. ೨-೨೫೮) ; ಎನ್ನ ಹಣೆಯ ದುರ್ಲಿಖಿತವ ತೊಡೆದು ಶಿವಮಂತ್ರವ ಸಂಬಂಧಿಸಿದ ಶ್ರೀಗುರುವಿಂಗೆ ನಮೋ ನಮಃ ಎಂಬೆನಯ್ಯ (ಅಖಂಡೇ. ೧೮-೫). [ ಸಂ. ]

**ದುರ್ಲಿಪಿ** (ನಾ). = ದುರ್ಲಿಖಿತ : ನಳಿನಸಂಭವಲಿಖಿತ ದುರ್ಲಿಪಿಗಳನೊರಸಿ ಶಿವತೀರ್ಥಕಳಶಾಮಳಜಲವನೆಱೆದಮಳ ಶಿ ವ ಸಂ ಸ್ಕಾ ರಿ ಯ ಂ ಮಾಡಿ (ಬಸವು. ೪೬-೮೨). [ ಸಂ. ]

**ದುರ್ವಚನ** (ನಾ). ಕೆಟ್ಟ ಮಾತು ; ಬಯ್ಗುಳು; ನಿಂದೆ: ದುರ್ವಚನವಂ ನುಡಿಯದತಿಥಿಗಳ ಕೆಡೆನುಡಿಯದುರ್ವಧನವಂ ಕೂಡಿ ಗೋರಕ್ಷಣಂ ಮಾಳ್ಪದುರ್ವರೆಯೊಳಿದು ಕೀರ್ತಿ ವೈಶ್ಯಂಗೆ (ಜೈಮಿಭಾ. ೫-೫೦) ; ಕಡೆಗೆ ಕೈ ಹಿಡಿದಿರುವ ಮಡದಿಯು ದುಡುಕಿ ದುರ್ವಚನಗಳ ನುಡಿವಳು (ನೀಸಾರಾ. ೨೯-೧೬೮). [ ಸಂ. ]

**ದುರ್ವರ್ಣ** (ಗು). ೧. ಕೆಟ್ಟ ಬಣ್ಣವುಳ್ಳ. ೨. ಕೆಟ್ಟ ಅಥವಾ ಕೀಳು ಜಾತಿಯ. (ನಾ). ೩. ಕೆಟ್ಟ ಬಣ್ಣ : ನಿಸಿತಖಡ್ಗದ ಮೈಯ ರಕ್ತವ ದೞೊಳು ಸಂಗಮಿಸೆ ಜಲಂ ದುರ್ವರ್ಣವಾಗೆ . . . ಸ್ನಾನಪಾನಂ ಮಾಡಲನುವಲ್ಲೆನಲು (ಸೋಮಚ. ೫-೬೩). ೪. ಬೆಳ್ಳಿ : "ದುರ್ವರ್ಣಂ, ರಜತಂ, ರೂಪ್ಯಂ, ಖರ್ಜೂರಂ, ಶ್ವೇತಂ – ೫ ಬೆಳ್ಳಿಯ ಹೆಸರುಗಳು" (ಸಿದ್ಧಾಂತಿ. ೩೦೪). [ ಸಂ. ]

**ದುರ್ವರ್ಣೆ** (ನಾ). ಕೆಟ್ಟ ಬಣ್ಣದ ದೇಹವುಳ್ಳವಳು ; ಕುರೂಪಿ ; ಕಾಂತಿ ಹೀನೆ : ದುರೂಪೆ ದುರ್ವರ್ಣೆ ದುರ್ಗಂಧೆ ದುಸ್ಸ್ವರೆ ಪುಟ್ಟುಂಗುರುಡಿ ಪೊಲತಿಯಾಗಿ ಪುಟ್ಟಿ (ಪದ್ಮರಾ. ೯-೬) : ದುರ್ಗಂಧೆ ದುರ್ವರ್ಣೆ ಜಾತ್ಯಂಧಕಿ . . . ಎನಿಸಿದ ಪಾಪಕ್ಕೆ ಪಕ್ಕಾಗಿ ದುಃಖಾಧಿಕೆಯಿಂ ಸಂಸಾರಕೂಪಾರದೊಳನವರತಂ ನೀಡುಮೋಲಾಡುತಿರ್ದಳ್ (ಸುಕುಮಾ. ೫-೨೦).
[ ಸಂ. ದುರ್ವರ್ಣಾ ]

**ದುರ್ವರ್ತನೆ** (ನಾ). ಕೆಟ್ಟ ನಡವಳಿಕೆ ; ಭ್ರಷ್ಟಾಚರಣೆ ; ದುರಾಚಾರ : ಮೇಲಂ ಕೀಳುಗಳ ಭಾವನೆ ಅವರ ಈ ದುರ್ವರ್ತನೆಯ ತಳಹದಿಯಾಗಿತ್ತು (ರಂಗರೋ. ೮೩) ; ತನ್ನ ತಾಯ ಬಳಿಗೆ ಹೋಗಿ ರಾಣಿಯ ದುರ್ವರ್ತನೆಯನ್ನು ಒಂದು ಕನಸಿನ ನೆವದಿಂದ ಸೂಚಿಸಲು (ಕಾವ್ಯಸ. ೬೨); ಚಿತ್ತವಿಕೃತಿ ಅಪರಾಧ ಅಥವಾ ದುರ್ವರ್ತನೆ ಅಥವಾ ಕಾನೂನುವಿರುದ್ಧ ವರ್ತನೆ (ಭಾಧಾನ. ೧೯೨). [ ಸಂ. ದುರ್ವರ್ತನ ]

**ದುರ್ವಲ** (ನಾ). ಶಕ್ತಿಹೀನನಾದವನು ; ದುರ್ಬಲ : ಕಲಿತನ ಬಲವುಳ್ಳ ನಿಗಲ್ಲದೆ ಕೈದು ಫಲಿಸದು ದುರ್ವಲಗೆಂದು ಕಲಿಸಿದರಾಚಾರ್ಯರಾ ಕುವರಗೆ ಖಡ್ಗಕುಲಸಾಧನೆಯನೆಲ್ಲವನು (ಕುರಾಕಾಂ. ೮-೮೬). [<ಸಂ. ದುರ್ಬಲ]

**ದುರ್ವಹ** (ಗು). ೧. ಹೊರಲಾಗದ; ಬಹಳ ಭಾರವಾದ; ಭರಿಸಲಾಗದ: ಧರಣೀಭರವಂ ತ್ವದೀಯದೋಃಪರಿಘದಿನಾಂತು ಪಿಂಗಿಪುದು ನಂದನ ದುರ್ವಹಭಾರಖೇದಮಂ (ಚಂದ್ರಪು. ೨-೫೨). ೨. ತಡೆಯಲಾಗದ ; ಸಹಿಸಲಾಗದ : ಸುಹುತಂ ಕೌರವ್ಯಕ್ರವ್ಯಹವ್ಯದಿಂದೆನ್ನ ಕೋಪಹವ್ಯವಹಂ ದುರ್ವಹದುರ್ಯೋಧನ ದೇಹಪ್ರಹರಣಲೋಹಿತದಿನಾದುದವಭೃಥಸವನಂ (ಗದಾಯು. ೮-೪೭). ೩. ಕೆಟ್ಟ ಪ್ರವಾಹದಿಂದ ಕೂಡಿರುವ ; ನಾಶಕರವಾದ ಪೂರದಿಂದ ಕೂಡಿರುವ : ಆ ನದಿಯ ಲಹರಿಗೆ ಮೂಡಣಂ ಪಡುವಣಂದೆರಡು ದುರ್ವಹ ನದಿ ಕೂಡಿರ್ದುವು (ಭರತೇ. ೩೩-೭೫). (ನಾ). ೪. ಹೊರಲಾಗದುದು : ಲಲನೆಯರ್ಗಂಗರಾಗಮುದು ದುರ್ವಹಮಂಶುಕಭಾರಮಂಗಸಂಚಲತೆಗೆ ಕಾರಣಂ (ಕಾದಂಪೂ. ೧೦೦೩). ೫. ನಿರ್ವಹಿಸಲು ಕಷ್ಟವಾದುದು : ದುರ್ವಹಮಪ್ಪ ರಾಜ್ಯಭರದಿಂ ನೆಱೆ ಪಿಂಗಿಸಿ ಮತ್ತಮೆಮ್ಮನಾ ನಿರ್ವೃತಿಸೌಖ್ಯಮಂ ಪಡೆವ ಮಾರ್ಗಮನೆಯ್ದಿಸಿ . . . ಪುತ್ರ ನೀಂ ಮುದದೆ ಮಾಡು ಮದೀಯ ಮನಃಪ್ರಮೋದಮಂ (ಶಾಂತೀಶ್ವ. ೪-೧೭೪); ಈರ್ವರೊಳಗಾವನಾದೊಡಂ ವಾದಮುಖದಿಂ ಸೋಲ್ತಪಂ . . . ಒರ್ವಂಗೆ ಶಿಷ್ಯನಾಗದೆ ಪೋಗಬಾರದೀ ದುರ್ವಹದ ಭಾಷೆಯಂ ಬರೆಯಿಸುಭಯಾನುಮತಪೂರ್ವಕದಿನೆನೆ (ಪದ್ಮರಾ. ೧೦-೩). [ ಸಂ. ]

**ದುರ್ವಾಕ್ಯ** (ನಾ). ಕೆಟ್ಟ ಮಾತು ;ಬಯ್ಗುಳು ; ನಿಂದೆ : ಕರ್ತೃ ಭೃತ್ಯನ ವಾಸಕ್ಕೆ ಐದಿದಲ್ಲಿ . . . ಆತನಲ್ಲಿ ದುರ್ವಾಕ್ಯ ದುಶ್ಚರಿತ್ರ ಪರಿಹಾಸಕಗಳಂ ಬೀಱದೆ (ವಚಸಂ. ೧೯೧-೩೪) ; ದುರ್ಬುದ್ಧಿ ದುರ್ವಾಕ್ಯ ಮಱೆದೆ ಸಾಧು ಸಜ್ಜನರ ಸಂಗ ನಿನ್ನಿಂದ ಬೆರೆದೆ (ಪುರಂದ. ೪-೧೬೦-೧೫). [ ಸಂ. ]

**ದುರ್ವಾದ** (ನಾ). ೧. ಅಸಮಂಜಸವಾದ ಮಾತು ; ಸರಿಯಲ್ಲದ ವಾದ ; ಕುತರ್ಕ ; ವಿತಂಡವಾದ : ದುರ್ವಾದದಿಂದಿನ್ನೆಗಂ ಭೇದಂ ಬಟ್ಟಿರ್ದೆಗೆಟ್ಟು ಕೆಟ್ಟೆನಿನಿತುಂ ಕಾಲಂಗಳೇಂ ಕರ್ಮವೋ (ಸುಕುಮಾ. ೩-೪೩); ಇಂತಹ ಸ್ಥಿತಿಯಲ್ಲಿ ನಮಗೆ ಜ್ಞಾನವಿಲ್ಲದಿದ್ದ ಮಾತ್ರಕ್ಕೆ ವಸ್ತುವೂ ಇಲ್ಲವೆಂಬ ದುರ್ವಾದವೇಕೆ? (ಜೀವಾತ್ಮ. ೧೮೮). ೨. ಅಪವಾದ: ಕೆಲವು ದುರಾತ್ಮರು ಸ್ವೇಚ್ಛಾಚಾರಕುತುಕರಾಗಿ ದುರ್ವಾದಗಳನ್ನೂ ಗ್ರಂಥಗಳನ್ನೂ ಹರಡುತ್ತಿರುವರು (ಹಿಂದಸಾ. ೨೮೬). [ ಸಂ. ]

**ದುರ್ವಾದಿ** (ನಾ). ಸಲ್ಲದ ತರ್ಕ ಮಾಡುವವನು ; ಅಯೋಗ್ಯವಾದ ಪೂರ್ವಪಕ್ಷವನ್ನು ಹೂಡುವವನು: ದುರ್ವಾದಿಯ ವಾದದೊಳ್ ಗೆಲಿದೆ (ಅಮಶ. ೫೨) ; ದುರ್ವಾದಿಗಳನ್ನೊಪ್ಪಿಸುವ ದೃಷ್ಟಿಯಿಂದ ಹೇಳಿದ್ದೇನೆ (ಧ್ವನ್ಯಾಲೋ. ೫೦). [ ಸಂ. ದುರ್ವಾದಿನ್ ]

**ದುರ್ವಾಪಣ** (ನಾ). ಎಳೆಗಳನ್ನು ಬಿಡಿಸಲಾಗದಂತೆ ನೆಯ್ದಿರುವುದು ; ಚೆನ್ನಾಗಿ ಬಿಡಿಸದಂತೆ ಒಡಗೂಡುವಿಕೆ,–ಕೂಡಿಕೊಳ್ಳುವಿಕೆ (?) : ಫಣರತ್ನಜ್ಯೋತಿಯಿಂ ಕಾಳಿಯನನಱಿಸಿ ಕಂಡೆಯ್ದಿ ಗೋಪಾಳಚೂಡಾಮಣಿ ಜೀವಂಬೆತ್ತ ಗಾರುತ್ಮತಮಣಿಯವೊಲಂಗಪ್ರಭಾಮಾಲೆ ದುರ್ವಾಪಣಮಂ ಕಾಳಿಂದಿಯೊಳ್ ಪುಟ್ಟಿಸಿ (ಅರ್ಧನೇ. ೮-೪೮). [ <ಸಂ. ದುರ್ವಾಪನ ]

**ದುರ್ವಾರ** (ಗು). ೧. ತಡೆಯಲು ಅಶಕ್ಯವಾದ ; ಸಹಿಸಲಾಗದ ; ದುರ್ಭರವಾದ : ವನವಾಸದೊಳಿರ್ಪೆನೆಂದು ದುರ್ವಾರಪರಾಕ್ರಮಂ ತಳರೆ (ಪಂಪಭಾ. ೧-೧೧೪) ; ಆ ಜಯಂತ ವಿಜಯರ್ಕಳಿರ್ವರುಂ ದುರ್ವಾರತಪೋಭಾರನಿರ್ವಾಣದಿಂ ತದಚ್ಯುತಕಲ್ಪದೊಳ್ ಸಾಮಾನಿಕದೇವರಾಗಿ ಪುಟ್ಟಿ (ಶಾಂತಿಪು. ೯-೫೫ ವ) ; ಚಂಡಾಲರ ಕೆಯ್ಯೊಳ್ ಬೀಟ್ವ ತೋಲ್ ಪಂಜರದ ಪಡಿಕೆಯೊಳ್ ನಿಲ್ವ ದುರ್ವಾರದುಃಖೋತ್ಕರಮೆಲ್ಲಂ ನೋಡಲೆನ್ನಿಂದ್ರಿಯನಿವಹದ ದೋಷಂ (ಕಾದಂಉ. ೬೫೨). ೨. ನಿವಾರಿಸಲು ಕಷ್ಟವಾದ ; ನಿವಾರಣೆ ಮಾಡಲಾಗದ : ಮಿಱುವನ್ನರಾರೆನ್ನೀ ದುರ್ವಾರಭುಜಬಲಮಂ (ಪಂರಾಮಾ. ೯-೧೯೩) ; ಆ ಪ್ರಯತ್ನಮಿಂತಾದುದಯ್ ದುರ್ವಾರ ದುರ್ಜ್ಞೇಯ ದುರ್ವಿಧಿಯ ಲೀಲೆಯಿಂ (ಶ್ರೀರಾಮಾ. ೧೧೯-೨೪೬). ೩. ದಾಟಲಾಗದ : ದುರ್ವಾರ ಸಂಸಾರವಿಚ್ಛೇದೋಪಾಯನಿಯುಕ್ತಸೂಕ್ತಿ ವೃಷಮಾರ್ಗಾಗ್ರೇಸರಂ . . . ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ (ಆದಿಪು. ೧-೧) ; ವಸುದೇವಂ ಮುಂದುಗೆಟ್ಟಲ್ಲಿ ಕಮ್ಮರಿವಾಯ್ದಂತಿರೆ ಪೊಕ್ಕಡಂಗೆ ತನಗಾ ತೀವಿರ್ದ ಕಾಳಿಂದಿ ಚೆಚ್ಚರಮಾಗಳ್ ನೆಲೆಯಾಗೆ ದಾಂಟಿ ನಡೆದಂ . . . ಇದೇಂ ಚಿತ್ರಮೋ (ಜಗವಿ. ೩-೧೦). ೪. ಅತಿಶಯವಾದ ; ಪ್ರಚಂಡವಾದ : ಮದವದ್ವೈರಿನರೇಂದ್ರಮಂಡಳಿಕ ಸೇನಾಭಂಜನಂ ವೀರನೀರದದುರ್ವಾರಸಮಿೀರಣಂ

(ಎಕ. VII, ಶಿಕಾರಿ. ೧೩೬-೨೩ ; 1068) : (ಸುಕುಮಾ. ಪರಿ. ೧-೧೮ ನೋ) ; ಉಗ್ರ ಕಾಲೋರಗಾವಲಿ ಭೂತಾವಲಿ ರೌದ್ರಸತ್ವನಿವಹಂ ಲೋಕಾದ್ಭುತಂ ನಾಡೆ ನೋಡಲಗುಂರ್ವಾದುದು ತದ್ವಿಭೀಷಣಕೃತಂ ದುರ್ವಾರ ವೈಕುರ್ವಣಂ (ಪಂಚಾವಮಾ. ೧೧-೬೭) : ದುರ್ವ್ವಾರಾರಾತಿ ಧರಾಧರೇಂದ್ರಕುಳಿಶಂ ಶ್ರೀವಿಷ್ಣು ಭೂಪಾಳಂ (ಎಕ. VI, ಚಿಕ್ಕಮ. ೧೦೯-೧೫ ; 1202). (ನಾ). ೫. ಅತಿಶಯವಾದುದು ; ಅಧಿಕವಾದುದು : ದುರ್ವಾರಂ ವಿಪುಳಾಂಧಕಾರವಮನಯಾಧಾರಂ ಮಹಾಘೋರಮಂತುರ್ವೀವ್ಯೋಮದಿಶಾಂಬುಧಿಪ್ರಕರ ನಾನಾ ವಸ್ತುವಿಸ್ತಾರಮಂ ಪರ್ವುತ್ತಳ್ಕಿಸುತುರ್ವಿಯಾ ಜಗಮುಮಂ ಕೃಷ್ಣತ್ವದಿಂ ಕೂಡೆ (ಪಾರ್ಶ್ವಪು. ೧೦-೦೭). [ ಸಂ. ]

**ದುರ್ವಾರ್ತೆ** (ನಾ). ಕೆಟ್ಟ ಸುದ್ದಿ,–ವರ್ತಮಾನ: ಪೇಳ್ವೆನಿದೊ ದುರ್ವಾರ್ತೆಯಂ (ಶ್ರೀರಾಮಾ. ೬೧-೧೯೯) : ದುರ್ವಾರ್ತೆಯನ್ನು ತಂದ ಮಂದಭಾಗ್ಯ ನಾನು (ಗುರುಚ. ೧೧೦). [ ಸಂ. ದುರ್ವಾರ್ತಾ ]

**ದುರ್ವಾಸ** (ನಾ). ೧. ದುರ್ವಾಸನೆ ; ನಾತ. ೨. (ಅಲಂ) ಸುಳಿವು ; ಸೂಚನೆ : ಇವರ ಗಳಿಕೆಯ ದುರ್ವಾಸ ನನಗೆ ಬರಹತ್ತಿತು. ಇವರಿಗೆ ಹಣ ಎಲ್ಲಿಂದ ಬರುವದೆಂದೇ ನನಗೆ ಗೂಢವಾಗಿತ್ತು (ರಕ್ತಧ್ವ. ೨೯೩). [ ಸಂ. ]

**ದುರ್ವಾಸನೆ** (ನಾ). ೧. ಕೆಟ್ಟವಾಸನೆ ; ನಾತ : ವಿದ್ಯುಚ್ಛಕ್ತಿಯ ಒಲೆಯ ಅನುಕೂಲತೆಗಳು : ದುರ್ವಾಸನೆ ಕೊಡುವುದಿಲ್ಲ. ಬೂದಿ ಅಥವಾ ಹೊಗೆ ಉಂಟಾಗುವುದಿಲ್ಲ (ಅಡುಸಾ. ೧೮). ೨. ಹಿಂದಿನ ಜನ್ಮಗಳ ಕೆಟ್ಟ ಸಂಸ್ಕಾರ. ೩. ಕೆಟ್ಟ ಆಸೆ ; ಕೀಳು ಆಕಾಂಕ್ಷೆ : ನೆನೆವುತ್ತಿದೆ ಮನ ದುರ್ವಾಸನೆಗೆ (ವಚಸಂ. ೬೩೬-೧೦೦) ; ತತ್ತ್ವಜ್ಞಾನಚಿಂತೆಯ ಘನತೆ ದೊರಕುವದೆಂತು ಮಾಯಾಜನಿತ ದುರ್ವಾಸನೆಯೊಲೊಂದಿಹ ಮರುಳು ಮಾನವಗೆ (ಅಮೃತ. ೧-೩೩). [ ಸಂ. ದುರ್ವಾಸನಾ ]

**ದುರ್ವಿಕಾರ** (ಗು). ೧. ಕೆಟ್ಟ ಭಾವನೆಯ ; ಕೀಳು ಆಲೋಚನೆಯ : ಸ್ವಪ್ನಾವಸ್ಥೆಯಲ್ಲಿ ಬ್ರಹ್ಮಾಂಡದೊಳಗುಳ್ಳ ಕಡೆ ಮೊದಲಿಲ್ಲದ ದುರ್ವಿಕಾರ ಸ್ವಪ್ನದಲ್ಲಿ ಹರಿದಾಡುವ ಜೀವಂಗೆ ಪ್ರಾಣಲಿಂಗದ ಪೂಜೆ ಎಲ್ಲಿಯದೋ (ಘನವ. ೩೫-೨೮). (ನಾ). ೨. ಕೆಟ್ಟ ಭಾವನೆ ; ಕೀಳು ಆಲೋಚನೆ : ದುರ್ವಿಕಾರಂ ಮನವನೆತ್ತಿಕ್ಕೆ ಪರಿಪರಿದು ದುರ್ಬೋಧರಂ ಕೂಡಿಕೊಂಡು ಸುತ್ತಂ ಸುಳಿದು (ಪಿಂಡೋರ. ಹ. ೫೦೨-೨೩). [ ಸಂ. ]

**ದುರ್ವಿಜ್ಞಾನಶಕ್ತಿ** (ನಾ). ಕೆಡುಕನ್ನುಂಟುಮಾಡುವ ವಿಶೇಷ ಜ್ಞಾನ,– ಅಧಿಕವಾದ ತಿಳಿವಳಿಕೆ : ಕುಳ್ಳನಾ ದೈತ್ಯದುರ್ಮಂತ್ರತಂತ್ರಿಕವರೇಣ್ಯಂ ದುರ್ವಿಜ್ಞಾನಶಕ್ತ್ಯಾಹ್ವಾನದೀಕ್ಷಿತನಾಗಿ (ಶ್ರೀರಾಮಾ. ೬೦೬-೧೯೩) [ಸಂ.]

**ದುರ್ವಿಟ** (ನಾ). ಅತಿ ಕೀಳಾದ ಕಾಮುಕ : ತನ್ನುಮಂ ಹೊಂದಿದ ಸುಖಂಗಳಂ . . . ಶಿವಂಗೀವ ಹದನನರಿದೊಡೆ ಸಾಕು ಶ್ರುತಿವಾಕ್ಯದಲಿ ದುರ್ವಿಟನಲ್ಲ ಶಮೆ ದಮೆ ಹೃದಯದಿಂದಲಿ ಉತ್ತಮ ವಿದ್ವಾಂಸರಚಿತಿರಲು (ಬಸಪು. ೪೦-೧೧). [ ಸಂ. ]

**ದುರ್ವಿದ** (ನಾ). ಮೂರ್ಖ; ತಿಳಿಗೇಡಿ: ನೀಳಾದಿ ಪಾಷಾಣಸಂಕುಲದೊಳ್ ದುರ್ವಿದರಂತು ಪೋಲಿಸುವೆನೇ ರೂಪಂ ಯಶೋಭದ್ರೆಯಾ (ಸುಕುಮಾ. ೯-೯೪). [ ಸಂ. ]

**ದುರ್ವಿದಗ್ಧ** (ಗು). ೧. ತಿಳಿಗೇಡಿಯಾದ ; ಚಾತುರ್ಯವಿಲ್ಲದ ; ಪರಿಣತಿಯಿಲ್ಲದ; ಅವಿವೇಕಿಯಾದ : ನಿನ್ನಂತಪ್ಪ ಪುರುಷನಂ ದೊರೆಕೊಳಿಸಿ ಕಳಿಂಚು ಮಾಡಿ ಕಳೆದ ದುರ್ವಿದಗ್ಧ ವಿಧಾತ್ರಂಗೆ ಮುನಿವೆನಾಂ (ಅರ್ಧನೇ. ೩-೨೮ ವ); ನುತಿಪೆಂ . . . ತತಗರ್ವೋದ್ಧತ ದುರ್ವಿದಗ್ಧ ಜನತಾ ಹೃದ್ಭೀಮನಂ ಭೀಮನಂ (ರಾಜಶೇ. ೧-೧೮); ದುರ್ವಿದಗ್ಧ ಮೂಢನಿಗೆ ಇದು ಅತ್ಯಂತ ಕಠಿಣ ಕೆಲಸವೇ (ಇಪ್ಪಕ. ೨೭೯). (ನಾ). ೨. ಅವಿವೇಕಿಯಾದುದು: ಇಂತಪ್ಪವಸ್ಥೆಯಿಂದಿವಳಿಂತಿರೆಯುಂ ದುರ್ವಿದಗ್ಧವೆನ್ನ ಮನಂ ಮತ್ತೆಂತುಂ ನಂಬಿದುದಿಲ್ಲ (ಕಾದಂಬ. ೨೪೨). ೩. ಅವಿವೇಕಿ; ಮೂರ್ಖ ; ತಿಳಿಗೇಡಿ : ಯಕ್ಷೋ ಯಾದೃಶಸ್ತಾದೃಶೋ ಬಲಿಯೆಂ ಬುಕ್ತಿಗೆ ದುರ್ವಿದಗ್ಧರೆ ವಲಂ ನೋಂತರ್ ಪೆಱರ್ ನೋಂತರೇ (ಲೀಲಾವ. ೧-೪೦) ; (ಸೂಕ್ತಿಸು. ೧-೪೯ ನೋ) ; ಜಾಣುವೆಗಳಿಂದೋದಿ ಕಲಿತಿಹ ವಾಣಿ ಚತುರತೆಯಿಂದ ಗರ್ವವ ಕೇಣಿವಿಡಿದಿಹ ದುರ್ವಿದಗ್ಧರಿಗುಸುರಲರಿದ ಪರೇ (ಗಗಶಾ. ೧೨-೮೪): ಈ ದುರ್ವಿದಗ್ಧರಿಗೆ, ಅವಿನೀತರಿಗೆ ಏನು ಗೊತ್ತು? (ರಾಮಾನಿ. ೮೩) ; ಅವರನ್ನು ಉದ್ರೇಕಗೊಳಿಸುವ ಯುವಯುವತಿಯರೂ ದುರ್ವಿದಗ್ಧ ದುರ್ವಿನೀತರೂ ಪಿಶುನ ಪುರೋಭಾಗಿಗಳೂ ಇದ್ದಾರೆ (ಆರ್ಯಧ. ೧೨೪). ೪. ದುರಹಂಕಾರಿ ; ಗರ್ವದಿಂದ ಕೂಡಿರುವವನು : ವಾಸವ ದುರ್ದಂತರಂಬರನೇಕ ಕ್ಷುದ್ರ ವಿದ್ಯಾಗರ್ವದುರ್ವಿದಗ್ಧರುಮಳೀಕ ವಿಚಕ್ಷಣರುಮಪ್ಪುದಱಿಂದಮುದನನುಮಾನದಿಂದಮಱಿದು (ಆದಿಪು. ೩-೮೭ ವ) ; ಜ್ಞಾನಿಗಳನೊಡಬಡಿಸಬಹುದಜ್ಞಾನಿಗಳನಹುದೆನಿಸಬಹುದು ಜ್ಞಾನಲವವನು ಕೂಡಿಕೊಂಡಿಹ ದುರ್ವಿದಗ್ಧರನು ಏನ ತಿಳುಹಲು ಬಹುದು (ಕುವ್ಯಾಉ. ೪-೨೪). [ ಸಂ. ]

**ದುರ್ವಿದಗ್ಧೆ** (ನಾ). ಅವಿವೇಕಿಯಾದವಳು. [ ಸಂ. ದುರ್ವಿದಗ್ಧಾ ]

**ದುರ್ವಿಧ** (ಗು). ೧. ಕೆಟ್ಟ ನಡತೆಯುಳ್ಳ ; ನೀಚವಾದ. ೨. ಬಡತನದ; ದರಿದ್ರನಾದ. (ನಾ). ೩. ದರಿದ್ರ ; ಬಡವ : "ಅಧನಂ ದುರ್ಗತಿಕಂ ದುರ್ವಿಧನೆಂದಱಿಗಿಲ್ಲದಂ ದರಿದ್ರಂ ನಿಸ್ಸಂ" (ವಸ್ತುಕೋ. ೬೩-೬೭). ೪. ದಡ್ಡ ; ತಿಳಿಗೇಡಿ. [ ಸಂ. ]

**ದುರ್ವಿಧಿ** (ನಾ). ದುರದೃಷ್ಟ ; ದುಷ್ಟ ವಿಧಿ : ಮೋಸವೋ? ದುರ್ವಿಧಿಯ ಚೆಲ್ಲಾಟವೋ (ಸುಗುಗಂ. ೮೫-೭) ; ಬಂತಾಕೆಗೆ ಹರೆಯದವರ, – ದುರ್ವಿಧಿ ಎಳೆಯರೆದೆಗೆ ಮಾಡುವ ಮಾಟ (ನಲ್ಮ. ೧೦-೨) ; ನಿನ್ನ ಉದ್ಧತಭಾಷಣವು ನನಗೆ ದುರ್ವಿಧಿಯು ನಿನ್ನಿಂದ ಕೂಗಿಸಿದ ಅಳಲಿನ ಕೂಗಿನಂತಿದೆ (ಘಾಟೀಮು. ೪೦). [ ಸಂ. ]

**ದುರ್ವಿನಿಯೋಗ** (ನಾ). ಕೆಟ್ಟ ರೀತಿಯಲ್ಲಿ ವ್ಯಯಮಾಡುವುದು ; ಸಲ್ಲದ ರೀತಿಯಲ್ಲಿ ವಿನಿಯೋಗ ಮಾಡುವುದು : ಇದನ್ನು ಆದಷ್ಟು ರಹಸ್ಯವಾಗಿಡಿ. ದುರ್ವಿನಿಯೋಗ ಮಾಡುವ ಅನಧಿಕಾರಿಗೆ ಹೇಳಬೇಡಿ (ಮಹಾಣ. ೯೪). [ ಸಂ. ]

**ದುರ್ವಿನೀತ** (ಗು). ೧. ಒರಟು ರೀತಿಯ. ೨. ದುಷ್ಟತನದ. ೩. ಹಠಮಾರಿತನದ ; ಮೊಂಡುತನದ. (ನಾ). ೪. ಅವಿಧೇಯ ; ವಿನಯವಿಲ್ಲದವನು ; ಉದ್ಧಟ : ಅವರನ್ನು ಉದ್ರೇಕಗೊಳಿಸುವ ಯುವಯುವತಿಯರೂ ದುರ್ವಿದಗ್ಧ ದುರ್ವಿನೀತರೂ ಪಿಶುನ ಪುರೋಗಾಮಿಗಳೂ ಇದ್ದಾರೆ (ಆರ್ಯಧ. ೧೬೪). ೫. ಪಳಗಿಸದ ಕುದುರೆ. ೬. ಗಂಗ ವಂಶದ ಒಬ್ಬ ಅರಸನ ಹೆಸರು : ದುರ್ವ್ವಿನೀತ ಅರಸರಾ ದಣ್ಣನಾಯಕನು . . . ಮಹಾಜನಕ್ಕೆ ಧರ್ಮ್ಮನಿಮಿತ್ತ ಕೊಟ್ಟ ಸ್ಥಿತಿಯ ಕ್ರಮ (ಎಕ. XVI, ತುಮಕೂ. ೮೦-೮ ; 903). ೭. ಕನ್ನಡದ ಒಬ್ಬ ಕವಿಯ ಹೆಸರು : ವಿಮಳೋದಯ ನಾಗಾರ್ಜುನ ಸಮೇತ ಜಯಬಂಧು ದುರ್ವಿನೀತಾದಿಗಳೀ ಕ್ರಮದೊಳ್ ನೆಗೞ್ಚಿ ಗದ್ಯಾಶ್ರಮದ ಗುರುತಾಪ್ರತೀತಿಯಂ ಕೆಯ್ಕೊಂಡರ್ (ಕವಿರಾ. ೧-೨೯). [ ಸಂ. ]

**ದುರ್ವಿನೀತತೆ** (ನಾ). ಅವಿಧೇಯನಾಗಿರುವಿಕೆ : ಉರ್ವಿಪತಿ ನೇಮಿಸಿದಡಾಗದು ಸರ್ವಥಾ ತನಗೆಂದನನುವಿನ ದುರ್ವಿನೀತತೆಯನು ನಿರೀಕ್ಷಿಸಿ ಪೂರುವಿಂಗೆಂದ (ನಿಭಾಗ. ೯-೨೦-೪೨). [ ಸಂ. ದುರ್ವಿನೀತತಾ ]

**ದುರ್ವಿನೀತೆ** (ನಾ). ವಿನಯವಿಲ್ಲದವಳು ; ಅವಿಧೇಯಳಾದವಳು : ದುರ್ವಿನೀತೆ ವಿನಯಂಗೆಟ್ಟೆಯೆಂದಾಚಾರಮೆ ತನ್ನಂ ಜಡಿವಂತೆಯುಂ . . . ನಿನಗೆ ತರಳತೆಯಿದೆತ್ತಣಿಂ ಬಂದುದೆಂದು ಧೈರ್ಯಮೆ ಧಿಕ್ಕರಿಸುವಂತೆಯುಂ ಅತಿಲಜ್ಜಿತೆಯಾಗಿ ತನ್ನೊಳಿಂತೆಂದಳ್ (ಕಾದಂಬ. ೬೫). [ ಸಂ. ದುರ್ವಿನೀತಾ ]

**ದುರ್ವಿಪತ್ತಿ** (ನಾ). ಘೋರವಾದ ವಿಪತ್ತು,-ಅಪಾಯ : ದುರ್ವಿಪತ್ತಿಗಂ ದ್ವಾರಿಯನಿತ್ತು (ಅಮಕ. ೩೬). [ ಸಂ. ]

**ದುರ್ವಿಪಾಕ** (ನಾ). ೧. ಕೆಟ್ಟ ಫಲಿತಾಂಶ ; ಹದಗೆಡುವುದು : ಪುದಿದ ಶಿಥಿಲಪರಿಣಾಮದೊಳೊದವಿದ ದುರಿತಾನುಗತಮುದನುಭಾಗಮೆನಿಪ್ಪುದು ಶರ್ಕರಾದಿಕಿಂಪಾಕದುರ್ವಿಪಾಕ ಪ್ರಭಾವಶಕ್ತಿಪ್ರತಿಮಂ (ಸುಕುಮಾ. ೮-೩೦). ೨. ಪೂರ್ವಕರ್ಮಗಳ ದುಷ್ಟ ಪರಿಣಾಮ. 'ದೈವದುರ್ವಿಪಾಕ' ಪರಾ. [ ಸಂ. ]

**ದುರ್ವಿಮೋಹ** (ನಾ). ಕೆಟ್ಟ ಆಸೆ ; ದುಷ್ಟ ಇಚ್ಛೆ : ಹುಟ್ಟದ ಯೋನಿ ಮೆಟ್ಟದ ನೆಲಂ ನೆಱೆ ಕೊಳ್ಳದ ಕಾಲಮೊಮ್ಮೆಯುಂ ಮುಟ್ಟದ ಭಾವ ಮೊಂದದ ಭವಂ ಪೆಱತಿಲ್ಲೆನೆ ದುರ್ವಿಮೋಹದಿಂ ತಿಟ್ಟನೆ ಬಂಕೆ ನೀ ತಿಳಿಯದೆ (ಶಾಸ್ತ್ರಸಾರ. ೬) ; (ಪ್ರಾಕ್ತಾವ್ಯಮಾಲಿಕೆ. ೧೨೫೮ ನೋ). [ ಸಂ.]

**ದುರ್ವಿಲಸಿತ** (ನಾ). ಕೆಟ್ಟ ಕೆಲಸ ; ದುಷ್ಟ ಕಾರ್ಯ ; ದುಷ್ಕರ್ಮ : ದಶವದನ ಮನೋಭಂಗಮನೊಳಕೊಂಡೇಕೆ ಜಪಂಗೆಯ್ದಪೆ ನೆನೆಯ ನಿನ್ನ ದುರ್ವಿಲಸಿತಮಂ (ಪಂಪರಾಮಾ. ೧೪-೯೬). [ ಸಂ. ]

**ದುರ್ವಿಷಯ** (ನಾ). ೧. ಕೆಟ್ಟ ವಿಚಾರ ; ದುಷ್ಟ ಸಂಗತಿ : ಮನದೊಳೆ ನಿನ್ನ ಚಿಂತನೆಯನಲ್ಲದೆ ... ಕಾಯದಲ್ಲಿ ನಿನ್ನನಘಪದಾಬ್ಜಸೇವನೆಯನಲ್ಲದೆ ನಚ್ಚಿರವಾಗಳುಂ ಕೃಪಾವನನಿಧಿ ಮಿಕ್ಕ ದುರ್ವಿಷಯಮಂ ತಿಳಿದಿರ್ದಪೆ ನೀನಿದೆಲ್ಲಮಂ (ಶಬಶಂ. ೨-೧೧೧). ೨. ಹೀನವಾದ ಇಂದ್ರಿಯಸುಖ,- ವಿಷಯ : ದೇಹದಿಚ್ಛೆಗೆ ಹರಿದು ಕೆಮ್ಮನೆ ಕೆಡಬೇಡ ದುರ್ವಿಷಯವ ಬಿಡು ಬೇಗ ಗುರುಪದವ ನಂಬು (ಗಣಭಾ. ೫೮-೧); ಅತಿಕಾಂಕ್ಷೆಯಿಂದ ದುರ್ವಿಷಯ ಬಲಿದು ... ನೀ ಕೆಡಬೇಡ ಮನುಜ (ಪುರಂದ. ೧-೨೭-೨) ; ದುರ್ವಿಷಯ ವಶನಾಗಿ ಪ್ರತಿಭೆ ಪೋಗಿ ಅಂಬುಜಾಂಬಕಿ ಕೈಕೆಗಾಳಾದನೆನ್ನುತ ವಿಡಂಬನಂ ಗೆಯ್ಯುದುಳಿದಪರೆ (ವಂಕಾರಾ. ೨-೬-೪೩). [ ಸಂ. ]

**ದುರ್ವಿಳಸನ** (ನಾ). ದುರ್ವಿಲಸಿತ ; ಕೆಟ್ಟ ಕೆಲಸ ; ದುಷ್ಟಕಾರ್ಯ ; ನೀಚಕೆಲಸ : ಅವಧರಿಸದೆ ನಿನ್ನೊಳ್ ಪಿರಿದವಿನಯಮಂ ನೆಗಟ್ದ ದೋಷಮಂ ತಪದೊಳ್ ನೀಗುವೆನೆಸದಾಗ್ರಹಮಂ ಬಿಸುಡುವುದೊರ್ಮೆಗೆ ಮಱೆವುದೆನ್ನ ದುರ್ವಿಳಸನಮಂ (ಆದಿಪು. ೧೪-೧೩೦) ; ಗರ್ವಿತ ನೃಪಾಲ ಕಾಧಮ ದುರ್ವಿಳಸನಜನಿತ ಭೂರಿಭಾರದೊಳೆನಸುಂ ನಿರ್ವಿಣ್ಣೆಯಾಗಿ ಭೂವಧು ಗೀರ್ವಾಣಾವೃತವಿರಿಂಚಿಸಭೆಯಂ ಪೊಕ್ಕಳ್ (ಜಗವಿ. ೧-೨೭).
[ ಸಂ. ದುರ್ವಿಲಸನ ]

**ದುರ್ವೀರ್ಯ** (ನಾ). ದುಷ್ಟತನವುಳ್ಳವನ ವೀರ್ಯ; ಕೇಡಿಗನ ಶುಕ್ಲ,- ರೇತಸ್ಸು : ದುರ್ವೀರ್ಯವಾದುದರಿಂದ ಅದು ದುಷ್ಟನಾಗಿ ಲೋಕಕಂಟಕ ವಾಗುವುದು (ಮಹಾಣ. ೧೧೮). [ ಸಂ. ]

**ದುರ್ವೃತ್ತ** (ಗು). ೧. ಕೆಡುಕನ್ನುಂಟುಮಾಡುವ ; ದುಷ್ಟತನದ ; ಕೆಟ್ಟ ನಡತೆಯುಳ್ಳ : ಎತ್ತ ನೋಡುವಡತ್ತ ಬಲ ದುರ್ವೃತ್ತ ಸುಭಟರ ಬಲ ಶರೌಘದ ಕತ್ತಲೆಗೆ ಹದನೇನೆನುತ ದೈತ್ಯಾರಿ ಚಿಂತಿಸಿದ (ಕುವ್ಯಾದ್ರೋ. ೧೧-೬೦). (ನಾ). ೨. ದುರಾಚಾರ ; ಕೆಟ್ಟ ನಡವಳಿಕೆ ; ದುಷ್ಕರ್ಮ : ಕುಳಪಾಳನಮೆಂಬುದು ಕುಲಧರ್ಮಮುಮಂ ಪಿರಿದುಂ ಪ್ರಯತ್ನದಿಂ ಪ್ರತಿಪಾಲಿಸುವುದುಂ ಅಲ್ಲದಂದು ಕುಲಂ ದುಃಕುಲ ದುರ್ವೃತ್ತ ದೂಷಿತ ಮಕ್ಕುಂ (ಚಾವುಂಪು. ೨೨೦) ; ಶಾಸ್ತ್ರಕಾರರ ದೃಷ್ಟಿಯಲ್ಲಿ ಸ್ತ್ರೀಯವು . . . ಆತ್ಮೋದ್ಧಾರಕ್ಕೂ, ಸ್ವಶ್ರೇಯಸ್ಸಿಗೂ ಹಾನಿಕರವಾದ ದುರ್ವೃತ್ತವು (ಆರ್ಯಧ. ೨೯). ೩. ಅವಿನೀತ ; ದುರಾಚಾರಿ ; ಕೆಟ್ಟ ನಡವಳಿಕೆ ಯುಳ್ಳವನು : "ಅನಾಚಾರಿ ದುರ್ವೃತ್ತನುದಾಸೀನನಕ್ಕು" (ಮಂಗರಾ. ೭೫-೭) ; ಉತ್ತಮರುಗಳ ನಿಂದಿಸುತ ದುರ್ವೃತ್ತನಾಗಿ . . . ಜಗಕ್ಕೆ ಜಡಾತ್ಮರಾಗಿಹ ವೇದಬಾಹ್ಯರ ಮೃತ್ಯುದೇವತೆ ಮುಱಿದು ಮೋದದೆ ಬಿಡುವಳೇಯೆಂದ (ಕುವ್ಯಾಉ. ೪-೧೧೦). [ ಸಂ. ]

**ದುರ್ವೃತ್ತತನ** (ನಾ). ಕೆಟ್ಟ ನಡತೆ ; ದುರಾಚಾರ : ರಘುಪತಿಯ ಒತ್ತ ಬರದಾಹವಕೆ ತನುವನು ತೆತ್ತು ನಿಲುವವರಾರು ನೆಱೆ ದುರ್ವೃತ್ತತನವಿದು ನಮ್ಮದೆಂದಂತರಿಸಿದನು ಹನುಮ (ತೊರರಾ. ೫-೨-೪೯).
[ ದುರ್ವೃತ್ತ + -ತನ ]

**ದುರ್ವೃತ್ತಿ** (ನಾ). ೧. ದುರಾಚಾರ ; ಕೆಟ್ಟ ನಡವಳಿಕೆ : ಮುನ್ನ ಹುಟ್ಟಿ ದುದು ಮೊದಲಿದುವೆ ಕಡೆ ಮುಂಗೆಟ್ಟು ದುರ್ವೃತ್ತಿಯಲಿ ಪುಣ್ಯದ ಬಟ್ಟೆ ಯೆಂತಹದೆಂದಱೆಯೆ (ಬಸವು. ೪೧-೮) ; ದುರ್ವೃತ್ತಿಗಳು ಮೇರೆ ಮೀರುತ್ತ ನಡೆದುವು (ಜತೆಸ. ೧೦೭). ೨. ಕೆಟ್ಟ ಪರಿಸ್ಥಿತಿ ; ದುಸ್ಥಿತಿ. ೩. ದುರಾ ಚಾರಿ ; ಕೆಟ್ಟ ನಡತೆಯುಳ್ಳವನು : ಕಠಿಣಾತ್ಮರಂ ದುರ್ವೃತ್ತಿಗಳನಘ ನಿಳಯರಂ . . . ವ್ಯಾಕುಳರನತಿಕೃಪೆವೆತ್ತು ಕಾಯ್ದಾಯೆಮ್ಮುಮಂ ನೀ (ಬಸವು. ೩೮-೨೧). [ ಸಂ. ]

**ದುರ್ವೇಶ** (ನಾ). ಒಳಗೆ ಹೋಗಲು ಆಗದುದು ; ಪ್ರವೇಶಿಸಲು ಅಸಾಧ್ಯವಾದುದು: ಸಮುತ್ಕಂಟಕವಿಟಪಿಲತಾವೀರುದತ್ಕಂತವ್ಯತ್ಯುತ್ಕರ ದು ರ್ವೇ ಶ ಂ ಮನಕ್ಕದ್ಭುತರಸದೊದವಂ ತಂದುದಂದೊಂದಗೇಂದ್ರಂ (ಚಂದ್ರಪು. ೫-೬೬). [ ಸಂ. ]

**ದುರ್ವ್ಯಯ** (ನಾ). ವೃಥಾ ಖರ್ಚು ; ಅಪವ್ಯಯ. [ ಸಂ. ]

**ದುರ್ವ್ಯವಸಾಯ** (ನಾ). ಕೆಟ್ಟ ಕೆಲಸ; ದುಷ್ಟ ವ್ಯವಹಾರ; ದುಷ್ಟ ಬುದ್ಧಿಯು ತನ್ನ ದುರ್ವ್ಯವಸಾಯವು ವ್ಯರ್ಥವಾಗಿ ಹೋಯಿತೆಂದರಿತು . . . ನುಡಿದನು (ಕವಿಕ. ೧೯). [ ಸಂ. ]

**ದುರ್ವ್ಯವಸ್ಥೆ** (ನಾ). ಕೆಟ್ಟ ವ್ಯವಸ್ಥೆ ; ಸರಿಯಾದ ಸ್ಥಿತಿ ಇಲ್ಲ ದಿರುವಿಕೆ : ಕುಕಲ್ಪಿತವಾದ ಆರ್ಥಿಕ ದುರ್ವ್ಯವಸ್ಥೆಯಿಂದ ನಿರ್ಮಿಸಲ್ಪಟ್ಟ ಒಂದು ಚಕ್ರಬಿಮ್ಮನ ಕೋಟೆ ಇಂದು ನಾವು ಬಾಳುತ್ತಿರುವ ಸಮಾಜ (ದಾಸಕೊ. ೩೩). [ ಸಂ. ದುರ್ವ್ಯವಸ್ಥಾ ]

**ದುರ್ವ್ಯಸನ** (ನಾ). ಕೆಟ್ಟ ಗೀಳು ; ದುಶ್ಚಟ ; ಇಂದ್ರಿಯಭೋಗದಲ್ಲಿ ಅತ್ಯಾಸಕ್ತಿ : ಪುಸಿಬಸನಮೆಂದು ಕೆಲಬರ್ ಕುಸಿವರ್ ನಾಲಗೆಯನಿಕ್ಕು ಟಿಯೊಳ್ ಪರವಧುದುರ್ವ್ಯಸನಂ ನಿನಗೆಂದಮರ್ದಪ್ಪಿಸುವರ್ ಕೆಂಪೆಸೆಯೆ ಕಾಯ್ದುಯಃಪುತ್ರಿಕೆಯಂ (ಆದಿಪು. ೫-೮೭) ; ತನ್ನ ಗಂಡನಪ್ಪ ಕ್ರಕಚನಂ ಬರಿಸಿ ನೀನಿಂತಪ್ಪ ದುರ್ವ್ಯಸನಮಂ ಕಲ್ತೆಯೆಂದು ಬಾರಿಸಿ ಮತ್ತಮಿಂತೆಂ ದಳ್ (ಪಂಚತಂ. ೨೭೮-೧); ಸದ್ಗತಿ ಕೆಡುಗು ದುಶ್ಚರಿತದಲಿ ನಿಜಸತಿ ಕೆಡುಗು ದುರ್ವ್ಯಸನದಲಿ (ಕುವ್ಯಾಅ. ೩-೧೦೯) ; ಐಸಿರಿಯನೆಲ್ಲಮಂ ದುರ್ವ್ಯಸನ ದೊಳ್ ಕಳೆದು ಕಡುದರಿದ್ರತೆವೆತ್ತು . . . ಹಸಿವಿಂದೆ ನಿದ್ರಿವಗೆ ಬೀಳ್ವುದು ಕನಸು (ಶ್ರೀರಾಮಾ. ೬೪-೨೭೦). [ ಸಂ. ]

**ದುರ್ವ್ಯಸನಲಂಪಟ** (ನಾ). ದುಶ್ಚಟಗಳುಳ್ಳವನು ; ವಿಷಯಾಸಕ್ತ : ದುರ್ವ್ಯಸನಲಂಪಟರಿಗಾಚಾರಿಯರು ಖಳರಿಗೆ ನಿಮ್ಮೊಳುಪದೇಶ . . . ಗುಣವಿಹೀನರು ಶಲ್ಯ ನೀವೆಂದ (ಕುವ್ಯಾಕ. ೯-೨೨).
[ ದುರ್ವ್ಯಸನ + ಲಂಪಟ ]

**ದುರ್ವ್ಯಸನಿ** (ಗು). ೧. ಕೆಟ್ಟ ಚಟವುಳ್ಳ ; ದುರಭ್ಯಾಸದ. (ನಾ). ೨. ಕೆಟ್ಟ ಚಟವುಳ್ಳವನು ; ಕೆಟ್ಟ ವ್ಯಸನಗಳಲ್ಲಿ ನಿರತನಾದವನು : ಪುಸಿಯ ಪರಾಂಗನಾರತದ ಮದ್ಯದ ಮಾಂಸದ ಮೆಯ್ಗೊಱಲ್ದು ದುರ್ವ್ಯ ಸನಿಯ ಮಾಡಿದೋದೆ ನಿಮಗಾಗಮಮಾಗಿರಸತ್ಯವಾದಮಂ ಪೊಸಯಿಸಿ . . . ಕಸಕಳೆಯಂತು ನಾಲಗೆ ಪೊರಳ್ವುದು (ಆದಿಪು. ೨-೧೧) ; ರಸನೇಚ್ಛೆ ಯೊಳಾಡುವ ದುರ್ವ್ಯಸನಿಗಳುಂ ತಮಗೆ ಧರ್ಮಮುಂಟೆಂದೆಂಬರ್ (ಜನಾಲ. ೨೮-೨೮) ; ಅನುಜಾತನಂ ವಿನೀತನನಱೆಯಟ್ಟಿ ದುರ್ವ್ಯಸನಿಯಂ ಕಱೆದಂ (ಪಂಪರಾಮಾ. ೧೪-೧೧೭) ; ದುರ್ವ್ಯಸನಿ ದುರಾಚಾರಿಯೆಂದೆನಿಸದಿರಯ್ಯಾ ಎನ್ನ (ಬಸವ. ೨೬೨) ; ದಾಯಗರು ದುರ್ವ್ಯಸನಿಗಳು ದುಸ್ಸಹವು ನಿಮ್ಮಭ್ಯುದಯವಹಿತರಿಗೆ (ಕುವ್ಯಾಸ. ೧೧-೧೮). [ ಸಂ. ದುರ್ವ್ಯಸನಿನ್ ]

**ದುರ್ವ್ಯಸನಿಗ** (ನಾ). ಕೆಟ್ಟ ಗೀಳುಳ್ಳವನು: ದುರ್ವ್ಯಸನಿಗರು ದುಷ್ಟರ ನೆರವನಾಶ್ರಯಿಸುವರು (ಬಿಜ್ಜಪು. ೭೦-೩೩). [ ದುರ್ವ್ಯಸನ + – ಇಗ ]

**ದುರ್ವ್ಯಸನೆ** (ನಾ). ಕೆಟ್ಟ ಚಟವುಳ್ಳವಳು; ದುರಾಚಾರವುಳ್ಳವಳು; ದುರಭ್ಯಾಸದಿಂದ ಕೂಡಿದವಳು: ದುರ್ಮತಿ . . . ದುರ್ವ್ಯಸನೆ ದುರಾತ್ಮೆಯಪ್ಪ ವಧು ಸಜ್ಜನಪೇ (ಮದಶಿ. ೮-೭); ಚಪಳೆಯರು ದುರ್ವ್ಯಸನೆಯರು ಜನಮೋಹಪಾಶೆಯರು . . . ಕಳ್ಳೆಯರು ಚಿಳ್ಳೆಯರು (ಬಸವು. ೪೦-೫೪). [ ಸಂ. ದುರ್ವ್ಯಸನಾ ]

**ದುರ್ವ್ಯಾಪಾರ** (ನಾ). ದುರಾಚಾರ; ದುಷ್ಟ ವ್ಯವಹಾರ; ಕೆಟ್ಟ ನಡವಳಿಕೆ: ವೇದವೇದಾಂತಾದಿಕಥನಾಪಾದಿತೋಪರಿತತ್ತ್ವ ನಿಶ್ಚಯವಾದಿ ಘನಸಂಸಾರ ದುರ್ವ್ಯಾಪಾರ ಸಂಹಾರಿ (ಬಸವು. ೧೯-೨). [ ಸಂ. ]

**ದುರ್ವ್ಯಾಪಾರಿ** (ನಾ). ಕೆಟ್ಟ ಕೆಲಸದಲ್ಲಿ ಮಗ್ನನಾದವನು; ದುಷ್ಟ ವ್ಯವಹಾರದಲ್ಲಿ ತೊಡಗಿದವನು: (+). [ ಸಂ. ದುರ್ವ್ಯಾಪಾರಿನ್ ]

**ದುರ್ವ್ಯಾಪಾರಿಸು** (ಕ್ರಿ). ಕೆಟ್ಟ ನಡತೆಗೆ ಬೀಳು; ದುರಾಚಾರದಲ್ಲಿ ವ್ಯವಹರಿಸು; ಕೆಟ್ಟ ಕೆಲಸ ಮಾಡು: ಜನನೀಜನಕರಾಜ್ಞೆಯನು ಮೀಱದೆ ಕುಲಾಚಾರದಲಿ ನಡೆದಾಱುವರ್ಗವನೊಂದಿ ದುರ್ವ್ಯಾಪಾರಿಸದೆ ನಡೆದವನು ತಾ ಸತ್ಪುರುಷನವನಿಯಲಿ (ಜೀವಂಧ. ೫-೭೭).

[ ದುರ್ವ್ಯಾಪಾರ + – ಇಸು ]

**ದುರ್ವ್ಯಾಮೋಹ** (ನಾ). ಕೆಟ್ಟ ವಿಷಯದಲ್ಲಿ ಒಲವು; ದುಷ್ಟ ಕಾರ್ಯದಲ್ಲಿ ಆಸಕ್ತಿ. [ ಸಂ. ]

**ದುರ್ವ್ಯಾಲ, ದುರ್ವ್ಯಾಳ** (ನಾ). ಕೆಟ್ಟ ಹಾವು: ದುಮ್ಮಾನದಿಂ ತಮತಮಗೆ ನಿಖಿಳಸರ್ಪಾಳಿ ಚಿಂತಿಸೆ ಬಳಿಕ ಧೃತರಾಷ್ಟ್ರನೆಂಬ ದುರ್ವ್ಯಾಲ [ಪಾಠಾಂ. ಳ]ಪತಿ ನುಡಿದನು (ಜೈಮಿಭಾ. ೨೪-೨೦). **ದುರ್ವ್ಯಾಳ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ]

**ದುರ್ವ್ಯಾಳ** 'ದುರ್ವ್ಯಾಲ' ನೋ.

**ದುರ್ವ್ರಣ** (ನಾ). ಕೆಟ್ಟ ಹುಣ್ಣು; ಹುಳಿತ ಹಣ್ಣು: ಕೊಳಕು ನಾಱುವ ದುರ್ವ್ರಣಂಗಳು ತೊಳಲುವರಿವರ್ಗಕೆ ತವರ್ಮನೆ (ಬಸವು. ೪೦-೬೧); ಮದ್ದನು ಗಿಡಿವ ಜೇವಣಿಗೆಯೊಳು ಸಪ್ರಾಣಿಸುವ ದುರ್ವ್ರಣವ ತೊಡೆದು ಕಟ್ಟುವ ಹಸ್ತಿವೈದ್ಯರ ಗಡಣವುಭಯದೊಳೆಸೆವವು (ಕುಮಾಭೀ. ೫-೪೦); ಬುಡಬುಡಿಸುವೇಱಿನಲಿ ದುರ್ವ್ರಣದೊಡನೆ ಸೂಸುವ ಬಸೆಯು ನಾಱುವ ಮೊಡೆವೆಣನ ಮಿಗೆ ಬೀಗಿ ಬಿದ್ದಿರ್ದಿಭಘಟಾವಳಿಯ . . . ಕಂಡು (ತೊರರಾ. ೩-೮-೪); ದುರ್ವ್ರಣಕ್ಕೆ . . . ಸೆಕ್ಕೆ, ನವುಲಾಡಿಸೆಕ್ಕೆ . . . ಗಿದ್ದನದೊಳಗೆ ಕಾಸಿ ಕದಡಿ ಕುಡಿಗೆಯೊಳು ಇಕ್ಕಿಕೊಂಬುದು. ಕಜ್ಜಿಗೆ ತೊಡೆದು ಹಾಕುವುದು (ವಿವೈವಿ. ೧೭೫). [ ಸಂ. ]

**ದುರ್ವ್ಯಯ** (ನಾ). = ದುರ್ವ್ಯಯಂ: (+). [ <ಸಂ. ದುರ್ವ್ಯಯ ]

**ದುರ್ಹೃದ** (ನಾ). ಕೆಟ್ಟ ಹೃದಯವನ್ನುಳ್ಳವನು; ಹಗೆ; "ಶತ್ರು" (ಗಂಗಾಮು. ೦೬೪). [ ಸಂ. ದುರ್ಹೃದ್ ]

**ದುಲಿ** (ನಾ). ೧. ಹೆಣ್ಣು ಆಮೆ. ೨. ಸಣ್ಣ ಆಮೆ. [ ಸಂ. ]

**ದುಲ್ಲಟೆ** (ನಾ). ಭಿಕ್ಷಾಪಾತ್ರೆ (?): ತನ್ನ ಕೆಲದೊಳಿರ್ದ ತಿರಿದುಂಬ ದುಲ್ಲಟೆಯಂ ಕೊಂಡು ಗಜಮನಜಮನಿಡುವಂತೆ ಭಯಮಿಲ್ಲದಿಡುವುದುಂ ಕರಿ ನರಿಯಂತೆ ಕೀಟಿಟ್ಟಾಱಟ ಭಯದಿಂದಿದಿರಾಗಿ ಬರಲಣ್ಮದೆ ಮಗುಟ್ದು ತನ್ನ ನೆಲೆಗೆ ಪೋಯಿತು (ಧರ್ಮಾಮೃ. ೧೩-೭೭). [ ? ]

**ದುಲ್ಲಹ** (ಗು). ಪಡೆಯಲು ಅಸಾಧ್ಯವಾದ; ಅಸಾಮಾನ್ಯವಾದ: ಕಂಸಂ ಪಂದಿಗೆಱಗಿದ ನಾಯಂ ಹೆಕ್ಕಳಿಸುವಂತೆ ತೊಡೆಯನಪ್ಪಳಿಸಿ ದುಲ್ಲಹ ಮಲ್ಲರೊಳಘಟಶೂರಚಾಣೂರವಿಕ್ರಮದಿಂ ಸ ಮುಕ ರ್ತ ರಿ ಯ ನೆ ನ್ನ ಯ್ಯಂ ಕೊಂಡನೆಂದು ಪಡಿಗೆಯಿಸಲು (ಅರ್ಧನೇ. ೮-೧೦೭ ವ).

[ <ಪ್ರಾ. ದುಲ್ಲಹ./ಸಂ. ದುರ್ಲಭ ]

**ದುವಂಗುಲ** (ನಾ). ಎರಡು ಅಂಗುಲ: ಚೌವಂಗುಲ ದುವಂಗುಲಕೊಡೆ ಮುರಿವ ಪಟ್ಟಸಕೆ ಚಾಚುವ ಝಡಿತೆಗೊದಗುವ ಭಟರು ಹೆಣಗಿದರರಸ ಕೇಳೆಂದ (ಕುಮ್ಯಾಸ. ೨-೯೭). [ ದು + ಅಂಗುಲ ]

**ದುವಟ** 'ದುಪ್ಪಟ' ನೋ.

**ದುವಟ್ಟಿಗೆ**, ದೂವಟ್ಟಿಗೆ, ದೂವಡಿಗೆ (ನಾ). ಎರಡು ವಂಡಿಕೆಯ ಬಟ್ಟೆ: "ದುವಟ್ಟಿಗೆ (ದೂವಟ್ಟಿಗೆ) – ದ್ವಿಪಟ್ಟಿಕಾ" (ತದ್ಭಕೋ. ೨೦); ದುಗೆ – ದ್ವಿಗುಣ – ದುಗುಣ; ದ್ವಿಪಟ್ಟಿಕಾ – ದುವಟ್ಟಿಗೆ, ದೂವಟ್ಟಿಗೆ (ಶಮದ. ೨೪೦ ಪ್ರಯೋ). **ದೂವಟ್ಟಿಗೆ**: ಪದದಾದಿಯ ದೀರ್ಘಕ್ಕೆ – ಅವರ – ಆವರೆ . . . ದ್ವಿಪಟ್ಟಿಕಾ–ದೂವಟ್ಟಿಗೆ (ಶಮದ. ೨೬೭ ಪ್ರಯೋ). **ದೂವಡಿಗೆ**: ಸೀತ ವಾತಗಳ ನಿವಾರಿಸಲೆಂದು ಮಾಡಿದ ಹೊದಿಕೆಯಲ್ಲಿ ನಿಶಾರಯೆನಿಸುಗು. ದೂವಡಿಗೆ (ನಾಚಿರಾ. ೧೨೪).

[ <ಸಂ. ದ್ವಿಪಟ್ಟಿಕಾ ]

**ದುವಯಿ** (ನಾ). [ಛಂದ] ಎರಡು ಪಾದಗಳುಳ್ಳ ಒಂದು ಛಂದಸ್ಸಿನ ಹೆಸರು; ದ್ವಿಪದಿ: ಕಂದಕ್ಕಾರ್ಯೆಗೆ . . . ದುವಯಿಗೆ [ಪಾಠಾಂ. ದುವಡಿಗೆ] ಮಾತ್ರಾವೃಂದಮುಮಂ ಗಣವಿವರಣೆಯಿಂದಮುಮಂ ತಿಳಿಯ ಪೇೞ್ವೆಂ (ಛಂದೋಂಬು. ೪-೨೨೭); ಮೊದಲೊಳೆ ಮಾತ್ರೆಗಳಾಱಪ್ಪುದು ಪದ ವೆರಡಱೊಳಮಂತೆ ಕಂದದ ಗಣಮೆಯ್ದುದಯಿಸಿ ಗುರುವೆರಸಿರ್ಕಂತ್ಯದಿ ನಿರ್ಪತ್ತೆಂಟು ಮಾತ್ರೆ ದುವಯಿಗೆ ನಿಯಮಂ (ಛಂದೋಂಬು. ೪-೨೩೫).

[ <ಪ್ರಾ.ದುವಈ./ಸಂ. ದ್ವಿಪದೀ ]

**ದುವಲ** (ನಾ). ಒಂದು ತೂಕ,–ಅಳತೆ; ಎರಡು ಪಲ: ಧರಣ ಬೇಳೆ ಖಂಡಗದ ಹದಿನೈದು ಕೊಳಗದವೊಬ್ಬಳಕ್ಕಂ ಗದ್ಯಾಣ ಎಳು ಬೌಲ ದುವಲ ಬೆಲ್ಲ ಸಾವಿರದೆಂಬತ್ತಕ್ಕಂ ಗದ್ಯಾಣ ಹತ್ತು (ಎಕ. XI, ಮೊಳಕಾ. ೩೦-೧೨; 1386). [ ದು + ಪಲ$_3$ ]

**ದುವಲಿ** (ನಾ). (?): × ಪಜಾಳೆದವರು ಬಂದು ಅವರ ಬಾಗೆರತಿ ತಾಕೆ ಬಂದು ಗಂಡುಮೊಗ ಅದಂ ಪರಿಹರಿಸಿ ಕರೆವು ಆ ಹೆಂಣುಮಗುವು ಅರಡೆಂಟು ಬಳಿಯಿಸಮಬದ ಕೇಳಿ ಬಾಗಿರತಿ ಗಂಡುಮಗುವಾಗೊಲ ಹೊಟಿ ಆಕೆಗು ಹೆಂಣುಮಗ ದುವಲಿ ಕೊಟರಿ ತಂದುಮಂ ಕೊಂಡರು (ಎಕ. XVI. ಗುಬ್ಬಿ. ೨೦-೨೦; ?). [ ? ]

**ದುವಲಿನಾಯಕ** (ನಾ). ಒಬ್ಬಾತನ ಹೆಸರು: × ತಂಡಿಯ ಮಹಾಜನಕ್ಕೆ ಧರ್ಮ್ಮನಿಮಿತ್ತ ಕೊಟ್ಟ ಸ್ಥಿತಿಯ ಕ್ರಮ ಅವುದೆನ್ದಡೆ ಅರಸರಾ ದುವಲಿ ನಾಯಕನಾಳ್ವನ್ ದುದ್ದಅ ಅರಸರಾಳ್ವ ಬನ್ದಾರ್ನ್ನಾಯಕರ್ಗ್ಗೆ ಸೊಲ್ಲಗೆ ಕೀಟಾಳ್ಗೆ ಕೂಟುವುಣ × × × ಯ ಕುಡುವೊರ್ (ಎಕ. XVI, ತುಮಕೂ. ೮೧-೧೦; 903). [ ದುವಲಿ? + ನಾಯಕ ]

**ದುವಾಡ** (ನಾ). ಒಂದು ಬಗೆಯ ದೇಶೀನೃತ್ಯ: ಬಲು ದುವಾಡಕ್ಕೆ ಮನವಿಟ್ಟು ಗುಂಡಾಲ ಮೊದಲಾದವಂ ತೋಱಿ ನರ್ತಿಸಿದಳಾ ಬಾಲೆ (ಸೌಂದಪು. ೮-೧೦); ಪಲವಂದದ ದುವಾಡಮುಂ . . . ಲೇಸುವಡೆಯೆ ತಾಂಡವಮಂನಾಡುತಿರ್ದಳೀಶ್ವರನ ಸಮ್ಮುಖದೊಳು (ರೇವಣ. ೩೨-೪೮).

[ <ಸಂ. ಧ್ವಾಡ ]

**ದುವಾಡಿಸು** 'ದುವ್ವಾಳಿಸು' ನೋ.

**ದುವಾಳ್** (ನಾ). (?): ಮಾಯೆಯ ಮನೆಯ ದುವಾಳಿಂದೆ ನಿರ್ಮಾಯ ನಿತ್ಯೋಜ್ಜ್ವಳ ನಿಸ್ತ್ರೈಗುಣ್ಯ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೩೪); "ಪ್ರಾಬಲ್ಯ" (ರಕ್ಷಾಶ. ಕೋಶ). [ ? ]

**ದುವೆಟ್ಟಿಗೆ** (ನಾ). ಒಂದು ಪ್ರದೇಶದ ಹೆಸರು (?): ಪೆರಿಯ ಆಲ × × × ವಾರಿ ಮರಳ್ಳುಣಾಸ ಪೆರಿ × × × ತೊಟಿಯು ಅಲರೆ ಮೇರ ದುವೆಟ್ಟಿಗೆ ನಿಱುಕಲ್ಲು ಕೊವಳ್ಳದಾ ಪೆರಿಯ ಎಲವು ಅಲ್ಲಿಂ ಕೂಡಿತ್ತು (ಎಕ. II, ೩೫-೬; ಸು. 800). [ ? ]

**ದುವ್ವಟ** 'ದುಪ್ಪಟಿ' ನೋ.

**ದುವ್ವಟಗಾಸೆ** (ನಾ). ೧. ರೇಷ್ಮೆ ಬಟ್ಟೆಯ ಕಚ್ಚೆ : ರಂಜಿಸುವ ದಿವ್ಯಾಂಗಸುಂದರದ ಹೊಸ ದುವ್ವಟಗಾಸೆಯ ಮಲೆಯಾಳದ ಶಶಿಮುಖಿಯರು ರಾಜಿಸಿದರು (ಕಂಸವಿ. ೨೧-೮)ಜ. ೨. ವಂಡಿಕೆಯಿಂದ ಕೂಡಿರುವ ಕಚ್ಚೆ. [ ದುವ್ವಟ (<ದುಪ್ಪಟಿ) + ಕಾಸೆ₁ ]

**ದುವ್ವಟ್ಟ** 'ದುಪ್ಪಟಿ' ನೋ.

**ದುವ್ವಳಿ** 'ದುವ್ವಾಳಿ' ನೋ.

**ದುವ್ವಳಿಸು** 'ದುವ್ವಾಳಿಸು' ನೋ.

**ದುವ್ವಾಳಿ**, ದುವ್ವಳಿ, ದೂವಾಳಿ (ನಾ). ೧. ತೀವ್ರಗತಿ ; ವೇಗವಾದ ನಡೆ ; ಓಟ : ಸಾಲು ಗೋವಳಿಗಟ್ಟಿಗೆಯ ಕುಂತಾಳಿಗಳ ತೂಗಾಟ ಮಿಗೆ ದುವ್ವಾಳಿಗಳ ದೆಖ್ಖಾಳ ಗಜರಥತುರಗಸೇನೆಯಲಿ (ಕುಮಾ.ದ್ರೋ. ೧೨-೨೭) ; ಅಂಗವಣೆ ಮನದಲ್ಲಿ ಪದದಲಿ ಮುಂಗುಡಿಯ ದುವ್ವಾಳಿ ಕಯ್ಯಲಿ ಸಿಂಗದಾಯತ ಸವೆಯದೆರಡೊಡ್ಡಿನಲಿ ಸುಭಟರಿಗೆ (ಕುಮಾ.ದ್ರೋ. ೧೭-೩) ; ನಭಕುಪ್ಪರಿಸಲ್ಕೆ ನಿಲ್ಲದಲ್ಲಾಡಿತು ಪದಿನಾಲ್ಕು ಲೋಕ ಕೋಡಿಬಿದ್ದಾವು ಸಪ್ತಶರಧಿ ದುವ್ವಾಳಿಯ ಮಾಡಿದ ಗರುಡ ವೇಗದಲಿ (ಪ್ರೋಹತ. ೪೨-೭). ೨. ದಾಳಿ ; ಮುತ್ತಿಗೆ ; ಆಕ್ರಮಣ : ಕೆಲಕಡೆಯ ಕೆಳದಿಯರ ಕಂಗಳ ಹೊಳಹು ದುವ್ವಾಳಿಯಲಿ ಸುಮತಿಸ್ಖಲಿತ ಕಂಧೂಳಿಯಲಿ ಮಾಸಿತು ಮನದ ಮಡಿವರ್ಗ (ಕುಮಾ.ಆ. ೧೩-೪೭); ದಳಪತಿಯ ದುವ್ವಾಳಿ ಪಾಂಡವ ಬಲವ ಕೆದಱಿತು ಕಲ್ಪವೇಘದ ಹೊಲಿಗೆ ಹಱಿದವೊಲಾಯ್ತು ಮಾದ್ರೇಶ್ವರನ ಶರಜಾಲ (ಕುಮಾ.ಶ. ೨-೩೭) ; ರಕ್ಕಸರು ನೂಕಿದರು ಹಯಗಳ ದಕ್ಕಡೆಯ ದುವ್ವಾ[ಪಾಠಾಂ. ದೂವಾ]ಳಿಯಲಿ ಕೈಯಿಕ್ಕಿದುದು ಕಾಲಾಳು ಖಳಖಳಿಯೆನಲು ಕೈದುಗಳ (ತೊರರಾ. ೫-೬-೧೩) ; ಹೊಗೆಯ ಹೊರಳಿಯ ಧಳ್ಳುರಿಯ ಹೆಚ್ಚುಗೆಯ ದುವ್ವಾಳಿಯಲಿ ಮೃಗಜಾಲಗಳ ಮುಸುಕಿಕೊಳುತ್ತ ಬಂದುದು ಘೋರದವದಹನ (ತಿಮ್ಮಕೃ. ೪-೩೨). ೩. ಕುದುರೆಯ ಗತಿಯಲ್ಲಿ ಒಂದು ಬಗೆ: ಬವರಿಯ ಬಿಡೆಯ ದುವ್ವಾಳಿಗಳ ಸೂಟಿಯ ಸರಳ ಸೋಹಿನಲಿ ಕಡುಗಲಿಗಳೇಱಾಟದಲಿ ಮಿಗೆ ಝಡಿ ಪವಾಡ ದೃಢಾಯತಿಕೆಗಿದು ಪಡಿಯ ನೆಳ ರೇವಂತರೆಂದುದು ರಾವುತಿಕೆಗಳಲಿ (ಕುಮಾ.ಆ. ೭-೨). ೪. ಪ್ರಸರಣ ; ವ್ಯಾಪಿಸುವಿಕೆ : ಮುಗುದೆಯರು ಮನುಮಥನ ಮೊನೆಯಾಳುಗಳು ಮುಸುಕಿತು ಮಾನಿನಿಯ ದಂಡಿಗೆಯ ಮೈಕಾಂತಿಗಳ ದುವ್ವಾಳಿ[ಪಾಠಾಂ. ದುವಾಳಿ]ಗಳ ಲಹರಿಯಲಿ (ಕುಮಾ.ಆ. ೮-೭). ೫. ತೂಗಾಟ ; ಓಲಾಟ. 'ದುವ್ವಾಳಿಸು' ಪರಾ. **ದುವ್ವಳಿ.** 'ದುವ್ವಳಿಸು' ಪರಾ. **ದೂವಾಳಿ :** ೧. ಹೊಳಹು ದೂವಾಳಿಯಲಿ ಪಾರ್ಥನ ಕೆಲಕೆ ಬಿಟ್ಟನು ರಥವ ನಿಲು ನಿಲ್ಲೆಲವೋ ಹೋಗದಿರೆನುತ ಬೆಂಬತ್ತಿದನು ಕಲಿಕರ್ಣ (ಕುಮಾ.ಕ. ೧೧-೩೫) ; ಚಂಚಲಾಕ್ಷಿಯರ ಥಳಥಳಿಪ ಕಡೆಗಣ್ಣ ಕುಡಿಮಿಂಚವರೆಡರ್ದ ತೇಜಿಗಳ ದೂವಾಳಿಯುಂ ಮುಂಚಿದುವು (ಜೈಮಿಭಾ. ೧೬-೭). [ ದೇ.॥ ತೆಲು. ದುವ್ವಾಳಿ, ದುವಾಳ, ದುವಾಳಿ ]

**ದುವ್ವಾಳಿಗ** (ನಾ). ಆಕ್ರಮಣ ಮಾಡುವವನು ; ದಾಳಿಕಾರ : ಝಡಿವ ಬೊಬ್ಬೆಯ ಜಾನುಜಂಘೆಯ ದೃಢಗತಿಯ ದುವ್ವಾಳಿಗರು ಬಂದಡಸಿ ಮುತ್ತಿದರಿಂದ್ರಪುತ್ರನ ಪುರವನಗಲದಲಿ (ತೊರರಾ. ೪-೪-೩).
[ ದುವ್ವಾಳಿ + -ಗ₃ ]

**ದುವ್ವಾಳಿಸು**, ದುವಾಡಿಸು, ದುವ್ವಳಿಸು, ದೂವಾಳಿಸು (ಕ್ರಿ). ೧. ವೇಗವಾಗಿ ಓಡಿಸು ; ಮುನ್ನುಗ್ಗಿಸು : ಸೌರಾಷ್ಟ್ರದರಸನೈತಂದ ಸುದ್ದಿಯನಾದಿಮಯ್ಯಂಗೆ ಬೇಗದಿಂ ಮುಂದೆ ಪರಿದಱುಪುವಂತೆರಳೆಯುಂ ದುವ್ವಾಳಿ[ಪಾಠಾಂ. ದೂವಾಳಿ]ಸುತೆ ಚಂದ್ರಮುಂ ಬಂದನು (ಸೋಮಪುಜ. ೪-೨೬); ವಾಘೆಯ ಕೊಂಡು ರಥವನು ಮುಂದೆ ದುವ್ವಾಳಿಸಿದನು (ಕುಮಾ.ಆ. ೨೨-೨೮) ; ಹೊಳೆವ ಕುದುರೆಯ ಹಿಂಡಿನೊಳು ತಾನೆಂದು ಕತ್ತಳನ ದುವ್ವಾಳಿಸಿ ಬಂದು ಕಲಹರಿದೇಶದ ರಾಯ ಕೈಮುಗಿದೊಯ್ಯನೊಲೆದೊಂದು ದೆಸೆಯೊಳು ನಿಂದ (ಭರಚ. ೨೨-೩೫) ; ಬಿಸಿಲುಗುದುರೆಯೇಱಿ ಬೇಸಗೆ ರಾಜನಂದೆಸಗಿ ದುವ್ವಾಳಿಸಲಾಗ ಮಿಸುಗುವ ಖುರೋಧಳಿಯೆಂಬೊಲು ಸುಳಿಗಾಳಿ ಪಸರಿಸಿತಾ ಕಾಲದೊಳಗೆ (ಕಂಸವಿ. ೯-೧೨) ; ಬಿಜ್ಜಳನ ಮೇಳದೊಳು ತೇಜಿ ದುವ್ವಾಳಿಸಲ್ಕೊಡನೆಯ್ದೆ ಕನಕದಂಡದ ಚಾಮರ ಬೀಳೆ . . . ನೃಪ ಕಂಡು (ಗುರುಬಾ. ೭-೨೦) ; ಅರೆಲಕ್ಷ ದಳಗಳಿಂ ರಥವ ದುವ್ವಾಳಿಸುತ ಪರಿತಂದನು (ತುರಂಗ. ೭೩-೩೨). ೨. ರಭಸದಿಂದ ಮುನ್ನುಗ್ಗು ; ವೇಗವಾಗಿ ಹೋಗು ; ಧಾವಿಸು : ಬಳಸಿ ದುವ್ವಾಳಿಸುವ ತುರಗಕುಲಮುಂ ಪೋಳ್ದು ನೆರೆದ ರಥನಿಕರಮುಂ ನುಚ್ಚುನೂಱು ಮಾಡಿ (ವೀರರ. ಹ. ೪೯೪-೨) ; ಕಾಯಸೌಖ್ಯಕೆ ಕಾಮಸುಖದ ವಿಡಾಯ ತತುಪಕೆ ವೇಡೆಗೊಂಡು ನವಾಯಿಯಲಿ ದುರ್ಗತಿಗೆ ದುವ್ವಾಳಿಸುವವನಲ್ಲೆಂದ (ಕುಮಾ.ಆ. ೮-೩೦) ; ಪಗೆಯ ಏಳಿಸುವೆನೆದಟರು ಸೀಳಿಸುವೆನಂಗವುಂ ಬೇಳಿಸುವೆನಗ್ನಿಯೊಳ್ ತಾಳಿ ಸುರರೆಂದು ದುವ್ವಾಳಿಸುತೆ ವಂದಿರವದೋಳಿ ಸುತ್ತಲ್ ಮುಸುಕೆ ತೂಳದಿಂ ಹರಿ ನಡೆದನು (ಚಬಪು. ೩೦-೫೫). ೩. ಆಕ್ರಮಣಮಾಡು : ಕಾಲಕೇಯರ ನಗರಿಯಲಿ ದುವ್ವಾಳಿಸಿತಲೇ ಮೃತ್ಯು (ಕುಮಾ.ಆ. ೧೨-೫೫); ಲಸತ್ಪ್ರಾಗ್ವಂಶವನು ದು[ಪಾಠಾಂ. ಧು]ವ್ವಾಳಿಸಿದರೊರೆಸಿದರು ಪತ್ನೀಶಾಲೆಯನು (ನಿಘಾಗ. ೪-೨-೨೦). ೪. ಹೋಗಲಾಡಿಸು ; ನಿವಾರಿಸು : ಎಳೆನಗೆಗಳಲಿ ವೇದಪಾಠರ ಕಲಕಿ ಮಿಗೆ ವೇದಾಂತನಿಷ್ಠರ ಹೊಳಸಿ ದುವ್ವಾಳಿಸುವೆವೆಮಗಿದಿರಾರು ಲೋಕದಲಿ (ಕುಮಾ.ಆ. ೧೮-೧೪); ದೆಸೆದೆಸೆಯ ದುರಿತವನು ದುವ್ವಾಳಿಸುವ ವೀಣಾರವದ . . . ಅಸಮವೈಷ್ಣವಮಾರ್ಗಮಾನವ್ಯಸನಿಗಳ ದೇವನನು ಕಾಣುತ (ನಿಘಾಗ. ೪-೫-೧೧). ೫. ಹೋಗು ; ನಿವಾರಣೆಯಾಗು ; ದೂರದಲಿ ದುವ್ವಾಳಿಸಿದ ಭೀತಿಯಲಿ ಕಪಿ ಮೈಯಿಕ್ಕುತೈತಂದ (ತೊರರಾ. ೪-೭-೧). ೬. ಕುದುರೆಯನ್ನು ಒಂದು ವಿಶಿಷ್ಟರೀತಿಯಲ್ಲಿ ನಡೆಸು : ಇರ್ವರುಂ ವಾರುವಂಗಳನೇಱಿ ರಾವುತತನದ ಬಿನ್ನಣಮುಂ ಮೆಱೆಯಲ್ಪಡೆಯುಪ್ಪುದುಂ . . . ದುವ್ವಾಳಿಪುದುಂ ತಱುಬುವುದುಂ ಎಂಬಿವು ಮೊದಲಾದ ಗತಿಭೇದಂಗಳಿಂದಿನಿಸುಂ ಪೊಟ್ಟುಗಳೆಯುತ್ತಿರ್ಪಿನಂ (ಚಕಪು. ೧೨-೦). ೭. ತುಂಬಿಕೊಳ್ಳು ; ವ್ಯಾಪಿಸು : ಬೆಸಸಿದನು ಚಕ್ರವನು ... ದೆಸೆದೆಸೆಗೆ ದುವ್ವಾಳಿಸುವ ಬೆಳಗೆಸೆಯೆ ಬಂದು ಸುನೀತಕಂಠದ ಬೆಸುಗೆ ಬಿಡಲೆಱಗಿದುದು ಹಾಯ್ದುದು ತಲೆ ನಭಸ್ಥಳಕೆ (ಕುಮಾ.ಸ. ೧೦-೭೭) ; ಹೊಡೆವ ನಿರ್ಝರ ದುಂದುಭಿಧ್ವನಿ ಘುಡುಘುಡಿಪ ಬರಸಿಡಿಲ ಗರ್ಜನೆ ನುಡಿವ ಬಿರುಸಿನ ಕಹಳೆ ದುವ್ವಾಳಿಪ ಮಹಾಹವಕೆ (ದೇವೀಮ. ೨-೩೨). ೮. ತೂಗಾಡಿಸು ; ಬೀಸು : ಪತಾಕಾವಳಿಯ ಸೂಳೆಱಿದು ಮುಸಗಿ ದುವ್ವಾಳಿಸುವ ಗೋವಳಗಟ್ಟಿಗೆಯ ಗೊಂದಣಂಗೂಡಿ ಗಗನಂ ಕವಿದಂತೆ . . . ತೆಕ್ಕನೆ ತೀವಿದ ಪದಾತಿಬಲದೊಳಂ (ಗಿರಿಕ. ೬-೫೫ ವ) ; ಹಿಗ್ಗಿದವಮ್ಮಾಯುಧಿಷ್ಠಿರನೃಪತಿ ಭೀಮು ಕೈನೆಗ್ಗಿದಂ ಗದೆಯ ದುವ್ವಾಳಿಸುತ (ತುರಂಗ. ೭೫-೧೪). **ದುವಾಡಿಸು :** ೧. ನಾನು ತೇಜಿಯ ದುವಾಡಿಸಿದ ಮೇಲ್ಮಾಳಿಗೆಯೊಳು ಊರ್ವಶಿಯೊ . . . ಮಂಜುಘೋಷೆಯೋ ಪಾರ್ವತೀಶನೆ ಬಲ್ಲನವಳ ಕಂಡೆನ್ನ ಜೀವನ ಕಾವನೆಸುಗೆಯೊಳಗಂ ನೋವುತಿರ್ದಪೆನು (ಪ್ರಭುಪು. ೮-೨೬). **ದುವ್ವಳಿಸು :** ೧. ರಥವುಂ ದುವ್ವಳಿಸುತಲೇ ಬಳಿಕಂ (ಕರ್ಣಾಕಾ. ೨೮). ೨. ಮೈಸೂರ ಬಲವು ಸಾಗಿ ಭೂರಿ ದುಮ್ಮಿಟ್ಟು ದುವ್ವಳಿಸಿ (ಸೌಂದಕಾ. ೭-೩೮). **ದೂವಾಳಿಸು :** ೧. ತೂಳಿಸಿದರಾನೆಯಂ ಜೋದರುರವಣಿಸಿ ದೂವಾಳಿಸಿದರುಬ್ಬೆದ್ದು ರಾವುತರ್ತೇಜಿಯಂ (ಜೈಮಿಭಾ. ೨೨-೭). ೨. ತೀವಿದ ಶಸ್ತ್ರಾಸ್ತ್ರದ ದೋಣಿಗಳ ಹಳವಿಗೆಗಳ ದೂವಾಳಿಪ ತುರಗದ ಪಕ್ಕರಿಕೆಯ . . . ಜೀತ್ಕೃತಿಯೆಡ್ದೆಸೆ ಬಸವಳಿಯೆ (ವೀರೇಶ. ೨-೩೦) ; ಪವನವೇಗವ ಕೀಳ್ಪಡಿಸಿ ದೂವಾಳಿಪ ಜವಗಾತಿಯ ಬೆನ್ನೊಳಿರ್ದು ಕುವರ

ಕಂಗೆಟ್ಟು ಬಿದ್ದಪನೆಂದು ತಕ್ಕೆಗೊಂಡು (ಮೋಹತ. ೩೦-೨೭) ; ಅಯೋಧ್ಯಾಪುರಿಗೆ ದೂವಾಳಿಸಿದನವುಲವಣಿಪುಷ್ಪಕದ ಮೇಲೆ ಭರತನಂ ಪಾಲಿಸಲ್ಕೆ (ಜೈಮಿಭಾ. ೧೮-೮). ೬. ಸೂಕಳಾಶ್ವಂಗಳಂ . . . ಕಡಂಗಿ ನಡೆಯಿಪ ಪೊಳಯಿಪ ದೂವಾಳಿಪ . . . ಘೋಳಾಯಿಲರ್ ನೆರೆದು (ರಾಜಶೇ. ೬-೧೧ ವ). ೯. ಅಟ್ಟು ; ಓಡಿಸು : ಎತ್ತ ದೂವಾಳಿಸುವಡಾಲಿಗಳತ್ತ ಲಾನೆಯ ಥಟ್ಟು (ಕುಮಾವ್ಯಾ.ವಿ. ೫-೧೧). [ ದುವ್ವಾಳಿ + -ಸು$_1$ ]

**ದುವ್ವೆ** 'ದೂವೆ$_1$' ನೋ.

**ದುವ್ವೋಜ** (ನಾ). ಒಬ್ಬಾತನ ಹೆಸರು: ಮಾತಿಳ ಚಾವೋಜಂ ಎಡವ ಗೇತೋಜಂ ಅಯ್ಯಾವೊಳಿ ಗೇತೋಜಂ ಬಸದ ದೇವಿಯ ದಾಸಿ ದು[ವ್ವೋ]ಜಂ (ಸೌಇಇ. XI-i, ೫೭-೨೭ ; 1019).

[ ದುವ್ವ ? + ಓಜ$_1$ (<ಒವಜ಼) ]

**ದುಶ್ಚಟ** (ನಾ). ಕೆಟ್ಟ ಗೀಳು; ಕೆಟ್ಟ ಚಾಳಿ; ದುರಭ್ಯಾಸ: ಹಗಲುಗನಸು ಕಾಣುವ ಈ ದುಶ್ಚಟ ನನಗೆ ಹತ್ತಿದ್ದು ಸೋದರತ್ತೆಯ ಮನೆಗೆ ಹೋದ ಮೇಲೆ (ಮೂರುದಾ. ೨೪೨); ಹುಡುಗರಲ್ಲಿರುವ ದುಶ್ಚಟಗಳನ್ನು ಕಂಡೂ ಕಾಣದ ಹಾಗಿರುವ ನಿಮ್ಮ ಶಿಕ್ಷಣಕ್ಕೇನೆನ್ನಬೇಕು (ರಂಗರೂ. ೦೨೫) ; ತನ್ನ ದೃಢವಾದ ದುಶ್ಚಟಗಳಿಂದ ಬಿಡುಗಡೆ ಮಾಡಿಕೊಳ್ಳುವುದು ಸಾಧಕನಿಗೆ ಒಂದು ಪ್ರಚಂಡವಾದ ಕೆಲಸವಾಗುವುದು (ಪರಪ. ೨೬೫); ಈ ದುಶ್ಚಟವನ್ನು ತಪ್ಪಿಸಿಕೊಳ್ಳಲು ಪ್ರಯತ್ನ ಮಾಡಬೇಕು (ಮನೋನಂ. ೯೩).

[ P ಇದು ಸಂಸ್ಕೃತದಲ್ಲಿರುವ 'ದುಶ್ಚರಿತ', 'ದುಶ್ಚರಿತ್ರ' ಮುಂತಾದ ಶಬ್ದಗಳ ಸಾದೃಶ್ಯದಿಂದ ಕನ್ನಡದಲ್ಲಿ ಮಾಡಿಕೊಂಡಿರುವ ರೂಪ ]

**ದುಶ್ಚರ** (ಗು). ೧. ಆಚರಿಸಲು ಕಷ್ಟವಾದ,- ಕಠಿಣವಾದ,- ಘೋರವಾದ : ಯಮಧರಗುರುಗಳ ಪಾದಮೂಲದೊಳ್ ದುಶ್ಚರ ತಪಶ್ಚರಣಪರಾಯಣಂ ಜೀವಿತಾಂತ್ಯದೊಳ್ ಸಮಾಹಿತಚಿತ್ತನಾಗಿ ಪಡೆದಂ ಬ್ರಹ್ಮೇಂದ್ರತೆಯಂ (ಆದಿಪು. ೫-೯೭ ವ) ; ಸಹಸ್ರಾಯುಧಂ ಜನೇಶ್ವರರೂಪಮಂ ತಾಳ್ದಿ ದುಶ್ಚರತಪಶ್ಚರಣಪರಿಣತನಿಹಿತವಿಹಾರನಾಗಿ . . . ನೆಗಟುತ್ತಿರೆ (ಶಾಂತಿಪು. ೯-೨೯ ವ). (ನಾ). ೨. [ಜೈನ] ಸತ್ಪ್ರಣೀತ, ಸಮಾನ, ನಿರೂಪಮಾನ, ನಿರಪೇಕ್ಷ, ದುಶ್ಚರ, ಪ್ರರೂಢ, ಅಹಿಂಸಾಸ್ರ ಮತ್ತು ಫಳವಂತವೆಂಬ ಎಂಟುಂ ಬಗೆಯ ಧರ್ಮಗಳಲ್ಲಿ ಒಂದು; ಆಚರಿಸಲು ಕಷ್ಟವಾದ ಧರ್ಮ: ದುಶ್ಚರಮೆಂಬುದು ಬಾಲವೃದ್ಧರೋಗಾರ್ತರೇಂ ಕಾಪುರುಷರಿನೊಂದುದಿವಸಮುಪ್ಪೋಷಂ ನೆಗಟಲಶಕ್ಯಮಪ್ಪ ಧರ್ಮಂ (ಜಾವುಂಪು. ೭). [ ಸಂ. ]

**ದುಶ್ಚರಿತ** (ಗು). ಕೆಟ್ಟ ನಡತೆಯ ; ದುಷ್ಟ ನಡವಳಿಕೆಯುಳ್ಳ. (ನಾ). ೨. ಕೆಟ್ಟ ನಡತೆ ; ದುಷ್ಟತನ : ಅಕ್ಕ . . . ನಿನಗಾನುಕ್ಕಿ ಮನವಿಟ್ಟೆನ್ನ ದುಶ್ಚರಿತಕ್ಕೆ ವಿಧಿಯುಂಟೆ (ಬಸಪು. ೪೫-೯). ೩. ಕೆಟ್ಟ ಕಾರ್ಯ; ಪಾಪದ ಕೆಲಸ ; ದುಷ್ಕರ್ಮ: "ದುರಿತಂ . . . ದುಶ್ಚರಿತಂ . . . ಅಶುಭಂ ನಾರಕಂ ಮಳಂ ದುಷ್ಕರ್ಮಂ" (ವಸ್ತುಕೋ. ೨೦-೧೨); ಭವಬದ್ಧವೈರದಿಂ ಕಾದು ವಿದೇಹಿಯ ಗರ್ಭಮಂ ನಿಶಾಚರನಿರ್ದಂ ವಿವಿಧೋಪಸರ್ಗಮಂ ಪಡೆಯವೆ ಮುಳಿಸಂ ಪಡೆವ ಮುಳಿವ ದುಶ್ಚರಿತಂಗಳ್ (ಶಂರಾಮಾ. ೪-೫): ಮತಿ ಕೆಡುಗು ಮಧುಪಾನದಲಿ ಸದ್ಗತಿ ಕೆಡಂಗು ದುಶ್ಚರಿತದಲಿ (ಕುಮಾವ್ಯಾ.ಉ. ೩-೧೧೯) ; ಮಾರೀಚ ಮನದಲಿ ಘಸಣಿಗೊಳುತಿರ್ದನು ಕಣಾ ರಾಕ್ಷಸ ಕುಲಾಧೀಶ್ವರನ ದುಶ್ಚರಿತದ ದುರಾಗ್ರಹಕೆ (ತೊರರಾ. ೩-೮-೧). ೪. ಕೆಟ್ಟ ನಡತೆಯುಳ್ಳವನು ; ದುರಾಚಾರಿ : ಅಕುಲೀನಪ್ರಾಪ್ತರೊಳ್ ದುಶ್ಚರಿತರೆನಿಪ ಮಾತಂಗರೊಳ್ ಪುಟ್ಟಿ . . . ದುಃಖಾಧಿಕೆಯಿಂ [ಯಾ] ಸಂಸಾರ ಕೂಪಾರದೊಳನವರತಂ ನೀಡುಮೋಲಾಡುತಿರ್ದಳ್ (ಸುಕುಮಾ. ೫-೨೧) ; ತರುಣಿಯಲಿ ಹಗೆಗಳಲಿ . . . ದುರ್ಮಂತ್ರಿಯಲಿ ದುಶ್ಚರಿತನಲಿ ವಿಶ್ವಾಸಿಸೆಯಲೇ ಭೂಪ ಕೇಳೆಂದ (ಕುಮಾವ್ಯಾ.ಸ. ೧-೫೯). [ ಸಂ. ]

**ದುಶ್ಚರಿತೆ** (ನಾ). ಕೆಟ್ಟ ನಡವಳಿಕೆಯುಳ್ಳವಳು : ದುಶ್ಚರಿತೆ ದುರ್ಭಗೆ . . . ದುರಾತ್ಮೆಯುಪ್ಪ ವಧು ಸಜ್ಜನಮೇ (ಮದಕಿ. ೮-೭).

[ ಸಂ. ದುಶ್ಚರಿತಾ ]

**ದುಶ್ಚರಿತ್ರ** (ನಾ). ೧. ಕೆಟ್ಟ ನಡವಳಿಕೆ,- ನಡತೆ ; ಕೆಟ್ಟ ವ್ಯವಹಾರ : ಪುರುಳಿಲ್ಲದಂಗೆ ಜೈನಂ ದೊರೆಕೊಂಡುಂ ದುಶ್ಚರಿತ್ರಮಂ ಬಿಡದು (ಸಮಯಪ. ೪-೩೯) ; ಪುರುದೇವಂ ಮೊದಲಾಗಿರೆ ದೊರೆವೆತ್ತಿಕ್ಷ್ವಾಕುವಂಶದವನೀಶರೊಳಾಂಬರಮಿಲ್ಲ ದುಶ್ಚರಿತ್ರಂ ದೊರೆಕೊಂಡಂದೆನ್ನ ಪೌರುಷಂ ದೊರೆಗಿಡದೇ (ಶಂರಾಮಾ. ೧೫-೭೦) ; ಆತ ಕೊಟ್ಟುದ ತಾ ಮುಟ್ಟದೆ ಆತನಲ್ಲಿ ದುರ್ವಾರ್ಕೆ ದುಶ್ಚರಿತ್ರ ಪರಿಹಾಸಕಂಗಳಂ ಬೀಜದೆ (ವಚಸಂ. ೧೯೧-೩೪) ; ಆಮೇಲೆ ದುಶ್ಚರಿತ್ರ ಕಡಿಮೆಯಾಗುತ್ತದೆ: ಲೋಭವಿರುವುದಿಲ್ಲ (ಬಂಕಿಮು. ೬೭). ೨. ಕೆಟ್ಟ ನಡತೆಯ ವ್ಯಕ್ತಿ : ಮೃಣಾಳಿನಿಯು ದುಶ್ಚರಿತ್ರಳೆಂದು ಕೇಳಿ ಅವನಿಗೆ ದುಃಖವೂ ಕೋಪವೂ ಉಂಟಾದುವು (ಬಂಕಿಮು. ೧೮೧).

[ ಸಂ. ]

**ದುಶ್ಚರಿತ್ರೆ** (ನಾ). ಕೆಟ್ಟ ನಡತೆಯುಳ್ಳವಳು ; ದುಷ್ಟೆ: ರೋಹಿಣಿಯು ಮೊದಲು ದುಶ್ಚರಿತ್ರೆ, ಲೋಭಿ (ಬಂಕಿಮು. ೬೭). [ ಸಂ. ದುಶ್ಚರಿತ್ರಾ ]

**ದುಶ್ಚರ್ಮ** (ಗು). ೧. ಚರ್ಮರೋಗದಿಂದ ಕೂಡಿದ,-ಪೀಡೆಗೊಂಡ; ಕುಷ್ಠರೋಗವುಳ್ಳ. (ನಾ). ೨. ಕುಷ್ಠರೋಗ : ಗಣಜಲೆಯ ಬೇರು . . . ಅಮರದವಳ್ಳಿ ಎಂಬಿವಂ ಗೋಮೂತ್ರದಲ್ಲಿ ಕಾಯಿಸಿದುದಂ ಗುಗ್ಗುಳ ಬೆರಸಿ ಕುಡಿಯಲು ದುಶ್ಚರ್ಮ . . . ಉದರಶೋಷ, ಶ್ಲೇಷ್ಮಾದಿಗಳೆಲ್ಲವೂ ಮಾಣುವುವು (ವಿಶ್ವವಿ. ೧೯). ೩. ಶಿಶ್ನದ ಮುಂಭಾಗದಲ್ಲಿ ಚರ್ಮದ ಮೇಲುಪದರವಿಲ್ಲದವನು. [ ಸಂ. ದುಶ್ಚರ್ಮನ್ ]

**ದುಶ್ಚಾರಿತ್ರ** (ನಾ). = ದುಶ್ಚರಿತ್ರ ೧: ಆನೆನ್ನ ಪಿಂದಣ ದುಶ್ಚಾರಿತ್ರಮಂ ನೆನೆನೆನೆದು ವಿಷಣ್ಣೆಯಾಗಿರಲ್ (ಪುಣ್ಯಾಸ್ರ. ೧೧-೧೭ ವ). [ ಸಂ. ]

**ದುಶ್ಚಿಂತೆ** (ನಾ). ಕೆಟ್ಟ ಯೋಚನೆ ; ದುಷ್ಟ ಆಲೋಚನೆ : ಕೊನೆಗೆ ತನ್ನ ಮನಸ್ಸಿನ ದುಶ್ಚಿಂತೆಯನ್ನೂ ಈ ಎಲ್ಲ ಅಪ್ರೀತಿಕರ ಆಲೋಚನೆಯನ್ನೂ ದೂರ ತಳ್ಳುವುದಕ್ಕೋಸ್ಕರ ಭೂಪತಿಯು ಟೇಬಲ್ಲಿನಿಂದ ಒಂದು ಪುಸ್ತಕ ಎತ್ತಿಕೊಂಡು ಅಂದನು (ಇಪ್ಪಕ. ೨೬೧). [ ಸಂ. ದುಶ್ಚಿಂತಾ ]

**ದುಶ್ಚಿಕ್ಯ** (ನಾ). [ಜ್ಯೋತಿ] ಲಗ್ನದಿಂದ ಮೂರನೆಯ ರಾಶಿ : ದುಶ್ಚಿಕ್ಯ ಸಂಜ್ಞಂ ತೃತೀಯವೆ ದಲ್ . . . ಭಿದ್ರಮದು ಲಗ್ನಕಷ್ಟಮಸ್ಥಾನಕಂ (ಜಾತತಿ. ೧-೩೫). [ ಸಂ. ]

**ದುಶ್ಚಿತ್ತ** (ನಾ). ೧. ಕೆಟ್ಟ ಭಾವನೆ,-ಅಭಿಪ್ರಾಯ: ಚಿತ್ತದಲ್ಲಿ ಖಯ ಹೋಡಿ ಬೇಡೆಲೆ ಸತ್ಯಶೀಲನೆ ನಿಮ್ಮೊಡೆಗೆ ದುಶ್ಚಿತ್ತವೆಮಗಿಲ್ಲ (ಕೋಗಯ. ೨೭-೯೩). ೨. ಕೊರಗು ; ದುಃಖ. ೩. ದುಃಖಿಸಂವವನಂ ; ದುಃಖಿ: ಹೆತ್ತ ತಾಯ್ ಗಾಂಧಾರಿಸಹಿ ಸಾವಿತ್ತಡಿಗಳಕಟಕಟ ನೀ ದುಶ್ಚಿತ್ತನಾಗದಿರೆಂದು ನುಡಿದನು ನೃಪತಿ ಕೌರವಗೆ (ಕುಮಾವ್ಯಾ.ಅ. ೨೧-೧). [ ಸಂ. ]

**ದುಶ್ಚೇತ** (ನಾ). = ದುಶ್ಚಿತ್ತ ೩ : ಒಟಲುತಂ ಸಂಘಾತಿಗಳು ಹೋದರೆ ಅಕಟ ದುಶ್ಚೇತನಾದೆನೆನುತ್ತಿರಲು (ಬಸಪು. ೫೭-೧೧).

[ ಸಂ. ದುಸ್ಚೇತಸ್ ]

**ದುಶ್ಚೇಷ್ಟಿತ** (ನಾ). ಕೆಟ್ಟ ಕೆಲಸ ; ಅಯೋಗ್ಯವಾದ ಕಾರ್ಯ ; ತಪ್ಪು: 'ಮತ್ತೆ ಹೀಗೆಯೆ ಮಾಡಲಾಗದು' ಎಂಬ ಗದ್ಗದನುಡಿಯಲಿ ಅವನ ದುಶ್ಚೇಷ್ಟಿತವ ಸೂಚಿಸಿ . . . ಕಾಂತನ ಹೊಡೆವಳಳುವಾ ಕಾಂತೆಯು (ಧ್ವನ್ಯಾಲೋ. ೮೭). [ ಸಂ. ]

**ದುಶ್ಚೇಷ್ಟೆ** (ನಾ). ೧. ತುಂಟತನ ; ಕೀಟಲೆ: (ಕ). ೨. ನಾಶಕಾರಕವಾದ ಕೆಲಸ: ಹಲಧರನ ಮುಸಳವನು ಪಾಂಡವಬಲದ ದುಶ್ಚೇಷ್ಟೆಯನು . . . ಬಲಿಮಥನನೀಕ್ಷಿಸುತ . . . ಅಳುಕದಿದಿರಲಿ ನಿಂದು ಹಿಡಿದನು ಬಲನ ಬಲಗಯ್ಯ (ಕುಮಾವ್ಯಾ.ಗ. ೮-೨೪). [ ಸಂ. ದುಶ್ಚೇಷ್ಟಾ ]

**ದುಶ್ಚ್ಯವನ** (ಗು). ೧. ಕದಲಿಸಲು ಕಷ್ಟವಾದ ; ದೃಢವಾದ. (ನಾ). ೨. ಇಂದ್ರ: "ಪುರುಹೂತನಿಂದ್ರಂ ... ದುಶ್ಚ್ಯವನಂ ... ಸುತ್ರಾಮನಕ್ಕುಂ" (ಮಂಗರಾ. ೧೨-೧) ; ಸುರೆಯಿಂ ಸೊರ್ಕಂ . . . ಮುಗ್ಧ ದೋಷಾಕರನಿಂ ವಕ್ರತ್ವಮಂ ದುಶ್ಚ್ಯವನನ ಹಯದಿಂ ವೇಗಮಂ ತಾಳ್ದಿ ನೀರಾಕರ ದಿಂದೇಟ್ಟೆಂದಳಂತಾ ಸಿರಿ ಸಹಭವರಂ ಪೋಲ್ವುದೇಂ ಚೋದ್ಯಮಾಯ್ತು (ಕಾದಂಪೂ. ೫೪೬) ; ತಲೆ ಬೆಳೆದಾ ಪರ್ವತಾಕಾಶವನೇಱಿದ ಮುಗಿಲ ನೀರ ಸೇದೆಯಂ ಮಿಗೆ ದುಶ್ಚ್ಯವನಂ ಬಿಡಿಸುವ ಘನಶಸ್ತ್ರವಣಂ ಪೊಳೆವಂತೆ ಮಿಂಚು ಮಿಂಚಿತ್ತಾಗಳ್ (ಮಲ್ಲಿಕಾ. ೧೧-೧೧೦). [ ಸಂ. ]

**ದುಶ್ಶಕುನ** (ನಾ). ಅಮಂಗಳಕರವಾದ ಸೂಚನೆ; ಅಪಶಕುನ : ಕಂಡೆಯ್ಯ ದಶಕಂಠ ತಾನಿದು ಖಂಡಿತದ ದುಶ್ಶಕುನಫಲವಿದನುಂಡು ತೇಗುವ ಬೇಗ ನಡೆ (ತೊರರಾ. ೩-೮-೨) ; ಪಂಚವಟಿ ಧರೆಯೆಲ್ಲವುಂ ಪರ್ವಿರಲ್ಕದರ ದುಶ್ಶಕುನ ಸೂಚಿತ ಬೃಹಚ್ಛ್ಬಾಯೆ (ಶ್ರೀರಾಮಾ. ೨೩೦-೬೧). [ ಸಂ. ]

**ದುಶ್ಶಠಣೆ** (ನಾ). ಅಧಿಕವಾದ ದೌರ್ಜನ್ಯ : ರಾವಣಂ . . . ಬಳಿಕೆದ್ದು ಕೂಲಮುಂ ಸಾರಿ ದುಶ್ಶಠಣೆಯಿಂದಬ್ಬರಿಸಂತರುಪಿದಂ ಮುಳಿದು ಶುಕ ಸಾರಣರ್ಗೆ (ಪರಶು. ೧೨-೨೮). [ <ಸಂ. ದುಶ್ಶಠನ ]

**ದುಶ್ಶಾಲು** (ನಾ). ಎರಡಂ ಶಾಲು ; ಜೋಡಿ ಶಾಲು : ೧೦೦ ವರಹಗಳ ಸಂಬಳವನ್ನು ತೆಗೆದುಕೊಳ್ಳುತ್ತಾ, ದುಶ್ಶಾಲು ಸಹಾ ಇನಾಮಾಗಿ ಸಕಲ ಕಾರ್ಯಗಳಿಗೂ ಇವರೇ ಓಡಾಡುತಿದ್ದರು (ಜಾಮುವಂ. ೨೨೦).
[ ಮರಾ. ದುಶಾಲ್, ದುಶಾಲಾ ; ಹಿಂ. ದುಶಾಲಾ ]

**ದುಶ್ಶಾಸನ** (ಗು). ೧. ಪಳಗಿಸಲಾಗದ; ಅಂಕೆಯಲ್ಲಿಡಲಾಗದ. (ನಾ). ೨. ಧೃತರಾಷ್ಟ್ರನ ಎರಡನೆಯ ಮಗನ ಹೆಸರು ; ದುರ್ಯೋಧನನ ತಮ್ಮ : ಕಡಿಮೆ ದುಶ್ಶಾಸನೋರಸ್ಥಳಮನಗಲೆ ಪೋಟ್ದಾರ್ದು ಕೆನ್ನೆತ್ತರಂ ಪೊಕ್ಕುಡಿಮೆ ಪಿಂಗಾಕ್ಷನೂರುದ್ವಯಮನುರುಗದಾಘಾತದಿಂ (ಪಂಪಭಾ. ೭-೧೩) ; ದುಶ್ಶಾಸನೋರಸ್ಥಳ [ಕ್ಷರದಸ್ರಾಂ] ಬಾವ ನಾರ್ದು ಪೀರ್ದ ಮುಳಿಸಿಂಗಂ ಮೂಱಿಗೊಳ್ (ಗದಾಯು. ೮-೧೮) ; ದುಶ್ಶಾಸನನು ಜಗದೊಳಗದ ದುಱುದುಂಬಿ ಕುರುಪತಿ ಮೇಲೆ ನೇಮಿಸ ಲುಚಿತಗೈವನೆ (ಕುಮ್ಯಾಸ. ೦೪-೬೦). [ ಸಂ. ]

**ದುಶ್ಶೀಲ** (ಗು). ೧. ಕೆಟ್ಟ ನಡತೆಯುಳ್ಳ ; ದುಷ್ಟ ಸ್ವಭಾವದ : ಪಾಲೊಳ್ಪೊಳೆಯ ಪಿಂಡಿ ಕಲಕಿದಂದದಲಿ ದುಶ್ಶೀಲಮಂತ್ರದಿ ಸೈಂಧ ವಾಧಿಪನ ಪುತ್ರಿಯ ಹೃದಾಲಯವ ವಿಕಳಗೊಳಿಸಲ್ಕೆ . . . ಯತ್ನಮಂ ಯೋಚಿಸುತ (ಮಂಕಾರಾ. ೨-೫-೮). (ನಾ). ೨. ಕೆಟ್ಟ ನಡವಳಿಕೆ: ಆಡಳಿತ ಕಳ್ಳತನ ಮಾಡಿದರೆ . . . ದುಶ್ಶೀಲವನ್ನು ಪ್ರಸಾರಮಾಡಿದರೆ, ಕ್ಷೇತ್ರ ಬೇರೆಯೆಂದು ಧರ್ಮ ಸುಮ್ಮನಿರಬೇಕೆ ? (ಸಣ್ಣಕ. VIII, ೩೦) ; ಬಾಲ ವಿಲ್ಲದ ನರರು ಸೃಷ್ಟಿಯನ್ನಾಳುವರು . . . ಬಾಲದುದಿ ಸುಟ್ಟ ಕಪಿ ಹನುಮ ಗುಡಿದೇವನ್ಯೆ ! ಬಾಲವೇ ದುಶ್ಶೀಲ ! ನರಿಕುಲಕೆ ಕಾಲ (ಕಎಪು. ೪೩-೯). ೩. ಕೆಟ್ಟ ನಡವಳಿಕೆಯುಳ್ಳವನು ; ದುರಾಚಾರಿ : ದುಶ್ಶೀಲರ ಎನಗೊಮ್ಮೆ ತೋಱದಿರು (ವಚಸಂ. ೩೫೪-೧೧೧) ; ಮಹಾದುಸ್ಸಹನ ದುಶ್ಶೀಲನ . . . ಕೈವಿಡಿದೆತ್ತಬೇಕೆಲೆ ದೇವ ನೀನೆಂದ (ತೊರರಾ. ೪-೪-೫೭). [ ಸಂ. ]

**ದುಶ್ಶೀಲವಂತ** (ನಾ). ಕೆಟ್ಟ ಗುಣವುಳ್ಳವನು ; ದುಷ್ಟಸ್ವಭಾವದವನು : ಒಬ್ಬರನೊಬ್ಬರು ಹಳಿದಾಡುವ ದುಶ್ಶೀಲ[ಪಾಠಾಂ. ದುಃಶೀಲ]ವಂತರ ಮೆಚ್ಚುವನೆ ನಮ್ಮ ಅಖಂಡೇಶ್ವರ (ಅಖಂಡೇ. ೨೯೩-೬೨).
[ ಸಂ. ದುಶ್ಶೀಲವತ್ ]

**ದುಶ್ಶೀಲೆ** (ನಾ). ಒಳ್ಳೆಯ ನಡವಳಿಕೆಯಿಲ್ಲದವಳು ; ಕುಲಟೆ : ಪುರುಳಳಿದ ಮೆಯ್ಯಾದೊಡಂ ಬೇಳಿ ಬೆಲೆಯಿತ್ತೊಡವನಂ ಕಾಮನೆಂಬ ದುಶ್ಶೀಲೆಯರು ಕಣ್ಗೆಸೆದರು (ಹಚಕಾ. ೪-೪೪). [ ಸಂ. ದುಶ್ಶೀಲಾ ]

**ದುಶ್ಶ್ರವ** (ನಾ). ಕೇಳಲು ಕಷ್ಟವಾದುದು ; ಕರ್ಣಕಠೋರವಾದುದು: ಮತ್ತೆಯುಂ ಕೇಳಿಸಲ್ಕನುಗೆಯ್ದಪ್ಪೆನಿದೊಂದು ದುಶ್ಶ್ರವಮುಮಂ ರಾಜಾಧಿರಾಜಾತ್ಮಜಾ (ಕಾದಂಉ. ೫೪೫). [ ಸಂ. ]

**ದುಶ್ಶ್ರಾವ** (ನಾ). = ದುಶ್ಶ್ರವ : ಶರಭಗ್ರಸ್ತೋತ್ಥ ಕಂಠೀರವ ಕಟು ರಟನೋತ್ಥ ಪ್ರತಿಧ್ವಾನವದ್ಗಹ್ವರ ದುಶ್ಶ್ರಾವಶ್ರವಂ (ಚಂದ್ರಪು. ೫-೬೬).
[ ಸಂ. ]

**ದುಶ್ಶ್ರಾವ್ಯ** (ಗು). ಕೇಳಲು ಕಷ್ಟವಾದ ; ಕರ್ಣಕಠೋರವಾದ : "ದುಶ್ಶ್ರಾವ್ಯ; ಅಪಸ್ವನ; ಅಪಸ್ವರ; ಅಸಂಬದ್ಧ ; ಅಸಂಗತ" (Absonant. ಇಂಕನಿ). [ ಸಂ. ]

**ದುಶ್ಶ್ರುತಿ** (ನಾ). ಕೆಟ್ಟ ಮಾತು ; ಅಪಕೀರ್ತಿ ; ದುಷ್ಕೀರ್ತಿ : ಕೃತ ಮಱೆಯುದನೆಂಬೀ ದುಶ್ಶ್ರುತಿ ಪರೆಗುಮುಸತ್ಯದೋಷಮುಕ್ಕುಂ ಮುಳಿಗುಂ ಪ್ರತಿಪನ್ನಿಕೆಗಿಡೆ ದಶರಥಸುತನಾ ವಿಭು ಮುಳಿದವಂಗೆ ಜವನುಂ ಮುಳಿಗುಂ (ಪಂರಾಮಾ. ೧೧-೪೭). [ ಸಂ. ]

**ದುಶ್ಶ್ವಾಪದ** (ನಾ). ದುಷ್ಟ ಪ್ರಾಣಿ ; ಕ್ರೂರಮೃಗ : ನಾನಾಗುಲ್ಮ ಲತಾಂಘ್ರಿಪಪ್ರಕರದಿಂ ತೀವಿರ್ದ ದುಶ್ಶ್ವಾಪದಧ್ವಾನಾಭೀಳಮನೇನುಮಂ ಬಗೆಯದೆ . . . ಭೂನಾಥಂ ನಡೆದಂ (ನಳಚಂ. ೫೦೩). [ ಸಂ. ]

**ದುಷಮ** (ನಾ). [ಜೈನ] ಅವಸರ್ಪಿಣೀಕಾಲದ ಒಂದು ವಿಭಾಗ : ಕೆಟ್ಟ ಕಾಲ ; ಬರಿಯ ದುಃಖವೇ ತುಂಬಿರುವ ಕಾಲ : ಒಂದರೊಳ ಗಾರಾರು ಕಾಲವು ಸಂದು ಸುಷಸುಷ ಸುಷಮಸುಷದುಷದಿಂದ ದುಷಸುಷ ದುಷಮವುಂತಿದುಷಮೆಂಬ ಕಾಲಗಳು (ಬಿಜ್ಜಪು. ೮-೩೨); ಈಗ ನಡೆಯುತ್ತಿರು ವುದು ಅವಸರ್ಪಿಣಿ ಕಾಲ. ಇದನ್ನು ಈ ಕೆಳಗೆ ಕಂಡಂತೆ ಆರು ವಿಭಾಗಗಳ ನ್ನಾಗಿ ವಿಂಗಡಿಸಲಾಗಿದೆ. (೧) ಅತಿಸುಖವುಳ್ಳುದು ... (೫) ದುಃಖವುಳ್ಳುದು (ದುಷಮ) (ಭಾರದ. ೦೬೦) ; P ಜೈನಧರ್ಮದ ಪ್ರಕಾರ ಕಾಲವನ್ನು ಎರಡು ಭಾಗಗಳಾಗಿ ವಿಂಗಡಿಸಿದ್ದಾರೆ. ೧. ಉತ್ಸರ್ಪಿಣೀಕಾಲ. ೨. ಅವಸರ್ಪಿಣೀ ಕಾಲ. ಉತ್ಸರ್ಪಿಣಿ ಎಂದರೆ ಮನುಷ್ಯ ಮತ್ತು ತಿರ್ಯಗ್ಜಂತುಗಳ ದೇಹಪ್ರಮಾಣ, ಶರೀರಬಲ, ಆಯುಸ್ಸು, ಸುಖ ಇತ್ಯಾದಿಗಳು ಕ್ರಮವಾಗಿ ಏರುವ ಕಾಲ. ಅವಸರ್ಪಿಣಿ ಎಂದರೆ ಅವು ಕ್ರಮವಾಗಿ ಕುಗ್ಗುವ ಕಾಲ. ಉತ್ಸರ್ಪಿಣೀಕಾಲದಲ್ಲಿ ಈ ಕೆಳಗೆ ಸೂಚಿಸಿದ ಹೆಸರಿನ ಭಾಗಗಳು ಕ್ರಮವಾಗಿ ಮೂಡಿ ಬರುವುವು. ಅದರಲ್ಲಿ ೬ ವಿಭಾಗಗಳಿವೆ. ೧. ದುಷ್ಷಮದುಷ್ಷಮ, ಅತಿ ದುಃಖವುಳ್ಳುದು. ೨. ದುಷ್ಷಮ, ದುಃಖವುಳ್ಳುದು. ೩. ದುಷ್ಷಮ ಸುಷಮ, ಹೆಚ್ಚು ದುಃಖ ಮತ್ತು ಕಡಿಮೆ ಸುಖ ವುಳ್ಳುದು. ೪. ಸುಷಮ ದುಷ್ಷಮ, ಹೆಚ್ಚು ಸುಖ ಮತ್ತು ಕಡಿಮೆ ದುಃಖವುಳ್ಳುದು. ೫. ಸುಷಮ, ಸುಖವುಳ್ಳುದು. ೬. ಸುಷಮ ಸುಷಮ, ಅತಿ ಸುಖವುಳ್ಳುದು. ಅವಸರ್ಪಿಣೀಕಾಲದಲ್ಲಿ ಈ ಕೆಳಗೆ ಸೂಚಿಸಿದ ಹೆಸರಿನ ಭಾಗಗಳು ಕ್ರಮವಾಗಿ ಮೂಡಿ ಬರುವುವು. ಅದರಲ್ಲಿ ೬ ವಿಭಾಗಗಳಿವೆ.

೧. ಸುಷಮ ಸುಷಮ, ಅತಿಸುಖವುಳ್ಳುದು. ೨. ಸುಷಮ, ಸುಖವುಳ್ಳುದು. ೩. ಸುಷಮದುಷ್ಷಮ, ಹೆಚ್ಚು ಸುಖ ಮತ್ತು ಕಡಿಮೆ ದುಃಖವುಳ್ಳುದು. ೪. ದುಷ್ಷಮಸುಷಮ, ಹೆಚ್ಚು ದುಃಖ ಮತ್ತು ಕಡಿಮೆ ಸುಖವುಳ್ಳುದು. ೫. ದುಷ್ಷಮ, ದುಃಖವುಳ್ಳುದು. ೬. ದುಷ್ಷಮದುಷ್ಷಮ, ಅತಿದುಃಖವುಳ್ಳುದು.
[ <ಸಂ. ದುಷ್ಷಮ ]

**ದುಷಮದುಷಮ** (ನಾ). [ಜೈನ] ಅವಸರ್ಪಿಣೀಕಾಲದ ಒಂದು ವಿಭಾಗ ; ಅತಿ ಹೆಚ್ಚು ದುಃಖವುಳ್ಳ ಕಾಲ : ಈಗ ನಡೆಯುತ್ತಿರುವುದು ಅವಸರ್ಪಿಣಿ ಕಾಲ. ಇದನ್ನು ಈ ಕೆಳಗೆ ಕಂಡಂತೆ ಆರು ವಿಭಾಗಗಳನ್ನಾಗಿ

ವಿಂಗಡಿಸಲಾಗಿದೆ :— (೧) ಅತಿಸುಖವುಳ್ಳುದು . . . (೬) ಅತಿ ದುಃಖವುಳ್ಳುದು (ದುಷಮದುಷಮ) (ಭಾರದ. ೧೬೧). 'ದುಷಮ' ಪರಾ. [ ದುಷಮ + ದುಷಮ ]

**ದುಷಮಸುಷಮ** (ನಾ). [ಜೈನ] ಅವಸರ್ಪಿಣೀಕಾಲದ ಒಂದು ವಿಭಾಗ; ಹೆಚ್ಚು ದುಃಖ ಮತ್ತು ಸ್ವಲ್ಪ ಸುಖ ಕೂಡಿರುವ ಕಾಲ : ಈಗ ನಡೆಯುತ್ತಿರುವುದು ಅವಸರ್ಪಿಣಿ ಕಾಲ. ಇದನ್ನು ಈ ಕೆಳಗೆ ಕಂಡಂತೆ ಆರು ವಿಭಾಗಗಳಾಗಿ ವಿಂಗಡಿಸಲಾಗಿದೆ :— (೧) ಅತಿಸುಖವುಳ್ಳುದು . . . (೪) ದುಃಖ – ಸುಖವುಳ್ಳುದು (ದುಷಮಸುಷಮ) (ಭಾರದ. ೧೬೧). 'ದುಷಮ' ಪರಾ. [ ದುಷಮ + ಸುಷಮ ]

**ದುಷಸುಷ** (ನಾ). = ದುಷಮಸುಷಮ : ಒಂದರೊಳಗಾರುಂ ಕಾಲವು ಸಂದು . . . ಸುಷಮಸುಷಮದುಷದಿಂದ ದುಷಸುಷ ದುಷಮಮತಿದುಷಮೆಂಬ ಕಾಲಗಳು (ಬಿಜ್ಜಪು. ೮–೩೨). 'ದುಷಮ' ಪರಾ. [ <ದುಷಮಸುಷಮ ]

**ದುಷ್ಕಂಟಕ** (ನಾ). ಪರಿಹರಿಸಲು ಕಷ್ಟವಾದ ಅಡ್ಡಿ ; ನಿವಾರಿಸಲಾಗದ ಆಪತ್ತು : ಪುಷ್ಕರ ಗದಾಶಂಖಚಕ್ರಶೋಭಿತ ಕರಚತುಷ್ಕದಿಂ . . . ರಾಮಣೀಯಕ ವಪುಷ್ಕಾಂತಿಯಿಂದೆಸೆವ ನಿನ್ನ ರೂಪೆರ್ದೆಯೊಳಿರೆ ದುಷ್ಕಂಟಕದ ಭೀತಿಯೆನಗದೇಕೆಲೆ ದೇವ (ಜೈಮಿಭಾ. ೧೫–೩೬). [ ಸಂ. ]

**ದುಷ್ಕರ** (ಗು). ೧. ಮಾಡಲು ಕಠಿಣವಾದ, – ಕಷ್ಟಕರವಾದ, – ಕಷ್ಟಸಾಧ್ಯವಾದ : ದೇವವ್ರತನ ದುಷ್ಕರ ಪ್ರತಿಜ್ಞೆಯನ್ನು ಹೊಗಳುತ್ತ . . . ಎಲ್ಲರೂ ಅವನನ್ನು ಭೀಷ್ಮನೆಂದು ಕರೆಯಲಾರಂಭಿಸಿದರು (ಭೀಷ್ಮಚ. ೮). ೨. ದುಷ್ಟತನದ ; ಕೆಟ್ಟ ; ಹಿಂಸೆ ಕೊಡುವ ; ತ್ರಾಸದಾಯಕವಾದ : ಜನ್ಮದುಷ್ಕರ ರೋಗಾಳಿಯೊಳೊಂದಿ ನೊಂದುವನಿಶಂ ದ್ಯೂತಾದಿಯಿಂ ಕೆಟ್ಟ ಭೂವರರಂ ಬಣ್ಣಿಪರೇಕೆ ಮೂಢಕವಿಗಳ್ (ಹಮ್ವೀರ. ೧–೨೬). (ನಾ). ೩. ಕಷ್ಟ ; ಸುಲಭವಲ್ಲದುದು ; ದುರ್ಘಟವಾದುದು: ಅಂತು ದುರ್ಯಶಃಪದಮುಂ ದುಷ್ಕರಮುಂ ದುಸ್ಸಾಧ್ಯಮುಂ ದುರ್ಘಟಮುಮೆನಿಪೆಡೆಯೊಳ್ದೆಗೆಟ್ಟದೊಂದವಜ್ಞೆಯಿಂದೆಸಗಿದಪಂ ವಿಷಮಾಸ್ತ್ರಂ (ಕಾದಂಪೂ. ೮೫೭) ; ಅಸಮಾಸದೊಳಂದೊರೆವೆತ್ತ ಸಮಾಸದೊಳಂ ಣಕಾರದಿಂ ಪರದೊಳ್ ಸಂದಿಸಿದ ನಕಾರಂ ಣತ್ವಂ ಪ್ರಸಿದ್ಧಮುಚ್ಚರಿಸುವರ್ಗೆ ದುಷ್ಕರಮದುವುಂ (ಶಮದ. ೧೫೪) ; ನಾಟಕದ ನಿಯಮಗಳನ್ನೂ ಮಾನದಂಡಗಳನ್ನೂ ಕಂಡುಹಿಡಿದು, ಸೂತ್ರೀಕರಿಸುವುದು ಸುಲಭ; ಆದರೆ ಕಾದಂಬರಿಯ ವಿಷಯದಲ್ಲಿ ಆ ಕಾರ್ಯ ಬಹು ದುಷ್ಕರ (ಸಾಹಿಪ್ರ. ೧೨೦). ೪. ಕೆಡುಕು ; ದುಷ್ಟತನ : ಘನದುರಿತಾತ್ಮನಪ್ಪ ಶನಿಘೋಷನ ದುಷ್ಕರದೊಂದು ಸೊಂಕಿನಿಂ ಜನಿಸಿದ ಪಾಪಮುಂ ಪಟುಯುಮಿಂತೆರಡುಂ ತಪದಿಂದಮಲ್ಲದಿನ್ನೆನಗೆ ಸಮಂತು ಪಿಂಗದು (ಶಾಂತೀಶ್ವ. ೬–೧೩೦). ೫. ಯಂದ್ವದಲ್ಲಿ ಒಂದು ವರಸೆ (?) : ಒಳಗಂ ದಕ್ಷಿಣ ಸುಕರ ದುಷ್ಕರಮಂ ಪೊಱಗಣ ಸುಕರದುಷ್ಕರ ಭೇದಮಂ ಒಳಗೆ ವಾಮದ ವಿಷಮಮನಲ್ಲಿಯ ವಿಷಮದುಷ್ಕರಮನಿನ್ನದಱ ಪೊಱಗಗ್ಗಳಿಕೆಯೆನಿಪತಿ ವಿಷಮಮುಮನದಱತಿವಿಷಮ ದುಷ್ಕರಮೆಂಬ ದುಷ್ಕರಮಂ ಎಳೆಯೊಳೊರ್ವನೆ ಚಾರಿಸಲ್ ಬಲ್ಲಂ ನಾಲ್ಕುಪ್ರಕರಣಮುಮನಿನ್ದ್ರರಾಜಂ (ಎಕ. II, ೦೫೩–೮೨ : ೨೨೨). ೬. [ಕಾವ್ಯಮಿ] ಹದಿನೆಂಟು ಬಗೆಯ ಕಾವ್ಯದೋಷಗಳಲ್ಲಿ ಒಂದು ; ತಿಳಿಯಲು ಕಷ್ಟವಾಗಿರುವಿಕೆ : ಪರಿಗೀತಾರ್ಥಂ ಪೂರ್ವಾಪರದೊಳ್ ಬಗೆವಾಗಳಿಂದು ಮೊಂದಱೊಳೊಂದುಂ ದೊರೆಕೊಂಡೊಂದದೊಡದು ದುಷ್ಕರಮೆ ವಿರುದ್ಧಾರ್ಥಮೆಂಬುದಾದಂ ದೋಷಂ (ಕವಿರಾ. ೧–೮೦) ; ಅಸದರ್ಥಂ . . . ಅಭವ್ಯಂ ದುಷ್ಕರಂ . . . ಇನಿತುಂ ದೋಷಂಗಳಪ್ಪಾದಶಂ (ಛಂದೋಂಬು. ೧–೯೭ ಅಡಿಟಿ). 'ದುರ್ಲಕ್ಷಣ' ಪರಾ. ೭. = ದುಷ್ಕರಕಾವ್ಯ : ಬವಕಾರಂಗಳ್ ಪಹವರ್ಣವೆರಡುಮವಿಭೇದದಿಂದೆ ಸಲ್ಗುಂ ಸಂಯೋಗವಿಶಿಷ್ಟಮುಂ ಸ್ವರೂಪಮುಮವಿಕಲ್ಪದೊಳೊಂದಿ ನೆಗಟ್ಗುಮವು ದುಷ್ಕರದೊಳ್ (ಕಾವ್ಯಾವ. ೫೩೦). [ ಸಂ. ]

**ದುಷ್ಕರಕಾವ್ಯ** (ನಾ). ೧. [ಕಾವ್ಯಮಿ] ಕಠಿಣವಾದ ಕಾವ್ಯ ; ರಚಿಸುವುದಕ್ಕೆ ಅಥವಾ ಅರ್ಥೈಸುವುದಕ್ಕೆ ಕಷ್ಟಕರವಾದ ಕಾವ್ಯ : [ಗೋಮೂತ್ರಿಕಂ] ಸಯಮಕಂ ಪ್ರೇಮದಿಂ ಗೋಪಿತಕ್ರಿಯಂ ಶ್ರೀಮದರ್ಧಭ್ರಮಂ ಚಕ್ರನಾಮಂ ಮುರಜಬಂಧಕಂ ಇವು ದುಷ್ಕರಕಾವ್ಯಂಗಳ್ (ಕವಿರಾ. ೨–೧೧೩). ೨. ಚಿತ್ರಕಾವ್ಯ ; ವ್ಯಂಗ್ಯಾರ್ಥರಹಿತವಾದ ಕಾವ್ಯರಚನೆ : ಕಾವ್ಯದ ಎಲ್ಲಾ ಅಂಶಗಳಲ್ಲಿಯೂ ಕಂಡುಬರುವ 'ಧ್ವನಿ'ಯನ್ನು ಆನಂದವರ್ಧನನು ಬಿಡಿಸಿ, ತೋರಿಸಿ, ಅದರ ಪ್ರಾಧಾನ್ಯದ ಮೇಲೆ ಕಾವ್ಯದ ಯೋಗ್ಯತೆಯು ಹೆಚ್ಚು ಕಡಿಮೆಯಾಗುವುದೆಂದು ಹೇಳಿದನು : ಅದೇ ಪ್ರಧಾನವಾಗಿರುವುದು ಉತ್ತಮಕಾವ್ಯ, ಅಪ್ರಧಾನವಾಗಿರುವುದು ಮಧ್ಯಮಕಾವ್ಯ, ಇಲ್ಲದೆಯೇ ಇರುವುದು – 'ದುಷ್ಕರ' ಕಾವ್ಯಗಳು – ಅಧಮಕಾವ್ಯ (ಧ್ವನ್ಯಾಲೋ. X ಮುನ್ನುಡಿ). [ ದುಷ್ಕರ + ಕಾವ್ಯ ]

**ದುಷ್ಕರ್ಮ** (ನಾ). ೧. ಕೆಟ್ಟ ಕೆಲಸ ; ಪಾಪಕಾರ್ಯ ; ಪಾತಕ : "ದುರಿತಂ ಪಾಪಮಘರ್ಮಸ್ವರೂಪಂ . . . ಅಶುಭಂ ನಾರಕಂ ಮಳಂ ದುಷ್ಕರ್ಮಂ" (ವಸ್ತುಕೋ. ೨೦–೧೨) ; ಸಂಭಿನ್ನಮಹಾಪಾತಿಗಳ್ . . . ದುಃಖಾಂಭೋಧಿಯ ಕಡೆಗಾಣದೆ ಜೃಂಭಿತದುಷ್ಕರ್ಮದಿಂದೆ ನವೆದಪರಿನ್ನುಂ (ಆದಿಪು. ೫–೭೬) ; ಎನ್ನ ದುಷ್ಕರ್ಮವಶದಿಂದಾದ ಕರ್ಮವೆಂದಿನ್ನೆಗಂ ಬಗೆದೆನಾನಿಂದುತನಕಂ (ಹಚಕಾ. ೦೩–೧೪) ; ಭವಭವದೊಳ್ ಕಟ್ಟಿದನೇಕವಿಧದ ದುಷ್ಕರ್ಮಮಂ ಕಟಲ್ಚಲ್ ಪುಣ್ಯಾಸ್ರವದೊಳ್ ನೆರೆಯಲ್ ಭವ್ಯರ್ಗಿವೆ ದಿವಸಂ (ಪುಷ್ಪಪು. ೩–೧೨೪) ; ತೊಟ್ಟನೆ ಪಶುಗಳಂ ಕೊಲುವ ಮೆಲುವ ಕುಮನದ ಪಶುಕರ್ಮಿಗಳ ದುಷ್ಕರ್ಮಂ [ಪಾಠಾಂ. ದುಃಕರ್ಮಂ]ಗಳೊಳಗಿರಲು (ಬಸವಪು. ೬೦–೪೦) ; ಪೂರ್ವ ದುಷ್ಕರ್ಮವು ಒಟ್ಟೈಸಿ ಮೂಡಿದೆ ಅಲ್ಲದೊಡಾವುದೀ ಪೆಟ್ಟು (ಇಂಚಾಪ. ೪೫–೧೧). ೨. ಕಷ್ಟದ ಕೆಲಸ ; ತ್ರಾಸದಾಯಕವಾದ ಕಾರ್ಯ. ೩. ಕೀಳು ಜಾತಿಯವನು ; ಚಂಡಾಲ : "ನಿಷಾದಂ ಜನಂಗಮನು ದುಷ್ಕರ್ಮನೆನೆ ಹೊಲೆಯನಾ ಚಂಡಾಲನೆಂದೆನಲು ಡೋಹಂಗೆ ನಾಮಮಕ್ಕುಂ" (ಮಂಗರಾ. ೧೧೨–೬). [ ಸಂ. ದುಷ್ಕರ್ಮನ್ ]

**ದುಷ್ಕರ್ಮಿ** (ಗು). ೧. ಪಾಪದಿಂದ ಕೂಡಿದ ; ದುಷ್ಟತನದ. (ನಾ). ೨. ಪಾಪಕರ್ಮವನ್ನು ಮಾಡುವವನು ; ದುಷ್ಟ : ನೀಃಕರ್ಮಿ ನೀಂ ದುಷ್ಕರ್ಮಿ ನಾಂ ನೀಂ ಪಶುವನಾಂ ಪಶುವು (ಬಸವಪು. ೨೨–೬೦) ; ನಿಮ್ಮ ನಿಂದಿಸುವವರುಗಳು ದುಷ್ಕರ್ಮಿಗಳು (ಶಿವಾನ್ಮಾಅ. ೬–೧೧೯) ; ಪಾತಕಿಯಾದರೇನು . . . ನೀತಿಯ ಬಿಟ್ಟು ದುಷ್ಕರ್ಮಿಯಾದರೇನು (ಪುರಂದ. ೧–೧೯೩–೨). [ ಸಂ. ದುಷ್ಕರ್ಮಿನ್ ]

**ದುಷ್ಕವಿ** (ನಾ). ಕೆಟ್ಟ ಕವಿ ; ಕುಕವಿ : ಗರ್ವದಿಂ ಬೆಱೆತು ಬಿಜ್ಜನೆ ಬೀಗಿ ಸರಸ್ವತೀಶಿರೋವ್ಯಥೆಯನದೇಕೆ ಮಾಡುವರೊ ದುಷ್ಕವಿಗಳ್ಕಲರೀ ಧರಿತ್ರಿಯೊಳ್ (ಶೃಂಗಾರ. ೧–೭). [ ಸಂ. ]

**ದುಷ್ಕವಿತೆ** (ನಾ). ಕೆಟ್ಟಕವಿತೆ,: ಓದಿದೊಡೆ ಕಲ್ಲಮಾಲೆಯನಾದಂ ಕರ್ಬೊನ್ನ ಕಡಲೆ ವಾದಿಸೆ ರಸಮಂ ಸೋದಿಸೆಯುಂರ್ಕಿನ ಪುಡಿಯೆನಿಪಾ ದುಷ್ಕವಿತೆಗಳ ನೆಣಸಲೇಕೀ ಕೃತಿಯೊಳ್ (ಗಿರಿಕ. ೧–೨೨). [ ಸಂ. ದುಷ್ಕವಿತಾ ]

**ದುಷ್ಕಾಮ** (ನಾ). ಕೆಟ್ಟ ಬಯಕೆ; ಕೀಳು ಆಸೆ; ತುಚ್ಛವಾದ ಭೋಗಾಭಿಲಾಷೆ: ಆಡುವ ದುರಾಲಾಪವೇ ಮಂತ್ರವು ನಿನಗೆ ದುಷ್ಕಾಮವೇ ನೇಮ (ಬಸವಪು. ೪೧–೯) ; ಅಂತೇ ಅಮೃತಮತಿ ಎರಡು ಶಕ್ತಿಗಳ ಸುಂಟರಗಾಳಿಯಲ್ಲಿ ಸಿಕ್ಕಿದ ತರಗೆಲೆಯಾದಳು. ಆಮೇಲೆ ಅವಳ ದುಷ್ಕಾಮವೇ ಅವಳ ತರ್ಕವಾಯಿತು (ಕಸಾಜ. ೨೦೩). [ ಸಂ. ]

**ದುಷ್ಕಾಮಿ** (ನಾ). ದುರಾಸೆಯುಳ್ಳವನು; ದುಷ್ಟ ಅಪೇಕ್ಷೆಯುಳ್ಳವನು: ಹುಟ್ಟಿರುವುದು ನೀ . . . ನೆಟ್ಟನೆ ಕೆಲಸವ ಗೈವುದು ನೀ; ಅಷ್ಟಿರೆ ದುಷ್ಕಾಮಿಗೆ ಕೇಡಾಳಿಗೆ ಇಷ್ಟೇತಕೆ ನೀ ಬೆದರುವುದು (ಕಎಪು. ೪೯-೪). [ ಸಂ. ದುಷ್ಕಾಮಿನ್ ]

**ದುಷ್ಕಾಲ, ದುಷ್ಕಾಳ** (ನಾ). (ಪಾಪ, ಕ್ಷಾಮ, ರೋಗರುಜಿನ ಮುಂತಾದವುಗಳಿಂದ ಉಂಟಾದ) ಕೆಟ್ಟ ಕಾಲ; ಕಷ್ಟದ ಕಾಲ: **ಅಂತಹ** ದುಷ್ಕಾಲ ಬಂದರೆ ಆಗ ನನ್ನನ್ನು ನಾನು ರಕ್ಷಿಸಿಕೊಳ್ಳುವೆನು (ಮುಹಾಜ. ೧೭); ಹಣಮಾಡುವ ದಾರಿ ತಿಳಿದವರಿಗೆ, ಈ ಇಂಥ ದುಷ್ಕಾಲದಲ್ಲೂ ಪೆಟ್ರೊಮೆಕ್ಸ್ ಉರಿಸುವುದಕ್ಕೆ ಸಾಧ್ಯವಿದೆ (ಜಾರುದಾ. ೧೬೩). **ದುಷ್ಕಾಳ:** ಈ ಸಾರೆ ದುಷ್ಕಾಳದ ಸುದ್ದಿ ತಿಳಿಸಿ ತಿರುಗಿ ಬರಬೇಕು (ಅನ್ನ. ೬೪); ದುಷ್ಕಾಳಪೀಡಿತರಾಗಿ ಹೊಟ್ಟೆ ಹೊರೆದುಕೊಳ್ಳಲು ಗುಳೆ ಎತ್ತಿ ಬಂದ ದುರ್ದೈವಿಗಳು (ಮುಣ್ಣು. ೧೬೫). [ ಸಂ. ]

**ದುಷ್ಕಾಳ** 'ದುಷ್ಕಾಲ' ನೋ.

**ದುಷ್ಕೀರ್ತಿ** (ನಾ). ಅಪಯಶಸ್ಸು; ಅಪಕೀರ್ತಿ: ಬಾದ ದಕ್ಷಿಣೆ ಮೃಷ್ಟಭೋಜನದಿಂದ ತುಷ್ಟರು ನಾವು ನಮಾಗಿದಱಿಂದ ಬಹ ದುಷ್ಕೀರ್ತಿ ಬರಲೆಂದುದು ಬುಧವ್ರಾತ (ಕುವ್ಯಾಅ. ೦೫-೩); ಬಳಸುತಿದೆ ದುಷ್ಕೀರ್ತಿ ಕೀರ್ತಿಯನೆಲೆ ರಘುಕ್ಷಿತಿನಾಥ ಬಿಡಿಸೈ (ತೊರರಾ. ೩-೦೦-೨). [ ಸಂ. ]

**ದುಷ್ಕುಲ** (ನಾ). ಕೆಟ್ಟ ವಂಶ; ಹೀನವಾದ ಕುಲ: ಶಾಪದಿಂದಾದ ದುಷ್ಕುಲಂ ಸತ್ಕುಲಜ ಭೂಪ ನಿನ್ನಯ ಸಂಗದಿಂ ಶುದ್ಧವಪ್ಪುದೆಂಬಾಪೇಕ್ಷೆಯಿಂ ಬಂದೆವು (ಹಜಕಾ. ೬-೨೨). [ ಸಂ. ]

**ದುಷ್ಕುಲೀನ** (ನಾ). ಹೀನಕುಲದಲ್ಲಿ ಹುಟ್ಟಿದವನು: ವ್ಯಾಧರುಂ ದುಷ್ಕುಲೀನರುಮರಸುಗಳಾಗಿ . . . ಅನ್ಯಾಯದೊಳು ಪ್ರವರ್ತಿಸುವರು (ಚಾವುಂಪು. ೫೩). [ ಸಂ. ]

**ದುಷ್ಕೃತ** (ನಾ). ೧. ಕೆಟ್ಟ ಕೆಲಸ; ಪಾಪ; ಪಾತಕ; ನೀಚಕಾರ್ಯ: ನಾನಾಯೋನಿಗಳೊಳ್ ಸುಟಿದೇನಾನುಂ ದುಷ್ಕೃತಂ ಸಡಿಲ್ದೊಡೆ ಪಡೆದುಂ ಮಾನುಷ್ಯಮನತಿದಾರುಣಮಾನಸಶಾರೀರದುಃಖಪೀಡಿತನಕ್ಕುಂ (ಆದಿಪು. ೯-೪೮); ಕವಿಕುಳಸೇವ್ಯಮಾನ ಕವಿತಾಕಳಹಂಸೆಗೆ ಕೇಳಿಲೀಲೆ ಸಂಭವಿಪೊಡ ನಾಮುಲಂ ಜನಕಥಾರಸಮಾನಸದಲ್ಲಿ ಕೂಡೆ ಸಂಭವಿಕುಮುದಲ್ಲದಂತೆ ದೊರೆಕೊಳ್ಗುಮೆ ದುಷ್ಕೃತಸ್ವೈರಿಭಪ್ರಜಾವಿವರಮೆನಿಪ್ಪ ರಾಜವಿಟಚೋರಕಥೋಲ್ಬಣಪಲ್ವಲಂಗಳೊಳ್ (ಚಂದ್ರಪು. ೦-೫೦); ಒಂದು ದುಷ್ಕೃತ ಕಾರ್ಯ ಕಾರಣದಿಂದವಿಂತಹ ಶಾಪವಾಯಿತು (ಬಸಪು. ೩೪-೧೮); ದುಷ್ಕೃತವನೆಸಗುವರು ಫಲದಲಿ ಕಕ್ಕುಲಿಸುವರು (ಕುವ್ಯಾಉ. ೪-೯೬). ೨. ಪಾಪಿ; ಪಾತಕಿ: ದುಷ್ಕೃತನಾ ಖಚರೇಂದ್ರುಂ ನಿಷ್ಕೃಪೆಯಿಂ ಬಿಸುಟು ಪೋಗೆಯುಂ ವೇಣುವಂ (ಶಾಂತೀಶ್ವ. ೯-೦೬); ಕಪಟನಂ ದುಷ್ಕೃತನನನೃತನನಿನ್ನು ಸೈರಿಸಿ ತಪ್ಪುಗಳನೆನ್ನ ಅತಿಕರುಣದಲಿ ನೋಡಿ . . . ಸಮುದ್ಧರಿಸು (ಬಸಪು. ೨೩-೪೦). [ ಸಂ. ]

**ದುಷ್ಕೃತಕಾರಿ** (ನಾ). ಪಾಪಿ; ಪಾತಕಿ: ನಾರಿ ನರಕಕೆ ದಾರಿ . . . ಮೋಹನಕಾರಿ ದುಷ್ಕೃತಕಾರಿ (ಕಾಶಿರಾ. ೨೩-೨೮). [ಸಂ. ದುಷ್ಕೃತಕಾರಿನ್]

**ದುಷ್ಕೃತಘರಟ್ಟ** (ನಾ). ಪಾಪವನ್ನು ನಾಶಮಾಡುವವನು; ಕೆಡುಕುಗಳನ್ನು ಹೋಗಲಾಡಿಸುವವನು: ದಿಟ್ಟಿಗುತ್ತಮದ ವಸ್ತುಂಗಳಂ ದುಷ್ಕೃತಘರಟ್ಟಂಗೆ ಭಕ್ತಿಯಿಂದರ್ಪಿಸಲ್ವೇಕು (ವೀಶೈಪು. ೬-೦೦-೫).

[ ದುಷ್ಕೃತ + ಘರಟ್ಟ ]

**ದುಷ್ಕೃತಿ** (ನಾ). ೧. ಕೆಟ್ಟ ಕೆಲಸ; ದುಷ್ಕೃತ್ಯ: ದುಷ್ಕೃತಿಯ ಕುಹಕದಿಂ ಬೈದು ಭಂಗಿಸಿ ಜಱಿದನಾತ್ಮಜನನರ್ಜುನಂ (ಜೈಮಿಭಾ. ೦೬-೫೫). ೨. ದುಷ್ಟ; ನೀಚ: ದುರ್ಜನನೆನಿಸಿರ್ದ ದುಷ್ಕೃತಿಗೆ ಭಕ್ತಿಯೊಳೆತ್ತುವೆನಗ್ರಪೂಜೆಯಂ (ಸೂಕ್ತಿಸು. ೦-೨೮). [ ಸಂ. ]

**ದುಷ್ಕೃತ್ಯ** (ನಾ). ಕೆಟ್ಟ ಕೆಲಸ; ಪಾಪಕಾರ್ಯ: "ಕಾಟಿಗ್ಗಯ್ತುಮೆನೆ ದುಷ್ಕೃತ್ಯ" (ಶಬ್ದಮಂ. ೫೩); ಜ್ಞಾನವುಪದೇಶದಲಿ ದೊರೆತಿರೆ ಮಾನವನು ದುಷ್ಕೃತ್ಯವೆಸಗುವ ನೋಡಿ (ನೀಸಾರಾ. ೨೩-೦೩೨); ತನ್ನಿಂದ ಯಾವುದೋ ದುಷ್ಕೃತ್ಯವನ್ನು ಮಾಡಿಸಲು ಅವನು ಒಲೆನಿನ್ ತನಗೆ ಹೀಗೆ ಲಂಚ ಕೊಟ್ಟಿರಬೇಕು ಎಂದು ಯೋಚಿಸಿದನು (ಮಲೆನಾ. ೦೨೬). [ ಸಂ. ]

**ದುಷ್ಕ್ರಮ** (ಗು). ೧. ಕ್ರಮಬದ್ಧವಲ್ಲದ; ಅಕ್ರಮವಾದ. (ನಾ). ೨. ನಡೆದು ಸೇರಲಾಗದುದು; ನಡಗೆಯಿಂದ ಬಳಿಸಾರಲಾಗದುದು: ನುಡಿವರೆ ಕಾಣೆನಾಪ್ತರನು ನೋಡುವರುತ್ತಮಪೆಣ್ಗಳಿಲ್ಲ ನಿನ್ನಡಿಗಳ ಕಂಡು ಸೈರಿಪಡೆ ನೀನಿಹ ಊರತಿದೂರ ದುಷ್ಕ್ರಮಂ (ಮಲ್ಲಕಾ. ೦೫-೧೯೦). ೩. [ಕಾವ್ಯಮೀ] ಅರ್ಥದೋಷಗಳಲ್ಲಿ ಒಂದು; ಕ್ರಮಕ್ಕೆ ವಿರೋಧವಾದುದು: ದುಷ್ಕ್ರಮ – ಲೋಕಶಾಸ್ತ್ರಾದಿಗಳಿಗೆ ವಿರುದ್ಧವಾದ ಕ್ರಮದಲ್ಲಿ ಹೇಳಿರುವುದು (ಕೈಟಿಡಿ. ೨೨೯). [ ಸಂ. ]

**ದುಷ್ಖಲ** (ನಾ). ಮಹಾದುಷ್ಟ: ಪಾವಾಡಿಗನುರೆ ನಾಗಸರವನೂದೆ ಚಿಂತೆಯ ತಿರಸ್ಕರಿಸಿ ಪೆಡೆಯೆತ್ತಿ ನಲಿದು ಕೇಳ್ವಂತೆ ದುಷ್ಖಲಸಮೂಹಂ ಪಿಂತೆ ಗಳಹುತ್ತಿರಲ್ಕಾ ಖುಲ್ಲರೆಂಬ ಫಣಿಮಂತಣಂ ಶ್ರುತಿಪುಟಕ್ಕೆ ಕಾವ್ಯನಾಗಸರದಂತಪ್ಪುದಾಗಿ ತಲೆವೆಡೆಯೆತ್ತಿ ಕೇಳ್ವರೀ ಕೃತಿಯ ವಚನಾಮೃತವನು (ಖಕೋಪು. ೧-೪೦). [ ಸಂ. ]

**ದುಷ್ಟ** (ಗು). ೧. ಕೆಟ್ಟ ಗುಣವುಳ್ಳ; ಕೆಟ್ಟ ಸ್ವಭಾವವುಳ್ಳ; ಕೆಡುಕು ಮಾಡುವ: ಭಾಲಾಂಬಕಾ ದುಷ್ಟಕಾಲಾರಿ ಖಡ್ಗಾದಿ ಶೂಲಾಯುಧ ತ್ರಿಪುರಕೋಲಾಹಲ (ವೀಶೈಪು. ೮-೧೩-೧); ದುಷ್ಟರಾಜನ ಮಾತನವನ ರಾಜ್ಯದೊಳಿರುವಷ್ಟು ದಿವಸ ಕೇಳ್ವರಂತೆ (ಭರಚ. ೪-೯೭) ೨. ಕೆಟ್ಟುಹೋದ; ಹಾಳಾದ; ಭ್ರಷ್ಟವಾದ; ಕಲುಷಿತವಾದ. ೩. ದೋಷಯುಕ್ತವಾದ; ದೋಷಿಯಾದ. (ನಾ). ೪. ಕೆಟ್ಟವನು; ನೀಚ; ಅಧಮ: "ದುಟ್ಟಂ ತಾಂ ದುಷ್ಟನಕ್ಕು" (ಕವಿಕಂ. ೨೨೮): ದುಷ್ಟರನೊಳಕೊಂಡು ಕೆಟ್ಟರ ಕಥೆಗಳಂ ಪೇಟ್ವೆಂ (ಪಂಚತಂ. ೦೨೨-೧೨); ಇಂತಪ್ಪ ದುಷ್ಟರೆಮ್ಮೂರೊಳಗೆ ತಾನಿಲ್ಲ (ನಂಬಿರ. ೬-೨೫); ದುಷ್ಟ ದುಱುದುಂಬಿ ನಂಜುಂಡರಾಜ . . . ಮಲೆತಿರ್ದನಾಗ (ಕಂನವಿ. ೧೮-೨೦); ದುಷ್ಟರಲಿ ಶಿಷ್ಟರಲಿ . . . ಸಿದ್ಧಿ ಹೊಂದುತಲಿರಲು ನಿನ್ನಮೃತನೀತಿ ಶ್ರದ್ಧೆಯಿಹ ಧೃತಿಗಿಹುದೆ ಹೇಳ್ ಅಶಿವಭೀತಿ? (ಅನಿಕೇ. ೫೬-೯). ೫. ಪಾಪ; ಅಪರಾಧ: ಹುಟ್ಟು ಹೊಂದುಗಳಿಲ್ಲ ಕಷ್ಟ ದುಷ್ಟಗಳಿಲ್ಲ ಮುಟ್ಟದ ಹಗೆ ಕೆಳೆಯಿಲ್ಲ (ಶ್ರೀಪಾಲ. ೧೪-೮೩). ೬. ದೋಷ; ಕಳಂಕ. ೭. ದೋಷಯುಕ್ತವಾದ ಮರಕತದ ಜಾತಿಯಲ್ಲಿ ಒಂದು ಬಗೆ; ಕಣಿಗಿಲೆಯ ಎಲೆಯ ಬಣ್ಣದ ಮರಕತ: ದೋಷಲೇಶಾನ್ವಿತಂ ದುಷ್ಟಂ ದೋಷಮೂರ್ಧಿತಂ ದೋ [ಷಲೇಶಂ] ಮಂದದೋಷಮೆಂದಿಂತೀ ಪಂಚವಿಧಮಾದ ಸದೋಷ ಜಾತಿ ಮರಕತಮುಂ ಪೇಳ್ವೆನೆಂತೆನೆ ... ನಾಡೆ ಪಚ್ಚೆಳೆಯುಚ್ಚಪತ್ರದ ಕಾಂತಿಯಾದುದೆ ದುಷ್ಟಂ (ಹಾಲಾಸ್ಯ. ೨-೦-೮೮ ವ). ೮. ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯಗಳೆಂಬ ಅರಿಷಡ್ವರ್ಗ. ೯. (ಉತ್ತಮಲೋಹದ ಜೊತೆಗೆ ಬೆರೆತಿರುವ) ಕೀಳು ಲೋಹ; ಅವಲೋಹ. ೧೦. ಹಾವು; ಸರ್ಪ. ೧೧. ಕುದುರೆ; ಅಶ್ವ. ೧೨. ಮದವೇರಿದ ಆನೆಯ ಗಂಡಸ್ಥಲದಿಂದ ಸುರಿಯುವ ದ್ರವ; ಮದೋದಕ: "ಅವಲೋಹ ವಾಜಿ ದುರ್ಜನ ಷಡುವರ್ಗ ಸರ್ಪ ಗಜದಾನಗಳಿಂತಿವು ದುಷ್ಟಶಬ್ದ" (ನಾನಾರ. ೫೨). ೧೩. [ಕಾವ್ಯಮೀ] ಎಂಟು ಬಗೆಯ ವಾಕ್ಯದೋಷಗಳಲ್ಲಿ ಒಂದು; ವ್ಯಾಕರಣದೋಷಗಳಿಂದ ಕೂಡಿರುವುದು: ಖಂಡಿತ, ವ್ಯಸ್ತಸಂಬಂಧ, ಅಸಮ್ಮತ, ಅಪಕ್ರಮ, ಅಪಛಂದಸ್ಸು, ಯತಿಭ್ರಷ್ಟ, ದುಷ್ಟ, ಅಸತ್ಕ್ರಿಯೆಯೆಂಬೆಂಟು ವಾಕ್ಯದೋಷಮಿಲ್ಲದೆ (ವಿವೇಕ. ೧೮೦).

ದುಷ್ಟಮನ್ನೆಯ ಪ್ರಳಯಕಾಳ=ಕೆಟ್ಟವನಾದ ಸಾಮಂತನಿಗೆ ಪ್ರಳಯ ಕಾಲದ ಯಮನಂತಿರುವವನು; ಒಂದು ಬಿರುದು: ಅಸಹಾಯ ಸಿಂಹಂ ತಗಟ್ಟಿದ್ದ ಬಡಿವಂ ದುಷ್ಟಮನ್ನೆಯ ಪ್ರಳಯಕಾಳಂ ಶ್ರೀಮತ್ತೈಗ್ಗಡೆ ಮಾದಿ[ಮ]ಯ್ಯಂ (ಸೌಇಇ. XX, ೨೪-೬; 1034). ದುಷ್ಟರಂಕುಸ=ದುಷ್ಟರಿಗೆ ಅಂಕುಶದಂತಿರುವವನು; ಒಂದು ಬಿರುದು: ರಿಪುಮಂಡಳಿಕಕುಮರಗಳಗಂಡ್ಡಗತ್ತರಿ . . . ದುಷ್ಟರಂಕುಸ ಶ್ರೀಮ ತ್ರಿಭುವನ ಮಲ್ಲದೇವಂ (ಕಇಅ. ೧೦೪-೧೪-೧೬; 1080). ದುಷ್ಟರ್ಗೆ ಧೂರ್ತ= ಕೆಟ್ಟವರ ಪಾಲಿಗೆ ಧೂರ್ತನಂತಿರುವವನಂ; ಒಂದಂ ಬಿರುದು ಕಲಿಯುಗಪಾರ್ತ್ಥ ದುಷ್ಟರ್ಗ್ಗೆ ಧೂರ್ತ್ತ ಸಂಗ್ರಾಮರಾಮ (ಎಕ. II, ೦೧೩-೩೩; 1131). ದುಷ್ಟ ಶಿರಃಕತ್ತರಿ=ದುಷ್ಟರ ಶಿರಕ್ಕೆ ಕತ್ತರಿಯಂತಿರು ವವನಂ; ಒಂದಂ ಬಿರುದು: ಅರಿಘಟಾಕೇಸರಿ ದುಷ್ಟಶಿರಃಕ[ತ್ತ]ರಿ . . . ಸಮಸ್ತಪ್ರಶಸ್ತಿಸಹಿತ ಶ್ರೀಮನುಮಹಾಪ್ರಧಾನ ಕಡಿತವೆಗ್ಗಡೆ . . . ಮಧುವರಸರು (ಕಇಅ. ೦೪-೪-೧೪೦; 1093). [ಸಂ.]

**ದುಷ್ಟಕರ್ಮ** (ನಾ). ಕೆಟ್ಟ ಕೆಲಸ; ಹೀನಕೃತ್ಯ: ಭ್ರಷ್ಟಜನ್ಮದಲ್ಲಿ ಬಂದು ದುಷ್ಟಕರ್ಮಂಗಳನೆ ಮಾಡಿ (ಪುರಂದ. ೪-೧೨-೭). [ದುಷ್ಟ + ಕರ್ಮ]

**ದುಷ್ಟಗೋಷ್ಠಿ** (ನಾ). ಕೆಟ್ಟ ಜನರ ಸಹವಾಸ. [ದುಷ್ಟ + ಗೋಷ್ಠಿ]

**ದುಷ್ಟಗ್ರಹ** (ನಾ). ಕೆಡುಕನ್ನುಂಟುಮಾಡುವ ಗ್ರಹ; ಅನಿಷ್ಟವನ್ನುಂಟು ಮಾಡುವ ಗ್ರಹ: ಎಲವೊ ದುಷ್ಟಗ್ರಹದ ಬಾಧೆಯ ನಿಲಿಸಲಟಿಯರೆ ಮಂತ್ರವಾದಿಗಳು (ಕುಮಾ್ಯದ್ರೋ. ೧೩-೧೦). [ದುಷ್ಟ + ಗ್ರಹ]

**ದುಷ್ಟಚತುಷ್ಟಯ** (ನಾ). ೧. ನಾಲ್ವರಂ ಕೆಡುಕರ ಗುಂಪು. ೨. ಕೌರವರ ಪಕ್ಷದಲ್ಲಿ ಸದಾ ಕೆಡುಕನ್ನು ಆಲೋಚಿಸುತ್ತಿದ್ದ ನಾಲ್ಕು ಜನರ ಗುಂಪು; ದುರ್ಯೋಧನ, ಕರ್ಣ, ದುಶ್ಶಾಸನ ಮತ್ತು ಶಕುನಿ. ೩. (ವಿಶೇಷವಾಗಿ) ದುರ್ಯೋಧನನ ರಾಜ್ಯಭಾರದಲ್ಲಿ ಅವನಿಗೆ ತಿಳಿವಳಿಕೆ ನೀಡುತ್ತಿದ್ದ ನಾಲ್ಕು ಜನರು; ದುಶ್ಶಾಸನ, ಕರ್ಣ, ಶಕುನಿ ಮತ್ತು ಸೈಂಧವ: ದುಶ್ಶಾಸನ ಕರ್ಣ ಶಕುನಿ ಸೈಂಧವರೆಂಬ ದುಷ್ಟಚತುಷ್ಟಯದೊಳ್ ಮಂತಣವಿರ್ದು . . . ಇನ್ನಾವ ಮಾಟ್ಕೆ ಯೊಳ್ ಪಗೆಯಂ ಕೆಯ್ಗೆ ಮಾಡುವಂ ಪೇಟಿಮೆನೆ (ಪಂಪಭಾ. ೬-೭೭ ವ). [ದುಷ್ಟ + ಚತುಷ್ಟಯ]

**ದುಷ್ಟಜನ** (ನಾ). ಕೆಟ್ಟ ಜನ; ಕೆಡುಕನ್ನುಂಟು ಮಾಡುವ ಮಂದಿ: ದುಷ್ಟಜನರು ಈ ಸೃಷ್ಟಿಯೊಳಿದ್ದರೆ ಶಿಷ್ಟಜನರಿಗೆಲ್ಲ ಕೀರ್ತಿಗಳು (ಪುರಂದ. ೪-೧೨೩-೨); ದುಷ್ಟಜನರು ಇಲ್ಲದ ಸಲ್ಲದ ಕಾರಣಗಳನ್ನು ಕಲ್ಪಿಸಿ ಹರಟ ಬಹುದು (ಶಾಂತಲಾ. ೨೩೦). [ದುಷ್ಟ + ಜನ]

**ದುಷ್ಟತನ** (ನಾ). ೧. ಕೆಟ್ಟತನ; ನೀಚತನ: ಸೌಂದರಸೆಟ್ಟಿಯುಂ ಸೋಮ ಶರ್ಮನುಮೇಗೆಯ್ದುಂ ದುಷ್ಟತನಮಂ ನಿವಾರಿಸಲಾಜದೆ (ಧರ್ಮಾಮೃ. ೨-೧೬೧); ಶಿಸ್ತನ್ನು ಉಲ್ಲಂಘಿಸಿದವನು ಆ ನೀತಿ ನಿಯಮಗಳನ್ನು ಮುರಿಯುತ್ತಾನೆ. ಅದು ದುಷ್ಟತನ (ಶಿಕ್ಷದ. ೩೦೩). ೨. ತುಂಟತನ: ದುಷ್ಟತನ ಮಾಡಬೇಡವಯ್ಯಾ ಎನ್ನ ಕಷ್ಟವೇನೆನುತಲಿ ಮುದ್ದಿಟ್ಟು ಓಡಿದ (ಪುರಂದ. ೫-೪೯-೧). [ದುಷ್ಟ + -ತನ]

**ದುಷ್ಟತೆ** (ನಾ). ಕೆಟ್ಟತನ: ಖಲನೆನಿತು ಪಟಿಯನಾದೊಡಮಿಲೇಶ್ವರಂ ಗಟಿವನೊಡರಿಕುಂ ದುಷ್ಟತೆಯಿಂ (ಪಂಚತಂ. ೦೦೬-೨೦); ಸೃಷ್ಟಿಸಮಯ ದೊಳಿದರ್ಕಿದು ಚೇಷ್ಟಿತಮೆಂದಖಿಳಜಾತಿಯೊಳ್ ಕಲ್ಪಿಸೆ ನೀಂ ದುಷ್ಟತೆ ನಿಸರ್ಗಮಾಯ್ತೆನೆ ದುಷ್ಟವಿಷೋರಗನೆ ನಿನ್ನ ಮಾಡಿದ ಮಾಟಂ (ಜಗವಿ. ೩-೧೦೨). [ಸಂ. ದುಷ್ಟತಾ]

**ದುಷ್ಟನಿಗ್ರಹ** (ನಾ). ೧. ನೀಚರನ್ನು ಶಿಕ್ಷಿಸುವುದು; ಕೆಟ್ಟವರನ್ನು ದಂಡಿಸುವುದು: ದುಷ್ಟನಿಗ್ರಹ ಶಿಷ್ಟಪ್ರತಿಪಾಲನದಿಂ . . . ರಾಜ್ಯವೃತ್ತಿ ಯನನಾಲಸ್ಯದಿಂ ಪಾಲಿಸಿದಂದು ಯಶೋಲಾಭಮುಂ . . . ಅಕ್ಕುಂ (ಚಾವುಂಪು. ೨೦೯); ದುಷ್ಟನಿಗ್ರಹ ಶಿಷ್ಟಪ್ರತಿಪಾಲನಾರ್ಥಮೆನ್ನವತಾರಂ (ಜಗವಿ. ೩-೮೨); ಕುಮಾರನಾರಸಿಂಗದಣ್ಣಾಯಕರು ಹೆ ಟಿ ಹೆ ಮೂನೂಟಿಮಂ ದುಷ್ಟನಿಗ್ರಹ ಶಿಷ್ಟಪ್ರತಿಪಾಳನಂಗೆಯ್ದು (ಎಕ. XII, ಗುಬ್ಬಿ. ೧೧-೩೫; 1226); ವಿಹಿತಂ ಕ್ಷತ್ರಿಯನಂದನಂಗೆ ದಿಟಮೆಂತುಂ ನೀತಿಯೊಳ್ ದುಷ್ಟನಿಗ್ರಹ ಶಿಷ್ಟಪ್ರತಿಪಾಲನಂಗಳ್ (ಪುಷ್ಪಪು. ೫-೫). ೨. ಕೆಟ್ಟವರನ್ನು ದಂಡಿಸುವವನು; ದುಷ್ಟರನ್ನು ಶಿಕ್ಷಿಸುವವನು; ನೀಚರನ್ನು ನಿಗ್ರಹಿಸುವವನು: ದುಷ್ಟನಿಗ್ರಹ ಶಿಷ್ಟಪರಿಪಾಲಕ ನಮ್ಮ ಕೂಡಲಸಂಗಮದೇವ (ಬಸವ. ೫೪೮); ಶಿವಂ ಸರ್ವಥಾ ದುಷ್ಟನಿಗ್ರಹ ಶಿಷ್ಟಪಾಲಕಂ ನೀಂ ತಿಳಿದುಕೊಳ್ಳೆಂದನು (ಚೆಬಪು. ೪೭-೨೭). [ದುಷ್ಟ + ನಿಗ್ರಹ]

**ದುಷ್ಟಪರಿವಾರ** (ನಾ). ಕೆಟ್ಟ ಜನರ ಸಮೂಹ; ದುಷ್ಟತನದಿಂದ ಕೂಡಿದ ಪರಿಜನ: ದುಷ್ಟಪರಿವಾರವೇಷ್ಟಿತನಪ್ಪರಸಂ ನಮಗೇನಂ ಬಗೆವನೆಂಬುದನೆಂತಟಿವೆವು (ಪಂಚತಂ. ೨೭-೬). [ದುಷ್ಟ + ಪರಿವಾರ]

**ದುಷ್ಟಪಾಠ** (ನಾ). (ಗ್ರಂಥಸಂಪಾದನೆಯಲ್ಲಿ) ನ್ಯಾಯವಾಗಿರಬೇಕಾದ ಪಾಠಕ್ಕೆ ಬದಲಾಗಿ ಇರುವ ತಪ್ಪಾದ ಪಾಠ, - ಕೆಟ್ಟಪಾಠ ೧. ಅತ್ಯುತ್ಕೃಷ್ಟವಾದ ಪಾಠಯೋಜನೆ . . . ೪. ಯಾವ ದೃಷ್ಟಿ ಯಿಂದಲೂ ಸಮರ್ಪಕವಾಗಿಲ್ಲದ ಅಸಹನೀಯವಾದ ಒಂದು ಪಾಠ ಯೋಜನೆ (Intolerable). ಇವುಗಳಲ್ಲಿ ಮೊದಲನೆಯದನ್ನು ಕವಿಪಾಠ ವೆಂದೇ ಸ್ವೀಕರಿಸಬಹುದು; ಕೊನೆಯದು ತುಂಬ ಹದಗೆಟ್ಟಿರುವ ದುಷ್ಟಪಾಠವೆಂದು ತಿಳಿಯಬೇಕು (ಕನ್ನಸಂ. ೧೬೨). 'ಅಪಪಾಠ' ಪರ್ಯಾ. [ದುಷ್ಟ + ಪಾಠ₂]

**ದುಷ್ಟಪೀಡೆ** (ನಾ). ಕೆಟ್ಟ ಜನರಿಂದಾಗುವ ಬಾಧೆ,-ಉಪದ್ರವ: ಉಪ ಶಮಿಸುಗೆ ಸಕಲೋರ್ವಿಯೊಳುಪದ್ರವಂ ಡಿಂಬಮನಯಮುಪಲಿಂಗಂ ಮಿಕ್ಕುಪಸರ್ಗಮರಿಷ್ಟಂ ದುಷ್ಟಪೀಡೆ ಡಾಮರಮುಜನ್ಮಮಾತಿಪ್ರಕರಂ (ವಸುಕೋ. ೯೭-೧). [ದುಷ್ಟ + ಪೀಡೆ]

**ದುಷ್ಟಬುದ್ಧಿ** (ನಾ). ೧. ನೀಚ ಗುಣ; ಕೆಟ್ಟ ಬುದ್ಧಿ. ೨. ಚಂದ್ರಹಾಸನ ಕಥೆಯಲ್ಲಿ ಬರುವ ಒಬ್ಬ ಮಂತ್ರಿಯ ಹೆಸರು: ದುಷ್ಟಬುದ್ಧಿಯೆಂಬ ಕುಂತಳೇಂದ್ರನ ಮಂತ್ರಿ ತನ್ನ ಮನೆಯೊಳ್ವಿಪ್ರಸಂತರ್ಪಣಂಗೈಯಲ್ (ಜೈಮಿಭಾ. ೨೮-೨೫). [ದುಷ್ಟ + ಬುದ್ಧಿ]

**ದುಷ್ಟಭಾವನೆ** (ನಾ). ಕೆಟ್ಟ ಭಾವನೆ,-ಆಶಯ; ಕೆಡುಕಿನಿಂದ ಕೂಡಿದ ಆಲೋಚನೆ: ನನ್ನ ದುಷ್ಟಭಾವನೆಗಳನ್ನು ಕರಗಿಸಲು ನಿಮ್ಮ ಕಳ್ಳೀರಸವೇ ಬೇಕಾಗಿತ್ತು (ಕಂಬಹು. ೨೨). [ದುಷ್ಟ + ಭಾವನೆ]

**ದುಷ್ಟಮನ** (ನಾ). ೧. ಕೆಟ್ಟ ಮನಸ್ಸು. ೨. ಕೆಟ್ಟ ಮನಸ್ಸುಳ್ಳವನು: ಅಮಲಯದುವಂಶನಿರೆ ದುಷ್ಟಮನ ಮಹಾವಂಶನೆಂದು ನೀನೇತಟಿ ನಗ್ಗವೊ ಕಲ್ಪವೃಕ್ಷಮಿರೆ ಕಳ್ಳಿ ಮಹಾವೃಕ್ಷಂ ಗಡನಿತಟಿಂದು ಪಿರಿದೇ (ಜಗವಿ. ೧೭-೨೮). [ದುಷ್ಟ + ಮನ₁]

**ದುಷ್ಟಮರ್ದನ** (ನಾ). ಕೆಟ್ಟವರನ್ನು ನಾಶಮಾಡುವವನು: ದುರಿತದಲ್ಲಣ ದುಷ್ಟಮರ್ದನ ಪರಮಸುಖದಿಂದತ್ತಲಿರೆ (ಶಾಶಿರಾ. ೩೮-೧). [ದುಷ್ಟ + ಮರ್ದನ]

**ದುಷ್ಟಮೃಗ** (ನಾ). ಕಾಡುಪ್ರಾಣಿ; ಕ್ರೂರ ಮೃಗ: ದುಷ್ಟಮೃಗ ನಿರಾ ಕರಣೋಪಾಯಮನಟಿಪಿದಾತನಿಂ ಬಟಿಯಂ ಸೀಮಂಕರನೆಂಬೊನಯ್ದು ನೆಯ ಕುಲಧರಂ . . . ಕಮಳಪ್ರಮಾಣಾಯುಷ್ಯನುಮಾಗಿ (ಚಾವುಂಪು. ೧೧); ದುಷ್ಟಮೃಗಸಮಿತಿ ನೋಡಲವಷ್ಟಂಭಿಸಿ ಮಚ್ಛರೀರವಮಾಂಸಾಶನದಿಂ ತುಷ್ಟಿಯನೆಯ್ದುವುದು (ನಳಚಂ. ೫೪೮); ನನ್ನಂ ವ್ಯಾಘ್ರ ಮೊದಲಾದ ದುಷ್ಟಮೃಗಗಳು ಅಪೇಕ್ಷಿಸುತ್ತಲಿವೆಯಾದ ಕಾರಣ (ಛಗವಿ. ೦೧೯ ಉಡಾದ). [ದುಷ್ಟ + ಮೃಗ]

**ದುಷ್ಟವಚನ** (ನಾ). ಕೆಟ್ಟಮಾತು ; ಕೆಡುನುಡಿ : ಮತ್ತಂ . . . ಹಲಂಬರೊಂದಾಗಿ ಗಳಬಳಿಸುವ ಪಾರಿಪ್ಲವಮುಮಸಂಯಮಮುಂ ದುಷ್ಟವಚನಮುಮೆಂದಿವಂ ಭೋಜನಕಾಲದೊಳು ವರ್ಜಿಸುವುದು (ಪಸಾರ. ೩೦೯). [ ದುಷ್ಟ + ವಚನ ]

**ದುಷ್ಟವನಿತೆ** (ನಾ). ಕೆಟ್ಟ ಹೆಂಗಸು ; ದುಷ್ಟಳಾದ ಸ್ತ್ರೀ ; ಕುಲಟೆ : ಹಲಸಿಯ ತಾಮ್ರಶಾಸನದಲ್ಲಿ ಶಾಂತಿವರವರ್ಮನು ದುಷ್ಟವನಿತೆಯಂತೆ ಶತ್ರುಗೃಹದಲ್ಲಿ ಅಡಗಿದ್ದ ರಾಜ್ಯಲಕ್ಷ್ಮಿಯನ್ನು ಸೆಳೆದು ತಂದನೆಂದು ಬರೆದಿದೆ (ಕರ್ನಾಅ. ೨೪). [ ದುಷ್ಟ + ವನಿತೆ ]

**ದುಷ್ಟವಾಸನೆ** (ನಾ). ಕೆಟ್ಟ ಬಯಕೆ ; ದುಷ್ಟ ಆಸೆ : ಆ ದುಷ್ಟವಾಸನೆಗಳಿಂದಲೆ ಪ್ರೇರಿತರಾಗಿ ಇಂದು ಅವರು ನೆಲ್ಲೂಹಳ್ಳಿಗೆ ಬಂದಿದ್ದರು (ಕಾನೂರು. ೪೩೦). [ ದುಷ್ಟ + ವಾಸನೆ ]

**ದುಷ್ಟವಿಧಿ** (ನಾ). ಕೆಟ್ಟ ವಿಧಿ ; ದುರ್ವಿಧಿ : ದುಷ್ಟವಿಧಿಯುಂ ನರಕವನ್ನು ಮನುಷ್ಯಾಕಾರದಲ್ಲಿ ಸೃಷ್ಟಿಸಿ, ಅದಕ್ಕೆ ಹೆಣ್ಣು ಎಂದು ಹೆಸರಿಟ್ಟನೋ ! (ಸುಗುಗಂ. ೭೦-೦೪). [ ದುಷ್ಟ + ವಿಧಿ ]

**ದುಷ್ಟವ್ರಣ** (ನಾ). ಕೆಟ್ಟ ಹುಣ್ಣು ; ದುರ್ವ್ರಣ : ಏಲಕ್ಕಿ, ಚಿತ್ರಮೂಲ, ಗರುಗ, ಎಕ್ಕ, ಕೊಡಸಿಗೆಯ ತಿಗಡು, ಇವುಗಳ ಕಷಾಯದೊಳು . . . ಎಣ್ಣೆಯನ್ನರೆದು ತೈಲವನಟ್ಟು ಪೂಸಿದರೆ . . . ತೊನ್ನು ಮುಂತಾದ ದುಷ್ಟವ್ರಣಗಳು, ಕರಕು, ಇವೆಲ್ಲವನ್ನೂ ಕೆಡಿಸುಗುಂ (ವಿವೈವಿ. ೦೫೯) ; ಪಂಚವಿಂಶತಿಗುಗ್ಗುಳಚೂರ್ಣಂ . . . ತೆಗೆದುಕೊಳ್ಳಲು ಕಾಸ, ಶ್ವಾಸ . . . ಜ್ವರ, ದುಷ್ಟವ್ರಣ, ಕುಷ್ಠ, ಎಂಬತ್ತು ವಿಧ ವಾತಗಳೂ ಸಹ ಮಾಣುವುವು (ಸಕವೈ. ೪೩೭). [ ದುಷ್ಟ + ವ್ರಣ ]

**ದುಷ್ಟಶಿಕ್ಷ** (ನಾ). ಕೆಟ್ಟವರನ್ನು ದಂಡಿಸುವವನು, – ಶಿಕ್ಷಿಸುವವನು : ದುಷ್ಟಶಿಕ್ಷನ ಸುಜನರಕ್ಷಕನ ರಾಯರಾಮನ . . . ತೊರವೆಯ ರಾಯನನು ಕರೆಕರೆದು ಮೊರೆಯಿಡುತಿರ್ದಳಾ ಸೀತೆ (ತೊರರಾ. ೩-೯-೪೩).

[ ಸಂ. ]

**ದುಷ್ಟಶಿಕ್ಷಕ** (ನಾ). = ದುಷ್ಟಶಿಕ್ಷ : ದುಷ್ಟಶಿಕ್ಷಕನಾದ ನೀನು ತಾನೇ ಇದನ್ನು ಅಟ್ಟುವುದಕ್ಕೆ ಸಮರ್ಥನು (ಶಾಕುಂತ. ೯೦-೯೧). [ ದುಷ್ಟ + ಶಿಕ್ಷಕ ]

**ದುಷ್ಟಶಿಕ್ಷಣ** (ನಾ). ಕೆಟ್ಟವರನ್ನು ಶಿಕ್ಷಿಸುವುದು : ದುಷ್ಟಶಿಕ್ಷಣ ದೀಕ್ಷಿತರ ರಾಮಲಕ್ಷ್ಮಣರ ಕೋದಂಡಠಂಕಾರಮಂತ್ರಚಿಚ್ಛಕ್ತಿಯ ಶರಾಘಾತಕಳಿದನ್ ಸುಬಾಹು (ಶ್ರೀರಾಮಾ. ೩೫-೧೪೯) ; ನಾವು . . . ದುಷ್ಟಶಿಕ್ಷಣ, ಶಿಷ್ಟರಕ್ಷಣೆಯ ವ್ರತ ತೊಟ್ಟವರು (ರಾಜ್ಯೋದ. ೧೩೪). [ ದುಷ್ಟ + ಶಿಕ್ಷಣ ]

**ದುಷ್ಟಶಿಕ್ಷೆ** (ನಾ). = ದುಷ್ಟಶಿಕ್ಷಣ : ರಾಜ್ಯವಾಳುವವರಿಗೆ ದುಷ್ಟಶಿಕ್ಷೆ, ಶಿಷ್ಟರಕ್ಷೆ ಇವೆರಡೂ ಗುಣಗಳಾಗಿರಬೇಕು (ರೂಢಿ). [ ದುಷ್ಟ + ಶಿಕ್ಷೆ ]

**ದುಷ್ಟಸಂಗತಿ** (ನಾ). ಕೆಟ್ಟ ಸಹವಾಸ : ದಾನಮಿತ್ರನು ರಾಜ್ಯವ ಬಿಟ್ಟು ದುಷ್ಟಸಂಗತಿಯಲ್ಲಿರಬಾರದೆಂದು ವನಕ್ಕೆ ಪೋದವನಾಗಲು (ಅರ್ಕಮಾ. ೯೩).

[ ದುಷ್ಟ + ಸಂಗತಿ ]

**ದುಷ್ಟಾತ್ಮ** (ನಾ). ದುರ್ಜನ ; ಕೆಡಂಕ : ದುಷ್ಟಾತ್ಮರಂ . . . ಕೆಟ್ಟ ಭೂವರರಂ ಬಣ್ಣಿಪರೇಕೆ ಮೂಢಕವಿಗಳ್ (ಹಮ್ಮೀರ. ೧-೨೭).

[ ಸಂ. ದುಷ್ಟಾತ್ಮನ್ ]

**ದುಷ್ಟಾತ್ಮಕ** (ನಾ). ಕೆಟ್ಟ ಸ್ವಭಾವದವನು ; ನೀಚ : "ಖಳನುಗ್ರಂ ಪಾಪಿ ದುಷ್ಟಾತ್ಮಕ(ನವನೆ) ಶಠಂ ದುರ್ಜನಂ ತಾನನಾರ್ಯಂ" (ವಸ್ತುಕೋ. ೧೦೦-೧೧). [ ಸಂ. ]

**ದುಷ್ಟಾನುಕೂಲ** (ನಾ). ಕೆಟ್ಟಕೆಲಸ ಮಾಡುವವನಿಗೆ ಸಹಾಯವನ್ನೊದಗಿಸುವವನು : ದುಷ್ಕಾರ್ಯದಲ್ಲಿ ಅಥವಾ ದುಷ್ಕಾರ್ಯ ಮಾಡುವವನಿಗೆ ನೆರವಾಗು, ಒತ್ತಾಸೆ ಕೊಡು ಅಥವಾ ಒಪ್ಪಿಗೆ ಕೊಡು ; ದುಷ್ಟಾನುಕೂಲನಾಗು (Abet. ಇಂಕನಿ). [ ದುಷ್ಟ + ಅನುಕೂಲ ]

**ದುಷ್ಟಾನುಮಾನ** (ನಾ). [ ನ್ಯಾಯ ] ಸುಳ್ಳನ್ನು ನಿಜದಂತೆ ಹೇಳುವ ರೀತಿ ; ಅಸತ್ಯವನ್ನು ಸತ್ಯದಂತೆ ನಿರೂಪಿಸುವುದು ; ಸರಿಯಾದ ಹೇತು ಮೊದಲಾದುವನ್ನು ಹೇಳದೆ, ಅತಿವ್ಯಾಪ್ತಿ, ಅವ್ಯಾಪ್ತಿ ಮೊದಲಾದ ದೋಷಗಳಿಂದ ಕೂಡಿ ಮಾಡುವ ಅನುಮಾನ ಪ್ರಮಾಣ ; ಸಲ್ಲದ ಹೇತುವಿನಿಂದ ಸಾಧ್ಯವನ್ನು ಸಾಧಿಸಲು ಹೊರಡುವುದು : ನಾವು ಕಾಲಿಬನ್, ರಾವಣಾದಿಗಳನ್ನು ಅಂಗೀಕರಿಸುತ್ತೇವೆ. ಅವರಂತಿರುವ ವ್ಯಕ್ತಿಗಳಿರುವುದು ಸಾಧ್ಯವೇ ಎಂದು ಕೂಡ ಯೋಚಿಸುವುದಿಲ್ಲ. ಏಕೆಂದರೆ ಕವಿಯು ಉಪಯೋಗಿಸಿರುವ ದುಷ್ಟಾನುಮಾನದ ಕೌಶಲದಿಂದ ಅವರು "ಸಾಧ್ಯ"ವಾಗಿ ತೋರುತ್ತಾರೆ (ಅರಿಕಾ. ೧೫೪) ; ಸುಳ್ಳುಸಂಗತಿಗಳನ್ನು ಸೂಕ್ತರೀತಿಯಲ್ಲಿ ಹೇಳುವ ಕೌಶಲವನ್ನು ಬೇರೆ ಎಲ್ಲರಿಗಿಂತಲೂ ಹೆಚ್ಚಾಗಿ ಹೋಮರನು ನಮಗೆ ಕಲಿಸಿದ್ದಾನೆ. ಎಂದರೆ ದುಷ್ಟಾನುಮಾನದ [Paralogism] ಪ್ರಯೋಗವನ್ನು ಎಂದು ನನ್ನ ಅರ್ಥ (ಅರಿಕಾ. ೧೩೩). [ ದುಷ್ಟ + ಅನುಮಾನ ]

**ದುಷ್ಟಾನ್ನ** (ನಾ). ೧. ಕೆಟ್ಟವನು ಕೊಟ್ಟ ಆಹಾರ : ಇದೆಲ್ಲಾ ದುಷ್ಟಾನ್ನ; ಆದ್ದರಿಂದ್ದ ತಿನ್ನಲು ಯೋಗ್ಯವಲ್ಲ (ವಚಭಾ. ೨೩೦). ೨. ದೋಷಪೂರ್ಣವಾದ ಆಹಾರ ; ಅಯೋಗ್ಯವಾದ ಆಹಾರ. [ ದುಷ್ಟ + ಅನ್ನ$_3$ ]

**ದುಷ್ಟಾಭಿರುಚಿ** (ನಾ). ಹೀನವಾದುದರಲ್ಲಿ ಸ್ವಾರಸ್ಯವನ್ನು ಕಾಣುವುದು ; ಕೀಳಾದುದರಲ್ಲಿ ಆಸಕ್ತಿ ; ಉತ್ತಮವಾದ ಮಟ್ಟವನ್ನು ಮುಟ್ಟದ ಅಭಿರುಚಿ : ಸಾಹಿತ್ಯವಿಮರ್ಶೆಯಲ್ಲಿನ ದೋಷವೊಂದು ಪರಿಮಿತಾಭಿರುಚಿಯಿಂದಾಗಲೀ ಅಥವಾ ದುಷ್ಟಾಭಿರುಚಿಯಿಂದಾಗಲೀ ಒದಗಬಹುದು . . . ನವ್ಯಕಾವ್ಯಪ್ರೇಮಿಗಳು ಪ್ರಚಲಿತ ನವ್ಯಕಾವ್ಯಗಳಲ್ಲಿಯೇ ಉತ್ತಮಗುಣದವುಗಳ ಬದಲು ಹೀನಗುಣದವನ್ನು ಮೆಚ್ಚಿದರೆ ಅಲ್ಲಿನ ದೋಷ ದುಷ್ಟಾಭಿರುಚಿಯದು (ಅರಿಕಾ. ೪೭) ;

[ ದುಷ್ಟ + ಅಭಿರುಚಿ ]

**ದುಷ್ಟಾರ್ದನ** (ನಾ). = ದುಷ್ಟಮರ್ದನ : ಶಿಷ್ಟಾಪಾಲ ದುಷ್ಟಾರ್ದನಂ . . . ಜಯತು ನಿತ್ಯಾನಂದಮೌನೀಂದ್ರ ಹೃದ್ಧಾಮಂ (ಹಮ್ಮೀರ. ೧-೧).

[ ಸಂ. ]

**ದುಷ್ಟಾಲೋಚನೆ** (ನಾ). ಕೆಟ್ಟ ಆಲೋಚನೆ, – ವಿಚಾರ : ಅವನ ಮನಸ್ಸು ದುಷ್ಟಾಲೋಚನೆಗಳ ನರಕವಾಗಿತ್ತು (ಪುನರು. ೩೮೩).

[ ದುಷ್ಟ + ಆಲೋಚನೆ ]

**ದುಷ್ಟಾಶ್ವ** (ನಾ). ತುಂಟ ಕುದುರೆ ; ಪಳಗದ ಅಶ್ವ ; ಅಗಡು ಕುದುರೆ : "ಸೂಕಳಾಹ್ವಯಂ ದುಷ್ಟಾಶ್ವಂ" (ವಸ್ತುಕೋ. ೮೭-೨೫) ; ಜಯಲಕ್ಷ್ಮೀಕಾನ್ತಂ ದುಷ್ಟಾಶ್ವಚಯಕಿದಾನೆನ್ನನರೇವನ್ತಂ ವಿದ್ವಿಟ್ನೃಪತಿಕೃತಾನ್ತಂ ಸುಖದಿನ್ದಮಿರ್ಪ್ಪ ಜಯಕೇಶಿನೃಪಂ (ಸೌಇಇ. XX, ೪೭-೨೬ ; 1074).

[ ದುಷ್ಟ + ಅಶ್ವ ]

**ದುಷ್ಟು** (ನಾ). ದುಷ್ಟತನ : ನೀನತಿಧೂರ್ತನೆ ದುಷ್ಟಿಂದೇನಾನುಮನೆನ್ನ ಮುಂದೆ ಮುನಿಪುಂಗವನಂ ಹೀನವಚನಂಗಳಿಂದಭಿಮಾನಂಗಿಡೆ ನುಡಿದೆಯಾದೊಡೆ (ಧರ್ಮಾಮೃ. ೯-೧೩೪).

**ದುಷ್ಟ ಮಾಡು** = ಕೆಟ್ಟ ಕೆಲಸವನ್ನು ಮಾಡು ; ದುಷ್ಟತನವನ್ನು ತೋರು : ದುಷ್ಟ ದುಶ್ಶಾಸನನು ತನ್ನ ನಾಚಿಕೆಯ ಕೊಳ್ವನೆಂದು ದುಷ್ಟ ಮಾಡುವನು ಎಂದು ಬಳಲಿ ದ್ರೌಪದಿ . . . ಸಭೆಗೆ ನಡೆದಳು (ಜಗೀತ. ೪೩). [ ದುಷ್ಟ + – ಉ$_4$ ]

**ದುಷ್ಟೆ** (ನಾ). ೧. = ದುಷ್ಟವನಿತೆ : ದುರ್ಮತಿ ದುಷ್ಟೆ . . . ದುರಾತ್ಮೆಯಪ್ಪ ವಧು ಸಜ್ಜನಮೇ (ಮದತಿ. ೮-೭) ; ಅವಳಂತಹ ದುಷ್ಟೆ ಇರಲಾರಳು ಎಂದೇ ಅನಿಸಿತು (ಕುಡಿಕೂ. ೨೫೩). ೨. ಸೂಳೆ ; ವೇಶ್ಯೆ.

[ ಸಂ. ದುಷ್ಟಾ ]

**ದುಷ್ಟೋರಗ** (ನಾ). ಕೆಟ್ಟ ಹಾವು ; ಕ್ರೂರ ಸರ್ಪ : ದುಷ್ಟೋರಗನಂ ತಗುಳ್ವೆಂ ಶಿಷ್ಟಜನಂ ಸೇವಿಪಂತು ಮಾಡುವೆನಿದನುತ್ಕೃಷ್ಟಮೆನೆ ದುಷ್ಟ ನಿಗ್ರಹ ಶಿಷ್ಟಪ್ರತಿಪಾಲನಾರ್ಥವೆಂನ್ನವತಾರಂ (ಜಗವಿ. ೩-೮೩).
[ ದುಷ್ಟ + ಉರಗ ]

**ದುಷ್ಠು** (ಗು). ೧. ಕಷ್ಟದ ದೆಸೆಯಲ್ಲಿರುವ ; ಕೆಟ್ಟ ಸ್ಥಿತಿಯಲ್ಲಿರುವ. ೨. ಕೆಟ್ಟ ; ದುಷ್ಟತನದ. ೩. ತಪ್ಪಾದ ; ಸರಿಯಿಲ್ಲದ. 'ಸುಷ್ಠು' ಪರಾ. [ ಸಂ. ]

**ದುಷ್ಪಕ್ವ** (ನಾ). ಸರಿಯಾಗಿ ಬೆಂದಿಲ್ಲದಿರುವುದು : ಅಪಕ್ವಂ ಅತಿಪಕ್ವಂ ದುಷ್ಪಕ್ವ . . . ಎಂದಿವು ದ್ರವ್ಯವಿಶೇಷಂಗಳು (ಪಸಾರ. ೩೧೮). [ ಸಂ. ]

**ದುಷ್ಪತ್ರ** (ನಾ). ಒಂದು ಬಗೆಯ ಪರಿಮಳದ ಸಸ್ಯ ; ಕರಿಯ ಕಚೋರ : "ರಾಕ್ಷಸೀ, ಚಂಡಾ, ಧನಹರೀ, ಕ್ಷೇಮಃ, ದುಷ್ಪತ್ರಃ, ಗಣ ಹಾಸಕಃ – ೭ ಕರೀಕಚೋರ" (ಸಿದ್ಧಾಂತಿ. ೧೧೧). [ ಸಂ. ]

**ದುಷ್ಪರಿಣತಿ** (ನಾ). ಕೆಟ್ಟ ಫಲ,–ಪರಿಣಾಮ : ಜಾನಕಿ ಮೂರ್ಛಿತೆಯಾಗೆ ದಶಾನನನನುಕಂಪೆ ಪುಟ್ಟೆ ಕರಂಣಿಸಿ ತನ್ನಂ ತಾನೆ ಪಟಿದುಟಿದು ಕರ್ಮಾಧೀನಸಮುತ್ಪನ್ನದುರಘದುಷ್ಪರಿಣತಿಯಂ (ಪಂರಾಮಾ. ೧೮-೧೧೧). [ ಸಂ. ]

**ದುಷ್ಪರಿಣಾಮ** (ನಾ). ೧. ಕಷ್ಟ ; ತೊಂದರೆ. ೨. ಕೆಟ್ಟ ಪ್ರಭಾವ : 'ಎ' ಜೀವಾತು ಸಾಕಷ್ಟು ಪ್ರಮಾಣದಲ್ಲಿ ಇಲ್ಲವಾದರೆ ಚರ್ಮ ಮತ್ತು ಕಣ್ಣುಗಳ ಮೇಲೆ ದುಷ್ಪರಿಣಾಮಗಳಾಗಬಹುದು (ಆಡುಸಾ. ೬೦) ; ಮಕ್ಕಳ ಎಳೆಯ ವಯಸ್ಸಿನಲ್ಲಿ ಅಂಥ ಚರಿತ್ರೆಯ ಬೋಧನೆಯಿಂದ ಮುಂದಿನ ಜನಾಂಗದ ಮೇಲೆ ಆಗುವ ದುಷ್ಪರಿಣಾಮ ಅಷ್ಟಿಷ್ಟಲ್ಲ (ಶಿಕ್ಷದ. ೨೬೭). ೩. ಕೆಟ್ಟ ಫಲ,–ಫಲಿತಾಂಶ. ೪. ಕೆಟ್ಟ ಆಲೋಚನೆ : ಪೆಱತೇನುಮಂ ಬಗೆಯದೆ ನಳಕೂಬರನೊಳ್ ಕೂಡಿ ಸುಖಮಿರೆಂದಾಕೆಯ ದುಷ್ಪರಿಣಾಮಮಂ ಪತ್ತುವಿಡಿಸಿ (ಪಂರಾಮಾ. ೧೦-೮೫ ವ). [ ಸಂ. ]

**ದುಷ್ಪುತ್ರ** (ನಾ). ಕೆಟ್ಟ ಮಗ; ದುಷ್ಟನಾದ ಮಗ: ಈ ಪಾಪಕರ್ಮನಪ್ಪ ದುಷ್ಪುತ್ರನಿಂ ನಿನಗಿಂತಪ್ಪ ದುರ್ಮರಣಂ ಸಮನಿಸಿದುದು (ಪಂಚತಂ. ೧೭೮-೧). [ ಸಂ. ]

**ದುಷ್ಪ್ರತಿಕಾರ** (ಗು). ಎದುರಿಸಲು ಅಸಾಧ್ಯವಾದ: ಆರು ನಿಲಿಸುವರಕಟ ದುಷ್ಪ್ರತಿಕಾರ ಶರವಿದು (ಕುವ್ಯಾ.ಕ. ೨೫-೨೫). [ ಸಂ. ]

**ದುಷ್ಪ್ರತೀತಿ** (ನಾ). ೧. ಕೆಟ್ಟ ಹೆಸರು ; ಅಪಯಶಸ್ಸು ; ಅಪಕೀರ್ತಿ. ೨. ಕೆಟ್ಟ ಅಥವಾ ಅಶ್ಲೀಲವಾದ ಅರ್ಥ : ಎರಡು ಪದಂಗಳ ನಡುವೆ ಬೇಱೊಂದು ದುಷ್ಪ್ರತೀತಿ ಪುಟ್ಟುವೊಡೆ ಸಂಧಿಯಂ ಮಾಡಲಾಗದು (ಶಮದ. ೬೨ ವೃತ್ತಿ). [ ಸಂ. ]

**ದುಷ್ಪ್ರಭಾವ** (ನಾ). ಕೆಟ್ಟ ಪ್ರೇರಣೆ ; ದುಷ್ಟವರ್ಚಸ್ಸು : ದುಷ್ಪ್ರಭಾವ ನಿರುದ್ಯೋಗಗಳಿಂದ ಮೊದಲೇ ದಾರಿ ತಪ್ಪಿದ ವ್ಯಕ್ತಿಯನ್ನು ಜೈಲಿಗೆ ನೂಕುವುದರಲ್ಲೇನು ಅರ್ಥವಿದೆ ? (ಪುನರು. ೬೨೯) ; ಗ್ರೀಕರ ಅಪೂರ್ಣ ಜ್ಞಾನದ ಮತ್ತು ಸಂಕುಚಿತ ಮನೋವೃತ್ತಿಯ ದುಷ್ಪ್ರಭಾವ ನಿಜವಾದ ತತ್ತ್ವಜ್ಞಾನದ ಮುನ್ನಡೆಗೆ ತಡೆಯಾಯಿತು (ಮುಕ್ತಾರ. ೬ ಪೀಠಿಕೆ). [ ಸಂ. ]

**ದುಷ್ಪ್ರವೃತ್ತಿ** (ನಾ). ಕೆಟ್ಟ ಸ್ವಭಾವ; ನೀಚ ನಡವಳಿಕೆ : ಹೀಗೆ ಸತ್ಪ್ರವೃತ್ತಿ ಮತ್ತು ದುಷ್ಪ್ರವೃತ್ತಿಗಳ ಸಂಘರ್ಷದ ಮಧ್ಯೆ ಮಹಾಭಾರತದಲ್ಲಿ ಇನ್ನೊಂದು ಭಾಗವತತತ್ತ್ವವನ್ನವಲಂಬಿಸಿದ ಭಾವನಾಪರಂಪರೆಯೂ ಬೆಳೆದು ಬಂದಿದೆ (ಭಾರದ. ೯೮) ; ಅಂದಿನ ಕಾಲಮಾನಕ್ಕನುಸರಿಸಿ, ಸುತ್ತಣ ಸನ್ನಿವೇಶದ ಆಘಾತದಿಂದ ಮನಸ್ಸು ದುಷ್ಪ್ರವೃತ್ತಿಗಿಳಿದರೆ ? (ಚಿತಸ. ೬೧). [ ಸಂ. ]

**ದುಷ್ಪ್ರವೇಶ್ಯ** (ನಾ). ಒಳಗೆ ಹೋಗಲು ಅಶಕ್ಯವಾದುದು ; ಪ್ರವೇಶಿಸಲು ಕಷ್ಟವಾದುದು : ಉದಗ್ರತರುಗಹನದುಷ್ಪ್ರವೇಶ [ ಶ್ಯ ] ಮಪ್ಪ ವನದುರ್ಗದುನ್ನತಿಯುಮನೊಳಕೊಂಡು (ಆದಿಪು. ೦೩-೫೭ ವ) ; ಆದರೆ ಅಂತಃಪುರ ಇನ್ನು ದುಷ್ಪ್ರವೇಶ್ಯವಾಗಿಯೇ ಇತ್ತು (ನಗಹೊ. ೨೨೮). [ಸಂ.]

**ದುಷ್ಪ್ರಶ್ನೆ** (ನಾ). ಅಸಂಬದ್ಧವಾದ ಪ್ರಶ್ನೆ: ಎಲ್ಲಿಯದು ದುಷ್ಪ್ರಶ್ನೆ ಮಱು ಮಾತೆಲ್ಲಿಯದು (ಕುವ್ಯಾಸ. ೧೮-೬೫). [ ಸಂ. ದುಷ್ಪ್ರಶ್ನ ]

**ದುಷ್ಪ್ರಾಪ** (ಗು). ಹೊಂದಲು ಅಶಕ್ಯವಾದ,–ಕಷ್ಟಸಾಧ್ಯವಾದ : ತಳ್ತು ಕಾದಿದನಾದಂ . . . ಪದ್ಮರಾಜನರಿದುಷ್ಪ್ರಾಪಪ್ರತಾಪೋದಯಂ (ಪದ್ಮರಾ. ೩-೧೮). [ ಸಂ. ]

**ದುಷ್ಪ್ರಾಪ್ಯ** (ನಾ). ಪಡೆಯಲು ಅಸಾಧ್ಯವಾದುದು ; ಹೊಂದಲು ಅಶಕ್ಯವಾದುದು : ಹೃದಯದೊಳಗಿದ್ದೇನು ಫಲ ದುರ್ಹೃದಯರಿಗೆ ದುಷ್ಪ್ರಾಪ್ಯವಲ್ಲಾ ಪದವಿದಮಳಾತ್ಮರಿಗೆ ತೋರ್ಪುದು ವಿಶ್ವಮಯವಾಗಿ (ನಿಭಾಗ. ೩-೫-೮೩). [ ಸಂ. ]

**ದುಷ್ಪ್ರಾರಬ್ಧ** (ನಾ). ಕೆಟ್ಟ ಹಣೆಯ ಬರಹ; ದುರದೃಷ್ಟ; ದುರ್ದೈವ : ಮುಱಿದೆನಾಗಳೆ ವಿಗಡವಿಧಿಯೆಚ್ಚಱಿಸಿದರೆ ಹರಿಭಕ್ತಿಮುಖದಲಿ ಮುಱಿದುದೆಮ್ಮಯ ಪೂರ್ವದುಷ್ಪ್ರಾರಬ್ಧ ಕರ್ಮಫಲ (ಕುವ್ಯಾಸ. ೦೫-೬೫). [ ಸಂ.]

**ದುಷ್ಪ್ರೇಕ್ಷ್ಯ** (ಗು). ೧. ನೋಡಲು ಕಷ್ಟವಾದ ; ಕಣ್ಣು ಕೋರೈಸುವ. (ನಾ). ೨. ನೋಡಲು ಭಯಂಕರನಾದವನು: ಯಮ ಸಮಕಕ್ಷನೆನಿಪ ದುಷ್ಪ್ರೇಕ್ಷನುಂ ರಿಪುಘಟಾವಿಘಟನಮೃಗೇಂದ್ರಂ . . . ಪ್ರಿಯ ವಿಗ್ರಹನುಂ ಮೊದಲಾಗೆ ಸಿಂಹರಥಮನೇಱಿ ಸಂಗರಾಂಗಣಕ್ಕೆ ನಡೆದರ್ (ಪಂರಾಮಾ. ೦೩-೨೯ ವ). [ ಸಂ. ]

**ದುಷ್ಪ್ರೇರಣೆ** (ನಾ). ಕೆಟ್ಟ ಪ್ರೇರಣೆ,–ಉತ್ತೇಜನ: ಸಂಚಿತ ಪೂರ್ವಕರ್ಮ ದುಷ್ಪ್ರೇರಣೆ ನೇರಿತಂ ನಡೆಯಲೀಗುಮೆ (ಪಂರಾಮಾ. ೧೧-೧೭೬).
[ ಸಂ. ದುಷ್ಪ್ರೇರಣಾ ]

**ದುಷ್ಫಲ** (ನಾ). ಕೆಟ್ಟ ಫಲ,–ಫಲಿತಾಂಶ ; ದುಷ್ಪರಿಣಾಮ. [ಸಂ. ]

**ದುಷ್ಮನ್,** ದುಷ್ಮಾನ್, ದುಷ್ಮಾನ, ದುಸುಮಾನ, ದುಸ್ಮಾನ (ನಾ). ಹಗೆ ; ವೈರಿ; ಶತ್ರು: ದುಷ್ಮನ್ ಸತ್ತ ; ಮಹಾರಾಜ ನಮ್ಮ ವೈರಿಯಾದ ಔರಂಗಜೇಬ ಬಾದಶಹ ಮಡಿದ (ಹಂಸಾ. ೦೭೭). **ದುಷ್ಮಾನ್ :** ಕಂಪನಿ ಸರಕಾರದ ಜಯಪ್ರದದ ಲಷ್ಕರು ದೊಡ್ಡ ದುಷ್ಮಾನ್ ಟೀಪುಸುಲ್ತಾನರ ಸಂಗಡ ಲಡಾಯಿ ಮಾಡುವ ಬಗ್ಗೆ ಇದೇ ಕೊಡಗಿನ ಸೀಮೆಯ ಮಾರ್ಗವಾಗಿ ಬರುತ್ತಾ ಇದೆ (ರಾಜೇಂದ್ರ. ೬೮) : ಬನ್ನೂರೇನು, ದುಷ್ಮಾನ್ ಪಾಳ್ಯಪಟ್ಟೇ ? (ಕಲನಿ. ೨೦೦). **ದುಷ್ಮಾನ :** ಘಟ್ಟ ಇಳಿದು ಹೋಗುವ ಮಾರ್ಗಗಳ ಕಟ್ಟಿ, ದುಷ್ಮಾನನ ಲಷ್ಕರಿನ ಸಂಗಡ ಲಡಾಯಿ ಮಾಡುವ ಬಗ್ಗೆ ದಾರಿ ನೋಡುತ್ತ ಇದ್ದಲ್ಲಿ (ರಾಜೇಂದ್ರ. ೯೦) ; ಎರಡು ಜನ ದುಷ್ಮಾನರು ಬಂದಲ್ಲಿ, ಪಹರೆದವರು ಅಟಕಾಯಿಸುವಾಗ್ಗೆ, ದುಷ್ಮಾನರು ಪಹರೆದವರ ಮೇಲೆ ಗುಂಡು ಹಾರಿಸಿದಲ್ಲಿ, ಒಂದು ಗುಂಡು ಹಾರಿ . . . ಗೋಡೆಗೆ ಬಡೀತು (ರಾಜೇಂದ್ರ. ೨೬೭); ನಾನು ಹಿಂದೆ ಹೇಳಿದ್ದನ್ನು ಈಗ ನನಗೇ ತಿರುಗಿ ಒಪ್ಪಿಸುತ್ತೀಯಾ ದುಷ್ಮಾನ ? (ಮೂರುದಾ. ೪೯). **ದುಸುಮಾನ :** ಮಗನಿಗೆ ಪತ್ರ ಬರೆದಾನಪ್ಪ ತಂದೆ ದುಸುಮಾನಾ (ನಾಪದ. ೩೯) ; ಬಸವನೇರಿ ಮೇಲೆ ಬಸುಮವ ಹುಯಿಕೊಂಡು ಸಸಿಮಾವಿನೊಳಗೆ ಬರುವೋರು ನಂಜಪ್ಪಗೆ ದುಸುಮಾನರೆಲ್ಲ ಅರುಗಾಗಿ (ನಾಪದ. ೧೦೨). **ದುಸ್ಮಾನ :** ಅಶ್ವಪತಿ ಗಜಪತಿಯು ವಿಶ್ವನುತ ಹಂಪೆಯಲಿ ದುಸ್ಮಾನರೊಡನೆ ಹೊಡೆದಾಡೆ (ಸರ್ವಜ್ಞ. ೦೦೭೩) ; ಹಸುಮಗಳನೊಯ್ಯುದ್ದು ಮುದುಕಾಗಿ ಕೊಟ್ಟಾರ ದುಸ್ಮಾನರವರು ತವರವರು (ಗರತಿ. ೬೫).
[ ←ಪಾರ. ಹಿಂ. ದುಶ್ಮನ್ ; ಮರಾ. ದುಶಮನ್, ದುಶ್ಮನ್, ದುಸ್ಮನ್, ದುಸ್ಮಾನ್ ]

**ದುಷ್ಮಾನ್** 'ದುಷ್ಮನ್' ನೋ.

**ದುಷ್ಮಾನ** 'ದುಷ್ಮನ್' ನೋ.

**ದುಷ್ಷಮ** (ಗು). ೧. ವಿಷಮ ; ವ್ಯತ್ಯಾಸ ಹೊಂದುವ. ೨. ಸರಿಯಲ್ಲದ; ತಪ್ಪಾದ. ೩. ಕೆಟ್ಟದಾದ ; ನೀಚವಾದ. 'ದುಷ್ಷಮಗತಿ'

ಪರಾ. (ನಾ). ೪. = ದುಷಮ : ಉತ್ಸರ್ಪಿಣಿಯವಸರ್ಪಿಣಿ ನಾಮಮಂ ಪಡೆದುದದೊಂದು ಪತ್ತುಕೋಟಿಕೋಟಿಸಾಗರೋಪಮ ಸಂಖ್ಯೆಯಂ ತಾಳ್ದಿ ಸುಷಮಸುಷಮಂ ಸುಷಮಂ ಸುಷಮ ದುಷ್ಷಮಂ ದುಷ್ಷಮ ಸುಷಮಂ ದುಷ್ಷಮಮಮತಿದುಷ್ಷಮಮೆಂದೊಂದೊಂದು ಷಡ್ಭೇದ ಭಿನ್ನ ಮಾದುದಲ್ಲಿ (ಆದಿಪು. ೬-೪೮ ವ) ; ಅನುಸಂಧಾನಂಗಿಡದ್ದೆದನೆಯದು ದುಷ್ಷಮಮೆನಿಪ್ಪ ಕಾಲಂ ಬಳಿಕಾಱನೆಯದತಿದುಷ್ಷಮಂ(ಶಂರಾಮಾ. ೧-೫೭). 'ಸುಷಮ' ಪರಾ. [ ಸಂ. ]

**ದುಷ್ಷಮಕಾಲ** (ನಾ). = ದುಷಮ : ಮುಸುಱಿದ ಮುಗಿಲ್ಗಳಿಂದಣಮೆಸೆ ಯದೆ ನಿಂದರ್ಕಬಿಂಬಮುಂ ಕಂಡುದಱಿಂದೆಸೆಯದು ದುಷ್ಷಮಕಾಲದೊಳಸ ದೃಶ ಕೈವಲ್ಯಬೋಧದಿನಕರಬಿಂಬಂ (ಆದಿಪು. ೧೫-೩೦).

[ ದುಷ್ಷಮ + ಕಾಲ ]

**ದುಷ್ಷಮಗತಿ** (ನಾ). ಕೆಟ್ಟ ಸ್ಥಿತಿ ; ದುರ್ಗತಿ : ನಮ್ಮ ಸಮಾಜದ ದುಷ್ಷಮಗತಿ 'ಅತಿ ಸರ್ವತ್ರ ವರ್ಜಯೇತ್' ಎಂಬ ನಾಣ್ಣುಡಿಯನ್ನು ಮರೆತು ನಾವೆಲ್ಲರೂ ಅತಿ ಮತೀಯರಾದ್ದರಿಂದ ಎಂದು ಹೇಳಬಹು ದಲ್ಲವೇ ? (ಕಸಾಪ. XXIII ೬೬೩೪). [ ದುಷ್ಷಮ + ಗತಿ ]

**ದುಷ್ಷಮಸುಷಮ** (ನಾ). = ದುಷಮಸುಷಮ : ಉತ್ಸರ್ಪಿಣಿಯವಸರ್ಪಿಣಿ ನಾಮಮಂ ಪಡೆದುದದೊಂದು ಪತ್ತುಕೋಟಿಕೋಟಿಸಾಗರೋಪಮ ಸಂಖ್ಯೆಯಂ ತಾಳ್ದಿ ಸುಷಮಸುಷಮಂ . . . ದುಷ್ಷಮಸುಷಮಂ ದುಷ್ಷಮಮತಿದುಷ್ಷಮಮೆಂದೊಂದು ಷಡ್ಭೇದ ಭಿನ್ನಮಾದುದು (ಆದಿಪು. ೬-೪೮ ವ) ; ಕೋಟಿ ಕೋಟಿಸಾಗರೋಪಮ ಸ್ಥಿತಿಯಪ್ಪ ದುಷ್ಷಮಸುಷಮ ಮೆಂಬ ನಾಲ್ಕನೆಯ ಕಾಲದೊಳ್ (ಚಾವುಂಪು. ೪೦೨) ; ಎರಡನೆಯ ಸುಷಮ ಕಾಲದ ಪೊರೆಯೊಳ್ ಮೂಱನೆಯ ಸುಷಮದುಷ್ಷಮಕಾಲಂ ಚರಿಯಿಸುಗುಂ ನಾಲ್ಕನೆಯದು ಪರಿವಿಡಿಯಿಂದಪ್ಪುದಲ್ತೆ ದುಷ್ಷಮಸುಷಮಂ (ಶಂರಾಮಾ. ೧-೫೬). 'ದುಷಮ' ಪರಾ. [ ದುಷ್ಷಮ + ಸುಷಮ ]

**ದುಷ್ಷಮೆ** (ನಾ). = ದುಷಮ : ಅವಱೊಳವಸರ್ಪಿಣಿಯಕಾಲಂ ಸುಷಮ ಸುಷಮೆಯುಂ . . . ದುಷ್ಷಮೆಯುಮತಿದುಷ್ಷಮೆಯುಮೆಂದು ಷಡ್ವಿಧ ಮಕ್ಕುಂ (ಅಜಿಪು. ೩-೧೭). [ ಸಂ. ದುಷ್ಷಮ ]

**ದುಸರ₁** (ನಾ). ಎರಡು ಬಾಣ : "ದುಸರ-ದ್ವಿಶರ" (ತದ್ಭಕೋ. ೨೦) ; ದ್ವಿಶರ-ದುಸರ ; ದ್ವಿಹಸ್ತ-ದೂಹತ, ದೂಹತ್ಥ (ಶಮದ. ೨೯೦ ಪ್ರಯೋ). [ <ಸಂ. ದ್ವಿಶರ ]

**ದುಸರ₂** (ನಾ). ೧. ಎರಡೆಳೆಯ ಹಾರ ; ಜೋಡೆಳೆ ಸರ : ಮುಕುಟಂ ಕೇಯೂರಂ ಕರ್ಣಕುಂಡಲಂ ಕೊಪ್ಪು ಸರಿಗೆ ದುಸರಂ ಮಣಿಮುದ್ರಿಕೆ ತ್ರಿಸರಮೆಂಬ ಭೂಷಾನಿಕರಮನಾ ಭೂಷಣಾಂಗತರು ಕುಡುತಿರ್ಕುಂ (ಆದಿಪು. ೫-೩೩) ; ಮನೋಹರಪುಷ್ಪಗಳ ಏಕಸರ ದುಸರ ಪಲಸರ ದಂಡೆ ಬಾಸಿಗ ವಿವಿಧಮಾಲಾಬಂಧಗಳು (ಬಿಟ್ಟಅ. ೮೭-೧೦). ೨. ಎರಡನೆಯ ಎಳೆ ; ಇನ್ನೊಂದು ಹಾರ : ದುಸರಮದಾಗೆ ಭಾರತಿಗೆ ಹಾರ ಮನೋ ಯರಮಾಗೆ ಕೋದಪೋಲೆಸವಿನಮುಕ್ಕರಂ ಕರೆಯುಗಂಗಳೊಳಂ ಬರೆವಂ (ಎಕ. V, ಚನ್ನರಾ. ೨೦೩-೩೦ ; 1223) ; ಆತ್ಮೇಶ್ವರನಿಕ್ಕಿದಂ ಕುಚ ದೊಳೊಂದು ಹಾರಮಂ ಕಾದಲಳ್ ನಡುಗುತ್ತೆಕ್ಕಸರಕ್ಕೆ ತಾಂ ದುಸರಮಂ ಬಾಷ್ಪಾಂಬುವಿಂದಿಕ್ಕಿದಳ್ (ಅನಂಪು. ೮-೯). [ ದು + ಸರ₆ ]

**ದುಸರಾ₃** (ಗು). ಎರಡನೆಯ ; ಅನ್ಯ ; ಮರು : ಹರಾಜಿನಲ್ಲಿ ಪಡೆದು ಕೊಂಡವನು ಹರಾಜು ಹಣ ಕೊಡದೆ ತಪ್ಪಿದಲ್ಲಿ ಆ ಸ್ವತ್ತುಗಳನ್ನು ಪುನಃ ದುಸರಾ ಹರಾಜು ಮಾಡಿ ಹರಾಜಿನಲ್ಲಿ ಕಡಮೆ ಬಂದ ನಷ್ಟಮೊಬಲಗನ್ನು . . . ಕೊಡಲು ಬದ್ಧನಾಗಿರುವನು (ಗ್ರಾಮಾಕ. ೭೭).

[ ←ಹಿಂ. ದುಸರಾ, ದೂಸರಾ ; ಮರಾ. ದುಸರಾ ]

**ದುಸರಿ** (ನಾ). (ಪೊದೆಯಾಗಿರುವ) ಒಂದು ಬಗೆಯ ಬಳ್ಳಿ : (೬).

ದುಸರಿ ಬಳ್ಳಿ = ದುಸರಿ : ಧಗಡಿಬಳ್ಳಿ, ದುಸರಿ ಬಳ್ಳಿ, ಆಡಂಬುಬಳ್ಳಿ, ಯಡಾನಿಬಳ್ಳಿ, ಕಾಗೆಮಾರಿ (ಪ್ರಮಿಜಿಗಿ. ೨೩-೪೨೪).

[ ದೇ.॥ ತೆಲು. ದೂಸರಿ = ಒಂದು ಬಗೆಯ ಹುಲ್ಲು ]

**ದುಸಿ** (ನಾ). (?) : ಗುಣ್ಣಕನ್ದರ್ಪ ಪರಬಳಸರ್ಪ್ಪ ಪಗೆಯಂ ಬೆಂಕೊಳ್ವ ದುಸಿಗಟ್ಟಿಕ್ಕೆ ಪೇಸುವಂ ಮಾಕ್ಕೋಲ ಭೈ[ರ]ವಂ (ಎಕ. VI, ಚಿಕ್ಕಮ. ೭೬-೧೫ ; ಸು. 1060 ?).

[ P ಇದು 'ಪುಸಿ' ಎಂಬುದರ ಅಪಲಿಖಿತವಿರಬಹುದು ]

**ದುಸುಮಾನ** 'ದುಮ್ಮಾನ್' ನೋ.

**ದುಸುಮಾನಗಿತ್ತಿ** (ನಾ). ಹಗೆಯಾದವಳು : ಶತ್ರುವಾದವಳು : ಹಸು ಗೂಸನೊಯ್ದು ಮುದುಕಾಗೆ ಕೊಟ್ಟಾರೆ ದುಸುಮಾನಗಿತ್ತಿ ಹಡೆದವ್ವ (ಹಳ್ಳಿಯ. ೧೨೪). [ ದುಸುಮಾನ (<ದುಷ್ಮನ್) + -ಗಿತ್ತಿ ]

**ದುಸುಮುಖ** (ನಾ). (?) : ಹಸುರುಮುಂಡಾಸದವನೇ ದುಸುಮುಖ ಸರಜಪ್ಪನಾಯ್ಕ ಹೆಸರನೀ ರೀತಿ ಪಡೆದಲ್ಲೋ ಲೋಕದ ಮೇಲೆ (ನಾಪದ. ೧೫೦). [ ? ]

**ದುಸುಮುಸಿ** 'ಧುಸುಮುಸು' ನೋ.

**ದುಸುಮುಸು** 'ಧುಸುಮುಸು' ನೋ.

**ದುಸ್ತಮ** (ನಾ). ೧. ಕಗ್ಗತ್ತಲೆ ; ದಟ್ಟವಾದ ಅಂಧಕಾರ : ಚಕ್ರಸಹಾಯ ನಾಕ್ರಮಿಸಿದಂ ಭೂಚಕ್ರಮಂ ಪಾದದಿಂ ರಸೆಗಾಗಳ್ ಬಲಿ ದುಸ್ತಮಂ ತಳರ್ವಿನಂ (ಪುಷ್ಪಪು. ೮-೨೩). ೨. ಅತಿಯಾದ ಅಜ್ಞಾನ. [ ಸಂ. ]

**ದುಸ್ತರ** (ಗು). ೧. ದಾಟಲಾಗದ ; ಹಾದು ಹೋಗಲಾಗದ : ಚಾರಿತ್ರ ಸಂಶುದ್ಧರೀ ದುಸ್ತರ ಸಂಸಾರಾಬ್ಧಿಯಿಂದಂ ಪೊಱಮಡಿಸುಗೆ ಸದ್ಧರ್ಮರಾ ಚಾರ್ಯರೆಂದುಂ (ಸುಕುಮಾ. ೧-೩). ೨. ನಿವಾರಿಸಲಾಗದ ; ಪರಿಹರಿಸ ಲಾಗದ : ಎಲೆ ತಾಯೆಯಾ ದುಸ್ತರ ಮಹಾಪಾತಕವನೆಂತುತ್ತರಿಸುವೆನು ಮುಂದೆ (ಬಸವಪು. ೪೫-೨೫). ೩. ಗೆಲ್ಲಲಾಗದ ; ಅಜೇಯ ; ನಿಗ್ರಹಿಸ ಲಾಗದ ; ಮೀರಿಸಲಾಗದ. (ನಾ). ೪. ದಾಟಲಾಗದುದು ; ಹಾದು ಹೋಗಲಾಗದುದು: ನೋಟಕ್ಕೊಡಿಂತಿದು ದುಸ್ತರಂ ನರಕಂ (ರಾಮಾಕ್ವ. ೧೦೬-೨೦) ; ಅದರ ನಿಜವಾದ ಅಂತರವು ಗುಣಿಸಿ ನೋಡಿದ ಹೊರತು ವ್ಯಕ್ತವಾಗದು ; ಅದು ನಮ್ಮ ಭಾಗಕ್ಕೆ ದುಸ್ತರವಾದೊಂದು ಮಹಾಬಿಲ (ಜ್ಯೋತಿರ್ವಿ. ೨೫೭). ೫. ಅನುಭವಿಸಲಾಗದುದು ; ಸಹಿಸಲಸಾಧ್ಯ ವಾದುದು ; ಅಸಹನೀಯವಾದುದು: ಪಿತೃವಿಯೋಗವೆಂ ದುಸ್ತರವೋ(ಚಂದ್ರಪು.೨-೬೦).೬. ಅಸಾಧ್ಯವಾದುದು; ಕಷ್ಟವಾದುದು: ಅವನ ತಾಯಿನಾಡಿನಲ್ಲಿ ಶುಭ್ರವಾದ ಆಕಾಶವನ್ನು ನೋಡುವುದೇ ದುಸ್ತರವಾಗಿತ್ತು (ಶಿಲ್ಪಸಾ. ೧೦೯) ; ಮಧ್ಯಾಹ್ನದ ಊಟವಾದ ಕೂಡಲೇ ಅಲ್ಲಿರುವುದು ಕೂಡ ಅವನಿಗೆ ದುಸ್ತರವಾಯಿತು (ಮುಗಿಸು. ೦೯) ; ಅನುವಾದಭಾಗ ಶಾಸ್ತ್ರಪರಿಚಯವಿಲ್ಲದವರಿಗೆ ಸಮಗ್ರಾರ್ಥವನ್ನು ಮಾಡಿ ಕೊಡುವುದು ದುಸ್ತರ (ಧ್ವನ್ಯಾಲೋ. XIII ೫೦೩) ; ಸಂಸಾರಪರಿತ್ಯಾಗ ಮಾಡಿ, ಕಾಡನ್ನು ಸೇರಿದ ಯೋಗಿಗಿಂತ ಸಂಸಾರದಲ್ಲಿದ್ದು ವಿರಕ್ತರಾಗು ವುದು ಹೆಚ್ಚು ದುಸ್ತರ (ಧರ್ಮಸಾ. ೧೩೪). [ ಸಂ. ]

**ದುಸ್ತರತೆ** (ನಾ). ದಾಟಲಾಗದುದು ; ಮೀರಲಾಗದುದು : ಇದು ಯಥಾರ್ಥದ ವಾಕ್ಯವದು ತಪ್ಪದು ವಿಚಾರಿಸಲುಳಿದವರಿಗಾದುದು ಮಹಾ ದುಸ್ತರತೆ (ಪ್ರಭುಲೀ. ೨-೩೯) ; ಶರಧಿಯೊಲು ದುಸ್ತರತೆಯುಲಿ ದುರ್ಧರು ಷತೆಯಲಗ್ನಿಯೊಲು ವಿಕ್ರಮಸಿರಿಯಲಾ ಸಿಂಹದವೊಲು (ನಿಘಗ. ೧-೮-೧೦).

[ ಸಂ. ದುಸ್ತರತಾ ]

**ದುಸ್ತರಾವಸ್ಥೆ** (ನಾ). ಸರಿಸಮನಾಗಿರದ ಸ್ಥಿತಿ ; ಕಠಿಣವಾದ ಅವಸ್ಥೆ : ಇಂತಪ್ಪ ದುಸ್ತರಾವಸ್ಥೆಯೊಳ್ ಕಾದುವುದು ಕಜ್ಜಮಲ್ಲ (ಪಂಚತಂ. ೨೦೭-೧). [ ದುಸ್ತರ + ಅವಸ್ಥೆ ]

**ದುಸ್ತರ್ಕ** (ನಾ). ಸರಿಯಲ್ಲದ ವಾದ ; ಕುತರ್ಕ : ವಾದಿಗಳ ದುಸ್ತರ್ಕ ನಸಿದುದು (ಕುವ್ಯಾಸ. ೯-೩೩) ; ಶಾಸ್ತ್ರಕ್ಕೆ ಪ್ರತಿಕೂಲವಾಗಿರುವ ತರ್ಕ ದುಸ್ತರ್ಕ (ಹಿಂದಸಾ. ೧೦೫). [ ಸಂ. ]

**ದುಸ್ತರ್ಕ್ಯ** (ಗು). ಊಹಿಸಲು ಸಾಧ್ಯವಿಲ್ಲದ ; ಅತರ್ಕ್ಯ : ನಿನ್ನಿಂದ ಲೇಸನಾರ್ಜಿಪೆನೆನ್ನುವಾಸೆಯಿಂದಿರೆ ಬಂದುದೀ ಸಮಯದೊಳಗತುಳ ದುಸ್ತರ್ಕ್ಯ ವಿಘ್ನಮನ್ನೇನೆಂಬೆ ಕೃತಕೃತ್ಯಮಂ (ವೆಂಕಾರಾ. ೨-೯-೩). [ ಸಂ. ]

**ದುಸ್ತ್ಯಾಪಚತ್ವ** (ನಾ). ಒಂದು ಬಗೆಯ ಸಸ್ಯ : ದುಸ್ತ್ಯಾಪಚತ್ವ, ಕರ್ಕಾಟ ಶೃಂಗಿ (ವ್ಯಾಜಿಗಿ. ೭೨-೧೨೫೭). [ ? ]

**ದುಸ್ತಾಮಸ** (ನಾ). ಅಧಿಕವಾದ ಅಜ್ಞಾನ,-ಅವಿವೇಕ : ಕ್ಷಾತ್ರ ದುಸ್ತಾಮಸಮಡಸಿದವಂಗಕ್ಕುಮೇ ಸದ್ವಿವೇಕಂ (ಶಬಶಂ. ೪-೫೫) ; ದುಸ್ತಾ ಮಸದ ದುಸ್ಸಂಗ, ದುಸ್ಸಂಧಾನದ ಸಹಗಮನ, ನಿರ್ಗತಿಕನ ನಿರ್ಗಮನ ! (ನವ್ಯಕಾ. ೩೫). [ ಸಂ. ]

**ದುಸ್ತಾರ** (ಗು). ೧. ಹಾದು ಹೋಗಲಾರದ; ದುಸ್ತರವಾದ : ಅಲ್ಲಿಂದ ಪೊರಮಟ್ಟು ದುಸ್ತಾರವಪ್ಪ ಕಾನನವ ಪೊಕ್ಕು ಪೋಗುತಿರಲು (ನವಮೋ. ೭-೪೭). ೨. ನಿವಾರಿಸಲಾಗದ ; ಸೈರಿಸಲಾಗದ : ಕರವಾರಿಜದಿ ಸುರಿವ ರಕ್ತವನೊರಸಿಕೊಂಡು ದುಸ್ತಾರಕೋಪದಿಮ್ಮಾರನೆಡಕರದ ಚಾಪಮಂ ಖಂಡಿಸಲು (ನವಮೋ. ೦೨-೭೯). [ ಸಂ. ]

**ದುಸ್ತು** (ನಾ). ಉಡುಪು; ಉಡುಗೆ: ಅಂಗಡಿಯಲ್ಲಿ ದುಸ್ತುಗಳ ಹೊಲಿವುತ [ಪಾಠಾಂ. ಯೊಳು ಕುಳಿತು ಮಾರುತಲಿಹ] ಚಿಪ್ಪಿಗರಿರ್ದರೊಂದೆಸೆಯ (ಅಬ್ಯಲೂ. ೩-೯೦) ; ಮೋಸಕರವಾಗಿ ಸರಕಾರದ ದುಸ್ತನ್ನು ಧರಿಸಿದರೆ ೩ ತಿಂಗಳ ಬರೀ ಶೈದು ಅಥವಾ ೧೦೦೦ ರೂಪಾಯಿ ಜುಮಾರ್ನೆ (ಗ್ರಾಮೂಕ. ೧೮೧) ; ಒಳ್ಳೆಯ ದುಸ್ತಿನಲ್ಲಿ ಭುಜಂಗನು ಪ್ರವೇಶಿಸುವನು (ದೇಶಧು. ೪೯); ಬೇಡೇಕರರು ದುಸ್ತು ಮಾಡಿಕೊಂಡು ಅವರನ್ನು ಸಂಧಿಸು ವಾಗಲೇ ಹೊತ್ತಾಗಿತ್ತು (ಜಾರುದಾ. ೧೯೯). 'ದಿರಸು' ಪರ್ಯಾ.

[ ←ಮರಾ. ದುಸ್ತ್./ತುಳು. ತೆಲು. ದುಸ್ತು ]

**ದುಸ್ತ್ರೀ** (ನಾ). ಕೆಟ್ಟ ಹೆಂಗಸು ; ದುಷ್ಟೆ: ಪತಿಯುತೆಯರಲ್ಲದಾ ಪಟ್ಟಣ ದೊಳಿಲ್ಲ ದುಸ್ತ್ರೀಯರೆಲೆ ಕಂಬುಕಂಠೀ (ನವಮೋ. ೨-೫೩). [ ಸಂ. ]

**ದುಸ್ಥಿತಿ** (ನಾ). ಹೀನಸ್ಥಿತಿ ; ದುರವಸ್ಥೆ : ಅವನಾಳ್ವ ಭುವನದೊಳಗನ್ಯತ . . . ದುರ್ನೀತಿ ದುಸ್ಸಂಗ ದುಸ್ಥಿತಿ ದುರಾಚಾರವಿಲ್ಲ (ಹಜಕಾ. ೨-೧೦) : ಎಲೆ ಯುಧಿಷ್ಠಿರನೃಪಕುಮಾರ ಪ್ರಳಯದಾಪತ್ತಾಯ್ತು . . . ದುಸ್ಥಿತಿ ಯಾಯ್ತು ನಕುಲಂಗೆ (ಕುವ್ಯಾದ್ರೋ. ೭-೨೨). [ ಸಂ. ]

**ದುಸ್ಥಿತೆ** (ಗು). ಕೆಟ್ಟಸ್ಥಿತಿಯಲ್ಲಿರುವ ; ದರಿದ್ರವಾದ : ದುಸ್ಥಿತ ಲೋಕ ಕಲ್ಪತರುವೆಂಬುದು . . . ಸಮಸ್ತಮಹೀಜನಮಿಂದ್ರರಾಜನಂ (ಎಕ. II, ೦೩೩-೩೭ ; 982).

[ ℙ ಇದು 'ದುಸ್ಥಿತ' ಎಂಬುದರ ಅಪಲಿಖಿತವಿರಬಹುದು ]

**ದುಸ್ಥೆ** (ನಾ). ದುಷ್ಟತನದಿಂದ ವರ್ತಿಸುವವಳು ; ನೀಚ ಹೆಂಗಸು : ದುರ್ಮತಿ ದುಷ್ಟೆ ದುಸ್ಥೆ ದುರ್ವ್ಯಸನೆ ದುರಾತ್ಮೆಯಪ್ಪ ವಧು ಸಜ್ಜನಮೇ (ಮದತಿ. ೮-೭). [ ಸಂ. ದುಸ್ಥಾ ]

**ದುಸ್ಪರ್ಶ** (ನಾ). ೧. ಮುಟ್ಟಲಾಗದುದು. ೨. ತೀಟೆಕಸಂಧಿ ; ತುರುಚಿ : "ದುಸ್ಪರ್ಶ [ಪಾಠಾಂ. ದುಃಸ್ಪರ್ಶ] ಮೆನೆ ತುಜುಚಿಯಕ್ಕುಂ" (ಮಂಗರಾ. ೪೪-೪೪) ; "ದುಸ್ಪರ್ಶಃ – ಬಳ್ಳಿದುಜುಚಿ" (ಓಷಧಿ. ೭೭). ೩. ಹೆಗ್ಗುಳ್ಳ. [ ಸಂ. ]

**ದುಸ್ಪರ್ಶೆ** (ನಾ). ಮುಳ್ಳುಬದನೆ ; ಹೆಗ್ಗುಳ್ಳ : "ನಿದಿಗ್ಧಿಕಾ, ಸ್ಪೃಶೀ, ವ್ಯಾಘ್ರಿ, ಬೃಹತೀ . . . ದುಸ್ಪರ್ಶಾ ರಾಷ್ಟ್ರಿಕಾ–೧೦ ಹೆಗ್ಗುಳ್ಳದ ಹೆಸರುಗಳು. ಮುಳ್ಳುಳ್ಳ ಚಿರುಗುಳ್ಳ" (ಸಿದ್ಧಾಂತಿ. ೦೩೩).

[ ಸಂ. ದುಸ್ಪರ್ಶಾ ]

**ದುಸ್ಮಾನ** 'ದುಷ್ಮನ್' ನೋ.

**ದುಸ್ವಪ್ನ** (ನಾ). ಕೆಟ್ಟ ಕನಸು: ಮತ್ತೊಂದು ದಿವಸಂ ನಿಶಾವಸಾನ ಸಮಯ ದೊಳು ದುಸ್ವಪ್ನಂಗಳಂ ಕಂಡು (ಚಾವುಂಪು. ೫೨) ; ದುಸ್ವಪ್ನದಿಂ ಮರಣ ಸೂಚನೆ (ವಿವೇಕ. ೨೦೪). [ ಸಂ. ]

**ದುಸ್ವರ** (ನಾ). ೧. ಕೆಟ್ಟ ಸ್ವರ ; ಅಪಸ್ವರ. 'ದುಸ್ವರಗೈ' ಪರ್ಯಾ. ೨. [ಜೈನ] ಎಪ್ಪತ್ತೆರಡು ಬಗೆಯ ನಾಮಕರ್ಮಪ್ರಕೃತಿಗಳಲ್ಲಿ ಒಂದು ; ದುಷ್ಟಸ್ವರ ಹೊರಡಲು ಕಾರಣವಾದ ಕರ್ಮ : ಸುಸ್ವರ ದುಸ್ವರ ಸುಭಗ ದುರ್ಭಗ . . . ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೭-೪೪ ವ). [ ಸಂ. ]

**ದುಸ್ವರಗೈ** (ಕ್ರಿ). ಕೆಟ್ಟ ಸ್ವರವನ್ನುಂಟು ಮಾಡು ; ಅಹಿತವಾದ ಧ್ವನಿ ಯನ್ನು ಹೊರಡಿಸು : ತಮ್ಮೊಳು ತಾವು ಮಥಿಸುವೊಲು ಮಿಸುಪ ದುಸ್ವರಗೈವ ಶುಕ ವಾಯಸ ಗರುಡ ಮೊದಲಾದ ಪಕ್ಕಿಗಳೆಸೆದಿಹವು ಬನ ಬನದ ತಾಣದಲಿ (ಕೋಗಯು. ೦೪-೧೦). [ ದುಸ್ವರ + ಗೈ (<ಕೆಯ್$_1$) ]

**ದುಸ್ಸಂಗ** (ನಾ). ೧. ಕೆಟ್ಟ ಸಹವಾಸ ; ಸರಿಯಲ್ಲದ ಜೊತೆ : ಸತತಂ . . . ಸದ್ಧರ್ಮಗುಣಂಗಳಸ್ತ್ರತತಿಗಳ್ ನಿಸ್ತ್ರಿಂಶಧಾನುಷ್ಕಸಂಗತಿಯಿಂದಂ ಪರಮರ್ಮಭೇದಿಗಳೆನಲ್ ತೀಕ್ಷ್ಣಂಗಳುಂ ಮಾಂಸಲೋಹಿತವಕ್ತ್ರಂಗಳು ಮಾದುವೆನ್ನರುಮನೇಂ ದುಸ್ಸಂಗಮೇಗೆಯ್ಯದೋ (ಪಂಚಾಪಾ. ೦೩-೫೦) ; ಲಿಂಗವಂತನ ಸನ್ನಿಧಿಯಿಂದ ಹಿಂದಣ ದುಸ್ಸಂಗ ಕೆಡುವುದು (ಬಸವ. ೦೫೦); ಅವನಾಳ್ವ ಭುವನದೊಳಗನ್ಯತ . . . ದುರ್ನೀತಿ ದುಸ್ಸಂಗ ದುಸ್ಥಿತಿ ದುರಾಚಾರವಿಲ್ಲ (ಹಜಕಾ. ೨-೧೬) ; ಯತಿ ಕೆಡುಗು ದುಸ್ಸಂಗದಲಿ ಭೂಪತಿ ಕೆಡುಗು ದುರ್ಮಂತ್ರದಲಿ (ಕುವ್ಯಾಉ. ೩-೧೧೯) ; ಭಾವ ಭಾವ ಏಕಾರ್ಥ ವಾಗದವರ ಸಂಗವದೇತರ ಸಂಗ ದುಸ್ಸಂಗವಲ್ಲದೆ (ಅಖಂಡೇ. ೦೨೯-೯೪). ೨. ಕೆಟ್ಟ ಮನಸ್ಸು ; ದುಷ್ಟ ಪ್ರವೃತ್ತಿ : (+). [ ಸಂ. ]

**ದುಸ್ಸಂಗಿ** (ನಾ). ಕೆಟ್ಟ ಸಹವಾಸದಲ್ಲಿರುವವನು : ದುಸ್ಸಂಗಿಗಳ ಸಂಗ ದೋಷಕ್ಕೆ ಈಡು ಮುಕ್ತಿಯ ಕೇಡು (ಅಖಂಡೇ. ೦೨೯-೯೪).

[ ಸಂ. ದುಸ್ಸಂಗಿನ್ ]

**ದುಸ್ಸಂತತಿ** (ನಾ). ೧. ಕೆಟ್ಟ ಸಂತತಿ ; ದುಷ್ಟ ಸಂತತಿ. ೨. ಹಾದರಕ್ಕೆ ಹುಟ್ಟಿದುದು. [ ಸಂ. ]

**ದುಸ್ಸಂಧಾನ** (ನಾ). ೧. ಒಟ್ಟಿಗೆ ಸೇರಲು ಕಷ್ಟವಾದುದು ; ಕೂಡಲು ಅಸಾಧ್ಯವಾದುದು. ೨. ಕೆಟ್ಟ ಸಂಧಾನ,-ಸಂಚು. ೩. ಹಾದರ.

[ ಸಂ. ]

**ದುಸ್ಸಂಧಿ** (ನಾ). [ವ್ಯಾಕ] ಒಂದು ಬಗೆಯ ಸಂಧಿದೋಷ ; ಅಪಾರ್ಥ ವನ್ನು ಕೊಡುವ ಅಥವಾ ಶ್ರುತಿಕಷ್ಟವಾದ ಸಂಧಿ: ಅಸದರ್ಥಂ . . . ಅಪ್ರೌಢತೆಯಪ್ರತೀತಿವಚನಂ ದುಸ್ಸಂಧಿ ವಿಶ್ಲೇಷನಷ್ಟಸಮಾಸಂ . . . ಇನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೧-೪೭ ಅಡಿಟಿ); ದುಸ್ಸಂಧಿಯ ನಿಬದ್ಧಂ ವಿರುದ್ಧಾರ್ಥ ನೀರಸಂ ಶೈಥಿಲ್ಯವರ್ಣಂ ಕಾರಕವಿರಹಿತಂ ಕ್ರಿಯಾಳಂಕಾರಹೀನವೆನಿಪ್ಪ ಪೊಳ್ಳಂ ತೂಱಿ ಕಳೆದಿಂತು . . . ರಚಿಸುವೆಂ ಕೃತಿಯ (ಬಸವು. ೩-೧೮). 'ದುರ್ಲಕ್ಷಣ' ಪರ್ಯಾ. [ ಸಂ. ]

**ದುಸ್ಸರ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ : ನುತಚೌಪಟು . . . ಪಂಚಾಯಿತಮೆನಿಪ್ಪಯಿದು ನಿಱಿಗೆಗಾಯತ ಮುಂಡಿ ದುಮಾಡಮೆಕ್ಕಸರ ವಿಸರವುಲ್ಲಾಸ ದುಸ್ಸರ . . . ಸಿಂಹಾನಕ ಚಟಿಯೆಂಬ ಚತುರ ಠಾಣದ ತರಹರದೊಳು ಹಲಗೆಯ ಮುಗ್ಗುಲೊಳು ಖಡ್ಗಮಂ ಜಡಿದರು (ಸೋಮಜ. ೫-೦೪). [ ? ]

**ದುಸ್ಸರಣಿ** (ನಾ). ಕಠಿಣವಾದ ಮಾರ್ಗ : ದುರ್ಗಗಳೊಳು ದುಸ್ಸರಣಿಯೊಳು ದೊಂಗರಗಳೊಳು . . . ಅಗಲಕೆ ಹರಿದು ಹೋರಟೆಗುಟ್ಟಿದ ನಂ ಹೊಮ್ಮಿಱಿಯ ಬೆನ್ನಿನಲಿ (ತೊರರಾ. ೩-೮-೫೭). [ ಸಂ. ]

**ದುಸ್ಸಹ** (ಗು). ೧. ಸಹಿಸಲು ಕಷ್ಟವಾದ; ತಾಳಲಾರದ; ಸೈರಿಸಲಾಗದ: ತನ್ನ ಪಿರಿಯ ಮಗನಂ ಕರೆದು ತನ್ನ ದುಸ್ಸಹಾವಸ್ಥಾಂತರಮನಱಿಪಿ (ಆದಿಪು. ೨-೧೪ ವ); ಅತಿ ದುಸ್ಸಹವಾರ್ತಾವಿಷಲತೆಯಿಂ ನಾಂಟಿಸಲಿದಲ್ತೆ ಕಂಸಶೋತ್ರಕ್ಷಿತಿಖನನಪವಿಶಲಾಕಾತತಿಯೆನೆ ದಶನಾಂತು ನಿಮಿರೆ ಮುನಿಯಿಂತೆಂದಂ (ಜಗವಿ. ೨-೪೩); ಇತ್ತ ಹೆತ್ತ ತಾಯಿ ದುಸ್ಸಹ ಸಮಾಚಾರವನ್ನು ಕೇಳಿ ಪ್ರಾಣಬಿಟ್ಟರು (ಶಾಂತಲಾ. ೧೭೦). (ನಾ). ೨. ಸಹಿಸಲಾಗದಂದಂ; ತಾಳಲಾಗದಂದಂ: ಆ ಕಾಮಬಾಣಾಗ್ನಿಯಿಂ ಸರ್ವಮುಖಕ್ಷ್ವೇಡಾಗ್ನಿಯೇಂ ದುಸ್ಸಹಮೆ (ಜಗವಿ. ೩-೯೫); ದುಸ್ಸಹವು ನಿಮ್ಮಭ್ಯುದಯವಹಿತರಿಗೆ (ಕುವ್ಯಾಸ. ೧೧-೦೮); ತೆರಳಲ್ಕಿಷ್ಟರ್ ದೇಶಾಂತರ ಕಬಲಾಜನದ ಚಿಂತೆ ದುಸ್ಸಹಮಲ್ತೇ (ಶಾಕುಂತ. ೪೮-೪); ಅವಮಾನವನ್ನು ಸಹಿಸಲು ಯುವಕರಿಗೆ ದುಸ್ಸಹ (ಶಿಕ್ಷದ. ೧೧೫). ೩. ಸಹಿಸಿಕೊಳ್ಳಲು ಆಗದವನು: ದುರ್ಲಭನಾರು ದುಸ್ಸಹನಾರು ದುರ್ಮತಿ ಯಾರು ಧರ್ಮಜ ತಿಳಿಯಹೇಳೆಂದ (ಕುವ್ಯಾಅ. ೦೩-೫೭); ಮಹಾದುಸ್ಸಹನ ದುಶ್ಶೀಲನ ದುರಾಚಾರನ . . . ಕೈವಿಡಿದೆತ್ತಬೇಕೆಲೆ ದೇವ (ತೊರರಾ. ೪-೪-೫೭); ದುಸ್ಸಹರಜೇಯರಪ್ರತಿಸಮರಥರ್ಸಾಹಸಿಗಳಿರ್ವರುಂ ಗಗನಗಮನದ ವೀರರು (ಕ್ರಮಿಭಾ. ೨೨-೩೦). [ ಸಂ. ]

**ದುಸ್ಸಹವಾಸ** (ನಾ). ಕೆಟ್ಟ ಸಹವಾಸ; ದುಸ್ಸಂಗ: ದುಸ್ಸಹವಾಸವು ದುರ್ಗತಿಯನ್ನು ಕೊಡುವುದಾಗುವುದು (ಅರ್ಕಮೂ. ೬೯). [ ಸಂ. ]

**ದುಸ್ಸಾಹಸ** (ನಾ). ಅಸಾಮಾನ್ಯವಾದ ಸಾಹಸ; ಅತ್ಯಂತ ಸಾಹಸ: ಹುದುಗಿದಗ್ಗದ ಸತ್ವ ದುಸ್ಸಾಹಸದ ನಿರೂಢಿಯ ಸೋಸಮಯ [ಪಾಠಾಂ. ದುತ್ಸಾಹದ ನಿರೂಢಶ್ವಾಸದಲಿ]ಗದುಗದಿತ ಕಂಠದ . . . ಗುರುವಾಯಿಳದ ಭೀಮನ ಕಂಡನಾ ಭೂಪ (ಕುವ್ಯಾಅ. ೦೩-೩೮). [<ಸಂ. ದುಸ್ಸಾಹಸ]

**ದುಸ್ಸಾಧ್ಯ** (ನಾ). ಕಾರ್ಯಗೊಳಿಸಲು ಅಸಾಧ್ಯವಾದಂದಂ, –ಕಷ್ಟಸಾಧ್ಯವಾದುದು: ವಿದ್ಯಾವಂತರು . . . ಉತ್ತಮವುಟ್ಟದ ಜೀವನ ನಡೆಸಬೇಕೆಂದು ಹಾರೈಸುವುದು ಸಹಜವಾದ್ದು. ಆದರೆ ಅನೇಕರಿಗೆ ಅದು ದುಸ್ಸಾಧ್ಯವೆನಿಸಬಹುದು (ಶಿಕ್ಷದ. ೬೬೮). [ ಸಂ. ]

**ದುಸ್ಸಾಹಸಿಕ** (ನಾ). ಗಂಡಾಂತರವನ್ನು ಎದುರಿಸುವ ಅತಿಯಾದ ಸಾಹಸ: ತನ್ನ ಪ್ರಾಧಾನ್ಯವನ್ನು ರಕ್ಷಿಸಿಕೊಳ್ಳುವುದಕ್ಕೋಸ್ಕರ ದುಸ್ಸಾಹಸಿಕವಾದೊಂದು ಸಂಕಲ್ಪವನ್ನು ಮಾಡಿದಳು (ಕಪಾಕುಂ. ೬೫). [ ಸಂ. ]

**ದುಸ್ಸ್ಥಲ, ದುಸ್ಸ್ಥಳ** (ನಾ). ೧. ಕೆಟ್ಟ ಸ್ಥಳ; ಅನುಕೂಲವಲ್ಲದ ಜಾಗ. **ದುಸ್ಸ್ಥಳ:** ೨. ಇಕ್ಕಟ್ಟಾದ ಮಾರ್ಗ, –ಸ್ಥಳ: ದುಸ್ಸ್ಥಳಮುದಯಾಚಳಧಾತುಸ್ಥಳಿಯಿಂ ಬೇಗಮಡರ್ವ ದಿನನಾಥರಥಪ್ರಸ್ಥಾನಪಾಂಸುವೆನಿಸಿ ದಿಶಾಸ್ಥಗಿತಂ ರಂಜಿಸಿತ್ತು ಸಂಧ್ಯಾರಾಗಂ (ಮಲ್ಲಿಪು. ೭-೧೦೫). [ ಸಂ. ]

**ದುಸ್ಸ್ಥಳ** 'ದುಸ್ಸ್ಥಲ' ನೋ.

**ದುಸ್ಸ್ವಪ್ನ** (ನಾ). = ದುಸ್ವಪ್ನ: ದುಸ್ಸ್ವಪ್ನಕೆ ಬೆಚ್ಚುತಲೆಚ್ಚತ್ತಂತೆ ನಾವೆದ್ದೆವು ನಲ್ಮೆಳವಿಗೆ (ಅಹಲ್ಯಾ. ೧೧೩-೧೧). [ ಸಂ. ]

**ದುಸ್ಸ್ವಭಾವ** (ನಾ). ಕೆಟ್ಟ ಸ್ವಭಾವ; ದುಷ್ಟ ಗುಣ. [ ಸಂ. ]

**ದುಸ್ಸ್ವರ** (ನಾ). = ದುಸ್ವರ ೧: ಕಾಗೆ ಬಂದು ಪಾಯ್ದುಂ ದುಸ್ಸ್ವರದಿಂ ಕರೆವುದುಂ (ಪಂಚತಂ. ೨೨೪-೧೧). [ ಸಂ. ]

**ದುಸ್ಸ್ವರೆ** (ನಾ). ಕೆಟ್ಟ ಧ್ವನಿಯುಳ್ಳವಳು: ದುರ್ಗಂಧೆ ದುಸ್ಸ್ವರೆ ಪುಟ್ಟುಂ ಗುರುಡಿ ಪೊಲತಿಯಾಗಿ ಪುಟ್ಟಿ (ವಡ್ಡಾರಾ. ೯-೩). [ ಸಂ. ದುಸ್ಸ್ವರಾ ]

**ದುಹತ್ತ, ದೂಹತ್ತ** (ನಾ). ಎರಡು ಕೈ: "ದುಹತ್ತ (ದೂಹತ್ತ) – ದ್ವಿಹಸ್ತ = ಹಸ್ತಯುಗ್ಮ" (ತದ್ಭಕೋ. ೨೦); ದುಗೆ – ದ್ವಿಗುಣ – ದ್ಯುಗುಣ . . . ದ್ವಿಹಸ್ತ – ದುಹತ್ತ, ದೂಹತ್ತ (ಶಮದ. ೨೯೦ ಪ್ರಯೋ). **ದೂಹತ್ತ:** ಮೇಲಿನ ಪ್ರಯೋಗಗಳನ್ನು ನೋಡಿ. [ ದು + ಹತ್ತ₂ ]

**ದುಹಾರ** (ನಾ). (?): ಕಂಗಳೋರೆಯ ಥಾಳಿಸುವ ಹಾಸಂಗಿಗಳ ಬಿಗುಹಿನ ದುಹಾರದ ಭಂಗಿಗಳ ಬಲುವಿಟರ ಕರಣದ ಸಾರಿಗಳ ಸೆರೆಯ ಮುಂಗುಡಿಯ ನಿಜನಾರಿಯರ ಕವಿವಂಗವಣೆಗಳ ಜೂಜುಗಾತಿಯರಂಗನೆಯ ದಂಡಿಗೆಯ ಬಳಿವಿಡಿದರು ವಿದಗ್ಧೆಯರು (ಕುವ್ಯಾಅ. ೦೩-೪೨); ಕೆಲಬಲನ ಭಿತ್ತಿಯ ಕಂಬ ಕಂಬದ ನಡುವೆ ಭಿತ್ತಿಗಳು ಹೊಳಹನೇ ಕಂಡೆನು ವಿವೇಕದ ಕಳವು ಚಿತ್ರದ ಸೆಱೆ ದುಹಾರದೊಳಿ [ಪಾಠಾಂ. ಳು] ೞದವಕ್ಷಿಗಳಿಂತು ಸೋತೆನು (ಕುವ್ಯಾಸ. ೧೨-೩೬); ದುಗನ ಹಾಯಿಕು ತನಗೆ ಹಾಯ್ಕಿತ್ತಿಗನವೆಂಬಬ್ಬರದ ಹಾಸಂಗಿಗಳ ಬೊಬ್ಬೆಯ ಸಾರಿಗಳ ಮಣಿಖಟಿಲನಿಸ್ವನವ ಉಗಿವ ಸೆರೆಗಳ ಬಳಿ ದುಹಾರದ ಬಿಗುಹುಗಳ ಬೀದಿಗಳ ತಳಿಸಾರಿಗಳ ಧಾಳಾಧೂಳಿ ಮಸಗಿತು (ಕುವ್ಯಾಸ. ೦೩-೫೦); ನಿಮ್ಮಣ್ಣನಾಡಿ ದುಹಾರದಲಿ ಸೆಱೆಯೋದನಾತನ ಹರಿಬವೇ ನಿಮಗೆ (ಕುವ್ಯಾಶ. ೨೦-೧೩). [ ? ]

**ದುಹಿ** (ನಾ). ದ್ವೇಷ; ವಿರೋಧ: ದುಹೀ ಮಾಡುವವ ಅಹೀ ಹಾಗೆ (ಗಾದೆ): ದುಹೀ ಮಾಡುವವ ಅಹಿಗಿಂತ ಕಡೆ (ಗಾದೆ).

[ ←ಮರಾ. ದುಹೀ, ದುಈ ]

**ದುಹಿತಾರ** 'ದುಹಿತೆ' ನೋ.

**ದುಹಿತೃ** (ನಾ). ೧. ಮಗಳು; ಪುತ್ರಿ: "ಪೆಣ್ ದುಹಿತೃ ನಂದನೆ ಪುತ್ರಿ ತನೂಜೆ ಸೂತಿ ತಾನೆನಿಕುಂ" (ವಸ್ತುಕೋ. ೫೪-೦೭); ಅಹಹ ನರ್ತಕಿಯಲು ಗಂಧರ್ವನಾಯಕನ ದುಹಿತೃವಲ್ಲಾ ನಿನ್ನ ಮಾತೆ (ಕ್ರಮಿಭಾ. ೧೭-೫೫). ಅಂತರಿಕ್ಷದಲ್ಲಿ ಆದಿತ್ಯನು ತನ್ನ ದುಹಿತೃವಾದ (ಪುತ್ರಿ) ಪೃಥ್ವಿಯ ಗರ್ಭರೂಪವಾದ ಉದಕವನ್ನು ಧರಿಸಿದ್ದಾನೆ (ಋಕ್ಸಾರ. ೨೭೬). ೨. ಹಾಲು ಕರೆಯುವವಳು: ಗೌಳಿಗಿತ್ತಿ: (ಕ). [ ಸಂ. ]

**ದುಹಿತೆ, ದುಹಿತಾರ** (ನಾ). ಮಗಳು; ಪುತ್ರಿ: "ದುಹಿತೆ – ದುಹಿತೃ = ಮಗಳು" (ತದ್ಭಕೋ. ೨೦); ಆದಿಶಿವಭಕ್ತಂಗೆ ಮದುವೆಯನಾದರದಿ ನಾ ಮಾಳ್ಪೆನಲ್ಲದೆ ಈ ದುಹಿತೆಯಂ ಭವಿಗೆ ಕೊಡೆನು (ಬಸವಪು. ೩-೮೬); ದುಹಿತೆಯಳ ಹರಿರಾಯನರಮನೆಗೆ ವಿಜಯದಿಂ ಕಳುಹಲ್ಕೆ ತೆರಳಿ ಬಂದಂ (ಗುರುಚಾ. ೩-೦೧). **ದುಹಿತಾರ:** ಆರಾದೇಶಕ್ಕೆ –ಸವಿತಾರ, ಕರ್ತಾರ . . . ದುಹಿತಾರ (ಶಮದ. ೮೫ ಪ್ರಯೋ). [<ಸಂ. ದುಹಿತೃ ]

**ದುಹಿಸು** (ಕ್ರಿ). (ಹಾಲಿನಂತೆ) ಕರೆ; ಸುರಿಸು; ನೀಡು: ಸ್ತನದೆ ಸರಸಾಮೃತವ ಕರೆಯುವ ಜನರ ಕಾಮನೆಯನ್ನು ದುಹಿಸುವ ಮುನಿಯ ಹೋಮದ ಧೇನುವನು ತನ್ನೆದುರಿನಲಿ ಕಂಡ (ರಘುವಂ. ೨-೩೦).

[ ದುಹ್, (P < ಸಂ. ದುಹ್) + – ಇಸು₃ ]

**ದುಹೇರ, ದುಹೇರಿ** (ಗು). ೧. ಇಮ್ಮಡಿ; ದ್ವಿಗುಣಿತ (ಕ). **ದುಹೇರಿ:** ೨. ಪ್ರತಿ; ಸಮಾನವಾದ ಗುಣವುಳ್ಳ: ಸ್ವಾತಂತ್ರ್ಯಚಳುವಳಿಯ ಕಾಲದಲ್ಲಿ ದುಹೇರಿ ಕಾರುಭಾರು ನಡೆಯುತ್ತಿತ್ತು (ರೂಢಿ).

[ ←ಮರಾ. ದುಹೇರಾ, ದುಹೇರೀ, ದುಹಿರೀ ]

**ದುಹೇರಿ** 'ದುಹೇರ' ನೋ.

**ದುಳಿರವಟ** (ನಾ). ಒಂದು ಬಗೆಯ ತೆರಿಗೆ: ಯಾ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ . . . ಕುಳವಡೆ ಸಾರಡೆ ದುಳಿರವಟ ಕಟಳೆಪಟ ಏರಿ ಮಿಾನ ಬೆಲೆ ಸಂತೆ ಉಂಟಾದ ಹಲ ಉಪಾಧಿಗಳೂ ಸಹ ಸೇರ್ಸಿ ಕೊಟ್ಟೆವಾಗಿ (ಸೌಇಇ. IX-ii, ೪೭೩-೮; 1470). [ ? ]

△ **ದುಱ** 'ದುರ್₁' ನೋ.

**ದುಱದುಱಿಸು** 'ದುಱುದುಱಿಸು' ನೋ.

**ದುಱಿ, ಜುಱಿ** (ಕ್ರಿ). ಹೊರಚಲ್ಲು; ಹೊರಸೂಸು: ಇಱಿದ ನೆಲಂಗಳಾಂತವರ ನೆತ್ತರನಕ್ಕಿಸಲಾಱಿದ್ದೆಗಳುಂ ದುಱಿತೊರೆಯುತ್ತಮಿರ್ದ್ದಪುವು ತೀಂಬ ಕಟಂಗಳನೆಂಟುಮಾನೆಗಳುಂ ತಱತಱನಟ್ಟಿನಂ ಜಯದ ಲಚ್ಚಣಗಂಬದೊಳುದ್ದಿಕೊಳುವುವು (ಎಕ. V, ಬೇಲೂರು. ೦೭೦-೦೫; ಸು. 1160).

ಜುಱಿ: ಮುರಾರಿ ಮು[ಂ] ಖರನಂ ಸೞ್ಬನೆ ಸೀೞ್ದಿಡ ಮುನಿಸಿಂದೊಗೆ ದಾಱ್ ಪರಪೆ ಧಾತು ನಿರ್ಝರದಂತಶ್ರು[ಜ]ಳವೊಱ್ತು ಜುಱಿಯುತ್ತುಮಿರ್ಪ ಧಾತ್ರಿಯುಪ್ಪುದುಂ (ಅರ್ಧನೇ. ೮-೨೨ ವ) ; ತಱಿದ ಕುಱಿಗಳ ಹಂದಿಯಡಗಿನ ಜುಱಿತ ರಕುತದ ಮೊಲನ ಖಂಡದ . . . ಹಱದೆಱಕೆಗಳ ಕಂಡಬಲೆ ಹೊಗಳಿದಳಡಬಳದ ವಂಸೆಯ (ಕುವ್ಯಾವಿ. ೩-೩೭). 'ತೊರೆ₂', 'ಸುರಿ₁' ಪರಾ.

**ದುಱ್ದುಂಬಿ** 'ದುಱುದುಂಬಿ' ನೋ.

**ದುಱು–** (ಉಪ). ಕೆಟ್ಟದ್ದನ್ನು ಸೂಚಿಸುವ ಒಂದು ಉಪಸರ್ಗ. 'ದುಱುದುಂಡಿ', 'ದುಱುದುಂಬಿ' ಪರಾ. [ <ದುರ್– ]

**ದುಱುದುಂಡಿ,** ದುರುದುಂಡಿ, ದುರ್ದುಂಡಿ (ನಾ). ೧. ಕೆಟ್ಟ ವ್ಯಕ್ತಿ; ಕೆಡುಕು ಮಾಡುವವಳು ; ದುಷ್ಟೆ : ಪಂಚಪೃಥ್ವಿಯ ಮಧ್ಯದಲ್ಲಿ ಒಂದು ಉಡುವರದ ಗಿಡ ಹುಟ್ಟಿತ್ತು ಆ ಗಿಡುವನೊಡದು ಒಬ್ಬ ದುಱುದುಂಡಿ ಹುಟ್ಟಿದಳು (ಕೋಲಶಾಂ. ೨೨-೮) ; ತನುಮಧ್ಯದಲ್ಲಿ ಅಜ್ಞಾನಸ್ವರೂಪಿಣಿಯಾದ ಮಾಯೆಯೆಂಬ ದುರ್ವಿಕಾರಿ ಹುಟ್ಟಿ ಆ ತನುಮಧ್ಯದಲ್ಲಿ ಇರುತ್ತಿಹಳೆಂಬುದೀಗ . . . ದುಱುದುಂಡಿ ಹುಟ್ಟಿದಳು ಎಂಬ ಶಬ್ದಕ್ಕರ್ಥ (ಕೋಲಶಾಂ. ೨೨-೮ ಟೀಕು). **ದುರುದುಂಡಿ :** ೧. ಅನಿತರೊಳು ದುರುದುಂಡಿಯೈತಂದು ಪೂಜೆಗೈದಾ ಮಹಾಕಾಳಿಯಂ (ಪಂಕಾರಾ. ೬-೪೮-೪೮). **ದುರ್ದುಂಡಿ :** ೨. ಬಜಾರಿ; ಗಂಡುಬೀರಿ : ಈ ದುರ್ದುಂಡಿಯನ್ನು ಮದುವೆಯಾಗಲಾರೆ (ಸೀತಾರ. ೧೦) ; ಒಮ್ಮೊಮ್ಮೆ ಆಕೆಯನ್ನು ದುರ್ದುಂಡಿ ಎಂತಲೂ ಕರೆಯುತ್ತಿದ್ದರು (ನನ್ನೂರು. ೮). [ ದುಱು + ದುಂಡಿ₁ ]

**ದುಱುದುಂಬ** (ನಾ). ಕೆಟ್ಟವನು; ನೀಚ : ದುಱುದುಂಬ ಪೊಡಱಿಯುಮರರ ಬಸಿಱೊಳೊಗೆದು ಸುಗತಿಯ ಸೊಂಪುವಡೆಯದತ್ಯಂತ ಪಾತಕಿಯಾದೆ (ಕೊಟ್ಟೂಬ. ೪-೧೩೨). [ <ದುಱುದುಂಬಿ ]

**ದುಱುದುಂಬಿ,** ದುರುದುಂಬಿ₁, ದುಱ್ದುಂಬಿ (ನಾ). ೧. ಕೆಟ್ಟ ಗುಣವುಳ್ಳ ವ್ಯಕ್ತಿ ; ನೀಚ ವ್ಯಕ್ತಿ : ನಾಡ ದುಱುದುಂಬಿಯರೆಂದುದನೆಂದ ಮಂದಿರೊಳ್ ನೆಱೆದೊಡಗೂಡಿ ಕಳ್ಗುಡಿವ ಡಂಬಗಿದೊತ್ತಿರನಾರುಂ ಬಾರಿಪರ್ (ಪಸಾರ. ೪೭೭) ; ಪರಿಣತರ ನುಡಿಗಳನು ಕಿವಿಯೋಕರಿಸಿದವು ದುಱುದುಂಬಿಗಳ ಬಾಹಿರರ ನುಡಿಗಳನಡಿಗಡಿಗೆ ಕುಡಿದು ತೇಗಿದವು (ಕುವ್ಯಾಸ. ೧೦-೩) ; ಪಿರಿಯ ಪಟ್ಟಣದ ರಾಜ್ಯವಾಳುವ ದುಷ್ಟ ದುಱುದುಂಬಿ ನಂಜುಂಡರಾಜ . . . ಮಲೆತಿರ್ದನಾಗ (ಕಂನವಿ. ೦೮-೨೦) ; ಮುಂಬಗಲ ನೆಳಲವೋಲ್ ದುಱುದುಂಬಿಗಳೊಳ್ ಮಾಳ್ಪ ಮೈತ್ರಿ ಕುಂದುಗುಂ (ನೀತಿಮಂ. I, ೨೩೯). ೨. ತುಂಟತನವುಳ್ಳುದಂ : ನಿನ್ನಯ ಸುಱಿಗುರುಳಲ್ಲವಿವೆನ್ನಯ ಮಱಿಯೆಂದು ಬಂದು ತಲೆವಿಡಿದವೊಲಾ ಚೆನ್ನೆಯ ತಲೆವಿಡಿದಿರ್ದುದು ತಾಂ ನಱುಗಂಪಿಗೆ ತುಂಬಿ ದುಱುದುಂಬಿ ಕರಂ (ಚಂದ್ರಪು. ೭-೧೦೨). ೩. ತಂಟೆ : ಮಱಿಯೊಳು ಬಂದು ಮಕ್ಕಳ ಗರ್ದುಗವ ಹಾಲುಪಱಿಯೆಂದು ಬಾಚಿ ಹಿಡಿಯಲು ಹೆಱನೂಂಕಿ ಬಳಿಕ ಕೈಯಿಂದ ಸುಲಿವನಾವ ದುಱುದುಂಬಿಯಾ ಬಾಲವಿಷ್ಣು (ನೇಮಿಶಂ. ೧೫-೧೦೮). (ಗು). ೪. ಕೆಟ್ಟಗುಣವುಳ್ಳ ; ಭಂಡತನದ : ಕೆಲಬರ್ದುಱುದುಂಬಿ ಮುಂಡೆಯರ್ಮನೆಯೊಳಗುಳ್ಳುದಂ ತವಿಸಿ ಗಂಡರನೇಂ ಕುಱಿಮಾಡಿ ತಂದಪರ್ (ಸಮ್ಮಪ. ೯-೧೧೩) ; ಸಂದುಗೊಂದಿನೊಳಡಂಗಿರ್ದು ಬಱಿವೋಕರ ಕೊಲ್ವ ಕಳ್ವ ದುಱುದುಂಬಿ ಕೊಲೆಗಂಗೆ (ರಾಮಾಶ್ವ. ೭೪-೨). **ದುರುದುಂಬಿ₁:** ೧. ಶಿಶುಪಾಲನು ಮಹಾ ದುರುದುಂಬಿ (ರಾಜಸೂ. ೧೧). ೪. ಈ ದುರುದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು (ಶಾಕುಂತ. ೯೦-೧೭). **ದುಱ್ದುಂಬಿ :** ೫. ದುರಭಿಮಾನದ; ಹೆಮ್ಮೆಯ : ತೆಱಪಿಲ್ಲದಿರೆ ಮುನ್ನಿನೊಂದು ದುಱ್ದುಂಬಿ ಲಿಪಿಯನುಜ್ಜಿಸಿ ಬರೆಸಿದೆನು (ಭರತ. ೫೪-೪೩). [ ದುಱು + ತುಂಬು₂ + – ಇ₃ ]

**ದುಱುದುಂಬಿಗ,** ದುರುದುಂಬಿಗ (ನಾ). ದುಷ್ಟ ; ನೀಚ ; ಕೆಟ್ಟವನು ; ಪುಂಡ : ನೋಟಕರು ನಿರ್ಭಯರು ಕೊನಬಿಗಳಾಟವಿಕ ದುಱುದುಂಬಿಗರು [ಪಾಠಾಂ. ಗಳು] . . . ಖಳರು ಕೂಡಿತು ಕೋಟೆಸಂಖೆಯಲಿ (ತೊರರಾ. ೫-೫-೧೫) ; ಡಂಬಕನು ಡೌಳಿಯ ವೃಥಾ ದುಱುದುಂಬಿಗಂ . . . ಎಂದಿರದೆ ಬಂದೆ ನಂಬಿ ನೆಱೆ ಪಕ್ಕಾದಿರಕ್ಕಟ ದುಃಖದುರಿಗೆಂದ (ಮುದೇಪು. ೩-೨೭). **ದುರುದುಂಬಿಗ :** ಪೆರರ ಪಡಿಮಾತನಾಡುವ ದುರುದುಂಬಿಗನೆಕ್ಕಸಿಕ್ಕನಂ (ನೀತಿಸಾ. ೮೫೭). [ ದುಱುದುಂಬಿ + – ಗ₂ ]

**ದುಱುದುಂಬಿತನ,** ದುರುದುಂಬಿತನ (ನಾ). ೧. ಕೆಟ್ಟ ನಡವಳಿಕೆ ; ದುಷ್ಟತನ ; ನೀಚತನ : ತಾನಿಲ್ಲದುದ ನೆವವನಿಕ್ಕಿ ದುಱುದುಂಬಿತನದಿ ನಿವನಂ ಕೊಲಿಸಿ (ಸಮ್ಯಕೌ. ೨-೯೫) : ರಾಮನ ಕೊಱಚಾಟದಿಂ ಕೊಲಿಸುವುದು ದುಱುದುಂಬಿತನವಲ್ಲವಿದು ರಾಜಕಾರ್ಯದ ಹೊಱಗೆಯಲ್ಲೆಂದು ಪೇಳಿದನು (ಕುರಾಸಾಂ. ೩೫-೩೦) ; ಆತನೊಳ್ ನೆಲೆಗೊಂಡ ದೈವದೊಲವುಮಂ, ಪಾರ್ವರ ಪರಕೆಗಳುಮನಱಿಯದೆ ದುಱುದುಂಬಿತನದಿಂ ಕೆಣಕು ಜಗಳಂ ತೆಗೆವುದುಂ (ಚಾಕಪಂ. ೧೩-೭). ೨. ತುಂಟತನ : ಮಿಸುಪ ಕರವೀರದ ಕಡುಗೆಂಬಿದ ಬಿರಿಮುಗುಳ್ಗಳಂ ಮಾಸುಂಕಿ ಮುತ್ತಿ ಮುಸುರೆಂದು ಮುಂಕೊಂಡು ಝೇಂಕರಿಸುತ್ತ ದುಱುದುಂಬಿತನದಿಂ ಬಂದು ಮಱಿದುಂಬಿಗೆ ಚಂಪಕಕೋರಕ ಭ್ರಾಂತಿಗೊಟ್ಟು ತೊಟ್ಟನೆ ಮುಗುಳ್ಚಿಯುಂ (ರಾಜಶೇ. ೧೨-೩೯ ವ). ೩. ಅವಿವೇಕ ; ದಡ್ಡುತನ : ದುರುಳ ನೀ ದುಱುದುಂಬಿತನದಲಿ ನಿನ್ನ ಹೊಗಳಿದೊಡೆ ಗರುವ ಮಾನ್ಯರು ಮೆಚ್ಚುವರೆ (ಕುವ್ಯಾವಿ. ೭-೦೮) ; ದುಱುದುಂಬಿತನದಿ ಧುರಮಂ ಮಾಳ್ಪೆನೆಂದೂರ ಪೊಱಮಟ್ಟು ತನ್ನ ಸೇನೆಯನು ಪರಬಲಕೆ ಕುಯ್ಯುಗಱಿ ಮಾಡಿ ನಾಡುಬೀಡಂ ಕೆಡಿಸಿಕೊಂಡನಲ್ಲಾ ನಮ್ಮ ನೃಪತಿ (ಸಮ್ಯಕೌ. ೮-೫೪) ; ಇಱಿದು ಮೆಱೆದು ಪೊಕ್ಕು ಪೊಱಮಡಬಲ್ಲ ಅಱಿಕೆಯಭಟರಿರ್ದಂತೆ ದುಱುದುಂಬಿತನದೊಳಿಂತಿದನೆಣಿಸುವರೇ ಕಱುವರೆಯದೊಳೆಲೆ ಮಗನೇ (ನೇಮಿಶಂ. ೨೮-೩೦). **ದುರುದುಂಬಿತನ :** ೧. ಬರಿದೆ ದುರುದುಂಬಿತನದ ಮಾನಿನಿಯವಳ್ ಕುಲನಾಶಿನಿ (ರುಕ್ಮಾಂಗ. ೬-೫೭) ; ಅವರು ಮಕ್ಕಳ ದುರುದುಂಬಿತನಕ್ಕೆ ಎಡೆಕೊಟ್ಟು ಕುಟುಂಬವಿನಾಶಕ್ಕೆ ಕಾರಣರಾಗುತ್ತಾರೆ (ಕಸಾಜ. ೨೫೭); ದುರುದುಂಬಿತನ, ಕಾಮತೃಷ್ಣೆ, ಹಿಡಿಹೊನ್ನಾಶೆ ಈ ಗೋಡೆಗಳಾಚೆ ಮಾನವ ದೃಷ್ಟಿಯು ಇನ್ನೂ ಹರಿದಿಲ್ಲ (ಧೂಮಮ. ೧೮) : ಜೈಲುಗಳಲ್ಲಿ ತಾಂಡವವಾಡುತ್ತಿದ್ದ ಘೋರದುಷ್ಕರ್ಮವನ್ನೂ ದುಷ್ಕರ್ಮಪ್ರವರ್ತಕರ ದುರುದುಂಬಿತನವನ್ನೂ ಅವನು ಕಣ್ಣಾರೆ ಕಂಡಿದ್ದನು (ಕುಸರು. ೫೯೧). ೪. ಮಂದ; ಸೊಕ್ಕು ; ಅಹಂಕಾರ : ರಾಮನನ್ನು ಬಗ್ಗು ಬಡಿಯುತ್ತೇನೆಂಬ ದುರುದುಂಬಿತನದಿಂದ ರುದ್ರ ಕರ್ನಾಟಕ ರಾಜ್ಯದ ಮೇಲೆ ಧಾಳಿ ನಡೆಸಿದನು (ನಂಜುಂಡ. ೪೪) ; ಆದರೆ, ನಾನೀಗ ದುರುದುಂಬಿತನದ ಗಂಗನನ್ನು ಹದಗೊಳಿಸಲಾಗಿ ಅವನೆ ರಾಜ್ಯದೊಳಗೇ ನುಗ್ಗುತ್ತೇನೆ (ವೀರಬಂ. ೬೫).

[ ದುಱುದುಂಬಿ + – ತನ ]

**ದುಱುದುಂಬಿನಿ** (ನಾ). ದುಷ್ಟೆ ; ಕೆಟ್ಟವಳು : ಕೇಡಿಯೊ ಕುಂಟಣಿಯೊ ಕುಬ್ಜೆಯೊ ನಾಡೆ ದುರ್ಗಂಧಿನಿಯೊ ದುಱುದುಂಬಿನಿಯೊ ದುರ್ಜನಿಯೊ (ಮುದೇಪು. ೬-೨೧). [ < ದುಱುದುಂಬಿ ]

**ದುಱುದುಱನೆ** (ಅ). ವೇಗವಾಗಿ ; ದುರುದುರು ಎಂಬ ಶಬ್ದದೊಡನೆ: ಇಱಿದೆಚ್ಚು ಕಡಿವಲ್ಲಿ ಹೊಡವಲ್ಲಿ ಸೀಳ್ವಲ್ಲಿ ದುಱುದುಱನೆ ನೆತ್ತರುಗೆ (ವೀಕ್ಷ್ಮಪು. ೨-೧೧-೮). 'ದರದುರನೆ' ಪರಾ.

[ ದುಱುದುಱು + – ಅನೆ₁ ]

**ದುಱುದುಱಿಸು,** ಜುಱುಜುಱಿಸು, ದುರುದುರಿಸು₁, ದುಱದುಱಿಸು (ಕ್ರಿ). (ನೊರೆ ಸಹಿತವಾಗಿ) ಧಾರೆಯಾಗಿ ಸುರಿ ; ಒಂದೇ ಸಮನೆ ಸ್ರವಿಸು ; ಬಳಬಳನೆ ಸುರಿ : ಕೋಣನ ಮುಱಿದಲೆಯ ಪಿಸಲಿನ

ರಕುತದ ದುಱುದುಱಿಪ ದಂಡೆಯುಲಿ ಕಲಸಿದ ಕೂಳ ಮುದ್ದೆಗಳ (ಕುಮಾ.ಭಾ. ೮-೪); ದುಱುದುಱಿಪ ನೆತ್ತರ ನಿಹಾರದ ಮೈಯ ಸಡಲಿದ ಕೈಯ ಬಿಲುಸರಳ ಅರಸನನು ಕಂಡಳಲಿದರು (ಕುಮಾ.ಭಾ. ೧೧-೩೫); ದ ಱುದುಱಿಪ ತಲೆ ವಿದ್ರುಳ ಹಱಿಗರುಳ ನೆಣವಸೆಯ ಮೂಳೆಯ ಮುಱುಕುಗಳ ಕಡಿಖಂಡಮಯವಾಯ್ತು ವಿಳಚತುರಂಗ (ಕುಮಾ.ದ್ರೋ.೧೮ ೩೩); ಮುಱಿದ ಮೂಳೆಗಳಿಂ ಸುಭಟರ ದುಱುದುಱಿಸುವ ಗಾಯಗಳಿಂದಾ ರಣ ಭೂಱಿ ದುದು ಭೀಕರವಡೆದು (ಕುಮಾಸಾಂ. ೧೨-೮೧). ಜುಱುಜುಱಿಸು: ಆ ಕುವರಾರ ಶರಾಭಿವರುಷದಲಿ ಜುಱುಜುಱಿಪ ಕರುಳಗಳ ಖಂಡದ ಹಱಿದೊಗಲ ತೊಡೆ ತೋಳ್ಗಳಲಿ ಹದ್ದೊಱೆಗಳಾದವು (ನಿಭಾಗ. ೧೧-೮೬-೮); ಜುಱು ಜುಱಿಪ ಕೀವು ನೆತ್ತರ್ಗೆಱಗುತ ರಘುವ್ಮೆಂದು ಮೊರೆವ ನೊಳವಿಗೆ (ವ್ಯಷವಿ. ೩೮-೧೨೪). ದುರುದುರಿಸು₁: ಗುರುಗುರಿಸುವ ಜೀವದೊಡಲೊಳು ದುರುದುರಿಸುತಿಹ ರಕುತಮಯದಿಂ ಮೆರದುದೈ ರಣಭೂಮಿ (ದೇವೀಭಾ. ೩-೧೪). ದುಱದುಱಿಸು: ದುಱದುಱಿಪ ರಕುತದ ಕಾಲುವೆಯೊಳುಱಿ ತೇಲಿದುವು ಹಯರಾವ್ರರಟ್ಟೆಗಳು (ಮೈರಾಕಾ. ೪-೪೯); ದುಱದುಱಿಪ ನೆತ್ತರಿನ ಕೋಡಿಯಿರದೊತ್ತರಿಸಿ ಸುತ್ತುವರಿಯೆ . . . ಬೆಂಬತ್ತಿದರ್ ದಾನವರನೆತ್ತಿದಾಯುಧಗಳಿಂದೆ (ಜಲಕು. ೪೪-೪೧).

[ ದುಱು ದುಱು + – ಇಸು₂ ]

**ದುಱುದುಱು** (ನಾ). (ದ್ರವಪದಾರ್ಥಗಳು ಸುರಿಯುವುದನ್ನು ಸೂಚಿಸುವ) ಒಂದು ಅನುಕರಣ ಶಬ್ದ: ದುಱುದುಱೆಂದು ನೆತ್ತರುಱಿ ಶಾಕಿನಿಗಳಲ್ಲಿ ಬಾಯ್ಗಳನೊಡ್ಡಿ ಬಿಸಿನೆತ್ತರ ಜುಱ್ರೆಂದು ಪೀರಿಯಾನಂದಿಸುತ ನಲಿದು ಘುಳುಘುಱ್ರೆಂದು ತೇಗಿದ ವು (ಜೇರವಾ. ೪-೧೫); ದುಱುದುಱೆಂದು ನೆತ್ತರುಗೆ ಕುಕಿಲಿರಿದು ಭೂತಂಗಳೆಯ್ದೆ ಬಾಯೊಡ್ಡಿ ನಲಿದು . . . ಘುಱ್ರೆಂದು ತೇಗಿ ಪರಸಿದವು ಶಿವದೂತರಂ (ವೀಕ್ಷಪು. ೨-೭-೪೮).

**ದುಱುದುಱುದಿನ್** 'ತಂಱುತುಱುತಿನ್' ನೋ.

△**ದುಱುಸು** 'ದುರಂಸು₁' ನೋ.

**ದೂ** 'ದು' ನೋ.

**ದೂಂಟಿಕ್ಕು**, ದೂಟಿಕ್ಕು (ಕ್ರಿ). ೧. ಮೇಲಕ್ಕೆ ನೆಗೆ; ಜಿಗಿ: ಭರದಿಂ ಬಂದೆನ್ನ ಮೇಗಾಲ್ಗಳನಮಳಡಿಯಿಂ ಮೆಟ್ಟಿ ದೂಂಟಿಕ್ಕಿ . . . ತಾವಾ ಧರವುಂ ತತ್ಕಾಂತ ಪೆಂಪಿಂ ಮಗುಟ್ದು ಮಗುಟ್ದವಳ್ ಚುಂಬನಂ ಗೆಯ್ದಳಾಗಳ್ (ದಕಕು. ೧೧-೯೬); ಮರಳಿ ಕುಂಟುತ್ತೆ ದೂಂಟಿಕ್ಕಿ ನಡೆಯುತ್ತುಮೆನ್ನ ಕರದೊಳಗೆ ಲೀಲ್ಮಮಂ ಪಿಡಿದೆತ್ತಿಕೊಂಡು (ಅರಾಜ. ೬-೧೭). ದೂಟಿಕ್ಕು: ೧. ಉರದೊಳ್ ಪೆರ್ವೊಲೆ ನಿಂದು ಮಿಳ್ಳಿಸೆ ಭುಜಾಮೂಲಂಗಳ ಸ್ಥಾನದೊಳ್ ಬೆರಸಲ್ ಪೆರ್ದೊಡೆ ನೀಳ್ದು ಕೂಡೆ ನಿಮಿರಲ್ ದೂಟಿಕ್ಕಿ ತಾಂ ನೀಳ್ಕೆ ಸೌಂದರಿಯೊರ್ವಳ್ ಕಡುನೀಡಿ ಮೇಲೆ ನಳತೋಳಂ ಚಂಚಳಂಬೆತ್ತ ನುಣ್ಬೆರಳಿಂ ಪೊದಿಱಿಪುತ್ತವಿರ್ದಳೊಲವಿಂ ದೊಂದುಚ್ಚಶಾಖಾಗ್ರದೊಳ್ (ಬಾಧಪು. ೧೪-೮೫). ೨. ತಳ್ಳು; ದೂಡು; ಸರಿಸು: ತರಳತನದಲಿ ತಾನು ಮಾಡಿದ ದುರುಳತೆಯ ದೂಟಿಕ್ಕಿ ನಿಮ್ಮಯ ಹಿರಿಯತನವನು ಮೆಱಿಪುದು (ತೊರರಾ. ೬-೨೪-೩೭); ನಿನ್ನ ನಂದನಂ ದುರುಳತನದಿಂ ನಿಮ್ಮ ದೂಟಿಕ್ಕಿ ಹಿರಿಯರಂ ಕುರುಡನಂ ನಂಬಿ ಕುರುಡುಂಅಡವಿಯಂ ಪೊಕ್ಕವೊಲಾದ (ತುರಂಗ. ೭೦-೭); ಗುರು ಭೀಷ್ಮ ವಿದುರಾದಿಗಳ್ನುಡಿಯ ದೂಟಿಕ್ಕಿ ದುರುಳರ ಕುಯುಕ್ತಿಗಂ ಮೈಗೊಟ್ಟು ಕೆಟ್ಟು ಪೊರದೆಗೆದು ಪೋಪಾಗಳೀಗಾರುಂಟು (ತುರಂಗ. ೭೩-೫೪); ನಮ್ಮ ಪಾಂಡವರೆಂಬ ಪ್ರೀತಿಯ ಸೊಮ್ಮು ನಾವು ಸುರಿದರೆ ಕೌರವ ಕರ್ಮಿಗಳುಚಿತವ ನೆನವನೆಂದೇ ಹೊರೆಗೆ ದೂಟಿಕ್ಕಿ ನಮ್ಮ ಪ್ರೀತಿಗೆ ಮುನಿದರರಿಯದೆ ಹೆಮ್ಮೆಯಿಂದವರೊಡನೆ ನೆರವಿಗಧರ್ಮವಿಡಿದೈತಂದ ಕೌರವನೆಲ್ಲಿ ತೋರೆಂದ (ಕೃಷ್ಣಾ.ಭಾ. ೨೮-೯೦). [ ದೂಂಟು₁ + ಇಕ್ಕು ]

**ದೂಂಟಿಸು**, ದೂಟಿಸು, ದೂಡಿಸು (ಕ್ರಿ). ೧. ಹಾರುವಂತೆ ಮಾಡು; ಜಿಗಿಸು; ಚಿಮ್ಮಿಸು: ಎಂಟು ಶಿರವನೀವೆನೆಂಟೊಡಲಾತಂಗೆಂದಂಟ ಮಾನಸದಿ ಮಂತ್ರವನೂ ದೂಂಟಿಸುತವೆ ತನ್ನ ಕಂಠವರಿಯಲು ಶ್ರೀ ಕಂಠ ಹೋ ಪುರೆ ಸಾಕು ನಿಲ್ಲು ಎನುತ (ಭೈರವೇ. ೧-೨೭೪). ದೂಟಿಸು: ೧. ಉಚ್ಚಡಿರು ದೋರ್ವಳತಟಾಕದ ಮುಚ್ಚುದೂಂಬನು ನಮ್ಮ ಮುಂದೆನು ತೆಚ್ಚು ಗಗನಕೆ ದೂಟಿಸಿದ[ಪಾಠಾಂ. ದನು] ದೂಷಣನ ಮಸ್ತಕವ (ತೊರರಾ. ೩-೭-೧೮). ೨. ನಾಶಮಾಡು; ಇಲ್ಲವಾಗಿಸು: ಭಕ್ತಜನ ಹೃದಯಾಂಧ ಕಾರಮಂ ದೂಟಿಸಲು ಬಲದ ಕೈಯೊಳಗೆ ಚಕ್ರಾದಿತ್ಯನಂ ಧರಿಸಿ ರಾಜಿಸುತಿಹೆ (ಅರ್ಜಾವಿ. ೧-೮೫); ತಾಟಕಿಯಾಟವುಂ ಕಣೆಯೊಂದರಿಂದ ದೂಟಿಸಿದನು ರಾಮ (ಸಂರಾಣಂ. ೧೭). ದೂಡಿಸು: ೩. ಮುಂದಕ್ಕೆ ಬರಂ; ಚಾಚು: ದೂಡಿಪ ಬೆಳಗಾಯಿ ಬೊಗರಿಮೊಲೆಯ ಚೆಲ್ವ ಗಾಡಿಕಾತಿಯರ್ಕೈದಿದರು (ಕಂಸವಿ. ೯-೮೦); ಓಡಿತು ತವದೊಡ್ಡು ಪಾಡಿದೊ ಕೋಗಿಲೆ ದೂಡಿಸಿ ಅಂಬುಜವರಲ್ದೊ (ಪೂಜ್ಯಜ. ೭).

ದೂಡಿಸಿಕೊಳ್ಳು = ನೂಕಿಸಿಕೊಳ್ಳು; ಹೊರಗೆ ಹಾಕಿಸಿಕೊಳ್ಳು: ದೂಡಿಸಿಕೊಂಡ ಮನುಷ್ಯ ಹೇಡಿಗಿಂತ ಕಡೆ (ಗಾದೆ); ದೂಡಿಸಿಕೊಂಡವನಿಗೆ ನಾಡಿನ ಗೊಡವೆ ಯಾಕೆ? (ಗಾದೆ). [ ದೂಂಟು₁ + – ಇಸು₂ ]

**ದೂಂಟು₁**, ದೂಟು₁, ದೂಡು (ಕ್ರಿ). ೧. ಒಂದೇ ಕಾಲಿನಿಂದ ನಡೆ; ಒಂಟಿಕಾಲಿನಲ್ಲಿ ನಡೆ; ಕುಂಟನಡೆ; ಕುಂಟು: "ದೂಂಟು – ಏಕಪಾದ ಗತೌ" (ಶಮುಧಾ); ನಿತ್ಯಬಿಂದುಗೆ–ಬೆಡಂಗು, ಕಡಂಗು . . . ದಾಂಟು, ದೂಂಟು (ಶಮದ. ೩೭ ಪ್ರಯೋ); ದಾಂಟು, ದೂಂಟು (ಶಬ್ದಾನು. ೮೦ ಪ್ರಯೋ) ೨. ಹಾರಾಡು; ಗಾಳಿಯಲ್ಲಿ ತೇಲಾಡು, – ಸಂತ್ಯಾಡು: ನವಸಹಕಾರನೊಳ್ ನೆರೆದ ಮಲ್ಲಿಗೆ ನಲ್ಲಳ ತಾರಹಾರದಂತೆವೊಲಿರೆ ಮೊಲ್ಲೆ ಮೊಗ್ಗರಿಸೆ ಕಂಪನಲಂಪಿನೊಳೀಂಟಿ ದೂಂಟುವಾಡುವ ಮಱಿದುಂಬಿ ಮಾಲೆ ತಳಿರೊಳ್ ತಡಮಾಯ್ದೆರ್ದೆ ಝುಂಕೃತಂ ತುಳುಂಕುವ ನೆವದಿಂದೆ ಜೇವೊಡೆದು ನೋಡಿದನಂಗಜನಿಕ್ಷುಚಾಪಮಂ (ಅನಂಪು. ೭-೯). ದೂಟು₁: ೩. ಹಾರಂ; ಚಿಮ್ಮು: ದೂಟ ಬಿದ್ದವು ಸೀಸಕವು ಶತಕೋಟಿ ಘಾಯದ ಘಟನೆಯೊಳು ಶತಕೋಟಿ ಘಾಯಕೆ ಸಿಡಿದ ಹೇಮಾಚಳದ ತುದಿಯಂತೆ (ಕುಮಾ.ಗ. ೭-೧೨). ೪. ಹಾರಿಸಂ; ಚಿಮ್ಮಿಸು: ದೂಟೆ ಮಸ್ತಕವಪ್ಪು ಕಟ್ಟಿದು ಕೂಟದಲಿ (ತೊರರಾ. ೩-೭-೧೯). ೫. ನೂಕು; ದಬ್ಬು; ತಳ್ಳು. ೬. ನಿವಾರಿಸು; ದೂರವಮಾಡು: ಪದಧೂಳಿಯಲಿ ದೂಟದನಹಲ್ಯಾ ಸತಿಯ ದುಷ್ಕೃತವ (ತೊರರಾ. ೧-೨-೨೦); ದೂಡಿದಳು ಲಜ್ಜೆಯನು ಮೂರ್ಛೆಯ ಧಾಟಿಯಲಿ ಧೃತಿಗೆಟ್ಟಳು . . . ತರಳಾಕ್ಷಿ (ನಿಭಾಗ. ೧೧-೫೮-೨೪). ೭. ಅಲುಗಾಡು; ಕಂಪಿಸು; ತೂಗಾಡು; ಏರುಪೇರಾಗು: ಕೋಟಿಸಂಖ್ಯೆಯ ಬಲವ ಮಿಕ್ಕಿನ ಕೋಟಿಸಂಖ್ಯೆಯ ಯೂಥಪರು ಧರೆ ದೂಟಲಂಬುಧಿ ಮಿಾಟಲು . . . ತೋಱಿಸಿದರೀ ಪರಿಪಾಟಿಯುಲಿ . . . ಗಣನೆಯಿಲ್ಲದ ರಾಮಸೈನಿಕವ (ತೊರರಾ. ೪-೭-೨೫). ದೂಡು: ೫. ತೊಟ್ಟಿಗೆ ವಿಭು ಸಾಯೆ ಪೊಯ್ದು ಕಿವಿಯಂ ಪಿಂಡಿ ದೂಡಲೊಡರ್ಚಿ ಬಂದನೇ (ಸುಕುಮಾ. ೨-೬೩); ದಶಕಂಠ . . . ದೂಡಿಬಿಟ್ಟನು ತಮ್ಮ ವಿಭೀಷಣನ (ಕೌಶಿರಾ. ೧೪ ಪಲ್ಲವಿ); ಚೇದಿಭೂಪತಿ ದಂತವಕ್ತ್ರರು ವಿಪ್ರ ಶಾಪದಲಿ ಆದರೀ ಪರಿ ವಿಷ್ಣುಪದದಿಂ ದೂಡಿದುದು ನಿಜಕರ್ಮಗತಿ (ನಿಭಾಗ. ೭-೦-೨೫); ಈ ಸಣ್ಣ ಮಗುವ ದೂಡುವರಲ್ಲೆ ಯುದ್ಧಕ್ಕೆ (ಅಭಿಕಾ. ೮); ಬಳಿಕಿತ್ತ ಮಲ್ಲಮ್ಮನಂ ದೂಡಿ ತಾವುಣ್ಣಲೆಳಸುತೊಳಪೊಕ್ಕು ನೋಡಲ್ ಬೋನ ಕಜ್ಜಾಯ ಉಳಿಯದೆಲ್ಲವಡಂಗಿ ಪೋಗಿತ್ತು (ಮಲ್ಲಚ. ೬-೨); ಬೆಳಕು ಕತ್ತಲೆಯ ಎರಡು ಗೋಲಗಳು ಒಂದನೊಂದು ದೂಡೆ (ಅರಳು. ೨೨೮-೨೦); ಎರಡು ಗಂಟೆ ಕಾಲ ನಿದ್ದೆಮಾಡದೆ ಅತ್ತಿತ್ತ ಹೊರಳಿ ಸಮಯ ದೂಡಿದರು (ಕಾವೇರಿ. ೧೭೦); ಕಂಡವರ ಮಕ್ಕಳನ್ನು ಬಾವೀಲಿ

ದೂಡಿ, ಆಳಾ ನೋಡಿದ ಹಾಗೆ (ಗಾದೆ). ೬. ಸಖಿ, ಮುನ್ನಿನ ಸಖ್ಯವು ಸಾರ್ಥಕವೆ ಸುಖಕಾಲದಿ ಸಖಿಯರ ದೂಡುವರೆ (ವಿಸೀಗೀ. ೭೮-೪). ೮. (ಹಳ್ಳಿ, ಜಾತಿ ಮುಂತಾದುವುಗಳಿಂದ) ಹೊರಗೆ ಹಾಕು,- ಬಹಿಷ್ಕರಿಸು : "ದೂಡು-ಹೊರಗೆ ಹಾಕು" (ಜಾನಕೋ. ೭).

[ ದೇ.॥ ತಮಿ. ತೂಣ್ಡು ; ತುಳು. ದೂಡು ; ಕೊಡ. ದುಡ್, ದುಡಿ ; ತೆಲು. ದೂಂಟು ]

**ದೂಂಟು₂**, ದೂಟು₂ (ನಾ). ಹೆಜ್ಜೆ ; ಅಡಿ (?): ಎಡೆಯೊಳ್ ದೂಂಟಿಂದೆ ದೂಂಟಿಂಗೆ ಪೆರ್ವಜಿ೯ಯುಂ ಪೊಯ್ವು ಕೆಲಕ್ಕೆ ನಾಣ್ಚಿ ತಲೆಗುತ್ತಿ ಪಾರ್ಕೆಯೋಂ ಜೋಡೆಯೋ (ಪಂಪಭಾ. ೪-೮೨). **ದೂಟು₂** : ದೂಟಿಂದೆ ದೂಟಿಂಗೆ ಮರವಟ್ಟುಮಾ ಮುದುಕಿ ತೊಟ್ಟ ನೋಂಪಿಯು ಬಳ್ಮೆಯುೂರೆಗೋಲಂ ನೆವಿಸ್ಸಿ ಸಂಚಲಿಸಿದಳೊ ರಾಮನಂ ಕರೆದೊರಲಿ, ಕರೆದು ಕೂಗಿ (ಶ್ರೀರಾಮಾ. ೧೨೨-೨೯೪); ☞ ಇದಂ 'ದಾಂಟಿಂದೆ ದಾಂಟಿಂಗೆ' ಎಂಬುದರ ಅಪಲಿಖಿತವಿರಬಹುದೆ ? [ <ದೂಂಟು₁ ]

**ದೂಂಡು** (ನಾ). ಮನಸ್ಸಿನ ಅನಿರ್ಧಾರ (?) : ಮನವೊಸೆದಿತ್ತು ದೂಣ್ಡರದೆ ಭೂಮಿಯನಿತ್ತು (ಬೊಂಕಶಾ. ೧೯೪೫, ಬಂಕಾಪುರ. ೧೧-೩೩; ?).

[ <ದೂಂಟು₁ ? ]

**ದೂಕೀಲ** (ನಾ). ಒಂದು ಬಗೆಯ ಆಭರಣ (?) : ಮಣಿಹಾರ ಕಾಣ್ಕೆ ಯನಿಟ್ಟುಯಿಟ್ಟು ದೂಕೀಲ ನೀವಾರಿಗಳನಿಟ್ಟನಾಗಮನೆಲೆಯುನರಿದು ಕೈಗೋಣ್ಗಳೆತ್ತಿ ಸಾರಿದರು (ಜಿನಮು. ೩-೫). [ ? ]

**ದೂಕು**, ದೂಗು (ಕ್ರಿ). ದೂಡು ; ದಬ್ಬು ; ತಳ್ಳು : ಸಾವಿತ್ರಿ ಎರಡು ತಿಂಗಳ ಕಾಲ ಕುಮುದಮ್ಮ ಠಂಗಮ್ಮ ಇವರನ್ನು ಆಶ್ರಯಿಸಿ ಬಾಳು ದೂಕಬೇಕಾಯಿತು (ತಾಯಿಕ. ೧೫೦). **ದೂಗು** : ತನ್ನ ತಾನೆ ದುಂಬಾಲ ಬಿದ್ದ ಕವಿನೆರಳ ದೂಗು ನೂಗು (ಅರಳು. ೩೫೫-೧೦). 'ನೂಂಕು₁' ಪರಾ.

[ ದೇ. ॥ ತೆಲು. ದೂಂಕು = ಹಾರು, ನೆಗೆ ]

**ದೂಗ** 'ದುಗ' ನೋ.

**ದೂಗರುವ** (ನಾ). ಇಮ್ಮಡಿ ಪರಾಕ್ರಮವುಳ್ಳವನು (?) : ಪಂಪರಿಯಾ ಶಸ್ತ್ರಾಸ್ತ್ರ ಕೌಶಲಗಳ ದೂಗರುವ ತೋರಿದಂ (ತುರಂಗ. ೧೧-೩೮).

[ ದೂ (<ದು) + ಗರುವ₁ ]

**ದೂಗಿಸು** (ಕ್ರಿ). ದಬ್ಬು ; ತಳ್ಳು ; ನಂಗ್ಗಿಸು : ಮಧ್ಯಮರು ಪುಢಾರಿತನದ ಯಜ್ಞದಲ್ಲಿ ಯಾರನ್ನೋ ದೂಗಿಸಿ ಕಪಟಸಾಕ್ಷಿತ್ವದ ತಾಟಸ್ಥ್ಯದಿಂದ ಅವರು ಮೈಮರೆಸಿಕೊಳ್ಳುವುದು . . . ವಾಡಿಕೆಯದೇ ಆಗಿದೆ (ಪಂಜಪಂ. ೬ ಮುನ್ನುಡಿ). 'ನೂಂಕಿಸು' ಪರಾ. [ ದೂಗು (<ದೂಕು) + -ಇಸು₃ ]

**ದೂಗು** 'ದೂಕು' ನೋ.

**ದೂಜಾವ** 'ದುಜಾವ' ನೋ.

**ದೂಟಾಡು** (ಕ್ರಿ). ಅಲುಗಾಡು ; ಅಲ್ಲಾಡು. 'ದೂಟಾಡಿಸು' ಪರಾ.

[ ದೂಟು₁ (<ದೂಂಟು₁) + ಆಡು₁ ]

**ದೂಟಾಡಿಸು** (ಕ್ರಿ). ೧. "ಹಾರಾಡಿಸು ; ಚಿಮ್ಮಾಡು" (ಶ್ರಭಣ.). ೨. ಅಲುಗಾಡಿಸು ; ಅಲ್ಲಾಡಿಸು ; ತೂಗಾಡಿಸು : ಮೇರುಶೈಲವುಂ ದೂಟಾಡಿಸಿತು ರಾಶಿ ತಾರಾಗ್ರಹಂಗಳಂ ತಾಟಾಡಿಸಿತು ಹನುಮನಬ್ಬರಣೆ (ಕೃಮಿಥಾ. ೧೩-೪೩) ; ಮರುತನೆಡೆಯಾಟವೇಂ ಗಿರಿವರನ ದೂಟಾಡಿಸಲು ಬಲ್ಲುದೆ (ದಿಲೀಪ. ೨-೩೩) ; ಬುಡ ದೂಟಾಡಿಸಿ, ತಲೆ ತಾಟಾಡಿಸಿ, ಗುಡಿಸಿಲ ಮಾಡನು ಹುಲುಹುಲುಮಾಡಿಸಿ ಬಂತೈ! ಬಂತೈ (ಕಷಿಪು. ೨೮-೫).

[ ದೂಟಾಡು + -ಇಸು₃ ]

**ದೂಟಿಕ್ಕು** 'ದೂಂಟಿಕ್ಕು' ನೋ.

**ದೂಟಿಸು** 'ದೂಂಟಿಸು' ನೋ.

**ದೂಟು₁** 'ದೂಂಟು₁' ನೋ.

**ದೂಟು₂** 'ದೂಂಟು₂' ನೋ.

**ದೂಡಿಸು** 'ದೂಂಟಿಸು' ನೋ.

**ದೂಡು** 'ದೂಂಟು₁' ನೋ.

**ದೂಡುಗಾಡಿ** (ನಾ). ತಳ್ಳುಬಂಡಿ; ತಳ್ಳುಗಾಡಿ; "ಮಕ್ಕಳನ್ನು ಕುಳ್ಳಿರಿಸಿ ದೂಡಂತ್ತಾ ಒಯ್ಯುವ ಗಾಡಿ" (ಕಸೂ ಕೋ. ೪೯೪).

[ ದೂಡು (<ದೂಂಟು₁) + ಗಾಡಿ₃ ]

**ದೂತ** (ನಾ). ೧. ಸುದ್ದಿ ಅಥವಾ ಸಂದೇಶವನ್ನು ಒಯ್ಯುವವನು ; ಓಲೆಕಾರ : "ಲೇಖವಾಹಂ ದೂತಂ" (ಪಸು ಕೋ. ೬೧-೫೮) ; "ದೂತನೆನೆ ಪೋಗಿ ಪೇಟುವನೆನಿಕ್ಕು" (ಮಂಗರಾ. ೭೩-೨೪); ದೂತಂ ದಪ್ಪನ ವಾರ್ತೆಯುಂ ನುಡಿದು ಮೇಗಂ ನೋಟ್ಪುಡಿಲ್ಲೆಂಗೆ ತದ್ದೂತಂ ನಿಶ್ಚಯ ಕಾರ್ಯವುಂ ನುಡಿಯುತುಂ ತನ್ನಂಗಮುಂ ಮುಟ್ಟಿದಂತಾ ಕಾಣಂ ಫಣಿ ದಪ್ಪಮೆಂಗೆ (ಲೋಕೋಪ. ೧೦-೬) ; ಉಳಿದ ಚತುರಾಂಬುಧಿವೃತಾ ಭೂತಳದ ಭೂಪಾಲರಿಗೆ ದೂತರ ಕಳುಹಿದನು (ಕೊರರಾ. ೧-೭-೧೦). ೨. ರಾಯಭಾರಿ ; ನಿಯೋಗಿ: ಇನಿತೊಂದು ನುಡಿದ ಬಲ್ಮೆಯು ನಿನಗಿಲ್ಲ ದೊಡೇಕೆ ನಿನ್ನನಾಳ್ದಂ ನಿನ್ನಂ ಮಾನವೊಲ್ದು ನಟ್ಟಿಯುಟ್ಟಿದನನಾಕುಳಂ ದೂತನಿಂತು ನುಡಿಯಲ್ವೇಟ್ಕುಂ (ಆದಿಪು. ೧೪-೬೫) ; ಎಟ್ಪೋಗು ದೂತನಪ್ಪನ ಬೆಟ್ಟನ ನುಡಿಗೇಳ್ಕು ಮುಳಿಯಲಾಗದು (ಪಂಪಭಾ. ೯-೫೮) ; ದೂತನನಟ್ಟುವುದೆಂತುಂ ನೀತಿಯೆ (ಪಂರಾಮಾ. ೧೧-೨೪) ; ದೂತಂಗೋಲಗದೊಳ್ ಪೆರ್ಮಾತಂ ಮಗನಿಂದೆ ನುಡಿಯಿಪೆಡೆಯಲ್ಲದು (ಚಂದ್ರಪು. ೧೦-೧೦೧); ದೂತಂ ಸಂಗರಮುಂ ನಿರೂಪಿಸೆ (ಪಾರ್ಶ್ವಪು. ೨-೯೦); ಎರಡಕ್ಕಂ ಸಲ್ವಂತಿರೆ ನರನಾಥಂಗುಸಿರ್ಗೆ ಸಂಧಿವಿಗ್ರಹಿನುಡಿಯುಂ ಸರಿಯುಪ್ಪುದನೆರಡಕ್ಕಂ ಪರಿಣತಮಂತಿ ದೂತನಿಂತು ನುಡಿಯಲೆವೇಟ್ಕುಂ (ಸೂಕ್ತಿಸು. ೩೬-೮೩); ಬಂದ ದೂತನ ಕೊಲುವನರಸೇ . . . ತಾನೊಂದು ಹುಲುಗಬಿ ವೀರನನು ಬೇಹಿಂಗೆ ಕಳುಹುವರೇ (ಕಾಶಿರಾ. ೧೧-೫೩). ೩. ಸಂಧಾನ ಮಾಡುವವನು ; ಮಧ್ಯಸ್ಥ. ೪. ಸೇವಕ ; ಆಳು : ಮನೋಜ ವಸಂತರಾ ಖಳನ ಬೆಸನ ಮಾಡುವ ದೂತರೀ ರವಿ ಶಶಿಗಳೊಪ್ಪುವ ದೀವಟಿಗರು (ತೊರರಾ. ೧-೮-೬೩) ; ನಿನ್ನ ಬಳಿ ಒಬ್ಬ ಸಿಪಾಯಿ ದೂತ ಇರುವನಲ್ಲವೇ ? (ಮಾಳಿನಾ. ೬೪). [ ಸಂ. ]

**ದೂತಕಾರ್ಯ** (ನಾ). ರಾಯಭಾರಿಯ ಕೆಲಸ : ಮುರಾಂತಕನಂತಪ್ಪವಂ ಯುಧಿಷ್ಠಿರಂ ದೂತಕಾರ್ಯಕ್ಕಟ್ಟಿದಂ (ಪಂಚತಂ. ೨೩೮-೮).

[ ದೂತ + ಕಾರ್ಯ ]

**ದೂತಕಿ** (ನಾ). ಸೇವಕಿ : ಇತ್ತ ಪುತ್ರೋದಯದ ಶುಭವಾರ್ತೆಯಾ ಬಂದೋರ್ವ ದೂತಕಿಯು ಶ್ರೀಕೃಷ್ಣರಾಯಂಗೆ ಪೊಂದಿಸುತ ನಿಂದು ಸೂಚಿಸೆ (ನವಕೋ. ೧೦-೨೨) ; ಶ್ರೀವೃಷಾದೇವಿಯುರುಯಿದನರಿದು ತಳೆತ ಭೂಜದ ನೆಳಲೊಳಂ ನಿಂತು ದೂತಕಿಯರಂ ಕಳುಹೆ (ನವಪೋ. ೨೯-೩೯).

[ <ಸಂ. ದೂತಿಕಾ ]

**ದೂತಟ್ಟು** 'ದೂದಟ್ಟು' ನೋ.

**ದೂತತನ** (ನಾ). = ದೂತತ್ವ : (+). [ ದೂತ + -ತನ ]

**ದೂತತ್ವ** (ನಾ). ರಾಯಭಾರ ಮಾಡುವಿಕೆ ; ದೂತ್ಯ : ಸಾಂಗವಾದುದು ನರಪತಿಯ ದೂತತ್ವವಿನ್ನೀಶ್ವರನು ಪಾಡಲ್ಲೆನಗೆನುತ ಹಿಗ್ಗಿದನು ಹರುಷದಲಿ (ಕೊರರಾ. ೫-೩-೨೭); ಮೆಲ್ಲಗೆ ಕಿವಿಯಲ್ಲಿ 'ನಿನ್ನ ತಂಗಿಯುತನ್ನ ಬರುವಂತೆ ಹೇಳು' ಎಂದನು. ದೂತತ್ವವೆ ಸಿದ್ಧಿಸಿತು (ಮರಪು. ೨೬೮).

[ ಸಂ. ]

**ದೂತಮುಖ್ಯ** (ನಾ). ರಾಯಭಾರಿಗಳಲ್ಲಿ ಶ್ರೇಷ್ಠನಾದವನಂ,-ಪ್ರಮುಖ ನಾದವನಂ : ಚತುರವಚನರಚನಾಪ್ರಪಂಚಕಂಚುಕಿತ ರೋಮಾಂಚಚುಂಚು ಸಭಾಜನಶರೀರನುಮಪ್ಪ ದೂತಮುಖ್ಯನನಟ್ಟಿ (ಶಾಂತಿಪು. ೨-೫೦ ವ) ;

ನೀತಿನಿರತನುಮಾಕಾರವಂತನುಂ ವಚನಚತುರನುಮಪ್ಪುದ್ಧವನೆಂಬ ದೂತಮುಖ್ಯನನಟ್ಟಿದೊಡೆ (ಚಂದ್ರಪು. ೬-೧೮ ವ); ದೃಷ್ಟಂ ವರವಕ್ರೋಕ್ತಿ ವಿಶಿಷ್ಟಂ ನಿಶ್ಶಂಕನನ್ವಿತಂ ನಯನಿಪುಣಂ ಸ್ಪಷ್ಟ ಪರಚಿತ್ತವೃತ್ತಿಸ್ಪಷ್ಟಾರ್ಥನೆನಿಪ್ಪ ದೂತಮುಖ್ಯನನಾಗಳ್ ಕರೆದು (ಪಾರ್ಶ್ವಪು. ೨-೫೦).
[ ದೂತ + ಮುಖ್ಯ ]

**ದೂತಯ** 'ದಾತಯಂ' ನೋ.

**ದೂತಲಕ್ಷಣ** (ನಾ). ರಾಯಭಾರಿಯು ಹೊಂದಿರಬೇಕಾದ ಲಕ್ಷಣ,- ವಿಶಿಷ್ಟ ಗುಣ : (+). 'ದೂತಾಂಗ' ಪರಾ. [ ದೂತ + ಲಕ್ಷಣ ]

**ದೂತವಚನ** (ನಾ). ರಾಯಭಾರಿಯ ಮಾತು; ದೂತನ ನುಡಿ: ಬಾಹುಬಲಿ ಕುಮಾರಂ ದೂತವಚನಾಕರ್ಣನೋದೀರ್ಣ ಕ್ರೋಧೋದ್ಗಚ್ಛದಚ್ಛೇದ ಜಳ ಸ್ವೇದಧಾರಾಸಾರಭೀಕರಾಲೋಹಿತ ಕಪೋಳತಳಮುಂ ... ಭೀಷಣಾರುಣ ಗಂಡಸ್ಥಳಮುಮಪ್ಪ ಗಂಧಸಿಂಧುರೇಂದ್ರಮನನುಕರಿಸಿ (ಆದಿಪು.೧೪-೬೩ ವ).
[ ದೂತ + ವಚನ ]

**ದೂತಸಂಪ್ರೇಷಣ** (ನಾ). ವಾರ್ತಾವಾಹಕನನ್ನು ಕಳುಹಿಸುವುದು; ದೂತನನ್ನು ಕಳುಹಿಸುವುದು : ಆಕೆ ನಿನಗನುರಕ್ತೆ ವಿರಕ್ತೆಯೆಂಬುದಂ ದೂತಸಂಪ್ರೇಷಣದಿನಱಿದನುರಕ್ತೆಯಪ್ಪೊಡೇಕಾನುಮೊಂದು ಪಾಯದಿಂ ತಪ್ಪದು ವಿರಕ್ತೆಯಪ್ಪೊಡಾಕೆಯಂ ಬಲ್ಲಾಳ್ತನದಿಂ ತಪ್ಪದುಮೆನೆ (ಚಾವುಂಪು. ೩೦೨). [ ಸಂ. ]

**ದೂತಾಂಗ** (ನಾ). [ಕಾವ್ಯವಿ] ದೂತಲಕ್ಷಣವನ್ನು ತಿಳಿಸುವ ಭಾಗ; ರಾಯಭಾರಿಯು ಹೊಂದಿರಬೇಕಾದ ಲಕ್ಷಣಗಳ ವಿವರಣೆ; ಅಷ್ಟಾದಶ ವರ್ಣನೆಗಳಲ್ಲಿ ಒಂದು : ಸ್ಥಿರನಾದೇಯಸ್ವರೂಪಂ ಪರನೃಪ ವಸುಧಾಂತಾಕುಳಜ್ಞಂ ಸದೃಷ್ಟಾಂತರವಾಕ್ಯಂ ಸಾಮಭೇದಾದ್ಯತಿಶಯ ವಿದನಗ್ರಾಮ್ಯವೇಷಂ ಸಭಾಭ್ಯಂತರ ನಿಶ್ಶಂಕಂ ಪರಾಶೇಂಗಿತವಿದನೆನಿಪಂ ದೂತನೆಂದಿಂತು ಧಾತ್ರೀಶ್ವರ ಕಾರ್ಯೋದ್ಯೋಗಿಗಳ್ ಬಿತ್ತರಿಪ ಕವಿಗಳಿಂ ಖ್ಯಾತ ದೂತಾಂಗಮಕ್ಕುಂ (ಸೂಕ್ತಿಸು. ೧೬-೧); P ರಾಯಭಾರಿಗಳ ಕಾರ್ಯಗಳನ್ನು ಕುರಿತ ವಿವರಣೆ; ರಾಯಭಾರಿಯಲ್ಲಿರಬೇಕಾದ ಸ್ಥಿರತೆ, ಔದಾರ್ಯ, ಶತ್ರುರಾಜ್ಯದ ಒಳಗಿನ ತೊಂದರೆಗಳನ್ನು ತಿಳಿಯುವಿಕೆ ದೃಷ್ಟಾಂತಸಹಿತವಾಗಿ ಭಾಷಣ ಮಾಡುವ ಚಾತುರ್ಯ, ಚತುರೋಪಾಯಗಳ ಆಳವಾದ ಜ್ಞಾನ, ನಾಗರಿಕವಾದ ವೇಷಭೂಷಣ, ಮಹಾಸಭೆಗಳ ನಡುವೆ ನಿಶ್ಚಂಚಲವಾದ ಅಭಿಪ್ರಾಯವನ್ನು ಹೊಂದಿರುವಿಕೆ, ಇತರ ರಾಜರ ಅಂತರಂಗದ ಉದ್ದೇಶಗ್ರಹಣಶಕ್ತಿ, ಸಹಜಪ್ರಜ್ಞೆ, ಅನೇಕ ಭಾಷೆಗಳ ಜ್ಞಾನ, ದಕ್ಷತೆ, ನೋಟದಿಂದಲೇ ಇತರರನ್ನು ಗೆಲ್ಲಬಲ್ಲ ಶಕ್ತಿ, ಕೋಪರಾಹಿತ್ಯ ಮುಂತಾದುವೆಲ್ಲ ಇದ್ದರೆ ಅಂತಹವನನ್ನು ನಿಜವಾದ ದೂತನೆಂದು ಕರೆಯುತ್ತಾರೆ. ಕಾವ್ಯಗಳಲ್ಲಿ ಬರಬೇಕಾದ ಹದಿನೆಂಟು ವರ್ಣನೆಗಳಲ್ಲಿ ಇವುಗಳನ್ನು ಕುರಿತ ವರ್ಣನೆಯೂ ಒಂದು. ಅದನ್ನು ದೂತಾಂಗವೆಂದು ಕರೆಯುತ್ತಾರೆ. [ ದೂತ + ಅಂಗ ]

**ದೂತಾವಾಸ** (ನಾ). ರಾಯಭಾರಿಯ ವಾಸಸ್ಥಾನ; ನಿಯೋಗಿಯ ಮನೆ : ಮಾಸ್ಕೋದಲ್ಲಿರುವ ಅಮೆರಿಕ ದೂತಾವಾಸದ ಮುಂಗಡೆ ಪ್ರದರ್ಶನ (ಬಸಂಕ. ೧೧-೨-೬೩; ೫-೭). [ ದೂತ + ಆವಾಸ ]

**ದೂತಿ** (ನಾ). ೧. ಸೇವಕಿ; ಗೌಡಿತಿ. ೨. [ಕಾವ್ಯವಿ] ಶೃಂಗಾರ ಸನ್ನಿವೇಶಗಳ ನಿರೂಪಣೆಯಲ್ಲಿ ಕವಿಗಳು ಹೇಳುವ ನಾಲ್ಕು ಬಗೆಯ ಪರಿಚಾರಿಕೆಯರಲ್ಲಿ ಒಂದು ಬಗೆ; (ಅಂತರಂಗದ ವಿಷಯಗಳನ್ನು ಹೇಳಬಹುದಾದ) ಸಖಿ ಗೆಳತಿ: "ಸಂಚಾರಿಯೆನೆ ದೂತಿಯಕ್ಕುಂ" (ಮಂಗರಾ. ೯೦-೫); ನವಪಲ್ಲವಗಳಂತೆ ಸರಾಗಂಗಳಾದ ದೂತೀವಚನಂಗಳ್ ಕಾಂತಾಜನಕ್ಕೆ ಕರ್ಣಪೂರಂಗಳಾಗೆಯುಂ (ಕಾದಂಪೂ. ೫೧೩); ದೂತೀಪ್ರೇಷಣಕೃತ ಸಂಕೇತಾದಿಗಳೊಂದುಮಿಲ್ಲ (ಲೀಲಾವ. ೧೦-೩೮); ಬಳಿಕ ಅಭಿಸಾರಿಕೆ ಚತುರಿಕೆ ಸಹಸಂಚಾರಿಕೆ ದೂತಿಯರೆಂಬ ಚತುರ್ವಿಧ ಸಖಿಯರಿಂ (ವಿವೇಕ. ೨೨೯); ಯಾಮವು ಕಳೆದರು ಬರಲಿಲ್ಲವಾತನು ದೂತಿಯೆ ಹೋಗೋಣ ಏಳು (ಇಂಚಾಪ. ೧೭೭-೨೨). ೩. ಸಮಾಚಾರವನ್ನು ತಲುಪಿಸುವ ಹೆಂಗಸು : "ದೂತೀ, ಸಂಚಾರಿಕಾ – ಈ ೨ ದೂದವಿ" (ಹಲಾಯು. ೮೧-೩೨೭). ೪. ತಲೆಹಿಡುಕಿ; ಕುಂಟಣಿ: ನೆರೆಯ ಮುಂದುಕಿ ಕನ್ನೆದೊತ್ತು . . . ಕುಂಟಿಯೆಂಬ ಪೆಣ್ಗಳರಸಿ ಕೇಳು ದೂತಿಯರ್ಕಳಪ್ಪುದೇ ದಿಟಂ (ಜನವ. ೧೩-೨). [ ಸಂ. ದೂತೀ ]

**ದೂತಿಕೆ** (ನಾ). ದೂತಿ; ದೂದವಿ: "ದೂತೀ, ಸಂಚಾರಿಕಾ–೨ ದೂತಿಕೆಯ ಹೆಸರುಗಳು" (ಸಿದ್ಧಾಂಶಿ. ೧೭೨). [ ಸಂ. ದೂತಿಕಾ ]

**ದೂತೀಜಲ್ಪ** (ನಾ). ದೂತಿಯ ನುಡಿ : ಕಿವಿವುಗೆ ನುಡಿದೊಡಂಗೊಂಡು ಪೋಪುದುಂ ದಕ್ಷಿಣನವಳ ದೂತೀಜಲ್ಪಂ [ಪಾಠಾಂ. ದೂತಿಕಾಕಲ್ಪಂ] ವಿಸ್ಪಷ್ಟಾರ್ಥಮಾದುದೆಂದುಮಲ್ಲಿಂ ತಳರ್ದು ರಾಜಭವನಾಭಿಮುಖನಾಗಿ (ಚಂದ್ರಪು. ೮-೯೦ ವ). [ ಸಂ. ]

**ದೂತೀಯ** 'ದಂಷೀಯ' ನೋ.

**ದೂತು** 'ದೂದು' ನೋ.

**ದೂತ್ಕೃತ** (ನಾ). [ಕಾಮಶಾ] ರತಿಕ್ರೀಡೆಯ ಒಂದು ಧ್ವನಿ : ಸೀತ್ಕೃತಂ ಹೂಂಕೃತಂ . . . ದೂ[ಪಾಠಾಂ. ಹೂ]ತ್ಕೃತಂ ಶ್ವಸಿತಮುರುರಾತ್ಕೃತಂ ಎನಿಪೀ ಚಮತ್ಕೃತಿಯನಱಿದು ರಮಿಸುವನೆ ಚದುರಂ (ಜನವ. ೮-೫೦).
[ ಸಂ. ]

**ದೂತ್ಯ** (ನಾ). ೧. ರಾಯಭಾರಿಯ ಉದ್ಯೋಗ,- ಸ್ಥಾನ; ನಿಯೋಗಿಯ ಅಧಿಕಾರ. ೨. ದೂತನ ಕೆಲಸ; ರಾಯಭಾರ : "ದೂತ್ಯಂ,(ದೌತ್ಯಂ) ತದ್ಭಾವಕರ್ಮಣೋಃ, ದೂತಭಾವಕ್ಕೂ ದೂತಕೃತ್ಯಕ್ಕೂ ಹೆಸರು. ದೂತನಾಗುವಿಕೆ, ದೂತನು ಮಾಡತಕ್ಕ ಕೆಲಸ, ಇವುಗಳು" (ಸಿದ್ಧಾಂಶಿ. ೨೩೯). ೩. ಸುದ್ದಿ; ವರ್ತಮಾನ; ಸಮಾಚಾರ. 'ದೌತ್ಯ' ಪರಾ. [ ಸಂ. ]

**ದೂದ** (ನಾ). ಸುದ್ದಿಯನ್ನು ಒಯ್ಯುವವನು; ವಾರ್ತಾವಾಹಕ; ದೂತ : ಇನಿಯನಟ್ಟಿದ ದೂದರ ಸೀಯನಪ್ಪ ಮಾತಿನ ರಸದೊಳ್ ಕೊನರ್ವುದು ತಳಿರ್ವುದು . . . ನಲ್ಮೆಯೆಂಬ ನಂದನವನಮೋಪರೊಳ್ (ಪಂಪಭಾ. ೪-೧೦೨); ತೆಂಗಾಳಿಯೆಂಬ ದೂದನಂ ಕಳೆದು . . . ನಮ್ಮ ಪೆಱೆಯಂ ತಡೆಯದೆ ಬಿಡಿಸಿಕೊಂಡು ಬಾಯೆಂದೊಡೆ (ಕಬ್ಬಿಕಾ. ೧೩೦).
[ <ಸಂ. ದೂತ ]

**ದೂದಗ, ದೂದವ** (ನಾ). ದೂತ; ಕುಂಟಣಿಗ : ಬೋಳೈಸಿ ತೆತ್ತು ಕಾವನ ಕೇಳಿಯೊಳನುವೆತ್ತು ಪೊರೆವ ಪುರುಳಿಗನಂ ತಾಂ ಮೇಳೈಸುವ ದೂದ[ಪಾಠಾಂ. ದು]ಗನಿಂ ಸೂಳೆಗಮುಪರಬ್ಬೆಯರ್ಗಮಪ್ಪುದು ಪಬ್ಬಂ (ಚಿಕವಿ. ೬-೧೧೬). **ದೂದವ** : "ಸೂಟ್ಗಿರೆವನೆನಲ್ಕೆ ದೂದವಂ [ಪಾಠಾಂ. ದೂದಂ]" (ಚತುನಿ. ೬. I, ೪೫); ಓತು ಮಾತಡಕಲೊಂದಿದ ದೂದವರಿಲ್ಲ ನೆಟ್ಟನಪ್ಪುದಱಿನದಿಂತರಣ್ಯರುದಿತಂ ವಲಮೆನ್ನೊಲವಿಂದು ಮಕ್ತಿಯಾ (ಪಂಪಭಾ. ೪-೭೯); ತಪ್ಪದು ಮಾ[ತು] ದೂದವರ ಕೆಯ್ಯೊಳೆ ಕಾಲ್ವಿಡಿದಟ್ಟ ಕಣ್ಣ ನೀರ್ ತಪ್ಪುವು (ಪಂಪಭಾ. ೪-೯೯). [ <ಸಂ. ದೂತಕ ]

**ದೂದಟ್ಟು, ದೂತಟ್ಟು** (ಕ್ರಿ). ೧. ಸಮಾಚಾರವನ್ನು ಕಳುಹಿಸು; ಸುದ್ದಿಯನ್ನು ತಿಳಿಸು : ಸುವಸ್ತುವಾಹನವ ಸಡಗರದಿ ತೆಗೆಕೊಂಡು . . . ಮೋಘಕೂಟದ ಕಡೆವೊಳಲ ಹೊಕ್ಕಿರ್ದು ದೂದಟ್ಟಿದನು ಪುರವರ್ಗೆ (ಸಾಳ್ವಭಾ. ೩೭-೫೦). ೨. ರಾಯಭಾರವನ್ನು ಮಾಡಲು ಕಳುಹಿಸು : ಆ ನಾರದನನೆ ದಿವಿಜಾರಾಜಂಗೆ ದೂದಟ್ಟಿ (ಜಗವಿ. ೧೩-೩೨ ವ); ಬಹುಶಾಖದಶೋಕಾನೋಕಹಮೆಸೆದುದು ಮುನಿಯ ಪೆಜಗೆ ನೆಟಲಾಗೆ ಮಾನಸ್ಮೃಹೆಯಿಂದಷ್ಟಮಹಾಪ್ರಾತಿಹಾರ್ಯತರನೆರೆಯಲೆಂದು ದೂದಟ್ಟಿದ

ಪೊಲ್ (ಅನಂಪು. ೨-೪೭); ಪುದುವಾಟ್ಟರೊಳ್ ಪಗೆಯಂ ದೂದಟ್ಟೆಯುಂ, ತಾಂ ಪಿಡಿದಿರ್ಪರೊಳ್ ಕಾವನಂ ಕಾವಲ್ಮಾಡಿಯುಂ ನೋಟಮಾಟಂಗಳ್ಗೆ ತೋಱಿದನಲ್ತೆ ! (ರಾಮಾಶ್ವ. ೪೫-೮). ೩. ಕಂಟಣಿಯ ಕೆಲಸಕ್ಕೆ ಕಳುಹಿಸು : ಮೋಹಧನವಮಂ ಮುಂದಿಟ್ಟು ದಲ್ ತೃಷ್ಣೆ ಲಂಪಟೆ ಬೆನ್ನಿಂ ಬಿಡದೊಲ್ದೊಲ್ದೊಮನೆಯುಂ ದೂದಟ್ಟಿ ದುರ್ಬುದ್ಧಿಯಂ. (ಶಾಂತಿಪು. ೭-೭೭) : ನೃಪಂ ಬೆಂಬಿಟ್ಟುಂ ದೂದಟ್ಟೆಯುಂ ಬಾರಂ (ಶಮದ. ೨೩೮ ಪ್ರಯೋ) ; ವೇದಾಗಮವನೊರೆದ ವಾಮದೇವನನೆ ಬೆಲೆವೆಣ್ಣಡೆಗೆ ದೂದಟ್ಟ ತನ್ನ ಭಕ್ತಿಯು ಬಲ್ಮೆಯು ಭೂಮಿಯೊಳ್ಪ್ರಕಟಿಸಿದ ಕಡುನೀಱಿಂ (ಸೌಂದಪು. ೨-೩೫); ನಂಬಿ ದೂದಟ್ಟಿ ಕಾಳ್ಗಿಲಸಂಗ್ಯೆಸಿದನಯ್ಯೊ ದೇಸಿಗನಿವಂ ತಾಯುಳ್ಳೊಡಿಂತಪ್ಪನೇ (ವೃಷವಿ. ೯-೧೦೬). **ದೂತಟ್ಟು** : ೨. ಮಱುಜೂಜಂ ಕುಡುವೇಟ್ಟುದಾಂ ರವಣಮಂ ಬೇಟ್ಟಂತುಟಂ ತಂದೆ ನೆಂದಱಿಪಲ್ಕೊರ್ವ ಕಠೋರವಾಕ್ಯಮುಖನಂ ದೂತಟ್ಟೆ (ಜಳಕಂ. ೭೩೪).

[ ದೂದು + ಅಟ್ಟು₂ ]

**ದೂದಪೇಡಾ** (ನಾ). ಹಾಲಿನಿಂದ ತಯಾರಿಸಿದ ಒಂದು ಬಗೆಯ ಸಿಹಿತಿಂಡಿ: ಪರೀಕ್ಷೆಯಲ್ಲಿ ಮೊದಲನೇ ದರ್ಜೆಯಲ್ಲಿ ತೇರ್ಗಡೆಯಾದುದರಿಂದ ಅವಳು ತನ್ನ ಗೆಳತಿಯರಿಗೆಲ್ಲಾ ದೂದಪೇಡಾ ಹಂಚಿದಳು (ರೂಢಿ).

[ ←ಮರಾ. ದೂಧ್‌ಪೇಢಾ ]

**ದೂದಫೇಣಿ** (ನಾ). ಹಾಲಿನಲ್ಲಿ ಬೇಯಿಂಸಿ ತಯಾರಿಸಿದ ಒಂದು ಬಗೆಯ ಸಿಹಿತಿಂಡಿ,–ಫೇಣಿ : (ಸ್ಯಾಂಡರ್). [ ←ಹಿಂ. ದೂಧ್‌ಫೇನೀ ]

**ದೂದವ** 'ದೂದಗ' ನೋ.

**ದೂದವಿ** (ನಾ). ೧. ದೂತಿ; ಸಮಾಚಾರವನ್ನು ತಿಳಿಸುವವಳು,–ತಲುಪಿಸುವವಳು: ಪಿಂದಾಂ ಬಂದಪೆನೆಂಬಿದಂ ನರರ್ಗೆ ನೀಂ ಪೇೞೆಂದು ಮಾರ್ಕಾಂತಕಂ ನಿಂದ್ಮಾಂಗಂ ಜರೆಯೆಂಬ ದೂದವಿಯುಮಂ ಮುಂದಟ್ಟ (ಬಾಳಪು. ೫-೩೫). ೨. ತಲೆಹಿಡುಕಿ ; ಕಂಟಣಿ : "ಸಂಚಾರಿಕೆ ತಾಂ ದೂದವಿಯಭಿಸಾರಿಕೆ ಸಂಕೇತನಕ್ಕೆ ಪೋಪವಳಕ್ಕುಂ" (ವಸ್ತುಕೋ. ೫೩-೭); ಒರ್ವಳ್ ತನ್ನ ನಲ್ಲನಲ್ಲಿಗೆ ದೂದುವೋಗಿ ಬಂದ ದೂದವಿಗೇಗೆಯ್ವ ತೆಱನುಮನಱಿಯದೆ ಪದೆದು ಪಡೆಮಾತಂ ಬೆಸಗೊ[ಳ್ವುದಂ] ಕಂಡು (ಪಂಶಭಾ. ೪-೧೦೦ ವ) ; ಬರ ಪಾರದೆ ದೂದವಿಯರ ಹರಿಸದೆ . . . ಮನವೊಲ್ದಾಗಳ್ನೆರೆಯಲ್ಲೊರೆಕೊಳ್ಳ ರತಮ ಸಂಕಲ್ಪರತಂ (ಕಾದಂಉ. ೩೧೮) ; ಅನ್ನೆಗಂ ನೆರೆವಮನೆಯ ನಾವಿದನ ಪೆಂಡತಿಯಪ್ಪ ದೂದವಿ ಪಾದರಿಗನಂ ಸಂಕೇತಸ್ಥಾನದೊಳಿರಿಸಿ ಪರಿತಂದು (ಪಂಚತಂ. ೭೫-೨) ; ಅವರ ದೂದವಿಯರ ಲಲ್ಲೆವೆರಸಿದ ಮೆಲ್ನುಡಿಯೆ ಕರ್ಣಪೂರಮಾಗೆಯುಂ (ಮಲ್ಲಿಪು. ೩-೪೨ ವ) ; ಅವನ ಕಾದಲಳ ದೂದವಿ ಬಂದು ಪೊಡೆವಟ್ಟು ಪೊರ್ದಿ ಕಂಳ್ಗಿರ್ದು (ಚಂದ್ರಪು. ೮-೮೨ ವ) ; ಮುದುಗರಡಿಯ ಮಱು–ದೊವಲಂದದೆ ಕರಿಯಂ . . . ಎಂದೊಡೆ ದೂದವಿಗವಳಿತಂದಳ್ (ಯಶೋಚ. ೨-೪೧); ಪಾರದೆ ಬರ್ಪ ದೂದವಿಯರಂ ತವಕಂ ತವೆ ಮಿಕ್ಕು ನೀವಿಯೊಳ್ ಚಾರುಕಳಾಪಮಂ ನಿಲಿಸುತುಂ ದೆಸೆಯಂ ನಡೆ ನೋಡುತುಂ . . . ಜಾರೆಯರೆಯ್ದುತಿರ್ದರುಪಕಾಂತರನಂದು ಮಹಾಂಧಕಾರದೊಳ್ (ಕುಸುಮಾ. ೪-೩೫) ; ಉನ್ನತಪ್ರೌಢನಂಗನೆಗೆ ವಿತ್ತಂಗುಡದೆ ಚೆನ್ನನುಡಿ ಗೂಟಂಗಳಿಂದೆ ಕಾಲಂ ಕಳೆವುದನ್ನೋಡಿ ಕಾಯ್ದು ದೂದವಿ . . . ಇಂತೆಂದಳು (ಭಾವಚಿಂ. ೭-೨೪) ; ಬಯಸಿದ ನರರೊಳವರ ತಂದು ನೆರೆಯಿಸುವರು ದೂದವಿಯರು (ಕುರಾಸಾಂ. ೨೯-೧೦೦).

[ ದೂದವ (<ದೂದಗ) + – ಇ₂ ]

**ದೂದವಿಗೆಲಸ** (ನಾ). ದೂತಿಯ ಕಾರ್ಯ; ಕಂಟಣಿಯ ಕೆಲಸ : ಶಿವಶಂಭುಶಂಕರನ ದೂದವಿಗೆಲಸಕೆ ತೆರಳಿಚಿದ ದುಷ್ಕರ್ಮಿ (ಸೌಂದಪು. ೧೭-೨೮). [ ದೂದವಿ + ಕೆಲಸ ]

**ದೂದಿ₁** (ನಾ). ೧. (ಶುದ್ಧಿ ಮಾಡಿದ) ಹತ್ತಿ ; ಅರಳೆ : "ದೂದಿ–ತೂಲೀ =ಹತ್ತಿ" (ತದ್ಭಕೋ. ೨೦). ೨. (ಬೆಂಕಿಯನ್ನು ಹೊತ್ತಿಸಲು ಉಪಯೋಗಿಸುವ) ಬೂರಗದ ಹತ್ತಿ ಮತ್ತು ಅದರ ವಂಶ "ದೂದಿ= ತೀವ್ರವಾಗಿ ಬೆಂಕಿ ಹತ್ತುವದೊಂದು ಪದಾರ್ಥ" (ಗಂಗಾಪು. ೩೫೭) ; "ದೂದಿ–ಕಿಡಿ ಹಿಡಿಯುವ ಹಿಂಜರ ; ಅರಳೆ" (ಜಾನಕೋ. ೭) ; ಕೆಂಡದೊಡಿಗೆಗೆಳಸುವ ದೂದಿಯೊಟ್ಟಿಲಂತೆ (ವೀಶೈಪು. ೩-೨-೧೦).

[ ದೇ.? ತೆಲು. ದೂದಿ ]

**ದೂದಿ₂** (ನಾ). ಸಮಾಚಾರವನ್ನು ತಿಳಿಸುವವಳು; ದೂದವಿ ; ದೂತಿ : ತಕಾರಕ್ಕೆ ದಕಾರಂ–ಕೈತವ–ಕೈದವ . . . ದೂತಿ–ದೂದಿ (ಶಮದ ೨೫೫. ಪ್ರಯೋ) ; ದೂತಿ, ದೂದಿ; ಕೈತವ, ಕೈದವ (ಶಬ್ದಾನು. ೧೮೩ ಪ್ರಯೋ).

[ <ಸಂ. ದೂತೀ ]

**ದೂದಿಬೋಯ** (ನಾ). ಒಬ್ಬಾತನ ಹೆಸರು: ದೂದಿಬೋಯಸ್ಯ ಕೌಣ್ಡಿಲ್ಯ ಗೋತ್ರ ಗಬೋತಶರ್ಮ್ಮಣ ಏಕಂಶಃ (ಇಆ. VII, ೧೮೪-೩೭ ; 668).

[ ದೂದಿ? + ಬೋಯ ]

**ದೂದು**, ದೂತಂ (ನಾ). ೧. ಸಮಾಚಾರ ; ಸುದ್ದಿ. 'ದೂದುವೋಗು' ಪರಾ. ೨. ರಾಯಭಾರ ; ನಿಯೋಗ : "ದೂದು . . . ದೌತ್ಯ" (ತದ್ಭಕೋ. ೨೦). 'ದೂದೈದು' ಪರಾ. **ದೂತು**: ೨. ಏನೇನು ವಿಸ್ಮಯವ ನಾಂಗೈದೆ ನಿಷ್ಠುರವ ನೀನಾಡ ಸಲ್ಲದಾದಿಯಲಿ ನಿಮ್ಮಯ್ಯಗೆ ನಿಧಾನದಿಂ ದೂತಿತ್ತು ಬಂದೆಯೆನಲೊಪ್ಪಿ ಪಿತವಾಕ್ಯವೆ ವಿವಾಹವೆನುತ (ಲಕ್ಷ್ಮಿಭಾ. ೧-೨೦-೪೪). [ ದೂದ + – ಉ₄ ]

**ದೂದುಗಾರ** 'ದೂದುಗಾಱ' ನೋ.

**ದೂದುಗಾಱ**, ದೂದುಗಾರ (ನಾ). ಸುದ್ದಿಯನ್ನು ಒಯ್ಯುವವನು ; ದೂತ : ಆ ನುಡಿಗೊಪ್ಪಿ ದೂದುಗಾಱನಲ್ಲಿಂ ತಳರ್ದು ... ಮೆಲ್ಲಮೆಲ್ಲನೆ ತವಸಿಯ ಪೊರೆಗೈತಂದು (ರಾಮಾಶ್ವ. ೫೭-೨೭). **ದೂದುಗಾರ** : ರಾಯಸಮಂ ಬರೆದೊರ್ವ ಪಟುಭಟನ ಕರದೊಳಿಟ್ಟು ಕಳಿಪಲೊಡಮಾ ದೂದಂಗಾರಂ . . . ಬಂದಾಸ್ಥಾನಮಂ ಪೊಕ್ಕು (ಚಂದ್ರಛ್ಬು. ೫-೧೦).

[ ದೂದು + – ಕಾಱ ]

**ದೂದುನಡೆ** (ಕ್ರಿ). ರಾಯಭಾರಕ್ಕಾಗಿ ಹೋಗು; ದೂತಕಾರ್ಯಕ್ಕೆಂದು ಹೋಗು : ಅಂದು ಪಾಂಡವರ ಪಾಳೆಯದಿಂ ಕುರುನಗರಿಗೆ ದೂದುನಡೆದ ಬಟಲ್ಕೆಗಳೆಯಲೆಂದು ಒಯ್ಯನೊತ್ತುವ ಸಿರಿಪೊಡವಿಯರ ಮೆಲ್ಗೈಳ ಸೋಂಕಿಗೆ ನವಿರುಣ್ಮುವ ಕಿಱುದೊಡೆಗಳಂ (ಜಿಕವಂ. ೩೪-೮).

[ ದೂದು + ನಡೆ₁ ]

**ದೂದುಪೋಗು** 'ದೂದುವೋಗು' ನೋ.

**ದೂದುವೋಗು**, ದೂದುಂಪೋಗು (ಕ್ರಿ). ವರ್ತಮಾನ ಕೊಡಲು ಹೋಗು; ಸಂದ್ದಿ ತಿಳಿಸಲು ಹೋಗು : ತನ್ನ ನಲ್ಲನಲ್ಲಿಗೆ ದೂದುವೋಗಿ ಬಂದ ದೂದವಿಗೇಗೆಯ್ವ ತೆಱನುಮನಱಿಯದೆ ಪದೆದು ಪಡೆಮಾತಂ ಬೆಸಗೊ[ಳ್ವುದಂ] ಕಂಡು (ಪಂಶಭಾ. ೪-೧೦೦ ವ). **ದೂದುಪೋಗು** : ಬೇಟದ ಸೂಡಿಂ ಬಾಡಿ ಬಸಂಗೆಟ್ಟುದನಿಂದು ನಿಂದು ಕಾಂತೆಗಱಿಪಿ ಬಱಿಯಟ್ಟುವೆವನಿತೊಂದು ಪೊಟ್ಟು ಸ್ಥಿತಿರ್ಪುದೆಂದು ಸಂಶಯಿಸಿ ದೂದು ಪೋಪವನೆ ಮುಯ್ಯೇರಡಿಗಳೋಡೆ (ರಾಮಾಶ್ವ. ೨೨-೧೩).

[ ದೂದು + ಪೋಗು₁ ]

**ದೂದೈದು** (ಕ್ರಿ). ರಾಯಭಾರ ಮಾಡಲು ಹೋಗು,–ಪ್ರಯಾಣ ಮಾಡು : ಅಂತಪ್ಪ ದುಮಾಗಳುರ್ಕಿನ ಸೊರ್ಕಾಳ್ಕೆನದಿಂ ನೀಳ್ದಂಗದಂ ಗದನಂದಿನ ರಾವಣನೆಡೆಗೆಂತಂತು ಕಡುಸಡಗರದಿಂ ದೂದೈದಿವಂದು ಸಮುಚಿತಾಸನದೊಳ್ ಕುಳ್ಳಿರ್ಪುದುಂ (ರಾಮಾಶ್ವ. ೧೪೨-೭).

[ ದೂದು + ಐದು₁ (<ಎಯ್ದು) ]

**ದೂನ** (ಗು.) ೧. ಸಂತಾಪ ಹೊಂದಿದ; ನೋವಾದ; ಪೀಡೆಗೊಳಗಾದ: ಆ ಲೇಖವಾಹಕರ್ . . . ಆ ವೃತ್ತಾಂತಮಂ ತ್ವರಿತಗತಿ ಬಿನ್ನವಿಸಿದಪ್ಪನೆನ್ನತ್ತಂ ವಿಷಣ್ಣದೂನವದನರಾಗಿರ್ಪುದುಂ (ಕಾದಂಉ. ೬೩೯). ೨. ಬಳಲಿದ; ಆಯಾಸಗೊಂಡ. 'ದೂನಿಸು' ಪರಾ. ೩. ಸುಟ್ಟ; ಕಾಯಿಸಿದ; ತಪ್ತ. [ ಸಂ. ]

**ದೂನಿಕೆ** (ನಾ). ಒಂದು ಬಗೆಯ ಆಭರಣ (?): ಪಟ್ಟಸರವು ದೂನಿಕೆಗಳ ಚಿನ್ನದ ದಾರಿ ಕಟ್ಟಾಣಿ ಪೊನ್ನ ದಾರಿಗಳ (ದೇವಾಂಪು. ೫-೧೦೬). [ ? ]

**ದೂನಿಸು** (ಕ್ರಿ). ೧. ದುಃಖಿಸು; ಶೋಕಪಡು; ಸಂತಾಪ ಹೊಂದು: ದೂನಿಸಿ ಜಾನಿಸಿ ನಿಟ್ಟಸುತಿರ್ದಂ ತಾನದು ಕಾರಣದಿಂ ನಸುನಗೆ ಮಿಗೆ ಯೊಗೆದುದೆನಗೆಯೆನಲು (ಉದ್ಭಟ. ೩-೬೨); ಸುತರು ಸುಮ್ಮಾನದೊಳಿಯ್ಯರುತಿರಲು ದೂನಿಸುತಿದ್ದಿರಿ ನೀವೆಮಗಿದಱ ಸಂಧಾನಗಾಣ ಸದಾಡಿರೆಂದ (ಭರತೇ. ೪೫-೪೫); ದೂನಿಸುತಿರೆ ನಿಮ್ಮ ನಗಿಸಲೇಕಾಗಿ ಹಾಸ್ಯಾನುವಾದದಿ ನಗಿಸಿದೆನೌ ಅನುದರದಿ ಶೋಕವಿಲ್ಲದೆ ತಾಳ್ದೆನೌ ಏನಹುದಿನ್ನಳಲಿದರೆ (ಭರತೇ. ೭೧-೧೧೪). ೨. ಬಳಲು; ಆಯಾಸ ಹೊಂದು: ಬೆಚ್ಚುತ್ತ ಬೆದಱುತ್ತ ದೂನಿಸುತ . . . ಓಡಿದನು (ಸೌಂದಪು. ೧೭-೪೩). [ ದೂನ + – ಇಸು₃ ]

**ದೂಪ** (ನಾ). ೧. ಸುಟ್ಟಾಗ ಸುವಾಸನೆಯನ್ನು ಬೀರುವ (ಹಾಲುಮಡ್ಡಿ, ಸಾಂಬ್ರಾಣಿ ಮುಂತಾದ) ಪರಿಮಳಪದಾರ್ಥ: (೬). ೨. ಸಾಂಬ್ರಾಣಿ ಮೊದಲಾದ ಸುವಾಸನೆಯ ಪದಾರ್ಥಗಳಿಂದ ಹೊರಡುವ ಹೊಗೆ: ಧಕಾರಕ್ಕೆ ದಕಾರಂ–ಔಷಧ–ಔಸದ . . . ಧೂಪ–ದೂಪ (ಶಮದ. ೨೫೫ ಪ್ರಯೋ). ೩. ಒಂದು ಬಗೆಯ ಮರ: ಧೂಪದ ಮರ: ಕೆಲವು ಕಡೆಗಳಲ್ಲಿ ತೇಗ, ನಂದಿ, ಹೆಬ್ಬಲಸು, ಬಲಿಗೆ, ದೂಪ, ಜಂಭೆ . . . ಮುಂತಾದ ಗಗನಚುಂಬಿತ ವೃಕ್ಷಗಳಿದ್ದರೆ ಕೆಲವು ಕಡೆಗಳಲ್ಲಿ ಗರಗಿ, ಬಿದಿರು . . . ಮುಂತಾದ ಗಿಡ ಬಳ್ಳಿ ಪೊದೆಗಳಿದ್ದವು (ಶಂಜಪಂ. ೨).

**ದೂಪದ ಕಡ್ಡಿ**=ಧೂಪಕ್ಕಾಗಿ ಸುಗಂಧವಸ್ತುಗಳಿಂದ ತಯಾರಿಸಿದ ಕಡ್ಡಿ; ಊದುಕಡ್ಡಿ: (೬). **ದೂಪ ಹಾಕು**=೧. ಸುಗಂಧದ್ರವ್ಯಗಳಿಂದ ಹೊಗೆ ಹಾಕು; ಧೂಪ ಹಾಕು: ದೂಪ ಹಾಕಿದರೆ ಪಾಪ ಹೋದೀತೆ? (ಗಾದೆ). ೨. (ಆಲಂ) ಕೆರಳಿಸು; ಉದ್ರೇಕವನ್ನುಂಟುಮಾಡು: ಅಣ್ಣ ತಮ್ಮಂದಿರಲ್ಲಿ ಜಗಳ ತರಲು ಮಾವನು ಕಿರಿಯವನಿಗೆ ಆಗಿಂದಾಗ ದೂಪ ಹಾಕುತ್ತಲಿದ್ದಾನೆ (ರೂಢಿ). [ <ಸಂ. ಧೂಪ ]

**ದೂಪಟ** 'ದುಪ್ಪಟ' ನೋ.

**ದೂಪಾರತಿ**(ನಾ). ೧. ಧೂಪದಿಂದ ಮಾಡುವ ಆರತಿ: ಅರ್ಚಕರು ದೇವರಿಗೆ ದೂಪಾರತಿಯನ್ನು ಮಾಡುತ್ತಿದ್ದಾರೆ (ರೂಢಿ). ೨. ಸುಗಂಧ ವಸ್ತುಗಳಿಂದ ಆರತಿ ಎತ್ತುವುದಕ್ಕೆ ಉಪಯೋಗಿಸುವ ಸಾಧನ; ಧೂಪಾರತಿಯನ್ನು ಮಾಡುವ ಪಾತ್ರೆ,–ಉಪಕರಣ: ಸ್ವಸ್ತಿಶ್ರೀ ನಗರೇಶ್ವರದೇವರಿಗೆ . . . ಸೊಣ್ಣಪ್ಪನು ಕೊಟ್ಟ ಉಪಕರಣ ಹರಿಯಾಣ ಅಡ್ಡಣಿಗೆ ಗಂಪಿನಮಾರತಿ ದೂಪಾರತಿ ಬಟ್ಟಲು ಶಂಕು (ಎಕ. IX, ಬೆಂಗಳೂ. ೯೦-೧೧; ಸು. 1400); ದೂಪಾರತಿಯು ಘಂಟೆಯುಮನುಯ್ಯೆನೂರನಾ ಪದ್ಮವದನೆಯರು ತಂದಿಡರು[ಲು]ವಲವಿನಿಂ ತಾ ಪಿಡಿದು (ನವಪೂ. ೨೦-೨೭). 'ಧೂಪಾರತಿ' ಪರಾ. [ ದೂಪ + ಆರತಿ₁ ]

**ದೂಪಿಸು₁**, ಧೂಪಿಸು₁ (ಕ್ರಿ). ೧. ಬಾಯಾರು; ನೀರಡಿಸು: ಯಯಾತಿ ಬೇಂಟೆಯ ನೆವದಿ ಸೇನಸಹಿತಾರಣ್ಯದೊಳ್ ಬಳಲಿ ದೂಪಿಸಿ ಕೊಳದಿ ನೀರನೀಂಟೆ (ಲಕ್ಷ್ಮೀಭಾ. ೧೫-೮); ವಿಪಿನದೊಳು ಮೃಗಹರಣಕೇಳಿಗಂ ನಡೆತಂದು ಸಂಚರಿಸಿ ದೂಪಿಸಿದರು (ತುರಂಗ. ೧೭-೧೯). ೨. ಸಂತಾಪ ಹೊಂದು; ಸಂಕಟಪಡು: ಹಸಿವು ತೃಷೆ ಬಳಲಿಕೆಗಳಲಿ ದೂ[ಪಾಠಾಂ. ಧೂ]ಪಿಸುತ ಬಂದಳು ಮಾಯೆ ತಾನಲ್ಲಮನನಱಸುತಲಿ (ಪ್ರಭುಲೀ. ೭-೪೪); ಶರತಾಪದಿಂ ದೂಪಿಸುತ ಕೇಳಿದಳ್ (ಜನಮು. ೧೧-೧೪). ೩. ಮೂರ್ಛೆ ಹೊಂದು: ಶೋಕಪ್ರಳಾಪದಿಂ ನರನಳಲುತಿರಲಿತ್ತ ಕರ್ಣಸುತನಟ್ಟಿ ಬಂದಪ್ಪಳಿಸಲು ದೂ[ಪಾಠಾಂ. ಧೂ]ಪಿಸಿ ಧರೆಗೆ ಬಿದ್ದು (ಜೈಮಿಭಾ. ೨೩-೩೦).

**ಧೂಪಿಸು₁**: ೧. ನಡೆದು ಪಡೆ ಧೂಪಿಸಿತು ಬಿಂಜದಿ ಕುಡಿಯೆ ನೀರನು ಕಾಣದಸವಳಿದು (ಕೌಶಿರಾ. ೯-೩೪); ಶರಹತಿಯಲುಱೆ ನೊಂದು ಧೂಪಿಸಿ ತರೆಹರಿಸುವಶ್ವಾಳಿ (ಕುವ್ಯಾಕ. ೨೩-೨೯); ಮನುಮಥನ ಶರಹತಿಗೆ ಧೂಪಿಸುತ ಮೈಮಱೆದರು (ನಿಧಾಗ. ೧೦-೮೦-೩೯).

[ ←ತೆಲು. ದೂಪಿಂಚು ]

**ದೂಪಿಸು₂** (ಕ್ರಿ). (ಸುಗಂಧ ದ್ರವ್ಯಗಳಿಂದ ಹೊಗೆ ಹಾಕಿ) ಪರಿಮಳಿಸುವಂತೆ ಮಾಡು,–ಸುವಾಸನೆ ಬೀರುವಂತೆ ಮಾಡು: ದೂಪಿಸಿದ ಬಿಳಿದುಗುಳನುಟ್ಟನುಲೇಪನಂಗಳ ಹೂಸಿ . . . ಇದಿರಾಯ್ತು ನೃಪಕಟಕ (ಕುವ್ಯಾಗ. ೧-೨೭). [ ದೂಪ + – ಇಸು₃ ]

**ದೂಪೆ** 'ದೂವೆ₁' ನೋ.

**ದೂಬರದಿಂಡಿ** (ನಾ). ದುಂದುವೆಚ್ಚ ಮಾಡುವವಳು; "ದುಂದುಗಾರಿತಿ" (ಜಾನಕೋ. ೭). [ ದೇ.॥ ತಮಿ. ತೂಪ್ಪರತಣ್ಣಿ; ತೆಲು. ದೂಬಬದಿಂಡಿ ]

**ದೂಮರ** 'ತೂಮರು' ನೋ.

**ದೂಮುಕ** 'ದುಮುಕ' ನೋ.

**ದೂಮುಧಾಮು** (ನಾ). ಹಾಳುಮಾಡುವಿಕೆ; ಪೋಲುಮಾಡುವಿಕೆ: (ಸ್ಯಾಂಡರ್). 'ಧಾಮುಧೂಮು' ಪರಾ.

[ ←ಮರಾ. ಹಿಂ. ಧೂಮಧಾಮ್ ]

**ದೂಯಂ** 'ದುಯ್ಯಂ' ನೋ.

**ದೂರ್** 'ದೂಱು₁' ನೋ.

**ದೂರ** (ಗು). ೧. ಸಮೀಪವಲ್ಲದ; ಹತ್ತಿರವಲ್ಲದ. ೨. ದೀರ್ಘವಾದ; ನಿಡಿದಾದ: ಅಂತು ದೂರಾಯುಸ್ಸಾಗರಪಾರಗನಾಗಲೊಡಂ (ಚಂದ್ರಪು. ೯-೫೬ ವ). (ನಾ). ೩. (ಕಾಲ, ಸ್ಥಳ ಮುಂತಾದುವುಗಳಲ್ಲಿ) ಹತ್ತಿರವಲ್ಲದುದು; ಸಮೀಪವಲ್ಲದುದು: "ಗೆಂಟು ವಿಪ್ರಕೃಷ್ಟಂ ದೂರಂ" (ವಸ್ತುಕೋ. ೧೦೯-೬೮); ತಂದೆ ಕಟಿದಟಲ ಬೇಗೆಯೊಳಂ ದೂರದೆ ಬಿರ್ದದೊಂದು ಕಡುಸೇದೆಯೊಳಂ ಬಂದೆನ್ನಂ ಪರವಶತೆಯೊಳೊಂದಿಸಿ ದತ್ತಾಗಳಾ ಪಿಪಾಸೋದ್ರೇಕಂ (ಕಾದಂಪೂ. ೧೮೯); ಅಯ್ಯ ದೂರದಲ್ಲಿರ್ದಹೆಯೆಂದು ಬಾಯಾಱಿ ಬಳಲುತ್ತಿದ್ದೆನಯ್ಯ ನಾನು (ಮಹಾದೇ. ಬ. ೩೮-೮೧); ದೂರದೊಳೆ ನೋಡಿ ಕಂಡು ಪುರೂರವನಿದಪೂರ್ವಮೃಗಮೆ ನುತ್ತಿಸಲಂಬಂ ನಾರಿಯೊಳಿಟ್ಟಂ (ವರ್ಧಪು. ೧೦-೩೦); ದೂರದಿಂ ಪರ್ವತಂ ರಮ್ಯಂ (ಎಕ. VI, ತರೀಕೆ. ೪೫-೬೪; 1196); ತೇರನೆಚ್ಚನು ಕುದುರೆಕಾಱರ ದೂರದಲಿ ಖಂಡಿಸಿದನು (ಕುವ್ಯಾಕ. ೨೦-೨೨); ಇರುಳು ಕತ್ತಲೆಯು ಗವಿ; ಮನೆ ದೂರ; ಕನಿಕರಿಸಿ, ಕೈಹಿಡಿದು ನಡೆಸೆನ್ನನು (ಇಂಗೀತ. ೯೭-೩); ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ (ಗಾದೆ). ೪. ಸೇರದುದು; ಹೊರತಾದುದು; ಎರವಾದುದು: ತನ್ನ ತಾನಱಿದೆನೆಂಬಹಂಕಾರವುಳ್ಳರೆ ನಿಮ್ಮವರಿಗೆ ದೂರ (ಬಸವ. ೬೩೯); ಈ ಗುಣ ಸಂಗನಬಸವಣ್ಣಂಗೆ ದೂರ (ಸರ್ವಪ. ೧೨೦-೬೧೯). ೫. ಎರಡು ಸ್ಥಳಗಳ ನಡುವಿನ ಅಂತರ: ಮಕ್ಕಳ ಮೇಲೆ ಗಮನವಿದ್ದುದರಿಂದ ಕುಂತಿಗೆ ದೂರವೇ ಕಾಣಲಿಲ್ಲ (ವಚಭಾ. ೧೫).

**ದೂರದೂರ** (ದ್ವಿರುಕ್ತಿ): ದೂರದೂರೋಪವಿಷ್ಟಮಾಕವಂಬುಕಬ್ಬಾವಾವಂಸಕಿರಾತವರ್ಷಧರಕಂಚುಕಿಪ್ರಪಂಚೆಯುಮಾಗಿರ್ಪಿನೆಗಂ (ಚಂದ್ರಪು. ೩-೫೦ ವ); ನಿಮ್ಮ ನಿರ್ಮಳರೂಪಮಂ ಕಂಡವರುಗಳ ಬಹು ಪಾಪಸಂಕುಳವಳಿದುಹೋಗವೆ ದೂರದೂರದಲಿ (ಬಸಪು. ೪೭-೩೩); ದೂರ

ದೂರದಿಂದ ಜನರು ಬರುತ್ತಾರೆ (ಮುಂಬಯಿ. ೪-೧೪೨). **ದೂರಣ** = ೧. ಸಮೀಪವಲ್ಲದ ; ದೂರದ : ದೂರಣ ದೇಶದಿಂ ಬಂದವನೀಶಕು ಮಾರರು ನೆರೆದು ನೋಡುತಿದೆ ಮಾರನ ಮದದಾನೆ ನೋಡೇಳು (ಕುರಾಸಾಂ. ೨೧-೪೦); ನೋಡೆಂದು ಸಖಿಜನರು ಕರವೆತ್ತಿ ದೂರಣಂ ತೋರೆ ವೀಕ್ಷಿಸಲು (ನವಮೋ. ೭-೯). ೨. ಬಹುಕಾಲದಿಂದ ನಡೆದು ಬಂದ ; ಬಹಳ ದೀರ್ಘವಾದ : ಚಿರಕಾಲದಿಂ ದೂರಣ ಸ್ನೇಹವೆಮಗೆಂದು ತರಣಿ ತಾಮರೆಯೆಡೆಗೆಯ್ದಿ ಹರುಷದೊಳೊಪ್ಪಿತೆಂದೆನೆ ಚಕ್ರಪರನಾ ಕರಕಮಲ ದೊಳೊಪ್ಪಿದುದು (ಶ್ರೀಪಾಲ. ೧೨-೪೩): ℙ ಇದಂ ಅತ್ತಣ, ಇತ್ತಣ, ಪಡುವಣ, ನಡುವಣ ಎಂಬ ಕನ್ನಡ ಶಬ್ದಗಳ ಸಾದೃಶ್ಯದ ಮೇಲೆ ಮಾಡಿಕೊಂಡ ರೂಪವಿರಬಹುದು. **ದೂರದ ನಂಟ, ದೂರದ ನೆಂಟ** = ಹತ್ತಿರದ ಬಂಧುವಲ್ಲದವನು; ದೂರದ ನೆಂಟಸ್ತಿಕೆಯುಳ್ಳವನು : ದೂರದ ನಂಟರುಂ ಕಂಡರಂತೆ ಸಂಶಯಮಾಗದೆ (ಧರ್ಮಾಮೃ. ೯-೧೯೩) ; ನಾವು ನಿನ್ನ ಮನೆಯಲ್ಲಿ ಯಾರೊ ದೂರದ ನೆಂಟ . . . ಅಂತ ತಗ್ಗಿ ನಡೆಯೋದು ನನ್ನಿಂದಾಗೋದಿಲ್ಲವಲ್ಲ ! (ಸಣ್ಣ.ಕ. IX, ೬೬). **ದೂರದ ಬಳಗ.** = ಹತ್ತಿರವಲ್ಲದ ಸಂಬಂಧ,-ನೆಂಟಸ್ತಿಕೆ : ಅಲ್ಲಿರೋದು ದೂರದ ಬಳಗ ಅವರು ಹೋಗು ಅಂದಾಗ ಹೊರಟುಬರ್ತೀನಿ (ಬನಶಂ. ೧೯೦). **ದೂರದ ಸಂಬಂಧ** = ದೂರದ ಬಳಗ: ಓಬಯ್ಯ ಯಾವುದೋ ಭೂಗತ ವಾಗಿದ್ದ ದೂರದ ಸಂಬಂಧವೊಂದನ್ನು ಸಂಶೋಧನೆಯಿಂದ ಕಂಡುಹಿಡಿದು ಅವಳನ್ನು 'ತಂಗಿ' ಎಂದು ಕರೆಯತೊಡಗಿದ್ದನು (ಕಾನೂರು. ೧೬೦). **ದೂರ ಪಡಿಸು** = ಪರಿಹರಿಸು; ಇಲ್ಲವಾಗಿಸು : ಇದನ್ನೆಲ್ಲಾ ದೂರಪಡಿಸುವುದರಲ್ಲಿ ಕಾವೇರಿ ಸಾಯಿ:ವುದು ಮೇಲು (ಕಾವೇರಿ. ೨೦೩). **ದೂರಪಾರ, ದೂರ ಬಾರ** = ಹತ್ತಿರವಲ್ಲದುದು ; ದೂರ : ನಾವು ನೋಡಿಕೊಂಡು ಬರುವ ದೂರಪಾರ ಏನಿಲ್ಲ (ಸ್ವಪ್ನಹೊ. ೨೮) ; ಮಗಳನ್ನು ದೂರಬಾರ ಕೊಟ್ಟರೆ ಹೋಗಿಬರುವುದು ಕಷ್ಟವಾಗುತ್ತೆ (ರೂಢಿ). **ದೂರಮಾಗು, ದೂರವಾಗು, ದೂರಾಗು** = ೧. ಹತ್ತಿರದಲ್ಲಿರದಿರು ; ಹೆಚ್ಚು ಅಂತರ ಹೊಂದು ; ತೊಲಗು: ಸಾಮಂತಸಂದೋಹಮಾವಸರಭೀತಿಯಿಂ ತೊಲಗಿ ಪೋಗೆಯುಂ ನಿಜನಿಯತಪ್ರದೇಶದಿಂ ಪ್ರತೀಹಾರರತಿದೂರಮಾಗೆಯುಂ (ಮಲ್ಲಿಪು. ೪-೭೪ ವ); ತನುಮುಟ್ಟಿ ಮನಮುಟ್ಟದೆ ದೂರವಾದರಯ್ಯಾ ಬೆಲೆವೆಣ್ಣಿನಂತೆ (ವಚಸಂ. ೩೦೭-೯೦) ; ಸದ್ಭಕ್ತಂಗೆ ಜನನ ಮರಣಂಗಳು ದೂರವಾಗಿರ್ಪು ವಯ್ಯಾ (ಅಖಂಡೇ. ೧೬೧-೨೩) ; ಸಾತ್ವಿಕಸದುಭಕುತಿಯ:ನಟಿ:ಯುದವರ ಸಂಗದಿಂದ ಕೈಲಾಸಕ್ಕೆ ದೂರಾಗಿಪ್ಪರು (ಸವಪಾವ. ೨-೭) ; ಈ ಕರ್ನಾಟಕ ಭಾಗವು ಸಹ್ಯಾದ್ರಿಯಿಂದ ಪೂರ್ವಕ್ಕೆ ಹೆಚ್ಚು ಹೆಚ್ಚು ದೂರಾಗುತ್ತ ಹೋಗು ತ್ತದೆ (ಕಭಾಗ. ೪). ೨. ಅಗಲು ; ಎರವಾಗು; ಸಂಬಂಧವನ್ನು ಕಳೆದು ಕೊಳ್ಳು : ಎಲ್ಲ ತೆಱದಿಂ ನಿಮಗೆ ದೂರವಪ್ಪಂ ದೇವ (ಬಸರ. ೧-೭೪) ; ಇಂದಿರೇಶನ ಅರ್ಚಿಸದಱಿಂದ ಬಹು ನೊಂದು ದೂರಾದೆ ಸದ್ಗತಿಯಿಂದ (ಪುರಂದ. ೧-೦೭೭-೬). ೩. ನಿವಾರಣೆಯಾಗು : ನಾನು ಪತ್ರಿಕೆಯನ್ನು ಉತ್ತಮವಾಗಿ ನಡೆಸಿಕೊಂಡು ಹೋದರೆ ಆರ್ಥಿಕ ಕೊರತೆ ತಾನೇ ದೂರಾ ಗುವದು (ಅಪನಾ. ೨೬). **ದೂರವಿರಿಸು** = ಹತ್ತಿರ ಬರದಂತೆ ಮಾಡು ; ಅಂತರವಿರುವಂತೆ ಮಾಡು : ಸಾಲವೆಂಬುದು ಭಯಂಕರಪಿಶಾಚಿ. ಆದನ್ನು ಆದಷ್ಟು ದೂರವಿರಿಸಬೇಕು (ಆದುಸಾ. ೧೨೪). **ದೂರ ಸರಿ** = ಹತ್ತಿರದಲ್ಲಿರದಿರು ; ಅಂತರವನ್ನು ಹೆಚ್ಚಿಸು : ಬುದ್ಧಿಯ ಸೆಣಸಾಟ ಮೇಲುಗೈ ಆಗಿ ವಾಸ್ತವಿಕ ನಿಲುವಿನಿಂದ ದೂರ ಸರಿಯುವರು (ದ್ಯಾವಿವಿ. ೬೮). **ದೂರ ಸಾರು** = ದೂರಸರಿ : ಕೈಕಟ್ಟಿ ಲಕ್ಷಿಸದೆ ದೂರ ಸಾರಿದೆಯಾ ? ಕೈಕೊಟ್ಟು ಬರಹೇಳಿ ಸಾಸಮಾಡಿದೆಯಾ ? (ಕವಿಪು. ೩೭-೬). **ದೂರಾ ದ್ದೂರ** = ಸಮೀಪವಲ್ಲದುದು; ಹೆಚ್ಚು ಅಂತರವಿರುವುದು : ದೂರಾ ದ್ದೂರದ ನೆಲನಾವುದುಯಿದು (ಬದ್ಧಪ್ರ. ೩೦-೭೪೮). [ ಸಂ. ]

**ದೂರಂಬೋಗು,** ದೂರಪೋಗು, ದೂರಹೋಗು (ಕ್ರಿ). ಸಮೀಪದಲ್ಲಿರ ದಿರು ; ತೊಲಗು : "ಕಟಿಂದಿಂ = ಸತ್ತಂ ; ದೂರಂಬೋದಂ ; ಕಯ್ನಾ ಱಿದಿಂ" (ಶಮದ. ಪರಿ. ೧). **ದೂರಪೋಗು :** "ತೊಱಲ್ - ದೂರ ಪೋದುದು" (ಚತುನಿ.ಕ. I, ೬೬). **ದೂರಹೋಗು:** ದೂರಹೋದವರಿಂದು ಬರುವರೆ, ಎಂದು ಬರುವ ನಿರೀಕ್ಷೆಯು ? (ನೆಲಮು. ೧೧-೮) ; ಅವಳು ದೂರಹೋದುದು ಒಳ್ಳೆಯದಾಯಿತು (ಹೂಹಣ್ಣು. ೧೯೩).

[ ದೂರ + ಪೋಗು$_1$ ]

**ದೂರಂಮಾಡು,** ದೂರಮಾಡು (ಕ್ರಿ). ೧. ದೂರಹೋಗುವಂತೆ ಮಾಡು ; ಹತ್ತಿರವಿರದಂತೆ ಮಾಡು ; ತ್ಯಜಿಸು : ಪೂರ್ವಾರ್ಜಿತ ಪ್ರಾಪ್ತಿಯಿಂ ದಾರಿದ್ರ್ಯಂ ಧನಮೆಂಬೆರಳ್ಮನಿಕುಂ ಮತ್ತೇಕೆ ಧೀರತ್ವಮಂ ದೂರಂಮಾಡಿ ಮನಂ ಸದಾ ಕುದಿವುದೋ (ರತ್ನಾಶ. ೪೭). **ದೂರಮಾಡು:** ೨. ಇಲ್ಲದಂತೆ ಮಾಡು ; ನಿವಾರಿಸು ; ಕಳೆ : ಪರಿಹರಿಸು : ನನ್ನ ಕಷ್ಟ ವನ್ನು ದೂರಮಾಡುವುದಕ್ಕಾಗಿ (ಮುಂಬಯಿ. ೪-೧೦೭) ; ಆದ ತಪ್ಪು ತಿಳಿವಳಿಕೆಯನ್ನು ದೂರಮಾಡಿ ಸರಿಯಾದ ವಿಚಾರಸರಣಿಯೊಂದಕ್ಕೆ ಎರಡೂ ಪಕ್ಷಗಳು ಬರಬಹುದು (ಅಪನಾ. ೧೩೨). [ ದೂರ + ಮಾಡು$_1$ ]

**ದೂರಗ** (ಗು). ೧. ಸಮೀಪವಲ್ಲದ ; ಹತ್ತಿರವಲ್ಲದ. (ನಾ). ೨. ದೂರ ಹೋಗುವಂಥದು. [ ಸಂ. ]

**ದೂರಗತ** (ಗು). ದೂರ ಹೊರಟುಹೋದ : ಕೃಷ್ಣವರ್ಣದ ಅವಳ ಮಾಲುಗಣ್ಣುಗಳು ಕ್ಷಣ ಮಾತ್ರ ಅವನ ಮುಖದಲ್ಲಿ ನಾಟಿದ್ದು, ಅನಂತರ ದೂರಗತವಾದುವು (ಪುನರು. ೩೨೨). [ ಸಂ. ]

**ದೂರಗತೆ** (ನಾ). ಸಮೀಪವರ್ತಿಯಲ್ಲದವಳು ; ಹತ್ತಿರವಿಲ್ಲದವಳು: ಇನ್ನು ಮೇಲೆ ನಿನಗೆ ನಾನು ದೂರಗತೆಯಾಗುವೆನಲ್ಲವೆ ? (ಶಾಕುಂತ. ೩೪-೧೯). [ ಸಂ. ದೂರಗತಾ ]

**ದೂರಗಾಮಿ** (ನಾ). ೧. ದೂರ ಹೋಗುವವನು : ಊರಿನಿಂದ ದೂರ ಗಾಮಿಯಾಗುವ ನನಗೆ ಈ ವ್ಯವಹಾರವೆಲ್ಲ ಏಕೆ? (ರೂಢಿ). ೨. ದೂರ ಹೋಗುವುದು,-ಚಲಿಸುವುದು : ಮನುಷ್ಯನ ಕಣ್ಣೂ ಕಿವಿಯೂ ಸಮಾನವಾದ ದೂರಗಾಮಿಯಾಗಿದ್ದರೆ ಮನುಷ್ಯನ ದುಃಖಪ್ರವಾಹವು ಹೆಚ್ಚುತ್ತಿದ್ದಿತೋ, ಕಡಿಮೆಯಾಗುತ್ತಿದ್ದಿತೋ ಅದನ್ನಾರು ಹೇಳಬಲ್ಲರು ? (ಕಪಾಕುಂ. ೧೨೨). ೩. ಬಾಣ ; ಶರ. [ ಸಂ. ದೂರಗಾಮಿನ್ ]

**ದೂರಗೆಯ್ಯು** 'ದೂರಗೈ' ನೋ.

**ದೂರಗೈ,** ದೂರಗೆಯ್ಯು (ಕ್ರಿ). ೧. ಬಿಡು ; ತ್ಯಜಿಸು : ಕೆಟ್ಟ ಅಭ್ಯಾಸ ಗಳನ್ನು ದೂರಗೈಯದಿದ್ದರೆ ಬಾಳು ಸಂತೋಷವಾಗಿರುವುದಿಲ್ಲ (ರೂಢಿ). ೨. ಪರಿಹರಿಸು; ಕಳೆ; ನಿವಾರಿಸು: ಸಜ್ಜನಸಂಗವು ತೋರಿ ಸುಗತಿಯನು ದೂರಗೈವುದು ಕುಮತಿಯನು (ಇಂಚಾಪ. ೭೪-೬೦). **ದೂರಗೆಯ್ಯು :** ೧. ಸಣ್ಣಪುಟ್ಟ ಮಾತಿಗೆ ಸ್ನೇಹಿತರನ್ನು ದೂರಗೆಯ್ಯುವುದು ಸರಿಯಲ್ಲ (ರೂಢಿ). [ ದೂರ + ಗೈ (<ಕೆಯ್$_1$) ]

**ದೂರಘ್ರಾಣ** (ನಾ). [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು : ಆವುದೊಂದು ದೂರದಿಂ ಬಂದ ಗಂಧಮನಿಂತುಟೆಂದಱಿವುದು ದೂರಘ್ರಾಣಮೆಂಬುದು (ಪಸಾರ. ೩೯೬). [ ದೂರ + ಘ್ರಾಣ ]

**ದೂರತೋಪಾಸ್ತ** (ನಾ). ದುಸ್ತರವಾದುದು ; ಅಸಾಧ್ಯವಾದುದು. ನೀವು ಕನ್ಯಕುಬ್ಜದ ಸಾರ್ವಭೌಮನನ್ನು ಪರಾಭವಗೊಳಿಸಿದ ಹೊರತು, ಆ ದೇಶಗಳು ನಿಮ್ಮ ಮಾಂಡಲಿಕತ್ವವನ್ನು ವಹಿಸುವುದು ದೂರತೋಪಾಸ್ತ ವಿರುವದು (ಈಶಸಂ. ೧೪) ; ಇನ್ನು ಉಪಾಯಾಂತರಗಳಿಂದ ಹಿಡಿಯುವ ದಂತೂ ದೂರತೋಪಾಸ್ತವೇ ಸರಿ (ಕಳ್ಳಕಾ. ೪೬) ; ℙ 'ದೂರತಃ+ ಅಪಾಸ್ತ' ಎಂದು ಬಿಡಿಸಬಹುದಾದ ಸಂಸ್ಕೃತಶಬ್ದಕ್ಕೆ 'ದೂರ ದಿಂದಲೇ ತಳ್ಳಲಾದುದು' ಎಂಬ ಅರ್ಥವಿದೆ. [ ? ]

**ದೂರದರ್ಶಕ** (ಗು). ೧. ದೂರದಲ್ಲಿರುವುದನ್ನು ತೋರಿಸುವ,-ಕಾಣುವಂತೆ ಮಾಡುವ. 'ದೂರದರ್ಶಕಯಂತ್ರ' ಪರಾ. (ನಾ). ೨. ದೂರದ ವಸ್ತುಗಳು ಹತ್ತಿರದಲ್ಲಿದ್ದಂತೆಯೂ, ಹೆಚ್ಚು ಗಾತ್ರದಲ್ಲಿಯೂ ಕಾಣುವಂತೆ ಮಾಡುವ ಸಲಕರಣೆ,-ಯಂತ್ರ ; ದುರ್ಬೀನು : ದೂರದರ್ಶಕ ; ದುರ್ಬೀನು (Telescope. ಪತ್ರಿನಿ. ೬೨) ; ದೂರದರ್ಶಕವನ್ನು ಅಂತರಿಕ್ಷಕ್ಕೆ ತಿರುಗಿಸಿದುದರಿಂದ ಅದುವರೆಗೂ ಕೇವಲ ಕಲ್ಪನಾವಿಲಾಸದಿಂದ ಸೃಷ್ಟಿಸಲ್ಪಟ್ಟಿದ್ದ ಹಲವಾರು . . . ಕಟ್ಟುಕಥೆಗಳೂ ಆಧಾರರಹಿತವಾದುವು (ಶುಕ್ರಾರ. ೧೮ ಪೀಠಿಕೆ) ; ದೂರದರ್ಶಕದ (Telescope) ಮೂಲಕ ಶನಿಗ್ರಹದ ಬಳೆಗಳನ್ನು ಕೆಲವು ಪಂಡಿತರಿಗೆ ತೋರಿಸಿದಾಗ ಅವರಲ್ಲೊಬ್ಬರು, "ಹೀಗೆ ಬಳೆಗಳು ಕಾಣುವುದು ದೃಷ್ಟಿ ದೋಷವೋ, ಈ ದೂರದರ್ಶಕದ ಗಾಜಿನ ದೋಷವೋ?" ಎಂದು ಕೇಳಿದರು (ಭೌತವಿ. ೨೦). [ ದೂರ + ದರ್ಶಕ ]

**ದೂರದರ್ಶಕಯಂತ್ರ** (ನಾ). = ದೂರದರ್ಶಕ ೨ : ದೂರದರ್ಶಕಯಂತ್ರ ದಕ್ಷಿಯೊಳ್ ಕಣ್ಣಿಟ್ಟು, ಗಗನವಿಜ್ಞಾನಿ ತಾಂ ರಾತ್ರಿಯಾಕಾಶದಲಿ ಕಾಣ್ಬೊಂದು ತಾರಾಗರ್ಭದಂತೆ (ಶ್ರೀರಾಮಾ. ೧೧-೨೭೩); ಗೆಲೀಲಿಯೊ ತನ್ನ ಪ್ರಖ್ಯಾತವಾದ ದೂರದರ್ಶಕಯಂತ್ರ ಅಥವಾ ದುರ್ಬೀನನ್ನು (Telescope) ತಯಾರಿಸಿದನು (ಗಣಿಚ. ೧೦೩) ; ಆಕಾಶವನ್ನು ನೋಡುವುದಕ್ಕೆ ಒಂದು ಸರಳವಾದ ದೂರದರ್ಶಕ (Telescope) ಯಂತ್ರವನ್ನು ತಯಾರಿಸಿದ (ಆಕಾಶ. ೫). [ ದೂರದರ್ಶಕ + ಯಂತ್ರ ]

**ದೂರದರ್ಶನ** (ನಾ). ೧. ದೂರದಿಂದ ನೋಡುವಿಕೆ ; ದೂರದಿಂದ ಕಾಣುವುದು. ೨. ತಡೆಗಳಿಂದ ಅಥವಾ ಹೆಚ್ಚು ಅಂತರದಿಂದ ಮರೆಯಾಗಿರುವ ವಸ್ತುಗಳನ್ನು ಅಥವಾ ದೇಶಾಂತರಗಳಲ್ಲಿ ನಡೆಯುವ ಸಂಗತಿಗಳನ್ನು ನಿಸ್ತಂತು ತರಂಗಗಳ ಅಥವಾ ಇತರ ವೈಜ್ಞಾನಿಕ ಸಾಧನೆಗಳ ಸಹಾಯದಿಂದ ನೋಡುವುದು ; ಟೆಲಿವಿಷನ್ನು ದೂರ(ವಸ್ತು)ದರ್ಶನ; ಪರೋಕ್ಷವೀಕ್ಷಣ (Television. ೩೦ಕನಿ). ೩. ಮುಂದಾಲೋಚನೆ ; ದೀರ್ಘದೃಷ್ಟಿ. ೪. ಪಂಡಿತ ; ವಿದ್ವಾಂಸ. ೫. ಹದ್ದು. ೬. [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು : ಅಯ್ದುವರ್ಣಂಗಳೊಳಾವುದೊಂದು ದೂರದಿಂ ಬಂದ ವರ್ಣಮನಿಂತುಟೆಂದಱಿವುದು ದೂರದರ್ಶನಮೆಂಬುದು (ಪಸಾರ. ೩೮೬). 'ಬುದ್ಧಿಋದ್ಧಿ' ಪರಾ. [ ದೂರ + ದರ್ಶನ ]

**ದೂರದರ್ಶಿ** (ಗು). ೧. ದೂರದೃಷ್ಟಿಯುಳ್ಳ ; ಮುಂದಾಲೋಚನೆಯನ್ನು ಮಾಡುವ; ವಿವೇಕವುಳ್ಳ. (ನಾ). ೨. ದೂರದರ್ಶಕಯಂತ್ರ: ದೂರದರ್ಶಿಯು (Telescope) ಹಾಲೆಂಡಿನಲ್ಲಿ ೧೬೪೫ರಲ್ಲಿ ತಯಾರಾಯಿತು (ಶಿಲ್ಪನಾ. ೦೫೨) ; ನಮ್ಮ ದೃಷ್ಟಿಯ ಶಕ್ತಿಯನ್ನು ದೂರದರ್ಶಿಗಳು ಇನ್ನೂ ಹೆಚ್ಚಿಸಿವೆ (ಬಾಲಪ್ರ. I, ೫). ೩. ದೂರಾಲೋಚನೆಯುಳ್ಳವನು ; ವಿವೇಕಿ ; ಪಂಡಿತ : "ದೂರದರ್ಶಿ, ದೀರ್ಘದರ್ಶೀ – ಈ ೨ ದೂರವಾದ ಹಿಂದುಮುಂದು ಯೋಚನೆಯುಳ್ಳವನ ಹೆಸರು" (ಸಿದ್ಧಾಂತಿ. ೨೦೩). [ ಸಂ. ದೂರದರ್ಶಿನ್ ]

**ದೂರದರ್ಶಿತ್ವ** (ನಾ). ದೂರದೃಷ್ಟಿ ; ಮುಂದಾಲೋಚನೆ ; ವಿವೇಕ : ಬಹುಶ್ರುತನ ಮಂತ್ರನಿಶ್ಚಯಮುಮಂ ದೂರದರ್ಶಿತ್ವಮುಮಂ ಪ್ರತಿಭಾಗುಣಮುಮಂ . . . ಸಚಿವಸಮೂಹಂ ಮಚ್ಚಿ (ಶಾಂತಿಪು. ೨-೭೦ ವ) ; ಸರ್. ಎಂ. ವಿಶ್ವೇಶ್ವರಯ್ಯನವರ ದೂರದರ್ಶಿತ್ವದಿಂದಲೂ . . . ದೇಶವು ಹೊಸರೂಪವನ್ನೇ ತಾಳಿತು (ಮೈವಾಸು. ೨೦). [ ಸಂ. ]

**ದೂರದರ್ಶಿನಿ** (ನಾ). ೧. ಮುಂದಾಲೋಚನೆ ಮಾಡುವವಳು ; ವಿವೇಕಿ : ಆಗ ದೂರದರ್ಶಿನಿಯಾದ ನಿದಾನಬುದ್ಧಿಯ ಹಿರಿಯ ಹೆಂಗುಸು ಎಂದರೆ ವಿನುತೆಯೇ (ದೂರಸ. ೦೫೫). ೨. ದೂರದರ್ಶಕಯಂತ್ರ : ದೂರದರ್ಶಿನಿಯ ನೋಟಕ್ಕೆ ಎಲ್ಲ ಜ್ಯೋತಿರ್ಮೇಘಗಳೂ ಬಹು ಸುಂದರ (ನಕ್ಷತ್ರ. ೫) ; ದೂರದರ್ಶಿನಿಯಿಂದ ನೋಡುವೆನಾ ಅನಂತದ ಅಂಚನು (ಶಿಲಾಲಿ. ೩೭-೧೩). [ ಸಂ. ದೂರದರ್ಶಿನೀ ]

**ದೂರದೃಷ್ಟಿ** (ನಾ). ೧. ದೂರದ ನೋಟ. ೨. = ದೂರದರ್ಶಿತ್ವ : ಸಾಮಾನುಗಳನ್ನು ಕೊಂಡುಕೊಳ್ಳುವಾಗ ನೀವು ಕೊಡುವ ಬೆಲೆಗೆ ಸರಿಯಾದ ಪ್ರತಿಫಲ ಸಿಗಬೇಕೆಂದರೆ ಕೊಂಡುಕೊಳ್ಳುವವನಲ್ಲಿ ದೂರದೃಷ್ಟಿಯಿರಬೇಕು (ಅಡುಸಾ. ೦೩೪). ೩. ಅರುವತ್ತು ನಾಲ್ಕು ವಿದ್ಯೆಗಳಲ್ಲಿ ಒಂದು ; ಮುಂದಾಗುವುದನ್ನು ತಿಳಿಯುವುದು : ಅಕ್ಷರ ಲೆಕ್ಕ . . . ದೂರದೃಷ್ಟಿ ದೂರಶ್ರವಣ . . . ಮಂತ್ರ ತಂತ್ರಸಿದ್ಧಿ ಇವೆಲ್ಲವ ಕಲಿತಡೇನೋ (ವಚಸಂ. ೦೩-೪೨); P ಪರಂಪರಾಗತವಾದ ಅರುವತ್ತು ನಾಲ್ಕು ವಿದ್ಯೆಗಳಲ್ಲಿ ಇದರ ಉಲ್ಲೇಖವಿಲ್ಲ. ೪. ದೃಷ್ಟಿಯ ದೋಷಗಳಲ್ಲಿ ಒಂದು; ದೂರದ ವಸ್ತುಗಳು ಮಾತ್ರ ಸ್ಫುಟವಾಗಿ ಕಾಣುವ ಕಣ್ಣಿನ ಕುಂದು: ದೂರದೃಷ್ಟಿಯುಳ್ಳ ಕಣ್ಣು ಅದೇ ದೂರದ ವಸ್ತುಗಳನ್ನು ಸ್ಪಷ್ಟವಾಗಿ ನೋಡಬೇಕಾಗಿದ್ದರೆ ಹೆಚ್ಚು ತ್ರಾಸಪಡಬೇಕು (ನಿಮ್ಮಿದ್ಯ. ೬೪). 'ಚಾಳೀಸು' ಪರಾ. [ ದೂರ + ದೃಷ್ಟಿ ]

**ದೂರದೆಸೆ** (ನಾ). (ಒಂದು ಪ್ರದೇಶದಿಂದ) ಅಂತರ ಅಧಿಕವಾಗಿರುವ ಪ್ರದೇಶ,-ಸ್ಥಳ : ಕದಡುಬಗೆ ತಿಳಿಯಾಗಿ, ದೂರದೆಸೆ ಬಳಿಯಾಗಿ, . . . ನುಡಿದಳವಳೆಂದು (ಹೊಂಗಳು. ೧೨-೨೨). [ ದೂರ + ದೆಸೆ₂ ]

**ದೂರದೇಶ** (ನಾ). ಬಹಳ ಅಂತರವಿರುವ ನಾಡು,-ಸೀಮೆ : ದೂರದೇಶದೊಳಿರ್ದು ಬಂದೆ (ಧರ್ಮಾಮೃ. ೦೩-೪೦). [ ದೂರ + ದೇಶ ]

**ದೂರನಿರ್ದೇಶನ** (ನಾ). ಅಧಿಕವಾದ ಅಂತರದಲ್ಲಿದ್ದೂ ಯಂತ್ರಗಳ ಕಾರ್ಯವನ್ನು ಮಾರ್ಗದರ್ಶನ ಮಾಡಬಲ್ಲ ಶಕ್ತಿ,-ತಿಳಿವು : ಬಿಲ್ಲು ಬಾಣಗಳಿಂದ ಯುದ್ಧ ಮಾಡುತ್ತಿದ್ದ ಕಾಲಕ್ಕೂ ಅಣುಬಾಂಬುಗಳನ್ನು ದೂರನಿರ್ದೇಶನದಿಂದ ಹಾರಿಸುವ ಈಗಿನ ಕಾಲಕ್ಕೂ ಇರುವ ವ್ಯತ್ಯಾಸವೇ ಅನ್ನಿ (ಮನೋನಂ. ೦೩೪). [ ದೂರ + ನಿರ್ದೇಶನ ]

**ದೂರಪಥ** (ನಾ). ಬಹಳ ಅಂತರವುಳ್ಳ ಮಾರ್ಗದ ಸ್ಥಳ ; ಹತ್ತಿರವಲ್ಲದ ಜಾಗ : ದೂರಪಥಕ್ಕೆ ಪೋಪೆನೆನುತುಂ ಪ್ರಿಯಳಲ್ಲಿಗೆ ಬಂದು ಕೇಳಲ್ (ಮಲ್ಲಕಾ. ೦೫-೨೦೩). [ ದೂರ + ಪಥ ]

**ದೂರಪಾತಂ** (ಅ). ದೂರದಿಂದ ಗುರಿಯಿಟ್ಟು : ಒರ್ವನನೆ ಲಕ್ಷ್ಯಂಮಾಡಿ ಶರಾಸಾರದಿಂ ದೂರಪಾತಮಿಸುವುದುಂ (ಶಾಂತಿಪು. ೪-೮ ವ). [ ಸಂ. ]

**ದೂರಪೋಗು** 'ದೂರಂಬೋಗು' ನೋ.

**ದೂರಪ್ರತಿ** (ನಾ). (ಕಾಲ ಕಳೆದ ಕಾರಣದಿಂದ ಅಥವಾ ಅನೇಕ ಸಲ ಪ್ರತಿಮಾಡಿದ ಪರಿಣಾಮವಾಗಿ) ಬಹಳ ವ್ಯತ್ಯಾಸಹೊಂದಿದ ನಕಲು,-ಪ್ರತಿ : ಹಸ್ತಪ್ರತಿಸಂಗ್ರಹಗಳಲ್ಲಿ ನಮಗೆ ಇಂದು ಕಾಣಸಿಗುತ್ತಿರುವ ಪ್ರತಿಗಳು, ಸ್ವಹಸ್ತಪ್ರತಿಗಳಿಂದ ಇಲ್ಲವೆ ಅವುಗಳ ಸದ್ಯಪ್ರತಿ (Immediate Copy) ಅಥವಾ ದೂರಪ್ರತಿ(Distant Copy)ಗಳಿಂದ ಎಂಥ ಪರಿಸ್ಥಿತಿಯಲ್ಲಿ ನಕಲುಗೊಂಡವು ಎಂಬುದನ್ನು ನಾವು ಕೇವಲ ಊಹಿಸಬೇಕಷ್ಟೆ ! (ಭಾರಪ. ೨೮). [ ದೂರ + ಪ್ರತಿ ]

**ದೂರಪ್ರಾಚ್ಯ** (ಗು). ೧. ತೀರ ಪೂರ್ವದಲ್ಲಿರುವ : ದೂರಪ್ರಾಚ್ಯ ದೇಶಗಳಿಗೆ ಹೋಗಿ ಇದೇ ತರಹದ ಸಂಶೋಧನೆ ಮಾಡಿ ಆ ವಿವರಗಳನ್ನೂ ತಮ್ಮ ಪುಸ್ತಕಕ್ಕೆ ಸೇರಿಸುವುದಾಗಿ ಹೇಳಿದರು (ಮಾರ್ಗದ. ೦೫೫). (ನಾ). ೨. ಜಪಾನ್ ಮೊದಲಾದ ತೀರ ಪೂರ್ವದ ದೇಶ. [ದೂರ+ಪ್ರಾಚ್ಯ]

**ದೂರಪ್ರಿಯ** (ನಾ). ದಕ್ಕದ ಪ್ರಿಯ ; ದೊರಕದ ನಲ್ಲ : ನೀರೇಜನಿಯೆನಿತಲರ್ದೀಂ ಸಾರದೆ ಪೋದಂ ದಿನೇಶನಂತೆನಗಂ ನೀಂ ದೂರಪ್ರಿಯನಾದೈ ಸಂಸಾರಂ ವ್ಯಥೆಯಾದುದೆಂದು ಬೆಚ್ಚನೆ ಸುಯ್ದಳ್ (ಅರ್ಧನೇ. ೩-೨೭). [ ದೂರ + ಪ್ರಿಯ ]

**ದೂರಫಲ** (ನಾ). ೧. ಬಹಳ ಕಾಲದ ಬಳಿಕ ಆಗುವ ಪರಿಣಾಮ; ತುಂಬ ತಡವಾಗಿ ಬಂದೊದಗುವ ಫಲ: ಇವು ದೂರಫಲಂಗಳ್ ಸ್ವಪ್ನವಿಶೇಷಂಗಳ್ (ಆದಿಪು. ೧೫-೪೪). ೨. ಹೆಚ್ಚು ಅಂತರವಿರುವ ಸಂತತಿ, – ಸಂತಾನ: ತಮ್ಮನು ಅಣ್ಣನಿಂದ ಹದಿನೈದು ವರ್ಷಗಳಷ್ಟು ಅಂತರದಲ್ಲಿ ಹುಟ್ಟಿದ ದೂರಫಲವಾಗಿದ್ದನು (ರೂಢಿ). [ದೂರ+ಫಲ$_1$]

**ದೂರಭವ್ಯ** (ನಾ). [ಜೈನ] ಸಮ್ಯಕ್ತ್ವಕ್ಕೆ ಇನ್ನೂ ದೂರವಾಗಿರುವವನು; ಸಿದ್ಧಿಯನ್ನು ಸಾಧಿಸದಿರುವವನು: ಆತನತ್ಯುನ್ನತಬೋಧನೀಂ ಬೆಸಸಭವ್ಯನೋ ಭವ್ಯನೋ ದೂರಭವ್ಯನೋ (ಆದಿಪು. ೨-೩೪); ಎಮ್ಮರಸಂಗಾನೆನಿತು ಧರ್ಮಶ್ರವಣಂಗೆಯ್ದೊಡಂ ಭೋಗಂಗಳ್ಗೆ ವಿಮುಖನಾಗಂ ಆತನಭವ್ಯನೊ ಭವ್ಯನೊ ದೂರಭವ್ಯನೊ ನಿಮ್ಮಡಿಗಳೆ ತಿಳಿಯೆ ಬೆಸಸಿಂ (ಚಾವುಂಪು. ೧೫); ವಾಯುಭೂತಿಚರನಪ್ಪ ಜೀವನೀಗಳಭವ್ಯನೋ ಭವ್ಯನೊ ಮತ್ತಂ ದೂರಭವ್ಯನೋ ಬೆಸಸಿಮೆಂದಂ (ಸುಕುಮಾ. ೫-೨೨); ಕಣ್ಬೇನೆ ಮಾಣ್ದಂದು ಕಾಣ್ಬಕ್ಷಿರೋಗಿಯಂತೆ ದೂರಭವ್ಯಂ ಕರ್ಮೋಪಶಮಮಾದಾಗಳಱಿಗುಂ (ಪಸಾರ. II, ೪೫೨). 'ಭವ್ಯ' ಪರಾ.

[ ದೂರ + ಭವ್ಯ ]

**ದೂರಮಾಡಿಸು** (ಕ್ರಿ). ದೂರವಾಗುವಂತೆ ಮಾಡು; ನಿವಾರಿಸು; ಪರಿಹರಿಸು: ನೆರೆಯುವರ ಕಷ್ಟಗಳನ್ನು ದೂರಮಾಡಿಸಿದನು (ಮುಂಬಯಿ. ೫-೨೦೬). [ ದೂರಮಾಡು (<ದೂರಂಮಾಡು) + – ಇಸು$_3$ ]

**ದೂರಮಾಡು** 'ದೂರಂಮಾಡು' ನೋ.

**ದೂರಮಾಪಕ** (ನಾ). ಒಂದು ಪ್ರದೇಶ ಅಥವಾ ವಸ್ತುವಿನೊಂದಿಗೆ ಇರುವ ಅಂತರವನ್ನು ಅಳೆಯುವ ಯಂತ್ರಸಾಧನ: ದೂರದಲ್ಲಿರುವ ಯಂತ್ರಸಲಕರಣೆಯ ಅಳತೆ ಸಂಖ್ಯೆಗಳನ್ನು ವಿದ್ಯುತ್ಪ್ರವಾಹದ ಸಹಾಯದಿಂದ ದಾಖಲಿಡುವ ಸಲಕರಣೆ; (ಮೋಜಣಿ, ಫಿರಂಗಿ ಅಭ್ಯಾಸ, ಮೊ.ಗಳಲ್ಲಿ) ದೂರಗಳನ್ನು ಗೊತ್ತುಮಾಡಲು ಉಪಯೋಗಿಸುವ ಸಲಕರಣೆ; ದೂರಮಾಪಕ (Telemeter. ಇಂಕನಿ). [ ದೂರ + ಮಾಪಕ ]

**ದೂರಮುದ್ರಕ** (ನಾ). ಯಾಂತ್ರಿಕ ನಿರ್ದೇಶನದಿಂದ ಹತ್ತಿರವಿರದ ಪ್ರದೇಶಕ್ಕೆ ಕಳುಹಿಸಿದ ವರ್ತಮಾನ, ಸೂಚನೆ, ನಿರೂಪಣೆ ಮುಂತಾದುವನ್ನು ಮುದ್ರಿಸುವ ಸಾಧನ: "ದೂರಮುದ್ರಕ; ಟೆಲಿಪ್ರಿಂಟರ್" (Tele-Printer. ಪತ್ರಿನಿ. ೮೨). [ ದೂರ + ಮುದ್ರಕ ]

**ದೂರಮುದ್ರಣ** (ನಾ). = ದೂರಮುದ್ರಕ: (Tele-Type. ಪತ್ರಿನಿ. ೮೨).

[ ದೂರ + ಮುದ್ರಣ ]

**ದೂರಲೇಖ** (ನಾ). ವಿದ್ಯುಚ್ಛಕ್ತಿಯ ಸಹಾಯದಿಂದ ವರ್ತಮಾನಗಳನ್ನು ಸಂಕೇತಗಳ ಮೂಲಕ ಹತ್ತಿರದಲ್ಲಿರುವವರಿಗೆ ತಿಳಿಸುವ ಯಾಂತ್ರಿಕ ಸಾಧನ: ಸಮಾಚಾರ ಕಳುಹಿಸಲು ಉಪಯೋಗಿಸುವ ದೂರಲೇಖದ (ಟೆಲಿಗ್ರಾಫ್)ಭಾಗ (Communicator. ಇಂಕನಿ).

[ ದೂರ + ಲೇಖ ]

**ದೂರಮಂದೆ** (ನಾ). ತುಂಬ ಪುಕ್ಕಲ; ತೀರ ಅಂಜುಕುಳಿಯಾದ ವ್ಯಕ್ತಿ; ಮಹಾಭೀತ: ಶ್ರುತವಿಲ್ಲದ ಲಿಂಗಿಯಂತೆ ಮೂರ್ಖನಾಗದೆ ದೂರಮಂದೆಯಂತೆ ತಲ್ಲಣಿಸದೆ . . . [ ಧರ್ಮದೊಳ್ ] ನಿಶ್ಶಂಕನುಮಪ್ಪುದು (ಧರ್ಮಾಮೃ. ೪-೪೬). [ ದೂರ + ಮಂದೆ ]

**ದೂರವಾಣಿ** (ನಾ). ವಿದ್ಯುಚ್ಛಕ್ತಿಯ ಮೂಲಕ ಧ್ವನಿಯನ್ನು, ಮುಖ್ಯವಾಗಿ ಮಾತುಗಳನ್ನು ಸಾಗಿಸುವ ಸಲಕರಣೆ; ಟೆಲಿಫೋನು: ಮೊದಲು ದೂರವಾಣಿಯ ಮುಂದೆ ಕುಳಿತು ವಿಮಾನಕ್ಷೇತ್ರದ ಅಧಿಕಾರಿಯನ್ನು ವಿಚಾರಿಸಿದೆ (ನಂಟರು. ೧೦೩); ಟಪಾಲು ಮತ್ತು ತಂತಿ, ದೂರವಾಣಿ ನಿಸ್ತಂತುವಾರ್ತೆ ಮತ್ತು ಪ್ರಸಾರಣ ಮತ್ತು ಇತರ ಅದೇ ರೂಪದ ಸಮಾಚಾರ ಸಾಧನ (ಭಾಧಾನ. ೨೮೦). [ ದೂರ + ವಾಣಿ$_1$ ]

**ದೂರವಾರ್ತಾವ್ಯವಸ್ಥೆ** (ನಾ). ದೂರದೂರದ ಪ್ರದೇಶಗಳಿಗೆ (ದೂರಲೇಖ, ದೂರವಾಣಿ ಮುಂತಾದುವುಗಳ ಮೂಲಕ) ಸಮಾಚಾರಗಳನ್ನು ತಲುಪಿಸಲು ಮಾಡಿರುವ ವ್ಯವಸ್ಥೆ: ಇಂತಹ ಸಂಕ್ಷೋಭಗಳಿಂದ ಟೆಲಿಗ್ರಾಫ್, ಟೆಲಿಫೋನ್, ರೇಡಿಯೋ ಮುಂತಾದ ದೂರವಾರ್ತಾವ್ಯವಸ್ಥೆಗಳಿಗೆಲ್ಲಾ ಅಡಚಣೆಯುಂಟಾಗುವುದು (ಭೌತವಿ. ३२२).

[ ಸಂ. ದೂರವಾರ್ತಾವ್ಯವಸ್ಥಾ ]

**ದೂರವೀಕ್ಷಣ** (ನಾ). ೧. ದೂರದಲ್ಲಿರುವ ವಸ್ತುಗಳನ್ನು ನೋಡುವುದು. 'ದೂರವೀಕ್ಷಣಯಂತ್ರ' ಪರಾ. ೨. ಕಣ್ಣಿಗೆ ಕಾಣದ ವಿಷಯಗಳನ್ನು ಪ್ರತ್ಯಕ್ಷವಾಗಿ ಕಂಡಂತೆ ಮನಸ್ಸಿನಲ್ಲಿ ಗ್ರಹಿಸುವುದು; ಅತೀಂದ್ರಿಯ ದೃಷ್ಟಿ: ಅವಧಿಜ್ಞಾನ ಆಧುನಿಕ ಮನಶ್ಶಾಸ್ತ್ರದಲ್ಲಿ ದೂರವೀಕ್ಷಣ (Clairvoyance) ವೆಂದು ಕರೆದಿರುವ ಶಕ್ತಿಯನ್ನು ಹೋಲುತ್ತದೆ. ದೂರದಲ್ಲಿ ನಡೆದಿರುವ ಅಥವಾ ಗತಕಾಲದಲ್ಲಿ ನಡೆದಿರುವ ಸಂದರ್ಭಗಳನ್ನು ಕುಳಿತ ಕಡೆಯಿಂದಲೇ, ಕಣ್ಣಿನ ಸಹಾಯವಿಲ್ಲದೆಯೇ ಒಂದು ದೃಶ್ಯದಂತೆ ನೋಡುವುದು-ದೂರವೀಕ್ಷಣಶಕ್ತಿಯಿಂದ ಸಾಧ್ಯ (ತತ್ವಪ್ರಾ. ೧೪೮).

[ ದೂರ + ವೀಕ್ಷಣ ]

**ದೂರವೀಕ್ಷಣಯಂತ್ರ** (ನಾ). ದೂರದರ್ಶಕಯಂತ್ರ: ಇದು ದೂರವೀಕ್ಷಣಯಂತ್ರ (Telescope) ಇರಬಹುದೇ ಎಂಬ ಸಂಶಯ ಬರುತ್ತದೆ (ಮ್ಯಾಸು. ೧೦೯). [ ದೂರವೀಕ್ಷಣ + ಯಂತ್ರ ]

**ದೂರವುಳಿ** (ಕ್ರಿ). ಹತ್ತಿರದಲ್ಲಿರದಿರು; ದೂರವಿರು: ಸಂಬಂಧಿಕರು ಅವರ ನಡವಳಿಕೆಯನ್ನು ನೋಡಿ ದೂರವುಳಿದರು (ರೂಢಿ).

[ ದೂರ + ಉಳಿ$_1$ (<ಉಳ್$_1$) ]

**ದೂರಶ್ರವಣ** (ನಾ). ೧. ಅರುವತ್ತುನಾಲ್ಕು ವಿದ್ಯೆಗಳಲ್ಲಿ ಒಂದು; ಹೆಚ್ಚು ಅಂತರದಲ್ಲಿಯ ಧ್ವನಿಯನ್ನು ಕೇಳುವುದು: ಅಕ್ಷರ ಲೆಕ್ಕ . . . ದೂರದೃಷ್ಟಿ ದೂರಶ್ರವಣ . . . ಮಂತ್ರ ತಂತ್ರಸಿದ್ಧಿ ಇವೆಲ್ಲವ ಕಲಿತಡೇನೋ (ವಚಸಂ. ೧೩-೪೨). ☞ ಪರಂಪರಾಗತವಾದ ಅರುವತ್ತುನಾಲ್ಕು ವಿದ್ಯೆಗಳಲ್ಲಿ ಇದರ ಉಲ್ಲೇಖವಿಲ್ಲ. ೨. = ದೂರಶ್ರವಣತ್ವ: ರಾಜಸದ ದಶಸಿದ್ಧಿಯಿದ್ದಿಹವು . . . ಕೇಳನೂರ್ಮಿಯು ಒಂದು ಮತ್ತೆಯು ಕೇಳು ದೂರಶ್ರವಣ ಎರಡದು (ಜ್ಞಾನಸಿಂ. ೨೦-೫೩). ೩. [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು: ದೂರದಿಂ ಬಂದ ಶಬ್ದಮನಿಂತು ಟೆಂದಱಿವುದು ದೂರಶ್ರವಣಮೆಂಬುದು (ಪಸಾರ. ३४೬). 'ಬುದ್ಧಿಋದ್ಧಿ' ಪರಾ. [ ದೂರ + ಶ್ರವಣ$_2$ ]

**ದೂರಶ್ರವಣತ್ವ** (ನಾ). [ಯೋಗ] ರಾಜಸಯೋಗದ ಹತ್ತು ಬಗೆಯ ಸಿದ್ಧಿಗಳಲ್ಲಿ ಒಂದು; ಇರುವ ಕಡೆಯಿಂದಲೇ ದೂರದ ಧ್ವನಿಯನ್ನು ಕೇಳಬಲ್ಲ ಶಕ್ತಿ: ಅನೂರ್ಮಿಮತ್ವ, ದೂರಶ್ರವಣತ್ವ, ದೂರದರ್ಶಿತ್ವ, ಕಾಮರೂಪತ್ವ, ಪರಕಾಯಪ್ರವೇಶಿತ್ವ, ಸ್ವಚ್ಛಂದಮೃತ್ಯುತ್ವ, ದೇವತೆಗಳ ಮತ್ತು ದೇವಕನ್ಯೆಯರ ಸಹಕ್ರೀಡೆಯನ್ನು ನೋಡುವಿಕೆ, ಯಥಾಸಂಕಲ್ಪ ಸಿದ್ಧಿ, ಅಪ್ರತಿಹತವಾದ ಆಜ್ಞಾಶಕ್ತಿ (ಶ್ರೀವತ್ಸ. ೪೮೯). 'ದಶಸಿದ್ಧಿ' ಪರಾ. [ ಸಂ. ]

**ದೂರಸಂಪರ್ಕ** (ನಾ). ದೂರದಲ್ಲಿರುವವರೊಡನೆ ಸಂಭಾಷಿಸಲು ಸಹಾಯ ಮಾಡುವ ಸಾಧನ: (Tele-Communication. ಪತ್ರಿನಿ. ೮೧).

[ ದೂರ + ಸಂಪರ್ಕ ]

**ದೂರಸ್ತ** (ನಾ). ೧. ಹತ್ತಿರಕ್ಕೆ ಬರದವನು; ದೂರವೇ ಉಳಿಯುವವನು. ೨. (ಆಲಂ) ಏರಮಾದವನು; ದೂರವಾದವನು: ಇವರಲ್ಲಿ ನಾವು ಯಾರಾದರೂ ಕಾಣಿಕೆ ತೆಗದುಕೊಂಡರೆ ನಮ್ಮ ಶ್ರೀಸೈಲದ ಸೂರ್ಯಸಿಂಹಾಸನಕೆ ದೂರಸ್ತರು (ಎಕ. VI, ಚಿಕ್ಕಮ. ೧೧೦-೨೩ ; 1702).

[ <ಸಂ. ದೂರಸ್ಥ ]

**ದೂರಸ್ಥ** (ಗು). ೧. ಹೆಚ್ಚು ಅಂತರದಲ್ಲಿರುವ ; ಹತ್ತಿರವಲ್ಲದ. (ನಾ). ೨. ಹೆಚ್ಚು ಅಂತರದಲ್ಲಿರುವುದು ; ಸಮೀಪವಲ್ಲದುದು : ಜಿನತತ್ವಂ ಸ್ಮರತತ್ವಮೆಂಬಿವೆರಡುಂ ದೂರಸ್ಥಂ (ಶಾಂತಿಪು. ೧-೧೬). ೩. (ಯಾವುದಾದರೊಂದು ಸ್ಥಿತಿಯನ್ನು) ಮೀರಿದವನು,–ಅತೀತನಾದವನು : ಅಷ್ಟವಿಧಾರ್ಚನೆಯ ಮಾಡಿ ಒಲಿಸುವೆನೆ ಅಯ್ಯ ನೀನು ಬಹಿರಂಗ ವ್ಯವಹಾರ ದೂರಸ್ಥನು (ಮಹಾದೇ. ಬ. ೧೩-೧೦). [ ಸಂ. ]

**ದೂರಸ್ಪರ್ಶನ** (ನಾ). [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು; ದೂರದಿಂದಲೇ ಸ್ಪರ್ಶಜ್ಞಾನವನ್ನು ಪಡೆಯುವುದು : ಎಂಟು ಸ್ಪರ್ಶಂಗಳೊಳಾವುದೊಂದು ದೂರದಿಂ ಬಂದ ಸ್ಪರ್ಶನಮನಿಂತುಟೆಂದಱಿವುದು ದೂರಸ್ಪರ್ಶನವೆಂಬುದು (ಪಸಾರ. ೩೮೬). 'ಬುದ್ಧಿಋದ್ಧಿ' ಪರಾ. [ ದೂರ + ಸ್ಪರ್ಶನ ]

**ದೂರಹೋಗು** 'ದೂರಂಬೋಗು' ನೋ.

**ದೂರಾನ್ವಯ** (ನಾ). ೧. ಹತ್ತಿರವಲ್ಲದ ಸಂಬಂಧ : ವೈಜ್ಞಾನಿಕ ಪ್ರಭಾವದ ದೂರಾನ್ವಯ ಅಲ್ಲಿದೆ ಎಂದು ಒಪ್ಪಿಕೊಳ್ಳಬಹುದು (ಸುವರ್ಣ. ೨೦೮). ೨. [ವ್ಯಾಕ] ಕಾವ್ಯದಲ್ಲಿ ಶಬ್ದಗಳು ಹತ್ತಿರವಿರದೆ ಇರುವುದರಿಂದ ಅರ್ಥವನ್ನು ಸ್ಪಷ್ಟಗೊಳಿಸಲಾಗದಿರುವಿಕೆ; ದೂರದ ಶಬ್ದವನ್ನು ಅನ್ವಯಕ್ಕಾಗಿ ಹತ್ತಿರಕ್ಕೆ ತರುವುದು ; F ಇದು ಒಂದು ದೋಷ. ನೇಯಂದ ದೋಷ ಎಂದು ಕರೆಯುತ್ತಾರೆ.

[ ದೂರ + ಅನ್ವಯ ]

**ದೂರಾನ್ವಿತ** (ನಾ). ಹತ್ತಿರದ ಸಂಬಂಧವಿಲ್ಲದುದು ; ಹೊಂದಿಕೆಯಾಗದುದು : ವಿರುದ್ಧರಸದ ವಿಭಾವಾದಿಗಳನ್ನು ವರ್ಣಿಸುವುದು ದೂರಾನ್ವಿತವಾದ ವಸ್ತುವಾವುದೋ ಒಂದನ್ನು ಬೆಳೆಸುವುದು . . . ಇವೆಲ್ಲವೂ ರಸದ ವಿರೋಧಕ್ಕೆ ಕಾರಣಗಳಾಗುತ್ತವೆ (ಧ್ವನ್ಯಾಲೋ. ೧೬೩).

[ ದೂರ + ಅನ್ವಿತ ]

**ದೂರಾರಿಷ್ಟ** (ನಾ). ಮುಂದೆ ಉಂಟಾಗುವ ಅಶುಭ,–ಕೇಡು : ಅಂತು ಭರತೇಶ್ವರಂ . . . ಒಂದುದಿವಸಂ ತ್ರಿಯಾಮಾವಿರಾಮದೊಳ್ ಆಶ್ಚರ್ಯಭೂತಂಗಳುಂ ದೂರಾರಿ[ಪಾಠಾಂ. ನಿ]ಷ್ಟಫಲಸೂಚಕಂಗಳುಮಪ್ಪ ಸ್ವಪ್ನಂಗಳಂ ಕಂಡು (ಆದಿಪು. ೧೩-೨೦ ವ). [ ದೂರ + ಅರಿಷ್ಟ ]

**ದೂರಾರ್ಥ** (ನಾ). ೧. ಹತ್ತಿರವಿರದ ವಸ್ತು,–ಪದಾರ್ಥ : (+). ೨. [ಕಾವ್ಯಮೀ] ಪದಗಳಿಂದ ಸಹಜವಾಗಿ ಹೊರಡದ ಅರ್ಥ; ಊಹಿಸಲು ಕಷ್ಟವಾಗುವ ಅರ್ಥ. [ ದೂರ + ಅರ್ಥ ]

**ದೂರಾಲೋಚನೆ** (ನಾ). ಮುಂದಿನದನ್ನು ಯೋಚಿಸಬಲ್ಲ ಶಕ್ತಿ,–ವಿವೇಕ ; ಮುಂದಾಲೋಚನೆ : ಈ ಪ್ರಕಾರವಾಗಿ ದೂರಾಲೋಚನೆಯಿಂದ, ಪರಿಣಾಮ ಪರಿಜ್ಞಾನವನ್ನು ಅರಿತು . . . ಸದಾ ವಾಕ್ಕಿಗೆ ಸಂಸ್ಕಾರವನ್ನು ಮಾಡಿಕೊಳ್ಳುತ್ತಿರಬೇಕು (ಆರ್ಯಧ. ೩೩).

[ ದೂರ + ಆಲೋಚನೆ ]

**ದೂರಾಸ್ವಾದ** (ನಾ). [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು : ಪಂಚರಸಂಗಳೊಳಾವುದೊಂದು ದೂರದಿಂ ಬಂದ ರಸಮನಿಂತುಟೆಂದಱಿವುದು ದೂರಾಸ್ವಾದಮೆಂಬುದು (ಪಸಾರ. ೩೮೬). 'ಬುದ್ಧಿಋದ್ಧಿ' ಪರಾ. [ ದೂರ + ಆಸ್ವಾದ ]

**ದೂರಾಸ್ವಾದನ** (ನಾ). = ದೂರಾಸ್ವಾದ : ಪಂಚರಸಂಗಳೊಳೊಂದೊಂದು ರಸಂ ದೂರದಿಂ ಬಂದುದು ಇಂತುಂಟೆದಱಿವುದು ದೂರಾಸ್ವಾದನವೆಂದಱಿವುದು (ಶ್ರಾವಕಾ. ೯೩-೩). 'ಬುದ್ಧಿಋದ್ಧಿ' ಪರಾ. [ ದೂರ + ಆಸ್ವಾದನ ]

**ದೂರಾಳಿ** (ನಾ). ನಿಂದಿಸುವ ಸ್ವಭಾವದ ವ್ಯಕ್ತಿ ; ಹೀಯಾಳಿಸುವುದೇ ಸ್ವಭಾವವಾದ ವ್ಯಕ್ತಿ : ಕನ್ನಡದ ದೂರಾಳಿಗಳನ್ನು ಎರಡು ಪಂಗಡ ಮಾಡಬಹುದು (ಕನ್ನಸು. I, ೧೩೦). [ದೂರು$_3$ (<ದೂಱು$_2$)+–ಆಳಿ$_3$]

**ದೂರಿ$_1$** (ನಾ). ಬಂಡಿಯ ಎರಡು ಚಕ್ರಗಳನ್ನೂ ಕೂಡಿಸುವ ಸಾಧನ; ಅಚ್ಚುಮರ : ರಥಕ್ಕೆ ಸೇರಿಸತಕ್ಕ ದೂರಿ ಮೊದಲಾದ ಸಾಮಗ್ರಿಗಳನ್ನೂ (ಕೃವಾಉ. ೨೪೪) ; ಗಾಡಿಯ ಎರಡು ಚಕ್ರಗಳನ್ನೂ ಮಧ್ಯದ ದೂರಿಯೊಂದಿಗೆ ಹೊತ್ತುಕೊಂಡು ಹೋಗಿ . . . ನದಿಯ ತೀರದ ಮರಳಿನಲ್ಲಿ ಹೂಳಿದವರುಂಟು (ಬೆಸ್ತಕ. ೩೬).

[ ←ಹಿಂ. ಮರಾ. ಧುರೀ, ಧುರಾ./ಪ್ರಾ. ಧುರೀ./ಸಂ. ಧುರ್ ]

**ದೂರಿ$_2$** (ನಾ). ಎಳೆಯ ಮಕ್ಕಳನ್ನು ಆಡಿಸುವಾಗ ಉಪಯೋಗಿಸುವ ಒಂದು ಪದ ದೂರಿ ದೂರಿ ದುಗ್ಗಲಮ್ಮ (ರೂಢಿ). [ ? ]

**ದೂರಿತ** (ನಾ). ದೂರ ಉಳಿಯುವವನು : ದೂರದೊಳಿರ್ಪೆಯೇಕೆನಲ್ ದೂರಿತರಲ್ತೆ ಪುಷ್ಪವತಿಯಾದಳ ಕಂಡರೆ ನೀತಿಮಾರ್ಗದರ್ (ಮಲ್ಲಿಕಾ. ೪-೬೮೮). [ ಸಂ. ]

**ದೂರಿಸು$_1$** 'ದೂಱಿಸು' ನೋ.

**ದೂರಿಸು$_2$**, ದೂರೈಸು (ಕ್ರಿ). ನಿವಾರಿಸು ; ಪರಿಹರಿಸು : ದೂರಿಸದೆ ನೆನೆದು ಕೂಳುಂ ನೀರುಮನಜ್ಞಾನದಿಂದಮಿರುಳುಂ ಪಗಲುಂ ಸಾರತರ ಪರಮಸೌಖ್ಯಸುಧಾರಸಭರಿತಾತ್ಮತತ್ತ್ವಮಂ ನೆನೆ ಮನದೊಳ್ (ಉಸಾರ. ೪೪-೨೭೦) ; (ಪಸಾರ. ೩೭೦ ನೋ) ; ತಾಂ ವರಸತಿಯ ಸಂಭೋಗದೊಳಮಲಾತ್ಮಸಂವರಿಪೂರ್ವಕಮಾಗಿ ಪುಂವೇದನೀಯ ಕರ್ಮವನು ದೂರಿಸಿದನದೇಂ ವೀತರಾಗನೊ ಭೋಗಿ (ಭರತ. ೧೦-೧೨೩) ; ಆರ ಮೇಲೆಸುಗೆ ದೇವರಿಗೆ ಹೆಂಗಳ ಮೇಲೊ ದೂರಿಸುವಾಳ್ಗಳ ಮೇಲೊ (ಭರತ. ೫೦-೨೫). **ದೂರೈಸು** : ನನ್ನಯ ಚಿಂತೆಯನ್ನು ದೂರೈಸಲಿಚ್ಛಿಸಿ ಕಾಂತೆ ಪ್ರಾಣಗಳಲ್ಲಿ ಸ್ಥಿರವಾಗಿರಿಸಿ ಪ್ರೇಮದಲಿ ಅಂತವನ್ನೈದಿದರು ನನ್ನಯ ಸ್ವಾಂತರಂಗಕೆ ಸುಖವು ತೋರದು (ರಘುವಂ. ೮೪-೬೦).

[ ದೂರ + –ಇಸು$_3$ ]

**ದೂರೀಕರಿಸು** (ಕ್ರಿ). ತ್ಯಜಿಸು ; ಬಿಟ್ಟುಬಿಡು : ಅರಿವನೊತ್ತಿಗನೇಕೆಂದು ನೀನೆನ್ನ ದೂರೀಕರಿಸಬೇಡಮ್ಮ (ಕುರಾಸಾಂ. ೧-೨೪) : ದೇವರನ್ನು ದೂರೀಕರಿಸಿ ಮಿಲ್ಟಿಯವರನ್ನು ದೇವರೆಂದು ತಿಳಿದುಕೊಂಡಂತೆ ಕಾಣುವದು (ಅಮಗಾಂ. ೪) ; ಜಾತಿ ಅಥವಾ ವರ್ಗಭೇದ ಭಾವನೆಗಳನ್ನು ದೂರೀಕರಿಸಿ ಬಡವರೂ ಶ್ರೀಮಂತರೂ, ಹಿರಿಯರೂ ಕಿರಿಯರೂ ಒಂದಾಗಿ ಸೇರುತ್ತಾರೆ (ಭಾರಜಾ. ೪೭) ; ಅವನನ್ನು ದೂರೀಕರಿಸಲು ಆಗ ಅವರಿಗೆ ಇನ್ನೊಂದು ಕಾರಣವೂ ಉದ್ಭವವಾಯಿತು (ನಿಸುತ. ೪೮) ; ಹೊಸಗನ್ನಡಕ್ಕೆ ಸೇರುವುದಿಲ್ಲವೆಂದು ದೂರೀಕರಿಸಬೇಕಾದ ಯಾವ ಪ್ರಯೋಗವೂ ಈ ಪದ್ಯಪಂಕ್ತಿಗಳಲ್ಲಿಲ್ಲ (ಸಮಾಲೋ. ೦೩). [ ದೂರೀಕರಣ$_0$ + –ಇಸು$_3$ ]

**ದೂರೀಕೃತ** (ಗು). ೧. ನಿವಾರಿಸಿದ ; ದೂರಗೊಳಿಸಿದ : ತಾರಪತಿವತ್ಕೀರ್ತಿವಿಹಾರಾ . . . ಪ್ರಭಯಾನಿಜತನುಪೂರಾ ಪೂರಾಶ್ರಿತಹೃತ್ಕ್ಲೇಶವಿದೂರಾ ದೂರೀಕೃತಬಲವಿಸ್ತಾರಾ (ಕವಿರಾ. ೩-೨೩೩) ; ಅತಿವಿಶದಮಣಿಪ್ರದೀಪಿಕೋದ್ಯೋತದೂರೀಕೃತತಮಸ್ತಮದೊಳನೇಕರತ್ನರಚಿತ ಪ್ರತಿಪಾದುಕವಿನ್ಯಸ್ತಕಾಂಚನಮಂಚೋಪಶೋಭಿತದೊಳ್ . . . ಆ ದಂಪತಿಗಳ್ . . . ನಿದ್ರಾರಸವಶಗತರಾದರ್ (ಆದಿಪು. ೫-೨೨ ವ) ; ದೂರೀಕೃತಾರಿಷಡ್ವರ್ಗನುಂ . . . ನಮಿಾಕೃತಸಾಮಂತವರ್ಗನುಮಾಗಿ (ಚಂದ್ರಪು. ೪-೨೮ ವ) ; ದೂರೀಕೃತಾಘಂ ಮಹಿತಜೀವನ್ಮುಕ್ತಮಾನಸನು (ಬಸವು. ೨೯-೨). ೨. ಬೇರ್ಪಡಿಸಿದ ; ಪ್ರತ್ಯೇಕಪಡಿಸಿದ. [ ಸಂ. ]

**ದೂರೀಭೂತ** (ನಾ). ಪ್ರತ್ಯೇಕವಾದುದು ; ಬೇರೆಯಾದುದು : ವ್ಯಂಗ್ಯಾರ್ಥವು ವಾಚ್ಯಾರ್ಥದೊಡನೆ ಕೂಡಿಯೇ ಅನುಭವಕ್ಕೆ ಬರುತ್ತದೆ. ಆದುದರಿಂದಲೇ . . . ವ್ಯಂಗ್ಯಪರಾಮರ್ಶಕಾಲದಲ್ಲಿ ವಾಚ್ಯಬುದ್ಧಿಯು ದೂರೀಭೂತವಾಗುವುದಿಲ್ಲ (ಧ್ವನ್ಯಾಲೋ. ೨೩). [ ಸಂ. ]

**ದೂರು$_1$** 'ದೂಱು$_1$' ನೋ.

**ದೂರು₂** 'ತೂರು₂' ನೋ.

**ದೂರು₃** 'ದೂಱು₂' ನೋ.

**ದೂರು₄** (ನಾ). ಹತ್ತಿರವಲ್ಲದಂದು ; ದೂರ : ದೂರಿಂದ ಕಾಣಿಸುವ ಗ್ರಾಮಂಗಳು ಸುಟ್ಟಂತೆ ತೋರುತ್ತವೆ (ಕಥಾಗ. ೬) ; ಅಗ್ಗೆ ದೂರಿನಿಂದ ಪೈಜಣ, ರುಳಿ, ಗೆಜ್ಜೆ ಸಪ್ಪಳವಾಯಿತು (ವಿಜಯ. ೧೪೪) ; ಮೂದರ ಚಿನ್ನಪ್ಪ ದೂರಿನಲ್ಲಿ ಕೂಗಿಕೊಂಡನು (ಹಳ್ಳಿ.ಬ. ೪). [ <ಸಂ. ದೂರ ]

**ದೂರುಗ** 'ದೂಱುಗ' ನೋ.

**ದೂರೈಸು** 'ದೂರಿಸು₂' ನೋ.

**ದೂರೋತ್ಸಾರಿತ** (ಗು). ಬಹು ಅಂತರದಲ್ಲಿ ಬಿಟ್ಟ ; ದೂರದಲ್ಲಿ ನಿಲ್ಲಿಸಿದ : ಓರ್ವಂ ರಾಜಕುಮಾರಂ ದೂರೋತ್ಸಾರಿತವಾಹನಂ ಸಸಂಭ್ರಮೋಪಗತಪರಿಚಾರಕಸ್ಕಂಧವಿನ್ಯಸ್ತವಾಮಹಸ್ತನಾಗಿ (ಆದಿಪು. ೩-೯೦ ವ) ; ಸಪ್ತಾನೀಕಸಮೇತರಾಗಿ ಗಗನತಳಮನಲಂಕರಿಸಿ ಬಂದು ದೂರೋತ್ಸಾರಿತವಾಹನರಾಗಿ ಸೂರ್ಯಮಿತ್ರಜಿನೇಂದ್ರನಂ ತ್ರಿಃಪ್ರದಕ್ಷಿಣಂ ಗೆಯ್ದು (ಸುಕುಮಾ. ೮-೬೬ ವ) ; ದೂರೋತ್ಸಾರಿತ ವಿಚಿತ್ರಾತಪತ್ರ ವಿವಿಧ ವಾಹನಂ ಬಸದಿಯಂ ಬಲಗೊಂಡು . . . ಬಂದು (ಪಂರಾಮಾ. ೭-೬೯ ವ). [ ದೂರ + ಉತ್ಸಾರಿತ ]

**ದೂರ್ತ** (ಗು). ೧. ಮೋಸದ ; ವಂಚನೆಯ. (ನಾ). ೨. ಮೋಸಗಾರ; ವಂಚಕ : ದೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಪರಿಯೆ (ಧರ್ಮಾಮೃ. ೨-೬೯). 'ದೂರ್ತವಡೆ' ಪರಾ. ೩. ಕಾಮಂಕ ; "ವಿಟ" (ನಾಚಿರಾ. ೬). [ <ಸಂ. ಧೂರ್ತ ]

**ದೂರ್ತವಡೆ** (ನಾ). ಮೋಸಗಾರರ ಗುಂಪು; ವಂಚಕರ ಸಮೂಹ: ಸರ್ವಸ್ವಾಪಹರಣಂ ಮಾಡಿ ತನ್ನೊಡನಿರ್ದ ಕಸವಿಂಗಂ ಕಳುಚಿಂಗಂ ಡಸಿಕಿಂಗಂ ದೂರ್ತವಡೆಗಮುತಿಚಪಳರ್ಗಂ . . . ಕುಡುವನುರ್ಕಿ ಕುಮಾರಂ (ಧರ್ಮಾಮೃ. ೨-೭೦). [ ದೂರ್ತ + ಪಡೆ₂ ]

**ದೂರ್ತು** (ನಾ). ೧. ಮೋಸ ಮಾಡಿಯೂ ನಾಚಿಕೆ ಪಡದಿರುವುದು,– ಸಂಕೋಚಪಡದಿರುವುದು. ೨. ವಂಚಕತನ ; ದುಷ್ಟತೆ ; ಮೋಸಗಾರಿಕೆ : ದೂರುಂ ದೂರ್ತುಂ [ಪಾಠಾಂ. ರ್ಕುಂ] ದುಷ್ಟುಂ ನೂಱುಂಟು (ಮುದತಿ. ೧೦-೩); ಉಣ್ಬರ ಬಾಯೊಳ್ ತಿಣ್ಣನೆ ಕಿರ್ಚಂ ಪುಡಿಯಂ ಮಣ್ಣಂ ಪೊಯ್ದಂತು ಮಾಡಿದ್ದೈ ದೂರ್ತಿಂದಂ (ಧರ್ಮಾಮೃ. ೯-೧೩೬) ; ಕೊಲೆಗೆಯ್ದುವ ದೂರ್ತುಗಳಂ ಪಲವನವರ್ ಚಲದೆ ಮಾಡಿ ನೆಲನಂ ಬಿಸುಟೀ ಕುಲಪತಿಗೆ ಮುಲೆದು (ನೇಮಿಪು. ೧೦-೪೭) ; ದ್ವಿಗುಣಮಾಗದೆ ಮಾಣ್ಬುದೆ ನಿನ್ನ ಧೂ[ದೂ]ರ್ತು (ದಶಕು. ೧೦-೧೧೪). ೩. ವಿಟವೃತ್ತಿ ; ಕಾಮುಂಕತೆ; ಲಂಪಟತೆ: ಅವಳೆಂದಳಿಂತಿನಿತು ಧೂ[ದೂ]ರ್ತಿನೊಳಿಂತಿರುತೇನೊ ನಾಣ್ಚವೊ ಎನೆ (ನೇಮಿಪು. ೩-೦೪೮). [ ದೂರ್ತ + –ಉ₄ ]

**ದೂರ್ತೆ** (ನಾ). ವಂಚಕಿ ; ಕಪಟಿ ; ಮೋಸಗಾರ್ತಿ : (೬). [ ದೂರ್ತ + –ಎ₃ ]

**ದೂರ್ವ** (ನಾ). ಗರಿಕೆ : ಅನುರೂಪಂ ಸ್ಫಟಿಕಾಬ್ಜದೊಳ್ ದಧಿ ಸುವರ್ಣ ಕ್ರೌಂಚದೊಳ್ ರೋಚನಂ ಘನಹಾರೀತಕಹಂಸಿಯೊಳ್ ಹರಿತ ದೂರ್ವಂ . . . ಮಾಣಿಕ್ಯಭಾಜನದೊಳ್ ಕುಂಕುಮಪಂಕಮೇಂ ಮೆಱೆದುವೋ ಮಾಂಗಲ್ಯಸಾಕಲ್ಯಮಂ (ಪಂರಾಮಾ. ೩-೦೨೩). [ ಸಂ. ದೂರ್ವಾ ]

**ದೂರ್ವಾಂಕುರ** (ನಾ). ಗರಿಕೆಯ ಚಿಗುರು; ಎಳೆಗರಿಕೆ: ಆ ದೂರ್ವಾಂಕುರ ವರ್ಣದೊಳಾದಮೊಡಂಬಟ್ಟ ಕನಕಕವಚಂ . . . ಕ[ಣ್ಗಾದ]ಮೆ ಬರೆ ಬಂದು ಮುಂದೆ ನಿಂದಂ ಹರಿಗಂ (ಪಂಪಭಾ. ೨-೬೪) ; ಉಜ್ಜ್ವಲದಂತಂ ಪರಿವೃತ್ತ ಮೌಕ್ತಿಕಸಮಂ . . . ತನುರೋಮರಾಜಿ ವಿಲಸದ್ದೂರ್ವಾಂಕುರಾಭಂ ಮನಂಗೊಳೆ ಚಂಚನ್ನಿಜಪಂಚವರ್ಣೆ ಪಡೆಗುಂ ಚಿತ್ರಾಂಗನಾಶಂಕೆಯಂ (ಆದಿಪು. ೨-೪೪); ರುಚಿರಮರಕತಶ್ಯಾಮ ದೂರ್ವಾಂಕುರಗ್ರಾಸದೊಳಂ ಅತಿಸ್ವಚ್ಛಸ್ವಾದು ಸಲಿಲಪಾನದೊಳಂ ಮೆಲ್ಲಮೆಲ್ಲನೆ ಮೆಲ್ಕಾಡಿ (ಪಂಚತಂ. ೨೪-೦೨) ; ಮೆಱೆವ ದೂರ್ವಾಂಕುರದ ಮಾಲೆಯಿಂದಂದಿರಾದ ಮೌಕ್ತಿಕದ ಮಾಲೆ . . . ಸ್ತಂಭದಿಂದೆಸೆವುದು (ಜಿತುಪು. ೬-೦-೫೭). [ ಸಂ. ]

**ದೂರ್ವಾಂಚಿತ** (ನಾ). ಗರಿಕೆಯಿಂದ ತುಂಬಿ ಅಲಂಕಾರ ಮಾಡಿದಂದು : ಪಂಚರತ್ನ ಸಮಸ್ತೌಷಧಿ ಗರ್ಭಮಕ್ಷತಯುತಂ ದೂರ್ವಾಂಚಿತಂ ಸರ್ವಧಾನ್ಯಸಮುತ್ತಂಭಿತಪೂರ್ಣಕುಂಭಮೆಸೆದತ್ತಾ ವೇದಿಕಾಮಧ್ಯದೊಳ್ (ಪಂರಾಮಾ. ೩-೦೨೪). [ ಸಂ. ]

**ದೂರ್ವಾಕಿಸಲಯ** (ನಾ). = ದೂರ್ವಾಂಕುರ: ಅಷ್ಟರಲ್ಲಿ ನಾನೂ ಶಕುಂತಳೆಗೋಸ್ಕರ ಗೋರೋಚನ, ತೀರ್ಥಮೃತ್ತಿಕೆ, ದೂರ್ವಾಕಿಸಲಯಗಳ ಮಂಗಳಾನುಲೇಪಗಳನ್ನು ಮಾಡುವೆನು (ಶಾಕುಂತ. ೪೯-೨೦). [ ಸಂ. ]

**ದೂರ್ವಾಪ್ರವಾಲ** (ನಾ). = ದೂರ್ವಾಂಕುರ : ಅಪೂರ್ವ ದೂರ್ವಾಪ್ರವಾಲಾಲಂಕೃತ ಕರ್ಣಪೂರನುಂ . . . ಪುಣ್ಯಾಶೀರ್ವಚನ ನಿರ್ಘೋಷದತ್ತಕರ್ಣನುಂ ಆಗಿರ್ದು (ಆದಿಪು. ೧೦-೦೦ ವ). [ ಸಂ. ]

**ದೂರ್ವಾಸಕ್ತಿ** (ನಾ). ಗರಿಕೆಯಲ್ಲಿ ಆಸಕ್ತಿ ; ಹುಲ್ಲನ್ನು ತಿನ್ನುವ ಆಸೆ : ಘನ ದೂರ್ವಾಸಕ್ತಿಯಂ ಗಾರುಡಮಣಿರುಚಿಯೊಳ್ ದಾವವಿಭ್ರಾಂತಿಯಂ ಕಾಂಚನಭಿತ್ತಿವ್ರಾತದೊಳ್ . . . ಮಾನೇಚರಸ್ತ್ರೀಭ್ರುಮಮನತುಳ ನೀಳಾಶ್ಮಪಾಂಚಾಳಿಕಾದರ್ಶನದೊಳ್ ತಾಳುತ್ತುಮೆತ್ತಂ ಸುಟ್ಟುವುದು ಮಹೀಭೃದ್ಗೇಹದೇಣೀಸಮೂಹಂ (ಚಂದ್ರಪು. ೦-೦೪೭). [ ಸಂ. ]

**ದೂರ್ವಿಜ ?** (ನಾ). ಬ್ರಹ್ಮ (?) : ಮೂಪರೆನ್ನ ಸುತರಾಗಿಯೆನೆ ಶಶಿಧರಂ ಯಜ್ಞಕರ ದೂರ್ವಿಜಂ ದೂರ್ವಾಸಮೆಸರಾದವೊಲಂ ಬಸವತತ್ತ್ವಣಿಕೆ ಪೆಸರಿಟ್ಟವನ ಚರಣಾಂಬುಜಕ್ಕೆ ಶರಣು (ಲಿಚಿಂ. ೩೩-೩೩). [ ? ]

**ದೂರ್ವೆ** (ನಾ). ಒಂದು ಬಗೆಯ ಹುಲ್ಲು; ಗರಿಕೆ: "ಹರಿತಾಲೀ, ದೂರ್ವಾ– ಇವೆರಡುಂ ಕಱುಂಕೆ" (ಹಲಾಯು. ೩೨-೩೮) : "ದೂರ್ವೆ ಹರಿತಾಳಿಯೆನೆ ಕಱುಂಕೆಯೆನಿಸಿಕ್ಕು" (ಮಂಗರಾ. ೩೩-೭) ; ಎಳಸೆ ಪುರ್ವು ದೂರ್ವೆಯಂನ ರೋರುಹಮುಜ್ಜ್ವಲಕುಂಭಶೋಭೆಯಿಂ ಪಾಳಿಸೆ (ಚಂದ್ರಪು. ೦೦-೩) ; ಆ ಕ್ಷಣ ದೂರ್ವೆ ದಧಿಗಳನು ತರಿಸಿದನು (ಕಾಶಿರಾ. ೩-೩೦) ; ದೂರ್ವೆಯ ದಳವ ಮೇಯ ಬಂದ ಮೊಲನ ಉರ್ವಿಯಂ ಕರಡಿ ತೊಡರಿಕೊಂಡಿಪ್ಪುದಯ್ಯ (ಸಿದ್ಧೇವ. ೧೯೩-೩೯೪) ; ದೂರ್ವೆಯಿಂ ಕಡೆಗಾದ ವಸ್ತುಗಳುರ್ವಿಯೊಳಗಿಲ್ಲೆಂಬರೆಲ್ಲರು . . . ದೂರ್ವೆಯಿಂ ಕಡೆ ಬೇಡಿ ಬಾಳುವ ಮನುಜನು (ಶಂಕರಾ. ೭-೨೦). [ ಸಂ. ದೂರ್ವಾ ]

**ದೂಲ, ಧೂಲ** (ನಾ). ಉದ್ದವೂ ದಪ್ಪವೂ ಆದ ಮರದ ತೊಲೆ,– ಮರಮುಟ್ಟು : ನೀಲಮಾಯ ಬೋದಿಗೆ ಪಚ್ಚೆಯ ಚೆಲ್ವ ದೂಲಗಳ್ . . . ಮೃಗನಾಭಿಯ ಸುತ್ತುಭಿತ್ತಿ ಬಾವನ್ನದಿನರ್ಥಿಯಿಂದೆ ಮೆಱೆಗುಂ ಧರಣೀಶನ ಮಂತ್ರಶಾಗೃಹಂ (ಮಲ್ಲಿಕಾ. ೫-೫) ; ನಾರಾಯಣಶಾಸ್ತ್ರಿಗಳು ಮನೆಯ ಒಂದುಂಕಣವನ್ನು ಕೀಳಿಸಿ ಹೊಸದಾಗಿ ಕಟ್ಟಬೇಕೆಂದು ಒಂದಷ್ಟು ತೊಲೆ ದೂಲ ತರಿಸಿಹಾಕಿಕೊಂಡಿದ್ದರು (ನಾಲ್ಕು.ಕ. ೯) ; ಆನೆಗಳ ಎಳೆತಕ್ಕೆ ಶಕಟದ ಮರದ ದೂಲಗಳು ಕಿತ್ತುಬಂದುವು (ಶಾಂತಲಾ. ೨೪೬) ; ಅಲ್ಲಿ ಹಿಂದಿನ ದಿನದಂತೆ ದೊಡ್ಡ ದೊಡ್ಡ ದೂಲದಂತಿದ್ದ ಕಟ್ಟಿಗೆಯ ರಾಶಿಯಲ್ಲಿ ಬೆಂಕಿಯು ಉರಿಯುತ್ತಿತ್ತು (ಕಪಾಕುಂ. ೨೫) ; ಅಂತರಿಕ್ಷಕ್ಕೆ ದೂಲವಿಲ್ಲ (ಭಾತತ್ತ್ವ. ೨೩). **ಧೂಲ:** ನಾರಾಚ ಸಲಾಕಿ ಕೊಂಡಿ ಸಹ ೧ ಮರದ ರಥದ ಗಾಲಿಚಕ್ರಗಳು ಧೂಲ ೨ ಸಹ . . . ಯಿಾ ಸಾಮಾನು ಲೆಕ್ಕ ಬರ ಬರದಿರುವ ತಾಂಬ್ರದ ತಗಡು (ಎಕ. XIV, ನಂಜನ. ೨೯೪, ಪುಟ ೦೪೪ ; 1852). 'ತೊಲ್ಹ' ಪರಾ. [ ?./ತಮಿ. ತೂಲ ; ತೆಲು. ದೂಲ ]

**ದೂವಟ** 'ದುಪ್ಪಟಿ' ನೋ.

**ದೂವಟಿ** 'ದುಪ್ಪಟಿ' ನೋ.

**ದೂವಟ್ಟಿಗೆ** 'ದುವಟ್ಟಿಗೆ' ನೋ.

**ದೂವಡಿಗೆ** 'ದುವಟ್ಟಿಗೆ' ನೋ.

**ದೂವಾಟ** 'ದುಪ್ಪಟಿ' ನೋ.

**ದೂವಾರಿ** (ನಾ). ಹೊರುವವನು : ಹೊಂದುಡಿಗೆಯ ದೂವಾರಿಗಳು ವೆಂಠಣಿಸಿದರು (ಕುಮಾರವ್ಯಾ. ೮-೩೫). [ <ಸಂ. ಧೌರೇಯ ]

**ದೂವಾಳಿ** 'ದುಮ್ಮಾಳಿ' ನೋ.

**ದೂವಾಳಿಸು** 'ದುಮ್ಮಾಳಿಸು' ನೋ.

**ದೂವೆ₁**, ದುವ್ವೆ, ದೂಪೆ, ದೂಹೆ (ನಾ). ೧. ಹೊಗೆ ; ಧೂಮ : ಬಟ್ಟೆಯ ದೂಳಿದೂಪೆ ಮೊದಲಾದುದು (ಕಾದಂಪೂ. ೧೯೭) ; ಧೂಮ– ದೂವೆ (ಶಬ್ದಾನು. ೧೭೦ ಪ್ರಯೋ) , ತಳಿರ್ಗಳೆ ದಳ್ಳುರಿಯುಲರಿಂ ಬೆಳೆದಲರ್ಗಳೆ ದೂವೆ [ಪಾಠಾಂ. ದೂಸೆ, ಧೂಮ]. ಮಂತ್ರಘೋಷಂ ಪಿಕಸಂಕುಳರವಮೆನೆ ಚೂತಂ ಕಣ್ಗೊಳಿಪುದು ಹೋಮಾಗ್ನಿಯಂತೆ ಕಾಮಾಧ್ವರಿಯಾ (ಶಬಶಂ. ೨-೪೮). ೨. ಆವಗೆ : ದೂವೆಯೊಳ್ ಪೊಕ್ಕ ಪಾವಿನಂತೆ ಬೆದಬೆದ ಬೆಂದು (ಲೀಲಾವ. ೧೧-೭೦ ವ); ಪೊಗೆಯುಡಂಗೆಗವಿದ ದೂವೆಯಂತಿರೆ ಬರುಂಟಿದೊಡೆ ಬಿಸಿಯುನುಗುಟ್ವ ಕಪ್ಪುರದ ನಣ್ಣಾಳಲ ಜಗಲಿಯುಂ (ವರ್ಧಪು. ೫-೬೩ ವ) ; ದೂವೆ [ಪಾಠಾಂ. ದಾವಿ]ಯೊಳ್ ಪೊಕ್ಕುರಗಿಯಂತೆ ಬೆದಬೆದನೆ ಬೆಂದು (ಚಬಪು. ೧೯-೪೩). ೩. ಹೆಣವನ್ನು ಸುಡುವ ಜಾಗ ; ಚಿತೆ : ಪಂದಲೆಯೋಳಿದೋರಣದ ಸೀಯುದರಂ ಪೊಸದೂವೆ ದೂಪ ತೂಗುಂದಲೆ ಬಾಟ್ವೆಣಂ ಪೊಡರೆ ಬಳ್ಳುವ ಸಮ್ಮನ ಸೂಲಂ (ಕಾವ್ಯಾವ. ೫೭) ; ಪರೇತವನದೊಳಗೆ ಪೊಸದೂವೆಯು ಕೆಲದೊಳ್ ಕಳೆದೊಟ್ಟಿದ ತೊಡವುಗಳುಮಂ ಮರದ ಕೊಂಬಿನೊಳ್ ಬರೆದು ಕಟ್ಟಿದ ಕಪ್ಪಡಮುಮಿರ್ದಪ್ಪುದೆಂದು ಪಿತೃವನಪಾಳಕಂ . . . ಬಿನ್ನವಿಸಿ (ಅರ್ಧನೇ. ೫-೪೦ ವ) ; ಭೂನುತಕುಮಾರನಂ ದಹಿಸಿ ದೂವೆಯ ಕೆಲದೊಳೇ ನರಕಿ ವನಿತೆಯನನಾಮಿಕನ ಕಯ್ಯೊಳನುಮಾನವಿಲ್ಲದೆ ಕೊಲಿಸು (ಹಚಕಾ. ೧೩-೯); ತ್ವರಿತದೆ ಪುಟ್ಟಿ ಬರ್ಪನುತಮಾ ಕ್ಷಣದಿಂ ಮೊಗೆದೆತ್ತಿ ದೂವೆಯಂತಿರೆ ಕಡುಗಾಯ್ದ ಭೂರಜಮಂ . . . ಅಂಬರಮನೆ ಚುಂಬಿಸುತ್ತಿರದೆ ಸುಟ್ಟುರೆಗಳ್ ನೆಗೆದತ್ತುವೆತ್ತಲುಂ (ಕುಸುಮಾ. ೮-೧೨೨) : ಅಸಿಯ ಗಸಣಿಯುಂ ದೂವೆಯ ಬೇವಸಮುಂ . . . ಕನಸಿನೊಳುಂ ಇಲ್ಲೆನಿಸಿ (ಎಕ. XI, ಹೊಳಕಾ. ೨೦-೪೧; 1278 ?). **ದುವ್ವೆ** : ೪. ಬೆಂಕಿ; ಅಗ್ನಿ; ಕೆಂಡ: ಕುಂದೆ ನದೀಜಲಂ ಪರಿಯೆ ನಾಲ್ದೆಸೆಯೊಳ್ ಮೃಗತೃಷ್ಣೆ . . . ದುವ್ವೆ ವೊಲಾಗೆ ಧೂಳಿ ಕಾಮಂ ದಯೆಗೆಟ್ಟು ಕಾಮುಕರವರ್ದಿಸಿ ನೋಡಲುದಗ್ರ ತೇಜದಿಂ ಬಂದುದು ಚೈತ್ರ ಮಾಸಂ (ನಳಚಂ. ೫೭). **ದೂಪೆ** : ೩. ಉರಿಯು ತ್ಯಲ ದೂಪೆಯು ಸತ್ತರ ಕರುಳ್ಗಳನೆವರ ತಲೆಯ ತೋರಣ ದಿಂದಂ ಕರವ ಸುರದಿಪರ್ವಲ[ದ]ಮರದಿಂ ಭರದಿಂದ ಮಾಟ್ಟಿ ಬ[ಳ್ಳಿ]ನ ಸರದಿಂ . . . ಆಗುವರ್ಮಗಿರೆ (ಬಂಹರಿ. ೨-೧೧). ೫. ಸಮಾಧಿ: ಇನ್ನೊಮ್ಮೆ ಮೂರರೊಳ್ ದೂಪೆಯಿಂದಳಲಾಯ್ತು ಹನ್ನೊಂದರೊಳ್ ನೆರವಿಯಿಂ ಬಳಗವೆರೆದು ಚೆನ್ನೆಯಂ ಪೆಸರೆತ್ತಿ ತಣಿದುಂಡು ಮರೆಯಾಯ್ತು (ಕಾಲೂರ. ೧೮೫-೪೨೧). **ದೂಹೆ** : ೩. 'ದೂಹೆಗಾಡು' ಪರಾ.

**ದೂವೆ ಮಾಡು** = ಸಮಾಧಿಮಾಡು : ನೆನ್ನೆ ಸತ್ತವನನ್ನು ಈಗ ದೂವೆ ಮಾಡಿ ಬಂದರು (ರೂಢಿ). [ <ಸಂ. ಧೂಮ./ತುಳು. ದೂಪೆ ]

**ದೂವೆ₂**, ದುರುವೆ (ನಾ). ಹುಲ್ಲು ; ಗರಿಕೆ : ಹಟ್ಟಿ = ದೂವೆಯೊಳ್ ತ್ರಟಿಲಂ ಪೂಟ್ದ ಕ್ರಿಯೆ (ಶಮುದ. ಪರಿ. ೧) ; ಕೆಸಟಿಳಿಳಾಗದ ಬಸಿಟೊಳ್ ಪುಟ್ಟದಾಣಿಮುತ್ತುಗಳಿಂ ಬಿಗಿದು ದೂವೆಯ ಕಂಸುಟಿಂ ಪುದಿದು . . . ತಾವರೆಯ ಕೋಶದಂತಿರೆಸೆವ ಜೋಳದ ಪಾಟಿಯಂ (ರಾಮಾಶ್ವ. ೧೧೧-೨೫). 'ದೂವೆದೊಟ್ಟು' ಪರಾ. **ದುರುವೆ** : ಮೊಸರು ಅಕ್ಷತೆ ಕಲಸಿಯೆಸಳು ದುರುವೆ ಮುಡಿಸಿ (ಶಜಾಗೀ. ೧೨೫). [ <ಸಂ. ದೂರ್ವಾ ]

**ದೂವೆಕಿಚ್ಚು** 'ದೂವೆಗಿಚ್ಚು' ನೋ.

**ದೂವೆಗಿಚ್ಚು**, ದೂವೆಕಿಚ್ಚು, ದೂವೆಗಿರ್ಚು (ನಾ). ೧. ಬಹಳ ಶಾಖ ವನ್ನು ಹೊಮ್ಮಿಸುವ ಬೆಂಕಿ ; ನಿಗಿನಿಗಿಯಾದ ಬೆಂಕಿ : ಕೆಂಡದ ಮಟಿ ಕೊಂಡಪ್ಪುದಜಾಂಡದಿನಿಳೆ ದೂವೆಗಿಚ್ಚನುಗುಟ್ದಪ್ಪುದು (ಪುಷ್ಪಪು. ೮-೭೫). **ದೂವೆಕಿಚ್ಚು** : ೨. ಆವಗೆಯ ಬೆಂಕಿ : ಪುಲ್ಲ ಕಿಚ್ಚಿನಂತೆ ಪುಂವೇದಂ ದೂವೆಕಿಚ್ಚಿನಂತೆ ಸ್ತ್ರೀವೇದಂ ಇಟ್ಟಿಗೆಯ ಕಿಚ್ಚಿನಂತೆ [ನ]ಪುಂಸಕವೇದಂ (ಶಾಸ್ತ್ರಟೀ. ೧೧೯-೫). △ **ದೂವೆಗಿರ್ಚು** : ೨. ಅಂತೂರ್ವರನೊರ್ವರ್ ಕರಗಸದಿಂ ಸೀಳ್ವ ದೂವೆಗಿರ್ಚ[ಪಾಠಾಂ. ಗಿಚ್ಚ]ನೊಳ್ ಪೊಟ್ವ ತತ್ತಟಿದಟಿವ ಪಲ ತೆಱದ ದಂಡನೆಗಳುಂ (ವರ್ಧಪು. ೧೧-೪೭ ವ).

[ ದೂವೆ₁ + ಕಿಚ್ಚು ]

△ **ದೂವೆಗಿರ್ಚು** 'ದೂವೆಗಿಚ್ಚು' ನೋ.

**ದೂವೆದೊಟ್ಟು** (ನಾ). (ಆಲಂ) ಕೀಳಾದ ದಾಸಿ; ಹುಲುದಾಸಿ: ಸಿರಿವೆಣ್ಣಂ ದೂವೆದೊಟ್ಟಿಂಗಣೆಯನೆ ಬಗೆದಂ ಮತ್ತಮಾ ವಿಶ್ವವಿಶ್ವಂಭರೆಯಂ ಮೃತ್ಪಿಂಡಮಾತ್ರಾಕೃತಿಯೆನೆ ಬಗೆದಂ (ಚಂದ್ರಪು. ೧೦-೧೨೮).

[ ದೂವೆ₂ + ತೊಟ್ಟು ]

**ದೂವೆಯಿಡು** (ಕ್ರಿ). ಹೊಗೆಯಾಡು ; ಹೊಗೆಯೇಳು : ಮೆಟ್ಟಿದೊಡೆ ದೂವೆಯಿಡುವುದು . . . ಮುಟ್ಟಿದೊಡೆ ಹೊತ್ತಿ ಹೊಗೆವುದು ಕಟ್ಟುಗ್ರಂ ವಿರಹತಾಪಮಂಗಜಕೋಪಂ (ನಳಚಂ. ೧೬೭) [ ದೂವೆ₁ + ಇಡು₁ ]

**ದೂವ್ವಾಡ** (ನಾ). ಖಡ್ಗಯುದ್ಧದ ಒಂದು ವರಸೆ: ನುತಚೌಪಟು . . . ಪಂಚಾಯಿತಮೆನಿಪ್ಪಯಿದು ನಿಟಿಗೆಗಾಯತ ಮುಂಡಿ ದೂವ್ವಾಡ [ಪಾಠಾಂ. ದುವಾಡ, ದೂವಾಡ]ವೆಕ್ಕಸರ . . . ಚಟಿಯೆಂಬ ಚತುರ ಠಾಣದ ತರಹರದೊಳು ಹಲಗೆಯ ಮಗ್ಗುಲೊಳು ಖಡ್ಗವಂ ಜಡಿದರು (ಸೋಮಡ. ೫-೧೪). [ ? ]

**ದೂಷಕ** (ಗು). ೧. ಬಯ್ಯುವ ; ನಿಂದಿಸುವ ; ತೆಗಳುವ: ದೀಪಿಸಲು ಶಿವಭಕ್ತಿಸತ್ಸಭೆ ಪಾಪಸಂಕುಳಪಳಿಯೆ ದೂಷಕ ತಾಪಸರು ತಾವೈಸಟಿಂ ಸಾಷ್ಟಾಂಗದಿಂ ನಮಿಸಿ (ಬಸಪು. ೪೪-೩೪). ೨. ಕೆಟ್ಟದ್ದನ್ನು ಮಾಡುವ ; ಕೆಡುಕನ್ನುಂಟುಮಾಡುವ ; ದುಷ್ಟತನದ. ೩. ಹಾಳುಮಾಡುವ ; ಅಪಮಾನಗೊಳಿಸುವ ; ಭ್ರಷ್ಟಗೊಳಿಸುವ. (ನಾ). ೪. ನಿಂದಿಸು ವವನು ; ದೋಷಾರೋಪಣೆ ಮಾಡುವವನು ; ತೆಗಳುವವನು ; ನಿಂದಕ : ಜಂಗಮಪ್ರಸಾದ ದೂಷಕರ ಭಂಜಿಸುತ ಯಮನಧಿಕನಾರಕ ಪುಂಜದಲಿ ಕೆಡಹುವನು(ಬಸಪು. ೫೭-೨೨): ದೂಷಕಸಂಕುಳಶರನಿಧಿಶೋಷಣ ಕಳಜೆತ್ತಿಯಾಂಡಭಕ್ತರಿಗತಿಸಂತೋಷದಿ ಗಣಪದವಿತ್ತಹಿಭೂಷ ಶಿವಂ (ತ್ರಿಪುವಿ. ೪೭-೧೨). ೫. ದುಷ್ಟ ; ನೀಚ : ದೂಷಕನವನೊಬ್ಬ ದೇಶವ ಕೊಟ್ಟರೆ ಆಸೆಮಾಡಿಯುವನ ಹೊರೆಯಲಿರಬೇಡ (ಬಸವ. ೧೩೭): ದಾಸೋಹ ವನಜಿಯದ ದೂಷಕನು ನಾನಯ್ಯ (ಉರಿವ. ೩೪-೪೨). ೬. ಹಾಳು ಮಾಡುವವನು; ನಾಶಮಾಡುವವನು : ಪಾತಕನು ಪತಿತನು . . . ದೂಷಕನು ದುರ್ಜನನಪ್ರಯೋಜಕನು ನೀತಿಹೀನನು (ಕುಮಾರವ್ಯಾ ೮-೪೦).

[ ಸಂ. ]

**ದೂಷಣ** (ನಾ). ೧. ನಿಂದೆ ; ತೆಗಳಿಕೆ ; ಖಂಡಿಸುವುದು : ಪಟ–ವಸ್ತ್ರ ವಿಶೇಷಂ; ದೂಷಣಂ; ನಾಯು ಸೋವುವುದು; ಲೋಹದ ಘಟ್ಟಿ (ಶಮುದ. ಪರಿ. ೧). ೨. ಅಪಮಾನ ; ಅಪಮರ್ಯಾದೆ : ನಿಮ್ಮ ಮಗ ಕುಲಭೂಷಣನಲಾ ಧರ್ಮಸುತನಾತನಲಿ ಹುರುಡಿಸುವ ರೋಷವುಂಟೇ ತನಗೆ ನಿಮಗಿದು ದೂಷಣವೆ ತಾನಲ್ಲ(ಕುಮಾರವ್ಯಾ. ೨೦-೩೭) ; ಅನುಜನಂಗನೆ ಗಳುಪಿ ವೈರವ ಕೊನರಿಸಿದೆಯಾತನಲಿ ತಾನಿದು ನಿನಗೆ ದೂಷಣವಲ್ಲವೆ (ತೊರರಾ. ೪-೪-೧೧) ; ಶಿವಶಿವಾ ದೂಷಣಕೆ ಬೆದಱಿ ಮಾಡಿಧಿರಿ ಕೈತವ ಜಾರವಿದ್ಯೆಗಳ (ಪ್ರಮಿಥಾ. ೨-೭೧). ೩. ಕೆಡಿಸುವುದು; ದುರುಪಯೋಗ

ಪಡಿಸುವುದು: ಅದು ಸಾಧನ ದೂಷಣ ಪ್ರಯೋಗಾನ್ಯಥಾನುಪತ್ತಿಯಿಂ ಬಹಿರರ್ಥಸಿದ್ಧಿಯಕ್ಕುಂ (ಆದಿಪು. ೨-೧೦ ವ). ೪. ನಿಂದಕ; ಖಂಡಿಸು ವವನು: ಶಿವಗುಣದೂಷಣಾಹಿತಕರ ಜಂಗಮತೋಷಣಾಚಾರ . . . ಬಸವಕುಮಾರ ಮಾಂ ತ್ರಾಹಿ (ಬಸವು. ೨೦-೩೮). ೫. ದೋಷ; ತಪ್ಪು: ವರಯತಿಗೆ ಭಂಗಮಂ ತಾರದೆ ನಿಜಾನ್ವಯಕ್ರಿಯೆಗಳ್ಗೆ ದೂಷಣಂ ಬಾರದೆ . . . ಕಾವ್ಯಪ್ರಬಂಧಮಂ ಶಾರದೆಯ ಕರುಣದಿಂ ಪೇಳ್ವೆ (ಜೈಮಿಭಾ. ೦-೬): ಇದು ಭೂಷಣವೋ ದೂಷಣವೋ ಈ ಬಿನದಿಗೆ ಕುಹಕವೆ ತೋಷಣವೋ (ಗದೇಶ. ೪-೯೩). ೬. ಪಾತಕ; ಪಾಪ. ೭. ರಾಮನಿಂದ ಹತನಾದ ಒಬ್ಬ ರಾಕ್ಷಸನ ಹೆಸರು: ಎಚ್ಚು ಗಗನಕೆ ದೂಟಿಸಿದ ದೂಷಣನ ಮಸ್ತಕವ (ತೊರರಾ. ೩-೬-೧೮). [ಸಂ.]

**ದೂಷಣಿಕ** (ಗು). ಹೀಯಾಳಿಸುವ; ನಿಂದಿಸುವ: ದೋಷರಾ ಕಥೆಯಲ್ಲ ದೂಷಣಿಕಕಥೆಯಲ್ಲ ಭೂಸುರೋಜ್ವಲ ಜಗದೀಶನ ಕೃತಿಯು (ಆದಿಪ. ೨-೫). [ಸಂ.]

**ದೂಷಣೆ** (ನಾ). ೧. ನಿಂದಿಸುವುದು; ತೆಗಳಿಕೆ: ಪರರ ದೂಷಣೆಯಿಂದ ಇಂಥಾ ಅವಸ್ಥೆಯು ನಿನಗೆ ಬಂದ ಹಾಗೆ ಕಾಣುತಿದೆ (ನೀತಿಚಂ. VI, ೧೯); ದೋಷ ಮಾಡಿದವನಿಗೆ ದೂಷಣೆ ತಪ್ಪದು (ಗಾದೆ). ೨. ಅಪವಾದ; ದೋಷಾರೋಪಣೆ: ನಮ್ಮ ಲುಕಸಾನಿ ಮಾಡಿದಿರಿ ಅಂತ ನಮಗೆ ದೂಷಣೆ ಕೊಡುತ್ತಾರೆ (ಮುಂಬವ್ಯಾ. ೩೦ ಪ್ರಸ್ತಾವನೆ). [ಸಂ. ದೂಷಣ]

**ದೂಷಿ** 'ದೂಸಿ' ನೋ.

**ದೂಷಿಕೆ** (ನಾ). ಕಣ್ಣಿನೊಳಗಿರುವ ಕೊಳೆ; ಪಿಸಂರು; ಗೀಜು. [ಸಂ. ದೂಷಿಕಾ]

**ದೂಷಿತ** (ಗು). ೧. ನಿಂದೆಗೊಳಗಾದ. ೨. ಹಾಳಾದ; ಭಗ್ನವಾದ. ೩. ಕೆಟ್ಟುಹೋದ; ಭ್ರಷ್ಟವಾದ. (ನಾ). ೪. ದೋಷವುಳ್ಳುದು; ದೋಷಯುಕ್ತವಾದುದು: ಕಪೋಲಕ್ಕೆ ಉಪಮಾನ ಕೊಡುವುದಾದರೆ . . . ಅದಕ್ಕಿಂತ ಎಷ್ಟೋ ಹೀನವಾದ, ಕಲಂಕದಿಂದ ದೂಷಿತವಾದ ಚಂದ್ರಬಿಂಬವನ್ನು ಹೇಳಿದರೆ ಸರಿಯೆ? (ಧ್ವನ್ಯಾಲೋ. ೧೧೯ ಅಡಿಟಿ). ೫. ಪಾಪ; ಪಾತಕ: "ಕಿಲ್ಬಿಷಂ. . . . ದೂಷಿತವಮಘಮೆನಲ್ . . . ಪಾಪಮಕ್ಕುಂ" (ಮಂಗರಾ. ೧೧೬-೨). [ಸಂ.]

**ದೂಷಿತಾನ್ನ** (ನಾ). ಬೇರೊಂದು ವಸ್ತುವಿನ ಸಂಪರ್ಕದಿಂದ ಕೆಟ್ಟು ಹೋದ ಆಹಾರ; ಮಲಿನವಾದ ಆಹಾರ: ದೂಷಿತಾನ್ನವೆಂದರೆ ಶುದ್ಧವಾದ ಆಹಾರಕ್ಕೆ ಶುದ್ಧವಾದ ಮತ್ತೊಂದು ವಸ್ತು ಸಂಪರ್ಕವಾಗಲೀ ಅಶುದ್ಧವಾದುದರ ಸಂಪರ್ಕವಾಗಲೀ ಆಗುವುದು. ಹಾಲಿಗೆ ಹುಳಿ, ಪಾಯಸಕ್ಕೆ ಉಪ್ಪು ಬೆರೆದರೆ, ಹುಳಿ ಉಪ್ಪು ಎರಡೂ ತಿನ್ನುವ ಪದಾರ್ಥವೇ ಆದರೂ ಹಾಲೂ ಪಾಯಸವೂ ದೂಷಿತವಾಗುವುವು (ಆರ್ಯಾಧ. ೨೦೮). [ದೂಷಿತ + ಅನ್ನ₃]

**ದೂಷಿತೆ** (ನಾ). ೧. ದೂರು ಹೊತ್ತವಳು; ಅಪವಾದವನ್ನು ಹೊಂದಿದವಳು: ಅಪವಾದಂ ಪೊರ್ದಿದಿಂ ಬಳಿಯಂ ದೂಷಿತೆಯಾದೀ ಮಡದಿಯಂ ಬಿಟ್ಟಲ್ಲದೆ ಮಾಣೆಂ (ರಾಮಾಶ್ವ. ೨೫-೧೧). ೨. ಪಾಪ ಮಾಡಿದವಳು; ಪಾಪಿಷ್ಠೆ. 'ದೋಷದೂಷಿತೆ' ಪರಾ. [ಸಂ. ದೂಷಿತಾ]

**ದೂಷಿಸು** (ಕ್ರಿ). ೧. ನಿಂದಿಸು; ತೆಗಳು: ಮಹಾಪುರುಷರು ನಿರ್ವಹಿಸುವ ಮೂಲೋತ್ತರ ಗುಣಂಗಳಂ ತದ್ಬಲಹೀನರುಮಲ್ಪಸತ್ವರುಂ ನಿರ್ವಹಿಸಲಾಱದೆ ಗುರುಕುಳಮಂ ದೂಷಿಸುವರು (ಚಾವುಂಪು. ೫೬); ಹಾರಂ ಕಣ್ಬನಿಯಿಂದಾದತ್ತುಱದ ಭೂಷೆಯಂ ದೂಷಿಪವೊಲ್ (ಚಂದ್ರಪು. ೫-೧೨೮); ದೂಷಿಸಿದಡಾ ವೀರಭದ್ರನು ಪೂಷನೆಂಬನ ಹಲ್ಲನುದುರ್ಚನೆ (ಬಸವು. ೫೪-೫೨); ಈ ತೆಱದಿಂ ದುರ್ಜನರಂ ದೂಷಿಸಿ ನೀತಿನಿಪುಣರೆನಿಸುವ ಸಜ್ಜನರಂ ಪ್ರೀತಿ ಮಿಗಿಲು ತುತಿಯಿಸಿ (ಜಯುಕಾ. ೧-೨೩). ೨. ವಂಚಿಸು; ಅನ್ಯಾಯಂ ಮಾಡು: ಭರತ ಬಂದವ ಬಂದ ಹದನೇನಱಿಯಬಾರದು ಜೀಯ . . . ಧರೆಯ ದೂಷಿಸಿ ಕೊಂಡುದಲ್ಲದೆ ಧುರಕೆ ಬಹುದಿದು ಗುಣವೆಯೆಂದುಬ್ಬರದ ರೋಷಾವೇಶದಲಿ ಸೌಮಿತ್ರಿ ಗರ್ಜಿಸಿದ (ತೊರರಾ. ೨-೬-೨೦). [ದೂಷಣ + -ಇಸು₃]

**ದೂಷ್ಯ** (ಗು). ೧. ಕೆಡುವ; ಕೆಟ್ಟುಹೋಗಬಹುದಾದ. ೨. ದೂಷಣೆಗೆ ಅರ್ಹವಾದ; ಖಂಡನೆಗೆ ಯೋಗ್ಯವಾದ; ನಿಂದ್ಯ: ಸಮುಚಿತಕೃತಿ ದೋಷದೂಷ್ಯಮಾರ್ಗಕ್ರಮಪರಿಭಾವಿತಚಿತ್ತವೃತ್ತಿಯಪ್ಪಂಗಮಳಿನ ಕವಿತಾ ಗುಣೋದಯಶ್ರೀ ಸಮನಿಸುಗುಂ ಸತತಾಭಿಯೋಗದಿಂದಂ (ಕಾವ್ಯಾವ. ೪೯೬). ೩. ಕೆಟ್ಟ; ದುಷ್ಕೃತನದ. (ನಾ). ೪. ನಿಂದೆ; ತೆಗಳಿಕೆ: ಜನರ ಪರಿಪರಿ ದೂಷ್ಯ ಭೂಷ್ಯವ ನೆನೆವನೇ ತಮ್ಮಡಿಯ ಸಂಭಾವನದ ಬಲುಹಿರಲಾವ ಭಯವೇಕೆಂದು ಕೈಮುಗಿದ (ಗದಕಾ. ೧೭-೬೪). ೫. ನಿಂದ್ಯವಾದುದು; ತೆಗಳಿಕೆಗೆ ತಕ್ಕುದು: ನಿರುಪಮಗಂಧರ್ವಗತಿಸ್ವರಾದಿಕ ಕಳಾಗುಣಂ ಚತುಃಷಷ್ಟಿವಿಧಂ ದೊರೆಕೊಳ್ಳದುದಲ್ಲಿ ಕಳಾವಿರುದ್ಧದೋಷಂ ವಿಶಿಷ್ಟಜನತಾದೂಷ್ಯಂ (ಕವಿರಾ. ೦-೦೦೬); ಧುರದೊಳ್ಪಱಿಮಱಿ ಯಾಡುವ ತೆಱದಿಂದುಱದಿಱಿದನೆಂಬ ನಿಯಮಂ ದೂಷ್ಯಂ (ಶಮದ. ೧೯ ಪ್ರಯೋ): ಲೌಕಿಕಕ್ಕಿದು ದೂಷ್ಯವೆಂದವರುಗಳನೊಡಬಡಿಸಿ (ತೊರರಾ. ೦-೩-೬). ೬. ಬಟ್ಟೆ; ವಸ್ತ್ರ. ೭. ಹತ್ತಿ. ೮. ಗುಡಾರ; ಡೇರೆ: "ದೂಷ್ಯಂ, ಸ್ಥೂಳಂ . . . ಕೇಳಿಕಾ–ಈ ೫ ಗುಡಿ" (ಹಲಾಯು. ೭೪-೨೯೭); "ಚಿತ್ರಕುಟಿ . . . ದೂಷ್ಯಮೆನೆ ಗುಡಿಯಕ್ಕು" (ಮಂಗರಾ. ೩೫-೨೭). ೫, ೮: ನಡೆದು ಬಱಿಯಂ ಕ್ರೋಶದ್ವಿತಯ ಮಾತ್ರದೊಳ್ ಪ್ರಸಿದ್ಧದೂಷ್ಯಮಾಗಿಯುಮಂ ದೂಷ್ಯಮುಂ . . . ವಿಶಾಲಪರಿಧಿಯಾಗಿಯುಂ ಅವಿಶಾಲಪರಿಧಿಯೆನಿಸಿ ಗೃಹಮಹತ್ತರಂ ಮುನ್ನಮೆ ಸಮೆದುದಂ ಪ್ರಸ್ಥಾನಶಿಬಿರಮಂ ಪೊಕ್ಕು (ಚಂದ್ರಪು. ೧೧-೧೭ ವ). [ಸಂ.]

**ದೂಸ₁** (ನಾ). ಕಾಡುಬತ್ತ; ನೀವಾರ: "ದೂಸಂ ತೃಣಧಾನ್ಯ(ಮಂ) ಮಟವೀಸಂಭವಮದೆ ಗವೇಧುಕಂ ನೀವಾರಂ" (ವಸ್ತುಕೋ. ೯೫-೧೯). [ ←ತೆಲು. ದೂಸ]

**ದೂಸ₂**, ದೂಸು (ನಾ). ೧. ಬಟ್ಟೆ; ಅರಿವೆ: "ದೂಸ (ಸು) – ದೂಷ್ಯ = ವಸ್ತ್ರಭೇದ" (ಕಶ್ಯಕೋ. ೨೦). 'ದೂಸಿಗ' ಪರಾ. ೨. ಗುಡಾರ; ಡೇರೆ. ಪುದಿಯ ಕವಿಲ್ತ ಕೇಸರದ ದೂಸಮಶೋಕೆಯ ವೀಣೆಯಂ ಪ್ರಿಯಾಳದ ಗಂಡಿ . . . ಒಪ್ಪಿ ತೋಱದುವು ಮನೋಜರಾಜಶಿಬಿರಂಗಳೆಂಬಿನೆಗಂ ವನಾಳಿಗಳ್ (ಚಂದ್ರಪು. ೭-೬೨); ದೇಶಾಧಿಪರ ಬೆಳ್ಗೊಡೆಗಳು ನಕ್ಷತ್ರ ರಾಶಿಯಂತೆಸೆಯೆ ಮಧ್ಯದಲಿ ಕೇಶವರಾಯನ ದೂಸ ರೋಹಿಣಿಯ ಪ್ರಾಣೇಶನೆಂಬಂತೆ ರಂಜಿಸಿತು (ಮೋಹತ. ೨೬-೬೮): ಹಳದಿ ಬಿಳಿಯ ಮುಂತಾದ ಪಟ್ಟೆಗಳಿಂದ ಚಲುವೆತ್ತ ದೂಸವನು ಬಿಗಿಸಿ (ಜಿನರಾ. ೬-೫೮). **ದೂಸು:** ೨. ಕಟ್ಟಕಡೆಗಳೊಳು ಜಯವಿಜಯರ ದೂಸು ಕಟ್ಟಾಯತ ದೊಳೆಸಿತ್ತಿದುವು (ನಾಗಕು. ೦೫-೦೦೫); ಧೊರೆ ಮಂದರ ತನ್ನ ದೂಸ ತೊರೆಯೊತ್ತಿಲಿ ಹುಯಿಸೆ ದೊರೆದೊರೆಗಳ ದೂಸು ಇರದೆ ಸುತ್ತಲು ಹೊಯಿದವಾಗ ಪಡುವ ದಿಕ್ಕಿಲಿ ದಳವಾಯಿಯುಕಂಪನ ಕಡು ದೊಡ್ಡ ದೂಸು ತಾನೆತ್ತುಬಿಡದಾ ದೂಸ ಬಳಸಿ ಗುರಿಕಾಱರ ಗಡಣ ಗಾವುತಿಗಳೆ ದ್ದಾವು (ಜ್ಞಾನಚ. ೧೨-೯೭); ಬಿಟ್ಟ ಬೀಡಿನ ನಡುವೆ ಗಗನವ ಮುಟ್ಟ ಲೆಸೆದಿಹ ದೂಸಿನೊಳು ವಲವಿಟ್ಟು ಕುಳಿತಿಹನು (ಜಿನಭಾ. ೪೭-೨೦); ದೂಸಿಗತಿಸಂತೋಷದಲಿ ಪ್ರಾಣೇಶನನು ಕರವಿಡಿದು ಗುಣವಾರಾಶಿ ನಡೆ ತಂದಮಲತರ ಸಿಂಹಾಸನದ ಮೇಲೆ . . . ಕುಳಿತಳು (ಜಿನಭಾ. ೪೯-೧೦): ಇಂತು ಮರಾಟರೊಳ್ ಪ್ರಸಿದ್ಧರಾಗಿರ್ದ . . . ಮಹಾಶೂರರಂ ಕಡಿದವ ರಾನೆ ಕುದುರೆ ಬೊಕ್ಕಸ ದೂಸು ದುಮಾನ ಬಿರುದು ಮುಂತಾದವಂ ಕೊಂಡು (ಸಕವ್ವ. ೩ ಪ್ರಸ್ತಾವನೆ). [<ಪ್ರಾ. ದೂಸ./ಸಂ. ದೂಷ್ಯ]

**ದೂಸಕ** (ನಾ). ೧. ನಿಂದಿಸುವವನು ; ತೆಗಳುವವನು ; ದೂಷಕ : ದೂಸಕರ ದೂಱುಗೇಳ್ದುಂ ಸಾಸಿಗನೆನ್ನಳವನಱಿದುಮುಱಿಯದೆ ಪಿರಿದುಂ ದೋಸಿಗನಾದೊಡೆ ಕೊಲ್ಗುಂ ಪೇಸುವನಲ್ಲಂ ಸಮುದ್ರವಿಜಯನಜೇಯಂ (ಅರ್ಧನೇ. ೩-೧೩) ; ಇನ್ನುಣಲಿ ತಾವು ಮಾಡಿತನೆಂದು ಭರವಸದೊಳಾ ದೂಸಕರು ತಮ್ಮ ನಿಳಯಕ್ಕೆ ತಿರುಗಿದರು (ಸೌಂದಪು. ೧೨-೭೦); ದೋಷಿ ಯಲ್ಲದನೆನ್ನನು ದೋಷಿಯೆಂಬಾ ದೂಸಕರಾ ದೂಱುಗೇಳಿ . . . ಸೆಱೆವನೆ ಯೊಳಿಕ್ಕಿದಿರಿ (ನೇಮಿಸಂ. ೮-೧೧೪) ; ಬಿಟ್ಟು ರಸವನುಱಿ ಕಸವ ಪಿಡಿವ ಧಾರೆವಟ್ಟಲ ಪೋಲ್ವ ದೂಸಕರು ಮಿಟ್ಟನೆ ಮಿಡುಕದಾಲಿಸಿದೊಡೀ ಕೃತಿ ಝುಮ್ಮುದಟ್ಟದೆ ಕಲ್ಲೆರ್ದೆಗವರ (ನಾಗಕು. ೧-೭೦). ೨. ತೆಗಳಿಕೆ ; ನಿಂದೆ: ಒಡೆಯನೆ ಬಂದ ಸೌಜನ್ಯವ ಮೆಱೆವುದು ಬಿಡುವುದು ವಾಸಿ ದೂಸಕವ (ವರ್ಧಚ. ೬-೬೩). [ <ಸಂ. ದೂಷಕ ]

**ದೂಸಗ** (ನಾ). = ದೂಸಿಗ: "ವಸ್ತ್ರಕ್ರೀತನೊಳು ದೂಸಗನೆನುವಂಕ್ಕು" (ಶಶರ. ೩೧) ; ಬಿಳಿದುಪ್ಪಟ ರಾವಣಮೆಚ್ಚು ಗಜಾವಳಿ ಮಂಡೋದರಿ ಮೆಚ್ಚಿನ ಸೀರೆಯ ಮಾಳಿಗೆಗಳು ಬಳ್ಳಳನೆ ಬಳಸಿದುದು ದೂಸಗರಾಸುರ ದಿಂದೋಸರಿಸೆ (ಕುಮುರಾ. ೧೪-೩೮). [ ದೂಸ್ಕ + – ಗ ]

**ದೂಸಣ**, ದೂಸಣೆ (ನಾ). ನಿಂದೆ ; ತೆಗಳಿಕೆ ; ದೊಷಣೆ : ದೂಷಣ, ದೂಸಣ; ಅನಿಮಿಷ, ಅನಿಮಿಸ (ಶಬ್ದಾನು. ೧೩೮ ಪ್ರಯೋ). **ದೂಸಣೆ :** ಷಕಾರಕ್ಕೆ–ಅಮಿಷ–ಅಮಿಸ . . . ದೂಷಣ–ದೂಸಣೆ (ಶಮಂದ. ೨೫೩ ಪ್ರಯೋ). [ <ಸಂ. ದೂಷಣ ]

**ದೂಸಣೆ** 'ದೂಸಣ' ನೋ.

**ದೂಸರ್** 'ದೂಸಱು' ನೋ.

**ದೂಸರ** (ನಾ). ೧. ಬೂದುಬಣ್ಣ ; ಕಂದುಬಣ್ಣ ; ಮಾಸಲುಬಣ್ಣ ; ನಸುಬಿಳಿದು : "ದೂಸರ–ಧೂಸರ = ಬೂದುಬಣ್ಣ" (ತದ್ಭಕೋ. ೨೦) ; ನವಸುರಭಿಕುಸುಮ ಪಾದಪಪ್ರಸೂನಮಂಜರೀರಜಃಪ್ರಸರದೂಸರೋಪ ಕಂಠದೊಳ್ (ವರ್ಧಮಾ. ೫-೬೨ ವ) ; ಧಕಾರಕ್ಕೆ ದಕಾರಂ–ಔಷಧ–ಔಸದ . . . ಧೂಸರ–ದೂಸರ (ಶಮಂದ. ೨೫೫ ಪ್ರಯೋ). ೨. ಮಲಿನತೆ ; ಕೊಳಕು ; ಮಾಲಿನ್ಯ : ಕುಂದಣದ ಪುತ್ಥಳಿಯ ದೂಸರ ಕೆಡಲೆಂದು ಪುಳಿ ದೊಳೆವಂದದಿಂದವೆ ಕೋಮಲೆಯರು ಜಳಕವ ಮಾಡಿಸಲೆಸಗಿದರು(ಶ್ರೀಪಾಲ. ೨-೪೯) ; ಜಗದೊಳಗೆ ದೂಸರವು ಪರಿಕಿಸಿ ನಗೆನೆಗೆಯೊಳಿವಂಗೈದಿ ಕುಂದಿತು ಜಗಳದಲಿ ಭುಜಶೌರ್ಯ ಪ್ರಾಣಕ್ಕೊದಗಿತುಪಹತಿಯು (ಅಂಬಿಕಾ. ೪೪-೧೧).

**ದೂಸರಮಂಗೆಯ್** = ಮಲಿನಗೊಳಿಸು : ಪೂಸರಲನ ಜಸಮುಂ ದೂಸರಮಂಗೆಯ್ದನ . . . ನುತಿಸಿದನವನಭವನ (ಉದ್ಭದೇ. ೭-೧೯). **ದೂಸರಮಾಗು** = ಬೂದುಬಣ್ಣದಿಂದ ಕೂಡು : ಆಗಳ್ ದೂಸರ ಮಾದುದು ಗಗನಂ (ಲೀಲಾವ. ೬-೧೦೬); ತುಂಬಿಗಳಚ್ಚವೂಗಳಿಂ ದೂಸರ ಮಾದ ಬೊಲ್ಲೆಯದ ಕಂಪಿನೊಳೋಕುಳಿಯಾಡೆ ಸಿಂಗರಂ ದೇಸೆಯೊಳೊಂದಿ ತೋಱೆ ತಳರ್ದಂ ನನೆಯುಂಬನದೊಂದು ಚೆಲ್ವಿನಿಂ (ಕಬ್ಬಿಕಾ. ೯೦) ; ಆ ಪೊಳ್ತಿಗೆ ವಾಸರ ದೂಸರಮಾಯ್ತು (ಉದ್ಭದೇ. ೩-೬೩).

[ <ಸಂ. ಧೂಸರ ]

**ದೂಸರಂದಾಳ್** (ಕ್ರಿ). ಮಂಕಾಗು ; ಬಣ್ಣಗೆಡು: ಪುದಿದು ಕಂದಿನೊಳೊಂದಿ ಚಂದಂಗೆಡುತ್ತೆ ಮುಗಿವುದು ಮಾಸಿ ದೂಸರಂದಾಳ್ದು ಮುನ್ನಾಡೆ ನಾಣ್ಚದೆ ಕೊಱತೆವಡೆದಮರ್ದುಗಯ್ದುನಂ ಪೊಂದಾವರೆಯನಮಳಮಣಿಮುಕುರಮಂ ಪದಪಿನಿಂದೇಳಿಪ್ಪ ಟಾಳಿಪ್ಪ ಜಾಳಿಪೊಂದದಟನಿಂದೇಳಿಸಿತು ಸುದತಿಯಾ ಮಿಱುಮಿನುಪ ವದನ (ಉದ್ಭದೇ. ೨-೫೫). [ ದೂಸರ + ತಾಳ್$_1$ ]

**ದೂಸರಿಗ** (ನಾ). ಕಾರಣನಾದವನು ; ನಿಮಿತ್ತನಾದವನು : "ಹಯನ್, ಹಯಾನಃ . . . ಹೇತ್ರಾ ಈ ೬ ದೂಸರಿಗಂ" (ಕಾಶಕ್ಕ. ೨೦೭). [ದೂಸರ್ (<ದೂಸಱು) + – ಇಗ ]

**ದೂಸರು** 'ದೂಸಱು' ನೋ.

**ದೂಸಱು**, ದೂಸರ್, ದೂಸರು (ನಾ). ೧. ಕಾರಣ; ನಿಮಿತ್ತ ; ನೆವ; ನೆವ : "ದೂಸಱಿಂದು ತನ್ನ ದೆಸೆ" (ಕಶಸಾ. ೨೮-೬೦೨) ; ಧೂಳೀಧೂಸರ ವರರತ್ನಾಳಿಗಳಂ ಕಂಡ ದೂಸಱಿಂದಂ ಧರಣೀಪಾಳಕಮುನಿಪರ್ ಪಂಚಮಕಾಳದೊಳಣಮಾಗರಲ್ತೆ ಬುದ್ಧಿಪ್ರಾಪ್ತರ್ (ಆದಿಪು. ೧೫-೩೮) ; ಎನ್ನಯ ದೂಸಱಿನೆನ್ನ ಕರ್ಮದಿಂ ಪಗೆವರಿನಕ್ಕಟಾ ನಿಮಗಮಿಾಯಿರ ವಾದುದೆ ಕುಂಭಸಂಭವಾ (ಪಂಪಭಾ. ೧೩-೫೭); ಲೋಕಾನುಗ್ರಹಂಗೆಯ್ವ ದೂಸಱಿನಾಂ ಬಂದುದಯಂಗೆಯ್ದುತ್ತಮಿರಲ್ (ಕಾದಂಬ. ೬೧೧) ; ಪೊಡೆವಡೆ ಪರಸದೆ . . . ಮುಂದೆ ನಿಂದರಂ ಕಾಣದೆ ತಕ್ಕೆಡೆಯೊಳ್ ಕಡೆಗಣಿಸುವ ನೃಪವಿಡಂಬಮಿವು ಲಕ್ಷ್ಮಿ ನಿನ್ನ ದೂಸಱಿನಲ್ತೇ (ಗದಾಯು. ೯-೮) ; ಜಾನಕಿಯ ದೂಸಱಿಂ ಲಂಕಾನಾಥಂ ದಾಶರಥಿಯ ಕೈಯೊಳ್ ಮಡಿಗುಂ (ಪಂರಾಮಾ. ೩-೨೩); ಭಕ್ತನಂ ಭವಿಯೆಂದ ದೂಸಱಿಂದವ್ವುದಿದು (ಮದೇರ. ೪-೧೨೭) ; ಎನಗೆ ನಿಮ್ಮಯ ದೂಸಱಿಂದಾಯ್ತುನಿತು ಸಭೆಯುಲಿ ಮಾನಹಾನಿ (ಕುವ್ಯಾಅ. ೧೧-೬) ; ನಂದಿಸು ನಂದಿಸು ನಿನ್ನಯ ಕರುಣದ ನಂದನನಾಸಱ ಬೇಸಱ ದೂಸಱನೀಸರ ಮೇಲುಱದೆ (ಉದ್ಭದೇ. ೩-೨೮) ; ೨. ಅಪವಾದ; ನಿಂದೆ; ತೆಗಳಿಕೆ: ಹುಲುಮನುಜ ರಜಕನಾಡಿದ ದೂಸಱಂ ನೆನೆದು ಕುಲಪತ್ನಿಯುಂ ಬಿಡುವ ಹದನಾವುದಕಟ (ಜೈಮಿಭಾ. ೧೮-೫೩). ೩. ದಿಕ್ಕು ; ದೆಸೆ : "ದೆಸೆಯೆಂದೆನ್ನಲ್ ದೂಸಱದು" (ಕವಿಶಂ. ೨೩೩) ; ಆ ಸಮಯದಿ ಮೂಡ ಪಡುವಣ ಖಂಡದ ದೂಸಱಿಂದಿಬ್ಬರೆಯ್ತಂದು ಆ ಸೀಮೆ ವಶವಾದುವೆಂದು ತಂದೋಲೆಯ ಭೂಸುದತೀಶಗಿಕ್ಕಿದರು (ಭರತ. ೫೭-೬೪). ೪. ಸ್ಥಿತಿ ; ಇರುವಿಕೆ : ದೂಸಱದೆತ್ತಣಿನಾಯ್ತು (ರಾಮಾಶ್ವ. ೨೦-೧೩). **ದೂಸರ್ :** ೧. "ಕಾರಣಂ = ದೂಸರ್" (ಕಾಶಕ್ಕ. ೨೪೦) ; ಚೆನ್ನಲ್ಲದೆಂದು ಕೆಲರ್ಕೈದಿದರ್ ಬಿದ್ದಿನರ್ ಬಿನ್ನನೆಯ ದೂಸರ್ಗಳೊಂದೊಂದ ನುಡಿದು (ಕಾಲೂರ. ೧೮೦-೪೦೬). **ದೂಸರು :** ೧. ತರುಣೀ ನಿನ್ನಯ ದೂಸರಿನುರುಪುವ ಮದನಾಗ್ನಿಕೀಲದಿಂ ಸೀದುರೆ ಸೀಕರಿಪೋದ ವರುಣನೆನ್ನಂ ಕರುಣದೆ ನೀಂ ವರಿಸಿ ತಂಪಿಸೆಂದೊರೆಯೆಂದಂ (ದಮಸ್ವ. ೩-೧೬೭) ; ಬೀಳೇಳುಗಳಿಗನುವೊ ಗೆಯ್ಮೆಯೋ ದೂಸರೇಂ (ಕಾಲೂರ. ೫೮-೯೪). [ ದೇ.? ತೆಲು. ದೂಸರಿ ]

**ದೂಷಿ**, ದೂಪಿ (ನಾ). [ನಾಟ್ಯ] ನರ್ತನದ ಒಂದು ಭಂಗಿ: ದೂಸಿಯುಂ ವಿಷಮದೂಷಿಯುಂಮೆನಿಸುವಡಹುಗಳನು . . . ತುಳಿಲಿನಿಪ್ಪವು ಲೇಸು ವಡೆಯೆ ತಾಂಡವಮನಾಡುತಿರ್ದಳು (ರೇವಣ. ೩-೪೮). **ದೂಷಿ:** ಲಾಗನು ಲಾಗು ಬೀಸುಗಾಲು ದೂಷಿ ವಿಷಮದೂಷಿ . . . ಮೊದಲಾದವಗಡ ದಡವುಗಳನಳವಡಿಸಿ (ವಿರೂಪಾ. ೮೭ ವ). [ <ಸಂ. ಧೂಸೀ ]

**ದೂಸಿಗ** (ನಾ). ಬಟ್ಟೆಯ ವ್ಯಾಪಾರಿ; ಜವಳಿ ವ್ಯಾಪಾರಿ: "ದೂಸಿಗನೆನಲ್ ಸೀರೆವರದಂಗೆ ನಾಮಂ" (ಕಬ್ಬಿಕ್ಕ. ೩೪); ಬಚ್ಚರ ದೂಸಿಗರ ನಿಯೋಗಿಗಳ ಅಗ್ಗಯಿಲೆಯರಪ್ಪ ಸೂಳೆಯರ ಸಾಮಂತರ ಕಸವರಂಗಳೆಲ್ಲಮಂ ಕಳ್ದು (ವಡ್ಡಾರಾ. ೦೨೩-೪) ; ದೇವಕಾರ್ಯ್ಯಮಂ ದೂಸಿಗ ಕೇತಿಸೆಟ್ಟಿ ಬಿನ್ನವಿಸೆ (ಕಇ. I, ೧೭-೨೭ ; 1055) ; ದೂಸಿಗರಂಗಡಿಯಂ ಪೊಕ್ಕು . . . ವಸ್ತ್ರ ನಿಕರಮನೋಸರಿಸದೆ ಸೂಱೆಗೊಂಡು (ಧರ್ಮಾಮೃ. ೨-೩೩) ; ಒಪ್ಪಿದರಲ್ಲಿ ದೂಸಿಗರ್ದೇಸಿವೆತ್ತು (ಪದ್ಮರಾ. ೮-೬೭) ; ಚೆನ್ನವರದರ್ ದೂಸಿಗರ್ ಮುತ್ತುಮಾಣಿಕದ ಪರದರ್ ವಣಿಗ್ವರರ್ . . . ಜೂಜುಗಾಱರ್ ಮುಖ್ಯರೊದಗಿ ಬರುತಿರ್ದರೇಂ ವಣ್ಣಿಸುವೆನು (ಚಬಸ. ೪೭-೪೧).

**ದೂಸಿಗವರದ** = ಬಟ್ಟೆಯ ವ್ಯಾಪಾರಿ; ಜವಳಿವರ್ತಕ: ಮಿಸುನಿ ಗಚ್ಚಿನ ಬಣ್ಣಸೀರೆಯ ದೂಸಿಗವರದರ ಮಱಗೆಯಿಂ . . . ಕಮ್ಮಾಱರ ಮುಂಗುಡಿಯಿಂ ಪುರಂ ಕಣ್ಗೆಂಬಾದುದು (ರಾಮಾಶ್ವ. ೧೦೩-೦೫).

[ ದೂಸ್ಕ + – ಇಗ ]

**ದೂಸಿಗವಸರ** (ನಾ). ಜವಳಿ ವ್ಯಾಪಾರಿಗಳ ಅಂಗಡಿ ; ಜವಳಿ ಅಂಗಡಿ; ಬಟ್ಟೆ ಅಂಗಡಿ : "ದೂಸಿಗವಸರವೆನಿಪ್ಪುದೇ ಸೀರೆಯ ಪಸರವು" (ಚತುನಿ. ೬೨) ; ತೊಳಗಿದುವು . . . ಪಟ್ಟಾವಳಿಯ ದುಕೂಲದ ಚೀನದ ತಳಿರ್ವಟ್ಟೆಯ ಪಟಿಯವಟಿಯ ದೂಸಿಗವಸರಂ (ಲೀಲಾವ. ೭-೧೯) ; ದಿವ್ಯಾಂಬರಂಗಳಿಂದೆಸೆವುವಲ್ಲಿ ದೂಸಿಗವಸರಂ (ಜಗವಿ. ೯-೧೧೧); ಪವಣಿಸಿ ಷಡ್ವರ್ಗಂಗಳನವನುದ್ಭವಿಸಿದ ವಿರಂಚಿಗಚ್ಚರಿಯಂ ಬೀಱುವ ಬಹುವರ್ಣಂಗಳ ವಸ್ತ್ರ ವಿತಾನವೆನಿಪ್ಪುದೊಪ್ಪಿ ದೂಸಿಗವಸರಂ (ಕುಸುಮಾ. ೨-೧೦೭): ಶೀವಿರ್ಪಶ್ವಾವಳಿಯ ಗಜಾವಳಿಯ ನರಾವಳಿಗಳ ವಿಕ್ರಯದಿಂದಂ ಭಾವಿಸೆ ದೂಸಿಗವಸರಂ ಮೂವರ್ ರಾಯರನೆ ಮಾಱುವಂತೆಸೆದಿರ್ಕುಂ (ಗಿರಿಜ. ೨-೯೪). [ ದೂಸಿಗ + ಪಸರ ]

**ದೂಸಿಗವ್ಯವಹಾರಿ** (ನಾ). ಬಟ್ಟೆಯ ವ್ಯಾಪಾರಿ : ಎರಡು ಸ್ಥಳದ ದೂಸಿಗ ವ್ಯವಹಾರಿಗಳಲುಂ ನಾನಾದೇಶಿ ದೂಸಿಗವ್ಯವಹಾರಿಗಳಲುಂ ಪೊಂಗೆ ಕಾಣಿ ಎರಡು (ಎಕ. VII, ಶಿಕಾರಿ. ೧೧೮-೩೯ ; 1150).
[ ದೂಸಿಗ + ವ್ಯವಹಾರಿ ]

**ದೂಸಿಸು** (ಕ್ರಿ). ದೋಷವನ್ನುಂಟುಮಾಡು ; ಕೆಡಂಕನ್ನುಂಟುಮಾಡು : ಒಂದೆ ಬೆರಲೆನಿತನಿತೆ ನೀಳ್ದೊಂದಳವಿಗಳೂರ್ಧ್ವರೇಖೆ ತೋರ್ಪೊಡಂ ಮಱಿಗಂತೊಂದು ವರಿಸದೊಳೆ ಮುಖರೋಗಂ ದೂಸಿಸೆ ಮರಣಮಕ್ಕುಂ (ಅಶ್ವಶಾ. ೫-೪). [ <ದೂಷಿಸು ]

**ದೂಸು** 'ದೂಸ$_1$' ನೋ.

**ದೂಸೆಯಕ್ಕಿ** (ನಾ). ಅರ್ಧ ಕುಟ್ಟಿದ ಕೊಟ್ಟಣದ ಅಕ್ಕಿ ; ಹೊಟ್ಟಿರುವ ಅಕ್ಕಿ : ಉಂಭಷಡ್ಭಾಗ ಪ್ರದಾನೇನ = ಭತ್ತವಂ ಮಿದಿವಲ್ಲಿ ಪಿಡಿಯಕ್ಕಿಯ [ಪಾಠಾಂ. ಸಿಡಿಯಕ್ಕಿಯ]ನಾಯ್ದುಕೊಳ್ವಲ್ಲಿನಿತು ಭಿ ಕ್ಷೆ ಯಾ ಚ ನೆ ಯ ಭಾಗವಂ ಅಥವಾ ದೂಸೆಯಕ್ಕಿಯಾಜನೆಯ ಭಾಗವಂ (ಪ್ರದಾನೇನ) ಕುಡುವುದಱಿಂದಂ (ನೀತಿವಾ. ೬--೨೬). [ ದೂಸೆ$_0$ + ಅಕ್ಕಿ$_1$ ]

**ದೂಹತಿ** 'ದೂಹತ್ತಿ' ನೋ.

**ದೂಹತ್ತ** 'ದುಂಹತ್ತ' ನೋ.

**ದೂಹತ್ತಿ**, ದೂಹತಿ (ನಾ). ಒಂದು ಬಗೆಯ ಉದ್ದವಾದ ಕತ್ತಿ : ರಾಹುತರು ನಿಲ್ಲದೆ ದೂಹತ್ತಿಯ ಕೊಂಡಾಡುತ್ತೆಲ್ಲರುಮೆಯ್ದೆ ಮುಳಿದು ಮೂವಳಿಸಲ್ಕಲ್ಲಳಿಸದೆ ನಸುನಗುತಂ ನೋಡಿದನಂದು ಲಕ್ಷ್ಮಣಂ ಬಲವ (ಕುಮುರಾ. ೮-೫೩) ; ಇಳಿದು ಗಜವನು ಕೈದುಗಳ ನೆಲಕಿಳುಹಿ ಜೋಧರು ವಾರುವದಿನಿಳಿಗಿಳಿದು ರಾವ್ತರು ಹಾಯ್ಕಿದರು ದೂಹತ್ತಿ ಲೌಡಿಗಳ (ಕುವ್ಯಾಅ. ೧೯-೫೩) ; ತೆತ್ತಿಸಿದವಂಬುರವಣಿಸಿ ದೂಹತ್ತಿ ಹೊ ಳೆ ದ ವು ಸಮರದಲಿ (ಕುವ್ಯಾಗ. ೨-೧೭) ; ಬರಬರೆ ದೂರದಲಿ ದೂಹತ್ತಿಯಲಿ ಕಡಿವಡೆದ ಸೀತೆಯ ಕಂಡನಜಸೂನು (ತೊರರಾ. ೬-೪೦-೪೨). **ದೂಹತಿ** : ೧. ಅವನ ಮಂತ್ರಿಗಳು ಮತವಿದಲ್ಲೆಂದಡ್ಡವಿಸಿ ದೂಹತಿಯ ಹಸ್ತವ ಹಿಡಿದು ರಣನಿಷ್ಕೃತಿಗೆ ರಂಜಕವಾವುದಿನಿತಱೊಳೆಂದರವರಂದು (ತೊರರಾ. ೬-೪೫-೬೨). ೨. "ಎರಡು ಅಲಗುಳ್ಳ ಖಡ್ಗ " (ಪ್ರಭಾ).
[ <ಸಂ. ದ್ವಿಹಸ್ತೀ ]

**ದೂಹಸ್ತಿ** (ನಾ). = ದೂಹತ್ತಿ : ಪದದಾದಿಯ ದೀರ್ಘಕ್ಕೆ – ಅಮರ – ಅವರೆ . . . ದ್ವಿಹಸ್ತಿ – ದೂಹಸ್ತಿ ; ನವಮಿ – ನಾಮಿ (ಶಮದ. ೨೬೭ ಪ್ರಯೋ). [ ☞ ಇದು 'ದೂಹತ್ತಿ' ಎಂಬುದರ ಅಪಲಿಖಿತವಿರಬಹುದು ]

**ದೂಹೆ** 'ದೂವ್ಹೆ' ನೋ.

**ದೂಹೆಗಾಡು** (ನಾ). ಶ್ಮಶಾನ ; ಸುಡಂಗಾಡು : ಕನ್ನವಿಕ್ಕಿದವರನು . . . ಕಡಿಯೆಂದು ಕಳುಹಿದರೆ ಚೆನ್ನಾಗಿ ಮೆಱೆಸುತ್ತ ತಂದವರ ದೂಹೆಗಾಡಿನೊಳು ತಲೆಗಳ ಹೊಡೆಯಲು (ಸಿಂಗಿರಾ. ೨೩-೧೧).
[ ದೂಹೆ (<ದೂವೆ$_1$) + ಕಾಡು$_2$ ]

**ದೂಳ್** 'ದೂಳಿ' ನೋ.

**ದೂಳ** (ನಾ). ಒಂದು ಬಗೆಯ ಮರ : ದೂಳ, ದೇವದಾರಿ, (ಪಬ್ಬ).– ಕಾನಡಾಜಿಲ್ಲೆಯ ಅತ್ಯುನ್ನತವೃಕ್ಷಗಳಲ್ಲಿ ಒಂದು ... ಕಟ್ಟಿಗೆ ಯಾವತ್ತು ಕೆಲಸಕ್ಕೆ ಬರುವುದು (ಕಭಾಗ. ೪೨). [ ? ]

**ದೂಳಕ್ಕರ** (ನಾ). ಬರೆಯುವುದನ್ನು ಕಲಿಯುವಾಗ ಮರಳಿನ ಮೇಲೆ ಬರೆಯುವ ಅಕ್ಷರ: ದೂಳಕ್ಕರ ಗಜತುರಗದೇಱಾಟವು ಬಾಲಕೇಳಿಗಳಾದಿಯಾಗಿ ಮೇಳದೊಳಿಹ ಪ್ರಾಣಸಖ ಪ್ರಹಸಿತನೊಳು ಪೇಱದ ತನ್ನ ದುಸ್ಥಿತಿಯಂ (ಅಂಜನ. ೫-೯೭); ಕನಕದಾಸನ ಮಡನೆ ಹರಿ ಮುನ್ನ ಪೇಳಿಸಿದ ನಾನು ದೂಳಕ್ಕರಮನರಿಯೆನೆನ್ನಿಂದ ಪೇಳಿಸುವ ಹರಿಹರರ ಮಹಿಮೆಯನು ಯಾರ್ಬಲ್ಲರಭವಾ (ನವಮೋ. ೦-೯). [ ದೂಳು (<ದೂಳಿ) + ಅಕ್ಕರ$_1$ ]

**ದೂಳಕ್ಷರ** (ನಾ). = ದೂಳಕ್ಕರ : (ಪ). [ ದೂಳು (<ದೂಳಿ) +ಅಕ್ಷರ ]

**ದೂಳಾಟ**, ಧೂಳಾಟ (ನಾ). ಮಣ್ಣಿನಲ್ಲಿ ಆಡುವ ಆಟ ; ಧೂಳಿನಲ್ಲಿ ಆಡುವುದು ; ಮಣ್ಣಾಟ : ಕೊಳನ ಹೊಂದೆರೆಯತ್ತಿ ಮಿಂದೇಳೆಲೆಯ ವಾಳೆಯ ಕರ್ಪೂರದ ದೂ[ಪಾಠಾಂ. ಧೂ]ಳಾಟಗಳನಾಡಿ . . . ನಂದನದೊಳಗೆ ಸುಳಿದಾಡುವುದು ಬಾಲಕನಂದದೊಂದೆಲರು (ಸಾಳ್ವಭಾ. ೨-೫) ; ಓರಗೆಮಕ್ಕಳೊಡನೆ ದೂಳಾಟ ಮೊದಲಾದ ಲೀಲೆಗಳ ಪರಿವಿಡಿಯಿಂದೆಸೆವ ಕುಮಾರರ್ಗೆ ಮುನಿಪತಿ ಚೌಲಕರ್ಮಂಗಳಂ ಮಾಡಿಸಿ (ಜೈಮಿಭಾ. ೧೯-೫೦). **ಧೂಳಾಟ** : ಭೀಷ್ಮನ ತೋಳ ತೊಟ್ಟಿಲಿನೊಳಗೆ ಬೆಳೆದವು ಸಲಹಿದನು ಧೂಳಾಟ ಮೊದಲಾಗಿ (ಕುವ್ಯಾಭೀ. ೭-೨೮); ಸೊಕ್ಕಿದ ರದನಿಗಳ ಧೂಳಾಟ ವೊಪ್ಪಿದವವರ ಯುದ್ಧದಲಿ (ಸಾಳ್ವಭಾ. ೨೨-೭೦) ; ತೊದಲುನುಡಿಗಳಂಬೆಗಾಲು ದಟ್ಟಡಿ ಮುಂದುವೊದವಿದ ಧೂಳಾಟದಿಂದ ಪದುಳದೆ ಬಾಲಲೀಲೆಯ ತೋಱಿ ಸಕಲರ್ಗೆ ಚದುರಕುಮಾರರೊಪ್ಪಿದರು (ಕಂನವಿ. ೪-೮೦) ; ಇಬ್ಬರೂ ಬಾಲ್ಯದಲ್ಲಿ ಒಟ್ಟಿಗೆ ಧೂಳಾಟವಾಡಿದ ಜೊತೆಗಾರರು (ಕಾವ್ಯಸ. ೬೫). [ ದೂಳು (<ಧೂಳಿ) + ಆಟ ]

**ದೂಳಿ**, ದೂಳ್, ದೂಳು, ಧೂಳ್, ಧೂಳು (ನಾ). ೧. ಮಣ್ಣಿನ ಹುಡಿ ; ಪಾಂಸು ; ರಜ : "ದೂಳಿ – ರಜಸ್, ಪಾಂಸು" (ನಾಚಿರಾ. ೪) ; ಬಟ್ಟೆಯ ದೂಳಿ ದೂವೆ ಮೊದಲಾದುದು (ಕಾದಂಪೂ. ೧೯೭) ; ದೂಳಿಯ ಪಚ್ಚೆಯಂತೆ . . . ಬೂದಿಯ ಬೊಟ್ಟಿನಂತೆ ಮಾಗೆಯ ಪೊತ್ತಿನಂತೆ ತೋಱಿ ಪಾ ಱ ವಾ ಯು ಷ್ಯ ಮಂ (ಧರ್ಮಾಮೃ. ೯-೨೩ ಅಡಿಟಿ) : ದೂಳಿಯೊಳೆಬಲ್ಪ ಮೇಲುಂದಿನ ದುಗುಲದ ಸೆಱಂಗಿನೊಳಂ (ವರ್ಧಪು. ೯-೬೦ ವ) ; ಒತ್ತರಿಸಿ ಫಲುಗುಣನ ಸೂನುವಂ ಭಾನುವಂ ಮುತ್ತಿದುದಂ ಚಾತುರಂಗಾಳಿಯುಂ ದೂ[ಪಾಠಾಂ. ಧೂ]ಳಿಯುಂ . . . ಘೋರತರ ಸಂಗರದೊಳು (ಜೈಮಿಭಾ. ೨೨-೩೭) ; ದೂಳಿಯಿಂದ ಮಾಳಿಗೆ ಆದೀತೇ ? (ಗಾದೆ). ೨. ಪುಡಿ ; ಚೂರ್ಣ ; ಹಿಟ್ಟು : ಮನೋಭೂಸುರಮಪ್ಪ ಕಪ್ಪುರದ ದೂ[ಪಾಠಾಂ. ಧೂ]ಳಿಯನಲ್ಲದೆ ದೂ[ಪಾಠಾಂ. ಧೂ]ಳಿಯಂ ನಿಜಾವಾಸದೊಳೆಂತುಟೆಂದಱಿಯನಿಂತುಟು ಪುಣ್ಯ ಮ ಗ ಣ್ಮ ಮಾ ತ ನಾ (ಸುಕುಮಾ. ೧೧-೧೧೭). ೩. ಹೂವಿನಲ್ಲಿರುವ ಪುಡಿ; ಪರಾಗ : ಸೊಂದಿಗೋಡಗಂಗಳ ಕಾಲಾಟದಿನಲ್ಲೊಕ್ಕಲರಿನುದಿರ್ದ ದೂಳಿಗಳನಮರ್ಚಿಯುಂ (ಕಬ್ಬಿಕಾ. ೫೩ ವ); ತಿಳಿಗೊಳಂಗಳೊಳಲರ್ದ ಪೊಚ್ಚ ಪೊಂದಾವರೆಗಳ ದೂ[ಪಾಠಾಂ. ಧೂ]ಳಿ ತನಿಗಂಪನುಂಡು ಮಿಂಡೆದ್ದ ಭೃಂಗಾಳಿಗಳ ಬಳಗಂ ಪರಿಯಲು (ಜೈಮಿಭಾ. ೩-೮). **ದೂಳ್** : ೧. ಮಸಗಿದುರಿ ಪೊಗೆ ಸಿಡಿಲ್ಮಿಂಚು ಕತ್ತಲೆ ಗಾಳಿ ಮುಗಿಲೊಡ್ಡು ದೂಳ್ಗಳಿಂದೆ ದೆಸೆಗೆಡಿಸುತ . . . ಮಸಗಿದು (ಜೈಮಿಭಾ. ೧೬-೩೭) ; ಲಕ್ಷ್ಮಣಂ . . . ಎಂದುಮಗಲದಣ್ಣನ ಕಡೆಗೆ ದೂ ಳ್ಮಾ ಯ ದೊ ಳ್ಪ ತ್ತಿ ಪೊರಳ್ವ ಸೀತೆಯ ಕಡೆಗೆ ತೂಗುಯ್ಯಲೆಪೊಲಾದನು (ಜೈಮಿಭಾ. ೧೯-೨೯) ; ದೊರೆಗಳ ದೊರೆ ಚಕ್ರಿಯೆನಿಸಿ ದರ್ಪವುಪನು ಮೆರೆದನು : ಈಗಳದನು ದುಡುಂಕುಹೆಮ್ಮೆ

ದೂಳ್ಗೊದೆದುದೊ ಅರಿಯೆನು (ಪಾರಸಿ. ೯-೧೯೭). ದೂಳು: ೧. ಶರ್ಕರೆಯ ಬುದ್ಧಿಯಲಿ ದೂಳನು ತಿಂಬಬುಧರಂತೆ ದುಃಖದಲಿವನು ಪಡೆಯದೇ ಸುಖಸೌಖ್ಯವಿಲ್ಲದೆ ಬಳಲುವುದು ತಾವತ್ಕಧಿಕಬುದ್ಧಿಯಲಿ (ನಿಘಾಗ. ೧೧-೫-೪); ಗಾಳಿಯಿಂದ ದೂಳು ಹಾರಿದರೆ ಕೋಳೀ ಹೊಟ್ಟೆ ತುಂಬೀತೆ? (ಗಾದ); ದೂಳಲ್ಲಿ ಬಿದ್ದವ ಮೂಳನಿಂದ ಕಡೆ (ಗಾದ). ೩. "ಪರಾಗ, ಸುಮನೋರಜ = ಹೂವಿನ ದೂಳು" (ನಾಚಿರಾ. ೬); "ಪರಾಗಃ, ಸುಮನೋರಜಃ -೨ ಹೂವ್ವಿನೊಳಗಿರುವ ದೂ[ಪಾಠಾಂ. ಧೂ]ಳು, ಪೂದೂಳಿ, ಅಲರ ಪುಡಿ" (ಸಿದ್ಧಾಂತಿ. ೦೦೦). ಧೂಳ್: ೧. ಅಜುನೀರ್ವಳ್ಳಂ ನೆಟಿಲ್ಗುಂದಿದ ತರುನಿಚಯಂ ಧೂಳಡರ್ದುರ್ಬಿ ನಿಚ್ಚಂ ಪಜಿಗೆಟ್ಟಪ್ಪಾಸ ...ಸರ್ವೋರ್ವಿಯೊಳ್ ಕೂಡೆ ನೋಡಲ್ ಬಜಿನಾಗಲ್ (ದಶಕು. ೩-೧೩). ಧೂಳು: ೧. ಸೃಷ್ಟಿಯಲಿ ಅಣುವಿನಣುವಿನ ವ್ಯೆಯು ಧೂಳಿನಲೊಂದು ಕಣ ನೀನು (ಕಗದ್ಯ. ೧೪೦); ಎರಡೂ ಕೈಗಳನ್ನು ಬಡಿದು ಧೂಳನ್ನು ಜಾಡಿಸಿ (ಕಮ್ಮಟಿ. ೨). ೨. "ಹುಡಿ = ಧೂಳು" (ಕಾಶಕ್ಕ. ೩೭).

ದೂಳ ಅಡರಿಸು = (ಉಕ) ತರಾಟೆಗೆ ತೆಗೆದುಕೊಳ್ಳು: ನಾನು ಚೆನ್ನಾಗಿ ದೂಳ ಅಡರಿಸಿದೆ. ಕೊನೆಗೆ ನನ್ನ ಸೂಚನೆ ಮಾನ್ಯವಾಯಿತು (ಪ್ರೇಮಾಕ್ರ. ೨೬೭). ಧೂಳಸಂಜೆ = ಸಾಯಂಕಾಲದ ಮಬ್ಬುಗತ್ತಲೆ: ಭೂತ ಪಿಶಾಚಿಗಳು . . . ಅಡ್ಡಾಡುವ ಕಾಲವೆಂದರೆ ಧೂಳ ಸಂಜೆ ಅಥವಾ ದೊಡ್ಡ ನಸುಕು (ಕನ್ನಜಾ. ೨೦). ಧೂಳಾಗು = ೧. ಹೊಲಸಾಗು; ಕೊಳೆಯಾಗು: ಮಣ್ಣಿನಲ್ಲಿ ಕೆಲಸಮಾಡಿ ಆತನ ಬಟ್ಟೆಯೆಲ್ಲಾ ಧೂಳಾಗಿದೆ (ರೂಢಿ). ೨. ಮಣ್ಣುಪಾಲಾಗು; ನಾಶವಾಗು; ಹಾಳಾಗು: ದ್ರೋಹಿಗಳು ಧೂಳಾಯ್ತು, ಬಳಿಕಿನೊಳೀ ಹದನು ಬಂದಿದೆ ಜಗತ್ರಯ ರೂಹುಗೆಡುತಿದೆ (ಕುವ್ಯಾಕ. ೭-೪೫). ದೂಳು ಧುಮುಸ = ಮಣ್ಣು, ಕಸ ಇತ್ಯಾದಿ: ಇದು ಧೂಳುಧುಮುಸವನ್ನದೆ ಅಂಗಳ ನಡುವೆ ಮಣ್ಣಲ್ಲಿ ಕುಳಿತು ಕುಟ್ಟುವುದು (ಕನ್ನಜಾ. ೩೭). [<ಸಂ. ಧೂಲಿ]

ದೂಳಿಕಡವ 'ದೂಳಿಗಡವ' ನೋ.

ದೂಳಿಗಡವ, ದೂಳಿಕಡವ, ಧೂಳಿಕಡವ, ಧೂಳಿಗಡವ (ನಾ). ಒಂದು ಬಗೆಯ ಸಸ್ಯ: "ರೇಣುಕದಂಬಕಃ – ದೂಳಿಗಡವ" (ಓಷಧಿ. ೧೪೦). ದೂಳಿಕಡವ: "ಮಕರಂದವಾಸಃ – ದೂಳಿಕಡವ, ಕರ್ಕಟಕ, ಹಿಪ್ಪಲಿ, ಉತ್ತರಣೆ" (ಓಷಧಿ. ೧೨೩). ಧೂಳಿಕಡವ: "ಬಲಭದ್ರಸಂಜ್ಞಕಃ – ಧೂಳಿಕಡವ" (ಓಷಧಿ. ೧೦೭). ಧೂಳಿಗಡವ: "ಕ್ರಮುಕಪ್ರಸೂನಃ – ಧೂಳಿಗಡವ" (ಓಷಧಿ. ೨೮). [ದೂಳಿ + ಕಡವ₁ (<ಕಡಂಬ)]

ದೂಳಿಗಟ್ಟಲೆ (ನಾ). ಧೂಳಿನಿಂದ ಉಂಟಾದ ಮಬ್ಬು, – ಕತ್ತಲೆ: ಆಗಳಾಗಸಕ್ಕೆ ನೆಗೆದು ಪರ್ವಿದ ದೂಳಿಗಟ್ಟಲೆಯೊಳ್ . . . ಕಾದಿ (ಕಬ್ಬಿಗಕಾ. ೨೬೭). [ದೂಳಿ + ಕತ್ತಲೆ]

ದೂಳಿಗೋಂಟೆ, ದೂಳಿಗೋಟೆ, ದೂಳ್ಗೋಂಟೆ, ಧೂಳ್ಗೋಂಟೆ (ನಾ). ೧. ನಾಶಕ್ಕೆ ಒಳಗಾದ ಕೋಟೆ, – ದುರ್ಗ: ಚಲಂ ನೆಲೆಗಿಡೆ, ಬಲಂ ಬಯಲ್ವುಗೆ, ಕೊಂಚೆಗೋಂಟೆ ದೂಳಿಗೋಂಟೆಯಪ್ಪುದುಂ (ರಾಮಾಶ್ವ. ೯೭-೨೦). ದೂಳಿಗೋಟೆ: ೨. ವಶಪಡಿಸಿಕೊಂಡ ಕೋಟೆ; ಅಧೀನಕ್ಕೊಳಗಾದ ದುರ್ಗ: ಇಕ್ಕೇರಿಯ ಭೂಪ . . . ಪೊಕ್ಕ ಮಲೆಯು ನಾಕ್ಷಣ ದೂಳಿಗೋಟೆಯು ಗಕ್ಕನೆ ಕೊಂಡರೇವೇಳ್ವೆ (ಕಂನವಿ. ೧೧-೫). ದೂಳ್ಗೋಂಟೆ. ಧೂಳ್ಗೋಂಟೆ:

ದೂಳಿಗೋಂಟೆಯ ಕೊಳ್, ದೂಳಿಗೋಟೆಯ ಕೊಳ್, ದೂಳಿಗೋಟೆಯಂ ಕೊಳ್, ದೂಳ್ಗೋಂಟೆಯಂ ಕೊಳ್, ಧೂಳ್ಗೋಟೆಯಂ ಕೊಳ್ = ಕೋಟೆಯನ್ನು ನಿರ್ನಾಮಂ ಮಾಡು; ದುರ್ಗವನ್ನು ಧೂಳು ಧೂಳಾಗುವಂತೆ ಮಾಡು: ಇಕ್ಕಿ ನಿಚ್ಚಣಿಗೆಯಂ ದೂಳಿಗೋಂಟೆಯ ಕೊಳ್ಳಬೇಕೆಂಬ ಪಡಿಯಜರ ಕಲಕಲಂ ಕರಮೊಪ್ಪಿತು (ಸಮ್ಯಕಾ. ೮-೩೦); ಸುಯೋಧನಾದಿಗಳೂರನುರವಣಿಸಿ ದೂ[ಪಾಠಾಂ. ಧೂ]ಳಿಗೋಟೆಯ ಕೊಂಡಿವರು ರಾಜಾಲಯಕೆ ಬರೆ (ಕುವ್ಯಾಅ. ೭-೬೪); ಉರವಣಿಸಿ ದೂ[ಪಾಠಾಂ. ಧೂ]ಳಿಗೋಟೆಯು ಕೊಂಡ ರಘುವೀರನೆಂದು (ಜೈಮಿಭಾ. ೧೮-೭); ತ್ರಿಪುರಮಂ ಪರಿದ್ಯೆದಿ ಮುತ್ತಿ ದೂಳ್ಗೋಂಟೆಯಂ ಕೊಂಬುದೆನೆ ಹರುಷದಿಂ ತಂತಮ್ಮ ಚಾತುರ್ಬಲಂವೆರಸಿ ನಡೆದರತಿಸಂಭ್ರಮದೊಳು (ಜಬಪು. ೪೨-೨೩); ಧೂಳ್ಗೋಂಟೆಯಂ ಕೊಂಡು ನೆಲಸರಿತಮಂ ಮಾಡುತಿರಲು (ಜಬಪು. ೪೮-೮). 'ಧೂಳೀಗೋಂಟೆ' ಪರಾ.

[ದೂಳಿ + ಕೋಂಟೆ]

ದೂಳಿಗೋಟೆ 'ದೂಳಿಗೋಂಟೆ' ನೋ.

ದೂಳಿಚಿತ್ರ (ನಾ). ಬಣ್ಣಬಣ್ಣದ ಪುಡಿಗಳಿಂದ ರಚಿಸಿದ ಚಿತ್ರ, – ರಂಗವಲ್ಲಿ: ಮಳಯಜದ ಮೊಲೆಯ ಕುಂಕುಮದಳಕದ ಕತ್ತುರಿಯ ಬಣ್ಣವಣ್ಣಿಗೆ ಕೊಳದೊಳ್ತಳರ್ದಿರೆ ಜಳರುಹಮುಖಿಯರ್ ಜಳಕೇಳಿಯ ನೆವದಿ ದೂಳಿಚಿತ್ರಂ ಬರೆದರ್ (ಯಕೋಚ. ೪-೮). 'ಧೂಳೀಚಿತ್ರ' ಪರಾ.

[ದೂಳಿ + ಚಿತ್ರ]

ದೂಳಿಡು (ಕ್ರಿ). ದೂಳನ್ನು ಎಬ್ಬಿಸು, – ಹರಡು, – ಎರಚು: ಜಡಿವ ಕಲ್ಗುಂಡು ದೂಳಿಡುವ ಬಿಜುಗಾಳಿ ಕಂಗೆಡಿಪ ಕತ್ತಲೆ (ಜೈಮಿಭಾ. ೪-೨೩); ಊರ್ಧ್ವಮುಖವಾಗಿ ಸೂಸುವ ರಜದ ಸೋನೆಯೆನೆ ದೂಳಿಡೆ . . . ಗುಹೆ ದೋಣಿ ಮೊರಡಿ ಪಳ್ಳ ಕೊಳ್ಳ ಜನ ಸರಿ ಜಲುಗು ಗಹನ ಗಹ್ವರದ ವಿಂಧ್ಯಾದ್ರಿಯಂ ಫಲಗುಣನ ಸೇನೆ ತುಳಿದಸಿಯುರೆದುದು (ಜೈಮಿಭಾ. ೧೧-೮); ಪಡಲಿಡು, ಪೊಡಮಡು . . . ದೂಳಿಡು, ಮಾಳಿಡು (ಶಬ್ದಾನು. ೪೮೮ ಪ್ರಯೋ). [ದೂಳು (<ದೂಳಿ) + ಇಡು₁]

ದೂಳಿತ (ನಾ). ಭಸ್ಮ; ವಿಭೂತಿ: ಆ ಮಹಾತ್ಮರು . . . ತಿಮ್ಮಣ್ಣ ನಾಯಕನಿಗೆ ದೆಸೆಗಟ್ಟಿನ ದೂಳಿತ, ಸಿದ್ಧಮೂಲಿಕೆ, ಕೈಉಂಬು ಇವುಗಳನ್ನು ಕೊಟ್ಟು . . . ಹೊರಟುಹೋದರಂತೆ (ಚಿತ್ರಪಾ. ೭).

[<ಸಂ. ಧೂಲಿತ]

ದೂಳಿದರ್ಶನ (ನಾ). ಮೊದಲಸಲದ ನೋಟ, – ದರ್ಶನ: ದೊಡ್ಡ ದರಬಾರು ಮಾಡಿ ದೂಳಿದರ್ಶನದಲ್ಲೇ ಅಂದರೆ ಮೊದಲನೇ ಸರ್ತಿ ಕಾಣುವುದರಲ್ಲೇ ಮಂತ್ರಿಬುದ್ಧಿಯನ್ನರಿಯಬೇಕು (ಕಥಾಮಂ. IV, ೩೨): P ಪ್ರಯಾಣದಲ್ಲಿ ಮೈಮೇಲೆ ಬಿದ್ದ ಧೂಳಂಸಹಿತವಾಗಿ ಎಂದರೆ ಬಂದ ಕೂಡಲೆ ಮಾಡುವ ದೇವರ ಅಥವಾ ಹಿರಿಯರ ದರ್ಶನ.

[ದೂಳಿ + ದರ್ಶನ]

ದೂಳಿಸು (ಕ್ರಿ). ೧. ಹುಡಿ ಹರಡು, – ವ್ಯಾಪಿಸು: ಚಾರುತರಮಖಿ ಮೆರೆದರಮಳಾಗಾರಮಂಟಪವಳಯದಲಿ ಕರ್ಪೂರ ದೂ[ಪಾಠಾಂ. ಧೂ]ಳಿಸಿತು (ತೊರರಾ. ೧-೭-೧೩). ೨. ಲೇಪಿಸು; ಪೂಸು: ಪಳಿಮಂಜಳಿಣ್ಣೆಯಂ ದೊಡ್ಡಂಗೆ ದೂಳಿಸಿದರೆಳೆವೆಣ್ಗಳೊಸಗೆಯಿಂ (ಕಾಲೂರ. ೧೪೭-೩೦). [ದೂಳಿ + – ಇಸು₃]

ದೂಳಿಸೆಜ್ಜರ (ನಾ). ಧೂಳಾಟವಾಡುವ ಜಾಗ; ಕ್ರೀಡಾಸ್ಥಾನ: ಪದೆಪಿಂ ಮೇಳಿಸೆ ದೂ[ಪಾಠಾಂ. ಧೂ]ಳಿಸೆಜ್ಜರವಿದೆಂದಾಶಾಗಜಂ ಭೀತಿಯೊಂದಿದು ನೂಱೆಕ್ಕೊಂದೆನಿಸಿರ್ದ ಕೇತುವೆರಸೀಗಳ್ ರಾಹು ಮೇಲೆತ್ತಿ ಬಂದುದೆನುತ್ತುಂ ರವಿಮಂಡಳಂ ನಡುಗೆ . . . ಪರ್ಬಿತ್ತುರ್ಬಿ ಸೇನಾರಜಂ (ಮಲ್ಲಿಪು. ೮-೧೪೩); ಆ ಸಮಯದೊಳ್ ದೂಳಿಸೆಜ್ಜರಕ್ಕುಜ್ಜುಗಿಸಿ ಕಾಡಾನೆಗಳ ಕೋಡ ಮೊನೆಯಿನೀಡಿಱುವ ಗಿರಿಯ ದರಿಯ ಗೈರಿಕಪರಾಗಮಂ ಸಂಧ್ಯಾರಾಗವಿಸಷದಿನಾಗಸಕ್ಕೆ ಪಸರಿಸಿಯುಂ (ಚಂದ್ರಪು. ೮-೪ ವ); ಕರ್ಪೂರದೊಪ್ಪುವ ಜಗಲಿ ದೂ[ಪಾಠಾಂ. ಧೂ]ಳಿಸೆಜ್ಜರಮೆನಿಸೆ (ಪಾರ್ಶ್ವಪು. ೯-೩೦ ವ). 'ಧೂಳಿಸೆಜ್ಜರ' ಪರಾ. [ದೂಳಿ + ಸೆಜ್ಜರ (<ಸೆಜ್ಜಾರ)]

ದೂಳು 'ದೂಳಿ' ನೋ.

**ದೂಳುಗೆದಱು** (ಕ್ರಿ). ೧. ಪುಡಿಪುಡಿಯಾಗಿ ಬೀಳು ; ಧೂಳಾಗಿ ಹೋಗು: ಸೊಗಸಿನ ಗೋಪುರಂಗಳು ಕಾಲುಗುರದಾಗಿನಲಿ ಸಿಡಿಲೊಡೆದದ್ರಿಯಂದದಲಿ ದೂಳು[ಪಾಠಾಂ. ದೂಳಿ, ಧೂಳಿ]ಗೆದಱಿದವು (ತೊರರಾ. ೬-೧೦-೨೭). ೨. ಧೂಳು ತುಂಬಿರು : ಆಲಿ ಮರಳಿದ ಮುಸುಡ ಮುಸುಕಿನ ದೂಳುಗೆದಱಿದ ತಲೆಯ ತೇರಿನ ಮೇಲೆ ತಂದಿಳುಹಿದನು (ತೊರರಾ. ೬-೪೫-೧೦). [ ದೂಳು (<ದೂಳಿ) + ಕೆದಱು₁ (<ಕೆದಱ್₁) ]

**ದೂಳುಪಾವಡ** (ನಾ). [ವೀಶೈ] ಸಜ್ಜೆಯಲ್ಲಿ ಈಶ್ವರಲಿಂಗದ ಮೇಲೆ ಧೂಳು ಬೀಳದಂತೆ ಮುಚ್ಚುವ ಬಟ್ಟೆ, - ವಸ್ತ್ರ : ದೂಳುಪಾವಡ ಕಂಠಪಾವಡ ಸರ್ವಾಂಗಪಾವಡ ಇಂತೀ ತ್ರಿವಿಧಶೀಲ ನಡೆಸುವಲ್ಲಿ ದೂಳು ಪಾವಡವಾದಲ್ಲಿ ಆತ ನೀರನು ಹಾಯಬಹುದು (ಏಲೇಶ್ವ. ೩೪) : ಕಂಠ ಪಾವಡ ಧೂಳ[ದೂಳು]ಪಾವಡ ಸರ್ವಾಂಗಪಾವಡ ಉಂಟೆಂಬ ಮಹಾ ಪಾತಕರಿಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ (ಚನ್ನವ. ಕ. ೨೨೪-೪೯೭). ಧೂಳ ಪಾವಡದವರು = ಲಿಂಗಾಯತ ಜಾತಿಯಲ್ಲಿ ಒಂದು ಪಂಗಡ : ಲಿಂಗಾಯತರಲ್ಲಿ ಒಟ್ಟಿಗೆ ೩೧ ಒಳಭೇದಗಳು. ಧೂಳಪಾವಡದವರು, ಶೀಲವಂತರು . . . ಇವರೇ ಮೇಲಾದ ಲಿಂಗಾಯತರು (ಕಥಾಗಿ. ೯೧). [ ದೂಳು (<ದೂಳಿ) + ಪಾವಡ₁ ]

**ದೂಳುವಡೆ** (ಕ್ರಿ). ಪುಡಿಯಾಗು ; ಧೂಳಾಗು : "ಗುಂಡಿತ, ರೂಪಿತ = ದೂಳುವಡೆದುದು" (ನಾಚಿರಾ. ೬). [ ದೂಳು (<ದೂಳಿ) + ಪಡೆ₁ ]

**ದೂಳಿಯ** (ನಾ). ಕೈಗೆ ತೊಡುವ ಮುತ್ತಿನ ಆಭರಣ : ಹೇಮಶೃಂಖಳೆ ಮಣಿಮಾಳೆ ದೂಳಿ[ಪಾಠಾಂ. ವೆ]ಯದ ಕಂಕಣಮಿಟ್ಟ . . . ಕೀರ್ತಿಪತಾಕೆ ತನ್ನೊಳೊಳ್ಪಳವಡೆ ಬಂದನಂದು ಗಜಭಟ್ಟನೆನಿಪ್ಪಂ (ಲೀಲಾವ. ೯-೫೫). [ ? ಇದು 'ಜೂಳಿಯ' ಎಂಬುದರ ಅಪಲಿಖಿತವಿರಬಹುದೆ ? ]

**ದೂಳ್ಗೊಂಟೆ** 'ದೂಳಿಗೋಂಟೆ' ನೋ.

**ದೂಳ್ವಡಿಸು** (ಕ್ರಿ). ಧೂಳಾಗುವಂತೆ ಮಾಡು ; ಧೂಳು ಏಳುವಂತೆ ಮಾಡು; ಪುಡಿಪುಡಿ ಮಾಡು: ನಡೆದತ್ತಾ ರಾಜರಾಜೇಂದ್ರನ ಬಲಮದು . . . ವಲ್ಗದಶ್ವೋತ್ಕರಖುರಹತಿಯಿಂ ಬೆಟ್ಟುವೆಟ್ಟೆಲ್ಲಮಂ ದೂಳ್ವಡಿಸುತ್ತುಂ (ಶಾಂತೀಶ್ವ. ೧೫-೧೦೭). [ ದೂಳ್ (<ದೂಳಿ) + ಪಡಿಸು ]

**ದೂಱ್** 'ದೂಱು₁' ನೋ.

**ದೂಱಿಡು** (ಕ್ರಿ). ೧. ಅಪವಾದ ಹೊರಿಸು ; ತಪ್ಪು ಹೊರಿಸು : ಪಱಿವನ್ಯಾಯುವ ನೋಡದನ್ಯರೊಳೆ ದೂಱಿಟ್ಟೆಲ್ಲರಂ ಬಾಧಿಪಾ ತಳವಾಱಂ ಬೆಳವಾಱನೈ (ಸೋಮೇಶ. ೭೭). ೨. ವರದಿ ಮಾಡು ; ಹೇಳು : ದೊರೆಯಲ್ಲಿಗೈದಿದನೊಬ್ಬ ದೂಱಿಡಲು (ಕೌಶಿರಾ. ೩೨-೨೭). [ ದೂಱು₂ + ಇಡು₁ ]

**ದೂಱಿಸು,** ದೂರಿಸು₁ (ಕ್ರಿ). ೧. ನಿಂದಿಸು ; ತೆಗಳು ; ಟೀಕಿಸು : ಸರಸತಿಯಂ ಮನೋಮುದದೆ ತಾಳ್ದಿದನೆನ್ನನವಜ್ಞೆಗೆಯ್ದನಾನಿರೆನವಳ್ಕೆಳ್ಚಿ ಸವತಿಯೊಳ್ಪುದುವಾಳ್ವುದು ಕಷ್ಟಮೆಂದು ನಿಷ್ಠುರವಚನಂಗಳಂ ನುಡಿದು ದಿಕ್ಕರಿಯಂ ಪರಿದೇಱಿ ಕೀರ್ತಿ ತಾಂ ಪುರುಡಿಸಿ ದೂಱಿಪಳ್ ವರತಪೋನಿಧಿಯಂ ನಯಸೇನಸೂರಿಯಂ (ಎಇ. XVI, ೬೧-೬೦ ; 1081) ; (ಶಾಪಮಂ.೧೪೫ ನೋ); ದೂಱಿಸದಿರಬೇಕು ದೂಱಿಗಳುಕಬೇಕು (ಕುರಾಸಾಂ. ೨೪-೨೦). ೨. ಚಿಂತಿಸು ; ಕಳವಳಪಡು ; ವ್ಯಥೆಪಡು ; ದುಃಖಿಸು : "ದೂಱಿಪುದೆಂದು ಚಿಂತಿಪುದು" (ಕಶಸಾ.-೦೨-೨೨೮) ; ಆಕೆಯ ದೂಱಿಸಿ ಸುಯ್ದು ಸುಯ್ಕೊಳಚ್ಚಳಿಸಿದುದಾ ಸರೋಜದಳನೇತ್ರೆಯ ನಲ್ಮೆಯೊಳತ್ತ ಕಣ್ಣ ನೀರ್ಗಳ ಪೊನಲಿಂದೆ ಕರ್ಚಿ ಕಳೆದುಂತಿರೆ ಪೋದುದು ಕೋಪಮೋಪನಾ (ಆದಿಪು. ೦೨-೦೩) ; ನಿಮ್ಮನೆ ನೆನೆದು ದೂಱಿಪಂ ರಘುವೀರಂ (ಪಂರಾಮಾ. ೧೦-೬೪) ; ನೀರದವಿಟಂಗೆ ವಿದ್ಯುನ್ನಾರಿಯ ವಿರಹಂ ಪೊಣರ್ಚೆ ಬಡವಾಗಿ ಕರಂ ದೂಱಿಸಿ ಬೆಳರ್ತ ತೆಱದಿಂ ಶಾರದಜಳಧರದ ತುಱುಗಲೊಗೆದುವು ನಭದೊಳ್ (ಲೀಲಾವ. ೫-೨೪) ; ಕಱುವಂ ದೂಱಿಸಿ ಮೆಲ್ಕನೊಕ್ಕು ತುಱುವಂ ತಾಯ್ಗಾಡಿನೊಳ್ಪಿಟ್ಟು ಮುಂದುಱುವಾರಿಯ್ತುರ್ವೆಳಗಂದಿಗಳ್ (ಲೀಲಾವ. ೫-೯೭) ; ಮನದೊಳ್ ಪಿರಿದುಂ ದೂಱಿಸಲದೇಕೆ ಬಿದಿ ಕೈವಾರಿಸಿದೊಡೆ ತೀರದಿರ್ಪುದಾವುದುಮುಂಟೇ (ಚಂದ್ರಪ್ರ. ೩-೭೭) ; ಮರುಳು ಮಗನೇನಾದನೋ ಎನುತ್ತ ಬಳವಳಿದು ದೂಱಿಸುತ್ತಿದಿರಾಗಿ ಬರುತ ಮಕ್ಕಳ ನಡುವೆ ಬಪ್ಪ ಸಿದ್ಧೇಶ್ವರನನತಿದೂರದೊಳು ಕಂಡು (ಸಿದ್ಧರಾ. ೨-೦೮) : ಬಸಂತಂ ತಳರ್ವನೆಯೊಳ್ ನಲ್ಲನಂ ನೆನೆದು ದೂಱಿಸುತಿರ್ಪ್ಪ ಗಾರ್ತಿಗಾ ತೆಱನೆಲ್ಲಮಂ ಬಿನ್ನಪಂಗೆಯ್ದು (ಕಬ್ಬಿಗಕಾ. ೩೨೧);ದೂರದೊಳಿರ್ದ ಕಾಮಿನಿಯುನಾಸೆವಡುತ್ತತಿತಾಪದೇಳ್ಗೆಯಿಂ ದೂಱಿಸಿ ಸುಯ್ಕಲೇಕೆ ವಿರಹ ವ್ಯಥೆಯಿಂದಂ (ನಳಚಂ. ೬೨) ; ಮೊದಲೆಳೆಯರ್ಕಳಿಲ್ಲದುಱೆ ದೂಱಿಸಿ ಮದ್ದುರುವಿತ್ತ ಮಂತ್ರದಿಂ ಪದಱಿನೊಳೀತನಂ ಪಡೆದು . . . ಯೌವನೋದಯವಿಳಾಸಮನೀಕ್ಷಿಪ ಕಾಲಕಿಂತು ಬಂದುದೆ ಮೃತಿಯೆಂದು ಚಿಂತಿಸದಿರ್ (ರಾಜಶೇ. ೧೪-೩೯). ೩. ಚಿಂತೆಗೆ ಒಳಗುಮಾಡು ; ವ್ಯಥೆಗೆ ಒಳಪಡಿಸು: ಸ್ವೈರದಿನಾಂ ಪೋಗುತ್ತಿರೆ ತಾರಾಪಥದೊಳ್ ಪಳಂಚಿದುದು ಕಿವಿಯಂ ಹಾಹಾರವಮುಱಿಯೆಣ್ಣೆಯವೋಲ್ ದೂಱಿಸೆ ಬಗೆಬಗೆಯೊಳೊಗೆಯೆ ಕಾರುಣ್ಯರಸಂ (ಪಂರಾಮಾ. ೧೦-೫೭); ತನ್ನ ತಾನೇ ದೂಱಿಸಿ ದೊಡಾನೇನ ಮಾಡುವೆನೆಂದನಲ್ಲಮನು (ಪ್ರಭುಲೀ. ೭-೫೦). **ದೂರಿಸು₁** : ೧. ಮನಮಂ ದುರ್ವ್ಯಸನಕ್ಕೆ ತಂದು . . . ಲೋಕದಪವಾದಕ್ಕಾವಗಂ ಬನ್ದು ದುರ್ಮ್ಮನದಿಂ ದೂರಿಸುತಿರ್ಪ್ಪ ತಾಪಸ ನಿಕೃಷ್ಟಜ್ಞಾನಶಕ್ತಿ ಬ್ರತೀಂದ್ರನನೇವ್ವೋಲ್ವರೆ (ಶಾಇಇ. XI-ii, ೦೫೨-೩೩ ; 1103). [ ದೂಱು₂ + -ಇಸು₃ ]

**ದೂಱು₁,** ದೂರ್, ದೂರು₁ (ಕ್ರಿ). ೧. ನಿಂದಿಸು ; ತೆಗಳು ; ಬಯ್ಯು; ಟೀಕಿಸು : ಇತ್ತ ಸರ್ವದಯಿತೆ ಗರ್ಭಮಂ ತಾಳೆ ಸಾಗರದತ್ತಂ ಕಂಡು ದುಶ್ಚರಿತೆಯೆಂದು ದೂಱೆ (ಜಾವುಂಪು. ೮೧); ಪೆಱರವಗುಣಮಂ ಕಂಡೊಡೆ ಯಱಿಯಟ್ಟಿ ತಗುಳ್ದು ದೂಱವೇಡ (ಧರ್ಮಾಮೃ. ೫-೦೦೨) : ಲಿಂಗವಾರೋಗಣೆಯ ಮಾಡಿವನೆಂಬರು ತಾವುಂಡು ನಿಮ್ಮ ದೂಱುವರು (ಅವಚಂ. ೩೭-೧೬೨) ; ಕಸವಮಂತ್ರಿಗಳು . . . ದೂಱಿದರು ಬಸವಣದಂಡನಾಯಕನ (ಐಸಪು. ೧೦-೪) ; ದೂಱುವವರಾವಲ್ಲವೆಂದನು ಭಾನುಸುತ ನಗುತ (ಕುವ್ಯಾಕ. ೦-೨೪); ಸರಸರಿಸಿ ಬಳಿಕಾ ಮುನೀಂದ್ರರು ಸರಸಿಜಾಕ್ಷನ ಸಂದರುಶನಕೆ ಬರಲು ಬಳಿಯಲಿ ಬಂದು ದೂಱಿದರವರು ಮುನಿವರರ (ತೊರರಾ. ೦-೮-೦೯) ; ಸಾರಿ ದೂಱಿ ಹೇಳುತೇನೆ ಕೆಟ್ಟಿ ಕಂಡ್ಯ ಬಡ್ಡಿ ಮನವೆ (ಕನಕ. ೩೩ ಪಲ್ಲವಿ). ೨. ಚಾಡಿಹೇಳು : "ದೂಱು-ಪೈಶುನ್ಯೇ (ದೂಱು ಹೇಳು)" (ಶಮದ್ರ) ; ಮಂದರೋದ್ಧರ ಧರಣಿಪಾಲಕನೆಂದು ನಿಂದಿಹ ತಾಗಿ ಧರಣಿಯನಿಂದು ಕದ್ದರೆ ಕಮಲಸಂಭವ ದೂಱುವನು ಹರಿಗೆ (ಸುಭಪ. ೭-೨೮); ಮೆಲ್ಲಮೆಲ್ಲನೆ ಬೆಮರುಣ್ಮೆ ಜಾಣ್ಮೆಯೊಳವಂ ಮಱಸುತ್ತಿರೆ ದೂಱಿದತ್ತು ಕಂಪನಕೃತಕಂಕಣಸ್ವನಮುಮಾಸ್ಯವಿಕಾಸಮುಮಾತ್ತರಾಗಮಂ (ರಾಜಶೇ. ೮-೭೪). ೩. ಅಪವಾದ ಹೊರಿಸು; ಅನ್ಯಾಯವಾದ ಆರೋಪಣೆಯನ್ನು ಮಾಡು : ನೆರೆಯಳ್ ತಾನೀಯಳಿಮ್ಮಂ ಸವತಿತನಕೆ ಶೀತಾಂಶುವಂ ರೋಹಿಣೀಸೌಂದರಿಯೆಂದೆಟ್ಟಿಂದು ದೂಱಲ್ಕೆಱಿಗಿದಮುಳತಾರಾಳಿಯೋ (ಕುಸುಮಾ. ೦೩-೭೭) ; ದನುಜನೊಯ್ದಾಸತಿಯ ರಾಘವ ಮನದ ಮೋಹದಿ ಕೂಡಿಕೊಂಡನುಯೆನುತ ಲೋಕವು ದೂಱುಗೆಂದಾನಿನಿತು ಕಾಡಿದೆನು (ಕೌಶಿರಾ. ೪೩-೫೨). ೪. ಮೊರೆಹೊಗು ; ತೋಡಿಕೊಂಡು ಸಹಾಯವನ್ನು ಕೋರು : ಎನಗಾದದೊಂದು ಪರಿಭವಮನಾರ್ಗೆ ದೂಱಿದಪೆನಾರ್ಗೆ ಪೇಟ್ದಪೆಂ (ಕಾದಂಉ. ೨೯೮) : ಕೂರ್ಪವರಿಂ ಪೇಟ್ವುದು ಬುದ್ಧಿಯನೆಂದು ದೂಱುತಿರ್ಪರ್ ಪೆಂಡಿರ್ (ಸಮುಪ. ೫-೯೮). ೫. ಸುದ್ದಿ ಮುಟ್ಟಿಸು ; ಹೇಳು ; ನಿವೇದಿಸು ;

ಅರಿಕೆಮಾಡು: ಬಂದನಾ ಗುರು ಮತ್ತೆ ಗಂಗೆಯ ಮಿಂದು ಬಳಿಕಲ್ಲೊಬ್ಬ ಸೂತಜಗೆಂದನೆಲವೋ ನೀನು ಹಸ್ತಿನಪುರಕೆ ದೂಱುವುದು ಇಂದು ಭಾರ ದ್ವಾಜನನು ತಾನೊಂದು ನೆಗಳ್ಚಿತೆಂದು ನುಂಗಿತದೆಂದು (ಕಂಭಪ. ೧೮-೩೩) ; ಗಂಡಗೆ ದೂಱಬೇಕೆನುತಡಱಿದಳು ಸೋಪಾನಪಂಕ್ತಿಗಳ (ತೊರ ರಾ. ೩-೮-೩೬). ೬. ಅಪಶಕುನ ನುಡಿ : ದೂಱಿತು ಬಲದ ಭಾಗದೆ ಪಲ್ಲಿ ಮುಂಗಟ್ಟೆ ಪಾಱಿತು ವಾಸುಗಿವಕ್ಕಿ (ಮೋಹತ. ೬-೨೫). ದೂರ್ : ೧. ಲಿಂಗ ಚಂದಯರೆಲ್ಲ ಮಾಚಯ್ಯರಲ್ಲಿ ದೂರ್ದರು ಶರಣು ಶರಣಾರ್ಥಿ (ಮುಡಿಥ. ೧೬). ೨. ಗುರುವಿನೆಡೆಗೈದಿ ನೀಂ ದೂರ್ದುದೇಂ (ವಂಕಾರಾ. ೫-೨೦-೨೯). ದೂರು₁: ೧. ಅವನನ್ನು ದೂರುವ ಹಾಗಿಲ್ಲ (ಕಾವ್ಯಸ. ೮೧); ನಾನೇನೂ ಅವನನ್ನು ದೂರಲಿಲ್ಲ (ಕಾಲಮು. ೧೯೦) ; ಬಲಾತ್ಕರಿಸಿ ನಿನ್ನನ್ನು ತಂದೆನೆಂದು ದೂರುತ್ತಾರೆ (ದೌಲತ್. ೩೦೦). ೨. ಈ ರೋಹಿನಿಂದಮಾನಿರ್ದ ಡೆಯು ರಕ್ಕಸರು ದೂರದಿರರಸುರಪತಿ ಕೇಳ್ದರೆ ಕುತೂಹಲಂ ತೋರುತೆನ್ನಂ ಪಿಡಿವರು (ವಂಕಾರಾ. ೫-೨-೧೧) : ಪೊಂದೊಡಿಗೆಯಂ ತೋರಲೆಂದು . . . ಕಾಮಗೆ ದೂರಲೆಂದು ಕಾಮುಕಿಯರ್ಕೆತಂದು ಬೀದಿಯ ನಡುವೆ ನಿಂದು ಬೆರಗಾಗಿರ್ದರು (ತುರಂಗ. ೭-೨೩). ೪. ಕಾಡ ಕಾಪಿನವರ್ಗೆ ದೂರಿದೊಡೆ ಬಾಳ್ವೆಯೇಂ (ಕಾಲೂರ. ೪೯-೭೨).

ದೂಱಿಕೊಳ್ಳು = ನಿಂದಿಸು ; ಅವಹೇಳನ ಮಾಡು ; ಬಯ್ಯು : ಕೊಟ್ಟಡೆ ಕೊಂಡಾಡಿ ಕೊಡದಿರ್ದರೆ ದೂಱಿಕೊಂಡು ಹೋಹಾತ ಜಂಗಮವಲ್ಲ (ಅವಜಂ. ೨೨೩-೧೧೦೯).

[ ದೇ.॥ ತಮಿ. ತೂಱು, ತೂಱ್ಱು ; ಮಲ. ತೂಱು ; ತುಳು. ದೂರು ; ತೆಲು. ದೂಱು ]

**ದೂಱು₂, ದೂರು₃, ದೂಱ್** (ನಾ). ೧. ನಿಂದೆ ; ತೆಗಳಿಕೆ ; ಟೀಕೆ : ದೂಱಿದು ತಮ್ಮಯ ಚಿತ್ತಕ್ಕೇಱಿದ ದಿವಸದೊಳೆ ಪೊಲ್ಲಕೆಯ್ದಂ (ಅರ್ಥನೀ. ೫-೪೪) ; ಪ್ರಿಯಾನನಮನೀಕ್ಷಿಸಲುದ್ಯತೆಯಾಗಿ ತಾನೆ ಲಜ್ಜಿಸಿ ತಲೆವಾಗಿ ಕಂಡು ಮಣಿಕುಟ್ಟಿಮದೊಳ್ ನೆಱೆ ನೋಡಿ ಮತ್ತೆ ಮಾನಸದೊಳ ಗಿಟ್ಟೊಡಂ ನವಸುಖಾನುಭವಕ್ಕರೆಮುಚ್ಚಿ ಕಣ್ಗಳಂ ಪಸರಿಪ ಹೋಮ ಧೂಮತತಿಗೆಂದು ಶಶಿಪ್ರಭೆ ದೂಱನೇಱಿಪಳ್ (ಚಂದ್ರಪು. ೬-೭೬); ಬಸವನ ದೂಱಿಗೊಳಗ ದನೆಯೆನುತ ತಲೆದೋಱವತ್ತಲೆ ಸರಿವುತಿರೆ (ಬಸಪು. ೯-೩೦) : ಅನ್ಯಥಾ ದೂಱು ಪುಟ್ಟಿತು (ಶಬ್ದಾನು. ೮೨ ವ್ಯಾಖ್ಯಾ). ೨. ಕೆಟ್ಟ ಹೆಸರು ; ಅಪವಾದ : "ಗಾರಣಂ–ದೂಱು" (ಶಮದ. ಪರಿ. ೨) ; ಅವರನಾ ಮಾಟ್ಕಿಯೊಳೆ ನಡೆಯಲೀಯದೆ ಮಾಡಿ ಕಿಡಿಸಿದೊಡೆ ನಿನಗೆ ಪಿರಿದುಂ ದೂಱಕ್ಕುಂ (ಆದಿಪು. ೧೫-೨೫ ವ) ; ಕಾಮಾಂಧಂ ಕೀಚಕನಾಟಿಸಿ ಗಂಧರ್ವರಿನಱಿದನೆನಗೆ ದೂಱಪ್ಪನೆಗಂ (ಪಂಪಭಾ. ೮-೭೯) ; ಪರಪುರುಷಾ ಕುಳಕೆಯಿನನ್ವಯಕ್ಕೆ ದೂಱಂ ತಂದಳ್ (ಶಾಂತಿಪು. ೩-೮೩) ; ಸುರಭಿ ಪ್ರಾಲೇಯಂತೋಯಂಗಳಂ ಯುಂವಪಾಂಥರ್ಗೆಱೆವಲ್ಲಿ ತಮ್ಮ ಲಲಿತಾಂ ಗೋಪಾಂಗಶೃಂಗಾರಗೌರವಮಂ ಬೀಱುವರೆಂಬ ದೂಱನೆಸಗುತ್ತಿರ್ಪರ್ ಪ್ರಪಾಕಾಂತೆಯರ್ (ಪುಷ್ಪಪು. ೨-೨೨) ; ದೂಱು ಮಱವೊಳ್ಮಡಿ ವಂಚನೆ ಯೆಂಬುಪಾಯಮಂ ಪಾಱಿಸಿ ಧರ್ಮಮಂ ನಿಱಿಸಿ ಪಾಲಿಸವೇಟ್ಪುದು ದೇಶಮಂ ನೃಪಂ (ಸೂಕ್ತಿಸು. ೧೬-೮) ; ತನ್ನಿಂದ ತೋಱಿತು ದೂಱು ದುರ್ಭಯ ಸಂದಿಸದಲೇ ತಾಯನೆನುತಳವಳಿದನಾ ಹನುಮ (ತೊರರಾ. ೫-೮-೮೭). ೩. ಮೊರೆ; ಇತರರಲ್ಲಿ ತೋಡಿಕೊಳ್ಳುವಿಕೆ; ಅಹವಾಲು; ರಕ್ಷಣೆಗಾಗಿ ಮಾಡಿಕೊಳ್ಳುವ ಬೇಡಿಕೆ : ದೇವರಿಗೆ ದೂಱ್ಕೆದಲಂ ದೊಱಲಿದಳು ಲಲಿತಾಂಗಿ (ಕುಮ್ಯಾಸ. ೧೫-೨೮) ; ಅಖಿಳ ಸುರಾಳಿಗಳ ದೂಱಿನಲಿ ಲಕ್ಷ್ಮೀಲೋಲ ನಿನ್ನುದರದಲಿ ಜನಿಸುವನು (ತೊರರಾ. ೧-೫-೭). ೪. ಸುದ್ದಿ ; ಸಮಾಚಾರ ; ವರದಿ. 'ದೂಱುಂಗಾಱ' ಪರಾ. ೫. ನಿರೂಪ ; ಅಪ್ಪಣೆ; ಸೂಚನೆ : ಬೇಱೆ ಬೇಱವನೀಶಂಗೆ ಪಡಿಹಾಱವನಂ ಕಳುಹಿದರು ಕೃಷ್ಣನ ದೂಱು ಬರಲಳೆವಡಿಸಿದರು ಸಂಗ್ರಾಮಸಾಧನವ (ಕುಮ್ಯಾಉ. ೧೧-೧೧). ೬. ಚಿಂತೆ ; ವ್ಯಸನ ; ಕಾಳಜಿ : ಬೇಱೆ ಮತವೇ ನೆಮಗೆ ಲೋಕದ ದೂಱು ನಿಮ್ಮದು [ಪಾಠಾಂ. ಬೇಱೆ ಮತವೆಮಗೇನು ಬೊಪ್ಪನ ಚಾರಿ ನಿಮ್ಮದು ] ನೀವು ಬೊಪ್ಪನ ನೂಱುಮಡಿಯೆಮಗೊಳ್ಳಿ ದರು ಬೇಱಿನ್ನು ಹಿತರುಂಟೆ (ಕುಮ್ಯಾಆ. ೮-೭೫) ; ಬಱಿದೆ ಕಾಷದಿರೇಳು ಮನದಲಿ ಮಱೆದೆವಾಗಳೆ ಕೌರವನು ಮುಂದಱಿಯದವಗಡಿಸಿದನು ಹೋಗಲಿ ನಿಮ್ಮ ದೂಱೇಕೆ (ಕುಮ್ಯಾಉ. ೧೧-೮). ೭. ವೇದನೆ ; ಬಾಧೆ : ಆಡಾಗಿ ಸಾಯರೆ ದೂಱಿಂಗೆಡೆಯಾಗಿ ಬೇಯರೆ ಪರಸ್ತ್ರೀಗಾಸೆ ಗೆಯ್ದಿರ್ಪವರ್ (ಧರ್ಮಾಮ್ಮ. ೧೩-೧೩೨) ; ಮೊದಲೆನ್ನ ಹಸಿವಿನ ದೂಱ ನೀ ದಿಟ ನಿಲಿಸಬಲ್ಲೊಡೆ ಮಾಱುಮಾತುಗಳೇನು ಕಾರಣ (ಪ್ರಭುಲೀ. ೨೩-೧೨). ದೂರು₃ : ೩. ಪುರಂದರನ ಸಮೀಪವನ್ನೈದಿ ದೂರುಗಳ ಪೇಳಿ ಕೊಳಲೋಸುಗ ಅಮರಾವತೀಪುರಲಕ್ಷ್ಮಿಯೆ ಬರುವಳೊ ಎಂಬಂತೆ (ಸೌಗಂಧಿ. ೪೮೦-೨೦) ; ಕಷ್ಟದಲ್ಲಿರುವವರ ದೂರನ್ನು ನ್ಯಾಯವಾಗಿ ವಕಾಲತ್ತು ವಹಿಸಿ ನ್ಯಾಯಾಲಯದಲ್ಲಿ ವಾದಿಸುವ ನ್ಯಾಯವಾದಿಗಳಿಗೇ ವಕೀಲರು ಎಂದು ಹೆಸರು (ಪ್ರತಾಪ. ೯೨) ; ವಿವಾದದಲ್ಲಿ ಅಥವಾ ದೂರಿನಲ್ಲಿ ನ್ಯಾಯನಿರ್ಣಯ ಮಾಡುವುದಕ್ಕೆ . . . ಅವಕಾಶವನ್ನು ಕಲ್ಪಿಸ ಬಹುದು (ಭಾಧಾನ. ೧೪೮) : ದೂರು ನನ್ನ ಹತ್ತಿರವೂ ಬಂತು (ರೂಪಸಂ. ೧೩) ; ದೊರೆಯ ತನಕ ದೂರು, ಹೊಳೆಯ ತನಕ ಓಟ (ಗಾದೆ). ೮. ಚಾಡಿ : ಇತರರ ಮೇಲೆ ದೂರನ್ನು ಹೇಳುವುದೇ ಅವನ ಸ್ವಭಾವ (ರೂಢಿ). ದೂಱ್ : ೨. ದನುಜಾರಾತಿ ಸ್ಯಮಂತರತ್ನವ ನೃಪಂ ಗೀಯಲ್ಕೆ ದೂಱ್ ಪೋದುದೇ (ಸೋಮೇಶ. ೮೩). ೯. (?): ಪೊಡವಿಪತಿ ಗೊರವೆನೆನೆ ಬೇಟ್ಪಡೆಯದುವದೆಕರಿಸಿ ಕಬ್ಬಿಗದೂರ್ಱನೆಯುಂ ಹಡುವಸು ಮಱಸೆಟ್ಟಸುಗೆಮ್ಮಡಿಯೊಳಮಾರ್ಗೆಂದು ನುಡಿವ ಪಟಗನ್ನಡಮಂ (ಕವಿರಾ. ೧-೪೯).

ದೂರು ಹೇಳಿಕೊಳ್ಳು = ಮೊರೆಯಿಡು : ಬಿನ್ನವಿಸಿಕೊಳ್ಳು : ಮಲ್ಲವ್ವನು ಆ ಊರ ದೊರೆಯ ಬಳಿಗೆ ಹೋಗಿ ದೂರು ಹೇಳಿಕೊಂಡಳು (ನೀತಿಚಿಂ. IX, ೩೦). ದೂರು ಹೇಳು= ೧. (ತನಗಾದ ತೊಂದರೆಯನ್ನು ಕುರಿತು) ಬಿನ್ನವಿಸು ; ಮೊರೆಯಿಡು : ಮೃಗಗಳ ಬಾಧೆಗೆ ಸೈರಿಸ ಲಾರದೆ ಬಂದು ಧೊರೆಯಾದ ಸುಚರಿತ್ರರಾಯನಿಗೆ ದೂರು ಹೇಳಲಾಗಿ (ಸೌಗಂಧಿ. ೨೪-೪). ೨. ಚಾಡಿ ಹೇಳು : ಅಪಾದನೆಮಾಡು : ತಂಬಟೆ ಹೋಗಿ ಭೇರಿಗೆ ದೂರು ಹೇಳಿದ ಹಾಗೆ (ಗಾದೆ). ದೂರು ಹೊರಿಸು = ನಿಷ್ಕಾರಣವಾಗಿ ಆರೋಪಿಸು: ನನ್ನ ತಂಗಿಯ ಮೇಲೆ ದೂರು ಹೊರಿಸುವುದು ನನ್ನ ವೃತ್ತಿಯೆ? (ವಾತ್ಸಲ್ಯ. ೧೧೮). ದೂಱು ತರು, ದೂರು ತರು = ೧. ಅಪವಾದ ಬರುವಂತೆ ಮಾಡು ; ಕೆಟ್ಟ ಹೆಸರು ತರು: ಹೆತ್ತಮನೆಗೆ ದೂರುತರ ಬೇಡವೆಂದು ಹೆಣ್ಣುಮಕ್ಕಳಿಗೆ ಬುದ್ಧಿವಾದ ಹೇಳುವುದು ಸಂಪ್ರದಾಯ (ರೂಢಿ). ೨. ಚಾಡಿ ಹೇಳು : ಕುಂದು ನಿಂದೆ ಬಂದರೆ ದೂಱು ತಂದು ಕೊಡುವರು ಲಕ್ಷ್ಮೀರಮಣ (ಪುರಂದ. ೪-೯-೨). ದೂಱು ಮಾಡು, ದೂರು ಮಾಡು = ಅಪವಾದವನ್ನು ಹೊರಿಸು ; ಆರೋಪಣೆ ಮಾಡು: ದೂಱುಮಾಡುವರೇನೆ ರಂಗಯ್ಯನ ದೂಱುಮಾಡುವರೇನೆ (ಪುರಂದ. ೧-೯೪ ಪಲ್ಲವಿ); ಬ್ರಹ್ಮಾನಂದನೂ ಅವಳು ರೋಹಿಣಿಯನ್ನು ಊರು ತುಂಬ ದೂರುಮಾಡಿರುವುದಾಗಿ ಬರೆದನು (ಬಂಕಿಮ. ೭೦). ದೂಱು ಮುಟ್ಟು = ಅಪವಾದ ಬರು ; ಆರೋಪಕ್ಕೆ ಗುರಿಯಾಗು : ಮೊಱೆಯಿಟ್ಟೆ ಕಾಯದಿರೆ ದೂಱು ಮುಟ್ಟುವುದು ಶ್ರೀ ಲಕ್ಷ್ಮೀರಮಣ (ಪುರಂದ. ೪-೯-೧). ದೂಱು ಹೊಱು, ದೂರು ಹೊರು = ೧. ನಿಂದೆ ಬರು; ತೆಗಳಿಕೆ ಅಂಟಿಕೊಳ್ಳು: ಕೆಡೆದು ದನುಜರು ಕೇಣವಿಲ್ಲದೆ ತೊಡಗಿದಾಹವದೊಳಗೆ ಕೊಂದವ ಕೊಡನ ಮಗನೋ ದೂಱು

ಹೊತ್ತುದು ಬಱಿದೆ ಹಗೆಗಳಿಗೆ (ಕುವ್ಯಾದ್ರೌ. ೧೩-೩೩). ೨. ಅಪವಾದಕ್ಕೆ ಈಡಾಗು; ಆರೋಪಕ್ಕೆ ಪಕ್ಕಾಗು: ದೂರು ಹೊರೋಕಿಂತ ಮಾರಿ ಹೊರೋದುತ್ತಮ (ಗಾದೆ).

[ <ದೂಱು$_1$./ತಮಿ. ತೂಱು ; ಮಲ. ತುಳು. ದೂರು ; ಕೊಡ. ದೂರೀ ; ತೆಲು. ದೂಱು ]

**ದೂಱುಕಾಱ** 'ದೂಱ ಗಾಱ' ನೋ.

**ದೂಱುಗ,** ದೂರುಗ (ನಾ). ೧. ವರ್ತಮಾನ ಒಯ್ಯುವವನು ; ವರದಿ ಒಪ್ಪಿಸುವವನು ; ದೂತ ; ಸೇವಕ : ಪರಾತ್ಪರವಸ್ತು ನಸುನಗುತ ತೋಱಿದನು ಬಳಿಕುಮೆಗೆ ರಾವಣನ ದೂಱುಗರ ನೋಡಿವರನೆನೆ ಹೊರೆ ಯೇಱಿ ಹೊಂಪುಳಿಯೋದಳುಮೆ ಮಹಿಮೆಗೆ ಮಧುದ್ವಿಷನ (ತೊರರಾ. ೪-೯-೩೩). **ದೂರುಗ :** ೨. ಅಪವಾದ ಹೊರಿಸುವವನು ; ಆರೋಪ ಮಾಡುವವನು : ಅದು ಇಲ್ಲದಿದ್ದರೆ ವ್ಯಕ್ತಿಯಲ್ಲಿ ಉಡಾಳತನ ಬೇರೂರಿದೆ ಎಂದು ದೂರುಗರಿಗೆ ಅವಕಾಶ ಸಿಕ್ಕಂತಾಗುವುದು (ಗೋಯಾತ್ರ. ೩೩).

[ ದೂಱು$_2$ + – ಗ$_2$ ]

**ದೂಱುಗಣ್** (ನಾ). ದೈನ್ಯವನ್ನು ಸೂಚಿಸುವ ಕಣ್ಣು ; ಮೊರೆಯಿಡುವ ಕಣ್ಣು : ಜಾಱುದುಬ್ಬಿನ ಹೊತ್ತ ದುಗುಡದ ಮೋಱಿಗಳ ಮೋನದ ನಿಹಾರದ ದೂಱುಗಂಗಳ ದೇವನಿಕರವ ಕಂಡು ಕರುಣದಲಿ . . . ಶಿವ ತೋಱಿ ನುಡಿದನು ಪಾಶುಪತ್ಯದ ಸಾರಸಂಗತಿಯ (ಕುವ್ಯಾಕ. ೬-೨೫).

[ ದೂಱು$_2$ + ಕಣ್ ]

**ದೂಱುಗಾಱ,** ದೂಱುಕಾಱ (ನಾ). ೧. ಸಮಾಚಾರವನ್ನು ತಿಳಿಸುವವನು ; ದೂತ : ಜವನ ದೂಱು[ಪಾಠಾಂ. ದೂದು]ಗಾಱರ ಜಂಗುಳಿ ...ಕೊಡಲಿಯ ಕೂರ್ಪಾಳ ಪರುಠವಣೆಯ ಸಡಗರದ ದಟವುಟದಿಂ ಬಂದು ಮುತ್ತಿ ಮುತ್ತಿ ಅಱಗುಲಿ ಜೀವಾತ್ಮನಂ ಸೆಱೆವಿಡಿದತ್ತು (ರಾಮಾಶ್ವ. ೭೯-೨೦). **ದೂಱುಕಾಱ:** ೨. ಮೊರೆಯಿಡುವವನು : ನಗರ ಮೂಱಱ ದೂಱುಕಾಱರ ದುಗುಡವನು ಪರಿಹರಿಸಿ ಕರುಣಾಳುಗಳರಸ ಶಿವ ಸಂತವಿಟ್ಟನು ಸುರಕದಂಬಕವ (ಕುವ್ಯಾಕ. ೮ ಸೂಚನೆ) ; ಕೇಳಿದನು ಕಡು ದೂಱುಕಾಱರ ನಾಲಿಗೆಯ ರಚಿತೋಕ್ತಿಯನು ಕರುಣಾಳುಗಳ ಬಲ್ಲಹನು ನಿದ್ರಾಯೋಗಮುದ್ರೆಯಲಿ (ತೊರರಾ. ೦-೮-೫೪).

[ ದೂಱು$_2$ + – ಕಾಱ ]

**ದೂಱುಗೇಳ್** (ಕ್ರಿ). ನಿಂದೆಯನ್ನು ಕೇಳು ; ನಿಂದೆಗೆ ಕಿವಿಗೊಡು : ದೂಸಕರ ದೂಱುಗೇಳ್ದುಂ ಕೊಲ್ಲುಂ ಪೇಸುವನಲ್ಲಂ ಸಮುದ್ರವಿಜಯಂ (ಅರ್ಧನೇ. ೫-೦೪). [ ದೂಱು$_2$ + ಕೇಳ್ ]

**ದೃಕ್ಕು** (ನಾ). ೧. ಕಣ್ಣು ; ನೇತ್ರ : "ದೃಕ್ಕೆಂಬುದು ಕಣ್ಣೆನಲ್ಕಕ್ಕು" (ಶಬ್ದಿಕೈ. ೬೩) ; ವಿಭವಕ್ಕೆ ಬಾಹ್ಯದಲ್ಲಿ ಮುಟ್ಟಿ ನೋಡಿಹೆನೆಂದಡೆ ಚಿತ್ತ ಶುದ್ಧನಲ್ಲದ ಕಾರಣ ದೃಕ್ಕಿಂಗೆ ತೋಱಿ ಸರ್ವಾಂಗದಲ್ಲಿ ಲಕ್ಷ್ಯವಾಗದೆಂಬುದಕ್ಕೆ ಸೂಚನೆ (ಮೋಳಿಮಾ. ೯೮-೩೮೬) ; ಲಿಂಗದೃಷ್ಟಿ ಪರಿಪೂರ್ಣವಾದಲ್ಲಿ ದೃಕ್ಕಿಂಗೆ ತೋಱುವುದೆಲ್ಲವೂ ಲಿಂಗಮಯವಾಗಿ (ಮಹದೇವ. ೨೪೭-೬೭) : ಭಾವದ ದೃಕ್ಕಿನಿಂದ ನವಲಿಂಗಂಗಳ ನೋಡಿ ಪೂಜಿಸಿ (ಅಖಂಡೇ. ೨೩೧-೮೩). ೨. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ. [ ಸಂ. ದೃಶ್ ]

**ದೃಕ್ಕುಬೊಂಬೆ** (ನಾ). ಕಣ್ಣಿನ ಪಾಪೆ ; ಕಣ್ಣುಗೊಂಬೆ : ಇಂತೀ ಉಭಯ ಬಿನ್ನವಾದಲ್ಲಿ ಎನ್ನ ಮಱವೆಯೇ ನಿನ್ನ ಕೇಡು ನಿನ್ನ ಮಲ ಎನ್ನ ಕೇಡು ಅದು ದೃಕ್ಕುಬೊಂಬೆಯಂತೆ ನಿಶ್ಚಯವಾದಲ್ಲಿ ನೀನೇ ನಿಃಕಳಂಕ ಮಲ್ಲಿಕಾರ್ಜುನಾ (ಮೋಳಿಮಾ. ೩೬-೧೪೯). [ ದೃಕ್ಕು + ಬೊಂಬೆ ]

**ದೃಕ್ಕುಸ್ಥಿತಿ** (ನಾ). [ಯೋಗ] ರಾಜಯೋಗದ ಹದಿನೈದು ಬಗೆಯ ಯೋಗಾಂಗಗಳಾದ ಯಮ, ನಿಯಮ, ತ್ಯಾಗ, ಮೌನ, ದೇಶ, ಕಾಲ, ಆಸನ, ಮೂಲಾಬಂಧ, ದೇಹಸಾಮ್ಯ, ದೃಕ್ಕುಸ್ಥಿತಿ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣೆ, ಧ್ಯಾನ ಮತ್ತು ಸಮಾಧಿ ಎಂಬವುಗಳಲ್ಲಿ ಹತ್ತನೆಯದು : ದೃಕ್ಕು ದೃಶ್ಯವು ನಶ್ವ ಮೂಱನು ದೃಷ್ಟಿಸಿಯೆ ನೋಡ್ಪಾವವಸ್ತುವು ದೃಷ್ಟದಿಂ ಅದು ತಾನೆಯೆಂದೇ ಅದುವೆ ತಾನಾಗಿ ದೃಷ್ಟಿಸಿಯೆ ತಾ ನೋಡುತಿಹುದೇ ಶಿಷ್ಟ ದೃಕ್ಕುಸ್ಥಿತಿಯಿದೆಂದು ಯಥೇಷ್ಟದಿಂ ಯೋಗಿಗಳಂ ಹೊಗಳ್ವರು ದೃಕ್ಕುಸ್ಥಿತಿಯೆಂದು (ಜ್ಞಾನಸಿಂ. ೧೭-೨೮). [ ದೃಕ್ಕು + ಸ್ಥಿತಿ ]

**ದೃಕ್ಕೋಣ** (ನಾ). ನೋಡುವ ರೀತಿ ; ದೃಷ್ಟಿಕೋನ : ಕೇವಲ ಕರ್ಮಾತ ಭಾವದಿಂದ, ಪಾಪ ಪುಣ್ಯಗಳ ದೃಕ್ಕೋಣದಿಂದ ನೋಡಿದರೂ ಅರ್ಜುನನು ಯಾರಿಗಾಗಿ ಎಂದರೆ ಯಾವ ಶತ್ರುಗಳಿಗಾಗಿ ಅಳಬಾರದೋ ಅಂಥವರಿಗಾಗಿ ಅಳುತ್ತಿದ್ದಾನೆ (ಭಾರದ. ೧೦೩). [ ಸಂ.

**ದೃಕ್ಕ್ರಿಯಾತ್ಮಕ** (ನಾ). [ಯೋಗ] ದರ್ಶನ ಮತ್ತು ಕರ್ಮ ಇವೆರಡನ್ನೂ ಕೂಡಿಕೊಂಡಿರುವುದು: ಜ್ಞಾನಯೋಗಿಯಾದವನು ಕರ್ಮಯೋಗಿಯೂ ಆಗಬೇಕು ; ಏಕೆಂದರೆ ಯೋಗ ದೃಕ್ಕ್ರಿಯಾತ್ಮಕವಾದದ್ದು (ಭಾರದ. ೦೦೫). [ ಸಂ. ]

**ದೃಕ್ಛ್ರುತಿ** (ನಾ). ಕಣ್ಣೇ ಕಿವಿಯಾಗಿರುವ ಪ್ರಾಣಿ ; ಹಾವು ; ಸರ್ಪ : "ವಿಷಧರಃ, ದಂದಶೂಕಃ . . . ದೃಕ್ಛ್ರುತಿಃ, ಭುಜಂಗಮಃ – ಈ ೨೫ ಪಾವಿನ ಪೆಸರ್" (ಹಲಾಯು. ೧೦೫-೧೮). [ ಸಂ. ]

**ದೃಕ್ಪಥ** (ನಾ). = ದೃಗುಪಥ : ಭರತಗೆ ರಾಜ್ಯಸಿರಿಯನಿತ್ತಾದೊಡಂ ತಪ್ಪದಿಂದೆನ್ನ ದೃಕ್ಪಥವನಗಲದೆ ಸುಖದೊಳಿಪ್ಪುದುಚಿತವು (ಮಂಕಾರಾ. ೨-೯-೩೨). [ ಸಂ. ]

**ದೃಕ್ಪರಿಧಿ** (ನಾ). ನೋಟದ ಮೇರೆ ; ದೃಷ್ಟಿಯ ಎಲ್ಲೆ : ಎತ್ತಣಿನೊ ದೃಕ್ಪರಿಧಿಯಾಚೆಯಿಂದಬನಂತಸತ್ತ್ವ ತೆರೆತೆರೆಯಾಗಿ ಬೀಸಿ ಗೂಢದಲಿ ಬಿತ್ತರಿಸುತಿಹುದು ಹೊಸಹೊಸತನವನೆಡೆಬಿಡದೆ (ಮಂಕುಕ. ೯೩). [ಸಂ.]

**ದೃಕ್ಪ್ರಭೆ** (ನಾ). ಕಣ್ಣಿನ ಕಾಂತಿ, - ಪ್ರಕಾಶ ; ನೇತ್ರದ ಹೊಳಪು : ದಿಕ್ಚಕ್ರ ಮನಚ್ಚಜೊನ್ನಮೆಳಸಿತ್ತೆಬನ್ನೆಗಂ ತುಂಬಿ ದೃಕ್ಪ್ರಭೆ . . . ಬಂದಳ್ ಕುಡುತುಂ ಶಶಿಪ್ರಭೆ ಜನಾಕ್ಷೀಂದೀವರಾನಂದಮಂ (ಚಂದ್ರಪು. ೬-೭೯).

[ ಸಂ. ದೃಕ್ಪ್ರಭಾ ]

**ದೃಕ್ಸಹಸ್ರ** (ನಾ). ಸಾವಿರ ಕಣ್ಣುಗಳು : ದೇವಗಣಿಕಾತತಿಯಾತನ ಗೀತಮಂ ನಿಜಾನಂದದೆ ಪಾಡೆ ಕೇಳಲೆರಡುಂ ಕಿವಿಯಿಲ್ಲದೆ ತನ್ನ ದೃಕ್ಸಹಸ್ರಂ ದಿಟದಿಂದೆ ಕರ್ಣಚಯಮಾಗದೆ ನಿಷ್ಫಲಮಾದುದೆಂದು ಸಂಕ್ರಂದನನೆಯ್ದೆ ಕಣ್ಗೆ ಕಿಸುಗಣ್ಣುವನಾತ್ಮಸಭಾಂತರಾಳದೊಳ್ (ಚಂದ್ರಪು. ೦೦-೯೭).

[ ಸಂ. ]

**ದೃಕ್ಸಿದ್ಧಾಂತ** (ನಾ). [ಜ್ಯೋತಿ] (ಆಧುನಿಕ ಯಂತ್ರ ಸಹಾಯದಿಂದ) ಗ್ರಹಗಳ ಸ್ಥಿತಿಯನ್ನು ಪ್ರತ್ಯಕ್ಷವಾಗಿ ಕಂಡುಕೊಂಡು ನಿರ್ಣಯಿಸುವ ಖಗೋಳ ವಿಜ್ಞಾನ; ಜ್ಯೋತಿರ್ವಿಜ್ಞಾನ. 'ದೃಗ್ಗಣಿತ' ಪರ್ಯಾ [ ಸಂ. ]

**ದೃಕ್ಸೌಮ್ಯ** (ಗು). ಕಣ್ಣಿಗೆ ಹಿತವನ್ನುಂಟುಮಾಡುವ ; ನೇತ್ರಾನಂದಕರವಾದ : ಪ್ರಕ್ಷುಭಗೋರಸಸ್ಖಳನಂ ದೃಕ್ಸೌಮ್ಯಶರೀರನಂ ಸಮೇಣಾಸ್ಯನನಂ ವಾಕ್ಸಾರನನಾ ಬಳವಿಪ್ಪಕ್ಕೇನರ್ ಗೋಪಬಂಧುಗೆತ್ತರ್ ಖಳನಂ (ಜಗವಿ. ೪-೫೦). [ ಸಂ. ]

**ದೃಗಂತ** (ನಾ). ಕಣ್ಣಿನ ಕೊನೆ ; ಅಪಾಂಗ ; ಕಟಾಕ್ಷ : ತನ್ನ ದೃಗಂತದಿಂದೀಕ್ಷಿಸುತ ಪ್ರಿಯ ಪೋಗೆ ಬಂದುದೀ ಬೇಗೆ (ಶಾಕುಂತ. ೦೮ ಅಡಿಪದ್ಯ).

[ ಸಂ. ]

**ದೃಗಂತರ** (ನಾ). ಕಣ್ಣಿನ ಒಳಗು, - ಒಳಭಾಗ : ಚರಣಾಲಕ್ತಕಲಾಂಛನಂ ನಿಟಿಲದೊಳ್ . . . ತಾಂಬೂಲರಾಗಂ ದೃಗಂತರದೊಳ್ ಪುಷ್ಪರಜಃ ಪ್ರಲೇಪಮುರದೊಳ್ ತಳ್ತಿರ್ಪುದು (ಕಾವ್ಯಸಾ. ೬೫೫). [ ಸಂ. ]

**ದೃಗಂಬು** (ನಾ). ಕಣ್ಣೀರು ; ಕಂಬನಿ ; ಅಶ್ರು : ಮೃಗನಯನೆಯ ಮನದ ಖೇದಮಂ ಪಚ್ಚುಗೊಳಲ್ ಬಗೆದಂತಾಕುಳಚಿತ್ತಂ ದೃಗಂಬುವಂ ತೊಡೆದು ಮೆಲ್ಲನಂದಿಂತೆಂದಂ (ಚಂದ್ರಪು. ೩-೫೩). [ ಸಂ. ]

**ದೃಗು** (ನಾ). ೧. = ದೃಕ್ಕು ೧ : ಮೊಗಸದಾದವು ನೋಡಲಮರರ ದೃಗುಗಳಸುರರ ಸುಪ್ರತಾಪದ ಸೆಗಳಿಕೆಯ ಶಿಖಿಯುಬ್ಬರದ ಸಂತಾಪಲಹರಿಯಲಿ (ತೊರರಾ. ೬-೨೦-೫೨). ೨. = ದೃಕ್ಕು ೨ : ನಯನ . . . ದೃಗು ಯುಮಳ ಲೋಚನ ದಂಪತಿ ಇಂತಿನಿತುಂ ಶಿಕ್ಕೆ ಹೆಸರು (ವ್ಯವಹಾ. ೧೦-೧೩). [ <ಸಂ. ದೃಶ್ ]

**ದೃಗುಜಲ** (ನಾ). = ದೃಗಂಬು : ಅಂದು ಭಂಗಿಸುವಲ್ಲಿ ದೃಗುಜಲಬಿಂದುವೊಂದುಂ ಹೊಱಪಡದು . . . ಇಂದದೇನು ನಿಮಿತ್ತಂ ಸಲಿಲಂ ನಿನ್ನ ನಯನದಲಿ (ಬಸಪು. ೧೮-೫೩) : ಕೊರಳ ಸೆರೆ ಹಿಗ್ಗಿದವು ದೃಗುಜಲ ಉರವಣಿಸಿ ಕಡುನೊಂದನಕಟಾ ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ (ಕುವ್ಯಾಉ. ೧೦-೧೧) : ಮಗನ ಮರಣದಲೆಂತು ಜೀವವ ಬಗೆವಳಕಟ ಸುಭದ್ರೆಯೆನುತವೆ ದೃಗುಜಲವ ಬೆರಳಿಂದ ಮಿಡಿದರು ಗೌರಿ ದೇವಿಯರು(ಕುವ್ಯಾದ್ರೋ. ೬-೯೪); ದೃಗುಜಲಗಳೊಱತೆಗಳ ತೋಳಪ್ಪುಗೆಯ ಮಿಗ ತೋತ್ಸವದ ಸಮರದ ನಗಮಹೀರುಹ ಮುಕ್ತಹಸ್ತರ ನೋಡುತ್ತೈತರಲು (ತೊರರಾ. ೬-೪೧-೪೩). [ ದೃಗು + ಜಲ$_2$ ]

**ದೃಗುದೀಧಿತಿ** (ನಾ). ಕಣ್ಣಿನ ಕಾಂತಿ : ಶತದಳಾಯತಲೋಲ ದೃಗುದೀಧಿತಿಗಳಲ್ಲಿಯೆ ಸಿಕ್ಕಿ ಕಾಲಿಡಲಱಿಯದೋರಂತೆ ರತಿಪನೆಸುವ ನಿಶಾತಮಾರ್ಗಣಹತಿಗೆ ಗುಱಿಯಾದೆನು (ಬಸಪು. ೪೦-೭). [ ದೃಗು + ದೀಧಿತಿ ]

**ದೃಗುಪಥ** (ನಾ). ದೃಷ್ಟಿಯ ಹರಹು; ಕಣ್ಣಳತೆ; ನೋಟ : ನೆಗಹಿ ಬೀಸುವ ಚೌರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕೆ ತೋಱಿದರು ತಂತಮ್ಮಾಳು ಕುದುರೆಗಳ (ಕುವ್ಯಾದ್ರೋ. ೯-೧೭).
[ ದೃಗು + ಪಥ ]

**ದೃಗುಮಧ್ಯ** (ನಾ). ಕಣ್ಣಿನ ಗುಡ್ಡೆ ; ಕಣ್ಣಾಲಿ : ನಗ ಮರುತಂ ಋಕ್ಷ ಮುಕ್ತಾಫಲಂಗಳ್ ದೃಗುಮಧ್ಯಂ . . . ಶುಭ್ರಾದಿಗಳ್ ತಾರೆಶಬ್ದಂ (ನಾನಾರ. ೪೧). [ ದೃಗು + ಮಧ್ಯ ]

**ದೃಗುಯುಗ** (ನಾ). ಎರಡು ಕಣ್ಣುಗಳಂ : ಬಿಚ್ಚಿದ ಕೇಶಪಾಶದ ಮುಗಿದ ಸರಸಿಜದಂತೆ ದೃಗುಯುಗದೊರೆತ ಕಂಬನಿಯು ಒಗುವಪಾಂಗದ . . . ಬಿಗಿದ ದಾಳಿಂಬವನು ಹೋಲುವ ಬಾಯ ಬಿಡುತಿರಲು (ಕಾಶಿರಾ. ೧೦-೫೪); ನಗೆಮೊಗದ ಮಿಂಚುಗಳ ದೃಗುಯುಗದ ಕಾಂತಿಗಳ . . . ಮಿಗಡೆಯರ್ನೆರೆದು ಕಾಳೆಗಕೆ ಮುಂಕೊಳುತಿರ್ದರು (ಜೈಮಿಭಾ. ೧೭-೪).
[ ದೃಗು + ಯುಗ ]

**ದೃಗುಯುಗಳ** (ನಾ). = ದೃಗುಯುಗ : ದೃಗುಯುಗಳ ಜಲಬಿಂದುಗಳಿಗಾಜಲಬಿಂದು ಸುರಿವಂತೆ ಒಗುವ ಖಂಡಿತಹಾರ ಮುಕ್ತಾಳಿಗಳು ಮೆಱೆದವು (ಕುವ್ಯಾಸ. ೦೪-೭೦) ; ಯುಗದ ಪರಿಯವಸಾನದುದಯದಲಗಧರನು ಲೀಲೆಯಲಿ ಮನುವಿನ ದೃಗುಯುಗಳ ಗೋಚರಕೆ ಸುಳಿದನು ಮತ್ಸ್ಯರೂಪದಲಿ (ನಿಭಾಗ. ೨-೩-೨) : ಬಿಗಿದ ಪದ್ಮಾಸನ ನಾಸಿಕಾಗ್ರದ ದೃಗುಯುಗಳ ಸಂಚಲಿಸದ ಚಿತ್ತ ಬಗೆದೋಱುತಿಹ ರಾಮನಾಮವ ಜಾನಿಪ ಜಗದೆಱೆಯನ ಕಾವ ಕಂಡ (ಮೋಹತ. ೭-೩೪).
[ ದೃಗು + ಯುಗಳ ( = ಯುಗಲ) ]

**ದೃಗುವಿಹೀನ** (ನಾ). ಕಣ್ಣುಗಳಿಲ್ಲದವನು ; ಕುರುಡ : ದೃಗುವಿಹೀನರ ಬಾಳಿಕೆಯ ಸುಡಲೆನುತ ತನ್ನೊಳು ಹಿರಿದು ಚಿಂತಿಸಿದ (ಕುವ್ಯಾಭೀ. ೧-೫೪); ದೃಗುವಿಹೀನನು ಕತ್ತಲೆಯ ಮೊಗೆಮೊಗೆದು ಕಡೆಗಾಣದವೊಲರಿಸಂಯುಗಕೆ ಸರೆಣೆಯ ಕಾಣದುಸುರಿಡುತಿರ್ದನಸುರೇಂದ್ರ (ತೊರರಾ. ೬-೪೦-೩).
[ ದೃಗು + ವಿಹೀನ ]

**ದೃಗುಶಿಖಿ** (ನಾ). ಕಣ್ಣಿನ ಬೆಂಕಿ ; ನೇತ್ರಾಗ್ನಿ : ದೃಗುಶಿಖಿ ಕಿಡಿಗಳೊಗೆ ಭುಗಿಭುಗಿಲು ಛಿಟಛಿಟಿಲೆನುತ ಮಿಗೆ ನೆಗೆಯೆ (ಬಸಪು. ೧೭-೧೯) ; ಸಗರಸುತ ಚರಿತವನು ಕಪಿಲನ ದೃಗುಶಿಖಿಯಲುರಿದುದನು ಬಳಿಕವರಿಗೆ ಭಗೀರಥ ನಿಳುಹಿದಮರನದೀಕಥಾಂತರವ . . . ಮುನಿಪ ವರ್ಣಿಸಿದ (ಕುವ್ಯಾಅ. ೯-೧೩). [ ದೃಗು + ಶಿಖಿ ]

**ದೃಗುಸನ್ನೆ** (ನಾ). ಕಣ್ಣಿನಿಂದ ಮಾಡುವ ಸೂಚನೆ,-ಸಂಕೇತ; ಕಣ್ಣುಸನ್ನೆ: ಇಂಚರದಮರಿಯರೊಡನಾಡುವ ನೇತ್ರಲಾಂಛನಗುಱಿ ಮೇಘ ವೆಣ್ಣು ಸಂಚಲದೃಗುಸನ್ನೆಯ ಮಾಡಿದಂದದಿ ಮಿಂಚಡರಿತು ನಭಸ್ಥಲದಿ (ಮೋಹತ. ೪-೩೩). [ ದೃಗು + ಸನ್ನೆ$_2$ ]

**ದೃಗ್ಗಣಿತ** (ನಾ). [ಜ್ಯೋತಿ] ಗ್ರಹ, ನಕ್ಷತ್ರ ಮುಂತಾದುವುಗಳನ್ನು ಪ್ರತ್ಯಕ್ಷವಾಗಿ ಪರಿಶೀಲಿಸಿ ತಯಾರಿಸಿದ ಲೆಕ್ಕ ; ಜ್ಯೋತಿರ್ಗಣಿತ. 'ದೃಕ್ಸಿದ್ಧಾಂತ' ಪರಾ. [ ಸಂ. ]

**ದೃಗ್ಗೋಚರ** (ನಾ). ಕಣ್ಣಿಗೆ ಕಾಣಿಸುವಂಥದಂ; ದೃಷ್ಟಿಗೆ ಗೋಚರವಾಗುವಂಥದು : ಕಣಾದನ ವೈಶೇಷಿಕದರ್ಶನ ಅಣುಗಳ ಸಂಯೋಗ ವಿಯೋಗವಿಶೇಷವೇ ದೃಗ್ಗೋಚರವಾಗುತ್ತಿರುವ ಜಗತ್ತೆಂದಿತು (ಭಾರದ. ೧೨೨) ; ಸೂಕ್ಷ್ಮವಾಗಿ ಅವಲೋಕಿಸಿದಾಗ ನಮ್ಮೆದುರು ಮೂರೇ ಮೂರು ಜೀವನ ತತ್ತ್ವಗಳು ದೃಗ್ಗೋಚರವಾಗುತ್ತವೆ (ಧರ್ಮಸಾ. ೩). [ ಸಂ. ]

**ದೃಗ್ದೀಪ್ತಿ** (ನಾ). = ದೃಕ್ಪ್ರಭೆ : ಮುಗಿಲೊಡ್ಡಂ ಕುಡುಮಿಂಚನಬ್ದರವಮಂ ಶಕ್ರಾಸ್ತ್ರಮಂ ತಂದಲಂ ನಗಭಿದ್ಗೋಪಕಳಾಪಮಂ ಕಚಭರಂ ದೃಗ್ದೀಪ್ತಿ ಕಾಂಚೀರವಂ ಸೊಗಯಿಪ್ಪಾಭರಣಾಂಶು ದೇಹರುಚಿ ಕಂಬಾಯ್ ಪೋಲೆ (ಪುಷ್ಪಪು. ೧೪-೪೭). [ ಸಂ. ]

**ದೃಗ್ಯುಗ** (ನಾ). = ದೃಗುಯುಗ : ಹರಿಯಾತನೇ ದೃಗ್ಯುಗಕೆ ಗೋಚರನಾದನು (ಕುವ್ಯಾಅ. ೧೪-೨೦). [ ಸಂ. ]

**ದೃಗ್ಯುಗಳ** (ನಾ). =ದೃಗುಯುಗ: ನಗುವಂತಿರ್ದಪ್ಪುದಿಂತೀ ವದನಮುರುಳಿಗೊಂಡಿರ್ಪುದೀ ಕೇಶಮಿಾ ದೃಗ್ಯುಗಳಂ ಕನ್ನೆಯಿದ್ದಂತಿರ್ದಪುದು (ಕಾದಂಉ. ೭೩೨) ; ಕೇಳಿಯವರೆ ಸಂವಾದವ ತಿದ್ದಲು ಕಾಳಿ ನಿರ್ವಾಣದಾಕೃತಿಯ ತಾಳಿ ಬಂದಿದಿರಾಗಿ ನಿಲಲಚ್ಯುತ ನೋಡಿ ಹೊಳೆದ ದೃಗ್ಯುಗಳವನು (ಮೋಹತ. ೩೮-೨೪). 'ದೃಗುಯುಗಳ' ಪರಾ. [ ಸಂ. ದೃಗ್ಯುಗಲ ]

**ದೃಙ್ಮೂಲ** (ನಾ). ಕಣ್ಣಿನ ಕುಣಿಕೆ; ಕಣ್ಣಿನ ತುಂದಿ : ದೃಙ್ಮೂಲದೊಳಿ ಮುದಶ್ರುವೊಗೆಯೆ ಕರಯುಗ್ಮಂಗಳ ಮುಗಿದು (ಉದ್ಭದೇ. ೩-೭೦). [ಸಂ.'

**ದೃಢ** (ಗು). ೧. ಭದ್ರವಾದ ; ಮಜಬೂತಾದ ; ಬಿಗಿಯಾದ ; ಗಾಢವಾದ. ೨. ಬಲವಾದ ಶಕ್ತಿಯುಳ್ಳ ; ಬಲಿಷ್ಠ. 'ದೃಢಾಯ್ಸು] ಪರಾ. ೩. ಸ್ಥಿರವಾದ ; ಅಚಲವಾದ: "ಸ್ಥಿರ, ಸ್ಥಾಯಿ, ದೃಢ, ನಿತ್ಯ" (Constant. ಪಾರಿಸಿ. ೨೦). ೪. ಕಠಿನವಾದ; ಗಟ್ಟಿಯಾದ. ೫. ನಿಶ್ಚಯವಾದ ; ದಿಟವಾದ ; ಸ್ಥಿರಪಡಿಸಿದ : ಹಿಂದಿರುಗಿ ಬರಬೇಕಾಗಿದ್ದ ಹೊತ್ತು ಬಹಳ ಮಿೀರಿಹೋದುದರಿಂದ ಅವರ ಅನುಮಾನವು ದೃಢ ಸಿದ್ಧಾಂತವಾಯಿತು (ಕಪಾಕುಂ. ೭). ೬. ಉತ್ಕಟವಾದ; ತೀವ್ರವಾದ. ೭. ಅಧಿಕವಾದ ; ಹೆಚ್ಚಾದ. (ನಾ). ೮. ಗಟ್ಟಿಯಾದಂದು ; ಬಲವಾದುದು ; ಬಿಗಿಯಾದಂದು : ಗೋಪಿ ದಾವಿನ್ನಡುವಂ ತೊಡರ್ಚಿ ದೃಢವಾಗಲುಲೂಖಲದಲ್ಲಿ ಕಟ್ಟಿ (ಜಗವಿ. ೩-೩೭). ೯. ಸ್ಥಿರತೆ ; ಅಚಲವಾಗಿರುವಿಕೆ : ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ ಮನದಲ್ಲಿ ದೃಢವಿಲ್ಲದನ್ನಕ್ಕ (ಬಸವ. ೯೯) ; ಕಡೆಗೆ ಮಾಡದ ಭಕ್ತಿ ದೃಢವಿಲ್ಲದಾಳುತನ ಮೃಡನೊಲಿಯ ಹೇಳಿದರೆ ಎಂತೊಲಿವನಯ್ಯ (ಮಹಾದೇ. ಬ. ೪೫-೧೦೫) ; ಅಮೃತದಲಿ ಬಟುಹಿನಲಿ . . . ದೃಢದಲ್ಲಿ ಮೇಣ್ ವೃತ್ರನಾಮಮೆನಿಕು (ಮಂಗರಾ. ೧೫೪-೭೫); ಕರ್ಣನ ದೃಢವ ಕಂಡನು ಮನದೊಳುತ್ಸಾಹಿಸಿದನು (ಕುವ್ಯಾಉ. ೧೦-೨೧). ೧೦. ದಟ್ಟವಾಗಿರುವಿಕೆ ; ಸಾಂದ್ರತೆ : "ನಿಬಿಡಂ,

ನಿಬಿರೀಸಂ, ದೃಢಂ, ಗಾಢಂ–ಈ ೪ ತೆಱಪಿಲ್ಲದುದು" (ಹಲಾಯು. ೧೧೯–೩೩). ೧೧. ನಿರ್ಧಾರ; ನಿಶ್ಚಯ: ತಾ ನುಡಿದ ನುಡಿಯನು ಸಲಿಸುವುದು ನೆಱೆ ದೃಢವೆ ದೃಢವೆಂದಿತ್ತನಱಿಯದೆ ಸತಿಗೆ ನಂಬುಗೆಯ (ಹೊರಿಶಾ. ೨–೨–೬); ಪಾಂಡಿತ್ಯವೆನುವುದು ಅನುಮಾನಕಿನ್ನೊಂದು ಹೆಸರೆಂದು ದೃಢವಾಯಿತೆನಗೆ (ಇಂಜಾಪ. ೨೩೭–೬೨). ೧೨. ಕಠಿನತೆ; ಕಾಠಿನ್ಯ; "ಖರಃ, ಕಠೋರಃ, ಕಠಿನಃ . . . ದೃಢಃ–ಈ ೬ ಬೆಟ್ಟದು" (ಹಲಾಯು. ೩೭–೧೮೭). ೧೩. ಸತ್ಯವಾದುದು; ದಿಟವಾದುದು: ನಡೆಯೊಳಿಚ್ಚ ಱವ ಬಿಡದಿರು ಪರವಶದಿ ದೃಢವನಗಲದಿರು (ಸರ್ವಜ್ಞ. ೩೦೦). [ ಸಂ. ]

**ದೃಢಕಾಯ** (ನಾ). ೧. ಬಲಿಷ್ಠವಾದದೇಹ; ಗಟ್ಟಿಮುಟ್ಟಾದ ಶರೀರ: ಆದರೆ ಎಲ್ಲಕ್ಕಿಂತ ಮಿಗಿಲಾಗಿ ಮುಕ್ತತಾಪತ್ರಯದ ಆರೋಗ್ಯದೃಢಕಾಯ ಸಂಪನ್ನತೆಯ ಆತ್ಮಸಂತೋಷ (ಪುನರು. ೨೨೦). ೨. ಗಟ್ಟಿಮುಟ್ಟಾದ ದೇಹವುಳ್ಳವನು; ಬಲಿಷ್ಠ: ದೃಢಕಾಯರಾದ ಯುವಕರು ಶಾಲೆಗಳಿಂದ ಹೊರಬರಬೇಕು (ಶಿಕ್ಷಣ. ೩೮೩): ಬಲಿಷ್ಠನೂ ಆರೋಗ್ಯದೃಢಕಾಯನೂ ಎಂಬುದು ಆತನ ಚಲನೆಯ ವೈಖರಿಯಿಂದ ತಿಳಿದುಬರುತ್ತಿತ್ತು (ಕಾನೂರು. ೧). [ ದೃಢ + ಕಾಯ ]

**ದೃಢಗಲಿ** (ನಾ). ಅತಿಶಯವಾದ ಪರಾಕ್ರಮವುಳ್ಳವನು; ಮಹಾ ಪರಾಕ್ರಮಿ: ದೃಢಗಲಿ ಖಳನುರಸ್ಸಲದೆ ಕಠಾರಿಯ ಬುಡಮುಟ್ಟ ಚಾಚಿ ಬೊಬ್ಬಿಱಿದ (ಮೋಹತ. ೧೩–೬೭); ದೃಢಗಲಿಯಹುದೆಂದು ಮಗನ ಮಸ್ತಕವ ಮೆಯ್ದಡಹಿ ತಕ್ಕೆಯೊಳಿಟ್ಟುಕೊಂಡು (ಮೋಹತ. ೧೩–೫೦). [ ದೃಢ + ಕಲಿ$_2$ ]

**ದೃಢಗುಣ** (ನಾ). ಅಚಲವಾದ ಗುಣ; ಸ್ಥಿರವಾದ ಗುಣ: ಅತಿ ಸೂಕ್ಷ್ಮ ತತ್ತ್ವಮಂ ಕಾಣ್ಬತನುವನೊಟ್ಟಯಿಸಿ ಕಟ್ಟುವೀ ದರ್ಶನಶುದ್ಧತೆಗಂ ದೃಢಗುಣಸುಸಮರ್ಥತೆಗಂ ಸಲೆ ದೇವಚಂದ್ರಯತಿಪತಿ ನೋಂತಂ (ಚಂದ್ರಪು. ೧–೩೩). [ ದೃಢ + ಗುಣ ]

**ದೃಢಗೊಳ್ಳು** (ಕ್ರಿ). ಸ್ಥಿರವಾಗು; ಅಚಲವಾಗು; ಭದ್ರವಾಗು [ ದೃಢ + ಕೊಳ್ಳು$_1$ (<ಕೊಳ್$_1$) ]

**ದೃಢಚರ್ಯೆ** (ನಾ). ೧. ಬಿಡದೆ ಆಚರಿಸುವುದು; ಸ್ಥಿರವಾಗಿ ಆಚರಿಸು ವುದು. ೨. [ಜೈನ] ಜೈನಮತದ ಧರ್ಮಗ್ರಂಥಗಳನ್ನು ವ್ಯಾಸಂಗ ಮಾಡಿ ಜ್ಞಾನಾಭಿವೃದ್ಧಿಗೆ ಸಹಾಯಕವಾದ ಇತರ ಗ್ರಂಥಗಳನ್ನು ವ್ಯಾಸಂಗ ಮಾಡುವುದು: ಮತ್ತಮುಮವತಾರವೃತ್ತಿಲೋಭಗ್ರಹಣಪೂಜಾ ರಾಧ್ಯ ಪುಣ್ಯ ಯಜ್ಞ ದೃಢಚರ್ಯೋಪಯೋಗಿತ್ವಮೆಂಬೆಂಟುಂಬೆರಸು (ಆದಿಪು. ೧೫–೧೬ ವ); ದೃಢಚರ್ಯೆಮುಂ ಉಪಯೋಗಿತ್ವಮೆಂಬೆಂಟು ಗರ್ಭಾನ್ವಿತಕ್ರಿಯೆಯೊಳು (ಚಾವುಂಪು. ೨೩೦): ಅಂಥಾ ಪುಣ್ಯಯಜ್ಞ ವನ್ನುಳ್ಳವನು ಜೈನಾಗಮಶಾಸ್ತ್ರಂಗಳಂ ಓದಿ ಪೂರೈಸಿ ಅನ್ಯಮತ ಗ್ರಂಥಾರ್ಥಗಳಂ ಸಹ ತಿಳಿದುಕೊಳ್ಳುವುದೇ ದೃಢಚರ್ಯೆವೆಂಬ ೭ನೇ ಕರ್ಮವು (ಪುರುಜ. ೨೦೭). 'ದೀಕ್ಷಾನ್ವಯಕ್ರಿಯೆ' ಪರಾ. [ ದೃಢ + ಚರ್ಯೆ ]

**ದೃಢಚಿತ್ತ** (ನಾ). ೧. ಚಂಚಲವಾಗದ ಮನಸ್ಸು; ಗಟ್ಟಿಮನಸ್ಸು; ಅಚಲವಾದ ಚಿತ್ತ. 'ದೃಢಚಿತ್ತವಿಡಿ' ಪರಾ. ೨. ಗಟ್ಟಿಮನಸ್ಸುಳ್ಳ ವನು; ಚಂಚಲನಲ್ಲದವನು: "ಶಂಸಿತನಾ ಸುನಿಶ್ಚಿತಂ ದೃಢಚಿತ್ತನೆಂದೆ ನಿಕ್ಕುಂ" (ಮಂಗರಾ. ೭೫–೫); ದೃಢಚಿತ್ತಂ ಗುಣನಿಳಯಂ ಕಡುಗಲಿ . . . ಭವ್ಯವನಜವನಕಳಹಂಸಂ (ಧರ್ಮಾಮೃ. ೭–೧೩). [ ದೃಢ + ಚಿತ್ತ ]

**ದೃಢಚಿತ್ತವಿಡಿ** (ಕ್ರಿ). ದೃಢಮನಸ್ಸಿನಿಂದ ಕೂಡಿರು; ಸ್ಥಿರವಾಗಿರು: ದೃಢಚಿತ್ತವಿಡಿದು ಭೋಗಿಭೂಷಣ ಕೋಪವ ತಾಳಿ ಕಿಡಿಕಿಡಿಯೋಗಿ ಕೆಂಗಿಡಿಗಣ್ಣ ತೆಱೆದ (ಮೋಹತ. ೭–೩೮). [ ದೃಢಚಿತ್ತ + ಪಿಡಿ$_1$ ]

**ದೃಢತೆ** (ನಾ). ಸ್ಥಿರತೆ; ನಿಶ್ಚಲತೆ. [ ಸಂ. ದೃಢತಾ ]

**ದೃಢತ್ವ** (ನಾ). ಚಂಚಲವಾಗದಿರುವಿಕೆ; ಸ್ಥಿರವಾಗಿರುವಿಕೆ: "ಗಲ್ಭ– ಅಧಾರ್ಷ್ಟ್ಯೇ, ದೃಢತ್ವದೊಳ್" (ಶಾಶಕ್ಕ. ೧೧೬). [ ಸಂ. ]

**ದೃಢನಿರ್ಧಾರ** (ನಾ). ಅಚಲವಾದ ನಿರ್ಣಯ; ಸ್ಥಿರವಾದ ನಿರ್ಧಾರ: ಆ ಬಗ್ಗೆ ಅವನ ಮನಸ್ಸಿನಲ್ಲಿ ದೃಢನಿರ್ಧಾರ ಬಲಿತಿರಲಿಲ್ಲ (ಪುನರು. ೪೩೬). [ ದೃಢ + ನಿರ್ಧಾರ ]

**ದೃಢನಿಶ್ಚಯ** (ನಾ). = ದೃಢನಿರ್ಧಾರ: ಸುಲಭವಾಗಿ ಸಡಿಲದ ದೃಢ ನಿಶ್ಚಯ ಅವನ ಹುಟ್ಟುಗುಣವಾಗಿತ್ತು (ಪುನರು. ೩೩೨). [ ದೃಢ + ನಿಶ್ಚಯ ]

**ದೃಢಪಡಿಸು** (ಕ್ರಿ). ನಿಶ್ಚಿತಗೊಳಿಸು; ಖಚಿತಪಡಿಸು; ಬಲಪಡಿಸು: ಅನಂತಕವಿಯ ಗ್ರಂಥದ ಮೇರೆಗೆ . . . ಕೂಷ್ಮಾಂಡಿಯೇ ಮುಖ್ಯ ಪ್ರೇರಕಳೆಂಬುದನ್ನು ದೃಢಪಡಿಸುತ್ತದೆ (ಸಮಾಲೋ. ೨೬೦). [ ದೃಢಪಡು + – ಇಸು$_2$ ]

**ದೃಢಪಡು** (ಕ್ರಿ). ನಿಶ್ಚಿತವಾಗು; ಸ್ಥಿರವಾಗು. 'ದೃಢಪಡಿಸು' ಪರಾ. [ ದೃಢ + ಪಡು$_1$ ]

**ದೃಢಪತಿವ್ರತೆ** (ನಾ). ಗಂಡನನ್ನು ಕುರಿತ ವಿಶ್ವಾಸ ಮತ್ತು ಭಕ್ತಿಗಳಲ್ಲಿ ಸ್ಥಿರವಾದ ನಡವಳಿಕೆಯುಳ್ಳವಳು; ಮಹಾಪತಿವ್ರತೆ: ಇಂದು ಜಯವಧು ದೃಢಪತಿವ್ರತೆಯೆಂದು ಬಗೆದೈ ಭೂಪ ಹುಸಿ ಹೋಗೆಂದು ಗುರುಸುತ ನಗುತ ಹೋದನು ತನ್ನ ಮೋಹರಕೆ (ಕುವ್ಯಾಕ. ೨೯–೨೨). [ ದೃಢ + ಪತಿವ್ರತೆ ]

**ದೃಢಪ್ರತ್ಯಯ** (ನಾ). ಸ್ಥಿರವಾದ ವಿಶ್ವಾಸ,–ನಂಬುಗೆ; ದೃಢನಿಶ್ಚಯ. [ ದೃಢ + ಪ್ರತ್ಯಯ ]

**ದೃಢಬುದ್ಧಿ** (ನಾ). ಅಚಲವಾದ ಬುದ್ಧಿ; ಗಟ್ಟಿಮನಸ್ಸು: ದೃಢಬುದ್ಧಿ ಯಿಲ್ಲದವ ಕಡುಮೂರ್ಖ (ಗಾದೆ). [ ದೃಢ + ಬುದ್ಧಿ ]

**ದೃಢಬ್ರತ** (ನಾ). = ದೃಢವ್ರತ: (೬). [ ದೃಢ + ಬ್ರತ ]

**ದೃಢಬ್ರತೆ** (ನಾ). ಸ್ಥಿರವಾದ ಪ್ರತಿಜ್ಞೆಯನ್ನುಳ್ಳವಳು; ಸ್ಥಿರಸಂಕಲ್ಪ ದಿಂದ ಕೂಡಿರುವವಳು: ಈಯಯ್ಯುದ್ಧಮಣುಬ್ರತಮಂ ಕೈಕೊಂಡು ದೃಢಬ್ರತೆಯಾಗು ಸುವ್ರತೆಯಾಗು ಮಗಳೆ (ವದ್ಧಾರಾ. ೨೨–೨೦). [ <ಸಂ. ದೃಢವ್ರತಾ ]

**ದೃಢಭಕ್ತ** (ನಾ). ನಿಶ್ಚಲವಾದ ಭಕ್ತಿಯನ್ನು ಉಳ್ಳವನು: ನಡೆದದ್ದೆಲ್ಲವು ಲಕ್ಷ ಪ್ರದಕ್ಷಿಣೆ ನುಡಿದದ್ದೆಲ್ಲವು ಗಾಯತ್ರಿಮಂತ್ರಗಳು . . . ದೃಢ ಭಕ್ತರೇನು ಮಾಡಿದರದೇ ಮರಿಯಾದೆ (ಪುರಂದ. ೩–೧೧೬–೨). [ ದೃಢ + ಭಕ್ತ ]

**ದೃಢಭಕ್ತಿ** (ನಾ). ನಿಶ್ಚಲವಾದ ಭಕ್ತಿ: ದೃಢಭಕ್ತಿ ನಿನ್ನಲಿ ಬೇಡಿ ನಾನಡಿ ಗೆಱಗುವೆನಯ್ಯ ಅನುದಿನ ಪಾಡಿ (ಪುರಂದ. ೧–೯–೨). [ ದೃಢ + ಭಕ್ತಿ ]

**ದೃಢಮನಸ್ಸು** (ನಾ). = ದೃಢಬುದ್ಧಿ: ದೃಢಮನಸ್ಸು ಮಾಡಿಕೊಂಡು ಕೆಲವು ಕಾಲ ಮನಃಕ್ಲೇಶವನ್ನು ಸಹಿಸಿಕೊಳ್ಳಬೇಕು (ಸಾವಿತ್ರಿ. ೩). [ ದೃಢ + ಮನಸ್ಸು ]

**ದೃಢಮುಷ್ಟಿ** (ನಾ). ೧. ಬಲವಾದ ಹಿಡಿ; ಶಕ್ತಿಯುತವಾದ ಮುಷ್ಟಿ: ಒತ್ತಿ ದೃಢಮುಷ್ಟಿಯಲಿ ಹಿಡಿದರು ಸತ್ವವುಳ್ಳವರೆರಡು ಬದಿಯನು (ಕೌಶಿರಾ. ೨೯–೬). ೨. ಅಚಲವಾದ ನಿರ್ಧಾರ; ಹಿಡಿದ ಪಟ್ಟು ಬಿಡದಿರುವಿಕೆ: ದೃಢಮುಷ್ಟಿಯರಸನ್, ಆರ್ಗಮೊಳಗಲ್ಲದೋನ್ ಸ್ವರ್ಗದಲ್ಲಾಳ್ದಪನ್ (ಬದ್ಧಪ್ರ. ೧೮–೩೭೮). ೩. ಕತ್ತಿ; ಖಡ್ಗ. ೪. ಜಿಪುಣ; ಲೋಭಿ; ಜೀನ. 'ಕಪಿಮುಷ್ಟಿ' ಪರಾ. [ ದೃಢ + ಮುಷ್ಟಿ$_2$ ]

**ದೃಢಮೂಲ** (ನಾ). ಬಲವಾಗಿ ಬೇರೂರಿದುದು; ಸ್ಥಿರವಾಗಿರುವುದು: ಭವಾನೀಚರಣನ ಮನದಲ್ಲಿ ಒಂದು ವಿಧದ ಭರವಸೆ ದೃಢಮೂಲವಾಗಿ ಹೋಯಿತು (ಇಷ್ಟಕ. ೩೩೮). [ ದೃಢ + ಮೂಲ ]

**ದೃಢಮೈತ್ರಿ** (ನಾ). ಗಾಢವಾದ ಸ್ನೇಹ: "ಗಾಢಸ್ನೇಹ, ದೃಢಮೈತ್ರಿ" (Fast Friendship. ಪತ್ರಿನಿ. ೩೭). [ ದೃಢ + ಮೈತ್ರಿ ]

**ದೃಢವಾಕ್ಯ** (ನಾ). ೧. ಅಚಲವಾದ ಮಾತು,–ನುಡಿ ; ಗಟ್ಟಿಮಾತಂ: ಚಂಡನೊಳುದ್ದಂಡ ದಂಡಕ್ರಮಂ ಯೋಗ್ಯಮೆಂದು ದೃಢವಾಕ್ಯಮಂ ನುಡಿದು (ಹಮ್ಮೀರ. ೩–೨೨ ವ). ೨. ನಿರ್ಧಾರವಾದ ಮಾತುಳ್ಳವನಂ. [ ದೃಢ + ವಾಕ್ಯ ]

**ದೃಢವಾಣಿ** (ನಾ). ಸ್ಪಷ್ಟವಾದ ಧ್ವನಿ: ತ್ರಿಜಟೆ ಧೈರ್ಯಮಂ ಕರೆವ ದೃಢವಾಣಿಯಿಂ . . . ಒರೆದಳಿಂತು (ಶ್ರೀರಾಮಾ. ೪೯೬–೨೭೫). [ ದೃಢ + ವಾಣಿ$_1$ ]

**ದೃಢವಿಡಿ** (ಕ್ರಿ). ಬಲವಾದ ಆಧಾರವೆಂದು ನಂಬು; ಗಟ್ಟಿ ಮನಸ್ಸು ಮಾಡು: ಪುಡುಕುತ್ತ ಪೋಗು ದೊರಕುವನೆನಲು ನಂಬಿ ನಾಂ ದೃಢವಿಡಿದುಮಾರಣ್ಯದೊಳು ತೊಳಲಿ ಬಳಲಿದೆನು (ನವಮೋ. ೯–೩೭). [ ದೃಢ + ಪಿಡಿ$_1$ ]

**ದೃಢವ್ರತ** (ನಾ). ೧. ಕಟ್ಟುನಿಟ್ಟಾಗಿ ಧಾರ್ಮಿಕ ವಿಧಿಗಳನ್ನು ಪಾಲಿಸುವಿಕೆ ; ನಿಯಮಪಾಲನೆ: ನಾಭಿನಂದನನಂದನನವರ ದೃಢವ್ರತಕ್ಕೆ ಮೆಚ್ಚಿ . . . ಪವಿತ್ರಗಾತ್ರರ್ ಮಾಡಿ (ಆದಿಪು. ೧೫–೧೧ ವ): ಉಪ್ಪು ಬಿಟ್ಟು ಸಪ್ಪೆಯನುಂಡರೆ ಅದು ಮನದ ಹೇಸಿಕೆಯಲ್ಲದೆ ದೃಢವ್ರತವಲ್ಲ (ಮಡಿಮಾ. ೧೮–೨೩). ೨. ದೃಢವಾದ ಪ್ರತಿಜ್ಞೆಯನ್ನು ಹೊಂದಿರುವವನಂ; ಸ್ಥಿರಸಂಕಲ್ಪವುಳ್ಳವನು: "ಸಂಶಿತಃ, ಸುನಿಶ್ಚಿತಃ – ಈ ೨ ದೃಢವ್ರತಂ" (ಹಲಾಯು. ೬೭–೨೪೮); ಈ ಪರಿ ಗದಗದಿಸಬಹುದೇ ದೃಢವ್ರತ ಸದಮಳದ ಸತ್ಪುರುಷರೆಂದಳು ಕೌಸಲಾದೇವಿ (ತೊರರಾ. ೨–೫–೭); ಆ ಬಾಣವು . . . ನನ್ನನ್ನು ಪುನಃ ಬಿಡು ಎಂದು ಕೇಳಿಕೊಂಡಿತು . . . ಆದರೂ ದೃಢವ್ರತನಾದ ಕರ್ಣನು ಇದನ್ನು ತಿರಸ್ಕರಿಸಿದನು (ನೀತಿಚಿಂ, XIV, ೨೮). [ ದೃಢ + ವ್ರತ ]

**ದೃಢಸಂಕಲ್ಪ** (ನಾ). ಮಾಡಿದ ನಿಶ್ಚಯವನ್ನು ವ್ಯತ್ಯಾಸಮಾಡದಿರುವಿಕೆ; ಸ್ಥಿರವಾದ ಸಂಕಲ್ಪ : ಬಂಧುಭಾವನೆಯನ್ನು ಎಲ್ಲರಲ್ಲೂ ವೃದ್ಧಿಗೊಳಿಸುವುದಕ್ಕಾಗಿಯೂ ದೃಢಸಂಕಲ್ಪಮಾಡಿದವರಾಗಿ . . . ಆತ್ಮಾರ್ಪಿತ ಮಾಡಿಕೊಂಡಿದ್ದೇವೆ (ಭಾಧಾನ. ೧) ; ಅವನು ನೀತಿಯ ದೃಢಸಂಕಲ್ಪವುಳ್ಳವನಾಗಿ ಶಕ್ತನಾಗಿ ಸುಖಿಯಾಗಿ ಹಿಂದಿರುಗುತ್ತಿದ್ದನು (ಮಲನಾ. ೧೨೮). [ ದೃಢ + ಸಂಕಲ್ಪ ]

**ದೃಢಸಂಧಿ** (ನಾ). (ಬಿಡಿಸಲಾರದಂತೆ) ಗಟ್ಟಿಯಾಗಿ ಸೇರಿಕೊಂಡಿರುವುದು: "ದೃಢಸಂಧಿಃ, ಸಂಹತಃ – ದೃಢವಾದ ಕೀಲು ಉಳ್ಳದ್ದು . . . ಗಟ್ಟಿಯಾಗಿ ಬೆಸಿಗೆಗೊಂಡಿರುವುದು" (ಸಿದ್ಧಾಂತಿ. ೩೪೩). [ದೃಢ + ಸಂಧಿ]

**ದೃಢಾಂಗ** (ನಾ). ಬಲವಾದ ದೇಹವುಳ್ಳವನು; ಬಲಿಷ್ಠ : ದೃಢಾಂಗರಾದ ಬೋಯಿಗಳನ್ನು . . . ಬೇಗ ಬರುವಂತೆ ಹೇಳಿದ್ದರು (ಶಾಂತಲಾ. ೩೭೨). [ ದೃಢ + ಅಂಗ$_2$ ]

**ದೃಢಾನುರಾಗ** (ನಾ). ೧. ಸ್ಥಿರವಾದ ಪ್ರೀತಿ. ೨. ಸ್ಥಿರವಾದ ಪ್ರೀತಿಯುಳ್ಳವನು: "ನೀಲೀರಾಗಂ ದೃಢಾನುರಾಗಂ" (ವಸ್ತುಕೋ. ೬೪–೭೬). [ ದೃಢ + ಅನುರಾಗ ]

**ದೃಢಾಯ** (ನಾ). ಸ್ಥಿರವಾದ ರೀತಿ,–ಕ್ರಮಂ,–ಸ್ಥಿತಿ: ದ್ವಾಪರದಲಿ ದೃಢಾಯದಲಿ ತಾ ಧರ್ಮವೆರಡಡಿ ಬೀಯವಾದುದು ನಿಂದುದೆನಿಸಿತು ನಿನ್ನ ದೆಸೆಯಿಂದ (ಕುವ್ಯಾಅ. ೧೪–೩೭). [ ದೃಢ + ಆಯ$_1$ ]

**ದೃಢಾಯತಿಕೆ** (ನಾ). ಅಚಲವಾದ ನಿರ್ಧಾರ; ಸ್ಥಿರವಾದ ನಿಶ್ಚಯ : ಕಡುಗಲಿಗಳೀಜಾಟದಲಿ ಮಿಗೆ ಝಡಿ ಪವಾಡ ದೃಢಾಯತಿಕೆಗಿದು ಪಡಿಯ ನಳರೇವಂತರೆಂದುದು ರಾವುತಿಕೆಗಳಲಿ (ಕುವ್ಯಾಅ. ೭–೨). [ ದೃಢ + ಆಯತಿಕೆ (<ಆಯತಿಕ್ಕೆ) ]

**ದೃಢಾಯ್ಲ** (ನಾ). ಅಚಲಶಕ್ತಿಯುಳ್ಳವನು ; ದೃಢತೆಯುಳ್ಳವನಂ; ಗಟ್ಟಿಗ : ದೃಢಾಯ್ಲರಪ್ಪಳಿಸಿದರು ಪದಘಟ್ಟಣೆಗೆ ನೆಲ ಕುಸಿಯೆ (ಕುವ್ಯಾಸ. ೨–೧೦೮). [ ದೃಢ + – ಆಯ್ಲ (< – ಆಯಿಲ$_2$) ]

**ದೃಢೀಕರಣ** (ನಾ). ನಿಶ್ಚಿತಪಡಿಸುವಿಕೆ ; ಖಾತ್ರಿಮಾಡುವುದು : ಉಪಾಹಾರ ರಕ್ಕಸ ದೃಢೀಕರಣ ವರ್ಧನಗಳೊಳ್ ಬಲಿಯು (ಶಬ್ದಮಂ. ೧೦೯). [ ಸಂ. ]

**ದೃಢೀಕರಿಸು** (ಕ್ರಿ). = ದೃಢಪಡಿಸು : ಭಾರತ, ರಾಮಾಯಣವೆಂಬೆರಡೇ ವ್ಯಾಸ ವಾಲ್ಮೀಕಿಗಳಿಂ ಪ್ರಣೀತವಾದ ಇತಿಹಾಸಂಗಳವಟಿಲ್ಲಿ . . . ವೈದಿಕ ಧರ್ಮಾದಿಗಳಂ ದೃಢೀಕರಿಸುತ್ತಿರ್ಕುಂ (ವಿವೇಕ. ೮): ಈ ಅನುಮಾನವನ್ನು ದೃಢೀಕರಿಸುವ ವಿಷಯಗಳಿವೆಯೋ ಎಂದು ನೇರ ಪ್ರಶ್ನೆಗಳನ್ನು ಕೇಳಿದೆ (ಮನೋನಂ. ೯೩). [ ದೃಢೀಕರಣ + – ಇಸು$_3$ ]

**ದೃಢೀಕೃತ** (ಗು). ಬಲಪಡಿಸಿದ ; ಗಟ್ಟಿಮಾಡಿದ ; ಸ್ಥಿರಗೊಳಿಸಿದ : ದೂರೀಕೃತಾರಿಷಡ್ವರ್ಗನುಂ ಸಮಾಕೃತತ್ರಿವರ್ಗನುಂ ದೃಢೀಕೃತತಳವರ್ಗನುಂ ನಮಾಕೃತಸಾಮಂತವರ್ಗನುಮಾಗಿ (ಚಂದ್ರಪು. ೪–೨೮ ವ). [ ಸಂ. ]

**ದೃತಿ** (ನಾ). ೧. ದ್ರವಪದಾರ್ಥಗಳನ್ನು ಇಡುವ ತೊಗಲಿನ ಚೀಲ. ೨. ಗಾಳಿಯನ್ನು ತುಂಬುವ ಚರ್ಮದ ಚೀಲ ; ತಿದಿ : "ದೃತಿ ಚರ್ಮಸೇವನಮೆನಲ್ಕೆ ತಿದಿಯಕ್ಕು" (ಮಂಗರಾ. ೧೩೩ ೩೦). ೩. ಮೀನಂ. ೪. ಗಂಗೆದೊಗಲು. ೫. ಚರ್ಮ. [ ಸಂ. ]

**ದೃಪ್ತ** (ಗು). ೧. ಸೊಕ್ಕಿನ; ಗರ್ವದ : ಅನಂತವೀರ್ಯನ ದೃಪ್ತೋದಾತ್ತಕರ್ಣಕಟುಕವಚೋನಿಚಯನಿಶಿತಾಸ್ತ್ರಂಗಳ್ ನೆಟನನುಚೆ (ಶಾಂತಿಪು. ೪–೫೨ ವ) ; ದೃಪ್ತಮನಸಿಜನನಜನಿಪದೀಪ್ತಮಹಾಘೋರತಪ್ತತಪಮೆಸೆಯೆ ಶಮವ್ಯಾಪ್ತಂ ಪ್ರತಿಮಾಯೋಗದೆ ಸಪ್ತದಿನಂಬರೆಗಮಿರೆ ಮುನೀಶ್ವರತಿಳಕಂ (ಪಾರ್ಶ್ವಪು. ೧೫–೪೮) ; ಸತ್ತುದು ನಾಯಿ ಕೇಡಿಗನು ಗೋದೆಯ ತಡಿಯೊಳು ಹೊದೆಯೊಳಗಿರುವೊಂದು ದೃಪ್ತಕೇಸರಿ ಕೊಂದುದದನು (ಗಾಥಾಸ. ೨–೭೫). (ನಾ). ೨. ಹೆಮ್ಮೆಪಡುವವನು ; ಗರ್ವಿಷ್ಠ : ದ್ವಿಷನ್ನೃಪರನೇಕಾಕ್ಷೌಹಿಣೀಸೇನೆಯಂ ನೆಟಿವಂ ದೋರ್ಬಲದೃಪ್ತನಪ್ರತಿಹತಂ ರಾಮಾನುಜಂ ಲಕ್ಷ್ಮಣಂ (ಕಂರಾಮಾ. ೯–೧೮೩). ೩. [ವಿಶಿಷ್ಟಾ] ಕರ್ಮಫಲವನ್ನು ಅನುಭವಿಸಲು ಸಿದ್ಧನಾಗಿರುವವನು: ಪರಮೈಕಾಂತಿಗಳು ದೃಪ್ತರೆಂದೂ ಆರ್ತರೆಂದೂ ಎರಡು ವಿಧ. ಪ್ರಾರಬ್ಧ ಕರ್ಮವನ್ನು ಅವಶ್ಯಕವಾಗಿ ಅನುಭವಿಸಬೇಕೆಂದು ತಿಳಿದು ದೇಹಾವಸಾನವನ್ನು ನಿರೀಕ್ಷಿಸುವವರು ದೃಪ್ತರು. ಸಂಸಾರಸ್ಥಿತಿಯು ಬಹಳ ದುಸ್ಸಹವೆಂದು ತಿಳಿದು ಉತ್ತರಕ್ಷಣದಲ್ಲಿಯೇ ಮೋಕ್ಷವಾಗಲಿ ಎಂದು ಅಪೇಕ್ಷಿಸುವವರು ಆರ್ತರು (ಭಾತತ್ತ್ವ. ೭೭೧). ೪. [ನಾಟ್ಯ] ಮೂವತ್ತಾರು ಬಗೆಯ ದೃಷ್ಟಿಚಲನಗಳಲ್ಲಿ ಒಂದು ; ಉಪಾಂಗಗಳಲ್ಲಿ ಕಣ್ಣಿನ ೩೬ ದೃಷ್ಟಿಚಲನೆಗಳು ಮುಖ್ಯವಾದುವುಗಳು. ಮೊದಲನೆಯ ೮ ಚಲನೆಗಳು ರಸಯುಕ್ತ ನೋಟಗಳು: ೧. ಕಾಂತ, ೨. ಭಯಾನಕ, ೩. ಹಾಸ್ಯ, ೪. ಕರುಣ, ೫. ಅದ್ಭುತ, ೬. ರೌದ್ರ, ೭. ವೀರ, ೮. ಬೀಭತ್ಸ. ಮತ್ತೆ ಬರುವ ೮ ಚಲನೆಗಳು ಸ್ಥಾಯಿಭಾವ ನೋಟಗಳು: ೧. ಸ್ನಿಗ್ಧ, ೨. ಹೃಷ್ಟ, ೩. ದೀನ, ೪. ಕ್ರುದ್ಧ, ೫, ದೃಪ್ತ, ೬. ಭಯಾನ್ವಿತ, ೭. ಜುಗುಪ್ಸಿತ, ೮. ವಿಸ್ಮಿತ. ಉಳಿದ ೨೦ ನೋಟಗಳು ವ್ಯಭಿಚಾರಿ ಭಾವಯುಕ್ತವಾದುವುಗಳು: ೧. ಶೂನ್ಯ, ೨. ಮಲಿನ, ೩. ಶ್ರಾಂತ, ೪. ಲಜ್ಜಿತ, ೫. ಗ್ಲಾನ, ೬. ಶಂಕಿತ, ೭. ವಿಷಣ್ಣ, ೮. ಮುಕುಳ, ೯. ಕುಂಚಿತ, ೧೦. ಅಭಿತಪ್ತ, ೧೧. ಜಿಹ್ಮ, ೧೨. ಲಲಿತ, ೧೩. ವಿತರ್ಕಿತ, ೧೪. ಅರ್ಧಮುಕುಳ, ೧೫. ವಿಭ್ರಾಂತ, ೧೬. ವಿಪ್ಲುತ, ೧೭. ಆಕೇಕರ. ೧೮. ವಿಕೋಶ,

೧೯. ತ್ರಸ್ತ, ೨೦. ಮದಿರ. ಕಣ್ಣಾಲಿಗಳ ೮ ಚಲನೆಗಳಿವೆ. ಅವು ಯಾವುವೆಂದರೆ–೧. ಸಮ, ೨. ಸಾಚಿ, ೩. ಅನುವೃತ್ತ, ೪. ಆಲೋಕಿತ, ೫. ವಿಲೋಕಿತ, ೬. ಪ್ರವಿಲೋಕಿತ, ೭. ಉಲ್ಲೋಕಿತ, ೮. ಅವಲೋಕಿತ: "ದೃಪ್ತ – ಕಣ್ಣನ್ನು ಅರಳಿಸಿ, ಗರ್ವ ಮತ್ತು ಸಂತೋಷಗಳಿಂದ ಕೂಡಿ ಸ್ಥಿರದೃಷ್ಟಿಯಿಂದ ನೋಡುವುದು" (ಲಾಸ್ಯರಂ. ೨೬೮ ಗದ್ಯಾನುವಾದ). 'ದೃಪ್ತದೃಷ್ಟಿ' ಪರಾ. [ಸಂ.]

**ದೃಪ್ತದೃಷ್ಟಿ** (ನಾ). = ದೃಪ್ತ ೪ : ಸಂಚಲಮಿಲ್ಲದೆ ಕಣ್ಮಲರ್ದುಂ ಚಲ್ಲದೆ ಗರ್ವಭಾವದಿಂದಂ ಬೆಱಗಿಂದಂ ಚಂದದೊಳು[ಱ]ವೆತ್ತುಂ ಮಿಂಚುವ ಕಣ್ ಮೂಡೆ ದೃಪ್ತದೃಷ್ಟಿಯೆನಿಕ್ಕುಂ (ಲಾಸ್ಯರಂ. ೩-೨೨).
[ ದೃಪ್ತ + ದೃಷ್ಟಿ ]

**ದೃಪ್ಯದ್ಬಳ** (ನಾ). ೧. ದರ್ಪವುಳ್ಳ ಸೈನ್ಯ. ೨. ದರ್ಪದಿಂದ ಕೂಡಿದ ಸೈನ್ಯವುಳ್ಳವನು: ದೆಸೆಯುಂ ಖಡ್ಗಾಂಶುಜಾಲಂ ಬೆಳಗೆ . . . ದಿಗ್ವೇತಂಡವುಂ ಡಿಂಡಿಮರುತಿ ಚಕಿತಂ ಮಾಡೆ ದೃಪ್ಯದ್ಬಳಂ ಮಾಮಸಕಂ ಗೊಂಡೆತ್ತಿ ಬಂದಂ ಬಗೆಯದೆ ಪೃಥಿವೀಪಾಲನುಗ್ರಾಜಿಲೋಲಂ (ಚಂದ್ರಪ್ರ. ೧೦-೫೮). [ ಸಂ. ದೃಪ್ಯದ್ಬಲ ]

**ದೃಬ್ಧ** (ಗು). ೧. ಕಟ್ಟಿದ ; ಪೋಣಿಸಿದ ; ಜೋಡಿಸಿದ : "ಗ್ರಥಿತಂ, ಗ್ರಂಥಿತಂ, ದೃಬ್ಧಂ– ೨ ಕಟ್ಟಲ್ಪಟ್ಟ ಅಥವಾ ಪೋಣಿಸಲ್ಪಟ್ಟ ಪುಷ್ಪಮಾಲಾದಿಗಳ ಹೆಸರುಗಳು" (ಸಿದ್ಧಾಂತಿ. ೩೪೬). ೨. ಹೆದರಿದ ; ಭಯಗೊಂಡ.
[ ಸಂ. ]

**ದೃಶ್ಯ** (ಗು). ೧. ಕಣ್ಣಿಗೆ ಕಾಣುವ ; ದೃಷ್ಟಿಗೆ ಗೋಚರವಾಗುವ. ೨. ನೋಡಬಹುದಾದ ; ನೋಡಲು ಯೋಗ್ಯವಾದ. ೩. ಸುಂದರವಾದ; ರಮಣೀಯವಾದ; ಮನೋಹರವಾದ. (ನಾ). ೪. ಕಣ್ಣಿಗೆ ಕಾಣುವಂತಹುದು ; ಗೋಚರವಾಗುವುದು ; ಜನಜೀವನದಲ್ಲಿ ಕಾಣುವ ಯಾವುದಾದರೊಂದು ಘಟನೆ : ದೃಶ್ಯ ಜಡಸಂಧಾನವೆನಿಸುವ ನಶ್ವರದ ಮನ ನೇತ್ರ ವಾಗಾದಿಸ್ವಚೇಷ್ಟಾದುರ್ಬಲಗಳೆಂತಾವನೊಬ್ಬನನು ಆಶ್ರಯಿಸಿ (ಅಮೃತ. ೩-೭೦) ; ಜೀವಾತ್ಮನಿಗೆ ಹಿಂದೆ ಹೇಳಿದ ಬುದ್ಧಿಯನ್ನು ನೋಡುತ್ತಿರುವ ಸ್ವಭಾವ ಎಂದರೆ ಸಾಕ್ಷಿತ್ವವು ಇರುವುದರಿಂದ ಇವನು ದ್ರಷ್ಟಾ, ಇತರ ವಸ್ತುಗಳು ದೃಶ್ಯ (ಹಿಂದಸಾ. ೫೯). ೫. ಕಾಣ್ಕೆ; ನೋಟ: ವಿಕ್ರಮಾದಿತ್ಯನ ತಲಮಂಚಿಶಾಸನದ ಕಾಲವು ಅವನ ಆಳಿಕೆಯ ೬ನೆಯ ವರ್ಷದಲ್ಲಿ ಬಂದ ಶ್ರಾವಣಮಾಸದ ಸೂರ್ಯಗ್ರಹಣವು ಕ್ರಿ. ಶ. ೬೬೦, ಜುಲೈ ೧೩ ಸೋಮವಾರದಂದು ಬಾದಾಮಿಯಲ್ಲಿ ದೃಶ್ಯವಿತ್ತು (ಕರ್ನಾಟ. ೭೨). ೬. ನೋಡಲು ತಕ್ಕುದು ; ನೋಟಕ್ಕೆ ಯೋಗ್ಯವಾದಂದು : ಅದು ಕಂಡವನಿಪಾಳನಿವಳುಮಿಾ ಜಳಮುಂ ದೃಶ್ಯಮಲ್ಲದೆ ಪರಿಸ್ಪೃಶ್ಯಮಲ್ಲೆಂದಲ್ಲಿಂ ತಳರ್ದು ನಡೆಯೆ (ಲೀಲಾವ. ೬-೪೩ ವ). ೭. [ಕಾವ್ಯಮಿಾ] ಅಭಿನಯದ ಸಹಾಯದಿಂದ ಪ್ರದರ್ಶನವಾಗಬಹುದಾದ ಕಾವ್ಯ ; ದೃಶ್ಯಕಾವ್ಯ; ನಾಟಕ ; ರೂಪಕ: ದೃಶ್ಯ ಶ್ರವ್ಯ ದ್ವಿಧಮಾತ್ರಾದಿಪ್ರಯೋಗಂಗಳೊಳಂ ನಾನಾವಿಧ ವಾದ್ಯಂಗಳೊಳಂ ಆಂಗಿಕಾಭಿನಯಂಗಳೊಳಮೆಸೆಯೆ . . . ರಂಗಂಬೊಕ್ಕು (ಆದಿಪು. ೭-೧೧೪ ವ): ದೃಶ್ಯಕ್ಕೆ 'ಅಭಿನೇಯ'ವೆಂದೂ ಹೆಸರು. ನಾಟಕಾದಿ ರೂಪಕಗಳು 'ದೃಶ್ಯ' ವೆನಿಸುತ್ತವೆ (ಕೃಪಿಡಿ. ೧೮೦). ೮. ನೋಟಕ್ಕೆ ಆನಂದವನ್ನುಂಟುಮಾಡುವ ರಂಗದ ಏರ್ಪಾಡು,–ರಂಗಸಜ್ಜಿಕೆ : ಪ್ರತಿಯೊಂದು ರುದ್ರನಾಟಕದಲ್ಲಿಯೂ ಅರಿಸ್ಟಾಟಲನು ಆರು ಅಂಗಗಳನ್ನು ನಿರ್ದೇಶಿಸುತ್ತಾನೆ. ಅವು ದೃಶ್ಯ (Spectacle), ಗೀತ (Song), ವಸ್ತು (Plot) (ಅರಿಕಾ. ೨೮). ೯. ನಾಟಕದ ಒಂದು ಸನ್ನಿವೇಶ,– ಘಟನೆ ; ಅಂಕದ ಒಂದು ಭಾಗ: ಈ ಗ್ರೀಕ್ ಪ್ರಹಸನದ ದೃಶ್ಯ ತುಳುವದೇಶದ ಸಮುದ್ರತೀರದ್ದೇ ಇರಬೇಕೆಂದೂ . . . ವಿದ್ವಾಂಸರು ಊಹಿಸಿದ್ದಾರೆ (ದ್ರಾವಿವಿ. ೭೮). ೧೦. ಘಟನೆ ನಡೆಯುವ ಸ್ಥಳ : ಬಳಿಕ ದೃಶ್ಯವು ದಂಡಕಾರಣ್ಯಕ್ಕೆ ವರ್ಗವಾಗಿ, ಅಲ್ಲಿಯ ಋಷಿಗಳ ಶಾಂತಜೀವನದ ಪ್ರಕರಣವು ತೆರೆಯುತ್ತದೆ(ಭಾರದ. ೮೮). [ಸಂ.]

**ದೃಶ್ಯಕಲಾಕೃತಿ** (ನಾ). ನೋಟದ ಮೂಲಕ ಸಂತೋಷವನ್ನುಂಟುಮಾಡುವ ಚಿತ್ರ, ಶಿಲ್ಪ ಮುಂತಾದ ಕಲಾವಿದನ ನಿರ್ಮಾಣ : ಕ್ಲೈವ್‌ಬೆಲ್ . . . ದೃಶ್ಯಕಲಾಕೃತಿ (Visual art) ಗಳಲ್ಲಿ ಇರುವ ಈ ಗುಣವನ್ನು 'ಸಿಗ್ನಿಫಿಕೆಂಟ್ ಫಾರಂ' ಎಂದು ಕರೆಯುತ್ತಾನೆ (ಸೌಂದಸ. ೭೫).
[ ದೃಶ್ಯ + ಕಲಾಕೃತಿ ]

**ದೃಶ್ಯಕಾವ್ಯ** (ನಾ). [ಕಾವ್ಯಮಿಾ] ಅಭಿನಯದ ಸಹಾಯದಿಂದ ಪ್ರದರ್ಶಿಸಬಹುದಾದ ಕಾವ್ಯ ; ರೂಪಕ ; ನಾಟಕ : ಸಂಸ್ಕೃತದಲ್ಲಿ ದೃಶ್ಯಕಾವ್ಯಕ್ಕೆ 'ರೂಪಕ' ಎಂಬುದು ಸಾಮಾನ್ಯವಾದ ಹೆಸರು(ಭಾರಮಿ. ೬ ಅಡಿಟಿ).
[ ದೃಶ್ಯ + ಕಾವ್ಯ ]

**ದೃಶ್ಯತೆ** (ನಾ). ಪ್ರದರ್ಶನಕ್ಕೆ ಯೋಗ್ಯವಾಗಿರುವಿಕೆ ಪ್ರದರ್ಶನಸಾಧ್ಯತೆ : ನಾಟಕದ ಈ ದೃಶ್ಯತೆ ಹಾಗು ಶ್ರಾವ್ಯತೆಗಳಲ್ಲಿ ಒಂದು ಪ್ರಕಾರದ ವಿರೋಧವು ನಿರ್ಮಾಣವಾದುದು ಕಂಡುಬರುತ್ತದೆ (ಪ್ರಬಂಧ. ೩೭).
[ ಸಂ. ದೃಶ್ಯತಾ ]

**ದೃಶ್ಯತೆವಡೆ** (ಕ್ರಿ). ಕಾಣುವಂತಾಗು ; ವ್ಯಕ್ತವಾಗು : ಚಿಂಬಾವುಡೆಯುಡಿವಸನವು ತೊಯ್ದು ನಿತಂಬವು ದೃಶ್ಯತೆವಡೆದು... ಮೆಚ್ಚಿಯೆ ಪೀತಾಂಬರ ನೋಡಿ ಹಿಗ್ಗಿದನು (ಮೋಹತ. ೧೪-೫೮). [ ದೃಶ್ಯತೆ + ಪಡೆ₁ ]

**ದೃಶ್ಯಾದ್ಭುತ** (ನಾ). ನೋಡಲು ಅದ್ಭುತವಾದುದು ; ನೋಟಕ್ಕೆ ಆಶ್ಚರ್ಯವನ್ನುಂಟುಮಾಡುವುದು : ದಿಟಂ ರಾಕ್ಷಸವ್ಯಾಯಾಮರಂಗ ಮಿರವೇಳ್ಕುಮಿಾ ದೃಶ್ಯಾದ್ಭುತಂ ! (ಶ್ರೀರಾಮಾ. ೪೫೫-೨೭೯).
[ ದೃಶ್ಯ + ಅದ್ಭುತ ]

**ದೃಶ್ಯಾಧಾರ** (ನಾ). ಪತ್ರದಲ್ಲಿ ತೋರಿಸಿರುವ, ಆದರೆ ಸ್ವಾಧೀನಕ್ಕೆ ಒಪ್ಪಿಸದಿರುವ ಒತ್ತೆ ; ತೋರ್ವೊತ್ತೆ : (ಮ್ಯಾಗಿಜಿ. IV, ೭೬೮).
[ ದೃಶ್ಯ + ಆಧಾರ ]

**ದೃಶ್ಯಾನುವಿದ್ಧ** (ನಾ). [ಯೋಗ] ದೃಶ್ಯಾನುವಿದ್ಧ, ಶಬ್ದಾನುವಿದ್ಧ, ನಿಃಸಂಕಲ್ಪ, ನಿರ್ವಿಕಲ್ಪ, ನಿವೃತ್ತಿಕ, ನಿರ್ವಾಸನ ಎಂಬ ಆರು ಬಗೆಯ ಸಮಾಧಿಗಳಲ್ಲಿ ಒಂದು ; ದೃಶ್ಯದಿಂದ ಕೂಡಿದ ಸವಿಕಲ್ಪ ಸಮಾಧಿ : ಘಟಾದಿ ವಿಷಯ ಜಾತದೊಳ್ ಅವುದಾನೊಂದನಾದರೂ ಕುಱಿತು ಅದಱ ನಾಮ ರೂಪುಗಳೆಂಬ ಮಾಯಾಂಶಗಳೆರಡನೂ ಮಱೆತು ಅಸ್ತಿ ಭಾತಿ ಪ್ರಿಯಮೆಂಬ ಸಚ್ಚಿದಾನಂದ ಬ್ರಹ್ಮಾಂಶತ್ರಯವನನುಸಂಧಾನಂಗೈವುದೇ ಬಾಹ್ಯದ ದೃಶ್ಯಾನುವಿದ್ಧವೆಂಬ ಸವಿಕಲ್ಪಕಸಮಾಧಿಯೆನಿಸುವುದು (ವಿವೇಕ. ೫೭) ; ಧ್ಯಾನಿಸಲು ಸವಿಕಲ್ಪಕವೆ ದೃಶ್ಯಾನುವಿದ್ಧವದೇ ಮಗುಳೆ ಶಬ್ದಾನುವಿದ್ಧವಿವೆರಡು ಬಾಹ್ಯಾಭ್ಯಂತರಗಳೆಂದ (ಅಮೃತ. ೬-೫೫) ; "ದೃಶ್ಯದಿಂದ ಕೂಡಿದ್ದು" (ಅಮೃತ. ಅಡಿಟಿ) ; ಒಳಗೆ ಕರಣಂಗಳನು ಕುಱುಹಿಟ್ಟಳವಡಲು ದೃಶ್ಯತ್ವದಿಂ ತಾ ತಿಳಿಯುತವನೊಂದೊಂದ ನಿದಿರಿಟ್ಟಱಿದು ತಾನದಕೆ ತಳೆದು ಸಾಕ್ಷಿತ್ವವನು ಬೇಱಾಗುಳವುದೇ ದೃಶ್ಯಾನುವಿದ್ಧವು ಬಳಿಕಯ ಸಮಾಧಿಯು (ಅಮೃತ. ೬-೫೭) ; ಆವನಿದ ಕೇಳುವನು ಕಾಣುವನಾವನಾಸ್ವಾದಿಸುವ ಗಂಧವನಾಘ್ರಾಣಿಸುವ ಶೀತೋಷ್ಣಗಳನ ಱುಹಿಸುವ ಆ ವಿಭುವೆ ತಾನೆನ್ನುತಲಿ ತಾನೀ ವಿಷಯಗಳ ಕುಱಿತು ಕುಱುಹನು ಭಾವಿಸಲು ದೃಶ್ಯಾನುವಿದ್ಧವು (ಅಮೃತ. ೬-೫೭) ; ಮನಕೆ ವಚನಕೆ ಕಣ್ಗಗೋಚರನೆನಿಸುವಾತ್ಮನನಾವ ಪರಿಯಲಿ ನೆನೆಯಬಹುದೆಂದೆನಲು ಕೇಳು ತಟಸ್ಥಲಕ್ಷಣವ ಅನುವಿನಿಂ ಶಾಖಾಗ್ರದಲಿ ಚಂದ್ರನನು ಸಾಧಿಸುವಂತೆ ಕರಣಗಳನಿತುವನು ಕುಱುಹಿಟ್ಟಱಿಯೆ ದೃಶ್ಯಾನುವಿದ್ಧವದು (ಅಮೃತ. ೬-೫೮). 'ನಿರ್ವಿಕಲ್ಪಸಮಾಧಿ', 'ಸವಿಕಲ್ಪಸಮಾಧಿ' ಪರಾ. [ ದೃಶ್ಯ + ಅನುವಿದ್ಧ ]

**ದೃಶ್ಯಾವಳಿ** (ನಾ). (ನಾಟಕ, ಕಥೆ ಮುಂತಾದುವುಗಳ) ದೃಶ್ಯಗಳ ಸಾಲು, – ಮಾಲೆ : ಅನಂತರ ಕಥೆಯ ದೃಶ್ಯಾವಳಿಯಲ್ಲಿ ಇನ್ನೊಂದು ಹೊಸದಾದ ವಿಸ್ತಾರವಾದ ದೃಶ್ಯವು ತೆರೆಯುತ್ತದೆ (ಭಾರದ. ೮೮).
[ ದೃಶ್ಯ + ಆವಳಿ$_1$ (=ಆವಲಿ) ]

**ದೃಶ್ಯೋಪಮಾನ** (ನಾ). (ಚಿತ್ರಕಲೆಯಲ್ಲಿ) ಒಂದು ಗೊತ್ತಾದ ಸ್ಥಾನದಿಂದ ಒಂದು ಘನವಸ್ತುವನ್ನು ನೋಡಿದರೆ ಹೇಗೆ ಅದು ಕಾಣುವುದೋ, ಅದೇ ಪರಸ್ಪರ ಸಂಬಂಧವುಳ್ಳ ಸ್ಥಾನ, ಪ್ರಮಾಣ ಇತ್ಯಾದಿಗಳಲ್ಲಿ ಕಾಣುವಂತೆ, ಆ ವಸ್ತುವನ್ನು ಸಮತಲದ ಮೇಲೆ ನಿರೂಪಿಸುವುದು ; ಯಥಾರೋಪಣ : ಉತ್ತಮರೀತಿಯಲ್ಲಿ ವರ್ಣ ಪ್ರಭಾವ (Colour Effects) ಛಾಯಾತೇಜ, ದೃಶ್ಯೋಪಮಾನ (Perspective) ಇವೆಲ್ಲವುಗಳ ಬಲದಿಂದ ಕಣ್ಣಿಗೆ ಸೊಗಸಾಗುವಂತೆ ಮಾಡಿದರೆ . . . ಅದೇ ಕಲೆಯೆಂದು ತಿಳಿಯುತ್ತಿರುವೆವು (ಛಾಚಿತ್ರ. ೧೨).
[ ದೃಶ್ಯ + ಉಪಮಾನ ]

**ದೃಷದ** (ನಾ). ಕಲ್ಲು ; ಶಿಲೆ : ಶಮ್ಯವುಲೂಖಲಂಗಳು ದೃಷಜ [ದ] ಕೃಷ್ಣಾಜಿನ ಜುಹು ಸ್ರುವೆ ದರ್ವಿಯುತ ಕುಂಭಯೆಸೆಯಲು (ಕೌಶಿರಾ. ೧-೫೯). [ ಸಂ. ದೃಷದ್ ]

**ದೃಷದವದಾರಿಣಿ** (ನಾ). ಕಲ್ಲು ಕಡೆಯುವ ಉಳಿ ; ಕಲ್ಲುಳಿ ; ಟಂಕ : "ದೃಷದವಧರಣಿ [ದಾರಿಣಿ] ಪೆಸರ್ಗೊಳ್ವುದಂತದಕ್ಕುಂ ಟಂಕಂ" (ವಸ್ತುಕೋ. ೫೧-೩೬). [ ಸಂ. ದೃಷದವದಾರಿಣೀ ]

**ದೃಷದಾಶನ** (ನಾ). ಕಲ್ಲು ಹರಳು ತಿನ್ನುವ ಪಕ್ಷಿ; ಪಾರಿವಾಳ : "ದೃಷದಾಶನಂ ಪಾರಿವಮೆನಿಕ್ಕು" (ಮಂಗರಾ. ೫೨-೮). [ ಸಂ. ]

**ದೃಷ್ಟ** (ಗು). ೧. ನೋಡಿದ ; ಈಕ್ಷಿಸಿದ ; ಕಂಡ. ೨. ಗಮನಿಸಿದ ; ಲಕ್ಷ್ಯಕೊಟ್ಟ. ೩. ತಿಳಿದುಕೊಂಡ ; ಗ್ರಹಿಸಿದ. ೪. ನಿಶ್ಚಯಿಸಿದ ; ನಿರ್ಧಾರ ಮಾಡಿದ. ೫. ಅನುಭವಿಸಿದ. (ನಾ). ೬. ನೋಟ; ದರ್ಶನ: ಸಾಕಾರರೂಪನೆ ತಾಳಿ ಬಿಜ್ಜಳಗೆ ಬೇಕಾದ ದೃಷ್ಟವನು ತೋರಿದ ಗುರುವೆ (ಶಿವಗೀ. ೬೬-೩೧೭). ೭. ಕಣ್ಣಿಗೆ ಕಾಣಿಸಿಕೊಳ್ಳುವುದು ; ಗೋಚರವಾಗುವುದು : ಬಯಲು ಮೊಳಗಿ ಮಳೆ ಸೃಜಿಸಿ ಆ ಬಯಲು ಆ ಮಳೆಯ ನೊಡಗೂಡಿ ದೃಷ್ಟವಪ್ಪ ವಾರಿಕಲ್ಲಾಗಿ ತೋರಿದಂತೆ ನಿನ್ನ ನೆನಹೆ ನಿನಗೆ ಶಕ್ತಿಯಾಯಿತ್ತಲ್ಲಾ (ವಚಸಂ. ೨೫-೮೭); ದೃಷ್ಟಿಯ ದೃಷ್ಟದಿಂದ ಮೋಹದ ಲವಲವಿಕೆ (ವಚಸಂ. ೫೧೬-೮೮). ೮. ಕಾಣಬಹುದಾದುದು : ಮರಳು ಕೌರವ ಜಂಗಮ ಸ್ಥಾವರದ ದೇಹಕೆ ಸೆಳಲಹುದು ದಿನಕರನ ದೇಹಕೆ ನೆಳಲು ಶ್ರುತವೋ ದೃಷ್ಟವೋ ನಿನಗೆ (ಕುವ್ಯಾದ್ರೋ. ೧೫-೫೪) ; ಇದನ್ನು ದೃಷ್ಟವೆಂದೂ ಶ್ರುತವೆಂದೂ ಉಪಾಸನೆ ಮಾಡಬೇಕು (ಬೃಹ್ಯಭಾ. I, ೨೧೫). ೯. ಪ್ರತ್ಯಕ್ಷ ; ಸಾಕ್ಷಾತ್ಕಾರ : ನಿಮ್ಮ ನಂಬಿದ ಮತ್ತೊಂದನರಿಯೆ ನಿತ್ಯಸ್ವತಂತ್ರನು ನೀನೆ ದೃಷ್ಟ ಲಿಂಗ ಜಂಗಮ ಒಂದೆ ಎಂದಿಪ್ಪೆನು ಪರಮ ಪ್ರಭುವೆ (ಬಸವ. ೮೩೦) ; ಸಾಕಾರ ನಷ್ಟ ನಿರಾಕಾರ ದೃಷ್ಟವೆಂಬುದು ಭಾವದ ಬಳಲಿಕೆ (ಅವಚಂ. ೨೧೧-೯೫೦) ; ನಿಷ್ಠೆಯಿಲ್ಲದ ಪೂಜೆ ಎಷ್ಟು ಕಾಲ ಮಾಡಿದರು ನಷ್ಟವಲ್ಲದೆ ದೃಷ್ಟವುಂಟೆ (ಶಿವಗೀ. ೧೬೦-೮೦೦ ವ). ೧೦. ಗುರುತು; ಕುರುಹು : ಲಿಂಗಕ್ಕೆ ಮಜ್ಜನವ ಮಾಡುವಲ್ಲಿ ಮಂಡೆಯ ಕುರುಹನರಿಯೆ . . . ಇನ್ನಾರಿಗೆ ಹೇಳುವೆ ಕೊಟ್ಟ ಗುರು ದೃಷ್ಟವ ಹೇಳಿದುದಿಲ್ಲ (ಮೋಳಿಮಾ. ೧೬೫-೬೧೫). ೧೧. ಉದಾಹರಣೆ ; ನಿದರ್ಶನ; ದೃಷ್ಟಾಂತ : ಇಂತಪ್ಪ ಇಷ್ಟಲಿಂಗವ ದೃಷ್ಟದಲ್ಲಿ ಹಿಡಿದುದಕೆ ಇದೇ ದೃಷ್ಟ (ಮೋಳಿಮಾ. ೬೦-೨೫೦) ; ಎಮ್ಮ ವಚನವೆ ಮೃದುತರಯೋಗವೇ ಪರಿಯಂಕಶೂಲವಿದಕ್ಕೆ ದೃಷ್ಟವಲಾ (ಬಸಪು. ೨೯-೧) ; ಒರ್ವರಿಗೆ ಹುಟ್ಟಿ ಮತ್ತೊರ್ವರ ಅಪ್ಪ ಎಂಬ ನಾಣ್ಣುಡಿಯು ದೃಷ್ಟ ಎನಗಾಯಿತ್ತಯ್ಯ ಗುರುವೆ (ಘನವ. ೬-೪) ; ನಿಷ್ಠೆಯಿಂದಿರುವಂಥ ಸತಿಯು ಭ್ರಷ್ಟಳಾಗುವುದಿಲ್ಲವಿದನು ನೀನರಿತಿರು ದೃಷ್ಟವು ದಮಯಂತಿಕಥೆಯು (ಇಂಚಾಪ. ೧೦೦-೮೮). ೧೨. ಸಾಕ್ಷಿ ; ಪುರಾವೆ. 'ವಾಗ್ದೃಷ್ಟ' ಪರಾ. ೧೩. ಒರೆಗಲ್ಲು : 'ದೃಷ್ಟಮೆನೆ ಮಚ್ಚಮಕ್ಕುಂ" (ಮಂಗರಾ. ೧೦೫-೧೪). ೧೪. [ವೀಶೈ] ದರ್ಶನದಿಂದ ಸಾಧ್ಯಮಾಡಿಕೊಂಡ ಅಲೌಕಿಕ ಭಾವ, – ವಸ್ತು, – ಪರಬ್ರಹ್ಮ. 'ದೃಷ್ಟಪೂಜೆ' ಪರಾ. [ ಸಂ. ]

**ದೃಷ್ಟನಷ್ಟ** (ನಾ). ಕಣ್ಣಿಗೆ ಕಾಣಿಸಿ ಮಾಯವಾಗುವುದು ; ದೃಷ್ಟಿಗೆ ಗೋಚರವಾಗಿ ಅದೃಶ್ಯವಾಗುವುದು ; ನಶ್ವರವಾದುದು : ತನ್ನ ಕಲ್ಪಿತದ ಉತ್ಪತ್ತಿಯನರಿಯದೆ ಸತ್ತಿಹೆನೆಂಬ ಭ್ರಾಂತಿಯಿಂದ ನಿಜವಸ್ತುವ ಮುಟ್ಟದೆ ಹೋಯಿತ್ತೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ದೃಷ್ಟನಷ್ಟ ಭಾವಿಯಾದ ಕಾರಣ (ಮೋಳಿಮಾ. ೧೭೮-೭೭೦) ; ಮನೆ ಮಠ . . . ಮೊದಲಾದ ಸಕಲವಸ್ತುಗಳು ನೋಡುತ್ತಿರುವಾಗಲೇ ನಾಶವಾಗಿ, ವಸ್ತುಗಳು ಇದ್ದದ್ದಕ್ಕೂ ಇಲ್ಲದಿದ್ದಕ್ಕೂ ವ್ಯತ್ಯಾಸವಿಲ್ಲದೆ ಮಾಯಾಪ್ರಾಯವಾಗಿರುವುದೆಂದು ಲೋಕಾನುಭವದಲ್ಲಿದೆ. ಇದಕ್ಕೆ ದೃಷ್ಟನಷ್ಟವೆಂದು ಹೆಸರು. ಎಂದರೆ ಕಣ್ಣಿಗೆ ಕಾಣಿಸಿ ಮಾಯವಾಗುವುದೆಂದು ಅರ್ಥವು (ಹಿಂದಸಾ. ೪೪). [ ದೃಷ್ಟ + ನಷ್ಟ ]

**ದೃಷ್ಟಪೂಜೆ** (ನಾ). [ವೀಶೈ] ಕಾಣುವ ಪರವಸ್ತುವಿಗೆ ಮಾಡುವ ಪೂಜೆ : ಇಂತಿದು ಇಷ್ಟಲಿಂಗದ ದೃಷ್ಟಪೂಜೆ, ದೃಷ್ಟಯೋಗ (ಮೋಳಿಮಾ. ೧೦೬ ಪ್ರಸ್ತಾವನೆ). [ ದೃಷ್ಟ + ಪೂಜೆ$_2$ ]

**ದೃಷ್ಟಾಂತ** (ನಾ). ೧. ಪ್ರತ್ಯಕ್ಷವಾಗಿ ಕಂಡುದು : ಶಾಸ್ತ್ರವ್ಯವಹಾರದಲ್ಲಿ ಅಂತ ಪದಕ್ಕೆ ಕೊನೆಯೆಂದರ್ಥದ ಮೇಲೆ ನಿರ್ಣಯವೆಂದರ್ಥ ಪ್ರಸಿದ್ಧ, ದೃಷ್ಟಾಂತ, ಸಿದ್ಧಾಂತ, ವೇದಾಂತ ಈ ಮೂರು ಪದಗಳಲ್ಲಿ ದೃಷ್ಟಾಂತ ಪದವು ನೋಡಿ ಬಂದ ನಿರ್ಣಯವೆಂದರ್ಥದಲ್ಲಿರುವುದು (ಹಿಂದಸಾ. ೦೮೦). ೨. ಉದಾಹರಣೆ; ನಿದರ್ಶನ : ಎಂತಾನುಂ ಪಲವುಂ ದೃಷ್ಟಾಂತಮನೆನಿತಾನುಮುಪಮೆಯುಂ ತದ್ದ್ವಿಜರ್ ಮುಂ ತೋರಿ ತೋರಿ ಚಿತ್ರಭ್ರಾಂತಿಯುಮಂ . . . ಪಿಂಗಿಸಿದರ್ (ಪಂರಾಮಾ. ೧೭-೫೬) ; ಕೃಷ್ಣನ ಜಯಮುನೀಗಳರಿಯಿರೆ ಕಡುಕೆಯ್ದಾ ಕೇಶಿ ಧೇನುಕರ್ಕಳನೇಕಾಂಗದೆ ಗೆಲ್ದುದಲ್ಲವೇ ದೃಷ್ಟಾಂತಂ (ಜಗವಿ. ೫-೮೯) ; ಆವ ಮಾರ್ಗದೊಳಾದಡಾತನ ಸಾವು ಕೆಡಿಸಿದಡಲ್ಲದಾಗದು ಭಾವಿಸಲು ದೃಷ್ಟಾಂತಮಾಗಳೆ ದೃಷ್ಟವಹುದು (ಬಸಪು. ೫೦-೫೬) ; ಮೀಸಲಿನ ಮಾನಿನಿಯರಲಿ ಮನದಾಸೆ ಮನುಜರ ಮುರಿವುದಕೆ ನಾನೈಸಲೇ ದೃಷ್ಟಾಂತವೆಂದನು ನಹುಷ (ಕುವ್ಯಾಅ. ೧೩-೬೬); ಪದವಿ ತಪ್ಪಿದ ಮೇಲೆ ನಂಟರಿಪ್ಪರೆ ನಮಗೆ ಕಟ್ಟಿಟ್ಟ ಹಗೆ ಕಾಣ ಕೊನೆಗೆ ದೃಷ್ಟಾಂತವನು ಕೇಳು ಕೆರೆ ಬತ್ತಿ ಬರಿದಾಗೆ ಅಪ್ತನೆ ವೈರಿ ತಾವರೆಗೆ (ಇಂಚಾಪ. ೯೨-೫೦). ೩. ಸ್ಪಷ್ಟವಾದ ಗುರುತು, – ಚಿಹ್ನೆ : ತ್ರಿದಶಾರಿ ಧೂಮಕೇತುವನುದರದೊಳೀ ದೇವಿ ತಳೆದುದರ್ಕಿದೆ ದೃಷ್ಟಾಂತದ ಧೂಮಲೇಖೆಯನೆ ಕರ್ಪೊದವಿದ ರೋಮಾಳಿ ರಂಜಿಕುಂ ದೇವಕಿಯಾ (ಜಗವಿ. ೨-೯೧). ೪. ಸಾಯುವುದು ; ಮರಣ. ೫. [ಕಾವ್ಯಮೀ]=ದೃಷ್ಟಾಂತಾಲಂಕಾರ : ಎಂತುಟು ಮುನ್ನಂ ಪೇಟ್ದರ್ಥಾಂತರಮಂತುಟನೆ ಬಟಿಕೆ ತೋರುವುದದು ದೃಷ್ಟಾಂತಂ (ಕಾವ್ಯಾವ. ೭೦೪). ೬. [ನ್ಯಾಯ] ಹದಿನಾರು ಪದಾರ್ಥಗಳಲ್ಲಿ ಒಂದು : ಗೌತಮೋಕ್ತನ್ಯಾಯವು ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ ಸಿದ್ಧಾಂತ ಅವಯವ ತರ್ಕ ನಿರ್ಣಯ ವಾದ ಜಲ್ಪ ವಿತಂಡಾ ಹೇತ್ವಾಭಾಸ ಛಲ ಜಾತಿ ನಿಗ್ರಹಸ್ಥಾನಂಗಳೆಂಬ ಷೋಡಶ ಪದಾರ್ಥಂಗಳಂ ನಿರೂಪಿಸುತ್ತ (ವಿವೇಕ. ೧೧) ; ನ್ಯಾಯ ದರ್ಶನದಲ್ಲಿ ಪ್ರಮಾಣ, ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ ಸಿದ್ಧಾಂತ ಅವಯವ ತರ್ಕ ನಿರ್ಣಯ ವಾದ ಜಲ್ಪ ವಿತಂಡಾ ಹೇತ್ವಾಭಾಸ ಛಲ ಜಾತಿ ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದಸಾ. ೦೦೩). 'ಪದಾರ್ಥ' ಪರಾ ; P 'ಕಾರ್ಯ'

ವೆನಿಸುವುದಕ್ಕೆಲ್ಲ ಒಬ್ಬ ಕರ್ತೃ ಇದ್ದೇ ತೀರಬೇಕು, ಗಡಿಗೆ ಎಂಬ ಕಾರ್ಯಕ್ಕೆ ಕರ್ತೃವಾಗಿ ಕುಂಬಾರನೊಬ್ಬನು ಇರುವಂತೆ. ಹಾಗೆಯೇ ಪ್ರಪಂಚವೂ ಒಂದು ಕಾರ್ಯ. ಆದ್ದರಿಂದ ಅದಕ್ಕೂ ಒಬ್ಬ ಕರ್ತೃ ಇದ್ದಾನೆ. ಅವನೇ ಈಶ್ವರ. ನ್ಯಾಯ ಪ್ರಯೋಗದಲ್ಲಿ ಹೀಗೆ ಉದಾಹರಣೆಗಳನ್ನು ನೀಡುವುದೇ ದೃಷ್ಟಾಂತ. ೭. (ಉಕ) ಸ್ವಪ್ನದಲ್ಲಿ ಕಾಣುವ ಸೂಚನೆ: ನಮಗಾದರೂ ಎಲ್ಲಿ ತಿಳಿದಿತ್ತು? ಹಳೇ ಕಾಲ ಆಗಿದ್ದರ ದೃಷ್ಟಾಂತ ಆಗೇದ ಅಂತ ಬಂದು ಹೇಳಬೇಕು, ಅಂಥಾ ಚಮತ್ಕಾರ ಆಗೇದ (ಹೊಸಂಸಾ. ೨೩). [ಸಂ.]

**ದೃಷ್ಟಾಂತಕಥೆ** (ನಾ). ನೀತಿಬೋಧನೆಗಾಗಿ ಅಥವಾ ಅಭಿಪ್ರಾಯ ನಿರೂಪಣೆಗಾಗಿ ನಿರೂಪಿಸುವ ಕಥೆ: ಮಕ್ಕಳ ಮನಸ್ಸಿಗೆ ಹಿಡಿಯುವಂತೆ ದೃಷ್ಟಾಂತಕಥೆಗಳನ್ನು ಹೇಳುವುದರಿಂದ ಎಷ್ಟೋ ಗಹನವಾದ ವಿಷಯಗಳನ್ನು ಸುಲಭವಾಗಿ ಗ್ರಹಿಸುತ್ತಾರೆ (ರೂಢಿ).
[ದೃಷ್ಟಾಂತ + ಕಥೆ]

**ದೃಷ್ಟಾಂತಾಲಂಕಾರ,** ದೃಷ್ಟಾಂತಾಳಂಕಾರ (ನಾ). [ಕಾವ್ಯಮೀ] ಅರ್ಥಾಲಂಕಾರದ ಒಂದು ಭೇದ: ಎರಡು ವಾಕ್ಯಂಗಳ್ಬೇಱಾಗಿ ಯೊಂದಕ್ಕೊಂದು ಸಾದೃಶ್ಯದಿಂ ಪ್ರತಿಬಿಂಬದಂತೆ ತೋಱುವುದು ದೃಷ್ಟಾಂತಾಲಂಕಾರಂ (ಅಪ್ರತಿ. ೬೦); ಎರಡು ಬೇರೆ ಬೇರೆ ವಾಕ್ಯಗಳು ಪರಸ್ಪರ ಅರ್ಥಸಾದೃಶ್ಯದಿಂದ, ಒಂದರ ಪ್ರತಿಬಿಂಬ ಮತ್ತೊಂದು ಎಂದು ತೋರುವಂತಿದ್ದರೆ, ಅದು ದೃಷ್ಟಾಂತಾಲಂಕಾರ. ಲಕ್ಷ್ಯ–ನಿಂದಿಸುವರ್ ದುರ್ಜನರೆಂಬೊಂದು ಭಯುಂಬೆತ್ತು ಸುಕವಿ ರಚಿಸನೆ ಕೃತಿಯಂ ಮುಂದೇಹರಭಯದಿಂದರವಿಂದಸಖಂ ನಿಜಮಯೂಖಮಂ ಪಸರಿಸನೇ (ಕೃಪಿಡಿ. ೨೬೫). **ದೃಷ್ಟಾಂತಾಳಂಕಾರ:** ಇಂತುದಿತ ಭೇದಮಂ ದೃಷ್ಟಾಂತಾಳಂಕಾರಮಾರ್ಗಮಂ ಕನ್ನಡದೊಳ್ ಸಂತತಗುಣಮಂ ಕೈಕೊಳ್ವಂತಾಗಿರೆ ಬಗೆದು ಪೇಟ್ಗೆ ಪರಮಕವೀಶರ್ (ಕವಿರಾ. ೩-೧೫೩).
[ದೃಷ್ಟಾಂತ + ಅಲಂಕಾರ]

**ದೃಷ್ಟಾಂತಾಳಂಕಾರ** 'ದೃಷ್ಟಾಂತಾಲಂಕಾರ' ನೋ.

**ದೃಷ್ಟಾದೃಷ್ಟ** (ಗು). ೧. ಕಣ್ಣಿಗೆ ಕಾಣಿಸುವ ಮತ್ತು ಕಾಣಿಸದಿರುವ. ೨. ಈಗಿರುವ ಹಾಗೂ ಮುಂದಿನ ಜೀವನದ ಬಗ್ಗೆ ಸಂಬಂಧಪಟ್ಟ: ದೃಷ್ಟಾದೃಷ್ಟಗುಣವಿಸ್ಪಷ್ಟ ಬಸವೇಶ (ಬಸಪು. ೪೮-೩೩). ೩. ತಿಳಿದ ಮತ್ತು ತಿಳಿಯದಿರುವ: ಪಂಚವಿಧ ಭೂತಭೌತಿಕ ವಸ್ತುಗಳಿಗೂ ಪುರುಷನೆಂಬ ಆತ್ಮನಿಗೂ ದೃಗ್ದೃಶ್ಯ ಸಂಬಂಧವು ಸಾಕ್ಷಾತ್ತಾಗಿ ಸಹಜವಾಗಿ ಇದ್ದರೆ . . . ದೃಷ್ಟಾದೃಷ್ಟ ವ್ಯವಸ್ಥೆಯು ಇರಲಾರದು ಎಂದರೆ, ಪುರುಷನಿಗೆ ಒಂದು ಕಾಲದಲ್ಲಿ ಒಂದು ವಸ್ತುವು ತಿಳಿಯಿತು ಅಥವಾ ತಿಳಿಯಲಿಲ್ಲ ಎಂಬ ವ್ಯವಸ್ಥೆಯು (ಹಿಂದಸಾ. ೫೬). (ನಾ). ೪. ಕಂಡು ಕಾಣದಿರುವ ವಸ್ತು ಅಥವಾ ವೃತ್ತಿ: ಶರಣ ದೃಷ್ಟಾದೃಷ್ಟ ಕಾಣಯ್ಯಾ ಮುಟ್ಟದೆ ಮುಟ್ಟುವ ಕಾಣಯ್ಯಾ (ಚನ್ನವ. ಕ. ೫೮೨-೧೨೯೭); ಈ ಪ್ರಮಾಣಂಗಳೋರಂತೆ ಮೆಱೆವ ದೃಷ್ಟಾದೃಷ್ಟದುಭಯ ವಿಷಯಮುಮಾಗೆ ಶಬ್ದ ಪ್ರಮಾಣೋರುತರಮೆಂತೆಂದು ಬೆಸಗೊಂಬಡಂ (ವೀಶೈಪು. ೫-೧೧-೩೦). [ಸಂ.]

**ದೃಷ್ಟಾದೃಷ್ಟಿ** (ನಾ). ನೋಟಗಳು ಪರಸ್ಪರ ಸೇರುವಿಕೆ, – ದರ್ಶನ: ಅವ್ವನೊಡನೆ ದೃಷ್ಟಾದೃಷ್ಟಿಯಾಗುತ್ತಲೆ ಅವಳು ಚೆಂದುಟಿಗಳಲ್ಲಿ ಬೆಳ್ನಗೆಯನ್ನು ಅರಳಿಸಿ ಆನಂದದ ನಿರ್ಝರಿಯನ್ನು ಹರಿಸಿದಳು (ಎರಸ.೧೭). [←ಮರಾ. ದೃಷ್ಟಾದೃಷ್ಟ]

**ದೃಷ್ಟಾದೃಷ್ಟಿಯೋಗ** (ನಾ). = ದೃಷ್ಟಾದೃಷ್ಟಿ: ಚೆಲುವಕ್ಕೆ ನಲಿವಕ್ಕೆ ಬಲವು ಒಲವುಗಳಕ್ಕೆ ಶುಭಮಕ್ಕೆ ನಮ್ಮ ದೃಷ್ಟಾದೃಷ್ಟಿಯೋಗಕ್ಕೆ (ಹೃದಸ. ೫೬-೧೨). [ದೃಷ್ಟಾದೃಷ್ಟಿ + ಯೋಗ]

**ದೃಷ್ಟಾದೇವಿಕಂದಲು** (ನಾ). ಗೌರಿಯೆಂದು ಪೂಜೆ ಸಲ್ಲಿಸುವ ಒಂದು ಬಗೆಯ ಪೂಜಾ ಪಾತ್ರೆ; ಅಮ್ಮನ ಕಂದಲು: ಹಳೆಯ ಸಂಪ್ರದಾಯದ ಅವರ ಮನೆಯಲ್ಲಿ ಇಂದಿಗೂ ಗೌರಿಯ ಪೆಟ್ಟಿಗೆಯ ಬಳಿ ದೃಷ್ಟಾದೇವಿ ಕಂದಲು ಇಟ್ಟು ಪೂಜಿಸುತ್ತಾರೆ (ರೂಢಿ).
[ದೃಷ್ಟಾದೇವಿ? + ಕಂದಲು (<ಕಂದಲ್$_1$)]

**ದೃಷ್ಟಾನುಭಾವ** (ನಾ). ಪ್ರತ್ಯಕ್ಷವಾದ ಅನುಭಾವ: ಗಿಡು ಗಿಡುವಿಗೆ ಕಱುಹಲ್ಲದೆ ಗಂಧ ಗಂಧ ಕೂಡಿ ದ್ವಂದ್ವವಾಗಿ ಬೆರದಲ್ಲಿ ಕದುಂಬಗಂಧವಲ್ಲದೆ ಒಂದಱ ಗಂಧವೆಂದು ಸಂದಿಸಿ ತೆಗೆಯಲಿಲ್ಲ. ಅವರು ನಿಂದ ನಿಂದ ಸ್ಥಲಕ್ಕೆ ಸಂಬಂಧವಾಗಿಪ್ಪರು. ಇದು ದೃಷ್ಟಾನುಭಾವಸಿದ್ಧಿ (ಮದೀವ. ೨೮೫-೬೦).
[ದೃಷ್ಟ + ಅನುಭಾವ]

**ದೃಷ್ಟಾನುಮಾನ** (ನಾ). "ಪ್ರತ್ಯಕ್ಷಕ್ಕೆ ಅರ್ಹರಾದ ವಸ್ತುವಿನ ಜ್ಞಾನವನ್ನು ಹುಟ್ಟಿಸುವ ಅನುಮಾನವು ದೃಷ್ಟಾನುಮಾನ. ಉದಾ:– ಧೂಮಾನುಮಾನವು ಪ್ರತ್ಯಕ್ಷಕ್ಕೆ ಯೋಗ್ಯವಾದ ಅಗ್ನಿಯ ಜ್ಞಾನವನ್ನು ಹುಟ್ಟಿಸುವುದು" (ಭಾತತ್ತ್ವ. ೮೪೨). [ದೃಷ್ಟ + ಅನುಮಾನ]

**ದೃಷ್ಟಾರ್ಥಾಪತ್ತಿ** (ನಾ). [ತತ್ತ್ವಶಾ] ಮೀಮಾಂಸಕರೇ ಮೊದಲಾದ ದಾರ್ಶನಿಕರು ಅಂಗೀಕರಿಸಿರುವ ಅರ್ಥಾಪತ್ತಿ ಎಂಬ ಪ್ರಮಾಣದಲ್ಲಿ ಒಂದು ವಿಧ; ಇದು ಕಣ್ಣಾರೆ ಕಂಡ ಅಂಶದಲ್ಲಿ ಪ್ರವರ್ತಿಸುವ ಅರ್ಥಾಪತ್ತಿ; ಮೀಮಾಂಸಕರು ವೇದಾಂತಿಗಳೇ ಮೊದಲಾದವರು ಪ್ರತ್ಯಕ್ಷ, ಅನುಮಾನ, ಉಪಮಾನ, ಆಗಮ, ಅರ್ಥಾಪತ್ತಿ, ಅನುಪಲಬ್ಧಿ ಎಂಬ ಆರು ಪ್ರಮಾಣಗಳನ್ನು ಅಂಗೀಕರಿಸಿದ್ದಾರೆ. ಒಂದು ಅಂಶದಿಂದ ಮತ್ತೊಂದು ಅಂಶವನ್ನು ಕಲ್ಪಿಸುವುದು ಅಂದರೆ ಉಪಪಾದ್ಯ (ಕಾರ್ಯ) ವಾದ ಅಂಶದಿಂದ ಉಪಪಾದ (ಕಾರಣ)ವನ್ನು ಕಲ್ಪಿಸುವುದು ಅರ್ಥಾಪತ್ತಿಪ್ರಮಾಣ. ನೈಯಾಯಿಕರು ಈ ಪ್ರಮಾಣವನ್ನು ಪ್ರತ್ಯೇಕವಾಗಿ ಒಪ್ಪದೆ ಅನುಮಾನ ಪ್ರಮಾಣದಲ್ಲಿ ಸೇರಿಸುತ್ತಾರೆ. ಇದರಲ್ಲಿ ದೃಷ್ಟಾರ್ಥಾಪತ್ತಿ, ಶ್ರುತಾರ್ಥಾಪತ್ತಿ ಎಂದು ಎರಡು ಬಗೆ: ಪಗಲುಣ್ಣದ ದೇವದತ್ತನ ದೇಹದ ಪೀನತ್ವಮಂ ಕಂಡು ದೃಷ್ಟಮಾದ ಪೀನತ್ವದಿಂ ತತ್ಕಾರಣಮಾದ ರಾತ್ರಿಭೋಜನಮಂ ಕಲ್ಪಿಸುವುದೇ ದೃಷ್ಟಾರ್ಥಾಪತ್ತಿಯುಕ್ಕುಂ (ವಿವೇಕ. ೧೯); ಅರ್ಥಾಪತ್ತಿಯು ದೃಷ್ಟಾರ್ಥಾಪತ್ತಿ ಮತ್ತು ಶ್ರುತಾರ್ಥಾಪತ್ತಿ ಎಂದು ಎರಡು ವಿಧ (ಭಾತತ್ತ್ವ. ೬೦೨).
[ದೃಷ್ಟ + ಅರ್ಥಾಪತ್ತಿ]

**ದೃಷ್ಟಿ** (ನಾ). ೧. ನೋಡುವುದು; ಈಕ್ಷಿಸುವುದು; ಅವಲೋಕನ. ೨. ಕಣ್ಣಿನ ನೋಟ: "ನಿಭಾಳನಂ . . . ದರ್ಶನಂ, ದೃಷ್ಟಿಃ, ದ್ಯೋತನಂ– ಈ ೮ ನೋಟಂ" (ಹಲಾಯು. ೯೩-೫೦೨); ಮುಖದ ಕಾಮಕಾರ್ಪಣ್ಯಮುಮಂ ದೃಷ್ಟಿಯ ದೈನ್ಯಮುಮನಱಿದು . . . ತುಂಬುರನಿಂತೆಂದಂ (ನಂಬಿರ. ೪-೧೨); ದೃಷ್ಟಿ ನಿನ್ನ ಪಾದದಲ್ಲಿ ನೆಡೋ ಹಾಗೆ . . . ಎನ್ನ ಗುಟ್ಟು ಅಭಿಮಾನಗಳ ಕಾಯೊ ನೀನು (ಪುರಂದ. ೧೩೬ ಪಲ್ಲವಿ); ಐತರೇಯೋಪನಿಷತ್ತಿನಲ್ಲಿ ಸಂಜ್ಞಾನ (ಚೇತನಭಾವ) . . . ದೃಷ್ಟಿ, ಧೃತಿ . . . ಮಶ ಈ ಹದಿನಾರು ಮನಸ್ಸಿನ ವಿಕಾರಗಳೆಂದಿರುವವು (ಅಮೃತ. ೬-೨೬ ಟೀಕು). ೩. ಕಣ್ಣು; ನೇತ್ರ: "ದೃಕ್, ದೃಷ್ಟಿಃ . . . ಈಕ್ಷಣಂ, ಅಕ್ಷಿ – ಈ ೯ ಕಣ್" (ಹಲಾಯು. ೮೬-೩೬); "ಚಕ್ಷುನೇತ್ರಂ ನಯನಮುಂಬಕಂ ದೃಗ್ದೃಷ್ಟಿ . . . ಕಣ್ಣೆನಿಸಿಕ್ಕು" (ಮಂಗರಾ. ೯೩-೨); ರವಿ ಲೋಕತ್ರಯಕೆಲ್ಲ ದೃಷ್ಟಿ (ಸೋಮೇಶ. ೮೬); ಪಾಡುವರು ಕೆಲರಲ್ಲಿ ಹರಿಯನು ನೋಡುವರು ನಿಜದೃಷ್ಟಿ ದಣಿಯಲು (ಕಾಶಿರಾ. ೪೪-೧೩). ೪. ಆಲೋಚನೆ; ವಿಚಾರ: "ದೃಷ್ಟಿವಿಲೋಚನ ವಿಚಾರ ದರ್ಶನ ವಚನಂ" (ವಸ್ತುಕೋ. ೦೪೦-೬೨). ೫. ಅರಿವು; ಜ್ಞಾನ; ವಿವೇಕ:

ಜಡ ಮರ್ತ್ಯರಿಗೆ ನಿಶ್ಚಯವುಂಟೆ ದೃಷ್ಟಿವಿನಷ್ಟಮಾತ್ರರಿಗೆ (ನಿಭಾಗ. ೩-೧-೩). ೬. ಅಭಿಪ್ರಾಯ; ಧೋರಣೆ : ನಾನು ಆ ದೃಷ್ಟಿಯಿಂದ ಮಾತನಾಡಲಿಲ್ಲ (ರೂಢಿ). 'ದೃಷ್ಟಿಕೋನ' ಪರಾ. ೭. [ಜೈನ] ಸಮ್ಯಗ್ದರ್ಶನ. 'ದೃಷ್ಟಿಮೋಹ', 'ದೃಷ್ಟಿವಿಭವ' ಪರಾ. ೮. [ನಾಟ್ಯ] ಕಣ್ಣಿನ ಚಲನೆಯಲ್ಲಿ ಒಂದು ಬಗೆ : ಛತ್ತೀಸದೃಷ್ಟಿ ಚೌಷಷ್ಟಿ ಹಸ್ತಂಗಳಂ ಬಿತ್ತರಿಸುವುದು ಕೋಪೆನಿಕ್ಕು (ಮಂಗರಾ. ೨೫-೯). ೯. [ಜ್ಯೋತಿ] ಗ್ರಹಗಳು ತಾವಿರುವ ರಾಶಿಯಿಂದ ಇತರ ರಾಶಿಗಳನ್ನೂ ಅಲ್ಲಿರುವ ಗ್ರಹಗಳನ್ನೂ ನೋಡುವುದು : ನವಗ್ರಹಗಳಲ್ಲಿ ದೃಷ್ಟಿಯು ವಾಮದಕ್ಷಿಣ ಸಂಮುಖಗಳೆಂಬ ಭೇದದಿಂದ ಮೂರು ಬಗೆಯೆಂದು ತಿಳಿಯತಕ್ಕದ್ದು (ಅರ್ಕಮಾ. ೩೯).

ದೃಷ್ಟಿಇಡು = ಕಣ್ಣಿಡು ; ಗಮನಿಸು ; ನಿಗಾ ವಹಿಸು : ಕೆಲವರು ಆಳುಗಳ ಕೆಲಸದ ಮೇಲೆ ದೃಷ್ಟಿಇಡುತ್ತಾರೆ (ಮುಂಬಯಿ. ೫-೨೯೩). ದೃಷ್ಟಿ ಕೊಡು = ಗಮನಿಸು ; ಕಾಳಜಿ ವಹಿಸು : ಸಂಬಳದ ಮೇಲೆ ದೃಷ್ಟಿ ಕೊಡದೆ (ಮುಂಬಯಿ. ೫-೨೯೫). ದೃಷ್ಟಿಗೆ ಬೀಳು = ಕಣ್ಣಿಗೆ ಬೀಳು ; ಗೋಚರವಾಗು ; ಕಾಣು : ದೈವಯೋಗದಿಂದ ಅಲ್ಲೇ ಸಮೀಪದಲ್ಲಿ ಒಂದು ಮರದ ಟೊಂಗೆಯು . . . ಅವನ ದೃಷ್ಟಿಗೆ ಬಿತ್ತು (ಮುಂಬಯಿ. ೪-೩೮) : ನಾನು ಅಂಗಳದಲ್ಲಿ ದೃಷ್ಟಿಗೆ ಬೀಳುತ್ತಲೇ . . . ನನ್ನ ಚಿಕ್ಕ ತಮ್ಮ ಜಯಜಯಕಾರ ಮಾಡುತ್ತ ಓಡಿ ಬಂದು ನನ್ನ ಮೈ ಅಡರಿದ (ಶ್ಯಾಮತಾ. ೧೩೫). ದೃಷ್ಟಿಚುಕ್ಕೆ = ದೃಷ್ಟಿಯ ಬಟ್ಟು : ದೃಷ್ಟಿಚುಕ್ಕೆಯದೊಂದನಲ್ಲ ಚೆಂದಂಗಳ್ಗವಿಟ್ಟಹನು ಪರಮೇಷ್ಠಿ, ಶಶಿಗೆ ಮಶಿಯವೊಲು (ಮಂಕುಕ. ೪೪೭). ದೃಷ್ಟಿ ತಗಲು = ಕಣ್ಣಂಜಲಾಗು ; ಕೆಟ್ಟಕಣ್ಣು ತಗಲು: ಮಗುವಿಗೆ ದೃಷ್ಟಿ ತಗಲುವಂತೆ ಅಲಂಕಾರ ಮಾಡಿದ್ದರು (ರೂಢಿ). ದೃಷ್ಟಿ ತಪ್ಪಿಸು = ಕಣ್ಣಿಗೆ ಬೀಳದಂತಿರು; ಮರೆಯಾಗಿರು : ಈಚೀಚೆಗೆ ಅವನು ದೃಷ್ಟಿ ತಪ್ಪಿಸಿ ಓಡಾಡಲು ಪ್ರಾರಂಭಿಸಿದ್ದಾನೆ (ರೂಢಿ). ದೃಷ್ಟಿ ತಾಗು = ದೃಷ್ಟಿ ತಗಲು : ದೃಷ್ಟಿ ತಾಗಿತೆ ನಮ್ಮ ಕೃಷ್ಣರಾಯಗೆ (ಪುರಂದ. ೩-೧೭೩ ಪಲ್ಲವಿ) ; ದೃಷ್ಟಿ ತಾಗಿತೆ ನಿನಗೆ ರಂಗಯ್ಯ (ಪುರಂದ. ೩-೦೦-೧). ದೃಷ್ಟಿ ತೆಗೆ = ಇಳಿ ತೆಗೆ; ದೃಷ್ಟಿದೋಷವನ್ನು ಪರಿಹರಿಸು : ಕಾಮಾಕ್ಷಿಗೂ ಗಿರಿಜಳ ಪ್ರೇತ ಏನೋ ಕೀಟಲೆ ಮಾಡಿರಬೇಕು. ಇರು, ದೃಷ್ಟಿತೆಗೆಯುತ್ತೇನೆ ಎನ್ನುತ್ತ ವೆಂಕಮ್ಮ ಒಳನಡೆದರು (ಪದ್ಮಸ. ೮೩). ದೃಷ್ಟಿ ನಿವಾಳಿಸು = ದೃಷ್ಟಿ ತೆಗೆ : ಶ್ಯಾಮರಾಯ ಬಂದು ವಾಡೆಯ ಬಾಗಿಲಲ್ಲಿಳಿದಾಗ ರಾಧಾಕಕ್ಕಿ ಮಗನಿಗೆ ದೃಷ್ಟಿ ನಿವಾಳಿಸಿ ಒಗೆದರು (ದೀಪಹ. I, ೨೩). ದೃಷ್ಟಿ ಬಡಿ = ದೃಷ್ಟಿ ತಗಲು : ಮದುಮಕ್ಕಳು ದೃಷ್ಟಿ ಬಡಿಯುವಂತಿದ್ದರು (ರೂಢಿ). ದೃಷ್ಟಿ ಬೀಳು = ದೃಷ್ಟಿ ತಗಲು : ಕೆಟ್ಟವರ ದೃಷ್ಟಿ ಬೀಳದಿರಲಿ ಎಂದೇ ವನಜ ಮುಂಜಾಗ್ರತೆ ವಹಿಸಿದ್ದಳು (ದೇವಹಂ. ೧೦೭) : ಮಗುವಿಗೆ ದೃಷ್ಟಿ ಬಿದ್ದಿರಬೇಕು. ನೆನ್ನೆಯಿಂದ ಒಂದೇ ಸಮನೆ ರಚ್ಚೆ ಹಿಡಿದಿದೆ (ರೂಢಿ). ದೃಷ್ಟಿ ಮುರಿ = ದೃಷ್ಟಿ ತೆಗೆ : ತೊಟ್ಟಿಲೊಳಗಿನ ಕಂದ ತೋಳು ಬೀಸುವ ಚಂದ ರಟ್ಟೆ ನೊಂದಾವು ಎಲೆ ಕಂದ ನಿಮ್ಮವ್ವ ದೃಷ್ಟಿ ಮುರಿಲಾಕ ತಿಳಿಯಾಳು (ಹಳ್ಳಿಯ. ೭೪). ದೃಷ್ಟಿಯ ಬಟ್ಟು, ದೃಷ್ಟಿಯಬೊಟ್ಟು = ಕಣ್ಣಂಜಲಾಗದಂತೆ (ಹಣೆ, ಗಲ್ಲಗಳ ಮೇಲೆ ಇಡುವ ಕಪ್ಪು ಬೊಟ್ಟು : ಕೌರವೇಂದ್ರನ ಪುರುಹಿ ಭಸ್ಮವ ಮಾಡಿ ದೃಷ್ಟಿಯ ಬಟ್ಟ ನೊಸಲಲ್ಲಿ ಇರಿಸುವೆನು (ಜಿನಭಾ. ೭೪-೪೩) ; ಮಗುವಿಗೆ ಕಣ್ಣಂಜಲು ತಾಕದಂತೆ ದೃಷ್ಟಿಯ ಬೊಟ್ಟನ್ನಿಟ್ಟದ್ದರು (ರೂಢಿ). ದೃಷ್ಟಿಯಾಗು = ಕೆಟ್ಟ ಕಣ್ಣು ತಗುಲು ; ಕಣ್ಣಂಜಲಾಗು ; ದೃಷ್ಟಿ ತಾಗು ; ದೃಷ್ಟಿಯಾಯ್ತಲೆ ಉಪ್ಪಾರತಿಯನೆತ್ತು (ಬಸರ. ೭-೧೩೩) ; ಯಾರಿಗಾದರೂ ದೃಷ್ಟಿಯಾದರೆ, ನಮ್ಮ ಅಜ್ಜಿ . . . ತುಸು ಬೂದಿಯನ್ನು ತಂದು, ಮಂತ್ರವನ್ನು ಹೇಳುತ್ತ ಅದನ್ನು ತಿಕ್ಕುತ್ತಿದ್ದಳು (ಶ್ಯಾಮತಾ. ೧೩೫). ದೃಷ್ಟಿಯಾರೆ = ಕಣ್ಣು ತುಂಬುವಂತೆ ; ತೃಪ್ತಿಯಾಗುವಂತೆ ; ಕಣ್ಣಾರೆ : ಕಟ್ಟದಿರಿನಲ್ಲಿ ಶಿವಭಕ್ತನ ಕಂಡು ದೃಷ್ಟಿ[ಯಾ]ರೆ ಶರಣೆಂದೊಡೆ . . . ಪಾಪ ಬಿಟ್ಟು ಹಿಂಗುವುದು ನೋಡಾ (ಬಸವ. ೧೪೦) ; ಹೊತ್ತಾರೆ ಎದ್ದು ಶಿವಲಿಂಗ ದೇವನ ದೃಷ್ಟಿ[ಯಾ]ರೆ ನೋಡದವನ ಸಂಸಾರವೇನವನ (ಬಸವ. ೧೫೭). ದೃಷ್ಟಿಯೆತ್ತು = ದೃಷ್ಟಿತೆಗೆ: ಆರತಿಗೆ ಬಂದಿದ್ದವರು ಹೊರಟ ನಂತರ ಮಗುವಿಗೆ ದೃಷ್ಟಿಯೆತ್ತಿದರು (ರೂಢಿ). ದೃಷ್ಟಿ ಹರಿಸು = ನೋಡು ; ಈಕ್ಷಿಸು : ಬೀದಿಯಲ್ಲಿ ನಡೆದು ಬರುತ್ತಿದ್ದ ವ್ಯಕ್ತಿಯ ಕಡೆಗೆ ಕುತೂಹಲದಿಂದ ದೃಷ್ಟಿ ಹರಿಸಿದರು (ಪುನರು. ೨೭೬). [ಸಂ.]

**ದೃಷ್ಟಿಕೋಣ** (ನಾ). ೧. = ದೃಷ್ಟಿಕೋನ ೧ : ವಿವಿಧ ದೃಷ್ಟಿಕೋಣದಿಂದ ನೋಡಬಯಸಿ ಬಂದ ಜನರಿಗೆ ತೃಪ್ತಿ – ಸಮಾಧಾನಗಳನ್ನು ತಂದು ಕೊಡಲು ಸಾಧನವಾದ ದೇವಾಲಯವು . . . ಆಧ್ಯಾತ್ಮಿಕಮಾರ್ಗಾನ್ವೇಷಣೆಮಾಡಲು ಪ್ರೇರಿಸುವಂತಾಯಿತು (ಭಾರದ. ೮೧). ೨. = ದೃಷ್ಟಿಕೋನ ೨ : ಅನೇಕ ಮಂದಿ ಆಚಾರ್ಯರು ತಮ್ಮ ತಮ್ಮ ದೃಷ್ಟಿಕೋಣಗಳಿಂದ ಭಾಷ್ಯಗಳನ್ನು ಬರೆದಿದ್ದಾರೆ (ಭಾರದ. ೪೭). [ದೃಷ್ಟಿ + ಕೋಣ೨]

**ದೃಷ್ಟಿಕೋನ** (ನಾ). ೧. ನೋಡುವ ರೀತಿ ; ನೋಟದ ನಿಟ್ಟು : ಆದರೂ ನೋಡುವ ದೃಷ್ಟಿಕೋನ ಹೊಸದಾಗಿದೆ (ಕರ್ನಾಕ. ೪೪೩) ; ಕವಿಯೊಬ್ಬನನ್ನು ಕುರಿತು, ಅವನ ಸಮಗ್ರಕೃತಿಗಳನ್ನು ತೆಗೆದುಕೊಂಡು ನಾನಾ ದೃಷ್ಟಿಕೋನಗಳಿಂದ ಅವುಗಳನ್ನು ವೀಕ್ಷಿಸಿ (ಬಂಕಿಮ. ೦೦ ಮುನ್ನುಡಿ). ೨. ವಿಚಾರದ ಸರಣಿ ; ಧೋರಣೆ ; ಆಲೋಚನೆಯ ಮಾರ್ಗ : ನಮ್ಮ ಶಿಕ್ಷಣಸಂಸ್ಥೆಗಳು ಮೂರು ಮುಖ್ಯವಾದ ದಿಕ್ಪಥಗಳಲ್ಲಿ ತಮ್ಮ ದೃಷ್ಟಿಕೋನವನ್ನು ಬದಲಾಯಿಸಿಕೊಳ್ಳಬೇಕು (ಶಿಕ್ಷದ. ೧೮).

[ದೃಷ್ಟಿ + ಕೋನ (<ಕೋಣ್)]

**ದೃಷ್ಟಿಗೋಚರ** (ನಾ). ೧. ಕಣ್ಣಿಗೆ ಕಾಣುವಂಥದು ; ಗೋಚರವಾಗುವಂಥದು : ಸೊಡ್ಡಳದೇವನೆಲ್ಲರ ದೃಷ್ಟಿಗೋಚರದಾಗಲಲ್ಲಿಗೆ ಬಹನು (ಬಸಪು. ೫೩-೧೫). ೨. ನೋಟದ ಪಥ, –ಹರವು.

[ದೃಷ್ಟಿ + ಗೋಚರ]

**ದೃಷ್ಟಿಗ್ರಾಹ್ಯ** (ನಾ). ಕಂಡು ತಿಳಿಯಬೇಕಾದುದು ; ಕಣ್ಣಿನ ಮೂಲಕ ತಿಳಿಯುವುದು : ಧ್ಯಾನದರ್ಶಿತ ದೇವತೆಗಳ ಈ ವರ್ಣನೆಯೇ ಮುಂದಿನ ಶಿಲ್ಪಕಲಾಚಾರ್ಯರ ಪರಿಭಾವನೆಯ ವಸ್ತುಗಳಾಗಿ, ಭಾರತೀಯ ದೇವ ದೇವತಾವಿಗ್ರಹಗಳ ಮಾದರಿಗಳೂ ಆದುವೆನ್ನುವುದು ಗಮನಾರ್ಹವಾದ ಸಂಗತಿ. ಈ ಎಲ್ಲ ವೈವಿಧ್ಯಮಯವಾದ ರೂಪಗಳೆಲ್ಲವೂ ದೃಷ್ಟಿಗ್ರಾಹ್ಯವೇ ಹೊರತು ಮುಷ್ಟಿಗ್ರಾಹ್ಯವಲ್ಲ (ಸೌಂದಶ. ೯೯). [ದೃಷ್ಟಿ + ಗ್ರಾಹ್ಯ]

**ದೃಷ್ಟಿದಾನ** (ನಾ). ಕುರುಡನಿಗೆ ನೋಡುವ ಶಕ್ತಿಯನ್ನುಂಟುಮಾಡುವುದು ; ಅಂಧತ್ವವನ್ನು ತಪ್ಪಿಸುವುದು : ಡಾಕ್ಟರ್ ಮೋದಿಯವರು ನಾಡಿನಲ್ಲೆಲ್ಲಾ ಸುತ್ತಾಡಿ ಅನೇಕ ಕುರುಡರಿಗೆ ದೃಷ್ಟಿದಾನ ಮಾಡಿದ್ದಾರೆ (ರೂಢಿ). [ದೃಷ್ಟಿ + ದಾನ]

**ದೃಷ್ಟಿದೋಷ** (ನಾ). ೧. ನೋಟದಲ್ಲಿರುವ ದೌರ್ಬಲ್ಯ, – ನ್ಯೂನತೆ ; ಕಣ್ಣಿನ ಐಬು : ನೀವು ತುಂಬಾ ಇಳಿದು ಹೋಗಿದ್ದೀರಿ . . . ಹಾಗೇನಿಲ್ಲ. ಅದು ನಿಮ್ಮ ದೃಷ್ಟಿದೋಷವಿರಬೇಕು (ಕುಸುಸಂ. ೨೧೦) ; ನಮ್ಮ ಕಣ್ಣಿಗೆ ಅಧಿಕಕಾಂತಿಯ ನಕ್ಷತ್ರಗಳು ಕ್ಷೀಣಕಾಂತಿಯವುಗಳಿಗಿಂತ ದೊಡ್ಡದಾಗಿ ಕಾಣುವುದಕ್ಕೆ ಕಣ್ಣಿನ ದೃಷ್ಟಿದೋಷವೇ ಕಾರಣ (ನಕ್ಷತ್ರ. ೫) ; ಮೆಳ್ಳಗಣ್ಣು ಮಾಡುವುದು . . . ಪದೇ ಪದೇ ಕಣ್ಣುಜ್ಜುವುದು, ಕಾರಣವಿಲ್ಲದೆ ರೇಗುವುದು ಮುಂತಾದ ಚಿಹ್ನೆಗಳು ದೃಷ್ಟಿದೋಷವಿದ್ದಲ್ಲಿ ಕಾಣಿಸಿಕೊಳ್ಳುವುದು (ನಿಮ್ಮದ್ಯ. ೩೩). ೨. ಕಣ್ಣೆಸರಿನಿಂದ ಆಗುವ ಕೆಡುಕು ; ಕಣ್ಣಂಜಲು : "ಕಣ್ಣಂಜಲೆನೆ ದೃಷ್ಟಿದೋಷವು" (ಶಬ್ದಮಂ. ೭೪).

[ದೃಷ್ಟಿ + ದೋಷ]

**ದೃಷ್ಟಿದ್ರವಣ** (ನಾ). [ಕಾಮಶಾ] ನೋಟ ಮಾತ್ರದಿಂದಲೇ ರೇತಸ್ಸು ಸ್ಖಲನವಾಗುವುದು ; ನೋಟದಿಂದ ಉಂಟಾಗುವ ಶುಕ್ಲದ್ರವಣ : ಪೋಗಲಾಜಿದೆಯನಿಮಿಷತೆವಡೆದಿರಲ್ಕವಳ ನಾಗಭೂಷಣ ನಿಟ್ಟಿಸಲ್ ನೋಟನೋಟವೊಂದಾಗೆ ದೃಷ್ಟಿದ್ರವಣವಾಗಿ ಕುಳ್ಳಿರ್ದು ತಲೆವಾಗಿ ಲಜ್ಜಿತೆಯಾದಳು (ಭಿಕ್ಷಾಜ. ೨-೩೬). [ದೃಷ್ಟಿ + ದ್ರವಣ]

**ದೃಷ್ಟಿದ್ರಾವಣ** (ನಾ). ಕಣ್ಣು ಸೋರುವಿಕೆ ; ಸೋರಂಗಣ್ಣಿನ ರೋಗ : ದೃಷ್ಟಿದ್ರಾವಣಕ್ಕೆ :–ಬಿದುರೆಲೆ, ಹೊನ್ನೆ, ಕೆಂಪಿನ ಅಗಸೆಯ ಹೂ, ನಾಂಗುಲಿಕೆ, ಪಾದರಸ ಇವನ್ನು ಕೂಡಿ ಮರ್ದಿಸಿ ತಿಲಕವಿಡಲು ದೃಷ್ಟಿ ದ್ರಾವಣ ಮಾಣ್ಗುಂ (ವಿವ್ಯವಿ. ೨೦೦). [ದೃಷ್ಟಿ + ದ್ರಾವಣ]

**ದೃಷ್ಟಿಪಟಲ** (ನಾ). ಕಣ್ಣುಗುಡ್ಡೆಯ ಹಿಂಭಾಗದಲ್ಲಿರುವ, ಬೆಳಕಿನ ಸಹಾಯದಿಂದ ಬಿಂಬಗಳನ್ನು ಗುರುತಿಸುವ ಪೊರೆ : ಕಾಶಿಬಿಂದುವಿನ ಹಿಂಬದಿಯಲ್ಲಿ ಗಾಜಿನಂತಿರುವ ಲೆನ್ಸ್ ಇರುತ್ತದೆ . . . ಈ ಲೆನ್ಸ್‌ನ ಹಿಂದುಗಡೆಯಲ್ಲಿ ದೃಷ್ಟಿಪಟಲ ಇರುತ್ತದೆ (ನಿಮ್ಮದೃ. ೧೦೫). [ದೃಷ್ಟಿ + ಪಟಲ₁]

**ದೃಷ್ಟಿಪಥ** (ನಾ). ಕಣ್ಣಿಗೆ ಕಾಣುವಷ್ಟು ಪ್ರದೇಶ ; ಕಣ್ಣಿನ ದೃಷ್ಟಿ ಹೋಗುವಷ್ಟು ದೂರ : ಎಷ್ಟು ಹೊತ್ತು ಕಾದು ನೋಡಿದರೂ ಅವನು ಬರುವುದು ದೃಷ್ಟಿಪಥಕ್ಕೆ ಬೀಳಲೇ ಇಲ್ಲ (ರೂಢಿ). [ದೃಷ್ಟಿ + ಪಥ]

**ದೃಷ್ಟಿಪಾಟವ** (ನಾ). ನೋಟದ ಶಕ್ತಿ,–ಪರಿಪಾಟಿ ; ಕಣ್ಣಿನ ಚೈತನ್ಯ : ದೃಷ್ಟಿಪಾಟವ ಕುಗ್ಗಿದಾಗ ವೈದ್ಯರ ಸಲಹೆಯನ್ನು ಪಡೆಯುವುದು ಒಳ್ಳೆಯದು (ರೂಢಿ). [ದೃಷ್ಟಿ + ಪಾಟವ]

**ದೃಷ್ಟಿಪಾತ** (ನಾ). ನೋಡುವಿಕೆ ; ನೋಟ : ನಿನ್ನ ಲೀಲಾಲಸದ್ದೃಷ್ಟಿ ಪಾತಮೆರ್ದೆಯೊಳ್ ನೆಲಸಿರ್ದುವು (ಆದಿಪು. ೩-೨೩) ; ಅನಂತರಮಾಬದ್ಧ ಮಂಡಲಾಸೀನನಾಗಿರ್ದು ಸಚಿವಮುಖಿಮಂನತಿಪ್ರಸನ್ನದೃಷ್ಟಿಪಾತದಿನಭಿ ಮುಖಿಂ ಮಾಡಿ (ಚಂದ್ರಪು. ೯-೧೦೪ ವ) ; ಪರಮಪುರುಷನ ದೃಷ್ಟಿಪಾತದಿ ನಿರದೆ ಸಂಚಿತಸಕಲ ದುಷ್ಕೃತ ಹರೆದುದಿಸಿದಳು ಶಿಲೆಯ ಮಧ್ಯದೊಳಬಲೆ ಗೌತಮನ (ತೊರರಾ. ೧-೧೨-೧೯) ; ವೈರಿಗಳ ನೂರಾರು ದೃಷ್ಟಿಗಳು ತನ್ನಲ್ಲಿಯೇ ನಾಟಿದ್ದಂತೆ ಅವನಿಗೆ ಭಾಸವಾಗುತ್ತಿತ್ತು. ಆ ದೃಷ್ಟಿಪಾತವನ್ನು ನೋಡಿದರೆ ಎರಡು ಕಡೆಯಿಂದಲೂ ತಾನು ಹೊಡೆತಕ್ಕೆ ಸಿಕ್ಕಿದಂತೆ ಅವನಿಗೆ ಅನುಭವವಾಗುತ್ತಿತ್ತು (ಪುನರು. ೨೩೫). [ದೃಷ್ಟಿ + ಪಾತ₁]

**ದೃಷ್ಟಿಪುಷ್ಪ** (ನಾ). ಕಣ್ಣುಗುಡ್ಡೆಯ ಮೇಲೆ ಉಂಟಾಗುವ ಬೆಳ್ಳನೆಯ ಮಚ್ಚೆ ; ಕಣ್ಣಿನಲ್ಲಿ ಬೆಳೆಯುವ ಹೂವು : ದೃಷ್ಟಿಪುಷ್ಪ ದ್ವಿತೀಯ ಪ್ರಕಾರ :–ಟಂಕಣವನ್ನು ಗಂಧಕದೊಳಗೆ ತೇದು ಹೂವಿನ ಮೇಲೆ ಚಿಮ್ಮಿ ಹೂವನ್ನು ಕಟ್ಟಾಗಿ ಕಟ್ಟಿ . . . ೧ ಘಳಿಗೆ ಪಚಿಸುವುದು (ವಿವ್ಯವಿ. ೦೮೨). [ದೃಷ್ಟಿ + ಪುಷ್ಪ]

**ದೃಷ್ಟಿಭರ್ತ್ಸನೆ** (ನಾ). ಕಣ್ಣಿನಿಂದ ಸೂಚಿಸುವ ತಿರಸ್ಕಾರ,–ಹೀಯಾಳಿಕೆ, –ನಿಂದೆ : ದೇವಿ ... ನೋಡಿದಳ್ ನೇರಮುಸುರನಂ, ದೃಷ್ಟಿಭರ್ತ್ಸನೆಗಳ್ಕಿ ಸಡೆತುದೆನಲಳಿಯಾಸೆ ತಾಂ ರಕ್ಕಸಗೆ ! (ಶ್ರೀರಾಮಾ. ೩೩೪-೮೬). [ದೃಷ್ಟಿ + ಭರ್ತ್ಸನೆ]

**ದೃಷ್ಟಿಭೇದ** (ನಾ). ೧. ಆಲೋಚನೆಯಲ್ಲಿರುವ ಭೇದ ; ವಿಚಾರದಲ್ಲಿರುವ ವ್ಯತ್ಯಾಸ : ಕೆಲವು ವಿಲಾಯಿತಿ ವಿದ್ವಾಂಸರು ಬಹುಶ್ರುತರಾದರೂ ಅವರಿಗೆ ಭಾರತೀಯ ಲಲಿತಕಲೆಗಳ ಪೂರ್ಣರೂಪ ಕಂಡುಬಂದಿಲ್ಲ. ಇದಕ್ಕೆ ದೃಷ್ಟಿಭೇದವೇ ಕಾರಣವೆನ್ನಬಹುದು (ಭಾರರ. ೦೭೭). ೨. [ನಾಟ್ಯ] ಕಣ್ಣಾಲಿಯನ್ನು ತಿರುಗಿಸುವ ರೀತಿ,–ಕ್ರಮ; ಇದು ಮೂವತ್ತಾರು ಬಗೆ. ಪ್ರಮುಖವಾಗಿ ಇದನ್ನು ಮೂರು ವಿಭಾಗ ಮಾಡಬಹುದು ೧. ಸರಸದೃಷ್ಟಿ. ೨. ಸ್ಥಾಯಿದೃಷ್ಟಿ. ೩. ಸಂಚಾರಿದೃಷ್ಟಿ. ಸರಸ ದೃಷ್ಟಿಯಲ್ಲಿ ಎಂಟು ಭೇದಗಳಿವೆ. ೧. ಕಾಂತ (ನೋಡುವ ವಸ್ತುವನ್ನು ಹೀರುವಂತೆ ಕಣ್ಣನ್ನು ಅರಳಿಸಿ ಅನುರಾಗ ಹೆಚ್ಚುವಂತೆ ಹುಬ್ಬನ್ನು ಚಲಿಸಿ ಕಡೆಗಣ್ಣಿನಿಂದ ನೋಡುವುದು). ೨. ಹಾಸ್ಯ (ಕರೀಗುಡ್ಡೆಯನ್ನು ಸ್ವಲ್ಪ ಒಳಕ್ಕೆ ಮಾಡಿ ವಿಚಿತ್ರವಾಗಿ ಸುತ್ತಿಸಿ ಮೆಲ್ಲನೆ ಸುಮಾರಾಗಿ ಮತ್ತು ಜಾಗ್ರತೆಯಾಗಿ ಕಣ್ಣನ್ನು ಮಿಟುಕಿಸುವುದು). ೩. ಕರುಣ (ಕಲಕಿದ ಮನಸ್ಸಿನಿಂದ ಕಣ್ಣೀರು ತುಂಬಿಸಿ ರೆಪ್ಪೆ ಬಡಿಯುತ್ತ ಮೂಗಿನ ತುದಿಯನ್ನು ನೋಡುವುದು). ೪. ರೌದ್ರ (ಹುಬ್ಬನ್ನು ಗಂಟಿಕ್ಕಿ, ಕಣ್ಣನ್ನು ಕೆಂಪಗೆ ಮಾಡಿ ರೆಪ್ಪೆ ಬಡಿಯದೆ ನಟ್ಟ ದೃಷ್ಟಿಯಲ್ಲಿ ಆತುರದಿಂದ ನೋಡುವುದು). ೫. ವೀರ (ಪ್ರಜ್ವಲಿಸುವ ಕಡೆಗಣ್ಣ ನಟ್ಟ ಸಮಾರ್ಧ ದೃಷ್ಟಿಯಲ್ಲಿ ಗಾಂಭೀರ್ಯದಿಂದ ನೋಡುವುದು). ೬. ಭಯ (ರೆಪ್ಪೆಯನ್ನಗಲಿಸಿ ಮೇಲಕ್ಕೆತ್ತಿ ಹೆದರಿಕೆಯಿಂದ ಆಲಿಯನ್ನು ಹೆಚ್ಚಾಗಿ ತಿರುಗಿಸುವುದು). ೭. ಬೀಭತ್ಸ (ಆಲಿಯನ್ನೂ ರೆಪ್ಪೆಯನ್ನೂ ಚಲಿಸಿ ರೆಪ್ಪೆಯನ್ನು ಅರ್ಧ ಮುಚ್ಚಿ ಕಡೆಗಣ್ಣಿನಿಂದ ನೋಡುವುದು). ೮. ಅದ್ಭುತ (ರೆಪ್ಪೆಯನ್ನು ಸ್ವಲ್ಪ ಮುಚ್ಚಿ ಪ್ರಸನ್ನತೆಯಿಂದ ಕೂಡಿ ಬಿಳೀಗುಡ್ಡೆ ಮಾತ್ರ ಕಾಣುವಂತೆ ಕರೀ ಗುಡ್ಡೆಯನ್ನು ಒಂದು ಕಡೆಗೆ ತರುವುದು). ಸ್ಥಾಯಿದೃಷ್ಟಿಯಲ್ಲಿ ಎಂಟು ಭೇದಗಳಿವೆ. ೧. ಸ್ನಿಗ್ಧ (ಹೆಚ್ಚು ಬಯಕೆಯನ್ನು ಸೂಚಿಸುತ್ತ ಹುಬ್ಬನ್ನು ನೆಟ್ಟಗೆ ಮಾಡಿ ಪ್ರಸನ್ನತೆ, ಮಾಧುರ್ಯ ಇವುಗಳಿಂದ ಕೂಡಿ ಕಡೆಗಣ್ಣಿಂದ ನೋಡುವುದು). ೨. ಹೃಷ್ಟ (ಗಡ್ಡವನ್ನರಳಿಸಿ ರೆಪ್ಪೆಯನ್ನು ಸ್ವಲ್ಪ ಮುಚ್ಚಿ ತೃಪ್ತಿಯನ್ನುಹೊಂದಿ ಹಸನ್ಮುಖವಾಗಿ ಕೋಮಲ ದೃಷ್ಟಿಯಿಂದ ನೋಡುವುದು). ೩. ದೀನ (ಕಣ್ಣೀರಿನಿಂದ ಕೂಡಿ ಕಣ್ಣನ್ನು ಅರ್ಧ ಮುಚ್ಚಿ ನಿಧಾನವಾಗಿ ದೃಷ್ಟಿಯನ್ನು ಚಲಿಸುವುದು). ೪. ಕ್ರುದ್ಧ (ಸ್ಥಿರವಾಗಿ ರೆಪ್ಪೆಯನ್ನು ಉಬ್ಬಿಸಿ ಹುಬ್ಬನ್ನು ಗಂಟಿಕ್ಕಿ ಕರೀಗುಡ್ಡೆಯನ್ನು ಸ್ವಲ್ಪ ಚಲಿಸುತ್ತ ಬಿರುಸಾಗಿ ನೋಡುವುದು). ೫. ದೃಪ್ತ (ಕಣ್ಣನ್ನು ಅರಳಿಸಿ, ಗರ್ವ ಮತ್ತು ಸಂತೋಷಗಳಿಂದ ಕೂಡಿ ಸ್ಥಿರ ದೃಷ್ಟಿಯಿಂದ ನೋಡುವುದು). ೬. ಭಯ (ನಡಗರದಿಂದ ಕೂಡಿ ಹೆದರುತ್ತ ಕಣ್ಣನ್ನು ಪುನಃ ಪುನಃ ಮುಚ್ಚಿ ತೆರೆದು ಆಲಿಗಳು ಕೆಳಕ್ಕೆ ಬೀಳುವುವೋ ಎನ್ನುವಂತೆ ದೃಷ್ಟಿಯನ್ನು ಚಲಿಸುವುದು). ೭. ಜುಗುಪ್ಸಿತ (ರೆಪ್ಪೆಗಳನ್ನು ಸಂಕುಚಿಸಿ ಕರೀಗುಡ್ಡೆಗಳನ್ನು ಒಳಕ್ಕೆ ಮಾಡಿ ಸುಳ್ಳುನೋಟದಿಂದ ಕಂಡೂ ಕಾಣದಂತೆ ಬೇಸರದಿಂದ ನೋಡುವುದು). ೮. ವಿಸ್ಮಿತ (ಪ್ರೀತಿಯಿಂದ ಕೂಡಿ ಕಣ್ಣನ್ನು ತೆರೆದು ರೆಪ್ಪೆ ಬಡಿಯದೆ ಮೇಲ್ನೋಟದಿಂದ ದೃಷ್ಟಿಸಿ ನೋಡುವುದು). ಸಂಚಾರಿದೃಷ್ಟಿಯಲ್ಲಿ ಇಪ್ಪತ್ತು ಭೇದಗಳಿವೆ. ೧. ಶೂನ್ಯ (ಚಲಿಸದೆ, ನೋಡುವ ಪದಾರ್ಥದ ಅರಿವಿಲ್ಲದಂತೆ ಮಬ್ಬಾದ ಸಮ ದೃಷ್ಟಿಯಿಂದ ನೋಡುವುದು). ೨. ಮಲಿನ (ದೃಷ್ಟಿಸಿ ನೋಡಿ ರೆಪ್ಪೆಗಳನ್ನು ಅರ್ಧ ಮುಚ್ಚಿ ಪುನಃ ರೆಪ್ಪೆಯ ರೋಮಗಳನ್ನು ಅದಿರಿಸುತ್ತ ಕಡೆಗಣ್ಣನ್ನು ಕೆಂಪಗೆ (ಮಬ್ಬು) ಮಾಡಿ ನೋಡುವುದು). ೩. ಶ್ರಾಂತ (ದೃಷ್ಟಿಯನ್ನು ಬಹಳ ದೂರ ಪ್ರಸರಿಸದೆ ಸ್ವಲ್ಪ ಮೇಲು ದೃಷ್ಟಿ ಮಾಡಿ ರೆಪ್ಪೆಯ ರೋಮಗಳನ್ನು ಸೇರಿಸಿ ಕರೀಗುಡ್ಡೆ ಬೀಳುವುದೋ ಎನ್ನುವಂತೆ ಕಡೆಗಣ್ಣಿನಿಂದ ನೋಡುವುದು). ೪. ಲಜ್ಜಿತ (ರೆಪ್ಪೆಗಳನ್ನು ಮೇಲಕ್ಕೂ ಕೆಳಕ್ಕೂ ಚಲಿಸುತ್ತಾ ಕೆಳಗೆ ನೋಡುವುದು). ೫. ಶಂಕಿತ (ಚಂಚಲ ಮತ್ತು ಸ್ಥಿರದೃಷ್ಟಿಗಳಿಂದ ಪಕ್ಕವನ್ನು ಮತ್ತೆ ಮತ್ತೆ ನೋಡಿ ಜಾಗ್ರತೆ ತಿರುಗುವುದು). ೬. ಮುಕುಳ (ಆಲಿಗಳನ್ನು ಚಲಿಸದೆ ರೆಪ್ಪೆಗಳನ್ನು ಮುಚ್ಚುವುದು). ೭. ಅರ್ಧ ಮುಕುಳ (ರೆಪ್ಪೆಗಳನ್ನು ಅರ್ಧ ಮುಚ್ಚಿ ಆಲಿಗಳನ್ನು ಮೆಲ್ಲಗೆ ತಿರುಗಿಸುವುದು). ೮. ಗ್ಲಾನ (ಕರೀಗುಡ್ಡೆಗಳನ್ನು ಒಳಕ್ಕೆ ಮಾಡಿ

ಆಲಸ್ಯದಿಂದ ಕೂಡಿ ನಿಧಾನವಾಗಿ ತಿರುಗಿಸುವುದು). ೯. ಜಿಹ್ಮ (ಆಲಿಗಳು ಕೆಳಕ್ಕೆ ಬೀಳುವುವೋ ಎನ್ನುವಂತೆ ಅರೆಗಣ್ಣಿನಿಂದ ಪಕ್ಕವನ್ನು ನೋಡುವುದು). ೧೦. ಕುಂಚಿತ (ಆಲಿಗಳನ್ನು ಒಳಕ್ಕೆ ಮಾಡಿ ರೆಪ್ಪೆಗಳನ್ನು ಸ್ವಲ್ಪ ಮುಚ್ಚಿ ನೋಡುವುದು). ೧೧. ವಿತರ್ಕಿತ (ರೆಪ್ಪೆಗಳನ್ನೂ ಮತ್ತು ಆಲಿಗಳನ್ನೂ ಜಾಗ್ರತೆ ತಿರುಗಿಸುವುದು). ೧೨. ಅಭಿತಪ್ತ (ರೆಪ್ಪೆಗಳನ್ನು ಚಲಿಸುತ್ತ ಮೆಲ್ಲನೆ ನೋಡುವುದು). ೧೩. ವಿಷಣ್ಣ (ರೆಪ್ಪೆಗಳನ್ನು ಬಡಿಯುತ್ತ ಅರಳಿಸಿ ಆಲಿಗಳನ್ನು ಚಲಿಸದೆ ನೋಡುವುದು). ೧೪. ಲಲಿತ (ಮುಗುಳ್ನಗೆಯಿಂದ ಕೂಡಿ ಅನುರಾಗ ಹೆಚ್ಚುವಂತೆ ಹುಬ್ಬು ಹಾರಿಸುತ್ತ ಕಡೆಗಣ್ಣಿನಿಂದ ನೆಲವನ್ನು ನೋಡುವುದು). ೧೫. ಆಕೇಕರ (ಇನ್ನೊಂದನ್ನು ನೋಡುವಾಗ ರೆಪ್ಪೆಯನ್ನು ಅರ್ಧ ಮುಚ್ಚಿ ಕಡೆಗಣ್ಣಿನಿಂದ ಆಲಿಗಳನ್ನು ಪುನಃ ಪುನಃ ಚಲಿಸುವುದು). ೧೬. ವಿಕೋಶ (ರೆಪ್ಪೆಗಳನ್ನರಳಿಸಿ ಬಡಿಯದೆ ಆಲಿಗಳನ್ನು ತಿರುಗಿಸುವುದು). ೧೭. ವಿಭ್ರಾಂತ (ಕಣ್ಣುಗುಡ್ಡೆಯನ್ನು ಅರಳಿಸಿ ಚಂಚಲ ದೃಷ್ಟಿಯಿಂದ ನೋಡುವುದು). ೧೮. ವಿಪ್ಲುತ (ರೆಪ್ಪೆಗಳನ್ನು ಅದಿರಿಸುತ್ತ ಚಂಚಲದೃಷ್ಟಿಯಿಂದ ಅರೆಗಣ್ಣಲ್ಲಿ ನೋಡುವುದು). ೧೯. ತ್ರಸ್ತ (ಕಣ್ಣನ್ನರಳಿಸಿ ಹೆದರಿದಂತೆ ರೆಪ್ಪೆಗಳನ್ನು ಸುತ್ತಿಸುವುದು). ೨೦. ಮದಿರೆ: ಇದು ಮೂರು ಬಗೆ. ಅ. ತರುಣ (ಕಣ್ಣನ್ನರಳಿಸಿ ಕಡೆಗಣ್ಣಿನಿಂದ ಕಂಡೂ ಕಾಣದಂತೆ ಆಲಿಯನ್ನು ಸುತ್ತಿಸುತ್ತ ನೋಡುವುದು). ಆ. ಮಧ್ಯಮ (ರೆಪ್ಪೆಗಳನ್ನು ಸ್ವಲ್ಪ ಬಗ್ಗಿಸಿ ಗಾಬರಿಯಿಂದ ನೋಡಿ ತಾರೆಯನ್ನು ಸುತ್ತಿಸಿ ಕಣ್ಣುಗುಡ್ಡೆಯ ಮಧ್ಯದಲ್ಲಿ ನಿಲ್ಲಿಸುವುದು). ಇ. ತೀವ್ರ ಹೊರಕ್ಕೆ ಕಾಣದಂತೆ ಆಲಿಗಳನ್ನು ಸ್ವಲ್ಪ ಒಳಕ್ಕೆ ಮಾಡಿ ಕೆಳಗಡೆ ನೋಡಿ ರೆಪ್ಪೆಗಳನ್ನು ಬಡಿಯದೇ ಇರುವುದು ಅಥವಾ ರೆಪ್ಪೆಗಳನ್ನು ಬಡಿಯುತ್ತಲೇ ಇರುವುದು: ಉರುವಿಪ್ಲುತಮುಂ ತ್ರಸ್ತಂ ಸರಸಿಜಮುಖಿ ಮದಿರೆಯೆಂದು ತೋರ್ಪಿಪ್ಪತ್ತುಂ ಪರಿ ಸಂಚಾರಿಗಳುಂ ಕೇಳ್ ತರುಣೀ ಮೇಣ್ ದೃಷ್ಟಿಭೇದ ಮೂವತ್ತಾಱುಂ (ಲಾಸ್ಯರಂ. ೩-೮); ವಿಲಸಿತ ಕರಭೇದ ದೃಷ್ಟಿಭೇದವು ನೆಱೆಯೊಲವುದೋಱುವ ಶಿರಭೇದ . . . ಚಾರಿಯ ಭೇದದಲಿ ಭಾವಗಳ ತೋಱಿದರು (ಕಂನವಿ. ೮-೬೨).

[ ದೃಷ್ಟಿ + ಭೇದ ]

**ದೃಷ್ಟಿಮಾಂದ್ಯ** (ನಾ). ಕಣ್ಣಿನ ಶಕ್ತಿ ಕುಗ್ಗುವಿಕೆ ; ಒಂದು ಬಗೆಯ ಕಣ್ಣುರೋಗ : "ಕಣನಂ, ಕಣನೀಯುಂ ಈ ೨ ದೃಷ್ಟಿಮಾಂದ್ಯಂ" (ಕಾಶಕ್ಯ. ೨೬೫) ; ವಯಸ್ಕರಲ್ಲಿ ಬರುವ ಕಣ್ಣೊಳಗಿನ ಅಂತರದ್ರವದ ಒತ್ತಡದ ಹೆಚ್ಚಿನಲ್ಲಿ (Glaucoma) ದೃಷ್ಟಿಮಾಂದ್ಯವು ಮೊದಲಿನ ಚಿಹ್ನೆ (ನಿಮ್ಮದೃ. ೮೨) ; (ಕಣ್ಣಿನ ಮುಖ್ಯ ನರಕ್ಕೆ ಬೇನೆಯುಂಟಾದುದರಿಂದ) ದೃಷ್ಟಿಮಾಂದ್ಯ, ದೃಷ್ಟಿನಾಶ (Amaurosis. ಇಂಕನಿ).

[ ದೃಷ್ಟಿ + ಮಾಂದ್ಯ ]

**ದೃಷ್ಟಿಮಾಪಕ** (ನಾ). ''ಕಣ್ಣಿನ ಕಿರಣವಕ್ರೀಕರಣಶಕ್ತಿಯನ್ನೂ ದೃಷ್ಟಿ ಪರಿಮಿತಿಯನ್ನೂ ಪರೀಕ್ಷಿಸುವ ಸಲಕರಣೆ; ಕಣ್ಣಿನ ಸ್ಪಷ್ಟ ದೃಷ್ಟಿಯ ದೂರವನ್ನಾಗಲೀ ಅಥವಾ ಅದರ ಹೊಂದಿಕೊಳ್ಳುವ ಪರಿಮಿತಿಯನ್ನಾಗಲೀ ಅಳೆಯುವ ಸಲಕರಣೆ: ದೃಷ್ಟಿಮಾಪಕ'' (Optometer. ಇಂಕನಿ). [ ದೃಷ್ಟಿ + ಮಾಪಕ ]

**ದೃಷ್ಟಿಮೋಹ** (ನಾ). [ಜೈನ] ಸಮ್ಯಗ್ದರ್ಶನವನ್ನು ನಷ್ಟಗೊಳಿಸುವ ಕರ್ಮ: ಘನ ಮಿಥ್ಯಾತ್ವ ದವಾನಳಶಿನದ್ಧ ಜೀವಕ್ಕೆ ದೃಷ್ಟಿಮೋಹಪ್ರವಿನಾಶನಮಿಲ್ಲದಂದು ಪುಟ್ಟದು ಮನದೊಳ್ ಸ್ವಮೋಕ್ಷಸಾಧನಂ ಸಮ್ಯಕ್ತ್ವಂ (ಆದಿಪು. ೫-೫೨); ''ಸಮ್ಯಗ್ದರ್ಶನಕ್ಕೆ ದೃಷ್ಟಿಯೆನ್ನುತ್ತಾರೆ. ಅದನ್ನು ಮೋಹಿತಗೊಳಿಸುವ ಅಥವಾ ನಷ್ಟಪಡಿಸುವ ಕರ್ಮಗಳು ದೃಷ್ಟಿಮೋಹಗಳು' (ಆದಿಪು. ಅನುಬಂಧ. ೨); ಪರಮಾತ್ಮಂ ಪರಮಾಗಮಂ ಪರಮ ಚಾತುರ್ವರ್ಣ್ಯಮಾರ್ಹಂತ್ಯಮುದ್ಧುರಸದ್ಧರ್ಮಮಿವಂ ತಿರಸ್ಕರಿಸೆ ಸಾರ್ಗುದೃಷ್ಟಿಮೋಹಾಸ್ರವಂ (ಸುಕುಮಾ. ೮-೧೯). [ ದೃಷ್ಟಿ + ಮೋಹ ]

**ದೃಷ್ಟಿಯುದ್ಧ** (ನಾ). ರೆಪ್ಪೆ ಬಡಿಯದೆ ಪರಸ್ಪರರ ಕಣ್ಣುಗಳನ್ನು ರೋಷದಿಂದ ನೋಡುವಿಕೆ ; ಒಬ್ಬರನ್ನೊಬ್ಬರು ಗುರಿಯಿಟ್ಟು ನೋಡುವುದು ; P ದ್ವಂದ್ವಯುದ್ಧದಲ್ಲಿ ವ್ಯಕ್ತಿಯ ಸತ್ವವನ್ನು ಪರೀಕ್ಷಿಸುವ ಬಗೆಗಳಲ್ಲಿ ಒಂದು : ಒಬ್ಬರನ್ನೊಬ್ಬರು ದುರುಗುಟ್ಟಿ ನೋಡುವಾಗ ರೆಪ್ಪೆಬಡಿದವರು ಸೋತರೆಂದು ತೀರ್ಮಾನವಾಗುತ್ತಿತ್ತು. ಭರತರಾಜಂ ಸೋಲ್ತುಂ ಅಂತು ಬಾಹುಬಲಿಯ ತೇಜಃಪುಂಜಮೆ ಕಣ್ಣೊಳುಳ್ಕುವಂತೆ ಸೈರಿಸದೆಮೆಯಿಕ್ಕಿ ದೃಷ್ಟಿಯುದ್ಧದೊಳ್ ಸೋಲೆ (ಆದಿಪು. ೧೪-೧೦೩ ವ) ; ಬಾಹುಬಲಿ ಭರತನಂ ದೃಷ್ಟಿಯುದ್ಧ ಜಲಯುದ್ಧದೊಳ್ ಗೆಲ್ದು (ಚಾವುಂಪು. ೪೪)

[ ದೃಷ್ಟಿ + ಯುದ್ಧ ]

**ದೃಷ್ಟಿಯುದ್ಧಂಗೆಯ್** (ಕ್ರಿ). ರೆಪ್ಪೆ ಬಡಿಯದೆ ಪರಸ್ಪರ ರೋಷದಿಂದ ನೋಡು ; ಕಣ್ಣಿನ ನೋಟದಿಂದಲೇ ಕಾದು : ಭೀಕರ ಬದ್ಧಭ್ರುಕುಟಿ ಘಟಿತರದ್ಭುತರಟ್ಟಾಸುರರಧಿಕ ಕೋಪಪಾಟಳ ಪರುಷೇಕ್ಷಣರೆನಿಸಿ ದೃಷ್ಟಿಯುದ್ಧಂಗೆಯ್ದರ್ (ಗದಾಯು. ೮-೨). [ ದೃಷ್ಟಿಯುದ್ಧ + ಕೆಯ್$_1$ ]

**ದೃಷ್ಟಿರೋಷ** (ನಾ). ಕಣ್ಣಿನಲ್ಲಿ ವ್ಯಕ್ತವಾಗುವ ಕೋಪ ; ನೋಟದಲ್ಲಿ ಕಂಡ ಬರುವ ಸಿಟ್ಟು : ಅವನ ದೃಷ್ಟಿದೋಷಕ್ಕೆ ಅಳುಕಿ ಮಾತನಾಡಲಂಜಿದ್ದ ಕಿಂಕರರ ಮೇಲೆ ರೇಗಿ (ಚಂದ್ರಸ. ೧೦೩). [ ದೃಷ್ಟಿ + ರೋಷ ]

**ದೃಷ್ಟಿವಲಯ** (ನಾ). ನೋಟದ ಪಥ,–ಹರಹು : ಆ ಪರಮರೂಪ ನಮ್ಮ ದೃಷ್ಟಿವಲಯಕ್ಕೆ ಮೀರಿದುದು (ಸೌಂದಸ. ೧೦೦). [ದೃಷ್ಟಿ+ವಲಯ]

**ದೃಷ್ಟಿವಾದ** (ನಾ). [ಜೈನ] ಜೈನಾಗಮಗಳ ಹನ್ನೆರಡು ಅಂಗಗಳಲ್ಲಿ ಒಂದು : ಆಚಾರ, ಸೂತ್ರಕೃತ . . . ಪ್ರಶ್ನವ್ಯಾಕರಣ, ವಿಪಾಕಸೂತ್ರ, ದೃಷ್ಟಿವಾದ ಎಂಬುವು ಹನ್ನೆರಡು ಅಂಗಗಳು (ಭಾತತ್ತ್ವ. ೨೨೮). 'ದ್ವಾದಶಾಂಗ' ಪರಾ. [ ದೃಷ್ಟಿ + ವಾದ$_3$ ]

**ದೃಷ್ಟಿವಾರಿ** (ನಾ). (?) : ರಂಗಮಂಟಪದೊಳು ಕುಳ್ಳಿರ್ದ ದೃಷ್ಟಿವಾರಿಯ ದೃಢಚಿತ್ತಂಗೆ ಕರ್ಣದ್ವಯದ ಕಮನೀಯಂಗೆ . . . ಬಸವಣ್ಣಂ ಮೈಯಿಕ್ಕಿ ಕುಳ್ಳಿರ್ದು (ಬಸರ. ೪-೬೯) . "ತನಗೂ ದೇವರಿಗೂ ನಡುವೆ ಬಂದವರನ್ನು ಕತ್ತರಿಸುತ್ತೇನೆಂಬ ಪ್ರತಿಜ್ಞೆ" (ಬಸರ. ಕೋಶ). 'ದಿಟ್ಟಿವಾರಿ' ಪರಾ. [ ದೃಷ್ಟಿ + ವಾರಿ$_2$ ? ]

**ದೃಷ್ಟಿವಾಳ** (ನಾ). ೧. ದೃಷ್ಟಿಯ ಸೂಕ್ಷ್ಮತೆಯುಳ್ಳವನು : ಸೂಕ್ಷ್ಮ ನೋಟವುಳ್ಳವನು; ಗುರಿಕಾರ : ತೋಱಿದ ಭೇದವ ತೋಱಿದಂತೆ ಕಂಡಾತನಲ್ಲದೆ ದೃಷ್ಟಿವಾಳ ತಾನಲ್ಲ (ಅವಚಂ. ೧೪೦-೬೪೪) ; ಬೆಲೆಯ ತಪ್ಪದೆ ಪೇಳ್ವ ದೃಷ್ಟಿವಾಳರೊಳ್ ಪೆಸರ್ವಡೆದಿರ್ಪ ರತ್ನದ ಪರೀಕ್ಷಕರಿರ್ದರನಂತಗಾಡಿಯಿಂ (ಮಲ್ಲಕಾ. ೪-೬೩೪). ೨. ಗುರಿಯಿಡುವುದರಲ್ಲಿ ಪರಿಣತಿ ; ಸ್ಪಷ್ಟವಾದ ಗುರಿ ಹೊಂದಿರುವುದು ; ಗುರಿಕಾರತನ : ಆವ ವಹಿಲದೊಳಂಬ ತೊಡಚುವನು . . . ಅದಾವ ನಿರುತದಲೊಡ್ಡುವನು ಕೊರಳಿಂಗೆ ಕೋಲುಗಳ ಆವ ದೃಢತೆಯೊ ದೃಷ್ಟಿ [ಪಾಠಾಂ. ಮುಷ್ಟಿ] ವಾಳವಿದಾವ ಗರುಡಿಶ್ರಮವೆನುತ ದಿವಿಜಾವಳಿಗಳುಲಿಯಲು ವಿಭಾಡಿಸಿದನು ರಿಪುವ್ರಜವ (ಕುವ್ಯಾದ್ರೋ. ೫-೬) ; ಕಡುಮನದ ಕೋಪಗಳ ಬಲಿದಿಟ್ಟೆಡೆಯ ಮುಷ್ಟಿಯ ದೃಷ್ಟಿವಾಳದ [ಪಾಠಾಂ. ಟ್ಟಿಡಿಯ ದೃಷ್ಟಿಯ ಮುಷ್ಟಿವಾಳದ]ಸಡಿಪಡದ ಸೌರಂಭರೆಚ್ಚಾಡಿದರು ಸರಿಸದಲಿ (ತೊರರಾ. ೬-೨೮-೨೪) ; ಅಸಮಸಮ ಪಯಪಾಡಿನಲಿ ಬಾರಿಸಿದ ಮುಷ್ಟಿಯ ದೃಷ್ಟಿವಾಳದ ಕೊಸರಿಕೆಯ ಕೋಪದಲಿ ಕೈಕೊಂಡನು ಮಹಾಹವಕೆ (ತೊರರಾ. ೬-೩೩-೧೩). [ ದೃಷ್ಟಿ + – ವಾಳ್$_1$ ]

**ದೃಷ್ಟಿವಾಳತನ** (ನಾ). ಸ್ಪಷ್ಟವಾದ ಜ್ಞಾನವನ್ನು ಹೊಂದಿರುವಿಕೆ: ವಿವೇಕ; ವಿವೇಚನೆ: ಜಾತ್ಯಂಧರ್ಗೆ ನೀವು ನಿಮಗೆಲ್ಲಿಯದು ದೃಷ್ಟಿವಾಳ ತನವು (ವೀಶೈಪು. ೪-೪-೪೦). [ ದೃಷ್ಟಿವಾಳ + – ತನ ]

**ದೃಷ್ಟಿವಾಳಿಕೆ** (ನಾ). = ದೃಷ್ಟಿವಾಳತನ : ರತ್ನಪಾಷಾಣದ ತೇಜಕಾಂತಿ ಎಲ್ಲಾ ಪಾಷಾಣಗಳಿಗಿಲ್ಲದಂತೆ ಅಂತಪ್ಪ ರತ್ನಪಾಷಾಣದ ಜಾತಿಕಲೆಗಳ ನಱಿವ ದೃಷ್ಟಿವಾಳಿಕೆಯೂ ಒಬ್ಬಂಗಲ್ಲದೆ ಎಲ್ಲರಿಗೆಯೂ ಇಲ್ಲದಂತೆ (ವಚಸಂ. ೫೩೧-೭ ಟೀಕು) [ ದೃಷ್ಟಿವಾಳ + – ಇಕೆ ]

**ದೃಷ್ಟಿವಿಕ್ಷೇಪ** (ನಾ). ೧. ನೋಟವನ್ನು ಬೀರುವುದು. ೨. ಓರೆ ನೋಟ; ಕಂಡಿನೋಟ. [ ದೃಷ್ಟಿ + ವಿಕ್ಷೇಪ ]

**ದೃಷ್ಟಿವಿಭವ** (ನಾ). [ಜೈನ] ಸಮ್ಯಗ್ದರ್ಶನದ ಪ್ರಭಾವ, – ಮಹಿಮೆ: ಭವಾಬ್ಧಿತಟಂ ಸಮೀಪಮಾಗಿರೆ ದೊರೆಕೊಂಡ ದೃಷ್ಟಿವಿಭವಂ ಕಳೆಗುಂ ಖಳಕರ್ಮಬಂಧಮಂ (ಆದಿಪು. ೫-೫೩). [ ದೃಷ್ಟಿ + ವಿಭವ ]

**ದೃಷ್ಟಿವಿಷ** (ಗು). ೧. ಕಣ್ಣಿನಲ್ಲಿ ವಿಷವನ್ನು ಹೊಂದಿರುವ. 'ದೃಷ್ಟಿ ವಿಷಭುಜಂಗ' ಪರಾ. (ನಾ). ೨. ನೋಟದಿಂದಾಗುವ ಕೆಡುಕು; ಕಣ್ಣೆಂಜಲು. ೩. ಕಣ್ಣಿನಿಂದ ಹೊರಡುವ ವಿಷ; ವಿಷಮಯವಾದ ನೋಟ: ನಾಗರಾಜಂ ಕಡುಮುನಿದು ... ತನ್ನ ದೃಷ್ಟಿವಿಷದಿಂದಱುವತ್ತು ಸಾಸಿರ್ವರುಮನೊರ್ಮೊದಲೆ ಭಸ್ಮಮಪ್ಪಂತು ಮಾಡಿ ಪೋದಂ (ಜೀವಸಂ. ೨೦-೩೭ವ). ೪. ಒಂದು ಬಗೆಯ ಹಾವು; ಶಂಖಪಾಲ : ಎರಡು ಪದಂಗಳಪಭ್ರಂಶಕ್ಕೆ—ದೃಷ್ಟಿವಿಷ–ದಿಟ್ಟಬಿಸ, ದಿಟ್ಟವಿಸ (ಶಮದ. ೨೮೯ ಪ್ರಯೋ). [ ದೃಷ್ಟಿ + ವಿಷ ]

**ದೃಷ್ಟಿವಿಷತ್ವ** (ನಾ). [ಜೈನ] ಆರು ಬಗೆಯ ರಸಋದ್ಧಿಗಳಲ್ಲಿ ಒಂದು; ನೋಟವನ್ನು ಬೀರಿ ಸಾವನ್ನು ತರುವ ಸಿದ್ಧಿ: ಆವನೋರ್ವನಂ ಮುನಿದು ನೋಟ್ಪನೋರ್ೀಡಿದಾಗಳೆ ಸಾವುದು ದೃಷ್ಟಿವಿಷತ್ವಮೆಂಬುದು (ಪಸಾರ. ೩೯೦). [ ಸಂ. ]

**ದೃಷ್ಟಿವಿಷಭುಜಂಗ** (ನಾ). ನೋಟದಿಂದಲೇ ಕೊಲ್ಲುವ ಶಕ್ತಿಯುಳ್ಳ ಹಾವು : ಮಣಿಕೇತು ದೃಷ್ಟಿವಿಷಭುಜಂಗನಾಗಿ ಕೃತಕದೊಳವರಂ ಭಸ್ಮಂ ಮಾಡಿದೊಡೆ (ಜೀವಸಂ. ೨೦-೩೩ ಅಡಿಪಾಠ). [ ದೃಷ್ಟಿವಿಷ + ಭುಜಂಗ ]

**ದೃಷ್ಟಿವಿಷಭುಜಂಗಮ** (ನಾ). = ದೃಷ್ಟಿವಿಷಭುಜಂಗ : ನಿಮ್ಮ ಬಲ್ಲಂದದೊಳು ಕಾಪಂ ಮಾಡಿಮೆಂದೊಡವರ್ಬಂದು ಕೈಲಾಸದ ಬಳಸಿಯು ವಳಗಂ ಮಾಡುವರಂ ಮಣಿಕೇತು ದೃಷ್ಟಿವಿಷಭುಜಂಗಮನಾಗಿಸಿ . . . ಅವರಂ ಭಸ್ಮಂ ಮಾಡಿದೊಡೆ (ಜಾವುಂಪು. ೯೨). [ ದೃಷ್ಟಿವಿಷ + ಭುಜಂಗಮ ]

**ದೃಷ್ಟಿವಿಷಾಹಿ** (ನಾ). = ದೃಷ್ಟಿವಿಷಭುಜಂಗ: ಇವೆ ದೃಷ್ಟಿ [ಪಾಠಾಂ. ದುಷ್ಟ] ವಿಷಾಹಿಗಳೀ ಕವಿತರ್ಪುವೆ ಜವನ ಬೆಸದಿನೆನೆ ನಿಮಿಷಕ್ಕೀಂ ತವೆ ಪೀರ್ದುವು ಖಚರಪ್ರಾಣವಾಯುವಂ ಕೃಷ್ಣನೆಚ್ಚ ನಾರಾಚಂಗಳ್ (ಪಂರಾಮಾ. ೯-೬೫).
[ ದೃಷ್ಟಿವಿಷ + ಅಹಿ ]

**ದೃಷ್ಟಿವೈಶಾಲ್ಯ** (ನಾ). (ಆಲಂ) ವಿಷಯಂಗಳನ್ನು ಕುರಿತ ನೋಟದಲ್ಲಿಯ ವ್ಯಾಪಕತೆ; ಅರ್ಥಮಾಡಿಕೊಳ್ಳುವುದರಲ್ಲಿರುವ ಔದಾರ್ಯ; ಪರಿಶೀಲಿಸುವುದರಲ್ಲಿ ಸರ್ವತೋಮುಖತೆ : ದೃಷ್ಟಿವೈಶಾಲ್ಯವ ಗಳಿಸು (ಇಂಚಾಪ. ೮೦-೮೯); ವಸ್ತುವಿನ ಗುಣಾವಗುಣಗಳ ಪರೀಕ್ಷೆಯಲ್ಲಿ ದೃಷ್ಟಿ ವೈಶಾಲ ಅಗತ್ಯ (ರೂಢಿ). [ ದೃಷ್ಟಿ + ವೈಶಾಲ್ಯ ]

**ದೃಷ್ಟಿವ್ಯಪೇತ** (ನಾ). ಕಣ್ಣಿಲ್ಲದವನು; ಕುರುಡ : "ಅಂಧಂ ದೃಷ್ಟಿವ್ಯ ಪೇತನುಂ ತಾನುಕ್ಕುಂ" (ವಸ್ತುಕೋ. ೧೩೪-೮೯). [ ದೃಷ್ಟಿ + ವ್ಯಪೇತ ]

**ದೃಷ್ಟಿಶಾಸ್ತ್ರ** (ನಾ). "ದೃಷ್ಟಿಹೇತುವಾದ ಬೆಳಕಿನ ನಿಯಮಗಳನ್ನು ಕುರಿತ ಶಾಸ್ತ್ರ" (Optic. ಇಂಕನಿ); ಬೆಳಕು ಸಂಚರಿಸುವ ರೀತಿ, ಗಾಜು ಗಳಲ್ಲಿ ವಕ್ರವಾಗುವ ಕ್ರಮ . . . ತಿಳಿಸುವ ಶಾಸ್ತ್ರವನ್ನು ದೃಷ್ಟಿಶಾಸ್ತ್ರ ವೆಂದು ನಾನು ಕರೆದಿರುವೆನು (ವಿಜ್ಞಾಕ. ೨೪ ಅಡಿಟಿ). [ ದೃಷ್ಟಿ + ಶಾಸ್ತ್ರ ]

**ದೃಷ್ಟಿಶೂನ್ಯೆ** (ನಾ). ಕಣ್ಣಿಲ್ಲದವಳು; ಕುರುಡಿ : ಕಪಾಲಕುಂಡಲೆಯು ದೃಷ್ಟಿಶೂನ್ಯೆಯಾದವಳಂತೆ ಮಾತಿಲ್ಲದೆ ಕಾಪಾಲಿಕನ ಹಿಂದೆ ಹೋದಳು (ಕಪಾಕುಂ. ೧೨೭). [ ಸಂ. ದೃಷ್ಟಿಶೂನ್ಯಾ ]

**ದೃಷ್ಟಿಸಾಕಲ್ಯ** (ನಾ). ವಿಚಾರದ ಸರ್ವತೋಮುಖತೆ; ಸಮಗ್ರದೃಷ್ಟಿ; ವಿಚಾರದ ಬಹುಮುಖತೆ: ಅವರು ವಿಶ್ವಭಾರತಿಯನ್ನು ಸ್ಥಾಪಿಸಿದ್ದು ಈ ದೃಷ್ಟಿಸಾಕಲ್ಯವೂ ಈ ಸಂಪನ್ನತೆಯೂ ಬೆಳೆಯಲೆಂದೇ (ನಿಬಂಧ.I, XIV ಮುನ್ನುಡಿ). [ ದೃಷ್ಟಿ + ಸಾಕಲ್ಯ ]

**ದೃಷ್ಟಿಸು** (ಕ್ರಿ). ೧. ನೋಡು; ನಿರೀಕ್ಷಿಸು : ದೃಷ್ಟಿಸನು ಮಾತಾಡ ಅವರ ನುಡಿಯಂ ಕೇಳಲೊಲ್ಲನು (ಬಸವು. ೬೦-೧೪); ಸೃಷ್ಟಿ ಯೆಲ್ಲವನು ಮನಮುಟ್ಟುವದು ನಿಮಿಷದಲಿ ನೆಟ್ಟು ಭಾವಜೀವವಿಪ್ಪ ಮೂಱಿಕೊಂದೆಂದು ದೃಷ್ಟಿಪನೆ ಶ್ರೇಷ್ಠ (ಸರ್ವಜ್ಞ. ೦೬೧); ರಾಯನಂ ದೂರದಿಂ ದೃಷ್ಟಿಸಿ (ಸೌಗಂಧಿ. ೩೦೦-೧೩). ೨. ದಿಟ್ಟಿಸು; ಎವೆಯಿಕ್ಕ ದಂತೆ ನೋಡು; ದುರುಗುಟ್ಟು: ಶಂಕರದಾಸಿ ಕಟ್ಟಾಸುರದಿ ದೃಷ್ಟಿಸಲು . . . ಸ್ಥೂಲವನಮಾಲಿಪುತುಮೆ ನೆಱೆ ಹೋಳಿದಿಬ್ಬಗಿಯಾಗಿ ನೆಲದಲಿ ಧೂಳಿಪಟವಾಯ್ತು (ಬಸವು. ೫೩-೭೦). ೩. ಗಮನಿಸು; ಲಕ್ಷ್ಯ ಕೊಡು: ಸೂರಪ್ಪನವರ ಆ ದಿನದ ವರ್ತನೆಯನ್ನು ಅಪ್ಪಾಜಿಯು ದೃಷ್ಟಿಸಲಿಲ್ಲ (ಹೆಂಗಾಳ್ಳ. ೪೩). [ ದೃಷ್ಟಿ + – ಸು$_1$ ]

**ದೃಷ್ಟಿಸೃಷ್ಟಿವಾದ** (ನಾ). [ಅದ್ವೈತ] ಮಾಯಾವಾದದಲ್ಲಿ ಒಂದುವಿಧ: ನಾವು ನೋಡಿದರೆ ಮಾತ್ರ ಅಗಲೆ ಜಗತ್ತಿನ ಸೃಷ್ಟಿಯಾಗುವದೆಂದೂ ನೋಡದೆ ಇದ್ದರೆ ಜಗತ್ತೇ ಇಲ್ಲವೆಂದೂ ಕೆಲವರು ಹೇಳುವರು. ಇದಕ್ಕೆ ದೃಷ್ಟಿಸೃಷ್ಟಿ ವಾದವೆಂದು ಹೆಸರು (ಅಮೃತ. ೫-೪೮ ಟೀಕು). 'ಮಾಯಾವಾದ' ಪರಾ. [ ದೃಷ್ಟಿ + ಸೃಷ್ಟಿ + ವಾದ$_3$ ]

**ದೃಷ್ಟ್ಯವಿಷ** (ನಾ). [ಜೈನ] ಎಂಟು ಬಗೆಯ ಔಷಧ ಋದ್ಧಿಗಳಲ್ಲಿ ಒಂದು; ದೃಷ್ಟಿಯಿಂದಾಗುವ ವಿಷವನ್ನು ಪರಿಹರಿಸುವ ಶಕ್ತಿ: ಆರ್ಕೆಲಂಬರ ನೋಟದಿಂದಮ ವಿಷಂ ನಿರ್ವಿಷಮಕ್ಕುಮದು ದೃಷ್ಟ್ಯವಿಷ ಮೆಂಬುದು (ಪಸಾರ. ೪೮೦). [ ಸಂ. ]

**ದೆಂಗು** (ಕ್ರಿ). ಹಡು; ಕೇಯು; ಸಂಭೋಗಿಸು. [ ದೇ.॥ ತೆಲು. ದೆಂಗು ]

**ದೆಂಜಿ** (ನಾ). (ಕರಾ) ನೀರಿರುವ ಬಳಿ ವಾಸಿಸುವ ಒಂದು ಬಗೆಯ ಚಿಕ್ಕ ಪ್ರಾಣಿ; ನಳ್ಳಿ; ಏಡಿಕಾಯಿ: ತೋಡಿನ ಇಬ್ಬದಿಗಳಲ್ಲಿ ಮಣ್ಣು ಕೊರೆದು ಅಡಗಿದ ದೆಂಜಿಗಳನ್ನು ಹಿಡಿಯುವುದೂ ಇದೆ (ಜಾಳಿಗಿ. ೪೯).
[ ←ತುಳು. ದೆಂಜಿ, ಡೆಂಜಿ ]

**ದೆಖ್ಖಾಣ** 'ದೆಖ್ಖಾಳ' ನೋ.

**ದೆಖ್ಖಾದೆಖ್ಖಿ** (ನಾ). ೧. ಇಬ್ಬರು ಪರಸ್ಪರ ಹಮ್ಮಿನಿಂದ ಮಾಡುವ ಯುದ್ಧ; ಸ್ಪರ್ಧೆಯ ಕಾಳಗ: ದ್ವಂದ್ವಯುದ್ಧ: ಮುರಾರಿಯೊಳು ದೆಖ್ಖಾದೆಖ್ಖಿಯೊಳು ಕಾದಿ ತಳ್ತಿಱಿದು ಗೆಲ್ದು ತುರುಗದಳಮಂ ತಂದ ಪಗೆಮೆಚ್ಚೆಗಂಡ (ಸೌಇಇ. IX-1, ೩೪೩-೨೨; 1226): ಹೆಲ್ಲಾಹೆಲ್ಲಿ ದಾಟಾ ದಾಟಿ, ದೆಖ್ಖಾದೆಖ್ಖಿ . . . ಮಲ್ಲಾಮಲ್ಲಿ–ಇವು ತತ್ಸಮಂಗಳ್ (ಶಮದ. ೧೮೫ ಪ್ರಯೋ): ಬಲನ ವಜ್ರನ ಕಾಲನೇಮಿಯ ಜಲರುಹಾಕ್ಷನ ರಾವಣನ ರಘುಕುಲನ ದೆಖ್ಖಾದೆಖ್ಖಿ ಜೋಡಿಸಿತಾತನೀತನಲಿ (ಕುವ್ಯಾಕ. ೨೦-೨೨); ಬಿಡದೆ ದೆಖ್ಖಾದೆಖ್ಖಿಯುಲಿ ಧೃತಿಗೆಡದೆ ದಾಳಾಧೂಳಿಯುಲಿ ಬಲುಗಡಿಯ ಖಾಡಾಖಾಡಿಯುಲಿ ಕಾದಿದರು ಕಡುಹಿನಲಿ (ತೊರವಾ. ೬-೪೬-೫೬). ೨. ರಭಸ : ತೀಕ್ಷ್ಣತೆ; ಜೋರು : ತಾಗಿ ತಳ್ತಿಱಿದು ರಕ್ಕಸವಡೆಯೊಳ್ ಮಿಕ್ಕು ಮಿಱುವ ದೇವರ್ಕಳ ದೆಖ್ಖಾದೆಖ್ಖಿಯ ಕಾಳೆಗಮಂ ಕಂಡು ಕಡುಮುಳಿದು (ಗಿರಿಕ. ೬-೭೪ ವ); ಕಳಕಳದ ಬಹುವಿಧದ ವಾದ್ಯದ ದಳದ ದೆಖ್ಖಾದೆಖ್ಖಿಯುಲಿ ಕಲಿಕರ್ಣ ನಡೆತಂದ (ಕುವ್ಯಾಕ. ೧೧-೪೯).
[ ←ಮರಾ. ದೇಖೋದೇಖೀ ]

**ದೆಖ್ಖಾಯ** 'ದೆಖ್ಖಾಯಿ' ನೋ.

**ದೆಖ್ಖಾಯಿ,** ದೆಖ್ಖಾಯಂ (ನಾ). ಅತಿಶಯ; ವೇಗ; ರಭಸ; ನೆಟ್ಟನೈದುವ ಹಿಳುಕುಗಳ ತಱಿದೊಟ್ಟಿದನು ದೆಖ್ಖಾಯಿ [ಪಾಠಾಂ. ಯ]ಯಲಿ ಗಱಿ ಗಟ್ಟಿತೀತನ ಖಾತಿ ಮೆಱೆದುದು ಕೇಣವಿಲ್ಲೆನಿಸಿ (ಕುಮಾದ್ರೋ. ೧೮-೨೮). **ದೆಖ್ಖಾಯ:** ತವತವಗೆ ದೆಖ್ಖಾಯ ಮಿಗೆಯುತ್ಸವದಲುಱುಬಿದರವನಿ ಪಾಲನ ಗವಿಯ ಘಾಡಿಕೆ ಜೋಡಿಸಿತು ಗೀರ್ವಾಣರಾಲಿಗಳ (ಕುಮಾಕ. ೧೩-೧೬). 'ದಿಖಾವು' ಪರಾ; P ಮರಾಠಿ ಭಾಷೆಯಲ್ಲಿ ಭಾವನಾಮಗಳನ್ನು ಮಾಡುವುದಕ್ಕೆ '-ಈ' ಎಂಬ ಪ್ರತ್ಯಯವನ್ನು ಹಚ್ಚಿಸಲಾಗುತ್ತದೆ 'ನವಾಈ', ನವಾಯಿ ಎಂಬ ಪದದಲ್ಲಿರುವಂತೆ. ಇದರ ಸಾದೃಶ್ಯದ ಮೇಲೆ ಕುಮಾರವ್ಯಾಸನು ಗರುವಾಯಿ, ದೆಖ್ಖಾಯಿ, ವಿಡಾಯಿ ಮುಂತಾದ ಶಬ್ದಗಳನ್ನು ಸೃಷ್ಟಿಸಿಕೊಂಡಿರಬಹುದು. [ ? ]

**ದೆಖ್ಖಾಯ್ಲ** (ನಾ). ರಭಸದಿಂದ ಕೂಡಿರುವವನು; ಜೋರಿನಿಂದ ಕೂಡಿಕೊಂಡಿರುವವನು. 'ದೆಖ್ಖಾಯ್ಲತನ' ಪರಾ.

[ ದೆಖ್ಖಾಯಿ + -ಆಯ್ಲ (< -ಆಯಿಲ್ಲ) ]

**ದೆಖ್ಖಾಯ್ಲತನ** (ನಾ). ತೀವ್ರತೆ; ಜೋರು: ಉಗ್ರವಾಗಿರುವಿಕೆ: ರಭಸ: ಅರಸ ಕೇಳ್ಳೆ ಕರ್ಣಭೀಮರ ಧರಧುರದ ದೆಖ್ಖಾಯ್ಲತನ ಗಬ್ಬರಿಸಿತಾಹವಗರ್ವಿತರ ಗಾಢಾಯ್ಲ ಚೀತನವ (ಕುಮಾಕ. ೧೪-೩).

[ ದೆಖ್ಖಾಯ್ಲ + -ತನ ]

**ದೆಖ್ಖಾಳ,** ದೆಖ್ಖಾಣ (ನಾ). ೧. ಹೆಚ್ಚಳ; ಸಮೃದ್ಧಿ; ಅತಿಶಯ; ಅಧಿಕ್ಯ: ಆ ಸುದೇಷ್ಣಾದೇವಿಯರ ನಿಡುಕೇಶವನು ಹಿಕ್ಕುವಳು ಮುದದಲಿ ಪೋಸಿಮಲ್ಲಿಗೆಯರಳ ದೆಖ್ಖಾಳವನು ಮುಡಿಸುವಳು (ಕುಮಾವಿ. ಓರಿಜ. ೨-೩): ದಳಪತಿ ಕುರುಬಲದ ದೆಖ್ಖಾಳವನು ನೋಡಿದನು ತೂಗಾಡಿದನು ಮಣಿ ಶಿರವ (ಕುಮಾಶ. ೨-೩); ತುಂಬುರರ ನಾರದರ ದಿವಿಜನಿತಂಬಿನಿಯರ ಸುಗೀತ ರಚನಾಡಂಬರದ ದೆಖ್ಖಾಳ ಮಿಗೆ ರಂಜಿಸಿತು ಗಗನದಲಿ (ತೊರರಾ. ೬-೩೩-೪೮); ನೀನು ಮದನವ್ರತನಾಗಿ ರತಿರಾಗಿಣಿಯರತ್ತ ಬಿರ್ದುಗೊಂಡಾಡುವ ನಸೆಯ ದಾಹದ ದೆಖ್ಖಾಳವು . . . ವಿದೂಷಕಲೀಲೆಯಾಗಿದೆ! (ಮಂತ್ರಕ. ೧-೮). ೨. ವಿಲಾಸ; ವೈಭವ; ಸಂಭ್ರಮ; ಉತ್ಸಾಹ: ಕಲಿತುರಗದೆಖ್ಖಾಳಕೇಳೀವಿಳಾಸನುಂ . . . ಉದ್ಭಟಕ್ಷಿತೀಂದ್ರಚಂದ್ರಮಂ ಪೇರೋಲಂಗಗೊಟ್ಟಿಸೆದಿರ್ದಂ (ಉದ್ಭಟ. ೨-೬ ವ); ನೀವು ನೋಟಕರೆಮಗೆ ರಣ ದೆಖ್ಖಾಳವೆಂದನು ಕರ್ಣ ಗುರುಸುತಗೆ (ಕುಮಾಕ. ೧೦-೨೦); ಕಡಿತಲೆಯ ಸುರಗಿಯ ಕೊಂತದ ಸೂಳದ ಬಲ್ಲಣೆಯ ಮಾೞಿಗೆಯ ಭಟರ ದೆಖ್ಖಾಳಂ ನೇರಮಾಗೆ (ರಾಮಾಶ್ವ. ೫೦-೭). ೩. ತೀಕ್ಷ್ಣತೆ; ಉಗ್ರತೆ: ರಭಸ: ತಗ್ಗಿತು ರಥದ ಲಗ್ಗೆಯ ಧರಧುರದ ದೆಖ್ಖಾಳ (ಕುಮಾಭೀ. ೮-೦೯); ತ್ರಿಭುವನ ಕಂಪಿಸುತಿರ್ದುದೈ ರಣದವಕಿಗರ ದಕ್ಕಡದ ದೆಖ್ಖಾಳದ ಮಹಾಹವಕೆ (ತೊರರಾ. ೪-೩-೦೨). ೪. ರಮಣೀಯತೆ; ಮನೋಹರತೆ: ಮತ್ತಮಾರಭಟಿಯೊಳ್ ದೆಖ್ಖಾಳಂ ಮಿಕ್ಕು ಸಾತ್ವತಿಯೊಳ್ ಪಜ್ಜಳಂಬೆತ್ತು ಭಾರತಿಯೊಳ್ ಕಾಂತಿ ಕೆಯ್ಗಣ್ಮೆ . . . ಕಳ್ಳಿರ್ದ ಗಮಕಿಗಳ ತಂಡದೊಳಂ (ಗಿರಿಕ. ೨-೦೦೫ ವ). **ದೆಖ್ಖಾಣ:** ೧. "ದೆಖ್ಖಾಣ [ಪಾಠಾಂ. ಳ] ಮೆನಲ್ ಹೆಚ್ಚುಗೆ" (ಭಾರನಿ. ೨೫); ವರ್ಗದ್ವಿತೀಯಾಕ್ಷರಂಗಳ್ಗೆ - ವಖ್ಖಾಣಂ, ದೆಖ್ಖಾಣಂ (ದೆಖ್ಖಾಳಂ) (ಶಮದ. ೧೫).

[ ←ಮರಾ. ದೇಖಣಾ, ದೇಖಣಾಊ = ಅಂದವಾದ ]

**ದೆಖ್ಖಾಳಂಗುಡು** (ಕ್ರಿ). ವಿಲಾಸವನ್ನುಂಟುಮಾಡು; ವೈಭವವನ್ನುಂಟುಮಾಡು: ನಡುವಣ ರಂಗಮುಂಟಪದೊಳ್ನರ್ತನಂಗುಡುವ ತಾಳದ ಗತಿಗುಡುವ ಮದ್ದಳೆಯ ಲಹಣಿಗುಡುವ ಆವುಜದ ದೆಖ್ಖಾಳಂಗುಡುವ ಕರಡೆಯ ಸವಿಗುಡುವ ವೀಣೆಯ ನಯಂಗೊಡುವ ಕಿನ್ನರಿಯ ಲಲ್ಲೆಗೊಡುವ ಕೌಸಳದ ಹಲ್ಲಣೆಗುಡುವ ವಾಸದ ಲಲ್ಲೆಗುಡುವ ಜೀವಣಿಗೆಯರ ಸಂಗೀತದ ಸಂದಣಿಯೊಳ್ (ಮಲುರ.ಹ. ೧೬೯-೧೦).

[ ದೆಖ್ಖಾಳ + ಕುಡು$_1$ (<ಕೊಡು$_1$) ]

**ದೆಖ್ಖಾಳತನ** (ನಾ). ತೀಕ್ಷ್ಣತೆ; ಉಗ್ರತೆ: ಶಲ್ಯನ ಧರಧುರದ ದೆಖ್ಖಾಳತನವನು ಕಂಡು ಖಾತಿಯಲಿ ಸರಳು ಹದಿನೈದಱಲಿ ಶಲ್ಯನ ಬಱಿಯ ಕೆತ್ತಿದನು (ಕುಮಾದ್ರೋ. ೫-೩೨). [ ದೆಖ್ಖಾಳ + -ತನ ]

**ದೆಖ್ಖಾಳಭೂಮಿ** (ನಾ). ವಿಲಾಸಸ್ಥಾನ; ಕ್ರೀಡಾಸ್ಥಳ; ಆಟದ ಬಯಲು: ವರವಸಂತನ ಬೀಡೊ ಮನ್ಮಥಧರಣಿಪನ ದೆಖ್ಖಾಳ ಭೂಮಿಯೊ . . . ಎನೆ ನೆಱೆ ಮೆಱೆದುದಾ ಭೂಮಿ (ತೊರರಾ. ೦-೩-೯).

[ ದೆಖ್ಖಾಳ + ಭೂಮಿ ]

**ದೆಖ್ಖಾಳಿಸು** (ಕ್ರಿ). ಹೆಚ್ಚಾಗು; ಅತಿಶಯವಾಗು: ಬೀಳಿದರಂದು ಹೋಮವ ಮಂತ್ರರವ ದೆಖ್ಖಾಳಿಸೆ ಪಾರ್ವರು ಮುದದಿಂದ (ಸೂಬಸೋ. ೩-೪). [ ದೆಖ್ಖಾಳ + -ಇಸು$_3$ ]

**ದೆಗ್ಗರಳೆ** (ನಾ). ಹೇರಳೆ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು. 'ದೊಡ್ಡೀಳೆ' ಪರಾ.

[ ? + ಹೆರಳೆ (<ಪೇರೀಳೆ) ]

**ದೆಬ್ಬೆ$_1$** 'ದಬ್ಬೆ$_1$' ನೋ.

**ದೆಬ್ಬೆ$_2$,** ಡೆಬ್ಬೆ$_2$ (ನಾ). ಏಟು; ಹೊಡೆತ; ಪೆಟ್ಟು: "ಹೊಡೆತ, ಏಟು, ಗುದ್ದು, ದೆಬ್ಬೆ, ಪೆಟ್ಟು" (Blow. ೫೦೩೧); ಅವಳು ಚೀರಿದಷ್ಟೂ ಹೆಚ್ಚಾಗಿಯೇ ದೆಬ್ಬೆಗಳು ಬೀಳತೊಡಗಿದವು (ಕಾನೂರು. ೯೨); ತಿರಿತಿರಿಗಿ ಗೋಕರ್ಣಕ್ಕೆ ಹೋಗಿ ತುರುಕನಿಂದ ದೆಬ್ಬೆ ತಿಂದ (ಗಾದೆ). **ದೆಬ್ಬೆ$_2$:** (ಕ). 'ದಬ್ಬೆ$_1$' ಪರಾ. [ ದೇ.೫ ತಮಿ. ತಪ್ಪೈ, ತೆಪ್ಪಲ್; ತೆಲು. ದೆಬ್ಬ ]

**ದೆಯಿಗಾವೆ** (ನಾ). ಒಂದು ಗ್ರಾಮದ ಹೆಸರು; P ಈಗಿನ ನಾಂದೇಡ್ ಜಿಲ್ಲೆಯ ದೇಗಾಂವ್ ಎಂಬ ಗ್ರಾಮ: ಕಲಿಚೋರರಸ ಕಳಶಾರೋಹಣಮಂ ಮಾಡಿಸಿ ಕೊಟ್ಟ ಗಾವುಂಡಗಾವೆ ೧ ದೆಯಿಗಾವೆಯಲು ಘಳೆಯ ಮತ್ತರು ೪೦ (ನಾಂದೇಡ್. ೦೦-೩ : 1088).

[ <ದೇವ + ಗಾವೆ (<ಗಾವು) ]

**ದೆಯ್ವ,** ದಯ್ವ, ದೆವ್ವ (ನಾ). ೧. ದೇವತೆ; ದೇವರು: ದೆಯ್ವಂ ಬಂದಂತೆ ರಹಸ್ಯಂಗಳಂ ಮಡದಿ ಪೇೞ್ದು (ಮದಶಿ. ೦೦-೯೭); ಮತ್ತಿನ ದೆಯ್ವಂ [ಪಾಠಾಂ. ದೈವಂ]ಗಳ್ಗೆ ಕೊಟ್ಟರ್ಚನೆಯನೆ ಖಳರುಂ ದುಷ್ಟರುಂ ಕಷ್ಟರುಂ ದುರ್ಜನರುಂ ಸೇವಿಪ್ಪರ್ (ಸಮಪ. ೧-೦೨೦). ೨. ಭಾಗ್ಯ; ಅದೃಷ್ಟ: ಮಗನೆ ನಿನಗಪ್ಪೊಡೆ ದೆಯ್ವಂ ಪ್ರತಿಕೂಲಮೆಂತುಂ ಕಾದಿಗೆಲಲಾರ್ಪೆಯಲ್ಲೆ (ಪಂಪಭಾ. ೦೩-೬೫ ವ). ೩. ಕಣ್ಣಿಗೆ ಕಾಣದಿದ್ದರೂ ಮನುಷ್ಯರಿಗೆ ಕೆಡುಕು ಮಾಡುತ್ತವೆ ಎಂದು ನಂಬಲಾದ ಭೂತ, ಪ್ರೇತ, ಪಿಶಾಚಿ ಮುಂತಾದುವು: ಕೋಗಳಿಯ ಬದ್ದಿಗನ ವೃತ್ತಿಯ ಮಾನ್ಯಕಾಱರುಂ ತೊಲಗಿಸುವ ಧರ್ಮಮಂ ಮಱೆದು ದೆಯ್ವಕೆ ಕಾಳು ಕುಱಿಯಿಕ್ಕಿದವರ್ಪ್ಪೊಲೆಯರವರ್ಗೆ ವೃತ್ತಿಯಣಮಾಗದು (ಸೌಇಇ. IX-1, ೦೦೭-೩೬ ; 1055). **ದಯ್ವ:** ೨. ಅವರವರ ದಯ್ವದಿಂದಮನವರವ ರಾಗಮದೊಳವರ ಕಥೆಗಳೊಳಂ ನೋಡುವಡವೆ ದೂಪಿಸಿದವುವು (ಸಮಪ. ೮-೨೦೭). **ದೆವ್ವ:** ೩. ದೈವ-ದೆವ್ವ (ಶಬ್ದಾನು. ೦೬೦ ವ್ಯಾಖ್ಯಾ); ದೇವರೊ ದೆವ್ವವೊ ದಿಂಡರೊ ಲಂಡರೊ ಬಂಡರೊ ಯೆಂದೆನುತ (ಹಾಲಾಸ್ಯ. ೩-೧೦-೧೨); ನಾವು ದೆವ್ವಗಳನ್ನು ಕಂಡಿಲ್ಲ ಎಂದ ಮಾತ್ರಕ್ಕೇ ಅವುಗಳ ಅಸ್ತಿತ್ವವನ್ನು ಅಲ್ಲಗಳೆಯುವುದು ತರ್ಕಬದ್ಧವಾದ ಮಾತಲ್ಲ (ಸಡಿದಾ. III, ೨೦೬೦); ದೇವ ದೈವಗಳಂತೆ ದೆವ್ವವೂ ನಮ್ಮ ಹಳ್ಳಿಗರನ್ನು ಹಿಡಿದಿದೆ (ಕನ್ನಜಾ. ೦೯); ತುಂಗ . . . ತೆಂಗಿನ ಮರದಷ್ಟು ಎತ್ತರದ ದೆವ್ವವನ್ನು

ಕಂಡು ಹೆದರಿಕೊಂಡ ವಿಚಾರ ಅವಳೇ ಹೇಳುತ್ತಾಳೆ (ಪದ್ಮಸ. ೨೭). ೪. (ಆಲಂ) ಕೆಡುಕು ಮಾಡುವ ವ್ಯಕ್ತಿ: ತನ್ನ ರಾಜಕೀಯ ಪ್ರಭಾವದಿಂದ ಈ ವ್ಯಕ್ತಿ ಊರಿಗೆ ದೆವ್ವವಾಗಿದ್ದಾನೆ (ರೂಢಿ). ೫. ಬೃಹದಾಕಾರವಾದುದು.

**ದೆಯ್ವದವನು** = ಭೂತ, ಪಿಶಾಚಿ ಮುಂತಾದುವನ್ನು ಬಿಡಿಸುವನೆಂದು ನಂಬಲಾಗಿರುವವನು: ಮಲೆನಾಡಿನ ಕೆಲವು ಕಡೆಗಳಲ್ಲಿ ದೆಯ್ವದವನ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ (ರೂಢಿ). **ದೆಯ್ವದವರು** = (ಉಕ) ಊರಿನಲ್ಲಿ ಗಣ್ಯರೆನಿಸಿಕೊಂಡವರು; ಹಿರಿಯರು; ಮಾನ್ಯರು: ದೆಯ್ವದವರು ಹೇಳಿದಂತೆ ಕೇಳಿದರೆ ಗ್ರಾಮಕ್ಕೆ ಅನುಕೂಲ (ರೂಢಿ). **ದೆವ್ವದ ಕಾಟ**=ದೆವ್ವದ ಚೇಷ್ಟೆ: ಹಳ್ಳಿಯ ಹೆಣ್ಣುಮಕ್ಕಳಿಗಂತೂ ದೆವ್ವದ ಕಾಟ ಇದ್ದೇ ಇರುತ್ತದೆ (ಕನ್ನಜಾ. ೧೯); ರಂಗರಾಯರ ಮನೆಗೆ ನಿತ್ಯವೂ ರಾತ್ರಿ ಕಲ್ಲು ಎಸೆಯುವುದು ಯಾವುದೋ ದೆವ್ವದ ಕಾಟವೆಂದೇ ಅವನು ಮನಸ್ಸಿನಲ್ಲಿ ನಿರ್ಧರಿಸಿ ಬಿಟ್ಟಿದ್ದನು (ಸಂಸ್ಕಾಕ. ೮೦). **ದೆವ್ವದ ಕುಣಿತ** = ಒಂದು ಬಗೆಯ ಜಾನಪದ ನೃತ್ಯ: ಸುಗ್ಗಿಯ ಕುಣಿತ, ದೆವ್ವದ ಕುಣಿತ . . . ಕೊಡಗರ ಕುಣಿತ–ಹೀಗೆ ಎಷ್ಟೋ ಬಗೆಯ ನೃತ್ಯಗಳು ಕರ್ಣಾಟಕದಲ್ಲಿಯೇ ಇವೆ (ಹುಬ್ಬುಮು. ೩೦೦). **ದೆವ್ವದ ಚೇಷ್ಟೆ** = ಪಿಶಾಚಿಯ ಉಪಟಳ; ಭೂತದ ಬಾಧೆ: ಆ ಮನೆಯಲ್ಲಿ ವಿಪರೀತ ದೆವ್ವದ ಚೇಷ್ಟೆಗಳಿಂದಾಗಿ ಇಟ್ಟ ವಸ್ತುಗಳೆಲ್ಲಾ ಚೆಲ್ಲಾಪಿಲ್ಲಿಯಾಗಿಬಿಡುತ್ತವೆ ಎಂದು ಹೇಳುತ್ತಾರೆ (ರೂಢಿ). **ದೆವ್ವದ ಮನೆ**= ೧. ಪಿಶಾಚಿಯು ವಾಸಮಾಡುವುದೆಂದು ನಂಬಲಾದ ಮನೆ: ನಾನು ಬಾಡಿಗೆಗೆ ಹಿಡಿದ ಮನೆಯು ದೆವ್ವದ ಮನೆಯಂತೆ (ಜನಜೀ. ೬೦); ಆ ಮೂಲೆಮನೆಗೆ 'ದೆವ್ವದ ಮನೆ'ಯೆಂದು ಆ ಬೀದಿಯವರೇ ಹೆಸರಿಟ್ಟು ಯಾರೂ ವಾಸಕ್ಕೆ ಬಾರದಂತೆ ಮಾಡುತ್ತಿದ್ದಾರೆ (ರೂಢಿ). ೨. ಪಾತ್ರಿಯು ಮೈಮೇಲೆಭೂತವನ್ನು ಆವಾಹನೆ ಮಾಡಿಕೊಂಡು ಭವಿಷ್ಯವನ್ನು ಹೇಳುವ ಸ್ಥಳ; ಪಾತ್ರಿಯು ಗಣ ಬರಿಸಿಕೊಳ್ಳುವ ಮನೆ: ಸರೋವರದ ದಕ್ಷಿಣಕ್ಕಿರುವ ಕಿರುದಾರಿಯಲ್ಲಿ ಇಂದಿಗೂ ಎರಡು ಹಳೆಯ ಕಾಲದ ಹುಲ್ಲಿನ ಚಾವಣಿಯ ದೆವ್ವದ ಮನೆಗಳಿವೆ (ಪದ್ಮಸ. ೨೭); ಅಂದು ಜನಸಂದಣಿ ದೆವ್ವದ ಮನೆಯಲ್ಲಿ ಸೇರಿತ್ತು. ನಮ್ಮೂರ ಜನಕ್ಕೆ ದೆವ್ವದ ಮನೆಯಲ್ಲಿ ತುಂಬಾ ವಿಶ್ವಾಸ (ದಕ್ಷಿನ. ೯೫). **ದೆವ್ವದುಡಿತ** = ಮನುಷ್ಯನಿಗೆ ಅಸಾಧ್ಯವಾದ ಕೆಲಸ; ಪಿಶಾಚಿಯು ಮಾತ್ರ ಮಾಡಬಹುದಾದಂಥ ಅತ್ಯಂತಶ್ರಮದ ಕೆಲಸ: ದೊಡ್ಡ ಸಾಹೇಬನು ಅವನಿಗೆ ದೆವ್ವದುಡಿತ ಕೊಡತೊಡಗಿದನು (ಇಪ್ಪಕ. ೩೦೦). **ದೆವ್ವ ಬಡಿ** = ೧. ದೆವ್ವ ಹಿಡಿ: ದೆವ್ವ ಬಡಿದರೆ ಬಿಡಿಸುವ ಬಂಟರೂ ಇದ್ದಾರೆ ಹಳ್ಳಿಗಳಲ್ಲಿ (ಕನ್ನಜಾ. ೧೯). ೨. ಆವೇಶ ಬರು; ಉದ್ರೇಕವುಂಟಾಗು: ತುಳಸಿಗೆ ದೆವ್ವಬಡಿದಿತ್ತು (ಜಮಿನ್ದಾ. ೧೩). **ದೆವ್ವ ಹಿಡಿ** = ಭೂತ, ಪಿಶಾಚಿ ಮೆಟ್ಟಿಕೊಳ್ಳು: ಇದೇನಯ್ಯ ನಾಣಿ, ಹೀಗೆ ದೆವ್ವಹಿಡಿದವನಂತೆ ನಿಂತುಬಿಟ್ಟಿದ್ದೀಯ? (ರಾಮಚನ. ೧೦೭).

[ <ಪ್ರಾ. ದಇವ, ದೇವ್ವ./ಸಂ. ದೈವ ]

**ದೆಯ್ವದ ಮಂಟೂರ್** (ನಾ). ಒಂದು ಊರಿನ ಹೆಸರು; P ಈಗಿನ ಬಿಜಾಪುರ ಜಿಲ್ಲೆಯ ಬೀಳಗಿ ತಾಲ್ಲೂಕಿನ ಮಂಟೂರು: ಯಮನಿಯಮ ಸ್ವಾಧ್ಯಾಯಜಪಹೋಮಾನುಷ್ಠಾನುಪರಾ × ನರಪ್ಪ ದೆಯ್ವದಮಂಟೂರೊಡೆಯ ಮಧುಸೂದನಯ್ಯ ಪ್ರ × ಖಮಹಾಜನಂ (ಸೌಇಇ. XI–1, ೭೪–೭೬; 1041). [ ? + ಊರ್ ]

**ದೆಯ್ವಬಲ** (ನಾ). ಅದೃಷ್ಟದ ಬಲ, –ಶಕ್ತಿ: ಕಾಯ್ವಟಲುಱ ಜತುಗೃಹದೊಳಗಯ್ವರುಮಂ ಮಂತ್ರಬಲದೆ ಸುಟ್ಟೊಡಮವರಂ ದೆಯ್ವಬಲಮೊಂದೆ ಕಾದುದು ದೆಯ್ವಮನಾರಯ್ಯ ಮಿಱ ಬಾಟಲ್ ನೆಱವರ್ (ಪಂಪಭಾ. ೪–೩). [ ದೆಯ್ವ + ಬಲ₂ ]

**ದೆವಸ** (ನಾ). ೧. ಒಂದು ಹಗಲು ಮತ್ತು ಒಂದು ರಾತ್ರಿಯಷ್ಟು ಕಾಲ; ಇಪ್ಪತ್ತುನಾಲ್ಕು ಗಂಟೆಗಳ ಕಾಲ; ದಿನ: "ದೆವಸವೆಂದು ದಿವಸಂ" (ಕಶಸಾ. ೧೩–೨೪೭); ಕೊಟ್ಟ ತೋಱದು ಮೂವತ್ತು ಗಾವುದ × × × ದೆವಸದೊಳಯ್ದು ಅರಸನಂ ಜಾವಿಸಿ (ಸೌಇಇ. XI–1, ೧೦–೧೪; 965): ಜಯದ್ರಥಂ ಸಿಗ್ಗಾಗಿ ಕೈಲಾಸದೊಳೀಶ್ವರಂಗೆ ತಪಂಗೆಯ್ದು ಮೆಚ್ಚಿಸಿ ಪಾಂಡವರನೊಂದು ದೆವಸದನುವರದೊಳ್ ಗೆಲ್ವೆನಕ್ಕೆಂದು ಬರಂಬಡೆದು ಪೋದಂ (ಪಂಪಭಾ. ೭–೩೨ ವ); ತಾನೆ ಗಡ ಬರ್ಪ ನೆನಿಸುವೊಡಾ ನರನಯ್ದಾಱು ದೆವಸಮಂ ಬಟ್ಟುಪನೇ (ಕಾವ್ಯಾವ. ೧೫೪): ಅಱವತ್ತುಘಳಿಗೆಗೊಂದು ದೆವಸಂ (ವ್ಯವಹಾ. ಅನುಬಂಧ. I, ೩೦); ರೋಗದಿಂ ಪತ್ತೆಂಟು ದೆವಸಕಸುವೊಱಯಾಗಿ ಬೇಗದಿಂ ರಜತಗಿರಿಗೈದಿದಂ ಸುಖಿಯಾಗಿ (ಬಸರ. ೫–೧೪೯); ಸೌಂದರಗಣಾಧೀಶನಿರುತಲೊಂದಾನೊಂದು ದೆವಸದೊಳು . . . ಎನ್ನ ಪಾಲಿಸುವುದೆಂದು ಬಿನ್ನಹಮಾಡಿದ (ಸೌಂದಪು. ೬–೨೫). ೨. ಬಾಳುವೆ; ಜೀವಮಾನ; ಆಯುಷ್ಯ: ಎನ್ನ ದೆವಸಮುಂ ಜವ್ವನಮುಮಡವಿಯೊಳಗೆ ಪೂತ ಪೂವಿನಂತೆ ಕಿಡಲೀಯದಾತನನೆನ್ನಂ ಪಾಣಿಗ್ರಹಣಂಗೆಯ್ವಂತು ಮಾಡು (ಪಂಪಭಾ. ೦–೭೬ ವ).

**ದೆವಸಲುಂ** = ನಿತ್ಯವೂ: ದೇಸಿಗ ಪ್ರವಾಸಿಗರಾಹಾರಸತ್ರಕ್ಕೆ ದೆವಸಲುಂ ಬ್ರಾಹಣರುಣ್ಬಂತಾಗಿ (ಎಕ. VII, ಶಿಕಾರಿ. ೧೬–೩೦; 1085). [<ಸಂ. ದಿವಸ]

**ದೆವಸವಳ** (ನಾ). ಪ್ರತಿದಿನದ ಸೇವೆ; ಪ್ರತಿನಿತ್ಯವೂ ವರ್ತನೆಯಾಗಿ ಮಾಡಬೇಕಾದ ಕಾರ್ಯ: ದೆವಸವಳ ಸ್ಥಳದಲೆರಡೆರಡು ಕಟ್ಟು ಹೂವನಿಕ್ಕಿ (ನಾಂದೇಡ್. ೩೨–೨೫; 1139); ತೋಂಟದ ಕೆಯಿ ಮಡಿಯ ಮೇರೆ ಹೂಗಿಡುವ ದಾತಾರನಿಟ್ಟ ದೆವಸವಳ ಬಾಸಿಗ ದಂಡೆ ಹೂ ಏಕಾದಸಿಯ ದೆವಸ ತೋಂಟದ ಹೂವೆಲ್ಲವಂ ಪೂಜೆಯ ಕಟ್ಟಿ . . . ಏಕಾದಸಿಯಲು ತ[೦]ದು ಕುಡುವ ದೆವಸವಳವೆರಡು ಕಟ್ಟು ಹೂವನಿಕ್ಕಿ ೨೮೦ ಗಿಡು (ನಾಂದೇಡ್. ೩೨–೧೯; 1138); ದಂಡಿನೊಕ್ಕಲುಂ ತಳದೊಕ್ಕಲುಂ ದೆವಸವಳವೆಂಣೆಗಾಣದಲ್ಲಿ ಸೊಳಸವೆರಡು (ಎಇ. XX, ೧೨–೪೮; 1167), 'ದೇವಸಬಳ', 'ಸಬಳಗದ್ಯಾಣ' ಪರಾ.

[ ದೆವಸ + –ವಳ (< –ವಾಳ₁) ]

**ದೆವೆಟಿ** (ನಾ). ಒಬ್ಬಾತನ ಹೆಸರು: ಸಿರಿದ ದೆವೆಟಿಯರ ಮಗ ದಾವಣಗವುದದ ಮಹಾಜನಕೆ ಕೊಟ್ಟದು ಶಾಲೆ (ಎಕ. VII, ಶಿಕಾರಿ. ೪೫–೭೩; ಸು. 890). [ ? ]

**ದೆವ್ವ** 'ದೆಯ್ವ' ನೋ.

**ದೆವ್ವಂಗುಣಿ** (ಕ್ರಿ). ಪಿಶಾಚಿಯಂತೆ ವಿಚಿತ್ರವಾಗಿ ನೆಗೆದಾಡು, –ಹಾರಾಡು, –ಕುಣಿ: ನರಳುಗಳ್, ವೀರಾಟ್ಟಹಾಸಗಳ್, ಕಟುವಿಕಟಚೀತ್ಕಾರಗಳ್ ಪ್ರಳಯಶಂಕೆಯನೊಡರ್ಚುತ್ತೆ ದೆವ್ವಂಗುಣಿದುವಲ್ಲಿ! (ಶ್ರೀರಾಮಾ. ೫೩೦–೪). [ ದೆವ್ವ (<ದೆಯ್ವ) + ಕುಣಿ₁ ]

**ದೆವ್ವದುಂಬೆ** (ನಾ). ಕೇಸರಿಬಣ್ಣದ ದೊಡ್ಡ ಹೂವುಗಳನ್ನು ಬಿಡುವ ಒಂದು ಬಗೆಯ ಕಾಡು ಗಿಡ: (+). 'ದೇವದುಂಬೆ' ಪರಾ.

[ ದೆವ್ವ (<ದೆಯ್ವ) + ತುಂಬೆ₂ ]

**ದೆವ್ವಬಾಳೆ, ದೇವಬಾಳೆ** (ನಾ). (ಉಕ) ಒಂದು ಬಗೆಯ ಸಸ್ಯ; ಕತ್ತಾಳೆ. **ದೇವಬಾಳೆ**: ಸಣಬು, ದೇವಬಾಳೆ ಅಥವಾ ಹುಚ್ಚ ಕೇದಗಿನಾರು (ಮುಂಬವ್ಯಾ. ೧೯). [ದೆವ್ವ (<ದೆಯ್ವ)+ಬಾಳೆ₁ (<ಬಾಟಿ)]

**ದೆವ್ವಬಿಡಿಸು** (ಕ್ರಿ). ೧. (ನಂಬಿಕೆಯಲ್ಲಿರುವಂತೆ ಮಂತ್ರ, ತಂತ್ರ ಮೊದಲಾದ ಸಾಧನಗಳಿಂದ ವ್ಯಕ್ತಿಗೆ ಹಿಡಿದಿರುವ) ಪಿಶಾಚಿಯನ್ನು ಬಿಟ್ಟುಹೋಗುವಂತೆ ಮಾಡು: ನಮ್ಮೂರ ಜೋಗಿ ದೆವ್ವಬಿಡಿಸುತ್ತಾನೆ (ರೂಢಿ). ೨. (ಆಲಂ) ಚೆನ್ನಾಗಿ ಥಳಿಸು, –ಬಡಿ, –ಹೊಡೆ: ಅವನಿಗೆ ಇವತ್ತು ದೆವ್ವಬಿಡಿಸುತ್ತೇನೆ (ರೂಢಿ). [ ದೆವ್ವ (<ದೆಯ್ವ) + ಬಿಡಿಸು ]

**ದೆವ್ವಹತ್ತಿ** (ನಾ). ಒಂದುಂ ಬಗೆಯ ದೊಡ್ಡಹತ್ತಿ,- ಕಾಡುಹತ್ತಿ : (ವ್ಯಾಜಿಗಿ. ೧-೨). [ ದೆವ್ವ (<ದೆಯ್ವ) + ಹತ್ತಿ (<ಪಱ್ತಿ) ]

**ದೆಶೆ$_1$** 'ದಸೆ' ನೋ.

**ದೆಶೆ$_2$** 'ದೆಸೆ$_2$' ನೋ.

**ದೆಶೆಗೇಡಿ** (ನಾ). ಅದೃಷ್ಟಹೀನ ; ದುರದೃಷ್ಟಶಾಲಿ : ಈ ದೆಶೆಗೇಡಿ ಚಾರುದತ್ತನನ್ನು ಶೂಲಕ್ಕೆ ಹಾಕುವ ವೇಳೆಯಲ್ಲೆ (ಮುಂಬಯಿ. ೬-೨೧೫); ಇದ್ದ ಆಸ್ತಿಯನ್ನೆಲ್ಲ ಕಳೆದುಕೊಂಡು ಅವನು ಈಗ ದೆಶೆಗೇಡಿಯಂತೆ ಊರೂರು ಅಲೆಯುತ್ತಿದ್ದಾನೆ (ರೂಢಿ). [ ದೆಶೆ$_1$ (<ದಸೆ) + ಕೇಡಿ$_1$ ]

**ದೆಶೆಯಾನೆ** 'ದೆಸೆಯಾನೆ' ನೋ.

**ದೆಸೆ$_1$** 'ದಸೆ' ನೋ.

**ದೆಸೆ$_2$, ದಿಸೆ, ದೆಶೆ$_2$** (ನಾ). ೧. ದಿಕ್ಕು : "ಹರಿದಾಶಾದಿಕ್ಕಕುಪ್ಕಾಷ್ಠೆಗಳೆನೆ ದೆಸೆಗಳ್" (ವಸ್ತುಕೋ. ೯-೫೦) : "ಗೊಂಟುಂ ದೆಸೆಯುಂ ಕನ್ನಡದೆ ದಿಕ್ಕುವೆಸರಹುದು" (ಕಂನವಿ. ೩೯) ; ದಕ್ಷಿಣಾ ದೆಸೆಗಲ್ಲಂ ತೊಱೆವಿ ಅನ್ತೆ ಬನ್ದು . . . ತುಱ್ದಿಲ್ಗಾಲೊಳ್ಕೂಡಿತ್ತು (ಮ್ಯಆರ್. ೧೯೩೭, ೫೩-೨೭ ; ಸು. 550); ದೆಸೆಗಳ್ವಿಶಾಲವಾದುವು . . . ಶರದಾಗಮದೊಳ್ (ಕವಿರಾ. ೨-೫೯) : ಕಾಲಮೇಘಸಮೂಹಂ ದೆಸೆಯೆಲ್ಲಮಂ ಕವಿದುದೋ ಗಂಧೇಭಚರ್ಮಂಗಳಂ ಪಸರಂಗೆಯ್ದನೊ ಶಂಭುವೆಂಬ ಬಗೆಯಿಂ . . . ಕವಿದತ್ತುದ್ದಾಮಭೀಮಂ ತಮಂ (ಪಂಪಭಾ. ೪-೪೯) ; ತನ್ಮಧ್ಯದೊಳಿರ್ಪುದು ರುಚಿವನ್ಮೇರುನಗೇಂದ್ರಮದಱ ಮೂಡಣ ದೆಸೆಯೊಳ್ (ಶಾಂತಿಪು. ೧-೫೭) : ಇಕಾರಕ್ಕೆ ಎತ್ವಂ-ಇಳಾ-ಎಳೆ ; ದಿವಸ-ದೆವಸ ; ದಿಶಾ-ದೆಸೆ (ಶಮುದ. ೨೭೦ ಪ್ರಯೋ) ; ಧರೆಗೆ ವನನಿಧಿ ಜನಕೆ ದೆಸೆಯೈಶ್ವರಿಯಕಿಂದ್ರನು . . . ವಿದ್ಯದಲಖಿಳಕಳೆಗಳ ಪರಿಣತತ್ವವದ ವಧಿಯಾ ನೃಪಗೆ (ಜೀವಂಧ. ೨-೪೫) ; ದೆಸೆಗಳ ಹೊಲಿಗೆ ಹಱಿಯದೆ ಮಾಣವೆನೆ ಹೊಕ್ಕವು ರಥಾನೀಕ (ಕುಮ್ಯಾದ್ರೋ. ೧೨-೮) ; ದೆಸೆಗೆ ಬಿಟ್ಟಾ ರಾಯರ ಬಾಟ್ದಲೆವಿಡಿದುಂ ಜಯಕಾಂತೆಗೆ ತೊಟ್ಟಿರಂ ಮಾಡುತುಂ . . . ಕಪ್ಪ ಕಾಣ್ಕೆಗಳನೆಱೆದು ತರ್ಪಂ (ರಾಮಾಶ್ವ. ೪೯-೧೭). ೨. ಎಡೆ ; ಸ್ಥಳ : ಜಾಗ : ತಮ್ಮಯ್ವರುಂ ಪಾಂಚಾಳಿವೆರಸು ಪೋದ ದೆಸೆಯನಾರುಮಱಿಯದಂತು ದ್ವೈತವನದುಂ ಪೊಱಮಟ್ಟು (ಪಂಪಭಾ. ೮-೫೦ ವ) ; ಮಲಿನರನೆ ಪೊರ್ದುವಯ್ ನಿರ್ಮಲರತ್ತಲ್ ಪೊರ್ದಲೊಲ್ಲೆ ನೀಂ ಕನ್ನಡಿಯೊಳ್ ಜಲಮಿರ್ಪ ದೆಸೆಯೊಳಿರ್ದಾ ಕಿಲುಂಬುಗೊಂಡಿರ್ದ ದೆಸೆಯೊಳಿರ್ದುದೆ ಪೇಟ್ಟುಂ (ಗದಾಯು. ೯-೧೦) ; ಒಂದು ದೆಸೆಯಲಿ ರಾಯನಿಪ್ಪತ್ತೊಂದು ಸಾವಿರ ರಥಸಹಿತುಘೇಯೆಂದು ಬಿಟ್ಟನು ಭೀಮಸೇನನ ರಥದ ಸಮ್ಮುಖಕೆ (ಕುಮ್ಯಾಕ. ೧೫-೧೯). ೩. ಮಗ್ಗುಲಂ ; ಬಳಿ ; ಹತ್ತಿರ : ವಿದ್ಯಾಧರಿಯರ್ಕಳ್ ಬರ್ಪಂತೆ ಬಂದು ಬಾಗಿಲ್ಮಾಡದ ಪೊಱಗಣ ದೆಸೆಯೊಳ್ ತಂತಮ್ಮ ವಾಹನಂಗಳಿಂದಿೞಿದು ಪೊಕ್ಕು ಬಸದಿಯಂ (ವಡ್ಡಾರಾ. ೮೦-೧೪); ಅಪ್ರತಿರಥಂ ರಥಮನೇಱಿ ಮನಃಪವನವೇಗದಿಂ ದ್ವಾರಾವತಿಯನೆಯ್ದಿ . . . ಮಧುಮಥನನೆತ್ತಲಣ್ಮದೆ ಕಾಲ ದೆಸೆಯೊಳುಸಿರದೆ ಕುಳ್ಳಿರೆ (ಪಂಪಭಾ. ೯-೧೦ ವ) : ರವಿ ಶಿಖಿ ಪವನಂ ವ್ಯೋಮಗಣಂ ಪಗಲಾಗದು ಸಾಮಾನ್ಯಂ ಕಾವ್ಯಗೀತವೆರಡಱ ದೆಸೆಗಂ (ಛಂದೋಂಬು. ೦-೪೪ ಅಡಿಟಿ) ; ತನ್ನಯ ಕಾಲ ದೆಸೆಯಲಿ ಕೆಡೆದ ಕೌರವಸುತರು ನೂರ್ವರಲಿ ಬಾಲಕನು ಬಳಲಿದನು (ಕುಮ್ಯಾದ್ರೋ. ೬-೬೧). ೪. ಕಾರಣ ; ನಿಮಿತ್ತ : "ದೆಸೆಯಿಂ ದೆನ್ನಲ್ ದೂಸಱದು" (ಕವಿಕಂ. ೨೩೩) ; ಸೀತಾದೇವಿಯನಾವನಾನುಮೊರ್ವಂ ಮಾಯಾವಿ ಕಳ್ದುಯ್ದಾ ಕಾನನದೊಳಿರ್ದಪನಾ ದೆಸೆಗಗ್ರಜಂ ವ್ಯಗ್ರನಾಗಿರ್ದಪಂ (ಪಂರಾಮಾ. ೯-೧೩೭ ವ); ಎನ್ನಯ ದೆಸೆಯ ಭಯ ಬೇಡ (ಕುಮ್ಯಾದ್ರೋ. ೦-೨೭) ; ಅತಿಭಯಂಕರ ದಾನವರ ದೆಸೆಗೆ ದೆಸೆಗೆಟ್ಟು ಭೀತಿಯಿಂದಿರದೆ ಧನದಂ ಬಿನದವಂ ಬಿಟ್ಟನು (ಜಬಪು. ೪೦-೨೯). ೫. ಪಂಗಡ ; ಪಕ್ಷ : ಎಸಲು ಭೀಮನ ಬಾಣವನು ಖಂಡಿಸಿದ ಮೂಱಂಬಿನಲಿ ರವಿಸುತನಸಮಸಾಹಸಿಯೆಚ್ಚಡೆಚ್ಚನು ಭೀಮ ಮಱುಗಣೆಯ ನಿಶಿತಶರವನು ಹೆತ್ತು ಶರದಲಿ ಕುಸುರಿದಱಿದನು ಕರ್ಣನಿಬ್ಬರ ದೆಸೆಗೆ ದೇವಾನೀಕ ಮೆಚ್ಚಿತು (ಕುಮ್ಯಾದ್ರೋ. ೧೩-೨೪) ; ತಾಯತಂದೆಯ ದೆಸೆ ಗಂಡನ ದೆಸೆಯೆಂಬೀಯೆರಡಿರವಿನೊಳೆಸೆವ ಕಾಯಬಾಂಧವರ ಕಣ್ಣೆರಡೆಂದು ಕಾಂಬುದು (ಹದಿಬ. ೪-೩೦) ; ಶಾನುಭೋಗನ ಸಂಬಳ ಸಂತೋ ಎಂದು ಕೇಳಬೇಡ ಹೆಂಡತಿ ದೆಸೆಯವರು ಉಂಡರೋ ಎಂದು ಕೇಳಬೇಡ (ಗಾದೆ). ೬. ರೀತಿ ; ಕ್ರಮಂ ; ಬಗೆ : ಸರ್ವ್ವನಮಸ್ಯಂ ಕೊಟ್ಟ ಮತ್ತರ್ ನೂಱು ಅದಱ ಸೀಮೆಯ ದೆಸೆಯೆನ್ತೆನ್ದೊಡೆ(ಂ) ತೆಂಕಣಭಾಗಂ ಕಟ್ಟಿಲೆವಾಡದ ಪೊಲಂ (ಸೌಇಇ. XI-I, ೪೮-೧೨ ; 1002) ; ಈಯೊಟ್ಟೆಯಂ . . . ಕೊಲ್ವ ದೆಸೆಯಂ ಪೇೞ್ದೊಡೆ (ಪಂಚತಂ. ೧೪೨-೭). ೭. ಗೊಡವೆ ; ಸಹವಾಸ ; ಸಂಬಂಧ ; ಸಂಪರ್ಕ ; ಗೋಜು : ದೋಷಂಗಳಿಂತು ಮಿಗೆ ಸಂಶ್ಲೇಷದೊಳಾದಂದು ಸಕಲವಿದ್ವತ್ಸಭೆಯೊಳ್ ದೂಷಿಸುಗುಂ ಕೃತಿವಧುವಂ ಭಾಷಾವಿದರದಱ ದೆಸೆಯನುೞಿಗೀ ತೆಱದಿಂ [ಪಾಠಾಂ. ತೆಱನನುೞಿಗೀ ದೆಸೆಯಿಂ] (ಕವಿರಾ. ೦-೯೯) : ನಿಲಲಾಱದು ನೀರ ದೆಸೆಯನುೞಿದಸುವಿನಿಸುಂ (ಧರ್ಮಾಮೃ. ೧-೧೭೧); ಪಿಸುಣರಹ ದುರ್ಜನರ ಕುೞಿಗಳ ದೆಸೆಗೆ ಹೋಹರೆ ಸಜ್ಜನರ್ಕಳು (ಬಸಪು. ೨೮-೩೮). ೮. ವಿಚಾರ ; ವಿಷಯಂ : ಪ್ರಿಯಸಖವಾರ್ತೆಯಂ ತಿಳಿಯೆ ಬಿನ್ನವಿಸನ್ನೆಗಮಿರ್ಕೆ ಪತ್ರಲೇಖೆಯ ದೆಸೆ (ಕಾದಂಬು. ೫೩೭). **ದಿಸೆ** : ೧. ಮೂಡ ದಿಸೆಯೊಳ್ ಮೂಡ (ಎಇ. VII, ೨೦೧-೧೦ : 865). ೯. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : "ಅಷ್ಟ, ವಸು, ದಂತಿ, ದುರಿತ, ಕರ್ಮ, ದಿಸೆ . . . ದಿಗ್ದಂತಿ ಇಂತಿನಿತುಂ ೮ಕ್ಕೆ ಪೆಸರು" (ವ್ಯವಹಾ. ೧೦-೩೦). **ದೆಶೆ$_2$** : ೧. ಸುಲೋಚನೆಯುಂ ಸ್ವಯಂಬರಕ್ಕಗ್ರಣಿಯಕ್ಕುಮೆಂದೊಡದನಕಂಪನನೊಡಂಬಟ್ಟೆಲ್ಲಾ ದೆಶೆಗಳೊಳು ಭೂಚರ ಖೇಚರ ಕುಮಾರರ್ಕಳ್ಗೆ ಬಱಿಯನಟ್ಟಿರ್ಪನ್ನೆಗಂ (ಚಾವುಂಪು. ೫೭).

**ದೆಸೆದೆಸೆ** (ದ್ವಿರುಕ್ತಿ) : ಅಂತು ಕುರುಬಲದ ಕರಿಘಟೆಗಳಂ ನುಂಗುವಂತೆ ದೆಸೆದೆಸೆಗೆ ಮಿಳಿರ್ದು ಮಿಳ್ಳಿಸಿದ ಸಿಂಗದ ಪಱವಿಗೆಯುಂ(ಪಂಪಭಾ.೧೦-೯೭ ವ): ಉರದಡಕಿಲ್ವಿಣ್ಣಂ ಕರ್ದುಕಿರದಧರದ ಪುಣ್ಗೆವಾಯ್ದ ಮಿಾಂಗಗಿದು ತಳೋದರಿ ದರಿಯನೆಯ್ದುವಿನಮಾ ಸರೋವರಂ ಕದಡೆ ಬೆರ್ಚಿ ದೆಸೆದೆಸೆ ಪರಿದಳ್ (ಶಾಂತಿಪು. ೮-೪೪) ; ದೆಸೆದೆಸೆಗೋಡಿದನ್ಯಕರಿ ದಿಕ್ಕರಿಯಾದುದರಾತಿಭೂಭುಜಪ್ರಸರಮೆ ದಿಕ್ಪತಿಪ್ರಸರಮಾದುದು (ಗದಾಯು. ೧-೫೩) ; ಕಟ್ಟು ಹುಲ್ಲಂ ನೆಗಪಿ ದೆಸದೆಸೆಗೆ ಸಿವದಿಡುತೆ (ತಿರುರ. ದೇ. ೦೪-೧೩) ; ಜಲವನರಿಭಟ ಸುಳಿದು ತುಳಿದನು ಹಿಳಿದು ಹಿಂಡಿದನು ಕೆಲರು ಕಂಪಿಸೆ ಕೆಲರು ಕಂಗೆಡೆ ಕೆಲರು ದೆಸೆದೆಸೆಗೋಡೆ (ಕೌಶಿರಾ. ೩-೧೭). **ದೆಸೆಬಾಯಿಬಿಡು** = (ಉಕ) ಗಾಬರಿಯಿಂದ ಏದುಸಿರು ಬಿಡು : ದರಿಯಪ್ಪನೇರುಮಾಲು ತೆಗೆದುಕೊಂಡು, ದೆಸೆಬಾಯಿಬಿಡುತ್ತ ಓಡಿ ಗೌಡರಿಗೆ ಮುಟ್ಟಸಿದ (ಗ್ರಾಮಾಯ. ೩೨); ಭಟ್ಟ ದೆಸೆಬಾಯಿಬಿಡುತ್ತ ಓಡಿ ಬಂದ (ಮೇದಿಮ. ೬) ; ಹೇಳತದ ತಡಿಯಲಾ ಅಷ್ಟ್ಯಾಕ ದೆಸೆಬಾಯಿಬಿಡತೀದಿ (ಅಮುನಿ. ೪೩). **ದೆಸೆಯುವರು** = (ನಾಲ್ಕು) ದಿಕ್ಕುಗಳಿಗೆ ಸಂಬಂಧಪಟ್ಟವರು ; ದಿಕ್ಪಾಲಕರು : ದೆಸೆಯುವರು ಮೂಲೆಗಳವರು ಮನ್ನಿಸುವರೇ (ಕುಮ್ಯಾಆ. ೧೧-೨೭). **ದೆಸೆಯಿಂ, ದೆಸೆಯಿಂದ, ದೆಸೆಯಿಂದಂ, ದೆಸೆಯಿಂದೆ, ದೆಸೆಯೊಳ್** = ಪಂಚಮೀವಿಭಕ್ತಿಯ ಅತ್ತಣಿಂ ಎಂಬ ಪ್ರತ್ಯಯದ ಅರ್ಥದಲ್ಲಿ ಉಪಯೋಗಿಸುವ ಪ್ರತ್ಯಯ; P ಪಂಚಮೀವಿಭಕ್ತಿಯ ಪ್ರತ್ಯಯವಾದ; 'ಅತ್ತಣಿಂ' ಎಂಬ ರೀತಿಯಲ್ಲಿ ಅವುಗಳಿಗೆ ಬದಲಾಗಿ ವಿಕಲ್ಪವಾಗಿ ದೆಸೆಯಿಂ, ದೆಸೆಯಿಂದ, ದೆಸೆಯಿಂದಂ, ದೆಸೆಯಿಂದೆ ಎಂದು ಉಪಯೋಗವಾಗುತ್ತವೆ : ಪರರ ದೆಸೆಯಿಂ ತನ್ನ ಮರ್ಮಸ್ಥಾನಂಗಳನತ್ಯಂತ ಸೂಕ್ಷ್ಮಮಾದೊಡಂ ಮಱಸುವಂ (ಪಂಚತಂ. ೦೦೪-೧೨); ಇವರ ದೆಸೆಯಿಂದ

ರಸ ಗಂಧ ರೂಪು ಶಬ್ದ ಸ್ಪರ್ಶನ ಜನಿಸಿತ್ತು (ಆದಪ. ೩೮-೮೦) : ಕಶ್ಯಪ ಮುನಿಯು ದೆಸೆಯಿಂದಾದುದೀ ಮೇದಿನಿಯು ವಿಸ್ತರವೆಂದು ಮುನಿ ನುಡಿದನು (ತೊರರಾ. ೧-೪-೧೩) ; ನಿನಗಿನಿವಿರಿದು ಭಯಾವೇಶವಾರ ದೆಸೆ ಯಿಂದಮಾದುದು (ಶಾಂತಿಪು. ೬-೬೨ ವ) ; ಎಂದುಮಿವರ ದೆಸೆಯಿಂದಂ ನಿಮಗೊಂದುಂ ಭಯಮಿಲ್ಲಂ (ಚಾವುಂಪು. ೧೪) : ಏಳ್ನೂಱು ಭೂತಮಾಶನ ಪುರಕ್ಕೈದಲುಳಿದೊಂದು ಭೂತಂ ಬಂದವಂ ಕಾಣದಳುತಿರೆ ಭೋಜನದಱ ದೆಸೆಯಿಂದೆ ಮಗುಳಾ ಗುರುವಿನಸ್ಥಿಗಳ ಪೊಗೆಯೊಳಗೆ ಚಂದದಿಂದಖಿಳಜನ ವೆರಸಿ . . . ಶಿವಪುರಕ್ಕೈದಿದಂ (ಚಬಪು. ೫೫-೪೭); ತನ್ನಾಳ್ದನ ದೆಸೆಯೊಳ್ ಭೀತನುಮುಪಮಾನಿತನುಮಾಗಿರ್ದಂ (ಪಂಚತಂ. ೩೪೭-೧೯) ; ಬಸವನಿರವಂ ದ್ವಾರಪಾಲರ ದೆಸೆಯೊಳಱಿದು . . . ಗಮನಿಸಲು (ಬಸಪು. ೪೫-೪೩).

[ <ಸಂ. ದಿಶಾ ]

**ದೆಸೆ$_3$** (ನಾ). ಒಂದು ಬಗೆಯ ತೆರಿಗೆ (?) : ಈ ಧರ್ಮ್ಮದ ಸ್ಥಳದಲ್ಲಿ ಬಳ್ಳಾಳರಿಗೆ ಅನಾಯ ಸನಾಯ ಸಲ್ಲದು ಇಲ್ಲ ಆ ಸ್ಥಳ(ಗ)ದಲು ಇದ್ದ ಒಕ್ಕಲಿಗೆ ಬಿಟ್ಟಿ ಬಿರಾಡ ಸಲ್ಲದು ಕಾಣಿಕೆ ದೆಸೆ ಅಪ್ಪಣೆ ಪಡೆದಲ್ಲಿಯೆತ್ತು ಸಲ್ಲದು (ಎಇ. XX, ೯೪-೫೪ ; 1556). [ ? ]

**ದೆಸೆಗಟ್ಟು** (ನಾ). ದಿಗ್ಬಂಧನ: ಆ ಮಹಾತ್ಮರು . . . ತಿಮ್ಮಣ್ಣ ನಾಯಕನಿಗೆ ದೆಸೆಗಟ್ಟಿನ ದೂಳಿತ, ಸಿದ್ಧಮೂಲಿಕೆ, ಕೈಅಂಬು ಇವುಗಳನ್ನು ಕೊಟ್ಟು . . . ಬುದ್ಧಿ ಹೇಳಿ ಹೊರಟು ಹೋದರಂತೆ (ಚಿತ್ರಪಾ. ೭) ; "ದೆಸೆಗಟ್ಟಿನ ಧೂಳಿತ = ಸಣ್ಣಗಿರುವ ಮಣ್ಣಿನ ಹುಡಿಗೆ ಧೂಳು ಎಂದೂ ಹೆಸರು . . . ರೂಢಿಯಲ್ಲಿ ದೇವರ ಪಾದದಲ್ಲಿರುವ ಧೂಳು ಅಥವಾ ವಿಭೂತಿಗೆ ಈ ಹೆಸರು ಬಂದಿದೆ, ಇದಕ್ಕೆ ಪಾದರೇಣು ವೆಂದು ಸಹ ವಾಡಿಕೆ ಇದೆ" (ಚಿತ್ರಪಾ.ಅನುಬಂ. ೩).

[ ದೆಸೆ$_2$ + ಕಟ್ಟು$_2$./ತೆಲು. ದೆಸಕಟ್ಟು = ಕಳ್ಳತನಮಾಡುವಾಗ ಬಳಸುವ ಒಂದು ಬಗೆಯ ಸಾಧನ ]

**ದೆಸೆಗಡೆ** (ನಾ). ೧.ದಿಕ್ಕಿನ ತುದಿ ; ದಿಗಂತ : ಮೆಟ್ಟಿದುದುರಗಪುರವನಳಕೆ ಯನಱೆಯಟ್ಟಿದುದು ದೆಸೆಗಡೆಗೆ ಮುಟ್ಟಲೀಯದೆ ಮೇಲಕೆ ನೂಕಿದುದು ಸುರಪಟ್ಟಣವನು ಚೆಲ್ವಿನಿಂದ (ಕುರಾಸಾಂ. ೧೭-೭). ೨. ಮೂಲೆ ; ಕೊನೆ: ಬಿಡದಿರೆ ಪರಮಪಾತಕಿಯನಿವಳ ದೆಸೆಗಡೆಗಿರದಿಟ್ಟು ಪೋಗುವೆನು (ಕುರಾಸಾಂ. ೪೩-೧೩೦). [ ದೆಸೆ$_2$ + ಕಡೆ$_3$ ]

**ದೆಸೆಗಾಣ್** (ಕ್ರಿ). ದಿಕ್ಕನ್ನು ಕಾಣು; ದಿಕ್ಕು ತೋಚು; ಮುಂದುಗಾಣು: ಉರಿಕೊಳೆ ದೆಸೆಗಾಣದೆ ದೆಸೆವರಿವರಿದು ಕುಜಂಗಳಂ ಪಡಲ್ವಡಿಸಿ ಭಯಂ ಬೆರಸೊಳಱೆ ನೆಗೆದುದಾ ವನಕರಿಶರಭಕಿಶೋರಕಂಠಗರ್ಜನೆ ಬನದೊಳ್ (ಪಂಪಭಾ. ೫-೯೧) ; ಅದನಾಂ ಕೇಳ್ದಿರ್ದಗೆಟ್ಟು . . . ಕಣ್ಣೀರ ಪೂರದ ಗುರ್ವಿಂ ದೆಸೆಗಾಣದಂದೆಡಪುತಂ ತಾಗುತ್ತುಂ (ಕಾದಂಪೂ. ೯೦) : ಬೆಳಗೆ ಶಿಗ್ಮಕರಂ ದೆಸೆಗಾಣದಿರ್ಪ ಕೌಶಿಕನಯನಂಗಳಂ . . . ಏಕೆಯೊ ಮಾಡಿದ ನಬ್ಬವಿಷ್ಟರಂ (ಪಂರಾಮಾ. ೧-೪೦) ; ಅಗರುವ ಧೂಪಧೂಮದೊದವಿಂ ದೆಸೆಗಾಣದೆ(ವರ್ಧಪು. ೧-೬೭). [ ದೆಸೆ$_2$ + ಕಾಣ್ ]

**ದೆಸೆಗಾರ** (ನಾ). ಅದೃಷ್ಟಶಾಲಿ ; ಪುಣ್ಯವಂತ ; ಭಾಗ್ಯಶಾಲಿ : ಅಡಕೆ ಬೆಳೆದವರು ಒಳ್ಳೆ ದೆಸೆಗಾರರಾಗಿ ಬದುಕಿ ಹೋದರು (ರೂಢಿ).

[ ದೆಸೆ$_1$ (<ದಸೆ) + -ಗಾರ (< -ಕಾಱ) ]

**ದೆಸೆಗಿಡಿಸು** 'ದೆಸೆಗೆಡಿಸು' ನೋ.

**ದೆಸೆಗಿಡು** 'ದೆಸೆಗೆಡು' ನೋ.

**ದೆಸೆಗೂಡು** (ಕ್ರಿ). ಗುಂಪನ್ನು ಸೇರು : ಶಿವಶಿವ ವಲಿಮುಖರ ದೆಸೆಗೂಡೆ ದಳಪತಿ ನೀಲ ಹರಿತಂದ (ಕೌಶಿರಾ. ೩೦-೪೧). [ ದೆಸೆ$_2$ + ಕೂಡು$_1$ ]

**ದೆಸೆಗೆಡಿಸು, ದೆಸೆಗಿಡಿಸು** (ಕ್ರಿ). ೧. ದಿಕ್ಕು ತೋರದಂತೆ ಮಾಡು ; ಮುಂದುಗಾಣದಂತೆ ಮಾಡು ; ದಿಗ್ಭ್ರಮೆಯುಂಟುಮಾಡು : ಅಱಿವುಗೆಡಿಸುತ್ತುಮೆಲ್ಲಾ ತೆಱದಿಂ ದೆಸೆಗೆಡಿಸದಿರದು ವಿಷಯಸಮೂಹ ಕ್ಕೆಱಗಿ ಬಿಡದಂತೆ ಪತ್ತುವ ಮಱುಕಂ ದಿಙ್ಮೋಹದಂದದಿಂ ಮಾನಿಸರಂ (ಕಾದಂಪೂ. ೫೪೮) ; ಮಸುಳುವನು ತೋಱುವನು ತೊಡೆವನು ದೆಸೆಗೆಡಿಸು ವನು ಬಳಿಕ ಮುಳಿಸಿನೊಳಾ ಮಹಾರಥರ (ಕುವ್ಯಾಕ. ೧೧-೪೭) ; ಎಸಲ ಲರ್ಗಣೆಗಳವಳ . . . ಕರಣಗಳ ದೆಸೆಗೆಡಿಸಿದವೆನಲವಳ ವಿರಹದೊಂ ದೆಸಕವನೇನ ಪೇಳುವೆನು (ಕುರಾಸಾಂ. ೪೩-೮೯). **ದೆಸೆಗಿಡಿಸು:** ೧. ಒಸೆದು ಯಶೋದ್ಭ × × × ದೇವನಿದಿರಾಂತವರಂ ದೆಸೆಗಿಡಿಸಿ ವೀರಭೋಜ್ಯಾ ವಸುಂಧರಾ × × × (ಎಕ VIII (S), ಸೊರಬ. ೫೮೭-೩೦ ; 1201). ೨. ಓಡಿಸು; ನಿವಾರಿಸು ; ನಾಶಪಡಿಸು : ನೆಲ್ಲಿ . . . ಅಸಿತದಯಃ ಕಾಂತದ ಮದಮಂ ದೆಸೆಗಿಡಿಸುಗುಮೆಂದೊಡಿಲ್ಲಿ ಸಂದೆಯಮುಂಟೇ (ಜಮದ. ೩-೭೯). [ ದೆಸೆ$_2$ + ಕೆಡಿಸು$_1$ ]

**ದೆಸೆಗೆಡು, ದೆಸೆಗಿಡು** (ಕ್ರಿ). ೧. ದಿಕ್ಕು ತೋಚದಿರು ; ಮುಂದುಗಾಣ ದಿರು ; ದಿಗ್ಭ್ರಾಂತಿಗೊಳ್ಳು : ದೆಸೆಯಂ ಪೊತ್ತ ಮದೇಭರಾಜಿ ದೆಸೆ ಗೆಟ್ಟೋಡಲ್ತಗುಳ್ದತ್ತು (ಪಂಪಭಾ. ೯-೯೪) ; ದೆಸೆಗೆಟ್ಟುದ್ವಾಪ್ಪದಿಂದಂ . . . ಅಧೋಮುಖಿಯೆನಿಪ ಮಹಾಶ್ವೇತೆಯುಂ ಕಂಡನಾಗಳ್ (ಕಾದಂಉ. ೫೪೩); ಭಯರಸದಿಂ ದೆಸೆಗೆಟ್ಟರ್ ಕಂಡದೃಷ್ಟಪೂರ್ವಮನಾರ್ಯರ್ (ಪಂರಾಮಾ. ೦-೭೧); ಕಾಗೆಯಂ ಕಂಡ ಕೋಗಿಲೆಯಂತೆ ಮಾಲೆಗಾಱರ್ಬೆರ್ಚಿ ದೆಸೆಗೆಟ್ಟು ಪರಿಯೆ (ಧರ್ಮಾಮ್ಮ. ೩-೩೪); ಬಿಸಿಲು ಮಳೆ ಬಿಱುಗಾಳಿಯೊಳು ಬಲು ದೆಸೆಗೆಟ್ಟೆ ತಿರುಗಿ ದೇಶದೇಶದೊಳು (ಪುರಂದ. ೧-೧೭೭-೩). ೨. ಹಾಳಾಗು ; ನಾಶವಾಗು ; ಏನ್ನ ಮೊಗಮುಂ ತಲೆಯುಂ ಬಾತು ಪೋದಪುದು ಕಿಚ್ಚಲ್ಲ ಮಿಂಚುಂಬುಟು ನೀನಿದನೂದಿ ದೆಸೆಗೆಡವೇಡ (ಪಂಚತಂ. ೩೪೩-೭) ; ರಾಯನರನೆಲೆ ದೆಸೆಗೆಡಲು ಮೊಳಗಿದನು ಪಾರ್ಥ ಕುಮಾರನಳವಿಯಲಿ (ಕುವ್ಯಾದ್ರೋ. ೫-೧೫) : ಬಸವನೆಂದರೆ ಪಾಪ ದೆಸೆ ಗೆಟ್ಟು ಹೋಗುವುದು (ಸರ್ವಜ. ೨೯೪). **ದೆಸೆಗಿಡು :** ೨. ನೀಂ ಸ್ತ್ರೀರೂಪ ದೊಳ್ ತೊಡರ್ದು ದೆಸೆಗಿಡಲ್ವೇಡ (ಚಾವುಂಪು. ೪೦) ; ಕಲಿಕಾಲದೇಳ್ಗೆಯುಂ ದೆಸೆಗಿಡೆ ತೂಳ್ದಿ ತಾಳ್ದಿ . . . ಸಿಙ್ಗವಿಷ್ಟರಮನೇಱದನಾ ಜಯಸಿಙ್ಗ ವಲ್ಲಭಂ (ಎಕ. VII, ಶಿಕಾರಿ. ೧೩೫-೧೫; 1019); ಸುಖಮುಮಂ ಆಯುಷ್ಯ ಮುಮಂ ಮಂತ್ರ [ತಂತ್ರವೈದ್ಯಂಗಳಿಂ] ಪಡೆವೆನೆಂದು ದೆಸೆಗಿಡಲ್ವೇಡ (ಧರ್ಮಾಮ. ೪-೫೦).

ದೆಸೆಗೆಟ್ಟವ=ದಿಕ್ಕುಗೆಟ್ಟವನು: "ನಷ್ಟಃ, ಗೃಹೀತದಿಕ್, ಕಾಂದಿಶೀಕಃ, ಭಯದ್ರುತಃ – ಈ ೪ ದೆಸೆಗೆಟ್ಟವಂ" (ಹಲಾಯು. ೭೯-೬೩೫).

[ ದೆಸೆ$_2$ + ಕೆಡು$_1$ ]

**ದೆಸೆಗೇಡಿ** (ನಾ). ದಿಕ್ಕಿಲ್ಲದವನು ; ಆಶ್ರಯವಿಲ್ಲದವನು ; ನಿರಾಶ್ರಿತ : ಏತಕ್ಕೆ ಬಿಟ್ಟುಹೋದನು ನಿನ್ನನು ಮಾತ ಏತಕ್ಕೆ ಅವನತಿಗಳೆದ ಏತಕ್ಕೆ ನಾ ದೆಸೆಗೇಡಿಯಾದೆನು ಎಂದು ಮಾತೆಯಾವಪ ಬೆಸಗೊಂಡ (ನಿಜಸಾಂ. ೪೩-೮); ನಾನೇ ದೆಸೆಗೇಡಿಯಾದ ಅಹಮ್ಮದನು (ಮುಂಬಯಿ. ೫-೧೩) : ಹೊಟ್ಟೆಯ ಮಗನು ದೆಸೆಗೇಡಿಯಾದದ್ದರ ಅರಿವು ನಿಮಗೆ ಇಲ್ಲವೇ ಇಲ್ಲವೋ? (ತುಳಸೀ. ೧೦೭). [ ದೆಸೆ$_2$ + ಕೇಡಿ$_1$ ]

**ದೆಸೆದಪ್ಪು** (ಕ್ರಿ). ದಿಕ್ಕುತಪ್ಪು; ಆಶ್ರಯವಿಲ್ಲದಂತಾಗು: ಪ್ರಮುಖರಪ್ಪ ನಾಯಕರ ಪೆಂಡಿರುಂ ತಮ್ಮ ಗಂಡರಂ ಕೊಳಗುಳದೊಳಱಸಿ ಕಾಣದೆ ಬಾಯಟಿದು ಪಳಯಿಸುತ್ತುಂ ಯೂಥಪತಿ ಕೆಡೆಯೆ ದೆಸೆದಪ್ಪಿದ ವನಕರಿ ಕರೇಣುಗಳುಮನಡರ್ಪಿಲ್ಲದೆ ಕಲ್ಪವೃಕ್ಷಮುಡಿದು ಕೆಡೆಯೆ ಬಂಬಲ ಬಾಡಿದ ವನಲತೆಗಳುಮಂ ಪೋಲ್ತು (ಪಂಪಭಾ. ೧೪-೪ ವ). [ ದೆಸೆ$_2$ + ತಪ್ಪು$_1$ ]

**ದೆಸೆದಿರಿ** (ಕ್ರಿ). ದಿಕ್ಕುದಿಕ್ಕುಗಳಲ್ಲಿ ಅಲೆ, ತಿರುಗು : ಜನ್ನಗುದುರೆಯುಂ ಕಾಣದಿರೆ . . . ದೆಸೆದಿರಿಯುತುಮಿರ್ಕೆಲನೊಳಱಸುತುಂ (ರಾಮಾಶ್ವ. ೧೧೦-೭). [ ದೆಸೆ$_2$ + ತಿರಿ$_1$ ]

**ದೆಸೆದೀವು** (ಕ್ರಿ). ದಿಕ್ಕುಗಳನ್ನು ತುಂಬು, – ವ್ಯಾಪಿಸು : ದೆಸೆದೀವಿತ್ತು ಘೋರಾಂಧಕಾರಂ (ರಾಜಶೇ. ೧೧-೧೯). [ ದೆಸೆ$_2$ + ತೀವು ]

**ದೆಸೆದೇವತೆ** (ನಾ). ದಿಕ್ಕಿನ ದೇವತೆ : ಸಿಡಿಲೊಳ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳ್ ಬಾಳ್ ಪಳಂಚೆ ಮಾರ್ಕಿಡಿವಿಡೆ ನೋಡಲಂಜಿ ದೆಸೆದೇವತೆಗಳ್ ಪೆಱಪಿಂಗೆ (ಪಂಪಭಾ. ೧೦-೪೩) : ದೆಸೆದೇವತೆಗಳ್ಗೆ ಜಪಾಪ್ರಸೂನಮುಂ ರಕ್ತ ಬಲಿಯುಮಂ ತಾಮೆ ಕುಡುವಂತೆಸೆದಿರ್ದರೊ ಕಡೆಗಣ್ಣೊಳ್ ಪಸರಿಸೆ ಕಡುಗೆಂಪು ಭೀಮದುರ್ಯೋಧನರಾ (ಗದಾಯು. ೮-೩) ; ದೆಸೆದೇವತೆಯ ಕುಸುಂಬೆಯ ಕುಸುಮಂಗಳಿನಿಂಡೆಯಾಡುವಂತಿರೆ (ಅರ್ಧನೇ. ೭-೩೨).

[ ದೆಸೆ$_2$ + ದೇವತೆ ]

**ದೆಸೆಪಟದುಳಿ** (ಕ್ರಿ). ದಿಕ್ಕಾಪಾಲಾಗಿ ಹೋಗುವಂತೆ ಮಾಡು ; ಧೂಳೆಬ್ಬಿಸು ; ನಾಶಮಾಡು : ಸಂಗರಜಯದ ಮಡುವಿನಲಿ ಸಲೆ ಸೊಗಸಿ ತನಿಸೊಕ್ಕಿ ದೆಸೆಪಟದುಳಿದು ಸೌಭದ್ರೇಯಭೃಂಗನ ಬಲುದನಿಯು ಭರವಂಜಿಸಿತು ಜಯಯುವತಿವಿರಹಿಗಳ (ಕುಮಾ.ದ್ರೋ. ೬-೩೦).

[ ದೆಸೆ$_2$ + ಪಟ$_2$ + ತುಳಿ$_1$ (<ತುಱಿ$_1$) ]

**ದೆಸೆಬಿದ್ದಂ, ದೆಸೆವಿದ್ದಂ** (ಅ). ೧. ಹೆಚ್ಚಾಗಿ ; ಅತಿಶಯವಾಗಿ : ಚಿತ್ರಜನಾಜ್ಞೆ ಮುತ್ತೆ ದೆಸೆಬಿದ್ದಂ ಬೆರ್ಚೆ ಲಜ್ಜಾರಸಂ ಮನದಿಂ ಸೂಸಿದುದು (ಮಲ್ಲಿಪು. ೫-೭) : ದೆಸೆಬಿದ್ದಂ ಕುಣಿವಂಗನಾಜನದ ಕಾಂಚೀಘಂಟಿಕಾಘೋಷವೊಂದೆಸೆಯೊಳ್ . . . ಘೂರ್ಣಿಸೆ ಪೂರ್ಣಮಾಯ್ತು ಜನಜನ್ಯೋತ್ಸಾಹ ಕೋಳಾಹಳಂ (ಮಲ್ಲಿಪು. ೧೩-೧೨) ; ಪುಸಿವಡೆ ಪೋಲಲ್ಪುಸಿವುದು ಪುಸಿಯಲ್ಕಱಿಯದೊಡೆ ಮಾಣ್ಬುದಂತಿರದೆ ಕರಂ ದೆಸೆಬಿದ್ದಂ ಪುಸಿವಡೆ ಬಾರಿಸ ಬಪ್ಪುದೆ ಪುಸಿಯ ಬಸನವಮಾಗಿಪ್ಪವರಂ (ಸಮಪ. ೧೦-೦೨) ; ಪಸರಿಸೆ ಪೂವಲಿಗಳ್ ಬಾಜಿಸೆ ಬದ್ದವಣಂಗಳೊಡನೆ ಮಿಳ್ಳಿಸೆ ಗುಡಿಗಳ್ ದೆಸೆಬಿದ್ದವಾಡೆ ತರುಣಿಯರೊಸಗೆಯ ಮೇಲೊಸಗೆಯಾದುದು (ಪಂರಾಮಾ. ೩-೧೩೪) ; ಬದ್ದವಣಂ ಬಾಜಿಸೆ ದೆಸೆಬಿದ್ದಂ ಕುಣಿದಾಡೆ ಗಣಿಕೆಯರ್ . . . ಪರಿದತ್ತು ಹರ್ಷರಸಮಾ ಪುರದೊಳ್ (ಪಂರಾಮಾ. ೪-೨೮). ೨. ಗುರಿಯೇ ಇಲ್ಲದಂತೆ ; ದಿಕ್ಕಾಪಾಲಾಗಿ ; ಎಲ್ಲ ಕಡೆಗೂ: ಪ್ರಮಥರಂಗೋಪಾಂಗಸಂಛನ್ನಸಾಯಕಪತ್ರಂಗಳೆಱಂಕೆಯವಾಗೆ ದೆಸೆಬಿದ್ದಂ ಪಾಱಿದರ್ ಬೇಗದಿಂ (ಜಗವಿ. ೧೮-೧೨) ; ನೀಂ ದೆಸೆಬಿದ್ದಂ ಮರೆಯಂತೆ ಪಾಯ್ತಂದೆಯಪ್ಪುದಱಿಂ ಮರೆಯಾಗೆಂದು ಶಾಪಮಂ ಕುಡೆ (ಕೊಲ್ಹಾ.ಶಾ. ೧೫-೨೩ : 1186 ) ಎತ್ತಿಸಿ ತೋರ್ಪೆಂ ರಿಪುಬಳಮುಂ ದೆಸೆಬಿದ್ದಂ ತೂಳ್ದೆ ಜಯಪತಾಕವಮನೀಗಳ್ (ಚಂದ್ರಪು. ೧೦-೮೦). **ದೆಸೆವಿದ್ದಂ** : ೧. ದೆಸೆವಿದ್ದಂ ಸುರತೂರ್ಯಮುಣ್ಮೆ ಬರಲಂತಾಯ್ತಾ ಪ್ರತಿಧ್ವಾನಂ (ನೇಮಿಪು. ೮-೦೨೬).

[<ಸಂ. ದಿಶಾವಿದ್ಧ ? ]

**ದೆಸೆಮಿಣಿ** 'ದೆಸೆಮಿಳಿ' ನೋ.

**ದೆಸೆಮಿಳಿ, ದೆಸೆಮಿಣಿ** (ನಾ). (ತೇರು ಮುಂತಾದ ಯಾವುದಾದರೂ ವಸ್ತುವಿನ) ಎರಡು ಮಗ್ಗುಲಂಗಳಿಗೆ ಕಟ್ಟಿ ಎಳೆಯುವ ಹಗ್ಗ : ದಬ್ಬುಕ ಪಾಳಾಸ ದೆಸೆಮಿಳಿ ಚೆಲ್ಲಹ ಕಬ್ಬಿ ತಾಪಣೆ ಮೇಲಕ್ಕೆ ಉಬ್ಬಲೀಯದ ಕಬ್ಬುನದ ಗುಂಡು ಪಾಡಿಗಳಬ್ಬರವಿರೆ ಸುಮ್ಮನಿಹುದು (ಕುರಾಸಾಂ. ೯-೩೭). **ದೆಸೆಮಿಣಿ** : ಹಿಡಿದರಾಗಳೆ ತೇರ ಮಿಣಿಯಂತೆ ಕಟಕದ ಕಡೆಮುಟ್ಟ ನಿಡುಸರಪಣಿಯ ಎಡಬಲಕಲ್ಲಲ್ಲಿ ಕವಲಾಗಿ ಸರಪಣಿ ನಡೆದುವು ದೆಸೆಮಿಣಿಯಂತೆ (ಭರಜ. ೪೯-೧೦೯). [ ದೆಸೆ$_2$ + ಮಿಳಿ$_2$ ]

**ದೆಸೆಮುಟ್ಟು$_1$** (ಕ್ರಿ). ದಿಕ್ಕಿನ ಗಡಿಯನ್ನು ಸೇರು ; ದಿಗಂತವನ್ನು ತಲಪು; ಬಹುದೂರ ವ್ಯಾಪಿಸು : ಮುಟ್ಟೆಂಬುದರ್ಕೆ – ದೆಸೆಮುಟ್ಟೆ, ವಾರ್ಧಿ ಮುಟ್ಟೆ, ಅಂತಮುಟ್ಟೆ (ಶಮದ. ೨೪೮ ಪ್ರಯೋ) ; ಡೌಡೆಯ ಮಾವುರಿಯ ಭೇರಿಯ ಭೂರಿನಿನಾದಂ ದೆಸೆಮುಟ್ಟೆ ಪಳಂಚಲೆಯೆ (ರಾಮಾಶ್ವ. ೫೦-೨).

[ ದೆಸೆ$_2$ + ಮುಟ್ಟು$_1$ ]

**ದೆಸೆಮುಟ್ಟು$_2$** (ನಾ). ದಿಕ್ಕನ್ನು ಮುಟ್ಟಿದುದು ; ದಿಗಂತವಿಶ್ರಾಂತವಾದುದು : ರಾವಣಂ ಮುಂತಪ್ಪ ದೆಸೆಮುಟ್ಟಿನ ಜಸದ ದೈತ್ಯರಂ ಱೆಪ್ಪಿಸೊಪ್ಪಿ ಸೋವಿದ ಶ್ರೀರಾಮಂ ಬೇಳ್ವ ಜನ್ನದ ಹಸುವಂ ಕಳ್ದುಯ್ದುಂ ಬಾಟ್ಚಿನೆಂದು ಬಗೆವ ನೀನಾವೊಂ ? (ರಾಮಾಶ್ವ. ೧೧೩-೨೦).

[ ದೆಸೆ$_2$ + ಮುಟ್ಟು$_2$ ]

**ದೆಸೆಮೂಲೆ** (ನಾ). ದಿಕ್ಕುಗಳು ಸೇರಿರುವ ಸ್ಥಳ ; ದಿಕ್ಕಿನ ಗೊಂಟು : ದೆಸೆಮೂಲೆಗಳ್ ಪಳಂಚೆ ಮಾರ್ದನಿಗುಡುವಂತು . . . ಬೊಬ್ಬೆಱಿದಂ ಕಲಿಯಣಾವಂ (ರಾಮಾಶ್ವ. ೧೩೦-೨೮). [ ದೆಸೆ$_2$ + ಮೂಲೆ ]

**ದೆಸೆಯಾಣ್ಮ** (ನಾ). ದಿಕ್ಕಿನ ಅಧಿಪತಿ ; ದಿಕ್ಪಾಲಕ : ಅಲರಂಬನಯ್ಯ ಬಿದಿಯುಮದುರ್ಗಂಬರೆಱೆಯ ದೆಸೆಯಾಣ್ಮರೆಲರ್ವಟ್ಟೆಗರು . . . ಅಱು ಮೊಗನೊಡನೆ ಕಱೆಗೊರಲನೊಪ್ಪಿರ್ದನು (ಭಾವಚಿಂ. ೯-೪೬) ; ದೆಸೆಯಾಣ್ಮರ ಪುರವಿದಕೆಣೆಯಿಲ್ಲೆಂದು ನಸುನಗೆ ಪುರಲಕ್ಷ್ಮಿಯುವಳ ದಶನಪಂಕ್ತಿಗಳ ಚೆಲ್ವಿನೆ ಕೋಟೆಯಾ ತನೆಯೆಸೆದುವು (ಕಂನವಿ. ೬-೫) ; ದೆಸೆಯಾಣ್ಮರುಂ ಸಂತಸಂಗೊಂಡು ಮುಂತೆ ಆ ಪಿರಿಯ ರಕ್ಕಸನ ಕಡೆಯಂ ಕಾಯುತಿರ್ದರ್ (ಅದ್ಭುತ. ೪೭-೧೬). [ ದೆಸೆ$_2$ + ಅಣ್ಮ (<ಅಳ್ಮ) ]

**ದೆಸೆಯಾನೆ, ದೆಶೆಯಾನೆ** (ನಾ). ಎಂಟುದಿಕ್ಕುಗಳಲ್ಲಿಯೂ ಭೂಮಿಯನ್ನು ಹೊತ್ತಿರುವುದೆಂದು ನಂಬಲಾದ ಐರಾವತವೇ ಮೊದಲಾದ ಆನೆ ; ದಿಗ್ಗಜ : ದೆಸೆಯಾನೆಗಳಾನನದೊಳ್ ಪಸರಿಸಿ ದುಗ್ಧೋದಬಿಂದು . . . ಬೆಳ್ಪಸದನದಂತಿದುರ್ವಜಿತ ಸವನೋತ್ಸವದೊಳ್ (ಅಜಿಪು. ೪-೫೯) ; ಎಣ್ದೆಸೆಯೊಳಿರ್ದ ದೆಸೆಯಾನೆಗಳಂ ಜಳಕೇಳಿಗೆ ಕರೆವಂತಿರೆ (ಮಲ್ಲಿಪು. ೩-೫೦) ; ಉಲಿದೆಂಟುಂ ದೆಸೆಯಾನೆಯುಂ ಪಿಡಿದು ಕೋಡಂ ಕಿಬ್ಬು ತಾರೆಂಬುದೇಂ . . . ಬೀರಮೋ (ಕಬ್ಬಿಕಾ. ೨೪೦) ; ದೆಸೆಯಾನೆಗಳುಱೆ ಬೆರ್ಚೆ ಕಡಲು ತೆರೆಮಸಗಿ ಮೇರೆಯ ಮಿಱೆ ಪೆರ್ಚೆ ಎಸೆದುದು ಜಯದುಂದುಭಿನಾದ (ಕುರಾಸಾಂ. ೦೦-೭೫). **ದೆಶೆಯಾನೆ.** ದೆಶೆಯಾನೆಗಳ್=ಒಂದು ಬಿರುದು : ಮಹಾಮಂಡಲೇಶ್ವರನಯೋಧ್ಯ ಸಿಂಹಾಸನಂ [ಕಂ]ಬುಕುನ್ದ್ರಾ ಪುರ್ವರವರೇಶ್ವರಂ ದೆಶೆಯಾನೆಗಳ್ನಳಂಪೂರ ಭುಜಂಗರಿಪು ಪಕ್ಷ[ಕ್ಷ]ಯಕಾರಣಂ (ಕಇಅ. ೪೦-೫೮-೧೦ ; 1087).

[ ದೆಸೆ$_2$ + ಆನೆ$_1$ ]

**ದೆಸೆವಂತ** (ನಾ). = ದೆಸೆಗಾರ: ದೆಸೆವಂತರಾಗಿ ಬದುಕ್ಯಾವ್ರೆ ರಾಯರು (ಜಗೀತ. ೮೦). [ ದೆಸೆ$_1$ (<ದಸೆ) + – ವಂತ ]

**ದೆಸೆವಡೆ** (ಕ್ರಿ). ಅದೃಷ್ಟವನ್ನು ಹೊಂದು ; ಭಾಗ್ಯವನ್ನು ಪಡೆ ; ಭಾಗ್ಯಶಾಲಿಯಾಗಿರು : ದೆಸೆವಡೆದು ಕೆಲವುದಿನ ಬಸವನಿದ್ದಂತಿರ್ದ . . . ಬಸವ ರಸೆಯಲ್ಲಿ ಬಿದ್ದಳಿದುದೆಂಬ ಬಿಱುನುಡಿಗೇಳಿ (ಗುರುಚಾ. ೧೦-೮೫).

[ ದೆಸೆ$_1$ (<ದಸೆ) + ಪಡೆ$_1$ ]

**ದೆಸೆವರಿ** (ಕ್ರಿ). ದಿಕ್ಕುದಿಕ್ಕಿಗೆ ಓಡು ; ಗುರಿಯಿಲ್ಲದೆ ಚಲಿಸು ; ಸಿಕ್ಕಿದ ಕಡೆಗೆ ಹೋಗು : ಉರಿ ಕೊಳೆ ದೆಸೆಗಾಣದೆ ದೆಸೆವರಿವರಿದಂ ಕುಜಂಗಳಂ ಪಡಲ್ವಡಿಸಿ ಭಯಂಬೆರಸೊಳಱೆ ನೆಗೆದುದಾ ವನಕರಿಶರಭಕಿಶೋರ ಕಂಠಗರ್ಜನೆ ಬನದೊಳ್ (ಪಂಪಭಾ. ೫-೯೧). [ ದೆಸೆ$_2$ + ಪರಿ$_2$ ]

**ದೆಸೆವಲಿ** (ನಾ). ೧. (ಶಾಂತಿಕರ್ಮ ಮೊದಲಾದ ಸಂದರ್ಭಗಳಲ್ಲಿ) ದಿಗ್ದೇವತೆಗಳನ್ನು ತೃಪ್ತಿಪಡಿಸುವುದಕ್ಕಾಗಿ ಕೊಡುವ, ಅನ್ನಾಹಾರಾದಿ ವಸ್ತು; ದಿಗ್ಬಲಿ. ೨. (ಆಲಂ) ದೇಹವನ್ನು ತುಂಡರಿಸಿ ದಿಕ್ಕಾಪಾಲಾಗಿ ಬಿಸಾಡುವಿಕೆ ; ಬಲಿಕೊಡುವಿಕೆ : ಪಿಡಿಖಣ್ಡ[ಂ]ಗೊಣ್ಡು ದೆಸೆವಲಿಗೆಱಪೊಟ್ಟು (ಸಾಇಇ. XI-1, ೧೧-೨೦ : 365) ; ಪೂರ್ವಪದಂ ತದ್ಭವಮಾದುದರ್ಕೆ – ಗ್ರಾಮರಸ–ಗಾವರಸ . . . ದಿಶಾಬಲಿ – ದೆಸೆವಲಿ (ಶಮದ. ೨೮೯ ಪ್ರಯೋ). 'ದೆಸೆವಲಿಗೊಡು' ಪರಾ. [ ದೆಸೆ$_2$ + ಬಲಿ$_2$ ]

**ದೆಸೆವಲಿಗುಡು** 'ದೆಸೆವಲಿಗೊಡು' ನೋ.

**ದೆಸೆವಲಿಗೆಯ್** (ಕ್ರಿ). ದಿಕ್ಕುಗಳಿಗೆ ಬಲಿಯನ್ನಾಗಿ ಮಾಡು; ಕತ್ತರಿಸಿ ದಿಕ್ಪಾಲಾಗಿ ಎಸೆ: ಉಱದಿರ್ದಿರ್ದೊಡಾನಱಿವೆಂ ನಿನ್ನನಿಲ್ಲಿ ದೆಸೆವಲಿಗೆಯ್ಯಲ್ (ಪಂಪಭಾ. ೬-೫೭); ಕೆಲರಂ ದೆಸೆವಲಿಗೆಯ್ದು ಕೆಲರಂ ಭುಜಬಲದಿನಱಿದು ಶಿಲೆಯೊಳ್ಪುಯ್ದು (ಗದಾಯು. ೩-೧೦); ಅನ್ಯಕಾಂತೆಗಾಟಿಸಿದ ದುರಾತ್ಮನಂ ರಣದೊಳಣ್ಮಿದನಪ್ಪೊಡವೋಘಟಾಣದಿಂ ದೆಸೆವಲಿಗೆಯ್ವೆಂ (ಪಂರಾಮಾ. ೧೧-೫): ನಾಳೆ ನಿನ್ನಂ ದೆಸೆವಲಿಗೆಯ್ದಲ್ಲದೆ ಮಾಣೆಂ (ಧರ್ಮಾಮೃ. ೩-೧೧೦ ಅಡಿಪಾಠ); ಏಱುಂ ತೆಱದ ತಾಳವಟ್ಟದ ಪೊಯ್ಲೊಳಂ ನಾಲ್ವತ್ತುನಾಲ್ಕು ಗಾತ್ರಾಪರಪಾತದೊಳಂ ದೆಸೆವಲಿಗೆಯ್ದು . . . ಮಹಾವನಮಂ ವನಕೇಳಿಗಜಂ ಪೊಕ್ಕುದಂ ಕೇಳ್ದು (ಚಂದ್ರಪ್ರ. ೯-೧೧೧ ವ). [ ದೆಸೆವಲಿ + ಕೆಯ್$_1$ ]

**ದೆಸೆವಲಿಗೊಡು,** ದೆಸೆವಲಿಗುಡು (ಕ್ರಿ). = ದೆಸೆವಲಿಗೆಯ್: ಈಕೆ . . . ರಕ್ಕಸರ ಬಳಗವಂ ಸದೆದು ದೆಸೆವಲಿಗೊಟ್ಟು ನಿಮ್ಮಂ ಪೊರೆದ ಶ್ರೀರಘುರಾಮನ ಪಟ್ಟದ ರಾಣಿ (ರಾಮಾಶ್ವ. ೩೯-೩). **ದೆಸೆವಲಿಗುಡು:** ಅಂತು ಭಯ ಬಲದ ಚಾತುರ್ದಂತಂ ಪೇಸೇಟಿ ಕಾದಿ ದೆಸೆವಲಿಗುಡಲ್ (ಪಂರಾಮಾ. ೧೩-೯೭); ಬಿಸಸನದೊಳ್ ದಶಮುಖನಂ ದೆಸೆವಲಿಗುಡಲೆಂದು ಭರತಶತ್ರುಘ್ನರ್ . . . ಸನ್ನಾಹಭೇರಿಯಂ ಪೊಯಿಸುವುದುಂ (ಪಂರಾಮಾ. ೧೪-೭೨). [ ದೆಸೆವಲಿ + ಕೊಡು$_1$ ]

**ದೆಸೆವಳ** (ನಾ). ದಿಕ್ಕುಗಳ ಮೇಲೆ ಅಧಿಕಾರವುಳ್ಳವನು: ದಿಕ್ಪಾಲ: ಆಗಳ್ ಸಾವಿತ್ರಿ ಡೋಲಾಯಮಾನಮಾನಸನಾಗಿ ದೇವಿಯರಂ ಬಲವಂದು ಕೈಮುಗಿದು ದೆಸೆವಳರ್ಗೆ . . . ಕೇಳಿಸಿ (ರಾಮಾಶ್ವ. ೩೯-೨).
[ ದೆಸೆ$_2$ + -ವಳ (< -ವಾಳ$_1$) ]

**ದೆಸೆವಾನ** (ನಾ). ಅದೃಷ್ಟಶಾಲಿ; ಭಾಗ್ಯವಂತ: ಬಹಳ ದೆಸೆವಾನ ಆಗುತ್ತಾನಂತ ಅಣ್ಣ ಹೇಳೇ ಹೇಳುತ್ತಾನೆ (ದಾಕೂಟ. ೧೦೦).
[ <ಸಂ. ದಶಾವತ್ ]

**ದೆಸೆವಿದ್ದಂ** 'ದೆಸೆಬಿದ್ದಂ' ನೋ.

**ದೆಸೆವೆಟ್ಟು** (ನಾ). ದಿಕ್ಕಿನ ಕೊನೆಯ ಬೆಟ್ಟ: ತೆಱಪುಗುಡದೆ ಸೂಟಿಸುವ ನಿಸ್ಸಾಳದ ಬಲ್ಸರಕೆ ದೆಸೆವೆಟ್ಟುಗಳ್ ನಿಬ್ಬರಂ ಬಿಱಿಯೆಯುಂ (ಕಬ್ಬಿಗಕಾ. ೨೮೮). [ ದೆಸೆ$_2$ + ಬೆಟ್ಟು$_2$ ]

**ದೆಸೆಹೊದ್ದು** (ಕ್ರಿ). ಸಾನ್ನಿಧ್ಯವನ್ನು ಹೊಂದು; ಹತ್ತಿರದಲ್ಲಿರು: ಬಿಸರುಹಕುಸುಮಜನ ಕಪಾಲವ ಹಿಡಿದಾತನ ಕೈಯಲ್ಲಿ ಗಸಣಿಗೊಳಗಾದರು ಆತ್ಮನ ರಸಿಕವನಱಿಯದ ಈ ಹುಸಿಕರ ನೋಡಿ ದೆಸೆಹೊದ್ದಿಹನೆಂದರೆ [ಪಾಠಾಂ. ಹೊದ್ದೆನೆಂದೆ] ಪಶುಪತಿ ದೂರ (ಪೋಲೀಮಾ. ೫೯-೨೪೩).
[ ದೆಸೆ$_2$ + ಹೊದ್ದು$_1$ (<ಪೊರ್ದು$_1$) ]

**ದೇಂಟು,** ದೇಟು (ನಾ). ೧. ಮರ, ಗಿಡ ಮುಂತಾದುವುಗಳ ತಾಳು,- ಕಾಂಡ: ಕಲಂಬ= ೧. ಬಾಣ. ೨. ದೇಂಟು (ಗಂಗಾಮು. ೬೪). ೨. ತೊಟ್ಟು; ವೃಂತ; ದಂಟು; ತುಂಬು: ಅದರ ಎಲೆಗಳು . . . ದೇಂಟಿನ ಬುಡದಿಂದ ತುದಿಯ ತನಕ ಎರಡೆರಡರಂತೆ ಸಾಲುಗೊಂಡಿರುತ್ತವೆ (ಮುಂಬಯಿ. ೪-೫೪). **ದೇಟು:** ೨. ವೃಂತ = ಕಾವು, ದೇಟು, ತುಂಬು, (ಗಂಗಾಮು. ೨೯೫); ಗೀತೆ ಕಲ್ಪತರುವಿನ ಒಂದು ಮೊಳಕೆಯೆಂದರೆ, ಜ್ಞಾನ, ಕರ್ಮಗಳು ಅದರ ಎರಡು ಎಲೆಗಳು, ಅದಕ್ಕೆ ಭಕ್ತಿಯೇ ದೇಟು (ಧರ್ಮಸಾ. ೧೧೮); ಎಲ್ಲಾ ಒಂದೇ ದೇಟಿನ ಮಾವುಗಳು ನಾವು ದೇವನ ದೇಟಿನ ಕಾಯಿಗಳು (ನನಲ್ಲ. ೧೩೨-೬); ಸರಳವಾಗಿ ಒಂದು ಹೂವಿನ ದೇಟಿನಂತೆ ಪುಷ್ಪಮಾಲೆಯು ಬೆಳೆದಿದ್ದಳು (ಸಮಜೀ. ೮೬೨): ಅಲ್ಲಿ ದೇಟಿಗೆ ಅಂಟಿಕೊಂಡು ತೆಪ್ಪಗಿನ ಕಳ್ಳನಂತೆ ನುಸುಳುತ್ತಿರುವ ಆ ಹಸಿರು ಕೀಟವನ್ನು ಕಂಡಿರಾ? (ಗಾಳಿಪ. ೦೧೭).
[ ದೇ.?೩ ./ ಮರಾ. ದೇಂಟ್, ದೇಟ್ ]

**ದೇಕಗಾವುಂಡ** (ನಾ). ಒಬ್ಬಾತನ ಹೆಸರು: ತನ್ನ ತಮ್ಮಂ ದೇಕಗಾವುಣ್ಡಂ ಮಾಡಿಸಿದ ಶಿವಾಲಯ (ಎಕ. VII, ಶಿಕಾರಿ. ೨೦-೦೨; 1082).
[ ದೇಕ$_6$ + ಗಾವುಂಡ (<ಗಾಮುಂಡ) ]

**ದೇಕಬ್ಬೆ** (ನಾ). ಒಬ್ಬಾಕೆಯ ಹೆಸರು: ಪೊನ್ನಬ್ಬೆಗಂ ರವಿಗಂಗಂ ಪುಟ್ಟಿದ ದೇಕಬ್ಬೆಯರಂ . . . ಏಚಂಗೀಯೆ (ಎಕ. IV, ಹೆಗ್ಗಡ. ೧೮-೧೭; 1057).
[ ದೇಕ$_6$ + ಅಬ್ಬೆ$_1$ ]

**ದೇಕಾರ** (ನಾ). ದಾನವಾಗಿ ದೊರೆತುದು: ಆಚಾರ್ಯರೇ ದಕ್ಷಿಣೆ, ದೇಕಾರಗಳು ಕೂಡಿ ತಲೆಗೆ ಎಷ್ಟೆಷ್ಟು ಸಿಕ್ಕಿತು? (ನಲದ. ೫೩).
[ ←ಮರಾ. ದೇಕಾರ್ ]

**ದೇಕು,** ಡೀಕು, ಡೇಕು, ತೀಕು, ದೇಗು, ದೋಕು (ಕ್ರಿ). ೧. ತಗ್ಗಿ ಮುಂದುವರಿ; ಕುಳಿತುಕೊಂಡು ಜರುಗು,-ಸರಿ: ಗುಡಿಯೊಳಕ್ಕೆ ದೇಕಿಕೊಂಡು ಬರಬಹುದಾಗಿತ್ತು (ಗಲಿಪ್ರ. ೧೩). ೨. ಕಷ್ಟಪಡು; ಏಗು; ಹೆಣಗು: ಮ್ಯಾಲೀನ ಓಣೇಯ ಮೂಗ ಸಂಪಗಿ ಹೆಣ್ಣ ದೇಕೂದ ಬಂತ ನಿನಗಾಗಿ (ಕನ್ನಜಾ. ೧೧೮); ನಾನು ಹೊರಗೆ ದುಡೀತಾ ಇದೇನೆ, ನೀನು ಒಳಗೆ ದೇಕುತಾ ಇದೀಯೆ (ಬೆಳುಮು. ೪೧). ೩. (ಗೋಲಿಯಾಟದಲ್ಲಿ ಸೋತವನು) ಕೈಯ ಗಿಣ್ಣಿನಿಂದ ಗೋಲಿಯನ್ನು ಮುಂದಕ್ಕೆ ನೂಕು,- ತಳ್ಳು: ಗೋಲಿಯಾಟ ಆಡಿ ಸೋತರೂ ಕೂಡ ದೇಕದೆ ಹೋಗುವ ಭಂಡರೂ ಇದ್ದಾರೆ (ರೂಢಿ). **ಡೀಕು:** ೨. ಬರಿಯ ಒಂದು ವಿಷಯದಲ್ಲಿ ಸ್ವಲ್ಪ ಗುಣ ಕಡಿಮೆ ಬಿದ್ದು ನಪಾಸಾಗಬೇಕು; ಅದಕ್ಕಾಗಿ ಮತ್ತೆ ಆರು ತಿಂಗಳಾದರೂ ಡೀಕುವುದೆ? (ಭೂಮಿತಾ. ೧೧). ೩. ವೆಂಕಟೇಶ ನನ್ನು ಸೋಲಿಸಿ ಡೀಕಲಿಕ್ಕೆ ಹಚ್ಚಿದ್ದಾಗ್ಗ ಅವನ ಕೈತೊಗಲೆಲ್ಲ ಸುಲಿದು ಬಿಡುತ್ತಿತ್ತು (ಫಲಸಂ. ೨೭). **ಡೇಕು:** ೨. ಅವರೆಲ್ಲ ಗಾಣದೆತ್ತಿನಂತೆ ಬೆಳಗಿನಿಂದ ಸಂಜೆಯವರೆಗೆ 'ಡೇಕು'ತ್ತಿರುವಾಗ ತಾನು ಹಾಯಾಗಿ ಕೈಚಲ್ಲಿ ಕುಳಿತುಕೊಂಡಿರಬೇಕೆ? (ಕರಿಹಾ. ೨೪). **ತೀಕು:** ೩. ಗೋಲಿಯಾಟದಲ್ಲಿ ಸೋತು, ತೀಕಿ ಮುಂಗೈಯನ್ನೆಲ್ಲಾ ಗಾಯ ಮಾಡಿಕೊಂಡಿದ್ದನು (ರೂಢಿ). **ದೇಗು:** ೧. ಸರಸ್ವತಿ ಬಹಳ ಪ್ರಯಾಸದಿಂದಲೇ ದೇಗಿಕೊಂಡು ಬಂದು ಅವನನ್ನು ಸಮಾಪಿಸಿದಳು (ಹೇಮುಕೂ. ೪೭). **ದೋಕು:** ೩. ದೋಕು ಬಾಮ್ಮ ಅನಂದು . . . ದೋಕೋಕ್ಕೆ ಹೆದರುತ್ತೇನೇನೋ? (ನಡದಾ. I, ೫೨೨). ೪. ಹುಲ್ಲನ್ನು ಕೆತ್ತು. 'ಏಗು$_1$', 'ಡೋಕರಿ' ಪರಾ.
[ ದೇ.೩ ತುಳು. ದೋಗು; ತೆಲು. ದೇಂಕು, ಡೇಂಕು ]

**ದೇಕ್ಷಿ** (ನಾ). ಅಡುಗೆಗೆ ಉಪಯೋಗಿಸುವ ಒಂದು ಬಗೆಯ ದೊಡ್ಡ ಪಾತ್ರೆ: ಹಿಡಿಪಾತ್ರೆಗಳು, ತಟ್ಟೆಗಳು, ಡಬ್ಬಗಳು, ಡಬರಿಗಳು, ದೇಕ್ಷಿಗಳು, ಹಾಲಿನ ಪಾತ್ರೆಗಳು ಮೊದಲಾದುವನ್ನು ಅಲ್ಯುಮಿನಿಯಂನಿಂದ ಮಾಡಲಾಗುತ್ತದೆ (ಗೃಹವಿ. ೦೭೬).
[ ← ಪಾರ. ಹಿಂ. ದೇಗಚೀ, ದೇಗಚಾ; ಮರಾ. ದೇಖಚಾ, ದೇಗಚಾ ]

**ದೇಖಣೆ** (ನಾ). ಪ್ರದರ್ಶನ: ಅದರಲ್ಲಿ ಸಾಕಷ್ಟನ್ನು ಮಾರಿಯೂ ಮಾರುತ್ತಾರೆ. ಆದರೆ ದೇಖಣೆಗೆ ಇರಿಸುವುದಿಲ್ಲ (ಸ್ವಪ್ನಹೊ. ೪೭).
[ ←ಮರಾ. ದೇಖಣೇ = ನೋಡು ]

**ದೇಖರಖಿ** 'ದೇಖರೇಖಿ' ನೋ.

**ದೇಖರೇಖಿ,** ದೇಖರಖಿ (ನಾ). ಮೇಲ್ವಿಚಾರಣೆ; ಉಸ್ತುವಾರಿ; ನೋಡಿಕೊಳ್ಳುವುದು; ರಕ್ಷಣೆ: ಗ್ಯಾಂಗ ಮುಖ್ಯರು ತಮ್ಮ ಗ್ಯಾಂಗಿನ ದೇಖರೇಖಿ ಮಾಡುತ್ತ ಓಡಾಡಹತ್ತಿದರು (ಅನ್ನ. ೨೦೩); ನಿನ್ನ 'ದೇಖರೇಖಿ ಯಿದ್ದರೆ ಸಾಕು' ಎಂದು ಗಣಪೂನನ್ನು ಕಳಿಸಿದರು (ಮೂರುದಾ. ೭೦); ಅವರ ಹುಣಸೀಗಿಡದ ಹೊಲದಾಗ . . . ಅಷ್ಟು ದೇಖರೇಖಿ ಮಾಡಬೇಕಾಗೇದ (ತಿರುಗು. ೪೦). **ದೇಖರಖಿ:** ಅದೆಲ್ಲದರ ದೇಖರಖಿ ರಾಜಪ್ಪನ ಕಡೆಗಿತ್ತು (ದೀಪಹ. II, ೮). [ ←ಹಿಂ. ಮರಾ. ದೇಖರೇಖ್ ]

**ದೇಖಾವಳಿ** (ನಾ). = ದೇಖರೇಖಿ : ಅಸ್ಮಿಪಾಸ್ತಿಯು ದೇಖಾವಳಿ (ಅರೈಕೆ) ನಡೆಯದಿರುವುದನ್ನು ಕಂಡು ಪದ್ಮನಾಭಭಟ್ಟರಿಗೆ ಬಲು ದುಗುಡವಾಯಿತು (ಭ್ರಾಂತಿಸು. ೮೭). [ ←ಹಿಂ. ದೇಖಾಭಾಲಿ, ದೇಖಭಾಲ್ ]

**ದೇಖಾವೆ** (ನಾ). ನೋಡತಕ್ಕದ್ದು ; ದೃಶ್ಯ ; (ನಾಟಕ, ಸಿನಿಮಾ ಮೊದಲಾದ) ಪ್ರದರ್ಶನ : ನಿಮ್ಮ ದೇಖಾವೆಯೇ ಅಲ್ಲಿಯ ದೊಡ್ಡ ಆಕರ್ಷಣೆ (ಕೈಲಾಸ. ೪೦) ; ಲಂಡನಿನಲ್ಲಿ ಆದಿತ್ಯವಾರ ಸಿನಿಮಾ ದೇಖಾವೆಗಳೂ ಇರುವುದಿಲ್ಲ (ಅಪೂಪ. ೪೧) ; ಒಂದೊಂದರೆ ತಾಸಿನ ಈ ದೇಖಾವೆಯಲ್ಲಿ ಅರುವತ್ತು ಎಪ್ಪತ್ತು ಮಂದಿ ನಟರು ಬಂದು ಯುಗಾಂತರ ಭಾರತದ ಒಂದು ದೃಶ್ಯವನ್ನು ತೋರಿಸಿದರು (ಹುಮುಖ. ೩೦೯).
[ ←ಹಿಂ. ದೇಖಾವ್ ; ಮರಾ. ದೇಖಾವಾ ]

**ದೇಖೀಲು** (ಅ). ಎಲ್ಲಾ ಸೇರಿ ; ಒಟ್ಟಿನಲ್ಲಿ ; ಕೂಡಿ : ಬಿಡಾರದಲ್ಲಂತೂ ಆಳುಕಾಳು ದೇಖೀಲು ಇಪ್ಪತ್ತು ಜನಗಳ ಮೇಲೆ ಭೋಜನಕ್ಕೆ ಸೇರುತ್ತಿದ್ದರು (ಕಲನೆ. ೨೩೨). [ ←ಮರಾ. ದೇಖೀಲ್ ]

**ದೇಗು** 'ದೇಕು' ನೋ.

**ದೇಗುಲ, ದೇವಳ**$_1$, **ದೇವುಲ** (ನಾ). ೧. ಗುಡಿ ; ದೇವಸ್ಥಾನ ; ದೇವಾಲಯ : "ದೇಗುಲಂಗಳನೆ ಆಯತ(ನ)ವೆಂಬುದು" (ಹಲಾಯು. ೪೯-೦೩೪) ; ಗಾವುಂಡಸ್ವಾಮಿಗಳ ಮಗನನ್ನಾಗವ್ಮಯ್ಯ ಕಲ್ಲ ದೇಗುಲ ಮಾಪ್ಪಾಡಿಸಿದಡೆ ಸಲಿಸಲೆನ್ನು ಕೊಟ್ಟು ಮಣ್ಣು ಒಕ್ಕಣ್ಣಾಗ (ಎಕ. III, ಮಂಡ್ಯ. ೦೩-೯ ; 896) ; ನಿಜರಾಜರಾಜಧಾನಿ ಮೆಟುವಿಡುವಿನೊಳಿನ್ದ್ರ ವಿಮಾನಸಮಾನಮಪ್ಪ [ದೇಗು]ಲಮಂ ಮಾಡಿ (ಸೌಇಇ. XI-i, ೨೨-೯ ; 897) ; ಗೋವರಣ್ಣೆ ಬರೆ ಪಾಯಿಸಿ ಘೋಟಯಿಲರ್ ತಗುಳ್ದು ತತ್ತಟ ತಟಿದಿಕ್ಕಿ ದೇಗುಲಕೆ ಪೆರ್ಮರನಂ ಕಡಿವಂತೆ ಮಾಡಿದರ್ (ಪಂಪಭಾ. ೮-೯೩ ವ) ; ಸಾವಾಗ ದೇಹವ ದೇಗುಲಕ್ಕೊಯ್ಯೆಂಬ ದೇವರಿಗೆ ಹಣ ಬಿಟ್ಟು ಹೇಳಿತ್ತೆ (ಬಸವ. ೨೨೨) ; ವಸುಧೆಯೊಳು ಪೊಡವಮಡಲು ದೇಗುಲಂ ಬಿರ್ದ ನುಡಿ ಪಸರಿಸುವ ನಾಡಗಾದೆಯ ತೆಜದಿ ನಿಮ್ಮ ಸೇವಿಸ ಬಂದು ನಮಗಾಯ್ತು ನರಕವು (ಸಿದ್ಧರಾ. ೧-೨೭) ; ಒಳಗಿದ್ದ ದೇವನ ಕಾಣದೆ ಹೊರಗೆ ದೇಗುಲವ ಪೂಜಿಸುವೆಗ್ಗನಂತೆ (ಭರತ. ೨-೩೩). ೨. ಹಾಳು ಬಿದ್ದ ಜಾಗ ; ಪಾಳುಮನೆ : ಬಡವಾದಿರರಸ ಕಾಲೊಳ್ ನಡೆದಪರೊಡ ನಾಳುಮಿಲ್ಲ ಕಡಲೆಗಳೇಂ ನಿಮ್ಮುಡಿಯೊಳಗೆ ಪಡುವ ದೇಗುಲದೆಡೆ ಯಾವುದು ಕುಡದ ನಿಮಗಮಿಾಯೆಡಬುವಾಯ್ತೆ (ಶಮದ. ೧೦೨ ಪ್ರಯೋ). **ದೇವಳ**$_1$ : ೧. ನನ್ನ ಜೀವನಾವಸ್ಥೆಯ ವಿಚಾರದಲ್ಲಿಯೂ ಹೀಗೆನೆ! ದೇವಳದ ಪೂಜೆಭಟ್ಟನಾಗಿದ್ದೆನೆಂದು, ಹರಿಕತೆಯ ಹರಿದಾಸನಾಗಿದ್ದೆನೆಂದು ಏನೆಲ್ಲ ಹೇಳುತ್ತಿದ್ದಾರೆ (ರೂಪಸಂ. ೩೯) ; ಸ್ಥಾನಿಕರಿಗೆ ಅನಾದಿಯಲ್ಲಿ ದೇವಳದ ಅರ್ಚಕತನವಿತ್ತು (ತುಳುನಾ. ೧೦೭). **ದೇವುಲ** : ೧. ಚ(೦)ಮ್ಮಯ ನಾಯಕ × × × ಯಂ ದೇವುಲದ ತನ್ನ ಪೂಜೆ ವೃತ್ತಿಯೊ × × × (ಸೌಇಇ. XI-ii, ೦೯೭-೭ ; 1121).
[ <ಸಂ. ದೇವಕುಲ./ಪ್ರಾ. ದೇಉಲ./ಮರಾ. ದೇಉಳ, ದೇವಳ ]

**ದೇಗುಲಕಾಟಿ** (ನಾ). ೧. ದೇವರ ಪೂಜೆ ಮಾಡುವ ಅರ್ಚಕ. ೨. ದೇವಸ್ಥಾನದ ಪಾರುಪತ್ತೆಗಾರ, – ರಕ್ಷಕ : ಆ ದೇಗುಲಕಾಟಿ ರಚಿಯುದಂದದಿನೆಯ್ದಿಯಾ ದೇವಿಯು ಬೆಂಗಡೆಯೊಳು ಭೇದಿಸದಂದದೊಳ ಡಗಿರ್ದ (ಪ್ರಭುಂಜ. ೪-೩೦). [ ದೇಗುಲ + – ಕಾಟಿ ]

**ದೇಗುಲದೋಂಟ** (ನಾ). ಹೂವು, ತುಳಸಿ, ಬಿಲ್ವ ಮೊದಲಾದುವನ್ನು ಬೆಳೆಸುವ, ದೇವಸ್ಥಾನಕ್ಕೆ ಸೇರಿದ ಉದ್ಯಾನ : ದೇಗುಲದೋಣ್ಟಂ ಪ × × ವೆ ನೂಱು ಬತ್ತದ ಮಣ್ಣು ಯಾಱುಪಸುವಂ ಮಾದೇವಗ್ಗ್ಗ ಮಾಪಳ್ಳಿ ಗೊಣ್ಡದೇವಗಂ ನನ್ದಾವೆಳಕಿಜ್ಗಿ ಕೊಟ್ಟಂ (ಎಕ. IV, ಗುಂಡ್ಲುಪೇ. ೯೩-೨೩ ; 1049). [ ದೇಗುಲ + ತೋಂಟ ]

**ದೇಗುಲವಜೆ**$^1$ (ನಾ). ದೇವಾಲಯಗಳಲ್ಲಿ ಬಾರಿಸುವ ತಮಟೆ, ನಗಾರಿ ಮುಂತಾದ ಚರ್ಮವಾದ್ಯ : ಸನ್ನೆಯ ಘಂಟಾರವ ದೇಗುಲವಜೆ ರನ್ನಘಟದ ನಿರ್ಮಲಾಂಬು (ಶ್ರೀಪಾಲ. ೧೦-೫೪) ; ದೇಗುಲವಜೆಯ ಧ್ವನಿಗಳುಜೆ ಪೆರ್ಚಿದುವು (ಜಿಬಪು. ೫-೨೦) ; ಮೊಳಗಿದುವಲ್ಲಲ್ಲಿ ದೇಗುಲ ವಜೆಗಳು (ಶಂನವಿ. ೯-೦೭೭). [ ದೇಗುಲ + ವಜೆ$^1_1$ ]

**ದೇಗುಲಿಗ** (ನಾ). ದೇವಸ್ಥಾನದ ಸೇವಕ, – ಪರಿಚಾರಕ : ಆಚರಣಕ್ಕೆ – ದೇಗುಲಿಗಂ, ಅಕ್ಕರಿಗಂ, ಚಂದಸಿಗಂ (ಶಮದ. ೦೯೭ ಪ್ರಯೋ).
[ ದೇಗುಲ + – ಇಗ./ಪ್ರಾ. ದೇಉಲಿಅ ]

**ದೇಚಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ದೇಚಯ್ಯ (ಎಕ. II, ೪೭೦-೦ ; 1060). [ ದೇಚ$_0$ + ಅಯ್ಯ$_1$ ]

**ದೇಟಿ** (ನಾ). ಒಂದು ಬಗೆಯ ವೀಳೆಯದೆಲೆಯ ಬಳ್ಳಿ ; ಕಾಡು ವೀಳೆಯದೆಲೆಯ ಬಳ್ಳಿ : ಕಾನಡಾ ಜಿಲ್ಲೆಯಲ್ಲಿ ದೇಟೀಯೆಲೆಯ ಬಳ್ಳಿಗಳು ಅಡವಿಯಲ್ಲಿ ತಮಗೆ ತಾವೇ ಬೆಳೆದು ಕೊಳೆತು ಕೆಡುತ್ತಿರುತ್ತವೆ (ಕಭಾಗ. ೨೭೭). [ ←ಮರಾ. ದೇಂಟೀ, ದೇಂಠೀ ]

**ದೇಟು** 'ದೇಂಟು' ನೋ.

**ದೇಡ** (ನಾ). ನೇಕಾರ; ನೆಯ್ಗೆಯವನು: ಬಡಗಿ ೧ ಕಂಪಾಱ ೧ ಸಂಮಗಾಱ ೧ ಅಸಗ ೧ ದೇಡ ಮಗ್ಗ × × ಪ್ಪಿನಿತೆ ಗಾವಲಿ ೨ . . . ಧಾರಾಪೂರ್ವ್ವಕಂ ಮಾಡಿಕೊಟ್ಟರು (ಸೌಇಇ. XX, ೦೭೮-೪೭ ; 1192) ಬಡಗಿ ಕಂಮ್ಮಾಱ ಅಕ್ಕಸಾಲೆ ಅಸಗ ಸಂಮ್ಮಗಾಱ ದೇಡ ಹೊಲೆಯರ ಕೂಡೆವೊಳಗಾಗಿ ಪುರದ ಬೀರವಣವಂ ಬಿಟ್ಟರು (ಸೌಇಇ. XX, ೨೯೯-೬ ; 12ನೆಯ ಶತ); ಅಸಗ ಸಂಮ್ಮಗಾಱ ದೇಡ ಹೊಲೆಯರ ಕೂಂಟೆ (ಬೊಂಕಶಾ. ೦೯೩೭, ಸಿಂದಗಿ. ೩೯-೭ ; ?). [ <ಜೇಡ ]

**ದೇಡಸೀರೆ** (ನಾ). ಒಂದು ಬಗೆಯ ಸೀರೆ : ಸೀರೆಗೆ ಪಾಗ ೧ ಮೊಟ್ಟೆಯ ಸೀರೆಗೆ ಪೊಂಗೆ ಪಣ ೧ ದೇಡಸೀರೆಗೆ ಪೊಂಗೆ ಪಣ ೧ (ನಾಂದೇಡ್. ೩-೨೨ ; 1047). [ ದೇಡ + ಸೀರೆ$_2$ ]

**ದೇಣಾಲೇಣ** (ನಾ). ಹಣಕಾಸುಗಳನ್ನು ಬಡ್ಡಿಗೆ ಕೊಡುವುದು ಮತ್ತು ತೆಗೆದುಕೊಳ್ಳುವುದ : ಲೇವಾದೇವಿ ವ್ಯವಹಾರ : (?).
[ ←ಹಿಂ. ದೇನಲೇನಾ ; ಮರಾ. ದೇನ್‌ಲೇನ್ ]

**ದೇಣಿಗೆ** (ನಾ). ೧. ಕೊಡುಗೆ; ದಾನ; ದತ್ತಿ: ನಮ್ಮ ಭೌತಿಕ ನಾಗರಿಕತೆಯು ಇಂದಿನ ಉನ್ನತದೆಸೆ ಕೇವಲ ವಿಜ್ಞಾನದ ದೇಣಿಗೆಯಾಗಿದೆ (ನಿರಶಾ. ೧) ; ನಿನ್ನಿಂದ ಯಾವುದಾದರೊಂದು ದೇಣಿಗೆಯನ್ನು ದೊರಕಿಸುವದಕ್ಕಾಗಿಯಾಗಲಿ . . . ಛತ್ರಸಾಲನು ನಿನ್ನ ದರ್ಬಾರಕ್ಕೆ ಬಂದಿರುವುದಿಲ್ಲ (ಧಾರ್ಮಿಕೇ. ೨೪೭) ; ಮನುಷ್ಯರು ಎಷ್ಟು ಕೊಟ್ಟರೂ ಸಾಲದು. ದೇವರ ದೇಣಿಗೆ ಮಾತ್ರ ಅಖಂಡವಾಗಿರುತ್ತದೆ (ಸ್ಮೃತಿಚಿ. ೧೦). ೨. ಅನುಗ್ರಹ ; ವರ: ಜಗತ್ತಿನಲ್ಲಿ ಕಲೆಯಷ್ಟು ಪವಿತ್ರವಾದದ್ದು ಬೇರೆ ಯಾವುದೂ ಇಲ್ಲ. ಇಂಥ ಪೂಜನೀಯ ದೇಣಿಗೆಯನ್ನು ಪಡೆದವರು ನಿಜಕ್ಕೂ ಧನ್ಯರು (ಗಂಗಾವ. ೦೩೯). [ ←ಮರಾ. ದೇಣಗೀ , ದೇನಗೀ ]

**ದೇಣೆ** (ನಾ). ೧. ಸಾಲ ; ಋಣ : ಶಿವಿಲ್‌ಕೋರ್ಟಿನವರು ದೇಣೆಗಾರನ ದೇಣೆಗೋಸ್ಕರ ಹಕ್ಕು ಬಾಧ್ಯತೆಯನ್ನು ಹರಾಜು ಮಾಡಿದರೆ (ಗ್ರಾಮಾಕ. ೭೯). ೨. ಕೊಡಬೇಕಾದ ಹಣ : ಬೊಂಬಾಯಿಯವರೆಷ್ಟೋ ಮಂದಿ ಕಾಗದ ಬರೆಯುತ್ತಿದ್ದಾರೆ, ಮೂರುಸಾವಿರ ದೇಣೆ ಕೊಡುತ್ತಾರೆಂದು ಬರೆದಿದ್ದಾರೆ (ಸನ್ಯಾಸಿ. ೮೭). [ ←ಮರಾ. ದೇಣೇ ]

**ದೇಣೇದಾರ** (ನಾ). ಸಾಲವನ್ನು ತೆಗೆದುಕೊಂಡಿರುವವನು; ಸಾಲವನ್ನು ಹಿಂದಿರುಗಿಸಬೇಕಾಗಿರುವವನು: ಕೋರ್ಟಿನ ಡಿಕ್ರಿಯ ಅಮಲ್ಬಾರಿಯಲ್ಲಿ ಜಡ್ಜ್‌ಮೆಂಟ್ ದೇಣೇದಾರನು ದಸ್ತಗಿರಿ ಮಾಡಲ್ಪಡಲೂ ಕೂಡದು (ಗ್ರಾಮಾಕ. ೩೪). [ ದೇಣೆ + – ದಾರ$_4$ ]

**ದೇನಗವಳಿ** (ನಾ). ಒಂದಂ ಬಗೆಯಂ ಉತ್ತಮಂ ಜಾತಿಯಂ ಬತ್ತ: ಮಾಧವೇಶ್ವರ ದೇವರ ದೇವತಾಪೂಜೆಗೆ . . . ನೈವೇದ್ಯಕ್ಕೆ ದೇನಗವಳಿ ನೆಲ್ಲು ಬಳ್ಳ ೨ (ಸೌಇಇ. XV, ೨೪೧-೬೮ ; 1174).

[ ದೇನ$_0$ + ಕವಳ್$_2$ (<ಕಟವೆ) ]

**ದೇಯ$_1$** (ನಾ). ಶರೀರ ; ದೇಹ : ಭಂಮುನಾಯಗ ರಾಮನು ಹುಲಿಯ ಕಾದು ದೇಯ ಬಿಟ್ಟು ವಳಿಕಾ ಸ್ವಸ್ಥನಾದನು (ಎಕ. VI, ತರೀಕೆ. ೧೬-೬ ; 1193 ?); ದೇಯುದ ನೀಲದುಂಗುರದ ಕಾಂತಿಗಳಿಂ ಕರಿದಾಗಿ ಶೋಭೆಯುಂ ಬೀಯುದ ಪಾಣಿಶೋಣಮಣಿಕಂಕಣ ಸತ್ಕಿರಣಂಗಳಿಂದೆ ಕೆಂಪಾಯುತಮಾಗಿ ತೋಱಿದೊಡೆ ಮಾನಸದೊಳ್ ಪುದಿಯಲ್ಕೆ ಕೌತುಕಂ ಮಾಯುದ ಮಧ್ಯ ಮೆಂದಬಳೆ ಪಿಂದೆ ನೋಡಿದಳೊಂದು ಜಾವಮುಂ (ಬಾಧಪು. ೧೦-೧೩೪).

[ <ಸಂ. ದೇಹ ]

**ದೇಯ$_2$** (ಗು). ೧. ಕೊಡಬೇಕಾದ ; ದಾನ ಮಾಡಬೇಕಾದ. ೨. ಕೊಡುವ ; ದಾನಮಾಡುವ: ಸ್ವಸ್ಯ–ದೇಯುದ್ರವ್ಯದ, ಅತಿಸರ್ಗಃ–ಕೊಡುವುದು (ತತ್ತ್ವಪ್ರ. ೨೮೫). (ನಾ). ೩. ದಾನಕೊಡಬೇಕಾದ ಪದಾರ್ಥ.–ವಸ್ತು: ದಾನಲಕ್ಷಣಮಪ್ಪಡೆ ದಾತೃವೆಂದುಂ ದೇಯುವೆಂದುಂ ಪಾತ್ರಮೆಂದುಂ ತ್ರಿವಿಧಮಕ್ಕುಂ (ಚಾವುಂಪು. ೨೨೬) : ಇದೇ ದೇಯಂ ಮತ್ತದೇಯಂ ಬಗೆವೊಡಿದು ದಲೆಂಬೀ ವಿಚಾರಕ್ಕಣಂ ಸಲ್ಲದೆ . . . ಕೊಟ್ಟು ದಾರಿದ್ರ್ಯದ ಮಾತಿಲ್ಲೆಲ್ಲಿಯುಂ ಬಾಟ್ತಿಗಮಖಿಳಧರಾಚಕ್ರದೊಳ್ ತಾನೆನಿಪ್ಪಗ್ಗದ ಮಾತಂ ಮಾಡಿದಂ (ಚಂದ್ರಪು. ೬-೧೦೩). ೪. ದಾನವಾಗಿ ಕೊಟ್ಟುದು: ಪುರವರ್ಗ್ಗದ ಪನ್ನೆರಡು ಮನೆಯ ನೇಸಣಮುಮಂ ನೊನ್ದುಗಾಣಮುಮಂ ಬಿಟ್ಟರಿನ್ತೀ ದೇ[ಯು]ಮಂ ಮೇಲಾಳ್ಕೆಯರಸಿಂಗೆ (ಕಇ. V, ೬-೧೪ ; 1032 ?). 'ಅದೇಯ' ಪರಾ. [ ಸಂ. ]

**ದೇಯಾರ್ಥಿ** (ನಾ). ದಾನವನ್ನು ಬೇಡುವವನು ; ಯಾಚಕ ; ಭಿಕ್ಷಂಕ : ರಾಯನಂ ಕಾಣಲಾಗದೆ ಮಂತ್ರಿಯೆಡೆ ಸಾರ್ವ ದೇಯಾರ್ಥಿಪ್ಪೊಲು ನೀನು (ಮಂಳುಕ. ೦೪೪). [ ದೇಯ$_2$ + ಅರ್ಥಿ$_2$ ]

**ದೇಯಿ** (ನಾ). (ಕರಾ) ಹೆಣ್ಣುದೆವ್ವಗಳಲ್ಲಿ ಒಂದಂ : 'ದೈಯೊಂ' (ಗಳು) = ದೈವ (ಗಳು) ಎನ್ನುತ್ತಾರೆ. ಅವುಗಳಲ್ಲಿ ಗಂಡುಭೂತಗಳೂ . . . ಇವೆ. ಹೆಣ್ಣುಭೂತಗಳೂ (ಉದಾ :–ಉಳ್ಳಾಳ್ದಿ, ಜುಮಾದಿ, ಕಲ್ಲುರ್ಟಿ, ದೇಯಿ, ಬೈದ್ಯೆದಿ ಇತ್ಯಾದಿ) ಇವೆ (ತುಳುನಾ. ೨೫೧).

[ ←ತುಳು. ದೇಯಿ./ಪ್ರಾ. ದೇಈ./ಸಂ. ದೇವೀ ]

**ದೇಯಿಂಗೆಱೆ$^3$** (ನಾ). ಒಂದಂ ಸ್ಥಳದ ಹೆಸರು : ಇನ್ತೀ ದಣ್ಡದೊಳಂ . . . ಪುಟ್ಟಿದ ದ್ರವ್ಯಮುಮಂ ಕಳೆವುದ್ದಳೆಯ ಪಣಮುಂ ದೇಯಿಂಗೆಱೆ$^3$ಗೆ (ಎಇ. XX, ೬-೪೧ ; 1012). [ ದೇಯಿ + ಕೆಱೆ$^3$ ]

**ದೇಯಿಮಯ್ಯ** (ನಾ). ಒಬ್ಬಾತನ ಹೆಸರು : ದಾತಾರಂ ದೇಯಿಮಯ್ಯ ಸೆಟ್ಟಿಯರ × ಗಂ ಮುಟ್ಟಿಂ ನಲ್ಲಯ್ಯನುಂ . . . ತಿಱ್ದಿ ಪೇಳೆ (ಸೌಇಇ. XX, ೧೯-೬೯ ; 1015). [ ದೇಯಿ + ಅಮು (<ಅಮ್ಮ$_1$) + ಅಯ್ಯ$_1$ ]

**ದೇವ** (ಗು). ೧. ದೇವಲೋಕಕ್ಕೆ ಸೇರಿದ. 'ದೇವನದಿ' ಪರಾ. ೨. ಪ್ರಕಾಶಿಸುವ. (ನಾ). ೩. ದೇವಲೋಕದಲ್ಲಿ ವಾಸಿಸುವವನು ; ಸ್ವರ್ಗಲೋಕವಾಸಿ ; ದೇವತೆ ; ದಿವಿಜ : "ದಿವಮೆಂದಿಂತಿದು ತಾನಮರ್ತ್ಯಭವನಂ ತದುದ್ಭವ [ರ್ಕಳ್] ದಿವೌಕಸರ್ ದೇವರ್ಕಳ್ . . . ತ್ರಿದಶರ್" (ವಸ್ತುಕೋ. ೬-೩೦) ; "ಆದಿತ್ಯಃ, ತ್ರಿದಶಃ, ಸುರಃ . . . ದೈವತಂ–ಈ ೨೧ ದೇವರ್ಕಳ ಪೆಸರ್" (ಹಲಾಯು. ೨-೪) ; ದೇವರ ಪಱೆಗಳ ರವದೊಳ್ ದೇವರ ಸುರಿವರಲ ಸರಿಯ ಬೆಳ್ಸರಿಯೊಳ್ ತದ್ದೇವವಿಮಾನಾವಳಿಯೊಳ್ ತೀವಿದುದೊರ್ಮೊದಲೆ ಗಗನದಿಂ ಧರೆ ಮಧ್ಯಂ (ಪಂಪಭಾ. ೧-೧೪೭) ; ಜೀವಾತ್ಮರುಗಳಿಗೆ ಅವರವರ ಕರ್ಮಾಧೀನವಾಗಿ ಬರುವ ದೇಹವನ್ನು ದೇವ ಮನುಷ್ಯ ತಿರ್ಯಕ್ ಸ್ಥಾವರವೆಂದು . . . ವಿಭಾಗಮಾಡಿರುತ್ತಾರೆ (ಹಿಂದಸಾ. ೧೪). ೪. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾದವನು ; ಪರಮಾತ್ಮ ; ಭಗವಂತ ; ಪರಬ್ರಹ್ಮ : ಜೀವನುಮಶುದ್ಧನು ದೇವನತಿಶುದ್ಧನು (ಬಸಪು. ೫೧-೨೯) ; ದೇವ ಬಂದ ನಮ್ಮ ಸ್ವಾಮಿ ಬಂದನೋ (ಪುರಂದ. ೧-೪೮ ಪಲ್ಲವಿ) ; ದೇವನಾರೆಂದೆನಲು ಬುದ್ಧಿಯ ಭಾವದಲಿ ಭಾವವನಱಿವ ಸದ್ಭಾವರೂಪನು ಸಾಕ್ಷಿಯಾತನೆ ದೇವನೆನಿಸುವನು (ಅಮೃತ. ೩-೧೪೭) ; ಆ ದೇವ ಈ ದೇವ ಮಾದೇವನೆನವೇಡ ಆ ದೇವರ ದೇವ ಭುವನದ ಪ್ರಾಣಿಗಳಿಗಾದವನೆ ದೇವ (ಸರ್ವಜ್ಞ. ೧೯೦) ; ಇಬ್ಬನಿಯಲಿ ಸುಖಿಸುವ ಹೃದಯವೆ ದೇವಗೆ ಗುಡಿ (ಅನಿಕೇ. ೩೪-೩). ೫. ಬ್ರಹ್ಮ : "ಸರಸಿರುಹಭವಂ ಬ್ರಹ್ಮಂ ಹಿರಣ್ಯಗರ್ಭಂ ವಿಧಾತೃ ದೇವನಜಂ . . . ಚತುರಾಸ್ಯಂ" (ವಸ್ತುಕೋ. ೩-೦೧). ೬. ಗುರು, ದೊರೆ ಮುಂತಾದ ಹಿರಿಯರನ್ನು ಕುರಿತು ಸಂಬೋಧಿಸುವಾಗ ಬಳಸುವ ಗೌರವಸೂಚಕವಾದ ಮಾತು : ದೇವ ಬಿನ್ನಪ ಮಿಂದು ಖಾಂಡವಮಂ ಕೃಶಾನು ತಗುಳ್ದು ನಾನಾವಿಧಂ ಸುಡೆ . . . ದೇವರೆಂದಱಿದಿರ್ದಂ (ಪಂಪಭಾ. ೫-೯೪); ದೇವ ಪೆಱತಾವುದವ್ಯಕ್ತಾವಯವದೊಳಂ ಕುಮಾರಸನ್ನಿತಿಕೆಯನುದ್ಭಾವಿಸುತಿರ್ದಪ್ಪ[ದಂ ಪರಿ]ಭಾವಿಸು ನೀಂ ಚಕ್ರವರ್ತಿಚಿಹ್ನೋತ್ಕರಮಂ (ಕಾದಂಪೂ. ೪೧೯) ; ದೇವ ನಿಮಗಪ್ಪ ಪಿಶಿತಮನಾವೆಡೆಯೊಳಮಱಸಿ ಪಡೆದೆವಿಲ್ಲ (ಪಂಚತಂ. ೦೪೪-೨೧) ; ದೇವ ಕನಸಿದು ಕರಂ ದೋಷಾವಹಂ (ಯಕೋಹ. ೩-೦೩). ೭. ಪೂಜ್ಯ, ಮಹನೀಯ ಎಂಬರ್ಥದಲ್ಲಿ ಹೆಸರಿನ ಕೊನೆಯಲ್ಲಿ ಸೇರಿಸುವ ಮಾತು: "ಪಾದಃ, ದೇವಃ, ಭಟ್ಟಾರಕಃ – ಈ ಮೂಱುಂ ಪೆಸರ ಕಡೆಯೊಳ್ ಪೂಜಾವ[ಚ]ನಂ" (ಹಲಾಯು. ೨೫-೦೫೪) : "ಪೆಸರ್ ಕಡೆಯಾಗುನುಡಿ ದೇವಮಕ್ಕು" (ಮಂಗರಾ. ೨೭-೭). ೮. ವಿಹರಿಸುವವನು ; ಕ್ರೀಡಿಸುವವನು : ದೇವ ಎಂದರೆ ಕ್ರೀಡಾಮಯ ಎಂದು ಮತ್ತೊಂದು ಅರ್ಥ (ಭಾತತ್ತ್ವ. ೪೮೭). ೯. ದಡ್ಡ ; ಹೆಡ್ಡ. ೧೦. ಮಗು ; ಶಿಶು. ೧೧. [ಛಂದ] ಒಂದಂ ಅಕ್ಷರ ಗಣದ ಹೆಸರು; ನಗಣ (ᑌᑌᑌ): ನಗಣ . . . (ನಾಕ, ಇಂದ್ರನಿಲಯ, ದೇವ, ಇಂದ್ರ) (ಛಂದೋಂಬು. ೬, ೧೨). ೧೨. [ಜೈನ] ಲೋಕಾಂತಿಕ ದೇವತೆ : ದೇವರೊಳಂ ಗುರುಗಳೊಳಮಾಗಮದೊಳಂ ನೆಬುಗೆಯುಂ ನಲ್ಮೆಯುಂ ಭಕ್ತಿಯುಮನೂನಮಾಗೆ (ಸುಕುಮಾ. ೩-೪೭ ವ).

ದೇವಾಂದೇವ = ದೇವರ ದೇವ ; ದೇವಾಧಿದೇವ; ಪರಮೇಶ್ವರ: ಕಿಱಿಗ್ಗಣೇಶ್ವರದಾ ದೇವರು ಪರವರಿಯ ಭತ್ತಮುಂ ಕವಿಲೆಯ ಪಾಲುಂ ಎಟ್ಟಿಂ × × × ದೇವಾನ್ದೇವನ ಪರಿಜನಮಲ್ಲಾಡೆ ಪೆಱನೊರ್ವನಾರು ಮುಂಣಿನ್ದೊಮೆಣ್ಣುಕಂ ಇನ್ತುಣ್ಣೋರುಂ ಉಣಿಯ ಕೊಡುವೋನುಂ . . . ಪೂತಿ ಎನ್ವ ನರಗಕ್ಕೆ ಸಲ್ಗೆ (ಎಕ. VI, ಕೊಪ್ಪ. ೩೭-೪; ಸು. 675 ?).

[ ಸಂ. ]

**ದೇವಂಗೆಯ್$_1$** (ಕ್ರಿ). ದೇವತ್ವವನ್ನು ಆರೋಪಿಸು : ದೇವಂಗೆಯ್ವುದು ಕಲ್ಲ ಮಣ್ಣ ಪರಿಜಂ ಚಿಹ್ನಂಗಳಂ ಶೂನ್ಯಮಂ (ಸಂಸತ. ೩-೨).

[ ದೇವ + ಕೆಯ್$_1$ ]

**ದೇವಂಗೆಯ್$_2$** (ನಾ). ದೇವರಿಗೆ ಸೇರಿದ ಸಾಗುವಳಿ ಜಮೀನು : ತಂಕ ದೇವಂಗೆಯ್ಯ ಮೇರೆ (ಎಇ. VII, ೨೦೦-೦೧ ; 865).

[ ದೇವ + ಕೆಯ್$_4$ ]

**ದೇವಂಗೇರಿ** (ನಾ). ಒಂದು ಸ್ಥಳದ ಹೆಸರು : ಶ್ರೀಪುರದಾ ಬಡಗಣ ಪಡುವಣ ಕೋಣುಳ್ಳನ್ದೇವಂಗೇರಿ ಮದಮನೆ ಒಂದಂ (ಎಕ. IV, ನಾಗಮಂ. ೮೫-೬೯ ; 776). [ ದೇವ + ಕೇರಿ ]

**ದೇವಋಣ** (ನಾ). ದೇವ, ಋಷಿ ಮತ್ತು ಪಿತೃ ಎಂಬ ಋಣತ್ರಯದಲ್ಲಿ ಮೊದಲನೆಯದು ; ದೇವತೆಗಳು ತನಗೆ ಮಾಡಿರುವ ಉಪ

ಕಾರಕ್ಕಾಗಿ ಮನುಷ್ಯನು ಮಾಡಬೇಕಾದ ಕೃತಜ್ಞತೆಯ ಕಾರ್ಯ: ಪಿತೃಋಣ, ಗುರುಋಣ, ದೇವಋಣ ಇತ್ಯಾದಿ ಎಲ್ಲ ಋಣದ ಭಾರವನ್ನು ನಿವ್ವೊಬ್ಬರ ತಲೆಯ ಮೇಲೆ ಹೊರಿಸಬೇಕಾಗುತ್ತದೆ (ಹೊಸಕ್ಟ. ೨೫೨). [ ದೇವ + ಋಣ ]

**ದೇವಋಷಿ** (ನಾ). = ದೇವರ್ಷಿ ೧ : ಪರಸಮಯದ ದೇವಋಷಿ ಸಮೂಹಕ್ಕಂ ಪೆಂಡಿರು ಮಕ್ಕಳುಮೊಳರಾಯ್ತಾಪ್ಪರಿಕ್ಕೆ ಮುನಿಗಳ್ಗೆ ಸಲ್ಲ ಜಿನಶಾಸನದೊಳ್ (ಸಮಪ. ೮-೨೦೬); ದೇವವೃಂದವು ಬೆರಸಿ ನಾನಾದೇವ ಋಷಿಯರು ಕೂಡಿ ಭೂಮಿಾದೇವಿಯನು ಸಂತೈಸಿ (ಸಂಭಪ. ೬-೬೨). [ ದೇವ + ಋಷಿ ]

**ದೇವಕಂಟಕ** (ನಾ). ದೇವತೆಗಳಿಗೆ ಮುಳ್ಳಿನಂತಿರುವವನು; ದೇವತೆಗಳನ್ನು ಕಾಡುವವನು; ರಾಕ್ಷಸ: ದೇವ ಮಗನಸಲಿಂದ ಕಾದಲು ದೇವಕಂಟಕ ಬಂದ ಮೇಲಿನ್ನಾವುದುಚಿತವು ನೀವೆ ಬಲ್ಲಿರಿ ಕಾಳಗದ ಪರಿಯ (ಕೌಶಿರಾ. ೩೭-೨೩). [ ದೇವ + ಕಂಟಕ ]

**ದೇವಕಣಗಿಲೆ** 'ದೇವಗಣಗಿಲು' ನೋ.

**ದೇವಕಣಿಶ** (ನಾ). ಒಂದು ಬಗೆಯ ಸಸ್ಯ; ಪಚ್ಚೆತೆನೆ: "ದೇವಕಣಿಶಂ ಪಚ್ಚೆಯಕ್ಕು" (ಮಂಗರಾ. ೪೦-೩೦). [ ಸಂ. ]

**ದೇವಕನ್ನಿಕೆ** (ನಾ). ದೇವತಾಸ್ತ್ರೀ; ದೇವಕನ್ಯೆ: ಗವುಡನು ಸೋಮ ××× ತುಜುವ ಮರಳ್ಳಿಯರವಿ ××× ನು ದೇವಕಂನಿಕೆಯುರು (ಎಕ್. XVI, ಚಿಕ್ಕನಾ. ೧೦೦-೨ ; 1301). [ ದೇವ + ಕನ್ನಿಕೆ$_1$ ]

**ದೇವಕನ್ಯೆ** (ನಾ). = ದೇವಕನ್ನಿಕೆ: ದೇವಕನ್ಯೆಯ ಸಾಕ್ಷಾತ್ಕಾರಕ್ಕಾಗಿ ಹಂಬಲಿಸಿ ಹತಾಶನಾದ ರಾಜಪುತ್ರನ ಕಥೆಯೊಂದಿದೆ (ದೇಕನ್ಯೆ. ೦). [ ದೇವ+ಕನ್ಯೆ ]

**ದೇವಕಾಂಚನ** (ನಾ). ಒಂದು ಬಗೆಯ ಮರ; ಕೆಂಪು ಕಂಚಿವಾಳ. [ ಸಂ. ]

**ದೇವಕಾಂತೆ** (ನಾ). = ದೇವಕನ್ನಿಕೆ: ಚಂದ್ರಮಂಡಲಂಗಳನೆಳಮಿಂಚು ತಾಳ್ದಿದವೊಲಡ್ಡಣದೊಡ್ಡಣಮೆಡ್ಡಮಾಗೆ ಕಾವಳವಿಗೆ ಖಡ್ಗಧಾರಿಣಿಯ ರಾದರನಿಂದೆಗೆ ದೇವಕಾಂತೆಯರ್ (ಅನಂಪು. ೪-೫೦). [ ದೇವ + ಕಾಂತೆ ]

**ದೇವಕಾರ್ಯ** (ನಾ). ೧. ದೇವರ ಅನುಗ್ರಹವನ್ನು ಬಯಸಿ ಮಾಡುವ ವ್ರತೋಪವಾಸಗಳು ಮುಂತಾದ ಕಾರ್ಯ: ದೇವಕಾರ್ಯಕೆ ನೆರೆದು ನೆರೆಯೂರಿಂಗೆ ಪೋಪಂತೆ (ಬಸಪು. ೪೪-೬೨); ಮೊಸರುಹೆಡಿಗೆ ಶಿರದಲಿ ದೇವಕಾರ್ಯ ಮಿಾಸಲು (ಪುರಂದ. ೨-೨೦೪-೨); ಆತನಿಗೆ ಹಿಂದೂ ರಾಜ್ಯದ ಪುನರುದ್ಧಾರಕಾರ್ಯ, ದೇಶೋದ್ಧಾರಕಾರ್ಯ, ದೇವಕಾರ್ಯ ವಾಗಿತ್ತು (ಬಂಕಿಮ. ೧೮೫). ೨. ಕೆಲವು ಪಂಗಡಗಳಲ್ಲಿ ಮದುವೆಗೆ ಮುಂಚೆ ಮಾಡುವ ಕುಲದೇವತೆಯ ಪೂಜೆ: ಈಗ ದನಿಗಳಿಗೆ ಅವಕಾಶ ವಿಲ್ಲ, ದೇವಕಾರ್ಯ ನಡೆದಿದೆ (ಜಮಿಾನ್ದಾ. ೧೧). ೩. ಸಂಪ್ರದಾಯ ನಿಷ್ಠರ ಮನೆಗಳಲ್ಲಿ ವರ್ಷಂಪ್ರತಿ ಒಂದು ವಿಶಿಷ್ಟವಾದ ತಿಥಿಯಲ್ಲಿ ಆಯಾ ಮನೆದೇವತೆಯ ಪ್ರೀತ್ಯರ್ಥವಾಗಿ ನೆರವೇರಿಸುವ ಒಂದು ಪವಿತ್ರಕಾರ್ಯ. [ ದೇವ + ಕಾರ್ಯ ]

**ದೇವಕುಜ** (ನಾ). ದೇವಲೋಕದ ಮರ; ಕಲ್ಪವೃಕ್ಷ: ಇದು ದಲ್ ಚಂದ್ರಮನಲ್ತು . . . ತತ್ಕಂಠವಿಲಂಬಿ ದೇವಕುಜಪುಷ್ಪಸ್ರಗ್ರಜೋ ವಿಭ್ರಮಂ (ರಾಜಶೇ. ೧೩-೪೪). [ ದೇವ + ಕುಜ ]

**ದೇವಕುರು** (ನಾ). [ಜೈನ] ವಿದೇಹಕ್ಷೇತ್ರದಲ್ಲಿ ಮೇರುಪರ್ವತಕ್ಕೆ ದಕ್ಷಿಣದಲ್ಲಿರುವ ಒಂದು ಭೋಗಭೂಮಿ: ಕರುಮಾಡದೇಟನೆಯ ನೆಲೆಯೊಳಿರ್ದಲ್ಲಿ ಸಿಡಿಲ್ ಪೊಡೆಯೆ ಸತ್ತು ದೇವಕುರುವಿನೊಳ್ ಪುಟ್ಟಿದಂ (ಶಂರಾಮಾ. ೦೬-೪೨ ವ); ಪುರಂ ವಿರಾಜಿಪುದು ದೇವಕುರುಪ್ರತಿಮಾನ ಮೆಂಬಿನಂ (ಚಂದ್ರಪ್ರ. ೦೦-೬೨). [ ದೇವ + ಕುರು$_3$ ]

**ದೇವಕುಲ, ದೇವಕುಳ** (ನಾ). ೧. ದೇವಾಲಯ; ದೇವಸ್ಥಾನ: ಕುಲ ನಗಂಗಳೆನಿಪ ದೇವಕುಲದ ಭೋಗದಿಂ ಸರಾಗಮಾದ ರಾಗದಿಂ (ಪಂಪಭಾ. ೧-೩೮ ರಗಳೆ): ಅಮರಾಪಗಾಪಯಃಪೂರಮನಾಂತ ಹೈಮನಗದಂತಿರೆ ದೇವಕುಲಂಗಳೊಪ್ಪುಗುಂ (ಕಾದಂಪೂ. ೨೯೬); ಕೈತೊಳೆದು ದೇವಕುಲ ಕೈತಂದು ವಿಘ್ನಶಾಂತಿಯ ಬೇಳ್ದು (ಪಾರಿಸ. ೧೦-೨೦೮). ೨. ದೇವತೆಗಳ ಗುಂಪು,-ಸಮೂಹ: "ದೇವಕುಲಕೆ ಬಿಜ್ಜೋದರರುಮಚ್ಚರರುಮಕ್ಕು" (ಕಬ್ಬಿಕ್ಕ. ೧೦). ೧, ೨: ಧನದನಿವಾಸದಿಂ ಮಣಿಮಯೋಜ್ವಳದೇವ ಕುಲಂಗಳಿಂದೆ . . . ಪೌದನಪುರವೊಪ್ಪುತಿರ್ಪುದಮರಾವತಿಯಂತೆ (ಪಾರ್ಶ್ವಪು. ೧-೧೧೨). **ದೇವಕುಳ**: ೧. ದೇವಕುಳಂಗಳಿಂ [ವ] × ವಧೂ ಕುಳಹರ್ಮ್ಯಕೋಶತಂಗಳಿಂ ಮಹೀದೇವಗ್ರಹಂಗಳಿಂ ಧನಪತಿಪ್ರಭವೈಶ್ಯ ಕದಂಬಗೇಹದಿಂ (ಎಇ. XX, ೦೦೬-೨೯ ; 1167); ತಾರಕಪ್ರತತಿಗಳಾರಯ ಲ್ಕಡೆವ ದೇವಕುಳಂಗಳ . . . ತಟಾಕಚಯಂಗಳ ಪೆರ್ಮೆಯಿಂದ ಮೂರ್ಜಿತಮೆನಿಪಗ್ರಹಾರಮವು ವಿಷ್ಣುನೃಪಾಲಕನಿತ್ತ ದತ್ತಿಗಳ್ (ಎಕ್. VI, ತರೀಕೆ. ೪೫-೨೯ ; 1196). [ ದೇವ + ಕುಲ ]

**ದೇವಕುವರ, ದೇವಕೊಮಾರ** (ನಾ). ೧. ದೇವರ ಮಗ; ಏಸುಕ್ರಿಸ್ತ: ದಿವಕೀದು ದೇವಕುವರಂ ಮರಳಿ ಬಹನೆಂಬ ಗೆಲುವಿಂದ ದೇವದೂತರೆ ಬಾರಿಸುವರೊ ಮಂಗಲವಾದ್ಯವೆನಲು (ಗೊಲ್ಗೊಥಾ. ೦-೬). **ದೇವಕೊಮಾರ**: ೨. ಒಬ್ಬಾತನ ಹೆಸರು: ಶ್ರೀವರಮತಿಸಾಗರಪಣ್ಡಿತ ಭಟಾರರ ಬೆಸದೊಳಣ್ಣಯ್ಯನುಂ ದೇವಕೊಮಾರನುಂ ಧೋರನುಮಿಟ್ಟು (ಎಕ್. III, ಶ್ರೀರಂಗ. ೧೪೮-೧೧ : 904 ?). [ ದೇವ + ಕುವರ$_2$ ]

**ದೇವಕುಸುಮ** (ನಾ). ಲವಂಗ: "ಲವಿ ಲವಂಗಂ ದೇವಕುಸುಮಮೆನೆ" (ಮಂಗರಾ. ೪೩-೪೦); "ಲವಂಗಂ, ದೇವಕುಸುಮಂ, ಶ್ರೀಸಂಜ್ಞಂ-೩ ಲವಂಗದ ಹುವ್ವು, ಲವಂಗ" (ಸಿದ್ಧಾಂತಿ. ೧೭೯). [ ದೇವ + ಕುಸುಮ ]

**ದೇವಕುಳ** 'ದೇವಕುಲ' ನೋ.

**ದೇವಕೂಟ** (ನಾ). ೧. ದೇವಾಲಯ. ೨. ದೇವಸ್ಥಾನದ ಭೋಜನ ಶಾಲೆ. ೩. ದೇವಸ್ಥಾನದ ಭೋಜನಶಾಲೆಯ ಮೇಲ್ವಿಚಾರಣೆ: ಅಧಿಕಾರವುಳ್ಳ ಸಂಸ್ಥೆಗಳು:—ಊರು (ಊರವರು), ನಾಡು . . . ಸರ್ವಾತಿಥ್ಯಕುಟುಂಬ, ದೇವಕೂಟ, ಕ್ರಮುಕಾರಿಯ (ತುಳುನಾ. ೨೬೦). [ ದೇವ + ಕೂಟ$_1$ ]

**ದೇವಕೃಚ್ಛ್ರ** (ನಾ). ಒಂದು ಬಗೆಯ ಪ್ರಾಯಶ್ಚಿತ್ತ; ಹೆಚ್ಚಾದ ಕಾಯ ಕ್ಲೇಶದಿಂದ ನಿರ್ವಹಿಸಬೇಕಾದ ಒಂದು ಬಗೆಯ ತಪಸ್ಸು: ದೋಷಪರಿಹಾರಾರ್ಥಮಾಗಿ ಶರೀರಬಾಧಾತ್ಮಕತ್ವದಿಂ ಮಹತ್ಕಷ್ಟ ಸಾಧ್ಯಂಗಳಾದ ತಪ್ತಕೃಚ್ಛ್ರ ದೇವಕೃಚ್ಛ್ರ ಯಾವಕೃಛ್ರ ಮುಂತಾದುವುಗಳಂ ಪಕ್ಷ ಮಾಸಾದಿಕಂಗಳಲ್ಲಿ ಅನ್ನಮಂ ವರ್ಜಿಸಿ ತಗ್ಗಿಸಿಕೊಂಬುದು (ವಿವೇಕ. ೧೭೯). [ ಸಂ. ]

**ದೇವಕೃತ** (ನಾ). ೧. ದೇವರಿಂದ ಆದುದು; ಮನುಷ್ಯಶಕ್ತಿಗೆ ಅಸಾಧ್ಯವಾಗಿದ್ದು ಕೇವಲ ಅದೃಷ್ಟದಿಂದ ಒದಗಿಬರುವುದು. ೨. [ಜೈನ] ಮೂವತ್ತು ನಾಲ್ಕು ಅತಿಶಯಗಳಲ್ಲಿ ಒಂದು; ಜೈನರ ಪ್ರಕಾರ ೩೪ ಅತಿಶಯಗಳಿವೆ. ಇವು ತೀರ್ಥಂಕರನಿಗೆ ಉಂಟಾಗುವ ಅತಿಶಯಗಳು. ಇವುಗಳನ್ನು ಸ್ವಾಭಾವಿಕ ಅತಿಶಯಗಳು, ಕರ್ಮಕ್ಷಯಜ ಅತಿಶಯಗಳು ಮತ್ತು ದೇವಕೃತ ಅತಿಶಯಗಳೆಂದು ಮೂರು ವಿಭಾಗ ಮಾಡಿದ್ದಾರೆ. ಸ್ವಾಭಾವಿಕ ಅತಿಶಯಗಳು-ಸ್ವೇದರಹಿತತ್ವ, ನಿರ್ಮಲಶರೀರ, ಹಾಲಿನಂತೆ ಬಿಳಿಯ ರಕ್ತ, ವಜ್ರವೃಷಭನಾರಾಚಸಂಹನನ, ಸಮಚತುರಸ್ರ ಶರೀರಸಂಸ್ಥಾನ, ಅನುಪಮರೂಪ, ಅತ್ಯಧಿಕ ಸುಗಂಧತ್ವ, ೧೦೦೮ ಬಗೆಯ ಉತ್ತಮ ಲಕ್ಷಣಗಳನ್ನು ಹೊಂದಿರುವಿಕೆ, ಅತ್ಯಧಿಕ

ವಾದ ಬಲ ಮತ್ತು ಹಿತಮಿತವಾದ ಭಾಷಣ ಎಂಬ ಹತ್ತು ವಿಧಗಳು. ಕರ್ಮಕ್ಷಯಜ ಅತಿಶಯಗಳು–ತನ್ನ ಸುತ್ತಲೂ ನಾಲ್ಕು ದಿಕ್ಕುಗಳಲ್ಲಿ ನೂರುಯೋಜನಗಳವರೆಗೆ ಸುಭಿಕ್ಷತೆ, ಆಕಾಶಗಮನ, ಹಿಂಸೆಯ ಅಭಾವ, ಭೋಜನದ ಅಭಾವ, ಉಪಸರ್ಗಗಳ ಅಭಾವ, ನಾಲ್ಕೂ ಕಡೆಗೆ ಮುಖವಾಗಿರುವ ಸ್ಥಿತಿ, ನೆಳಲು ಬೀಳದಿರುವಿಕೆ, ಎವೆ ಬಡಿಯದಿರುವಿಕೆ (ನಿರ್ನಿಮೇಷ ದೃಷ್ಟಿ), ಸಮಸ್ತವಿದ್ಯೆಗಳಲ್ಲಿ ಪ್ರಭುತ್ವ, ನಖ ಹಾಗು ರೋಮಗಳು ಸಮಾನವಾಗಿರುವಿಕೆ ಮತ್ತು ಹದಿನೆಂಟು ಭಾಷೆಗಳಲ್ಲಿಯೂ ಏಳುನೂರು ಕ್ಷುದ್ರಭಾಷೆಗಳಲ್ಲಿಯೂ (ಏಕಕಾಲಕ್ಕೆ) ಹೊರಡುವ ದಿವ್ಯಧ್ವನಿ ಎಂಬ ಹನ್ನೊಂದು ವಿಧಗಳು. ದೇವಕೃತ ಅತಿಶಯಗಳು–ತೀರ್ಥಕರ ಮಹಿಮೆಯಿಂದ ಯೋಜನಗಳ ವರೆಗಿನ ವನಗಳಲ್ಲಿ ಎಲೆ, ಹೂ, ಹಣ್ಣುಗಳು ತುಂಬುವುದು, ಮುಳ್ಳು,ದೂಳು ಹೊರಟುಹೋಗಿ ಸುಖವಾದ ಗಾಳಿ ಬೀಸುವುದು, ಜೀವಗಳು ಪರಸ್ಪರ ವೈರಭಾವವನ್ನು ತ್ಯಜಿಸುವುದು, ಭೂಮಿ ಕನ್ನಡಿಯಂತೆ ಸ್ವಚ್ಛವೂ ರತ್ನಮಯವೂ ಆಗುವುದು, ಸೌಧ ರ್ಮೇಂದ್ರನ ಆಜ್ಞೆಯಿಂದ ಸುಗಂಧಜಲದ ವೃಷ್ಟಿ, ದೇವವಿಕ್ರಿಯೆ ಯಿಂದ ಸಸ್ಯಫಲಸಮೃದ್ಧಿ, ಎಲ್ಲ ಜೀವಗಳಿಗೂ ನಿತ್ಯ ಆನಂದ, ಶೀತಲವಾದ ಗಾಳಿ ಬೀಸುವಿಕೆ, ಬಾವಿ, ಕೆರೆ, ನದಿಗಳಲ್ಲಿ ನಿರ್ಮಲ ವಾದ ನೀರು ತುಂಬುವಿಕೆ, ಆಕಾಶ ನಿರ್ಮಲವಾಗುವಿಕೆ, ಎಲ್ಲ ಜೀವಗಳೂ ರೋಗರಹಿತರಾಗಿರುವಿಕೆ, ನಾಲ್ಕು ದಿವ್ಯ ಧರ್ಮ ಚಕ್ರಗಳ ದರ್ಶನ ಮತ್ತು ತೀರ್ಥಕರನ ನಾಲ್ಕೂ ಮಗ್ಗುಲುಗಳಿಗೆ ಸಕಲ ಪೂಜಾದ್ರವ್ಯಗಳುಂಟಾಗುವಿಕೆ ಎಂಬ ಹದಿಮೂರು ವಿಧಗಳು: ಸ್ವಾಭಾವಿಕ ಕರ್ಮಕ್ಷಯಜ ದೇವಕೃತಂಗಳೆಂಬ ಮೂವತ್ತುನಾಲ್ಕು ಮತಿಶಯಂಗಳೊಳೊಂದುಗುಂದದಿರೆಯುಂ (ಶಾಂತಿಪು. ೧೨–೧೪ ವ); ದೇವಕೃತಂಗಳುಮಂ ಸ್ವಾಭಾವಿಕಮುಮನಜಿತ ನೀನೆ ತಾಳ್ದಿದೆ (ಅಜಿಪು. ೮–೦೨). [ದೇವ + ಕೃತ]

**ದೇವಕೊಮಾರ** 'ದೇವಕುವರ' ನೋ.

**ದೇವಕ್ರಿಯೆ** (ನಾ). [ಸಂಗೀತ] ಒಂದು ರಾಗದ ಹೆಸರು: ದೇವಕ್ರಿಯೆ ತ್ರಿಣೇತ್ರಕ್ರಿಯೆ ಭೂತಾಳಕ್ರಿಯೆಯೆಂಬ ಮೂಱುಂ ಕೋಲಾಹಲರಾಗಕ್ಕು ಪಾಂಗಗಳು (ವಿವೇಕ. ೨೩೪). [ಸಂ. ದೇವಕ್ರಿಯಾ]

**ದೇವಖಾತ** (ನಾ). ೧. ನೈಸರ್ಗಿಕವಾಗಿ ಉಂಟಾದ ಜಲಾಶಯ; ಅಕೃತ್ರಿಮವಾದ ಸರೋವರ ಮೊದಲಾದ ಜಲಾಧಾರ: "ದೇವಖಾತಮಕ್ಕುಮಖಾತಂ" (ವಸ್ತುಕೋ. ೨೪–೩); "ಅಖಾತವಮಾ ದೇವಖಾತಮೆನಲ್ಕೆ" (ಮಂಗರಾ. ೦೨೩–೦೪): ತಾನಾಗಿ ನಿರ್ಮಿತವಾದ ಪುಷ್ಕರಿಣಿ ಮುಂತಾದವು ದೇವಖಾತವು (ಆಯುಧ. ೧೭೬). ೨. ಕುರುಕ್ಷೇತ್ರ ದಲ್ಲಿದ್ದ ಒಂದು ಜಲಾಶಯದ ಹೆಸರು: ನಡುವಗಲಿಱಿವಿನಂ ಕಾದಿ ಬಟಲ್ದು ಕುದುರೆಗಳಂ ನೀರೊಳಿಕ್ಕಲೆಂದು ದೇವಖಾತಮೆಂಬ ಮಡುವಿಂಗೆ ಬರ್ಪುದುಂ (ಪಂಪಭಾ. ೧೧–೦೫೬ ವ). [ದೇವ + ಖಾತ₂]

**ದೇವಗಂಗೆ** (ನಾ). ದೇವಲೋಕದ ನದಿ: ಸುಜ್ಞಾನ ನಿರ್ಮಲ ದೇವಗಂಗೆ ಯಲಿ ಇಳಿದು ಸ್ನಾನಂಗೈದು (ಗಗತಾ. ೦೬–೧೯). [ದೇವ + ಗಂಗೆ₂]

**ದೇವಗಂಟೆ** (ನಾ). ಒಂದು ಬಗೆಯ ಔಷಧಿಸಸ್ಯ: ಹೊಟ್ಟೆ ನುಲಿಯು ವುದಕ್ಕೆ:–ದೇವಗಂಟೆಯ ರಸದಲ್ಲಿ ಉಳ್ಳಿ, ಮೆಣಸು ಅರೆದು ಆ ದೇವ ಗಂಟೆಯ ರಸದಲ್ಲಿ ಕದಡಿ ಮೂಱುದಿನ ಕೊಳ್ಳಲು ಹೊಟ್ಟೆ ಕಚ್ಚುವುದು ಮಾಣ್ಗುಂ (ವಿವೈವಿ. ೭೬); ನಾಲ್ಕುವರಹ ತೂಕ ದೇವಗಂಟೆ ಸೊಪ್ಪನೂ . . . ಒಂದು ಮಾನ ಹಸುವಿನ ತುಪ್ಪದಲ್ಲಿ ಹಾಕಿ ಕಾಸಿ ಹದದಲ್ಲಿ ತೆಗೆದು ನ ಸಿಕದಲ್ಲಿ ನಸ್ಯಮಂ ಮಾಡಿಸಲು ಅರೆದಲೆಬೇನೆ ಮಾಣುವುದು (ವೃದ್ಯಸಾ. II, ೦೩೪). [<ಸಂ. ದೇವಘಂಟಾ]

**ದೇವಗಣ** (ನಾ). ೧. ದೇವತೆಗಳ ಗುಂಪು,–ಸಮೂಹ: ರುದ್ರನ ಹಾವುಗೆ ಉರಿಯುತ್ತು ದೇವಗಣಂಗಳು ನಿವಾತವಾದರು (ಬಸವ. ೯೩೦); ಭಯಮಂ ದೇವಗಣಕ್ಕೆ ಮಾಡಿ . . . ಆದಿನ ಕಾಲನೇಮಿಯೆ ಕಂಸಾಸುರನಾಗಿ ಪುಟ್ಟಿದುದನಾಂ ಬಲ್ಲೆಂ (ಜಗವಿ. ೧–೭೪); ಮಾಲೆಗೊಂಡೆಯ್ತಪ್ಪ ದೇವಗಣ ತತಿಯೊಳಗೆ ಶಾಂತಾರ್ಕಕೋಟಿಪ್ರಭಾಪುಂಜದಿಂ ಬೆಳಗೆ ಮುಂತೆ ಶಿವ ಮೂರ್ತಿ (ನಂಬಿರ. ೭–೧೨೨); ಭಾಸ್ವರಭಕ್ತಿಯಿಂದೆಱಗೆ ದೇವಗಣಂ (ಪುಷ್ಪಪು. ೧೦–೧೯). ೨. [ಜ್ಯೋತಿ] ನಕ್ಷತ್ರಗಳ ಮೂರು ಗಣಗಳಲ್ಲಿ ಒಂದು; ದೇವವರ್ಗಕ್ಕೆ ಸೇರಿದುವೆಂದು ಭಾವಿಸಲಾದ ನಕ್ಷತ್ರಗಳ ಗುಂಪು; ☞ ೧. ಅಶ್ವಿನಿ, ಮೃಗಶಿರೆ, ಪುನರ್ವಸು, ಪುಷ್ಯ, ಹಸ್ತ, ಸ್ವಾತಿ, ಅನೂರಾಧೆ, ಶ್ರವಣ ಮತ್ತು ರೇವತಿ–ಇವು ಒಂಬತ್ತು ಸೇರಿ ದೇವಗಣ. ೨. ಭರಣಿ, ರೋಹಿಣಿ, ಆರ್ದ್ರೆ, ಪುಬ್ಬೆ, ಉತ್ತರೆ, ಪೂರ್ವಾಷಾಢ, ಉತ್ತರಾಷಾಢ, ಪೂರ್ವಾಭಾದ್ರೆ, ಉತ್ತರಾಭಾದ್ರೆ– ಈ ಒಂಬತ್ತೂ ಸೇರಿ ಮನುಷ್ಯಗಣ. ೩. ಕೃತ್ತಿಕೆ, ಆಶ್ಲೇಷೆ, ಮಖೆ, ಚಿತ್ತೆ, ವಿಶಾಖೆ, ಜ್ಯೇಷ್ಠ, ಮೂಲ, ಧನಿಷ್ಠೆ, ಶತಭಿಷೆ–ಇವು ಒಂಬತ್ತು ಸೇರಿ ರಾಕ್ಷಸಗಣ. ಒಬ್ಬ ಕನ್ಯೆಗೆ ಮತ್ತು ಒಬ್ಬ ವರನಿಗೆ ಮದುವೆ ಮಾಡಬಹುದೆ ಎಂಬ ವಿಷಯವನ್ನು ಪರಿಶೀಲಿಸಲು ಜ್ಯೋತಿಷ್ಯಶಾಸ್ತ್ರದಲ್ಲಿ ಹನ್ನೆರಡುಕೂಟಗಳನ್ನು ಹೇಳಿದ್ದಾರೆ. ಅವುಗಳಲ್ಲಿ ಗಣಕೂಟವೆಂಬುದೂ ಒಂದು. ಅದರಲ್ಲಿ ಕನ್ಯೆಯ ಮತ್ತು ವರನ ನಕ್ಷತ್ರಗಳು ಒಂದೇ ಗಣಕ್ಕೆ ಸೇರಿದ್ದರೆ ಪ್ರಶಸ್ತ. ದೇವಗಣ ಮನುಷ್ಯಗಣವಾದರೆ ಮಧ್ಯಮ. ದೇವಗಣ ರಾಕ್ಷಸ ಗಣವಾದರೆ ಅಧಮ. ಮನುಷ್ಯಗಣ ರಾಕ್ಷಸಗಣವಾದರೆ ನಿಷಿದ್ಧ: ದೆವ್ವ ಭೂತಗಳು . . . ದೇವಗಣದವರಿಗೆ ಕಾಣಿಸುವುದಿಲ್ಲ (ನಡದಾ. III, ೨೦೬೧); ಗಂಡಿನ ನಕ್ಷತ್ರ ದೇವಗಣ. ಹೆಣ್ಣಿನದು ಮನುಷ್ಯಗಣ. ಚೆನ್ನಾಗಿ ಕೂಡಿದೆ (ರೂಢಿ). ೩. [ಛಂದ] ಕರ್ತೃವಿಗೂ ಅವನ ಒಡೆಯನಿಗೂ ಶುಭವನ್ನುಂಟುಮಾಡುವ ಒಂದು ಬಗೆಯ ಗಣ: ಭಾಸ್ವದ್ದೇವಗಣಂಗಳೆಂದಱಿದೆಂ ಪಂಕೇಜಪತ್ರೇಕ್ಷಣೇ (ಛಂದೋಂಬು. ೧–೪೩); ತಾಳಮಾನಸರಿಸವನಱಿಯೆ ಓಜೆ ಬಜಾವಣೆಯ ಲೆಕ್ಕವನಱಿಯೆ ಅಮೃತಗಣ ದೇವಗಣವನಱಿಯೆ (ಬಸವ. ೪೪೪); ಭಾವಿಸೆ ಪದಪದ್ಮಂ ಗಳೊಳಾವಾವಂ ಗಣಮನಿಕ್ಕಲವುಮಿವುಮೆನ್ನದೆ ದೇವಗಣಮಿಟ್ಟು ಮುಂದ ಕ್ಕಾವ ಗಣಂ ಬಂದಡುತ್ತಮಂ (ಕವಿಜಿ. ೧–೩೭); ☞ 'ನಗಣ'ಕ್ಕೆ ಅಧಿ ದೇವತೆಗಳು ದೇವತೆಗಳು. ಆದ್ದರಿಂದ ಕೆಲವರು 'ನಗಣ'ವನ್ನೂ ಕೆಲವರು 'ಮಗಣ'ವನ್ನೂ ದೇವಗಣವೆಂದು ಹೇಳುತ್ತಾರೆ. ಅಮೃತ ಗಣ ಎಂಬ ಪದದ ವಿಚಾರ ಪಿಂಗಳಾಚಾರ್ಯನ ಛಂದಶ್ಶಾಸ್ತ್ರದಲ್ಲಿಲ್ಲ. ದೇವಗಣವು ಆಯುರ್ವೃದ್ಧಿ ಮಾಡುವುದೆಂದೂ ರಾಕ್ಷಸಗಣವು ಕೆಡುಕನ್ನುಂಟುಮಾಡುವುದೆಂದೂ ನಂಬಿಕೆಯಿದೆ. [ದೇವ + ಗಣ]

**ದೇವಗಣಿಕೆ₁** (ನಾ). ಒಂದು ಬಗೆಯ ಗಿಡ: "ಅಂಬಾಲಾ–ದೇವಗಣಿಕೆ" (ಕಾಶಕ್ಕ. ೩೦). [ದೇವ + ಗಣಿಕೆ₂]

**ದೇವಗಣಿಕೆ₂** (ನಾ). ರಂಭೆ, ಊರ್ವಶಿ, ತಿಲೋತ್ತಮೆ, ಚಿತ್ರಲೇಖೆ, ಮಂಜುಘೋಷೆ, ಮೇನಕೆ, ಸುಕೇಶಿ ಮತ್ತು ಘೃತಾಚಿ ಎಂಬ ಅಪ್ಸರಸ್ತ್ರೀಯರಲ್ಲಿ ಒಬ್ಬಳು: ಭೀಷ್ಮನ್ ಎಟ್ಟಂತೆ ನೆಲ ಮುಟ್ಟದೆ ಬಿಟ್ಟೋನಾನ್ ದೇವಗಣಿಕೆಯರಾರ್ಗ್ಗುಮ್ಬಿಡಿದು ಬನ್ದಿದಿರ್ಗ್ಗೊಣ್ಡಾಯೆ ವೀರಲೋಕಕೆ ಸನ್ದೋನ್ (ಎಕ. VIII, ಸೊರಬ, ೧೦–೪: ಸು. 800); ದೇವಗಣಿಕೆಯರನೆ ಪೋಲ್ವಯ್ಯೂರ್ವರರಸಿಯರ್ಕಳಿಂದಂ (ವಡ್ಡಾರಾ. ೮೧–೭); ರಂಭೆ ಊರ್ವಶಿ ತಿಲೋತ್ತಮೆ ಚಿತ್ರಲೇಖೆ ಮಂಜುಘೋಷೆ ಮೇನಕೆ ಸುಕೇಶಿ ಘೃತಾಚಿ ಮೊದಲಾದ ದೇವಗಣಿಕೆಯರುಂ (ವಿವೇಕ. ೨೨೮). [ದೇವ + ಗಣಿಕೆ₃]

**ದೇವಗಣಗಿಲು,** ದೇವಕಣಗಿಲೆ (ನಾ). ಸುತ್ತಲೂ ಬಿಳಿ, ಒಳಗೆ ನಸು ಹಳದಿ ಬಣ್ಣದ ದಪ್ಪರೇಕುಗಳಿಂದ ಕೂಡಿದ ಹೂವುಗಳನ್ನು ಬಿಡುವ ಒಂದು ಬಗೆಯ ಮರ ಮತ್ತು ಅದರ ಹೂವು: ಹಳ್ಳಿಗಳಲ್ಲಿ ಸಾಮಾನ್ಯವಾಗಿ ದೇವಾಲಯದ ಹತ್ತಿರವೇ ದೇವಗಣಗಿಲು ಮರಗಳಿರುತ್ತವೆ (ರೂ೦). **ದೇವಕಣಗಿಲೆ:** ದೇವಕಣಗಿಲೆಯ ಮರದ ತುಂಬ ತುಂಬಿದ ಎಲೆಯ ಮಧ್ಯೆ ಕೊಂಬೆಕೊಂಬೆಯಲ್ಲಿ ಬೆಳ್ಳನೆ ಹೂತಿದ್ದಿತು (ಸಣ್ಣ.ಕ. VII, ೪೦). [ದೇವ + ಗಣಗಿಲು (<ಕಣಗಿಲೆ$_1$)]

**ದೇವಗತಿ** (ನಾ). ೧. ದೇವತೆಯಾಗುವಿಕೆ; ದೇವತ್ವವನ್ನು ಪಡೆಯುವಿಕೆ; ಜೀವನಿಗೆ ಉಂಟಾಗುವ ದೇವ, ಮಾನವ, ತಿರ್ಯಕ್ ಮತ್ತು ನಾರಕ ಎಂಬ ನಾಲ್ಕು ಗತಿಗಳಲ್ಲಿ ಮೊದಲನೆಯದು : ನಿಜದ್ವಿಚರಮ ಸಮಯದೊಳ್ ಅನ್ಯತರ ವೇದನೀಯ ದೇವಗತಿ ತತ್ಪ್ರಯೋಗ್ಯಾನುಪೂರ್ವ ಶರೀರಬಂಧನ ಸಂಘಾತ . . . ನೀಚೈರ್ಗೋತ್ರಗಳೆಂಬ ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೯೯ ವ); ಮುನ್ನಿನ ತಿರ್ಯಗ್ಗತಿ ಬಟಿಕಂ ನೆರಪಿದ ದೇವಗತಿ ವಿನಿಷ್ಫಲಮಾದತ್ತು (ಪಾರ್ಶ್ವಪು. ೬-೩೭); ಎಲ್ಲ ಪರಿಣಾಮಗಳಿಂದಲೂ ಯಾವ ಗತಿಯಲ್ಲಿ ಸುಖವುಂಟಾಗುವುದೋ ಅದೇ ದೇವಗತಿಯು (ಜ್ಞನಪ. ೨೯೫). ೨. ದೇವತೆಗಳಿಗೆ ದಿಕ್ಕಾಗಿರುವವನು; ಶಿವ: ದೇವಗತಿ ದೇವಮತಿ ದೇವದುರ್ಲಭನೆಂಬ ಕರೆವ ಬಿರುದಿನ ಕಹಳೆಗಳ ಮಹಾರವದೊಳಗೆ ಧರೆ ನಡುಗೆ (ನಂಬಿರ. ೭-೧೧೮). [ದೇವ + ಗತಿ]

**ದೇವಗತಿವಡೆ** (ಕ್ರಿ). ದೇವತ್ವವನ್ನು ಹೊಂದು; ದೇವತೆಯಾಗು: ನಿಜಸ್ವಾಮಿಯಪ್ಪ ಶಂಭುವಿನ ಕೈಯೊಳ್ ಕನ್ಯಾನಿಮಿತ್ತಂ ಸತ್ತು ದೇವಗತಿವಡೆದಲ್ಲಿಂ ಬಂದು (ಶಂರಾಮಾ. ೧೬-೩೮ ವ); ದೇವಗತಿವಡೆದು ಬಂದೀ ಭೂವಿಶ್ರುತರಾದಿರಿಂತಿದಂ ಮಱೆದಿರೆ ಪೇೞ್ ದೇವಿ (ನೇಮಿಪು. ೧೪-೫೭). [ದೇವಗತಿ + ಪಡೆ$_1$]

**ದೇವಗರಿಗೆ** (ನಾ). ಒಂದು ಬಗೆಯ ವನಸ್ಪತಿ: ದೇವಗರಿಗೆ, ಹಿರೇಕಣಗಲು . . . ಕಾಡುಜೀರಕ (ವ್ಯಾಜಿಗಿ. ೩೮-೭೫೯). [?]

**ದೇವಗಾಂಧಾರ** (ನಾ). [ಸಂಗೀತ] ಒಂದು ರಾಗದ ಹೆಸರು: ಆ ರಂಭಾದಿ ವೇಶಿಯರು ದೇವಗಾಂಧಾರರಾಗದಿಂ ದೇವತಾಸಾರ್ವಭೌಮನಾದ ಇಂದ್ರನಂ ಸ್ತುತಿಸಿ (ಸೌಗಂಧಿ. ೫೦೩-೨). [ಸಂ.]

**ದೇವಗಾಂಧಾರಿ** (ನಾ). [ಸಂಗೀತ] ಒಂದು ರಾಗದ ಹೆಸರು: ಸಮಸ್ತ ರಾಗಂಗಳೊಳಗೆ ರಾಮಕ್ರಿಯೆ . . . ದೇವಗಾಂಧಾರಿ ... ಮಧ್ಯಮಾವತಿ ಯೆಂಬ ಮೂವತ್ತಾಱುರಾಗಂಗಳೇ ಮುಖ್ಯವಾಗಿ ಬಳಕೆಯಿಂದಧು ನಾತನರಲ್ಲಿ ಪ್ರಸಿದ್ಧಗೊಂಡಿರ್ಪವು (ವಿವೇಕ. ೨೩೪): ದೇವಗಾಂಧಾರಿ . . . ಸೌರಾಷ್ಟ್ರವೆಂಬ ಪಾವನರಾಗದೊಳರುಹನನೊಲ್ದು ಸಂಜೀವನವೆನಿಸಿ ಹಾಡಿದರು (ಭರತ. ೫-೬೭); ದೇವಗಾಂಧಾರಿ ೨೯ನೇ ಮೇಳಕರ್ತ ಧೀರ ಶಂಕರಾಭರಣದಲ್ಲಿ ಜನ್ಯ (ಸಂಗೀಡಂ. ೧೪೯). [ಸಂ. ದೇವಗಾಂಧಾರೀ]

**ದೇವಗಾಣ** (ನಾ). ದೇವಸ್ಥಾನಕ್ಕೆ ಸಂಬಂಧಪಟ್ಟ ಎಣ್ಣೆಯ ಗಾಣ: ಧಾರಾಪೂರ್ವಕಂ ಮಾಡಿಬಿಟ್ಟಾಯಪೆಂತೆಂದಡೆ . . . ದೇವಗಾಣದೊಕ್ಕಲಲ್ಲಿ ದಿವಸವಳವೆಂಣೆ ಸೊಳಸವೊಂದು (ಎಇ. XX, ೧೨-೪೯; 1167). [ದೇವ + ಗಾಣ$_1$]

**ದೇವಗಾತ್ರ** (ನಾ). ದೇವತೆಗಳ ಶರೀರದಂತೆ ಶರೀರವುಳ್ಳವನು; ಸುಂದರವಾದ ದೇಹವುಳ್ಳವನು: ಸಜ್ಜೆಯೆಡೆ ನಟ್ಟು ನಿಂತವಧರಿಸಿದಳ್ ದೇವಗಾತ್ರನಂ (ಶ್ರೀರಾಮಾ. ೨೭೩-೨೬೮). [ದೇವ + ಗಾತ್ರ]

**ದೇವಗುಪ್ತ** (ನಾ). [ಸಂಗೀತ] ಒಂದು ರಾಗದ ಹೆಸರು: ಸೈಂಧವಿ ಪಂಚಮ ಷಾಡವ ದೇವಗುಪ್ತ . . . ಎಂಬೆಂಟು ರಾಗಂಗಳುಂ ಷಟ್ಸ್ವರ ಜಾತೀಯಂಗಳು (ವಿವೇಕ. ೨೩೩). [ಸಂ.]

**ದೇವಗುರು** (ನಾ). ದೇವತೆಗಳ ಗುರು; ಬೃಹಸ್ಪತಿ: ದೇವಗುರು ಬೆಸಸೆ ಜನಕ ಭವಾವಳಿಯಂ ಕೇಳ್ದು ವಿನಯವಿನಮಿತನಾದೊಂ (ಶಾಂತಿಪು. ೭-೬೫); ಖಳನೆಡೆಗೆ ಮೆಲ್ಲನೆ ದೇವಗುರು ಬಿಡದಂಜುತ್ತೈತಂದ (ತೊರಣಾ. ೬-೪೬-೪೦); ದೇವಗುರುದರ್ಶನದಿಂದಲೇ ಶಾಂತಿಯನ್ನು ಪಡೆದ ಆತನ ಮನಸ್ಸು . . . ನಿರ್ಮಲವಾಗಿತ್ತು (ಮಹಾಪ. ೧೦೦). [ದೇವ + ಗುರು]

**ದೇವಗೃಹ** (ನಾ). ದೇವಾಲಯ; ದೇವಸ್ಥಾನ: ಇದು ರಮ್ಯವೆನಿಸಿದಲ್ಲಿಪ್ಪುದು ದಯ್ವಂ ದೇವಗೃಹದೊಳಿಪ್ಪುದು ಮೋಹಿನ್ನದೆ ಪೊಗೆವುತಪೊಲೆಯೊಳಗಿಪ್ಪುದು ದೈವಮೆನಲ್ಕೆ ಸಲ್ಲದಱಿವುಳ್ಳೈತಂ (ಸಮಪ. ೮-೧೮೫). [ದೇವ + ಗೃಹ]

**ದೇವಗೃಹೋದ್ಧರಣ** (ನಾ). ದೇವಾಲಯದ ಜೀರ್ಣೋದ್ಧಾರ; ಹಳೆಯದಾಗಿ ಬಿದ್ದುಹೋಗುವಂತಿರುವ ದೇವಸ್ಥಾನಗಳ ದುರಸ್ತು, – ರಿಪೇರಿ: ಶ್ರೀಮದಾಹವಮಲ್ಲದೇವ ಪಾದಪದ್ಮೋಪಜೀವಿಯಪ್ಪ ಪೆರ್ಗ್ಗಡೆ ಜೋಗಪಯ್ಯಂ ತದೀಯ ದೇವಗೃಹೋದ್ಧರಣ ಮುಮಂ . . . ಮಾಡಿ (ಕಇಇ. ೬೮-೨-೨೭; 1056). [ದೇವಗೃಹ + ಉದ್ಧರಣ]

**ದೇವಗೇಹ** (ನಾ). ಗುಡಿ; ದೇವಸ್ಥಾನ; ದೇವಾಲಯ: "ಉಪನಂದನ ಕೈತವ ದೇವಗೇಹ ಕೇದಾರಮನಿಕ್ಕು" (ನಾನಾರ. ೩೯). [ದೇವ + ಗೇಹ]

**ದೇವಗೊಳಗ** (ನಾ). ಬೆಳೆದ ಧಾನ್ಯದಲ್ಲಿ ಮೊಟ್ಟಮೊದಲು ದೇವರಿಗೆ ಮೀಸಲಾಗಿ ಕೊಳಗದಲ್ಲಿ ಅಳೆಯುವ ಧಾನ್ಯ: ಕೊಟ್ಟಾರದ ಕರಣಂ ದೇವರ್ಗ್ಗೆ ಪೂಜಿಸುವ ಪಣ ಶಿ . . . ದೇವಗೊಳಗಂ ಧರ್ಮ್ಮಗೊಳಗಂ ವೊನ್ದು (ಸೌಇಇ. IX-i, ೧೦೭-೧೮; 1050); ಕೆಱೆಯ ಕೊರಲು ದೇವಗೊಳಗಂ ಧರ್ಮಗೊಳಗವೆರಡು (ಎಕ. XI, ಚಳ್ಳಕೆ. ೨೧-೨೫; 1087); ಶ್ರೀಮೂಲಸ್ಥಾನದೇವರ ಗೋಸಗೆಯುಪಹಾರಕ್ಕೆ ಕುಲಕೆ ಪೊಕ್ಕುಳಾ ಭತ್ತ ದೇವಗೊಳಗವಾಗಿ ಕೊಟ್ಟರು (ಎಕ. VIII, ಸೊರಬ. ೨೪೭-೯; 1288). [ದೇವ + ಕೊಳಗ$_1$]

**ದೇವಗ್ರಹ** (ನಾ). ಸೂರ್ಯ, ಚಂದ್ರ ಮೊದಲಾದ ಗ್ರಹಗಳಿಂದುಂಟಾಗುವುದೆಂದು ನಂಬಲಾದ ಪೀಡೆ: ನಾನಾಶಸ್ತ್ರಧಾರಣೆ ಮಾಡುವುದರಿಂದ . . . ದೇವಗ್ರಹ, ಗಂಧರ್ವಗ್ರಹ, ಯಕ್ಷಗ್ರಹ ಮುಂತಾದ ದುಷ್ಟಗ್ರಹಂಗಳನ್ನೂ ಶತ್ರುಗಳಿಂದುಂಟಾಗುವ ಹಾನಿಯನ್ನೂ ಕಿಡಿಸುವುದು (ಸಕವ್ಯ. ೫೭). [ದೇವ + ಗ್ರಹ]

**ದೇವಚಾಪ** (ನಾ). ಮಳೆಬಿಲ್ಲು; ಕಾಮನ ಬಿಲ್ಲು; ಇಂದ್ರಚಾಪ: ಕಡೆಯೊಳ್ ತಗುಳ್ದ ರತ್ನದ ಬೆಡಂಗುವೆತ್ತೆಸೆವ ದೀಪ್ತಿವಲಯದ ಚೆಲ್ವಂ ಪಡೆದು ಸಲೆ ದೇವಚಾಪದ ನಡುವಣ ಲಲಿತಾರ್ಧಚಂದ್ರನಿರ್ಪಂತಿರ್ಕುಂ (ಆದಿಪು. ೭-೭೫): ದೇವಾನಕಂಗಳ್ ಮೊಟಗೆ ಪಲವುಮಾ ಕಾಲದೊಳ್ ದೇವಚಾಪಂ ಜ್ಯೋತಿರ್ಲೋಕಾಧಿಪಾಲಾಭರಣಕಿರಣದಿಂದುರ್ವಿಯುಂ ಪರ್ವೆ ಬಂದರ್ (ಶಾಂತಿಪು. ೮-೧೨೦). [ದೇವ + ಚಾಪ]

**ದೇವಚಿಕಿತ್ಸಕ** (ನಾ). ೧. ದೇವತೆಗಳ ವೈದ್ಯ; ಧನ್ವಂತರಿ. ೨. ಅಶ್ವಿನೀ ದೇವತೆಗಳು: "ದೇವಚಿಕಿತ್ಸಕರಶ್ವಿನಿದೇವರ್" (ವಸ್ತುಕೋ. ೧೦-೫೩); "ನಾಸತ್ಯಾ, ಅಶ್ವಿನೌ, ದಸ್ರೌ, ದೇವಚಿಕಿತ್ಸಕೌ–ಈ ೪ ದೇವರ ವೈದ್ಯರ್" (ಹಲಾಯು. ೧೫-೮೪). [ದೇವ + ಚಿಕಿತ್ಸಕ]

**ದೇವಚೆನ್ನೆಲ್ಲಕೊಳ** (ನಾ). ಒಂದು ಜಲಾಶಯದ ಹೆಸರು: ದಾಸನೂರಕ್ಕೂಟಸಂಧಿಯಲ್ ಉನ್ನತಭೂಮಿಯ ದೇವಚೆನ್ನೆಲ್ಲಕೊಳಮ್ (ಮ್ಯಾಆರಿ. ೧೯೨೫, ೧೦೫-೪೮; 634). [? + ಕೊಳ$_2$]

**ದೇವಚ್ಛಂದ** (ನಾ). ೧. ಒಂದು ಬಗೆಯ ಮುತ್ತಿನ ಸರ; ಎಂಭತ್ತೊಂದು ಎಳೆಗಳುಳ್ಳ ಹಾರ: ವಿಜಯಚ್ಛಂದಹಾರ ದೇವಚ್ಛಂದಾರ್ಧಹಾರ . . .

ಮಾಣವಕಂಗಳೆಂಬ ಪನ್ನೊಂದು ನಾನಾರತ್ನಸುವರ್ಣಪದಕವಿರಚಿತನಾದಿ ಭೇದದಿಂ (ಆದಿಪು. ೮-೫೪ ವ). ೨. ನೂರು ಎಳೆಗಳುಳ್ಳ ಮುತ್ತಿನ ಸರ: "ದೇವಚ್ಛಂದಂ ಯಷ್ಟಿಶತಾವಚ್ಛಿನ್ನಂ" (ವಸ್ತುಕೋ. ೭೫-೩); "ನೂಱು ಸರದ ಮುತ್ತು ದೇವಚ್ಛಂದ ಎಂಬುದು" (ಹಲಾಯು. ೯೨-೪೦೮); "ನೂಱು ಸರ ಮುತ್ತು ದೇವ[ಪಾಠಾಂ. ಹ]ಚ್ಛಂದವಕ್ಕುಂ" (ಮಂಗರಾ. ೧೦೦-೨೪); ☞ ಈ ಹಾರದಲ್ಲಿರತಕ್ಕ ಎಳೆಗಳ ಸಂಖ್ಯೆಯ ಬಗ್ಗೆ ವಿವಿಧಾಭಿಪ್ರಾಯಗಳಿವೆ. [ಸಂ.]

**ದೇವಜಗ್ಧಕ** (ನಾ). ಒಂದು ಬಗೆಯ ಸುಗಂಧದ ಹುಲ್ಲು; ಕಾಚಿ ಹುಲ್ಲು: "ಕತ್ತೃಣಂ, ಪೌರಂ, ಸೌಗಂಧಿಕಂ, ಧ್ಯಾಮಂ, ದೇವಜಗ್ಧಕಂ, ರೌಹಿಷಂ–೬ ಕಾಚೀಹುಲ್ಲು, ಕಾಚೀಕಡ್ಡಿ, ಹಂಚೀಕಡ್ಡಿ, ಬರಗುಕಡ್ಡಿ ಇವು ಗಳೆಲ್ಲಕ್ಕೂ ಪೆಸರುಗಳು" (ಸಿದ್ಧಾಂತಿ. ೧೫೦). [ಸಂ.]

**ದೇವಜನಿತ** (ನಾ). ದೇವರಿಂದ ಉಂಟಾದುದು; ಪರಮಾತ್ಮನಿಂದಾದುದು: ಲೋಕದಲ್ಲಿ ಪಾಪ, ಅನ್ಯಾಯ, ನೀಚತನಗಳೂ ದೇವಜನಿತವೆಂದು ತಿಳಿಯಬೇಕೆ? (ಸಮಜೀ. ೩೦೬). [ದೇವ + ಜನಿತ]

**ದೇವಜಾತಿ** (ನಾ). ದೇವತೆಗಳ ಕುಲ,–ಪಂಗಡ: "ಯಕ್ಷಃ . . . ಪೈಶಾಚ, ದೇವಯೋನಿಃ–ಇಂತಿವೆಲ್ಲಂ ದೇವಜಾತಿಯೆಂಬುದು" (ಹಲಾಯು. ೧೫-೮೭). [ದೇವ + ಜಾತಿ]

**ದೇವಜ್ಯೇಷ್ಠ** (ನಾ). ದೇವತೆಗಳಲ್ಲಿ ಹಿರಿಯುವನು; ಬ್ರಹ್ಮ: ದೇವಜ್ಯೇಷ್ಠನ ಬೆಸದಿಂ ರೈವತಕಂ ತೇದು ತನ್ನ ಮಗಳಂ ಕುಡಲ್ . . . ಬಲದೇವಂ ವೈವಾಹೋತ್ಸವದೆ ನೆರೆದು ಸುಖದಿಂದಿರ್ದಂ (ಜಗವಿ. ೧೧-೨). [ದೇವ + ಜ್ಯೇಷ್ಠ]

**ದೇವಟ್ಟ** (ನಾ). ದೇವರ ಸ್ವತ್ತು,– ಆಸ್ತಿ: ಈ ದೇಗುಲವ ಮಡಿಸಿ ತೆರಗಾಲಂ ದೇವಟ್ಟ ಬಿಟ್ಟಳ್ (ಪ್ಯಾಆರಿ. ೧೯೩೦, ೧೪-೧೧; ಸು. 882). [<ಸಂ. ದೇವಾರ್ಥ]

**ದೇವಡಿ₁** (ನಾ). ೧. ದೇವರ ಸೇವೆ ಮಾಡುವವನು; ದೇವಾಲಯದ ಪೂಜಾರಿ,–ಅರ್ಚಕ: ಧರ್ಮಸ್ಥಳದ ಅಮ್ರುತಪಡಿಗೆ ದೇವಡಿಗಳಿಗೆ ಬಿಟ್ಟ ಬಾಳಿಗೆ ಅರ್ಥ ಅರುವಾರ ಸಲ್ಲ (ಸೌಇಇ. IX-ii, ೪೭೦-೭೦; 1482). ೨. ಒಬ್ಬಾತನ ಹೆಸರು: ವಳಿಗ್ರಾಮೆಯರ ದಾಸಡಿಯುಂ ಅಮಲಿಯರೆ ದೇವಡಿಯು (ಎಕ. VII, ಶಿಕಾರಿ. ೦೫೪-೭; ಸು. 685); ಬಾಣಗುನ್ದೂರಾ ದೇವಡಿಗಳುಂ ಕುನ್ದಡಿಗಳುಂ ಅಂಬ್ಬಲ್ಮಡಿಯ ಪೆಮಸರುಂ ಆಳಗೆವಿಯರುಂ . . . ಇ ಪೊಲನಂ ನಡೆಯಿಸಿದೋರ್ (ಎಕ. XVI, ಗುಬ್ಬಿ. ೭೫-೫೭; 733). [ದೇವ + ಅಡಿ₁]

**ದೇವಡಿ₂** (ನಾ). ೧. ಮುಖಮಂಟಪ; ಕೈಸಾಲೆ; ಮೊಗಸಾಲೆ: ಶ್ರೀಪ್ರಸಂನಕೇಶವದೇವರ ಪೂಜಾರಿಗಳ್ ದೇವರ ದೇವಡಿಗಳಂ ಕಟ್ಟಲು ಸದ್ಭಕ್ತಿಯಿಂ ಕೊಟ್ಟರು (ಸೌಇಇ. XV, ೫೪೫-೧೦; 1165); ಪಟ್ಟಣಕ್ಕೆ ಬಂದು ಕರ್ತರ ಅರಸಿನವರ ದೇವಡೀ ಬಳಿಯಿಂದ ಬಹದರರ ಬಳಿಗೆ ಬಂದು (ಹೈದರ. ೧೦೦). ೨. ಮನೆಯ ಮುಂದೆ ಇರುವ ಕಟ್ಟೆ; ಜಗಲಿ: ಪಶುಗಳ ಮುಂದೆ ನಡೆಯುಂದು ಘರ್ಜಿಸುತ ನಿಂದಿಹರು ದೇವಡಿಯೊಳು (ಕೃಷ್ಣವಿ. ೨-೧೧); ಪ್ರಘಣ – ಬಾಗಿಲ ಹೊರಗಿನ ದೇವಡಿ (ಗಂಗಾಪು. ೨೦೯); ಇನ್ಸ್‌ಪೆಕ್ಟರರು ಅಚ್ಚಕರೀಬಣ್ಣದ ಡ್ರೆಸ್ಸಿನಿಂದ ಸಜ್ಜಾಗಿ ದೇವಡಿಯ ಮೇಲೆ ಬಂದು ನಿಂತುಕೊಂಡಿದ್ದರು (ಕಳ್ಳಕಾ. ೨೪). ೩. ಮನೆಯ ಬಾಗಿಲಿನಲ್ಲಿ ಅಳವಡಿಸಿರುವ ಬಾಗಿಲುವಾಡದ ಕೆಳಮರ; ಹೊಸ್ತಿಲು: (ಕ).
[<ಸಂ. ದೇಹಲೀ./ಹಿಂ. ದೇಹರೀ; ಮರಾ. ದೇವಡೀ, ದೇವಢೀ, ದೇಹುಡೀ; ಗುಜ. ದೇವ್ರೀ; ಬಂಗಾಳಿ. ದೆಉರಿ, ದೆಹುರಿ; ಒರಿಯಾ. ದೆಹುರಿ]

**ದೇವಡಿಗ** (ನಾ). ದೇವಾಲಯದಲ್ಲಿ ದೇವರ ಪೂಜೆ ಮಾಡಿ ಜೀವಿಸುವವನು; ಪೂಜಾರಿ; ಅರ್ಚಕ: ಅರಸಗವು × × ಮಕಲಸಮಭಟ್ಟನು ದೇವಡಿಗಗೆ ಕೊಟ್ಟಂ (ಎಕ. XIV, ಶ್ರೀರಂಗ. ೩೪-೧೫; 1127); ಅಡಿಗ ಪ್ರತ್ಯಯಕ್ಕೆ–ದೇವಡಿಗಂ, ಪಾವಡಿಗಂ, ಪೂವಡಿಗಂ (ಶಮದ. ೨೦೩ ಪ್ರಯೋ); ಹಾವಡಿಗನು ದೇವಡಿಗನೊಳಗೆ ಅಡಗಲು ಹಾವೆತ್ತ ಹೋದವೋ ದೇವಾ (ಸಿದ್ಧೇವ. ೦೨೮-೩೮೨); ದೇವಡಿಗನು ದೇವಗೊಂದು ಪೂವನರ್ಪಿಸಲದು ದೇವಡಿಗನ ಹಂಗೊ ದೇವನ ಮಹಿಮೆಯೊ ಸ್ವಾಮಿ (ಭರತ. ೫೩-೮೪); ದೇವರ ಪೂಜಿಸುವಂ ದೇವಡಿಗಂ (ಶಬ್ದಾನು. ೪೧೩ ವ್ಯಾಖ್ಯಾ); ದೇವಸ್ಥಾನದ ಸೇವಕರು . . . ಅಂಬಲವಾಸಿ, ಬರಿಯ, ದೇವಡಿಗ, ದೇವಾಳಿ (ತುಳುನಾ. ೧೭೨). [ದೇವ + –ಅಡಿಗ₂]

**ದೇವಡಿತಿ, ದೇವಡಿತ್ತಿ** (ನಾ). ೧. ದೇವತಾಸ್ತ್ರೀ; ಅಪ್ಸರೆ: ಸಗ್ಗಂಗಳೊಳಿರ್ಪ ದೇವಡಿತಿ ತೊಟ್ಟಿರೊಳಟ್ಟಿಯನಾಗಲೀವನೇ (ಶಂಪಭಾ. ೧೧-೪೫). ೨. ದೇವದಾಸಿ: ಪನ್ನೆರಡುಂ ಗಟ್ಟಿದ್ದ ನೀರ್ವರ್ಣಣ್ಣುಮಂ ಪದಿಂಬರ್ ದೇವಡಿತಿಯಗ್ಗ್ರಂ ತವುಗಂ ಮನೆಗಂ . . . ಧಾರೆಯನೆಱೆದು ಬಿಟ್ಟು ಕೊಟ್ಟರ್ (ಎಕ. IV, ಚಾಮರಾ. ೧೮-೮; ಸು. 1000 ?).
**ದೇವಡಿತ್ತಿ:** ೨. ಇನ್ನುಣ್ಣೋರುಂ ಉಣಿಯ ಕೊಡುವೋನುಂ ದೇವಡಿತ್ತಿಯರಿನ್ನುಂ ಸಾಎರಿನ್ದುಂ ಅಭರಮೆತ್ತಿ ಆಯತಿವಿ ಕೊಳ್ಳೋರುಂ . . . ನರಗಕ್ಕೆ ಸಲ್ಗೆ (ಎಕ. VI, ಕೊಪ್ಪ. ೩೭-೫; ಸು. 675?).
[ದೇವಡಿ₁ + –ಇತಿ₁ (< –ಇತ್ತಿ) /ತಮಿ. ತೇವಟಿ]

**ದೇವಣ** 'ದೇವಣ್ಣ' ನೋ.

**ದೇವಣ್ಣ, ದೇವಣ** (ನಾ). ಒಬ್ಬಾತನ ಹೆಸರು: ಕರಣಿಕ ದೇವಣ್ಣಗಳ ಬರಹ (ಎಕ. XI, ಚಿತ್ರದು. ೩-೩೫; 1356). 'ದೇವಣ್ಣಯ್ಯ' ಪರಾ.
**ದೇವಣ:** ದೇವಣ ಕ್ರಮಯಿತ ಭಟ್ಟಪೌತ್ರಾಯ (ಇಆ. XVI, ೨೪-೭೩; 1009). [ದೇವ + ಅಣ್ಣ₁]

**ದೇವಣ್ಣಯ್ಯ** (ನಾ). ಒಬ್ಬಾತನ ಹೆಸರು: ವಿಶಿಷ್ಟಜನಾಶ್ರಯನಪ್ಪ ಶ್ರೀಮದ್ದೇವಣ್ಣಯ್ಯ[ಂ] (ಇಆ. XII, ೨೦೯-೧೮; 814); ಶ್ರೀಮದ್ದೇವಣ್ಣಯ್ಯಂ ಬೆಳ್ವೊಲ ಮೂನೂಱುಂಮನಾಳುತ್ತಂ (ಎಇ. VII, ೨೦೬-೧೮; 866). [ದೇವಣ್ಣ + ಅಯ್ಯ₁]

**ದೇವತನ** (ನಾ). ದೇವತ್ವವನ್ನು ಹೊಂದಿರುವಿಕೆ: ದೇವನೆಂದೇ ನೀವು ಬಗೆವಿರಿ ದೇವತನ ನಮ್ಮಲ್ಲಿ ಲವವಿಲ್ಲ (ರುದ್ರಾಉ. ೧-೪೩); ದೇವತನವಂ ಬಿಟ್ಟು ನರನಾದವಂಗೆ ಬಳಿಕಾವ ಗೌರವವಿಹುದು (ಜೈಮಿಭಾ. ೬-೫೪); ಬ್ರಾಹ್ಮಣರಿಗೆ ದೇವತನ ಏತರಿಂದ? . . . ಬ್ರಾಹ್ಮಣರಿಗೆ ದೇವತನ ಅಧ್ಯಯನದಿಂದ (ವಚಭಾ. ೧೮೦). [ದೇವ + –ತನ]

**ದೇವತನು** (ನಾ). ದೇವತೆಗಳಿಗೆ ಇರುವಂಥ ಶರೀರ: ದೇವತನುವೆರಸಿ ರೆಂತಂತಾ ವೈಶಂಪಾಯನಂ ಸುಖನಿಶ್ಚಯದಿಂ ಜೀವಿಸುತಿರ್ದಪಂ (ಕಾದಂಉ. ೪೩೪). [ದೇವ + ತನು]

**ದೇವತರು** (ನಾ). ೧. ದೇವಲೋಕದ ಮರ; ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ ಮತ್ತು ಹರಿಚಂದನ ಎಂಬ ಐದುಂ ವೃಕ್ಷಗಳಲ್ಲಿ ಒಂದು: "ಮಂದಾರಃ, ಪಾರಿಜಾತಕಃ, ಸಂತಾನಃ, ಕಲ್ಪವೃಕ್ಷಃ, ಹರಿಚಂದನಂ . . . ೫ ಈದೇವತರವಃ – ದೇವತಾಕಲ್ಪವೃಕ್ಷಗಳ ಹೆಸರುಗಳು" (ಸಿದ್ಧಾಂತಿ. ೨೨); ದೇವತರುವಿನ ಕುಸುಮವಮ್ಮಾ ನಾನು ಭಾವಜನ ಪಿತಗೆ ಕೊಂಡು ಬಂದಿದ್ದೆನಮ್ಮಾ (ಶ್ರೀಕೃಪಾ. ೬). ೨. ಅರಳಿಯ ಮರ; ಅಶ್ವತ್ಥ. [ದೇವ + ತರು₂]

**ದೇವತಾಂಶಕೆ** (ನಾ). = ದೇವತಾಧಿಷ್ಠಿತೆ: ರತಿಗೆಣೆಯೆನಿಸಿದ ಗುಣಸಂತತಿಯುಳ್ಳಾಕೆ ದೇವತಾಂಶಕೆಯುಂತಾ ಸತಿಯುಂ ಕೊಂಡಾಡುಗೆ ತತ್ಪತಿಗಂ ಧರ್ಮಾರ್ಥಕಾಮಭೋಗಂ ನೆಗಟ್ಟುಂ (ಮದತಿ. ೮-೨). [ಸಂ. ದೇವತಾಂಶಕಾ]

**ದೇವತಾಡ** (ನಾ). = ದೇವದಾಳಿ : "ದೇವತಾಡಃ, . . . ದೇವತಾಳೀ ವೃಕ್ಷದ ಹೆಸರುಗಳು" (ಸಿದ್ಧಾಂತಿ. ೧೨೭). [ ಸಂ. ]

**ದೇವತಾಣ** (ನಾ). ದೇವಸ್ಥಾನ ; ದೇವಾಲಯ : ಕೇಣವಿಲ್ಲದೆ ಬೀದಿ ಬೀದಿಯೊಳಗೆ ದೇವತಾಣ ನೋಟಕರ ಸಂದೋಹ ಮಾಣದೆ ಮಣಿ ಸೊಡರ್ವೆಳಗಿನೊಳ್ ಕೃಷ್ಣ ದಿವಾಣದೊಳಿದ್ದನೋಲಗದಿ (ಮೋಹತ. ೧೮-೮). [ ದೇವ + ತಾಣ./ಸಂ.ದೇವಸ್ಥಾನ ]

**ದೇವತಾತತ್ತ್ವ** (ನಾ). ಜಗತ್ತಿನ ನದಿ, ಕಾಡು ಮೊದಲಾದ ಪ್ರತಿಯೊಂದುಂ ಪ್ರಕೃತಿಸ್ವರೂಪಕ್ಕೂ ಒಬ್ಬೊಬ್ಬ ಅಧಿದೇವತೆಯುಂಟು ಎಂಬ ಸಿದ್ಧಾಂತ : ವೈದಿಕತತ್ತ್ವದಲ್ಲಿ ದೇವತಾತತ್ತ್ವ, ಈಶ್ವರತತ್ತ್ವ, ಆತ್ಮತತ್ತ್ವ ಎಂದು ಮೂರು ವಿಭಾಗಗಳಿವೆ (ಬಂಕಿಮ. ೪೧೯). [ ಸಂ. ]

**ದೇವತಾತ್ಮ** (ನಾ). ದೇವತಾಸ್ವರೂಪ : ದೇವತಾತ್ಮನಾದ, ನೀನು ನಮ್ಮ ಯಜ್ಞದಲ್ಲಿ ಸತ್ಫಲಗಳನ್ನು ಹಂಚುವವನಾಗು (ಋಕ್ಸಾರ. ೧೭).
[ ಸಂ. ದೇವತಾತ್ಮನ್ ]

**ದೇವತಾಧಿಷ್ಠಿತೆ** (ನಾ). ದೇವಾಂಶದಿಂದ ಕೂಡಿಕೊಂಡಿರುವವಳು ; ದೇವಾಂಶಸಂಭೂತಳು : ಲಕ್ಷ್ಮೀಮತಿಯೆಲವೊ ದೇವತಾಧಿಷ್ಠಿತೆಯಲ್ಲದ ಕೇವಳಮನುಷ್ಯಾಙ್ಗನೆಯೇ (ಎಕ. II, ೧೨೮-೨೨ ; 1121).
[ ಸಂ. ದೇವತಾಧಿಷ್ಠಿತಾ ]

**ದೇವತಾನಿಷ್ಠ** (ನಾ). ದೇವರಲ್ಲಿ ನಿಷ್ಠೆಯುಳ್ಳವನು ; ಭಕ್ತ : ಪರಮಜಿನಪದಾಂಭೋಜಾತದೊಳ್ ಭೃಂಗಮಾಲಾಪರಿಕರಮೆನೆ ಕಣ್ಗಳ್ . . . ಶುದ್ಧಚೈತನ್ಯರೂಪಂಗಿರಲೆಡೆಯೆನೆ ಚಿತ್ತಂ ದೇವತಾನಿಷ್ಠನಾದಂ (ಅನಂಪು. ೪-೭೫). [ ಸಂ. ]

**ದೇವತಾಪ್ರಸ್ತ** (ನಾ). ಮದುವೆಗೆ ಮೊದಲು ಕುಲದೇವತೆಯ ತೃಪ್ತಿಗಾಗಿ ಮಾಡುವ ಭೋಜನ ಸಮಾರಂಭ; ದೇವರೂಟ: ಸುವಾಸಿನಿಯರೊಲವಿನಿಂ ಕಂಭಮನುಯರ್ಚಿಸಿ ದೇವತಾಪ್ರಸ್ತಮಾ ಲೇಸಿನಿಂ ತೀರ್ಚಿ (ನವಮೋ. ೧೩-೫೪). [<ಸಂ. ದೇವತಾಪ್ರಸ್ಥ ? ]

**ದೇವತಾಭಾವ** (ನಾ). ತಾನು ದೇವರೆಂಬ ಭಾವನೆ,– ತಿಳಿವಳಿಕೆ : ಸುಪ್ರೀತನಾದ ಯಜ್ಞೇಶ್ವರ ಪೂಜಾರ್ಹನಾದ ದೇವತಾಭಾವವನ್ನು ಬಿಟ್ಟು, ಮಿತ್ರಭಾವವನ್ನು ಧರಿಸಿದ (ಚಿತಂಬಾ. ೪). [ ಸಂ. ]

**ದೇವತಾಮನುಷ್ಯ** (ನಾ). ದೇವತೆಯ ಸ್ವಭಾವದ ವ್ಯಕ್ತಿ ; ದೈವಿಕ ಗುಣವುಳ್ಳವನು : ದೊಡ್ಡರಾಯರು ಇನ್ನೂ ಇಪ್ಪತ್ತು ವರ್ಷ ಬದುಕುತ್ತಾರೆ. ಅವರು ದೇವತಾಮನುಷ್ಯ (ವಾತ್ಸಲ್ಯ. ೫) ; ಅವಳು ದೇವತಾಮನುಷ್ಯಳು. ಎಲ್ಲರ ಪರಾಂಬರಿಕೆ ಮಾಡುತ್ತಾಳೆ (ಶ್ಯಾಮಲಾ. ೪೦). 'ದೇವಮಾನವ' ಪರಾ. [ ಸಂ. ]

**ದೇವತಾಮೂಢ** (ನಾ). [ಜೈನ] ಲೋಕಮೂಢ, ದೇವತಾಮೂಢ ಮತ್ತು ಪಾಷಂಡಿ ಎಂಬ ಮೂಢತ್ರಯಗಳಲ್ಲಿ ಒಂದು ; ಗಿಡ, ಮರ, ಕಲ್ಲುಂ ಮುಂತಾದುವನ್ನೂ ಅಹಮಿಂದ್ರ, ಪ್ರತೀಂದ್ರ, ಕ್ಷೇತ್ರಪಾಲ ಮೊದಲಾದ ದೇವತೆಗಳನ್ನೂ ಪೂಜಿಸುವುದು : ಜಿನನಲ್ಲದಾಪ್ತರಂ ಪಿಡಿದು ನಮೆವುದುಂ ಕಿಚ್ಚು ಕವಿಲೆ ಮರನಾಯುಧಮೆಂಬಿನಿತಕ್ಕಂ ಪೊಡವಡುವುದುಮನೇಕಮಿವು ಬಗೆಯೆ ದೇವತಾಮೂಢಂಗಳ್ (ಸಮಪ. ೯-೩); ಅಹಮಿಂದ್ರ ಪ್ರತೀಂದ್ರ ಲೋಕಪಾಲಾದ್ಯನೇಕ ಸ್ವರ್ಗಜಾಮರ ನಿಕಾಯಮಂ ನಿರ್ದೋಷಿದೇವರೆಂದಾರಾಧನೆಯಂ ಮಾಳ್ಪುದು ದೇವತಾಮೂಢಮೆಂಬುದು (ಪಸಾರ. ೪೬೨). [ ಸಂ. ]

**ದೇವತಾಯಾತ್ರೆ** (ನಾ). ದೇವರ ರಥೋತ್ಸವ ; ಜಾತ್ರೆ : ತಿರುವೆಂಗಳನಾಥನ ಧ್ವಜದ ಸೇವೆ ದೇವತಾಯಾತ್ರೆಯನೂ ಪ್ರತಿವರುಷವೂ ನಡಸುವ ಧರ್ಮ (ಎಕ. XVI, ಪಾವುಗ. ೦೦೨-೫ ; 1541).
[ ಸಂ. ದೇವತಾಯಾತ್ರಾ ]

**ದೇವತಾರತಿ** (ನಾ). ದೇವರುಗಳ ವಿಷಯದಲ್ಲಿರುವ ಪ್ರೀತಿ,– ಭಕ್ತಿ : ದೇವತಾರತಿಯು ಭಾವವಾಗಿ ಉಳಿದುದು ಸಾಮಾಜಿಕಕಾರಣಕ್ಕಾಗಿ (ಸಾಹಿವಿ. ೨೯). [ ಸಂ. ]

**ದೇವತಾರೂಪ** (ನಾ). ೧. ದೇವತೆಯ ಆಕಾರ,– ಸ್ವರೂಪ. ೨. ದೇವರು: ಈ ಹತಕಲ್ಮಷಂಗೆ ಮಾತಾಪಿತೃಭಾವಮೆಂದು ನಿಮಗಾದುದು ನೀಮೆಮಗೆಂದು ದೇವತಾರೂಪಂ (ಶಾಂತಿಪು. ೧೯-೭೫). [ ಸಂ. ]

**ದೇವತಾರ್ಚನೆ** (ನಾ). ದೇವರ ಪೂಜೆ : ನಾವು ಬಲದಲು ನಮ್ಮ ಎಡದಲು ನೀವು ಕುಳ್ಳಿರ್ದತಿ ವಿಶೇಷದ ದೇವತಾರ್ಚನೆಯಂ ಸಲಿಸಿ (ಬಸವು. ೨೪-೨೮); ಮಧ್ವರಾಯರ ದೇವತಾರ್ಚನೆಯ . . . ಮೂಲರಘುಪತಿ ಒಂದು ಮುದ್ದು ಜಾನಕಿ ಒಂದು (ಪುರಂದ. ೫-೧೦೭ ಪಲ್ಲವಿ).
[ ಸಂ. ದೇವತಾರ್ಚನಾ ]

**ದೇವತಾರ್ಪಣ** (ನಾ). ದೇವರಿಗೆ ಸಮರ್ಪಿಸುವುದು. 'ದೇವತಾರ್ಪಣಗೈ' ಪರಾ. [ ಸಂ. ]

**ದೇವತಾರ್ಪಣಗೈ** (ಕ್ರಿ). ದೇವರಿಗೆ ಒಪ್ಪಿಸು : ಸುಜನೆಯರು . . . ನಿತ್ಯವಿಧಿಭಜನೆಯೆಲ್ಲವ ತೀರ್ಚಿಸಲು ಪರಿಪರಿ ಪಾಕದ್ರವ್ಯಮಂ ಗಡಣಿಸಿಡಲು ನೋಡುತ್ತೆ ದೇವತಾರ್ಪಣಗೈದು ಸವಿರುಚಿಯು ಮಾಡಿ ಸವಿಸವಿದುಂಡು ತೇಗಿ (ನವಮೋ. ೧೭-೦೮). [ದೇವತಾರ್ಪಣ+ಗೈ$_1$ (<ಕೆಯ್$_1$)]

**ದೇವತಾಲ, ದೇವತಾಳ** (ನಾ). = ದೇವದಾಳಿ: "ದೇವತಾಲ, ಜೀಮೂತ" (ನಾಚಿರಾ. ೬). **ದೇವತಾಳ** : "ವೇಣೀ, ಗರಾಗರೀ, ದೇವತಾಳಃ, ಜೀಮೂತಃ – ೪ ದೇವತಾಳೀವೃಕ್ಷದ ಹೆಸರುಗಳು" (ಸಿದ್ಧಾಂತಿ. ೧೨೭) ; "ದೇವತಾಳ – ದೇವತಾಳಿ" (ಓಷಧಿ. ೭೯). [ ಸಂ. ]

**ದೇವತಾಲಯ** (ನಾ). ದೇವಾಲಯ ; ಗುಡಿ : ಮಂಡಳಮಂ ನಿಜಮಂ ದ್ವಿಜಮಂಡಲಿಗಂ ದೇವತಾಲಯಕ್ಕಂ ಕೊಟ್ಟಂ ಖಂಡಯಮೆತ್ತಳಿಯಂ ಪರಮಂಡಳಮಂ ವೀರವಿಷ್ಣುವರ್ಧನನಾಳ್ದಂ (ಎಕ. VI, ಕಡೂರು. ೦೩೯-೩೦ ; 1173). [ ಸಂ. ]

**ದೇವತಾವರಣ** (ನಾ). ಜಪ, ಪೂಜೆ ಮೊದಲಾದ ಸಂದರ್ಭಗಳಲ್ಲಿ ಆರಾಧ್ಯದೇವತೆಯನ್ನು ಮಂತ್ರಪೂರ್ವಕವಾಗಿ ಆವಾಹನೆ ಮಾಡುವುದು ; ಆರಾಧ್ಯದೇವತೆಯ ನಾಮಗ್ರಹಣಪೂರ್ವಕವಾಗಿ ಸಂಕಲ್ಪ ಮಾಡುವುದು : ಋಷಿಚಂದಮುಖ್ಯಾದಿ ದೇವತಾವರಣದಿಂ . . . ಪರಿಶುದ್ಧಿಯೊಡೆದು (ನವಮೋ. ೨-೩೭). [ಸಂ. ]

**ದೇವತಾಸಾನ್ನಿಧ್ಯ** (ನಾ). ೧. ದೇವತಾಮೂರ್ತಿಯ ಬಳಿಯಿರುವುದು ; ದೇವರ ಸಾಮೀಪ್ಯ. ೨. ಶಾಸ್ತ್ರೋಕ್ತವಾದ ಕ್ರಮದಿಂದ ಪ್ರತಿಷ್ಠೆ ಮಾಡಿದ ಪ್ರತಿಮೆಗಳಲ್ಲಿ ದೇವರು ನೆಲಸುವುದು ; ಆವಾಹನೆ ಮಾಡಿದ ಸ್ಥಳದಲ್ಲಿ ದೇವರು ಇರುವುದು : ಶಿಲಾ, ಮೃತ್, ದಾರು, ರತ್ನ, ಲೋಹಾದಿ ಮೂರ್ತಿಗಳಲ್ಲಿ ಯಾವ ಪರಿಮಿತಿಯಲ್ಲಿ, ಎಷ್ಟು ಕಾಲ ಆಯಾಯ ದೇವತಾಸಾನ್ನಿಧ್ಯವು ನೆಲೆಗೊಳ್ಳುವುದೆಂಬುದೂ . . . ಆಗಮ ಶಾಸ್ತ್ರದಲ್ಲಿ ಉದಾಹೃತವಾಗಿವೆ (ಭಾರದ. ೮೦). [ ಸಂ. ]

**ದೇವತಾಸಿದ್ಧಾಂತ** (ನಾ). ದೇವತೆಗಳನ್ನು ಕುರಿತ ಸಿದ್ಧಾಂತ : ಹೋಮರನ ದೇವತಾಸಿದ್ಧಾಂತ (Theology)ವನ್ನು ಅನೈತಿಕವಾದುದೆಂದು ಖಂಡಿಸುವುದರಿಂದ ತೃಪ್ತರಾಗದೆ . . . ಅವನ ಮೇಲೆ ದೋಷಗಳ ಪರ್ವತವನ್ನೇ ಹೇರಲು ಅವರು ಶ್ರಮಿಸಿದರು (ಅರಿಶಾ. ೧೩೭ ಅಡಿಟಿ). 'ದೇವತಾತತ್ತ್ವ' ಪರಾ. [ ಸಂ. ]

**ದೇವತಾಸ್ಥಳ** (ನಾ). (ಪ್ರಾಚೀನವಾದ) ದೇವಸ್ಥಾನಗಳು ಇರುವ ಸ್ಥಳ : ಆ ನಿಯಮ ನಿಬಂಧನೆಗಳಂತೆ ನಿರ್ಮಿತವಾದ ದೇವತಾಸ್ಥಳಗಳು ಕ್ಷೇತ್ರಗಳೆಂದು ವಿಖ್ಯಾತಿ ಹೊಂದಿ . . . ಪ್ರಕಾಶಿಸುತ್ತಿವೆ (ಭಾರದ. ೮೦).
[ ಸಂ. ದೇವತಾಸ್ಥಲ ]

**ದೇವತಾಸ್ಥಾನ** (ನಾ). ದೇವತೆಗಳ ಪ್ರತಿಮೆಗಳನ್ನು ಪೂಜಿಸುವ ಸ್ಥಳ; ದೇವಾಲಯ; ದೇವಸ್ಥಾನ: ದೇವತಾಸ್ಥಾನದಲಿ ವಿಪ್ರಸಭಾವಳಯದಲಿ . . . ಉಪಹತಿಯ ಮಾಡುವುದಾವ ಗುಣ ಗರುವರಿಗೆ (ಕುವ್ಯಾಉ. ೩-೧೨೮). [ ಸಂ. ]

**ದೇವತಾಳ** 'ದೇವತಾಲ' ನೋ.

**ದೇವತೂರ್ಯ** (ನಾ). ದೇವತೆಗಳು ನುಡಿಸುವ ವಾದ್ಯ; ದೇವಲೋಕದ ವಾದ್ಯ: ಬೆಳ್ಗೊಡೆ ಸೊಗಯಿಪ ಭಾಮಂಡಳಂ ದೇವತೂರ್ಯೋದಿತನಾದಂ . . . ವಿಶ್ರುತಮಾಗಿರ್ಕುಂ ಸುರೇಂದ್ರೋಪಕೃತಮೆನಿಸಿ ನಿಮ್ಮೊಳ್ (ಸುಕುಮಾ. ೪-೫೦). [ ದೇವ + ತೂರ್ಯ$_2$ ]

**ದೇವತೆ** (ನಾ). ಸ್ವರ್ಗನಿವಾಸಿಯೆಂದು ಭಾವಿಸಲಾದ, ಅತಿಮಾನುಷ ಶಕ್ತಿಯುಳ್ಳ ಜೀವ; ದಿವಿಜ: ದೇವತೆ ನಿಂದಿದಂ ನುಡಿದಳಕ್ಕ ನೆಗಟ್ಟಿಯ ಪುಷ್ಕರಾರ್ಧದೊಳ್ (ಶಾಂತಿಪು. ೪-೬೩); ಕ್ಷೇಮಮಂ ದಯಮಾಡೆನುತಲುದ್ದಾಮ ಶಿವಭಾವದಿ ಶರಣುವೊಗಲಾ ಮಹಿಮನಾ ದೇವತೆಗಳಂ ಕಾಯ್ದು ಸಲಹುತ್ತ (ಬಸಪು. ೨೩-೧೭): P ಈ ಶಬ್ದ ಪುಂ, ಸ್ತ್ರೀ, ನಪುಂಸಕ ಈ ಮೂರು ಲಿಂಗಗಳಲ್ಲೂ ಉಪಯೋಗವಾಗುತ್ತದೆ. [ ಸಂ. ದೇವತಾ ]

**ದೇವತೋಪದ್ರವ** (ನಾ). ದೇವತೆಯಿಂದುಂಟಾದ ಕೇಡು,-ಅನಿಷ್ಟ: ವಿಗತಜೀವಿತರಾಗಿರ್ದ ಮೂವರನುಜರುಮಂ ಕಂಡಿದು ಮನುಜರಿಂದಾದುಪದ್ರವಮಲ್ಲಮೇನಾನುಮೊಂದು ದೇವತೋಪದ್ರವಮಾಗಲೆವೇಳ್ಕುಮೆಂದು (ಪಂಪಭಾ. ೮-೪೦ ವ). [ ಸಂ. ]

**ದೇವತೋದ್ಯಾನವನ** (ನಾ). ದೇವಾಲಯಕ್ಕೆ ಸೇರಿದ ತೋಟ: ಕಲ್ಕೆಱೆಯುತ್ತರದಿಶಾಭಾಗದ ದೇವತೋದ್ಯಾನವನಮಧ್ಯಸ್ಥಿತ ಸರೋವರದ ಪಶ್ಚಿಮತಟದಲ್ಪೂರ್ಬ್ಬಾಭಿಮುಖಮಾಗಿಟ್ದು ಶಿವಾಲಯಂ ಪ್ರದಕ್ಷಿಣಂ ಬಂದು (ಸೌಇಇ. XX, ೪೬-೪೮; ಸು. 1076). [ ಸಂ. ]

**ದೇವತೋಪಾಸನೆ** (ನಾ). ದೇವರನ್ನು ಒಲಿಸಿಕೊಳ್ಳುವುದಕ್ಕಾಗಿ ಮಾಡುವ ಜಪ, ಪೂಜೆ ಮೊದಲಾದುವು: ಆಗಮೋಕ್ತ ವಿಧಾನಗಳು ಹೊರತು ಬೇರೆ ಮಾರ್ಗಗಳು ಕಲಿಯುಗದಲ್ಲಿ ದೇವತೋಪಾಸನೆಗೆ ಪ್ರಶಸ್ತಗಳಲ್ಲ (ಭಾರದ. ೭೮). [ಸಂ. ದೇವತೋಪಾಸನಾ]

**ದೇವತೋಪಾಸ್ತಿ** (ನಾ). = ದೇವತೋಪಾಸನೆ: ಆ ದೇವತೋಪಾಸ್ತಿಯಾತನೇ ಯೋಗಿಯೆನಲು (ವೀಶೈಪು. ೫-೧೭ ಸೂಚನೆ). [ ಸಂ. ]

**ದೇವತ್ತಿ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು: ತರುವಾಟಗಳಿಂದೆಸೆವ ನಂದನಾದ್ಯಾರಾಮಂಗಳೊಳು . . . ಪನ್ನೇಱಳೆ ದೇವತ್ತಿ . . . ಸಾರ್ವರ್ತುಕವಾದ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೦೧). [ ದೇವ + ಅತ್ತಿ$_1$ ]

**ದೇವತ್ರಯ** (ನಾ). ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ಹೆಸರಿನಿಂದ ಪ್ರಸಿದ್ಧರಾದ ಮೂರು ದೇವತೆಗಳು; ತ್ರಿಮೂರ್ತಿ: ದೇವತ್ರಯಾದ್ಯನಪ್ಪಾ ದೇವಜ್ಯೇಷ್ಠಂ ಸ್ವನಾಭಿಕಮಳಭವಂ ಪಾದೇವಂ ದ್ವಿತೀಯನೆನಿಪೀ ದೇವಂ ಶ್ರೀವಾಸುದೇವ ನರ್ಘ್ಯನಮೋಘಂ (ಜಗವಿ. ೧೭-೨೭); ದೇವತ್ರಯದೊಳ್ ಪಿರಿಯನದಾವಂ ಶಶಿಮೌಳಿಯೆಂಬ ತೆಱದಿಂದತುಳಾಜ್ಞಾವಿಭವದಿಂದೆ ಪಿರಿಯಂ ಭೂವಿನುತಂ ಚಿಕ್ಕರಾಜನೂರ್ಜಿತತೇಜಂ (ಕುಸುಮಾ. ೧-೧೩); ರುದ್ರ ವಿಷ್ಣು ಬ್ರಹ್ಮರೆಂಬ ದೇವತ್ರಯದೊಳು ಪ್ರೇರಿಪಾ ತ್ರಿಗುಣಕ್ಕತೀತವಹ ಶಿವತತ್ತ್ವಕಾರಣದೊಳು (ವೀಶೈಪು. ೧-೧-೩೨). [ ದೇವ + ತ್ರಯ ]

**ದೇವತ್ರಿತಯ** (ನಾ). = ದೇವತ್ರಯ: ತನಗೆ ದೇವತ್ರಿತಯವಲ್ಲದೆ ದನುಜ ದಿವಿಜಾದಿ ತ್ರಿಲೋಕದ ಜನವಿದಿರೆ ಮೆಚ್ಚಿಸಿತು ಮಗುವಿನ ದಿಟ್ಟತನವೆಂದ (ಕುವ್ಯಾಕ. ೨೦-೩೦). [ ದೇವ + ತ್ರಿತಯ ]

**ದೇವತ್ವ** (ನಾ). ೧. ದೇವತನ; ದೇವತಾಸ್ವರೂಪ: ಆ ಪುಣ್ಯದಿಂ ಭೋಗಭೂತಳದೊಳ್ ಪುಟ್ಟಿ ಕಷಾಯಮಿಲ್ಲದುದಱಿಂ ದೇವತ್ವಮಂ ಪೆತ್ತಂ (ಶಾಂತಿಪು. ೭-೩೦); ಕೆಲರಾ ಸಭೆಯೊಳಿರ್ದು ಕುಣಿದುಂ ದೇವತ್ವಕ್ಕಾಟಿಪರ್ (ಜಿನಾಲಿ. ೧೫-೧೫); ದೇವತ್ವವಿಹ ನರಂ ಪ್ರತಿಮೆ ತಾಂ ಚಿಂತೆಯಂ ವಿವಾರಿಹ ನಿರಾಕೃತಿಗೆ! (ಅಗ್ನಿಂಹ. ೫೫-೨). ೨. ದೇವತೆಯ ಪ್ರಭಾವ,-ಶಕ್ತಿ,-ಮಹಿಮೆ: ನಾದಪ್ರಿಯ ನಂದಿಯನೇಱಿಕೊಂಡು ಅತೀತನ ಮೇಲೆ ಆನಂದಸಿಂಹಾಸನವಿಕ್ಕಿ ಕುಳ್ಳಿತ್ತು ಕೂಡಲಸಂಗಮದೇವರ ದೇವತ್ವ ಕೆಟ್ಟಿತ್ತು (ಬಸವ. ೬೩೦); ಆ ದೇವರಲ್ಲಿ ದೇವತ್ವ ಏನಾದರೂ ಇದ್ದ ಪಕ್ಷದಲ್ಲಿ ... ನನ್ನ ಅದೃಷ್ಟ ಪರೀಕ್ಷೆಮಾಡಲು ತಯಾರಾಗಿದ್ದೇನೆ (ವೀರಯೋ. ೫೫). [ ಸಂ. ]

**ದೇವದತ್ತ** (ಗು). ೧. ದೇವರು ಕೊಟ್ಟ; ಅದೃಷ್ಟದಿಂದ ಉಂಟಾದ: ನಿನಗೆ ನಗದುಹಣವಿರದಿದ್ದರೂ ದೇವದತ್ತವಾದ ಮೋಹನರೂಪು ಇದೆ (ಹೇಮಂತ. ೧೦೨). (ನಾ). ೨. ಅರ್ಜುನನ ಶಂಖದ ಹೆಸರು: ಇದನಿಂದ್ರನಟ್ಟಿದಂ ನಿನಗಿದಱ ಪೆಸರ್ ದೇವದತ್ತಮೆಂಬುದು ನಿನಗಭ್ಯುದಯಕರಂ ಶಂಖಂ (ಪಂಪಭಾ. ೭-೪); ದೇವದತ್ತದ ಧರಧುರದ ದೆಖ್ಖಾಳವಿದೆ ಗಾಂಡಿವದ ಬೊಬ್ಬೆಯಿದೆ (ಕುವ್ಯಾವಿ. ೭-೪); ಈ ಸವ್ಯಸಾಚಿತ್ವಮಿಾ ದೇವದತ್ತಶಂಖಂ ತನಗಿದೇಕೆ ನಿನ್ನಂ ಜಯಿಸದೆ (ಜೈಮಿಭಾ. ೧೩-೮); ಅರ್ಜುನನ ದೇವದತ್ತವೆಂಬ ಶಂಖವೂ ಬಂದದ್ದು ಈ ಮಯನಿಂದಲೇಯೆ (ವಚಭಾ. ೭೫). ೩. ಶರೀರದಲ್ಲಿರುವ ಒಂದು ಬಗೆಯ ವಾಯು ವಿಶೇಷ; ಆಕಳಿಕೆ, ಓಕರಿಕೆ ಮತ್ತು ಹೊಟ್ಟೆತೊಳಸು ಮೊದಲಾದುವನ್ನು ಉಂಟುಮಾಡುವ ವಾಯು: ಓಕರಿಕೆಯು ಮಾಡುವುದೊಂದು ದೇವದತ್ತವಾಯು (ಚನ್ನಬ. ಕ. ೪೦೦-೮೭೬); ಮತ್ತಮಾ ಉಪವಾಯುಗಳೊಳು ನಾಗವಾಯುವಿನಿಂ ಸೀನು ಕೆಮ್ಮು ದೇವದತ್ತವಾಯುವಿನಿಂ ನಗೆನುಡಿ (ವಿವೇಕ. ೩೪); ವಿಜೃಂಭಣರೂಪಕ್ರಿಯೆಯಂ ಮಾಡುವದರಿಂದ ದೇವದತ್ತಸಂಜ್ಞೆಯನ್ನೂ . . . ಪಡೆದುಕೊಂಡಿರುವುದು (ಮುಮುಕ್ಷು. ೩). ೪. ಅನಿರ್ದಿಷ್ಟ ವ್ಯಕ್ತಿಯನ್ನು ಸೂಚಿಸುವಾಗ ಬಳಸುವ ಶಬ್ದ: ದೇವದತ್ತನ ಘಟದ ಮಾಟ್ಕೆ, ದೇವದತ್ತನ ಇರವು (ಶಬ್ದಾನು. ೨೨೭ ಪ್ರಯೋ). [ ಸಂ. ]

**ದೇವದತ್ತಿ** (ನಾ). ದೇವಸ್ಥಾನ ಮೊದಲಾದ ಧರ್ಮಸಂಸ್ಥೆಗಾಗಿ ಕೊಡುವ ದಾನ,-ಉಂಬಳಿ. [ ದೇವ + ದತ್ತಿ ]

**ದೇವದಲ್ಲಣ** (ನಾ). (ತನ್ನ ಪರಾಕ್ರಮದಿಂದ) ದೇವತೆಗಳಿಗೆ ಆತಂಕವನ್ನುಂಟುಮಾಡುವವನು: ದೇವದಲ್ಲಣರೆನಿಪ ದೈತ್ಯರಿಗೋವಿ ಸುರೆಯ ನದೆಱೆದು ಸೊಕ್ಕಿಸಿ (ಸಂಭಪ. ೮-೬೦); ಕಪಿಗಳ ಕೆಣಕಿ ಚತುರಾಹವದ ಕೋವಿದ ದೇವದಲ್ಲಣನು ಅಣುವ ಮೊದಲಾದವರ ತೃಣವೆಂದೆಣಿಸಿ (ಕೌಶಿರಾ. ೩೭-೧೭); ರಾವಣಗೆ ಹುಟ್ಟಿಹನುಯೆಂಬರು ದೇವದಲ್ಲಣ ನಿಂದಕೀಯನು (ಮೂಲರಾ. ೧-೦). [ ದೇವ + ತಲ್ಲಣ (<ತಲ್ಲಟ) ]

**ದೇವದಾನ** (ನಾ). ದೇವಾಲಯಕ್ಕೆ ಕೊಡುವ ದಾನ,-ದತ್ತಿ,-ಉಂಬಳಿ: ಕೂಲಿಗೊಳ್ಳಂ ನೋಡ ದೇವದಾನದ ಕೆಯ್ಗೆ ಕೂಲಿಗೊಳ್ವಂ ನೋಡ ವಿಕ್ಕ ಭವಿಗಳ ಕೆಯ್ಗೆ (ಅರಿಪ. ದೇ. ೧೭೪-೧೫); ದೇವದಾನದ ಗದ್ದೆ ಬೆದ್ದಲು ಸಹಿತ . . . ಕೊಳ್ಳಿವೆಂದು ಬಿಟ್ಟು (ಎಕ. II, ೩೪೭-೩೨; ಸು. 1296). [ ದೇವ + ದಾನ ]

**ದೇವದಾಯ** (ನಾ). = ದೇವದಾನ: ನಮ್ಮಯ ವೃತ್ತಿ ದೇವದಾಯಕೆ ಸಂದುದೆಂಬರೆಮ್ಮಭಿಧಾನ ಭಾವಿಸಿ ವಿಶ್ವೇಶ್ವರರೆಂದು (ತ್ರಿಭುತಿ. ೧೦-೧೧); ದೇವದಾಯಂಗೊಟ್ಟು ಅಱಿಂಗೆಯ್ದು (ಚಿಕವಂ. ೪೬-೧೮); ಗುಮ್ಮಟನಾಥಸ್ವಾಮಿಯವರ ದೇವದಾಯಗಳನ್ನೂ . . . ಜೀರ್ಣೋದ್ಧಾರ ಮಾಡಿ (ಚಿಟ್ಟಅ. ೪೦-೧೨). 'ದೇವದೇಯ' ಪರಾ. [ ದೇವ + ದಾಯ$_2$ ]

**ದೇವದಾರಿ** (ನಾ). ಒಂದು ಬಗೆಯ ತರಕಾರಿ ಗಿಡ : ದೇವದಾರಿ, ಗಂಧಗಿರಿ, ಗ್ಯಾದಾರಿ, ಚೆಂಬುಳುಕಾಯಿ (ವ್ಯಜಿಗ. ೩೫-೬೮೩) ; ಸೋಮವಾರ ಪ್ರತಿಯೊಬ್ಬರೂ . . . ದೇವದಾರೀಪಲ್ಲೆ, ಅಕ್ಕರಿಕಿಪಲ್ಲೆ, ಚಿಗುರು ಮುಂತಾದುವನ್ನೇ ತಿನ್ನತಕ್ಕದ್ದೆಂದು ತಾವು ಫರ್ಮಾನು ಹೊರಡಿಸಿಲ್ಲವೆ ಪಲ್ಲೆಪ್ರೇಮಿ ? (ಹನ್ನೊಂದ. ೬೮). [ ? ]

**ದೇವದಾರು** (ನಾ). ಒಂದು ಬಗೆಯ ಮರ: “ಶಕ್ರಪಾದಪಃ, ಪಾರಿಭದ್ರಕಃ, ಭದ್ರದಾರು, ದ್ರುಕಿಲಿಮಂ, ಪೀತದಾರು, ದಾರು, ಪೂತಿಕಾಷ್ಠಂ– ಈ ೭ ದೇವದಾರು” (ನಾಚಿರಾ. ೧೦೮): “ಚೊಪ್ಪಟೆಯೆನಲ್ ದೇವದಾರು ವಕ್ಕುಂ” (ಮಂಗರಾ. ೩೭-೧೭) ; ವನ್ಯಮಹೀರುಹವಾದ ಕಲ್ಪನಂದನತರು ದೇವದಾರುಕುಜಮಾದ ನಮೇರುಕುಜಂ . . . ಚರದ್ವನಗಜವಾದ ದಿವ್ಯಗಜಮೆಂಬುದನಾ ನೆಲಸುಂಟುಮಾಡುಗುಂ (ಶಾಂತಿಪು. ೯-೧೩೪) ; ಬೆಲ್ಲವತ್ತವು ದೇವದಾರು ಕಕ್ಕೆಯ ಕೊಱಡು . . . ಶಿವನಿಗರ್ಪಿಸುವಲ್ಲಿ (ಚತುಪು. ೭-೪-೩೭) ; ಮುಂದೆ ಕಾಣುವ ದೇವದಾರುವನಂದದಿಂ ಧೂರ್ಜಟಿಯು ತನ್ನಯ ಕಂದನಂತೆಯೆ ಮನ್ನಿಸಿದನು (ರಘುವಂ. ೧೮-೩೭): ನಮ್ಮ ವಸತಿಯ ಕೆಳಗಡೆ ಒಂದು ಕಣಿವೆಯಲ್ಲಿ ವಿಶಾಲವಾದ ದೇವದಾರು ವನವಿತ್ತು (ನಿಬಂಧ. II, ೭೧).

**ದೇವದಾರು ಧೂಪ, ದೇವದಾರುವಿನ ಧೂಪ** = ದೇವದಾರುಮರದ ರಸದಿಂದ ಉಂಟಾಗುವ ಸುಗಂಧ ಪದಾರ್ಥ : “ಚಂಡಗಂಧಃ–ದೇವದಾರುಧೂಪ” (ಓಷಧಿ. ೫೫) ; “ವಾಯಸಃ, ಶ್ರೀವಾಸಃ ... ಸರಳದ್ರವಃ– ಈ ೫ ದೇವದಾರುವಿನ ಧೂಪ” (ನಾಚಿರಾ. ೧೩೪). [ ಸಂ ]

**ದೇವದಾವರೆ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು : ದೇವದಾವರೆ, ಬೆಟ್ಟದಾವರೆ ಮೊದಲಾಗಿ ಭೂಧರದೊಳಗೆ ಒಪ್ಪಿಹವು (ಮಾದೇಸಾಂ. ೧-೫೩). [ ದೇವ + ತಾವರೆ (<ತಾಮರೆ) ]

**ದೇವದಾಸಿ** (ನಾ). ೧. ದೇವರ ಸೇವೆಗಾಗಿ ತನ್ನ ಜೀವಮಾನವನ್ನು ಮುಡುಪಾಗಿಟ್ಟು ದೇವಾಲಯದಲ್ಲಿ ಸೇವೆ ಸಲ್ಲಿಸುವ ಅವಿವಾಹಿತ ಮಹಿಳೆ. ೨. ದೇವಸ್ಥಾನದ ನರ್ತಕಿ : ಕಲುಕುಟಿಗ ಕಾಳೋಜ ದೇವದಾಸಿಗಳಿಗೆ ಬಿಟ್ಟ ಬೆದ್ದಲೆ (ಎಕ. VII, ಶಿವಮೊ. ೯೭-೫೫ ; 1113). ೩. ನರ್ತನ ಮಾಡುವ ವೃತ್ತಿಯ ವೇಶ್ಯೆ: ಅವರ ಮದುವೆಯ ನಿಮಿತ್ತ ನಾಚಿಗಾಗಿ ಗೋವೆಯಿಂದ . ದೇವದಾಸಿಯರನ್ನು ಕರೆಯಿಸಲಾಗಿತ್ತು (ಸಮಜೀ. ೯೫೫) ; ನಾಲ್ಕು ಜನರ ಮುಂದೆ ಬಾಯಿ ತೆಗೆಯಲು ತಾನೇನ ದೇವದಾಸಿಯಲ್ಲವೆಂದು ಶಾಂತಾ ಜಾರಿಕೊಂಡಳು (ರಂಗರೋ. ೧೧೧).
[ ದೇವ + ದಾಸಿ ]

**ದೇವದಾಸಿಪದ್ಧತಿ** (ನಾ). ಅವಿವಾಹಿತ ಮಹಿಳೆಯು ದೇವರ ಸೇವೆಗಾಗಿ ತನ್ನ ಜೀವಮಾನವನ್ನು ಮುಡುಪಾಗಿಡುವ ಪದ್ಧತಿ,–ಸಂಪ್ರದಾಯ: ಒಮ್ಮೆ ದೇವದಾಸಿಪದ್ಧತಿಯು ಪ್ರಬಲವಾಗಿದ್ದಿತು (ಕಶಾಅ. ೨೦೩) ; ಈಗಲೂ ಕೆಲವು ಕಡೆಗಳಲ್ಲಿ ದೇವದಾಸಿಪದ್ಧತಿ ರೂಢಿಯಲ್ಲಿದೆ (ರೂಢಿ).
[ದೇವದಾಸಿ + ಪದ್ಧತಿ ]

**ದೇವದಾಸಿಸಂಪ್ರದಾಯ** (ನಾ). = ದೇವದಾಸಿಪದ್ಧತಿ : ಕರ್ಣಾಟಕದಲ್ಲಿ ದೇವದಾಸಿಸಂಪ್ರದಾಯವು . . . ಇತ್ತೀಚೆಗೆ ಕಡಮೆಯಾಗುತ್ತಿದೆ (ಕಶಾಅ. ೧೮೫). [ ದೇವದಾಸಿ + ಸಂಪ್ರದಾಯ ]

**ದೇವದಾಳಿ** (ನಾ). ಒಂದು ಬಗೆಯ ಗಿಡ ; ದೇವತಾಳ : “ವೇಣೀ, ಗರಾಗರೀ, ದೇವತಾಳಃ, ಜೀಮೂತಃ–ಈ ೪ ದೇವದಾಳಿ” (ನಾಚಿರಾ. ೧೦೮) ; “ ಆ ದೇವದಾಳಿ ತಾಡಕವುಕ್ಕು ” (ಮಂಗರಾ. ೪೦-೩೧) ; ದೇವದಾಳಿಬೇರು . . . ಪದ್ಮಕ, ಶ್ರೀಗಂಧ ಇವಿಷ್ಟನೂ ಪ್ರತ್ಯೇಕ ನಾಲ್ಕು ವರಹ ತೂಕವ ಸೇವಿಸಲು . . . ಬಿಕ್ಕಳುನುಡಿ, ನೆನಹು ಇವೆಲ್ಲವೂ ಪರಿಹರವಹವು (ವೈದ್ಯಸಾ. II, ೫೩). [ ಸಂ. ದೇವದಾಲೀ ]

**ದೇವದುಂದುಭಿ** (ನಾ). ೧. ಸ್ವರ್ಗದಲ್ಲಿರುವ ನಗಾರಿ ; ದೇವಲೋಕದ ಭೇರಿ ; ☞ ದೇವತೆಗಳು ಮಾನವರ ಹಿರಿಮೆಯನ್ನು ಕುರಿತು ತಮ್ಮ ಸಂತೋಷವನ್ನು ವ್ಯಕ್ತಪಡಿಸಲು ಬಾರಿಸುವರೆಂದು ಭಾವಿಸಲಾದ ಒಂದು ಬಗೆಯ ಚರ್ಮವಾದ್ಯ: ದಿಗ್ಭಿತ್ತಿಯೊಳ್ ದೇವದುಂದುಭಿನಾದಂ . . . ಒಪ್ಪುತಿರೆ ಬಂದಂ ಲೋಕನಾಥಂ (ಶಾಂತಿಪು. ೧-೮೧) ; ಮೇಘಸ್ವನದಿ ದೇವದುಂದುಭಿಯೊಳಂ ವ್ಯಾಡನಣುಗ ವೀರಭದ್ರಂ ನಡೆದಂ (ಲಿಚಿಂ. ೧೮-೨೫) ; ದೇವದುಂದುಭಿ ಮೊಳಗುತ್ತಿರೆ ಹರಿ ವಿಧಿ ಬಹುಮುನಿಗಣವರರುಂ ಜಯ ಜೀಯಯೆಂದು ಕೀರ್ತಿಸುತಿರೆ (ಹಮ್ಮಿರ. ೨-೧೨) ; ಮೊಳಗಿದುವು ದೇವದುಂದುಭಿಗಳ್ (ಜೈಮಿಭಾ. ೩೧-೭೪): ೨. ಒಂದು ಬಗೆಯ ಸಸ್ಯ;ಕೆಂಪು ತುಳಸಿ: “ಪಾಲಗಃ–ದೇವದುಂದುಭಿ ಹುಲ್ಲು” (ನಾಚಿರಾ. ೧೧೨); “ಛತ್ರಂ, ಅತಿಛತ್ರಂ, ಪಾಲಘ್ನಃ–ಈ ೩ ದೇವದುಂದುಭಿಯ ಹುಲ್ಲು” (ಓಷಧಿ. ೯೪). [ ಸಂ. ]

**ದೇವದುಂಬೆ** (ನಾ). ಒಂದು ಬಗೆಯ ತುಂಬೆಗಿಡ ಮತ್ತು ಅದರ ಹೂವು : ಅದಿದೆನ್ನದೆ ಲಾಂಗಲಿ ದೇವದುಂಬೆ ಸುರದಾಳಿಯೆಂಬಿವಂ ಕಟಿಯಿಂದಂ ಪೂಸಿದೊಡೆ . . . ಊತಿಯಂ ಮಟ್ಗಿಸುಗುಂ (ಲೋಕೋಪ. ೯-೧೭೧). ‘ದೆವ್ವದುಂಬೆ’ ಪರಾ. [ ದೇವ + ತುಂಬೆ₂ ]

**ದೇವದುರ್ಲಭ** (ನಾ). ದೇವತೆಗಳಿಗೂ ಸುಲಭವಾಗಿ ಒಲಿಯದವನು : ದೇವಗತಿ ದೇವಮತಿ ದೇವದುರ್ಲಭನೆಂಬ ಕರೆವ ಬಿರುದಿನ ಕಹಳೆಗಳ ಮಹಾರವದೊಳಗೆ ಧರೆ ನಡುಗೆ (ನಂಬಿರ. ೭-೧೧೮).
[ ದೇವ + ದುರ್ಲಭ ]

**ದೇವದೂತ** (ನಾ). ದೇವರ ಆಳು ; ದೇವಲೋಕದ ದೂತ : ದೇವಕುವರಂ ಮರಳಿ ಬಹನೆಂಬ ಗೆಲುವಿಂದ ದೇವದೂತರೆ ಬಾರಿಸುವರೊ ಮಂಗಲವಾದ್ಯವೆನಲು ಮುಂಬಕ್ಕಿಗಳ ಮೇಳವಂ ಮೊಳಗಾಡೆ (ಗೊಲ್ಗೊಥಾ. ೧-೮). [ ದೇವ + ದೂತ ]

**ದೇವದೇಯ** (ನಾ). ದೇವರಿಗೆ ಕೊಡಬೇಕಾದುದು ; ದೇವಸ್ಥಾನಕ್ಕೆ ಸಲ್ಲತಕ್ಕುದಂ : ಆಸ್ಥಾನಕವಿಯಾದ ರವಿಕೀರ್ತಿ ಜೈನೇಂದ್ರಗೃಹವನ್ನು ಕಟ್ಟಿಸಿ ಕೆಲ ಗ್ರಾಮಗಳನ್ನು ದೇವದೇಯವಾಗಿ ಕೊಟ್ಟನು (ಕರ್ಣಾಅ. ೭೭). ‘ದೇವದಾಯ’ ಪರಾ. [ ದೇವ + ದೇಯ ]

**ದೇವದೇವ** (ನಾ). ದೇವತೆಗಳಿಗೆ ಒಡೆಯನಾದವನು; ದೇವಾಧಿದೇವ: ಕರೆದಡೆ ಬೆಸನೇನೆಂಬ . . . ದೈನ್ಯಕ್ಕೆಲವೊ ತನುವನಾನೊಡ್ಡುವಂತಾದಿದೇವಂ ಪುರುದೇವಂ ದೇವದೇವಂ ಕುಡೆ ಪಡೆದ ನೆಲಕ್ಕಾರೊಳಂ ಪಂಥಮುಂಟೆ (ಆದಿಪು. ೧೪-೭೭) ; ದೇವದೇವಂ ಸಂತಸದೊಳಿಂತೆಂದನು (ಬಸಪು. ೧-೭೦) ; ಪೊಕ್ಕುಳಲ್ಲಿ ಅಜನ ಪಡೆದ ದೇವದೇವನು ಚಿಕ್ಕ ಉಂಗುಷ್ಠದಲ್ಲಿ ಗಂಗೆಯ ಪಡೆದನು (ಪುರಂದ. ೨-೮೨-೩) ; ಭುಜಗಧರನಂ . . . ದೇವದೇವನಂ ಭಜಿಸಿದಳಗಜೆ ಬನದೊಳು (ಜೈಮಿಭಾ. ೧೫-೨೩) ; ದೇವದೇವನ ಆಜ್ಞೆಗಾಗಿ ಕಾಯುತ್ತ . . . ಮಲಗಿಕೊಂಡಿದ್ದಾನೆ (ಬೆಳುಮ. ೫೨). [ ದೇವ + ದೇವ ]

**ದೇವದೌವಾರಿಕ** (ನಾ). ದೇವಲೋಕದ ದ್ವಾರಪಾಲಕ : ದೇವದೌವಾರಿಕ ಕಳಕಳಕ್ವಣಿತಪ್ರತ್ಯುತ್ತರೋಚ್ಚಳಿತ ಕೇಳೀವನಮಾಲಾಕಲಕಂಠವಿಲಾಪೆಯುಂ (ಅನಂಪು. ೪-೯೪ ವ). [ ದೇವ + ದೌವಾರಿಕ ]

**ದೇವದ್ವಿರದ** (ನಾ). ದೇವಲೋಕದ ಆನೆ; ಐರಾವತ: ಶ್ವೇತಾಂಭೋಜಾತ ದೇವದ್ವಿರದ ಸುರನದೀದುಗ್ಧವಾರಾಸಿಚಂದ್ರದ್ಯೋತಪ್ರಸ್ಪರ್ಧಿ ಭಾಭಾಸುರವಿಶದಯಶಂ (ಎಕ. IV, ನಾಗಮಂ. ೭೦-೧೧; 1178).
[ ದೇವ + ದ್ವಿರದ ]

**ದೇವಧುನಿ** (ನಾ). = ದೇವನದಿ : ದೇವಧುನಿಯುಬ್ಬರಂ ಸೆಳದೊಯ್ಯೆ ಕಾಡುನಾಡಂ ಬಂಡೆಗಳ ಬಿಡದೆ ? (ಹಬ್ಬರ. ೨೧-೧೦೮). [ದೇವ+ಧುನಿ₁]

**ದೇವಧೂಪ** (ನಾ). ಒಂದು ಬಗೆಯ ಸುಗಂಧದ್ರವ್ಯ ; ಗುಗ್ಗುಳ: "ಮಹಾಕ್ಷಃ–ಗುಗ್ಗುಳ, ದೇವಧೂಪ" (ಓಷಧಿ. ೧೧೮). [ ದೇವ + ಧೂಪ ]

**ದೇವಧೂಪತೈಲ** (ನಾ). [ವೈದ್ಯಶಾ] ಒಂದು ಬಗೆಯ ತೈಲ: ದೇವಧೂಪತೈಲ–ಔಡಲಸೊಪ್ಪಿನ ರಸ, ಉಮ್ಮತ್ತಿಸೊಪ್ಪಿನ ರಸ . . . ಎಣ್ಣೆಯ ನಟ್ಟು ಚಿಕ್ಕಣಪಾಕದಲ್ಲಿಳುಹಿ ಆ ಎಣ್ಣೆಯನ್ನು ಸರ್ವಾಂಗಕ್ಕೆ ಲೇಪಿಸಲು ಸಕಲಜ್ವರಂ ತೀರ್ಗುಂ (ಸಕವೈ. ೧೧೭). [ ದೇವಧೂಪ + ತೈಲ$_1$ ]

**ದೇವನ** (ನಾ). ೧. ಹೋಗುವಿಕೆ ; ಗಮನ. ೨. ಹುರುಡು ; ಸ್ಪರ್ಧೆ. ೩. ವ್ಯವಹಾರ ; ಉದ್ಯೋಗ ; ಕಸುಬು. ೪. ಪಗಡೆಯ ಕಾಯಿ. ೫. ಆಟ ; ಕ್ರೀಡೆ. ೬. ಪಗಡೆಯ ಆಟ. ೭. ಜೂಜಾಟ ; ಪಂದ್ಯ : ಪಣನಂ ಕುರುಪತಿ ಕುಡಲಾ ಜನಪತಿಗಳ್ ದೇವನಕ್ಕೆ ಕುಳ್ಳಿರ್ದರ್ (ಬಾಲಭಾ. ೭–೬೩). ೮. ದುಃಖ ; ಶೋಕ. [ ಸಂ. ]

**ದೇವನಗ** (ನಾ). ದೇವತೆಗಳ ಬೆಟ್ಟ ; ಮೇರುಪರ್ವತ : ದೇವನಗಾಗ್ರದಿಂದಭಿಷವೋತ್ಸವದಿಂದಿಳಿತಂದು ಬೇಗದಿಂ ತೀವಿ ನಿಜಾಳವಾಳಕುಳಮಂ ತಣಿವಿತ್ತ ಸುಧಾಬ್ಧಿಜ್ಞೀವನಂ (ಚಂದ್ರಪು. ೧೫–೬೭). [ ಸಂ. ]

**ದೇವನಗರಿ** (ನಾ). ೧. ದೇವತೆಗಳ ಪಟ್ಟಣ; ಅಮರಾವತಿ. ೨. ಕನ್ನಡ ಕವಿ ಲಕ್ಷ್ಮೀಶನ ಜನ್ಮಸ್ಥಳವಾದ ದೇವನೂರು : ರಸಾತಿಶಯಮೆನೆ ಪಾಡುವರ್ದೇವನಗರೀನಿಕೇತನ ಶ್ರೀಪತಿಯ ಚಾರಿತ್ರಮಪ್ಪ ರಾಮಾಯಣ ವನನುದಿನದೊಳು (ಜೈಮಿಭಾ. ೧೯–೫೫). [ ದೇವ + ನಗರಿ ]

**ದೇವನಗರೀಶ** (ನಾ). ೧. ಅಮರಾವತಿಯ ಒಡೆಯ, – ರಾಜ ; ದೇವೇಂದ್ರ. ೨. ದೇವನೂರಿನಲ್ಲಿ ನೆಲಸಿದ ದೇವರಾದ ಶ್ರೀಕೃಷ್ಣ : ತಾನೆ ಸಲ್ಲಲಿತ ಹರಿಗಳಂ ಪಿಡಿದು ಕಟ್ಟಿದನಿಳಾವಲ್ಲಭರ ಮುಂದೆ ಕಾರುಣ್ಯದಿಂ ದೇವನಗರೀಶ ಲಕ್ಷ್ಮೀಕಾಂತನು (ಜೈಮಿಭಾ. ೩೨–೫೭). [ಸಂ.]

**ದೇವನದಿ** (ನಾ). ದೇವಲೋಕದಿಂದ ಇಳಿದು ಬಂದ ನದಿ ; ಗಂಗಾನದಿ: "ತ್ರಿದಶಧುನಿ ವಿಷ್ಣುಪದಿ ಗಂಗೆ ಜಾಹ್ನವಿ ದೇವನದಿಯೆನಿಕು" (ಮಂಗರಾ. ೧೩೩–೧೦) ; ದೇವನದಿ ಚಂದ್ರುನನಲಾಕ್ಷಿ . . . ಒಪ್ಪಲ್ ಪಾವನ ಶಿವಾಪತಿ ನಿಜಾಕೃತಿಯೊಳಿರ್ದಂ (ತ್ರಿಪುವಿ. ೫೭–೧೪). [ ದೇವ + ನದಿ ]

**ದೇವನಹುಳಿ** (ನಾ). ಒಂದು ಬಗೆಯ ವನಸ್ಪತಿ : ಕಣ್ಮುಟಗಲ್, ದೇವನಹುಳಿ, ಮಕ್ಕಿ, ಹರಲಂಗುಪ್ಪ, ರೇವಲ್‌ಚಿನ್ನಿ, ಅರಿಸಿನಗುರ್ಗಿ (ವ್ಯಾಣಿಗಿ. ೩೮–೬೫೭). [ ? ]

**ದೇವನಾಗರಿಲಿಪಿ** (ನಾ). ಒಂದು ಬಗೆಯ ಲಿಪಿ ; P ಸಾಮಾನ್ಯವಾಗಿ ಸಂಸ್ಕೃತ ಮತ್ತು ಕೆಲವು ಇಂಡೋ‌ಆರ್ಯನ್‌ಭಾಷೆಗಳನ್ನು ಬರೆಯಲು ಉಪಯೋಗಿಸುವ ಲಿಪಿ : ಸಂಘದ ರಾಜಭಾಷೆಯು ದೇವನಾಗರಿ ಲಿಪಿಯಲ್ಲಿ ಹಿಂದಿ ಆಗಿರತಕ್ಕುದು (ಭಾಥಾನ. ೨೦೦). [ ಸಂ. ದೇವನಾಗರೀಲಿಪಿ ]

**ದೇವನಾದೋತ್ತರ** (ನಾ). [ಸಂಗೀತ] ಒಂದು ರಾಗದ ಹೆಸರು : ನೀಲೋತ್ಪಲಿನಿ . . . ದೇವನಾದೋತ್ತರ . . . ವಸಂತಬಂಗಾಳ ವೆಂಬಿಪ್ಪತ್ತೆರಡು ರಾಗಂಗಳುಂ ಕ್ರಿಯಾಂಗದಿಂದ ಪುಟ್ಟಿದವು (ವಿವೇಕ. ೨೩೪). [ ಸಂ. ]

**ದೇವನಾಲ, ದೇವನಾಳ** (ನಾ). ಒಂದು ಬಗೆಯ ಹುಲ್ಲು ; ಲಾಳದ ಕಡ್ಡಿ : (ಕ). **ದೇವನಾಳ :** "ನಡಃ, ಧಮನಃ, ಪೋಟಗಳಃ – ಈ ೩ ದೇವನಾಳ" (ನಾ ಚಿ ರಾ. ೧೧೩) ; ನಡ್ವತ್, ನಡ್ವಲ = ದೇವನಾಳಂ ಪಿರಿದಾಗಿರ್ಪ ಭೂಮಿ (ನಾಚಿರಾ. ೩). [ ದೇವ + ನಾಲ$_1$ ]

**ದೇವನಾಳ** 'ದೇವನಾಲ' ನೋ.

**ದೇವನಿಕಾಯ** (ನಾ). ದೇವತೆಗಳ ಸಮೂಹ,–ಗುಂಪು : ದೇವನಿಕಾಯ ಸಮೇತಂ ದೇವೇಂದ್ರಂ ತ್ರಿಭುವನೇಶಜನ್ಮೋತ್ಸವಮಂ ಭಾವಿಸಿ ಶಕ್ರನೆ ಮಾಡಿದೊಡಾ ವಿ[ನು]ತವಿಳಾಸದಳವನೇನಂ ಪೇಟ್ವೆಂ (ಬಂಹರಿ. ೯–೧೨೦); ದೇವನಿಕಾಯಕಿರೀಟಕನದ್ರತ್ನಾವಳಿ ಸಂಜನಿತಾಂಶುವಜಸ್ರಂ ತೀವಿ ವಿರಾಜಿಪ ದೇವಿಯ ಪಾದಕ್ಕಾ ವಸುಧಾಪತಿ ಪಾದ್ಯಮನಿತ್ತಂ (ಉದ್ಭಟ. ೩–೧೧೪). [ ದೇವ + ನಿಕಾಯ ]

**ದೇವನೂರು** (ನಾ). ೧. ಒಂದು ಊರಿನ ಹೆಸರು: ಕಾರೆನಾಡ ದೇವನೂರ ನುಳಗ್ಗೆ ಯರಕುಳದ ಮಧಿಗವುಡನ ಕುಪುತ್ರ ರಾಮಧೇವನು . . . ಮೆಚ್ಚು ಗೊಟ್ಟ ಭೂಮಿ (ಎಕ. VII, ಶಿಕಾರಿ. ೫೩–೧೦ ; 357? ಕ್ರಶ). ೨. = ದೇವಪುರ ೨ : ಲಕ್ಷ್ಮೀಶಕವಿ . . . ಅರಸೀಕೆರೆ ತಾಲ್ಲೂಕು ಬಾಣಾವರದ ಹೋಬಳಿಗೆ ಸೇರಿದ ದೇವನೂರು ಎಂಬ ಗ್ರಾಮದಲ್ಲಿ ಶ್ಯಾನುಭೋಗ (ಜೈಮಿಭಾ. III ಮುನ್ನುಡಿ). [ <ದೇವ + ಊರು$_3$ (<ಊರ್) ]

**ದೇವಪಟಹ** (ನಾ). ದೇವಲೋಕದ ಒಂದು ಬಗೆಯ ವಾದ್ಯ ವಿಶೇಷ ; ತಮಟೆಯಂಥ ಒಂದು ವಾದ್ಯ : ದೇವಪಟಹಂಗಳುಲಿಯಲ್ . . . ಅಮರಪುಷ್ಪಕಮಾ ಗೌರೀವರನಾಜ್ಞೆಯೊಳಾಗಳ್ ಭೂಮಳೆಯಕ್ಕಿರದೆ ಬಂದು ದತಿಸಂಭ್ರಮದಿಂ (ತ್ರಿಪುವಿ. ೨೫–೩೯). [ ದೇವ + ಪಟಹ ]

**ದೇವಪತಿ** (ನಾ). ದೇವತೆಗಳ ಅರಸು ; ದೇವೇಂದ್ರ : ದೇವಪತಿ ಪೇಟ್ ಧನದಂ ರೈವೃಷ್ಟಿಯನೆಸಗೆ ಮಾಡೆ ಪದ್ಮಾದಿಸರೋದೇವಿಯರುಂ ರುಚಕಾಚಳದೇವಿಯರುಂ ತಾಯ್ಗೆ ಗರ್ಭಸಂಶೋಧನಮಂ (ಪಾರ್ಶ್ವಪು. ೧೫–೫೩). [ ದೇವ + ಪತಿ$_2$ ]

**ದೇವಪತ್ರ** (ನಾ). ಒಂದು ಬಗೆಯ ಗಿಡ ; ಮಂಚಿಪತ್ರೆ : "ದೇವಪತ್ರುಂ ಪಂಚಪತ್ರು ಗಾಂಧಾರಿಯದು" (ಮಂಗರಾ. ೪೦–೩೦). [ ದೇವ + ಪತ್ರ ]

**ದೇವಪಥ** (ನಾ). ದೇವತೆಗಳ ಮಾರ್ಗ ; ಆಕಾಶ : ನಿರಂತರಾಟ್ಟಾಲಕ ಪ್ರತೋಲೀಂದ್ರಕೋಶ ದೇವಪಥ ಸನಾಥಂಗಳುಂ ಗಂಡಶೈಲಾಭೀಲಶಿಲಾ ಯಂತ್ರಭಯಂಕರಂಗಳುಂ . . . ಅಪ್ಪ ದುರ್ಗಂಗಳೊಳ್ (ಆದಿಪು. ೧೩–೫೭ ವ). [ ದೇವ + ಪಥ ]

**ದೇವಪುತ್ರಕ** (ನಾ). ದೇವಸ್ಥಾನದ ಮೇಲ್ವಿಚಾರಕ · ದೇವರ ಅಂಗ ಭೋಗಕ್ಕೆ ಕಾಮಿಸೆಟ್ಟಿಯ ಗಾಣವಂ ಸರ್ಬ್ಬಬಾಧಾಪರಿಹಾರ ಶ್ರೀಮಾನ್ಯ ವಾಗಿ ಆಚಂದ್ರಾರ್ಕತಾರಂಬರಂ ದೇವಪುತ್ರಕರು ಸಲಿಸುವರು (ಸೌಇಇ. XX, ೧೩೦–೧೦ ; 1187). [ ಸಂ. ? ]

**ದೇವಪುರ** (ನಾ). ೧. ದೇವತೆಗಳ ಊರು ; ಅಮರಾವತಿ. ೨. ಲಕ್ಷ್ಮೀಶ ಕವಿಯ ಜನ್ಮಸ್ಥಳ ; ದೇವನೂರು : ದೇವಪುರ ಲಕ್ಷ್ಮೀರಮಣನಾಸ್ಯ ಚಂದ್ರುನಾನಂದಮಂ ನಮಗೀಯಲಿ (ಜೈಮಿಭಾ. ೧–೧). [ ದೇವ + ಪುರ$_2$ ]

**ದೇವಪೂಜೆ** (ನಾ). ದೇವರಿಗೆ ಮಾಡುವ ಅರ್ಚನೆ : ದೇವತಾರ್ಚನೆ : "ಇಷ್ಟಂ, ಇಷ್ಟಿಃ . . . ಯಾಜ್ಯಂ—ಈ ೧೦ ದೇವಪೂಜೆ" (ಶಾಶಕ್ಕ. ೧೬೦); ಯಜ್ಞಶಬ್ದಂ ದಾನದೊಳಂ ದೇವಪೂಜೆಯೊಳಂ ಪ್ರವರ್ತಿಸುಗುಂ (ಜಾಪುಪು. ೨೮೩) ; ದೇವಪೂಜೆಯ ಮಾಟ ದುರಿತಬಂಧನದೋಟ ಶಂಭು ನಿಮ್ಮಯ ನೋಟ ಹಿಂಗದ ಕಣ್ಬೇಟ (ಬಸವ. ೧೭೭) ; ದೇವಪೂಜೆಯೆಂದುಂ ಗುರೂ ಪಾಸ್ತಿಯೆಂದುಂ ಸ್ವಾಧ್ಯಾಯಮೆಂದುಂ ಸಂಯಮಮೆಂದುಂ ತಪಮೆಂದುಂ ದಾನಮೆಂದುಂ ಗೃಹಸ್ಥಂಗೆ ಆ ಱು ತೆ ಱ ದಿ ಂ ಧರ್ಮಸಂಗ್ರಹಮಕ್ಕುಂ (ಪುಣ್ಯಾಸ್ರ. ೧–೫೫ ವ) ; ದೇವಪೂಜೆಯ ಮಾಡಿ ದಿವ್ಯಾನ್ನಪಾನವ ಸೇವಿಸಿದರು ಲೀಲೆಯಿಂದ (ಭರತ. ೨೩–೯೦) ; ದೇ ವ ಪೂ ಜೆ ಯ ಲ್ಲಿ ಆಸಕ್ತಿ ಯುಳ್ಳವಳೂ . . . ಸುಖಕರಳೂ ಆಗಿರು (ಪುಕ್ಕಾರ. ೩೦೧). [ ದೇವ + ಪೂಜೆ$_2$ ]

**ದೇವಪೂವು** (ನಾ). ಒಂದು ಸ್ಥಳದ ಹೆಸರು : ಮಾರಯ್ಯಸೆಟ್ಟಿಯ ಪೆಣ್ಡತಿ ಗುಣ್ಡಬ್ಬೆ ಮೂಲಸ್ಥಾನದೇವರ್ಗ್ಗೆ ದೇಗುಲವಂ ಮಾಡಿಸಿ ದೇವರ್ಗ್ಗೆ ದೇವಪೂವಿನ ಮುದನೆಮಯ್ಯ ತೆಱಿಪಟ್ಟಪಾಳಿಯ ಪೊನ್ನರ ಕೊಟ್ಟು ಮಣ್ಣರ ಕೊಣ್ಡು ಬಿಡಿಸಿದಡೆ (ಪ್ಯಾಅರಿ. ೧೯೪೭, ೨೮–೩೦ ; 1032). [ ? ]

**ದೇವಪ್ರಿಯ** (ನಾ). ದೇವತೆಗಳ ಪ್ರೀತಿಗೆ ಪಾತ್ರನಾಗುವವನು : ದೇವಪ್ರಿಯನಾದವನು ಕಠಿಣಕಷ್ಟಾಶ್ರಯನದಾವನು ಧರ್ಮಸುತ ಹೇಳೆಂದನಾ ಖಚರ (ಕುಮಾ.ಆ. ೨೩-೯೦). [ ದೇವ + ಪ್ರಿಯ ]

**ದೇವಬಾಭೂಳ** (ನಾ). ಒಂದು ಬಗೆಯ ಸಸ್ಯ ; ದೊಡ್ಡ ದೊಡ್ಡ ಮುಳ್ಳುಗಳುಳ್ಳ ಒಂದು ಬಗೆಯ ಗಿಡ ; ಗೊಬ್ಬಳಿ ; ಮುಳ್ಳು ಜಾಲಿ : ಜಾಲಿ, ದೊಣ್ಣೆಮುಳ್ಳಿನ ದೇವಬಾಭೂಳಸಣ್ಣಗಿಡವು ಬೇಲಿಯ ಕೆಲಸಕ್ಕೂ ಗೂಟಗಳನ್ನು ಕೆತ್ತಲಿಕ್ಕೂ ಬರುತ್ತದೆ (ಕಭಾಗ. ೪೮).
[ ←ಮರಾ. ದೇವಬಾಭೂಳ ]

**ದೇವಬಾಳೆ** 'ದೆವ್ವಬಾಳೆ' ನೋ.

**ದೇವಬ್ರಾಹ್ಮಣ** (ನಾ). ಯಾತ್ರೆ, ಮದುವೆ, ಮುಂಜಿ ಮೊದಲಾದ ಶುಭಕಾರ್ಯಗಳ ಮೊದಲು ದೇವತಾಪೂಜೆಯ ನಂತರ ಮಾಡುವ ಬ್ರಾಹ್ಮಣ ಸಂತರ್ಪಣೆ : ದೇವಬ್ರಾಹ್ಮಣವಾದ ಮೇಲೆ ಅತ್ಯಾಬಾಯಿ ಮತ್ತು ಜತೆಗೆ ಬಂದವರು ತಿರುಗಿ ಹೋದರು (ಸ್ಮೃತಿಚಿ. ೨೯೨).
[ ದೇವ + ಬ್ರಾಹ್ಮಣ ]

**ದೇವಭಕ್ತ** (ನಾ). ದೇವರಲ್ಲಿ ಭಕ್ತಿಯಿಟ್ಟಿರುವವನು: ದೇವಭಕ್ತರಿಲ್ಲದೂರು ಸಿನೆ ಹಾಳು (ಬಸವ. ೮೭). [ ದೇವ + ಭಕ್ತ ]

**ದೇವಭಕ್ತಿ** (ನಾ). ದೇವರ ಮೇಲಿನ ಪ್ರೀತಿ : ಎಂತೆಂಬ ದೇವಭಕ್ತಿಯ ದೆಂತೆಂಬಧಿಗಮದ ತೇಜಮೆಂತೆಂಬ ವಿನೋದಾಂತರಮೆನೆ ದೇವನನೆ ನಿರಂತರ ಮಮರಾಧಿರಾಜನಾರಾಧಿಸುವಂ (ಅಜಿಪು. ೫-೮೪). [ ದೇವ + ಭಕ್ತಿ ]

**ದೇವಭಾಗ** (ನಾ). ದೇವಸ್ಥಾನಕ್ಕೆ ಕೊಟ್ಟ ಉಂಬಳಿ,-ದಾನ : ಈ ದೇವ ಭಾಗಮುಮ × × × ನೆಗಳ್ದವರವರದೇ [ಧರ್ಮ್ಮ] (ಸೌಇಇ. XX, ೨೩-೩೦ : 1020). [ ದೇವ + ಭಾಗ ]

**ದೇವಭಾಷೆ** (ನಾ). ೧. ದೇವತೆಗಳಾಡುವ ಭಾಷೆ : ಆಕಾಶ ಪುಸ್ತಕದ ಅತ್ಯನಿರ್ವಚನೀಯದೇವಭಾಷಾದೃಶ್ಯಕಾವ್ಯಗಳ್ ! (ಅಗ್ನಿಹಂ. ೬೨-೧೦೭). ೨. ಸಂಸ್ಕೃತ ಭಾಷೆ : ಸಂಸ್ಕೃತವನ್ನು ದೇವಭಾಷೆಯೆಂದೂ ಕರೆಯುತ್ತಾರೆ (ರೂಢಿ). [ ಸಂ. ]

**ದೇವಭೂಮಿ** (ನಾ). ದೇವತೆಗಳ ನೆಲೆ ; ಸ್ವರ್ಗ ; ಭೋಗಭೂಮಿ : ಈ ದೇವಭೂಮಿಯು ಮನುಷ್ಯರಿಗೆ ಗೋಚರವಾಗತಕ್ಕದಲ್ಲವಲ್ಲಾ (ಶಾಕುಂತ. ೧೦೬-೨೪). [ ದೇವ + ಭೂಮಿ ]

**ದೇವಭೂಯ** (ನಾ). ದೇವತ್ವ ; ದೇವಭಾವ; ದೇವರೊಂದಿಗೆ ಸೇರುವುದು ; ಸಾಯುಜ್ಯ ; ಮುಕ್ತಿ : "ದೇವಭೂಯಮದು ದೇವತ್ವಂ" (ವಸ್ತುಕೋ. ೫೯-೯೭) ; "ದೇವಭೂಯಂ, ದೇವತ್ವಂ, ದೇವಸಾಯುಜ್ಯಂ-೩ ದೇವಸ್ವರೂಪವಾಗುವಿಕೆ" (ಸಿದ್ಧಾಂತಿ. ೨೩೨). [ ಸಂ. ]

**ದೇವಭೂಷಣ** (ನಾ). ದೇವರಿಗೆ ಅಲಂಕಾರಯೋಗ್ಯವಾದುದು : ಇರಲಾರು ಮೂಲೆ . . . ಕಾಕಪಾದಗಳುಮಿರದಿರಲು ದೇವಭೂಷಣ ಮಪ್ಪುದಾ ವಜ್ರಮೆಂದಗಸ್ತ್ಯಂ ಪೇಳ್ದನು (ರತ್ನಶಾ. ೮-೧೪).
[ ದೇವ + ಭೂಷಣ ]

**ದೇವಭೇಷಜ** (ನಾ). ದೇವತೆಗಳ ವೈದ್ಯ : ದೇವಭೇಷಜರಾದ ಅಶ್ವಿನೀ ದೇವತೆಗಳನ್ನೇ ಕುರಿತು ಪ್ರಾರ್ಥಿಸಿ (ಚಿತಂಬಾ. ೧೭). [ದೇವ + ಭೇಷಜ]

**ದೇವಭೋಗ** (ನಾ). ದೇವಸ್ಥಾನದ ಖರ್ಚು ವೆಚ್ಚಗಳಿಗಾಗಿ ಕೊಡುವ ಜಮೀನು; ದೇವರಿಗಾಗಿ ಕೊಡುವ ಭೂಮಿ,-ಗ್ರಾಮ: 'ತಿರುವಯ್ಯನು ಆನೆಊರೊಳ್ಕೊಟ್ಟ ದೇ ವ ಭೋ ಗ ಕಣ್ಡುಗ ಗಟ್ದೆಯು (ಎಕ. X, ಚಿಂತಾಮ. ೪೯-೧೧; 951); ಮಾಚಿರಸರ ಮಗಂ ಪುದಿಯಣ್ಣ ಗಂಗೇಶ್ವರಕ್ಕೆ ಬಿಟ್ಟ ದೇವಭೋಗದಿ ಗಟ್ದೆ ಮೂಗಣ್ಡುಗಂ (ಎಕ. X, ಶ್ರೀನಿವಾ. ೧೭-೧೭; ಸು. 1015) ; ಚಕ್ರವರ್ತಿಯ ದಯೆಯಿಂ ದೇವಭೋಗಂ ಗುಡಿಗೆಟೆಯ ನಾಳುತ್ತಮಿರೆ (ಸೌಇಇ. XX, ೪೭-೨೦ : 1072). [ ದೇವ + ಭೋಗ ]

**ದೇವಭೋಳೆ** (ಗು). ಮೋಸವನ್ನರಿಯದ; ನಿಷ್ಕಪಟಿಯಾದ; ಮುಗ್ಧ : ನಿಮ್ಮಂಥ ದೇವಭೋಳೇ ಜನರಿಗೆ ಹೀಂಗ ಆಗಬಾರದಾಗಿತ್ತು (ಗಂಗಾಸಾ. ೪); ಪಂಡಿತರು ದೇವಭೋಳೆ ಮನುಷ್ಯರು (ಸಮಜೀ. ೩೨೭) ; ಅತ್ಯಂತ ಸರಳ ದೇವಭೋಳೆ ಮತ್ತು ಪ್ರೇಮಳಸ್ವಭಾವದ ಒಬ್ಬ ಕ್ರಿಸ್ತೀಯಮಹಿಳೆ ಇರುತ್ತಿದ್ದಳು (ಸ್ಮೃತಿಚಿ. ೨೯೫). [ ←ಮರಾ. ದೇವಭೋಳಾ ]

**ದೇವಮಂದಿರ** (ನಾ). ದೇವಾಲಯ ; ಗುಡಿ : ದೇವಮಂದಿರದಲ್ಲಿ ಆರತಿಯ ಘಂಟಾರವ ಏಳುವದುಂಟು (ಇಪ್ಪಕ. ೩೫೨); ಇಂದಿಗೂ ಆ ದೇವಮಂದಿರ ಒಳಕೋಟೆಯ ಕೊಂಬಿನಂತಿದೆ (ಚಿಳುಮು. ೫೩). [ ದೇವ + ಮಂದಿರ ]

**ದೇವಮಣಿ** (ನಾ). ೧. ಸಮುದ್ರಮಥನಕಾಲದಲ್ಲಿ ಕ್ಷೀರಸಮುದ್ರದಿಂದ ಹುಟ್ಟಿದುದೆಂದು ನಂಬಲಾದ ರತ್ನ ; ಕೌಸ್ತುಭ: ದೇವಮಣಿಗೂಡಿ ಜಳಧಿಯೊಳಾ ವಿಬುಧವರಾಶ್ವಮೊಗೆದಗಲ್ದಿರ್ಪುದವಾ ದೇವಮಣಿಗೂಡಿ ರಾಜಿಸುವೀ ವಿಪುಳತರಾಶ್ವಯುಂಗಕದೇಂ ಪಾಸಟಿಯೋ (ರಾಜಶೇ. ೧೨-೧೦೫). ೨. ಬೇಡಿದುದನ್ನು ಕೊಡುವುದೆಂದು ನಂಬಲಾದ ಸ್ವರ್ಗಲೋಕದ ಮಣಿ ; ಚಿಂತಾಮಣಿ: ಸುರರಂಗೀತನು ಕಲ್ಪತರು ಭೂಸುರರಿಗೀತನು ದೇವಮಣಿ (ತೊರಾ. ೬-೮-೩೦). ೩. ಕುದುರೆಯ ಕೊರಳಲ್ಲಿರುವ ಶುಭ ಸೂಚಕವಾದ ಸುಳಿ : "ನಡುಗೊರಲ ಸುಟಿ ದೇವಮಣಿ" (ಮಂಗರಾ. ೮೩-೨೦) ; ಕೊರಲೊಳ್ ಕಣ್ಗೆಸೆದೊಪ್ಪೆ ದೇವಮಣಿ ಮೇಣ್ ರೋಚಮಾನಂ ಪೊದಟ್ದಿರೆ ಪೂರ್ವಾಂಗದ ದೋಷಮಂ . . . ಪಿಂಗುಗುಂ (ಲೋಕೋಪ. ೧೧-೮೪); ಮಾರುತಂಗತಿ ವೇಗ ಪಂಚಕಲ್ಯಾಣವಿದೆ ದೇವಮಣಿ ದೊರೆ ಸುಳಿಗಳಿವೆಯಾ ಸುಲಕ್ಷಣವನಱಿವರಾರು (ಭಾವಚಿಂ. ೬-೧೭).
[ ದೇವ + ಮಣಿ³ ]

**ದೇವಮತಿ** (ನಾ). ದೇವತೆಗಳಿಗೆ ಬುದ್ಧಿಯನ್ನು ಕೊಡುವವನು : ದೇವಗತಿ ದೇವಮತಿ ದೇವದುರ್ಲಭನೆಂದು ಕರೆವ ಬಿರುದಿನ ಕಹಳೆಗಳ ಮಹಾರವದೊಳಗೆ ಧರೆ ನಡಂಗೆ (ನಂಬಿರ. ೬-೧೧೮). [ ದೇವ + ಮತಿ ]

**ದೇವಮನೋಹರಿ** (ನಾ). [ಸಂಗೀತ] ಒಂದು ರಾಗದ ಹೆಸರು : ದೇವಮನೋಹರಿ – ೩೩ನೇ ಮೇಳಕರ್ತ ಖರಹರಪ್ರಿಯದಲ್ಲಿ ಜನ್ಯ (ಸಂಗೀಶಂ. ೧೪೧). [ ಸಂ. ದೇವಮನೋಹರೀ ]

**ದೇವಮನ್ಯ** (ನಾ). = ದೇವಮಾನ್ಯ ೧ : ಆ ಪನ್ನಿರ್ಮ್ಮರ್ತ್ತರ್ಕ್ಕೆಯ್ಯುಂ ನಾಲ್ಕುಗೆಯ್ದು [ದೇವ]ಮನ್ಯ[ಗ್ಗಾ]ಗಿ ಬಾಟ್ದುದು (ಸೌಇಇ. XI-I, ೩೪-೧೩ ; 925). [ <ಸಂ. ದೇವಮಾನ್ಯ ]

**ದೇವಮಾತೃಕ** (ನಾ). ಮಳೆಯ ನೀರಿನಿಂದಲೇ ಬೆಳೆಯನ್ನು ಬೆಳೆಯುವ ಭೂಮಿ : "ಅವುದು ಬೆಳೆಗುಂ ವೃಷ್ಟಿಯಿನಾ ವಿಷಯಂ ದೇವಮಾತೃಕಂ ಸತತಂ" (ವಸ್ತುಕೋ. ೨೭-೩) ; "ಮುಗಿಲ್ಯ ನೀರಿಂ ಬೆಳೆವ ಮಹಿ ದೇವ ಮಾತೃಕಂ" (ಮಂಗರಾ. ೨೮-೪) ; ದೇವ [ಪಾಠಾಂ. ದೆಯ್ವ]ಮಾತೃಕವೆನಿಪ್ಪ ಪೊಲಂ ನವಗಂಧಶಾಳಿಯಂ ಬೆಳೆವುದು (ಪಂಪಭಾ. ೧-೫೪) ; ಶಾಳಿವನಂ . . . ಸಿತೇಕ್ಷುರಸಪ್ರವಾಹಮಾತೃಕವೆನೆ ಸಂತತಂ ಬೆಳೆಯೆ ಪೆರ್ಬೆಳಸಿಂ ಪುಸಿಯಾಯ್ತು ದೇವಮಾತೃಕವೆಸರೆನ್ನದಾ ನೆಲದ ಕೆಯ್ವೊಲನಂ ಪೆಱತೇ ನೆಂಬುದೋ (ಮಲ್ಲಿಪು. ೨-೧೭) ; ನದೀಮಾತೃಕಮುಂ ದೇವಮಾತೃಕಮು ಮೆಂಬ ಭೇದಮಂ ಬೇರ್ಪಡಿಸಿ (ಪುಷ್ಪಪು. ೨-೧೪ ವ) ; ದೇವಮಾತೃಕ ನದೀಮಾತೃಕಗಳ ಬಗೆಗೊಳದಾ ನಾಡೊಳು (ತ್ರಿಭುತಿ. ೨-೧೪). [ ಸಂ. ]

**ದೇವಮಾತೃಕೆ** (ನಾ). =ದೇವಮಾತೃಕ: ದೇವಮಾತೃಕೆ ನದೀಮಾತೃಕೆಯಾದ ನಾನಾವಿಧ ಬೆಳೆಯ ಭೂಮಿಗಳು . . . ಧಾನ್ಯಸಂದೋಹಕಾವಾಸ ವಾಗಿರುತಿಹುದು (ನಾಗಕು. ೨-೧೮). [ ಸಂ. ದೇವಮಾತೃಕ ]

**ದೇವಮಾತೆ** (ನಾ). ದೇವತೆಗಳ ತಾಯಿ; ಅದಿತಿ : ಮಿತ್ರಾ ವರುಣರನ್ನು . . . ಸತ್ಯಸ್ವರೂಪಳೂ ದೇವಮಾತೆಯೂ ಆದ ಅದಿತಿಯು . . . ಹಡೆದಳು (ಋಕ್ಸಾರ. ೧೩೦). [ ದೇವ + ಮಾತೆ ]

**ದೇವಮಾದಳ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ದೊಡ್ಡ ಮಾದಳ : (*). [ ದೇವ + ಮಾದಳ ]

**ದೇವಮಾನ** (ನಾ). ೧. ಒಂದು ಅಳತೆಯ ಪ್ರಮಾಣ : ಅಲ್ಲಿಲ್ಲಿಯ ಸಮಸ್ತ ಅಂಗಡಿಯ ಆವಟದಲು ಹೇಱಿಗೆ ಭತ್ತ ದೇವಮಾನ ೨ ಹೆಜ್ಜುಂಕ ಹೇಱಿಂಗೆ ಭತ್ತ ಬಳ್ಳ ೧ (ನಾಂದೇಡ್. ೩-೨೨ ವ ; 1047) ; ಊರಲ್ಲಿ ಹರದರು ಮಾಱುಗೊಂಡ ಭತ್ತಕ್ಕೆ ಪೊಂಗೆ [ಹಾ]ಗವೊನ್ದುಮಂ ಹೇಱಿಸಲ್ಲಿ ದೇವಮಾನವು ಧರ್ಮ್ಮವಿಚಾರದಲ್ಲಿ ಮುದ್ರಾಪಣವುಂ ಇನ್ತೀ ಧರ್ಮ್ಮವಂ ಪ್ರತಿಪಾಳಿಸುವರ ಧರ್ಮ್ಮ (ಕಇಇ. ೪೭-೪-೨೪ ; ಸು. 1152). ೨. ದೇವತೆಗಳ ಲೆಕ್ಕದಲ್ಲಿ ಕಾಲ ಅಥವಾ ಸ್ಥಳದ ಅಳತೆ. [ ದೇವ + ಮಾನ ]

**ದೇವಮಾನವ** (ನಾ). ದೇವತೆಯ ಸ್ವಭಾವದವನು : ಶ್ರೀರಾಮಕೃಷ್ಣ ಪರಮಹಂಸರನ್ನು ಈ ಯುಗದ ದೇವಮಾನವನೆಂದು ಕರೆಯಬಹುದು (ರೂಢಿ). [ ದೇವ + ಮಾನವ ]

**ದೇವಮಾನ್ಯ** (ನಾ). ೧. ದೇವತೆಗಳ ಗೌರವಕ್ಕೆ ಪಾತ್ರನಾದವನು ; ಮಹಾತ್ಮ : ಸಾಮಾನ್ಯನಂ ದೇವಮಾನ್ಯಂಗೆತ್ತುದಜ್ಜ, ನಿನ್ನಳ್ಕರೂಹೆ ! (ಶ್ರೀರಾಮಾ. ೨೭೩-೨೫೨). ೨. ದೇವತೆಗಳು ಕೊಟ್ಟ ಕೊಡುಗೆ : ಇನ್ ನಿನ್ನ ದಿನಬಾಟ್ಸಿ ಫುಟಗಳ್ಗೆ ಕಳ್ದಗುಡು ಪೋಗು ದೇವಮಾನ್ಯಂಗಳನ್ (ಬದ್ಧಪ್ರ. ೬-೧೦೫). ೩. ದೇವಾಲಯಗಳಿಗೆ ದಾನವಾಗಿ ಕೊಟ್ಟ ಜಮೀನು ; ಉಂಬಳಿ : ಇಂತೊಪ್ಪುವ ಕುಮಾರನುದಯೋತ್ಸವದಿಂ ದೇವಮಾನ್ಯಾದಿಗಳಂ ಕೊಟ್ಟು ನಾಮಕರಣಂಗೆಯ್ದು (ಹಮ್ಮೀರ. ೨-೫೫ ವ). [ ದೇವ + ಮಾನ್ಯ ]

**ದೇವಮಾರ್ಗ** (ನಾ). ದೇವತೆಗಳು ಸಂಚರಿಸುವ ದಾರಿ ; ಆಕಾಶ. [ ದೇವ + ಮಾರ್ಗ ]

**ದೇವಮುಖ** (ನಾ). ದೇವತೆಗಳಿಗೆ ಬಾಯಿಯಂತಿರುವವನು ; ಅಗ್ನಿ : ಸುರರ ಬಿನ್ನಹವನವಧರಿಸುತಂ ಗೌರೀಶ ಪರಮಸುಖದಾನಂದದಮೃತರಸ ವೀರ್ಯಮಂ ಧರಿಸುವಡೆ ಸಾಮರ್ಥ್ಯ ಹವಿಗಲ್ಲದಿಲ್ಲೆಂದು ದೇವಮುಖ ನಾನನದೊಳು ಕರುಣಿಸುತ (ಲಕಿಜಂ. ೧೭-೨೦). [ ದೇವ + ಮುಖ ]

**ದೇವಮುನಿ** (ನಾ). ದೇವತೆಗಳ ಋಷಿ ; ನಾರದ : ಆಗಳಾ ಭೋಜರಾಜಂ ದೇವಮುನಿ ನುಡಿದ ನುಡಿಯಂ ಭಾವಿಸಿ (ಜಗವಿ. ೫-೫೭) ; ಇಳಿದು ಧರಣಿಗೆ ಸುಳಿದು ನೀತಿಸ್ಖಲಿತಜಡರನು ತಿದ್ದಿ ತಿಳುಹುವ ಸುಲಭತನದಲಿ ದೇವ ಮುನಿ ನಿನಗಾರು ಸರಿಯೆಂದ (ಕುಮ್ಯಾಸ. ೧-೮೪). [ ದೇವ + ಮುನ್ಸಿ ]

**ದೇವಮುಳ್ಳು** (ನಾ). ಒಂದು ಬಗೆಯ ವನಸ್ಪತಿ : ಮೂತ್ರಕಲ್ಲಿಗೆ ಗುಳಿಗೆಯ ಮಾಡುವ ಕ್ರಮ :–ಕೆಂಪಿನ ಅಂಕೋಲಬೇರು, ಹುಳಿಸೊಪ್ಪು, ಗೇರು, ದೇವಮುಳ್ಳು, ಬಿಳಿಕಣಿಕೆಬೇರು . . . ಅಂಬಿಲದಲ್ಲಿ ಅರೆದು ಮೂತ್ರ ಕಲ್ಲಿಗೆ ಗುರುಗುಂಜಿಯ ಪ್ರಮಾಣಕ್ಕೆ ಕೊಡುವುದು (ವಿಷ್ಮವಿ. ೧೨೪). [ ದೇವ + ಮುಳ್ಳು (<ಮುಳ್) ]

**ದೇವಮೂಢತ್ವ** (ನಾ).=ದೇವತಾಮೂಢ : ಕೇವಲಜ್ಞಾನದರ್ಶನಸುಖ ವೀರ್ಯಾದಿ ನಿಜಶುದ್ಧಗುಣಂಗಳಪ್ಪ . . . ನಿಜಶುದ್ಧಾತ್ಮನಂ ದೇವ ನೆಂಬುದು ಅಂತಪ್ಪ ನಿಜಶುದ್ಧಾತ್ಮದೇವನನಱಿದು ನಂಬದುದೆ ದೇವ ಮೂಢತ್ವಮೆಂಬುದು (ಪಸಾರ. ೪೬೦). [ ಸಂ. ]

**ದೇವಯಜನ** (ನಾ). ಯಜ್ಞವೇದಿಕೆ : ಸರಯೂನದಿಯ ತೀರದಲ್ಲಿ ಭವ್ಯ ವಾದ ದೇವಯಜನವೊಂದು ಸಿದ್ಧವಾಗಿದೆ (ಮಹಾಅ. ೧೦೨) ; ಯಾಗಶಾಲೆಗೆ ದೇವಯಜನವೆಂದು ಹೆಸರು (ಮಹಾಅ. ೧೦೨ ಅಡಿಟಿ). [ ಸಂ. ]

**ದೇವಯಜ್ಞ** (ನಾ). ದೇವತೆಗಳ ಪ್ರೀತ್ಯರ್ಥವಾಗಿ ಗೃಹಸ್ಥನು ಪ್ರತಿ ದಿನವೂ ಮಾಡಬೇಕಾದ ಪಂಚಯಜ್ಞಗಳಲ್ಲಿ ಒಂದು ; ಅಗ್ನಿಯಲ್ಲಿ ಹೋಮ ಮಾಡಬೇಕಾದ ಔಪಾಸನ ಮೊದಲಾದ ಕರ್ಮ : ಬಳಿಕ ದೇವಯಜ್ಞ ಪಿತೃಯಜ್ಞ ಮನುಷ್ಯಯಜ್ಞ ಭೂತಯಜ್ಞ ಬ್ರಹ್ಮಯಜ್ಞಾದಿ ಗಳಂ ಮಾಳ್ಪುತನಾಗಿ (ವಿವೇಕ. ೦೩೪) ; ದೇವಯಜ್ಞ ಮತ್ತು ಬ್ರಹ್ಮಯಜ್ಞ ಎಂಬ ದೈನಂದಿನದ ಕರ್ತವ್ಯನಿರ್ವಹಣದಿಂದ ಗೃಹಸ್ಥನು ಲೋಕಸಂಗ್ರಹ ನಿರತನಾಗಿರಬೇಕು (ಹುಕ್ಕಾರ. ೯೦ ಪೀಠಿಕೆ). 'ಪಂಚಯಜ್ಞ' ಪರಾ. [ ದೇವ + ಯಜ್ಞ ]

**ದೇವಯಾನ** (ನಾ). ೧. ದೇವತೆಗಳು ಸಂಚರಿಸುವ ವಾಹನ,–ವಿಮಾನ ಮೊದಲಾದುವು. ೨. ಹೆಣವನ್ನು ಹೊರಲು ಕಟ್ಟುವ ಸಾಧನ ; ಚಟ್ಟ : ಒಳಗೆ ಬಂದವರು ತಾವು ತಂದಿದ್ದ ದೇವಯಾನವನ್ನು ಕೆಳಗಿಟ್ಟು . . . ಗೋಣಿಯನ್ನು ಮಂಚದಿಂದೆತ್ತಿ ಅದರ ಮೇಲಿಟ್ಟರು (ರಾಜಾಮು. ೦೧೫). ೩. [ವೇದಾಂತ] ಪರಲೋಕದ ದಾರಿ ; ಬ್ರಹ್ಮಲೋಕದ ಮಾರ್ಗ : ದೇವತೋಪಾಸಕರ ದೇವಯಾನ (ಇದಕ್ಕೆ ಶುಕ್ಲಮಾರ್ಗವೆಂದೂ ಅರ್ಚಿರಾದಿಮಾರ್ಗವೆಂದೂ ಹೆಸರು) (ಅಮೃತ. ೬-೨೨ ಅಡಿಟಿ) ; ರಾಜನು ಆತನನ್ನು ದೇವಯಾನ, ಪಿತೃಯಾನ ಮಾರ್ಗಗಳ (ಮರಣಾನಂತರ ಆತ್ಮನ ಗತಿಗಳು) ಸಾಧನಗಳೇನೆಂಬುದನ್ನು ಬಲ್ಲೆಯಾ ? ಎಂದು ಕೇಳಿದನು (ಭಾರದ. ೪೧): P ಮುಕ್ತಿಸಾಧಕನಿಗೆ ಇರುವ ಪರಲೋಕಮಾರ್ಗವು ಎರಡು. ೧. ದೇವಯಾನ. ೨. ಪಿತೃಯಾನ. 'ದೇವಯಾನ' ದಿಂದ ಪ್ರಯಾಣಮಾಡುವವನು ಮತ್ತೆ ಭೂಮಿಯಲ್ಲಿ ಹುಟ್ಟುವುದಿಲ್ಲ. ಬ್ರಹ್ಮಲೋಕವನ್ನು ಸೇರಿ ಅಲ್ಲಿ ಜ್ಞಾನಮಹಿಮೆಯಿಂದ ಮುಕ್ತಿ ಯನ್ನು ಪಡೆಯುತ್ತಾನೆ. ಇದಂ ಕ್ರಮಮುಕ್ತಿಮಾರ್ಗ. 'ಪಿತೃ ಯಾನ'ದಿಂದ ಪ್ರಯಾಣ ಮಾಡುವವನು ತನ್ನ ಪುಣ್ಯವು ಮುಗಿದ ಮೇಲೆ ಮತ್ತೆ ಭೂಮಿಯಲ್ಲಿ ಹುಟ್ಟಬೇಕಾಗುತ್ತದೆ. ಜ್ಞಾನಿಗಳು ದೇವಯಾನದಿಂದಲೂ ಕರ್ಮಿಗಳು ಪಿತೃಯಾನದಿಂದಲೂ ಮುಕ್ತಿಗೆ ಹೋಗುತ್ತಾರೆ. [ ದೇವ + ಯಾನ ]

**ದೇವಯು** (ನಾ). ದೇವರಲ್ಲಿ ಭಕ್ತಿಯುಳ್ಳವನು ; ದೈವಭಕ್ತ : ದೇವಯಜನದಲ್ಲಿ ಈ ಕೊನೆಯಿಂದ ಆ ಕೊನೆಯವರೆಗೆ ಇದ್ದವರೆಲ್ಲರೂ ದೇವಯುಗಳಾಗಿ ಶ್ರದ್ಧಾಭಕ್ತಿಸಮನ್ವಿತರಾಗಿ ಕಾದಿದ್ದಾರೆ (ಮಹಾಅ. ೧೦೪) : ದೇವಯು–ದೇವತೆಗಳು ಬೇಕು ಎನ್ನುವ ಶ್ರದ್ಧಾವಂತರು (ಮಹಾಅ. ೧೦೪ ಅಡಿಟಿ). [ ಸಂ. ]

**ದೇವಯುಗ** (ನಾ). ಮನುಷ್ಯರ ನಾಲ್ಕುಯುಗಗಳ ಕಾಲ ; P ಮನುಷ್ಯ ಲೋಕದ ೩೬೦ ವರ್ಷಗಳಿಗೆ ದೇವಲೋಕದ ಒಂದು ವರ್ಷವಾಗು ತ್ತದೆ. ಇಂಥ ದೇವವರ್ಷಗಳು ೪೮೦೦ ಆದರೆ ಕೃತಯುಗ, ೩೬೦೦ ಆದರೆ ತ್ರೇತಾಯುಗ, ೨೪೦೦ ಆದರೆ ದ್ವಾಪರಯುಗ ಮತ್ತು ೧೨೦೦ ಆದರೆ ಕಲಿಯುಗ. ಒಟ್ಟು ೧೨೦೦೦ ವರ್ಷಗಳಾದರೆ ಒಂದು ದೇವಯುಗ ಅಥವಾ ಮನುಷ್ಯರ ಚತುರ್ಯುಗಗಳಾಗುತ್ತವೆ : ೭೧ ದೇವಯುಗಕ್ಕೆ ಮನ್ವಂತರ (ಸಿದ್ಧಾಂತಿ. ೩೯). [ ದೇವ + ಯುಗ ]

**ದೇವಯೋನಿ** (ನಾ). ೧. ದೇವಜಾತಿಗೆ ಸೇರಿದವನು; ದೇವತೆ; ಗಂಧರ್ವ, ಕಿನ್ನರ ಮುಂತಾದವರು : "ಖೇಚರ ಕಿನ್ನರ ಯಕ್ಷ ಪಿಶಾಚರ್ ಗಂಧರ್ವರಪ್ಸರಃಪ್ರಕರಂ ದೋಷಾಚರರೆಂದದ್ಭುತಗುಣಗೋಚರರ ವರೆಯ್ದೆ ದೇವಯೋನಿಗಳೆನಿಪರ್" (ವಸ್ತುಕೋ. ೧೦-೫೪) ; "ಕಿನ್ನರರು ಗಂಧರ್ವರಪ್ಸರರು . . . ದೇವಯೋನಿಗಳೆನಿಕ್ಕುಂ" (ಮಂಗರಾ. ೧೭-೧೭). ೨. ಅಗ್ನಿಯನ್ನು ಉತ್ಪಾದಿಸುವ ಮರದ ಸಾಧನ ; ಅರಣಿ. [ ದೇವ + ಯೋನಿ ]

**ದೇವಯ್ಯ** (ನಾ). ಒಬ್ಬಾತನ ಹೆಸರು : ದಣ್ಣಾನಾ[ಯ]ಕ ದೇವಯ್ಯಂ ಊರನಾಳೆ (ಸೌಇಇ. XX, ೧೫-೧೨ : 904); ಮೊಳಿಯನೂರ ದೇವಯ್ಯನುಂ . . . ಧರ್ಮ್ಮರಾಸಿ ಭಟಾರರ ಕಾಲಂ ಕರ್ಚ್ಚಿ ಕೊಟ್ಟ ಸ್ಥಿತಿ (ಎಕ. XI, ಚಿತ್ರದು. ೭೭ ೨೦ ; 937). [ ದೇವ + ಅಯ್ಯ$_1$ ]

**ದೇವರ್,** ದೇವರು (ನಾ). ೧. ಪರಮಾತ್ಮ; ಭಗವಂತ: ನಮ್ಮ ದೇವರ್ ಬಂದು ಕಾಯದಿರೆ, ಅವನ ಕಯ್ ತಡೆಯದಿರೆ . . . ಅದುವೆ ನಾವ್ ನಾಯ್ಪಾಲ್ ಶವಂಗಳ್! (ಅಶ್ವತ್ಥಾ. ೪೩-೩). ೨. ರಾಜ, ಗುರು, ಹಿರಿಯ ಮುಂತಾದವರನ್ನು ಕುರಿತು ಗೌರವದಿಂದ ಹೇಳುವ ಮಾತು (ತಾವು ಎಂಬಂತೆ): ದೇವರ ಬಾಹುಬಳಮಾಜೇಯಮುಮಸಹಾಯ ಮುಮಪ್ಪುದಾದೊಡಂ . . . ದೇವರ್ ನೆಗಟಲಾಗದೇನಂ ನೆಗಟ್ಟೊಡಂ ಕುರುಪಿತಾಮಹನೊಳಾಳೋಚಿಸಿ ನೆಗಟ್ಟುದು (ಪಂಪಭಾ. ೧೩-೫೦೫); ದೇವರೆ ಭಾಜನಂ ವಿದಿತ ರತ್ನಚಯಕ್ಕೆ ದಲೆಂದು ತನ್ನ ಸದ್ಭಾವದಿನೆನ್ನನಾಳ್ದನ ಮಗಳ್ ಪದಪಿಂದಮೆ ತಂದಳ್ (ಕಾದಂಪೂ. ೩೭): ಅದು ಕಾರಣದಿನಾಕೆ ದಶಮಾವಸ್ಥೆಗೆ ಪಕ್ಕಾಗದನ್ನೆಗಮಿದಕ್ಕೆ ತಕ್ಕುದಂ ದೇವರ್ ಸಮಕಟ್ಟುವುದು (ಚಂದ್ರಪ್ರ. ೫-೧೩೭ ವ). **ದೇವರು**: ೧. ತಾವೆ ದೇವರೆಂಬ ಅಸುರರ ಕಾನನವ ತರಿದೊಟ್ಟುವ . . . ವ್ಯಾಸರಾಯರಿರಲು (ಪುರಂದ. ೪-೨-೨); ದೇವರಿಗೆ ಸೇರದ ದೇಶವಿಲ್ಲ, ದೇವರಿಗೆ ತಿಳಿಯದ ಭಾಷೆಯಿಲ್ಲ (ಜಕರಾ. ೨೭೪); ದೇವರು ಕೊಟ್ಟರೂ ಪೂಜಾರಿ ಕೊಡ (ಗಾದೆ). ೨. ಹೊತ್ತಿ ಹೋಗೆವ ಪರಾಕ್ರಮಾಗ್ನಿಯ ತುತ್ತು ಪದ್ಮವ್ಯೂಹ ದೇವರು ಚಿತ್ರಯಿಸುವುದು ಹೊತ್ತುಗಳೆಯದೆ ಎನ್ನ ಕಳುಹೆಂದ (ಕುಮಾವ್ಯಾ. ೫-೪೫); ಸಿಟ್ಟು ಪಾಪದ ಬೇಡಿ ದೇವರು (ದೇವಹಂ. ೦೯೩). ೩. ದೇವತಾವಿಗ್ರಹ: ದೇವರಿಲ್ಲದ ಗುಡಿಯು ಪಾಳು ಬಿದ್ದಂಗಡಿಯು (ಕನಕ. ೫೦-೧); ದೇವರಿಲ್ಲದ ಗುಡಿ ಯಂತೆ ಅದರಲ್ಲಿ ಮಧುವಿರಲಿಲ್ಲ (ಔಳಕ. ೩೯).

**ದೇವರ ಅನುಗ್ರಹ** = ದೇವರಿಂದುಂಟಾಗುವ ದಯೆ, – ಕರುಣೆ: ದೇವರ ಅನುಗ್ರಹದಿಂದ ಯಾವ ತೊಂದರೆಯೂ ಆಗುವುದಿಲ್ಲ (ಪದ್ಮಸ.೧೨); ನಿಮ್ಮ ಪಾಲಿಗೆ ದೇವರ ಅನುಗ್ರಹವಿದೆ (ದೇವಹಂ. ೦೬೩). **ದೇವರ ಆಣೆ, ದೇವರಾಣೆ** = ಭಗವಂತನ ಹೆಸರಿನಲ್ಲಿ ಮಾಡುವ ಪ್ರಮಾಣ: ನೂರು ದೇವರ ಆಣೆ . . . ನಾನು ಯಾವ ತಪ್ಪನ್ನು ಮಾಡಿಲ್ಲ (ಪದ್ಮಸ. ೩೭); ಅಡಿಗಡಿಗೆ ದೇವರಾಣೆ ಅಡಿಗಡಿಗೆ ಭಕ್ತರಾಣೆ . . . ಎಂಬ ವಚನವೇ ಹೊಲ್ಲ (ಬಸವ. ೦೭೭); ದೇವರಾಣೆಗೂ ಇದು ನಟನೆಯಲ್ಲ (ಮುಕ್ತ್ಯದ. ೩೩). **ದೇವರ ಒಕ್ಕಲು** = ಒಂದು ದೇವತೆಯನ್ನು ತಮ್ಮ ಮನೆದೇವತೆ ಯನ್ನಾಗಿ ಪೂಜಿಸುವ ಮನೆತನ, – ವಂಶ: ಲಗ್ನ ಮೊದಲಾದ ಮಂಗಲ ಕಾರ್ಯಗಳಲ್ಲಿ ಈ ದೇವರ ಒಕ್ಕಲುಳ್ಳವರು ಗುಗ್ಗಳ ಹೊತ್ತಿಸಿ ನಂದಿಯ ಆಡುತ್ತಾರೆ (ಕನ್ನಜಾ. ೮). **ದೇವರ ಒಡವೆ** = ದೇವತಾಮೂರ್ತಿಗೆ ತೊಡಿಸುವ ಆಭರಣ: ಕೋಟಿಪತಾಳರು ಅಲಂಕರಿಸಿದ್ದ ದೇವರ ಒಡವೆಗಳನ್ನು ಉಗ್ರಾಣದ ಪೆಟ್ಟಿಗೆಯ ಒಳಸೇರಿಸಿ . . . ಮನೆಗೆ ಬಂದರು (ದೇವಹಂ. ೧೧). **ದೇವರಂಗಡಿ** = ದೇವಾಲಯಕ್ಕೆ ಸೇರಿದ ಅಂಗಡಿ: ವತ್ತ್ರವಂಗಡಿಯುರೆಯುಂಗಡಿ ದೇವರಂಗಡಿ ಮೂನ್ನದಂಗಡಿಯುಂನದುಡಿ ಸುರಿಯಂ ಕೊಂಡು (ಕಇ. II, ೨೧-೨೩; 1147). **ದೇವರ ಕಂಡಿ** = ದೇವರನ್ನಿಡುವ ಮಾಡ, – ಗೂಡು: ದೇವರ ಕಂಡಿಯಲ್ಲಿ ಪ್ರಸಾದ ಇದೆ (ದೇವಹಂ. ೦೩). **ದೇವರ ಕರೆ ಬರು** = ಸಾವು ಬರು; ಅವಸಾನಕಾಲ ವುಂಟಾಗು: ದೇವರ ಕರೆ ಬಂದದ್ದರಿಂದ ಅವಳು ಹೋದಳು (ಶ್ಯಾಮುತಾ. ೨೮೮). **ದೇವರ ಕಲ್ಲು** = ದೇವರ ಆಕಾರಗಳನ್ನು ಕೆತ್ತಿರುವ ಕಲ್ಲು; ದೇವರೆಂದು ಭಾವಿಸಿರುವ ಕಲ್ಲು: ಅಲ್ಲಲ್ಲಿ ಸಣ್ಣ ಸಣ್ಣ ದೇವರ ಕಲ್ಲುಗಳಿವೆ (ರಕ್ತರೂ. ೬೦). **ದೇವರ ಕಿರೀಟ** = ದೇವರಿಗೆ ತೊಡಿಸಿರುವ ಕಿರೀಟ: ಯಾವುದೋ ಮತ್ತೇರಿದ ದೇವರ ಕಿರೀಟದಿಂದ ಉದುರಿದ ರತ್ನ (ಮನೆಜ.೬೮); ಮಂಗಳಾರತಿಯ ಬೆಳಕಿನಲ್ಲಿ ದೇವರ ಕಿರೀಟವು ಥಳಥಳನೆ ಹೊಳೆಯು ತ್ತಿತ್ತು (ರೂಢಿ). **ದೇವರ ಕೃಪೆ** = ದೇವರ ಅನುಗ್ರಹ: ಅಮ್ಮಾ, ದೇವರ ಕೃಪೆ ಯಾವಾಗಲೂ ಇರುತ್ತದಲ್ಲವೇ? (ಶ್ಯಾಮುತಾ. ೨೨೭); ದೇವರ ಕೃಪೆ ಇದ್ದರೆ ಎಲ್ಲಾ ಕೆಲಸ ಹೂವಿನ ಸರ ಎತ್ತಿದ ಹಾಗೆ ಆಗುತ್ತೆ (ರೂಢಿ).

**ದೇವರ ಕೊಳಗ** = ದೇವಗೊಳಗ: (ಎಸಮ್ಮ. XV, ೩೩). **ದೇವರ ಕೋಣೆ** = ಮನೆಯಲ್ಲಿ ದೇವರನ್ನಿಡುವ ಕೊಠಡಿ; ಪೂಜಾಗೃಹ: ಆಬೋಲೀನ ಮೆಲ್ಲನೆ ಎದ್ದು ಕೈಕಾಲು ತೊಳೆದು ದೇವರ ಕೋಣೆ ಹೊಕ್ಕು . . . ಪ್ರಾರ್ಥಿಸಹತ್ತಿದಳು (ಆಬೋಲೀ. ೧೮); ತಾಯಿ ದೇವರ ಕೋಣೆಗೆ ಹೋಗಿ ದೇವರ ಮೊರೆ ಹೊಕ್ಕಳು (ಶ್ಯಾಮುತಾ. ೦೩). **ದೇವರ ಗಂಟು** = ದೇವರಿಗಾಗಿ ಸಂಗ್ರಹಿಸಿ, ಮೀಸಲಾಗಿಟ್ಟ ಹಣ: ದೇವರ ಗಂಟನ್ನು ಬಿಚ್ಚಿ ಹಣ ತೆಗೆದುಕೊಂಡು ಬಂಗಾರದ ಆಣಸುಗಳನ್ನು ಮಾಡಿಸಿತ್ತು (ಬೆಳುಮು. ೦೭೮). **ದೇವರ ಗಂಡ** = ದೇವರಿಗೆ ಒಡೆಯನಾದವನು; ದೇವಾಧಿದೇವ: ದೇವಾದಿದೇವ ದೇವರ ಗಂಡ ದೇವರಾದಿತ್ಯ . . . ಎಂಬ ಧ್ವನಿ ತೀವಿದ ಮೃದಂಗಭೇರೀರವಂಬೆರಸಿ ಹುಟ್ಟಿತ್ತು ಗಗನಾಂಗಣ ದೊಳು (ಸೋಮಚ. ೪-೨೮). ಎಲ್ಲಾ ದೇವರ ಗಂಡ . . . ಶಿವಬಿಲ್ಲ ಮುರಿದ ಪ್ರಚಂಡ (ಪುರಂದ. ೧-೭೭-೯). **ದೇವರ ಗುಡಿ** = ದೇವಾಲಯ; ದೇವಸ್ಥಾನ: ದೇವರ ಗುಡಿ ಮಠ ಮನೆಯೆಲ್ಲ ಮಣ್ಣು ಆವಾಗ ಅಡುವ ಮಡಕೆಯು ತಾ ಮಣ್ಣು (ಪುರಂದ. ೨-೮೦-೨); ಬಸವಣ್ಣ ದೇವರ ಗುಡಿಗೆ ಕರೆತರುತ್ತಿದ್ದರೆ ಅದನ್ನು ಬೆನ್ನಟ್ಟಿಕೊಂಡು ಬಂದರು ಜನ (ಬೆಳುಮು. ೧೮೦). **ದೇವರ ಗುಡ್ಡಿ** = ಕಳಸಪೂಜೆ ಮಾಡುವ ಸೇವೆಗಾಗಿ ಅವಿವಾಹಿತ ಳಾಗಿಯೇ ಉಳಿಯುವ ಹೆಂಗಸು: (ಎಸಮ್ಮ. II, ೭). **ದೇವರ ಗೂಳಿ** = ದೇವರ ಹೆಸರಿನಲ್ಲಿ ಬಿಟ್ಟಿರುವ ಹೋರಿ; ಬಸವ: ದೇವರ ಹೆಸರಿನಲ್ಲಿ ಗೂಳಿಯೊಂದನ್ನು ಬಿಡುವ ಸಂಪ್ರದಾಯವು ಹಿಂದೆಯೂ ಇದ್ದಿತು, ಈಗಲೂ ಇದೆ. ಆ ಗೂಳಿಯನ್ನು 'ದೇವರ ಗೂಳಿ', 'ದೇವರ ಎತ್ತು' ಎಂದು ಕರೆಯುವುದುಂಟು (ಕಶಾಲ. ೦೯೯). **ದೇವರ ಘಟಗೆಯ ಮಾಣಿ** = ದೇವಾಲಯಗಳಲ್ಲಿ ದೇವರ ಅಭಿಷೇಕಕ್ಕೆ ನೀರನ್ನು ತರುವ ಹುಡುಗ: ದೇವರ ಘಟಗೆಯ ಮಾಣಿಗಳು ನಾಲ್ವರ್ಗ್ಗಂ ಮತ್ತರು ೫೦ (ಕಇಉ. ೯-೩-೩೦೭; 1076). **ದೇವರ ಚೌಕಿ** = ದೇವರನ್ನು ಇಡುವ ನಾಲ್ಕು ಕಾಲಿನ ಪೀಠ; ಮಂದಾಸನ: ಅಲ್ಲೇ ಶಾಲೆ. ಅದರ ಒಂದು ಮೂಲೆಯಲ್ಲೇ ಮಾವನವರು ದೇವರ ಚೌಕಿಯನ್ನಿಟ್ಟಿದ್ದರು (ಸ್ವಕಿಚ. ೩೩). **ದೇವರ ತೀರ್ಥ** = ದೇವರಿಗೆ ಅಭಿಷೇಕ ಮಾಡಿದ ಪವಿತ್ರಜಲ: ಕೆಲವು ಸಂಪ್ರದಾಯಸ್ಥರು ದಿನವೂ ದೇವರ ಪೂಜೆ ಮಾಡಿ ಮೊದಲು ದೇವರ ತೀರ್ಥವನ್ನು ಸ್ವೀಕರಿಸಿದ ನಂತರವೇ ಬೇರೆ ಆಹಾರವನ್ನು ತೆಗೆದು ಕೊಳ್ಳುತ್ತಾರೆ (ರೂಢಿ). **ದೇವರ ತೇರು** = ದೇವರನ್ನು ಕೂರಿಸಿ ಮೆರ ವಣಿಗೆ ಮಾಡುವ ರಥ ಹಾಗೂ ಅಂದು ಆಚರಿಸುವ ಉತ್ಸವ: ದೇವರ ತೇರನ್ನು ನೋಡಲು ಹಳ್ಳಿಗೆ ಹಳ್ಳಿಯೇ ಸೇರಿದೆ (ರೂಢಿ). **ದೇವರ ದಯ** = ದೇವರ ಅನುಗ್ರಹ: ಇಷ್ಟರವರೆಗೆ ದೇವರ ದಯದಿಂದ ಏನೂ ಆಗಿಲ್ಲ (ದೇವಹಂ. ೦೯೮); ನಾವು ದೇವರ ದಯದಿಂದ ಅನುಕೂಲವಾಗಿದೀವಿ (ದೂಬಿಟ್ಟ. ೮೩). **ದೇವರ ದರ್ಶನ** = ದೇವರನ್ನು ನೋಡುವುದು: ದೇವರ ದರ್ಶನವಾಗಬೇಕಿದ್ದರೆ ಹೇಳಿ. ಬಾಗಿಲು ತೆರೆಯುತ್ತೇನೆ (ದೇವಹಂ. ೦೯೭); ತುಸು ಹೊತ್ತು ಕುಳಿತು ದೇವರ ದರ್ಶನ ಮಾಡಿಕೊಂಡು ಹಿಂತಿರುಗುತ್ತಿದ್ದಳು (ಶ್ಯಾಮುತಾ. ೯೭). **ದೇವರ ದೀಪ** = ದೇವರ ಮುಂದೆ ಹಚ್ಚಿಡುವ ಸೊಡರು: ದೇವರ ದೀಪವೆಂದ ಮಾತ್ರಕ್ಕೆ ಅದರ ಬುಡಕ್ಕೆ ಕತ್ತಲೆ ಇರುವುದು ಸುಳ್ಳಲ್ಲವಷ್ಟೆ (ಮುಕ್ತ್ಯದ. ೮೭); ದೇವರ ದೀಪಕ್ಕೆ ಇನ್ನೆರಡು ಸವಟು ಎಣ್ಣೆ ಹಾಕಿ . . . ಕುಳಿತಳು (ನಿರಾಘ. ೫೮). **ದೇವರ ನಾಮ** = ಪುರಂದರದಾಸರೇ ಮೊದಲಾದವರು ಬರೆದಿರುವ ಭಕ್ತಿ ಪ್ರಧಾನವಾದ ಹಾಡು, – ಕೀರ್ತನೆ: ದೇವಿಕಾಮಾತೆಯು . . . ದೇವರ ನಾಮಗಳನ್ನೂ ಕೀರ್ತನೆಗಳನ್ನೂ ಹಾಡಬೇಕೆಂದು ವೈಷ್ಣವಿಯನ್ನು ಪ್ರಾರ್ಥನೆ ಮಾಡುತ್ತಿದ್ದಳು (ಶ್ರೀರಾಮ. ೧೦೦೩). **ದೇವರ ನಿರ್ಮಾಲ್ಯ** = ದೇವರಿಗೆ ಪೂಜೆ ಮಾಡಿದ ನಂತರ, ಮರುದಿನ ಪೂಜಿಸುವ ಮುಂಚೆ

ತೆಗೆದ ಬಾಡಿದ ಹೂವು : ದೇವಾಲಯದಲ್ಲಿ ಈ ದಿವಸ ದೇವರ ನಿರ್ಮಾಲ್ಯವೇ ನಾಲ್ಕು ಮಂಕರಿಯಷ್ಟಿತ್ತು (ಊಧಿ). ದೇವರ ನೈವೇದ್ಯ = ದೇವರಿಗೆ ಅರ್ಪಿಸಲು ಮಾಡಿದ ಅಡುಗೆ, ತಿಂಡಿ, ತಿನಿಸು ಮುಂತಾದುವು: ತಂದೆಯವರು ನಮ್ಮನ್ನು ಕರೆದು ದೇವರ ನೈವೇದ್ಯವನ್ನು ನಮಗೆ ಕೊಟ್ಟರು (ಶ್ಯಾಮಚಾ. ೧೫೬) : ಪುರೋಹಿತರ ಮನೆಯಲ್ಲಿ ದೇವರ ನೈವೇದ್ಯವಾದ ಬಳಿಕವೇ ಮನೆಯಲ್ಲಿ ಎಲ್ಲರಿಗೂ ಊಟ (ಊಧಿ). ದೇವರ ಪಾದ = ವಿಷ್ಣುವಿನ ಪಾದ ; ದೇವರೆಂದು ಪೂಜಿಸುವ ವಿಷ್ಣು ಪಾದದ ಆಕೃತಿ ಅವರು ಯಾತ್ರೆ ಮಾಡಿದಾಗ ಪ್ರಯಾಗದಿಂದ ನಾಲ್ಕು ಜೊತೆ ದೇವರ ಪಾದಗಳನ್ನು ತಂದರು (ಊಧಿ). ದೇವರ ಪಾದ ಸೇರು = ಮರಣ ಹೊಂದು ; ಸಾಯು : ಬಹಳ ಚಿಕ್ಕ ವಯಸ್ಸಿನಲ್ಲಿಯೇ ಆಕೆ ದೇವರ ಪಾದ ಸೇರಿಬಿಟ್ಟಳು (ಊಧಿ). ದೇವರ ಪೀಠ = ದೇವರನ್ನು ಕೂಡಿಸುವ ಆಸನ,–ಗದ್ದುಗೆ : ದೇವರ ಪೀಠದಿಂದ ಧ್ವಜಕಟ್ಟೆಯ ತನಕ ಸಾಲಾಗಿ ಇಟ್ಟ ತೊಳೆದ ಹೊಳೆಯುವ ಹರಿವಾಣದಲ್ಲಿ ತುಂಬಿದ ಅರಳು ಪಂಚಕಜ್ಜಾಯದ ನೈವೇದ್ಯ (ದೇವಹಂ. ೧). ದೇವರ ಪೂಜೆ = ದೇವರಿಗೆ ಮಾಡುವ ಅರ್ಚನೆ,–ಆರಾಧನೆ : ಧೂಪಾರತಿಯ ನೋಡುವ ಬನ್ನಿ ನಮ್ಮ ಗೋಪಾಲಕೃಷ್ಣದೇವರ ಪೂಜೆಯ (ಪುರಂದ. ೪–೪ ಪಲ್ಲವಿ) ; ಗಂಗೆ ದೇವರ ಪೂಜೆಗಾಗಿ ಹೂಗಳನ್ನು ಕೊಯ್ಯುತ್ತಾಳೆ (ಕಪಪು. II, ೧೫) : ತಂದೆಯವರು ದೇವರ ಪೂಜೆ ಮಾಡಿದರು (ಶ್ಯಾಮಚಾ. ೧೫೬). ದೇವರು ಪೆಟ್ಟಿಗೆ = ದೇವರನ್ನಿಡುವ ಸಂಪುಟ : ದೇವರ ಪೆಟ್ಟಿಗೆ ತೆಗೆದು ಶಾಲ ಗ್ರಾಮ ಸಾವಿರ ನುಂಗುವನೆ (ಪುರಂದ. ೨–೯೩–೧). ದೇವರ ಪ್ರದಕ್ಷಿಣೆ = ದೇವರಿಗೆ ಭಕ್ತಿಯ ಸೂಚಕವಾಗಿ ಬಲಗಡೆಯಿಂದ ಸುತ್ತುಹಾಕುವುದು : ದೇವಸ್ಥಾನವನ್ನು ಪ್ರವೇಶಿಸುವುದಕ್ಕೆ ಮುಂಚೆ ಪ್ರಾಕಾರದಲ್ಲಿ ದೇವರ ಪ್ರದಕ್ಷಿಣೆ ಮಾಡಬೇಕು (ಊಧಿ). ದೇವರ ಪ್ರಸಾದ = ದೇವರಿಗೆ ಅರ್ಪಿಸಿ ತೆಗೆದುಕೊಂಡ ನೈವೇದ್ಯ ಮುಂತಾದುವು : ಎಷ್ಟು ಸಿಹಿ ! ದೇವರ ಪ್ರಸಾದವನ್ನು ಬಿಟ್ಟರೆ ಇನ್ನಿಲ್ಲ ! (ಕಾನೂರು. ೫೦೦). ದೇವರ ಪ್ರಾರ್ಥನೆ = ದೇವತಾಸ್ತುತಿ : ಜಾನಕಿ ದೇವರ ಪ್ರಾರ್ಥನೆ ಮಾಡುವಾಗ ಗಂಡನ ಮನೋಭಾವವನ್ನು ಮನಸ್ಸಿನಲ್ಲಿಟ್ಟುಕೊಂಡೇ ಮಾಡತೊಡಗಿದಳು (ಮುತ್ತೈದೆ. ೧೨೧). ದೇವರಭಿಷೇಕ = ದೇವರಿಗೆ ಮಾಡಿಸುವ ಮಂಗಳ ಸ್ನಾನ ; ಮಂಗಳಕರವಾದ ನೀರು, ಹಾಲು ಮುಂತಾದ ದ್ರವವನ್ನು ದೇವರಿಗೆ ಎರೆಯುವುದು : ದೇವರಭಿಷೇಕದ ನೀರನ್ನೇ ತೀರ್ಥ ಎಂದು ಕರೆಯುತ್ತಾರೆ (ಊಧಿ). ದೇವರ ಮಂಟಪ = ದೇವರ ಚೌಕಿ : ದೇವರ ಮಂಟಪದ ಮುಂದೆ ಶೇಷಪ್ಪಶಾಸ್ತ್ರಿಗಳು ಕೈ ಜೋಡಿಸಿಕೊಂಡು ನಿಂತಿದ್ದರು (ಮುತ್ತೈದೆ. ೨೬೧) ; ಚಿನ್ನ, ಆಭರಣ, ದೇವರ ಮಂಟಪದ ಬೆಳ್ಳಿ . . . ಅವರ ಸಂಪತ್ತನ್ನು ಸಾರುತ್ತಿದ್ದುವು (ಕರುಳ. ೧೬೦). ದೇವರ ಮಕ್ಕಳು = ಬೆಸ್ತರು : ಯಾ ಗ್ರಾಮಕ್ಕೆ ದೇವರ ಮಕ್ಕಳು ಕುಳಗಾರರಾಗಿ (ಮೈಆರಿ. ೧೯೨೯, ೧೮–೨೬ ; 1402). ದೇವರ ಮನೆ = ದೇವರ ಕೋಣೆ : ದೇವರ ಮನೆಯಲ್ಲಿ ಗಂಟೆಯ ಗಣಗಣ ಸಪ್ಪಳವಾಯಿತು (ಮುತ್ತೈದೆ. ೨೬೧) ; ಕೈತಾನ . . . ದೇವರ ಮನೆಯಲ್ಲಿದ್ದ ಅಬೋಲೀನಳನ್ನು ಸಮೀಪಿಸಿದ (ಅಬೋಲೀ. ೨೧). ದೇವರ ಮರ = ೧. ದೇವಲೋಕದ ಮರ ; ಕಲ್ಪವೃಕ್ಷವೇ ಮೊದಲಾದುವು : "ಮಂದಾರಃ, ಪಾರಿಜಾತಕಃ, ಹರಿಚಂದನಃ, ಕಲ್ಪವೃಕ್ಷಃ, ಸಂತಾನಃ–ಈ ೫ ದೇವರ ಮರಂಗಳ್" (ಹಲಾಯು. ೨೨–೧೩೫). ೨. ಯಾವುದಾದರೊಂದು ದೇವರ ಹೆಸರಿನಲ್ಲಿ ಮೀಸಲಾಗಿಟ್ಟಿರುವ ಫಲವೃಕ್ಷ. ದೇವರ ಮಾಡ = ದೇವರ ಕಂಡಿ : ದೇವರ ಮಾಡದಲ್ಲಿ ಗಂಗಾ ಜಲವಿದೆ (ಮುತ್ತೈದೆ. ೪೯). ದೇವರ ಮಾಡು, ದೇವರು ಮಾಡು = ೧. ದೇವರ ಅನುಗ್ರಹ ಸಂಪಾದನೆಗಾಗಿ ಹಬ್ಬ, ಪೂಜೆ ಮೊದಲಾದ ಉತ್ಸವಗಳನ್ನು ನೆರವೇರಿಸು ; ದೇವರ ಸೇವೆಯನ್ನು ಮಾಡು : ಮದಕರಿನಾಯಕನಿಗೆ ಮಕ್ಕಳಿಲ್ಲದ ಕಾರಣ . . . ಉಚ್ಚಂಗಮ್ಮ ದೇವರ ಇದಿರೆತ್ತಿ ಸಕಲರೂ ದರ್ಶನ ಕಟ್ಟಿಕೊಂಡು ಬೇವನ್ನುಟ್ಟು ದೇವರ ಮಾಡಿದರು (ಚಿತ್ರಜಾ. ೨೫). ೨. ದೇವತಾವಿಗ್ರಹಗಳನ್ನು ಮಾಡು,–ಕೆತ್ತು : ಮಣ್ಣಿನ ದೇವರು ಮಾಡಿ ಹುಡುಗರೇ ಹೊತ್ತುಕೊಂಡು ಕುಣಿಯುವುದು (ಸುವಸಂ. ೩೯). ದೇವರ ಮೂರ್ತಿ = ದೇವತಾವಿಗ್ರಹ : ದೇವರ ಮೂರ್ತಿಯ ಮುಂದೆ ಮೊಣಕಾಲೂರಿ ಪ್ರಾರ್ಥಿಸುತ್ತಿದ್ದ ಅಬೋಲೀನಳಿಗೆ ... ಹೆಜ್ಜೆಯ ಸದ್ದು ತನ್ನ ತಂದೆಯದೆಂದು ಗುರುತಿಸಲು ಹೊತ್ತು ಹಿಡಿಯಲಿಲ್ಲ (ಅಬೋಲೀ. ೨೧). ದೇವರ ಮೇಲೆ ಭಾರ ಹಾಕು = ಸಂಪೂರ್ಣ ಜವಾಬ್ದಾರಿಯನ್ನು ದೇವರ ಮೇಲೆ ಹೊರಿಸು : ದೇವರ ಮೇಲೆ ಭಾರ ಹಾಕಿ ಹೊರಡುವುದು. ಬೇರೆ ಮಾರ್ಗವಿಲ್ಲ (ದೇವಹಂ. ೨೧೦) : ಊರಿನಲ್ಲಿ ಇದ್ದವರು . . . ದೇವರ ಮೇಲೆ ಭಾರ ಹಾಕಿ ಧೈರ್ಯದಿಂದ ನಿಂತರು (ಊರುಕ. ೩೬) ದೇವರ ರಥೋತ್ಸವ = ದೇವರನ್ನು ತೇರಿನಲ್ಲಿ ಕೂರಿಸಿ ಮೆರವಣಿಗೆ ಮಾಡುವ ಉತ್ಸವ : ಈ ದೇವರ ರಥೋತ್ಸವದಲ್ಲಿ ಜನರು ಕಿಚ್ಚು ಹಾಯುವರು (ಕನ್ನಜಾ. ೧೦). ದೇವರಲಂಕಾರ = ಹಬ್ಬ ಹರಿದಿನಗಳಲ್ಲಿ ದೇವತಾಮೂರ್ತಿಗೆ ಮಾಡುವ ವಿಶೇಷ ರೀತಿಯ ಉಡುಗೆ ತೊಡುಗೆಗಳ ಸಿಂಗಾರ : ಈ ದಿನ ದೇವಸ್ಥಾನದಲ್ಲಿ ದೇವರಲಂಕಾರ ಮನೋಹರವಾಗಿದ್ದಿತು (ಊಧಿ). ದೇವರ ಲೋಕ = ದೇವಲೋಕ ; ಸ್ವರ್ಗ : ಎಮಗೆ ದೇವರ ಲೋಕಮೇ ಲೋಕಮೆಮ್ಮೊಡನೆ ಬಪ್ಪುದೆಂದನುಜ್ಞೆಯಂ ದಯೆಗೆಯ್ಯಲ್ವೇಳ್ಕುಮೆಂದಿಂತೆಂದರ್ (ಬಾಧಪು. ೧೬–೪೦ ವ). ದೇವರ ವ್ರತ = ದೇವರನ್ನು ಕುರಿತು ಮಾಡುವ ನೇಮ,–ನೋಂಪಿ : ಜಾನಕಿ . . . ದೇವರ ವ್ರತವನ್ನು ಆರಂಭಿಸಬೇಕೆಂದು ನಿಶ್ಚಯಿಸಿದಳು (ಮುತ್ತೈದೆ. ೬೭). ದೇವರ ಸಂಕಲ್ಪ = ದೇವರ ಉದ್ದೇಶ; ದೈವೇಚ್ಛೆ : ನಿಮ್ಮ ಹುಡುಗನಿಗೆ ನಮ್ಮ ಮೋನಕ್ಕನನ್ನು ತಂದುಕೊಳ್ಳುವ ಆಸೆಯಿದೆ–ದೇವರ ಸಂಕಲ್ಪ, ಬ್ರಹ್ಮಬರಹ (ಮೂಮನೆ. ೧೬). ದೇವರ ಸಂತರ್ಪಣೆ = ಮದುವೆ, ಮುಂಜಿ ಮುಂತಾದ ಶುಭಕಾರ್ಯಗಳಿಗೆ ಮುಂಚಿತವಾಗಿ ಮಾಡುವ ಕುಲದೇವರ ಪೂಜೆ ಹಾಗೂ ಭೋಜನ ಸಮಾರಂಭ : ಮಗನ ಮದುವೆಗೆ ದೇವರ ಸಂತರ್ಪಣೆಯ ದಿನವೇ ನೆಂಟರೆಲ್ಲ ಬಂದುಬಿಟ್ಟರು (ಊಧಿ). ದೇವರ ಸಮಾರಾಧನೆ = ದೇವರ ಸಂತರ್ಪಣೆ : ದೇವರ ಸಮಾರಾಧನೆಯ ದಿನ ಇಷ್ಟಮಿತ್ರರೆಲ್ಲ ಬಂದಿದ್ದರು (ಊಧಿ). ದೇವರ ಸಾನ್ನಿಧ್ಯ = ದೇವರ ಬಳಿ,–ಸಾಮೀಪ್ಯ : ಆ ಒಂದು ದಿನ ವಿಧಿನಿಯಮಕ್ಕೆ ಶರಣುಬಂದು ದೇವರ ಸಾನ್ನಿಧ್ಯದಲ್ಲಿ ಗಿರಿಜಳಿರುವುದು ಅವಳಿಗೆ ಬೇಕಿತ್ತು (ದೇವಹಂ. ೯೫). ದೇವರ ಸೇವೆ = ದೇವರ ಪೂಜೆ : ದೇವರ ಸೇವೆಯಲ್ಲಿ ಲೋಪವಾಗಬಾರದು (ದೇವಹಂ. ೨೦೮). ದೇವರ ಹಣ = ದೇವರ ಗಂಟು : ದೇವರ ಹಣದಿಂದ ನಿಮಗೆ ಸಾಲವಾಗಿ ಕೊಟ್ಟಿದ್ದೇನೆ (ದೇವೀಜಾ. ೧೨೫). ದೇವರ ಹೆಂಡತಿ = ವೇಶ್ಯೆ ; ದೇವದಾಸಿ : ನೀನೂ ಕೂಡಾ ದೇವರ ಹೆಂಡತಿಯಾಗಿ . . . ಮೈ ಮನಸ್ಸನ್ನು ಚೊಕ್ಕಟವಾಗಿಡುವುದಕ್ಕೆ ಎಷ್ಟು ಶ್ರಮಿಸಿದ್ದಿ ಎಂಬುದು ನನಗೆ ಗೊತ್ತು (ದೇವಹಂ. ೮೫). ದೇವರ ಹೊನ್ನು = ದೇವರ ಮೂರ್ತಿಯಿರುವ ಚಿನ್ನದ ತಾಳಿ : ಭೂವಲ್ಲಭೆಯ ಕೊರಲ ದೇವರ ಹೊನ್ನ ಭಾವವ ಪಡೆದುದಾ ನಗರಿ (ಶ್ರೀಪಾಲ. ೧–೬೮). ದೇವರ ಹೊಲ = ಗ್ರಾಮಗಳಲ್ಲಿ ದೇವರಿಗಾಗಿ ಬಿಟ್ಟಿರುವ ಹೊಲ,–ಜಮೀನು : ಸಾಮಾನ್ಯವಾಗಿ ಎಲ್ಲ ಊರುಗಳಲ್ಲಿಯೂ ದೇವರ ಹೊಲವನ್ನು ಜನ ಬಿಟ್ಟಿಯಾಗಿ ಉಳುತ್ತಾರೆ, ಬಿಟ್ಟಿಯಾಗಿ ಬೆಳೆ ಕೊಯ್ಯುತ್ತಾರೆ (ಊಧಿ). ದೇವರಿಗೆ ನಡೆದುಕೊಳ್ಳು = ದೇವರ ಹರಕೆ, ಪೂಜೆ ಮುಂತಾದುವುಗಳನ್ನು ಸಲ್ಲಿಸು : ಹಳ್ಳಿಯಲ್ಲಿ ಜೋಯಿಸರು ಹೇಳುವಂತೆ ನಮ್ಮ ಹಳ್ಳಿಗರು ಈ ದೇವರಿಗೆ ನಡೆದುಕೊಳ್ಳುತ್ತಾರೆ (ಕನ್ನಜಾ. ೧೦). ದೇವರಿಚ್ಛೆ =

**ದೇವರ ಸಂಕಲ್ಪ** : ದೇವರಿಚ್ಛೆ ಇರುವವರೆಗೆ ಈ ಯಂತ್ರವು ನಡೆಯು ತಕ್ಕದ್ದೇ (ಶ್ಯಾಮಲಾ. ೨೬೨) ; ಮನುಷ್ಯಪ್ರಯತ್ನವೆಲ್ಲಾ ಮಾಡಿದ್ದಾಯ್ತು. ಇನ್ನು ದೇವರಿಚ್ಛೆಯಿದ್ದ ಹಾಗಾಗಲಿ (ರೂಢಿ). **ದೇವರುಂಬಳಿ** = ದೇವರ ಹೊಲ : ಮಹಾಜನಂ ಪ್ರಭುಗಳುಂಬಳಿಯುಮಂ ದೇವರುಂಬಳಿಯುಮ ಸರ್ವ್ವಬಾಧಾಪರಿಹಾರವಾಗಿ ಕಾದೂಡುವರು (ನಾಂದೇಡ್. ೩-೨೨ ವ ; 1047). **ದೇವರು ದಿಂಡರು**=ದೇವರುಂ ಮತ್ತು (ದೇವರಂತೆ ಸಾಮರ್ಥ್ಯ ವಿರುವ) ದೇವರ ಪರಿವಾರದವರು, – ಪರಿವಾರದೇವತೆಗಳುಂ : ಅವನಿಗೆ ದೇವರು ದಿಂಡರು, ಧರ್ಮಕರ್ಮ, ಮತಗಿತ ಯಾವುದರಲ್ಲೂ ನಂಬಿಕೇನೇ ಇಲ್ಲಾಂತಾನೋ ? (ವೀರಯೋ. ೧೮) ; ದೇವರು ದಿಂಡರಿಗೆ ನಡಕೊಂಡದ್ದಾಯಿತು. ಏನೂ ಉಪಯೋಗವಾಗಲಿಲ್ಲ (ಹೊಸಕ್ಷ. ೦೮೪). **ದೇವರುತ್ಸವ** = ದೇವರಿಗೆ ಮಾಡುವ ಪೂಜೆ, ಹಬ್ಬ ಮುಂತಾದ ದಿವಸ ಗಳಲ್ಲಿ ನಡೆಯುವ ಮೆರವಣಿಗೆ : ಸಂಜೆಗೆ ದೇವರುತ್ಸವ (ರೂಢಿ). **ದೇವರು ಮೈಮೇಲೆ ಬರು** = ಆವೇಶವುಂಟಾಗು : ಪೂಜೆಯಾದ ಮೇಲೆ ಪೂಜಾರಿಗೆ ದೇವರು ಮೈ ಮೇಲೆ ಬಂತು (ರೂಢಿ). **ದೇವರೂಟ** = ದೇವರ ಸಂತರ್ಪಣೆ : ದೇವರೂಟದ ದಿನವೇ ತುಂಬಾ ನೆಂಟರು ಬಂದು ಸಂಭ್ರಮ ಅತಿಶಯವಾಗಿತ್ತು (ರೂಢಿ). **ದೇವರೂಳಿಗ** = ದೇವಸ್ಥಾನದ ಕೆಲಸ : ದೇವರೂಳಿಗದ ದೀವಟಿಗೆಯ ದಾಸಿಮನಿಗೆ . . . ದೇವಾದಾಯದ ಒಂದು ಪಾಲು ಸಂದಾಯವಾಗಬೇಕು (ಸವತಿ. ೦೬೬). **ದೇವರೇ ಗತಿ**=ಮನುಷ್ಯನು ತನ್ನ ಅಸಹಾಯಕತೆಯನ್ನು ಸೂಚಿಸಲು ಹೇಳುವ ಮಾತು : ಗಂಟಲು ಸರಿಯಿಲ್ಲದೇನೇ ಇಷ್ಟೊಂದು ಹೊತ್ತು ಅರಚುವಾಗ ಸರಿಯಿದ್ದರೆ ದೇವರೇ ಗತಿ (ಗಾರಳ. ೪೯).

[ ℙ 'ದೇವ' ಎನ್ನುವ ಪದದ ಬಹುವಚನರೂಪವು ಕನ್ನಡದಲ್ಲಿ ವಿಶೇಷವಾಗಿ ಏಕವಚನದ ಅರ್ಥದಲ್ಲಿ ಪ್ರಯೋಗವಾಗುತ್ತದೆ ]

**ದೇವರ** (ನಾ). ೧. ಗಂಡನ ಒಡಹುಟ್ಟಿದವನು ; ಪತಿಯ ಸಹೋದರ; ಮೈದುನ ; ℙ ಗಂಡನ ತಮ್ಮನಿಗೆ ಮಾತ್ರ ಇದು ವಿಶೇಷವಾಗಿ ಬಳಕೆಯಾಗುತ್ತದೆ : "ದೇವರಃ . . . ಗಂಡನಿಗೆ ಒಡಹುಟ್ಟಿದ ಗಂಡುಸರ ಹೆಸರು. ಮೈದಂದರು, ಭಾವಂದರು" (ಸಿದ್ಧಾಂತಿ. ೧೫೩) : ಕೇಳಿದೈ ಎಲೆ ದೇವರನೆ ದೇವೇಶನಿರವೆಂತೆಂದಳಬುಜಾಕ್ಷಿ (ಪಂಕಾರಾ. ೩-೧೧-೩೯) ; ದೇವರಾ ನೋಡು ನೀನಾರ್ಯಪುತ್ರಂ ಕ್ಷೇಮದಿಂದಿರ್ದಪನೆ (ಶೇಷರಾ. ೩-೬೩) ; ದೇವರನಾಡಿದ ಪರುಷತರವಾಕ್ಯಮಾರ್ಗಣಂ ಕರ್ಣಕೋಟರಮಂ ನಾಂಟೆ (ರಾಮಾಶ್ವ. ೩೫-೬). ೨. ಹೆಂಡತಿಯ ಸಹೋದರ ; ಭಾವ ಮೈದ ; ಶ್ಯಾಲಕ : "ಸತಿಯ ಸಹಜಾತನಕ್ಕುಂ ಪ್ರ[ ತೀ ]ತಿಯಿಂ ಶ್ಯಾಲನಾಮನುಂ ದೇವರನುಂ" (ವಸ್ತುಕೋ. ೫೫-೨೦); ಇಂದೆಮ್ಮ ದೇವರನೇಂ ಕ್ಷೇಮದೊಳಿರ್ದನೇ (ಅನಂಪು. ೨-೫೭) ; ಆ ತಪೋಧನನಾವ ನೆಂಬಭಿಶಂಕೆಯೇಕೆ ಜಗತ್ರಯಖ್ಯಾತನರ್ಜುನನಿಂದ್ರಸೂನು ಮುಕುಂದ ದೇವರನುಗ್ರಶೌರ್ಯಾತುಳಂ (ಶಬಶಂ. ೨-೧೦೫). [ ಸಂ. ]

**ದೇವರಕೆಱೆ** (ನಾ). ಒಂದು ಸ್ಥಳದ ಹೆಸರು : ದೇಗುಲಕೆ ಸಲ್ವುದು ದೇವರಕೆಱೆಯಾ ಮೂಡಣ ಕಡೆಗೋಡಿನಲಿ ಬೆಗ್ಗಟ್ಟಿ ಖಣ್ಡುಗ ಸಲ್ವುದು (ಎಕ. IX, ಮಾಗಡಿ. ೭೫-೦೯; 966). [ <ದೇವ + ಕೆಱೆ$^3$ ]

**ದೇವರಥ** (ನಾ). ೧. ದೇವತಾಪ್ರತಿಮೆಗಳನ್ನು ಕೂರಿಸಿ ಮೆರವಣಿಗೆ ಯಲ್ಲಿ ಉತ್ಸವ ಮಾಡುವ ರಥ : "ದೇವಾರ್ಥಮಪ್ಪುದಕ್ಕುಂ ದೇವರಥಂ" (ವಸ್ತುಕೋ. ೮೬-೨೭). ೨. ದೇವತೆಗಳ ಯಾನ ; ಪುಷ್ಪಕ. [ ದೇವ + ರಥ ]

**ದೇವರದಾಸಯ್ಯ** (ನಾ). ಒಬ್ಬಾತನ ಹೆಸರು : ದೇವರದಾಸಯ್ಯನ ಅಬ್ಬೆಗಳ್ . . . ಚಾಮಕಬ್ಬೆಗಳ ನಿಸಿಧಿಗೆ (ಎಕ. XV, ಹೊಳೆನ. ೬೭-೫ ; ಸು. 950). [ <ದೇವ + ದಾಸಯ್ಯ ]

**ದೇವರಮ್ಯ** (ನಾ). [ ಛಂದ ] ಒಂದು ವೃತ್ತದ ಹೆಸರು ; ಅಕ್ಷರ ಛಂದಸ್ಸಿನಲ್ಲಿ ಪ್ರತಿಯೊಂದು ಪಾದದಲ್ಲಿ ನಾಲ್ಕಕ್ಷರಗಳಿರುವ ಒಂದು ವೃತ್ತ; ರಗಣ ಮತ್ತು ಒಂದು ಗುರು ಇರುವ ವೃತ್ತ : ಪಾವಕಾಗ್ರಂ ಭಾವನೀಯಂ ದೇವದೇವಂ ದೇವರಮ್ಯಂ (ಛಂದೋಂಬು. ೨-೬೩). [ಸಂ.]

**ದೇವರಾಜ** (ನಾ). ದೇವತೆಗಳ ರಾಜ ; ಇಂದ್ರ : ವಾಸವಸ್ತ್ರೀಯರ ಮುಖಾಬ್ಜಾಸವಸಂಬಂಧಿಗಳಪ್ಪ ಶೇಷಾಕ್ಷತಂಗಳನೀಶ್ವರನ[ಂ] ಗೆಲ್ದ ಗೆಲ್ಲಕ್ಕೆ ಸೇಸೆಗೊಳ್ವಂತೆ ಸೇಸೆಗೊಳುತ್ತುಂ ದೇವರಾಜನೊಡನೆ ದೇವಾಪ್ಸರೋ ನಿಚಯನಿಚಿತಮಪ್ಪ ದೇವವಿಮಾನಮಂ ಪೊಕ್ಕಾಗಳ್ (ಪಂಪಭಾ. ೮-೨೭ ವ) ; ಬಗೆಯಲ್ ಬಾರದ ದೇವರಾಜಬಲಮಂ ಭೋರೆಂದು ಪೋ ಪೋ . . . ನೀನೆಂಬ ದಂದುಗದಿಂ ದೇವರ ದಂಡಧಾರರೆರಡುಂ ಪಕ್ಷಂ ಗಳೊಳ್ ಸಾರೆ (ಶಾಂತಿಪು. ೧೦-೨೪) ; ದೇವರಾಜ, ಈ ವಸಿಷ್ಠಶೋಕವು ಕೊನೆಗಾಣಬೇಕು (ಮಹಾಆ. ೧೨೫). [ ದೇವ + ರಾಜ ]

**ದೇವರಾಜ್ಯ** (ನಾ). ಇಂದ್ರನ ರಾಜ್ಯ ; ಸ್ವರ್ಗ : ದೇವರಾಜ್ಯಸಲ್ಲೀಲೆಯೊಳಾ ನೃಪೋತ್ತಮರನೆಯ್ದಿಪನೋವದೆ ಕುಂತಳೇಶ್ವರ (ಎಕ. VII, ಶಿಕಾರಿ. ೧೦೦-೦೪ ; 1129). [ ದೇವ + ರಾಜ್ಯ ]

**ದೇವರಾಯಉತ್ತ** (ನಾ). ಒಂದು ಬಗೆಯ ತೆರಿಗೆ : ಮನೆತೆರಿಗೆ, ಹುಲ್ಲ ಹಣ, ದೇವರಾಯಉತ್ತ (ಸವೆದ ನಾಣ್ಯ ತೆತ್ತಾಗ ಕಡಮೆ ಬಿದ್ದಿತೆಂಬು ದನ್ನು ತುಂಬಲು ಹಾಕಿದ ಹೆಚ್ಚಿನ ತೆರಿಗೆ) (ನಮ್ಮನು. ೨೪೩). 'ದೇವ ರಾಯಮಟ್ಟ' ಪರಾ.

[ ದೇವರಾಯ$_0$ + ಉತ್ತ$_0$; ℙ ಇಲ್ಲಿ 'ಉತ್ತ' ಎಂಬುದು 'ವೃತ್ತಿ'ಯಿಂದ ಬಂದಿರಬಹುದು ]

**ದೇವರಾಯಮಟ್ಟ** (ನಾ). ಒಂದು ಬಗೆಯ ತೆರಿಗೆ : ಕುಱಿದೆಱೆಗೆ ಜಾತಿ ಗೂಟ ದೇವರಾಯಮಟ್ಟ ಹೆಚ್ಚುಬೇಡಿಗೆ ಗ್ರಾಮಾದಾಯ ಚರಾದಾಯ (ಎಕ. XIV, ಮೈಸೂರು. ೧೧೫-೪೦೩ ; 1674) ; (೧) ಮನೆದೆರಿಗೆ, (೨) ಹುಲ್ಲುಹಣ, (೩) ದೇವರಾಯಮಟ್ಟ, (೪) ಏರಸುಂಕ, (೫) ಸಮಯಾ ಚಾರ, (೬) ದನಕರು ಮಾರಿದ್ದಕ್ಕೆ ಸುಂಕ, (೭) ಕುರಿದೆರಿಗೆ, (೮) ಗುಳುವಿನ ಪೊಮ್ಮು, (೯) ಅಂಗಡಿವಸರ, (೧೦) ಕೂಟಾಚಾರ, (೧೧) ಉಬ್ಬೆಕಾಣಿಕೆ, (೧೨) ಅಂಗಡಿ ಪಟ್ಟಡಿ, (೧೩) ಗಿಡಕಾವಲು, (೧೪) ಜಾತಿಮಣಿಯ, (೧೫) ಮಗ್ಗದ ಕಂದಾಯ, (೧೬) ಪಾಶವಾರ, (೧೭) ಮದುವೆದೆರಿಗೆ, (೧೮) ಉಪ್ಪಿನ ಮೋಳೆ, (೧೯) ಕಾದಿಯ ತೆರಿಗೆ, – ಈ ಮೇರೆಗೆ ಹತ್ತೊಂಬತ್ತು ಬಾಬುಗಳನ್ನು ರೈತರಿಗೆ ನಿಶ್ಕರ್ಷೆ ಮಾಡಿಸಿ (ಮಹಾಮಂ. I, ೧೨೪). [ ದೇವರಾಯ$_0$ + ಮಟ್ಟ$_2$ ]

**ದೇವರಾಯಿ** (ನಾ). (ದೇವರಾಯನು ಚಲಾವಣೆಗೆ ತಂದ) ಒಂದು ಬಗೆಯ ಚಿನ್ನದ ನಾಣ್ಯ : ಇದಲ್ಲದೆ ಇನ್ನೂ ಇತರ ಬಂಗಾರದ ನಾಣ್ಯ ಗಳು ವಿಶೇಷವಾಗಿದ್ದವು, ಯಾವವೆಂದರೆ ಗಬರು . . . ದೇವರಾಯಿ, ರಾಮರಾಯಿ (ಚಿತ್ರಪಾ. ೧೦೪) : ℙ ಚಿತ್ರದುರ್ಗದಲ್ಲಿ ಅನೇಕ ರೀತಿಯ ಬಂಗಾರದ ನಾಣ್ಯಗಳು ಸಿಕ್ಕಿದುವೆಂದು 'ಚಿತ್ರಪಾ. ೧೦೪' ರಲ್ಲಿ ಹೇಳಿದೆ. ಅವುಗಳ ಪಟ್ಟಿ ಹೀಗಿದೆ : ಗಬರು, ಪ್ರಿಯಂಕಾವೇರಿ, ಮೊಹರು, ಪ್ರಳಯಂಗಲೂರ, ಪುತಲಿ, ಪಾಪನಾಯಕಿಹೊನ್ನು, ಶಿವರಾಯಿಹೊನ್ನು, ಆದವಾನಿಹೊನ್ನು, ಬಾದಷಾಹಿಹೊನ್ನು, ತಾಡಪತ್ರೆಹೊನ್ನು, ಸಣ್ಣಗಿರಿ, ಹಿಂದೆಹೊನ್ನು, ಅಚ್ಯುತರಾಯಿ, ನಿಷಾನಿಖಲು, ದೇವರಾಯಿ, ಕಲ್ಲುಕುಂಟೆ, ರಾಮರಾಯಿ, ದುರ್ಗಿ, ಜಾತಮಾಹಿಸ್, ಇಕ್ಕೇರಿ, ಧಾರವಾಡಿ. [ ದೇವರಾಯ$_0$+–ಇ$_3$ ]

**ದೇವರಾಸಿ** (ನಾ). ಒಬ್ಬಾತನ ಹೆಸರು : ಸ್ವಯಂಭುದೇವರ ಸ್ಥಾನಾಧಿಪ ರಪ್ಪ ದೇವರಾಸಿಜೀಯ್ಯರ್ ಸಿಷ್ಯಂ ವಾಮದೇವ (ಸೌಇಇ. XX, ೨೪-೨೩; 1034). [ ? ]

**ದೇವರು** 'ದೇವರ್' ನೋ.

**ದೇವರುಷಿ** (ನಾ). = ದೇವರ್ಷಿ ೧ : ದೇವರುಷಿಗಳು . . . ಪೂಜಿಸಲು ಬೇಕೀ ಮಹಾಗಣಪತಿಯನು (ಗಗಶಾ. ೫-೧೦). [ ದೇವ + ರುಷಿ ]

**ದೇವರೊಘ** (ನಾ). ಒಂದು ಬಗೆಯ ತೆರಿಗೆ (?) : ಉಪ್ಪಿನ ಪೇಟೆಂಗೆ ಸುಂಕ ದೇವರೊಘಂ ಮಾನವೊನ್ದು ಖಂಡಸ್ಫುಟಿತ ಜೀರ್ಣೋದ್ಧರಣ ಗನ್ಧ ಧುಪ ದೀಪ ನಿವೇದ್ಯಕೆನ್ದು (ಕಇಅ. ೬೯-೨-೫೦ ; 1056). [ ? ]

**ದೇವರ್ಷಿ** (ನಾ). ೧. ದೇವಜಾತಿಯಲ್ಲಿ ಹುಟ್ಟಿದ ಋಷಿ. ೨. ಬ್ರಹ್ಮನ ಪುತ್ರನಾದ ಋಷಿ ; ನಾರದ : ದೇವರ್ಷಿಯೆ ! ಗೀತದೊಳುಂ, ಆಹಾರ ದೊಳುಂ . . . ನಾಣ್ಚಿಕೆಯಾಗದೆಂಬರದು ಕಾರಣದಿನೀ ಬಿಜ್ಜಿಗೆ ಲಜ್ಜೆ ಸಲ್ಲದೈ (ಅದ್ಭುತ. ೨೪-೨೧). P ಋಷಿಗಳಲ್ಲಿ ರಾಜರ್ಷಿ, ಬ್ರಹ್ಮರ್ಷಿ, ದೇವರ್ಷಿ ಎಂಬ ಮೂರು ವರ್ಗಗಳಿವೆ. ೧. ಕ್ಷತ್ರಿಯಜಾತಿಯಲ್ಲಿ ಹುಟ್ಟಿ ರಾಜನಾಗಿದ್ದು, ತಪಸ್ಸುಮಾಡಿ ಋಷಿಧರ್ಮದಲ್ಲಿರುವವನು ರಾಜರ್ಷಿ. (ಜನಕ, ದಿಲೀಪ ಮೊದಲಾದವರು). ೨. ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿ ಬ್ರಹ್ಮವನ್ನು ಅರಿತವನು ಬ್ರಹ್ಮರ್ಷಿ. (ವಾಮ ದೇವ, ಪರಾಶರ ಮೊದಲಾದವರು). ಬ್ರಹ್ಮವನ್ನು ಅರಿತವನು ಯಾವ ಜಾತಿಗೆ ಸೇರಿದ್ದರೂ ಬ್ರಹ್ಮರ್ಷಿಯಾಗುತ್ತಾನೆ–ವಿಶ್ವಾಮಿತ್ರನ ಹಾಗೆ. ೩. ದೇವಜಾತಿಗೆ ಸೇರಿದ ತಪಸ್ವಿಯು ದೇವರ್ಷಿಯೆನಿಸಿ ಕೊಳ್ಳುವನು. (ಅತ್ರಿ, ಮರೀಚಿ, ಭರದ್ವಾಜ, ಪುಲಸ್ತ್ಯ, ಪುಲಹ, ಕ್ರತು, ಭೃಗು, ವಸಿಷ್ಠ, ಪ್ರಚೇತ, ನಾರದ ಮೊದಲಾದವರು).

[ ದೇವ + ಋಷಿ ]

**ದೇವಲ** (ನಾ). ೧. ದೇವರ ಪೂಜೆಯ ಆದಾಯದಿಂದ ಜೀವಿಸುವವನು; ದೇವಸ್ಥಾನದಲ್ಲಿ ಕೆಲಸ ಮಾಡುವವನು. ೨. ದೇವರ ವಿಗ್ರಹಗಳನ್ನು ಮಾಡಿ ಜೀವಿಸುವವನು ; ವಿಗ್ರಹಶಿಲ್ಪಿ : ಈ ದೇವಲ ಶಬ್ದಕ್ಕೆ 'ವಿಗ್ರಹ ಗಳನ್ನು ರಚಿಸಿ ಜೀವಿಸುವವ' ಎಂಬರ್ಥವು ವ್ಯುತ್ಪತ್ತಿಯಿಂದ ಬರುತ್ತದೆ (ಭಾರದ. ೫೧೦). ೩. ಧರ್ಮಶಾಸ್ತ್ರವೊಂದನ್ನು ಬರೆದಿರುವ ಒಬ್ಬ ಮಹರ್ಷಿ : ಭೂನುತ ದೇವಲಮುನಿ ಬರಿಸಲ್ಕತಿಮುದದಿಂ ಬಂದು (ಉದ್ಭಟ. ೩-೫೩) ; ಸುಮೇಘಪರ್ವತದಲ್ಲಿ ಅತ್ರಿ . . . ದೇವಲ ದಧೀಚಿ ದೂರ್ವಾಸ ದತ್ತಾತ್ರೇಯ ಜಮದಗ್ನಿ ಜೈಮಿನಿ ಜಹ್ನು ಜಾಬಾಲಿ ರೋಮಜ ಮತಂಗ ಪತಂಜಲಿ ಪರಾಶರ ಪುಲಸ್ತ್ಯ ಶತಾನಂದ ಸಾನಂದ ಶ್ವೇತಕೇತು ಉಪಮನ್ಯು ಮೊದಲಾದ ಅಷ್ಟಾಶೀತಿಸಹಸ್ರ ಋಷಿಗಳಿಗನಂತಾಶ್ರಯಂಗಳುಂ (ವಿವೇಕ. ೨೧೬). [ ಸಂ.]

**ದೇವಲಕ** (ನಾ). = ದೇವಲ ೧ : ಹಲಗೆಕಾರರನಾಪ್ತರುಂ ದೇವಲಕರುಂ ಪೂವಡಿಗರುಂ ಬಾಗಿಲವರುಂ ಸುಯಿಧಾನರುಂ ಹಲವಾಳುಗಳನಾಯ್ದು (ಬಸಪು. ೧೬-೧೩) ; ಆವನಸ್ನಾನದಲಿಯೋದುವ ದೇವಲಕರನು ಮುಟ್ಟಿ ಯೋದುವ . . . ಬ್ರಹ್ಮಘಾತಕರ ನೋಡುತಲುವಧ್ಯಯನ ಹೇಳುವ ಮೂಢಗಹುದತ್ಯಧಿಕ ನರಕದ ಗೂಡು (ಸಂಭಪ. ೪-೧೬) ; ಯಾವ ಬ್ರಾಹ್ಮಣನು ಹಣವನ್ನು ಸ್ವೀಕರಿಸಿ ದೇವರ ಪೂಜೆಯನ್ನು ಮಾಡುವನೋ ಅವನು ದೇವಲಕನೆಂದೆನಿಸಿಕೊಂಡು ಸಕಲಕಾರ್ಯಗಳಲ್ಲಿ ಬಹಿಷ್ಕರಿಸಲ್ಪಡು ತ್ತಾನೆ (ತುಳುನಾ. ೨೩೩). [ ಸಂ. ]

**ದೇವಲಬ್ಬೆ** (ನಾ). ಒಬ್ಬಾಕೆಯ ಹೆಸರು : ಆ ವಿಭುಗೆ ದೇವಲಬ್ಬೆ ಗುಣಾ ವಳಿಯಿಂ (ಬೊಂಕಶಾ. ೧೯೩೪, ಹಾವೇರಿ. ೬೧-೨೧ ; ?).

[ ದೇವಲ? + ಅಬ್ಬೆ$_1$ ]

**ದೇವಲಿಪಿ** (ನಾ). ಒಂದು ಬಗೆಯ ಲಿಪಿ ; ವಿಷಯವನ್ನು ರಹಸ್ಯವಾಗಿ ಡಲು ಬಳಸುತ್ತಿದ್ದ ಒಂದು ಬಗೆಯ ಗೂಢಲಿಪಿ : ದೇವಲಿಪಿಯಲಿ ಬಂದ ಲೇಖೆಯೊಳಾವ ಸಂಖ್ಯೆಯವಿತ್ತೊವದಱಿಂ ಭಾವಿಸಲು ನೂರ್ಮಡಿ ಯೆನಿಸಿ ಧನರಾಶಿಯಾಗಿರಲು (ಬಸಪು. ೫-೬೦) ; ಶೈಲಲಿಪಿ ದೇವಲಿಪಿ ನಂದಿಲಿಪಿ . . . ಯಾ ಅಗಣಿತಲಿಪಿಗಳ ನೋಡಲರಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತಿರ್ದರು ವಿದ್ವಾಂಸರುಗಳೆಲ್ಲಾ (ಭಾಸ್ಕರ. ೭೭-೬).

[ ದೇವ + ಲಿಪಿ ]

**ದೇವಲೋಕ** (ನಾ). ದೇವತೆಗಳು ವಾಸಿಸುವ ಲೋಕ ; ಸ್ವರ್ಗ : "ಸ್ವರ್, ಸ್ವರ್ಗಃ . . . ಊರ್ಧ್ವಲೋಕಃ (ಚ)–ಈ ೧೧ ದೇವಲೋಕದ ಪೆಸರ್" (ಹಲಾಯು. ೨-೩) : ನನ್ದಿಸೇನಪ್ರವರಮುನಿವರನ್ದೇವಲೋಕಕ್ಕೆ ಸನ್ದಾನ್ (ಎಕ. II, ೮೯-೪ ; ಸು. 700) ; ಗೋವರ್ಧನಭಟಾರರ್ ಸಮಾಧಿಮರಣದಿಂದಂ ರತ್ನತ್ರಯಮಂ ಸಾಧಿಸಿ ಮುಡಿಪಿ ದೇವಲೋಕಕ್ಕೆ ಪೋದರ್ (ಪಡ್ಮರಾ. ೭೪-೨೯); ಅಂತು ದೇವಲೋಕದೊಳ್ ತನ್ನ ಮಾತೆ ಮಾತಾಗಿರ್ದ ಪರಾಕ್ರಮಧವಳನ ಪರಾಕ್ರಮಕ್ಕಂ ಗಂಡಗಾಡಿಗಂ ರಂಭೆ ಸೋಲ್ತು (ಪಂಪಭಾ. ೮-೨೮ ವ) ; ಭೂಲೋಕದ ಸ್ಥಾವರಕ್ಕೆ ಸತ್ಯ ಲೋಕದ ಅಗ್ಗವಣಿಯಲ್ಲಿ ಮಜ್ಜನಕ್ಕೆಱೆದು ದೇವಲೋಕದ ಪುಷ್ಪದಲ್ಲಿ ಪೂಜೆಯ ಮಾಡಿದಡೆ (ಅವಚಂ. ೪೬-೧೯೭) ; ದೇವಲೋಕ ಮರ್ತ್ಯಲೋಕ ವೆಂಬುದು ಬೇಱೆ ಮತ್ತುಂಟೆ (ಬಸವ. ೧೩೯) ; ದೇವಲೋಕಶ್ರೀಯನನು ಭವಿಸುತ್ತಮಿರೆ ನಿಜಾಯುರಬ್ಧಿದ್ವಯಮರ್ಧವತ್ಸರಾವಶೇಷಮಾಗಲೊಡಂ (ಚಂದ್ರಪು. ೪-೭೮ ವ) ; ನಾಯಿ ಬೊಗಳಿದರೆ ದೇವಲೋಕ ಹಾಳೇ ? (ಗಾದೆ). [ ದೇವ + ಲೋಕ ]

**ದೇವಲ್ಯ** 'ದೇವಾಲ್ಯ' ನೋ.

**ದೇವವಂದ್ಯ** (ನಾ). ದೇವತೆಗಳ ಗೌರವಕ್ಕೆ ಪಾತ್ರನಾದವನು : ಪರಮ ಶ್ರೀಪತಿ ದೇವವಂದ್ಯನಮಿತಕ್ಷೇಮಂಕರಂ (ಶಾಂತಿಪು. ೮-೧೦೭).

[ ದೇವ + ವಂದ್ಯ ]

**ದೇವವಧು** (ನಾ). ಅಪ್ಸರಸ್ತ್ರೀ : ದೇವವಧೂಸಮೀಪದೊಳೆ ಸಂಯಮ ಮೊಪ್ಪೆ . . . ತಪಮಿರ್ದಪರಲ್ಲಿ ಕಾಮಿವರ್ (ಶಾಕುಂತ. ೧೦೩-೧೭೫).

[ ದೇವ + ವಧು ]

**ದೇವವರಿಯ** (ನಾ). ಒಬ್ಬಾತನ ಹೆಸರು: ಹೊಲೆಯರ ಕಣವೊಂಗೆ ಕೊಟ್ಟ ಮಣ್ಣ ಖ ೧ ಹೊರೆಯಾಲ ದೇವವರಿಯರು ಗವೊಶಧರಿ ಬೆಸ × × × (ಎಕ. IV, ಗುಂಡ್ಲುಪೇ. ೯೦-೧೪ ; 976). [ ? ]

**ದೇವವರ್ಧಕಿ** (ನಾ). ದೇವತೆಗಳ ಬಡಗಿ ; ವಿಶ್ವಕರ್ಮ : "ದೇವವರ್ಧಕಿ ತ್ವಷ್ಟ್ರುವೆನೆ ವಿಶ್ವಕರ್ಮಂ" (ಮಂಗರಾ. ೭-೨೩). [ ದೇವ + ವರ್ಧಕಿ ]

**ದೇವವಲ್ಲಭ** (ನಾ). ೧. ದೇವತೆಗಳ ಒಡೆಯ,–ಸ್ವಾಮಿ : ದೇವಸಂತಾನ ಗುರು ದೇವವಲ್ಲಭನೆಂದು . . . ದೇವದುರ್ಲಭನೆಂದು ಕರೆವ ಬಿರುದಿನ ಕಹಳೆಗಳ ಮಹಾರವದೊಳಗೆ ಧರೆ ನಡುಗೆ (ನಂಬಿರ. ೭-೧೦೭). ೨. ಒಂದು ಬಗೆಯ ಮರ : (ಕ). [ ದೇವ + ವಲ್ಲಭ ]

**ದೇವವಸ್ತ್ರ** (ನಾ). ರೇಷ್ಮೆ ವಸ್ತ್ರ,–ಬಟ್ಟೆ : ದೇವವಸ್ತ್ರವನುಟ್ಟು ಭಸ್ಮಾಂಗಾ ವಿಭೂಷಣರಾಂಕಿತಾ ವೀರಾವತಾರರು ವೀರಭದ್ರಾದಿ ಪ್ರಮಥವರರ ಭಾವ ದಲಿ ನೆನೆದು (ಬಸಪು. ೩೧-೨೨). [ ದೇವ + ವಸ್ತ್ರ ]

**ದೇವವಾಣಿ** (ನಾ). ೧. ದೇವರ ಮಾತು,–ವಾಣಿ : ದೇವವಾಣಿಗಳೆಲ್ಲ ದಿಟವಾಗೆ – (ಎಂದು ದಿಟವಾಗವವು ? ) ನಾವೀಗ ಕಂಡುದೇ ಪೇಳದೇ ಮುಂದೆಯೂ ಆಗುವುದ ? (ಪಾರಸಿ. ೩೦-೬೮೮) : ಸೆಟ್ಟರ ಅನುಭವವಾಣಿ . . . ಭಗವದ್ಗೀತೆಯ ದೇವವಾಣಿಯೊಂದಿಗೆ ತುಲನೆ ಮಾಡಲು ಹಚ್ಚಿತು (ಜನಜೀ. ೫). ೨. ಸಂಸ್ಕೃತ ಭಾಷೆ ; ಸಂಸ್ಕೃತವನ್ನು ದೇವವಾಣಿ ಎಂದು ಕರೆಯುತ್ತಾರೆ (ರೂಢಿ). [ ದೇವ + ವಾಣಿ$_1$ ]

**ದೇವಮಾನಸ** (ನಾ). ದೇವತೆಯಂತೆ ಒಳ್ಳೆಯ ಗುಣಗಳಿಂದ ಕೂಡಿರು ವವನು ; ದೇವತಾಮನುಷ್ಯ : ಮಕಾರಕ್ಕೆ ವತ್ವಂ—ದೇವಮಾನುಷ – ದೇವಮಾನಸ; ಯಮಳಮರ್ದಳ – ಜವಳಿವದ್ದಳೆ (ಶಮದ. ೨೯೨ ಪ್ರಯೋ).

[ <ಸಂ. ದೇವಮಾನುಷ ]

**ದೇವವಾರಣ** (ನಾ). ದೇವತೆಗಳ ಆನೆ; ಐರಾವತ ; ಸುರಭಿದೇವತೆಯೆಂಬ ಕಾಪಿನೆ ಮಾಣ್ದುದೇಜುಪ್ಪೆವ ದದೆಂದಿರದೆ ಮಾಣ್ದುದು ದೇವವಾರಣಂ (ಪಂಪಭಾ. ೧–೨೫). [ ದೇವ + ವಾರಣ ]

**ದೇವವಿಟ** (ನಾ). ದೇವಲೋಕದಲ್ಲಿರುವ ಕಾಮುಕ : ದೇವವಿಟರ್ಗೆ ಕಣ್ಮಾಯವಂ ಬಿಡಿಸಿ (ನಂಬಿರ. ೧೨–೪೦) ; ಸಕಲ ಸುರಶ್ರೇಷ್ಠರುಗಳಲ್ಲಿ ಕೊನಬುಗಳಾದ ಮಕರಧ್ವಜ ನಳಕೂಬರ ಜಯಂತ ಅನಿರುದ್ಧ ಕೂಚಿಮಾರ ಪಾಂಚಾಲ ಪಲ್ಲವ ಪ್ರವೀಣಾದಿ ದೇವವಿಟರುಂ (ವಿವೇಕ. ೨೨೮). [ ದೇವ + ವಿಟ ]

**ದೇವವಿನೂತ** (ನಾ). ದೇವತೆಗಳ ಪ್ರಶಂಸೆಗೆ ಪಾತ್ರನಾದವನು ; ದೇವಗುರು ; ಬೃಹಸ್ಪತಿ : ದಿವಸಕರ ಚಂದ್ರಯುತ ಭಾರ್ಗವನಂ ಜನ್ಮಾವಸರದೊಳೀಕ್ಷಿಸುವೊಡೆ ದೇವವಿನೂತಂ (ಜಾತತಿ. ೬–೨೫). [ ದೇವ + ವಿನೂತ ]

**ದೇವವೀಧಿ** (ನಾ). ದೇವತೆಗಳ ಸಮೂಹ,–ಗುಂಪು: ದೇವವೀಧಿ ದೇವುರೆ ಸುರರಾಜರಾಜ ಧಿರುರೇ ಎನೆ . . . ಭಲರೇ ಕಪರ್ದಿಯೆನೆ ನಂದಿಯು ನೇಚಾಡಿದನೆಮ್ಮ ಶಂಕರಂ (ಗಿರಿಕ. ೧೦–೬೫). [ ದೇವ + ವೀಧಿ (<ಬೀದಿ) ]

**ದೇವವೀರ್ಯ** (ನಾ). ದೇವತೆಗಳ ಸಾಮರ್ಥ್ಯ,–ಪ್ರಭಾವ,–ಮಹಿಮೆ : ಸೂರ್ಯನೊಳು . . . ವೈರಾಗ್ಯದೊಳು ದೇವವೀರ್ಯದೊಳು ಮುಕ್ತಿಯೊಳು ಶ್ರೀಯೊಳು ಮಹಾತ್ಮ್ಯೆಯೊಳು ಭರ್ಗನೊಳು ಭಗವೆನಿಕ್ಕುಂ (ಮಂಗರಾ. ೧೫೦–೫೧). [ ದೇವ + ವೀರ್ಯ ]

**ದೇವವೆಸ** (ನಾ). ದೇವರ ಕಾರ್ಯ,–ಸೇವೆ : ಸೊಡಿಡಿಯ ಹೊನ್ನೆಯ ಮಗ ಬೀರಯ್ಯ ದೇವವೆಸ ಕಾಯಾವಾಚಿಕಂ ಸರತ್ತಿ ಪ್ರವಾಣ ನಿಮಿತ್ತಮಾಗಿ ಅಗ್ನಿಪ್ರವೇಶಂಗೆಯ್ದು ಶಿವಲೋಕಪ್ರಾಪ್ತನಾದ (ಮೈಆರಿ. ೧೯೬೨, ೬೬–೫ ; 1133). [ ದೇವ + ಬೆಸ$_1$ ]

**ದೇವವ್ರತ** (ನಾ). ೧. ಬ್ರಹ್ಮಚರ್ಯವ್ರತ : ಆ (ಅ)ಬ್ರಹ್ಮಂ ದಶವಿಧದಿಂ ತೀಬ್ರಂ ನೆಲಸಿದೊಡೆ ಸೋಲ್ಲು ಸೈರಿಸದೆ ಚತುರ್ಥಬ್ರತವಂ ಪೊರ್ದಿದೊಡೆನ್ನೀ ಬ್ರಹ್ಮಂ ಕಿಡಿಸಲಘಚಯಂ ಸೋರ್ತರ್ಕುಂ ಅಂತು ಪತ್ತುಂ ತೆಱದ ಬ್ರಹ್ಮದಿಂ ತುತ್ತತುದಿಯೊಳಾಪತ್ತುವಡಿಸುವ ಕರ್ಮಂಗಳ್ ಪತ್ತುಗಂ ಅವಱಿಂ ಜೀವಂ ದುಃಖಾಗ್ನಿಯೊಳ್ ಪೊತ್ತುಗುವಂವು ಬಸನಮು ಅಂತಪ್ಪ ಬ್ರಹ್ಮಂ ದಶವಿಧಮಾವುವೆಂದೊಡೆ ಇಂದ್ರಿಯವರ್ಧನಮಪ್ಪಾಹಾರ ಮನುಣ್ಬುದುಂ ತಂಬುಲಮಂ ತಿಂಬುದುಂ ವಸ್ತ್ರಕಂಬಳಂಗಳಂ ಪೊದೆವುದುಂ ಮೃದುಶಯ್ಯೆಯೊಳೊಱಗುವುದುಂ ತನ್ನ ದಂತ ನಖ ತನುಮಲಾದಿಗಳಂ ಪಿಂಗಿಸುವುದುಂ ಆಗಳುಂ ಸ್ತ್ರೀಪ್ರಸಂಗದೊಳಿರ್ಪುದುಂ ಸುಗಂಧದ್ರವ್ಯಂಗಳಂ ಪೂಸುವುದುಂ ಸುಗಂಧಪುಷ್ಪಂಗಳಂ ವಾಸಿಸುವುದುಂ ಗೀತವಾದ್ಯಂಗಳಂ ಕೇಳ್ವುದುಂ ನೃತ್ಯನಾಟಕಂಗಳಂ ನೋಟ್ಪುದುಂ ಎಂದಿಂತು ದಶವಿಧಮಕ್ಕುಂ ಅಂತು ಬ್ರಹ್ಮಚರ್ಯಮೆಂಬುದು ದೇವವ್ರತಂ ಆವ ವ್ರತಕ್ಕ ಮುತ್ಕೃಷ್ಟಂ (ಜೀವಸಂ. ೧೩೯–೫). ೨. ಬ್ರಹ್ಮಚರ್ಯವ್ರತವನ್ನು ಪಾಲಿಸುವವನು. ೩. ಗಂಗಾದೇವಿಯ ಮಗ ; ಭೀಷ್ಮ : ದೇವವ್ರತನೆನಿಸಿ ನೆಗಟ್ದ ಯಶವಂ ಬೆರಸಿ . . . ಈ ಭೀಷ್ಮರಂತು ನುಡಿದರುಮೊಳರೇ (ಪಂಪಭಾ. ೬–೪೨). ೪. [ಜೈನ] ಶ್ರೇಷ್ಠವಾದ ವ್ರತ. [ ದೇವ + ವ್ರತ ]

**ದೇವಶಿಖಾಮಣಿ** (ನಾ). ದೇವತೆಗಳ ತಲೆಮಣಿಯಂತಿರುವವನು ; ದೇವಶ್ರೇಷ್ಠ : ಶಿವಾಲಯಕ್ಕೆ ಬಂದು ದೇವ ದೇವ ದೇವಶಿಖಾಮಣಿ . . . ಕರುಣಿಸು ಎಂದು (ನಂಬಿರ. ೩–೭೪). [ ದೇವ + ಶಿಖಾಮಣಿ ]

**ದೇವಸಂಘಾತ** (ನಾ). ದೇವತೆಗಳ ಸಮೂಹ,– ಗುಂಪು : ದೇವದುಂದುಭಿಯ ರವಮುಮಂ ಯಶೋಭದ್ರೆ ನೋಡಿ ದೇವಸಂಘಾತಮಂ ಕಂಡು ಮಗನ ಸಾವನಱಿದು (ವಡ್ಡಾರಾ. ೨೫–೨೩). [ ದೇವ+ಸಂಘಾತ ]

**ದೇವಸಂತಾನ** (ನಾ). = ದೇವಸಂಘಾತ : ದೇವಸಂತಾನಗುರು . . . ದೇವದುರ್ಲಭನೆಂದು ಕರೆವ ಬಿರುದಿನ ಕಹಳೆಗಳ ಮಹಾರವದೊಳಗೆ ಧರೆ ನಡುಗೆ (ನಂಬಿರ. ೬–೧೧೭). [ ದೇವ + ಸಂತಾನ ]

**ದೇವಸಂಪ್ರದಾಯ**(ನಾ). [ ಚಿತ್ರಶಾ ]ಭಾರತೀಯ ಚಿತ್ರಕಲೆಯ ಮೂರು ಸಂಪ್ರದಾಯಗಳಲ್ಲಿ ಒಂದು : ತಾರಾನಾಥ ಅಗ್ಗೆ ದೇವ, ಯಕ್ಷ ಮತ್ತು ನಾಗ ಎಂದು ಮೂರು ಸಂಪ್ರದಾಯಗಳಿದ್ದವೆಂದು ಹೇಳುತ್ತಾನೆ. ದೇವ ಸಂಪ್ರದಾಯವು ಕ್ರಿಸ್ತಪೂರ್ವ ಆರನೇ ಶತಮಾನದ ತನಕ ಮಗಧರಾಜ್ಯದಲ್ಲೂ ಯಕ್ಷಸಂಪ್ರದಾಯ ಮೂರನೇ ಶತಮಾನದಲ್ಲಿ ಅಶೋಕನ ಕಾಲದಲ್ಲೂ ನಾಗಸಂಪ್ರದಾಯವು ಅನಂತರ ಕ್ರಿಸ್ತಶಕ ಮೂರನೇ ಶತಮಾನದಿಂದ ನಾಗಾರ್ಜುನನ ಕಾಲದಲ್ಲೂ ರೂಢಿಯಲ್ಲಿತ್ತೆಂದೂ ಆತ ಹೇಳಿದ್ದಾನೆ (ಭಾರಿದ. ೫೨೩). [ ದೇವ + ಸಂಪ್ರದಾಯ ]

**ದೇವಸತ್ರ** (ನಾ). ದೇವತೆಗಳ ಪ್ರೀತಿಗಾಗಿ ಮಾಡುವ ಯಾಗ : ಸುಖ ದುಃಖಗಳ ಮೋಡಗಳು ಯಾವವಾದರೂ ಇದ್ದಲ್ಲಿ ಅವು ದೇವಸತ್ರಕ್ಕೆ ಅಡ್ಡ ಬರುವ ರಾಕ್ಷಸೀಛಾಯೆಯಂತೆ ತಮ್ಮ ತಾತ್ಕಾಲಿಕ ವಿರೋಧದಿಂದ ಸತ್ರದ ಮಹತ್ವವನ್ನೇ ಬೆಳಸಿ ಕಣ್ಮರೆಯಾಗುವುವು (ಪ್ರಬಂಧ. ೧೪). [ ದೇವ + ಸತ್ರ ]

**ದೇವಸತ್ವ** (ನಾ). ೧. ದೇವತೆಯ ಮನಸ್ಸು,–ಚಿತ್ತ. ೨. [ಕಾಮಶಾ] ಸ್ತ್ರೀಯರ–ಹನ್ನೆರಡು ಬಗೆಯ ಸ್ವಭಾವಗಳಲ್ಲಿ ಒಂದು; ದೇವತೆಗಳ ಮನಸ್ಸಿನಂತೆ ಉತ್ತಮವಾಗಿರುವ ಮನಸ್ಸು : ಪರಿಮಳಾಂಗದ ಮನೋಹರ ವದನದ . . . ಭಾಸುರಗುಣದವಳೆ ದೇವಸತ್ವದವಳು (ಜನವ. ೫–೨೬) ; ದೇವಸತ್ವ ಯಕ್ಷಸತ್ವ ಗಂಧರ್ವಸತ್ವ ನರಸತ್ವ ನಾಗಸತ್ವ ಕಾಕಸತ್ವ ವಾನರಸತ್ವ ಮುನಿಸತ್ವ ಪಿಶಾಚಸತ್ವ ರಾಕ್ಷಸಸತ್ವ ಕಿನ್ನರಸತ್ವ ಖರಸತ್ವವೆಂಬ ದ್ವಾದಶಸತ್ವದ ಸತಿಯರಿಂ (ವಿವೇಕ. ೨೪೫). 'ದ್ವಾದಶ ಸತ್ವ' ಪರಾ. [ ದೇವ + ಸತ್ವ$_2$ ]

**ದೇವಸದೃಶ** (ನಾ). ದೇವತೆಗಳಿಗೆ ಸಮಾನನಾದ ವ್ಯಕ್ತಿ ; ದೇವತೆಯಂತಿರುವ ವ್ಯಕ್ತಿ : ದೇವಸದೃಶನಾದ ನಿನ್ನನ್ನು ನೋಡಿದ ಮೇಲೆ ನನಗೆ ನಿನ್ನ ಮೇಲೆ ಮನಸ್ಸಾಗಿದೆ (ವಚಭಾ. ೩೭). [ ದೇವ + ಸದೃಶ ]

**ದೇವಸನ್ನಿಧಿ** (ನಾ). ದೇವತೆಗಳ ಸಾಮೀಪ್ಯ : ಎಲ್ಲಿ ಭೂರಮೆ ದೇವಸನ್ನಿಧಿ ಬಯಸಿ ಬಿಮ್ಮನೆ ಬಂದಳೋ . . . ಅಲ್ಲೆ ಕೊಡವರ ಬೀಡಲಾ ! (ಕಪವು. ೬–೧೫೨) ; ದೊಡ್ಡಪ್ಪನವರತ್ತ ಓಗೊಟ್ಟರಾ ಕರೆಗೆ ನಡೆದರು ದೇವಸನ್ನಿಧಿಗೆ (ಇಂಚಾಪ. ೨೯–೩೪). [ ದೇವ + ಸನ್ನಿಧಿ ]

**ದೇವಸಪರ್ಯೆ** (ನಾ). ದೇವರ ಪೂಜೆ : ಮೃತ್ಪ್ರಾಂನ್ನದಾನಿತ್ವಂ ದೇವಸಪರ್ಯೆ ಮಂತ್ರಮುಖಿಳಂ ಸಂಪೂರ್ಣಮಿಾ ಸೋಮಯಾಜಿತ್ವಂ ತತ್ವಗಮೆನ್ದು ಬಣ್ಣಿಸೆ ಜನಂ (ಸೌಇಇ. XI-1, ೪೫–೪೪ ; 980). [ ದೇವ + ಸಪರ್ಯೆ ]

**ದೇವಸಬಳ, ದೇವಸವಳ** (ನಾ). ಒಂದು ಬಗೆಯ ನಾಣ್ಯ (?) : ನಿತ್ಯ ದಾನಕ್ಕೆ ದೇವಸಬಳದ ಪದಿನೆಂಟುಕೋಟಿಪೊನ್ನುಮನಿತ್ತು (ಪಂಪಭಾ. ೨–೪೪ ವ); "ದೇವತೆಗಳಲ್ಲಿರುವ ಒಂದು ತೂಕ, ಅಥವಾ ಅಳತೆ(?)" (ಪಂಪದೀ. ೮೭) ; ದೇವಸಬಳದ ಪದಿನೆಂಟುಕೋಟಿಪೊನುಮಂ ತರಿಸಿ ಕೊಟ್ಟು (ಪಂಪಭಾ. ೧೨–೫೨ ವ). **ದೇವಸವಳ** : ದುರ್ಯೋಧನನಟ್ಟಿದ ದೇವಸವಳದ ಪದಿನೆಂಟುಕೋಟಿಪೊನ್ನುಮನೊಟ್ಟಿ ಬೆಟ್ಟಾಗೆ ಪುಂಜಿಸಿ (ಪಂಪಭಾ. ೯–೭೦ ವ). 'ದೇವಸವಳ', 'ಸಬಳಗದ್ಯಾಣ' ಪರಾ ; **P** ಇದು ಪ್ರತಿನಿತ್ಯವೂ ನಡೆಯಬೇಕಾದ ಯಾವುದೋ ದಾನ, ಪೂಜೆ, ಬಾಗಿನ ಇತ್ಯಾದಿ ಉದಾರಕಾರ್ಯಕ್ಕೆ ಸಂಬಂಧಿಸಿ ವರ್ತನೆಯಾಗಿ ಬರುತ್ತಿದ್ದವರಿಗೆ ಕೊಡುಗೆಯಾಗಿ ಕೊಡುತ್ತಿದ್ದ ದಾನವಿರಬೇಕು. [ <ದೇವಸವಳ ? ]

**ದೇವಸಭೆ** (ನಾ). ೧. ಇಂದ್ರನ ಆಸ್ಥಾನ : "ಸುಧರ್ಮಾ, ದೇವಸಭಾ– ೨ ದೇವತೆಗಳ ಸಭೆಯ ಹೆಸರುಗಳು" (ಸಿದ್ಧಾಂತಿ. ೩೨) ; ದೇವಸಭೆಯೊಳಗೆ ನಾನು ನುಡಿದು ಭಾಷೆಯನಿತ್ತೆ (ಹಜಕಾ. ೧೯-೧೯). ೨. ದೇವತೆಗಳ ಸಮೂಹ : ಅಂತು ಓರಿದು ಮೊಸಗೆಯಂ ಮಾಡಿ ದೇವಸಭೆಯುಂ ಬ್ರಹ್ಮ ಸಭೆಯುಮೊಡನಿರ್ದು (ಪಂಪಭಾ. ೧-೧೧೮ ವ). [ ದೇವ + ಸಭೆ ]

**ದೇವಸಮಿತಿ** (ನಾ). ದೇವತೆಗಳ ಗುಂಪು,–ಸಮೂಹ : ದೇವಸಮಿತಿಯ ವಿಳಾಸಮಂ ನೆಱೆಯೆ ಪೊಗಬಲಾರ್ಪೊಂ ನೆಱೆಪೊ (ಶಾಂತಿಪು. ೧೦-೪).

[ ದೇವ + ಸಮಿತಿ ]

**ದೇವಸವಳ** 'ದೇವಸಬಳ' ನೋ.

**ದೇವಸಾಕ್ಷಾತ್ಕಾರ** (ನಾ). ದೇವರನ್ನು ಪ್ರತ್ಯಕ್ಷವಾಗಿ ನೋಡುವುದು ; ದೇವರನ್ನು ಎದುರಿಗೆ ನೋಡುವುದು: ಜ್ಞಾನೇಶ್ವರ ಮತ್ತು ಕಬೀರರು ತಮ್ಮ ಭಕ್ತಿಮನೋಧರ್ಮವನ್ನು ಜಗತ್ತಿನ ಜನರಿಗೆ ದೇವಸಾಕ್ಷಾತ್ಕಾರ ವನ್ನು ಬೋಧಿಸಲು ಮೀಸಲಾಗಿಟ್ಟರು (ಧರ್ಮಸಾ. ೧೫೦).

[ ದೇವ + ಸಾಕ್ಷಾತ್ಕಾರ ]

**ದೇವಸಾತ್ಕ** (ನಾ). ದೇವರಿಗೆ ಸೇರಿದುದು : "ದೇವಸಾತ್ಕಂ ದೈವೀಯಂ" (ವಸ್ತುಕೋ. ೧೦೦-೭೧). [ ಸಂ. ]

**ದೇವಸಾನ್ನಿಧ್ಯ** (ನಾ). ದೇವತೆಯ ಸಾಮೀಪ್ಯ; ದೇವರ ಬಳಿ ಇರುವುದು: ನಿರ್ಮಲ ವಾತಾವರಣದ ದೇವಸಾನ್ನಿಧ್ಯವನ್ನು ಬಿಟ್ಟು ತನ್ನ ಅಜ್ಜ–ತಾಯಂದಿರು ಧಾರವಾಡಕ್ಕೆ ಏಕೆ ಹೋದರು (ಗಂಗಾಸಾ. ೧೩).

[ ದೇವ + ಸಾನ್ನಿಧ್ಯ ]

**ದೇವಸಾಯುಜ್ಯ** (ನಾ). ಭಕ್ತನು ತಾನು ಉಪಾಸನೆ ಮಾಡುವ ದೇವತೆ ಯಲ್ಲಿ ಐಕ್ಯವಾಗುವುದು; ℙ ತೈತ್ತಿರೀಯೋಪನಿಷತ್ತಿನ ೧೦ ನೆಯ ಪ್ರಪಾಠಕದ ೧೪ನೆಯ ಅನುವಾಕದಲ್ಲಿ ಉಪಾಸನೆಯಿಂದ ೧. ಸಮಾನಲೋಕತೆ, (ಇಷ್ಟದೇವತೆಯೊಂದಿಗೆ ಒಂದೇ ಲೋಕದಲ್ಲಿ ವಾಸಿಸುವುದು), ೨. ಸಾರ್ಷ್ಟಿ (ಇಷ್ಟದೇವತೆಗೆ ಸರಿಸಮಾನವಾದ ಐಶ್ವರ್ಯವನ್ನು ಎಂದರೆ ಅಣಿಮಾದಿ ಸಿದ್ಧಿಗಳನ್ನು ಪಡೆಯುವುದು), ೩. ಸಾಯುಜ್ಯ (ಇಷ್ಟದೇವತೆಯ ಸಹಭಾವ ಅಥವಾ ತಾದಾತ್ಮ್ಯ ವನ್ನು ಪಡೆಯುವುದು) ಎಂಬ ಮೂರು ಬಗೆಯ ಸಿದ್ಧಿಗಳನ್ನು ಹೇಳಿದೆ. ಮತ್ತೆ ಕೆಲವು ಗ್ರಂಥಗಳಲ್ಲಿ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂಬ ನಾಲ್ಕು ಬಗೆಯ ಮುಕ್ತಿಗಳು ನಿರೂಪಿತವಾಗಿವೆ. ಭಾಗವತದ ೩-೨೯-೧೨ರಲ್ಲಿ ೧. ಸಾಲೋಕ್ಯ (ಭಗವಂತನ ಲೋಕದಲ್ಲಿರುವುದು), ೨. ಸಾರ್ಷ್ಟಿ (ದೇವರಿಗೆ ಸರಿ ಸಮಾನವಾದ ಐಶ್ವರ್ಯ ಹೊಂದಿರುವುದು), ೩. ಸಾಮೀಪ್ಯ (ದೇವರ ಹತ್ತಿರದಲ್ಲಿರುವುದು), ೪. ಸಾರೂಪ್ಯ (ದೇವರಿಗೆ ಸಮಾನ ವಾದ ರೂಪ ಧರಿಸುವುದು), ೫. ಏಕತ್ವ (ಇಷ್ಟದೇವತೆಯಲ್ಲಿ ಐಕ್ಯ ವಾಗುವುದು) ಎಂಬ ಐದು ಬಗೆಯ ಮುಕ್ತಿಯ ಅಂತಸ್ತುಗಳನ್ನು ಹೇಳಿದೆ. ಅದ್ವೈತದ ಸಿದ್ಧಾಂತದಂತೆ ಇವೆಲ್ಲ ಉಪಾಸನೆಯಿಂದ ಸಿದ್ಧಿಸುವ ಗೌಣಮುಕ್ತಿಗಳು. ಪರಮಮುಕ್ತಿಯು ಶುದ್ಧಬ್ರಹ್ಮ ಭಾವ–ಇದು ತತ್ತ್ವಜ್ಞಾನದಿಂದ ಮಾತ್ರ ಲಭಿಸುತ್ತದೆ. ಮುಕ್ತಿಯ ಈ ಸಂಖ್ಯೆಗಳ ಬಗೆಗೆ ಮತ್ತು ವಿವರಣೆಯ ಬಗೆಗೆ ಬೇರೆ ಬೇರೆ ಅಭಿಪ್ರಾಯಗಳಿವೆ. [ ದೇವ + ಸಾಯುಜ್ಯ ]

**ದೇವಸಾಲೆ** (ನಾ). (?): ತಸ್ಯ ಸೀಮಾನ್ತರಂ ಕೊಳ್ತಿನಿಲಿಱಿಪ ಮೇರಿಷ್ಯೆವಿ ವಾಣ್ಣಿಕರ್ಕ್ಕೆ ತುಟ್ಟಿಲುಂ ದೇವಸಾಲೆಯುಂ ಕೆಬ್ಬಿಱಿಪ . . . ನನ್ದಾಕ ಕೊಳ್ತಾಲೆಯುಳ್ ಕುಡಿತ್ತು (ಎಕ. XVI, ಗುಬ್ಬಿ. ೭೩-೫೦.: 733). [ ? ]

**ದೇವಸಾವರ್ಣಿಕ** (ನಾ). ಈಗ ನಡೆಯುತ್ತಿರುವ ಶ್ವೇತವರಾಹಕಲ್ಪದಲ್ಲಿ ಹದಿಮೂರನೆಯ ಮನು,–ಮನ್ವಂತರಪ್ರವರ್ತಕ : ಸ್ವಾಯಂಭುವ ಸ್ವಾರೋಚಿಷ ಉತ್ತಮ ತಾಮಸ ರೈವತ ಚಾಕ್ಷುಷ ವೈವಸ್ವತ ಸೂರ್ಯ ಸಾವರ್ಣಿಕ ದಕ್ಷಸಾವರ್ಣಿಕ ಬ್ರಹ್ಮಸಾವರ್ಣಿಕ ಧರ್ಮಸಾವರ್ಣಿಕ ರುದ್ರ ಸಾವರ್ಣಿಕ ರೌಚ್ಯ ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳೊಳಗೆ . . . ರೌಚ್ಯನೇ ದೇವಸಾವರ್ಣಿಕನೆಂದು ಪುರಾಣಭೇದಂಗಳಿಂ ನಾಮಾಂತರ ಮುಂಟಾಗಿ (ವಿವೇಕ. ೨೧೮). 'ಮನು', 'ಮನ್ವಂತರ' ಪರಾ. ℙ ಪ್ರತಿ ಯೊಂದು ಕಲ್ಪದಲ್ಲಿಯೂ ಹದಿನಾಲ್ಕುಮಂದಿ ಮನುಗಳಿರುತ್ತಾರೆ. ೧. ಸ್ವಾಯಂಭುವ, ೨. ಸ್ವಾರೋಚಿಷ, ೩. ಉತ್ತಮ, ೪. ತಾಮಸ, ೫. ರೈವತ, ೬. ಚಾಕ್ಷುಷ (ಇವರು ಆಗಿಹೋದವರು). ೭. ವೈವಸ್ವತ (ಈಗಿನ ಮನು). ೮. ಸಾವರ್ಣಿ, ೯. ದಕ್ಷಸಾವರ್ಣಿ, ೧೦. ಬ್ರಹ್ಮಸಾವರ್ಣಿ, ೧೧. ಧರ್ಮಸಾವರ್ಣಿ, ೧೨. ರುದ್ರ ಸಾವರ್ಣಿ, ೧೩. ದೇವಸಾವರ್ಣಿ, ೧೪. ಇಂದ್ರಸಾವರ್ಣಿ (ಇವರು ಮುಂದೆ ಬರುವ ಮನುಗಳು). [ ಸಂ. ]

**ದೇವಸಾಸವೆ, ದೇವಸಾಸಿವೆ**(ನಾ). ಒಂದು ಬಗೆಯ ಗಿಡ: "ರಕ್ತಮೂಲಕಃ- ದೇವಸಾಸವೆ" (ಒಷಧಿ. ೧೩೩). **ದೇವಸಾಸಿವೆ** : "ಅಕ್ಷಃ –ತಾಡಿಕವಡೆ, ಚಿಂದುಗ, ದೇವಸಾಸಿವೆ" (ಒಷಧಿ. ೧) ; "ನಿರ್ಜರಾದಿ ಸರ್ಷಪಃ–ದೇವ ಸಾಸಿವೆ" (ಒಷಧಿ. ೮೮). [ ದೇವ + ಸಾಸವೆ ]

**ದೇವಸಾಸಿವೆ** 'ದೇವಸಾಸವೆ' ನೋ.

**ದೇವಸಾಳಿ** (ನಾ). ನೆಯ್ಗೆಯವರಲ್ಲಿ ಒಂದು ಪಂಗಡ: ನೇಕಾರರು . . . ೨ನೇ ವರ್ಗದಲ್ಲಿ ದೇವಸಾಳಿಗಳು, ಇಲ್ಲವೆ ದೇವಾಂಗರುಯೆಂಬ ಜಾತಿ ಯೊಂದೇ ಉಂಟು (ಕಥಾಗ. ೧೫೯). [ ದೇವ + ಸಾಳಿ (<ಸೇಲೆ) ]

**ದೇವಸಿಂಗರ** (ನಾ). ದೇವತೆಗಳು ಅಲಂಕಾರ ಮಾಡಿಕೊಳ್ಳುವಂಥ ಶ್ರೇಷ್ಠವಾದ ಅಲಂಕಾರ,–ಲೋಕೋತ್ತರವಾದ ಶೃಂಗಾರ: ದೇವ ಸಿಂಗರಗೂಡಿ ಸಿಂಹಪೀಠದೊಳಿರ್ದ ಭಾವನ ಕಂಡ ದೂರದೊಳು (ಭರತೇ. ೩೯-೯೩). [ ದೇವ + ಸಿಂಗರ ]

**ದೇವಸಿದ್ಧಿ** (ನಾ). ದೇವಾನುಗ್ರಹದಿಂದ ಉಂಟಾಗುವ ಕಾರ್ಯಜಯ: ದೇವಸಿದ್ಧಿ ಮಾನುಷಸಿದ್ಧಿ ಯೆಂಬೆರಡುಂ ಸಿದ್ಧಿಯುಮಂ . . . ಸೌಧರ್ಮ ಕಲ್ಪೇಶ್ವರಂ ಪ್ರತ್ಯಕ್ಷಂ ಮಾಡಿದಾಗಳ್ (ಅಜಿಪು. ೩-೩೦ ವ).

[ ದೇವ + ಸಿದ್ಧಿ ]

**ದೇವಸುತ**(ನಾ).=ದೇವಕುಮಾರ ೧ : ನೀ ದೇವಸುತನಾಗಿದ್ದರೀ ಸಿಲುಬೆ ಯಿಂದಿಳಿದು ಬಾರ ನೋಡುವ ! (ಗೊಲ್ಗೊಥಾ. ೧೨-೩೦೮).

[ ದೇವ + ಸುತ ]

**ದೇವಸುರಭಿ** (ನಾ). ದೇವತೆಗಳ ಹಸು ; ಕಾಮಧೇನು : ಸ್ತೋತ್ರುವೇ ಅನುಗ್ರಹವನ್ನು ಕರೆಯುವ ದೇವಸುರಭಿಯಲ್ಲವೆ ? (ಜಿತಂಜಾ. ೪).

[ ದೇವ + ಸುರಭಿ ]

**ದೇವಸುಷಿ** (ನಾ). ಹೃದಯದಲ್ಲಿರುವ ಐದು ರಂಧ್ರಗಳು : ಹೃದಯಕ್ಕೆ ಐದು ರಂಧ್ರಗಳಿವೆ. ಸ್ವರ್ಗದ್ವಾರಗಳಾಗಿರುವ ಅವುಗಳನ್ನು ಪ್ರಾಣವೇ ಮುಂತಾದ ದೇವತೆಗಳು ಕಾದುಕೊಂಡಿರುವುದರಿಂದ ಅವು ದೇವಸುಷಿಗಳು (ಬ್ರಹ್ಮಭಾ. ೨೧೯ ಅಡಿಟಿ); ℙ ಛಾಂದೋಗ್ಯೋಪನಿಷತ್ತಿನ ಮೂರನೆಯ ಅಧ್ಯಾಯದ ಹದಿಮೂರನೆಯ ಖಂಡದಲ್ಲಿ ಹೃದಯಾಕಾಶರೂಪ ವಾದ ಬ್ರಹ್ಮದ ಉಪಾಸನೆಯನ್ನು ಹೇಳಿದ ಮೇಲೆ ಅದು ಪರಿಪೂರ್ಣವೆನಿಸುವುದಕ್ಕಾಗಿ ತದಂಗವಾಗಿ ಪಂಚದೇವಸುಷಿಗಳ ಉಪಾಸನೆಯು ಹೇಳಲ್ಪಟ್ಟಿದೆ. ಸ್ವರ್ಗಲೋಕದ ಭವನವಾದ ಹೃದಯಕ್ಕೆ ಐದು ರಂಧ್ರಗಳಿವೆ. ಸುಷಿಯೆಂದರೆ ರಂಧ್ರ ಅಥವಾ ದ್ವಾರ. ದೇವತೆಗಳಾದ ಪ್ರಾಣಾದಿಗಳು ಇಲ್ಲಿ ಕಾವಲಿರುವುದರಿಂದ ಇವಕ್ಕೆ ದೇವಸುಷಿಗಳೆಂಬ ಹೆಸರು ಬಂದಿದೆ. ಪೂರ್ವದಿಕ್ಕಿನ ಸುಷಿಗೆ ಪ್ರಾಣ ಅಥವಾ ಆದಿತ್ಯನೆಂದೂ ದಕ್ಷಿಣದ ಸುಷಿಗೆ ವ್ಯಾನ ಅಥವಾ

ಚಂದ್ರಮುಸನೆಂದೂ ಪಶ್ಚಿಮದ ಸುಷಿಗೆ ಅಪಾನ ಅಥವಾ ಅಗ್ನಿಯೆಂದೂ ಉತ್ತರದ ಸುಷಿಗೆ ಸಮಾನ ಅಥವಾ ಪರ್ಜನ್ಯವೆಂದೂ ಮೇಲುಗಡೆಯ ಸುಷಿಗೆ ಉದಾನ ಅಥವಾ ವಾಯುವೆಂದೂ ಹೆಸರು. ಈ ಐವರು ಬ್ರಹ್ಮಪುರುಷರೆಂದೂ ಸ್ವರ್ಗಲೋಕದ ದ್ವಾರಪಾಲಕರೆಂದೂ ಹೆಸರು ಪಡೆದಿದ್ದಾರೆ. ಇವರ ಉಪಾಸನೆಯಿಂದ ಮಾನವನು ಸ್ವರ್ಗಲೋಕವನ್ನು ಪಡೆಯುತ್ತಾನೆ. ಸುಷಿಗಳಿಗೂ ಸುಷಿಪಾಲಕರಾದ ದೇವತೆಗಳಿಗೂ ಶ್ರುತಿಯು ಅಭೇದವನ್ನು ಕಲ್ಪಿಸಿದೆ. [ದೇವ + ಸುಷಿ]

**ದೇವಸೇನೆ** (ನಾ). ದೇವತೆಗಳ ದಂಡು,–ಸೇನೆ : ದೇವಸೇನೆ ನಡೆದತ್ತೋ ರಂತೆ ನೂಲ್ವೊಯ್ದುವೊಲ್ (ಆನಂಪು. ೫-೪೪). [ದೇವ + ಸೇನೆ]

**ದೇವಸೌಖ್ಯ** (ನಾ). ದೇವತೆಗಳು ಅನುಭವಿಸುವ ಸುಖ,–ಭೋಗ ; ದಿವ್ಯಭೋಗ ; ಲೋಕೋತ್ತರವಾದ ಸುಖ : ದೇವಸೌಖ್ಯಮಂ ಸೇವಿಸಿಯುಂ ಕಷಾಯಮೊಗೆಯುತ್ತಿರೆ ಪೋದ ಪರಾರ್ಥ್ಯವಸ್ತುದಂತಾ ವಿಭುಗಳುದುದೆಂದು ವಿಶದಂ ಬಹಿರಂಗಮುಮಂತರಂಗಮುಮಂ (ಶಾಂತಿಪು. ೯-೩೩). [ದೇವ + ಸೌಖ್ಯ]

**ದೇವಸ್ತುತಿ** (ನಾ). ದೇವರನ್ನು ಕುರಿತ ಹೊಗಳಿಕೆ ; ದೇವರ ಮಹಾತ್ಮೆಯ ವಿವರಣೆ ; ದೇವರ ಪ್ರಾರ್ಥನೆ : ದೇವಸ್ತುತಿ ಲೋಕಕ್ಕೆ ಖಿಳಾವನಿಯೊಳ್ಪಲವು ಭೇದಂ (ಸಮುಪ. ೮-೮೯). [ದೇವ + ಸ್ತುತಿ]

**ದೇವಸ್ತುತ್ಯ** (ನಾ). ದೇವರ ಗೌರವಕ್ಕೆ ಪಾತ್ರನಾದವನು : ದೇವಸ್ತುತ್ಯನನರುಹದ್ದೇವನನರ್ಚಿಸುತಮಿರ್ಪ ಭವ್ಯನವಶ್ಯಂ ಭಾವಿಪಡೆ ಮರ್ತ್ಯನಲ್ಲಂ ದೇವಸ್ತುತ್ಯನೆ ದಲಲ್ಲಿ ಸಂದೆಯಮುಂಟೇ (ಸಮುಪ. ೧-೯೩).
[ದೇವ + ಸ್ತುತ್ಯ]

**ದೇವಸ್ತ್ರೀ** (ನಾ). ೧. ದೇವಜಾತಿಯಲ್ಲಿ ಹುಟ್ಟಿದ ಹೆಂಗಸು ; ದೇವತಾಸ್ತ್ರೀ : ದೇವಸ್ತ್ರೀಚಿಕುರಪರಿವೃತಪಾದೆ ಪದ್ಮಾವತಿ ವರದೆಯೆಮಗಕ್ಕೆ (ಲೀಲಾವ. ೧೦-೩). ೨. ರಂಭೆ, ಊರ್ವಶಿ ಮೊದಲಾದ ಅಪ್ಸರೆಯರಲ್ಲಿ ಒಬ್ಬಳು. 'ದೇವಗಣಿಕೆ₂' ಪರಾ. [ದೇವ + ಸ್ತ್ರೀ]

**ದೇವಸ್ಥಾನ** (ನಾ). ೧. ದೇವತಾವಿಗ್ರಹಗಳನ್ನು ಪ್ರತಿಷ್ಠಿಸಿ ಪೂಜೆ ಮಾಡಲು ಕಟ್ಟಿರುವ ಕಟ್ಟಡ ; ಗರ್ಭಗುಡಿ. ೨. ದೇವಾಲಯ ; **ಗುಡಿ :** ಹರಶಂಕರೇಶ್ವರಸ್ವಾಮಿಯವರ ದೇವಸ್ಥಾನದ ಪೌಳಿಯುಲಿ (ಎಕ. XII, ತಿಪಟೂ. ೬೩-೪ ; 1748) ; ಒಂದು ಸಿಂಹವು . . . ದೇವಸ್ಥಾನದ ಬಳಿಯಲ್ಲಿ ನೀಮಿಯ ಬಯಲಿನ ದನ ಕುರಿಗಳನ್ನು ರಾತ್ರಿ ನಾಶಮಾಡುತ್ತಿದೆ (ಮುತಕ. ೮೮) ; ಮೂರ್ತಿಯ ಉಪಾಸನೆಗಾಗಿ ಸಲಕ್ಷಣವಾಗಿ ವಾಸ್ತುಶಾಸ್ತ್ರ ಸಮ್ಮತವಾಗಿ ರಚಿತವಾದ ಪ್ರಾಸಾದವೇ ದೇವಸ್ಥಾನವೆಂದು ಕರೆಯಲ್ಪಟ್ಟಿತು (ಭಾರದ. ೮೧) ; ನೀವು ನಿಮ್ಮ ಪ್ರದಕ್ಷಿಣೆ ಮಾಡಿಕೊಳ್ಳುತ್ತಾ ದೇವಸ್ಥಾನವನ್ನೂ ಪ್ರದಕ್ಷಿಣೆ ಮಾಡಬೇಕು (ನಕ್ಷತ್ರ. ೬೧).

**ದೇವಸ್ಥಾನದ ಚಾವಡಿ** = ದೇವಸ್ಥಾನಗಳ ಮೇಲ್ವಿಚಾರಣೆಗಾಗಿ ಏರ್ಪಾಡು ಮಾಡಿದ್ದ ಕಚೇರಿ,–ಕಾರ್ಯಾಲಯ : ದೇವಸ್ಥಾನದ ಚಾವಡಿ – ಇದರಲ್ಲಿ ಸಕಲದೇವಾಲಯಗಳ ಆದಾಯ, ವ್ಯಯಗಳನ್ನೂ, ಅಲ್ಲಿ ನಡೆಯತಕ್ಕ ಆಯಕಟ್ಟುಗಳನ್ನೂ ನೋಡುವಂತೆ ನಿಬಂಧನೆ ಮಾಡಿದರು (ಕುಹಾವಂ. I, ೧೫೦) ; ಚಿಕ್ಕದೇವರಾಜಒಡೆಯರವರು . . . ೧೮ ಕಚೇರಿ ಎಂಬದಾಗಿ ನಿಬಂಧನೆಮಾಡಿದರು. ಯಾವವೆಂದರೆ (೧) ನಿರೂಪದ ಚಾವಡಿ . . . (೧೬) ದೇವಸ್ಥಾನದ ಚಾವಡಿ (ಹಾಮುವಂ. ೧೪೬).
[ದೇವ + ಸ್ಥಾನ]

**ದೇವಸ್ನಾನ** (ನಾ). ದೇವರಿಗೆ ಮಾಡುವ ಅಭಿಷೇಕ : ವಾನರಸಂಹತಿ ದೇವಸ್ನಾನಂ ಮಾಡುವ ಗ್ಗರ್(ಗ್ಗೆ) ಗದ್ದುಗೆಯ ನೀರಂ ಸನ್ನಾನದ ತಂದೀವುವೆನಲ್ಕೆ (ಎಇ. XVI, ೩-೧೦ ; 980 ?). [ದೇವ + ಸ್ನಾನ]

**ದೇವಸ್ವ** (ನಾ). ದೇವರ ಸ್ವತ್ತು ; ದೇವಾಲಯಕ್ಕೆ ಸೇರಿದ ಆಸ್ತಿ : ಅನುದಿನಂ ದೇವಸ್ವಮಂ ತಿನ್ದು ದುರ್ಜನರೊಳಾಣದೆ ಸಂದು ಲೋಕದವವಾದಕ್ಕಾವಗಂ ಬನ್ದು ದುರ್ಮ್ಮನದಿಂ ದೂರಿಸುತಿರ್ಪ್ಪ ತಾಪಸನಿಕೃಷ್ಟಜ್ಞಾನಶಕ್ತಿಬ್ರತೀಂದ್ರನನೇವ್ಯೋಲ್ವರೆ (ಸೌಇಇ. XI-ii, ೧೫೩-೩೩ : 1108) ; ದೇವಸ್ವಮಿದೆನ್ನದೆ . . . ತಿಂದಂ ವ್ಯಸನಾವಸಥಂ ಗುಣದ ಕೇಡನೆಂತುಂ ನೋಡಂ (ನೇಮಿಪು. ೩-೮೬) ; ಆ ದೇವರಿಂಗೆ ನಡವ ಅಂಗರಂಗ ನೈವೇದ್ಯ ಮುಂತಾದ ಧರ್ಮಂಗಳಿಗೆ ಬಿಡು ದೇವಸ್ವವಾಗಿ ಕ್ಷೇತ್ರಂಗಳ ಬಿ[ಟ್ಟು] (ಕಇ. III-i, ೭-೧೩ ; 1527) ; ಇದರಲ್ಲಿ . . . ಕೆಲ ಭೂಮಿಗಳು ಶ್ರೀಮಹಾದೇವರ ದೇವಸ್ವಗಳೆಂದು ಬರೆದಿದೆ (ಕರ್ನಾಅ. ೬೬).
[ಸಂ.]

**ದೇವಸ್ವನಿಧಿ** (ನಾ). ದೇವಾಲಯದ ಖರ್ಚುವೆಚ್ಚಗಳಿಗಾಗಿ ಏರ್ಪಡಿಸಿರುವ ಇಡುಗಂಟು,–ಪುದುವಟ್ಟು : ದೇವಸ್ವನಿಧಿಗೆ ಪ್ರತಿವರ್ಷ ಸಲ್ಲಿಸಬೇಕಾದ ಐವತ್ತೊಂದುಲಕ್ಷ ರೂಪಾಯಿಗಳ ಮೊಬಲಗು (ಭಾಧಾನ. ೧೬೩).
[ದೇವಸ್ವ + ನಿಧಿ]

**ದೇವಸ್ವರೂಪಿಣಿ** (ನಾ). ದೇವತಾಸ್ವಭಾವವುಳ್ಳವಳು ; ದೇವತೆಯಂತೆ ಉದಾತ್ತಗುಣಗಳಿಂದ ಕೂಡಿರುವವಳು : ನೀನು ಹೋಗಿ ಅವರನ್ನೂ ಅವರ ತಾಯಿಯನ್ನೂ ದೇವಸ್ವರೂಪಿಣಿಯಾದ ಕೃಷ್ಣೆಯನ್ನೂ ಕರೆದುಕೊಂಡು ಬಾ (ವಕಭಾ. ೬೬). [ಸಂ. ದೇವಸ್ವರೂಪಿಣೀ]

**ದೇವಳ₁** 'ದೇಗುಲ' ನೋ.

**ದೇವಳ₂** (ನಾ). (?) : ಎಲೆ ಧರ್ಮನಾಥ ನೀನುಜ್ಜ್ವಳಬೋಧತ್ರಯಮುನಾಂತೊಡಂ ಮಗನೆಂಬಗ್ಗಳವಂ ದೇವಳದೊಳೊಂದಿ ನಲವಿಂದಂ ರಾಜನೀತಿಯಂ ನಿನಗುಸಿರ್ವೆಂ (ಶಾಂತಪು. ೧೩-೧೩೬). [?]

**ದೇವಳಿ, ದೇವಾಳಿ** (ನಾ). ದೇವಸ್ಥಾನದ ಪರಿಚಾರಕರಲ್ಲಿ ಒಂದು ಪಂಗಡ : ಕಾಳೇಕುಣಬಿಗಳಲ್ಲಿ ದೇವಳೀಕುಲದ ಮುತ್ತೈದೆಯು ಮದಿಮಗಳ ಕೊರಳಲ್ಲಿ ಮಂಗಳಸೂತ್ರ ಕಟ್ಟುವಳು (ಕಭಾಗೆ. ೧೫೦) ; ದೇವಳಿಗಳು – ಇವರೂ ಕಾನಡಾಜಿಲ್ಲೆಯವರೇ . . . ಗುಡಿಗಳ ಪರಿಚಾರಕರೊಳಗೆ ಸೇರಿದ ಹೆಂಗಸರ ಸಂತತಿಯವರು ಇವರೆಂದು ತೋರುತ್ತದೆ (ಕಭಾಗೆ. ೧೯೧). **ದೇವಾಳಿ :** ದೇವಸ್ಥಾನದ ಸೇವಕರು . . . ದೇವಡಿಗ, ದೇವಾಳಿ, ಮಾಲಿ (ತುಳುನಾ. ೧೬೩).
[ದೇವಳ₁ (<ದೇಗುಲ) + – ಇ₃./ಸಂ. ದೇವಲ]

**ದೇವಳಿಗೆ** 'ದೇವಾಳ್ಗೆ' ನೋ.

**ದೇವಳೂರ್** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀಮತ್ತುಗಳನ ಎಡವರಿಯ ಕಾಳಿಗ ದೇವಳೂರ ಮೇಲಾವೇಗ ಉತ್ತವಳ್ಳಂಗಾ × × × (ಎಕ. III, ಮೈಸೂರು. ೪೫-೨ ; ಸು. 990 ?). [? + ಊರ್]

**ದೇವಾಂಗ** (ನಾ). ೧. ದೇವರ ಅವಯವ. ೨. ಶ್ರೇಷ್ಠವಾದ ಒಂದು ಬಗೆಯ ಬಟ್ಟೆ ; ರೇಷ್ಮೆಬಟ್ಟೆ : "ದೇವಾಂಗಮೆಂದು ಪಟಭೇದವಮುಕ್ಕುಂ" (ಮಂಗರಾ. ೧೦೦-೨೮) ; ಪಟ್ಟಿ ಚಿತ್ರಾವಟ್ಟಿ ಜೋಗಂ ಪಟ್ಟಿಯುಂ ದೇವಾಂಗ ಮೆಂಬ ವಸನಂಗಳನೇಂ ಘಟಿಯಿಸುವವೋ (ಆದಿಪು. ೫-೩೪) ; ಬೊಂಗದ ನಾರಂಗದ ದೇವಾಂಗದ ಪಲತೆಱದ ಸಕಲವಟ್ಟೆಗಳಂ . . . ಪಾಸಿ (ಸುಕುಮಾ. ೧೦-೯೦) ; ದೇವಕಿ ಕಡುಗಂದಿಯುಪ್ಪುದಟಿಂ ತೊರೆದೆಚ್ಚು ವಾಯ್ವ ಮೊಲೆವಾಲಿಂ ಮಗನಂ ಮಜ್ಜನಂಬುಗಿಸಿ . . . ದೇವಾಂಗ ಮನುಡಿಸಿ (ಅರ್ಧನೇ. ೮-೩೦ ವ) ; ಬಿಜ್ಜಳನ ಭಂಡಾರದ ಚಿನಿ ಮಹಾಚಿನಿ ದೇವಾಂಗ ಲತಾವಳಿ . . . ಮೊದಲಾದ ಪಟ್ಟಾವಳಿಯ ದಿಂಡುಗಳಂ ತರಿಸಿ (ಬಸರ. ೮-೧೧) ; ಉತ್ತಮದ ದೇವಾಂಗವಸ್ತ್ರವನು ಧರಿಸುವಡೆ ಮುತ್ತು ಮಾಣಿಕವ ತೊಡುವರೆ ಮಾಡುವುದು ನಿತ್ಯದಾನವನು (ಸರ್ವಜ್ಞ. ೬೩೪). ೧, ೨ : ದೇವಾಂಗಸ್ಪರ್ಶೋಚಿತ ದೇವಾಂಗಾಮೂಲ್ಯವಸನದಿಂ

ಛಾದಿಸಿದ್ಧೆ (ವರ್ಧಪು. ೧೪-೩): ದೇವಾಂಗಾಮೃತಕಣಮಂ ದೇವಾಂಗದಿನೊತ್ತಿ ಶಚಿ ವಿಭೂಷಿಸಿದಳ್ (ಪಾರ್ಶ್ವಪು. ೧೪-೧೦೦) ; ದೇವಾಂಗದಿಂದೆ ತೊಡೆದಳ್ ದೇವಾಂಗನೆ ರತ್ನಮುಕುರಮಂ ತೊಡೆವವೊಲಾ ದೇವಾಂಗಮನೊಲ್ದುಉಗುವ ದೇವಾಂಗವಿಭೂಷಣಾಂಶು ಮಾರ್ಪೊಳೆವಿನೆಗಂ (ಅನಂಪು. ೫-೮೦). ೩. ಪರಮೇಶ್ವರನ ದೇಹದಿಂದ ಹುಟ್ಟಿದ ಒಬ್ಬ ಅವತಾರಪುರುಷ; ನೆಯ್ಗೆಯ ಕಲೆಯನ್ನು ಪ್ರಚಾರಕ್ಕೆ ತಂದವನು : (ಕ). ೪. ನೆಯ್ಗೆಯವರಲ್ಲಿ ಒಂದು ಒಳಪಂಗಡ : "ಜಾಡ, ನೇಕಾರ, ಹಟಗಾರ, ದೇವಾಂಗ" (ಕಂನುಹು. ೮೪) ; ಕೊಂಕಣರಲ್ಲಿ ನಾಯ್ಕನೆಂದೂ ದೇವಾಂಗರಲ್ಲಿ ಚೆಟ್ಟಿ ಎಂದೂ . . . ಇತ್ಯಾದಿ ಕೌಟುಂಬಿಕ ಹೆಸರುಗಳಿವೆ (ತುಳುನಾ. ೦೮೪).

ದೇವಾಂಗದ ಬೆಕ್ಕು = ಒಂದು ಬಗೆಯ ಬೆಕ್ಕು : "ಪೂತಿಕೃಶಃ- ದೇವಾಂಗದ ಬೆಕ್ಕು" (ಓಷಧಿ. ೧೦೩). [ ದೇವ + ಅಂಗ$_2$ ]

**ದೇವಾಂಗನೆ** (ನಾ). ದೇವಲೋಕದ ಹೆಣ್ಣು ; ದೇವತಾಸ್ತ್ರೀ ; ಅಪ್ಸರೆ: ದೇವಾಂಗನೆಯರ್ ಪಾಡುವರಾವನ ಜಸಮಂ (ಆದಿಪು. ೧೩-೭೬) ; ಕುಲಶಿಖರಶೇಖರಿಯರುಮಪ್ಪ ದೇವಾಂ [ಪಾಠಾಂ. ಲೇಖಾಂ ]ಗನೆಯರುಮಂ ಗಲೋದರಪರಿಶೋಧನಪ್ರಮುಖ ನಿಖಿಲನಿಯೋಗಭೋಗಕ್ಕೆ ಬೆಸಸಿದಂ (ಅನಂಪು. ೪-೭೯ ವ); ದೇವಾಂಗನೆಯರಿಂತು ಪೊಗಟ್ದುಂ ತೆಗಳ್ದುಂ ಬಯ್ದುಂ ಭಂಗಿಸಿಯುಂ ನುಡಿಸಿದೊಡಂ . . . ಕದಲದ ರಾಯನ ಕಟ್ಬಾಯಸದ ತಪದ ಬಲ್ಮೆಯುಂ ಕಂಡು ದೂರದೆ ಕೈಮುಗಿದು ಬೆಂಗೊಟ್ಟರ್ (ರಾಮಾಶ್ವ. ೬೩-೩). [ ದೇವ + ಅಂಗನೆ ]

**ದೇವಾಂಗವಸನ** (ನಾ). ರೇಷ್ಮೆವಸ್ತ್ರ : ಕಾಂಚನಮಂಚೋಪಶೋಭಿತ ದೇವಾಂಗವಸನಪ್ರಚ್ಛದಾಚ್ಛಾದಿತ ಶಯ್ಯಾತಳದೊಳ್ . . . ಪಟ್ಟರ್ದ ಗರ್ಭೇಶ್ವರಿಯಲ್ಲಿಗೆ ದೂತನನಟ್ಟಿ (ಶಾಂತಿಪು. ೮-೮೩ ವ).

[ ದೇವಾಂಗ + ವಸನ ]

**ದೇವಾಂಗವಸ್ತ್ರ** (ನಾ). =ದೇವಾಂಗವಸನ : ಇಂದ್ರಾಣಿ ಭಗವದಂಗಸಂಗತ ಜಳಕಣಂಗಳಂ ದೇವಾಂಗವಸ್ತ್ರಂಗಳೊಳೊತ್ತಿ ಕಳೆದು (ಆದಿಪು. ೭-೦೦೫ ವ); ದಿವಿಜಪತಿ ಪೊಳೆವ ದೇವಾಂಗವಸ್ತ್ರಮಂ ಭುವನಪತಿಯನುಡಿಸಿ (ಶಾಂತಿಪು. ೧೧-೩೩) ; ದೇವಾಂಗವಸ್ತ್ರಮಂ ಸೆಳೆಮಂಚಂ ಕವುಳುಡೆ ಧವಳಚ್ಛತ್ರಮು ಮಿಪ್ಪೊಪ್ಪೆ ಪಾಸಂ ಸಮಂತು ಪಾಸುವುದು (ಮದತಿ. ೦೦-೨೩).

[ ದೇವಾಂಗ + ವಸ್ತ್ರ ]

**ದೇವಾಂಬರ** (ನಾ). ೧. ದೇವತೆಗಳು ಧರಿಸುವ ಬಟ್ಟೆ. ೨. ಅಮೂಲ್ಯವಾದ ಬಟ್ಟೆ ; ಬೆಲೆಬಾಳುವ ಹಾಗೂ ಪ್ರಶಸ್ತವಾದ ಬಟ್ಟೆ: ಧನಕನಕ ದೇವಾಂಬರಾದಿಮುಕ್ತಾಭರಣಕರ್ಪೂರವೀಟಕಾದಿಗಳನಿತ್ತು ಓವಿ ಸಿಂಹಳ ಮುಖ್ಯರಂ ತಮ್ಮತಮ್ಮ ದೇಶಾವಳಿಗೆ ಬೀಳ್ಕೊಡಲು (ಭಾವಚಿಂ. ೫-೩೧).

[ ದೆ ವ + ಅಂಬರ ]

**ದೇವಾಗಮ** (ನಾ). ದೇವತೆಗಳ ಆಗಮನ : ನಡೆ ನೋಡಲೊಡಂ ದೇವಾಗಮಮಂ ಓರಿದೊಂದು ದಂದುಗದ ಸಂದಣಿಯಿಂದಮ . . . ನೋವೆನಗಾದುದು (ಆದಿಪು. ೩-೩೩). [ ದೇವ + ಆಗಮ ]

**ದೇವಾಗಮನ** (ನಾ). = ದೇವಾಗಮ : ಆ ವನಿತೆ . . . ಸೌಧೋಪರಿಮತಳದೊಳ್ ನಿಂದು ದೇವಾಗಮನಮಂ ನೋಡಲೊಡಂ (ಆದಿಪು. ೩-೩೩ ವ).

[ ದೇವ + ಆಗಮನ ]

**ದೇವಾಗಾರ** (ನಾ). ೧. ದೇವತೆಗಳ ವಾಸಸ್ಥಾನ; ಸ್ವರ್ಗ : ದೇವಾಗಾರದೊಳುರ್ವಿಯೊಳ್ ಗಗನದೊಳ್ ವಲ್ಮೀಕದೊಳ್ ನಾಕಮುಕ್ಕು (ನಾನಾರ. ೬೩). ೨. ದೇವಸ್ಥಾನ ; ದೇವಾಲಯ : ನೀರ ಪೊಟ[3] . . . ದೇವಾಗಾರಂ ಚೌಮಟಮಸೆದಿರ್ಪಾರಮೆಯಂಬೆಡೆಗಳುಚಿತಪ್ರೋಸಜಿ[3]ಗೇಟಲ್ (ಲೋಕೋಪ. ೧೩-೫೩) ; ಅವಿರಳವಾದ್ಯಸಮೇತಂ ಧವಳಪ್ರಾಸಾದಸಾರ ದೇವಾಗಾರಂ (ಜಗವಿ. ೩-೨೩); ಎಟ್ಟೆಂದು ದೇವಾಗಾರಮಂ ಪೊಕ್ಕು (ಉದ್ಭಟ. ೧೦-೧೩೮ ವ) ; ಕೆಱೆಯುಂ ಕಟ್ಟಿಸು ಭಾವಿಯುಂ ಸವಸು ದೇವಾಗಾರಮಂ ಮಾಡಿಸಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು (ಸೌಇಇ. IV, ೨೬೭-೪೪ ; 1380). [ ದೇವ + ಆಗಾರ ]

**ದೇವಾಜೀವ** (ನಾ). ೧. ದೇವಸ್ಥಾನದಲ್ಲಿ ಪೂಜೆ ಮಾಡಿ ಜೀವಿಸುವವನು ; ದೇವಸ್ಥಾನದ ಅರ್ಚಕ; "ಪೂಜಾರಿ" (ಅಮರ. ಟೀಕು). ೨. ದೇವಸ್ಥಾನದ ಕೆಲಸಗಾರ,-ಸೇವಕ.

[ ದೇವ + ಆಜೀವ$_1$ ]

**ದೇವಾತಿ** (ನಾ). ಒಬ್ಬಾತನ ಹೆಸರು : ಶಿರಿಪುರುಷನ ಮಗ ದೇವಾತಿ ಪಡಿಸಲಿಸಿ ಉಣ್ಬೊನ್ (ಎಕ. VIII, ಸೊರಬ. ೮೫-೯ ; 976). [ ? ]

**ದೇವಾತ್ಮಜಾತ** (ನಾ). ಏಸುಕ್ರಿಸ್ತ : ತನಗೆ ತಾನೆಣೆಯ ದೇವಾತ್ಮಜಾತನ ನೋಡ ! (ಗೊಲ್ಗೊಥಾ. ೪-೯೩). [ ದೇವ + ಆತ್ಮಜಾತ ]

**ದೇವಾದಾಯ** (ನಾ). ದೇವಸ್ಥಾನಕ್ಕೆ ದಾನಮಾಡಿದ ಭೂಮಿ,-ಜಮೀನು ; ದೇವಮಾನ್ಯ : ಆ ಗ್ರಾಮದ ಕಾಡಾರಂಬ ನೀರಾರಂಬ ಗೊಪ್ಪಲ ಪೊಂಮೆಸುಂಕ ದೇವಾದಾಯ ಬ್ರಂಹಾದಾಯ ನಟ್ಟಕಲ್ಲು ಬಿಟ್ಟಬಸವ ಮೊದಲಾದುವುಗಳನ್ನು ಈ ಮಠಕೆ ಅಮೃತಪಡಿ ದೀಪಾರಾಧನೆ ಕಾರ್ಯಂಗಳಿಗಾಗಿ ಕೊಡವದು (ಎಕ. IV (R), ಚಾಮರಾ. ೨೯೩-೩೮ ; 1345) ; ನೆರೆಯೂರ ಬೀರಗವುಂಡನೇ . . . ದೇವಾದಾಯ ಮಾಡಿದ ಸಂದರ್ಭದಲ್ಲಿ (ಸವತಿ. ೧೬೬). [ ದೇವ + ಆದಾಯ ]

**ದೇವಾಧಿದೇವ** (ನಾ). ೧. ದೇವರುಗಳಿಗೂ ದೇವನಾಗಿರುವವನು ; ದೇವತೆಗಳಿಗೂ ನಿಯಾಮಕನಾಗಿರುವವನು; ಪರಮಾತ್ಮ. ೨. ಶಿವ. ೩. ವಿಷ್ಣು. ೪. ಇಂದ್ರ. ೫. ಅರ್ಹಂತ ; ಜಿನ : ದೇವಾಧಿದೇವನಪ್ಪನ ಕೇವಳಬೋಧೋದಯಂ ಪ್ರಸಿದ್ಧೋದಯಮಂ ದೇವನಿಕಾಯಸಮೇತಂ ದೇವೇಂದ್ರಂ ಮಾಡೆ ನೆಱೆಯೆ ಪೊಗಟ್ದನುಮೊಳನೇ (ಬಂಹರಿ. ೧೩-೩೧). [ ಸಂ. ]

**ದೇವಾಧಿಪ** (ನಾ). ದೇವತೆಗಳ ಒಡೆಯ,- ರಾಜ ; ದೇವೇಂದ್ರ. 'ದೇವಾಧಿಪಪುರ' ಪರಾ. [ ದೇವ + ಅಧಿಪ ]

**ದೇವಾಧಿಪಪುರ** (ನಾ). ೧. ಇಂದ್ರನ ಪಟ್ಟಣ ; ಅಮರಾವತಿ ; ಸ್ವರ್ಗ. ೨. [ಛಂದ] ಮೂರು ಲಘುಗಳಿರುವ ಅಕ್ಷರ ಗಣ; ನಗಣ (ᑌᑌᑌ): ಭೂಮಿ ಜ್ವಾಲೇಂದು ದೇವಾಧಿಪಪುರಗಣಮುಂ ಮುಂತೆ ತೋಯತ್ರಯಂಗಳ್ ತಾಮೆತ್ತಂ ಬಂದು ಚೆಲ್ವಾಗಿರೆ ... ಸ್ರಗ್ಧರಾನಾಮವೃತ್ತಂ (ಛಂದೋಂಬು. ೨-೧೮೧). [ ದೇವಾಧಿಪ+ಪುರ$_2$ ]

**ದೇವಾಧೀಶ** (ನಾ). ೧. ದೇವತೆಗಳ ರಾಜ ; ದೇವೇಂದ್ರ. ೨. ವಿಷ್ಣು : ದೇವ ದೇವಾಧೀಶ ಸರ್ವಗುಣಾವಲಂಬನ . . . ನರನಾಟಕದ ಮಾಯಾಶ್ರೀವರನೆ ಚಿತ್ತೈಸು (ತೊರರಾ. ೬-೫೩-೬೯). ೩. ಅರ್ಹಂತ ; ಜಿನ: ದೇವಾಧೀಶನನೊರ್ವ ವರ್ಣಿಸೆ ಮನೋವಾಕ್ಕಾಯಸಂಶುದ್ಧಿಯಿಂ ದೇವೇಂದ್ರತ್ವಮೆ ಸಾರ್ವುದು (ಅನಂಪು. ೧-೬೧). [ ದೇವ + ಅಧೀಶ ]

**ದೇವಾನಕ** (ನಾ). ದೇವತೆಗಳ ಭೇರಿ,- ದುಂದುಭಿ : ದೇವಾನಕಂಗಳ್ ಮೊಟಗೆ (ಶಾಂತಿಪು. ೮-೧೩೧) : ದೇವಾನಕರವಮೊದವೆ ನೃಪಾವಾಸದೊಳೊಗೆದುದಿಂತು ಪಂಚಾಶ್ಚರ್ಯಂ (ಪುಲ್ಲಿಪು. ೧೪-೧೧) ; ವಿಸ್ತರ ದೇವಾನಕಮುಣ್ಮೆ ದಿಬ್ಯಗತಿವೆತ್ತಂ ಧಾತ್ರಿ ಭಾಪ್ಪೆಂಬಿನಂ (ಸೌಇಇ. XX, ೨೪೮-೨೯ ; 1228). [ ದೇವ + ಆನಕ ]

**ದೇವಾನಾಂಪ್ರಿಯ** (ನಾ). ೧. ದೇವತೆಗಳಿಗೆ ಪ್ರಿಯನಾದವನು ; P ಇದು ಅಶೋಕಚಕ್ರವರ್ತಿಗಿದ್ದ ಒಂದು ಬಿರುದು. ೨. ಏನೂ ತಿಳಿಯದವನು ; ದಡ್ಡ ; ಮೂರ್ಖ : ದೇವಂಗೆ ವಿಷಯಮಲ್ಲದೆ ದೇವಾನಾಂಪ್ರಿಯರ್ಗೆ ವಿಷಯಮೇ ಸತ್ಕಾವ್ಯಂ (ಯಶೋಚ. ೧-೬);

ದೇವಾನಾಂಪ್ರಿಯನೆ ವಲಂ ದೇವಗತಿಪ್ರೀತನಪ್ಪವಂ ತದ್ಗತಿಯಿಂ ದೇವ ಗತಿಯಿಂದೆ ಬಯಸರ್ ಭಾವಿಸೆ ಭವ್ಯರ್ಕಳಲ್ಲಿ (ಪಾರ್ಶ್ವಪು. ೭-೧೫). ೩. (ಯಜ್ಞಕ್ಕೆ ಆಹುತಿಯಾಗಿ ಕೊಡುವ) ಹೋತ. [ಸಂ.]

**ದೇವಾನೀಕ** (ನಾ). ದೇವತೆಗಳ ಗುಂಪು,- ಸಮೂಹ : ಇಬ್ಬರ ದೆಸೆಗೆ ದೇವಾನೀಕ ಮೆಚ್ಚಿತು (ಕುಮಾರವ್ಯಾ. ದ್ರೋ. ೧೩-೨೪). [ ದೇವ + ಅನೀಕ ]

**ದೇವಾನ್ನ** (ನಾ). ದೇವತೆಗಳಿಗೆ ಯೋಗ್ಯವಾದ ಆಹಾರ; ಉತ್ತಮವಾದ ಆಹಾರ; ದಿವ್ಯಾನ್ನ: ಮಡದಿಯನ್ನಗಲೊಳಗೆ ಸಕಲ ದೇವಾನ್ನವ ಒಡೆಯರಿಂದಲೂ ಮಿಗಿಲಾಗಿಕ್ಕಲು ತೆಗೆದಿರಿಸಿದೆನು (ಬಸವ. ೪೩೯); ನೀನು ಪ್ರೀತಿಯಿಂ ಸಕಲ ದೇವಾನ್ನಮುಂ ಸಲಿಸೆ ನಿನ್ನಯ ನೆನಹಿನಿಂ ಜನಿಸಿದ ಭೂತಜೀವರ್ಗೆ ಸಂತೃಪ್ತಿಯಹುದೆಲೆ ಮಹಾಪೂತ ವಿಖ್ಯಾತ (ಪ್ರಭುಪು. ೪-೫೫). [ ದೇವ + ಅನ್ನ$_3$ ]

**ದೇವಾಪಗೆ** (ನಾ). ದೇವತೆಗಳ ನದಿ ; ಗಂಗಾನದಿ: ತಡೆಗುಮೆ ದೇವಾಪಗೆ ತಡೆಯದೆಡೆಯೊಳಂಭೋಧಿವರಂ (ಶಾಂತಿಪು. ೫-೧೪೭) ; ಹರಿನೀಳ ಶಿಳಾ ಸೋಪಾನಂ ನಿಮಿರ್ದುವು ದೇವಾಪಗೆಯಂ ಬಳಸಿ ಪರಿವ ಯಮುನಾನದಿ ವೋಲ್ (ಮಲ್ಲಿಪು. ೧೨-೭೭). [ ದೇವ + ಆಪಗೆ ]

**ದೇವಾಯತನ** (ನಾ). ದೇವಸ್ಥಾನ; ದೇವಾಲಯ : ಆ ರಮಣೀಯ ದೇವಾಯತನನೂತ್ನಸ್ತಂಭವಂ ನೆಮ್ಮಿ ನಿಂದಿರ್ದು (ಕಾದಂಪೂ. ೬೮೭) ; ಶ್ರೀರಾಜಾಧಿತೇಶ್ವರದೇವರಂ ಪ್ರತಿಷ್ಠೆಗೈಯ್ದು ಮಹೋತ್ತುಂಗ ದೇವಾಯತನವಮಂ ಮಾಡಿಸಿ (ಕಇಅ. ೨೨-೭-೨೮ ;1083). [ ದೇವ + ಆಯತನ ]

**ದೇವಾರ, ದೇಹರ, ದೇಹಾರ$_1$** (ನಾ). ೧. ದೇವಾಲಯ ; ದೇವಸ್ಥಾನ: ದೇವಾರಕ್ಕೆ ಜಕ್ಕಲಿಯೊಳ್ ನಾಲ್ಕು ಮತ್ತಲ್ಕೆಯ್ಯುಂ ಕೊಟ್ಟಳ್ (ಎಕ. VII, ಶಿಕಾರಿ. ೨೦೯-೧೮ ; 918) ; ಈ ಕಲ್ಲ ಬಸದಿಯುಮೊನ್ದು ದೇವಾರಮುಮಂ ಮಾಡಿಸಿದಳ್ (ಎಕ. VIII, ನಗರ. ೪೫-೭ ; 950); ಆಗಾರಕ್ಕೆ— ಕ್ಷೀರಾಗಾರ—ಕೀರಾರ, ಕೀಲಾರ . . . ದೇವಾಗಾರ—ದೇವಾರ (ಶಮದ. ೨೯೫ ಪ್ರಯೋ) ; ಬಾಲಕನ ಕಣ್ಗೊಂದು ಬೆಲೆವಣಿಗಟ್ಟನ ದೇವಾರಂ ತೋಱಿವರ್ಪುದುಂ (ರಾಮಾಶ್ವ. ೭೬-೨೬). **ದೇಹರ:** ೧. ಎಮ್ಮವ್ವೆಯುಂ ದೇಹರದ ಜಗಲಿಯೊಳೊಱತೆಯಂ ತಾನಗಿವುತಿದ್ದಹಳು (ಬಸಪು. ೪೭-೨೬). **ದೇಹಾರ$_1$ :** ೧. ಊರಿಂಗೀಶಾನ್ಯದ ಪಳ್ಳದ ಬಡಗಣತಡಿಯ ಪಿರಿಯ ದೇಹಾರದ ಕೆಯಿ ತೆಂಕಣಸೀಮೆ (ಸೌಇಇ. XI-i, ೬೫-೫೦ ; 1029) ; ಮಱುದಿವಸಂ ದೇಹಾರಕ್ಕೆ ದೇವರಂ ಕಾಣಲೆಂದು ಬಂದು (ಧರ್ಮಾಮೃ. ೩-೨೩೫) : ನವ್ಯದಿವ್ಯೋಪಕರಣಪ್ರವ್ಯಕ್ತಸಮವಸೃತಿವ್ಯವಹಾರವಮಂ ದೇಹಾರವಮಂ ಪೊಕ್ಕು (ಪಾರ್ಶ್ವಪು. ೩-೨೯ ವ). ೨. ದೇವಾರ್ಚನೆಗಾಗಿ ಸಿದ್ಧಪಡಿಸಿದ ಗುಡಾರ: ಮಜ್ಜನದ ದೇಹಾರದ ರೆಂಟೆಯ ಕೊಂಚೆಯದ ಕೂರವದ . . . ವಿಳಾಸನಿವಾಸಂಗಳಿಂದಂ (ಶಾಂತಿಪು. ೧೦-೧೪೭ ವ) ; ಕಾಡೊಡೆಯರ್ಂಗವನೀಪತಿ ಬೇಡಿದುದಂ ಕೊಟ್ಟು ಹರಿಣಪೋತಕಯುಗವಂ ನೀಡಿಲ್ಲದೆ ಕೊಂಡೊಯ್ದಂ . . . ಅಂತು ಕೊಂಡುಪೋಗಿ ತನ್ನ ದೇಹಾರದ ಮನೆಯೊಳ್ ಕಟ್ಟುವುದುಂ (ಪುಣ್ಯಾಸ್ರ. ೨-೧೬ ವ) ; ಮದುವೆಯುತ್ಸವಕೆಂದು ಕಟಕದ ನಡುವೆಯೊಡ್ಡಿದುದೊಂದು ಹೊಸ ಜನವಾಸ ಅದಕೆ ನೃಪರ ಮನೆ ದೇಹಾರಗಳು ನೆಲಸಿದುವವಸರಕೆ ತಕ್ಕಂತೆ (ಭರಚ. ೪೦-೮).

**ದೇಹಾರದ ಸಮಯ** = ದೇವಸ್ಥಾನದ (ಧರ್ಮದರ್ಶಿಗಳ) ಸಭೆ : ದಂಡನಾಯಕ ಕೇಶಿಮಯ್ಯಂಗಳು . . . ದಂಡನಾಯಕ ಉದಯಿಮಯ್ಯಂಗಳು ಇನ್ತಿನಿಬರುಂ ಧರ್ಮ್ಮಕ್ಕೆ ಸಹಾಯಕರಾಗಿ ಹೊಯ್ಸಳ ದೇವನ ದೇಹಾರದ ಸಮಯದಲಿರ್ದು (ಮ್ಯಾಆರಿ. ೧೯೩೭, ೩೪-೧೭ ; 1142).

[ <ಸಂ. ದೇವಾಗಾರ./ಪ್ರಾ.ದೇಹರಯ; P ಇದನ್ನು ಸಂ. 'ದೇವಗೃಹ'ದಿಂದಲೂ ನಿಷ್ಪನ್ನ ಮಾಡಬಹುದು ]

**ದೇವಾರಂಗೆಯ್, ದೇಹಾರಂಗೆಯ್$_1$** (ಕ್ರಿ). ದೇವಾಲಯವನ್ನು ಕಟ್ಟು; ನಿರ್ಮಿಸು (?) : ಇದು ವಿದ್ಯಾದಾನಂ ದೇವಾರಂಗೆಯ್ವ ಬ್ರತಿಗಳುಣ್ಬನ್ (ಎಕ. III, ನಂಜನ. ೧೫೫-೧ ; ಸು. 970 ?). **ದೇಹಾರಂಗೆಯ್$_1$ :** ಬಸವಸೆಟ್ಟಿ ತನ್ನ ದೇಹಾರಂಗೆಯ್ವ ಚೋವವುವಂ ಧಾರಾಪೂರ್ವ್ವಕಂ ಭೂಮಿಯಂ ಬಿಟ್ಟಂ ಚೋವವುವಂ ಬರೆಯಿಸಿದಂ (ಎಕ. IV, ಹೆಗ್ಗಡ. ೧೭-೨೨ ; 1021). [ ದೇವಾರ + ಕೆಯ್$_1$ ]

**ದೇವಾರಣ್ಯ** (ನಾ). [ಜೈನ] ಮೇರುಪರ್ವತದ ಕೆಳಗಿರುವ ಭದ್ರಸಾಲವೆಂಬ ವನ : ದೇವಾರಣ್ಯಂ ದೇವರ ದೇವನ ಮನಕಿಂಬನೀಯೆ ತನ್ನಂದನದೊಳ್ (ಶಾಂತಿಪು. ೮-೧೨೨). [ ದೇವ + ಅರಣ್ಯ ]

**ದೇವಾರಾತಿ**(ನಾ). ೧. ದೇವತೆಗಳ ಶತ್ರು; ರಾಕ್ಷಸ; ದೈತ್ಯ. ೨. ರಾವಣ: ಏಳು ದೇವಾರಾತಿಯಿಂದಿನ ಕಾಳಗದ ಪರಿ ಹೊಸತು (ಕಾಶಿರಾ. ೩೨-೨೯). [ ದೇವ + ಅರಾತಿ ]

**ದೇವಾರಿ** (ನಾ). = ದೇವಾರಾತಿ೧ : ಮಡದೀ,/ನೀಂ ಪಡೆವಾ ಸುತಂ . . . ತವಿಕುಮಿಾ ದೇವಾರಿಯಂ (ಜಗವಿ. ೨-೮೫). [ ದೇವ + ಅರಿ$_6$ ]

**ದೇವಾರ್ಚನ** (ನಾ). ದೇವರ ಪೂಜೆ ; ದೇವತಾರಾಧನೆ : ಮೂಱು ಪೊಟ್ತಿನ ದೇವಾರ್ಚನವುಂ ಷಟ್ಕರ್ಮವುಮುಳ್ಳನವದ್ಯಂ ಶ್ರಾವಕರ್ಕಳೊಳ್ ಸಾಮಯಿಕಂ (ಅನಂಪು. ೩-೬೧). [ ದೇವ + ಅರ್ಚನ ]

**ದೇವಾರ್ಚನೆ** (ನಾ).=ದೇವಾರ್ಚನ : ದೇವಾರ್ಚನೆ ದಾನಂ ಸಂಧ್ಯಾವಂದನೆ ಜಪವೆನಿಪ್ಪವಂ ಮಾಟಿಪ್ಪ ವಿಪ್ರಾವಳಿಗೆ ದರ್ಭೆಯಿಲ್ಲದೊಡಾ ವನಫಲಮಲ್ಲಿ ಮಸುರರುಂ ಗಡ ಕೊಳ್ವರ್ (ಸಮುಪ. ೧೨-೪೭): ಮರುಳ ದೇವಾರ್ಚನೆಯೊ ಕನಸಿನ ಸಿರಿಯೊ ಶಿಶುವಿನ ಕೈಯ ರತ್ನವೊ ... ಹರನನೀ ಚರ್ಮಾಕ್ಷಿಯಲಿ ಗೋಚರಿಸೆ ಬೇಡಿದುದಂಬು ಮರ್ತ್ಯದೊಳಿರವು ಮಝು ಭಾಪೆನ್ನ ಪುಣ್ಯವೆನುತ್ತ ಬಿಸುಸುಯ್ದ (ಕುಮಾರವ್ಯಾ. ಅ. ೭-೨) ; ದೇವಾರ್ಚನೆಗಳ ಘಂಟಾರಾವಂ . . . ಚೆಲ್ವಿಂದಂ ಕಾವೇರೀಪಟ್ಟಣಂ ಕರಂ ಸೊಗಯಿಸುಗುಂ (ತ್ರಿಪುವಿ. ೧೧-೪). [ ದೇವ + ಅರ್ಚನೆ ]

**ದೇವಾರ್ಚನೆಗೆಯ್** (ಕ್ರಿ). ದೇವರ ಪೂಜೆಯನ್ನು ಮಾಡಂ ; ದೇವತಾರಾಧನೆಯನ್ನು ನೆರವೇರಿಸು : ದೇವಾರ್ಚನೆಗೆಯ್ದಲ್ಲಿಂ ಪಾವುಗೆಯಂ ಮೆಟ್ಟಿ ನಡೆದು ಮನೆದೆಯ್ವಕ್ಕಂ ಗೋವಾಜಿಗಜಾಶಸ್ತ್ರಂ [ ಶಸ್ತ್ರಕೆ ] ಗಾವಿಲ ರತಿಯಿಂದೆ ತಾಮು ಪೊಡೆವಡುತಿಪ್ಪರ್ (ಸಮುಪ. ೯-೮೪). [ ದೇವಾರ್ಚನೆ + ಕೆಯ್$_1$ ]

**ದೇವಾರ್ಚಿತ** (ನಾ). ದೇವತೆಗಳಿಂದ ಪೂಜಿತನಾದವನಂ ; ದೇವಗುರಂ ; ಬೃಹಸ್ಪತಿ ; ಇಂದುಪ್ರಿಯನಂದನಂ ದ್ವಿತಯದೊಳ್ ದೇವಾರ್ಚಿತಂ ನಾಲ್ಕಱೊಳ್ ... ಇರಲ್ ಗೋವೃಂದಕತ್ಯುತ್ತಮಂ (ಅಟ್ಯಮ. ೮-೧೮೫). [ ದೇವ + ಅರ್ಚಿತ ]

**ದೇವಾರ್ಭಕ** (ನಾ). [ಜೈನ] ಅರ್ಹಂತನಾಗುವ ಶಿಶು: ಮಣಿಮಂಡಪದ ನಡುವಣರ್ಚಿಸಿದ ಸಿಂಹಾಸನದೊಳ್ ಪೂರ್ವಾಭಿಮುಖನಾಗಿ ದೇವಾರ್ಭಕನನಿರಿಸುವುದುಂ (ಮಲ್ಲಿಪು. ೧೨-೧೧೨). [ ದೇವ + ಅರ್ಭಕ ]

**ದೇವಾಲಯ** (ನಾ). ದೇವಸ್ಥಾನ ; ದೇಗುಲ ; ಗುಡಿ : "ದೇವಾಲಯಮಾಯತನಂ" (ವಸ್ತುಕೋ. ೪೬-೧೩); ಎಲ್ಲೆಲ್ಲಿ ದೇವಾಲಯಂಗಳುಂಟಾದಲ್ಲಿ ಅಲ್ಲಲ್ಲಿ ನಿಚ್ಚಂ ಸಹಸ್ರಪೊನ್ಗಳನಲ್ಲಿ ಕೊಡುತೆ ಬಂದಪೆವು (ನಂಬಿರ. ೭-೧೬೧); ಯಾವ ಗುಡಿ ಮಿಗಿಲು ಈ ಭುವನದೇವಾಲಯಕೆ ? (ಪಕ್ಷಕಾ. ೨೮-೨೫). [ ದೇವ + ಆಲಯ ]

**ದೇವಾಲಿಕೆ** (ನಾ). (?): ನುಡಿದುದೆ ದೇವಾಲಿಕೆ ತನ್ನಡವಲಿ ಮನುಮಾರ್ಗ್ಗಮಾರ್ಪು ಸುರಕುಜದ ಬನಂ ಯೆಡೆಗೊಣ್ಡ ರೂಪು ಕಾಮನ ಹಿಡಿದಲಗಣೆಯೆನಿಪ ದಾವದಣ್ಣಾಧಿಪನಂ (ಎಕ. V, ಚನ್ನರಾ. ೧೮೭-೩೦ ; 1143). [ ? ]

**ದೇವಾಲೆಯ** 'ದೇವಾಲ್ಯ' ನೋ.

**ದೇವಾಲ್ಯ,** ದೇವಲ್ಯ, ದೇವಾಲೆಯ (ನಾ). ದೇವಸ್ಥಾನ; ದೇವಾಲಯಂ; ಗುಡಿ: ಮೂಲಸ್ಥಾನ ನಂದಿಕೇಶ್ವರದೇವರ ದೇವಾಲ್ಯ(ಲಯ)ಮಂ ಜೀರ್ಣೋದ್ಧಾರಂ ಮಾಡಿ (ಇಅ. V, ೧೬-೨೭; 1019); ಸಯಂಬುದೇವರಿಗೆರದು ಬಟ್ಟಾರ ದೇವಾಲ್ಯಮಂ ಮಾಡಿಸಿದಂ (ಎಕ. XIV, ಶ್ರೀರಂಗ. ೩೪-೭; 1126); ಹಸುಳೆಯಾಗಿಯುಂ ನಾನು ಕೆಱೆ ಬಾವಿ ದೇವಾಲ್ಯ ವಿರಚಿಸಿ ಭವಕೆ ಬಂದು ಫಲವನುಂಡು ನರಕಕೆ ಬೀಳುವನ ಕರುಣಕರದಿಂದೆತ್ತಿ ನಿನ್ನ ಹೊರೆಯೊಳಗಿರಿಸಿದೆ ಯೋಗಿನಾಥ (ಸಿದ್ಧರಾ. XXIV, ೬೮೩); ಗಂಗೇಶ್ವರದೇವರ ದೇವಾಲ್ಯಮಂ ಮಾಡಿಸಿ (ಎಕ. VII, ಶಿವಮೊ. ೫-೪೫; 1218); ಆರಾಮವಗ್ರಾರ ಧರ್ಮತಟಾಕಗಳ ಚಾರುತರದ ದೇವಾಲ್ಯ ಧಾರಿಣಿಯೊಳಗೆ ಕಂಠೀರವೇಶ್ವರನಿಂದ ಪೂರೈಸಿ ಮೆಱೆದುವರ್ತಿಯಲಿ (ಕಂನವಿ. ೨೭-೩೭). **ದೇವಲ್ಯ:** ಆವಾವ ದಿಕ್ಕಿನಲಿ ಪಟ್ಟಿಯ ಮೇಲ್ಕಟ್ಟು . . . ನವರತ್ನದ ಕುಚ್ಚಿಂದ ದೇವಲ್ಯವೆಸೆದುದು (ಕಂನವಿ. ೭-೮೮). **ದೇವಾಲೆಯ:** ಇನ್ನೀ ಸ್ಥಾನಮಾನ್ಯಮಂ ಶ್ರೀಮೂಲಸ್ಥಾನಮಪ್ಪಯಂಭು ಕಲಿದೇವಗ್ಗಂ ಗವಱೇಶ್ವರದೇವಗ್ಗಂ ದೇವಾಲೆಯುಮಂ ಮಾಡಿಸಿ (ಎಕ. XI, ದಾವಣ. ೧೩೫-೨೫; 1124).

[ <ಸಂ.ದೇವಾಲಯ./ತುಳು. ದೇವಲ್ಯ ]

**ದೇವಾವನಿಜಾತ** (ನಾ). ದೇವಲೋಕದ ಮರ; ಕಲ್ಪವೃಕ್ಷ: ಆ ವನನಂದನಮಧ್ಯದ ದೇವಾವನಿಜಾತಮಿಾತನೆಂಬವೊಲಿತ್ತಂ . . . ರಾಜಶೇಖರಕ್ಷಿತಿಪಾಲಂ (ರಾಜಶೇ. ೧೦-೧೯೯). [ ದೇವ + ಅವನಿಜಾತ ]

**ದೇವಾಶ್ವ** (ನಾ). ಇಂದ್ರನ ಕುದುರೆ; ಉಚ್ಚೈಃಶ್ರವಸ್ಸು: "ಉಚ್ಚೈಃಶ್ರವಾಃ, ದೇವಾಶ್ವಃ – ಈ ೨ ಇಂದ್ರನ ಕುದಿರೆ" (ಹಲಾಯು. ೧೧-೬೦).

[ ದೇವ + ಅಶ್ವ ]

**ದೇವಾಸ** (ನಾ).=ದೇವಸ್ವ (?): ಘುಂಬಳಿ ದೇವಾಸ ಖಂಡಿಕೆ ದಂಡಿಗೆ ಪುಡುಗೊಱೆ ಮತ್ತೆ ಏನುಳ್ಳದಕ್ಕೆಯೂ ಸೆಲವಾಗಿ ಅಱುವತ್ತು ಹೊನ್ನನುಳಿದು (ಎಕ. VI, ಶೃಂಗೇರಿ. ೧-೧೭; 1346); ಶ್ರೀಮದಶೇಷಮಹಾಜನಂಗಳು ತಮ್ಮ ಹಳಿ ಕೆಂಪಿಡಿಯನು ದೇವಾಸ ಹೊರತಾಗಿ ಬಿದಿರೆನಾಯ್ಕನ ಮಗಳು ಕಾಚಮನಾಯ್ಕಿತಿ ತಮ್ಮ ಹರಿವಾಣಕ್ಕೆ ಕೊಟ್ಟದು (ಎಕ. VII, ಶಿವಮೊ. ೪೭-೫; 1688). [<ಸಂ.ದೇವಸ್ವ ?]

**ದೇವಾಸಾಲೆ** (ನಾ). (?): ನಲ್ಲ ದೇವಾಸಾಲೆ ಹುಲ್ಲೆಗೊಂಬತ್ತು ಮುಖ ಬೆಳ್ಳಿಲಿಗೆ ನಾಲ್ಕು ತನಿಗೋಡು ಮೂಡಿದ್ದನಿಲ್ಲಿಯೇ ಕಂಡೆ (ಸರ್ವಜ್ಞ. ೨೦೬೯).

[ ? ]

**ದೇವಾಸುರ** (ನಾ). ೧. ದೇವತೆ ಮತ್ತು ರಾಕ್ಷಸ. 'ದೇವಾಸುರ ಯುದ್ಧ' ಪಠಾ. ೨. (ಆಲಂ) ದೇವತೆಗಳಿಗೂ ರಾಕ್ಷಸರಿಗೂ ನಡೆದ ಯುದ್ಧ: ದೇವಾಸುರದೊಳವಿಂದಿನ ನೋವಂ ನೊಂದಱಿಯೆಂ (ಪಂಪಭಾ. ೧೧-೨೦). ೩. (ಆಲಂ) ಒಳ್ಳೆಯತನಕ್ಕೂ ಕೆಟ್ಟತನಕ್ಕೂ ಉಂಟಾದ ಘರ್ಷಣೆ: ಅಂದು ಮೊದಲಾದುದೇ ದೇವಾಸುರಂ! (ಹೊಂಗಳು. ೩೭-೨೪) ೪. (?): ಸಿರಿವಚ್ಛನುಂ ಶ್ರೀಪುರುಷನುಂ ದೇವಾಸುರರಾ ಶಿವಮಾರನುಂ . . . ಎನೆಬರು ಎಱೆದು ಸತ್ತೊರ್ (ಮೈಆರಿ. ೧೯೪೪, ೬-೧; ಸು. 808). [ ದೇವ + ಅಸುರ ]

**ದೇವಾಸುರಯುದ್ಧ** (ನಾ). ದೇವತೆಗಳಿಗೂ ರಾಕ್ಷಸರಿಗೂ ನಡೆದ ಯುದ್ಧ,–ಕದನ: ಮುನ್ನಂ ಕೃತಯುಗದೊಳ್ ಸೋಮನ ವರುಣನ ರಾಜಸೂಯದ ಕಡೆಯೊಳ್ ದೇವಾಸುರಯುದ್ಧಂ ನೆಗೞ್ (ಪಂಪಭಾ. ೬-೨೪ ವ); ದೇವಾಸುರಯುದ್ಧಕ್ಕೆ ಕರಗಂಬೊತ್ತಲೆಂಬಂತನವರತಬಾಷ್ಪವಾರಿಧಾರಾಪೂರಪರಿಪಾರಿತಪಲ್ಲವನೇತ್ರೆಯುಂ . . . ಎನಿಸಿದ ಪಾಂಚಾಲ ರಾಜತನೂಜೆ (ಗದಾಯು. ೧-೫೫ ವ). [ ದೇವಾಸುರ + ಯುದ್ಧ ]

**ದೇವಾಳಿ** 'ದೇವಳಿ' ನೋ.

**ದೇವಾಳೆ** (ನಾ). ಒಂದು ಬಗೆಯ ಬಾಳೆಯ ಗಿಡ ಮತ್ತು ಅದರ ಹಣ್ಣು: ರಸವಾಳೆ ಪುಟವಾಳೆ ರಾಜವಾಳೆ ಸಕ್ಕರೆಯೆಸೆವಾ ದೇವಾಳೆ . . . ಮೆಱೆದುವರ್ತಿಯಲಿ (ಕಂನವಿ. ೫-೮೭). [<ದೇವ+ಬಾಳೆ (<ಬಾೞೆ)]

**ದೇವಾಳ್ಗೆ,** ದೇವಳಿಗೆ (ನಾ). ಒಂದು ಪ್ರದೇಶದ ಹೆಸರು: ದೇವಾಳ್ಗೆ ವಿಷಯೇ ಕಿಱುಮುಂಡ ನೀರಿಣಾಂ ನಕರಸ್ಯ ದಶವೋಭಾಗಃ (ಮೈಆರಿ. ೧೯೩೦, ೩-೧೯; ಸು. 500). **ದೇವಳಿಗೆ:** ಶ್ರೀಮತ್ ಪೆರ್ಮ್ಮಾನಡಿಗಳ್ ರಾಜ್ಯಂಗೆಯ್ಯುತ್ತಿರೆ ಕಲಿಗಂಗ ದೇವಳಿಗೆಟ್ಟಿತ್ತೂವನಾಳುತ್ತುಮಿರೆ (ಎಕ. VI, ಚಿಕ್ಕಮ. ೪೨-೭; 959). [ ? ]

△ **ದೇವಾರ್ಚ್ಚನ** (ನಾ). = ದೇವಾರ್ಚನ: ದೇವಾರ್ಚ್ಚನ ಒಡೆಯೊರ್ವಿ ನದಿಯುಕೆ ನದಿಯುಂ ಪಡೆದತ್ತುದು (ಇಅ. XIV, ೨೩-೫೧; 9ನೆಯ ಶತ).

[ <ಸಂ. ದೇವಾರ್ಚನ ]

**ದೇವಿ** (ನಾ). ೧. ಹೆಣ್ಣುದೇವತೆ; ದೇವತಾಸ್ತ್ರೀ: ನುಡಿಯೊಂದು ಮಾಟ ಪೊಂದೆನಿಸಿದ ಮಾನವಂಗೆನಗೆ ದೇವಿ ಹಸಾದಮನೇಕೆ ಮಾಡಿದಳ್ (ಕಾದಂಉ. ೨೬೧); ದೇವಿವೆಸರೆಸೆವ ಲಕುಮಾದೇವಿಗವಾ ವಿಷ್ಣುವರ್ದ್ಧನಂಗಂ ತನಯಂ (ಎಕ. VI,ತರೀಕೆ. ೪೫-೩೦; 1196). ೨. ಗೌರಿ; ಪಾರ್ವತಿ; ದುರ್ಗೆ: ಸುಮಾನದಿಂ ಗಮನಿಸುತ ಶಿವನೊಡನೆಂದಳಾ ದೇವಿ (ಬಸಪು. ೫೦-೨); ದೇವಿಯರು ಗುಹ ಗಣಪಮುಖ್ಯಗಣಾವಳಿಗೆ ಪೊಡಮಟ್ಟನು (ಕುಮ್ಮಾಅ. ೬-೧೦೧). ೩. ಪಟ್ಟಾಭಿಷಿಕ್ತಳಾದ ರಾಣಿ; ಪಟ್ಟದ ರಾಣಿ: "ದೇವೀ . . . ಪಟ್ಟಾಭಿಷಿಕ್ತಳಾದ ರಾಣಿಯ ಹೆಸರು" (ಸಿದ್ಧಾಂತಿ. ೩೩); ದೇವಿಯರೊಳೊರ್ಬರೊರ್ಬರ್ ದೇವಿಯ ಪರಿವಾರರಪ್ಸರೋಗಣಮುಂ . . . ಎನಗೆ ಪೊಗಟಲಳಂಬಂ (ಆದಿಪು. ೬-೧೫); ಏನೇನಭಿಮತಮಂ ಪೇೞ್ ನೀನಾಸ್ವಾದಿಸಿದೆ ದೇವಿಯರಮನೆಯೊಳ್ (ಕಾದಂಪೂ. ೮೫); ದೇವಿಯರ ಪರಕೆಯಿಂದೆನಗಾವುದಱೊಳ್ ಕೊಱತೆಯಿಲ್ಲ (ಯಶೋಚ. ೩-೯); ದೇವಿಯ ಬಗೆಯನಲರ್ಚಲ್ ದೇವರವೊಲ್ ಬಲ್ಲರಾರೊ (ಪುಷ್ಪಪು. ೩-೬೪); ದೇವಿ ಎವೆಗಳನಿಡದೆ ನೋಡುತ್ತಾ ವಿಯತ್ತಳದಲ್ಲಿ ಓಹಿಲದೇವನಂ ತಾನಱಿಸಿ ಕಾಣದೆ (ಬಸಪು. ೪೪-೪೦); ಎಲೆ ದೇವಿ, ಇದೆ ಕೊಳ್ ಈ ಕದಳೀಗೃಹಕ್ಕಾ ಕಡೆಯೊಳೆ ಕಣ್ಗೊಳಿಪುದು (ಮಿತ್ರಗೋ. ೩೪); ದೇವಿ ಬರುವಳು; ಆಕೆ ಬಹಳ ಮಾನಗರ್ವಿತೆ (ಶಾಕುಂತ. ೯೨-೧೩). ೪. ಸಿಡುಬುರೋಗ: ಹಳ್ಳಿಯಲ್ಲಿ ಅನೇಕ ಮಕ್ಕಳಿಗೆ ದೇವಿ ಎದ್ದಿದೆ (ರೂಢಿ). ೫. ಹೆಗ್ಗುರುಟಿಕೆ ಗಿಡ: "ಮೂರ್ವಾ, ದೇವೀ . . . ಪೀಲುಃಪರ್ಣೀ–೧೦ ಹೆಗ್ಗುರುಟಿಕೆಯ ಹೆಸರುಗಳು. ಕುರುಟಿಕೇಬೀಜ ಪ್ರಸಿದ್ಧ" (ಸಿದ್ಧಾಂತಿ. ೧೩೦). ೬. ಒಂದು ಬಗೆಯ ಸುವಾಸನೆಯುಳ್ಳ ಬೇರಿನ ಗಿಡ; ಸಂಕೇಬೇರು: "ಮರುನ್ಮಾಲಾ . . . ದೇವೀ, ಲತಾ, ಲಘುಃ, ಸಮುದ್ರಾಂತಾ, ವಧೂಃ, ಕೋಟಿವರ್ಷಾ, ಲಂಕಾಪಿಕಾ – ೧೦ ಸ್ಪೃಕ್ಕೆಯೆಂಬ ಗ್ರಂಥ್ಯದ್ರವ್ಯ, ಸಂಕೇ ಬೇರು" (ಸಿದ್ಧಾಂತಿ. ೦೪೩).

[ ಸಂ. ದೇವೀ ]

**ದೇವಿಗ** (ನಾ). ದೇವತಾವಿಗ್ರಹಗಳನ್ನು ಮಾಡುವವನು; ವಿಗ್ರಹ ಶಿಲ್ಪಿ: ದೇವರಂ ಮಾಡುವಂ ದೇವುಳಿಗಂ, ದೇವಿಗಂ (ಶಬ್ದಾನು. ೪೦೦ ಪ್ರಯೋ). [ ದೇವ + – ಇಗ ]

**ದೇವಿಗೆಱೆ** (ನಾ). ಒಂದು ಕೆರೆಯ ಹೆಸರು: ನಾಗವರ್ಮ್ಮನ್ ಕಟ್ಟಿಸಿದ ದೇವಿಗೆಱೆಗಂ ಪಿರಿಯಕೆಱೆಗಂ ಬಿತ್ತುವಟ್ಟಮಂ ಕೊಟ್ಟರು (ಎಕ. III, ನಂಜನ. ೧೯೨-೮; 968). [ ದೇವಿ + ಕೆಱೆ ]

**ದೇವಿತನ** (ನಾ). ಪಟ್ಟದ ರಾಣಿಯ ಪದವಿ,–ಸ್ಥಾನ: ಬುದ್ಧದಾಸಿಗೆ ದೇವಿತನಂಗೊಟ್ಟನಿಂತು ಕಷ್ಟನುಮೊಳನೇ (ಧರ್ಮಾಮೃ. ೮-೨೦೯).

[ ದೇವಿ + –ತನ ]

**ದೇವಿದೇಟಿ** (ನಾ). ಒಂದು ಬಗೆಯ ತೆರಿಗೆ : ಬಸದಿಯ ವೃತ್ತಿಯೆಲ್ಲವಕ್ಕಂ ದೇವಿದೇಟಿ ಅಡೆಗಟ್ಟುರ್ಗ ಕಾಣಿಕೆ . . . ಸಲ್ಗೆ (ಎಕ. VIII, ನಗರ. ೩೭-೧೫೪ ; 1077). [ ದೇವಿ? + ತೆಟಿ₃ ]

**ದೇವಿಯಬ್ಬೆ** (ನಾ). ಒಬ್ಬಾಕೆಯ ಹೆಸರು : ಬನ್ನುದತ್ತನು ಸೆಟ್ಟಿತ್ತಿ ದೇವಿಯಬ್ಬೆಯಂ ನಿಱಿಸಿ (ಎಕ. VI, ಮೂಡಗೆ. ೧೯-೯ ; ಸು. 1025) ; ಶ್ರೀಮತ್ ಪ್ರಭಾಚನ್ದ್ರಸಿದ್ಧಾನ್ತದ ಭಟ್ಟಾರರ ಸಿಶ್ಶಿನ್ತಿಯರಪ್ಪ ದೇವಿಯಬ್ಬೆಕನ್ತಿಯರ ನಿಸಿಧಿಗೆ ಅಯ್ದು ದಿವಸನ್ನೋ × ಸ್ವರ್ಗ್ಗಸ್ತರಾದರ್ (ಎಕ. XV, ಹೊಳೆನ. ೬೫-೧೦ ; 950). [ ದೇವಿ + ಅಬ್ಬೆ₁ ]

**ದೇವಿಲಿ** (ನಾ). ದೇವರು ಇಲ್ಲವೆಂದು ಭಾವಿಸುವವನು ; ನಾಸ್ತಿಕ ; ನಿರೀಶ್ವರವಾದಿ : ಸಾವಿಗೆ ಹೆದರುವ ಹಳೆಹೇಡಿಯೇ ? ನಾ ಬೇಯುವೆ ನಿನಗಾಗಿ ಗಾವಿಲಕೆಲ್ಲರು ದೇವಿಲಿಯಾಗರೆ ಭಕ್ತನ 'ಬಲಿ'ಗಾಗಿ (ನನಲ್ಲ. ೩೦-೧೫). [ ದೇವ + – ಇಲಿ₃ ]

**ದೇವಿಹಾಕಿಸು** (ಕ್ರಿ). ಸಿಡುಬು ಚುಚ್ಚಿಸು ; ಡಾಕುಹಾಕಿಸು ; ವ್ಯಾಲಿ ಚುಚ್ಚಿಸು : ಮೂರುತಿಂಗಳೊಳಗೆ ಮಕ್ಕಳಿಗೆ ದೇವಿಹಾಕಿಸುವುದರಿಂದ ಈ ರೋಗ ಬರುವುದಿಲ್ಲ (ಗೃಹವಿ. ೧೫೦). [ ದೇವಿಹಾಕು + – ಇಸು₃ ]

**ದೇವಿಹಾಕು** (ಕ್ರಿ). ಸಿಡುಬುರೋಗವನ್ನು ತಡೆಯುವುದಕ್ಕಾಗಿ ಸಿಡುಬು ರಸಿಕೆಯನ್ನು ರಕ್ತಕ್ಕೆ ಸೇರಿಸು ; ಸಿಡುಬುಹಾಕು ; ಡಾಕು ಹಾಕು : ಸಿಡುಬು ಬರದ ಹಾಗೆ ದೇವಿಹಾಕುವುದು ಚೀನೀಯರಿಗೆ ೧೧ನೆಯ ಶತಮಾನ ದಲ್ಲಿ ತಿಳಿದಿತ್ತಂತೆ (ಶಿಲ್ಪನಾ. ೯೯). [ ದೇವಿ + ಹಾಕು (<ಪಾಯ್ಯು₁) ]

**ದೇವೀಮತ** (ನಾ). [ಶೈವ] ಚಂದ್ರಜ್ಞಾನಾಗಮದ ಹದಿನಾಲ್ಕು ಭೇದ ಗಳಲ್ಲಿ ಒಂದು : ಸ್ಥಿರಸಂಹಿತೆ ಸ್ಥಾಣುಸಂಹಿತೆ ಮಹಂತಸಂಹಿತೆ ನಂದಿ ಸಂಹಿತೆ ನಂದಿಕೇಶ್ವರಸಂಹಿತೆ ಏಕಪಾದಪುರಾಣ ಶಂಕರಾಗಣ ನೀಲ ಭದ್ರತಂತ್ರ ಶಿವಭದ್ರಾಗಮ ಕಲಾಭೇದಾಗಮ ಶ್ರೀಮುಖಾಗಮ ಶಿವಶಾಸನಾಗಮ ಶಿವರೇಖಾಗಮ ದೇವೀಮತವೆಂದು ಚಂದ್ರಜ್ಞಾನಾ ಗಮದ ಹದಿನಾಲ್ಕು ಭೇದಂಗಳು (ವಿವೇಕ. ೭೦). 'ಚಂದ್ರಜ್ಞಾನಾಗಮ' ಪರಾ. [ ಸಂ. ]

**ದೇವುರೆ** (ನಾ). ಹರ್ಷವನ್ನು ಸೂಚಿಸುವ ಒಂದು ನುಡಿ : ದೇವ ವೀಧಿ ದೇವುರೆ ಸುರರಾಜರಾಜ ಧಿರುರೇ ಎನೆ (೧೦ಕ. ೧೦-೬೯).

**ದೇವುಲ** 'ದೇಗುಲ' ನೋ.

**ದೇವುಲಾಳು** (ನಾ). ದೇಗುಲದ ಆಳು (?) : ಆ ಮಿಹಿಲಾಳು ಭೋಜ ದೇವುಲಾಳು [ಪಾಠಾಂ. ದೇವುರಾಳು, ದಬಲಾಳು] ಆನು ಸೂಳೆ ನಮ್ಮ ಕ್ಕನೂ ಸೂಳೆ (ಬಸವ. ೩೨೭). "ದೇವಭಕ್ತ" (ಬಸವ. ಕೋಶ).
[ ದೇವುಲ (<ದೇಗುಲ) + ಆಳು₂ (<ಆಳ್₃) ]

**ದೇವುಳಿಗ** (ನಾ). ೧. = ದೇವಡಿಗ೧: ಉಳಿಗ ಪ್ರತ್ಯಯಕ್ಕೆ – ದೇವುಳಿಗಂ ಮಣ್ಣುಳಿಗಂ (ಶಮದ. ೨೦೦ ಪ್ರಯೋ). ೨. = ದೇವಿಗ : ದೇವರಂ, ಮಾಡುವಂ, ದೇವುಳಿಗಂ, ದೇವಿಗಂ (ಶಬ್ದಾನು. ೪೧೦ ಪ್ರಯೋ).
[ ದೇವ + – ಉಳಿಗ₂ ]

**ದೇವುಳಿಗಿತಿ** (ನಾ). ದೇವುಳಿಗನ ಹೆಂಡತಿ : ಉಳಿಗ—ದೇವುಳಿಗಿತಿ, ಪಾಲುಳಿ ಗಿತಿ, ಕಯ್ದುಳಿಗಿತಿ (ಶಬ್ದಾನು. ೧೯೨ ಪ್ರಯೋ) ; ಬ್ರಾಹ್ಮಣಿತಿ . . . ದೇವುಳಿಗಿತಿ, ಇತ್ಯಾದಿ (ಹೊನುಗ. ೯೬).
[ ದೇವುಳಿಗ + – ಇತಿ₁ (< – ಇತ್ತಿ) ]

**ದೇವೆಡಿತ್ತಿ** 'ದೇವಡಿತಿ' ನೋ.

**ದೇವೆಟಿಯ** (ನಾ). ಒಬ್ಬಾತನ ಹೆಸರು : ಬಸನ್ತಕುಮರ ಯೆಡೆವೊಟಲ ನಾಡ ಸಲೆವುಗೆಯ ಕೊಟ್ಟ ಶಾಸನವು ಪಡೆದು ಶಾನ್ತಪನ ಮಗ ದೇವೆಟಿಯಗೆ ನಷ್ಟಪ್ಪಗೊಣ್ಡು ಕೊಟ್ಟನ್ (ಎಕ. VIII, ಸೊರಬ. ೫೭೦-೫೫ ; 692). [ ದೇವ + ಎಟಿಯ ]

**ದೇವೇಂದ್ರ** (ನಾ). ದೇವತೆಗಳ ಒಡೆಯ ; ಸ್ವರ್ಗಲೋಕದ ಅಧಿಪತಿ : ಶ್ರೀದೇವೇಂದ್ರಮುನೀಂದ್ರವಂದಿತಗುಣವ್ರಾತಂ ದಯಗೆಯ್ವನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ (ಆದಿಪು. ೧-೧) ; ದೇವೇಂದ್ರನುಮಾಗಳ್ ದೇಶಾವಧಿಯಿಂ . . . ಆತ್ಮೀಯಭಾವಮನಱಿದು ವ್ಯತೀ[ತ]ಭವ ಸಂತತಿಯಂ (ಶಾಂತಿಪು. ೩-೭) ; ಅತ್ತಲ್ ದೇವೇಂದ್ರಂ ಮತ್ತಿತ್ತಲ್ ಭುಜ ಗೇಂದ್ರಂ (ಶಮದ. ೧೯೧ ಪ್ರಯೋ) ; ದೇವೇಂದ್ರನು ದೇವತೆಗಳ ಸಹಾಯ ವನ್ನು ಪಡೆದು ತಾನೇ ಐರಾವತದ ಮೇಲೆ ವಜ್ರಧಾರಿಯಾಗಿ ಕುಳಿತು ಹೋರಾಡಿದರೂ ಪ್ರಯೋಜನವಾಗಲಿಲ್ಲ (ವಚಭಾ. ೭೪).
[ ದೇವ + ಇಂದ್ರ ]

**ದೇವೇಂದ್ರಚಾಪ** (ನಾ). ಇಂದ್ರನ ಧನುಸ್ಸು ; ಕಾಮನ ಬಿಲ್ಲು ; ಮಳೆ ಬಿಲ್ಲು : ದೇವೇಂದ್ರಚಾಪಂ ದಲೆಂಬಿನೆಗಂ ಬಾಹುಬಲೀಶನೇಱಿಸಿದಂ . . . ಚಾಪಮಂ (ಆದಿಪು. ೧೪-೯೯). [ ದೇವೇಂದ್ರ + ಚಾಪ ]

**ದೇವೇಂದ್ರತಮ್ಮಡಿ** (ನಾ). ಒಬ್ಬಾತನ ಹೆಸರು : ಪೊಟ್ಟವಿನೀತೀಶ್ವರಕ್ಕಂ ಸರ್ವ್ವಪರಿಹಾರಂ ಕೊಟ್ಟಮ್ಮರ್ಣ್ಣುಂ ಮನೆಯುಂ ತೋಟಕ್ಕಂ ದೇವೇಂದ್ರ ತಮ್ಮಡಿಗಳಾ ಮುದ್ದೆಗಣರಾ ಗೋಷ್ಠಿಧರ್ಮ್ಮಂ (ಎಕ. IV, ಚಾಮರಾ. ೬೩-೫ ; ಸು. 750). [ ದೇವೇಂದ್ರ + ತಮ್ಮಡಿ₁ ]

**ದೇವೇಂದ್ರತ್ವ** (ನಾ). ದೇವೇಂದ್ರನ ಅಧಿಕಾರ, –ಪದವಿ : ದೇವಾಧೀಶನ ನೊರ್ಮೆ ವರ್ಣಿಸೆ ಮನೋವಾಕ್ಕಾಯಸಂಶುದ್ಧಿಯಿಂ ದೇವೇಂದ್ರತ್ವಮೆ ಸಾರ್ವುದು (ಅನಂಪು. ೦-೬೦); ತಾರಕನಿಂದ ಭಂಗಂಬಟ್ಟ ದೇವೇಂದ್ರತ್ವ ವೇಕೆಮಗೆ (ಬಸಪು. ೧೮-೨೨). [ ಸಂ. ]

**ದೇವೇಂದ್ರಪಟ್ಟ** (ನಾ). ದೇವೇಂದ್ರನ ಅಧಿಕಾರ ; ಸ್ವರ್ಗಲೋಕದ ಅರಸುತನ ; ದೇವತೆಗಳ ರಾಜನಾಗುವಿಕೆ ; ಇಂದ್ರಪದವಿ : ಆ ನಿಜಫಲಪ್ರಾಪ್ತಿಯಲಿಯುಸುಮಾನವಿಲ್ಲದೆ ಫಲಿಸಿ ನಿನ್ನಾಧೀನವಾಯಿತ್ತೀಗಳೀ ದೇವೇಂದ್ರಪಟ್ಟವಿದು (ಬಸಪು. ४೧-೧೦). [ ದೇವೇಂದ್ರ + ಪಟ್ಟ₃ ]

**ದೇವೇಜ** (ನಾ). ದೇವರನ್ನು ಪೂಜಿಸುವವನು ; ದೇವತಾರ್ಚನೆ ಮಾಡುವವನು : ಸುವಾಚ್, ಸುವಾಚಂ. ಏವಂ ಗುಣಭಾಜಂ, ಅಶ್ವ ಯುಜಂ, ಋತ್ವಿಜಂ, ದೇವೇಜಂ . . . ಪ್ರಷ್ಠವಾಹಂ (ಶಬ್ದಾನು. ೧೨೯ ಪ್ರಯೋ). [ ಸಂ. ದೇವೇಜ್ ]

**ದೇವೇಶ** (ನಾ). ೧. = ದೇವೇಂದ್ರ : ದೇವೇಶಮುಖ್ಯದಿಗೀಶರುಂ . . . ನೆರೆದೋಲಯಿಸುತಿರಲು (ಬಸಪು. ೨೪-೪೮). ೨. ಶಿವ ; ಪರಮೇಶ್ವರ : ಇಱಿವಂತು ನಿನಗೆ ಮನದೊಳ್ ತಱಿಸಲವುಂಟಪ್ಪೊಡೆಲವೊ ದೇವೇಶನನೇಂ ಸೆಱೆವಿಡಿದೆ ತೊಲಗು ದೇವನ ಮುಱಿಯಂ ಬಟಿಕಱಿಯಲಕ್ಕುಮೆನಗಂ ನಿನಗಂ (ಶಂಪಭಾ. ೧೦-೧೨೧); ದೇವೇಶ ನಿಮ್ಮ ಪದರಾಜೀವದ ಭಾವನೆಯ ಪೆರ್ಮೆಯೆಂತುಟೊ (ಶಬಶಂ. ೨-೬೭). [ ದೇವ + ಈಶ ]

**ದೇವೇಶೋತ್ತರ** (ನಾ). [ಶೈವ] ಸಿದ್ಧಾಗಮದ ನಾಲ್ಕು ಭೇದಗಳಲ್ಲಿ ಒಂದು : ಸಾರೋತ್ತರ ದೇವೇಶೋತ್ತರ [ಪಾಠಾಂ. ಶೋಕ್ತ] ಶಾಲಭೇದ ಶಶಿಮಂಡಲವೆಂದು ಸಿದ್ಧಾಗಮದ ನಾಲ್ಕು ಭೇದಂಗಳು (ವಿವೇಕ. ೭೦).
[ ದೇವೇಶ + ಉತ್ತರ ]

**ದೇವೇಶ್ವರತ್ವ** (ನಾ). = ದೇವೇಂದ್ರತ್ವ : ಅರ್ಜುನನು "ದೇವರಾಜ ! ನನಗೆ ದಿವ್ಯಲೋಕಗಳಾಗಲಿ, ದೇವತ್ವವಾಗಲಿ, ದೇವೇಶ್ವರತ್ವವಾಗಲಿ ಬೇಕಾಗಿಲ್ಲ" ಎಂದನು (ವಚಭಾ. ೧೨೪). [ ಸಂ. ]

**ದೇವೋತ್ತಮ** (ನಾ). ದೇವತೆಗಳಲ್ಲಿ ಶ್ರೇಷ್ಠನಾದವನು : ಕಮಲಭವ ಸುರವಂದ್ಯ ಗಿರಿಜಾರಮಣ ಭಕ್ತಕುಟುಂಬಿ ದೇವೋತ್ತಮ ತ್ರಿಯಂಬಕ ಪುಷ್ಟಿವರ್ಧನ ಕರುಣಿಸುವುದೆಂದ (ಕುವ್ಯಾಭಾ. ೬-೪೪) ; ದೇವೋತ್ತಮ ನಪ್ಪೀಶ್ವರನಾವಾಸಮೆನಿಪ್ಪ ಚೇರಮಂಡಳದೊಳ್ (ತ್ರಿಪುವಿ. ೩-೧).
[ ದೇವ + ಉತ್ತಮ ]

**ದೇವೋತ್ತರಕುರು** (ನಾ). [ಜೈನ] ವಿದೇಹಕ್ಷೇತ್ರದಲ್ಲಿ ಮೇರುಪರ್ವತಕ್ಕೆ ದಕ್ಷಿಣದಲ್ಲಿ ಮತ್ತು ನಿಷಧಕ್ಕೆ ಉತ್ತರದಲ್ಲಿ ಇರುವ ಒಂದು ಭೋಗ ಭೂಮಿ : ದೇವೋತ್ತರಕುರುಗಳೆ ನಾನಾವಿಧಕಲ್ಪಾಂಘ್ರಿಪಂಗಳಿಂದಂ ಪತಿಯಂ ತೀವಿ ಬಳಸಿರ್ದುವೆನೆ (ಆದಿಪು. ೧೦-೩೩). 'ದೇವಕುರು' ಪರಾ. [ದೇವ + ಉತ್ತರಕುರು]

**ದೇವೋತ್ಸವ** (ನಾ). ದೇವಾಲಯ ಮೊದಲಾದ ಕಡೆಗಳಲ್ಲಿ ನಡೆಯುವ ದೇವರ ಉತ್ಸವ : ಸುಂದರಾಗಮಕಲಿತ ದೇವೋತ್ಸವಂಗಳನು ಸರಸ ಸಜ್ಜನಗೋಷ್ಠಿಸಲ್ಲಾಪಗಳನು ... ನೆನೆದಿಂತು ಸಂಹೃಷ್ಟನಾದೆನ್ಯೆ (ಮಲದೇ. ೫೬-೭). [ದೇವ + ಉತ್ಸವ]

**ದೇವೋನ್ಮಾದ** (ನಾ). ದೇವಭಕ್ತಿಯಿಂದ ಉಂಟಾಗುವ ಪರವಶತೆ : ಕೊನೆಕೊನೆಗೆ ಶರೀಫರು ದೇವೋನ್ಮಾದದ ಪೂರ್ಣ ನಿಬ್ಬೆರಗಿನಲ್ಲಿರುತ್ತಿದ್ದರು (ಶರೀಫ. ೦ ಕವಿಕಾವ್ಯ ಪರಿಚಯ). [ದೇವ + ಉನ್ಮಾದ]

**ದೇವೋಪಘಾತ** (ನಾ). ದೇವತೆಗಳಿಂದ ಉಂಟಾಗುವ ತೊಂದರೆ,- ಬಾಧೆ : ದೇವೋಪಘಾತಮಮಂ ಶೌರ್ಯಾವಷ್ಟಂಭದಿನದೆಂತು ಗೆಲ್ದಿಯೊ (ಶಾಂತಿಪು. ೮-೬೯). [ದೇವ + ಉಪಘಾತ]

**ದೇವ್ಯಾಗಮ** (ನಾ). [ಶೈವ] ಶೈವಾಗಮಗಳಲ್ಲಿ ಒಂದು; ಶಕ್ತಿಯ ಉಪಾಸನೆ : ಶೈವಾಗಮದಲ್ಲಿ ಅನುಷ್ಠಾನಭೇದದಿಂದ (ಉಪಾಸನಾಭೇದ ದಿಂದ) 'ಶೈವಾಗಮ, ದೇವ್ಯಾಗಮ ಅಥವಾ ಶಾಕ್ತ್ಯಾಗಮ, ವಾತು ಳಾಗಮ ಅಥವಾ ತಾಂತ್ರಿಕಾಗಮ' ಮತ್ತು 'ವೀರಶೈವಾಗಮ' ಎಂದು ನಾಲ್ಕು ಒಳಭೇದಗಳಿವೆ (ಭಾರದ. ೬೪). [ಸಂ. (ದೇವೀ + ಆಗಮ)]

**ದೇಶ** (ನಾ). ೧. ಜಾಗ; ಸ್ಥಳ; ಪ್ರದೇಶ: ಸುತ್ತಲುಂ ಗಿಳಿಗಳ ಹಿಂಡುಗಳ್ ನೆರೆದು ಕೂಡಿಯುಮಲ್ಲಿ ಸಹಸ್ರಮುಂ ನಿರಾಕುಳಮನುರಾಗದಿಂ ಪಲವುದೇಶದೊಳಿರ್ಪುವು ಬಂದು (ಕಾದಂಪೂ. ೧೨೬). ೨. ಆಡಳಿತ ಸಪ್ತಾಂಗಗಳಲ್ಲಿ ಒಂದು ; ನಾಡು ; ಸೀಮೆ ; ಜನಪದ : "ಎಸೆವ ನೀವೃಜ್ಜನಪದಂ ದೇಶಮೆನೆ ನಾಡ ಪೆಸರಕ್ಕು" (ಮಂಗರಾ. ೫೬-೨) ; ನಿನ್ನಯ ದೇಶಮೆತ್ತಣದು (ಕಾದಂಪೂ. ೯೦) ; ಅಳಕಾವಿಷಯಮೆಂಬ ದೇಶದೊಳೊಪ್ಪುಗುಂ ನಗರಿ ಕೋಸಳೆಯೆಂದು (ಚಂದ್ರಪು. ೪-೮೦) ; ಹೇಳಿರೈ ನಿಮಗಾವ ದೇಶ ವಿಶಾಲಗೋತ್ರವದಾವುದೆನುತ (ಕುಮ್ಯಾ.ಸ. ೨-೬೩); ಕೋಶ ಬಲ ತಳತಂತ್ರ ಹೆಚ್ಚಿದ ದೇಶ ದುರ್ಗಾಮಾತ್ಯ ಮಿತ್ರ ಮಹೀಶಜನ ವೆಂಬುದು ಕಣಾ ಸಪ್ತಾಂಗ ಸನ್ನಾಹ (ಕುಮ್ಯಾ. ೯-೩) ; ದೇಶವೆಮ್ಮದು ಹೇಳುವೊಡೆ ಪರದೇಶ ಬಿದಿನ ಬಿಂಕಕಾಜಿರ ವಾಸಿಗರನಲ್ಲೆನಿಸುವಲ್ಲಮ ನೆಂಬ ಪೆಸರೆನಗೆ (ಪ್ರಭುಲೀ. ೫-೦೩). ೩. ಎರಡು ವಸ್ತುಗಳ ಮಧ್ಯದ ಅಂತರ,-ಅವಕಾಶ : ಈ ಬೃಹದಂತರಗಳನ್ನು . . . ಊಹಿಸುವುದಕ್ಕೆ ದೇಶವನ್ನು ಎಂದರೆ ಅಂತರವನ್ನು ಕಾಲಮಾನದಿಂದ ಅಳೆಯಬೇಕು (ಜ್ಯೋತಿರ್ವಿ. ೨೭೯) ; ಕಾಲವು ನಾನು, ದೇಶವು ನಾನು, ನಿರ್ಗುಣಿ ನಾನು (ಪಾಂಚಜ. ೧೭-೧೮) ; ಇದು ದೇಶದ (Space) ಮಾತಾಯಿತು. ಇನ್ನು 'ಕಾಲ'ದ ಮಾತು (ನಿಬಂಧ. I, ೨೫). ೪. ಭಾಗ ; ವಿಭಾಗ ; ಪಕ್ಕ : 'ಏಕದೇಶ', 'ದೇಶಘಾತಿ' ಪರಾ.

ದೇಶದ ಪೇಟೆ = ಹದಿನೆಂಟು ಪಣದವರು ಅಥವಾ ಬಲಗೈ ಜಾತಿ ಎಂಬ ವ್ಯಾಪಾರಸ್ಥರಾದ ಜನರು ವಾಸಿಸುವ ಪಟ್ಟಣದ ಭಾಗ,- ಪೇಟೆ : (ಶಿ). [ಸಂ.]

**ದೇಶಕುಲಕರಣಿ** (ನಾ).= ದೇಶಪಾಂಡೆ ೨ : ಆದಕ್ಕೆ ಮುಖ್ಯ ಗಣಿಕನಾದವ ದೇಶಪಾಂಡೆ, ದೇಶಕುಲಕರಣಿ. ಇವನು ಗ್ರಾಮದ ಲೆಕ್ಕಪತ್ರಗಳನ್ನು ಇಟ್ಟು ಬರವಣಿಗೆ ಕೆಲಸ ಮಾಡತಕ್ಕವನು. ಇವನಿಗೆ ದೇಶಕುಲಕರಣಿ ಎಂತಲೂ ಹೆಸರು (ಪಾಳಗಾ. ೧೦). [←ಮರಾ. ದೇಶಕುಳಕರಣೀ]

**ದೇಶಗತಿ** 'ದೇಸಗತಿ' ನೋ.

**ದೇಶಗಾಹು** (ನಾ). ದೇಶದ ರಕ್ಷಣೆ,-ಪಾಲನೆ : ಬ್ರಾಹ್ಮರ ಜನಪ ಸುಲಿವುತ ದೇಶಗಾಹಿನ ಮನ್ನೆಯಾದಿಗಳ ಅನಿತುವನು ಸಂಹರಿಸಿ (ಸಂಭಭ. ೨೬-೪೯). [ದೇಶ + ಕಾಹು$_1$ (<ಕಾಪು)]

**ದೇಶಗೌಳ** (ನಾ). [ಸಂಗೀತ] ಗೌಳ ರಾಗದ ಉಪಾಂಗರಾಗಗಳಲ್ಲಿ ಒಂದು : ಕರ್ಣಾಟಗೌಳ ದೇಶಗೌಳ . . . ದ್ರಾವಿಡಗೌಳವೆಂಬೀಳುಂ ಉಪಾಂಗಗೌಳರಾಗಂಗಳು (ವಿವೇಕ. ೨೩೪). [ದೇಶ + ಗೌಳ$_1$]

**ದೇಶಘಾತಿ** (ನಾ). [ಜೈನ] ಜೀವನ ಗುಣಗಳಲ್ಲಿ ಕೆಲವು ಭಾಗಗಳನ್ನು ನಾಶಮಾಡುವ ಕರ್ಮಪ್ರಕೃತಿ ; ಘಾತಿಕರ್ಮಪ್ರಕೃತಿಗಳು ೪೭. ಅವುಗಳಲ್ಲಿ ೨೬ ದೇಶಘಾತಿ ಮತ್ತು ೨೧ ಸರ್ವಘಾತಿ. ನಾಲ್ಕು ಜ್ಞಾನಾವರಣ, ಮೂರು ದರ್ಶನಾವರಣ, ಹದಿನಾಲ್ಕು ಮೋಹ ನೀಯ ಮತ್ತು ಐದು ಅಂತರಾಯಯದಾನಾಂತರಾಯಾದಿಗಳು ಸೇರಿ ಇಪ್ಪತ್ತಾರು ದೇಶಘಾತಿಗಳಾಗುತ್ತವೆ : ಅನಂತಭಾಗಹಾರದಿಂದಂ ಭಾಗಿಸಿದೊಡೆ ಬಹುಭಾಗಂ ದೇಶಘಾತಿಗಳ್ಗಕ್ಕುಮೇಕಭಾಗಂ ಸರ್ವಂ ಘಾತಿಸಂಬಂಧದಿ ದ್ರವ್ಯಮಿನಿತಕ್ಕುಮಿ ದ್ರವ್ಯಮಂ ಷೋಡಶಕಷಾಯಂ ಗಳುಂ ಸರ್ವಘಾತಿಗಳಪ್ಪುದಱಿಂದಂ ಪದಿನೇಳಕ್ಕಂ (ಗೊಮ್ಮಸಾ. ೩-೧). 'ಸರ್ವಘಾತಿ' ಪರಾ. [ದೇಶ + ಘಾತಿ$_1$]

**ದೇಶತ್ಯಾಗ** (ನಾ). ಸ್ವದೇಶವನ್ನು ತ್ಯಜಿಸುವುದು,-ತೊರೆಯುವುದು : ಭಕ್ತರ ಮನವ ಶಿವನು ನೋಡಲಿಕ್ಕೆ ಕಂಟಕವನೊಡ್ಡುವನು . . . ದೇಶ ತ್ಯಾಗವ ಮಾಡಿಸುವನು ಅಲ್ಲಿ ಮಹಾವ್ಯಾಧಿಗಳ ತೋಱಿಸುವನು (ವಚಸಂ. ೩೩೬-೪೦): ನಿನ್ನ ದೇಶತ್ಯಾಗದ ದೆಸೆಯೊಳ್ ಪಲಕಾಲಂ ಸತ್ತನೊಳನೆಂಬ ಸುದ್ದಿಯುಂ ಕೇಳ್ದೆಮಿಲ್ಲ (ಬಂಹರಿ. ೪-೦೬ ಪ). [ದೇಶ + ತ್ಯಾಗ]

**ದೇಶದ್ರೋಹ** (ನಾ). ದೇಶಕ್ಕೆ ಕೇಡುಕನ್ನುಂಟುಮಾಡುವುದು ; ರಾಷ್ಟ್ರ ಘಾತಕತನ : ಅಂದು ದರಬಾರಿನಲ್ಲಿ ಯಾವುದು ನ್ಯಾಯವೆಂದು ನನಗೆ ತೋರಿತೋ, ಯಾವುದು ರಾಜಧರ್ಮವೆಂದು ಹೊಳೆಯಿತೋ-ಇಂದು ಅದು ಪಾಪವೆಂದೂ, ದೇಶದ್ರೋಹವೆಂದೂ ನನಗೇ ತೋರುತ್ತಿದೆ (ವಾಲಚ್. ೧೩೪). [ದೇಶ + ದ್ರೋಹ]

**ದೇಶದ್ರೋಹಿ** (ನಾ). ದೇಶಕ್ಕೆ ಕೇಡುಕನ್ನುಂಟುಮಾಡುವವನು ; ರಾಷ್ಟ್ರಘಾತಕ : ಅವನು ಐಗುಪ್ತದೇಶದಿಂದ ಓಡಿಬಂದವನು; ಗತಿಯಿಲ್ಲ ದವನು, ದೇಶದ್ರೋಹಿ ಎಂದರು (ಮುಡಸ. ೪೬) ; ಇತ್ತಲಾ ಬಾದಷಹನು ಕಿಡಿಕಿಡಿಯಾಗಿ, ರಾಜದ್ರೋಹಿಯೂ ದೇಶದ್ರೋಹಿಯೂ ಆದ . . . ಅವನನ್ನು ಶೂಲಕ್ಕೇರಿಸುವೆನೆಂದು ಕೆರಳಿದ್ದ (ಕಲಾಧ. ೮೪). [ಸಂ. ದೇಶದ್ರೋಹಿನ್]

**ದೇಶಧರ್ಮ** (ನಾ). ಒಂದು ದೇಶದಲ್ಲಿ ಹಿಂದಿನಿಂದಲೂ ನಡೆದು ಕೊಂಡು ಬಂದಿರುವ ನಡೆನುಡಿ ಮತ್ತು ಆಚಾರ ವ್ಯವಹಾರ ; ಒಂದು ದೇಶದಲ್ಲಿ ಪರಂಪರಾಗತವಾಗಿ ಬಂದಿರುವ ನಡವಳಿಕೆ : ಕಾಲಧರ್ಮ, ದೇಶಧರ್ಮ ಇತ್ಯಾದಿಗಳಲ್ಲಿ ಕಾಲ ದೇಶಗಳಿಗುಚಿತವಾದ ನಡೆನುಡಿ ಗಳೆಂದರ್ಥವು (ಆರ್ಯಧ. ೧೧). [ದೇಶ + ಧರ್ಮ]

**ದೇಶನ** (ನಾ). ಉಪದೇಶ ; ಬೋಧನೆ : ಗುರು, ಈ ದೇಶನವನ್ನು ಮುಗಿಸಿ . . . ಜಾತಕವನ್ನು ಗುರುತಿಸಿದನು (ಬುದ್ಧಪ. ೦೬). [ಸಂ.]

**ದೇಶನಾಡು** (ನಾ). = ದೇಶ ೨.

ದೇಶನಾಡಿನವರು = ದೇಶದ ಮುಖಂಡರು; ಗ್ರಾಮಾದಿಗಳಲ್ಲಿ ನಡೆ ಯುವ ವ್ಯಾಜ್ಯ, ವ್ಯವಹಾರಗಳನ್ನು ವಿಚಾರಿಸಿ ನ್ಯಾಯನಿರ್ಣಯ ಮಾಡುವ, ಬೇರೆ ಬೇರೆ ಕಡೆಯಿಂದ ಬಂದು ಸೇರುವ ಪಂಚಾಯಿತಿ ಯವರು : ಮಲ್ಲಿಗೆಹೂವನ್ನು ಹಜಾಮರು ಮುಡಿಯಕೂಡದುಯೆನ್ನು ಈ ಮಡಿವಾಳ ಸೆಟಿಗಳೂ ದೇಶನಾಡಿನವರ ಕೂಡ ಹೇಳುವಲಿ (ಎಕ. IX, ಕಾನಕಾ. ೯೦-೦೬ ; 1700). [ದೇಶ + ನಾಡು]

**ದೇಶನಾಲಬ್ಧಿ** (ನಾ). [ಜೈನ] ಕ್ಷಯೋಪಶಮ, ವಿಶೋಧಿ, ದೇಶನಾ, ಪ್ರಾಯೋಗ್ಯ, ಕರಣ ಎಂಬ ಪಂಚಲಬ್ಧಿಗಳಲ್ಲಿ ನಾಲ್ಕನೆಯದು : P ಆರು ದ್ರವ್ಯಗಳು, ನವಪದಾರ್ಥಗಳು ಇವುಗಳ ಬಗ್ಗೆ ಉಪದೇಶಿಸುವಂಥ ಆಚಾರ್ಯರು ದೊರಕಿ, ಅವರ ಉಪದೇಶವನ್ನು ಕೇಳಲು ಸಿಗುವುದು ಮತ್ತು ಅವರು ಉಪದೇಶಿಸಿದ ಧರ್ಮತತ್ತ್ವವನ್ನು ತಿಳಿದುಕೊಂಡು, ಧರಿಸುವ ಶಕ್ತಿ ಇರುವುದು : ಷಡ್ದ್ರವ್ಯ ಪಂಚಾಸ್ತಿಕಾಯ ಸಪ್ತತತ್ತ್ವ ನವಪದಾರ್ಥೋಪದೇಶಕ ಜೈನಾಚಾರ್ಯ ಪ್ರಭೃತಿ ಲಾಭಮುಂ ದೇಶಿತ ಪದಾರ್ಥಾವಧಾರಣ ಲಾಭಮುಂ ಮೇಣ್ ದೇಶನಾಲಬ್ಧಿಯಕ್ಕುಂ (ತತ್ತ್ವಪ್ರ. ೮೦). 'ಪಂಚಲಬ್ಧಿ' ಪರಾ. [ಸಂ.]

**ದೇಶನಿವೇಶೋಪದೇಶ** (ನಾ). [ಜೈನ] ಜೈನ ಪುರಾಣದಲ್ಲಿರಬೇಕಾದ ಎಂಟು ಅಂಗಗಳಲ್ಲಿ ಒಂದು; ದೇಶದ ವಿನ್ಯಾಸ, ವಿಸ್ತೀರ್ಣ, ರೀತಿ, ರಚನೆ ಮೊದಲಾದುವುಗಳನ್ನು ತಿಳಿಸುವುದು: ಆ ಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸಂಪತ್ಸರಿವರ್ಣನಮುಂ ರಾಜ್ಯರಾಮಣೀಯಕಾಖ್ಯಾನಮುಂ ತೀರ್ಥಮಹಿಮಾಸಮರ್ಥನಮುಂ ಚತುರ್ಗತಿಸ್ವರೂಪನಿರೂಪಣಮುಂ ತಪೋದಾನವ್ಯಾವರ್ಣನಮುಂ ತತ್ಫಲ ಪ್ರಾಪ್ತಿಪ್ರಕಟಮುಮೆಂದಿಂತಪಯಂಗಳಿಂಟಕ್ಕುಂ (ಆದಿಪು. ೧-೪೨ ವ). 'ಪುರಾಣ' ಪರಾ. P 'ಆದಿಪು' ಮತ್ತು 'ಚಾವುಂಪು' ಗಳಲ್ಲಿ, ಪುರಾಣದಲ್ಲಿರಬೇಕಾದ ಅಂಗಗಳು ಎಂಟು ಎಂದು ಹೇಳಿದೆ. ಆದರೆ 'ಅನಂಪು. ೧-೬೬'ರಲ್ಲಿ, ಮುನಿಮಾರ್ಗೋಕ್ತವಾದ ಅಂಗಗಳು ಐದು, ಮತ್ತು ಕವಿಪ್ರೋಕ್ತವಾದ ಅಂಗಗಳು ಎಂಟು (೫+೩) ಎಂದು ಹೇಳಿದೆ. [ದೇಶ + ನಿವೇಶ + ಉಪದೇಶ]

**ದೇಶಪದ್ಧತಿ** (ನಾ). ದೇಶದ ಆಚಾರ,-ಸಂಪ್ರದಾಯ : ಅವನ ತಂದೆಯು ದೇಶಪದ್ಧತಿಯಂತೆ ಅವನನ್ನು . . . ಗೋಪಾಲಕರಲ್ಲಿಗೆ ಕಳುಹಿಸಿಕೊಟ್ಟನು (ಮಹಸ. ೭೪) ; ಅವರು ಯಾವ ಸಂದರ್ಭದಲ್ಲೂ ತಮ್ಮ ದೇಶಪದ್ಧತಿಯನ್ನು ಬಿಟ್ಟು ನಡೆಯುವುದಿಲ್ಲ (ರೂಢಿ).
[ದೇಶ + ಪದ್ಧತಿ]

**ದೇಶಪರತ್ವ** (ನಾ). ಬೇರೆ ಬೇರೆ ಪ್ರದೇಶಗಳಿಗೆ ಸಂಬಂಧಪಟ್ಟಿರುವಿಕೆ: ಮಾಂತಿಸದ ಗುಣಗಳು ದೇಶಪರತ್ವದಿಂದ ಬೇರೆಬೇರೆಯಾಗುತ್ತವೆ (ಮುಂಬಯಿ. ೫-೦೪). [ಸಂ.]

**ದೇಶಪರಿಚ್ಛೇದ** (ನಾ). "ಒಂದು ದೇಶದಲ್ಲುಂಟು ಮತ್ತೊಂದು ದೇಶದಲ್ಲಿಲ್ಲವೆಂದೆನಿಸಿಕೊಂಬುದೇ ದೇಶಪರಿಚ್ಛೇದವೆನಿಸುವುದು" (ವಿವೇಕ.೩೩) : ಕೆಲವೆಡೆಯಿದ್ದು ಕೆಲವೆಡೆಯಿಲ್ಲದಿರುವಿಕೆಯು ದೇಶಪರಿಚ್ಛೇದ (ಭಾರದ. ೨೪೩). [ದೇಶ + ಪರಿಚ್ಛೇದ]

**ದೇಶಪರ್ಯಟನ** (ನಾ). = ದೇಶಾಟನ: ದೇಶಪರ್ಯಟನವೆಂದರೆ ಅವರಿಗೆ ತುಂಬ ಖುಷಿ (ರೂಢಿ). [ದೇಶ + ಪರ್ಯಟನ]

**ದೇಶಪರ್ಯಟನೆ** (ನಾ). = ದೇಶಾಟನ : ದೇಶಪರ್ಯಟನೆಯಿಂದ ಜ್ಞಾನಾರ್ಜನೆಯಾಗುತ್ತದೆ (ರೂಢಿ). [ದೇಶ + ಪರ್ಯಟನೆ]

**ದೇಶಪಾಂಡೆ** (ನಾ). ೧. ಒಂದು ಜಿಲ್ಲೆಯ ಕಂದಾಯದ ಮುಖ್ಯಾಧಿಕಾರಿ ; ಮಹಾಲ್ಕರಿ : ದಿವಾನಸಹೇಬಾ ದೇಶಮುಕಿ ದೇಶಪಾಂಡೇರೂ . . . ಹನೆರಡು ಆಯಗಾರರು (ಎಕ. XII, ಶಿರಾ. ೮೭-೩ ; ?). ೨. ವತನದಾರನಾಗಿದ್ದುಕೊಂಡು ಗ್ರಾಮದ ಲೆಕ್ಕಪತ್ರಗಳನ್ನು ಬರೆಯುವವನು ; ಶಾನುಭೋಗ ; ಕರಣಿಕ ; ಕುಲಕರಣಿ ; ಶ್ಯಾನುಭೋಗ ಅಥವಾ ಮೆನನ್ ಎಂಬುದನ್ನು ಬೊಂಬಾಯಿಪ್ರಾಂತ್ಯದಲ್ಲಿ ದೇಶಾಯಿ, ದೇಶಪಾಂಡೆಯುಂತಲೂ ಗ್ರಾಮದ ಅಕೌಂಟೆಂಟಿನ ಹೆಸರುಂಟು (ಗ್ರಾಮಾಕ. ೧); ೬ದಕ್ಕೆ ಮುಖ್ಯಗಣಕನಾದವ ದೇಶಪಾಂಡೆ, ದೇಶಕುಲಕರಣಿ (ಪಾಳೆಗಾ. ೧೧). [←ಮರಾ. ದೇಶಪಾಂಡೇ]

**ದೇಶಪಾಂಡೆತನ** (ನಾ). ದೇಶಪಾಂಡೆಯ ಉದ್ಯೋಗ,- ಅಧಿಕಾರ : ವೆಂಕಟಾದ್ರಿಯಜಮಾನರಿಗೆ ಹುರಳಿಪಾಲಿದ ದೇಶಪಾಂಡೆತನವನ್ನು ಕೊಟ್ಟೆವಾಗಿ (ಮೈಆರಿ. ೧೯೩೮, ೬೪-೧೨ : 1533). [ದೇಶಪಾಂಡೆ + – ತನ]

**ದೇಶಪ್ರೇಮ** (ನಾ). ತನ್ನ ದೇಶದ ಮೇಲೆ ಇರುವ ಮಮತೆ,-ಅಭಿಮಾನ: ಸೋದರ ಸೋದರಿಯರೆ, ಮೇಲೇಳಿ . . . ದೇಶಪ್ರೇಮಾವೇಶವ ತಾಳಿ (ಕೋಗಿಲೆ. ೩೩-೭); ಅವನ ಅಚಲನಿರ್ಧಾರವನ್ನು, ಅನುಪಮದೇಶಪ್ರೇಮವನ್ನು ಕಂಡು ಅವನ ಬಗೆಗೆ ನನಗಿದ್ದ ಆದರವಿನ್ನೂ ಹೆಚ್ಚಿದೆ (ಆಗಸ್ಟ್. ೬೫). [ದೇಶ + ಪ್ರೇಮ]

**ದೇಶಬಂಧ** (ನಾ). [ಯೋಗ] ಯೋಗದ ಅಷ್ಟಾಂಗಗಳಲ್ಲಿ ಒಂದು; ಧಾರಣೆ; P ನಾಭಿ ಚಕ್ರ, ನಾಸಿಕಾಗ್ರ, ಜಿಹ್ವಾಗ್ರ ಇವೇ ಮೊದಲಾದ ಸ್ಥಾನಗಳಲ್ಲಿ ಮನಸ್ಸನ್ನು ಬೇರೆ ಕಡೆ ಚಲಿಸದಂತೆ ನಿಲ್ಲಿಸುವುದು: ಧಾರಣೆಯೆಂದರೆ ಶುಭವಾದ ಆಶ್ರಯವಾದ ನಾಭಿಚಕ್ರ, ಹೃದಯ, ಜಿಹ್ವಾಗ್ರ, ನಾಸಾಗ್ರ, ಶಿರಸ್ಸು ಮೊದಲಾದ ಶರೀರದವಯವದಲ್ಲಿ ಅಥವಾ ಹೊರಗಿನ ಶುಭವಾದ ಮಂಗಳಕರವಾದ ವಸ್ತುವಿನಲ್ಲಿ ಚಿತ್ತವನ್ನು ಸ್ಥಿರವಾಗಿ ನಿಲ್ಲಿಸುವ ಅಭ್ಯಾಸಮಾಡುವುದು. ಇದೇ ದೇಶಬಂಧವು (ಹಿಂದಸಾ. ೧೦೭). 'ಅಷ್ಟಾಂಗಯೋಗ' ಪರಾ. [ದೇಶ + ಬಂಧ]

**ದೇಶಬಾಂಧವ** (ನಾ). ಒಂದೇ ದೇಶದಲ್ಲಿ ಜನಿಸಿರುವುದರಿಂದ ಪರಸ್ಪರ ಸಂಬಂಧ ಹೊಂದಿದವನು: ದೇಶಬಾಂಧವರ ಬಗ್ಗೆ-ದೀನ ದಲಿತರ ಬಗ್ಗೆ ಎದೆಯಲ್ಲಿದ್ದ ತಳಮಳವನ್ನೆಲ್ಲ ಹೊರಚೆಲ್ಲುವಂತಿದ್ದ ದೃಷ್ಟಿ (ಆಗಸ್ಟ್. ೫).
[ದೇಶ + ಬಾಂಧವ]

**ದೇಶಭಕ್ತ** (ನಾ). ತನ್ನ ದೇಶದ ಬಗ್ಗೆ ಭಕ್ತಿಯನ್ನು ಹೊಂದಿರುವವನು,- ಗೌರವವನ್ನು ಹೊಂದಿರುವವನು : ದೇಶಭಕ್ತರ ಉಪದೇಶಗಳನ್ನು ಕೇಳಿ ರೌದ್ರಾವೇಶವನ್ನು ತಾಳತೊಡಗಿದ (ಮರಮ. ೪೭೪) ; ಸ್ವಾತಂತ್ರ್ಯದ ಹೋರಾಟದಲ್ಲಿ ಅನೇಕ ಜನ ದೇಶಭಕ್ತರು ಅಸು ನೀಗಿದರು (ರೂಢಿ).
[ದೇಶ + ಭಕ್ತ]

**ದೇಶಭಕ್ತಿ** (ನಾ). = ದೇಶಪ್ರೇಮ : ಇವನೂ ದೇಶಭಕ್ತಿಯ ಕಾವಿನಿಂದ ಅಲ್ಲಿಗೆ ಹೋಗತೊಡಗಿದ (ಮರಮ. ೪೭೪) ; ದೇಶಭಕ್ತಿಯನ್ನು ಹೊಂದಿದ್ದ ಅನೇಕ ಮಹನೀಯರು ನಮ್ಮ ನಾಡಿಗಾಗಿ ದುಡಿದರು (ರೂಢಿ).
[ದೇಶ + ಭಕ್ತಿ]

**ದೇಶಭಾಷೆ** (ನಾ). ಒಂದು ಪ್ರದೇಶದಲ್ಲಿ ಹಿಂದಿನ ಕಾಲದಿಂದಲೂ ಬಳಕೆಯಲ್ಲಿರುವ ಮಾತು; ನಾಡುನುಡಿ : ಈ ಕೆಲವು ವಿಷಯಗಳು ವಿಶೇಷವಾದ ಪ್ರಾಮುಖ್ಯತೆಯನ್ನು ಹೊಂದಿ, ಗಮನಾರ್ಹವಾಗಿ ನೊಳಂಬರ ಮೂಲವನ್ನು ಮತ್ತು ದೇಶಭಾಷೆಯನ್ನು ನಿರ್ಧರಿಸಲು ಸಹಾಯಕವಾಗುತ್ತದೆ (ನೊಳಂಬ. ೭೯); ಶ್ರೀಬಂಕಿಂಬಾಬು ಅವರ ಅನೇಕ ಗ್ರಂಥಗಳು ... ಯೂರೋಪ್ ಖಂಡದ ದೇಶಭಾಷೆಗಳಿಗೂ ಭಾಷಾಂತರ ಮಾಡಲ್ಪಟ್ಟವೆ (ಕಪಾಕುಂ. ವಿಜ್ಞಾಪನಾ). [ದೇಶ + ಭಾಷೆ]

**ದೇಶಭ್ರಷ್ಟ** (ನಾ). ತನ್ನ ಮಾತೃಭೂಮಿಯಿಂದ ಹೊರದೂಡಲ್ಪಟ್ಟವನು ; ತನ್ನ ದೇಶದಲ್ಲಿ ಕಾರಣಾಂತರದಿಂದ ನೆಲೆಯಿಲ್ಲದವನಾಗಿ ಪರದೇಶಕ್ಕೆ ಹೋಗಿರುವವನು; ಗಡೀಪಾರಾದವನು : ತಪ್ಪು ಮಾಡಿ, ಊರಲ್ಲಿದ್ದರೆ ಸಿಕ್ಕಿಬೀಳುತ್ತೇನೆ ಎಂದು ಹೆದರಿ, ದೇಶಭ್ರಷ್ಟನಾಗಿದ್ದಾನೆ (ಕರುಕ. ೧೭೨); ನೀನು ತಪ್ಪುಕಾಣಿಕೆಯನ್ನು ಕೊಡುವುದಕ್ಕಾಗಲಿ ಅಥವಾ ದೇಶಭ್ರಷ್ಟನಾಗುವುದಕ್ಕಾಗಲಿ ಒಪ್ಪದಿದ್ದ ಮೇಲೆ . . . ಬೇರೆ ಮಾರ್ಗವೇ ಇರಲಿಲ್ಲ (ಸೋಕ್ರಮ. ೪೩). [ದೇಶ + ಭ್ರಷ್ಟ]

**ದೇಶಭ್ರಷ್ಟತ್ವ** (ನಾ). ದೇಶಭ್ರಷ್ಟನಾಗುವಿಕೆ ; ಗಡೀಪಾರಾಗುವಿಕೆ.
[ಸಂ.]

**ದೇಶಮುಕಿ** 'ದೇಶಮುಖಿ' ನೋ.

**ದೇಶಮುಖ, ದೇಶಮುಕಿ** (ನಾ). (ಹಿಂದೆ ಮರಾಟರ ಕಾಲದಲ್ಲಿ) ಪರಗಣವೆಂದು ಕರೆಯಲಾಗುತ್ತಿದ್ದ ದೇಶವಿಭಾಗದ ಅಧಿಕಾರಿ; ಪ್ರಾಂತಾಧಿಕಾರಿ: ಮೇಲಾಗಿ ಕೇಶವರಾಯರೂ ಎಲ್ಲ ವಿಷಯಗಳಲ್ಲಿ 'ದೇಶಮುಖ'ರಂತೆ ನಡೆದರು (ಸಮಜೀ. ೬೨೫); ರಾಜಾನುಗ್ರಹ ಪಡೆದು ದೊಡ್ಡ ದೇಶಮುಖನೆಂದೆನಿಸಿಕೊಂಬ ಆಶೆಯೂ ಬಹಳ (ಕಥವಿ. II, ೨೫೭); ಒಂದು ಪ್ರಾಂತದ ಆಡಳಿತವೆಲ್ಲವೂ ದೇಶಾಧಿಕಾರಿಯಾದ ದೇಶಮುಖ . . . ದೇಶಪಾಂಡೆ, ದೇಸಾಯಿ . . . ಎಂಬೀ ಅಧಿಕಾರಿಗಳ ಅಧೀನವಾಗಿದ್ದವು (ಛತ್ರಶಿ. ೧೫೭). **ದೇಶಮುಕಿ**: ಮಲಸಿ × ಗೌಡಗೆ ದಿವಾನ ಸಹೇಬಾ ದೇಶಮುಕಿ ದೇಶಪಾಂಡೇರೂ ಕನಗೊಡ × ಗೌಡ ಶಾನಬೋಗರು (ಎಕ. XII, ಶಿರಾ. ೮೭-೩ ; ?). [← ಮರಾ. ದೇಶಮೂಖ್./ಸಂ. ದೇಶಮುಖ]

**ದೇಶರೂಪ** (ನಾ). ಸನ್ನಿವೇಶಕ್ಕೆ ಅನುಸಾರವಾಗಿರುವುದು; ಔಚಿತ್ಯ: ಹೊಂದಾಣಿಕೆ: "ಅಭ್ರೇಷಃ, ನ್ಯಾಯಃ, ಕಲ್ಪಃ, ದೇಶರೂಪಂ, ಸಮಂಜಸಂ – ಇ ತನಗೆ ಉಚಿತವಾದ ಧರ್ಮಗಳನ್ನು ತಪ್ಪದೇ ತಕ್ಕ ಹಾಗೆ ನಡೆದುಕೊಳ್ಳುವಿಕೆ" (ಸಿದ್ಧಾಂತಿ. ೨೦೮). [ದೇಶ + ರೂಪ]

**ದೇಶವಾಚಕ** (ನಾ). ದೇಶವನ್ನು ತಿಳಿಸುವ ಶಬ್ದ; ಪ್ರದೇಶವನ್ನು ತಿಳಿಸುವ ಶಬ್ದ: ಆ ಪದಗಳು ಭಾಷಾವಾಚಕ ಪದಗಳಾಗಿರದೆ ದೇಶವಾಚಕಗಳಾಗಿರಬಹುದು (ದ್ರಾವಿವಿ. ೯೦). [ದೇಶ + ವಾಚಕ]

**ದೇಶವಿರತ** (ನಾ). [ಜೈನ] ದೇಶವಿರತಿವ್ರತವನ್ನು ಹೊಂದಿದವನು: ಪರಮಾಗಮದೊಳ್ ಸಾಗಾರರ ನೆಲೆ ಪನ್ನೊಂದು ಪನ್ನೆರಟ್ಟಪದನಗಾರರ ನೆಗಟ್ದ ಗುಣಸ್ಥಾನಂ ಪರಿಕಿಪೊಡೇಟಲ್ತೆ ದೇಶವಿರತನನವಟ್ಕೊಳ್ (ಅನಂಪು. ೩-೫೭); ದೇಶವಿರತ_ಯಾವ ಜೀವವು ಜಿನೇಂದ್ರದೇವನಲ್ಲಿ ಅದ್ವಿತೀಯಶ್ರದ್ಧೆಯನ್ನಿಟ್ಟು ತ್ರಸಹಿಂಸೆಯಿಂದ ವಿರತ ಮತ್ತು ಅದೇ ಸಮಯದಲ್ಲಿ ಸ್ಥಾವರಹಿಂಸೆಯಿಂದ ಅವಿರತವಾಗುವುದೋ ಆ ಜೀವಕ್ಕೆ ವಿರತಾವಿರತವೆಂದು ಹೇಳುವರು (ಶ್ರಾವಕಾ. ಪರಿ. II, ೬೧೭). [ದೇಶ + ವಿರತ]

**ದೇಶವಿರತಿ** (ನಾ). [ಜೈನ] ಶ್ರಾವಕರು ಧರಿಸಿರುವ ದಿಗ್ವಿರತಿ, ದೇಶವಿರತಿ ಮತ್ತು ಅನರ್ಥದಂಡವಿರತಿ ಎಂಬ ಮೂರು ಬಗೆಯ ಗುಣವ್ರತಗಳಲ್ಲಿ ಒಂದು; ೪ ಆಜೀವ ಪರ್ಯಂತವೂ ನಿಗದಿಯಾದ ದಿನ, ತಿಂಗಳು, ವರ್ಷ ಮುಂತಾದ ಕಾಲಪ್ರಮಾಣಗಳಲ್ಲಿ, ನಿರ್ದಿಷ್ಟವಾದ ಅಡವಿ, ನದಿ, ತಟಾಕ ಮೊದಲಾದ ಪ್ರದೇಶಗಳಿಂದ ಹೊರಗೆ ಸಂಚರಿಸುವುದಿಲ್ಲವೆಂಬ ವ್ರತ: ಇನ್ನೆರಡನೆಯ ದೇಶವಿರತಿಯೆಂತೆನೆ ಯಾವಜ್ಜೀವಂ ತೊಱೆದುದಱೊಳಗೆಯುಂ ಘಟಿಕೆ ಮುಹೂರ್ತ ದಿನರಾತ್ರಿ ಪಕ್ಷಮಾಸ ಋತುಚತುರ್ಮಾಸ ಅಯನಸಂವತ್ಸರಾದಿಕಾಲ ಪ್ರಮಾಣದಿಂ ಕೆಮ್ಮನೆ ಮೂಱಡವಿ ನದೀತಟಾಕ ಇವೇ ಮೊದಲಾದ ಪ್ರದೇಶಾದಿಗಳಿಂದ ತ್ರೈಲ್ಪೋಗೆನೆಂದು ಪ್ರಮಾಣಿಸುವುದೆರಡನೆಯ ಗುಣವ್ರತಮಕ್ಕುಂ (ಪಸಾರ. ೩೦೧). [ದೇಶ + ವಿರತಿ]

**ದೇಶವ್ಯಾಪ್ತಿ** (ನಾ). ಆಕಾಶ ಮೊದಲಾದ ಸ್ಥಳಗಳಲ್ಲಿ ಹರಡಿಕೊಳ್ಳುವಿಕೆ: ದೇಶವ್ಯಾಪ್ತಿಯಿಂದ ಅಣು ಮಹತ್ ಮಹತ್ತರ ಮೊದಲಾದ ವ್ಯವಹಾರಗಳು ಕೂಡುವುವು. ದೇಶವ್ಯಾಪ್ತಿಯೆಂದರೆ ಪರಮಾಣು ಎಷ್ಟು ಆಕಾಶಪ್ರದೇಶವನ್ನು ಆವರಿಸುತ್ತದೆಯೋ ದ್ವ್ಯಣುಕವು ಅದಕ್ಕಿಂತಲೂ ಅಧಿಕಪ್ರದೇಶವನ್ನು ಆವರಿಸುತ್ತದೆ (ಹಿಂದುಸಾ. ೮೧). [ದೇಶ + ವ್ಯಾಪ್ತಿ]

**ದೇಶವ್ರತ** (ನಾ). = ದೇಶವಿರತಿ: ದೇಶವ್ರತ–ದಿಗ್ವ್ರತದಲ್ಲಿ ಗೊತ್ತುಮಾಡಿದ ಮೇರೆಗಳಲ್ಲಿಯೂ ಈಚೆಗೆ ಸಮೀಪದ ನದೀಪರ್ವತಗಳ ಆಚೆಗೆ ಆಮರಣವೂ ಹೋಗುವುದಿಲ್ಲವೆಂದು ನಿಶ್ಚಯಿಸುವುದು ದೇಶವ್ರತವು (ಜೈನಧ. ೬೯). 'ಗುಣವ್ರತ', 'ಶೀಲವ್ರತ' ಪರಾ. [ದೇಶ + ವ್ರತ]

**ದೇಶವ್ರತಿ** (ನಾ). = ದೇಶವಿರತ: ದೇಶವ್ರತಿಗಳಂ ಪೇಟ್ವೆನೆಂತೆನೆ ದರ್ಶನಿಕನುಂ ವ್ರತಿಕನುಂ . . . ಉದ್ದಿಷ್ಟವಿರತನುಮೆಂದು ದೇಶವ್ರತಿಗುಣಸ್ಥಾನದ ವರ್ಪನ್ನೊಂದು ವಿಕಲ್ಪಮಪ್ಪ ವರ್ತಂತಮ್ಮಗುಣಂಗಳತ್ತಣಿಂ ಪೂರ್ವಗುಣಂಗಳ್ವೆರಸು ಕ್ರಮದಿಂ ಪೆರ್ಚಿದರ್ (ಪಸಾರ. ೨೯೧). [ದೇಶ + ವ್ರತಿ]

**ದೇಶವ್ರಾತ** (ನಾ). ದೇಶಗಳ ಸಮೂಹ: ಧರ್ಮಜನಿದ್ದ ದೇಶವ್ರಾತದೊಳು ಬಱನಿಲ್ಲ ಸವೆಯವು ಬೆಳೆದ ಬೆಳಸುಗಳು (ಕುವ್ಯಾವಿ. ೪-೧೨). [ದೇಶ + ವ್ರಾತ]

**ದೇಶಶಾಖೆ** (ನಾ). ಒಂದು ದೇಶದ ಬೇರೆ ಬೇರೆ ವಿಭಾಗ; ಜಿಲ್ಲೆ. 'ದೇಸಾಕೆ' ಪರಾ. [ದೇಶ + ಶಾಖೆ]

**ದೇಶಸಂಚಾರ** (ನಾ). ದೇಶದಲ್ಲೆಲ್ಲ ತಿರುಗುವಿಕೆ; ನಾಡಿನಲ್ಲೆಲ್ಲ ಸಂಚರಿಸುವಿಕೆ; ದೇಶಪರ್ಯಟನೆ: ಆ ಸ್ವಾಮಿಗಳು ದೇಶಸಂಚಾರ ಮಾಡುತಿದ್ದು ಜನರಿಗೆ ತತ್ತ್ವಬೋಧೆ ಮಾಡುತ್ತಿದ್ದರು (ರೂಢಿ). [ದೇಶ + ಸಂಚಾರ]

**ದೇಶಸಂಯುತ** (ನಾ). [ಜೈನ] ಐದು ಅಣುವ್ರತ, ಮೂರು ಗುಣವ್ರತ ಮತ್ತು ನಾಲ್ಕು ಶಿಕ್ಷಾವ್ರತ__ಈ ಹನ್ನೆರಡು ವ್ರತಗಳನ್ನು ಪಾಲಿಸುವ ಶ್ರಾವಕ: ಏಕದೇಶನಿರ್ವೃತಿ ಲಕ್ಷಣಾಣುವ್ರತ ಗುಣಶಿಕ್ಷಾವ್ರತಸ್ವರೂಪ ಮೋಕ್ಷಾದಶನಿಲಯಮುಮಪ್ಪ ದೇಶಚಾರಿತ್ರದೊಳು ವರ್ತಿಸುವ ಶ್ರಾವಕನೈದನೆಯ ಗುಣಸ್ಥಾನವರ್ತಿ ದೇಶಸಂಯತನಕ್ಕುಂ (ಶ್ರಾವಕಾ. ೬೮-೩). [ದೇಶ + ಸಂಯತ]

**ದೇಶಸಂಯಮ** (ನಾ). [ಜೈನ] ಅಸಂಯಮ, ದೇಶಸಂಯಮ, ಸಾಮಾಯಿಕ, ಛೇದೋಪಸ್ಥಾಪನ, ಪರಿಹಾರವಿಶುದ್ಧಿ, ಸೂಕ್ಷ್ಮಸಾಂಪರಾಯ, ಯಥಾಖ್ಯಾತಶುದ್ಧಿಸಂಯಮ ಎಂಬ ಏಳು ಬಗೆಯ ಸಂಯಮಗಳಲ್ಲಿ ಒಂದು; ಹನ್ನೆರಡು ಬಗೆಯ ವ್ರತಗಳನ್ನು ಪಾಲಿಸುವ ಶ್ರಾವಕನ ಚಾರಿತ್ರ: ಸಾಮಾಯಿಕಚ್ಛೇದೋಪಸ್ಥಾಪನಾಪರಿಹಾರ ವಿಶುದ್ಧಿಸೂಕ್ಷ್ಮಸಾಂಪರಾಯಯಥಾಖ್ಯಾತಚಾರಿತ್ರದೇಶಸಂಯಮ ಅಸಂಯಮವಿಕಲ್ಪದಿಂ ಸಂಯಮಂ ಸಪ್ತವಿಧಂ (ತತ್ತ್ವಸ್ರ. ೧೭); ಸಮ್ಯಕ್ ಮಿಥ್ಯಾತ್ವ ಗುಣಸ್ಥಾನದಲ್ಲಿರುವ ಜೀವವು ಸಕಲಸಂಯಮ ಇಲ್ಲವೆ ದೇಶಸಂಯಮವನ್ನು ಗ್ರಹಣಮಾಡುವುದಿಲ್ಲ (ಶ್ರಾವಕಾ. ಪರಿ. II, ೬೧೭). [ದೇಶ + ಸಂಯಮ]

**ದೇಶಸಾತ್ಮ್ಯ** (ನಾ). [ವೈದ್ಯಶಾ] ಮೂರು ಬಗೆಯ ಸಾತ್ಮ್ಯಗಳಲ್ಲಿ ಒಂದು; ವಾಸಮಾಡುವ ಪ್ರದೇಶಕ್ಕೆ ಹೊಂದಿಕೊಳ್ಳುವುದು, – ಒಗ್ಗಿಕೊಳ್ಳುವುದು: ವಿರುದ್ಧಪಾನಾಹಾರಗಳು ವಿರುದ್ಧಪ್ರಕೃತಿಯುಳ್ಳವನಾಗಿದ್ದರೂ ದೇಹಕ್ಕೆ ಒಡಂಬಟ್ಟು ಬಂದರೆ ಅದೇ ಸಾತ್ಮ್ಯವೆನಿಸಿಕೊಂಬುದು. ಆ ಸಾತ್ಮ್ಯವೆಂತೆಂದೊಡೆ . . . ದೇಶಸಾತ್ಮ್ಯ, ದೇಹಸಾತ್ಮ್ಯ, ವ್ಯಾಧಿಸಾತ್ಮ್ಯವೆಂದು ಆ ಸಾತ್ಮ್ಯ ಮೂಱು ತೆಱನಾಗಿಹುದು (ವೈದ್ಯಸಾ. I, ೧೨). 'ದೇಹಸಾತ್ಮ್ಯ' ಪರಾ. [ದೇಶ + ಸಾತ್ಮ್ಯ]

**ದೇಶಸೇವೆ** (ನಾ). ಹುಟ್ಟಿದ ದೇಶಕ್ಕಾಗಿ ಮಾಡುವ ಸೇವೆ,–ಕಾರ್ಯ; ನಾಡ ಸೇವೆ: ಅವರು . . . ಜೀವಿತದ ಕೊನೆಯ ನಿಮಿಷದವರೆಗೂ ದೇಶಸೇವೆ ಮಾಡಿದರು (ಕಪಪು. ೫-೬೫); ಗೃಹಸ್ಥರಿಗೆ ದೇಶಸೇವೆ ಮಾಡುವ ಅಧಿಕಾರವಿಲ್ಲವೇ? (ಭಾರತಿ. ೭೩). [ದೇಶ + ಸೇವೆ]

**ದೇಶಸ್ಥ** (ಗು). ೧. ದೇಶದಲ್ಲಿರುವ; ದೇಶದಲ್ಲಿ ವಾಸಿಸುವ. (ನಾ). ೨. ಒಂದು ದೇಶದಲ್ಲಿ ವಾಸಿಸುವ ವ್ಯಕ್ತಿ. ೩. ಬ್ರಾಹ್ಮಣರಲ್ಲಿ ಒಂದು ಪಂಗಡ; ಮಹಾರಾಷ್ಟ್ರದ ಕಡೆಯಿಂದ ಕರ್ನಾಟಕಕ್ಕೆ ವಲಸೆ ಬಂದು, ಸ್ಮಾರ್ತ ಮತ್ತು ಮಾಧ್ವ ಸಂಪ್ರದಾಯ, ಆಚಾರಗಳನ್ನು ಹೊಂದಿಸಿಕೊಂಡಿರುವ ಬ್ರಾಹ್ಮಣವರ್ಗ: ದೇಶಸ್ಥ ಬ್ರಾಹ್ಮಣರು: ಇವರನ್ನು ನಮ್ಮ ಜಿಲ್ಲೆಯಲ್ಲಿ 'ತೋಟಿಗ' ರೆಂದು ಕರೆಯುವುದೂ ಉಂಟು (ತುಳುನಾ. ೧೫೭). [ಸಂ.]

**ದೇಶಾಂತರ** (ನಾ). ಬೇರೆದೇಶ; ಪರದೇಶ; ವಿದೇಶ: ಧರಣಿ ನುಂಗುವ ಳಿಬ್ಬರನು ಸಂಗರವ ಜಯಿಸದ ನೃಪನ ದೇಶಾಂತರವ ಚರಿಸದ ಪಂಡಿತನ (ಕುಮ್ಯಾಉ. ೩-೨೨); ಹರನುರಿಗಣ್ಣೊಳೆನ್ನಾಳ್ದ ದೇಹವ ಬಿಟ್ಟ ವಿರಹದೆ ದೇಶಾಂತರವ ಭರವಶದೊಳು ಸಿಕ್ಕಿದೆ ನಾನು ಮುಂದಕೆ ಸ್ಮರನೆ ಶರಣನೆಂದ ಳವಳು (ಮೋಹತ. ೧೦-೨೦); ನಾನು ಸರಕಾರದ ಕೆಲಸದ ನಿಮಿತ್ತವಾಗಿ ದೇಶಾಂತರದಲ್ಲಿರುವಾಗ ನಿಮ್ಮ ತಾಯಿಯೇ ನನ್ನ ಮಕ್ಕಳನ್ನು ಜೋಕೆ ಮಾಡಿದಳು (ಮುಂಬಯಿ. ४-೧೯೬); ಈಗ ತಂದೆಯ ತೊಡೆಯನ್ನು ಬಿಟ್ಟು . . . ದೇಶಾಂತರದಲ್ಲಿ ನಾನೆಂತು ಜೀವವನ್ನು ಧರಿಸುವೆನು (ಶಾಕುಂತ. ೫೬-೧೨); ದೇಶಾಂತರ ಹೋದರೆ ದೈವ ಬಿಟ್ಟೀತೆ? (ಗಾದೆ).
[ ಸಂ. ]

**ದೇಶಾಂತರಂಗೆಯ್**(ಕ್ರಿ). ಪರದೆ ಶಕ್ಕೆ ಹೋಗು; ವಿದೇಶಕ್ಕೆ ಹೋಗು: ಅಬಲೆ ನೀನೆಂತು ದೇಶಾಂತರಂಗೆಯ್ವೆಯುಕಟಾ (ನವಮೋ. ೮-೬೯).
[ ದೇಶಾಂತರ + ಕೆಯ್$_1$ ]

**ದೇಶಾಂತರವಾಸ** (ನಾ). ಪರದೇಶದಲ್ಲಿ ವಾಸಮಾಡುವುದು; ಸ್ವದೇಶ ಭ್ರಷ್ಟನಾಗಿರುವುದು: ಈ ಯುರೋಪ್‌ಖಂಡದವರಲ್ಲಿ ಅನೇಕರು ದೇಶಾಂತರವಾಸ ಮಾಡಿಕೊಂಡು ಗಣಿಗಳಲ್ಲಿ ಕೆಲಸ ಮಾಡಬೇಕೆಂಬ ಶಿಕ್ಷೆಗೆ ಒಳಗಾದವರು (ಭೂಗೋಳ. ೧೦೮). [ ದೇಶಾಂತರ + ವಾಸ$_2$ ]

**ದೇಶಾಂತರವಾಸಿ** (ನಾ). ಪರದೇಶವಲ್ಲಿ ವಾಸಮಾಡುವವನು; ವಿದೇಶ ವಾಸಿ: ಯೌವನಪರಿಪೂರ್ಣದೊಳ್ ದೇಶಾಂತರವಾಸಿಗಳಪ್ಪರಸು ಗಳಾಕೆಯಂ ಬೇಡಿಯಟ್ಟೆ (ಚಾವುಂಪು. ೨೮೩). [ಸಂ. ದೇಶಾಂತರವಾಸಿನ್]

**ದೇಶಾಂತರಿ** (ನಾ). ೧. ಪರದೇಶದಿಂದ ಬಂದಿರುವವನು; ಬೇರೆ ದೇಶಕ್ಕೆ ಸೇರಿದವನು; ವಿದೇಶಿ: ಆ ಕಾಲದೊಳ್ ನೀಂ ದೇಶಾಂತರಿಯಾಗಿಯುಂ ನೀಂ ಬದ್ಧಮಿಥ್ಯಾದೃಷ್ಟಿಪ್ರೀತಿಂಕರನೆಂಬ ಪೆಸರನಾಂತು ಬಂದಾ ಪೂಜೆಯಂ ಕಂಡು . . . ಪೇರಡವಿಯೊಳು ಯಕ್ಷನಾಗಿ ಪುಟ್ಟೆ (ಪುಣ್ಯಾಸ್ರ ೧-೪೬ ಪ). ೨. ವಿರಕ್ತ; ಚರಜಂಗಮ; ಸ್ಥಳದಿಂದ ಸ್ಥಳಕ್ಕೆ ಚಲಿಸುವ ಜಂಗಮ: ದೇಶಾಂತರಿ ದೇಶಾಂತರಿ ಎಂದು ನುಡಿವ ಹುಸಿಭ್ರಷ್ಟರ ನೇನೆಂಬೆನಯ್ಯಾ (ವಚಸಂ. ೧೯೪-೪೪). [ ಸಂ. ದೇಶಾಂತರಿನ್ ]

**ದೇಶಾಂತರಿಗ** (ನಾ). = ದೇಶಾಂತರಿ ೧: ಆ ಗೃಹಸ್ಥನ ಪೆಂಡತಿ ಮುಖ ದೊಳ್ ಸೆಜ್ಜೆಂಗನಿಕ್ಕಿಕೊಂಡು ಮಗಂಗೆ ಮೊಲೆಯೂಡುವುದಂ ಕಂಡು ದೇಶಾಂತರಿಗರಿದೇನೆಂದು ಬೆಸಗೊಂಡೊಡೆ (ಪಂಚತಂ. ೨೨೯-೩).
[ ದೇಶಾಂತರ + -ಇಗ ]

**ದೇಶಾಕಿ** (ನಾ). [ಸಂಗೀತ] ಒಂದು ರಾಗದ ಹೆಸರು; ದೇಶಾಕ್ಷಿ: ದೇಶಾಕಿ [ಪಾಠಾಂ. ಖ] (ದೇಶಿ ?) ಯಲ್ಲದ ರಾಗ ಉಪ್ಪಿಲ್ಲದ ಊಟ ಸಪ್ಪೆ ಕಾಣಿರೋ ಅಯ್ಯಾ ಮಿಕ್ಕಿನ ರಾಗ ಶಿವನಲ್ಲದ ದೈವ ಫಲವಿಲ್ಲ ಕಾಣಿರೋ ಅಯ್ಯಾ ಮಿಕ್ಕಿನ ತುಂಬುರ ನಾರದರು ಶಿವನ ಕೇಳಿಸುವ ರಾಗ ಮಹಾಲಿಂಗ ಗಜೇಶ್ವರನ ನಚ್ಚಿನ ರಾಗ (ಸರ್ವವ. ೭೪-೪೧೦). [ <ಸಂ. ದೇಶಾಕ್ಷೀ ]

**ದೇಶಾಕೆ** 'ದೇಸಾಕೆ' ನೋ.

**ದೇಶಾಕ್ಷಿ** (ನಾ). [ಸಂಗೀತ] ಒಂದು ರಾಗದ ಹೆಸರು: ಪಾಡಿ ವಸಂತ ಸಂಕೀರ್ಣ ದೇಶಾಕ್ಷಿಯುಗೂಡಿದ ಸಾಳಂಗಗಳೆಂಬ ಗಾಡಿಕಾತಿಯರು ಗಾನವನಾಲಾಪವ ಮಾಡಿದರಂದಮರರು ಸೋಲೆ (ಸೊಬಸೋ. ೨೪-೩೫); ಬಳಿಕ ಸಮಸ್ತರಾಗಂಗಳೊಳಗೆ . . . ದೇಶಾಕ್ಷಿ . . . ಮಧ್ಯಮಾವತಿ ಯೆಂಬ ಮೂವತ್ತಾಱು ರಾಗಂಗಳೇ ಮುಖ್ಯಮಾಗಿ ಬಳಿಕೆಯಿಂದಧುನಾ ತನರಲ್ಲಿ ಪ್ರಸಿದ್ಧಿಗೊಂಡಿರ್ಪುವು (ವಿವೇಕ. ೨೩೪); ರಾಗ ದೇಶಾಕ್ಷಿ, ನಾದ ನಾಮಕ್ರಿಯೆ (ಪ್ರಸಕೀ. ೮). [ ಸಂ. ದೇಶಾಕ್ಷೀ ]

**ದೇಶಾಖ್ಯಾನ** (ನಾ). =ದೇಶನಿವೇಶೋಪದೇಶ: ದೇಶಾಖ್ಯಾನಮೆಂಬುದು ವಿಷಯವ್ಯಾವರ್ಣನಂ (ಚಾವುಂಪು. ೧೨). [ ದೇಶ + ಆಖ್ಯಾನ ]

**ದೇಶಾಚಾರ** (ನಾ). ಒಂದು ದೇಶದಲ್ಲಿ ಮೊದಲಿನಿಂದ ನಡೆದು ಬಂದಿ ರುವ ಪದ್ಧತಿ, - ಸಂಪ್ರದಾಯ: ಬ್ರಹ್ಮಚಾರಿ ಯತಿ ದೀಕ್ಷಿತರಿಗೆ ಸೂತಕಾದಿ ಹೊಲೆಗಳಿಲ್ಲವೆಂಬುದು ಮೊದಲಾದಾಚಾರ ಭೇದಮಿರ್ಪುದಱಿಂ ದೇಶಾಚಾರ . . . ಸಂಪ್ರದಾಯವೆಂಬುದು ಮೊದಲಾದವುಗಳಂ ತಿಳಿದು (ವಿವೇಕ. ೧೮೭); ಇಂತು ತಮ್ಮನ್ನರೆನ್ನನ್ನರಿಗೆ ಯಾವುದೇ ಭೂಷಣವ ತೊಡಿಸಿದರೆ ಅದು ನಮಗೆ ನೀಡಿದಂತೆಯೆ. ಇಂತು ನಮ್ಮ ದೇಶಾಚಾರ (ನವರಾ. V, ೨೬); ಇದರೊಳಗಿನ ಆತ್ಮವೀರದ ಕತೆ ದೇಶಾಚಾರ, ಕಾಲಾಚಾರಗಳನ್ನು ಮೀರಿ ಸಾರ್ವಕಾಲಿಕವಾದ ಸಾರ್ವದೇಶಿಕವಾದ ಗುಣವನ್ನು ಹೊಂದಿ ಗುರುತ್ವವನ್ನು ಪಡೆದಿದೆ (ವೀರಯೋ. VI ಮುನ್ನುಡಿ).
[ ದೇಶ + ಆಚಾರ ]

**ದೇಶಾಟಣ** (ನಾ). = ದೇಶಾಟನ: ದೇಶಾಟಣ ಮಾಡುವುದು ಸಮುದ್ರದ ಮೇಲೆ ನಾವೆಯಲ್ಲಿ ಸಂಚರಿಸುವುದು ಸಹಾ ದೇಹಕ್ಕೆ ಒಳ್ಳೆಯದು ಎಂದು ಅಭಿಪ್ರಾಯ ಪಡುತ್ತಾರೆ (ಪೀಟಮೂ. ೩೨). [ <ಸಂ. ದೇಶಾಟನ ]

**ದೇಶಾಟನ** (ನಾ). ದೇಶಸಂಚಾರ. 'ದೇಶಾಟನಂಗೆಯ್' ಪರಾ. [ ಸಂ. ]

**ದೇಶಾಟನಂಗೆಯ್** (ಕ್ರಿ). ದೇಶಸಂಚಾರ ಮಾಡು: ದೇಶಾಟನಂಗೆಯ್ವು ತಾನಂದದಿಂ ಮೂರುಸಾಸಿರಂ ವೀರಮಾಹೇಶ್ವರರ್ವೆರಸಿ ಶಿವಯೋಗಿವರನಿರೆ ಲೀಲೆಯಿಂ (ಕುಮಾಪು. ೩-೫೦). [ ದೇಶಾಟನ + ಕೆಯ್$_1$ ]

**ದೇಶಾಟನೆ** (ನಾ). = ದೇಶಾಟನ: ದೇಶಾಟನೆಯಿಂದ ಲೋಕವ್ಯವಹಾರ ಜ್ಞಾನ ವೃದ್ಧಿಯಾಗುತ್ತದೆ (ರೂಢಿ). [ ಸಂ. ದೇಶಾಟನ ]

**ದೇಶಾದಿ** (ನಾ). [ಸಂಗೀತ] ಒಂದು ಬಗೆಯ ತಾಳ: ಆದಿ, ದೇಶಾದಿ . . . ಝಂಪೆತಾಳಗಳಲ್ಲಿ ಬಹಳ ಹಾಡುಗಳನ್ನು ರಚಿಸಿದ್ದಾರೆ (ಸಂಗೀತ. ೨೯). [ ದೇಶ + ಆದಿ$_2$ ]

**ದೇಶಾಧಿನಾಥ** (ನಾ). ದೇಶಕ್ಕೆ ಒಡೆಯ; ರಾಜ: ಕೇಳಿರೈ ದೇಶಾಧಿ ನಾಥರು ವೀರ ಪರಿವಾರ ನಾಳೆ ಮೊದಲಾಗರ್ಜುನನ ನಾವ್ ಕಾಳೆಗಕೆ ಬರಲೀಯೆವು (ಕುಮ್ಯಾದ್ರೋ. ೩-೫). [ ದೇಶ + ಅಧಿನಾಥ ]

**ದೇಶಾಧಿಪ** (ನಾ). = ದೇಶಾಧೀಶ: ದೇಶಾಧಿಪ ಕೃಷ್ಣರಾಯಂಗೆ ಖಳರಿಂದ ಮೋಸವ ಬರಗುಡೆನೆಂದು ಶೇಷ ಮಂಡಳಿಸಿದಂದದಿ ವಜ್ರದಾಳ್ವೇರಿ ಲೇಸಾದುದು (ಮೋಹತ. ೩-೮); ದೇಶಾಧಿಪರ ಬೆಳ್ಗೊಡೆಗಳು ನಕ್ಷತ್ರ ರಾಶಿಯಂತೆಸೆಯೆ ಮಧ್ಯದಲಿ ಕೇಶವರಾಯನ ದೂಸ ರೋಹಿಣಿಯ ಪ್ರಾಣೇಶನೆಂಬಂತೆ ರಂಜಿಸಿತು (ಮೋಹತ. ೩೬-೬೮). [ ದೇಶ + ಅಧಿಪ ]

**ದೇಶಾಧಿಪತಿ** (ನಾ). = ದೇಶಾಧೀಶ: ದೇಶಾಧಿಪತಿ ಹರಿಶ್ಚಂದ್ರರಾಯನ ಸತ್ಯವಾಸವನ ಸಭೆಯೊಳಗೆ ನೆಗಳ್ದ ಪ್ರಸಂಗದಿಂ ಕೌಶಿಕ ವಸಿಷ್ಠಮುನಿಗಳಿಗೆ ಘನತರದ ಸಂವಾದವಂ ಮಾಡಿ ತಂದು (ಹಚಕಾ. ೧ ಸೂಚನೆ); ದೇಶಾಧಿ ಪತಿಯ ಗರ್ಭದಿ ಬಂದು ನಿನಗೀಗ ಹಾಸುವ ವಸ್ತ್ರಗಳಿಲ್ಲ (ಚಂದ್ರಹಾ. ೧-೨೪).
[ ದೇಶ + ಅಧಿಪತಿ ]

**ದೇಶಾಧೀಶ** (ನಾ). ದೇಶಕ್ಕೆ ಒಡೆಯ; ರಾಜ: ದೇಶಾಧೀಶ ತನೂಭವರ್ ಸೆಡೆವುದುಂ ಸಾಕೇತಸಿಂಹಾಸನಾಧೀಶಂ ಕಂಡು (ಪಂರಾಮಾ. ೫-೮೩).
[ ದೇಶ + ಅಧೀಶ ]

**ದೇಶಾಭಿ** (ನಾ). [ಸಂಗೀತ] ಒಂದು ರಾಗದ ಹೆಸರು: ಮಾಳವಿ ಮಲಹರಿ ದೇಶಾಭಿ ಗುರ್ಜರಿ ಚಾಳಿ ದೇಶಿ ಧನ್ಯಾಸಿ (ತರ್ಕಕಾ. ೭-೫೫).
[ ?./ಸಂ. ದೇಶಾಭೀರೀ ]

**ದೇಶಾಭಿಮಾನ** (ನಾ). ತನ್ನ ದೇಶದ ಮೇಲಿನ ಮಮತೆ; ಮಾತೃ ಭೂಮಿಯ ಮೇಲಿನ ಗೌರವ; ದೇಶಪ್ರೇಮ: ದೇಶಾಭಿಮಾನವೇ ಮತವಾಗಲೆಂದು ದೇಶಸೇವೆಯೆ ನಿರತವ್ರತವಾಗಲೆಂದು (ಕಎಪು. ೧೭-೧೦); ರಾಷ್ಟ್ರೀಯ ಸ್ವಾರ್ಥ ಮತ್ತು ಹೆಮ್ಮೆಗಳು 'ದೇಶಾಭಿಮಾನ'ವೆಂಬ ಸದ್ಗುಣವೆನಿಸಿಕೊಳ್ಳುವುವು (ಜಗಸಂ. ೩೮). [ ದೇಶ + ಅಭಿಮಾನ ]

**ದೇಶಾಭಿಮಾನಿ** (ನಾ). ದೇಶಾಭಿಮಾನವುಳ್ಳವನು; ದೇಶಭಕ್ತ : ದೇಶಾಭಿಮಾನಿಯಾದ ಮನುಷ್ಯನು ಇವುಗಳಲ್ಲಿ ಯಾವುದನ್ನೂ ಧಿಕ್ಕರಿಸುವ ಹಾಗಿಲ್ಲ (ಭಾಗ್ಯಶಿ. ೩೦) ; ಈಗ ನಮ್ಮ ರಾಷ್ಟ್ರಕ್ಕೆ ದೇಶಾಭಿಮಾನಿಗಳಾದ ನಾಯಕರ ಅವಶ್ಯಕತೆಯಿದೆ (ರೂಢಿ). [ ಸಂ. ದೇಶಾಭಿಮಾನಿನ್ ]

**ದೇಶಾಯಿ** 'ದೇಸಾಯಿ' ನೋ.

**ದೇಶಾಯಿಕೆ** (ನಾ). ೧. ದೇಸಾಯಿತನ ; ದೇಸಾಯಿಯ ಅಧಿಕಾರ. ೨. ದೇಸಾಯಿಯ ಅಧಿಕಾರಕ್ಕೆ ಒಳಪಟ್ಟ ಗ್ರಾಮಾದಿಗಳು : ನಮ್ಮ ದೇಶಾಯಿಕೆಯ × × × ಗೆ ಸಲುವ (ಬೊಂಕಶಾ. ೧೯೩೫, ರಾಣೆಬೆನ್ನೂರು. ೧೬-೪೦ ; 1597). [ ದೇಶಾಯಿ (<ದೇಸಾಯಿ) + – ಇಕೆ ]

**ದೇಶಾವಕಾಶಿಕವ್ರತ** (ನಾ). [ಜೈನ] ಶ್ರಾವಕರು ಆಚರಿಸುವ ಒಂದು ವ್ರತ; **P** ಆನಯನ (ಮರ್ಯಾದಿತ ಕ್ಷೇತ್ರದ ಹೊರಗೆ ಬೇಡುವುದು), ಪ್ರೇಷ್ಯಪ್ರಯೋಗ (ಮರ್ಯಾದಿತ ಕ್ಷೇತ್ರದ ಹೊರಗೆ ಕಳುಹಿಸುವುದು), ಶಬ್ದಾನುಪಾತ (ಮರ್ಯಾದಿತ ಕ್ಷೇತ್ರದ ಹೊರಗಿನವರೊಂದಿಗೆ ಮಾತನಾಡುವುದು), ರೂಪಾನುಪಾತ (ಮರ್ಯಾದಿತ ಕ್ಷೇತ್ರದ ಹೊರಗಿನವರಿಗೆ ಅಭಿಪ್ರಾಯಗಳನ್ನು ತಿಳಿಸುವುದು) ಮತ್ತು ಪುದ್ಗಲಕ್ಷೇಪ (ಮರ್ಯಾದಿತ ಕ್ಷೇತ್ರದ ಹೊರಗಿನವರಿಗೆ ಪತ್ರ ಮೊದಲಾದ ಪದಾರ್ಥಗಳ ಮೂಲಕ ತಿಳಿಸುವುದು)—ಈ ಐದು ಅತಿಚಾರಗಳನ್ನು ಬಿಡುವುದು : ಆವುದೊಂದು ವ್ರತದಲ್ಲಿ ದಿಗ್ವಿರತಿಯಿಂದವು ಹವಣಿಸಲ್ಪಟ್ಟ ದೇಶವಿಭಾಗದಲ್ಲಿ ಹವಣಿಸಲ್ಪಟ್ಟ ಕಾಲವನುಳ್ಳಯಿರವು ಅಹುದು . . . ಆ ವ್ರತವನ್ನು ದೇಶಾವಕಾಶಿಕವ್ರತವೆಂದು ಹೇಳುವರು (ಸಾಗಾಧ. ೫೫). [ ದೇಶಾವಕಾಶಿಕ$_2$ + ವ್ರತ ]

**ದೇಶಾವಧಿ** (ನಾ). [ಜೈನ] ದೇಶಾವಧಿ, ಪರಮಾವಧಿ ಮತ್ತು ಸರ್ವಾವಧಿ ಎಂಬ ಮೂರು ಬಗೆಯ ಅವಧಿಜ್ಞಾನಗಳಲ್ಲಿ ಒಂದು ; ಕ್ಷೇತ್ರ, ಕಾಲ, ಭಾವಗಳಿಗೆ ಸಂಬಂಧಿಸಿದಂತೆ ಸೀಮಿತವಾದ ಪದಾರ್ಥಗಳ ಜ್ಞಾನ ; **P** ಜೈನರ ಪ್ರಕಾರ ಇರುವ ಮತಿ, ಶ್ರುತ, ಅವಧಿ, ಮನಃಪರ್ಯಯ ಮತ್ತು ಕೇವಲ ಎಂಬ ಐದು ಬಗೆಯ ಜ್ಞಾನಗಳಲ್ಲಿ ಅವಧಿಜ್ಞಾನವು ಮೂರನೆಯದು : ದೇವೇಂದ್ರನು ಮಾಗಳ್ ದೇಶಾವಧಿಯಿಂ . . . ಅಱಿದಂ ವ್ಯತೀ[ತ]ಭವಸಂತತಿಯಾ (ಶಾಂತಿಪು. ೫-೭) ; ದೇಶಾವಧಿ ಪರಮಾವಧಿ ಸರ್ವಾವಧಿಗಳೆನಿಪ್ಪುವುಚಿತ ನಾಮಯುತಂಗಳ್ (ಚಂದ್ರಪು. ೧೪-೫೫) ; ಅವಧಿಜ್ಞಾನಂ ದೇಶಾವಧಿ ಪರಮಾವಧಿ ಸರ್ವಾವಧಿಯೆಂದು ತ್ರಿವಿಧಂ (ಪಸಾರ. ೫೭೯). [ದೇಶ+ಅವಧಿ]

**ದೇಶಾವಧಿಜ್ಞಾನಿ** (ನಾ). [ಜೈನ] ದೇಶಾವಧಿಜ್ಞಾನವನ್ನು ಪಡೆದಿರುವವನು : ಸ್ತುತಿಯಿಸಿ ದೇಶಾವಧಿಜ್ಞಾನಿಯಪ್ಪ ಸೂರ್ಯಮಿತ್ರಮುನಿನಾಥನತಿವಿಶುದ್ಧಪರಿಣಾಮದಿಂ ಸರ್ವಾವಧಿಜ್ಞಾನಲೋಚನನಾಗಿ ನಿರ್ವಾಣೋರ್ವರಾಂತರ್ಭಾಗದಿಂ ಪೊಱಮಟ್ಟು (ಸುಕುಮಾ. ೪-೫೪ ವ).
[ ಸಂ. ದೇಶಾವಧಿಜ್ಞಾನಿನ್ ]

**ದೇಶಾವರ, ದೇಶಾವರಿ, ದೇಶಾವಾರ** (ನಾ). ೧. ಮದುವೆ, ಮುಂಜಿ ಮುಂತಾದ ಶುಭಕಾರ್ಯಗಳಿಗೂ ದೇವರ ಉತ್ಸವ, ವ್ರತ ಮುಂತಾದ ಮಠೀಯ ಕಾರ್ಯಗಳಿಗೂ ಊರೂರು, ಮನೆಮನೆ ಅಲೆದು (ಬ್ರಾಹ್ಮಣರು) ಧನರೂಪವಾಗಿ ಮತ್ತು ವಸ್ತುರೂಪವಾಗಿ ಸಹಾಯ ಪಡೆಯುವುದು : ಏಕನಾದವನ್ನು ಹಿಡಿದು ಕನಕ ಪುರಂದರರ ಕೀರ್ತನೆಗಳನ್ನು ಹಾಡಿಕೊಂಡು ದೇಶಾವರಕ್ಕೆ ಹೋಗುತ್ತಿದ್ದ (ಮಧುನ. ೬೪) ; ಪೂರ್ಣಯ್ಯನವರು 'ಐದು ರೂಪಾಯಿ, ಮಂಡ್ಯದ ಧಾವಳಿ' ಯನ್ನು ದೇಶಾವರದ ದಾಸರಿಗೆ ಸಂಭಾವನೆ ಕೊಟ್ಟರೆ ಸಾಕೆಂದು ಯೋಚಿಸಿದ್ದರು ! (ಜಗದಾ. ೧೬೯) ; ಮನೆಮನೆಗೆ ಅಲೆದು ದೇಶಾವರ ನಡೆಸಿ, ಸಂಭಾವನೆ ಬೇಡಿ ... ಜೀವನಯಾಪನೆಮಾಡುತ್ತಿದ್ದನು (ಮಲಿಮ. ೩೧೯). ೨. ಮನೆಮನೆಗೆ ಹೋಗಿ ಪಡೆಯುವ ಧನಸಹಾಯ. 'ದೇಶಾವರ ಬೇಡು' ಪರಾ. ೩. ವಿದೇಶ ; ಪರದೇಶ : (ಕ). ೪. ಪರದೇಶದಿಂದ ಬಂದ ವಸ್ತು ; ಆಮದು ಮಾಡಿಕೊಂಡ ಸರಕು : (ಕ). **ದೇಶಾವರಿ :** ೧. ಅವರು ಸುತ್ತಲಿನ ಹಳ್ಳಿಗಳಲ್ಲಿ ತಿರುಗಾಡಿ ಕಾಳುಕಡಿಗಳ ದೇಶಾವರಿಯನ್ನು ಮಾಡಬೇಕಾಗಿ ಬರುತ್ತಿತ್ತು (ಹಬ್ಬಿಬ. ೯೭) ; ದೇಶಾವರಿಗೆ ಬಂದ ಬ್ರಾಹ್ಮಣರ ನಡೆನುಡಿಯನ್ನು ಸ್ವಲ್ಪ ಕಂಡುಹಿಡಿಯಿರಿ (ಮುಂಗಾಪು. ೦೧೭). **ದೇಶಾವಾರ :** ೧. ಒಂದು ಧಡೆಯ ಭಂಗಾರವನ್ನೂ ಮಾರಿ ಜೀವಿಸಿ ವಕೀಲನೊಬ್ಬನ ಬಳಿ ದೇಶಾವಾರಕ್ಕೆ ಹೋದರಂತೆ (ಕಭವಿ. II, ೪೧೯). ೫. ಒಂದು ಬಗೆಯ ಹಸನುಮಾಡಿದ ಅಡಕೆ ; **P** ಬಹುಶಃ ಪರದೇಶಕ್ಕೆ ಕಳುಹಿಸಲು ಸಿದ್ಧವಾಗುವ ಅಡಕೆ ಇರಬಹುದು : ಹಸಿಯ ಅಡಿಕೆಗಳಲ್ಲಿ ಮಧ್ಯ ಎಳಕು ಮತ್ತು ಬಹಳ ಎಳಕಾದ ಅಡಿಕೆಗಳನ್ನು ಸಣ್ಣಾಗಿ ಕೊರೆದು ಚೂರು ಮಾಡಿ ಕುದಿಸುತ್ತಾರೆ. ಅದರಲ್ಲಿ ಚತುರ್ಭಾಗ ಕೊರಪ, ಲವಂಗಚೂರು, ಮೋಡಿ, ಅಣ್ಣಾವಾರ, ದೇಶಾವಾರ ಎಂದು ಬೇರೆ ಬೇರೆ ರಾಶಿಗಳನ್ನು ಮಾಡುತ್ತಾರೆ (ಕೃಷಿಪ್ರ. ೧೫೩).

**ದೇಶಾವರದ ನಗು = ದೇಶಾವರಿನಗೆ :** ನಾನು ದೇಶಾವರದ ನಗು ಬೀರಿ "ಏನಿಲ್ಲ ಏನಿಲ್ಲ ಬಿಡಿರಿ" ಎಂದೆ (ನಾಪೋಲೀ. ೪೫). **ದೇಶಾವರದ ನಗೆ, ದೇಶಾವಾರದ ನಗೆ = ದೇಶಾವರಿನಗೆ :** ಮುಖದ ಮೇಲೆ ದೇಶಾವರದ ನಗೆಯನ್ನು ಮೂಡಿಸುತ್ತಾ ಎದ್ದು ನಿಂತೆ (ಮನೋನಂ. ೭೮) ; ಗುರುರಾಜರಾಯರು ಕೂಡ ದೇಶಾವರದ ನಗೆ ಬೀರುತ್ತ (ಮರಳಿ. ೩೫) ; ದೇಶಾವಾರದ ನಗೆ ಬೀರಿ ಅಲ್ಲಿಂದ ನುಸುಳುತ್ತಿದ್ದ (ಊರುಕ. ೩೦). **ದೇಶಾವಾರದ ಜೀರಿಗೆ = ಒಂದು ಬಗೆಯ ಜೀರಿಗೆ :** ಶ್ರೀತುಳಸಿ, ಹೊಮ್ಮುಗಳು . . . ಪುತ್ರಜೀವಿ, ದೇಶಾವಾರದ ಜೀರಿಗೆ ಇವಿಷ್ಟನ್ನೂ ಅರೆದು ಕೊಡಲು ದಾಹಜ್ವರ, ಮೈನೋವು, ತಲೆಭಾರವಾಗಿರುವುದು ಸಹ ನಿಲ್ಲುವುವು (ಸಕವೈ. ೭೮) ; ಶುಂಠಿ ಕರ್ಕಾಟಕಶೃಂಗಿ ಅಳಲೆಕಾಯಿ ಜೀರಿಗೆ ದೇಶಾವಾರದ ಜೀರಿಗೆ ಮುಡಿವಾಳಾ ಲವಂಗಾ ಇವು ಸಮಾನಂಗೊಂಡು ಸಣ್ಣನಾಗಿ ಚೂರ್ಣಿಸಿ (ದ್ರಾಕ್ಷಚೂ. ೬-೮).
[ ←ಮರಾ. ದೇಶಾವರ್ ]

**ದೇಶಾವರಬೇಡು, ದೇಶಾವರಿಬೇಡು** (ಕ್ರಿ). ಊರೂರು ಸುತ್ತಿ ಸಹಾಯವನ್ನು ಬೇಡು : ತೆಲುಗುಬ್ರಾಹ್ಮಣರು . . . ಮದ್ರಾಸ್ ಇಲಾಖೆಯಿಂದ ದೇಶಾವರಬೇಡುವುದಕ್ಕೆ ಇಲ್ಲಿಗೆ ಬರುವರು (ಕಥಾಗಿ. ೮೩). **ದೇಶಾವರಿಬೇಡು :** ಯಾಚಕನು ನನಗೂ ದೇಶಾವರಿಬೇಡುವನೆಂಬ ಭಯದಿಂದ ಬಿಟ್ಟನಂತೆ (ಸಾಳುಂಸಾ. ೫೦). [ ದೇಶಾವರ + ಬೇಡು$_1$ ]

**ದೇಶಾವರಿ** 'ದೇಶಾವರ' ನೋ.

**ದೇಶಾವರಿನಗು** (ಕ್ರಿ). (ಧನಸಹಾಯವನ್ನು ಬೇಡಲು ಹೋದಾಗ) ಕೃತ್ರಿಮವಾಗಿ ನಗೆಯನ್ನು ತೋರ್ಪಡಿಸು ; ನಗಲು ಕಾರಣವಿಲ್ಲದಿದ್ದರೂ ಸುಮ್ಮನೆ ಹಲ್ಲುಕಿರಿ ; ಕೃತ್ರಿಮಹಾಸವನ್ನು ತೋರ್ಪಡಿಸು : ಬಾಬೂ ಅಪರಾಧಿಯ ದೇಶಾವರಿನಕ್ಕನು (ರಕ್ತಧ್ವ. ೩೮೭). [ ದೇಶಾವರಿ (<ದೇಶಾವರ) + ನಗು$_1$ ]

**ದೇಶಾವರಿನಗೆ** (ನಾ). ಹುಸಿನಗೆ ; ಕೃತ್ರಿಮವಾದ ನಗು ; ಇಷ್ಟವಿಲ್ಲದಿದ್ದರೂ ತೋರಿಕೆಗಾಗಿ ನಗುವಿಕೆ : ದೇಶಾವರಿನಗೆ ಬೀರುತ್ತ ಪೋಲೀಸರು ಹೊರಡಲು ಅಣಿಯಾದರು (ಹಳ್ಳಿಹಾ. ೭); ನಾನು ದೇಶಾವರಿನಗೆ ಹೊರಡಿಸಿದೆ (ವೈದ್ಯವಿ. ೪೩) ; ದೇಶಾವರಿನಗೆ ನಕ್ಕು ಕಲ್ಲನ ಮುಖದ ಕಡೆ ನೋಡಹತ್ತಿದ ಪಂಡಿತ (ಅಶೋಕ. ೫); ಸುಬ್ಬಣ್ಣಾಚಾರ್ಯರು ದೇಶಾವರೀ ನಗೆಯನ್ನು ನಕ್ಕರು (ಸಮುಜೀ. ೪೪) ; ಸಾಹೇಬರು . . . ದೇಶಾವರೀನಗೆಯನ್ನು ನಕ್ಕು (ಲೀಪಹ. II, ೩೩೧).
[ ದೇಶಾವರಿ (<ದೇಶಾವರ) + ನಗೆ ]

**ದೇಶಾವರಿಬೇಡು** 'ದೇಶಾವರಬೇಡು' ನೋ.

**ದೇಶಾವರಿಭಾಷೆ** (ನಾ). ೧. ಧನಸಹಾಯ ಬೇಡುವಾಗ ಹೇಳುವ, ಕನಿಕರವುಂಟಾಗುವಂತೆ ಮಾಡುವ ಮಾತು; ದೈನ್ಯವನ್ನು ತೋರ್ಪಡಿಸುವ ಮಾತು. ೨. ಕಾರ್ಯಸಾಧನೆಗಾಗಿ ಆಡುವ ಅತಿವಿನಯದಿಂದ ಕೂಡಿರುವ ಮಾತು; ಕೃತ್ರಿಮವಿನಯದಿಂದ ಕೂಡಿರುವ ವ್ಯಂದನುಡಿ: ಈಗಾಗಲೇ ನಾವು ದೇಶಾವರೀಭಾಷೆಯಲ್ಲಿ ಪಾರಂಗತರಾಗಿದ್ದೆವು (ದೀಪಹ. II, ೧೦).
[ ದೇಶಾವರಿ (<ದೇಶಾವರ) + ಭಾಷೆ ]

**ದೇಶಾವಾರ** 'ದೇಶಾವರ' ನೋ.

**ದೇಶಿ$_1$** (ನಾ). ೧. ದೇಶಕ್ಕೆ ಸಂಬಂಧಪಟ್ಟುದು. ೨. ತಾಯಿನಾಡಿನಲ್ಲೇ ತಯಾರಾದುದು; ಸ್ವದೇಶದಲ್ಲಿಯೇ ಉತ್ಪಾದಿಸಲ್ಪಟ್ಟುದು; ಸ್ವದೇಶಿ: ಆ ಜಿನಸಗಳ ಖರೀದಿಯು ನಮ್ಮ ಆಸಾಮಿಗಳು ನಮಗೆ ಬರಿಯುತ್ತಾರೆ. ಆದರೆ ವಿಲಾಯತೀ ಬೇಕೋ ಅಥವಾ ದೇಶಿ ಬೇಕೋ ಇದರ ಬಗ್ಗೆ ಖುಲಾಸೆಯನ್ನು ಮಾಡುವದಿಲ್ಲ (ಮುಂಬವ್ಯಾ. ೧೦೧).
ದೇಶೀಮೆಟ್ಟು = ನಮ್ಮ ದೇಶದ ವಸ್ತುಗಳಿಂದ, ನಮ್ಮ ದೇಶದಲ್ಲೇ ತಯಾರು ಮಾಡಿದ ಎಕ್ಕಡ,–ಚಪ್ಪಲಿ,–ಪಾದರಕ್ಷೆ; ನಾಟಿಜೋಡು: ತಲೆಯ ಮೇಲೆ ಉರುಟಾಗಿ ಕಟ್ಟಿದ ಪಗಡಿ, ಕಾಲಲ್ಲಿ ದೇಶೀಮೆಟ್ಟುಗಳು (ಪ್ರಕಾಶ. ೮). [ <ಸಂ. ದೇಶೀಯ ]

**ದೇಶಿ$_2$** (ನಾ). ೧. ಆಯಾ ದೇಶದಲ್ಲಿ ಮಾತ್ರ ವ್ಯವಹಾರದಲ್ಲಿರುವ ಉಡುಪು, ಅಲಂಕಾರ, ಆಚಾರ ಮೊದಲಾದುವುಗಳ ವಿಶಿಷ್ಟ ರೀತಿ,–ಬಗೆ. 'ದೇಶಿಪರಿ' ಪರಾ. ೨. ಒಂದು ದೇಶದ ಅಥವಾ ದೇಶ ವಿಭಾಗದ ಆಡುನುಡಿ; ವ್ಯಾವಹಾರಿಕ ಭಾಷೆ; ಮಾರ್ಗವಲ್ಲದ ನಾಡನುಡಿ: ದೋಸಮಿನಿತೆಂದು ಬಗೆದುದ್ಭಾಸಿಸಿ ತಱಸಂದು ಕನ್ನಡಂಗಳೊಳೆಂದುಂ ವಾಸುಗಿಯುಮಱಿಯಲಾಱದೆ ಬೇಸಱುಗುಂ ದೇಶಿ ಬೇಱವೇಱಪ್ಪುದಱಿಂ (ಕವಿರಾ. ೧-೪೬): ನವರಸಮುಣ್ಮೆ ಮಾತು ಪೊಸತಾಗಿರೆ ದೇಶಿಯೆ ದೇಸೆವೆತ್ತುದೆಂಬವೊಲಿರೆ . . . ಒಡರ್ಚಿದನೀ ಪ್ರಬಂಧಮಂ (ಛಂದೋಂಬು. ೧-೧೧): ಕವಿಗಳ್ . . . ದೇಶಿಯೊಳುದ್ಭವಮಪ್ಪ ವರ್ಣದಿ ಪಂಚವಿಧಂ ತಾನೆಂದು ತಿಳಿಪುವರ್ ಶುದ್ಧಗೆಯಂ (ಶಮದ. ೩೧); ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ದೇಶಿಗಳನು ಬಳಸಿಕೊಂಡಂತೆ ಗೋಚರವಾಗುತ್ತದೆ (ಕನ್ನಜಾ. ೨೦೭). ೩. [ಸಂಗೀತ] ಒಂದು ರಾಗದ ಹೆಸರು: ದೇಶಿ ಗುಜ್ಜರಿಗಳಿಂದೀಶ ನಿಮ್ಮಂ ಹಾಡಿ ದೇಶಾಕ್ಷಿ ಗೌಳದೆ ಮಹೇಶ ನಿಮ್ಮಂ ಹಾಡಿ (ಲಿಂಗಾರ. ಹ. ೫೩೧-೫); ಸಾಳಂಗ ನಾಟಿ ಭೈರವಿ ದೇಶಿ ಗುಜ್ಜರಿ ಮಾಳವಿಯಾಹೇರಿ ಕಾಂಬೋಧಿ ಗೌಳ ವರಾಳಿ ವಸಂತ ಭೈರವಿ[ಯರಿ]ದೊಳವನವನೊಲ್ದು ಪಾಡಿದ (ತ್ರಿಭುಶಿ. ೬-೩೦): ನಾಟಿ ದೇಶಿ ಗುಜ್ಜರಿಯಾ . . . ಗೌಳಮನಾ ವೀಣೆಯಲ್ಲಿ ಮುನಿ ಬಾಜಿಸಿದಂ (ವೀರವಿ. ೬-೪೯). ೪. [ನಾಟ್ಯ] ಒಂದು ಬಗೆಯ ನೃತ್ಯ: ಚೆಲ್ವಡರೆ ದೇಶಿಯನಾಡುತಿರ್ಪಳು (ರೇವಣ. ೩೨-೪೯); ಗೋಪಾಂಗ ಪ್ರತ್ಯಂಗ ಭ್ರಮರಿ ಭಾವನೆ ಮಂಡಲಂಗಳಿಂ ಶುದ್ಧ ದೇಶಿಗಳೊಳಳವಡಿಸಿ . . . ನರ್ತಿಸುವ ನೃತ್ಯದಬಲಾಜನಂ ಕಣ್ಗೆಸೆದುದು (ಚಬಪು. ೨-೯): ಭಾವಾಶ್ರಯವಾದ 'ನೃತ್ಯ'ಕ್ಕೆ ಮಾರ್ಗವೆಂದೂ ತಾಲಲಯಾಶ್ರಯವಾದ 'ನೃತ್ತ'ಕ್ಕೆ ದೇಶಿ (ದೇಸಿ)ಯೆಂದೂ ಹೆಸರಿರುವಂತೆ ದಶರೂಪಕದಿಂದ ತಿಳಿಯಬರುತ್ತದೆ (ಕೈಬಿಡಿ. ೨೨೩). [ ಸಂ. ದೇಶೀ ]

**ದೇಶಿಕ** (ನಾ). ೧. ಯಾವುದಾದರೊಂದು ವಿಷಯದಲ್ಲಿ ದಾರಿ ತೋರಿಸುವವನು; ಮಾರ್ಗದರ್ಶಿ: ಪಂಡಿತಪ್ರಿಯ ಶಾಂತಿಪೌಷ್ಟಿಕಕರ್ಮದೇಶಿಕನ [ಪಾಠಾಂ. ದೀಕ್ಷಿತನ] . . . ಪೌರೋಹಿತನ ಮಾಡುವುದರಸ ಕೇಳೆಂದ (ಕುವ್ಯಾಉ. ೩-೮೬). ೨. ತತ್ತ್ವೋಪದೇಶ ಮಾಡುವವನು; ಪರಲೋಕಸಾಧನೆಗೆ ಬೇಕಾದ ಧರ್ಮವನ್ನು ಬೋಧಿಸುವವನು; ಆಚಾರ್ಯ; ಗುರು: ದೇಶಿಕರಿಂ ಪೂರ್ವಭವಕ್ಲೇಶಂಗಳನಱಿದು (ಪಂರಾಮಾ. ೧೦-೧೨೦): ಕೆಲವಿತ್ತಡಿಯ ಕಡೆ ನೋಡದಲೆ ದೇಶಿಕನಡಿಯ ನೋಡುತಲಿ (ಗಗತಾ. ೨-೩೩); ತನ್ನ ಶಿಷ್ಯರಿಗೆ ಜ್ಞಾನೋಪದೇಶವನ್ನು ಮಾಡಿ ಆ ಜ್ಞಾನಬಲದಿಂದ ಮೋಕ್ಷವನ್ನು ಕೊಡುವವನು ಯಾವನೋ ಆತನೇ ದೇಶಿಕನೆಂದು ಹೇಳಿಸಿಕೊಳ್ಳುವನು (ಅಷ್ಟಾವಿ. ೧). ೩. ದಾರಿಗ; ಪ್ರಯಾಣಿಕ. ೪. ದಿಕ್ಕಿಲ್ಲದವನು; ಅನಾಥ; ಪರದೇಶಿ: ರುದ್ರನ ಪಾಶವ ಹೊತ್ತು . . . ಭವಪಾಶದಲ್ಲಿ ತಿರುಗುವ ದೇಶಿಕರ ಕಂಡು ನಾಚಿದೆ (ಮೋಳಿಮಾ. ೧೦೩-೪೧೧); ಯಾರಿಲ್ಲದಾ ದೇಶಿಕನ ತೆರದಿ ರಕ್ಕಸನ ಕೈಸಿಕ್ಕಿಯತಿಘಾಸಿಗೊಂಡೆದೆಯೊಡೆದು ಜೀವಿಪನೆ (ನವಮೋ. ೨೯-೪೭); ಅವನು ತನ್ನ ಚಿಕ್ಕವಯಸ್ಸಿನಲ್ಲಿಯೆ ತಾಯಿ–ತಂದೆಗಳನ್ನು ಕಳೆದುಕೊಂಡು ದೇಶಿಕನಾಗಿ ತನ್ನ ಕಕ್ಕನ ಮನೆಯಲ್ಲಿಯೆ ಬೆಳೆದ (ಬಹಿಷ್ಕಾ. ೨): ದೇಶಿಕನಾಗಿ ಮನ್ಮಥನು ಪತ್ನಿಯೊಡನೆ ಹೊರಹೊರಟನು (ಕರ್ನಾಕ. ೨೬೧). 'ದೇಸಿಗ' ಪರಾ. [ ಸಂ. ]

**ದೇಶಿಕಾತಿ** 'ದೇಸಿಗಾತಿ' ನೋ.

**ದೇಶಿಕೋತ್ತಮ** (ನಾ). ಗುರುಗಳಲ್ಲಿ ಶ್ರೇಷ್ಠನಾದವನು; ಶ್ರೇಷ್ಠನಾದ ಆಚಾರ್ಯ: ಅನಘನಪ್ಪ ಪಾದಿರಾಜನ ಮನದ ಬಲುಹಂ ನೋಡಿದಪೆ ನಾನೆನುತ ಸದ್ಗುಣಿ ಮಲ್ಲಿಕಾರ್ಜುನ ದೇಶಿಕೋತ್ತಮನು (ಬಸಪು. ೧೯-೮೫); ಬೇಡವೀ ನುಡಿ ದೇಶಿಕೋತ್ತಮ ಮತ್ತೊಂದನಾಡಬಾರದೆ ಬೇಗದೊಳೆಮ್ಮ ಕೊಡೆ (ತ್ರಿಭುತಿ. ೧೯-೧೬); ತಿಳಿವಂತೆ ಪೇಳುವ ದೇಶಿಕೋತ್ತಮನಂಘ್ರಿನಳಿನಂಗಳಿಗೆ ನತಿಗೈದು (ಹದಿಬ. ೮-೩೩). [ ದೇಶಿಕ + ಉತ್ತಮ ]

**ದೇಶಿಗ** 'ದೇಸಿಗ' ನೋ.

**ದೇಶಿಗಣ** (ನಾ). = ದೇಸಿಗಗಣ: ಸ್ವಸ್ತಿ ಶ್ರೀಮೂಲಸಂಘ ದೇಶಿಗಣ ಪುಸ್ತಕಗಚ್ಛ ಕುಂಡಕುಂದಾನ್ವಯದ . . . ತತ್ಕಾಲಧರ್ಮಪ್ರವರ್ತಕರಾದ ಧರ್ಮಾಚಾರ್ಯರ ಬಿರುದಾವಲಿ ಎಂತೆಂದೊಡೆ (ಎಕ. I (R), ೧೯-೩ ; 1544). [ ದೇಶಿ$_1$ + ಗಣ ]

**ದೇಶಿಗಿತಿ** 'ದೇಸಿಗಿತಿ' ನೋ.

**ದೇಶಿಗಿತ್ತಿ** 'ದೇಸಿಗಿತಿ' ನೋ.

**ದೇಶಿನಿ** (ನಾ). ತೋರುಬೆರಳು; ಹೆಬ್ಬೆಟ್ಟಿನ ಪಕ್ಕದ ಬೆರಳು; ತರ್ಜನಿ: ಆನಿಹೆನು ಕುಡಿ ಶಿಶುವೆ ಬೆರಳನೆನುತ್ತ ಕರುಣಾರಸದಲಿಂದ್ರನು ಕೊಟ್ಟನಾ ದೇಶಿನಿಯನರ್ಭಕಗೆ (ನಿಭಾಗ. ೯-೬-೨೫). [ ಸಂ. ದೇಶಿನೀ ]

**ದೇಶಿಪರಿ** (ನಾ). = ದೇಸಿಪರಿ: ಅಂದವೆಱಿದ ಗಡ್ಡ ದರ್ಭೆಗಳಿಂದ ನೆಱಿಯುಡಿಗೆಗಳ ನಾಟಕದಿಂದ ಮಟ್ಟೆಯ ಧಟ್ಟು ನೊಸಲಲಿ ದೇಶಿಪರಿ ಮೆಱಿಯೆ (ಕುವ್ಯಾಆ. ೧೦-೨). [ ದೇಶಿ$_2$ + ಪರಿ$_3$ ]

**ದೇಶೀಯ** (ಗು). ೧. ದೇಶಕ್ಕೆ ಸಂಬಂಧಪಟ್ಟ; ನಾಡಿಗೆ ಸಂಬಂಧಿಸಿದ: ಆ ಪರಿಚಿತ ಸನ್ಯಾಸಿಯು ಬೆಂಕಿಯ ಬೆಳಕಿನಲ್ಲಿ ಆದೇ ದೇಶೀಯ ಕಾಗದದಲ್ಲಿ ಇದ್ದ ಲೇಖನವನ್ನು ತೆರೆದಿಟ್ಟು . . . ಲೆಕ್ಕ ಬಿಡಿಸುತ್ತಿದ್ದನು (ಇಪ್ಪಕ. ೩೪೦). (ನಾ). ೨. ನಾಡಿನಲ್ಲಿಯೇ ಹುಟ್ಟಿ ಬೆಳೆದು ಬಂದುದು; ದೇಶಕ್ಕೆ ಸಂಬಂಧಪಟ್ಟುದು: ಹೀಗೆ ದೇಶೀಯವಾದ . . . ಛಂದೋರೂಪಗಳನ್ನು ಹೊಸರೀತಿಯಲ್ಲಿ ಪ್ರಯೋಗಿಸಿ ಈ ಕವಿತೆಗಳನ್ನು ಕಟ್ಟಿದ್ದೇನೆ (ಇಂಚಾಪ. ೩ ಅರಿಕೆ). ೩. ಒಂದು ದೇಶದ ಸಂಸ್ಕೃತಿ, ನಡವಳಿಕೆ, ದೇಶಭಾಷೆಯ ಪದ, ಅಕ್ಷರ ಮೊದಲಾದುವು: ಇವು ವರ್ಣಾವೃತ್ತಿಗೆ ಸಲ್ವುವು . . . ದೇಶೀಯವೆನಿಪುವಾ ಹ್ರಸ್ವಮೆನಿಸಿದಾ ಎ ಒ ಸಹಿತಂ (ಶಮದ. ೧೯); ತದ್ಭವದ ಬೆಸುಗೆಯುಂ ದೇಶೀಯಕಮರ್ದ ಸೊಂಪಂ ತೊಳಪ ತತ್ಸಮದ ಬಿನ್ನಣವನುಸುರೆಂದು ಕೋವಿದರ್ ಬೆಸಸಲ್ (ಕಬ್ಬಿಕೈ. ೩): ತಱಸಂದನಂತನಾಮಂಗಳೊಳ್ ದೇಶೀಯ ಪಲವು ತೆಱಂ

(ಶಬ್ದಮಂ. ೧೩೦). ೪. [ಜೈನ] ಮುನಿಗಳ ಒಂದು ಗುಂಪು,– ಪರಂಪರೆ,–ಗಣ : ಗಣಗಳು : ದೇವ, ಸೇನ, ಬಲಾತ್ಕಾರ, ಬಳಗಾಚಿ (ಇದು ಬಲಾತ್ಕಾರವಿರಬಹುದೆ ?) ದೇಶೀಯ, ದ್ರವಿಳ . . . ಕಾರೆಯ ಆಜಿ (ಕಶಾಲ. ೮೭). [ಸಂ.]

**ದೇಶೀಯಪದ** (ನಾ). ಪರಭಾಷೆಯಿಂದ ಬಾರದ, ಹಾಗೂ ಪರಭಾಷಾ ಪದಗಳಿಂದ ಜನ್ಯವಲ್ಲದ ಪದ ; ದೇಶ್ಯಪದ : ಬೇಟ್ಟರ ಕಯ್ವೊಕ್ಕ ನಿಧಿಯೆನಿಪಪಭ್ರಂಶಕ್ಕಂ ದೇಶೀಯಪದಕಮುಂಟು ಸಮಾಸಂ (ಶಮದ. ೨೯೯). [ದೇಶೀಯ + ಪದ₂]

**ದೇಶೀಯಾಕ್ಷರ** (ನಾ). ಅಚ್ಚಗನ್ನಡ ಭಾಷೆಯ ಅಕ್ಷರ ; ಬೇರೆ ಭಾಷೆಯಿಂದ ಬಂದಂ ಸೇರದ ಅಕ್ಷರ : ಆ ಎ ಒ ಸಹಿತಂ = ಆ ಎ ಒ ಎಂಬಿವು ಸಹಿತವಾಗಿ, ದೇಶೀಯಂ = ದೇಶೀಯಾಕ್ಷರಂಗಳ್, ಎನಿಪುವು = ಎನಿಸುವುವು (ಶಮದ. ೧೯ ಟೀಕು). [ದೇಶೀಯ + ಅಕ್ಷರ]

**ದೇಶೋದ್ಧಾರ** (ನಾ). ಹೀನಸ್ಥಿತಿಯಲ್ಲಿರುವ ದೇಶವನ್ನು ಮೇಲಕ್ಕೆತ್ತುವುದು ; ದೇಶದ ಜನರ ಕಷ್ಟಗಳನ್ನು ಪರಿಹರಿಸಿ ನೆಮ್ಮದಿಯನ್ನುಂಟು ಮಾಡುವುದು ; ದೇಶಕ್ಕೆ ಒದಗಿರುವ ಆಪತ್ತನ್ನು ಪರಿಹರಿಸುವುದು; ದೇಶದ ರಕ್ಷಣೆ,–ಅಭಿವೃದ್ಧಿ : ಆತನಿಗೆ ಹಿಂದೂರಾಜ್ಯದ ಪುನರುದ್ಧಾರ ಕಾರ್ಯ, ದೇಶೋದ್ಧಾರಕಾರ್ಯ, 'ದೇವಕಾರ್ಯ'ವಾಗಿತ್ತು (ಬಂಕಿಮ. ೧೮೫); ನಾನು ದೇಶೋದ್ಧಾರ ಮಾಡುವ ಭಾರ ವಹಿಸಿಲ್ಲ (ಭಾರತಿ. ೧೨೦) ; ಆಗ ಸದಾಶಿವರಾಯರ ಮನೆಯೇ ದೇಶೋದ್ಧಾರದ ಚಟುವಟಿಕೆಗಳಿಗೆ ಕೇಂದ್ರಸ್ಥಳವಾಯಿತು (ಕಪಪು. ೫–೬೪). [ದೇಶ + ಉದ್ಧಾರ]

**ದೇಶ್ಯ** (ಗು). ೧. ದೇಶದಲ್ಲಿ ಹುಟ್ಟಿದ ; ದೇಶದಲ್ಲಿ ವಾಸಿಸುವ ; ದೇಶದಲ್ಲಿರುವ. (ನಾ). ೨. ಯಾವುದಾದರೊಂದು ಭಾಷೆಯ ಮೂಲ ಪದ : ಸಂಸ್ಕೃತದಿಂದ ಬಂದಿರುವ ಶಬ್ದಗಳನ್ನು ಈ ಭಾಷೆಗಳು ಪರಕೀಯ ಶಬ್ದಗಳೆಂದು ಎಣಿಸಿವೆ. ತಮ್ಮದೇ ಆದ ಶಬ್ದಗಳನ್ನು "ದೇಶ್ಯ" ಎಂದು ಕರೆಯುತ್ತವೆ (ನಮ್ಮನು. ೧೯) ; ಒಂದು ಭಾಷೆಯನ್ನಾಡುವ ಜನರಲ್ಲಿಯೇ ಹುಟ್ಟಿ ಬೆಳೆದ ಶಬ್ದಗಳಿಗೆ "ದೇಶ್ಯ" ಎಂದು ಹೆಸರು (ಕ್ಯಪಿಡಿ. ೧೪). ೩. [ವ್ಯಾಕ] ಅಚ್ಚಗನ್ನಡ ಶಬ್ದ : ಅಚ್ಚಗನ್ನಡದಲ್ಲಿ ಮಾತ್ರವೆ ಪ್ರಯೋಗಿಸಲ್ಪಡುವುದು ದೇಶ್ಯವು (ಹೊಸಗ. ೩೪) ; ನಿಮ್ಮ ಪದರಚನೆಯು ಅವರವುಗಳಿಗಿಂತ ಹೆಚ್ಚು ದೇಶ್ಯ (ಕಾಲೂರ. ೯ ಮುನ್ನುಡಿ). ೪. [ಸಂಗೀತ] (?): ಘನ, ನಯ ಮತ್ತು ದೇಶ್ಯಗಳನ್ನು ಹಾಡುವುದರಲ್ಲಿ ಅವರು ಚೆನ್ನಾಗಿ ನುರಿತವರು (ಸಂಗೀತ. ೪೫). 'ದೇಶೀಯ' ಪರಾ. [ಸಂ.]

**ದೇಶ್ಯಕಾಂಭೋಜಿ** (ನಾ). [ಸಂಗೀತ] ಒಂದು ಮಿಶ್ರರಾಗದ ಹೆಸರು : ಗುಮ್ಮಕಾಂಭೋಜಿ ತೆನಗು ಕಾಂಭೋಜಿ ದೇಶ್ಯಕಾಂಭೋಜಿಯೆಂಬ ಮೂಜಿಕೇ ಕಾಂಭೋಜೀತುಶ್ರಂಗಳು (ವಿವೇಕ. ೨೫೫). [ದೇಶ್ಯ + ಕಾಂಭೋಜಿ (<ಕಾಂಬೋದಿ)]

**ದೇಶ್ಯಕಾಪಿ** (ನಾ). [ಸಂಗೀತ] ಒಂದು ಮಿಶ್ರರಾಗದ ಹೆಸರು : ಈ ಭಾಷಾಂಗ ಕಾಪಿರಾಗಕ್ಕೆ ಹಿಂದೂಸ್ಥಾನಿಕಾಪಿ, ದೇಶ್ಯಕಾಪಿ ಮತ್ತು ಮಿಶ್ರಕಾಪಿ ಎಂಬ ಹೆಸರುಗಳೂ ಪ್ರಚಾರದಲ್ಲಿವೆ (ಸಂಗೀಶ. ೫೦). [ದೇಶ್ಯ + ಕಾಪಿ₁]

**ದೇಶ್ಯವರ್ಣ** (ನಾ). = ದೇಶೀಯಾಕ್ಷರ : ದೇಶ್ಯವರ್ಣವೆಂದರೆ ಸಂಸ್ಕೃತದಲ್ಲಿರದೆ ಕೇವಲ ಕನ್ನಡದಲ್ಲಿ ಮಾತ್ರ ಇದ್ದುವು (ಭಾಷಾಶಾ. ೧೦೫). [ದೇಶ್ಯ + ವರ್ಣ]

**ದೇಶ್ಯಶಬ್ದ** (ನಾ). = ದೇಶೀಯಪದ : ಅಚ್ಚಗನ್ನಡದಲ್ಲಿ ದೇಶ್ಯಶಬ್ದಗಳೂ ತದ್ಭವಗಳೂ ಸೇರುತ್ತವೆ (ಕ್ಯಪಿಡಿ. ೩) ; ಹೀಗೆ ಸಾಮಾನ್ಯವಾಗಿ ಯಾವ ಭಾಷೆಯನ್ನು ತೆಗೆದುಕೊಂಡರೂ ಅದರಲ್ಲಿ ದೇಶ್ಯಶಬ್ದಗಳೂ ಅನ್ಯದೇಶ್ಯ ಶಬ್ದಗಳೂ ಸೇರಿರುತ್ತವೆ (ಕ್ಯಪಿಡಿ. ೧೪). [ದೇಶ್ಯ + ಶಬ್ದ]

**ದೇಸ** (ನಾ). ದೇಶ ; ನಾಡು ; ಜನಪದ : ಸ್ವಸ್ತಿ ಶ್ರೀಗಙ್ಗೆಯುಂ ಕಡಾರಮುಂ ಪೂರ್ವ್ವದೇಸಮುಂ ಕೊಣ್ಡ ಉಡಯಾರ್ ಶ್ರೀರಾಜೇನ್ದ್ರಚೋಳ ದೇವರ್ಗ್ಗೆ (ಎಕ. X, ಕೋಲಾರ. ೧೪–೧ ; 1035) ; ಸುಕ್ಷೇ[ತ್ರ] ದಿಂದಾಯ್ಕಾಖಂಡವುದೊಪ್ಪಿ ತೋರ್ಪ್ಪ ದದ ಚೋಳ್ಸತ್ತಾಳವಾ ದೇಸಮುಂ (ಕಇ. I, ೪೧–೪ ; 1417) ; ಉಚಿತ ನಾಲ್ಕುದೆಸೆಯ ದೇಸಗಳ ಬಿರುದಿನ ಗಣಿಕೆಯರ್ಪುರವರನಾರಿಯರಿರದೆ ಸಿಂಗರಿಸಿಯ್ಯೆದಿದರು (ಕಂನವಿ. ೩೦–೭೪). [<ಸಂ. ದೇಶ]

**ದೇಸಗತಿ, ದೇಶಗತಿ, ದೇಸಗತ್ತಿ** (ನಾ). ೧. ದೇಸಾಯಿಯ ಅಧಿಕಾರ,– ಹುದ್ದೆ ; ದೇಸಾಯಿಯ ಆಳ್ವಿಕೆ, – ಆಡಳಿತ ; ದೇಸಾಯಿತನ : ಈ ಹಾಳು ದೇಸಗತಿ ಇರದೇ ಹೋಗಿ ಮೈತುಂಬ ದುಡಿತ ಇದ್ದಿದ್ದರೆ, ಇಂತಹದು ಸಾಧ್ಯವಿತ್ತೆ ? (ಕಾಗಿಳ. ೩೩) ; ಊರಿನ ದೇಸಗತಿಯನ್ನು ಕಳೆದುಕೊಂಡು ಬಹಳ ದಿನಗಳಾಗಿರಲಿಲ್ಲ (ಜೀಭಾ. ೩); ಅದರ ಮರಿವರುಷ ಅಂದರ, ನಮ್ಮ ಈ ಊರಿನ ದೇಸಗತಿ ಹಾಳಾಗಿ ಹೋತಂತರಿ ! (ಜನಜೀ. ೮೫) ; ಕಿತ್ತೂರು . . . ದೊಡ್ಡ ದೇಸಗತಿಯ ನೆಲೆಯಾಗಿದ್ದಿತು (ಕವಿಂಚಿ. ೭೧). ೨. ದೇಸಾಯಿಯ ಅಧಿಕಾರಕ್ಕೆ ಒಳಪಟ್ಟ ನಾಡು : ಇದು ನಮ್ಮ ಆಸ್ತಿಯಲ್ಲ. ಇದನ್ನು ದೇಸಗತಿ, ಜಾಗೀರು ಎನ್ನುವುದು ಬರೀ ಭ್ರಮೆ (ಪ್ರೇಮಾಶ್ರ. ೧೯೦). **ದೇಶಗತಿ :** ೨. ಇವರ ತಂದೆಯವರು ಕುರಿವೆಟ್ಟ ದೇಶಗತಿಯ ಕಾರಭಾರಿಗಳು (ಜಯಂತ. ೫೯). **ದೇಸಗತ್ತಿ :** ೧. ಒಕ್ಕಲಿಗರೂ ಶಿಕ್ಷಕರೂ ಬರಬರುತ್ತ ಇಂಥ ವೈಭವಗಳಿಗೆ ಮನಸೋತದ್ದರಿಂದ ದೇಸಗತ್ತಿಯವರ ದರ್ಪವು ಊರಲ್ಲಿ ದಿನದಿನಕ್ಕೆ ಹೆಚ್ಚ ತೊಡಗಿತು (ಸಮಜೀ. ೧) ; ಮಲಸರ್ಜನು ೧೭೭೭ನೇ ಇಸವಿಯಲ್ಲಿ ದೇಸಗತ್ತಿಯ ಪಟ್ಟವೇರಿದನು (ಮುಂಬಯಿ. ೪–೨೦೩). [← ಮರಾ. ದೇಸಕತ್]

**ದೇಸಗತ್ತಿ** 'ದೇಸಗತಿ' ನೋ.

**ದೇಸಾಕೆ, ದೇಶಾಕೆ** (ನಾ). ದೇಶದ ಭಾಗ; ದೇಶಕ್ಕೆ ಸೇರಿದುದು; ದೇಶಿ: "ದೇಸಾಕೆ–ದೇಶಶಾಖಾ=ದೇಶಭಾಗ" (ತದ್ಭಕೋ. ೩೦) ; ಪೂರ್ವಪದಾಂತ್ಯಲೋಪಕ್ಕೆ–ದೇವಕುಲ–ದೇಗುಲ ; ದೇಶಶಾಖಾ–ದೇಸಾಕೆ (ಶಮದ. ೨೪೪ ಪ್ರಯೋ). **ದೇಶಾಕೆ :** ದೇಶಾಕೆ, ದೇಶಶಾಖಾ (ಶಬ್ದಾನು. ೩೭೮ ವ್ಯಾಖ್ಯಾ). [<ಸಂ. ದೇಶಶಾಖಾ]

**ದೇಸಾಯಣಿ** (ನಾ). ದೇಸಾಯಿಯ ಅಧಿಕಾರವುಳ್ಳವಳು ; ದೇಸಾಯಿಣಿ: ಇದೇ ಕಾಲಕ್ಕೆ ಇವನ ಸೇನೆಯ ಒಂದುಭಾಗವನ್ನು ಬೆಳವಡಿಯ ದೇಸಾಯಣಿಯಾದ ಮಲ್ಲಮ್ಮಾಯಿಯು ತಡೆದಳು (ಹಿಂದುಇ. ೨೨೦). [<ದೇಸಾಯಿ]

**ದೇಸಾಯಿ, ದೇಶಾಯಿ** (ನಾ). ೧. (ಮರಾಟರ ಆಳ್ವಿಕೆಯಲ್ಲಿ) ಪ್ರಾಂತಾಧಿಕಾರಿ ; ಕುಲಕ್ರಮವಾಗಿ ಬಂದ ದೇಶಭಾಗದ ಆಡಳಿತಗಾರ; ನಾಡೊಡೆಯ : ಕಿತ್ತೂರ ದೇಸಾಯಿಯಾದ ಮಲಸರ್ಜನು ಸನ್ ೧೭೭೭ನೇ ಇಸವಿಯಲ್ಲಿ ದೇಸಗತ್ತಿಯ ಪಟ್ಟವೇರಿದನು (ಮುಂಬಯಿ. ೪–೨೦೩). **ದೇಶಾಯಿ :** ೧. "ನಾಯಃ = ಕುಕ್ಕುರನುಂ, ಮಲಯಾಳನುಂ, ದೇಶಾಯಿಯುಂ" (ಶಾಕಕ. ೧೫೮) ; ವರ ಮಳೆಯ ಮಲ್ಲೇಶನುರುಶಿಷ್ಯ ತೊರೆಸಾಲ ಪರಗಣೆಯ ಕೋಲಾರಪುರಕೆ ದೇಶಾ[ಪಾಠಾಂ. ಸಾ] ಯಿ (ಪ್ರೌಢರಾ. ೧–೨೫) ; ಸೀಮೆ ದೇಶಾಯಿ ದೇಶಕರ್ಣಿ (ಎಇ. ೧೯೫೦, ಹಾನಗಲ್. ೧೨೭–೬ ; 1735) ; ಅಂಥಾ ದೇಶಕ್ಕೆ ಮುಖಂಡನಾದವನು ದೇಶಾಯಿ ಅಥವಾ ದೇಶಮುಖ (ಪಾಳೆಗಾ. ೧೧). ೨. ಶಾನುಭೋಗ : ಶ್ಯಾನುಭೋಗ ಅಥವಾ ಮೆನನ್ ಎಂಬುದನ್ನು ಬೊಂಬೈಪ್ರಾಂತ್ಯದಲ್ಲಿ ದೇಶಾಯಿ, ದೇಶಪಾಂಡೆಯಂತಲೂ ಗ್ರಾಮದ ಅಕೌಂಟೆಂಟನ ಹೆಸರುಂಟು (ಗ್ರಾಮಾಕ. ೧). [← ಮರಾ. ದೇಸಾಯ್, ದೇಸಾಈ]

**ದೇಸಾಯಿಗೌಡ** (ನಾ). ೧. ಮೊರಸು ಒಕ್ಕಲು ಜನಾಂಗದ ಮುಖಂಡ,-ನ್ಯಾಯಂತೀರ್ಮಾನ ಮೊದಲಾದುವುಗಳಲ್ಲಿ ಪರಮಾಧಿಕಾರವುಳ್ಳವನು,-ಭೂಮಿಗೌಡ : (ಎಸಮ್ಯ. XV, ೩೭). ೨. ಕಂದಾಯ ಮತ್ತು ನ್ಯಾಯನಿರ್ಣಯಗಳ ಎರಡೂ ಅಧಿಕಾರಗಳನ್ನುಳ್ಳ ಸ್ಥಳೀಯ ಅಧಿಕಾರಿ. [ ದೇಸಾಯಿ + ಗೌಡ$_1$ (<ಗಾಮುಂಡ) ]

**ದೇಸಾಯಿತಿ** (ನಾ). ದೇಸಾಯಿಯ ಹೆಂಡತಿ,-ಪತ್ನಿ : 'ದೇಸಾಯಿತಿಯು ಬಸಿರಿದ್ದದ್ದು ನಿಜ ಎಂದಾಯಿತು (ನಿರಾಭ. ೧೦೦) ; ದೇಸಾಯಿತಿ ಹತ್ತನೆ ತಿಂಗಳಲ್ಲಿ ಹಡೆದಳು (ನಿರಾಭ. ೧೦೩).

[ ದೇಸಾಯಿ + -ತಿ$_1$ (< -ಇತಿ) ]

**ದೇಸಾಳ** (ನಾ). ದೇಶಕ್ಕೆ ಸಂಬಂಧಪಟ್ಟುದು ; ದೇಶೀಯವಾದುದು (?) : ಉಟ್ಟ ಹೊಸ ದೇಸಾಳದುಡುಗೆ ರಂಜಿಸುತಮಿರೆ (ಇಹರ. ದೇ. ೩೨-೧೯) : ಕೈಸಾಳಂ ಸನ್ನೆಯೊಳೊತ್ತುತ್ತಿರೆ ದೇಸಾಳಂ ನುಡಿಯೊಳಿ ಬೆಳೆವುತ್ತಿರೆ (ಭೃಂಗೀರ. ಹ. ೪೭೭-೧೪) ; ಅಗ್ಗಳದ ದೇಸಾಳ ನುಡಿಗಡಣ (ರೇವಣ. ೧೩೭-೩೩).

[ ←ಮರಾ. ದೇಸಾಳ್, ದೇಸೋಳೀ, ದೇಶವಳೂ ;
ಹಿಂ. ದೇಸವಾಲ್ ]

**ದೇಸಿ, ದೇಸೆ** (ನಾ). ೧. ಒಂದುದೇಶದಲ್ಲಿ ಮಾತನಾಡುವ ಭಾಷೆ ; ದೇಶ್ಯಭಾಷೆ : ದೊರೆಕೊಂಡಿರೆ ಸೊಗಯಿಸುಗುಂ ಪುರಾಣಕಾವ್ಯಪ್ರಯೋಗದೊಳ್ ತತ್ಕಾಲಂ ವಿರ(ಸಂ) ಕರಮುವು ದೇಸಿಗೆ ಜರದ್ಧಧೂವಿಷಯುಸುರತರಸರಸಿಕತೆವೋಲ್ (ಕವಿರಾ. ೧-೫೦) : ಹಳ್ಳಿಯ ಆಡುವ ಭಾಷೆಯ ಜೊತೆಗೆ ಹೋಲಿಸಿ ನೋಡಿದೆನತ್ತ ಶಿವಮೊಗ್ಗೆಯ ದೇಸಿಯ ನುಡಿಯನು ಕೊನೆಗೆ (ಇಂಚಾಪ. ೩೩-೫೦). ೨. ಪರಭಾಷೆಯ ಅನುಕರಣವಿಲ್ಲದೆ ಅಚ್ಚಗನ್ನಡ ಶಬ್ದಗಳನ್ನು ಮನೋಹರವಾಗಿ ಬಳಸುವ ಶುದ್ಧಗನ್ನಡದ ಶೈಲಿ : ಪೂರ್ವಾಚಾರ್ಯರ್ ದೇಸಿಯನೆ ನಿಚ್ಚಿಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ (ಕವಿರಾ. ೧-೭೫) ; ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್ ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಮೊಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊಡಿಯಿಂ ಬಟಲ್ದು ತುಂಬಿಗಳಿನೆ ತುಂಬಿ ಕೋಗಿಲೆಯ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್ (ಪಂಪಭಾ. ೧-೮) ; ಅಸಗನ ದೇಸಿ ಪೊನ್ನನ ಮಹೋನ್ನತಿವೆತ್ತ ಬೆಡಂಗು ಪಂಪನೊಂದಸದೃಶಮಪ್ಪಪೂರ್ವರಸಮಯ್ದು . . . ನೆಲಸಿರ್ಕೆ ಧಾರಿಣಿ ಮನಂಗೊಳೆ ಮತ್ಕೃತಿಯೊಳ್ (ಧರ್ಮಾಮೃ. ೧-೩೯) : ಮಾರ್ಗವು ತನ್ನ ಸ್ವಾರಸ್ಯವನ್ನು ಕಳೆದುಕೊಂಡಾಗ . . . 'ದೇಸಿ'ಯು ತಲೆಯೆತ್ತುತ್ತದೆ (ನವ್ಯಕಾ. ೪೦). ೩. ಅಚ್ಚಗನ್ನಡ ಶಬ್ದ,-ಪದ : ಕನ್ನಡಕೆಂತಪ್ಪುವು ಶಬ್ದಮೆಂಬ ವಿದ್ವಜ್ಜನರಾ ಚಿಂತೆ ಪರಿಹರಿಪ ಮಾಟ್ಕೆಯೊಳಂತುಸುರ್ವೆಂ ದೇಸಿ ತದ್ಭವಂ ತತ್ಸಮಮುಂ (ಚತುನಿ. ೩). ೪. ಒಂದು ದೇಶದಲ್ಲಿ ಪರಂಪರಾಗತವಾಗಿ ಬಂದಿರುವ ಸಂಸ್ಕೃತಿ, ಆಚಾರ, ವ್ಯವಹಾರ ಮೊದಲಾದುವು : ಯಹೂದ್ಯದೊಳಿರುವ ದೇಸಿ ಪರದೇಸಿಯ ತನುಮನಧನಂಗಳಂ ಸೂರೆಗೊಂಡು (ಗೊಲ್ಗೊಥಾ. ೩-೪೮). ೫. ಸ್ವಾಭಾವಿಕವಾದ ಚೆಲುವು,-ಸೊಬಗು ; ಸಹಜವಾದ ಸೌಂದರ್ಯ : ವಿಳಿರ್ವ ಕುರುಳ್ಗಳೊಳ್ ತೊಡರ್ದ ದೇಸಿ[ಪಾಠಾಂ. ಸೆ]ಯನಾವಗಮಿವ ಚೆನ್ನ ಪೂಗಳನವನೊಯ್ಯನೋಸರಿಸುತುಂ . . . ಬರ್ಪ ಮಾದ್ರಿಯುಂ . . . ಪಾಂಡುರಾಜಂ ಕಂಡು (ಪಂಪಭಾ. ೩-೧೭);ಗಾಡಿಗೆ ಪಾಡಾದ ಪಸದನಕ್ಕಂ ತೇಜಕ್ಕೋಜಾದ ಕಾಂತಿಗಂ ಬೆಡಂಗಿಗೆ ಪಾಂಗಾದ ದೇಸಿಗಂ . . . ಪೊಗಟ್ದು (ಶಾಂತಿಪು. ೩-೫೩ ವ) ; ಚರಣಂ ನವಕೇಸರದೊಂದು ದೇಸಿಯಂ ಪ್ರಕಟಿಸೆ (ಕಾದಂಬ. ೬೧) : ನೆಲೆಮಾಡದ ಪೊಸದೇಸಿಯ ನೆಲೆಮಾಡದ ಕಲ್ಪಪದನಮೆಯ್ದುದಣಂ ಕೀಟಿನೆಲೆಯಾದುದು (ಪಂರಾಮಾ. ೧-೧೩೭) ; ಕೂಸುಗಳಂ ಮುದ್ದಾಡಿಸಿ ದೇಸಿಯ ಮಾತುಗಳನಾಡಿಸಿ ಪೆರ್ಚಿಸಿ (ಧರ್ಮಾಮೃ. ೫-೯೦) ; ದೇಸಿಯ ರಾಜಪಟ್ಟದ ಸವಿನುಡಿಗಳನು ಸೃಷ್ಟೀಶ್ವರಗೆ ಬಿನ್ನೈಸುತ ಮಂತ್ರಿಗಳಿಟ್ಟಣಿಸಿಹರು (ಕಂನವಿ. ೮-೩೭). ೬. ಗತ್ತು ; ರೀತಿ ; ವಿಜೃಂಭಣೆ : ತಳಿರ ತೊಂಗಲೀ ಕೇಜಿಡೆಯ ಬಿಂಕಮಂ ಬೀಟಿ ಪೊಳೆವ ಕೆಂಗಾಯ್ ನೊಸಲ ಕಣ್ಣ ದೇಸಿಯ ಸೂಸೆ . . . ಶಿವಚಿಹ್ನವಾಂತಂತೆ ನೇಟಿಲ್ವರಂ ಚೆಲ್ವಾದುದು (ಪದ್ಮರಾ. ೮-೩೧) : ಅಗ್ಗದ ಸಗ್ಗದ ಜೋಸೆಯರೊಂದು ನೆರವಿಯೊಳ್ ದೇಸಿಯಿಂ ಬೆರೆದಾಗಳುಂ ಬಿನದಿಸುತ್ತೆ (ರಾಮಾಶ್ವ. ೧೩೭-೧೮). ೭. ಅಲಂಕರಣ ; ಶೃಂಗಾರ : ಆವ ಪರಿಯ ದೇಸಿಯಾಣ್ಮಗೆ ಬಗೆವರ್ಪುದಾ ವಿಧಗಳನಾರೈದು ಭಾವಿಸಿ ತಿಳಿದುಟ್ಟು ತೊಟ್ಟು ಬಣ್ಣಗೆಯಿಂದ ಭಾವವ ಬಂದಿಗೊಳುವುದು (ಹದಿಬ. ೩-೧೭). ೮. ಬಗೆ ; ರೀತಿ ; ಕ್ರಮಂ ; ಸಂಪ್ರದಾಯ : ಛಂದಮಿದಾವುದೆಂದೊಡಿಟ್ಟರ್ ಪದಬಂಧದೊಳೇ ಪ್ರಯೋಗಮೆಂತೆಂದೊಡೆ ಬಯ್ವರಾವ ಕವಿಮಾರ್ಗಮಿದೆಂದೊಡೆ ಪೊಯ್ವರರ್ಥಮೇನೆಂದೊಡೆ ತೊಂಡುಭಂಡುಗೆಡೆದುಟ್ಟುದನಿಕ್ಕುವರಾವ ನೀತಿ ಪೇಟೆಂದೊಡೆ ಕೊಲ್ವರೀಗಳಿನ ದೇಸಿಗೆ ಬಿಟ್ದ ಮಹಾಕವೀಶ್ವರರ್ (ಸೂಕ್ತಿಸು. ೧-೩೫) : ಮೊಗಮೊಂದು ತೋಳಿರಡಟಿಂ ಸ್ಫುರಿಸುತೀ ಪರಿಯಿಂದೆ ವಿಟಜಂಗಮಾಕೃತಿಯನಾಂತು ಪೊಸದೇಸಿ ರಚಿಸೆ. (ಪದ್ಮರಾ. ೫-೪೩) : ಬಲಿದು ಮಕುಟಾವಳಿಯ ಶೋಣಿತಪಳಿಯ ರಕ್ಕಸ ದೇಸಿ[ಪಾಠಾಂ. ಶಿ]ಯುಲಿ ಬಿಗಿದೆಳೆವ ಹಾಹೆಯನೋಜೆಗೊಳಿಸಿಕ್ಕಲಿಸಿ ಪದಯುಗವ (ತೊರರಾ. ೧-೧೫-೧೯). ೯. "ನೇರ್ಪು, ತಕ್ಕುಮೆ, ಔಚಿತ್ಯ" (ಗಿಳಿವಿಂ. ೧೩೭ ಟಿಪ್ಪಣಿ) : ತಕ್ಕಳಿಯದೆ ನಿಲ್ಗು ಕಬ್ಬಿಗನ ಮಾತು ವಿಮರ್ಶಕನಿತ್ತ ದೇಸಿಯಿಂ (ಗಿಳಿವಿಂ. ೦೧೧-೮). ೧೦. (ಹಿಂದಿನ ಕಾಲದಲ್ಲಿದ್ದ) ವರ್ತಕರ ಒಂದು ಪಂಗಡ,-ಮಂಡಲಿ : ಅಗ್ರಹಾರು ತುಂಬುಳದಲು ತಂಬುಲಿಗರುಂ ದೇಸಿಯುಂ ಬಿಟ್ಟ ಧರ್ಮ್ಮಂ (ಸೌಇಇ. IX-1, ೨೩೯-೧೭ ; 1142) ; ಬಾವಿಯನಗಳಿಸಿ ತತ್ಸಮಿಪದಲು ಸಮಸ್ತದೇಸಿಯನುಮತದಿಂ ದೇಸೀಶ್ವರದೇವರ ಪ್ರತಿಷ್ಠೆಯಂ ಮಾ[ಡಿ] (ಸೌಇಇ. IX-1, ೨೬೮-೪೬ ; 1162). 'ಪಾ ನಾ ದೇ ಸಿ' ಪರಾ. ೧೧. (ಅಲಂ) ತೋರಿಕೆ ; ಭೂಷಣ ; ಚಂದ : ಒಸೆದವರಿವರೆನ್ನದೆ ಸಂತೊಸಮಪ್ಪಿನಮಿತ್ತು ಪಡೆದನೀ ವಸುಮತಿಯೊಳ್ ವಸುಧೈಕಬಾಂಧು ಪೆಂಬೀ ಪೆಸರಂ ರೇಚರಸನಂತು ದೇಸಿಯನಾಯ್ತು (ಎಕ. V, ಅರಸೀ. ೭೭-೨೯ ; 1220). ೧೨. [ನಾಟ್ಯ] ಒಂದು ಬಗೆಯ ದೇಶೀಯ ನೃತ್ಯ : ತೋರಮಲ್ಲಿಗೆಯ ತುಟುಂಬು ರಾಹು ತವೆ ನುಂಗಿದ ಚಂದ್ರನನೊಯ್ಯನೊಯ್ಯನಂದುಗುಟ್ಟುವೊಲೊಪ್ಪಿರಲ್ ಬಲದೊಳುರ್ವಿಸಿ ದೇಸಿಗೆ ದೇಸಿಯಾಡಿದಳ್ (ಪಂಪಭಾ. ೭-೮೭) ; ಬುಧಸನ್ನುತ ದೇಶಾದ್ಯ ವಿವಿಧನೃತ್ಯಂ ದೇಸಿಯೆನಿಸಿ ಮೆಱೆವುದು ಜಗದೊಳ್ (ಲಾಸ್ಯರಂ. ೧-೨೧) ; ಭಾವಾಶ್ರಯವಾದ 'ನೃತ್ಯ'ಕ್ಕೆ ಮಾರ್ಗವೆಂದೂ ತಾಲಲಯಾಶ್ರಯವಾದ 'ನೃತ್ತ'ಕ್ಕೆ ದೇಶಿ (ದೇಸಿ)ಯೆಂದೂ ಹೆಸರಿರುವಂತೆ ದಶರೂಪಕದಿಂದ ತಿಳಿಯಬರುತ್ತದೆ(ಕೃಪಿಡಿ. ೨೨೩). **ದೇಸೆ :** ೨. ಆದಿಪುರಾಣವಸ್ತುಕೃತಿಯಂ ಪೇಟ್ದಂ ಬೆಡಂಗಪ್ಪ ಮಾರ್ಗದೊಳಂ ದೇಸೆಯೊಳಂ ಪೊದಟ್ದಿಸೆವಿನಂ ಸಂಸಾರಸಾರೋದಯಂ (ಆದಿಪು. ೧೭-೭೮) ; ನೆಗಟ್ದ ರಸಂ ಮನಂಗೊಳಿಸೆ ಮಾರ್ಗಪೊಡಂಬಡೆ ದೇಸೆ ಕಬ್ಬಮಂ ಬಗೆಗೊಳಲಿಂತು ಪೇಟ್ದುದು (ಗದಾಯು. ೧-೩೬) ; ಪೊಸತೆನಿಸಿ ದೇಸೆಯಿಂ ನವರಸವಸೆಯಲ್ಕೊಳ್ಪುವೆತ್ತ ಮಾರ್ಗದಿನಿಳಗೇನೆಸೆದುವೊ ಸುಕವಿಗಳೆನೆ ನೆಗಟ್ದಸಗನ ಮನಸಿಜನ ಚಂದ್ರಭಟ್ಟನ ಸುಡಿಗಳ್ (ಪಂಚತಂ. ೫-೯) ; ನಾಗವರ್ಮನ ನೆನಹು ಹೊನ್ನನ ದೇಸೆ [ಪಾಠಾಂ. ಸಿ] ವಿಜಯನ ಭಾವ ... ಅನುಕರಿಸಲೀ ಕಾವ್ಯದೊಳಗೆ (ಜೀಪಂಚ. ೧-೩೦). ೫. "ದೇಸೆಯು ಗಾಡಿಯು ಸೊಬಗಹುದು" (ಕವಿಕಂ. ೨೦೨) ; ಒದವಿದ ನೂಲ ತೊಂಗಲುಲಿ ದೇಸೆಯನಾಂತು ವಿಳಾಸದಿಂದಿಱುಂಕಿದ ನಿಱಿ ಗಂಡರಳ್ಳಿರ್ದಗಳಂ ತುಱಿ

ಪೋಜೆಯುನುಂಟುಮಾಡುವಂದದೆ ನಿಡುಗಣ್ಗಳೊಳ್ಪಡೆ (ಪಂಪಭಾ. ೪–೩೫) ; ಚಂದ್ರಬಲವುಂ . . . ತದಾನನಚಂದ್ರಂ ಕುಡೆ ದೇಸೆ ಪೊಚ್ಚಪೊಸತಾಯ್ತು (ಗದಾಯು. ೧–೭) ; ಆಗಳಂತವುರದಂಗನೆಯರ್ನಡೆತಂದು ಬಾಹುವಲ್ಲರಿ ಕುಡೆ ದೇಸೆಯಂ ತ್ರಿಭುವನಪ್ರಭುಗಿಕ್ಕಿದರೊಲ್ದು ಸೇಸೆಯಂ (ಜಗವಿ. ೧೫–೭೯) ; ಸಮ್ಮಯ ಮಾತಿಂಗಿಂಬುಗೊಟ್ಟೊಡೆ . . . ಕೃತಾರ್ಥರೆ ನಾವಿದು ನಮ್ಮ ದೇಸೆಯೊಳ್ ಗಡಣಿಸೆ ನೋಡೆ ಕೌತುಕಮೆನುತ್ತುಮವಳ್ ತಳರ್ದಳ್ ಪ್ರಮೋದದಿಂ (ಕುಸುಮಾ. ೧೩–೧೦); ದೇಸೆಯನಾಂತ ಕನ್ನಡಿತಿಯರ್ ಕವಡೊಂದಿದ ಚೆಂದದಾಂಧ್ರಿಯರ್(ಚಕವಿ. ೫–೧೭೫). ೬. ಕನಕಾಂಬುಜ ಪಾದಪೀಠದೊಳ್ ನಿಸದಮ ನೀಡಿ ಕಾಲನಿಡೆ ರಾಜಕುಮಾರನದೊಂದು ದೇಸೆಯಿಂ (ಶಾಂತಿಪು. ೮–೪); ದಿಟ್ಟಿಗೆ ನಯಂಬಡೆದ ಪೊಚ್ಚಪೊಸ ದೇಸೆಯಿಂ (ಆಜಿಪು. ೪–೭ ರಗಳೆ); ಪೊಸತಿದೆಂದು ನಿರೀಕ್ಷಿಸಲೊಂದು ದೇಸೆಯುಂ ಪೆತ್ತು (ಜಗವಿ. ೩–೩೯). ೭. ಲಲಿತೋನ್ನತಮಣಿಮಯಕೂಟದಂದಮದು ಪಲವುಂ ದೇಸೆಯ ಮಾಟದಂದಂ (ಆದಿಪು. ೪–೩೦ ರಗಳೆ). ೧೧. ಸಾಸಿರತೋಳ್ಗಳುಳ್ಳೆನಗೆ ಕಾಳೆಗಮಿಲ್ಲಿನಿತೊಂದು ತೋಳ್ಗಳಂ ದೇಸೆಗೆ ಪೊತ್ತೆನಲ್ಲದಿಱಿವಂತಿರೆ ಪೊತ್ತೆನೆ, ಪೇೞಿಂ (ಜಗವಿ. ೧೭–೮೫) ; ಯದುರಾಜನ ಮನ್ನಿಗೀಗಳಿಂತಚ್ಯುತದೇವನೆಂಬ ಪೆಸರಾದುದಿದಲ್ಲದೆ ದೇಸೆಗಾದುದೇ (ಎಕ. V, ಬೇಲೂರು. ೧೭೫–೨೧ ; 1186); ಗುರುಶಬ್ದಂ ವಾಚ್ಯವಾಯ್ತಲ್ಲದೆ ವರಮುನಿಚಂದ್ರಂಗಿದೇಂ ದೇಸೆಗಾಯ್ತೆ (ಸೌಇಇ. XX, ೨೪೮–೯ ; 1228). ೧೨. ತುಱುಗಿ ತುರಂಗಮಂ ಪೊಳೆದು ಮೆಟ್ಟುವ ದೇಸೆಯನಾಡಿ ತೋರ್ಪಪೋಲ್ ತುಱುಗಿ ಕಪೋಲರಂಗತಟದೊಳ್ ಕುಣಿಯಲ್ ಮ ಣಿ ಕು ಂ ಡ ಳ ದ್ವ ಯ ಂ (ಪುಷ್ಪಪು. ೩–೭೪). ೧೩. [ಸಂಗೀತ] (?): ಬಹುಲಾಯಿ ದೇಸೆ ಪಲ್ಲಣೆ ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸವಂ (ಜಗವಿ. ೫–೩) ; ವಾದ್ಯವಿದ್ಯಾಧರನಪ್ಪ ವಿದ್ಯಾಧರಮಾರ್ದಂಗಿಕಂ ಮೃದಂಗಸಂಗತೋತ್ಸಂಗವಾಗಿ . . . ರಿಪುವಣಿ ಸಹರಣಿ ತುಡುಕು ದಱಿದು ವತ್ಕಿರಿ ಜತಿ ಜೋಕೆಯೆಂಬ ದೇಸೆಯ ಶಬ್ದಂಗಳೆಸೆಯೆ ಬಾಜಿಸುತ್ತಿರೆಯುಂ (ಶಾಂತೀಶ್ವ. ೧೬–೭೭ ವ).

**ದೇಸಿಯಂಕಕಾಱ**=ಒಂದು ಬಿರುದು : ವೂರ ಹಳಿಯರು ತಂಮಡಿಹರ ದಾಡೆ ಮಂಟಿ ಬೋವ ಮಡೆಯ ಬೋವ ಅಪ್ಪಹರುಯ ಮಲ್ಲಿಗಗೆಱೆ ಹೊರಗಾಗಿ ಕೊಟ್ಟರು ಎಣಿಸು ಮಗ ದೇಸಿಯಂಕಕಾಱಯಿಸಾಸ×ಗಲ್ಲ ಬರದ ಸೇನಬೋ ಗೋಪಯ್ಯ (ಎಕ. XIV, ಮಳವ. ೧೪೨–೨೮ ; ಸು. 1251).

[ <ಪ್ರಾ. ದೇಸೀ./ಸಂ. ದೇಶೀ./ತೆಲು. ದೇಸಿ ]

**ದೇಸಿಕಾರ್ತಿ** 'ದೇಸಿಗಾರ್ತಿ' ನೋ.

**ದೇಸಿಕಾರ್ತಿತನ** (ನಾ). ಚೆಲುವು; ಸೊಬಗು; ಬೆಡಗು : ದೇಸಿಕಾರ್ತಿತನಮಂ ನೆಱೆ ಬೀಱುತದೊರ್ವಳೊಪ್ಪಿದಳ್ (ತ್ರಿಪುವಿ. ೨೪–೧೫೭).

[ ದೇಸಿಕಾರ್ತಿ (<ದೇಸಿಗಾರ್ತಿ) + – ತನ ]

**ದೇಸಿಕಾಱ** 'ದೇಸಿಗಾಱ' ನೋ.

**ದೇಸಿಗ, ದೇಶಿಗ** (ಗು). ೧. ಪರದೇಶಿತನದ; ನಿರ್ಗತಿಕತನದ: ಪರದೇಶಕ್ಕೆ ದೇಸಿಗಮಾರ್ಗದಿಂ ಪೋಗಿ ಸೇದೆಗಿಡಲ್ವೇಡ (ಸುಕುಮಾ. ೩–೩೭ ವ). (ನಾ). ೨. ಪರಸ್ಥಳದವನು; ಬೇರೆ ಕಡೆಯಿಂದ ಬಂದವನು; ಯಾತ್ರಿಕ : ಪಱಿಕಾಱಗ್ಗಂ ಪಾತ್ರಕ್ಕಂ ದೇಸಿಗ ಛಾತ್ರಭೋಜನಕ್ಕಮೆಂದು ಸಮಕಟ್ಟಿ . . . ಸರ್ವ್ವನಮಸ್ಯಮಾಗೆ ಕುಡೆ (ಸೌಇಇ. IX–1, ೮೦–೧೬ ; 1018) ; ಅಮಾವಾಸ್ಯೆ ಸೋಮವಾರದಂದು ದೇಸಿಗ ಪ್ರವಾಸಿಗರ ಆಹಾರದಾನಕ್ಕೆ ಬಿಟ್ಟ ಸತ್ತ್ರಂ (ಎಕ. VII, ಶಿಕಾರಿ. ೧೪–೧೪ ; 1089). ೩. ದಿಕ್ಕಿಲ್ಲದವನು; ಗತಿಗೆಟ್ಟವನು; ಪರದೇಶಿ; ನಿರ್ಗತಿಕ : ಪೊಟಲೆಲ್ಲಮಂ ತೊಟಲ್ದು ಬಸಿಱಂ ಪೊರೆವೊಂ ದೇಸಿಗಂ (ವಡ್ಡಾರಾ. ೪೭–೮) ; ಎನ್ನೀ ಶ್ರೀಪತ್ನೀಶತೆಯುಂ ಬಗೆಯದೆ ಯತ್ನಪರರ್ ದೇಸಿಗಂಗೆ ಕೂಸಂ ಕೊಟ್ಟರ್ (ಶಾಂತಿಪು. ೫–೪೩) ; ಧವಳಮಂಗಳಗೇಯದಿನೊಪ್ಪಿ ಬರ್ಪ ಕೌರವಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ (ಗದಾಯು. ೫–೪೧) ; ಆರುಮಿಲ್ಲದ ದೇಸಿಗರಂತೆ ಕಾಡಂ ಪೊಕ್ಕು (ಧರ್ಮಾಮೃ. ೮–೮೦); ಮಗನರಸಿ ಮಂತ್ರಿಸಹಿತವನಿಪಂ ಹಿಂದೆ ದೇಸಿಗನಂತೆ ಕೌಶಿಕನ ಕಾಹಿನೊಳು ಬರೆ (ಹಚಕಾ. ೮–೭೩) ; ಒಕ್ಕಡಿತೆ ನೀರ್ಗೆ ಪಱಿಪಟ್ಟಿರ್ಕೆಯು ಪಣ್ಣೆಲೆಯ ಮುಱಿಗೆ ದೇಸಿಗರಂ ದೇವರ್ಕಳ್ಗೊಡೆಯರ್ ಮಾಟ್ಟಿರೆ (ಶಮದ. ೨೪ ಪ್ರಯೋ); ಏಳಿರೈ ಸಾಕೇಳಿ ಮಕ್ಕಳಿರೇಳಿರೈ ದೇಸಿಗರು ನಾವೆ ಭೂಪಾಲಕರು ನೀವು (ಕುವ್ಯಾಗ. ೧೧–೫೪); ಈ ಕ್ಷೋಣಿಸುತೆ ಗಂಗೆಯಂ ಕಳೆದು ಕಾಡೊಳ್ಮಹಾಕ್ಷೀಣೆಯಾಗಿ ದೇಸಿಗರಂತೆ ದೆಸೆದೆಸೆಯನೀಕ್ಷಿಸುತೆ ಮಱುಗುತಳುತಿರ್ದುದಂ ಕಂಡೆನು (ಜೈಮಿಭಾ. ೧೮–೪೦). ೪. ಋಷಿ; ಮುನಿ; ತಪಸ್ವಿ: ಕರುಣಾರಾಸಿ ಪವಡಿಸಿರಲ್ಕೆ ಕಂಡಾ ದೇಸಿಗನು ದಂಡಪ್ರಣಾಮ ಮಾಡುತ್ತೈತಂದ (ನಿಭಾಗ. ೯–೪–೨೩)– ದೇಸಿಗರಾಣ್ಮ ! ಬೆಳರ್ವಯ್ಯನಾಂತ ಪಕ್ಕಿದೇರನಂತುಂ ನಾಲ್ಗೈಮೊತ್ತ ಬಾಂಬೊಚ್ಚದಲೆಯನಂತುಂ ಒತ್ತಲೆಯ ಪೊಂಬಸಿಱನಂತುಂ ನಿನ್ನಂ ಕಾಣ್ಬೆಂ (ರಾಮಾಶ್ವ. ೭೫–೨೮). ೫. ಶಿವ; ಪರಮೇಶ್ವರ: "ಎಣ್ಮಯ್ಯಂ . . . ದೇಸಿಗಂ . . . ಐಮೊಗಂ – ಈ ೩೩ ಈಶ್ವರಂಗೆ ಪೆಸರ್" (ಕಶಸಾ. ೧–೧) ; "ಗೊಂದೆವಟಿಯುಗೆಯ ದೇಸಿಗನೆಂದುಂ . . . ಪೇೞ್ವರ್ ಸ್ಮರಹರಂಗೆ ನಾಮವಿದೆನುತುಂ" (ಕವಿಕಂ. ೧೭) ; "ದೇಸಿಗನೀಶ್ವರಂ" (ಕಶರ. ೫೧). **ದೇಶಿಗ :** ೩. ನೆನೆದನು ಮಱೆದಿರದೆ ತಾ ನಾಮಸುಧೆಯನು ಹರಿಹರಿಯೆ ಗೋವಿಂದ ದೇಶಿಗರೊಡೆಯ ನೀನೆನುತ (ಸಂಭಪ. ೮–೪೪) ; ದೇಶಿಗನಾದನೆಂದತ್ತರಿರ್ವರು ದುಗುಡದಲಿ (ಮೋಹತ. ೩೪–೩೩). ೬. ದೇಶದ ಪ್ರಜೆ,–ಜನ; ದೇಶದವನು : ದೇಶಿಗನು ತನ್ನೂರನುಳಿದು ವಿದೇಶದಲಿ ತೊಳಲುತ್ತ ತನ್ನಯ ದೇಶವನು ನೆನೆದಲ್ಲವನು ಬಿಸುಟೈದುವಂದದಲಿ (ನಿಭಾಗ. ೪–೧೫–೩೭). ೭. ಆಚಾರ್ಯ; ಗುರು : ಎಲವೊ ದೇಶಿಗ ಕಂಕಭಟ್ಟನೆ ಹಲವು ಧರ್ಮವ ಬಲ್ಲೆ ಗಡ ನೃಪತಿಲಕಗಱುಹುವುದೇನು ಸನ್ಯಾಸಿಗಳಿಗುಚಿತವಿದು ತಿಳಿಯೆ ದೇಶಿಗರಿಂಗೆ ದೇಶಿಗರೊಲವು ಸಮನಿಸಬೇಕು ಸಭೆಯಲಿ ಬಲವಿಹೀನರಿಗಾಪ್ತರಿಲ್ಲೆಂದಬಲೆಯೊಱಲಿದಳು (ಕುವ್ಯಾವಿ. ೩–೧೯). [ <ಸಂ. ದೇಶಿಕ ]

**ದೇಸಿಗಗಣ** (ನಾ). [ಜೈನ] ಜೈನಮುನಿಗಳ ಒಂದು ಪಂಗಡ; ಪರಂಪರಾಗತವಾದ ಜೈನ ವಿರಕ್ತರ ಒಂದು ಗುಂಪು: ದೇಸಿಗಗಣದ ಮಹೇಂದ್ರಪಂಡಿತರ್ (ಸೌಇಇ. XI–1, ೩೮–೧೧; 950); ಜಿನಶಾಸನಮಂ ಮೊದಲಿನ್ದಂತಳವಟ್ಟ ದೇಸಿಗಗಣ ಶ್ರೀಕೊಣ್ಡಕುನ್ದಾನ್ವಯಾಸ್ಪದಮಾಚಾರ್ಯರ್ (ಕಇಇ. ೭೩–೮–೬ ; 1008) ; ದೇಸಿಗಗಣದ ಪುಸ್ತಕಗಚ್ಛದ ಬೋಧವಿಭವದ ಕುಕ್ಕುಟಾಸನ ಮಲಧಾರಿದೇವರ ಶಿಷ್ಯರೆನಿಪ ಪೆಂಪಿಂಗಾದಂ (ಎಕ. II, ೭೩–೩೦: 1118). [ ದೇಸಿಗ + ಗಣ ]

**ದೇಸಿಗಣ** (ನಾ). = ದೇಸಿಗಗಣ : ಶ್ರೀಮೂಲಸಂಘ ದೇಸಿಗಣ ಪುಸ್ತಕಗಚ್ಛದ × × × ಕೊಂಡಕುಂದಾನ್ವಯರಾರ್ಯ್ಯ ಶುಬೇನ್ದು ಕಂದ ವಿ[ಜಯ]ಕೀರ್ತಿದೇವರ ಪ್ರಿಯಶಿಷ್ಯರಪ್ಪ ಬಾಹುಬಲಿದೇವರು (ಎಕ. I (R), ೭೫–೩ : 1390). [ ದೇಸಿ + ಗಣ ]

**ದೇಸಿಗತನ** (ನಾ). ದಿಕ್ಕಿಲ್ಲದಿರುವಿಕೆ : ನಿರ್ಗತಿಕತೆ : ನಿನ್ನಾಸೆಯೊಳಾಂ ನಿನಗೆ ಸಕಲ ರಾಜ್ಯಶ್ರೀಯುಂ ಲೇಸಾಗಿ ಮಾಡದಿರ್ದೊಡೆ ದೇಸಿಗತನದಿಂದೆ ನಮೆವುದೊಂದನೆ ಬಗೆವಾ (ಧರ್ಮಾಮೃ. ೩–೯೯) ; ಉಸಿರ್ದಳು ಪರರತಿ ದೇಸಿಗತನದ ಸುದ್ದಿಯನು (ಮೋಹತ. ೧೧–೨೦). [ ದೇಸಿಗ + – ತನ ]

**ದೇಸಿಗಾತಿ, ದೇಶಿಕಾತಿ** (ನಾ). = ದೇಸಿಗಾರ್ತಿ: ದೇಸಿಗಾತಿಯರನೆಸುಗೆಯಲ್ಲಿಕರ ನೊಂದು ಬೇಸತ್ತು ಹೆದೆಯನಿಳುಹದೆ ಸಾಸಿಗ ಕಾಮನಿಟ್ಟಿಕ್ಷುಚಾಪದವೊಲು ಮಿಸೆ ಕಂಜಿಪುದು ಕೇಶವನ (ವರ್ಧಜ. ೪–೧೦). **ದೇಶಿಕಾತಿ:** ಸೂಸಕಂಗಳ ಮುರಿದ ಮುತ್ತಿನ ದೇಶಿಕಾತಿಯರಾನನೇಂದುಗಳಾ ಸುಧಾಕರವೆನಲು ಗೆಲಿದುದು ಸಭೆ ನಭಸ್ಥಳವ (ಕುವ್ಯಾಸ. ೧೩–೩೦). [ ದೇಸಿ + – ಕಾತಿ ]

**ದೇಸಿಗಾರ್ತಿ,** ದೇ ಸಿ ಕಾ ರ್ತಿ, ದೇಸೆಕಾರ್ತಿ, ದೇಸೆಗಾರ್ತಿ (ನಾ). ಚೆಲುವೆ; ಸುಂದರಿ; ವಿಲಾಸವತಿ: ಪುನ್ನ ಬರ್ಪುದಕ್ಕೆ ಎಡಿ ಬಣ್ಣವೇಟಿ ಕಳೆ ಧೂಸರವಾದುದು ದೇಸಿಗಾರ್ತಿಯಾ (ವಿರೂಪಾ. ೯೦). **ದೇಸಿಕಾರ್ತಿ:** ಮಿಸುಗುವ ದೋರೆವಲ್ ಕರಮೆ ಪಾಸರ್ತವಾದುದು ದೇಸಿಕಾ [ಪಾಠಾಂ. ಸೆಗಾ]ರ್ತಿಯೊಳ್ (ಚಂದ್ರಪು. ೮–೫೦); (ರಸರ. ೩–೧೩೭ ನೋ;) ಮತ್ತಮೊರ್ವ ದೇಸಿಕಾರ್ತಿ ದೇಸಿಗೆ ತಕ್ಕ ವೇಷವಳವಟ್ಟರೆ . . . ನೋಟಕರ ದಿಟ್ಟಿಗೆ ಮಧುರವಾಗೆ ಮೆಚ್ಚನಚ್ಚೊತ್ತಿರ್ದಳ್ (ವಿರೂಪಾ. ೯೦). **ದೇಸೆಕಾರ್ತಿ:** ಲಲಿತಾಂಗನಂ ಮನಂಗೊಳಿಸುವಂಚಿಸ್ಸೆಕಾರ್ತನದ ಲಲ್ಲೆಯ ಸಗ್ಗದ ದೇಸೆ[ಪಾಠಾಂ. ಗಾಡಿ]ಕಾರ್ತಿಯರ್ (ಆದಿಪು. ೨–೭೧); ಪರಿಣತಿ ರಂಜಿಸುತ್ತುಮಿರೆ ನರ್ತಿಸಿದರ್ ಪೊಸ ದೇಸೆಕಾರ್ತಿಯರ್ (ಅಜಿಪು. ೫–೩೦); ಈಸು ಲಾವಣ್ಯವನುಳ್ಳ ಸರ್ವಾಂಗವಿಲಾಸದ ಪೊಸದೇಸೆ [ಪಾಠಾಂ. ಶಿ]ಕಾರ್ತಿ ಆಸೆ ಮಾಡಿದಳು ನಿನ್ನನು (ಕುಠಾಸಾಂ. ೨೫–೯೦). **ದೇಸೆಗಾರ್ತಿ:** ಮೇಲಿನ 'ಚಂದ್ರಪು' ಪ್ರಯೋಗದ ಪಾಠಾಂತರವನ್ನು ನೋಡಿ. [ ದೇಸಿಗಾಟಿ + – ತಿ$_1$ (< – ಇತ್ತಿ) ]

**ದೇಸಿಗಾಟಿ,** ದೇಸಿಕಾಟಿ, ದೇಸೆಕಾಟಿ, ದೇಸೆಗಾಟಿ (ನಾ). ೧. ಚೆಲುವ; ಸುಂದರ. ೨. ತನ್ನ ಕುಶಲಕಲೆಯಿಂದ ಸೌಂದರ್ಯವನ್ನುಂಟು ಮಾಡುವವನು; ಕಲಾವಿದ: ಶಿಲ್ಪದ ದೇಸಿಗಾಟಿರ ಕೈಮೆಗಳು ಲೇಸೈಸಲೇ (ಕುಪ್ವಾಸ. ೧೩–೨೪). **ದೇಸಿಕಾಟಿ:** ೧. ಉಸಿರಿನಿಯನೆ . . . ರಸಿಕ ಚೂಡಾಮಣಿ ಪೊಸದೇಸಿ [ಪಾಠಾಂ. ಸೆ] ಕಾಟಿನೆ ರಸಪೂರ ಜಾತಿ ಸತ್ಕಥೆಯ (ವರ್ಧಚ. ೭–೨). **ದೇಸೆಕಾಟಿ:** ೧. ಕಲಿಗಳಾದಿತ್ಯಂ ದೆಸೆಕಾಟಿರಡೆಗಣ್ಣರೊ [ಳ್ಪ]ಳಿವಂ ಪಿಸುಣಿಂಗೆ ಮುಳಿವಂ ವಾದ್ಯವಿದ್ಯಾಧರಂ . . . ಸಮಸ್ತ ಪ್ರಶಸ್ತಿಸಹಿತಂ ಶ್ರೀಮನ್ಮಹಾಸಾಮನ್ತನೆಟಿಯಮ್ಮನಿರಲ್ (ಸೌಇಇ. XI-1, ೭೪–೧೨; 1041); ಗಣ್ಡಮಣ್ಡಳಿಕಗಣ್ಡ ತಳಪ್ರಹಾರಿ ದೆಸೆಕಾಟಿರ ದೇವ ಮೂಱುರಾಯರಾಸ್ಥಾನತಲಿ ಬಿರುದರ ಗಂಡ ಶ್ರೀ[ಮ]ನ್ಮಹಾ ಮಣ್ಡಳೇಶ್ವರಂ ಕಾರ್ತ್ತವೀರ್ಯ್ಯದೇವರಸರು (ಕಇ. V, ೨೦–೪೩; 1125); ದೇಸೆಕಾಱನಂ ನಿಶ್ಚಿಂತನಂ ಸಿದ್ಧರಾಮಯ್ಯನಂ ದೂರದಿಂ ಕಂಡಳು (ಸಿದ್ಧರಾ. ೭–೧). **ದೇಸೆಗಾಟಿ** ೧: 'ದೇಸೆಗಾರ್ತಿ' ಪರಾ.

[ ದೇಸಿ + – ಕಾಟಿ ]

**ದೇಸಿಗಾಟಿಕೆ** (ನಾ). ಬೆಡಗು; ಠೀವಿ; ಗತ್ತು: ಕಾಸೆವೆರಸಿ ಕಳದಲಿ ನಿಂದದೊಂದು ವಿಲಾಸಕೆ ರಂಗದೊಳ್ಳಿಂದ ದೇಸಿಗಾಟಿಕೆಯ ಸುಪಾತ್ರ ಮೋಹಿಸುವಂತೆ ಪೂಸರ ನಿಂದೆ ಮೋಹಿಸುತ (ಭರಚ. ೫೨–೩೪).

[ ದೇಸಿಗಾಟಿ + – ಇಕೆ ]

**ದೇಸಿಗಿತಿ,** ದೇಶಿಗಿತಿ, ದೇಶಿಗಿತ್ತಿ (ನಾ). ಅನಾಥೆಯಾದ ಹೆಂಗಸು; ದಿಕ್ಕಿಲ್ಲದ ಪಂಹಿಳೆ: ಸಟಿಸಿಕ್ಕಿಂ ಪಿಡಿತಂದ ದೇಸಿಗಿತಿಯಂ ಭೋಗೋಪಭೋಗಂಗಳಂ ಮುಟಿದುಂ ಕಾಣದನಾಥೆಯಂ ನುಡಿವಪೊಲ್ಲಿನ್ನೊಂದು ಸಂಪ್ರತ್ತಿಯಿಂ ಜಱಚುತ್ತಿರ್ದಪೆ (ಅನಂಪು. ೧೧–೯೦); ಸ್ವರಲೋಪಕ್ಕೆ–ಘಟ್ಟಪಳ್ಳಿ . . . ದೇಸಿಗಿತಿ (ಶಮಂದ. ೨೦೯ ಪ್ರಯೋ); ಆಸೆಗೊಡುವವರಿಲ್ಲವಕಟಾ ದೇಸಿ[ಪಾಠಾಂ. ಶ, ಶಿ]ಗಿತಿ ತಾನಾಥನೇ ನೆಟಿ ದೋಷವಿಲ್ಲವೆ ನಿಮಗೆ ಕಂದನ ಕೊಂದವರು . . . ಎಂದಬಲೆ ಮೊಱೆಯಿಟ್ಟಳು ಭಟಾವಳಿಗೆ (ತೊರರಾ. ೭–೪೫–೨೪); ದೇಸಿಗಿತಿಯನು ಕಂಡು ಮಾಯಾಪಾಶಕಿದು ಘನವಲ್ಲೆನುತ ಬೆಸಗೊಂಡನಾ ಸತಿಯ (ನಿಭಾಗ. ೮–೧೩–೩೭). **ದೇಶಿಗಿತಿ:** ಮೇಲಿನ 'ತೊರರಾ' ಪ್ರಯೋಗದ ಪಾಠಾಂತರವನ್ನು ನೋಡಿ. **ದೇಶಿಗಿತ್ತಿ:** ದೇಶಿಗಿತ್ತಿಯರನು ಕೊಲಲೊಂದು ಸಿಂಗ ಬಂದಾಸೆವಟ್ಟದೆ ನೋಡಿಮನಲಾ (ಅಂಜಚ. ೧೦–೨೮); ದೇಶಿಗಿತ್ತಿಯ ನುಡಿವಂತೆ . . . ಎನ್ನ ಘಾಸಿ ಮಾಡುವವರೆನಿಸಿತಾಗ (ಅನಂಚ. ೧೮–೧೦೩).

[ ದೇಸಿಗ + – ಇತಿ$_1$ (< – ಇತ್ತಿ) ]

**ದೇಸಿಪರಿ** (ನಾ). ದೇಸಿಯಂ ರೀತಿ; ಸೊಬಗು: ಪೊಳೆಪೊಳೆವ ಕೆಂಜೆಡೆಯ ನಹಿಪತಿಯಳುಕೆ ಬಿಗಿದನು ದಂತಿಚರ್ಮದ ನೆಲಕೆ ಮುಂಜೆಗಳೆಯಲುಟ್ಟನು ದೇಸಿಪರಿ ಮೆಱೆಯೆ (ಕುಪ್ವಾಕ. ೭–೧೧). [ ದೇಸಿ + ಪರಿ$_3$ ]

**ದೇಸಿಯಗಣ** (ನಾ). = ದೇಸಿಗಗಣ: ಶ್ರೀಮೂಲಸಂಗ ದೇಸಿಯಗಣ ಪುಸ್ತಕಘಛ ಕೊಂಡಕುಂದಾನ್ವಯ ಇಂಗುಳೇಸ್ವರದ ಬಳಿಯ . . . ಪ್ರಭಾಚಂದ್ರದೇವರ ನಿಸಧಿ (ಎಕ. I (R), ೮೪–೧; 1044); ಸ್ವಸ್ತಿಶ್ರೀ ಮೂಲಸಂಘ ದೇಸಿಯಗಣ ಪುಸ್ತಕಗಚ್ಛ ಕೊಂಡಕುಂದಾನ್ವಯದ ತಾತಂಗಿಯ ಶ್ರೀಮಾಘನಂದಿ ಭಟ್ಟಾರಕ ದೇ × × ಶಾಂತಿನಾಥದೆವರ ಪ್ರತಿಷ್ಠೆಯ ಮಾಡಿದರು (ಎಕ. I (R), ೪–೧; ಸು. 12ನೆಯ ಶತ).

[ < ದೇಸೀಯ + ಗಣ ]

**ದೇಸಿವಡೆ,** ದೇಸೆವಡೆ (ಕ್ರಿ). ೧. ಚೆಲುವನ್ನು ಹೊಂದು; ಸೌಂದರ್ಯವನ್ನು ಹೊಂದು; ಶೋಭಿಸು; ಬೆಡಗನ್ನು ಪಡೆ: ಕಡುಚೆಲ್ವಿಂ ರತಿಗೆಗ್ಗಂ ಪಡೆದು ವಿಲಾಸಕ್ಕೆ ದೇಸಿವಡೆದವನಿಪನೊಳ್ ಪಡೆದು ಪಿರಿಯರಸಿತನಮುಂ (ಪಂಡಾಮಾ. ೨–೭೨); ಕೆಂಜೆಡೆಗಳ ಗೊಂಚಲ್ಗಳಿಂ ದೇಸಿವಡೆದುಟ್ಟ ವ್ಯಾಘ್ರಚರ್ಮಾಂಚಲದೊಳ್ಪಿದೆ . . . ಸಾಲೋಕ್ಯಸಾಮಿಪ್ಯದವರೆಸೆದಿರ್ದರು (ಚಬಪು. ೨–೨೫); ತರುಣಹರಿಣಗಣಕ್ಕೆ ಸರಸೇಕ್ಷಣದ ಸವಿನೋಟ ಮನುಪದೇಶಿಪಂತೆ ದೇಸಿ[ಪಾಠಾಂ. ದೆಸೆ]ವಡೆದು (ರಾಜಶೇ. ೧–೧೩೫ ವ). **ದೇಸೆವಡೆ:** ೧. ದೇಸೆವಡೆದತ್ತು ರತ್ನಶಿಲಾಸೋಪಾನದಿಂ . . . ಕಾಸಾರು (ಜಗವಿ. ೧೦–೬೨); ನುಣ್ಪೆಳೆಗನುಗುಳ್ವ ಪದತಳದ ಸೌಂದರಿಯಿಂದ ದೇಸೆವಡೆದ ಹದಿನಾಱಱ ಹರೆಯದ ಹರಂ ಕರುಣಿಸಿ ನಡೆತಂದು (ಬಸರ. ೧೨–೧೦೦). ೨. ಹಿರಿಮೆಯನ್ನು ಹೊಂದು; ದೊಡ್ಡಸ್ತಿಕೆಯನ್ನು ಪಡೆ: ದೇವಾ ನಿಮ್ಮ ಪೂಜಿಸಿ ದಾಸನ ಕುಲ ದೇಸೆ [ಪಾಠಾಂ. ಸಿ] ವಡೆಯಿತ್ತು (ಬಸವ. ೬೦೭).

[ ದೇಸಿ + ಪಡೆ$_1$ ]

**ದೇಸಿವೆಱು,** ದೇಸೆವೆಱು (ಕ್ರಿ). ಚೆಲುವನ್ನು ಪಡೆ; ಶೋಭೆಯನ್ನು ಹೊಂದು; ಶೋಭಿಸು: ರಸ ಭಾವಂ ಗಮಕಂ ಕಾಣಿಸೆ ನಾಣ್ನುಡಿ ದೇಸಿವೆತ್ತ ಪೊಸನುಡಿ ಮಾರ್ಗಂ . . . ಇನಿತಱೊಳೆಸೆಯದ ಕೃತಿ ಕೃತಿಯೆ (ಧರ್ಮಾಮೃ. ೧–೪೦); ಅಂಬರವಿತಾನದಿಂ ನರರ ಬರಿಸುತ್ತೊಪ್ಪಿದರಲ್ಲಿ ದೂಸಿಗರ್ದೇಸಿವೆತ್ತು (ಪದ್ಮರಾ. ೮–೭೭); ಕಿಱುಗಿವಿ ದೇಸಿವೆತ್ತಸಿಪೊಗಂ . . . ಸೂಕ್ಷ್ಮರೋಮದಿಂ ಮೆಱೆದುವು ಸಂಗರಾಂಗಣದೊಳಪ್ರತಿವೀರನ ವಾಜಿರಾಜಿಗಳ್ (ಅಪ್ರತಿ. ೧೩೩–೭); ಮುರಿದೆಳವಿಾಸೆ . . . ಎಡಗಾಲ ತೊಡರ್ವಿರಾಜಿಸುತ್ತಿರೆ ಪೊಸದೇಸಿವೆತ್ತಸದುದಲ್ಲಿ ನರೇಂದ್ರಕುಮಾರಸಂಕುಳಂ (ರಾಜಶೇ. ೧೨–೪೫). **ದೇಸೆವೆಱು:** ನವರಸಮುಣ್ಮೆ ಮಾತು ಪೊಸತಾಗಿರೆ ದೇಶಿಯೆ ದೇಸೆವೆತ್ತುದೆಂಬವೊಲಿರೆ . . . ಒಡರ್ಚಿದನೀ ಪ್ರಬಂಧಮುಂ (ಛಂದೋಂಬು. ೧–೧೧); ಬಾಸೆ ದೇಸೆವೆತ್ತುದು ವಳಿರೇಖೆ ಮಸುಳ್ದು ತೋಱಿದುವು (ಸುಕುಮಾ. ೧೦–೧೯); ದೇಸೆವೆತ್ತುವು ಕಮಳಭವಂಗಿಕ್ಕುವಮಳ ಚಮರರುಹಗಳ್ (ಜಗವಿ. ೧–೩೮). [ ದೇಸಿ + ಪೆಱು$_1$ ]

**ದೇಸಿಸೆಟ್ಟಿ** (ನಾ). ವರ್ತಕರ ಒಂದು ಪಂಗಡ: ಸಾಸನಿಸೆಟ್ಟಿ, ದೇಸಿಸೆಟ್ಟಿ ಮುಮರಿದಂಡಂ ರವ ಮುಖ್ಯವಾಗಿ ಆ ಮಹಾಜನಂಗಳ ಸಂನಿಧಾನದಲು (ಕಕುಲ. ೪–೧೯; ?). [ ದೇಸಿ + ಸೆಟ್ಟಿ ]

**ದೇಸೀಯ** (ನಾ). ದೇಶಕ್ಕೆ ಸಂಬಂಧಿಸಿದುದು; ದೇಶ್ಯ: "ಕಾಕಂದೆನೆ ದೇಸೀಯಂ" (ಕವಿಕಂ. ೨೪೭). [ < ಸಂ. ದೇಶೀಯ ]

**ದೇಸುಕ್ಕೆ** (ನಾ). ಒಂದು ಉದ್ದಳತೆ (?): ಹೂವಿನ ಹಡಂಗಿಲೆಯ ಚಲ್ಲಿಯ ಕೇರಿಯಲ್ಲಿ ಪರವಾಳಿಗೆಮನೆ ಸರ್ವ್ವಪಂ ದೇಸುಕ್ಕೆ ಏಳುವೂರೊಡೆಗೆಱೆಯ ಕೆಳಗಣ ತೋಂಟಾ (ಸೌಇಇ. IX-1, ೨೫೪–೭೭; 1148). [ ? ]

**ದೇಸೆ** 'ದೇಸಿ' ನೋ.

**ದೇಸೆಕಾರ್ತಿ** 'ದೇಸಿಗಾರ್ತಿ' ನೋ.

**ದೇಸೆಗಾರ್ತಿ** 'ದೇಸಿಗಾರ್ತಿ' ನೋ.

**ದೇಸೆಗಾಱ** 'ದೇಸಿಗಾಱ' ನೋ.

**ದೇಸೆಯಱ್** (ಕ್ರಿ). ಬೆಡಗನ್ನು ತಿಳಿ; ಅಂದವನ್ನು ತಿಳಿ : ಭಾಸಿಪ ಬಹುರತ್ನವಿಭೂಷಣದಿಂ ದೇಸೆಯಱಿದು ಸಿಂಗರಿಸಿದ ಬಳಿಕ (ಜಯಕಾ. ೫-೨೪). [ ದೇಸೆ (<ದೇಸಿ) + ಅಱ್ ]

**ದೇಸೆವಡೆ** 'ದೇಸಿವಡೆ' ನೋ.

**ದೇಸೆವೆಱು** 'ದೇಸಿವೆಱು' ನೋ.

**ದೇಹ** (ನಾ). ಮೈ ; ಶರೀರ ; ಅಂಗ : "ಕಾಯಂ ಸಂಹನನಂ ದೇಹಂ ವಪುಯೆಂದಿನಿತುಂ ಭಾವಿಸುವೊಡಂಗಪರ್ಯಾಯಂಗಳ್" (ವಸ್ತುಕೋ. ೬೭-೧) ; ದೇಹಕ್ಕಶುಚಿತ್ವಂ . . . ಅಶುದ್ಧಾಹಾರವ್ಯದ್ಧಮಧುಕೀಟಾಹತ ಮತಿದುಸ್ತರಾಮಯಂ ಧಾತುಮಯಂ (ಮಲ್ಲಿಪು. ೧೪-೬೪); ಎಡದ ಕೈಯಲಿ ನಿಗಳವನಿಕ್ಕಿ ಬಲದ ಕೈಯ ಕಡಿದುಕೊಂಡರೆ ನೋಯದಿಪ್ಪುದೆ ಪ್ರಾಣ ವೊಂದಾಗಿ ದೇಹ ಬೇಱಲ್ಲ (ಬಸವ. ४೦೫); ದೇಹಕ್ಕನುಗುಣವಾಗಿರೆ ಬಾಹುಕನೆಂಬಧಮನಾಮಮಂ ತಳೆದಂ (ನಳಚಂ. ೬೪೬) ; ದೇಹ ತಾನಭಿಮನ್ಯುವೋ ದಿಟ ದೇಹಿ ತಾನಭಿಮನ್ಯುವೋ ಜಡದೇಹ ತಾನಭಿಮನ್ಯು ವಲ್ಲದು ಕೆಟ್ಟರೇನಾಯ್ತು (ಕುಮಾವ್ಯಾ. ೭-೨೭) ; ದೇಹವೆಂತೆನೆ-ದೇಹವು ಕೃಶ, ಸ್ಥೂಲ, ಮಧ್ಯಮವೆಂದು ಮೂರು ತೆರನಾಗಿರುವುದು (ಸಕವೈ. ೧೯).

**ದೇಹ ಮಾರು** = ಪರಪುರುಷನಿಗೆ ಶರೀರವನ್ನು ಒಪ್ಪಿಸು ; ಅನೈತಿಕ ಸಂಬಂಧವನ್ನು ಬೆಳೆಸು ; ವೇಶ್ಯಾವೃತ್ತಿಯನ್ನು ನಡೆಸು : ಶೀಲ ಚೆಲುವೆಯಿರಬಹುದು. ಗುಣವತಿಯಿರಬಹುದು. ಆದರೆ ಅವಳ ತಾಯಿ ನಾಲ್ಕು ಜನಕ್ಕೆ ದೇಹಮಾರಿದಳೆಂದರೆ ಗೌರವವುಳ್ಳ ತಾನದ ಹುಡುಗ ಒಪ್ಪುತ್ತಾನೆಯೇ ? (ಹೂಹಣ್ಣು. ೭೯). [ ಸಂ. ]

**ದೇಹಗುಣ** (ನಾ). ಶರೀರದ ಗುಣ; ಶರೀರಧರ್ಮ: ದೇಹಗುಣಗಳಳಿದು ಲಿಂಗದೇಹಿಯಾದ ಶರಣನು ಬಾಹಿರಂಗದ ಬಳಿಕ ಮಾಯಾ ಮೋಹವನ್ನು ಜಱಿದನು (ಅವಚಂ. ३೯೧-೧೩೦೩). [ ದೇಹ + ಗುಣ ]

**ದೇಹಜ** (ಗು). ೧. ದೇಹದಲ್ಲಿ ಹುಟ್ಟಿದ ; ಶರೀರದಲ್ಲಿ ಉಂಟಾದ. (ನಾ). ೨. ಅಂಗಜ ; ಕಾಮ ; ಮನ್ಮಥ : ದೇಹಜ ತನಗೆ ಮಾರ್ಮಲೆವ ತಾಪಸರೆಂಬ ವಿಹಂಗಮಂಗಳ ತಲೆಯನು (ಜ್ಞಾನಜ. ३-೧३). [ ಸಂ. ]

**ದೇಹರ್ಝಾಡೆ** (ನಾ). ಹಳ್ಳಿಯ ಮನೆಗಳ ಮತ್ತು ಜಾನುವಾರುಗಳ ಗಣತಿ: (ಕಿಸಂಗ್ರ. ೧೯೭). [←ಮರಾ. ದೇಹರ್ಝಾಡಾ, ದೇಹೇರ್ಝಾಡಾ]

**ದೇಹತೆ** (ನಾ). ದೇಹದ ಭಾವ,-ಧರ್ಮ ; ದೇಹತನ ; ದೇಹತ್ವ: ಭಕ್ತಯುಕ್ತಿಯನಧಿಕಭಯಮಂ ಭಕ್ತದೇಹಿಕ ದೇಹತೆಯುಮಂ [ಪಾಠಾಂ. ದೇವತನಂಮಂ] ವ್ಯಕ್ತಮಾಗಲು ನಂಬಿಯಣ್ಣಂಗಱುಹಬೇಕೆಂದು (ಬಸಪು. ३೬-३४). [ ಸಂ. ದೇಹತಾ ]

**ದೇಹತ್ಯಾಗ** (ನಾ). ದೇಹವನ್ನು ಬಿಡುವುದು ; ಸಾವು ; ಮರಣ : ದೇಹಗತ ಆತ್ಮಕ್ಕೆ ಜೀರ್ಣದೇಹತ್ಯಾಗವೂ ನವ್ಯದೇಹಲಾಭವೂ ಸಹಜ (ಭಾರದ. ೧೧೪). [ ದೇಹ + ತ್ಯಾಗ ]

**ದೇಹತ್ರಯ** (ನಾ). [ವೇದಾಂತ] ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಶರೀರಗಳು; **P** ೧. ಸ್ಥೂಲಶರೀರ: ಪಂಚಭೂತಗಳಿಂದ ಆಗಿರುವ ಶರೀರ. ೨. ಸೂಕ್ಷ್ಮ ಶರೀರ : ಸ್ಥೂಲಶರೀರದ ಒಳಗಡೆ ಪಂಚಪ್ರಾಣಗಳೂ ದಶೇಂದ್ರಿಯಂಗಳೂ ಮನಸ್ಸೂ ಬುದ್ಧಿಯೂ ಪಂಚತನ್ಮಾತ್ರಗಳೂ ಕೂಡಿರುವ ಶರೀರ. ಇದಕ್ಕೆ ಲಿಂಗಶರೀರವೆಂದು ಹೆಸರು. ಇದು ಮರಣಾವಸ್ಥೆಯಲ್ಲಿ ಸ್ಥೂಲಶರೀರವನ್ನು ಬಿಟ್ಟು ಹೋಗಿ ಪುಣ್ಯಪಾಪಫಲಗಳನ್ನು ಅನುಭವಿಸಲು ಬೇರೊಂದು ಸ್ಥೂಲಶರೀರವನ್ನು ಸೇರಿಕೊಳ್ಳುತ್ತದೆ. ಇದು ಮೋಕ್ಷವಾಗುವ ವರೆಗೂ ಇರುತ್ತದೆ. ३. ಕಾರಣಶರೀರ: ಇದು ನಿದ್ರೆಯಲ್ಲಿ ಜೀವನಿಗೆ ಆಶ್ರಯವಾಗಿರುವ ಅವ್ಯಕ್ತ ಎಂಬ ಹೆಸರುಳ್ಳ ಅನಾದಿಯಾದ ಮಾಯೆ. ಇದು ಸುಷುಪ್ತಿಯಿಂದ ಅಭಿವ್ಯಕ್ತವಾಗುತ್ತದೆ. ನಿದ್ರಾವಸ್ಥೆಯಲ್ಲಿ ಬುದ್ಧಿಯ ವ್ಯಾಪಾರವೆಲ್ಲ ಈ ಮಾಯೆಯಲ್ಲಿ ಅಡಗಿರುತ್ತದೆ. ಜೀವನು ನಿದ್ರೆಯಲ್ಲಿ ಅಲ್ಲಿದ್ದುಕೊಂಡು ಸುಖವನ್ನು ಅನುಭವಿಸುತ್ತಾನೆ. ಇದು ಅದ್ವೈತದ ಪ್ರಕ್ರಿಯೆ : ಗುರುವು ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ದೇಹತ್ರಯಗಳಲ್ಲಿರುವ ಆಣವ, ಮಾಯಾ, ಕಾರ್ಮಿಕಗಳೆಂಬ ಮಲತ್ರಯಗಳನ್ನು . . . ಸುಟ್ಟು (ಅಷ್ಟಾವಿ. ೧) : ದೇಹತ್ರಯದ ಸ್ಮೃತಿಯು ತಪ್ಪಿ ದೇವಾ ನೀನೆ ಗತಿಯು ಎಂದು (ಶರೀಷ. ೧೭-೧). [ ದೇಹ + ತ್ರಯ ]

**ದೇಹದಂಡಣೆ** (ನಾ). = ದೇಹದಂಡನೆ : ದೇಹದಂಡಣೆಯೇಕೆ ಆಯಾಸ ಗೊಳಲೇಕೆ ಮಾಯಾರಿ ಶಿವನ ನಿಜಸುಖದೊಳೊಡವೆರೆದ ಕಾಯವೆ ಶಿವನ ನಿಜರೂಪ (ಗುರುಬೋ. ೩-೮೮). [ ದೇಹ + ದಂಡಣೆ ]

**ದೇಹದಂಡನೆ** (ನಾ). ತಪಸ್ಸು, ವ್ರತ, ಉಪವಾಸ, ವ್ಯಾಯಾಮ ಮುಂತಾದ ಕಾರಣಗಳಿಂದಾಗಿ ಶರೀರಕ್ಕೆ ಮಾಡಿಕೊಳ್ಳುವ ಕ್ಲೇಶ,-ಶಿಕ್ಷೆ ; ಕಾಯಕ್ಲೇಶ : "ತಪಃ-ದೇಹದಂಡನೆ" (ಕಾಶಕ್ಕ. ३೪). [ ದೇಹ + ದಂಡನೆ ]

**ದೇಹದಾರ್ಢ್ಯ** (ನಾ). ದೇಹದ ಶಕ್ತಿ ; ಶರೀರದ ಬಲ : ದೇಹದಾರ್ಢ್ಯವೂ ಸಾಕಷ್ಟಿದ್ದಿತು (ಜಂಗಬ. ೧೯೪). [ ದೇಹ + ದಾರ್ಢ್ಯ ]

**ದೇಹದೀಪ್ತಿ** (ನಾ). ಶರೀರದ ಕಾಂತಿ,-ಶೋಭೆ : ಹಾರ ಮರೀಚಿಯುಂ ಮರಕತಚ್ಛವಿಯುಂ ಗೆಲೆ ದೇಹದೀಪ್ತಿ . . . ಬಲಾಚ್ಯುತರದೇನೆಸೆದಿರ್ದರೊ ರಾಮಲಕ್ಷ್ಮಣರ್ (ಪಂರಾಮಾ. ३-೧೫೯). [ ದೇಹ + ದೀಪ್ತಿ ]

**ದೇಹಧರ್ಮ** (ನಾ). ೧. ದೇಹದ ಸ್ವಭಾವ,-ಪ್ರಕೃತಿ. ೨. ಶರೀರದಲ್ಲಿ ತನ್ನಷ್ಟಕ್ಕೆ ನಡೆಯುತ್ತಿರುವ ಶ್ವಾಸೋಚ್ಛ್ವಾಸಾದಿ ಕಾರ್ಯ ; ಶರೀರ ವ್ಯಾಪಾರ : ದೇಹಧರ್ಮ ತನ್ನ ಆದಂತೆ ಆಗಲಿ ಕೂಡಲಸಂಗನ ಪೂಜಿಸಿದಲ್ಲದೆ ನಿಲಲಾಱೆನು (ಬಸವ. ४೯೫) ; ದೇಹಧರ್ಮವೆಂದರೆ ದೇಹ ದಲ್ಲಿ ತಾನಾಗಿ ನಡೆಯುತ್ತಿರುವ ಪ್ರಾಕೃತಿಕ ಕಾರ್ಯಗಳು (ಆರ್ಯಧ. ೧೧). [ ದೇಹ + ಧರ್ಮ ]

**ದೇಹಧಾರಣ** (ನಾ). ಶರೀರವನ್ನು ಧರಿಸುವುದು ; ಬದುಕಿರುವುದು : ಜೀವನು ತನ್ನ ಕರ್ಮಾನುಸಾರವಾಗಿ ದೇಹಧಾರಣ ಮಾಡುತ್ತಾನೆ (ರೂಢಿ). [ ದೇಹ + ಧಾರಣ ]

**ದೇಹಧಾರಿ** (ಗು). ೧. ದೇಹವನ್ನು ಹೊಂದಿರುವ; ಶರೀರವನ್ನು ಪಡೆದಿರುವ. (ನಾ). ೨. ದೇಹವನ್ನು ಹೊಂದಿರುವ ಜೀವ ; ಬದುಕಿರುವ ವ್ಯಕ್ತಿ. 'ಚರಮದೇಹಧಾರಿ' ಪರಾ. [ ಸಂ. ದೇಹಧಾರಿನ್ ]

**ದೇಹನಿಸ್ಪೃಹ** (ನಾ). ಶರೀರಾಭಿಮಾನವನ್ನು ತೊರೆದವನು ; ವಿರಕ್ತ : ಸುಸವಾಧಿಯೋಗದಲ್ಲೆದು ನಿಜವನು ದೇಹನಿಸ್ಪೃಹನಾಗು ನೀನೆಂದ (ಕುಮಾವ್ಯಾ. ೧೮-೫೮). [ ದೇಹ + ನಿಸ್ಪೃಹ ]

**ದೇಹನ್ಯಾಸ** (ನಾ). ಜಪ, ಪಾರಾಯಣ ಮೊದಲಾದ ಕಾಲದಲ್ಲಿ ವಿಧ್ಯುಕ್ತವಾದ ರೀತಿಯಲ್ಲಿ ಹೃದಯವೇ ಮೊದಲಾದ ದೇಹಭಾಗ ಗಳನ್ನು ಮುಟ್ಟಿಕೊಳ್ಳುವುದು : ನಿರುತ ಸತ್ಪ್ರಾಣಯಾಮವ ತೀರ್ಚಿ ಕರ ದೇಹನ್ಯಾಸಂಗಳರ ಪೂರಿಸಿ (ನವಮೋ. ३-४३) . 'ಅಂಗನ್ಯಾಸ', 'ಕರನ್ಯಾಸ' ಪರಾ. [ ದೇಹ + ನ್ಯಾಸ ]

**ದೇಹಪುಷ್ಟಿ** (ನಾ). ಶರೀರವು ಪುಷ್ಟವಾಗುವುದು,-ದೃಢವಾಗುವುದು : ರಸ, ಗಂಧಕ . . . ಕಿರುಮೂಲಕ, ಇವ ಚೂರ್ಣಮಾಡಿ ಕೊಳ್ಳುವುದು. ದೀಪನ ಹುಟ್ಟುವುದು, ದೇಹಪುಷ್ಟಿಯಹುದು (ವಿವೈವಿ. ೧೭೦). [ ದೇಹ + ಪುಷ್ಟಿ ]

**ದೇಹಪ್ರಕೃತಿ** (ನಾ). ಶರೀರದ ಸ್ವಭಾವ ; ನೈಜವಾದ ಮೈಗುಣ : ದೇಹಪ್ರಕೃತಿಯ (Constitutional) ರೋಗಲಕ್ಷಣಗಳು (Symptoms) ಉಗ್ರವಾಗುತ್ತವೆ (ಕಲರೋ. ೦೭) ; ನನ್ನ ದೇಹಪ್ರಕೃತಿಗೆ ಅದು ಒಗ್ಗುವುದಿಲ್ಲ (ಪದ್ಮಸ. ೨೫೫). [ ದೇಹ + ಪ್ರಕೃತಿ ]

**ದೇಹಬಾಧೆ** (ನಾ). ೧. ಶರೀರಕ್ಕೆ ಒದಗುವ ತೊಂದರೆ. ೨. ಮಲ ಮೂತ್ರ ವಿಸರ್ಜನೆ : ಕತ್ತಲೆಯಲ್ಲಿ ಕಾಣದಾದನು. ದೇಹಬಾಧೆಗೆ ಅವಸರವಾಗಿರಬೇಕು (ಮಲಮ. ೮೬೪). [ ದೇಹ + ಬಾಧೆ ]

**ದೇಹಬಿಡು** (ಕ್ರಿ). (ಜೀವಾತ್ಮನು) ಶರೀರವನ್ನು ತ್ಯಜಿಸು ; ಸಾಯು ; ಮರಣಹೊಂದು : ನನಗೆ ದೇಹಬಿಡಲು ಅಪ್ಪಣೆ ಕೊಡು ; ನೀನು ಅನುಜ್ಞೆ ಕೊಟ್ಟರೆ ನನಗೆ ಸದ್ಗತಿ ಲಭಿಸುತ್ತದೆ (ವಚಥಾ. ೩೫೮). [ ದೇಹ + ಬಿಡು$_1$ ]

**ದೇಹಭಾನ** (ನಾ). ಮೈ ಮೇ ಲಿ ನ ಎಚ್ಚರ,–ಪರಿವೆ,–ಪ್ರಜ್ಞೆ : ಮಾತಂಗಾ ದೇಹಭಾನವಿಲ್ಲದೆ ಎದೆಯನ್ನು ಗಟ್ಟಿಯಾಗಿ ಗುದ್ದಿಕೊಂಡಳು (ವಾಸನಾ. ೧೨೧); ದೇಹಭಾನವನ್ನು ಮರೆತು ಸುಶೀಲೆಯ ಜೀವ ಅಲೆಯುತ್ತಿತ್ತು (ಸಮಜೀ. ೬೨೩). [ ದೇಹ + ಭಾನ ]

**ದೇಹಭಾನಗೊಳ್ಳು** (ಕ್ರಿ). ಮೈಮೇಲಿನ ಪ್ರಜ್ಞೆಯನ್ನು ಪಡೆ; ಮೂರ್ಛೆ ತಿಳಿ : ತಾಯಿಯ ದರ್ಶನವಾಗುತ್ತಲೆ ಹೂಸೆ ದೇಹಭಾನಗೊಂಡು ತಾವು ಮನೆಗೆ ಬಂದೆನೆಂದು ತಿಳಿದುಕೊಂಡಳು (ಹಂಸಾ. ೮). [ ದೇಹಭಾನ + ಕೊಳ್ಳು$_1$ (<ಕೊಳ್$_1$) ]

**ದೇಹಭಾವ** (ನಾ). ಶರೀರದ ಸ್ವಭಾವ ; ಶರೀರಧರ್ಮ : ದೇಹಭಾವವಳಿದಲ್ಲದೆ ಜೀವಭಾವವಳಿಯದು ಜೀವಭಾವವಳಿದಲ್ಲದೆ ಭಕ್ತಿಭಾವವಳವಡದು (ಅವಚಂ. ೨೭೩-೧೨೫೭). [ ದೇಹ + ಭಾವ$_2$ ]

**ದೇಹಮಬ್ಬು** (ನಾ). ಮೈಮೇಲೆ ಕಪ್ಪುಬಣ್ಣ ಹರಡುವ ಒಂದು ಬಗೆಯ ಚರ್ಮರೋಗ : ದೇಹಮಬ್ಬುವರ್ಧನಕ್ಕೆ :–ಶುಂಠಿ ಪಲ ೧ ತಾಳೀಬೆಲ್ಲ ಪಲ ೩, ಸಮುದ್ರಫಾಳಬೀಜ ಪಲ ೧, ಈ ಮೂರನ್ನೂ ಮರ್ದಿಸಿ ಎಲಚಿಹಣ್ಣಿನ ಪ್ರಮಾಣ ಗುಳಿಗೆಯ ಕೊಡಲು ಕರ ಉಥಿ ಮಾಸಿ ಸಾಯಂಕಾಲದಲ್ಲಿ ಗುಣ (ವಿವೈವಿ. ೧೧೭). [ ದೇಹ + ಮಬ್ಬು (<ಮರ್ವು) ]

**ದೇಹಮುಕ್ತ** (ನಾ). ದೇಹದಿಂದ ಬಿಡುಗಡೆ ಹೊಂದಿದವನು : ಸತ್ತು ಹೋದವನು ; ಮೃತ : ಎರೆಯಂಗರು ದೇಹಮುಕ್ತರಾದರು (ಶಾಂತಲಾ. ೧೮). [ ದೇಹ + ಮುಕ್ತ ]

**ದೇಹಮೋಹ** (ನಾ). ಶರೀರದ ಮೇಲಿನ ಮಮತೆ ; ಬದುಕಬೇಕೆಂಬ ಇಚ್ಛೆ : ತಂದೆಯಳಿದಾ ಹೊತ್ತು ಹಗೆಯನು ಕೊಂದು ಸಾಯದೆ ದೇಹ ಮೋಹಕೆ ನಿಂದು ನೀ ನಿಶ್ಶಂಕನಾದೈ ವೈರಿಶರಹತಿಗೆ (ಕುವ್ಯಾಕ. ೩-೨೮). [ ದೇಹ + ಮೋಹ ]

**ದೇಹಯಾತ್ರೆ** (ನಾ). ದೇಹವನ್ನು ಪೋಷಿಸಿಕೊಂಡು ಹೋಗುವಿಕೆ ; ಜೀವನವನ್ನು ಸಾಗಿಸುವಿಕೆ : ಪೋಲೀಸಿನವರಿಗೆ ಗೂಢಚಾರನಾಗಿದ್ದುಕೊಂಡು ದೇಹಯಾತ್ರೆಯನ್ನು ನೆರವೇರಿಸಿಕೊಳ್ಳುತ್ತಿರುವ ಆ ಹರೇ ರಾಮನೇ ? (ಬಿಶಾಪ. ೧೫). [ ದೇಹ + ಯಾತ್ರೆ ]

**ದೇಹರ** 'ದೇವಾರ' ನೋ.

**ದೇಹರುಚಿ** (ನಾ). = ದೇಹದೀಪ್ತಿ : ಕನಕಚ್ಛಾಯೆಯಿನಾಳ್ದ ದೇಹರುಚಿ ಚೆಲ್ವಂ ಬೀಱೆ (ಪುಷ್ಪಪು. ೦-೧೧). [ ದೇಹ + ರುಚಿ ]

**ದೇಹಲಬ್ಧಾಂಗುಲ, ದೇಹಲಬ್ಧಾಂಗುಳ** (ನಾ). [ಶಿಲ್ಪಶಾ] ದೇವತಾ ಪ್ರತಿಮೆಗಳನ್ನು ಕಡೆಯುವಾಗ ದೇಹದ ಪ್ರಮಾಣವನ್ನು ನಿರ್ಣಯಿಸುವ ಒಂದು ಅಳತೆ : ಮಾನಾಂಗುಲ, ಮಾತ್ರಾಂಗುಲ, ದೇಹ ಲಬ್ಧಾಂಗುಲವೆಂಬ ಅಳತೆಗಳಿಂದ ಪಂಚತಾಲ, ನವತಾಲಾದಿ ವಿವೇಚನೆಯಿಂದ ಮೂರ್ತಿಗಳನ್ನು ರಚಿಸುವ ವಿಧಾನಗಳನ್ನೂ...ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಭಾರದ. ೮೦). **ದೇಹಲಬ್ಧಾಂಗುಳ :** ಪ್ರತಿಮೆಯ . . . ಒಂದೊಂದವಯವಕ್ಕಿಷ್ಟು ಭಾಗವೆಂದು ವಿಭಾಗಿಸುವದೇ ದೇಹಲಬ್ಧಾಂಗುಳಮಕ್ಕುಂ (ವಿವೇಕ. ೩೦೦). [ ದೇಹ + ಲಬ್ಧ + ಅಂಗುಲ ]

**ದೇಹಲಬ್ಧಾಂಗುಳ** 'ದೇಹಲಬ್ಧಾಂಗುಲ' ನೋ.

**ದೇಹಲಿ, ದೇಹಳಿ** (ನಾ). ೧. ಹೊಸತಿಲು ; ಹೊಸ್ತಿಲು. ೨. ಬಾಗಿಲ ಮುಂದಿನ ಜಗಲಿ : (೬). **ದೇಹಳಿ :** ೧. "ದೇಹಳಿಯದೊಗೆದ ಹೊಸತಿಲೆನಿಕ್ಕುಂ" (ಮಂಗರಾ. ೫೮-೧೨) ; "ನೆಱೆ ದೇಹಳಿಯೆ ಪೊಸಂತಿಲ್" (ಕಬ್ಬಿಗ. ೪೭) ; "ಹೊಸ್ತಿಲೊಳು ದೇಹಳಿಯೆನಿಕ್ಕು" (ಕಶರ. ೫೨); ಏಳು ಶರಧಿಸಚ್ಚೋರೆ ದಶದಿಕ್ಕು ದೇಹಳಿ ನೆರೆದ ಜನವೇ ಚಿತ್ರದಿರವಜಾಂಡವೆ ಚೆಂಡು ಸುರತರು ನಿಂಬಭೂಜವಾಗಲದೇ ವಿರತಿ (ಕೈವಲ್ಯ. ೩-೨೦-೧) ; ಪಕ್ಕಂಗಳಂ ನೋಡಿ ಗೇ[ದೇ]ಹಳಿಯಂ ಸಾರ್ದರದರ್ಕೆ ಮೇಲೆ ನಸು ಬೆರ್ಚುತ್ತಂಗಳಂಬೊಕ್ಕರ್ (ಚಕವಿ. ೬-೧೧೯); ಶ್ರೀದ್ವಾರದ ದೇಹಳಿಯನ್ನು ದಾಂಟಿಸಿ ನಿಲಿಸಿ (ಬಟ್ಟಅ. ೩೭-೨) ; ರಾಣಿಯ ತೊಟ್ಟಿಯ ದೇಹಳಿಗಳ ಪಡಿಯರತಿಯರು ಮಾಟಿಕಬ್ಬೆಗೆ ದಾರಿ ಮಾಡಿಕೊಟ್ಟರು (ಸವತಿ. ೯೨). [ ಸಂ. ]

**ದೇಹಲೀದೀಪನ್ಯಾಯ** (ನಾ). ಒಂದು ಬಗೆಯ ಲೋಕನ್ಯಾಯ ; ೯ ಹೊಸ್ತಿಲಿನ ಮೇಲೆ ದೀಪವನ್ನಿಟ್ಟರೆ, ಹೊಸ್ತಿಲಿನ ಎರಡು ಕಡೆಗೂ ಬೆಳಕು ಹಬ್ಬುತ್ತದೆ. ಹೀಗೆ ಒಂದು ಕಾರ್ಯದಿಂದ ಬೇಕಾದ ಎರಡು ಫಲಗಳು ಲಭಿಸಿದಂತಾಗುತ್ತದೆ. ಇದನ್ನು 'ದೇಹಲೀದೀಪನ್ಯಾಯ'ವೆಂದು ವ್ಯವಹರಿಸುತ್ತಾರೆ. ದೀಪಕಾಲಂಕಾರದಲ್ಲಿ–ಉಪಮಾನವಾಕ್ಯದಲ್ಲಾಗಲಿ, ಉಪಮೇಯವಾಕ್ಯದಲ್ಲಾಗಲಿ ಒಂದು ಕಡೆ ಸಾಮಾನ್ಯಧರ್ಮವನ್ನು ತಿಳಿಸುವ ಪದವನ್ನು ಬಳಸಿದರೆ ಅದು ಎರಡು ವಾಕ್ಯಗಳಿಗೂ ಅನ್ವಯಿಸುತ್ತದೆ–ಎಂಬ ಸಂದರ್ಭದಲ್ಲಿ ಆಲಂಕಾರಿಕರು ಈ ನ್ಯಾಯವನ್ನು ಉದಾಹರಿಸಿದ್ದಾರೆ. [ ಸಂ. ]

**ದೇಹಲೇಪ** (ನಾ). ಮೈಗೆ ಬಳಿಯುವುದು : ಸಹದೇವೀಸೊಪ್ಪಿನ ರಸ . . . ಕಾಯಿಸಿ, ಹದದಲ್ಲಿಳುಹಿ, ದೇಹಲೇಪವಂ ಮಾಡಲು ಶೀತಜ್ವರ, ಗರ್ಭಿಣಿಜ್ವರ ಸಹ ಮಾಣ್ಗುಂ (ಸಕವ್ಯ. ೭೧). [ ದೇಹ + ಲೇಪ ]

**ದೇಹವಂಚಕ** (ನಾ). ಕೆಲಸಮಾಡಲು ಹಿಂದೆಗೆಯುವವನು ; ಮೈಗಳ್ಳ; ಸೋಮಾರಿ : ಆದಿಜಂಗಮಭಕ್ತಿ ತತ್ಪ್ರಸಾದಭೋಗಂ ದೇಹವಂಚಕನಾದವಂಗಳವಡದು (ಬಸಪು. ೩೯-೧೯). [ ದೇಹ + ವಂಚಕ ]

**ದೇಹವಾಸನೆ** (ನಾ). ೧. ದೇಹಧರ್ಮ ; ದೇಹದ ಇಚ್ಛೆ ; ಶರೀರದ ಕಡೆಗಿರುವ ಅಭಿಮಾನ : ಅಂತು ಭೇದವಳಿದು ತಾನೆಲ್ಲಾ ಲಿಂಗವಯವಾಗಿಪ್ಪ ಸದ್ಭಕ್ತಂಗೆ . . . ದೇಹವಿಡಿದಿರ್ದು ದೇಹವಾಸನೆಯಿಲ್ಲ (ವಚಸಂ. ೫೨೮-೩ ಟೀಕೆ). ೨. ಹಿಂದಿನ ಜನ್ಮದ ಸಂಸ್ಕಾರ; ಹಿಂದಿನ ಜನ್ಮದಲ್ಲಿ ಪಡೆದಿದ್ದ ದೇಹದ ಮೇಲಿನ ಅಭಿಮಾನ ಮೊದಲಾದ ಭಾವಗಳು ಈಗಿನ ದೇಹಕ್ಕೂ ಅನುಸರಿಸಿ ಬರುವಿಕೆ : ಶಾಸ್ತ್ರವಾಸನೆಯು ಲೋಕಗಳ ವಾಸನೆ ದೇಹವಾಸನೆಯು ವಾಸನೆಗಳಿವು ಮೂರು (ಜ್ಞಾನಸಿಂ. ೩೪-೧೧). [ ದೇಹ + ವಾಸನೆ ]

**ದೇಹವಿಡಿ** (ಕ್ರಿ). ಶರೀರವನ್ನು ಹೊಂದು ; ದೇಹಧಾರಣೆ ಮಾಡು : ಸದ್ಭಕ್ತಂಗೆ . . . ದೇಹವಿಡಿದಿರ್ದು ದೇಹವಾಸನೆಯಿಲ್ಲ (ವಚಸಂ. ೫೨೮-೩ ಟೀಕೆ). [ ದೇಹ + ಪಿಡಿ$_1$ ]

**ದೇಹವಿಡು** (ಕ್ರಿ). ಶರೀರವನ್ನು ಬಿಡು,–ತ್ಯಜಿಸು ; ಮರಣ ಹೊಂದು: ಗುರು ಜಯಂತಿ ದಿನ, ದೇಹವಿಟ್ಟ ಗೆಳೆಯ ಚೆನ್ನಮಲ್ಲಪ್ಪ ಗಲಗಲಿ (ಹೃದಸ. ೫ ಅರ್ಪಣ). [ ದೇಹ + ಇಡು$_1$ ]

**ದೇಹಶುದ್ಧಿ** (ನಾ). ಶರೀರವನ್ನು ನಿರ್ಮಲಗೊಳಿಸುವಿಕೆ ; ಸ್ನಾನ ಮಾಡುವಿಕೆ: ದೇಹಶುದ್ಧಿಯನ್ನು ತಳೆದು ಯೋಗಾಭ್ಯಾಸವನ್ನು ಮಾಡಿ ಶಿವೈಕ್ಯವನ್ನು ಪಡೆಯುವ ವಿವರಣೆಗಳು "ಯೋಗಪಾದ"ದಲ್ಲಿ ಉಕ್ತವಾಗಿವೆ (ಭಾರಆ. ೬೩). [ದೇಹ + ಶುದ್ಧಿ]

**ದೇಹಶೇಷ** (ನಾ). ಹೆಣವನ್ನು ಸುಟ್ಟ ಬಳಿಕ ಉಳಿಯುವ ಬೂದಿ ಮುಂತಾದುವು: ಇವು ಅವರ ದೇಹಶೇಷಗಳು; ಇವನ್ನೂ ಈ ಮಕ್ಕಳನ್ನೂ ನಿಮ್ಮ ವಶಕ್ಕೆ ತೆಗೆದುಕೊಂಡು ಮೃತರಿಗೆ ನಡೆಸಬೇಕಾದ ಉತ್ತರಕ್ರಿಯೆಗಳನ್ನು ನಡೆಸಿ! ಎಂದು ಹೇಳಿ, ಕೌರವರಿಗೆ ಒಪ್ಪಿಸಿ ಹೊರಟನು (ವಚಭಾ. ೧೫).
[ದೇಹ + ಶೇಷ]

**ದೇಹಶೋಧನೆ** (ನಾ). ಭೇದಿ ; ವಿರೇಚನ : ೧೦ ನಿಂಬೆಯ ಹಣ್ಣು ಹಿಂಡಿ ಅಟ್ಟು ಇಳುಹಿಕೊಂಡು ದೇಹಶೋಧನೆಯಂ ಮಾಡಿಸಿ . . . ಸೇವಿಸುತ್ತ ಬರಲು ಶ್ವಾಸ . . . ದಾಹ ಮುಂತಾಗಿ ಪರಿಹಾರವಕ್ಕುಂ (ಸಕವೈ. ೨೩೪).
[ದೇಹ + ಶೋಧನೆ]

**ದೇಹಸಂಬಂಧ** (ನಾ). ಶಾರೀರಕವಾದ ಸಂಬಂಧ; ದೈಹಿಕವಾದ ಸಂಪರ್ಕ: ಈಗ ಸುಬ್ಬುವಿಗೂ ಅವಳಿಗೂ ದೇಹಸಂಬಂಧ ಇಲ್ಲ. ಪರಸ್ಪರ ಗೌರವ ಮಾತ್ರ ಇದೆ (ಭೀಮುಕಾ. ೨೨೯). [ದೇಹ + ಸಂಬಂಧ]

**ದೇಹಸಂಬಂಧಿ** (ನಾ). ಶರೀರಕ್ಕೆ ಸಂಬಂಧಿಸಿದವನು ; ಜೀವ : ದೇಹಸಂಬಂಧಿಯಾದವನನ್ನು ಜನರು ಅರಿಯಬಲ್ಲರು, ದೇಹಾತಿರಿಕ್ತನನ್ನು ಜನರು ಅರಿಯಲಾರರು (ಶುಕ್ಕಾರ. ೩೮೧). [ಸಂ. ದೇಹಸಂಬಂಧಿನ್]

**ದೇಹಸಾತ್ಮ್ಯ** (ನಾ). [ವೈದ್ಯಶಾ] ಮೂರು ಬಗೆಯ ಸಾತ್ಮ್ಯಗಳಲ್ಲಿ ಒಂದು ; ವಿರುದ್ಧವಾದ ಆಹಾರ ಪಾನೀಯಗಳಾದರೂ ದೇಹಕ್ಕೆ ಒಗ್ಗುವಿಕೆ: ದೇಶಸಾತ್ಮ್ಯ, ದೇಹಸಾತ್ಮ್ಯ, ವ್ಯಾಧಿಸಾತ್ಮ್ಯವೆಂದು ಆ ಸಾತ್ಮ್ಯ ಮೂರುತೆರನಾಗಿಹುದು (ವೈದ್ಯಸಾ. I, ೧೨). 'ದೇಶಸಾತ್ಮ್ಯ' ಪರಾ. [ದೇಹ + ಸಾತ್ಮ್ಯ]

**ದೇಹಸಾಮ್ಯ** (ನಾ). [ಯೋಗ] ರಾಜಯೋಗದ ಹದಿನೈದು ಅಂಗಗಳಲ್ಲಿ ಒಂದು; ಆಹಾರ, ಪಾನೀಯ, ನಿದ್ರೆ ಮುಂತಾದುವುಗಳನ್ನು ಪರಿಮಿತಗೊಳಿಸಿ ದೇಹವನ್ನು ದಂಡಿಸಿ, ಒಣಗಿದ ಕಟ್ಟಿಗೆಯಂತೆ ಮಾಡಿ ತನ್ನ ಹತೋಟಿಯಲ್ಲಿಟ್ಟುಕೊಳ್ಳುವುದು: ಯುಕ್ತಾಹಾರಂಗಳನು ಮಾಡಿಯೆ ಯುಕ್ತನಿದ್ರೆಗಳನ್ನು ಮಾಡಿಯೆ ಯುಕ್ತವುದಕವು ಯುಕ್ತವ್ಯವಹರ ಯುಕ್ತಗಳು ಮಾಡಿ ಯುಕ್ತದಿಂ ದೇಹವನೆ ದಂಡಿಸಿ ಯುಕ್ತದಿಂ ತನ್ನಾಜ್ಞೆಯೊಳಗೆಯು ಯುಕ್ತ ಶುಷ್ಕಾಷ್ಟದಂತಿರಲದು ದೇಹಸಾಮ್ಯ (ಜ್ಞಾಸಿಂ. ೧೬-೨೬). [ಸಂ.]

**ದೇಹಸುಖ** (ನಾ). ಶರೀರದ ಸುಖ : ದೇಹಸುಖಹೇತುಗಳುಮಂ ದೇಹಮುಮಂ ತನ್ನವೆಂದು ಪಂಬಲಿಸದೆ ನಿರ್ಮೋಹದಿನಿರೆ ಯತಿಪತಿಗವ್ಯಾಹತ ಮಳವಟ್ಟುದುತ್ತಮಾಕಿಂಚನ್ಯಂ (ಮಲ್ಲಿಪು. ೧೧-೧೪) ; ದೇಹಸುಖದೂರಂ ಜರಾತನ್ನಹಾದ್ರುವ್ಯನಂ ದೇಹಾಂತರಪ್ರಾಪ್ತಿಯನ್ನಹಾಧೀರಸ್ತು ತತ್ರಮುಹ್ಯತಿ ನ ಸುಲಸನ್ಮೋಹಿಯುಪ್ಪ ಭಗವದ್ವಾಕ್ಯಮುಂಟಪ್ಪ ಕಾರಣಂ (ವೀಶೈಪು. ೫-೫-೧೪). [ದೇಹ + ಸುಖ]

**ದೇಹಸುರ್ಕು** (ನಾ). ಮೈಮೇಲಿನ ಸುಕ್ಕು,- ಚರ್ಮದ ತೆರೆ : "ದೇಹಸುರ್ಕು ತೆರೆಯು" (ಶಬ್ದಮಂ. ೧೧೬). [ದೇಹ + ಸುರ್ಕು₂]

**ದೇಹಸ್ಥಿತಿ** (ನಾ). ದೇಹದ ಇರುವಿಕೆ ; ಶರೀರಾರೋಗ್ಯ ; ಶರೀರದ ಪ್ರಕೃತಿ : ಚತುರ್ವಿಧ ದೇವರ್ಕಳ್ಗೆಲ್ಲಾ ಕಾಲಂ ಕಬಳಾಹಾರವಿಲ್ಲದೆಯುಂ ಶರೀರಸ್ಥಿತಿಯುಂಟೆಂದು ಕಾಣಲ್ಪವ್ಪುದರಿಂ ಮೇಣ್ಗರ್ಭಾರ್ಭಕದೊಳು ಕಬಳಾಹಾರವಿಲ್ಲದೆಯುಂ ಶರೀರಸ್ಥಿತಿ ಕಾಣಲ್ಪವ್ಪುದರಿಂ ದೇಹಸ್ಥಿತಿಗೆ ಕಬಳಾಹಾರಮೆ ನಿಯಮಮಲ್ತು (ಪಸಾರ. ೫೦೪); ಈಗೀಗ ನನ್ನ ದೇಹಸ್ಥಿತಿಯೇ ಚೆನ್ನಾಗಿಲ್ಲ (ರೂಢಿ). [ದೇಹ + ಸ್ಥಿತಿ]

**ದೇಹಳಿ** 'ದೇಹಲಿ' ನೋ.

**ದೇಹಾಂತ** (ನಾ). ದೇಹದ ಕೊನೆ,-ನಾಶ ; ಮರಣ ; ಸಾವು : ಸಂತವಿಡಿರೇ ಮಗನ ನಿಜದೇಹಾಂತಕೃತ ಸಂಕಲ್ಪ ಗಡ ನೃಪನಂತರಂಗವ ಕರೆಸಿಯೆಂದಳಲಿದಳು ಗಾಂಧಾರಿ (ಕುವ್ಯಾಆ. ೨೦-೩೨). [ದೇಹ+ಅಂತ₂]

**ದೇಹಾಂತರ** (ನಾ). ಬೇರೆಯ ಶರೀರ : ವರುಷತನಕ ನಪುಂಸಕದ ಲಾಚರಿಸಬಲ್ಲೆನೆ ಸಾಕು ದೇಹಾಂತರವನಂಗೀಕರಿಸುವೆನಲಾ ತನ್ನ ಸುಡ ಲೆಂದ (ಕುವ್ಯಾಆ. ೮-೧೫) ; ದೇಹಸುಖದೂರಂ ಜರಾತನ್ನಹಾದ್ರುವ್ಯನಂ ದೇಹಾಂತರಪ್ರಾಪ್ತಿಯನ್ನಹಾಧೀರಸ್ತು ತತ್ರಮುಹ್ಯತಿ ನ ಸುಲಸನ್ಮೋಹಿಯುಪ್ಪ ಭಗವದ್ವಾಕ್ಯಮುಂಟಪ್ಪ ಕಾರಣಂ (ವೀಶೈಪು. ೫-೫-೧೪).
[ಸಂ.]

**ದೇಹಾಂತಶಿಕ್ಷೆ** (ನಾ). ಗಲ್ಲು; ಮರಣದಂಡನೆ : ಕಾನೂನು ಕೊಲೆಗಡುಕರಿಗೆ ದೇಹಾಂತಶಿಕ್ಷೆಯನ್ನು ವಿಧಿಸುತ್ತದೆ (ರೂಢಿ).
[ದೇಹಾಂತ + ಶಿಕ್ಷೆ]

**ದೇಹಾಂಶು** (ನಾ). ಶರೀರದ ಕಾಂತಿ,-ಹೊಳಪು,-ಪ್ರಭೆ: ಉದ್ಯೋತಿಸಿದಂ ಹಿಮಾಂಶುರುಚಿಯಿಂ ದೇಹಾಂಶುವಿಂ ಭೂಭುಜಂ (ಪುಷ್ಪಪು. ೧೩-೨೪).
[ದೇಹ + ಅಂಶು]

**ದೇಹಾತಿರಿಕ್ತ** (ಗು). ೧. ದೇಹದಿಂದ ಬೇರೆಯಾದ,-ಭಿನ್ನವಾದ. (ನಾ). ೨. ದೇಹದಲ್ಲಿದ್ದುಕೊಂಡು ದೇಹದಿಂದ ಬೇರೆಯಾಗಿರುವವನು ; ಜೀವಾತ್ಮ : ದೇಹಸಂಬಂಧಿಯಾದವನನ್ನು ಜನರು ಅರಿಯಬಲ್ಲರು, ದೇಹಾತಿರಿಕ್ತನನ್ನು ಜನರು ಅರಿಯಲಾರರು (ಶುಕ್ಕಾರ. ೩೮೧).
[ದೇಹ + ಅತಿರಿಕ್ತ]

**ದೇಹಾತುರ** (ನಾ). ದೇಹದ ಮೇಲಿನ ಪ್ರಬಲವಾದ ಆಸೆ; ದೇಹವನ್ನು ಪೋಷಿಸಿಕೊಳ್ಳಬೇಕೆಂಬ ಹೆಬ್ಬಯಕೆ : ತನ್ನ ದೇಹಾತುರದಲಡವಿಯೊಳನ್ಯರನು ಸಂಹರಿಸುತಿರೆ (ಹರಿಸಾ. ೯೨). [ದೇಹ + ಆತುರ]

**ದೇಹಾಭಿಲಾಷೆ** (ನಾ). ಶರೀರದ ಮೇಲಿನ ಆಸೆ; ಬದುಕಬೇಕೆಂಬ ಆಸೆ : ಅರಸುಕುಲದಲಿ ಹುಟ್ಟಿ ಸಾಪತ್ನರುಗಳಿರೆ ದೇಹಾಭಿಲಾಷೆಯಲುರಗನಂತೊಳಗಿಹುದು ಧರ್ಮವೆ (ಕುವ್ಯಾಉ. ೩-೨೨).
[ದೇಹ + ಅಭಿಲಾಷೆ]

**ದೇಹಾಯಾಸ** (ನಾ). ಶರೀರಶ್ರಮ; ದೇಹಾಲಸ್ಯ : ಮಹಾರಾಜರು ದೇಹಾಯಾಸದಿಂದ ಮಲಗುತ್ತಾರೆ. (ಸಂಸಕ. ೧೦೬). [ದೇಹ + ಆಯಾಸ]

**ದೇಹಾರ₁** 'ದೇವಾರ' ನೋ.

**ದೇಹಾರ₂** (ನಾ). ದೇವರ ವಿಗ್ರಹ ; ದೇವತಾಮೂರ್ತಿ,-ಪ್ರತಿಮೆ : ತನ್ನ ದೇಹಾರವ ತನ್ನ ಕಣ್ಣುಗಳಿಂದ ನನ್ನಿಯಾಗಿಯೆ ಕಾಣ್ಬನೆವರೆ ತನ್ನ ದೇಹವು ಮೊದಲಾದ ವಸ್ತುಗಳನು ತನ್ನದಲ್ಲೆಂದುಳಿದಳು (ಅಂಜನ. ೯-೨೬೪); ತನ್ನ ದೇಹಾರವ ಕಾಣುತಲಾ ಲಕ್ಷ್ಮಿ ತನ್ನ ಕಣ್ಣುಗಳು ಬಂದಂತೆ ಉನ್ನತಹರ್ಷವನ್ನೈದಿದಳದನಿನ್ನು ವರ್ಣಿಸಲೆನ್ನಳವಲ್ಲ (ಅಂಜನ. ೯-೨೭೦); ಕರಿಕರಿಗೊಂಡು ಬಾಜಿಪ ವಾದ್ಯರಭಸದೊಳುರುಜಯಜಯರಭಸದೊಳು ಕುಣುಕುಣುಮೆಟ್ಟಲಾನೆಯ ಮೇಲೆ ಬಂದನು ಮೆಱೆವ ದೇಹಾರದಂದದೊಳು (ಭರತ. ೨೦-೯೩) ; ಬಸದಿಗಳ್ನವರತ್ನಮಯ ಹೇಮಮಯವಲ್ಲಿ ಎಸೆವ ದೇಹಾರಗಳ್ತಾವು ಮಿಸುನಿರನ್ನದೊಳು ಸಿದ್ಧಾಸನದಲ್ಲಿ ರಾಜಿಸಿದುವು (ಭರತ. ೬೨-೩೦).

ದೇಹಾರದ ಮಂದಿರ = ದೇವರ ಪ್ರತಿಮೆಯಿರುವ ಮಂದಿರ ; ದೇಗುಲ ; ದೇವಾಲಯ : ಒಂದುದಿನದೊಳಾಕೆಯು ದೇಹಾರದ ಮಂದಿರವನು ಹೊಕ್ಕು ಕಪಟದಿಂದ ಜಿನೇಂದ್ರಬಿಂಬವನೊಯ್ದು ನಿಜವಾಸದೊಂದು ತಾಣದೊಳಿರಿಸಿದಳು (ಅಂಜನ. ೯-೨೪೮).

[<ಸಂ. ದೇವಾಕಾರ]

**ದೇಹಾರ್ಯ₁** (ನಾ). ೧. ದೇವರಿಗೆ ಸಮರ್ಪಿಸುವ ಆಹಾರ; ಎಡೆ; ನೈವೇದ್ಯ: ಮನ ಮುಟ್ಟದ ಮಜ್ಜನ ತನು ಮುಟ್ಟದ ದೇಹಾರ ಭಾವ ತಾಗದ ಪೂಜೆ ವಿವೇಕ ತಾಗದ ನೋಟ ವಾಯು ತಾಗದ ಠಾವ ತೋರಿಕ್ಕೆ (ಅವಚಂ. ೧೯೫-೮೮೩); ಕಸವ ಬೋಹರಿಸಿ ದೇಹಾರಕ್ಕೆಡೆಮಾಡಿ ಕಸನಿರಲು ದೇಹಾರ ಶುಚಿಗೆ ಸೊಬಿತನಲ್ಲ ಪರದೈವವೃಳ್ಳವಂಗೆ ಗುರುಲಿಂಗವಿಲ್ಲ (ಸಮೂವ. ೨೨-೮೧). ೨. ಊಟ; ಭೋಜನ; ಆರೋಗಣೆ: ಉಡಲುಂ ತುಡಲುಂ ಕೊಟ್ಟುಂ ಪಿಡಿ ತೀವಿದ ಪೊನ್ನನಿತ್ತುವನ್ನರೊಳನ್ನರ್ಪಡೆಯರ್ದೇಹಾರಮನುಡ ತುಡಲಿತ್ತುಂ ಕುಡುವರರ್ಥಿಯಿಂದಂ ಜೈನರ್ (ಸಮಪ. ೭-೩೧); ಶಿಷ್ಯನಂ ಮುನ್ನಂ ಸಚ್ಚಾರಿತ್ರಂ ಮಾಡದೆ ದೇಹಾರಮನೀಯಲ್ಕೆ ಮಾಣುಗುತಿಪ್ಪರ್ಗೊರವರ್ (ಸಮಪ. ೧೯-೨೦); ಆರೋಗಿಸುವೆಡೆಯೊಳ್ ದೇಹಾರದೊಳ್ . . . ನೃಪನಾರೈದೆಚ್ಚೆತ್ತು ನಡೆಗೆ (ನೀತಿಸಾ. ೩೫೭). ೩. ಪೂಜೆ: ನೋಡುವವರುಳ್ಳರೆ ಮಾಡುವ ದೇಹಾರವ . . . ಲಿಂಗವ ತೋರಿ ಉದರವ ಹೊರೆವ ಭಂಗಗಾಣ ನಾನು (ಬಸವ. ೩೦೬); ದೇಹಾರವ ಮಾಡಿ ಲಿಂಗಾರ್ಪಿತವ ಮಾಡದೆ ಆಹಾರವ ಕೊಂಡರೆ ಕೋಳಿ ಹುಳುವನಾಯ್ದು ತಿಂದಂತೆ (ದೇದಾವ. ೫೦-೧೦೩); ಹೃದಯಕಮಲ ಮಧ್ಯದಲ್ಲಿಪ್ಪ ದೇವನ ದೇಹಾರವ ಮಾಡಲರಿದು ದೇಹಿ ನಿರ್ದೇಹಿಯಾಗದ ನ್ನಕ್ಕರ ದೇಹಾರವೆಲ್ಲಿಯದೊ ಅನಂತಮುಖದಲ್ಲಿ ದೇಹಾರವ ಮಾಡಲು ದೇವನಲ್ಲಿಲ್ಲ ನೋಡಾ (ಚನ್ನವ. ಕ. ೧೧೯-೧೧೩). [<ಸಂ. ದೇವಾಹಾರ]

**ದೇಹಾರಂಗೆಯ್₁** 'ದೇವಾರಂಗೆಯ್' ನೋ.

**ದೇಹಾರಂಗೆಯ್₂** (ಕ್ರಿ). ದೇವತಾಮೂರ್ತಿಯನ್ನುಮಾಡು, ಕಂಡರಿಸು: ಶ್ರೀಶಿಲೆಲೇಪ್ಯಕಾಂಸ್ಯರಜತಾಷ್ಟಾಪಾದರತ್ನಂಗಳಿಂ ದೇಹಾರಂಗೆಯಲಂಗ ಸೌಂದರಬಲಂ (ರತ್ನಾ. ೫. ೧೧). [ದೇಹಾರ್ಯ₂ + ಕೆಯ್₁]

**ದೇಹಾರಗೃಹ** (ನಾ). ದೇವತಾಮೂರ್ತಿ ಇರುವ ಗೃಹ; ದೇವಾಲಯ: ಒಳಗಣ ಪೂಜಾರಚನಾವಿಳಸನಮಂ ಪೂಜಿಗೆ ತೋರಿಸುತ್ತುಂ ಮೆರೆಗುಂ ಪಳಿಕಿನ ಶಿಲೆಯಿಂ ಮಾಡಿದ ಥಳಥಳಿಪ ವಿಶಾಳ ಚಾರು ದೇಹಾರಗೃಹಂ (ಬಾಹುಪು. ೧-೧೭೩). [ದೇಹಾರ್ಯ + ಗೃಹ]

**ದೇಹಾರಾಗಾರ** (ನಾ). ದೇಹಾರಗೃಹ; ದೇವಾಲಯ: ಅಂತು ಬಂದು ದೇಹಾರಾಗಾರಮಂ ಪೊಕ್ಕು ವೀತರಾಗಶ್ರೀಚರಣಸಮಾರಾಧನಂಗೆಯ್ದು ಬಟಿಯಮಾರೋಗಣೆಯಂ ಮಾಡಿ (ಬಾಹುಪು. ೬-೧೦೫ ವ).
[ದೇಹಾರ್ಯ₂ + ಆಗಾರ]

**ದೇಹಾರಿ** (ನಾ). ದೇವಸ್ಥಾನದ ಅರ್ಚಕ,-ಪೂಜಾರಿ: ದೇವರಂ ಪೂಜಿಸುವ ದೇಹಾರಿಗಳಿರ್ವ್ವರ್ಗಂ ಮತ್ತ ೪೦ (ಕಇಇ. ೯-೩-೩೨೨ ; 1062).
[ದೇಹಾರ₁ (< ದೇವಾರ) + -ಇ₃]

**ದೇಹಾರ್ಯಕೆ** (ನಾ). ದೇಹದ ಪೋಷಣೆ: ಅಭ್ಯಂಜನಾದಿ ದೇಹಾರ್ಯಕೆಗಳಂ ಬಿಟ್ಟು (ಶುಕಸ. ೧೭). [ದೇಹ + ಆರೈಕೆ (<ಆರಯ್ಕೆ)]

**ದೇಹಾಲಸ್ಯ** (ನಾ). ಶರೀರದಲ್ಲಿ ಉಂಟಾಗುವ ಬಳಲಿಕೆ,-ಅನಾರೋಗ್ಯ,-ಅಸ್ವಸ್ಥತೆ: ರಾಜನ ದೇಹಾಲಸ್ಯವನ್ನು ಕುರಿತು ವರ್ತಮಾನ ಕೊಟ್ಟರು (ಪೇಟಿಮಾ. ೨೦). [ದೇಹ + ಆಲಸ್ಯ]

**ದೇಹಾವಗಾಹನ** (ನಾ). [ಜೈನ] ಜೀವಸಮಾಸದ ಹದಿನಾಲ್ಕು ಭಾಗಗಳಲ್ಲಿ ಒಂದು; ಶರೀರದ ಆಕಾರ,-ಪ್ರಮಾಣ: ಜೀವಸಮಾಸದಲ್ಲಿ ಸಾಮಾನ್ಯವಾಗಿ ಹದಿನಾಲ್ಕುಭಾಗಗಳಾದರೂ ಉತ್ತರಭೇದಗಳು ಐವತ್ತೇಳಾಗುತ್ತವೆ. ಅವುಗಳಲ್ಲಿ (೧) ಸ್ಥಾನ . . . (೩) ದೇಹಾವಗಾಹನ (ಶರೀರದ ಆಕಾರ) (ಜೈನಪ. ೩೦೦). [ದೇಹ + ಅವಗಾಹನ]

**ದೇಹಾವಸಾನ** (ನಾ). ಸಾವು; ಮರಣ: ಜೀವಭಾವದ ಭ್ರಮೆಯುಳಿದು ದೇಹಾವಸಾನದಲಿ ಕೇವಲಾದ್ವಯಪದವ ಒದಗುವದು (ಗಗಶಾ. ೨-೧೦).
[ದೇಹ + ಅವಸಾನ]

**ದೇಹಿ₁** (ನಾ). ೧. ದೇಹವುಳ್ಳುದು; ಪ್ರಾಣಿ, ಮನುಷ್ಯ ಇತ್ಯಾದಿ: ಕೈಕೊಳ್ವಡಾತ್ಮಸುಖಮನೆ ಕೈಕೊಳ್ವುದು ದೇಹಿ (ಶಾಂತಿಪು. ೧೧-೮೭); ಸಕಲ ದೇಹಿಗೆ ನೀನೆ ಶರಣ್ ಜಿನೇಶ್ವರಾ (ಪಂರಾಮಾ. ೫-೮): ನೀಂ ನಿಃಶಂಕತೆಯಿನಿನಿತು ದೇಹಿಗಳಂ ಕೊಂದವೆ (ಯಶೋಚ. ೪-೭೦). ೨. ದೇಹದೊಳಗೆ ನೆಲಸಿರುವವನು; ಜೀವಾತ್ಮ: ದೇಹ ತಾನಭಿಮನ್ನುವೋದಿಟ ದೇಹಿ ತಾನಭಿಮನ್ನುವೋ (ಕುವ್ಯಾದ್ರೋ. ೭-೨೭); ದೇಹಿದೇಹೀಯೆಂಬುದಾತ್ಮರೊಳ್ ಬೆರೆತಿಹುದು (ಉದ್ಯದೇ. ೨-೧೫). [ಸಂ. ದೇಹಿನ್]

**ದೇಹಿ₂** (ಅ). ೧. "ಕೊಡು" ಎಂಬರ್ಥದ ಒಂದು ಶಬ್ದ: "ಭವತಿ ಭಿಕ್ಷಾಂ ದೇಹಿ" ಎಂಬುದಿದುವೆ ಕಬ್ಬಿಗರ್ಗೆ ಸಿದ್ಧಿಸಿದ ಪರ್ವೆಯು ಸಪ್ತಾಕ್ಷರೀಮಂತ್ರಂ (ರಾಮಾಶ್ವ. ೧೧೮-೧೯); ವ್ರಾತ್ಯನೆಡೆಗೆ ದೇಹಿ ಎಂದು ಬಂದೆ (ಗದೇಶ. ೩-೫೦). ೨. (ಆಲಂ) ದೇಹಿ ಎಂದು ಬೇಡುವವನು; ಯಾಚಕ: ದೇಹಿ ನೀನು ವ್ಯಾಪಾರಿಗಳು ನಮ್ಮವರು ಬೇಡು ಕೂಡಲಸಂಗಮದೇವಾ ಎಮ್ಮವರ ಕೈಯಲು (ಬಸವ. ೧೧೩); P ತ್ರಾಹಿ, ದೇಹಿ, ಪಾಹಿ, ಮುಂತಾದ ಸಂಸ್ಕೃತದ ಕೆಲವು ಕ್ರಿಯಾಪದಗಳನ್ನು ಅವ್ಯಯಗಳೆಂದು ಪರಿಗಣಿಸಿ, ಮುಖ್ಯ ಉಲ್ಲೇಖಗಳಾಗಿ ಕೊಟ್ಟಿದೆ. ಇಲ್ಲಿ 'ದೇಹಿ' ಎಂಬುದು ವಿಶೇಷವಾಗಿ ನಾಮಪದದ ಅರ್ಥದಲ್ಲೂ ಉಪಯೋಗವಾಗಿದೆ. [ಸಂ.]

**ದೇಹುತ** (ನಾ). ದೇವರಿಗೆ ಅರ್ಪಿಸಿದುದು (?): ಅಲ್ಲಿಯ ಗೌಂಡದೇವರ ದೇಹುತನಾಗಿ ಮಾಡಿದ ಭೂಮಿಯುಜಿದು ಹತಕ್ಕೊಂದು ಮತ್ತರೋಪಾದಿಯಿಂ ಮೂಣಿಗರವಾಗಿ ಮಾನ್ಯದಿಂ ಮಾಡಿಕೊಂಡುಂಬರು (ಸೌಇಇ. IX-1, ೨೫೪-೪೭; 1148). [< ಸಂ. ದೇವಹುತ ?]

**ದೇಹೋಚ್ಛ್ರಿತಿ** (ನಾ). ದೇಹದ ಎತ್ತರ: ಅಮರನ ದೇಹೋಚ್ಛ್ರಿತಿ ಮೂಱು ಮೊಲಂ (ಸುಕುಮಾ. ೯-೩೩). [ದೇಹ + ಉಚ್ಛ್ರಿತಿ]

**ದೇಹೋತ್ಥಾನ** (ನಾ). [ಯೋಗ] ಪ್ರಾಣಾಯಾಮಸಿದ್ಧಿಗಳಲ್ಲಿ ಒಂದು; ಆಕಾಶದಲ್ಲಿ ನಿರಾಧಾರವಾಗಿ ನಿಂತಿರುವುದು; ಶ್ವಾಸ ನಿರೋಧದಿಂದ ದೇಹವು ಹಗುರವಾಗಿ ಮೇಲಕ್ಕೇರುವುದು: ಸ್ವೇದ ಕಂಪನ ದೇಹೋತ್ಥಾನವೆಂಬ ಕ್ರಮದಿಂ ಕನಿಷ್ಠಮಧ್ಯಮೋತ್ತಮ ಪ್ರಾಣಾಯಾಮಸಿದ್ಧಿ ಸೂಚನಂಗಳಂ (ವಿವೇಚ. ೧೫೦). [ದೇಹ + ಉತ್ಥಾನ]

**ದೇಹೋದ್ಭವ** (ನಾ). ೧. ಶರೀರದಲ್ಲಿ ಹುಟ್ಟಿದಂದು. ೨. ಮಗ; ತನುಜ: ರವಿ . . . ಕುಂಭದೊಳ್ ಕೂಡೆ ದೇಹೋ[ಪಾಠಾಂ. ಧರ್ಮೋ]ದ್ಭವ ಭಾಗ್ಯೋತ್ಸವ್ಯಪ್ಪನಸ್ವಂ (ಜಾತತಿ. ೧೭-೧೭). [ದೇಹ + ಉದ್ಭವ]

**ದೇಹೋಪಚಾರ** (ನಾ). ಶರೀರಕ್ಕೆ ಮಾಡುವ ಸೇವೆ,-ಶುಶ್ರೂಷೆ: ಅತ್ತೆಗೆ ದೇಹೋಪಚಾರ ಮಾಡುತ್ತ ಮಾವನಿಗೆ ದೇವತಾಪೂಜಾದಿಗಳಲ್ಲಿ ಸಹಾಯವಾಗಿದ್ದಳು (ವಚಥಾ. ೧೭೮). [ದೇಹ + ಉಪಚಾರ]

**ದೈತ** (ನಾ). ೧. ಪ್ರೀತಿಪಾತ್ರ; ಕಾಂತ; ಗಂಡ; ಪತಿ: ಆತಂ ನಿನ್ನಯ ಮೋಹದ ದೈತಂ ವಿಭು ನಾಗದತ್ತನಂಗಜವಿಕಳೋಪೇತಂ ಬೆನ್ನೊಳು ಬರುತಿರ್ಪಾತಂ ತಾನೆನಲು ಪರದಿ ವಿಸ್ಮಯಬಟ್ಟಳ್ (ಪುಣ್ಯಾಸ್ರ.೧-೫೫). ೨. ಒಡೆಯ; ಅಧಿಪತಿ: "ನಾಯಕಂ ನಾಥನಿಂದ್ರಂ ಕಾಂತನೀಶ್ವರಂ ಪ್ರೀಯನಧಿಪಂ ದೈ[ಪಾಠಾಂ. ದಯಿ]ತನೀಶಂ . . . ಎನಲೊಡೆಯಂಗೆ ನಾಮಮಕ್ಕುಂ" (ಮಂಗರಾ. ೭೭-೭). 'ದೈತೇಂದ್ರ' ಪರಾ.
[<ಸಂ. ದಯಿತ]

**ದೈತೆ** (ನಾ). ೧. ಪ್ರೀತಿಪಾತ್ರಳಾದ ಮಹಿಳೆ; ನಲ್ಲೆ; ಪ್ರಾಣಕಾಂತೆ; ಮಡದಿ; ಪತ್ನಿ: ದೈತೆ ನೋಡೆನುತಿಳಿದು ರಾಘವ ಸೇತುವನು ಧನುವಿನಲಿ ಖಂಡಿಸೆ (ಕೌಶಿರಾ. ೧೧-೧೭). ೨. ಹೆಣ್ಣು; ಯುವತಿ; ಸ್ತ್ರೀ: ದೈತೆಯಂ ತಂದೊರ್ಬಳಂ ಮದುವೆಯಂ ಮಾಡಿ ಸ್ನೈತಿಕ್ಕಿ ಬಿಡಬಾರದಂತೆ ನೇಹಂಗೂಡಿ (ಪಿಂದೋರ. ಹ. ೫೩೨-೧೯). [ದೈತ + -ಎ₂]

**ದೈತೇಂದ್ರ** (ನಾ). ಒಡೆಯರ ಒಡೆಯ : ದೈವ್ಯತೀಯಕ ಜನಪಂಗದ್ವೈ ತಂಗಜಿತಂಗೆ ಭುವನದಯಿತಂಗಾಗಳ್ ದೈತೇಂದ್ರರೆಲ್ಲಮೆಱಗಿದರಾತತ ಪುಣ್ಯಂಗೆ ಜಗದೊಳೆಣೆಗದರೊಳರೆ (ಅಜಿಪು. ೫-೩).

[ ☞ ಇಲ್ಲಿ ಸಂಸ್ಕೃತದ'ದಯಿತೇಂದ್ರ' ಎಂಬುದನ್ನು ಪ್ರಾಸಕ್ಕಾಗಿ ಕವಿ ಅರಿಸಮಾಸ ಮಾಡಿಕೊಂಡಂತೆ ತೋರುತ್ತದೆ ]

**ದೈತೇಯ** (ನಾ). ೧. ದಿತಿಯ ಮಗ ; ಅಸುರ ; ರಾಕ್ಷಸ : "ದನುಜರ್ ದೈತೇಯರ್ ದಿತಿತನೂಭವರ್ ಪೂರ್ವದೇವರಸುರರ್" (ವಸ್ತುಕೋ. ೬-೩೨) ; "ಅಸುರಃ, ದಾನವಃ, ದೈತ್ಯಃ, ದೈತೇಯಃ . . . ಪಾತಾಲ ನಿಲಯಃ (ಸ್ಮೃತಾಃ) – ಈ ೮ ಅಸುರರ ಪೆಸರ್" (ಹಲಾಯು. ೨-೫) ; ಬಲಿದರ್ಪಹರಂ ಜಿತಾರಿ ದೈತೇಯನನಂತಭೋಗನಿಲಯಂ (ಗದಾಯು. ೧-೧). ೨. ಲೋಕಪಾಲಕರಲ್ಲಿ ಒಬ್ಬ ; ನಿರ್ಋತಿ : ತೊಡೆವೆಂ ಶಕ್ರನ ನಾಮಮಂ ತುಡುಕಿ ನೀರೊಳ್ ಮೆಟ್ಟುವೆಂ ವಹ್ನಿಯಂ ಪೊಡೆವೆಂ ಕಾಲನನಿಕ್ಕಿ ಡೊಕ್ಕರಿಸುವೆಂ ದೈತೇಯನಂ (ಜಗವಿ. ೩-೨೦). [ ಸಂ. ]

**ದೈತೇಯಿ** (ನಾ). ರಾಕ್ಷಸಿ ; ಅಸುರಸ್ತ್ರೀ : ಪಟುಮತಾಯ್ ಎನ್ನುವಳ್, ದೈತೇಯಿ ತೀವಿಸಳ್ (ಬದ್ಧಪ್ರ. ೪೭-೧೦೦೦). [ ದೈತೇಯ + -ಇ ]

**ದೈತ್ಯ** (ಗು). ಅತ್ಯಧಿಕವಾದ ; ಅತಿಶಯವಾದ : ತಾಯೂರ್ಗೆ ಧಾವಿಸಿದನೈ ದೇವಾಸುರರ ವಿರ್ಾವ, ದೈತ್ಯಬಲಶಾಲಿ, ಆ ವಾಲಿ ! (ಶ್ರೀರಾಮಾ. ೩೦೦-೨೭೩). (ನಾ). ೨. ರಾಕ್ಷಸ ; ಅಸುರ : "ಸುರದ್ವಿಷರೆನೆ ದೈತ್ಯರ್ ಶುಕ್ರಶಿಷ್ಯರಾರ್ಗಮುದ್ರೃಕ್ಕರ್" (ವಸ್ತುಕೋ. ೬-೩೨) ; ಕೃತಯುಗದಿಂದಾ ದವರ್ ತ್ರೇತೆಯೊಳ್ ಪುಟ್ಟಿದವರ್ ಮತ್ತೀಗಳೀ ದ್ವಾಪರದೊಳೊಗೆದವರ್ ದೈತ್ಯರಿರ್ದಪ್ಪರ್ (ಜಗವಿ. ೧-೬೬) ; ದೈತ್ಯರಂ ಕನಸೊಳ್ ಕಾಣಲು ಬಾರದೈ (ಸೋಮೇಶ. ೭೦) ; ಸಾಕು ದೈತ್ಯನ ಕೆಡಹು . . . ತಡವು ಮಾಡದಿರು (ಕುವ್ಯಾದ್ರೋ. ೧೬-೨೩) ; ದೈತ್ಯರ ಕುಲವ ಸವೆಯಲು ವಿಷ್ಣು ಕ್ಷತ್ರಿಯವಧೆಗೆ ಭಾರ್ಗವನು (ಗಗತಾ. ೧೭-೫೭). ೩. (ಆಲಂ) ದಡಿಗ ; ಟೊಣಪ. ೪. ಬಹಳ ದುಷ್ಟ ; ಜನರಿಗೆ ಹಿಂಸೆಯನ್ನು ಕೊಡುವವನು. ೫. ಬಹಳ ಶಕ್ತಿವಂತ ; ಅಮಾನುಷ ಪರಾಕ್ರಮಿ. [ ಸಂ. ]

**ದೈತ್ಯಕುಠಾರ** (ನಾ). ರಾಕ್ಷಸರಿಗೆ ಕೊಡಲಿಯಂತೆ ಇರುವವನು ; ರಾಕ್ಷಸರನ್ನು ನಾಶಪಡಿಸುವವನು ; ಕೃಷ್ಣ : ವೀರ ದೈತ್ಯಕುಠಾರ ಗಳಿತ ವಿಕಾರ ಗೋಪೀಜಾರ . . . ಮುರಹರ ಸಲಹಬೇಕೆಂದ (ಕುವ್ಯಾಭೀ. ೩-೮೭). [ ದೈತ್ಯ + ಕುಠಾರ ]

**ದೈತ್ಯಗುರು** (ನಾ). ೧. ರಾಕ್ಷಸರ ಗುರು,-ಪುರೋಹಿತ ; ಶುಕ್ರಾಚಾರ್ಯ. ೨. ನವಗ್ರಹಗಳಲ್ಲಿ ಆರನೆಯದು ; ಶುಕ್ರಗ್ರಹ : "ಉಶನಾಃ, ಶುಕ್ರಃ, ಕಾವ್ಯಃ, ದೈತ್ಯಗುರುಃ, ಭಾರ್ಗವಃ, ಕವಿಃ, ಧಿಷ್ಣ್ಯಃ– –ಈ ೭ ಶುಕ್ರನ ಪೆಸರ್" (ಹಲಾಯು. ೯-೪೮) ; ಧರಣೀಜಂ ಪದಿನೈದು . . . ದೈತ್ಯಗುರುವಿಪ್ಪತ್ತೊಂದು ಸಂವತ್ಸರಂ ಪರಮೋಚ್ಚಾಂಶದೊಳೊಂದಿ ನಿಂದೊಡದು ಪಿಂಡಾಯುಷ್ಯಮಕ್ಕುಂ ಧ್ರುವಂ (ಜಾತತಿ. ೮-೧೧). [ ದೈತ್ಯ + ಗುರು ]

**ದೈತ್ಯಜೀವ** (ನಾ). ೧. ರಾಕ್ಷಸರ ಪ್ರಾಣ. ೨. ರಾಕ್ಷಸರ ರೂಪವಾದ ಚೈತನ್ಯ : ದೈತ್ಯರಿಗೆ ಸುಖವಾದರೂ ದೇವಾವೇಶದಿಂದಲೇ ಹೊರತು ದೈತ್ಯಜೀವರಿಗಿಲ್ಲ (ಹಸಾರ. ೭-೧ ತಾತ್ಪರ್ಯ). [ ದೈತ್ಯ + ಜೀವ ]

**ದೈತ್ಯಧ್ವಂಸಿ** (ನಾ). ರಾಕ್ಷಸರನ್ನು ನಾಶಪಡಿಸುವವನು ; ದೈತ್ಯಾರಿ ; ವಿಷ್ಣು. [ ಸಂ. ದೈತ್ಯಧ್ವಂಸಿನ್ ]

**ದೈತ್ಯನಿಕಾಯ** (ನಾ). ರಾಕ್ಷಸರ ಸಮೂಹ,-ಗುಂಪು : ದಾಯವಿದು ತಮಗೆಂದು ದೈತ್ಯನಿಕಾಯ ಬಂದು ರಸಾತಳಕೆ ಕುರುರಾಯನನು ಕೊಂಡೊಯ್ದು ತಿಳುಹಿದರವರು ಸಾಮದಲಿ (ಕುವ್ಯಾಅ. ೨೦-೬೩). [ ದೈತ್ಯ + ನಿಕಾಯ ]

**ದೈತ್ಯಮರ್ದನ** (ನಾ). = ದೈತ್ಯಧ್ವಂಸಿ : ದನುಜರ ಕಯ್ಯೊಳಿರ್ದಮರ್ದ ನಾವಗಮಿವಾಟಿಸ್ಕೊಳಲೆಂದು ದೈತ್ಯಮರ್ದನನೆನಿಸಿರ್ಪವಂ ಕಪಟದಿಂದೆ ವಿಲಾಸಿನಿಯಾದ ವೇಷಮಂ ನೆನೆಯಿಸಿದಪ್ಪುದೀ ಪಸಿಯ ಬಣ್ಣಮಿವಳ್ಗಿನೆ (ಕಾದಂಪೂ. ೩೮). [ ದೈತ್ಯ + ಮರ್ದನ ]

**ದೈತ್ಯಮಹತ್ತರ** (ನಾ). ೧. ರಾಕ್ಷಸರಿಗೆ ಮಂತ್ರಿಯಾದವನು ; ಶುಕ್ರಾಚಾರ್ಯ. ೨. ಶುಕ್ರಗ್ರಹ : ನಿಲೆ ದೈತ್ಯಮಹತ್ತರನನಿಮಿಷದೊಳ್ ಸಮಸ್ತ ಧರಣೀಶನಕ್ಕುಮಕುಲೋದ್ಭವನುಂ (ಜಾತತಿ. ೧೨-೧೩). [ ದೈತ + ಮಹತ್ತರ ]

**ದೈತ್ಯರಿಪು** (ನಾ). ರಾಕ್ಷಸರ ಶತ್ರು ; ಅಸುರರ ವೈರಿ ; ದೈತ್ಯಾರಿ ; ಕೃಷ್ಣ : ಮಱುದಿವಸ ವೈಹಾಳಿಯನು ಹೊಱವಂಟರನಿಬರು ದೈತ್ಯರಿಪು ಸಹಿತ (ಕುವ್ಯಾಉ. ೧೧-೧೪). [ ದೈತ್ಯ + ರಿಪು ]

**ದೈತ್ಯವೈರಿ** (ನಾ). = ದೈತ್ಯರಿಪು : ಧರಿಸಿಕೊಂಡಿಹ ದೈತ್ಯವೈರಿ ವಿರಿಂಚಿ ಮುಖ್ಯಾದಿತ್ಯಕಾಪಾಲಾಸ್ಥಿಮಾಲಾವಳಿಗಳೇ ಸಾಕ್ಷಿ (ಬಸಪು. ೫೪-೫೯). [ ದೈತ್ಯ + ವೈರಿ ]

**ದೈತ್ಯಾಂತಕ** (ನಾ). = ದೈತ್ಯರಿಪು : ದೈತ್ಯಾಂತಕನಾಮದಿಂದೆಸೆವ ಲಕ್ಷ್ಮೀವಲ್ಲಭಂಗೆತ್ತಿದಾ ಗಗನಚ್ಛತ್ರದ ಹೇಮದಂಡಮೆನಿಸಲ್ ಸಾಲ್ದತ್ತು ಹೇಮಾಚಲಂ (ಜಗವಿ. ೧-೨೫) ; ಮೇಲು ಪೋಗಿನ ಸಿದ್ಧಿ ದೈತ್ಯಾಂತಕನ ಬುದ್ಧಿಯಲಿ . . . ಎನುತೈತಂದನಾ ಪಾರ್ಥ (ಕುವ್ಯಾಅ. ೪-೩೪). [ ದೈತ್ಯ + ಅಂತಕ ]

**ದೈತ್ಯಾಮಾತ್ಯ** (ನಾ). ೧ ರಾಕ್ಷಸರ ಮಂತ್ರಿ ; ಶುಕ್ರಾಚಾರ್ಯ. ೨. ಶುಕ್ರಗ್ರಹ : ತುಲೆಯೊಳ್ ದೈತ್ಯಾಮಾತ್ಯಂ ನಿಲೆ . . . ಪುಟ್ಟಿದ ಮನುಜನವನಿಪಾಲಕನಕ್ಕುಂ (ಜಾತತಿ. ೧೨-೧೬). [ ದೈತ್ಯ + ಅಮಾತ್ಯ ]

**ದೈತ್ಯಾರಾತಿ** (ನಾ). = ದೈತ್ಯರಿಪು : ದೈತ್ಯಾರಾತಿಗೆಱಗಿಯನಂತಶಯನಖ್ಯಾತಿ ವಿಭವವನೀಕ್ಷಿಸುತ ಹರುಷದಲಿ ನಡೆತಂದ (ಕುವ್ಯಾಅ. ೧೯ ೧೭). [ ದೈತ್ಯ + ಅರಾತಿ ]

**ದೈತ್ಯಾರಿ** (ನಾ). = ದೈತ್ಯರಿಪು : ಒಲ್ದೀಕ್ಷಿಸಿದಂ ನಿಜಾಗ್ರಭವನಂ ದೈತ್ಯಾರಿ (ಜಗವಿ. ೪-೫೮). [ ದೈತ್ಯ + ಅರಿ ]

**ದೈತ್ಯೆ** (ನಾ). ೧. ರಕ್ಕಸಿ ; ರಾಕ್ಷಸಿ. ೨. ಒಂದು ಬಗೆಯ ಸುಗಂಧ ದ್ರವ್ಯ ; ಮುರೆ : "ತಾಲಪರ್ಣೀ, ದೈತ್ಯಾ, ಗಂಧಕುಟೀ, ಮುರಾ, ಗಂಧಿನೀ–೫ ಮುರೆಯೆಂಬುವ ಗ್ರಂಥಿಕ ಜಿನಸು" (ಸಿದ್ಧಾಂತಿ. ೧೨೩). [ ಸಂ. ದೈತ್ಯಾ ]

**ದೈತ್ಯೇಂದ್ರ** (ನಾ). ರಾಕ್ಷಸರ ರಾಜ ; ಪ್ರಬಲನಾದ ರಾಕ್ಷಸ : ಚತುರಾಸ್ಯೇಂದ್ರಾದಿದೇವರ್ ನಡೆದು ಜಲಧಿತಲ್ಪಂಗೆ ದೈತ್ಯೇಂದ್ರರು ದ್ವೃತ್ತತೆಯಂ ಪೇಳ್ವುದುಂ ಕಂಸಪ್ರಭೃತಿದಿತಿಜರಂ ಕೊಲ್ವೆನಾನೆಂದು ಪೂರ್ಣಾಚ್ಯುತದೇವಂ ದೇವಕೀಗರ್ಭದೊಳುದಯಿಸಲೆಂದಿರ್ದಂ (ಜಗವಿ. ೨-೪೪) ; ನಿನ್ನ ಪಾಡಿನ ದುರುಳರೇ ದೈತ್ಯೇಂದ್ರರೀತನ ಕೆಣಕಿದವರು (ಕುವ್ಯಾಸ. ೯-೫೯) ; ಭ್ರಾಂತಿಗದ್ದಿದ ಮತಿವಿಕಾರದಾ ದೈತ್ಯೇಂದ್ರನಂ ತಂದನರಮನೆಗೆ . . . ಅತಿಖೇದದಲಿ (ಶ್ರೀರಾಮಾ. ೪೧೧-೭). [ ದೈತ್ಯ + ಇಂದ್ರ ]

**ದೈತ್ಯೇಂದ್ರಗುರು** (ನಾ). ೧. ರಾಕ್ಷಸರಾಜನ ಪುರೋಹಿತ,-ಆಚಾರ್ಯ ; ಶುಕ್ರಾಚಾರ್ಯ. ೨. ಶುಕ್ರಗ್ರಹ : ದೈತ್ಯೇಂದ್ರಗುರುವಿಂದೆ ವಾಗ್ಮಿ ಸುರೇಂದ್ರಾರ್ಚಿತನಿಂದೆ ಗೀತವಿದನಕ್ಕುಂ (ಜಾತತಿ. ೧೫-೪). [ ದೈತ್ಯೇಂದ್ರ + ಗುರು ]

**ದೈನಂದಿನ** (ಗು). ಪ್ರತಿದಿನದ ; ಪ್ರತಿದಿನದಲ್ಲೂ ಉಂಟಾಗುವ ; ಪ್ರತಿದಿನವೂ ಜರುಗುವ ; ದೈನಿಕ : ದೈನಂದಿನ ಸಾಮಾನ್ಯದ ನೀರಸವನೆ ಉಜ್ವಲಿಸಿದೆ ಅತೀಂದ್ರಿಯ ಆವೇಶದಲಿ ! (ಅನಿಕೇ. ೪೫-೨೦) ; ಪುರಂದರ,

ತ್ಯಾಗರಾಜ, ಸದಾರಂಗರ ಕೃತಿಗಳನ್ನು ಕೇಳಿದಾಗ . . . ನಮ್ಮ ಮನಸ್ಸು ದೈನಂದಿನ ರಾಗದ್ವೇಷಗಳನ್ನು ಮರೆತು ಪ್ರಶಾಂತಸ್ಥಿತಿಯನ್ನು ಮುಟ್ಟುತ್ತದೆ (ಭಾರದ. ೫೨೧) ; ದೈನಂದಿನ ಜೀವನಕ್ಕೆ ಸಂಬಂಧಿಸಿದ ಕೆಲಸಗಳು ಮೊದಲಿಗಿಂತ ಈಗ ಸುಲಭವಾಗಿ ನಡೆಯುತ್ತಿವೆ (ಜೀವಾತ್ಮ. I ಮುನ್ನುಡಿ); ದೈನಂದಿನ ವರ್ತಮಾನಗಳನ್ನು ಪತ್ರಿಕೆಗಳಲ್ಲಿ ನೋಡಬೇಕು (ರೂಢಿ).

[ ಸಂ. ]

**ದೈನಂದಿನಪತ್ರಿಕೆ** (ನಾ). ಪ್ರತಿನಿತ್ಯವೂ ಹೊರಡುವ ಸಮಾಚಾರಪತ್ರಿಕೆ; ವೃತ್ತಪತ್ರಿಕೆ ; ದಿನಪತ್ರಿಕೆ : ಆ ದಿನದ ದೈನಂದಿನಪತ್ರಿಕೆಯಲ್ಲಿ ಸಿಡಿಮದ್ದಿನ ವಿಷಯವು ದೊಡ್ಡದೊಡ್ಡ ಅಕ್ಷರಗಳಲ್ಲಿ ಮುದ್ರಿಸಲ್ಪಟ್ಟು ಎಲ್ಲೆಲ್ಲಿಯೂ ಮಾರಾಟವಾಗುತಿದ್ದಿತು (ಪಿಶಾಪ. ೯೬). [ದೈನಂದಿನ+ಪತ್ರಿಕೆ]

**ದೈನಾಸ** (ನಾ). ೧. ಅನುಕಂಪ ಬರುವಂತೆ ಬೇಡಿಕೊಳ್ಳುವಿಕೆ ; ಕನಿಕರವುಂಟಾಗುವಂತೆ ಕೇಳಿಕೊಳ್ಳುವಿಕೆ. ೨. ದೈನ್ಯಭಾವ ; ದೀನತೆ : ಅದೆಷ್ಟೋ ದೈನಾಸದಿಂದ ಕಲ್ಪಿಸಿ ಹೇಳಿದ ಯಾವ ಸೇವಕರ ಮಾತಿನಲ್ಲಿಯೂ ಅವಳಿಗೆ ವಿಶ್ವಾಸ ಉಂಟಾಗಲಿಲ್ಲ (ಮಹಾಪೂ. ೫೧) : ಹೇಳು ಕಮಲವೆ ಮೇಲೆ ಮುಖಮಾಡಿ ದೈನಾಸದಿಂದೇನು ನೋಡುತಿರುವೆ ? (ನನಲ್ಲ. ೩೪-೪).

[ <ಸಂ. ದೈನ್ಯ ]

**ದೈನಾಸಪಡು** 'ದೈನಾಸಬಡು' ನೋ.

**ದೈನಾಸಬಡು, ದೈನಾಸಪಡು** (ಕ್ರಿ). ದೀನತನವನ್ನು ಹೊಂದು ; ಕನಿಕರವುಂಟಾಗುವಂತೆ ವರ್ತಿಸು ; ಮೊರೆಯಿಡು : ಈ ಸಮ್ಮಿಲನದ ಸುದ್ದಿಯನ್ನು ಇನ್ನಾರಿಗೂ ಹೇಳಬಾರದೆಂದು ದೈನಾಸಬಡುತ ಬಿನ್ನವಿಸಿಕೊಂಡಳು (ಮೂವಾಸಾ. ೫೧) ; ವೈದ್ಯರನಾರೆ ಕರಕೊಂಡು ಬರ್ರಿ . . . ಹೆಂಡತಿ ದೈನಾಸಬಟ್ಟು ಹೇಳಿಕೊಂಡಳು (ನಿರಾಭ. ೧೦೩) ; ಆಚಾರ್ಯರು ದೈನಾಸಬಟ್ಟರು (ಸಮಜೀ. ೩೫). **ದೈನಾಸಪಡು** : ಮನಸಿಲ್ಲದವಗ ದೈನಾಸ ಪಡೂದು ಯಾಕ ಬಿಡ (ಮಣ್ಣುಹೆ. ೧೬೨). [ ದೈನಾಸ + ಪಡು$_1$ ]

**ದೈನಿಕ** (ಗು). ೧. ದಿನದಲ್ಲಿ ಉಂಟಾಗುವ : "ಒಂದು ದಿನದ ; ಒಂದು ದಿನ ಹಿಡಿಯುವ ; ದೈನಿಕ" (Diurnal. ಇಂಕನಿ) ; ನಿನ್ನ ದೈನಿಕ ಕಾರ್ಯಕ್ರಮವೇನು ? (ರೂಢಿ). (ನಾ). ೨. ಪ್ರತಿನಿತ್ಯವೂ ಹೊರಡುವ ಸಮಾಚಾರ ಪತ್ರಿಕೆ ; ದಿನಪತ್ರಿಕೆ : ಮುಂಬಯಿಯ ವಿಖ್ಯಾತ ದೈನಿಕಗಳನ್ನೋದುವ ಎಲ್ಲ ವಿದ್ಯಾವಂತರಿಗೂ ಅದು ಗೊತ್ತಿದೆ (ಒಂಟಿದ. ೩).

[ ಸಂ. ]

**ದೈನ್ಯ** (ನಾ). ೧. (ಬಡತನ, ಅಪರಾಧ ಮೊದಲಾದ ಕಾರಣದಿಂದ ಉಂಟಾಗುವ) ಕರುಣಾಜನಕವಾದ ಸ್ಥಿತಿ; ದೀನತನ: "ದೈನ್ಯದಲಿ ಯಜ್ಞೋತ್ಸಾರದಲಿ ಕೋಪದಲಿ ಮನ್ಯುವೆಂದೆಂಬುದು" (ಮಂಗರಾ. ೧೪೫-೨೮) : "ದೈನ್ಯದಿ ಯಜ್ಞದಂತ್ಯದೊಳು . . . ಮನ್ಯುವೆನಿಕ್ಕುಂ" (ನಾನಾರ. ೩೬) ; ಮುಖದ ಕಾಮಕಾರ್ಪಣ್ಯಮುಮಂ ದೃಷ್ಟಿಯ ದೈನ್ಯಮುಮನಱಿದು ಏನಾನುಮೊಂದು ನೆವಂಬಡೆದೆದ್ದು (ನಂಬಿಕ. ೪-೧೩); ತನ್ನ ಮಾಡಿದ ತಪ್ಪು ತನ್ನಂ ನೋಯಿಸೆ ತಾನೆ ತಿಳಿಪಲೆಂದು ನುಡಿದಂ ದೈನ್ಯದ ಮಾತಂ (ಅನಂಪು. ೮-೯) ; ಮುನಿದಿನಿಯನ ಕಡುಮೊನೆವಾತಿಗೆ ನೊಂದು ಕನಲದೆ ಗಾಱುವಡೆಯದೆ ತನುಮಂನಗಳ ತನ್ನ ಬಸಗೈದು ದೈನ್ಯವ ಕೊನರಿಸಿ ತಂಪುಗೊಳಿಪುದು (ಹದಿಬ. ೩-೨೩) ; ನಾರಾಯಣನು ದೈನ್ಯದಿಂದ ಬೇಡಿಕೊಂಡನು (ಕಂಬಹು. ೧೩೪) ; ದೈನ್ಯದಿಂದ ಬೇಡೋಕಿಂತ ದೈವಾಧೀನವಾಗೋದುತ್ತಮ (ಗಾದೆ). ೨. ದೀನಭಾವದಿಂದ ಕೂಡಿರುವವನು ; ಹೇಡಿ ; ಅಶಕ್ತ : ಪ್ರಿಯವ ನುಡಿದರೆ ದೈನ್ಯನೆಂಬರು ನಯದಿ ಬರಲ ಸಮರ್ಥನೆಂಬರು (ಕಾಶಿರಾ. ೧೫-೪೯). ೩. ವಂಚನೆಗೆ ಒಳಗಾದವನು: "ವಿಕೃತಂ ವಿಪ್ರಲಬ್ಧನೆನೆ ಸಲೆ ದೈನ್ಯನಕ್ಕು" (ಮಂಗರಾ. ೭೨-೨೧). ೪. [ ಕಾವ್ಯವಿಮ ] ರಸಕ್ಕೆ ಪರಿಪೋಷಕಗಳಾದ ಮೂವತ್ತುಮೂರು ವ್ಯಭಿಚಾರಿಭಾವ ಅಥವಾ ಸಂಚಾರಿಭಾವಗಳಲ್ಲಿ ಒಂದು ; ದುರವಸ್ಥೆಯೊದಗುವುದು ಮೊದಲಾದ ಕಾರಣಗಳಿಂದ ಉಂಟಾಗುವ ಒಂದು ಬಗೆಯ ನಿರುತ್ಸಾಹ ಮನೋಭಾವ,-ಕುಗ್ಗಿದ ಮನಸ್ಸು ; P ಇದು ಪೆಚ್ಚುಮುಖ, ಕ್ಷೀಣಸ್ವರ ಮೊದಲಾದುವುಗಳಿಂದ ಅಭಿನಯಗೊಳ್ಳುತ್ತದೆ : ಮತಿ ನಿರ್ವೇದ . . . ಅಮರ್ಷದೈನ್ಯೋತ್ಸುಕ . . . ಮೃತಿಗಳಿವಿಂತೆಯೆದ್ದ ಸಂಚಾರಿಭಾವಂ (ಕಾವ್ಯಾವ. ೭೯೫) ; ಮನದ ಪರಿತಾಪದಿಂದಂ ಜನಿಯಿಸುಗುಂ ದೈನ್ಯಭಾವಮೆಂದದನಱಿಮಂಡನಶೂನ್ಯರೂಪಮಳಿನಾನನ ವಿಕೃತಾಕಾರಕರಣಮಪ್ಪ ಕ್ರಮದಿಂ (ಶೃಂಗಾರ. ೨-೨೬) ; ಆದಂ ಹೃತ್ಪಪದೌರ್ಗತ್ಯಾದಿಯೆ ದೈನ್ಯಕೆ ವಿಭಾವಮಂತಾ ಮುಸುಕಿಂಬುದ ಮೃಜಾತ್ಯಾಗಂ ಮೆಯ್ಯಾದುದುನ್ನತಭಾರ ದೈನ್ಯವಾಗನುಭಾವಂ (ರಸರ. ೧೧೮ ಸೂತ್ರ) ; ದುರ್ಗತಿಯಿಂದ ಜನಿಸುವುದು ದೈನ್ಯ (ಭಾರಮಿಾ. ೪೪೭).

**ದೈನ್ಯವಾಚಾಯುತ** = ದೀನಭಾವದಿಂದ ಮಾತನಾಡುವವನು ; ರಕ್ಷಣೆಗಾಗಿ ಬೇಡಿಕೊಳ್ಳುವವನು : ಚಾಪಚ್ಯುತರನಪಗತವಾಹನರ ಪರಿಮುಕ್ತಕೇಶಿಗಳ ಗತಿವಿಹೀನರ ದೈನ್ಯವಾಚಾಯುತರ ತರುವಲ್ಮೀಕ ಜಲಸಂಗತರನಿಱಿವುದು ಧರ್ಮವೇ (ಕುಮಾವ್ಯಾಕ. ೨೬-೩೨). [ ಸಂ. ]

**ದೈನ್ಯಂಗವಿ** (ಕ್ರಿ). ದೀನತೆಯನ್ನು ಹೊಂದು ; ದೈನ್ಯಭಾವದಿಂದಿರು : ದೈನ್ಯಂಗವಿದು ಪೊಗಳುತ ಸಭಯಮಾನಸರಾಗಿ ವಂದಿಸುವ ಅವನಿಸುರರಿಗೆ ಅಭಯಮಂ ಕೊಟ್ಟು (ಬಸರ. ೫೬-೫೧). [ ದೈನ್ಯ + ಕವಿ$_1$ ]

**ದೈನ್ಯಂದೋಱು** (ಕ್ರಿ). ದೀನತನವನ್ನು ತೋರಿಸು: ಆ ತಪೋಧನರೊಳೊರ್ವಂ ಪ್ರಗಲ್ಭತಾಪಸಂ ಕಿಂಕರತೆಯನಾಳ್ದು ಕರಾಂಬುಜಂಗಳಂ ಮುಗಿದು ದೈನ್ಯಂದೋಱಿ ನಿಂದು (ಶಬಶಂ. ೨-೨೫ವ). [ ದೈನ್ಯ + ತೋಱು ]

**ದೈನ್ಯಂಬಡು, ದೈನ್ಯವಡು** (ಕ್ರಿ). ೧. ದೀನತನವನ್ನು ಅನುಭವಿಸು ; ತಾನು ಕೀಳೆಂಬ ಭಾವನೆಯನ್ನು ಹೊಂದು : ಘನದೈನ್ಯಂಬಡುವರ್ ಗುರುತ್ವಗೆಡುವರ್ ಗ್ರಾಸಕ್ಕೆ ಕುಗ್ರಾಮವಾಗೆ (ಸೋಮೇಶ. ೪೮); ನಾಡೆ ದೈನ್ಯಂಬಟ್ಟಭಯಮಂ ಬೇಡಿ . . . ಭಕ್ತರ ಕರುಣಾವಡೆವೆನು (ಬಸಪು. ೨೬-೬೭). ೨. ದೈನ್ಯದಿಂದ ಬೇಡಿಕೊಳ್ಳು,-ಪ್ರಾರ್ಥಿಸು : ಮಾರಸನ್ನಿಭನ ಪುಡುಕಿ ಕರತಾರೆಂದುಯೆನಗೆ ದೈನ್ಯಂಬಡಲು (ನವಮೋ. ೨೬-೪೫).

**ದೈನ್ಯವಡು** : ೨. ಕೇಳು ರಘುಪತಿ ಬಿನ್ನಹವನೀ ಖೂಳ ಕೈಮುಗಿದೆನಲು ಬಗೆವನೆ ಧಾಳಿಮಾಡುವೆ ವರುಣಲೋಕವ ಹಾಳುಮಾಡುವೆನು ಗೋಳಿಡಲು ನಾ ಕಟ್ಟೆ ತಹೆ ನೀ ಕಾಳುಮಾಳನ ಬೇಡಲೇತಕ್ಕೇಳು ರಾಘವ ದೈನ್ಯವಡದಿರುಯೆಂದ ಸುಗ್ರೀವ (ಕಾಶಿರಾ. ೦೫-೪೧).

**ದೈನ್ಯಂಬಟ್ಟವ** = ಮೋಸಕ್ಕೆ ಸಿಕ್ಕಿ ವ್ಯಥೆಯನ್ನು ಅನುಭವಿಸುತ್ತಿರುವವನು : "ವಿಕೃತಃ, ವಿಪ್ರಲಬ್ಧಃ-ಈ ೨ ದೈನ್ಯಂಬಟ್ಟವಂ" (ಹಲಾಯು. ೬೩-೨೨೮). [ ದೈನ್ಯ + ಪಡು$_1$ ]

**ದೈನ್ಯಗೂಡು** (ಕ್ರಿ). ದೀನತನವನ್ನು ಹೊಂದಿರು; ಅತ್ಯಂತ ನಮ್ರತೆಯನ್ನು ಪಡೆ : ಒಂದಾನೊಂದುದಿನಮುಮಾದೇವಿಯು . . . ಆ ರಾಜಶೇಖರನ ಎಡದೊಡೆಯೊಳ್ಕುಳಿತು ವಿಜ್ಞಾಪನಂಗೆಯ್ವಲ್ಲಿ ಮಹಾಭಕ್ತಿಯಿಂದ ಅತ್ಯಂತ ದೈನ್ಯಗೂಡಿ (ಸಕಪ್ಪ. ೬ ಪೀಠಿಕಾಪ್ರಕರಣ).

[ ದೈನ್ಯ + ಕೂಡು$_1$ ]

**ದೈನ್ಯದೃಷ್ಟಿ** (ನಾ). ದೀನತನವನ್ನು ವ್ಯಕ್ತಪಡಿಸುವ ನೋಟ : ಪಿಡಿದಿರ್ದ ಶಿವನ ಮೆಲ್ಲಡಿಯಂ ಬಿಟ್ಟು ದೈನ್ಯ ದೃಷ್ಟಿಯಿಂ ಶಿವನ ಮೊಗಮಂ ನೋಡುತ್ತಿರಲ್ (ನಂಬಿಕ.೧೬-೯೦); ಪೊಸಜೆಡೆಯೊಳ್ ತೊಡಂಕಿ ನೊಸಲೊಳ್ ನಡೆಪಾಡಿ . . . ಕರಂಗಳೊಳ್ ವಿರಾಜಿಸಿ ಪದದಲ್ಲಿ ಬಿಳ್ದುವು ಭವಾನಿಯ ಮಾನಿಯ ದೈನ್ಯದೃಷ್ಟಿಗಳ್ (ಗಿರಿಕ. ೫-೮೭).

[ ದೈನ್ಯ + ದೃಷ್ಟಿ ]

**ದೈನ್ಯಭಾವ** (ನಾ). ೧. ದೀನತನ ; ದೈನ್ಯ. ೨. ದುಃಖ ; ವ್ಯಥೆ : ಮುಂದೆ ನಿಂದಿರ್ದ ಮೇದಿನೀದೇವಿಯ ದೈನ್ಯಭಾವಮಂ ವಿರಿಂಚ ಕಾರುಣ್ಯಚಿತ್ರದಿಂ ನೋಡಿ (ಜಗವಿ. ೧-೨೭ ವ) ; ತರಣಿಕುಲತಿಲಕನೊಯ್ಯನೆ ದೈನ್ಯಭಾವದಿಂ . . . ಸೌಮಿತ್ರಿಗಿಂತೆಂದನು (ಜೈಮಿಭಾ. ೧೮-೫೭).
[ ದೈನ್ಯ + ಭಾವ ]

**ದೈನ್ಯವಚನ** (ನಾ). ೧. ದೀನತನದಿಂದ ಕೂಡಿದ ಮಾತು. ೨. ದುಃಖವನ್ನು ತೋಡಿಕೊಳ್ಳುವ ವಾಕ್ಯ ; ಮೊರೆ : ವ್ಯಾಕುಳಾಂಗನಾಜನದ ದೈನ್ಯವಚನಪರಂಪರೆಗೇಳ್ದು (ಜಗವಿ. ೩-೧೦೩ ವ): ಓವಿ ಓ ಎನದಿರ್ದೊಡೆಂತೆಲೆ ದೇವ . . . ಸಂಗಮದೇವ ಎನುತತಿ ದೈನ್ಯವಚನದಲಿ (ಬಸವು. ೨೨-೫೩). [ ದೈನ್ಯ + ವಚನ ]

**ದೈನ್ಯವಡು** 'ದೈನ್ಯಂಬಡು' ನೋ.

**ದೈನ್ಯವದನ** (ನಾ). ೧. ದೀನತನವನ್ನು ತೋರಿಸುವ ಮುಖ. ೨. ದೀನತನವನ್ನು ತೋರ್ಪಡಿಸುವ ಮುಖವುಳ್ಳವನು ; ದೀನ : ಕೈಯಂ ಮುಗಿದು . . . ದೈನ್ಯವದನನುಂ ಕಾರ್ಪಣ್ಯ ಕಾಯನುಮಾಗಿ (ಬಸರ. ೬-೪೪). [ ದೈನ್ಯ + ವದನ ]

**ದೈನ್ಯವೃತ್ತಿ** (ನಾ). ೧. ಬಹಳ ದೀನತನದಿಂದ ಕೂಡಿದ ಜೀವನ ; ಹೀನವಾದ ಬದುಕು : ಕೊಳನ ಬಿಡು ಕಾದೇಳು ಹಿಂದಣ ಹಳಿವ ತೊಳೆ . . . ಭೂವಳಯಮಾನ್ಯನು ದೈನ್ಯವೃತ್ತಿಯು ಬಳಸುವರೆ ಸುಡು ಮರುಳೆ ಕುರುಪತಿ ಕೈದುಗೊಳ್ಳೆಂದ (ಕುಮ್ಯಾಗ. ೫-೨೩). ೨. ದೀನಭಾವ ; ದೀನತನ ; ದೈನ್ಯ : ಅರಸ ದ ಶ ರ ಥ ನಾ ವಿಭಾಂಡುಕ ವರ ಕುಮಾರನ ಚರಣದಲಿ ತನ್ನರಸಿಯರು ಸಹ ದೈನ್ಯವೃತ್ತಿಯ ಭಕ್ತಿಭಾವದಲಿ . . . ವ್ಯೆಯಿಕ್ಕಿದನು (ತೊರರಾ. ೧-೬-೧೫). ೩. ಹೀನವಾದ ವ್ಯವಹಾರವುಳ್ಳುದು : ಗನ್ನಗತಕಂಗಳ ನೆಲೆಗಳಾಪನ್ನಿಧಿಗಳತಿಮೋಹ ಮಾಯಾಸನ್ನವರ್ತಿಗಳಸ್ಥಿರಂಗಳು ದೈನ್ಯವೃತ್ತಿಗಳು . . . ವಾರಸತಿಯರ ಮನಸುಗಳು (ಬಸವು. ४೦-೬೭). [ ದೈನ್ಯ + ವೃತ್ತಿ ]

**ದೈರ್ಘ್ಯ** (ನಾ). ೧. ಉದ್ದ ; ನೀಳ ; ಆಯಾಮ : "ಸು (ವ್ಯ)ಕ್ತಂ ದೈರ್ಘ್ಯನಾಮಮಾಯಾಮಮಂ" (ವಸ್ತುಕೋ. ೧೧೩-೧೫) ; ಅರಿರೌದ್ರಂ ಕರದೈರ್ಘ್ಯಮುಲ್ಲಸದಹೀನಾಲಂಕೃತಂ . . . ರಕ್ಷಿಕ್ಕೆ ಭೂಚಕ್ರಮಂ (ಜಗವಿ. ೧-೫) ; ಹಣೆಯಿಂದ ಪಾದದವರೆಗೆ ನೀಳವಾಗಿ ಮಾಡಿದ ಅಳತೆಯು ದೈರ್ಘ್ಯವೆನಿಸಿಕೊಳ್ಳುವುದು (ಸೌಗಂಧಿ. ೨೬೭-೯) ; ಇದು ಚರಮಪಾಶ ದೈರ್ಘ್ಯದಿಂ ಗುಣೆಯಿಸಿ ವಿಶೇಷಾಧಿಕಮಾಗಿ ಮಾಡುತ್ತಿರಲು (ಕ್ಷೇತ್ರಗ. ೫೨-೨೩). ೨. ಎತ್ತರ. ೩. ವಿಶಾಲತೆ ; ಹರಹು : "ದೈರ್ಘ್ಯಂ, ಆಯಾಮಃ, ಆರೋಹಃ-೩ ಉದ್ದವಾಗಿರುವ ತಿರ್ಯಕ್ಪರಿಮಾಣ, ನೀಳವಾಗಿರುವಿಕೆ" (ಸಿದ್ಧಾಂತಿ. ೨೦೩). [ ಸಂ. ]

**ದೈವ** (ಗು). ೧. ದೇವರಿಗೆ ಸಂಬಂಧಪಟ್ಟ ; ದೇವರಿಗೆ ಸೇರಿದ. (ನಾ). ೨. ದೇವತೆ ; ದೇವರು ; ಭಗವಂತ : ಪದಿನಾಲ್ಕುಂ ರತ್ನಕ್ಕಂ ಮೊದಲೆನಗೀ ಚಕ್ರರತ್ನಮಿದಱಿಂ ಮೇಲಾವುದು ದೈವಮೆನಗಿದಯೋಧ್ಯೆಯನಿದು ಪುಗದೆ ತಱುಂಬಿ ನಿಂದ ಕಾರಣಮೇನೋ (ಆದಿಪು. ೧೪-೭) ; ಮಡಕೆ ದೈವ ಮೊಱ ದೈವ . . . ದೈವ ದೈವವೆಂದು ಕಾಲಿಡಲಿಂಬಿಲ್ಲಾ ದೈವನೊಬ್ಬನೆ ಕೂಡಲಸಂಗಮದೇವ (ಬಸವ. ೫೬೩) ; ಎನ್ನ ಕರುಣಾಸಿಂಧುವೇ ನೀವೆನ್ನತಿ ಪ್ರಿಯಬಂಧುವೇ ನೀವೆನ್ನ ಸತ್ಕುಲದೈವವೇ ಮನೆದೈವವೇ ಅಕಟ (ಬಸವು. ೬೭-೩) ; ದೈವದಾಧೀನದಲಿ ಜಗವಾ ದೈವ ಮಂತ್ರಾಧೀನ (ಕುಮ್ಯಾಉ. ४-೫೦) ; ದೈವವು ಮಂತ್ರವು ತೀರ್ಥವು ವೈದ್ಯವು . . . ಲೋಗರಗಿವು ದಿಟಸಿದ್ಧಿಯನೀವುವು (ಇಂಜಾಪ. ೬೬-೬೭). ೩. ಕ್ಷುದ್ರದೇವತೆ ; ಪರಿಮಿತವಾದ ಪ್ರಭಾವವುಳ್ಳ ದೇವತೆ : ಲೋಗರ ಬೇಡಿಕೊಂಡುಂಬ ದೈವಂಗಳು ತಾವೇನ ಕೊಡುವುವು (ಬಸವ. ೫೫೫). ४. ಅಧಿಕಾರಿ ; ಒಡೆಯ ; ಪ್ರಭು : ಜಗದೊಳು ಭೋಗಮೋಕ್ಷಂಗಳಿಗೆ ಶಿವನೇ ದೈವವಹುದು (ಬಸವು. ४೯-೧೨). ೫. ಜನ್ಮಾಂತರದಲ್ಲಿ ಮಾಡಿದ ಪುಣ್ಯಫಲ ; ಅದೃಷ್ಟ ; ಭಾಗ್ಯ ; ಸುಕೃತ ; ದೈವವಿದಿರ್ಚೆ ಬಂದುದು ಜಗಜ್ಜಯಮಂ ತಳೆ ದೇವ (ಕಾದಂಪೂ. ४೨೭) ; ಪುರುಷಂ ದೈವಮೆ ಶರಣೆಂದಿರಲಾಗದು ತನಗೆ ತಾನೆ ಮಾಡದು ದೈವಂ (ಪಂಚತಂ. ೧೯೦-೨೦) ; ತನ್ನ ಚಿಂತೆಯದೊಂದು ದೈವದ ಗನ್ನಗತಕವದೆರಡು ಭಾವದ ಬನ್ನಣೆಯ ಬಗೆ ಮೂಱು ದೈವಧ ಭಿನ್ನಮುಖ ನಾಲ್ಕು (ಕುಮ್ಯಾಉ. ೩-೫) ; ದೈವ ಅಂದರೆ ಅದೃಷ್ಟ ಅಥವಾ ಕರ್ತಾ ಜೀವ (ಹಸಾರ. ೩-೧೦ ವಿಶೇಷಾರ್ಥ). ಕಾರ್ಯಸಾಧನೆಯಾಗಲು ಯತ್ನ ಮಾಡದಿದ್ದರೆ ನಮಗೆ ದೈವವು ಎಂತು ಸಹಾಯ ಮಾಡೀತು ? (ಸಾವಿತ್ರಿ. ३) ; ಕಣ್ಣು ಕೊಂಡುಹೋದ ದೈವ ಮತೀಕೊಟ್ಟಿತು (ಗಾದೆ) ; ತಾನೇ ಇದೆಣಿಸಿದರೆ ದೈವವೊಂದೆಣಿಸಿತು (ಗಾದೆ). ೬. ದೆವ್ವ ; ಪಿಶಾಚಿ ; ಭೂತ : ಅರಸನ ಅಂಕೆಯಿಲ್ಲ ದೈವದ ಕಾಟವಿಲ್ಲ (ಗಾದೆ). ೭. (ಉಕ) ಸಮಾಜ ; ಕುಲದ ಹಿರಿಯರು : ಅವಳ 'ದೈವ'ದ ಗಂಡಸರು ತಮ್ಮ ವೃತ್ತಿಯನ್ನು ಕೈಕೊಳ್ಳಲು ಹೊಲ, ಕಾಡುಗಳಿಗೆ ಹೋಗಿದ್ದರೆ ಹೆಂಗಸರು ತಿರುಪೆಗೆ ಹೋಗಿ ಅದೆಷ್ಟೋ ಸಮಯ ಕಳೆದುಹೋಗಿದೆ (ಬನಸಿ. ४೯). ೮. ಆಸ್ತಿ ; ಐಶ್ವರ್ಯ.

ದೈವ ತೆರೆ=ಅದೃಷ್ಟವುಂಟಾಗು : ದೈವ ತೆರೆದರೆ ಬಡವ ಬಲ್ಲಿದನಾಸು (ರೂಢಿ). ದೈವದ ಕಲ್ಲು = ಕ್ಷುದ್ರದೇವತೆಗಳನ್ನು ಪೂಜಿಸುವವರು ದೇವತಾಪ್ರತಿನಿಧಿಯೆಂದು ಪೂಜಿಸುವ ಕಲ್ಲು,-ಪ್ರತಿಮೆ : ಅವರು ಒಂದುದಿನ ಗ್ರಾಮದ ದೈವದ ಕಲ್ಲನ್ನು ತಂದು, ತಮ್ಮ ಬಚ್ಚಲಮನೆಯಲ್ಲಿ ಹಾಸಿದರು (ಹುಚ್ಚುಮ. ३३). ದೈವದ ಕೊಡಿ = ದೇವರ ಬಾವುಟ: ಅದಕ್ಕೆ ವರುಷ ವರುಷ ದೈವದ'ಕೊಡಿ' ಕಟ್ಟಿಸುತ್ತಿದ್ದರು. ಆ ಬಳಿಕ ಅದನ್ನಾರಾದರೂ ಕದ್ದು ತಿಂದರೆ ಅವರು ದೈವದ ಕೋಪಕ್ಕೆ ತುತ್ತಾಗುವರೆಂದು ನಂಬಿಕೆ (ರಕ್ತರೂ. ೨). ದೈವದಚ್ಚು = "ದೇವರ ವಿಗ್ರಹಾದಿಗಳಂ ಬರೆದಿರುವ ಯಂತ್ರ" (ಪದ್ಮಸಾ. II, ೮೨೨ ಟೀಕು) : ಪರಕೆಯ ದೈವದಚ್ಚುಗಳನಚ್ಚರಿಯಾಗಿರೆ ಕಟ್ಟುವರ್ ಕೆಲರ್ ಕೊರಲೊಳ್ (ಪದ್ಮಸಾ. II, ೮೨೨; ಧರ್ಮಪ). ದೈವರ್= ಅದೃಷ್ಟಶಾಲಿಗಳು ; ಭಾಗ್ಯವಂತರು : ಕೈವಾರದೆ ಕೈಮುತದಿಂ ಕೈವಾರದಿ ಗೆಲ್ದೆ ಲಜ್ಜೆತೆಯನೆಂತೆನೆ ಕೇಳ್ ದೈವರ್ಕೂಡಿದೊಡೆತ್ತಂ ದೈವಂ ಮರುಳಾದುದೆಂಬುದಂ ಕೇಳ್ದಱಿಯಾ (ಮದರ್ತಿ. ೧೧-४३). ದೈವುಳ್ಳತನ = ಶ್ರೀಮಂತಿಕೆ ; ಐಶ್ವರ್ಯ : ಸಂಸಾರದಲ್ಲಿ ನಮಗೆ ದೈವುಳ್ಳತನವಾಗಲಿ ಬಡತನವಾಗಲಿ ಬರುವದು (ಮುಂಬಯಿ. ४-೧೯೦). ದೈವುಳ್ಳವ = ಐಶ್ವರ್ಯವಂತ ; ಧನಿಕ ; ಸಾಹುಕಾರ : ಅವನು ಬಡವನೇ ಆಗಲಿ, ದೈವುಳ್ಳವನೇ ಆಗಲಿ, ಈ ತರದ ಕೆಲವು ಸಣ್ಣ ದೊಡ್ಡ ಸಂಧಿಗಳು ಬಂದೇಬರುತ್ತವೆ (ಚರಿಸಂ. ೦೯೯) ; ದೈವುಳ್ಳವರಿಗೆ ದಯವೇ ಇಲ್ಲ ! ತಿತ್ತಿರಿ ತುಂಬಿದೆ ಕೂಳಿನ ಕೋಟೆ! (ಗರಿ. ೫೯-೧೧) ; ದೈವುಳ್ಳವರ ಮಗನೆಂಬ ಗರ್ವವಿದ್ದಿಲ್ಲ (ನಿರಾಘ. ೬೭). [ ಸಂ. ]

**ದೈವಂಬೊಱಿಸು** (ಕ್ರಿ). ಅದೃಷ್ಟವನ್ನೇ ನಂಬು ; ಅದೃಷ್ಟದ ಮೇಲೆ ಭಾರಹಾಕು : ''ಯದ್ಭವಿಷ್ಯಃ, ದೈವಪರಃ-ಈ ೨ ದೈವಂಬೊಱ[ಱು] ಸಿರ್ಪವಂ'' (ಹಲಾಯು. ೬೨-೨೨೨). [ ದೈವ + ಪೊಱಿಸು ]

**ದೈವಕಾರ್ತಿ** (ನಾ). ಮಾಟ, ಮಂತ್ರ, ತಂತ್ರಗಳನ್ನು ಮಾಡುವ ಹೆಂಗಸು ; ಮಂತ್ರಗಾರ್ತಿ : ಆ ದೈವಕಾರ್ತಿ ಬಂದು ಮಾಯಾದೇವತೆಗಳನೀ ಪರಿಯಿಂದೊಲಿದಾರಾಧಿಸಿದಳು (ಕುರಾಸಾಂ. ೨೫-೧೦೭).
[ ದೈವಕಾಟಿ + – ತಿ (< –ಇತ್ತಿ) ]

**ದೈವಕಾಟಿ** (ನಾ). ಮಾಟ, ಮಂತ್ರ, ತಂತ್ರಗಳನ್ನು ಮಾಡುವವನು ; ಮಂತ್ರಗಾರ ; ಮಾಟಗಾರ. 'ದೈವಕಾರ್ತಿ' ಪರಾ.
[ ದೈವ + – ಕಾಟಿ ]

**ದೈವಕೃತ** (ಗು). ೧. ಅದೃಷ್ಟದಿಂದ ಮಾಡಿದ,-ಉಂಟಾದ: ನೀವು ಸೇನಾಪತ್ಯವನು ಸಂಭಾವಿಸಿರೆ ಸಾಕಿನ್ನು ಮಿಗಿಲಾ ದೈವಕೃತ ಪೌರುಷವ ನಾಳಿನೊಳಱಿಯಬಹುದೆಂದ (ಕುಮ್ವಾ.ಕ. ೧-೧೮). ೨. ಅದೃಷ್ಟ; ದೈವ. [ದೈವ + ಕೃತ]

**ದೈವಕೃತಿ** (ನಾ). ದೇವತೆಗಳು ಮೆಚ್ಚುವಂತಹ ಕಾರ್ಯ: ನೀವು ಮೊದಲಲಿ ಬೆಸಸಿದಿರಿ ಮಾಯಾವಿಗಳ ಮಾಯೆಯಲಿ ಗೆಲುವುದು ದೈವಕೃತಿಯಿದು ರಾಜಮಂತ್ರದ ಸಾರತರವೆಂದು (ಕುಮ್ವಾ.ಗ. ೭-೪೪). [ದೈವ + ಕೃತಿ]

**ದೈವಗತಿ** (ನಾ). ಅದೃಷ್ಟದ ಘಟನೆ; ಅದೃಷ್ಟದ ಪರಿಣಾಮ; ದೈವೇಚ್ಛೆ: ದೈವಗತಿಗಾರಳಲಿ ಮಾಡುವುದೇನೆನುತ ನುಡಿಸಿದನು ಕುರುಪತಿಯ (ಕುಮ್ವಾ.ಗ. ೬-೨). [ದೈವ + ಗತಿ]

**ದೈವಗೇಡಿ** (ನಾ). ಅದೃಷ್ಟಹೀನ; ದುರ್ದೈವಿ; ದುರದೃಷ್ಟವಂತ: ಇದಕ್ಕೆ ದೈವಗೇಡಿಯಾದ ನಾನು ಇನ್ನೇನು ಮಾಡಲಿ (ಉರಾಜ. ೩೦-೩೮ ಪ); ಈ ದೈವಗೇಡಿಗಳಿಗೆ ದೇವರನ್ನು ಬಿಟ್ಟು ಯಾರೂ ಕಾಯೋರಿಲ್ಲ (ಪ್ರೇಮಾಶ್ರ. ೪೭). [ದೈವ + ಕೇಡು + - ಇ₃]

**ದೈವಘಟನೆ** (ನಾ). =ದೈವಗತಿ: ಈಸು ಪೌರುಷ ದೈವಘಟನೆಯೊಳೀಸು ಪರಿಯಂತಾಯ್ತು (ಕುಮ್ವಾ.ಸ. ೧೧-೭); ಆ ಮಹಾಗಿರಿದುರ್ಗವಿದು ತಾ ವ್ಯೋಮಕೇಶನು ಗೆಲಿದ ದುರ್ಗದ ಕೈಮೆಗಿಮ್ಮಡಿಸಾಧ್ಯವಾದುದು ದೈವ ಘಟನೆಯಲಿ (ತೊರರಾ. ೩೪-೧೪). [ದೈವ + ಘಟನೆ]

**ದೈವಚಿಂತಾಸಕ್ತ** (ನಾ). ಭಗವಂತನ ಧ್ಯಾನದಲ್ಲಿ ನಿರತವಾದುದು: ದೈವಚಿಂತಾಸಕ್ತಮಾದೆನ್ನ ಹೃದಯದೊಳು ಹೊಮ್ಮಲಂತಃಶರ್ಮಲಹರಿ ಲಹರೀ (ಮಲಿದೇ. ೩೪-೧೦). [ಸಂ.]

**ದೈವಜ್ಞ** (ನಾ). ಗ್ರಹಗತಿಯನ್ನು ತಿಳಿದು ಜನರಿಗೆ ಮುಂದೆ ನಡೆಯುವ ಶುಭಾಶುಭ ಫಲಗಳನ್ನು ತಿಳಿಸುವವನು; ಭವಿಷ್ಯಜ್ಞ; ಜೋಯಿಸ: "ಕಾರ್ತಾಂತಿಕಂ . . . ದೈವಜ್ಞನಾದಿಶಿಗಣಕಂ ತಾನಕ್ಕುಂ" (ವಸ್ತುಕೋ. ೬೦-೨೧); ಮಕ್ಕಳನಾರ್ಗೆ ಕುಡುವಮೆಂದು ದೈವಜ್ಞನಂ ಬೆಸಗೊಂಡೊಡೆ (ಪಡ್ಮಾರಾ. ೬೦-೨೦; ದೈವಜ್ಞವದನತಿಲಕಂ ... ಜಾತಕತಿಲಕಂ ತ್ರೈಲೋಕ್ಯ ತಿಲಕಮಿದು ಕೇವಲಮೋ (ಜಾತಕ. ೨೪-೩೮); ಚಂಡ ದೈವಜ್ಞನನಧಿಕ ಗುಣಮಂಡನನ ಬಹುಶಾಸ್ತ್ರಪಠಣನ ಪಂಡಿತನ ಪೌರೋಹಿತನ ಮಾಡುವುದು (ಕುಮ್ವಾ.ಉ. ೩-೮೬). [ಸಂ.]

**ದೈವಜ್ಞೆ** (ನಾ). ಜ್ಯೋತಿಷ್ಯವನ್ನು ತಿಳಿದಿರುವವಳು. [ಸಂ. ದೈವಜ್ಞಾ]

**ದೈವತ** (ಗು). ೧. ದೇವರಿಗೆ ಸಂಬಂಧಿಸಿದ,- ಸೇರಿದ. (ನಾ). ೨. ದೇವತೆ; ದೇವರು: "ಆದಿತ್ಯಃ . . . ಅಮೃತಾಶನಃ, ಅನಿಮಿಷಃ, ದೇವಃ (ತಥಾ) ದೈವತಂ-ಈ ೨೧ ದೇವರ್ಕಳ ಪೆಸರ್" (ಹಲಾಯು. ೨-೪); ಬಂದೆವು ಇಕೊ ಹಿಮಪರ್ವತ! . . . ನಿಂತಿದೆ ಅಕೊ ಶಿವದೈವತ! (ಕ್ಷ್ರಾಂಚಧ್ವ. ೨೧-೧೧); ಪಂತರ ಮನೆಯ ದೇವರನ್ನು ತನ್ನ ದೈವತವನ್ನಾಗಿ ಮಾಡಿಕೊಂಡಳು (ದೀಪಹ. II. ೧೭೮); ಕಲೋಪಾಸಕನಿಗೆ ಈ ಎರಡೂ ಮೂಲಭೂತ ದೈವತಗಳು ಕೊನೆಗೆ ಒಂದಾಗಿಯೇ ಕಾಣಿಸಿಕೊಳ್ಳುತ್ತವೆ (ನವ್ಯಕಾ. ೭೦). [ಸಂ.]

**ದೈವದತ್ತ** (ನಾ). ದೇವರಿಂದ ಕೊಡಲ್ಪಟ್ಟುದು; ದೈವಿಕವಾಗಿ ಬಂದುದು; ಶ್ರೇಷ್ಠವಾದುದು: ನೋಡು ನಿನ್ನ ಕಲೆ ದೈವದತ್ತವಾದದ್ದು (ಹುಸಗೀ. ೧೩೦). [ದೈವ + ದತ್ತ]

**ದೈವದುರ್ವಿಪಾಕ** (ನಾ). ವಿಧಿಯ ದುಷ್ಟಪರಿಣಾಮ; ದುರ್ದೈವ: ದೈವದುರ್ವಿಪಾಕದಿಂದ ಆ ಶ್ರೀಮಂತ ದರಿದ್ರನಾಗಿಬಿಟ್ಟ (ರೂಢಿ). [ದೈವ + ದುರ್ವಿಪಾಕ]

**ದೈವದೂರ** (ನಾ). ಭಾಗ್ಯದಿಂದ ದೂರವಾದವನು; ಅದೃಷ್ಟಹೀನ; ದುರ್ದೈವಿ: ದೈವದೂರರು ಧರ್ಮಹೀನರು ನೆಯ್ವ ನೆಯ್ಗೆಗಳೆನುತ ಮಿಗೆ ಬಿಸುಸುಯ್ದು ತಿದ್ದರು ಕರ್ಣಕೃಪಗುರುನಂದನಾದಿಗಳು (ಕುಮ್ವಾ.ದ್ರೋ. ೧೪-೪೭); ದೈವದೂರರಿಗೆಂತು ಸೇರುವುದುಚಿತ ಬೋಧೆಗಳು (ಕಾಶಿರಾ. ೨೩-೧೫); ಭವಣೆಗೆಗೆ ನೆಱೆ ಬರಿಸಿ ಕೊಲುವನಲಾ ಕೃತಾಂತನು ದೈವದೂರರನು (ನಿಭಾಗ. ೨-೧-೮). [ದೈವ + ದೂರ]

**ದೈವದ್ರೋಹ** (ನಾ). ದೇವರುಗಳ ಬಗೆಗೆ ಮಾಡುವ ಅಪಚಾರ: ದೇವಾಲಯ ಮೊದಲಾದವುಗಳ ಸ್ವತ್ತನ್ನು ಅಪಹರಿಸುವುದೇ ಮೊದಲಾದ ದುಷ್ಕೃತ್ಯ: ಗುರುವಿರೋಧ ಮಹೀಬುಧರ ಮತ್ಸರವು ದೈವದ್ರೋಹ ... ವೆಂಬಿವನರವರಿಸದಂಗೈಸೆ ಭೂಪನ ಸಿರಿಗೆ ಮೊಳೆಯದೆ ಕೇಡು (ಕುಮ್ವಾ.ಉ. ೩-೭೯); ಆವ ವಿಪ್ರದ್ರೋಹವೋ ತನಗಾವ ದೈವ ದ್ರೋಹವೋ ಶಿವ ಆವ ಪುಣ್ಯವನಳಿಸಿದೆನೊ (ಕಾಶಿರಾ. ೩೦-೪೩); ಬಗೆವೊಡಿವು ಮುನ್ನ ಮಾಡಿರ್ದ ದೈವದ್ರೋಹದಘದಿಂದೆ ಬನದ ಪೊಱ ವಳಯದೊಳ್ಪಹುಕಂಟಕಿಗಳಾಗಿ ಬಂದು ಸಂಭವಿಸಿರಲ್ ತಳಿತ ಹೊಂಗೇದಗೆಗಳು (ಜೈಮಿಭಾ. ೩-೩೫). [ದೈವ + ದ್ರೋಹ]

**ದೈವದ್ರೋಹಿ** (ನಾ). ದೇವರಿಗೆ ದ್ರೋಹವನ್ನು ಮಾಡುವವನು,- ಅಪಚಾರ ಮಾಡುವವನು: ದೈವದ್ರೋಹಿಗೆತ್ತಣ ಲೇಸು ಬಹುದೆಂದ (ಕುಮ್ವಾ.ದ್ರೋ. ೧೦-೧೪); ದೈವದ್ರೋಹಿಗಳು ನಿಮಗೆ ಅರಿವಿಜಯವೆಲ್ಲಿಯದು ನೀವ್ ಮನಬಜರ್ಕ್ಕೆ ನಿಮ್ಮನ್ವಯವ ಸಂಹರಿಸಿದಿರಿ ಸಾಕೆಂದು ಸಂಜಯ ತೂಗಿದನು ಶಿರವ (ಕುಮ್ವಾ.ಕ. ೧-೧೫); ಏಳು ದೈವದ್ರೋಹಿ ಭೂದಿವಿಜಾಳಿ ನಿಂದಕ ನಿಂದಿರಸುರರ ಕಾಲಕರ್ಮದ ಮೃತ್ಯು ಬಂದಿದೆ ನೋಡು ಕಣ್ದೆಱೆದು (ತೊರರಾ. ೬-೪೨-೩೦). [ಸಂ. ದೈವದ್ರೋಹಿನ್]

**ದೈವಪರ** (ನಾ). ೧. ದೇವರಲ್ಲಿ ಒಲವುಳ್ಳವನು; ದೈವಭಕ್ತ: ಅವನು ಒಳ್ಳೆಯ ಸಾತ್ವಿಕ ಮತ್ತು ದೈವಪರ (ರೂಢಿ). ೨. ಕೇವಲ ಅದೃಷ್ಟವನ್ನೇ ನಂಬಿಕೊಂಡಿರುವವನು; ಪುರುಷಪ್ರಯತ್ನವನ್ನು ಮಾಡದಿರುವವನು: ಜ್ಞಾತಿಬಹಿಷ್ಕೃತಂ ವ್ಯಸನಿ ದೈವಪರಂ ಶಿಶು ದೀರ್ಘರೋಷಿ . . . ಎನಿಪ ನರಪನೊಳೆಂದುಂ ವಿಜಿಗೀಷುಗಳಪ್ಪ ಮಹೀಭುಜರೆಂದುಂ ಸಂಧಿಪಮಾಡರ್ (ಪಂಚತಂ. ೨೨೦-೭). [ಸಂ.]

**ದೈವಪುರುಷ** (ನಾ). ದೇವಾಂಶದಿಂದ ಹುಟ್ಟಿದವನು; ದೇವಾಂಶಸಂಭೂತ; ಮಹಾತ್ಮ: ಮುನಿಪನ ಬರಿಸಲೆನ್ನಳವಹುದೆ ಕೆರಳಿದಡುರುಹಿ ಕಳೆಯನೆ ದೈವಪುರುಷರು ಸುಲಭರೇ (ಕಾಶಿರಾ. ೧-೪೧). [ದೈವ + ಪುರುಷ]

**ದೈವಪ್ರೇರಣೆ** (ನಾ). ಅಂತಃಪ್ರೇರಣೆ; ತಾನಾಗಿಯೇ ಉಂಟಾಗುವ ಅಂತರಂಗ ಪ್ರವೃತ್ತಿ: ಹೊಮ್ಮುಗವೆತ್ತ ವಾನರರ ಸೇರುಪಡಿ ತಾನೆತ್ತ ದೈವಪ್ರೇರಣೆಯದ್ದೆ ಸಲ್ಲದಿದು ನಾವಾರು ಮಾಡುವುದಲ್ಲ (ತೊರರಾ. ೬-೫೦-೮೪). [ದೈವ + ಪ್ರೇರಣೆ]

**ದೈವಬಲ, ದೈವಬಳ** (ನಾ). ಅದೃಷ್ಟದ ಶಕ್ತಿ,-ಪ್ರಭಾವ,-ಮಹಿಮೆ: ಕುರುಪತಿಗಿಲ್ಲ ದೈವಬಲಮಾಜಿಗೆ ಮೇಲ್ಕಲೆಗೆಯ್ವರಾಗಳುಂ ಗುರು ಗುರುಪುತ್ರ ಸಿಂಧುಸುತರಾಳ್ದನುಮೆನ್ನನೆ ನಚ್ಚಿ ಪೆರ್ಚಿ ಮುಂ ಪೊರೆದನಿದಿರ್ಚಿ ಕಾದುವರುಮೆನ್ನಯ ಸೋದರರೆಂತು ನೋಡಿ ಕೊಕ್ಕರಿಸದೆ ಕೊಲ್ವೆನೆನ್ನೊಡಲನಾಂ ತವಿಪೆಂ ರಣರಂಗಭೂಮಿಯೊಳ್ (ಪಂಪಭಾ. ೯-೭೦); ಆಗಳ ಪಗತವಿಷಾದರುಮುಪಗತಪ್ರಮೋದರುಮಾದಂತಃಪುರಾವರೋಧಜನಂಗಳೆಲ್ಲಂ ತನ್ನ ಮೇಗಿಲ್ಲದ ಬಲ್ಲಾಳ್ತನಮುಮಂ ದೈವಬಲಮುಮಂ ಮೆಚ್ಚಿದು (ಶಾಂತಿಪು. ೮-೫೪ ಪ); ದೈವಪೌರುಷದೊಳಗೆ ಶಿವ ಶಿವ ದೈವಬಲವೇ ಬಲವಲಾ (ಕುಮ್ವಾ.ದ್ರೋ. ೯೪-೪೬). ದೈವಬಳ: ಪಾಂಡವರ್ ಬಳಸಂಪನ್ನರುದಗ್ರದೈವಬಳಸಂಪನ್ನರ್ (ಪಂಪಭಾ. ೧೦-೫). [ದೈವ + ಬಲ₂]

**ದೈವಬಳ** 'ದೈವಬಲ' ನೋ.

**ದೈವಭಕ್ತಿ** (ನಾ). ದೇವರ ಮೇಲಿನ ಅತಿಶಯವಾದ ಪ್ರೀತಿ: ತಾಯಿದಿರು ಇಂತ ದೃಢಮನ ದೈವಭಕ್ತಿ ಧೃತಿ ಸತ್ಯಚರಿತವ ಮೆರೆಯಬೇಕು (ನವರಾ. II, ೩೩); ಅವರು ಬಾಳುವುದು ದೈವಭಕ್ತಿಪೂರಕವಾಗಿ ಸಾಯುವುದು ದೈವಭಕ್ತಿಪೂರಕವಾಗಿ (ಭಾರದ. ೩೨೭). [ ದೈವ + ಭಕ್ತಿ ]

**ದೈವಮಾಯೆ** (ನಾ). ವಿಧಿಯ ಲೀಲೆ,–ವಿಲಾಸ: ದೇವಿಯಾರೆಂದಱಿಯಲಾ ನೀನಾವನೆಂಬುದ ಮಱೆದೆ ಶಿವ ಶಿವ ದೈವಮಾಯೆಗೆ ಸಂದೊಡುಳಿದವ ರಳವೆ (ಕಾಶಿರಾ. ೪೩–೩೯). [ ದೈವ + ಮಾಯೆ ]

**ದೈವಯಂತ್ರ** (ನಾ). ದೇವರ ಹತೋಟಿ,– ನಿಯಂತ್ರಣ; ದೇವರ ಪ್ರಭುತ್ವ,–ಆಜ್ಞೆ: ಮಂತ್ರಿ ಮತ್ಸರದಿಂದೆ ಮುಂದೆ ತಪ್ಪುವ ದೈವ ಯಂತ್ರಭೇದವನಱಿಯದಿಂದುಹಾಸನ 'ಮೇಲೆ ತಂತ್ರಮಂಪಣ್ಣಿಕೊಲಿಸು ವೆನೆಂದು ಕಳುಹಿದಂ ಕುಂತಳೇಂದ್ರನ ನಗರಿಗೆ (ಜೈಮಿಭಾ. ೨೯ ಸೂಚನೆ). [ ದೈವ + ಯಂತ್ರ ]

**ದೈವಯಜ್ಞ** (ನಾ). ದೇವರ ಪ್ರೀತ್ಯರ್ಥವಾಗಿ ಮಾಡುವ ಯಾಗ: ಬ್ರಹ್ಮಯಜ್ಞ ಪಿತೃಯಜ್ಞ ದೇವಯಜ್ಞ ಭೂತಯಜ್ಞ ಮನುಷ್ಯಯಜ್ಞ– ಈ ಐದು ಮಹಾಯಜ್ಞಗಳು (ಆರ್ಯಧ. ೧೮೭). [ ದೈವ + ಯಜ್ಞ ]

**ದೈವಯೋಗ** (ನಾ). ಅದೃಷ್ಟದ ಘಟನೆ,–ಸಂಬಂಧ; ಜನ್ಮಾಂತರದ ಪುಣ್ಯಪಾಪಕರ್ಮಗಳ ಫಲವಾಗಿ ಘಟಿಸುವ ಸಂಬಂಧ: ಅರಸ ಕೇಳ್ಳೆ ದೈವಯೋಗವ ಪರಿಹರಿಸಲಾರಳವು (ಕುವ್ಯಾಗ. ೪–೪೨); ದೈವಯೋಗದಿಂದ ನೀನು ತಪ್ಪಿಸಿಕೊಂಡು ಬಂದೆ (ಶಾಕುಂತ. ೯೨–೧೧೦): ಈ ಮಿತ್ರನು ದೈವಯೋಗದಿಂದಲೇ ಪ್ರಾಪ್ತನಾದನು (ಮಂಜುಕ. ೨); ದೈವಯೋಗ ದಿಂದ . . . ಅಲ್ಲೇ ಸಮೀಪದಲ್ಲಿ ಒಂದು ಮರದ ಟೊಂಗೆಯು . . . ಅವನ ದೃಷ್ಟಿಗೆ ಬಿತ್ತು (ಮುಂಬಯಿ. ೪–೩೮). [ ದೈವ + ಯೋಗ ]

**ದೈವರೂಪು** (ನಾ). ದೇವರ ಸ್ವರೂಪ; ದೇವತಾಸ್ವರೂಪ: ತನ್ನ ನೆನಹಿನಪೋಲು ಕಾರ್ಯವು ಚೆನ್ನಹಡೆ ಲೋಕಕ್ಕೆ ತಾ ಬೇರಿನ್ನು ದೈವವದೇಕೆ ತಾನೇ ದೈವರೂಪೆಂದ (ಕುವ್ಯಾಉ. ೩–೫). [ ದೈವ + ರೂಪು ]

**ದೈವರೇಷೆ** (ನಾ). ಅದೃಷ್ಟದ ಗೆರೆ, – ಬರಹ; ಹಣೆಬರಹ; ಭಾಗ್ಯ ರೇಖೆ: ಒಡಲ ನೂಲಿನಿಂದ ನೇಯುವಂತ ಜೇಡ ಜಾಲಾ ತನ್ನ ದೈವರೇಷೆ ಬರೆಯುವಂತೆ ತಾನೆ ಭಾಲಾ (ನಾದಲೀ. ೮೪–೧೧೦); ಪ್ರತಿಯೊಂದು ಶಬ್ದಕ್ಕೂ ಅದರದರ ದೈವರೇಷೆಯನ್ನು ಕೊರೆಯಿಸುವ ಒಂದು ಜನ್ಮಕುಂಡಲಿ ಸಿದ್ಧವೇ ಆಗಿದೆ (ಭಾಷಾಶಾ. ೧೩೮). [ ದೈವ + ರೇಷೆ ]

**ದೈವರ್ದ್ಧಿ** (ನಾ). ಅದೃಷ್ಟದ ಸಮೃದ್ಧಿ,–ಹೆಚ್ಚಳ,–ಅತಿಶಯ: ದೇವ ರೊಳ್ ಕೆಲರ್ಗೆ ಜಾತಿಸ್ಮರಣಂ ಕೆಲರ್ಗೆ ಧರ್ಮಶ್ರವಣಂ ಕೆಲರ್ಗೆ ಜಿನಮಹಿಮೋದರ್ಶನಂ ಕೆಲರ್ಗೆ ದೈ[ವಾಕಾಂ. ದೇ] ವರ್ದ್ಧಿದರ್ಶನಂ ಇಂತು ಸಹಸ್ರಾರಕಲ್ಪಂಬರಂ ಅಕ್ಕುಂ (ತತ್ತ್ವಪ್ರ. ೧೩). [ ದೈವ + ಋದ್ಧಿ ]

**ದೈವವಂತ** (ನಾ). ಭಾಗ್ಯವಂತ; ಧನಿಕ: ಯಾರಾದರೂ ದೈವವಂತರ ಕನ್ಯೆಯನ್ನು ಆರಿಸಿ ತಂದರೆ ಸಿಗುವ ಅಲ್ಪಸ್ವಲ್ಪ ವರದಕ್ಷಿಣೆಗೆ ಒಡೆಯನು ನಾನಲ್ಲದೆ ಇನ್ನಾರು? (ಬಿಟ್ಟಹೂ. ೪೭). [ ಸಂ. ದೈವವತ್ ]

**ದೈವವಶ** (ನಾ). ಅದೃಷ್ಟ; ಭಾಗ್ಯ: ದೈವವಶದಿಂದ ವಿವಾಹ ಸಂಭ್ರಮ ಗಳೆಲ್ಲ ಮುಗಿದ ಮೇಲೆ ಅದು ವೆಂಕಟರಾಮನ ಗಮನಕ್ಕೆ ಬಂದಿತು (ಗೋಪುರ. ೧೬೨). [ ದೈವ + ವಶ ]

**ದೈವವಶಾತ್** (ಅ). ಭಾಗ್ಯವಿಶೇಷದಿಂದ; ಸುಯೋಗದಿಂದ; ಅದೃಷ್ಟ ವಶಾತ್: ಅವರು ದೈವವಶಾತ್ ಇಂದು ಅಪಘಾತದಿಂದ ಪಾರಾದರು (ರೂಢಿ). [ ಸಂ. ]

**ದೈವವಾಣಿ** (ನಾ). ದೇವರು ಕೊಕ್ಕ ತಿಳುವಳಿಕೆ; ದೇವರ ಆದೇಶ; ಅಂತರ್ವಾಣಿ: ಆ ದೈವವಾಣಿಯು ಬೇಡವೆಂದುದನ್ನು ಆತನು ಮಾಡು ತ್ತಿರಲಿಲ್ಲವಂತೆ (ಸೋಕ್ರಮ. ೩೦). [ ದೈವ + ವಾಣಿ$_1$ ]

**ದೈವವಿಡಂಬನೆ** (ನಾ). ಅದೃಷ್ಟದ ದುರ್ವಿಲಾಸ; ದೈವದ ಮೋಸ: ತನ್ನಂತಹ ನತದೃಷ್ಟನ ಮುಂದೆ ಲೋಲಾನಂತಹ ಲಾವಣ್ಯವತಿಯು . . . ಯಾಚಿಸುವುದು ದೈವವಿಡಂಬನೆಯೆಂದುಕೊಂಡನು (ಜಯಂತ. ೧೬೨). [ ದೈವ + ವಿಡಂಬನೆ ]

**ದೈವವಿದ** (ನಾ). = ದೈವಜ್ಞ: ದೈವವಿದನಂಗನೆಯೊಳ್ ಕೆಳೆಗೊಳ್ವಂ . . . ಕುಳೀರಸಂಭವಂ (ಜಾತಕತಿ. ೧೭–೪). [ ಸಂ. ದೈವವಿದ್ ]

**ದೈವವಿದ್ವಿಷ್ಟ** (ನಾ). ದೇವರಿಗೆ ವಿರೋಧಿಯಾದವನು; ದೇವರ ಶತ್ರು: ಅವನಿಂದೆಯುಂ ದೈವವಿದ್ವಿಷ್ಟರಾರುಂಟು (ಮೂರುನಾ. ೧೨೫–೮೭೪). [ ದೈವ + ವಿದ್ವಿಷ್ಟ ]

**ದೈವವಿಮುಖಿ** (ನಾ). ಪ್ರತಿಕೂಲವಾದ ಅದೃಷ್ಟವುಳ್ಳವನು: ದುರ್ದೈವಿ; ದುರದೃಷ್ಟವಂತ: ದೈವವಿಮುಖಿಗೆ ತಂದೆತಾಯ್ಗಳಿ ಮೃತ್ಯು ಮಾರಿಗಳು (ಕಾಶಿರಾ. ೩೭–೬೦). [ ದೈವ + ವಿಮುಖಿ ]

**ದೈವವಿಸೂತ್ರ** (ನಾ). ಬ್ರಹ್ಮ ಸಂಕಲ್ಪ; ವಿಧಿನಿಯಮ; ಪೂರ್ವಜನ್ಮದ ಕರ್ಮಾನುಸಾರವಾಗಿ ಇದು ಹೀಗೆಯೇ ಆಗಬೇಕೆಂಬ ನಿಯಮ; ಭವಿತವ್ಯತೆ: ದೈವವಿಸೂತ್ರಮಂ ಪುರುಷಕಾರಂ ಮಿಾಱಲೇನಕ್ಕುಮೇ (ಜಗವಿ. ೩–೧೯). [ ದೈವ + ವಿಸೂತ್ರ ]

**ದೈವವಿಹೀನ** (ನಾ). ಅದೃಷ್ಟಹೀನ; ದೌರ್ಭಾಗ್ಯವಂತ: ಏಸು ಬಲ ವೆನಿತೈಶ್ವರಿಯವಿದ್ದೇಸು ಭಟರನಿತಗ್ಗಳಿಯರಿದ್ದೇಸಲಿ ಫಲವೇನು ದೈವ ವಿಹೀನರಿವರೆಂದ (ಕುವ್ಯಾಗ. ೩–೪); ಭಾವಿಸಿದಿರೇ ಜಾಂಬವರೆ ಸದ್ಭಾವದಲಿ ನೀವುತ್ತರಾಯಿಗಳಾವು ದೈವವಿಹೀನರಾದೆವು (ತೊರರಾ. ೬–೫೧–೩೧). [ ದೈವ + ವಿಹೀನ ]

**ದೈವವ್ಯವಸಿತ** (ನಾ). ದೈವ ಸಂಕಲ್ಪ; ದೈವೇಚ್ಛೆ: ಇನ್ನು ದೈವವ್ಯವಸಿತದ ಫಲಿಸುವುದಲಾ ಕೌರವನ ಸಿರಿ ಪಣ್ಯಾಂಗನಾವಿಭ್ರಮವ ವರಿಸಿತಲಾ (ಕುವ್ಯಾಗ. ೪–೬೦). [ ದೈವ + ವ್ಯವಸಿತ ]

**ದೈವಶಾಲಿ** (ನಾ). ಅದೃಷ್ಟವಂತ; ಭಾಗ್ಯವಂತ; ಧನ್ಯ. [ ಸಂ. ದೈವಶಾಲಿನ್ ]

**ದೈವಶಿಕ್ಷೆ** (ನಾ). ದೇವರು ಕೊಡುವ ಶಿಕ್ಷೆ; ದೇವರಿಂದುಂಟಾಗುವ ತೊಂದರೆ,–ಕ್ಲೇಶ. [ ದೈವ + ಶಿಕ್ಷೆ ]

**ದೈವಶಿಲ್ಪಿ** (ನಾ). ದೇವತೆಗಳ ಬಡಗಿ; ಸ್ವರ್ಗಲೋಕದ ಶಿಲ್ಪಿ: ಎರಡನೆಯದಾಗಿ "ತ್ವಷ್ಟಾ" ಎಂಬ ದೈವಶಿಲ್ಪಿಯ ಹೆಸರು ಋಗ್ವೇದದಲ್ಲಿಯೇ ಉಕ್ತವಾಗಿದೆ (ಭಾರಶ. ೫೦೯). [ ದೈವ + ಶಿಲ್ಪಿ$_1$ ]

**ದೈವಸಂಕಲ್ಪ** (ನಾ). = ದೈವವಿಸೂತ್ರ: ನಾನು ಆ ದಿನ ಮನೆಯಲ್ಲಿರಲಿಲ್ಲ, ಅವನಿಗೂ ಇದು ಯಾರ ಮನೆ ಎಂಬುದೂ ತಿಳಿದಿರಲಿಕ್ಕಿಲ್ಲ. ಎಂತಹ ದೈವ ಸಂಕಲ್ಪ! (ಕರುಳ. ೨೩೯). [ ದೈವ + ಸಂಕಲ್ಪ ]

**ದೈವಸನ್ನಿಧಿ** (ನಾ). ದೇವರ ಸಾನ್ನಿಧ್ಯ: ದೇವರ ಸಮೀಪದಲ್ಲಿ ಇರುವಿಕೆ: ಸಾಕ್ರಟೀಸನ ಸ್ನೇಹಿತನೊಬ್ಬನು ಡೆಲ್ಫಿ ಎಂಬ ಪ್ರಸಿದ್ಧಕ್ಷೇತ್ರಕ್ಕೆ ಹೋಗಿ, ಅಲ್ಲಿಯ ದೈವಸನ್ನಿಧಿಯಲ್ಲಿ . . . ಕೇಳಲಾಗಿ, "ಇಲ್ಲ" ಎಂದು ಆ ದೇವತೆಯು ಉತ್ತರಕೊಡಿಸಿತಂತೆ (ಸೋಕ್ರಮ. ೨೦). [ ದೈವ + ಸನ್ನಿಧಿ ]

**ದೈವಸಹಾಯ** (ನಾ). ದೇವರ ಕೃಪೆ, – ಕರುಣೆ: ದೈವಸಹಾಯವಿದ್ದರೆ ಯಾವ ಕಾರ್ಯವೂ ಸುಲಭವಾಗಿ ನಡೆಯುತ್ತದೆ (ರೂಢಿ). [ ದೈವ + ಸಹಾಯ ]

**ದೈವಸಾಕ್ಷಾತ್ಕಾರ** (ನಾ). ದೇವರನ್ನು ಕಣ್ಣಾರೆ ನೋಡುವಿಕೆ; ದೇವರ ಪ್ರತ್ಯಕ್ಷ ದರ್ಶನ: ತಾನು ಪಡೆದ ಅನುಭವವು ದೈವಸಾಕ್ಷಾತ್ಕಾರವೆಂದೂ, ಆದೇ ಪರಮಸತ್ಯವೆಂದೂ ಅವನು ಬಗೆಯುತ್ತಾನೆ (ದೂರಸ. ೨೩೦). [ ದೈವ + ಸಾಕ್ಷಾತ್ಕಾರ ]

**ದೈವಸಾಧನೆ** (ನಾ). ದೇವತ್ವವನ್ನು ಪಡೆಯಲು ಮಾಡುವ ಸಾಧನೆ; ಅಧ್ಯಾತ್ಮ ಸಾಧನೆ: ಆದಿಯನ್ನು ತಿಳಿಯಲು ಆಶಿಸುವ ಇಂತಹ ಕುತೂಹಲ ಮನೋಭಾವ ತಾನೇ, ಮನುಷ್ಯನನ್ನು ದೈವಸಾಧನೆಗೆ ಎಳೆದಿರುವುದು (ನಿಶಲು. ೫೫). [ದೈವ + ಸಾಧನೆ]

**ದೈವಸೂತ್ರ** (ನಾ). = ದೈವವಿಸೂತ್ರ: ಅರಸ ಕೇಳುಪವಾಸಗಳು ಜಾಗರಗಳವುಲ ಬ್ರಹ್ಮಚರಿಯುದ ನಿರತಿಶಯ ಸುವ್ರತವು ದೊರಕಿತು ದೈವಸೂತ್ರದಲಿ [ಪಾಠಾಂ. ಗತಿಯಿಂದ] (ತೊರರಾ. ೬-೪೫-೮). [ದೈವ+ಸೂತ್ರ]

**ದೈವಸೃಷ್ಟಿ** (ನಾ). ದೇವರಂ ಉತ್ಪತ್ತಿಮಾಡಿದಂದು; ದೇವರು ನಿರ್ಮಿಸಿದಂದು; ಜಗತ್ತು: ದೈವಾನುಗ್ರಹದಿಂದ ಅರಳಿದ ಪ್ರತಿಭಾಪುಷ್ಪ ಮಾರ್ಗಮಧ್ಯದಲ್ಲಿ ಆದಷ್ಟು ದೈವಸೃಷ್ಟಿಯ ಸೇವೆಮಾಡಿ, ಕೊನೆಗೆ ದಿವ್ಯಪಾದಗಳಲ್ಲಿ ಲೀನವಾಗಬೇಕು (ಹಂಸಗೀ. ೧೩೦). [ದೈವ + ಸೃಷ್ಟಿ]

**ದೈವಹೀನ** (ನಾ). = ದೈವವಿಹೀನ: ದೈವಹೀನನವಿನೀತ ಸ್ವೈನ್ಯನನ್ಯಾಯಿಯೆನಿಪ ನರಪನೊಳೆಂದುಂ ವಿಜಿಗೀಷುಗಳಪ್ಪ ಮಹೀಭುಜರೆಂದುಂ ಸಂಧಿ ಮಾಡರ್ (ಪಂಚತಂ. ೨೨೦-೧೩); ದೈವಬಲವವರಲ್ಲಿ ನೀವೇ ದೈವಹೀನರು (ಕುಮ್ಮಾಭೀ. ೧-೨೩); ತಪವನು ನಾನು ಮಾಡಿದೆ ದೈವಹೀನಗೆ ವಿಫಲವಾಯ್ತೆಂದು (ಕಾಶಿರಾ. ೨೩-೨೫). [ದೈವ + ಹೀನ]

**ದೈವಹೊಡಕ** (ನಾ). ದೆವ್ವಬಡಿದಿರುವವನು; ಪಿಶಾಚಗ್ರಸ್ತ; ಭೂತಾವೇಶವಾದವನು: ದೈವಹೊಡಕ ಮದ್ಯವ ಪಾನಮಾಡಿದಂತೆ ಮೊದಲೆ ಮನ್ಮಥವಿಕಾರವುಂಟಾದ ನನ್ನ ಮನಸ್ಸು . . . ಕದಡಿತು (ವಚಕಾ. ೨೪). [ದೈವಹೊಡೆ + – ಕ₃]

**ದೈವಹೊಡೆ** (ಕ್ರಿ). ಪಿಶಾಚಗ್ರಸ್ತವಾಗು; ಭೂತಾವೇಶವುಂಟಾಗು; ದೆವ್ವಬಡಿ: ದೈವಹೊಡೆದಂದದಲಿ ಬೆಚಿತು ಸಭಾವಲಯದಲಿ ಗರ್ವವಿಭ್ರಮಭಾವಭೂಷಿತನಾಗಿ ವೈಹಾಯಸವನೀಕ್ಷಿಸುತ ಪಾವಿನಂದದೊಳಿರದೆ ಹಾಸ್ಕರಸಾವಲಂಬನನಾಗದೆಯು ಸುಖಜೀವಿಯಾಗಿಹುದು ತ್ತಮವು (ಕುಮ್ಮಾಅ. ೮-೩೬). [ದೈವ + ಹೊಡೆ₁ (<ಪೊಡೆ₁)]

**ದೈವಾಧೀನ** (ನಾ). ದೇವರಿಗೆ ವಶವರ್ತಿಯಾಗಿರಂವುದಂ; ಅದೃಷ್ಟದ ವಶದಲ್ಲಿರುವುದು: ಎಲೆ ಮರುಳೆ ರಾಧೇಯ ಘಡ ಮನವಿಳುಹದಿರು ತಪ್ಪೇನು ಸೋಲವು ಗೆಲವು ದೈವಾಧೀನ ನಿನ್ನಾಳ್ತನಕೆ ಕುಂದೇನು . . . ನೀ ಮನವಳುಕದಿರು ಹಿಡಿ ಧನುವನನುವಾಗೆಂದನಾ ಶಲ್ಯ (ಕುಮ್ಮಾಕ. ೧೩-೨೦); ಏನ ಮಾಡಿದರೇನು ದೈವಾಧೀನವೆಲ್ಲವು (ಕಾಶಿರಾ. ೨೩-೨೫); ದೈವಾಧೀನದಿ ಬಂದಿದನಾವಂಗಸದಳವೆನಿಪ್ಪುದಂ ನಿರವಿಸಿ ನೀಂ ಪಾವನರಂ ಮಾಳ್ಪುದು ನುತದೇವ ಮಹಾದೇವ ಶಂಭುವೆಮ್ಮನೆನುತ್ತಂ (ಹಾಲಾಸ್ಯ. ೨-೯-೨೮); ಹುಟ್ಟು, ಸಾವು ದೈವಾಧೀನ. ಹುಟ್ಟಿದವನು ಸಾಯಲೇಬೇಕು ಎಂಬ ಮನೋಭಾವವವರದು (ಧರ್ಮಸಾ. ೧೧೦).

ದೈವಾಧೀನನಾಗು = ಸಾಯಂ; ಮರಣಹೊಂದಂ: ಇವೊತ್ತಿಗೆ ಹದಿನೇಳು ದಿವಸದ ಹಿಂದೆ ಆತನು ದೈವಾಧೀನನಾದನು (ವಚಭಾ. ೧೫); ಕಡೆಗೊಮ್ಮೆ ಹೃದಯವಿಕಾರದಿಂದ ದೈವಾಧೀನನಾದನು (ಸಸ್ಯಕ. ೪೭); ನಂಜುಂಡಯ್ಯನವರು ದೈವಾಧೀನರಾಗಲು ನಾನು ಮಾಡಿದ್ದ ಅನುವಾದವನ್ನು . . . ಪ್ರಕಟಿಸಲು ನನಗೆ ಸಾಧ್ಯವಾಗದೇ ಹೋಯಿತು (ಜ್ಯೋತಿರ್ವಿ. vi, ಪೀಠಿಕೆ). ದೈವಾಧೀನವಾಗು = ದೈವಾಧೀನನಾಗು: ಮದ್ದಗಿರಿಯಲ್ಲಿಯವರ ಚಿಕ್ಕಪ್ಪ ಗುಲಾಮ ಹೈದರಸಾಬರು ದೈವಾಧೀನವಾದ್ದರಿಂದ (ಹೈದರ. ೩೦); ದೈನ್ಯದಿಂದ ಬೇಡೋಕಿಂತ ದೈವಾಧೀನವಾಗೋದು ಉತ್ತಮ (ಗಾರ). [ದೈವ + ಅಧೀನ]

**ದೈವಾನ** (ನಾ). ಅದೃಷ್ಟಶಾಲಿ; ಭಾಗ್ಯವಂತ: ದತ್ತಗೇಡಿಗೆ ಕೊಟ್ಟವರಿಲ್ಲಂತ ದೈವಾನರದು ಕಸಗೊಂಡವರಿಲ್ಲಂತ (ಅಲ್ಲಿವಿ. ೦೦೮). [<ಸಂ. ದೈವವತ್]

**ದೈವಾನುಕೂಲ** (ನಾ). = ದೈವಸಹಾಯ: ಅನಲನಲ್ಪವದಾದಡೇನದುವ ನಿಲನಿಂದ ಪ್ರಕಾಶಿಸುತಲಿಹುದನವರತಲಾ ನೀತಿಯಲಿ ದೈವಾನುಕೂಲವದು ಘನವೆನಿಸಿಯೈದುತ್ತಿಹುದುವ ಧರ್ಮವಸತ್ಯವರ್ಮಾಚರಣದಲಿ ಮನುಜರೊಳಗಿದನಱಿದು ನಡೆವವ ಜಾಣನಹನೆಂದ (ತಿಮ್ಮಅ. ೨-೨೪); ಅನುದಿನ ಕರ್ಮಶುದ್ಧಿಯ ಕಾರ್ಯವಿದ್ದಾಗ ಅರಿದೆನಿಪ ದೈವಾನುಕೂಲವದಿರದೆ ಕೆಡುವುದು ತಿಳಿದದನು ಮಿಗೆ ನರನು ಪ್ರಥುತರ ಪುಣ್ಯಕರ್ಮವ ಮಾಡಬೇಕೆಂದ (ತಿಮ್ಮಅ. ೨-೨೫). [ಸಂ.]

**ದೈವಾನುಕೂಲತೆ** (ನಾ). = ದೈವಸಹಾಯಂ: ಏನವಮಾಡಿದಡೇನು ಸದ್ಧರ್ಮಾನುಭಾವರಿಗೈಸಲೇ ದೈವಾನುಕೂಲತೆ (ತೊರರಾ. ೬-೨೦-೪೦). [ಸಂ. ದೈವಾನುಕೂಲತಾ]

**ದೈವಾನುಕೂಲ್ಯ** (ನಾ). = ದೈವಸಹಾಯ: ಏನನಾಡಿದಡೇನು ಫಲ ದೈವಾನುಕೂಲ್ಯದ ಕುಣಿಕೆ ಬೇಱಿಹುದಾ ನರೇಂದ್ರನ ಸಾರಿ ಸೋಕುದು ನಿಮಿಷಮಾತ್ರದಲಿ (ಕುಮ್ಮಾಸ. ೧೩-೫೬). [ದೈವ + ಆನುಕೂಲ್ಯ]

**ದೈವಾನುಗ್ರಹ** (ನಾ). ದೇವರ ಕೃಪೆ, – ದಯೆ: ದೈವಾನುಗ್ರಹದಿಂದ ಅರಳಿದ ಪ್ರತಿಭಾಪುಷ್ಪ, ದೈವಾನುಗ್ರಹಕಾತರನಾಗಿ, ಮಾರ್ಗಮಧ್ಯದಲ್ಲಿ ಆದಷ್ಟು ದೈವಸೃಷ್ಟಿಯ ಸೇವೆ ಮಾಡಿ, ಕೊನೆಗೆ ದಿವ್ಯಪಾದಗಳಲ್ಲಿ ಲೀನವಾಗಬೇಕು (ಹಂಸಗೀ. ೧೩೦); ದೈವಾನುಗ್ರಹದಿಂದ ಮಳೆ ಬಂದು ಕೆರೆಗೆ ನೀರು ಬಂದಿದೆ (ರೂಢಿ). [ದೈವ + ಅನುಗ್ರಹ]

**ದೈವಾಪರ** (ನಾ). ದೇವರನ್ನು ಅಪರ(ಪರಕೀಯನಲ್ಲದವನೆಂದು ನಂಬಿ)ದವನಂ; ದೈವಭಕ್ತ; ದೇವರ ಪಕ್ಷಪಾತಿ: ಅನುಪಮಚರಿತ ದೈವಾಪರನು ಪುಣ್ಯನಿಧಿ . . . ಎಂದಿಳೆ ಹೊಗಳುತಿರಲದುವೆ ಕೇಳ್ದೆ ಸ್ವರ್ಗ (ಕುಮ್ಮಾಉ. ೪-೪೦). [ದೈವ + ಅಪರ]

**ದೈವಾಯತ** (ನಾ). ದೇವರ ಅಧೀನದಲ್ಲಿರುವುದು; ಅದೃಷ್ಟದ ಕೈಯಲ್ಲಿರುವುದಂ; ಮಂನುಷ್ಯರ ಕೈಯಲ್ಲಿ ಇಲ್ಲದಿರಂವುದು; ದೈವಾಯತ್ತ: ನಿನಗೆ ಮುನಿದಡೆ ನೋಯಿಸುವಡಳವಲ್ಲ ಘಡ ದೈವಾಯತಕೆ ನೀನೇಕೆ ಬೆಱಿತಿಹೆಯೆಂದನಾ ಭೂಪ (ಕುಮ್ಮಾಗ. ೬-೧೮). [<ಸಂ. ದೈವಾಯತ್ತ]

**ದೈವಾಯತ್ತ** (ನಾ). = ದೈವಾಯತ: ಸಮರಜಯಂ ದೈವಾಯತ್ತಮದಱಿನಾ ಪುರುಷಕಾರಮೆಮಗಾಯಿತ್ತಾಗಳ್ (ಗದಾಯು. ೬-೪೬); ಫಲವು ದೈವಾಯತ್ತ ನಾವು ಮಾಡುವುದೇನು (ಧ್ವನ್ಯಾಲೋ. ೧೦೬). [ದೈವ + ಆಯತ್ತ₂]

**ದೈವಿಕ** (ಗುಂ). ೧. ದೇವತೆಗಳಿಗೆ ಸಂಬಂಧಿಸಿದ; ದೇವತೆಗಳಿಂದ ಉಂಟಾದ, – ಒದಗಿದ: ಮಾನುಷ ಪ್ರಮಾಣವು ದೊರೆಯದಿದ್ದ ಪಕ್ಷದಲ್ಲಿ ದೈವಿಕ ಪ್ರಮಾಣವನ್ನು ಪಡೆಯುತ್ತಿದ್ದರು (ಧಾರಧ. ೫೬); ಅಲ್ಲಿನ ಶಿಕ್ಷಣ ದೈವಿಕಭಾವನೆ ಮೂಡಿಸುತ್ತಿದ್ದರೂ ಮತಸಹಿಷ್ಣುತೆಯನ್ನು ಬೋಧಿಸುವಂತಿರಲಿಲ್ಲ (ಶಿಕ್ಷರ. ೬೫); ಈ ದೈವಿಕ ಪ್ರೇರಣೆಯು ತನಗೆ ಬಾಲ್ಯದಿಂದಲೂ ಲಭ್ಯವಾಗಿತ್ತೆಂದು ಆತನೇ ಹೇಳಿದ್ದಾನೆ (ಸೋಕ್ರಮ. ೨೦). ೨. ಅದೃಷ್ಟದಿಂದ ಒದಗಿದ; ಅಕಸ್ಮಾತ್ತಾಗಿ ಉಂಟಾದ: ಏನೋ ದೈವಿಕಘಟನೆಯಿಂದ ಅವರ ಭೇಟಿಯೊದಗಿತು (ರೂಢಿ). (ನಾ). ೩. ಅತಿಮಾನುಷವಾದುದಂ: ಅರಸ ಚಿತ್ರಸೇಳು ತಾಳಿವೆ ಸರಿಸದಲಿ ದೈವಿಕದ ಮರನಿವನುರಗನಂದದ ದೈತ್ಯಮುನಿ ಧರಿಸಿಹನು ವಿತಳದಲಿ (ತೊರರಾ. ೪-೨-೪೫). ೪. ದುರ್ದೈವ; ದುರದೃಷ್ಟ: ಪಲವುಂ ಭವಂಗಳೊಳ್ ನೆರಪಿದೆನ್ನಯ ಪಾಪಮೊ ಮೇರೆಗೆಟ್ಟ ಕೋಟಲೆಗಳನುಣ್ಬೆನೆಂಬಲ ಸೈರಣೆಯೋ ಕಡುಪಿಂ ತಗುಳ್ದು ನೆಟ್ಟಲೆವಸಮಾಸ್ತ್ರವಕ್ರತೆಯೊ ದೈವಿಕಮೋ ನಿನಗೇನನೆಂಬೆ ನಗ್ಗಲಿಸಿಯೆ ನಿಂದುದೆಂತುಮಸು ಪೋಗದ ಕಲ್ಲೆರ್ದೆಯಿಂ ಮಹೀಪತೀ (ಕಾದಂಪೂ. ೯೨೦). [ಸಂ.]

**ದೈವಿಕಶರ** (ನಾ). = ದೈವಿಕಾಸ್ತ್ರ : ಉರಿವುದುಂದೇ ತೇರು ಕರ್ಣನ ಗುರು ನದೀನಂದನನ ದೈವಿಕಶರಹತಿಯೊಳೆವ್ವಿಂದ ಸಿಂದುದು ಪಾರ್ಥ (ಕುವ್ಯಾಗ. ೮-೫೦). [ ದೈವಿಕ + ಶರ ]

**ದೈವಿಕಾಸ್ತ್ರ** (ನಾ). ದೇವರಿಂದ ಕೊಡಲ್ಪಟ್ಟ ಅಸ್ತ್ರ ; ದಿವ್ಯಾಸ್ತ್ರ ; ಮಂತ್ರಾಸ್ತ್ರ : ನಾವಿಳಿದ ಬಳಿಕೀ ರಥದೊಳಿರಲಾವ ಹದನೋ ನಿನಗೆ ಕಂಡ್ಯೆ ದೈವಿಕಾಸ್ತ್ರದ ಮಹಿಮೆಗಳನು (ಕುವ್ಯಾಗ. ೮-೫೩). [ ದೈವಿಕ + ಅಸ್ತ್ರ ]

**ದೈವೀಕೃಪೆ** (ನಾ). ದೇವರ ದಯೆ,– ಕರುಣೆ: ದೈವೀಕೃಪೆಯು ಮಂತ್ರದಂಡ ತನ್ನಾವುದೋ ಕಾರ್ಯಕ್ಕಾಗಿ ಅರಸಿದ ಹೂವು ಜನತೆಗೆ ನೀಡುವ ತನ್ನ ಪರಿಮಳಕ್ಕೆ ಸುಂಕ ಕೇಳುತ್ತದೆಯೇ ?(ಹಂಸಗೀ. ೧೩೦). [ ಸಂ. ದೈವೀಕೃಪಾ ]

**ದೈವೀಪ್ರವೃತ್ತಿ** (ನಾ). ದೇವತೆಗಳ ಸಂಬಂಧವಾದ ವ್ಯವಹಾರ,– ಆಚಾರ ; ಸಾತ್ವಿಕ ಕಾರ್ಯಾಚರಣೆ,–ಪ್ರವರ್ತನೆ : ಅವನಲ್ಲಿದ್ದ ಪಾಶವೀಶಕ್ತಿ . . . ಆ ದಿನ ಬೆಳಗ್ಗೆ ಸುಳುಹುದೋರಿದ್ದ ದೈವೀಪ್ರವೃತ್ತಿಯನ್ನು ಮೆಟ್ಟಿ ತುಳಿದು ಭೂಗತವಮಾಡಿತು (ಪುನರು. ೭೫). [ ಸಂ. ]

**ದೈವೀವಿರುದ್ಧ** (ಗು). ದೈವಿಕ ಪ್ರವೃತ್ತಿಗೆ ವಿರೋಧವಾದ ; ಸಾತ್ವಿಕ ಕಾರ್ಯಾಚರಣೆಗೆ ಪ್ರತಿಬಂಧಕವಾದ ; ಒಳ್ಳೆಯ ಗುಣಗಳಿಗೆ ಬಾಧಕವಾದ: ದೈವೀವಿರುದ್ಧಂ ತಮಃಪ್ರವೃತ್ತಿಯಂ ನಿಗ್ರಹಿಸಿ (ಶ್ರೀರಾಮಾ. ೪೪೫-೪). [ <ಸಂ. ದೈವವಿರುದ್ಧ ]

**ದೈವೀಶಕ್ತಿ** (ನಾ). ದೇವತೆಗಳ ಸಂಬಂಧವಾದ ಬಲ ; ದೈವಪ್ರಭಾವ,– ಮಹಿಮೆ ; ದೇವತೆಗಳ ಸಾಮರ್ಥ್ಯ : ಆಗಮವು ದೈವೀಶಕ್ತಿಯ ವಿಲಾಸವನ್ನು ಜಗತ್ತಿಗೆ ಅರಿವು ಮಾಡಿಕೊಡಲು ದೇವಸ್ಥಾನದ ನಿರ್ಮಾಣವನ್ನು ಸಾಧ್ಯಮಾಗಿಟ್ಟುಕೊಂಡಿದೆ (ಭಾರದ. ೮೦). 'ದೈವೀಪ್ರವೃತ್ತಿ' ಪರಾ. [ ಸಂ. ]

**ದೈವೀಸಂಪತ್ತು** (ನಾ). ದೇವತೆಗಳಿಗೆ ಸಂಬಂಧಿಸಿದ ಗುಣಗಳ ಸಮೃದ್ಧಿ ; ಅಹಿಂಸೆ, ಸತ್ಯ, ಶಾಂತಿ, ತ್ಯಾಗ ಮೊದಲಾದ ಒಳ್ಳೆಯ ಗುಣಗಳು ; ಶೀಲವಂತನಾಗಿ ನಡೆದುಕೊಳ್ಳುವ ಸ್ವಭಾವ ; ಸದ್ಗುಣಗಳನ್ನು ಪ್ರಕಟಿಸುವ ಸ್ವಭಾವ : ಅಹಿಂಸಾ, ಸತ್ಯ . . . ಇತ್ಯಾದಿ ಗುಣಗಳನ್ನು ಘೋಷಿಸಿದ ಆತ್ಮ ದೈವೀಸಂಪದ್ಯುಕ್ತವಾಗಿ ಜಗತ್ಕಲ್ಯಾಣಸಾಧಕವಾಗುತ್ತದೆ (ಪುಕ್ವಾರ. ೦೩೪ ಪೀಠಿಕೆ). 'ಆಸುರೀಸಂಪತ್ತು' ಪರಾ. [ ಸಂ. ದೈವೀಸಂಪದ್ ]

**ದೈವೀಸ್ಫೂರ್ತಿ** (ನಾ). ದೈವಿಕವಾದ ಸ್ಫುರಣೆ ; ಸಮಯೋಚಿತವಾದ ಸಂಗತಿಯು ತಟ್ಟನೆ ಹೊಳೆಯುವುದು : ಕಾವ್ಯ ಎಂಬುದು ಸೃಷ್ಟಿ, ಅದರಲ್ಲಿ ಆಡುವ ಉಸಿರು ದೈವೀಸ್ಫೂರ್ತಿ– ಎಂದು ಅವರ ನಂಬಿಕೆ (ಸೌಂದಸ. ೦೦೩). 'ದೈವೀಪ್ರವೃತ್ತಿ' ಪರಾ. [ ಸಂ. ]

**ದೈವೇಚ್ಛೆ** (ನಾ). ಪೂರ್ವಜನ್ಮದ ಕರ್ಮಾನುಸಾರವಾಗಿ ಇದಂ ಹೀಗೆಯೇ ಆಗಬೇಕೆಂಬ ನಿಯಮಂ ; ವಿಧಿನಿಯಮ ; ಬ್ರಹ್ಮಸಂಕಲ್ಪ ; ಭವಿತವ್ಯತೆ: ಎಮ್ಮ ಸಾವುಮುಟ್ಟಿವುಂ ದೈವೇಚ್ಛೆಯಾಯ್ತಾಗದೇ (ಪಂಪಭಾ. ೩-೮೯) ; ನನ್ನದು ಹೀಗೆ ಕೊನೆಗಾಣಬೇಕೆಂದು ದೈವೇಚ್ಛೆ ಇತ್ತು. ಅದಕ್ಕೆ ನೀನು ನಿಮಿತ್ತವಾಗಿ ಒದಗಿ ಬಂದೆ (ಹಂಸಗೀ. ೨೦೩). [ ದೈವ + ಇಚ್ಛೆ ]

**ದೈವೋದಯ** (ನಾ). ಒಳ್ಳೆಯ ಅದೃಷ್ಟದ ಆರಂಭ ; ಭಾಗ್ಯೋದಯ : ಅವಳ ದೈವೋದಯುವದೈಸಲೆ ಸವಡಿಸೀರೆಯು ಸುತ್ತಿ ಸಡಿಲದು (ಕುವ್ಯಾಸ. ೦೬-೫). [ ದೈವ + ಉದಯ ]

**ದೈವೋಪಹತ** (ಗು). ದುರದೃಷ್ಟಕ್ಕೆ ಈಡಾದ ; ದುರ್ದೈವಕ್ಕೆ ಒಳಗಾದ: ಐಸಲೇ ದೈವೋಪಹತ ಮನದಾಸಜಾರಿಂದಡಗುವುದು (ಕುವ್ಯಾಅ. ೨೦-೪೭). [ ದೈವ + ಉಪಹತ ]

**ದೈಶಿಕ** (ಗು). ೧. ದೇಶಕ್ಕೆ ಸಂಬಂಧಪಟ್ಟ : ದಹಿಕ ದೈಶಿಕ ಕಾಲಿಕತ್ರಯ ಗಹನ ಕರ್ಮಗಳುಂಟು (ಹಸಾರ. ೯-೪). (ನಾ). ೨. ಆಯಾ ದೇಶದಲ್ಲಿ ಆಚರಿಸಬೇಕಾದ ಕರ್ಮ : ಮನುಷ್ಯರು ಮಾಡಬೇಕಾದ ಕರ್ಮಗಳು ಮೂರು ಪ್ರಕಾರ, ದೈಹಿಕ, ದೈಶಿಕ, ಕಾಲಿಕ . . . ದೈಶಿಕ ದೇಶಸಂಬಂಧವಾದುದು (ಹಸಾರ. ೯-೪ ತಾತ್ಪರ್ಯ). [ ಸಂ. ]

**ದೈಹಿಕ** (ಗು). ದೇಹಕ್ಕೆ ಸಂಬಂಧಪಟ್ಟ ; ಶರೀರಕ್ಕೆ ಸಂಬಂಧಿಸಿದ : ಜನಾಂಗದ ದೈಹಿಕ ಯೋಗ್ಯತೆ, ಮಾನಸಿಕ ಶಕ್ತಿ... ಇದೇ ಹೆಣ್ಣುಮಕ್ಕಳ ಆರೋಗ್ಯ ಮತ್ತು ಸುಖಸಂತೋಷಗಳನ್ನು ಹೊಂದಿಕೊಂಡಿದೆ (ಅಡುಸಾ. ೨೦) ; ಮೂಢನಂಬಿಕೆಯಾದರೂ ದೃಢವಾದುದಾದರೆ, ಮನಸ್ಸಿಗೆ ಧೈರ್ಯವನ್ನು ತುಂಬಿ ದೈಹಿಕ ಪವಾಡಗಳನ್ನು ನಡಸಬಹುದು (ಮನೋಸಂ. ೦೯೬) ; ಮನುಷ್ಯರು ಮಾಡಬೇಕಾದ ಕರ್ಮಗಳು ಮೂರು ಪ್ರಕಾರ: ದೈಹಿಕ, ದೈಶಿಕ, ಕಾಲಿಕ,–ದೈಹಿಕವೆಂದರೆ ದೇಹದಿಂದ ಮಾಡುವ ಸೇವೆಗಳು – ನಮನಾದಿಗಳು (ಹುಕ್ಸಾರ. ೯-೬ ತಾತ್ಪರ್ಯ). [ ಸಂ. ]

**ದೈಹಿಕಮಲ** (ನಾ). ಶರೀರದಲ್ಲಿ ಉತ್ಪತ್ತಿಯಾಗುವ ಹನ್ನೆರಡು ಬಗೆಯ ಅಶುಚಿದ್ರವ್ಯ,–ಕೊಳೆ,–ಹೊಲಸು : ಗುಗ್ಗೆ ಜಬುರು ಕಣ್ಣೀರು ಸಿಂಬಳ ಶ್ಲೇಷ್ಮ ಬೆವರು ಕನುಗು ಜಲ ಮಲ ರಕ್ತ ರೇತಸ್ಸು ಮಜ್ಜೆ ಈ ಹನ್ನೆರಡೂ ದೈಹಿಕಮಲಗಳು (ಆರ್ಯಾಧ. ೧೧೦). [ ದೈಹಿಕ + ಮಲ ]

**ದೈಹಿಕಯಾತನೆ** (ನಾ). ಶರೀರಕ್ಕೆ ಉಂಟಾಗುವ ಹಿಂಸೆ,–ಬಾಧೆ : ದೈಹಿಕ ಯಾತನೆಯಾಗಿ ಪರಿಣಮಿಸಿದ ನೈತಿಕ ಜುಗುಪ್ಸೆ . . . ಭಯಂಕರವಾಗಿ ಅವನ ಮನಸ್ಸನ್ನಾಕ್ರಮಿಸಿತು (ಪುನರು. ೨೩೭). [ ದೈಹಿಕ + ಯಾತನೆ ]

**ದೈಹಿಕವಿಕ್ರಮ** (ನಾ). ಶಾರೀರಕವಾದ ಸಾಹಸ,–ಶ್ರಮ : ಹೀಗೆ ದೈಹಿಕ ವಿಕ್ರಮವೇ ಕ್ರಮವೆಂದು ಕೊರೆದುಕೊಂಡನು (ಜಯಂತ. ೨೭೯). [ ದೈಹಿಕ + ವಿಕ್ರಮ ]

**ದೈಹಿಕಶಿಕ್ಷಣ** (ನಾ). ದೇಹಶಕ್ತಿಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಕೊಡುವ ವ್ಯಾಯಾಮ ಶಿಕ್ಷಣ ; ಅಂಗಸಾಧನೆಯನ್ನು ಕಲಿಸುವುದು : ದೈಹಿಕಶಿಕ್ಷಣವು ಪ್ರೌಢವಿದ್ಯಾಭ್ಯಾಸದ ಒಂದು ಅವಿಭಾಜ್ಯ ಭಾಗವಾಗಿದೆ (ರೂಢಿ). [ ದೈಹಿಕ + ಶಿಕ್ಷಣ ]

**ದೈಹಿಕಸುಖ** (ನಾ). ಶರೀರದಿಂದ ಅನುಭವಿಸುವ ಸುಖ ; ಕಾಮಸುಖ ; ಕಾಮೋಪಭೋಗ : ಹಸಿವಾದಾಗ ರುಚಿರುಚಿಯಾದ ಭೋಜನ, ಕೋಪ ಬಂದಾಗ ಅಬ್ಬರ, ದೈಹಿಕಸುಖ ಬಯಸಿದಾಗ ಹೆಂಡತಿ ಸಾಯುತ್ತಾ ಬಿದ್ದಿದ್ದರೂ ಅವಳನ್ನು ತನ್ನ ಬಯಕೆಗೆ ಬಲಿಕೊಡುವುದು ಅವರಿಗೆ ಸಾಮಾನ್ಯವಾಗಿಹೋಗಿತ್ತು (ಕೀಲುಗೊಂ. ೦೦೩) ; ಹೆಂಡೊಮ್ಮೆ ದೈಹಿಕ ಸುಖಕ್ಕೆ ತನ್ನನ್ನು ಬಳಸಿಕೊಂಡಂತೆ ಮತ್ತೆ ಆಧ್ಯಾತ್ಮಿಕ ಕಲ್ಯಾಣಕ್ಕೆ ಬಳಸಲವಕಾಶ ಕೊಡುವುದಿಲ್ಲವೆಂದೂ . . . ಅವಳು ಯೋಚಿಸಿದಳು (ಪುನರು. ೩೨೫). [ ದೈಹಿಕ + ಸುಖ ]

**ದೊಂಗರ** 'ಡೊಂಗರ' ನೋ.

**ದೊಂಟೆ** (ನಾ). ಪ್ರಾಣಿಗಳ ಕೊರಳಿಗೆ ಕಟ್ಟುವ ಮರದ ತಂಡು ; ಗುದಿ : ಕೊರಳ ದೊಂಟೆ ಟಕ್ ಟಕ್ ಎನೆ ಚಿಮ್ಮುತ ಬಿಸಿಲೊಳು ಮಲಗಿಹ ಹೊಮ್ಮಿದ ಹಸುರಲೆ ಕುಣಿಯುವ ಕರುಗಳ ಕೂಡುವೆನು (ಕದಕೆ. ೩-೦೮) ; ಕೊಟ್ಟಿಗೆಯಲ್ಲಿಯೂ ಗೊರಸಿನ ಸದ್ದು, ಕೊಂಬಿನ ಸದ್ದು, ದೊಂಟೆಯ ಸದ್ದು . . . ಕೇಳಿಸತೊಡಗಿತು (ಮಲಮ. ೪೦). [ ದೇ.ಶ ತಮಿ. ತೊಣ್ಣು ; ಮಲ. ತೊಣ್ಣು ]

**ದೊಂಡಿ** (ನಾ). ಒಂದು ಬಗೆಯ ವಿಮಾನ : ಗಜಿ ಮಿಜಿವ ಕಾಗೆಂಡೆಯ್ಯುಯ್ಯರೆಗ ದೊಂಡಿ ಕೆಂಗಬು . . . ಎಂಬ ಪರಿಪರಿಯ ವಿಮಾನ್ಗಳಂ ಗುಡಿಗೆಯ್ದರ (ಹಿಕಕಾ. ೫-೪೫). [ ದೇ.ಶ ತಮಿ. ತೊಣ್ಟ್ಯ ; ತೆಲು. ದೊಂಡು, ದುಂದಾಮ ]

**ದೊಂಡೆ₁, ಜೊಂಡು₃, ಜೊಂಡೆ, ತೊಂಡೆ₄** (ನಾ). ೧. ಸಿಕ್ಕು ಸಿಕ್ಕಾಗಿರುವುದು; ತೊಡರಿಕೊಂಡಿರುವುದು; ಹೆಣೆದುಕೊಂಡಿರುವುದು: ನಾನಾಮೃಗಾನೀಕದ ಕರ್ಗಂಡಂಗಳಂ ದೊಂಡೆಗಳನೆಡಸಿ ನುಂಗುತ್ತುಂ (ಶಾಂತೀಶ್ವ. ೩-೭); ಪಾರ್ಥನ ಕರುಳ ದೊಂಡೆಯು ಕೊಳ ಮುದ್ದೆಯ ಬಡಿಸಿ ದೈತ್ಯರಿಗೆ . . . ದಣಿಸಿದಡರಸು ಕೌರವನೆನ್ನ ಸಾಕಿತಕೆಂದು ಫಲವೆಂದ (ಕುಮಾ.ಕ. ೮-೪೨); ವೋಜೆವೃತಿರ್ದವು ರಣಸಮುದ್ರದ ತೆರೆಯ ಬಲುರವದಂತೆ ನೆಣನುಬ್ಬರದ ನೆತ್ತರಿನಸ್ಥಿಮಾಂಸದ ಮಿದುಳ ದೊಂಡೆಗಳ . . . ನಡುಹಜೆದ ಕಪಿಗಳ ಖಳಕದಂಬದ ಸರಿಬೆರಕೆಯಲಿ (ತೊರರಾ. ೭-೩೭-೪೨). ೨. ಅಜಿಗಿಜಿಯಾದುದು; ಜಿಗುಟಾದುದು: ಕಣೆವೋದ ಕಾಲ್ ಸಿಡಿದ ಖಂಡದ ದೊಂಡೆಯು ರಾಶಿ ಪೊಕ್ಕುವರ್ಗಡಿಯಿಡಲಿಲ್ಲೆನಲ್ (ಮಹಾನೀ. ೧೨-೧೨). **ಜೊಂಡು₃**: ೧. ಬಿಡುಮಿದುಳ ಜೊಂಡಿನಿಂ ನಡುತೊಡೆಯ ತುಂಡಿನಿಂ ಪೊಡೆಗೆಡೆದು ಬೀಳ್ದರಿಂ ನೆತ್ತರಿನೊಳಾಳ್ದರಿಂ ರಣಧರಣ ಕಣ್ಗೆಸೆದುದು (ಜಬಪು. ೩೮-೩೯). **ಜೊಂಡೆ**: ೧. ನರಳ್ವ ವೀರರ ಮಿದುಳ ಜೋಟಿನ ಜೊಂಡೆ ಜೋಡಣೆಯ . . . ಭಟರಟ್ಟೆಗಳಲೆಸೆದುದು ಕೂಡೆ ರಣಭೂಮಿ (ಕುಮಾ.ಕ. ೧೫-೩೩); ಕರುಳ ರಕುತದ ಜೊಂಡೆಯಲಿ ಜರಿದೆಲುಗಳಲಿ ಜವನುಂಡು ಕಾಜಿದ ನೆಲನವೊಲು ರಣಭೂಮಿ ರಂಜಿಸಿತು (ತೊರರಾ. ೩-೬-೧೭). **ತೊಂಡೆ₄**: ೧. 'ತೊಂಡೆಗರುಳು' ಪರಾ.

**ದೊಂಡೆ₂** 'ತೊಂಡೆ₃' ನೋ.

**ದೊಂಡೆಕರುಳ್** 'ದೊಂಡೆಗರುಳ್' ನೋ.

**ದೊಂಡೆಗರುಳ್, ತೊಂಡೆಗರುಳು, ದೊಂಡೆಕರುಳ್, ದೊಂಡೆಗರುಳು** (ನಾ). ಕುಚ್ಚುಕುಚ್ಚಾಗಿ ಹೆಣೆದುಕೊಂಡಿರುವ ಕರುಳು; ಮಾಲೆಗರುಳು: ಮುನಿಸಂ ಮಾಡಿದರಾತಿನಾಥರಡಗಂ ಸುಪ್ಪಲ್ಗೆ ಕೆನ್ನೆತ್ತರಂ ಕೆನೆಗೊಂಡಾಜಿದ ಪಾಲ್ಗೆ ದೊಂಡೆಗರುಳಂ ಕರ್ಬಿಂಗೆ ಲೆಕ್ಕ[ಕ್ಕೆ ತಂ]ದಿನಿಸುಂ ಮಾಣದೆ ಪೀರ್ದು ಪೀರ್ದು ನೊಣೆದು (ಪಂಪಭಾ.೧೨-೦೬೦); ದೊಂಡೆಗರುಳ್ಗಳುಂ ತೊರಳೆಯುಂ ಮುತ್ತೆ ಬಾಡುತಂ ಪುಂಡಗುಳು ನೀರ್ಸುರಿಯೆ ನಡನಡುಗಿ ಕೋಡುತಂ (ಬಿಂಡೂರ. ೧-೭); ಕಂಡು ಪವನಜ ತುಡುಕಿ ಮಿಗೆ ಮುಂಕೊಂಡು ನೆಲಕ್ಕಪ್ಪಳಿಸೆ ಮೆಲ್ಲನೆ ದೊಂಡೆಗರುಳುಜೆ ಸೂಸೆ ಚೆಲ್ಲಿತು ರಾಜಸಭೆಯೊಳಗೆ (ಕುಮಾವಿ. ೭೦೩. ೯-೬೨); ವೀರ ದುರ್ಮುಖನ ದೊಂಡೆಗರುಳಗಲಿದವು ಪನಸನ ತುಂಡುಗಳು ತೂಜೆದವು ಮರುಳ್ಗಳ ತಂಡದಲಿ ತಜೆದೊಟ್ಟಿದನು ಮಿಕ್ಕಾದ ಯೂಥಪರ (ತೊರರಾ. ೬-೦೭-೨೨); ದೊಂಡೆಗರುಳ್ಗಳನುಗಿದು ಸೌಬಲನ ನಾಸಿಕದ ಬಿಸಿನೆತ್ತರಂ ಸುರಿಯಿಸಿ (ಘೋರಾಸು. ೩೫-೨೩). **ತೊಂಡೆಗರುಳು**: ಮುಂಡದ ಹಲಗೆ ಹೆಣದ ಎಲುವಿನ ಕತ್ತಿ ತೊಂಡೆಗರುಳು ಬಿರುಹಗ್ಗ ಖಂಡದ ಹಿಡಿಗಲ್ಲು ನರದ ಚಬುಕುಗಳ ಗಂಡುಭೂತಗಳೆದ್ದವಾಗ (ಹರಿಶಾ. ೩-೫೭); ತೊಂಡೆಗರುಳನು ದಂಡೆಯನು ಮಾಡಿಸುವೆಯುವಳಿಗೆ (ಕರಿಕ. ೬೩-೩). **ದೊಂಡೆಕರುಳ್**: ಮೆರ್ಬುಲಿ ಪಾಯೆ ಕಂಠಗತಜೀವಿತರಾದವರೆಕ್ಕಲಂ ಕನಲ್ದುರ್ಬಿ ಪಿಸುಟ್ದು ದೊಂಡೆಕ[ಪಾಠಾಂ. ಗ]ರುಳಂ ತಳೆದಿರ್ಪವರ್ . . . ಸರ್ಬ ಮೃಗಂಗಳಂ ಕೆಡಪಿ ಬರ್ಪವರೊಪ್ಪಿದರ್ (ದಶಕು. ೫-೯೧). **ದೊಂಡೆಗರುಳು**: ದೊಂಡೆಗರುಳಿನ ಪಾಯ ಜೋಲಿನ ಕುಂಡಲಿತಕರಜಂಘೆಗಳ ಬಿಡುಮುಂಡೆಗೆದಜೆದ ಖಳನ ಕಂಡುದು ಭೂಸುರವ್ರಾತ (ಕುಮಾ.ಅ. ೧-೩೩); ದೊಂಡೆಗರುಳಿನ ರಾಸಿಗಳ ತೊಡೆಯಿಂದ ಮುರಿದಿಹ ಕಾಲ್ಗಳಿಂ ರಣವಂದು ಭೀಕರಿಸಿದುದು (ದೇವೀಪು. ೩-೨೫). [ ದೊಂಡೆ₁ + ಕರುಳ್ ]

**ದೊಂಡೆಗರುಳು** 'ದೊಂಡೆಗರುಳ್' ನೋ.

**ದೊಂಡೆಗೆಸಱು** (ನಾ). ಮಂದವಾದ ಕೆಸರು; ಅಜಿಗಿಜಿಯಾದ ಕೆಸರು: ರಕುತದ ದೊಂಡೆಗೆಸಜೆನೊಳದ್ದುದಗಣಿತ ರಥಗಜಾಶ್ವಚಯ (ಕುಮಾ.ಕ. ೭-೩೦). [ ದೊಂಡೆ₁ + ಕೆಸಱು (<ಕೆಸಱ್) ]

**ದೊಂಡೆದೊಂಗುವೊಂಗು ?** (ಕ್ರಿ). (?): ಕೆದಱಿದ ಕುಂತಳಂ ಕುಸಿದು ಕೊರ್ಬಿದ ಪೆರ್ಮೊಲೆ ದೊಂಡೆದೊಂ[ಪಾಠಾಂ. ವೊಂ]ಗುವೊಂಗಿದ ತುಟಿ ತಳ್ಪಿನಿಂ ಮುಱಿದ ಮೆಯ್ಯ ವಿರೋಪನ ತಳ್ತ ತೋಳ್ಗಳೊತ್ತಿದ ಬಱೆಮೆಯ್ಯ ಕೂರುಗುರ ಬಾಸುಱೆ ಭೂಷಣಮಾಗಳುಂ ರತಾಂತದೊಳ್ (ಲೀಲಾವ. ೧೩-೩೫). [ ? ]

**ದೊಂಡೆನರವು** (ನಾ). ಮುದ್ದೆಗಟ್ಟಿದ ನರ; ಹೆಣೆದುಕೊಂಡ ನರ: ತೊಗಲ ಕೊಯ್ಲಿನ ಮುಱಿದ ಮೂಳೆಗಳ ದೊಂ[ಪಾಠಾಂ. ಜೊಂ]ಡೆನರವಿನ ಜುಱಿತ ಮಿದುಳಿನ . . . ಕಾಲಾಂತಕನ ಹೆಬ್ಬೆಳಸು ಹುಲುಸಾಯ್ತು (ಕುಮಾ.ಭೀ. ೯-೧೩). [ ದೊಂಡೆ₁ + ನರವು ]

**ದೊಂದಡಿ** 'ದೊಂದುಳಿ' ನೋ.

**ದೊಂದಣ** 'ದೊಂದುಳಿ' ನೋ.

**ದೊಂದಣೆ** 'ದೊಂದುಳಿ' ನೋ.

**ದೊಂದಿ** 'ದೊಂದೆ' ನೋ.

**ದೊಂದಿಬೆಳಕು** 'ದೊಂದಿವೆಳಗು' ನೋ.

**ದೊಂದಿಮಿಸೆ** (ನಾ). ಗುಂಜುಗುಂಜಾಗಿರುವ ಮೀಸೆ; ಕೆದರುಮೀಸೆ: ದೊಂದಿಮೀಸೆಯ ಆ ವ್ಯಕ್ತಿ ಉದ್ದವಾಗಿ ದಡೂತಿಯಾಗಿದ್ದನು (ಪುನರು.೨೫). [ ದೊಂದಿ (<ದೊಂದೆ) + ಮೀಸೆ ]

**ದೊಂದಿವೆಳಗು, ದೊಂದಿಬೆಳಕು** (ನಾ). ಪಂಜಿನ ಬೆಳಕು: ದೊಂದಿವೆಳಗಂ ಸಮರ್ಪಿಸಿ ನಿಶೀಥಿನಿಯ ಮಶಕೆ, ದಾಂಟಿದರಗಂ ಇರ್ವರ್ . . . ಕಪಿಧ್ವಜರ್! (ಶ್ರೀರಾಮಾ. ೭೦೦-೧೨). **ದೊಂದಿಬೆಳಕು**: ಒಮ್ಮೆ ದೊಂದಿಬೆಳಕಿನಲ್ಲಿ ಎರಡು ಮೈಲಿ ಕಾಡು ಸುತ್ತಿ ದಿಕ್ಕುತಪ್ಪಿ ನಿಂತ ಹಸುವನ್ನು ಹುಡುಕಿ (ಬಾಳಿವೃ. ೦೯). [ ದೊಂದಿ (< ದೊಂದೆ) + ಬೆಳಗು₂ ]

**ದೊಂದುಳಿ, ದೊಂದಡಿ, ದೊಂದಣ, ದೊಂದಣೆ** (ನಾ). ೧. ಗುಂಪು; ಸಮೂಹ; ಜಂಗುಳಿ: "ಬಂಬಲ್ . . . ದೊಂದುಳಿ . . . ಗೊಂದಣ (ಉಂದಲ್)–ಈ ೪೦ ಸಮೂಹಂ" (ಕಶಸಾ. ೧೧-೨೨೨); "ಜಂಗುಳಿ ಶೆರಲ್ಕೆ ದೊಂದುಳಿ ನೆರವಿ ಥಟ್ಟು . . . ಸಂದಣಿ ಜಾಳಿಗೆಯುಮೆನೆ ಶ್ರೇಣಿಕಾಖ್ಯಂ" (ಕಬ್ಬಿಕ್ಕೈ. ೧೬); "ಸಮೂಹಾರ್ಥದೊಳ್ ದೊಂದುಳಿಯೆನಿಕ್ಕುಂ" (ಕಶರ. ೫೨); ಸುರರ ಸಂದಣಿಯು ಕಿನ್ನರರ ದೊಂದುಳಿ[ಪಾಠಾಂ. ಗೊಂದಣೆ, ಜಂಗುಳಿ]ಯ ಖೇಚರರ ಗುಂಪಿನ ಪನ್ನಗರ ಪಂಕ್ತಿಯಿಂ . . . ಹರನ ಸಭೆ ಸುಖದ ಸೊಗಸಿನ ಜೊಮ್ಮುವಿಡಿದು ಮೆಱೆದಿರಲು (ಸಿದ್ಧರಾ. ೦-೨೩); ಸಿಡಿಲ ದೊಂದುಳಿಯಂತೆ . . . ಜಗವ ಸುಡುವ ಪೆರ್ಗಿಚ್ಚಿನಂತಿಹ ಕೋಪಶಿಖಿ ಮುಖದೊಳಡರೆ (ಲಕ್ಷ್ಮಿಭಾ. ೩-೪೦). ೨. ಗುಂಪಿನಲ್ಲಿ ಉಂಟಾಗುವ ಸಂತೋಷ,– ಮುದ: "ನೆರವಿ ಮುದಗಳೊಳು ದೊಂದುಳಿ" (ಶಬ್ದಮಂ. ೧೧೯); "ದೊಂದುಳಿ ಮುದಂ" (ಸಂಜೀವ. ೨೫); "ದೊಂದುಳಿಯೆನಲ್ ಸಂತೋಷಮಕ್ಕುಂ" (ಕಶರ. ೫೨); ಮರಿಯ ತಿಂದಾಮೇಲೆ ಎಳಸವೃತೆಯಂ ಮೆದ್ದು ಮೊರೆದು ದೊಂದುಳಿಯನ್ನು ಸಾರುತ್ತಲಿಹುದು (ಕಾಲೂರ.೫೩-೪೧); ಎಲ್ಲಿ ದೊಂದುಳಿಗಳವು ಪಗಲಿರುಳ ತೊಡಕೆಲ್ಲಿ (ಕಾಲೂರ. ೬೮-೧೦೯). **ದೊಂದಡಿ**: ೧. ಸಂದಣಿಯ ಕಳಕಳದ ಮಂದಿಯ ದೊಂದಡಿ [ಪಾಠಾಂ. ಗೊಂದಣ, ದೊಂದಣ]ಯನೊಲ್ಲದೆ ಕೆಲಬರೆರವಿಂದವದನೆಯರುಪ್ಪರಿಗೆಗಳನೇಱೆ ನೋಡುವರು (ಬಸವು. ೫-೩೮). **ದೊಂದಣ**: ೧. ಅಂದಣದ ಸಂದಣಿಯ ದೊಂ[ಪಾಠಾಂ. ಗೊಂ]ದಣ ಮಂದಿಯಿಬ್ಬಗಿಯಾಗಿ . . . ಮುಂದೆ ತೊಲಗದೆ ಬಪ್ಪವರ ಮುಡುಹಿಂದಣೆದು ಹೊಯ್ವುತ್ತ ಕೈದುಗಳಿಂದ ಚಿಮ್ಮುತ ಬಂದು ಹೊಕ್ಕರು ರಾಜಮಂದಿರವ (ಬಸವು. ೬೦-೨೮); ಲಲನಾಶಿರೋಮಣಿಯ ಮುಖತುಹಿನಕಿರಣನಂ ನಲವಿಂದ ಬಯಸಿ ನಡೆತಂದ ತಾರಾಗಣದ ಚೆಲುವ ದೊಂ[ಪಾಠಾಂ. ಗೊಂ]ದಣಗಳೆತ್ತರದಿ ನಿಂದಿರ್ಪವೊಯೆನೆ (ವಂಶಾರಾ. ೦-೨೦-೫೦). **ದೊಂದಣೆ**: ೧. ದೊಂದಣೆ

ಯೊತ್ತಿನೊಳೊತ್ತರಿಸಿದ ಬಿಲ್ಲಾಳಿರ್ (ವೀರೇಚ. ೨-೩೩) ; ಉತ್ಕಟದ ದೊಂದಣಿಗಲಸಿ ಬಂದೈ ಸಿರಿಗಿರಿಯೊಳಿರದೆ (ಬಸಪು. ೧೮-೯) ; ಭೂತ ವೇತಾಳರಿಂ ಕಾಳರಿಂ ಕಡುಭಯಂಕರವಾಗೆ ಸಂದಣಿಯ ದೊಂದಣಿಯ ವರ್ಣಿಸುವನಾರಿಳೆಯೊಳು (ಲಕ್ಷ್ಮಭಾ. ೩-೩೪); ಸಂತತಂ ಶುಕಕೋಕಿಲ ಧ್ವನಿಯ ದೊಂದಣಿಯ ನಾದದ ವಿನೋದದಿಂದ (ರುಕ್ಮಾಂಗ. ೨-೨೫) ; ಸಂಸಾರವನ್ನು ಅಲ್ಲಿ ದುರ್ಜನರ ದೊಂದಣಿಯಿಂದಾಚೆ ಹೂಡಿಬಿಡೋಣ (ಜನನಾ. ೪೪). 'ತೊಂತುಳಿ' ಹೋ. [←ತೆಲು. ದೊಂದಡಿ, ದಂದಡಿ]

**ದೊಂದುಳಿಸು** (ಕ್ರಿ). ೧. ಗುಂಪುಗೂಡು. ೨. ಗುಂಪಿನಲ್ಲಿ ವಿನೋದ ಪಡು,_ ಸಂತಸಪಡು : ಅಳಿಗುರುಳ್ಗಳ ಮುಂದೆ ತೊಳಪ ನಾಸಿಕದಿ ಮಂಡಳಿಪ ಮೌಕ್ತಿಕ ಥಾಳಗೊಳಲಲಂಕಾರ ವೆಗ್ಗಳಿಸಿ ದೊಂದುಳಿಸಿ ಯೊಗ್ಗುಳಿಸಿ ವನದೊಳ್ ಬಳಸಿ ಸುಳಿದಾಡಿದರ್ ಸತಿಯರು (ಲಕ್ಷ್ಮಭಾ. ೧೫-೨೭). [ ದೊಂದುಳಿ + – ಇಸು$_3$ ]

**ದೊಂದೆ, ದೊಂದಿ** (ನಾ). ೧. ಕಟ್ಟು ; ಕಂತೆ ; ರಾಶಿ : ಹೊತ್ತಿಸಿದ ಹುಲ್ಲ ದೊಂದೆಗಳ ಕೇಸುರಿಗಳಿಂ ಸುತ್ತುವರಿದೆಸುವ ಶರಸಂತತಿಯ ಸಮಿಶಿಯಿಂದೆ . . . ಆ ನಗರಿ ದಾರುಣತರಂ ಬಡೆದುದು (ಸಮ್ಮಕಾ. ೮-೨೯); ಸುಡುವ ಸುಣ್ಣಕಲ್ಲು ಉರಿವ ಪುಲ್ಗಳ ದೊಂದೆ ಸುರಿವ ಕೆಂಡ ತಚಿ ಕರವೆಸೆದುದು ದುರ್ಗದೊಳಗೆ (ಕುರಾಸಾಂ. ೩೭-೫೫); ಹುರಿದ ಮಳಲು ಹುಲ್ಲ ದೊಂದೆಗಳಿಂ ಭೀಕರಮಾಯ್ತು ಕೋಟೆ (ಚಂಪ್ರಸಾಂ. ೮-೧೦); ಬಲ್ಮೊನೆಗ ಳ್ಮೃಶಾನುವೊಳ್ ಬೆರಸಿದ ಪುಲ್ಲ ದೊಂದೆ ಪೆಟಲುಪ್ಪಿನ ಪೆರ್ದಿದಿ ಮರ್ದಿವೆಂಬಿವಂ ಸುರಿದು . . . ಅರಿಭಟರಿಂತು ಕಾದುತಿರೆ ಮುತ್ತಿದರಳ್ಕದೆ ತನ್ಮಹಾಭಟರ್ (ರಾಜಶೇ. ೭-೧೦೭). **ದೊಂದಿ :** ೨. ಕೋಲಿಗೆ ಬಟ್ಟೆಯ ಚೂರುಗಳನ್ನು ಸುತ್ತಿ ಎಣ್ಣೆಯನ್ನು ಸುರಿದು ಹೊತ್ತಿಸಿದ ಪಂಜು,–ಹಿಲಾಲು,–ದೀವಟಿಗೆ: ವೀರಭದ್ರನ ಮುಂಗಡೆಗೆ ಉರಿಯುತ್ತಿರುವ ದೊಂದಿಯನ್ನು ಹಿಡಿದೊಬ್ಬ ನಿಂತ (ಬಣ್ಣಮಾ. ೯೫) ; ಮೂಢಗ್ರಾಮ್ಯರಾರಾದರೂ ದೂರದಿಂದ ನೋಡಿದ್ದರೆ ಅದನ್ನು ಕೊಳ್ಳಿದೆವ್ವವೆಂದು ತಿಳಿಯುತ್ತಿದ್ದರು; ತಿಳಿದವರು 'ದೊಂದಿ' ಎಂದು ಹೇಳುತ್ತಿದ್ದರು (ಕಾನೂರು. ೦೦೩) ; ರಾತ್ರಿಯ ಅರ್ಚನೆ ಮುಗಿಯುತ್ತಿದ್ದಂತೆ ಹತ್ತಿಸಿದ ದೊಂದಿಗಳು ಮಂಕಾಗಿ ಜಾತ್ರೆಯ ಗಲಿಬಿಲಿ ಕಡಿಮೆಯಾಗುತ್ತದೆ (ಸಂಸ್ಕಾರ. ೧೪೨) ; ದೊಂದಿಗಳನ್ನು ಹೊತ್ತಿಸಿ ದೇವಸ್ಥಾನದ ನವರಂಗಮಂಟಪದ ಮೇಲಿನಂಕಣದ ಶಿಲ್ಪಗಳನ್ನು ನನಗೆ ತೋರಿಸುತ್ತಾನೆ (ಈಡಕೆ. ೪೪). [ ದೇ.॥ ತುಳು. ದೊಂದಿ ]

**ದೊಂಬ, ಡೊಂಬ$_1$, ದೊಮ್ಮರ** (ನಾ). ಗಳೆಯ ಮೇಲೆ ಲಾಗ ಹಾಕಿ ಕಸರತ್ತುಗಳನ್ನು ತೋರಿಸುತ್ತಾ ಜೀವನವನ್ನು ನಡೆಸುವವನು; ಕೊಲ್ಲಟಿಗ : ಕೌಶಂಬೀಪುರದೊಳ್ ಬಹುಕರ್ಮಿಯೆಂಬ ದೊಂಬನ ಮನೆಯೊಳ್ ಸ್ತ್ರೀವೇದದಿಂ ಬೆಳ್ಗತ್ತಿಯಾಗಿ ಪುಟ್ಟಿ (ಸುಕುಮಾ. ೫-೧೨ ವ) ; ಮೇಲೆ ಮರದ ರೆಂಬೆಯೊಂದಕ್ಕೆ ಮತ್ತು ಕೆಳಗೆ ನೆಲಕ್ಕೆ ಬಿಗಿದಿದ್ದ ದಪ್ಪನೆಯ ಮಿಣಿಯ ಇಳಿಜಾರಿನಲ್ಲೊಬ್ಬ ದೊಂಬ ಜರ್ರನೆ ಜಾರಿಬಿಟ್ಟು ನಿಂತು, ಸಲಾಮು ಮಾಡಿದ (ಸಂಸ್ಕಾರ. ೧೩೩) ; ದೊಂಬರ ಮಗುವಿಗೆ ತಂತಿಯೂ ನೆಲ (ಶಿಲಾಲ. ೬೪-೧) ; ದೊಂಬನ ಸಾವು ಗಣೆಯ ಮೇಲೆ, ಬಿಲ್ಲವರ ಸಾವು ಮರದ ಮೇಲೆ (ಗಾದೆ) ; ಅಗಸನ ಕತ್ತೆ ದೊಂಬನಿಗೆ ತ್ಯಾಗ (ಗಾದೆ). **ಡೊಂಬ$_1$ :** "ಕೊಲ್ಲಟಿಗನೆನೆ ಡೊಂಬನು" (ಶಬ್ದಮಂ. ೭೦) ; "ಡೊಂಬನ ಪೆಸರ್ ತವೆ ಕೊಲ್ಲಟಿಗನಕ್ಕುಂ" (ಕಬ್ಬಿಕೈ. ೩೭); "ಡೊಂಬಪೆಸರಿಂ ಪೇಟಲ್ಕದು ಸಲ್ಗು ಕೊಲ್ಲಟಿಗನೆಂದೆನುತುಂ" (ಕವಿಕಂ. ೧೬೨); ಕೋಳಿಯಂತೆ ಕೂಗಿ ಡೊಂಬರಂತೆ ಕೂಡಿ ಆಡಿ ಬಾಗಿ ಹಿಂಗದಿದ್ದಡೆ ಕೊಂಡಾಡುವ ಈ ಲಾಗ ನೋಡಿಕೊಳ್ಳಿ (ಬಲೀಶ್ಕ. ೪೩೪-೩೫); ಪಂದೆಯ ಮಾತಿನಂತೆ ಡೊಂಬರ ತೋಟಿಯಂತೆ (ಧರ್ಮಾಮ್ಮ. ೮-೯೪) ; ಶುಕನೋದಿಂಗುಚಿ ಚೆಲ್ವೆ ಕಾಕರವ ರಂಭಾನೃತ್ಯಕಂ ಡೊಂಬರೇ (ಸೋಮೇಶ. ೩); ಅಗಣಿತರಹ ಡೊಂಬರುಗಳು ಬಗೆಬಗೆಯಾಟವ ತೋಟಿ ಮಹಾಸ್ಥಾನವ ಮಿಗೆ ಮೆಚ್ಚಿಸಿದರು (ಕಂನಪಿ. ೨೧-೯೭); ಕಣ್ಣು ಕುಂಬಳ ಹೋಳು ಹೊಟ್ಟೆ ಡೊಂಬರ ಡೋಳು ಕೈಕಾಲು ಬಿದಿರಿನ ಕೋಲು (ಇಂಚಾಪ. ೧೧೧-೪೧). **ದೊಮ್ಮರ$_1$ :** ತೆಲುಗು (Telugu):_ ದೇವಾಂಗ, ಸಾಲೆ . . . ಬೋಗಂ, ದೊಮ್ಮರ, ಇತರರು (ತುಳುನಾ. ೧೭೫).

**ಡೊಂಬರ ಕೋಡಗ** = ೧. ಕೊಲ್ಲಟಿಗರು ತಮ್ಮ ಆಟಕ್ಕಾಗಿ ಪಳಗಿಸಿ ಉಪಯೋಗಿಸುವ ಕಪಿ. ೨. ಮತ್ತೊಬ್ಬನ ಪ್ರೇರಣೆಯಂತೆ ಕಾರ್ಯವನ್ನೆಸಗುವವನು ; ಕಲಿಸಿದಂತೆ ಕಾರ್ಯದಲ್ಲಿ ಪ್ರವರ್ತಿಸು ವವನು : ದುರ್ಯೋಧನಂ . . . ಡೊಂಬರ ಕೋಡಗದಂತೆ ಆಡಿ ಗೆಲ್ದಾಗಳ್ (ಪಂಪಭಾ. ೬-೭೨ ವ). **ಡೊಂಬರಲಾಗ, ಡೊಂಬ ಲಾಗ** = ೧. ಡೊಂಬರವನು ಹಾಕುವ ಲಾಗ ; ದೊಂಬರು ಗಣೆ ಹತ್ತಿ ತಲೆ ಕೆಳಗು ಮಾಡಿ ಹಾರುವುದು; ತಿಪ್ಪರಲಾಗ : "ಅಂತರಪಲ್ಟಿ ; ಡೊಂಬರ ಲಾಗ" (Somersault. ಇಂಕನಿ) ; ಡಂಭಕ ಭಕ್ತಿಗೆ ಮೆಚ್ಚಿ ಕೊಡನು ಕೃಷ್ಣ ಡೊಂಬಲಾಗವ ಹಾಕಿ ಡೊಂಡೊಂಡೆ ಹೊರಳಿದರಿಲ್ಲ, (ಪುರಂದ. ೫-೧೩೮ ಅನುಪಲ್ಲವಿ). ೨. ವಿಶ್ವಪ್ರಯತ್ನ ಮಾಡುವುದು: ಡೊಂಬರ ಲಾಗ ಹಾಕಿದರೂ ಬೇರೆಯವರು ಈ ಕೆಲಸಮಾಡಲು ಸಾಧ್ಯವಿಲ್ಲ (ರೂಢಿ). **ಡೊಂಬರ ಹುಳ** = ಡೊಂಬರಲಾಗದಂತೆ ಲಾಗಹಾಕಿಸಲು ಮಕ್ಕಳು ಆಟಕ್ಕಾಗಿ ಉಪಯೋಗಿಸುವ ಒಂದು ಬಗೆಯ ಹುಳು ; ಭೋರಂಗಿ ಹುಳು : (+). **ದೊಂಬರ ಕುಣಿತ** = ಕಲೆಗಾರಿಕೆಯಿಲ್ಲದೆ ಕುಣಿಯುವ ಕುಣಿತ; ಕುಮಾರರಾಮನಿಗೆ ಸಂಬಂಧಿಸಿದ ಹಾಡುಗಳನ್ನು ಹಾಡಿ ಕೊಂಡು ದೊಂಬರು ಆಚರಿಸುವ ಹಬ್ಬಗಳ ಸಂದರ್ಭದಲ್ಲಿ ದೊಂಬರ ಹೆಂಗಸರು ಮಾಡುವ ಒಂದು ಬಗೆಯ ಜಾನಪದ ನೃತ್ಯ: ದೊಂಬರ ಕುಣಿತ ಇದ್ದಲ್ಲಿ ಜನ ಸೇರಿರುತ್ತಾರೆ (ರೂಢಿ). **ದೊಂಬರಗಿತ್ತಿ** = ದೊಂಬರ ಸ್ತ್ರೀ ; ದೊಂಬಿತಿ : (+). **ದೊಂಬರ ಪೋರಿ** = ೧. ದೊಂಬರವಳು; ದೊಂಬರ ಹುಡುಗಿ : ಆ ದೊಂಬರ ಪೋರಿ ಊರೂರು ಸುತ್ತಿ ಜೀವನ ನಡೆಸುತ್ತಾಳೆ (ರೂಢಿ). ೨. ಬಸವಿ; ಸೂಳೆ: (+). **ದೊಂಬ ರಾಟ, ಡೊಂಬರಾಟ** = ೧. ದೊಂಬರು ಆಡುವ ಗಣೆಯ ಆಟ,–ಕಸ ರತ್ತು : ಪೂರ್ವಕಾಲದಲ್ಲಿ ಇಲ್ಲಿಗೆ ಸುತ್ತುಮುತ್ತಲಿನ ಏಳೂರು ಶಿಡಿತೇರು ಗಳು ಬಂದು ದೊಡ್ಡ ಜಾತ್ರೆಯಾಗಿ ಕುಸ್ತಿ ದೊಂಬರಾಟ ಎಲ್ಲಾ ಆಗುತ್ತಿದ್ದು ವಂತೆ (ಹುಟ್ಟಿಹ. ೪); ದೊಂಬರಾಟ ಮುಂತಾದ ಹಲವಾರು ಮನರಂಜನೆಯ ಕಾರ್ಯಕ್ರಮಗಳು ಪದ್ಧತಿಯಂತೆ ನಡೆದುವು (ಸವತಿ. ೯೮) ; ದೊಂಬರಾಟ ದವರು ರಂಗಸ್ಥಳದ ಮೇಲಕ್ಕೆ ಓಡುತ್ತಾಬಂದರು (ಶಾಲಪು. ೧೨೧) ; ಅರಸ ನಿದ್ದನು ಡೊಂಬರಾಟಕೆ ಸೆರೆಯ ಸಿಕ್ಕಿದ ಮನದಲಿ (ಕಪು. ೩೭-೧); ಸಾಲೆ ಯಲ್ಲಿ ಅದೇನೋ ನಡೆದಿದೆಯೆಂತಲ್ಲ—ಹಗರಣವೋ ಡೊಂಬರಾಟವೋ (ಮೂರುದಾ. ೩೦). ೨. ವಿಶೇಷ ಪ್ರಯತ್ನ ; ಮಹತ್ವವನ್ನು ತೋರಿಸಿ ಕೊಳ್ಳುವುದು.; ಆಟೋಪ : ಯಮನಿಯಮಗಳ ಡೊಂಬರಾಟದಿಂದ ಫಲವೇನು (ವಿಚಾಮಂ. ೪೯); ಕವಿಯ ಕಲ್ಪನಾಶಕ್ತಿ ಎತ್ತರಕ್ಕೆ ಹೋದರೂ ಡೊಂಬರಾಟಕ್ಕಾಗಿ ಎಂದು ತೋರಬಹುದು (ಕಸಾಚ. ೫೧). ೩. ಹಸಿವು: ಕಣ್ಣಿರುವಷ್ಟು ನೋಟ, ಕಾಲು ಸೋಲುವ ತನಕ ಓಟ, ಹೊಟ್ಟೆಯಲ್ಲಿ ಡೊಂಬರಾಟ (ನೆಲಮು. ೬೫-೨). **ದೊಂಬರು ಗಣೆ** = ಕೊಲ್ಲಟಿಗರು ಆಟ ದಲ್ಲಿ ಉಪಯೋಗಿಸುವ ಗಣೆ,–ಬಿದಿರಿನ ಕೋಲು : ಯೆಲ್ಲಕ್ಕನು ಭಾರಿ ದೊಂಬರುಗಣೆ ಮೇಲೆಯಿಂದ ಬಿದದ ಕಾರಣ (ಮೈಆರಿ. ೧೯೩೮, ೯೮-೪ : ಸು. 17 ನೆಯ ಶತ).

[ ದೇ.॥ ತಮಿ. ತೊಮ್ಬ ; ಮಲ. ದೋಮ್ಬರ್, ಡೋಮ್ಬರ್; ತುಳು. ದೊಂಬೆ, ದೊಮ್ಮರೆ, ಡೊಂಬೆ, ಡೊಂಬಾರೆ; ತೆಲು. ದೊಮ್ಮರ./ಸಂ. ಡೋಂಬ, ಡೋಮ ]

**ದೊಂಬಬ್ಬೆ** (ನಾ). ಒಬ್ಬಾಕೆಯ ಹೆಸರು: ತ್ರೈಲೋಕಪೊಟಲಂ ದೊವ್ವಬ್ಬೆ ಆಳುತ್ತಿರೆ ಅಲ್ಲಿ ಕೊಟ್ಟದು ಆಱುಗಣ್ಡುಗ ಮಣ್ಣು (ಎಕ. XII, ಶಿರಾ. ೨೪-೪೩ ; ಸು. ೨೦೦). [ ದೊಂಬಂ + ಅಬ್ಬೆ$_1$ ]

**ದೊಂಬಿ, ಡೊಂಬಿ$_1$, ಡೊಂಬು$_1$, ಡೊಂಬೆ$_1$, ದೊಂಬೆ** (ನಾ). ೧. ಗುಂಪು ; ಸಮೂಹ : ಕುಸುಮಸೌರಭಕೆ ಊಟೆವರಿವ ತುಂಬಿಗಳ ದೊಂಬಿ (ಪೋಹಕ. ೫-೨೫); ದ್ವಾದಶಾರ್ಕಬಿಂಬ ಪೂರ್ವೋದಧಿಯವನುಚ್ಚಳಿಸಿ ಕತ್ತಲೆಯ ದೊಂಬಿಯಂ ತುಳಿವುತುದಯಾಚಲಾಗ್ರವ ನಿಲ್ಕಲಂಬುಜೋದರ . . . ಸಂಗಮಸ್ನಾನಕ್ಕೆತಂದನೊಲಿದು (ವೆಂಕಾರಾ. ೨-೧೮-೧). ೨. ಗದ್ದಲ; ಗೊಂದಲ. ೩. ದಂಗೆ ; ವಿರೋಧದ ಚಳುವಳಿ ; ಜಗಳ ; ಕದನ ; ಕಾಳಗ : ದೊಡ್ಡ ದೊಂಬಿ ಉಂಟಾಗುವಂತಿತ್ತು (ವ್ಯಾಸಜಿ. ೮೦): ದೊಂಬಿಗೆ ಹೋದವನು ಶರೀರದ ಹಂಬಲು ಬಿಟ್ಟರೆ ಲೇಸು (ಗಾದೆ). **ಡೊಂಬಿ$_1$** : ೧. ನೆರೆನೆರೆದು ಮೊರೆವ ಮಱಿದುಂಬಿಗಳ ಡೊಂ[ಪಾಠಾಂ. ದೊಂ]ಬಿ (ಜೈಮಿಭಾ. ೨೯-೪೭); ತನಿಗಂಪನುಂಡುಂಡು ಪೆಸಾರಲಮ್ಮದಿಹ ತುಂಬಿಗಳ ಡೊಂಬಿಗಳ ನೆರವಿ ಕಾಣುತಲಿ (ವೆಂಕಾರಾ. ೧-೫-೫೭). ೩. 'ಡೊಂಬಿಗ$_1$' ಪರಾ. **ಡೊಂಬು$_1$** : ೧. ಸರಸಿಜದ ನಿಜಗಂಧದಲಿ ತನುಪರಿಮಳವ ತಕ್ಕೈಸಿ ವನದಲಿ ತರಳೆಯರು ತುಂಬಿದರು ಮಱಿದುಂಬಿಗಳ ಡೊಂಬಿನಲಿ (ಕುವ್ಯಾಆ. ೧೮-೩); ಅಂಬುನಿಧಿ ಬಡಬಡವರಿಗೆ ತೆಗೆದುಂಬಿಗೊಡಲೊಡ್ಡುವುದೆ ಕಪಿಗಳ ಡೊಂಬಿಗೀವುದೆ ಬೆನ್ನ ಬೆಟ್ಟಕೆ ಕಥೆಯ ಮಾತಲ್ಲ (ತೊರರಾ. ೬-೩೪-೧೯). **ಡೊಂಬೆ$_1$** : ೨. ಆ ಖರ್ಪರನ ಕೂಡಲ ಜೋಗಿಗಳು ಡೊಂಬೆಯಂ ಮಾಡಿ ರಾಮಯ್ಯನ ಶಿಷ್ಯರ ನೋಯಿಸಲು (ಭೈರಸೂ. ೩೨೭). **ದೊಂಬೆ** : ೩. ನಿಶ್ಚಯವಾಗಿ ಈ ದೊಂಬೆಯಿಂದ ಸರಕಾರಕ್ಕೆ ಒಳಗೊಳಗೆ ಬಹಳ ಆನಂದವಾಗಿರಲಿಕ್ಕೆಬೇಕು (ಕುರಿಹಿಂ. ೦೪೦). 'ತೊಂಬೆ$_1$' ಪರಾ.

**ದೊಂಬಿ ಎಬ್ಬಿಸು** = ದಂಗೆಯೇಳುವಂತೆ ಮಾಡು : ನಿನಗೇನು ಹಳ್ಳಿಯಲ್ಲಿ ದೊಂಬಿ ಎಬ್ಬಿಸಬೇಕೆಂಬ ಉದ್ದೇಶವೊ ? (ಯೋಧಪು. ೮೮). **ದೊಂಬಿ ಏಳು** = ವಿರುದ್ಧವಾಗಿ ನಿಲ್ಲು ; ದಂಗೆ ಏಳು : ಆವನ ಮನಸ್ಸು ದೊಂಬಿ ಏಳಲು ಯತ್ನಿಸುತ್ತಿತ್ತು (ಬಿಕಂಬಾ. ೦೦೫). **ದೊಂಬಿಮಾಡು, ಡೊಂಬಿ ಮಾಡು, ಡೊಂಬು ಮಾಡು**=ದಂಗೆ ಏಳು: ದೊಂಬಿಮಾಡಿ ಜನರು ಅವರ ಜಾಲದಲ್ಲಿ ಬಿದ್ದಂತೆ ಆಯಿತು (ಯಕ್ಷಪ್ರ. ೫೭) ; ಜನರು ತಮ್ಮ ಕರ್ತವ್ಯಗಳನ್ನೇ ಮರೆತು ಪಂಗಡಗಳನ್ನು ಕಟ್ಟಿಕೊಂಡು ದೊಂಬಿ ಮಾಡಲುಪಕ್ರಮಿಸಿದರು (ಪ್ರಗಂಖ. ೩) ; ಹಿಮಕರಹಾಸವನು ಸೆಳೆದು ಡೊಂಬಿ ಮಾಡುವ ವಾಲಿತನುಜನ ಸಂಬರಿಸಿ (ತೊರರಾ. ೬-೪೮-೨೭) ; ಜಾಳಿಸಿತು ರಥ ಜಡಿವ ಕೌರವನಾಳ ರ್ಥೋಂಪಿಸಿ ಡೊಂಬು ಮಾಡುವ ಜಾಳ ರ್ಘಾಡಿಸಿ ಬೈದು ಹೊಕ್ಕನು ಮತ್ತೆ ಗುರುಸೂನು (ಕುವ್ಯಾಕ. ೦೪-೨೯). **ದೊಂಬಿಯ ಜಗಳ** = **ದೊಂಬಿಜಗಳ** : ಬರಿದೆ ದೊಂಬಿಯ ಜಗಳವನು ನರಹರಿಯ ನೀ ಮಾಡಿದೊಡೆಯೊಪ್ಪೆನು (ಅರ್ಜುವಿ. ೦೦-೧೭). **ದೊಂಬಿ ಹಚ್ಚು** = ದೊಂಬಿ ಮಾಡು : ಶತ್ರುಗಳನ್ನು ಎಡೆಬಿಡದೆ ನೆಲಕ್ಕುಪ್ಪಳಿಸಿದರೆಂದು ಕೂಗುತ ದೊಂಬಿ ಹಚ್ಚಿದರು (ಕೋಹಿನೂ. ೦೪).

[ ದೇ.॥ ತುಳು. ದೊಂಬಿ, ಡೊಂಬಿ, ಡೊಂಬೆ; ತೆಲು. ದೊಮ್ಮಿ ]

**ದೊಂಬಿಗ, ಡೊಂಬಿಗ$_1$** (ನಾ). ೧. ಗೊಂದಲವನ್ನುಂಟುಮಾಡುವವನು; ಗದ್ದಲ ಮಾಡುವವನು : (ಪ್ರ). **ಡೊಂಬಿಗ$_1$** : ೨. ಕಾಳಗ ಮಾಡುವವನಂ ; ಮೇಲೆಬೀಳುವವನಂ : ಅಂಬರಕೆ ಜಡಿದಿಟ್ಟನೌಕುವ ಡೊಂಬಿಗರ ದವಡಿಗರ ದಕ್ಕಡ ರಕ್ಕಸರ ಹನುಮ (ತೊರರಾ. ೫-೪-೨೨).

[ ದೊಂಬಿ + –ಗ$_2$ ]

**ದೊಂಬಿಗಾರ, ಡೊಂಬಿಗಾರ** (ನಾ). ೧. ಗದ್ದಲ ಮಾಡುವವನಂ ; ಗಲಾಟೆ ಮಾಡುವವನಂ : ಬೀದಿಯ ದೊಂಬಿಗಾರರೂ ವಿದ್ಯಾನಿಲಯಗಳನ್ನು ಹೊಕ್ಕು ಅಲ್ಲಿಯೂ ಮರ್ಕಟಚೇಷ್ಟೆ ನಡಿಸುವಂತೆ (ವಿಜಾಮಂ. ೦೧೨). **ಡೊಂಬಿಗಾರ** : ೨. ದಂಗೆಎಬ್ಬಿಸುವವನಂ : ಡೊಂಬಿಗಾರ ನಿವನಂ ಮರಳಿ ಹಿಡಿವುದೆನೆ ಸಾಧ್ಯನೇನಿನ್ನು (ಗೊಲ್ಲೊಥಾ. ೭-೦೭೦).

[ ದೊಂಬಿ + –ಕಾರ$_1$ (< –ಕಾಱ) ]

**ದೊಂಬಿಗೂಡು** (ಕ್ರಿ). ಗುಂಪು ಸೇರು ; ಸಂದಣಿಗೂಡು : ಈ ಗುಂಬದಂಬಟೆಯವರ್ ದೊಂಬಿಗೂಡಿ ಪಾಡುವ ಬಣ್ಣಪಾಡಂ ಕೇಳುತ್ತೆ (ಚಳವಿ. ೭-೧೩೪ ವ). [ ದೊಂಬಿ + ಕೂಡು$_1$ ]

**ದೊಂಬಿಜಗಳ** (ನಾ). ಬೀದಿಯಲ್ಲಿ ನಡೆಯುವ ಜಗಳ ; ಬೀದಿಜಗಳ ; ಹಾದಿಜಗಳ : ಹೆಚ್ಚು ಗುಡಿಸಲುಗಳಿರುವಲ್ಲಿ ದೊಂಬಿಜಗಳ ಸರ್ವೇಸಾಮಾನ್ಯವಾಗಿರುತ್ತದೆ (ರೂಢಿ). [ ದೊಂಬಿ + ಜಗಳ (<ಜಗಟ) ]

**ದೊಂಬಿತಿ, ಡೊಂಬತಿ, ಡೊಂಬಿತಿ$_1$** (ನಾ). ದೊಂಬರ ಹೆಂಗಸು ; ಕೊಲ್ಲಟಿಗಿತ್ತಿ: ತನ್ನ ಗುರು ದೊಂಬಿತಿಯ ಕೂಡುಣುತ್ತಿರಲ್ (ಪಾಕೋಪು. ೧೩-೪). **ಡೊಂಬತಿ** : ಇದು ವಿಷದ ಮರನೆಂದು ಮುಳ್ಳ ಕಟ್ಟಿರಲು ಅದನಱಿದು ಒಬ್ಬ ಡೊಂಬತಿ . . . ರಾಯನ ತೋಟದ ವಿಷದ ಹಣ್ಣ ಮೆದ್ದು (ಭೈರಸೂ. ೧೭೨) ; ಸಂತೆಯಂಗಡಿ ಸೂಳೆ ಮುಂತೊಲಿವ ಡೊಂಬತಿಯ . . . ಹೋದವನ ಸಂತಾನ ಕೆಡುಗು (ಸರ್ವಜ್ಞ. ೧೯೪೭) ; ಬಲ್ಲಂತೆ ನಾನು ನಾಡಾಡಿ ಡೊಂಬತಿಯಾಗಿ ಗಣಮಿಣಿಗಳನ್ನೇರಿ ಕುಣಿಯಬಹುದು (ಸಹೀಗೀ. ೫೯-೭). **ಡೊಂಬಿತಿ$_1$**: ಅಮಿತವೈಭವದೊಳು ಬರುತ್ತ ಗುರು ಡೊಂಬಿತಿಯ ಮಮತೆಯಿಂ ಪೋದನೆನೆ (ವೀಶ್ವಪು. ೭-೪-೦೭).

[ ದೊಂಬ + –ಇತಿ$_1$ (< –ಇತ್ತಿ) ]

**ದೊಂಬಿದಾಸ** (ನಾ). ಊರೂರು ಸಂಚರಿಸುತ್ತಾ ಐತಿಹಾಸಿಕ, ಪೌರಾಣಿಕ ಕಥೆಗಳಿಗೆ ಸಂಬಂಧಿಸಿದ ಹಾಡುಗಳನ್ನು ಹಾಡುತ್ತಾ, ಬಯಲಿನಲ್ಲಿ ರಾತ್ರಿಯ ಹೊತ್ತು ನಾಟಕ ಆಡುವ ವೃತ್ತಿಯವನು ; P ಇವರಿಗೆ 'ಹೆಣ್ಣುವೇಷ' ದವರು ಎಂತಲೂ ಕರೆಯುತ್ತಾರೆ : ದೊಂಬಿಯಾಗಿ ಆಟ ಆಡುತ್ತಿದ್ದುದರಿಂದ ಯಕ್ಷಗಾನವನ್ನು ನನ್ನೂರಿನಲ್ಲಿ ದೊಂಬೀಆಟವೆಂದು, ದೊಂಬೀಆಟ ಆಡುವ ಜನರಿಗೆ ದೊಂಬೀದಾಸರೆಂದೂ ಕರೆಯುತ್ತಾರೆ (ನನ್ನೂರು. ೩೦೩) : ದೊಂಬೀದಾಸರ ಆಟಗಳಲ್ಲಿ ಇದು ಇನ್ನೂ ನಿಂತಿರುವುದನ್ನು ನಾವು ಬಲ್ಲೆವು (ಸಾಹಿಜೀ. ೧೭) : ದೊಂಬಿದಾಸನ ನಿಲುವಂಗಿ ಹಾಕಿದಂಥ ನಾರದ ಬರುತ್ತಿರಲಿಲ್ಲ (ಯಕ್ಷಬ. ೧೦೮) :

[ ದೊಂಬಿ + ದಾಸ ]

**ದೊಂಬಿದುಳುಕು** (ನಾ). ಬಹಳವಾದ ತುಳುಕು ; ಕಲ್ಲೋಲ ಧುಮ್ಮಿಕ್ಕಿದನು ಸರಸಿಯಲಿ ದೊಂಬಿದುಳುಕಿನೊಳದನು ಕಾಣದೆ ಶಂಬರಾಂತಕನಿಟ್ಟ ಮೂಡಿಗೆಯಂಬೆನಲು ಪೊರಮಟ್ಟ ದಿವ್ಯಾಂಗನೆಯ ರೂಪಿನಲಿ (ಅನಂರಾ. ೪-೧-೧೩). [ ದೊಂಬಿ + ತುಳುಕು$_2$ (<ತುಳುಂಕು$_2$) ]

**ದೊಂಬಿಯುದ್ಧ** (ನಾ). ಗುಂಪುಗುಂಪಾಗಿ ಮಾಡುವ ಯುದ್ಧ ; ಅನೇಕ ಜನರು ಆಕ್ರಮಣ ಮಾಡಿ ಮಾಡುವ ಯುದ್ಧ : ಕೌರವಬಲದೊಡನೆ ಯುದ್ಧಕ್ಕೆ ಮುಹೂರ್ತ ಮಾತ್ರವು ದೊಂಬಿಯುದ್ಧವನ್ನು ಮಾಡಿ (ಕೃವಾಆ. ೩೫೯). [ ದೊಂಬಿ + ಯುದ್ಧ ]

**ದೊಂಬಿಸಾಕ್ಷಿ** (ನಾ). ಗೊಂದಲವನ್ನುಂಟುಮಾಡುವ ಹೇಳಿಕೆ,–ಸಾಕ್ಷಿ : (ಪ್ರ). [ ದೊಂಬಿ + ಸಾಕ್ಷಿ ]

**ದೊಂಬಿಸ್ವಾಧ್ಯಾಯ** (ನಾ). ೧. ಗುಂಪಿನಲ್ಲಿ ವೇದವನ್ನು ಅಧ್ಯಯನ ಮಾಡುವಿಕೆ. ೨. ಜಾತ್ರೆ ಮುಂತಾದ ಕಡೆ, ಗಲಾಟೆಯ ನಡುವೆ, ಗೊಂದಲದಲ್ಲಿ ನಡೆಯುವ ಅತ್ಯಾಚಾರ : (ಪ್ರ).

[ ದೊಂಬಿ + ಸ್ವಾಧ್ಯಾಯ ]

**ದೊಂಬೆ** 'ದೊಂಬಿ' ನೋ.

**ದೊಕ್ಕನೆ** (ಅ). ೧. ದೊಕ್ಕೆಂದು ಶಬ್ದವಾಗುವ ಹಾಗೆ: ಒಂದೆ ಸರಲಿಂದವಂ ವನೆರ್ದೆಯಂ ದೊಕ್ಕನೆ ತಿಣ್ಣಮೆಚ್ಚು ಕೊಲಲೊಲ್ಲನೆ ಸಂಕ್ರಂದನನಂದನ

ತನಯಂ (ಪಂಪಭಾ. ೧೧-೯೭); ಇಕ್ಕೆಯೊಳಱಿಸಿ ಕಾಣದೆ ಪಕ್ಕಿಯುಂಬರೆಕಕ್ಕಱು ಮಿಗೆ ಪಾಱಿ ನೆಲಕೆ ದೊಕ್ಕನೆ ಕೆಡೆದು ಪ್ರಳಪಿಸಿತದಱೊಂದು ದುಃಖ ಮಂನದನೇನೆಂಬೆ (ಅಂಜಚ. ೭-೧೭೬). ೨. ಕೂಡಲೆ; ಬೇಗನೆ; ತಕ್ಷಣ: ಎಕ್ಕಿಯ ಕೋರಕಮಂ . . . ಅರೆದು ಕದಡೀಂಟಲೊಡಂ ದೊಕ್ಕನೆ ಮಾಣ್ಗುಂ ಪೇಕುಳಿಯುಕ್ಕಿದ ಶುನಕನ ವಿಷಂ (ಖಮುದ. ೧೩-೨೭); ಪಕ್ಕ ವಿಲ್ಲದ ಪಕ್ಕಿಯಂದದಿ ನನ್ನನಂ ದೊಕ್ಕನೆ ಮಾಡಿದೆ ಮಗನೆ ದಿಕ್ಕಾವುದು ಪೇಳೆನಗಿನ್ನು ನಂದನ ಅಕ್ಕಟ ತಾಯಂನು ತೊಱೆದೈ (ಕವಿಚ. II, ೪೪. ಕಾಮನ ಕಥ); ದಿಕ್ಕುದಿಕ್ಕುಗಳಿಂದ ಬಂದೊಂದು ಮರದಲಿ ಪಕ್ಷಿ ಕುಳಿತು ರಾತ್ರಿಯಲಿ ಅರ್ಕನುದಯವಾಗೆ ತಮತಮ್ಮ ದಿಕ್ಕಿಗೆ ದೊಕ್ಕನೆ ಪೋಪಂತೆ ಕಾಣ (ದ್ವಾದಶಾ. ೧-೩೭); ರುಗುಮಿಣಿ ದೊಕ್ಕನಾಕೆಯ ಕರಸಿ ನೋಡಿ ದಳಕ್ಕಱಿಂದ (ಸಾಳ್ವಭಾ. ೩೦-೩೩); ಬೊಕ್ಕಸ ಭಂಡಾರ ದೇಶ ರಾಣಿಯ ವಾಸ ಮಿಕ್ಕ ಕುಮಾರವರ್ಗವನು ದೊಕ್ಕನೆ ಬಿಟ್ಟುಹೋದನು (ಅನಂಚ. ೩-೨೦೭). [ ದೊಕ್ಕು + – ಅನೆ$_1$ ]

**ದೊಕ್ಕರಿ** 'ಡೊಕ್ಕರ್ಕ' ನೋ.

**ದೊಕ್ಕರಿಗೊಳ್** 'ಡೊಕ್ಕರಂಗೊಳ್' ನೋ.

**ದೊಕ್ಕರಿಸು** 'ಡೊಕ್ಕರಿಸು' ನೋ.

**ದೊಕ್ಕು** (ನಾ). ಒಂದಂ ಅನುಕರಣ ಶಬ್ದ: ದೊ[ಪಾಠಾಂ. ಧೊ]ಕ್ಕು ಧಡ ಸಬುಂದಗಳಲಿಳಿ ಗುಮ್ಮಿಕ್ಕೆ ಕೂರುಮನಱಿಚಿ . . . ಧೈರ್ಯಬಲ ರೊದಗಿದರು ಸರಿಸದಲಿ (ತುರರಾ. ೪-೪-೨೭).

**ದೊಕ್ಕೆ** 'ಡೊಕ್ಕೆ' ನೋ.

**ದೊಕ್ಕೆನ್** (ಕ್ರಿ). ದೊಕ್ಕೆಂದಂ ಶಬ್ದವುಂಟಾಗು: ಉರ್ಕಂಬುಗಳೆಱಗಿ ರೋಮರೋಮಕ್ಕೆ ನೆಳಿಲ್ ನೆಕ್ಕು ಚಳಿಲ್ ಚಕ್ಕು ದೊಗಲ್ ದೊಕ್ಕೆನೆ ನಾಂಟಿದುವರಾತಿಭಟರವಯವಮಂ (ಜಗವಿ. ೭-೮೧); ಹಾಳಾಹಳಸಮಾನ ತೀವ್ರಾನುಭಾಗದ ದುರಿತಭಾರದಿಂ ಬೀೞ್ವಂತೆ ದೊಕ್ಕೆನೆ [ಪಾಠಾಂ. ದೊಕ್ಕನೆ] ಬಿಟ್ಟು (ವರ್ಧಪು. ೧೧-೧೫ ವ); ಕರಘಾತದಲಿ ದಡ ದೊಕ್ಕೆನಲು ಕೆಡಹಿದನು ಕೇಳೀ ಸೌಧಸಂಕುಳವ (ತೊರರಾ. ೫-೪-೧೫).

[ ದೊಕ್ಕು + ಎನ್$_1$ ]

**ದೊಗರು** 'ಡೊಂಗರು' ನೋ.

**ದೊಗಲ್** (ನಾ). ಒಂದಂ ಅನುಕರಣ ಶಬ್ದ: ಉರ್ಕಂಬುಗಳೆಱಗಿ ರೋಮ ರೋಮಕ್ಕೆ ನೆಳಿಲ್ ನೆಕ್ಕು ಚಳಿಲ್ ಚಕ್ಕು ದೊಗಲ್ ದೊಕ್ಕೆನೆ ನಾಂಟಿದು ವರಾತಿಭಟರವಯವಮಂ (ಜಗವಿ. ೭-೮೧).

**ದೊಗಲೆ** 'ದಗಲ್ಕೆ' ನೋ.

**ದೊಗಹು** (ನಾ). ಒಂದಂ ಅನುಕರಣ ಶಬ್ದ: ಘಳಿಲೆಂಬ ಘಣ್ಣೆಂಬ ದೊಗಹೆಂಬ ದೊಕ್ಕೆಂಬ . . . ಕೂರಸಿಗಳುರವಣೆಯ ದನಿಯುಡುಸುತಂ ಪುಟ್ಟೆ (ಇಹರ. ದೇ. ೪೧-೨೨); ಖಣಿಲ್ಪಟಿಲ್ದೊಗಹು . . . ಗರಿಗರಿಲೆಂಬ ನಿಷ್ಠುರರವಂ ಮಿಗೆ ತಟ್ಟುಱಿದತ್ತು ಯುದ್ಧದೊಳ್ (ಗಿರಿಕ. ೭-೩೮).

**ದೊಗಳೆ** 'ದಗಲ್ಕೆ' ನೋ.

**ದೊಗೆ$_1$** (ಕ್ರಿ). ಉಗುರಿನಿಂದ ಗೆಬರು; ಕವರು: ಮಣ್ಣನ್ನು ದೊಗೆದು ಅಲ್ಲಿ ಬಚ್ಚಿಟ್ಟಿದ್ದ ಗೋಲಿಯನ್ನುಹುಡುಕತೊಡಗಿದ (ರೂಢಿ). [ ? ]

**ದೊಗೆ$_2$** (ನಾ). ಕೆತ್ತಿದ ಪ್ರದೇಶ; ಹಳ್ಳ ಮಾಡಿರುವ ಜಾಗ (?): ಕಲ್ಲ ಮೇಗಣ ದೊಗೆಯುಲುಂ ಚೆಯಕೇತನಿರ್ಪ್ಪತ್ತು ಮ[ಳ]ಕಯ್ಯ ಕೆಲಸಂ ಗೆಯ್ದು (ಸಾಇಇ. XI-i, ೮೫-೪೧; 1049). [ <ದೊಗೆ$_1$ ]

**ದೊಗ್ಗ** (ನಾ). ೧. ಹಂಳಿಯಾದುದಂ: ಕಳ್ಳಂ ಕುಡಿದರಂತೆ ಸ್ರೋರ್ಕಿ ದೊಗ್ಗಳೆಯಂತುರ್ಬಿ [ಪಾಠಾಂ. ಕಾಯ್ದು ಪಾಲಂತುರ್ಕಿ] [ಬಳಿವ ಪೊಲೆ ಯಂತೆ ಕೊರ್ವಿ] ಎಳವೆಱೆಯಂತೆ ವಕ್ರನಾಗಿ (ಧರ್ಮಾಮೃ. ೨-೧೧೫). ೨. ಹುಳಿನಂಚು; ತರಿಯಿಂದ ಮಾಡಿದ ಗಟ್ಟಿಯಾದ ಅಂಬಲಿ: ಅಗ್ಗಸುಗ್ಗಿಗಳುಂಟು ದೊಗ್ಗ[ಪಾಠಾಂ. ಡೊಗ್ಗೆ]ಮಜ್ಜಿಗೆಯುಂಟು ಹೆಗ್ಗಳದ ಕಾಯಿ ಮೆಲಲುಂಟು (ಸರ್ವಜ್ಞ. ೧೬೧೯). [ ? ]

**ದೊಗ್ಗಳಿ, ದಗ್ಗಳಿ, ದಗ್ಗಿ** (ನಾ). ಒಂದು ಬಗೆಯ ಸಸ್ಯ: ಹುಲಿಗಿಲ್ ದೊಗ್ಗಳೆ[ಪಾಠಾಂ. ಡೊಗ್ಗಗೆ, ದೊಗ್ಗಗೆ]ಯ ಹಱುಹೆಯುಂಬವಱೆಲೆಯುಂ ಕಱಿಯೊಳುಱಿ ಕಾಸಿ ಕಟ್ಟಿಲ್ ತೊಲಗುಗುಂಪೊದಱಿಸುವ ಮುಳ್ಳ ವಿಷಮೆನಿತನಿತುಂ (ಖಮುದ. ೨-೨೦೧). ದಗ್ಗಳಿ: ಸೊಪ್ಪುಗಳು: ಅಗಸೆ . . . ಹರಿವೆ, ಚಿಲಕಿ, ದಗ್ಗಳಿ, ಕೆಸವೆ, ದೊಡ್ಡಬಸಲಿ (ನಮ್ಮನಾ. ೨೩೭). ದಗ್ಗಿ: ದಗ್ಗಿಸೊಪ್ಪು, ಚಿಲಕೀರೇಸೊಪ್ಪು (ವ್ಯಜಿಗಿ. ೭-೯೭).

[ ದೇ.ಕ ತುಳು. ದೊಗ್ಗುಲಿ, ದೊಗ್ಗೊಲಿ; ತೆಲು. ದೊಗ್ಗಲಿ, ದಗ್ಗಲಿ ]

**ದೊಗ್ಗಾಲು** 'ಡೊಗ್ಗಾಲು' ನೋ.

**ದೊಗ್ಗಾಲೂರು** 'ಡೊಗ್ಗಾಲೂರಂ' ನೋ.

**ದೊಟ್ಟೆ** (ನಾ). (ಕರಾ) ಬಾವಿಯಿಂದ ನೀರನ್ನು ಮೇಲಕ್ಕೆ ಎತ್ತುವ ಸಾಧನ; ಏತ: ನೀರಿನ ಆಳು ಲಕ್ಕು ದೊಟ್ಟೆಯಂ ನೀರು ಸೇದಲು ಬಂದಾಗ ರಾಮನಾಥ ಹಾಗೂ ಅವನ ತಂದೆ ಇಬ್ಬರೂ ಹಿತ್ತಲಲ್ಲಿದ್ದರು (ಮೂರುನಾ. ೨೯); ಇಷ್ಟು ವರ್ಷ ದೊಟ್ಟೆಯಿಂದ ಅವರು ನೀರನ್ನು ಮೊಗೆಯುತ್ತಿದ್ದರು (ಮರಮ. ೫೪). [ ←ತುಳು. ದೊಟ್ಟೆ ]

**ದೊಠಾರ** (ನಾ). ೧. ಶೂರ; ಪರಾಕ್ರಮಿ; ಕಲಿ: ಅರಿವನು ಕಲಿ ಪಾರ್ಥನೇ ತ್ರಿಪುರಾರಿ ಹಿಡಿವಂಬಾಯಿತೆಂಬ ದೊಠಾರನೇ ದೈತ್ಯಾರಿ ಸಾರಥಿಯೆಂಬ ಗರ್ವಿತನೆ (ಕುಮ್ಯಾದ್ರೋ. ೯-೪೨); ಮೇಳವದ ಪರಿ ಲೇಸು ಕರ್ಣನ ಸೋಲದಲಿ ಸೀಮರಿಸಿದರೆ ಭೂಪಾಲನಾಣೆ ದೊಠಾರರಹಿರೆನು ತೆಚ್ಚನಾ ಪಾರ್ಥ (ಕುಮ್ಯಾಕ. ೨೪-೪೧). ೨. ನಿಂದೆ; ಮೂದಲೆ; ಚುಚ್ಚುಮಾತಾಡುವಿಕೆ; ಬಯ್ಯುಳಂ. 'ತಂಟಾರ', 'ದೊಠಾರತನ', 'ದೊಠಾರಿಸು' ಪರಾ. [ ? ]

**ದೊಠಾರತನ** (ನಾ). ೧. ಶೌರ್ಯ; ಸಾಹಸ; ಪರಾಕ್ರಮಂ: ಆಳುತನದ ದೊಠಾರತನ ಸರಿಯಾಳಿನಲಿ ಸೆಣಸಾದೊಡೊಳ್ಳಿತು ಮೇಳವೇ ಗುರುದೈವ ದಲಿ (ಕುಮ್ಯಾದ್ರೋ. ೧-೨೭); ಅರ ತೇಜದಲೊಲಿಸಿದೆನು ಮದನಾರಿಯನು ಮಱಗಾಳಗದ ದೊ[ಪಾಠಾಂ. ಕು]ಠಾರತನದಲಿ ಮೆಚ್ಚಿ ಕೊಟ್ಟನಲ್ಲೆ ನಿಜಾಸ್ತ್ರವನು (ನಿಭಾಗ. ೧-೧೧-೪೩). ೨. ನಿಂದಿಸುವಿಕೆ; ಮೂದಲಿಸು ವಿಕೆ; ಬಯ್ಯುವಿಕೆ: ನಾಡ ಮಾತನು ಕಲಿತು ನಮ್ಮೊಡನಾಡುತಿಹರೆ ದೊಠಾರತನದಲಿ ಮರುಳುತನದಿಂದೆ (ಪ್ರಭುಲೀ. ೧೩-೧೨).

[ ದೊಠಾರ + – ತನ ]

**ದೊಠಾರಿಸು** (ಕ್ರಿ). ೧. ಪರಾಕ್ರಮವನ್ನು ತೋರಿಸು; ಶೌರ್ಯ ತಾಳು; ಸಾಹಸಮಾಡು: ಆಳಿವನ ಘಾಟವೆ ದೊಠಾರಿಸಿ ಸೋಲಿಸುವ ದೇನರಿದೆ (ಕುಮ್ಯಾಕ. ೨೭-೩೩). ೨. ಮೂದಲಿಸು; ನಿಂದಿಸಿ ಮಾತಾಡು: ಪೋಡಿ ಮಾಡದಿರಲೆ ಕಿರೀಟಿ ವಿಭಾಡಿಸುವುದರಿದೇ ದೊಠಾರಿಸಿಯಾಡು ವುದು ದೊರೆಗುಚಿತವೇ (ಕುಮ್ಯಾಭೀ. ೯-೩೭); ಧಡ ದೊಠಾರಿಸಿ ನುಡಿದ ಜಹ್ವೆಯ ಹಡತಲೆಯಲುಗಿವೆನು ಕಣಾ (ಕುಮ್ಯಾದ್ರೋ.೧೭-೩೪); ಇವನ ದೊಠಾರಿಸುವ ನಾಲಗೆಯ ಕೊಯ್ಲಿಗೆ ಶಸ್ತ್ರವಿವೆಯೆನುತ(ಕುಮ್ಯಾಕ. ೪-೧೧).

[ ದೊಠಾರ + – ಇಸು$_3$ ]

**ದೊಡಹಳತ** 'ದೊಡ್ಡಹಾಳಿತ' ನೋ.

**ದೊಡ್ಡ** (ಗುಂ). ೧. ಗಾತ್ರದಲ್ಲಿ ಹಿರಿದಾದ; ದಪ್ಪವಾದ; ಸ್ಥೂಲವಾದ: ಅವಳ ತಂದೆ ಒಂದು ಕಡೆ ಕುಳಿತು ದೊಡ್ಡ ಒಂದು ಡೋಲನ್ನು ಬಡಿಯು ತ್ತಿದ್ದನು (ಸಣ್ಣಕ. IV, ೩೨). 'ದೊಡ್ಡನೇಱಿಲ್' ಪರಾ. ೨. ವಯಸ್ಸಿ ನಿಂದ ಹಿರಿಯರಾದ; ಹಿರಿಯಂ; ಜ್ಯೇಷ್ಠ. 'ದೊಡ್ಡಕ್ಕ', 'ದೊಡ್ಡಣ್ಣ' ಪರಾ. ೩. ಮುಖ್ಯವಾದ; ಪ್ರಧಾನವಾದ. 'ದೊಡ್ಡಗಿಡ್ಡಂಗಿ', 'ದೊಡ್ಡಬೀದಿ' ಪರಾ. ೪. ಉದಾರವಾದ; ಉದಾತ್ತವಾದ;

ಧಾರಾಳ. 'ದೊಡ್ಡಮನಸ್ಸು' ಪರಾ. ೫. ಒಳ್ಳೆಯ; ತಳಿಯ; ಉತ್ತಮವಾದ. 'ದೊಡ್ಡದನ' ಪರಾ. ೬. ವಿಸ್ತಾರವಾದ; ವಿಶಾಲವಾದ; ಅಗಲವಾದ: ಅವನದು ತುಂಬಾ ದೊಡ್ಡಮುಖ (ರೂಢಿ). 'ದೊಡ್ಡಮನೆ' ಪರಾ. ೭. ಎತ್ತರವಾದ; ಬೆಳೆದ. 'ದೊಡ್ಡಮರ' ಪರಾ. ೮. ಉಬ್ಬಿದ; ಚಾಚಿದ. 'ದೊಡ್ಡಹೊಟ್ಟೆ' ಪರಾ. ೯. ಶಕ್ತಿಯುತವಾದ; ಬಲವಾದ. ೧೦. ಉದ್ದವಾದ; ನೀಳವಾದ. 'ದೊಡ್ಡಿತು' ಪರಾ. ೧೧. ಅತಿಯಾದ; ಆಡಂಬರದ; ವೈಭವದಿಂದ ಕೂಡಿದ: ಆಗಾಗ ಅವರ ಮನೆಯಲ್ಲಿ ದೊಡ್ಡ ಮೇಜವಾನಿಗಳು ನಡೆಯುತ್ತಲೇ ಇರುತ್ತವೆ (ರೂಢಿ). ೧೨. ಭರ್ತಿಯಾದ; ತುಂಬಿದ: ಇಂದು ಮಳೆ ಬಂದಿರುವ ಕಾರಣ ದೊಡ್ಡ ಹೊಳೆ ಆರಂಭವಾಗಿರುವುದರಿಂದ ನದಿಯನ್ನು ದಾಟಿ ಬರಲು ಯಾರೂ ಸಾಹಸ ಮಾಡುವುದಿಲ್ಲ (ರೂಢಿ). ೧೩. ಗಟ್ಟಿಯಾದ; ಜೋರಾದ. 'ದೊಡ್ಡದನಿ' ಪರಾ. ೧೪. ಗಾಢವಾದ; ಅಂತ್ಯವಿಲ್ಲದ. 'ದೊಡ್ಡನಿದ್ದೆ' ಪರಾ. ೧೫. ವೇಗದಿಂದ ಕೂಡಿದ; ವೇಗವಾದ. 'ದೊಡ್ಡನಡೆ' ಪರಾ. ೧೬. ಸಿರಿ ತುಂಬಿದ; ಐಶ್ವರ್ಯವುಳ್ಳ. 'ದೊಡ್ಡೊಕ್ಕಲು' ಪರಾ. ೧೭. ಹೆಚ್ಚಿನದಾದ; ಮಹತ್ತಾದ. 'ದೊಡ್ಡಸುದ್ದಿ' ಪರಾ. ೧೮. ತಿಳಿದ; ತಿಳಿವಳಿಕೆ ಹೊಂದಿದ. 'ದೊಡ್ಡಮಾತು' ಪರಾ.

**ದೊಡ್ಡದೊಡ್ಡ** (ದ್ವಿರುಕ್ತಿ): ಗಂಡಶೈಲಾಃ . . . ಬೆಟ್ಟದಿಂದ ಕೆಳಕ್ಕೆ ಉರುಳಿಕೊಂಡು ಜಾರಿದ ದೊಡ್ಡದೊಡ್ಡ ಕಲ್ಲುಗುಂಡುಗಳು (ಸಿದ್ಧಾಂತಿ. ೧೦೮); ದೊಡ್ಡ ದೊಡ್ಡ ಕಣ್ಣುಗಳನ್ನು ಮೆಡ್ಡರಿಸಿಕೊಂಡು . . . ಬಸ್ಸು ಗಾಡಿಗೆ ಎದುರಾಗಿ ಬರುತ್ತಿದ್ದರೆ ಎತ್ತುಗಳಿಗೆ ಬೆಟ್ಟದಾಕಾರದ ಭೂತವೇ ಬಂದಂತೆ ಕಂಡು... ಪರಾರಿಯಾಗುತ್ತಿದ್ದುವು (ನನ್ನೂರು. ೩೯). **ದೊಡ್ಡಂಕಂ ಬಡಿವ, ದೊಡ್ಡಂಕ ಬಡಿವ** = ಮಹಾಯುದ್ಧಗಳಲ್ಲಿ ಹೋರಾಡುವವನು; ಅತಿಶಯವಾಗಿ ಹೋರಾಡುವವನು; ಒಂದು ಬಿರುದು: ತೂಗಿ ತುತ್ತಿಡುವ ಬಿರುದರ ಪೆಣ್ಡರ ಗಣ್ಡಂ . . . ದೊಡ್ಡಂಕಂ ಬಡಿವ ಗೀತಪ್ರಗೀತಂ ಗೇಯವಿನೋದನ್ ನಿಜಕುಳೋತ್ತುಂಗ ಶ್ರೀಮದಟಿಯಂಗದೇವ ಸ್ಥಿರಂ ಜೀಯಾತ್ (ಮ್ಯಾಆರಿ. ೧೯೩೯, ೩೭-೩೦ : 1096); ದೊಡ್ಡಂಕ ಬಡಿವ ಜಗವನಣ್ಡಲೆವ ಸಿತಗರ ಗಣ್ಡ ಸಾಮನ್ತ ಬಿಟ್ಟಿದೇವರು (ಎಕ. XVI, ಕ್ಯನಾ. ೯೮-೧೩ ; 1169); ದೊಡ್ಡಂಕ ಬಡಿವನೆಂಬ ಬಿರುದಂ ಚಾಲುಕ್ಯಚಕ್ರವರ್ತಿಯಾಹವ[ಮ]ಲ್ಲನ ಕಯ್ಯಲು ಪಡೆದು (ಎಕ. XVI, ಚಿಕ್ಕನಾ. ೬೩-೬೩ ; 1242). **ದೊಡ್ಡಕುದುರೆ ಚೇಷ್ಟೆ**=ಹಣದ ಸಾಮರ್ಥ್ಯವಿದ್ದವರು ಮಾಡುವ ವ್ಯವಹಾರವನ್ನು ಹಣವಿಲ್ಲದವರು ಅನುಕರಿಸುವ ನಡವಳಿ: ಅವರದೆಲ್ಲ ದೊಡ್ಡಕುದುರೆ ಚೇಷ್ಟೆ. ನಾವು ಅವರಿಗೆ ಈಡೇನೂ ಅಲ್ಲ (ಮಹಾಗ. ೩). **ದೊಡ್ಡದಾಗು** = ೧. ಗಾತ್ರದಲ್ಲಿ ಹಿರಿದಾಗು; ದಪ್ಪವಾಗು: ಬೆಲೂನಿನಲ್ಲಿ ಗಾಳಿ ತುಂಬುತ್ತಾ ತುಂಬುತ್ತಾ ಅದು ದೊಡ್ಡದಾಗುತ್ತಾ ಬಂತು (ರೂಢಿ). ೨. ವಿಶಾಲವಾಗು; ವಿಸ್ತಾರವಾಗು: ಜನರಲ್ ವಾರ್ಡಿನಲ್ಲಿ ಪ್ರಪಂಚ ದೊಡ್ಡದಾಗಿತ್ತು (ಕೀಲುಗೊಂ. ೧೪೩). ೩. ನೀಳವಾಗು; ಉದ್ದವಾಗು: ಈ ದಿನದ ನನ್ನ ಭಾಷಣ ಸ್ವಲ್ಪ ದೊಡ್ಡದಾಗಬಹುದು (ರೂಢಿ). ೪. ದೊಡ್ಡವಳಾಗು; ಮೈನೆರೆ: ಆರೇಳು ತಿಂಗಳುಗಳಾದವು. ಹೆಣ್ಣು ದೊಡ್ಡದಾಯಿತು (ಹುಟ್ಟಿಹ. ೧೬).

**ದೊಡ್ಡದು** = ೧. ಹಿರಿದಾದುದು; ಹೆಚ್ಚಿನದು: ನಿಮ್ಮ ಭಾಗ್ಯ ದೊಡ್ಡದೋ ನಮ್ಮ ಭಾಗ್ಯ ದೊಡ್ಡದೋ (ಪುರಂದ. ೩-೩೦ ಪಲ್ಲವಿ); ಕ್ಷಮೆಯು ದೊಡ್ಡದೇ ಹೊರತಾಗಿ ಪಾಪಕೃತ್ಯದಿಂದುಂಟಾಗುವ ಭೋಗವು ದೊಡ್ಡದಲ್ಲ (ಕೃವಾಉ. ೩೪); ನಿನ್ನನ್ನು ಕಣ್ಣಿಗೆ ಒತ್ತಿಕೊಳ್ಳಬೇಕೆಂಬ ಆಶೆಯಾಗುವುದು. ನೀನು ಎಷ್ಟು ದೊಡ್ಡವಳು! ನಿನ್ನ ಹೃದಯ ಎಷ್ಟು ದೊಡ್ಡದು, ಶಾಂತಲೆ! (ಶಾಂತಲಾ. ೩೯೩). ೨. ವಿಶಾಲವಾದುದು: ಕುಪ್ಪತ್ತೂರಿನ ದೇವಾಲಯವು ಬಹಳ ಹಳೆಯದು ಮತ್ತು ದೊಡ್ಡದು (ಮೈವಾಸ್ತು. ೧೩೦). ೩. ಅಮೂಲ್ಯವಾದುದು; ಮಹತ್ತಾದುದು: ಮಾನವಜನ್ಮ ದೊಡ್ಡದು ಇದ ಹಾನಿ ಮಾಡಲಿಬೇಡಿ ಹುಚ್ಚಪ್ಪಗಳಿರಾ (ಪುರಂದ. ೧-೧೪-೧). ೪. ಅಶಕ್ಯವಾದುದು; ಅಸಾಧ್ಯವಾದುದು: ಇದೇನು ದೊಡ್ಡದೆಂದು ಕೈಯನ್ನು ತೂಗುತ್ತಾ ಪಾಲದಲ್ಲಿ ನಡೆದನು (ಕಾಲೂರ. ೧೧ ಕಥಾಸಾರ). **ದೊಡ್ಡದು ಮಾಡು** = ಅಲ್ಪವನ್ನು ಅತಿಯಾಗಿ ಭಾವಿಸು: ಇಷ್ಟು ಸಣ್ಣದಾದ ವಿಷಯವನ್ನು ದೊಡ್ಡದು ಮಾಡಬಾರದು (ಆಳನಿ. ೩೪); ತನ್ನ ಹೆಂಡತಿಗಾದ ಒಂದು ಸಣ್ಣ ಅಪಚಾರವನ್ನು ದೊಡ್ಡದು ಮಾಡಿ ಹಿರಿಯ ಮಗ ಮನೆ ಬಿಟ್ಟು ಬೇರೆ ಸಂಸಾರ ಹೂಡಿದ್ದಾನೆ (ರೂಢಿ). **ದೊಡ್ಡವ, ದೊಡ್ಡವನು** = ೧. ವಯಸ್ಕ; ಹಿರಿಯ: ಎಡ್ಡಮುಂ ಮಬ್ಬಿನೊಳ್ ದೊಡ್ಡನುಂ ನೋಡಿದಂ ದೊಡ್ಡಮಂ ಕಿರಿದಾಗಿ ಬಯಕೆಯೊಳಗಿಳಿದಂ (ಕಾಲೂರ. ೪೧-೫೧); ಹೌದು ಮಗು, ನೀನೀಗ ತುಂಬ ದೊಡ್ಡವ (ಮರಮು. ೩೭೬); ವೆಂಕಟಸ್ವಾಮಿ ನನಗಿಂತ ಸುಮಾರು ಹತ್ತು ವರುಷ ದೊಡ್ಡವನು (ಸಣ್ಣಕ. IV, ೩೦): ಮಧು ದೊಡ್ಡವನಾಗುತ್ತಾನೆ, ಓದಿ ವಿದ್ಯಾವಂತನಾಗುತ್ತಾನೆ (ಕೀಲುಗೊಂ. ೮೦). ೨. ಶ್ರೀಮಂತ; ಸಾಹುಕಾರ: ದೊಡ್ಡವನುಂಡರೆ ಮದ್ದು ಬಡವನುಂಡರೆ ಹೇಸಿಗೆ (ಗಾದೆ); ದೊಡ್ಡವನ ಮಾತು ಸವಿ, ಬಡವನ ಊಟ ಸವಿ (ಗಾದೆ). ೩. ಶ್ರೇಷ್ಠನಾದವನು. **ದೊಡ್ಡವರು, ದೊಡ್ಡರ್** (ಬಹುವ) = ೧. ಹಿರಿಯರು: ಹೆದ್ದರೆಂಬುವರೇನೋ ಲಂಗೋಟಿ ಜನರನ್ನು ದೊಡ್ಡವರೆಂದು ವಂದಿಸುವರು ಯತಿಗಳ (ಪುರಂದ. ೪-೮೮-೩); ಗೊಡ್ಡು ನಾಮ ತೀಡಿಕೊಂಡು ಅಡ್ಡಾದಿಡ್ಡಿ ಮುದ್ರೆಗಳ ಬಡಿದುಕೊಂಡಿನ್ನು ದೊಡ್ಡ ದೊಡ್ಡ ಮಾತುಗಳಾಡಿ ದೊಡ್ಡವರೆಂದ್ಹೇಳಿಕೊಂಬ ಬಡ್ಡೀ ಧಗಡೀಮಕ್ಕಳಿಗಿನ್ನು ವೈಷ್ಣವ ಸಲ್ಲುವುದೆ (ಪುರಂದ. ೪-೧೧೧-೧); ತಮ್ಮ ಚಾತುರ್ಯವನ್ನು ದೊಡ್ಡವರಿಗೆ ತೋರಿಸಬೇಕೆಂದು ಹುಡುಗರು ಸದಾ ಅಭಿಲಾಷಿಸುವರು (ರಾವಿಜ. ೩೩): ದೊಡ್ಡವರದೆಲ್ಲವು ದೊಡ್ಡದೆಂಬುವ ಮಾತು ಸುಳ್ಳಲ್ಲ! (ಉಯ್ಯಾಲೆ. ೬೫-೧). ೨. ಸಾಹುಕಾರರು; ಶ್ರೀಮಂತರು: ಗುರಿಕಾರರಿಗೆ ಮೈಸೂರಿನಲ್ಲಿ ದೊಡ್ಡವರುಗಳ ಮನೆವಾರ್ತೆಗಳ ಮತ್ತು ಚಾಕರರುಗಳ ನೆಂಟಸ್ತನ ಮತ್ತು ಗೆಳೆತನ ಬಹಳ ಉಂಟಂತೆ (ಕಲನೆ. ೩೩೦): ದೊಡ್ಡವರ ಮನೆ ನೋಟ ಚಂದ, ಬಡವರ ಮನೆ ಊಟ ಚಂದ (ಗಾದೆ): ದೊಡ್ಡವರ ಕೈ ಗಿಡ್ಡ (ಗಾದೆ). ೩. ಮೇಲೆನಿಸಿಕೊಂಡವರು; ಮಹಾವ್ಯಕ್ತಿಗಳು; ಹೆಚ್ಚಿನವರು: ಜಾಗೃತಿಯು ಘನ,-ಕೃತಿಯು ಘನವು,-ವಿಸ್ಮೃತಿಯು ಘನ! ದೊಡ್ಡವರು! (ಉಯ್ಯಾಲೆ. ೬೫-೧೬); ಅಂತು ಪೊಣಮಡುವರಾತಿಕಾಲಾನಲನಂ ಕಂಡು ಕಡ್ಡುವಂದ ದೊಡ್ಡರೆಲ್ಲಂ ಮುಸುಟಿ (ಪಂಪಭಾ. ೩-೬೧ ವ): "ವೃದ್ಧರು" (ಪಂಪದೀ. ೧೧೫). **ದೊಡ್ಡವಳಾಗು** = ೧. ವಯಸ್ಕಳಾಗು: ನೀನು ಚಿಕ್ಕವಳು . . . ದೊಡ್ಡವಳಾದ ಮೇಲೆ ನಿನಗೆ ಎಲ್ಲಾ ಅರ್ಥವಾಗುತ್ತೆ (ಕೀಲುಗೊಂ. ೧೩). ೨. ಪ್ರಥಮ ಋತುಮತಿಯಾಗು; ಪುಷ್ಪವತಿಯಾಗು; ಮೈನೆರೆ: ಈ ಅನಾಥ ಬಾಲಿಕೆಯ ವಿವಾಹದ ಭಾರವೂ ಗುರುಚರಣರ ಮೇಲೆಯೇ ಬಿದ್ದಿದೆ. ದೊಡ್ಡವಳಾಗಿ ಬಿಟ್ಟಿದ್ದಾಳೆ (ಪರಿಹೀ. ೩೯): ಅಬ್ಬಬ್ಬಾ ಅಂದ್ರೆ ಇನ್ನೆರಡು ವರ್ಷಗಳಲ್ಲಿ ದೊಡ್ಡವಳಾಗುತ್ತಾಳೆ (ಕೀಲುಗೊಂ. ೩೦). : **ದೊಡ್ಡವಳು**=೧. ಹಿರಿಯಳು: ಹಾಗಾದರೆ ನೀನು ದೊಡ್ಡವಳಲ್ಲಾ, ನಿನಗೇಕೆ ಮಕ್ಕಳಾಗೋದಿಲ್ಲ? (ಕೀಲುಗೊಂ. ೧೧). ೨. ಶ್ರೇಷ್ಠಳಾದವಳು: ನೀನು ಎಷ್ಟು ದೊಡ್ಡವಳು! ನಿನ್ನ ಹೃದಯ ಎಷ್ಟು ದೊಡ್ಡದು, ಶಾಂತಲೆ! (ಶಾಂತಲಾ. ೩೯೩). ೩. ಎತ್ತರವಾಗಿರುವವಳು: ಇಬ್ಬರನ್ನೂ ಅಕ್ಕಪಕ್ಕದಲ್ಲಿ ನಿಲ್ಲಿಸಿ ನೋಡಿದರೆ ದೊಡ್ಡವಳು ಯಾರು ಎಂದು ತಿಳಿಯುತ್ತದೆ (ರೂಢಿ). **ದೊಡ್ಡ ಹಾಲುಗೆಯ ದೇವರು**=ಪ್ರಸಿದ್ಧವಾಗಿದ್ದ ಒಂದು ದೇವತೆಯನ್ನು ಕುರಿತ

ವಿವರಣೆಯನ್ನು ಕೊಡುವ ಪದ : ಸಯಂಭುದೇವರ ಗುಡಿಯ ದೊಡ್ಡ ಹಾಉಗೆಯ ದೇವರ ಕೃಪೆಯಿಂದ ದನಗೂರ ದೊರೆ . . . ಸುಬರಾಜ್ಯಂಗೆ ಯ್ಯುತ್ತಿರಲು (ಎಕ. III, ಮಳವ. ೬೩-೩ : 1603). **ದೊಡ್ಡಾಳು**= ೧. ಎತ್ತರವಾದ ಆಳು : ಅಪ್ಪಾಜಿಯು ಅಷ್ಟು ದೊಡ್ಡಾಳಲ್ಲವಾದ್ದರಿಂದ ಅವರಿಗೆ ಸರಿಯಾಗಿತ್ತು (ಕಂಗಾಳ್ಕೆ. ೨೫). ೨. ಬಲವಾದ ಆಳು : ಗಾರೆಕೆಲಸಕ್ಕೆ ನಾಲ್ಕು ಜನ ದೊಡ್ಡಾಳುಗಳು ಆವಶ್ಯಕ (ರೂಢಿ). **ದೊಡ್ಡಿಹ**= ೧. ದಪ್ಪವಾದ ; ಸ್ಥೂಲವಾದ : ಗಂಡಶೈಲಂಗಳ್ – ಬೆಟ್ಟದತ್ತಣಿಂದ ಉರುಳ್ವ ದೊಡ್ಡಿಹ ಕಲ್ಲುಗಳು (ನಾಚಿರಾ. ೩) ; ಮಹೋಕ್ಷ–ದೊಡ್ಡಿಹ ಎತ್ತು (ನಾಚಿರಾ. ೩). ೨. ಹಿರಿದಾದ ; ಹೆಚ್ಚಿನ ; ಶ್ರೇಷ್ಠ : ಒಡ್ಡಿದ ಮೋಹರಗಳನೊಡೆ ಹಾಯ್ವುವೆ ದೊಡ್ಡಿಹ ರಾವುತರುಗಳ ಒಡ್ಡಮುಂಚುವೆ (ಕುಠಾಸಾಂ. ೧೫-೧೭) ; ಒಡ್ಡಿದ ಶೂಲವ ಹಾಯ್ದು ಮೈಲಾರದ ದೊಡ್ಡಿಹ [ಪಾಠಾಂ.ಯ] ದೇವರಿಂದವನ ಅಡ್ಡಾಕಿಲ್ಲದೆ ತರಿಸಿ ನಿನ್ನಯ ಕಾಲಿಗಡ್ಡಗೆಡಹುವೆನಂಜದಿರು (ಕುಠಾಸಾಂ. ೨೪-೩೭). **P** ಇದಲ್ಲದೆ ಅನೇಕ ನಾಮಪದಗಳೊಡನೆ ಕೂಡಿ ಸಂದರ್ಭಕ್ಕನುಸಾರವಾಗಿ ಈ ಶಬ್ದ ಹೆಚ್ಚು ವ್ಯಾಪ್ತವಾದ ಅರ್ಥವನ್ನು ಪಡೆಯುತ್ತದೆ. ಉದಾಹರಣೆಗೆ– ದೊಡ್ಡ ಅಂಗಡಿ, ದೊಡ್ಡ ಊರು, ದೊಡ್ಡಕೆರೆ, ದೊಡ್ಡ ಕೆಲಸ, ದೊಡ್ಡ ಜಾತ್ರೆ, ದೊಡ್ಡ ತಪ್ಪು, ದೊಡ್ಡಧಿಕಾರಿ, ದೊಡ್ಡನದಿ, ದೊಡ್ಡ ಪುಸ್ತಕ ಭಂಡಾರ, ದೊಡ್ಡ ವಸ್ತುಪ್ರದರ್ಶನ, ದೊಡ್ಡ ಸೈನ್ಯ, ದೊಡ್ಡಹಳ್ಳಿ, ದೊಡ್ಡಹೊಟ್ಟೆ ಮುಂತಾದುವು.

[ ದೇ.II ತಮಿ. ತೊಟ್ಟು ; ತುಳು. ದೊಡ್ಡ, ದೊಡ್ಡು ; ತೆಲು. ದೊಡ್ಡ ; ಕೊಡ. ದೊಡ್ ; ಕೊಲಾ. ದೊಡಾಂದ್ ]

**ದೊಡ್ಡ ಅಂಚಿಹುಲ್ಲು** 'ದೊಡ್ಡ ಹಂಚಿಹುಲ್ಲು' ನೋ.

**ದೊಡ್ಡ ಅಂಟುಪುರಲೆಹುಲ್ಲು** (ನಾ). ಒಂದು ಬಗೆಯ ದೊಡ್ಡದಾದ ಅಂಟುಪುರಲೆ ಹುಲ್ಲು : ದೊಡ್ಡಅಂಟುಪುರಲೆಹುಲ್ಲು, ಕರಿಉಟ್ಟೆಹುಲ್ಲು (ವ್ಯಾಜಿಗಿ. ೬೯-೧೧೩೦). [ದೊಡ್ಡ + ಅಂಟುಪುರಲೆ + ಹುಲ್ಲು (<ಪುಲ್)]

**ದೊಡ್ಡ ಏಲಕ್ಕಿ** 'ದೊಡ್ಡೇಲಕ್ಕಿ' ನೋ.

**ದೊಡ್ಡಕಡಗ** (ನಾ). ಒಂದು ಬಗೆಯ ದೊಡ್ಡ ತೇಗದ ಮರ : ಹೆತ್ತೇಗ, ಎಟ್ಟೆಗ, ಎತ್ತಾಗ, ಅರ್ಜಿನತೇಗ, ದೊಡ್ಡಕಡಗ, ಹೆಡ್ಡ (ವ್ಯಾಜಿಗಿ. ೩-೪೦).

[ ದೊಡ್ಡ + ಕಡಗ$_2$ ]

**ದೊಡ್ಡಕಡವ** (ನಾ). ಒಂದು ಬಗೆಯ ದೊಡ್ಡ ಕದಂಬವೃಕ್ಷ : "ಮಹಾಕದಂಬಃ–ದೊಡ್ಡಕಡವ, ರಾಜ್ಞಿ" (ಒಪಧಿ. ೧೩೩).

[ ದೊಡ್ಡ + ಕಡವ$_1$ (<ಕಡಂಬ) ]

**ದೊಡ್ಡಕರುಳು** (ನಾ). ಜಠರದ ಕೊನೆಯಿಂದ ಗುದದ್ವಾರದವರೆಗಿನ ಅನ್ನನಾಳದ ಭಾಗ : ಸಣ್ಣಕರುಳಿನಲ್ಲಿ ಸಹ ಅರಗದ ಹಾಗೂ ಶರೀರಕ್ಕೆ ಬೇಡವಾದ ಅನ್ನದ ಭಾಗವು, ದೊಡ್ಡಕರುಳಿನಲ್ಲಿ ಬಂದು ಸೇರುತ್ತದೆ (ಗೋಗ್ರಾಸ. ೪೫) ; ಕೆಲವು ಕೀಟಗಳಲ್ಲಿ . . . ದೊಡ್ಡಕರುಳು (ಕೊಲೊನ್) ಗುದನಾಳದ ಚೀಲ (Rectal sac) ಮತ್ತು ಗುದಗಳಂತೆ ವಿಭಾಗಿಸಬಹುದು (ಕೀಟಬ. ೩೮). 'ಸಣ್ಣಕರುಳು' ಪರಾ.

[ ದೊಡ್ಡ + ಕರುಳು (<ಕರುಳ್) ]

**ದೊಡ್ಡಕಹಿಮೆಣಸು** (ನಾ). ಒಂದು ಬಗೆಯ ಸಸ್ಯ ; ಕಂಕೊಳ : "ಕಂಕೊಲ–ಕಂಕೊಳ, ದೊಡ್ಡಕಹಿಮೆಣಸು" (ಒಪಧಿ. ೩೩).

[ ದೊಡ್ಡ + ಕಹಿಮೆಣಸು$_1$ ]

**ದೊಡ್ಡಕಳವಿ** (ನಾ). ದಪ್ಪವಾದ ಹಣ್ಣುಗಳನ್ನು ಬಿಡುವ ಕಳವಿ ಗಿಡ,– ಕಮರಿಕೆಗಿಡ : "ಮಹಾಶ್ವೇತ–ದೊಡ್ಡಕಳವಿ, ಬಿಳಿಯ ಬಳ್ಳಿ, ಸುಂಡೆ, ಕೆಂಜಿಡೆ" (ಒಪಧಿ. ೧೬೭) ; "ಶಿರಿಪತ್ರಃ–ದೊಡ್ಡಕಳವಿ" (ಒಪಧಿ. ೧೬೭).

[ ದೊಡ್ಡ + ಕಳವಿ (<ಕಳವೆ$_1$) ]

**ದೊಡ್ಡಕಳವಿಗೆ** (ನಾ). ಮುಳ್ಳುಗಸೆಯಂಲ್ಲಿ ಒಂದು ಬಗೆ : "ಗಿರಿಕರ್ಣಿಕೆ–ದೊಡ್ಡಕಳವಿಗೆ" (ಒಪಧಿ. ೪೮). [ ದೊಡ್ಡ + ಕಳವಿಗೆ$_2$ ]

**ದೊಡ್ಡಕಳ್ಳಂಗಡಲೆ** (ನಾ). ದೊಡ್ಡದಾದ ಕಳ್ಳಂಗಡಲೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ ; ದೊಡ್ಡದಾದ ಏಲಾವಾಲುಕ : "ವರ್ಷಪುತ್ರಿ–ದೊಡ್ಡಕಳ್ಳಂಗಡಲೆ" (ಒಪಧಿ. ೧೪೬).

[ ದೊಡ್ಡ + ಕಳ್ಳಂಗಡಲೆ ]

**ದೊಡ್ಡಕಾಗೆ** (ನಾ). ಒಂದು ಬಗೆಯ ಕಾಗೆ ; ಮಂಡಕಾಗೆ : "ಅರಣ್ಯವಾಯಸಃ–ದೊಡ್ಡಕಾಗೆ" (ಒಪಧಿ. ೯) ; "ಕಾಕೋಲ–ಚಪ್ಪ, ದೊಡ್ಡಕಾಗೆ, ನೀರುಳ್ಳಿ" (ಒಪಧಿ. ೨೯). [ ದೊಡ್ಡ + ಕಾಗೆ ]

**ದೊಡ್ಡಕಾವಲಿ** (ನಾ). ಒಂದು ಬಗೆಯ ಸಸ್ಯ : ಕರಂಡಹಣ್ಣಿನ ಗಿಡ, ಕಬಳಿಗಿಡ, ಕಳಾಗಿಡ, ದೊಡ್ಡಕಾವಲಿ, ಹೆಜ್ಜಾರಿಗೆ (ವ್ಯಾಜಿಗಿ. ೧೯-೩೩೩).

[ ದೊಡ್ಡ + ಕಾವಲಿ$_1$ ]

**ದೊಡ್ಡಕಿತ್ತೀಳೆ** (ನಾ). ಈಳೆ ಜಾತಿಗೆ ಸೇರಿದ ಒಂದು ಬಗೆಯ ದೊಡ್ಡ ಮರ ಮತ್ತು ಅದರ ಹಣ್ಣು : "ದ್ವಿಪದಃ–ದೊಡ್ಡಕಿ(ತ್ತಳಿ)ತ್ತೀಟ[3] [ಳೆ]" (ಒಪಧಿ. ೭೭) ; "ದ್ವಿಪಖರ್ಜೂರೀ–ದೊಡ್ಡಕಿತ್ತೀಟ[3] [ಳೆ]" (ಒಪಧಿ. ೭೭) ; "ಬೃಹತ್ಪಾರಾವತಂ–ದೊಡ್ಡ ಕಿತ್ತೀಟ[3] [ಳೆ]" (ಒಪಧಿ. ೧೦೯). [ ದೊಡ್ಡ + ಕಿತ್ತೀಳೆ ]

**ದೊಡ್ಡಕುಶೆ** (ನಾ). ಒಂದು ಬಗೆಯ ದೊಡ್ಡದಾದ ಹುಲ್ಲು : "ಶವಿಷ–ಬನ್ನಿ, ದೊಡ್ಡಕುಂಶೆ" (ಒಪಧಿ. ೧೫೯). [ ದೊಡ್ಡ + ಕುಶೆ$_1$ ]

**ದೊಡ್ಡಕೂವೆ** (ನಾ). ಗೆಣಸಿನಲ್ಲಿ ಒಂದು ಬಗೆ : ದೊಡ್ಡಕೂವೆ, ಕೆಂಪು ಕೂವೆ (ವ್ಯಾಜಿಗಿ. ೩೬-೫೦೦). [ ದೊಡ್ಡ + ಕೂವೆ$_1$ ]

**ದೊಡ್ಡಕ್ಕ** (ನಾ). ಅಕ್ಕಂದಿರಲ್ಲಿ ಹಿರಿಯಳಾದವಳು ; ಹಿರಿಯ ಅಕ್ಕ ; ಜ್ಯೇಷ್ಠ ಸೋದರಿ : ದೊಡ್ಡಕ್ಕನನ್ನು ಕಕ್ಕಿ ಗದರಿಸಿದಳೆಂದು ಮಕ್ಕಳೆಲ್ಲಾ ನಗತೊಡಗುವಾಗ ಯಶೋದೆಯ ಮೊಗದಲ್ಲೂ ಮೂಡುತ್ತಿದ್ದುದು ನಗುವೆ (ವಾತ್ಸಲ್ಯ. ೮೧) ; ದೊಡ್ಡಕ್ಕನ ಚಾಳಿ ಮನೆಮಂದಿಗೆಲ್ಲಾ (ಗಾದೆ).

[ ದೊಡ್ಡ + ಅಕ್ಕ$_1$ ]

**ದೊಡ್ಡಕ್ಕಿಹುಲ್ಲು** (ನಾ). ಹೊಲದಲ್ಲಿ ತಾನಾಗಿ ಬೆಳೆಯುವ ದೊಡ್ಡದಾದ ಒಂದು ಬಗೆಯ ಹುಲ್ಲು : ದೊಡ್ಡಕ್ಕಿಹುಲ್ಲು, ಮಣ್ಣಕ್ಕಿಹುಲ್ಲು (ವ್ಯಾಜಿಗಿ. ೩೦-೫೮೪). [ ದೊಡ್ಡ + ಅಕ್ಕಿಹುಲ್ಲು ]

**ದೊಡ್ಡಕ್ಷರ** (ನಾ). (ಇಂಗ್ಲಿಷ್ ಭಾಷೆಯಲ್ಲಿ) ವಾಕ್ಯದ ಅಥವಾ ಹೆಸರಿನ ಮೊದಲನೆಯ ಅಕ್ಷರ ; ಆದಿಯ ಅಕ್ಷರ : ಪ್ರತಿ ಫಾಂಟನಲ್ಲಿಯೂ ದೊಡ್ಡಕ್ಷರಗಳು (Capitals) ಚಿಕ್ಕಅಕ್ಷರಗಳು . . . ಸಂಯುಕ್ತಾಕ್ಷರಗಳೂ ಇರುತ್ತವೆ (ಮುದ್ರಕ. ೧೮). [ ದೊಡ್ಡ + ಅಕ್ಷರ ]

**ದೊಡ್ಡಖಚೋರ** (ನಾ). ಒಂದು ಬಗೆಯ ದೊಡ್ಡದಾದ ಖಚೋರ : ಅಗಿಲು, ಸಣ್ಣಖಚೋರ, ದೊಡ್ಡಖಚೋರ . . . ಇವಿಷ್ಟನ್ನು ಪ್ರತ್ಯೇಕ ಎರಡು ವರಹ ತೂಕಗಳನು ಸೂಕ್ಷ್ಮವಾಗಿ ಚೂರ್ಣಿಸಿ ಹಾಕಿ . . . ನಸ್ಯಂಗಳ ಮಾಡಿಸಲು ನೇತ್ರರೋಗ, ಶಿರೋರೋಗಂಗಳು ಶಮನವಹವು (ವೈದ್ಯಸಾ. II, ೧೩೫). [ ದೊಡ್ಡ + ಖಚೋರ ]

**ದೊಡ್ಡಖರ್ಜೂರ** (ನಾ). ಒಂದು ಬಗೆಯ ದೊಡ್ಡದಾದ ಖರ್ಜೂರದ ಮರ ಮತ್ತು ಅದರ ಹಣ್ಣು : "ರಾಜಪಿಂಡಾ–ದೊಡ್ಡಖರ್ಜೂರ" (ಒಪಧಿ. ೧೯೭) ; "ರಾಜಜ್ಯೇಷ್ಠಾ–ಬಾಬಟ[3], ದೊಡ್ಡಖರ್ಜೂರ" (ಒಪಧಿ. ೧೯೭). [ ದೊಡ್ಡ + ಖರ್ಜೂರ ]

**ದೊಡ್ಡಗಟ್ಟು** (ನಾ). ದೊಡ್ಡದಾದ ಅಣೆಕಟ್ಟು : ಬ್ರಹ್ಮೇಶ್ವರದೇವರ್ಗ್ಗೆ ಬ್ರಹ್ಮವೇದಿಜೀಯರು ಕಾಲಂ ಕರ್ಚ್ಚಿಯೂರಿಂ ಪಡುವ ದೊಡ್ಡಗಟ್ಟಿನ ಕೆಳಗೆ ಬಿಟ್ಟ ಗಟ್ಟಿ ಮತ್ತ ರೊ೦ದು (ಎಕ. XI, ದಾವಣ. ೧೩೬-೩೯ : 1037). [ ದೊಡ್ಡ + ಕಟ್ಟು$_2$ ]

**ದೊಡ್ಡಗರಿಕೆಹುಲ್ಲು** (ನಾ). ಒಂದು ಬಗೆಯ ಗರಿಕೆಹುಲ್ಲು : (ವ್ಯಜಿಗಿ. ೩೪-೬೬೪). [ ದೊಡ್ಡ + ಗರಿಕೆ (<ಕಱುಂಕೆ) + ಹುಲ್ಲು (<ಪುಲ್) ]

**ದೊಡ್ಡಗಾದಾರಿ** (ನಾ). ಒಂದು ಬಗೆಯ ಸಸ್ಯ ; ದೊಡ್ಡಮಾಚಿಪತ್ರೆ : (ಕ). [ ದೊಡ್ಡ + ಗಾದಾರಿ ]

**ದೊಡ್ಡಗಿಡ್ಡಂಗಿ** (ನಾ). ಮುಖ್ಯವಾದ ಕಾರಾಗೃಹ : ನಿಮ್ಮನ್ನೆಲ್ಲ ದೊಡ್ಡ ಗಿಡ್ಡಂಗಿಯ ಗುಪ್ತಗೃಹದಲ್ಲಿ ಉಳ್ಳ ಆ ಹಲಕೆಲವು ಮುಟ್ಟುಗಳ ಶಸ್ತ್ರಗಳ ಯಂತ್ರಗಳ ಕಡಿಕರ ಸಾಹಾಯ್ಯದಿಂದ (ಚಿಟ್ಟಅ. ೫೨-೫).
[ ದೊಡ್ಡ + ಗಿಡ್ಡಂಗಿ$_2$ ]

**ದೊಡ್ಡಗುಣ** (ನಾ). ಉದಾರವಾದ ಗುಣ : ದೊಡ್ಡಗುಣವನೊಂದ ನೇನೆಂಬೆ ಪತಿಯು ಮೈಯೊಡ್ಡಿನೊಳುಣ ಕುಳಿತಾಗ ಅಡ್ಡಣಿಗೆಯನೊಲ್ಲರ ವಕೇನು ಲೋಕದ ಹೆಡ್ಡ ಹೆಂಗಳೆ ಹೇಳುವಾಗ (ಭರತ. ೪-೫೯) : ಕೆಟ್ಟದ್ದನ್ನು ಸರಿಪಡಿಸಿಕೊಳ್ಳುವದೇ ದೊಡ್ಡಗುಣ (ಭೀಮಕಾ. ೩೨೯).
[ ದೊಡ್ಡ + ಗುಣ ]

**ದೊಡ್ಡಗುಲಗಂಜಿ** (ನಾ). ದೊಡ್ಡದಾದ ಒಂದು ಬಗೆಯ ಸಸ್ಯ ಮತ್ತು ಅರ್ಧ ಕೆಂಪಾಗಿಯೂ ಅರ್ಧ ಕಪ್ಪಾಗಿಯೂ ಇರುವ ಅದರ ಬೀಜ ; ಆನೆಗುಲಗಂಜಿ : ಮಂಜತ್ತಿ, ಮಂಜಡಿ, ಮುಂಜಟ್ಟೆ, ದೊಡ್ಡಗುಲಗಂಜಿ, ಆನೆಗುಲಗಂಜಿ (ವ್ಯಜಿಗಿ. ೩-೩೮).
[ ದೊಡ್ಡ + ಗುಲಗಂಜಿ (<ಗುರುಗುಂಜಿ) ]

**ದೊಡ್ಡಗೆಣಸು** (ನಾ). ಗೆಣಸಿನಲ್ಲಿ ಒಂದು ಬಗೆ : "ಪರಾವತಃ–ದೊಡ್ಡ ಗೆಣಸು" (ಓಷಧಿ. ೯೨). [ ದೊಡ್ಡ + ಗೆಣಸು (<ಗೆಟಸು) ]

**ದೊಡ್ಡಗೋಣಿ** (ನಾ). ದೊಡ್ಡದಾದ ಒಂದು ಬಗೆಯ ಗೋಣಿಮರ : (ವ್ಯಜಿಗಿ. ೬೪-೧೨೯೫). [ ದೊಡ್ಡ + ಗೋಣಿ$_1$ (<ಗೋಳಿ$_1$) ]

**ದೊಡ್ಡಗೋರ** (ನಾ). ಒಂದು ಬಗೆಯ ಸೊಪ್ಪು : ಸೊಪ್ಪುಗಳು : ಅಗಸೆ . . . ತುಂಬೆ, ಚಿಟಗಿನ, ಪರಪಾಟಕ, ದೊಡ್ಡಗೋರ, ಹುಳಿ ಬಚ್ಚಲಿ (ನಮ್ಮನು. ೨೩೭). [ ದೊಡ್ಡ + ಗೋರ ]

**ದೊಡ್ಡಗೋರಂಟಿ** 'ದೊಡ್ಡಗೋರಂಟೆ' ನೋ.

**ದೊಡ್ಡಗೋರಂಟೆ** ದೊಡ್ಡಗೋರಂಟಿ, ದೊಡ್ಡಗೋರಟೆ (ನಾ). ಕೆಂಪುಹೂವುಗಳನ್ನು ಬಿಡುವ ಕುರವಕಗಿಡದಲ್ಲಿ ಒಂದು ಬಗೆ ; ಹೆಗ್ಗೋರಂಟೆ : "ಅಮ್ಲಾನಃ, ಮಹಾಸಹಾ–೨ ದೊಡ್ಡಗೋರಂಟಿ" (ಸಿದ್ಧಾಂಶಿ. ೧೨೯). **ದೊಡ್ಡಗೋರಂಟೆ** : "ಕುರವಕಃ, ಶೋಣೇ, ತತ್ರ ಕೆಂಪುಹುವ್ವುಗಳುಳ್ಳ ದೊಡ್ಡಗೋರಂಟಿ, ಹೆಗ್ಗೋರಂಟಿ" (ಸಿದ್ಧಾಂಶಿ. ೧೧೩). **ದೊಡ್ಡಗೋರಟೆ** : "ಮಹಾಸಹಾ–ಸೇವಂತಿಗೆ, ಕಾಡುದ್ದು, ದೊಡ್ಡ ಗೋರಟೆ, ಕಾಡಹುರುಳಿ" (ಓಷಧಿ. ೧೧೮). [ ದೊಡ್ಡ + ಗೋರಂಟೆ ]

**ದೊಡ್ಡಗೋರಟೆ** 'ದೊಡ್ಡಗೋರಂಟೆ' ನೋ.

**ದೊಡ್ಡಚಂಚು** (ನಾ). ಒಂದು ಬಗೆಯ ದೊಡ್ಡದಾದ ಹರಳು ಗಿಡ : "ಬೃಹಚ್ಚಂಚುಃ–ದೊಡ್ಡಚಂಚು" (ಓಷಧಿ. ೧೦೯). [ದೊಡ್ಡ + ಚಂಚು$_2$]

**ದೊಡ್ಡಚಿರಾಯತ** (ನಾ). ಒಂದು ಬಗೆಯ ಮೂಲಿಕೆ ; ನೀಲಿ ಹೂವುಗಳನ್ನು ಬಿಡುವ ಚಿ ರಾ ಯ ತ ಎಂಬ ಸಸ್ಯದಲ್ಲಿ ಒಂದು ವಿಧ : (ವ್ಯಜಿಗಿ. ೩೬-೭೦೦). [ ದೊಡ್ಡ + ಚಿರಾಯುತ (<ಕಿರಿಯಾತು) ]

**ದೊಡ್ಡಚಿಲ್ಲ** (ನಾ). ದೊಡ್ಡದಾದ ಒಂದು ಬಗೆಯ ಚಿಲ್ಲದ ಗಿಡ : "ಕಾಲಮಂಜಿಷ್ಠೆ–ಕೋಳಿಕುಟುಮ, ಕರಿಯ ತಿಗಡೆ, ದೊಡ್ಡ ಚಿಲ್ಲ, ಮೆಣಸು" (ಓಷಧಿ. ೨೮). [ ದೊಡ್ಡ + ಚಿಲ್ಲ$_1$ ]

**ದೊಡ್ಡಚುಂಚು** (ನಾ). ಒಂದು ಬಗೆಯ ವನಸ್ಪತಿ : "ಮಹಾಚುಂಚು– ದೊಡ್ಡಚುಂಚು" (ಓಷಧಿ. ೧೧೭). [ ದೊಡ್ಡ + ಚುಂಚು$_1$ ]

**ದೊಡ್ಡಜಡ** (ನಾ). ಕಾಲರಾಬೇನೆ : ಊರಿನಲ್ಲಿ ದೊಡ್ಡಜಡ ಬಂದುದಿನಿಂದ ಜನಗಳು ನರಳುವುದು ನೋಡಲು ಸಾಧ್ಯವಿಲ್ಲ (ರೂಢಿ). [ದೊಡ್ಡ+ಜಡ]

**ದೊಡ್ಡಜಾಜಿಕಾಯಿ** (ನಾ). ಒಂದು ಬಗೆಯ ಕಾಯಿ : ದೊಡ್ಡಜಾಜಿ ಕಾಯಿ, ಕನಾಗಿ (ವ್ಯಜಿಗಿ. ೫೬-೧೧೧೮).
[ ದೊಡ್ಡ + ಜಾಜಿಕಾಯಿ (<ಜಾದಿಕಾಯ್) ]

**ದೊಡ್ಡಜೀರಗೆ** (ನಾ). ಜೀರಗೆಯಲ್ಲಿ ಒಂದು ಬಗೆ : "ತಪನಃ–ದೊಡ್ಡ ಜೀರಗೆ, ಔಡಲ" (ಓಷಧಿ. ೬೫). [ ದೊಡ್ಡ + ಜೀರಗೆ ]

**ದೊಡ್ಡಜೀರಿಗೆ** (ನಾ). = ದೊಡ್ಡಜೀರಗೆ : ದೊಡ್ಡ ಸೋಂಪು, ದೊಡ್ಡ ಜೀರಿಗೆ (ವ್ಯಜಿಗಿ. ೩೮-೭೪೬). [ ದೊಡ್ಡ + ಜೀರಿಗೆ ]

**ದೊಡ್ಡಜೀವ** (ನಾ). ಮುಖ್ಯವಾದ ಜೀವ,–ಪ್ರಾಣ ; P ಹೆಣ್ಣು ಬಸುರಿಯಾಗಿದ್ದಾಗ ಅವಳನ್ನು ದೊಡ್ಡಜೀವ, ದೊಡ್ಡಪ್ರಾಣ ಎಂದು ಕರೆಯುವುದುಂಟು : ಅವನೆದೆಗೆ ಕಿವಿಯೊಡ್ಡಿ . . . "ದೊಡ್ಡ ಜೀವವೇ ಹಾರಿಹೋಗಿದೆ" ಎಂದವನು ಗೊಣಗುಟ್ಟಿದನು (ಪುನರು. ೪೫೨) : ಗರ್ಭದಲ್ಲಿದ್ದ ಪಿಂಡವು ತಿರುಗಿ ಸ್ಥಳಪಲ್ಲಟವಾಗಿದ್ದುದರಿಂದ ಅದನ್ನು ಕತ್ತರಿಸಿ ಹೊರತೆಗೆಯದಿದ್ದರೆ ದೊಡ್ಡಜೀವಕ್ಕೆ ಅಪಾಯವೆಂದು ಮಾತ ನಾಡಿಕೊಂಡರು ಆಸ್ಪತ್ರೆಯಲ್ಲಿ (ಬೆಂಗಬ. ೧೯೭); ಸತತವಾದ ಗಮನವನ್ನು ಕೊಟ್ಟು ಆ ವೈದ್ಯರು ದೊಡ್ಡಜೀವ ಸಣ್ಣಜೀವಗಳೆರಡನ್ನೂ ಉಳಿಸಿದರು (ರೂಢಿ). [ ದೊಡ್ಡ + ಜೀವ ]

**ದೊಡ್ಡಜೋಳ** (ನಾ). ಮುಸುಕಿನ ಜೋಳ : (ಕ).
[ ದೊಡ್ಡ + ಜೋಳ ]

**ದೊಡ್ಡಜ್ವರ** (ನಾ). ಕಾಲರಾಬೇನೆ : ಊರೂರಿಗೆ ದೊಡ್ಡಜ್ವರ ಬಂದು ಬಿಟ್ಟದೆ (ರೂಢಿ). [ ದೊಡ್ಡ + ಜ್ವರ ]

**ದೊಡ್ಡಣ** (ಗು). ದೊಡ್ಡದಾದಂಥ ; ಗಾತ್ರವಾದ : ಕುಣಿಹಲ್ಲ ಪುರುಷ ನಂತೆ ಮಾತು ದೊಡ್ಡಣ ಕಾಲು ಕೆಂಪಾಗಿದ್ದ ಕೇಶ (ಸಾಮುಲ. ೨೯-೨).
[ <ದೊಡ್ಡ ]

**ದೊಡ್ಡಣ್ಣ** (ನಾ). ಅಣ್ಣಂದಿರಲ್ಲಿ ಹಿರಿಯನಾದವನು ; ಮೊದಲನೆಯ ಅಣ್ಣ : ಏನು ಲೀಲೆಯೊಳು ಚಿಕ್ಕಣ್ಣನಿಹನು ತನ್ನ ವಿಮಲಲೋಚನೆಯ ರೆಂ ಕಿ ಹ ರು ತಾನು ದೊಡ್ಡಣ್ಣನಂತುಪವಾಸಗೈವನೊ ಮಾನಿನಿ ಹೇಳೆಂದಳಾಗ (ಭರತ. ೧೯-೫೩) ; ನಮ್ಮ ದೊಡ್ಡಣ್ಣನಿಂದ ಕಾಗದ ಬಂದು ಬಹಳ ದಿನವಾಯಿತು (ರೂಢಿ). [ ದೊಡ್ಡ + ಅಣ್ಣ$_1$ ]

**ದೊಡ್ಡತಂಗಡಿ** (ನಾ). ಒಂದು ಬಗೆಯ ದೊಡ್ಡದಾದ ತಂಗಡಿ ಸಸ್ಯ : ದೊಡ್ಡತಂಗಡಿ, ಸೀಮೆ ಆಗಸೆ (ವ್ಯಜಿಗಿ. ೧೮-೩೨೮).
[ ದೊಡ್ಡ + ತಂಗಡಿ ]

**ದೊಡ್ಡತಂದೆ** (ನಾ). ೧. ತಂದೆಯ ಅಣ್ಣ ; ದೊಡ್ಡಪ್ಪ. ೨. ತಾಯಿಯ ಅಕ್ಕನ ಗಂಡ : (ಕ). [ ದೊಡ್ಡ + ತಂದೆ ]

**ದೊಡ್ಡತಗಚೆ** (ನಾ). ಒಂದು ಬಗೆಯ ಸಸ್ಯ ; ತಗಚೆಯಲ್ಲಿ ಒಂದು ವಿಧ : ಕೋಲ್‌ತಗಸಿ, ದೊಡ್ಡತಗಚೆ, ಆನೆಸೊಗಟೆ (ವ್ಯಜಿಗಿ. ೧೯-೩೩೭).
[ ದೊಡ್ಡ + ತಗಚೆ ]

**ದೊಡ್ಡತನ** (ನಾ). ೧. ಹಿರಿಯತನ ; ಘನತೆ ; ಮರ್ಯಾದೆ : ದೊಡ್ಡ ತನವೆನಗಿಲ್ಲ ಅಂಜುವೆನಂಜುವೆ ನಿಮ್ಮ ಪ್ರಮಥರಿಗೆ (ಬಸವ. ೪೧೨) ; ದೊಡ್ಡತನವ ನೀಗಿ ಗಡ್ಡದ ತಾಪಸನಡ್ಡಬಿದ್ದಿರೆ ಗೋಪಿಯರು ಗಡ್ಡವ ಪಿಡಿದು ತೂಗುತ ಗೋ ಪ ರೊ ಳು ಪೇಳ್ವರಡ್ಡಬಿದ್ದುದ್ದು ನಗುವರು (ಅಂಜಚ. ೨-೭೭); ಅಡ್ಡಮೋಟೆಯನಿಕ್ಕಿ ನಗುವಳು ನೋಡುವಳೊಡ್ಡೊಡ್ಡಿ ನುಡಿದೇಡಿಸುವಳು ದೊಡ್ಡತನವೆ ಭಾವ ನಿನಗಿದೆಂಬಳು ರಾಯ ಸದ್ದೆ ಮಾಡದೆ ಕೇಳುತಿಹನು (ಭರತ. ೯-೧೧೪). ೨. ಗುಣಾತಿಶಯ ; ಒಳ್ಳೆಯ ಗುಣ : ತಂದೆಯ ಸಹಾನುಭೂತಿಯ ಸಮ್ಮತಿಯಿಂದಾಗಿ ಹೈಮವತಿಯ ಮನಸು ಗೋವರ್ಧನನ ದೊಡ್ಡತನದಲ್ಲಿ ಅನುರಕ್ತವಾಯಿತು (ಎರಕ. ೮೧). 'ಸಣ್ಣತನ' ಪರಾ. [ ದೊಡ್ಡ + – ತನ ]

**ದೊಡ್ಡತಾಯಿ** (ನಾ). ೧. ತಾಯಿಯ ಅಕ್ಕ ; ದೊಡ್ಡಮ್ಮ. ೨. ತಂದೆಯ ಅಣ್ಣನ ಹೆಂಡತಿ ; ದೊಡ್ಡಪ್ಪನ ಹೆಂಡತಿ : ದೊಡ್ಡತಾಯಿ ತೀರಿಕೊಂಡ ಬಗೆಗೆ ಹೆಚ್ಚಿನದು ತನಗೇನೂ ತಿಳಿದಿರಲಿಲ್ಲ (ವಾತ್ಸಲ್ಯ. ೧೦) ; ಆ ಮಂಗುವಿಗಾದರೂ . . . ತಾಯಿಯೊಡನೆ ಇರಲು ಮನಸ್ಸಾಗದೆ ನಿತ್ಯವೂ ಬಯಲು, ಬೆಂಗರೆ, ಅರಾಲುಗಳಿಂದು ಮನೆಯ ಹೊರಗೇನೆ ದಿನ ಕಳೆಯುತ್ತಿದ್ದ ದೊಡ್ಡತಾಯಿಯನ್ನು ಹಿಂಬಾಲಿಸುವ ಮನಸ್ಸಾಯಿತು (ಮರಮ. ೧೧೩). [ ದೊಡ್ಡ + ತಾಯಿ (<ತಾಯ್) ]

**ದೊಡ್ಡತಿಪ್ಪಲಿ** 'ದೊಡ್ಡಹಿಪ್ಪಲಿ' ನೋ.

**ದೊಡ್ಡತುಂಬೆ** (ನಾ). ಒಂದು ಬಗೆಯ ದೊಡ್ಡದಾದ ತುಂಬೆ ಗಿಡ ಮತ್ತು ಅದರ ಹೂವು: ಹಸುರುತುಂಬೆ, ದೊಡ್ಡತುಂಬೆ (ಮೃಜಿ. ೫೦-೧೦೦೦೩). [ ದೊಡ್ಡ + ತುಂಬ್ಬೆ ]

**ದೊಡ್ಡತೊಪ್ಪೆಮರ** (ನಾ). ಒಂದು ಬಗೆಯ ಮರ : ದೊಡ್ಡತೊಪ್ಪೆಮರ, ...ದಲ್ಲಿಮರ, ಬಟ್ಟಗ (ಮೃಜಿ. ೯೫-೮೮೫). [ದೊಡ್ಡ+ತೊಪ್ಪೆ+ಮರ$_1$]

**ದೊಡ್ಡದಗರೆ** (ನಾ). ಒಂದು ಬಗೆಯ ತಗರೆ ಸಸ್ಯ : (ಮೃಜಿ. ೦೮-೩೩೩). [ ದೊಡ್ಡ + ತಗರೆ ]

**ದೊಡ್ಡದತ್ತೆಲೆ** (ನಾ). ಒಂದು ಬಗೆಯ ಎಳ್ಳಗಸೆ ಸಸ್ಯ : ದೊಡ್ಡದತ್ತೆಲೆ, ಉಮೆ (ಮೃಜಿ. ೬೫-೧೬೧೦೧). [ ದೊಡ್ಡ + ದತ್ತೆಲೆ ]

**ದೊಡ್ಡದನ** (ನಾ). ಒಳ್ಳೆಯ ತಳಿಯ ಪಶು ; ಉತ್ತಮಜಾತಿಯ ದನ : ಹೆಚ್ಚು ದನಗಳನ್ನು ಇಟ್ಟುಕೊಳ್ಳುವ ಬದಲು ಎರಡು ದೊಡ್ಡದನಗಳನ್ನು ಇಟ್ಟುಕೊಂಡರೆ ಸಾಕು (ರೂಢಿ). [ ದೊಡ್ಡ + ದನ ]

**ದೊಡ್ಡದನಿ** (ನಾ). ಗಟ್ಟಿಯಾದ ಧ್ವನಿ; ಜೋರಾದ ಧ್ವನಿ : ಕೆಲಹೊತ್ತಿನ ಮೇಲೆ ಭಟ್ಟರು ತಮ್ಮ ದೊಡ್ಡದನಿಯಲ್ಲಿ, "ಮಾದ್ಯಾ ಬಾರಿಸಿರೋ" ಎಂದರು (ಅಜೋಲೀ. ೫೩).

ದೊಡ್ಡದನಿ ತೆಗೆ = ಎತ್ತರದ ಧ್ವನಿಯಲ್ಲಿ ಮಾತನಾಡು ; ಜೋರು ಮಾಡು : ನಾಗಮ್ಮನ ಅಳು ಅಳತೆ ಮೀರಿತು . . . ಅಳುತ್ತ "ನಾನು ನನ್ನ ಮಾವನವರ ಊರಿಗೇ ಹೋಗ್ತೀನಿ" ಎಂದು ದೊಡ್ಡದನಿ ತೆಗೆದಳು (ದಾಸಕೂ. ೮೬) ; ಅವನು ದೊಡ್ಡದನಿ ತೆಗೆಯದೆ ಮಾತನಾಡುವಂತೆಯೇ ಇಲ್ಲ (ರೂಢಿ). [ ದೊಡ್ಡ + ದನಿ$_1$ ]

**ದೊಡ್ಡದರ್ಭೆ** (ನಾ). ಒಂದು ಬಗೆಯ ಹುಲ್ಲು : "ಬಹುಮೂಲಃ – ದೊಡ್ಡದರ್ಭೆ, ಮಗ್ಗಿ" (ಓಷಧಿ. ೦೦೬). [ ದೊಡ್ಡ + ದರ್ಭೆ ]

**ದೊಡ್ಡನಡೆ** (ನಾ). ವೇಗದಿಂದ ಕೂಡಿದ ನಡಿಗೆ ; ವೇಗವಾದ ನಡಿಗೆ : ಎತ್ತುಗಳನ್ನು ದೊಡ್ಡನಡೆಯಲ್ಲಿ ಬಿಡು (ರೂಢಿ). [ ದೊಡ್ಡ + ನಡೆ$_2$ ]

**ದೊಡ್ಡನಸುಕು** (ನಾ). ಇನ್ನೂ ಕತ್ತಲು ಇರುವ ಜಾವ ; ಬೆಳಗು ಬರಲು ಇನ್ನೂ ಸಾಕಷ್ಟು ಸಮಯವಿರುವ ಪ್ರಭಾತಕಾಲ : ದೊಡ್ಡನಸುಕಿನಲ್ಲಿ ಎದ್ದು ಸೋನಾಮಣಿಯು . . . ಬಾಗಿಲಿಗೆ ಬಂದು ಸದ್ದಿಲ್ಲದೆ ನಿಂತಳು (ಇಪ್ಪಳ. ೦೮೦) ; ಅವು ಅಡ್ಡಾಡುವ ಕಾಲವೆಂದರೆ ಧೂಳಸಂಜೆ ಅಥವಾ ದೊಡ್ಡನಸುಕು (ಕನ್ನಜಾ. ೩೦). [ ದೊಡ್ಡ + ನಸುಕು ]

**ದೊಡ್ಡನಾತದಗಿಡ** (ನಾ). ಒಂದು ಬಗೆಯ ಸಸ್ಯ : ಅರದ್ರಿ, ದೊಡ್ಡನಾತದ ಗಿಡ, ಇಬನ್ನೆ, ರುಚಿಕತ್ರಿ (ಮೃಜಿ. ೦೫-೩೮೩). [ ದೊಡ್ಡ + ನಾತ + ಗಿಡ (<ಗಿಡು) ]

**ದೊಡ್ಡನಾಯಿ** (ನಾ). ೧. ಎತ್ತರವಾಗಿ ಬೆಳೆದಿರುವ ನಾಯಿ, –ಶುನಕ: ದೊಡ್ಡತಲೆ ಯಮನ ದೂತರು ಗಡ್ಡದ ದೂತರು ಓಡಿ ಬಂದರು ದೊಡ್ಡ ನಾಯಿಗಳ ಟೊಂಕಕೆ ಬಿಗಿದು ಚಿಕ್ಕನಾಯಿಗಳ ಎಡಕೈಯಲಿ ಕೊಂಡು (ಪುರಂದ. ೫-೧೩೬-೫). ೨. ಹೆಬ್ಬುಲಿ : "ಶಾರ್ದೂಲಃ, ದ್ವೀಪೀ, ವ್ಯಾಘ್ರಃ – ಕಿ ದೊಡ್ಡಹುಲಿ, ಹೆಬ್ಬುರಹುಲಿ, ದೊಡ್ಡನಾಯಿ" (ಸಿದ್ಧಾಂತಿ. ೧೫೩). [ ದೊಡ್ಡ + ನಾಯಿ (<ನಾಯ್) ]

**ದೊಡ್ಡನಾಳಲು** (ನಾ). ಒಂದು ಬಗೆಯ ದೊಡ್ಡದಾದ ಹುಲ್ಲುಗಿಡ ; ದೊಡ್ಡದಾದ ಜೊಂಡುಗಿಡ : "ದೇವನಾಳಃ – ದೊಡ್ಡನಾಳ(ಣ)ಲು" (ಓಷಧಿ. ೭೯). [ ದೊಡ್ಡ + ನಾಳಲು (< ನಾನಲ್) ]

**ದೊಡ್ಡನಿಂಬೆ** (ನಾ). ಒಂದು ಬಗೆಯ ದೊಡ್ಡದಾದ ನಿಂಬೆಯ ಗಿಡ ಮತ್ತು ಅದರ ಹಣ್ಣು ; ಗಜನಿಂಬೆ : "ಜಂಬೀರ = ದೊಡ್ಡನಿಂಬೆ" (ಅಕಾನಿ. ೧೧-೩). [ ದೊಡ್ಡ + ನಿಂಬೆ ]

**ದೊಡ್ಡನಿದ್ದೆ** (ನಾ). ೧. ಗಾಢವಾದ ನಿದ್ರೆ ; ೨. ಸಾವು ; ಮರಣ : "ದೊಡ್ಡನಿದ್ದೆ –ಗಾಢನಿದ್ರೆ, ಸಾವು" (ಜಾನಕೋ. ೭). [ ದೊಡ್ಡ + ನಿದ್ದೆ ]

**ದೊಡ್ಡನಿದ್ರೆ** (ನಾ). = ದೊಡ್ಡನಿದ್ದೆ : (೩). [ ದೊಡ್ಡ + ನಿದ್ರೆ ]

**ದೊಡ್ಡನೀರಂಜಿ** (ನಾ). ಒಂದು ಬಗೆಯ ಸಸ್ಯ ; ನೀರಂಜಿಯಲ್ಲಿ ಒಂದು ವಿಧ : ದೊಡ್ಡನೆಗ್ಗಿಲು, ದೊಡ್ಡನೀರಂಜಿ, ಆನೆನೆಗ್ಗಿಲು (ಮೃಜಿ. ೬೦-೧೩೦೬). [ ದೊಡ್ಡ + ನೀರಂಜಿ (<ನೀರುವಂಜಿ) ]

**ದೊಡ್ಡನೀಲಿ** (ನಾ). ಒಂದು ಬಗೆಯ ದೊಡ್ಡದಾದ ನೀಲಿಗಿಡ : "ರಾಜನೀಲಿಕಾ – ದೊಡ್ಡನೀಲಿ" (ಓಷಧಿ. ೧೩೮) ; ಕೊಮ್ಮೆಬೇರು, ದೊಡ್ಡ ನೀಲಿ, ಅಣಚಿ ಇವಿಷ್ಟನ್ನು . . . ಕಲ್ಲೊಳಿಟ್ಟು ಅರೆದು ಹಸುವಿನ ಮಜ್ಜಿಗೆಯಲ್ಲಿ ಕುಡಿಯ ಕೊಡಿಸಲು . . . ವಿಷ ಪರಿಹರವಹುದು (ವೃದ್ಧಸಾ. II, ೨೦೭). [ ದೊಡ್ಡ + ನೀಲಿ ]

**ದೊಡ್ಡನೂಲು** (ನಾ). ದಪ್ಪವಾದ, ಒರಟು ನೂಲು: ಸ್ಥೂಲ, ಶಾಟಕ – ದೊಡ್ಡನೂಲ ಸೀರೆ (ನಾಚಿರಾ. ೩). [ದೊಡ್ಡ + ನೂಲು$_2$ (<ನೂಲ್$_2$)]

**ದೊಡ್ಡನೆಕ್ಕರೆ** (ನಾ). ನೇರಳೆ ಬಣ್ಣದ ಹೂವುಗಳನ್ನು ಬಿಡುವ ನೆಕ್ಕರೆ ಎಂಬ ಗುಲ್ಮಜಾತಿಯಲ್ಲಿ ಒಂದು ವಿಧ : (ಮೃಜಿ. ೫೩-೧೧೬೯). [ ದೊಡ್ಡ + ನೆಕ್ಕರೆ ]

**ದೊಡ್ಡನೆಗ್ಗಿಲು** (ನಾ). ಒಂದು ಬಗೆಯ ಸಸ್ಯ ; ನೆಗ್ಗಿಲಿನಲ್ಲಿ ಒಂದು ವಿಧ : ದೊಡ್ಡನೆಗ್ಗಿಲು, ದೊಡ್ಡನೀರಂಜಿ, ಆನೆನೆಗ್ಗಿಲು (ಮೃಜಿ. ೬೦-೦೩೦೬). [ ದೊಡ್ಡ + ನೆಗ್ಗಿಲು (<ನೆಗ್ಗಿಲ್) ]

**ದೊಡ್ಡನೆಲದಾವರೆ** (ನಾ). ಒಂದು ಬಗೆಯ ಹೂವಿನ ಗಿಡ ; ನೆಲದಾವರೆಯಲ್ಲಿ ಒಂದು ವಿಧ : "ಶುದ್ಧಮೂಲಂ – ದೊಡ್ಡನೆಲದಾವರೆ" (ಓಷಧಿ. ೧೬೮). [ ದೊಡ್ಡ + ನೆಲದಾವರೆ$_1$ ]

**ದೊಡ್ಡನೆಲ್ಲಿ** (ನಾ). ನೆಲ್ಲಿಯಲ್ಲಿ ಒಂದು ವಿಧ : ಬೆಟ್ಟದ ನೆಲ್ಲಿಕಾಯಿ . . . ದೊಡ್ಡನೆಲ್ಲಿ, ಬೆಟ್ಟನೆಲ್ಲಿ (ಮೃಜಿ. ೩೯-೬೪೯). [ ದೊಡ್ಡ + ನೆಲ್ಲಿ$_1$ ]

**ದೊಡ್ಡನೇಜಿಲ್**, **ದೊಡ್ಡನೇಜಿಲು** (ನಾ). ಗಾತ್ರದಲ್ಲಿ ಹಿರಿದಾದ ನೇರಿಳೆಹಣ್ಣಿನ ಮರ ಮತ್ತು ಅದರ ಹಣ್ಣು : "ಮಹಾಫಲ – ಬೆಲ್ಲವತ್ತ, ಹಲಸು, ದೊಡ್ಡನೇಜಿಲ್" (ಓಷಧಿ. ೧೧೮). **ದೊಡ್ಡನೇಜಿಲು** : "ಕೋಕಿಲೇಷ್ಟಾ – ದೊಡ್ಡನೇಜಿಲು" (ಓಷಧಿ. ೯೧). [ ದೊಡ್ಡ + ನೇಜಿಲ್ ]

**ದೊಡ್ಡನೇಜಿಲು** 'ದೊಡ್ಡನೇಜಿಲ್' ನೋ.

**ದೊಡ್ಡಪಟಿಕ** (ನಾ). ಸ್ಫಟಿಕದ ಗಿಡದಲ್ಲಿ ಒಂದು ಬಗೆ ಮತ್ತು ಅದರ ಹೂವು : ದೊಡ್ಡಪಟಿಕ, ನಾಗಮಲ್ಲಿಗೆ (ಮೃಜಿ. ೬೬-೧೩೯೫). [ ದೊಡ್ಡ + ಪಟಿಕ$_2$ ]

**ದೊಡ್ಡಪಡಪತ್ರೆ** (ನಾ). ಒಂದು ಬಗೆಯ ಮೂಲಿಕೆ : ದೊಡ್ಡಪಡಪತ್ರೆ ಚೂರ್ಣ ವರಾಹ ತೂಕ ಗುಳಿಗೆ ಮಾಡಿ ಕೊಡಲು ಹಾವುಗಳ ನಾನಾ ವಿಷ, ನಾನಾ ಪ್ರಾಣಿಗಳಿಗೂ ವಿಷ ಹರ (ವಿವ್ಯವಿ. ೧೧೪). [ದೊಡ್ಡ+ಪಡಪತ್ರೆ$_2$]

**ದೊಡ್ಡಪತ್ರೆ**, **ದೊಡ್ಡಿಪತ್ರೆ** (ನಾ). ಅಡುಗೆಗೂ ಔಷಧಿಗೂ ಉಪಯೋಗಿಸುವ, ದೊಡ್ಡ ದೊಡ್ಡ ದಪ್ಪ ಎಲೆಗಳನ್ನುಳ್ಳ ಒಂದು ಬಗೆಯ ಗಿಡ ಮತ್ತು ಅದರ ಎಲೆ : "ಛತ್ರಕೋಶಾತಕೀ–ದೊಡ್ಡಪತ್ರೆ (ಬೋಟತರ ?)" (ಓಷಧಿ. ೫೫). **ದೊಡ್ಡಿಪತ್ರೆ** : "ಅಜಪಾದಃ – ಎಲೆಗಳ್ಳಿ, ದೊಡ್ಡಿಪತ್ರೆ" (ಓಷಧಿ. ೬). [ ದೊಡ್ಡ + ಪತ್ರೆ ]

**ದೊಡ್ಡಪರೀಕ್ಷೆ** (ನಾ). ಮುಂದಿನ ತರಗತಿಗೆ ತೇರ್ಗಡೆ ಮಾಡಲು ಮಾಡುವ ಪರೀಕ್ಷೆ ; ವಿದ್ಯಾ ಇಲಾಖೆಯವರು ನಡೆಸುವ ಸರ್ವಶಾಲಾ ಪರೀಕ್ಷೆ : ದೊಡ್ಡಪರೀಕ್ಷೆಯೊಳಿನ್ನ ದುರ್ದೈವಕೆ ವಿಜಯವು ಅರೆಬರೆಯಾಗೆ (ಇಂಜಾಪ. ೧೯-೮೦). 'ಸಣ್ಣಪರೀಕ್ಷೆ' ಪರಾ. [ ದೊಡ್ಡ + ಪರೀಕ್ಷೆ ]

**ದೊಡ್ಡಪುಂಡರೀಕ** (ನಾ). ದೊಡ್ಡದಾದ ಬಿಳಿ ತಾವರೆಯ ಬಳ್ಳಿ ಮತ್ತು ಅದರ ಹೂವು : "ಪುಂಡರೀಯಕಂ – ದೊಡ್ಡಪುಂಡರೀಕಂ" (ಓಷಧಿ. ೧೦೧). [ ದೊಡ್ಡ + ಪುಂಡರೀಕ ]

**ದೊಡ್ಡಪುರಲೇಹುಲ್ಲು** (ನಾ). ಒಂದು ಬಗೆಯ ಹುಲ್ಲು : ದೊಡ್ಡಪುರಲೇ ಹುಲ್ಲು, ಸಣ್ಣಊಗು ಹುಲ್ಲು (ವೃಜಿಗಿ. ೩೪-೬೬೧).
[ ದೊಡ್ಡ + ಪುರಲ್ಲೆ (<ಪುರುಲ್ಲೆ) + ಹುಲ್ಲು (<ಪುಲ್) ]

**ದೊಡ್ಡಪ್ಪ** (ನಾ). ೧. ತಂದೆಯ ಅಣ್ಣ ; ದೊಡ್ಡತಂದೆ : "ಪಿತೃವ್ಯಃ, ಪಿತುರ್ಭ್ರಾತಾ – ತಂದೆಗೆ ಪಡಹುಟ್ಟಿದವನ ಪೆಸರು. ಚಿಕ್ಕಪ್ಪ, ದೊಡ್ಡಪ್ಪ" (ಸಿದ್ಧಾಂಶಿ. ೧೭೫); ಇಲ್ಲ ದೊಡ್ಡಪ್ಪ, ಇಲ್ಲಿಯೇ ಮಲಗುತ್ತೇನೆ (ವಾತ್ಸಲ್ಯ. ೧) ; ವೈದಿಕಲೌಕಿಕೋಭಯವಿದ್ಯಾನಿಪುಣರು ನನ್ನ ಆ ದೊಡ್ಡಪ್ಪನವರು (ಇಂಜಾಪ. ೧೫-೬೦). ೨. ಗೌರವವುಳ್ಳ ವ್ಯಕ್ತಿ ; ಮನ್ನಣೆಯನ್ನು ಹೊಂದಿರುವವನು : ದುಡ್ಡು ದೊಡ್ಡಪ್ಪಾದು ಗಂಡರಾಗಲು ಬಹುದೆ ದುಡಿದುಂಡರು ಗಂಡರಿರಬೇಕ (ಕನ್ನಜಾ. ೩೪೬); ದುಡ್ಡಿದ್ದವನೇ ದೊಡ್ಡಪ್ಪ (ಗಾದೆ). [ ದೊಡ್ಡ + ಅಪ್ಪ$_1$ ]

**ದೊಡ್ಡಬರ** (ನಾ). (ಹಿಂದೆ ೧೮೭೬-೭೮ರ ಧಾತು ಮತ್ತು ಈಶ್ವರ ಸಂವತ್ಸರಗಳಲ್ಲಿ ಇಡೀ ರಾಷ್ಟ್ರವನ್ನೇ ತಲ್ಲಣಗೊಳಿಸಿದ) ಒಂದು ದೊಡ್ಡ ಕ್ಷಾಮ ; ಭಯಂಕರವಾದ ಬರ : ಆಚಾರ್ರು . . . ಮೂರು ವರ್ಷದ ಬರ ಅಥವಾ ದೊಡ್ಡಬರ, ಜೋಳದ ಬರಗಳನ್ನು ಕಂಡಿದ್ದರು (ನನ್ನೂರು.೧೯೩) ; ಮೊದಲೇ ಬಡತನ, ಅದರಲ್ಲಿ ದೊಡ್ಡಬರ (ಕನ್ನಜಾ. ೨೦).
[ ದೊಡ್ಡ + ಬರ$_1$ (<ಬಱ) ]

**ದೊಡ್ಡಬಸಲೆ, ದೊಡ್ಡಬಸಳೆ** (ನಾ). (ಅಡುಗೆಗೆ ಉಪಯೋಗಿಸುವ) ಒಂದು ಬಗೆಯ ಬಳ್ಳಿ ಮತ್ತು ಅದರ ಸೊಪ್ಪು : ಸೊಪ್ಪುಗಳು : ಅಗಸೆ . . . ದಗ್ಗಳಿ, ಕೆಸವೆ, ದೊಡ್ಡಬಸಲೆ, ಬಿಲವರಗ (ನಮ್ಮುಸು. ೨೩೭).
**ದೊಡ್ಡಬಸಳೆ** : ದೊಡ್ಡಬಸಳೆ ಬಳ್ಳಿ ತಾರಸಿಯ ಮೇಲಕ್ಕೂ ಹಬ್ಬಿಕೊಂಡು ಹೋಗಿದೆ (ರೂಢಿ). [ ದೊಡ್ಡ + ಬಸಲೆ ]

**ದೊಡ್ಡಬಸಳೆ** 'ದೊಡ್ಡಬಸಲೆ' ನೋ.

**ದೊಡ್ಡಬಿಂದಿಗೆಗಿಡ** (ನಾ). ಒಂದು ಬಗೆಯ ಹೂವಿನ ಗಿಡ : (ವೃಜಿಗಿ. ೫-೮೭). [ ದೊಡ್ಡ + ಬಿಂದಿಗೆ + ಗಿಡ (<ಗಿಡು) ]

**ದೊಡ್ಡಬೀದಿ** (ನಾ). ಮುಖ್ಯವಾದ ಬೀದಿ ; ಪ್ರಧಾನ ರಸ್ತೆ : ದೇವರ ಉತ್ಸವದ ಕಾರಣ ಆ ದೊಡ್ಡಬೀದಿಯಲ್ಲಿ ಬಹುಜನರು ಸೇರಿದ್ದಾರೆ (ರೂಢಿ). [ ದೊಡ್ಡ + ಬೀದಿ ]

**ದೊಡ್ಡಬೆಂಡೆ** (ನಾ). ಒಂದು ಬಗೆಯ ದೊಡ್ಡದಾದ ಕಾಯಿಗಳನ್ನು ಬಿಡುವ ಬೆಂಡೆ ಗಿಡ ಮತ್ತು ಅದರ ಕಾಯಿ : ದೊಡ್ಡಬೆಂಡೆ, ಕಾಡುಕುತ್ರಿ (ವೃಜಿಗಿ. ೬೬-೧೫೬೦). [ ದೊಡ್ಡ + ಬೆಂಡೆ ]

**ದೊಡ್ಡಬೆಟ್ಟ** (ನಾ). ಎತ್ತರವಾದ ಬೆಟ್ಟ : "ತ್ರಿಕೂಟಃ . . . ಮೂರು ಶಿಖರಗಳುಳ್ಳ ಬಹಳ ಪ್ರಸಿದ್ಧವಾದ ದೊಡ್ಡಬೆಟ್ಟ" (ಸಿದ್ಧಾಂಶಿ. ೪೪) ; ಅಂಬುಧಿಯೊಳ್ ಮಗನ ಮಲಗಿಸಿ ಮೇಲೆ ದೊಡ್ಡಬೆಟ್ಟವನ್ನು ಇಟ್ಟು ಬನ್ನಿರೋ (ಪುರಂದ. ४-೬-೩) ; ಕನ್ನಡ ಶಾಸನಗಳಲ್ಲಿ ಚಿಕ್ಕ ಬೆಟ್ಟವನ್ನು ಕಟ್ವಪ್ಪು ಎಂದೂ ದೊಡ್ಡಬೆಟ್ಟವನ್ನು 'ಪೆರ್ಗಟ್ವಪ್ಪು' ಎಂದೂ ಕರೆದಿದೆ (ಕಶಾಅ ೬೮). P ಶ್ರವಣಬೆಳಗೊಳದಲ್ಲಿರುವ ಚಂದ್ರಗಿರಿಗೂ ಊಟಿಯ ಬಳಿಯಿರುವ ನೀಲಗಿರಿಯ ಶಿಖರಕ್ಕೂ ದೊಡ್ಡಬೆಟ್ಟವೆಂಬ ಹೆಸರು ಬಂದಿದೆ. [ ದೊಡ್ಡ + ಬೆಟ್ಟ (<ಬೆಟ್ಟು$_2$) ]

**ದೊಡ್ಡಬೆಲ್ಲಗೆಣಸು** (ನಾ). ಒಂದು ಬಗೆಯ ಸಿಹಿಗೆಣಸು : "ತಾಂಬೂಲಪತ್ರಿಕಾ – ದೊಡ್ಡಬೆಲ್ಲಗೆಣಸು" (ಓಷಧಿ. ೬೮).
[ ದೊಡ್ಡ + ಬೆಲ್ಲ + ಗೆಣಸು (<ಗೆಟಸು) ]

**ದೊಡ್ಡಬೆಳ್ಳಿಹಣ** (ನಾ). ಒಂದು ಬಗೆಯ ಬೆಳ್ಳಿ ನಾಣ್ಯ : (*).
[ ದೊಡ್ಡ + ಬೆಳ್ಳಿ + ಹಣ ]

**ದೊಡ್ಡಬೇನೆ** (ನಾ). ಕ್ಷಯ ಮೊದಲಾದ ಭಯಾನಕ ವಾದ ರೋಗ ; ದೊಡ್ಡ ರೋಗ : ಜಗಳದ ಕಾವಿನಲ್ಲಿ ಆಕೆ ನಿನಗೆ ದೊಡ್ಡ ಬೇನೆ ಬರ, ಎಂದು ನಟಿಕೆ ಮುರಿದಳು (ರೂಢಿ). [ ದೊಡ್ಡ + ಬೇನೆ ]

**ದೊಡ್ಡಬೇವು** (ನಾ). ಒಂದು ಬಗೆಯ ಬೇವಿನ ಮರ : "ರಕ್ತಃ – ದೊಡ್ಡಬೇವು, ತಾರೆ, ಕಡಸಿಗೆ" (ಓಷಧಿ. ೧೩೩) ; "ಪಿನಿಂಬಃ–ದೊಡ್ಡಬೇವು" (ಓಷಧಿ. ೧೩೩). [ ದೊಡ್ಡ + ಬೇವು ]

**ದೊಡ್ಡಬೊಂಬೆಯಾಟ** (ನಾ). ಬೊಂಬೆಯಾಟದಲ್ಲಿ ಒಂದು ಪ್ರಕಾರ.
**ದೊಡ್ಡಬೊಂಬೆಯಾಟದವರು** = ದೊಡ್ಡ ಬೊಂಬೆಯಾಟವನ್ನು ಆಡಿಸುವವರು : (ಎಸವ್ಯ. XXII, ೩). [ ದೊಡ್ಡ + ಬೊಂಬೆಯಾಟ ]

**ದೊಡ್ಡಮದ್ದು** (ನಾ). ಅಶ್ವಗಂಧದ ಬೇರು ; ಹಿರೇಮದ್ದು : (*).
[ ದೊಡ್ಡ + ಮದ್ದು$_1$ (<ಮರ್ದು) ]

**ದೊಡ್ಡಮನಸ್ಸು** (ನಾ). ಉದಾರಬುದ್ಧಿ ; ವಿಶಾಲಹೃದಯ : ಗಿರಿಜ ಬದುಕಿದ್ದಾಗ "ದೋಸೆ ತಿನ್ನು" ಎಂದು ದೊಡ್ಡಮನಸ್ಸು ತೋರಿಸಿರಲಿಲ್ಲ (ಪದ್ಮಸ. ೬೨) ; ನೀವು ಅಂತಹ ದೊಡ್ಡಮನಸ್ಸಿನವರೆಂಬುದನ್ನು ಮಂದಿ ಬಲ್ಲುದು ಮಹಾರಾಣಿ (ಸವತಿ. ೧೨).
**ದೊಡ್ಡಮನಸ್ಸು ಮಾಡು**=ಉದಾರಬುದ್ಧಿಯನ್ನು ತೋರು; ಕರುಣೆ ತೋರು : ತಾವು ದೊಡ್ಡಮನಸ್ಸು ಮಾಡಬೇಕು (ಒಡಕ. ೯೦) ; ಈಗ ಕುಂತಿಯು ದೊಡ್ಡಮನಸ್ಸು ಮಾಡಿದರೆ ನನಗೂ ಮಕ್ಕಳಾದಾವು (ವಚಭಾ. ೧೩). [ ದೊಡ್ಡ + ಮನಸ್ಸು ]

**ದೊಡ್ಡಮನುಷ್ಯ** (ನಾ). ೧. ಗೌರವಯುತ ಮನುಷ್ಯ : ನನ್ನ ಸಬ್ ಡಿವಿಜನ್ ಆಫೀಸರು ದಳವಾಯಿ ಮನೆತನದ ಚಿಕ್ಕದೇವರಾಜೇಅರಸರೆಂಬ ದೊಡ್ಡಮನುಷ್ಯರು (ಕಲಿನೆ. ೨೧೭) ; ಊರಿಗೆ ದೊಡ್ಡಮನುಷ್ಯ ಅನ್ನಿಸಿಕೊಳ್ಳೋಕೆ ನಾನು, ಬಂದೋರ ಚಾಕರಿ ಮಾಡೋಕೆ ನೀವಾ ? (ಚಂದಕೋ.೩೬). ೨. ಶ್ರೀಮಂತ : "ದೊಡ್ಡಮನುಷ್ಯ, ದೊಡ್ಡಸ್ತಿಕೆಗಾರ" (Aristocrat. ಪಾರಿನಿ. ೭). [ ದೊಡ್ಡ + ಮನುಷ್ಯ ]

**ದೊಡ್ಡಮನೆ** (ನಾ). ೧. ವಿಶಾಲವಾದ ಮನೆ : ಸಾಹುಕಾರನು ಆ ದೊಡ್ಡಮನೆಯಲ್ಲಿ ಬೀದಿಯ ಕಡೆಯ ಒಂದು ಕೊಠಡಿಯನ್ನು ಸುಬ್ಬಣ್ಣನವರಿಗೆ ತೋರಿಸಿ, ನೀವು ಬೇಕಾದರೆ ಇಲ್ಲಿಯೇ ಇರಿ. ಎಂದು ಹೇಳಿದನು (ಸಣ್ಣಕ. X, ೫೪) ; ಒಂದು ಕಾಲಕ್ಕೆ ಅದು ಬಹಳ ದೊಡ್ಡಮನೆ ಆಗಿದ್ದಿರಬೇಕು (ಚಂದಕೋ. ೩೦). ೨. (ಆಲಂ) ಕಾರಾಗೃಹ ; ಸೆರೆಮನೆ : (*).
[ ದೊಡ್ಡ + ಮನೆ ]

**ದೊಡ್ಡಮಬ್ಬು** (ನಾ). ಬೆಳಗಿನ ಜಾವಕ್ಕೂ ಮುಂಚಿನ ಸಮಯ ; ಬೆಳಗಾಗುವುದಕ್ಕಿಂತ ತುಂಬಾ ಮುಂಚಿನ ಸಮಯ : ಚನ್ನ ದೊಡ್ಡ ಮಬ್ಬಿಗೇ ಊರು ಬಿಟ್ಟು ಮೂರಾಳುದ್ದ ಹೊತ್ತಿಗೆ ಬೆಟ್ಟ ಸೇರಿದ (ನನ್ನೂರು. ೨೦೯). 'ನಸುಮಬ್ಬು' ಪರಾ.
[ ದೊಡ್ಡ + ಮಬ್ಬು (<ಮರ್ಬು) ]

**ದೊಡ್ಡಮರ** (ನಾ). ೧. ದೊಡ್ಡದಾದ ಮರ ; ಎತ್ತರವಾದ ವೃಕ್ಷ. ೨. ಹಿರೇಮರ ; ಹೆಮ್ಮರ : "ಮಂಡೂಕಪರ್ಣಃ, ಪತ್ರೋರ್ಣಃ, ನಟಃ, ಕಟ್ವಂಗಃ . . . ೧೨ ಹೆಮ್ಮರದ ಹೆಸರುಗಳು. ದೊಡ್ಡಮರ, ಹೆಗ್ಗೂಗಟೇ ಮರ" (ಸಿದ್ಧಾಂಶಿ. ೧೧೯) ; ದೊಡ್ಡಮರ, ಹೆಮ್ಮರ, ಹಿರೇಮರ (ವೃಜಿಗಿ. ४-೫೮). [ ದೊಡ್ಡ + ಮರ$_1$ ]

**ದೊಡ್ಡಮಳೆ** (ನಾ). ಜೋರಾಗಿ ಸುರಿಯುವ ಮಳೆ ; ಬಿರುಮಳೆ : ದೊಡ್ಡಮಳೆ ಬೆಳ್ಳಿಬಿಸಿಲುಗಳೆರಡ ಮುಕ್ಕುಳಿಸಲೆಡ್ಡಮೆನೆ ಬಾನೊಡಲ್ ಬರಿದಾಗುತಿತ್ತು (ಕಾಲೂರ. ೫೭-೯೩); ಮಳೆಗಾಲದಲ್ಲೆಲ್ಲ ಕೂಡಿ ನಾಲ್ಕಾರು ದೊಡ್ಡಮಳೆಗಳು ಬಿದ್ದರೆ ಬಹು ಸುದೈವ (ಮುಂಬಯಿ. ೫-೧೯೪). [ ದೊಡ್ಡ + ಮಳೆ (<ಮಟಿ) ]

**ದೊಡ್ಡಮಾತು** (ನಾ). ಅತಿ ಉಚಿತವಾದ ಮಾತು ; ಎಲ್ಲರೂ ಒಪ್ಪಬಹುದಾದ ಮಾತು ; ತಿಳಿವಳಿಕೆಯಿಂದ ಕೂಡಿದ ಮಾತು : ದೊಡ್ಡಮಾತೇನು, ಗಿಡ್ಡಮಾತೇನು ? (ಪೀಟಿಮಾ. ೩೯) ; ಇಂತಹ ಕೆಲಸ ಮಾಡುವುದಕ್ಕೆ ನಿಮಗೆ ನಾಚಿಕೆಯಿಲ್ಲವಂತೆ . . . ಮತ್ತೆ ಮರ್ಯಾದಿ ಬಗ್ಗೆ ದೊಡ್ಡಮಾತು ಹೇಳುತ್ತೀರಿ (ದೇವಹಂ. ೧೭೩) ; ನಮಗೇಕಪ್ಪ ಅಷ್ಟು ದೊಡ್ಡಮಾತು (ಕತ್ತಬಿ. ೩೯). [ ದೊಡ್ಡ + ಮಾತು₁ ]

**ದೊಡ್ಡಮಾರವಾಳಿ** (ನಾ). ಒಂದು ಬಗೆಯ ಒಣಹುಲ್ಲು : (+). [ ದೊಡ್ಡ + ಮಾರವಾಳಿ (<ಮಾರುಳಿ) ]

**ದೊಡ್ಡಮಾರ್ಗ** (ನಾ). ಆನೆ, ಕುದುರೆಗಳ ಸವಾರಿಯಿಂದ ಕಿರುದೊಡೆಯಲ್ಲುಂಟಾಗುವ ಜಡ್ಡು, -ದಡ್ಡು : "ದೊಡ್ಡಮಾರ್ಗಂ = ಆನೆ ಕುದುರೆಗಳೊಳಾದ ಕಿಱುದೊಡೆಯ ಜಿಡ್ಡು, (ಜಡ್ಡು, ದಡ್ಡು)" (ಶಮದ. ಪರಿ. ೨); "ದೊಡ್ಡಮಾರ್ಗಮೆಂದಾನೆ ಕುದುರೆಗಳ ಕಿಱುದೊಡೆಯೊಳಿರದಾದ ದಡ್ಡಕ್ಕು" (ಕಬ್ಬಿಗ. ೯೧) ; ಆರೂಢಸರ್ವಜ್ಞನ ದೊಡ್ಡ [ಪಾಠಾಂ. ಡ್ಡಿ]ಮಾರ್ಗಂಗಳೆಳವಾಟಿಯು ದಿಂಡಿನೊಳ್ ಸಾಣೆಗಟ್ಟಿದಂತಾದುವು (ಪಂಪಭಾ. ೩-೩೯ ವ) ; ಮದಗಜದ ಪೊರಜು ಪೊಯ್ಮೆಟ್ಟಿ ದೊಡ್ಡಮಾರ್ಗದ ಕಿಣಂಗಳಂ ಕಿಗ್ಗಣ್ಣೊಳ್ ಪದನತನ್ನಪರೀಕ್ಷಿಸೆ (ಅನಂಪು. ೩-೯). [ ದೊಡ್ಡ + ಮಾರ್ಗ ]

**ದೊಡ್ಡಮಾವು** (ನಾ). ಒಂದು ಬಗೆಯ ಗಿಡ : "ಶರಾಟಿಕಾ – ದೊಡ್ಡಮಾವು" (ಓಷಧಿ. ೧೬೦). [ ದೊಡ್ಡ + ಮಾವು ]

**ದೊಡ್ಡಮೆಕ್ಕೆಗಿಡ** (ನಾ). ಒಂದು ಬಗೆಯ ಬಳ್ಳಿ ; ಹಾಲ್ಮೆಕ್ಕೆ ಬಳ್ಳಿ : (+). [ ದೊಡ್ಡ + ಮೆಕ್ಕೆ + ಗಿಡ (<ಗಿಡು) ]

**ದೊಡ್ಡಮೆಣಸಿನಕಾಯಿ** (ನಾ). = ದೊಣ್ಣೆಮೆಣಸಿನಕಾಯಿ : (ಮೈಜಿಗಿ. ೧೭-೩೦೩). [ ದೊಡ್ಡ + ಮೆಣಸಿನಕಾಯಿ ]

**ದೊಡ್ಡಮೇದೆ** (ನಾ). ಒಂದು ಬಗೆಯ ಮೂಲಿಕೆ: "ವೃಕ್ಷಾರ್ಹಃ – ದೊಡ್ಡಮೇದೆ" (ಓಷಧಿ. ೦೫೭). [ ದೊಡ್ಡ + ಮೇದೆ ]

**ದೊಡ್ಡಮ್ಮ** (ನಾ). ೧. = ದೊಡ್ಡತಾಯಿ ೧ : ಚಿಕ್ಕಮ್ಮಗಾ ರಾಯ ಕೈಲಾಗು ಗೊಟ್ಟೊಳಹೊಕ್ಕು ದೊಡ್ಡಮ್ಮನ ಕಂಡ (ಭರಜ. ೫೨-೧೪೦) ; ಕಾಳೂರಿನಲ್ಲಿ ಗಿರಿಜಳ ದೊಡ್ಡಮ್ಮನ ಮನೆಯಿದೆ (ದೇವಹಂ. ೯೭). ೨. = ದೊಡ್ಡತಾಯಿ ೨ : ನಿದ್ದೆ ಚೆನ್ನಾಗಿ ಬಂತು ದೊಡ್ಡಮ್ಮ (ವಾತ್ಸಲ್ಯ. ೧೭). ೩. ಕೇಡುಕನ್ನುಂಟುಮಾಡುವವದೆಂದು ನಂಬಲಾದ ಒಬ್ಬ ಹೆಣ್ಣು ದೇವತೆಯ ಹೆಸರು : ಮಾರುದ್ದ ಮಂಡೇ ಧರಿಸೊ ದೊಡ್ಡಮ್ಮಾ ನಿನ್ನ ಮಾಯಾ ಒಬ್ಬರಿಗೂ ತಿಳಿಯಾದೋ (ಹುಟ್ಟುಹ. ೪೩) ; ಕೋಣಗಳನ್ನು ಕಡಿದ ರಕ್ತ ಚಿಕ್ಕಮ್ಮನ ಗುಡಿಯಿಂದ ದೊಡ್ಡಮ್ಮನ ಗುಡಿಯ ತನಕ ಹರಿದು ಹೋಗುತ್ತಿತ್ತು (ನನ್ನೂರು. ೩೦). ೪. ಸಿಡುಬು : ಮಗೂಗೆ ದೊಡ್ಡಮ್ಮ ಆಗಿರುವುದರಿಂದ ಮೈಲಿಗೆ ಆಗಗೊಡಬಾರದು (ರೂಢಿ). ೫. ದನಗಳಿಗೆ ಬರುವ ಕಾಲರಾ ಜಾತಿಯ ರೋಗ ; ದೊಡ್ಡರೋಗ : (ಎಸಮ್ಮ. XV, ೩೭). [ ದೊಡ್ಡ + ಅಮ್ಮ₂ ]

**ದೊಡ್ಡಯ್ಯ** (ನಾ). = ದೊಡ್ಡಪ್ಪ : (+). [ ದೊಡ್ಡ + ಅಯ್ಯ₁ ]

**ದೊಡ್ಡರತ್ನಗಂಧಿ** (ನಾ). ಕೆಂಪು ಮತ್ತು ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಮರ ಮತ್ತು ಅದರ ಹೂವು ; ಗುಲ್ಮೊಹೋರ್ ಮರ: ಸೀಮೆಸಂಕೇಶ್ವರ, ದೊಡ್ಡರತ್ನಗಂಧಿ, ಕೆಂಪುತುರಾಯಿ, ಗುಲ್ಮಹರ್ ಮರ, ಕತ್ತೀಕಾಯಿ (ಮೈಜಿಗಿ. ೩೯-೫೭೪). [ ದೊಡ್ಡ + ರತ್ನಗಂಧಿ ]

**ದೊಡ್ಡರಾಗಿ** (ನಾ). ಒಂದು ಬಗೆಯ ರಾಗಿ; ಆರು ತಿಂಗಳಲ್ಲಿ ಕೊಯ್ಲಿಗೆ ಬರುವ ರಾಗಿ : ಹೊಲಗಳಲ್ಲಿ ಗಿಡ್ಡರಾಗಿಯು ಬಂದು, ದೊಡ್ಡರಾಗಿಯ ನಾಟಿಯನ್ನು ಹಾಕಿದರು (ಹುಟ್ಟುಹ. ೬೩). [ ದೊಡ್ಡ + ರಾಗಿ₁ ]

**ದೊಡ್ಡರಾಜಾನ್ನ** (ನಾ). ಗಾತ್ರದಲ್ಲಿ ಹಿರಿದಾದ ಒಂದು ಬಗೆಯ ಭತ್ತ,- ನೆಲ್ಲು : "ಗಂಧಾಢ್ಯ–ಶಾಲಿ, ದೊಡ್ಡರಾಜಾನ್ನ" (ಓಷಧಿ. ೪೭). [ ದೊಡ್ಡ + ರಾಜಾನ್ನ ]

**ದೊಡ್ಡರಿಸಿನ** (ನಾ). ಅರಿಸಿನದಲ್ಲಿ ಒಂದು ಬಗೆ: "ಪೀತದ್ರುಃ, ಕಾಲೀಯಕಃ . . . ಪರ್ಜನೀ–೭ ಮರದರಿಸಿನ, ಕಸ್ತೂರಿಅರಿಸಿನವೆಂದು ಕೆಲವರನ್ನುವರು ದೊಡ್ಡರಿಸಿನ, ಕಾಡುಅರಿಸಿನ" (ಸಿದ್ಧಾಂತಿ. ೧೩೩). [ ದೊಡ್ಡ + ಅರಿಸಿನ ]

**ದೊಡ್ಡರೋಗ** (ನಾ). ೧. ಭಯಂಕರವಾದ ರೋಗ ; ಸಾವು ತರುವ ರೋಗ ; ಕ್ಷಯ ಮೊದಲಾದ ಭಯಾನಕವಾದ ರೋಗ : ನಿಂಗೆ ದೊಡ್ಡರೋಗ ಬರ (ಹುಟ್ಟುಹ. ೧೩೯). ೨. ದನಗಳಿಗೆ ಬರುವ ಕಾಲರಾ ಜಾತಿಯ ರೋಗ ; ದೊಡ್ಡಮ್ಮ : (ಎಸಮ್ಮ. XV, ೩೭). [ ದೊಡ್ಡ + ರೋಗ ]

**ದೊಡ್ಡವನಮುಗುಳಿ** (ನಾ). ಒಂದು ಬಗೆಯ ದೊಡ್ಡದಾದ ಕಾಡುಮರ: (ಮೈಜಿಗಿ. ೭೧-೧೯೭೩). [ ದೊಡ್ಡ + ವನಮುಗುಳಿ₀ ]

**ದೊಡ್ಡವರಹ** (ನಾ). ಒಂದು ಬಗೆಯ ನಾಣ್ಯ : ಶಾಸನಗಳಲ್ಲಿ ಬರುವ ನಾಣ್ಯಗಳೂ, ಅಳತೆಗಳೂ:– ಗದ್ಯಾಣ . . . ವರಹ, ದೊಡ್ಡವರಹ, ಮಂಗಳೂರು ಗದ್ಯಾಣ (ತುಳುನಾ. ೨೭೧). [ ದೊಡ್ಡ + ವರಹ ]

**ದೊಡ್ಡವೂಸಿ** (ನಾ). ಪುಷ್ಯ ಮಳೆ: (ಎಸಮ್ಮ. XV, ೩೧). 'ಚಿಕ್ಕವೂಸಿ' ಪರಾ. [ ದೊಡ್ಡ + ಪೂಸಿ₃ (<ಪುಸ್ಯ₁) ]

**ದೊಡ್ಡವ್ವ** (ನಾ). = ದೊಡ್ಡತಾಯಿ : (+). 'ಚಿಕ್ಕವ್ವ' ಪರಾ. [ ದೊಡ್ಡ + ಅವ್ವ₁ (<ಅವ್ವೆ) ]

**ದೊಡ್ಡಶಣಬು** 'ದೊಡ್ಡಸಣಬು' ನೋ.

**ದೊಡ್ಡಶರ** (ನಾ). ಒಂದು ಬಗೆಯ ಹುಲ್ಲು : "ಮಹಾಶರಂ–ದೊಡ್ಡಶರ" (ಓಷಧಿ. ೧೧೭). [ ದೊಡ್ಡ + ಶರ ]

**ದೊಡ್ಡಸಂಪಿಗೆ** (ನಾ). ಒಂದು ಬಗೆಯ ಸಂಪಿಗೆ ಮರ ಮತ್ತು ಅದರ ಹೂವು : (ಮೈಜಿಗಿ. ೫೩-೧೧೭೫). [ ದೊಡ್ಡ + ಸಂಪಿಗೆ (<ಸಂಪಗೆ) ]

**ದೊಡ್ಡಸಣಬು, ದೊಡ್ಡಶಣಬು** (ನಾ). ಒಂದು ಬಗೆಯ ಗಿಡ: "ಮಹಾಶ್ವೇತಪರ್ಣೀ–ದೊಡ್ಡ ಸಣಬು" (ಓಷಧಿ. ೧೩೩). **ದೊಡ್ಡಶಣಬು:** "ಮಹಾಶಣಪುಷ್ಪಿಕಾ – ದೊಡ್ಡಶಣಬು" (ಓಷಧಿ. ೧೩೩). [ ದೊಡ್ಡ + ಸಣಬು (<ಸಣಂಬು) ]

**ದೊಡ್ಡಸರ್ಲೆಹಕ್ಕಿ** (ನಾ). ಒಂದು ಬಗೆಯ ಪಕ್ಷಿ. ೧. ಸಿರಿಗಿರಿ. ೨. ತಾಡಿಗ್ಯ. ೩. ಸಲಿಕಿಬಾಯಿ ಹಕ್ಕಿ : (+). [ ದೊಡ್ಡ + ಸರ್ಲೆ (<ಸರಲೆ) + ಹಕ್ಕಿ₁ (<ಪಕ್ಕಿ₁) ]

**ದೊಡ್ಡಸಾಮೆ** (ನಾ). ಸಾಮೆಧಾನ್ಯದಲ್ಲಿ ಒಂದು ವಿಧ ; ಹೆಜ್ಜಾಮೆ : ದೊಡ್ಡ ಜಾತಿಯ ಸಾಮೆ ಅಕ್ಕಿ : (ಎಸಮ್ಮ. I, ೩೧). [ ದೊಡ್ಡ + ಸಾಮೆ₁ (<ಸಾವೆ₁) ]

**ದೊಡ್ಡಸಾಸುವೆ** (ನಾ). ಸಾಸವೆಯಲ್ಲಿ ಒಂದು ವಿಧ : (+). [ ದೊಡ್ಡ + ಸಾಸುವೆ (<ಸಾಸವೆ) ]

**ದೊಡ್ಡಸಿವನ್ನಿ** (ನಾ). ಒಂದು ಬಗೆಯ ದೊಡ್ಡದಾದ ಸಿವನ್ನಿ ಮರ : "ಮಹಾಕುಮುದ–ದೊಡ್ಡ ಸಿವನ್ನಿ" (ಓಷಧಿ. ೧೩೩). [ ದೊಡ್ಡ + ಸಿವನ್ನಿ (<ಸೀವನ್ನಿ) ]

**ದೊಡ್ಡಸಿಹಿಗೆಣಸು** (ನಾ). ಸಿಹಿಗೆಣಸಿನಲ್ಲಿ ಒಂದು ಬಗೆ : "ಮಹಾನೀಲಾ ಕರಿಯ ಗಿರಿಕರ್ಣಿ, ಹಿರಿಯ ನೇಟಿಲ್, ದೊಡ್ಡಸಿಹಿಗೆಣಸು" (ಓಷಧಿ. ೧೧೭). [ ದೊಡ್ಡ + ಸಿಹಿಗೆಣಸು (<ಸೀಗೆಣಸು) ]

**ದೊಡ್ಡಸುದ್ದಿ** (ನಾ). ವಿಶೇಷವಾದ ಸುದ್ದಿ; ಮಹತ್ವದ ಸಮಾಚಾರ: ಶಾನುಭೋಗರ ಮಗಳಿಗೆ ಮದುವೆ ನಿಶ್ಚಯವಾದದ್ದು ಊರಿಗೆಲ್ಲ ದೊಡ್ಡ ಸುದ್ದಿಯಾಯಿತು (ಊ). [ ದೊಡ್ಡ + ಸುದ್ದಿ ]

**ದೊಡ್ಡಸುರುಟಿ** (ನಾ). ಒಂದು ಬಗೆಯ ಸಸ್ಯ: ದೊಡ್ಡಸೊಳ್ಳಿ, ದೊಡ್ಡ ಸುರುಟಿ (ಮೈಜಿಗಿ. ೧೦-೧೭೦). [ ದೊಡ್ಡ + ಸುರುಟಿ$_{0}$ ]

**ದೊಡ್ಡಸೇವಗೆ** (ನಾ). ಒಂದು ಬಗೆಯ ಸೇವಿಗೆ; ದಪ್ಪನಾದ ಸೇವಿಗೆ: ಪರಡಿ ಗೌವಲಿಯಪ್ಪೆ ಮಣಿ ಸಣ್ಣ ಗೋಧೂಮ ಸರವಳಿಗೆ ದೊಡ್ಡಸೇವಗೆ ಕಡುಬುವುಂಡಲಿಗೆ ಬೆರಲ ಸೇವಗೆಯಾದಿಯಾಗಿಯಡವಾದ ಕಜ್ಜಾಯಗಳ ತೆಗೆದುಕೊಂಡು (ಸೂಪಶಾ. ೬-೭). [ ದೊಡ್ಡ + ಸೇವಗೆ (<ಸೇವಿಗೆ) ]

**ದೊಡ್ಡಸೊಳ್ಳಿ** (ನಾ). ಒಂದು ಬಗೆಯ ಸಸ್ಯ: ದೊಡ್ಡಸೊಳ್ಳಿ, ದೊಡ್ಡ ಸುರುಟಿ (ಮೈಜಿಗಿ. ೧೦-೧೭೦). [ ದೊಡ್ಡ + ಸೊಳ್ಳಿ$_{0}$ ]

**ದೊಡ್ಡಸೋಂಪು** (ನಾ). ಒಂದು ಬಗೆಯ ದೊಡ್ಡದಾದ ಸಾಂಬಾರದ ಕಾಳು: ದೊಡ್ಡ ಸೋಂಪು, ದೊಡ್ಡಜೀರಿಗೆ (ಮೈಜಿಗಿ. ೩೮-೭೪೭).
[ ದೊಡ್ಡ + ಸೋಂಪು ]

**ದೊಡ್ಡಸೋರೆ** (ನಾ). ಒಂದು ಬಗೆಯ ಸೋರೆ ಬಳ್ಳಿ ಮತ್ತು ಅದರ ಕಾಯಿ: ಕಾಯಿಗಳು:–ಅಗಸೆ . . . ದೊಡ್ಡಕುಂಬಳ, ದೊಡ್ಡಸೋರೆ (ನಮ್ಮನು. ೨೩೭). [ ದೊಡ್ಡ + ಸೋರೆ$_1$ ]

**ದೊಡ್ಡಸೌತೆ** (ನಾ). ಒಂದು ಬಗೆಯ ತರಕಾರಿ ಬಳ್ಳಿ; ಸೌತೆಗಿಡದಲ್ಲಿ ಒಂದು ಬಗೆ ಮತ್ತು ಅದರ ಕಾಯಿ: "ನಾಗವಾತಾ – ಮಣಿಸಿಲೆ, ತುಳಸಿ, ದೊಡ್ಡಸೌತೆ" (ಓಷಧಿ. ೮೭). [ ದೊಡ್ಡ + ಸೌತೆ (<ಸವುಂತೆ) ]

**ದೊಡ್ಡಸ್ತ** (ನಾ). ದೊಡ್ಡತನವುಳ್ಳವನು; ಹಿರಿಮೆಯುಳ್ಳವನು. 'ದೊಡ್ಡಸ್ತನ', 'ದೊಡ್ಡಸ್ತಿಕೆ' ಪರಾ. [ ದೊಡ್ಡ + –ಸ್ತ ]

**ದೊಡ್ಡಸ್ತನ, ದೊಡ್ಡಿಸ್ತನ** (ನಾ). ದೊಡ್ಡತನ; ಗೌರವ; ಮರ್ಯಾದೆ; ಹಿರಿಮೆ: "ದೊಡ್ಡಸ್ತನ–ದೊಡ್ಡಸ್ತಿಕೆ" (ಜಾನಕೋ. ೭). **ದೊಡ್ಡಿಸ್ತನ:** ತಮ್ಮ ಅಣ್ಣನ ದೊಡ್ಡಿಸ್ತನವನ್ನು ಕೊಚ್ಚಿಕೊಳ್ಳುತ್ತಾ ಇದ್ದಳು (ಪ್ರತಿಬಿಂ. ೪೭); ನಿಮ್ಮ ಮರ್ಯಾದೆಯು ದೊಡ್ಡಿಸ್ತನವಾದರೂ ಏನು? (ರಂಗರೋ. ೭೯).
[ ದೊಡ್ಡಸ್ತ + –ತನ ]

**ದೊಡ್ಡಸ್ತಿಕೆ** (ನಾ). ೧. ಹಿರಿಮೆ; ಹೆಚ್ಚುಗಾರಿಕೆ; ಘನತೆ; ಗೌರವ; ಮರ್ಯಾದೆ: ಮನುಷ್ಯನ ಹಿರಿಮೆ ದೊಡ್ಡಸ್ತಿಕೆಗಳು ತಾಯಿ ತಂದೆ ಗಳನ್ನೇ ಹೆಚ್ಚಾಗಿ ಅವಲಂಬಿಸಿರುತ್ತವೆ (ಕ್ಷಾಮಶಾ. ೧); ಮಾಡಬಾರದು ಎಂದು ಯಾವಾಗ ದೊಡ್ಡವರು ಹೇಳುತ್ತಾರೋ ಹಾಗೆ ಮಾಡದಿರುವುದೂ ಒಂದು ದೊಡ್ಡಸ್ತಿಕೆ! (ಕಂಬಹು. ೭೨); ಇದರಿಂದ ನನ್ನ ಅವನ ದೊಡ್ಡಸ್ತಿಕೆ ಮತ್ತೂ ಬೆಳೆಯಿತು (ಶಾಲಿಮ. ೨೨೧); ಒಂದು ಬಾನಿ ಹೆಂಡಕ್ಕೆ ಎರಡು ಬಾನಿ ನೀರು ಬೆರಸಿ ಸಂಪಾದನೆ ಮಾಡಿದಾರೆ ಈ ದೊಡ್ಡಸ್ತಿಕೇನ (ಮರೀ. ೬೩). ೨. ಠೀವಿ; ಜಬರ್: "ಠೀವಿ = ದೊಡ್ಡಸ್ತಿಕೆ" (ಗಂಗಾಮ. ೧೪೪); ದೊಡ್ಡಸ್ತಿಕೆಯ ಆಶೀರ್ವಾದಗಳಿಂದ ಸಂದೇಶವನ್ನು ಮಾತ್ರ ಕಳಿಸಬೇಕು (ಹುಚ್ಚುಹು. ೧೦೨). [ ದೊಡ್ಡಸ್ತ + –ಇಕೆ ]

**ದೊಡ್ಡಸ್ತು** (ನಾ). ಹಿರಿಮೆ; ಘನತೆ: ದೊಡ್ಡಸ್ತಿನೀದೊಡನೆ ಸುಪ್ರಧಾನಿ ವರೇಣ್ಯ ಗಡ್ಡಮಂ ಗಂಟಿಕ್ಕಿ (ಪರಶು. ೯-೨೦). [ ದೊಡ್ಡಸ್ತ + –ಉ$_4$ ]

**ದೊಡ್ಡಹಂಚೀಹುಲ್ಲು, ದೊಡ್ಡಅಂಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು: ದೊಡ್ಡಹಂಚೀಹುಲ್ಲು . . . ಕರೀಸಣ್ಣ ಹಂಚೀ ಹುಲ್ಲು (ಮೈಜಿಗಿ. ೯-೧೪೭). **ದೊಡ್ಡಅಂಚಿಹುಲ್ಲು:** ಬೆಟ್ಟಂಚಿ ಹುಲ್ಲು, ಭೀಮನ ಹಂಚಿ, ದೊಡ್ಡಅಂಚಿಹುಲ್ಲು, ಗುಂಡುಮುಂಚಿ ಹುಲ್ಲು, ಗಂಟುಕಾಚಿ (ಮೈಜಿಗಿ. ೭೪-೧೫೧೯). [ ದೊಡ್ಡ + ಹಂಚಿಹುಲ್ಲು ]

**ದೊಡ್ಡಹತ್ತಿ** (ನಾ). ಹತ್ತಿಯ ಗಿಡದಲ್ಲಿ ಒಂದು ಬಗೆ: (ಮೈಜಿಗಿ. ೪೦-೭೯೨). [ ದೊಡ್ಡ + ಹತ್ತಿ$_1$ (<ಪಟ್ಟಿ) ]

**ದೊಡ್ಡಹನಿಚೆ** (ನಾ). ಒಂದು ಬಗೆಯ ಗಿಡ: (ಮೈಜಿಗಿ. ೧೫-೨೭೫).
[ ದೊಡ್ಡ + ಹನಿಚೆ ]

**ದೊಡ್ಡಹರಳು** (ನಾ). ದೊಡ್ಡ ಗಾತ್ರದ ಹರಳು ಮತ್ತು ಅದರ ಗಿಡ: ದೊಡ್ಡಹರಳು, ಬೆಟ್ಟಹರಳು, ತುರುಕುಹರಳು, ಮರಹರಳು, ಕಾಡು ಹರಳು (ಮೈಜಿಗಿ. ೪೭-೯೪೩). 'ಬೆಟ್ಟುಹರಳು' ಪರಾ.
[ ದೊಡ್ಡ + ಹರಳು (<ಪರಲ್) ]

**ದೊಡ್ಡಹಲ್ಲಿ** (ನಾ). ಒಂದು ಬಗೆಯ ಹೂವಿನ ಗಿಡ: "ಕಂಭವಿಪುಷ್ಪ– ದೊಡ್ಡಹಲ್ಲಿ" (ಓಷಧಿ. ೩೬). [ ದೊಡ್ಡ + ಹಲ್ಲಿ$_0$ ]

**ದೊಡ್ಡಹಾಲುಗುಂಬಳ** (ನಾ). ಒಂದು ಬಗೆಯ ಕುಂಬಳ ಬಳ್ಳಿ ಮತ್ತು ಅದರ ಕಾಯಿ: "ನಾಡ್ಯಲಾಬೂಃ – ದೊಡ್ಡಹಾಲುಗುಂಬಳ" (ಓಷಧಿ. ೮೫). [ ದೊಡ್ಡ + ಹಾಲುಗುಂಬಳ (<ಪಾಲ್ಗುಂಬಳ) ]

**ದೊಡ್ಡಹಾಲ್ಮೆಕ್ಕೆ** (ನಾ). ದೊಡ್ಡದಾದ ಹಾಲುಮೆಂಕ್ಕೆ ಗಿಡದಲ್ಲಿ ಒಂದು ಬಗೆ: ದೊಡ್ಡಹಾಲ್ಮೆಕ್ಕೆ, ಹಾವುಮೆಕ್ಕೆಕಾಯಿ, ಇಂದ್ರಾವರುಣೆ (ಮೈಜಿಗಿ. ೨೨-೪೦೦). [ ದೊಡ್ಡ + ಹಾಲ್ಮೆಕ್ಕೆ ]

**ದೊಡ್ಡಹಾಳಿತ, ದೊಡಹಳತ** (ನಾ). ಒಂದು ದೊಡ್ಡ ಅಳತೆಯ ಪ್ರಮಾಣ: ದೊಡ್ಡಹಾಳಿತದ ಮಣವಿನ ತೂಕಕ್ಕೆ ಇದೇ ೪೪–೪೬ ಸೇರು ಎಂತಲೂ ನಿಬಂಧನೆ ಮಾಡಿದರು (ಜಾಮುಮಂ. ೧೦೯). **ದೊಡಹಳತ:** ಹೊನ್ನವರದ ಲಿಂಗಸೆಟರ ಮಗ ಸಿದಲಿಂಗಸೆಟಿ ಯಡವುರ ಸಿದಲಿಂಗೇಸ್ವರ ಸೋಮಿ ಪದಕೆ ಮಲರ ಸೆ ಕಿ ನ ಕಳಸ ಯಾ ನಗದ ತೂಕ ದೊಡಹಳತ ನ ೨ ತಿಮೂರು ಸೇರು (ಎಕ. XVI, ಕುಣಿಗ. ೭೮–೨; ?).
[ ದೊಡ್ಡ + ಹಾಳಿತ (<ಪಾಳತ) ]

**ದೊಡ್ಡಹಿಂಗಿನಬಳ್ಳಿ** (ನಾ). ಒಂದು ಬಗೆಯ ಬಳ್ಳಿ: (ಮೈಜಿಗಿ. ೩೮-೭೪೭).
[ ದೊಡ್ಡ + ಹಿಂಗು$_3$ + ಬಳ್ಳಿ ]

**ದೊಡ್ಡಹಿಂಡಿಗಿಡ** (ನಾ). ಒಂದು ಬಗೆಯ ಸಸ್ಯ: (ಮೈಜಿಗಿ. ೩-೩೦).
[ ದೊಡ್ಡ + ಹಿಂಡಿ$_2$ (<ಪುಂಡಿ$_1$) + ಗಿಡ (<ಗಿಡು) ]

**ದೊಡ್ಡಹಿಟ್ಟಳಿಕ** (ನಾ). ಒಂದು ಬಗೆಯ ಸಸ್ಯ: "ಮಹಾಪೂಲ–ದೊಡ್ಡ ಹಿಟ್ಟಳಿಕ" (ಓಷಧಿ. ೧೧೪). [ ದೊಡ್ಡ + ಹಿಟ್ಟಳಿಕ ]

**ದೊಡ್ಡಹಿಪ್ಪಲಿ, ದೊಡ್ಡತಿಪ್ಪಲಿ** (ನಾ). ಒಂದು ಬಗೆಯ ಹಿಪ್ಪಲಿ ಗಿಡ ಮತ್ತು ಅದರ ಕಾಳು; ಬಾಲಮೆಣಸು: "ಕಪಿವಲ್ಲಿ–ದೊಡ್ಡಹಿಪ್ಪಲಿ" (ಗಂಗಾಮ. ೭೦); ಗಜಹಿಪ್ಪಲಿ, ದೊಡ್ಡಹಿಪ್ಪಲಿ (ಮೈಜಿಗಿ. ೬೮-೧೩೪೮); ಜೀನಸುಗಳು–೧ ಅಕ್ಕಲಕಾರ . . . ೬೭ ದೊಡ್ಡಹಿಪ್ಪಲಿ (ಮುಂಬಯ್ಯಾ. ೧೨೫). **ದೊಡ್ಡತಿಪ್ಪಲಿ:** (ಮೈಜಿಗಿ. ೬೬-೧೩೪೨). [ ದೊಡ್ಡ + ಹಿಪ್ಪಲಿ ]

**ದೊಡ್ಡಹೀರೆ** (ನಾ). ಹೀರೆಬಳ್ಳಿಯಲ್ಲಿ ಒಂದು ವಿಧ ಮತ್ತು ಅದರ ಕಾಯಿ: "ಕೋಶಾತಿ–ದೊಡ್ಡಹೀರೆ" (ಓಷಧಿ. ೪೧)
[ ದೊಡ್ಡ + ಹೀರೆ$_1$ (<ಪೀರೆ) ]

**ದೊಡ್ಡಹುಳಕ** (ನಾ). ನೀಳವಾದ ಕೊಕ್ಕಿನ, ವಕ್ರವಾಗಿ ಹಾರುವ ಒಂದು ಬಗೆಯ ಬೇಟೆಯ ಹಕ್ಕಿ; ತೇವದ ಮರಳುಪ್ರದೇಶಗಳಲ್ಲಿ ಸೇರಿಕೊಳ್ಳುವ ಒಂದು ಬಗೆಯ ಹಕ್ಕಿ; ಉಲ್ಲಂಗಿ: (+).
[ ದೊಡ್ಡ + ಹುಳಕ ]

**ದೊಡ್ಡಹುಳಿ** (ನಾ). ಒಂದು ಬಗೆಯ ನಿಂಬೆಯ ಗಿಡ ಮತ್ತು ಅದರ ಕಾಯಿ: ಕಾಡುನಿಂಬೆ, ದೊಡ್ಡಹುಳಿ (ಮೈಜಿಗಿ. ೧೦-೧೭೩).
[ ದೊಡ್ಡ + ಹುಳಿ$_2$ (<ಪುಳಿ$_2$) ]

**ದೊಡ್ಡಹೆಂಡತಿ** (ನಾ). ಮೊದಲನೆಯ ಹೆಂಡತಿ; ಹಿರಿಯ ಹೆಂಡತಿ: "ಕೃತಸಾಪತ್ನಿಕಾ, ಅಧ್ಯೂಢಾ, ಅಧಿವಿನ್ನಾ–ಷಿ ದೊಡ್ಡಹೆಂಡತಿ, ಹಿರೇ ಹೆಂಡತಿ ಹೆಸರುಗಳು" (ಸಿದ್ಧಾಂತಿ. ೧೪೭).
[ ದೊಡ್ಡ + ಹೆಂಡತಿ (<ಪೆಂಡತಿ) ]

**ದೊಡ್ಡಹೆಮ್ಮರ** (ನಾ). ಹೆಮ್ಮರದಲ್ಲಿ ಒಂದು ಬಗೆ "ಭೂತಸಾರಃ–ದೊಡ್ಡಹೆಮ್ಮರ" (ಓಷಧಿ. ೧೧೩).

[ ದೊಡ್ಡ + ಹೆಮ್ಮರ (<ಪೆರ್ಮರ) ]

**ದೊಡ್ಡಹೊಂಗೆ** (ನಾ). ಒಂದು ಬಗೆಯ ಹೊಂಗೆ: "ಕಳಾರಾಮಃ–ದೊಡ್ಡಹೊಂಗೆ" (ಓಷಧಿ. ೩೪). [ ದೊಡ್ಡ + ಹೊಂಗೆ ]

**ದೊಡ್ಡಹೊಟ್ಟೆ** (ನಾ). ದೊಡ್ಡದಾದ ಉಬ್ಬಿದ ಹೊಟ್ಟೆ, – ಉದರ ; ಡೊಳ್ಳುಹೊಟ್ಟೆ : ಮನದೊಳಿದ್ದುದನೆಹಗೆ ಹೇಳಿದೆಯೆನುತ ಪಡೆದಾ ದೊಡ್ಡಹೊಟ್ಟೆಯನೆನುತ ಬಡನುಡಿಯುಂ ನುಡಿವರೇ (ಬಸಪು. ೫೯–೧೪) : ದೊಡ್ಡಹೊಟ್ಟೆಯಿದ್ದವ ಹೆಡ್ಡನೋ (ಗಾದೆ).

**ದೊಡ್ಡಹೊಟ್ಟೆಯುವ** = ದೊಡ್ಡ ಹೊಟ್ಟೆಯನ್ನು ಉಳ್ಳವನು ; ಗಣೇಶ : "ಪಬ್ಬೊಡೆಯ, ಪೆರ್ವೊಡೆಯ–ದೊಡ್ಡಹೊಟ್ಟೆಯುವ, ಗಣೇಶ" (ಗಂಗಾಮು. ೨೦೫). [ ದೊಡ್ಡ + ಹೊಟ್ಟೆ$_1$ (<ಪೊಟ್ಟೆ) ]

**ದೊಡ್ಡಹೊನ್ನೆ** (ನಾ). ಒಂದು ಬಗೆಯ ದೊಡ್ಡದಾದ ಹೊನ್ನೆಮರ : "ಅವಸಾಯನಿ–ದೊಡ್ಡಹೊನ್ನೆ" (ಓಷಧಿ. ೮).

[ ದೊಡ್ಡ + ಹೊನ್ನೆ (<ಪೊನ್ನೆ) ]

**ದೊಡ್ಡಹೊಲೆಗಾರ** (ನಾ). ಒಂದು ಬಗೆಯ ಸಸ್ಯ : ದೊಡ್ಡಹೊಲೆಗಾರ, ಬೆಟ್ಟಹೊಲೆಗಾರ (ವ್ಯಾಜಿಗ. ೪೪–೮೬೮). [ ದೊಡ್ಡ + ಹೊಲೆಗಾರ$_0$ ]

**ದೊಡ್ಡಾಟ** (ನಾ). ಬಯಲಾಟದ ಒಂದು ಪ್ರಕಾರ ; ಮೇಳ : ಮೊನ್ನೆ ಒಂದು ದೊಡ್ಡಾಟವೂ ಆಯ್ತು, ಸತ್ಯಹರಿಶ್ಚಂದ್ರ ಅಂತ (ತುಂಗಭ. ೧೪).

[ ದೊಡ್ಡ + ಆಟ ]

**ದೊಡ್ಡಾಣೆ** (ನಾ). ಎಂಟನೆಯ ಒಂದು ($\frac{೧}{೮}$) ರೂಪಾಯಿಯ ಬೆಲೆಯಿದ್ದ ಒಂದು ಹಳೆಯ ಬೆಳ್ಳಿಯ ನಾಣ್ಯ : ಒಂದೆರಡು ದಿವಸಗಳ ಮೇಲೆ ಊದಿದ ಸ್ಥಳಗಳಲ್ಲೆಲ್ಲಾ ದೊಡ್ಡಾಣೆಯಷ್ಟು ಅಗಲ ನೀಲಿಬಣ್ಣದ ಗುಳ್ಳೆಗಳೇಳುತ್ತವೆ (ಗ್ರಾಮೂಕ. ೧೬೦). [ ದೊಡ್ಡ + ಆಣೆ$_5$ ]

**ದೊಡ್ಡಾನೆ** (ನಾ). ಗುಂಪಿನಲ್ಲಿಯೇ ಹಿರಿದಾದ ಆನೆ ; ಗುಂಪಿನ ಒಡೆಯನಾದ ಆನೆ ; ಸಲಗ : "ಯೂಥನಾಥಃ, ಯೂಥಪಃ–೨ ಆನೆಗಳ ಹಿಂಡಿನಲ್ಲಿ ಮುಖ್ಯವಾದ ಗಜದ ಪೆಸರುಗಳು ; ಸಲಗ, ದೊಡ್ಡಾನೆ" (ಸಿದ್ಧಾಂತಿ. ೨೧೧). [ ದೊಡ್ಡ + ಆನೆ$_1$ ]

**ದೊಡ್ಡಿ$_1$** 'ತೊಟ್ಟಿ$_1$' ನೋ.

**ದೊಡ್ಡಿ$_2$** (ನಾ). ಸೂಳೆ ; ವೇಶ್ಯೆ. 'ದೊಡ್ಡಿತನ' ಪರಾ. [<ತೊಟ್ಟಿ$_3$]

**ದೊಡ್ಡಿ$_3$** (ನಾ). ಒಂದು ಬಗೆಯ ಮೂಲಿಕೆ : ಋಷಭಕ, ದೊಡ್ಡಿ, ಹಾಲದೊಡ್ಡಿ . . . ಪ್ರಾತಃಕಾಲದಲ್ಲಿ ಗ ಳ ತೂಕವಂ ಸೇವಿಸುವುದು (ಸಕವ್ಯ. ೨೧೮). 'ತೊಟ್ಟಿ$_4$' ಪರಾ. [ ? ]

**ದೊಡ್ಡಿಗೂಡು** (ಕ್ರಿ). ದೊಡ್ಡಿಯಲ್ಲಿ ಕೂಡಿಹಾಕು : ಆ ಮಂದೆಯನ್ನು ಅರಮನೆಯ ಅಯ್ದನೆಯ–ಎಂದರೆ, ತಳಾತಳದ ಹೆಸರ–ನೆಲಮಾಳಿಗೆಯಲ್ಲಿ ದೊಡ್ಡಿಗೂಡಿರು (ಬೆಟ್ಟಅ. ೧೪೩–೭).

[ ದೊಡ್ಡಿ$_1$ (<ತೊಟ್ಟಿ$_1$) + ಕೂಡು$_1$ ]

**ದೊಡ್ಡಿಗೊಳ್** (ಕ್ರಿ). ಗುಂಪುಗೂಡು ; ಗುಂಪಾಗು : ತೆನೆಯ ಸಂದಿಗಳೊಳ್ ಸಂದಣಿಸಿ ನೇಲ್ವ ವೀರಭಟ ಕುಣಪಂಗಳಿಂ ಪೆಣೆದ ಪೆರ್ಮಟೆಯಂ ಕಱುವ ವಿಳಯಜಳಧರದೊಡ್ಡಿನಂತೆ ದೊಡ್ಡಿಗೊಂಡಿರ್ದುದು (ಅನಂಪು. ೧೧–೮೪ ವ). [ ದೊಡ್ಡಿ$_1$ (<ತೊಟ್ಟಿ$_1$) + ಕೊಳ್$_1$ ]

**ದೊಡ್ಡಿತನ** (ನಾ). ೧. ಸೂಳೆತನ ; ಸೂಳೆಗಾರಿಕೆ : ನಾನು ವೇಶ್ಯೆ ! ನಾನು ಸೂಳೆ ! ಎಂದು ಕಂಡಕಂಡವರೊಡನೆ ಸಾರಿಕೊಳ್ಳುವುದಿದೊಂದು ದೊಡ್ಡತನವೇನು . . . ಅಲ್ಲ ದೊಡ್ಡಿತನ (ಮಂತ್ರಶ. ೨೬–೨೨). ೨. ಮೋಸ ; ವಂಚನೆ : ಸಲೆ ನಂಬಿದರೊಳೆರಡೆಂಟನೆಣಿಸುವರು ಕೈವಿಡಿದು ದೊಡ್ಡಿತನ ಮಾಡಿದನ ಲೆಕ್ಕಿಸದಿಹರು (ನಿಜಶ. ೮೪). [ ದೊಡ್ಡಿ$_2$ + –ತನ ]

**ದೊಡ್ಡಿತು, ದೊಡ್ಡಿತ್ತು** (ನಾ). ೧. ಗಾತ್ರದಲ್ಲಿ ಹಿರಿದಾದುದು ; ದಪ್ಪವಾದುದು ; ಸ್ಥೂಲವಾದುದು : "ದೊಡ್ಡಿತೆನಲ್ಕೆ ಮಹಾರ್ಥಶಬ್ದದೊಳ್" (ಕರ್ಣಾನಿ. ೧೮) ; ಅಸಿದು ಬೆಳೆಯದೆ ಕೊಬ್ಬಿ ದೊಡ್ಡಿತಹ [ಪಾಠಾಂ. ಗೊಡ್ಡಿಡದ] ತೆನೆಗಳೊಳು (ಸಿದ್ಧರಾ. ೨–೫೯) ; ಕಲ್ಲನತಿ ದೊಡ್ಡಿತಂ ಪಿಡಿದು ತೊಱೆಯಿಳಿಯೆ ಚಿತ್ರೋಲ್ಲಾಸದಿಂದೆತ್ತಿ ಪಾಯ್ಕಲ್ (ಪಾಸೋಪು. ೪–೧೦೭). ೨. ಅಗಾಧವಾದುದು ; ಗಹನವಾದುದು ; ಮುಖ್ಯವಾದುದು : ದೇವ ಚಿತ್ತೈಸೈ ಸಲೆ ನಿಜಸೇವಕರು ನಾವಿರಲು ದೊಡ್ಡಿತದಾವುದು (ಹರಿರಾ. ೪–೮–೧೦) ; ಅದೇನು ದೊಡ್ಡಿತು ಮಾಂಧಾತ ಸುತ್ಯಾಗವ ಬೇಡ ಬಂದವಗೆ ರಾಗದಿಂದೊಡಲ ಥಿಕ್ಕನೆ ಸೀಳ್ದು ದಕ್ಷಿಣಭಾಗವ ಕೊಟ್ಟುದನಱಿಯಾ (ಮೋಹತ. ೫–೫೪). ೩. ಎತ್ತರವಾದುದು ; ದೊಡ್ಡಿತಾದ ಎಲವದ ಮರದ ಮೇಲೆ ಅನೇಕ ಗಿಣಿಗಳಿರುವುವು (ಷಡಕಾ. ೩). ೪. ಉದ್ದವಾದುದು ; ನೀಳವಾದುದು : ಮಹಾಬಾಹೋ ಎಲೈ ದೊಡ್ಡಿತಾದ ತೋಳುಗಳುಳ್ಳಂಥಾ ಹೀಗೆ ಸಂಬೋಧನೆ ಮಾಡಿದ್ದರಿಂದ (ಉತ್ತಟೀ. ೨–೩). ೫. ಗಟ್ಟಿಯಾದುದು ; ಜೋರಾದುದು : ಐದು ತಿಂಗಳ ಕೂಸಂ ಸಂಸಿನಿಯೆಂಬ ದೇವತೆ ಪಿಡಿದೊಡಾ ಕೂಸು . . . ಆಕಾಶವಂ ನೋಡುಗುಂ ದೊಡ್ಡಿತಪ್ಪ ಧ್ವನಿಯಿಂದಳುಗುಂ (ಬಾಲಚಿ. ೧೨೫–೧೭) ; ಒಡ್ಡಿದ ಭೈರವ ಬಲರಾಮನ ಪೆಟ್ಟು ದೊಡ್ಡಿತೆನುತ್ತೆ ನಿಷ್ಠುರದಿ ಒಡ್ಡಿಯ ನುಡಿದು (ಮೋಹತ. ೩೯–೧೩) ; ಕೇಳಿ ಕಿಡಿಕಿಡಿವೋಗಿ ಬಾಯ್ ದೊಡ್ಡಿತೆಂದೆನ್ನನೂಳುವೆಯ (ಚಬಪು. ೪೭–೨೯). ೬. ಹೆಚ್ಚಿನದು ; ಮಿಗಿಲಾದುದು ; ಮಹತ್ತಾದುದು : ಕೊಡುವರ್ಗಾವುದು ದೊಡ್ಡಿತ್ತೆ (ಸೋಮೇಶ. ೮೪) ; ಪರಮೊಮ್ಮದನುಭವವೊಂದುಳ್ಳರವನಿಗೆ ದೊರಕದ ದೊಡ್ಡಿತೊಂದುಂಟೆ (ಭರಚ. ೫–೮೩) : ತುಪ್ಪ ಸಕ್ಕರೆ ಪಾಲ ಸವಿವ ಮನುಜರ ತಂದೊಪ್ಪಿಸುವುದು ದೊಡ್ಡಿತಲ್ಲ (ಕಂನವಿ. ೧೦–೪) : ಎನ್ನೀ ಕೀರ್ತಿಯೆ ದೊಡ್ಡಿತೆಂಬ ತೆರದಿಂ . . . ಕೀರ್ತಿಯ ನಾಂತು ಕಂಗೊಳಿಸಿದರ್ (ಮೈಸೂಪು. ೭–೩೩೩). ೭. ಅಮೂಲ್ಯವಾದುದು ; ಶ್ರೇಷ್ಠವಾದುದು : ವ್ಯರ್ಥವಾದುದು ಮದ್ವಚನ ಸೃಷ್ಟಿಸುವ ಸಮರ್ಥ ಪೇರ್ಗಾವನೈಶ್ವರ್ಯ ಕರ್ತಳೀತನ ರಾಣಿ ನಿಖಿಳಮೈಭೋಗವು ವ್ಯರ್ಥ ದ್ವಾರಕಿ ದೊಡ್ಡಿತಹುದೆ (ಮೋಹತ. ೨೯–೨೭). ೮. ಹೆಚ್ಚಳ ; ಹಿರಿಮೆ ; ಘನತೆ : ನಾವಿವಗೆ ಮನವೊಡ್ಡಿ ಬಿಡದೆ ಸುಖಿಯಿಸುವ ದೊಡ್ಡಿತೆಂದಿಂಗಹುದೊ ಎಂದು ಕೆಲಬರು ಗುಡ್ಡಣಿಕೆಯನೆಣಿಸುವರು (ನೇಮಿಸಂ. ೮–೩೭). ೯. ದೊಡ್ಡವಸ್ತು ; ಹಿರಿಯವಸ್ತು : ಪೇತೆ ನೀನೇನು ದೊಡ್ಡಿತು ನನ್ನ ಸರಲ ಮುಯ್ಯಾತುಕೊಂಬೊಡೆ ರುದ್ರಗರಿದು ಮಾತುಗಾಱಿಕೆ ಬೇಡ ಹಿಡಿಯೆಂದು ಛಾಳದೆ ತೂತೇಳಲೆಚ್ಚು ಬೊಬ್ಬಿಱಿದ (ಮೋಹತ. ೧೩–೫೯). **ದೊಡ್ಡಿತ್ತು** : ೧. ಆ ಗ್ರಾಮಕ್ಕೊಂದು ಎಳಗನಂ ಕಳಿಪಿ ಯಥೇಷ್ಟ ಗ್ರಾಸವನಿಕ್ಕುವುದು ಬಡವಾದೆಯು ದೊಡ್ಡಿತ್ತಾ [ಪಾಠಾಂ. ಡ್ಡನಾ] ದಡೆಯು ತಪ್ಪು ಸಮಾನವಾಗಿರಿಸದಿರ್ದೊಡೆ ನಿಮ್ಮ ಗ್ರಾಮಮಂ ಕೆಡಿಸುವೆಂ (ಪುಣ್ಯಾಸ್ರ. ೩–೨೭ ವ) ; ಅದಱಲ್ಲಿ ದೊಡ್ಡಿತ್ತಾದ ತಗರು ಹುಟ್ಟಿ ಮಲವುತ್ತ ಬರಲು (ಭೈರಸೂ. ೧೧೩) : ಮೆಯ್ಯು ನುಣುಪಾಗಿ ಬಟುವಾಗಿ ದೊಡ್ಡಿತ್ತಾಗಿ ತನ್ನ ಮೆಯ್ಯಿಗೆ ತಕ್ಕ ಚೆಂದವಾದ ರೂಪು ಕಾಣಿಸುವುದು (ಅಶ್ವಟೀ. ೨೩–೧೦). ೨. ಸುವ್ರತದ ಫಲದಿನುರಗ ನರ ನಾಕಮೆಂಬ ನೆಲಕೊಡೆಯರಾಗುವರ್ ಕೈವಲ್ಯಕಾಂತೆಯೊಳಗಲಸದೇ ಕೂಡುವರಿದೇನು ದೊಡ್ಡಿತ್ತೆನಲ್ (ಸಮ್ಯಕ್. ೮–೭). ೬. ಎಲ್ಲರಿಗೂ ಪ್ರಾಣದಾಸೆ ದೊಡ್ಡಿತ್ತಾಗಿರುವುದರಿಂದಲೂ . . . ಬದುಕಿರುವುದು ಕಾರ್ಯವೆಂದು ನಿಶ್ಚೈಸಿ (ಷಡಕಾ. ೪೦). ೭. ಗ್ರಹನಿಚಯಾ ಆದಿತ್ಯಾದಿ ನವಗ್ರಹಂಗಳೂ ಉರುತತ್ವ ಶಿವಾದಿ ಪೃಥುವ್ಯಾಂತವಾದ ದೊಡ್ಡಿತ್ತಾದ ಮೂವತ್ತಾಱು ತತ್ವಂಗಳು ಶ್ರೀಗುರುವಿನ ಪಾದದ ಜಂಘೆಯಲ್ಲಿಹವು (ಆತ್ಮತ್ರಿ. ೫ ಟೀಕು) ; ಓಂಕಾರವು ಶಿವಾತ್ಮ ಹಕಾರವು ಉರು ಪಂಚ ಪ್ರಣವ

ದೊಡ್ಡಿತ್ತಾದವ್ವೆದು ಪ್ರಣವಂಗಳು (ಅತ್ಮತ್ರಿ. ೯೧ ಟೀಕು). ೧೧. ಅಗಲವಾದುದಂ; ವಿಶಾಲವಾದುದಂ : ಸಿಂಹಕಟಿತಟಮನಿಳಿಸುವ ರಿಪುಸುರಂಗ ಕಂಠೀರವನ ಕಟಿತಟವೊಲ್ದು ನೋಡುವ ಗಾಡಿಕಾರ್ತಿಯರ ಕಣ್ಗೆ ಕಾಮ [ನ]ಡ್ಡಣವಂತೆ ದೊಡ್ಡಿತ್ತಾಗಿ ಮಿಾಱುವುದ್ವೃತ್ತತೆಯ [ನೀಟ್ಟು] ಕೊಂಡಂತುದ್ವೃತ್ತಂಗಳಾದುವು (ಪಂಪಭಾ. ೨-೩೯ ವ); ಹುತ್ತಿನವೋಲ್ ಕೆಟಗು ದೊಡ್ಡಿತ್ತಾಗಿ ಮೇಗಸಿದಪ್ಪ ಶರೀರರೂಪ (ಶತ್ರ್ಯಪ್ರ. ೨೯೬). (ಗ೧). ೧೧. ಹಿರಿದಾದ; ದೊಡ್ಡದಾದ : ತುಕಾರ ದುಕಾರಂಗಳ ಕಡೆಯಾಗಿ ಪಲವು ಗುಣವಚನಂಗಳೊಳವು; ಅವಱೊಳ್ ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ಅಗಲಿತ್ತು, ದೊಡ್ಡಿತ್ತು, ಬಲ್ಲಿತ್ತು ಎಂಬಂತೆ ನೋಡಿಕೊಳ್ವುದು (ಶಮದ. ೭೭ ಪ್ರಯೋ).

**ದೊಡ್ಡಿದ** = ೧. ಹಿರಿಯ; ಪೂಜ್ಯ: ಭೀಮನ ಮಱೆಯಂ ಬಂದು ಪುಗೆ ಕೊಂದು ಕುಡೆ ನೀನಂದಿಂಬೞಿಕಹಹ ದೇವ ದೊಡ್ಡಿದನಾದಯ್ (ಗದಾಯು. ೭-೪೯); ನಿನ್ನನತ್ಯಾದರದಿಂ ದೇವನೆ ದಿಂಡನೆಯೆಂದೊಡೆ ದೇವಂ ನೀನೆಂತದೆಂತು ದೊಡ್ಡಿದನಪ್ಪೈ (ಧರ್ಮಾಮೃ. ೯-೧೧೬). ೨. ಶೂರ; ಪರಾಕ್ರಮಿ : ನಿಮ್ಮ ಕಣ್ಣಿಗೆ ನರನು ದೊಡ್ಡಿದನುಳಿದ [ಪಾಠಾಂ. ದೊಡ್ಡಿತು ಉಳಿದ] ವೀರರ ಕಣ್ಗೆ ತುಸು ಮಾತ್ರ (ಕುಮ್ಮಾವಿ. ೭-೧೧); ಏನವನು ದೊಡ್ಡಿದನು ಶರಸಂಧಾನಸಮಯಿಗಳಾವು ನವಗಾ ವಾನರಮಿತ್ರತ್ವವೆಂಬುದು ಲೋಕಹಾಸ್ಯವಲೆ (ತೊರರಾ. ೪-೭-೧೪).

**ದೊಡ್ಡಿದುವು** (ಬಹುವ) = ಗಾತ್ರದಲ್ಲಿ ಹಿರಿದಾಗಿರಂವಂಥವು : ನಡೆನೋೞ್ಪೊಡಮಂತುಮೀತು ಮೂಱುಸಿಯುವು ಮೂಱು ದೊಡ್ಡಿದುವು ಮೂಱೆಡೆ ತೆಳ್ಪಿದುವಂಬುಜಾಕ್ಷಿಯಾ (ಪಂಪಭಾ. ೪-೭೨); ಅತಿರಥನಾತಂ ಗಡ . . . ತದ್ರಥದ ಗಾಲಿಗಳ್ದೊಡ್ಡಿದುವೇ (ಗದಾಯು. ೩-೫೫).

**ದೊಡ್ಡಿಯ** = ಬಲವುಳ್ಳ; ಶಕ್ತಿಯ : ಇವಂ ದೊಡ್ಡಿಯನಾಳ್ಕುದುರೆಯಂ ತೋಱೆ ಮಿಾಱೆ ಕಾಡಿದಡೆ ಎನ್ನ ಸತ್ತ ಸಾವುಂ ಕೆಟ್ಟ ಕೇಡುಂ ನಂಬಿಯುಮಂ ನರಸಿಂಗವೊನೆಯರುಮಂ ತಾಗುವುದು (ನಂಬಿರ. ೬-೧೦೨). [<ದೊಡ್ಡ]

**ದೊಡ್ಡಿತೆ** (ನಾ). = ದೊಡ್ಡತನ ೧ : ಅವಳ ದೊಡ್ಡಿತೆಯು ಸಹನಶೀಲತೆಯಲ್ಲಿಯಷ್ಟೇ ಮುಗಿಯುವುದಿಲ್ಲ (ಗೂತ್ತುಗು. ೧೩೯); ಖಾನನಿಗೆ ತಾವು ಕಂಡ ಆ ದೊರೆಯ ದೊಡ್ಡಿತೆಯನ್ನು ಬಿನ್ನವಿಸುವರು (ಕರ್ಣಾಜ. ೧೧೧); ಜ್ಞಾನ ಮತ್ತು ಧೈರ್ಯ–ಇವೇ ದೊಡ್ಡಿತೆಯ ಹಾಗೂ ಹಿರಿಮೆಯ ಅಡಿಗಲ್ಲು (ದಾಬುತ್ತಿ. ೧೪). [<ದೊಡ್ಡಿತು]

**ದೊಡ್ಡಿತ್ತು** 'ದೊಡ್ಡಿತು' ನೋ.

**ದೊಡ್ಡಿದಾರ** (ನಾ). ದೊಡ್ಡಿಯನ್ನು ನೋಡಿಕೊಳ್ಳಲೆಂದು ನಿಯುಕ್ತನಾದ ಅಧಿಕಾರಿ: ಡಿಸ್ಟಿಕ್ಟ್‌ಮ್ಯಾಜಿಸ್ಟ್ರೇಟರವರು ಪ್ರತಿಯೊಂದು ದೊಡ್ಡಿಗೂ ದೊಡ್ಡಿದಾರರುಗಳನ್ನು ಸಹಾ ನೇಮಿಸುವರು (ಗ್ರಾಮಾಕ. ೧೦೩). [ದೊಡ್ಡಿ₁ (<ತೊಟ್ಟಿ₁) + – ದಾರ್₄]

**ದೊಡ್ಡಿಪತ್ರೆ** 'ದೊಡ್ಡಪತ್ರೆ' ನೋ.

**ದೊಡ್ಡಿಪ್ಪೆ** (ನಾ). ಒಂದು ಬಗೆಯ ಮರ; ಇಪ್ಪೆಯಂಲ್ಲಿ ಒಂದು ವಿಧ: ಇಪ್ಪೆ, ದೊಡ್ಡಿಪ್ಪೆ, ಹಿಪ್ಪೆ, ಹಾಲಿಪ್ಪೆ (ವೃಜಿಗಿ. ೧೨-೨೦೪). [ದೊಡ್ಡ + ಇಪ್ಪೆ₁ (<ಇರ್ಪೆ)]

**ದೊಡ್ಡಿಮರ** (ನಾ). ಒಂದು ಬಗೆಯ ಮರ,–ವೃಕ್ಷ : ದೊಡ್ಡತೊಪ್ಪೆ ಮರ, ದೊಡ್ಡಿಮರ, ಬಿಂದಾರಿಮರ, ದಲ್ಲಿಮರ, ಬಿಟ್ಟಗ(ವೃಜಿಗಿ. ೪೫-೮೮೫). [ದೊಡ್ಡಿ₂ + ಮರ₁]

**ದೊಡ್ಡಿಮೆ** (ನಾ). ಮರ್ಯಾದೆ; ಘನತೆ; ದೊಡ್ಡಸ್ತಿಕೆ : ವ್ಯಾಪಾರೋದ್ಯೋಗಗಳಲ್ಲಿ ವ್ಯಕ್ತಿಸ್ವಾತಂತ್ರ್ಯವಿದೆ . . . ಒಕ್ಕಲತನದಲ್ಲಿ ದುಡಿತಕ್ಕೆ ತಕ್ಕ ದೊಡ್ಡಿಮೆ ಇದೆ (ರಕ್ತಧ್ವ. ೧೦೨). [<ದೊಡ್ಡಿತು + – ಮೆ₁]

**ದೊಡ್ಡಿಲಿ** (ನಾ). ದೊಡ್ಡ ಇಲಿ; ಹೆಗ್ಗಣ : "ಮೂಷೀ–ದೊಡ್ಡಿಲಿ" (ಓಷಧಿ. ೧೩೭); ಸಣ್ಣಿಲಿ, ದೊಡ್ಡಿಲಿ, ಮೂಗಿಲಿ . . . ಹುಡುಗಿಲಿ, ಎಲ್ಲಾ ಬಂದುವು ಓಡೋಡಿ, ಜೋಗಿಯು ಬಾರಿಸೆ ಕಿಂದರಿಯ (ಬೊಜೋಗಿ. ೧೧-೨೫೭). [ದೊಡ್ಡ + ಇಲಿ₁]

**ದೊಡ್ಡಿಲೆ, ದೊಡ್ಲಿ** (ನಾ). ಒಂದು ಬಗೆಯ ಕಾಡುನಿಂಬೆಯ ಗಿಡ ಮತ್ತು ಅದರ ಕಾಯಿ : ಮಾದಲ ನಿಂಬೆ ದೊಡ್ಡಿಲೆ ಕಂಚಿ ಕಿತ್ತೀಳೆ ಸ್ವಾದು ಖರ್ಜೂರ ದ್ರಾಕ್ಷಿಗಳು (ಪೋಹಕ. ೨೪-೫೨); "ದದ್ದಿಲೆಹಣ್ಣು" (ಪ್ರಭಣ್ಣ). ದೊಡ್ಲಿ : (ಕ). [←ತುಳು. ದೊಡ್ಡಲೆ, ದೊಡ್ಲೆ]

**ದೊಡ್ಡಿವೆಸರ್** (ನಾ). ದೊಡ್ಡಹೆಸರಂ; ಕೀರ್ತಿ : ವಾರಿಜನಾಭಂ ಹರಿಯೆಂಬ ದೊಡ್ಡಿ [ಪಾಠಾಂ. ದ್ದೆ]ವೆಸರಂ ಪೊತ್ತಿರ್ದ ನೀಂ ಮಂತ್ರಿಯಾಗೆ (ಪಂಪಭಾ. ೯-೯೭); ಬಲದ ಕೆಲದೊಳು ಮಿಱುಮಿಱುಮಿಱುಗಿ ತನ್ನ ಪಡೆದೊಂಗಂ ತನ್ನ ಪೆಸರಿಂದಮೆ ದೊಡ್ಡಿವೆಸರಾಗಿ ನೆಗೞ್ದ ಚಕ್ರಮಂ ನೋಡೆ (ಶಾಂತಿಪು. ೪-೪೮ ವ). [<ದೊಡ್ಡಿತು + ಪೆಸರ್]

**ದೊಡ್ಡಿಸು** (ಕ್ರಿ). ವಿವರವಾಗಿ ಹೇಳು; ವಿವರಿಸು : ಗಂಗಾದೇವಿಗಾಗೋವಿಂದನೀ ರೀತಿಯಲಿ ದೊಡ್ಡಿಸಿಯಂದು ತನ್ಮಾನಸದ ಬಹುದುಃಖವನು ಬಿಡಿಸಿದನು (ತಿಮ್ಮಳ. ೧೧-೪೭). [ದೊಡ್ಡಿತು + – ಇಸು₂]

**ದೊಡ್ಡಿಸ್ತನ** 'ದೊಡ್ಡಸ್ತನ' ನೋ.

**ದೊಡ್ಡೀಚಲು** (ನಾ). ಒಂದು ಬಗೆಯ ಈಚಲುಮರ ಮತ್ತು ಅದರ ಹಣ್ಣು : "ಪಿಂಡಖರ್ಜೂರಃ–ದೊಡ್ಡೀಚಲು" (ಓಷಧಿ. ೯೮). [ದೊಡ್ಡ + ಈಚಲು₁ (<ಈಂಚಿಲ್)]

**ದೊಡ್ಡೀಳೆ** (ನಾ). ಈಳೆಯ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು : ತೆಂಗಡಕೆ ಪಲಸುಗಳ್ ನಾರಂಗಂ ಕಿತ್ತೀಳೆ ನಿಂಬೆ ದೊಡ್ಡೀಳೆ[ಳೆ]ಗಳಿಂ ಸಂಗಳಿಸಿದ ಸವಿನಿಂಬೆಗಳಿಂಗಿತದಿಂ ಬೆಳೆದ ರಾಯಗಿತ್ತೀಳೆ[ಳೆ]ಗಳುಂ (ಹಾಲಾಸ್ಯ. ೧-೧೪-೧೧). [ದೊಡ್ಡ + ಈಳೆ]

**ದೊಡ್ಡು, ದುಡ್ಡು₂, ದೊಡ್ಡೆ₁** (ನಾ). ಕಾಡುಕೋಣ; ಕಾಸರ : ಅದ್ವವಿಸಿಸೋಹಿದರು ಕೋಣನ ದೊಡ್ಡುಗಳ ದಂತಿಗಳ ಮರೆಗಳ ಒಡ್ಡೊಡೆಯದವೊಲಾ ಸುಮಿತ್ರಾಸುತನ ಸರಿಸದಲಿ (ತೊರರಾ. ೩-೩-೧೨); ಕಾಡುಕೋಣಗಳಿಗೆ 'ದೊಡ್ಡು' ಎಂದು ಹೆಸರು (ಕಾನೂರು. ೫೮); ಕಡ ಮತ್ತು ಸಾರಗದ ಹಿಂಡುಗಳೂ ದೊಡ್ಡುಗಳ ಮಂದೆಗಳೂ . . . ಅಲ್ಲಲ್ಲಿ ಅವಿಶ್ರಾಂತವಾಗಿ ಸುತ್ತಾಡುತ್ತಿದ್ದವು (ಪಂಜಪಂ. ೨). ದುಡ್ಡು₂ : ಗುಡ್ಡಗಳ ವೆಂಬಂತೆ ರಥನಿವಹ ಕಾರ್ಮುಗಿಲಿನೊಡ್ಡಿನಂತಿಭರಾಜಿ ಹಯನಿಕರ ಕಡಲಂತೆ ದುಡ್ಡಿನಂತತಿಪುಪ್ಪಿ ಕಾಲ್ಬಲಂ ಕೂಡಿತಿದಕಾವ ನಾಡೀಡೆಂಬೊಲು (ಪರಶು ೯-೨೦); ಕೋಣಕ್ಕೆ "ದುಡ್ಡು" ಎಂದು ನಮ್ಮವರು ಕರೆಯುತ್ತಾರೆ (ಬಾಲಪ್ರ. III. ೦೭೦೪). ದೊಡ್ಡೆ₁ : ಹುಲಿಯಾಗಲಿ ಕರಡಿಯಾಗಲಿ ದೊಡ್ಡೆಯಾಗಲಿ ಉರಿಯುವ ಬೆಂಕಿಗೆ ಅಂಜಿ ಅದರ ಬಳಿ ಸಾರುವುದಿಲ್ಲ (ಮಲಿಮ. ೨೪೯).

**ದೊಡ್ಡಿನ ಮೃಗ** = ಕೋಣದ ಜಾತಿಗೆ ಸೇರಿದ ಪ್ರಾಣಿ: ಪರಿಹರಿಕುಂ ದೊಡ್ಡಿನ ಮೃಗ [ಪಾಠಾಂ. ದೊಡ್ಡಿಮೃಗ] ದುರುವಿಷಮಂ ನಸ್ಯಲೇಪನಾಂಜನದಿಂದಂ (ಖಮದ. ೧೩-೬೯). **ದೊಡ್ಡಿನ ಹೋರಿ** =ಹೋರಿ ಕೋಣ: ಉಡು ನವಿಲಾವೆ ಬೆಕ್ಕು ನರಿ ಲಾವುಗೆ ದೊಡ್ಡಿನ ಹೋರಿ ಹೇರನೆಲ್ . . . ಕೊಂಡುಗುಱಿ ಕೂರಗೆಯೆಂಬಿವನ್ನೆದೆ . . . ಪೊತ್ತು ಬೇಡವಡೆ ಬಂದುದು (ಸೂಕ್ತಿಸು. ೩-೧೬೮). [ತೆ ೧.೫ ತುಳು. ದೊಡ್ಡು]

**ದೊಡ್ಡೆ₁** 'ದೊಡ್ಡು' ನೋ.

**ದೊಡ್ಡೆ₂** (ನಾ). ದಪ್ಪವಾಗಿರುವವಳು; ಸ್ಥೂಲವಾಗಿರಂವವಳಂ : ಕಡು ನಿಡಿಯಳ್ ಕರಮೆ ಗುಜ್ಜೆ ಮೇಣ್ ಕರಮುಸಿಯಳ್ ಕಡು ದೊಡ್ಡೆಯೆನಿಪ್ಪೊಡಂ ನೋೞ್ಪೊಡೆ ಪುರುಷಾಕಾರೆಯಪ್ಪೊಡಂ ಕಷ್ಟೆಯವಳ್ (ಲೋಕೋಪ. ೧೧-೭೦). [ದೊಡ್ಡ + – ಎ₂]

**ದೊಡ್ಡೆಲಚಿ** (ನಾ). ಒಂದು ಬಗೆಯ ಎಲಚಿಮರ ಮತ್ತು ಅದರ ಹಣ್ಣು: "ರಾಜವಲ್ಲಭಃ–ಹಣ್ಣಿನ ಹಾಲೆ, ದೊಡ್ಡೆಲಚಿ" (ಓಷಧಿ. ೧೩೮). [ ದೊಡ್ಡ + ಎಲಚಿ ]

**ದೊಡ್ಡೆಲೆಭೋಗಿ** (ನಾ). ಒಂದು ಬಗೆಯ ಮರ; ಉನ್ನಿಮರ: ಹೈಗ, ಉನ್ನಿಮರ, ಕಲ್‌ಬೋವು, ದೊಡ್ಡೆಲೆಭೋಗಿ (ವೃಕ್ಷಗಿ. ೪೪–೭೭೪).

[ ದೊಡ್ಡ + ಎಲೆ$_1$ + ಭೋಗಿ ]

**ದೊಡ್ಡೇಲಕ್ಕಿ, ದೊಡ್ಡಏಲಕ್ಕಿ** (ನಾ). ಒಂದು ಬಗೆಯ ಏಲಕ್ಕಿ ಗಿಡ ಮತ್ತು ಅದರ ಕಾಯಿ: "ದಿವ್ಯಗಂಧಾ–ದೊಡ್ಡೇಲಕ್ಕಿ" (ಓಷಧಿ. ೭೫). **ದೊಡ್ಡ ಏಲಕ್ಕಿ**: "ಪೃಥ್ವೀಕಾ–ಜೀರಗೆ, ದೊಡ್ಡಏಲಕ್ಕಿ, ಹಿಂಗುಪತ್ರ, ಹರೇಣುಕ" (ಓಷಧಿ. ೧೦೨). [ ದೊಡ್ಡ + ಏಲಕ್ಕಿ ]

**ದೊಡ್ಡೊಕ್ಕಲು** (ನಾ). ಹಿರಿಯ ಒಕ್ಕಲು; ಮುಖ್ಯವಾದ ಒಕ್ಕಲು; ಶ್ರೀಮಂತ ಒಕ್ಕಲು: ಊರಿಗೆಲ್ಲಾ ಅವರದೇ ದೊಡ್ಡೊಕ್ಕಲು (ರೂಢಿ).

[ ದೊಡ್ಡ + ಒಕ್ಕಲು$_2$ (<ಒಕ್ಕಲ್$_2$) ]

**ದೊಡ್ಲಿ** 'ದೊಡ್ಡಿಲೆ' ನೋ.

**ದೊಣೆ$_1$, ಜೊಣೆ, ಡೊಣೆ$_2$, ಡೋಣಿ$_1$, ಧೊಣೆ, ದೋಣಿ$_2$, ಧೊಣೆ** (ನಾ). ೧. ಬೆಟ್ಟದ ಮೇಲಿರುವ ಸ್ವಾಭಾವಿಕವಾದ ಹೊಂಡ,–ಕೊಳ: ಮುಗಿಲ ನೀರಂ ನಂಬಿ ದೊಣೆಯ ನೀರಂ ತುಳುಂಕುವ ಕೋಡಗಮುಮಂ (ಧರ್ಮಾಮೃ. ೮–೫೧); ಕಾಯ್ದುಕ್ಕುವ ದೊಣೆಯುದಕದೊಳಿಡೆ ಚಂಚು ಬೆಂದು (ಕುಸುಮಾ. ೮–೧೨೮); ಎಲ್ಲರೂ ದೊಣೆಯೊಂದರಲ್ಲಿ ಸ್ನಾನಮಾಡಿ ಮಧ್ಯಾಹ್ನಸಮಯಕ್ಕೆ ಊರಿಗೆ ಹಿಂತಿರುಗಿದರು (ಶಾಂತಲಾ. ೩೭೮); ಇಲ್ಲಿ ಎಲ್ಲೋ ಒಂದು ದೊಣೆ ಇದ್ದಹಂಗಿತ್ತಪ್ಪಾ (ಮಲಮ. ೨೫೪); ದೊಣೆಗೆ ಹೋದರೂ ಹೊಣೆ ತಪ್ಪದು (ಗಾದೆ). ೨. (ಕಟ್ಟಿಸಿದ ಅಥವಾ ನಿರ್ಮಿಸಿದ) ಕೊಳ,– ಕಲ್ಯಾಣಿ: ಆನಂದಸಂವತ್ಸರದಲ್ಲಿ ಕಟ್ಟಿಸಿದ ದೊಣೆಯು (ಎಕ. II, ೦೬೨-೦; 1194 ?); ಹೊಸ್ತಾಗಿ ಹಂಪೆಯ ದೊಣೆಯ ತೋಡ್ಸಿ ಬರಸಿದ ಶಾಸನ (ಸೌಇಇ. IX–i– ೩೫೯-೧೨ ; 1340). ೩. ಹಳ್ಳ; ತಗ್ಗು: "ದ್ರೋಣಿಃ, ಶೈಲಸಂಧಿಃ . . . ಈ ೨ ದೊಣೆಯ ಹೆಸರು" (ಸಾಚಿರಾ. ೦೦೪); ದನಕಟ್ಟುವ ಕೊಟ್ಟಿಗೆಯಲ್ಲಿ ದೊಡ್ಡ ದೊಡ್ಡ ದೊಣೆಗಳು ಬಿದ್ದಿವೆ (ರೂಢಿ). **ಜೊಣೆ**: ೧. ಕೆರೆ ತೊರೆ ಮಡು ಜೊಣೆ ಪರಿವಾ ನಿರ್ಝರ (ಶರಜ. ೫೯೦). **ಡೊಣೆ$_2$**: ೧. ಮುಗಿಲ ನೀರಂ ನಚ್ಚಿ ಡೊಣೆಯ ನೀರಂ ತುಳುಂಕಿದ ಕೋಡಗದಂದಂ ನಿನಗಕ್ಕುಂ (ಶಂಚಶಂ. ೬೮-೮); ನಾವೀ ಪ್ರದೇಶದೊಳು ಕೆಱೆಯಾಗಿ ತೊಱೆಯಾಗಿ ಡೊಣೆಯಾಗಿ ವಾಪಿಕೂಪಂಗಳಾಗಿ ಈಶನಭಿಷವದಗ್ರಜಲಕೆ ಸಂದಿಪ್ಪೆವು (ಸಿದ್ಧರಾ. ೪–೨೩); ನೀರಡಸಿ ಬಟಲ್ದು ಬಂದು ಬೆಟ್ಟದ ಡೊಣೆಗಳೊಳ್ ಮುನ್ನ ಪೊಕ್ಕಿರ್ದ ಕಳ್ಳುಂ ಬಳೆದು ತಿಳಿದಿರ್ದೊಡದಂ ಕುಡಿದು ಸೊಕ್ಕಿ (ಜೀವಸಂ. ೧೪೪–೧೯); ಬೆಂಚೆ ಡೊಣೆ ದೀರ್ಘಿಕೆ ಕಮ್ರಡು ಪಳ್ಳ ಕೊಳ್ಳ ನೀರೊಱೆವ ಕೊಳಂ (ಜಟ್ಯಮ. ೦-೪೫); ದಿವಿಜ ಧಾರುಣಿರುಹಂಗಳ ನೆಲೆಯೊ ಕಡಮರದಿರವೊ ಶೋಭನದ ಡೊ[ಪಾಠಾಂ. ದೊ]ಣೆಯೊ (ಬಸವು. ೦-೩೯). ೨. ಬಡಗಣ ಭಾಗೆಯ ಪಡುವಣ ಭಾಗದಲು ಕಟ್ಟಿಸಿದ ಡೊಣೆ (ಎಕ. XII, ತುಮಕೂ. ೩೯-೮ ; 1387); ಕನ್ನರಿದೇವನ ಮಲಪಗಳು ಕಟ್ಟಿಸಿದ ಲಖುಮಣ್ಣಗಳ ಬಾಗಿಲು ಡೊಣೆ ಸೋಪಾನಕೆ (ಎಕ. X, ಬಾಗೇಪ. ೩೩-೮; 1406). ೩. "ಡೊಣೆ–ತಗ್ಗು" (ಜಾನಕೋ. ೬೩); "ಬೆಟ್ಟಗಳ ನಡುವಣ ಆಳವಾದ ಗುಂಡು ಪೊಳ್ಳು" (Punch-bowl, ಇಂಕನಿ). **ಡೋಣಿ$_1$**: ೧. ಕಾಮಧೇನುವಿನ ನಡುವೆಯೊಂದು ಕೋಣ ಕಟ್ಟಿಯಿದ್ದಿತ್ತು, ಕೋಣನ ಗವಲು ತಾಗಿ ಕಾಮಧೇನು ಕೆಡುತ್ತದೆ. ಕೋಣನ ಡೋಣಿ [ಪಾಠಾಂ. ದೊಣೆ]ಗೆ ತಳ್ಳಿ ಕಾಮಧೇನುವ ಕಾಣದಂತೆ ಮಾಡು (ಕೋಲಶಾಂ. ೪೨–೩೨); ಕೆಱೆ ಬಾವಿ ಬಗರಗೆ ಡೊಣೆ ಡೋಣಿ [ಪಾಠಾಂ. ಣೆ] ದೀರ್ಘಿಕೆಯೊಱತೆ ಕಾಲುವೆ ಬೆಂಚೆ ಪಳ್ಳ ಮೆಱೆದಿರುತಿಹವು (ಕುರಾಸಾಂ. ೪–೬೭); ಸುರಕುಜದ ತೋಪು ಸುರಧೇನುವಿನ ಹಿಂಡು ಸಿದ್ಧರಸ ತೀವಿರ್ದ ಡೋಣಿಗಳಮೃತದ ತಟಾಕಗಳು (ನಂದಿಮಾ. ೧೧-೧೦). ೨. ನಾಲ್ಕನೆಯ ವಿಟ್ಟಪಯ್ಯಂಗಳ ಪ × × × ಸಿನಲು ಡೋಣಿಯಿಂ ಬಡಗಲು ಶಿವಾರಾಜನ ವೃತ್ತಿಯ ಮತ್ತರು ೪ (ಕೂಲ್ಹಾಶಾ. ೮–೭೪ ; 1147). ೩. ಎರಡು ಕೊರಿಗೆಯ ಡೋಣಿಯ ಹೊಲವೊಂದು ಮಾತ್ರ ಉಳಿದಿದ್ದಿತು (ನಿಸರ್ಗ. ೨೮೨), 'ಡೋಣಿವಟ್ಟಿ' ಪರಾ. **ಧೊಣೆ**: ೧. "ಧುಣಾ=ಧೊಣೆ" (ಕಾಶಕ್ಕ. ೩೫). **ದೋಣಿ$_2$**: ೧. ದೋಣಿಯ ತಿಳಿನೀರ ಕುಡಿದು (ಮುಹಾವಿ. ೭–೩೮); ಬೆಟ್ಟದ ಮೇಲಿನ ದೋಣಿಗಳಲ್ಲಿ ನೀರು ಬಹಳ ಗಲೀಜಾಗುವುದೆಂದು ತಿಳಿದಿದ್ದರಿಂದ ಹೀಗೆಮಾಡಬೇಕಾಯಿತು (ಜಂಗಾಳ್ಯ. ೩೪೮). ೩. 'ದೋಣಿವೋಗು' ಪರಾ. ೪. ತಗ್ಗಿನ ನೆಲ; ಹಳ್ಳವಾಗಿರುವ ಹೊಲ,– ಗದ್ದೆ: ಸರ್ವನಮಸ್ಯ ಮಾಡಿ ಬಿಟ್ಟ ಮತ್ತರು ೧೦೦ ದೋಣಿಯಿಂ [ತೆಂ]ಕ ದೇ × × × ತೋಟ ಮತ್ತ ೨೭ (ಸೌಇಇ. XX, ೨೩-೨೨; 1029); ಕೇತಯ್ಯಂ ಬಿಟ್ಟ ದೋಣಿಯ ನೆಲ ಮತ್ತ[ರು ನಾ]ಲ್ವತ್ತು (ಸೌಇಇ. XI-i, ೮೩-೨೦ ; 1049); ಶ್ರೀಸೋಮೇಶ್ವರದೇವರ್ಗ್ಗೆ ತಮ್ಮ ಪ್ರಭುತ್ವದ ದೋಣಿಯಿಂ ತೆಂಕ ಒಡ್ಡವಾಡಿಗೆಯ ಬಟ್ಟೆಯಿಂ ಪಡುವ ಬಸ್ಥಿಚಿನ್ನಾಮಣಿಯ ಈರ್ಪ್ಪತ್ತೆಂಟು ಗೇಣ ಕೋಲಲು ತಮ್ಮಂ[ಶ]ಕ್ಕೆ ಬಂದ ಮತ್ತರಯ್ವತ್ತೇಳು (ಸೌಇಇ. XX, ೬೯–೪೪; 1107); × × × ಪೇಸ್ವರ ದೇವರ ೩ ದೋಣಿ × ಬೆಂಣ್ಣೆ × × × ದೇವ[ರು] ನದಿಯೊಱ[ವೆ]ಯ ಮಲ್ಲಿಕಾರ್ಜುನ [ದೇವ]ರು ಗುಂಡಿಯ ಹಳ್ಳಿಯ ರಾವಂನಾಥದೇವ (ಸೌಇಇ. XI-i, ೩೦–೩೩ ; ಸು. 12ನೆಯ ಶತ). **ಧೊಣೆ**: ೫. ಬಾವಿ: ಸಾನ್ತರಸ . . . ಬಟರಿಜ್ಗೆ ಕೊಟಾರ್ ಧೊಣೆಗೊಡಲಾ ನರಡಿ ಇಟ್ಟು ಕೊಟಾರ್ (ಎಕ. VI, ಕೊಪ್ಪ. ೩೯–೪ ; ಸು. 700 ?).

**ದೋಣಿಗೆರೆ** = ಹೊಲ, ಗದ್ದೆಗಳನ್ನು ಉಳುವಾಗ ನೇಗಿಲಿನಿಂದ ಮಾಡುವ ಹಳ್ಳದ ಗೆರೆ; ಸೀತೆಸಾಲು; ಉಕ್ಕೆಗೆರೆ.–ಸಾಲು: ದೋಣಿಗೆರೆಗಳಿಗೆ ಸರಿಯಾಗಿ ಪೈರನ್ನು ನಾಟಿ ಮಾಡುತ್ತಾ ಹೋಗುತ್ತಾರೆ (ರೂಢಿ). **ದೋಣಿಸಾಲು** = ದೋಣಿಗೆರೆ: ಉಳುವಾಗ ದೋಣಿಸಾಲುಗಳು ಒಂದೇ ಸಮನಾಗಿ ಮೂಡುತ್ತಾ ಹೋಗುತ್ತವೆ (ರೂಢಿ).

[ ದೇ.೫ ತೆಲು. ದೊನ./ಸಂ. ದ್ರೋಣೀ ]

**ದೊಣೆ$_2$** 'ತೊಣೆ$_2$' ನೋ.

**ದೊಣೆನಾಯಕ, ಡೊಣೆನಾಯಕ** (ನಾ). ಕೆರೆ, ಕುಂಟೆಯ ಕಾವಲುಗಾರ; ದೊಣೆಯನ್ನು ಕಾಯ್ದುಕೊಂಡಿರತಕ್ಕವನು; ದೊಣೆಯ ರಕ್ಷಕ: ಹೊಳೇ ನೀರು ಕುಡಿಯಕ್ಕೆ ದೋಣೇನಾಯಕನ ಅಪ್ಪಣೆ ಬೇಕಿಲ್ಲ (ಜಂಗಾಳ್ಯ. ೩೫೩). **ಡೊಣೆನಾಯಕ**: ಹರಿಯೋ ನೀರಿಗೆ ಡೊಣೆನಾಯಕನ ಅಪ್ಪಣೆಯೇನು (ಹುಟ್ಯಹ. ೦೨೩): ಹೊಳೆಯ ನೀರಿಗೆ ಡೊಣೆನಾಯಕನ ಅಪ್ಪಣೆಯೇ ? (ಗಾದೆ). [ ದೊಣೆ$_1$ + ನಾಯಕ ]

**ದೊಣೆವೋಗು, ಡೊಣೆವೋಗು, ಡೋಣಿವೋಗು, ದೋಣಿಯೋಗು, ದೋಣಿವೋಗು** (ಕ್ರಿ). ಡೊಗರು ಬೀಳು; ತಗ್ಗುಬೀಳು; ಹಳ್ಳವಾಗು: ಪಿಸುಟ್ಟ ಕಿಱುಪಿಡೆಯುಂ ಕಣೆವೋದ ಕಣಕಾಲುಂ ದೊಣೆ [ಪಾಠಾಂ. ಡೊಣೆ, ದೋಣಿ]ವೋದ ಮೇಗಾಲುಂ ಪಱಿದು ಪಾಯ್ವ ಪಂದಲೆಗಳುಂ (ಪಂರಾಮಾ. ೧೩-೫೪ ವ). **ಡೊಣೆವೋಗು**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಡೋಣಿವೋಗು**: ಕುಮತಿ ಸಿದ್ಧಾಂಜನದಿನೊಡೆದೊಂದು ಕಣ್ಗಳಿಂ ತಱಿದುಕೊಳೆ ಡೋಣಿವೋಗಿರ್ದ ಪೆರ್ಬುಣ್ಗಳಿಂ (ಕಾದಂಬ. ೨೭೦ ರಗಳೆ). **ದೋಣಿಯೋಗು**: ೧ಂತು ಚಕ್ರಹತಿಯಿಂ ದೋಣಿಯೋದ [ಪಾಠಾಂ. ವೋದ] ರಣಕ್ಷೋಣಿಯಂ . . . ರಥಿಗಳಟ್ಟೆಗಳೆಂಬ ಬೆಟ್ಟುಗಳಿಂ ಪೂಱ್ದು ಸಮತಳಂ ಮಾಡಿ

(ಪಾಶ್ವಪು. ೬-೧೩೦ ವ). **ದೋಣಿವೋಗು :** ಒಡೆದಿರ್ಬಗಿಯಾಗಿ ಪೋಟ್ಟು ನೀರೇಱಿದ ನಾಳಿಪುಣ್ಣೊಡೆದು ಸೌಳಿನೆ ಸೀಳ್ದುದು ದೋಣಿವೋಪಿನಂ [ಪಾಠಾಂ. ದೋಳಿವೋಪಿನಂ] (ಸುಕುಮಾ. ೫-೧೭) ; ತನು ದೋಣಿವೋದುವು ನೆತ್ತರ್ ಕೊಡನೆತ್ತಿ ಸುರಿವವೊಲ್ ಸುರಿದು (ನೇಮಿಪು. ೧೧-೧೭೫).

[ ದೋಣಿ₁ + ಪೋಗು₁ ]

**ದೊಣ್ಣೆ₁, ಡೊಣ್ಣೆ₁** (ನಾ). ೧. ದಪ್ಪವಾದ ಕೋಲು; ದಂಡ; ಲಗುಡ : ಕೈಯಲ್ಲಿ ದೊಣ್ಣೆ [ಪಾಠಾಂ. ದಾಣ] ಮನದಲ್ಲಿ ಕ್ರೋಧ ವಚನದಲ್ಲಿ ಕಂಕಿಲ ಲಿಂಗದ ವಾರ್ತೆ ನಿನಗೇಕೆ (ಅವಶಂ. ೨೭೫-೧೨೬) ; ಮಂದರಗಿರಿಯಂನೆತ್ತುವಡೆ ನುಗ್ಗೆಯ ದೊಣ್ಣೆಯಿಂದ ವಿನಾಂಟದಡೇಳುವುದೆ (ಮೋಹತ. ೨೯-೩೪) ; ನೂತನ ಕತ್ತಿ ಕಠಾರಿ ದೊಣ್ಣೆಯ ಸಾಧಕೋತ್ತಮ ರಾಜಕುವರರು (ಕಂಸವಿ. ೭-೦೮) ; ನಾನೆಷ್ಟು ಮುದುಕನಾದೊಡುಮೆನಗೆ ಬ್ರಹ್ಮಾಂಡತಾನದೊಳಗೆಲ್ಲೆಲ್ಲಿಯುಂ ತಿರುಗುವದು ತಪ್ಪದೇನಂ ಮಾಡಲು ಶಕ್ತಿ ಕುಂದಿರ್ಪುದೆಂದೂರಿಕೊಂಡಿರ್ಪ ದೊಣ್ಣೆಯೆಂದು (ಅಜಾನಿ. ೧-೮೫) ; ಈ ಡಕಾಯಿತರ ಕಥೆಗೆ ಸೂಕ್ತವಾಗಿರುವಂತೆ ಇದರಲ್ಲಿ "ಆ ಕಾಲದ ಪೀನಲ್ ಕೋಡಾಗಿದ್ದ" ದೊಣ್ಣೆಯ ಸ್ತೋತ್ರ ಬರುತ್ತದೆ (ಬಂಕಿಮ. ೨೯೮) ; ಕುಂಬಾರನಿಗೆ ವರುಷ, ದೊಣ್ಣೆಗೆ ನಿಮಿಷ (ಗಾದೆ) ; ಕಂಕುಳಲ್ಲಿ ದೊಣ್ಣೆ ಕೈಯಲ್ಲಿ ಶರಣಾರ್ಥಿ (ಗಾದೆ). (ಗು). ೨. ದಪ್ಪವಾದ; ದೊಡ್ಡದಾದ. 'ದೊಣ್ಣೆಮುಳ್ಳು' ಪರಾ. **ಡೊಣ್ಣೆ₁ :** ೧. ಗಿಡುಗನ ಉಡು ನುಂಗಿ ಹೊಡೆವವನ ದಡಿ ನುಂಗಿತ್ತು . . . ಗಿಡುಗನ ಉಡುವ ಹೊಡೆವವನ ಡೊಣ್ಣೆಯ ಬಾಯಿಲ್ಲದ ಇಱುಹೆ ನುಂಗಿತ್ತ ಕಂಡೆ (ಅಱಿಮಾ. ೧೯೭-೧೭೦) ; ಡೊಣ್ಣೆಯೊಳು ಚಚ್ಚಿ ಕೆಲವು ಮಿಗಗಳ ಕೊಂದರು (ನೇಮಿಸಂ. ೨-೫೦) ; ಅಣ್ಣತಮ್ಮಂದಿರಿನ್ನು ಜಗದೊಳಿದ್ದವರೆಲ್ಲ ಡೊ[ಪಾಠಾಂ. ದೊ]ಣ್ಣೆಯೊಳ್ಪಡಿದಾಡದಿಹರೆ (ಭರತೇ. ४೮-೫೮) ; ಡೊಣ್ಣೆಗಳನ್ನು ಹಿಡುಕೊಂಡು ಬಂದು ಆ ಮೃಗವನ್ನು . . . ಕೊಂದುಬಿಟ್ಟರು (ಮುಂಬಯಿ. ४-४೨). ೨. 'ಡೊಣ್ಣೆಮುಳ್ಳು' ಪರಾ. ೩. ಟೊಣಪ : (ಕ)

**ದೊಣ್ಣೆ ಭಾಗವತ** = ಸೋಮಾರಿ; ಲವಲವಿಕೆಯಿಲ್ಲದವನು; ಕೂತ ಕಡೆಯೇ ಕೂತಿರುವವನು : ಹೊತ್ತಿಗೆ ಮುಂಚೆ ಏಳದ ದೊಣ್ಣೆ ಭಾಗವತನಂತೆ ಬಿದ್ದು ಕೊಂಡಿರುತ್ತಾನೆ (ರೂಢಿ).

[ ದೇ.॥ ತುಳು. ದೊಣೆಲ್, ಡೊಣ್ಣೆ ; ಕೊಡ. ದೊಣ್ಣೆ; ಕೊಲಾ. ದೊಣ್ ]

**ದೊಣ್ಣೆ₂** 'ತೊಂಡೆ₂' ನೋ.

**ದೊಣ್ಣೆಕಾಟ** 'ತೊಂಡೆಕೇತ' ನೋ.

**ದೊಣ್ಣೆಗ, ಡೊಣಗ, ಡೊಣ್ಣೆಗ** (ನಾ). ೧. ಟೊಣಪ; ದಡಿಗ : ಶಿವಕಥಾಮೃತರಸವ ದೊ[ಪಾಠಾಂ. ಡೊ]ಣ್ಣೆಗರ್ ಕಪಟಾಂಧನರರಱಿವರೇ ಪರಮಸತ್ಕವಿಗಳಱಿವಂದದಿ (ರಾಘಶ. ೦-೧೯). **ಡೊಣಗ :** ೧. ಈ ಡೊಣಗಕ್ಷತ್ರಿಯಾಧಮನು ಅವರೆಲ್ಲರನ್ನು ಮೂರ್ಖರಲ್ಲಿ ಎಣಿಸಿ, ನಮ್ಮನ್ನು ಶಿಕ್ಷಿಸಬಂದಿರುವನಲ್ಲ (ಭಾಸ್ಕಾಶ. ೨೧೯). ೨. ಪುರಂಷನ ಜನನೇಂದ್ರಿಯ : ರಣದೊಳಂ ಜಯುವಧೂಟಿಯು ಮುಂದೆ ನಿನ್ನಯ ಡೊಣಗನ ಬಿಟ್ಟುಕೊಂಡಿರಲು ಅಣಕವಾಡುವರಪ್ಸರಗಣಿಕೆಯರೆಲೆ ರಣಭಂಡ ಹೋಗೆಂದು ನುಡಿದ (ಮೋಹತ. ೩೯-४). **ಡೊಣ್ಣೆಗ :** ೧. ಮೇಲಿನ 'ದೊಣ್ಣೆಗ' ಉಲ್ಲೇಖಕ್ಕೆ ಕೊಟ್ಟಿರುವ ಪ್ರಯೋಗದ ಪಾಠಾಂತರವನ್ನು ನೋಡಿ. [ ದೊಣ್ಣೆ₁ + – ಗ₃ ]

**ದೊಣ್ಣೆಮುಳ್ಳು, ಡೊಣ್ಣೆಮುಳ್ಳು** (ನಾ). ದಪ್ಪವಾದ ಮುಳ್ಳು; ದೊಡ್ಡ ಮುಳ್ಳು : (ಕ). **ಡೊಣ್ಣೆಮುಳ್ಳು :** ಎಣ್ಣೆ ಬಲು ಕಾಸಿ ಕಣ್ಣೊಳಗೆ ಸುರಿದಂತೆ ಡೊಣ್ಣೆಮುಳ್ಳುಗಳು ನಟ್ಟಂತೆ (ಕನ್ನಜಾ. ೨೩೯).

[ ದೊಣ್ಣೆ₁ + ಮುಳ್ಳು (<ಮುಳ್) ]

**ದೊಣ್ಣೆಮೂಗು, ಡೊಣ್ಣೆಮೂಗು** (ನಾ). ದಪ್ಪವಾದ ಮೂಗು : ಅವಳದು ದೊಣ್ಣೆಮೂಗು, ಲಕ್ಷಣವಾಗಿಲ್ಲ (ರೂಢಿ). **ಡೊಣ್ಣೆಮೂಗು :** ಗುಳ್ಳಗಣ್ಣು ಮತ್ತು ಡೊಣ್ಣೆಮೂಗು ಇರುವವಳೇನು ?(ಮೋಹಿನೀ. ೨೮).

[ ದೊಣ್ಣೆ₁+ ಮೂಗು₁ ]

**ದೊಣ್ಣೆಮೆಣಸಿನಕಾಯಿ, ಡೊಣ್ಣೆಮೆಣಸಿನಕಾಯಿ** (ನಾ). ಹೆಚ್ಚು ಖಾರವಿಲ್ಲದಿರುವ, ದಪ್ಪವಾಗಿಯೂ ದುಂಡಗೂ ಇರುವ ಒಂದು ಬಗೆಯ ಮೆಣಸಿನಕಾಯಿ ; ದಪ್ಪಮೆಣಸಿನಕಾಯಿ ; ರುಚಿಯಾಗಿರುವುದರಿಂದ ಹೆಚ್ಚಾಗಿ ಇದನ್ನು ತರಕಾರಿಯಾಗಿ ಉಪಯೋಗಿಸುತ್ತಾರೆ : ದೊಣ್ಣೆಮೆಣಸಿನಕಾಯಿಯ ಬೋಂಡ ಬಹಳ ರುಚಿಯಾಗಿರುತ್ತದೆ (ರೂಢಿ). **ಡೊಣ್ಣೆಮೆಣಸಿನಕಾಯಿ :** ಮೆಣಸಿನಕಾಯಿ ಡೊಣ್ಣಮೆಣಸಿನ ಕಾಯಿ ಶಾವಿ ಹುಣಸೀಯಕಾಯಿ ಹುಳಿಪಲ್ಯೆ ದಾಸೋಹಕೆ ಹಣ್ಣುಗಳ ತಂದಿಹರು ತರತರದ (ಸಿದ್ಧಪು. ೧೭-४೮) ; ನಾನೇನು ನಿಮ್ಮ ಕೈತೋಟದಲ್ಲಿ ಬೆಳೆದ ಬದನೆಕಾಯಿಯೋ, ಚಳ್ಳವರಿಯೋ, ಡೊಣ್ಣೆಮೆಣಸಿನಕಾಯಿಯೋ (ಇಪ್ಪಕ. ೨೧೫). [ ದೊಣ್ಣೆ₁ + ಮೆಣಸಿನಕಾಯಿ ]

**ದೊದಿಪಂದಿಗಲಿ** (ನಾ). ಒಬ್ಬಾತನ ಹೆಸರು : ಪಟ್ಟಜ್ಜಗ್ಗಿದ ಮೂರನೇ ವರಿಷದನ್ದು ದಾವರಜ್ಜದ ದೊದಿಪನ್ದಿಗಲಿಯು ಕಲ್ಲೂರುಂ ಕಬೂರು ಮೊಳನಿಕೆ ಕರ್ಪೂರ . . . ತುಱುವನಿಕ್ಕಿಸಿ ಮುಗುಬ್ದು ಬರುತಿಟ್ಟೊಡೆ (ಎಕ. XII, ತಿಪಟೂ. ೧೧-४ ; ಸು. 930 ?). [ ? ]

**ದೊದ್ದಿ** (ನಾ). ಒಂದು ಬಗೆಯ ಗಿಡ : "ಶಂ(ಕ)ಖಕರ್ಣಃ–ದೊದ್ದಿ, ಕತ್ತೆ" (ಒಷಧಿ. ೧೬೦). [ ? ]

**ದೊದ್ದೆ₁, ದೊದ್ದೆಯ** (ನಾ). ೧. ಗುಂಪು ; ಸಮೂಹ : ಎನಿತು ದೇವರ ದೊದ್ದೆ ಹಿಂಡುಗೊಳ್ಳದು ನೆನೆಯೆ (ರುದ್ರಶ. ದೇ. ೨೧೭-೦४) ; ಎತ್ತ ನ್ನೈರುತಿಗೀರುತಿಗಳಿವರೆತ್ತ ಜಲಧಿಪ ಗಿಲಧಿಪ ಫಡಯೆತ್ತ ಪವನಂಗಿವನ ದೊದ್ದೆಗೆ ಹೊದ್ದಲೇಸಲ್ಲಿ (ಸಾನಂದ. ೯-೧೫) ; ದೊದ್ದೆ ತಗೆಯಲಿ ಪಾರ್ಥ ಪವನಜರಿದ್ದರಾದರೆ ಬರಲಿ ಸಮರವ ಹೊದ್ದಲಾಪರೆ ಹೊಗಲಿ ಹರಿ ತೋಱಲಿ ಸಹಾಯತೆಯ (ಕುಮ್ಮಾಭೀ. ೮-೨೦) ; ಎದ್ದಾ ನೃಪಂ . . . ನಿರ್ಮಲತಪಸ್ವಿಗಳ ನಿಶ್ಚಲಹೃದಯ ಮಧ್ಯಪಂಕೇಜಾತದ ಗದ್ದುಗೆಯೊಳೆಸೆವ ಚಿದ್ರೂಪನಂ ಜಗವಱಿಯೆ ದೊದ್ದೆಯೊಳ್ಕೂಡಿ ತೇರ್ಗುದುರೆಯುಂ ಪೊಡೆವುದುಂ ಪೊದ್ದಿಸಿದ ಪಾರ್ಥನಾರಿದರೊಳೆನಲರ್ಜುನಂ ಬಂದಾತನಂ ಕಂಡನು (ಜೈಮಿಭಾ. ೫-೯). ೨. ಗದ್ದಲ; ದೊಂಬಿ ; ಗಲಭೆ ; ಗೊಂದಲ : ನೆಱಿ ಕೂಗುವ ಕೊಳರ್ವಕ್ಕಿಯ ದೊದ್ದೆ [ಪಾಠಾಂ. ಡ್ಡಿ]ಯ ಪಱಿಯೊಪ್ಪೆ ಮಱಿದುಂಬಿಗಳ ಗಱಿಯ ಝುಂಕಾರ ಸುಸ್ವರ ಪೂಂತ ಮಹಪುರುಮೆಗಳಱಿದ ವಾಗ (ಮೋಹತ. ೭-೧೭). ೩. ಸೈನ್ಯ; ಪಡೆ ನೆರೆದ ದೊದ್ದೆಯನೊರಸಬಹುದೇನರಿದು . . . ಗಹನವೆ ನಿನ್ನ ವೀರರಿಗೆ (ಕುಮ್ಮಾಭೀ. ೧-೭) ; ಧಾತುಗೆಟ್ಟುದು ದೊದ್ದೆಯೆಂದೇ ಭೂತಳಾಧಿಪ ಬಗೆಯದಿರು (ಕುಮ್ಮಾದ್ರೋ. ೧೭-೧೩) ; ತವರು ದೊದ್ದೆಯ ಹೊಗಿಸಬೇಡು ಳಿದವರನೆಂದೊಳಹೊಗುತ ನೇಮುವನವಸರದ ಸೇವಕರಿಗಿತ್ತು (ತೊರರಾ. ೨-೨-೨೫) ; ಗದ್ದೆಯ ಗೊರವನೊಳ್ ಕಡಿದಾಡಿ ಪೊಗರುವೆತ್ತಿದ್ದೆ ನೀ ರಣರಂಗದೊಳಗೆ ಬಿದ್ದೆಯ ನನ್ನ ಬಾಧೆಗೆ ಕೃಷ್ಣ ಕರೆ ನಿನ್ನ ದೊದ್ದೆಯ ನಿಲಲೊಬ್ಬಗಿರದು (ಮೋಹತ. ४೦-೧೮) ; ಇಂತು ದೊದ್ದೆಯ ಹೊಯ್ಲಿನಿಂ ಕ್ಷಿತಿಯಂತರದಿ ಮಡುಗಟ್ಟ ನೆತ್ತರ ಸಂತತಂ ಪರಿಯಲ್ಕೆ (ಅಜಾನಿ. ೭-೭೯). **ದೊದ್ದೆಯ :** ೧. ಗೆದ್ದುದೇ ರಣವೆಲವೊ ದಿವಿಜರ ದೊದ್ದೆಯದ ಸೂಳೆಯರ ಚೌರಿಗೆ ಬಿದ್ದಿನರ ವೀಳಯದ ಬಡಗರು ಭಟರ ಮೋಡಿಯಲಿ (ಕುಮ್ಮಾಉ. ೧೯-೨೫).

**ದೊದ್ದೆ₂** (ನಾ). ಉಗ್ಗು ; ತೊದಲುಮಾತು : (ಕ).

[ ದೇ.॥ ತುಳು. ದೊದ್ದೆ, ಗೊದ್ದೆ ]

**ದೊಡ್ಡೆಕಾಱ** (ನಾ). ಕೋಲಾಹಲವನ್ನುಂಟುಮಾಡುವವನು; ಗೊಂದಲವನ್ನುಂಟುಮಾಡುವವನು; ತೊಂದರೆಯನ್ನುಂಟುಮಾಡುವವನು: ಗುದ್ದುಗಳ ಮಳೆಗಱೆಯೆ ಕೌರವ ದೊಡ್ಡೆಕಾಱನು ಕಾಣಸವನನು ಹೊದ್ದಿಸಿದ ಹೊಲದತ್ತ ಬುತ್ತಿಯನುಂಡು ನಿಂದಿದನ (ಸಂಭಪ. ೨೩-೭೦).
[ ದೊಡ್ಡೆ$_1$ + – ಕಾಱ ]

**ದೊಡ್ಡೆಗ** (ನಾ). ೧. ಸೈನಿಕ: ಇದ್ದರಱುವತ್ತಾಱುಕೋಟಿಯ ದೊಡ್ಡೆಗರು ಮುನ್ನಮೃತಮಥನದಲ್ಲಿದ್ದವರು ಮತ್ತಲ್ಲಿ ದೇವಾಸುರರ ಕದನದಲಿ (ಸಂಭಪ. ೮-೧೦೫); ಎಲೆಲೆ ದೊಡ್ಡೆಗರೇಕೆ ಕೊಬ್ಬಿದರಳವನಱಿಯದೆ ನುಗ್ಗು ಮಂಱಿದರೆ ದಳದ ದೊರೆಗದು ಭಂಗವೇ ಬಾಹಿರನ ಹೊಯ್ಕೆನುತ (ಕುಮ್ಮಾದ್ರೋ. ೧೭-೨೯); ಅದ್ದಲಿಸಿದುದು ತಲೆ ರಘೂತ್ತಮನಿದ್ದ ಠಾವನು ಹೇಳೆನುತ ಕಪಿ ದೊಡ್ಡೆಗರನಱೆಯಟ್ಟಿ ಕೊಲುತಿಟ್ಟಣಿಸಿತಿದಿರಿನಲಿ (ತೊರರಾ. ೬-೨೮-೬೦); ದೊಡ್ಡೆಗರೇಕೆ ಹೊಕ್ಕರು ಕೊಲ್ಲುಕೊಲ್ಲೆಂದು ಹೆದ್ದೊರೆ ದೈತ್ಯರೆಯ್ದಿದರು (ಮೋಹತ. ೩೫-೧೮); ತುಳುನಾಡಿನರಸು ದೊಡ್ಡೆಗರ ತೆಳಿಸುತೆಯ್ದಿ ತುಳಿಲುಗೈದನು ಚಕ್ರಧರಗೆ (ಭರಜ. ೨೨-೫೧); ದಾನವರ ಬಲದ ನೆರೆದ ದೊಡ್ಡೆಗರಾನಲರಿಯದೋಡಲ್ ಕಂಡು ದುರುಳಬಲ ಶುಂಭ ಧೂಮ್ರಾಕ್ಷಮೃತ್ರಾದಿಗಳ್ ಕೈಕೊಂಡರಾಹವವನು (ಜಬಪು. ೨೬-೨೨). ೨. ಸಾಮಾನ್ಯಜನ; ನಾಡಾಡಿ: ದೊಡ್ಡೆಗರು ರಕ್ಕಸನ ಕಾಣುತ ಕದ್ದು ಹಾಯ್ದರು ಜನಕ ಚಿಂತೆಯಲಿದ್ದನವ ನಡೆತಂದನುಗ್ಗಡಣೆಯ ನಿನಾದದಲಿ (ತೊರರಾ. ೦-೧೫-೧೦); ಮುದ್ದಿಸುತಿಹರು ಮಕ್ಕಳನವು ತೊಡೆಯ ಮೇಲಿದ್ದಂತೆ ಮಲವ ಬಿಡುವುವು ಎದ್ದು ವಸ್ತ್ರವ ಹಾಕಿ ಹೇಸುತಿಹರು ಥೀ ಥೀ ದೊಡ್ಡೆಗರೆನೆ ನಕ್ಕರವರು (ಭರಜ. ೬೫-೩೦); ಮದ್ದಳೆಯ ಗತಿಗೆ ಜಘನಗಳೆದ್ದಾಡಲು ನಗುತ ಕಂಡು ಲಾಲಿಪರಲ್ಲದೆ ಪದ್ಯ ಪದ ಕಾವ್ಯದರ್ಥವ ದೊಡ್ಡೆಗರೇಂ ಬಲ್ಲರೆಂದ ಚೂಡಾರತ್ನ (ನೀತಿಸಾ. ೭೩). [ ದೊಡ್ಡೆ$_1$ + –ಗ$_2$ ]

**ದೊಡ್ಡೆಗವಿಸು** (ಕ್ರಿ). ಗುಂಪಾಗಿ ಮುತ್ತುವಂತೆ ಮಾಡು; ಆಕ್ರಮಣ ಮಾಡಿಸು: ಎದ್ದು ತಾನೈತಂದು ಸೇನೆಯ ದೊಡ್ಡೆಗವಿಸಿದ ಮುನಿವ ರಾಶ್ರಮಕಿದ್ದು ಗೃಹಮಂಡಲವ ಕೊಂಡರು ಸೂಱೆಗರು ನೃಪನ (ಸಂಭಪ. ೨೬-೨೦). [ ದೊಡ್ಡೆ$_1$ + ಕವಿಸು ]

**ದೊಡ್ಡೆಗೂಳು** (ನಾ). ರಾಶಿಗಟ್ಟಲೆಯ ಕೂಳು, –ಅನ್ನ: ದೊಡ್ಡೆಗೂಳಿನ ಮೈಸಿರಿಯ ಬಲು ಬಿದ್ದನಿಕ್ಕುವ ಭೂತ ಪವಮಾನಜನ ಕಿಬ್ಬರಿಯ ಗುದ್ದಿದರೆ ಕಲಿಭೀಮನದಕುಬ್ಬೆದ್ದು ಗೋಣನು ತಿರುಹಿ ಬಸುಱಕೊಳಗದ್ದಯಿಸಿ ಯರೆದರೆದು ಕಾಲಲಿ ತಿಕ್ಕಿದನು ಭೀಮ (ಕುಮ್ಮಾವಿ. ೬೪೩. ೯-೬೦).
[ ದೊಡ್ಡೆ$_1$ + ಕೂಳ್$_2$ (<ಕೂಟ್$_1$) ]

**ದೊಡ್ಡೆಯ** 'ದೊಡ್ಡೆ'$_1$ ನೋ.

**ದೊಡ್ಡೆವೋಗು** (ಕ್ರಿ). ಗಲಭೆಯಾಗು; ಕೋಲಾಹಲವುಂಟಾಗು: ಹೊದ್ದದೊಬ್ಬೊಬ್ಬರು ಕಲಹವಾಗೆದ್ದು ತಾವಿಱಿದಾಡಿದರು ಪುರಿ ದೊಡ್ಡೆವೋದಂದು ಹುಟ್ಟಿದುದು ವಿಪರೀತವದಱೊಳಗೆ (ಬಸಪು. ೬೦-೩೭).
[ ದೊಡ್ಡೆ$_1$ + ಪೋಗು$_1$ ]

**ದೊನವುರ** (ನಾ). ಒಂದು ಊರಿನ ಹೆಸರು: ನೂರ್ಮಡಿ ಚೋೞಂ ನವಲಖ(ಪ್ಪ)ಬಲಂಬೆರಸು ಬಂದು ದೊನವುರದೊಳ್ ಬಿಟ್ಟಿದ್ದು ದೇಸ(ಶ)ವೆಲ್ಲಮಂ ಸೂಱೆಗೊಣ್ಡು (ಎಇ. XVI, ೭೪-೨; 1007).
[ **P** ಇದು 'ದೋಣವುರ' ಅಥವಾ 'ದ್ರೋಣಪುರ' ಎಂಬುದರ ಅಪಲಿಖಿತ ವಿರಬಹುದೇ ? ]

**ದೊಣ್ಣಮಾರ** (ನಾ). ಒಬ್ಬಾತನ ಹೆಸರು: ಶ್ರೀರಾಮರಾ ರಾಮಡಿನಾಡು ಮೂನೂಱಱ ನಾಣ್ದರಸಾ ಆಳೆ ಅವರ ಮಗನ್ದೊಣ್ಣಮಾರನ್ ಚೋಱದ ನಚ್ಚಯನ್ನೊಳ್ಪಟ್ಟು (ಎಕ. X, ಗೌರೀಬಿ. ೭೭-೩; ಸು. 750).
[ ದೊಣ್ಣ? + ಮಾರ ]

**ದೊನ್ನೆ** (ನಾ). ಬಾಳೆಯ ಅಥವಾ ಅಡಿಕೆಯ ಪಟ್ಟೆಯಿಂದ ಮಾಡಿದ ಬಟ್ಟಲು; ಎಲೆಬಟ್ಟಲು: ಮೃದುತರವೆನಿಪ ಪರಿಮಳಿಪ ಹೊಸ ಖಂಡಂಗಳಂ ಸವಿಗೊಳುತ ಪುಳಕಿಸಿ ಹೊಲಿದ ದೊನ್ನೆಯೊಳಿರಿಸಿ ಬಾಸಣಿಸಿ (ಬಸಪು. ೧೮-೨೧); ದೊನ್ನೆಗಳ ಹರಹಿ ಬಾಳೆಲೆಹಾಳೆಯಂ ಹಾಕಿ ಬಿನ್ನಣದಿ ಮಾಡಿದಾ ಚೌಕದೆಡೆಗಳ ಮುಂದೆ . . . ಕುಳ್ಳಿರ್ದರ್ (ಸಮ್ಯಕೌ. ೬-೨೩); ಮತ್ತದಕೆ ಹಾಲು ನೀರೆಱದು ಸಂಪಳಿಗಲಸಿ ಎತ್ತರದ ಮೇಲೆ ದೊನ್ನೆಯನಿರಿಸಿ ತುಪ್ಪವಂ ಹತ್ತದಂದದಿ ತೊಡೆದು ಹೊಯ್ದುಕೊಂಡದನಿಡ್ಡಲಿಗೆಯಂತೆ ಬೇಯಿಸುವುದು (ಸೂಪಶಾ. ೬-೭); ಸಣ್ಣನುಚ್ಚು ಇಟ್ಟುಕೊ ಗೊಡ್ನಳಿ ಕಾಸಿಕೊ ದೊನ್ನೆಯೊಳಗೆ ತುಪ್ಪ ಬಡಿಸಿಕೊ (ಪುರಂದ. ೩-೧೮೭-೭); ನಳಿನದಳದ ದೊನ್ನೆಯೊಳು ಶಾಂತೋದಕವ ಮೊಗೆದು ಪಾನಂಗೈಸಿ (ನವಮೋ. ೬-೬೦); ಅಡಕೆಯ ಹಾಳೆಗಳಿಂದ ಐದಾರು ದೊಡ್ಡದೊಡ್ಡ ದೊನ್ನೆಗಳನ್ನು ಹೊಲಿದರು (ಕಳಹು. ೬೫).
[ ದೇ.II ತಮಿ. ತೊನ್ನೈ; ಮಲ. ದೊನ್ನ; ತುಳು. ತೆಲು. ದೊನ್ನೆ; ಕುಇ. ಡೊನೊ; ಕುವಿ. ದುನ್ನೋ ]

**ದೊಪ್ಪನೆ** (ಅ). ದೊಪ್ಪೆಂದು ಶಬ್ದವಾಗುವ ಹಾಗೆ: ರಂಗಮಂಟಪದೊಳು ದೊಪ್ಪನೆ ಬಿದ್ದು (ಬಸರ. ೨-೫೦); ದೊ [ಪಾಠಾಂ. ತೊ]ಪ್ಪನೆ ಕೆಡೆಗು ದನಿಗೊಟ್ಟು ಕರೆದು ಕರಂ ಮುಗಿದು ಹೊಡಮಟ್ಟು ಗಿಣ್ಣಲನಂತು ನೂಕುಗು ಮತ್ತೆ ಮುಂದಿಡುಗು (ಬಸಪು. ೧೪-೧೮); ತನ್ನ ಬಾಯಂ ಹೊಯ್ದುಕೊಳುತಂ ತನ್ನ ಶೋಕಾಕ್ರಾಂತದಿಂದಂ ತನ್ನ ತಾ ಮಱೆದಿಂತು ದೊ[ಪಾಠಾಂ. ಧೊ]ಪ್ಪನೆ ಕೆಡೆದು ನೆಲದಲ್ಲಿ (ಬಸಪು. ೪೫-೭); ನೆಲಕೆ ದೊಪ್ಪನೆ ಹಾಯ್ದುಕೊಂಡನು (ಕುಮ್ಮಾಕ. ೧೫-೨೭); ದೊಪ್ಪನೆ ಎಚ್ಚರ ತಪ್ಪಿ ಬಿದ್ದಳು (ಬಂಕಿಮ. ೧೮೧).

**ದೊಪ್ಪದೊಪ್ಪನೆ, ದೊಪ್ಪುದೊಪ್ಪನೆ** (ದ್ವಿರುಕ್ತಿ): ದೊಪ್ಪದೊ [ಪಾಠಾಂ. ತೊಪ್ಪತೊ]ಪ್ಪನೆ ಪಿರಿಯ ಕಲ್ಲೊಳು ತಪ್ಪಲಿಡುತಂ ಸೋಹುತಂ ಹರಿತಪ್ಪ ಕೆಲವಾಡುಗಳನು . . . ಹೊಡೆದು (ಬಸಪು. ೨೦-೧೪); ಶೂಲೆ ಬಾಧಿಸುತಿಪ್ಪ ಸಂಕಟಕಾಲದಿಳೆಯೊಳು ದೊಪ್ಪದೊ[ಪಾಠಾಂ. ತೊಪ್ಪತೊ]ಪ್ಪನೆ ಕೆಡೆದು ಹೊರಳುತ್ತ ಮಿಗೆ ನರಳುತಿರಲು (ಬಸಪು. ೪೯-೨೭); ದೊಪ್ಪುದೊಪ್ಪನೆ ಪಚ್ಚೆಯಿಡುವಳು ದುಗುಡವ ಸೊಪ್ಪುಸೊಪ್ಪನೆ ತುಳಿವಂತೆ (ಭರಜ. ೧೩-೬೫).
[ ದೊಪ್ಪು + – ಅನೆ$_1$ ]

**ದೊಪ್ಪು** (ನಾ). ಒಂದು ಅನುಕರಣ ಶಬ್ದ: ಬೆರಸಿ ಪದಾತಿ ನೆಕ್ಕು ನೆರಿಲೆಂಬ ನೆಳಿಲ್ನೆಳಿಲೆಂಬ ಘಾರು ಘರ್ಘರ ಘರಿಲೆಂಬ ದೊಪ್ಪು ದೊದಲೆಂಬ . . . ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳು (ಗಿರಿಕ. ೬-೬೮).

**ದೊಪ್ಪುಟು** (ನಾ). ಒಂದು ಬಗೆಯ ಹುಳು: ಸ್ಪರ್ಶರಸಮೆರಡುಮನಱಿವ ಶಂಖ ಶುಕ್ತಿ ಗುಳ್ಳೆ ಗುಬ್ಬಿ ನಾಯಿನೊಳಲೆ ದೊಪ್ಪುಟು ಗೊಣ್ಣೆಹುೞು ಕ್ರಿಮಿ ಮೊದಲಾದುವೆಲ್ಲಱೊಳಂ (ಪಸಾರ. ೪೯). [ ? + ಪುೞು ]

**ದೊಪ್ಪೆ** 'ಡೊಪ್ಪೆ' ನೋ.

**ದೊಪ್ಪೆಗಿವಿ** (ನಾ). ದೊನ್ನೆಯಂತೆ ಅಗಲವಾಗಿರುವ ಕಿವಿ: ಕೈಕಾಲುವತಿ ತೋರ ದೊಪ್ಪೆಗಿವಿ ದನಿ ಕಾಕು (ಕಕ್ಕೋಕ. ೨-೧೭).
[ ದೊಪ್ಪೆ (<ಡೊಪ್ಪೆ) + ಕಿವಿ$_3$ ]

**ದೊಪ್ಪೆನ್** (ಕ್ರಿ). ದೊಪ್ಪೆಂದು ಶಬ್ದಮಾಡು: ಛಾಯವಡೆದಾನೆಗಳು ಗುಳವನು ಹಾಯಿಕಲು ನೆಲಕುರುಳಿದವು ವಾನಾಯುಜಂಗಳು ಬಿಗುಹ ಬಿಡೆ ದೊಪ್ಪೆಂದವಾಜಿಯಲಿ (ಕುಮ್ಮಾಕ. ೫-೪); ತಲ್ಲಿಂಗಮಂ ಕಂಡು ಕೋಪಾವೃತಚಿತ್ತಂ ಬೇಗದಿಂ ಕೈಗೊಡಲಿಯನಧಟಿಂದೆತ್ತಿ ಹಾಯ್ದಿಕ್ಕಿದಂ ತಪ್ಪಿತನಂ ದೊ[ಪಾಠಾಂ. ಧೊ]ಪ್ಪೆಂದು ಮುಂಡಂ ಕೆಡೆಯೆ ತಲೆ ಕರಂ ಬೀಳ್ವಿನಂ (ವೃಷವಿ. ೬-೧೬). [ ದೊಪ್ಪು + ಎನ್$_1$ ]

**ದೊಬ್ಬಿಕೆ** (ನಾ). ದಬ್ಬುವುದು; ನೂಕುವುದು: ಅನಿರೀಕ್ಷಿತವಾದ ಈ ದೊಬ್ಬಿಕೆಯಿಂದಾಗಿ ಅನಂತನ ಹೆಜ್ಜೆ ತಪ್ಪಿಹೋಗಿ ಅವನು ಮುಗ್ಗರಿಸಿ ಬಿದ್ದನು (ಒಡ್ಡಿಉ. ೧೨೭). [ ದೊಬ್ಬು (<ದಬ್ಬು$_1$) + – ಇಕೆ ]

**ದೊಬ್ಬಿಸು** 'ದಬ್ಬಿಸು' ನೋ.

**ದೊಬ್ಬು** 'ದಬ್ಬು$_1$' ನೋ.

**ದೊಬ್ಬುಳಿ** 'ದಂಪ್ಪಳ' ನೋ.

**ದೊಮ್ಮ** (ನಾ). ಒಂದು ಮನೆತನದ ಹೆಸರು (?): ಪೃಯ್ಯಲೊಳ್ ದೊಮ್ಮರ ಕಾಡವಂ ಸತ್ತು ಸ್ವರ್ಗ್ಗಾಲಯಕ್ಕೇಱಿದನ್ (ಎಇ. VI, ೦೭೩-೪; 780). [ ? ]

**ದೊಮ್ಮರ** 'ದೊಂಬ' ನೋ.

**ದೊಮ್ಮಳಿ** (ನಾ). ೧. ಗುಂಪು; ಸಮೂಹ. ೨. ಗಾಬರಿ. 'ದೊಮ್ಮಳಿಸು' ಪರಾ. [ <ದೊಂದುಳಿ ? ]

**ದೊಮ್ಮಳಿಸು** (ಕ್ರಿ). ೧. ಗುಂಪುಗೂಡು; ಸಂದಣಿಗೊಳ್ಳು: ಧರಾಚಕ್ರಮನಾಕ್ರಮಿಸಿ ನಿಶಾತಹೇತಿಗರ್ಭಂಗಳುಮನೇಕಪ್ರಕಾರಕೇತನ ವಾಜಿರಾಜಿಗಳುಮಾಗಿ ದೊಮ್ಮಳಿಸಿ ನಡೆವ ರಥಂಗಳುಮಂ (ಪಂಪಭಾ. ೧೧-೫೧ ವ); ಅಮಿತಾಳಾಪಂಗಳಿಂ ದೊ[ಪಾಠಾಂ. ದ]ಮ್ಮಳಿಸಿ ಕಿನಿಸಿ ಕೊಟ್ಟೊಳ್ವ ತಾತ್ಪರ್ಯಮೇಂ (ಸುಕುಮಾ. ೭-೪೦); ನೆರೆದ ರಾಜಲೋಕಮೆಲ್ಲಂ ರಾಜಸುತೆಯನೀಡಾಡಿ ಬಂದು ದೊಮ್ಮಳಿಸಿ ಮುಮ್ಮಟಿಕೊಂಡು ನೋಡುತ್ತಮಿರ್ಪುದುಂ (ಅರ್ಧನೇ. ೭-೩೯ ವ); ಅಂತುಭಯಬಳಚತುರಂಗವಾಹನಂಗಳೊಳೊರ್ವೊರ್ವದಲೆ ದೊಮ್ಮಳಿಸಿ ಬೆರಸಿದಾಗಳ್ (ವರ್ಧಪು. ೮-೪೭). ೨. ಗಾಬರಿಯಾಗು; ಗಾಬರಿಪಡು: "ದೊಮ್ಮಳಿಸು–ತಿರ್ಯಕ್ಸಮೂಹಸಂಭ್ರಮೇ (ದನದ ಹಿಂಡಿನಂತೆ ಗಾಬರಿಪಡು)" (ಶಮಧಾ); ಅಗ್ನಿಶಿಖಾಮುಖಕ್ಕೆ ದೂರಮಪ್ಪ ಬಕ್ಕಬಯಲ ತಾಣದೊಳ್ ದೊಮ್ಮ [ಪಾಠಾಂ. ರ್ಮ]ಳಿಸಿ ನಿಂದು ಬಹುಜನಂಗಳುಮ್ಮಳಿಸಿ ತಮ್ಮೊಳಿಂತೆಂದರ್ (ಪಂರಾಮಾ. ೧೧-೧೫೫ ವ); ಆಗಳಂಜಲಿಮಂಜಲಿಮೆಂದು ಬೆಗಡುಗೊಂಡ ಗೋವಳಿಗರ ನೊಡಗೊಂಡು ದೊಮ್ಮಳಿಸಿ ಮಮ್ಮಟಿಗೊಳ್ವ ಗೋವುಗಳನಟ್ಟಿಕೊಂಡು ಕಿಱಿದಂತರದೊಳಿರ್ದ ಗೋವರ್ಧನಗಿರಿಯ ಮಱಿಗೆ ಪೋಗಿ (ಅರ್ಧನೇ. ೮-೧೦ ವ); ಹಯಂ ತಾಂ ತನಗೆ ತೂಪಿಱಿದ ಕೂರ್ಪಿನ ಪೆರ್ಮೆಯಿಂ ಸೊಮ್ಮುವೆರ್ಚಿ ದೊಮ್ಮಳಿಸಿ ಕಿಚಿಕಿಲ್ದು ಬಿಮ್ಮನೆ ನಡೆದು ಬಟಿಯ ಪೊಟಿಯು ಮಿಕ್ಕು ಪೊಕ್ಕು ದಿಕ್ಕುಗೆಟ್ಟು ಮುಟುಂಗಿ ಕಣ್ಮಾಯವಾಯ್ತು (ರಾಮಾಶ್ವ. ೧೨೦-೨೩). ೩. ವೇಗಗೊಳ್ಳು; ರಭಸಗೊಳ್ಳು: ಅಂತು ನೆಗೆಟ್ದ ಭಾವವ್ಯತಿಕರಂಗಳ್ ದೊಮ್ಮಳಿಸೆ ತಮ್ಮನಿಬರುಂ ಘಟ್ಟಿಸಿ ನಿಂದು ತಟ್ಟುತ್ತು ತಾಗಿ ಪೋಗದೆ (ಅನಂಪು. ೭-೪೭ ವ); ಅಂತು ನಿಂದಳವಿಯೊಳ್ ದೊಮ್ಮಳಿಸಿ ನೂಂಕುವ ದೈತೇಯಚಕ್ರಿಯ ಚತುರಂಗಬಲಮುಮನಿತುಮೊಂದೆ ಮುಖದೊಳ್ ಕೈಕೊಂಡು ನಿಜಗಜಘಟಾಪಟಲಕ್ಕೆ ಸೂಚೀಯಾನೆಯಂ ಮಾಡಿ (ಅನಂಪು. ೧೪-೭ ವ). [ ದೊಮ್ಮಳಿ + – ಇಸು$_3$ ]

**ದೊಮ್ಮೇಜಾಡ್ಯ** (ನಾ). ಪಶುಗಳಿಗೆ ಬರುವ ಒಂದು ಬಗೆಯ ರೋಗ: (ಎಸಮ್ಮ. XV, ೪೦). [ ದೊಮ್ಮೆ$_0$ (P←ತೆಲು. ದೊಮ್ಮ) + ಜಾಡ್ಯ ]

**ದೊರಕಿಸು** (ಕ್ರಿ). ಪಡೆ; ಹೊಂದು; ಪಡೆದುಕೊಳ್ಳು: ಎಲ್ಲಾದರೂ ಒಂದು ಉದ್ಯೋಗ ದೊರಕಿಸಿ ಉಪಜೀವನಕ್ಕೆ ಮಾರ್ಗ ಮಾಡಿಕೊಳ್ಳಬೇಕು (ಮುಂಬಯಿ. ೪-೫೦); ಸರ್ಕಾರದ ಆ ಅನ್ಯಾಯದ ವಿರುದ್ಧ ಹೋರಾಡಿ ದೊರಕಿಸಿದ ಪ್ರಥಮವಿಜಯದಿಂದಾಗಿ ಹುಡುಗರೆಲ್ಲ ಹರ್ಷದಿಂದ ಹಾರಾಡುತ್ತಿದ್ದಾರೆ (ಅಗಸ್ಸ್. ೮೦); ಗಾಂಧೀಜಿ ಹೇಳುತ್ತಾರೆ–'ರಾಟೆಯ ತಿರುಗಿಸಿರಿ! ಸ್ವಾತಂತ್ರ್ಯವ ದೊರಕಿಸಿರಿ' ಎಂದು! (ಇತಿಶ್ರೀ. ೧೩೭). [ ದೊರಕು + – ಇಸು$_3$ ]

**ದೊರಕು** (ಕ್ರಿ). ಸಿಗು; ಸಿಕ್ಕು; ಪ್ರಾಪ್ತವಾಗು; ಲಭ್ಯವಾಗು; ದೊರೆ; ವರರಾಜ್ಯಂ ಶ್ರೀಸಹಿತಂ ದೊರಕಲ್ ಕೈಕೊಳ್ಳದಿರ್ಪರಾರ್ (ಪಂಚತಂ. ೧೦೦-೧೩); ಮಂದಮತಿಗಳಿಗೆ ದೊರಕದ ಲೇಸನೀಯಬೇಕೆಂದು ಮನದೊಳು ನೆನೆದನು (ಸಿದ್ಧರಾ. ೧-೨೫); ತನಗೆ ಮಣಿ ದೊರಕದೆಂಬೊಂದನುತಾಪದೆ ತಪನನೆಯ್ದಿದನೊ ಶರನಿಧಿಗೆಂಬಿನಮೆಸೆವ ರಾಗದಿಂ ಭೋಂಕೆನಲಪರಾಂಭೋಧಿಗಿಳಿದನಬ್ಜಸಹಾಯಂ (ದಶಕು. ೫-೧೪); ಧೇನುವೇತಕೆ ದಾನಗೊಂಬ ಮಹಾನುಭಾವರು ದೊರಕದಿದ್ದರೆ (ಸಂಭಪ. ೧೦-೧೧); ಇರಲಿರಲಿ ತೋಱಸುವೆ ಮುಂದಕೆ . . . ದೊರಕುವಶಂಭವ ಬೀದಿಗಲಹವನೆಂದಳು (ತೊರರಾ. ೨-೧-೨೯); ಪರಮಪಟ್ಟಸ್ಥಲಮಾರ್ಗಮಿಾ ಶರೀರದೊಳಿಲ್ಲಿ ದೊರಕಲರಿಯದು (ಚಿಬಪು. ೩-೨); ದುರ್ಲಭವಾದ ವಸ್ತುಗಳೆಲ್ಲವೂ ಅವನಿಗೆ ದೊರಕಿದ್ದವು (ಪರಿಚೀ. ೧೦). [ <ದೊರೆ$_1$./ತುಳು.ದೊರಕು, ದೊರಂಕು, ದೊರಕ್; ತೆಲು. ದೊರಕು ]

**ದೊರಗು** 'ತರಕು' ನೋ.

**ದೊರಗುಉಸುಬು** (ನಾ). ಒರಟಾದ ಮರಳು,–ಉಸುಬು; ದಪ್ಪ ಮರಳು: ಹೋಗುವ ದಾರಿಗೆ ದೊರಗುಉಸುಬನ್ನು ತಂದು ಸುರಿದು ಚೆನ್ನಾಗಿ ಮಾಡಿದ್ದಾರೆ (ಅಪೂಪ. ೩೨). [ ದೊರಗು (<ತರಕು) + ಉಸುಬು (<ಉಸುಂಬು) ]

**ದೊರಗುಗಾಜು** (ನಾ). ಒರಟಾದ ಮೇಲ್ಮೈಯುಳ್ಳ ಗಾಜು; ಪಾರದರ್ಶಕವಲ್ಲದ ಗಾಜು: ಅದರ ಮುಂಗಡೆಯಲ್ಲಿ ಒಂದು ಭೂತಕನ್ನಡಿಯೂ ಹಿಂಗಡೆ ಒಂದು ದೊರಗುಗಾಜಿನ ಹಲಗೆಯೂ ಇವೆ (ವಿಜ್ಞಾವಿ. ೮). [ ದೊರಗು (<ತರಕು) + ಗಾಜು (<ಕಾಜು) ]

**ದೊರಪಯ್ಯ** (ನಾ). ಒಬ್ಬಾತನ ಹೆಸರು: ಪಡಿಯಱ ದೊರಪಯ್ಯನ ಪಿರಿಯರಸಿ ಪಾಂಬಬ್ಬೆ ತಲೆವಱಿದುಮೂವತ್ತುವರಿಸಂ ತಪಂಗೆಯ್ದು ಯ್ದುಂ ನೋನ್ತುಚ್ಚಮಠಾಣಮೇಱಿದರ್ (ಎಕ. VI, ಕಡೂರು. ೧-೧೩; 971). [ <ದೋರ$_3$ + ಅಪ (<ಅಪ್ಪ$_1$) + ಅಯ್ಯ$_1$ ]

**ದೊರಯ್ಯನಾಯಕ** (ನಾ). ಒಬ್ಬಾತನ ಹೆಸರು: ಅಯ್ಯಹರಸರ ಮಗಮ್ ದೊರಯ್ಯನಾಯಕ (ಮೈಆರಿ. ೧೯೨೪, ೯೫-೪; 1021). [ <ದೋರ$_3$ + ಅಯ್ಯ$_1$ + ನಾಯಕ ]

**ದೊರೆ$_1$** (ಕ್ರಿ). ೧. ಸಮೀಪಕ್ಕೆ ಬರು; ಬಳಿಸಾರು: ಮುಳಿಯಿಸುವ ಮುಳಿವ ತಿಳಿಪುವ ತಿಳಿವೊಲಿಸುವ ದೊರೆವ ನೆರೆವ ರಮಣೀರಮಣಾಕುಳ ಕಳಕಳದಿಂದಂಗಜವಿಳಾಸದೆಱೆವೆಟ್ಟು ನೆಟ್ಟನಿದೆ ಪೆಱತುಂಟೇ (ಶಾಂತಿಪು. ೩-೧೦). ೨. ಕಾಣು; ತೋರು: ಮೂಡದೆಸೆಯೊಳ್ಕೆಂಪು ದೊರೆಯೆ ತಾರಗೆ ಪರೆಯೆ ಕೂಡೆ ತಂಗಾಳಿ ಮುಂಬರಿಯೆ (ಜೈಮಿಭಾ. ೨-೭೫). ೩. ದೊರಕು; ಸಿಕ್ಕು; ಸಿಗು; ಪ್ರಾಪ್ತವಾಗು; ಲಭಿಸು: ಎಮ್ಮ ಮಮ್ಮಂಗಮೆಮಗವಿಾಗಳನುವರಂ ದೊರೆಯಲಾಯ್ತು [ಪಾಠಾಂ. ದೊರೆಯಾಯ್ತು] (ಪಂಪಭಾ. ೧೧-೪೨ ವ); ನಗರಾಂಗನೆಯರ್ಮಹೋತ್ಸವಂ ದೊರೆದುದೆನುತ್ತಲಂಪು ಮಿಗೆ ನೋಡಿದರಾ ಮನುಜೇಂದ್ರಚಂದ್ರನಂ (ಕಾದಂಪೂ. ೪೮೩); ಬಿಱುನಡೆಯ ಪದಹತಿಗಳಿವ ಪಲತೆಱದ ಜೀವಿಗಳಿಗೆ ವಿಮೋಕ್ಷಂ ದೊಱೆ[ರೆ]ವುದೆಂದಡೆ ಬೊಮ್ಮಯನ ಕೈಯಲಿ ಮರಣವಾದ (ಬಸಪು. ೩೪-೩೭); ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ (ಪುರಂದ. ೩-೧೯೯ ಪಲ್ಲವಿ); ವಿಶೇಷ ಸುಕೃತದ ಫಲಂ ದೊರೆತುದೆನಗೆಂದವಂ ಬಿದ್ದನಚ್ಯುತನಂಘ್ರಿಗೆ (ಜೈಮಿಭಾ. ೭-೬೫); ಸೀಮೆಗೆ ಯಿರಪಗೌಡ × ರಡು ಕೈವಡ ಮುಂತಾಗಿ ಸೀಮೆನಹಿಸು ಮುಂತಾಗಿ ದೊರೆವ ತರು ಮುಂತಾಗಿ ಭೂಮಿಗೆ ನಾಲ್ಕುಮೂಲೆಗೆ ಕಲ್ಲು ನಟ್ಟದ್ದು (ಎಕ. VII, ಶಿವಮೊ. ೯೩-೨೭; ?); ಪರಮಾತ್ಮನ ದರ್ಶನ

ಕೇವಲ ತಪಸ್ಸಿನಿಂದಲೂ ಕರ್ಮಯೋಗದಿಂದಲೂ ದೊರೆಯಬೇಕೆಂಬುದಿಲ್ಲ (ಧರ್ಮಸಾ. ೮೫). ೪. ಉಂಟಾಗು ; ಸಂಭವಿಸು : ಮಂತ್ರಿ ಚತುರೋಪಾಯಂಗಳಂ ಬಲ್ಲೊಡಂ ದೊರೆವೋಲ್ ಚಿನ್ನಕೆ ಸೌರಭಂ (ಸೋಮೇಶ. ೧೧).
[ ದೇ.॥ ತೆಲು. ದೊರೆಯು, ದೊರಪ್ಪ ]

**ದೊರೆ₃** (ನಾ). ೧. ಸಮಾನ ; ಎಣೆ ; ಸಾಟಿ; ಸರಿ: "ಸರಿ, ದೊರೆ . . . ಸಂಗಡಂ–ಈ ೧೧ ಸಮಾನಕ್ಕೆ ಪೆಸರ್" (ಶಶಸಾ. ೫೯–೨೯೧) ; ಹರಿಣಧರ ಸರಸಿಜಂಗಳ್ ದೊರೆಯಲ್ಲವು ತನಗೆ ತಾನೆ ದೊರೆ ನಿನ್ನ ಮೊಗಂ (ಕವಿರಾ. ೩–೭೭) ; ಇದಱ ದೊರೆಗೆ ಗಿರಿಗಳುಮೊಳವೇ (ಆದಿಪು. ೭–೬೫) ; ಜಾಕವ್ವೆ ಗುಣದ ಪೆಂಡಿರ್ ದೊರೆಯೇ (ಪಂಪಭಾ. ೧–೪೦) ; ನರನಾರಾಯಣರೆಂಬಿರ್ವರುಮೊಡಗೂಡಿದೊಡೆ ಗೆಲ್ವರಾರುರ್ವರೆಯೊಳ್ ನಿರುತಮೆನೆ ನೆಗಟ್ದ ನಿಮ್ಮಿರ್ವರ ದೊರೆಗಂ ಬಗೆವೊಡಗ್ಗಳಂ ನರರೊಳರೇ (ಪಂಪಭಾ. ೧೨–೧೨೩) ; ದೊರೆಗಾಣೆಂ ನಿನಗೆ ಜಿನೇಶ್ವರ ಪೆಱರಂ ನಿನಗೆ ನೀನೆ ದೊರೆಯೆನಿಪ್ಪೆ (ಅಜಿಪು. ೮–೨೨) ; ತನಿರಸದಿಂದಮೃತದ ದೊರೆಯೆನಿಸುವ ಕುಂಕುಮದ ರುಚಿಯನನುಕರಿಸುವ ಮಾವಿನ ಪಣ್ಣಂ (ಧರ್ಮಾಮೃ. ೮–೧೭); ಕಡೆಯಲೆಂದು ಪಾಲ್ಗಡಲೊಳ್ ತಂದಿರಿಸಿದ ಮಂದರಗಿರಿಗೇಂ ದೊರೆಯಾದುದೊ ಪೊನ್ನ ಕೋಂಟೆ (ಮಲ್ಲಿಪು. ೨–೫೧). ೨. ಸರಿಯಾದುದು ; ಸಮಂಜಸವಾದುದು : ಕವಿಗಳ ನಾಮಧಾರಕನರಾಧಿಪರೋಳಿಯೊಳೀತನೊಳ್ಳಿದಂ ಕವಿ ನೃಪನೀತನೊಳ್ಳಿದನೆನಲ್ ದೊರೆಯಲ್ತು (ಪಂಪಭಾ. ೧–೧೧); ನಿನ್ನಂ ಪುಸಿಯಾಡಿ ಕಾಡಲೆನಗೇಂ ದೊರೆಯೇ (ಪಂಪಭಾ. ೮–೪) ; ದೊರೆಯೊಳೊಬ್ಬನ ಹಾನಿ ಭಟರೆಲ್ಲರಿಗೆ ದೊರೆ (ಕುವ್ಯಾಶ. ೨–೧೯). ೩. ರೀತಿ ; ಬಗೆ ; ಕ್ರಮ : ಸ್ಯಂದನಾಶ್ವಂಗಳನೊಂದೆ ದೊರೆಯೊಳ್ ಪರಿಯೆ ಪರಿಚೋದಿಸಿ ಬಾಣಪಾತಪ್ರಮಾಣದೊಳ್ ನಿಱಿಸಂಪುದುಂ (ಶಾಂತಿಪು. ೪–೧೧ ವ) ; ಮದವಮಾಂದ್ಯೋತ್ಪಾದನಾಪಹರಣಮಾರಣ ವಶೀಕರಣದ್ವೇಷಣಾದಿಗಳ್ಗೆ ಪೆಱವುವಿಾ ದೊರೆಯವರ್ಕೆ ಪಿರಿದುಮಾಗಮಂಗಳ ಪ್ರಮಾಣಂಗಳ್ (ಕಾದಂಉ. ೬೪೮); ಪೂಮಳೆಯಿಾ ದೊರೆಯಕ್ಕುಮೆಂಬಿನಂ ಸುರಿದುದು ಪುಷ್ಪವೃಷ್ಟಿ (ಎಕ. II, ೨೩೪–೩೯ ; ಸು. 1180).

**ದೊರೆಗೆ ವರ್** = ಸಮನಾಗು ; ಸಮಾನವಾಗು : ಸಮಕ್ಕೆ ಬರು : ಹಾರಾದ್ಯಾಭರಣಂಗಳಿನಾ ರೂಪಾಶ್ಚರ್ಯವಾಗೆ ಪಾಣಿಕಚಟ್ಟಂ ನೀರಂಜಿಸಿ ದಳಿವಿಡಿದ ಮಹಾರತ್ನದ ದೊರೆಗೆವಂದುದಾ ಸ್ತ್ರೀರತ್ನಂ (ಆದಿಪು. ೪–೬೨) ; ಖಳರೋಳಿಯೊಳ್ದೊರೆಗೆವಂದನೆನ್ನನದೇನನೆಂದಪೆಂ (ಕಾದಂಉ. ೪೦೦) ; ಚತುರಾನ್ವಿತಮೆಂಬ ನೆಗಟ್ತೆಯಿಂದಿಳಾವಂತರೊಳಾರುಮೇಂ ದೊರೆಗೆ ವರ್ಪರೆ ಪೋಲಿಸೆ ಭಟ್ಟಪಾರ್ಯನೊಳ್ (ಲೋಕೋಪ. ೧–೧೧) ; ಹರಿಕಾನ್ತೆಯುಮಿಾ ಕಾನ್ತೆಯ ದೊರೆಗೆ ವರಲ್ಕಾಱಳು (ಎಕ. VI, ಮೂಡಗೆ. ೨೨–೨೪ ; 1129). **ದೊರೆಯಾಗು** = ಹೋಲಿಕೆಯನ್ನು ಪಡೆ,–ಹೊಂದು ; ಹೋಲು : ನೇಣ್ಬಲೆಯ ತೊಡರೊಳ್ ತೊಡಂಕಿ ನಡುಗುವ ಕುರಂಗಿಯೊಳ್ದೊರೆಯಪ್ಪಳ್ (ಪರ್ಧಪು. ೪–೫೭ ವ) ; ಸುರನದಿಯ ಫೇನಪುಂಜದ ಸಿರಿಯಂ ಸಲೆ ತಳೆದು ತೊಳಪ ತುಹಿನಾಚಲದೊಳ್ ದೊರೆಯಾದಂ (ಕುಸುಮಾ. ೧–೧೨೧). 'ಒರೆ₇' ಪರಾ.

**ದೊರೆ₄, ಧೊರೆ** (ನಾ). ೧. ಒಡೆಯಂ; ರಾಜ; ಪ್ರಭು ; ಅರಸು : ಗಾಂಗೇಯಂ ದೊರೆಯ ಪಿರಿಯ ಮಗನುಂ ಕ್ರಮಕ್ರಮಾರ್ಹನುಮಿರ್ದಂತೆನ್ನ ಮಗಳಂ ಕುಡೆವು (ಪಂಪಭಾ. ೧–೭೦ ವ) ; ಹೊನ್ನುಳ್ಳ ದೊರೆಯಂತೆ ಭಾವಿಸಿಕೊಂಡಂ ಹಮ್ಮಿನಲಿಪ್ಪನೆ ಭಕ್ತನು (ಚನ್ನವ. ಕ. ೧೨೧–೨೭೭) ; ದೊರೆಯೊಳ್ ಸ್ನೇಹವನಾಂತವಂ ಬಡವರಂ ತಾಂ ನೋಟ್ಟನೇ ಪ್ರೀತಿಯಿಂ (ಸೋಮೇಶ. ೪೦) ; ದೊರೆ ತತ್ತ್ವರುಳಿದರು ನೆರವು ಬಹುದು (ಕುವ್ಯಾಶ. ೨–೧೯) ; ಮಗಳಿಗೆ ವರನಾವ ಧರೆಯ ದೊ[ಪಾಠಾಂ. ಧೊ]ರೆಗಳೊಳಗೆಂದ (ವರ್ಧಚ. ೪–೮೩) ; ದೊರೆ ಎನ್ನ ಒಲವು ಸುಸ್ಥಿರವೆಂದೆಲ್ಲರ ಹಗೆತರವಲ್ಲ (ಪುರಂದ. ೨–೪೫–೨) ; ದೊರೆಯು ರಥವಾದರೂ ಎಣ್ಣೆಯಿಲ್ಲದೆ ತಿರುಗದು (ಗಾದ). ೨. ಯೂರೋಪಿನಿಂದ (ವಿಶೇಷವಾಗಿ ಇಂಗ್ಲೆಂಡಿನಿಂದ) ಬಂದ ಮನುಷ್ಯ ; ಇಂಗ್ಲೀಷ್ ಅಧಿಕಾರಿ, ಕಾಫಿ ತೋಟದ ಒಡೆಯ, ಪಾದ್ರಿ ಮುಂತಾದವರು : ದೊರೆಗಳ ಮನಸ್ಸಿಗೆ, ಅವಳು ಆತ್ಮಹತ್ಯೆ ಮಾಡಿಕೊಂಡಿರಬೇಕೆಂಬ, ಭೀತಿ ಹುಟ್ಟಿತು (ಜೋಮದು. ೯೪) ; ದೊರೆಗಳು ಪುಸ್ತಕಗಳನ್ನು ಇನಾಮು ಕೊಡುವದಕ್ಕೆ ಬರುತ್ತಾರೆ (ಮುಂಬಯಿ. ೧–೧೪). ೩. ಸಾಮರ್ಥ್ಯ ; ಪರಾಕ್ರಮ : ಪರಿಭವದ ಪೊಱಿಯನಾಂತಿರ್ದರಾತಿಗಳ್ಗೆ ತನ್ನ ಕುಲಮುಂ ಚಲಮುಂ ದೊರೆಯುಂ ಕಿಡೆ ಬಾಳ್ವಂ ಗಂಡರೂಪಿನೊಳ್ ಗಂಡನಲ್ತು ಪೆಂಡತಿಯೆ ವಲಂ (ಆದಿಪು. ೧೨–೯೭). ೪. ಹಿರಿಮೆ ; ಯೋಗ್ಯತೆ. 'ದೊರೆಗೆಡಿಸು' ಪರಾ. ೫. ಶ್ರೇಷ್ಠತೆ ; ಆಧಿಕ್ಯ. 'ದೊರೆವೆಟ್ಟು₃' ಪರಾ. **ಧೊರೆ** : ೧. ನಿಮ್ಮ ಧೊರೆಗೆ ಶೀಘ್ರವಾಗಿ ಅರಿಕೆಮಾಡು (ಕೃವಾಕ. ೫೩) ; ಆ ಸವಿಾಪದ ಮಹೇಶೂರಪುರದ ಧೊರೆಗಳಂ ಕಾಪಿಟ್ಟುಕೊಂಡು ಇರುತ್ತಿರುವಳು (ಬಟ್ಟಿಆ. ೧೬–೨೫). ೬. ಅಧಿಕಾರಿ (?) : ಮಳಿಗೆಯೊಳಗೈನೂರ್ವ್ವರ್ ಸ್ವಾಮಿಗಳ್ ಬಿಟ್ಟಾಯಂ ಹೊಂಗೆ ಕೊಟ್ಟವರಲ್ಲಿಯುಡಕೆಯೊಂದು ಕೊಂಡವರಲ್ಲಿಯುಡಕೆಯೊಂದು ಎಣಿಸಿದ ಧೊರೆಗಳಲ್ಲಿ ಪ್ರತ್ಯೇಕವಡಕೆಯೊಂದು (ಎಇ. XX, ೧೨–೫೩ ; 1167).
[ ದೇ.॥ ತಮಿ. ತುರೈ, ಮಲ; ತುರ ; ತುಳು. ದೊರೆ, ಧೊರೆ ; ತೆಲು. ದೊರ, ಧೊರ ]

**ದೊರೆಕಾರ್ಯ** (ನಾ). (ಶ್ರೀಮಂತಿಕೆಯ) ಆಡಂಬರ : ಕಡೆವಳ್ಳಿ ಬೀಱುಮನೆ ಮುಂಗಯ್ಯಾರ್ಭಟಂ ಸಾಲದಾ ದೊರೆಕಾರ್ಯಂ ಘೃತಮಿಲ್ಲದೂಟದ ಸುಖಂ . . . ಬಱಗೈಯ್ಯಂ ಸುಱದಂತೆ (ಸೋಮೇಶ. ೧೭).
[ ದೊರೆ₃ + ಕಾರ್ಯ ]

**ದೊರೆಕುಮಾರಿತಿ** (ನಾ). ದೊರೆಯ ಮಗಳು ; ರಾಜಕುಮಾರಿ : ದೊರೆಕುಮಾರಿತಿಯರಾ ಬೀದಿಯೊಳಗರ್ತಿಯೊಳಿಡೆಯಾಡುತಿಹರು (ಕಂನವಿ. ೭–೧೯).
[ ದೊರೆ₃ + ಕುಮಾರಿತಿ ]

**ದೊರೆಕೊಳ್₁**, ದೊರೆಕೊಳ್ಳು (ಕ್ರಿ). ೧. ಸಿಕ್ಕು ; ಸಿಗು ; ಲಭಿಸು ; ಪ್ರಾಪ್ತವಾಗು : "ದೊರೆಕೊಳ್ – ಪ್ರಾಪ್ತೌ" (ಶಮಧಾ) ; ಧರಣೀಶರ ಕಾರುಣ್ಯಂ ದೊರೆಕೊಣ್ಡೊಡೆ (ಎಇ. XIII, ೩೩೦–೧೪ ; 929) ; ಪೂರ್ವಪುಣ್ಯಫಲದಿಂ ದೊರೆಕೊಂಡ ವಿಮಾನಂ (ಆದಿಪು. ೨–೬೪): ಸೌಖ್ಯಮದೆಂತುಂ ದೊರೆಕೊಂಡಿತಿಲ್ಲ ಹೃದಯಕ್ಕೋರಂತೆ (ಕಾದಂಪೂ. ೩೪೭); ಸಂದ ತಿರಿಕಂಗೆ ತೊವೆ ತುಪ್ಪಂ ದೊರೆಕೊಳಲುಣ್ಮೆ ನಲಿವ ತೆಱದಿಂ (ಧರ್ಮಾಮೃ. ೯–೩೦) : ದಿವಸಶ್ರೀ ದೊರೆಕೊಂಡ ಕೋಕಮಿಥುನಂ . . . ವಿರಾಜತ್ಕಳಹಂಸಯುಗ್ಮಮೆನೆ ಕೂಡಿ ಕ್ರೀಡಿಸುತ್ತಿರ್ಪರುತ್ಸವದಿಂದಾ ವಿಜಯಾವತೀಯುವತಿಯುಂ ವಿಶ್ವಂಭರೋರ್ವೀಶನುಂ (ಕುಸುಮಾ. ೩–೨೭) ; ಕೇಳಿದಗೆ ಮೋಕ್ಷದ ಮಂದಿರವು ದೊರೆಕೊಳ್ಳ್ಗು (ಸಂಭಪ. ೮–೧೪೨). ೨. ಉಂಟಾಗು; ಸಂಭವಿಸು; ಕೂಡಿಬರು : ನಿಮ್ಮ ಮನದಿಂ ಮಿಥ್ಯಾಕಳಂಕಂ ತೆರಳ್ದಿನಿಸುಂ ಪೋಗದು ಕಾಲಲಬ್ಧಿ ದೊರೆಕೊಂಡಂದಲ್ಲದೇಂ ಪೋಕುಮೇ (ಆದಿಪು. ೨–೨೨) ; ಪ್ರಸವಸಮಯಂ ದೊರೆಕೊಳೆ (ಪಂಪಭಾ. ೧–೭೪೪ ವ) ; ನುಡಿತಡವಪ್ಪುದೊಂದು ಮೊಗದೊಳ್ ಮುಱುಕಂ ದೊರೆಕೊಳ್ವುದೊಂದು . . . ಕಳ್ಗುಡಿದವರಂದಮಿಂತು (ಪಂಪಭಾ. ೨–೪೯) ; ಆ ಪುಲಿಯ ಪೂರ್ವಭವವೃತ್ತಾಂತಮುಮಂ ಕಾಲಲಬ್ಧಿ ದೊರೆಕೊಳೆ ತೋಱದಿರ್ದುದುಮ ನಱಿಪಿ (ಚಾವುಂಪು. ೨೫) ; ಗುರುವಂ ಲಘುಸಂಧಾನದೆ ನರನಿಸೆ ಗುರುಲಘುವಿಮಿಶ್ರಿತಂ ದೊರೆಕೊಳೆ ತದ್ಗುರು ತಚ್ಛಂದೋವೃತ್ತಿಗೆ ದೊರೆಯೆನಿಸಿರ್ದುದು ಮನಕ್ಕೆ ದುರ್ಯೋಧನನಾ (ಗದಾಯು. ೪–೪೮) ; ಇನಿತೊದಾಕ್ರೋಶಮಿಾ ನಾಗಶರ್ಮನೊಳೇಕಾರಣದಿಂದಮಿಂದು ದೊರೆಕೊಂಡತ್ತೊ

(ಸುಕುಮಾ. ೭-೪೩) ; ಪುರುಷಂಗೆ ಸುದೃಷ್ಟಿತ್ವಂ ದೊರೆಕೊಂಡೊಡೆ (ಸಮಪ. ೫-೧೧) ; ಬಲಿ ಕಾಲಲಬ್ಧಿ ದೊರೆಕೊಳೆ ಬಲವಂದಾ ಯತಿಪರಂಘ್ರಿಯುಗ ದೊಳ್ ಬಿಟ್ಟು (ನೇಮಿಪು. ೫-೨೫) ; ಸ್ವರದಿಂ ಯಲದಿನಸಾದಿಷ್ಟರೇಫದಿಂ ಪರದೊಳವರ್ದು ತೋಱೆ ಪವರ್ಗಂ ದೊರೆಕೊಳ್ಗುಂ ವಾದೇಶಂ (ಶಾಬ್ದಾವ. ೬೩) ; ಪರಿಹಾಸಹೇತುಭಾವನೆ ದೊರೆಕೊಳೆ ಚಿತ್ರಕ್ಕೆ ಹಾಸ್ಯ ಮೆಂಬ ರಸಂ ತಾಂ ಸರಸೋಕ್ತಿಗಳಿಂದಮುದಾಹರಿಪೆಂ (ಶೃಂಗಾರ. ೧-೬೬). ೩. ಈಡೇರು ; ನೆರವೇರು : ಬಗೆ ದೊರೆಕೊಂಡುದಿಲ್ಲಿದು ವಿಧಾತ್ರನ ದೋಷಮೊ (ಪಂಪಭಾ. ೧೩-೧೧೩) ; "ಲಭಿಸು" (ಪಂಪದೀ. ೫೫೦). ೪. ಸಿಕ್ಕಿ ಬೀಳು ; ವಶವಾಗು ; ಅಧೀನವಾಗು : ದೊರೆಕೊಂಡೆಯೆಂತು ಮುಂ ಪಂಜರಬಂಧನವಾದುದೆಂತು (ಕಾದಂಪೂ. ೯೧). ೫. ಕಾಣು ; ತೋರು ; ಪ್ರಕಟವಾಗು : ಉರದೊಳ್ ಫಣಿ ಕರದೊಳ್ ಬಿಲ್ ಶಿರದೊಳ್ [ತೊ]ಱೆ ತೊಱೆಯು ಕೆಲದೊಳೆಸೆದಿರೆ ಪೆಱ ಮುಂಗೊರಲೊಳ್ ಕಱೆಮಱೆಯಿಲ್ಲದೆ ದೊರೆಕೊಳೆ ಮೃಡನಡಿಗೆ ಹರಿಗನೆಱಗಿದನಾಗಳ್ (ಪಂಪಭಾ. ೮-೨೪) ; ಗುಣಲೋಪಂ ವರಶಬ್ದಶಾಸ್ತ್ರದೊಳ್ ತಾಂ ದೊರೆಕೊಳ್ಗುಂ (ವರ್ಧಪು. ೧-೪೭). **ದೊರೆಕೊಳ್ಳು :** ೬. ಪಡೆ ; ಹೊಂದು : ಸೀತಾ, ಚಂದ್ರಮತೀ, ದಮಯಂತೀ ಮೊದಲಾಗಿ ಸತಿಯರು ದೊರೆಕೊಂಡ ಸುಖವೇನು? (ಭಾರದ. ೪೮೩). [ ದೊರೆ$_{1}$ + ಕೊಳ್$_{1}$ ]

**ದೊರೆಕೊಳ್$_{2}$**, ದೊರೆಗೊಳ್ (ಕ್ರಿ). ಸಮಾನವಾಗು ; ಸಾಟಿಯಾಗು ; ಹೊಂದಿಕೊಳ್ಳು : ದೊರೆಕೊಂಡಿರೆ ಸೊಗಯಿಸುಗುಂ ಪುರಾಣಕಾವ್ಯ ಪ್ರಯೋಗದೊಳ್ತತ್ಕಾಲಂ ವಿರಸಂ ಕರಮವು ದೇಸಿಗೆ ಜರದ್ವಧೂವಿಷಯ ಸುರತರಸರಸಿಕತೆವೊಲ್ (ಕವಿರಾ. ೧-೫೦) ; ಪರಿಗೀತಾರ್ಥಂ ಪೂರ್ವಾಪರ ದೊಳ್ಪೊಗೆವಾಗಳೆಂದುಮೊಂದಱೊಳೊಂದುಂ ದೊರೆಕೊಂಡೊಂದದೊಡದು ದುಷ್ಕರಮೆ ವಿರುದ್ಧಾರ್ಥಮೆಂಬುದಾದಂ ದೋಷಂ (ಕವಿರಾ. ೧-೮೦) ; ಸುರಿವರಲೊಂದು ಬೆಳ್ಸರಿಯದಾತ್ಮತನೂಭವನುತ್ತಮಾಂಗದೊಳ್ ದೊರೆಕೊಳೆ ನಿಲ್ಲದಲ್ಲಿ ಕುಸುಮಂ ಕೆಲವಲ್ಲುಗೆ ತನ್ನ ರತ್ನವಿಸ್ಫುರಿತಕಿರೀಟಮಂ ಕವಿದು ತಾನೆ ನರಂಗೆ ಕಿರೀಟನಾಮಮಂ ಸರಸದಿನಾಗಳುಚ್ಚರಿಸಿ ಸಾಹಸಮಂ ಪೊಗೞ್ದಂ ಸುರಾಧಿಪಂ (ಪಂಪಭಾ. ೫-೧೧೩) ; ನಾಲ್ಕುಂ ಚರಣಂಗಳು ಮೊಂದಕ್ಕೊಂದು ದೊರೆಕೊಂಡಿರೆಯದು ಸಮತ್ವಮೆನಿಪುದು (ಅಪ್ರತಿ. ೯-೧). **ದೊರೆಗೊಳ್ :** ಇವಂ ಧರ್ಮದೊಳ್ ಧರ್ಮಸುತನಂ ನೇಮದೊಳ್ ರಾಮಚಂದ್ರನಂ ದೊರೆಗೊಂಡು (ಚಿಕವಿ. ೩-೧೧).

[ ದೊರೆ$_{2}$ + ಕೊಳ್$_{1}$ ]

**ದೊರೆಕೊಳಿಸು$_{1}$** (ಕ್ರಿ). ೧. ಲಭಿಸುವಂತೆ ಮಾಡು; ದೊರಕುವಂತೆ ಮಾಡು : ಪರ[ವ]ಸದ ಬಗೆಯೊಳೊಂದಂ ದೊರೆಕೊಳಿಸುವುದಱಿಗತರ್ಕ ತೋಪಸ್ಥಾನಂ ನಿರುತಂ ಸಮಾಹಿತಾಲಂಕರಣಾಂತರಮಕ್ಕುಮಿಂತು ತದುದಾಹರಣಂ (ಕವಿರಾ. ೩-೧೨೩) ; ಪುರುಪರಮೇಶ್ವರನಂದನ ದೊರೆಕೊಳಿಸುಗೆ ನಿನಗೆ . . . ಮಂಗಳಮಂ (ಆದಿಪು. ೧೨-೫೩) ; ನಾಳಿನುಣಿಸ ನೆನಗೆ ದೊರೆಕೊಳಿಸಿ ಬಂದುದು ಕರಮೊಳ್ಳಿತಾಯ್ತೆಂದು ನಗುತಿರ್ಪನ್ನೆಗಂ (ಪಂಪಭಾ. ೩-೨೬ ವ) ; ಭಕ್ತಿಸಂಪದವ ದೊರೆಕೊಳಿಸಿ ಪಾಲಿಸಿದ ಪರಮ ಗುರುವೇ (ಶಿವಗೀ. ೬೫-೩೧೨) ; ಪರಿಣಾಮವಶದೆ ಜನ್ಮಾಂತರದೊಳ್ ಶುಭಮಶುಭಮೆಂಬ ಕರ್ಮಂಗಳೊಳಾರ್ ದೊರೆಕೊಳಿಸಿದರಾವುದನಾ ದೊರೆಯದೆ ಫಲಮಕ್ಕುಮುವರ್ಗೆ ಪೆಱತಾದವುದೇ (ಚಂದ್ರಪು. ೩-೬೬). ೨. ಉಂಟುಮಾಡು : ತರಳತರಲೋಚನಂ ನಿರ್ಭರರಾಗರಸಂ ಮುಖಾರವಿಂದಂ ನಿನ್ನಾ ದೊರೆಕೊಳಿಸಿದೊಸಗೆಯೇಂ ಬಂಧುರಂ (ಕವಿರಾ. ೩-೧೭) ; ದೊರೆಕೊಳಿಸುವ ತತ್ಕ್ರಿಯೆಯೊಳ್ ಪರಿಣಮಿಸುವ ಫಳಮನಸ್ತ್ರಶಸ್ತ್ರ ತನುತ್ರೋತ್ಕರರಹಿತಂಗಸಹಾಯಂಗರಾತಿಬಲಜಯಮನಳವೆ ದೊರೆಕೊಳಿಸುವವೋಲ್ (ಆದಿಪು. ೧೫-೧೭) ; ಕರವಿಲುಳಿತ ನೀಲಕಬರಿಭರಮಂ ಪಿಡಿದುಂ ಪರಿಭವಿಸಲ್ ಕೃಷ್ಣೆಗೆ ವಿಗೆ ದೊರೆಕೊಳಿಸದೆ ಕೋಪಮಂ ಮನಸ್ತಾಪಮುಮಂ (ಗದಾಯು. ೧-೫೯) ; ಭಾವಿಸಲ್ಕೌತುಕಮೇನಂ ಮಾಡದೇನಂ ದೊರೆಕೊಳಿಸದೊ ಸಂಸಾರಿಗೇನೇನನೇನಂ (ಸುಕುಮಾ. ೫-೪೮) ; ಮಹಾಬಲನ ಭುಜಾಪರಿಘಕ್ಕೆ ಕುಂದನಿನಿಸಂ ದೊರೆಕೊಳಿಸದನೆಂದೊಡೇಂ ಮಯಮುಂ ದುರ್ಜಯನೋ (ಪಂರಾಮಾ. ೧೪-೧೩೯) ; ಪಿರಿದುಂ ಬಿದಿ ನಿಜ ಜನ್ಮಾಕರಮೆನಿಸಿದ ಪದ್ಮಜಾತಿಗಂ ಮ್ಲಾನತೆಯಂ ದೊರೆಕೊಳಿಸಿದನೆನೆ (ಚಂದ್ರಪು. ೮-೧೪). ೩. ಈಡೇರಿಸು ; ನೆರವೇರಿಸು : ಅಮರನಾಯಕರೆಲ್ಲಂ ನೆರೆದು ವಿವಾಹಮನಾತೆಗೆ ದೊರೆಕೊಳಿಸಿದರ್ (ಆದಿಪು. ೬-೮೭). ೪. ಸೇರಿಸು ; ಕೂಡಿಸು : ಪಿರಿದಾಯಾಸದೆ ಗುಣಮಂ ದೊರೆಕೊಳಿಸಿದೊಡಂ ಖಲಂಗೆ ಗುಣಮಂ ಪಶ್ಚಾತ್ಕರಿಸಿ ಗುಣೆಯುಂ ವಿಭೇದಿಪ ಪರಿ ತೀಕ್ಷ್ಣ ಮುಖಂಗೆ ಸೂಚಿಯಂತಿರೆ ಸಹಜಂ (ಶಬ್ದಶಂ. ೧-೧೭).

[ ದೊರೆಕೊಳ್$_{1}$ + – ಇಸು$_{3}$ ]

**ದೊರೆಕೊಳಿಸು$_{2}$** (ಕ್ರಿ). ೧. ಹೋಲಿಕೆಗೊಳ್ಳು ; ಹೋಲು ; ಸಮವಾಗಿ ಕಾಣು : ಶರದುದಿತಶಿಶಿರಕರನುಂ ಸರಸಿರುಹಮುಮಿವು ತ್ವದೀಯ ವದನ ಮುಮಿನಿತುಂ ದೊರೆಕೊಳಿಸುವೊಡೆ ಪರಸ್ಪರವಿರೋಧಿಗಳ್ ನಿರುತಮೆನೆ ವಿರೋಧೋಪಮಿತಂ (ಕವಿರಾ. ೩-೭೫). ೨. ಸರಿಯಾಗಿ ಕಂಡುಹಿಡಿ ; ಗ್ರಹಿಸು : ಸ್ಮರನಸ್ತ್ರಸಮಿತಿಯದು ನಿರ್ಭರಮಂಗಮನುರ್ಚಿ ಪೋಗೆಯುಂ ಪೋಬಱಿಯುಂ ದೊರೆಕೊಳಿಸಲಾಗದದಱಿಂ ಶರತತಿಯಲ್ತೆಂಬುದಿಂತು ಧರ್ಮಾಪೋಹಂ (ಕವಿರಾ. ೩-೧೮೫). [ ದೊರೆಕೊಳ್$_{2}$ + – ಇಸು$_{3}$ ]

**ದೊರೆಕೊಳ್ಳು** 'ದೊರೆಕೊಳ್$_{1}$' ನೋ.

**ದೊರೆಗದ್ದುಗೆ** (ನಾ). ೧. ರಾಜನ ಪೀಠ,–ಸಿಂಹಾಸನ. ೨. ರಾಜತ್ವ : ತೊರೆದು ದೊರೆಗದ್ದುಗೆಯನಿಲ್ಲಿಗೈತಂದನೈಸೆ (ಶ್ರೀರಾಮಾ. ೨೦೭-೩೩೫).

[ ದೊರೆ$_{3}$ + ಗದ್ದುಗೆ$_{2}$ (<ಗರ್ದುಗೆ$_{2}$) ]

**ದೊರೆಗಲಿ** (ನಾ). ಸರಿಸಮಾನನಾದ ಪರಾಕ್ರಮಿ,–ಕಲಿ : ಹರಣದ ಬಿಯಕೊಂದಿನಿಸುಮನೆಣಿಸದ ದೊರೆಗಲಿಗಳ್ ಬಿನದಕೆ ನಡೆವಂದದಿ ಹರಿಸಂ ವಿಗೆ ನಡೆತಂದರ್ (ಜಯಕಾ. ೬-೨೪). [ ದೊರೆ$_{2}$ + ಕಲಿ$_{2}$ ]

**ದೊರೆಗಾಣ್** (ಕ್ರಿ). ಸಮಾನವಾಗಿ ಕಾಣು; ಸರಿಯಾಗಿ ಕಾಣು : ದೊರೆಗಾಣೆಂ ನಿನಗೆ ಜನೇಶ್ವರ ಪೆಱರಂ ನಿನಗೆ ನೀನೆ ದೊರೆಯೆನಿಪ್ಪೈ ಮಂದರಗಿರಿಗೆ ಮಂದರಾದ್ರಿಯೆ ದೊರೆ ಜಲಧಿಗಗಾಧಜಲಧಿ ದೊರೆ ಪೆಱವೊಳವೆ (ಅಜಿಪು. ೮-೨೨). [ ದೊರೆ$_{2}$ + ಕಾಣ್ ]

**ದೊರೆಗಿಡಿಸು** 'ದೊರೆಗೆಡಿಸು' ನೋ.

**ದೊರೆಗಿಡು** (ಕ್ರಿ). ೧. ಸಾಮರ್ಥ್ಯವನ್ನು ಕಳೆದುಕೊಳ್ಳು ; ಪರಾಕ್ರಮವನ್ನು ಕಳೆದುಕೊಳ್ಳು ; ಅಸಮರ್ಥವಾಗು : ಶರಚಾಪಚಕ್ರಭೀಕರಕರವಾಳಾಯುಧವಿರಾಜಿ ಮತ್ಕರಯುಗಮಿಂ ದೊರೆಗಿಡೆ ಪೆಱಗೆ ಮುಗಿವುದೆ (ಆದಿಪು. ೧೨-೧೧೦). ೨. ಹಿರಿಮೆಯನ್ನು ಕಳೆದುಕೊಳ್ಳು ; ಅಯೋಗ್ಯವಾಗು : ದೊರೆಗಿಡೆ ಬಾಯ್ಗೆ ಬಂದುದನೆ ಬಯ್ವಂ (ಶೃಂಗಾರ. ೩-೧೫).

[ ದೊರೆ$_{3}$ + ಕಿಡು (<ಕೆಡು$_{1}$) ]

**ದೊರೆಗೆಡಿಸು,** ದೊರೆಗಿಡಿಸಂ (ಕ್ರಿ). ಯೋಗ್ಯತೆ, ಹಿರಿಮೆ ಮೊದಲಾದುವನ್ನು ಕಡಮೆ ಮಾಡು,–ಕೀಳಾಗಿಸು : ಸರ್ವೇಶನ ನಿಶ್ಚಳತಪದುರವಣೆಯ ತೇಜಮಂ ದೊರೆಗೆಡಿಸಲ್ ಕಳರವದಿಂ ಬಗ್ಗಿಸುವರಗಿಳಿಗಳ ಚಪ್ಪರಣೆಯೊಂದೆ ಸಾಲದೆ (ಗಿರಿಕ. ೭-೭೨) ; ವರುಣನ ಪುರುಳುಗೆಡಿಸಿ . . . ಧನದನನು ದೊರೆಗೆಡಿಸಿದನೀಶಾನ್ಯನನಿಳಿಯೊಳು ತಿರಿದುಣಿಸಿದನದಟಂದ (ತ್ರಿಪುಸಾಂ. ೬-೬೬). **ದೊರೆಗಿಡಿಸು :** ಕುರುವೃದ್ಧಂ ಕುಲವೃದ್ಧಂ ಸರಿತ್ಸುತಂ ತಕ್ಕನೆಂದು ನಂಬಿದ ಸಭೆಯೊಳ್ ದೊರೆಗಿಡಿಸಿ ನುಡಿದೊಡೇ ನೊಲವರಮೆನ್ನದೆ ನೀನುಮದನೆ ಕೊಂಡೆಸಗುವುದೇ (ಪಂಪಭಾ. ೬-೪೪) ; ಮನುಜರೆಲ್ಲರ ಪೆಂಪಂ ದೊರೆಗಿಡಿಸಿ ವೀರಗಜ್ಜನ ಹನುಮಂ ಧರೆ ಪೊಗಳಲು

ಸುರಗತಿ ಪೋಪ (ಎಕ. VII, ಶಿವಮೊ. ೫೬-೨೬ ; 1125) ; ದೊರೆಗಿಡಿಸಿ ನುಡಿದು ಪರನಂ ಪರಿಭವಿಸಿಯುಂಮವನ ಮನದೊಳಾದಂ ಖೇದಂ ದೊರೆಕೊಂಡೊಡಂತೆ ಸುಖಿಯಿಪ ನರಂಗೆ ಮಾರಕರೆ ಮೆಚ್ಚಿಯುಟ್ಟರೆ ಬಳಿಯಂ (ಉಸಾರ. ೪೭-೨೮೫). [ ದೊರ್$_3$ + ಕೆಡಿಸು$_1$ ]

**ದೊರೆಗೆಡು** (ಕ್ರಿ). ಕ್ರಮತಪ್ಪು ; ರೀತಿತಪ್ಪು : ರಘುರಾಮನಂಗನೆಯನೆನ್ನಂ ಸೀತೆಯಂ ಪಾತಕಂ ದೊರೆಗೆಟ್ಟುಯ್ದಪಂ (ಪಂರಾಮಾ. ೯-೧೪೩); ದೊರೆಗೆಟ್ಟು ಹುಸಿದೊಡಂ ನರಕ ರಾಜ್ಯಾಂತರಂ ನರಕಪರಸುಗಳಿಗಾದೇಶವೆಂದೆನೆ ನರಕಿ ನರಕಕ್ಕೆ ತೆಕ್ಕುವನೆ (ಹಜಕಾ. ೧೧-೨೨) ; ದೊರೆಗೆಟ್ಟ ಮಾತು ಸೊಕ್ಕುವ ತಕ್ಕೆ ರಾಜಿಸೆ ನೆರೆದರನೇಕ ಬಂಧಗಳಿಂದೆ (ತ್ರಿಭುತಿ. ೧೬-೪೨). [ ದೊರ್$_2$ + ಕೆಡು$_1$ ]

**ದೊರೆಗೊಳ್** 'ದೊರೆಕೊಳ್$_2$' ನೋ.

**ದೊರೆತನ** (ನಾ). ರಾಜನಾಗಿರಂವಿಕೆ ; ರಾಜತ್ವ : ದೊರೆತನವದಿಲ್ಲೀತಗೆಂದಡೆ ದೊರೆಯ ಮಗನೀ ಊರೊಳಗೆ ಸತ್ಪುರುಷನಲ್ಲೆಂದೂಹಿಪಡೆ ಪುರುಷಾರ್ಥಪರ ನಾನು (ಬಸಪು. ೪೦-೧೫) ; ಉರಗನ ತುಳಿದ . . . ದೊರೆತನದೇಳ್ಗೆಯ ತೋಱಿಂದು ಧೂರ್ಜಟಿ ಶರತತಿಯಿಂದಲಿಕ್ಕಿದನು (ಮೋಹತ. ೩೯-೩೪) ; ದೊರೆತನದ ಬಾಳು ಮತ್ತು ಕೇಳಯ್ಯ ಕೃಷ್ಣ (ಪುರಂದ. ೨-೨೦೪-೧) ; ಎಮ್ಮ ರಾಜ್ಯಗಳ ಸುತ್ತಿ ಸುಳಿದು ಧೂಳಿಪಟಮಾಡೆ ನಮಗಿನ್ನೆತ್ತಣ ದೊರೆತನವೆಂದ (ಕಂನವಿ. ೭೭-೬೬) ; ಶಲನೆಂಬ ರಾಜನು ದಕ್ಷಿಣದೇಶದಲ್ಲಿ ದೊರೆತನವನ್ನು ಮಾಡುತ್ತಿದ್ದನು (ನೀತಿಚಿಂ. XI, ೧೨). [ ದೊರ್$_3$ + – ತನ ]

**ದೊರೆತಾಯಿ** (ನಾ). ರಾಜನ ತಾಯಿ ; ರಾಜಮಾತೆ : ಅದೆ ಕೋ, ಬರುವಳು . . . ದೇವರ ಕಣ್ಬೊಳಪಿನ ದೊರೆತಾಯಿ (ಪಾರಸಿ. ೮-೧೭೬). [ ದೊರ್$_3$ + ತಾಯಿ (<ತಾಯ್) ]

**ದೊರೆನಿರಿಗೆ** (ನಾ). ರಾಜನಿಗೆ ತಕ್ಕಂಥ ಮರ್ಯಾದೆ,–ರೀತಿ ; ರಾಜಮರ್ಯಾದೆ ; ರಾಜಯೋಗ್ಯವಾದ ಗೌರವ : ದೊರೆಯನುಂಪಚರಿಸಿದನು ದೊರೆನಿರಿಗೆಯಿಂ (ಶ್ರೀರಾಮಾ. ೨೦೫-೨೦೪). [ ದೊರ್$_3$ + ನಿರಿಗೆ (<ನಿಱಿಗೆ) ]

**ದೊರೆಪಾಟ** (ನಾ). ದೊರೆಯಂ ಅಂತಃಪುರ : ಹಂಹರದೇವಿ ನಿಮ್ಮಮ್ಮನೊರ್ವಳೆ ಪಟ್ಟದರಸಿ ರಾಯಗೆ . . . ಮಿಕ್ಕ ನಾವೆಲ್ಲರು ದೊರೆಪಾಟಯೊಳಗದವರು (ಕುರಾಸಾಂ. ೨೭-೧೦೯). [ P ಇದು 'ದೊರೆಪಾಡಿ' ಎಂಬುದರ ಅಪಲಿಖಿತವಿರಬಹುದು ]

**ದೊರೆಮಗ** (ನಾ). ಅರಸನವಂಗ ; ರಾಜಕುಮಾರ : ಹಿರಿತನದ ಪೆರ್ಮೆಯುಳ್ಳ ದೊರೆಮಗನಾದರೇನು ಸಲ್ಲದೊ ಈ ಕಾರ್ಯ (ಪುರಂದ. ೨-೨೦೪-೧); ಅತಿಸುಲಭಸ್ವರ್ಗ ದೊರೆಮಗನ ಮೇಲೆ ಹೂಡಿತ್ತು ಘೋರಯುದ್ಧ (ಶಿಲಾಲ. ೫೫-೮) ; ಹುಡುಗನು ದೊರೆಯ ತೋಟದಲ್ಲಿ ಆಡುತ್ತಿರುವಾಗ ಒಂದು ಕಣಜ ಹಾರಿಬಂದು ದೊರೆಮಗನ ಕಣ್ಣನ್ನು ಕಡಿಯಿತು (ನೀತಿಚಿಂ.III, ೧೨); ದೊರೆಮಗನಿಗೆ ಉಡಿದಾರ ಸಿಕ್ಕಲಿಲ್ಲ (ನೀತಿಚಿಂ. VIII, ೧೧) ; ನಾನು ಕಲಿತ ವಿದ್ಯೆಯನ್ನು ಸಂತೋಷದಿಂದ ದೊರೆಮಗನಿಗೆ ಕಲಿಸಿಕೊಡುತ್ತೇನೆ (ಹಾಹುತ್ತ. ೮೧). [ ದೊರ್$_3$ + ಮಗ ]

**ದೊರೆಮಗಳು** (ನಾ). ಅರಸನ ಮಗಳು ; ರಾಜಕುಮಾರಿ : ಒಲುಮೆ ಪೊಲೆ ಸವಿಯಾದ ಗಾನವನುಲಿವ ದೊರೆಮಗಳೆಂಬೆನೋ! (ಇಂಗೀತ. ೧೨-೨೫). [ ದೊರ್$_3$ + ಮಗಳು (<ಮಗಳ್) ]

**ದೊರೆಮುಗಿಲು** (ನಾ). ದೊಡ್ಡ ಮುಗಿಲು ; ರಾಜಮುಗಿಲು : ದೊರೆಮುಗಿಲು ತರೆಮುಗಿಲು ನಿಡುಮೋಹರದ ಮುಗಿಲುಪ್ಪರದ ಮುಗಿಲುಬ್ಬರದ ಝಾಡಿಯ ಜೋಡಿಗಳ ಜಂಗಳದ ಮುಗಿಲಿನಲಿ ತರಣಿ ಶಶಿ ತಾರಾ ಗೃಹಂಗಳ ಹರವು ನಿಂದುದು (ತೊರರಾ. ೪-೬-೫). [ ದೊರ್$_3$ + ಮುಗಿಲು (<ಮುಗಿಲ್) ]

**ದೊರೆಮೋಡಿ** (ನಾ). ರಾಜನಿಗೆ ತಕ್ಕ ರೀತಿ ; ರಾಜರೀತಿ, –ಗಾಂಭೀರ್ಯ : ಬೆಡಗಾದ ಸಿಂಗರ ಬೆಡಗಿನ ನಗೆನೋಟ ದೊರೆಮೋಡಿಗೂಡಿ ಬಪ್ಪಾಗ ಭರತರಾಜಗೆ ತಕ್ಕ ಮೈದುನನಿವನು (ಭರಚ. ೩೯-೯೦). [ ದೊರ್$_3$ + ಮೋಡಿ ]

**ದೊರೆಯ** (ನಾ). ಸಾಟಿಯಾದ ವ್ಯಕ್ತಿ ; ಸಮಾನನಾದ ವ್ಯಕ್ತಿ : ಸುರನದಿಯ ನೀರೊಳ್ ಮಿಂದಿನನಂ ನೋಡಿ ನಿನ್ನ ದೊರೆಯನೆ ಮಗನಕ್ಕೆಂದಾಹ್ವಾನಂಗೆಯ್ಯಲೊಡಂ (ಪಂಪಭಾ. ೧-೯೧) ; ಪುತ್ರನೆನ್ನ ದೊರೆಯಂ ನಿನಗಕ್ಕೆ (ಪಂಪಭಾ. ೧-೯೪). 'ಆದೊರೆಯ', 'ಈ ದೊರೆಯ' ಪರಾ.

**ದೊರೆಯರ್** (ಬಹುವ) : ಅಗ್ರಮಹಿಷಿ ಭುವನಾಂಬಿಕೆ ವಾಗ್ದೇವಿಯರ ದೊರೆಯರೆನಿಸಿದ ದೀವಬ್ಬರಸಿಯರ ದೊರೆಗೆಟ್ಟರ್ ಪೆಱರೊಳರೆ (ಎಕ. X, ಮುಳಬಾ. ೩೮-೩; ಸು. 890). [ದೊರ್$_2$ + – ಅ$_6$]

**ದೊರೆಯಕ್ಕರ** (ನಾ). [ಛಂದ] ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ ಮತ್ತು ಕಿರಿಯಕ್ಕರ ಎಂಬ ಐದು ಬಗೆಯ ಅಕ್ಕರವೃತ್ತಗಳಲ್ಲಿ ಒಂದು ; ಪ್ರತಿ ಪಾದದಲ್ಲಿಯೂ ಎರಡು ವಿಷ್ಣು, ಒಂದು ಬ್ರಹ್ಮ, ಎರಡು ವಿಷ್ಣು ಒಂದು ಬ್ರಹ್ಮ ಇರುವ, ಒಟ್ಟು ಆರು ಗಣಗಳಿಂದ ಕೂಡಿರುವ ಒಂದು ಅಕ್ಕರವೃತ್ತ : ಧೊರೆವೆತ್ತ ಗಣದಿಂ ದೊರೆವೆತ್ತ ಪೆಸರಿಂ ದೊರೆಯಾಗಿ ಸಂದುದು ದೊರೆಯಕ್ಕರಂ (ಛಂದೋಂಬು. ೫-೨೪೩). 'ಪಿರಿಯಕ್ಕರ' ಪರಾ. [ ದೊರ್$_2$ + ಅಕ್ಕರ$_2$ ]

**ದೊರೆಯಾಳ್** (ನಾ). ಸರಿಸಮಾನನಾದ ವ್ಯಕ್ತಿ : ಕಾದಲೆನಗೆ ದೊರೆಯಾಳ್ದಿಟದೊಳಾರೆಂದು ವೀರಭದ್ರಂ ಕೋಟಿಸಿಡಿಲಂತೆ ಗರ್ಜಿಸಿದನು (ಚಬಪು. ೩೧-೧೪). [ ದೊರ್$_2$ + ಆಳ್$_3$ ]

**ದೊರೆಯಿಸು** (ಕ್ರಿ). ದೊರಕುವಂತೆ ಮಾಡು ; ಸಿಗುವಂತೆ ಮಾಡಂ : ಸುರೆ ನೆತ್ತರಿಂದೆ ಚಾತುರ್ಮಾಸ್ಯಮಂ ಕಳೆದ ಹಿರಿಯರಿದೆ . . . ಯತಿ ಮಾಂಸಮಂ ಭಾದ್ರಪದಕೆ ಬಿಡದೆ ದೊರೆಯಿಸುವರಿದೆ (ಜೈಮಿಭಾ. ೧೬-೨೮). [ ದೊರ್$_1$ + – ಇಸು$_3$ ]

**ದೊರೆಯೆಣಿಸು** (ಕ್ರಿ). ಸಮಾನವಾಗಿ ಭಾವಿಸು ; ಹೋಲು : ಗುಣಜಾತ್ಯಾದಿಗಳಿಂ ದೊರೆಯೆಣಿಸುವುದು ಸಹೋಕ್ತಿಯೆಂಬುದಕ್ಕುಂ (ಕವಿರಾ. ೩-೧೫೪). [ ದೊರ್$_2$ + ಎಣಿಸು ]

**ದೊರೆವಕ್ಕಿ** (ನಾ). ಎಣೆವಕ್ಕಿ ; ಚಕ್ರವಾಕ : ನಿಡುಕೇಶಪಾಶಮಂ ಬೀಸಿ ಮಿಗೆ ಚದರಿಸುತ್ತೊಮ್ಮೊಮ್ಮೆ ದೊರೆವಕ್ಕಿಯ ಬೆಡಗಿನಿಂ . . . ಎಡೆಯಾಡುತಿರುತಿಪ್ಪ ಪಾಂಥರಂ ಕಣ್ಗೊನೆಯ ಕಡುನೋಟದಲಗಿನಿಂದಣಕಿಪಾ ಪಾಮರಿಯರಿಹ ಸೊಬಗದೇವೇಳ್ವೆನು (ಪರಶು. ೪-೧೮). [ದೊರ್$_2$+ಪಕ್ಕಿ$_1$]

**ದೊರೆವಟ್ಟೆ** (ನಾ). ರಾಜಮಾರ್ಗ ; ರಾಜಬೀದಿ : ದೊರೆವಟ್ಟೆಯಂ ಪಿಡಿದು ಮಂಗಳವರೆಯ ನಾದಕ್ಕೆ ನಡೆನಡೆಯೆ ನಿಡುಪೊಸಗೆ (ಶ್ರೀರಾಮಾ. ೫೦-೬೪೭). [ ದೊರ್$_3$ + ಬಟ್ಟೆ$_1$ ]

**ದೊರೆವಡು** (ಕ್ರಿ). ಸಾಟಿಯಾಗು ; ಎಣೆಯಾಗು : ನೀಳದ ಪುತ್ಥಳಿಯ ದೊರೆವಟ್ಟ ಶಿಶುವನು ಕಂಡು ನಲಿವುತ ದೇವಿಗೆಱಗಿದನು (ಸಾಳ್ವಭಾ. ೨೧-೨೩). [ ದೊರ್$_2$ + ಪಡು$_1$ ]

**ದೊರೆವಡೆ$_1$** (ಕ್ರಿ). ೧. ಸಿಕ್ಕು ; ಸಿಗು ; ಪ್ರಾಪ್ತವಾಗು : ಪರಮಂಗಪ್ಪ ಮಹಾಪ್ರತೀಹಾರಂ ದೊರೆವಡೆದೊಪ್ಪಿದುದುದದಱೊಳಪಾರಂ (ಅನಂಪು. ೧೧-೧೮ ರಗಳೆ) ; ತಂಬೆಲರು ಮೆಲ್ಲನೆ ತೀಡಲು ದೊರೆವಡೆದ ಕನಕಲತೆಯಂಗಪರಿಮಳವಿದೆಂದಱಿದು (ಸೌಂದಪು. ೧೪-೧೧) : ತನಗೆ ದೊರೆವಡೆದೊಂದು ಜವ್ವನದ ಪೊಸಕುದುರೆಯಂ ನಿಟ್ಟಿಸಿಯುಟ್ಟಿಱಿಂ ಪೊಂಪುಳಿ ಪೋಗಿ (ರಾಮಾಶ್ವ. ೮೫-೧). ೨. ಈಡೇರು ; ನೆರವೇರು : ದೊರೆವಡೆದುದಿರ್ವರ ಮನೋರಥಂ (ಶಾಂತಿಪು. ೧-೭೯). [ ದೊರ್$_1$ + ಪಡೆ$_1$ ]

**ದೊರೆವಡೆ$_2$** (ಕ್ರಿ). ಪ್ರಸಿದ್ಧಿಯನ್ನು ಹೊಂದು; ಹೆಸರಾಗು; ಖ್ಯಾತಿಯನ್ನು ಪಡೆ: ದೊರೆವಡೆದ ಯಶೌಘನ ಭೂವರತಿಳಕನ ಕಣ್ಗಳಂಗರಕ್ಕರ್ ಮನಮಾಭರಣಂ . . . ಎನೆ ಸಂದತ್ತು ಚಂದ್ರಮತಿ ಗರಸಿತನಂ (ಯಶೋಚ. ೨-೩); ದೊರೆವಡೆದವ್ಯಯಲಿಂಗಂ ಸರಿ ಸರ್ವವಿಭಕ್ತಿಗಂ ತ್ರಿಲಿಂಗಕ್ಕಂ... ಸರಿಯೆನಿಸಿ ವಿಕಾರವಿಲ್ಲದರ್ಥಮನೀಗುಂ (ಶಮದ. ೯೦); ದೊರೆವಡೆದಿರ್ದ ಮುಂಬರೆಯದೊಳ್ತಪಮಂ ಮರುಳಾಗಿ ಪುತ್ತುವಿಾ ದೊರೆಯುವರಾವಗಂ ತಳೆಯೆ ಬಂದ ವಸಂತದ ಸೊಂಪು ಮಲ್ಲಿಕಾಪರಿಮಳದೇಟಿ{ಗೆ} . . . ಭಾವಿಸೆ ಬಂಜೆಯಾಗದೇ (ಪುಣ್ಯಾಸ್ರ. ೫-೪೮); ಆ ಜನನಾಯಕಂ . . . ತೋಳ್ವಲಮೆ ಬಲಂ ನೈಜಮೆನಲಿಂತು ದೊರೆವಡೆದೀ ಜಗತೀಭರಮನೊಂದೆ ಪುರಮೆನಲಾಳ್ವಂ (ಧರ್ಮನಾ. ೩-೨); ದೊರೆವಡೆದ ಸಿರಿವಂತನಾತನ ವರತನುಜೆ ಗಂಧರ್ವದತ್ತೆಯು (ಸಾಳ್ವಭಾ. ೧೭-೨). [ ದೊರ್$_3$ + ಪಡೆ$_1$ ]

**ದೊರೆವರ್** (ಕ್ರಿ). ಸದೃಶವಾಗು; ಎಣೆಯಾಗು; ಸಮಂವಾಗು: ಬಂದ ಬಸಂತಂಗಂದರವಿಂದಿನಿ ಸೇಸಿಕ್ಕಲೆಂದು ನೆಗಪಿದ ಹಸ್ತಕ್ಕೇಂ ದೊರೆವಂದುವೊ ಜಲಲವದಿಂದೆಸೆವುನ್ನಾಳವಿಕಚಕೋಕನದಂಗಳ್ (ಚಂದ್ರ ಪು. ೭-೫೯); ತಣ್ಣೀರೊಳಟ್ಟಿದ ತನಿಗೆಂಡಕ್ಕೆ ದೊರೆವರ್ಪ ಬವರಿಗಳ ಗಾವರಕ್ಕೆಟ್ಟಿತ್ತು (ರಾಮಾಶ್ವ. ೧೦೧-೧೩). [ ದೊರ್$_2$ + ಬರ್ ]

**ದೊರೆವಾಡು** (ನಾ). ಶ್ರೇಷ್ಠವಾದ ಹಾಡು; ಉತ್ತಮವಾದ ಹಾಡು: ಭೀಮವಿಕ್ರಮವಲ್ಲ! ಹಾಹಾದಿ ಹೂಹುಗಳ ಸ್ತೋಮವಿದು–ತಿರುಹಾಡು ಸಾಕು! ದೊರೆವಾಡುಗಳ ಸೀಮೆಗಳ ಸಮ್ರಾಟನಾಗಿ ಆಳುವವರೆಗೆ ಏನಾದರೇನು ನನಗೆ? (ಗರಿ. ೧೩-೨). [ ದೊರ್$_3$ + ಪಾಡು$_2$ ]

**ದೊರೆವೆಣ್ಣು** (ನಾ). ಶ್ರೇಷ್ಠಳಾದ ಸ್ತ್ರೀ; ಉತ್ತಮ ಸ್ತ್ರೀ: ಓಣಿಯಿಕ್ಕೆಲದಲಿ ದೊರೆವೆಣ್ಣುಗಳು ಮುತ್ತುಮಾಣಿಕದಾರತಿ ಬೆಳಗಿ ಕಾಣಿಕೆಯಿತ್ತು ಕೆಯ್ಮುಗಿದರು (ಮೋಹತ. ೩೪-೧೮). [ ದೊರ್$_3$ + ಪೆಣ್ಣು (< ಪೆಣ್) ]

**ದೊರೆವೆಸರು** (ನಾ). ಶ್ರೇಷ್ಠವಾದ ಹೆಸರು: ಹೊರೆಹೊಗದೆ ಬಳಿಕರಸ ವಾನರರರಸಗೆಂದನು ರವಿಜನೆಂಬೀ ದೊ[ಪಾಠಾಂ. ಧೊ]ರೆವೆಸರು ಬಂದಂದವಾವುದು ಹೇಳಬೇಕೆಂದ (ತೊರರಾ. ೪-೨-೧೨).
[ ದೊರ್$_3$ + ಪೆಸರು$_1$ (<ಪೆಸರ್) ]

**ದೊರೆವೆಱು$_1$** (ಕ್ರಿ). ೧. ಲಭಿಸು; ಪ್ರಾಪ್ತವಾಗು; ದೊರಕು: ಅನಂತ ಕರ್ಮಜಯದಿಂ ದೊರೆವೆತ್ತುದು ಪುತ್ತನಂತಜಿನ್ನಾಮಂ (ಅನಂಪು. ೧-೧). ೨. ಸೇರಿರು; ಕೂಡಿರು: ನಿರ್ವ್ಯಾಕುಲಮುಪ್ಪನಂತಸುಖಮುಂ ಮೆಯ್ವೆತ್ತು ನಿನ್ನೊಳ್ಕರಂ ದೊರೆವೆತ್ತಿರ್ದುದು (ಸುಕುಮಾ. ೪-೫೨).
[ ದೊರೆ$_1$ + ಪೆಱು$_1$ ]

**ದೊರೆವೆಱು$_2$** (ಕ್ರಿ). ಹೊಂದಿಕೆಯಾಗು; ಸರಿಯಾಗು: ಅನೇಕ ವಾಕ್ಯ ಸಂಜಾತಗುಣಂ ತದೇಕವಚನಂಗಳೊಳಂ ದೊರೆವೆತ್ತು ಕೂಡುಗುಂ (ಕವಿರಾ. ೧-೧೧೯). [ ದೊರ್$_2$ + ಪೆಱು$_1$ ]

**ದೊರೆವೆಱು$_3$** (ಕ್ರಿ). ೧. ಶ್ರೇಷ್ಠವಾಗು; ಮಿಗಿಲಾಗು; ಅಧಿಕವಾಗು; ಅತಿಶಯಂವಾಗು: ಅನುಕ್ರಮದಿಂದಂ ದೊರೆವೆತ್ತ ಸಪ್ತಪರಮಸ್ಥಾನಂಗಳಂ ಪೊರ್ದುವೈ (ಆದಿಪು. ೫-೬೩); ಪೊದಱೋಲಗಸಾಲೆ ಮೊಕ್ಕಳಂ ಬೀಸುವ ಗಾಳಿ ಚಾಮರದ ಗಾಳಿಯೆನಲ್ ದೊರೆವೆತ್ತುದೇಂ ಸುಖಾವಾಸನಿಮಿತ್ತ ವಾಯ್ತೊ ವನವಾಸನಿವಾಸಮೆ ಪಾಂಡುಪುತ್ರರಾ (ಪಂಪಭಾ. ೭-೨೯); ಅರಸನಱಿದೇಂ ಮಹಾಪುರುಷರತ್ನದೊಳ್ ರತ್ನಮಂ ತಗುಳ್ಚಿದನೊ ಕರಂ ದೊರೆವೆತ್ತಿ ಪೆರಡು ವಿದೆ ಜೀವರತ್ನವಿಂದಜೀವರತ್ನಮೆಂಬಿನಿತೆ ವಲಂ (ಶಾಂತಿಪು. ೨-೭೫); ಈರೇಟ್ಮಹೀಭಾಗಮಂ ದೊರೆವೆತ್ತುತ್ತಮಭೋಗದೊಳ್ ತಣಿಪಿದಂ ಭೂಪೋತ್ತಮಂ (ಪಂಚತಂ. ೬-೧೩); ದೊರೆವೆತ್ತ ತರ್ಕಶಾಸ್ತ್ರದ ಪರಿಣತಿಗಂ ನೆಗಟ್ದ ಚಕ್ರವರ್ತಿಯ ಸಭೆಯೊಳ್ ಬೆರಲೆತ್ತಿದರ್ (ಸುಕುಮಾ. ೧-೩೮); ತರುಣಮೃಗಾಕ್ಷಿಯ ದೊರೆವೆತ್ತರುಣತಳಂ ಬಾಹುಲತೆಯ ಪಲ್ಲವಮೆನೆ ಭಾಸುರತಮನಾಗಿರ್ದನೊಳ್ ಸುರತಮಂನಿರ್ಮಡಿಸಂಗುಂ ನಿಜಸ್ಪರ್ಶನದಿಂ (ಜಗವಿ. ೧೦-೩೩); ಮನಸ್ಸಂಜಾತ ನಾರಾಯಣಾಮರಸಿಂಹಾದಿಗಳಿಂ ನೆಗಟ್ತೆವಡೆದೀ ಶೃಂಗಾರವಿಾಗಳ್ಕರಂ ದೊರೆವೆತ್ತತ್ತನೆ ಬೇಱೆ ವಿಸ್ತರಿಸಿದಂ (ಶೃಂಗಾರ. ೧-೧೫); ಪರಮದಯಾಗುಣಂ ನಯನದೊಳ್ ದೊರೆವೆತ್ತನುಕಂಪೆ ಕಾಯದೊಳ್ . . . ದೊರೆವಡೆದೊಪ್ಪೆ (ಅನಂಪು. ೧-೫); ಕಣ್ಗಳೋ ದೊರೆವೆತ್ತೊಪ್ಪುವ ನೈದಿಲೋ (ಕಬ್ಬಿಗಕಾ. ೩೩೯). ೨. ಶೋಭೆಗೊಳ್ಳು; ಶೋಭಿಸು: ಅಂತು ದೊರೆವೆತ್ತು ಬಂದ ಬಸಂತದೊಳಾ ಮಾರಿದತ್ತನುಂ ಪುರಜನಮುಂ ತಂತಮಂಗೆ ಚಂಡಮಾರಿಗೆ ಸಂತಸಮಂ ಮಾಡಲೆಂದು ಜಾತ್ರೆಗೆ ನೆರೆದರ್ (ಯಶೋಚ. ೧-೩೯); ದೊರೆವೆತ್ತು ತೋರ್ಪಯೋಧ್ಯಾಪುರದೊಳ್ ಚಿತ್ರಿಕಲಲಾಮನಿಪ್ಪನದೊರ್ಪಂ (ಪುಣ್ಯಾಸ್ರ. ೩-೩೯). [ ದೊರ್$_3$ + ಪೆಱು$_1$ ]

**ದೊರೆಸಾನಿ** (ನಾ). ೧. ಅರಸನ ಪತ್ನಿ; ರಾಣಿ: ವರಚಿತ್ರಲೇಖೆಯಿನಿತಾ ದೊರೆಸಾನಿಯು ನುಡಿಗಳೊರೆಯೆ ಧೊರೆಯಿಂತೆಂದಂ (ಸೌಗಂಪ. ೧೦೮-೧೦); ಮಣಭಾರ ಚಿನ್ನವ ಹೊತ್ತರೆ ಬಂತೇನು ಬಡತೊತ್ತು ದೊರೆಸಾನಿಯಲ್ಲ (ಇಂಜಾಪ. ೧೧೮-೭೯). ೨. ಇಂಗ್ಲೀಷ್ ಹೆಂಗಸು; ಆಂಗ್ಲಸ್ತ್ರೀ: ನನ್ನೂರಿನ ಚಾರ್ಲಿಚಾಪ್ಲಿನ್ ತನ್ನ ಹಿಂದಿನ ದೊರೆಸಾನಿಯ 'ಲೇಡಿವೇಷ' ಹಾಕಿಯೇ ಹಾಕುತ್ತಾನೆ (ನನ್ನೂರು. ೪೭); ಈ ಊರಿನ ಆಸ್ಪತ್ರೆಯಲ್ಲಿ ಸೇರಿಸಿ . . . ವಿಶೇಷವಾಗಿ ಗಮನಿಸಲು ಒಬ್ಬ ದೊರೆಸಾನಿಯವರನ್ನೇ ನೇಮಿಸುತ್ತೇವೆ (ಪ್ರತಾಪ. ೧೧೭). 'ಅರಸಾನಿ' ಪರಾ.
[ ದೊರ್$_3$ + ಸಾನಿ ]

**ದೊರೆಹುಲ್ಲು** (ನಾ). ನೀರು ನಿಂತಿರುವ ಸ್ಥಳಗಳಲ್ಲಿ ಬೆಳೆಯುವ ಒಂದು ಬಗೆಯ ಹುಲ್ಲು; ಜೊಂಡು: ಈಜಿಪ್ಟಿನವರು ಒಂದು ರೀತಿಯ ದೊರೆ ಹುಲ್ಲನ್ನು (Water Weeds) ಹೆಣೆದು ಅವುಗಳ ಚಾಪೆಯ ಮೇಲೆ ಕುಚ್ಚಿ (Brush) ನಿಂದ ಬರೆದರು (ಜ್ಞಾಲಪ್ರ. I, ೩೦೭).
[ <ತೊಱೆ$_2$ + ಹುಲ್ಲು (<ಪುಲ್) ]

**ದೊರ್ಪು ?** (ನಾ). (?): ತೊಡೆಯುಂ ಪೊಡೆಯುಂ ದೊರ್ಪಿಂ [ಪಾಠಾಂ. ರ್ಪಂ] ತೊಡೆವಲದಿಂ ಮದನನನಿಸೆ ನನೆಯಂಬುಗಳಂ ತೊಡೆಸಕ್ಕಿ ಮಾಡಿ ಕಾಂತೆಯ ತೊಡೆ ತೊಡೆದುವು ಕನಕಕದಳಿಕಾವಿಲಸನಮಂ (ಮಲ್ಲಿಪು. ೩-೬೦): "ಸಾರ; ತಿರುಳು" (ಪ್ರಭಣ್ಣ). [ ? ]

**ದೊಲ್ಲಯಿಸು** 'ದೋಲಯಿಸು' ನೋ.

**ದೊಸಕ್** (ನಾ). ಒಂದು ಅನುಕರಣ ಶಬ್ದ. 'ದೊಸಕ್ಕನೆ' ಪರಾ.

**ದೊಸಕ್ಕನೆ** (ಅ). ದೊಸಕ್ಕೆಂದು ಶಬ್ದವಾಗುವ ಹಾಗೆ; ಒಮ್ಮೆಲೆ: ಬಿರುಗಾಳಿಯ ದಾಳಿಗೆ ಸಿಲುಕಿದ ಬಾಳೆಯ ಗಿಡ ದೊಸಕ್ಕನೆ ನೆಲಕ್ಕೊರಗಿದಂತಾಯ್ತು (ಅಳಾಕ. ೧೭). [ ದೊಸಕ್ + – ಅನೆ$_1$ ]

**ದೊಸರು** (ನಾ). ಹುದುಲು; ಕೆಸರು; ಪಂಕ: ಹಸುರಿನ ಆಶೆಗೆ ಹೋಗಿ ದೊಸರಿಗೆ ಬಿದ್ದ ಹಾಗಾಯ್ತು (ಹುಟ್ಟಿಹ. ೧೨೩). [ <ಒಸರ್$_2$ ]

**ದೊಸೆ** (ಕ್ರಿ). ಕುಸಿ.

**ದೊಸೆದು ಬೀಳು** = ಕುಸಿದು ಬೀಳು: ಅದು ತುಂಬಾ ಹಳೆಯ ಮನೆಯಾದ್ದರಿಂದ ಇದ್ದಕ್ಕಿದ್ದಂತೆ ಗೋಡೆಗಳೆಲ್ಲಾ ದೊಸೆದು ಬಿದ್ದವು (ರೂಢಿ). [ ? ]

**ದೊಳದೊಳ** (ನಾ). ಒಂದು ಅನುಕರಣ ಶಬ್ದ: ಧುಳುಧುಳುಂ ದೊಪ್ಪೆಂಬ . . . ದೊಳದೊಳೆಂಬೀ ಧ್ವನಿಗಳವನಿಗೆ ಭಯುವನೀವುತಿರೆ (ಸಾನಂಚ. ೮-೧೩).

**ದೊಳ್ಳಾಯಿ** (ನಾ). ಆಧಿಕ್ಯ; ಹೆಚ್ಚಳ: ಮಗುಳೆ ಮಗುಳೆ ಸುಮಂತ್ರ ಮನದುಬ್ಬೆಗದಲುಱೆ ಬೆಂಡಾಗಿ ವಿರಹದ ಧಗೆಯ ದೊ[ಪಾಠಾಂ. ಡಿ,ಡೊ]ಳ್ಳಾಯಿಯಲಿ ಬಂದನು ಕೌಸಲಾವತಿಗೆ (ತೊರರಾ. ೨-೫-೨). 'ಡೊಳ್ಳಾಸ' ಪರಾ. [ ? ]

**ದೊಳ್ಳಾಸ** 'ಡೊಳ್ಳಾಸ' ನೋ.

**ದೊಳ್ಳು** 'ಟೊಳ್ಳು' ನೋ.

**ದೊಳ್ಳೆ** 'ಟೊಳ್ಳು' ನೋ.

**ದೊಳ್ಳೆಗಣ್ಣ** (ನಾ). ಗುಳಿ ಬಿದ್ದ ಕಣ್ಣುಗಳುಳ್ಳವನಂ : ದೊಳ್ಳಾಯ್ತು ನೇತ್ರಂ ಅದಱಿಂ ಬಟಿಕ್ಕಮೆನಗಾದುದು ಭಾವಿಸೆ ದೊಳ್ಳೆಗಣ್ಣನೆಂಬೀ ನಾಮಂ (ಪದ್ಮಸಾ. II, ೫೮೭ ; ಧರ್ಮಪ).

[ ದೊಳ್ಳೆ (<ಟೊಳ್ಳು) + ಕಣ್ + – ಅ₇ ]

**ದೊಳ್ಳೆತನ** (ನಾ). ಉಬ್ಬಿದ ಹೊಟ್ಟೆಯನ್ನು ಹೊಂದಿರುವಿಕೆ; ಡೊಳ್ಳು ಹೊಟ್ಟೆಯನ್ನು ಹೊಂದಿರುವುದು : "ತುಂದಿಲತಾ – ದೊಳ್ಳಿ[ಳ್ಳೆ] ತನವಂಂ" (ನೀತಿವಾ. ೨೪–೬೨). [ ದೊಳ್ಳೆ (<ಟೊಳ್ಳು) + – ತನ ]

**ದೋಂಟಿ, ದೋಟಿ₁** (ನಾ). ೧. (ಎಲೆ, ಹಣ್ಣು ಮೊದಲಾದುವುಗಳನ್ನು ಕೀಳಲು ಅನುಕೂಲವಾಗುವಂಥ) ತುದಿಯಲ್ಲಿ ಕೊಕ್ಕೆಯನ್ನು ಹೊಂದಿರುವ ಉದ್ದನೆಯ ಕೋಲು ; ಕೊಕ್ಕೆಕೋಲು : ಬೇಡಂ ತರುಶಾಖಾಖಗನೀಡಮನಳ್ಳಿಱಿದು ದೋಂಟಿಯಿಂ ಕೆದಱುವವೋಲ್ (ಅನಂಪು. ೧೩–೨೮); ನಿತ್ಯಬಿಂದುಗೆ–ಬೆಡಂಗು . . . ದೋಂಟಿ, ಮೋಂಟಿ, ವಿಸಾಂಟು (ಶಮದ.೩೬ ಪ್ರಯೋ) : ದೇವಲೋಕದ ಕಲ್ಪವೃಕ್ಷದಗ್ರದ ರಸಫಲಾವಳಿಯ ನಿಚ್ಚಣಿಗೆ ದೋಂಟಿಯಿಲ್ಲದೆ ನೀಳ್ದೊಡಾವ ಯತ್ನವು (ವೀಶೈಪು. ೧–೫–೨). **ದೋಟಿ₁ :** ೧. ತೊಟ್ಟು ಬಿಡುವ ವೇಳೆಯನಱಿದ ಮತ್ತೆ ದೋಟಿಯನಿಕ್ಕಲೇತಕ್ಕೆ (ದಾಸೋಸಂ. ೬೫) ; ನಿಲುಕದ ಹೂವಿ ಗೊರ್ವಳು ದೋಟಿಯ ಹಾಕಿ ಸೆಳೆಯೆ (ಚಂಪ್ರಸಾಂ. ೧೭–೧೦೩); ವಿಸಾಟು ವತ್ತೆಸೆವ ಶಿವಭಕ್ತರೊಳ್ಳುಡಿವರಕೆಯಾಟದಿಂದಿರಲೆರಲ್ವಟ್ಟಿ ದೊರೆದಲೆಗ ಪೂದೋಟದೊಳ್ಳೈಗರೆದು ಶರಣಾರ್ತಿಯಂದೆನಲು ಶರಣುಶರಣಾರ್ತಿ ಯೆಂದು ದೋಟಿಯಿಂದಲೆ ಗುತ್ತುಱಿಂಗೆದರ್ದು (ಮದೇಪು. ೨೯–೪೨); ದೋಟಿಗೆ ದೊರೆತ ದೋರೆಹಣ್ಣನವನಿಗೆ ಮೆಲಿಸುವೆ (ಗೀವಿಂ ೬೦–೩೧) ; ಪತ್ರೆ ಕೊಯ್ಯಲು . . . ಗೋದಾವರಮ್ಮನನ್ನು ದೋಟಿಗಾಗಿ ಕೇಳಿದೆ (ಪ್ರಶ್ನೆ. ೧೪೯) ; ದೋಟಿಯಿಂದ ಜೇನು ತೆಗೆದ ಹಾಗೆ (ಗಾದೆ). ೨. ಆನೆ ಯನ್ನು ತಿವಿಯುವ ಅಂಕುಶ. 'ಕೈದೋಟಿ', 'ದೋಟಿಕೋಲು' ಪರಾ.

**ದೋಂಟಿ ವಿಳಾಸ** = ಅಂಕುಶಗಳಿಂದ ಆನೆಯನ್ನು ನಿಯಂತ್ರಿಸು ವವನು ; ಒಂದು ಬಿರುದು : ಕಾಡಾನೆಮಲ್ಲರುಂ ಅಡವಿಕಂದರ್ಪ್ಪರುಂ ದೋಂಟಿವಿಳಾಸರುಂ ಮಱುವುಗೆ ಕಾವರುಂ (ಸೌಇಇ. XV, ೨೧೧–೪೦ ; 1196). **ದೋಟಿಯನಿಕ್ಕು** = ಪ್ರಯತ್ನಪಡು ; ಯತ್ನಿಸು : ಬಂದುದನತಿ ಗಳೆಯದೆ ಬಾರದುದಕ್ಕೆ ದೋಟಿಯನಿಕ್ಕದೆ (ಡಜೊಮ್ಮ. ೪೦).

[ ದೇ.II ತಮಿ. ಮಲ. ತೋಟ್ಟಿ ; ತುಳು. ದೋಂಟಿ ; ತೆಲು. ದೋಟಿ ]

**ದೋಂಟಿಗೋಲು, ದೋಟಿಕೋಲು, ದೋಟಿಗೋಲು** (ನಾ). ೧. = ದೋಂಟಿ ೧ : ಅರಳಿದ ಪುಷ್ಪ ಪರಿಮಳಿಸದಿಹುದೇ ತುಂಬಿದ ಸಾಗರ ತೊರೆನೆರೆಯಾಡದಿಹುದೇ ಆಕಾಶವ ಮುಟ್ಟುವವ ದೋಂಟಿಗೋಲ ಹಿಡಿವನೇ (ವಚಸಂ. ೫೦೭–೪೭). **ದೋಟಿಕೋಲು :** ೨. ಆನೆಯನ್ನು ತಿವಿಯುವ ಕೋಲು ; ಅಂಕುಶ : "ಅಂಕುಶಃ, ಸೃಣಿಃ–೨ ಅಂಕುಶದ ಹೆಸರುಗಳು, ಕೊಕ್ಕೇಕೋಲು, ದೋಟಿಕೋಲು" (ಸಿದ್ಧಾಂತಿ. ೨೦೩). **ದೋಟಿಗೋಲು :** ೧. ಪಾರಿಜಾತ ವೃಕ್ಷವೊಂದು ಕೊಂಬೆಗೆ ಊರುಗೋಲಾಗಿಯೂ ದೋಟಿಗೋಲಾಗಿಯೂ ಇರುವಂತೆ ತೋರುತ್ತದೆ (ದೇವೀಜಾ. ೧೨೧). [ ದೋಂಟಿ + ಕೋಲು₁ (<ಕೋಲ್₁) ]

**ದೋಂಟಿವಲೆ, ದೋಟಿವಲೆ** (ನಾ). ಪಕ್ಷಿಗಳ ಗೂಡುಂಗಳನ್ನು ಕಿತ್ತು ಹಕ್ಕಿಯ ಮೊಟ್ಟೆ ಮೊದಲಾದುವನ್ನು ಸಂಗ್ರಹಿಸಲು, ಮರಗಿಡ ಗಳಿಂದ ಹಣ್ಣುಗಳನ್ನು ಇಳಿಸಲು ಮತ್ತು ಬೇಟೆಗಳಲ್ಲಿ ಉಪಯೋಗಿ ಸಲು ಬಳಸುವ ದೋಟಿಗೆ ಅಳವಡಿಸಿದ ಬಲೆ : ಕೋಸುವಲೆ ದೋಂಟಿವಲೆ ಬಾಣಾಸನವಲಗಂಬು . . . ಪಾಶದ ನಾಯ್ವೆರಸು ಬನಕೆ ಬೇಡರ್ ನಡೆದರ್ (ಸೂಕ್ತಿಸು. ೩–೧೦೩). **ದೋಟಿವಲೆ :** ದೋಟಿ [ಪಾಠಾಂ. ತೊಟ್ಟೆ, ತೋಟಿ, ತೋಡಿ]ವಲೆ ಗೂಟವಲೆ ಕಣ್ಣವಲೆ ... ಮುಂದಸಿನವಲೆಯ ಹೊಱಿಗಳ ಬೇಡವಡೆ ನೆರೆದುದು (ಹಜಕಾ. ೫–೮).

[ ದೋಂಟಿ + ಬಲೆ₁ ]

**ದೋಂಟಿಕಾಲು** (ನಾ). ೧. ನೀಳವಾದ ಕಾಲು. ೨. ಬೀಸಂಗಾಲು ; ದಾಪುಗಾಲು : ಐತಾಳರು– 'ಇದೊಂದು ಮುಲಾಜೀ' ಎಂದು ದೋಂಟಿ ಕಾಲಿಕ್ಕಿಕೊಂಡು, ಅಗೆಯ ಹೊರೆಯನ್ನು ನಟ್ಟಿಗದ್ದೆಗೆ ಸಾಗಿಸಿಯೇ ಬಿಟ್ಟರು (ಮರಮು. ೩೭). [ ←ತುಳು. ದೋಂಟಿಕಾರು ]

**ದೋಃಕಂಡೂಯನ** (ನಾ). ತೋಳಿನ ತೀಟೆ,–ತಂಡಿತ : ಎನಗೆ ರಣ ರಭಸದಿಂ ಗಡ ಮನುಜಂ ಮೇಲೆತ್ತಿ ಬಂದನಿಂ ದೋಃಕಂಡೂಯನಮಂ ಕಟಲ್ವಲೆಡೆಯಾಯ್ತೆನುತ್ತುಮುತ್ತರಳತಾಮ್ರಲೋಚನನಾದಂ (ಪಂರಾಮಾ. ೧೩–೩). [ ಸಂ. ]

**ದೋಕರಿ** (ನಾ). ಹುಲ್ಲನ್ನು ಕೀಳಲು ಉಪಯೋಗಿಸುವ ಒಂದು ಬಗೆಯ ಸಾಧನ : (ಕ). [ <ದೋಕು ]

**ದೋಕು** 'ದೇಕು' ನೋ.

**ದೋಖಂಡೇರಾಯ** (ನಾ). ಎರಡು ಕೈಗಳಲ್ಲೂ ಕತ್ತಿಯನ್ನು ಹಿಡಿದು ಹೋರಾಡುವವನು ; ಒಂದು ಬಿರುದು : ಇಕ್ಕೆರ್ಯ್ಯ ಖಡ್ಗದಿಂ ಕುರಿದರಿದಾ ಶ್ರೀಕರವೆಂಕಟಭೂಪಂ ದೋಖಂಡೇರಾಯನೆಂಬ ಬಿರುದು ಮೆರೆದಂ (ಕೆಳನೃ. ೫–೧೭). [ < ದು + ಖಂಡೇರಾಯ₀ ]

**ದೋಗುಣ** (ಗು).=ದ್ವಿಗುಣ : ಅಧಸ್ತನೋಪರಿತನ ನಾನಾಗುಣಹಾನಿ ಶಲಾಕೆಗಳುಂ ದುಗುಣಂ ದೋಗುಣಹಾನಿಯುಂ ಉಭಯಮನ್ಯೋನ್ಯಂ (ಗೊಮ್ಮಸಾ. ೫೫–೫). [ <ದುಗುಣ ]

**ದೋಚಯ್ಯ** (ನಾ). ಒಬ್ಬಾತನ ಹೆಸರು : ಶ್ರೀಪಾದಪದ್ಮಾರಾಧಕ ರಾಚಯ್ಯ ದೋಚಯ್ಯ ಮಗ ಜಗದೇವ (ಎಕ. VII, ಚನ್ನಗಿ.೩೨–೨೩೫ ; ಸು. 1050 ?). [ ದೋಚ₀ + ಅಯ್ಯ₁ ]

**ದೋಚು** (ಕ್ರಿ). (ಸಿಕ್ಕಿದುದೆಲ್ಲವನ್ನು) ಕದಿ ; ಅಪಹರಿಸು ; ಲೂಟಿ ಮಾಡು : ಅವನ ಆಸ್ತಿಯನ್ನೆಲ್ಲ ದೋಚಿಕೊಂಡು ಹೋದುದಕ್ಕೆ ಪರಿಹಾರ ವನ್ನು ಕೊಡು (ಅರ್ಯಕ. ೧೮) ; ದಾಮಾಜಿಗೆ ತಿಳಿಯದಂತೆ ಸಾಧ್ಯವಾ ದಷ್ಟು ಹಣವನ್ನು ದೋಚುತ್ತಿದ್ದನು (ಕಲಾಧ. ೮೧) ; ನೀನು . . . ದೋಚಿಕೊಂಡು ಹೋಗುವವಳು, ಅಂತ ಗುಮಾನಿ ಇಡುತ್ತಾರೆ (ಜಂಗೂಲಿ. ೯೪) ; ನನ್ನಲ್ಲಿ ಸ್ವಲ್ಪ ಹಣವೂ ಇತ್ತು. ಅದನ್ನೆಲ್ಲ ಆ ಅಳಿಯ ದೋಚಿಕೊಂಡ (ಹಳ್ಳಿಹಾ. ೧೧೨). [ ದೇ.II ತೆಲು. ದೋಚು ]

**ದೋಜಕ್** 'ದೋಜಕು' ನೋ.

**ದೋಜಕು, ದೋಜಕ್** (ನಾ). ನರಕ : ಹಿಂದೂಜನರ ಉಪ್ಪ ತಿಂದು ಷಹೀದು ಆದರೆ ದೋಜಕು ಶಿವಾಯಿ ಅನ್ಯಥಾ ಇಲ್ಲ (ಚಿತ್ರಪಾ. ೯೪). **ದೋಜಕ್ :** ಹಿಂದೂಜನರ ಉಪ್ಪ ತಿಂದು ಷಹೀದ್ ಆದರೆ, ದೋಜಕ್ (ನರಕ) ಶಿವಾಯಿ ಅನ್ಯಥಾ ಇಲ್ಲ (ಪಾಳೆಗಾ. ೩೩).

[ ←ಪಾರ. ಹಿಂ. ದೋಜಖ್ ]

**ದೋಟಿ₁** 'ದೋಂಟಿ' ನೋ.

**ದೋಟಿ₂** (ನಾ). ಖಡ್ಗಯುದ್ಧದ ಒಂದು ಪಟ್ಟು,–ವರಸೆ : ಮೊಳಕಾಲು ಗಳನ್ನು ವಕ್ಷಸ್ಥಳದಲ್ಲಿ ಇರಿಸಿ ಮೇಲಕ್ಕೆ ಹಾರಿ ಭ್ರಮಣವನ್ನು ಆಮೇಲೆ ಮಾಡಿ ಭೂಮಿಯಲ್ಲಿ ಕಾಲುಗಳಲ್ಲಿ ನಿಲ್ಲಬೇಕು ಅದು ದೋಟಿಯೆಂದು ನುಡಿಯಲ್ಪಡುವುದು (ಖಡ್ಗಟೀ. ೪–೨೪). [ ? ]

**ದೋಟಿಕೋಲು** 'ದೋಂಟಿಗೋಲು' ನೋ.

**ದೋಟಿಗೋಲು** 'ದೋಂಟಿಗೋಲುು' ನೋ.

**ದೋಟಿಯಿಕ್ಕು** (ಕ್ರಿ). ದೋಟಿಯಂನ್ನು ಹಾಕಿ ಕೀಳಂ: ಜಿನಪತಿಗೆಱಗದೆ ಬಲ್ಲಾಳ್ತನದಿಂದಂ ಮಾಡಿಕೊಳ್ವೆನೆಂಬೊಡೆ ಸುಖಮಂ ತನಗದು ಮೊಗ್ಗಾದುದೆ ಮಾವಿನ ಪಣ್ಣೀಂ ದೋಟಿಯಿಕ್ಕಿ ತೆಗೆವಂತೆ ಸುಖಂ (ಧರ್ಮಾಮೃ. ೬-೧೭೦). [ ದೋಟಿ$_1$ (<ದೋಂಟಿ) + ಇಕ್ಕು ]

**ದೋಟಿವಲೆ** 'ದೋಂಟಿವಲೆ' ನೋ.

**ದೋಣ$_1$** (ನಾ). ದೊಡ್ಡಹೊಟ್ಟೆಯಂಳ್ಳವನಂ; ಡೊಳ್ಳುಹೊಟ್ಟೆಯವನು: (ಕ). [ ದೋಣಾ + – ಅ$_7$ ]

**ದೋಣ$_2$** (ನಾ). ೧. ಒಂದಂ ಅಳತೆ; ನಾಲ್ಕು ಕೊಳಗ: "ದೋಣ – ದ್ರೋಣ = ನಾಲ್ಕು ಕೊಳಗ" (ತದ್ಭವಕೋ. ೨೧). ೨. ದ್ರೋಣಾಚಾರ್ಯ: ಪರಿವೃತರೇಫಲೋಪಕ್ಕೆ ಕ್ರೇಣಿ – ಕೇಣಿ . . . ದ್ರೋಣ – ದೋಣ (ಶಮದ. ೨೬೧ ಪ್ರಯೋ). ೩. ಮರದ ದೋಣಿ. ೪. ನೀರಿನ ತೊಟ್ಟಿ. ೫. ಒಂದು ದೇಶದ ಹೆಸರು. ೬. ಒಂದು ಪರ್ವತ. ೭. ಚೇಳಂ. ೮. ಕಣಗಿಲೆಗಿಡ. [ <ಪ್ರಾ. ದೋಣ./ಸಂ. ದ್ರೋಣ ]

**ದೋಣಗಾವುಂಡ** (ನಾ). ಒಬ್ಬಾತನ ಹೆಸರಂ: ದೋಣಗಾವುಣ್ಡರುಂ ಎಳಗಾವುಣ್ಡರುಂ (ಸೌಇಇ. XX, ೯–೧೭; ಸು. ೯ನೆಯ ಶಶ ?).

[ ದೋಣ$_2$ + ಗಾವುಂಡ ]

**ದೋಣಮರಸ** (ನಾ). ಒಬ್ಬಾತನ ಹೆಸರಂ: ದೋಣಮರಸನ ತಂಮು ಬಾಚರಸ ತಂನ್ನ ಪುಲ್ಲಿವಿಗೆಯ ಸಿದ್ಧಾಯದೊಳಗೆ ಆಚಂದ್ರಕಾಲಂ ಸಲಲು ಸೊಡರೆಣ್ಣೆಗೆ ಬಿಟ್ಟ ಪಣವಯ್ದು (ಕಇಆ. ೮೦–೦೪–೩ : ಸು. 1088).

[ ದೋಣ$_2$ + ಅವು (<ಅಮ್ಮ$_1$) + ಅರಸ$_1$ ]

**ದೋಣಶರ್ಮ** (ನಾ). ಒಬ್ಬಾತನ ಹೆಸರಂ: ರೇಕಾದಿ ಬೋಯಸ್ಯ ಕಾಶ್ಯಾ(ಶ್ಯ)ಪಗೋತ್ರ ದೋಣಶರ್ಮ್ಮಣ ಏಕ್ಕರಿಶಃ (ಇಆ. VII, ೧೮೮–೫೨; 668).

[ ದೋಣ$_2$ + ಶರ್ಮ ]

**ದೋಣಿ$_1$** (ನಾ). ದೊಡ್ಡಹೊಟ್ಟೆಯುವಳಂ; ಡೊಳ್ಳುಹೊಟ್ಟೆಯಂವಳಂ: ಆ ದೋಣಿ ಹೇಗೆ ಓಡಬಲ್ಲಳು ? (ರೂಢಿ). [ ದೋಣ$_1$ + – ಇ$_2$ ]

**ದೋಣಿ$_2$** 'ದೂಣಿ$_1$' ನೋ.

**ದೋಣಿ$_3$, ಡೋಣಿ$_2$** (ನಾ). ೧. ನೀರಂ ತುಂಬಲಂ ಇರಂವ ತೊಟ್ಟಿ; ನೀರಿನ ತೊಟ್ಟಿ: ಕಲ್ಲ ದೋಣಿಯೊಳೆಱೆದ ನೀರಂತೆ ಕೈಕೊಳ್ಳದೆ ಸತಿಯರ ರೂಪನೆ ಭಾವಿಸುತಿರ್ಪುದುಂ (ಧರ್ಮಾಮೃ. ೭–೧೬೫). ೨. ಅಗಲವಾದ ಬಾಯಿಯಂನ್ನು ಹೊಂದಿರಂವ ಪಾತ್ರೆ; ಬಾನಿ: ತಿಂದನಾ ಕುಱಿ ಕೋಣ ಕಾಟಿಯನೊಂದು ಕಡೆಯಿಹ ಸುರೆಯ ದೋಣಿಯು ಹಲವು ಬಱಗೆಯ್ದು (ಕಾಶಿರಾ. ೨೪–೧೪); ಚಾರು ಕಸ್ತೂರಿ ಕರ್ಪೂರ ವೆರಸಿದ ಪನ್ನೀರ ಕೊಪ್ಪರಿಗೆದೋಣಿಗಳ ಕೇರಿಕೇರಿಯೊಳೆಡೆಗಟ್ಟಿನೊಳಿಡೆ ಪರಿವಾರ ವಸಂತವಾಡಿದುದು (ಭರಜ. ೪೦–೨೮); ಎಡೆಯೆಡೆಗೆ ತೀವಿದ ಸುಗಂಧದ ಕಟಾಹದಿಂ ಕಡುಗೆಂಪು ಬೀಱುವ ಜವಾದಿಯ ಘಟಂಗಳಿಂದೊಡನೆ ತೀವಿದ ಸುಕಸ್ತೂರಿಗಳ ದೋಣಿಯಿಂದೆಸೆವ ಕರ್ಪೂರಂಗಳ ಕೊಡಗಳಿಂ (ಜಬಪು. ೩೬–೨೯). ೩. (ಧಾನ್ಯಗಳನ್ನು ತುಂಬಿಡುವ ಅಂಡಾಕಾರವಾದ) ದೊಡ್ಡ ಹರವಿ; ಗುಂಡಾಣ: ಉಗ್ರಾಣದ ಅಕ್ಕಿಯ ದೋಣಿಯಲ್ಲಿ ಸತ್ತು ಬಿದ್ದಿದ್ದ ಇಲಿಯನ್ನು ಬಾಲದಿಂದೆತ್ತಿ . . . ಹೊರಗೆಸೆಯಲು (ಸಂಸ್ಕಾರ. ೬೩). ೪. ತಟ್ಟೆ; ಹರಿವಾಣ: ನಾಯುಣ್ಣದ ದೋಣಿಯೊಳೂಡಿದೊಂಗೆ ಪದಯಿದನೆ ಕರಂ (ಸುಕುಮಾ. ೨–೬೯). ೫. (ಮಳೆಯ) ನೀರು ಬಿದ್ದು ಹರಿದು ಹೋಗಲಂ ಮನೆಯ ಮಾಳಿಗೆಗೆ ಅಳವಡಿಸಿದ ಕೊಳವೆ; ಹರಿನಾಳಿಗೆ. ೬. ನೀರಿನ ಮೇಲೆ ತೇಲಂವ ಸಾಧನ; ನಾವೆ; ತೆಪ್ಪ; ಹರಿಗೋಲು: "ದೋ [ಪಾಠಾಂ. ಡೋ]ಣಿಯೆಂದೆಸಲ್ ನಾವೆಯಕ್ಕುಂ" (ಮಂಗರಾ. ೧೨೦–೪); ತುಳುಕುನೀರಾಡಿದಂ ದೋಣಿಯಿಂದೇಱಿದನೆಂಬಂತೆ (ಸುಕುಮಾ. ೯–೪೩); ಕಲ್ಲ ದೋಣಿಯನೇಱಿ ಬಂದ ತೊಱೆಯೊಳ್ ಪೋಪೆನೆಂಬನುಂ (ಧರ್ಮಾಮೃ. ೭–೩೭); ತಾವರೆಯೆಸಳ ದೋಣಿಯ ಮೇಲೆ ಹಾಯ್ದುವು . . . ತುಂಬಿಗಳು (ಸಂಭಪ. ೧೬–೯); ಎಡೆಯಾಡುತಿಹ ದೋಣಿ ದುಗ್ಗಿ ಕಪ್ಪಲು ದೊಡ್ಡ ಹಡಗುಗಳರವ ನೋಡಿದರಂ (ಭರಜ. ೨೩–೯೬); ಈಗ ಶೋಣದಲ್ಲಿ ದೋಣಿಗಳು ಓಡಾಡುತ್ತವೇನಂ ? (ಬಾಇಳ. ೫). ಡೋಣಿ$_2$: ೩. ಹಣನನು ತೈಲದ ಡೋಣಿಯೊಳಗಿರಿಸಿದಳು ಯೋಗದಲಿ (ನಿಭಾಗ. ೪–೧೧–೩೨); ಬಾಯದು ಕಲಗಚ್ಚಿನ ಡೋಣಿ (ಜಿದಾವ. ೩೭–೬). ೪. ಹೊಸನಾಯ ಡೋಣಿಯೊಳು ನೀನುಂಡಂ ನಾಯ್ಸಾವನಸವಸದೊಳಿಯ್ದುವದ್ವೈತಿಯೆಂದೆನಿಪ ಪುಲ್ಕಸನೆ ನಿನಗೇಕೆ ಬೊಮ್ಮದ ಮಾತುಗಳು (ವೀಶೈವು. ೪–೪–೨೫); ಕತ್ತಿಯಂ ತಕ್ಕೊಂಡು ಮರದ ಡೋಣಿಯೊಳುಂಡು . . . ಚೆನ್ನಬಸವಾಂಕನಲ್ಲಿಗಂ ಬಂದು (ಪ್ರಭುಪು. ೯–೨೦೦); ಬ್ರಾಹ್ಮಣರು ರಾಧಕ್ಕನವರ ಮನೆಯಲ್ಲಿ ಭೋಜನಕ್ಕೆ ಕುಳಿತೊಡನೆ ಡೋಣಿಗೆ ನೀಡಿಸಿ ? ಗಂಗಾಸಾನಿ ಶಂಭುಲಿಂಗನ ಮೂರ್ತಿಯ ಮುಂದೆ ಕುಳಿತು ಕೊಂಡಳು (ಗಂಗಾಸಾ. ೮೫). ೬. ಜಾಲಗಾಱನ ಡೋಣಿಯಂತೆ ಬಳಸುವ ಹುಟ್ಟನಂತೆ ಬೈಚಿಟ್ಟ ನೆಲೆಯಂತೆ ಇದ್ದಡೇನು ಭೋಗಿಸಲರಿಯವಾಗಿ (ಮೋಳಿಮಾ. ೩೦–೧೨೪); ಗುಂಡಿಗೆ ಕೊಡ ಕೊಪ್ಪರಿಗೆ ಡೋಣಿ ಪಱಿಗೋಲು ಬೆಂಡುವರಗಳನು ತರಿಸಿ ಮಂಡಲಪತಿ . . . ಎಯ್ದಿದನು (ಕುರಾಸಾಂ. ೨೭–೧೦೧); ಪೆಸರುವಡೆದ ಮಧುರಸವಾಹಿನಿಯ ದಾಂಟಿಸಲು ಚಂದನ ಡೋಣಿಗಡರ್ದು (ಪೋಹತ. ೫–೨೬); ಎಡೆಯೆಡೆಯೊಳಿಡಿಕಿಱಿದ ಡೋಣಿಗಳ ಶ್ರೇಣಿಗಳ . . . ಪಡೆಪಿನಿಂ ಕಡಲೆಸೆದುದು (ಜಬಪು. ೨–೪); ಇವರ ನಾವು ಇನ್ನೂ ಆ ಸಂಗನ ಡೋಣಿಯಿಂದ ತುಸ ದೂರದಲ್ಲೇ ಹೋಗುತ್ತಿತ್ತು (ಇಂದುಮು. ೬೬); ಒಡಕು ಡೋಣಿಗೆ ಗಿಡ್ಡಜಲ್ಲು (ಗಾದೆ). ೭. ಅಭಿಷೇಕದ ನೀರನ್ನು ತುಂಬುವ ಪಾತ್ರೆ: ದೇವರಂಗಭೋಗಕ್ಕೆ ಬಿಟ್ಟ ಡೋಣಿ ಮೂಱು (ಸೌಇಇ. XI-ii, ೨೦೩–೬; ?). ೮. ದನಗಳಿಗೆ ನೀರಂ ಹಾಕಲೆಂದಂ (ಮರದಿಂದ ಅಥವಾ ಕಲ್ಲಿನಿಂದ) ಮಾಡಿರಂವ ಎಡೆ, – ಸ್ಥಳ: ಹೊಲೆಯರ ದನಗಳಿಗಾಗಿ ಕಲ್ಲಿನ ಡೋಣಿಗಳನ್ನು ಮಗ್ಗುಲಲ್ಲಿಯೇ ಕಟ್ಟಿಸಲಾಯಿತು (ಜಬ್ಬಿಬ. ೨೩).

ದೋಣಿಯ ಪಂದ್ಯ = ನಾವೆಗಳನ್ನು ವೇಗವಾಗಿ ನಡೆಸುವ ಸ್ಪರ್ಧೆ; **P** ಕೇರಳದಲ್ಲಿ ಇದಂ ಪ್ರಸಿದ್ಧವಾದ ಒಂದು ಕ್ರೀಡೆ: ಓಣಂ ಹಬ್ಬದಲ್ಲಿ ದೋಣಿಯ ಪಂದ್ಯಗಳು ವಿಶೇಷವಾಗಿ ನಡೆಯುತ್ತವೆ (ರೂಢಿ).

[ <ಪಾಲಿ. ಪ್ರಾ. ದೋಣೀ./ಸಂ. ದ್ರೋಣೀ ]

**ದೋಣಿಕಡವು** (ನಾ). ನಾವೆಯ ಮೂಲಕ ನದಿಯನ್ನು ಹಾಯ್ದು ದಾಟುವ ಸ್ಥಳ; ಈ ಊರಿಗೆ ಒಂದು ಮೈಲಿಯ ಕೆಳಗೆ ಹೊಳೆ ದಾಟಲು ದೋಣಿಕಡವು ಇದೆ (ರೂಢಿ).

[ ದೋಣಿ$_3$ + ಕಡವು$_3$ (<ಕಡಹು$_2$) ]

**ದೋಣಿಕೊಂಡ** 'ದೋಣಿಗೊಂಡ' ನೋ.

**ದೋಣಿಗಾರ** (ನಾ). ನಾವೆ ನಡೆಸಂವವನಂ; ಓಡುಗಾರ; ಅಂಬಿಗ: ವಿದುರನು ಕಳಿಸಿದ್ದ ದೋಣಿ ಸಿದ್ಧವಾಗಿದ್ದಿತು. ದೋಣಿಗಾರನು ರಹಸ್ಯವನ್ನು ತಿಳಿದ ಸ್ನೇಹಿತನೆಂಬುದನ್ನು ಶೋಧಿಸಿ ತಿಳಿದುಕೊಂಡರು (ವ್ಯಾಸಜಿ. ೬೬). [ ದೋಣಿ$_3$ + – ಗಾರ (< – ಕಾಱ) ]

**ದೋಣಿಗೊಂಡ, ದೋಣಿಕೊಂಡ** (ನಾ). ೧. ದೋಣಿಯಾಕಾರದ ಪಾತ್ರೆ; ದೊನ್ನೆಯಾಕಾರದ ಹರವಿ, – ಮಡಕೆ: ಮನುಷ್ಯರ್ಗಱಿಯಲಾಗದೆಂದೊಂದು ದೋಣಿಗೊಂ[ಪಾಠಾಂ. ಕೊಂ]ಡಮಂ ತರಿಸಿ ನೀರಂ ತೆಕ್ಕನೆ ತೀವಿಯದಱೊಳಗೆ ಚಮರಿಯನರ್ದಿ (ವಡ್ಡಾರಾ. ೬೫–೪). ೨. ನೀರಿನ ತೊಟ್ಟಿ: (ಕ). ದೋಣಿಕೊಂಡ: ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ದೋಣಿ$_3$ + ಕೊಂಡ$_2$ ]

**ದೋಣಿದಳ** (ನಾ). ನಾವೆಯ ಆಕಾರದ ದಳ,–ಪಕಳೆ : ಉಳಿದ ಎರಡು ದಳಗಳು ಕೂಡಿಕೊಂಡು ದೋಣಿ ಆಕಾರದಂತಿವೆ. ಇವೇ ದೋಣಿದಳಗಳು (ಸಸ್ಯಶಾ. ೫೮). [ ದೋಣಿ₃ + ದಳ₂ (= ದಲ) ]

**ದೋಣಿದಾಟು** (ನಾ). = ದೋಣಿಕಡವು : "ದೋಣಿದಾಟು ; ಕಡವು" (Grind. ಇಂಕನಿ). [ ದೋಣಿ₃ + ದಾಟು₂ (<ದಾಂಟು₃) ]

**ದೋಣಿಯೋಗು** 'ದೊಣೆವೋಗು' ನೋ.

**ದೋಣಿವಲೆ** (ನಾ). ಒಂದು ಬಗೆಯ ಬಲೆ : ಕಾಲಸಃಭಟರು ದೋಣಿದ [ವ]ಲೆಗಳ ತೋಳ ಖಂಡಿಯ ಜಾಳುವಲೆಗಳವೋಲಿಯೇರಿನ ದೋರಿವಲೆ ಗಳಲ್ಲೆದೆ ಕೂಡಿದರು (ಸಂಭವ. ೮-೧೦೬). [ ದೋಣಿ₃ + ಬಲೆ₁ ]

**ದೋಣಿವೀಟ್** (ಕ್ರಿ). ಡೊಗರು ಬೀಳು ; ಕುಳಿಯಾಗು ; ಹಳ್ಳ ವುಂಟಾಗು : ಮದದಾನೆಗಳಾನೆಯೊಳ್ ವೊಗಂಬುಗುತರೆ ದಂತದಂಡ ಹತಿಯಿಂ ಬಿಸುನೆತ್ತರ ಧಾರೆಗಳ್ ಭಂಗಿಲ್ಬುಗಿಲೆನೆ ಪಾಯ್ದು ಪೊಣ್ಮದುವು ಕೋಟ್ಮಿದುಳೊಕ್ಕುವು ಬಲ್ಗರುಳ್ಗರ್ಳಗಿಯೆನೆ ದೋಣಿವಿಟ್ಟುದು [ಪಾಠಾಂ. ದೋಣಿಬಿರ್ದುವು] ಶಿರಂ ಬಿರಿಕೆರ್ದುದು ಕುಂಭಮಂಡಲಂ (ಪಂಪಾಮಾ. ೧೦-೮೧). 'ಡೋಣಿವೀಟ್' ಪಾಠ.

[ ದೋಣಿ₂ (<ದೊಣೆ₁) + ಬೀಟ್₁ ]

**ದೋಣಿವೋಗು** 'ದೊಣೆವೋಗು' ನೋ.

**ದೋಣು** (ನಾ). ದೊಡ್ಡ ಹೊಟ್ಟೆ ; ಡೊಳ್ಳುಹೊಟ್ಟೆ. 'ದೋಣು ಹೊಟ್ಟೆ' ಪಾಠ. [ <ಟೊಳ್ಳು ]

**ದೋಣುಹೊಟ್ಟೆ** (ನಾ). ದೊಡ್ಡದಾಗಿರುವ ಹೊಟ್ಟೆ; ಡೊಳ್ಳುಹೊಟ್ಟೆ: "ದೋಣುಹೊಟ್ಟೆ – ಗಡಗಿ ಹೊಟ್ಟೆ" (ಜಾನಕೋ. ೮).

[ ದೋಣು + ಹೊಟ್ಟೆ₁ (<ಪೊಟ್ಟೆ₁) ]

**ದೋಣೆ** (ನಾ). ಒಂದು ಊರಿನ ಹೆಸರು : ದಟಿಯರು ಕುರ[ಬ]ರು ಗಣಿಗರು . . . ದೋಣೆಯ ಆಟ (ಇಆ. XIV, ೨೩೩-೫೯ ; ಸು. 9ನೆಯ ಶತ ?) : ದೋಣೇ ಕ್ರಮಯಿತಭಟ್ಟಪುತ್ರಾಯ (ಇಆ. XVI, ೨೪-೭೪ ; 1009). [ ? ]

**ದೋತರ** 'ಧೋತ್ರ' ನೋ.

**ದೋತರಜೋಡು** (ನಾ). ಎರಡು ದೋತರಗಳು ; ಜೋಡಿ ಪಂಚೆ : ಒಂದೇ ತರದ ಎರಡು ದೋತರಗಳಿಗೆ ದೋತರಜೋಡು ಅನ್ನುತ್ತಾರೆ (ಮುಂಬಯಿ. ೩-೯೮). [ ದೋತರ (<ಧೋತ್ರ) + ಜೋಡು ]

**ದೋತ್ರ** 'ಧೋತ್ರ' ನೋ.

**ದೋಧಕವೃತ್ತ** (ನಾ). [ಛಂದ] ಪ್ರತಿಯೊಂದು ಚರಣದಲ್ಲಿ ಹನ್ನೊಂದು ಅಕ್ಷರಗಳಿರುವ ಒಂದು ಅಕ್ಷರವೃತ್ತದ ಹೆಸರು : ಇಂದುಗಣಂಗಳ ಮೂಱವಱಿಂದಂ ಮುಂದೆ ಗುರುದ್ವಯಮಾಗೆ ವಿರಾಮಂ ಬಂದು ಪದಾಂತದೊಳಿರ್ದೊಡೆ . . . ದೋಧಕವೃತ್ತಂ (ಛಂದೋಂಬು. ೩-೧೦೬); ೧೧ನೆಯ ತ್ರಿಷ್ಟುಪ್ಪಿನಲ್ಲಿ . . . (vii) ಭತ್ರಯಮಿರ್ಗುರು ದೋಧಕವೃತ್ತಂ (ಕೃಪಿಡಿ. ೮೦). [ ಸಂ. ]

**ದೋನೇಜ** (ನಾ). ಎರಡು ಕೈಗಳಲ್ಲೂ ಭರ್ಜಿ ಅಥವಾ ಈಟಿಯನ್ನು ಹಿಡಿವ ಹೋರಾಡುವವನು ; ಒಂದು ಬಿರುದು : ವರ ಪಾತುಶಾಹ ಸೈನ್ಯೋತ್ಕರವನೆರಳ್ಕಯ್ಯೊಳಾಂತ ನೇಜಗಳಿಂ ಕೋಡಿರಿದು ಕಾಲ್ದೆಗೆಸಿ ವೆಂಕಟನರಪತಿ ದೋನೇಜನೆಂಬ ಬಿರುದಂ ಮೆರೆದಂ (ಕೆಳನ್ನ. ೫-೨೭).

[ <ದು + ನೇಜ (<ನೇಜಯ) ]

**ದೋಪಿಡು** (ಕ್ರಿ). ಹಾಳುಮಾಡು ; ನಾಶವನ್ನು ಉಂಟುಮಾಡು : ಪರಸ್ಥಳದವರ ಸಂಸಾರಕ್ಕೆ ಮನೆ ಕೊಟ್ಟು ಇಲ್ಲಿಂದ ಸಾಮಾನುಗಳನ್ನೆಲ್ಲಾ ಕಳುಹಿಸಿ ದೋಪಿಡುವುದು ಯಾವ ದೇವರಿಗೆ ಪ್ರೀತಿ ? (ತುರಾಯಿ. ೧೪೨).

[ ದೋಪು + ಇಡು₁ ]

**ದೋಪು** (ನಾ). ನಾಶ ; ಹಾಳು : ಮನೆಯನ್ನು ದೋಪು ಮಾಡಿಬಿಟ್ಟು ಬಂದೆಯಾ ? (ಸಾವಿತ್ರಿ. ೩೫).

**ದೋಪು ಕೊಡು** = ಹಾಳಾಗುವಂತೆ ಕೊಡು : ದೋಪುಕೊಟ್ಟು ದರಿದ್ರನಾದ ಸುಮುಖನಿಗೆ ಬಹಳ ವ್ಯಸನವುಂಟಾಗಿ (ಕಥಾಮಂ. IV, ೭೪).

[ ←ತೆಲು. ದೋಪು= ಕಳವುಮಾಡು ]

**ದೋಪೆನ್** (ಕ್ರಿ). ದೋಪ್ ಎಂದು ಶಬ್ದವುಂಟಾಗು ; ದೊಪ್ಪೆನ್ನು : ಉಡಿಗುಂ ಸಿಜ್ಗದ ದಾಡೆಯಂ ಭಿಟಿಲ್ಲೆನಲ್ ಸಜ್ಜುರ್ದ್ಧ ನಾಗೇನ್ದ್ರನಂ ಪೊಡೆಗುಂ ದೋಪೆನೆ ಮೇರೆದಪ್ಪಿ ಕವಿತರ್ಪ್ಪಂಭೋಧಿಯಂ ಕೋಪದಿಂ ಕುಡಿಗುಂ (ಎಕ. XI, ಹೊಳಲ್ಕ. ೧೨೦-೩೩ ; ಸು. 1240).

[ P ಇದು 'ದೊಪ್ಪೆನ್' ಎಂಬುದರ ಅಪಲಿಖಿತವಿರಬಹುದು ]

**ದೋಬಿ** 'ಧೋಬಿ' ನೋ.

**ದೋಬಿಖಾನೆ** (ನಾ). ಅಗಸರು ಬಟ್ಟೆಗಳನ್ನು ಚಲುವೆ ಮಾಡುವ ಸ್ಥಳ: (Laundry. ಇಂಕನಿ). [ ದೋಬಿ (<ಧೋಬಿ) + ಖಾನೆ ]

**ದೋಬಿಘಾಟ್** (ನಾ). ಅಗಸರು ಬಟ್ಟೆ ಒಗೆಯುವ ಸ್ಥಳ : ದೋಬಿಘಾಟ್ ಗಳಲ್ಲಿ ಅಗಸರು ಬಟ್ಟೆಗಳನ್ನು ಒಗೆಯುತ್ತಿದ್ದರು (ರೂಢಿ).

[ ←ಹಿಂ. ಧೋಬಿಘಾಟ್ ]

**ದೋಬೀಪಾಟ್** (ನಾ). ಕುಸ್ತಿಯಲ್ಲಿ ಒಂದು ಪಟ್ಟು : ಕಳಾವರ್‌ಜಂಗ್, ಏಕಲಾಂಗ್, ದೋಬೀಪಾಟ್, ಟಿಬ್ಬಿ ಹಾರಿಸುವುದು, ಸವಾರಿ ಹಾಕುವದು . . . ಇತ್ಯಾದಿ ಪಟ್ಟುಗಳನ್ನೆಲ್ಲಾ ಸುಬ್ಬು ಚಟುಕಾಗಿ, ಸರಾಗವಾಗಿ ಉಪಯೋಗಿಸುವಂತೆ ಕಲಿತ (ಭೀಮಕಾ. ೪೩). [←ಹಿಂ. ಧೋಬೀಪಾಟ್]

**ದೋಭಿ** 'ಧೋಬಿ' ನೋ.

**ದೋಮ** 'ದೋವೆಂ' ನೋ.

**ದೋಮದೆರೆ** 'ದೋವೆಂತೆರೆ' ನೋ.

**ದೋಮೆ, ದೋಮ** (ನಾ). ಸೊಳ್ಳೆ ; ಗುಂಗಾಡು ; ನೊರಜು : ಧಾನ್ಯ ಹೆಚ್ಚಿದರೆ ದೋಮೆಗೆ ಏನು ? (ಗಾದೆ). **ದೋಮ :** 'ದೋವಂ ದೆರೆ' ಪಾಠ. [ ದೇ.॥ ತೆಲು. ದೋಮ ; ಕೊಲಾ. ಡೋಮೆ ]

**ದೋಮೆತೆರೆ, ದೋವಂದೆರೆ** (ನಾ). ಸೊಳ್ಳೆಗಳು ಬಾರದಂತೆ ತಡೆಯಲು ಉಪಯೋಗಿಸುವ ಪರದೆ; ಸೊಳ್ಳೆಪರದೆ: "ಆಂದೋಳ ಪರಿಯಂಕಮೆನೆ ತೂಗುವಂಚಮುಕ್ಕುಂ ದೆಸೆಗೆ ತೆರೆವಿಡಲ್ದೋಮೆತೆರೆ [ಪಾಠಾಂ. ದೋಮದೆರೆ] ಯಕ್ಕು" (ಮಂಗರಾ. ೬೦-೧೭). **ದೋಮದೆರೆ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ ದೋಮೆ + ತೆರೆ₄ ]

**ದೋಯಿಸ** (ನಾ). = ಜೋಯಿಸ : ಕಾಲನಾಥದೋಯಿಸರ ಕೊಡಗಿಯನು ಅಪಹರಿಸ್ತವರು ಕಾಶಿಯ ಕ್ಷೇತ್ರದಲ್ಲಿ ತನ್ನ ತಾಯಿ ಗೋಉ ಬ್ರಾಹ್ಮರ ಕೊನ್ದ ಪಾಪಕ್ಕೆ ಹೋಹರು (ಎಕ. XIV, ಗುಂಡ್ಲುಪೇ. ೧೨೦-೧ ; ?). 'ಜೋಯಿಸ' ಪಾಠ. [ <ಸಂ. ಜ್ಯೋತಿಷ ]

**ದೋರ₁** 'ದೋರೆ₁' ನೋ.

**ದೋರ₂** 'ದಾರ₂' ನೋ.

**ದೋರ₃, ಧೋರ₁** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ದೋರಂ ಪ್ರಿಥುವಿರಾಜ್ಯಂ ಕೆಯೆ (ಎಇ. VI, ೧೬೩-೧ ; ಸು. 780) ; ಕಲಿದೋರನಾ ನೋಡಿಸಿ ಪಲರಾನಿಱಿದು ಕೊನ್ದು ಗೆಲ್ದು ತಾನುಮ್ಮಡಿದು ಕಳಿಜನ್ ಸುರಾಲಯಮೇಱಿದಾನ್ (ಎಕ. VIII, ಸೊರಬ. ೫೪೨-೫ ; ಸು. 800). **ಧೋರ :** ಬೆಳ್ಗೊಳಾಧಿಪತಿಗಳಪ್ಪ ಶ್ರೀವರಮತಿಸಾಗರಪಂಡಿತಭಟಾರರ ಬೆಸದೊಳಣ್ಣಯನುಂ ದೇವಕೊಮಾರನುಂ ಧೋರನುಂ (ಎಕ. III, ಶ್ರೀರಂಗ. ೧೪೮-೧೧ : 904 ?). 'ದೊರಪಯ್ಯ' ಪಾಠ.

[ <ಸಂ. ಧ್ರುವ ]

**ದೋರ$_4$** (ನಾ). ೧. ದಾರ: ರಜ್ಜು. ೨. ಕೈಗೆ ತೊಡುವ ಒಂದು ಬಗೆಯ ಆಭರಣ. [ ಸಂ. ]

**ದೋರಗವುಂಡ** (ನಾ). ಒಬ್ಬಾತನ ಹೆಸರು: ಕೆಱೆಗೂಡಲ ದೋರಗವುಣ್ಡ (ಮೈಆರಿ. ೧೯೧೯, ೧೦-೭೪ ; 900).

[ ದೋರ$_3$ + ಗವುಂಡ (<ಗಾಮುಂಡ ]

**ದೋರಗಾಯಿ** 'ದೋರೆಗಾಯ್' ನೋ.

**ದೋರನೇರಿಳೆ** (ನಾ). ಅರ್ಧ ಮಾಗಿದ ನೇರಿಲೆಹಣ್ಣು: ಅದರ ತಲೆ ಮೇಲೆ ಕೊಂಬು ಮೊಳೆತಿವೆ ದೋರನೇರಿಳೆಯ ಹಣ್ಣ ತೆರ (ಅಹಲ್ಯ. ೧೬-೧೩). [ ದೋರ$_1$ (<ದೋರೆ$_1$) + ನೇರಿಳೆ$_1$ (<ನೇಱಲ್) ]

**ದೋರಪಾಲ** (ನಾ). ಬಾಗಿಲು ಕಾಯುವವನು; ದ್ವಾರಪಾಲಕ: ಬಂದನರಮನೆಗಾಗಿ ಬಾಗಿಲ ಮುಂದಣೆಡಬಲ ಹೇಮವೇದಿಯ ಸಂದಣಿಯ ಜನ ನೋಡಲೆಂದನು ದೋರಪಾಲರಿಗೆ (ಕುವ್ಯಾಸ. ೫-೨೭).

[ <ಸಂ. ದ್ವಾರಪಾಲ ]

**ದೋರಪ್ಪರಸ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ದೋರಪ್ಪರಸರ್ ಪೃಥಿವೀರಾಜ್ಯಂಗೆಯೆ (ಸೌಇಇ. XX, ೧೦-೧ ; 8 ನೆಯ ಶತ) : **P** ಇದು ರಾಷ್ಟ್ರಕೂಟದ ಅರಸು ಧ್ರುವನಿಗೆ ಅನ್ವಯಿಸುತ್ತದೆ.

[ ದೋರ$_3$ + ಅಪ್ಪ$_1$ + ಅರಸ$_1$ ]

**ದೋರಬ್ಬೆ** (ನಾ). ಒಬ್ಬಾಕೆಯ ಹೆಸರು: ದೋರಬ್ಬೆಯ ಮಗಂ ಮಲ್ಲುಗ ಕೊಟ್ಟಿಯಲ್ಪರಿದು ತುಱುವಂ ಶೆಱೆಯುಮನಿಕ್ಕಿಸಿ ಕಾದಿ ಸತ್ತಂ (ಎಕ. XII, ತಿಪಟೂ. ೫೫-೩ ; ಸು. 880). [ ದೋರ$_3$ + ಅಬ್ಬೆ$_1$ ]

**ದೋರಯ್ಯ** (ನಾ). ಒಬ್ಬಾತನ ಹೆಸರು: ಗಱ್ಗಿಗೊಣ್ಡ ಭೋಟಿಗಾವುಣ್ಡನುಮ್ ದೋರಯ್ಯನುಮ್ . . . ಮೂವರುಮ್ (ಮೈಆರಿ. ೧೯೧೫, ೧೯-೯ ; 1050) ; ಪೂರಿತ × × × ವಂಸದ × × × ದೋರಯ್ಯ × × × ರುಳ್ಳಿಕಾಯ್ಪಕೊಱ್ಗಣಿ ವರ್ಮ್ಮ ಧರ್ಮ್ಮ (ಎಕ. V, ಹಾಸನ. ೧೮೫-೧ ; ?).

[ ದೋರ$_3$ + ಅಯ್ಯ$_1$ ]

**ದೋರಸಮುದ್ರ** (ನಾ). ಒಂದು ಊರಿನ ಹೆಸರು; **P** ಈಗಿನ ಹಳೆಬೀಡಿಗೆ ಹಿಂದೆ ಇದ್ದ ಹೆಸರು. ಹೊಯ್ಸಳ ಬಲ್ಲಾಳ ಅರಸನ ರಾಜಧಾನಿಯಾಗಿದ್ದ ನಗರ. 'ಧ್ರುವಸಮುದ್ರ' ಎಂಬುದರ ಈಚಿನ ರೂಪ: ದೋರಸಮುದ್ರಕ್ಕಿದಿರೆತ್ತಿ ಬೇಲುಪುರಮಂ ಕೊಂಡಂತೆ (ಮುಂಬರಾ. ೩೪೦-೩೦ ; 1060) ; ಈ ಜಿನಾಲಯಮನೆತ್ತಿಸಿದಂ ವಿಭು ಬೊಪ್ಪದೇವನಗ್ಗಳಿಕೆಯ ರಾಜಧಾನಿಗಳೊಳೊಪ್ಪುವ ದೋರಸಮುದ್ರಮಧ್ಯದೊಳ್ (ಎಕ. V, ಬೇಲೂರು. ೧೩೪-೫೩ ; 1133) ; ಅಂತು ಸುಖಸಂಕಥಾವಿನೋದದಿಂ ದೋರಸಮುದ್ರದ ನೆಲವೀಡಿನೊಳು ರಾಜ್ಯಂಗೆಯ್ಯುತ್ತಮಿರೆ (ಎಕ. VII, ಶಿವಮೊ. ೫-೧೧ ; 1218).

[ ದೋರ$_3$ + ಸಮುದ್ರ$_1$ ]

**ದೋರಹಣ್ಣು** 'ದೋರೆವಣ್' ನೋ.

**ದೋರಾಂದೋಳನ** (ನಾ). ತೋಳಿನ ಚಲನೆ,–ಅಲುಗಾಟ: ಲಸದ್ದೋರಾಂದೋಳನಜಾತಕಂಕಣಝಣತ್ಕಾರಂ (ಚಂದ್ರಪ್ರ. ೧೦-೩).

[ ಸಂ. ದೋರಾಂದೋಲನ ]

**ದೋರಿಯ$_1$** (ನಾ). ಒಂದು ಬಗೆಯ ನೆಯ಼್ಗೆಯ ಬಟ್ಟೆ; ಪಟ್ಟೆ ಇರುವ ಬಟ್ಟೆ: "ದೋರಿಯ ನಾಗವಟ್ಟೆ . . . ದೇವಾಂಗಮೆಂದು ಪಟಭೇದಮಕ್ಕುಂ" (ಮಂಗರಾ. ೧೧೧-೨೮) ; ಮಗರಿಯ ದೋರಿಯದ . . . ಮಱಿಗೆಗಳಿಂ ಸೋಲಿಪುವು ಸೀರೆವರದರ ಪಸರಂ (ಕಬ್ಬಿಕಾ. ೩೮) ; ದೋರಿಯ ಪಟ್ಟೆಯ ತೊಱೆದಳೊರ್ವಳು ಹೊಸ ಸೀರೆಯ ತೊಱೆದಳೊರ್ವಬಲೆ (ಭರಜ. ೨೦-೩೦).

[ ←ಹಿಂ. ಡೋರಿಯಾ; ಮರಾ. ದೋರವಾ ]

**ದೋರಿಯ$_2$** 'ದೋರೆ$_2$' ನೋ.

**ದೋರೆ$_1$, ಡೋರೆ, ದೋರ$_1$** (ಗು). ೧. ಅರ್ಧ ಮಾಗಿದ; ಅರೆ ಹಣ್ಣಾದ; ಪಕ್ವವಾಗುತ್ತಿರುವ. 'ದೋರೆಗಾಯ್', 'ದೋರೆವಣ್' ಪರಾ. (ನಾ). ೨. ಅರ್ಧ ಮಾಗಿದ ಫಲ; ಅರೆಮಾಗಿದುದು: ಅಪರದಿಗ್ವಿಭಾಗದೊಳಿನಿಸೊಂದಾರಕ್ತಮಾಗಿ ನೇಱಲ ದೋರೆಯನನುಕರಿಪುದಾದುದಾಗಸಮಾಗಳ್ (ಕಾವ್ಯಾವ. ೫೦೭) ; ಅಂಕುರದಿಂ ಪ್ರವಾಳಕುಲದಿಂ ನನೆಯಿಂ ಮುಗುಳಿಂ ಪ್ರಸೂನದಿಂ ಕಿಱುಗಾಯ್ಗಳಿಂ ತೊಱೆದ ದೋರೆಗಳಿಂ ತನಿವಣ್ಣ ಪಂಕ್ತಿಯಿಂದಂ . . . ಆಮ್ರಮೊಪ್ಪುಗುಂ (ಗಿರಿಕ. ೨-೩೩) : ಮಿಡಿದೊಂಗಲನೊಂದು ಕೊಂಬು ಕಾಯ್ವಳಗಮನೊಂದು ಕೊಂಬು ಹದದೋರೆಗಳೋಳಿಯನೊಂದು ಕೊಂಬು . . . ತಳೆದಿಂತು ಮನೋಹರಮಾಯ್ತು ಮಾಮರಂ (ಕುಸುಮಾ. ೧೦-೧೫೫) ; ಪೂ ಕದಿರ್ ಮಿಡಿ ದೋರೆ ಪಕ್ವಫಲಸಂತತಿಯಿಂ ದೊರೆವೆತ್ತು ಮಾಮರಂ ಮದನನ ಜನ್ಮಭೂಮಿಯೆನೆ ಪೆರ್ಮೆಯನಾಂತಿರಲೇನೊ ಕೌತುಕಂ (ಪುಣ್ಯಾಸ್ರ. ೩-೭೪). **ಡೋರೆ**: ೨. ಕಾಯಿ ಡೋರೆ ಹಣ್ಣು ಮೊದಲಾದುವುಗಳಲ್ಲಿಯ ಗಂಧವನಱಿವುದು ಆಚಾರಲಿಂಗದಲ್ಲಿಯ ಪ್ರಸಾದಲಿಂಗ (ಆದವ. ೧೯೪-೩೫೦). **ದೋರ**: ೧. 'ದೋರನೇರಿಳೆ' ಪರಾ. [ದೇ.॥ ತುಳು. ದೋರೆ; ತೆಲು. ದೋರ]

**ದೋರೆ$_2$, ದೋರಿಯ$_2$, ದೋರ್ಯ** (ನಾ). ೧. (ಕೈಗೆ ತೊಡುವ) ಒಂದು ಬಗೆಯ ಆಭರಣ,–ಬಳೆ: "ಆವಾಪಕಃ ಪಾರಿಹಾರ್ಯಃ–ಸೂಡಿಗಮೆಂಬ ಕಡಗ, ಚೂಡಾಲು, ಪೌಂಚಿ, ಕಂಕಣ, ಚೌಕಟ್ಟು, ದೋರೆ" (ಸಿದ್ಧಾಂತಿ. ೩೦೦); ಕಡಗ ಕಂಕಣ ಮಣಿ ದೋರೆ (ವಿದಾಕ್ಯ. ೭೧-೩) : ಕಂಕಣಂ ಚೂಡೆ ದೋರೆಯು ಪರಡಿ . . . ಕರದ್ವಯದ ಮಣಿಬಂಧದಲಿ ಒಲವಿನಿಂದಿಟ್ಟರು (ನವಮೋ. ೨೩-೪೦) ; ಅಳವಡಿಸಿ ತೋಳ ಬಾಪುರಿ ಬಂದಿ ಭುಜಕೀರ್ತಿಗಳನು ಪೊಂಬಳೆ ದೋರೆ ಕಂಕಣಂ ಚೂಡೆಯುಜ್ವಳಿಪ ಮಣಿಮಯದ ಕಾಂಚೀಧಾಮ ರುಳಿಯು (ನವಮೋ. ೧೦-೨೫). **ದೋರಿಯ$_2$**: ೨. (ಕರಾ) ಕೈಬಳೆಗಳ ಹಿಂದೆ ಇಡುವ ಆಭರಣ. **ದೋರ್ಯ**: ೧. ದೋರ್ಯ ಹರಡಿ ಕೈಕಟ್ಟು ಚೂಡ್ಯ ಈರೈದುಂಗುರವುಳ್ಳ ಬೆಟ್ಟು (ವಿದಾಕ್ಯ. ೧೦೩-೬) ; ಕಡಗ ಕಂಕಣ ದೋರ್ಯ ಚಳಕಿ ಭಾಪುರಿಯ ಪೊನ್ನುಡಿಗೆಯ ರಮಣಿ ತೋರಿದಳು (ದೇವೀಪ್ರ. ೪೬) ; ಸುಮಂಗಲಿಯರು . . . ಹಿಂಬಳೆ, ಮುಂಬಳೆ, ದೋರ್ಯ, ಪೌಂಚಿ, ಹರಡೀಗುಂಡು, ಗೆಜ್ಜೆ, ಕಾಲುಸರ . . . ಡಾಬು ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲಿಮ. ೩೮). [ ದೇ.॥ ತುಳು. ದೋರೆ ]

**ದೋರೆಕಾಯಿ** 'ದೋರೆಗಾಯ್' ನೋ.

**ದೋರೆಗರುಳು** (ನಾ). ದೋರೆಗಾಯಂತೆ ಕೆಂಪಗಿರುವ ಕರುಳು: ಸಾರಥಿಯ ಶಿವ ಕೊಟ್ಟನಾದೊಡೆ ಮಾರಿಗುಬ್ಬಸವಾಗದಂತಕನೂರು ತುಂಬದೆ ದೊಳ್ಳು ನೂಕದೆ ರಣಪಿಶಾಚರಿಗೆ ದೋರೆಗರುಳಲಿ ದಾನವಿಯರೊಡಲೇಱು ಹತ್ತದೆ ಹಬ್ಬವಾಗದೆ ಭೂರಿ ಭೇತಾಳರಿಗೆ ಹೋಹುದೆ ಬಱಿದೆ ರಣವೆಂದ (ಕುವ್ಯಾವಿ. ೫-೨೫).

[ ದೋರೆ$_1$ + ಕರುಳು (<ಕರುಳ್) ]

**ದೋರೆಗಾಯ್, ದೋರಗಾಯಿ, ದೋರೆಕಾಯಿ, ದೋರೆಗಾಯಿ** (ನಾ). ಅರ್ಧ ಮಾಗಿದ ಕಾಯಿ; ಹಣ್ಣಾಗಲು ಬಂದ ಕಾಯಿ: ಪುದಿದೆಳಗಾಯ್ ಬಸಂತದ ಮೊದಲ್ ನೆರೆದೊಪ್ಪುವ ದೋರೆಗಾಯ್ ಬಸಂತದ ನಡು ಪಣ್ ಬಸಂತದ ಸೆಱಂಗೆನೆ ತನ್ಮಯಮಪ್ಪಿನಂ ಬಸಂತದ ನಿಮಿರ್ದಾದಿಮಧ್ಯಮವಸಾನಮೊಡಂಬಡೆ ತನ್ನೊಳಂ ಬಸಂತದೊ[ಳಮಿದೇಂ] ಬಸಂತದದಗುಂತಿಗೆ ಬಾಱಿಸ್ಕೊದಲಾಯ್ತೊ ಮಾಮರಂ (ಶಾಂತಿಪು.೭-೧೪೩) ; ಸೀಮಾವಿನ ದೋರೆಗಾಯ್ಗಳಂ ಗೊಲೆವೆರಸು ನೆಲಕ್ಕೆ ಬೀಱಲೀಯದೆ (ಧರ್ಮಾಮ್ಯ. ೦೩-೩೦) ; ಪೊಳೆವಲರ ಸಿಂಧೂರತಿಲಕದಿಂ ತತ್‌ಕಂಸುಮಕೆಳಸಿ ಬಂದೆಱಗಿದಳಿಗಳ

ಕುಂತಳದಿನವಟಿ ಕಳರುತಿಯ ಸವಿವಾತಿನಿಂ ತೋಱ[ರ]ದೋಱ[ರೆ]ಗಾಯ್ಗಳ ಕುಚಂಗಳಿನೊಪ್ಪುತೆ . . . ದಾಡಿಮಿಾಲಲನೆ ಶುಕನು ಮನೊಲಿಸಿಕೊಂಡಳಿನೆ (ಪದ್ಮರಾ. ೮-೩೬). **ದೋರಗಾಯಿ :** ಸೀಬೆಯ ಮರದಲ್ಲಿದ್ದ ದೋರಗಾಯಿಗಳನ್ನೆಲ್ಲಾ ಹುಡುಗರು ಕಿತ್ತು ಹಾಕಿದ್ದಾರೆ (ರೂಢಿ). **ದೋರೆಕಾಯಿ :** ಒಂದು ಮಾಗಿದ ಹಣ್ಣು, ಇನ್ನೊಂದು ಮಿಂಚುವ ದೋರೆಕಾಯಿ (ಶರಹ. ೪೯೭). **ದೋರೆಗಾಯಿ :** "ಶಲಾಟುಃ, ಆಮೋಫಲೇ-ಪಕ್ವವಾಗದೇ ಇರುವ ಕಾಯಿ, ಕಸುಗಾಯಿ, ದೋರೆಗಾಯಿ, ಎಳೆಗಾಯಿ, ಮಿಡಿಗಾಯಿ" (ಸಿದ್ಧಾಂತಿ. ೧೦೦) ; ನಸುಮಿಡಿಗಾಯಿ ಕಸುಗಾಯ್ದೋರೆಗಾಯಿಗಳ . . . ಭೂಜದಿನೆಸೆದುದುದ್ಯಾನ (ತೊರರಾ. ೧-೯-೧೨); ಚೆಟ್ಟಾಗಿರಲಿ, ದೋರೆಗಾಯಾಗಿರಲಿ, ಅಥವಾ ಹಣ್ಣೇ ಆಗಲಿ ಬಹಳ ರುಚಿ (ನನ್ನೂರು. ೧೯೯).

[ದೋರೆ$_1$ + ಕಾಯ್$_4$./ತುಳು. ದೋರೆಕಾಯಿ ; ತೆಲು. ದೋರಗಾಯ]

**ದೋರೆಗಾಯಿ** 'ದೋರೆಗಾಯ್' ನೋ.

**ದೋರೆಗೆಂಬಿಸಿಲ್** (ನಾ). ಅರ್ಧ ಮಾಗಿದ ಫಲದ ಬಣ್ಣವನ್ನು ಹೊಂದಿರುವ ಬಿಸಿಲು ; ಕೆಂಬಿಸಿಲು : ವಧೂಜನಪಾದಪಲ್ಲವಪ್ರಸರದ ಕಾಂತಿ ಕಾಮುಗಿಲ ಮೇಗೆಳನೇಸಱ ದೋರೆಗೆಂಬಿಸಿಲ್ಪಸರಿಸಿದಂತಿರಾಯ್ತು (ಅನಂಪು. ೧೦-೩೫). [ದೋರೆ$_1$ + ಕೆಂಬಿಸಿಲ್]

**ದೋರೆಪಣ್** 'ದೋರೆವಣ್' ನೋ.

**ದೋರೆವಣ್**, ದೋರಹಣ್ಣು, ದೋರೆಪಣ್, ದೋರೆಹಣ್ಣು (ನಾ). ಪೂರ್ಣವಾಗಿ ಮಾಗದ ಹಣ್ಣು ; ಮಾಗಲಿರುವ ಹಣ್ಣು : ಅಂಬುಧಿಯೊಳುದಿರ್ದು ತೇಂಕುವುದುಂಬರ ಜಂಬುವಿನ ದೋರೆಪಣ್ಣುಪೋಲೆಸೆಗುಂ (ಅರ್ಧನೇ. ೧-೫೫) ; ತಳಿರ ಕಳಿಕೆಯ ಮಿಡಿಯ ಪೂಗುಡಿಯ ಪಣ್ಣ ದೋರೆವಣ್ಣ ಬೆರಕೆವಣ್ಣದೊಳ್ದಳಿರ ಪುದುವಿನಿಂ ಬೆಡಂಗುವಡೆದು (ಚಂದ್ರಪ್ರ. ೧-೧೦೫ ವ) ; ಜಂಬು ದೋರೆವಣ್ದೊಂಗಲನಾಂತುದು (ಅನಂಪು. ೯-೬) ; ಕೆಂಬರಲೆಂಬಂತೆ ಸಾರತರವಾದ ದೋರೆವಣ್ಗಳಿಂದಿಂದ್ರನೀಲದುದಂಡಂಬಡೆದು (ಶಬಶಂ. ೨-೪೨ ವ). **ದೋರಹಣ್ಣು :** ಪೂರ್ತಿ ಮಾಗಿದ ಹಣ್ಣಿಗಿಂತ ದೋರಹಣ್ಣು ಹೆಚ್ಚು ರುಚಿಯಾಗಿರುತ್ತದೆ (ರೂಢಿ). **ದೋರೆಪಣ್ :** ಕಳಿಕೆ ಕೊನರ್ ತಳಿರ್ ಮುಗುಳಲರ್ ಮಿಡಿ ಕಾಯ್ ನಸುದೋರೆ ದೋರೆ ಪಣ್ ಬಳಸಿರಲ್ . . . ಮದನತೋಮರವಾದುದು ಬಂದ ಮಾಮರಂ (ಜಗವಿ. ೧೪-೨೭). **ದೋರೆಹಣ್ಣು :** ಕಾಯಿ ದೋರೆಹಣ್ಣು ಮೊದಲಾದವಱಲ್ಲಿಯ ಗಂಧವನಱಿವುದು ಆಚಾರಲಿಂಗದಲ್ಲಿಯ ಪ್ರಸಾದಲಿಂಗ ಇಂತಿದಱಲ್ಲಿಯ ಗಂಧತೃಪ್ತಿಯನಱಿವುದು ಆಚಾರಲಿಂಗದಲ್ಲಿಯ ಮಹಾಲಿಂಗ (ಅದವ. ೫-೧೨) ; ವಿಜಯನ ಸತಿಯಿಂದ ಫಲವಾಯಿತು ಅದು ಗಜರಾಜನಿಂದ ದೋರೆಹಣ್ಣಾಯ್ತು (ಪುರಂದ. ೫-೯೨-೨) ; ಬೋರೆಗಿಡದಿ ದೋಟಿಗೆ ದೊರೆತ ದೋರೆಹಣ್ಣನವನಿಗೆ ಮೆಲಿಸುವೆ (ಗಿಳಿವಿಂ. ೬೧-೩೨).

[ದೋರೆ$_1$ + ಪಣ್$_3$]

**ದೋರೆವಲ್**, ದೋರೆವಲ್ಲು (ನಾ). ದೋರೆಹಣ್ಣಿನಂಥ ನಸುಗೆಂಪು ಬಣ್ಣದ ಹಲ್ಲು : ಮಿಸುಗುವ ದೋರೆವಲ್ ಕರಮೆ ಮಾಸರವಾದುದು ದೇಸೆಕಾರ್ತಿಯೊಳ್ (ಚಂದ್ರಪ್ರ. ೮-೫೦) ; ಮಿಸುನಿಯ ಕಂಕಣಂ ಪೊಳೆವ ಪೊಂಬಳೆ . . . ಹಳದಿಯಂಬರಮೊಪ್ಪುವ ದೋರೆವಲ್ ಕರಂ ಮಿಸುಗುವ ಪುಷ್ಪರಾಗಮಣಿಮುದ್ರಿಕೆಯಿಂದಮಲಂಪುಗೊಂಡು ನಿಂದಸಿಯಳು ಪೋಲ್ತಳಂಗಜನ ವಲ್ಲಭೆಯರ್ಚಿಪ ಪೊನ್ನ ಬೊಂಬೆಯಂ (ಸೂಕ್ತಿಸು. ೮-೪೧೯) ; ಕೆಂಬರಲ ಪಳಿವ ದೋರೆವಲ್ (ನಾಗಪ. ೨-೧೧೪). **ದೋರೆವಲ್ಲು :** ಗಂಡಸ್ಥಲಪನ್ನೆ ಕೊನರುವ ಕರ್ವಿನಸೆ ತೊಂಡೆವಣ್ದುಟಿ ದೋರೆವಲ್ಲು ಮಂಡಳಿಸುವ ಕಂಠಸರದ ನುಣ್ಗೊರಲನ ಕಂಡಾಕ್ಷಣ ಸೋತರೊಲಿದು (ಮೋಹತ. ೧೮-೬೩). [ದೋರೆ$_1$ + ಪಲ್]

**ದೋರೆವಲಸು** (ನಾ). ಅರ್ಧ ಮಾಗಿದ ಹಲಸು : ಕೆಲವು ಹೊಸ ದೋರೆವಲಸಿನ ತೊಳೆಯನುಕ್ಕರಿಸಿ ಪಲಭಾಗೆಯಂ ಮಾಡಿ ತಾಳಿದಂಗಳನಟ್ಟು (ಸೂಪಶಾ. ೫-೫೭). [ದೋರೆ$_1$ + ಪಲಸು (<ಪನಸು)]

**ದೋರೆವಲ್ಲು** 'ದೋರೆವಲ್' ನೋ.

**ದೋರೆವಾಯ್** (ನಾ). ದೋರೆಹಣ್ಣಿನಂತೆ ಕೆಂಪಗಿರುವ ಬಾಯಿ ; ಕೆಂಬಾಯಿ : ಅಳಿದ ಕುರುಳ್ ತಡಂಮುಡಿದ ಸೋರ್ಮುಡಿ ಬೀಗಿ ಬೆಳರ್ತ ದೋರೆವಾಯ್ . . . ನವನಖಾಂಕಮಲಂಕರಿಸಲ್ ನಿಜೇಚ್ಛೆಯಿಂ ಸುಳಿವಬಲಾಜನಂ ದಿನಕರೋದಯಕಾಲದೊಳೊಪ್ಪಿ ತೋಱುಗುಂ (೯-೬೧). [ದೋರೆ$_1$ + ಬಾಯ್]

**ದೋರೆವಾಯ್ದೊಱ** (ನಾ). ದೋರೆಹಣ್ಣಿನಂತೆ ಕೆಂಪಗಿರುವ ತುಟಿ ; ಕೆಂದುಟಿ : ಪಾಮರಿಯರ ದೋಱ[ರೆ]ವಾಯ್ದೊಱಗಳಂ ನೆಱಮಾಕ್ಷಿಸಿ ಬೀಡೆವೆತ್ತು ಬಿತ್ತರಿಸುವ ದಾಡಿಮವ್ರಜಮಿಂಬಭಿಶಂಕೆಯನಪ್ಪುಕೆಯ್ದು (ಶಾಂತೀಶ್ವ. ೧-೯೩). [ದೋರೆ$_1$ + ಬಾಯ್ದೊಱ$_2$]

**ದೋರೆವಿಸಿಲು** (ನಾ). = ದೋರೆಗೆಂಬಿಸಿಲ್ : ಎಳನೇಸಱ ದೋರೆವಿಸಿಲು ಕತ್ತಲೆಯೊಳು ಪೊಳೆವಂತೆ (ಅನಂಚ. ೧೫-೫).

[ದೋರೆ$_1$ + ಬಿಸಿಲು (<ಬಿಸಿಲ್)]

**ದೋರೆಹಣ್ಣು** 'ದೋರೆವಣ್' ನೋ.

**ದೋರ್ಗರ್ವ** (ನಾ). ತೋಳಿನ ಶಕ್ತಿ ಅಥವಾ ಪರಾಕ್ರಮದ ಬಗ್ಗೆ ಇರುವ ಹೆಮ್ಮೆ,- ಗರ್ವ : ದೋರ್ಗರ್ವಮನಿರ್ವಲಂ ಪೊಗಟ್ಟಿನಂ ಸೌಮಿತ್ರಿಯುಂ ರಾಮನಂ ವಿರಥರ್ಮಾಡಿ ರಣಾಗ್ರದೊಳ್ ಪಿಡಿದುತಂದಾಂ ಕೊಟ್ಟಪೆಂ (ಪಂರಾಮಾ. ೧೪-೧೧೯) ; ದೋರ್ಗ್ಗರ್ವದೊಂದು × × ಆತನ ಸಹೋದರಂ ತಾಂ ಭೂತಳದೊಳು ಕೀರ್ತಿವೆತ್ತ(೦)ನಮಳಚರಿತ್ರಂ (ಸೌಇಇ. XV, ೨೩೩-೮ ; 1203); ಮೌನಮಂ ತಾಳ್ದಾ ಮಹಾಸಭೆಯೊಳ್ ದೋರ್ಗರ್ವಮುಳಿದ ಭಟರಂ ಮಿತ್ರರಂ ಬಂಧುವರ್ಗಂಗಳಂ ನೋಡಿ (ಜಬಪು. ೫೦-೪). [ಸಂ.]

**ದೋರ್ದಂಡ** (ನಾ). ದಂಡದಂತೆ ಉದ್ದವಾದ ತೋಳು ; ಶಕ್ತಿಯಂತವಾದ ಬಾಹು ; ಭುಜಾದಂಡ : ಸುರಸಂದೋಹದ ತೀವಿ ತಂದಡಂ ಘಟಸಂಘಾತಂಗಳಾನಲ್ಕೆರಟ್ಕರದಿಂ ಬಾರದೆ ಮಾಣೆ ನಿರ್ಮಿಸಿದ ದೋರ್ದಂಗಳೊಳ್ ಭೂಷಣೋತ್ಕರಮಿಂಬಾಗಿರೆ (ಆದಿಪು. ೭-೪೭) ; ಈ ವಜ್ರಾವರ್ತ ಕೋದಂಡಮನವಯವದಿಂದೇಱಸಲ್ ಸಾಲ್ವ ದೋರ್ದಂಡಾವಷ್ಟಂಭ ಪ್ರಚಂಡಂ ಜನಕಜೆಗೆ ವರಂ ಬರ್ಪುದು (ಪಂರಾಮಾ. ೫-೭೬). [ಸಂ.]

**ದೋರ್ದರ್ಪ** (ನಾ). =ದೋರ್ಗರ್ವ : ದರ್ಪಕ ಮೇಘಚಂದ್ರಮುನಿಯೊಳ್ ಮಾಣ್ ನಿನ್ನ ದೋರ್ದರ್ಪಮಂ (ಪಂರಾಮಾ. ೧-೨೦); ಇವು ಕಂದರ್ಪಂಗೆ ದೋರ್ದರ್ಪವನಳಿಗಳಿಪಂ ಗಂಧವಾಹಂಗೆ ಸೌಗಂಧವನಬ್ಜಂಗರ್ಜಿತಾಟೋಪವವನಡರಿಸುಗುಂ (ಜಗವಿ. ೪-೬೫). [ಸಂ.]

**ದೋರ್ದಿ** (ನಾ). (ತೆಂಗಿನ ನಾರಿನ) ದಪ್ಪವಾದ ಹಗ್ಗ : ಆಗ ಅಲ್ಲಿದ್ದ ಸದಸ್ಯರಲೊಬ್ಬನು "ದೋರ್ದಿಯಂತೆ (ತೆಂಗಿನ ನಾರಿನ ಹಗ್ಗದಂತೆ) ಯಾಕೆ ತಿರುಚಿಕೊಂಡು ಸುತ್ತುತ್ತಿದ್ದೀಯೆ ?" ಎಂದು ಆತನನ್ನು ವಿನೋದವಾಗಿ ಕೇಳಿದನು (ದಾದಾನ. ೪) ; 'ದೋರ್ದಿ'ಯನ್ನು ಸುಟ್ಟರೂ, ಅದರ ರುಚನ್ನು ನಾಶಮಾಡಲಾಗುವುದಿಲ್ಲ (ದಾದಾನ. ೪).

[←ಗುಜ. ದೋರಡಿ]

**ದೋರ್ಬಲ**, ದೋರ್ಬಳ (ನಾ). ತೋಳಿನ ಬಲ,-ಕಸುವು; ಭುಜಬಲ ; ಪರಾಕ್ರಮ : ಕಾಡ ಬಡನರಿ ಮೊಲ ಪುಲ್ಲೆಗಳಲ್ಲಿ ನಿನ್ನ ಸಾಹಸಮುಂ ದೋರ್ಬಲಮುಂ ಮೆಱಗುಮದಲ್ಲದೆ ಚಲದಂಕನೊಳಿನ್ನೊಳಿಂತುಮೇಂ ಮೆಱದಪುದೇ (ಶಬಶಂ. ೪-೨೭) ; ಹರ್ಷವರ್ಧನನನ್ನು ತನ್ನ ದೋರ್ಬಲದಿಂದ ಇರಿದಿಕ್ಕಿ . . . 'ಪರಮೇಶ್ವರ'ನೆಂದು ಬಿರುದು ಪಡೆದನು

(ಕವೀರ. ೧೩). **ದೋರ್ಬಳ :** ಕುಂತಳನೃಪಾಳಂ [ಕೂಡೆ] ಕೊಣ್ಡಾಡೆ ದೋರ್ಬಳವಮಂ . . . ಮಧುವದಣ್ಣಾಧೀಶ್ವರಂ ತಾಳ್ದಿದಂ (ಕಇಅ. ೪-೨-೧೨೦ ; 1058) ; ದ್ವಿಗುಣಿಸಿದತ್ತು ದೋರ್ಬಳ ಚತುರ್ಬಳವಿಾತನಿನೀ ನೃಪಂಗೆ (ಮಲ್ಲಿಪು. ೪-೧೫೦) ; ದೋರ್ಬಳವಾಯುನಂದನನೆ ಪುಟ್ಟಿದ ನಂದನನೆಂದು ನೋಡಿ (ಕುಸುಮಾ. ೬-೧೦೯). 'ದೋರ್ವಲ' ಪರಾ. [ ಸಂ. ]

**ದೋರ್ಬಲಿ** (ನಾ). ತೋಳಿನ ಬಲವುಳ್ಳವನು ; ಭುಜಬಲವುಳ್ಳವನು ; ಪರಾಕ್ರಮಿ : ದೋರ್ಬಲಿಯೆನಗೆಱಗದ ಮೇಲರಸುಗಳಾರ್ಬಂದೆಱಗಿದ ರೇನು ಮಾರ್ಬಲವಿದ್ದೇನು ಫಲ ನನಗಿನ್ನೀ ದೋರ್ಬಲವಿದ್ದೇನು ಫಲವು (ಗೋಮಟೇ. ೧೨-೨೬). [ ಸಂ. ದೋರ್ಬಲಿನ್ ]

**ದೋರ್ಬಳ** 'ದೋರ್ಬಲ' ನೋ.

**ದೋರ್ಭಂಗ** (ನಾ). ತೋಳಿನ ಪರಾಕ್ರಮಕ್ಕೆ ಅವಮಾನ ಮಾಡುವುದು; ಸೋಲಿಸುವುದು : ವೀರಂಗೆ ದೋರ್ಭಂಗಂ ಮಾಡಿದನೇನಲಂಘ್ಯ ಬಲನೋ ರಾಮಾನುಜಂ ಲಕ್ಷ್ಮಣಂ (ಪಂರಾಮಾ. ೮-೨೯) ; ಸಂಗರದೊಳ್ ಕುಡುವೆಂ ದೋರ್ಭಂಗಮಂ (ಪಂರಾಮಾ. ೧೩-೧೯೯) [ ಸಂ. ]

**ದೋರ್ಮಂಡಲ** (ನಾ). ಭುಜಪ್ರದೇಶ; ಬಾಹುವಲಯ : ದೋರ್ಮಂಡಲದೊಳ್ ತಳೆದಂ ಭೂಮಂಡಲಮಂ ತ್ರಿದಶಜಯಂ ಜಯಶ್ರೀರಮಣಂ (ಪಂರಾಮಾ. ೧೦-೬೮). [ ಸಂ. ]

**ದೋರ್ಮಹಿಮೆ** (ನಾ). ತೋಳಿನ ಶಕ್ತಿ ; ಪರಾಕ್ರಮದ ಹಿರಿಮೆ : ರಕ್ಕಸನ ದೋರ್ಮಹಿಮೆ ಮಡಲಿಱಿದು ಪರ್ಬಿದುದು (ಜಬಪು. ೪೭-೧೩). [ ಸಂ. ದೋರ್ಮಹಿಮನ್ ]

**ದೋರ್ಮೂಲ** (ನಾ). ಬಾಹುಮೂಲ ; ಕಂಕುಳು; ಬಗಲು: ಅಸಿತೇಕ್ಷು ಕಾರ್ಮುಕನೊಡಲನೇಳಿಪ ದೋರ್ಮೂಲ ಜಡೆವಾಳ ಬೇರ್ಮೂಲವೆರ್ದೆಗೊಳ್ವ ಭರ್ಮತಾಪಾಂರ ಸಾಸ್ಕ ಕೂರ್ಮೆಗಿಕ್ಕಿದ ವಸ್ಕರೊರ್ಮೊದಲಿವೆನೆ ರತಿಗೆ ನೂರ್ಮಡಿಯು ಗಾಡಿವಡೆವರ್ (ಉದ್ಭದೇ. ೫-೨೨) ; ಬಲಗಾಲ್ಪಿಂದೆಸೆಗಾಗೆ ವಾಮಪದಮಂ ಮುಂದಿಟ್ಟು ದೋರ್ಮೂಲಮುಂ ಮೊಲೆಯುಗ್ರಂ ತದೆಲೋೞ್ ತೆಳ್ನಡು ಬಳುಂಕಲ್ ನುಣ್ಗೊರಲ್ಕೊಂಕೆ ಕೋಮಲೆ ನಿಂದು . . . ಎಚ್ಚಳಿನಿಯಂ ಭಾಪೆಂಬಿನಂ ದ್ವೀಪಿಯಂ (ರಾಜಶೇ. ೫-೯೮).
[ ಸಂ. ]

**ದೋರ್ಯ** 'ದೋರೆ₂' ನೋ.

**ದೋರ್ಯುಗ** (ನಾ). ಎರಡು ತೋಳುಗಳು ; ಬಾಹುಯುಗ್ಮ : ತನುಲತೆಗೆ ಶಾಖೆ ಕರತಳವನಜಕ್ಕೆ ಮೃಣಾಳನಾಳಮಕ್ಷಿಭ್ರಮರಕ್ಕೆ ನವೀನಶಿರೀಷಸ್ರಜಮೆನೆ ವನಿತೆಯ ದೋರ್ಯುಗಕ್ಕೆ ಪರ್ಯಾಯಂಗಳ್ (ಚಂದ್ರಪು. ೧೧-೧೦೧) ; ಹರಭಕ್ತರ್ ಬಂದೊಡುರ್ಬುತ್ತವರ ಚರಣಮಂ ಕಣ್ಗಳೊಳ್ ಕಂಠದೊಳ್ ಪೇರುರದೊಳ್ ಭಾಳಾಗ್ರ ದೋರ್ಯುಗದೊಳುಭಯಗಂಡಂಗಳೊಳ್ ತಾಳ್ದುಮೆತ್ತುತ್ತೊರೆಯುತ್ತಪ್ಪುತ್ತೆ . . . ಬಾಳ್ದಿರ್ಪರವಂ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೫೮) . [ ಸಂ. ]

**ದೋರ್ಯುದ್ಧ** (ನಾ). ದ್ವಂದ್ವಯುದ್ಧ ; ಹೋರಾಟ ; ಜಗಳ : "ದೋರ್ಮಧ್ಯ [ಯುದ್ಧ] ಮೆನೆ ಕರೀರಕಮೆನಲು ಜಗಳಕ್ಕೆ ನಾಮಮಕ್ಕುಂ" (ಮಂಗರಾ. ೧೩೨-೩೦). [ ಸಂ. ]

**ದೋರ್ವಲ, ದೋರ್ವಳ** (ನಾ). ೧. = ದೋರ್ಬಲ : ವಿಜಯಶ್ರೀ ಕಾಂತೆಗಂ ಕಾಂತೆಗಂ ನಿನಗಂ ದೋರ್ವಲದಿಂದಮೊಂದೆ ಪಸೆಯೊಳ್ ಪಾಣಿಗ್ರಹಂಗೆಯ್ಕನೇ (ಪಂಪಭಾ. ೩-೬೫); ತನ್ನ ಬಾಣದ ಮೊನೆಯೊಳ್ ಮಾರ್ವಲಮಂ ತವಿಸಿದನೆನೆ ದೋರ್ವಲಮೇಂ ಬ್ರಹ್ಮರಥನೊಳವಿತಥಮಾಯ್ತೋ (ಪಂರಾಮಾ. ೨-೬೨); ಎನ್ನ ಪೆಂಡತಿಯೆನ್ನ ಬಾಂಧವರೆನ್ನವ್ವೆಯೆನ್ನ ದೋರ್ವಲಮೆಂದು ಧರ್ಮದ ಬಟ್ಟೆಗಾಣದೆ (ಧರ್ಮಾಮೃ. ೭-೧೨೦): ಪರ್ವಿದ ಗರ್ವದ ಕೊರ್ವಿಂದಮರರಗುರ್ವಿಸೆ ಭರ್ಜಿಸಿ ದೋರ್ವಲಮಂ ಮೆಱೆದುರ್ವುವ ದುಷ್ಟಜಲಂಧರವಾರಿಧಿಗೌರ್ವಾನಲ ಜಯತು (ಉದ್ಭದೇ. ೬-೧೯). **ದೋರ್ವಳ :** ೧. ದೋರ್ವಳದಿಂ ಚತುರಬ್ಧಿ ಮೇಖಲಾವಳಯಿತ ಭೂಮಿಗಾದನೆಱೆಯಂ . . . ಶೂದ್ರಕನೆಂಬ ಭೂಭುಜಂ (ಕಾದಂಪೂ. ೮): ದೋರ್ವಳದೃಪ್ತಂ ತಳತಂತ್ರಮಿರ್ಕೆಲದೊಳಿಂಬಾಗಿರ್ಪಿನಂ ಲೀಲೆಯಿಂ ತಳೆರ್ದಂ (ಪುಷ್ಪಪು. ೫-೧೮). ೨. ತೋಳಿನ ಶಕ್ತಿಯುಳ್ಳವನು; ಪರಾಕ್ರಮಿ : ಅದನಾಳ್ವನಪ್ರತಿಮ ದೋರ್ವಳನಾ ವಿಭುದೇವಸೇನಂ (ನೇಮಿಪು. ೬-೨) ; ಪುರದ ಬಹಿರಾವರಣಸೀಮಾಂತರದ ಸಂವೇಶದಲಿ ದೊರೆಗಳಿ ಬೀಡಾಯ್ತರಸು ಮನ್ನೆಯ ಮಂಡಲೇಶ್ವರ ಸಾರ್ವಭೌಮರಿಗೆ ದೋರ್ವಳರಿಗವನೀಸುರರಿಗಾ ವಿಟಶೂದ್ರ ಮೊದಲಾದರಿಗೆ ಮಿಕ್ಕಿನ ವಿವಿಧ ವರ್ಣಾಶ್ರಮ ಜನಂಗಳಿಗೆ (ತೊರರಾ. ೧-೧೨-೩೦).
[ < ಸಂ. ದೋರ್ಬಲ ]

**ದೋರ್ವಲನ** (ನಾ). ತೋಳುಗಳನ್ನು ಆಡಿಸುವುದು ; ಬಾಹುಚಲನೆ : ಚಾರಿ ಮೆಟ್ಟುವ ಭಂಗಿ ದೋರ್ವಲನಂ ಮನಂಗೊಳೆ ಮಂಜುಮಂಜೀರ ಕಂಕಣಕಿಂಕಿಣೀರುತಿ ಪೊಣ್ಮೆ ವಕ್ರಿತ ಕಂಧರಂ ಸ್ಮೇರವಕ್ತ್ರಸರೋರುಹಂ ಲಲಿತಾಯತೇಕ್ಷಣನಾಗಿ ಸಂಸಾರನಾಟಕಸೂತ್ರಧಾರಿ ಮುರಾರಿ ಕೈಪಱೆಗಾಡಿದಂ (ಜಗವಿ. ೩-೫೨). [ ಸಂ. ]

**ದೋರ್ವಳ** 'ದೋರ್ವಲ' ನೋ.

**ದೋರ್ವಳಯ** (ನಾ). ತೋಳಿಗೆ ತೊಡಿಸುವ ಒಂದು ಬಗೆಯ ಆಭರಣ; ತೋಳುಬಂದಿ ; ತೋಳುಬಳೆ ; ಬಾಹುಪೂರ : ಕಂಕಣಮಂ ತಗುಳ್ಚಿ ದೋರ್ವಳಯಮನಿಕ್ಕಿ ಮುದ್ರಿಕೆಯನೇಱಿಸಿ ನೂಪುರಮಂ ತೊಡರ್ಚಿ ಮಂಜುಳ ಕಟಿಸೂತ್ರಮಂ ತುಡಿಸಿ ಕಯ್ಗೆಯೆ ಕಣ್ಗೆಸೆದಂ ಜಿನಾರ್ಭಕಂ (ಪುಷ್ಪಪು. ೧೧-೬೩). [ ಸಂ. ದೋರ್ವಲಯ ]

**ದೋರ್ವಳಯುತ** (ನಾ). ತೋಳಿನ ಬಲದಿಂದ ಕೂಡಿದವನು ; ಭುಜಬಲವುಳ್ಳವನು ; ಪರಾಕ್ರಮಿ : ಎಲೆ ಸಹಜಾತೆ ನಿನ್ನನತಿವೇಗದೊಳಿಂದು ಪುರಂದರಾದಿಗಳ್ಬಳಯುತರಡ್ಡವಿಕ್ಕಿದೊಡೆ ಪೋಪೆನೆ ತಪ್ಪೆನೆನುತ್ತ . . . ದೋರ್ವಳಯುತನಾಹವಕ್ಕೆಳಸಿ ಪೊರ್ದಿರೆ ನಾಗಕುಮಾರಕುಂಜರಂ (ಪುಣ್ಯಾಸ್ರ. ೭-೬೨). [ < ಸಂ. ದೋರ್ಬಲಯುತ ]

**ದೋರ್ವಿಕ್ರಾಂತ** (ನಾ). = ದೋರ್ಬಲ : ನೆಗಟ್ದನಖಿಳರಾಜ್ಯಾಂಗನಾವಲ್ಲಭಂ ತಾನೆನೆ ದೋರ್ವಿಕ್ರಾಂತದಿಂದಾಚುಗಿನೃಪತನಯಂ ಬೊಮ್ಮಭೂಪಂ (ಸೌಇಇ. XI-ii, ೧೧೯-೧೮ ; 948). [ ಸಂ. ]

**ದೋಲ, ದೋಳ** (ನಾ). ೧. ತೂಗಾಡುವುದು ; ಓಲಾಡುವುದು ; ಹೊಯ್ದಾಡುವುದು: ಕಾರುಣ್ಯದೋಲದುಯ್ಯಾಲೆಯಂ ನೆನೆ (ಶ್ರೀರಾಮಾ. ೩೧೦-೨೩೯). ೨. ಫಾಲ್ಗುಣ ಮಾಸದ ಹುಣ್ಣಿಮೆಯ ದಿನ ಮಾಡುವ ಶ್ರೀಕೃಷ್ಣನ ಉತ್ಸವ,—ಡೋಲೋತ್ಸವ. ೩. ಅಂದಣ ; ಪಲ್ಲಕ್ಕಿ. ೪. ಉಯ್ಯಾಲೆ ; ತೂಗುಮಂಚ : "ದೋಲಾಂದೋಲ [ಪಾಠಾಂ. ದೋಳಾಂದೋಳ]ಮುಯ್ಯಲಕ್ಕುಂ" (ಮಂಗರಾ. ೬೧-೧೭). 'ಆಂದೋಲ' ಪರಾ. ೫. ವ್ಯವಸಾಯದ ಒಂದು ಉಪಕರಣ ; ಕುಂಟೆ : (ಕ). **ದೋಳ :** ೪. ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. 'ಆಂದೋಳ' ಪರಾ. ೫. "ದೋಳಂ ಕೂಂಟೆ" (ಮಂಗರಾ. ೧೧೯-೧). [ಸಂ.]

**ದೋಲಕ** (ನಾ). ತೂಗಾಡುವ ಕುಚ್ಚು ; ಲೋಲಕ: ಗಾಳಿಗೆ ತೂಗಾಡುವ ಝುಲ್ಲರಿಗಳ ಸ್ಫಟಿಕ ದೋಲಕಗಳ ಟುಣ್‌ಟುಣ್ ಧ್ವನಿ ... ಕೇಳಬರುತ್ತಿವೆ (ಇಪ್ಪಕ. ೧೪೭). [ ಸಂ. ]

**ದೋಲಯಿಸು** 'ದೋಲಿಸು' ನೋ.

**ದೋಲಾಯಂತ್ರ** (ನಾ). "ಒಂದು ಪಾತ್ರೆಯಲ್ಲಿ ಕಷಾಯವನ್ನು ಹಾಕಿ ಅದರ ಬಾಯ ಮೇಲೆ ಅಡ್ಡಕಟ್ಟಿಗೆಯನ್ನಿಟ್ಟು ಅದಕ್ಕೆ ಔಷಧದ ಗಂಟು ಇಳಿಬಿಡಬೇಕು. ಆ ಗಂಟು ಕಷಾಯದಲ್ಲಿ ಅರ್ಧ ಮುಳುಗಿರಬೇಕು. ಇದಕ್ಕೆ ದೋಲಾಯಂತ್ರವೆಂಬ ಸಂಜ್ಞೆಯಿರುತ್ತದೆ" (ಗೃಹವೈ. ೮ ಅಡಿಟಿ): ಆದರೊಳಗಿನ ಕಸರು ಕಡ್ಡಿಗಳನ್ನಾರಿಸಿ ಅರಿವೆಯಲ್ಲಿ ಗಂಟುಕಟ್ಟಿ ತ್ರಿಫಲಾದ ಕಷಾಯದೊಳಗೆ ದೋಲಾಯಂತ್ರದಿಂದ ಕು ದಿ ಸ ಬೇ ಕು (ಗೃಹವೈ. ೮). [ಸಂ.]

**ದೋಲಿ** (ನಾ). ಬೆಟ್ಟ ಮುಂತಾದ ಇಳಿಜಾರಿನ ಪ್ರದೇಶಗಳಲ್ಲಿ ಮನುಷ್ಯರನ್ನು ಕೂರಿಸಿಕೊಂಡು ಮನುಷ್ಯರೇ ಹೊರುವ ತೊಟ್ಟಿಲಿನಂಥ ಒಂದು ವಿಧವಾದ ವಾಹನ: ಮದುವೆಯಾಗಿ ಮ ರು ದಿ ಬ್ಬ ಣ ಬಂದದ್ದು ದೋಲಿಯಲ್ಲಿ (ಪಳಮ. ೫೫); ದೋಲಿಯಲ್ಲಿ ಪರ್ವತವನ್ನು ಹತ್ತುತ್ತಿದ್ದಾಗ, ಪರ್ವತದ ಮೇಲು ಕೆಳಗು ಪ್ರದೇಶಗಳಲ್ಲಿ ಚೈತ್ರಮಾಸದ ನಾನಾ ವಿಧವಾದ ಬೆಳೆ . . . ಸೌಂದರ್ಯದ ಉರಿಯನ್ನು ಎಬ್ಬಿಸಿತ್ತು (ನಿಬಂಧ. II, ೬೯); ಎರಡು ದೋಲಿಗಳನ್ನು ಹೊಂದಿಸಿಕೊಂಡು . . . ಕರೆದುಕೊಂಡು ಹೋಗಿ (ಬಂಕಿಮ. ೩೨೦). 'ಡೋಲಿ' ಪರಾ. [ಸಂ. ದೋಲೀ]

**ದೋಲಿಗ** (ನಾ). ಕೆಲಸಗಾರ; ಸೇವಕ: ದಾವಣಿಗೂಂಟವುಂ ಪೊಡೆವ . . . ಗುಡಿವೊಯ್ದು ಬೆನ್ನ ಪುಣ್ಣೋವುವ ನೀರ್ಗೊಳಕ್ಕೆ ಬಟಲ್ವೆಟ್ಟುಗಳಂ ಪೊಡೆವಕ್ಕಿಯಂ ಕರಂ ಭಾವಿಸೆ ಸೇರೆಗೊಂಡಡುವ ದೋಲಿಗರಿಂದೆಸೆದಂ ವಣಿಗ್ವರಂ (ದಶಕು. ೪-೭೮). [<ಜೋಲಿ$_1$ + -ಗ$_2$]

**ದೋಲಿಸು, ದೊಲ್ಲಯಿಸು, ದೋಲಯಿಸಂ** (ಕ್ರಿ). ಅಲ್ಲಾಡುವಂತೆ ಮಾಡು; ತೂಗಾಡಿಸು: ತಡಿಯ ಹೆಮ್ಮರದ ನೆರಳ ದೋಲಿಸುತ ಬಳಿಗೆ ಬರುವ ತೆರೆಯ ಕರದೊಳಾಂತು (ಹಂಸದ. ೬-೩೦). **ದೊಲ್ಲಯಿಸು:** ಇನ್ನು ಮೇತಕೆ ನಿನ್ನ ಮುಸುಕುವೌನವ ತೊರೆಯೆ? ಮುಚ್ಚಾಲೆಯಾಡಿ ದೊಲ್ಲಯಿಸುವೇಕೆನ್ನ? (ಗೀವಿಂ. ೨೭-೨). **ದೋಲಯಿಸು:** ಐರಾವತವನೆ ಬಿಳಿಮುಗಿಲಾನೆಯ ಸದರದಿ ಮುಟ್ಟುತ ನೇವರಿಸಿ, ಕುಸುಮಾವಳಿಯೆನೆ ಬಾನಿನ ನೀಲವ ಟೊಂಗೆಯ ತುದಿಯೊಳು ದೋಲಯಿಸಿ (ಮಾಂದಳಿ. ೫೭-೧೨). [ದೋಲ + -ಇಸು$_3$]

**ದೋಲು** 'ಡೋಲು' ನೋ.

**ದೋಲೆ** (ನಾ). ಉಯ್ಯಾಲೆ; ತೊಟ್ಟಿಲು: "ದೋಲೆ (ದೋಲಿ)–ದೋಲಾ= ಡೋಲಿ" (ತದ್ಭಕೋ. ೨೦). 'ಡೋಲೆ' ಪರಾ. [ಸಂ. ದೋಲಾ]

**ದೋಲೋತ್ಸವ** (ನಾ). ದೇವರ ಮೂರ್ತಿಯನ್ನು ಉಯ್ಯಾಲೆಯಲ್ಲಿ ಕೂರಿಸಿ ಮಾಡುವ ಉತ್ಸವ: ಶ್ರೀನಿವಾಸದೇವರ ಗುಡಿಯಲ್ಲಿ ಇಂದು ದೋಲೋತ್ಸವ ನಡೆಯುತ್ತದೆ (ರೂಢಿ). 'ಡೋಲೋತ್ಸವ' ಪರಾ. [ದೋಲ + ಉತ್ಸವ]

**ದೋವತಿ** 'ಧೋವತಿ' ನೋ.

**ದೋವತ್ತಿ** 'ಧೋವತಿ' ನೋ.

**ದೋವು** (ನಾ). (?): ಪಾಡಟಿದು ಕೋಮಳಾಂಗಂ ಬಾಡೆ ನಿಜಾವಯವ ದವುಳಮಣಿಭೂಷಣವುಂ ನೋ ಡು ವ ಡೆ ದೋವಿನೋಲೆಯಾ (?) ತೋಡುಟಿಯಲ್ ಪೊಕ್ಕಳಬಲೆ ಜನಕಾಲಯವುಂ (ನಳಚಂ. ೫೭೮). [?]

**ದೋಶಿ** (ನಾ). ಜೋಯಿಸ: ಜೋಶಿಗಳೂ ದೋಶಿಗಳೂ (ಹುಚ್ಚಾಟ. ೧೭). 'ಜೋಶಿ' ಪರಾ. [< ಸಂ. ಜ್ಯೋತಿಷಿನ್]

**ದೋಶ್ಚಕ್ರ** (ನಾ). ಕೈಯಲ್ಲಿರುವ ಚಕ್ರಾಯುಧ; ಹಸ್ತವರ್ತಿಯಾದ ಚಕ್ರಾಯುಧ: ಚಕ್ರರತ್ನಮೊಂದೆಯಲ್ತು ಚಕ್ರಿಗಾನುಮಲ್ತೆ ದೋಶ್ಚಕ್ರಮೆಂದು ಬಂದು ಮುಂದೆ ನಿಲ್ವ ಮಾಟ್ಕೆಯಿಂ ಪ್ರಭಾಚಕ್ರಮೆಸೆಯೆ (ಆದಿಪು. ೧೨-೫೫). [ಸಂ.

**ದೋಶ್ಶಾಲಿ** (ನಾ). (ಸಮರ್ಥವಾದ) ತೋಳುಳ್ಳವನು; ಪರಾಕ್ರಮಶಾಲಿ: ವಿ ಜ ಯಾ ರ್ಥ ನ ಗ ಕ್ಕೆ ತ್ತಿ ದ ನ ಜೇ ಯ ದೋ ಶ್ಶಾ ಲಿ ರಾವಣಂ ನಿಜವಿಜಯಧ್ವಜಿನಿಗಳೇಟುಂ ನಿ ಜ ಸೀ ಮಾ ವ ಪ್ರ ವೇ ದಿ ಯಿಂ ತಳರ್ದು ಪೆನಲ್ (ಪಂರಾಮಾ. ೧೦-೯೭). [ಸಂ. ದೋಶ್ಶಾಲಿನ್]

**ದೋಷ** (ನಾ). ೧. ಕುಂದು; ಕಳಂಕ: "ಕುಱುಹಿನಲ್ಲಿಯುಂ ಕಳಂಕದಲ್ಲಿಯುಂ ದೋಷವೆಂಬುದು" (ಹಲಾಯು. ೧೩೭-೩೪): "ಕಡುಹಿ[ಕುಱುಹಿ]ನಲಿ ದೋಷದಲ್ಲಿ ವಿಗೆ ಕ ಳ ೦ ಕ ವು ದೆ ೦ ಬು ದು" (ಮಂಗರಾ. ೦೪೨-೦೯). ೨. ಕೊರತೆ; ನ್ಯೂನತೆ. 'ದೃಷ್ಟಿದೋಷ' ಪರಾ. ೩. ತಪ್ಪು; ಅಪರಾಧ: "ದೋಷವಪರಾಧ" (ವಸ್ತುಕೋ. ೧೧೪-೧೮); ಗುಣಾರ್ಣವನೊಳ್ಳು ಮನ್ಮನೋವಾಸಮನೆಯ್ದೆ ಪೇಟ್ದಪೆನದಲ್ಲದೆ ಗರ್ವಮೆ ದೋಷಮ[ಟ್ಟಿ]ಗುಂ ದೋಷಮೆ (ಪಂಪಭಾ. ೧-೧೩); ದೋಷಮುಮೋವವುಂ ಶಕುನಿಯಿಂ ಯುವರಾಜನಿನಾಯ್ತು (ಪಂಪಭಾ. ೧೩-೬೮); ಅವರ ಮಾತು ಮೀರಿದ ದೋ ಷ ಕ್ಕೆ ನಾವು ಪಾತ್ರರಾಗುವೆವು (ಮುಂಬಯಿ. ४-४८). ೪. ಕೆಟ್ಟ ಕಾರ್ಯ; ಪಾಪ: "ಅಘಂ ನಕ್ಕಾಂಕ ದೋಷಾಹ್ವಯಂ" (ನಾನಾರ. ೧೭); ದೋಷವಲ್ಲಿಯದೊ ದುರಿತವಲ್ಲಿಯದೊ ಸಂಗಯ್ಯಾ ನಿಮ್ಮ ಮಾಣದೆ ನೆನೆವವಂಗೆ ಭವಕರ್ಮವೆಲ್ಲಿಯದೊ (ಬಸವ. ೮೭೦); ಹಿಂದೆ ಮಾಡಿದ ದೋಷ ಒಂದುಳಿಯದಱುಹಿದೆನೊ ತಂದೆ ಪುರಂದರವಿಠಲ ಬಂದೆನ್ನ ಸಲಹೊ (ಪುರಂದ. ४-४४-೫). ೫. ಕೆಟ್ಟ ಗುಣ; ದುರ್ಗುಣ; ಅವಗುಣ: ಏಸು ಪುಣ್ಯವ ಗಳಿಸಿಕೊಂಡರು ದ್ವೇಷವೆಂಬೀ ದೋಷದಿಂದಲಿ ಲೇಸು ದೊರಕುವುದೆ (ಅಮೃತ. ३-೬೭); ರಾ ಗ ದ್ವೇ ಷ ಗ ಳೆ ೦ ಬು ದು ದೋಷಗಳು (ಹಿಂದಸಾ. ೧೧೫). ೬. ಕೆಟ್ಟ ನಡತೆ; ದುಶ್ಚಾರಿತ್ರ್ಯ: ನೀಂ ಪೊಲ್ಲಮೆಗೆ ಕರಂ ಗೆಂಟಾಗಿರ್ದುಂ ನಿನ್ನ ದೋಷಮುಂ ಕಂಡುಮೇಕೆ ಕಳೆಯದಿರ್ಪಯ್ ಬೇಗಂ ಕಳೆ ಕಳೆಯದುದಾಸೀನನಾಗಿರ್ದೆಯಾದೊಡೆ ಸೂಜಿಯ ಬಟಿಯ ದಾರದಂತೆ ದೋಷದ ಬಟಿಯನೆ ಪಾಪಂ ತಗುಳ್ದು ಬರ್ಕುಂ (ಜೀವಸಂ. ३४-४८ ವ). ೭. ಕೇಡು; ಅನರ್ಥ: ಪರಮೇಶ್ವರನಾತಂ ತತ್ಪ್ರಮಾದಮುಂ ಸ್ಮರಿಸಿದೊಂ ನಿರುಪಮಮಿದೆಂದು ಶಂ ಕಿ ಸ ದಿ ರು ಮುಟ್ಟದು ಗುಣಿಗೆ ದೋಷಿಗಕ್ಕುಂ ದೋಷಂ (ಶಾಂತಿಪು. ३-೮೮); ಇಂದ್ರಿಯನಿಗ್ರಹವ ಮಾಡಿದರೆ ಹೊಂದುವುವು ದೋಷಂಗಳು ಮುಂದೆ ಬಂದು ಕಾಡುವುವು ಪಂಚೇಂದ್ರಿಯಂಗಳು (ಬಸವ. ९४೦). ೮. ಅವಮಂಗಳವಾದುದು; ಅಶುಭವಾದುದು: ಕೊ ರ ಲೊ ಳ್ ಕಣ್ಗೆಸೆದೊಪ್ಪೆ ದೇಪಮಣಿ ಮೇಣ್ ರೋಚಿಮಾನಂ ಪೊದಟ್ದಿರೆ ಪೂ ರ್ವಾ ೦ ಗ ದ ದೋಷಮುಂ ನಿಟಿಲದೊಳ್ ನಿಶ್ರೇಣಿಕಾಕಾರದಿಂದಿರೆ ಮೇಣ್ ಪ(ಪು)ಲ್ಲಿಯ ಮಾಟ್ಕೆಯಿಂದಿರೆ ಶಿರೋದೋಷಂಗಳಂ ಮೇ ಖ ಳಾ ೦ ತ ರ ದೆ ಊ ಳ್ ತೋಟಿರೆ ಪಶ್ಚಿಮಾರ್ಧದ ಶುಭಾವರ್ತಂಗಳುಂ ಪಿಂಗುಗುಂ (ಲೋಕೋಪ. ೧೦-೪೪). ೯. ಕತ್ತಲೆ; ಅಂಧಕಾರ. 'ದೋಷಾನುಷಂಗ' ಪರಾ. ೧೦. (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ, ಕಫಗಳೆಂಬ ಮೂರುಂ ಬಗೆಯ ನ್ಯೂನತೆಗಳು: ಅನಾಮಯಂ, ಆರೋಗ್ಯಂ –೨ ರೋಗವಿಲ್ಲದೆ ಯಿರುವಿಕೆ, ವಾತ ಪಿತ್ತ ಶ್ಲೇಷ್ಮಗಳೆಂಬ ಮೂರು ದೋಷಗಳೂ ಸಮಾನವಾಗಿರುವಿಕೆ (ಸಿದ್ಧಾಂತಿ. ೧೮೨). ೧೧. (ರೋಗವು ತೀವ್ರವಾದಾಗ) ನಾಲಗೆಯ ಮೇಲೆ ಉಂಟಾಗುವ ಕೆಂಪು ಅಥವಾ ಕಪ್ಪು ಕಲೆ: ರೋಗವು ಬಲವಾಗಿ ನಾಲಗೆಯ ಮೇಲೆ ದೋಷ ಬಂತು (ನೀತಿಚಿಂ. I, ३೭). ೧೨. (ರೋಗದ) ಚಿಕಿತ್ಸೆ: "ದೋಷಂ ಪ್ರತಿಕಾರಕ್ರಿಯೆ" (ವಸ್ತುಕೋ. ೭४-४३). ೧೩. [ಕಾವ್ಯಮೀ] ಪದ, ಅರ್ಥ, ರಸಗಳಿಗೆ ಸಂಬಂಧಿಸಿದ ಕಾವ್ಯಪ್ರಯೋಗದ ನ್ಯೂನತೆಗಳು; P ಪ್ರಾಚೀನ ಆಲಂಕಾರಿಕರ ಹೇಳಿಕೆಗಳ ಪ್ರಕಾರ ಕಾವ್ಯದೋಷಗಳ ಸಂಖ್ಯೆ ಹಾಗೂ ವಿವರಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ನಾ ಟ್ಯ ಶಾ ಸ್ತ್ರ

ಹಾಗು ಕಾವ್ಯಾವಲೋಕನಗಳ ಪ್ರಕಾರ ಕಾವ್ಯದೋಷಗಳು ಹತ್ತು. ಅವು ಯಾವುವೆಂದರೆ : "(ಅ) ಗೂಢಾರ್ಥ, ಅರ್ಥಾಂತರ, ಅರ್ಥ ಹೀನ, ಭಿನ್ನಾರ್ಥ, ಏಕಾರ್ಥ, ಅಭಿಪ್ಲುತಾರ್ಥ, ನ್ಯಾಯಾದಪೇತ, ವಿಷಮ, ವಿಸಂಧಿ, ಶಬ್ದಚ್ಯುತ (ನಾಟ್ಯಶಾ. ೧೬-೮೪/೧೭-೮೮). (ಆ) ಅಪಾರ್ಥ, ವ್ಯರ್ಥ, ಏಕಾರ್ಥ, ಸಸಂಶಯ, ಉಪಕ್ರಮ, ಶಬ್ದ ಹೀನ, ಯತಿಭ್ರಷ್ಟ, ಭಿನ್ನವೃತ್ತ, ವಿಸಂಧಿಕ, ದೇಶಕಾಲಕಲಾಲೋಕ ನ್ಯಾಯಾಗಮವಿರೋಧಿ (ಕಾವ್ಯಾವ. ೮೧-೮೮)'' (ಶ್ರೀವತ್ಸ. ೧೧೯): ಛಂದೋಂಬುಧಿಯ ಪ್ರಕಾರ ಕಾವ್ಯದೋಷಗಳು ಹದಿನೆಂಟು. ಅವು ಯಾವುವೆಂದರೆ: "ಅಸದರ್ಥ, ವಿಪರೀತಕಲ್ಪನೆ, ಅಭವ್ಯ, ದುಷ್ಕರ, ಗ್ರಾಮ್ಯ, ನೀರಸ, ಅಪ್ರೌಢತೆ, ಅಪ್ರತೀತಿವಚನ, ದುಸ್ಸಂಧಿ, ವಿಶ್ಲೇಷ, ನಷ್ಟಸಮಾಸ, ನಯನಾಶ, ರೀತಿವಿಫಲ, ದುರ್ಲಕ್ಷಣ, ಹಾಸ್ಯವಾಕ್, ವಿಷಮ, ಅಸೌಮ್ಯ, ಅನೋಜೆ (ಛಂದೋ. ಪು. ೧೦೦-ಪ. ೧)" (ಶ್ರೀವತ್ಸ. ೧೧೯). ಸಂಸ್ಕೃತ ಆಲಂಕಾರಿಕರು ಮತ್ತು ಕನ್ನಡ ಆಲಂಕಾರಿಕರೆಲ್ಲರ ಅಭಿಪ್ರಾಯಗಳನ್ನು ಒಟ್ಟುಗೂಡಿಸಿ, ಕನ್ನಡ ಕೈಪಿಡಿಯಲ್ಲಿ ಒಂದು ಪ್ರತ್ಯೇಕ ವಿಭಾಗವನ್ನು ಮಾಡಿ ಕೊಂಡಿದ್ದಾರೆ. ಆ ವಿಭಾಗದ ಮೇರೆಗೆ ಈ ಕೆಳಕಂಡ ವಿವರಣೆಯನ್ನು ಕಾಣಬಹುದು. ಕಾವ್ಯದಲ್ಲಿ ಪದ, ಅರ್ಥ, ರಸಗಳೆಂಬುವು ಮುಖ್ಯವಾದುವುಗಳಾದುದರಿಂದ, ಕಾವ್ಯದೋಷಗಳನ್ನು ಪದ ದೋಷ, ಅರ್ಥದೋಷ ಮತ್ತು ರಸದೋಷಗಳೆಂದು ಮೂರು ಭಾಗ ಮಾಡಬಹುದು. "೧. ಪದದೋಷಗಳು ... ೧. ಶ್ರುತಿಕಟು-ಪರುಷಾಕ್ಷರಗಳಿಂದ ಕೂಡಿ ಕಿವಿಗೆ ಅಶ್ರಾವ್ಯವಾಗಿ ಇರುವುದು. ೨. ಚ್ಯುತಸಂಸ್ಕಾರ - ವ್ಯಾಕರಣಕ್ಕೆ ವಿರುದ್ಧವಾಗಿರುವುದು. ೩. ಅಪ್ರಯುಕ್ತ - ಕೋಶ ವ್ಯಾಕರಣಗಳಿಗೆ ಒಪ್ಪಿಗೆಯಾಗಿದ್ದರೂ, ಪ್ರಯೋಗದಲ್ಲಿ ಇಲ್ಲದೇ ಇರುವುದು. ೪. ನಿಹತಾರ್ಥ-ಪ್ರಸಿದ್ಧವಾದ ಅರ್ಥವನ್ನು ಬಿಟ್ಟು ಬೇರೆ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು. ೫. ಅನುಚಿತಾರ್ಥ - ಹೇಳಬೇಕೆಂದಿರುವ ಅರ್ಥದ ಸ್ವಾರಸ್ಯವನ್ನು ಕೆಡಿಸುವುದು. ೬. ನಿರರ್ಥಕ - ಪಾದಪೂರಣಕ್ಕೆ ಮಾತ್ರ ಹಾಕಿರುವುದು. ೭. ಅಶ್ಲೀಲ - ಮನಸ್ಸು ಹಿಂದೆಗೆಯುವಂತೆ ಮಾಡುವುದು. ಇದು ಮೂರು ವಿಧ :-(i) ನಾಚಿಕೆಗೊಳಿಸು ವುದರಿಂದ, (ii) ಜುಗುಪ್ಸೆ ಅಥವಾ ಅಸಹ್ಯವನ್ನುಂಟುಮಾಡುವುದರಿಂದ, (iii) ಅಮಂಗಲ ಅಥವಾ ಕೆಟ್ಟದ್ದನ್ನು ಸೂಚಿಸುವುದರಿಂದ. ೮. ಸಂದಿಗ್ಧ - ಗೊತ್ತಾದ ಒಂದು ಅರ್ಥವಿಲ್ಲದೆ ಹೀಗೋ ಹಾಗೋ ಎಂದು ಸಂದೇಹ ಹುಟ್ಟುವಂತೆ ಇರುವುದು. ೯. ಅಪ್ರತೀತ - ಕೇವಲ ಶಾಸ್ತ್ರಗಳಲ್ಲಿ ಮಾತ್ರವೇ ಬರುವುದು. ೧೦. ಗ್ರಾಮ್ಯ - ಗಂಭೀರವಲ್ಲದ್ದು. ೧೧. ಕ್ಲಿಷ್ಟ - ಪಾಠಕರಿಗೆ ಸುಲಭವಾಗಿ ಅರ್ಥವಾಗದಿರುವುದು. ೧೨. ಅವಿಮೃಷ್ಟವಿಧೇಯಾಂಶ - ಹೇಳಬೇಕೆಂದಿರುವ ವಿಷಯದಲ್ಲಿ ಮುಖ್ಯಭಾಗಕ್ಕೆ ತಕ್ಕ ಪ್ರಾಶಸ್ತ್ಯ ಕೊಡದಂತಿರುವುದು. ೧೩. ವಿರುದ್ಧಮತಿಕೃತ್ - ಹೇಳಬೇಕೆಂದಿದ್ದ ಅರ್ಥಕ್ಕೆ ಕೇವಲ ವಿರುದ್ಧವಾದ ಅರ್ಥವೂ ಆಗುವಂತಿರುವುದು. ವಾಕ್ಯದಲ್ಲಿ ಮಾತ್ರ ಬರತಕ್ಕ ದೋಷಗಳು. ೧. ಪ್ರತಿಕೂಲವರ್ಣ - ಪ್ರಸಕ್ತವಾದ ರಸಕ್ಕೆ ಅನುಗುಣವಲ್ಲದ ಅಕ್ಷರಗಳಿರುವುದು. ೨. ವಿಸಂಧಿ-ಎಂದರೆ (i) ಅಶ್ಲೀಲವು ತೋರುವ ಹಾಗೆ ಸಂಧಿ ಮಾಡಿರುವುದು. (ii) ಕಿವಿಗೆ ಬಿರುಸಾಗಿರುವಂತೆ ಸಂಧಿ ಮಾಡಿರುವುದು. ೩. ಅನುಚಿತ ವೃತ್ತ.-(i) ಛಂದಸ್ಸಿಗೆ ಅನುಸಾರಿಯಾಗಿದ್ದರೂ ಕಿವಿಗೆ ಶ್ರಾವ್ಯವಲ್ಲದೆ ಇರುವುದು. (ii) ರಸಕ್ಕೆ ಅನುಗುಣವಲ್ಲದ ವೃತ್ತವನ್ನು ಉಪಯೋಗಿಸಿರುವುದು. ೪. ನ್ಯೂನಪದ - ಪ್ರಕೃತಾರ್ಥವನ್ನು ತಿಳಿಸುವುದಕ್ಕೆ ಸಾಕಾಗುವಷ್ಟು ಪದಗಳನ್ನು ಉಪಯೋಗಿಸಿಲ್ಲದಿರುವುದು. ೫. ಅಧಿಕಪದ - ಪ್ರಕೃತಕ್ಕೆ ಬೇಡದೆ ಇರುವ ಹೆಚ್ಚು ಪದಗಳನ್ನು ಉಪಯೋಗಿಸಿರುವುದು. ೬. ಪುನರುಕ್ತಿ - ವಿಶೇಷ ಪ್ರಯೋಜನವೇನೂ ಇಲ್ಲದೆ ಒಂದೇ ಅರ್ಥವುಳ್ಳ ಒಂದೇ ಪದವನ್ನು ಅನೇಕ ಸಾರಿ ಉಪಯೋಗಿಸಿರುವುದು. ೭. ಪತತ್ಪ್ರಕರ್ಷ - (ಅಲಂಕಾರವಾಗಲಿ ಬಂಧವಾಗಲಿ) ಮೊದಲು ಉತ್ಕೃಷ್ಟವಾಗಿದ್ದು, ಅನಂತರ ಬರಬರುತ್ತ ಕೀಳಾಗುವುದು. ೮. ಅಸ್ಥಾನಪದ - ಪದಗಳನ್ನು ಸರಿಯಾದ ಸ್ಥಾನಗಳಲ್ಲಿ ಉಪಯೋಗಿಸದೆ ಇರುವುದು. ೯. ಸಂಕೀರ್ಣ - ಎರಡು ಮೂರು ವಾಕ್ಯಗಳಿರುವ ಕಡೆಯಲ್ಲಿ ಒಂದರ ಪದಗಳು ಮತ್ತೊಂದರೊಡನೆ ಬೆರೆತು ಹೋಗಿ (ಅರ್ಥ ಮಾಡುವುದಕ್ಕೆ ಕಷ್ಟವಾಗಿ) ಇರುವುದು. ೧೦. ಪ್ರಸಿದ್ಧಿವಿರೋಧ - ಲೋಕಪ್ರಸಿದ್ಧಿಗೆ ವಿರುದ್ಧವಾದದು . ೧೧. ಅಕ್ರಮ-ಕ್ರಮತಪ್ಪಿರುವುದು. ೨. ಅರ್ಥದೋಷಗಳು. ೧. ಅಪುಷ್ಟಿ - ಮುಖ್ಯವಾಗಿ ಹೇಳಬೇಕೆಂದಿರುವ ವಿಷಯಕ್ಕೆ ಯಾವ ಅಂಶದಲ್ಲಿಯೂ ಪುಷ್ಟಿ ಅಥವಾ ಅತಿಶಯವನ್ನು ತರದೇ ಇರುವ ಸಂಗತಿಯನ್ನು ಹೇಳಿರುವುದು. ೨. ಕಷ್ಟತೆ - ಸುಲಭವಾಗಿ ಮನಸ್ಸಿಗೆ ಹಿಡಿಯದೆ ತಿಳಿದುಕೊಳ್ಳುವುದಕ್ಕೆ ಕ್ಲೇಶವನ್ನುಂಟುಮಾಡುವುದು. ೩. ವ್ಯಾಹತಿ - (ಯಾವುದಾದರೂ ಒಂದು ವಸ್ತುವನ್ನು ಹೊಗಳಿ ಅಥವಾ ನಿಂದಿಸಿ, ಆಮೇಲೆ ಅದಕ್ಕೆ) ವಿರುದ್ಧವಾಗಿ ಮತ್ತೇನನ್ನಾದರೂ ಹೇಳುವುದು. ೪. ಪುನರುಕ್ತಿ - ಹೇಳಿದ್ದನ್ನೇ ಹೇಳುವುದು. ೫. ದುಷ್ಕ್ರಮ - ಲೋಕಶಾಸ್ತ್ರಾದಿಗಳಿಗೆ ವಿರುದ್ಧವಾದ ಕ್ರಮದಲ್ಲಿ ಹೇಳಿರುವುದು. ೬. ಗ್ರಾಮ್ಯತೆ - ಸಭ್ಯರ ಮನಸ್ಸಿಗೆ ಸಂಕೋಚವನ್ನುಂಟುಮಾಡುವುದು. ೭. ಸಂದಿಗ್ಧತೆ - ಕವಿಯ ಭಾವವು ಹೀಗೋ ಹಾಗೋ ಎಂದು ಸಂದೇಹವಾಗುವಂತೆ ಇರುವುದು. ೮. (i) (ಲೋಕ)ಪ್ರಸಿದ್ಧಿ ವಿರೋಧ - ಜನಗಳಲ್ಲಿ ಪ್ರಸಿದ್ಧವಲ್ಲದೆ ಇರುವುದು. (ii) (ಕವಿ) ಪ್ರಸಿದ್ಧಿವಿರೋಧ - ಕವಿಗಳು ಹಿಂದಿನಿಂದಲೂ ಅನುಸರಿಸಿರುವ ಸಂಪ್ರದಾಯ ಅಥವಾ 'ಸಮಯ'ಕ್ಕೆ ವಿರುದ್ಧವಾಗಿರುವುದು. ೯. ವಿದ್ಯಾವಿರೋಧ - ಶಾಸ್ತ್ರ ಮುಂತಾದುಗಳಿಗೆ (ದೇಶಕಾಲಾದಿಗಳಿಗೂ) ವಿರುದ್ಧವಾಗಿರುವುದು. ೧೦. ಅನವೀಕೃತತ್ವ - ಅನೇಕ ಸಂಗತಿಗಳಿದ್ದರೂ ಅವುಗಳನ್ನು ಹೊಸ ಹೊಸ ಬಗೆಯಲ್ಲಿ ಹೇಳದೆ, ಒಂದೇ ಬಗೆಯಲ್ಲಿ ಹೇಳಿರುವುದು . . . ೩. ರಸದೋಷಗಳು. ೧-೩. ರಸಗಳು, ಸ್ಥಾಯಿಭಾವ, ಸಂಚಾರಿಭಾವ ಇವುಗಳ ಹೆಸರನ್ನು ಹೇಳುವುದು. (ಇವು ಯಾವಾಗಲೂ ಸನ್ನಿವೇಶವಿಶೇಷದಿಂದಲೂ ಅನುಭಾವಾದಿಗಳಿಂದಲೂ ವ್ಯಕ್ತವಾಗಬೇಕು). ೪-೫. ವಿಭಾವಾನುಭಾವಗಳು ಸುಲಭವಾಗಿ ತಿಳಿಯದೆ ಇರುವುದು. ೬. ಪ್ರಕೃತರಸಕ್ಕೆ ವಿರುದ್ಧವಾದ ವಿಭಾವಾನುಭಾವ ಸಂಚಾರಿಭಾವಗಳನ್ನು ಹೇಳುವುದು . . . ೭. ಒಂದೇ ರಸವನ್ನು ಬಿಟ್ಟು ಬಿಟ್ಟು ಪುನಃ ಪುನಃ ಪ್ರತಿಪಾದಿಸುವುದು. ೮. ಅನುಚಿತಸ್ಥಾನದಲ್ಲಿ ವಿಸ್ತರಿಸುವುದು. ೯. ಯಾವುದಾದರೂ ಒಂದು ರಸವು ಧಾರಾಕಾರವಾಗಿ ಹೋಗುತ್ತಿರುವಾಗ ತಟ್ಟನೆ ಅದನ್ನು ನಿಲ್ಲಿಸಿಬಿಡುವುದು. ೧೦. ಅಂಗವಾದ ರಸವನ್ನು ವಿಸ್ತಾರ ಮಾಡುವುದು. ೧೧. ನಾಯಕ ನಾಯಿಕೆ ಮುಂತಾದ ಪ್ರಧಾನಾಂಶಗಳಿಗೆ ತಕ್ಕಷ್ಟು ಗಮನ ಕೊಡದೆ ಹೋಗಿರುವುದು. ಇದರಿಂದ ಮುಖ್ಯರಸಕ್ಕೆ ಅಡ್ಡಿಯಾಗುವುದು). ೧೨. ಪ್ರಕೃತಿ ವಿಪರ್ಯಯ - ಪಾತ್ರಗಳ 'ಪ್ರಕೃತಿ' ಅಥವಾ ಸ್ವಭಾವಕ್ಕೆ (ದಿವ್ಯ, ಅದಿವ್ಯ, ದಿವ್ಯಾದಿವ್ಯ, ಧೀರೋದಾತ್ತ ಇತ್ಯಾದಿ)

ಅನುಚಿತವಾಗಿರಬಹುದಾದ ನಡತೆಯನ್ನು ವರ್ಣಿಸಿರುವುದು. ಹೀಗೆಯೇ ದೇಶ, ಕಾಲ, ಪಾತ್ರಗಳ ವಯಸ್ಸು, ಜಾತಿ, ವೇಷ, ಮಾತು, ಕಥೆ ಇವುಗಳ 'ವಿಪರ್ಯಯ'ವನ್ನೂ ತಿಳಿದುಕೊಳ್ಳಬೇಕು. (೧೩). ರಸೋತ್ಪತ್ತಿಗೆ ಅಂಗವಾಗದಿರುವ, ಎಂದರೆ ಪ್ರಯೋಜಕ ವಲ್ಲದಿರುವ, ಸಂಗತಿಯನ್ನು ಹೇಳುವುದು. (೧೪). ಒಂದೇ ಕಡೆಯಲ್ಲಿ ಪರಸ್ಪರ ವಿರುದ್ಧವಾದ ಎರಡು ರಸಗಳನ್ನು ಪ್ರತಿಪಾದಿಸುವುದು" (ಕೈಪಿಡಿ. ೩೨೭) : ಅಸದರ್ಥಂ ವಿಪರೀತಕಲ್ಪನೆಯಭವ್ಯಂ ದುಷ್ಕರಂ . . . ಅಸೌಮ್ಯಮನೋಜೆಯೆಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೧-೪೬ ಅಡಿಪದ್ಯ ); ಶ್ರುತಿವಿರಸಪದಕ್ಲೇಪಸ್ಥಿತಿಕಷ್ಟಂ ಗ್ರಾಮ್ಯಶಬ್ದ ಸಂದರ್ಭ ಸಮನ್ವಿತಮುಮಸಭ್ಯಾರ್ಥತ್ವತಿಸ್ಮೃತಿಯುಂ ನೀರಸಮೆನಿಪ್ಪುದಕ್ಕುಂ ದೋಷಂ (ಕಾವ್ಯಾವ. ೪೪೩) ; ಗುಣಮಂ ಕಂಡೊಡೆ ದುರ್ಜನಂ ಬಗೆವನಲ್ಲಂ ದೋಷಮಂ ಕಂಡ ಸದ್ಗುಣಿವೊಲ್ ದೋಷಮನಲ್ಲಿ ಕಂಡೊಡೆ ಖಳಂ ವಿಸ್ತಾರಿಕುಂ (ಸೂಕ್ತಿಸು. ೧-೬೩) ; ರಸಕ್ಕೆ ಅಡ್ಡಿಯಾಗುವುದೇ 'ದೋಷ' ವೆಂದು ಹೇಳಬಹುದು (ಕೈಪಿಡಿ. ೩೨೬). 'ಅಷ್ಟಾದಶ ದೋಷ' ಪರಾ. ೧೪. [ಜ್ಯೋತಿ] ಗ್ರಹಗಳ ಚಲನೆಯಿಂದ ಉಂಟಾಗುವ ಕೆಡುಕು : ಘಟಿಯಿಕ್ಕುಂ ಜಲಧೀಶಮಂಡಲದ ದೋಷಂ ಸದ್ಯಮುತ್ತಿಂದ್ರಮಂಡಳದೋಷಂ ದಿನಸಪ್ತಮಕ್ಕೊಗೆಗು ಮತ್ತಾ ತಿಂಗಳೊಳ್ ವಹ್ನಿಮಂಡಳದೋಷಂ ಪವಮಾನಮಂಡಳದ ದೋಷಂ ತೋರ್ಕುಮೆರಿತಿಂಗಳೊಳ್ ಸಲೆಯುರ್ವೀಮಳಯಪ್ರಕಂಪನಫಲಂ ಷಣ್ಮಾಸದೊಳ್ ತೋರುಗುಂ (ಲೋಕೋಪ. ೪-೮೯). ೧೫. [ನ್ಯಾಯ] ಪ್ರಮೇಯದ ಹನ್ನೆರಡು ವಿಭಾಗಗಳಲ್ಲಿ ಒಂದು ; P ಆತ್ಮ, ಶರೀರ, ಇಂದ್ರಿಯ, ಅರ್ಥ, ಬುದ್ಧಿ, ಮನಸ್ಸು, ಪ್ರವೃತ್ತಿ, ದೋಷ, ಪ್ರೇತ್ಯಭಾವ, ಫಲ, ದುಃಖ ಮತ್ತು ಅಪವರ್ಗ ಎಂಬಿವು ಹನ್ನೆರಡು ವಿಭಾಗಗಳು. ಇವುಗಳ ವಿವರವು ಈ ಕೆಳಕಂಡಂತೆ ಇದೆ. ಆತ್ಮ = ಸರ್ವವನ್ನೂ ನೋಡತಕ್ಕವನು, ಅನುಭವಿಸತಕ್ಕವನು, ತಿಳಿಯತಕ್ಕವನು ; ಶರೀರ = ಆತ್ಮನ ಭೋಗಕ್ಕೆ ಆಶ್ರಯವಾದುದು ; ಇಂದ್ರಿಯಗಳು = ಸಾಧನಗಳು ; ಅರ್ಥ = ವಿಷಯಗಳು ; ಬುದ್ಧಿ = ಭೋಗ ; ಮನಸ್ಸು = ಇಂದ್ರಿಯಗಳು ಸಕಲವಿಷಯಗಳನ್ನೂ ತಿಳಿಯಲು ಪ್ರತ್ಯೇಕವಾಗಿ ಅಸಮರ್ಥವಾಗಿರುವುದರಿಂದ ಶರೀರೇಂದ್ರಿಯಾರ್ಥ ಬುದ್ಧಿ ಸುಖವೇದನೆಗಳಿಗೆ ಉತ್ಪತ್ತಿ ಕಾರಣವಾದುದು; ಪ್ರವೃತ್ತಿ= ಪುಣ್ಯಪಾಪಗಳು ; ದೋಷ = ರಾಗದ್ವೇಷಗಳು ; ಪ್ರೇತ್ಯಭಾವ = ಕೊನೆಯ ಹಂತವಾದ ಮೋಕ್ಷ ; ಫಲ = ಸುಖದುಃಖಾನುಭವಗಳು ; ಅಪವರ್ಗ = ತತ್ತ್ವಜ್ಞಾನವನ್ನು ಹೇತುವಾಗಿ ಹೊಂದಿರುವ ಉಪಾದೇಯ. ೧೬. [ತರ್ಕಶಾ] ತರ್ಕಶಾಸ್ತ್ರದಲ್ಲಿ ಉಕ್ತವಾಗಿರುವ ಲಕ್ಷಣ ಮತ್ತು ಹೇತುದೋಷಗಳು ; P ಅತಿವ್ಯಾಪ್ತಿ, ಅವ್ಯಾಪ್ತಿ, ಅಸಂಭವ, ಅನ್ಯೋನ್ಯಾಶ್ರಯ, ಆತ್ಮಾಶ್ರಯ ಗಳೆಂಬಿವು ಲಕ್ಷಣದೋಷಗಳು. ವ್ಯಭಿಚಾರ, ವಿರೋಧ, ಸತ್ಪ್ರತಿಪಕ್ಷ, ಅಸಿದ್ಧಿ, ಬಾಧೆಗಳೆಂಬಿವು ಹೇತುದೋಷಗಳು. 'ಲಕ್ಷಣದೋಷ', 'ಹೇತುದೋಷ' ಪರಾ. ೧೭. [ಜೈನ] ಹದಿನೆಂಟು ಬಗೆಯ ವಿಘ್ನಗಳು ; P ದಿಗಂಬರ, ಶ್ವೇತಾಂಬರ ಸಂಪ್ರದಾಯಗಳಿಗನುಸಾರವಾಗಿ ಇವನ್ನು ಎರಡು ಪಟ್ಟಿಗಳಲ್ಲಿ ಕಾಣಬಹುದು : "ದಿಗಂಬರ ಸಂಪ್ರದಾಯದಂತೆ- ಕ್ಷುತ್ (ಹಸಿವು), ಪಿಪಾಸಾ (ನೀರಡಿಕೆ), ಜರಾ (ಮುಪ್ಪು), ಆತಂಕ (ರೋಗ), ಜನ್ಮ (ಹುಟ್ಟು), ಅಂತಕ (ಸಾವು), ಭಯ (ಅಂಜಿಕೆ), ಸ್ಮಯ (ಗರ್ವ), ರಾಗ, ದ್ವೇಷ, ಮೋಹ, ಚಿಂತೆ, ರತಿ, ನಿದ್ರೆ, ವಿಸ್ಮಯ, ವಿಷಾದ, ಸ್ವೇದ, ಖೇದ (ರತ್ನಕ. ದ. ಅ. ೬ ವ್ಯಾ). ಶ್ವೇತಾಂಬರ ಸಂಪ್ರದಾಯದಂತೆ- ವೀರ್ಯಾಂತರಾಯ, ಭೋಗಾಂತರಾಯ, ಉಪಭೋಗಾಂತರಾಯ, ದಾನಾಂತರಾಯ, ಲಾಭಾಂತರಾಯ, ನಿದ್ರಾ, ಭಯ, ಅಜ್ಞಾನ, ಜುಗುಪ್ಸಾ, ಹಾಸ್ಯ, ರತಿ, ಅರತಿ, ರಾಗ, ದ್ವೇಷ, ಅವಿರತಿ, ಕಾಮ, ಶೋಕ, ಮಿಥ್ಯಾತ್ವ (ರತ್ನಕ. ದ. ಅ. ೬ ವ್ಯಾ)" (ಶ್ರೀವತ್ಸ. ೨೦೩) : ನಿಧನ ನಿದ್ರೆ ಚಿಂತೆ ಲಜ್ಜೆ ಕ್ಷುಧೆ ತೃಷೆ ವಿಷಯ ಆಧಿವ್ಯಾಧಿ ದ್ಯೂತೋದ್ಯೋಗ ದಾಹಶೋಷ ರತಿ ಸ್ವೇದ ಕೋಪ ಶೋಕ ಉದ್ಭ್ರಮೆ ಭಯ ಎಂಬ ಹದಿನೆಂಟು ದೋಷಾವರಣನಾಗಿ (ಅದವ. ೧೫೦-೬೬೧). P ಈ ಪ್ರಯೋಗದಲ್ಲಿ ಬಂದಿರುವ ಪಟ್ಟಿಯ ಪ್ರಕಾರ ಕೆಲವು ಶಬ್ದಗಳು ಮೊದಲಿನ ಪಟ್ಟಿಗೆ ಹೊರತಾಗಿವೆಯಾದರೂ ಜೈನಮತದ ಪರಿಭಾಷೆಯನ್ನೇ ಇಲ್ಲಿ ಬಳಸಿಕೊಳ್ಳಲಾಗಿದೆಯೆಂಬ ಅಭಿಪ್ರಾಯದಿಂದ ಇದನ್ನು ಪ್ರತ್ಯೇಕವಾಗಿ [ವಿಶೈ] ಎಂದು ಸೂಚಿಸದೆ ಇಲ್ಲಿಯೇ ಪ್ರಯೋಗವನ್ನು ತೆಗೆದುಕೊಳ್ಳಲಾಗಿದೆ.

ದೋಷ ಕೊಡು = ತಪ್ಪು ಹೊರಿಸು ; ಆಪಾದನೆ ಮಾಡು ; ಅಪಾದಿಸು : ಮನೆಯಲ್ಲಿ ಅನೇಕ ಜನರಿದ್ದಾರೆ, ಯಾರಿಗೆಂದು ದೋಷ ಕೊಡುವಿರಿ? (ಇಪ್ಪಕ. ೩೦೭). [ ಸಂ. ]

**ದೋಷಂಗೆಯ್** (ಕ್ರಿ). ತಪ್ಪುಮಾಡು ; ಅಪರಾಧ ಮಾಡು : ಪೊಲ್ಲಮೆಯೊಳ್ ತೀವಿರ್ದ ಗೃಹಸ್ಥರೆಲ್ಲಂ ಕಣ್ಣಿವೆ ಮುಟಿಯಾದೊಡೆ ಬಾಟದನಿತುಂ ಮಾಟ್ಟ ಸ್ನೇಹದ ಪ್ರಾಣವಲ್ಲಭೆಯುಮಂ ದೋಷಂಗೆಯ್ದಳೆಂಬುದು ಕೇಳ್ದು ನಿತಟಿಯೊಳೆ ಪೊಱಮಡಿಸಿ ಕಳೆವರ್ (ಜೀವಸಂ.೩೪-೧೯ವ). [ದೋಷ+ಕೆಯ್,1]

**ದೋಷಕರ** (ನಾ). ೧. ಕೆಡುಕನ್ನುಂಟುಮಾಡುವಂಥದು ; ಅನರ್ಥಕಾರಿ : ಮೂಲಕಂ ಬಾಲಂ ದೋಷಹರಮಬಾಲಂ ದೋಷಕರಮದಱಿಂ ಪ್ರತ್ಯಕ್ಷ ಪರಿಚ್ಛೇದ್ಯಂ ವಸ್ತುತತ್ತ್ವಮನುಮಾನದಿಂ ವ್ಯಭಿಚರಿಸುಗುಂ (ಶಾಂತಿಪು. ೮-೧೨೮ ವ) ; ಶ್ಲೇಷ್ಮಪ್ರಶಮನಾರ್ಥಂ ಕೊಟ್ಟೌಷಧಂ ಪೆರ್ಚುವುದು ದೋಷಕರಂ (ಚಾವುಂಪು. ೨೯೩). ೨. ತಪ್ಪನ್ನು ಉಳ್ಳುದು; ತಪ್ಪಾದುದು: ಪಗಲಿರುಳೆಂಬಲ್ಲಿ ವಿಕಲ್ಪಗತಿಯಿನಾ ವ್ಯಂಜನಾಂತದೊಳ್ ಪೇಳ್ವರ್ ಸೂರಿಗಳಾಗಳೀಗಳೆಂಬೆಡೆಗಗಲ್ದುರುಟಿದೆಡೆಗಿನಾಗಮುಂ ದೋಷಕರಂ (ಶಮದ. ೧೦೯). [ ಸಂ. ]

**ದೋಷಕಾರಿ** (ನಾ). ೧. ಪಾತಕಿ; ಪಾಪಿಷ್ಠ; ಪಾಪಿ: ಪ್ರಾಣಲಿಂಗಿಸಂಬಂಧಿಯಾದ ಲಿಂಗವಂತನು ಏಕಭುಕ್ತ ಉಪವಾಸಂಗಳನ್ನು ಮಾಡಲಾಗದು . . . ದೋಷಕಾರಿಯಪ್ಪನು (ಉರಿಪ. ೧೩೩-೧೨೨). ೨. ಕೆಡುಕನ್ನುಂಟುಮಾಡುವಂಥದು. ೩. ಕೆಡುಕನ್ನು ಉಂಟುಮಾಡುವವನು; ಕೆಡುಕ. [ ಸಂ. ದೋಷಕಾರಿನ್ ]

**ದೋಷಗರ್ಭಿತ** (ಗು). ಕಳಂಕದಿಂದ ಕೂಡಿದ ; ಕಲುಷಿತವಾದ : ದೋಷಗರ್ಭಿತಧರ್ಮವನು ನಿರ್ಣೈಸಲಱಿಯದ ಮೂಢಮತಿಗೆ ಮುನೀಶ ಕೃಪೆಮಾಡೆಂದು ಮೈಯಿಕ್ಕಿದನು ಪಾಂಚಾಲ (ಕುವ್ಯಾಅ. ೧೬-೩೭). [ಸಂ.]

**ದೋಷಗವೇಷಣ** (ನಾ). ತಪ್ಪುಗಳನ್ನೇ ಹುಡುಕುವುದು ; ರಂಧ್ರಾನ್ವೇಷಣೆ ಮಾಡುವುದು ; ಛಿದ್ರಾನ್ವೇಷಣೆ : ಭಾಷಾವಿದರ್ ಕವಿತ್ವವಿಶೇಷಜ್ಞರ್ ನಿಕಷರಪ್ಪೊಡಪ್ಪುದು ಸಭೆಯೊಳ್ ಮಾಷಮುಖರಂತೆ ದೋಷಗವೇಷಣಪರರಪ್ಪರೆಂದೊಡದು ತೆಗಟಲ್ತೆ (ಆದಿಪು. ೧-೨೦). [ ಸಂ. ]

**ದೋಷಗ್ರಾಹಿ** (ನಾ). ೧. ತಪ್ಪುಗಳನ್ನು ಕಂಡು ಹಿಡಿಯುವವನು ; ದುರ್ಜನ : "ದೋಷಗ್ರಾಹಿ ಪುರೋಭಾಗಿ ದುರ್ಮುಖಂ ಮುಖರನವಂ" (ವಸುಕೋ. ೧೦೦-೧೮) : "ದೋಷಗ್ರಾಹೀ, ಪುರೋಭಾಗೀ, ದ್ವಿಜಿಹ್ವಃ, ಮತ್ಸರೀ – ಈ ೪ ಮಚ್ಚರಿಪಂ" (ಹಲಾಯು. ೫೭-೧೯೧). ೨. ಕೆಟ್ಟರಕ್ತವನ್ನು ಹೀರುವುದು. ೧, ೨ : ಗೋಲಾಂಗೂಳರಂತೆ ಸಹಜಚಾಪಲ್ಯರುಂ ಜಳೂಕಾಮುಖರಂತೆ ದೋಷಗ್ರಾಹಿಗಳುಂ . . . ಎನಿಸಿ (ಸುಕುಮಾ. ೨-೫ ವ). [ ಸಂ. ದೋಷಗ್ರಾಹಿನ್ ]

**ದೋಷಘ್ನ** (ನಾ). ೧. ಪಾಪವನ್ನು ನಾಶಮಾಡತಕ್ಕವನು ; ಪಾತಕವನ್ನು ನಿವಾರಿಸುವವನು : ದೋಷಘ್ನನೆಯಾಪ್ತಂ ತದ್ಬ್ಯಪಾತ್ಮಕಮಪ್ಪುದಾಗಮಂ (ಪಸಾರ. ೪೫೬). ೨. ಕೆಡುಕನ್ನು ನಿವಾರಿಸುವವನು. [ ಸಂ. ]

**ದೋಷಜ** (ನಾ). (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ ಮತ್ತು ಕಫಗಳೆಂಬ ಮೂರು ನ್ಯೂನತೆಗಳಿಂದ ಉಂಟಾದ ವ್ಯಾಧಿ : ವ್ಯಾಧಿಯು ಕರ್ಮಜವೆಂದೂ, ದೋಷಜವೆಂದೂ, ಕರ್ಮದೋಷಜವೆಂದೂ ಮೂರು ವಿಧವಾಗಿರುವುದು . . . ವಾತ ಪಿತ್ತ ಶ್ಲೇಷ್ಮ ಮೊದಲಾದ ದೋಷಗಳಿಂದುಂಟಾದ ವ್ಯಾಧಿಯು ದೋಷಜವೆನಿಸಿಕೊಂಬುದು (ಸಕವೈ. ೨೩). [ ಸಂ. ]

**ದೋಷಜ್ಞ** (ನಾ). ೧. ತಿಳಿದವನು ; ಪಂಡಿತ ; ವಿದ್ವಾಂಸ : "ಸೂರಿ ಬುಧಂ ಕವಿ ವಾಗ್ಮಿ ವಿಶಾರದನಭಿರೂಪನನ್ವಿತಂ ದೋಷಜ್ಞಂ" (ವಸು.ಕೋ. ೯೮-೪) ; ದೋಷಜ್ಞರ್ ಮುನಿದೊಸೆದು ಪರೀಕ್ಷಿಸಿದೊಡಮನುಪಮ ಗುಣವೊಂದದಂದು ಕೃತಿ ಸಂದಪುದೇ (ಪಾರ್ಶ್ವಪು. ೧-೭೯). ೨. ಉಪಾಧ್ಯಾಯ. ೩. [ವೈದ್ಯ] ರೋಗವು ಯಾವ ದೋಷದಿಂದ ಉಂಟಾಗಿದೆ ಎಂದು ಗುರುತಿಸಬಲ್ಲವನು ; ರೋಗನಿದಾನವನ್ನು ಬಲ್ಲವನು ; ವೈದ್ಯ : "ದೋಷಜ್ಞಂ ತಂತ್ರವೇದಿ ಬೆಜ್ಜಂ ವೈದ್ಯಂ" (ವಸು.ಕೋ. ೬೪-೪೨) ; "ಆಯುರ್ವೇದೀ, ಭಿಷಕ್, ವೈದ್ಯಃ, ದೋಷಜ್ಞಃ, ಚಿಕಿತ್ಸಕಃ –ಈ ೫ ವೈದ್ಯಂ" (ಹಲಾಯು. ೧೦೦-೪೫೮). [ ಸಂ. ]

**ದೋಷಜ್ವರ** (ನಾ). (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ ಮತ್ತು ಕಫಗಳೆಂಬ ಮೂರು ವಿಧವಾದ ನ್ಯೂನತೆಗಳಲ್ಲಿ ಯಾವುದರಿಂದಲಾದರೂ ಉಂಟಾಗುವ ಜ್ವರ : ಕೊಡಸಿಗೆಬೀಜ, ಹಿಪ್ಪಲಿ, ಶೀಗೆ . . . ಕಷಾಯಮಿಕ್ಕಿ ಕೊಡಲು, ಪೈತ್ಯಜ್ವರ, ವಿಷಮಜ್ವರ, ದೋಷಜ್ವರ ಸಹ ಗುಣವಾಗುವುವು (ಸಕವೈ. ೮೧). [ ದೋಷ + ಜ್ವರ ]

**ದೋಷತಟ್ಟು** (ಕ್ರಿ). ಕಳಂಕ ತಗುಲು ; ಅಪವಾದ ಬರು: ಒಡಲೊಳಗೇ ಉಸಿರಿಲ್ಲ ಒಂದು ಕ್ಷಣವಾದರೆ ಜೀವ ನಿಲ್ಲುವುದಿಲ್ಲ ಮಡಿದರೆ ದೋಷತಟ್ಟುವುದು ಒಂದು ಹಿಡಿ ಅಕ್ಕಿಯಿಂದಲೆ ಕೀರ್ತಿ ಬಾಹೋದು (ಪುರಂದ. ೪-೬೯-೭). [ ದೋಷ + ತಟ್ಟು$_1$ ]

**ದೋಷತ್ರಯ** (ನಾ). ೧. ದೋಷಾಶ್ರಯಂ, ಛಿದ್ರವಕ್ರ, ಕ್ರಿಮಿದೂಷಣಗಳೆಂದೆಂಬ (ಹವಳದ) ಮೂರು ಬಗೆಯ ನ್ಯೂನತೆಗಳು : ದೋಷಾಶ್ರಯಂ ಛಿದ್ರವಕ್ರಂ ಕ್ರಿಮಿದೂಷಣವೆಂದು ದೋಷತ್ರಯಮುಂಟದನುಳಿದು ನಿರ್ದೋಷವಿದ್ರುಮಮಂ ಕಾಮಿನಿಯರ್ ವಿಶೇಷವಾಗಿ ತಾಳಲ್ ಸುಖಾಯುಷ್ಯಸುಪುತ್ರಾರೋಗ್ಯಾದಿಸಿದ್ಧಿಗಳಪ್ಪುವು (ಹಾಲಾಸ್ಯ. ೨-೧-೧೧೪ವ). ೨. (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ ಮತ್ತು ಕಫಗಳೆಂಬ ಮೂರು ವಿಧವಾದ ನ್ಯೂನತೆಗಳು : "ದೋಷತ್ರಯಂವಾತ ಪಿತ್ತ ಶ್ಲೇಷ್ಮಂಗಳಕ್ಕು" (ಮಂಗರಾ. ೧೧೪-೩) ; ಲವಂಗ, ಶುಂಠಿ . . . ಇವಿಷ್ಟನ್ನೂ ಸಮಭಾಗವಾಗಿ ಕೂಡಿ ಒಂದು ತೂಕ ಸಕ್ಕರೆ ಬೆರಸಿ ಬಿಸಿನೀರಿನಲ್ಲಿ ಕಲಸಿ, ತೆಗೆದುಕೊಂಡರೆ ವಾತಪಿತ್ತಶ್ಲೇಷ್ಮ, ದ್ವಂದ್ವಜ್ವರ, ಸನ್ನಿಪಾತಜ್ವರ, ದೋಷತ್ರಯ . . . ಅತಿಸಾರ ಮೊದಲಾದ ಪೈತ್ಯಜ್ವರಂ ಮಾಣುವುವು (ಸಕವೈ. ೬೭). [ ದೋಷ + ತ್ರಯ ]

**ದೋಷದೂರ** (ನಾ). ೧. ಕುಂದಿಲ್ಲದುದು ; ಕಳಂಕವಿಲ್ಲದುದು: ಶಾಸನಂ ವಿಶ್ರುತಮಖಿಳಹಿತಂ ದೋಷದೂರಂ ಗಭೀರಂ (ಎಕ. II, ೬೫-೨ ; 1313) ; ಇಂತಿವೈದನಾನೊರ್ಬುಳಿಯಾಗಿ ಪೇಳ್ದನೆಲೆ ಮಂತ್ರಿಗಳಾಲಿಪುದೀ ಗುಣಾಂಕದಿಂದುರ್ಬಿದ ದೋಷದೂರಮೆನಿಸುತ್ತೆ ವಿರಾಜಿಪ ಪಚ್ಚೆಯಂ ಜನರ್ (ಹಾಲಾಸ್ಯ. ೨-೧-೯೦). ೨. ಕಳಂಕಗಳಿಂದ ದೂರವಾದವನು; ಕಳಂಕರಹಿತವಾದವನು : ದೋಷದೂರ ಶ್ರೀಪುರಂದರ ವಿಠಲ ಪೋಷ ಭಕ್ತ ಸುಮೃಂದ (ಪುರಂದ. ೩-೨೪-೧೧). [ ದೋಷ + ದೂರ ]

**ದೋಷದೂರತೆ** (ನಾ). ೧. ತಪ್ಪಿಲ್ಲದಿರುವಿಕೆ. ೨. (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ, ಕಫಗಳೆಂಬ ಮೂರು ನ್ಯೂನತೆಗಳಿಂದ ದೂರವಾಗಿರುವಿಕೆ: ಕಫ ವಾತ ಪಿತ್ತ ದೋಷದೂರತೆಯುಂ ಜರಾಮಯವ್ಯಾಬಾಧಾಬಾಧಿತ್ವಮುಂ . . . ತನುಗನುಸಂಗತಮಾಗೆ (ಶಾಂತಿಪು. ೧೦-೯೪ ವ). [ ಸಂ. ದೋಷದೂರತಾ ]

**ದೋಷದೂರೀಕರಣ**(ನಾ). ಕುಂದು, ನ್ಯೂನತೆಗಳ ನಿವಾರಣೆ : ಅಶೇಷದೋಷದೂರೀಕರಣಪರಿಣತಾನ್ತಃಕರಣರುಮಪ್ಪ ಶ್ರೀಮನ್ನಯಕೀರ್ತಿ ಸಿದ್ಧಾನ್ತ ಚಕ್ರವರ್ತಿಗಳ್ (ಎಕ. II, ೬೬-೬೯ ; 1176).
[ ದೋಷ + ದೂರೀಕರಣ$_0$ ]

**ದೋಷದೂಷಿತ** (ನಾ). ಪಾಪದಿಂದ ಕಳಂಕಿತನಾದವನು.
[ ದೋಷ + ದೂಷಿತ ]

**ದೋಷದೂಷಿತೆ** (ನಾ). ಪಾಪ ಮಾಡಿದವಳು ; ಕೆಟ್ಟ ಕೆಲಸ ಮಾಡಿ ಕಳಂಕ ಹೊಂದಿದವಳು: ಎಲೆ ಎಲೆ ದೋಷದೂಷಿತೆ ದ‍ರಾತ್ಮಿಕೆ ಲಿಂಗದ ಪಾವನಾಂಗಮಂ ತೊಲಗದೆ ಬಾಯುಗುಳ್ ಸಿಡಿಯೆ ತೂಂಕಿಬಿದಪ್ಪೆ ವರಾಕಿ ಪಾಟಿಸುತ್ತಲೆದುಲಿದಾಕೆಯಂ ನಿಳಯದಿಂ ಪೊಱಗಿಕ್ಕಿ ನಿರೀಕ್ಷಿಪಾಗಳ್ (ವೃಷವಿ. ೯-೫೭). [ ದೋಷ + ದೂಷಿತೆ ]

**ದೋಷದೃಷ್ಟಿ** (ನಾ). ೧. ನ್ಯೂನತೆಯಿಂದ ಕೂಡಿದ ದೃಷ್ಟಿ. ೨. ದೃಷ್ಟಿಯಲ್ಲಿ ನ್ಯೂನತೆಯುಳ್ಳವನು ; ದೃಷ್ಟಿ ದೋಷವುಳ್ಳವನು : ಥಳಥಳಿಪ ಪದಾರ್ಥವನೇಂ ಗಳ ಕಾಣ್ಬನೆ ದೋಷದೃಷ್ಟಿ (ಪುಷ್ಪಪು. ೧-೪೭).
[ ದೋಷ + ದೃಷ್ಟಿ ]

**ದೋಷನಿವಾರಣ** (ನಾ). ಕುಂದು, ನ್ಯೂನತೆಗಳ ನಿವಾರಣೆ: ಜಡರುಂ ಜಾತಿವಿಹೀನರುಂ . . . ಪಡೆದಾ ದೋಷನಿವಾರಣಕ್ಕಮೃತದಂಡಾಧೀಶನಂ ಪುಣ್ಯದಿಂ ಪಡೆದಂ ಪದ್ಮಜಂ (ಎಕ. VI, ತರೀಕೆ. ೪೫-೬೨ ; 1196).
[ ದೋಷ + ನಿವಾರಣ ]

**ದೋಷಪ್ರತಿಕಾರ** (ನಾ). ಪಾಪದ ವಿರುದ್ಧ ಮಾಡಬೇಕಾದ ಕ್ರಿಯೆ ; ಪಾಪನಾಶ : ನಿಬಿಡ ಕಾಯೋತ್ಸರ್ಗದೊಳ್ ಶುದ್ಧಿ ತಳ್ತಿರೆ ದೋಷಪ್ರತಿಕಾರ ಸಾರತಪಮಂ ತತ್ತಾಪಸಂ ತಾಳ್ದಿದಂ (ಸುಕುಮಾ. ೪-೧೫).
[ ದೋಷ + ಪ್ರತಿಕಾರ$_2$ ]

**ದೋಷಭಾವ** (ನಾ). ಪಾಪದ ಆಲೋಚನೆ ; ಪಾತಕದ ಚಿಂತೆ : ಗಣಭೃತ್ಪದಾಂಬುರುಹಸಂಕುಳಮಾವಗಮಸ್ಮದೀಯಭಾವಾಂಗ ಪವಿತ್ರಮಾನಸದೊಳಿಂತೆಸೆದಿರ್ಕೆ ಸುರಾಗದೇಟ್ಗೆಯಿಂ ಪಿಂಗದೆ ದೋಷಭಾವಭವಬಂಧನಮದಾಮಯದುಃಖಸಂಕುಳಂ (ಖಮದ. ೧-೯). [ ದೋಷ + ಭಾವ$_2$ ]

**ದೋಷಭೂಯಿಷ್ಠ** (ನಾ). (ಅನೇಕ) ನ್ಯೂನತೆಗಳಿಂದ ಕೂಡಿದುದು,– ತುಂಬಿದುದು : ಸಹಜವಾದ ಕರ್ಮವು ದೋಷಭೂಯಿಷ್ಠವಾಗಿದ್ದರೂ ಬಿಡಬಾರದು (ಭಾರದ. ೧೧೭). [ ದೋಷ + ಭೂಯಿಷ್ಠ ]

**ದೋಷಮುಕ್ತ** (ನಾ). ತಪ್ಪಿಲ್ಲದುದು ; ಸರಿಯಾದುದು : ಕಾನೂನು ಕಟ್ಟಳೆಗಳ ಅನ್ವಯು ಮತ್ತು ಅವುಗಳ ವ್ಯಾಖ್ಯಾನ ದೋಷಮುಕ್ತವಾಗಿದೆಯೆ ಇಲ್ಲವೆ ಎಂದು ಸೆನೆಟ್ ಪರಿಶೀಲಿಸುತ್ತದೆ (ಪುನರು. ೩೪೨).
[ ದೋಷ + ಮುಕ್ತ ]

**ದೋಷಮೂರ್ಛಿತ** (ನಾ). ಪಚ್ಚೆಯ ಐದು ವಿಧವಾದ ನ್ಯೂನತೆಗಳಲ್ಲಿ ಒಂದು ; ಕೆಂಪುತಾವರೆಯ ಎಲೆಯ ಹಿಂಭಾಗದ ಬಣ್ಣವನ್ನು ಹೊಂದಿರುವ ಪಚ್ಚೆ : ದೋಷಲೇಶಾನ್ವಿತಂ ದುಷ್ಟಂ ದೋಷಮೂರ್ಛಿತಂ ದೋ[ಷಲೇಶಂ] ಮಂದದೋಷಮೆಂದಿಂತೀ ಪಂಚವಿಧಮಾದ ಸದೋಷಜಾತಿ ಮರಕತಮಂ ಪೇಳ್ವೆಂ (ಹಾಲಾಸ್ಯ. ೨-೧-೮೮ ವ) ; ಹಲ್ಲಕಬಾಹ್ಯಪತ್ರದ ವರ್ಣಮಂತದೆ ಲೋಕದೊಳ್ ಪಾಡಿನಿಂದಮೆ ದೋಷಮೂರ್ಛಿತಮೆಂಬರೆಯ್ದೆ ಪರೀಕ್ಷಕರ್ (ಹಾಲಾಸ್ಯ. ೨-೧-೮೯). [ ಸಂ. ]

**ದೋಷಮೂರ್ಛೆ** (ನಾ). (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ ಮತ್ತು ಕಫಗಳೆಂಬ ಮೂರು ವಿಧವಾದ ನ್ಯೂನತೆಗಳಲ್ಲಿ ಯಾವುದರಿಂದಲಾದರೂ ಉಂಟಾಗುವ ಮೂರ್ಛೆ : ದುಂಪರಾಸ್ಮೆ, ಪಿಲ್ಲ ಪೀಲುಪಿಂಜರಗೆಡ್ಡೆ . . . ಇವು ಸಮಭಾಗವಾಗಿ ಕಷಾಯು ಮಾಡಿ ಕೊಡಲು ದೋಷಮೂರ್ಛೆ ಪರಿಹರ (ಸಕವೈ. ೧೭೩).
[ ದೋಷ + ಮೂರ್ಛೆ ]

**ದೋಷರಹಿತ** (ನಾ). ೧. ಪಾಪರಹಿತವಾದುದು ; ಶುದ್ಧವಾದುದು : ದೋಷಸಹಿತರಾದವರು ಪೇಳುವ ಧರ್ಮ ಲೇಸಲ್ಲವೆಂದವನುಳಿದು ದೋಷರಹಿತಮಪ್ಪ ದಯೆಯುತ ಧರ್ಮವ ಲೇಸಾಗಿ ಪಿಡಿಯಬಲ್ಲವರು (ದ್ವಾದಶಾ. ೧೧-೨೨). ೨. ಪಾಪಗಳಿಲ್ಲದವನು ; ಪವಿತ್ರನಾದವನು : ದೋಷಿಯು ನಾನಾದಡೇನಯ್ಯ ಸರ್ವದೋಷರಹಿತ ನೀನಲ್ಲವೆ (ಪುರಂದ. ೪-೧೪೨-೩). [ ಸಂ. ]

**ದೋಷರಹಿತೆ** (ನಾ). ಕಳಂಕಗಳಿಲ್ಲದವಳು; ಪವಿತ್ರಳಾದವಳು : ಸ್ಫೂರ್ತಿ ಸಿರಿಯೆ ನೀನುಕ್ಕಿ ಬಾ ಬೆಡಗುಗಾರ್ತಿ ನೀನೊಲಿದು ಬಾ ಭಾವಜಲಧಿ ಕೃಪೆ ದೋರು ಬಾ ದೋಷರಹಿತೆ ನೀ ಸಾರಿ ಬಾ (ಚಂದ್ರಮಾ. ೯-೧೪).
[ ದೋಷರಹಿತ + – ಎ₂ ]

**ದೋಷಲೇಶಾನ್ವಿತ** (ನಾ). ಪಚ್ಚೆಯು ಐದು ವಿಧವಾದ ನ್ಯೂನತೆಗಳಲ್ಲಿ ಒಂದು ; ಕಾಡುನಿಂಬೆ ಬಣ್ಣದ ಕಾಂತಿಯನ್ನು ಹೊಂದಿರುವ ಪಚ್ಚೆ : ದೋಷಲೇಶಾನ್ವಿತಂ ದುಷ್ಟಂ ದೋಷಮೂರ್ಛಿತಂ ದೋ[ಷಲೇಶಂ] ಮಂದದೋಷಮೆಂದಿಂತೀ ಪಂಚವಿಧಮಾದ ಸದೋಷಜಾತಿ ಮರಕತಮಂ ಪೇಳ್ವೆಂ (ಹಾಲಾಸ್ಯ. ೨-೦-೮೮ ಪ). [ ಸಂ. ]

**ದೋಷವರ್ಜಿತ** (ನಾ). ೧. ಪಾಪದಿಂದ ದೂರವಾದುದು ; ಪವಿತ್ರವಾದುದು : ದೋಷವರ್ಜಿತಮುಂ ಜ್ಞಾನಲತಾಭಿವೃದ್ಧಿಯನಶೇಷಪ್ರೀತಿಯುಂ ಲೋಕವಿಶ್ರುತಮುಂ ಧರ್ಮಮನೇಕೆ ಮಿಕ್ಕ ಪುರುಷಾರ್ಥಕ್ಕಂ ಸಮಂ ಮಾಳ್ಪರೋ (ಮಲ್ಲಿಕಾ. ೦-೪೩). ೨. ಪಾಪಗಳನ್ನು ಬಿಟ್ಟವನು; ಪವಿತ್ರನಾದವನು : ದೃಷ್ಟ ಶ್ರುತಾನುಭೂತ ದೋಷವರ್ಜಿತನುಂ ಮಂದ ತರಕಷಾಯಾನುರಂಜಿತಮಪ್ಪಾತಂಗಕ್ಕುಮಾವ ಟಿಳೊಳಪಾಯವಿಚಯಂ (ಜಾವುಂಪು. ೪೪೩). [ ದೋಷ + ವರ್ಜಿತ ]

**ದೋಷವಿಡು** (ಕ್ರಿ). ತಪ್ಪು ಹೊರಿಸು ; ಆಪಾದಿಸು : ತಮ್ಮ ಮೆಚ್ಚಕ್ಕೆ ದೋಷವಿಡಬೇಕಲ್ಲದೆ ಎರಡನೆಯವರಿಗೆ ದೋಷವಿಡಬಾರದು (ಮುಂಬಯಿ. ೩-೮೬). [ ದೋಷ + ಇಡು₁ ]

**ದೋಷವಿದೂರ** (ನಾ). ಪಾಪಗಳಿಂದ ದೂರನಾದವನು ; ಪವಿತ್ರನಾದವನು : ಲೇಸಾಗಿ ಮಡುವಿನೊಳ್ ಶೇಷನ ತುಳಿದಿಟ್ಟ ದೋಷವಿದೂರನ ತೂಗಿರೆ (ಪುರಂದ. ೨-೦೩೭-೪). [ ಸಂ. ]

**ದೋಷವಿರಕ್ತ** (ನಾ). ಕೆಟ್ಟ ಗುಣ ಅಥವಾ ಕೆಟ್ಟ ಕಾರ್ಯಗಳಲ್ಲಿ ಆಸಕ್ತಿಯಿಲ್ಲದವನು : ದೋಷವಿರಕ್ತನುಂ ಗುಣಾನುರಕ್ತನುಮಲ್ಲದೆ ಧರ್ಮಂಗೆಯ್ವನುಂ ಎಂತು ಪೆರ್ಚುಗುಂ (ಜೀವಸಂ. ೪೭-೨೦).
[ ದೋಷ + ವಿರಕ್ತ ]

**ದೋಷಸಹಿತ** (ನಾ). ಪಾಪದಿಂದ ಕೂಡಿದ ವ್ಯಕ್ತಿ ; ಪಾಪಿ : ದೋಷಸಹಿತರಾದವರು ಪೇಳುವ ಧರ್ಮ ಲೇಸಲ್ಲವೆಂದವನುಳಿದು ದೋಷರಹಿತಮಪ್ಪ ದಯೆಯುತ ಧರ್ಮವ ಲೇಸಾಗಿ ಪಿಡಿಯಬಲ್ಲವರು (ದ್ವಾದಶಾ. ೧೧-೨೨). [ ದೋಷ + ಸಹಿತ ]

**ದೋಷಸಿದ್ಧಿ** (ನಾ). ಅಪರಾಧಿಯೆಂಬ ನಿರ್ಧಾರ : ಜಾರಿಯಲ್ಲಿರುವ ಒಂದು ವಿಧಿಯನ್ನು ಉಲ್ಲಂಘಿಸಿದುದಕ್ಕಲ್ಲದೆ ಮತ್ತಾವ ಅಪರಾಧಕ್ಕಾಗಿಯೂ ಅವನ ಮೇಲೆ ದೋಷಸಿದ್ಧಿ ನಡೆಯತಕ್ಕುದಲ್ಲ (ಭಾಧಾನ. ೧೨).
[ ದೋಷ + ಸಿದ್ಧಿ ]

**ದೋಷಹಚ್ಚು** (ಕ್ರಿ). = ದೋಷವಿಡು : ಅವನಿಗೆ ಕೆಲವು ಜನರು ದೋಷ ಹಚ್ಚುತ್ತಾರೆ (ಮುಂಬಯಿ. ೩-೨೦೬). [ ದೋಷ+ಹಚ್ಚು₁ (<ಪಚ್ಚು₃) ]

**ದೋಷಹರ** (ನಾ). ಕೆಡುಕನ್ನು ನಾಶಮಾಡುವಂಥದು : ಮೂಲಕಂ ಬಾಲಂ ದೋಷಹರಮುಬಾಲಂ ದೋಷಕರಮುದಱಿಂ ಪ್ರತ್ಯಕ್ಷ ಪರಿಚ್ಛೇದ್ಯಂ ವಸ್ತುತತ್ತ್ವಮನುಮಾನದಿಂ ವ್ಯಭಿಚರಿಸುಗುಂ (ಶಾಂತಿಪು. ೮-೧೨೮ ವ).
[ ಸಂ. ]

**ದೋಷಹರಣ** (ನಾ). ೧. ಪಾಪವನ್ನು ನಿವಾರಣೆ ಮಾಡುವಿಕೆ. ೨. (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ ಮತ್ತು ಕಫಗಳೆಂಬ ಮೂರು ಬಗೆಯ ನ್ಯೂನತೆಗಳನ್ನು ನಿವಾರಿಸುವಿಕೆ.
[ ದೋಷ + ಹರಣ₂ ]

**ದೋಷಹೊರಿಸು** (ಕ್ರಿ). ಅಪವಾದಕ್ಕೆ ಹೊಣೆ ಮಾಡು,–ಈಡು ಮಾಡು : ಚೌಡಪ್ಪನವರ ಮೇಲೆ ದೋಷಹೊರಿಸುವುದು ನನಗೇಕೋ ಸರಿಯೆನಿಸದು (ಹಳ್ಳಿಹಾ. ೧೧೩). [ ದೋಷ + ಹೊರಿಸು (<ಪೊಱಿಸು) ]

**ದೋಷಹೊರು** (ಕ್ರಿ). ಅಪವಾದಕ್ಕೆ ಗುರಿಯಾಗು,–ಈಡಾಗು; ಅಪವಾದ ಹೊರು. 'ದೋಷಹೊರಿಸು' ಪರಾ.
[ ದೋಷ + ಹೊರು (<ಪೊಱು) ]

**ದೋಷಾಂಧ** (ನಾ). ದೋಷದಿಂದ ಕುರುಡಾದವನು : ಕಾಮಾತುರರುಂ ರಜೋಧಿಕರುಮೇಂ ಪೇದಕ್ಕೆ ಪಕ್ಕಾಗದಿರ್ಪರೆ ದೋಷಾಂಧರ್ (ಪಂಪರಾಮಾ. ೭-೬) ; ಪರಮದೇಶಿಕಶಿರೋಮಣಿಯ ದೋಷಾಂಧಮುದಕರಿ ವಿಳಸಿತ ಸೃಣಿಯ (ವೀಕ್ಷ್ಮಪು. ೩-೮-೨). [ ದೋಷ + ಅಂಧ ]

**ದೋಷಾಕರ** (ನಾ). ೧. ಪಾಪಗಳ ಆಕರ,–ನೆಲೆ,–ಗಣಿ. ೨. ಕಪ್ಪು ಕಲೆಗಳಿಂದ ಕೂಡಿದವನು ; ಚಂದ್ರ : ಸರಿದಧಿಪತಿಯುಂ ದೋಷಾಕರನಂತರ್ಮಾಲಿನನಾಗಿಯುಂ ಪೆರ್ಚಿಸುಗುಂ (ಕವಿರಾ. ೩-೩೫) ; ಮುಗ್ಧ ದೋಷಾಕರನು ವಕ್ರತ್ವಮು ದುಶ್ಚ್ಯವನನ ಹಯದಿಂ ವೇಗಮಂ ತಾಳ್ದಿ (ಕಾದಂಪೂ. ೩೪೬) ; ಇರದೆಯ್ದುರ್ಪಂ ದೋಷಾಕರನಮನಂ ನೋಡಲಾಗ ದೆಂದಾ ದಿನಪಂ ವರಧರ್ಮರಾಜಜನಕಂ ಕರಕುಳಮುಂ ತೆಗೆದು ನೀಳ ಗಿರಿಯಂ ಸಾರ್ದಂ (ಹಮ್ಮೀರ. ೩-೦೩).
[ ಸಂ. (ದೋಷ + ಆಕರ ; ದೋಷಾ + ಕರ) ]

**ದೋಷಾಕರರಹಿತ** (ನಾ). ೧. ಪಾಪಗಳಿಗೆ ನೆಲೆ ನೀಡದಂಥದು ; ಪಾಪರಹಿತವಾದುದು. ೨. ಚಂದ್ರನಿಂದ ದೂರವಾದುದು ; ಚಂದ್ರರಹಿತವಾದುದು. ೧, ೨ : ಸರಸಗುಣಶಾಲಿ ದೋಷಾಕರರಹಿತಂ ಸ್ವಪ್ರಸಿದ್ಧಮಂತಿಬಂಧುರಸಂಬುರುಹಮುದು ಮಿತ್ರರುಚಿವಿಸ್ಫುರಿತಂ ಸಿರಿ ಗಾದುದಲ್ತೆ ಮನೆ (ರಾಜಶೇ. ೬-೦೨೭). [ ಸಂ. ]

**ದೋಷಾಗಮನ** (ನಾ). ಪಾಪದ ಬರುವಿಕೆ ; ಪಾಪಸಂಬಂಧ ಉಂಟಾಗುವಿಕೆ : ರಾಗಮೆ ದೊರೆಕೊಳಿಕುಂ ದೋಷಾಗಮನಮನೆಂದು ಪೇಳ್ವ ತೆಱದಿಂ ಸಂಧ್ಯಾರಾಗಮೆ ದೊರೆಕೊಳಿಸಿತು ತಿಮಿರಾಗಮಮಂ (ಪುಷ್ಪಪು. ೦೩-೨೦). [ ದೋಷ + ಆಗಮನ ]

**ದೋಷಾಚರ** (ನಾ). ಕತ್ತಲೆಯಲ್ಲಿ ಓಡಾಡುವವನು; ನಿಶಾಚರ: ಖೇಚರ ಕಿನ್ನರ ಯಕ್ಷಪಿಶಾಚರ್ ಗಂಧರ್ವರಪ್ಸರಃಪ್ರಕರಂ ದೋಷಾಚರರೆಂದದ್ಭುತ ಗುಣಗೋಚರರವರೆಯ್ದೆ ದೇವಯೋನಿಗಳೆನಿಪರ್ (ವಸ್ತುಕೋ. ೦೦-೩೪).
[ ಸಂ. ]

**ದೋಷಾತಿರೇಕ** (ನಾ). ೧. ಹೆಚ್ಚಾದ ಕತ್ತಲೆ. ೨. ವಾತ, ಪಿತ್ತ ಮತ್ತು ಕಫಗಳ ಆಧಿಕ್ಯ. ೧, ೨ : ಸೊರ್ಗಗಳಿರುಳೆಣ್ಣೆಯುಂ ನಿಲೆ ಕುಡಿದಟ್ಟುಮೆ ಮಟ್ಟುಮೆನಿಸಿ ನಮೆದುವು ತನುಗಳ್ ಜಡತೆಯಿನದಂತೆ ಪೊಡರಲ್ ಕುಡುಗುಮೆ ದೋಷಾತಿರೇಕಮುರುಚಿನಿಮಿತ್ತಂ (ಪುಷ್ಪಪು. ೮-೧೭).
[ ದೋಷ + ಅತಿರೇಕ ]

**ದೋಷಾತಿಸಾರ** (ನಾ). (ದೇಹಕ್ಕೆ ಸಂಬಂಧಿಸಿದ) ವಾತ, ಪಿತ್ತ, ಮತ್ತು ಕಫಗಳೆಂಬ ದೇಹದ ಮೂರು ವಿಧವಾದ ನ್ಯೂನತೆಗಳಿಂದ ಉಂಟಾಗುವ ಅತಿಸಾರ,–ಭೇದಿ : ಭದ್ರಮುಸ್ತೆ, ಅಮರದವಳ್ಳಿ . . . ಅತಿಬಜೆ, ಶುಂಠಿ, ನೆಲಬೇವು ಇವಂ ಸಮಭಾಗ ಕಷಾಯಂ ಕಾಸಿ ಕೊಡಲು ದೋಷಾತಿಸಾರಂ ಮಾಣ್ಗುಂ (ಸಕವೈ. ೩೨೨).
[ ದೋಷ + ಅತಿಸಾರ ]

**ದೋಷಾನುವರ್ತನೆ** (ನಾ). ೧. ಕೆಟ್ಟತನವನ್ನು ಅನುಸರಿಸುವಿಕೆ ; ಕೇಡನ್ನು ಅನುಸರಿಸುವುದು. ೨. ರಾತ್ರಿಗೆ ಹೊಂದಿಕೊಳ್ಳುವುದು ; ರಾತ್ರಿಯನ್ನು ಅನುಸರಿಸುವುದು. ೧, ೨ : ಜಗತ್ಪ್ರೀತಿಕರಪರಿಗ್ರಹಿತನಾಗಿಯುಂ ದೋಷಾನುವರ್ತನೆಗೊಳಗಾಗದಕಳಂಕರಾಜನುಂ . . . ಪುಣ್ಯಜನೇಶ್ವರನುಮೆನಿಸಿ (ಪುಷ್ಪಪು. ೩-೨೦ ವ).
[ ದೋಷ + ಅನುವರ್ತನೆ ]

**ದೋಷಾನುಷಂಗ** (ನಾ). ಕತ್ತಲೆಯ ಸಹವಾಸ,–ಸಂಬಂಧ : ಕೋಕಮಿಥುನಂ ವಿಯೋಗೋದ್ರೇಕಂ ದೋಷಾನುಷಂಗದಿಂ ಸಮನಿಸೆ ಚಿಂತಾಕುಲಿತಮಾದುದಾರ್ಗಂ ವ್ಯಾಕುಲತೆಯನುಂಟುಮಾಡ್ಕುಮಿಷ್ಟವಿಯೋಗಂ (ಪಂರಾಮಾ. ೧೧-೧೮೨). [ ದೋಷ + ಅನುಷಂಗ ]

**ದೋಷಾನುಷಂಗೆ** (ನಾ). ೧. ಕಳಂಕವನ್ನು ಹೊಂದಿದವಳು ; ಕಳಂಕಿತೆ. ೨. ಕತ್ತಲೆಯ ಸಹವಾಸವನ್ನುಳ್ಳವಳು. ೧, ೨ : ಲಕ್ಷ್ಮೀಮಹಾದೇವಿ ಕಮಳಿನೀಲಕ್ಷ್ಮಿಯುಂ ಜಡಾಶಯನಿವಾಸಿಯೆನಿಸಿಯುಂ ಇಂದುಲೇಖಾಲಕ್ಷ್ಮಿಯುಂ ವಕ್ರಸ್ವಭಾವೆಯೆನಿಸಿಯುಂ ನಕ್ಷತ್ರಲಕ್ಷ್ಮಿಯುಂ ದೋಷಾನುಷಂಗೆಯೆನಿಸಿಯುಂ (ಮಲ್ಲಿಪು. ೩-೫೪ ವ).
[ ಸಂ. ದೋಷಾನುಷಂಗಾ (ದೋಷ + ಅನುಷಂಗ + – ) ]

**ದೋಷಾನ್ವೇಷಣ** (ನಾ). ೧. ತಪ್ಪನ್ನು ಹುಡುಕುವುದು ; ದೋಷವನ್ನು ಕಂಡುಹಿಡಿಯುವುದು : ತದೀಯ ವಯಸ್ಯನಾತನೆಗ್ಗಂ ಮಾರ್ಕೊಂಡು ದೋಷಾನ್ವೇಷಣಮಂ ಬಾರಿಸಿ (ಶಾಂತಿಪು. ೮-೭೯ವ). ೨. ತಪ್ಪನ್ನು ಹುಡುಕುವವನು : ಕಾಳೋರಗ್ರೋರಗನಂತೆ ದಾರುಣಮುಖರ್ ದುಷ್ಟರ್ ಖಳರ್ ದುರ್ಮುಖರ್ ದೋಷಾನ್ವೇಷಣರಪ್ಪವರ್ ಪಟುದೊಡೇನಂ ಮಾಟ್ಟರೇಗೆಯ್ಯರೋ (?) (ಸುಕುಮಾ. ೧-೪೭).
[ ದೋಷ + ಅನ್ವೇಷಣ ]

**ದೋಷಾಪಚಯ** (ನಾ). ೧. ಕೆಟ್ಟತನದ ಹಾನಿ.–ಹ್ರಾಸ. ೨. ಕತ್ತಲೆಯನ್ನು ಹೋಗಲಾಡಿಸುವುದು. ೧, ೨ : ಪ್ರಚುರ ಕಲಾನ್ವಿತರಕುಟಿಲಚಂಚಲರ್ ಶುದ್ಧಪಕ್ಷವೃತ್ತರ್ ದೋಷಾಪಚಯಪ್ರಕಾಶರೆನೆ ಬಾಲಚಂದ್ರದೇವಪ್ರಭಾವಮೇನಚ್ಚರಿಯೋ (ಪಂರಾಮಾ. ೧-೧೮).
[ ದೋಷ + ಅಪಚಯ ]

**ದೋಷಾಪತಿ** (ನಾ). ರಾತ್ರಿಯ ಒಡೆಯ ; ದೋಷಾಕರ ; ಚಂದ್ರ : ದೋಷಾಪತಿ ಪಾಪಗ್ರಹಯುತನೆನೆ ಚತುರ್ಥಮಂದಿರದೊಳಾಕೆಗಕ್ಕುಂ ಕ್ಲೇಶಂ (ಜಾತತಿ. ೪-೨೮). [ ಸಂ. ]

**ದೋಷಾಬಂಧು** (ನಾ). ರಾತ್ರಿಯ ಬಂಧು ; ಚಂದ್ರ : ಸಂಧಿಗಳುಂ ಕೆಲವೆಡೆಯೊಳ್ ಬಂದು ವಿರೂಪಂಗಳಾಗಿ ಸಮನಿಸಿ ಕವಿತಾಬಂಧನದೊಳಾಗೆ ದೋಷಾಬಂಧುಗೆ ಶಶಲಕ್ಷ್ಮದಂತೆ ಕಟಿಯುಂ ತರ್ಕುಂ (ಕವಿರಾ. ೧-೪೮).
[ ಸಂ. ]

**ದೋಷಾಭಾಸ** (ನಾ). ತಪ್ಪಿಲ್ಲದಿದ್ದರೂ ತಪ್ಪಾಗಿ ಕಾಣುವಂತೆ ಮಾಡುವಿಕೆ : ದೋಷಾಭಾಸಮನೊದವಿಪರೊಂದೆಡೆಗೆ ದುರ್ಜನಸ್ತುತ್ಯಕೃತುಯೆಂಬುದನನುಕರಿಸಿ ಕವೀಂದ್ರರ್ ಪದಪಿಂ ಕೃತಿಯೊಳ್ ಪರೋಪಕೃತಿಪರತಂತ್ರರ್ (ರಾಜಶೇ. ೧-೪೭).
[ ದೋಷ + ಆಭಾಸ ]

**ದೋಷಾಭಿಸಂಧಿ** (ನಾ). ೧. ಕೆಡುಕನ್ನು ಉಂಟುಮಾಡುವ ಉದ್ದೇಶ ; ದೋಷಪೂರ್ಣವಾದ ಉದ್ದೇಶ ; ಮೋಸ ; ಸಂಚು : ಮನ್ನಿಸುವಿರಲೆ ಮಕ್ಕಳಿರ ಸಂಪನ್ನಸತ್ತ್ವರು ನೀವು ಕರ್ಮಿಗಳೆನ್ನವರು ದೋಷಾಭಿಸಂಧಿಯ ಮುಟಿದು ಕಳೆಯೆಂದ (ಕುವ್ಯಾಸ. ೦೫-೬೦). ೨. ಕತ್ತಲೆಯ ಸಂಬಂಧ,–ಕೂಟ. ೧, ೨ : ವರ್ಣಸಂಕರಂ ಚಿತ್ರದೊಳ್ ದೋಷಾಭಿಸಂಧಿ ದಿವಸವಿರಾಮದೊಳ್ . . . ಪಂಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ). [ ದೋಷ + ಅಭಿಸಂಧಿ ]

**ದೋಷಾರಿ** (ನಾ). ಪಾಪಕ್ಕೆ ಶತ್ರುವಾದವನು ; ದೇವರು : ಈಶನನೊಲಿದರ್ಚಿಸುವನ ಕೈ ಶುದ್ಧಂ ಶಿವನ ಪಾಡುವನ ಬಾಯ್ ಶುದ್ಧಂ ದೋಷಾರಿಯ ನೆನೆವನ ಮನ ತಾ ಶುದ್ಧ ಕಣಾ (ಶಂಕಳಂ. ೯೦). [ ದೋಷ + ಅರಿ ]

**ದೋಷಾರೋಪ** (ನಾ). ತಪ್ಪು ಹೊರಿಸುವುದು ; ಅಪಾದನೆ : ಈ ಸಂವಿಧಾನದ ರಾಷ್ಟ್ರಪತಿಯವರನ್ನು ಮಹಾಭಿಯೋಗಕ್ಕೆ ಗುರಿಪಡಿಸಬೇಕಾದರೆ, ಸಂಸತ್ತಿನ ಉಭಯಸದನಗಳಲ್ಲಿ ಯಾವುದೊಂದು ಸದನದವರಾಗಲಿ ದೋಷಾರೋಪ ಮಾಡತಕ್ಕುದು (ಭಾಧಾನ. ೩೦).
[ ದೋಷ + ಆರೋಪ ]

**ದೋಷಾರೋಪಣ** (ನಾ). =ದೋಷಾರೋಪ.
[ ದೋಷ + ಆರೋಪಣ ]

**ದೋಷಾರೋಪಣೆ** (ನಾ). =ದೋಷಾರೋಪ : ಪಾವರ್ ಚೀಟಿ ತೆಗೆದುಕೊಂಡಿದ್ದ ಒಬ್ಬ ಸಾಲಗಾರನನ್ನು ದೋಷಾರೋಪಣೆಯಿಂದ ತಪ್ಪಿಸಿದ್ದಾಯ್ತು (ಪುನರು. ೨೦೨). [ ದೋಷ + ಆರೋಪಣೆ ]

**ದೋಷಾರ್ತಿ** (ನಾ). ಪಾಪದ ಪರಿಣಾಮದಿಂದ ದುಃಖಿಸುತ್ತಿರುವವನು : ಸಜ್ಜನದ್ವೇಷಿಯುಂ ಸಂಚಳನಂ ದೋಷಾರ್ತಿಯುಂ ದುರ್ಧರತರವಿರಸಕ್ರೀಡನಂ . . . ರಕ್ಷಿಪ್ಪುದು (ರಕ್ಷಾಶ. ೪೭).
[ ದೋಷ + ಆರ್ತಿ ]

**ದೋಷಾಲೇಪ** (ನಾ). ತಪ್ಪುಗಳ ಸಂಬಂಧ : ಈ ಪೇಟ್ದ ಮಾಟ್ಕೆಯುಂ ದೋಷಾಲೇಪಂ ಪೊರ್ದದಂತಿರೆ ಸನ್ನಿಬಂಧವ್ಯಾಪೃತನಕ್ಕೆ ಗುಣವದರ್ಥಂ ವ್ಯಾಪಕಮಾಗೆ (ಕಾವ್ಯಾವ.೪೯೩). [ ದೋಷ + ಆಲೇಪ ]

**ದೋಷಾವಕಾಶ** (ನಾ). ೧. ಪಾಪ ಅಥವಾ ಕೆಟ್ಟಕಾರ್ಯಗಳಿಗೆ ಅನುಕೂಲವಾದ ಸಂದರ್ಭ,–ಸೌಕರ್ಯ. ೨. ಕತ್ತಲೆಗೆ ಆಸ್ಪದ. ೧, ೨ : ಒದವಂ ಭವ್ಯಮುಖಾಂಬುಜಕ್ಕೆ ಮುದಮಂ ಸದ್ಧರ್ಮಚಕ್ರಕ್ಕೆ ಸಂಪದಮಂ ಲೋಕದ ದೃಷ್ಟಿಗಸ್ತಪದಮಂ ದೋಷಾವಕಾಶಕ್ಕೆ . . . ಪಡೆಯುತ್ತಿಕ್ಷ್ವಾಕುವಂಶೇಂದ್ರಶೈಲದಿನತ್ಯೂರ್ಜಿತತೇಜನುದ್ಭವಿಸಿದಂ ತ್ರೈಲೋಕ್ಯನಾಥಂ ಜಿನಂ (ಪುಷ್ಪಪು. ೧೧-೨). [ ದೋಷ + ಅವಕಾಶ ]

**ದೋಷಾವಸಥ** (ನಾ). ೧. ಪಾಪದ ನೆಲೆ,–ಆಶ್ರಯಸ್ಥಾನ : ಪಸಿಯೊಳ್ ಪಸುರ್ವಂದರೊಳಗ್ನಿಸಾಕ್ಷಿಯೊಳ್ ಕೊಂಡ ಪಾಂಡುಪತಿಯಿರೆ ದೋಷಾವಸಥರ್ ಪಾದರದಿಂ ಜನಿಯಿಸಿದರ್ (ಗದಾಯು. ೩-೩೮). ೨. ಕೆಡುಕಿಗೆ ನೆಲೆ : ನಯಮುಂ ಪೇಟ್ವೊಡೆ ಸಂಧಿ ಮಾಡಿಟಿಯದಿರ್ ಕೌಂತೇಯರೊಳ್ ಯುದ್ಧಮಕ್ಷಯದೋಷಾವಸಥಂ ಪ್ರಧಾನಪುರುಷರ್ ಕ್ಷತ್ರಕ್ಷಯಸ್ಥಾನಮೆಂದು ಯಥಾರ್ಥಂ ನುಡಿದಾರ್ತರಿಲ್ಲ (ಗದಾಯು. ೪-೬೬).
[ ದೋಷ + ಅವಸಥ ]

**ದೋಷಾವಹ** (ನಾ). ಅಪಾಯಗಳನ್ನು ತರುವಂಥದು ; ಅಶುಭಪರಿಣಾಮವನ್ನುಂಟುಮಾಡುವಂತಹುದು : ಮನೆಯಿಂದೋಸಟಿಗೇಳಲೆಂದು ಬರಲಾಗಲ್ ಭೇರಿವಾದ್ಯಂಗಳ್ಗೆ ತೂರ್ಯನಿನಾದಂ ಗುಡಿ ತೋರಣಂ . . . ಕಟ್ಟಿದಿರಾಗಿ ತೋಚಿ ಶುಭದಂ . . . ಮೇಷದವರಂ ಕಾಣಲ್ಕೆ ದೋಷಾವಹಂ (ಲೋಕೋಪ. ೧೨-೫೦) : ದೇವ ಕನಸಿದು ಕರಂ ದೋಷಾವಹಂ (ಯಶೋಚ. ೩-೧೩). [ ದೋಷ + ಅವಹ ]

**ದೋಷಾವಳಿ** (ನಾ). ೧. ತಪ್ಪುಗಳ ಗುಂಪು,-ಸಮೂಹ. ೨. ಕತ್ತಲೆಯ ಗುಂಪು,-ಸಮೂಹ. ೧, ೨ : ಮಳಿನತೆ ಇಲ್ಲದ ಕುನ್ದಂ ತಳೆಯದ ಸಲೆ ರಾಹುಪೀಡೆಯ್ಯದದ ದೋಷಾವಳಿಯೊಳ್ಪರಿಯಿಸದಸ್ತಾಚಳಕಳಸದ ಚನ್ದ್ರನೆನಿಸುವಂ ಶುಭಚಂದ್ರಂ (ಎಕ. VII, ಶಿಕಾರಿ. ೨೨೫-೭೧ ; 1204). [ ದೋಷ + ಆವಳ್ಯ (=ಆವಲಿ) ]

**ದೋಷಾವಿಲ** (ನಾ). ೧. ತಪ್ಪಿನಿಂದ ಕೂಡಿದುದು. ೨. ಕೆಡುಂಕಿನಿಂದ ಕೀಳಾದುದು : ಸೇವೆಯೆ ಕಷ್ಟಂ ಸೀತಾದೇವಿಯನೀಡಾಡಿ ಬರ್ಪುದಡವಿಯೊಳೆನೆ ದೋಷಾವಿಲ[ಪಾಠಾಂ. ಳ]ಮನಕ್ಕೆ ರಾಘವದೇವಂಗೆ ಕೃತಾಂತವಕ್ತ್ರನದನೇಗೊಂಡಂ (ಪಂರಾಮಾ. ೧೫-೭೪). [ ದೋಷ + ಆವಿಲ ]

**ದೋಷಾವೇಶ** (ನಾ). ಪಚ್ಚೆಯ ಐದು ವಿಧವಾದ ನ್ಯೂನತೆಗಳಲ್ಲಿ ಒಂದು ; ಇಬ್ಬನಿ ಬಿದ್ದ ತಾವರೆಯ ಪತ್ರದಂತಿರುವ ಪಚ್ಚೆ : ದೋಷಲೇಶಾನ್ವಿತಂ ದುಷ್ಟಂ ದೋಷಮೂರ್ಛಿತಂ ದೋಷಾವೇಶಂ [ಪಾಠಾಂ. ಷಲೇಶಂ] ಮುಂದದೋಷಮೆಂದಿಂತೀ ಪಂಚವಿಧಮಾದ ಸದೋಷಜಾತಿಮರಕತಮಂ ಪೇಳ್ವೆಂ (ಹಾಲಾಸ್ಯ. ೨-೧-೮೮ ವ). [ ಸಂ. ]

**ದೋಷಾಶ್ರಯ** (ನಾ). ಹವಳದ ಮೂರು ಬಗೆಯ ನ್ಯೂನತೆಗಳಲ್ಲಿ ಒಂದು ; ಕಳಂಕವನ್ನು ಹೊಂದಿರುವಂಥ ಹವಳ : ದೋಷಾಶ್ರಯಂ ಛಿದ್ರವಕ್ರಂ ಕ್ರಿಮಿದೂಷಣಮೆಂದು ದೋಷತ್ರಯಮುಂಟದನುಳಿದು ನಿರ್ದೋಷವಿದ್ರುಮಮಂ ಕಾಮಿನಿಯರ್ ವಿಶೇಷಮಾಗಿ ತಾಳಲ್ ಸುಖಾಯುಷ್ಯ ಸುಪುತ್ರಾರೋಗ್ಯಾದಿ ಸಿದ್ಧಿಗಳಪ್ಪುವು (ಹಾಲಾಸ್ಯ. ೨-೧-೧೧೪ ವ). 'ದೋಷತ್ರಯಂ' ಪಠಾ. [ ಸಂ. ]

**ದೋಷಿ** (ನಾ). ೧. ಕಳಂಕವನ್ನು ಹೊಂದಿರುವವನು; ಕಪ್ಪು ಕಲೆಗಳಿಂದ ಕೂಡಿದವನು ; ಚಂದ್ರ : ದೋಷಿ [ಪಾಠಾಂ. ಸಿ]ಯೊಡನಾಗಸವ ತಿರುಗಲಲಸಿ ಬಂದು ಧಗಧಗಿಪ ಬೆಳ್ದಿಂಗಳೊರ್ವೊತ್ತಮಾಗಿ ಸ್ಯೆನಿಗುರಿದತ್ತೆಂಬ ವೋಲ್ (ಸಂದಿಮಾ. ೨-೯೦). ೨. ತಪ್ಪುಮಾಡಿದವನು ; ಅಪರಾಧಿ : ಶಂಕಿಸದಿರು ಮುಟ್ಟದು ಗುಣಿಗೆ ದೋಷಿಗಕ್ಕುಂ ದೋಷಂ (ಶಾಂತಿಪು. ೩-೮೮) ; ದೋಷಿ ಪಿಡಿವಂತೆ ದಿವ್ಯದ ಕಾಸಿದ ಕುಟುವಂ ಕಡುಂಗಿ ಕಾಳೋರಗನಂ ಕೂಸು ಪಿಡಿವಂತೆ ಪಿಡಿದಂ ಸಾಸಿಗನವಿವೇಕಿ ಸೀತೆಯಂ ದಶಕಂಠಂ (ಪಂರಾಮಾ. ೯-೧೧೧) ; ತುಡುಕಿದ ದೋಷಿಯನಲ್ಲದೆ ಪಿಡಿಯದು ಘಟಸರ್ಪನಂತುಟಲ್ಲದೆ ತನ್ನಂ ತುಡುಕದ ನಿರ್ದೋಷಿಯುಮಮಂ ಪಿಡಿವುದು ಖಳಮುಖಘಟೋಗ್ರಜಿಹ್ವಾಸರ್ಪಂ (ಜಗವಿ. ೧-೭೨) ; ದೋಷಿಗೆ ತಕ್ಕ ದಂಡನೆಯ ಮಾಳ್ಪುದು ಮಾಡದುಪೇಕ್ಷಿಸಿರ್ದೊಡಾ ದೋಷಿ ಬಟಿಕ್ಕೆ ಧಾರಿಣಿಯೊಳಂ ಕುಶಮಿಲ್ಲದ ಹಸ್ತಿಯಂತೆ ನಿರ್ದೋಷಿಗಳಂ ಮದಾಂಧಗುಣದಿಂ ತುಟಿಗುಂ (ಸೂಕ್ತಿಸು. ೦೬-೧೧). ೩. ಕೆಟ್ಟ ನಡತೆಯುಳ್ಳವನು ; ದುರಾಚಾರಿ : ವಿಷಯದ ಸವಿ ತಲೆಗೇಟಿ ಶಿವಪೂಜೆಯ ಬಿಟ್ಟು ವೇಶಿಯರ ಎಂಜಲ ಹೇಸದೆ ತಿಂಬ ದೋಷಿಗಳನೇನೆಂಬೆನ್ನೆ (ದೇದಾವ. ೩೫-೬೫). [ ಸಂ. ದೋಷಿನ್ ]

**ದೋಷಿಗ** (ನಾ). ತಪ್ಪು ಮಾಡಿದವನು ; ಅಪರಾಧಿ : ಆದ ಮುಳಿಸಿಂದ ಮೆಲ್ಲಂ ತೇದುಂ ಕುಡಿಯಲ್ಕೆ ತಕ್ಕ ಪಗೆವನ ರುಧಿರಾಚ್ಯೋದಮನೆ ಕುಡಿದು ಮಾಣ್ದ ವೃಕೋದರನೇನಾವ ತೆಱದೊಳಂ ದೋಷಿಗನೇ (ಪಂಪಭಾ. ೧೨-೦೫೯). [ ದೋಷ + -ಇಗ ]

**ದೋಷೆ** (ನಾ). ಕತ್ತಲೆಯಿಂದ ಕೂಡಿದುದು ; ರಾತ್ರಿ : "ತಮಿಸ್ರೃ ನಿಶ ರಜನಿ ದೋಷೆ ರಾತ್ರಿ . . . ತ್ರಿಯಾಮ್ಯೆ ಯಾಮಿನಿಯಕ್ಕುಂ" (ವಸ್ತುಕೋ. ೦೫-೫) ; "ದೋಷಾ, ನಕ್ತಂ-೨ ರಜನೌ - ಇತಿ ರಾತ್ರಿಯೊಳು ಎಂಬ ಅರ್ಥದಲ್ಲಿ ವರ್ತಿಸುವವು" (ಸಿದ್ಧಾಂತಿ. ೩೬೬). [ ಸಂ. ದೋಷಾ ]

**ದೋಷೇಂಗಿತೆ** (ನಾ). ಅಂತರಂಗದಲ್ಲಿ ಕಳಂಕವುಳ್ಳವಳು : ನಡುಗುವೊಡಂ ಮೂಗರಳ್ದೊಡಂ ವ[ಪ]ದನೆರನನೆತ್ತುವಡಮುಬಲೆಯರ್ಕಣ್ಮುಡುಕೆಂಪಾದೊಡವಧರಂ ತವೆ (?) ತೆತ್ತುವಡಮುಱಿಗೆ ದೋಷೇಂಗಿತೆಯಂ (ಸುದತ. ೧೧-೩೩). [ ಸಂ. ದೋಷೇಂಗಿತಾ (ದೋಷ + ಇಂಗಿತ + -) ]

**ದೋಷೇತರ** (ನಾ). ಕೆಡುಂಕನ್ನುಂಟುಮಾಡದಿರುವಂಥದು : ದೋಷೇತರನಾಪ್ತಂ ತದ್ವ್ಯಾಹಿತಮುಪಹಿಂಸಮಾಗಮಂ ಷಡ್ಭೇದಾಕ್ಲೇಶಂ ಪದಾರ್ಥವಿಂದೆ ಗಂಡೂಷಂ ನಿನಗಕ್ಕೆ ದುರಿತಕಫವಿಳಯನದೊಳ್ (ಶಾಂತಿಪು. ೭-೪). [ ದೋಷ + ಇತರ ]

**ದೋಷೈಕದೃಷ್ಟಿ** (ನಾ). ೧. ಕೇವಲ ತಪ್ಪುಗಳನ್ನೇ ಹುಡುಕುವುದು : ಕರ್ಣರಸಾಯನವೆನಿಸುವ ಕೃತಿಯೊಳು ದೋಷೈಕದೃಷ್ಟಿಯ ಖಳರು . . . ಕುಂದನೆ ಪರಿಗಣಿಸುವರು (ಇಂಜಾಪ. ೩೭-೨೩). ೨. ಕೇವಲ ತಪ್ಪುಗಳನ್ನೇ ಹುಡುಕುವವನು : ದೋಷೈಕದೃಷ್ಟಿಯಾದವನು ವಿಮರ್ಶಕನೆನಿಸಿಕೊಳ್ಳುವುದಿಲ್ಲ (ರೂಢಿ) [ ಸಂ. ]

**ದೋಷೋದ್ಗಮ** (ನಾ). ೧. ಕೆಡುಂಕಿನ ಹುಟ್ಟು ; ಕೆಡುಕುಂಟಾಗುವಿಕೆ. ೨. ಕತ್ತಲೆಯಾಗುವಿಕೆ. ೧, ೨: ಕೇತಕೀಧೃತಸತ್ಕಂಟಕಮಲ್ಲದಿಲ್ಲ ವಸುಧಾಸತ್ಕಂಟಕಂ ಕಾಳಕಲ್ಪಿತ ದೋಷೋದ್ಗಮಮಲ್ಲದಿಲ್ಲ ಪೆಱವುಂ ದೋಷೋದ್ಗಮಂ ದೇಶದೊಳ್ (ಪುಷ್ಪಪು. ೨-೩೦). [ ದೋಷ + ಉದ್ಗಮ ]

**ದೋಸ** (ನಾ). ೧. ತಪ್ಪು ; ಅಪರಾಧ : ಆ ಸುಕರಂ ಗಡ ತಮಗತಿಭಾಸುರ ಮೃಗರಾಜನಾಮಮುಂ ಗಡಮೆಂದಾ ದೋಸಕ್ಕೆ ಮುಳಿದು ನೆಗಟ್ದರಿಕೇಸರಿ ಕೇಸರಿಗಳನಿತುಮಂ ತಳ್ತಿಱಿದಂ (ಪಂಪಭಾ. ೫-೪೯) ; ನನ್ನಿಗೆ ಬೀಗುವರ್ ನುಡಿ ತೊದಳ್ ದೋಸಕ್ಕೆ ಪಕ್ಕಾದೊಡಂ ಬಡಗಣ್ಣರ್ ಕಲಿಕಾಲದೊಳ್ ಕಲಿಗಳೊಳ್ಗಣ್ದಂ ಬರಂ ಗಣ್ದರೇ (ಎಕ. II, ೦೩೩-೭೦ : ೨೨೨) ; ಕೂಸಂ ಕೊಟ್ಟಪೆನೆಂಬೀ ದೂಸಱ್ ನೀವಿಂತವಜ್ಞೆಗೆಯ್ಯುತ್ತನ್ನಂ ಬೀಸರಮನೆ ನುಡಿದಪಿರೀ ದೋಸಮೆ ನೀಮುಱುದುಮಱಿಯರೆನ್ನನ್ನತಿಯಂ (ಪಂಚತಂ. ೨೬೧-೪) ; ಏಂ ದೋಸಮದೇಂ ಬನ್ನಂ ಬಿಸುಡಾ ಸವಣನ ಪೇಟ್ದ ಜೈನಮಂತಮಂ ಬ್ರತಮಂ (ಸುಕುಮಾ. ೬-೪೯). ೨. ಪಾಪ ; ಕೆಟ್ಟ ಕಾರ್ಯ : "ದೋಸಂ ಸಪಾಪಾಹ್ವಯಂ" (ಕರ್ಣಾನಿ. ೭೦) ; ಸಾಸಿಗನ್ನೆ ಹರಿ ನೀಂ ಪೆಣ್ಗೂಸಂ ವಧಿಯಿಸಿದೆ ಪಶುವನಟಿದ್ದೆ ಮತ್ತಾ ದೋಸಕ್ಕೆ ಹೇಸದೀಗ ಮಹಾಸಭೆಯೊಳಗಗ್ರಪೂಜೆಗಗ್ರಣಿಯಾದ್ದೆ (ಜಗವಿ. ೦೭-೯೨) ; ಬ್ರಾಹ್ಮಣರುಮಂ ಕವಿಲೆಯು[ಮ]ನಳಿದ ದೋಸಕ್ಕೆ ಹೋಹರ್ (ಸೌಇಇ, IX-1, ೨೮೨-೦೭ ; ಸು. 1190) ; ನರಕಿಗಳು ಹೋಹ ದೋಸಕ್ಕೆ ಹೋಹರು (ಎಕ. IX, ಚನ್ನಪ. ೫೮-೨೩ ; 1478 ?). ೩. = ದೋಷ ೧೩ : ದೋಸಮಿನಿತೆಂದು ಬಗೆದುದ್ಭಾಸಿಸಿ ತಱಿಸಂದು (ಕವಿರಾ. ೦-೪೬) ; ದೋಸಮನೆ ಗುಣದವೋಲುದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್ದೇಸಿಯನೆ ನಿಱಿಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ (ಕವಿರಾ. ೧-೭೪). [ <ಪ್ರಾ. ದೋಸ./ಸಂ. ದೋಷ ]

**ದೋಸಂಬೊರ್ದು** (ಕ್ರಿ). (ಸೋಲನ್ನು ಪಡೆದು) ಕಳಂಕವನ್ನು ಹೊಂದು; ಕುಂದನ್ನು ಹೊಂದು : ದೋಸಂಬೊರ್ದಿದ ತಂಟಿಲಸಂದನಂತೆ ಕಂದಿ ಚಾರಿತ್ರಂಗೆಟ್ಟ ಋಷಿಯಂತೆ ಮೆಯ್ಯುಱಿಯದೆ ಕೋಳ್ಪಟ್ಟರಂತೆ ಪುಯ್ಯಲಿಟ್ಟೊಳಱಿಯಟುತ್ತುಮಿರೆ (ಜೀವಸಂ. ೧೧೩-೪೬ವ). [ ದೋಸ + ಪೊರ್ದು ]

**ದೋಸವಂತ** (ನಾ). ದೋಷಿ ; ಅಪರಾಧಿ : ಜಗಳವಂತಂ, ದೋಸವಂತಂ (ಶಬ್ದಾನು. ೪೧೨ ಪ್ರಯೋ). [ ದೋಸ+-ವಂತ ]

**ದೋಸಿ** (ನಾ). ೧. ಕಳಂಕವುಳ್ಳವನು; ಕಲೆಯುಳ್ಳವನು : ದೋಸಿಯಾದಾ ಸಸಿಯ ತಲೆಯಲ್ಲಿ ತಾಳ್ದೆ ಪೂಬಾಸಿಗದೊಲೆನ್ನನೇಳಿಲಗೈದೆಯಿದು ಮಹಾದೋಸವೆಮ್ಮಿರ್ವರಂ ದಯದಲೆಡಬಲಗಣ್ಣಾಗಿ ನೀಂ ಕಾಣ್ಬುದೆಂದು ನೇಸಱಿದಿರಾವರೆಯ ಭಯಭಕ್ತಿಯಿಂದಲೋಲೈಸುವಂದದೊಳು

ಸದ್ರುಚಿರತ್ನರುಚಿರಸಿಂಹಾಸನಂ ಭಾಸಮಾನಮದಾಗಿ ರಂಜಿಸಿದುದು (ನಂದಿಮಾ. ೪-೩೧). ೨. ತಪ್ಪು ಮಾಡಿದವನು ; ಅಪರಾಧಿ : ನಡು ಗಣ್ಣಿನಿಂದ ಬೀರನ ಪೆತ್ತು ಕಳುಪೆ ಘುಡುಘುಡಿಸಿ ದೋಸಿಯ ತಲೆಯ ಹೊಡೆದಗ್ನಿಯೊಳಗಾರ್ದು ಕೆಡಹಿ ಕುಱಿದಲೆಯಿತ್ತನು (ಭಾವಜಂ. ೩-೧೩).

[< ಪ್ರಾ. ದೋಸಿ./ ಸಂ. ದೋಷಿನ್ ]

**ದೋಸಿಅರಸ** (ನಾ). ಒಬ್ಬಾತನ ಹೆಸರು : ಬಿಜಯಿತ್ತ ಬಾಣರಸ ಪ್ರಿಥಿವೀ ರಾಜ್ಯಂಗೆಯೆ ದೋಸಿಅರಸರಾ ಕಳಿಪುಲಿನಾಡಱುವತ್ತುಂ ಪಡೆದು ಕೊಟ್ಟೊಡುಂ (ಎಕ. X, ಮುಳಬಾ. ೨೪೪-೭ ; ಸು. 900).

[ದೋಸಿ? + ಅರಸ₁ ]

**ದೋಸಿಗ** (ನಾ). = ದೋಸಿ ೧ : ದೋಸಿಗನ ಕವರ್ದ್ದುಟದೊರ್ಗೆ ಪರಿಹಾ[ರ]ಂ (ಇಆ. X, ೧೭೪-೭ ; 7ನೆಯ ಶತ?) ; ದೂಸಕರ ದೂಱುಗೇಳ್ದುಂ ಸಾಸಿಗನೆನ್ನಳವನಱಿದುಮುಱಿಯದೆ ಪಿರಿದುಂ ದೋಸಿಗನಾದೊಡೆ ಕೊಲ್ಗುಂ ಪೇಸುವನಲ್ಲಂ (ಅರ್ಧನೇ. ೫-೧೩). [ ದೋಸ + – ಇಗ ]

**ದೋಸೆ₁, ದ್ವಾಶಿ** (ನಾ). ಅಕ್ಕಿ ಹಾಗೂ ಉದ್ದು ಅಥವಾ ಬೇರೆ ಧಾನ್ಯಗಳನ್ನು ಒಂದು ಪ್ರಮಾಣದಲ್ಲಿ ನೆನೆಸಿಟ್ಟು ನಂತರ ರುಬ್ಬಿ ಹೆಂಚಿನ ಮೇಲೆ ಹೊಯ್ದು ಬೇಯಿಸಿ ಮಾಡುವ ಒಂದು ಬಗೆಯ ಖಾದ್ಯ,– ತಿಂಡಿ: ವಿಾಸಲು ಸೂಸಲಾಗಿ ದೋಸೆ ಕಡುಬ ಹೊಯ್ದು ಹಬ್ಬವ ಮಾಡಿಹೆನೆಂಬ ಹೇಸಿಗಳ ಮಾತ ಕೇಳಲಾಗದು (ವಚಸಂ. ೩೭೮-೮); ದೋಸೆಯುನಟ್ಟ ವೋಲ್ ಮಳಲ ರಾಶಿಗಳೊಪ್ಪಮನಾಳ್ದುವು (ಬಾಧಪು. ೪-೭೮) ; ದೋಸೆಯಿಡ್ಡಲಿಗೆ ತಱಗು...ಎಂಬಿವನಾ ನಾರೀತತಿ ಮುನಿಜನಕ್ಕೆ ಬಡಿಸಿದುದಾಗಳ್ (ತ್ರಿಷುವಿ. ೧೦-೩೪) ; ಹೆಸಱ ದೋಸೆಯ ಹೂವಿನೆಸಳಂತೆ ಸಂಬಳಿಸಿ ಪಸನಾಗಿಯುಪ್ಪುಮೆಣಸಿಕ್ಕಿ (ಸೂಶಾ. ೪-೫೩) : ಸಣ್ಣಸೇವಗೆಯ ಮೆದೆ ಎಱೆಯಪ್ಪದಡಕಿಲಿಡ್ಡಲಿಗೆಗಳ ಬೋನ ದೋಸೆಯ ಲಗ್ಗೆ (ಸಮ್ಯಕೌ. ೭-೨೫) ; ದೋಸೆ ಕಜ್ಜಾಯ ... ಕಬ್ಬುವಿಲ್ಲೆಗಳನುಱೆ ಮಾಱುವರ್ ಬರುತಿರ್ದರು (ಚಿಬಪು. ೪೭-೪೨) : ಹಸನಾದ ದೋಸೆಯುಂಡಲಿಗೆ . . . ಪನ್ನೀರನೊಸೆದರ್ಪಿಸಿದರಂಬಿಕೆಗೆ (ಕಂನವಿ. ೨೨-೨೯) ; ದೋಸೆಯ ಊಟ ಊಟವಲ್ಲ, ದಾಸರ ಆಟ ಆಟವಲ್ಲ (ಗಾದೆ) : ಎಲ್ಲರ ಮನೆಯ ದೋಸೆಯೂ ತೂತೇ (ಗಾದೆ) ; ಆರು ದೋಸೆ ಕೊಟ್ಟರೆ ಅತ್ತೆ ಕಡೆ, ಮೂರು ದೋಸೆ ಕೊಟ್ಟರೆ ಮಾವನ ಕಡೆ (ಗಾದೆ). **ದ್ವಾಶಿ** : ಯಿದಕೆ ಪಶ್ಚಿಮ ಅಗ್ರೋದಕದ ಭಾವಿ ಸುತ್ತಲು ವಡೆ ದ್ವಾಶಿಗೆ ಗದೆ ಅಗಲ ೨೦ ಉದ ೨೦ ಬೀಜವರ್ರಿ ಲಾ ೨ (ಎಕ. XI, ಹೊಳಳ್ಕೆ. ೭-೨೪ ; 1568). **P** ಇದರಲ್ಲಿ ಅಕ್ಕಿದೋಸೆ, ಅವಲಕ್ಕಿದೋಸೆ, ಈರುಳ್ಳಿದೋಸೆ, ಒಗ್ಗರಣೆದೋಸೆ, ಕಡಲೇ ಬೇಳೆ ದೋಸೆ, ಕಾಯಿದೋಸೆ, ಖಾಲಿದೋಸೆ, ಗೋದಿದೋಸೆ, ತುಪ್ಪದ ದೋಸೆ, ಮಸಾಲೆದೋಸೆ, ಮೆಂತ್ಯದ ದೋಸೆ, ಮೊಟ್ಟೆ ದೋಸೆ, ರವೆ ದೋಸೆ, ರಾಗಿದೋಸೆ, ಹೆಸರುಬೇಳೆ ದೋಸೆ ಮುಂತಾಗಿ ಅನೇಕ ಬಗೆಗಳಿವೆ.

[ದೇ. ತಮಿ. ತೋಚೈ; ಮಲ. ದೋಶ; ತುಳು. ಕೊಡ. ತೆಲು. ದೋಸೆ]

**ದೋಸೆ₂** (ನಾ). ಒಂದು ಬಗೆಯ ತರಕಾರಿ ; ಸೌತೆಕಾಯಿ : ದೋಸೆ, ಸೋರೆಕಾಯಿ, ಸೊಂಡೆಗಣಸು, ಹುಳಿ . . . ಮೊಸರು, ಮಜ್ಜಿಗೆ ಮತ್ತು ಗುರುತ್ವಮಾದಾಹಾರಂಗಳಿವೆಲ್ಲಂ ಖಾಸ, ಶ್ವಾಸ, ಬಿಕ್ಕುಳುರೋಗಂಗಳ ವರಿಗೆ ಅಪಥ್ಯಂಗಳೆಂದರಿವುದು (ಸಕವೈ. ೨೪೫). [ ← ತೆಲು. ದೋಸ ]

**ದೋಸೆವದ** (ನಾ). ದೋಸೆಯ ಹಿಟ್ಟಿನ ಹದ ; ದೋಸೆಯಂತೆ ತೆಳ್ಳಗೆ ಬಳುಕುವುದು : ಬಿಸಿಲ ಹೊಡೆಯಿಂದ ಕಂದದೆ ದೋಸೆವದದಿ ಸೊಗಯಿಸುವ ಸಕ್ಕರೆಗಳೆಳನೀರ ಕುಯಿದಿಳುಪಿ ತಣ್ಣಸವಾದ ತಾಣದೊಳಗಿರಿಸಿ (ಸೂಶಾ. ೨-೩೧). [ ದೋಸೆ₁ + ಪದ₁ ]

**ದೋಸ್ತ** 'ದೋಸ್ತಿ' ನೋ.

**ದೋಸ್ತದಾರ, ದೋಸ್ದಾರ, ದೋಸ್ತುದಾರ** (ನಾ). ಗೆಳೆಯ ; ಮಿತ್ರ : ಈ ಪ್ರಕಾರ ನಮ್ಮ ತಮ್ಮ ಸಖಿತ್ವವಾಗಿ ಇರುವ ವಿಸ್ತಾರದಲ್ಲಿ ನಡಸುವ ಬಗ್ಗೆ ದೋಸ್ತದಾರರಿಗೆ ಯಾವಾಗಲೂ ಆಗ್ರಹಾ ಉಂಟಾಗಿ ಇರುವದರಿಂದ (ರಾಜೇಂದ್ರ. ೧೬೬). **ದೋಸ್ದಾರ** : ದೋಸ್ದಾರರ ಮಾತ ಮಿಾರಬಾರದು (ರಾಜೇಂದ್ರ. ೯೩). **ದೋಸ್ತುದಾರ** : ದೋಸ್ತುದಾರರಾದಂಥವರ ಹೆಸರಿಗೆ ಒಂದು ವಕೀಲು ಟೀಪುಸುಲ್ತಾನರ ಬಳಿಗೆ ನೇಮಿಸಿ ಕಳುಹಿಸುವಾ ಎಂಬುದಾಗಿ, ಬರದು ಕಳುಹಿಸಿ ಇದ್ದೀತು (ರಾಜೇಂದ್ರ. ೧೫೩).

[ ದೋಸ್ತ (<ದೋಸ್ತಿ) + – ದಾರ₄ ]

**ದೋಸ್ದಾರ** 'ದೋಸ್ತದಾರ' ನೋ.

**ದೋಸ್ತಿ, ದೋಸ್ತ, ದೋಸ್ತು** (ನಾ). ೧. ಮಿತ್ರತ್ವ ; ಗೆಳೆತನ ; ಸ್ನೇಹ : ತಮ್ಮ ದೋಸ್ತಿಯಿಂದಾ ನಮ್ಮನಸ್ಸಿನ ಸಂತೋಷ ಪಡಂಬಡಿಕೆ ಮರ್ತಬೆ ಎಲ್ಲಾ ಜನರಿಗೂ ತಿಳಿಯುವ ಹಾಗೆ ಮಾಡುತ್ತಾ ಇದ್ದೇವೆ (ರಾಜೇಂದ್ರ. ೨೨೮) ; ನನಗೂ ಅವರಿಗೂ ಬಾಳ ದೋಸ್ತಿ (ಮಣ್ಣುಹ. ೦೨೦) ; ವಕೀಲರದು ನಮ್ಮದು ದೋಸ್ತೀ ಬಹಾಳರಿ (ರಕ್ತಧ್ವ. ೧೯೭) ; ನಮ್ಮಿಬ್ಬರಿಗೂ ಬಹಳ ದೋಸ್ತಿಯಾಯಿತು (ಮಧುನ. ೧೨೬). ೨. ಗೆಳೆಯ; ಮಿತ್ರ : ಅವನೂ ಅವನ ದೋಸ್ತಿ ಗಣೇಶನೂ ಬೀದಿ ಬೀದಿ ಅಲೆಯುತ್ತಾರೆ (ತ್ಯಾಗಮು. ೧೯೦) : ನಿಮ್ಮ ತಂದೆಯ ದೋಸ್ತಿ, ಸಾಮಾನ್ಯವಾದ ವ್ಯಕ್ತಿಯೇನಲ್ಲ (ಪುನರು. ೩೩೦) ; ಅವನ ಹಳೆಯ ದೋಸ್ತಿಗಳಲ್ಲಿ ಕೆಲವರು ಎಲ್ಲಾ ವಯಸ್ಸಾಗಿ ಶಕ್ತಿ ಉಡುಗಿದವರು (ಯೋಧಪು. ೯೩). **ದೋಸ್ತ** : ೨. ಮಹಾರಾಜೆಸಾಹೇಬರವರ್ರು ತಮ್ಮ ದೋಸ್ತರಾದ ಕರ್ನಲ ಕುಲೂಸ ಸಾಹೇಬರವರ ಹೆಸರ್ರಿನಲ್ಲಿ . . . ಕಟ್ಟಿಸಿದರ್ರು (ಎಕ. IX, ಚನ್ನಪ. ೫-೨ ; 1799) ; ವಸ್ತಾದ ಅಲ್ಲಿಭಟ್ಟರ ಜೀವದ ದೋಸ್ತನಾದ (ಹಬ್ಬಿಬ. ೪೭). **ದೋಸ್ತು** : ೧. ಅವರಿಬ್ಬರಿಗೂ ಒಳ್ಳೆಯ ದೋಸ್ತು (ರೂಢಿ).

**ದೋಸ್ತಿ ಮಾಡು** = ಸ್ನೇಹ ಮಾಡಿಕೊಳ್ಳು ; ಗೆಳೆತನ ಬೆಳೆಸು: ಈಗ ಕೊಡಗಿನ ದೊರೆಗಳು ಹೈದರಲ್ಲೀಖಾನರ ಮಗ ಟೀಪುಸುಲ್ತಾನರ ಸಂಗಡ ವಿರುದ್ಧ ಮಡಗಿ ಇಂಗ್ರೇಜಿಯವರ ದೋಸ್ತಿ ಮಾಡಿಕೊಂಡು ಟೀಪುಸುಲ್ತಾನರಿಗೆ ಶತ್ರುವಾಗಿ ಇದ್ದಾರೆ (ರಾಜೇಂದ್ರ. ೮೮).

[ ← ಪಾರ. ಹಿಂ. ಮರಾ. ದೋಸ್ತೀ, ದೋಸ್ತ್ ]

**ದೋಸ್ತಿಗಾರ** (ನಾ). ಗೆಳೆಯ ; ಸ್ನೇಹಿತ : ಅವನ ನಾಲ್ಕೈದು ದೋಸ್ತಿಗಾರರು ಆಗ ಅಲ್ಲಿಂದಲೇ ಹಾದುಹೋಗುತ್ತಿದ್ದರು (ಹೊಸಕ್ಷಿ. ೭೨).

[ ದೋಸ್ತಿ + – ಗಾರ (<– ಕಾಱ) ]

**ದೋಸ್ತು** 'ದೋಸ್ತಿ' ನೋ.

**ದೋಸ್ತುದಾರ** 'ದೋಸ್ತದಾರ' ನೋ.

**ದೋಸ್ಸಾರ** (ನಾ). ೧. ತೋಳಿನ ಶಕ್ತಿ,–ಸಾಮರ್ಥ್ಯ. ೨. ತೋಳಿನ ಶಕ್ತಿಯುಳ್ಳವನು ; ಬಾಹುಬಲವುಳ್ಳವನು ; ಪರಾಕ್ರಮಿ : . ಆರಾಧಿಸಿ ಪಡೆದಂ ಗಡ ತೇರಂ ದೋಸ್ಸಾರನಲ್ಲದಂಗೇವುದೊ ಪೇೞ್ ಕೇರೆಂದು ಸಿಂಹರಥಮಂ ವೀರಶ್ರೀರಮಣನೇಱಿದಂ ರಘುವೀರಂ (ಪಂರಾಮಾ. ೧೪-೧೩೧). [ ಸಂ. ]

**ದೋಸ್ಸಾಹಸ** (ನಾ). ತೋಳಿನ ಬಲ,–ಶಕ್ತಿ,–ಸಾಹಸ ; ಬಾಹುಬಲ ; ಪರಾಕ್ರಮ : ಅನೇಕಾಹವದೃಷ್ಟದೋಸ್ಸಾಹಸಮಿದು ಮರಾಟಸುಭಟಬಲಂ (ಆದಿಪು. ೧೩-೪೫ ವ). [ ಸಂ. ]

**ದೋಹ₁** (ನಾ). = ದ್ರೋಹ : "ದೋಹ – ದ್ರೋಹ = ಹಾನಿ" (ಶಬ್ದಕೋ. ೨೧) ; ಪರಿವೃತ ರೇಫಲೋಪಕ್ಕೆ — ಕ್ರೋಣಿ – ಕೇಣಿ . . . ದ್ರೋಹ – ದೋಹ (ಶಮದ. ೨೬೧ ಪ್ರಯೋ). [<ಪ್ರಾ. ದೋಹ./ಸಂ. ದ್ರೋಹ ]

**ದೋಹ₂** (ನಾ). ೧. ಹಾಲು ಕರೆಯುವುದು. ೨. ಹಾಲು ; ಕ್ಷೀರ. ೩. ಹಾಲು ಕರೆಯುವ ಪಾತ್ರೆ. [ ಸಂ. ]

**ದೋಹಂಬಡೆ** (ಕ್ರಿ). ವಂಚನೆಗೊಳ್ಳು ; ಮೋಸಹೋಗು : ಆಹಾ ಕಾಮದಿ ದೋಹಂಬಡೆದು ದೇಹದೊಳಾತ್ಮಾಧ್ಯಾಸಂದಳೆದು . . . ಆನೆಂಬೀ ಭಾವಂ ಬಲುಹಾಗಿ ಈ ತೆಱದಿಂ ಪುರುಷನುಮೆನಿಸಿರ್ಪ ವಿತತ ಪ್ರಾಕೃತಸೃಷ್ಟಿಯೊಳಿರ್ಪ (ಶರಗೀ. ೫-೭). [ ದೋಹ$_1$ + ಪಡೆ$_1$ ]

**ದೋಹದ** (ನಾ). ೧. ಗರ್ಭಿಣಿಯರಿಗೆ ಉಂಟಾಗುವ ವಿಶೇಷ ಬಯಕೆ : ಸನ್ನಿಹಿತಗರ್ಭದೋಹದಸಂಪಾದನದಿಂ ವಿಳಾಸವತೀಮಹಾದೇವಿಯುಂ ಪ್ರಮುದಿತೆಯಪ್ಪಂತು ನೆಗಟುತ್ತುಮಿರೆ (ಕಾದಂಪೂ. ೧೦೮) ; ಬಯಕೆಯ ಬಾಗುಳಮಾ ಕಾಂತೆಯೊಳಂತದು ನೆಗಟ್ದುದಿಲ್ಲಣಂ ತೃಷ್ಣಾರ್ತಿಕ್ಷಯಕರನಿರೆ [ತಾಂ] ಗರ್ಭಾಶಯದೊಳ್ ತೋಱುಗುಮೆ ದೋಹದಂಗಳವೋದುಂ (ವರ್ಧಮಾ. ೧೧-೬೨) ; ತಾನೆ ಸೀತೆ ದೋಹದದಿನಡವಿಯ ರಿಸಿವೆಣ್ಗಳಂ ಕಾಣಲ್ಕೆಂದು ಬಯಸಿದಳ್ (ರಾಮಾಶ್ವ. ೨೬-೨೩). ೨. ಗರ್ಭ ; ಬಸಿರು. ೩. ಗಿಡಲತೆಗಳು ಪುಷ್ಪಿತವಾಗುವುದಕ್ಕೆ ಸಹಾಯ ಮಾಡುವ ವಿದ್ಯೆ ; ವೃಕ್ಷಾಯುರ್ವೇದದಲ್ಲಿ ಹೇಳಿರುವಂತೆ ಗಿಡಗಳಿಗೆ ಮಾಡುವ ಒಂದು ಬಗೆಯ ಚಿಕಿತ್ಸೆ,–ಸಂಸ್ಕಾರ : ದೋಹದವೆಂದರೆ ಮರಗಿಡಗಳಲ್ಲಿ ಅಕಾಲದಲ್ಲಿ ಫಲಪುಷ್ಪಗಳು ಉಂಟಾಗುವಂತೆ ಮಾಡುವ ಕಾರ್ಯ (ಲೋಕೋಪ. XIV ಮುನ್ನುಡಿ) ; 'ರತ್ನಾವಳಿ'ಯಲ್ಲಿ ಯಕ್ಷಿಣಿ ದೋಹದ ಮುಂತಾದ ವಿದ್ಯೆಗಳಿಂದಲೂ ಗಿಣಿ ಕೋತಿ ಮುಂತಾದ ಪ್ರಾಣಿಗಳಿಂದಲೂ ಕಥೆ ಕಟ್ಟಿ, ಕವಿ ತನ್ನ ಸಂವಿಧಾನಕೌಶಲವನ್ನು ಚೆನ್ನಾಗಿ ತೋರ್ಪಡಿಸಿಕೊಂಡಿದ್ದಾನೆ (ಸಂನಾಟ. ೧೯೭). ☞ ಕಾವ್ಯಗಳಲ್ಲಿ ಪ್ರಯೋಗವಾಗಿರುವ ಕವಿಸಮಯಗಳಲ್ಲಿ ಸುಂದರಸ್ತ್ರೀಯರು ಸ್ಪರ್ಶ ಮಾಡುವುದರಿಂದ ಪ್ರಿಯಂಗು ವೃಕ್ಷವೂ, ಮದ್ಯಪಾನಮಾಡಿ ಉಗುಳುವುದರಿಂದ ಬಕುಳವೃಕ್ಷವೂ, ಕಾಲಿನಿಂದ ಒದೆಯುವುದರಿಂದ ಅಶೋಕವೃಕ್ಷವೂ, ಕಡೆಗಣ್ಣನ್ನು ಹಾಯಿಸುವುದರಿಂದ ತಿಲಕವೃಕ್ಷವೂ, ಆಲಿಂಗನ ಮಾಡುವುದರಿಂದ ಕುರವಕವೃಕ್ಷವೂ ಕೂಡಲೇ ಚಿಗುರಿ ಪುಷ್ಪಭರಿತವಾಗುತ್ತವೆ ಎಂದು ವಿವರಣೆಗಳು ಬರುತ್ತವೆ. ೪. ಬಯಕೆ ; ಇಚ್ಛೆ ; ಅಭಿಲಾಷೆ ; ಮನೋರಥ.

**ದೋಹದ ಮಾಡು** = ಗಿಡಲತೆಗಳ ಬಯಕೆಯನ್ನು ಪೂರೈಸು ; ಗಿಡಲತೆಗಳು ಪುಷ್ಪಿಸುವುದಕ್ಕೆ ಸಹಾಯ ಮಾಡು : ರಾಜೋದ್ಯಾನದ ಅಶೋಕವೃಕ್ಷಕ್ಕೆ ದೋಹದ ಮಾಡಿ ಅದರಲ್ಲಿ ಹೂ ಬಿಡಿಸಬೇಕಾಗಿತ್ತು (ಸಂನಾಟ. ೧೨೪). [ ಸಂ. ]

**ದೋಹದಕ್ರಿಯೆ** (ನಾ). ಗಿಡಲತೆಗಳ ಬಯಕೆಯನ್ನು ಪೂರೈಸುವಿಕೆ ; ಗಿಡಲತೆಗಳು ಪುಷ್ಪಿಸುವಂತೆ ಮಾಡುವಿಕೆ. [ ದೋಹದ + ಕ್ರಿಯೆ ]

**ದೋಹದವತಿ** (ನಾ). ಬಯಕೆಯುಳ್ಳ ಗರ್ಭಿಣಿ ; ಬಸಿರಾಗಿ ಬಯಕೆಗಳನ್ನುಳ್ಳವಳು : "ಶ್ರದ್ಧಾಳುಃ, ದೋಹದವತೀ–೨ ಬಸುರಿಂದ ಬಯಕೆಯುಳ್ಳವಳ ಹೆಸರುಗಳು" (ಸಿದ್ಧಾಂತಿ. ೦೬೩) ; ಮತ್ತೆ ನೀನು ದೋಹದವತಿಯಲ್ಲವೆ ? – ಏನದು ನಿನ್ನ ಬಯಕೆ ? (ಮಂತ್ರಶ. ೧೪೨-೯).

[ ಸಂ. ದೋಹದವತೀ ]

**ದೋಹದವೃಕ್ಷ** (ನಾ). ಹೂವು ಬಿಡಲು ಸ್ತ್ರೀಯ ಪಾದಾಘಾತ, ಆಲಿಂಗನ, ನಗು, ಉಗುಳುವಿಕೆ ಇತ್ಯಾದಿಗಳನ್ನು ಬಯಸುವ ಮರ,–ವೃಕ್ಷ ; ☞ ಇವುಗಳಲ್ಲಿ ಹತ್ತು ಬಗೆಯ ಮರಗಳಿವೆ ; ಒಂದೊಂದಕ್ಕೂ ಒಂದೊಂದು ದೋಹದವುಂಟು. ಸುಂದರ ಸ್ತ್ರೀಯ ಪಾದಾಘಾತವನ್ನು ಬಯಸುವುದು ಅಶೋಕ, ಉಗುಳುವಿಕೆಯನ್ನು ಬಯಸುವುದು ಬಕುಳ, ಸ್ಪರ್ಶವನ್ನು ಬಯಸುವುದು ಚೂತ, ನಗುವನ್ನು ಬಯಸುವುದು ಸುರಹೊನ್ನೆ, ಕಣ್ಣು ಹಾಯಿಸುವಿಕೆ ಅಥವಾ ನೋಟವನ್ನು ಬಯಸುವುದು ತಿಲಕ, ಆಲಿಂಗನವನ್ನು ಬಯಸುವುದು ಕುರವಕ, ಸಂಭಾಷಣೆಯನ್ನು ಬಯಸುವುದು ಕರ್ಣಿಕಾರ, ಉಸುರಿನ ಸೋಂಕನ್ನು ಬಯಸುವುದು ಸಿಂಧುವಾರ, ಹಾಡನ್ನು ಬಯಸುವುದು ಪ್ರಿಯಾಳು, ಮುಖಪ್ರಸನ್ನತೆಯನ್ನು ಬಯಸುವುದು ಚಂಪಕ : ಪ್ರೌಢೆಯರಾದ ವನಿತೆಯರೊದೆದಡೆ ಮೇಲುಗಿದೊಡೆ ಸೋಂಕಿದೊಡೆ ನಕ್ಕರೆ ನೋಡಿದೊಡೆ ಆಲಂಗಿಸಿದೊಡೆ ನುಡಿದೊಡೆ ಉಸುರು ಸೋಂಕಿದೊಡೆ ಪಾಡಿದೊಡೆ ಮುಖಪ್ರಸನ್ನತೆ ಕಂಡರೆ ಕ್ರಮದಿಂ ಕುಸುಮಿತಂಗಳಪ್ಪ ಅಶೋಕ ಬಕುಳ ಚೂತ ಸುರಹೊನ್ನೆ ತಿಲಕ ಕುರವಕ ಕರ್ಣಿಕಾರ ಸಿಂಧುವಾರ ಪ್ರಿಯಾಳು ಚಂಪಕಂಗಳೆಂಬ ದಶ ದೋಹದ [ಪಾಠಾಂ. ೪] ವೃಕ್ಷಜಾತಿಗಳುಂ (ವಿವೇಕ. ೨೨೬). [ ದೋಹದ + ವೃಕ್ಷ ]

**ದೋಹದಶಂಸಿನಿ** (ನಾ). ದೋಹದವನ್ನು ಮಾಡಲು ಬಯಸುವವಳು : ದೋಹದಶಂಸಿನಿಯು ಒದೆದರೆ ಅಶೋಕವೃಕ್ಷವು ಬಹಳ ಹೂ ಬಿಡುವುದೆಂದು ಒಂದು ಸಂಸ್ಕೃತ ಕವಿಸಮಯವಿದೆ (ಕ್ರಾಂಜಧ್ವ. X ಮುನ್ನುಡಿ).

[ ಸಂ. ದೋಹದಶಂಸಿನೀ ]

**ದೋಹನ** (ನಾ). ೧. ಹಾಲು ಕರೆಯುವುದು,–ಹಿಂಡುವುದು : "ಕಱ–ದೋಹನೇ (ಹಾಲು ಕರೆ)" (ಶಮುಧಾ) ; ಯಜ್ಞಾರ್ಥದಿಂ ಪಡೆದ ಪಶುಗಳ ಕ್ರಯವಿಕ್ರಯ ದೋಹನವಾಹನಾದಿಗಳೊಳುಪಯೋಗಿಗಳಾದುದನಿಷ್ಟಫಳಪ್ರಾಪ್ತಿಪ್ರಸಂಗಮುಕ್ಕುಂ (ಜಾಮುಂಪು. ೨೯೩) ; ತೊರೆಯೆಂಬುದುಂಟು ನದಿಗಳೊಳು ದೋಹನದಲ್ಲಿ ಕಱಯೆಂಬುದುಂಟು . . . ಕುಟಿಲತನವೆಂದೆಂಬುದದು ಸಟುಮಿಂಡಿಯರುಗಳಕಂಗಳೊಳಗುಂಟು (ಸಿದ್ಧೇಪು. ೨-೧೭). ೨. ಹಾಲು ಕರೆಯುವ ಪಾತ್ರೆ. ೩. ಬಯಕೆಗಳನ್ನು ಈಡೇರಿಸುವಿಕೆ. ೪. [ಯೋಗ] ನಾಲಗೆಗೆ ಮಾಡುವ ಒಂದು ಸಂಸ್ಕಾರ (?) ಛೇದನ ಚಾಲನ ದೋಹನಾದಿ ಕ್ರಿಯೆಗಳಿಂ ಪೆರ್ಚಿದ ಜಿಹ್ವೆಯುಂ ಭ್ರೂಮಧ್ಯಸ್ಥಾನಕ್ಕೇಱಿಸಿ ಸ್ಥಿರದೃಷ್ಟಿಯಾಗಿಹುದೇ ಬಾಹ್ಯಖೇಚರಿಯೆನಿಸುವುದು (ಪರಮಾ. ೦-೯). [ ಸಂ. ]

**ದೋಹಲ, ದೋಹಳ** (ನಾ). ೧. ಇಚ್ಛೆ ; ಬಯಕೆ ; ಅಪೇಕ್ಷೆ : "ದೋಹಲಮಿಚ್ಛೆ ಮನೋರಥಮೀಹೆ ಸ್ಪೃಹೆ ಕಾಂಕ್ಷೆ . . . ಸಮಾನವಾಚಕಮುಕ್ಕುಂ" (ವಸ್ತುಕೋ. ೦೦೦-೩). ೨. ಬಸಿರಾದ ಹೆಂಗಸಿನ ಬಯಕೆ,–ಅಪೇಕ್ಷೆ : "ಗರ್ಭಿಣಿಗಳಪ್ಪ ಕಾಮಿನಿಯರ್ ಬಯಸುವ ಬಯಕೆ ದೋಹಲಂ ದೌಹೃದಮುಂ" (ವಸ್ತುಕೋ. ೫೪-೦೯). ೩. ಒಣಗಿದ ಸಗಣಿ ; ಬೆರಣಿ. ದೋಹಳ : ೧. ಕುಸುಮಾಪಚಯವಿಹರಣ ಪರಿಶ್ರಾಂತವಿಪ್ಪವಪ್ರವನಕೇಳೀದೋಹಳಸುರಕುಮಾರಪ್ರಕರಾನುಲಿಪ್ಯಮಾನಸರ್ವಾಂಗೀಣಚಂದನದ್ರುಮನಿವೇಶದಿಂ (ಚಂದ್ರಪ್ರ. ೧-೮೫). ೨. "ದೋಹಳಂ, ದೌಹೃದಂ, ಶ್ರದ್ಧಾ, ಲಾಲಸಾ–ಈ ೪ ಬಯಕೆ" (ಹಲಾಯು. ೮೨-೩೪೪) ; "ದೋಹಳಂ ದೌಹೃದಂ ಶ್ರದ್ಧೆ ಲಾಲಸೆಯೆನಲು ಬಯಕೆಗಳ್ಕು ನಾಮಂ" (ಮುಂಗರಾ. ೯೦-೭) ; ಗೆಲ್ದ ಜಟ್ಟಿಗರೆಸೆ ಸಂದ ಮಲ್ಲರನೆ ಪೋರಿಸಲುಂ ಪಿರಿದೊಂದು ದೋಹಳಂ ನೆಗಟ್ದುದು ಗರ್ಭದರ್ಭಕನ ದೋರ್ಬಲಗರ್ವಮನಂದು ಪೇಟ್ವವೋಲ್ (ಆದಿಪು. ೮-೪೮) ; ಆಕೆಯ ದೋಹಳಂ ಕರಂ ಪೆರ್ಚಿದುದು (ಪಂಪಭಾ. ೧-೧೪೨) ; ನಿಮ್ಮಡಿಗಳ ವಕ್ಷಸ್ಥಳಮಂ ವಿದಾರಿಸಿ ರಕ್ತಪಾನಮಂ ಮಾಟ್ಪೆನೆಂಬ ದೋಹಳಮೆನಗೆ ಪಾಪಿಷ್ಠೆಗೆ ಪುಟ್ಟಿರ್ಪುದು (ಪುಣ್ಯಾಸ್ರ. ೩-೮೭ ಮ). 'ಪುತ್ರದೋಹಳ' ಪರಾ.

[ ಸಂ. ]

**ದೋಹಳ** 'ದೋಹಲ' ನೋ.

**ದೋಹಳಗೈ** (ಕ್ರಿ). ಇಚ್ಛೆಯನ್ನು ಪಡೆ ; ಅಭಿಲಾಷೆಯನ್ನು ಹೊಂದು ; ಬಯಸು ; ಅಪೇಕ್ಷೆಪಡು : ಇಂತೊಪ್ಪುತಿಹ ನಾರಿಯರು ನಂದನದಲ್ಲಿ ಕಂತುವ ಕೂರಾಳ್ಗಳಂತೆ ಸಂತೋಷದಲಿ ದೋಹಳಗೈದು ವರಪ್ರಾಣಕಾಂತರ ಬಳಿಗೈದಿದರು (ಕಂನವಿ. ೫-೧೧೯).

[ ದೋಹಳ ( = ದೋಹಲ) + ಗೈ (<ಕೆಯ್$_1$) ]

**ದೋಹಳಸಂದೋಹ** (ನಾ). ಬಯಕೆಗಳ ಸಮೂಹ : ಅಂತು ಚಕ್ರವರ್ತಿ ಜನ್ಮೋತ್ಸವಸೂಚಕವಪ್ಪ ದೋಹಳಸಂದೋಹಂ ನೆಗಟೆ ಸುಖಪ್ರಸೂತಿ ಸಮಯದೊಳ್ (ಆದಿಪು. ೮-೩೩ವ).

[ ದೋಹಳ (= ದೋಹಲ) + ಸಂದೋಹ ]

**ದೋಹಾ, ದೋಹೆ** (ನಾ). ಹಿಂದಿ ಭಾಷೆಯಲ್ಲಿ ಎರಡು ಸಾಲುಗಳಿರುವ ಒಂದು ಬಗೆಯ ಪದ್ಯಜಾತಿ ; ದ್ವಿಪದಿ ; ೪ ಸಾಲುಗಳಿದ್ದರೂ ಇದನ್ನು ಎರಡು ಸಾಲುಗಳಾಗಿ ಬರೆಯುತ್ತಾರೆ. ೧ ಮತ್ತು ೩ನೇ ಚರಣಗಳಲ್ಲಿ ೧೩ ಮಾತ್ರೆಗಳೂ ೨ ಮತ್ತು ೪ರಲ್ಲಿ ೧೧ ಮಾತ್ರೆಗಳಿದ್ದು ೨ ಮತ್ತು ೪ರ ಸಾಲುಗಳಲ್ಲಿ ಅಂತ್ಯಪ್ರಾಸವಿರುತ್ತದೆ : ಮೈಸೂರಿನಲ್ಲಿ ಹರಿಕಥೆಯ ದಾಸರು ಕಬೀರನ ದೋಹಾಗಳನ್ನು ಹಾಡುತ್ತಿದ್ದುದನ್ನು ನಾನು ಕೇಳಿದ್ದೇನೆ (ಲೂಧ). **ದೋಹೆ :** ಕಬೀರನ ದೋಹೆಗಳ ತ್ಯಾಗರಾಜನ ಕೃತಿಗಳ, ಗಗನಭೇದಕ . . . ಜೀವತಲ್ಲೀನಕ ಶಕ್ತಿಯು ರಾಗರಸವಾದ ಕನ್ನಡ ಕೀರ್ತನೆಗಳು ಕನ್ನಡ ಕಂಠದಿಂದ ಬಂದರೆ ಇವುಗಳಲ್ಲಿಯೂ ಹುಟ್ಟಲಾರದೆ ? (ವಿಚಾಮಂ. ೫). 'ದುಮಯಿ' ಪರಾ.

[ ←ಹಿಂ. ದೋಹಾ, ದೋಹರಾ ; ಮರಾ. ದೋಹಾ, ದೋಹರಾ, ದೋಹೋರಾ ]

**ದೋಹಿ** (ನಾ). ಕೆಟ್ಟವನು ; ದ್ರೋಹಿ : (*).

[ <ಪ್ರಾ. ದೋಹಿ./ಸಂ. ದ್ರೋಹಿನ್ ]

**ದೋಹಿಲ್,** ದೋಹಿಲು, ದೋಹಿಲೆ (ನಾ). ದೂಷಣೆ; ಮಿಥ್ಯಾಪವಾದ ; ನಿಂದೆ : "ದೋಹಿಲ್ – ದೂಱುವುದು" (ಚತುನಿ. ೩. I, ೬೮). **ದೋಹಿಲು :** ಬಯಲಿಗಿಂತಕಟ ದೋಹಿಲನಿಕ್ಕಿದಪನು ನಿರ್ದಯದಿಂದಲೀ ಮುದುಕನಿವನನೀ ಸಭೆಯ ನಿರ್ಭಯದಿ ಪೊಗಿಸಿದ ಮೂಢನಾರವಗೆ ತಕ್ಕುದು ಮಾಳ್ಪನು (ಸೌಂದಪು. ೪-೬೬). **ದೋಹಿಲೆ :** "ದೋಹಿಲೆ ಗಾರಣವೆಂದು" (ಕವಿಕಂ. ೧೯೭). [ ? ]

**ದೋಹಿಲು** 'ದೋಹಿಲ್' ನೋ.

**ದೋಹಿಲೆ** 'ದೋಹಿಲ್' ನೋ.

**ದೋಹೆ** 'ದೋಹಾ' ನೋ.

**ದೋಳ** 'ದೋಲ' ನೋ.

**ದೋಳು₁** 'ಡೋಲು' ನೋ.

**ದೋಳು₂** (ನಾ). (?) : ಕೊಳನ ಕರಿಯ ಕಯದೊಡಗುಡಿಯ ಕಟಿಗೌಡಾ ವೀರಗರ ವೈಯಣಾ ದೋಳಿನತಿವಿದನ ಚೀಕವರ ಕಲದಲು ಗುಡಿಗಳು ಕೆರೆಗಳು ಆದಲು (ಎಕ. XI, ಹೊಳಲ್ಕೆ. ೬೬-೩೪ ; ?). [ ? ]

**ದೋಳುಗೆ** (ನಾ). (?) : ಬತ್ತುವ ಬಾಯ್ ವಾತಜ್ವರ ಚೇಷ್ಟೆ ನೋಯು ಕಿವಿ ದೋಳುಗೆಗಳ್ (ಕಲ್ಯಾಕಾ. ೩-೭). [ ? ]

**ದೋಱು** 'ಡೊಂಗಱು' ನೋ.

**ದೋಱುವೀಲ್** 'ಡೊಗರುಬೀಳು' ನೋ.

**ದೋಱುವೋಗು** 'ಡೋಱುವೋಗು' ನೋ.

**ದೌಕೂಲ** (ನಾ). ರೇಶಿಮೆಯ ಬಟ್ಟೆ ; ದುಕೂಲ. [ ಸಂ. ]

**ದೌಡಾಯಿಸು** (ಕ್ರಿ). ೧. ಅತಿವೇಗವಾಗಿ ಓಡುವಂತೆ ಮಾಡು ; ವೇಗವಾಗಿ ಓಡಿಸು : ಕುದುರೆಯನ್ನು ದೌಡಾಯಿಸಿಕೊಂಡು ಓಡಿದನು (ಘಾಟೀಮು. ೬೪) ; ಮಿಗಿಲಾದ ಹೆದರಿಕೆಯೊಂದು ಆ ಕುರಿಯನ್ನು ಮನುಷ್ಯರಿದ್ದೆಡೆಗೆ ದೌಡಾಯಿಸಿ ಓಡಿಸಿರಬೇಕೆಂದು ಮೂರ್ತಿ ಭಾವಿಸಿದನು (ಪಂಜಪಂ. ೨೦೦) ; ಗಾಡಿಗಳನ್ನು ದೌಡಾಯಿಸಿಕೊಂಡು ಮಧ್ಯಾಹ್ನದ ವೇಳೆಗೆ ಸಂತೆಯ ಮಾಳವನ್ನು ಸೇರಿದ್ದರು (ಸರ್ಪಮು. ೩೯೨). ೨. ಓಡು ; ಧಾವಿಸು : ಅವಳ ಅಭಿಲಾಷೆಯು ಹುಚ್ಚು ಕುದುರೆಯಾಗಿ ದೌಡಾಯಿಸಿರದೆ ಆದರ್ಶದ ಅಧೀನವಾಗಿದ್ದಿತು (ಅಂಬುಜಾ. ೨೩) : ಎಲ್ಲರೂ ಸವಾರರಾಗಿ ಇಪ್ಪತ್ತು ಕುದುರೆಗಳನ್ನು ಬೇರೆಯಾಗಿ ಓಡಿಸಿಕೊಂಡು ದೌಡಾಯಿಸಿದರು (ಒಡಕ. ೬೮). ೩. (ಆಲು) ಒಂದು ಸರಣಿಯಲ್ಲಿ ಹೋಗುತ್ತಿರುವಾಗ ಆತುರದಿಂದ ಮಧ್ಯೆ ಬಿಡು,– ಹಾರಿಸು ; ಚುಟುಕುಗೊಳಿಸು : ಯಾವ ಭಾಗವನ್ನೂ ಅತಿ ಹಿಗ್ಗಲಿಸದೆ, ಕೊನೆಕೊನೆಯಲ್ಲಿ ದೌಡಾಯಿಸದೆ . . . ಈ ಗುರಿಯನ್ನು ಸಾಧಿಸಿರುವುದು ಆಕ್ಸ್‌ಫರ್ಡ್ ನಿಘಂಟುಕಾರರ ಅಪೂರ್ವವಾದ ಪ್ರಶಸ್ತಿ (ಸಮಾಲೋ. ೨೬೮).

[ <ದೌಡು + – ಇಸು₂ ]

**ದೌಡು,** ಡವುಡು (ನಾ). ೧. ಓಡುವುದು ; ಓಟ : ಈ ಮರೆವಿನ ಭೂತ ಮೆಟ್ಟಿಕೊಂಡ ಅಕರ್ಮಣ್ಯ ದಿನಗಳಿಂದ ಒಂದೇ ದೌಡಿನಲ್ಲಿ ಓಡಿಹೋಗಿ ಬಿಡೋಣ ಎಂಬ ಇಚ್ಛೆಯಾಗುತ್ತದೆ (ನಿಬಂಧ. II, ೧೨೬). ೨. "(ಕುದುರೆ, ಮೊ.ಗಳ) ನಾಗಾಲೋಟ (ನಾಲ್ಕು ಕಾಲುಗಳೂ ಒಂದೇ ಬಾರಿ ನೆಲ ಬಿಟ್ಟು ಎಗರುವ ಓಟ) ; ದೌಡು ; ನಾಗಾಲೋಟದ ಸವಾರಿ" (Gallop. ಇಂಕನಿ). ೩. ಆಕ್ರಮಣ ; ಧಾಳಿ ; ದಂಡಯಾತ್ರೆ : ಕ್ರಿಸ್ತೀಶಕದ ೧೧ನೇ ಶತಕದಲ್ಲಿ ಗಿಝನಿಯ ಮಹಮೂದನು ಹಿಂದುಸ್ತಾನದಲ್ಲಿ ದೌಡುಗಳನ್ನು ಮಾಡಿದಂದಿನಿಂದ ಉತ್ತರಹಿಂದುಸ್ತಾನದಲ್ಲಿ ಮುಸಲ್ಮಾನರು . . . ಸಿಂಹಾಸನವನ್ನು ಸ್ಥಾಪಿಸಿದರು (ಕಥಾಗೆ. ೩೩೪). ೪. (ಉಕ) ಬೇಗ ; ಜಾಗ್ರತೆ. **ಡವುಡು :** (*).

**ದೌಡು ಕೀಳು** = ಪಲಾಯನ ಮಾಡು ; ಬೇಗದಿಂದ ಧಾವಿಸು ; ಓಡು : ಕುದುರೆಯು ಸಮೀಪ ಬರುತ್ತಿರುವುದನ್ನು ಕಂಡು ಭಯದಿಂದೇದುತ್ತ ದೌಡು ಕಿತ್ತರು (ಕೋಹಿನೂ. ೧೬). **ದೌಡು ಬರು** = ಅವಸರವಾಗಿ ಬರು ; ವೇಗವಾಗಿ ಬರು ; ಬೇಗ ಬರು : ಅದರಲ್ಲಿಯೂ ಕೊನೆಕೊನೆಗೆ ಸ್ವಲ್ಪ ಓಡಿ ಓಡಿಯೆ ದೌಡುಬರಬೇಕಾಯ್ತು (ಮಠಮ. ೮೦೧) ; ಸೀತಮ್ಮನವರು ಮುಸುರೆ ಕೈಯಲ್ಲೇ ದಡ ದಡ ದೌಡುಬಂದರು (ಜಾಲಗಿ. ೧೨೬). **ದೌಡು ಬಿಡು** = ದೌಡು ಕೀಳು : ಅವನು ಕ್ಷಣಮಾತ್ರದಲ್ಲಿಯೇ. . . ಉಸುಬಿನ ಬಯಲ ಮೇಲೆ ನಾಗಾಲೋಟದಲ್ಲಿ ದೌಡುಬಿಡುತ್ತಿದ್ದನು (ಭಾರವೀ. ೩೯). **ದೌಡು ಮಾಡು** = ದಂಡೆತ್ತಿ ಬರು ; ಧಾಳಿ ಮಾಡು : ಆ ತಾಲ್ಲೂಕಿನಲ್ಲಿ ದೌಡು ಮಾಡುವಂಥಾದ್ದು ನಿಲ್ಲಿಸಿ . . . ಆ ಠಾಣ್ಯದ ಮುಂದಿಗೆ ಸರದಾರನಾಗಿ, ಈ ನಗರಹಳ್ಳಿ ಪುಟ್ಟೇಗೌಡನು ಇದ್ದನು (ರಾಜೇಂದ್ರ. ೫೧) ; ಗಿಝನಿಯ ವಂಶದ ತುರ್ಕರು ಹಿಂದುಸ್ತಾನದ ಮೇಲೆ ದೌಡು ಮಾಡುವವರೆಗೆ ಮುಂದೆ ೨೦೦ ವರ್ಷ ಹಿಂದುಸ್ಥಾನವು ಶಾಂತವಾಗಿದ್ದಿತು (ಹಿಂಮುಸ. ೨೨) ; ತುಗಲಖ ಮಹಮ್ಮದನು ಈ ಪ್ರಾಂತದ ಮೇಲೆ ದೌಡು ಮಾಡಿ ನಾಗನಾಯಕನನ್ನು ಹಣ್ಣು ಮಾಡಿದ್ದರಿಂದ (ಕಮಲ. ೮೨). [ ←ಹಿಂ. ಮರಾ. ದೌಡ್ ]

**ದೌಡೆ** 'ದವಡೆ' ನೋ.

**ದೌಡೋಡು** (ಕ್ರಿ). ವೇಗವಾಗಿ ಓಡು ; ಅತಿ ಶೀಘ್ರವಾಗಿ ಓಡು : ತಂದನಿನ್ನೊರ್ವಂ ದುರಂತ ವೃತ್ತಾಂತಮಂ . . . ರಕ್ಕಸರ ಪಡೆ ಕೆಟ್ಟು, ಕಂಗೆಟ್ಟು . . . ಸೇನಾನಿಗಳ ಕಳೇವರಂಗಳಂ ತುಳಿ ತುಳಿದಿರದೆ ಲಂಕೆಯ ಕಡೆಗೆ ಪೆಡಂಮೆಟ್ಟಿ ದೌಡೋಡಿ ಬರುತಿರ್ಪುದಂ ! (ಶ್ರೀರಾಮಾ. ೬೫೭-೪೧೨); ಇನ್ನೀ ವಂಚಿಸುವಾಟವು ಸಾಗದು ಬಿನದ ಸಾಕಣ್ಣ, ಯಾರಿಗೆ ಮೆಚ್ಚು ? ಇಂತೀ ತೆರನಾ ಸರಸದಿ ನುಡಿಯಲು ದೌಡೋಡಿತು ಮೃಗ ಬಲು ನಾಚಿದ ವೊಲು (ಸಾಂದಸ. ೩೭). [ ದೌಡು + ಓಡು₁ ]

**ದೌತಿ** 'ದವುತಿ' ನೋ.

**ದೌತಿಮಣೆ** (ನಾ). ಮಸಿಕುಡಿಕೆಯನ್ನಿಡುವ ಮಣೆ : (ಒಂದು ಅಥವಾ ಹೆಚ್ಚು ದೌತಿಗಳನ್ನಿಡುವುದಕ್ಕೆ, ಸಾ., ಲೇಖನಿಯಾಸರೆ, ಮೊ.ಗಳೊಂದಿಗೆ ಇರುವ) ದೌತಿಮಣೆ (Ink Stand. ಇಂಕನಿ).

[ ದೌತಿ (<ದವುತಿ) +ಮಣೆ ]

**ದೌತ್ಯ** (ನಾ). ೧. ದೂತನಾಗಿರುವಿಕೆ ; ದೂತನ ಕೆಲಸ : "ದೂತ್ಯಂ, ದೌತ್ಯಂ – ತದ್ಭಾವಕರ್ಮಣೋಃ, ದೂತಭಾವಕ್ಕೂ ದೂತಕೃತ್ಯಕ್ಕೂ ಹೆಸರು, ದೂತನಾಗುವಿಕೆ, ದೂತನು ಮಾಡತಕ್ಕ ಕೆಲಸ" (ಸಿದ್ಧಾಂತಿ. ೩೪೯). ೨. ರಾಯಭಾರ ; ದೂತತನ : ಅವರ ದೌತ್ಯವನ್ನು ವಹಿಸಿ, ಖುದ್ದು ವೆಂಕಟುವಿನ ಸವಾರಿಯೇ ಚಂದುವಿನ ಮನೆಗೆ ಹೋಯಿತು (ಚಾರುದಾ. ೭೦). ೩. ಸಂದೇಶ ; ವಾರ್ತೆ. [ಸಂ.]

**ದೌಮಾಷಾಯು** 'ದಾಮಾಷೆ' ನೋ.

**ದೌರಾತ್ಮ್ಯ** (ನಾ). ಕೇಡಿಗತನ; ದುರುಳತನ ; ದುಷ್ಟಸ್ವಭಾವ : ಅವನು ನನ್ನ ಮೇಲೆ ಯಜಮಾನಿಕೆ ಮಾಡಬೇಕೆಂಬ ಉತ್ಸಾಹದಿಂದ ದೌರಾತ್ಮ್ಯ ನಡಸಿದ್ದರೆ . . . ಏನೋ ಒಂದು (ಪದಾರ್ಥ) ಆಗುತ್ತಿದ್ದೆ (ನಿಬಂಧ. II, ೪) ; ನನ್ನ ವ್ಯಕ್ತಿತ್ವದಲ್ಲಿ ಈ ನಾನಾ ವಿರೋಧಗಳ ವಿಷಮ ದೌರಾತ್ಮ್ಯ ಇರುವುದರಿಂದಲೇ . . . ಇಷ್ಟು ನಿರಂತರವೂ ಇಷ್ಟು ಪ್ರಬಲವೂ ಆದ ರೋದನ (ನಿಬಂಧ. II, ೧೨೫). [ಸಂ.]

**ದೌರಿತಕ** (ನಾ). ಧೌರಿತಕ, ಆಸ್ಕಂದಿತ, ಪ್ಲುತ, ವಲ್ಗಿತ, ಚಾರುರೇಚಿತ ಗಳೆಂಬ ಐದು ವಿಧವಾದ ಕುದುರೆಯ ಓಟಗಳಲ್ಲಿ ಒಂದು : ಕುಕ್ಕುಲೋಟ : ಮೇಲಣ ರಾವುತನ ಭಾರವನು ಸಡ್ಡೆ ಮಾಡದೆ ಇದ್ದ ಸತ್ವದಿಂದ ಹುಱುತ ನಡೆಯಲದು ದೌರಿತಕವೆನಿಸಿಕೊಂಬುವುದು (ಅಶ್ವಟೀ. ೨೫-೧). [<ಸಂ. ಧೌರಿತಕ]

**ದೌರ್ಘಟ್ಯ** (ನಾ). ಕೆಟ್ಟ ಘಟನೆಯುಂಟಾಗುವಿಕೆ ; ದುರ್ಘಟನೆ ಯಾಗುವಿಕೆ : ಹೀನೋತ್ಪಾತದ ಸೂಚನಾರ್ಥಮೊ . . . ಬ್ರಹ್ಮಾಂಡ ಸೃಷ್ಟ್ಯಂತಮೋ ನಾನೋಪಾಯದೊಳೊಂದಿ ನೋಡಲಮಮಾ ದೌರ್ಘಟ್ಯ ಮಾಯ್ತಲ್ಲದೇ ನೂನಂ ಪೋಗದು (ಹಮ್ಮೀರ. ೭-೯). [ಸಂ.]

**ದೌರ್ಜನ್ಯ** (ನಾ). ೧. ಕೆಟ್ಟತನ; ದುಷ್ಟತನ. ೨. ಕೆಟ್ಟತನವುಳ್ಳ ವ್ಯಕ್ತಿ; ದುರುಳ ; ನೀಚ : ಅಮರೇಂದ್ರನಂದದಿಂ ಶರಚಾಪಗಳ ಧರಿಸಿ ದಿವ್ಯ ತೇಜೋಮಯದಿ ಮೆರೆವ ನರಪುಂಗವನ ನೋಡಿ ವಿಸ್ಮಿತರಾದರಾಗಲಾ ದೌರ್ಜನ್ಯರು (ವಂಶಾರಾ. ೩-೧೦-೧೨). [ಸಂ.]

**ದೌರ್ಜನ್ಯಕಾರಿ** (ನಾ). ಕೆಟ್ಟ ಕೆಲಸವನ್ನು ಮಾಡುವವನು ; ದುಷ್ಟ : ಸಜ್ಜನರು ಸಾಯಲೊಡೆ ನಿರ್ಜರರು ಮಱುಗುವರು ದೌರ್ಜನ್ಯಕಾರಿ ಸತ್ತರೆ ಹತ್ತಿದ್ದ ಕಜ್ಜ ಹಱಿದಂತೆ (ಸರ್ವಜ್ಞ. ೮೧೪). [ಸಂ. ದೌರ್ಜನ್ಯಕಾರಿನ್]

**ದೌರ್ಜ್ಞ್ಯತಂತ್ರ** (ನಾ). ಕಾರಣಾಗಮದ ಏಳು ವಿಧಗಳಲ್ಲಿ ಒಂದು : ಕಾರಣತಂತ್ರ ಪಾವನತಂತ್ರ ದೌರ್ಜ್ಞ್ಯ[ಪಾಠಾಂ. ದೌರ್ಘ್ಯ]ತಂತ್ರ ಮಹೇಂದ್ರ ತಂತ್ರ ಭೀಮತಂತ್ರ ಮಾರಣತಂತ್ರ ಈಶಾನತಂತ್ರವೆಂದು ಕಾರಣಾಗಮದ ಸಪ್ತಭೇದಂಗಳು (ವಿವೇಕ. ೭೦). [ಸಂ. ?]

**ದೌರ್ಬಲ್ಯ** (ನಾ). ೧. ಬಲಹೀನತೆ; ಅಶಕ್ತತೆ; ದುರ್ಬಲತ್ವ : ಅವನ ದೇಹದ ದೌರ್ಬಲ್ಯಕ್ಕೆ ಕೆಟ್ಟ ಚಟಗಳೇ ಕಾರಣ (ರೂಢಿ). ೨. ಚಾಪಲ್ಯ ; ಗೀಳು : ಅವರ ಅಷ್ಟೊಂದು ಸಣ್ಣ ದೌರ್ಬಲ್ಯವನ್ನು ಒತ್ತಿ ತೋರಿಸಲಿಕ್ಕೆ ಅವರಾರಿಗೂ ಮನಸ್ಸು ಬರುವುದಿಲ್ಲ (ಕಂಬಹು. ೭೧) ; ಅವರಿಗೂ ಕೆಲವು ದೌರ್ಬಲ್ಯಗಳು ಇವೆ. ಆದರಿಂದಾಗಿ ಅವರು ತುಂಬಿದ ಕಪ್ಪದಲ್ಲಿ ಬೀಳುತ್ತಾರೆ (ಕುಸುಮ. ೧೪೭) ; ತನ್ನ ಮೃದುಹೃದಯದೊಂದು ದೌರ್ಬಲ್ಯಮಂ ಗುಪ್ತಮಂ, ಕಳ್ಳದಗಿ ಕಾಣ್ಬನಂ ಕಾಣ್ಬ ಕಲಿಯಾತ್ಮದಮೃತಂ ಕಾಳಕೂಟಕ್ಕೆ ತಿರುಗುವೊಲ್ ಕ್ರೂರವಾಯ್ತಾ ಕರ್ಬುರೇಂದ್ರನ ಭುಗಿಲ್ ಕೋಪ ಕರ್ಕೋಟಕಂ (ಶ್ರೀರಾಮಾ. ೫೭೯-೧೨೭). [ಸಂ.]

**ದೌರ್ಭಾಗ್ಯ** (ನಾ). ೧. ಅದೃಷ್ಟಹೀನತೆ ; ದುರ್ದೈವ : ಮಕ್ಕಳು ಸೌಭಾಗ್ಯಗಳೂ ಆಗಬಹುದು, ದೌರ್ಭಾಗ್ಯಗಳೂ ಆಗಬಹುದು (ಶಾಂತಲಾ. ೧೯೫). ೨. ಬಡತನ ; ದಾರಿದ್ರ್ಯ : ಬಡವನ ದೌರ್ಭಾಗ್ಯವಾತನ ತುಳಿವುದು ಪಾತಾಳದಿಂದತ್ತ ತಳಕೆ (ಇಂಚಾಪ. ೧೪೭-೭೫). [ಸಂ.]

**ದೌರ್ಮದ್ಯ** (ನಾ). ಕುಡಿದು ಅಮಲೇರಿ ಮಾಡುವ ರಂಪ. [ಸಂ.]

**ದೌರ್ಮನಸ್ಯ** (ನಾ). ದುರುದ್ದೇಶವನ್ನು ಹೊಂದಿರುವ ಮನಸ್ಸಿನ ಸ್ಥಿತಿ : ದುರ್ಯೋಧನ ಮಾಡಿದವರ ದೌರ್ಮನಸ್ಯದಂತೆ ಏನೋ ದುಗುಡ ಎಲ್ಲೆಲ್ಲೂ ದುಮುದುಮುಗುಟ್ಟುತ್ತಿದೆ (ಮಹಾಅ. ೨೯೫). [ಸಂ.]

**ದೌರ್ಹೃದ** (ನಾ). ೧. ಹಗೆತನ; ವೈರ; ದ್ವೇಷ; ಶತ್ರುತ್ವ. ೨. ಗರ್ಭ; ಬಸಿರು. ೩. ಗರ್ಭಿಣಿಯರಿಗೆ ಉಂಟಾಗುವ ವಿಶೇಷವಾದ ಬಯಕೆ. ೪. ಬಯಕೆ; ಅಭಿಲಾಷೆ. 'ದೋಹದ' ಪರ್ಯಾ. [ಸಂ.]

**ದೌಲಚ್ಛಾದ**, ದೌಲತ್‌ಜಾದಾ (ನಾ). ನರ್ತಕಿಯರು ಗಣ್ಯವ್ಯಕ್ತಿಗಳಿಗೆ ಗೌರವ ಸಲ್ಲಿಸಲು ಜಯಕಾರದೊಡನೆ ಮಾಡುವ ಸಲಾಮು : ಅವಳು ಅದೇ ದಿವಸ ಗೆಜ್ಜೆಕಟ್ಟಿ ಬಂದ ಬೀಗರಿಗೆ 'ದೌಲಚ್ಛಾದ' ಮಾಡಿ . . . ನಿನ್ನ ಮಗಳು ನಿನ್ನ ಹೆಸರು ವಿಚಾರಿಸುತ್ತಾಳೆ ಎನ್ನಿಸಿದ್ದಳು (ಹಹಸ. ೫೨) ; ಪ್ರತಿಯೊಬ್ಬರ ಮುಂದೆ ನಿಂತು ಹರಿವಾಣ ಮುಂದೆ ಹಿಡಿದು ಬಲಗೈಯಲ್ಲಿ 'ದೌಲಚ್ಛಾದ' ಎಂದು ನಮಸ್ಕರಿಸಿದ್ದಾಳೆ ಆಕೆ (ಬಣ್ಣಮಾ. ೧೩). **ದೌಲತ್‌ಜಾದಾ** : ಶೀನಮಯ್ಯನು ಹದಿನೆಂಟು ಬಾರಿ 'ಶೀನಮಯ್ಯ ಮಹಾರಾಜಕೊ ದೌಲತ್‌ಜಾದಾ' ಮಾಡಿಸಿಕೊಂಡನು (ಮರುಮ. ೧೬೪). [←ಅರ. ಮರಾ. ದೌಲತ್‌ಜಾದಾ, ದೌಲತ್‌ಜ್ಯಾದಾ]

**ದೌಲತ್** 'ದೌಲತ್ತು' ನೋ.

**ದೌಲತ್‌ಜಾದಾ** 'ದೌಲಚ್ಛಾದ' ನೋ.

**ದೌಲತ್ತು**, ದವಲತ್, ದವಲತ್ತು, ದೌಲತ್ (ನಾ). ೧. ಐಶ್ವರ್ಯ ; ಸಂಪತ್ತು; ಸಿರಿ: ದೊರೆಗಳವರ ಖುದ್ದು ದೌಲತ್ತು (ಮಹಾಮ. II, ೩೮); ನಿಮಗೆ ಪ್ರಾಣ, ಮಾನ (ಮರ್ಯಾದೆ), ದೌಲತ್ತು, ಇಜ್ಜತ್ತು ಮುಂತಾದವು ಹೆಚ್ಚಾಗಲಿ (ದೇವೀಚಾ. ೮೪). ೨. ವೈಭವ ; ಆಡಂಬರ ; ಠೀವಿ ; ದೊಡ್ಡಸ್ತಿಕೆ : ಏನ್ರಿ ಅಂತಹ ದೌಲತ್ತು ಬಂದಿರೋದು ನಿಮಗೇ ? ಅಂತ ಕೇಳ್ತೀನಿ ! (ಹನ್ನೊಂದ. ೮೩). ೩. ಅಧಿಕಾರ ; ಆಳ್ವಿಕೆ ; ಒಡೆತನ ; ದೊರೆತನ ; ಪ್ರಭುತ್ವ : ದೌಲತ್ತು ಕಂಪನಿಸರ್ಕಾರದ ಸುಫರ್ದಾಯಿತಂ (ಕಂಠೀರ. ೪೩); ಹಿಂದಿನ ಜಗದ್ಗುರುಗಳವರು . . . ಬಾಳೆಹಳ್ಳಿ ದೌಲತ್ತು ಉಜ್ಜಯಿನಿ ಸಂಪತ್ತು ಎಂಬ ನಾಣ್ಣುಡಿಯನ್ನು ಸಾರ್ಥಕಗೊಳಿಸಿ ಸತ್ಕೀರ್ತಿವಂತರಾಗಿದ್ದರು (ಗುರುದ. ೦೯). **ದವಲತ್** : ೧. ದವಲತ್– ದವಲತ್ತು (ಹೊನುಗ. ೧೧೨). **ದವಲತ್ತು** : ೧. ದನಗಳೇನು ಧನವಲ್ಲ ದವಲತ್ತೂ ಅಲ್ಲ (ಅಶೋಕ. ೮೭) ; ರೂಪಾಯಿ ದವಲತ್ತಿಗೆ ಬೆಲೆಯೇ ಹೊರತು ಮನುಷ್ಯರಿಗ್ಯಾರಯ್ಯಾ ಬೆಲೆ ಕಟ್ತುತ್ತಾರೆ (ಸಾಹೇಬ್. ೧೪೨). ೨. ಠಾಕುಟೀಕಿನ ಕಟ್ಟು ಅದಕೆ ಚಿನ್ನದ ಕಟ್ಟು ಸಾಕೊ ಅಣ್ಣಯ್ಯ ದವಲತ್ತು (ಹಳ್ಳಿಯ. ೧೩೧) ; ಶ್ರೀಮಂತಿಕೆಯ ದವಲತ್ತು ಮತ್ತು ಸಾರ್ವಭೌಮ ವಂಶದೊಡನೆಯ ಸಂಬಂಧ, ಇದರಿಂದಾಗಿ ಅವರ ಶೀಲ ಮತ್ತಷ್ಟು ಹದಗೆಡುತ್ತಿದೆ (ಪುನರು. ೬೨) ; ದವಲತ್ತೇನೆ ಬೂಬಿ ಅಂದರೆ ಶೇಕದಾರ ನನ್ನ ಅಳಿಯ ಅಂದ್ಲಂತೆ (ಗಾದೆ). ೩. ಸರಕಾರದ ಅಹಮದಿ ದವಲತ್ತಿಗೆ ಶ್ರೇಯಸ್ಸು ಅಪೇಕ್ಷಿಸಿಕೊಂಡು ಸುಖದಲ್ಲಿಯಿರೋದು (ಎಕ. IX, ದೊಡ್ಡಬ. ೧೨-೫ ; ಸು. 1785) ; ನಮ್ಮ ಮಗನಿಗೆ ಪೆರಿಯಾಪಟ್ಟಣದ ದವಲತ್ತಿನಲ್ಲಿ ನಿಮ್ಮ ಪೊಡಂಬಡಿಕೆಯಿಂದ ಕೂರಿಸಿ (ರಾಜೇಂದ್ರ. ೩) ; ಶ್ರೀರಂಗಪಟ್ಟಣದ ಬೊಕ್ಕಸಕ್ಕೆ ಬಂದ ಹಣವನ್ನು ದವಲತ್ತಿಗೆ ಎಂದು ನಿಷ್ಕರ್ಷೆ ಮಾಡಿದರು (ಜಾಮುಮ. I, ೦೨೪) ; ಇಲ್ಲಿ ಏನಿದ್ದರೂ ಔರಂಗಜೇಬನ ಮಹತ್ವ– ಅವನ ವೈಭವ, ದವಲತ್ತು, ಅಂತಃಪುರ ಇವುಗಳ ವರ್ಣನೆ (ಬಂಕಿಮ. ೨೫೭) ; ಅವನಿಗೂ ದವಲತ್ತು, ಆಟಾಟೋಪ ಮಾಡಲಿಕ್ಕೆ ಬರುತ್ತದೆ (ಸಾಹೇಬ್. ೩೩೭). **ದೌಲತ್** : ೨. ಒಳ್ಳೆಯ ದೌಲತ್ ನಡೆಸಿದವರಂತೆ ತಮ್ಮ ಕಾಲದಲ್ಲಿ (ಮರಳಿ. ೮೯). ೩. ಏನು ಮೋಸವಾಯಿತೋ ಸುಲ್ತಾನ ದೌಲತ್ ಯಾರ ಪಾಲಿಗೆ ಸೇರಿತೋ (ನಾಪದ. ೨೫).

**ದೌಲತ್ತು ಮಾಡು, ದವಲತ್ತು ಮಾಡು, ದೌಲತ್ ಮಾಡು** = ಆಡಳಿತ ನಡೆಸು ; ಅಧಿಕಾರ ಚಲಾಯಿಸು : ಎಲ್ಲಾರೂ ನನ್ನ ಮೇಲೆ ದೌಲತ್ತು ಮಾಡ್ತಾರೆ (ಅನ್ನಾವ. ೯೧) ; ಶ್ರೀರಂಗಪಟ್ಟಣದಲ್ಲಿ ದವಲತ್ತು ಮಾಡಿದ ನವಾಬ ಹೈದರಲ್ಲಿಖಾನಬಹದರವರ ದರಬಾರಿನ ವರ್ತಮಾನದ ವಿವರ (ಹೈದರ. ೩೯) ; ನಮ್ಮೂರಿನಲ್ಲಿ ಒಬ್ಬ ಫ್ರೆಂಚ್‌ಮನುಷ್ಯ ದೌಲತ್ ಮಾಡ್ತಾ ಇದ್ದಾನೆ (ಪುನರು. ೩೧೪).

[ ←ಅರ.ಪಾರ. ಹಿಂ. ದೌಲತ್ ; ಮರಾ. ದೌಲತ್, ದವಲತ್ ]

**ದೌವಾರಪಾರಿಕ** (ನಾ). (?): ಚಿತ್ರನ್ಯಸ್ತ ದೌವಾರಪಾರಿಕಾಪ್ರಕಾಶದಿಂದೆಲೆ ಮಿಡುಕದೆ ಮರವಟ್ಟು ನಿಂದ ಮಹಾಪ್ರಾತಿಹಾರ್ಯರುಮಂ (ವರ್ಧಮಾ. ೫-೯ ವ). [ < ದ್ವಾರ ]

**ದೌವಾರಿಕ** (ನಾ). ಬಾಗಿಲುಕಾಯುವವನು ; ದ್ವಾರಪಾಲಕ ; ಪ್ರತೀಹಾರ : "ದ್ವಾಸ್ಥಃ, ದೌವಾರಿಕಃ ... ದ್ವಾರಪಾಲಃ, ಪ್ರತೀಹಾರಃ – ಈ ೮ ಪಡಿ(ಯ)ಹಾರಂ" (ಹಲಾಯು. ೭೦-೨೬೦) ; ಮಕರ ತೋರಣಾಳಂಕೃತ ಜ್ಯೋತಿರಮರದೌವಾರಿಕಪರಿಪಾಳಿತ . . . ಮಂಗಳ ನವನಿಧಿಸಮನ್ವಿತ ಜಾತರೂಪಗೋಪುರಾಭ್ಯಂತರ ಮಹಾವೀಥೀಮಧ್ಯದೊಳ್ (ಆದಿಪು. ೧೧-೨೩ ವ) ; ಖೇಚರಂ ಬಂದು ದೌವಾರಿಕನಿವೇದಿತ ವೃತ್ತಾಂತನಾಗಿ (ಶಾಂತಿಪು. ೩-೧೮ ವ) ; ಸಮಯವಿದಸಮಯವೆಂದೆನ್ನ ದಂತಃಪುರದ ದೌವಾರಿಕರ್ತಡೆಯದಿರಲಿದೇ ವರವೆಂದನು (ರಾಘಶ. ೯-೫೦) ; ಒಳಗೆವೊಗಲೆಳಸೆ ದೌವಾರಿಕರು ತಡುಬಿದೊಡೆ [ಪಾಠಾಂ. ಸಿದರೆ ಕಾವಾಳು ಗಳು ತಡುಬೆ] ಬಳಸಿ ಲಿಂಗಾಲಯವ . . . ಪ್ರದಕ್ಷಿಣ ಬಂದುದಾ ಶುನಕನು (ಗುರುಚಾ. ೭-೮೪). [ ಸಂ. ]

**ದೌವಾರಿಕೆ** (ನಾ). ಬಾಗಿಲು ಕಾಯುವವಳು; ದ್ವಾರಪಾಲಕಿ : ದೌವಾರಿಕೆ ಬಣ್ಣಿಸಿದೊಡಮಾ ವಧು ತನ್ನ ನೃಪನನುಜದೆ ಪೋದಳ್ ಸಿರಿಯುಂ ಜೀವದ ಮತಿ ತರೆ ಪುಣ್ಯಾಭಾವದಿನದು ನೆಲಸಿ ತೊಲಗಿ ಪೋದಂತಾಗಳ್ (ಶಾಂತಿಪು. ೫-೧೩೭); ಅನತಿ ದೂರದೊಳಿರ್ದ ದೌವಾರಿಕೆಯುಂ ವೈಶಂಪಾಯನ ನೊಡಗೊಂಡು ಬರ್ಪುದೆಂದಂ ತದ್ವೃತ್ತಾಂತಾಕರ್ಣನ ಕೌತುಕದಿಂ ಬೆಸಸೆ (ಕಾದಂಪೂ. ೮೧). [ ಸಂ. ದೌವಾರಿಕಾ ]

**ದೌಷ್ಟ್ಯ** (ನಾ). ದುಷ್ಟತನ; ಕೆಡುಕಂ : ಚಾರುದೃಶ್ಯಂಗಳಿಂ ಪ್ರೀತಿ ಹೃದಯ ವಿಕಾಸ ಕ್ರೂರ ದೌಷ್ಟ್ಯಂಗಳಿಂ ವೀರಾನುಕಂಪ . . . ದಾರಿಯುದ್ಧಾರಕವು (ಮಂಕುಕ. ೪೫೭) ; ಅತಿಥಿದೇವರಂತೆ ಪೂಜೆಯನ್ನು ಗ್ರಹಿಸಿದವನ ದೌಷ್ಟ್ಯವನ್ನು ಎಣಿಸಬಾರದು (ಮಹಾಅ. ೧೮) ; ಶ್ರೀರಾಮಚಂದ್ರಂ, ವಿಭೀಷಣಶ್ರೀಬುದ್ಧಿ ತಾಂ ಮಂತ್ರಿಯಾಗಿರೆ . . . ದಾನವಕುಲದ ದೌಷ್ಟ್ಯಕೆ ದವಾಗ್ನಿ ತಾನಾಗಿ, ನಮ್ಮನುಯ್ವನ್ ದೇವಿ ಸೀತೆಯ ಪತಿವ್ರತಾಧರ್ಮ ಧವಳ ಅರಾಕ್ಷಸಾಲಯಕೆ ! (ಶ್ರೀರಾಮಾ. ೭೪೪-೧೮೭). [ ಸಂ. ]

**ದೌಹಿತ್ರ** (ನಾ). ಮಗಳ ಮಗ ; ಮೊಮ್ಮಗ : "ಮಗಳ ಮಗಂ ದೌಹಿತ್ರಂ" (ವಸ್ತುಕೋ. ೫೫-೨೨) ; "ಮಗಳ ಸುತ ದೌಹಿತ್ರನೆಂದೆನಿಕ್ಕುಂ" (ಮಂಗರಾ. ೯೩-೧೪) ; ಕವಿಸುಮನೋಬಾಣನ ಯಾದವ ಕಟಕಾಚಾರ್ಯನೆನಿಸುವ ದೌಹಿತ್ರನೆ ನಾಂ ಕವಿ ಕೇಶವನೆಂ ಯೋಗಿಪ್ರವರ ಚಿದಾನಂದ ಮಲ್ಲಿಕಾರ್ಜುನ ಸುತನೆಂ (ಶಮದ. ೨ ಪೀಠಿಕೆ). [ ಸಂ. ]

**ದೌಹೃದ** (ನಾ). ೧. ಹಗೆತನ ; ವೈರ ; ದ್ವೇಷ ; ಶತ್ರುತ್ವ. ೨. ಗರ್ಭ ; ಬಸಿರಂ. ೩. ಗರ್ಭಿಣಿಯಾದ ಹೆಂಗಸಿನ ಬಯಕೆ : "ಗರ್ಭಿಣಿಯರಪ್ಪ ಕಾಮಿನಿಯರ್ ಬಯಸುವ ಬಯಕೆ ದೋಹಲಂ ದೌಹೃದಮುಂ" (ವಸ್ತುಕೋ. ೫೪-೧೪) ; ತತ್ಕಾಂತೆಗೆ ನೆಗಬ್ದುವು ಗರ್ಭಸ್ಥನುತ್ಸಾಹಮಂ ತೋಳ್ವಲಮುಂ ಸಾಮ್ರಾಜ್ಯಮಂ ಸೂಚಿಸುವುವೊಲತಿ ಚೋದ್ಯಂಗಳೀ ದೌಹೃದಂಗಳ್ (ಆದಿಪು. ೮-೩೩). ೪. ಬಯಕೆ; ಅಭಿಲಾಷೆ. "ದೋಹಳಂ ದೌಹೃದಂ . . . ಬಯಕೆಗಕ್ಕು ನಾಮಂ" (ಮಂಗರಾ. ೯೦-೭). [ ಸಂ. ]

**ದ್ಯಾಸ** 'ಧ್ಯಾಸ' ನೋ.

**ದ್ಯು** (ನಾ). ೧. ಹಗಲು ; ದಿವಸ : "ದಿವಸಃ, ದಿವಾ, ದಿನಂ, ದ್ಯುಃ, ಅಹಃ, ವಾಸರಃ, ಘಸ್ರಃ—ಈ ೭ ಹಗಲ್" (ಹಲಾಯು. ೧೮-೧೦೭) ; "ಅಹ ದ್ಯು ದಿನಂ ದಿವಂ ಘಸ್ರಮಾ ದಿವಸಮೆನೆ ಹಗಲ ಪೆಸರೆನಿಕ್ಕುಂ" (ಮಂಗರಾ. ೩೦-೬). ೨. ಆಕಾಶ ; ಗಗನ: "ನಭಃ . . . ದ್ಯೌಃ, ವಿಹಾಯಸಃ, ಗಗನಂ, ದ್ಯುಃ—ಈ ೧೫ ಆಕಾಶಂ" (ಹಲಾಯು. ೨೨-೧೩೬). ೩. ಕಾಂತಿ; ಪ್ರಕಾಶ. ೪. ಸ್ವರ್ಗ: ದ್ಯುವಿಂ ಪಿಂಚಿತ್ತುವನ ಸಂಕಲ್ಪಾಶ್ವದ ಮನೋರಥಂ (ಸೌನಂದ. ೧೨-೫). [ ಸಂ. ]

**ದ್ಯುಚರ** (ನಾ). ೧. ಆಕಾಶದಲ್ಲಿ ಸಂಚರಿಸುವವನಂ ; ಗಂಧರ್ವ ; ವಿದ್ಯಾಧರ : ಖೇಚರನಿಶಾಚರದ್ಯುಚರಸಂಚಾರಮಲ್ಲದೆ ಭೂಚರ ಗೋಚರ ಮಲ್ಲೆಂದು (ಸುಕುಮಾ. ೭-೧೮ವ) ; ದ್ಯುಚರಖಚರಾವನೀಚರ ನಿಚಯಂ ನಿಚಿತಪ್ರಮೋದಭರದಿಂ ಪುರದೊಳ್ . . . ನರ್ತಿಸುತುಮಿರ್ದುದತಿ ಕೌತುಕದಿಂ (ವರ್ಧಪು. ೧೪-೫೭). ೨. ಆಕಾಶದಲ್ಲಿ ಚರಿಸುವಂಥದು ; ಗ್ರಹ. ೩. ಪಕ್ಷಿ ; ಹಕ್ಕಿ. ೪. ದೇವತೆ. [ ಸಂ. ]

**ದ್ಯುತಿ** (ನಾ). ೧. ಬೆಳಕಂ ; ಕಾಂತಿ ; ಪ್ರಕಾಶ ; ಪ್ರಭೆ : "ಬೆಳಗುಂ ದ್ಯುತಿಯುಂ" (ವಸ್ತುಕೋ. ೧೩೯-೭೭) ; "ಕರಮುಸ್ರಮಂಶುವಸುರೋಚಿ ದೀಧಿತಿ . . . ದ್ಯುತಿ ಪ್ರಗ್ರಹಂ ದೀಪ್ತಿ . . . ಶೋಚಿ ಘೃಣಿಯೆ ಪ್ರದ್ಯೋತವಾ ರಶ್ಮಿ" (ಮಂಗರಾ. ೧೧-೩) ; ತದ್ಯೋಗಿಫಣಾಮಣಿ ದ್ಯುತಿಯ ಕಟ್ಟಲೆಯಂ ತಲೆದೋಱಲೀಯದಾ ನಾಗರ ನಾಗಕನ್ನೆಯರ ರೂಪುಗಳಿಟ್ಟಳವಾಗೆ (ಪಂಪಭಾ ೪-೧೭) ; ಮೃಡಹಾಸದ್ಯುತಿಯಂತೆ ಕಂತು ಶರದಂತಿರ್ದಚ್ಚವೆಳ್ದಿಂಗಳಂ ಕಡುದಣ್ಪಿಂಗೆಡೆಗೊಂಡಿದೊಂದು ಬಿಸಿಲಿಂದಾಶ್ಚರ್ಯದಿಂದಂ ಜನಂ ನಡೆ ನೋಡುತ್ತೆ (ಜಗವಿ. ೪-೭೪) ; ಕಗ್ಗತ್ತಲೆಯ ಕಲ್ಗಬ್ಬಮಂ ಸೀಳ್ದು ಕೋಟಿಮಿಂಚುಗಳೊಮ್ಮೆ ಮಿಂಚಿದುವೆನಲ್ಕೆ ದ್ಯುತಿ ಪೊಣ್ಮಿದುದು (ಶ್ರೀರಾಮಾ. ೧೩-೩೩೯). ೨. ಕದಿರಂ ; ಕಿರಣ ; ರಶ್ಮಿ : ಚೆಲ್ವಿಂದಿಟ್ಟಳಮೆನಿಸಿರ್ದುವರುಣಚರಣದ್ಯುತಿಗಳ್ (ಕಾದಂಪೂ. ೪೫). ೩. ಸೌಂದರ್ಯ : ಅತುಳ ಸ್ವಚ್ಛಾಂಬುವಿಂ ಮಜ್ಜನಕೆಱೆದು ನವೀನ ಪ್ರಸೂನಪ್ರತಾನದ್ಯುತಿ ಸುತ್ತಲ್ ಸುತ್ತಿ (ರಕ್ಷಾಶ. ೭೪). [ ಸಂ. ]

**ದ್ಯುತಿಗರೆ** (ಕ್ರಿ). ಬೆಳಕನ್ನು ಬೀರಂ ; ಹೊಳಪು ನೀಡಂ ; ಕಾಂತಿಯ ನ್ನುಂಟುಮಾಡಂ : ದ್ಯುತಿಗರೆವ ಮಣಿಕಂಕಣಗಳಿಟ್ಟು (ನವಮೋ. ೨೫-೨೯).
[ ದ್ಯುತಿ + ಕರೆ$_2$ (<ಕಱೆ$^1_1$) ]

**ದ್ಯುತಿಗುಂದು** (ಕ್ರಿ). ಕಾಂತಿಹೀನವಾಗಂ; ನಿಸ್ತೇಜಗೊಳ್ಳು; ಮಂಕಾಗಂ: ದ್ಯುತಿಗುಂದಿದರ್ಕನು ಪಡುಗಡೆ ನೋಡಿರಿ ಮುಳುಗುತಲಿರುವನಂ ಭರದೆ (ಇಂಚಾಪ. ೧೧೧-೯೫). [ ದ್ಯುತಿ + ಕುಂದು$_1$ ]

**ದ್ಯುತಿಮಾಲಿ** (ನಾ). ಕಿರಣಗಳ ಮಾಲೆಯನ್ನುಳ್ಳವನಂ ; ಸೂರ್ಯ : ಮಿಕ್ಕಂ ವಿಷವಹ್ನಿಯಿಂ ವಿಳಯಕಾಲಜ್ವಾಲೆಯಿಂ ಭೋಗರತ್ನದ ಚೆಲ್ವಿಂ ದ್ಯುತಿಮಾಲಿಯಿಂ ಮುಸಕದಿಂ ದಂಭೋಳಿಯಿಂ ಕಾಳಿಯಂ (ಜಗವಿ. ೩-೮೩).
[ ಸಂ. ದ್ಯುತಿಮಾಲಿನ್ ]

**ದ್ಯುತಿವೀಱು** (ಕ್ರಿ). ಬೆಳಕನ್ನು ಬೀರಂ ; ಕಾಂತಿಯನ್ನು ಸೂಸಂ ; ಪ್ರಕಾಶಿಸಂ : ದ್ಯುತಿವೀಱುವ ಮುತ್ತಿನ ಚಳಕಗೆಯಂ ಯುವತಿಯ ನಳಿತೋಳ್ಗೆ ಕಟ್ಟಿದಳ್ (ಜಗವಿ. ೧೧-೧೧೭). [ ದ್ಯುತಿ + ಬೀಱು$_1$ ]

**ದ್ಯುತಿಸಂಶ್ಲೇಷಣ** (ನಾ). [ವಿಜ್ಞಾ] ಸಸ್ಯಗಳಂ ಸೂರ್ಯನ ಬೆಳಕನ್ನು ತೆಗೆದುಕೊಂಡಂ ಅದರ ಮೂಲಕ ತನಗೆ ಅಗತ್ಯವಾದ ಶಕ್ತಿಯನ್ನು ಉತ್ಪಾದಿಸಿಕೊಳ್ಳುವ ಕ್ರಿಯೆ ; ಬೆಳಕನ್ನು ಸಂಯೋಜಿಸುವಿಕೆ ; ಕಿರಣಸಂಯೋಜನೆ : ಆ ಶಕ್ತಿ ಸಸ್ಯಗಳು ದ್ಯುತಿಸಂಶ್ಲೇಷಣ (Photosynthesis) ದಿಂದ ತಯಾರಿಸಿದ ಆಹಾರದಲ್ಲಿ ಶೇಖರಿಸಿದ ಸೂರ್ಯಶಕ್ತಿಯಿಂದ ಒದಗುತ್ತದೆ (ಕೀಟಬಿ. ೨೪). [ ದ್ಯುತಿ + ಸಂಶ್ಲೇಷಣ ]

**ದ್ಯುತಿಸಂಶ್ಲೇಷಣೆ** (ನಾ). = ದ್ಯುತಿಸಂಶ್ಲೇಷಣ : ದ್ಯುತಿಸಂಶ್ಲೇಷಣೆ (ಫೋಟೊಸಿಂತೆಸಿಸ್) ಉಸಿರಾಡುವಿಕೆ, ನೀರು ಮತ್ತು ಲವಣಗಳನ್ನು ಬೇರುಗಳ ಮುಖಾಂತರ ಹೀರುವುದು, ಇತ್ಯಾದಿ ಶರೀರದ ಕ್ರಿಯೆಗಳಿಗೆ ಉಷ್ಣಾಂಶ ಆವಶ್ಯಕ (ಕವಿಕೋ. I, ೧೦). [ ದ್ಯುತಿ + ಸಂಶ್ಲೇಷಣೆ ]

**ದ್ಯುತ್ತು** (ನಾ). ೧. ಕಾಂತಿ ; ಪ್ರಕಾಶ : ಉಗಾಗಮಂ ಬಂದಲ್ಲಿ ದ್ವಿತ್ವ ಮುಂಟು. ಅಪ್, ವಿಯತ್, ಸಂಯತ್, ವಿದ್ಯುತ್, ಜಗತ್, ದ್ಯುತ್ . . . ತಟಿತ್–ಇವಾದಿಯಾದುವು ಅಬಾದ್ಯಾಕೃತಿಗಣಂ (ಶಮದ. ೮೭ ಅಡಿಟಿ); ಅಪ್ ವಿಯತ್ . . . ದ್ಯುತ್ . . . ತಟಿತ್ ಇತಿ ಅಬಾದಿರಾಕೃತಿಗಣಃ (ಶಬ್ದಾನು. ೧೩೫ ಪ್ರಯೋ). ೨. ಕದಿರು ; ಕಿರಣ ; ರಶ್ಮಿ. [ ಸಂ. ದ್ಯುತ್ ]

**ದ್ಯೂನ** (ನಾ). [ಜ್ಯೋತಿ] ಲಗ್ನದಿಂದ ಏಳನೆಯ ರಾಶಿ, –ಸಪ್ತಮಸ್ಥಾನ: ದ್ವಾದಶರಾಶಿ ರಿಃಫಮದು ಜಾಮಿತ್ರ ದ್ಯೂನ ದ್ಯೂನವೆಂದು ವಲಂ ಸಪ್ತಮ ರಾಶಿ ಛಿದ್ರಮದು ಲಗ್ನಕೃಷ್ಣಮಸ್ಥಾನಕಂ(ಜಾತಕ.೧–೩೫). 'ದ್ಯೂನ'ಪರಾ. [ ಸಂ. ]

**ದ್ಯೂನಗೃಹ** (ನಾ). = ದ್ಯೂನ : ದ್ಯೂನಗೃಹವಂದು ಪುಂರಾಶಿಯಾದಂದು ಪಾಪಗ್ರಹಮಂತಾ ರಾಶಿಯಂ ನೋಟ್ಕೊಡೆ ಕೃಶತನುವಕ್ಕುಂ (ಜಾತಕ. ೨೦–೮). [ ದ್ಯೂನ + ಗೃಹ ]

**ದ್ಯುನದಿ** (ನಾ). ಸ್ವರ್ಗಲೋಕದ ನದಿ ; ದೇವಗಂಗೆ ; ಸುರನದಿ : ಸಜ್ಜನಾಧಾರನಿರ್ದಂ ದ್ಯುನದೀಫೇನಪ್ರತಾನಪ್ರಥಿತಪೃಥುಯಶಂ ಭಾರತೀ ಕರ್ಣಪೂರಂ (ಪಂರಾಮಾ. ೭–೧೭೦) ; ದ್ಯುನದೀಸಮ್ಮೋಹದಿಂದಂ ಜಡೆಗೆದೆ ಲುವಮಾವಲ್ಲಭಂ ನಾಡೆಯುಂ ಸಾರ್ವಿನೆಗಂ . . . ಮುದ್ರಿಸಿದುದು ಜಗಮಂ ಚಾರುಚಂದ್ರಾಂಶುಜಾಲಂ (ಚಂದ್ರಪು. ೮–೪೦ ವ). [ ಸಂ. ದ್ಯುನದೀ ]

**ದ್ಯುನದೀಜ** (ನಾ). ಗಂಗೆಯ ಮಗ ; ಭೀಷ್ಮ : ದ್ಯುನದೀಜಂ ಕುಡೆ ತೋಯಮಂತ್ರಬಲದಿಂ ಪೊಕ್ಕಿರ್ದಪಂ ಕಾಲವಂಚನೆಗೆಯ್ಕೊಳ್ಕನಂ (ಗದಾಯು. ೭–೩೮). [ ಸಂ. ]

**ದ್ಯುನದೀನಂದನ** (ನಾ). = ದ್ಯುನದೀಜ : ಪೆಂಪಂಬರಾಭೋಗಮಂ ದ್ಯುನದೀನನ್ದನನಂ ವಿನೂತಚರಿತಂ ಕೀಳ್ಮಾಡೆ ಮೇಲ್ಮಾಡಿದಂ (ಎಕ. VI, ಕಡೂರು. ೫೦–೩೦ ; 1169). [ ಸಂ. ]

**ದ್ಯುನದೀಶ** (ನಾ). ಗಂಗೆಯ ಒಡೆಯ, –ಪತಿ ; ಶಿವ : ದ್ಯುನದೀಶಂ ಚಿತ್‌ಪ್ರಕಾಶಂ ಶರಣಜನಸದಾತೋಷನಾನಂದಕೋಶಂ (ಪಂಪಾಶ. ೮೦). [ ದ್ಯುನದಿ + ಈಶ ]

**ದ್ಯುಮಣಿ** (ನಾ). ಗಗನದ ರತ್ನ ; ದಿನಮಣಿ ; ಸೂರ್ಯ : "ರವಿ ಮಾರ್ತಾಂಡಂ ... ದ್ಯುಮಣಿ ತರಣಿ ಸಪ್ತಾಶ್ವನಾದಿತ್ಯನಕ್ಕುಂ" (ವಸ್ತುಕೋ. ೧೧–೬೪) : ಧರ್ಮಾಂಭೋಜಷಂಡದ್ಯುಮಣಿ ಬುಧಜನ ಪ್ರೀಣನಾಗ್ರೇಸರ ಗ್ರಾಮಣಿಯಾದಂ (ಅಜಿಪು. ೧೨–೧೫) ; ದ್ವಿಜನಂಶಾ[ಂಭೋದ]ಮಾರ್ಗ್ಗ ದ್ಯುಮಣಿ ಸಕಳಸಾಮನ್ತ ಚ[ಕ್ರಾಧಿ]ನಾಥಂ (ಕಇಅ. ೫೦–೪೦–೩೭ ; ಸು. 11ನೆಯ ಶತ) : ದ್ಯುಮಣಿಗೆ ಕಟ್ಟಿಲೆ ಶರಭಕ್ಕೆ ಮೃಗೇಂದ್ರ ಸೆಡೆವ ಮಾಟ್ಕೆಯಿಂ ಸೆಡೆದನಿವಂ ನಿಮಗೆ (ಪಂರಾಮಾ. ೭–೧೧೪) ; ದ್ಯುಮಣಿ ಯೊದೆದರೆ ತರಹರಿಸುವುದು ತಿಮಿರರಾಜನ ದೇಹವೀ ವಿಕ್ರಮದರಿದ್ರ ರಿಗಳುಕಿದರೆ ಬಳಿಕವ ಧನಂಜಯನೆ (ಕುಮ್ಮಾದ್ರೋ. ೧೪–೩೨) ; ದ್ಯುಮಣಿ ಕರ್ಣದ್ಯುಮಣಿ ಸಹಿತಸ್ತಮಿಸೆ ಕಮಲಿನಿ ಕೌರವನ ಮುಖಕಮಲ ಬಾಡಿತು ತಿಮಿರ ಹೆಚ್ಚಿತು ಶೋಕತಮದೊಡನೆ (ಕುಮ್ಮಾಕ. ೨೭–೩೦) ; ದ್ಯುಮಣಿ ಯಲ್ಲಮ ಸಿಕ್ಕದಾದನು ತಮದ ಮಾಯೆಗೆ (ಪ್ರಭುಲೀ. ೮–೫). [ ಸಂ. ]

**ದ್ಯುಮಣಿದ್ಯುತಿ** (ನಾ). ಸೂರ್ಯನ ಬೆಳಕು : ದ್ಯುಮಣಿದ್ಯುತಿ ಕುಮುದಕ್ಕಂ ಕಮಲಕ್ಕಂ ಮಾಡುವಂತೆ ಸಂಕೋಚ ವಿಕಾಸಮನೇಕ ಸಮಯದೊಳ್ ಶತ್ರುಮಿತ್ರಮಂಡಲಕೆ ಮಾಟ್ಪುವಾತನ ತೇಜಂ (ಮಲ್ಲಿಪು. ೩–೧೬). [ ದ್ಯುಮಣಿ + ದ್ಯುತಿ ]

**ದ್ಯುಮಣಿಪ್ರದ್ಯೋತ** (ನಾ). =ದ್ಯುಮಣಿದ್ಯುತಿ : ದ್ಯುಮಣಿಪ್ರದ್ಯೋತದಿಂ ಪದ್ಮಿನಿಗೆ ನಗೆಯುಮಾನಂದಮುಂ ಲೀಲೆಯುಂ ಶ್ರೀಯುಮಂನೂನಂ. . . ಪುಟ್ಟುವಂತೆ (ಅರ್ಧನೇ. ೪–೭೫). [ ದ್ಯುಮಣಿ + ಪ್ರದ್ಯೋತ ]

**ದ್ಯುಮಣಿಮಂಡಲ** (ನಾ). ಸೂರ್ಯನ ಬಿಂಬ ; ಭಾನುಮಂಡಲ : ತಮದ ಗಂಟಲನೊಡೆದ ಹರುಷ ದ್ಯುಮಣಿಮಂಡಲದಂತೆ ಜೀವಭ್ರಮೆಯು ಕವಚವ ಕಳೆದು ಹೊಳೆಹೊಳೆವಾತ್ಮನಂದದಲಿ . . . ಯುಧಿಷ್ಠಿರ ದೇವ ನೆನೆದನು ರಾಜತೇಜದಲಿ (ಕುಮ್ಮಾವಿ. ೧೦–೫). [ ದ್ಯುಮಣಿ + ಮಂಡಲ ]

**ದ್ಯುಮಣಿಮಯೂಖ** (ನಾ). = ದ್ಯುಮಣಿದ್ಯುತಿ : ತಮಮಂ ದ್ಯುಮಣಿ ಮಯೂಖೋದ್ಗಮಮಲೆವವೊಲಲೆಗೆ ಜಗದ ಮಿಥ್ಯಾತ್ವತಮಸ್ತಮನ ಅಕಳಂಕದೇವಪ್ರಮಾಣ ರತ್ನಪ್ರದೀಪರಶ್ಮಿಕಳಾಪಂ (ಆದಿಪು. ೧–೧೬). [ ದ್ಯುಮಣಿ + ಮಯೂಖ ]

**ದ್ಯುಮುಖ** (ನಾ). ಮುಂಜಾವ ; ಉಷಃಕಾಲ ; ಪ್ರಭಾತ : "ದ್ಯುಮುಖಂ ವಿಭಾತ ಪ್ರತ್ಯೂಷಮೆನಲಾ ಪ್ರಭಾತಮೆನೆ . . . ಪ್ರಾಕ್ ಪ್ರಾತಮೆನಲು ಕಲ್ಯಮೆಂದೆನಲು ಪ್ರಾಕ್ಕಾಲಮಕ್ಕು" (ಮಂಗರಾ. ೨೦–೮). [ ಸಂ. ]

**ದ್ಯುಮ್ನ** (ನಾ). ೧. ಕಾಂತಿ; ಪ್ರಕಾಶ. ೨. ಕಸುವು; ಬಲ; ಪರಾಕ್ರಮ ; ಶಕ್ತಿ : "ಪ್ರಾಣಃ, ಸ್ಥಾಮ, ಬಲಂ, ದ್ಯುಮ್ನಂ, ಓಜಃ, ಊಷ್ಮಾ, ತರಃ, ಸಹಃ–ಈ ೮ ಬಲ್ಪು(ಬಲುಹು)" (ಹಲಾಯು. ೧೩೦–೩೮). ೩. ಹಣ ; ಸಂಪತ್ತು ; ಐಶ್ವರ್ಯ ; ದ್ರವ್ಯ : "ದ್ಯುಮ್ನಂ ದ್ರವ್ಯಂ ದ್ರವಿಣಂ, . . . ವಿಭವಃ–ಈ ೧೫ ಒಡಮೆಯ ಪೆಸರ್" (ಹಲಾಯು. ೧೪–೮೦) : "ಧನಮದಾ ದ್ಯುಮ್ನಮಾ ದ್ರವ್ಯಮೆಂದೆನಲು ವಿತ್ತಮದಕ್ಕು" (ಮಂಗರಾ. ೧೭–೧೬). [ ಸಂ. ]

**ದ್ಯುಲೋಕ** (ನಾ). ಸ್ವರ್ಗಲೋಕ ; ದೇವಲೋಕ : ಒಬ್ಬ ಶಿಷ್ಯನು ದ್ಯುಲೋಕವೇ ಪರಬ್ರಹ್ಮವಸ್ತುವೆಂದೂ, ಮತ್ತೊಬ್ಬನು ಸೂರ್ಯನೇ ಪರಬ್ರಹ್ಮನೆಂದೂ . . . ನಿರೂಪಿಸಿದರು (ಭಾತತ್ತ್ವ. ೬೦) : ಅಗ್ನಿಯು . . . ಪ್ರಜಾಪತಿಯ ಉತ್ಪತ್ತಿಸ್ಥಾನವಾದ ದ್ಯುಲೋಕದಲ್ಲಿಯೂ ಅಸ್ತಿತ್ವ ವನ್ನು ಹೊಂದಿದ್ದಾನೆ (ಋಕಾರ. ೪೨). [ ಸಂ. ]

**ದ್ಯೂತ** (ನಾ). ೧. ಆಟ ; ಕ್ರೀಡೆ. ೨. ಪಗಡೆಯ ಆಟ ; ಜೂಜು : "ದ್ಯೂತಮದಕ್ಷವತಿ" (ವಸ್ತುಕೋ. ೬೫–೭೮) ; ಕೃತಕದ್ಯೂತವಿನೋದದಿಂ ದ್ರುಪದಜಾಕೇಶಾಂಬರಾಕೃಷ್ಟಿಯಿಂ ಧೃತರಾಷ್ಟ್ರಾತ್ಮಜ ಪಾಂಡುರಾಜಸುತರ ಮುನ್ನಂ ಕೊಲಲ್ಕೋಟಿದ್ದೆ (ಗದಾಯು. ೭–೪೦) ; ದ್ಯೂತದಲಿ ಮುನ್ನೇನ ನೊಡ್ಡಿದ ಸೋತನೇನನು ಶಿವಶಿವಾ (ಕುಮ್ಮಾಸ. ೧೪–೫೨) : ದ್ಯೂತಾದಿಯಿಂ ಕೆಟ್ಟ ಭೂವರರಂ ಬಣ್ಣಿಪರೇಕೆ ಮೂಢ ಕವಿಗಳ್ (ಹಮ್ಮಿರ. ೧–೨೬). ೩. ಜೂಜಿಗೆ ಒಡ್ಡುವ ಹಣ : "ದ್ಯೂತಕರಂ ದ್ಯೂತಪಣಂ ದ್ಯೂತ ಮೆನಿಪ್ಪುವು" (ವಸ್ತುಕೋ. ೧೩೨–೮೮). [ ಸಂ. ]

**ದ್ಯೂತಕರ** (ನಾ). ೧. ಆಟಗಾರ. ೨. ಜೂಜಾಡುವವನು ; ಜೂಜು ಗಾರ : "ದ್ಯೂತಕರನೆನೆ ಕಿತವನೆನೆ ಜೂಜುಗಾಱಂ" (ಮಂಗರಾ. ೭೨–೨೪). ೩. ಜೂಜಿಗೆ ಒಡ್ಡುವ ಹಣ : "ದ್ಯೂತಕರಂ ದ್ಯೂತಪಣಂ ದ್ಯೂತಮೆನಿ ಪ್ಪುವು" (ವಸ್ತುಕೋ. ೧೩೨–೮೮). [ ಸಂ. ]

**ದ್ಯೂತಕಾರ** (ನಾ). = ದ್ಯೂತಕರ ೨ : "ಕಿತವಃ, ದ್ಯೂತಕಾರಃ–ಈ ೨ ಜೂದುಗಾಱಂ" (ಹಲಾಯು. ೬೪–೩೩೪) ; ದ್ಯೂತಕಾರನ ಪತ್ನಿಯು ಅವನಿಂದ ತ್ಯಜಿಸಲ್ಪಟ್ಟವಳಾಗಿ ಪರಿತಾಪ ಪಡುತ್ತಾಳೆ (ಋಕ್ಸಾರ. ೩೧೪). [ ಸಂ. ]

**ದ್ಯೂತಕಾರಕ** (ನಾ). ೧. ಜೂಜನ್ನು ಆಡಿಸುವವನು ; ಜೂಜಿನ ಮನೆ ಯನ್ನು ನಡೆಸುವವನು : "ದ್ಯೂತಕಾರಕನೆನಲ್ಕಾಡಿಸುವನೆನಿಕ್ಕು" (ಮಂಗರಾ. ೭೨–೨೪). ೨. ಜೂಜಾಡುವವನು. [ ಸಂ. ]

**ದ್ಯೂತಕೃತ್ತು** (ನಾ). = ದ್ಯೂತಕರ ೨: "ಧೂರ್ತಃ, ಅಕ್ಷದೇವೀ, ಕಿತವಃ, ಅಕ್ಷಧೂರ್ತಃ, ದ್ಯೂತಕೃತ್–ಈ ಜೂಜು ಆಡುವವನ ಹೆಸರು" (ಸಿದ್ಧಾಂತಿ. ೨೭೫). [ ಸಂ. ದ್ಯೂತಕೃತ್ ]

**ದ್ಯೂತಕೇಳಿ** (ನಾ). ಪಗಡೆಯ ಆಟ; ಜೂಜಿನ ಆಟ; ಜೂಜಾಟ: ಎಲವೊ ಕಪಟದ್ಯೂತಕೇಳೀಕಲುಷಿತಾಂತಃಕರಣ ನಿನ್ನೀ ಬಲಕೆ ಪತಿ ನೀನೋ ಕೃಪಾಚಾರಿಯನೊ ಗುರುಸುತನೊ (ಕುಮಾರ. ೧–೨); ದ್ಯೂತ ಕೇಳಿಯೊಳಜ್ಞಾತವಾಸದೊಳಂದು ಧಾತುಗುಂದದೆ ಪಾಂಚಾಲಿ ಓತು ಪಾಂಡವರನೊಲಿಸಿ ಹದಿಬದೆಯರ ಬೈತಲೆವಣಿಯೆನಿಸಿದಳು (ಹದಿಬ. ೩–೪೮). [ ದ್ಯೂತ + ಕೇಳಿ₃ ( = ಕೇಲಿ) ]

**ದ್ಯೂತಕೌಶಲ** (ನಾ). ಪಗಡೆಯಾಟದಲ್ಲಿ ತೋರಿಸುವ ಕೌಶಲ,– ಚಾತುರ್ಯ; ಜೂಜಾಟದಲ್ಲಿ ತೋರಿಸುವ ಜಾಣತನ: ಬಟಾ ಬೊಪ್ಪಾಟವೇತಕೆ ವಿಜಯಸಿರಿ ವಾಚಾಟರಿಗೆ ಮೆಚ್ಚುವಳೆ ತೋಱಾ ದ್ಯೂತಕೌಶಲವ (ಕುಮಾವ್ಯಾಸ. ೧೩–೪೭). [ ದ್ಯೂತ + ಕೌಶಲ ]

**ದ್ಯೂತಪಣ** (ನಾ). ಜೂಜಿನಲ್ಲಿ ಒಡ್ಡುವ ಹಣ; ಒಡ್ಡು: "ದ್ಯೂತಕರಂ ದ್ಯೂತಪಣಂ ದ್ಯೂತಮೆನಿಪ್ಪುವು" (ವಸ್ತುಕೋ. ೧೬೨–೮೮). [ ದ್ಯೂತ + ಪಣ₃ ]

**ದ್ಯೂತಲೋಲುಪ** (ನಾ). ಜೂಜಿನ ಗೀಳು ಹಿಡಿದವನು; ಪಂದ್ಯದಲ್ಲಿ ಆಸಕ್ತನಾದವನು; ನೃಪನಗ್ಗಳದ ಧರ್ಮಜ್ಞನು ವಿಶೇಷದ್ಯೂತ ಲೋಲುಪನು (ಕುಮಾವ್ಯಾಸ. ೧೨–೧೮). [ ದ್ಯೂತ + ಲೋಲುಪ ]

**ದ್ಯೂತವರ್ತಿ** (ನಾ). ಜೂಜಿನಲ್ಲಿ ನಿರತನಾದವನು; ಪಂದ್ಯದಲ್ಲಿ ಅತಿಯಾದ ಆಸಕ್ತಿವಹಿಸುವವನು; ಜೂಜುಗಾರ: ನೃಪರು ಕಟ್ಟರೆ ಮಾನ್ಯವುಂಟೇ ಶಪಥವುಂಟೇ ದ್ಯೂತವರ್ತಿಗೆ (ಕಾಶಿರಾ. ೧೯–೨೦). [ ಸಂ. ದ್ಯೂತವರ್ತಿನ್ ]

**ದ್ಯೂತಾಳಿ** (ನಾ). ಜೂಜಾಡುವವನು; ಜೂಜುಗಾರ: ಬಾಲರಜ್ಞರಿಗೆ ಸ್ತ್ರೀಲೋಲ ದ್ಯೂತಾಳಿಗಂ ಕೀಳು ಸುರೆಮಾಂಸಭಕ್ಷಿಗೆ ವ್ಯಸನದೋಷಿಗಂ ದೀಕ್ಷೆಯಿಂದೆಮಗೆ ಶಿವ ಶಿಕ್ಷೆಗಳಹವು ಮಗನೆ (ದೀಕ್ಷಾಬೋ. ೧೫–೨೫೦). 'ಜೂದಾಳಿ' ಪರಾ. [ ದ್ಯೂತ + – ಆಳಿ₃ ]

**ದ್ಯೂನ** (ನಾ). [ಜ್ಯೋತಿ] ಜಾತಕನ ಲಗ್ನದಿಂದ ಏಳನೆಯ ಸ್ಥಾನ. 'ದ್ಯೂನಗೇಹ', 'ದ್ಯೂನಾಲಯ' ಪರಾ. [ ಸಂ. ]

**ದ್ಯೂನಗೇಹ** (ನಾ). = ದ್ಯೂನ: ಹಿಮಧಾಮಂ ದ್ಯೂನಗೇಹೋಪಚಯದೊಳ್ . . . ಸೌಮ್ಯನಿಂ ಪಂಚಮ ಕೇಂದ್ರಾಯತ್ರಿರಂಧ್ರಂಗಳೊಳತಿ ಶುಭದಂ ಶೇಷದೊಳ್ ಪೊಲ್ಲನಕ್ಕುಂ (ಜಾತಕ. ೧೧–೪). [ ದ್ಯೂನ + ಗೇಹ ]

**ದ್ಯೂನಪತಿ** (ನಾ). [ಜ್ಯೋತಿ] ಲಗ್ನದಿಂದ ಏಳನೆಯ ಸ್ಥಾನಕ್ಕೆ ಒಡೆಯನಾದವನು; ಏಳನೆಯ ಮನೆಯ ಅಧಿಪತಿ: ದ್ಯೂನಪತಿಯೆನಿಸೆ ಕುಲದಭಿಮಾನದೇವತೆಯೆನಿಸಿ ತತ್ಸೂನು ಸೌಭಾಗ್ಯನೆನಿಸುವ ನಾರಿ ದೊರಕುವಳು ಸೋಮಸುತ ನೀಚಾರಿ ಮೂಢದೊಳ್ ಕಾಮಪತಿಯಿಂದೆನಿಸೆ ಪಾಪಸ್ತೋಮದಲ್ಲಿರಲವನು ಕುಲನಾಶಕಾರಿಯೆನಿಸುವನು (ಕೇರಪ್ರ. ೧೧–೨೧). [ ದ್ಯೂನ + ಪತಿ₂ ]

**ದ್ಯೂನಾಲಯ** (ನಾ). = ದ್ಯೂನ: ದ್ಯೂನಾಲಯಗತಮೆನಿತು ಗ್ರಹಮಾ ಲೆಕ್ಕದಲೇಡು ಬೆನ್ನಲಾ ಪಶುಗಕ್ಕುಂ (ಜಾತಕ. ೫–೫). [ ದ್ಯೂನ + ಆಲಯ ]

**ದ್ಯೋತ** (ನಾ). ೧. ಹೊಳಪು; ಪ್ರಕಾಶ; ಕಾಂತಿ: ಸುಟಿದುದು ಪದಚಂಚನ್ನಖದ್ಯೋತಸುವ್ಯಕ್ತಪದಂ ಮಾರ್ಗಳಜಾಲಂ ಬಳಸಿದ ಜಳದೇವೀಸಮೂಹಂಬೊಲ್ ... ಇರುಳೊಳ್ ಜಾರನಾರೀಕದಂಬಂ (ಜಗವಿ. ೪–೨೯). ೨. ಸೂರ್ಯನ ಬೆಳಕು; ಬಿಸಿಲು: "ಪ್ರಕಾಶಃ, ದ್ಯೋತಃ, ಆತಪಃ– ೩ ಬಿಸಲಿನ ಹೆಸರುಗಳು" (ಸಿದ್ಧಾಂತಿ. ೩೩). ೩. ಶಾಖ; ಉಷ್ಣ. ದ್ಯೋತವಾಗು=ಹೊಳೆ; ಸ್ಫುರಿಸು: ಕವಿಯ ಆಶಯ ಈ ಪದ್ಯದಿಂದ ಚೆನ್ನಾಗಿ ದ್ಯೋತವಾಗುತ್ತದೆ (ರೂಢಿ). [ ಸಂ. ]

**ದ್ಯೋತಕ** (ಗು). ೧. ಹೊಳೆಯುವ; ಪ್ರಕಾಶಿಸುವ. (ನಾ). ೨. ಸ್ಪಷ್ಟವಾಗಿ ತೋರಿಸುವಂಥದು,–ತಿಳಿಸುವಂಥದು: ಕಥಾಕಾವ್ಯಗಳೂ ಆ ಕಾಲದ ಜನರ ಮನಃಪ್ರವೃತ್ತಿಯ ಎರಡನೆಯ ದ್ಯೋತಕಗಳಾಗಿದ್ದುವು (ಸಾಹಿಸ. ೧೫); ಭಾಷೆಯು ಸಾಮಾಜಿಕ ಸಂಬಂಧದ ದ್ಯೋತಕವಾಗಿದೆಯೇ ಹೊರತು, ಜಾನಾಂಗಿಕ ಐಕ್ಯದ ಗುರುತಾಗಲಾರದು (ಭಾಷಾಶಾ. ೩೦): ಕುಸುಮಾ–ಶೀನರ ಬಗ್ಗೆ ನರಹರಿಯ ಕನಸು ಅವನ ಚಿಂತೆಯ ದ್ಯೋತಕವಾಗಿದೆ (ಸವಜೀ. ೨೭ ಟೀಕೆ). [ ಸಂ. ]

**ದ್ಯೋತನ** (ಗು). ೧. ಹೊಳೆಯುವ; ಪ್ರಕಾಶಿಸುವ; ಬೆಳಗುವ. ೨. ವಿವರಿಸಿ ತೋರಿಸುವ; ವಿವರಿಸುವ. (ನಾ). ೩. ಬೆಳಕು; ಕಾಂತಿ; ಹೊಳಪು: "ದ್ಯುತ್, ದ್ಯುತಿಃ, ದ್ಯೋತನೀಯಂ, ದ್ಯುತ್ಯಂ, ದ್ಯೋತ್ಯಂ ಈ ೬ ಬೆಳಕು" (ಕಾಶಕ್ಕ. ೧೫೦). ೪. ನೋಟ; ದೃಶ್ಯ: "ನಿಭಾಳನಂ, ನಿಶಮನಂ, ನಿಧ್ಯಾನಂ, ಅವಲೋಕನಂ, ಲಕ್ಷಣಂ, ದರ್ಶನಂ, ದೃಷ್ಟಿಃ, ದ್ಯೋತನಂ – ಈ ೮ ನೋಟಂ" (ಹಲಾಯು. ೯೩–೪೧೨). [ ಸಂ. ]

**ದ್ಯೋತಿ₁** (ನಾ). ಹೊಳಪು; ಪ್ರಕಾಶ; ಕಾಂತಿ: ಅಮರಧನುರ್ದ್ಯೋತಿಯಂ ಪಂಚರತ್ನಚ್ಛವಿಯಿಂ ಕೀಳ್ಮಾಟ್ಟ ಸಲ್ಲಕ್ಷಣಗುಣನಿಧಿಗಳ್ ಪಲ್ಲಣಂ ಗಟ್ಟಿ ಬಂದಿರ್ದುವು . . . ತುರಂಗಂ (ಪುಷ್ಪಪು. ೫–೧೧). [ ಸಂ. ದ್ಯೋತಿಸ್ ]

**ದ್ಯೋತಿ₂** (ಗು). ಪ್ರಕಾಶಮಾನವಾದ; ಹೊಳೆಯುವ: ಶ್ರೀಮನ್ನಾಗೇಂದ್ರಭೋಗಸ್ಫುರದರುಣಮಣಿದ್ಯೋತಿಸಂಧ್ಯಾನಿಬದ್ಧಪ್ರೇಮಂ . . . ಹೇಮಪ್ರಭಾಪ್ರಸ್ಫುರಿತ ಗಿರೀಶ ಚಂಚಜ್ಜಟಾಜಾಲಜೂಟ ವ್ಯೋಮಪ್ರೋ ಧ್ಯಾಸಿಚಂದ್ರಂ ತ್ರಿಭುವನಜನಕಾನಂದಮಂ ಮಾಡುಗೆಂದುಂ (ಕಾದಂಪೂ. ೧). [ ಸಂ. ದ್ಯೋತಿನ್ ]

**ದ್ಯೋತಿತ** (ಗು). ಹೊಳೆಯುವಂತೆ ಮಾಡಿದ; ಬೆಳಗಿಸಿದ: ಅಳ್ದನಧಿಕಬಲನವನಿಪತಿವ್ರಾತಮಣಿಮಕುಟಕಿರಣದ್ಯೋತಿತಪಾದಂ ಸಪಾದಲಕ್ಷಕ್ಷಿತಿಯಂ (ಪಂಪಭಾ. ೧–೧೭); ಶ್ರೀಮನ್ನಾಕಾಧಿನಾಥಾನತಮಕುಟಮಣಿದ್ಯೋತಿತಾಂಘ್ರಿದ್ವಯಂ . . . ಕುಡುಗೆಮಗಮ್ಮೃತಾವಾಸಮಂ ವೀರನಾಥಂ (ಸುಕುಮಾ. ೧–೧). [ ಸಂ. ]

**ದ್ಯೋತಿತಾತ್ಮ** (ನಾ). ಪ್ರಕಾಶಗೊಂಡ ಆತ್ಮವುಳ್ಳವನು; ತಿಳಿವು ಹೊಂದಿದ ಅಂತರಂಗವುಳ್ಳವನು: ಆದರೆ ಸೂಕ್ತಿಸಹಸ್ರಗಳಿಂದ ದ್ಯೋತಿತಾತ್ಮರಾದ ಮಹಾತ್ಮರ ದೋಷಗಳನ್ನು ಉದ್ಘೋಷಿಸುವುದು ವಿಮರ್ಶಕನ ದೋಷವೇ ಆಗುವುದೆಂದು ಭಾವಿಸಿ ಅವುಗಳನ್ನಿಲ್ಲಿ ಬಿಡಿಸಿ ತೋರಿಸಲಿಲ್ಲ (ಧ್ವನ್ಯಾಲೋ. ೮೭). [ ಸಂ. ]

**ದ್ಯೋತಿರಿಂಗಣ** (ನಾ). ಮಿಂಚುಹುಳು; ದೀಪದ ಹುಳು. 'ಜ್ಯೋತಿರಿಂಗಣ' ಪರಾ. [ ಸಂ. ]

**ದ್ಯೋತಿಸು** (ಕ್ರಿ). ೧. ಪ್ರಕಟವಾಗು; ಕಾಣು; ತೋರು: ಶೀತಕರ ತೋಯಂ ದ್ಯೋತಿಸಿರೆ ನೀಲಾಬ್ಜಾಯತನಯನೇ ಕೇಳೋತು ಶಶಿಕಾಂತಂ (ಛಂದೋಂಬು. ೨–೭೭). ೨. ಕಾಣಿಸು; ತೋರಿಸು; ಪ್ರಕಾಶಗೊಳಿಸು; ಪ್ರಕಟಪಡಿಸು: ಮಹಾಪುಂಡರೀಕಮೆಂಬುದು ಕಾಲಾಪೇಕ್ಷೆಯಿಂ ವಜ್ರಧರ ಹಲಧರ ಚಕ್ರಧರಾದಿಗಳ ಉತ್ಪತ್ತಿ ಕಾರಣಮುಂ ಅನುಷ್ಠಾನಮುಂ ದ್ಯೋತಿಸುಗುಂ (ತತ್ತ್ವಪ್ರ. ೭೭). [ ದ್ಯೋತನ + – ಇಸು₃ ]

**ದ್ಯೋಧುನಿ** (ನಾ). ದೇವನದಿ; ಗಂಗೆ. [ ಸಂ. ದ್ಯೋಧುನೀ ]

**ದ್ರಂಗ** (ನಾ). ಪುರ; ಪಟ್ಟಣ; ನಗರ: 'ದ್ರಂಗ' ಶಬ್ದಕ್ಕೆ ಹೇಮಚಂದ್ರಾಚಾರ್ಯನು ಪುರಿ, ನಗರ ಎಂಬರ್ಥವನ್ನು ಹೇಳಿದ್ದಾನೆ (ಶಬ್ದವಿ. ೭೭). 'ಡಂಗ' ಪರಾ. [ ಸಂ. ]

**ದ್ರಜ** (ನಾ). (?) : ಸಾರಂಗದ ತಿದಿಯಲ್ಲಿ ದೋರೋ (ದಾರೂ ?) ದ್ರಜವ ತುಂಬಿದರು ಮೇರುಮಂದಿರದ ಮೇಲೆ ಮನೆಯ ಮಾಡಿದರು ಆರೋ! ತಿದಿಯು ಹಱೆವೆ ಮನೆಯು ಸುಡುವೆ ನಿಲುವೆ ಹೊಸಪರಿಯಱಿಯಾ ಎನ್ನ ಪರಿಯು (ಸರ್ವವ. ೨೯-೧೩೮). [ ? ]

**ದ್ರಢಿಮ** (ನಾ). ಬಲವಾಗಿರುವಿಕೆ ; ಬಿಗುಹು ; ದೃಢತೆ : "ಯಂದೃಚ್ಛೆ ದಾರ್ಢ್ಯಂ ದ್ರಢಿಮಂ" (ವಸ್ತುಕೋ. ೧೧೫-೨೭). [ ಸಂ. ದ್ರಢಿಮನ್ ]

**ದ್ರಪ್ಸ** (ಗು). ೧. ಹನಿಹನಿಯಾಗಿ ಬೀಳುವ ; ತೊಟ್ಟುತೊಟ್ಟಾಗಿ ಹನಿಯುವ. (ನಾ). ೨. ತೊಟ್ಟು ; ಹನಿ. ೩. ನೀರು ಬೆರಸಿದ ಮೊಸರು : "ದಧಿ ಘನೇತರಂ ತಾಂ ದ್ರಪ್ಸಂ" (ವಸ್ತುಕೋ. ೯೨-೩).
[ ಸಂ. ]

**ದ್ರಬ್ಯ** (ನಾ). ಹಣ ; ಧನ : ಬೆನಕಗಲುಡನ ಕಯ್ಯಲು ತತ್ಕಾಲೋಚಿತ ಕ್ರಯ ದ್ರಬ್ಯವನು ಕ್ರಯಲಕ್ಷಣಲಕ್ಷಿತವಾಗಿ ಸಾಕಲ್ಯೇನ ಹಸ್ತಸ್ಥವಾಗಿ ಕೊಟ್ಟು (ಎಕ. XI, ಚಿತ್ರದು. ೧೨-೧೮ ; 1286). [ <ಸಂ. ದ್ರವ್ಯ ]

**ದ್ರಬ್ಯನಿವೇದನಂಗೆಯ್** (ಕ್ರಿ). ಹಣವನ್ನು ಅರ್ಪಿಸು ; ಧನವನ್ನು ಸಮರ್ಪಿಸು : ನಗರ ಮಹಾಜನಂಗಳ್ಗಂ ಧರ್ಮಾರ್ತ್ಥರ ಪ್ರಾರ್ತ್ಥಿಸಿ ದ್ರಬ್ಯನಿವೇದನಂ [ಗೆ]ಯ್ದು (ಸೌಇಇ. XX, ೭೪-೩೧; 1112).
[ ದ್ರಬ್ಯ + ನಿವೇದನ + ಕೆಯ್₁ ]

**ದ್ರಮಿಳ** 'ದ್ರಮಿಂಟ' ನೋ.

**ದ್ರಮಿಟ, ದ್ರಮಿಳ, ದ್ರವಿಳ, ದ್ರವಿಟ** (ನಾ). ೧. ಭಾರತದ ದಕ್ಷಿಣ ಪ್ರದೇಶದ ಪೂರ್ವ ತೀರದ ಪ್ರದೇಶ ; ದ್ರಾವಿಡದೇಶ ; ತಮಿಳು ನಾಡು : ವಂಗಾಙ್ಗ ಕಳಿಙ್ಗ ವತ್ಸೂರ ಮಗಧ ಮದ್ರಕ ಕೇರಳ ಗಙ್ಗ ಮೂಷಕಪಾಣ್ಡ್ಯ ದ್ರಮಿಟ ಚೋಟಿಯಾಳುಕ ವೈಜಯಂತ್ಯ ಪ್ರಭುತಿರನೇಕ ಪರನ್ರಿಪತಿ ಸಮೂಹಾವಮರ್ದ್ದ ಲಬ್ಧ ವಿಜಯೇ (ಇಆ. XIX, ೦೭-೭ ; ಸು. 602). **ದ್ರಮಿಳ** : ೨. ದಕ್ಷಿಣದೇಶಕ್ಕೆ ಸಂಬಂಧಿಸಿದ ಜೈನಮುನಿ ಗಣಗಳಲ್ಲಿ ಒಂದು : ಗಣಗಳು: ದೇವ, ಸೇನ . . . ದ್ರಮಿಳ, ಪುನ್ನಾಗ ವೃಕ್ಷಮೂಲ (ಕಶಾಅ. ೮೬). **ದ್ರವಿಳ** : ೧. ದ್ರವಿಳಾನ್ಧ್ರ ಮಾಳವ ತುರುಂಷ್ಕಾದಿ ಪ್ರಸಿದ್ಧಾವನೀಶ್ವರರಂ ಸಾಧಿಸಿದ ಭುಜಾಸಿಬಳದಿಂ ಚಾಳುಕ್ಯ ಚಕ್ರೇಶ್ವರಂ (ಎಕ. XI, ದಾವಣ. ೩-೧೦ ; 1121). **ದ್ರವಿಟ** : ಇವರ್ಗಳೆಲ್ಲರುಮನಾಚಾರ್ಯರ್ ಮಾಡಿ ದ್ರವಿಟ [ಪಾಠಾಂ. ಡ. ೪] ವಿಷಯಕ್ಕೆ ಪೋಗಿಮೆಂದು ವಿಶಾಖಾಚಾರ್ಯರೊಡನೆ ಎಣ್ಬಾಸಿರ್ವರ್ ರಿಸಿಯರನಟ್ಟಿದರ್ (ವಡ್ಡಾರಾ. ೮೮-೨೨) ; ಕೌಶಿಕಾಂಧ್ರ ದ್ರವಿಳ[ಟ] ಗಜಮುಖಾಶ್ವಮುಖೋಷ್ಟ್ರಮುಖ ಖರಮುಖ . . . ತುರುಷ್ಕ ಪ್ರವರ ನಾನಾದ್ವೀಪ ದೇಶಾಧೀಶ್ವರರುಂ (ಪಂಪಭಾ. ೯-೯೫ ವ).
[ <ತಮಿೞ್./ಪ್ರಾ. ದಮಿಲ./ಸಂ. ದ್ರವಿಡ ]

**ದ್ರಮ್ಮ, ದಮ್ಮ₂** (ನಾ). ಚಿನ್ನದ ಒಂದು ಬಗೆಯ ನಾಣ್ಯ ; ಹದಿನಾರು ಪಣ ; ನಿಷ್ಕದ ಹದಿನಾರನೆಯ ಒಂದು ಭಾಗ : ದೀವಳಿಗೆಯು ಪರ್ವದನ್ದು ಕರಣಕ್ಕೆ ಇಪ್ಪತ್ತುನಾಲ್ಕು ದ್ರಮ್ಮ ತ ಳಾ ರ ರಿ ಗೆ ಇಪ್ಪತುನಾಲ್ಕು ದ್ರಮ್ಮ (ಹೈಆರಿ. VI, ೧೯೩೩-೩೪, ೧-೧೦ ; 972) ; ವರಿಸಕ್ಕೆ ಲೋಹ ದ್ರಮ್ಮಗಟ್ಟಳೆ ಪದಿನೈಯ್ದು ಪಣಮುಂ ಪನ್ನಿರ್ಕಳೆ ವಿಾರಿಯುಂ ಒರ್ಕಳ ತುಪ್ಪಮುನ್ನಿಟುವೋನ್ (ಎಕ. III, ಟುಂಡ್ಯ. ೧೪-೧೧ ; 907) ; ವಿಪ್ರರ ವಿವಾಹಮುಮಾಗಪ್ಪನಿತಟಿಗೊಳೆಲ್ಲಮೊಸಗೆ ದ್ರಮ್ಮಮುಮ್ಮಟಿಂ ತಪ್ಪಾ[ದೆ] ಮಾಣಿಯೊಳೆರಡಂ ಕೆಪ್ಪಿದರ್ (ಕಇ. II, ೪-೭ ; 918) ; ಸಿದ್ಧಾಯಮೆಲ್ಲಮ್ ದೇವರ್ಗ್ಗೆ ಬರಿಸಕ್ಕೆ ಅರಸರ್ಗ್ಗೆ ನಿ ಬ ದ್ಧಂ ಮೂ ವ ತ್ತು ಕರಿಯ ದ್ರಮ್ಮ(ಮ್ಮ)ಮುಂ ಗೂರ ವರ್ತ್ತಿಟುವರ್ (ಇಆ. XII, ೨೫೭-೧೦ ; 951) ; ಎಲೆಯ ಸುಂಕಮಾವಟಿಗೆ ಕಟ್ಟು ೨ ಬಿಳಿಯೆಲೆಯ ಪೇಟಿಂಗೆ ೫ ಪೆರ್ಜುಂಕಕ್ಕೆ ದ್ರಮ್ಮ ೧ (ನಾಂದೇಡ್. ೩-೨೨ ; 1047) : ಅಲ್ಲಿ ಪೂರ್ವ್ವಮಯ್ಯಾರ್ದೆಯಾಚಿಪ್ಪುಲಂಘನಕ್ಕೆ ದಣ್ಡಂ ಕರಿಯ ದ್ರ × × ಮಯ್ಯುತ್ತೆರಡು ಪಿಡಿದಂಗೆ ದ್ರಮ್ಮ ಪನ್ನೆರಡು (ಹೈಆಸಿ. ೭-೧೧೦ ; 1056) ; ಕವಡೆಗಳಿಪ್ಪತ್ತಾಗಲು ಪವಣಿಸೆ ಕಾಕಿಣಿಯು ನಾಲ್ಕು ಪಣ ಪದಿನಾಱು ಭುವನದಿ ದ್ರಮ್ಮಗಳಿನಿತಂ ಸವನಿಸಿ ಪದಿನಾಱೊಳದುವೆ ನಿಷ್ಕಮೆಂ[ಬೆಂ]ದಕ್ಕುಂ (ಭಾಸ್ಕರ. ೭೭-೪) : ನಾಣ್ಯಗಳ ಕೋಷ್ಟಕ: ೨೦ ವರಾಟಕ=೧ ಕಾಕಿನಿ, ೪ ಕಾಕಿನಿ=೧ ಪಣ . . . ೧೬ ಪಣ = ೧ ದ್ರಮ್ಮ, ೧೬ ದ್ರಮ್ಮ=೧ ನಿಷ್ಕ (ಗಚಿಚ. ೨೮೨ ಅಡಿಟ). **ದಮ್ಮ₂** : ಕೆಯ್ಗೆ ಪನ್ನೆರಡುಂ ವರಿಸ ಪರಿಯಾರಯಿಮ್ಮರ್ತ್ತ[ಗ್ಗೆ]ಒನ್ದು ದಮ್ಮ (ಸೌಇಇ. IX-1, ೧೨-೨೨ ; ೮೭೭) ; ಅಯ್ಯಾ ಎನಗುಡಲಿಲ್ಲೀನುಮೊಂದು ದಮ್ಮಕ್ಕಾದೊಡಂ ಸೀರೆಯುಂ ಕೊಂಡೀಯಿಮೆಂದೊಡೆ (ವಡ್ಡಾರಾ. ೭೭-೧೧); ಎಂಟು ದಮ್ಮದ ಪುಳ್ಳಿಯುಂ ತಂದು (ವಡ್ಡಾರಾ. ೭೭-೨೦). 'ಕಳ್ಳದಮ್ಮ' ಪರಾ.
[ ←ಗ್ರೀಕ್. Drachme./<ಪ್ರಾ. ದಮ್ಮ./ಸಂ. ದ್ರಮ್ಮ ]

**ದ್ರವ** (ಗು). ೧. ಓಡುವ. ೨. ಒಸರುವ ; ಜಿನುಗುವ. ೩. ಹರಿಯುವ ಸ್ವಭಾವದ ; ಪ್ರವಹಿಸುವ. (ನಾ). ೪. ಪಲಾಯನ ; ಓಟ : "ಪ್ರದ್ರಾವಃ, ಉದ್ರಾವಃ, ಸಂದಾವಃ, ವಿದ್ರವಃ, ದ್ರವಃ, ಅಪಕ್ರಮಃ, ಅಪಯಾನಂ-೮ ಪಲಾಯನವಾಗುವದಕ್ಕೆ ಹೆಸರು. ತಪ್ಪಿಸಿಕೊಂಡು ಓಡಿ ಹೋಗುವಿಕೆ" (ಸಿದ್ಧಾಂತಿ. ೨೭೦). ೫. ಹರಿಯುವಂತಹ ವಸ್ತು ; ನೀರು, ರಸ ಮೊದಲಾದುದು : "ರಸಂ ತಾಂ ದ್ರವಂ" (ವಸ್ತುಕೋ. ೧೨೨-೨೫) ; ಪವಣಱಿದು ಮಧುವುಮಂ ಹಿಕ್ಕವತ್ತಿಗೆಯ ಬೇರ ರಸಮುಂ ಶಶಿಯುಮನೊಂದುವಿನಂ ತೊಡೆದೊಡೆ ಪುಷ್ಪಂ ದ್ರವಮುಂ ಮಾಟ್ಕುಂ (ಲೋಕೋಪ. ೭-೪೭) ; ಯಾವತ್ತು ಸೃಷ್ಟ ಪದಾರ್ಥಗಳಿಗೆ ಭಾರವಿರುತ್ತದೆ. ಅವು ಘನ, ದ್ರವ, ಬಾಷ್ಪ ಅಂದರೆ ಅಪ್ರವಾಹಿ, ಪ್ರವಾಹಿ ವಾಯುರೂಪ ಎಂಬ ಮೂರು ರೂಪಗಳಿಂದ ಈ ಸೃಷ್ಟಿಯಲ್ಲಿ ವರ್ತಿಸುತ್ತವೆ (ಮುಂಬಯಿ. ೫-೩೩): ಕಂಡರೆ ಕರ್ರಗಿನ ದ್ರವದಂತೆ ಕಾಣಿಸುತ್ತಿತ್ತು (ದೀಪದ. ೨೫). ೬. ಆಟ ; ಕ್ರೀಡೆ ; ಲೀಲೆ : "ದ್ರವಃ, ಕೇಳಿಃ, ಪರೀಹಾಸಃ, ಕ್ರೀಡಾ, ಲೀಲಾ, ನರ್ಮ-೬ ಸ್ತ್ರೀಪುರುಷರ ಪರಿಹಾಸಕ್ಕೆ ಹೆಸರುಗಳು. ಅಂದರೆ ಹೆಣ್ಣುಗಂಡು ಸೇರಿ ಸೊಗಸಿನಿಂದಾಡುವಿಕೆ" (ಸಿದ್ಧಾಂತಿ. ೬೧). 'ದ್ರವಿಸು' ಪರಾ. ೭. ತೇವ ; ಹಸಿ ; ಆರ್ದ್ರತೆ. ೮. ಕರಗುವಿಕೆ. ೯. ಕಷಾಯ ; ಅರ್ಕ. [ ಸಂ. ]

**ದ್ರವಂತಿ** (ನಾ). ೧. ನದಿ ; ಹೊಳೆ : ದಿವ್ಯದ್ರವಂತಿಗಳ್ ಕೂಡುವ ಮಹದ್ಧ್ವನಿಯ ಜೋಗುಳವನಾಲಿಸುತೆ ನಿದ್ರಿಸಿದರಿನವಂಶಜರ್ (ಶ್ರೀರಾಮಾ. ೧೩೭-೩೬೨). ೨. ಇಲಿ ಯಾಲದಗಿಡ : "ನ್ಯಗ್ರೋಧೀ – ಅಲ, ಇಲಿವಾಲ, ದ್ರವಂತಿ" (ಓಷಧಿ. ೮೫). [ ಸಂ. ದ್ರವಂತೀ ]

**ದ್ರವಗಲ್ಲು** (ನಾ). ಚಂದ್ರನ ಕಿರಣಗಳ ಸ್ಪರ್ಶದಿಂದ ನೀರನ್ನು ಒಸರುವ ಕಲ್ಲು ; ಚಂದ್ರಕಾಂತ ಶಿಲೆ : ದ್ರವಗಲ್ಲ ಸೋಪಾನದ ಸರೋವರ ಕೇಶವನ ಕಣ್ಮನಕೆ ರಂಜಿಸಿತು (ಮೋಹತ. ೪-೫೫). [ ದ್ರವ + ಕಲ್ಲು (<ಕಲ್₃) ]

**ದ್ರವಗಾಳಿ** (ನಾ). = ದ್ರವವಾಯು : ರಾಸಾಯನಿಕಗಳನ್ನು (Chemicals) ಶುದ್ಧೀಕರಿಸುವುದಕ್ಕೂ ಶಕ್ತಿಯ ಉತ್ಪಾದನೆಗೂ . . . ದ್ರವಗಾಳಿಯನ್ನು (Liquid Air) ಬಳಸುತ್ತಾರೆ (ಶಿಲ್ಪನಾ. ೨೦೧). [ ದ್ರವ + ಗಾಳಿ₁ ]

**ದ್ರವಗೊಳಿಸು** (ಕ್ರಿ). ನೀರಾಗುವಂತೆ ಮಾಡು ; ಕರಗುವಂತೆ ಮಾಡು.
[ ದ್ರವ + ಕೊಳ್₁ + – ಇಸು₃ ]

**ದ್ರವಣ** (ನಾ). ೧. ಓಡುವಿಕೆ ; ಓಟ. ೨. ಒಸರುವಿಕೆ ; ಜಿನುಗುವಿಕೆ ; ಸ್ರವಿಸುವಿಕೆ : "ದ್ರವಣಂ, ದ್ರಾವಣಂ, ದ್ರುವಂ, ದ್ರೋತವ್ಯಂ . . . ದ್ರವ್ಯಂ – ಈ ೭ ನೀರ ಜಲ್ಲಿ" (ಕಾಶಕ್ಯ. ೭೬). ೩. ಪ್ರವಹಿಸುವಿಕೆ ; ಹರಿಯುವಿಕೆ. [ ಸಂ. ]

**ದ್ರವತ್ರಪು** (ನಾ). ೧. ಕರಗಿಸಿದ ಸೀಸ ಅಥವಾ ತವರ. ೨. ಕರಗಿಸಿದ ಸೀಸ ಅಥವಾ ತವರವನ್ನು ಮೈಮೇಲೆ ಸುರಿದು ಹಿಂಸಿಸುವ ನರಕ:

ಮತ್ತಂ ಕ್ರತು, ಪೂತಿಮಾಂಸ, ತಪ್ತ ಜತುಲೇಪ. ದ್ರವತ್ರಪು, ಉಚ್ಛ್ವಾಸ ವೆಂಬೈದು ಮಂತ್ರಿನರಕಂಗಳಿಂ ಕೂಡಿ (ವಿವೇಕ. ೧೮೦). [ ದ್ರವ + ತ್ರಪು ]

**ದ್ರವತ್ವ** (ನಾ). ೧. ಕರಗುವ ಸ್ವಭಾವ,-ಗುಣ. ೨. [ದ್ವೈತ] ನಲವತ್ತೊಂದು ಬಗೆಯ ಗುಣಗಳಲ್ಲಿ ಒಂದು ; ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ, ಪರಿಮಾಣ, ಸಂಯೋಗ, ವಿಭಾಗ, ಪರತ್ವ, ಅಪರತ್ವ, ಗುರುತ್ವ, ದ್ರವತ್ವ, ಲಘುತ್ವ, ಮೃದುತ್ವ, ಕಠಿನತ್ವ, ಸ್ನೇಹ, ಶಬ್ದ, ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ, ಆಲೋಕ, ಶಮ, ದಮ, ದಯೆ, ತಿತಿಕ್ಷೆ, ಭಯ, ಬಲ, ಲಜ್ಜೆ, ಗಾಂಭೀರ್ಯ, ಸೌಂದರ್ಯ, ಔದಾರ್ಯ, ಸ್ಥೈರ್ಯ, ಶೌರ್ಯ, ಸೌಭಾಗ್ಯಗಳೆಂಬಿವು ನಲವತ್ತೊಂದು ಬಗೆಯ ಗುಣಗಳು: ರೂಪ . . . ದ್ರವತ್ವ . . . ಸೌಭಾಗ್ಯವೆಂದು, ಸಾಮಾನ್ಯವಾಗಿ ನಲವತ್ತೊಂದು ವಿಧ ಗುಣಗಳು (ಹಿಂದಸಾ. ೨೬೫). [ ಸಂ. ]

**ದ್ರವಪಾವುಡ** (ನಾ). [ವೀಶೈ] ಲಿಂಗಕ್ಕೆ ಅಭಿಷೇಕ ಮಾಡಿ, ಒರೆಸಲು ಉಪಯೋಗಿಸುವ ಬಟ್ಟೆ ; ಉದಕಪಾವುಡ. [ ದ್ರವ + ಪಾವುಡ$_1$ (<ಪಾವಡ$_1$) ]

**ದ್ರವರೂಪ** (ನಾ). ಘನರೂಪವೂ ವಾಯುರೂಪವೂ ಅಲ್ಲದ, ನೀರನ್ನು ಅಥವಾ ಎಣ್ಣೆಯನ್ನು ಹೋಲುವ ಆಕೃತಿ : ಒಳವಲಯದಲ್ಲಿ ತರಿತರಿಯಾಗಿರುವ ದ್ರವರೂಪದ ವಸ್ತುವಿರುತ್ತದೆ (ಪ್ರಾಚಿಶಾ. ೪೪) ; ಒಂದು ಗ್ರಾಮ್ ತೂಕವುಳ್ಳ ಘನಪದಾರ್ಥವು ಬಿಸಿಯ ಮಟ್ಟದಲ್ಲಿ ವ್ಯತ್ಯಾಸ ಹೊಂದದೆ ದ್ರವರೂಪಕ್ಕೆ ತಿರುಗುವುದಕ್ಕೆ ಬೇಕಾಗುವ ಉಷ್ಣಕ್ಕೆ ದ್ರವಗುಪ್ತೋಷ್ಣವೆಂದೂ . . . ಹೆಸರು (ಭೌತವಿ. ೨೪೦). [ ದ್ರವ + ರೂಪ ]

**ದ್ರವವಸ್ತು** (ನಾ). ಹರಿಯುವಂಥ ವಸ್ತು ; ದ್ರವರೂಪದ ಪದಾರ್ಥ: ಒಂದು ಗ್ರಾಮ್ ದ್ರವವಸ್ತುವು ಆವಿಯಾಗಲು ಬೇಕಾಗುವ ಉಷ್ಣಕ್ಕೆ ಬಾಷ್ಪಗುಪ್ತೋಷ್ಣವೆಂದೂ (Latent heat of vaporisation) ಹೆಸರು (ಭೌತವಿ. ೨೪೦). [ ದ್ರವ + ವಸ್ತು ]

**ದ್ರವವಸ್ತ್ರ** (ನಾ). = ದ್ರವಪಾವುಡ. [ ದ್ರವ + ವಸ್ತ್ರ ]

**ದ್ರವವಾಯು** (ನಾ). ನೀರಿನ ರೂಪಕ್ಕೆ ತಂದ ಅನಿಲ, – ಗಾಳಿ : "ಅತ್ಯಧಿಕ ಒತ್ತಡದಿಂದಲೂ ಶೈತ್ಯದಿಂದಲೂ ದ್ರವರೂಪಕ್ಕೆ ತಿರುಗಿಸಿದ ವಾಯು : ದ್ರವವಾಯು" (Liquid-air. ಇಂಕನಿ) ; ಕೆಲವು ವರ್ಷಗಳ ಹಿಂದೆ ದ್ರವವಾಯುವಿನಿಂದ ಒಂದು ಮೋಟಾರು ಕಾರನ್ನು ನಡೆಸಿದರು (ಶಿಲ್ಪನಾ. ೨೦೧). [ ದ್ರವ + ವಾಯು ]

**ದ್ರವಸೇಚಕ** (ನಾ). ನೀರನ್ನು ಹಾಯಿಸುವ ಸಾಧನ : "ನೀರನ್ನು ಹಾಯಿಸುವವನು (ವದು) ದ್ರವಸೇಚಕ ; ದ್ರವ ಹಾಯಿಸುವ ಸಲಕರಣೆ" (Irrigator. ಇಂಕನಿ). [ ದ್ರವ + ಸೇಚಕ ]

**ದ್ರವಾಗ್ನಿ** (ನಾ). ೧. ಯುದ್ಧದಲ್ಲಿ ಉರಿಯೆರಚುವ ಯಂತ್ರದಿಂದ ಶತ್ರುಗಳ ಮೇಲೆ ಚೆಲ್ಲುವ ಒಂದು ಬಗೆಯ ಉರಿಯುವ ದ್ರವ : (Liquid-fire. ಇಂಕನಿ). ೨. ಹರಳುಗಳಲ್ಲಿ ಇರುವ ಹೊಳಪಿನ ರೇಖೆ : ವಜ್ರದ ಹರಳೊಳದಕವಾಗಿರುವ ದ್ರವಾಗ್ನಿಯಂತಾ ಫಾಲಗುಲ್ಫವಾ ನಿಪ್ಪಟ ಬ್ರಹ್ಮಚರ್ಯದ ದೀಧಿತಿಯ ನೋಡ (ಗೂಲ್ಬೊಗ್ಗಳ. ೪-೮೭). [ ದ್ರವ + ಅಗ್ನಿ ]

**ದ್ರವಾಶಯ** (ನಾ). ನೀರನ್ನು ಸಂಗ್ರಹಿಸಿಡುವ ಸ್ಥಳ: ನಾಳಗಳು ಸಾಮಾನ್ಯ ಸುರುಳಿ, ಕವಲು ಅಥವಾ ಹಾಲೆ, ಕೆಲವು ವೇಳೆ ದ್ರವಾಶಯಗಳುಳ್ಳವು (ಕೀಟಬಿ. ೪೨) ; ಗಂಟಲಿಗೆ ಸೇರಿದಂತೆ, ಅಂತರ್ಜೀವಕದಲ್ಲಿ ಒಂದು ದ್ರವಾಶಯ (Reservoir) ವಿರುವುದು (ಪ್ರಾಚಿಶಾ. ೫೨). 'ಜಲಾಶಯ' ಪರಾ. [ ದ್ರವ + ಆಶಯ ]

**ದ್ರವಿಡ** (ನಾ). ೧. ಭಾರತದ ದಕ್ಷಿಣ ಪ್ರದೇಶದ ಪೂರ್ವತೀರದ ಪ್ರದೇಶ; ದ್ರಾವಿಡದೇಶ ; ತಮಿಳುನಾಡು : ಕರ್ಣಾಟಾಂಧ್ರ ದ್ರವಿಡ ವರಾಟ . . . ಪಾಂಚಾಲ ವೆಂಗಿ ತೌಳವಾದಿ ದೇಶಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವವಿಷಯಭಾಷಾಜಾತಿಗಳಕ್ಕುಂ (ಛಂದೋಂಬು. ೧-೪೭) ; ಸೌರಾಷ್ಟ್ರ ಗುಜರಾಷ್ಟ್ರ ತುರುಕಾ ಇವು ಸ್ತ್ರೀರಾಜ್ಯ ವದ್ರ ದ್ರವಿಡವೂ (ದೇವಾಂಪು. ೬-೪೧) ; ಸೌರಾಷ್ಟ್ರ ಸಿಂಗಳ ದ್ರವಿಡ ಕಾಂಬೋಜದೇಶದ ಸಕಲಶರಣ ರೈತರುತಿರ್ದರು (ಚಬಪು. ೬-೪೯). ೨. ತಮಿಳುನಾಡಿನ ಜನಾಂಗದ ಅಥವಾ ನಿವಾಸಿಗಳ ಹೆಸರು : "ತಿಗುಳನೆನೆ ದ್ರವಿಡ" (ಶಬ್ದಮಂ. ೬೫) ; ಈ ದೇಶದ ಮೂಲನಿವಾಸಿಗಳು ದ್ರವಿಡರು (ಮುಂಬಯಿ. ೪-೧೨೩). ೩. ದ್ರಾವಿಡ ಭಾಷೆಗಳಲ್ಲಿ ಒಂದು ; ತಮಿಳು. 'ದ್ರವಿಡ ಭಾಷೆ' ಪರಾ. [ ಸಂ. ]

**ದ್ರವಿಡಭಾಷೆ** (ನಾ). ತಮಿಳು ಭಾಷೆ : ಪಿಳ್ಳೆನೈನಾರರಿಂಬಾಗಿರ್ದೊಂದಿತಿಹಾಸಮಂ ದ್ರವಿಡಭಾಷಾಭೇದದಿಂ ಮಾಡಿದರ್ (ರಾಜಶೇ. ೧-೭೭) ; ತಮಿಳಿಗೆ ದ್ರವಿಡಭಾಷೆ ಎಂಬ ಹೆಸರು ತೀರ ಇತ್ತೀಚಿನ ಗ್ರಂಥಗಳಲ್ಲೂ ಸಿಗುತ್ತದೆ (ದ್ರಾವಿವಿ. ೧೧೧). [ ದ್ರವಿಡ + ಭಾಷೆ ]

**ದ್ರವಿಡಮುಂಟಿನ್ಯಾಯ** 'ದ್ರವಿಡಮುಂಟಕನ್ಯಾಯ' ನೋ.

**ದ್ರವಿಡಮುಂಟಕನ್ಯಾಯ, ದ್ರವಿಡಮುಂಟಿನ್ಯಾಯ, ದ್ರವಿಡಮುಂಡಕನ್ಯಾಯ** (ನಾ). ಅನವಶ್ಯಕವಾದ ಶ್ರಮ ; ವೃಥಾ ಶ್ರಮ ; ಸುತ್ತು ಬಳಸು : ಅಜ್ಞಾನಿಂದಲೆ ದ್ರವಿಡಮುಂಟಕನ್ಯಾಯದಿಂ ಗುರುಸಿದ್ಧನೊಲವಹುದು ಕರ್ಮದಿಂದಿಲ್ಲಂ ಜಡಯುತೆ ನ ಕರ್ಮಣಾ ಎಂದಿಂತು ಶ್ರುತಿ ಮತ್ತೆ ಹರುಷದಿಂ ಜ್ಞಾನಾತ್ ಎನುತೆ ಪೊಗಳಿರಲು (ಕೃಕವ. ೫-೫-೫). **ದ್ರವಿಡಮುಂಟಿನ್ಯಾಯ** : ಈ ದೇಶದಲ್ಲಿ ನಿರಾಯಾಸದಿಂದ ಕೂರಿಗೆಯಲ್ಲಿ ನೆಲ್ಲು ಬಿತ್ತಿ ಬೆಳೆಯುವುದಕ್ಕಾಗಿ ಸುಲಭವಾದ ಭೂಮಿ ಇರಲಾಗಿ "ದ್ರವಿಡ ಮುಂಟಿ" ನ್ಯಾಯದಂತೆ ತೋಟಗಳಲ್ಲಿ ಗದ್ದೆಯನ್ನು ಮಾಡುವ ಪ್ರಯೋಜನವಿಲ್ಲ (ಕೃಷಿಪ್ರ. ೨೦೩). **ದ್ರವಿಡಮುಂಡಕನ್ಯಾಯ** : ಘನಮುಕ್ತಿಯನೀವ ಮತವನುಳಿದು ಮಹಾಯಾತನೆಗೈಯ್ಯುವರೊಲಿದಾತಂಗನುವಕ್ಕುಂ ದ್ರವಿಡ ಮುಂಡಕನ್ಯಾಯಮಿದುಂ (ಶರಗೀ. ೦-೬) 'ದ್ರಾವಿಡ ಪ್ರಾಣಾಯಾಮ' ಪರಾ. [ ದ್ರವಿಡ + ಮುಂಟಕ ? + ನ್ಯಾಯ ]

**ದ್ರವಿಡಮುಂಡಕನ್ಯಾಯ** 'ದ್ರವಿಡಮುಂಟಕನ್ಯಾಯ' ನೋ.

**ದ್ರವಿಡವೇದ** (ನಾ). ತಮಿಳುದೇಶದ ವೈಷ್ಣವಭಕ್ತರು ಶರಣಾಗತಿ ತತ್ತ್ವವನ್ನು ಬೋಧಿಸಲು ರಚಿಸಿದ ವೇದಾಂತತತ್ತ್ವಗಳನ್ನೊಳಗೊಂಡ ಕೃತಿಗಳು ; ಆಳ್ವಾರುಗಳ ರಚನೆಗಳು. [ ದ್ರವಿಡ + ವೇದ ]

**ದ್ರವಿಡಾಮ್ನಾಯ** (ನಾ). = ದ್ರವಿಡವೇದ. [ ದ್ರವಿಡ + ಆಮ್ನಾಯ ]

**ದ್ರವಿಣ** (ನಾ). ೧. ಆಸ್ತಿ ; ಸಂಪತ್ತು ; ಐಶ್ವರ್ಯ : "ದ್ಯುಮ್ನಮಾ ದ್ರವಿಣಮಾ ದ್ರವ್ಯವೆಂದೆನಲು ವಿತ್ತಮದಕ್ಕು" (ಮಂಗರಾ. ೧೭-೦೬) ; ಸಾಹಸದ್ರವಿಣಸಾಧನದಂತೆಯುಂ ಗುಣಗಣಮಣಿಗಣಕೋಶಗೃಹದಂತೆಯುಮಾಗಿ (ಶಾಂತಿಪು. ೧-೮೦) ; ಗುಣದ್ರವಿಣದಿನಿರ್ವರುಂ ವಿನಯದಿಂ ಸಭೆಗುತ್ಸವಮಂ ನಿಮಿರ್ಚಿದರ್ (ಪುಷ್ಪಪು. ೪-೬೩) ; ಸುಕವಿನಿಕರ ದಾರಿದ್ರ್ಯ ವಿದ್ರಾವಣ ದ್ರವಿಣ ಧಾರ ಧಾರಾಧರ ಕರಾಗ್ರ ಪರಿಹೃತ ಸುರಧರಾರುಹ ಪ್ರಭಾವನುಂ (ರಾಜಶೇ. ೫-೧). ೨. ಹಣ ; ಉಪಾಧ್ಯಿಯೊಳ್ ದ್ರವಿಣಮಂ ಬಯ್ಸು (ಆದಿಪು. ೫-೪) ; ಆ ಕೃಷೀವಲಂ ನೇಗಿಲಂ ಪಿಡಿದು ಪೊಡೆದು ಕಳಶಮಂ ಕಂಡು ಚೋದ್ಯಂಬಟ್ಟು ಇಂದಿಲ್ಲಿಯುಂಡಾತನ ದ್ರವಿಣಮಾಗದೆ ಮಾಣದಾನಿದಂ ಮನೆಗೊಯ್ವುದನುಚಿತಮಾತನಂ ಕರೆದೀವೆನೆಂದು . . . ಎಯ್ದೆವಂದು ಪೊಡವಟ್ಟಿಂತೆಂದಂ (ಪುಣ್ಯಾಸ್ರ. ೧೨-೧೭ ವ). ೩. ಚಿನ್ನ. ೪. ಕಸುವು ; ಬಲ ; ಶಕ್ತಿ. ೫. ಶೌರ್ಯ; ಪರಾಕ್ರಮ. ೬. ವಸ್ತು; ಪದಾರ್ಥ. [ ಸಂ. ]

**ದ್ರವಿಣೇಂದ್ರ** (ನಾ). ಧನದ ಅಧಿಪತಿ ; ಅಷ್ಟದಿಕ್ಪಾಲಕರಲ್ಲಿ ಒಬ್ಬನಂ ; ಕುಬೇರ : ಇಂದ್ರಂ ದಲಗ್ನಿಯುಮನುಂ ರುಂದ್ರತೆಯಿಂ ನಿರುತಿ ವರುಣನುಂ ವಾಯು ದ್ರವಿಣೇಂದ್ರಂ ಲಸದೀಶಾನಂ ಸಾಂದ್ರರ್ ದಿಕ್ಪಾಲಕರಷ್ಟಕಂ (ಹಾಲಾಸ್ಯ. ೪-೧೭-೨೫). [ ದ್ರವಿಣ + ಇಂದ್ರ ]

**ದ್ರವಿತ** (ನಾ). ೧. (ಮನಸ್ಸು) ಕರಗುಂವಿಕೆ, – ಆರ್ದ್ರವಾಗುವಿಕೆ : ಅವಳನ್ನು ಕಂಡೊಡನೆ ಸಿದ್ಧನಾಥನ ತಪಸ್ವೀಹೃದಯಂವೂ ದ್ರವಿತವಾಯಿತು (ಅಶ್ರು. ೭). ೨. ಅನುಕಂಪೆಯಿಂದ ಕರಗಿದವನಂ ; ಮೃದುವಾದ ಮನಸ್ಸನ್ನು ಹೋದಿದವನಂ : ಸ್ನೇಹದಿಂದ ದ್ರವಿತನಾಗಿ ತನ್ನ ಕೈಯನ್ನು ಕೋಮಲವಾದ ಮಾಯಾದೇವಿಯ ಭುಜದ ಮೇಲಾಡಿಸಿದನು (ಮೃಜಲ. ೧೦೧). [ಸಂ]

**ದ್ರವಿಯಿಸು** 'ದ್ರವಿಸು' ನೋ.

**ದ್ರವಿಸು, ದ್ರವಿಯಿಂಸು** (ಕ್ರಿ). ೧. ತೊಟ್ಟಿಕ್ಕು ; ಸಂರಿ ; ಸ್ರವಿಸಂ : ಜೇನುತುಪ್ಪಂ, ಹಿಕ್ಕವತ್ತಿಗೆಯ ಬೇರ ರಸಂ, ಕರ್ಪೂರಂ ಇವನೊಂದಾಗಿ ಕೂಡಿ ಆವುದೊಂದು ಕಂಪುಳ್ಳ ಪೂಗಳ ಮೇಲೆ ತೊಡೆಯಲ್ ಆ ಪೂಗಳ್ ದ್ರವಿಸಿ ಪರಿಮಳಂಗಿಡದೆ ಕಂಪಪ್ಪುವು (ಲೋಕೋಪ. ೭-೪೭ ಟೀಕು) ; ಶಶಿಕಾಂತದಿಂದೆಸೆವ ಕನ್ನಡಿಗೋಡೆಯ ಬಂದು ಮುಟ್ಗೊಂಡಿರಲ್ಕದು ದ್ರವಿಸುತಿರಲಾಗಿ (ಭಿಕ್ಷಾ. ೩-೩೨) ; ತಾವವನೀಶನೊಡಗೂಡಿದಂತೆ ನವ ಭಾರತಿಯಲ್ಲಿ ತಣಿದರಿಂದ್ರಿಯರಸ ದ್ರವಿಸಿತು ಮುಟ್ಟಿಯ ಮಾತೇನು (ಭರತ ೧೨-೧೩೭) ; ಚಂದ್ರಕಿರಣಗಳು ಸೋ[ ಸೋ ]ಂಕಿದ ಚಂದ್ರಕಾಂತಿಮಯವಾದ ಪುತ್ಥಳಿ ಬೆವರ್ವಂತೆ ಸ್ತ್ರೀರು ಆ ಪರಿ ಕಾಮುಕಳೆಯು ದ್ರವಿಸುವುದು (ಸೌಗಂಧಿ. ೪೯೩-೯). ೨. ರಮಿಂಸು ; ಕ್ರೀಡಿಸಂ : ಕೂಟದೊಳ್ಮನ ಮುಳುಗಿ ಸೌಖ್ಯದಿಂ ದ್ರವಿಸುವರ್ಕಾಮುಕಲೆಯುರಿದಂಗನೆಯರಲ್ಲಿ ದೊರೆಕೊಂಡ ಪುರುಷರೊಡನೆ (ಜೈಮಿಭಾ. ೧೫-೪೭). ೩. ಹಸಿಯಾಗಿರು ; ಒಣಗದಿರಂ ; ಬಾಡದಿರಂ. ೪. (ಮನಸ್ಸು) ಕರಗಂ,–ಆರ್ದ್ರವಾಗಂ : (+). ೫. ದ್ರವವಾಗಂ; ನೀರಾಗು : ಎಳೆಯಬಾಳೆಯ ಕಾಯಿ . . . ಜಾದಿಯ ಸೊಪ್ಪು[ವು]ರ ನೇಟ್ಲಿ ತಳಿರು ಮತ್ತಿವರ ತೊಕ್ಕವಟ್ಟೊಳಗೆಯೊಂದೊಂದ ಕಳಿತಬಾಳೆಯ ಹಣ್ಣನೊಳು ಕಲಸಿ ಬಲು ಬಿಸಿಲಿನೊಳಗಿರಿಸೆ ತಾಂ ದ್ರವಿಸಿ ರಸಮೊಸರೆ ಪಾನ ಕಕ್ಕತಿ ಸೊಗಸುವಡೆದಿರ್ಪುದು (ಸೂಪಶಾ. ೨-೩೪) ; ಬೆಂಗದಿರನುರಿಗೆ ಕರ್ಪೂರಶಿಲೆಯಂತೆವೋಲ್ ದ್ರವಿಸಿತಾ ಕೆರ್ಬಂಡೆ (ಶ್ರೀರಾಮಾ. ೩೮-೨೮೫).

**ದ್ರವಿಯಿಸು:** ೧. ಆರನೇಟ್ಲಿ ಪಣ್ಣಾಳನಿಕ್ಷುರಸದೊಳಿಂಬಾಗಿ ತೊಡೆ[ಳೆ]ದಂ ಘರ್ಮದೊಳಿಡುಗಚ್ಚರಿಯೆನೆ ತತ್ಕ್ಷಣದಿಂದವಟಿ ರಸಂ ದ್ರವಿಯಿಸಂ ಮಾವಗಂ (ಲೋಕೋಪ. ೮-೩೭). ೩. ಕುದಿಯುಸಿ ಶಿಗ್ರುಮೂಳರಸಮಂ . . . ಪೂಸಿ ಬಟ್ಟಲೊಳ್ ಸದಮಳ ಕೇತಕೀದಳಮನಿಕ್ಕಿರದಿಂಬಿನೊಳಂ ವಿಶಿಷ್ಟದಿಂ ಮೃದುತರಮಪ್ಪಿಯೊಳ್ ಮಿದಿಯನಿಕ್ಕಲೊಡಂ ದ್ರವಿಯಿಕ್ಕು ಮಾವಗಂ (ಲೋಕೋಪ. ೭-೪೮). ೪. ಎಳೆಯ ಕಟುಂಕೆ ನೇಟ್ಲಿಲೆಯೆಂಬಿವ ನಿಂಬಿನೆ ಪೂಸಿ ಘರ್ಮದೊಳ್ ಕಳೆದೊಡೆ ಬೆಚ್ಚರಂ ಸುಲಿದ ಬಾಟೆಯ ಪಣ್ ದ್ರವಿಯಿಕ್ಕುಮಾವಗಂ (ಲೋಕೋಪ. ೮-೩೭). ೬. ಒಸರು ; ಜಿನುಗು : ಚಂದ್ರಿಕೆಯಿಂದಂ ದ್ರವಿಯಿಪ ಚಂದ್ರೋಪಲದಂತೆ ನಿನ್ನ ಗುಣಗಣದಿಂದ ಚಂದ್ರಮುಖಿ ನಾಂದನಾಗಿ ನರೇಂದ್ರಂ ನುಡಿಯಲ್ಕುಮುಟ್ಯಿದಿರ್ಪಂ (ಕಾದಂಉ. ೧೭೭). [ ದ್ರವ + – ಇಸು ]

**ದ್ರವಿಳ** 'ದ್ರವಿಂಟ' ನೋ.

**ದ್ರವಿಳಗಣ** 'ದ್ರವಿಟಗಣ' ನೋ.

**ದ್ರವಿಳದೇಶ** (ನಾ). ದ್ರಾವಿಡದೇಶ ; ತಮಿಳರ ನಾಡು : ದ್ರವಿಳ[ಾ ಕಾಂ ಡ]ದೇಶದೊಳರಸ ಕೇಳೊರ್ವನಿಪಂ . . . ಭವರಹಿತನಿಟಿಭಕ್ತನೆಂಬಾ ಶಿವಗಣಾಗ್ರಣಿ ವಿತರಣದ ಕಣಿ ಸುವಿಮಳ ಸದಾಚಾರಮಾರ್ಗ ಸದಾನು ಪಾಲಕನು (ಬಸಪು. ೨೨-೧). [ ದ್ರವಿಳ (<ದ್ರವಿಂಟ) + ದೇಶ ]

**ದ್ರವಿಳಸಂಘ** (ನಾ). [ಜೈನ] ದಕ್ಷಿಣದೇಶದಲ್ಲಿ ನೆಲಸಿದ ಜೈನಮುನಿಗಳ ಸಂಘಗಳಲ್ಲಿ ಒಂದು : ಅಯಿಜ ೩೦೦ಬಟ[ಲಾ] ಊರೂರಲು ಪಣ ೨ ಇನ್ನಿನಿತುಮಂ ದ್ರವಿಳಸಂಘಾಶ್ರಯುಮಪ್ಪ ಪಲ್ಲವಜಿನಾಲಯಕ್ಕೆ ಕೊಟ್ಟಂ (ಕಇಅ. ೪೧-೫೮-೨೪ ; 1087) ; ಶ್ರೀಮದ್ರವಿಳಸಂಘದರುಙ್ಗಳಾನ್ವಯದ ಗುಡ್ಡರಪ್ಪ ಶ್ರೀಮತುನಾರಸಿಙ್ಗ ಹೊಯ್ಸಳಗಾವುಣ್ಡಂ (ಎಕ.VI, ಕಡೂರು. ೬೯-೨೭ ; 1160). 'ದ್ರಾವಿಡಸಂಘ' ಪರಾ. [ ದ್ರವಿಳ (<ದ್ರವಿಂಟ) + ಸಂಘ ]

**ದ್ರವಿಟ** 'ದ್ರವಿಂಟ' ನೋ.

**ದ್ರವಿಟಗಣ, ದ್ರವಿಳಗಣ** (ನಾ).=ದ್ರವಿಂಟ : ೨ ಪೋಚಬ್ಬರಸಿಯರ್ದ್ರವಿಟಗಣದ ನನ್ದಿಸಂಘದರುಙ್ಗಳಾನ್ವಯದ ಗುಣಸೇನಪಣ್ಡಿತದೇವರ ಗುಡ್ಡಿ ಮಾಡಿಸಿದ ಬಸದಿ (ಎಕ. I (R), ೬೯-೧ ; ಸು. 11ನೆಯ ಶಶ). ದ್ರವಿಳಗಣ : ಪೋಚಬ್ಬರಸಿಯರ್ತಮ್ಮ ಗುರುಗಳು ದ್ರವಿಳಗಣದ ನಂದಿಸಂಘದರುಂಗಳಾನ್ವಯದ ಗುಣಸೇನಪಣ್ಡಿತದೇವರ್ಗ್ಗೆ ಮಾಡಿಸಿ ಧಾರಾಪೂರ್ವಕಂ ಕೊಟ್ಟರು (ಎಕ. I (R), ೭೨-೪೨ ; 1059 ; ಎಕ. IX, ಕೊಡಗು. ೩೫-೪೩ ; 1058 ನೋ) ; ಗುರುಗಳ್ಸಿದ್ಧಾನ್ತ ತತ್ತ್ವಪ್ರಕಟನಪಟುಗಳ್ಪುಷ್ಪಸೇನವ್ರತೀಂದ್ರುರ್ವ್ವರ ಸಂಘನ್ನನ್ದಿಸಂಘಂ ದ್ರವಿಳಗಣಮಂ[ ಹಾ ]ರುಙ್ಗಳಾಮ್ನಾಯನಾಥಂ (ಎಕ. I (R), ೭೦-೩೪ ; 1064). [ ದ್ರವಿಟ (<ದ್ರವಿಂಟ) + ಗಣ ]

**ದ್ರವೀಕರಣ** (ನಾ). ೧. ಕರಗಿಸಂವಿಕೆ ; ನೀರನ್ನಾಗಿ ಮಾಡುವಿಕೆ : ಅವನು ವಾಯುಗಳ ದ್ರವೀಕರಣ ( Liquefaction ) ಮಾಡಿದುದನ್ನು ವ್ಯಾಪಾರಕ್ಕಾಗಿ ತಾನು ಉಪಯೋಗಿಸಿಕೊಳ್ಳಲಿಲ್ಲ (ವಿಜ್ಞಾಕ. ೮೫). ೨. ಹಸಿಮಾಡುವಿಕೆ ; ತೇವಗೊಳಿಸಂವಿಕೆ : "ನಾಂದು – ದ್ರವೀಕರಣೇ" (ಶಮುಧಾ). ೩. ಹನಿಯಂವಿಕೆ ; ಸ್ರವಿಸಂವಿಕೆ. [ ಸಂ. ]

**ದ್ರವೀಕರಿಸು** (ಕ್ರಿ). ಕರಗಿಸಂ; ಆರ್ದ್ರೀಕರಿಸಂ : ಯಾವುದು . . . ನಮ್ಮ ಮನಸ್ಸನ್ನು ದ್ರವೀಕರಿಸುತ್ತದೆಯೋ ಮತ್ತು ತನ್ಮೂಲಕ ಮನಸ್ಸನ್ನು ಆನಂದಪಡಿಸಂತ್ತದೆಯೋ ಅದು 'ಸುಂದರ' (ಸೌಂದಸ. ೪೭). [ ದ್ರವೀಕರಣ + – ಇಸು ]

**ದ್ರವೀಕೃತ** (ಗು). ಕರಗಿಸಿದ : ದ್ರವೀಕೃತ ಶಿಲಾಲೋಹಪ್ರವಾಹಂಗಳಂ ಓಕರಿಸುವಗ್ನಿಕುಕ್ಷಿಲದಂದದೊಳಿಂತು ಕರೆದನುರಿಪೆಂಕೆಯಂ ಮೇಘನಾದಂ (ಶ್ರೀರಾಮಾ. ೫೭೭-೪೨೯). [ ಸಂ. ]

**ದ್ರವ್ಯ** (ನಾ). ೧. ವಸ್ತು ; ಪದಾರ್ಥ : ಮುಕುಂದಂ ನಗಯುಜ್ಯೋಪಯೋಗ್ಯ ದ್ರವ್ಯಂಗಳಂ ತಂದು (ಜಗವಿ. ೪-೮೦ ಪ) ; ಅನಲನ ನಂಗಿದ ಶಿಲೆಯಂತೆ ಅರುಣನ ಕಿರಣವ ಕೊಂಡ ದ್ರವ್ಯದಂತೆ ಇನ್ನೇನುಪಮಿಸುವೆ (ಮೋಳಿಮಾ. ೬-೨೨) ; ವಸ್ತುವಿನ ಗುಣಗಳಲ್ಲಿ ಅದರಲ್ಲಿರುವ ದ್ರವ್ಯದ ಮೊತ್ತವೂ (Mass) ಒಂದು (ಶಿಲ್ಪನಾ. ೧೮೪). ೨. ಮೂಲವಸ್ತು ; ಕಚ್ಚಾಮಾಲು : ಯಾವುದು ಉಪಾದಾನಕಾರಣವಾಗಿರುವುದೋ ಅದು ದ್ರವ್ಯವೆನಿಸಿಕೊಳ್ಳುವುದು (ತತ್ವಸು. ೨). ೩. ಆಸ್ತಿ ; ಐಶ್ವರ್ಯ; ಸಂಪತ್ತು : "ದ್ರವಿಣಂ ದ್ರವ್ಯಂ ವಸ್ವರ್ಥವಿತ್ತ ರೈ ರಿಕ್ಥ ಸಾರಧನವೇ ಕಾರ್ಥಂ" (ವಸ್ತುಕೋ. ೨೪-೧೨) ; "ದಂ್ಮ್ಮನುಮಾ ದ್ರವಿಣಮಾ ದ್ರವ್ಯವೆಂದೆನಲು ವಿತ್ತಮುದಕ್ಕು" (ಮಂಗರಾ. ೧೭-೧೬) ; ಹುಟ್ಟುತ ದ್ರವ್ಯವನಟಿಯದವಂಗೆ ಐಶ್ವರ್ಯವಂತ ಮಗನಾದರೆ ಲಕ್ಷಸಂಖೆಯ ಹಿರಣ್ಯವ ತಂದು ಸಂತೋಷ ಪಡಿಸುವಂತೆ (ಬಸವ. ೭೦೫). ೪. ಹಣ ; ಧನ : ಚಂದ್ರಾದಿತ್ಯರುಮಂ . . . ಒಸೆದರ್ಚಿಸಿ ಭೂಪೇಂದ್ರಂ ದ್ವಿಜರ್ಗಾದರದಿಂ ದ್ರವ್ಯಮನೀಯಲನಿತುಮಂ ಪಶಮಮಕ್ಕುಂ (ಲೋಕೋಪ. ೪-೪೩) ; ದೇವರ ನಂದಾದೀವಿಗೆಗಲ್ಲಿಂದೆಯ ಮುದ್ರಾಮಣದ ಸುಂಕದೊಳಗೆ ಶಿಂಗಲ್ಲಿಂಗಲ್ಗೆ ಹತ್ತುಹತ್ತು ದ್ರ[ ವ್ಯಮಂ ] ಬಿಟ್ಟಂ (ಎಇ. XXVIII, ೩೫-೫೬ ; 1082) :

ಬಗ್ಗಾಲಿ ತನಗೆ ನೀಡಲಾದ ಅಷ್ಟಲ್ಲ ದ್ರವ್ಯವನ್ನು ಮರಳಿ ಮುದುಕನಿಗೇ ಅರ್ಪಿಸಿ . . . ಸಾಷ್ಟಾಂಗನಮಸ್ಕಾರ ಹಾಕಿದನು (ಕಂಬಕು. ೨೧); ದ್ರವ್ಯವಿದ್ದವನು ತಿಂದು ಸಾಯುಲಿಲ್ಲ, ಸಾಲ ಮಾಡಿದವನು ತಿದ್ದಿ ಸಾಯುಲಿಲ್ಲ (ಗಾದೆ). ೫. ಒಂದು ಬಗೆಯ ನಾಣ್ಯ ಮತ್ತು ಅದರ ತೂಕ: ಒಂದು ದ್ರವ್ಯದಷ್ಟು ಹಿಪ್ಪಲಿಚೂರ್ಣವನ್ನು ಈ ಹಿಪ್ಪಲಿಯೊಳರ್ಧ ಗಾಜುಲವಣವನ್ನು ಚೂರ್ಣವಂ ಮಾಡಿ ಹಾಕಿ . . . ಒಂದು ಗುಳಿಗೆಯಂ ಕೊಡೆ ಜ್ವರಾತಿಸಾರ ಗ್ರಹಿಣಿ ಮುಂತಾಗಿ ಮಾಣ್ಗುಂ (ಸಕವ್ಯ. ೩೦೯). ೬. ಮರದಿಂದ ಮಾಡಿದ ಪ್ರತಿಮೆ: "ಮರದಿಂದ ಮಾಡಿದ ರೂಪು ಕಸ್ವರ ಷಡುದ್ರವ್ಯಂಗಳುಂ ದ್ರವ್ಯಮಕ್ಕು" (ನಾನಾರ. ೧೬೩). ೭. ಔಷಧಿ; ಮೂಲಿಕೆ: ಸಿರಿಸಂ ಗೋದಿ(ಣ) ಪಟೋಳಮಾಡುಳೆಚಮಾ ಸಪ್ತಚ್ಛದಂ ಬೇವು ಭಿನ್ನರುಹಂ ಪುಲ್ಗಿಲೆನಿಪ್ಪುವಂ ತೆಗಟಿ ತದ್ದ್ರವ್ಯಂಗಳಂ ಕೊಂಡು ನೆಯ್ವರಸಟ್ಟಿಕ್ಕುಗೆ . . . ಮಾಣ್ಗುಂ ಕಫಂ (ಲೋಕೋಪ. ೯-೨೨೩): ಅಡಕಪುಟ್ಟನಬೇರು, ಬಿಳಿಹುಲಿಗಿಡದ ಬೇರು, ನೆಲತಾಟಿಗೆಡ್ಡೆ ಈ ಮೂರು ದ್ರವ್ಯಗಳನ್ನೂ . . . ಕಲ್ಕಮಾಡಿ ಸೇವಿಸಿದರೆ ಮೂತ್ರಕೃಚ್ಛ್ರ ಮತ್ತು ಶುಕ್ಲಮೇಹ ಮಾಣುವುವು (ಸಕವ್ಯ. ಪರಿ. ೪೯೩). ೮. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ: "ದಾ, ಖರ, ದ್ರವ್ಯ, ಋತು ... ಇಂತಿನಿತುಂ ಒಕ್ಕ ಪೆಸರು" (ವ್ಯವಹಾ. ೧೦-೨೩). ೯. [ತರ್ಕಶಾ] ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಮತ್ತು ಅಭಾವಗಳೆಂಬ ಏಳು ಬಗೆಯ ಪದಾರ್ಥಗಳಲ್ಲಿ ಒಂದು: ಕಾಣಾದವೆಂಬ ವೈಶೇಷಿಕ ಶಾಸ್ತ್ರವೇ ದ್ರವ್ಯ ಗುಣ ಕರ್ಮ . . . ಅಭಾವಗಳೆಂಬ ಪದಾರ್ಥ ಸಪ್ತಕಮಂ ಪ್ರತಿಪಾದಿಸುವುದಱಿಂ (ವಿವೇಕ. ೧೦); ವೈಶೇಷಿಕ ದರ್ಶನದಲ್ಲಿ ಸಾಮಾನ್ಯವಾಗಿ ಪ್ರಪಂಚವನ್ನು ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಮತ್ತು ಅಭಾವವೆಂದು ಏಳು ಪದಾರ್ಥಗಳಾಗಿ ವಿಭಾಗ ಮಾಡಿರುವರು (ಹಿಂದಶಾ. ೧೦೨). ೧೦. ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ವಿಶಿಷ್ಟ, ಅಂಶಿ, ಶಕ್ತಿ, ಸಾದೃಶ್ಯ ಮತ್ತು ಅಭಾವಗಳೆಂಬ ಹತ್ತು ಬಗೆಯ ಪದಾರ್ಥಗಳಲ್ಲಿ ಒಂದು; ℗ (ತಾರ್ಕಿಕದರ್ಶನದಲ್ಲಿ ಪ್ರಮೇಯಶಾಸ್ತ್ರವೆಂದು ಪರಿಗೃಹೀತ ವಾಗಿರುವ) ವೈಶೇಷಿಕದರ್ಶನದ ಪ್ರಕಾರ ಪದಾರ್ಥಗಳ ಸಂಖ್ಯೆ ಏಳಾದರೆ, ದ್ವೈತದರ್ಶನದ ಪ್ರಕಾರ ಇವುಗಳ ಸಂಖ್ಯೆ ಹತ್ತು ಎಂದಾಗಿದೆ. ದ್ವೈತದರ್ಶನದಲ್ಲಿ ಮಾಡಿಕೊಂಡಿರುವ ವಿಭಾಗದ ಹತ್ತು ಬಗೆಗಳು ಮತ್ತು ಅವುಗಳ ವಿವರಣೆ ಕೆಳಕಂಡಂತೆ ಇದೆ:- (೧). ದ್ರವ್ಯ:-ಪರಮಾತ್ಮ, ಲಕ್ಷ್ಮಿ, ಜೀವಾತ್ಮ, ಅವ್ಯಾಕೃತಾಕಾಶ, ಪ್ರಕೃತಿ, ಗುಣತ್ರಯ, ಮಹತ್ತತ್ತ್ವ, ಅಹಂಕಾರತತ್ತ್ವ, ಬುದ್ಧಿ, ಮನಸ್ಸು, ಇಂದ್ರಿಯ, ಮಾತ್ರಾ, ಭೂತ, ಬ್ರಹ್ಮಾಂಡ, ಅವಿದ್ಯೆ, ವರ್ಣ, ಅಂಧಕಾರ, ಕಾಲ, ವಾಸನಾ, ಪ್ರತಿಬಿಂಬ ಎಂದು ಇಪ್ಪತ್ತು ವಿಧಗಳು. (೨). ಗುಣ:-ಇದರಲ್ಲಿ ನಲವತ್ತು ವಿಧಗಳಿವೆ. ವಿವರಣೆಗೆ- 'ದ್ರವತ್ವ' ಪರಾ. (೩). ಕರ್ಮ:-ವಿಹಿತ, ನಿಷಿದ್ಧ, ಉದಾಸೀನ ಎಂದು ಮೂರು ವಿಧ. ಶಾಸ್ತ್ರಾಧಿಕಾರಿಗಳ ಕರ್ಮವೆಲ್ಲವೂ ವಿಹಿತ, ನಿಷಿದ್ಧಗಳಲ್ಲಿ ಸೇರುವುವು. ಚಲನೆಯೆಂಬ ಇತರ ದ್ರವ್ಯಗಳಲ್ಲಿರುವ ಕರ್ಮ ಉದಾಸೀನ. (೪). ಸಾಮಾನ್ಯ:-ಜಾತಿ, ಉಪಾಧಿ ಎಂದು ಎರಡು ವಿಧಗಳಿವೆ. ಆತ್ಮತ್ವ, ಮನುಷ್ಯತ್ವ, ಗೋತ್ವಾದಿಗಳು ಜಾತಿ ಗಳು. ಸರ್ವಜ್ಞತ್ವ, ಪ್ರಮೇಯತ್ವ, ವಾಚ್ಯತ್ವಾದಿಗಳು ಉಪಾಧಿ ಗಳು. (೫). ವಿಶೇಷ:-ಭೇದವಿಲ್ಲದಿರುವ ವಸ್ತುವಿನಲ್ಲಿ ಭೇದವ್ಯವ ಹಾರಕ್ಕೆ ನಿರ್ವಾಹಕವಾಗಿರುವುದು. (೬), (೭). ವಿಶಿಷ್ಟ, ಅಂಶಿ:- ಈ ಎರಡು ಪದಾರ್ಥಗಳು ಅಬಾಧಿತ ಪ್ರಾಮಾಣಿಕ ವ್ಯವಹಾರ ದಿಂದ ಅಂಗೀಕರಿಸಲ್ಪಟ್ಟಿರುವುವು. (೮), (೯), (೧೦). ಶಕ್ತಿ, ಸಾದೃಶ್ಯ, ಅಭಾವ:-ಈ ಮೂರು ಪದಾರ್ಥಗಳೂ ಇತರ ದರ್ಶನ ಗಳಲ್ಲಿರುವ ಹಾಗೆಯೇ ಪ್ರಾಯಃ ಇಲ್ಲಿಯೂ ಇರುವುವು. ಸಹಜ ಶಕ್ತಿ, ಆಧೇಯಶಕ್ತಿ, ಪದಶಕ್ತಿ-ಈ ಮೂರು ಪ್ರಸಿದ್ಧವಾದುವುಗಳು. ಪರಮಾತ್ಮನಲ್ಲಿ ಅಚಿಂತ್ಯಶಕ್ತಿಯೊಂದಿರುವುದು. ಪದಶಕ್ತಿಯಲ್ಲಿ ಮುಖ್ಯ ಗೌಣಗಳಲ್ಲದೆ ಪರಮಮುಖ್ಯವೆಂದೊಂದು ಸ್ವೀಕರಿಸಲ್ಪಟ್ಟು ಸಕಲ ಶಬ್ದವಾಚ್ಯತ್ವವೂ ಪರಮಾತ್ಮನಿಗೆ ಸ್ಥಾಪಿಸಲ್ಪಟ್ಟಿರುವುದು. ಅಭಾವದಲ್ಲಿ ಭೇದವೆಂಬ ಅನ್ಯೋನ್ಯಾಭಾವವು ಆಶ್ರಯಸ್ವರೂಪ ವಾಗಿರುವುದು. ಅತ್ಯಂತಾಭಾವವು ಅಸತ್ಪ್ರತಿಯೋಗಿಕವು. ಶಶಶೃಂಗ, ಗಗನಕುಸುಮ ಮೊದಲಾದ ಅಪ್ರಾಮಾಣಿಕ ಅಸದ್ವಸ್ತು ಗಳ ಅಭಾವವು: ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ವಿಶಿಷ್ಟ, ಅಂಶಿ, ಶಕ್ತಿ, ಸಾದೃಶ್ಯ, ಅಭಾವ ಎಂದು ಪದಾರ್ಥಗಳು ಹತ್ತು (ಹಿಂದಶಾ. ೨೬೩). ೧೧. [ಬೌದ್ಧ] ಜಾತಿ, ಗುಣ, ಕ್ರಿಯೆ, ನಾಮ ಮತ್ತು ದ್ರವ್ಯಗಳೆಂಬ ಐದು ವಿಧವಾದ ವಿಕಲ್ಪಗಳಲ್ಲಿ ಒಂದು: ವಿಕಲ್ಪಗಳು ಐದು-ಜಾತಿ, ಗುಣ, ಕ್ರಿಯೆ, ನಾಮ ಮತ್ತು ದ್ರವ್ಯ ಎಂದು. ಜಾತಿ, ಗುಣ, ಕ್ರಿಯೆಗಳು ಅಭಿನ್ನವಸ್ತುವಿನಲ್ಲಿ ಭೇದವನ್ನು ಕಲ್ಪಿಸುವುವು . . . ಗುಣ, ಕ್ರಿಯೆ, ನಾಮ ಮತ್ತು ದ್ರವ್ಯವಿಕಲ್ಪಗಳು ಭಿನ್ನವಸ್ತುಗಳಲ್ಲಿ ಅಭೇದವನ್ನು ಕಲ್ಪಿಸುವುವು (ಭಾತತ್ತ್ವ. ೨೨೩). 'ದ್ರವ್ಯಕಲ್ಪನೆ' ಪರಾ. ೧೨. [ಜೈನ] ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವಗಳೆಂಬ ಐದು ವಿಧವಾದ ಸಂಸಾರಗಳಲ್ಲಿ ಒಂದು: ಮುಕ್ತಿಕಾರಣಂಗಳುಪಾದೇಯಂ ಗಳ್ ಅವಱೊಳ್ ದ್ರವ್ಯ ಕ್ಷೇತ್ರ ಕಾಲ ಭವ ಭಾವ ಭೇದದಿಂ ಪಂಚವಿಧಂ ಸಂಸಾರಂ (ಆದಿಪು. ೧೦-೬೧ ವ); ದ್ರವ್ಯ ಕ್ಷೇತ್ರ ಕಾಲ ಭವ ಭಾವದಿಂದೊಡ ಗೂಡಿ ಉರ್ವಿಯ ಗತಿ ನಾಲ್ಕಱಿ ಪೂರ್ವಚತುರ್ದಶಜೀವಸಮಾಸದಿ ತೀವ್ರಭ್ರಮಣ ಸಂಸಾರ (ದ್ವಾದಶಾ. ೫-೨). 'ದ್ರವ್ಯಸಂಸಾರ' ಪರಾ. ೧೩. ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ ಗಳೆಂಬ ಆರು ಬಗೆಯ ದ್ರವ್ಯಗಳು: ಕರ್ಮಾವೃತಂಗಳುಂ ಕರ್ಮ ವಿಮುಕ್ತಂಗಳುಮಪ್ಪ ಜೀವಾದಿ ದ್ರವ್ಯಂಗಳಾಧಾರಭೂತಮಪ್ಪ ಲೋಕ ವಿಭಾಗಮೆಂತೆಂದೊಡೆ (ಅಜಿಪು. ೧೦-೨ ವ). 'ಷಡ್ದ್ರವ್ಯ' ಪರಾ. ೧೪. ತೀರ್ಥಂಕರರು ಉಪದೇಶಿಸಿರುವ ಪ್ರಥಮ, ಕರಣ, ಚರಣ ಮತ್ತು ದ್ರವ್ಯಗಳೆಂಬ ನಾಲ್ಕು ವಿಧವಾದ ಅನುಯೋಗಗಳಲ್ಲಿ ಒಂದು; ಜೀವಾದಿ ಷಡ್ದ್ರವ್ಯಗಳನ್ನೂ ಏಳು ತತ್ತ್ವಗಳನ್ನೂ ನಿರೂಪಿಸುವ ಶಾಸ್ತ್ರಭಾಗ: ಪ್ರಥಮ, ಕರಣ, ಚರಣ, ದ್ರವ್ಯ ಎಂಬ ನಾಲ್ಕು ಅನುಯೋಗಗಳನ್ನು ಜೈನರ ಚತುರ್ವೇದಗಳೆಂದು ಕರೆಯಬಹುದು (ಭಾರದ. ೦೬೯). 'ದ್ರವ್ಯಾನುಯೋಗ' ಪರಾ. [ಸಂ.]

ದ್ರವ್ಯಕರ್ಮ (ನಾ). [ಜೈನ] ಆತ್ಮನ ಬಂಧದೊಂದಿಗೆ ಉಂಟಾಗುವ ಜ್ಞಾನಾವರಣಾದಿ ಪುದ್ಗಲಕರ್ಮದ ಸಮೂಹ: ಹೀಗೆ ವಿಶಿಷ್ಟರೂಪ ವನ್ನು ಹೊಂದಿದ ಪೌದ್ಗಲಿಕ ಪರಮಾಣುಪುಂಜವೇ ದ್ರವ್ಯಕರ್ಮವೆನಿಸು ವುದು. ಇದಕ್ಕೆ ಕಾರ್ಮಣಶರೀರವೆಂದೂ ಹೆಸರು. ಇದು ಜನ್ಮಾಂತರ ದಲ್ಲಿಯೂ ಜೀವದ ಜೊತೆಗೆ ಸಾಗಿ, ಸ್ಥೂಲಶರೀರದ ನಿರ್ಮಾಣಕ್ಕೆ ಭೂಮಿಕೆಯಾಗುತ್ತದೆ (ಜೈವಪ. ೯). 'ಭಾವಕರ್ಮ' ಪರಾ.

[ದ್ರವ್ಯ + ಕರ್ಮ]

ದ್ರವ್ಯಕಲ್ಪನೆ (ನಾ). [ಬೌದ್ಧ] ಜಾತಿಕಲ್ಪನೆ, ಗುಣಕಲ್ಪನೆ, ಕ್ರಿಯಾ ಕಲ್ಪನೆ, ನಾಮಕಲ್ಪನೆ ಮತ್ತು ದ್ರವ್ಯಕಲ್ಪನೆಗಳೆಂಬ ಐದು ವಿಧವಾದ ವಿಕಲ್ಪಗಳಲ್ಲಿ ಒಂದು; ಒಂದೇ ಪ್ರದೇಶದಲ್ಲಿ ಕಂಡುಬರುವ ವಸ್ತು ಗಳಿಗೆ ಅಭೇದವನ್ನು ಕಲ್ಪಿಸುವುದು; ℗ ಈ ಐದು ವಿಧವಾದ ವಿಕಲ್ಪಗಳು ಕೆಲವು ವೇಳೆ ಅಭಿನ್ನ ವಸ್ತುವಿನಲ್ಲಿ ಭೇದಕಲ್ಪನೆಯನ್ನು ಮಾಡುವುವು. ಗೋವಿಗೂ ಗೋತ್ವಕ್ಕೂ ಭೇದವು ಕಂಡುಬರುವು

ದಿಲ್ಲ: ಆದರೆ ಗೋತ್ವವೆಂಬ ಜಾತಿಯು ಅವುಗಳಲ್ಲಿ ಜಾತಿಕಲ್ಪನೆಯನ್ನು ಮಾಡುವುದು. ಇದರಂತೆ ಗುಣಕಲ್ಪನೆ, ಕ್ರಿಯಾಕಲ್ಪನೆಗಳು ಅಭಿನ್ನ ವಸ್ತುವಿನಲ್ಲಿ ಭೇದಕಲ್ಪನೆ ಮಾಡುವುವು. ಶಬ್ದಾರ್ಥಗಳು ವಸ್ತುಸ್ಥಿತಿಯಲ್ಲಿ ಭಿನ್ನವಾದುವುಗಳು. ನಾಮಕಲ್ಪನೆಯು ಇವುಗಳಿಗೆ ಅಭೇದಕಲ್ಪನೆ ಮಾಡುವುದು. ಇದರಂತೆಯೇ ದ್ರವ್ಯಕಲ್ಪನೆಯು ಒಂದೇ ಪ್ರದೇಶದಲ್ಲಿ ಕಂಡುಬರುವ ವಸ್ತುಗಳಿಗೆ ಅಭೇದವನ್ನು ಕಲ್ಪಿಸುವುದು: ವಿಕಲ್ಪಗಳು ಅಥವಾ ಕಲ್ಪನೆಗಳು ಐದುವಿಧ–ಜಾತಿಕಲ್ಪನೆ, ಗುಣಕಲ್ಪನೆ, ಕ್ರಿಯಾಕಲ್ಪನೆ, ನಾಮಕಲ್ಪನೆ ಮತ್ತು ದ್ರವ್ಯಕಲ್ಪನೆ ಎಂದು (ಭಾತತ್ತ್ವ. ೨೬೬). [ ದ್ರವ್ಯ + ಕಲ್ಪನೆ ]

**ದ್ರವ್ಯಚೇತನವಾದ** (ನಾ). ಚೇತನವು ವಸ್ತುವಿನ ಅಸ್ತಿತ್ವದ ಒಂದು ಗುಣ ಎಂದು ವಾದಿಸುವ ವಾದ: "ದ್ರವ್ಯಕ್ಕೆ ಚೇತನವಿದೆ ಎಂಬ, ಅಥವಾ ಚೇತನವು ದ್ರವ್ಯದ ಒಂದು ಗುಣ ಎಂಬ ವಾದ: ದ್ರವ್ಯಚೇತನವಾದ" (Hylozoism. ಇಂಕನಿ). [ ದ್ರವ್ಯ + ಚೇತನ + ವಾದ₃ ]

**ದ್ರವ್ಯತಪ** (ನಾ). ವಸ್ತುಸಂಗ್ರಹಕ್ಕಾಗಿ ಮಾಡುವ ತಪಸ್ಸು; ಕಪಟವಾದ ತಪಸ್ಸು: ದ್ರವ್ಯತಪದಿಂದವಲ್ಲದೆ ನಿರ್ವ್ಯಾಕುಳ ಭಾವತಪಮುಮಂ ತಳೆಯಂ ತಾಂ ನಿರ್ವ್ಯಾಜವಿಜಾತನೆಂದಾ ದಿವ್ಯಾವಧಿಬೋಧರಱಿದು ತಪಮಂ ಕೊಟ್ಟರ್ (ಸುಕುಮಾ. ೬-೩೫). 'ಭಾವತಪ' ಪರಾ. [ ದ್ರವ್ಯ + ತಪ₃ ]

**ದ್ರವ್ಯತ್ವ** (ನಾ). ವಸ್ತುವಾಗಿರುವಿಕೆ; ವಸ್ತುವಿನ ಭಾವ: ಶಬ್ದಕ್ಕೆ ದ್ರವ್ಯತ್ವಮಂ ಜೈನರ್ ಪೇಳ್ದಪರ್ (ಶಮದ. ೨ ಟೀಕೆ); ದ್ರವ್ಯತ್ವ ವಿಧಾನ ಪ್ರಕರಣಮಪ್ಪುದಱಿಂ ಉಕ್ತಜೀವಂಗಳ್ಗಂ ಅದ್ರವ್ಯತ್ವ ವ್ಯವಚ್ಛೇದಾರ್ಥಂ ಉತ್ತರಸೂತ್ರಾವತಾರಂ (ತತ್ತ್ವಸೂ. ೨೩೦): ಮೋಕ್ಷದಲ್ಲಿ ಜೀವಾತ್ಮನು ತನ್ನ ಸ್ವಾಭಾವಿಕ ಸ್ಥಿತಿಯಲ್ಲಿರುವನು, ಅದೆಂತೆಂದರೆ ವಿಭುತ್ವ, ದ್ರವ್ಯತ್ವ, ನಿತ್ಯತ್ವ, ನಿರವಯವತ್ವ ನಾನಾತ್ವ ಮೊದಲಾದ ಧರ್ಮಗಳೊಡನೆ ಯಾವತ್ಕಾಲ ನಿರ್ದುಃಖಿಯಾಗಿರುತ್ತಾನೆ (ಹಿಂದಸಾ. ೦೨೪). [ ಸಂ. ]

**ದ್ರವ್ಯನಿವೇದನಂಗೆಯ್** (ನಾ). =ದ್ರಬ್ಯನಿವೇದನಂಗೆಯ್: ಮಹಾಜನ ನೂಱಿಪ್ಪದಿಂಬರ ಕಯ್ಯಲು ದಂಡನಾಯಕಂ ನಾಗವರ್ಮ್ಮಯ್ಯಂಗಳು ದ್ರವ್ಯನಿವೇದನಂಗೆಯ್ದು ಧಾರಾಪೂರ್ವ್ವಕಂ ಸರ್ವ್ವನಮಸ್ಯ ಸರ್ವ್ವಬಾಧಾಪರಿಹಾರವಾಗೆ ಪಡೆದು (ಸೌಇಇ. XX, ೮೧-೧೧; 1122). [ದ್ರವ್ಯ + ನಿವೇದನ +ಕೆಯ್₁]

**ದ್ರವ್ಯಪರಾವರ್ತನ** (ನಾ). = ದ್ರವ್ಯಪರಿವರ್ತನ: ಮುನ್ನೆ ಕೊಂಡ ಪುದ್ಗಲಂಗಳಂ ಬಿಸುಟ್ಟು ಪೆಱವುಂ ಸ್ನಿಗ್ಧರೂಕ್ಷಾದಿ ವಿಕಲ್ಪಂಗಳಂ ಜನ್ಮಜನ್ಮಾಂತರಂಗಳೊಳ್ ಕೊಳ್ಳುತ್ತುಮಿಂತು ಮೂಱುಂ ಲೋಕದೊಳುಳ್ಳ ರೂಪದ್ರವ್ಯಂಗಳೆಲ್ಲವಂ ನಿರವಶೇಷವಾಗೆ ಕೈಕೊಳ್ವುದು ದ್ರವ್ಯಪರಾವರ್ತನಮೆಂಬುದು (ಸುಕುಮಾ. ೬-೬ ವ); ಜೀವಾಜೀವ ದ್ರವ್ಯಪರಾವರ್ತನ ಹೇತು ವರ್ತನಾಲಕ್ಷಣಸದ್ಭಾವಂ ನಿತ್ಯಮಮೂರ್ತಂ ಕೇವಲಗಮ್ಯಂ ಸದಾನುಮೇಯಂ ಕಾಲಂ (ಶಂರಾಮಾ. ೦-೪೬). 'ಕ್ಷೇತ್ರಪರಾವರ್ತನ' ಪರಾ. [ ದ್ರವ್ಯ + ಪರಾವರ್ತನ ]

**ದ್ರವ್ಯಪರಿವರ್ತನ** (ನಾ). [ಜೈನ] (ಸಂಸಾರದಲ್ಲಿ ಪರಿಭ್ರಮಣ ಮಾಡುವ ಜೀವಗಳಿಗೆ ಉಂಟಾಗುವ) ದ್ರವ್ಯ, ಕ್ಷೇತ್ರ, ಕಾಲ, ಭವ ಮತ್ತು ಭಾವಗಳೆಂಬ ಐದು ರೀತಿಯ ಪರಿವರ್ತನೆಗಳಲ್ಲಿ ಒಂದು; ಪುದ್ಗಲ ಅಥವಾ ದ್ರವ್ಯದ ಮೂಲಕ ಆಗುವ ಭ್ರಮಣಕ್ಕೆ ತಗುಲುವ ಕಾಲಾವಧಿ: ಒಂದು ಜೀವಂಗಪ್ಪ ದ್ರವ್ಯಪರಿವರ್ತನಂ ನೋಕರ್ಮಪುದ್ಗಲಪರಿವರ್ತನಮೆಂದು ಕರ್ಮಪುದ್ಗಲಪರಿವರ್ತನಮೆಂದಿತ್ತೆಱಂ (ಜಾವುಂಪು. ೨೬೨); ದ್ರವ್ಯಪರಿವರ್ತನಂ ಲಬ್ಧ್ಯಪರ್ಯಾಪ್ತಕನುಂ ಸರ್ವಜಘನ್ಯಪ್ರದೇಶಶರೀರನುಂ ಲೋಕಮಧ್ಯಪ್ರದೇಶಾಷ್ಟಕವಂ ಸ್ವಶರೀರ ಮಧ್ಯಪ್ರದೇಶಂ ಮಾಡಿ ಪುಟ್ಟಿದುದಂ ಕ್ಷುದ್ರಭವಗ್ರಹಣಮಂ ಪೊರ್ದಿಬಟ್ಟು ಮೃತಮಾದುದುಮಪ್ಪಾವುದೊಂದು ಸೂಕ್ಷ್ಮನಿಗೋಧಜೀವನದುವೇ (ಜಸಾರ. ೫೪೭). [ ದ್ರವ್ಯ + ಪರಿವರ್ತನ ]

**ದ್ರವ್ಯಪೂರ್ವಕ** (ನಾ). ಧನಸಹಿತವಾದುದು; ಹಣದಿಂದ ಕೂಡಿದುದು: ಸ್ಥಾನಶಕ್ತಿಪಣ್ಡಿತರ್ ದ್ರವ್ಯಪೂರ್ವಕದಿಂ ಸರ್ವ್ವನಮಸ್ಯಮಾಗೆ ಯುೂರಿಂಗೀಶಾನ್ಯದ ಶತ್ರುದ ಕೆಯ್ಯುಂ ಪಡುವಣ ಪಾಳ ಕೆಯ್ಯುಂ ಕೊಣ್ಡು (ಸೌಇಇ. XX, ೫೭-೨೭; 1084). [ ಸಂ. ]

**ದ್ರವ್ಯಭೋಗ** (ನಾ). (?): ನರಭೋಗ ಶಿಲಾಭೋಗ ಪ್ರತಿಮಾಭೋಗ ದ್ರವ್ಯಭೋಗಾದಿಗಳ ವೈಚಿತ್ರ್ಯಮುಳ್ಳ ಲೋಕದೃಷ್ಟಾಂತಗಳಂ . . . ಸಮನ್ವಯಗೊಂಡು (ವಿವೇಕ. ೦೯೮). [ ದ್ರವ್ಯ + ಭೋಗ ]

**ದ್ರವ್ಯಭ್ರಮೆ** (ನಾ). ಸಂಸಾರದ ದುಃಖಕ್ಕೆ ಕಾರಣವಾಗುವ ಮೂರು ಭ್ರಮೆಗಳಲ್ಲಿ ಒಂದು; ಪದಾರ್ಥಗಳ ಗೋಚರತ್ವ, ಗುಣಧರ್ಮಗಳಿಂದ ಉಂಟಾಗುವ ತಪ್ಪುತಿಳಿವಳಿಕೆ ಅಥವಾ ಭ್ರಾಂತಿ: ಸಂಸಾರದಲ್ಲಿ ನಾನಾವಿಧವಾದ ದುಃಖಗಳನ್ನು ಕೊಡಿಸುವುದಕ್ಕೂ, ಪುನಃಪುನಃ ಸಂಸಾರದಲ್ಲಿ ಲೋಲಾಡುವಂತೆ ಮಾಡುವುದಕ್ಕೂ ಕಾರಕಭ್ರಮೆ, ಕ್ರಿಯಾಭ್ರಮೆ, ದ್ರವ್ಯಭ್ರಮೆ ಎಂಬ ಮೂರುವಿಧ ಭ್ರಮೆಗಳು ಕಾರಣವಾಗಿರುವುವು . . . ನಮ್ಮ ದೇಹ, ಹೆಂಡರು, ದ್ರವ್ಯ ಮೊದಲಾದವುಗಳೆ ನಮಗೆ ಸುಖಸಾಧನವೆಂದು ತಿಳಿಯುವುದೇ ದ್ರವ್ಯಭ್ರಮೆಯು (ಹಸಾರ. ೦೬-೨೯ ತಾತ್ಪರ್ಯ). 'ಕ್ರಿಯಾಭ್ರಮೆ' ಪರಾ. [ ದ್ರವ್ಯ + ಭ್ರಮೆ ]

**ದ್ರವ್ಯಮುದ್ರೆ** (ನಾ). [ಯೋಗ] ಮಂತ್ರಶಾಸ್ತ್ರ ಪ್ರಸಿದ್ಧವಾದ ಒಂದು ಬಗೆಯ ಹಸ್ತಮುದ್ರೆ (?): ದ್ರವ್ಯಮುದ್ರೆ . . . ಸಂಹಾರಮುದ್ರೆಯೆಂಬಾದಿಯಾಗಿ ಸಕಲ ಮುದ್ರೋಪಮುದ್ರಾಬಂಧಲಕ್ಷಣಂಗಳಂ ಗುರುಮುಖದಿಂದಱಿತು (ವಿವೇಕ. ೦೦೩). 'ಚಕ್ರಮುದ್ರೆ' ಪರಾ. [ ದ್ರವ್ಯ + ಮುದ್ರೆ ]

**ದ್ರವ್ಯಮೋಕ್ಷ** (ನಾ). [ಜೈನ] ಸಂಪೂರ್ಣವಾಗಿ ಎಂಟು ಕರ್ಮಗಳಿಂದಲೂ ಶರೀರಾದಿ ಬಂಧನಗಳಿಂದಲೂ ಮುಕ್ತನಾಗಿ ಸಿದ್ಧರೂಪದಲ್ಲಿ ಆತ್ಮನು ತನ್ನ ಸ್ವಾಭಾವಿಕಸ್ಥಿತಿಯನ್ನು ಪಡೆಯುವುದು: ಆ ಕರ್ಮವೂ ಕರಗಿಹೋಯಿತೆಂದರೆ, ಆತ್ಮನು ಈ ಸಂಸಾರದಿಂದ ಮುಕ್ತನಾಗುವನು. ಆಗ ದ್ರವ್ಯಮೋಕ್ಷವೂ ಒದಗಿತೆಂದು ಹೇಳುವರು (ಜೈನಪ. ೫೦೦). 'ಭಾವಮೋಕ್ಷ' ಪರಾ. [ ದ್ರವ್ಯ + ಮೋಕ್ಷ ]

**ದ್ರವ್ಯಯಜ್ಞ** (ನಾ). ಯಾಗ, ದಾನ, ದೇವರ ಪೂಜೆ ಮುಂತಾದ ಸತ್ಕಾರ್ಯಗಳಿಗಾಗಿ ಹಣವನ್ನು ಅಥವಾ ದ್ರವ್ಯವನ್ನು ವಿನಿಯೋಗಿಸುವುದು: ದ್ರವ್ಯಯಜ್ಞ, ತಪೋಯಜ್ಞ, ಯೋಗಯಜ್ಞ . . . ಹೀಗೆ ಅನಂತಯಜ್ಞಗಳನ್ನು ಶ್ರೀಕೃಷ್ಣನು ಹೇಳುತ್ತಾ ಯಜ್ಞದ ಮನೋಭಾವವನ್ನು ಕುರಿತು ಮೇಲಣ ಮಾತನ್ನು ಹೇಳುತ್ತಾನೆ (ಭಾರದ. ೦೦೬). [ ದ್ರವ್ಯ + ಯಜ್ಞ ]

**ದ್ರವ್ಯಯೋಗ** (ನಾ). [ಜೈನ] ಶರೀರ ನಾಮಕರ್ಮದ ಉದಯದಿಂದ ಮನಸ್ಸು, ವಚನ, ಶರೀರ ಇವುಗಳ ಕ್ರಿಯೆಗೆ ಜೀವಪ್ರದೇಶದಲ್ಲಿ ಉಂಟಾಗುವ ಚಂಚಲತೆ: ಆತ್ಮಪ್ರದೇಶದಲ್ಲಿ ಉಂಟಾಗುವ ಪರಿಸ್ಪಂದನಾತ್ಮಕಕ್ರಿಯೆಯಿಂದಲೂ ಕರ್ಮ ಕಟ್ಟುವುದು, ಆ ಕ್ರಿಯಾಶಕ್ತಿಯು ದ್ರವ್ಯಯೋಗವೆನಿಸುವುದು (ಜೈನಪ. ೦೯೬). 'ಭಾವಯೋಗ' ಪರಾ. [ ದ್ರವ್ಯ + ಯೋಗ ]

**ದ್ರವ್ಯರ್ಷಿ** (ನಾ). [ಜೈನ] ಮಿಥ್ಯಾದೃಷ್ಟಿಯುಳ್ಳ ಮುನಿ; ಆತ್ಮಜ್ಞಾನರಹಿತನಾದ ಮುನಿ; ಮುನಿವೇಷಧಾರಿ: ನಾಲ್ಸಾಸಿರ್ವರಸುಮಕ್ಕಳ್ ಪೋಗಲೊಲ್ಲದೆ ಅರಸನಾದುದನಪ್ಪೆವೆಂದು ಜಾತರೂಪಮಂ ಕೈಕೊಂಡು ದ್ರವ್ಯರ್ಷಿಯರಾಗಿರ್ದರ್ (ಜಾವುಂಪು. ೩೮). [ ದ್ರವ್ಯ + ಋಷಿ ]

**ದ್ರವ್ಯಲಿಂಗಿ** (ನಾ). = ದ್ರವ್ಯರ್ಷಿ : ಒಲವಿಂದೆ ಕೇವಲಂ ದ್ರವ್ಯಲಿಂಗಿಗಳ್ ತನ್ನನಂದು ಬಳಸಿಯುಮಿರೆ ನಿಶ್ಚಲತನು ಬಾಲಕುಜಂಗಳ ಪಲವಱ ನಡುವಿರ್ದ ಕಲ್ಪಕುಜಮನೆ ಪೋಲ್ತಂ (ಆದಿಪು. ೯-೮೩); ದೀಕ್ಷೆಯಿಲ್ಲದೆ ದ್ರವ್ಯಲಿಂಗಿಗಳಾಗಿರ್ದಾ ಕ್ಷಿತಿಪರ ನಟ್ಟನಡುವೆ ನಕ್ಷತ್ರಮಧ್ಯದ ಚಂದ್ರನಂತಾದಿ ಮುಮುಂಕ್ಷುವೊಪ್ಪಿದನು (ಗೋಮಟೇ. ೬-೯೩). [ ಸಂ. ದ್ರವ್ಯಲಿಂಗಿನ್ ]

**ದ್ರವ್ಯಲೇಶ್ಯ** (ನಾ). [ಜೈನ] ವರ್ಣನಾಮಕರ್ಮದಿಂದ ಉಂಟಾಗುವ ಶರೀರದ ಬಣ್ಣ,-ವರ್ಣ; P ಇದರಲ್ಲಿ ಕೃಷ್ಣ, ನೀಲ, ಕಾಪೋತ, ತೇಜ, ಪದ್ಮ ಮತ್ತು ಶುಕ್ಲಗಳೆಂಬ ಆರು ವರ್ಣಗಳಿವೆ : ನಿರ್ಗ್ರಂಥ ಸಂಪ್ರದಾಯದ ಗ್ರಂಥಗಳಲ್ಲಿ ಭಾವಲೇಶ್ಯ-ದ್ರವ್ಯಲೇಶ್ಯಗಳ ವಿವೇಚನೆಯು ವಿಸ್ತಾರವಾಗಿ ಬಂದಿದೆ (ಜ್ಞಿನಪ. ೫೪೦). [ ದ್ರವ್ಯ + ಲೇಶ್ಯ ]

**ದ್ರವ್ಯಲೇಶ್ಯೆ** (ನಾ). = ದ್ರವ್ಯಲೇಶ್ಯ : ಶರೀರದೊಳಾದ ವರ್ಣಂ ದ್ರವ್ಯಲೇಶ್ಯೆ ಪರಿಣಾಮದೊಳಾದ ವರ್ಣಂ ಭಾವಲೇಶ್ಯೆಯಕ್ಕುಂ (ಪಸಾರ. ೪೧೦). 'ಭಾವಲೇಶ್ಯೆ' ಪರಾ. [ ದ್ರವ್ಯ + ಲೇಶ್ಯೆ ]

**ದ್ರವ್ಯಲೋಪ** (ನಾ). ದ್ರವ್ಯದ ಅಭಾವ ; ಹಣದ ಕೊರತೆ. [ ದ್ರವ್ಯ + ಲೋಪ ]

**ದ್ರವ್ಯವಂತ** (ನಾ). ಹಣವುಳ್ಳವನು ; ಶ್ರೀಮಂತ : ಸರ್ವರೂ ದ್ರವ್ಯವಂತರು ಅವರು ಅವರಲ್ಲಿ ಆಸೆಯೆ ಅಯ್ಯಾ (ಸಿದ್ಧವ. ಕ. ೪೨೦-೧೩೫೫) ; ಧನವಂತಂ, ದ್ರವ್ಯವಂತಂ (ಶಬ್ದಾನು. ೪೦೩ ಪ್ರಯೋ). [ ಸಂ. ದ್ರವ್ಯವತ್ ]

**ದ್ರವ್ಯವಿವಕ್ಷೆ** (ನಾ). ವಸ್ತುವಿನ ಸರ್ವತೋಮುಖವಾದ ಅಸ್ತಿತ್ವವನ್ನು ಸಾಮಯುವವಾಗಿ ಅರಿಯುವ ದೃಷ್ಟಿ : ಅನ್ವಯರೂಪವಾದ ದ್ರವ್ಯ ವಿವಕ್ಷೆಯನ್ನು ಬಿಟ್ಟು ಬೇರೆಬೇರೆ ಪರ್ಯಾಯಗಳನ್ನು ಮಾತ್ರ ವಿಚಾರ ಮಾಡಿದರೆ ವಸ್ತುವು ಬರಿಯ ಪರ್ಯಾಯರೂಪವಾಗಿ ತೋರುತ್ತದೆ (ಭಾರದ. ೦೮೦). [ ದ್ರವ್ಯ + ವಿವಕ್ಷೆ ]

**ದ್ರವ್ಯವ್ಯಸನ** (ನಾ). ಹತ್ತು ಬಗೆಯ ಚಿಂತೆಗಳಲ್ಲಿ ಒಂದು ; ಧನವನ್ನು ಶೇಖರಿಸಬೇಕೆಂಬ ತೀವ್ರಾಪೇಕ್ಷೆ ; ಹಣದ ಚಿಂತೆ : ತನುವ್ಯಸನ ರಾಜ್ಯವ್ಯಸನ ವಿಶ್ವವ್ಯಸನ ಸ್ತ್ರೀವ್ಯಸನ ಧಾನ್ಯವ್ಯಸನ ದ್ರವ್ಯವ್ಯಸನ ವಿದ್ಯಾವ್ಯಸನ ಉತ್ಸಾಹಕವ್ಯಸನ ಸೇವಕವ್ಯಸನ ಕಾಷ್ಠವ್ಯಸನಗಳೆಂಬ ದಶವ್ಯಸನಗಳಿಂ ಹಸಗೆಟ್ಟು (ವಿವೇಕ. ೩೪೬). 'ಸಪ್ತವ್ಯಸನ' ಹೋ. [ ದ್ರವ್ಯ + ವ್ಯಸನ ]

**ದ್ರವ್ಯಶಕ್ತಿ** (ನಾ). ವಸ್ತುವಿನ ಮೂಲಗುಣ,-ಸಾಮರ್ಥ್ಯ : ಅನುಮಾನ ಪ್ರಮಾಣಮವಸ್ಥಾದೇಶಕಾಲಾದಿಗಳ್ ಭಿನ್ನವಪ್ಪುದಱಿಂ ದ್ರವ್ಯಶಕ್ತಿಯುಂ ಭಿನ್ನಂ (ಶಾಂತಿಪು. ೮-೧೨೮ ವ). [ ದ್ರವ್ಯ + ಶಕ್ತಿ ]

**ದ್ರವ್ಯಶುದ್ಧಿ** (ನಾ). ೧. (ಉಪಯೋಗಿಸುವ) ಪದಾರ್ಥಗಳನ್ನು ಶುಚಿ ಮಾಡುವಿಕೆ : ದ್ರವ್ಯಶುದ್ಧಿ ಕ್ಷೇತ್ರಶುದ್ಧಿ ಕಾಲಶುದ್ಧಿ ಭಾವಶುದ್ಧಿವೆರಸಿ ಶ್ರುತಮುಮಂ ಶ್ರುತಧರರುಮಂ ಮನ್ನಿಸಿ ಪರಮಾಗಮಾಭ್ಯಾಸಮಂ ಮಾಳ್ಪುದು ಸ್ವಾಧ್ಯಾಯಮೆಂಬುದು (ಪಸಾರ. ೩೭೯) ; ಆತ್ಮಶುದ್ಧಿ ಸ್ನಾನಶುದ್ಧಿ ಲಿಂಗಶುದ್ಧಿ ಮಂತ್ರಶುದ್ಧಿಗಳಂ ವಿಸ್ತರಿಸುವುದಱಲ್ಲಿ (ವಿವೇಕ. ೧೦೩) ; ಸ್ಮೃತಿಗಳು ಬ್ರಹ್ಮಚಾರಿಯ ಜೀವನ . . . ನಿಷಿದ್ಧಾಹಾರ, ಆಶೌಚ, ದ್ರವ್ಯಶುದ್ಧಿ ಶ್ರಾದ್ಧ . . . ಶಾಂತಿಕರ್ಮಗಳನ್ನೂ ವಿವರಿಸುತ್ತವೆ (ಭಾರದ. ೫೬). 'ಭಾವಶುದ್ಧಿ' ಪರಾ. [ ದ್ರವ್ಯ + ಶುದ್ಧಿ ]

**ದ್ರವ್ಯಶೂನ್ಯ** (ನಾ). ಏನೂ ಇಲ್ಲದಿರುವಿಕೆ ; ನಿರ್ವಾಯುವಾಗಿರುವಿಕೆ ; ನಿರ್ವಾತಸ್ಥಿತಿ : ಗೆಲಿಲಿಯೊವಿನ ಶಿಷ್ಯನಾದ ಟಾರಿಸೆಲಿಯು . . . ವಾದ ರಸದ ವಾಯುಮಾಪಕಯಂತ್ರವನ್ನು (Barometer) ಕಂಡುಹಿಡಿದು ದ್ರವ್ಯಶೂನ್ಯವಾದ ಸ್ಥಳದ (Vacuum) ಭಾವನೆಯನ್ನು ಸ್ಥಾಪಿಸಿದನು (ಶಿಲ್ಪಸಾ. ೦೦೦). [ ದ್ರವ್ಯ + ಶೂನ್ಯ ]

**ದ್ರವ್ಯಸಂವರೆ** (ನಾ). [ಜೈನ] ಬರಲಿರುವ ದ್ರವ್ಯದ ಆಸ್ರವವನ್ನು ತಡೆಯುವುದು ; ಕರ್ಮವು ಸೇರಿಕೊಳ್ಳುವುದನ್ನು ತಡೆಯುವುದು : ದ್ರವ್ಯಕರ್ಮದ ಬರವಂ ತಳರ್ವುದು ದ್ರವ್ಯಸಂವರೆಯೆಂಬುದು (ಶಾಸ್ತ್ರಟೀ. ೦೪೪-೧). [ ದ್ರವ್ಯ + ಸಂವರೆ ]

**ದ್ರವ್ಯಸಂಸಾರ** (ನಾ). [ಜೈನ] "ಪರಮಾಣು ಮುಂತಾದ ಎಲ್ಲಾ ಶರೀರವನ್ನು ಮೊದಲು ಸ್ವೀಕರಿಸಿ ಅನಂತರ ತ್ಯಜಿಸುವುದು" (ದ್ವಾದಶಾ. ೨೮೦ ಪಾರಿಭಾಷಿಕಕೋಶ) : ಪುದ್ಗಲಪರಿವರ್ತನದೊಳ್ ಕರ್ಮಪರಿವರ್ತನಕ್ಕೆ ಸೂಕ್ಷ್ಮನಿಗೋದಂ ಲಬ್ಧ್ಯಪರ್ಯಾಪ್ತನವಿಗ್ರಹ ಪ್ರಥಮಸಮಯಮಂ ನೋಡ (ಮೊದ)ಲ್ಮಾಳ್ಪುದು ನೋಕರ್ಮಕ್ಕೆ ವೇಟ್ಟ ಪಂಜಂತ(ಪಜ್ಜತ್ತನ) ಶರೀರೋದಯ ಪ್ರಥಮಸಮಯಮಂ ಮೊದಲ್ ಮಾಳ್ಪುದು ದ್ರವ್ಯಸಂಸಾರಂ (ದಾವುಂಪು. ೨೬) ; ಅಮೂರ್ತಾತೀಂದ್ರಿಯಾನಂತಜ್ಞಾನಸುಖಾದ್ಯನಂತಗುಣಾಧಾರಭೂತಸಹಜಶುದ್ಧಪರಮಾತ್ಮದ್ರವ್ಯೇತರ ಚೇತನಾಚೇತನ ಮೂರ್ತಾಮೂರ್ತರೂಪ ಪೂರ್ವಾಪೂರ್ವ ಮಿಶ್ರಸಮಸ್ತಪುದ್ಗಳದ್ರವ್ಯಸಮೂಹಮಂ ಜ್ಞಾನಾವರಣಾದಿ ದ್ರವ್ಯಕರ್ಮ ರೂಪದಿಂ ಶರೀರಾದಿ ನೋಕರ್ಮರೂಪದಿಂ ಶರೀರಪೋಷಣನಿಮಿತ್ತಮಾದ ಅಶನಪಾನಾದಿ ಪಂಚೇಂದ್ರಿಯವಿಷಯರೂಪದಿಂ ಮೇಣನಂತವಾರಂ ಜೀವನಿಂ ಸ್ವೀಕರಿಸಿ ಬಿಡೆಪಟ್ಟ ಪರಿಸಂಖ್ಯೆಯನೊಂದು ದ್ರವ್ಯಸಂಸಾರ ಮೆಂಬುದು (ಪಸಾರ. ೫೩೬) ; ಪರಮಾಣು ಮುಂತಾದೆಲ್ಲ ಶರೀರವನಂರು ಮೊದಲೊಳು ಕೊಂಡು ಬಿಟ್ಟು ಮರಳನಂತಬಾರಿ ಕೊಳುತಿರಲಂತದನ ಱುವುದು ದ್ರವ್ಯಸಂಸಾರ (ದ್ವಾದಶಾ. ೫-೫). [ ದ್ರವ್ಯ + ಸಂಸಾರ ]

**ದ್ರವ್ಯಸ್ಥಾಪನೆ** (ನಾ). ನೆಲದಲ್ಲಿ ಹಣವನ್ನು ಹುದುಗಿಸುವುದು ; ನಿಧಿಯನ್ನು ಹುಗಿದಿಡುವುದು. [ ದ್ರವ್ಯ + ಸ್ಥಾಪನೆ ]

**ದ್ರವ್ಯಸ್ವಭಾವಾಖ್ಯಾನ** (ನಾ). [ಕಾವ್ಯಮಿ] ಸ್ವಭಾವೋಕ್ತಿ ಅಲಂಕಾರದ ನಾಲ್ಕು ಪ್ರಕಾರಗಳಲ್ಲಿ ಒಂದು ; ಒಂದು ವಸ್ತುವಿನ ಸ್ವರೂಪವನ್ನು ಇದ್ದಂತೆಯೇ ವರ್ಣಿಸುವುದು : ಆಯತ ವಿಲೋಳಲೋಚನೆಯನುನ್ನತಸ್ತನಯುಗೆಯಂ . . . ಪೃಥುನಿತಂಬಬಿಂಬೆಯನುಱಿದಂ ದ್ರವ್ಯ ಸ್ವಭಾವಾಖ್ಯಾನಂ (ಕವಿರಾ. ೩-೧೦) ; ದ್ರವ್ಯಸ್ವಭಾವಾಖ್ಯಾನಕ್ಕೆ – ಕಟಿ ಕೊರಲೊಳ್ ಕಣ್ ನೊಸಲೊಳ್ . . . ನೆಱೆದಿರೆ ಕರಮೆಸೆದಂ ಪಲತೆಱದ ಮರುಳ್ವಡೆಯ ನಡುವುವಮಾಪತಿರುದ್ರಂ (ಕಾವ್ಯಾವ. ೬೧೦). [ ದ್ರವ್ಯ + ಸ್ವಭಾವ + ಆಖ್ಯಾನ ]

**ದ್ರವ್ಯಹರಣ** (ನಾ). ಹಣವನ್ನು ಕದಿಯುವುದು ; ಆಸ್ತಿಪಾಸ್ತಿಯನ್ನು ಅಪಹರಿಸುವುದು : (ಕ). [ ದ್ರವ್ಯ + ಹರಣ ]

**ದ್ರವ್ಯಹೀನ** (ನಾ). ಹಣವಿಲ್ಲದಿರುವವನು ; ಬಡವ ; ದರಿದ್ರ : ತನು ಕೇಶಂ ಪುಣ್ಯವಂತಂ . . . ರೋಮಶಂ ದ್ರವ್ಯಹೀನಂ (ಲೋಕೋಪ. ೧೧-೨೬) ; ದ್ರವ್ಯಹೀನರೆಂದು ಬಂದು ಸುಂದರೇಶಮೂರ್ತಿಯುಂ ಭವ್ಯಚಿತ್ತದಿಂದೆ ಪೂಜಿಸುತ್ತೆ (ಹಾಲಾಸ್ಯ. ೩-೬-೨೪). [ ದ್ರವ್ಯ + ಹೀನ ]

**ದ್ರವ್ಯಾಂಜನ** (ನಾ). ಒಂದು ಬಗೆಯ ಅಂಟು, ಲೇಪನದ್ರವ್ಯ; P ಎಡಗೈಗೆ ಈ ಲೇಪನದ್ರವ್ಯವನ್ನು ಬಳಿದರೆ ಕಳೆದು ಹೋಗಿರುವ ಹಣವು ಮತ್ತೆ ಕಾಣುತ್ತದೆಂಬ ನಂಬಿಕೆಯಿದೆ. [ ದ್ರವ್ಯ + ಅಂಜನ ]

**ದ್ರವ್ಯಾದ್ವೈತ** (ನಾ). ಭಾವಾದ್ವೈತ, ದ್ರವ್ಯಾದ್ವೈತ, ಕ್ರಿಯಾದ್ವೈತ ಎಂಬ ಮೂರು ಬಗೆಯ ಅದ್ವೈತಗಳಲ್ಲಿ ಒಂದು ; P "ತಾನೂ, ತನ್ನ ಹೆಂಡತಿ ಮಕ್ಕಳು ಮೊದಲಾದವರು ಮಾಡುವುದೂ ನೋಡುವುದೂ ಮೊದಲಾದ ಎಲ್ಲಾ ಕಾರ್ಯಗಳೂ, ಒಬ್ಬರಿಂದೊಬ್ಬರಿಗೆ ಉಪಕಾರ ಪ್ರತ್ಯುಪಕಾರವಾದ ಕ್ರಿಯೆಗಳನ್ನೆಲ್ಲಾ ಶ್ರೀ ಪರಮಾತ್ಮನೇ ಮಾಡಿಸುವವನು ಎಂದು ಎಲ್ಲಾ ಕಡೆಯಲ್ಲಿಯೂ ಇರುವ

ಭಗವದ್ರೂಪಗಳನ್ನು ಒಂದಾಗಿ ಭಾವಿಸುವುದಕ್ಕೆ ದ್ರವ್ಯಾದ್ವೈತ ವೆಂದು ಹೆಸರು" (ಹಸಾರ. ೫-೧೧ ತಾತ್ಪರ್ಯ) : ಭಾವಾದ್ವೈತ, ದ್ರವ್ಯಾದ್ವೈತ, ಕ್ರಿಯಾದ್ವೈತ ಎಂಬ ಮೂರು ಅದ್ವೈತಗಳನ್ನು ಭಾವಿಸ ಬೇಕು (ಹಸಾರ. ೫-೧೧ ಟೀಕು). [ ದ್ರವ್ಯ + ಅದ್ವೈತ ]

**ದ್ರವ್ಯಾನುಕೂಲ** (ನಾ). ಹಣ ಒದಗುವುದು ; ಹಣದ ಸೌಕರ್ಯ : ದಾನದಲಿ ವಿದ್ಯೆಯಾ ದಾನವೇ ದಾನಂ . . . ಜ್ಞಾನವನು ಗಳಿಸುವರೆ, ದ್ರವ್ಯಾನುಕೂಲಂ (ಕಎಪು. ೧೬-೬). [ ದ್ರವ್ಯ + ಅನುಕೂಲ ]

**ದ್ರವ್ಯಾನುಯೋಗ** (ನಾ). [ಜೈನ] ನಾಲ್ಕು ಬಗೆಯ ಅನುಯೋಗ ಗ್ರಂಥಗಳಲ್ಲಿ ಒಂದು ; ಜೀವಾದಿ ಷಡ್ದ್ರವ್ಯಗಳನ್ನೂ ಏಳು ತತ್ತ್ವ ಗಳನ್ನೂ ನಿರೂಪಿಸುವ ಶಾಸ್ತ್ರಭಾಗ : ಇನ್ನೊಂದಧಿಕಾರಮುಂಟು ದ್ರವ್ಯಾನುಯೋಗಮೆಂಬುದಂ ಕೇಳ್ದ ಬಳಿಕ್ಕೆ ಜ್ಯೋತಿಷಶಾಸ್ತ್ರಮಂ ವ್ಯಾಖ್ಯಾನಿಸುವೆಂ (ವಡ್ಡಾರಾ. ೬-೦೩) : ಕಿಱಿದುಮೊಂದಧಿಕಾರದಿಂ ದ್ರವ್ಯಾನುಯೋಗಮೆಂಬುದುಂಟದು ನಿಮ್ಮನ್ನರಪ್ಪ ನಿಶಿತಮತಿಗಳ್ಗೆ ಪಂಚರಾತ್ರಿಯೊಳೆ ಪ್ರತೀತಿಯಕ್ಕುಂ (ಸುಕುಮಾ. ೩-೩೭ ವ). 'ಕರಣಾನು ಯೋಗ' ಪರಾ. [ ದ್ರವ್ಯ + ಅನುಯೋಗ ]

**ದ್ರವ್ಯಾಯಿಲ** (ನಾ). ಹಣವಂತ ; ಧನಿಕ ; ಶ್ರೀಮಂತ : ಮಲ್ಲಿಶೆಟ್ಟಿಯು ಮೆಂಬ ಹರದಂಗೆ ಶರಧಿಪರ್ಯಂತ ವ್ಯಾಪಾರಮಂ ಮಾಳ್ಪ ಸಂತರುಂ . . . ಬಾಂಧವಜನಂ ಪರಿವೇಷ್ಟಿಸಿರೆ ಕೋಟಿ ದ್ರವ್ಯಾಯಿಲಂ ತ್ಯಾಗಭೋಗ ದೊಳಂ ಕೊಱತಿಲ್ಲದೆ (ಗುರುಚಾ. ೮-೪೩). [ ದ್ರವ್ಯ + - ಆಯಿಲ ]

**ದ್ರವ್ಯಾರ್ಜನೆ** (ನಾ). ಹಣವನ್ನು ಗಳಿಸುವಿಕೆ ; ಆಸ್ತಿಯನ್ನು ಸಂಪಾದಿ ಸುವಿಕೆ : ಅವರ ಜೀವನದ ಮುಖ್ಯಗುರಿ ದ್ರವ್ಯಾರ್ಜನೆಯಲ್ಲ (ಧರ್ಮಸಾ. ೧೦೬). [ ದ್ರವ್ಯ + ಅರ್ಜನೆ ]

**ದ್ರವ್ಯಾರ್ಥಿಕನಯ** (ನಾ). [ಜೈನ] ದ್ರವ್ಯಾರ್ಥಿಕನಯ ಮತ್ತು ಪರ್ಯಾಯಾರ್ಥಿಕನಯಂಗಳೆಂಬ ಎರಡು ಬಗೆಯ ನಯಗಳಲ್ಲಿ ಒಂದು ; ದ್ರವ್ಯದ ಕಡೆಗೆ ಲಕ್ಷ್ಯವಿಡುವುದು ; ಸಾಮಾನ್ಯ, ಅನ್ವಯ, ಅಭೇದ, ಏಕತ್ವ ಇತ್ಯಾದಿ ಯಾವುದೇ ವಿಚಾರಮಾರ್ಗದಿಂದ ದ್ರವ್ಯದ ವಿಚಾರ ಮಾಡುವುದು : ಏಳು ನಯಗಳಲ್ಲಿ ದ್ರವ್ಯಾರ್ಥಿ ಕನಯ, ಪರ್ಯಾಯಾರ್ಥಿಕನಯಗಳು ಎಂದು ಎರಡು ಭಾಗ ಮಾಡಲಾಗಿದೆ . . . ಸಾಮಾನ್ಯ, ಅನ್ವಯ, ಅಭೇದ, ಏಕತ್ವ ಇತ್ಯಾದಿ ಯಾವುದೇ ವಿಚಾರಮಾರ್ಗದಿಂದ ದ್ರವ್ಯದ ವಿಚಾರ ಮಾಡುವುದು ದ್ರವ್ಯಾರ್ಥಿಕನಯವು (ಜೈನಪ. ೨೨೪). [ ಸಂ. ]

**ದ್ರವ್ಯಾಶೆ** (ನಾ). ಹಣದ ಆಸೆ ; ಧನಾಪೇಕ್ಷೆ. [ ದ್ರವ್ಯ + ಆಶೆ ]

**ದ್ರವ್ಯೇಂದ್ರಿಯ** (ನಾ). [ಜೈನ] ಶರೀರನಾಮಕರ್ಮದಿಂದ ದೇಹಕ್ಕೆ ಉಂಟಾಗುವ ವಿಶೇಷ ಚಿಹ್ನೆಗಳು, ಸ್ಪರ್ಶನ, ರಸನಾ, ಘ್ರಾಣ, ಚಕ್ಷು ಮತ್ತು ಶ್ರೋತ್ರಗಳೆಂಬವು ; ಕಣ್ಣು, ಕಿವಿ, ಮೂಗು, ನಾಲಗೆ ಮತ್ತು ಚರ್ಮಗಳೆಂಬ ಐದು ಇಂದ್ರಿಯಂಗಳು : ದ್ರವ್ಯೇಂದ್ರಿಯಮುಂ ಭಾವೇಂದ್ರಿಯಮುಂ ಎಂದಿಂತು ಇಂದ್ರಿಯಂಗಳೆರಡು (ತತ್ತ್ವಾಪ್ರ. ೯೬) ; ದ್ರವ್ಯೇಂದ್ರಿಯಗಳಿಂದ ಜೀವಿಗಳಲ್ಲಿ ಏಕೇಂದ್ರಿಯವೇ ಮೊದಲಾದ ಐದು ವಿಭಾಗಗಳಾಗುತ್ತವೆ (ಜೈನಪ.೨೯೫) ; ಪಂಚೇಂದ್ರಿಯಗಳಲ್ಲಿ ದ್ರವ್ಯೇಂದ್ರಿಯ, ಭಾವೇಂದ್ರಿಯ ಎಂದು ಎರಡು ಬಗೆಗಳು (ಜೈನಧ. ೩೦). 'ಭಾವೇಂದ್ರಿಯ' ಪರಾ. [ ದ್ರವ್ಯ + ಇಂದ್ರಿಯ ]

**ದೃಷ್ಟ** (ನಾ). ೧. ಕಣ್ಣು ಕಾಣುವವನು ; ನೋಡುವವನು : ಹೊಳೆಯಲ್ಲಿ ತೇಲುವನ ಉಡಿಯ ಹಿಡಿದು ಹೋಹಂತ ಅಂಧಕ ದೃ [ದ್ರ] ಷ್ಟನ. ಹಿಂದೆ ಇದ್ದು ನಡೆನಡೆವಂತೆ (ಮೋಕ್ಷಮಾ. ೩೫-೧೪೮) ; ಜೀವಾತ್ಮನಿಗೆ . . . ನೋಡುತ್ತಿರುವ ಸ್ವಭಾವ ಎಂದರೆ ಸಾಕ್ಷಿತ್ವವು ಇರುವುದರಿಂದ ಇವನು ದ್ರಷ್ಟಾ, ಇತರ ವಸ್ತುಗಳು ದೃಶ್ಯ (ಹಿಂದಸಾ. ೫೯) : ಕಣ್ಣು ಇತರ ವಸ್ತು ಗಳನ್ನು ನೋಡುತ್ತದೆ, ಇದರಲ್ಲಿ ದೃಶ್ಯ, ದೃಷ್ಟ ಎಂದರೆ ನೋಡಲ್ಪಡತಕ್ಕ ಮತ್ತು ನೋಡುವವನ ಭೇದವು ಸ್ಪಷ್ಟವಾಗಿದೆ (ಜೀಪಾತ್ಯ. ೪೩). ೨. ಕಾಣಬಹುದಾದುದು ; ಗೋಚರಿಸುವುದು ; ನೋಟಕ್ಕೆ ಸಿಕ್ಕುವುದು : ಶಾಸ್ತ್ರದಿಂದಲೂ ದ್ರಷ್ಟಾ, ಬೋದ್ಧಾ, ಸರ್ವಜ್ಞಾತಾ ಎಂದು ಈಶ್ವರನ ಸ್ವರೂಪ ತಿಳಿಯಲ್ಪಡುವುದು (ಹಿಂದಸಾ. ೧೨೬). [ ಸಂ. ದ್ರಷ್ಟೃ ]

**ದೃಷ್ಟವ್ಯ** (ನಾ). ಸಾಕ್ಷಾತ್ಕರಿಸಿಕೊಳ್ಳಬೇಕಾದವನು ; ದರ್ಶನವಾಗ ಬೇಕಾದವನು : ಸೇವ್ಯನನು ಸತ್ಕೃತಿಗಳಲಿ ದ್ರಷ್ಟವ್ಯನನು ದೃಢಚಿತ್ತದಲಿ ಮಂತ್ರವ್ಯನಾ ಶ್ರೋತವ್ಯನನು . . . ಅಜ್ಞಾನದಲಿ ಯೋದ್ಧ [ಪಾಠಾ: ಗ]ವ್ಯನೆಂದೇ ನೆಣಿಸಿದೆವಲಾ (ಕುವ್ಯಾಅ. ೬-೬೪). [ ಸಂ. ]

**ದ್ರಷ್ಟಾರ** (ನಾ). ದೈವಿಕವಾದ ತಿಳಿವಳಿಕೆಯನ್ನು ಹೊಂದಿದವನು ; ದಿವ್ಯದೃಷ್ಟಿಯುಳ್ಳವನು ; ದಾರ್ಶನಿಕ ; ಪ್ರವಾದಿ : ಕ್ರೌಂಚದರ್ಶನ ಕವಿಯು ಮಂತ್ರದ್ರಷ್ಟಾರ (ಕ್ರೌಂಚಧ್ವ. ೩೩-೦೩) : ಸಾಂಖ್ಯದರ್ಶನದ ದ್ರಷ್ಟಾರ ಮಹರ್ಷಿ ಕಪಿಲ (ಶಾರದ. ೧೧೩) ; ಆ ಕ್ಷಣದಿಂದಲೇ ಹಜರತ್ ಮಹಮ್ಮದರು ದ್ರಷ್ಟಾರರಾದರು (ಮನೋನಂ. ೨೮೪). [ ಸಂ. ದ್ರಷ್ಟೃ ]

**ದ್ರಾಕ್ಷಾಪಾಕ** (ನಾ). [ಕಾವ್ಯಮೀ] ಸರಳವಾಗಿ ಹಾಗೂ ಸುಲಭವಾಗಿ ರಸವನ್ನು ಗ್ರಹಿಸಲು ಸಾಧ್ಯವಾದ ಶೈಲಿ ; ದ್ರಾಕ್ಷಿಯ ಹಣ್ಣನ್ನು ಬಾಯಿಗೆ ಹಾಕಿಕೊಂಡು ಸುಲಭವಾಗಿ ಅಗಿದು ಅದರ ರಸವನ್ನು ಗ್ರಹಿಸಬಹುದು. ಹೀಗೆ ಸುಲಭವಾಗಿ ಅರ್ಥವಾಗುವುದು ದ್ರಾಕ್ಷಾಪಾಕ : ದ್ರಾಕ್ಷಾಪಾಕಮೆನೆ . . . ಅರ್ಥಮಂ ತಿಳಿವಾಗುಳುಂ ತಾತ್ಪರ್ಯಮುಮೂಹಿಸುವಾಗಳುಂ ಒಂದೇ ಬಗೆಯಾಗಿ ಅಂದವಾಗಿರ್ಪುಂ (ಅಪ್ಪತಿ. ೨೨-೦೯) ; ದ್ರಾಕ್ಷಾಪಾಕದಂದದಿ . . . ನಾ ರಚಿಪೆ ಕಾವ್ಯವ ಸಾಳಭ್ರಂತದಲಿ (ಬಿಜ್ಜಪು. ೩-೪) ; ದ್ರಾಕ್ಷಾಪಾಕಕ್ಕೆ :- ಎಣಿಸೆ ನಖಂಗಳಿಂ ದುಡಿಯದಿರ್ದ ಚಿಗುರ್ ಕಡೆದೆಜ್ಜವಿಕ್ಕದೊಳ್ಕಣ ಸವಿ ನೋಡದಿರ್ದಾಳಿನವಂ ಮಧು . . . ಆಕೆಯ ರೂಪನಘಂ ಗಡಾ ಅದಕ್ಕೆಣೆಯೆನೆ ಭೋಕ್ತೃವಂ ವಿಧಿಯದಾವನನೊಂದಿಪನಾಹ ಕಾಣೆ ನಾಂ (ಕೈಪಿಡಿ. ೨೨೫). 'ನಾರಿಕೇಳ ಪಾಕ' ಪರಾ. [ ಸಂ. ]

**ದ್ರಾಕ್ಷಾಫಳ** (ನಾ). ದ್ರಾಕ್ಷಿಯ ಹಣ್ಣು : ಅಯ್ಯ ಹಾವುಮೆಕ್ಕೆಯಲ್ಲಿ ದ್ರಾಕ್ಷಾಫಳವನರಸುವರೆ (ಆದವ. ೦೩-೨೯). [ ಸಂ. ದ್ರಾಕ್ಷಾಫಲ ]

**ದ್ರಾಕ್ಷಾರಸ** (ನಾ). ೧. ದ್ರಾಕ್ಷಿಯ ಹಣ್ಣಿನ ರಸ ; ದ್ರಾಕ್ಷಾಸಾರ. ೨. ದ್ರಾಕ್ಷಿಯ ರಸದಿಂದ ತಯಾರಿಸಿದ ಮದ್ಯ : ಪುರೋಹಿತ . . . ತಟ್ಟೆಯೊಂದರಲ್ಲಿ ರೊಟ್ಟಿಯನ್ನು ಸಣ್ಣಸಣ್ಣ ಚೂರುಗಳಾಗಿ ಕತ್ತರಿಸಿ ಕ್ರಮವಾಗಿರಿಸಿ, ಅನಂತರ ಅವುಗಳನ್ನು ಒಂದು ಬಟ್ಟಲಿನಲ್ಲಿದ್ದ ದ್ರಾಕ್ಷಾರಸಕ್ಕೆ ಸುರಿಯುತ್ತಿದ್ದನು (ಪುನರು. ೧೬೫) ; ಸೀಸೆಯನ್ನು ತುಂಬಿದ ಕೆಂಪು ದ್ರಾಕ್ಷಾ ರಸದಿಂದ ತುಂಬಿ ಮರ್ಯಾಂಕಳು ಅದನ್ನು ವನ್ನೂಪನಿಗೆ ಕೊಟ್ಟಳು (ಮಲೆನಾ. ೬೭). [ ಸಂ. ]

**ದ್ರಾಕ್ಷಾರಿಷ್ಟ** (ನಾ). [ವೈದ್ಯ] ಕೆಲವು ಔಷಧದ್ರವ್ಯಗಳ ಸಾರವನ್ನು ಬಟ್ಟಿಯಿಳಿಸಿ ತೆಗೆದು, ಸಕ್ಕರೆ, ಜೇನು ಮುಂತಾದ ವಸ್ತು ಗಳೊಡನೆ ಕೂಡಿಸಿ ದ್ರಾಕ್ಷಾರಸವನ್ನು ಸೇರಿಸಿ ತಯಾರಿಸುವ ಒಂದು ಬಗೆಯ ಕಷಾಯ. [ ಸಂ. ]

**ದ್ರಾಕ್ಷಾವಲ್ಲಿ** (ನಾ). ದ್ರಾಕ್ಷಿಯ ಹಣ್ಣಿನ ಬಳ್ಳಿ ; ದ್ರಾಕ್ಷಿಬಳ್ಳಿ : ದ್ರಾಕ್ಷಾ ವಲ್ಲಿಯ ಫಲಮನಪೇಕ್ಷಿಸುವೊಡೆ ಕೋಟಿಯ(ಯ)ಜ್ಞಮಂ ತೊಡೆ ಮೇಣ ಭಕ್ಷಿಸು ಮಾಂಸಕಷಾಯಮನಕ್ಷಣಫಲಂಗಳಕ್ಕುಂ (ಲೋಕೋಪ. ೬-೫೩). [ ಸಂ. ]

**ದ್ರಾಕ್ಷಾಸವ** (ನಾ). = ದ್ರಾಕ್ಷಾರಸ ೨ : ಫ್ರಾನ್ಸ್, ಪೋರ್ತುಗಾಲ ದೇಶ ಗಳಿಂದ ತರತರದ ದ್ರಾಕ್ಷಾಸವಗಳೂ ಮದ್ಯಗಳೂ ಬರುತ್ತವೆ (ಮುಂಬಯಿ. ೪-೦೬೦). [ ಸಂ. ]

**ದ್ರಾಕ್ಷೆ** (ನಾ). ೧. ಒಂದು ಬಗೆಯ ಬಳ್ಳಿ ಮತ್ತು ಅದರ ಹಣ್ಣು; ಗೋಸ್ತನಿ: "ಗೋಸ್ತನಿ ಮೃದ್ವೀಕಾಭಿಧಾನೆ ತಾಂ ದ್ರಾಕ್ಷೆ" (ವಸ್ತುಕೋ. ೩೭-೩೩); ಮಾಂಸರಸಮಂ ಕಷಾಯಂ ಮಾಡಿ ತೊಡೆಯುತ್ತುವಿರಲ್ ದ್ರಾಕ್ಷಿ ಸಂಪೂರ್ಣ ಫಲಮಪ್ಪುದು (ಲೋಕೋಪ. ೭-೩೩ ಟೀಕೆ); ನಮ್ಮಲ್ಲಿ ದ್ರಾಕ್ಷಿಯನ್ನು ಸುಲಭವಾಗಿ ಬೆಳೆಸಬಹುದು (ಕೃಷಮು. ೩೮). ೨. ಒಣಗಿದ ದ್ರಾಕ್ಷಿ: ದ್ರಾಕ್ಷಿ, ಗೋಡಂಬಿಗಳ ಬೆಲೆ ಈಗ ಬಹಳ ಹೆಚ್ಚು (ರೂಢಿ).

[ ಸಂ. ದ್ರಾಕ್ಷಾ ]

**ದ್ರಾಕ್ಷಿಚೂರ್ಣ** (ನಾ). ದ್ರಾಕ್ಷಿ ಮುಂತಾದ ಅನೇಕ ಔಷಧಿದ್ರವ್ಯಗಳನ್ನು ಹಾಕಿ ಮಾಡಿದ ಪುಡಿ: ದ್ರಾಕ್ಷಿಚೂರ್ಣ-ದ್ರಾಕ್ಷಿಹಣ್ಣು, ಕೊತ್ತುಂಬರಿ . . . ಚೂರ್ಣಿಸಿ . . . ನಿತ್ಯವೂ ಉದಯಕಾಲದಲ್ಲಿ ಸೇವಿಸೆ ಪಿತ್ತಜ್ವರ, ಪಾಂಡು, ಕಾಮಾಲೆ ಸಹ ಮಾಣ್ಗುಂ (ಸಕವೈ. ೮೪).

[ ದ್ರಾಕ್ಷಿ + ಚೂರ್ಣ೩ ]

**ದ್ರಾಕ್ಷೆ** (ನಾ). ೧. = ದ್ರಾಕ್ಷಿ ೧.: "ಮೃದ್ವೀಕಾ, ಗೋಸ್ತನೀ, ದ್ರಾಕ್ಷಾ, ಹಾರಹೂರಾ-ಈ ೪ ದ್ರಾಕ್ಷೆ" (ಹಲಾಯು. ೩೩-೪೦); ಓಲೆ ಮೆಣಸನಂ ದ್ರಾಕ್ಷೆಯನು ರಸದಾಳಿ ದಾಳಿಂಬಂಗಳಂ ತವೆ ಬಾಲದಿಂದಲಿ ಕಿತ್ತೊರಸಿ ಹುಡಿಹುಡಿಮಾಡಿದನು ಹನುಮ (ತೊರರಾ. ೧೧-೩೦); ತೆಗೆದ ತೊಟಿ ಕಾಲುವೆಗಳುದ್ಯಾನಗಳ ಕಳವು ದ್ರಾಕ್ಷೆ ಧವಳೇಕ್ಷುಗಳ ವನವೀಥಿಗಳನೀಕ್ಷಿಸು ತರಸನೈತಂದ (ತೊರರಾ. ೧-೬-೧೧). ೨. = ದ್ರಾಕ್ಷಿ ೨: ಅರೆದಂಬಾಗಿರೆ ಬೆಂದ ಪೋಟಗೆಗಳಂ ಕಚ್ಚೂರ್ಣ ಪಂಚಾಂಶಮಾಗಿರೆ ಖರ್ಜೂರಮನಲ್ಲದಂ ದೆಱದ ಪಣ್ಣಂ ದ್ರಾಕ್ಷೆಯುಂ ಮತ್ತೆ ಶರ್ಕರೆಯು ಪೊಯ್ದು . . . ಖಂಡ ಲಡ್ಡುಗೆಗಳಂ ಮಾಟ್ಕೆಂದುವಿಾ ಮಾಟ್ಕೆಯಿಂ (ಲೋಕೋಪ. ೮-೦೪).

**ದ್ರಾಕ್ಷಾದಿ ಘೃತ** = ದ್ರಾಕ್ಷೆ ಮುಂತಾದ ಅನೇಕ ಔಷಧಿದ್ರವ್ಯಗಳನ್ನು ಹಾಕಿಮಾಡಿದ ಔಷಧಿ,-ಲೇಹ್ಯ: ದ್ರಾಕ್ಷಾದಿಘೃತ . . . ಈ ಘೃತ ವನ್ನು ಹೊಟ್ಟೆಗೆ ಸೇವಿಸುವುದರಿಂದ ಅಸ್ಥಿಗತಜ್ವರ . . . ಪುರಾಣಜ್ವರಗಳೆಲ್ಲಾ ಮಾಣುವುವು (ಸಕವೈ. ಪರಿ ೪೦೬). **ದ್ರಾಕ್ಷಾದಿ ಚೂರ್ಣ** = ದ್ರಾಕ್ಷಿಚೂರ್ಣ: ದ್ರಾಕ್ಷಾದಿಚೂರ್ಣ-ದ್ರಾಕ್ಷೆ, ಛತ್ರದರಳು . . . ಈ ದ್ರವ್ಯಗಳಿಗೆ ಸಮಭಾಗ ಸಕ್ಕರೆಯನ್ನು ಹಾಕಿ ಸೇವಿಸಲು ಪಿತ್ತರೋಗ, ಪಾಂಡು, ಕಾಮಿಲಾ ರೋಗ ಗಳು, ರಕ್ತಪಿತ್ತ, ದಾಹಜ್ವರಗಳು ಪ್ರಮೇಹಗಳು ಮಾಣುವುವು (ಸಕವೈ. ಪರಿ ೪೦೬). **ದ್ರಾಕ್ಷಾದಿ ಲೇಹ್ಯ** = ದ್ರಾಕ್ಷೆ ಮುಂತಾದ ಅನೇಕ ಔಷಧಿ ದ್ರವ್ಯ ಗಳನ್ನು ಹಾಕಿ ಮಾಡಿದ ಔಷಧಿ,-ಲೇಹ್ಯ: (ಪೆ).

[ ಸಂ. ದ್ರಾಕ್ಷಾ ]

**ದ್ರಾಗ್ಭೃತಕ** (ನಾ). ಬಾವಿಯಿಂದ ಆಗ ತಾನೆ ಸೇದಿದ ನೀರು: "ದ್ರಾಗ್ಭೃತಕಂಯೆಂಬುದು ಅಗಟ್ಟಿಯ ನೀರ್" (ಹಲಾಯು. ೦೦೭-೨೭).

[ ಸಂ. ]

**ದ್ರಾಘಿಮ** (ನಾ). ಉದ್ದ; ನೀಳ; ದೀರ್ಘತೆ: "ದ್ರಾಘಿಮಾಮಕ್ಕುಂ ಪ್ರಾಂಶುತೆ" (ವಸ್ತುಕೋ. ೧೧೩-೨೯); ಮುದದಿಂದಂ ದ್ರಾಘಿಮಶ್ಲಾಘಿ ಬಾಹುಗಳಿಂದಂ ತೆಗೆದಪ್ಪಿಕೊಂಡನರಸಂ ಶ್ರೀರೂಪಕಂದರ್ಪನಂ (ಸುಕುಮಾ. ೧೧-೨); ಮೂಷೆಯಿಟ್ಟು ತೆಱದಿಂ ಗ್ರಾವಸ್ಥಲಂ ಲೋಹಮಾದುವು ರೇಣುಸ್ಥಲಿ ಕಾಡುವಿಟ್ಟುವು ನಿದಾಘದ್ರಾಘಿಮೋದ್ರೇಕದೊಳ್ (ಪಂರಾಮಾ. ೭-೯೭); ದಿಶಾಕರಿ ಹಸ್ತಾಯತಮಾಂಸಲಂ ಭುಜಗರಾಜದ್ರಾಘಿಮಂ ವಿಶ್ವಭೂಧರಮಂ ತಾಳ್ದಿದುದೊಂದೆ ದಕ್ಷಿಣಭುಜಾದಂಡಂ ಧರಾಧೀಶನಾ (ಅನಂಪು. ೨-೬).

[ ಸಂ. ದ್ರಾಘಿಮನ್ ]

**ದ್ರಾಘಿಷ್ಠ** (ಗು). ತುಂಬಾ ಉದ್ದವಾದ; ಅತಿ ದೀರ್ಘವಾದ; ಬಲು ನೀಳವಾದ. [ ಸಂ. ]

**ದ್ರಾಪ** (ನಾ). ೧. ಕೆಸರು; ರಾಡಿ. ೨. ಗಗನ; ಆಕಾಶ. ೩. ದಡ್ಡ; ಮೂರ್ಖ; ತಿಳಿಗೇಡಿ. [ ಸಂ. ]

**ದ್ರಾಬೆ, ದ್ರಾಭೆ** (ನಾ). ೧. ದಡ್ಡ; ಪೆದ್ದ; ಮೂರ್ಖ. ೨. ಕೆಲಸಕ್ಕೆ ಬಾರ ದವನು; ನಿಷ್ಪ್ರಯೋಜಕ. ೩. ಕೊಳಕ; ಹೊಲಸು ಮನುಷ್ಯ. ೪. ದುರ್ಬಲ ವ್ಯಕ್ತಿ: ಈಗಿನವರು ನಾಜೂಕು ಕಲಿತುಕೊಂಡು ಬಿಟ್ಟಿದ್ದಾರಮ್ಮ . . . ಒಂದೋ ಎರಡೋ ಅಗಲಿಕ್ಕಿಲ್ಲ-ದ್ರಾಬೆಗಳ ಹಾಗೆ ಆಗುವುದು (ಕಾಯಿಕ. ೪೭). **ದ್ರಾಭೆ**: ೩. ಅವನ ಮೈಬಟ್ಟೆಗಳೂ ಕೊಳೆ ಹತ್ತಿ ನಾರುತ್ತಿದ್ದುವು . . . ಅಂತಹ ಎಷ್ಟೋ ಒಂದು ದ್ರಾಭೆಗಳನ್ನು ಪ್ರಪಂಚದಲ್ಲಿ ನೋಡಿದ್ದರಿಂದ ಅದರಲ್ಲಿ ಅವರಿಗೆ ನ್ಯೂನತೆ ಅಷ್ಟೇನೂ ಕಾಣಿಸಲಿಲ್ಲ (ಸುಜಿವಿ. ೮೪).

**ದ್ರಾಬೆ ಜನ** = ಕೊಳಕುತನದಿಂದ ಕೂಡಿದ ಜನ: ಮೈಗೆ ಸ್ನಾನವನ್ನು ಕಾಣಿಸದಂಥ ದ್ರಾಬೆಜನಗಳು ಇವರು (ರೂಢಿ). **ದ್ರಾಬೆ ನಂಟ** = ಅಸಹ್ಯ ವನ್ನು ಹುಟ್ಟಿಸುವ ನಂಟ; ಬೇಜಾರು ಹೊಂದುವಂತೆ ಮಾಡುವ ಬಂಧು: ಈ ದ್ರಾಬೆ ನಂಟನ ಕಾಟ ನಮಗೆ ತಪ್ಪಿದ್ದಲ್ಲ (ರೂಢಿ). **ದ್ರಾಬೆ ಮಾತು** = ಕೆಲಸಕ್ಕೆ ಬಾರದ ಮಾತು; ನೀರಸವಾಕ್ಯ: ಅವನ ದ್ರಾಬೆ ಮಾತು ಯಾವ ಪರಿಣಾಮವನ್ನೂ ಬೀರುವಂತಿರಲಿಲ್ಲ (ರೂಢಿ). **ದ್ರಾಬೆ ಮುಖ** = ಸಪ್ಪೆಯಾದ ಮುಖ; ನೀರಸ ಮುಖ; ನಿಸ್ತೇಜವಾದ ಮುಖ: ದ್ರಾಬೆಮುಖಕ್ಕೆ ಸೋಬಾನೆ ಒಂದು ಕೇಡು (ಗಾದೆ). **ದ್ರಾಬೆ ಮೂತಿ** = ದ್ರಾಬೆಮುಖ: ಈ ದ್ರಾಬೆಮೂತಿಗೆ ಎಷ್ಟು ಮಾಡಿದರೂ ಅಷ್ಟೇ (ರೂಢಿ). **ದ್ರಾಬೆಮೋರೆ** = ದ್ರಾಬೆಮುಖ: ಅವರು ದ್ರಾಬೆಮೋರೆ ಹಾಕಿ ಕೊಳ್ಳುವುದನ್ನು ನೋಡಿದರೆ ಮತ್ತೂ ರೇಗುತ್ತದೆ (ರೂಢಿ).

[ <ಸಂ. ದ್ರಾಪ./ತಮಿ. ತಿರಾಪ್ಪೈ; ತೆಲು. ದ್ರಾಬ, ದೇಬೆ ]

**ದ್ರಾಭೆ** 'ದ್ರಾಬೆ' ನೋ.

**ದ್ರಾಮಿಡ** (ಗು). ದ್ರಾವಿಡದೇಶಕ್ಕೆ ಸಂಬಂಧಿಸಿದ: ತಾಂತ್ರಿಕಸಿದ್ಧ ಮಂತ್ರಂಗಳಂ ದ್ರಾಮಿಡ ವೈಕೃತ ಪ್ರಾಕೃತ . . . ಕ್ಷುದ್ರಮಂತ್ರಂಗಳಂ ಬೇಱೆ ಬೇಱೆ ಉಪದೇಶ ಅನುಷ್ಠಾನಪರೀಕ್ಷೆಗಳಿಂ ವಿವೇಚಿಸಿ ತಿಳಿದಿರಲಕ್ಕುಂ (ವಿವೇಕ. ೮೦). [ <ಸಂ. ದ್ರಾವಿಡ ]

**ದ್ರಾಮಿಡಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು; ಗೌಳ ರಾಗದ ಒಂದು ಪ್ರಭೇದ: ಕರ್ಣಾಟಗೌಳ ದ್ರಾವಿಡಗೌಳವೆಂಬೆರಡುಂ ಉಪಾಂಗಗೌಳ ರಾಗಂಗಳು (ವಿವೇಕ. ೨೩೪). [< ಸಂ. ದ್ರಾವಿಡಗೌಲ]

**ದ್ರಾಮಿಡಘೂರ್ಜರಿ** (ನಾ). [ಸಂಗೀತ] ಒಂದು ರಾಗದ ಹೆಸರು; ಘೂರ್ಜರಿ ರಾಗದ ಒಂದು ಪ್ರಭೇದ: ಮಹಾರಾಷ್ಟ್ರಘೂರ್ಜರಿ ಸೌರಾಷ್ಟ್ರಘೂರ್ಜರಿ ದ್ರಾವಿಡಘೂರ್ಜರಿ ದಕ್ಷಿಣಘೂರ್ಜರಿಯೆಂಬ ನಾಲ್ಕುಂ ಉಪಾಂಗಘೂರ್ಜರೀ ರಾಗಂಗಳು (ವಿವೇಕ. ೨೩೪).

[ <ಸಂ. ದ್ರಾವಿಡಗೂರ್ಜರೀ ]

**ದ್ರಾಮಿಡವರಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು; ವರಾಳಿ ರಾಗದ ಒಂದು ಪ್ರಭೇದ: ಸಿಂಧುವರಾಳಿ ಕನ್ನಡವರಾಳಿ ದ್ರಾಮಿಡ ವರಾಳಿ ಪ್ರಥಮವರಾಳಿಯೆಂಬ ನಾಲ್ಕು ರಾಗಂಗಳುಂ ಉಪಾಂಗವರಾಳಿಗಳು (ವಿವೇಕ. ೨೩೪). [ <ಸಂ. ದ್ರಾವಿಡವರಾಲೀ ]

**ದ್ರಾಮಿಡಿ** (ನಾ). ತಮಿಳುನಾಡಿನ ಹೆಂಗಸು; ದ್ರಾವಿಡ ದೇಶದ ಸ್ತ್ರೀ: ಜೃಂಭತ್ಕೋಕೀ ವಿಯೋಗಾನಲ ವಿಪುಲ ಶಿಖಾಜಾಲ ಮುಕ್ತಾಲನೃತ್ಯಾರಂಭ ಕ್ಷುಭ್ಯದ್ಗಿರೀಶಪ್ರಚುರತರ ಜಟಾಮಾಲಮಾಶಾಂಗನಾ ಕೌಸುಂಭಾರಕ್ತೋ ತ್ತರೀಯಂ ಮಸಗಿತು ರಜನೀದ್ರಾಮಿಡೀಗಂಡಪಾಳೀಶುಂಭತ್ಸಿಂಧೂರಕಂ ಸಾಂಧ್ಯರುಚಿರವಿಕರೋತ್ಕೃತ್ತಮಂ ದೇಹರಕ್ಷಂ (ಚಿಕವಿ. ೬-೮).

[ ದ್ರಾಮಿಡ + - ಇ೩ ]

**ದ್ರಾವ** (ನಾ). ೧. ಓಡುವಿಕೆ; ಪಲಾಯನ. ೨. ವೇಗ; ರಭಸ. ೩. ಹರಿಯುವಿಕೆ; ಪ್ರವಹಿಸುವಿಕೆ. ೪. ಕರಗಿಸುವಿಕೆ. ೫. ಬಟ್ಟಿ ಯಿಳಿಸುವುದು. [ ಸಂ. ]

**ದ್ರಾವಕ** (ಗು). ೧. ಓಡುವಂತೆ ಅಥವಾ ಹರಿಯುವಂತೆ ಮಾಡುವ. ೨. ಕರಗಿಸುವ; ನೀರಾಗಿಸುವ. (ನಾ). ೩. ಕಾಂತಾಕರ್ಷಣವುಳ್ಳುದು; ಅಯಸ್ಕಾಂತ ; ಸೂಜಿಗಲ್ಲು. ೪. ಚಂದ್ರಕಾಂತಶಿಲೆ. ೫. ಕಳ್ಳ ; ಚೋರ. ೬. ಚಾತುರ್ಯವುಳ್ಳವನು ; ಕುಶಲ ; ಚತುರ : ಕೀವಿದರು ಹೊಟವಳಯದಲಿ ನಾನಾವಿಧದ ನಾಟಕದ ನರ್ತನ ಭಾವಕ ದ್ರಾವಕ ಸುಗಾಯಕ ಮಲ್ಲಚಿತ್ರಕರು (ಕುವ್ಯಾಆ. ೧೩-೨೦) ; ಕೋವಿದರು ಕರ್ಣಾಂಧ್ರ ಯುಗಹೀನರು ಮೂಕವಾಮನರು ದ್ರಾವಕರು ಜೂಜಿಗರು ಬಿರುದುಗಳ ತೋರುವರು (ತುರಂಗ. ೩೯-೩೫). ೭. ಕಾಮುಕ ; ವ್ಯಭಿಚಾರಿ. ೮. ಜೇನು ಮೇಣ. ೯. [ವೈದ್ಯ] ಬಟ್ಟಿಯಿಳಿಸಿ ತಯಾರಿಸಿದ ಔಷಧಿ : ದ್ರಾವಕವನ್ನು ಗಂಟಲೊಳಕ್ಕೆ ಲೇಪನ ಮಾಡಿಸಿಕೊಂಡೆ (ನಂಟರು. ೩೮). ೧೦. [ವಿಜ್ಞಾ] ಲೋಹವೇ ಮುಂತಾದುವನ್ನು ಕರಗಿಸಲು ಉಪಯೋಗಿಸುವ ಒಂದು ಬಗೆಯ ರಾಸಾಯನಿಕ ದ್ರಾವಣಾಮ್ಲ : ಸುಬ್ಬುವಿನ ಸಿಟ್ಟು ದ್ರಾವಕದಲ್ಲಿ ಬಿದ್ದ ಲೋಹದಂತೆ ಕರಗಿಹೋಯಿತು (ಭೀಮುಕಾ. ೦೬೨) ; ರಾಸಾಯನಿಕಯಂತ್ರಗಳಿಂದ ಬರುವ ದುರ್ವಾಸನೆಯು ದ್ರಾವಕಗಳೆಲ್ಲಾ ನದಿಗಳಲ್ಲಿ ಬೆರೆತರೆ ಇನ್ನೇನಾಗುತ್ತೆ ? (ಶಿಲ್ಪಸಾ. ೦೫೭).

[ ಸಂ. ]

**ದ್ರಾವಣ** (ನಾ). ೧. ದ್ರವರೂಪದ ವಸ್ತು ; ದ್ರವವಸ್ತು : ಪೊಟಾಸಿಯಂ ಪರ್ಮಾಂಗನೇಟ್ ದ್ರಾವಣವಾದರೋ ನೋಡುವುದಕ್ಕೆ ಊದಾಬಣ್ಣವಾಗಿ ಕಂಡರೂ ಹಸುರು, ನೀಲಿ ಬಣ್ಣಗಳ ಕೆಲವು ಭಾಗಕ್ಕೆ ಮಾತ್ರ ಸ್ವಲ್ಪವೂ ಪಾರದರ್ಶಕವಾಗಿರದೆ ಉಳಿದ ಬಣ್ಣಗಳಿಗೆ ಸಾಧಾರಣವಾಗಿರುತ್ತದೆ (ಭೌತವಿ. ೦೫೫) : ಇನ್ನೊಂದು ಚೂರನ್ನು ಅದರೊಡನೆ ಸುಲಭವಾಗಿ ಬೆರೆಯುವ ದ್ರಾವಣದಲ್ಲಿಡುತ್ತೇನೆ (ಯೋಧಪು. ೫೭). ೨. ಕರಗಿಸುವಿಕೆ. ೩. (ಆಲಂ) ಮರುಳಾಗುವಿಕೆ ; ಮೋಹಗೊಳ್ಳುವಿಕೆ : ಆ ಬೇರನ್ನು ತಾಮ್ರದ ತಗಡಿಗೆ ಹುದುಗಿಸಿ ಹಲ್ಲು ನುಲಿಯೆ ಏಳನೆಯ ಉಪ್ಪರಿಗೆಯಲ್ಲಿ ಇದ್ದ ಸ್ತ್ರೀಯಾದರೂ ದ್ರಾವಣ ತಪ್ಪದು (ವಿಶ್ವವಿ. ೨೦೨). [ ಸಂ. ]

**ದ್ರಾವಣಿ** (ನಾ). ಕರಗುವ ಸ್ವಭಾವವುಳ್ಳುದು ; ನೀರಾಗುವಂಥುದು: ಉಮರ್ದಿನುಂಡಿಗೆಗಳೆನಿಸುವ ಪಾಲುಂಡೆಗಳುಮನತಿಮೃದುಲಲಿತಕೋಮಲ ತಲಸಂಗಮಾತ್ರ ದ್ರಾವಣಿಯಪ್ಪ ಶಾಕವರ್ತಿಗೆಗಳುಮಂ ... ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೦೦-೨೯ ವ). [ ಸಂ. ದ್ರಾವಣಿನ್ ]

**ದ್ರಾವಣೀಯ** (ಗು). ಕರಗುವ; ದ್ರವಿಸುವ : ಅತಿಮೃದುರಸನಾಸಮ್ಮರ್ದನ ಮಾತ್ರದ್ರಾವಣೀಯಘೃತಪೂರಮುಂ (ಆದಿಪು. ೧೧-೨೭ ವ). [ ಸಂ. ]

**ದ್ರಾವಾಗ್ನಿ** (ನಾ). ಕರಗಿ ಹರಿಯುವ ಬೆಂಕಿ ; ಲಾವಾರಸ : ಬೆಂಕಿವೆಟ್ಟು ಗಳೋಕರಿಸಿದುವು ಭಯಂಕರಯುಗಾಂತಕದ್ರಾವಾಗ್ನಿಯಂ (ಶ್ರೀರಾಮಾ. ೮೦೭-೧೯೭). [ ದ್ರಾವ + ಅಗ್ನಿ ]

**ದ್ರಾವಿಡ** (ಗು). ೧. ದ್ರವಿಡಕ್ಕೆ ಸಂಬಂಧಿಸಿದ : "ದ್ರಾವಿಡ" ಎಂಬ ಶಬ್ದ ದ್ರಮಿಳ ಎಂಬ ಒಂದು ಪೂರ್ವರೂಪದಿಂದ ಬೆಳೆದಿರುವ ರೂಪ ಎಂದು ತೋರುತ್ತದೆ (ನಮ್ಮನು. ೦೪). 'ದ್ರಾವಿಡಕುಲ', 'ದ್ರಾವಿಡಭಾಷೆ' ಪರಾ. (ನಾ). ೨. ದ್ರಾವಿಡದೇಶಕ್ಕೆ ಸೇರಿದವನು : ಮಧ್ಯಭಾರತದ ಪಶ್ಚಿಮ ಉತ್ತರ ಮಧ್ಯಭಾಗಗಳಲ್ಲಿ ಕ್ರಿ. ಪೂ. ೧೫೦೦ ರಿಂದ ೮೦೦ರವರೆಗೆ ... ತುರೇನಿಯನ್ ಪಂಗಡದವರು ಪ್ರಭುತ್ವ ಮಾಡುತ್ತಿದ್ದರು. ಅವರನ್ನೇ ಸೌಲಭ್ಯದೃಷ್ಟಿಯಿಂದ ದ್ರಾವಿಡರೆಂದು ಕರೆಯಲಾಗಿದೆ (ಭಾರದ. ೦೭೦). ೩. ದ್ರಾವಿಡದೇಶಕ್ಕೆ ಸಂಬಂಧಿಸಿದ ಭಾಷೆ : ಇವುಗಳಲ್ಲಿ ಸಿಗುವ . . . ದ್ರಾವಿಡದ ಪದಗಳು ಮುಖ್ಯವೆನ್ನಬಹುದು (ದ್ರಾವಿವಿ. ೬೨). ೪. ತಮಿಳು ದೇಶ : ಅವಱಂ ಪೊಱಗೆ ಮತ್ತಂ ಕರ್ನಾಟಕ ಆಂಧ್ರ ದ್ರಾವಿಡ . . . ದೇಶಭಾಷೆಗಳೊಳ್ ಪುಟ್ಟುವವೆಲ್ಲಂ ಸರ್ವವಿಷಯಭಾಷಾಜಾತಿಗಳಕ್ಕುಂ (ಛಂದೋಂಬು. ೬. ೧-೭೭ ಅಡಿಟ). ೫. ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು ; ತಮಿಳುನಾಡಿನವನು ; ತಿಗುಳ : "ತಿಗುಳ ದ್ರಾವಿಡನಕ್ಕು" (ಮಂಗರಾ. ೦೦೨-೭). ೬. = ದ್ರಾವಿಡಸಂಘ: ಸಂಘಗಳು: ಮೂಲ, ನಂದಿ, ಯಾಪನೀಯ, ಯಾಪನೀಯನಂದಿ, ದ್ರಾವಿಡ, ಶ್ರೀಸಂಘ, ಕಿತ್ತೂರು (ಕಶಾಆ. ೮೭). ೭. [ವಾಸ್ತು] ಭಾರತೀಯ ವಾಸ್ತುಶಿಲ್ಪದ ನಾಗರ, ದ್ರಾವಿಡ ಮತ್ತು ವೇಸರಗಳೆಂಬ ಮೂರು ಪ್ರಭೇದಗಳಲ್ಲಿ ಒಂದು ; ದಕ್ಷಿಣ ದೇಶದಲ್ಲಿರುವ ವಾಸ್ತುಶಿಲ್ಪ ; ಆರು ಅಥವಾ ಎಂಟು ಮುಖಗಳುಳ್ಳ ದೇವಾಲಯ: ಶಿಲ್ಪಶಾಸ್ತ್ರಗಳಲ್ಲಿ . . . ಉತ್ತರ ಭಾರತದಲ್ಲ ನಾಗರ, ಕಾವೇರಿಗೆ ದಕ್ಷಿಣದಲ್ಲಿ ದ್ರಾವಿಡ, ಮಧ್ಯದಲ್ಲಿ ವೇಸರ ರೀತಿಗಳಿವೆಯೆಂದು ಹೇಳಿದೆ (ಹೊಯ್ಸವಾ. ೧) ; ಕಾಮಿಕಾಗಮ ಮತ್ತು ಸುಪ್ರಭೇದಾಗಮಗಳಲ್ಲಿಯೂ ಈ ಮೂರು ರೀತಿ (Style)ಗಳ ವಿಷಯವನ್ನು ಹೇಳಿದೆ. ಅವುಗಳೇ ನಾಗರ, ದ್ರಾವಿಡ ಮತ್ತು ವೇಸರ (ಭಾರದ. ೪೯೨).

**ದ್ರಾವಿಡ ನಮೂನೆ** = ದ್ರಾವಿಡ ವಾಸ್ತುಶಿಲ್ಪದ ಮಾದರಿ : ದ್ರಾವಿಡ ನಮೂನೆಯ ಶಿಖರವು ಅಡ್ಡಡ್ಡವಾದ ಹಂತಗಳಿಂದ ಕೂಡಿ, ಪಿರಮಿಡ್ಡಿನ ಆಕಾರವನ್ನು ಹೊಂದಿದೆ (ಭಾರದ. ೪೯೩). **ದ್ರಾವಿಡ ರೀತಿ** = ದ್ರಾವಿಡ ನಮೂನೆ : ನಾಗರ ಮತ್ತು ದ್ರಾವಿಡ ರೀತಿಗಳ ವಿಮಾನಗಳು ಚತುರಸ್ರಾಕಾರವಾಗಿದ್ದು ತುದಿಯಲ್ಲಿ ಶಿಖರವನ್ನು ಹೊಂದಿರುತ್ತವೆ (ಮೈವಾಸ್ತು. ೨೭). **ದ್ರಾವಿಡ ಶೈಲಿ** = ದ್ರಾವಿಡ ನಮೂನೆ : ಇಲ್ಲಿ ಕಾಣುವ ದ್ರಾವಿಡಶೈಲಿಯು ಐಹೊಳೆ, ಬಾದಾಮಿಯಲ್ಲಿರುವ ದೇವಾಲಯಗಳಿಗೂ ದಕ್ಷಿಣದ ಪಲ್ಲವ ಮತ್ತು ಚೋಳರು ಕಟ್ಟಿಸಿರುವ ಭವ್ಯವಾದ ದೇವಾಲಯ ಗಳಿಗೂ ಮಧ್ಯದ ಹೆಜ್ಜೆಯನ್ನಾಗಿ ಪರಿಗಣಿಸಬಹುದಾಗಿದೆ (ಮವಾಸ್ತು. ೩೫).

[ ಸಂ. ]

**ದ್ರಾವಿಡಕ** (ನಾ). ಒಂದು ಬಗೆಯ ಸಸ್ಯ ; ಕಾಡುಅರಿಸಿನದ ಗಿಡ ; ವನ ಹರಿದ್ರ ; ಕಚೋರ : "ಕಚ್ಛೂರಕಃ . . . ದ್ರಾವಿಡಕಃ, ಕಾಲ್ಯಕಃ, ವೇದ ಮುಖ್ಯಕಃ–ಈ ೪ ಗಂಧ ಕಚೋರದ ಹೆಸರುಗಳು" (ಸಿದ್ಧಾಂತಿ. ೦೪೩).

[ ಸಂ. ]

**ದ್ರಾವಿಡತಪಸ್ಸು** (ನಾ). ಆರ್ಯವರ್ಗಕ್ಕೆ ಸೇರದ, ಸಾತ್ವಿಕವಲ್ಲದ ತಪಸ್ಸು; ದುಷ್ಟಕಾರ್ಯಕ್ಕಾಗಿ ಶಕ್ತಿಯನ್ನು ಸಂಪಾದಿಸುವ ತಪಸ್ಸು: ದ್ರಾವಿಡತಪಸ್ಸಿನಿಂ ಮೃಡನಿಂ ಬರಂಗಳಂ ಪಡೆದನೆಂಬರ್ ಕಣಾ (ಶ್ರೀರಾಮಾ. ೨೯-೫೦). [ ದ್ರಾವಿಡ + ತಪಸ್ಸು ]

**ದ್ರಾವಿಡದೇಶ** (ನಾ). = ದ್ರಾವಿಡಧರೆ : ದ್ರಾವಿಡದೇಶದಲ್ಲಿ ನರಸಿಂಹ ನರಾಧಿಪನೆಂಬ ಭಕ್ತಂ . . . ಒಪ್ಪುತಿರ್ಪಂ (ವೃಷವಿ. ೧೪-೧೦೧).

[ ದ್ರಾವಿಡ + ದೇಶ ]

**ದ್ರಾವಿಡಧರೆ** (ನಾ). ತಮಿಳುನಾಡು : ಸಂದ ಮಹಂತರೊಳು ದ್ರಾವಿಡ [ಪಾಠಂ. ೪]ಧರೆಯೊಳತ್ಯಂತಭಕ್ತನು (ಬಸವು. ೨೪-೭೭).

[ ದ್ರಾವಿಡ + ಧರೆ ]

**ದ್ರಾವಿಡಪದ್ಧತಿ** (ನಾ). ೧. ದ್ರಾವಿಡಜನರಿಗೆ ಸಂಬಂಧಿಸಿದ ಸಂಪ್ರದಾಯ. ೨. [ಛಂದ] ದ್ರವಿಡವರ್ಗಕ್ಕೆ ವಿಶಿಷ್ಟವಾದ ರೀತಿ : ಆದರೂ ಶುದ್ಧದ್ರಾವಿಡಪದ್ಧತಿಯೊಂದು ಮೊದಲಿನಿಂದಲೂ ಸೂಕ್ಷ್ಮವಾದ ರೀತಿಯಲ್ಲಿ ಇದ್ದಿರಬೇಕೆಂದು ಊಹಿಸಬಹುದು (ಕ್ನಬಿಡಿ. ೦೪೨).

[ ದ್ರಾವಿಡ + ಪದ್ಧತಿ ]

**ದ್ರಾವಿಡಪ್ರಬಂಧ** (ನಾ). ತಮಿಳುದೇಶದ ವೈಷ್ಣವಭಕ್ತರು ಶರಣಾಗತಿ ತತ್ವವನ್ನು ಬೋಧಿಸಲು ರಚಿಸಿದ ವೇದಾಂತತತ್ವಗಳನ್ನೊಳಗೊಂಡ ಕೃತಿಗಳು ; ಆಳ್ವಾರುಗಳ ರಚನೆಗಳು : ಆಚಾರ್ಯರ ಹೊಸಮತಕ್ಕೆ ಆಧಾರಗಳೆಂದು ಹೇಳಲಾದ ದ್ರಾವಿಡಪ್ರಬಂಧಗಳನ್ನು ರಚಿಸಿದವರಲ್ಲಿ ಬೇರೆ ಬೇರೆ ಜಾತಿಯವರಿದ್ದರೆಂದು ಹೇಳಲಾಗಿದೆ (ಭಾರದ. ೨೮೫).

[ ದ್ರಾವಿಡ + ಪ್ರಬಂಧ ]

**ದ್ರಾವಿಡಪ್ರಾಣಾಯಾಮ** (ನಾ). (ಆಲಂ) ಬಳಸುದಾರಿಯ ಸಾಧನೆ; ಅನವಶ್ಯಕವಾದ ಶ್ರಮ: ಇಷ್ಟೆಲ್ಲ ದ್ರಾವಿಡಪ್ರಾಣಾಯಾಮ ಮಾಡಿ, ಪೀಠಿಕಾರೂಪವಾಗಿ ಸ್ವಲ್ಪ ಹೇಳಿ ಇನ್ನು ವಿಷಯಕ್ಕೆ ಕೈ ಹಚ್ಚುತ್ತೇನೆ (ನಾಡಿಗೇ. ೨೮೯); ಇಷ್ಟೆಲ್ಲಾ ಒದ್ದಾಡಿ ದ್ರಾವಿಡಪ್ರಾಣಾಯಾಮ ಮಾಡ ಬೇಕೆ? (ಕುರುಕ್ಷಾ. ೧೩); ಈ ದ್ರಾವಿಡಪ್ರಾಣಾಯಾಮವೆಲ್ಲಾ ಬೇಡ (ಹಂಗೀತ. ೪೫). P ದ್ರಾವಿಡರಲ್ಲಿ ಪ್ರಾಣಾಯಾಮಂ ಮಾಡುವಾಗ ಮೂಗನ್ನು ಹಿಡಿಯಬೇಕಾದರೆ ಬಲಗೈಯನ್ನು ತಲೆಯಂ ಸುತ್ತ ಬರುವಂತೆ ಚಾಲಿಸುವುದುಂ ಒಂದು ಸಂಪ್ರದಾಯಂ.

[ದ್ರಾವಿಡ + ಪ್ರಾಣಾಯಾಮ]

**ದ್ರಾವಿಡಬ್ರಾಹ್ಮಣ** (ನಾ). ೧. ಪಂಚ ದ್ರಾವಿಡಭಾಷೆಗಳಲ್ಲಿ ಯಾವುದಾದ ರೊಂದನ್ನು ತಾಯ್ನುಡಿಯಾಗುಳ್ಳ ಬ್ರಾಹ್ಮಣ. 'ಪಂಚದ್ರಾವಿಡ' ಪರಾ. ೨. ತಮಿಳಂಭಾಷೆಯನ್ನು ತಾಯ್ನುಡಿಯಾಗುಳ್ಳ ಬ್ರಾಹ್ಮಣ.

[ದ್ರಾವಿಡ + ಬ್ರಾಹ್ಮಣ]

**ದ್ರಾವಿಡಭಾಷೆ** (ನಾ). ದಕ್ಷಿಣದೇಶದ ದ್ರವಿಡವರ್ಗಕ್ಕೆ ಸೇರಿದ ಭಾಷೆ ಗಳಲ್ಲಿ ಒಂದು; ತಮಿಳು, ಕನ್ನಡ, ಮಲಯಾಳ, ತುಳು, ತೆಲುಗು, ಕೊಡಗು ಇತ್ಯಾದಿ: P ದ್ರಾವಿಡಭಾಷಾವರ್ಗದ ಉಗಮ ಹಾಗು ಅವುಗಳ ಸಂಖ್ಯೆಗಳ ಬಗೆಗೆ ಖಚಿತವಾದ ವಿವರಣೆ ದೊರೆತಿಲ್ಲ. ದೊರೆತಿರುವ ವಿವರಣೆಯ ಆಧಾರದ ಪ್ರಕಾರ ಅದರ ಉಪಭಾಷೆ ಗಳ ಸಂಖ್ಯೆ ಮೂವತ್ತಕ್ಕೂ ಮೀರಿದೆ. ಇವುಗಳಲ್ಲಿ ಕೆಲವು ಉತ್ತರ ದೇಶದ ಕೆಲವು ಪ್ರದೇಶಗಳಲ್ಲಿಯೂ ನೆಲೆನಿಂತಿವೆ. ಉದಾಹರಣೆಗೆ ಗೋಂಡಿ (ಮಧ್ಯಪ್ರದೇಶ, ಬಿಹಾರ, ಒರಿಸ್ಸಾ), ಬ್ರಾಹೂಈ (ಬಲೂಚಿಸ್ತಾನ, ಸಿಂಧ್), ಕಂಈ (ಒರಿಸ್ಸಾ), ಕುವಿ (ಒರಿಸ್ಸಾ, ಆಂಧ್ರ), ಪೆಂಗು (ಒರಿಸ್ಸಾ), ಕೋಲಾಮಿ (ಮಧ್ಯ ಪ್ರದೇಶ, ಬೀರಾರ್), ಪರ್ಜಿ (ಮಧ್ಯಪ್ರದೇಶ, ಪಶ್ಚಿಮಬಂಗಾಳ), ಮಲ್ತೊ (ರಾಜಮಹಾಲ್ ಪರ್ವತಪಂಕ್ತಿ), ಒಲ್ಲಾರಿ, ಕೊರಗ (ದಕ್ಷಿಣ ಕನ್ನಡ), ಗದಬ (ಒರಿಸ್ಸಾ), ಕೊಯ (ಆಂಧ್ರ), ಕೊಂಡ (ಒರಿಸ್ಸಾ), ತೋಡ, ಬಡಗ, ಕೋತ (ನೀಲಗಿರಿ), ಕುರುಂಖ್ (ಬಿಹಾರ್, ಅಸ್ಸಾಂ), ನಾಯ್ಕಿ (ಮಹಾರಾಷ್ಟ್ರದ ಛಾಂದಾಜಿಲ್ಲೆ) ಮೊದಲಾದುವು: ಸಂಸ್ಕೃತದ ಪ್ರಭಾವ ಉಳಿದ ದ್ರಾವಿಡಭಾಷೆಗಳಿಗಿಂತ ತಮಿಳಿನಲ್ಲಿ ಕಡಮೆ (ದ್ರಾವಿವಿ. ೧೧೭); ದ್ರಾವಿಡಭಾಷೆಯ ಗುಂಪಿಗೆ– ತಮಿಳು (ದ್ರಾವಿಡ), ತೆಲುಗು, ಕರ್ಣಾಟಕ, ತುಳುವು, ಮಲೆಯಾಳ ಭಾಷೆ ಗಳು ಸೇರಿರುವುವು (ಭಾರದ. ೪೩೩). [ದ್ರಾವಿಡ + ಭಾಷೆ]

**ದ್ರಾವಿಡವೇದ** (ನಾ). = ದ್ರಾವಿಡ ಪ್ರಬಂಧ: ಈ ಆಳ್ವಾರುಗಳಲ್ಲಿ ಕೆಲವರು ರಚಿಸಿದ ತಿರುವಾಯ್ಮೊಟಿ ಮುಂತಾದ ಗೀತೆಗಳು ಚತುರ್ವೇದದ ಸಾರವ ನ್ನೊಳಗೊಂಡು ದ್ರಾವಿಡವೇದವೆಂದು ಖ್ಯಾತವಾಗಿವೆ (ಭಾರದ. ೨೯೫).

[ದ್ರಾವಿಡ + ವೇದ]

**ದ್ರಾವಿಡಸಂಘ** (ನಾ). [ಜೈನ] ದಕ್ಷಿಣದೇಶದಲ್ಲಿ ನೆಲಸಿದ ಜೈನಮುನಿಗಳ ಸಂಘ: ತಮಿಳುನಾಡಿನಲ್ಲಿ ದ್ರಾವಿಡಸಂಘವೆಂಬ ಸಂಘವಿದ್ದರೂ ಈ ಸಂಪ್ರದಾಯ ಅಲ್ಲಿ ಕಂಡುಬರುವುದಿಲ್ಲ (ಕಶಾಅ. ೮೬). 'ದ್ರವಿಳಸಂಘ' ಪರಾ. [ದ್ರಾವಿಡ + ಸಂಘ]

**ದ್ರಾವಿಡಸಂಪ್ರದಾಯ** (ನಾ). = ದ್ರಾವಿಡಪದ್ಧತಿ.

[ದ್ರಾವಿಡ + ಸಂಪ್ರದಾಯ]

**ದ್ರಾವಿಡಸಂಸ್ಕೃತಿ** (ನಾ). ದಕ್ಷಿಣದೇಶದ ದ್ರವಿಡವರ್ಗಕ್ಕೆ ಸೇರಿದವರ ಸಂಸ್ಕೃತಿ: ಡಾ॥ ಎ. ಪಿ. ಕರಮರಕರ್ ಎಂಬ ವಿದ್ವಾಂಸ ಮೊಹಂಜೊ ದಾರೊದ ಸಂಸ್ಕೃತಿ ನಿಶ್ಚಯವಾಗಿಯೂ ದ್ರಾವಿಡಸಂಸ್ಕೃತಿಯೆಂದೇ ಸಾರಿದನು (ದ್ರಾವಿವಿ. ೨೫). [ದ್ರಾವಿಡ + ಸಂಸ್ಕೃತಿ]

**ದ್ರಾವಿಡಿ** (ನಾ). ೧. ದ್ರಾವಿಡದೇಶದ ಹೆಂಗಸು. ೨. [ಸಂಗೀತ] ಒಂದು ರಾಗದ ಹೆಸರು: ಭರತಖಂಡದ ಹಲವು ಒಳನಾಡುಗಳಲ್ಲಿಯೂ ಭಿನ್ನವಾದ ಗಾನಪದ್ಧತಿಯಿತ್ತೆಂಬುದಕ್ಕೆ ಆಂಧ್ರಿ, ದ್ರಾವಿಡಿ, ಸೌವೀರಿ ಮುಂತಾದ ಪ್ರಾಚೀನ ಜಾತಿರಾಗಗಳ ಹೆಸರುಗಳೇ ಸಾಕ್ಷಿಯಾಗಿವೆ (ಗಾನಕ. ೯೬). [ಸಂ. ದ್ರಾವಿಡೀ]

**ದ್ರಾವಿತ** (ಗು). ಕರಗಿದ; ದ್ರವವಾದ: ಕೊಳದೊಳ್ನಿಂದು ತರತ್ತರಂಗ ಜಳಮಂ ಮಿಂದಲ್ಲಿ ನಗ್ನಾಂಗಿ ಪೊಕ್ಕಳನಾದಚ್ಛಲದಿಂ ಕುಮಂತ್ರಜಪಮಂ ತದ್ವೇಷದಿಂ ಮಾಡೆ ಕೋಮಳೆ ಶೂನ್ಯಾಧ್ವಮನೈದೆ ದಾಂಟೆ ನಿಜಪಾದಂ ಪೋಗೆ ಮೈಗಂದಿ ಬೀಳ್ದಳಿದಂ ದ್ರಾವಿತ ಚಂದ್ರಸಾಂದ್ರತರರುಗ್ವ್ಯಾಸ್ತತ್ಕರಂ ಭಾಸ್ಕರಂ (ರಾಜಶೇ. ೧೩–೩೨). [ಸಂ.]

**ದ್ರಾವಿಳ** (ನಾ). = ದ್ರಾವಿಡ ೨: ನಾಗರದ್ರಾವಿಳಕಳಿಂಗವೆಸರ ಯಾಮುಂ ನಾತ್ಮಂತರಮೆಂಬ ಜಾತಿಗಳೊಳಂ (ಮಹಾನೇ. ೧೫–೨೭ ವ).

[<ದ್ರಾವಿಡ]

**ದ್ರು** (ನಾ). ಮರ; ವೃಕ್ಷ: "ತರು ಶಾಖಿ . . . ದ್ರುಮಂ ದ್ರು ಶಾಳಂ . . . ಮರಂ ನಗಂ ಕುಟಮನೋಕಹಂ ಶಿಖಿ ವೃಕ್ಷಂ" (ವಸ್ತುಕೋ. ೩೦–೧): "ತರು ವನಸ್ಪತಿ ಸಾಲಮಂಘ್ರಿಪಂ ದ್ರು ದ್ರುಮಂ . . . ಕುಜಮೆನಲು ವೃಕ್ಷಕ್ಕೆ ನಾಮವಕ್ಕುಂ" (ಮಂಗರಾ. ೩೦–೧). [ಸಂ.]

**ದ್ರುಕಿಲಿಮ** (ನಾ). ಒಂದು ಬಗೆಯ ಮರ; ದೇವದಾರು ವೃಕ್ಷ: "ಚಕ್ರ ಪಾದಪಃ, ಪಾರಿಭದ್ರಃ, ಭದ್ರದಾರು, ದ್ರುಕಿಲಿಮಂ . . . ಪೂತಿಕಾಷ್ಠಂ– ೭ ದೇವದಾರು ವೃಕ್ಷದ ಹೆಸರು" (ಸಿದ್ಧಾಂತಿ. ೦೨೪). [ಸಂ.]

**ದ್ರುಗುಯುಗಳ** (ನಾ). ಕಣ್ಣುಗಳ ಜೋಡಿ; ನಯನದ್ವಯ: ದ್ರುಗುಯುಗಳ ಮರೆದೆಟಿಯೆ [ಪಾಠಾಂ. ದೃಗುಯುಗವನರೆದೆಟೆದು] ರೋಮಾಳಿಗಳು ಕೆಕ್ಕೆಯ ಸಾರೆ ಕೊರಳಲೆಮುಗುಳೆ ಹಿಂಗಾಲ್ಗೊಂಡು ಖುರವನು ತೂಗಿಯೊಲೆದೊಲೆದು . . . ತೊಡಿಸಿದವು ತುರಗ (ಕುಮ್ಯಾವಿ. ೮–೮೪). [<ಸಂ. ದೃಗ್ಯುಗಲ]

**ದ್ರುಗುರಜ** (ನಾ). ಕಣ್ಣಿಗೆ ಬಿದ್ದ ದೂಳು: ರುಜೆಯನಲುಗುವ ರದನವ ದ್ರುಗುರಜವನು . . . ವೈರಿವ್ರಜವನುಳುಹುವನೆಗ್ಗನು (ಕುಮ್ಯಾಆ. ೮–೫೯)

[<ಸಂ.ದೃಗ್ರಜ]

**ದ್ರುಗ್ಧ** (ಗು). ೧. ಕಾಡಿಸಿದ; ಪೀಡಿಸಿದ; ತೊಂದರೆಪಡಿಸಿದ. ೨. ದ್ರೋಹಮಾಡಿದ. (ನಾ). ೩. ತೊಂದರೆ; ಪೀಡೆ. [ಸಂ.]

**ದ್ರುಘಣ** (ನಾ). ೧. (ಮರದಿಂದ ಮಾಡಿದ) ಕೊಡತಿ; ಗುಂದಿಗೆ: "ಮುದ್ಗರಃ, ದ್ರುಘಣಃ–ಈ ೨ ಡಂಗೆ" (ಹಲಾಯು. ೭೮–೩೩೦); "ದ್ರುಘಣಮೆನೆ ಡಂಗೆ" (ಮಂಗರಾ. ೮೮–೩೭). ೨. ಕೊಡಲಿ; ಪರಶು.

[ಸಂ.]

**ದ್ರುಣ** (ನಾ). ೧. ಚೇಳು; ವೃಶ್ಚಿಕ: "ವೃಶ್ಚಿಕಂ ದ್ರುಣಂ" (ವಸ್ತುಕೋ. ೪೦–೮). ೨. ಬಿಲ್ಲು; ಧನುಸ್ಸು: "ದ್ರುಣಂ ಕಾರ್ಮುಕಂ . . . ಚಾಪ ಮೆನಲು ಬಿಲ್ಲಿಂಗೆ ನಾಮಂ" (ಮಂಗರಾ. ೮೭–೩೨). ೩. ಕತ್ತಿ. [ಸಂ.]

**ದ್ರುಣಿ** (ನಾ). ೧. ಜರಿ; ಸಾವಿರಕಾಲು; ಲಕ್ಷ್ಮೀಬೇಳು. ೨. ಹೆಣ್ಣು ಆಮೆ. ೩. ಮರದ ತೊಟ್ಟಿ; ದೋಣಿ. [ಸಂ. ದ್ರುಣಿ, ದ್ರುಣೀ]

**ದ್ರುತ** (ಗು). ೧. ವೇಗವಾದ; ಶೀಘ್ರವಾದ. 'ದ್ರುತಗತಿ' ಪರಾ. ೨. ಹರಿದ; ಓಡಿದ. ೩. ಕರಗಿದ; ದ್ರವವಾದ: ಗಗನಕೆ ಸಹಜಾ ಭರಣಂ ಜಗದಾತ್ಮಂ ಕಲ್ಪಿತ ಶಶಿಮೂರ್ತಿಯೆನಿಪ್ಪಾ ಜಗಕಃಪ್ರಸೂತಿ ನೀಡುಗೆ ಸೊಗಮಂ ದ್ರುತಕನಕಸದೃಶದಶಶತಕಿರಣಂ (ಜಾತತಿ. XI ಉಪೋದ್ಘಾತ). ೪. ಚದರಿದ; ಹರಡಿದ. (ನಾ). ೫. ವೇಗ; ರಭಸ: "ದ್ರಾಕ್, ಚಪಳಂ . . . ದ್ರುತಂ, ಅಂಜಸಾ, ಝಟಿತಿ – ಈ ೧೬ ಶೀಘ್ರಂ" (ಹಲಾಯು. ೧೦೬–೧೨); "ತ್ವರಿತಂ ದ್ರುತಂ ಕ್ಷಿಪ್ರಮಾಶು ಲಘು

. . . ತೂರ್ಣಮಹ್ನಂ ಶೀಘ್ರಮಕ್ಕು" (ಮಂಗರಾ. ೮೭-೭) ; ದ್ರುತದೊಳೆ ಪೋಗಿ ದೇವಿಯ ಸಮೀಪದೆ . . . ನಿನ್ನ ಮಧುರಾವಳಿ ವೀಣೆಯ ವಾದನ ಪ್ರಗಲ್ಭಿತ ಪದದಿಂದೆ ಕೌತುಕಮನೋಲಗಿಸು (ಕುಸುಮಾ. ೧೩-೩೫); ವರ್ಣಗಳ ಉಚ್ಚಾರಣೆಯಲ್ಲಿ ಬರಬಹುದಾದ 'ದ್ರುತ', 'ವಿಲಂಬಿತ' ಮುಂತಾದ ವಕ್ತೃವ್ಯಾಪಾರವನ್ನೂ "ಧ್ವನಿ"ಯೆನ್ನಲಾಗಿದೆ (ಧ್ವನ್ಯಾಲೋ. ೩೯ ಅಡಿಟಿ). ೬. ತೀವ್ರಗತಿ ; ಶೀಘ್ರವಾದ ಚಲನೆ : ಪುಣ್ಯರೇಖೆಯ ಕೊಂಕಿ ಪುಟ್ಟಿತೆನೆ ಪಾಪಚಕ್ರದ ವಕ್ರತಾದ್ರುತಂ, ಇಂದೊ ನಾಳೆಯೊ ಎಂದೊ ಗೆಲ್ಲದಿರ್ಪುದೆ ಋತಂ ತನ್ನ ಮುನ್ನಿನ ಋಜುಕತೆಯೆತ್ತು ? (ಶ್ರೀರಾಮಾ. ೨೮೨-೧೩೦). ೭. ಚೇಳಂ ; ವೃಶ್ಚಿಕ : "ದ್ರುತಃ, ಅಳಿಃ, ವೃಶ್ಚಿಕಃ – ಈ ೩ ಕೇಟ್‌ (ಚೇಳು)" (ಹಲಾಯು. ೧೦೭-೨೩) : "ದ್ರುತಮಾಲಿ ವೃಶ್ಚಿಕಂ ಕ್ರೂರಚೇಟ³ನಿಕುಂ" (ಮಂಗರಾ. ೧೦೯-೫). ೮. ದೋಣಿಯಂನ್ನು ನಡೆಸುವ ಸಾಧನ ; ಹುಟ್ಟು : "ಖಜಿಕೆ ದರ್ವೀ ದಾರುಹಸ್ತಂ ದ್ರುತಂ ಹುಟ್ಟೆನಿಕ್ಕು" (ಮಂಗರಾ. ೭೦-೧೮). ೯. [ಸಂಗೀತ] ಅನುದ್ರುತ, ದ್ರುತ, ಲಘು, ಗುರು, ಪ್ಲುತ ಮತ್ತು ಕಾಕಪಾದ ಎಂಬ ತಾಳದ ಆರು ಅವಯವಗಳಲ್ಲಿ ಒಂದು ; ಅನುದ್ರುತದ ಎರಡರಷ್ಟು ಕಾಲ : ಗುರು ಲಘು ದ್ರುತ ಪ್ಲುತಂಗಳ ಸರ್ವಪರಿವಿಡಿದು ಸೂಡಿ ದಾಭರಣಗಳುಲಿಯೆ ನೆಟಿ³ ತಾಡಿಸಲು ತಾಳಗಳ (ಸನತ್ಕು. ೪-೧೨) : ಅನು ದ್ರುತ, ದ್ರುತ, ಲಘು, ಗುರು, ಪ್ಲುತ ಮತ್ತು ಕಾಕಪಾದ ಇವೇ ಷಡಂಗಗಳು (ಸಂಗೀಜಂ. ೫೪). ೧೦. ದ್ರುತ, ಮಧ್ಯ ಮತ್ತು ವಿಳಂಬ ಎಂಬ ಮೂರು ವಿಧವಾದ ಲಯಭೇದಗಳಲ್ಲಿ ಒಂದು ; ವೇಗವಾದ ಕಾಲ; ತೀವ್ರವಾದ ಲಯಂ : ದ್ರುತವಿಲಂಬಿತಮಧ್ಯಲಯಂ ತತ್ಸಾನುಗತಾಘಗತಿತ್ರಯಂ ಜತಿಯೊಳೊಂದುವಿನಂ ಪದಿನೆಂಟು ಚಾರಿ ಮನೋಹರಮಾಗೆ . . . ಭಾರತಿಕನೋಜೆಗೆ ಬಾಜಿಸಿದಂ ಚಿತ್ರಕ್ಕೆ ಚಮತ್ಕೃತಿಯಪ್ಪಿನಂ (ಮಲ್ಲಿಪು. ೮-೩೫) : ದ್ರುತಮಧ್ಯಲಯವಿಳಂಬಿತಗತಿಯತಿ ಕೌತುಕಮನೀಯ (ಮುಹಾನೇ. ೮-೫೪); ಲಯದಲ್ಲಿ ದ್ರುತ (ಹೆಚ್ಚಿನ ವೇಗ) ಮಧ್ಯ (ಹೆಚ್ಚೂ ಅಲ್ಲದ, ನಿಧಾನವೂ ಅಲ್ಲದ) ಮತ್ತು ವಿಳಂಬ (ನಿಧಾನ) ಎಂದು ಮೂರು ವಿಧ (ಸಂಗೀಜಂ. ೫೭); ಬುದ್ಧಿವಂತರಾದ ಕೆಲವರು ಗೀತವನ್ನು ವಿಲಂಬವೂ ದ್ರುತವೂ ಅಲ್ಲದ ಮಧ್ಯಕಾಲದಲ್ಲಿ ನಡೆಯಿಸಬೇಕೆನ್ನುವರು (ಗಾನಕ. ೭೭). [ಸಂ.]

**ದ್ರುತಕಾಲ** (ನಾ). = ದ್ರುತ ೧೦ : ಕೃಷ್ಣಯ್ಯರ್‌ . . . ಸ್ವರಾಭ್ಯಾಸವನ್ನು ನಾಲ್ಕುಸ್ಥಾಯಿಗಳಲ್ಲಿಯೂ ದ್ರುತಕಾಲದಲ್ಲಿಯೂ ವಿಲಂಬಿತಕಾಲದಲ್ಲಿಯೂ (ಮಂದ ಮತ್ತು ತೀವ್ರಗತಿಗಳಲ್ಲಿ) ನಡೆಸುತ್ತಿದ್ದರು (ಸಂಗೀತ. ೯೭).

[ದ್ರುತ + ಕಾಲ]

**ದ್ರುತಗತಿ** (ನಾ). ಶೀಘ್ರವಾದ ಚಲನೆ,-ಗಮನ : ದ್ರುತಗತಿಯಿಂ ಮೇಧಾವಿಳಯುತದಿಂದೆಟ್ಟಿಂದು ಭೂಪಮನ್ಮಥನಂತಾ ವ್ರತಿಪಕಿಯಾ ಪದಪಯೋಜದ್ವಿತಯಕ್ಕಾನಮ್ರನಾದನತ್ಯುತ್ಸವದಿಂ (ಕುಸುಮಾ. ೧೫-೧೧೪) ; ಗತಿರಹಿತರಿರವು ತನ್ನಂ ಬೆಸಗೊಳಿಸಲ್ಕಾಳಲಾಜಿದುದ್ಧರಣಾರ್ಥಂ ದ್ರುತಗತಿಯಿನವರ ನೆಲೆಗೀ ಧೃತವ್ರತರ ನಡೆವ ಭಂಗಿಯೇನಚ್ಚರಿಯೋ (ವಸ್ತುವಂ. ೭-೫೬) ; ತನಗೆ ಅರ್ಥವಾಗದ ಭಾಷೆಯಲ್ಲಿ ಓದಿ ಹೇಳಲ್ಪಟ್ಟ ಪದ್ಯಗಳಲ್ಲಿರುವ ಏರಿಳಿತಗಳ ಆವೃತ್ತಿ, ದ್ರುತಗತಿ ಅಥವಾ ವಿಲಂಬ ಚಲನೆ ಸ್ವರಮೇಳದಂತೆ ತನ್ನಲ್ಲಿ ಉತ್ಸಾಹದ ಅಥವಾ ವಿಷಾದದ ಭಾವವನ್ನು ಪ್ರೇರಿಸುತ್ತದೆ (ಸಾಹಿಪ್ರ. ೭೦) ; ದ್ರುತಗತಿಯಲ್ಲಿ ಸಂಗೀತವು ಮುಗಿದ ಮೇಲೂ ನಿರಂತರವಾದ ಶ್ರುತಿಯು ಶಾಂತವಾಗಿ ಸಾಗುವಂತೆ (ವಂಶವೃ. ೨). [ದ್ರುತ + ಗತಿ]

**ದ್ರುತಚಾಲನ** (ನಾ). ತ್ವರಿತಗತಿ ; ಶೀಘ್ರವಾಗಿ ಚಲಿಸುವಿಕೆ : ದ್ರುತ ಚಾಲನದಿಂದ ವೇಗವಾಗಿ ಮುಂದಕ್ಕೆ ಹೋಗುವುದು ಯಂತ್ರದ ಗಾಡಿಯ ಸಂಬಂಧದಲ್ಲಿ ನಿಜವಾಗಬಹುದು (ನಿಬಂಧ. II, ೨೧೦). [ದ್ರುತ+ಚಾಲನ]

**ದ್ರುತಪದ** (ನಾ). [ಛಂದ] ಜಗತೀಛಂದಸ್ಸಿನ ಒಂದು ಭೇದ ; ಪ್ರತಿಪಾದದಲ್ಲಿಯೂ ಹನ್ನೆರಡು ಅಕ್ಷರಗಳುಳ್ಳ ನಾಲ್ಕು ಪಾದಗಳ ಒಂದು ವರ್ಣವೃತ್ತ ; ಕ್ರಮವಾಗಿ ನ ಭ ಜ ಯ ಗಣಗಳು ಒಂದು ಸಾಲಿನಲ್ಲಿರುವ ವೃತ್ತ : ಶತಮುಖೇಂದು ರವಿತೋಯಮುಮಾಗಲ್‌ ಯತಿಪದಂ ನಿಲವು ದಂತಿಯೊಳಕ್ಕುಂ ಶತದಳಾಯತವಿಲೋಚನೆ ವೃತ್ತಂ ದ್ರುತಪದಂ ದ್ರುತಪದೋಕ್ತಿಗಳಿಂದಂ (ಛಂದೋಂಬು. ೨-೧೩೨) ; ದ್ರುತಪದಂ ನಭಜಯಂಗಳಿನಕ್ಕುಂ (ಕೃಬಡಿ. ೮೧). [ಸಂ.]

**ದ್ರುತಯಾನ** (ನಾ). ವೇಗವಾದ ನಡಗೆ ; ತ್ವರಿತಗತಿ ; ತೀವ್ರಗಮನ : ದ್ರುತಯಾನೋತ್ಕಂಠಿ ಪೀನೋದರನವನಿಪನೊಡ್ಡೋಲಗಕ್ಕೈದೆ (ಚಂದ್ರಪು. ೨-೭೪). [ದ್ರುತ + ಯಾನ]

**ದ್ರುತವಿಡು** (ಕ್ರಿ). ನೊಂದುಕೊಳ್ಳು ; ದುಃಖಿಪಡು : ವಸುಧಾಧೀಶನ ತೇಜವಲ್ಲವೆ ಕುಮಾರಂ ನಿಮ್ಮನಾರಯ್ದು ರಕ್ಷಿಸಲೀ ಮಂಗಲಯಾತ್ರೆಯೊಳ್‌ ದ್ರುತವಿಡಲ್‌ ಬಾಯ್ಬಿಟ್ಟಬಲ್ಕಾಗ ಸೈರಿಸಿಮಿಂ ಸ್ವಾಮಿಯ ಚಿತ್ರಮಂ ಕದಡದತ್ತಲ್ಸಾರಿಮೆಂದೊತ್ತಿ ಬಗ್ಗಿಸಿದರ್‌ ಮಂತ್ರಿ ಮಹತ್ತರರ್‌ ನೃಪವಧೂವಾರಾಂಗನಾವರ್ಗಮಂ (ಅನಂಪು. ೩-೧೦೩).

[ದ್ರುತ + ಇಡು₁]

**ದ್ರುತವಿಲಂಬಿತ, ದ್ರುತವಿಳಂಬಿತ** (ಗು). ೧. (ಚಲನೆಯಲ್ಲಿ) ವೇಗ ಮತ್ತು ಮಂದವಾಗಿರುವ. (ನಾ). ೨. ವೇಗವಾದ ನಡತೆ ಮತ್ತು ಮಂದವಾದ ನಡಗೆ : ನಗರಾರಣ್ಯವಿಶೇಷಂ ಬಗೆಗಿಲ್ಲನೆ ಕಾಲನಿಯಮದಿಂ ಬನದಿಂ ಚರ್ಯೆಗೆ ಪೊಱಮಟ್ಟಂ ಮುನಿ ತನ್ನ ಗಮನಮಂ ದ್ರುತವಿಲಂ[ವಾಕಾಂ. ೪೦]ಬಿತಂ ಪೊರ್ದದನಲ್‌ (ಶಂರಾಮಾ. ೧೭-೭೩). ೩. [ಛಂದ] ಜಗತೀ ಛಂದಸ್ಸಿನ ಒಂದು ಭೇದ ; ಪ್ರತಿಪಾದದಲ್ಲಿಯೂ ಹನ್ನೆರಡು ಅಕ್ಷರಗಳುಳ್ಳ ನಾಲ್ಕುಪಾದಗಳ ಒಂದು ವರ್ಣವೃತ್ತ : ನ ಭ ಭ ರ ಗಣಗಳು ಕ್ರಮವಾಗಿ ನಾಲ್ಕುಪಾದಗಳಲ್ಲಿಯೂ ಬರುವ ವೃತ್ತ : ದ್ರುತವಿಲಂಬಿತಂ ನಭಭರಂಗಳುಮೊಂದಿರೆ ಪಾದದೊಳ್‌ ಶುಭಕರಂ ಯತಿ ನಿಲ್ತಿರೆ ರಂಧ್ರದೊಳ್‌ ಪ್ರಭು ಕವೀಂದ್ರಸಹಾಯದೊಳಾದುದಿಂತಿಭಗತೀದ್ರುತಪೂರ್ವವಿಲಂಬಿತಂ (ಛಂದೋಂಬು. ೨-೮೫). ದ್ರುತವಿಳಂಬಿತ : ೧. ದ್ರುತವಿಳಂಬಿತಮನ್ಯಲಯಂಗಳೊಳ್‌ ತತಘನಾದಿ ಚತುರ್ವಿಧವಾದ್ಯದೊಳ್‌ . . . ಶತಮುಖಂ ಮೆಱೆದರ್ಶಿಯೊಳಾಡಿದಂ (ವರ್ಧಮಾ. ೧೨-೫೦). ೨. ದ್ರುತವಿಳಂಬಿತ ಸಂಭ್ರಮ . . . ವರ್ಜಿತ ಗತಿಕ್ರಮಮೊಪ್ಪೆ ವನಾಂತದಿಂ ವ್ರತಿ ಬರುತ್ತಿರೆ (ಪುಷ್ಪಪು. ೧೩-೧೧೭). ೩. ದ್ರುತವಿಳಂಬಿತಂ-ಎಣಿಸಿ ಪೆರ್ವೆರಲಿಂದಮೆ ಶಸ್ತ್ರಮಂ ಗುಣಿಸುಗಾಪೆರಲಂ ಪದಿಮೂಱಱಿಂ ಗಣಿದಮೇನಪನೊತ್ತುವುದೇಱಱಿಂ ದುಱಿದುವಂತವು ಶಸ್ತ್ರದ ಲಕ್ಷಣಂ (ಲೋಕೋಪ. ೧೦-೧೧೨). [ಸಂ.]

**ದ್ರುತವಿಳಂಬಿತ** 'ದ್ರುತವಿಲಂಬಿತ' ನೋ.

**ದ್ರುತಿ** (ನಾ). ೧. ಕರಗುವಿಕೆ ; ದ್ರವಿಸುವುದು : ಇದು ಸ್ವಾಂತಃಕರಣದ ದ್ರುತಿಯೇ ಸರಿ; ಲೌಕಿಕವಾದ ಶೋಕದಂತಲ್ಲ. ರಸದಿಂದ ತುಂಬಿದ ಗಡಿಗೆ ತುಳುಕುವಂತೆ, ಚಿತ್ತವೃತ್ತಿಯು ಉಕ್ಕಿ ಹೊರಹೊಮ್ಮುವ ಮಾತುಗಳಂತೆ . . . ಅದು ಸಮುಚಿತ ಛಂದೋರೂಪವನ್ನು ತಳೆದು ಹೊರಹೊಮ್ಮಿತು (ಧ್ವನ್ಯಾಲೋ. ೧೯ ಅಡಿಟಿ). ೨. ಕರಗಿದುದು ; ರಸ ; ದ್ರವ : ಪೊಳೆವ ರಜತಾಭ್ರಕ ದ್ರುತಿಗಳಿನಮೃತರಸಪ್ರವಾಹದಿಂದಭಿಷವಮುಗ್ಗಳಿಸೆ ತಳತಳಿಸಿ ತೊಳಗುವ ಪಳುಕಿನ ಪುತ್ಥಳಿಕೆಯಂತೆ ಕರಮೆಸೆದಿರ್ದಳ್‌ (ಕಾದಂಪೂ. ೭೭೮).

[ಸಂ.]

**ದ್ರುಪದ₁** (ನಾ). [ಸಂಗೀತ] ಒಂದು ಬಗೆಯ ತಾಳ : ನಮ್ಮ ದೇಶದ ಸಂಗೀತದಲ್ಲಿ...ದ್ರುಪದ, ಧಮಾರಿ, ಏಕ್ತಾ ಎಂಬ ಹಲವು ತಾಳಪದ್ಧತಿಗಳಿರುವುವು (ಬಾಲಪ್ರ. II, ೧೧೪೦). [<ಸಂ. ದ್ರುತಪದ]

**ದ್ರುಪದ್ಯ** (ನಾ). ೧. ಮರದ ಕಂಬ. ೨. ಪಾಂಚಾಲ ದೇಶದ ಅರಸು ; ದ್ರೌಪದಿಯ ತಂದೆ : ಕುಂಭಸಂಭವನಸಾ ದ್ರುಪದಂ ಕಡುಸಿಗ್ಗು ಮಾಡಿದಂ (ಪಂಪಭಾ. ೨-೪೮) ; ದ್ರುಪದನನುಜರು ಸೋಲಿಸಿದರೈ ಕೌರವೇಂದ್ರನ ಬಲವ (ಕುಮ್ಮಾಅ. ೭-೬೪). ೧, ೨ : ಆ ಮಹಾವನಂ . . . ಪಾಂಡವಪ್ರಕರ ದಂತಾತ್ರಭೀಮನಕುಲದ್ರುಪದವಮುಂ ಅರ್ಜುನೋರ್ಜಿತವಮುಂ (ಚಂದ್ರಪ್ರ. ೫-೫೨ ವ). [ ಸಂ. ]

**ದ್ರುಪದಜೆ** (ನಾ). ದ್ರುಪದರಾಜನ ಮಗಳು ; ದ್ರೌಪದಿ : ಗುಣಾರ್ಣವ ನನಾ ದ್ರುಪದಜೆಯನೊಡನೆ ಕುಳ್ಳಿರಿಸಿ ಹಿತಪುರೋಹಿತ ಪ್ರಾಜ್ಯಾಜ್ಯಾಹುತಿ ಹುತಹುತವಹ ಸಪ್ತಕೂಡದೊಳ್ ಕೆಯ್ನೀರೆಱೆದು ಪಾಣಿಗ್ರಹಣಂಗೆಯ್ದು (ಪಂಪಭಾ. ೩-೬೪ ವ). [ ಸಂ. ದ್ರುಪದಜಾ ]

**ದ್ರುಪದತನೂಭವ** (ನಾ). ದ್ರುಪದರಾಜನ ಮಗ ; ಧೃಷ್ಟದ್ಯುಮ್ನ : ದ್ರುಪದತನೂಭವಂ ಕುಪಿತನಾಗಿ ಮಹಾಭರದಿಂದೆ ಬಂದು (ಮಹಾನೇ. ೧೩-೩೦). [ ದ್ರುಪದ + ತನೂಭವ ]

**ದ್ರುಪದನಂದನ** (ನಾ). = ದ್ರುಪದತನೂಭವ : ಧರ್ಮನಂದನಂ ದ್ರುಪದನಂದನಂಗೆ ಬಟಿಯನಟ್ಟಿ ಬರಿಸಿ (ಪಂಪಭಾ. ೧೦-೫ ವ). [ ದ್ರುಪದ + ನಂದನ ]

**ದ್ರುಪದನಂದನೆ** (ನಾ). = ದ್ರುಪದಜೆ : ಈ ಭುಜಾದಂಡಮುಂ . . . ಈ ಧನುರ್ದಂಡಮುಮುಳ್ಳಿನಂ ದ್ರುಪದನಂದನೆ ಸಂಧಿಯನಾಗಲೀವೆನೇ (ಗದಾಯು. ೧-೭೩). [ ದ್ರುಪದ + ನಂದನೆ ]

**ದ್ರುಮ** (ನಾ). ಮರ ; ವೃಕ್ಷ : "ವೃಕ್ಷಃ . . . ದ್ರುಮಃ, ಪಾದಪಃ-ಈ ೧೯ ಮರಂ" (ಹಲಾಯು. ೨೯-೨೩) ; "ತರು ವನಸ್ಪತಿ ಸಾಲಮಂಘ್ರಿಪಂ ದ್ರು ದ್ರುಮಂ ಧರಣಿಜಂ . . . ಕುಜಮೆನಲು ವೃಕ್ಷಕ್ಕೆ ನಾಮಮಕ್ಕುಂ" (ಮಂಗರಾ. ೩೦-೧) ; ದ್ರುಮಪಲ್ಲವ ತಳನಿಪತಿತ ಹಿಮವಾಂಬು ಘಟಿಕಾಳಿ ನಾಡೆ ಸೊಗಯಿಸಿದಪುದು (ಶಾಂತಿಪು. ೫-೮೯) ; ಶಾಲ್ಮಲೀಚೈತ್ಯಜಂಬೂದ್ರುಮದೊಳ್ . . . ವಿಶ್ರುತಾಕೃತಿಮ ಚೈತ್ಯಾವಾಸ ಪೂಜೋತ್ಸವದಿನಗಲನಲ್ಲಿಂದಮೆಂದುಂ ಸುರೇಂದ್ರಂ (ಸುಕುಮಾ. ೯-೪೧) ; ಕರ್ಣನು ಬೇರು ಹಱಿದಾ ದ್ರುಮದವೋಲು ಗತಶೌರ್ಯನು (ಕುಮ್ಮಾದ್ರೋ. ೦೬-೫೭). [ ಸಂ. ]

**ದ್ರುಮಪತ್ರಪಾತ್ರೆ** (ನಾ). ಎಲೆಗಳಿಂದ ಮಾಡಿದ ಪಾತ್ರೆ ; ದೊನ್ನೆ : ಸುಮಮಕರಂದದಿಂದೆ ಕಪಿ ಕೈದೊಳೆದಾ ದ್ರುಮಪತ್ರಪಾತ್ರೆಯುಂ ಸಮೆದದಱಲ್ಲಿ ತುಂಬಿ ತುಳಿವೊಂದದ ಪೂಗಳನ್ನೆದೆ ತುಂಬಿಕೊಂಡು (ರಾಜಶೇ. ೧-೧೩೭). [ ದ್ರುಮ + ಪತ್ರ + ಪಾತ್ರೆ ]

**ದ್ರುಮಯೋಧಿ** (ಗು). ಗಿಡ, ಮರಗಳನ್ನೇ ಆಯುಧವನ್ನಾಗಿ ಉಪಯೋಗಿಸುವ : ಇತ್ತಲಿಂತಿಂತೆ ಶಿಬಿರಶಿಬಿರದಿ ಬೀಡುಬೀಡಿನೊಳ್ ದ್ರುಮಯೋಧಿ ಸೈನಿಕರ್ ತಂತಮ್ಮ ಸತ್ವದ ಸಮರ್ಥನೆಗೆ ವಾದಿಸುತ್ತಿರಲ್ (ಶ್ರೀರಾಮಾ. ೮೨೪-೩೪೧). [ ಸಂ. ದ್ರುಮಯೋಧಿನ್ ]

**ದ್ರುಮರಾಜಿ** (ನಾ). ಮರಗಳ ಸಾಲು : ದ್ರುಮರಾಜೀರಾಜಿತಂ ಜಂಗಮ ಮಿದುದಯಶ್ಯೆಳಂ ತದಗ್ರಾಧಿರೂಢಂ ಹಿಮರೋಚಿರ್ಮಂಡಳಾಳಂಕೃತ ಮಿದಭಿನವಂಲಕ್ಷ್ಮಂ (ವರ್ಧಪು. ೮-೪). [ ದ್ರುಮ + ರಾಜಿ ]

**ದ್ರುಮವಿತತಿ** (ನಾ). ಮರಗಳ ಗುಂಪು, - ತೋಪು : ಬೇಱಿಂ ಪೀರ್ದುಂ ತಣಿಯದೆ ನೀರಜಗಂಧಾನುಬಂಧಿಜಳಮಂ ಕೊಂಬಿಂ ಪೀರ ಲ್ಕೊಡರಿಸಿದಪುದೆವೆ ತೀರದ್ರುಮವಿತತಿಯೆಱಗಿ ತುಱುಗಿದುದದಱೊಳ್ (ಚಂದ್ರಪ್ರ. ೦-೮೪). [ ದ್ರುಮ + ವಿತತಿ ]

**ದ್ರುಮಾಮಯ** (ನಾ). ೧. ಮರಗಳಿಗೆ ಬರುವ ರೋಗ ; ಸಸ್ಯರೋಗ : (+). ೨. ಅರಗು ; ಲಾಕ್ಷ : "ಲಾಕ್ಷಾ, ರಾಕ್ಷಾ . . . ದ್ರುಮಾಮಯಃ-೬ ಅರಗಿನ ಹೆಸರುಗಳು" (ಸಿದ್ಧಾಂತಿ. ೦೬೯). ೩. ಅಂಟು ; ಗೋಂದು. [ ದ್ರುಮ + ಆಮಯ ]

**ದ್ರುಮೋತ್ಪಲ** (ನಾ). ಬೆಟ್ಟದಾವರೆ ; ಕೊಸಗು : "ದ್ರುಮೋತ್ಪಲಃ, ಕರ್ಣಿಕಾರಃ, ಪರಿವ್ಯಾಧಃ-ಈ ೩ ಕೊಸಗಿನ ಮರ" (ನಾಚಿರಾ. ೧೧೮) ; "ದ್ರುಮೋತ್ಪಲಃ, ಕರ್ಣಿಕಾರಃ . . . ಬೆಟ್ಟತಾವರೇ ಹೆಸರುಗಳು" (ಸಿದ್ಧಾಂತಿ. ೦೦೦). [ ಸಂ. ]

**ದ್ರುವಜಲ** (ನಾ). ಸದಾ ನೀರು ಇರುವುದು; ಬತ್ತದ ಸೆಲೆಯುಳ್ಳುದು: ನೀವು ಕಟಸ್ತಕ ಕೆಱೆ ದ್ರುವಜಲವಾದರೆ (ಸೌಇಇ. ೧೯೩೪, ಪುಂಗನೂರು. ೧೫೬-೧೭ : 1419). [ <ಸಂ. ಧ್ರುವಜಲ ]

**ದ್ರುವಣಿ** (ನಾ). ಒಂದು ಬಗೆಯ ಗಿಡ : "ಘೋರಾವಿ ಹುಳುಕುಡಿ ದ್ರುವಣಿ[ಪಾಠಾಂ. ದ್ರವಣಿ, ಧ್ರುವಣಿ] ಪುಸ್ತಕವಲ್ಲಿ ಗೌರಿ ಗೊಟ್ಟಕ್ಕಿ ವನ್ನಂಗಿಯನೆ ನೆಲಬೇವು" (ಮಂಗರಾ. ೪೪-೪೫). [ ? ]

**ದ್ರುವಯ** (ನಾ). ಮಾನ ; ಅಳತೆ : "ದ್ರುವಯಂ, ಪಾಯ್ಯಂ . . . ಮಾನಶಬ್ದದ ಅರ್ಥವುಳ್ಳವುಗಳು" (ಸಿದ್ಧಾಂತಿ. ೨೫೭). [ ಸಂ. ]

**ದ್ರುಹಿಣ** (ನಾ). ತ್ರಿಮೂರ್ತಿಗಳಲ್ಲಿ ಒಬ್ಬ ; ಬ್ರಹ್ಮ ; ಸೃಷ್ಟಿಕರ್ತ : "ಬ್ರಹ್ಮಾ . . . ದ್ರುಹಿಣಃ . . . ಕಮಲಾಸನಃ-ಈ ೨೦ ಬ್ರಹ್ಮನ ಪೆಸರ್" (ಹಲಾಯು. ೨-೭) ; ದ್ರುಹಿಣವಿನಿರ್ಮಿತಮೆನೆ × × ಣಯುತಂ ಬಾಣ ಗದ್ಯ[ವಾ] ಲಿಖಿತ ಪಿತಾಮಹನೆನ್ದೊರೆಯೊಳೊಪ್ಪಿರಲ್ (ಸೌಇಇ. XI-ii, ೧೪೭-೭೫ : 1099) ; ಕಣ್ಗೆಸೆದಂ ತ್ರಿಶೂಲಿಯಸಮಕರೋಟಿಮಾಲಿ ದ್ರುಹಿಣಶಿರಃಕಪಾಲಿ (ಭಿಕ್ಷಾಟ. ೧-೧೪) ; ಯಮಲೋಕಕನಿತಱೊಳ್ ದ್ರುಹಿಣನೆಯ್ದುಂದು-ಇವರೆಲ್ಲರ್ ನಿಚ್ಚಂ ವಿಷ್ಣುವಂ ಗಾನಯೋಗದಿಂ ಪೂಜಿಸುತಿರ್ದರ್ . . . ಎಂಬಾಗಳ್ (ಅದ್ಭುತ. ೧೯-೮). [ ಸಂ. ]

**ದ್ರುಹಿಣಸುತ** (ನಾ). ಬ್ರಹ್ಮನ ಮಗ ; ಕರ್ದಮನೆಂಬ ಬ್ರಹ್ಮರ್ಷಿ : ಯಥೋಕ್ತವಿಧಿಗಳಲಿ ದ್ರುಹಿಣಸುತನಲಿ ಸುತೆಗೆ ಪಾಣಿಗ್ರಹಣವನು ಮಾಡಿಸಿದನು (ನಿಭಾಗ. ೩-೦೦-೨೮). [ ದ್ರುಹಿಣ + ಸುತ ]

**ದ್ರುಹಿಣಾಂಡ** (ನಾ). ಬ್ರಹ್ಮಾಂಡ ; ಜಗತ್ತು : ದ್ರುಹಿಣಾಂಡೋದರ ಪಂಕಜಾಕರದೊಳುತ್ಕೃಷ್ಟಂ . . . ರಾಜದ್ವಾತ್ರಿಯೆಂಬಾ ಸರೋರುಹ ಮಧ್ಯಸ್ಥಿತ ನೂತ್ನಕರ್ಣಿಕೆಯವೊಲ್ಕ್ರೋರ್ಕುಂ ಸುವರ್ಣಾಚಲಂ (ಉದ್ಭಟ. ೦-೪೧). [ ದ್ರುಹಿಣ + ಅಂಡ ]

**ದ್ರೇಕ್ಕಾಣ** (ನಾ). [ಜ್ಯೋತಿ] ಲಗ್ನದ ಮೂರನೆಯ ಒಂದು ಭಾಗ ; P ಇದರಲ್ಲಿ ಮೇಷ, ಕರ್ಕಾಟಕ, ತುಲಾ, ಮಕರರಾಶಿಗಳ ಮೊದಲನೆಯ ದ್ರೇಕ್ಕಾಣವು ಆ ರಾಶಿಯೇ ಆಗುತ್ತದೆ. ಎರಡನೆಯ ದ್ರೇಕ್ಕಾಣವು ಅದರ ಐದನೆಯ ರಾಶಿಯಾಗುತ್ತದೆ. ಮೂರನೆಯ ಭಾಗವು ಅದರ ಒಂಬತ್ತನೆಯ ರಾಶಿಯಾಗುತ್ತದೆ. ಹಾಗೆಯೇ ವೃಷಭ, ಸಿಂಹ, ವೃಶ್ಚಿಕ, ಕುಂಭ ಈ ರಾಶಿಗಳಲ್ಲಿ ಒಂದನೆಯ ದ್ರೇಕ್ಕಾಣವು ಅದರ ಒಂಬತ್ತನೆಯ ರಾಶಿಯಾಗುತ್ತದೆ. ಎರಡನೆಯ ಭಾಗವು ಲಗ್ನದ್ರೇಕ್ಕಾಣವೇ ಆಗುತ್ತದೆ. ಮೂರನೆಯ ಭಾಗವು ಪಂಚಮರಾಶಿಯಾಗುತ್ತದೆ. ಮಿಥುನ, ಕನ್ಯಾ, ಧನುಸ್ಸು, ಮೀನ ಈ ರಾಶಿಗಳ ಒಂದನೆಯ ಭಾಗ ಪಂಚಮರಾಶಿ ದ್ರೇಕ್ಕಾಣ, ಎರಡನೆಯ ಭಾಗ ನವಮರಾಶಿ ದ್ರೇಕ್ಕಾಣ, ಮೂರನೆಯ ಭಾಗ ಲಗ್ನರಾಶಿ ದ್ರೇಕ್ಕಾಣವಾಗುತ್ತದೆ. ಉದಾಹರಣೆಗೆ : ಮೇಷಲಗ್ನಪ್ರಮಾಣ ೪-೨೮. ಇದರಲ್ಲಿ-೧-೨೯ ಮೇಷದ್ರೇಕ್ಕಾಣ, ೨-೫೮ ಸಿಂಹ ದ್ರೇಕ್ಕಾಣ, ೪-೨೮ ಧನುಃದ್ರೇಕ್ಕಾಣ. ವೃಷಭಲಗ್ನಪ್ರಮಾಣ ೫-೩. ಇದರಲ್ಲಿ-೧-೪೧ ಮಕರದ್ರೇಕ್ಕಾಣ, ೩-೨೨ ವೃಷಭ ದ್ರೇಕ್ಕಾಣ, ೫-೩ ಕನ್ಯಾದ್ರೇಕ್ಕಾಣ. ಮಿಥುನಲಗ್ನಪ್ರಮಾಣ ೫-೨೮. ಇದರಲ್ಲಿ-೧-೪೯ ತುಲಾದ್ರೇಕ್ಕಾಣ, ೩-೩೯ ಕುಂಭ ದ್ರೇಕ್ಕಾಣ, ೫-೨೮ ಮಿಥುನದ್ರೇಕ್ಕಾಣ. ಹೀಗೆಯೇ ಉಳಿದ ರಾಶಿಗಳಿಗೂ ಕಲ್ಪಿಸಿಕೊಳ್ಳಬೇಕು. ದ್ರೇಕ್ಕಾಣವು ಜಾತಕಫಲ ಮತ್ತು

ಪ್ರಶ್ನೆ ಹೇಳುವಾಗ ಉಪಯೋಗಕ್ಕೆ ಬರುತ್ತದೆ: ದ್ರೇಕ್ಕಾಣಮುಂ ಮೂಱನಿಕ್ಕುಂ (ಜಾತಕ. ೧-೨೭); ದ್ರೇಕ್ಕಾಣಮುಚಿತಮದಱಿಂ ವಿಕ್ಕಿರ್ಕುಂ ಹೋರೆ (ಚಿಕವಿ. ೬-೪೭); ಶುಭಲಗ್ನಂ ಶುಭತಾರೆ ಯೋಗಕರಣಂ ದ್ರೇಕ್ಕಾಣ ಹೋರಾಸಮಂ (ರಾಂಶಮುಂ ?) ಶುಭಂ (ಬೀಳವಂ. ೨-೧೬೮).
[ ಸಂ. ]

**ದ್ರೋಣ** (ನಾ). ೧. (ನೀರನ್ನು ತುಂಬಿಡುವ) ದೋಣಿಯಾಕಾರದ ಮರದ ಪಾತ್ರೆ. ೨. ಎಲೆಗಳಿಂದ ಮಾಡಿದ ಪಾತ್ರೆ; ದೊನ್ನೆ: ಮಾಣದೆ ಸೋರ್ವಿಂದ್ರಿಯಮುಂ ದ್ರೋಣದೊಳಾಂತಲ್ಲಿಯೊಗೆದ ಶಿಶುವಂ ಕಂಡೀ ದ್ರೋಣದೊಳ್ ಪುಟ್ಟಿದೀತಂ ದ್ರೋಣನೆ ಪೋಗೆಂದು ಪೆಸರನಿಟ್ಟಂ ಮುನಿಪಂ (ಪಂಪಭಾ. ೨-೪೩). ೩. ಒಂದು ಅಳತೆ; ನಾಲ್ಕು ಕೊಳಗ: "ಆಢಕಃ-೧ ಕೊಳಗದ ಹೆಸರು, ದ್ರೋಣಃ-೧ ನಾಗಳಧ ಹೆಸರು, ಕೆಲವರು ಇಕ್ಕಳವೆಂಬುವರು" (ಸಿದ್ಧಾಂತಿ. ೨೫೯); ಒಂದು ಸೊಲ್ಲಗೆಯೇ ನಿಕುಂಜವದು ನಾಲ್ಕಾಗಲೊಂದು ಕುಡಬವದು ನಾಲ್ಕಾಗಲೊಂದು ಪ್ರಸ್ಥವಾ ಪ್ರಸ್ಥವೆರಡಾಗಲೊಂದು ವಾಹವದರಡಾಗಲೊಂದು ಆಢಕವದು ನಾಲ್ಕಾಗಲೊಂದು ದ್ರೋಣ (ವಿವೇಕ. ೭); ದ್ರೋಣದಿ ಷೋಡಶಭಾಗವ ಕಾಣುತಲಂ ಭಾರ್ಯವೆನ್ನುತದು ನಾಲ್ಕಂಯೆಣಿಸೆ ದಾಢಕ ಪ್ರಸ್ಥಂ ಕ್ಷೋಣಿಯೊಳುಂ ಭಾಗಗಾಣು ನಾಲ್ಕಕೆ ಕುಡುಬಂ (ಭಾಸ್ಕರ. ೭೪-೧); ೪ ಆಢಕ=೧ ದ್ರೋಣ (೩೨ ಸೇರು) (ಸಕವೃ. XIII, ಕೃಷಾವನ). P ಈ ಅಳತೆಗಳ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ೪. ಇಂದ್ರನ ಏಳು ಮೇಘ ವರ್ಗಗಳಲ್ಲಿ ಒಂದು; P ಇದರಲ್ಲಿ ಎರಡು ವಿಧ: ೧. ಸಂವರ್ತ, ಭೀಮನಾದ, ದ್ರೋಣ, ಚಂಡ, ಬಲಾಹಕ, ವಿದ್ಯುತ್ಪತಾಕ, ಶೋಣ. ೨. ಸಂವರ್ತ, ಆವರ್ತ, ಪುಷ್ಕಲಾವರ್ತ, ದ್ರೋಣ, ಕಾಳ, ನೀಲ, ಮಹಾಕಾಳ: ಸಿಡಿಲ ಬಳಗವುನೊಳಕೊಂಡ ದ್ರೋಣ ಮಹಾದ್ರೋಣ ಪುಷ್ಕಳಾವರ್ತ ಸಂವರ್ತಕಂಗಳೆಂಬ ಮುಗಿಲ್ಗಳಂ ಬೆಸಸಿದಾಗಳ್ (ಪಂಪಭಾ. ೩-೯೩ ವ). ೫. ಕಾಡ ಕಾಗೆ; ಹೊಲೆಕಾಗೆ; ಮಂಡಕಾಗೆ; ಅಡವಿಯ ಕಾಗೆ: "ಕಾಕೋಲಃ, ಮೌಕುಳಿಃ, ದ್ರೋಣಃ, ಕೃಷ್ಣಕಾಕಃ, ವನಾಶ್ರಯಃ-ಈ ೫ ಅಡವಿಯ ಕಾಗೆ" (ಹಲಾಯು. ೪೦-೯೩); "ಶಿತಿಕಾಕಂ ವನಾಶ್ರಯಂ ಮೌಕುಳಿ ದ್ರೋಣವಾ ಕಾಕೋಳಮೆನೆ ಕಾಡ ಕಾಗೆ" (ಮಂಗರಾ. ೫೦-೪). ೬. ಚೇಳು; ವೃಶ್ಚಿಕ. ೭. [ಜ್ಯೋತಿ] ವೃಶ್ಚಿಕರಾಶಿ. ೬, ೭: ಮಕರ ಕರ್ಕಟಕ ಹರಿ ಮಿಥುನದಿಂದನಿಮೇಷನಿಕರದಿಂ ದ್ರೋಣಂ ತಿಮಿನಾನಂಗಳಿಂ ದೊಪ್ಪುತಕಳಂಕಮೆನೆ . . . ರಂಜಿಸಿತು ವಾರಾಶಿ (ಶ್ರೀರಾಮ. ೩-೨೯). ೮. ಕಪ್ಪೆ; ಮಂಡೂಕ. ೯. ಪಾಂಡವ, ಕೌರವರುಗಳಿಗೆ ಧನುರ್ವಿದ್ಯೆಯನ್ನು ಕಲಿಸಿದ ಗುರು; ಅಶ್ವತ್ಥಾಮನ ತಂದೆ: P ಭರದ್ವಾಜನೆಂಬ ಮಹರ್ಷಿಗೆ ಘೃತಾಚಿಯೆಂಬ ಅಪ್ಸರ ಸ್ತ್ರೀಯನ್ನು ನೋಡಿದ ಕೂಡಲೆ ವೀರ್ಯಸ್ಖಲನವಾಗಲು, ಅದನ್ನು ದೊನ್ನೆಯಲ್ಲಿಟ್ಟು ರಕ್ಷಿಸಿದನು. ಅದರಿಂದ ಮಗನೊಬ್ಬನು ಹುಟ್ಟಿದುದರಿಂದ ಅವನಿಗೆ ದ್ರೋಣನೆಂದು ಹೆಸರಾಯಿತು: ದ್ರೋಣಂ ಗಡಮಿಮುವಿದ್ಯೆಗೆ ಜಾಣಂ (ಪಂಪಭಾ. ೨-೫೭); ದ್ರೋಣನೆಮಗೊಳ್ಳಿಕೆಯ್ದಂ ದ್ರೋಣನ ಸುತನೊಳ್ಳಿಕೆಯ್ಯದಿರ್ಕುಮೆ (ಗದಾಯು. ೩-೬೧); ಹಳಿವಿದಿರ ಮೆಳೆಯ ಲಿ ವೊಳಗಿದುರಿಯವೊಲುಱುಹಿದನು ದ್ರೋಣ (ಕುಮಾವ್ಯಾದ್ರೋ. ೧೭-೨೫). ೧೦. ಬಿಲ್ಲು; ಧನಸ್ಸು: ಈಶ್ವರನ ದ್ರೋಣವ ಮಾಡಿ ಪದ್ಮನಾಭನ ನಾರಿಯ ಮಾಡಿ ಕಮಲಜನೆಂಬ ಬಾಣವ ತೊಟ್ಟು ಮೂಱುಭುವನವನೆಚ್ಚ ವರಾರೋ (ಅವಹಂ. ೧೭೭-೭೮೧); ಚಾಪದಿಂದ (ಒಂದು ರೀತಿಯ ಬೊಂಬು) ಮಾಡಿದ್ದು ಕೋದಂಡ, ದಾರುವಿನಿಂದ (ಒಂದು ರೀತಿಯ ಮರ) ಮಾಡಿದ್ದು ದ್ರೋಣ, ಶೃಂಗದಿಂದ (= ಕೊಂಬು) ಮಾಡಿದ್ದು ಧನುಸ್ ಅಥವಾ ಶಾರ್ಙ್ಗ (ಕಠಾಟ. ೨೭೩ ಅಡಿಟಿ). ೧೧. = ದ್ರೋಣಮುಖ: ರಾವಣೇಯಕ ಕೇಟ ವಕ್ತ್ರನ ಭೂಮಿಗೆಸೆವ ದ್ರೋಣ ಸಂವಾಹನಗಳಂ ಪೊಕ್ಕು . . . ನಡೆತಂದನು ಪ್ರಿಯಂಗುಷ್ಮಾಮಹಾವನಕೆ (ಸನತ್ಕು. ೩-೨೦). ೧೨. ತುಂಬೆಯ ಗಿಡ ಮತ್ತು ಅದರ ಹೂವು. 'ದ್ರೋಣಕಂಸುಮ', 'ದ್ರೋಣಪುಷ್ಪ' ಮರಾ. [ ಸಂ. ]

**ದ್ರೋಣಕಲಶ** (ನಾ). = ದ್ರೋಣ ೨: ದ್ರೋಣಕಲಶದೊಳಾದ ದೆಸೆಯಿಂ ದ್ರೋಣನಾದನು (ಕುಮಾವ್ಯಾಆ. ೬-೨೨). [ ಸಂ. ]

**ದ್ರೋಣಕಾಕ** (ನಾ). ಒಂದು ಬಗೆಯ ಕಾಗೆ; ದೊಡ್ಡ ಕಾಗೆ: "ದ್ರೋಣಕಾಕಃ, ಕಾಕೋಲಃ-೨ ಮುದಿಕಾಗೆ, ಮಹಾದೇಕಾಗೆ" (ಸಿದ್ಧಾಂತಿ. ೦೩೯). [ ಸಂ. ]

**ದ್ರೋಣಕುಸುಮ** (ನಾ). ತುಂಬೆಹೂವು: ಪ್ರಭುಶಟ್ಟಿಯ ಮಿದ್ದೆಯೊಳು ದ್ರೋಣಕುಸುಮದ ಮಳೆಯುಂ ಕಱೆಸಿದಂ (ಗುರುಚಾ. ೦೩-೮೯).
[ ದ್ರೋಣ + ಕುಸುಮ ]

**ದ್ರೋಣಕ್ಷೀರೆ** (ನಾ). ನಾಲ್ಕು ಕೊಳಗದಷ್ಟು ಹಾಲು ಕರೆಯುವ ಹಸು: "ದ್ರೋಣಕ್ಷೀರಾ, ದ್ರೋಣದುಘಾ-೨ ಇಕ್ಕಳ ಹಾಲು ಕರೆಯುವ ಆಕಳು" (ಸಿದ್ಧಾಂತಿ. ೨೯೫). [ ಸಂ. ದ್ರೋಣಕ್ಷೀರಾ ]

**ದ್ರೋಣಜ** (ನಾ). = ದ್ರೋಣಪುತ್ರ: ದ್ರೋಣಜನಾ ಪಾಂಚಾಲಕ್ಷೋಣೀಶರ ನಿಕ್ಕಿ ತಲೆಗಳಂ ತಂದು ಕುರುಕ್ಷೋಣೀಶನಿದಿರೊಳಿಟ್ಟಿ ಕೃಪಾಣೋಗ್ರ ಭುಜಾಗ್ರನಿರ್ಪುದುಂ (ಮಹಾನೀ. ೦೩-೩೦); ದಿವ್ಯಾಸ್ತ್ರಶಸ್ತ್ರಂಗಳಂ ಕಲ್ಗೆಳಂ ಕಾಷ್ಠದಿಂ ಹಿಮದಿಂದೆ ಬೆಂಕಿಯಿಂ ಹಸ್ತದಿಂ ಪಾದದಿಂ ದಮಿತ ಹನನೋಪಾಯದಿಂ ನೋಯಿಸುವರಿಲ್ಲವಮರ ಯಕ್ಷ ಪಿಶಾಚ ರಾಕ್ಷಸ ಮನುಷ್ಯಾದಿಗಳೊಳು ದ್ರೋಣಜನ ಕೇಳಾ (ರಾಘಿಕ. ೬-೩೫).
[ ಸಂ. ]

**ದ್ರೋಣದುಘೆ** (ನಾ). = ದ್ರೋಣಕ್ಷೀರೆ: "ದ್ರೋಣಕ್ಷೀರಾ, ದ್ರೋಣದುಘಾ-೨ ಇಕ್ಕಳ ಹಾಲು ಕರೆಯುವ ಆಕಳು" (ಸಿದ್ಧಾಂತಿ. ೨೯೫); ಓಹೋ ಹೊಗಟದಿರನಿಸಿದುವಾ ಹದದೊಳ್ ಜಲಧಿಘೋಷಮಂ ಧೇನುಪ್ರಷ್ಠಿ ದ್ರೋಣದುಘಾಧೃತದೋಹನಘನಧೀರದುಗ್ಧಧಾರಾಧ್ವನಿಗಳ್ (ಲೀಲಾವ. ೫-೧೦೮). [ ಸಂ. ದ್ರೋಣದುಘಾ ]

**ದ್ರೋಣಪುತ್ರ** (ನಾ). ದ್ರೋಣಾಚಾರ್ಯನ ಮಗ; ಅಶ್ವತ್ಥಾಮ: ಇನಜನಿಂ ತೀರದ ಕಜ್ಜಂ ದ್ರೋಣಪುತ್ರನಿಂ ತೀರ್ದಪುದೇ (ಗದಾಯು. ೩-೬೦); ದ್ರೋಣಪುತ್ರ, ರುದ್ರುಮಿತ್ರ, ನಿನ್ನ ಪೆಸರ ಪಟು ಇದೇನ್ ? (ಅಶ್ವತ್ಥಾ. ೭-೧೦೮). [ ದ್ರೋಣ + ಪುತ್ರ ]

**ದ್ರೋಣಪುಷ್ಪ** (ನಾ). = ದ್ರೋಣಕುಸುಮ: ಸಂತತಂ ದ್ರೋಣಪುಷ್ಪಂಗಳಿಂ ಬ್ರಹ್ಮನತ್ಕಂತ ಸದ್ಭಕ್ತಿಯಿಂ ಬ್ರಹ್ಮೇಶ್ವರನ ಪಾದಮಂ ತಾನೆ ಪೂಜೆಯಂ ರಚಿಸಿ ಮತ್ತಾ ಬ್ರಹ್ಮಪದವಿಯಂ ಸಲೆ ಪಡೆದನು (ಆರಾಜ. ೩-೨೩); ದೂರ್ವಾಂಕುರ ದ್ರೋಣಪುಷ್ಪವದ್ರುಗಂಚಗಳಂ ಪರ್ವತದೊಳಿರ್ಪ ಜಲದಿಂದೊರ್ವನೆಯಭಿಷೇಕಕೆಱವುದೆಂದು ಗಡಭವಾ (ಗುರುಬೋ. ೫-೦೩೭).
[ ದ್ರೋಣ + ಪುಷ್ಪ ]

**ದ್ರೋಣಮುಖ** (ನಾ). ನಾಲ್ಕುನೂರು ಗ್ರಾಮಂಗಳನ್ನೊಳಗೊಂಡ ಸೀಮೆಯ ಮುಖ್ಯಪಟ್ಟಣ; ಜಲಸ್ಥಲಮಾರ್ಗಗಳನ್ನುಳ್ಳ ಪುರ; P ಇದರ ವಿಷಯದಲ್ಲಿ ಭಿನ್ನಾಭಿಪ್ರಾಯಂಗಳಿವೆ: (ಕ)ದಂಬಪತ್ತನಮಾ ದ್ರೋಣಮ್ಮುಂಖಗಳಂ (ಬೊಂಕಶಾ. ೧೯೪೪, ಬಂಕಾಪುರ. ೨೦-೦೩ ; 1060).
[ ಸಂ. ]

**ದ್ರೋಣವ್ವ** (ನಾ). ಒಬ್ಬಾತನ ಹೆಸರು: ನಾನಾನ್ಯಪಕುಳಪ್ರಧಾನ ಭೂತಾಗುಣಮಂಶೋತ್ಪನ್ನೋ ದ್ರೋಣವ್ವ ನಾಮಧೇಯಸ್ತಸ್ಯ ಸೂನುಃ (ಸೌಇಇ. XX, ೫-೨೫ ; 723). [ ದ್ರೋಣ + ಅವ್ವ$_1$ ]

**ದ್ರೋಣಾಮುಖ** (ನಾ). = ದ್ರೋಣಮುಖ : ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ (ಪದ್ಮಾರಾ. ೭-೨); ತೊಂಭತ್ತೈಸಾಸಿರ ದ್ರೋಣಾಮುಖಂಗಳುಂ ನಾಲ್ವತ್ತೆಣ್ಸಾಸಿರ ಪಟ್ಟಣಂಗಳುಂ . . . ಪದಿನೆಣ್ಸಾಸಿರ ಮ್ಲೇಚ್ಛರಾಜರು ಮಾತ್ತೀಯಸಾವಿರಾಜ್ಯಪರಿಚ್ಛೇದಮಾಗೆ (ಆದಿಪು. ೧೫-೩ ವ); ತೊಂಬತ್ತಾಱುಸಾಸಿರ ದ್ರೋಣಾಮುಖಂಗಳಿಂದಂ . . . ಪದಿನೆಣ್ಸಾಸಿರ್ವರ್ ಮ್ಲೇಚ್ಛರಾಜರಿಂದಂ ನೆಱೆದೈಶ್ವರ್ಯದ ಮೇಗೆ (ಶಾಂತಿಪು. ೧೧-೮೪ ವ); ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖ ಸಂವಾಹಗಳೊಳ್ ವಿಹಾರಿಸುತ್ತುಂ (ಸುಕುಮಾ. ೪-೨೦ ವ); ಗ್ರಾಮ ಮಡಂಬ ಖರ್ವಡ ಪುರ ದ್ರೋಣಾಮುಖಾದ್ಯಂಗಳಂ ಸನಿವಾಸಾರ್ಥ ಮೊಡರ್ಚಿ ಸರ್ವಜನಮುಂ ವಾಸ್ತುಪ್ರಕಾರಂಗಳಿಂದನುವಪ್ಪಂತೆ ನೆಗಳ್ಚುಗುಂ ಮನೆಗಳಂ ತತ್ತನ್ಮಹಾಸ್ಥಾನದೊಳ್ (ವಿಷ್ಣುಪು. ೧-೨-೨೨).

[ < ದ್ರೋಣಮುಖ ]

**ದ್ರೋಣಾಸ್ಯ** (ನಾ). = ದ್ರೋಣಮುಖ : ತನತು ಪದಪಾಂಸುವಿಂ ಗ್ರಾಮ ನಗರ . . . ದ್ರೋಣಾಸ್ಯ ನಿಗಮಪತ್ತನತತಿ ಪಾವನಮಾಗೆ ವಿಹಾರಿಸುತ್ತ (ಪುಷ್ಪಪು. ೦೪-೦೪). [ ಸಂ. ]

**ದ್ರೋಣಿ** (ನಾ). ೧. ದೋಣಿ ; ನಾವೆ : "ಅಂಬುವಾಹಿ ತಾಂ ದ್ರೋಣಿ" (ವಸ್ತುಕೋ. ೨೪-೧೨); ಸೋಪಾನಪದ್ಧತಿಗಳೊಳ್ ಗಿರಿದುರ್ಗಾರೋಹಣಮುಮಂ ದ್ರೋಣಿ ಯಾನಪಾತ್ರಾದಿಗಳೊಳ್ ಜಲದುರ್ಗೋತ್ತರಣಮುಮನುಪದೇಶಂಗೆಯ್ದು (ಆದಿಪು. ೭-೬೨ ವ); ನೋಡುತಿರೆ ಮಂತ್ರಿ ದಡದಲಿ ನಿಂತು, ಬರಬರುತ ಕಿರಿದಾಗಿ, ಕಡೆಗೆ ಕಣ್ಮರೆಯಾದುದಾ ದ್ರೋಣಿ (ಶ್ರೀರಾಮಾ. ೯೮-೫೫೯). ೨. ದೊನ್ನೆ : ತಂದಳ್ ಸುರಸುಂದರಿ ಚಂದನರಸಭರಿತಾಯತ ಕೇತಕೀದಲದ್ರೋಣಿಗಳಂ (ಪಂಪರಾಮಾ. ೧೭-೯೦). ೩. ಮರದಲ್ಲಿ ಕೊರೆದು ಮಾಡಿದ ಪಾತ್ರೆ. ೪. ಎರಡು ಬೆಟ್ಟಗಳ ನಡುವಿನ ಕಣಿವೆಪ್ರದೇಶ ; ಕಮ್ಮರಿ ; ಕಂದಕ : ಹೊಕ್ಕನು ಕನಕಶೈಲ ದ್ರೋಣಿಗಳ ದುರ್ಬಲಸುರೌಘವನಾನೆಗಂಜಿಸಿ ಕಳೆದುಕೊಂಡನು ಸಕಲ ವಸ್ತುಗಳ (ಕುಮಾ.ಭ. ೩-೪೦). ೫. (ಸಮುದ್ರದಲ್ಲಿಯ) ಅತಿ ಆಳವಾದ ಪ್ರದೇಶ ; ಕೊಲ್ಲಿ : ಕೆಲವು ಕಡೆ ಸಾಗರ ಬಹಳ ಆಳವಾಗಿದೆ. ಆ ಪ್ರದೇಶಗಳನ್ನು ದ್ರೋಣಿ ಅಥವಾ ಪಾತಾಳ (Troughs or Deeps) ಎಂದು ಕರೆಯುತ್ತಾರೆ (ಭೂವಿಜ್ಞಾ. ೮೨). ೬. ನೀಲಿಯ ಗಿಡ. ೭. ವೀಣೆಯ ಬುರುಡೆ : ವೀಣೆಗೆ ಪತ್ರವಿಲ್ಲದಿದ್ದರೆ, ಚರ್ಮವಿಲ್ಲದಿದ್ದರೆ, ದ್ರೋಣಿಯಿಲ್ಲದಿದ್ದರೆ, ದಂಡವಿಲ್ಲದಿದ್ದರೆ, ಉಪವೀಣೆಯಿಲ್ಲದಿದ್ದರೆ, ತಂತಿಯಿಲ್ಲದಿದ್ದರೆ, ಕಮಾನು ಇಲ್ಲದಿದ್ದರೆ, ಪುರುಷನ ಸಾಮರ್ಥ್ಯ ಪ್ರಯತ್ನಗಳಿಲ್ಲದಿದ್ದರೆ ಶಬ್ದ ಹುಟ್ಟುವುದೆ ? (ಬುದ್ಧಪ. ಮಿಲಿಂದ. ೭೩).

[ ಸಂ. ದ್ರೋಣಿ, ದ್ರೋಣೀ ]

**ದ್ರೋಣಿಕೆ** (ನಾ). ಸಣ್ಣ ದೋಣಿ ; ಚಿಕ್ಕ ನಾವೆ : ತೇರ್ಗಳೀರೊಡ್ಡುಗಳ್ ಪವಣಂ ಮೀಱಿದಸೃಗ್ಝರಾವಗೆಯೊಳಂದಾಳುತ್ತುಮೇಟುತ್ತೆ ಪೋದುವು ದುರ್ವಾಯುಗೆ ಸಂದ ವಾರಿಧಿಯ ನಾನಾ ದ್ರೋಣಿಕಾಶ್ರೇಣಿಯೊಲ್ (ಮಹಾನೇ. ೭೨-೪೫). [ ಸಂ. ದ್ರೋಣಿಕಾ ]

**ದ್ರೋಣೀದಹನ** (ನಾ). ಒಂದು ಬಗೆಯ ಯುದ್ಧಸಾಧನ (?) : ಬಿಲ್ಲು ತೀರು . . . ದ್ರೋಣೀದಹನ ಶತಘ್ನಿ ಸಹಸ್ರಘ್ನಿ . . . ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿ ಸಾಧನವಿಶೇಷಂಗಳಿಂದಲುಂ (ವಿವೇಕ. ೨೬೩).

[ ಸಂ. ]

**ದ್ರೋಹ** (ನಾ). ೧. ವಿಶ್ವಾಸಘಾತ ; ವಂಚನೆ ; ಮೋಸ : "ಅಪಕಾರಃ, ದ್ರೋಹಃ—ಈ ೨ ಹೊಲ್ಲವೆ" (ಹಲಾಯು. ೧೨೭-೫೬); "ದ್ರೋಹಮುಪಕಾರ ಮಕ್ಕುಂ" (ಮಂಗರಾ. ೧೩೨-೨೬); ನೀ ಮುಂತಾಗಿ ಬಂದ ಭಕ್ತರ ನೀಯನ್ನದಿದ್ದರೆ ಅದೇ ದ್ರೋಹ (ಬಸವ. ೭೦೪); ದ್ರೋಹದಿಂದ ಪಡೆದ ರಾಜ್ಯ, ದ್ರೋಹದಿಂದಲೇ ಹೋಗಬಹುದು (ಹಂಗೀತ. ೦೧೪). ೨. ತಪ್ಪು ; ಅಪರಾಧ. ೩. ಹಗೆ ; ವೈರ : "ವಿದ್ವೇಷಂ ದ್ರೋಹಂ ವೈರಂ ವಿರೋಧಮೆನೆ ಪಗೆಯಕ್ಕುಂ" (ವಸ್ತುಕೋ. ೧೧೦-೪). ೪. ಮೋಸಮಾಡುವವನು ; ವಂಚಕ : ನೀಚನಾ ದ್ರೋಹನಾ ಸಂಚಳನಾ ಚಂಡಾಲನಾ ಪಾತಕನಿರವನಿದಂ ನೋಡು ಪಂಕೇಜವಕ್ತ್ರೇ (ಗದಾಯು. ೮-೪೫); ನೀವಿಾ ದ್ರೋಹನ ಮುಂದೆ ನಿಂದಿರ್ದೇನೆಂದು ಚಿಂತಿಸುತಿರ್ದಪಿರೆನೆ (ಪಂಚತಂ. ೦೮೦-೧೧).

**ದ್ರೋಹ ಎಣಿಸು** = ದ್ರೋಹ ಬಗೆ : ಹಾಲು ಕುಡಿದ ಮೇಲೆ ಮನೆಗೆ ದ್ರೋಹ ಎಣಿಸುವುದಿಲ್ಲ (ಪದ್ಮಸ. ೧೫೭). **ದ್ರೋಹಕಾಳಾನಳ** = ದ್ರೋಹ ಮಾಡುವವರಿಗೆ ಪ್ರಳಯಾಗ್ನಿಯಂತಿರುವವನು ; ಒಂದು ಬಿರುದು : ವೈರಿಬಳಜಳಧಿಬಡವಾನಳಂ ದ್ರೋಹಕಾಳಾನಳಂ . . . ಶ್ರೀಮತು ಮನ್ನಿಯ ಜೋಗಯ್ಯಂ (ಎಕ. VII, ಶಿಕಾರಿ. ೨೦-೧೫ ; 1032). **ದ್ರೋಹ ಘರಟ್ಟ** = ವಂಚಕರಿಗೆ ಅರೆಗಲ್ಲಿನಂತಿರುವವನು; ಶತ್ರುನಾಶಕ; ಒಂದು ಬಿರುದು : ಶ್ರೀಮನ್ಮಹಾಪ್ರಧಾನಂ ದಂಡನಾಯಕಂ ದ್ರೋಹಘರಟ್ಟಂ ಗಂಗರಾಜಂ (ಎಕ. II, ೭೩-೨೦ ; 1118); ವೈರಿಭೇರುಂಡಂ ರಿಪುರಾಯಘಟಿಯ ದಿಶಾಪಟ್ಟಂ ದ್ರೋಹಘರಟ್ಟಂ ದೇವಗುರುಚರಣ ಸರಸೀರುಹಭೃಂಗಂ (ನಾಂದೇಡ್.೨೮-೧೧; 1130). **ದ್ರೋಹ ಬಗೆ** = ಅಪಕಾರ ವನ್ನು ಎಣಿಸು ; ಕೇಡನ್ನು ಬಯಸು ; ದ್ರೋಹ ಮಾಡು : ನಿಮಗೆ ದೇವರು ಎಂದಿಗೂ ದ್ರೋಹ ಬಗೆಯುವುದಿಲ್ಲ (ದೇವಹಂ. ೨೪೪). **ದ್ರೋಹ ಮಾಡು** = ಎರಡು ಬಗೆ ; ಕೇಡೆಣಿಸು ; ವಂಚಿಸು : ಅವರು ನಿಮಗೆ ದ್ರೋಹ ಮಾಡಬಾರದು (ಧರ್ಮಸಾ. ೪೩); ದೋಸೆ ತಿನ್ನುವ ಆಸೆಯಿಂದ ಇದ್ದ ಸೊಸೆಗೆ ದ್ರೋಹ ಮಾಡಿದ ಪಾಪ ನನ್ನದು (ಪದ್ಮಸ.೬೦). **ದ್ರೋಹವಾಗು** = ಅಪಕಾರವಾಗು ; ಕೇಡಾಗು : ನನ್ನಿಂದ ಅವಳಿಗೆ ಯಾವ ದ್ರೋಹವಾಗಿದೆ ? (ಪದ್ಮಸ. ೧೫೨); ಅದರಿಂದ ಮಗಳಿಗೆ ದ್ರೋಹವಾಗುತ್ತದೆಯೆ ? (ದೇವಹಂ. ೧೧೪). [ ಸಂ. ]

**ದ್ರೋಹಚಿಂತನ** (ನಾ). ಮೋಸಮಾಡುವಿಕೆ ; ದ್ರೋಹವನ್ನು ಬಗೆಯುವಿಕೆ : ವ್ಯಾಪಾದಃ ದ್ರೋಹಚಿಂತನಂ (ಸಿದ್ಧಾಂತಿ. ೪೨).

[ ದ್ರೋಹ + ಚಿಂತನ ]

**ದ್ರೋಹಿ** (ನಾ). ೧. ಕೇಡಿಗ ; ಮೋಸಗಾರ ; ವಂಚಕ : ಪಚ್ಚಡಿಕೆಯಂ ಪತ್ತಿರ್ದ ಕೂಸಿಯಂ ಕಂಡರಸಂಗೆ ನಿದ್ರಾಭಂಗಮಂ ಮಾಡಿದ ದ್ರೋಹಿಯಿ [ಪಾಠಾಂ. ಹನಿ] ದಕ್ಕುಮೆಂದು ಮುಂದವಿಸರ್ಪಿಣಿಯಂ ಕೊಂದರ್ (ಪಂಚತಂ. ೦೩೦-೦೭); ಆನು ಭಕ್ತನೆನ್ನಲ್ಲಿ ಲೇಸುಂಟೆಂದು ಪರಿಣಾಮಿಸಿದರೆ ನಿಮಗಾನು ದ್ರೋ[ಹಿಯ]ಯ್ಯಾ (ಬಸವ. ೪೦೭); ಕೈಯ ಕರವಾಳಪರಶುವನೆತ್ತಿ ನೆಲದಲಿ ಬೀಳಹೊಡೆದನು ಓತನ ತಲೆಯನು ದ್ರೋಹಿ ಕೆಡೆಯೆನುತ (ಬಸಪು. ೯-೦೩); ದ್ರೋಹಿಗಳು ಧೂಳಾಯ್ತು ಬಳಿಕಿನೊಳೀ ಹದನು ಬಂದಿದೆ (ಕುಮಾ.ಭ. ೭-೪೫); ಪಡೆಯೊಳಗದಾವನು ದ್ರೋಹಿಯಿಲ್ಲೆಂದ (ಕೌರಿರಾ. ೪೩-೨೦). ೨. ಮೋಸ ಮಾಡಿದುದು; ವಂಚನೆ ಮಾಡಿದುದು: ಕರ್ಣನುಗ್ರರಥಮಂ ಮುಂ ನುಂಗಿದೀ ದ್ರೋಹಿಯೊಳ್ ನೆಲದೊಳ್ ಪಂಬಲೆ (ಪಂಪಭಾ. ೧೩-೧೭).

[ ಸಂ. ದ್ರೋಹಿನ್ ]

**ದ್ರೋಹಿಗ** (ನಾ). = ದ್ರೋಹಿ ೧ : ಹೊಯಸಳರಾಜ್ಯದ ದ್ರೋಹಿಗರನ್ನು ನಾಶಮಾಡಿ ದೇಶವನ್ನು ವಿಸ್ತಾರಪಡಿಸಿ, ನಿರುಪಾಧಿಕ ಮಾಡಿ, ದೇಶಸೇವೆಯನ್ನು ಮಾಡಿದ ಈ ಕತ್ತಿಯನ್ನು ಇನ್ನು ನೀನು ಹಿಡಿ (ಶಾಂತಲಾ. ೦೪೦).

[ ದ್ರೋಹ + -ಇಗ ]

**ದ್ರೋಹಿತನ** (ನಾ). ಮೋಸಗಾರಿಕೆ ; ವಂಚನೆ : ಈ ಸಂಸ್ಥಾನವು ಬಹು ಬಲವಾದದ್ದು. ಒತಾರಿಯೂ ದ್ರೋಹಿತನವೂ ಇಲ್ಲದಿದ್ದರೆ ಹೈದರನಿಗೂ ಜೈಸಲಸಾಧ್ಯವಾದದ್ದು (ಚಿತ್ರಪಾ. ೯). [ ದ್ರೋಹಿ + -ತನ ]

**ದ್ರೌಣಿ** (ನಾ). ೧. ದ್ರೋಣಾಚಾರ್ಯನ ಮಗ ; ಅಶ್ವತ್ಥಾಮ: ನಡೆ ಕುರುಕ್ಷ್ಮಾಪಾಲನಿರ್ದಲ್ಲಿಗೆಂದರವಿಂದಾಲಯೆಯುಂ ಮಗುಂಟ್ಚಿದನದೇನಾ ದ್ರೌಣಿ ಶೌರ್ಯಾರ್ಥಿಯೋ (ಪಂಪಭಾ. ೧೩-೧೧೨) ; ಜೋಳದ ಪಾಟಿಯುಂ ಬಗೆದರಿಲ್ಲಾ ದ್ರೌಣಿಯುಂ ದ್ರೋಣನುಂ (ಗದಾಯು. ೨-೧೧) ; ಇವರಂ ಸುಡುವುದೇ ಲೋಹಿತಾಶ್ವಾಸ್ತ್ರವೆನೆ ದ್ರೌಣಿ ನಾನಲ್ಲವೆ ಶಿವಾರ್ಚಕನೆಂದನು (ರಾಘಶ. ೬-೩೬). ೨. ದ್ರೋಣಿ ; ನಾವೆ. ೧, ೨: ಕೌರವಕ್ಷಿತಿಪರನ ಸೇನೆಯುಂತಾ ದ್ರೌಣಿಯಿಂ ವ್ಯಕ್ತದಂತಾ ಪ್ರವಾಹದಿಂದ . . . ಒಪ್ಪಿತು ಸಮುದ್ರಂ (ಭಾವಜಿಂ. ೧-೨೩). ℙ ಇಲ್ಲಿರುವ ಶ್ಲೇಷಾರ್ಥವು ವ್ಯಾಕರಣ ಶುದ್ಧವೆಂದು ಹೇಳಲಾಗುವುದಿಲ್ಲ. [ ಸಂ. ]

**ದ್ರೌಣಿಕ** (ನಾ). ನಾಲ್ಕು ಕೊಳಗ ಬೀಜವನ್ನು ಬಿತ್ತುವಷ್ಟು ಭೂಮಿ ; ದ್ರೌಣಿಕಃ – ನಾಲ್ಕು ಕೊಳಗ ಬಿತ್ತತಕ್ಕ ಭೂಮಿಯ ಪೆಸರು (ಗುರುಬಾ. ೨೯೬). [ ಸಂ. ]

**ದ್ರೌಪದಿ** (ನಾ). ೧. ದ್ರುಪದರಾಜನ ಮಗಳು ; ಪಾಂಡವರ ಪತ್ನಿ : ಆಗಳ್ ದ್ರೌಪದಿ ತನ್ನ ಕೇಶಪಾಶಮಂ ದುಶ್ಶಾಸನಂ ಪಿಡಿದು ತೆಗೆದನೆಂಬ ಸಿಗ್ಗಗ್ಗಳಂ ಪೆರ್ಚೆ ಸಭೆಯೊಳಿಂತೆಂದಳ್ (ಪಂಪಭಾ. ೬-೯ ವ) ; ಮರು ತ್ಪುತ್ರಂ ಬಟಿಯಟ್ಟಿ ಕರಸಿ ತೋಟಿಲ್ಕೇಚಕ್ಪೃತ್ರೀಕೃತ ಜಗದಹಿತಕ್ಷತ್ರಿಯ ಕುಳಕಾಳರಾತ್ರಿಯಂ ದ್ರೌಪದಿಯಂ (ಗದಾಯು. ೮-೪೪) ; ಮಗನು ಧೃಷ್ಟ ದ್ಯುಮ್ನ ದ್ರೌಪದಿ ಮಗಳು ಭಾರದ್ವಾಜನೆತ್ತಿದ ಹಗೆಗೆ ಹರುವಾಯ್ತೆನುತ ಹಿಗ್ಗಿದ ದ್ರುಪದಭೂಪಾಲ (ಕುವ್ಯಾಳ. ೬-೭೨). ೨. [ಜ್ಯೋತಿ] ಒಂದು ನಕ್ಷತ್ರದ ಹೆಸರು: ಅದರ ಕೆಳಗೆ ಕುಂತಿಯವರೆಗಿನ ಖಗೋಳಪ್ರದೇಶವೆಲ್ಲ ಆಂಡ್ರಾಮಿಡ ರಾಶಿಗೆ ಸೇರಿದೆ. ಆಂಡ್ರಾಮಿಡವನ್ನು ದ್ರೌಪದಿಯೆಂದು ಕರೆದಿದೆ (ನಕ್ಷತ್ರ. ೨೮). [ ಸಂ. ದ್ರೌಪದೀ ]

**ದ್ವಂದ್ವ** (ನಾ). ೧. ಎರಡು ; ಜೊತೆ ; ಯುಗಳ : "ಯುಗ್ಮಂ, ಯುಗಂ, ಯುಗಳಂ, ದ್ವಂದ್ವಂ . . . ಯಮಳಂ–ಈ ೮ ಅವಳ್" (ಹಲಾಯು. ೧೧೬-೧೫) ; ಎರಡರಲ್ಲೆ ಎಲ್ಲವಾಗಿ ಎರಡೆಂಬುದೆ ಅಲ್ಲವಾಗಿ ದ್ವಂದ್ವದಲ್ಲಿ ದಂಪತಿ ವಿಶ್ವವಾದ ಶಿವಸತಿ (ಅರಳು. ೪೪೬-೧೮) ; ಚೆಂದ ವೇಗ ಸ್ಮಿಮಿತ ದನುವು ಹುಳಿಯುಪ್ಪನುವು ದ್ವಂದ್ವದನುವುಗಳಿಂದ (ಮಂಕುಕ. ೪೪೮). ೨. ಪರಸ್ಪರ ವಿರುದ್ಧವಾದ ಗುಣ, ಸ್ವಭಾವ, ಸ್ಥಿತಿ ಅಥವಾ ವಸ್ತು ಮೊದಲಾದುವುಗಳ ಜೋಡಿ ; ಶೀತ – ಉಷ್ಣ, ಕತ್ತಲೆ– ಬೆಳಕು, ಸುಖ – ದುಃಖ, ಕಹಿ – ಸಿಹಿ ಇತ್ಯಾದಿ : ಸುಖ – ದುಃಖಗಳ ದ್ವಂದ್ವದಲ್ಲಿ ಸಿಲುಕದಿರು (ಧರ್ಮಸಾ. ೧೩೨) ; ಜೀವನು . . . ಲಾಭ– ನಷ್ಟ, ಜಯ–ಅಪಜಯಂಗಳೆಂಬ ದ್ವಂದ್ವಗಳಲ್ಲಿಯೇ ಯಾವಾಗಲೂ ಸಿಲುಕಿ ನರಳುತ್ತಿರುವನು (ಕಕ್ಷ.ವಿ. ೧೭). ೩. ಬೇರೆ ಬೇರೆ ಎಂಬ ಭಾವನೆ ; ದ್ವೈತಭಾವ: ಹುಟ್ಟಿಸುವಾತ ಬ್ರಹ್ಮನಾದಡೆ ಅರ್ಚಿಸಲೇಕೊ ನಿಮ್ಮುವ . . . ಕೊಂದು ಹೊದ್ದಿಸುವಾತ ರುದ್ರನಾದಡೆ ಮಹಾದ್ವಂದ್ವವ ನುಡಿಯ ಲೇಕೊ ನಿಮ್ಮುವ (ಮೋಳಿಮಾ. ೬-೨೩); ಆ ಒಂದಾದುದನೆ ನೋಡಿ ದ್ವಂದ್ವವನೆ ಹಱಿದು ನಿಮ್ಮ ಸಂಗಸುಖದೊಳಗೋಲಾಡಿ ಸುಖಿಯಾದೆ ನಯ್ಯಾ (ಲಿಂಗವ. ೭೬-೬೯) ; "ದ್ವಂದ್ವಗಳ ಗೆದ್ದಂದು" ; "ಕಾನನಕೆ ನಡೆದು ಏಕಾಂತದಲಿ ಕುಳಿತಂದು" ; ಎಂದು ಒಬ್ಬೊಬ್ಬರೊಂದನೂ ಹೇಳಿ ತೆರಳಿದರು (ಕೋಗಿಲೆ. ೬೪-೧೭). ೪. ವಿಶೇಷವಾಗಿ ಇಬ್ಬರು ಮಾಡುವ ಯುದ್ಧ ; ಮಲ್ಲಯುದ್ಧ, ಕುಸ್ತಿ ಇತ್ಯಾದಿ : "ಸಂಗ್ರಾಮಃ, ಸಮಿತಿಃ, ಸಮಿತ್ . . . ದ್ವಂದ್ವಃ, ವಿಗ್ರಹಃ – ಈ ೩೫ ಕಾಳೆಗಂ" (ಹಲಾಯು. ೬೩-೨೯೯). ೫. ಸಂದೇಹ ; ಸಂಶಯ. ೬. ಜಗಳ ; ಚರ್ಚೆ ; ವಾದವಿವಾದ : ಚರ್ಚಾಕೂಟದಲ್ಲಿ ಅವನಿಗೂ . . . ಚರಿತ್ರೆಯ ಅಧ್ಯಾಪಕರಿಗೂ ದ್ವಂದ್ವ ಪ್ರಾರಂಭವಾಗಿ ಬಿಡುತ್ತಿತ್ತು ! (ಭೂಮಿತಾ. ೭). ೭. ಇಬ್ಬರು ಸೇರಿ ಏಕಾಂತದಲ್ಲಿ ಮಾತನಾಡುವ ರಹಸ್ಯ,–ಗುಟ್ಟು. ೮.=ದ್ವಂದ್ವಸಮಾಸ: ದ್ವಿಪದಂ ವೇಣ್ ಬಹುಪದಮನ್ಯಪದಾರ್ಥದೊಳೊಂದಿ ನಿಲೆ ಬಹುವ್ರೀಹಿ ಸಮಸ್ತಪದಾರ್ಥಂ ದ್ವಂದ್ವಂ ಪೂರ್ವಪದಪ್ರಾಧಾನ್ಯಮವ್ಯಯೀಭಾವಾಖ್ಯಂ (ಕಾವ್ಯಾವ. ೨೦೮) ; ಪದಾರ್ಥದ ಗಡಣಂ ದ್ವಂದ್ವಮೆನಿಪ್ಪುದು (ಶಮದ. ೧೬೫ ಅಡಿಟಿ) ; ಅನೇಕ ಪದಗಳಿಗೆ ಸಮುಚ್ಚಯವು ತೋರಿ ಆಗುವ ಸಮಾಸವು ದ್ವಂದ್ವ (ಕೈಪಿಡಿ. ೨೨). [ ಸಂ. ]

**ದ್ವಂದ್ವಕರ್ಮ** (ನಾ). ಪರಸ್ಪರ ವಿರುದ್ಧವಾದ ಕಾರ್ಯ : ಸರ್ವ ಜೀವರು ಗಳಂತೆ ಪುಣ್ಯಪಾಪ ಸುಖದುಃಖ ಸ್ವರ್ಗ ನರಕಂಗಳೆಂಬ ದ್ವಂದ್ವಕರ್ಮಂಗಳ ಹೊದ್ದಿರ್ಪನೆ ಶಿವನು (ಅಖಂಡೇ. ೧೧೬-೬೨). [ ದ್ವಂದ್ವ + ಕರ್ಮ ]

**ದ್ವಂದ್ವಜ** (ಗು). ಬೇರೆ ಬೇರೆಯಾದುದರ ಸಂಬಂಧದಿಂದುಂಟಾದ ; ಭಿನ್ನಪ್ರಕೃತಿಗಳ ಸಂಕರದಿಂದ ಜನ್ಮವಾದ : ದ್ವಂದ್ವಜ ಪಿತೃಮಾತೃತೆ ಯಿಂ ದ್ವಂದ್ವಜಯುಮಸಾನ್ನಪಾನಖಾನಾದಿಗಳಿಂ ದ್ವಂದ್ವಜ ಋತುಸಂಗತದಿಂ ದ್ವಂದ್ವಪ್ರಕೃತಿಗಳೆ ಪುಟ್ಟುಗುಂ ತುರಗಂಗಳ್ (ಅಶ್ವಶಾ. ೬-೮೯). [ ಸಂ. ]

**ದ್ವಂದ್ವಜ್ವರ** (ನಾ). ವಾತ, ಪಿತ್ತ, ಕಫ–ಇವುಗಳಲ್ಲಿ ಯಾವುದಾದರೂ ಎರಡರ ದೋಷದಿಂದ ಬರುವ ಜ್ವರ ; ಎರಡು ದಿನಕ್ಕೊಮ್ಮೆ ಬರುವ ಜ್ವರ : ದ್ರಾಕ್ಷಿಹಣ್ಣು . . . ಕಟುಕರೋಹಿಣಿ ಇವುಗಳ ಕಷಾಯ ವನ್ನು ಕಾಯಿಸಿ . . . ಕೊಡಲು ತ್ರಿದೋಷಜ್ವರ, ದಾಹಜ್ವರ, ಶ್ವಾಸ, ದ್ವಂದ್ವಜ್ವರ, ಮದ, ಮೂರ್ಛೆ ಸಹ ಮಾಣ್ಗುಂ (ಸಕವೈ. ೧೧೧). [ ದ್ವಂದ್ವ + ಜ್ವರ ]

**ದ್ವಂದ್ವನಾಡಿ** (ನಾ). ವಾತ, ಪಿತ್ತ ಮತ್ತು ಕಫ ಇವುಗಳನ್ನು ಸೂಚಿಸುವ ನಾಡಿಗಳಲ್ಲಿ ಯಾವುದಾದರೂ ಎರಡು ನಾಡಿ : ನಾಡಿಯ ಗತಿಭೇದಂ ಗಳಿಂದ ವಾತ ಮೊದಲಾದ ನಾಡಿಗಳನ್ನೂ ವಾತ ಪಿತ್ತಾದಿ ದ್ವಂದ್ವನಾಡಿ ಗಳನ್ನೂ ತಿಳಿದು ಹೇಳುವುದು (ಸಕವೈ. ೧೩). [ ದ್ವಂದ್ವ + ನಾಡಿ ]

**ದ್ವಂದ್ವಪ್ರಕೃತಿ** (ನಾ). ೧. ಬೇರೆ ಬೇರೆ ಸ್ವಭಾವ. ೨. ಬೇರೆ ಬೇರೆ ಸ್ವಭಾವವುಳ್ಳುದು : ದ್ವಂದ್ವಜ ಪಿತೃಮಾತೃತೆಯಿಂ ದ್ವಂದ್ವಜಯುಮಸಾನ್ನ ಪಾನಖಾನಾದಿಗಳಿಂ ದ್ವಂದ್ವಜ ಋತುಸಂಗತದಿಂ ದ್ವಂದ್ವಪ್ರಕೃತಿಗಳೆ ಪುಟ್ಟುಗುಂ ತುರಗಂಗಳ್ (ಅಶ್ವಶಾ. ೬-೮೯). [ ದ್ವಂದ್ವ + ಪ್ರಕೃತಿ ]

**ದ್ವಂದ್ವಪ್ರಯತ್ನ** (ನಾ). ಯುದ್ಧದ ಪ್ರಯತ್ನ ; ಕದನ ಹೂಡುವಿಕೆ : ಖಂಡೇರಾಯನೊಡನೆ ಪುನಃ ದ್ವಂದ್ವಪ್ರಯತ್ನ ಮಾಡಬಾರದೆಂದು . . . ತನ್ನ ಅಧಿಕಾರವನ್ನು ಭದ್ರಗೊಳಿಸಿಕೊಂಡನು (ಒಡಕ. ೯೪). [ ದ್ವಂದ್ವ + ಪ್ರಯತ್ನ ]

**ದ್ವಂದ್ವಪ್ರಾಸ** (ನಾ). [ಛಂದ] ಪದ್ಯದ ಪ್ರತಿಸಾಲಿನ ಮೊದಲನೆಯ ಮತ್ತು ಮೂರನೆಯ ಸ್ವರಗಳ ನಡುವೆ ಒಂದೇ ಬಗೆಯ ವ್ಯಂಜನ ಅಥವಾ ವ್ಯಂಜನಗುಚ್ಛ ಎರಡು ಸಾರಿ ಆವೃತ್ತಿಗೊಳ್ಳತಕ್ಕುದು (?) : ದ್ವಿಪ್ರಾಸಂ ಸುಭಗ ದ್ವಂದ್ವಪ್ರಾಸಂ ಕಾವ್ಯರಚನೆಘಟಿ(ಗುಚಿ) ತಮ (ಮೆ) [ನಿ]ಪ್ಪಾ ತ್ರಿಪ್ರಾಸಂ [ಸಲೆಯುಂತಾ] [ದಿಪ್ರಾಸಂ] ಬೇಱಿ ನಾಲ್ಕು ತೆಱ ನಾಗಿರ್ಕುಂ (ಕವಿರಾ. ೩-೨೩೧) ; ಉದಾ :–ಒಂದೊಂದಱ ಸೌಂದರ್ಯ ಮನೊಂದೊಂದಿಕ್ಷಿಸಲೊಡರ್ಚೆ ನಾಸಿಕಮಡ್ಡಂ ಬಂದಂದಮನೀಕ್ಷಿಸಿ ಪೆಱನಿಂ[ದಂ] ದೀಕ್ಷಿಸು [ವು]ವವಳ ನಿಡಿಯೆಸಟ್ಟಿಣ್ಗಳ್ (ಕವಿರಾ. ೩-೨೩೩) ; ದ್ವಿಪ್ರಾಸಂ ಸುಭಗಂ ದ್ವಂದ್ವಪ್ರಾಸಂ ಕಾವ್ಯರಚನೆಗುಚಿತಮೆನಿಪ್ಪ ತ್ರಿಪ್ರಾಸಂ ಸಲೆಯುಂತಾದಿಪ್ರಾಸಂ ಬೇಱಿ ನಾಲ್ಕುತೆಱನಾಗಿರ್ಕುಂ (ಛಂದೋಂಬು. ೧-೧೯). [ ದ್ವಂದ್ವ + ಪ್ರಾಸ ]

**ದ್ವಂದ್ವಮೇಹ** (ನಾ). ಒಂದು ವಿಧವಾದ ಮೇಹರೋಗ : ವಿಷ್ಣುಕ್ರಾಂತಿ ಪರ್ಣವಂ ತಂದು ಕರದಿಂ ಮರ್ದಿಸಿ ಬಂದ ನೊರೆ ಕೂಡೆ ಒಂದು ಪಾವು ರಾಯಪುರಿಯ ಸಕ್ಕರೆಯಿಂದ ಕಲ್ಕ ಮಾಡಿ ಕೂಡೆ ಮೂರು ದಿನ ಕೊಳ್ಳಲು ದ್ವಂದ್ವಮೇಹ ನಾಶ (ವಿವೈವಿ. ೧೨೨). [ ದ್ವಂದ್ವ + ಮೇಹ ]

**ದ್ವಂದ್ವಯುದ್ಧ** (ನಾ). ಇಬ್ಬರುಂ ಮಾಡುವ ಕಾಳಗ ; ಕುಸ್ತಿ ; ಮಲ್ಲ ಯುದ್ಧ : ಅಂತಿರ್ವರುಂ ದ್ವಂದ್ವಯುದ್ಧದೊಳ್ ತಟ್ಟಿ ಕಾದೆ (ಶಾಂತಿಪು. ೪-೪೪ ವ) ; ದ್ವಂದ್ವಯುದ್ಧಕ್ಕೆ ಧರ್ಮನಂದನಾದಿಗಳ ಮೊಗಮಂ ನೋಡಿ (ಗದಾಯು. ೭-೬೧ ವ) : ಕೊಂದು ವಜ್ರಹನುವಂ ದ್ವಂದ್ವಯುದ್ಧದೊಳ್ ದ್ವಿವಿದಂ ತಾನಂಮೇರ್ವಡೆದುರುಳಿದನ್ (ಶ್ರೀರಾಮಾ. ೬೩೧-೬೦).
[ ದ್ವಂದ್ವ + ಯುದ್ಧ ]

**ದ್ವಂದ್ವಯೋಗ** (ನಾ). [ಕಾಮಶಾ] ಎರಡುಂ ಉಗುರುಗಳಿಂದಾದ ಗಾಯದ ಗುರುತು : ಎರಡುಗುರ್ಗಳಿಂ ಕದಪಧರಮುರೋಜಂಗಳಂ ಕರವೊತ್ತಲಂತದೇ ದ್ವಂದ್ವಯೋಗ (ಜನವ. ೭-೩೮) ; ಪಂಚನಖಯೋಗ, ದ್ವಂದ್ವಯೋಗ, ಅರ್ಧಚಂದ್ರಕ, ಮಂಡಲ, ಮಯೂರಪಥ, ಶತಪ್ಲುತ, ಉತ್ಪಲಪೆಂಬ ಸಪ್ತವಿಧ ನಖೋಪಕ್ಷತವಿಹಿತರಿಂ (ವಿವೇಕ. ೨೩೦). 'ನಖಕ್ಷತ' ಪರಾ. [ ಸಂ. ]

**ದ್ವಂದ್ವರೋಗ** (ನಾ). ವಾತ ಮತ್ತು ಪಿತ್ತ ಈ ಎರಡರ ದೋಷದಿಂದಾದ ಕಾಯಿಲೆ : ಬಹಳ ಶ್ಲೇಷ್ಮರೋಗಗಳಲ್ಲಿ . . . ಕೋಳಿಗಳ ಹಾಗೂ ನಾಡಿ ನಡೆವುದು. ವಾತ ಪಿತ್ತವೆರಡೂ ಕೂಡಿದ ದ್ವಂದ್ವರೋಗದಲ್ಲಿ ಅಡಿಗಡಿಗೆ ಹಾವಿನ ಹಾಗೆ ನಡೆಯುತ್ತ ಮತ್ತು ತಟತಟನೆ ಹಾರಾಡುತ್ತಲಿಹುದು (ಸಕವೈ. ೧೨). [ದ್ವಂದ್ವ + ರೋಗ ]

**ದ್ವಂದ್ವವಿರಹಿತ** (ನಾ). ಜೀವಾತ್ಮನ ಮತ್ತು ಪರಮಾತ್ಮನ ಐಕ್ಯವನ್ನು ಕಂಡವನು ; ಯೋಗಿ ; ಯತಿ : ಇಂದ್ರಿಯಮನೊಡೆತುಳಿದು ಕರ್ಮದ ಬಂದಿಯನು ತಲೆಬಳಚಿ . . . ದ್ವಂದ್ವವಿರಹಿತನಾಗಿ ವಿಶ್ವದಲೊಂದಿ ಮೆಟ್ಟಿಯುಲು ಬಲ್ಲವನು ಗುರುವೆಂದೆನಿಸುವನು (ಕುಮ್ಯಾಉ. ೩-೮೩).
[ ದ್ವಂದ್ವ + ವಿರಹಿತ ]

**ದ್ವಂದ್ವಸಮಾಸ** (ನಾ). [ವ್ಯಾಕ] "ಎರಡು ಅಥವಾ ಅನೇಕ ಪದಗಳು ಅರ್ಥದಲ್ಲಿ ಮುಖ್ಯ ಅಮುಖ್ಯ ಎಂಬ ಭೇದವಿಲ್ಲದಂತೆ ಜೊತೆಗೂಡಿ ಸಮಾಸವಾದರೆ ದ್ವಂದ್ವಸಮಾಸವೆಂದು ಹೆಸರು" (ಮಧ್ಯಮ. ೧೪೬) : ದ್ವಂದ್ವಸಮಾಸಕ್ಕೆ–ರಾಮರಾವಣೌ . . . ಸುಖದುಃಖ (ಶಬ್ದಾದ. ೪೬).
[ ದ್ವಂದ್ವ + ಸಮಾಸ ]

**ದ್ವಂದ್ವಾಗಮ** (ನಾ). ಶಾಂತಾಗಮದ ಏಳು ಭೇದಗಳಲ್ಲಿ ಒಂದು: ಲಿಂಗಾಧ್ಯಕ್ಷ ಸುರಾಧ್ಯಕ್ಷ ಶಂಕರತಂತ್ರ ಮಹೇಶ್ವರಾಗಮ ಅಸಂಖ್ಯತಂತ್ರ ಅನಿಲಾಗಮ ದ್ವಂದ್ವಾಗಮವೆಂದು ಶಾಂತಾಗಮದೇಳು ಭೇದಂಗಳು (ವಿವೇಕ. ೭೧). [ ದ್ವಂದ್ವ + ಆಗಮ ]

**ದ್ವಂದ್ವಾರ್ಥ** (ನಾ). ಶ್ಲೇಷಾರ್ಥ ; ಎರಡು ವಿಧವಾದ ಅರ್ಥ ; ಬೇರೆ ಬೇರೆ ರೀತಿಯ ಅರ್ಥ : ಅರ್ಥವಾಯಿತು ತಾನೆ, ದ್ವಂದ್ವಾರ್ಥ ? (ಚಂದ್ರಸ. ೪೪-೩). [ ದ್ವಂದ್ವ + ಅರ್ಥ ]

**ದ್ವಂದ್ವಾರ್ಥತೆ** (ನಾ). ಎರಡು ಅರ್ಥಗಳನ್ನು ಹೊಂದಿರುವಿಕೆ : ಭಿನ್ನವಾದ ಎರಡು ಅರ್ಥಗಳನ್ನು ಪಡೆದಿರುವಿಕೆ : ದ್ವಂದ್ವಾರ್ಥತೆ, ಸಂದಿಗ್ಧತೆ ; ಅನಿಶ್ಚಯಾರ್ಥ (Ambiguity. ಇಂಕನಿ).
[ ಸಂ. ದ್ವಂದ್ವಾರ್ಥತಾ ]

**ದ್ವತೊಗೆಯನೂರ್** (ನಾ). ಒಂದು ಊರಿನ ಹೆಸರು : ಕೊದಮೂಕುನಾಮ ಗ್ರಾಮಂ ಕುಂಬ(ಭ)ಸ(ಶ)ರ್ಮ್ಮಭಟ್ಟಃ ದ್ವತೊಗೆಯನೂರ್ನ್ನಾಮಗ್ರಾಮಂ ಕಾಶ್ಯಪಗೋತ್ರುಃ (ಇಅ. XVIII, ೩೬೭-೧೫ ; 8ನೆಯ ಶತ).
[ ? + ಊರ್ ]

**ದ್ವಯ** (ನಾ). ಜೊತೆ ; ಜೋಡಿ ; ಮಿಥುನ ; ಯುಗಳ : "ಯುಗ್ಮಂ, ಯುಗಂ . . . ದ್ವಯಂ, ಯಮಂ, ಯಮಳಂ – ಈ ೮ ಅಮಳ್" (ಹಲಾಯು. ೧೧೬-೧೫) ; ಮೃಷ್ಟಾನ್ನವ ನೆನೆದರೆ ಹೊಟ್ಟೆ ತುಂಬುವುದೇ . . . ನೆನೆದಡಾಗದು ನಿರ್ಧರಿಸಿ ದ್ವಯಕುಳವಳಿದು ಬೆರೆಯಬಲ್ಲಡೆ ಸದ್ಗುರು ಸಿದ್ಧಸೋಮೇಶ್ವರಲಿಂಗವು ತಾನೇ (ಸರ್ವವ. ೧೮೨-೮೩೫) ; ಬೆಳೆಯೆಂಬ ಧಾತು ಸಸ್ಯಾವಳಿಯೊಳ್ ಬಳೆಯೆಂಬ ಧಾತು ಮಿಕ್ಕೆಡೆಯೊಳ್ ಸಂಗಳಿಕುಂ ತಿಳಿಯಲ್ಬರ್ಪುದು ಬೆಳೆ ಬಳವಿಗಳೆಂಬ ಭಾವವಚನದ್ವಯದೊಳ್ (ಶಮದ. ೨೧೮) : ಬಿಜಯಂಗೆಯ್ದ ಮಂಗಳದ್ವಯಗಳಂ ಮುದ್ದಿಸಿದರುಪಚರಿಸಿದರ್ ದಶರಥಕುಮಾರರಂ (ಶ್ರೀರಾಮಾ. ೩೫-೧೮೬). [ ಸಂ. ]

**ದ್ವಯಭಾವ** (ನಾ). ಬೇರೆ ಬೇರೆ ಎಂಬ ಭಾವ ; ದ್ವೈತ : ದ್ವಯಭಾವಂ ನಮಗಿಲ್ಲ ಬಲ್ಲವರೆ ನಾನುಂ ನೀನುಮಿಾ ಮಾತ ನಿಶ್ಚಯಂ (ಜಗವಿ. ೧೮-೬೬). [ ದ್ವಯ + ಭಾವ$_{2}$ ]

**ದ್ವಯಂಪಿಡಿ** (ಕ್ರಿ). ದ್ವೈತಭಾವವನ್ನು ಹೊಂದು : ದ್ವಯುಪಿಡಿದುದಕ್ಕೆ ಎರಡಿಲ್ಲದೆ ಮಿಾಱಲಿಲ್ಲವಾಗಿ ಜಗವನಱುವುದಕ್ಕೆ ದಿವ ರಾತ್ರಿಯಿಲ್ಲಡೆ ಮಿಾಱ ತೋಱಲಿಲ್ಲವಾಗಿ ಸಂಸಾರವ ಹಱುವುದಕ್ಕೆ ನಿಃಕಳಂಕಮಲ್ಲಿಕಾರ್ಜುನನಲ್ಲದಿಲ್ಲವಾಗಿ (ಮೋಳಿಮಾ. ೦-೧). [ ದ್ವಯ + ಪಿಡಿ$_{1}$ ]

**ದ್ವಯಾತಿಗ** (ನಾ). ೧. ರಜೋಗುಣ ಹಾಗು ತಮೋಗುಣಗಳೆರಡನ್ನೂ ಮಿಾರಿದವನು ; ಸತ್ತ್ವಗುಣವುಳ್ಳವನು ; ಸಾತ್ವಿಕ : "ವಿರಜಸ್ತಮಾಃ, ದ್ವಯಾತಿಗಃ – ೨ ರಜೋಗುಣವನ್ನೂ ತಮೋಗುಣವನ್ನೂ ಬಿಟ್ಟ ಸಾತ್ವಿಕನ ಹೆಸರು" (ಸಿದ್ಧಾಂತಿ. ೨೨೮). ೨. ಸುಖ, ದುಃಖ ಮೊದಲಾದ ದ್ವಂದ್ವಗಳನ್ನು ಬಿಟ್ಟವನು ; ನಿರ್ಲಿಪ್ತ ; ವಿರಕ್ತ. [ ಸಂ. ]

**ದ್ವಾಃಸ್ಥ** (ನಾ). ≡ ದ್ವಾಸ್ಥ : ವಂದಿಪ ನುತಿಪ ದ್ವಾಃಸ್ಥರುಂ ಮನ್ನಿಸುತ . . . ಮೌನದಿಂ ದಿಟ್ಟಿಸಿದನು (ಪಂಕಾರಾ. ೨-೮-೧). [ ಸಂ. ]

**ದ್ವಾಃಸ್ಥಿತ** (ನಾ). ಬಾಗಿಲು ಕಾಯುವವನು ; ದ್ವಾರಪಾಲಕ. [ ಸಂ. ]

**ದ್ವಾತ್ರಿಂಶತಿ** (ನಾ). = ದ್ವಾತ್ರಿಂಶತ್ತು. 'ದ್ವಾತ್ರಿಂಶತಿದೋಷ' ಪರಾ.
[ ಸಂ. ]

**ದ್ವಾತ್ರಿಂಶತಿದೋಷ** (ನಾ). [ಜೈನ] ಸಾಮಾಯಿಕಕ್ಕೆ ಅಡ್ಡಿಯಾದ ಮೂವತ್ತೆರಡು ಬಗೆಯ ದೋಷಗಳು ; P ವ್ರತಾಚರಣೆಯನ್ನು– ೧. ಆಯಾಸಪಡುತ್ತ ಪ್ರೀತಿಯಿಲ್ಲದೆ ಮಾಡುವುದು. ೨. ಬೇಸರದಿಂದ ಮಾಡುವುದು. ೩. ಯಾರಿಗೂ ಕಾಣದಂತೆ ಒಳಹೊಕ್ಕು ಮಾಡುವುದು. ೪. ಬೇರೆಯವರನ್ನು ಗದರಿಸುತ್ತ ತಾನು ಒಲೆದಾಡುತ್ತ ಮಾಡುವುದು. ೫. ಮುಖವನ್ನು ಮೇಲಕ್ಕೆತ್ತಿ ಮಾಡುವುದು. ೬. ತೆವಳಿ, ತೆವಳಿ ನಿಧಾನವಾಗಿ ಮಾಡುವುದು. ೭. ಮಿಾನಿನಂತೆ ಹೊಳೆಯುತ್ತ ಆಡಂಬರದಿಂದ ಮಾಡುವುದು. ೮. ಇನ್ನೊಬ್ಬರ ಮೇಲೆ ಬಹಳ ಕೋಪಿಸಿಕೊಂಡು ಮಾಡುವುದು. ೯. ಕೈಯನ್ನು ಕಟ್ಟಿಕೊಂಡು ಅನಾಸಕ್ತಿಯಿಂದ ಮಾಡುವುದು. ೧೦. ಇನ್ನೊಬ್ಬರಿಗೆ ಹೆದರಿ ಮಾಡುವುದು. ೧೧. ಇನ್ನೊಬ್ಬರಿಂದ ಹೆದರಿಸಲ್ಪಟ್ಟು ಮಾಡುವುದು. ೧೨. ಅತಿಶ್ರದ್ಧೆಯಿಂದ ಕೂಡಿ ಮಾಡುವುದು. ೧೩. ಇತರರು ತಿಳಿಯದಂತೆ ಕದ್ದು ಮಾಡುವುದು. ೧೪. ಇತರರಿಗೆ ಅಡ್ಡಿತಂದು ತಾನು ಗರ್ವದಿಂದ ಮಾಡುವುದು. ೧೫. ಜಗಳವಾಡಿ, ಆ ಅಸಮಾಧಾನ ಪರಿಹಾರ ಮಾಡದೆ ಮಾಡುವುದು. ೧೬. ಗಟ್ಟಿಯಾಗಿ ಪಠನ ಮಾಡುತ್ತ ಮಾಡುವುದು. ೧೭. ಮಾಡಲಾಗದ ವಿಚಾರಗಳನ್ನು ಕುರಿತು ಮಾತನಾಡುತ್ತ ಮಾಡುವುದು. ೧೮. ಇತರರನ್ನು ಅವಹೇಳನ ಮಾಡುತ್ತ ಮಾಡುವುದು. ೧೯. ಹಣೆಯಲ್ಲಿ ಮೂರು ರೇಖೆಯುಂಟಾಗುವಷ್ಟು ಕೋಪದಿಂದ ಮಾಡುವುದು. ೨೦. ಅವಯವಗಳನ್ನು ಮುದುರಿಕೊಂಡು ಮಾಡುವುದು. ೨೧. ವಿಶ್ವಾಸವಿಲ್ಲದ ಗುರುಗಳನ್ನು ಕಂಡು ಮಾಡುವುದು. ೨೨. ಅಣೆಯಿಲ್ಲದೆ ಮಾಡುವುದು. ೨೩. ಗುರುಗಳಿಗೆ ಕಾಣಗೊಡದಂತೆ ಮಾಡುವುದು. ೨೪. ಶ್ರಮಣರು ಬಂದರಲ್ಲಾ ಈ ಬಿಟ್ಟಿಯ ಕೆಲಸ ಹೇಗಾದರೂ ಮುಗಿಯಲೆಂದು ವಿವಿಧ ಉಪಕರಣ

ಗಳನ್ನು ಕೂಡಿಸಿ ಮಾಡುವುದು. ೨೫. ಉಪಕರಣಗಳು ಇಲ್ಲದೆಯೇ ಮಾಡುವುದು. ೨೬, ೨೭, ೨೮. ತ್ರಿಸಂಧ್ಯೆಯಲ್ಲಿ ಮಾಡುವುದನ್ನು ಮೂರು ಘಳಿಗೆ ಮುಂಚೆ ಅಥವಾ ತಡಮಾಡಿ ಮಾಡುವುದು. ೨೯. ಮಂತ್ರಾದಿಗಳನ್ನು ಉಚ್ಚರಿಸದೆ ಮೌನವಾಗಿ ಮಾಡುವುದು. ೩೦. ಸನ್ನೆಗಳನ್ನು ತೋರುತ್ತ ಮಾಡುವುದು. ೩೧. ಬಹಳ ಕರ್ಕಶ ಧ್ವನಿಯಿಂದ ಮಂತ್ರಾದಿಗಳನ್ನು ಹೇಳಿ ಮಾಡುವುದು. ೩೨. ಮಂತ್ರಾದಿಗಳನ್ನು ಹಾಡುತ್ತ ಮಾಡುವುದು : ಪ್ರತಿದಿನ ಸಾಮಾಯಿಕವ ನಿರಾಲಸ್ಯಯುತನಾಗಿ ಮಾಳ್ಪುದರ್ಕಿಯೊಳು ಸತತ ದ್ವಾತ್ರಿಂಶತಿ ದೋಷವ ತೊಲಗಿಸಿ ಅತಿವಿಶೋಧಿ ಸಹಿತಾಗಿ (ದ್ವಾದಶಾ. ೧೧-೭೧೪). 'ದೋಷ' ನೋಡಿ. [ ದ್ವಾತ್ರಿಂಶತಿ + ದೋಷ ]

**ದ್ವಾತ್ರಿಂಶತ್ತು** (ನಾ). ಒಂದು ಸಂಖ್ಯೆ ; ಮೂವತ್ತೆರಡು : ಅಭಿನವೋದ್ವೃತ್ತ ಧೌತ ಶಂಖಶಶಾಂಕವಿಶದ ಜಲಾರ್ದ್ರಜಲ ಕುಸುಮಂಗಳಿಂ ಸಾರ್ವಭೌಮೋಚಿತ ದ್ವಾತ್ರಿಂಶಚ್ಚಾರುಚಾಮರಂಗಳಂ ಮಾಡಿ ಪಿಡಿಸಿಯುಂ (ಆದಿಪು. ೮-೪೧ ವ). [ ಸಂ. ದ್ವಾತ್ರಿಂಶತ್ ]

**ದ್ವಾತ್ರಿಂಶತ್ತ್ರಿದಶಪತಿ** (ನಾ). [ಜೈನ] ಮೂವತ್ತೆರಡು ಮಂದಿ ವ್ಯಂತರೇಂದ್ರರು; ಈ ಇವರಲ್ಲಿ ಕಿನ್ನರರ ಗುಂಪಿನಲ್ಲಿ ಇಬ್ಬರು ಇಂದ್ರರಿದ್ದಾರೆ : ೧. ಕಿನ್ನರ. ೨. ಕಿಂಪುರುಷ. ಕಿಂಪುರುಷರ ಗುಂಪಿನಲ್ಲಿ ಇಬ್ಬರು ಇಂದ್ರರಿದ್ದಾರೆ: ೧. ಸತ್ಪುರುಷ. ೨. ಮಹಾಪುರುಷ. ಮಹೋರಗರ ಗುಂಪಿನಲ್ಲಿ ಇಬ್ಬರು ಇಂದ್ರರಿದ್ದಾರೆ. ೧. ಅತಿಕಾಯ. ೨. ಮಹಾಕಾಯ. ಗಂಧರ್ವರ ಗುಂಪಿನಲ್ಲಿ ಇಬ್ಬರು ಇಂದ್ರರಿದ್ದಾರೆ: ೧. ಗೀತರತಿ. ೨. ಗೀತಯಶ. ಯಕ್ಷರ ಗುಂಪಿನಲ್ಲಿ ಇಬ್ಬರು ಇಂದ್ರರಿದ್ದಾರೆ : ೧. ಪೂರ್ಣಭದ್ರ. ೨. ಮಣಿಭದ್ರ. ರಾಕ್ಷಸರ ಗುಂಪಿನಲ್ಲಿ ಇಬ್ಬರು ಇಂದ್ರರಿದ್ದಾರೆ : ೧. ಭೀಮ. ೨. ಮಹಾಭೀಮ. ಪಿಶಾಚಿಗಳ ಗುಂಪಿನಲ್ಲಿ ಇಬ್ಬರು ಇಂದ್ರರಿದ್ದಾರೆ : ೧. ಕಾಳ. ೨. ಮಹಾಕಾಳ. ಭೂತಗಳ ಗುಂಪಿನಲ್ಲಿ ಇಬ್ಬರು ಇಂದ್ರರಿದ್ದಾರೆ : ೧. ಸುರೂಪ. ೨. ಪ್ರತಿರೂಪ. ಇವರಲ್ಲಿ ದಕ್ಷಿಣೋತ್ತರ ಭೇದದಿಂದ ದ್ವಿಗುಣಿತವಾಗಿ ಒಟ್ಟು ಮೂವತ್ತೆರಡು ಮಂದಿ ವ್ಯಂತರೇಂದ್ರರಾಗುತ್ತಾರೆ. ಮತ್ತು ಒಟ್ಟು ಇಂದ್ರರ ಸಂಖ್ಯೆ ನೂರು. ಹೇಗೆಂದರೆ–ಭವನವಾಸಿಗಳು ೪೦, ವ್ಯಂತರೇಂದ್ರರು ೩೨, ಕಲ್ಪವಾಸಿಗಳು ೨೪, ಸೂರ್ಯ ಮತ್ತು ಚಂದ್ರರು ೨, ಚಕ್ರವರ್ತಿ ೧, ಸಿಂಹ ೧ : ಚಿತ್ರಾತಪತ್ರದಿಂ ಶತಪತ್ರವನಸ್ಥಳಿಯನಿಟ್ಟಿಸೆ ಗಗನಂ ದೆಸೆಯಂ ಚಿತ್ರಿಸೆ ಕಿರೀಟಕಿರಣಂ ದ್ವಾತ್ರಿಂಶತ್ತ್ರಿದಶಪತಿಗಳಂದೇಟ್ಟಂದರ್ (ಮಲ್ಲಿಪು. ೧೪-೨೬೪). [ ಸಂ. ]

**ದ್ವಾತ್ರಿಂಶದಿಂದ್ರ** (ನಾ). = ದ್ವಾತ್ರಿಂಶತ್ತ್ರಿದಶಪತಿ : ಕೈಲಾಸಶೈಲವಿಶಾಲಸ್ಫಟಿಕಸ್ಥಲೀನಿಕಟಮುಂ ದ್ವಾತ್ರಿಂಶದಿಂದ್ರರ್ಕಳುತ್ಸವದಿಂದರ್ಚಿಸುವಾಗಳೇಂ ಕಟಿದುದೋ ಕರ್ಣಾಮೃತಾಸಾರಮಂ . . . ಸುರಸತೀಮಂಜೀರಿಕಾ ಶಿಂಜಿತಂ (ಶಂರಾಮಾ. ೧೭-೯೬). [ ಸಂ. ]

**ದ್ವಾತ್ರಿಂಶದುಪಚಾರ** (ನಾ). [ವೀಶೈ] ಮೂವತ್ತೆರಡು ಬಗೆಯ ಸೇವೆ: ಬಳಿಕ ಪರಮಪವಿತ್ರದ್ರವ್ಯಂಗಳಿಂ ಮಾಳ್ಪ ಉಪಚಾರಂಗಳೊಳಗೆ ತ್ರಿವಿಧೋಪಚಾರ . . . ದ್ವಾತ್ರಿಂಶದುಪಚಾರ [೩೨] ಉಂಟವರಲ್ಲಿ ಆವಾಹನ ಆಸನ ಪಾದ್ಯ ಅರ್ಘ್ಯ ಆಚಮನೀಯ ಸ್ನಾನ ವಸ್ತ್ರ ಯಜ್ಞಸೂತ್ರ ಭೂಷಣ ಗಂಧ ಅಕ್ಷತೆ ಪುಷ್ಪ ಧೂಪ ದೀಪ ನೈವೇದ್ಯ ಮುಖವಾಸನ ನೀರಾಜನ ದರ್ಪಣ ಫಲಾರ್ಪಣ ತಾಂಬೂಲ ಪ್ರದಕ್ಷಿಣ ನಮಸ್ಕಾರ ಸ್ತೋತ್ರ ಪುರಾಣಪಠಣ ಛತ್ರ ಚಾಮರ ವ್ಯಜನ ಶಯ್ಯೆ ಸಂಗೀತ ನೃತ್ಯ ವಾದ್ಯ ಆತ್ಮಾರೋಪಣಮೆಂಬ ದ್ವಾತ್ರಿಂಶದುಪಚಾರಂಗಳಂ ಸಮಂತ್ರಕಮಾಗಿ ಮಾಡಿ (ವಿವೇಕ. ೧೭೮). [ ಸಂ. ]

**ದ್ವಾತ್ರಿಂಶದೇಕಕಲ್ಯಾಣ** (ನಾ). [ಜೈನ]ಒಂದು ವ್ರತ: ಧರ್ಮಮಂ ಕೇಳ್ದು ಸಂಸಾರಶರೀರಭೋಗನಿರ್ವೇಗಮಂ ಬೋಧಿಸೆ ಸಮ್ಯಗ್ದರ್ಶನಸಮೇತಂ ಸಕಳಶ್ರಾವಕವ್ರತಂಗಳಂ ಕೆಯ್ಕೊಂಡು ಮನೆಗೆ ವಂದು ದ್ವಾತ್ರಿಂಶದೇಕಕಲ್ಯಾಣಂಗಳಂ ನೋನುತಿರ್ಪನ್ನೆಗಂ (ಶಾಂತಿಪು. ೯-೮೩ ವ). [ ಸಂ. ]

**ದ್ವಾದಶ** (ಗು). ೧. ಹನ್ನೆರಡನೆಯ : ದ್ವಾದಶಭಾಗವೊಂದು ಗೃಹಕಕ್ಕುಂ (ಜಾತತಿ. ೧-೨೭) ; ದ್ವಾದಶದಿನಕ್ಕೆ ನಾಮಕರಣೋತ್ಸವಮಂ ಮಾಡಲೆಂದು ಗಾರ್ಗ್ಯನೆಂಬ ಪುರೋಹಿತಂ ತಿರೋಹಿತವೇಷನಾಗಿ ಬಂದು (ಜಗವಿ. ೩-೨೬ ವ). (ನಾ). ೨. ಒಂದು ಸಂಖ್ಯೆ; ಹನ್ನೆರಡು: ದ್ವಾದಶಯೋಜನಸಂಸರ್ಪನ್ನಿನಾದಂಗಳಪ್ಪ ನಂದಿಗಳೆಂಬ ಪನ್ನೆರಡುಂ ಮಹಾಭೇರಿಗಳುಂ (ಆದಿಪು. ೧೫-೩ ವ) ; ಗಗನತಲದೊಳು ದ್ವಾದಶಯೋಜನಸಮವೃತ್ತ ಸಂಸ್ಥಾನಮುಂ (ಅಜಿಪು. ೭-೩೦ ವ). [ ಸಂ. ]

**ದ್ವಾದಶಕೂಟ** (ನಾ). [ಜ್ಯೋತಿ] ಕನ್ಯೆಗೂ ವರನಿಗೂ ವಿವಾಹವು ಕೂಡಿಬರುವುದೆ ಹೇಗೆ ಎಂದು ನೋಡುವ ಹನ್ನೆರಡು ಕೂಟಗಳು ; ಈ ೧. ದಿನ, ೨. ಗಣ, ೩. ಮಾಹೇಂದ್ರ, ೪. ಸ್ತ್ರೀದೀರ್ಘ, ೫. ಯೋನಿ, ೬. ರಾಶಿ, ೭. ಗ್ರಹಮೈತ್ರ, ೮. ವಶ್ಯ, ೯. ರಜ್ಜು, ೧೦. ವೇಧಾ, ೧೧. ವರ್ಣ, ೧೨. ನಾಡೀ. ಇವುಗಳಲ್ಲಿ ದಿನಕೂಟಕ್ಕೆ ಮೂರು, ಗಣಕೂಟಕ್ಕೆ ಆರು, ಯೋನಿಕೂಟಕ್ಕೆ ನಾಲ್ಕು, ರಾಶಿಕೂಟಕ್ಕೆ ಏಳು, ಗ್ರಹಮೈತ್ರಕ್ಕೆ ಐದು, ವಶ್ಯಕೂಟಕ್ಕೆ ಎರಡು, ವರ್ಣಕೂಟಕ್ಕೆ ಒಂದು, ನಾಡೀಕೂಟಕ್ಕೆ ಎಂಟು ಹೀಗೆ ದ್ವಾದಶಕೂಟಗಳಿಂದ ಮೂವತ್ತಾರು ಗುಣಗಳಿವೆ. ಅದರಲ್ಲಿ ಹದಿನೆಂಟು ಕೂಡಿಬಂದರೆ ಮದುವೆ ಮಾಡಬಹುದೆಂದು ತೀರ್ಮಾನಿಸುತ್ತಾರೆ. ಅಲ್ಲದೆ ಗಣಕೂಟ, ಯೋನಿಕೂಟ, ರಾಶಿಕೂಟ, ಗ್ರಹಮೈತ್ರಕೂಟ, ನಾಡೀಕೂಟವೆಂಬ ಐದು ಕೂಟಗಳಿಗೆ ವಿಶೇಷವಾಗಿ ಗಮನಕೊಡುತ್ತಾರೆ. [ ದ್ವಾದಶ + ಕೂಟ ]

**ದ್ವಾದಶಗಂಧರ್ವ** (ನಾ). ತುಂಬುರು, ನಾರದ, ಹಾಹಾ, ಹೂಹೂ, ವಿಶ್ವಾವಸು, ಉಗ್ರಸೇನ (ಅಗ್ರಸೇನ), ವಸುರುಚಿ (ಸುರುಚಿ), ಪರಾವಸು (ಸರ್ವಾವಸು), ಚಿತ್ರಸೇನ, ಊರ್ಣಾಯು (ಊರ್ಣಾಹ), ಧೃತರಾಷ್ಟ್ರ ಮತ್ತು ಸೂರ್ಯವರ್ಮರೆಂಬ ಹನ್ನೆರಡು ಮಂದಿ ಗಂಧರ್ವರು: ತುಂಬುರ ನಾರದ . . . ಸೂರ್ಯವರ್ಚ[ ರ್ಮ ]ರೆಂಬ ದ್ವಾದಶಗಂಧರ್ವರೇ ಪರಿಪಾಟಿಯಿಂ ಪಾಡುವರು (ವಿವೇಕ. ೨೬೬). [ ದ್ವಾದಶ + ಗಂಧರ್ವ ]

**ದ್ವಾದಶಗಣ** (ನಾ). [ಜೈನ] ಸಮವಸರಣಸಭೆಯಲ್ಲಿ ಸೇರುವ ಹನ್ನೆರಡು ಬಗೆಯ ವರ್ಗಗಳು ; ಈ ೧. ಮುನಿ, ೨. ಕಲ್ಪಜಸ್ತ್ರೀ, ೩. ಆರ್ಯಕೀರ, ೪. ಜ್ಯೋತಿಷ್ಕಸ್ತ್ರೀ, ೫. ವ್ಯಂತರಸ್ತ್ರೀ, ೬. ನಾಗಸ್ತ್ರೀ, ೭. ನಾಗದೇವತೆ, ೮. ವ್ಯಂತರ ದೇವತೆ, ೯. ಜ್ಯೋತಿಷ್ಕ ದೇವತೆ, ೧೦. ಕಲ್ಪವಾಸಿ, ೧೧. ಮನುಷ್ಯ, ೧೨. ತಿರ್ಯಕ್ ಪ್ರಾಣಿ: ದ್ವಾದಶಗಣ ಸರಸ್ಸರೋಜವಿದಳನಶೋಭಾಪ್ರಭಾವಪ್ರಸವಪಾರೀಣದಿವ್ಯವಚನಮರೀಚಿಮಾಲಿರೋಚಿರ್ನಿಚಯತ್ರಿಜಗಚ್ಚೂಡಾಮಣಿಯಂ ಕರಣತ್ರಯಶುದ್ಧಿಯಿಂದೆಱಗಿ (ಶಾಂತಿಪು. ೯-೬೯) ; ಗಣಧರಾಧೀಶ್ವರವರ್ಗಮುಂ . . . ನರನಿಕುರುಂಬಮುಂ ತಿರ್ಯಕ್ತತಿಯುಮೆಂಬೀ ದ್ವಾದಶಗಣಂಗಳುಮಂ ಇಂತನುಕ್ರಮದೊಳಿರ್ದ ಸಮವಸರಣಭೂಮಂಡಲದೊಳು (ಜಾಪುಂಪು. ೪೭) : ಮುನಿ ಕಲ್ಪಜಸ್ತ್ರೀಯರು . . . ನರ ತಿರ್ಯಂಚರುಗಳೆಂಬ ದ್ವಾದಶಗಣ ಕರವ ಮುಗಿದು ಬಳಸಿರಲು (ದ್ವಾದಶಾ. ೧೧-೪೭೯) : ಧರ್ಮಶ್ರವಣಮಂ ಕೇಳ್ದ ಪರಿವೃತದ್ವಾದಶಗಣಗಳಿಂ ಪರಮಶೋಭೆಯನಾಂತ ದೇವನ ಚರಣದಿದಿರಲಿ ಹರಹಿದನು ತನುಲತೆಯನವನಿಪತಿ (ಸನತ್ಕು. ೧-೩೭). [ ದ್ವಾದಶ + ಗಣ ]

**ದ್ವಾದಶಗ್ರಾಮಿ** (ನಾ). ದ್ವಾದಶಾದಿತ್ಯರ ಹನ್ನೆರಡು ಮಂದಿ ಸಾರಥಿಗಳ ಗುಂಪಿಗೆ ಸೇರಿದವನು; P ೧. ರಥಭೃತ್, ೨. ರಥಜ, ೩. ರಥಚಿತ್ರ, ೪. ರಥಾಶ್ವ, ೫. ಅರುಣ, ೬. ಸುಷೇಣ, ೭. ಸೇನಜಿತ್, ೮. ತಾರ್ಕ್ಷ್ಯ, ೯. ವೃತ್ರ, ೧೦. ಅರಿಷ್ಟನೇಮಿ, ೧೧. ರುತಜಿತ್, ೧೨. ಸತ್ಯಜಿತ್: ರಥಭೃತ್ ರಥಜ . . . ಸತ್ಯಜಿತ್ತುಗಳೆಂಬ ದ್ವಾದಶಗ್ರಾಮಿಗಳ ಪರಿಕ್ರಮದಿಂ ಸಾರಥಿಗಳು (ವಿವೇಕ. ೨೬೭). [ ಸಂ. ದ್ವಾದಶಗ್ರಾಮಿನ್ ]

**ದ್ವಾದಶಚಕ್ರವರ್ತಿ** (ನಾ). [ಜೈನ] ಅರುವತ್ತುಮೂರು ಮಂದಿ ಶಲಾಕಾಪುರುಷರಲ್ಲಿರುವ ಹನ್ನೆರಡು ಮಂದಿ ಸಾಮ್ರಾಟರು; P ೧. ಭರತ, ೨. ಸಗರ, ೩. ಮಘವಾ, ೪. ಸನತ್ಕುಮಾರ, ೫. ಶಾಂತಿ, ೬. ಕುಂಥು, ೭. ಅರ, ೮. ಸುಭೌಮ, ೯. ಪದ್ಮ (ಮಹಾಪದ್ಮ), ೧೦. ಹರಿಷೇಣ, ೧೧. ಜಯಸೇನ (ವಿಜಯ), ೧೨. ಬ್ರಹ್ಮದತ್ತ: ಅವಸರ್ಪಿಣಿಕಾಲದ (ದೊಳ್) . . . ದ್ವಾದಶಚಕ್ರವರ್ತಿಗಳುಂ ನವಬಲದೇವರುಂ ನವಕೇಶವರುಂ ನವಪ್ರತಿಶತ್ರುಗಳಪ್ಪರೆಂಬುದುಂ (ಚಾವುಂಪು. ೨೯೭). [ ದ್ವಾದಶ + ಚಕ್ರವರ್ತಿ ]

**ದ್ವಾದಶತಪ** (ನಾ). [ಜೈನ] ಸಂವರಕ್ಕೆ ಮಾರ್ಗವಾದ ಹನ್ನೆರಡು ಬಗೆಯ ತಪಸ್ಸು; P ಇದು ಬಹಿರಂಗ ತಪಸ್ಸು ಮತ್ತು ಅಂತರಂಗ ತಪಸ್ಸು ಎಂದು ಎರಡು ವಿಧ. ಅನಶನ (ಉಪವಾಸವನ್ನು ಮಾಡುವುದು), ಅವಮೋದರ್ಯ (ಅಲ್ಪಾಹಾರವನ್ನು ತೆಗೆದುಕೊಳ್ಳುವುದು), ವೃತ್ತಿಪರಿಸಂಖ್ಯಾನ (ಆಹಾರನಿಮಿತ್ತವಾಗಿ ಇಷ್ಟೇ ಮನೆಗಳಿಗೆ ಅಥವಾ ಇಲ್ಲಿಯವರೆಗೇ ಹೋಗುತ್ತೇನೆಂದು ಮುಂತಾಗಿ ನಿಯಮ ಮಾಡಿಕೊಳ್ಳುವುದು), ರಸಪರಿತ್ಯಾಗ (ಹಾಲು, ತುಪ್ಪ ಮೊದಲಾದ ರಸಪದಾರ್ಥಗಳನ್ನು ಬಿಡುವುದು), ವಿವಿಕ್ತಾವಾಸ (ಏಕಾಂತದಲ್ಲಿ ವಾಸಮಾಡುವುದು), ಕಾಯಕ್ಲೇಶ (ಶರೀರವನ್ನು ದಂಡಿಸುವುದು) ಎಂಬುದು ಆರು ಬಗೆಯ ಬಹಿರಂಗತಪಸ್ಸು. ಪ್ರಾಯಶ್ಚಿತ್ತ (ದೋಷಗಳನ್ನು ಶುದ್ಧಿಗೊಳಿಸುವುದು), ವಿನಯ (ಪೂಜ್ಯವಿಷಯಗಳಲ್ಲಿ ಆದರಭಾವ, ನಮ್ರತೆ), ವೈಯಾವೃತ್ಯ (ಸ್ವತಃ ಮತ್ತು ಅನ್ಯದ್ರವ್ಯಗಳ ಸಹಾಯದಿಂದ ಸೇವೆ ಮಾಡುವುದು), ಸ್ವಾಧ್ಯಾಯ (ಜ್ಞಾನಸಂಪಾದನೆಗಾಗಿ ಆಲಸ್ಯವನ್ನು ಬಿಡುವುದು), ವ್ಯುತ್ಸರ್ಗ (ಬಾಹ್ಯಾಭ್ಯಂತರಪರಿಗ್ರಹದಲ್ಲಿ ಮಮತೆಯನ್ನು ಬಿಡುವುದು), ಧ್ಯಾನ (ಚಿತ್ತಚಾಂಚಲ್ಯವನ್ನು ತ್ಯಜಿಸುವುದು) ಎಂಬುದು ಆರು ಬಗೆಯ ಅಂತರಂಗತಪಸ್ಸು: ದ್ವಾದಶತಪಂಗಳುಂ ಕರಮಾದರದಿಂ ಮೂರ್ತಿಗೊಂಡು ನಮ್ಮಯ ಪುರಕತ್ವಾದರದಿಂ ಬಂದುವು ಪುಣ್ಯೋದಯದಿಂದೆನಿಸಿ ನೆಗಳ್ದ ದಿವ್ಯಮುನೀಂದ್ರರ್ (ಧರ್ಮಾಮೃ. ೯-೧೫); ಆ ದ್ವಾದಶತಪಮಂ ತಳೆದಾ ದ್ವಾವಿಂಶತಿ ಪರೀಷಹಂಗಳುಮಂ ಗೆಲ್ದದ್ವೈತಂ ಮುನಿಮುಖ್ಯಂ ಸ್ಯಾದ್ವಾದಮತಾದ್ವಿತೀಯನೆನೆ ಪೆಸರ್ವೆತ್ತಂ (ಚಂದ್ರಪು. ೧೧-೧೬); ದ್ವಾದಶತಪದಧಿದೇವತೆಯಾದ ದಯಾಲಕ್ಷ್ಮಿಯೊದ ಬಟಿಕೆ . . . ಜೀವಂ ಪೋದೊಡಲುಂ ತಾದುದಾ ತಪೋಧನನ ಮನಂ (ವರ್ಧಪು. ೩-೧೯); ಜೈನಮತದಲ್ಲಿ ತ್ರಿಗುಪ್ತಿಗಳು . . . ಪಂಚಚಾರಿತ್ರಗಳು ದ್ವಾದಶತಪಗಳು ಇವುಗಳಿಂದ ಸಂವರವು ಸಾಧಿಸಲ್ಪಡುವುದು (ಜೈನಧ. ೩). [ ದ್ವಾದಶ + ತಪ್ಪ ]

**ದ್ವಾದಶನಾಮ** (ನಾ). ೧. ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷಿಕೇಶ, ಪದ್ಮನಾಭ ಮತ್ತು ದಾಮೋದರನೆಂಬ ವಿಷ್ಣುವಿನ ಪ್ರಸಿದ್ಧವಾದ ಹನ್ನೆರಡು ಹೆಸರುಗಳು. ೨. ದೇಹದ ಮೇಲೆ ಧರಿಸುವ ಹನ್ನೆರಡು ನಾಮಗಳು: ದ್ವಾದಶನಾಮದ ಗಂಧಂ ವೇದಾಧ್ಯಯನಾನುವಾದದಾನನಮೆಸೆಯಲ್ ವೇದಾಧ್ಯ ವಿಪ್ರವೇಷಮನಾಂತುದಂ ಕೈಕೊಂಡು (ಮಹಾನೀ. ೬-೧೭೩); ಸಿರಿ ಊರ್ಧ್ವಪುಂಡ್ರ ದ್ವಾದಶನಾಮವಿಡುವ ರ ಪರಿಚಾರಕರ ಪರಿಚಾರಕನೆನಿಸೆನ್ನ (ಕನಕ. ೦೯೦-೨); ದ್ವಾದಶನಾಮ ತುಲಸಿಮಾಲಾವಳಿಯ ಧಾರಣದಿ ವಿಷ್ಣುಮೂರ್ತಿಯ ಭಜಿಸುವಾ ವಸುಧೆಸುರರು ಕೆಲರುಮಾ ಪಟ್ಟಣಮನಿರದೆ ಪೊಸೆದಾಣ್ಮಕರ್ತುದಾರೆನಲುಸುರ್ವೆ (ನವಮೋ. ೧೦-೧೧). [ ದ್ವಾದಶ + ನಾಮ ]

**ದ್ವಾದಶಭಾವನೆ** (ನಾ). = ದ್ವಾದಶಾನುಪ್ರೇಕ್ಷೆ: ದ್ವಾದಶಭಾವನೆಗಳು . . . ಆ ಹನ್ನೆರಡು ಭಾವನೆಗಳು ಅನಿತ್ಯ ಅಶರಣ . . . ಬೋಧಿ ದುರ್ಲಭ ಮತ್ತು ಧರ್ಮ ಎಂದು ಇವೆ . . . ಈ ಭಾವನೆಗಳು ದ್ವಾದಶಾಂಗವಾಣಿಯ ಕೇವಲಸಾರದಂತಿವೆ . . . ಇವುಗಳಿಗೆ ಅನುಪ್ರೇಕ್ಷೆ ಎಂದೂ ಹೇಳುವರು (ಶ್ರಾವಕಾ. ೪೫೮). [ ದ್ವಾದಶ + ಭಾವನೆ ]

**ದ್ವಾದಶಮಾರ್ತಂಡ** (ನಾ). ಧಾತಾ, ಮಿತ್ರ, ಅರ್ಯಮಾ, ಶಕ್ರ, ವರುಣ, ಅಂಶ, ಭಗ, ವಿವಸ್ವಾನ್, ಪೂಷಾ, ಸವಿತಾ, ತ್ವಷ್ಟಾ, ವಿಷ್ಣು ಎಂಬ ಹನ್ನೆರಡು ಜನ ಆದಿತ್ಯರು; P ಇಲ್ಲಿ ಸೂಚಿತವಾಗಿರುವ ೧೨ ಜನ ಆದಿತ್ಯರ ಉಲ್ಲೇಖ ಇನ್ನೂ ಬೇರೆ ಬೇರೆ ಆಕರಗಳಲ್ಲಿ ಬೇರೆ ಬೇರೆಯಾಗಿ ಸಿಗುತ್ತದೆ: ದ್ವಾದಶಮಾರ್ತಂಡರನೇಕಾದಶರುದ್ರರ ನಷ್ಟವಸುಗಳಂ ನೆಟ್ಟಿ ಕಂಡಂ (ಜಗವಿ. ೫-೦೦೯). [ ದ್ವಾದಶ + ಮಾರ್ತಂಡ ]

**ದ್ವಾದಶರವಿ** (ನಾ). = ದ್ವಾದಶಮಾರ್ತಂಡ: ಸಂತಸದಿಂದಂ ದ್ವಾದಶರವಿಗಳ್ ಮಹೋಜ್ಜ್ವಳರ್ ನಡೆತಂದರ್ (ಗಿರಿಕ. ೦೦-೬೫). [ ದ್ವಾದಶ + ರವಿ ]

**ದ್ವಾದಶರಾಕ್ಷಸ** (ನಾ). ದ್ವಾದಶಾದಿತ್ಯರಿಗೆ ಅಂಗರಕ್ಷಕರಾದ ಹನ್ನೆರಡು ಮಂದಿ ದೈತ್ಯರು; P ಪ್ರಹೇತಿ, ಪೌರುಷೇಯ, ವಧ, ದರ್ಪ, ವ್ಯಾಘ್ರ, ಕ್ರೂರ, ಆಪಸ್ಸು, ವಾತ, ವಿದ್ಯುತ್, ದಿವಾಕರ, ಬ್ರಹ್ಮವೇತ್ತ ಮತ್ತು ಯಜ್ಞವೇತ್ತ: ಪ್ರಹೇತಿ ಪೌರುಷೇಯ . . . ಯಜ್ಞವೇತ್ತರೆಂಬ ದ್ವಾದಶರಾಕ್ಷಸರೇ ಕ್ರಮದಿಂದವರ ಮೈಗಾವಲವರು (ವಿವೇಕ. ೨೬೭). [ ದ್ವಾದಶ + ರಾಕ್ಷಸ ]

**ದ್ವಾದಶರಾಜಕ** (ನಾ). = ದ್ವಾದಶಚಕ್ರವರ್ತಿ: ದ್ವಾದಶರಾಜಕಮುಂ [ಶಾಕಾಂ. ರೆಂ] ಬುದನೋದುಗಳೊಳ್ ಕೇಳಲಾದುದಲ್ಲದೆ ಕಾಣಲ್ಕಾದುದೆ ಲವಣೋದಧಿವೃತಮೇದಿನಿಯೊಳ್ ದೇವ ನಿನ್ನ ಪೆಸರಸಿವೆಡೆಯೊಳ್ (ಆದಿಪು. ೧೪-೧೪); ದ್ವಾದಶರಾಜಕಮಂ ಗೆಲ್ದಾದುನ್ನತಿ ಪೆರ್ಚೆ ಕರ್ಮರಿಪು ವಿಜಯದೊಳಾಸಾದಿತ ಕೇವಳಲೋಚನನಾ ದೇವಂ ಮೋಕ್ಷಲಕ್ಷ್ಮಿಗಧಿಪತಿಯಾದಂ (ಶಾಂತಿಪು. ೭-೫೨). [ ದ್ವಾದಶ + ರಾಜಕ ]

**ದ್ವಾದಶರಾಶಿ** (ನಾ). ೧. [ಜ್ಯೋತಿ] ಮೇಷ, ವೃಷಭ, ಮಿಥುನ, ಕರ್ಕಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನುಸ್ಸು, ಮಕರ, ಕುಂಭ ಮತ್ತು ಮೀನ ಎಂಬ ಹನ್ನೆರಡು ರಾಶಿಗಳ ಹೆಸರು: ದ್ವಾದಶಕೋಷ್ಠಗಣಂಗಳುಮಾದರದಿಂ ಬಳಸೆ ಮೊದಲ ಪೀಠಮದೇಂ ಚೆಲ್ವಾದುದೊ ರವಿಮಂಡಳಮುಂ ದ್ವಾದಶರಾಶಿಗಳ ಬಳಸಿದುದದಿನಾದಂ (ಚಂದ್ರಪು. ೧೫-೮೨); ಗ್ರೀಕರ ದ್ವಾದಶರಾಶಿಪದ್ಧತಿಯು ಭಾರತದ ಖಗೋಳಜ್ಞರ ಮನಸ್ಸನ್ನು ಆಕರ್ಷಿಸಿತು (ನಕ್ಷತ್ರ. ೪೭). ೨. ಜಾತಕನ ಜನ್ಮಲಗ್ನದಿಂದ ಹನ್ನೆರಡನೆಯ ರಾಶಿ: ದುಶ್ಚಿಕ್ಯಸಂಜ್ಞಂ ತೃತೀಯಮೆದಲ್ ದ್ವಾದಶರಾಶಿ ರಿಃಫಮದು (ಜಾತತಿ. ೧-೩೫). [ ದ್ವಾದಶ + ರಾಶಿ ]

**ದ್ವಾದಶವರ್ಣ** (ನಾ). ಹನ್ನೆರಡು ಅಕ್ಷರಗಳು: ಯಕಾರದಿಂ ಅಕಾರಾದಿ ಷೋಡಶವರ್ಣಂಗಳು ಣಕಾರದಿಂ ಕಕಾರಾದಿ ದ್ವಾದಶವರ್ಣಂಗಳು . . . ಉದಿಸಿದವು (ಉದ್ಭವಾ. ೭-೨). [ ದ್ವಾದಶ + ವರ್ಣ ]

**ದ್ವಾದಶಸಂಗ್ರಹಕೃಷ್ಟಿ** (ನಾ). [ಜೈನ] ಅಪ್ರತ್ಯಾಖ್ಯಾನಕ್ರೋಧ, ಅಪ್ರತ್ಯಾಖ್ಯಾನಮಾನ, ಅಪ್ರತ್ಯಾಖ್ಯಾನಮಾಯೆ, ಅಪ್ರತ್ಯಾಖ್ಯಾನ ಲೋಭ, ಪ್ರತ್ಯಾಖ್ಯಾನಾವರಣಕ್ರೋಧ, ಪ್ರತ್ಯಾಖ್ಯಾನಾವರಣ ಮಾನ ಪ್ರತ್ಯಾಖ್ಯಾನಾವರಣಮಾಯೆ,ಪ್ರತ್ಯಾಖ್ಯಾನಾವರಣಲೋಭ, ಸಂಜ್ವಲನಕ್ರೋಧ, ಸಂಜ್ವಲನಮಾನ, ಸಂಜ್ವಲನಮಾಯೆ, ಸಂಜ್ವಲನ ಲೋಭ ಎಂಬ ಹನ್ನೆರಡು ಸಂಗ್ರಹಗಳ ಕರ್ಮಪರಮಾಣುಶಕ್ತಿ ಯನ್ನು ಕುಂಠಿತಗೊಳಿಸುವುದು; "ಅಪ್ರತ್ಯಾಖ್ಯಾನ, ಪ್ರತ್ಯಾಖ್ಯಾನ ಮತ್ತು ಸಂಜ್ವಲನ ಈ ಹನ್ನೆರಡು ಕಷಾಯಗಳ ಫಲ ಕೊಡುವ ಸಾಮರ್ಥ್ಯವನ್ನು ಕಡಿಮೆ ಮಾಡುವುದು" (ಆದಿಪು. ಕೋಶ): ಉಚಿತ ಕೃಷ್ಟಿವಿಧಾನದಿನನಂತಗುಣಹಾನಿರೂಪದಿಂ ದ್ವಾದಶಸಂಗ್ರಹಕೃಷ್ಟಿಗಳಂ ಮಾಡುತ್ತುಂ (ಆದಿಪು. ೧೧-೭೯ ವ); ಉಚಿತಕೃಷ್ಟಿಕ್ರಿಯೆಯಿಂ ಪೂರ್ವಾ ಪೂರ್ವಸ್ಪರ್ಧಕಾನುಭಾಗಮನನಂತಗುಣಹಾನಿರೂಪದಿಂ ದ್ವಾದಶಸಂಗ್ರಹ ಕೃಷ್ಟಿಗಳಂ ಮಾಡುತ್ತುಂ (ಚಂದ್ರಪ್ರ. ೧೯-೭೧ ವ).

[ ದ್ವಾದಶ + ಸಂಗ್ರಹ + ಕೃಷ್ಟಿ ]

**ದ್ವಾದಶಸತ್ತ್ವ** (ನಾ). [ಕಾಮಶಾ] ಸ್ತ್ರೀಯರಲ್ಲಿರುವ ಹನ್ನೆರಡು ಬಗೆಯ ಮನೋಧರ್ಮಗಳು; P 'ಜನವಶ್ಯ' ಗ್ರಂಥದ ಐದನೆಯ ಸಂಧಿ ಯಲ್ಲಿ ಇವುಗಳ ವಿವರಣೆಯನ್ನು ಹೀಗೆ ಕೊಡಲಾಗಿದೆ-"ಸುರ ಯಕ್ಷ ಗಂಧರ್ವ ನ[ಪಾಠಾಂ. ವ]ರ ನಾಗ ಕಾ[ಪಾಠಾಂ. ನಾ]ಕ ವಾನರ ಮುನಿ ಪಿಶಾಚ ರಾಕ್ಷಸ ಕಿನ್ನರ ಖರಮೆಂಬ ಪೆಸರ ಪನ್ನೆರಡು ಸ[ಪಾಠಾಂ. ತ]ತ್ತ್ವದ ಬಗೆಯ ನೊರೆವೆನಾಲಿಸು ಸರೋಜಾಯತಾಕ್ಷಿ ॥೨೫॥ ಪರಿಮಳಾಂಗದ ಮನೋಹರ ವದನದುಜ್ಜ್ವಲದ ಗರುವಿಕೆಯ ದಾನಶಕ್ತಿಯಾ ಯುಕ್ತಿಯ ಪುರುಷಭಕ್ತಿಯು ಪಲರ ಪೊರೆವ ಧನಮುಳ್ಳ ಭಾಸುರಗುಣದವಳಿ ದೇವಸತ್ತ್ವದವಳು ॥೨೬॥ ಸುರತಕ್ಕೆ ನಲಿವ ಸಿಂಗರಕೆ ಸೇರುವ ಸುರೆಗೆ ಹರುಷಿಸುವ ಘನಜಲಕ್ರೀಡೆ ಗೊಲಿವ ಸರಸಕ್ಕೆ ಸಲುವ ಸೌಂದರಕೆ ಲಜ್ಜೆಗೆ ನಿಜಾಕರಮೆನಿಪವಳಿ ಯಕ್ಷ ಸತ್ತ್ವದವಳು ॥೨೭॥ ತಾಂಬೂಲ ಗಂಧ ಮಾಲ್ಯಾಂಬರಾಂಬುಪ್ರಿಯದ ಪೊಂಬಣ್ಣದೊಳ್ನುಡಿಯ ರತಿಯಿಚ್ಚೆಯ ಇಂಬಱಿವ ಸಂಗೀತಮಂ ಬಲ್ಲ ಬಗೆಯೊಳಾರಂ ಬಗೆಯದವಳಿ ಗಂ[ಪಾಠಾಂ. ಗಾಂ]ಧರ್ವಸತ್ತ್ವೆ ॥೨೮॥ ಖುಡುಚಿತ್ತದಿಷ್ಟರ್ಗೆ ನಿಜದೊಳೊಲಿದಿರ್ಪ ಭಾವಜಕೇಳಿಗುತ್ಸಾಹಿಸುವ ದೈವವ ಭಜಿಸಿಪೊಡಲಂ ಕಟ್ಟುವ ಜಡಮೆನಿಪಮಲನೀರಜನೇತ್ರೆಯುವಳಿ ನರಸತ್ತ್ವದವಳು ॥೨೯॥ ಮೃದುಶೈತ್ಯಮಪ್ಪ ದೇಹದ ನಿದ್ದೆಗೆಯ್ದಿರವಿನಧಿಕ ವೆಂದೆನಿಪ ವಸ್ತುಗಳನೊಲ್ಲ ಪುದುಗುವ ತೊಳಲ್ವ ಗೀತದೊಳಿಚ್ಚೆಯಿಡುವ ಸುಯ್ಯೊದವಿದವಳೇ ನಾಗಸತ್ತ್ವದವಳು ॥೩೦॥ ಕ್ರೂರಬುದ್ಧಿಯ ಚಲಿಸು ವೋರೆಗಣ್ಣಿನ ಪಲರೊಳೋರಂತೆ ಪಿರಿದುಂಬ ಗೂಢರತದ ಆರನುಱಿ ನಂಬದಾಚಾರದಿಂ ನಡೆಯದ ಕಠೋರಸ್ವರದವಳೇ ಕಾಕಸತ್ತ್ವೆ ॥೩೧॥ ಹಿತವನಱಿಯದೆ ಚಲಿಪ ಮತಿಯ ಕೋಪದ ಕುಹಕದತಿಶಯದ ಬಹ್ವಾಶನದ ನಿಲ್ಲದ ಗತಿಯ ಘನನಖದಂತಹತಿಯುಳ್ಳ ಸರಸಸಂಗತಿಯಱಿಯದವಳಿ ಕಪಿಸತ್ತ್ವದವಳು ॥೩೨॥ ವಿನಯದ ವಿವೇಕದಿಂಪಿನ ಸ್ವೈರಣೆಯ ನುಡಿಯ ಜನನಿಜನಕರ್ಗಂಜಿ ನಡೆವ ಹಿತವ ನೆನೆವ ನಿರ್ಮತ್ಸರದ ಘನ ಭಕ್ತಿರತದ ಮಾನಿನಿಯ ಮುನಿಸತ್ತ್ವದವಳಬ್ಜಗಂಧಿ ॥೩೩॥ ಅಸಿಯ ನಡುವಿನ ಮಿಸುಗುವೆಸಳ್ಗಣ್ಣ ಪಿರಿದುಂಬ ಬಿಸುಮೆಯ್ಯ ಮದ್ಯ ಮಾಂಸ ಪ್ರೀತಿಯ ಪುಸಿಗೇಳ್ವಿರುಳ್ ತೊಳಲ್ವ ಸಸಿನಿರದ ಲಜ್ಜೆಯಱಿದೆಸೆವಳಿ ಪಿಶಾಚಿ[ಪಾಠಾಂ. ಚಿ]ಸತ್ತ್ವದವಳಂಗನೆ ॥೩೪॥ ಚಲದ ಕೋಪದ ಪುಸಿಯ ಕಲಹದಾತುರದಿರುಳ್ ನೆಲೆಗೆಟ್ಟು ಸುಳಿವ ಕಡುಗೆಂಪು ಮೆಯ್ಯ ಪಲಲಾಶನದ ಸುರೆಗೆ ನಲಿವ ಸಾಹಸದ ಚಾಪಲದವಳಿ ದೈತ್ಯಸತ್ತ್ವ[ಪಾಠಾಂ. ತ್ವ]ದವಳ ಬಲೆ ॥೩೫॥ ಬಗೆ ಲಜ್ಜೆಯುಳಮೆಂಬಿವಗಲ್ದ ಘನಮತ್ಸರದ ಜಗಳವಾಡುವ ತೊಡುವ ಪೂಗಂಧವ ಮಿಗೆ ಬಯಸುವ ಲ್ಲಿಗಲ್ಲಿಗೆ ನಿಲ್ವ ಬಣ್ಣವನೆ ಬಿಡಿದುಡುವಳವಳಿ ಕಿನ್ನರಸತ್ತ್ವೆಯು ॥೩೬॥ ವಿರಸೆ ನಿರ್ಲಜ್ಜೆ ದುಶ್ಚರಿತೆ ದುರ್ವಾರ್ಕ್ಕೆ ಮತ್ಸರಯುಕ್ತೆ ದುಷ್ಟೆ ಪುರುಷಾನುರಕ್ತೆ ಪಿರಿದೆನಲಂ ಬೈದು ಪೊಯ್ದು ರಂದಿರದೊದೆದೊಡಂ ಹರುಷಿಯಪ್ಪವಳಿ ಖರಸತ್ತ್ವದವಳು ॥೩೭॥: ದೇವಸತ್ವ ಯಕ್ಷಸತ್ವ ಗಂಧರ್ವಸತ್ವ ನರಸತ್ವ ನಾಗಸತ್ವ ಕಾಕಸತ್ವ ವಾನರಸತ್ವ ಮುನಿಸತ್ವ ಪಿಶಾಚಸತ್ವ ರಾಕ್ಷಸಸತ್ವ ಕಿನ್ನರಸತ್ವ ಖರಸತ್ವ ವೆಂಬ ದ್ವಾದಶಸತ್ವದ ಸತಿಯರುಂ (ವಿವೇಕ. ೨೯೫). [ ದ್ವಾದಶ + ಸತ್ವ$_1$ ]

**ದ್ವಾದಶಸರ್ಪ** (ನಾ). ದ್ವಾದಶಾದಿತ್ಯರ ಕುದುರೆಗಳನ್ನು ಕಟ್ಟುವ ಅಧಿಕಾರಿಗಳಾದ ವಾಸುಕಿ, ಕಂಕವೀರ, ತಕ್ಷಕ, ನಾಗ, ಇಳಾಪುತ್ರ, ಶಂಖಪಾಲ, ಐರಾವತ, ಧನಂಜಯ, ಮಹಾಪದ್ಮ, ಕರ್ಕೋಟಕ, ಕಂಬಳ ಮತ್ತು ಅಶ್ವತರವೆಂಬ ಹನ್ನೆರಡು ವಿಧವಾದ ಹಾವುಗಳು: ವಾಸುಕಿ ಕಂಕವೀರ ತಕ್ಷಕ . . . ಅಶ್ವತರರೆಂಬ ದ್ವಾದಶಸರ್ಪಂಗಳೇ ಪರಿ ವಿಡಿದಾ ವಾಜಿಬಂಧನಾಧಿಕಾರಿಗಳು (ವಿವೇಕ. ೨೬೬).

[ ದ್ವಾದಶ + ಸರ್ಪ ]

**ದ್ವಾದಶಸಾರತೈಲ** (ನಾ). ಗರುಗ, ಬಳ್ಳಿಸೊಂಡೆ, ಆಡುಸೋಗೆ, ನೆಲ ಗುಳ್ಳ, ಚೇಳುಬಾಲ, ಅಡಿಕೆಚಟ್ಟು, ಕೊಮ್ಮೆ, ಲೊಕ್ಕಿ, ಸೂರ್ಯ ಭಕ್ತ, ತಾರೆ, ಎಸಗ ಮತ್ತು ಎಲಹುರಿಗಳೆಂಬ ಹನ್ನೆರಡು ವಿಧವಾದ ಔಷಧಿಮೂಲಿಕೆಗಳಿಂದ ತೆಗೆದ ಎಣ್ಣೆ: ದ್ವಾದಶಸಾರತೈಲ – ಗರುಗ, ಬಳ್ಳಿಸೊಂಡೆ, ಆಡುಸೋಗೆ . . . ಎಲಹುರಿ–ಇದರಲ್ಲಿ ಪ್ರತ್ಯೇಕ ಸ್ವರಸಗಳ ಸಮವಾಗಿ ತೆಗೆದು (ಸಕವೈ. ೨೨೬). [ ದ್ವಾದಶ + ಸಾರ$_3$ + ತೈಲ$_1$ ]

**ದ್ವಾದಶಸ್ಥಾನ** (ನಾ). [ಜ್ಯೋತಿ] ಜಾತಕನ ಜನ್ಮಕುಂಡಲಿಯಲ್ಲಿರುವ ಹನ್ನೆರಡು ಮನೆ,-ಭಾವ; P ೧. ಜನ್ಮಲಗ್ನದ ಮನೆ-ಲಗ್ನಸ್ಥಾನ (ತನುಸ್ಥಾನ), ೨. ಧನಸ್ಥಾನ, ೩. ಭ್ರಾತೃಸ್ಥಾನ (ಸಹಜ), ೪. ಬಂಧುಸ್ಥಾನ (ಮಿತ್ರಸ್ಥಾನ), ೫. ಪುತ್ರಸ್ಥಾನ, ೬. ರಿಪುಸ್ಥಾನ, ೭. ಭಾರ್ಯಾಸ್ಥಾನ, ೮. ಮೃತ್ಯುಸ್ಥಾನ (ನೈಧನ), ೯. ಭಾಗ್ಯ ಸ್ಥಾನ (ಧರ್ಮಸ್ಥಾನ), ೧೦. ಕರ್ಮಸ್ಥಾನ (ಉದ್ಯೋಗ), ೧೧. ಲಾಭಸ್ಥಾನ, ೧೨. ವ್ಯಯಸ್ಥಾನ. ಆಯಾ ಸ್ಥಾನಗಳ ವಿಷಯ ವನ್ನು ಆ ಸ್ಥಾನದಲ್ಲಿರುವ ಗ್ರಹಗಳ ಬಲಾಬಲಗಳಿಂದ ನಿರ್ಣಯಿಸು ತ್ತಾರೆ. ಉದಾ: ಎರಡನೆಯ ಸ್ಥಾನದಲ್ಲಿ ಗುರು ಮೊದಲಾದ ಶುಭ ಗ್ರಹಗಳಿದ್ದು ಶುಭಗ್ರಹಗಳ ದೃಷ್ಟಿ ಮೊದಲಾದ ಸಾಮಗ್ರಿಗಳಿದ್ದರೆ ಜಾತಕನು ಧನವಂತನಾಗುತ್ತಾನೆ, ಇತ್ಯಾದಿ: ದ್ವಾದಶಸ್ಥಾನಗಳ ಬಲಾ ಬಲಗಳನ್ನು ತಿಳಿದುಕೊಳ್ಳದೆ ಜಾತಕಫಲವನ್ನು ಹೇಳುವುದಕ್ಕಾಗುವುದಿಲ್ಲ (ರೂಢಿ). [ ದ್ವಾದಶ + ಸ್ಥಾನ ]

**ದ್ವಾದಶಾಂಗ** (ನಾ). [ಜೈನ] ಜೈನರ ಧರ್ಮಗ್ರಂಥಗಳ ಹನ್ನೆರಡು ಭಾಗಗಳು; P ೧. ಆಚಾರಾಂಗ-ಮೋಕ್ಷಮಾರ್ಗಕ್ಕೆ ಸಹಾಯಕವಾ ಗುವ ಆಚಾರಗಳ ಅಂದರೆ ಕುಳಿತುಕೊಳ್ಳುವುದು, ಮಲಗುವುದು, ಆಹಾರಸ್ವೀಕಾರ ಇತ್ಯಾದಿಯಾದ ವಿಧಗಳ ವರ್ಣನೆ. ೨. ಸೂತ್ರ ಕೃತಾಂಗ-ಜ್ಞಾನದ, ವಿನಯಾದಿಯ ಅಥವಾ ಸ್ವಮತ, ಪರಮತಗಳ ಕ್ರಿಯೆಯ ಸಂಕ್ಷೇಪವಾದ ವರ್ಣನೆ. ೩. ಸ್ಥಾನಾಂಗ-ಒಂದರಿಂದ ಅನೇಕ ಭೇದರೂಪ ಜೀವ ಪುದ್ಗಲಾದಿಗಳ ವರ್ಣನೆ. ೪. ಸಮ ವಾಯಾಂಗ-ಶಾಸ್ತ್ರಗಳ ಅಂಗೋಪಾಂಗಗಳ ನಿತ್ಯಸಂಬಂಧಜ್ಞಾನ. ೫. ವ್ಯಾಖ್ಯಾಪ್ರಜ್ಞಪ್ತ್ಯಂಗ-ಗಣಧರರಿಂದ ಕೇಳಲಾದ ೬೦ ಸಾವಿರ ಪ್ರಶ್ನೆಗಳಿಗೆ ತೀರ್ಥಂಕರರು ಉತ್ತರ ಹೇಳಿದ ವರ್ಣನೆ. ೬. ಜ್ಞಾತೃ ಧರ್ಮಕಥಾಂಗ ಜ್ಞಾತಾ ಎಂಬ ಗಣಧರದೇವನ ಪ್ರಶ್ನೆಗಳ ಅನು ಸಾರವಾಗಿ ಉತ್ತರರೂಪವಾದ ಧರ್ಮಕಥೆ ೭. ಉಪಾಸಕಾಧ್ಯಯ ನಾಂಗ ಶ್ರಾವಕರು ಆಚರಿಸುವ ಕ್ರಿಯೆಯನ್ನು ತಿಳಿಸುವ ಶಾಸ್ತ್ರ. ಉಪಾಸಕನು ದಾನ ಅಥವಾ ಪೂಜೆಯಿಂದ ಸಂಘದ ಸೇವೆ ಸಲ್ಲಿಸುವ

ವಿವರಣೆ. ಶ್ರಾವಕರ ಪ್ರತಿಮಾ, ವ್ರತ, ಶೀಲ, ಆಚಾರ, ಕ್ರಿಯೆ, ಮಂತ್ರಾದಿಕಗಳ ವರ್ಣನೆ. ೮. ಅಂತಕೃದ್ದಶಾಂಗ-ಕೈವಲ್ಯಕ್ಕೆ ಹೋಗುವವರ ವರ್ಣನೆ; ಮೋಕ್ಷಗಾಮಿಗಳ ಬಗ್ಗೆ ವರ್ಣನೆ. ೯. ಅನುತ್ತರೋಪಪಾದಿಕದಶಾಂಗ - ಪ್ರತಿಯೊಬ್ಬ ತೀರ್ಥಂಕರನ ಜೀವನಾವಧಿಯಲ್ಲಿ ಹತ್ತು ಜನ ಮಹಾಮುನಿಗಳು ಉಪಸರ್ಗವನ್ನು ಅನುಭವಿಸಿ ೫ ಅನುತ್ತರ ವಿಮಾನಗಳಲ್ಲಿ ಯಾವುದಾದರೊಂದರಲ್ಲಿ ಜನ್ಮವನ್ನು ಹೊಂದುವ ಭಾಗದ ವರ್ಣನೆ. ೧೦. ಪ್ರಶ್ನವ್ಯಾಕರಣಾಂಗ-ಆಕ್ಷೇಪಣೀಯ, ವಿಕ್ಷೇಪಣೀಯ, ಸಂವೇದನೀಯ, ನಿರ್ವೇದನೀಯವೆಂಬ ನಾಲ್ಕು ಬಗೆಯ ಧರ್ಮಕಥೆಗಳ ವರ್ಣನೆ; ಅನೇಕ ಪ್ರಶ್ನೆಗಳಿಗೆ ಉತ್ತರ ಹೇಳುವ ರೀತಿ. ೧೧. ವಿಪಾಕಸೂತ್ರಾಂಗ-ಕರ್ಮದ ಬಂಧ, ಉದಯ, ಫಲ ಇತ್ಯಾದಿಗಳ ವರ್ಣನೆ. ೧೨. ದೃಷ್ಟಿವಾದಾಂಗ-೩೬೩ ಮಿಥ್ಯಾವಾದದ ನಿರಾಕರಣೆಯ ವಿವರಣೆ. ಇದರಲ್ಲಿ ೫ ಭೇದಗಳಿವೆ. ೧. ಪರಿಕರ್ಮ ೨. ಸೂತ್ರ. ೩. ಪ್ರಥಮಾನುಯೋಗ. ೪. ಪೂರ್ವಗತ.೫. ಚೂಲಿಕಾ: ಗುರುವಿನನುಮತದಿಂ ದ್ವಾದಶಾಂಗಚತುರ್ದಶಪೂರ್ವಂಗಳಂ ಕಲ್ತು (ಆದಿಪು. ೧೪-೧೩೯ ವ); ವಿಶಾಖಗಣಪ್ರಮುಖರ್ ಮಾರ್ಗಶಿರ ಸಿತೈಕಾದಶಿಯ ಪೂರ್ವಾಹ್ಣದೊಳ್ ದ್ವಾದಶಾಂಗದರ್ಥಂಗಳುಮಂ . . . ಅವಧಾರಿಸಿ (ಮಲ್ಲಿಪು. ೧೪-೨೬೭). [ ದ್ವಾದಶ + ಅಂಗ₂ ]

**ದ್ವಾದಶಾಂಗವೇದ** (ನಾ). = ದ್ವಾದಶಾಂಗ : ಆಚಾರಾಂಗ, ಸೂತ್ರಕೃತಾಂಗ, ಸ್ಥಾನಾಂಗ, ಸಮವಾಯಾಂಗ, ವ್ಯಾಖ್ಯಾಪ್ರಜ್ಞಪ್ತ್ಯಂಗ, ಜ್ಞಾತೃಕಥಾಂಗ, ಉಪಾಸಕಾಧ್ಯಯನಾಂಗ, ಅಂತಕೃದ್ದಶಾಂಗ, ಔಪಪಾದಕದಶಾಂಗ, ಪ್ರಶ್ನವ್ಯಾಕರಣಾಂಗ, ವಿಪಾಕಸೂತ್ರಾಂಗ, ದೃಷ್ಟಿವಾದಾಂಗಗಳೆಂಬ ಹನ್ನೆರಡು ಅಂಗಗಳಿವೆ. ಇವುಗಳಿಗೆ ದ್ವಾದಶಾಂಗವೇದಗಳೆಂದೂ ಜೈನಾಗಮದಲ್ಲಿ ಸಂಕೇತವಿದೆ (ಭಾರಠ. ೧೭೯). [ ದ್ವಾದಶಾಂಗ + ವೇದ ]

**ದ್ವಾದಶಾಂಶ** (ನಾ). [ಜ್ಯೋತಿ] ರಾಶಿಯ ಹನ್ನೆರಡನೆಯ ಒಂದು ಭಾಗ; P ಲಗ್ನವನ್ನು ಹನ್ನೆರಡು ಭಾಗಗಳನ್ನಾಗಿ ಮಾಡಿದರೆ ಪ್ರತಿಯೊಂದು ಭಾಗಕ್ಕೂ ದ್ವಾದಶಾಂಶವೆಂದು ಹೆಸರು. ಪ್ರತಿಯೊಂದು ರಾಶಿಯ ಮೊದಲನೆಯ ದ್ವಾದಶಾಂಶವು ಆ ರಾಶಿಯೇ ಆಗುತ್ತದೆ. ಮುಂದಕ್ಕೆ ಕ್ರಮವಾಗಿ ರಾಶಿಗಳ ದ್ವಾದಶಾಂಶಗಳು ಪ್ರಾರಂಭವಾಗುತ್ತವೆ. ಉದಾ.- ಮೇಷಲಗ್ನ ಪ್ರಮಾಣ ೪-೨೮ಅದರ ೧೨ನೆ ೧ ಎಂದರೆ ೦-೨೨ ಆಗುತ್ತದೆ. ೦-೨೨ ಮೇಷ, ೦-೪೪ ವೃಷಭ, ೧-೬ ಮಿಥುನ, ೧-೨೮ ಕರ್ಕಾಟಕ, ೧-೫೦ ಸಿಂಹ, ೨-೧೨ ಕನ್ಯಾ, ೨-೩೪ ತುಲಾ, ೨-೫೬ ವೃಶ್ಚಿಕ, ೩-೧೮ ಧನುಸ್ಸು, ೩-೪೦ ಮಕರ, ೪-೨ ಕುಂಭ, ೪-೨೪ ಮೀನ. ಹೀಗೆಯೇ ಇತರ ರಾಶಿಗಳಿಗೂ ಲೆಕ್ಕ ಹಾಕಿಕೊಳ್ಳಬೇಕು. ಜಾತಕಫಲನಿರ್ಣಯದಲ್ಲಿ ಇದು ಬಹಳ ಉಪಯುಕ್ತವಾಗಿದೆ: ತದ್ಗೃಹ ದ್ವಾದಶಾಂಶಮನಾಳ್ವರ್ ಸ್ವಗೃಹಾದಿ ರಾಶಿಪತಿಗಳ್ (ಜಾತಕತಿ. ೧-೨೮). [ ದ್ವಾದಶ + ಅಂಶ ]

**ದ್ವಾದಶಾತ್ಮ** (ನಾ). ಹನ್ನೆರಡು ಸ್ವರೂಪಗಳಲ್ಲಿ ಕಾಣಿಸುವವನು; ಸೂರ್ಯ; ನೇಸರು: "ಆದಿತ್ಯಃ, ಸವಿತಾ ;. . . ದ್ವಾದಶಾತ್ಮಾ, ತ್ರಯಾತನುಃ-ಈ ೪೭ ಆದಿತ್ಯನ ಪೆಸರ್" (ಹಲಾಯು. ೭-೩೭); "ನಿಶಿಪ್ಪೈರಿ ಮಿಹಿರಂ . . . ದ್ವಾದಶಾತ್ಮಂ ತ್ರಯಿಾತನು ವಿಭಾವಸು ಸಪ್ತಸಪ್ತಿ ಸವಿತಾರಂ ಸಹಸ್ರಾಂಶು ಪೂಷ್ಣನೆನೆ ಸೂರ್ಯನಕ್ಕುಂ" (ಮಂಗರಾ. ೧೦-೨); ಆದಿಶಕ್ತಿಯನಾಂತು ಮೆಟ್ಟಿ ದ್ವಾದಶಾತ್ಮನನಮೃತಕರನು ಕಟ್ಟಿ . . . ಓಂಕಾರವ ತಾನುಚ್ಚರಿಸಲು (ಬಸವು. ೫೫-೯೯); ದ್ವಾದಶಾತ್ಮನ ಭಜಿಸಿದರೆ ಭಕ್ಷ್ಯಾದಿ ಬಹುವಿಧದನ್ನ ಸಿದ್ಧಿಪುದು (ಕುವ್ಯಾಅ. ೧-೭).

[ ಸಂ. ದ್ವಾದಶಾತ್ಮನ್ ]

**ದ್ವಾದಶಾತ್ಮಕ** (ನಾ). = ದ್ವಾದಶಾತ್ಮ : ದ್ವಾದಶಾತ್ಮಕನಿಂದಲುಚ್ ದಿವಸ ವೆಂತಂತೆ ದೇವರಾಜೇಂದ್ರನಿಂ ಪಿರಿದು ಸೊಬಗಿಂದೊಪ್ಪಿತತುಳ ಪಂಪಾನಗರವು (ರಾಘಶ. ೧-೪೨). [ ಸಂ. ]

**ದ್ವಾದಶಾದಿತ್ಯ** (ನಾ). = ದ್ವಾದಶಮಾರ್ತಂಡ : ಅತಿಶಯಮಪ್ಪ ರೂಪುಂ . . . ತೇಜಮುಂ ದ್ವಾದಶಾದಿತ್ಯರ್ಕಳೊರ್ಮೊದಲೆ ಉದಯಂಗೆಯ್ದಂತೆ ಬೆಳಗಿದಪ್ಪುದು (ಪದ್ಮಾರಾ. ೬೬-೭); ಶ್ರುತಿಗಗಮ್ಯ ದ್ವಾದಶಾದಿತ್ಯನಪ್ರತಿಮಮಹಿಮಂಗೆ ಪ್ರತಿಯುಂಟೆ (ಬಸವ. ೫೩೯); ದ್ವಾದಶಾದಿತ್ಯರು ನವಬ್ರಹ್ಮಾದಿ ಬುಧ ಸಪ್ತಋಷಿಗಳುಂ . . . ಬಂದರೀಶನನೋಲಯಿಸಲೆಂದು (ಬಸವು. ೧-೪೨); ಧಾತಾ ಅರ್ಯಮಾ ಮಿತ್ರ ವರುಣ ಇಂದ್ರ ವಿವಸ್ವಾನ್ ಪರ್ಜನ್ಯ ಪೂಷ ಅಂಶುಮಾನ್ ಗಭಸ್ತಿಮಾನ್ ತ್ವಷ್ಟೃ ವಿಷ್ಣುಗಳೆಂಬರೀ ಕ್ರಮದಿಂ ದ್ವಾದಶಾದಿತ್ಯರು (ವಿವೇಕ. ೨೬೭)

[ ದ್ವಾದಶ + ಆದಿತ್ಯ ]

**ದ್ವಾದಶಾನುಪ್ರೇಕ್ಷೆ** (ನಾ). [ಜೈನ] ಜೈನಮುನಿಗಳು ಧ್ಯಾನ ಮಾಡಬೇಕಾದ ೧೨ ಬಗೆಯ ತತ್ತ್ವಗಳ ಅನುಚಿಂತನೆ; ಜೈನಮುನಿಗಳಿಗೆ ವೈರಾಗ್ಯ ಹುಟ್ಟಲು ಕಾರಣವಾದ ೧೨ ಬಗೆಯ ಭಾವನೆಗಳ ಚಿಂತನೆ; P ೧. ಅನಿತ್ಯಾನುಪ್ರೇಕ್ಷೆ : ದೇಹವು ಕ್ಷಣಭಂಗುರವಾದುದು; ಸಂಸಾರದ ಸರ್ವ ಅವಸ್ಥೆಗಳೂ ಅನಿತ್ಯವಾದುದು ಎಂಬ ಭಾವನೆ. ೨. ಅಶರಣಾನುಪ್ರೇಕ್ಷೆ: ಹುಟ್ಟು, ಸಾವು, ಮುಪ್ಪು, ರೋಗ ಮುಂತಾದುವುಗಳ ಭಯದಿಂದ ಯಾರೂ ತನ್ನನ್ನು ರಕ್ಷಿಸಲಾರರೆಂದೂ ರತ್ನತ್ರಯಾತ್ಮಕ ಧರ್ಮವೇ ಶರಣೆಂದೂ ಭಾವಿಸುವಿಕೆ. ೩. ಸಂಸಾರಾನುಪ್ರೇಕ್ಷೆ : ನರಕ, ಪಶು, ಮಾನವ, ದೇವ ಈ ೪ ಗತಿಯೂ ದುಃಖಮಯವಾದುದೆಂದು ಭಾವಿಸುವಿಕೆ. ೪. ಏಕತ್ವಾನುಪ್ರೇಕ್ಷೆ : ಜೀವನು ಒಂಟಿಯಾಗಿಯೇ ಹುಟ್ಟುವುದು ಮತ್ತು ಸಾಯುವುದು. ಒಂಟಿಯಾಗಿಯೇ ಸುಖ-ದುಃಖಗಳನ್ನು ಅನುಭವಿಸುವುದು ಎಂಬ ಭಾವನೆ. ೫. ಅನ್ಯತ್ವಾನುಪ್ರೇಕ್ಷೆ : ಜೀವದಿಂದ ದೇಹ, ಕುಟುಂಬ ಇತ್ಯಾದಿ ಪ್ರತಿಯೊಂದೂ ಭಿನ್ನ ಎಂಬ ಚಿಂತನೆ. ೬. ಅಶುಚಿತ್ವಾನುಪ್ರೇಕ್ಷೆ : ದೇಹವು ಮಲ, ಮೂತ್ರಗಳಿಂದ ಕೂಡಿ ಅಪವಿತ್ರವಾಗಿದೆ. ಮನುಷ್ಯದೇಹದಲ್ಲಿ ಒಂದಾದರೂ ಶುಚಿಯೂ ಪವಿತ್ರವೂ ಇಲ್ಲವೆಂದು ಭಾವಿಸುವುದು. ೭. ಆಸ್ರವಾನುಪ್ರೇಕ್ಷೆ: ಮನ, ವಚನ, ಕಾಯಗಳ ಶುಭ ಅಥವಾ ಅಶುಭ ಪ್ರವೃತ್ತಿಯಿಂದ ಕರ್ಮದ ಜನನ. ಅದು ಬಂಧನಕಾರಿಯಾಗುದು ಎಂಬ ಚಿಂತನೆ. ೮. ಸಂವರಾನುಪ್ರೇಕ್ಷೆ : ಮನ, ವಚನ, ಕಾಯಗಳ ನಿಗ್ರಹದಿಂದ ಅಥವಾ ಅವುಗಳನ್ನು ಧರ್ಮದಿಂದ ನಡೆಸುವುದರಿಂದ ಕರ್ಮಬಂಧ ನಿರೋಧವಾಗುತ್ತದೆ ಎಂಬ ಚಿಂತನೆ. ೯. ನಿರ್ಜರಾನುಪ್ರೇಕ್ಷೆ : ತಪಸ್ಸು ಅಥವಾ ಆತ್ಮಧ್ಯಾನದ ಮೂಲಕ ಕರ್ಮಕ್ಷಯದ ಸಮಯಕ್ಕೆ ಮೊದಲೇ ಕರ್ಮವು ಕ್ಷಯಿಸುವುದು ಎಂಬ ಭಾವನೆ. ಕರ್ಮವನ್ನು ಕ್ಷಯಿಸುವ ಅನಶನವೇ ಮೊದಲಾಗಿ ಹದಿಮೂರು ಪ್ರಕಾರವಾದ ತಪಸ್ಸನ್ನು ಕುರಿತು ವಿಚಾರ, - ಚಿಂತನೆ. ೧೦. ಲೋಕಾನುಪ್ರೇಕ್ಷೆ : ಲೋಕದಲ್ಲಿರುವ ಜೀವಿಗಳು ಯಾವುವು ಇದು ಸಾದಿಯೋ ಅನಾದಿಯೋ ಎಂದು ಭಾವಿಸುವುದು. ೧೧. ಬೋಧಿದುರ್ಲಭಾನುಪ್ರೇಕ್ಷೆ: ರತ್ನತ್ರಯಧರ್ಮವು ಲಭ್ಯವಾಗುವುದು ಬಹಳ ಕಠಿನವೆಂಬ ಭಾವನೆ. ೧೨. ಧರ್ಮಾನುಪ್ರೇಕ್ಷೆ : ಜಿನೇಂದ್ರನಿಂದ ಹೇಳಲ್ಪಟ್ಟ ಧರ್ಮವೇ ಹಿತವನ್ನುಂಟುಮಾಡುವುದು ಎಂಬ ಭಾವನೆ: ಸಿದ್ಧ ಪರಮೇಷ್ಠಿಗಳಷ್ಟಗುಣಂಗಳಂ ನೆನೆಯುತ್ತುಮಧ್ರುವಾದಿ ದ್ವಾದಶಾನುಪ್ರೇಕ್ಷಾಭಾವನಾಭಾವಿತಾಂತಃಕರಣನಾಗಿ . . . ಧರ್ಮಧ್ಯಾನಮಂ ಧ್ಯಾನಿಸುತ್ತುಂ (ಆದಿಪು. ೧೦-೧೪ ವ); ಭಟ್ಟಾರಕರ್ ದಶಕುಲಧರ್ಮ

ಮುವಂ ದ್ವಾದಶಾನುಪ್ರೇಕ್ಷೆಯುಮಂ ದ್ವಾವಿಂಶತಿಪರೀಷಹಂಗಳುಮಂ . . . , ಕೇಳ್ದು (ಚಾವುಂಪು. ೭೪) : ಎಂದಿಂತು ಪರಮನಿರ್ವೇಗ ಪರನಾಗಿ ನುಡಿದನಿತಱಿಂ ಮಾಣದೆ ಮತ್ತಂ ದ್ವಾದಶಾನುಪ್ರೇಕ್ಷೆಗಳನನು ಗಳಿಯಿಸನು ಸ್ಮರಿಸಲ್ ಬಗೆದು (ಪುಷ್ಪಪು. ೧೩-೪೩ ವ).

[ ದ್ವಾದಶ + ಅನುಪ್ರೇಕ್ಷೆ ]

**ದ್ವಾದಶಾಪ್ಸರಸ್ತ್ರೀ** (ನಾ). ಕೃತಸ್ಥಲೆ, ಪುಂಜಿಕಸ್ಥಲೆ, ಮೇನಕೆ, ಸಹಕನ್ಯೆ, ಪ್ರಮ್ಲೋಚಂತಿ, ವಿಶ್ವಾಚಿ, ಘೃತಾಚಿ, ಊರ್ವಶಿ, ಪೂರ್ವಚಿತ್ತಿ, ತಿಲೋತ್ತಮೆ, ರಂಭೆ ಮತ್ತು ಭದ್ರೆಯರೆಂಬ ಹನ್ನೆರಡು ಮಂದಿ ದೇವಗಣಿಕೆಯರು : ಕೃತಸ್ಥಲಿ . . . ತಿಲೋತ್ತಮೆ ರಂಭೆ ಭದ್ರೆಯರೆಂಬ ದ್ವಾದಶಾಪ್ಸರಸ್ತ್ರೀಯರು ಕ್ರಮದಿಂ ನರ್ತನವಂ ಮಾಳ್ಪರು (ವಿವೇಕ. ೨೬೬). [ ದ್ವಾದಶ + ಅಪ್ಸರ + ಸ್ತ್ರೀ ]

**ದ್ವಾದಶಾಯತನ** (ನಾ). [ಬೌದ್ಧ] ಕಿವಿ, ಚರ್ಮ, ಕಣ್ಣು, ನಾಲಗೆ, ಮೂಗು ಎಂಬ ಪಂಚೇಂದ್ರಿಯಗಳು ಮತ್ತು ಮನಸ್ಸು ಹಾಗು ಪಂಚೇಂದ್ರಿಯ ವಿಷಯಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಮತ್ತು ಧರ್ಮ ಎಂಬ ಹನ್ನೆರಡು ಬಗೆಯ ಆಯತನಗಳ : ಈ ಸ್ಕಂದಪಂಚಕದಲ್ಲೇ ದ್ವಾದಶಾಯತನ ಅಷ್ಟಾದಶ ಧಾತುಗಳು ಎಂದು ವಿಚಾರವಿರುವುದು. ದ್ವಾದಶಾಯತನವೆಂದರೆ ಮನಸ್ಸನ್ನು ಸೇರಿಸಿ ಆರು ಇಂದ್ರಿಯಗಳು, ಧರ್ಮವನ್ನು ಸೇರಿಸಿ ಆರುವಿಷಯಗಳು (ಹಿಂದಸಾ. ೨೯). [ ದ್ವಾದಶ + ಆಯತನ ]

**ದ್ವಾದಶಾಹ** (ನಾ). ೧. ಹನ್ನೆರಡು ದಿನಗಳ ಕಾಲ. ೨. ಹನ್ನೆರಡು ದಿನಗಳಲ್ಲಿ ನೆರವೇರಿಸಬೇಕಾದ ಒಂದು ಯಜ್ಞ : ದ್ವಾದಶಾಹವೆಂಬುದು ಹನ್ನೆರಡು ಹಗಲುಗಳಲ್ಲಿ ನೆರವೇರಿಸಬೇಕಾದ ಒಂದು ಯಜ್ಞ (ಕಕ್ತವಿ. ೯೮). ೩. ಒಬ್ಬ ವ್ಯಕ್ತಿಯು ಮೃತನಾದಾಗ ಹನ್ನೆರಡನೆಯ ದಿನ ಮಾಡುವ ಪಿತೃಕ್ರಿಯೆ ; ಸಪಿಂಡೀಕರಣಾದಿಕರ್ಮ. [ ಸಂ. ]

**ದ್ವಾದಶಿ** (ನಾ). ಚಾಂದ್ರಮಾನದ ಪ್ರತಿಪಕ್ಷದ ಹನ್ನೆರಡನೆಯ ತಿಥಿ : ಮಾಘ ಶುದ್ಧ ದ್ವಾದಶಿ (ಯಪರಾಹ್ಣದೊಳ್) . . . ಸಾಸಿರ್ವರರಸು ಮಕ್ಕಳ್ವೆರಸು ದೀಕ್ಷೆಯಂ ಕೈಕೊಂಡು (ಚಾವುಂಪು. ೧೦೪) ; ದ್ವಾದಶಿಯೊಳ್ ದಿನಾಧಿಪತಿ ಪಂಚಮಿಯೊಳ್ ಮಹಿಜಂ . . . ನಿಲೆ ದಗ್ಧವಾರಂ (ಲೋಕೋಪ. ೦-೪) ; ರಾಮಭಟ್ಟಾರಕರೆಂತುಮಸ್ಖಲಿತಚಿತ್ತದಿಂ ಶುಕ್ಲಧ್ಯಾನಪ್ರವಿಷ್ಟರಾಗಿ ಮಾಘಮಾಸದ ಶುಕ್ಲಪಕ್ಷದ ದ್ವಾದಶಿಯ ಬೆಳಗಪ್ಪಜಾವದೊಳ್ (ಪಂರಾಮಾ. ೧೬-೭೭ ವ) ; ದ್ವಾದಶಿಯೊಳು ಕುಶಶಯನ ಪೂಜೆಯಂ ಮಾಡಿ ಭುಂಜಿಪರ್ (ಜೈಮಿಭಾ. ೨೯-೦೩). [ ಸಂ. ದ್ವಾದಶೀ ]

**ದ್ವಾದಸಿ** (ನಾ). = ದ್ವಾದಶಿ : ಹೇಮಳಂಬಿ ಪ್ರಸಿದ್ಧಂ ಸ್ವಸ್ತಂ ಮಾಸಂಗಡಂ ಕಾರ್ತ್ತಿಕಮಸಿತದಿನಂ ದ್ವಾದಸೀಸೋಮವಾರಂ (ಎಕ. IV, ಹೆಗ್ಗಡ, ೧೮-೨ ; 1057) : ಅಮಾವಾಸೆ ದ್ವಾದಸಿಗೆ ದೋಸೆಗೆ ಉದು ಮು ೧ ಅಕಿ ಮು ೧ (ಸೌಇಇ. IX-ii, ४೫೨-४೭ ; 1450). [ <ಸಂ. ದ್ವಾದಶೀ ]

**ದ್ವಾಪರ** (ನಾ). ೧. ಚತುರ್ಯುಗಗಳಲ್ಲಿ ಮೂರನೆಯದು ; ಮಾನುಷ್ಯಮಾನದಲ್ಲಿ (೮೬೪,೦೦೦ ವರ್ಷಗಳ ಅವಧಿಯನ್ನುಳ್ಳ) ಮೂರನೆಯ ಯುಗ : ದ್ವಾಪರದಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದವೆಂದೆನಯ್ಯ ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದವೆಂದೆನಯ್ಯ (ಅವಚಂ. ೦೩-೫೨) ; ದ್ವಾಪರದ ಮಱೆ ಜವನಿಕೆಯಲೀ ದ್ವಾಪರವೊ ಕೃತಯುಗವೊ ಧರ್ಮದ ರೂಪು ನಾನಾಮುಖವಲವತರಿಸಿತೊ (ಕುವ್ಯಾಸ. ೬-೦೨) ; ಸಾರಸುತನಿಲ್ಲದೆ ತದ್ರಾಜಂ ದ್ವಾಪರದೊಳ್ ಶಿವನ್ಯೆಜೋನ್ನತಭಕ್ತಿ ಮುಕ್ತಿಗೆಂತೆನುತಿರ್ದಂ (ಹಮ್ಮಿರ. ೨-೨) ; ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು! (ಪಾಂಚಜ. ೦೨-೨). ೨. ಎರಡು ಎಂಬ ಸಂಖ್ಯೆಯನ್ನು ಸೂಚಿಸುವ ಚಿಹ್ನೆಯುಳ್ಳ ಪಗಡೆಯ ದಾಳದ ಒಂದು ಮುಖ, – ದುಗವಿರುವ ಮುಖ : ಕೃತದಲ್ಲಿ ನಾಲ್ಕು ಅಂಕಗಳಿರುವುವು. ಆ ಅಂಕವು ಬಿದ್ದರೆ ತ್ರೇತೆ (೩), ದ್ವಾಪರ (೨), ಕಲಿ (೧) ಎಂಬ ಗರಗಳ ಅಂಕಗಳೂ ಸೇರಿ ಹತ್ತಾಗುವವು (ಬೃಹ್ಕಥಾ. ೩೦೭ ಅಡಿಟಿ). ೩. ದ್ವಾಪರಯುಗಪುರುಷ. ೪. ಶಂಕೆ; ಸಂದೇಹ ; ಸಂಶಯ : "ಸಂದೇಹದಲ್ಲಿಯುಂ ದ್ವಾಪರಮೆಂಬುದು" (ಚಲಾಯು. ೦೩^-೩) ; "ಚ(ಕಿ)ತ್ಸಿತವಚನಂ ದ್ವಾಪರಂ" (ವಸ್ತುಕೋ. ೦೩೯-೦೨೬). ೫. ಕಾಳಗ ; ಯುದ್ಧ : "ಯುಗಂ ಕದನಂ ಸಂದೆಗಮಿಂತುಂ ದ್ವಾಪರವೆನಿಕ್ಕುಂ" (ನಾನಾರ. ೯೭). ೬. (ಅಲಂ) ಹಳೆಯ ಕಾಲ ; ಪ್ರಾಚೀನಕಾಲ. [ಸಂ.]

**ದ್ವಾಪರಯುಗ** (ನಾ). = ದ್ವಾಪರ ೧ : ದ್ವಾಪರಯುಗ ಎಂಟುಲಕ್ಷ ಅಱುವತ್ತುನಾಲ್ಕುಸಾವಿರವರುಷದಲ್ಲಿ ಸೌರಾಷ್ಟ್ರಸೋಮೇಶ್ವರದೇವರು ಮೂಲಸ್ಥಾನ (ಆದವ. ४೬-೦೩೧). [ ದ್ವಾಪರ + ಯುಗ ]

**ದ್ವಾಪಾರ** (ನಾ). ೧ = ದ್ವಾಪರ ೧. : ತ್ರಿಪುರಂ ಬೆಂದುದು ರುದ್ರನಿಂ ಕೃತಯುಗ ಪ್ರಾರಂಭದೊಳ್ . . . ದ್ವಾಪಾರದೊಳ್ ಖಾಂಡವಂ ಕಪಿರಾಜಧ್ವಜನಿಂ (ಗದಾಯು. ೧-೨೫) ; ದ್ವಾಪಾರದಲಿ ಭಾವಜಜನಕನಾಗುದವಿಸಿದನು ತ್ರಿಜಗವಱಿಯಲು ಬಾದರಾಯಣನೆಂಬ ನಾಮದಲಿ (ಬಸವು. ೫೪-೩೨). ೨.=ದ್ವಾಪರ ೪ : "ಸರ್ವಸಂದೇಹದಲ್ಲಿ ದ್ವಾಪಾರವೆಂಬುದು" (ಮಂಗರಾ. ೦೩೮-೧). [ <ಸಂ. ದ್ವಾಪರ ]

**ದ್ವಾಮುಷ್ಯಾಯಣ** (ನಾ). ಜನ್ಮ ಕೊಟ್ಟ ತಂದೆ ಮತ್ತು ದತ್ತು ತೆಗೆದುಕೊಂಡ ತಂದೆ ಈ ಇಬ್ಬರಿಗೂ ಉತ್ತರಾಧಿಕಾರಿಯಾಗುವ ಮಗ : ಆದರೆ ನಾವು ದ್ವಾಮುಷ್ಯಾಯಣರು. ನಾವು ದೇವತೆಗಳ ಪುತ್ರರು ಹೇಗೋ ಹಾಗೆಯೇ ದಾನವರಿಗೂ ಪುತ್ರವರ್ಗ (ನಡದಾ. II, ೦೩೮೮). [ ಸಂ. ]

**ದ್ವಾರ** (ನಾ). ೧. ಬಾಗಿಲು : "ದ್ವಾಃ, ದ್ವಾರಂ, ವಳಜಂ–ಈ ೩ ಬಾಗಿಲ್" (ಹಲಾಯು. ೫೦-೦४೫) ; "ವಳಜಮಾ ದ್ವಾರ್ ದ್ವಾರಮೆನಲು ಮನೆವಾಗಿಲಕ್ಕುಂ" (ಮಂಗರಾ. ೫೯-೦೨) ; ಒಂದು ದ್ವಾರದಲ್ಲಿ ಬಂದ ಆತ್ಮಂಗೆ ಹಲವು ದ್ವಾರ ಉಂಟೆಂದು ಹೊಲಬುದಪ್ಪಿ ನುಡಿವವರ ನೋಡಾ (ಮೋಳಿಮಾ. ೧-೧) ; ದ್ವಾರ ಚತುಷ್ಕಾನ್ವಿತಮಂ . . . ನಯನವಿನೋದಾಗರಮೆನಿಪ್ಪ ಪಟಮಂಡಪಮಂ ಸೌಧಮೆರ್ಗೆ೦ದ್ರದತ್ತ ಹಸ್ತಾವಳಂಬನೊಳಪೊಕ್ಕು (ಚಂದ್ರಪು. ೦೩-೧೦४). ೨. ದೇಹದ ನವರಂಧ್ರಗಳು : ಸಪ್ತಧಾತುಮಯ ಒಂಬತ್ತು ದ್ವಾರದಿಂ . . . ಪೂತಿ ಗಂಧ ಕುತ್ಸಿದಾಗರವೆನಿಸುವುದು (ದ್ವಾದಶಾ. ೦೧-೭४೦). 'ನವದ್ವಾರ' ಪರಾ. ೩. ಉಪಾಯ ; ಮಾರ್ಗ ; ದಾರಿ. [ ಸಂ. ]

**ದ್ವಾರಗೊಲ್ಲ** (ನಾ). ಬಾಗಿಲನ್ನು ಕಾಯುವ ಸೇವಕ ; ದ್ವಾರಪಾಲಕ : ಚಂದಮಂದಿರಬಾಗಿಲೊಳು ಮುನಿ ನಿಂದು ನುಡಿದನು ದ್ವಾರಗೊಲ್ಲಗೆ ಬಂದ ಕೌಶಿಕನೆಂದು ನೃಪನಿಗೆ ಇಂದು ತಿಳುಪೆಂದು (ಹಮಚ. ೦೧).

[ ದ್ವಾರ + ಗೊಲ್ಲ$_1$ ]

**ದ್ವಾರನಿಯುಕ್ತ** (ನಾ). ಬಾಗಿಲು ಕಾಯುವ ಕೆಲಸಕ್ಕೆ ನೇಮಕಗೊಂಡವನು ; ದ್ವಾರಪಾಲಕನಾಗಿ ನೇಮಕಗೊಂಡವನು : ರಜತಮಯ ಚತುರ್ಗೋಪುರದೊಳ್ ಕನಕಗದಾಹಸ್ತರ್ ದ್ವಾರನಿಯುಕ್ತರ್ ಜ್ಯೋತಿರಮರನಾಯಕರಿರ್ಪರ್ (ಮಲ್ಲಿಪು. ೦४-೦೩೯). [ ದ್ವಾರ + ನಿಯುಕ್ತ ]

**ದ್ವಾರಪಟ್ಟ** (ನಾ). ೧. ಬಾಗಿಲುವಾಡ. ೨. ಕದ. ೩. ಬಾಗಿಲ ತೆರೆ ; ಬಾಗಿಲಿನ ಪರದೆ. [ ಸಂ. ]

**ದ್ವಾರಪತಾಕೆ** (ನಾ). ಬಾಗಿಲಿಗೆ ಕಟ್ಟಿರುವ ಬಾವುಟ, – ನಿಶಾನೆ : ದ್ವಾರಪತಾಕೆಗಳುಂ . . . ಇಂದ್ರಧ್ವಜಂಗಳೆಂದಿಂತಿವು ನಿಷ್ಕಾರಣದಿನುಡಿದು ಕೆಡೆದೊಡೆ ಧಾರಿಣಿಯಧಿಪತಿಗೆ ಮರಣಮಕ್ಕುಮಮೋಘಂ (ಲೋಕೋಪ. ४-೫೯). [ ದ್ವಾರ + ಪತಾಕೆ ]

**ದ್ವಾರಪಾಲ** (ನಾ). ರಾಜಸೇವಕರಾದ ಹದಿನೆಂಟು ಬಗೆಯ ಪ್ರಧಾನರಲ್ಲಿ ಒಬ್ಬ; ದ್ವಾರನಿಯಂತೃ; ಬಾಗಿಲು ಕಾಯುವವನು: "ದ್ವಾಸ್ಥಃ, ದೌವಾರಿಕಃ . . . ದ್ವಾರಪಾಲಃ, ಪ್ರತೀಹಾರಃ–ಈ ರ ಪಡಿ(ಯ)ಹಾಱಂ" (ಹಲಾಯು. ೭೦-೨೭೦); ಪೌರೋಹಿತಂ ದಂಡನಾಥನಧ್ಯಕ್ಷನಧಿಕಾರಿ ಮಂತ್ರಿಪ್ರಧಾನಂ ಮಹೋಗ್ರಾಣಿ ಭಂಡಾರಿ ಸೇನಾನಾಯಕಂ ಸಂಧಿವಿಗ್ರಹಿ ಪ್ರತಿಹಾರಿಯಂತಸ್ಥಿತಂ ದ್ವಾರಪಾಲಂ ಕರಣಿಕಂ ದಂಡಪಾಣಿ ಕೊಠಾರಿ ಯುವರಾಜನಾ ತಳವಾಱನೆಂಬಿವರು ಭೂರಮಣರಲ್ಲಿ ವಿನಿಯೋಗವಂ ತಾಳ್ದು ಪದಿನೆಣ್ಬರ್ ಪ್ರಧಾನರೆನಿಕುಂ (ಮಂಗರಾ. ೮೦-೧೧); ಬಸವನಿರವಂ ದ್ವಾರಪಾಲರ ದೆಸೆಯೊಳಱಿದು ಮರಳ್ದು (ಬಸಪು. ೩೫-೪೨). [ ದ್ವಾರ + ಪಾಲ್ ]

**ದ್ವಾರಪಾಲಕ, ದ್ವಾರಪಾಳಕ** (ನಾ). ೧. = ದ್ವಾರಪಾಲ: ಪ್ರಜಾಪತಿ ಮಹೀಪಾಲನಂ ದ್ವಾರಪಾಲಕಸಂದರ್ಶಿತಂ ಕಂಡು (ಶಾಂತಿಪು. ೫-೯೦ ವ); ಕರೆಯಿರೆ ಹಿತವರಂ ಕರಣಿಕನಿಯೋಗಪ್ರತತಿಯಂ ಪರಿಚಾರಕರನಾ ದ್ವಾರಪಾಲಕರ (ಬಸಪು. ೩೫-೪೪). ೨. ದೇವಸ್ಥಾನದ ಮುಖ್ಯದ್ವಾರದ ಎರಡೂ ಕಡೆ ಇರುವ ವಿಗ್ರಹ. **ದ್ವಾರಪಾಳಕ**: ೧. ಸಿದ್ಧಾರ್ಥನೆಂಬ ದ್ವಾರಪಾಳಕಂ ಕಂಡು (ಪುಣ್ಯಾಸ್ರ. ೦೦-೨೦ ವ). [ ದ್ವಾರ + ಪಾಲಕ ]

**ದ್ವಾರಪಾಳಕ** 'ದ್ವಾರಪಾಲಕ' ನೋ.

**ದ್ವಾರಪ್ರದೇಶ** (ನಾ). ಬಾಗಿಲಿನ ಸಮೀಪದ ಪ್ರದೇಶ: ಆ ಕಿರಾತಂ ಕೊಂಡೊಯ್ದು ಬೇತಾಳಗುಹೆಯಂ ದೂರಾಂತರದೊಳ್ ತೋಱಲದಱ ದ್ವಾರಪ್ರದೇಶದಲ್ಲಿ (ಪುಣ್ಯಾಸ್ರ. ೭-೭೭ ವ). [ ದ್ವಾರ + ಪ್ರದೇಶ ]

**ದ್ವಾರಬಂಧ** (ನಾ). ೧. ಬಾಗಿಲಿನ ನಿಲುವು; ಕದಗಳಿಗೆ ಆಸರೆಯಾದ ಬಾಗಿಲಿನ ಚೌಕಟ್ಟು: ವಿಚಿತ್ರಮಣಿಮಯೂಖಚಿತ್ರಿತದ್ವಾರಬಂಧಬಂಧುರವುಂ (ಆದಿಪು. ೧೩-೪೬ ವ): ಪವಿಮಣಿಯ ದ್ವಾರಬಂಧಂ ಜಂತೆ (ಕುಮಾಪು. ೦-೫೫); ಮೇಲಿನ ಧಂವನೇಶ್ವರಿ, ದ್ವಾರಬಂಧ, ಗೋಡೆಯ ಹೊರಭಾಗ, ಶಿಖರ ಎಲ್ಲವೂ ಅತ್ಯಂತ ಸೂಕ್ಷ್ಮವಾದ ಕೆತ್ತನೆಗಳಿಂದ ಕೂಡಿವೆ (ಹೊಯ್ಸಳ ವಾ. ೦೦). ೨. ಕದ; ಬಾಗಿಲುಪಡಿ: "ಸಾಮ್ಯದೊಳು ಕುಡುಬದೊಳ್ ದ್ವಾರಬಂಧದೊಳ್ ಪಡಿಯೆನಿಕ್ಕು" (ಶಬ್ದಮಂ. ೯೬).

[ ದ್ವಾರ + ಬಂಧ ]

**ದ್ವಾರವಟ್ಟ** 'ದಾರವಟ್ಟ' ನೋ.

**ದ್ವಾರವಾಟಿಕೆ** (ನಾ). ಬಾಗಿಲುವಾಡ: ಎದ್ದ ಹುಲಿಮುಖ ದ್ವಾರವಾಟಿಕೆ ವಜ್ರದುಕ್ಕಿನ ಲಾಳವಿಂಡಿಗೆಯಿದ್ದ ಬಾಗಿಲ ಹೊಕ್ಕು ನೋಡುತ ಒಳಗೆ ಬರುತಿರ್ದ (ರೇವಣ. ೨-೫). [ <ದ್ವಾರವಟ್ಟ ? ]

**ದ್ವಾರಾ** (ಅ). ಮೂಲಕ; ಮುಖಾಂತರ: ಅಂಚೆ ದ್ವಾರಾ ಪುಸ್ತಕದ ಭಾಗಿ ಈ ದಿನ ಬಂದಿದೆ (ರೂಢಿ). [ ಸಂ. ]

**ದ್ವಾರಾಪೇಕ್ಷೆ** (ನಾ). [ಜೈನ] (ಅಡುಗೆ ಸಿದ್ಧವಾದಾಗ ಗೃಹಸ್ಥನು) ಬಾಗಿಲಲ್ಲಿ ನಿಂತುಕೊಂಡು ಜೈನಸಂನ್ಯಾಸಿಗಳು ಚರಿಗೆಬರುವುದನ್ನು ನಿರೀಕ್ಷಿಸುವಿಕೆ: ವ್ರತೋಪೇತಂ ದೀನಜನತಾಕಲ್ಪಾಂಘ್ರಿಪಂ ಶ್ರೀಯಂ ವಿರಾಕುಳವನನುಭವಿಸುತ್ತುಮಿರ್ದು ಮತ್ತೊಂದು ಪುಣ್ಯದಿನದೊಳನಗಾರಸಮಯದೊಳ್ ದ್ವಾರಾಪೇಕ್ಷೆಯೊಳಿರೆ (ಶಾಂತಿಪು. ೬-೭೯ ವ).

[ ದ್ವಾರ + ಅಪೇಕ್ಷೆ ]

**ದ್ವಾರಾವತೀಪುರ** (ನಾ). ಒಂದು ಊರಿನ ಹೆಸರು: ವೀರಲಕ್ಷ್ಮೀಕಾನ್ತಂ ದ್ವಾರಾವತೀಪುರವರೇಸ್ವ × × × ಗರುಡಧ್ವಜಂ ಸಂಕಚಕ್ರಲಾಂಛನಂ ಶ್ರೀಮನ್ಮಹಾಸಾಮನ್ತಂ (ಸೌಇಇ. XI-1, ೮೬-೦೪; 1050). [ಸಂ.]

**ದ್ವಾರಾವಲೋಕನ** (ನಾ). = ದ್ವಾರಾಪೇಕ್ಷೆ: ತನ್ನ ಭೂಮಿವಿಡಾಯವ ಬಿಟ್ಟು ದ್ವಾರಾವಲೋಕನಕಡಿಯಿಟ್ಟನಂಗಶೃಂಗಾರವೆರಸಿ ಭಕ್ತಿಯಿಂದ (ಭರತ. ೩-೩). [ ದ್ವಾರ + ಅವಲೋಕನ ]

**ದ್ವಾರಿಕ** (ನಾ). = ದ್ವಾರಪಾಲ: "ದ್ವಾರಿಕಂ [ಪಾಠಾಂ. ದೌವಾರಿಕಂ] ದ್ವಾಸ್ಥನೆನೆ ಬಾಗಿಲವನಕ್ಕು" (ಮಂಗರಾ. ೭೯-೫). [ ಸಂ. ]

**ದ್ವಾರಿಗ** (ನಾ). = ದ್ವಾರಪಾಲ: ಸುಂಕದೊಳ್ ನಿಯುಕ್ತಂ, ಸುಂಕಿಗಂ. ಏವಂ ಬಾಗಿಲಿಗಂ, ದ್ವಾರಿಗಂ, ಭಂಡಾರಿಗಂ (ಶಬ್ದಾನು. ೪೧೮ ಪ್ರಯೋ).

[ ದ್ವಾರ + – ಇಗ ]

**ದ್ವಾವತಿ** (ನಾ). ಒಂದು ಊರಿನ ಹೆಸರು: ಚಂದ್ರಾದಿತ್ಯಕೀರ್ತಿಕಳಸಾಗೆಯುಂ ಚಕ್ರಮೆ ಬೇಳವಾಗೆಯುಂ ವಜ್ರಕವಚಮೆ ಕಂಚುಳಿಕೆಯಾಗೆಯುಂ ದ್ವಾವತಿಯ ಭಂಡಮೆ ತಾಯಿ [ಭ] ಂಡವಾಗೆಯುಂ ಐಸಂಬರಮ ಆಮಾಳ್ಕ ವಸುಗಳಾಗೆಯುಂ ನಡೆದುಂ ನುಡಿದುಂ ಸಂದ . . . ಸ್ವಾಮಿಗಳ್ಗೆ ಸಾಷ್ಟಾಂಗಮೆಱಗಿ ಪೊಡಮಟ್ಟು (ಕಇ. IV, ೫೩-೦೩; 1000 ?) [ ಇದು 'ದ್ವಾರಾವತಿ' ಎಂಬುದರ ಅಪಲಿಖಿತವಿರಬಹುದೆ ? ]

**ದ್ವಾವಿಂಶತಿ** (ನಾ). ಒಂದು ಸಂಖ್ಯೆ; ಇಪ್ಪತ್ತೆರಡು: ದಶಸಹಸ್ರಧರಣೀಶ್ವರರೊಡನೆ ಜನೇಶರೂಪಮಂ ತಾಳ್ದಿ . . . ಅಚ್ಯುತಕಲ್ಪದೊಳ್ ದ್ವಾವಿಂಶತಿಪಾರಾವಾರಪರಮಾಯುಷ್ಯನೆನಚ್ಯುತೇಂದ್ರನುಮಾಗಿ (ಆದಿಪು. ೩-೫೭ ವ); ಆ ಕಲ್ಪದ್ವಯದ ಕಲ್ಪವಾಸಿಗರೆಲ್ಲಂ ತ್ರಿಹಸ್ತೋತ್ಸೇಧರುಂ ದ್ವಾವಿಂಶತಿ ಸಾಗರೋಪಮಾಯುಷ್ಯರುಂ ಮನಃಪ್ರವೀಚಾರದಿವ್ಯಸುಖಿರುಮಪ್ಪರ್ (ಸುಕುಮಾ. ೦೦-೬೮ ವ); ಉತ್ಕೃಷ್ಟದಿಂ ಯಥಾಸಂಖ್ಯೆಯಿಂ ಏಕ ತ್ರಿ ಸಪ್ತ ದಶ ಸಪ್ತದಶ ದ್ವಾವಿಂಶತಿ ತ್ರಯಸ್ತ್ರಿಂಶತ್ಸಾಗರೋಪಮಮಪ್ರಮಿತಂ (ತತ್ತ್ವಪ್ರ. ೩೨). [ ಸಂ. ]

**ದ್ವಾವಿಂಶತಿಜಲಧಿ** (ನಾ). [ಜೈನ] ಇಪ್ಪತ್ತೆರಡುಸಾಗರವೆಂಬ ಪ್ರಮಾಣದಷ್ಟು ಕಾಲ: ಅಖಿಲಸುಖಮನುಂಡರ್ ದ್ವಾವಿಂಶತಿಜಲಧಿವರೆಗಮಿಂದ್ರಪ್ರತೀಂದ್ರರ್ (ಶಾಂತಿಪು. ೭-೦೦೦). [ ದ್ವಾವಿಂಶತಿ + ಜಲಧಿ ]

**ದ್ವಾವಿಂಶತಿಪರೀಷಹ** (ನಾ). [ಜೈನ] ಕ್ಷುತ್ತು, ಪಿಪಾಸೆ (ತೃಷ್ಣೆ), ಶೀತ, ಉಷ್ಣ, ದಂಶಮಂಕ್ಷಿಕ (ದಂಶಮಶಕ), ನಗ್ನತೆ, ಅರತಿ, ಸ್ತ್ರೀ, ಚರ್ಯೆ, ಶಯ್ಯೆ, ನಿಷದ್ಯೆ, ಆಕ್ರೋಶ, ವಧೆ, ಯಾಚನೆ, ಅಲಾಭ, ಅದರ್ಶನ, ರೋಗ, ಸತೃಣಸ್ಪರ್ಶ, ಪ್ರಜ್ಞೆ, ಅಜ್ಞಾನ, ಮಲ, ಸಸತ್ಕಾರಪುರಸ್ಕಾರ ಎಂಬ ಇಪ್ಪತ್ತೆರಡು ಬಗೆಯ ಪರೀಷಹಗಳು: ಭಟ್ಟಾರಕರ್ ದಶಕುಲಧರ್ಮಮುಮಂ ದ್ವಾದಶಾನುಪ್ರೇಕ್ಷೆಯುಮಂ ದ್ವಾವಿಂಶತಿಪರೀಷಹಂಗಳುಮಂ . . . ಕೇಳ್ದು (ಜಾಪುಂಪು. ೮೩); ಮತ್ತಂ ತ್ರಿದಂಡ ತ್ರಿಶಲ್ಯ ತ್ರಿಗಾರವಂಗಳಂ ಕ್ರಮಕ್ರಮದಿಂ ಕಟಲ್ಚಿ ಕಳೆಯುತ್ತುಂ . . . ದ್ವಾವಿಂಶತಿಪರೀಷಹಮುಮಂ ತನ್ನಂ ಮಿಗಲೀಯದೆ ತಳೆದು (ಸುಕುಮಾ. ೩-೪೬ ವ). 'ಪರೀಷಹ' ಪರಾ.

[ ದ್ವಾವಿಂಶತಿ + ಪರೀಷಹ ]

**ದ್ವಾವಿಂಶತಿಶ್ರುತಿ** (ನಾ). [ಸಂಗೀತ] ನಾದಾಂತಾ, ನಿಷ್ಕಲಾ, ಗೂಢಾ, ಸಕಲಾ, ಮಧುರಾ, ಕಥಾ, ಏಕಾಕ್ಷರಾ, ಭೃಂಗರೀತಿ, ರಥಗೀತಿಕಾ, ಸಂಪ್ರೋಕ್ತಾ, ರಂಜಿತಾ, ಪೂರ್ಣಾ, ಅಲಂಕಾರಿಣೀ, ವಾಣೀಶೀ, ಮಣಿಕಾ, ತ್ರಿಸ್ಥಾನಾ, ಲಲಿತಾ, ಸುಸ್ವರಾ, ಭಾಷಾಂಗಾ, ಪಾಲಿಕಾ, ಸಂಪೂರ್ಣಾ, ಪ್ರಸನ್ನಾ ಎಂಬ ಇಪ್ಪತ್ತೆರಡು ವಿಧವಾದ ಶ್ರುತಿಗಳು: ಸಪ್ತಸ್ವರಗಳೇ ಅಲ್ಲದೆ ದ್ವಾವಿಂಶತಿಶ್ರುತಿ, ಅವುಗಳ ಪ್ರದರ್ಶನಕ್ಕೆ ಉಪಯೋಗಿಸಲಾಗುವ ಧ್ರುವವೀಣೆ . . . ಇವುಗಳನ್ನೆಲ್ಲಾ ವಿವರಿಸಿದ್ದಾನೆ (ಭಾರದ. ೫೩೮). 'ಶ್ರುತಿ' ಪರಾ.

[ ದ್ವಾವಿಂಶತಿ + ಶ್ರುತಿ ]

**ದ್ವಾಶಿ** 'ದೋಸೆ' ನೋ.

**ದ್ವಾಸ್ಥ** (ನಾ). = ದ್ವಾರಪಾಲ: "ದೌವಾರಿಕಂ ದ್ವಾಸ್ಥ [ಪಾಠಾಂ. ಸ್ಥ] ನೆನೆ ಬಾಗಿಲವನಕ್ಕು" (ಮಂಗರಾ. ೭೯-೫). [ ಸಂ. ]

**ದ್ವಿ** (ನಾ). ೧. ಒಂದು ಸಂಖ್ಯೆ; ಎರಡು: ದ್ವಿ ತ್ರಿ ಪದರಚಿತವೃತ್ತಿ ವಿಚಿತ್ರಾಪವರ್ಗ್ಯದ್ಯಲಂಕ್ರಿಯಾಸಮುಪೇತಂ . . . ಪಾಂಚಾಲರೀತಿಯೆನೆ ಪೆಸರ್ವಡೆಗುಂ (ಕಾವ್ಯಾವ. ೭೮೪); ಬೆ, ಬೆನ್ನಿ, ಯಮ, ನಯನ, ಅಕ್ಷಿ, ದ್ವಂದ್ವ, ದ್ವ, ದ್ವಿ, ದ್ವಯ, ದಂಪತಿ ಇಂತಿನಿತುಂ ೨ಕ್ಕೆ ಹೆಸರು (ವ್ಯವಹಾ. ೧೦-೦೨); ಏಕ ದ್ವಿ ತ್ರಿ ಚತುಃ – ಪಂಚಾಂಕಲಿತಾರ್ಥಂಗಳಾಗಿ ಬಿಟನೊಳವು (ಶಮದ. ೨೩). ೨. = ದ್ವಿವಚನ: ಏಕ ದ್ವಿತ್ವ ಬಹುತ್ವ ಮನೇಕ ದ್ವಿ ಬಹುತ್ವವಸ್ತುಗಳೊಳಾಚರಿಪರ್ (ಶಮದ. ೯೪). [ಸಂ.]

**ದ್ವಿಕ** (ನಾ). ೧. ಎರಡನ್ನು ಒಳಗೊಂಡುದು; ಯುಗಳ; ಜೋಡಿ; ಜೊತೆ: ಇನ್ನು ಕೆಲವು ದ್ವಿಕ (ಜೋಡಿ)ಗಳಾಗಿಯೂ ತ್ರಿಕ(ಮೂರು ಮೂರು) ಗಳಾಗಿಯೂ ಅಥವಾ ಅನೇಕಗಳಾಗಿಯೂ ಇವೆ (ಜ್ಯೋತಿರ್ವಿ. ೨೦). ೨. ಕಾಗೆ. ೩. ಚಕ್ರವಾಕ. [ಸಂ.]

**ದ್ವಿಕರ್ಮ** (ನಾ). ೧. ಎರಡು ಕರ್ಮಗಳು; ಪಾಪ ಮತ್ತು ಪುಣ್ಯ ಎಂಬ ಕರ್ಮ. ೨. [ವ್ಯಾಕ] ಎರಡು ಕರ್ಮಪದಗಳು: (೬).

[ದ್ವಿ + ಕರ್ಮ]

**ದ್ವಿಕರ್ಮಕ** (ನಾ). [ವ್ಯಾಕ] ಎರಡು ಕರ್ಮಪದಗಳನ್ನೊಳಗೊಂಡ ಕ್ರಿಯಾಪದ: ದೋಹನಾದಿಗಳೊಳ್ ದ್ವಿಕರ್ಮಕಮುಂಟು (ಶಮದ. ೧೨೮ ಪ್ರಯೋ); ಕೆಲವು ಧಾತುಗಳಿಗೆ ಎರಡು ಕರ್ಮಪದಗಳಿರುವುದುಂಟು. ಅಂಥವಕ್ಕೆ ದ್ವಿಕರ್ಮಕಗಳೆಂದು ಹೆಸರು (ಮಧ್ಯಮ. ೦೭೭). [ಸಂ.]

**ದ್ವಿಖುರ** (ನಾ). ೧. ಎರಡು ಗೊರಸು. ೨. ಸೀಳಿದ ಗೊರಸನ್ನು ಹೊಂದಿರುವ ಕುದುರೆ: ಹಸುಗಳ ಗೊರಸಿನಂತೆ ಯೆರಡು ಗೊರಸು ಗಳುಳ್ಳ ಅಶ್ವವು ದ್ವಿಖುರವೆನಿಸಿಕೊಳ್ಳುವುದು (ಸೌಗಂಧಿ. ೩೧೨-೧೦).

[ದ್ವಿ + ಖುರ]

**ದ್ವಿಗು** (ನಾ). [ವ್ಯಾಕ] ತತ್ಪುರುಷ ಸಮಾಸದ ಒಂದು ಭೇದ; ಪೂರ್ವ ಪದವು ಸಂಖ್ಯಾವಾಚಕವಾಗಿರುವ ತತ್ಪುರುಷ: ಉತ್ತರಪದದರ್ಥಂ ಮೆಯ್ವೆತ್ತಿರೆ ತತ್ಪುರುಷಮಂತದೇಕಾಶ್ರಯಮಾಗುತ್ತುಮಿರೆ ಕರ್ಮಧಾರಯಮತ್ತಂ ದ್ವಿಗುಸಂಜ್ಞಮದುವೆ ಸಂಖ್ಯಾದಿಪದಂ (ಕಾವ್ಯಾವ. ೨೦೪); ತತ್ಪುರುಷಂ ಸಮಂತದೇಕಾಶ್ರಯಮಾಗೆ ಕರ್ಮಧಾರಯಮಕ್ಕುಂ ಅದು ಸಂಖ್ಯಾಪೂರ್ವಕಮಾಗೆ ದ್ವಿಗುವಕ್ಕುಂ (ಶಮದ. ೧೭೪ ವೃತ್ತಿ); ವಿಶೇಷಣವು ಸಂಖ್ಯಾವಾಚಕವಾಗಿದ್ದರೆ ದ್ವಿಗು. ಉದಾ. ಒಂದು + ಪಿಡಿ = ಒರ್ಪಿಡಿ (ಕೈಪಿಡಿ. ೨೦). [ಸಂ.]

**ದ್ವಿಗುಣ** (ನಾ). ೧. ಎರಡರಷ್ಟು; ದುಪ್ಪಟ್ಟು; ಎರಡರಿಂದ ಗುಣಿಸಿದುದು: ದ್ವಿಗುಣಂ ಗುಡಮಾಗಿರೆ ಬೇಸಗೆಯೊಳ್ . . . ಅಷ್ಟಗುಣಂ ಮಾಗಿಯೊಳಿಂಬಿನೆ ಪೊಗೆಗೆಡೆಗೊಟ್ಟೆಂದು ಸಾರ್ದು ತಾಂ ಲೇಸಕ್ಕುಂ (ಲೋಕೋಪ. ೭-೫೫); ನೆಗಟ್ದ ನೃಪರೊಳಗೆ ಮುಂ ಕವಿತೆಗೆ ಮುಂಜಂ ಭೋಜನುತ್ಪಲಂ ಶ್ರೀಹರ್ಷಂ ಮಿಗಿಲವರಿಂ ಬಲ್ಲಾಳಂ ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ (ಯಶೋಚ. ೦-೦೭). ೨. ರಜೋಗುಣ ಮತ್ತು ತಮೋಗುಣವೆಂಬ ಎರಡು ಗುಣ: [ಮಿಗೆ ರ]ಣದೊಳ್ ಪರಿಚಿತ[ಮಾ] ದ್ವಿಗುಣಮದೋರಂತೆ ಮಟ್ಟಮಿರ್ದುದು ಮತ್ತಂ ವಿಗತವಿಕಾರಾಕಾರಂ ಸೊಗಯಿಸುಗುಂ ನಿನ್ನ ರೂಪು ಶಾಂತಾಧಾರಂ (ಕವಿರಾ. ೩-೧೯೭).

ದ್ವಿಗುಣ ದ್ವಿಗುಣ (ದ್ವಿರುಕ್ತಿ): ಸುತ್ತಿರ್ದುದು ನಂದೀಶ್ವರ ಸಮುದ್ರ ಮಿಂತು ದ್ವಿಗುಣದ್ವಿಗುಣ ವಿಸ್ತಾರದಿಂ (ಸುಕುಮಾ. ೧೧-೩೪ ವ). [ಸಂ.]

**ದ್ವಿಗುಣಂಗೆಯ್** (ಕ್ರಿ). ಎರಡರಿಂದ ಗುಣಿಸು; ಇಮ್ಮಡಿಗೊಳಿಸು; ಹೆಚ್ಚು ಮಾಡು: ಬಗೆದಾವೃತ್ತಪದಾಂತಮೆಯ್ದುವಿನೆಗಂ ಸಂಖ್ಯಾಂಕಮಂ ಸೂಕ್ತದಿಂ ದ್ವಿಗುಣಂಗೆಯ್ದು (ಛಂದೋಂಬು. ೬-೨೬೨).

[ದ್ವಿಗುಣ + ಕೆಯ್$_1$]

**ದ್ವಿಗುಣಗೊಳ್ಳು** (ಕ್ರಿ). ಎರಡರಷ್ಟಾಗು; ಇಮ್ಮಡಿಯಾಗಂ; ಹೆಚ್ಚಾಗು: ನೆಕ್ಕಲ್ದೊೀವ್ ದ್ವಿಗುಣಗೊಂಡ ಆಶ್ಚರ್ಯದಿಂದ ನುಡಿದನು (ಪುಸರು. ೨೦೩).

[ದ್ವಿಗುಣ + ಕೊಳ್ಳು$_1$ (< ಕೊಳ್$^1$)]

**ದ್ವಿಗುಣಿ** (ನಾ). ೧. ಎರಡರಷ್ಟು ಗುಣ ಉಳ್ಳ ವ್ಯಕ್ತಿ ಅಥವಾ ವಸ್ತು. ೨. ಎರಡರಷ್ಟು ಆದುದು; ಇಮ್ಮಡಿಯಾದುದು.

[ಸಂ. ದ್ವಿಗುಣಿನ್]

**ದ್ವಿಗುಣಿತ** (ನಾ). ಎರಡರಷ್ಟಾದುದು; ಇಮ್ಮಡಿಯಾದುದು: ದೇವಾಲಯದ ಗೋಡೆ ಮತ್ತು ಮೇಲ್ಛಾವಣಿ ದ್ವಿಗುಣಿತವಾಗಿವೆ(ಹೊಯ್ಸವಾ.೧೨೩); ವಣಿಜನ ವೃತ್ತಾಂತದಿಂದ ನಮ್ಮ ಮಹಾರಾಜನ ದುಃಖವು ದ್ವಿಗುಣಿತವಾಯಿತು (ಶಾಕುಂತ. ೯೪-೧೦). [ಸಂ.]

**ದ್ವಿಗುಣಿಸು** (ಕ್ರಿ). ಎರಡರಿಂದ ಗುಣಾಕಾರ ಮಾಡು; ಹೆಚ್ಚಿಸು; ಇಮ್ಮಡಿಗೊಳಿಸು: ದ್ವಿಗುಣಿಸಿ ವೃತ್ತಮನದಱೊಳ್ ಬಗೆದೊಂದಂ ಕಳೆದೊಡಕ್ಕುಮಂಗುಲಿಗಳವಂ ಮಿಗಲಾರದದ್ವಯೋಗದೆ ನೆಗಟ್ದುಪದೇಶದೊಳಪರಿಮಿತಂ ಪ್ರಸ್ತಾರಂ (ಛಂದೋಂಬು. ೬-೨೬೬); ಯುವತಿಯರೋರೊರ್ವರ ತಲೆನವಿರಂ ತಲೆನವಿರೊಳಡಸಿ ಕಟ್ಟುತ್ತುಂ ಮೋದುವುದುಂ ದ್ವಿಗುಣಿಸಿದುದು ಹಾರವಂ ಪ್ರತಿಧ್ವಾನದಿಂ ಜಿನೇಂದ್ರಾಲಯದೊಳ್ (ಶಾಂತಾಪು. ೧೪-೧೦೧); ವದನಾಬ್ಜಾಸವಗಂಧಲಂಪಟರಟದ್ಭೃಂಗಂಗಳಂ ಸೋಯಲೆತ್ತಿದ ನೀಳೋತ್ಪಳಮಾಳೆಯುಂ ದ್ವಿಗುಣಿಸಲ್ಕಾರ್ತತ್ತು . . . ಅಪಾಂಗಾಳೋಕನಂ ನಲ್ಲಳಾ (ಕಾವ್ಯಾವ. ೯೩೦); ದ್ವಿಗುಣಿಸಿದುವು ಶಕ್ರನ ನಿಮಿರ್ದೊಗೆವ ಭುಜಂಗಳ ನಖಂಗಳಿಂ . . . ನವಗ್ರಹಂಗಳ ರುಚಿಗಳ್ (ಪುಷ್ಪದ. ೦೨-೩೮). [ದ್ವಿಗುಣ + – ಇಸು$_3$]

**ದ್ವಿಗುಣೀಕೃತ** (ಗು). ಎರಡರಷ್ಟಾಗಿ ಮಾಡಿದ; ದುಪ್ಪಟ್ಟಾಗಿಸಿದ; ಇಮ್ಮಡಿಗೊಳಿಸಿದ: ತಪ್ತತಪನೀಯವರ್ಣಂ ಸಪ್ತಾರ್ತಿಪ್ರಮಾಣನಾಪ್ರಥಮಂ ಮಹಿಪ್ರಾಪ್ತಾವಬೋಧನುಪಚಿತದೀಪ್ತಿದ್ವಿಗುಣೀಕೃತಾಂಗನನು ಪಮವಿಭವಂ (ವರ್ಧಮಾ. ೬-೪೭); ದ್ವಿಗುಣೀಕೃತಪ್ರಕೃತಿಪ್ರಮೋದನುಂ . . . ದಶಾಂಗಭೋಗಸಂಗತನುಮಾಗಿ (ಚಂದ್ರಪು. ೭-೩೫ ವ).

[ಸಂ.]

**ದ್ವಿಗುಣೀಭೂತ** (ಗು). ಎರಡರಷ್ಟಾದ; ಇಮ್ಮಡಿಯಾದ: ಅದು ಕಾಣಲೊಡಂ ದ್ವಿಗುಣೀಭೂತ ಶೋಕೋದ್ರೇಕನಾಗಿ (ಚಂದ್ರಪು. ೫-೧೧ವ).

[ಸಂ.]

**ದ್ವಿಗುಸಮಾಸ** (ನಾ). = ದ್ವಿಗು: ದ್ವಿಗು=ದ್ವಿಗುಸಮಾಸ (ಶಮದ. ೧೭೪ ಅಡಿಟಿ); ದ್ವಿಗುಸಮಾಸಕ್ಕೆ–ಪಂಚೇಂದ್ರಿಯಾಣಿ, ಸಪ್ತಾಂಗಾನಿ (ಶಬ್ದಾದ. ೪೭).

[ದ್ವಿಗು + ಸಮಾಸ]

**ದ್ವಿಚರಮ** (ನಾ). [ಜೈನ] ಎರಡು ಸಲ ಮಾನವಜನ್ಮವನ್ನು ಹೊಂದಿ ಮುಕ್ತನಾಗುವವನು; P ವಿಜಯಾದಿ ವಿಮಾನಗಳಿಂದ ಚ್ಯುತನಾಗಿ ಮನುಷ್ಯನಾಗಿ ಹುಟ್ಟಿ ಸಂಯಮಿಯಾಗಿ ಮತ್ತೆ ವಿಜಯಾದಿಗಳಲ್ಲಿ ಹುಟ್ಟಿ ಅಲ್ಲಿಂದ ಚ್ಯುತನಾಗಿ ಮತ್ತೆ ಮಾನವನಾಗಿ ಸಿದ್ಧಿಯನ್ನು ಪಡೆಯುವವನು: ದ್ವಿಚರಮಾಃ – ದ್ವಿಚರಮರಪ್ಪರ್ (ತತ್ತ್ವಾಪ್ರ. ೨೨೩).

[ಸಂ.]

**ದ್ವಿಚರಮತ್ವ** (ನಾ). [ಜೈನ] ಎರಡುಸಲ ಮಾನವಜನ್ಮವನ್ನು ಹೊಂದಿ ಮುಕ್ತಿ ಹೊಂದುವಿಕೆ; P ಒಂದು ಜನ್ಮ, ಎರಡು ಜನ್ಮ ಮತ್ತು ಅನೇಕ ಜನ್ಮಗಳಲ್ಲಿ ಮುಕ್ತಿಯನ್ನು ಪಡೆಯುವುದೆಂದು ಮೂರು ಬಗೆಗಳಿವೆ: ಪರಮೋತ್ಕೃಷ್ಟತ್ವದಿಂ ಅವರ್ಗೆ ಸರ್ವಾರ್ಥಸಿದ್ಧಿನಾಮಮನ್ವರ್ಥಾಭಿಧಾನಮಕ್ಕುಂ ಅದಱಿಂ ಅವರ್ಗೆ ಏಕಚರಮತ್ವಸಿದ್ಧಿಯಕ್ಕುಂ ದ್ವಿಚರಮತ್ವಂ ಮನುಷ್ಯಶರೀರಾಪೇಕ್ಷೆಯಿಂ ಅಪ್ಪುದು (ತತ್ತ್ವಾಪ್ರ. ೨೨೩).

[ಸಂ.]

**ದ್ವಿಚರಮದೇಹ** (ನಾ). = ದ್ವಿಚರಮ : ದ್ವಿಚರಮದೇಹನೆ ನೀನೀ ಸಚರಾಚರಸೇವ್ಯಂ (ಮಹಾನೇ. ೧೬-೭೫). [ ದ್ವಿಚರಮ + ದೇಹ ]

**ದ್ವಿಚರಮಸಮಯ** (ನಾ). [ಜೈನ] ಎರಡನೆಯ ಸಲ ಮಾನವತ್ವವನ್ನು ಪಡೆಯುವ ಅವಧಿ : ಸ್ವಕೀಯ ದ್ವಿಚರಮಸಮಯದೊಳನ್ನತರ . . . ನೀಚೈರ್ಗೋತ್ರಂಗಳೆಂಬ ದ್ವ್ಯಧಿಕ ಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಮಹಾನೇ. ೧೬-೧೧೧ ವ); ಮುಂದೆ ಈ ಗುಣಸ್ಥಾನದ ದ್ವಿಚರಮ ಸಮಯದಲ್ಲಿ ೭೨ ಕರ್ಮಪ್ರಕೃತಿಗಳು ತೊಲಗುವುವು (ಜೈನಪ. ೩೮೪). 'ದ್ವಿಚರಮತ್ವ' ಪರಾ. [ ದ್ವಿಚರಮ + ಸಮಯ ]

**ದ್ವಿಚಾರಿಣಿ** (ನಾ). ಇಬ್ಬರು ಪುರುಷರಲ್ಲಿ ಅನೈತಿಕ ಸಂಬಂಧವುಳ್ಳವಳಂ: ದಿಲ್ಲೀಶ್ವರನ ಸೇವೆಯನ್ನು ಮಾಡಿರುವುದರಿಂದ ದ್ವಿಚಾರಿಣಿಯಾಗೆನು (ಕಪಾಕುಂ. ೮೦). [ ಸಂ. ದ್ವಿಚಾರಿಣೀ ]

**ದ್ವಿಜ** (ಗು). ೧. ಎರಡು ಸಲ ಹುಟ್ಟಿದ. (ನಾ). ೨. ಬ್ರಾಹ್ಮಣ : "ಬ್ರಾಹ್ಮಣಃ, ಬಾಡವಃ. ವಿಪ್ರಃ . . . ದ್ವಿಜಃ – ಈ ೧೦ ಬ್ರಾಹ್ಮಣಂ" (ಹಲಾಯು. ೬೫-೨೩೭) ; ವ್ರತಸಂಸ್ಕಾರದಿನಾದರ್ ವಿತತಗುಣರ್ ಬ್ರಾಹ್ಮಣರ್ ಕ್ರಿಯಾಸಂತತಿ ಸಂಯುತರುಚಿತಸತ್ಕ್ರಿಯಾವಿರಹಿತನಾತಂ ನಾಮಧಾರಕಂ ದ್ವಿಜನಲ್ಲಂ (ಆದಿಪು. ೧೫-೧೫) ; ದೀನಾನಾಥರ್ಗೆ ವೃದ್ಧ ದ್ವಿಜ ಮುನಿನಿಕರಕ್ಕಂದೆಡರ್ ಪೋಪಿನಂ . . . ಧರ್ಮಜಂ ಸೂಱೆಗೊಟ್ಟಂ (ಪಂಪಭಾ. ೬-೪೦) ; ದ್ವಿಜನಾಚಾರತೆಯುಳ್ಳವಂ (ಸೋಮೇಶ. ೯) ; ಅರಸುಗಳಿಗಿದು ವೀರ ದ್ವಿಜರಿಗೆ ಪರಮವೇದದ ಸಾರ . . . ಕಾವ್ಯಕೆ ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ (ಕುವ್ಯಾಆ. ೦-೧೯). ೩. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಣಗಳಲ್ಲಿ ಯಾವುದಾದರೊಂದರಲ್ಲಿ ಜನಿಸಿದವನು ; ☞ ಉಪನಯನವನ್ನು ಮತ್ತೊಂದು ಜನ್ಮವೆಂದು ಪರಿಗಣಿಸುತ್ತಾರೆ. ಸ್ಮೃತಿಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಣಗಳಿಗೆ ಉಪನಯನದ ಯೋಗ್ಯತೆಯಿದೆ: "ಬ್ರಾಹ್ಮಣಃ, ಕ್ಷತ್ರಿಯಃ, ವೈಶ್ಯಃ –ಈ ಮೂಱು ವರ್ಣಮಂ ದ್ವಿಜರೆಂಬುದು" (ಹಲಾಯು. ೬೫-೨೩೮) ; "ನಾಲ್ಕುವರ್ಣಂಗಳೊಳು ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯನೆಂಬೀ ಮೂಱುವರ್ಣಂ ದ್ವಿಜಾಖ್ಯಮಕ್ಕುಂ" (ಮಂಗರಾ. ೭೪-೦). ೪. ಮೊಟ್ಟೆಯಾಗಿ ಒಮ್ಮೆ, ಮೊಟ್ಟೆಯೊಡೆದು ಒಮ್ಮೆ ಹೀಗೆ ಎರಡು ಸಲ ಹುಟ್ಟುವುದು ; ಹಕ್ಕಿ, ಹಾವು, ಗೋಸುಂಬೆ ಇತ್ಯಾದಿ : "ಪತತ್, ಪತಂಗಃ . . . ವಾಜೀ, ದ್ವಿಜಃ – ಈ ೨೬ ಹಕ್ಕಿ" (ಹಲಾಯು. ४೦-೮೫) : "ಶಕುನಿ . . . ದ್ವಿಜಂ ಪಕ್ಷಿ ವಿಖಗಂ ವಿಹಾಯಸಂ ಪತಗಂ ಪತಂಗಂ . . . ಶಕುಂತಿಯೆನೆ ಪಕ್ಷಿ" (ಮಂಗರಾ. ೫೦-೧) ; ದ್ವಿಜರೋಳ್ಪಂಡಿತ ಕಾಮವಾಜಿಮುನಿ ನಾಮಾನಂದ ಸಂತಾನ ಹಾ ಸುಜನ ಶ್ರೀನಗವಾಸ ಚೆಂಗುಡಿಯ ಮೂಗೆನ್ನಾತ್ಮಚೈತನ್ಯಮೇ (ಹಮ್ಮೀರ. ४-೩೦). ೫. ಹಲ್ಲು ; ದಂತ : "ದಶನಃ, ದ್ವಿಜಃ, ದಂತಃ, ರದಃ, ರದನಃ–ಈ ೫ ಪಲ್ (ಹಲ್ಲು)" (ಹಲಾಯು. ೮೭-೩೭೩) ; "ಸಾಲುವಲ್ಲು ದ್ವಿಜಂ ರದನಂ ರದಂ ದಶನಮಾ ದಂತಮೆಂದೆನಿಕ್ಕುಂ" (ಮಂಗರಾ. ೯४-४). 'ದ್ವಿಜಹತಿ' ಪರಾ. ೬. ನಕ್ಷತ್ರ ; ತಾರೆ. 'ದ್ವಿಜಸಮೂಹ' ಪರಾ. ೭. ಧಾನ್ಯಸಮೂಹ. ೮. ಚಂದ್ರ ; ಶಶಿ : "ವಿಪ್ರರೊಳು ದಂತದೊಳು ಚಂದ್ರನೊಳು ಪಕ್ಷಿಯೊಳು ಸರ್ಪನೊಳ್ ತಾರೆಯೊಳ್ ದ್ವಿಜಮಕ್ಕು" (ಮಂಗರಾ. ೧೫೦-४೯) ; "ಅಂಡಜ ಗೃಹೋರಗ ಭೂಸುರ ದಂತ ಚಂದ್ರನೊಳ್ ಧಾನ್ಯಸಮೂಹದೊಳ್ ಸರಟದೊಳ್ ಭಗಣಂಗಳೊಳುಂ ದ್ವಿಜಾಂಕಿತಂ" (ನಾನಾರ. ೩೭). ೯. ಕಿವಿಯ ಆಭರಣ ; ಓಲೆ : "ಖಗಕುಲ ಸರ್ಪಂ ವಿಪ್ರಂ ಮೃಗಧರ ನಕ್ಷತ್ರ ಧಾನ್ಯ ತಾಟಂಕಂ ಹಲ್ ಬಗೆಗೆಂಟು ನಾಮ ನೋಡಲ್ ಜಗಕೀ ದ್ವಿಜ ಶಬ್ದ" (ನಾನಾಕಂ. ೭೯).
[ ಸಂ. ]

**ದ್ವಿಜಕುಲ** (ನಾ). ೧. ಬ್ರಾಹ್ಮಣರ ಕುಲ, – ಜಾತಿ : ದ್ವಿಜಕುಲತಿಲಕೋಪಮರಗ್ರಜಾನುಜರ್ ಮಲ್ಲಪಯ್ಯ ಪುನ್ನಮಯ್ಯಂಗಳ್ (ಶಾಂತಿಪು. ೧೨-೬೩) ; ದ್ವಿಜಕುಲ ಸಂಜಾತರ್ಗಡ ನಿಜದಿಂ ನೀಮಾರ್ಯಪುರುಷರುಂಗಡ (ವೃಷವಿ. ೩೦-೧೩). ೨. ಬ್ರಾಹ್ಮಣರ ಕುಲದಲ್ಲಿ ಜನಿಸಿದವನಂ ; ಬ್ರಾಹ್ಮಣ : ಕುಡುವುದೆ ಕನ್ನೆಯಂ ದ್ವಿಜಕುಲಂಗಿದು ವಿಶ್ವನರೇಂದ್ರವೃಂದದೊಳ್ ತೊಡರ್ದ ಪರಾಭವಂ (ಪಂಪಭಾ. ೩-೬೬) ; ದ್ವಿಜಕುಲನೆನಿಸುವನೀ ಪ್ರವ್ರಜಿತದೊಳೆಸಗಿದೊಡೆ ದೋಷಮುಂಟೆಂದು ಮನುವ್ರಜವಾಕ್ಯಮುಂಟು (ಸುಕುಮಾ. ೩-೩೦). ೩. ಹಕ್ಕಿಗಳ ಗುಂಪು : ಮಾಂಸವನಿಕ್ಕಿಯಾ ದ್ವಿಜಕುಲಕೆ ಸತ್ರವನಿಕ್ಕಿದುವು ದಿಗುವಲಯದೊಳು ರಣಧೀರನಂಬುಗಳು (ಕುವ್ಯಾವಿ. ೭ರಿಇ. ೮-४೩). [ ದ್ವಿಜ + ಕುಲ ]

**ದ್ವಿಜಗತಿ** (ನಾ). ೧. ಬ್ರಾಹ್ಮಣರ ವ್ಯವಹಾರ. ೨. ಪಕ್ಷಿಗಳ ಚಲನೆ ; ಹಕ್ಕಿಗಳ ಹಾರಾಟ. ೧, ೨ : ಘನನಾಮಂ ಲೋಕದೊಳ್ ಪೆರ್ಗಗೆಡೆಯೆನೆಸಿತ್ತಕ್ಕಟಾ ಕೆಮ್ಮನೀ ಮಿತ್ರನ ತೇಜಕ್ಕಡ್ಡಲಾದೆಂ ದ್ವಿಜಗತಿಗೆಡಿಸಿರ್ದೆಂ ಜಗತ್ಪಂಕಮೆನ್ನಿಂ ಜನಿಸಿತ್ತು . . . ಎನುತ್ತಂ ಚಿಂತೆಯಿಂ ಬೆಳ್ಪಡರ್ದುದೆನೆ ತದಬ್ದಂ ಶರನ್ಮೇಘಮಿರ್ಕುಂ (ರಾಜಶೇ. ೬-४). [ ದ್ವಿಜ + ಗತಿ ]

**ದ್ವಿಜಗಮನ** (ನಾ). (ಗರುಡ) ಪಕ್ಷಿಯ ಮೇಲೆ ಸಂಚರಿಸುವವನಂ ; ವಿಷ್ಣು : ದ್ವಿಜನಾಗಿ ಬಂದ ನಾರದಮುನಿ ಅಂದು ದ್ವಿಜಗಮನನ ಬಳಿಗೆ ಪೋಗಿ ತುತಿಸಿ (ತೀರ್ಥಮ. ೨೮೦). [ ದ್ವಿಜ + ಗಮನ$_2$ ]

**ದ್ವಿಜಗಮನೆ** (ನಾ). (ಹಂಸ)ಪಕ್ಷಿಯ ನಡಗೆಯಂತೆ ನಡಗೆಯುಳ್ಳವಳು; ಹಂಸಗಮನೆ : ದ್ವಿಜಗಮನೆ ದ್ವಿಜಯುಗ್ಮವಕ್ಷೋಜೆ ಲಾಲಿಸೌ (ನವಮೋ. ೩-೨೭). [ ಸಂ. ದ್ವಿಜಗಮನಾ ]

**ದ್ವಿಜಚಕ್ರ** (ನಾ). ೧. ಬ್ರಾಹ್ಮಣರ ಸಮುದಾಯಂ. ೨. (ಚಕ್ರವಾಕ) ಪಕ್ಷಿ. ೧, ೨ : ದ್ವಿಜಚಕ್ರಕ್ಕನಿಮಿತ್ತಮಾತ್ಮಕರದಿಂ ಸಂತಾಪಮಂ ಮಾಡಿಯುಂ ದ್ವಿಜರಾಜಂ . . . ರಜನೀಸಂಚರನಾಗಿಯುಂ ಕುವಲಯಾಪ್ತಂ ನೋಡಿದೇಂ ಚಿತ್ರಮೋ (ರಾಜಶೇ. ೦೦-೭೩). [ ಸಂ. ]

**ದ್ವಿಜತನೂಜ** (ನಾ). ಬ್ರಾಹ್ಮಣನ ಮಗ : ಮೃಡನ ಸುತನುಂ ದ್ವಿಜತನೂಜನೆಂದುಂ ತಾನೆ ತಾನಾಗಿ ಬಾಲಲೀಲೆಯ ಬಸವನೊಪ್ಪಿದಂ (ಬಸರ. ೧-೧೫೬). [ ದ್ವಿಜ + ತನೂಜ ]

**ದ್ವಿಜತ್ವ** (ನಾ). ಬ್ರಾಹ್ಮಣತ್ವ ; ಬ್ರಾಹ್ಮಣ್ಯ : ಮತ್ತಂ ತಮ್ಮ ದ್ವಿಜತ್ವಮನಱಿಪುವ ಬಗೆಯಿನಿಂತೆಂದಂ (ಚಾವುಂಪು. ೨೨೬) ; ದ್ವಿಜತ್ವವು ಸದ್ಧಮಲೋತ್ತಮಭಕ್ತಿನಿಷ್ಠತವಹುದೆ ಭಾವಿಸಲು (ಬಸಪು. ೩-೭೮) ; ಬ್ರಾಹ್ಮಣ–ಕ್ಷತ್ರಿಯ–ವೈಶ್ಯ ಈ ಮೂರುವರ್ಣದವರಿಗೆ ಉಪನಯನದಿಂದ ದ್ವಿಜತ್ವ ಬರುವದರಿಂದ . . . ವೇದಾಧಿಕಾರವಿರುವದು (ಮಾಧವ. ४೦೨). [ ಸಂ. ]

**ದ್ವಿಜನಿಕರ** (ನಾ). ೧. ಬ್ರಾಹ್ಮಣರ ಗುಂಪು. ೨. ಪಕ್ಷಿಗಳ ಸಮೂಹ : ತಾರೆಗಳು ತಮತಮಗೆ ತಲೆದೋಱೆ ಕತ್ತಲೆಯು ಬೀಱೆ ಭೀಕರವಾಗೆ ದ್ವಿಜನಿಕರವಾಶ್ರಯವ ಸೇರೆ (ಪ್ರೌಢರಾ. ೧೩-೨೮) ; ಒಂದು ಮಾರ್ಗದೊಳೆ ನಡೆಯದೆ ಸದಾ ದ್ವಿಜನಿಕರದಂದಮಂ ಕಿಡಿಸಿ . . . ಕುಂದನಿತ್ತುದಱಿಂದೆ ಸಾರಥಿ ಹೆಳವನಾದಂ (ಜೈಮಿಭಾ. ೧೭-४೩). ೧, ೨ : ದ್ವಿಜನಿಕರಂ ಧೌತವನಕ್ಕಜದಿಂ ಮೇಲ್ವಿಡಿದು ಪೋಪ ತೆಱದಿಂದಾಗಳ್ ದ್ವಿಜನಿಕರಂ ಧೌತವನಕ್ಕಜದಿಂ ಮೇಲ್ವಿಡಿದು ಪೋದುದೀಕ್ಷಿಸೆ ಭೂಪಂ (ನಳಚಂ. ೫೨೯).
[ ದ್ವಿಜ + ನಿಕರ$_1$ ]

**ದ್ವಿಜನ್ಮ** (ನಾ). ೧. (ಉಪನಯನದಿಂದ ಸಂಸ್ಕಾರ ಹೊಂದಿದ) ಬ್ರಾಹ್ಮಣ, ಕ್ಷತ್ರಿಯ ಅಥವಾ ವೈಶ್ಯ ; ದ್ವಿಜ : ಆಱುಂ ವೃತ್ತಿಗಳನಿವಂ ಮಿಱಿದರಲ್ಲರ್ ದ್ವಿಜನ್ಮರೀ ವೃತ್ತಿಗಳಿಂ ಬೇಱಾದರ್ ದ್ವಿಜರುಂತೇಂ ಬೇಱುಂಟೆ ಮನುಷ್ಯಜಾತಿ ತಾನೊಂದೆ ವಲಂ (ಆದಿಪು. ೧೫-೧೪). ೨. ಬ್ರಾಹ್ಮಣ : ಧರಾಮರರೀ ಬ್ರಾಹ್ಮಣರೆಂದು ಕೊಂಡು ಕೊನೆ

ದಾ ಷಟ್ಖಂಡ ಭೂಮಂಡಲೇಶ್ವರನೋರಂತೆ ನೆಗಟ್ಟಿ ಕೂಡೆ ನೆಗಟ್ಟತ್ತೆತ್ತಂ ದ್ವಿಜನ್ಮಾನ್ವಯಂ (ಆದಿಪು. ೧೫-೨೦) ; ದ್ವಿಜನ್ಮಂಗೆ ಗುಣಾನ್ವಿತೆ ಸತಿ ಸಜ್ಜನಿಕೆಗರುಂಧತಿಗೆ ಮಿಗಿಲ್ ಕೌಂಡಿಕಬ್ಬೆ (ಛಂದೋಂಬು. ೧-೧೭) ; ಜಗಮಱಿಯಲೀ ದ್ವಿಜನ್ಮನ ಮಗಳೆಂತೀ ಕನ್ನೆ ಮುನ್ನಮೋದಿದ ವೇದಾದಿಗಳನೊಱಲ್ದಿಗೆಳುದಾತ್ತಗೀತದಿಂದೋದಿದಂದಮಿದು ಬಿಸಮಂದಂ (ಸುಕುಮಾ. ೭-೫೭). [ ಸಂ. ದ್ವಿಜನ್ಮನ್ ]

**ದ್ವಿಜನ್ಮದಾನ** (ನಾ). ಬ್ರಾಹ್ಮಣರಿಗೆ ನೀಡುವ ದಾನ, – ಕೊಡುಗೆ : ವಸುವಂ ದ್ವಿಜನ್ಮದಾನದೆ ಪೊಸಜವ್ವನವಂ ಸ್ವದಾರಸಂತೋಷದೆ ನಿನ್ನಸುವಂ ಪತಿಕಾರ್ಯದೆ ವರ್ಜಿಸಿದೈ (ಗದಾಯು. ೫-೨೨).
[ ದ್ವಿಜನ್ಮ + ದಾನ ]

**ದ್ವಿಜನ್ಮವಂಶ** (ನಾ). ಬ್ರಾಹ್ಮಣ ವಂಶ,–ಕುಲ : ಸೋಮಶರ್ಮನೆಂಬೊಂ ದ್ವಿಜನ್ಮವಂಶಲಲಾಮಂ (ಸುಕುಮಾ. ೨-೩). [ ದ್ವಿಜನ್ಮ + ವಂಶ ]

**ದ್ವಿಜನ್ಮವರ್ಣ** (ನಾ). ಬ್ರಾಹ್ಮಣಜಾತಿ ; ದ್ವಿಜವರ್ಗ : ಅಂತು ಭವಿಷ್ಯ ದ್ವಿಜನ್ಮವರ್ಣಕಧ್ಯಯನಾಧ್ಯಾಪನದಾನಪ್ರತಿಗ್ರಹಯಜನಯಾಜನವಿಶಿಷ್ಟ ವೃತ್ತಿಯುಮಂ . . . ನಿಱಿಸಿ (ಆದಿಪು. ೮-೯೩ ವ). [ ದ್ವಿಜನ್ಮ + ವರ್ಣ ]

**ದ್ವಿಜನ್ಮಸಭೆ** (ನಾ). ಬ್ರಾಹ್ಮಣರ ಗುಂಪು : ಮೂಡುವ ಬಾಳದಿನೇಶಬಿಂಬದೊಂದೆಸಕದಿನಾ ದ್ವಿಜನ್ಮಸಭೆಯಂ ಪೊಱಮಟ್ಟೊಡೆ ಮಾಸಿದಂದಮುಂ ಪಸದನದಂತೆ ಕಣ್ಗೆಸೆದು ತೋಱಿದುದಾ ಕದನತ್ರಿಣೇತ್ರನಾ (ಪಂಪಭಾ. ೩-೬೦). [ ದ್ವಿಜನ್ಮ + ಸಭೆ ]

**ದ್ವಿಜಪ್ರಕರ** (ನಾ). = ದ್ವಿಜನಿಕರ ೨ : ಬಿಲ್ವಂ ದಾಳಿಂಬಮರಂ ದ್ವಿಜ ಪ್ರಕರಮುಂ ಭೃಂಗಾಳಿ ತಂಗಾಳಿಯುಂ . . . ಇರ್ದ ವನಾಂತರಾಳದೊಳ್ ಪದ್ಮಾಕರಮಿರ್ಪುದು (ಹಮ್ಮೀರ. ೪-೧೭). [ ದ್ವಿಜ + ಪ್ರಕರ$_2$ ]

**ದ್ವಿಜರಾಜ** (ನಾ). ೧. ಬ್ರಾಹ್ಮಣಶ್ರೇಷ್ಠ : ದ್ವಿಜರಾಜಂ ನಾಗದೇವಂ ಕಮಳಜಕುಳದಿಗ್ನಾಗನನ್ಯಾತನಗ್ರಾತ್ಮಜನುರ್ವ್ವೀಸುಂದರಂ ಸೋವರಸನು (ಸೌಇಇ. XX, ೩೦೩-೦ : 12ನೆಯ ಶತ). ೨. ಬ್ರಾಹ್ಮಣರ ಅಧಿಪತಿ,–ಅಧಿದೇವತೆ ; ಚಂದ್ರ : “ಇಂದುಃ, ಚಂದ್ರಃ . . . ದ್ವಿಜರಾಜಃ, ರಜನಿಕರಃ . . . ವಿಧುಃ, ದಾಕ್ಷಾಯಣೀರಮಣಃ – ಈ ೨೧ ಚಂದ್ರನ ಪೆಸರ್” (ಹಲಾಯು. ೮-೪೩) ; “ಇಂದು . . . ಚಂದ್ರಮಂ ವಿಧು ಸೋಮನತ್ರಿಗೋತ್ರಜನಬ್ಧಿನಂದನಂ ದ್ವಿಜರಾಜನೆನೆ ಸುಧಾಂಶುವೆನಿಕ್ಕು” (ಮಂಗರಾ. ೧೧-೪) ; ದ್ವಿಜರಾಜಂಗೆಣೆವಂದು ಚಕ್ರಹತಿಯಿಂ ಸ್ವರ್ಭಾನು ತುಂಡಾಗನೇ (ಸೋಮೇಶ. ೪೫) ; ದ್ವಿಜರಾಜಂ ಕಮಲಾರಿಯಾಗಿ ವಿಧು ಹಂಸದ್ವೇಷಿ ಮೇಣಾಗಿಯುಂ ನಿಜದಿಂದಬ್ಜನಭಂಗಲಕ್ಷಣಯುತಂ ತಾನಾಗಿ (ರಾಜಶೇ. ೧೧-೭೩) ; ಜನತಾಹ್ಲಾದಮಂನೀವುದಚ್ಚರಿಯೆ ಚಂದ್ರಂ . . . ದ್ವಿಜರಾಜನಬ್ಜನರಿದೇ ದೃಕ್ಕಪ್ಪುದುಂ ಶೌರಿಯಾ (ಜಿಕವಿ. ೬-೨೦). ೧, ೨ : ಈ ಮಹಾಪುರುಷಂ . . . ತೀವ್ರತೇಜನಾಗಿಯುಂ ಮಾರ್ತಂಡ ನಲ್ಲು ದ್ವಿಜರಾಜನಾಗಿಯುಂ ನಕ್ಷತ್ರಪತಿಯಲ್ಲು (ಜಗವಿ. ೮-೧೦ ವ). ೩. ಪಕ್ಷಿಗಳ ರಾಜ ; ಗರುಡ. ೧, ೩ : ದ್ವಿಜರಾಜಸುಸೇವಿತಂ ಬಲ ಜ್ಯಾಯನಭೇದ್ಯಮಂತ್ರಕುಶಲಂ ಬಲಿಬಂಧನನಂತೆ ರಾಯನಾರಾಯಣ ನೆಂಬುದುರ್ವಿ . . . ಬೂಚನ (ಎಕ. V, ಅರಸೀ. ೧೭೨-೨೩ ; 1162). ೪. ಗಂಡಭೇರುಂಡ ಪಕ್ಷಿ : ಪವನನಿನವಂ ... ದ್ವಿಜರಾಜರಿಂದವನುದಕದಿಂ ಮಾರ್ಕೊಂಡಾಂತಾಂತವಂ ಹಳಿ ಗೆಲ್ವುದುಂ (ಶಾಂತಿಪು. ೪-೩೦). ೫. ಹಾವುಗಳ ರಾಜ ; ಆದಿಶೇಷ. [ ಸಂ. ]

**ದ್ವಿಜರಾಜಧರ** (ನಾ). ಚಂದ್ರನನ್ನು ಧರಿಸಿದವನು;–ಶಿವ : ಸಾಂತ್ವನವೆಸರ ದ್ವಿಜಂ ದ್ವಿಜರಾಜಧರನನೋರೊಂದು ದೆವಸಂ ನೀರುಂಡುಂ ಗಾಳಿಯುಂಡು ಮುಣದೆಯುಂ ತಪಮನಾಚರಿಸುತಿರಲೊಡಂ (ರಾಮಾಶ್ವ. ೦೩೭-೦೦).
[ ಸಂ. ]

**ದ್ವಿಜವಂತಿ** (ನಾ). = ದ್ವಿಜಾವಂತಿ : ಪಲ್ಲವಿ ಶೇಷಯ್ಯರ್ ಅವರು . . . ಬೇರೊಂದು ಕಚೇರಿಯಲ್ಲಿ ದ್ವಿಜವಂತೀ ರಾಗವನ್ನು ಬಹಳ ವಿಸ್ತಾರವಾಗಿ ಹಾಡಿ ತೋರಿಸಿದರು (ಸಂಗೀತ. ೪೭). [ <ಸಂ. ದ್ವಿಜಾವಂತೀ ]

**ದ್ವಿಜವಂಶ** (ನಾ).=ದ್ವಿಜನ್ಮವಂಶ : ದ್ವಿಜವಂಶಮನಾ ಭರತಂ ಸೃಜಿಯಿಸಿದಂ (ಅಜಿಪು. ೧೦-೧೩) ; ಇನ್ತು ನಿಜಗೋತ್ರಶಿಖಾಮಣಿಯಂ ದ್ವಿಜವಂಶ ಭೂಷಣ[ರುಮೆ]ನಿಸಿ ನೆಗರ್ತ್ತೆ[ವಡೆದು] (ಸೌಇಇ. XX, ೭೪-೧೭ ; 1112); ದ್ವಿಜವಂಶಾರ್ಣವಪಾರಿಜಾತಕುಜದೇಶೀಯಂ ... ನಾಗವರ್ಮನಿದನುರ್ವೀ ಸಂಸ್ತುತಂ ಮಾಡಿದಂ (ಕಾವ್ಯಾವ. ೯೭೦). [ ದ್ವಿಜ + ವಂಶ ]

**ದ್ವಿಜವಂಶಜ** (ನಾ). ಬ್ರಾಹ್ಮಣವಂಶದಲ್ಲಿ ಹುಟ್ಟಿದವನು ; ಬ್ರಾಹ್ಮಣ : ಮಹೀಪತಿಗಂ ದ್ವಿಜವಂಶಜಗಮೇತಱ ಕೆಳೆ (ಪಂಪಭಾ. ೨-೪೮).
[ ಸಂ. ]

**ದ್ವಿಜವರ** (ನಾ). ೧. = ದ್ವಿಜರಾಜ ೧ : ಪರಮಬ್ರಹ್ಮತನೂಭವರ್ ದ್ವಿಜ ವರರ್ ವರ್ಣೋತ್ತಮರ್ ಲೋಕಪೂಜ್ಯರ್ (ಆದಿಪು. ೧೫-೨೦) ; ಫಲಾ ವಳಿಯಂ ವಿನಯದಿನಾ ದ್ವಿಜವರಂಗೆ ಕಪಿವರನಿತ್ತಂ[ಪಾಠಾಂ. ಜಂಗೆ ಕಪಿ ತಂದಿತ್ತಂ] (ಪಂಚತಂ. ೧೧೧-೧೯) ; ದ್ವಿಜವರ ಸೋಮಶರ್ಮನ ವಧೂಟಿಕೆ . . . ದಾನವಮಂ ಋಷಿಗೆ ಕೊಟ್ಟು (ಪುಣ್ಯಾಸ್ರ. ೦೨-೨೯). ೨. ಪಕ್ಷಿಗಳಲ್ಲಿ ಶ್ರೇಷ್ಠವಾದುದು ; ರಾಜಹಂಸ : ಉಣಲ್ಕಿತ್ತಬ್ಬಬೀಜಂಗಳಂ ಶರದಂಭೋಜನಿ ಮಾಡಿದಳ್ ದ್ವಿಜವರಂಗಾತಿಥ್ಯಸತ್ಕಾರಮಂ (ರಾಜಶೇ. ೬-೦೦). [ ದ್ವಿಜ + ವರ$_3$ ]

**ದ್ವಿಜಸಂತತಿ** (ನಾ). ೧. ಬ್ರಾಹ್ಮಣರ ಗುಂಪು. ೨. ಪಕ್ಷಿಗಳ ಸಮೂಹ. ೧, ೨ : ದ್ವಿಜಸಂತತಿಋಕ್ಸಾಮಾನಿಜಾಶ್ರಿತಸ್ಥಿತಿಯನಿರ್ಪವೊಲ್ ತದ್ವನ ದೊಳ್ ದ್ವಿಜಸಂತತಿ ಋಕ್ಸಾಮಾನಿಜಾಶ್ರಿತಸ್ಥಿತಿಯನಿರ್ಪುದು (ನಳಚಂ. ೩೦೭). [ ದ್ವಿಜ + ಸಂತತಿ ]

**ದ್ವಿಜಸಮೂಹ** (ನಾ). ನಕ್ಷತ್ರಗಳ ಗುಂಪು ; ತಾರೆಗಳ ಸಮೂಹ : ಅದೋ ದ್ವಿಜಸಮೂಹವು, ನನ್ನನ್ನು ನೋಡಲೆಂದು ಕಣ್ದೆರೆದು ನಿಲುಕಂತ್ತಿದೆ (ಹಗಲ. ೧೦). [ ದ್ವಿಜ + ಸಮೂಹ ]

**ದ್ವಿಜಹತಿ** (ನಾ). ೧. ಬ್ರಾಹ್ಮಣರ ಕೊಲೆ. ೨. ಹಲ್ಲಿನಿಂದುಂಟಾದ ಗಾಯ ; ದಂತಕ್ಷತ. ೧, ೨ : ದ್ವಿಜಹತಿ ವನಿತಾಧರದೊಳ್ ಪ್ರಜಾತಿಪಾತಂ ಮದಾಳಿಕುಳದೊಳ್ಪನದೊಳ್ಕುಜನಾಳೀಶಾಕರಸಂಭಜನಂ ತಲೆದೋರ್ಕುಮಲ್ಲದಿಲ್ಲಾ ನಾಡೊಳ್ (ರಾಜಶೇ. ೨-೨೯). [ ಸಂ. ]

**ದ್ವಿಜಾಂಗನೆ** (ನಾ). ೧. ಬ್ರಾಹ್ಮಣಸ್ತ್ರೀ. ೨. ಹೆಣ್ಣು ಹಕ್ಕಿ : ಎನ್ನನಿಲ್ಲಿರಿಸಿ ಪೆಱತೊಂದು ದ್ವಿಜಾಂಗನೆಯೊಳ್ ನೆರೆದು ಸುಖದಿನಿರ್ಪೆ (ಧರ್ಮಾಮೃ. ೨-೨೨೦). [ ದ್ವಿಜ + ಅಂಗನೆ ]

**ದ್ವಿಜಾತ** (ನಾ). ದ್ವಿಜ ; ಬ್ರಾಹ್ಮಣ : ಸಹಜಭಕ್ತರ್ಗೆ ಒಲವಿನೆತ್ತುವ ಕೈಗಳಂ ದುರ್ಮಲಿನ ಕರ್ಮಚರದ್ವಿಜಾತರ್ಗಲಸದೆತ್ತುವದಧಮಜಾತರ್ಗಧಮ ಜಾತವಲಾ (ಬಸವಪು. ೩-೪೭). [ ಸಂ. ]

**ದ್ವಿಜಾತಿ** (ನಾ). ೧. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಣಗಳಲ್ಲಿ ಯಾವುದಾದರೊಂದಕ್ಕೆ ಸಂಬಂಧಿಸಿದವನು : ನಟ್ಟನಡು ಕಟ್ಟಕಡೆ . . . ನೀರ ತಡಿ ಮನೆಗಟ್ಟುವೊಡಶುಭಂ ದ್ವಿಜಾತಿವರ್ಗಕ್ಕೆಲ್ಲಂ (ಲೋಕೋಪ. ೩-೧೨). ೨. ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವನು : ಬ್ರಾಹ್ಮಣ : ಅಂಗವಂಗಿಗಸಾಧ್ಯವಾದುದನಂಗಿಗೊಡಬಡುವುದೆ ದ್ವಿಜಾತಿಗೆ ಸಂಗತಾನುಷ್ಠಾನಪರವೆಂಬುದು ನೃಪಸ್ತೋಮ (ಕುವ್ಯಾಅ. ೦೨-೦೪). ೩. ಪಕ್ಷಿ ; ಹಕ್ಕಿ. ೨, ೩ : ಮತ್ತಮಾ ವನಂ . . . ಕುಜಾತಿ ಸಮೃದ್ಧಮಾಗಿಯುಂ ದ್ವಿಜಾತಿಮನೋಜ್ಞಮುಂ ಪರಿಗತಶಬರೋಪಯುಕ್ತಮಾಗಿಯುಮವಿಗ್ರಹಸವಂಗ್ರಸ್ಥಳಮುಂ . . . ಎನಿಸಿರ್ದುದು (ರಾಜಶೇ. ೫-೭೪ ವ). [ ಸಂ. ]

**ದ್ವಿಜಾತಿರೂಪ** (ನಾ). ಪಕ್ಷಿಯ ಸ್ವರೂಪ ; ಹಕ್ಕಿಯ ಆಕಾರ : ಕದನದೊಳಾನ್ತರಾತಿಗಹಿ[ಯಲ್ಲ]ದ ರಾಹು ದ್ವಿಜಾತಿರೂಪನಲ್ಲದ ವಿನತಾಸು[ತಂ] (ಸೌಇಇ. XX, ೫೦-೧೬ : ?). [ ದ್ವಿಜಾತಿ + ರೂಪ ]

**ದ್ವಿಜಾಧಮ** (ನಾ). ಕೀಳಾದ ಬ್ರಾಹ್ಮಣ ; ಹೆಸರಿಗೆ ಮಾತ್ರ ಬ್ರಾಹ್ಮಣನಾದವನು: "ಬ್ರಹ್ಮಬಂಧುಃ, ದ್ವಿಜಾಧಮಃ – ಈ ೨ ದ್ವಿಜಾಧಮಂ" (ಹಲಾಯು. ೬೭-೨೫೦) ; "ಬ್ರಹ್ಮಬಂಧುವೆನೆ ದ್ವಿಜಾಧಮನೆನಿಕ್ಕುಂ" (ಮಂಗರಾ. ೭೫-೭). [ ದ್ವಿಜ + ಅಧಮ ]

**ದ್ವಿಜಾವಂತಿ** (ನಾ). [ಸಂಗೀತ] ಒಂದು ರಾಗದ ಹೆಸರು; ಹರಿಕಾಂಭೋಜಿಯ ೨೮ನೆಯ ಮೇಳಕರ್ತ ರಾಗ : ರಾಗ ದ್ವಿಜಾವಂತಿ (ಶಂಕರಾಭರಣ) ಆದಿತಾಳ (ಹನುಮ. ೬೨). [ ಸಂ. ದ್ವಿಜಾವಂತೀ ]

**ದ್ವಿಜಿಹ್ವ** (ಗು). ೧. ಎರಡು ನಾಲಗೆಯುಳ್ಳ ; ಎರಡಂ ನಂಡಿಯುವ. (ನಾ). ೨. ಎರಡು ಮಾತನಾಡುವವನು ; ಮಾತಿಗೆ ತಪ್ಪುವವನು ; ಅವಿಶ್ವಾಸಿ : "ಎರಡು ನುಡಿವವ ಪುರೋಭಾಗಿ ದ್ವಿಜಿಹ್ವನಕ್ಕು" (ಮಂಗರಾ. ೬೮-೯). ೩. ಚಾಡಿ ಹೇಳುವವನು : ಚಾಡಿಕೋರ. ೪. ಎರಡು ನಾಲಗೆಯುಳ್ಳದು ; ಹಾವು ; ಸರ್ಪ : "ಉರಗಂ ಭೋಗಿ . . . ಸರ್ಪಂ ದ್ವಿಜಿಹ್ವಾಹ್ವಯಂ" (ವಸ್ತುಕೋ. ೧೯-೭). ೨, ೪ : ಉದಧಿಯಂತೆ ಜಡಸ್ವಭಾವರುಂ ವಿಷಮೋರಗನಂತೆ ದ್ವಿಜಿಹ್ವರುಂ . . . ಎನಿಸಿ (ಸುಕುಮಾ. ೨-೫ ವ) ; ಅದು ಸಲೆ ರಾಜಕೂನ್ಯಮುರುರಾಜವಿಭಾಸಿಯೆನಾಂ ದ್ವಿಜಿಹ್ವಸಂಪದಮದು ಸಜ್ಜನಕ್ಕೆ ಶರಣಾಂ (ಪುಷ್ಪಪು. ೯-೩೨) ; ಛಿದ್ರನಿವಾಸರಂ ಪದವಿಹೀನರನಶ್ರುತರುಂ ದ್ವಿಜಿಹ್ವರುಂ . . . ರೌದ್ರುತರಾಸ್ಯರಂ ಬೆರಸುವಾತನನೀತಿಯು ಸೇತುವಲ್ಲವೇ (ನಳಚಂ. ೬೦೦). ೫. ಸೀಳಿದ ನಾಲಗೆಯುಳ್ಳುದು : ದ್ವಿಜಿಹ್ವಂ ಹೀನಾಧಿಕದಂತನೇಕಮುಷ್ಕಂ ತ್ರಿಕರ್ಣವೆನಿಪಶ್ವಮಾಶುಭಲಕ್ಷಣಮಕ್ಕುಂ (ಲೋಕೋಪ. ೧೧-೮೬). ೬. ನಾಲಗೆಯ ಒಂದು ರೋಗ. [ ಸಂ. ]

**ದ್ವಿಜಿ** (ನಾ). ೧. ಒಂದು ಬಗೆಯ ಅಂಟುಗಿಡ ; ಭಾರಂಗಿ ಗಿಡ. ೨. ಒಂದು ಬಗೆಯ ಗಂದಿಗೆ ವಸ್ತು ; ರೇಣುಕ : "ದ್ವಿಜಾ, ಹರೇಣುಃ . . . ಭಸ್ಮಗಂಧಿನೀ – ೬ ರೇಣುಕಾ ಎಂಬುವ ಗ್ರಂಧ್ಯ ದ್ರವ್ಯದ ಹೆಸರು" (ಸಿದ್ಧಾಂತಿ. ೧೪೦). [ ಸಂ. ದ್ವಿಜಾ ]

**ದ್ವಿಜೇಶ** (ನಾ) ೧. ಬ್ರಾಹ್ಮಣರ ಅಧಿಪತಿ; ಚಂದ್ರ : ಪರನಖಕಾಂತಿಯೊಳ್ಪೊಳೆವ ಚಂದ್ರನನೀಕ್ಷಿಸಿ ಸದ್ವಿಜೇಶ ಮಚ್ಚರಣದೊಳೇಕೆ ಬಿರ್ದಯೆನುತಂ (ತ್ರಿಪುವಿ. ೨೪-೧೬೦). ೨. ಪಕ್ಷಿಗಳ ರಾಜ ; ಗರುಡ. ೩. ಕರ್ಪೂರ. [ ಸಂ. ]

**ದ್ವಿಜೋತ್ತಮ** (ನಾ). ಬ್ರಾಹ್ಮಣರಲ್ಲಿ ಶ್ರೇಷ್ಠನಾದವನು; ಉತ್ತಮನಾದ ಬ್ರಾಹ್ಮಣ : ಒಂಭತ್ತನೆಯ ತಿಂಗಳೊಳ್ . . . ದ್ವಿಜೋತ್ತಮರಿಂ ಗೋತ್ರಿಕಾಬಂಧನಮುಂ ಮಂತ್ರಪ್ರಸಾಧನಮುಂ ರಕ್ಷಸೂತ್ರಮುಮಂ ಗರ್ಭಿಣಿಗೆ ಮಾಟ್ಟುದು (ಬಾಪುಂಪು. ೨೧೪). [ ದ್ವಿಜ + ಉತ್ತಮ ]

**ದ್ವಿಜೋತ್ತಮೆ** (ನಾ). ಉತ್ತಮಳಾದ ಬ್ರಾಹ್ಮಣಸ್ತ್ರೀ : ಆ ದ್ವಿಜೋತ್ತಮೆ ಅಲ್ಲಿಯ ಮಣಿಮಯವಿಚಿತ್ರಜಿನಭವನಂಗಳಂ ಕಂಡು ಭಕ್ತಿಪೂರ್ವಕಮವೆಲ್ಲಮಂ ಪೂಜಿಸಿ (ಪುಣ್ಯಾಸ್ರ. ೦-೯೪ ವ). [ ಸಂ. ದ್ವಿಜೋತ್ತಮಾ ]

**ದ್ವಿಜೋಪಚಾರ** (ನಾ). ೧. ಬ್ರಾಹ್ಮಣನಿಗೆ ಮಾಡುವ ಸತ್ಕಾರ. ೨. ಹಲ್ಲನ್ನು ಉಜ್ಜುವುದಂ. ೧, ೨ : ಸ್ವರಾಗಸಂತತಿ ಶುನಕಗೋಷ್ಠಿಯೊಳು ಚತುರದ್ವಿಜೋಪಚಾರು ದಂತಧಾವನದೊಳು ವಿತತಧರ್ಮಶ್ರವಣವಂತ್ಯಕಾಲದೊಳಗೆ . . . ಅಲ್ಲದಾ ನಾಡೊಳಿಲ್ಲೆಂದ ವಿಶ್ವಾಮಿತ್ರನು (ಹಡಕಾ. ೨-೧೧). [ ದ್ವಿಜ + ಉಪಚಾರ ]

**ದ್ವಿಟ್ಕುಲ** (ನಾ). = ದ್ವಿಟ್ಚಕ್ರ : ನೆಗಟ್ದಂ ದ್ವಿಟ್ಕುಲಕುಲನಗದಳನಪಟುಪವಿಪ್ರತಿಮಭುಜಂ (ಕಾವ್ಯಾವ. ೧೯೭). [ ಸಂ. ]

**ದ್ವಿಟ್ಚಕ್ರ** (ನಾ). ವೈರಿಗಳ ಗುಂಪು ; ಶತ್ರುಗಳ ಸಮೂಹ : ದ್ವಿಟ್ಚಕ್ರಯೋಧನ ಪ್ರಕಟಸೂದನ ಘನವಿರಾಟ್ಬಾರುಗಾತ್ರಕೃತವಿಷ್ಣುಕಪಾಳಜತುರಾಷಾಟ್ಟಕಿತಚಂಚಲಿತ ತಾಂಡವಾಡಂಬರ ದಿಗಂಬರಾಂಬರಕುಂತಲ (ಉದ್ಭಟೀ. ೬-೩೨). [ ಸಂ. ]

**ದ್ವಿಟ್ಪುರ** (ನಾ). ೧. ಶತ್ರುಗಳ ನಗರ ; ಹಗೆಗಳ ಪಟ್ಟಣ. ೨. ಶತ್ರುವಿನ ಶರೀರ : ದ್ವಿಟ್ಪುರಧ್ವಂಸರತಕ್ರೋಧಂ ವೃಷಾಂಕಂ . . . ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ (ಜಗವಿ. ೧-೩). [ ಸಂ. ]

**ದ್ವಿತಯ** (ನಾ). ೧. ಎರಡಂ ; ಜೊತೆ ; ಜೋಡಿ ; ಯುಗಳ : ಯುಗ್ಮಂ . . . ದ್ವಿತಯಂ, . . . ಯಮಳಂ – ಈ ೮ ಅವಳ್" (ಹಲಾಯು. ೧೧೬-೧೫) ; ಅತಿಶಯಪುಣ್ಯಂ ಗರ್ಭಾವತರಣ ಜನ್ಮಾಭಿಷೇಕ ನುತಕಲ್ಯಾಣ ದ್ವಿತಯಮನೆಯ್ದಿರ್ದ ಜಗತ್ಪತಿ ಘನರಥನಭಿಮುಖಂ ವಿಮೋಹಾಂತರಥಂ (ಶಾಂತಿಪು. ೯-೩೯) ; ವೀರರ ವೀರ ವಿಮುಕ್ತಾಹಾರಂ ಭವದರಿವಧೂಸ್ತನ ದ್ವಿತಯಂ ಕಣ್ಣೀರಿಂ ಮಿಂದೆದೆಗಿರ್ಚಿಂದೋರಂತಿರೆ ಬೆಂದು ಚರಿಸುತಿರ್ಪುದು ತಪಮಂ (ಕಾದಂಪೂ. ೬೦). ೨. [ಗಣಿತ] ಎರಡಂ ಎಂಬ ಸಂಖ್ಯೆ : ಇಂತಿದು ಸಮುಬಂಧದ್ವಿತಯಾಂತರಮಾ ವಿಷಮುಬಂಧಮಿನ್ನಿಂತಕ್ಕುಂ (ಕವಿರಾ. ೨-೫೭); ಗಗನ ಗಗನಾಕಾಶ ರಸನವದ್ವಿತಯ್ಯೆ[ವಾಣಾಂ.ದ್ವಿತೀಯ್ಯೆ] ಕ್ಯದಂತೆಗಳ್ ತ್ರೇತೆಯಕ್ಕುಂ (ಮಂಗರಾ. ೨೨-೧೪). [ ಸಂ. ]

**ದ್ವಿತೀಯ** (ಗು). ೧. ಎರಡನೆಯ : ಅಂತು ಯತಿಯಂ ಪೇಟ್ಗಾರ್ಪಂತಾದ್ಯದೊಳಲಸದಾರ್ಯೆಯೊಳ್ ಕಂದದೊಳಂ ಸಂತಂ ದ್ವಿತೀಯಪಾದಗತಾಂತದೊಳಕ್ಕದು ಚತುಷ್ಪದೀಪದವಿಗಳೊಳ್ (ಕವಿರಾ. ೧-೭೭) : ಆ ದ್ವಿತೀಯ ಮುನೀಶ್ವರನಗ್ರಮುನೀಶ್ವರಾದೇಶದಿಂ . . . ಜನ್ಮಾಂಧಕಿಯಲ್ಲಿಗೆ ಬಂದು (ಸುಕುಮಾ. ೫-೨೩ ವ) ; ಈ ತೆಱದಿಂದ ವರ್ತಿಸುವನುದ್ದಿಷ್ಟನೆಂಬಾತ ದ್ವಿತೀಯಗುಣಧಾಮ (ದ್ವಾದಶಾ. ೧೧-೭೬೦). (ನಾ). ೨. ಜೊತೆಗಾರ ; ಸಂಗಾತಿ. ೩. ಎರಡು ; ಭಿನ್ನವಾದುದು : ಶ್ರುತಿಯೇಕ ಏವ ರುದ್ರೋನ ದ್ವಿತೀಯೆಂದಾವಗಂ ಪೇಳ್ವಂದದಿಂ (ಬಸಪು. ೫೪-೯).

ದ್ವಿತೀಯ ವಯಸ್ಸು = ಆಯುಷ್ಯದ ಉತ್ತರಭಾಗ ; ಇಳಿವಯಸ್ಸು ; ಅಪರವಯಸ್ಸು : (ಶ). ದ್ವಿತೀಯವಿವಾಹ = ಎರಡನೆಯ ಮದುವೆ : (ಶ). ದ್ವಿತೀಯಾವತಾರ = (ದೇವರ) ಎರಡನೆಯ ಹುಟ್ಟು ; (ದೇವರು) ಎರಡನೆಯ ಸಲ ಹುಟ್ಟಿ ಬರುವಿಕೆ : ಸಾರಲಿಲ್ಲದ ಪುರುಷನೀತ ದ್ವಿತೀಯಾವತಾರದ ಶ್ರೀದೇವಿ ನೀನು ಓರಂತೆ ಸೊಗವಾಳುವುದೆಂದು ಬೀಳ್ಕೊಂಡು ನಾರದನಡರಿದ ನಭವ (ಮೋಹತ. ೧೩-೮೨). [ ಸಂ. ]

**ದ್ವಿತೀಯಕಲ್ಯಾಣ** (ನಾ). [ಜೈನ] ಜಿನನ ಪಂಚಮಹಾಕಲ್ಯಾಣಗಳಲ್ಲಿ ಜನ್ಮಾಭಿಷೇಕೋತ್ಸವ ಎಂಬ ಎರಡನೆಯ ಕಲ್ಯಾಣ : ಪರಮೇಶ್ವರ ದ್ವಿತೀಯ ಕಲ್ಯಾಣಕರಣೋತ್ಸುಕಾಂತಃಕರಣನೈರಾವತಾರೂಢಂ ಶಚೀಸಮೇತನುಂ ಚತುರ್ವಿಧಾಮರಪರೀತನುಮಾಗಿ (ಪುಷ್ಪಪು. ೧೧-೫ ವ). 'ಜನ್ಮಸವನ', 'ಪಂಚಮಹಾಕಲ್ಯಾಣ' ಪರಾ.

[ ದ್ವಿತೀಯ + ಕಲ್ಯಾಣ ]

**ದ್ವಿತೀಯದ್ವೀಪ** (ನಾ). [ಜೈನ] ಎರಡನೆಯ ದ್ವೀಪ ; ಧಾತಕೀದ್ವೀಪ : ಅಂತಲ್ಲಿಂದಂ ತಳರ್ದು ಬಂದು ದ್ವಿತೀಯದ್ವೀಪದ ಯಾಮ್ಯದಿಶೆಯೊಳಿಸೆ ವಿಷುಕಾಧಾರಿಣೀಧರದ ಮೂಡಣ ಭರತದೊಳ್ (ಚಂದ್ರಪು. ೪-೭೯ ವ). 'ದ್ವೀಪ' ಪರಾ. [ ದ್ವಿತೀಯ + ದ್ವೀಪ ]

**ದ್ವಿತೀಯಪೀಠ** (ನಾ). [ಜೈನ] ಜಿನನ ಸಮವಸರಣದಲ್ಲಿ ಮಂಡಿಸುವ ಮೂರು ಪೀಠಗಳನ್ನೊಳಗೊಂಡ ಆಸನಗಳಲ್ಲಿ ಎರಡನೆಯದು : ಮೇಘರಥಧರಾಧೀಶ್ವರಸುಂ . . . ಸಮವಸರಣಮಂ ಪೊಕ್ಕು ಪ್ರಥಮ ದ್ವಿತೀಯ ತೃತೀಯ ಪೀಠಂಗಳುಮನನುಕ್ರಮದಿನರ್ಚಿಸಿ (ಶಾಂತಿಪು. ೯-೬೯ ವ).

[ ದ್ವಿತೀಯ + ಪೀಠ ]

**ದ್ವಿತೀಯರ್ಕ್ಷ** (ನಾ). [ಜ್ಯೋತಿ] ಎರಡನೆಯ ಸ್ಥಾನ : ಇನವರ್ಜ್ಯಂ ಕ್ಷಿತಿಜಾದಿಗಳ್ ಹಿಮಮಯೂಖಂಗೆ . . . ಒಂದಿ ನಿಲೆ ಮತ್ತಂ ತದ್ದ್ವಿತೀಯರ್ಕ್ಷದೊಳ್ ಸುನಫಾಯೋಗಂ (ಜಾತತಿ. ೧೪-೧).
[ ದ್ವಿತೀಯ + ಋಕ್ಷ ]

**ದ್ವಿತೀಯಾವಿಭಕ್ತಿ** (ನಾ). [ವ್ಯಾಕ] ಏಳಂ ವಿಭಕ್ತಿಗಳಲ್ಲಿ ಎರಡನೆಯದಂ : ಕರ್ಮಾರ್ಥವನ್ನು ಸೂಚಿಸುವ ವಿಭಕ್ತಿ : ದ್ವಿತೀಯಾವಿಭಕ್ತಿಗೆ – ಚೆಚ್ಚರಂ ನುಡಿದನೆಂಬಲ್ಲಿ ಚೆಚ್ಚರಮಂ ನುಡಿದನೆಂಬ ದ್ವಿತೀಯೆಯುನಱಿವುದು (ಶಮದ. ೯೦ ಪ್ರಯೋ) ; ದ್ವಿತೀಯಾವಿಭಕ್ತಿ . . . ಇದು ಕರ್ಮಾರ್ಥದಲ್ಲಿ ಬರುವುದು. ಕರ್ಮವೆಂದರೆ ಕ್ರಿಯೆಗೆ ವಿಷಯವಾದದ್ದು (ಕೈಪಿಡಿ. ೫೪). [ ಸಂ. ]

**ದ್ವಿತೀಯೆ** (ನಾ). ೧. ಹೆಂಡತಿ ; ಭಾರ್ಯೆ ; ಪತ್ನಿ : "ಹೆಂಡತಿ[ಯಲ್ಲಿ]ಯುಂ ದ್ವಿತೀಯಾಯೆಂಬುದು" (ಹಲಾಯು. ೧೩೩-೧೬) ; "ವಿವಾಹವಾದಾ ಕಾಂತೆಯು ದ್ವಿತೀಯೆಯೆಂಬುದು" (ಮಂಗರಾ. ೧೩೯-೬) ; ನಿನ್ನ ದ್ವಿತೀಯೆಯನವಳನೊರ್ವ ರಕ್ಕಸಂ ಕೊಂಡುಯ್ದ (ಅದ್ಭುತ. ೧೫-೧೧). ೨. ಪಕ್ಷದ ಎರಡನೆಯ ತಿಥಿ ; ಬಿದಿಗೆ. ೩. = ದ್ವಿತೀಯಾವಿಭಕ್ತಿ : ಮತ್ತಾ ದ್ವಿತೀಯೆಗಂ ಮನಮೊತ್ತರಿಸಿರ್ಕುಂ ವಿಭಾಷೆಯಿಂ ನಿಧನದೊಳಂ ಪತ್ತಿ ನಿಮಿರ್ದಮರ್ದು ನಿಲ್ಕುಮುದಾತ್ತತೆ ಮಿಗೆ ದಂ ತೃತೀಯೆಗೇದಂತಂ ಮೇಣ್ (ಕಾವ್ಯಾವ. ೧೦೭) ; ನಾನಾ ತೆಱದ ಲಿಂಗಂಗಳ್ಗೆ ಪರವಾಗಿ ನಾಮವಿಭಕ್ತಿಗಳ್, ಮ್ (ಸೂ. ೧೦೫), ಅಮ್ (ಸೂ. ೧೦೪, ೧೦೬), ಇಮ್ (ಸೂ. ೧೦೭), ಕೆ (ಸೂ. ೧೧೩, ೧೧೪), ಅತ್ (ಸೂ. ೧೦೬, ೧೧೬), ಅದ್ (ಸೂ. ೧೦೬, ೧೧೭), ಒಳ್ (ಸೂ. ೧೧೯) ಎಂದು, ಪ್ರಥಮೆಗಂ, ದ್ವಿತೀಯೆಗಂ, ತೃತೀಯೆಗಂ, ಚತುರ್ಥಿಗಂ, ಪಂಚಮಿಗಂ, ಷಷ್ಠಿಗಂ, ಸಪ್ತಮಿಗಂ – ಏಟಾಗಿ, ಕಾರಕವಶದಿಂ ಪತ್ತುಗುಂ (ಶಮದ. ೯೩ ವೃತ್ತಿ). [ ಸಂ. ದ್ವಿತೀಯಾ ]

**ದ್ವಿತ್ವ** (ನಾ). ೧. ಜೋಡಿ ; ಜೊತೆ. ೨. [ಗಣಿತ] ಎರಡು ಎಂಬ ಸಂಖ್ಯೆ. ೩. [ವ್ಯಾಕ] ವ್ಯಂಜನಗಳ ಸಂಯುಕ್ತಾಕ್ಷರ ; ಒತ್ತಕ್ಷರ : ಮೊದಲೊಳನುಸ್ವಾರಂ ಬೆರಸದಂತಪುಲ್ಲಿಂಗದೊಳ್ ಗೆಯಕ್ಕುಂ ದ್ವಿತ್ವಂ ವಿದಿತ ನಪುಂಸಕದೊಳ್ ಪಕ್ಷದಿಂ ತೃತೀಯಂ ಚತುರ್ಥಿಗಂತುಱಿದುವಱೊಳ್ (ಕಾವ್ಯಾವ. ೧೧೫) ; ಒಂದು ಹ್ರಸ್ವಸ್ವರದಿಂದ ಕೂಡಿ ಅಂತ್ಯದಲ್ಲಿ ನಣಯಲಳಗಳನ್ನುಳ್ಳ ಶಬ್ದಗಳಿಗೆ ಸ್ವರ ಪರವಾದರೆ ಆ ಅಂತ್ಯವ್ಯಂಜನಗಳಿಗೆ ಸಾಮಾನ್ಯವಾಗಿ ದ್ವಿತ್ವ ಬರುತ್ತದೆ (ಕೈಪಿಡಿ. ೧೧) ; ದ್ವಿತ್ವವಂದರೆ ಒಂದೇ ವರ್ಣವನ್ನು ಎರಡು ವರ್ಣವಾಗಿಮ್ಮಡಿಸಿ ಸಂಯುಕ್ತವಾಗಿ ಹೇಳುವುದು (ಹೊಸುಗ. ೨೬). ೪. ಒತ್ತಕ್ಷರವುಳ್ಳ ಪದ ; ದ್ವಿತ್ವವನ್ನು ಹೊಂದಿರುವ ಪದ : ಕೆಲವು ನಿಜಬಿಂದುಗಳ್ ಕೆಲಕೆಲವು ವಿಕಲ್ಪಾರ್ಥಬಿಂದುಗಳ್ ದ್ವಿತ್ವಂಗಳ್ ಕೆಲವಾ ಶಿಥಿಲದ್ವಿತ್ವಂ ಕೆಲವುಭಯಮುಮಾಗಿ ಕೆಲವು ಪದನಱಿವುದವಂ (ಶಮದ. ೩೬). ೫. = ದ್ವಿವಚನ : ಅವಱೊಳ್ ದ್ವಿತ್ವಬಹುತ್ವಂ ಬವರಿಸೆ ತಳ್ತಿರ್ಕುಮಲ್ಲಿ ಗಳ್ ಶಬ್ದಂ ಪುತ್ತವು ಸರ್ವನಾಮ ಗಣವಚನ ವೃತ್ತಿಯಂ ತಾಳ್ದಿ ನೆಗಟ್ಟುಮವು ಬಹುಳತೆಯಿಂ (ಕಾವ್ಯಾವ. ೮೭) : ಏಕ ದ್ವಿತ್ವಬಹುತ್ವಮನೇಕದ್ವಿ ಬಹುತ್ವವಸ್ತುಗಳೊಳಾಚರಿಪರ್ ಸ್ವೀಕಾರ್ಯಂ ಕನ್ನಡದೊಳಗೇಕಬಹುತ್ವಂ (ಶಮದ. ೯೪). [ ಸಂ. ]

**ದ್ವಿತ್ವವಿಕಲ್ಪ** (ನಾ). [ವ್ಯಾಕ] ಒತ್ತಕ್ಷರವು ಇಲ್ಲದೆಯೂ ಇರುವುದಂ : ಚತುರ್ಥಿಯ 'ಗೆ' ಕಾರಕ್ಕೆ ದ್ವಿತ್ವವಿಕಲ್ಪವೂ ಇದೆ—ಬುಧಗೆ, ಬುಧಗ್ಗೆ . . . ಇತ್ಯಾದಿ (ಸಂಶೋಧ. ೬೦). [ ದ್ವಿತ್ವ + ವಿಕಲ್ಪ ]

**ದ್ವಿತ್ವವೃತ್ತಿ** (ನಾ). [ವ್ಯಾಕ] ವ್ಯಂಜನಗಳ ಸಂಯುಕ್ತ ಸ್ವರೂಪ ; ಒತ್ತಕ್ಷರವಾಗಿರುವಿಕೆ : ಸ್ವರಮುಮರ್ದಿರೆ ಮುಂದೇಕಸ್ವರದೊಳ್ ನಣಲಯಳಕಾರಮನಿತುಂ ಹ್ರಸ್ವಾಕ್ಷರ ಪೂರ್ವಮಾಗೆ ಪೀನಂ ಸ್ವರೂಪದಿಂ ದ್ವಿತ್ವವೃತ್ತಿಯಂ ತಾಳ್ದಿರ್ಕುಂ (ಕಾವ್ಯಾವ. ೭೯) : ಪ್ರತಿಷೇದಧರ್ಥದೊಳೆ ಧಾತುವಿಂಗೆ ವಿಭಕ್ತಿ ಪರವಾದೊಡಂ ಭೂತಕಾಲಕ್ರಿಯೆಯೊಳ್ ಪ್ರತಿಷೇಧಮನುಸಿರ್ವ ಅದೆ ಎಂಬುದು ಪರವಾದೊಡಂ ನಣಲಯಳಂಗಳ್ಗೆ ದ್ವಿತ್ವವೃತ್ತಿ ನಿತ್ಯಂ (ಶಮದ. ೭೧ ವೃತ್ತಿ). [ ದ್ವಿತ್ವ + ವೃತ್ತಿ ]

**ದ್ವಿತ್ವಾಕ್ಷರ** (ನಾ). [ವ್ಯಾಕ] ವ್ಯಂಜನಗಳ ಸಂಯುಕ್ತಾಕ್ಷರ ; ಒತ್ತಕ್ಷರ : " ದ್ವಿತ್ವಾಕ್ಷರಮದು ದಡ್ಡಕ್ಕರಮೆಂದು ತಿಳಿವುದು " (ಚತುನಿ. ೨೪) : ಪರಪದಪೂರ್ವಂ ದ್ವಿತ್ವಾಕ್ಷರಮಾಗಿರೆ ಪೂರ್ವಪದದ ಚರಮಂ ಹ್ರಸ್ವಾಕ್ಷರಮಾಗೆ ಸಂಧಿದೋಷಂ ಸರೇಫಮಿದಿರಾಗೆ ಶಿಥಿಲಮೆಂದನುಸರಿಪರ್ (ಶಮದ. ೫೯). 'ದಡ್ಡಕ್ಕರ' ಪರಾ. [ ದ್ವಿತ್ವ + ಅಕ್ಷರ ]

**ದ್ವಿದಲ, ದ್ವಿದಳ** (ಗು). ೧. ಎರಡು ಬೇಳೆಯಾಗುವ,–ಹೋಳಾಗುವ. (ನಾ). ೨. ಎರಡು ಪಕಳೆಗಳು. ೩. ಎರಡು ಬೇಳೆ ಆಗುವ ಕಾಳು. ದ್ವಿದಳ: ೧. 'ದ್ವಿದಳಧಾನ್ಯ' ಪರಾ. ೨. ಷೋಡಶದಳ ಷೋಡಶಾಕ್ಷರ ದ್ವಿದಳ ದ್ವಿಯಕ್ಷರ (ದ್ವಯಾಕ್ಷರ) ಎಂಬ ಚಕ್ರದಳ ಅಕ್ಷರಂಗಳೆಲ್ಲವೂ ಬಯಲಾದವು (ಸಿದ್ಧೇವ. ೨೦೦-೬೧೪). [ ದ್ವಿ + ದಲ ]

**ದ್ವಿದಳ** 'ದ್ವಿದಲ' ನೋ.

**ದ್ವಿದಳಧಾನ್ಯ** (ನಾ). ಅವರೆ, ತೊಗರಿ, ಉದ್ದು, ಹೆಸರು ಮೊದಲಾದ, ಎರಡು ಬೇಳೆಯಾಗುವ ಧಾನ್ಯ,– ಕಾಳು : ಭಾರಿ ಅಮಾನಿಕೆರೆಯಿದ್ದು . . . ರಾಗಿ, ದ್ವಿದಳಧಾನ್ಯಗಳನ್ನು ಹೇರಳವಾಗಿ ಬೆಳೆಯುತ್ತಾರೆ (ನಿಟ್ಟೂರುಕಾಂ. ೨) ; ದೇಹವನ್ನು ಬೆಳೆಸುವ ಆಹಾರಗಳು . . . ಅವರೆ, ಸೋಯಾಬೀನ್ (Soya Bean) ಇತ್ಯಾದಿ ದ್ವಿದಳಧಾನ್ಯಗಳು (ಗೃಹವಿ. ೮).
[ ದ್ವಿದಳ (= ದ್ವಿದಲ) + ಧಾನ್ಯ ]

**ದ್ವಿದಳಪದ್ಮ** (ನಾ). [ಯೋಗ] ಯೋಗ ಸಾಧನೆಯಲ್ಲಿ ಕುಂಡಲಿನಿಯ ಶಕ್ತಿಯು ಎಚ್ಚೆತ್ತು ನಿಲ್ಲುವ ಸ್ಥಾನ : ಆಜ್ಞಾಚಕ್ರದ ದ್ವಿದಳಪದ್ಮದಲ್ಲಿ ಅವಿರಳ ಸುಜ್ಞಾನಪೀಠದೊಳಗೆ ಅಮೃತಮಯ ಲಿಂಗವ ಕಂಡೆನು ನೋಡಾ (ಸಿದ್ಧೇವ. ೧೭೮-೫೪೦).
[ ದ್ವಿದಳ (= ದ್ವಿದಲ) + ಪದ್ಮ ]

**ದ್ವಿದೃಷ್ಟಿ** (ನಾ). ಬಿಂಬಗಳು ಎರಡಾಗಿ ಕಾಣಿಸುವುದು ; ಒಂದು ಬಗೆಯ ಕಣ್ಣಿನ ದೋಷ : ಮಗುವಿಗುಂಟಾಗುವ ಅಡಚಣೆಗಳು : (೧) ಚೆನ್ನಾಗಿ ಕಾಣಿಸದೇ ಇರುವುದು . . . ದ್ವಿದೃಷ್ಟಿ ಅಥವಾ ಮಂಜುದೃಷ್ಟಿ (ನಿಮ್ಮದೃ. ೪೪). [ ದ್ವಿ + ದೃಷ್ಟಿ ]

**ದ್ವಿಧರ್ಮ** (ನಾ). ಎರಡು ಬೇರೆ ಬೇರೆ ಮತ,–ಧರ್ಮ ; ಭಿನ್ನಧರ್ಮ. ದ್ವಿಧರ್ಮದ ಕುಟುಂಬ=ಗಂಡಹೆಂಡಿರು ಬೇರೆ ಬೇರೆ ಮತಾಚರಣೆಯನ್ನು ಹೊಂದಿರುವ ಸಂಸಾರ ; ಗಂಡ ಹೆಂಡಿರು ಬೇರೆ ಬೇರೆ ಮತಧರ್ಮಗಳಿಗೆ ಸೇರಿರುವ ಕುಟುಂಬ: ಇಂಥದೊಂದು ದ್ವಿಧರ್ಮದ ಕುಟುಂಬದಲ್ಲಿ . . . ಹೆಂಡತಿ ಮತ್ತು ಮಗ ಇವರಷ್ಟೇ ಹಿಂದೂಗಳಾಗಿ ಇರುವಂಥ ಅವಸ್ಥೆ ಕೆಲದಿನ ನಡೆದು ಬಂತು (ಸ್ಮೃತಿಚಿ. ೪).
[ ದ್ವಿ + ಧರ್ಮ ]

**ದ್ವಿಧಾ** (ಅ). ೧. ಎರಡು ಭಾಗವಾಗಿ. ೨. ಎರಡು ವಿಧವಾಗಿ,– ರೀತಿಯಾಗಿ. [ ಸಂ. ]

**ದ್ವಿಧಾಕೃತ** (ನಾ). ಎರಡಾಗಿ ಒಡೆದುದು ; ಎರಡು ಹೋಳಾದುದು ; ಭಗ್ನವಾದುದು : "ಭಿನ್ನಂ ಭಂಗುರ ಭಗ್ನಂ ಛಿನ್ನಂ ವೃಕ್ಣಂ ದ್ವಿಧಾಕೃತಂ ಛಿತಮಕ್ಕುಂ" (ವಸುಕೋ. ೧೦೬-೪೮). [ ಸಂ. ]

**ದ್ವಿಧಾಕೃತಿ** (ನಾ). ಎರಡು ಆಕಾರ ; ಒಂದೇ ಬಗೆಯ ಎರಡು ರೂಪ : ಕೀರ್ತಿಯ ಮಡಲ್ವ ಸುಧೆಯೊಳ್ದ್ವಿಧಾಕೃತಿಯಾಯ್ತೊ ಸಂತಸದ ಬೆಳಸಿನ ಬೆಳೆದ ಪಸುಗೆಯೋ ಸಲ್ವ ಕುಲದೇಳ್ಗೆಯ ಸಸಿಯ ಕೋಡೊ . . . ವನಲ್ಕುಶಲವರ್ಕುಶಲದಿಂ ಕಣ್ಗೆಸೆದರಾಶ್ರಮದೊಳು (ಜೈಮಿಭಾ. ೧೯-೪೯).
[ ಸಂ. ]

**ದ್ವಿಧಾಗತಿ** (ನಾ). ೧. ಎರಡು ರೀತಿಯ ಸಂಚಾರ. ೨. ಮೋಸ ; ಇಬ್ಬಗೆಯ ವಹಿವಾಟು. ೩. ನೀರು ಮತ್ತು ನೆಲ ಎರಡರ ಮೇಲೂ ಚಲಿಸುವ ಪ್ರಾಣಿ ; ಏಡಿ, ಮೊಸಳೆ ಇತ್ಯಾದಿ. [ ಸಂ. ]

**ದ್ವಿಧಾಭಾವ** (ನಾ). ಇಬ್ಬಗೆಯ ಭಾವನೆ; ಎರಡು ಬಗೆಯ ಯೋಚನೆ : ಇದರ ಬಗ್ಗೆ ಅವನ ಮನಸ್ಸಿನಲ್ಲಿ ಒಂದಿಷ್ಟೂ ಒಂದು ಸಲವಾದರೂ ದ್ವಿಧಾಭಾವ ಮೂಡಬಾರದೆ ? (ಇಪ್ಪಕ. ೩೬೧). [ ಸಂ. ]

**ದ್ವಿಧಾವೃತ್ತಿ** (ನಾ). ಭಿನ್ನಭಿನ್ನ ಧೋರಣೆಗಳಿರುವ ವೃತ್ತಿ,-ನಡವಳಿಕೆ,-ವ್ಯವಹಾರ : ಆದಮನಾ ನಂದನಚ್ಯುತಿಯನ್ನು ಬಣ್ಣಿಸಿರುವ ಮಹಾಕವಿಯ ದ್ವಿಧಾವೃತ್ತಿ ನಿನ್ನ ಮನದಿ ಬಂದಿತು (ಚಿಂತನ. ೩೯-೧೩) ; ಅವನಲ್ಲಿಯ ದ್ವಿಧಾವೃತ್ತಿಯು ನಿರ್ಣಯವನ್ನೂ ಅವನು ದೈವಕ್ಕೇ ಬಿಟ್ಟುಕೊಟ್ಟಿದ್ದ (ಸಮುಜೀ. ೫೩೩) ; ಎರಡು ಕಣ್ಣಿಗೆ ಕಾಣುವ ವಸ್ತು ಒಂದು, ಎರಡು ಕಿವಿಗೆ ಕೇಳಿಸುವ ಶಬ್ದ ಒಂದು. ಅವುಗಳಿಗೆ ದ್ವಿಧಾವೃತ್ತಿಯಿಲ್ಲ ಮೂಲತಃ (ಅರಳು. ೧೯). [ ಸಂ. ]

**ದ್ವಿಪ** (ನಾ). ಎರಡು ಹಂತದಲ್ಲಿ ನೀರು ಕುಡಿಯುವಂಥದು; P ಸೊಂಡಿಲಿನಿಂದ ನೀರನ್ನು ಒಮ್ಮೆ ಹೀರಿ ತರುವಾಯ ಅದನ್ನು ಬಾಯಿಗೆ ಸುರಿದುಕೊಂಡು ಕುಡಿಯುವಂಥದು; ಆನೆ : " ಮಾತಂಗಃ, ದ್ವಿರದಃ, ದ್ವಿಪಃ, ಕರೀ, ಗಜಃ, ಸ್ತಂಬೇರಮಃ, ಅನೇಕಪಃ, ಕುಂಭೀ, ಕುಂಜರಃ, ವಾರಣಃ, ಇಭಃ, ರದೀ, ಸಾಮೋದ್ಭವಃ, ಸಿಂಧುರಃ– ಈ ೧೪ ಆನೆಯ ಪೆಸರ್ " (ಹಲಾಯು. ೩೬-೬೧) : ವಿಪುಳತರಕಟಕನುದ್ಯದ್ದ್ವಿಪಹಲಿ (ರಿ)ಮಹೀಷಿನಿಷೇವ್ಯನುನ್ನತಪಾದಂ ವ್ಯಪನೀತಶ್ರೀಫಲದಂ ವಿಪರೀತಕನಪ್ಪನಂತು ಭೂಭೃನ್ನಾಥಂ (ಕವಿರಾ. ೩-೧೧೦) ; ಭಗದತ್ತಂ ಸುಪ್ರತೀಕದ್ವಿಪಮನುಪಚಿತೋತ್ಸಾಹದಿಂ ತೋಱಿ ಕೊಟ್ಟಂ (ಪಂಪಭಾ. ೧೧-೬೯) : ಘನಶೌರ್ಯಾನಲಧೂಮವಲ್ಲಿವದನಾಂಭೋಜಾಳಿನೀಮಾಲೆ ಯೌವನಗಂಧದ್ವಿಪದಾನಲೇಖೆ ವಪುರಾಲೇಖ್ಯಪ್ರಭೋನ್ಮೀಲನಾಂಜನರುಗ್ರೇಖೆ ವಿವಾಹಮಂಗಳಕಿದೇ ಭ್ರೂಸಂಜ್ಞೆಯೆಂಬಂತೆ ಚೆಲ್ವನದೇಂ ಶ್ಮಶ್ರುವಿಕಾಸರೇಖೆ ತಳೆದತ್ತೀಗಳ್ಕುಮಾರಾಸ್ಯದೊಳ್ (ಕಾದಂಬ. ೪೧೦) ; [ ತಪಿ ]ಯಿಂ ನಿರ್ಧೂತದೋಷಂ ವಿಶದಶಶಿಯಿನತ್ಯಂತಕಾಂತಂ ಸದಾನದ್ವಿಪದಿಂ ಭದ್ರಾನ್ವ [ ಯಂ ] (ಸುಕುಮಾ. ೯-೧೦೬). [ ಸಂ. ]

**ದ್ವಿಪಕ್ಷ** (ನಾ). ೧. ಎರಡು ರೆಕ್ಕೆ : ಎರಡು ಪಕ್ಕಗಳಿದ್ದರೆ ದ್ವಿಪಕ್ಷವಿಮಾನ (Biplane) ಎನಿಸುವುದು (ಬಾಲಪ್ರ. II, ೯೪೫). ೨. ಎರಡು ಪಾರ್ಶ್ವ,-ಬದಿ : ದ್ವಿಪಕ್ಷದಲ್ಲಿ ಕಂಗೊಳಿಸುತ್ತಿದ್ದ ಮಹಾಸೌಧಗಳಿದ್ದ ವಿಶಾಲವೂ ಸುಂದರವೂ ಆದ ರಾಜವೀಥಿಗಳಲ್ಲಿ . . . ಆ ಬಂಡಿ ಮೇರಿಯಟ್ಟಳ ಗೃಹಾಭಿಮುಖವಾಗಿ ಸಾಗಿತು (ಪುನರು. ೩೩೬). ೩. ಎರಡು ಗುಂಪು,-ಪಂಗಡ. [ ದ್ವಿ + ಪಕ್ಷ ]

**ದ್ವಿಪಕ್ಷೀಯ** (ಗು). ಎರಡು ಗುಂಪಿಗೆ ಸೇರಿದ ; ಎರಡು ಪಂಗಡಕ್ಕೆ ಸಂಬಂಧಿಸಿದ. [ ದ್ವಿ + ಪಕ್ಷೀಯ ]

**ದ್ವಿಪಘಟಾಳಿ** (ನಾ). ಗಜಗಳ ಗುಂಪು ; ಆನೆಗಳ ಸಮೂಹ : ನೆಗಟ್ದಿರ್ಘೂರ್ಜರದ್ವಿಪಘಟಾಳಿಗೆ ತನ್ನಯ ಸೂಚಿಯಾನೆ ತೊಟ್ಟಗೆ ಸಮರಾಗ್ರದೊಳ್ಪರಿಯೆ (ಗದಾಯು. ೧-೧೬). [ ದ್ವಿಪ + ಘಟಾಳಿ ]

**ದ್ವಿಪಘಟೆ** (ನಾ). = ದ್ವಿಪಘಟಾಳಿ : ಪಡುವಣ ಕಡಲೊಳ್ ನಿತ್ತರಿಸದೆ ನೆಗೆದುವು ಜಳಮತ್ತ ದ್ವಿಪಘಟೆಗಳೆನಿಸಿದುವು ಘನಘಟೆಗಳ್ (ಮಲ್ಲಿಪು. ೮-೪೪). [ ದ್ವಿಪ + ಘಟೆ ]

**ದ್ವಿಪದ** (ಗು). ೧. ಎರಡು ಪಾದಗಳನ್ನೊಳಗೊಂಡ. (ನಾ). ೨. ಎರಡು ಕಾಲುಗಳನ್ನುಳ್ಳ ಜೀವ, – ಪ್ರಾಣಿ : ಕ್ಷೇತ್ರವಾಸ್ತು ಧನಧಾನ್ಯದ್ವಿಪದ . . . ಭಾಂಡಪ್ರಭೇದದಿಂ ಪತ್ತುಂ ತೆಱದ ಬಾಹ್ಯ ಪರಿಗ್ರಹಮುಮಂ . . . ಪತ್ತುವಿಟ್ಟು (ವರ್ಧಮಾ. ೧೦-೭ ವ). ೩. ಎರಡು ಪದಗಳು : ದ್ವಿಪದಂ ಮೇಣ್ ಬಹುಪದಮನ್ಯಪದಾರ್ಥದೊಳೊಂದಿ ನಿಲೆ ಬಹುವ್ರೀಹಿ (ಕಾವ್ಯಾವ. ೨೦೮). ೪. [ಛಂದ] ಪ್ರತಿ ಸಾಲಿನಲ್ಲಿ ಮೂರು ವಿಷ್ಣು, ಒಂದು ಬ್ರಹ್ಮಗಣ ಬರುವ ಪದ್ಯಜಾತಿ: ಈ ದ್ವಿಪದದ ಧಾಟಿ ತೆಲುಗಿನಲ್ಲಿ ಬಲು ಹಳೆಯದು (ಸಮಾಲೋ. ೨೦೮) ; ಈ ನಾಟಕಗಳು ಪದ್ಯ, ಕಥ್ಯ, ದ್ವಿಪದ, ಭಾಷಣಗಳು ಮುಂತಾದವುಗಳಿಂದ ರಂಜಿಸಲ್ಪಟ್ಟಿವೆ (ಭಾರದ. ೫೫೫). [ ಸಂ. ]

**ದ್ವಿಪದಿ** (ನಾ). ೧. [ಛಂದ] ಎರಡು ಪಾದಗಳನ್ನೊಳಗೊಂಡ ಒಂದು ವೃತ್ತ. ೨. ಪ್ರತಿಪಾದದಲ್ಲಿಯೂ ಐದು ಮಾತ್ರೆಯ ಗಣ ಮೂರೂ, ಮೂರು ಮಾತ್ರೆಯ ಗಣ ಒಂದೂ ಇರುವ ಒಂದು ವಿಧವಾದ ಪದ್ಯಜಾತಿ; ಒಟ್ಟು ಹದಿನೆಂಟು ಮಾತ್ರೆಗಳು ಒಂದೊಂದು ಸಾಲಿನಲ್ಲಿರುವ ಪದ್ಯ; P ಕನ್ನಡ ಕೈಪಿಡಿಯಲ್ಲಿ ಕೊಟ್ಟಿರುವ ದ್ವಿಪದಿಯಲ್ಲಿ "ಮೋಸಗಾರರ ಕೂಡೆ ಬೆರಸದಿರಬೇಕು" ಎಂಬ ಲಕ್ಷ್ಯದಲ್ಲಿ ೫ ಮಾತ್ರೆಯ ೩ ಗಣ, ೩ ಮಾತ್ರೆಯ ೧ ಗಣ ಬರುತ್ತದೆ. ಇದು ಒಟ್ಟು ೧೮ ಮಾತ್ರೆಗಳಾಗುತ್ತದೆ. ಮೊದಲನೆಯ ಗಣದಲ್ಲಿ ೬ ಮಾತ್ರೆಗಳೂ ಬಳಿಕ ೪ ಮಾತ್ರೆಗಳ ೫ ಗಣಗಳಿರಬೇಕೆಂದೂ ಕೊನೆಯಲ್ಲಿ ಗುರುವಿರಬೇಕೆಂದೂ ೨ ಮತ್ತು ೬ನೆಯ ಗಣಗಳು ಜಗಣವೇ ಆಗಬೇಕೆಂದೂ ದ್ವಿಪದಿಯ ಲಕ್ಷಣವನ್ನು ಸೋಮೇಶ್ವರನೆಂಬುವನು ಹೇಳಿದ್ದಾನೆಂದು ಭರತಕೋಶದಲ್ಲಿದೆ. ಈ ಲಕ್ಷಣದಂತೆ ೨೬ ಮಾತ್ರೆಗಳು ಒಂದೊಂದು ಸಾಲಿನಲ್ಲಿ ಬಂದಂತಾಗುತ್ತದೆ. ದ್ವಿಪದಿಯನ್ನು ಚರ್ಚರೀನರ್ತನದಲ್ಲಿ, ಗೀತದಲ್ಲಿ ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ : ದ್ವಿಪದಿ (ತೆಲುಗಿನಲ್ಲಿ ದ್ವಿಪದ) . . . ಪಾದಕ್ಕೆ ಮೂರು ವಿಷ್ಣು, ಒಂದು ಬ್ರಹ್ಮ ; ೫.೫.೫.೩–ಎರಡು ಸಲ : ಹಸಿದು ಬಂದವರಿಂಗಶನವೀಯಬೇಕು ಶಿಶುಗಳಿಗೆ ಪಾಲ್ಬೆಣ್ಣೆಗಳ ನಡಸಬೇಕು (ಕೈಪಿಡಿ. ೧೫೧) ; ಇದರಲ್ಲಿಯ ಪದ್ಯಗಳು ದ್ವಿಪದಿಗಳು, ಇಲ್ಲವೆ ಚೌಪದಿಗಳು (ಕವಪು. ೬೬೪) : ದ್ವಿಪದಿಯನ್ನೆ ದ್ವಿಗುಣಿತಗೊಳಿಸಿದಾಗ ಚೌಪದಿಯಾಗುವುದು (ಸಂಶೋಧ. ೧೩೩). 'ತ್ರಿಪದಿ' ಪರಾ. ೩. ಒಂದು ಬಗೆಯ ಪ್ರಾಕೃತದ ಪದ್ಯ.

[ ಸಂ. ದ್ವಿಪದೀ ]

**ದ್ವಿಪದೀಖಂಡ** (ನಾ). ಹಾಡಲು ಅನುಕೂಲವಾಗಿರುವ ಮಾತ್ರಾಪ್ರಧಾನವಾದ ಎರಡು ಸಾಲಿನ ಪದ್ಯ ; ಬಿಡಿಪದ್ಯ ; P ಇದರಲ್ಲಿ ಹಲವಾರು ಭೇದಗಳಿವೆ. ಶ್ರೀ ಹರ್ಷನ ರತ್ನಾವಳೀನಾಟಿಕೆಯಲ್ಲಿ ಬರುವ ದ್ವಿಪದೀಖಂಡದಲ್ಲಿ ಒಂದನೇ ಅಂಕದ ಹನ್ನೆರಡು ಮತ್ತು ಹದಿಮೂರನೆಯ ಪದ್ಯಗಳ ಒಂದೊಂದು ಸಾಲಿನಲ್ಲಿ ೨೬ ಮಾತ್ರೆಗಳಿವೆ ಕಲಾವತಿ, ಕನಕಾಂಗಿಯೆಂಬ ಚೇಟಿಯರಿರ್ವರುಂ ದ್ವಿಪದೀಖಂಡಮೆಂಬ ಪಾಡುಗಳಂ ಪಾಡುತ್ತೆ ಬಂದರ್ (ಮಿತ್ರಗೋ. ೯). [ ಸಂ. ]

**ದ್ವಿಪದ್ವಿಷ್ಟ** (ನಾ). ಆನೆಯ ವೈರಿ ; ಸಿಂಹ : ರುಂದ್ರದ್ವಿಪದ್ವಿಷ್ಟವಿಷ್ಟರವಿಶ್ರಾಂತನನಾತ್ಮಕಾಂತನನುಪಾಂತೋದ್ದಾಮ ಸೀಮಂತಿನೀಕರಚಾಮರೋತ್ಕರ ಮರುದ್ವ್ಯಾಕೀರ್ಣಕರ್ಣಾಬ್ಜನಂ ಸಾರ್ತಂದು (ಪುಷ್ಪಪು. ೯-೧೦೮).

[ ದ್ವಿಪ + ದ್ವಿಷ್ಟ ]

**ದ್ವಿಪಪತಿ** (ನಾ). ಆನೆಗಳ ಒಡೆಯ; ಗಜೇಂದ್ರ : ದ್ವಿಪಪತಿಗೆ ದಂತಭಂಗಂ . . . ಅಪಮಾನಿಗೆ ಮಾನಭಂಗವಾದುದೆ ಮರಣಂ (ನೀತಿಸಾ. ೧೧೧).

[ ದ್ವಿಪ + ಪತಿ ]

**ದ್ವಿಪಮಾರ್ಗ** (ನಾ). ಆನೆಯು ಹಾದುಹೋಗಿರುವ ದಾರಿ : ಅಪಗತಫಲತ್ವಮಂ ಭಗ್ನಪಾತಿತೋತ್ಪಾತ ವಿಧಿಯನೆಯ್ದಿದ ನೃಪರಿಂ ದ್ವಿಪಮಾರ್ಗಮೆಂತು ಹತಪಾದಪಂಗಳಿಂ ಭಯದಮಂತೆ ಭಯದಂ ಮಾರ್ಗಂ (ಶಾಂತಿಪು. ೧೦-೧೫೮). [ ದ್ವಿಪ + ಮಾರ್ಗ ]

**ದ್ವಿಪರೂಪು** (ನಾ). ಆನೆಯ ಆಕಾರ, – ಆಕೃತಿ : ವಸಿತೆ ಭೂತಿಯ ಉದರದಲ್ಲಿ ಗಜಮುಖನೆಂಬ ದನುಜ ಪುಟ್ಟಲ್ಕವಳು ದ್ವಿಪರೂಪ ಬಿಟ್ಟು ಮುನ್ನಿನ ತೆಱದಿ ತನ್ನೋಪನೆಡೆಗೆ ಪೋಗಲ್ಕೆ (ಪ್ರಾಥರಾ. ೧-೮).
[ ದ್ವಿಪ + ರೂಪು ]

**ದ್ವಿಪವಿಲಸಿತ** (ಗು). ೧. ಎರಡು ವಜ್ರಾಯುಧಗಳಿಂದ ಶೋಭಿಸುವ. ೨. ಆನೆಯ ವಿಲಾಸದಿಂದ ಕೂಡಿದ. ೧, ೨: ಆ ವನಂ . . . ದ್ವಿಪ ವಿಲಸಿತವಾಗಿಯುಮುಗಣಿತವಜ್ರೋಪರಂಜಿತಮುಂ ವಿತತಕರಾಕ್ರೋಪ ಲಸಿತಪವಾಗಿಯುಂ ಬಹುಲತಾರಾರಾಜಿತಮುಂ ತತತಾಪಸಸಮುಚ್ಚಯ ವಾಗಿಯುಮಶೋಕಸಂಗತಮೆನಿಸಿರ್ದುದು (ರಾಜಶೇ. ೫-೭೪ ವ).
[ ಸಂ. (ದ್ವಿ + ಪವಿ + ಲಸಿತ) ; (ದ್ವಿಪ + ವಿಲಸಿತ) ]

**ದ್ವಿಪವೈರಿ** (ನಾ). = ದ್ವಿಪದ್ವಿಷ್ಟ : ಉಪಶಮದಿಂದಾಸ್ತಿಕ್ಯದಿನುಪಾಸ್ತಿ ಸಂಯೋಗದಿಂ ದಯಾಳುತೆಯಿಂದಂ ದ್ವಿಪವೈರಿ ಬೆಳಗಂಗುಮ್ಮಘವಿಪಾಟನ ಪ್ರವಣಮನುಪಮಂ ಸಮ್ಯಕ್ತ್ವಂ (ವರ್ಧಮಾ. ೬-೨೫).  [ ದ್ವಿಪ + ವೈರಿ ]

**ದ್ವಿಪಸ್ಕಂಧ** (ನಾ). ಆನೆಯ ಹೆಗಲು, – ಭುಜ : ರದನಂಗಳ್ ನಾಲ್ಕು ಱಂದದ್ಭುತಮೆನಿಪ ಸಹಸ್ರದ್ವಿಪಸ್ಕಂಧದೊಳ್ ಪೂಡಿದ ವಿದ್ಯಾದೇವತಾ ನಿರ್ಮಿತರಥಮನತಿಕ್ಷೋಭದಿಂದೇಱ ಬಂದಂ (ಶಂರಾವಾ. ೧೪-೧೨೪).
[ ದ್ವಿಪ + ಸ್ಕಂಧ ]

**ದ್ವಿಪಾದ** (ನಾ). ಎರಡು ಪಾದಗಳು : ಮನುಜಂ ದ್ವಿಪಾದಪಶು ತಾನೆನಿಪ ವನುಂ . . . ಜಿನಮತಮನರ್ಥಿಯಿಂ ಕೇಳ್ದ ನರಂ ತಾಂ ಜೈನನೆನಿಸಿ ಪಂಡಿತನಕ್ಕುಂ (ಸಮಪ. ೩-೫೨). 'ದ್ವಿಪಾದಶೀರ್ಷಾಸನ' ಪರಾ.
[ ದ್ವಿ + ಪಾದ ]

**ದ್ವಿಪಾದಶೀರ್ಷಾಸನ** (ನಾ). [ಯೋಗ] ಯೋಗಾಸನಗಳಲ್ಲಿ ಒಂದು ಭಂಗಿ; ಎರಡೂ ಕಾಲುಗಳನ್ನು ಮೇಲೆತ್ತಿ ಮಾಡುವ ಶೀರ್ಷಾಸನದ ಒಂದು ಭಂಗಿ : ಮುಖ್ಯವಾದ ಕೆಲವು ಆಸನಗಳು :– ಅಷ್ಟವಿನ್ಯಾಸಗಳು ೧. ಉತ್ತಾನಾಸನ . . . ೩೦. ದ್ವಿಪಾದಶೀರ್ಷಾಸನ (ಭಾರದ. ೧೬೭).
[ ದ್ವಿಪಾದ + ಶೀರ್ಷಾಸನ ]

**ದ್ವಿಪಾದ್ಯ** (ನಾ). ಎರಡು ಪಟ್ಟು ತಪ್ಪುದಂಡ ; ಇಮ್ಮಡಿ ತಪ್ಪುದಂಡ : "ದ್ವಿಪಾದ್ಯಃ, ದ್ವಿಗುಣೋ ದಂಡಃ–ಎರಡರಷ್ಟು ದಂಡ ತೆಗೆದುಕೊಳ್ಳುವುದಕ್ಕೆ ಹೆಸರು, ದುಗುಣಿಜುಲ್ಮಾನೆ" (ಸಿದ್ಧಾಂತಿ. ೨೦೯).  [ ಸಂ. ]

**ದ್ವಿಪಾರಿ** (ನಾ). = ದ್ವಿಪದ್ವಿಷ್ಟ : ದ್ವಿಪಾರಿಗುಣ್ಮುವ ರಸನಾಗ್ರಮಂ ಪುಲಿಗೆ ಕೈಯೆರಡಂ ನಿರ್ಮಿದೆತ್ತಿ ಪಂದಿಗೊಪ್ಪುವ ಮೊಳಕೈಯ ತೋರ್ಪರರೆಬರ್ ಬಿಯದರ್ ಸಲೆ ಸನ್ನೆವೇಂಟೆಯೊಳ್ (ರಾಜಶೇ. ೫-೮೫).  [ ದ್ವಿಪ + ಅರಿ₆ ]

**ದ್ವಿಪೆ** (ನಾ). ಒಂದು ಬಗೆಯ ಗಿಡ ; ದೊಡ್ಡಕಣಿಗಿಲೆ ಗಿಡ : "ದ್ವಿಪೆಯನ್ನು ದಿಕೆ[ಪಾಠಾಂ. ಯುನ್ನಧುಕೆ] ವೆರ್ಗಣಿಗಿಲುಸಿಪರ್ಣ" (ಮಂಗರಾ. ೪೨-೩೭).
[ ? ]

**ದ್ವಿಪೇಂದ್ರ** (ನಾ). ಶ್ರೇಷ್ಠವಾದ ಆನೆ; ಗಜರಾಜ : ಯಾಮದ್ವಿಪೇಂದ್ರ ಪ್ರತಾನಕಟೋನ್ಮುಕ್ತಮದೌಘಕರ್ದಮಿತಕಾಂತಂ ರಾ ಜ ಗೇ ಹಾ ಜ ರಂ (ಚಂದ್ರಪ್ರ. ೧-೫೧) ; ಅನ್ನೆಗಮಾ ದ್ವಿಪೇಂದ್ರನುಂ ದಿನದಿನಂ ಮೊದಲಾಗಿ ನೀರಂ ಕುಡಿಯದೆ ಕವಳಂಗೊಳ್ಳದಿರ್ಪುದದಱ ಪರಿಚಾರಕಂ ಬಂದು ರಾಮಂಗೆ ಬಿನ್ನವಿಸಲ್ (ಪುಣ್ಯಾಸ್ರ. ೨-೮ ವ).
[ ದ್ವಿಪ + ಇಂದ್ರ ]

**ದ್ವಿಪ್ರತಿ** (ನಾ). ೧. ಎರಡು ಪ್ರತಿ : ದ್ವಿಪ್ರತಿಯಲ್ಲಿ ಪ್ರಾರ್ಥನಾಪತ್ರವನ್ನು ಹಾಕಬೇಕು (ರೂಢಿ). ೨. ಮೂಲ ಮತ್ತು ಅದರ ಎರಡನೆಯ ಪ್ರತಿ; ನಕಲು : ಸ್ಟೀರಿಯೋ ಮತ್ತು ಎಲೆಕ್ಟ್ರೋಫಲಕಗಳನ್ನು ಹಾಫ್‌ಟೋನ್ ಮತ್ತು ಲೈನ್ ಪಡಿಯಚ್ಚುಗಳನ್ನು ದ್ವಿಪ್ರತಿಗಳೆಂದು ಕ ರೆ ಯು ವ ರು (ಮುದ್ರಕ. ೫೬).  [ ದ್ವಿ + ಪ್ರತಿ ]

**ದ್ವಿಪ್ರಾಸ** (ನಾ). [ಛಂದ] ಪದ್ಯದ ಪ್ರತಿಸಾಲಿನಲ್ಲಿಯೂ ಮೊದಲ ಮತ್ತು ಮೂರನೆಯ ಸ್ವರಗಳ ನಡುವೆ ಒಂದೇ ರೀತಿಯ ಎರಡು ವ್ಯಂಜನಗಳು ಸಮವಾಗಿ ಬರುವ ಪ್ರಾಸ ; ಉದಾ:– ಅರಸರೊಳೆಲೆ ನೀಂ ಸರಸಮನರಸಿಯವೊಲಾಡುತಿರ್ಪೆ ನಿನಗಿದು ಗುಣಮೇ ಅರಸರ್ ಸರಸಮನಱವರೆ ಸರಸಮನಾಡರಸರಲ್ಲದವರೊಳ್ ಮಗಳೇ (ಕವಿರಾ. ೩-೨೩೩) ; ದ್ವಿಪ್ರಾಸಂ ಸುಭಗಂ ದ್ವಂದ್ವಪ್ರಾಸಂ ಕಾವ್ಯರಚನೆ(ಗುಚಿ) ತ(ಮೆಂ)[ನಿ]ಪ್ಪ ತ್ರಿಪ್ರಾಸಂ [ ಸಲೆಯಂತಾ ದಿಪ್ರಾಸಂ ] ಬೇಱ ನಾಲ್ಕು ತೆಱನಾಗಿರ್ಕುಂ (ಕವಿರಾ. ೩-೨೩೦) ; ದ್ವಿಪ್ರಾಸಂ ಸುಭಗಂ ದ್ವಂದ್ವಪ್ರಾಸಂ ಕಾವ್ಯರಚನೆಗುಚಿತಮೆನಿಪ್ಪ ತ್ರಿಪ್ರಾಸಂ ಸಲೆಯಂತಾದಿಪ್ರಾಸಂ ಬೇಱ ನಾಲ್ಕು ತೆಱನಾಗಿರ್ಕುಂ (ಛಂದೋಂಬು. ೧-೪೬ ಅಡಿಪದ್ಯ).  [ ದ್ವಿ+ಪ್ರಾಸ ]

**ದ್ವಿಭಂಗಿ** (ನಾ). [ನಾಟ್ಯ] ದೇಹವು ಎರಡು ಕಡೆ ಮಣಿದಿರುವುದು,– ಬಾಗಿರುವುದು ; ಅಂಗಭಂಗಿಗಳಲ್ಲಿ ಒಂದು : ದೇವತಾಮೂರ್ತಿಗಳ . . . ಸಮಭಂಗಿ, ದ್ವಿಭಂಗಿ, ತ್ರಿಭಂಗಿ ಮೊದಲಾದ ಅಂಗವಿನ್ಯಾಸಗಳ ವೈಖರಿಗಳನ್ನು ಸಕಾರಣವಾಗಿ ಚಿತ್ರಿಸಿದ್ದಾರೆ (ಭಾರದ. ೭೭).
[ ದ್ವಿ + ಭಂಗಿ₃ ]

**ದ್ವಿಭಾಗ** (ನಾ). ಎರಡು ಸಮಭಾಗ. 'ದ್ವಿಭಾಗಿಸು' ಪರಾ.
[ ದ್ವಿ + ಭಾಗ ]

**ದ್ವಿಭಾಗಿಸು** (ಕ್ರಿ). ಎರಡು ಸಮಭಾಗವನ್ನಾಗಿ ಮಾಡು,–ಬೇರ್ಪಡಿಸು: ಒಂದೇ ಆದ ಅರ್ಧನಾರೀನಟೇಶ್ವರನನ್ನು ದ್ವಿಭಾಗಿಸಿ ಈಶ್ವರ–ಪಾರ್ವತಿಯ ರನ್ನಾಗಿ ಹುಟ್ಟಿಸಿದ ಮೇಲೆ ಅವರನ್ನು ಒಂದುಗೂಡಿಸುವ ರತಿ ಕಾಮರು ಬೇಕೇ ಬೇಕು (ಸಾಹಿಸ. ೧೪೩).  [ ದ್ವಿಭಾಗ + – ಇಸು₃ ]

**ದ್ವಿಭಾಷಾಕ್ಷೇತ್ರ** (ನಾ). ಯಾವುದಾದರೂ ಎರಡು ಭಾಷೆಗಳನ್ನು ಪ್ರಧಾನವಾಗಿ ಆಡುವ ಮಾತಾಗಿ ಉಪಯೋಗಿಸುತ್ತಿರುವ ಕ್ಷೇತ್ರ,– ಸಂಗಮಪ್ರದೇಶ; ಕೋಲಾರ, ಕಾಸರಗೋಡು, ಬೆಳಗಾವಿ ಇತ್ಯಾದಿ.
[ ಸಂ. ]

**ದ್ವಿಭಾಷಾಚತುರ** (ನಾ). ಎರಡು ಭಾಷೆಗಳಲ್ಲಿ ನೈಪುಣ್ಯ ಪಡೆದವನು ; ಕೇಶವನ ಇನ್ನೊಂದು ಸಮಸ್ಯೆಯೆಂದರೆ ಅಭಿವ್ಯಕ್ತಿಯ ಎಡಬಿಡಂಗಿತನ, ಅವನು ದ್ವಿಭಾಷಾಚತುರ (ಹೊಸಕ್ನಿ. ೨೯೬).  [ ಸಂ. ]

**ದ್ವಿಭಾಷಾವಲಯ** (ನಾ). = ದ್ವಿಭಾಷಾಕ್ಷೇತ್ರ : ಕರ್ನಾಟಕ ದೇಶದಲ್ಲಿ ಬೆಳಗಾಂ ಮತ್ತು ಮಡಕಸಿರಾಗಳು ದ್ವಿಭಾಷಾವಲಯಗಳು (ರೂಢಿ).  [ಸಂ.]

**ದ್ವಿಭಾಷಿ** (ನಾ). ೧. ಎರಡು ಭಾಷೆಗಳನ್ನು ಬಲ್ಲವನು. ೨. ಭಾಷಾಂತರ ಮಾಡಿ ಹೇಳುವವನು ; ದುಬಾಷಿ : ಆದುದರಿಂದ ದ್ವಿಭಾಷಿಯಾಗಿದ್ದ ಸಿಪಾಯಿಯ ಕಡೆ ಅವನೂ ತಿರುಗಿದನು (ಮಲನಾ. ೧೧೫) ; ಎಷ್ಟೋ ಸಲ ತಾನೇ ದ್ವಿಭಾಷಿಯಾಗಿ ಅವರೆದುರು ನಿಂತು ಮಾತನಾಡಿದ್ದುಂಟು (ಜಯಂತ. ೩೨).  [ ಸಂ. ದ್ವಿಭಾಷಿನ್ ]

**ದ್ವಿಭಾಷಿತ್ವ** (ನಾ). ಎರಡು ಭಾಷೆಗಳನ್ನು ಉಪಯೋಗಿಸುವುದು: ಈ ದ್ವಿಭಾಷಿತ್ವದ ಪರಿಣಾಮವಾಗಿ ಪರ್ಜಭಾಷೆ ಪರಭಾಷೆಯ ಪದಗಳನ್ನು ವಿಪುಲವಾಗಿ ಪಡೆಯುತೊಡಗಿದೆ (ದ್ರಾವಿವಿ. ೧೯೩).  [ ಸಂ. ]

**ದ್ವಿಮಾತ್ರ** (ನಾ). [ಛಂದ] (ಉಚ್ಚಾರಣೆಗೆ) ಎರಡು ಮಾತ್ರೆಗಳಷ್ಟು ಕಾಲ ತೆಗೆದುಕೊಳ್ಳುವುದು ; ದೀರ್ಘಾಕ್ಷರ ; ಗುರು : ಸ್ವರದೊಳಗ ಮೇಕಮಾತ್ರಾನಿರತಂ ಹ್ರಸ್ವಂ ದ್ವಿಮಾತ್ರಮಂತದು ದೀರ್ಘಂ (ಕಾವ್ಯಾವ. ೧೧); ಸ್ವರ ವ್ಯಂಜನದಿನೇಕಮಾತ್ರಮಾದೊಡೆ ಹ್ರಸ್ವಂ, ದ್ವಿಮಾತ್ರಮಾದೊಡೆ ದೀರ್ಘಂ, ತ್ರಿಮಾತ್ರಮಾದೊಡೆ ಪ್ಲುತಂ (ಶಮದ. ೧೧ ವೃತ್ತಿ).  [ ಸಂ. ]

**ದ್ವಿಮಾಸ** (ನಾ). ಎರಡು ತಿಂಗಳು : ತ್ರಿದಿನಕ್ಕೊರ್ಮೆ ಫಲಾದನಂ ನೆಗಳ್ದು ದಾತಂಗೊಂದು ತಿಂ ಗ ಳ್ ದ್ವಿಮಾಸದೊಳಾಱುಂ ದಿನಕೊರ್ಮೆ ತತ್ಫಳಚಯಾಹಾರಂ (ಶಬಶಂ. ೨-೯೯).  [ ದ್ವಿ + ಮಾಸ₂ ]

**ದ್ವಿಮುಖ** (ಗು). ೧. ಎರಡು ಮುಖಗಳುಳ್ಳ. (ನಾ). ೨. ಎರಡು ಮುಖಗಳಿಂದ ಕೂಡಿದುದು: ಸಂಖ್ಯಾವಾಚಿ ಸಮಾಸಕ್ಕೆ–ಏಕಾಂಗ, ದ್ವಿಮುಖ . . . ದಶವ್ಯಾಕರಣ–ಎಂದು ಸಮಾಸವಾಗಲೊಡಂ (ಶಮದ. ೮೩ ಪ್ರಯೋ). ೩. ಇಬ್ಬಗೆಯಾದುದಂ; ಎರಡು ವಿಧವಾದುದಂ: ಮಾನವನ ಜೀವನದ ಹೋರಾಟ ದ್ವಿಮುಖ–ಬದುಕುವ ಸಲುವಾಗಿಯೇ ಹೋರಾಟವೊಂದು; ಉತ್ತಮ ಆದರ್ಶಸಾಧನೆಗಾಗಿ ನಡೆಯುವ ಹೋರಾಟವೊಂದು (ಮುಕ್ತಾರ. ೧ ಪೀಠಿಕೆ)). ೪. ಎರಡು ತಲೆಯ ಹಾವು; ಇರ್ತಲೆಹಾವು: " ದ್ವಿಮುಖಮುಹಿರಣಿಯೆನಲ್ಕಿರ್ತಲೆಗನಕ್ಕು " (ಮಂಗರಾ. ೧೧೮-೨). [ ದ್ವಿ + ಮುಖ ]

**ದ್ವಿಮುಖಿ** (ನಾ). ಎರಡು ಬಗೆಯಾಗಿರುವುದಂ: ಕುವಿಭಾಷೆ ಒರಿಯಾ ಮತ್ತು ತೆಲುಗುಭಾಷೆಗಳ ಗಡಿಯ ನಡುವೆ ದ್ವಿಮುಖಿಯಾದ ಪ್ರಭಾವಕ್ಕೆ ಒಳಗಾಗಿ ಬಾಳುತ್ತಿದೆ (ದ್ರಾವಿ. ೧೬೦). [ ಸಂ. ದ್ವಿಮುಖಿ: ]

**ದ್ವಿಯಾಮ** (ನಾ). ಎರಡು ಜಾವ,–ಯಾಮಂ: ದೂಜಾವಂ, ದುಜಾವಂ, ದ್ವಿಯಾಮಂ (ಶಬ್ದಾನು. ೩೬೬ ಪ್ರಯೋ). [ ಸಂ. ]

**ದ್ವಿರದ** (ಗು). ೧. ಎರಡು ಹಲ್ಲುಗಳನ್ನು ಹೊಂದಿದ; ಎರಡು ದಂತಗಳಿಂದ ಕೂಡಿದ. (ನಾ). ೨. ಆನೆ; ಗಜ: "ಮಾತಂಗಃ, ದ್ವಿರದಃ . . . ಸಿಂಧುರಃ– ಈ ೧೪ ಆನೆಯ ಪೆಸರ್" (ಹಲಾಯು. ೩೬-೬೦); ವನ್ಯಗಂಧದ್ವಿರದಮೊ ಕೊಳನಂ ಪೊಕ್ಕವೋಲ್ ಕಾದಿ ತೋರ್ಪೆಂ (ಪಂಪಭಾ. ೧೧-೮೬); ಸಿಂಹಹಸ್ತಾವಲಂಬದ್ವಿರದಂಬೋಲಿರ್ದನೀ ಮಾಯೆಯ ಮುಖದೆಡೆಯೊಳ್ (ರಕ್ಷಾಶ. ೨೬); ಹರಿದುದಗ್ಗದ ಸುಪ್ರತೀಕ ದ್ವಿರದ (ಕುವ್ಯಾದ್ರೋ. ೪-೬೬). [ ಸಂ. ]

**ದ್ವಿರದಕರ** (ನಾ). ಆನೆಯ ಸೊಂಡಿಲು: ಕರಮೆಂಬುದು (ದ್ವಿರದಕರಂ) ಪರಿಭಾವಿಪುದಿಂತಿದಂ ಪ್ರಯೋಗಾಂತರದಿಂ (ವಸ್ತುಕೋ. ೧೩೫-೧೧೨). [ ದ್ವಿರದ + ಕರ$_3$ ]

**ದ್ವಿರದಘಟಾಳಿ** (ನಾ).=ದ್ವಿಪಘಟಾಳಿ: ದ್ವಿರದಘಟಾಳಿಯೊತ್ತರದಿ ಪಾಯ್ವೆಡೆಯೊಳ್ನದಿ ಸೇತುಗಟ್ಟಿದಂತಿರೆ (ತ್ರಿಪುವಿ. ೨೪-೨೮೪) [ದ್ವಿರದ + ಘಟಾಳಿ ]

**ದ್ವಿರದಘಟೆ** (ನಾ).=ದ್ವಿಪಘಟಾಳಿ: ವಜ್ರಾಯುಧಾಂಕಂ ದ್ವಿರದಘಟೆಯುಂ . . . ಸಮರದೊಳೋರಂತೆ ಮಾಱಾಂತು ಗೆಲ್ದಂ (ಸುಕುಮಾ. ೬-೪). [ ದ್ವಿರದ + ಘಟೆ ]

**ದ್ವಿರದಾನನ** (ನಾ). ಆನೆಯ ಮುಖವುಳ್ಳವನು; ಗಣಪತಿ; ಗಜಾನನ: ಷಟ್ಪದರಾಜಿಚುಂಬಿತಕಪೋಲಯುಗಂ ದ್ವಿರದಾನನಂ . . . ನಮಗೀಗೆ ಮನೋರಥಂಗಳಂ (ಪಂಚತಂ. ೨೬೨-೧೮). [ ದ್ವಿರದ + ಆನನ ]

**ದ್ವಿರದಾರೋಹ** (ನಾ). ಆನೆಯನ್ನು ಏರುವವನು; ಮಾವುತ: ದ್ವಿರದಾರೋಹಂ ಯುದ್ಧೋದ್ಧುರಮನನಾಧೋರಣಂ ನಿಷಾದಿಯೆನಿಕ್ಕುಂ (ವಸ್ತುಕೋ. ೮೪-೧೧). [ ದ್ವಿರದ + ಆರೋಹ ]

**ದ್ವಿರದಾರೋಹಕ** (ನಾ). = ದ್ವಿರದಾರೋಹ: ದ್ವಿರದಾರೋಹಕ ವಾಜಿವಾಹಕ ವರೂಥಾರೂಢ ಭೂಪಾಲ ಕಿನ್ನರಯಾತಾಂಕುಶ ಪಾಶ ಖಡ್ಗ ಖರ ಕಾಂಡಾನೇಕಶಸ್ತ್ರಾಂಶುವುಂ ಸ್ಫುರಿತಾಂಗಾಭರಣಾಂಶುವುಂ ಭುವನಮಂ ಜ್ಯೋತಿರ್ಮಯಂ ಮಾಡೆ (ಮಹಾನೇ. ೧೧-೧೧೧).
[ ದ್ವಿರದ + ಆರೋಹಕ ]

**ದ್ವಿರದಾರೋಹಣ** (ನಾ). ಆನೆಯನ್ನು ಏರುವಿಕೆ; ಆನೆಸವಾರಿ: ದ್ವಿರದಾರೋಹಣ ಯೋಗ್ಯವೀಥಿ ಹಯಮೈಹಾಳಿ ಪ್ರದೇಶಂ (ಪುಷ್ಪಪು. ೪-೩೪).
[ ದ್ವಿರದ + ಆರೋಹಣ ]

**ದ್ವಿರದಾಸ್ಯ** (ನಾ). = ದ್ವಿರದಾನನ: ಈ ಮಹಾಪುರುಷಂ . . . ಕ್ರೌಂಚಾರಾತಿಯಾಗಿಯುಂ ಷಣ್ಮುಖನಲ್ತು ಪರಶುಧರನಾಗಿಯುಂ ದ್ವಿರದಾಸ್ಯನಲ್ತು (ಜಗವಿ. ೮-೧೦ ವ). [ ದ್ವಿರದ + ಆಸ್ಯ ]

**ದ್ವಿರದೇಂದ್ರ** (ನಾ). ಶ್ರೇಷ್ಠವಾದ ಆನೆ; ಗಜರಾಜ; ಗಜೇಂದ್ರ: ದ್ವಿರದೇಂದ್ರಸ್ಕಂಧಮಂ ರುಗ್ಮಿಣಿಯೊಡನೊಲವಿಂದೇಱಿ . . . ಲೀಲೆಯಿಂ ಬಂದು ಪೊಕ್ಕಂ ಪುರಮಂ (ಮಹಾನೇ. ೬-೪೦); ಆ ದ್ವಿರದೇಂದ್ರಂ ಮೂಱುದಿನಂಬರಂ ನಿರಾಹಾರನಾಗಿರಲ್ (ಪುಣ್ಯಾಸ್ರ. ೨-೮ ವ).
[ ದ್ವಿರದ + ಇಂದ್ರ ]

**ದ್ವಿರಸನ** (ನಾ). ೧. ಎರಡು ನಾಲಗೆಯುಳ್ಳುದು; ಹಾವು; ನಾಗ: "ವಿಷಧರಃ, ದಂದಶೂಕಃ . . . ದ್ವಿರಸನಃ, ಕಾದ್ರವೇಯಃ, ದರ್ವೀಕರಃ, ದೃಕ್ಛ್ರುತಿಃ, ಭುಜಂಗಮಃ–ಈ ೨೫ ಪಾವಿನ ಪೆಸರ್"(ಹಲಾಯು. ೧೧೫-೧೮). ೨. ನಾಗದೇವತೆ: ದ್ವಿರಸನರಟ್ಟಿದರ್ ಕೆಟಿಗೆ ಮೇಗೆ ದಿವೌಕಸರುಳ್ದುದರ್ (ಮಹಾನೇ. ೧೨-೪). ೩. ಆಡಿದ ಮಾತಿಗೆ ತಪ್ಪುವವನು; ವಂಚಕ. ೧, ೩: ಅಪದಸ್ಥಂ ವಿಷವಕ್ತ್ರಕಂ ದ್ವಿರಸನಂ ಮಿತ್ರದ್ವಿಷಂ ವಕ್ರಗಾಮಿ ಪರೋಪದ್ರವಕಾರಿ ದುಷ್ಟಮತಿ ಛಿದ್ರಾನ್ವೇಷಿ . . . ಎನೆ ಪಾವಂ ಪೋಲ್ತು ಲೋಕಕ್ಕೆ ಪರ್ತಿಪ ದುರ್ಮೇದ[ ಬೋಧ ]ನನುಗ್ರನಂ ತಪಸಿಯೆಂಬಮೂರ್ಧರೀ ಲೋಕದೊಳ್ (ಸಮಪ. ೧೪-೧೪). [ ಸಂ. ]

**ದ್ವಿರಸನಬಾಣ** (ನಾ). ಹಾವಿನ ಮಂತ್ರವನ್ನು ಅಭಿಮಂತ್ರಿಸಿ ಪ್ರಯೋಗಿಸುವ ಅಸ್ತ್ರ; ಸರ್ಪಾಸ್ತ್ರ: ದ್ವಿರಸನಬಾಣಂ ವಿಜಯನ ಗರುತ್ಮಶರದಿಂದೆ ನುಚ್ಚುನುಱಿಯಪ್ಪುದುಂ (ಮಹಾನೇ. ೧೨-೨೩೨). [ ದ್ವಿರಸನ + ಬಾಣ ]

**ದ್ವಿರಾಷ್ಟ್ರವ್ಯಾಪಾರ** (ನಾ). ಎರಡು ದೇಶಗಳ ನಡುವಿನ ಪರಸ್ಪರ ಮಾರಾಟ, ಕೊಳ್ಳಾಟ; ಅಂತರ ರಾಷ್ಟ್ರೀಯ ವ್ಯಾಪಾರ: ರಕ್ಷಣಾಸುಂಕ, (Protective Tariff), ವಿನಿಮಯಹತೋಟಿ . . . ದ್ವಿರಾಷ್ಟ್ರವ್ಯಾಪಾರ (Bilateral Trade), ಹಾಗು ವಿನಿಮಯ ಒಪ್ಪಂದಗಳು (ಅಂತಸಂ. ೯).
[ ದ್ವಿರಾಷ್ಟ್ರ$_0$ + ವ್ಯಾಪಾರ ]

**ದ್ವಿರುಕ್ತಿ** (ನಾ). ೧. [ವ್ಯಾಕ]ಒಂದು ವರ್ಣ ಅಥವಾ ಒಂದು ಪದವನ್ನು ಎರಡು ಸಲ ಉಚ್ಚರಿಸುವಿಕೆ: ಹೀಗೆ ಒಂದು ವಿಶೇಷವಾದ ಅರ್ಥವನ್ನು ಸೂಚಿಸುವುದಕ್ಕಾಗಿ ಪದವನ್ನು ಎರಡು ಬಾರಿ ಪ್ರಯೋಗಿಸುವುದಕ್ಕೆ ದ್ವಿರುಕ್ತಿ ಎಂದು ಹೆಸರು (ಮಧ್ಯಮ. ೧೯೦); ದ್ವಿರುಕ್ತಿ (೧) ದೂರ, ಸಾಮೀಪ್ಯ . . . ಬಾಧೆ ಇವು ಮೊದಲಾದ ಅರ್ಥಗಳು ತೋರುವಲ್ಲಿ ಒಂದೇ ಪದವನ್ನು ಅನೇಕಾವೃತ್ತಿ ಪ್ರಯೋಗಿಸುವರು (ಕೈಪಿಡಿ. ೬೦). ೨. ಒತ್ತಕ್ಷರ; ದ್ವಿತ್ವ: ಸ್ವರಮಾದಿಯಪ್ಪವವು ಮುಂತಿರೆ ದೀರ್ಘಂ ಮೊದಲೊಳಗುರುಗಕ್ಕುಂ ತದಮಾಂತರದೊಳ್ ಣಟಳನತಂಗಳ್ ದೊರೆಕೊಳೆ ತಳೆಗುಂ ದ್ವಿರುಕ್ತಿಯುಂ ಬಹುಳತೆಯುಂ (ಕಾವ್ಯಾವ. ೨೧೯); ಅತ್ವಂ = ದ್ವಿರುಕ್ತಿಯಾದ ನಡು ಕಡೆ ಎಂಬ ಶಬ್ದಂಗಳ ಮೊದಲ ಪದದ ಕಡೆಗೆ ಅಕಾರಂ . . . ಬರ್ಪುದು (ಶಮದ. ೧೯೩ ಟೀಕೆ).

**ದ್ವಿರುಕ್ತಿಕಾರ್ಯ** = ವೀಪ್ಸೆ ಮತ್ತು ಅನುಕರಣ–ಇವುಗಳಲ್ಲಿ ಬರುವ ದ್ವಿರುಕ್ತಿಯ ಸ್ವರೂಪದಲ್ಲಿ ಉಂಟಾಗುವ ವ್ಯತ್ಯಾಸ,–ಬದಲಾವಣೆ: ದ್ವಿರುಕ್ತಿಕಾರ್ಯಗಳು: –(i) ದ್ವಿರುಕ್ತಿಯಲ್ಲಿ ಪ್ರಾರಂಭದ ತುದಿ ಮೊದಲ್ ಶಬ್ದಗಳಿಗೆ ತುತ್ತ ಮೊತ್ತ ಎಂದೂ ಕಡೆ ನಡು ಶಬ್ದಗಳಿಗೆ ಕಟ್ಟ ನಟ್ಟ ಎಂದೂ ರೂಪಗಳು ಬರುವುವು. ಉದಾ:–ತುತ್ತತುದಿ, ಮೊತ್ತಮೊದಲ್, ಕಟ್ಟಕಡೆ, ನಟ್ಟನಡು (ಕೈಪಿಡಿ. ೬೦). [ ಸಂ. ]

**ದ್ವಿರೂಢೆ** (ನಾ). ಎರಡು ಸಲ ಮದುವೆಯಾದ ಹೆಂಗಸು.
[ ಸಂ. ದ್ವಿರೂಢಾ ]

**ದ್ವಿರೂಪ** (ನಾ). ೧. ಎರಡು ಆಕಾರ, – ಸ್ವರೂಪ: ದರಹಾಸವಿಭಾಸಿತ ವಕ್ತ್ರಶೋಭೆಯ ನೆವದಿಂದೆ ಚಂದ್ರಮಳಯುಂ ತಳೆದತ್ತನಿಶಂ ದ್ವಿರೂಪಮಂ (ಚಂದ್ರಪು. ೨-೧೫). ೨. ಎರಡು ರೂಪವುಳ್ಳದು: ದ್ವಿರೂಪ–ಬಹುರೂಪತ್ವ . . . ಹವಳದ ನಿರ್ಮಾಣ – ಇವೆಲ್ಲವೂ ಈ ವಂಶದ ವಿಶೇಷ ಲಕ್ಷಣಗಳು (ಪ್ರಾಣಿಶಾ. ೧೩೨). [ ಸಂ. ]

**ದ್ವಿರೇಫ** (ನಾ). ಭ್ರಮರ ಎಂಬ ತನ್ನ ಹೆಸರಿನಲ್ಲಿ ಎರಡು ರಕಾರಗಳನ್ನುಳ್ಳ ಕೀಟ ; ತುಂಬಿ : "ಮಧುಕರಃ . . . ಅಳೀ, ದ್ವಿರೇಫಃ – ಈ ೧೩ ತುಂಬಿ" (ಹಲಾಯು. ೪೩-೧೦೦) ; "ಅಳಿ ಚಂಚರೀಕಮಿಂದಿಂದಿರಂ ತುಂಬಿ . . . ಶಿಳೀಮುಖಮದಳಿನಂ ದ್ವಿರೇಫಮದು . . . ಭ್ರಮರಮಕ್ಕುಂ" (ಮಂಗರಾ. ೫೨-೧೧) ; ಸರಸಿಜಮೋ ಮೊಗಮೋ ಮೇಣ್ದ್ವಿರೇಫಮೋ ಲೋಲನಯನಯುಗಮೋ ಮನದೊಳ್ಪರಿದುಂ ಸಂಶಯಂ (ಕವಿರಾ. ೩-೭೧) ; ಸಿರಿಸದ ಪೂವಮಾಲೆಗಳಂ ದ್ವಿರೇಫಮಾಲೆಗಳ ಬಳಸಿದಂತಿಕ್ಕಿದಳಾ ತರುಣಿಯ ಮುಂಗೈಗಳೊಳಂ ಹರಿನೀಲದ ಪಿಂಡುಗಂಕಣಂಗಳನಾಗಳ್ (ಬಾಧಪು. ೧೧-೫೯) ; ತ್ರಾಹಿ ಗಿರಿಜಾನನಾಂಭೋಜಮುಗ್ಧಮಾಧ್ವದ್ವಿರೇಫ (ಉದ್ಭದೇ. ೩-೩೧). [ ಸಂ. ]

**ದ್ವಿರೇಫಕುಳ** (ನಾ). ತುಂಬಿಗಳ ಗುಂಪು ; ಭ್ರಮರಗಳ ಸಮೂಹ : ಅಲರ ತೊಂಗಲ ಮೇಲೆ ಗಾವರಿಪ ದ್ವಿರೇಫಕುಳಂಗಳಿಂ (ಹಾಲಾಸ್ಯ. ೧-೧೧-೪). [ ದ್ವಿರೇಫ + ಕುಳ$_5$ ( = ಕುಲ) ]

**ದ್ವಿರೇಫತತಿ** (ನಾ). = ದ್ವಿರೇಫಕುಳ : ನಿಜಶರೀರಸೌರಭಕೆ ಸೋಲ್ತು ತದ್ವ್ಯಾಜದಿಂ ದ್ವಿರೇಫತತಿ ಚಾಪದಿಂ ತೊಲಗೆ (ಮಲ್ಲಿಪು. ೧೪-೨೮೩). [ ದ್ವಿರೇಫ + ತತಿ$_2$ ]

**ದ್ವಿರೇಫಾಳಿ** (ನಾ). = ದ್ವಿರೇಫತತಿ : ಶಾಳಿವನಗಂಧಾಂಧದ್ವಿರೇಫಾಳಿ ಕಣ್ಗೊಳಿಸಿತ್ತು (ಪಂಪಭಾ. ೭-೭೧). [ ದ್ವಿರೇಫ + ಆಳಿ$_4$ ( = ಆಲಿ$_4$) ]

**ದ್ವಿರ್ಭಾವ** (ನಾ). [ವ್ಯಾಕ] ಒತ್ತಕ್ಷರ ; ದ್ವಿತ್ವ : ಅಪ್, ಕ್ಷುತ್ . . . ವಾಕ್ – ಇವು ಮೊದಲಾದುವರ್ಕೆ ಉತ್ವಂ ಬೆರಸಿ ದ್ವಿರ್ಭಾವಮಾಗಿ ಅಪ್ಪು, ಕ್ಷುತ್ತು – ಎಂಬಂತಾದೊಡಂ (ಶಮದ. ೮೬ ಪ್ರಯೋ) ; ಅಕಾರಾಂತ ನಪುಂಸಕಲಿಂಗದ ಏಕವಚನದಲ್ಲಿ ಬರುವ 'ಕೆ' ಕಾರಕ್ಕೆ ವಿಕಲ್ಪವಾಗಿ ದ್ವಿರ್ಭಾವವೂ ಇದೆ – 'ಮರಕ್ಕೆ' ಎಂಬಂತೆ (ಸಂಶೋಧ. ೭೦). [ ಸಂ. ]

**ದ್ವಿಲಿಪಿ** (ನಾ). ಎರಡು ಬಗೆಯ ಲಿಪಿ : ಈ ನಿಯಮಕ್ಕೆ ಬಾಧೆ ತರುವ ಮತ್ತೊಂದು ಅಂಶವೆಂದರೆ ಭಿನ್ನಲಿಪಿಗಳನ್ನು ಬಳಸುವ ಮತ್ತು ಭಿನ್ನಭಾಷೆಗಳನ್ನು ಆಡುವ ಪ್ರಾಂತ್ಯಗಳ ಗಡಿಗಳ ಉದ್ದಕ್ಕೂ ಎಡೆಬಿಡದೆ ಇರುವ ದ್ವಿಭಾಷಾ, ದ್ವಿಲಿಪಿವಲಯಗಳು (ಭಾರದ. ೩೯). [ ದ್ವಿ + ಲಿಪಿ ]

**ದ್ವಿವಚನ** (ನಾ). [ವ್ಯಾಕ] ಎರಡು ಸಂಖ್ಯೆಯ ವಸ್ತು, ವ್ಯಕ್ತಿ ಮುಂತಾದುವುಗಳನ್ನು ಸೂಚಿಸುವ ಶಬ್ದರೂಪ : ಪ್ರಮಾಣಾಂತರಸಂಖ್ಯಾನಿವೃತ್ತ್ಯರ್ಥಂ ದ್ವಿವಚನನಿರ್ದೇಶಂ ಪ್ರಮಾಣಕ್ಕೆ ಮಾಡೆಪಟ್ಟುತ್ತು (ತತ್ತ್ವಾರ್ಥ. ೫೩) ; ಸ್ವೀಕಾರ್ಯಂ ಕನ್ನಡದೊಳಗೇಕ ಬಹುತ್ವಂ ದ್ವಿವಚನಮುಚಿತದೆ ಬರ್ಕುಂ (ಶಮದ. ೯೪) ; ಫಿಜಿಯನ್ ಎಂಬ ಭಾಷೆಯಲ್ಲಿ ಏಕವಚನ, ದ್ವಿವಚನ, ತ್ರಿವಚನ ಮತ್ತು ಬಹುವಚನವೆಂಬ ನಾಲ್ಕು ಬಗೆಯ ವಚನಗಳಿವೆ (ದ್ರಾವಿವಿ. ೨೭೩). [ ಸಂ. ]

**ದ್ವಿವಪ್ತೃ** (ನಾ). ಮಲತಂದೆ ; ಬಲತಂದೆ : "ಬಲದಂದೆ ದ್ವಿವಪ್ತೃವಕ್ಕುಂ" (ಮಂಗರಾ. ೯೨-೦೨). [ ಸಂ. ]

**ದ್ವಿವಾರಂ** (ಅ). ಎರಡು ಸಲ ; ಎರಡು ಬಾರಿ : ಮತ್ತಂ ತದವಗಾಹನದಿಂ ದ್ವಿವಾರಮು ಯೋ ಪುಟ್ಟಿ ಪಂಚತ್ವಮನೆಯ್ದಿ (ಪಸಾರ. ೫೪೭). [ ಸಂ. ]

**ದ್ವಿವಿಧ** (ನಾ). ಎರಡು ಪ್ರಕಾರ : ನಿನ್ನ ಬೆಸಗೊಂಡ ತತ್ತ್ವಮುಂ ಹೇಯೋಪಾದೇಯರೂಪದಿಂ ದ್ವಿವಿಧಮಕ್ಕುಂ (ಆದಿಪು. ೧೦-೬೧ ವ). [ ದ್ವಿ + ವಿಧ ]

**ದ್ವಿವೇದನೀಯ** (ನಾ). [ಜೈನ] ಆತ್ಮನಿಗೆ ಸುಖ ಅಥವಾ ದುಃಖವನ್ನುಂಟುಮಾಡುವ, ಸಾತಾವೇದನೀಯ ಮತ್ತು ಅಸಾತಾವೇದನೀಯ ಎಂಬ ಎರಡು ವಿಧವಾದ ಕರ್ಮಪ್ರಕೃತಿ ; ᵽ ಜೀವನಿಗೆ ಸುಖಾನುಭವವನ್ನುಂಟುಮಾಡುವ ಕರ್ಮೋದಯ ಸಾತಾವೇದನೀಯ, ದುಃಖಕ್ಕೆ ಕಾರಣವಾದ ಕರ್ಮೋದಯ ಅಸಾತಾವೇದನೀಯ: ಪಂಚಜ್ಞಾನಾವರಣಂಗಳುಂ ದ್ವಿವೇದನೀಯಂಗಳುಂ ಅಷ್ಟಾವಿಂಶತಿ ಮೋಹನೀಯಂಗಳುಂ . . . ಸತ್ವಪ್ರಕೃತಿಗಳಿಂದುತ್ತರಪ್ರಕೃತಿಗಳು ಶ್ರೀವೀತರಾಗಸರ್ವಜ್ಞರಿಂದಂ ನಿರೂಪಿಸಲ್ಪಟ್ಟುವು (ಗೊಮ್ಮಸಾ. ೬-೮). [ ದ್ವಿ + ವೇದನೀಯ ]

**ದ್ವಿವ್ಯಕ್ತಿತ್ವ** (ನಾ). ಎರಡು ವಿಧವಾದ ವ್ಯಕ್ತಿತ್ವ ; ದ್ವಿಮುಖ ವ್ಯಕ್ತಿತ್ವ : ಹಾಗೆ ಮಾಡಲು ಯತ್ನಿಸಿದರೂ ದ್ವಿವ್ಯಕ್ತಿತ್ವವು ಹೆಚ್ಚು ದಿನ ಬಾಳಲಾರದು (ಧರ್ಮಶ್ರೀ. ೨೭೪). [ ದ್ವಿ + ವ್ಯಕ್ತಿತ್ವ ]

**ದ್ವಿಶಾಲಾಲಯ** (ನಾ). ಎರಡು ಅಂತಸ್ತಿನ ಮನೆ : ತದ್ಗುರು . . . ದ್ವಿಶರೀರರಾಶಿಯೊಳಿರಲ್ಕಕ್ಕುಂ ದ್ವಿಶಾಲಾಲಯಂ (ಜಾತತಿ. ೪-೧೪). [ ಸಂ. ]

**ದ್ವಿಶಿಖರ** (ನಾ). ೧. ಒಂದು ಪರ್ವತದ ಹೆಸರು : ಶೈಲೇಂದ್ರ ದ್ವಿಶಿಖರ . . . ಹಿಮಾದ್ರಿಗಳೆಂಬ ದಶಕುಲಪರ್ವತಂಗಳೇ ಪೂರ್ವೋಕ್ತ ಗಂಧಮಾದನವೆಂಬ ಕೀಲಕಪರ್ವತಕ್ಕೆ ತೆಂಕಣದಿಕ್ಕಿನಲ್ಲಿಹವು (ವಿವೇಕ. ೨೧೫). ೨. [ನಾಟ್ಯ] ಎರಡು ಶಿಖರಹಸ್ತಗಳನ್ನು ಕೂಡಿಸಿ ಹಿಡಿಯುವುದು ; ᵽ "ಮಂತ್ರಿಬ್ಬರನ್ನು ಶಪಿಸುವುದು, ಚಿಟುಕುಮುರಿಯುವುದು, ಸ್ತ್ರೀಯರ ಜಗಳ, 'ಇಲ್ಲ' ಎನ್ನುವುದು ಇವುಗಳನ್ನು ತೋರಿಸುವಾಗ" (ಲಾಸ್ಯರಂ. ೨೪೬ ಗದ್ಯಾನುವಾದ) : ದ್ವಿಶಿಖರ – ಎರಡುಂ ಶಿಖರಕರಂಗಳ್ ಸರಿಯಾಗೊಂದಲ್ಕೆ ಸಂಯುತಂಗಳೊಳಧಿಕಂ ತರುಣೀ ದ್ವಯಶಿಖರಾಖ್ಯಂ ಪಿರಿದುಂ ಶಾಪಿಸುವ ಚಿಟುಕುಮುರಿವಿನಿತಜಗಳಂ (ಲಾಸ್ಯರಂ. ೨-೮೧). [ ದ್ವಿ + ಶಿಖರ ]

**ದ್ವಿಶಿರ** (ನಾ). ಎರಡು ತಲೆಗಳನ್ನು ಹೊಂದಿರುವುದು ; ಭೇರುಂಡಪಕ್ಷಿ : ಪಸಿದೆಯ್ದುಂದುಣ್ಬುದಾ ಪೆಣ್ಬುಲಿಯ ಮೊಲೆಯನಲ್ಲಿರ್ದ ಸಾರಂಗಶಾಬಂ ದ್ವಿಶಿರಂ ತಾಯ್ದಪ್ಪಿ ಪಾಯ್ದೆಂಟಡಿಗೆ ಕುಟುಕನೊಲ್ದೂಡುಗುಂ (ಶಬಶಂ. ೨-೬೫). [ ದ್ವಿ + ಶಿರ$_2$ ]

**ದ್ವಿಷ** (ನಾ). ಹಗೆ ; ಶತ್ರು : "ಅರಿ ವಿರೋಧಿ . . . ದ್ವಿಷಂ ಶಾತ್ರವ ನರಾತಿಯಾಪ್ರತ್ಯನೀಕಂ ಪರಿಪಂಥಿಯೆನಲು ಹಗೆಯಕ್ಕು" (ಮಂಗರಾ. ೮೬-೨೯) ; ಬಲಸಂಪನ್ನಂ ದ್ವಿಪ[ಷ]ನಂ ರಣದೊಳ್ ಭಿನ್ನರಥಂ ಮಾಡಿ ಪಿಡಿದು ತಂದೆನಗಿತ್ತಂ (ಬಂಹರಿ. ೫-೩೧). [ ಸಂ. ]

**ದ್ವಿಷಜ್ಜನ** (ನಾ). ಹಗೆಯಾದ ಜನ ; ವೈರಿಜನ ; ಶತ್ರುಜನ: ಶ್ರೀ ಶೀಲಭದ್ರಂ ದ್ವಿಷಜ್ಜನದುರ್ಧರಗಜಾಂಕುಶಂ ಸುಜನರತ್ನಂ ತಾನೆನಲ್ಕೇಂ ಕೃತಾರ್ಥನೊ . . . ಶ್ರೀಧರಂ (ಜಾತತಿ. ೧-೫). [ ಸಂ. ]

**ದ್ವಿಷಜ್ಜಾತ**(ನಾ). ೧. ಶತ್ರುವಿನಿಂದುಂಟಾದುದು. ೨. ಶತ್ರುವಿನ ಮಗ: ದ್ವಿಷಜ್ಜಾತಂ ಚೂತಂ ಪಿತೃವನಮದಾಯ್ತುಂಬುಜವನಂ ವಿಷಾದಾಯಂ ಕಾಯಂ ವಸತಿಗವನಿಂ ಚಿತ್ರಭವನಿಂ (ಲೀಲಾವ. ೭-೮೩). [ ಸಂ. ]

**ದ್ವಿಷತೆ** (ನಾ). ಹಗೆತನ ; ಶತ್ರುತ್ವ : ಹುಸಿ ಪರದ್ರೋಹವು ಪರಸ್ತ್ರೀ ವ್ಯಸನಪೇಯವಸೂಯೆ ಮಾನ್ಯದ್ವಿಷತೆ ಪತಿತಸಮೇತವಾತ್ಮಸ್ತುತಿಯೆ ನಿಶ್ಚಿವನು ಬಿಸುಟು ತದ್ವಿಪರೀತದಲಿ ವರ್ತಿಸುವನವನೇ ರಾಯನು (ಕುಮ್ಯಾಉ. ೩-೭೦). [ ಸಂ. ದ್ವಿಷತಾ ]

**ದ್ವಿಷತ್ತು** (ನಾ). ಶತ್ರು ; ವೈರಿ : "ಅಭಿಯಾತಿಃ, ಅರಾತಿಃ, ಅಮಿತ್ರಂ, ರಿಪುಃ, ಪ್ರತಿಪಕ್ಷಃ, ವಿಪಕ್ಷಃ, ವಿರೋಧೀ, ಅರಿಃ, ಅಹಿತಃ, ಅಸಹನಃ, ಜಿಘಾಂಸುಃ, ಪರಿಪಂಥೀ, ಪರಃ, ಅಸುಹೃತ್, ಪ್ರತ್ಯರ್ಥೀ, ಪ(ತ್ಯ)ರ್ಯವಸ್ಥಾತಾ, ದ್ವೇಷೀ, ವೈರೀ, ಶಾತ್ರವಃ, ಶತ್ರುಃ, ಸಪತ್ನಃ, ಭ್ರಾತೃವ್ಯಃ, ಪ್ರತ್ಯನೀಕಃ, ದ್ವಿಷತ್ – ಈ ೨೪ ಹಗೆ" (ಹಲಾಯು. ೭೫-೩೦೨). [ ಸಂ. ದ್ವಿಷತ್ ]

**ದ್ವಿಷತ್ಸೇನೆ** (ನಾ). ಶತ್ರುಸೈನ್ಯ ; ಹಗೆಗಳ ಪಡೆ : ಎರಡುಂ ತೋಳ್ ನೆರವೊಂದೆ ಬಿಲ್ನೆರವಸಂಖ್ಯಾತಂ ದ್ವಿಷತ್ಸೇನೆ ಖೇಚರರಂ ಭೂಚರರನೊಂದೆ ಮೆಯ್ಯೊಳೆ ಕೊಲುತ್ತಿರ್ದಪ್ಪಂ (ಪಂರಾಮಾ. ೯-೧೨೨). [ಸಂ. ದ್ವಿಷತ್ಸೇನಾ]

**ದ್ವಿಷದ್ಬಳ** (ನಾ). = ದ್ವಿಷತ್ಸೇನೆ : ಶ್ರೀರಮಣಿಯಂ ದ್ವಿಷದ್ಬಳಪಾರಾವಾರದೊಳುದಗ್ರಭುಜವಿಜಯಮಹಾಮೇರುವನೆ ಕಡೆದು ಪಡೆದಳವಾರುಮಂ ನಿಟಿಸಿದುದುದಾತ್ತನಾರಾಯಣನಾ (ಪಂಪಭಾ. ೪-೧). [ ಸಂ. ದ್ವಿಷದ್ಬಲ ]

**ದ್ವಿಷದ್ಭೂಮಿಪ** (ನಾ). ಶತ್ರುರಾಜ : ತ್ರಿಜಗದ್ವ್ಯಾಪಿತಕೀರ್ತಿಕಾಂತಳ ಧರಾಧೀಶಂ ದ್ವಿಷದ್ಭೂಮಿಪವ್ರಜಕಾಲಂ ಹರಿಮೂರ್ತಿ ನಿರ್ಮಳಗುಣಂ (ಮದಕಿ. ೧-೩). [ ಸಂ. ]

**ದ್ವಿಷದ್ಯೋಷೆ** (ನಾ). ಹಗೆಯ ಹೆಂಡತಿ ; ಶತ್ರುವಿನ ಪತ್ನಿ : ನಾವೆಸಗವೇಳ್ದುದಂ ತಾನೆ ಸಾಧಿಸಿಹನಾ ದ್ವಿಷದ್‌ಯೋಷೆಯ ತಂದು (ಶ್ರೀರಾಮಾ. ೫೬೨-೨೯೩). [ ಸಂ. ದ್ವಿಷದ್ಯೋಷಾ ]

**ದ್ವಿಷನ್ನೃಪ** (ನಾ). ಶತ್ರುರಾಜ : ಸಾಧಿತಶತ್ರುಷಡ್ಬಲರನುಕ್ರಮದಿಂ ಚರರಂ ದ್ವಿಷನ್ನೃಪಾಷ್ಟಾದಶತೀರ್ಥದೊಳ್ನಡೆಯಿಸಲ್ನೆಱೆವರ್ (ಶಾಂತಿಪು. ೨-೪೨) ; ಒಂದು ದಿವಸಂ ದ್ವಿಷನ್ನೃಪವಂದಿತಚರಣಂ . . . ತಂದಂ ಜಿನೇಂದ್ರ ದೀಕ್ಷೆಗೆ ಬಗೆಯಂ (ವರ್ಧಮಾ. ೩-೩೬). [ ಸಂ. ]

**ದ್ವಿಷನ್ಮೇದಿನೀಶ್ವರ** (ನಾ). = ದ್ವಿಷನ್ನೃಪ : ರಣಜಯೋದ್ಯೋಗಂ ದ್ವಿಷನ್ಮೇದಿನೀಶ್ವರಸಂಹಾರಹವಿರ್ಭುಜಂ ಭುಜಬಳಂ (ಎಕ. II, ೧೩೩-೧೩ ; 982). [ ಸಂ. ]

**ದ್ವಿಷ್ಟ** (ಗು). ೧. ದ್ವೇಷದ ; ಹಗೆತನದ ; ಪ್ರತಿಪಕ್ಷದ. (ನಾ). ೨. ತಾಮ್ರ. [ ಸಂ. ]

**ದ್ವಿಷ್ಠ** (ಗು). ಎರಡರಲ್ಲಿರುವ ; ಎರಡು ಸ್ಥಳಗಳಲ್ಲಿರುವ. [ ಸಂ. ]

**ದ್ವಿಸಂದಿ** (ನಾ). ಒಂದು ಊರಿನ ಹೆಸರು : ದ್ವಿಸನ್ದಿ ಸತ್ತಿವಂಗಲದ ಗಂಗವೂರ ತತ್ ಪಶ್ಚಿಮಶ್ಚಾಮ್ (ಮ್ಯಆರಿ. ೧೯೧೯, ೧೧-೧೦ ; ?). [ ? ]

**ದ್ವಿಸಂಧಿಗ್ರಾಹಿ** (ನಾ). ಶ್ಲೋಕ, ಕಾವ್ಯ ಮುಂತಾದುವನ್ನು ಎರಡು ಸಲ ಕೇಳಿದ ಕೂಡಲೆ ನೆನಪಿನಲ್ಲಿಡುವ ಸಾಮರ್ಥ್ಯವುಳ್ಳವನು. [ ಸಂ. ದ್ವಿಸಂಧಿಗ್ರಾಹಿನ್ ]

**ದ್ವಿಸಪ್ತತಿಪ್ರಕೃತಿ** (ನಾ). [ಜೈನ] ಎಪ್ಪತ್ತೆರಡು ವಿಧವಾದ ಪ್ರಕೃತಿಗಳಂ; ₱ ೧. ಅನ್ಯತರವೇದನೀಯ, ೨. ದೇವಗತಿ, ೩. ನರಕಗತ್ಯಾನುಪೂರ್ವಿ, ೪. ತಿರ್ಯಗ್ಗತ್ಯಾನುಪೂರ್ವಿ, ೫. ಮನುಷ್ಯಗತ್ಯಾನುಪೂರ್ವಿ, ೬. ದೇವಗತ್ಯಾನುಪೂರ್ವಿ, ೭. ಔದಾರಿಕಶರೀರ, ೮. ವೈಕ್ರಿಯಿಕಶರೀರ, ೯. ಆಹಾರಕಶರೀರ, ೧೦. ತೈಜಸಶರೀರ, ೧೧. ಕಾರ್ಮಣಶರೀರ, ೧೨. ಸಮಚತುರಸಂಸ್ಥಾನ, ೧೩. ನ್ಯಗ್ರೋಧಸಂಸ್ಥಾನ, ೧೪. ಸ್ವಾತಿಸಂಸ್ಥಾನ, ೧೫. ಕಂಬ್ಜಸಂಸ್ಥಾನ, ೧೬. ವಾಮನಸಂಸ್ಥಾನ, ೧೭. ಹುಂಡಸಂಸ್ಥಾನ, ೧೮. ಶ್ವೇತವರ್ಣ, ೧೯. ಪೀತವರ್ಣ, ೨೦. ಹರಿತವರ್ಣ, ೨೧. ಅರುಣವರ್ಣ, ೨೨. ಕೃಷ್ಣವರ್ಣ, ೨೩. ತಿಕ್ತ, ೨೪. ಕಟು, ೨೫. ಕಷಾಯ, ೨೬. ಆಮ್ಲ, ೨೭. ಮಧುರ, ೨೮. ವಜ್ರವೃಷಭನಾರಾಚಸಂಹನನ, ೨೯. ವಜ್ರನಾರಾಚಸಂಹನನ, ೩೦. ನಾರಾಚಸಂಹನನ, ೩೧. ಅರ್ಧನಾರಾಚಸಂಹನನ, ೩೨. ಕೀಲಿತಸಂಹನನ, ೩೩. ಅಸಂಪ್ರಾಪ್ತಸೃಕಪಾಟಿಕಾಸಂಹನನ, ೩೪. ಔದಾರಿಕಾಂಗೋಪಾಂಗ, ೩೫. ವೈಕ್ರಿಯಿಕಾಂಗೋಪಾಂಗ, ೩೬. ಆಹಾರಕಾಂಗೋಪಾಂಗ, ೩೭. ಸುಗಂಧ, ೩೮. ದುರ್ಗಂಧ, ೩೯. ಮೃದುಸ್ಪರ್ಶ, ೪೦. ಕರ್ಕಶಸ್ಪರ್ಶ, ೪೧. ಗುರುಸ್ಪರ್ಶ, ೪೨. ಲಘುಸ್ಪರ್ಶ, ೪೩. ಶೀತಸ್ಪರ್ಶ, ೪೪. ಉಷ್ಣಸ್ಪರ್ಶ, ೪೫. ಸ್ನಿಗ್ಧಸ್ಪರ್ಶ, ೪೬. ರೂಕ್ಷಸ್ಪರ್ಶ, ೪೭. ಅಗುರುಲಘು, ೪೮. ಉಪಘಾತ, ೪೯. ಪರಘಾತ, ೫೦. ಉಚ್ಛ್ವಾಸ, ೫೧. ಪ್ರಶಸ್ತವಿಹಾಯೋಗತಿ, ೫೨. ಅಪ್ರಶಸ್ತವಿಹಾಯೋಗತಿ, ೫೩. ಸ್ಥಿರ, ೫೪. ಅಸ್ಥಿರ, ೫೫. ಶುಭ, ೫೬. ಅಶುಭ, ೫೭. ಸುಸ್ವರ, ೫೮. ದುಸ್ವರ, ೫೯. ಸುಭಗ, ೬೦. ದುರ್ಭಗ, ೬೧. ಪ್ರತ್ಯೇಕಶರೀರ, ೬೨. ಅಯಶ, ೬೩. ಯಶ (ಕೀರ್ತಿ), ೬೪. ಅನಾದೇಯ, ೬೫. ನಿರ್ಮಾಣ, ೬೬. ಆಹಾರಪರ್ಯಾಪ್ತಿ, ೬೭. ಶರೀರಪರ್ಯಾಪ್ತಿ, ೬೮. ಇಂದ್ರಿಯಪರ್ಯಾಪ್ತಿ, ೬೯. ಉಚ್ಛ್ವಾಸನಿಶ್ವಾಸಪರ್ಯಾಪ್ತಿ, ೭೦. ಭಾಷಾಪರ್ಯಾಪ್ತಿ, ೭೧. ಮನಃಪರ್ಯಾಪ್ತಿ, ೭೨. ನೀಚೈರ್ಗೋತ್ರ. ಇದರ ಗಣನೆಯಲ್ಲಿ ಆದಿಪುರಾಣದ ಬೇರೆ ಪ್ರತಿಗಳಿಗೆ ಹಾಗೂ ತತ್ತ್ವರತ್ನಪ್ರದೀಪಿಕೆ ಮೊದಲಾದ ಜೈನಾಕರಗ್ರಂಥಗಳಿಗೆ ವ್ಯತ್ಯಾಸವು ಕಂಡುಬರುತ್ತದೆ. ಕೆಲವು ಹೊಸದಾಗಿ ಸೇರಿವೆ, ಕೆಲವು ಬಿಟ್ಟುಹೋಗಿವೆ. ಪ್ರಕೃತ ಈ ಗಣನೆಯು ಆದಿಪುರಾಣದ ೧೬-೪೯ ವಚನದಲ್ಲಿ ಕೊಟ್ಟಿರುವಂತೆ ಪಾಠವನ್ನು ಶುದ್ಧಿಗೊಳಿಸಿ ಕೊಡಲಾಗಿದೆ: ಪಂಚಷಟ್ಕಾಂಗೋಪಾಂಗದ್ವಿಕಂ ಗಂಧದ್ವಿಕಂ ಸ್ಪರ್ಶಾಷ್ಟಕಂ ಅಗುರುಲಘುಂ . . . ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೯ ವ). [ ದ್ವಿ + ಸಪ್ತತಿ + ಪ್ರಕೃತಿ ]

**ದ್ವಿಸಪ್ತಲೋಕ** (ನಾ). ಈರೇಳು ಲೋಕ ; ಹದಿನಾಲ್ಕು ಲೋಕಗಳು ; ₱ ೧. ಭೂಲೋಕ, ೨. ಭುವರ್ಲೋಕ, ೩. ಸುವರ್ಲೋಕ, ೪. ಮಹರ್ಲೋಕ, ೫. ಜನಲೋಕ, ೬. ತಪೋಲೋಕ, ೭. ಸತ್ಯಲೋಕ, ೮. ಪಾತಾಳ, ೯. ಮಹಾತಳ, ೧೦. ರಸಾತಳ, ೧೧. ತಳಾತಳ, ೧೨. ಸುತಳ, ೧೩. ವಿತಳ, ೧೪. ಅತಳ : ಸಪ್ತಾಶ್ವ ಚಂದ್ರುವಸು ಮನುಗಳಂ ಬಡಿದು ದ್ವಿಸಪ್ತಲೋಕಂಗಳ್ಗೆ ಠಾಣೆಯುವನಿಟ್ಟು (ಜಬಪು. ೪೬-೧೧). [ ದ್ವಿ + ಸಪ್ತಲೋಕ ]

**ದ್ವಿಸರ** (ನಾ). ಎರಡೆಳೆಯ ಹಾರ, - ಸರ : ತುಲಸಿಯ ಮಣಿ ಸರೋಜಮಣಿಗಳ ಕೊರಳೊಳಪ್ಪಕಷ್ಟಕಿ ಯೇಕಸರ ದ್ವಿಸರ ತ್ರಿಸರಂಗಳಂ ಧರಿಸಿ ಮಿಸುನಿವೆರಸಿ (ಕೃಷ್ಣವಿ. ೨-೧೭). [ ದ್ವಿ + ಸರ೬ ]

**ದ್ವಿಸಹಸ್ರಜಿಹ್ವ** (ನಾ). ಎರಡುಸಾವಿರ ನಾಲಗೆಯುಳ್ಳವನು; ಆದಿಶೇಷ : ಅಹಿರಾಜಂ ದ್ವಿಸಹಸ್ರಜಿಹ್ವನಱಿಯಂ ವ್ಯಾವರ್ಣಿಸಲ್ ಬಲ್ಲನೇ ಮಹಿಯೊಳ್ ಮಾನವನೊಂದೆ ನಾಲಗೆಯೊಳ್ (ಜಗವಿ. ೨-೩೭). [ ಸಂ. ]

**ದ್ವಿಸಾಗರೋಪಮಾಯುಷ್ಯ** (ನಾ). [ಜೈನ] ಎರಡುಸಾಗರದಷ್ಟು ಆಯುಷ್ಯವನ್ನುಳ್ಳ ವ್ಯಕ್ತಿ : ಅಲ್ಲಿಯ ವೈಮಾನಿಕರೆಲ್ಲಂ ಸಪ್ತಹಸ್ತೋತ್ಸೇಧಶರೀರರುಮುತ್ಕೃಷ್ಟದಿಂ ದ್ವಿಸಾಗರೋಪಮಾಯುಷ್ಯರುಂ ಕಾಯಪ್ರವೀಚಾರರುಮಪ್ಪರ್ (ಸುಕುಮಾ. ೧೧-೬೦ ವ). [ ಸಂ. ]

**ದ್ವಿಸ್ವಭಾವ** (ನಾ). ೧. ಎರಡು ವಿಧವಾದ ಸ್ವಭಾವ. ೨. [ಜ್ಯೋತಿ] ದ್ವಾದಶರಾಶಿಗಳಲ್ಲಿ ಒಂದು ವರ್ಗ ; ಚರ ಮತ್ತು ಸ್ಥಿರರಾಶಿಗಳ ಧರ್ಮವನ್ನೂ ಹೊಂದಿರುವ ರಾಶಿ ; ₱ ಮೇಷಾದಿ ದ್ವಾದಶರಾಶಿಗಳಲ್ಲಿ ಮೂರು ಬಗೆಗಳಿವೆ. ಕೆಲವು ಚರರಾಶಿ, ಕೆಲವು ಸ್ಥಿರರಾಶಿ, ಕೆಲವು ದ್ವಿಸ್ವಭಾವರಾಶಿ. ಚರರಾಶಿ – ಮೇಷ, ಕರ್ಕಾಟಕ, ತುಲಾ, ಮಕರ. ಸ್ಥಿರರಾಶಿ–ವೃಷಭ, ಸಿಂಹ, ವೃಶ್ಚಿಕ, ಕುಂಭ. ದ್ವಿಸ್ವಭಾವರಾಶಿ – ಮಿಥುನ, ಕನ್ಯಾ, ಧನುಸ್ಸು, ಮೀನ : ಅಂಶಕದೊಳ್ ವರ್ಗೋತ್ತಮದಂಶಕಮಕ್ಕುಂ . . . ಸ್ಥಿರಗೃಹ ಮಧ್ಯಾಂಶಕಮುಂ ದ್ವಿಸ್ವಭಾವದಂತ್ಯಾಂಶಕಮುಂ (ಜಾತಕಿ. ೧-೩೮). [ ದ್ವಿ + ಸ್ವಭಾವ ]

**ದ್ವೀಂದ್ರಿಯ** (ನಾ). [ಜೈನ] ಸ್ಪರ್ಶನ ಮತ್ತು ರಸನ ಈ ಎರಡು ಇಂದ್ರಿಯಗಳು ಮಾತ್ರ ಇರುವ ಜಂತು : ಸ್ಪರ್ಶನ ರಸನೇಂದ್ರಿಯೋಪೇತಂಗಳಪ್ಪ ಶಂಖಾದಿ ದ್ವೀಂದ್ರಿಯಂಗಳುಂ . . . ಮನುಷ್ಯಾದಿ ಪಂಚೇಂದ್ರಿಯಂಗಳುಮೆಂದಿಂತು ತ್ರಸಜೀವಂಗಳ್ ಚತುರ್ವಿಧಮಕ್ಕುಂ (ಆದಿಪು. ೧೦-೬೦ ವ) ; ಆ ತ್ರಸಜೀವಿಗಳುಂ ದ್ವೀಂದ್ರಿಯಾದಿ ವಿಕಳೇಂದ್ರಿಯಂ ಷಡ್ವಿಧಂ (ಜೀವಸಂ. ೬-೩ ವ) ; ದ್ವೀಂದ್ರಿಯಂಗಳು ಇಱುವೆ ತಗಣೆ . . . ಮೊದಲಾಗೊಡೆಯವಾಗಿ ಪುಟ್ಟಿ ಕೆಲವು ಸತ್ತು . . . ದುರ್ಗತಿಗಳ್ಗೆ ಸಲ್ವುವು (ಶ್ರಾವಕಾ. ೧೨೩). [ ದ್ವಿ + ಇಂದ್ರಿಯ ]

**ದ್ವೀಪ** (ನಾ). ೧. ಸುತ್ತಲೂ ನೀರುಳ್ಳ ಎತ್ತರವಾದ ಭೂಭಾಗ; ನೀರಿನಿಂದ ಸುತ್ತುವರಿದ ಭೂಮಿ; ಅಂತರೀಪ; ನಡುಗಡ್ಡೆ: ದ್ವೀಪಾಬ್ಧಿವರ್ಗಕ್ರಮಮದುವುಮಸಂಖ್ಯಾತಮಾ ಸಂಖ್ಯೆಯೊಳ್ತಾತ್ಪರ್ಯಂಗೆಯ್ವನ್ನವೆಂಬಗ್ಗಳಿಕೆಯಿನೆಸೆದತ್ತೇಕರಜ್ಜುಪ್ರಮಾಣಂ (ಆದಿಪು. ೧-೪೮); ನೆಗಟ್ದಾ ದ್ವೀಪದ ಮಧ್ಯದಲ್ಲಿ ಕಲಶಂ ಚಂಡಪ್ರಭಂ ಪಂಜರಂ ಭಗಣಂ ಪಲ್ಲವಮಂಬುರಾಶಿಯೆನೆ . . . ಗಗನಚ್ಛತ್ರದ ಹೇಮದಂಡಮೆನಿಸಲ್ ಸಾಲ್ದತ್ತು ಹೇಮಾಚಲಂ (ಜಗವಿ. ೧-೨೫); ಜಲಧಿ ಮಾತೃಕೆ ವಾರ ಕುಲಗಿರಿಗಳು ವಿಭಕ್ತಿ ದ್ವೀಪ ಸರ್ಪಾವಳಿ ಮುನೀಶ್ವರರುಗಳ ಧಾತುಗಡಣದ ವೇದಿಗಳ ತಿಳಿದು . . . ನಡೆವವರುಗಳು ನಿರ್ಮಳದಲೆಡಹದೆ ಬೆರಸಿಕೊಂಬರು ಮುಕ್ತಿರಾಜ್ಯವನು (ಕುವ್ಯಾಉ. ೪-೩೪); ಎಲ್ಲಾ ಕಡೆಗಳಲ್ಲಿಯೂ ನೀರಿನಿಂದ ಸುತ್ತಲ್ಪಟ್ಟಿರುವ ಭೂಭಾಗವು "ದ್ವೀಪವು (Island)" ಎಂದು ಕರೆಯಲ್ಪಡುತ್ತದೆ (ಭೂಗೋಳ. ೧೦). ೨. ನೀರಿನ ಮಧ್ಯದ ಮರಳಿನ ದಿಣ್ಣೆ: "ಸೈಕತಃ, ಪುಳಿನಂ, ದ್ವೀಪಂ (ಸಿಕತಾ) – ಈ ೩ ಮಳಲ ದೀಣೆ (ದಿಣ್ಣೆ)" (ಹಲಾಯು. ೧೧೦-೪೮); "ಪುಳಿನಮೆನೆ ಸೈಕತಮೆನಲು ದ್ವೀಪಮೆಂದೆನಲು ಮಳಲೊಟ್ಟಲಕ್ಕು" (ಮಂಗರಾ. ೧೨೨-೧೧). ೩. ಮೇರು ಪರ್ವತದ ಸುತ್ತಲಿನ ಭೂಭಾಗ; ☞ ಪುರಾಣಗಳ ಪ್ರಕಾರ ಜಗತ್ತಿನಲ್ಲಿ ಜಂಬೂ, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ ಮತ್ತು ಪುಷ್ಕರ ಎಂಬ ಏಳು ದ್ವೀಪಗಳಿವೆ. ಇವು ಕಮಲದ ದಳದಂತೆ ಮೇರು ಪರ್ವತವನ್ನು ಸುತ್ತುಗಟ್ಟಿವೆ ಮತ್ತು ಒಂದೊಂದೂ ಬೇರೆಬೇರೆ ಸಾಗರದಿಂದ ಬೇರೆಯಾಗಿವೆ. ಈ ದ್ವೀಪಗಳ ಸಂಖ್ಯೆಯ ಬಗೆಗೆ ಭಿನ್ನಾಭಿಪ್ರಾಯಗಳಿವೆ. 'ಸಪ್ತದ್ವೀಪ' ಪರಾ. ೪. ಆಶ್ರಯಸ್ಥಾನ. ೫. ಒಂದು ಅಳತೆ: "ವರ್ತನೆಯದೈವತ್ತು ಮಂಡಲಮೆನಿಕ್ಕುವೈವತ್ತು ವಾರ್ತಮೆನಿಕ್ಕವೈವತ್ತು ಸಂಖ್ಯೆವರಲುತ್ತಮದ್ವೀಪಮಕ್ಕು" (ಮಂಗರಾ. ೯೬-೧೨). ೬. [ಜೈನ] ಜೈನಗ್ರಂಥಗಳಲ್ಲಿ ಹೇಳಿರುವ ಮುಖ್ಯವಾದ ಎಂಟು ದ್ವೀಪಗಳು; ☞ ೧. ಜಂಬೂದ್ವೀಪ, ೨. ಧಾತಕೀದ್ವೀಪ, ೩. ಪುಷ್ಕರವರದ್ವೀಪ, ೪. ವಾರುಣೀವರದ್ವೀಪ, ೫. ಕ್ಷೀರವರದ್ವೀಪ, ೬. ಘೃತವರದ್ವೀಪ, ೭. ಇಕ್ಷುವರದ್ವೀಪ, ೮. ನಂದೀಶ್ವರದ್ವೀಪ. 'ದ್ವಿತೀಯದ್ವೀಪ', 'ತೃತೀಯದ್ವೀಪ' ಪರಾ. ೭. (ಆಲಂ) ಸಂಪರ್ಕರಹಿತ ಸ್ಥಳ. [ಸಂ.]

**ದ್ವೀಪಕಲ್ಪ** (ನಾ). ಮೂರುಕಡೆ ನೀರುಳ್ಳ ಭೂಭಾಗ; ಪರ್ಯಾಯದ್ವೀಪ: ಹಿಂದೂದೇಶದ ತೀರ ದಕ್ಷಿಣತುದಿಯಲ್ಲಿಯೂ ಮಲಯಾ ದ್ವೀಪಕಲ್ಪದಲ್ಲಿಯೂ . . . ವಾಸವಾಗಿರುತ್ತಾರೆ (ಮುಂಬಯಿ. ೫-೨೯೦); ಕೊಂಚ ಕಡಮೆಯಾಗಿ ಎಲ್ಲಾ ಕಡೆಗಳಲ್ಲಿಯೂ ನೀರಿನಿಂದ ಸುತ್ತಲ್ಪಟ್ಟಿರುವ ಭೂಭಾಗವು "ಅರ್ಧ ದ್ವೀಪವು (Peninsula). ಪರ್ಯಾಯದ್ವೀಪ, ದ್ವೀಪಕಲ್ಪ" ಎಂದು ಕರೆಯಲ್ಪಡುತ್ತದೆ (ಭೂಗೋಳ. ೧೦); ದ್ವೀಪಕಲ್ಪ (ಪೆನಿನ್‌ಸ್ಯುಲ)ದಲ್ಲಿಯ ಬಹಳ ಬತ್ತಿದ ಪ್ರದೇಶಗಳೆಂದರೆ ಬಳ್ಳಾರಿಯ ಸುತ್ತಲಿರುವ ಎತ್ತರದ ಪ್ರದೇಶಗಳು (ದಭಾಇ. ೫). [ಸಂ.]

**ದ್ವೀಪಖಂಡ** (ನಾ). = ದ್ವೀಪ ೧: ಪೊರಪೊಣ್ಮುತ್ತೆ ಗೋಚರಿಪುದೊಂದದ್ಭುತಂ ದ್ವೀಪಖಂಡಮದೊ ಸಸ್ಯಹೀನಂ ಪ್ರಾಣರಹಿತಂ (ಶ್ರೀರಾಮಾ. ೧೬೫-೩೬).

[ದ್ವೀಪ + ಖಂಡ]

**ದ್ವೀಪಜಾಲ** (ನಾ). ನಡುಗಡ್ಡೆಗಳ ಗುಂಪು,– ಸಮುದಾಯ: ಒಂದಕ್ಕೊಂದು ಸಮೀಪದಲ್ಲಿರುವ ಅನೇಕ ದ್ವೀಪಗಳಿಗೆ "ದ್ವೀಪಜಾಲವು (Archipelago)" ಎಂದು ಹೆಸರು. ಏಷ್ಯಾಮೈನರಿಗೂ ಮತ್ತು ಗ್ರೀಸ್ ದೇಶಕ್ಕೂ ಮಧ್ಯದಲ್ಲಿರುವ ದ್ವೀಪಜಾಲಕ್ಕೆ "ನಿರ್ದಿಷ್ಟ ದ್ವೀಪಜಾಲ (The Archipelago)" ಎಂದು ಹೆಸರು (ಭೂಗೋಳ. ೧೦).

[ದ್ವೀಪ + ಜಾಲ$_1$]

**ದ್ವೀಪದ್ರಾಕ್ಷಿ** (ನಾ). ಒಂದು ಬಗೆಯ ಒಣದ್ರಾಕ್ಷಿ: "ದ್ವೀಪದ್ರಾಕ್ಷಿ (ಮೆಡಿಟರೇನಿಯನ್ ಸಮುದ್ರಪ್ರಾಂತಗಳಲ್ಲಿ ಬೆಳೆಯುವ ಬೀಜವಿಲ್ಲದ ದ್ರಾಕ್ಷಿಯನ್ನು ಒಣಗಿಸಿ ತಯಾರಿಸಿದ್ದು)" (Currant. ಇಂಕನಿ); ದ್ವೀಪದ್ರಾಕ್ಷಿ, ಖರ್ಜೂರದ ಹಣ್ಣು . . . ಲವಂಗ ಇವುಗಳನ್ನು ಸಮಭಾಗವಾಗಿ ಚೂರ್ಣವನ್ನು ಮಾಡಿ (ಸಕವೈ. ೮೪). 'ದೀಪದ್ರಾಕ್ಷಿ' ಪರಾ.

[ದ್ವೀಪ + ದ್ರಾಕ್ಷಿ]

**ದ್ವೀಪದ್ರಾಕ್ಷೆ** (ನಾ). = ದ್ವೀಪದ್ರಾಕ್ಷಿ: ಸಕ್ಕರೆ ದ್ವೀಪದ್ರಾಕ್ಷೆಹಣ್ಣು ಈ ಎರಡುಮಂ ಜೇನ ತುಪ್ಪದಲ್ಲಿ ಕಲಸಿ ಮೆದ್ದು ತಱುವಾಯೊಳ್ ತಣ್ಣೀರಂ ಕುಡಿಯಲ್ ಪಿತ್ತಂ ಕಿಡುವುದು (ಲೋಕೋಪ. ೯-೧೦ ಟೀಕು). 'ದೀಪದ್ರಾಕ್ಷೆ' ಪರಾ. [ದ್ವೀಪ + ದ್ರಾಕ್ಷೆ]

**ದ್ವೀಪಧಾತ್ರಿ** (ನಾ). = ದ್ವೀಪ ೧: ಧರಣಿಜಾಪ್ರಾರ್ಥನಾಶೀರ್ವಾದ ಮಿದಿರುಗೊಳೆ ಬಂದುದೆನೆ ಧಾವಿಸಿತ್ತೇರ್ದು ತನಗಭಿಮುಖಂ ಆ ದ್ವೀಪಧಾತ್ರಿ (ಶ್ರೀರಾಮಾ. ೪೧೮-೪೦೫). [ದ್ವೀಪ + ಧಾತ್ರಿ]

**ದ್ವೀಪಪತಿ** (ನಾ). ದ್ವೀಪದ ಒಡೆಯ,–ರಾಜ: ಶರಧಿಗಳ ವಳಯದಖಿಳ ದ್ವೀಪಪತಿಗಳ ತಲೆಗಳನು ಹೊಡೆದು (ತೊರರಾ. ೧-೮-೩೭).

[ದ್ವೀಪ + ಪತಿ$_2$]

**ದ್ವೀಪವತಿ** (ನಾ). ೧. (ಮಧ್ಯೆಮಧ್ಯೆ ದ್ವೀಪವನ್ನು ಹೊಂದಿರುವ) ನದಿ; ಹೊಳೆ; ತೊರೆ: "ಸಿಂಧುಃ . . . ದ್ವೀಪವತೀ, ಸರಿತ್, ರೋಧೋವಕ್ರಾ – ಈ ೨೧ ತೊಱೆ" (ಹಲಾಯು. ೧೧೦-೪೪); "ನದಿ ತರಂಗಿಣಿ ತಟಿನಿ . . . ದ್ವೀಪವತಿಯಾಪಗೆಯೆನೆ ತೊಱೆಗೆ ನಾಮಂ" (ಮಂಗರಾ. ೧೨೨-೧೦). ೨. ಭೂಮಿ. [ಸಂ. ದ್ವೀಪವತೀ]

**ದ್ವೀಪಸಮುದಾಯ** (ನಾ). = ದ್ವೀಪಜಾಲ: (Archipelago. ಪಾರಿನಿ. ೬).

[ದ್ವೀಪ + ಸಮುದಾಯ]

**ದ್ವೀಪಾಂತರ** (ನಾ). ಬೇರೆ ದ್ವೀಪ; ದೂರದಲ್ಲಿರುವ ದ್ವೀಪ; ಪರದೇಶ: ದ್ವೀಪಾಂತರಮಂ ಶ್ವೇತದ್ವೀಪಸ್ತ್ರೀ ನೋಡಲೆಂದು ಬಂದಳೊ (ಕಾದಂಪೂ. ೬೬೬); ವಾತಾಪಿಪುರವರೇಶ್ವರನುಮಶ್ವಮೇಧಯಜ್ಞದೀಕ್ಷಿತನುಂ ದ್ವೀಪಾಂತರಪ್ರಕಟಪ್ರಭಾವನುಮೆನಿಸಿದ ಪುಲಿಕೇಶಿದೇವನಿಂ (ಗದಾಯು. ೨-೭ ವ).

**ದ್ವೀಪಾಂತರಕ್ಕೆ ಕಳುಹಿಸು** = ಕರಿನೀರಿನ ಶಿಕ್ಷೆಗೆ ಒಳಗುಮಾಡು; ದೇಶಭ್ರಷ್ಟನನ್ನಾಗಿಸು. [ದ್ವೀಪ + ಅಂತರ]

**ದ್ವೀಪಾಂತರವಾಸ** (ನಾ). ತಪ್ಪು ಮಾಡಿದವರಿಗೆ ದೂರದ ದ್ವೀಪದಲ್ಲಿ ವಾಸಮಾಡುವಂತೆ ಕೊಡುವ ಒಂದು ಬಗೆಯ ಶಿಕ್ಷೆ; ಕರಿನೀರಿನ ಶಿಕ್ಷೆ: ದ್ವೀಪಾಂತರವಾಸ ಮಾಡಬೇಕೆಂಬ ರಾಜದಂಡನೆಗೆ ಗುರಿಯಾದವರು ಇರುವದಕ್ಕಾಗಿ ಈ ದ್ವೀಪಗಳಲ್ಲಿ ಸ್ಥಳವು ಏರ್ಪಾಟಾಗಿದೆ (ಭೂಗೋಳ. ೩೦).

[ದ್ವೀಪಾಂತರ + ವಾಸ$_2$]

**ದ್ವೀಪಾಂತರಶಿಕ್ಷೆ** (ನಾ). ತಪ್ಪು ಮಾಡಿದವರಿಗೆ ದ್ವೀಪಾಂತರವಾಸವನ್ನು ದಂಡನೆಯಾಗಿ ವಿಧಿಸುವ; ಒಂದು ಬಗೆಯ ಕಠಿನಶಿಕ್ಷೆ; ಕರಿನೀರಿನ ಶಿಕ್ಷೆ: ರಾಜಮೋಹನನಿಗೂ ಭಿಕ್ಷುವಿಗೂ ದ್ವೀಪಾಂತರಶಿಕ್ಷೆಯಾಯಿತು (ಬಂಕಿಪು. ೪೨). [ದ್ವೀಪಾಂತರ + ಶಿಕ್ಷೆ]

**ದ್ವೀಪಿ** (ನಾ). ೧. ಹುಲಿ; ಶಾರ್ದೂಲ; ವ್ಯಾಘ್ರ: "ವ್ಯಾಘ್ರಃ, ದ್ವೀಪೀ, ಪುಂಡರೀಕಃ, ತರಕ್ಷುಃ, ಶಾರ್ದೂಲಃ, ಚಿತ್ರಕಾಯಃ, ಮೃಗಾರಿಃ – ಈ ೭ ಹುಲಿ" (ಹಲಾಯು. ೩೮-೭೩); ನಿನಗಾದುಪಹತಿಯೆನಗಾದಪುದು ನಡೆಯೆಂದೆರಡುಂ ಆ ಕಪಟತಾಪಸರೂಪಧಾರಿಯಪ್ಪ ದ್ವೀಪಿಯ ಸಮೀಪಕ್ಕೆ ಬಂದು ಪೊಡೆವಟ್ಟು (ಪಂಚತಂ. ೨೩೩-೧೦); ಸಳನೆಂಬ ನೃಪಂ ಸೆಳೆಯಿಂದೆ ಕೋಪನ ದ್ವೀಪಿಯನೊಂದನೊರ್ವ್ವ ಮುನಿ ಪೊಯ್ಸಳಯೆಂದಡೆ ಪೊಯ್ದು ಗೆಲ್ದು (ಎಕ. IV, ನಾಗಮಂ. ೭೦-೨; 1178). ೨. ಚಿರತೆ.

[ಸಂ. ದ್ವೀಪಿನ್]

**ದ್ವೇಷ** (ನಾ). ೧. ಹಗೆತನ; ವಿರೋಧ; ವೈರ: ಷೋಡಶವಿಕಾರ – ರಾಗ, ದ್ವೇಷ, ಕಾಮ, ಕ್ರೋಧ, ಲೋಭ . . . ಶ್ರದ್ಧೆ ಈ ಹದಿನಾರೆಂದು ವಾಸುದೇವಮನನದಲ್ಲಿರುವದು (ಅಮೃತ. ೬-೨೬ ಟೀಕು); ಅವಿದ್ಯಾ, ರಾಗ, ದ್ವೇಷ, ಭಯ, ಮೋಹ ಮುಂತಾದುವು ಅಥವಾ ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಅಭಿನಿವೇಶ – ಇವು (ಬ್ರಹ್ಮಭಾ. ೪೩ ಅಡಿಟಿ) ; ಸ್ಮೃತಿ . . . ದ್ವೇಷ ಮೊದಲಾದುವು ಮನಸ್ಸಿನಿಂದ ಹುಟ್ಟುವುವು (ಭಾತತ್ತ್ವ. ೨೯೬) ; ನಿಮ್ಮಿಬ್ಬರ ಮೇಲೂ ಆಕೆಗೆ ದ್ವೇಷವಿದೆ (ಪದ್ಮಸ. ೧೩೪). ೨. ಅಪೇಕ್ಷೆ ಇಲ್ಲದಿರುವಿಕೆ ; ಅರುಚಿ : ಬೇಕೆಂಬ ಇಚ್ಛೆಯೇ ರಾಗ, ಬೇಡವೆಂಬ ಇಚ್ಛೆಯೇ ದ್ವೇಷ(ಹಿಂದಸಾ. ೩೩); ದ್ವೇಷ ಅಥವಾ ಅನಿಚ್ಛೆಯು ನಿವೃತ್ತಿಕಾರಣ (ಹಿಂದಸಾ. ೬೪) . ೩. ಜುಗುಪ್ಸೆ: ಅಸಹ್ಯ ; ಹೇವರಿಕೆ. ೪. ಕೋಪ; ಕ್ರೋಧ: ದ್ವೇಷಂ ವಿರಹಿಗಳ್ಗೊಳ್ ಪರಿತೋಷಂ ಮಧುಮತದೊಳಾಗೆ ಬಂದರ್ ಕೆಲರುಂ ಯೋಷಿಜ್ಜನಮುಲರಂಬಿನ ವೇಷಂ ಗೊಂಡಂತೆ ನೆಟಿಟದು ಪೂದುಡುಗೆಗಳಿಂ (ಶಾಂತಿಪು. ೮-೨೩).

**ದ್ವೇಷ ಸಾಧಿಸು**=ಹಗೆಯನ್ನು ಸಾಧನೆಮಾಡು : ಇಷ್ಟು ದ್ವೇಷ ಸಾಧಿಸಿ, ಆ ಮಕ್ಕಳಾದರೂ ಸುಖವಾಗಿದ್ದಾರೆಯೇ ? (ಕರುಳ. ೧೧೭). [ ಸಂ. ]

**ದ್ವೇಷಣ** (ನಾ). ೧. ಶತ್ರುತ್ವ ; ಹಗೆತನ ; ವೈರ. ೨. ಶತ್ರು ; ಹಗೆ; ವೈರಿ. [ ಸಂ. ]

**ದ್ವೇಷಿ** (ನಾ). ಹಗೆ ; ಶತ್ರು ; ವೈರಿ : "ಅಭಿಯಾತಿಃ . . . ದ್ವೇಷೀ, ವೈರೀ . . . ದ್ವಿಷತ್–ಈ ೨೪ ಹಗೆ" (ಹಲಾಯು. ೭೫-೩೦೨). [ ಸಂ. ದ್ವೇಷಿನ್ ]

**ದ್ವೇಷಿಸು** (ಕ್ರಿ). ೧. ಹಗೆತನ ಸಾಧಿಸು ; ಶತ್ರುತ್ವವನ್ನು ಬೆಳೆಸು : ನಾನು ಪ್ರೀತಿಯನ್ನು ದ್ವೇಷಿಸುತ್ತೇನೆ ; ಆ ಕಾರಣ ದ್ವೇಷವನ್ನು ಪ್ರೀತಿಸುತ್ತೇನೆ (ವಾತ್ಸಲ್ಯ. ೨೮೬). ೨. ಹೇವರಿಸು ; ಅಸಹ್ಯಪಡು : ಅವನು ತೀರಾ ದ್ವೇಷಿಸುವ ಹುರಿಹಿಟ್ಟನ್ನು ತಿನ್ನೆಂದರೆ ಅವನಿಗೆ ಕೋಪ ಉಂಟಾಗದೆ ಇರುವುದೇ ? (ಮೊಗ್ಗು. ೩೬). [ದ್ವೇಷ + – ಇಸು₃ ]

**ದ್ವೇಷ್ಟೃ** (ನಾ). = ದ್ವೇಷಿ. [ ಸಂ. ]

**ದ್ವೇಷ್ಯ** (ಗು). ೧. ಹಗೆತನದ; ಶತ್ರುತ್ವದ; ವೈರದ. (ನಾ). ೨. ಶತ್ರು; ವೈರಿ : "ಅಕ್ಷಿಗತಃ, ದ್ವೇಷ್ಯಃ, ಪ್ರಣಾಯ್ಯಃ, ಅಸಮ್ಮತಃ – ಈ ೪ ಅನಿಷ್ಟಂ" (ಹಲಾಯು. ೬೦-೨೦೧). [ ಸಂ. ]

**ದ್ವೈಗುಣಿಕ** (ನಾ). ಹೆಚ್ಚು ಬಡ್ಡಿಗೆ ಹಣ ಕೊಡುವವನು ; ದುಪ್ಪಟ್ಟು ಬಡ್ಡಿ ಹಾಕುವವನು ; ಕುಸೀದಕ : "ದ್ವೈಗುಣಿಕಃ, ವಾರ್ಧುಷಿಕಃ, ವೃದ್ಧ್ಯಾಜೀವಃ, ಕುಸೀದಕಃ – ಈ ೪ ಬಡ್ಡಿಗುಡುವವಂ" (ಹಲಾಯು. ೯೩-೪೧೭); "ಕುಸೀದಕನು ವಾರ್ಧುಷಿಕನಾ ದ್ವೈಗುಣಿಕ[ಪಾಠಾಂ. ದ್ವೈತಗುಣಿ] ನೆನಲು ವೃಧ್ಯಾಜೀವನೆನೆ ಬಡ್ಡಿಗೊಡುವನಕ್ಕುಂ" (ಮಂಗರಾ. ೧೧೨-೧). [ ಸಂ. ]

**ದ್ವೈತ** (ನಾ). ೧. ಉಭಯತ್ವ; ಎರಡಾಗಿರುವಿಕೆ; ದ್ವಿತ್ವ ; ದ್ವಂದ್ವಸ್ಥಿತಿ : ಕೂರ್ಮೆ ಬೆಸುಗೆಯಿಂ ದ್ವೈತ ತಾನದ್ವೈತಮಪ್ಪುದೊಂದಚ್ಚರಿಯೆ (ಶ್ರೀರಾಮಾ. ೧೨-೩೧೫) ; ಕಾಯಕೆ ಕಣ್ಗೆಳೆರಡಿರ್ಪ ಮಾಳ್ಕೆಯಿಂ ದ್ವೈತವಿರ್ದುದು ಸೀತೆ ರಾಮರೊಳಗದ್ವೈತಿ ತಾನಾಗಿ! (ಶ್ರೀರಾಮಾ. ೫೫-೫೦). ೨. ಎರಡು; ಜೊತೆ; ಜೋಡಿ : "ದ್ವಂದ್ವಮುಭಯಂ ದ್ವಯಂ ಯುಗ್ಮಯಮಳಂ ಯುಗಂ ದ್ವೈತಮೆನಲುಯೆರಡಕ್ಕೆ ಪೆಸರಕ್ಕು" (ಮಂಗರಾ. ೧೨೯-೧೨). ೩. [ತತ್ತ್ವಶಾ] ಜೀವ ಮತ್ತು ಈಶ್ವರಭೇದವನ್ನು ಪ್ರತಿಪಾದಿಸುವ ಒಂದು ತತ್ತ್ವ; ಜೀವಾತ್ಮ ಮತ್ತು ಪರಮಾತ್ಮ ಬೇರೆ ಬೇರೆ ಎಂದು ಹೇಳುವ, ಮಧ್ವಾಚಾರ್ಯರಿಂದ ಸ್ಥಾಪಿತವಾದ ತತ್ತ್ವ; ಪ್ರಸಿದ್ಧವಾದ ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತಗಳೆಂಬ ತ್ರಿಮತಗಳಲ್ಲಿ ಒಂದು : ಕೋವಿದರ ಸಂಗವನುಳಿದು ಮಾಯಾವಿಲಾಸದ ನೆಲೆಯ ನೋಡದೆ ಸಾವುತಿಹುದೇ ದ್ವೈತ (ಕುವ್ಯಾಖು. ೪-೭೫) ; ಗೀತೆಯಲ್ಲಿ ಆಚಾರ್ಯಶ್ರೇಷ್ಠ ಶಂಕರರು ಅದ್ವೈತವನ್ನು ಕಂಡರೆ ಮಧ್ವರು ದ್ವೈತವನ್ನು ಕಾಣುತ್ತಾರೆ (ಧರ್ಮಸಾ. ೧೨೯). ೪. ಸಂದೇಹ ; ಶಂಕೆ ; ಸಂಶಯ. ೩, ೪: ದ್ವೈತವ ಹೇಳುವ ಹಿರಿಯರೆಲ್ಲರು ದ್ವೈತಕ್ಕೊಳಗಾದರು ನಿಸ್ಸಂಸಾರವ ಹೇಳುವ ಹಿರಿಯರೆಲ್ಲರು ಸಂಸಾರದ ಸಾರವ ಚಪ್ಪರಿದು ಕೆಟ್ಟರು (ಪ್ರೋಲಿಮಾ. ೧೪-೫೦). [ ಸಂ. ]

**ದ್ವೈತದರ್ಶನ** (ನಾ). = ದ್ವೈತಮತ : ಶ್ರೀಮಧ್ವಾಚಾರ್ಯರು . . . ಪ್ರತಿಪಾದಿಸಿರುವ ದ್ವೈತವೇದಾಂತವನ್ನು ದ್ವೈತದರ್ಶನವೆಂದು ಕರೆಯುತ್ತಾರೆ (ಭಾರದ. ೨೭೩). [ ದ್ವೈತ + ದರ್ಶನ ]

**ದ್ವೈತಪಾಶುಪತ** (ನಾ). [ಶೈವ] ಶೈವಮತದ ಎಂಟು ಪ್ರಭೇದಗಳಲ್ಲಿ ಒಂದು : ಶೈವಮತದಲ್ಲಿ ನಾವು ಎಂಟು ಪ್ರಭೇದಗಳನ್ನು ಕಾಣಬಹುದು. (೧) ದ್ವೈತ ಪಾಶುಪತ, (೨) ದ್ವೈತಶೈವಸಿದ್ಧಾಂತ, (೩) ದ್ವೈತಾದ್ವೈತ ಲಕುಲೀಶಪಾಶುಪತ, (೪) ವಿಶಿಷ್ಟಾದ್ವೈತಶೈವ, (೫) ವಿಶೇಷಾದ್ವೈತ (ವೀರಶೈವ), (೬) ನಂದಿಕೇಶ್ವರ ಶೈವ, (೭) ರಸೇಶ್ವರಶೈವ, (೮) ಕಾಶ್ಮೀರಶೈವ (ಭಾರದ. ೨೦೦). [ ದ್ವೈತ + ಪಾಶುಪತ ]

**ದ್ವೈತಭಕ್ತಿ** (ನಾ). ಜೀವಾತ್ಮವು ಪರಮಾತ್ಮನಿಗೆ ತೋರುವ ಭಕ್ತಿ : ದ್ವೈತಭಕ್ತಿಯಲ್ಲಿ ಕೊನೆಯವರೆಗೂ ಭೇದವು ಇದ್ದೇ ಇರುವುದು . . . ಈ ದ್ವೈತಭಕ್ತಿಯಲ್ಲಿ ಸಾಮರಸ್ಯವಿಲ್ಲದುದರಿಂದ ಇದು ಸಂಸಾರಬಂಧವಿಮೋಚಕವಲ್ಲ (ಶಿವಾಸೂ. ೧೩೫-೪೫) ; ಸದಮಲದ್ವೈತಭಕ್ತಿಯು ನವವಿಧವಾಗಿ ಚದುರೆ ತೋರುವುದದ ವಿವರಿಪೆ (ವೇದಾಂತ. ೯). 'ಅದ್ವೈತಭಕ್ತಿ' ಪರಾ. [ ದ್ವೈತ + ಭಕ್ತಿ ]

**ದ್ವೈತಭಾವನೆ** (ನಾ). ಜೀವಾತ್ಮ ಮತ್ತು ಪರಮಾತ್ಮ ಎರಡೂ ಬೇರೆ ಬೇರೆ ಎಂದು ತಿಳಿಯುವಿಕೆ: ಭಕ್ತಸ್ಥಲದಿಂದ ಐಕ್ಯಸ್ಥಲಕ್ಕೆ ದ್ವೈತಭಾವನೆಯಿಂದ ಅದ್ವೈತಸಿದ್ಧಿಗೆ ಮುಂದುವರಿಯುವುದೇ ಸಾಧನೆ (ಶೂನ್ಯಕು. ೭). [ ದ್ವೈತ + ಭಾವನೆ ]

**ದ್ವೈತಮತ** (ನಾ). ಮಧ್ವಾಚಾರ್ಯರು ಪ್ರತಿಪಾದಿಸಿದ ಮತ ; ಆತ್ಮ ಮತ್ತು ಪರಮಾತ್ಮರಲ್ಲಿ ಭೇದವನ್ನು ಹೇಳುವ ಮತ : ಜೀವರಿಗೂ ಪರಮಾತ್ಮನಿಗೂ ಪಾರಮಾರ್ಥಿಕವಾದ ಭೇದವನ್ನು ಇಹದಲ್ಲಿಯೂ ಪರದಲ್ಲಿಯೂ ಸ್ಥಾಪಿಸಿರುವುದರಿಂದ ಇವರ ಮತಕ್ಕೆ ದ್ವೈತಮತವೆಂಬ ಹೆಸರು ಬಂದಿದೆ (ಭಾರದ. ೨೭೪). P "ಶ್ರೀಮಧ್ವಾಚಾರ್ಯರ ಸಿದ್ಧಾಂತತತ್ತ್ವಗಳಾದ ಮೇಲೆ ಉದಾಹರಿಸಿದ ಒಂಭತ್ತು ಪ್ರಮೇಯಗಳ ಸಾರಾಂಶವನ್ನು ಅವರ ಗ್ರಂಥದ ಆಧಾರದಿಂದಲೇ ಸಂಗ್ರಹರೂಪವಾಗಿ ಪ್ರತಿಪಾದಿಸಲಾಗಿದೆ. ೧. ಶ್ರೀಹರಿಯು ಸರ್ವೋತ್ತಮನು. ೨. ಈ ಜಗತ್ತು ಸತ್ಯವಾದುದು (ಮಿಥ್ಯೆಯಲ್ಲ, ಸುಳ್ಳಲ್ಲ). ೩. ಚೇತನ, ಅಚೇತನ ಮತ್ತು ಈಶ್ವರ ಇವರಿಗಿರುವ ಭೇದವು ಸತ್ಯವಾದುದು (ಪಾರಮಾರ್ಥಿಕವು). ೪. ಸಕಲಜೀವರೂ ಶ್ರೀಹರಿಗೆ ಅಧೀನರು ಮತ್ತು ಅವನ ದಾಸರು. ೫. ಜೀವರು ಪರಸ್ಪರ ತಾರತಮ್ಯವುಳ್ಳವರು. ೬. ಜೀವನಿಗೆ ಸ್ವರೂಪಾನಂದವುಂಟಾಗುವುದೇ ಮುಕ್ತಿಯು. ೭. ಅಂತಹ ಮೋಕ್ಷಕ್ಕೆ ನಿರ್ಮಲವಾದ ಭಕ್ತಿಯು ಮುಖ್ಯಸಾಧನವು. ೮. ಪ್ರತ್ಯಕ್ಷ, ಅನುಮಾನ ಮತ್ತು ಆಗಮ ಎಂಬುದಾಗಿ ಪ್ರಮಾಣಗಳು ಮೂರು ಬಗೆಯಾಗಿವೆ. ೯. ಸಕಲ ವೇದಗಳಿಂದಲೂ ಮುಖ್ಯವಾಗಿ ಪ್ರತಿಪಾದ್ಯನು ಶ್ರೀಹರಿಯು. ಈ ಪ್ರಮೇಯನವರತ್ನಮಾಲಿಕೆಯೇ ಶ್ರೀಮದಾನಂದತೀರ್ಥರು ಲೋಕಕ್ಕೆ ಧಾರೆಯೆರೆದಿರುವ ಸಿದ್ಧಾಂತದ ಸಾರವು" (ಭಾರದ. ೨೭೫). [ ದ್ವೈತ + ಮತ ]

**ದ್ವೈತಮಾರ್ಗ** (ನಾ). = ದ್ವೈತಮತ: ದ್ವೈತಮಾರ್ಗಕ್ಕೆ ಮುಕ್ತಿ ಎಂಬುದು ಎಂದೆಂದಿಗೂ ಸಟೆ (ಘನವ. ೧೭-೧೫). [ ದ್ವೈತ + ಮಾರ್ಗ ]

**ದ್ವೈತವಾದ** (ನಾ). ಜೀವಾತ್ಮ ಮತ್ತು ಪರಮಾತ್ಮರಲ್ಲಿರುವ ಭೇದ ವನ್ನು ಕುರಿತು ಹೇಳುವ ವಾದ; P ಮಧ್ವಾಚಾರ್ಯರು ಸಾರಿದ ಸಿದ್ಧಾಂತ. "ಒಂದೇ ತತ್ತ್ವದಿಂದ ಎಂಬ ವಾದವನ್ನು ಏಕತ್ವವಾದ ಅಥವಾ ಏಕತತ್ತ್ವವಾದ ಎನ್ನುತ್ತಾರೆ. ಎರಡರಿಂದ ಎನ್ನುವ ವಾದ ವನ್ನು ದ್ವೈತವಾದ, ದ್ವಿತತ್ತ್ವವಾದ(ಡ್ಯೂಯಲಿಸಂ) ಎನ್ನುತ್ತಾರೆ" (ಕವಿಕೋ. IX, ೮೮೦). [ ದ್ವೈತ + ವಾದ್ಯ ]

**ದ್ವೈತವೇದಾಂತ** (ನಾ). = ದ್ವೈತಮತ : ಜೀವ ಜಗತ್ತುಗಳು ಪರಮಾತ್ಮ ನಿಗೆ ಶರೀರರೂಪದಿಂದ ಸಂಬಂಧಪಟ್ಟಿರುವುದನ್ನು ಸಹಿಸಲಾಗದೆ, ಅವು ಗಳಲ್ಲಿ ಪರಸ್ಪರ ಪ್ರತ್ಯೇಕತೆಯನ್ನು ಪ್ರತಿಪಾದಿಸಲು ದ್ವೈತವೇದಾಂತವು ಹೊರಟಿತು (ಶಕ್ತಿವಿ. ೦೬). [ ದ್ವೈತ + ವೇದಾಂತ ]

**ದ್ವೈತಸಿದ್ಧಾಂತ** (ನಾ). = ದ್ವೈತಮತ : ದ್ವೈತಸಿದ್ಧಾಂತವನ್ನು ಸ್ಥಾಪಿಸಿದ ಆಚಾರ್ಯಪುರುಷರಾದ ಶ್ರೀಮಧ್ವಾಚಾರ್ಯರು ಉಡುಪಿಗೆ ಸಮೀಪ ದಲ್ಲಿರುವ ಶಿವಳ್ಳಿಯಲ್ಲಿ . . . ಜನಿಸಿದರು (ಕಶಾಅ. ೧೭೧) ; ಮೋಕ್ಷ ದಲ್ಲಿಯೂ ಜೀವರು ಪರಸ್ಪರ ತಾರತಮ್ಯಸಹಿತರಾಗಿಯೇ ಇದ್ದಾರೆಂಬುದು . . . ದ್ವೈತಸಿದ್ಧಾಂತದಲ್ಲಿ ಪ್ರತಿಪಾದಿಸಿರುವರು (ಭಾರದ. ೩೭೭). [ ದ್ವೈತ + ಸಿದ್ಧಾಂತ ]

**ದ್ವೈತಾದ್ವೈತ** (ನಾ). ೧. ದ್ವೈತ ಮತ್ತು ಅದ್ವೈತಸಂಪ್ರದಾಯ : ಇತರ ಮತದ ದ್ವೈತಾದ್ವೈತಶಾಸ್ತ್ರವ ಕೇಳಿ ಅಹುದೋ ಅಲ್ಲವೋ ಏನೋ ಎಂತೋ ಎಂದು ಸಂದೇಹಿಸಿದಲ್ಲಿ ಅದು ಅಜ್ಞಾನ ನೋಡಾ (ಸಿದ್ಧೇವ. ೨೦-೫೭). ೨. [ವೀಶೈ] ದ್ವೈತದಿಂದ ಪ್ರಾರಂಭಿಸಿ ಅದ್ವೈತದಲ್ಲಿ ಕೊನೆಗೊಳ್ಳುವ ಮತ; ವೀರಶೈವಮತ : "ವೀರಶೈವಧರ್ಮವನ್ನು ದ್ವೈತಾದ್ವೈತವೆಂದೂ ಶಕ್ತಿವಿಶಿಷ್ಟಾದ್ವೈತವೆಂದೂ ಕರೆಯುವುದುಂಟು" (ಶೂನ್ಯಕು. ೧೨೫) ; ಶಿವಶರಣರ ತತ್ತ್ವಸಿದ್ಧಾಂತಕ್ಕೆ ಶಕ್ತಿವಿಶಿಷ್ಟಾದ್ವೈತ, ದ್ವೈತಾದ್ವೈತ, ಪಟ್ಸ್ಥಲಸಿದ್ಧಾಂತ, ಭೇದಾಭೇದ ಇವೇ ಮೊದಲಾದ ಹೆಸರುಗಳಿವೆ (ಭಾರದ. ೩೦೮). [ ದ್ವೈತ + ಅದ್ವೈತ ]

**ದ್ವೈತಿ** (ನಾ). ೧. ಜೀವಾತ್ಮ ಮತ್ತು ಪರಮಾತ್ಮ ಬೇರೆಬೇರೆಯೆಂದು ತಿಳಿಯುವವನು: ನಿತ್ಯಮುಕ್ತನಾದ ನಿಜಲಿಂಗೈಕ್ಯನು ದ್ವೈತಿಯಲ್ಲ ಅದ್ವೈತಿ ಯಲ್ಲ ಕಾಣಾ (ಸಿದ್ಧೇವ. ೨೨-೫೯) ; ಈಶ್ವರನಿಗೂ ಜೀವಿಗೂ ಯಾವ ಸ್ಥಿತಿಯಲ್ಲಿಯೂ ಅಭೇದವನ್ನು ಒಪ್ಪದೆ ದ್ವೈತವೇ ವೇದಾಂತದ ಸಿದ್ಧಾಂತ ವೆನ್ನುವವರು ದ್ವೈತಿಗಳು (ಭಾರದ. ೧೩೦). ೨. ಮಾಧ್ವಮತಸ್ಥ. [ ಸಂ. ದ್ವೈತಿನ್ ]

**ದ್ವೈತೀಯಕ** (ಗು). ಎರಡನೆಯ: ದ್ವೈತೀಯಕಜನಪಂಗದ್ವೈತಂಗಜಿತಂಗೆ ಭುವನದಯಿತಂಗಾಗಳ್ ದೈತೇಂದ್ರರೆಲ್ಲಮೆಱಗಿದರಾತತಪುಣ್ಯಂಗೆ ಜಗ ದೊಳೆಱಗದರೊಳರೆ (ಅಜಿಪು. ೫-೩). [ ಸಂ. ]

**ದ್ವೈಧ** (ನಾ). ೧. ಎರಡಾಗಿರುವಿಕೆ ; ಬೇರೆಯಾಗಿರುವಿಕೆ. ೨. ಎರಡು ವಿಧ ; ಎರಡು ಪ್ರಕಾರ : ಅರ್ಥಂ ದ್ವೈಧಮಾಗೆ ಮನದ ಸಂಶಯಮಂ ಪರಿಚ್ಛೇದಿಸಿ . . . ತಿಳಿದು (ಮಲ್ಲಿಪು. ೩-೧೦). ೩. ದ್ವೇಷ; ವಿರೋಧ: ಕುರುಕುಮಾರರೊಳೆ ಮೊಳೆತಕಟಸೂಯೆ ಕೌರವರು ಪಾಂಡವರೆಂದು ದ್ವೈಧದ ತೃಣಾಗ್ನಿ ಕೊಮೆಕೊಮೆದು ಸಿಮಿಸಿಮಿಸುತಿದೆ ! ಎಂದಿಗಾವ ದವಾಗ್ನಿಯಾಗಿ ಧಗಧಗಿಸುವುದೊ (ಹಬ್ಬರ. ೨೪-೧೭). ೪. ಭೇದ : ಚಿತ್ರವಿರೆ ಚಿಂತೆಗಳು ಜೀವವಿರೆ ಜಗವೆಂಬ ದ್ವೈಧವೇ ಮೆರೆಯೆ (ಮಂಲಿದೇ. ೧೭-೬). ೫. = ದ್ವೈಧೀಭಾವ ೨ : " ದ್ವೈಧಂ-ಶತ್ರುಗಳಿಗೆ ಪರಸ್ಪರ ಭೇದಬುದ್ಧಿಯನ್ನು ಕಲ್ಪಿಸುವಿಕೆ " (ಸಿದ್ಧಾಂತಿ. ೨೪೦). 'ಷಡ್ಗುಣ' ಪರಾ. [ ಸಂ. ]

**ದ್ವೈಧೀಭಾವ** (ನಾ). ೧. ಎರಡು ವಿಧವಾದ ಭಾವನೆ ; ಸಂಶಯಂಭಾವನೆ: ಮನುಷ್ಯನು ಹೀಗೋ ಹಾಗೋ ಎಂದು ದ್ವೈಧೀಭಾವದಿಂದ ಯಾವ ಕಾರ್ಯಕ್ಕೂ ಹೋಗಬಾರದು (ಭೀಷ್ಮಜ. ೮೬). ೨. [ರಾಜನೀ] ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ ಮತ್ತು ಸಂಶ್ರಯ ಎಂಬ ಆರು ಬಗೆಯ ಭೇದೋಪಾಯಗಳಲ್ಲಿ ಒಂದು ; ಶತ್ರುಗಳನ್ನು ಭೇದೋಪಾಯಗಳಿಂದ ಒಡೆಯುವಿಕೆ : ಸಂಧಿವಿಗ್ರಹದ್ವಯಾವಸ್ಥಾನಂ ದ್ವೈಧೀಭಾವಮಕ್ಕುಂ (ಚಾವುಂಪು. ೩೦೦) ; ತನ್ನ ಮನವಾನೆನ್ನರುಮಱಿಯ ದಂತು ಕಾಕಾಕ್ಷಿಗೋಳಕನ್ಯಾಯದಿಂದಿರ್ಪುದು ದ್ವೈಧೀಭಾವಮೆಂಬುದಕ್ಕುಂ (ಪಂಚತಂ. ೨೧೯-೧೩). [ ಸಂ. ]

**ದ್ವೈಪ** (ಗು). ೧. ಹುಲಿಗೆ ಸಂಬಂಧಿಸಿದ ; ಹುಲಿಯ ತೊಗಲಿನಿಂದ ಮಾಡಿದ. (ನಾ). ೨. ಹುಲಿಯ ಚರ್ಮ. ೩. ಹುಲಿಯ ಚರ್ಮ ವನ್ನು ಹೊದಿಸಿದ ರಥ : "ದ್ವೈಪಃ, ವೈಯಾಘ್ರಃ-೨ ದ್ವೀಪಿಚರ್ಮಾ ವೃತರಥ-ಹುಲಿಯ ತೊಗಲು ಹೊದಿಕೆಯುಳ್ಳ ರಥದ ಹೆಸರು" (ಸಿದ್ಧಾಂತಿ. ೨೧೭). [ ಸಂ. ]

**ದ್ವೈಪಾಯನ** (ನಾ). ೧. (ಯಮುನಾನದಿಯ) ದ್ವೀಪದಲ್ಲಿ ಜನಿಸಿ ದವನು ; ವ್ಯಾಸಮಹರ್ಷಿ : "ಸಾತ್ಯವತೇಯಃ, ಪಾರಶರ್ಯಃ, ದ್ವೈಪಾ ಯನಃ, ವ್ಯಾಸಃ - ಈ ೪ ವ್ಯಾಸ" (ಹಲಾಯು. ೬೮-೨೫೯). 'ಕೃಷ್ಣ ದ್ವೈಪಾಯನ' ಪರಾ. ೨. ಒಂದು ಮಡುವಿನ ಹೆಸರು : ಪಾಂಡವರು ದ್ವೈಪಾಯನವೆಂಬ ಆ ಮಡುವಿನ ಹತ್ತಿರಕ್ಕೆ ಬಂದ ಕೂಡಲೆ ಧರ್ಮರಾಜನು ಕೃಷ್ಣನನ್ನು ಕುರಿತು . . . ಎಂದನು (ವಚಭಾ. ೩೦೪). P ಕನ್ನಡಕಾವ್ಯಗಳಲ್ಲಿ ಇದನ್ನೇ ವೈಶಂಪಾಯನಸರೋವರವೆಂದು ಕರೆದಿದೆ. [ ಸಂ. ]

**ದ್ವೈಮಾತುರ** (ನಾ). ೧. ಇಬ್ಬರು ತಾಯಂದಿರನ್ನು ಹೊಂದಿದವನು. ೨. ಗಣೇಶ : "ವಿನಾಯಕಃ, ವಿಘ್ನರಾಜಃ, ದ್ವೈಮಾತುರಃ . . . ಗಜಾನನಃ-೮ ಶಿವಪುತ್ರನಾದ ಗಣಪತಿಯ ಹೆಸರುಗಳು" (ಸಿದ್ಧಾಂತಿ. ೨೦); P (i) ಸ್ಕಂದಪುರಾಣದ ಮೇರೆಗೆ : ಗಣಪತಿಯು ರಾಜವರೇಣ್ಯನಿಗೆ ರಾಣಿ ಪುಷ್ಪಕೆಯಲ್ಲಿ ಚತುರ್ಭುಜ, ಆನೆಯ ತಲೆಯೊಡನೆ ಹುಟ್ಟಿ ದನು. ಪುಷ್ಪಕೆ ಭಯಗೊಂಡು ಆ ಶಿಶುವನ್ನು ಒಂದು ಸರೋವರ ದಲ್ಲಿ ಬಿಟ್ಟಳು. ಪಾರ್ಶ್ವನೆಂಬ ಋಷಿ ಅದನ್ನು ತನ್ನ ಆಶ್ರಮಕ್ಕೆ ಕೊಂಡೊಯ್ದು ತನ್ನ ಸತಿ ದೀಪವತ್ಸಲೆಗೆ ಕೊಟ್ಟನು. ಆಕೆ ಆ ಶಿಶುವನ್ನು ಸಲಹಿದಳು. ಗಣಪತಿಗೆ ಹೀಗೆ ಇಬ್ಬರು ತಾಯಂದಿರಾ ದರು. (ii) ಮತ್ಸ್ಯಪುರಾಣದ ಮೇರೆಗೆ : ಪಾರ್ವತಿಯು ತನ್ನ ಮೈಗೆ ಅಂಗರಾಗವನ್ನು ಪೂಸಿಕೊಂಡಾಗ ಕೆಳಗೆ ಬಿದ್ದುದರಲ್ಲಿ ಒಂದು ಪುರುಷಾಕಾರದ ಬೊಂಬೆಯನ್ನು ಮಾಡಿದಳು. ಅದು ಆನೆಯ ಆಕಾರವಾಗಿತ್ತು. ಆಕೆ ಅದನ್ನು ಗಂಗೆಯಲ್ಲಿ ತೇಲಿಬಿಟ್ಟಳು. ಗಂಗೆ ಅದನ್ನು ಪುತ್ರವಾತ್ಸಲ್ಯದಿಂದ ಮಗೂ ಎಂದಳು. ಪಾರ್ವತಿಯೂ ಹಾಗೇ ಕರೆದಳು. ಹೀಗೆ ಗಣಪತಿ ಇಬ್ಬರು ತಾಯಂದಿರನ್ನು ಪಡೆದನು. ೩. ಜರಾಸಂಧ; P ಬೃಹದ್ರಥನಿಗೆ ಬಹುಕಾಲ ಮಕ್ಕಳಾಗದುದರಿಂದ ಅವನು ಚಂಡಕೌಶಿಕಮುನಿಯ ಮರೆಹೊಕ್ಕನು. ಆ ಮಹರ್ಷಿ ಒಂದು ಮಾವಿನ ಹಣ್ಣನ್ನು ಮಂತ್ರಿಸಿ ರಾಣಿಗೆ ಕೊಡಬೇಕೆಂದು ಕೊಟ್ಟನು. ರಾಜನು ಆ ಹಣ್ಣನ್ನು ಎರಡು ಭಾಗ ಮಾಡಿ ತನ್ನ ಇಬ್ಬರು ಪತ್ನಿಯರಿಗೂ ಕೊಟ್ಟನು. ರಾಣಿಯರು ಗರ್ಭವತಿಯರಾಗಿ, ನವಮಾಸಾನಂತರ ಶಿಶುವಿನ ಒಂದೊಂದು ಹೋಳನ್ನು ಹೆತ್ತು, ಆ ವಿಕಾರಶಿಶುವನ್ನು ತಿಪ್ಪೆಯಲ್ಲಿ ಬಿಸಾಡಿದರು. ಜರೆಯೆಂಬ ರಾಕ್ಷಸಿ ಆ ಎರಡು ಸೀಳುಗಳನ್ನು ಕೂಡಿಸಿದುದರಿಂದ ಮಗು ಬದುಕಿತು. ಜರಾಸಂಧನ ಜನನವಾದುದು ಹೀಗೆ. [ ಸಂ. ]

**ದ್ವೈವಿಧ್ಯ** (ನಾ). ೧. ಎರಡಂ ವಿಧ, – ಪ್ರಕಾರ. ೨. ಉಭಯಸಂಕಟ ; ಬಿಕ್ಕಟ್ಟು ; ಪೇಚು : ಮಹಾಶಯ ! ತಾವು ದ್ವೈವಿಧ್ಯದಲ್ಲಿ ಸಿಕ್ಕಿರುವಂತೆ ತೋರುವುದು (ಪಿಶಾಪ. ೧೧). [ಸಂ.]

**ದ್ವೈಹಾಯನ** (ನಾ). ಎರಡು ವರ್ಷಗಳ ಅವಧಿ. [ಸಂ.]

**ದ್ವ್ಯಂಗರಾಶಿ** (ನಾ). [ಜ್ಯೋತಿ] ಚರರಾಶಿ ಮತ್ತು ಸ್ಥಿರರಾಶಿ ಎರಡರ ರೂಪವನ್ನು ಪಡೆದಿರುವ ರಾಶಿ; ದ್ವಿಸ್ವಭಾವದ ರಾಶಿ; ಮಿಥುನ, ಕನ್ಯಾ, ಧನುಸ್ಸು ಮತ್ತು ಮೀನ ಎಂಬ ರಾಶಿಗಳು: ಚರಗೃಹಮಪ್ಪವುದಾಗಿರೆ [ಪರ]ಮಂಡಲದೊಳ್ . . . ದ್ವ್ಯಂಗ ರಾಶಿಯಾಗಿರೆ ತದ್ವ್ಯಕ್ಷಮಧ್ಯದೆ ಪಡಿಗುಂ (ಜಾತತಿ. ೨೩-೩). [ಸಂ.]

**ದ್ವ್ಯಕ್ಷರ** (ನಾ). ೧. ಎರಡುಅಕ್ಷರಗಳಿಂಳ್ಳದು: ದ್ವಿದಳ ದ್ವ್ಯಕ್ಷರ [ಪಾಠಾಂ. ದ್ವಿಯಕ್ಷರ, ದ್ವಯಾಕ್ಷರ]ಎಂಬ ಚಕ್ರದಳ ಅಕ್ಷರಂಗಳೆಲ್ಲವೂ ಬಯಲಾದವು ನೋಡಾ (ಸಿದ್ಧೇವ. ೨೦೦-೬೧೪). ೨. [ಛಂದ]ಎರಡೇ ಅಕ್ಷರಗಳುಳ್ಳ ಪದ್ಯ ; ಎರಡುಅಕ್ಷರಗಳನ್ನು ಮಾತ್ರ ಬಳಸಿ ಬರೆದ ಪದ್ಯ : ನಿರೋಷ್ಠ್ಯ, ಅತಾಲವ್ಯ, ಏಕಾಕ್ಷರ, ದ್ವ್ಯಕ್ಷರ, ಹಾರಬಂಧ, ಮುರಜಬಂಧ ಮುಂತಾದ ನಾನಾವಿಧಗಳುಂಟು (ಕೃಪಿಡಿ. ೨೩೪). [ಸಂ.]

**ದ್ವ್ಯಕ್ಷರಿ** (ನಾ). ೧. ಎರಡು ಅಕ್ಷರಗಳನ್ನುಳ್ಳ ಮಂತ್ರ : ಏಕಾಕ್ಷರಿ, ದ್ವ್ಯಕ್ಷರಿ, ತ್ರ್ಯಕ್ಷರಿ, ಚತುರಾಕ್ಷರಿ, ಪಂಚಾಕ್ಷರಿ, ಷಡಕ್ಷರಿ ಮುಂತಪ್ಪ ಪ್ರಸಿದ್ಧಮಂತ್ರಂಗಳೊಳವಲ್ತೆ (ರಾಮಾಶ್ವ. ೧೧೬-೧). ೨. = ದ್ವ್ಯಕ್ಷರ ೨ : ದ್ವ್ಯಕ್ಷರಿ ದನುನಂದನನಿನನಂದನನಿನನಂದನನಿನನನಂದನನ ನಂದನನಂ (ಮದತಿ. ೬-೧೧); ಅಕ್ಷರಬಿಂದುಚ್ಯುತಕಂ ದ್ವ್ಯಕ್ಷರಿಯೇಕಾಕ್ಷರಂ ನಿರೋಷ್ಠ್ಯಮತಾಲವ್ಯಾಕ್ಷರಮೆನೆ . . . ನೆಗಟ್ಟುಂ ಪಲವುಂ (ಕಾವ್ಯಾವ. ೫೭೦). [ಸಂ. ದ್ವ್ಯಕ್ಷರೀ]

**ದ್ವ್ಯಣುಕ** (ನಾ). ಎರಡು ಪರಮಾಣುಗಳ ಸೇರಿಕೆಯಿಂದ ಉಂಟಾದುದು : ಎರಡು ಪರಮಾಣುಗಳು ಸಂಬಂಧ ಹೊಂದಿ ದ್ವ್ಯಣುಕ ಹುಟ್ಟುವದು (ಭಾರದ. ೨೩೦) ; ಎರಡು ಅಣುಗಳು ಸೇರಿ ಒಂದು ದ್ವ್ಯಣುಕವಾಗುತ್ತದೆ (ತತ್ತ್ವಪ್ರಾ. ೨೫೭). [ಸಂ.]

**ದ್ವ್ಯಧಿಕ** (ನಾ). ಎರಡರಷ್ಟು ; ಇಮ್ಮಡಿ : ನೀಚೈರ್ಗೋತ್ರಂಗಳೆಂಬ ದ್ವ್ಯಧಿಕಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಮಹಾನೇ. ೧೬-೧೧೧ ವ). [ಸಂ.]

**ದ್ವ್ಯಧಿಕತೆ** (ನಾ). ಎರಡರಷ್ಟಾಗಿರುವುದು ; ಎರಡುಪಟ್ಟಾಗಿರುವುದು ; ಇಮ್ಮಡಿ : ದ್ವಿಗುಣಕ್ಕೆ ಚತುರ್ಗುಣಂ ದ್ವಿಗುಣದ್ವಯಾಧಿಕಮಪ್ಪುದರಿಂ ದ್ವ್ಯಧಿಕಮೆಂಬುದಕ್ಕುಂ ಆ ಶಬ್ದಂ ಪ್ರಕಾರಾರ್ಥಂ ತತ್ಪ್ರಕಾರಂ ದ್ವ್ಯಧಿಕತೆಯಕ್ಕುಂ (ತತ್ತ್ವಪ್ರ. ೨೪೯). [ಸಂ. ದ್ವ್ಯಧಿಕತಾ]

**ದ್ವ್ಯರ್ಥಕ** (ಗು). ೧. ಎರಡು ಅರ್ಥಗಳುಳ್ಳ. ೨. ಸಂದಿಗ್ಧಾರ್ಥವುಳ್ಳ. [ಸಂ.]

**ದ್ವ್ಯರ್ಧ** (ನಾ). ಒಂದೂವರೆ; ಒಂದು ಮತ್ತು ಎರಡನೆಯದರಲ್ಲಿ ಅರ್ಧ. [ಸಂ.]

**ದ್ವ್ಯರ್ಧಾಕ್ಷ** (ನಾ). ಚಿತ್ರಕಲೆ ಮುಂತಾದುವುಗಳಲ್ಲಿ ಒಂದೂವರೆ ಕಣ್ಣು ಕಾಣುವಂತಿರುವ ಭಂಗಿ : ಎಸೆಗುಂ ಋಜ್ವಾಗತಂ . . . ಮೆಚ್ಚಿಸುಗುಂ ದ್ವ್ಯರ್ಧಾಕ್ಷಮೆಂಬಂತಿರೆ ಸೊಗಯಿಪುತಿರ್ಪಂಗನಾಭಂಗಿಯಂ ಚಿತ್ರಿಸಿ ಚಿತ್ರಕ್ಕಾಯುಪೊಯ್ಯುಂ ಮದನನೆನೆ ಮಹಾದೇವಿ ಕಣ್ಗೊಪ್ಪಿ ತೋರ್ಪಳ್ (ಅಜಿಪು. ೨-೪೫). [ಸಂ. (ದ್ವ್ಯರ್ಧ + ಅಕ್ಷಿ + –)]

**ದ್ವ್ಯರ್ಧಾಕ್ಷಿ** (ನಾ). = ದ್ವ್ಯರ್ಧಾಕ್ಷ : ರಥಾಂಗಮಿಥುನಂ ದ್ವ್ಯರ್ಧಾಕ್ಷಿಯಿಂ ಬರ್ಹಿಮಂಡಳಿ ಪಾರ್ಶ್ವಗತದಿಂದದೇಂ ಪಡೆದುವೋ ಪಂಚಾಂಡಕವ್ಯಕ್ತಿ ಕಣ್ಗೊಳಿ ಕಂದರ್ಪನ ಬಾಣಪಂಚಕದವೊಲ್ ಚಿತ್ರಕೃತಿಕ್ಷೋಭಮಂ (ಮಲ್ಲಿಪು. ೩-೪೧). [ಸಂ.]

**ದ್ವ್ಯಷ್ಟ** (ನಾ). ಒಂದು ಬಗೆಯ ಲೋಹ; ತಾಮ್ರ: "ತಾಮ್ರಕಂ–ಶುಲ್ಬಂ, ಮ್ಲೇಚ್ಛಮುಖಂ, ದ್ವ್ಯಷ್ಟಂ, ವರಿಷ್ಟಂ, ಉದುಂಬರಂ, ಒದುಂಬರಂ–೬ ತಾಮ್ರದ ಹೆಸರುಗಳು" (ಸಿದ್ಧಾಂತಿ. ೨೬೦). [ಸಂ.]

**ದ್ವ್ಯಹ** (ನಾ). ಎರಡು ದಿನಗಳ ಅವಧಿ. [ಸಂ.]

**ದ್ವ್ಯಾಮುಷ್ಯಾಯಣ** (ನಾ). = ದ್ವಾಮುಷ್ಯಾಯಣ. [ಸಂ.]

**ದ್ವ್ಯಾಹಿಕ** (ನಾ). ಎರಡು ದಿನಗಳಿಗೊಮ್ಮೆ ಬರುವ ಜ್ವರ ; ಎರಡರ ಜ್ವರ : ಮಾಕ್ಷಿಕ, ತಾಳಕ, ಸುವರ್ಣ ಇವೆಲ್ಲವನ್ನು ಎಕ್ಕದ ಹಾಲಲ್ಲೂ . . . ಜೇನುತುಪ್ಪದಲ್ಲೂ ಕೊಡಲು ಸರ್ವ ವಿಷಮಜ್ವರ, ಏಕಾಹಿಕ, ದ್ವ್ಯಾಹಿಕ, . . . ಧಾತುಗತಶ್ವಾಸ ಹರಂ (ವಿವ್ಯವಿ. ೧೬). [ಸಂ.]

**ದ್ವ್ಯಾಹಿಕಜ್ವರ** (ನಾ).=ದ್ವ್ಯಾಹಿಕ : ಬೆಳ್ಳುಳ್ಳಿ, ಅಗರಧೂಮ ಇವುಗಳನ್ನು ನಾಲ್ಕು ನಾಲ್ಕು ತೂಕ ಚೂರ್ಣವಂ ಮಾಡಿ . . . ತೈಲವನ್ನು ಅಭ್ಯಂಗನಕ್ಕೆ ಉಪಯೋಗಿಸಲು . . . ದ್ವ್ಯಾಹಿಕಜ್ವರ,ವಿಷಮಜ್ವರ ಮೊದಲಾದವುಗಳು ನಾಶವಾಗುವುವು (ಸಕವೈ. ೬೩). [ದ್ವ್ಯಾಹಿಕ + ಜ್ವರ]

*

# ಧ

**ಧ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತೊಂಬತ್ತನೆಯ ಅಕ್ಷರ. ೨. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : "ಅಟಿ ಝಧಳ ಮೊಂಬತ್ತು" (ಮಂಗರಾ. ೧೧೪-೧೧). ೩. [ಸಂಗೀತ] ಸಪ್ತಸ್ವರಗಳಲ್ಲಿ ಆರನೆಯದು ; ಧೈವತ : ಸ್ಥಾಯಿಸಂಚಾರಿಗಳ ಸ ರಿ ಗ ಮ ಪ ಧ ನಿ ಯು ಸರದಾಯತದ . . . ತಾರ ಮಧ್ಯ ಮಂದ್ರಗಳಿಂದೆ ಸೊಗಸುಗೊಳಿಸಿ ಗೇಯರಸಮೊಸರೆ ಪಾಡಿದರು (ಜೈಮಿಭಾ. ೨೧-೫೫) ; ಸಪ್ತಸ್ವರಗಳು ಕ್ರಮವಾಗಿ ಸ, ರಿ, ಗ, ಮ, ಪ, ಧ, ನಿ ಎಂಬ ಸಂಕೇತಾಕ್ಷರಗಳಿಂದ ಪ್ರಯೋಗದಲ್ಲಿವೆ (ಸಂಗೀಚಂ. ೧೫). ೪. [ಛಂದ] ಅಂಶಗಣಗಳಲ್ಲಿ ಒಂದು; ರಂಧ್ರಗಣ ; ನಾಲ್ಕು ಅಂಶಗಳನ್ನುಳ್ಳಗಣ.

**ಧಂ** (ನಾ). ಒಂದು ಅನುಕರಣ ಶಬ್ದ : ಪೊಗೆದುದು ಪೊತ್ತಿದತ್ತು . . . ಧಂ ಧಗಿಲ್ ಧಗಿಲ್ ಧಗಿಲೆನುತಟ್ಟಿ ತಟ್ಟಿದುದು ಮುಟ್ಟಿತು ಸುಟ್ಟಿತು ತಿಂದು ತೇಗಿದತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ (ಗಿರಿಕ. ೮-೪೭) ; ನಿಸ್ಸಾಣಧ್ವನಿ ತಂಬಟ ಸ್ಫುಟ ಢಡಂ ಧಂ ನಾದ ಭೀತಪ್ರ್ವಲರ್ನಿಸ್ಸತ್ವವ್ದಿರ್ಸುಟೋಡಿ ನಾಡ ನಗರಿ ಭಂಡಾರವಂ ಪೆಂಡಿರಂ (ಎಕ. VIII, ಸಾಗರ. ೧೫-೨೮ ; 1218) ; ಧಂ ಧಳಧಳರೆಂದು ಬಾಜಿಸಿದರು ದೇವದುಂದುಭಿಗಳನುಘೆಯೆನುತೆ (ಮೋಹತ. ೪೨-೧೨) ; ಕಡಲು ಕುಣಿಯೆಗೊಂದಣ ತೆರೆಮುರಿ ನೊರೆ ಧಂ ಧಣ (ಹೃದಸ. ೩೭-೧೨) ; ಧಂ ಧಂ ಎನ್ನುವ ಶಬ್ದ ಕೇಳಿಬರುತ್ತಿದೆ (ರೂಢಿ).

ಧಂಧಂ (ದ್ವಿರುಕ್ತಿ) : ಧಂಧಂ ಧಗಿಲ್ಬುಭುರ್ಗಿಲ್ ಘಂಘರಿಲೆಂದೇ ನಳ್ವಿತೋ ಸೇವುಣಬಳವನವುಂ ವೀರಬಲ್ಲಾಳ ಕೋಪೋದ್ಧುರದಾವೋಗ್ರಾನಳಂ (ಎಕ. VI, ಕರೀಕೆ. ೪೫-೪೩ ; 1196) ; ತ್ರಿದಶರಬ್ಬರಿಸಿ ಆನಕ ದುಂದುಭಿಶಂಖ ಧಂಧಂ ಧಣಾ ಸರಿಗಮಪಧನೀಯೆಂದೆನುತ . . . ತುತಿಸಿದರು (ವಿದಾಕ್ಯ. ೯೨-೨).

ಧಂದೆ,ದಂಧೆ, ಧಂಧೆ (ನಾ). ೧. ಜೀವನೋದ್ಯೋಗ; ಜೀವನೋಪಾಯಂ; ಹೊಟ್ಟೆಪಾಡಿನ ವೃತ್ತಿ : ಮೀನು ಹಿಡಿಯುವದೇ ಅವರ ಮುಖ್ಯ ಧಂದೆಯಾಗಿತ್ತು (ಪಾನಕ. ೭) ; ಸ್ವಂತ ಧಂದೆಯಿಂದ ಉಪಜೀವನ ಮಾಡುವ ವೈದ್ಯ ವೆಂಕಪ್ಪ (ಸಮಜೀ. ೧೧ ಟೀಕೆ). ೨. ಕೆಲಸ ; ಕಾರ್ಯ : ಊಟಕ್ಕೆ ಬೇಕಾಗುವ ಎಲೆ–ದೊನ್ನೆಗಳನ್ನು ಅಂಗಡಿಯಿಂದ ಖರೀದಿಮಾಡಿ ತರುವದು ಕೇವಲ ಅಬ್ರಾಹ್ಮಣ್ಯ ಧಂದೇ ಎಂದು ಅವನ ಠಾಮುಮತ (ದೀಪಹ. II, ೨). ೩. ವ್ಯಾಪಾರ : 'ಮೋಹಿನೀಸಿಂಧೂರ'ದ ಧಂದೆ ತೆಗೆದುಹಾಕಿಬಿಡುತ್ತಾರಂತೆ (ಸಾಹೇಬ್. ೨೩೩). ದಂಧೆ : ೨. ನಾವು ಎಂದಾದರೂ ಆ ದಂಧೆ ಮಾಡೇವೇ ? (ಬದುಜ. ೨೦೩) ; ಅಂಗಡಿಯಲ್ಲಿ ದಂಧೆ ಮಾಡು (ಮುಕ್ತಿ. ೧೯೩). ೩. ಅದೇ ದಂಧೆಯಲ್ಲಿ ಲಕ್ಷಾಂತರರೂಪಾಯಿ ಸಂಪಾದನೆಮಾಡಿದ ಕಂಪನಿಗಳೂ ಕುಂಟುತ್ತಲೇ ಇದ್ದವು (ಮಧುಸಂ. ೩೫). ಧಂಧೆ : ೧. ಹೊಟ್ಟೆ ಧಂಧೇನ ಬರವಣಿಗೆ ಮಾಡಿಕೊಂಡು, ಇಂಗ್ಲಂಡದೊಳಗ, ಅಮೇರಿಕಾದೊಳಗ ನಡೀಬಹುದು (ಆಪನಾ. ೨೦೨). ೩. ಅವನ ಧಂಧೆ ಮುಗ್ಗಿಸುವ ಉತ್ಸುಕತೆಯೂ ನನಗಿಲ್ಲ (ಗಾಳಿಪ. ೧೪೭).

[ ←ಹಿಂ. ಧಂಧಾ ; ಮರಾ. ಧಂದಾ ; ಗುಜ. ಧಂಧೋ ]

ಧ ಧೆ 'ಧಂದೆ' ನೋ.

ಧಕಲ್ಪಟ್ಟಿ 'ಢಕಲಪಟ್ಟಿ' ನೋ.

ಧಕಾರ (ನಾ). [ವ್ಯಾಕ] 'ಧ' ಎಂಬ ಅಕ್ಷರ : ಯತ್ವಮಿಶ್ರ ಧಕಾರಕ್ಕಿತ್ವಂ ಬೆರಸಿದ ದಕಾರಂ–ಅಧ್ಯಕ್ಷ–ಅದ್ದಿಕ (ಶಮದ. ೨೭೭ ಪ್ರಯೋ). [ ಸಂ. ]

ಧಕುಕು (ನಾ). ಒಂದಂ ಅನುಕರಣ ಶಬ್ದ : ವಿಕಳಾಂಧಕಾಸುರನ ಶೂಲದಿಂದಿಳಿದು ಮೇಲಕೆ ನೆಗಹಿ ನೆಲಕಿಕ್ಕಿಯೆರ್ದೆಯ ತುಳಿದಾಡಿದಂ ಧಕುಕು ಧಿಕುಕೆಂಬ ವಾದ್ಯಧ್ವನಿಗೆ ನಾಲ್ಕನೆಯ ಲೀಲೆಯುಂ ಶಿವ ನ ಮ ಸ್ತೇ (ಗುರುಚಾ. ೪-೧೧).

ಧಕ್ಕಡ, ದಕ್ಕಡ, ದಕ್ಕಡೆ, ದಕ್ಕಳ, ಧಕ್ಕಡಿ, ಧಕ್ಕಡೆ, ಧಕ್ಕಳ (ಗು). ೧. ಗಟ್ಟಿಮುಟ್ಟಾದ; ದೃಢಕಾಯವಾದ : ಪೈಸರದ ಬಲುಬಂಧ ಧಕ್ಕಡ ವಾಸುಗಿಯಂ ಮೇಳವದ ವರಪಕ್ಷೀಶ ಮಾರುತಿ ಕದನಕ್ಕೈವಡಿಯಿಂದ ಮಿಗಿಲೆನಲು (ಕುವ್ಯಾವಿ. ಓರಿಇ. ೪-೬೫) ; ಜಡಿದಿಟ್ಟನೌಕುವ ಡೊಂಬಿಗರ ದವಡಿಗರ ಧ[ಪಾಠಾಂ. ದ]ಕ್ಕಡ ರಕ್ಕಸರ ಹನುಮ (ತೊರರಾ. ೫-೪-೨೨). (ನಾ). ೨. ದಿಟ್ಟ; ಧೈರ್ಯಸ್ಥ; ಸಾಹಸಿಗ; ಶೂರ : ಸಿಕ್ಕಿದವು ಧಾಳಿಯಲಿ ಧೈರ್ಯದ ಧ[ಪಾಠಾಂ. ದ]ಕ್ಕಡರ ಮನ ಹರಹಿನೊಳಹಾಯಿಕ್ಕಿದರು ಕಡೆಗಣ್ಣ ಬಲೆಗಳ ಮುನಿಮೃಗಾವಳಿಗೆ (ಕುವ್ಯಾಆ. ೧೮-೭) ; ನೂಕಿದೊಡೆ ಕರ್ಣಾದಿ ದೊರೆಗಳ ಡಾಕನಾನುವರಾರು ದಿವಿಜಾನೀಕದಲಿ ಧ[ಪಾಠಾಂ. ದ]ಕ್ಕಡರುಸಂರು ದುವ್ವಾಳಿಸಿತು ನಭಕೆ (ಕುವ್ಯಾಆ. ೧೯-೧೩) ; ಭಾನು ಬಿಂಬವ ಮೊಗೆವ ಲೌಡೆಯ ಮಾನಸದ ಧಕ್ಕಡರು ಕಲಿ ಪವಮಾನತನಯನ ಮುತ್ತಿಕೊಂಡರು ರಾಯರಾವುತರು ಧಕ್ಕಡರು ನೂಕಿದರು ಪಯಂಗಳಂ ತೇರ್ಗಳಂ (ತುರಂಗ. ೫೨-೧೪). ೩. ತೀಕ್ಷ್ಣತೆ; ತೀವ್ರತೆ; ಉಜ್ಜ್ವಲತೆ: ಆಗ ದೀ ಪ್ತಿ ಯು ಧಕ್ಕಡದಿ ತೋರುವವು ಖಳಪಳ ನೀರು ಕುದಿವಂತೆ (ಜ್ಞಾನಸಿಂ. ೧೩-೪೪). ದಕ್ಕಡ : ೨. ದಾನವರು ದಕ್ಕಡರು ಧೈರ್ಯೋದ್ಧಾನಶೀಲರು ಘಾಯವನು ಗಿರಿಯಾನಬಾರದು ಮುಟ್ಟಿಬಲ ವೆಗ್ಗಳರು ಸತ್ತ್ವದಲಿ (ಕುವ್ಯಾದ್ರೋ. ೧೬-೩೫) ; ಭೀತಿಗೊಳುತಿದೆ ಮಾಱು ಬಲ ಮೆರ್ಮ ಪೂತು ದಕ್ಕಡ ದಿಟ್ಟರಿಪುಸಂಘಾತ ವಾರಿಧಿಬಾಡಬಾನಲಕೀರ್ತಿಜಗರಝಂಪ (ಕುವ್ಯಾಕ. ೨೧-೧೩) ; ದಕ್ಕಡರು ಬಿಲ್ಲವರಾಂತರರಿಭಟನ (ಕುವ್ಯಾಶ. ೨-೪೪). ೪. ದಿಟ್ಟತನ ; ಸಾಹಸ ; ಶೌರ್ಯ : ಆ ಕುದುರೆಯ ಬೆಂಗಾಪಿನ ದಕ್ಕಡದ ಗಂಡುಗಲಿಗಳ ಗಂಡಂ ರಾಘವಾವರಜನೆನ್ನನಿಂತು ಪೇಟ್ದಟ್ಟಿದಂ (ರಾಮಾಶ್ವ. ೧೪೨-೧೬). ದಕ್ಕಡೆ : ೨. ಕಕ್ಕಡೆಯ ಕರವಾಳ ಹರಿಗೆಯ ದಕ್ಕಡೆಯರೊತ್ತಂಬರಿಸಿ ಬೊಬ್ಬಿಕ್ಕಿ ಬಿಱುಗುಂಡುಗಳಲೆಬ್ಬಿದರಂಜನಾಸುತನ (ತೊರರಾ. ೫-೫-೧೯). ೫. ದಾಂಡಿಗ ; ಸ್ಥೂಲಕಾಯಂ ; ದೃಢಕಾಯಂ: ತೋಱಿದಿರಲವಗೆಚ್ಚಱಿಕೆ ಕರ್ವರ್ಣಱರುಕ್ಕಿನ ಚಮ್ಮಟಿಗೆಗಳಲೇಱಿ ಹೊಯ್ದರು . . . ದಳವೇಱಿದುದಾ ದಕ್ಕಡೆಯ ರಕ್ಕಸನೂಱಿಕೆಯ ಬಲುನಿದ್ರೆ ತೊಡೆಯನು ತಟ್ಟಿದಂದದಲಿ (ತೊರರಾ. ೬-೨೬-೨೭). ದಕ್ಕಳ : ೪. ತ್ರೈಭುವನ ಕಂಪಿಸುತಿರ್ದುದೈ ರಣದವಕಿಗರ ದ[ಪಾಠಾಂ. ಧ]ಕ್ಕಳ [ಪಾಠಾಂ. ಡ]ದ ದೆಖ್ಖಾಳದ ಮಹಾಹವಕೆ (ತೊರರಾ. ೪-೩-೧೨). ಧಕ್ಕಡಿ: ೬. ಅತಿಶಯಂ; ಹೆಚ್ಚಳ : ಬೆಕ್ಕಸಂಬಡುತಸುರಪತಿ ತನ್ನಿಕ್ಕೆಲದ ಕರತಳದ ಮುಸುಕಿನ ಧಕ್ಕಡಿಯ ದುಮ್ಮಾನದಲಿ ಹೊಕ್ಕನು ಪುರಾಂತರವ (ತೊರರಾ. ೬-೨೬-೨). ಧಕ್ಕಡೆ : ೨. ಧಕ್ಕಡೆಯರಾನಕದ ದನಿ ದಶದಿಕ್ಕನುಬ್ಬಿಸೆ (ತೊರರಾ. ೧-೧೫-೪೩) ; ಅರಿಶರೌಘಂಗಳಂ ಕತ್ತರಿಸಿ ಕರಚಮತ್ಕೃತಿಯೊಳ್ಧಕ್ಕಡೆಯರೆಚ್ಚಸ್ತ್ರಮಂ (ತುರಂಗ. ೬೬-೭). ಧಕ್ಕಳ : ೪. ಮೇಲಿನ 'ದಕ್ಕಳ' ಉಲ್ಲೇಖಕ್ಕೆ ಕೊಟ್ಟಿರುವ 'ತೊರರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ←ಮರಾ. ಧಕ್ಕಡ್, ಧಾಕಡ್ ]

ಧಕ್ಕಡತನ, ದಕ್ಕಡತನ (ನಾ). ೧. ಶೂರತನ; ಸಾಹಸವೃತ್ತಿ : ದಾನವರ ಧ[ಪಾಠಾಂ. ದ]ಕ್ಕಡತನವನದನೇನನೆಂಬೆನು ಜೀಯ (ಕುವ್ಯಾಅ. ೧೨-೨೧). ದಕ್ಕಡತನ: ೨. ದುಷ್ಟತನ; ಕೇಡಿಗತನ: ವಿವಿಧವನಪರಿಯಟಣದಾಯಾಸವನು ತತ್ಪರಿಸರದ ಕಂಟಕನಿವಹವನು ದಾನವರ ದಕ್ಕಡತನದ ದಟ್ಟಣೆಯ . . . ವಿವರಣವನಱುಹಿದನು (ಕುವ್ಯಾಅ. ೧೭-೫). [ ಧಕ್ಕಡ + – ತನ ]

ಧಕ್ಕಡಿ 'ಧಕ್ಕಡ' ನೋ.

ಧಕ್ಕಡಿಗ, ದಕ್ಕಡಿಗ (ನಾ). ೧. ದಿಟ್ಟ; ಬಲಶಾಲಿ; ಶೂರ. ೨. ದುಷ್ಟ ; ಕೆಡುಕ. 'ಧಕ್ಕಡಿಗತನ' ಪರಾ. ದಕ್ಕಡಿಗ : ೧. ಅವರು ಬಲುಂ ದಕ್ಕಡಿಗರೆಮಗೆ ಮಣಿಯರು (ಪ್ರಭುಪು. ೯-೨೪೬); ದಾಟಿಡುವ ದೆಖ್ಖಾಳದ ದಕ್ಕಡಿಗರಂ ತಱುಬಿ ನಿಂದಂ (ರಾಮಾಶ್ವ. ೧೪೩-೨೧). ೨. ತಾಯಿಗೆ ತಪ್ಪಿದ ದಕ್ಕಡಿಗನಿಗೆ ಆವಾಜ್ಞೆಯೆಂದು ನೀವೆಲ್ಲರು ಪೇಳಿ (ಸಾರಂಗ. ೨೦) ; ನಿನ್ನ ಮಾನವುಂ ಕೊಂಬ ದಕ್ಕಡಿಗರಾರು (ನವಮೋ. ೯-೩೮).

[ ಧಕ್ಕಡ + – ಇಗ ]

ಧಕ್ಕಡಿಗತನ (ನಾ). ದುಷ್ಟತನ ; ಕೆಡಂಕಂತನ : ಧನಗಿತ್ತಿಯಾ ಧಕ್ಕಡಿಗ[ಪಾಠಾಂ. ಯ]ತನವ ನೋಡುನೋಡನುಮಾನದನು ಲೇಸುಲೇಸೆಂದು ತಲೆದೂಗಿ ಕೌಟಿಲ್ಯವನು ಮಾಡಿ ಕಣ್ಗಟ್ಟುವಳು ಬಾಯ ಕಟ್ಟದಿರಳಂ (ಸಿಂಗಿರಾ. ೧೫-೧೧). [ ಧಕ್ಕಡಿಗ + – ತನ ]

ಧಕ್ಕಡೆ 'ಧಕ್ಕಡ' ನೋ.

ಧಕ್ಕಡೆಯ, ದಕ್ಕಡೆಯ (ನಾ). ಕಲಿ; ಶೂರ; ಸಮರ್ಥ; ದಿಟ್ಟ: ಅಭವಂಗೆ ಶಕ್ಯ ಮುನ್ನಲ್ಲಾನದೇಸರ ಧಕ್ಕಡೆಯ ನಾಚಿಸದಿರೀ ಕಡೆಗಿಕ್ಕು ಸಂಗರದಾನಿರೂಪಸ್ಥಿತಿಯ ವೀಳೆಯವ (ಅಂಬಿಕಾ. ೩೯-೭). ದಕ್ಕಡೆಯ : ಚಕ್ಕನೆ ನಿಜರಥವನಂತಲ್ಲಿಗೈದಿಸುತೆ ದಕ್ಕಡೆಯನಹ ವ್ಯಾಘ್ರಮುಖನಿಂಗಿಂತೆಂದನು (ಘೋರಾಸು. ೧೩). [ ಧಕ್ಕಡೆ (<ಧಕ್ಕಡ) + – ಅ₇ ]

ಧಕ್ಕಡೆಯತನ, ದಕ್ಕಡೆಯತನ (ನಾ). ೧. ಕಲಿತನ ; ಪರಾಕ್ರಮಂ ; ಶೌರ್ಯ ; ಸಾಮರ್ಥ್ಯ: ಮರ್ಕಟರ ದಳದುಳದ ದೂಱಿನ ಧ[ಪಾಠಾಂ. ದ]ಕ್ಕಡೆಯತನ ಬಿದ್ದುದೈ ಕರ್ಣಕ್ಕೆ ಕಮಲಪ್ರಿಯನ ಸುತ ಸಾವರ್ಣಿನಂದನೆಯ (ತೊರರಾ. ೪-೧೦-೧೭). ೨.=ಧಕ್ಕಡಿಗತನ : ನೈಋತಿ ಮಾತನಾಡದಿರು ತೆಗೆ ವಳಾವಳಿ ಬೇಡ ವರುಣ ಚಲಿಸದಿರು ಪವಮಾನ ಧನದೇಶ ಧಕ್ಕಡೆಯತನವು

ಸಲದು ಸಾರಿರಿ ದನುಜಸುರರು...ಎಂದು ಸಲೆ ವೇತ್ರಕರ್ ಬರಾ ಬರಿಗೆಯ್ಯೆ ತಿರ್ದರಾ ಭಾಳನೇತ್ರನ ಸಭೆಯೊಳು (ನಂದಿಮಾ. ೫-೩೮). **ದಕ್ಕಡೆಯತನ:** ೧. ಚಕ್ಕನೆ ಮೇಘನಾದಂ ಮುಳಿದು ಘರ್ಜಿಸುತೆ ಉಕ್ಕು ವಾತುರದಿಂದೆ ನಿಜವರೂಥವನುಳಿದು ದಕ್ಕಡೆಯತನದಿನಂಬರಕಡರ್ದು ಧನುವಿನಿಂ ಶರ ವರ್ಷಮಂ ಕರೆವುತೆ (ಘೋರಾಸು. ೨೭). [ ಧಕ್ಕಡೆಯ + – ತನ ]

**ಧಕ್ಕಲು** 'ದಕ್ಕಲು' ನೋ.

**ಧಕ್ಕಳ** 'ಧಕ್ಕಡ' ನೋ.

**ಧಕ್ಕಾ** 'ಧಕ್ಕೆ₃' ನೋ.

**ಧಕ್ಕಾಧಿಂಗಿ** (ನಾ). ತಾಳಮೇಳವಿಲ್ಲದ ಕುಣಿತವನ್ನು ಸೂಚಿಸುವ ಒಂದು ಅನುಕರಣ ಶಬ್ದ: ಕುಣೀಬ್ಯಾಡ, ಕುಣೀಬ್ಯಾಡಾ ಧಕ್ಕಾಧಿಂಗಿ, ನಿನಗೇನು ಗೊತ್ತ ತಂಗಿ (ದಾಸಹು. ೫೩).

**ಧಕ್ಕಾಮುಕ್ಕಿ, ಧಕ್ಕಾಮುಕ್ಕಿ, ಧಕ್ಕೆಮುಕ್ಕಿ, ಧಕ್ಕೆಮುಕ್ಕೆ** (ನಾ). ೧. ಗದ್ದಲ; ತಿಕ್ಕಾಟ; ನೂಕುನುಗ್ಗಲು; ಸಂಮರ್ದ: ಆ ರಸ್ತೆ ಒಮ್ಮೆಗೇ ಎರಡಡಿ ಅಗಲದ ಓಣಿಯಾಗಿ ಬಿಟ್ಟರೆ, ಹೋಗಿ ಬರುವವರಲ್ಲಿ ಧಕ್ಕಾಮುಕ್ಕಿಯಾಗುವುದಿಲ್ಲವೇ! (ಬಾಲಪ್ರ. III, ೧೩೦೪). ೨. ಗುದ್ದಾಟ; ಹೊಡೆದಾಟ; ಮಾರಾಮಾರಿ: "ಧಕ್ಕಾಮುಕ್ಕಿ–ತಕ್ಕೆಮುಕ್ಕಿ; ಬಡಿದಾಟ" (ಜಾನಕೋ. ೮); ಅದೇನು ಇಲ್ಲ. ಧಕ್ಕಾಮುಕ್ಕಿಯು ಹೊತ್ತಿನಲ್ಲಿ ಮಹಾದೇವ ತುಸು ಕಚ್ಚಿದ್ದ (ಕುರಿಹಿಂ. ೩೫). **ಧಕ್ಕಾಮುಕ್ಕಿ:** (೩). **ಧಕ್ಕೆಮುಕ್ಕಿ:** ೧. ದಯಮಾಡಿ ನನಗೆ ಧಕ್ಕೆಮುಕ್ಕಿ ಮಾಡಬೇಡಿರಿ. ದೂರಿಂದಲೇ ಮಾತಾಡಿರಿ (ಮೋಹಿನೀ. ೧೨೭). ೩. ಪೆಟ್ಟು; ಹೊಡೆತ; ಆಘಾತ: ಮುಂದೆ ಎಷ್ಟೋ ಧಕ್ಕೆಮುಕ್ಕಿಗಳನ್ನು ಹೊಂದಿ ಸ್ಪೇನಕ್ಕೆ ಮುಟ್ಟುವಷ್ಟರಲ್ಲಿ ಅರ್ಧ ಹಡಗಗಳು ಸಹ ಉಳಿದಿದ್ದಿಲ್ಲ (ಇಂಗ್ಲಇ. ೫೯). **ಧಕ್ಕೆಮುಕ್ಕೆ:** ೩. ಹಿಂದೂಧರ್ಮವು ಬಹುಕಾಲದಿಂದ ಪರಧರ್ಮದವರ ಧಕ್ಕೆಮುಕ್ಕೆಗಳ ಪರಂಪರೆಗಳಿಗೆ ತಲೆ ಕೊಟ್ಟು ನುಗ್ಗುನುರಿಯಾಗಿದ್ದರೂ . . . ಚಿರಸ್ಥಾಯಿ ಯಾಗಿರುವದು (ಹಿಂಮುಸ. ೨).

[ ←ಹಿಂ. ಧಕ್ಕಾಮುಕ್ಕೀ; ಮರಾ. ಧಕ್ಕಾಬುಕ್ಕೀ, ಧಕಾಬುಕಾ ಧಕಾಬುಕೀ, ಧಕೀಬುಕೀ, ]

**ಧಕ್ಕಿಮುಕ್ಕಿ** 'ಧಕ್ಕಾಮುಕ್ಕಿ' ನೋ.

**ಧಕ್ಕೆ₁** 'ಡಕ್ಕೆ' ನೋ.

**ಧಕ್ಕೆ₂, ದಕ್ಕೆ₂** (ನಾ). ೧. ಏಟು; ಪೆಟ್ಟು; ಹೊಡೆತ; ಆಘಾತ: ಲೇಡನ್‌ಜಾರದಲ್ಲಿ ವಿದ್ಯುತ್ತು ಬಹಳ ಸಂಚಿತವಾಗಿದ್ದರೆ, ಅದರ ಧಕ್ಕೆಯು ನಮಗೆ ತಡೆಯುವದಿಲ್ಲ (ಮುಂಬಯಿ. ೫-೨೦೯); ಕಲ್ಲು ಬೀಳುತ್ತಲೆ ಇದ್ದುವು. ಯಾರಿಗೂ ಧಕ್ಕೆಯಾಗಲಿಲ್ಲ (ಮೇದಿಮ. ೧೨೪). ೨. ವಿಪತ್ತು; ಆತಂಕ; ಹಾನಿ; ನಷ್ಟ: ಜ್ಞಾನಾಂಬೆಗೆ ನಡುಕವುಂಟಾಗಿ ಜ್ವರವೂ ಬಂದು ಗರ್ಭಕ್ಕೇ ಧಕ್ಕೆ ಬರುವಂತಾಗಿಬಿಟ್ಟಿತು (ಪ್ರತಾಪ. ೪೧); ಮನೆಯ ಮಾನಕ್ಕೆ ಧಕ್ಕೆ ತಗಲಿದಾಗ ಜೀವದ ಹಂಗುದೊರೆದು ಕಾದಿದ್ದ (ದಕ್ಷಿನ. ೧೧೧); ಕುಲದ ಕೀರ್ತಿಗೆ, ತನ್ನ ಪ್ರತಿಷ್ಠೆಗೆ ಧಕ್ಕೆ ಬರದಂತೆ ಭಯದಿಂದ ನಡೆದುಕೊಂಡು ಬಂದಿರುವನು (ವಾರಾಕ್ಕ. ೬೯); ನಿನ್ನ ನೌಕರಿಗೆ ಧಕ್ಕೆ ಬಂದೀತು (ನಾಪೋಲೀ. ೨೫೭). **ದಕ್ಕೆ₂: ೨.** ಅನ್ನ ತಿನ್ನದೇ ಸತ್ತರೂ ಅವರವರ ಧರ್ಮಕ್ಕೆ ದಕ್ಕೆಯಾಗಬಾರದು (ಕಾವೇರಿ. ೨೯).

**ಧಕ್ಕೆ ಹತ್ತು** = ತೊಂದರೆಯಾಗು: ನಿನ್ನಂಥ ಸಾವಿರಾರುಜನ ಸಾಹಸಿಗಳು . . . ಪ್ರಯತ್ನಿಸಿದರೂ ನನ್ನ ಒಂದು ಕೂದಲಿಗೆ ಕೂಡ ಧಕ್ಕೆ ಹತ್ತಲಾರದು (ಅಂಬಿಕೆ. ೧೫). [ ←ಹಿಂ. ಮರಾ. ಧಕ್ಕಾ ]

**ಧಕ್ಕೆ₃, ಧಕ್ಕಾ** (ನಾ). ಸಮುದ್ರದಲ್ಲಿ ಹಡಗುಗಳು ನಿಲ್ಲುವುದಕ್ಕಾಗಿ ಏರ್ಪಡಿಸಿದ ಸ್ಥಳ; ಹಡಗಂಕಟ್ಟೆ: ಧಕ್ಕೆಗಳೆಂಬುವು ಸಮುದ್ರದಿಂದ, ಶಾಂತವಾದ ಸ್ಥಳಕ್ಕೆ ಬಂದು, ದಡಕ್ಕೆ ತಾಗಿ ಹಡಗುಗಳು ನಿಲ್ಲುವ ಸ್ಥಳಗಳು (ಬಾಲಪ್ರ. II, ೮೧೭): ಬಂದರದ ಧಕ್ಕೆಗೆ ದೇಶ ಬಿಟ್ಟು ಇಷ್ಟು ದೂರ ಬಂದು, ಸ್ವಾಗತಿಸಿ ಇಲ್ಲಿಂದ ಕರೆದುಕೊಂಡು ಹೋಗಬೇಕಾಗಿದೆ ಒಬ್ಬ ಮಹಾಪುರುಷನನ್ನು (ಭಾರತಿ. ೨೫); ಆ ಸಂತೆಯ ಬಯಲನ್ನು ಕೊರೆದು ತೆಗೆದಂತೆ ಹಳ್ಳಕ್ಕೆ ಹೊಂದಿ ಗಚ್ಚಿನ ಧಕ್ಕೆ! (ಜಿಟ್ಟಹೂ. ೨). **ಧಕ್ಕಾ:** ಜಲಮಾರ್ಗದಿಂದ ಕಳುಹಿಸುವುದಕ್ಕೆ ಧಕ್ಕಾ ಫಿ ಹೋಡಿ ಬಾಡಿಗೆಯು ಖರ್ಚು ತಕ್ಕೊಳ್ಳುವ ದರಗಳು (ಮುಂಬವ್ಯಾ. ೪೦ ಪ್ರಸ್ತಾವನೆ).

[ ←ಮರಾ. ಧಕ್ಕಾ./ಇಂ. Dock ]

**ಧಕ್ಕೆ₄** (ನಾ). ಹಡಗಿನ ಅಟ್ಟ, –ಮೇಲುಭಾಗ: ನನ್ನ ಸೋದರನೊಡನೆಯೂ ಸ್ನೇಹಿತರೊಡನೆಯೂ ಹಡಗಿನ ಧಕ್ಕೆಗೆ ಬಂದುದಾಯಿತು (ಅಪೂಪ. ೪); ಪ್ರತಿನಿಧಿಯು ಹಡಗಿನ ಧಕ್ಕೆಗೆ ಬಂದು ಕಣ್ಣರಳಿಸಿ ನೋಡಿದನು (ಕಪಪು. ೬-೫೭). [ ←ಇಂ. Deck ]

**ಧಕ್ಕೆಬಲಿ** 'ಡಕ್ಕೆಬಲಿ' ನೋ.

**ಧಕ್ಕೆಮುಕ್ಕೆ** 'ಧಕ್ಕಾಮುಕ್ಕಿ' ನೋ.

**ಧಗ** (ನಾ). ಒಂದು ಅನುಕರಣ ಶಬ್ದ: ನಿಶಾಟರನುಂಡನಗ್ನಿ ಭುಮ್ಮೆಂಬ ಭಟಚ್ಚಟೆಂಬ ಧಗಯೆಂಬ ಧಗದ್ಧಗಯೆಂಬ [ಪಾಠಾಂ. ಧಗಲ್ಧಗಲೆಂಬ] ಥಟ್ಟುಪೊಟ್ಟೆಂಬ ರವಂ ಕಡುತ್ತಡಸಿ ಮೆಲ್ಲ ಸರಕ್ಕನುಸಾರಿಯಪ್ಪಿನಂ (ಕಾವ್ಯಾವ. ೨೮).

**ಧಗಧಗ, ಧಗದ್ಧಗ** (ದ್ವಿರುಕ್ತಿ): ಪಶ್ಚಿಮಾಶಾನಿಳಪಾತೋಜ್ಜೃಂಭಿತಂ ಬಂದುದು ವಿರಹಿತರುಪ್ರಾತಮಂ ಪರ್ವುವುಗ್ರಾನಳನೆಂಬಂತಬ್ದಕಾಲಂ ಸ್ತನಿತಧಗಧಗಧ್ವಾನರೌದ್ರಾಯಮಾಣಂ (ಚಂದ್ರಪು. ೪-೨೯); ಧಗಧಗಂ ಧಗಧಗಂ ಧಗಧಗಿಲ್ ಛಿಮಿಛಿಮಿಲ್ ಛುರಿಛುರಿಲ್ ಛಟಛಟೆಂದು . . . ಕೆಂಗಿಡಿಗೆದಱಿ ದಾವಾಗ್ನಿ ಮುತ್ತಿತ್ತು ನಾಲ್ದೆಸೆಯನು (ಹಡಕಾ. ೧೦-೬); ಧಗಧಗ ಎಂಬುದುಂ ಧಗಧಗಂ ಎನಲಾಗದು (ಶಮದ. ೬೧ ಪ್ರಯೋ); ಉರಿಯೊಳಾಜ್ಯಮನೆಱೆದೊಡಂತುಬ್ಬರಿಸಿ ಧಗಧಗ ಎನುತ ಶಕೆಯಾವರಿಸಿದ ವೊಲು (ಬಸಪು. ೪೪-೨); ಧಗಧಗ ನಿಸ್ವನಂ ನಿಮಿರೆ ಕೆಂಗಿಡಿ ಸೂಸೆ (ವೃಷವಿ. ೨೯-೧೪೧); ಧಗಧಗಾ ಉರಿಯುತಿದೆ ಹೇಗೊ ಹತ್ತಿದ ಬೆಂಕಿ (ಅರಣೋ. ೨೭); ಧಗದ್ಧಗೆಂದುರಿವ ದಳ್ಳುರಿಯೊಳ್ ಪಿಡಿದೊತ್ತಿ (ಧರ್ಮಾಮೃ. ೧೨-೨೩೮).

**ಧಗಧಗಧಗಿಸು** = ಅಧಿಕವಾಗಿ ಪ್ರಜ್ವಲಿಸು: ಉರಿಯ ತೆಕ್ಕೆಯುಲಿ ಧಗಧಗಧಗಿಸಿ ಥಾಳಿಟ್ಟುದು ಮಹಾಶರಮಹಿತಮೋಹರಕೆ (ಕುಮಾರದ್ರೋ. ೧೯-೩೩).

**ಧಗಡ₁** (ನಾ). ಜಾರ; ವಿಟ: ಎಲ್ಲಿಗೈದಿದನೊ ಧಗಡ ತೋರು ಬೇಗದಿ ನಿನ್ನ ಚಲ್ವಿಕೆಯು ಘನವಾಯ್ತೆಯೆನುತ ಕೊಲ್ಲುತಿರೆ (ಚಂದ್ರಾವ. ೪೫).

[ ←ಹಿಂ. ಧಗಡಾ; ಮರಾ. ಧಗಡ ]

**ಧಗಡ₂** (ನಾ). ದಾಂಡಿಗ; ದಡಿಯ; "ಹುಂಬ" (ಜಾನಕೋ. ೮).

P ಸಂಸ್ಕೃತ ಜೈನಗ್ರಂಥಗಳಲ್ಲಿ 'ಮಹಮ್ಮದೀಯ ಸೈನಿಕ, –ಭಟ' ಎಂಬ ಅರ್ಥದಲ್ಲಿ ಇದು ಬಳಕೆಯಲ್ಲಿದೆ.

[ ←ಮರಾ. ಧಾಂಗಡ್; ಗುಜ. ದಗಪ, ಧಗಡೋ ]

**ಧಗಡಿ₁, ದಗಡಿ** (ನಾ). ಉದ್ಧಟ ವ್ಯಕ್ತಿ; ಧೂರ್ತವ್ಯಕ್ತಿ; ಜಗಳಗಂಟಿ: ಬುಗುಡೀಯ ಕೊಟ್ಟೇನೆಂದು ಬೆಡಗಿನಿಂದ ಎನ್ನ ತಂದ ಬುಗ್ಗಿ ಕೇಳಿದರಲ್ಲಿ ಬುಗ್ಗಿ ಪಾಂಡವರಾಪ್ಪ ಪಗ್ಗಿ ... ಛೀ ಅತ್ತ ಹೋಗು ಧಗಡಿ ಪೋಗೆನುತಾನೆ (ಕನಶ. ೪೮-೬); ಬುಗುಡಿ ಅದರೆ ಧಗಡೀ ಮಗಳಿಗೆ ಆಗದೆ? (ಗಾದೆ). **ದಗಡಿ:** ಛೀ ದಗಡಿ ಜಾಯೆಂದು ನಿಜಕರದೊಳಿಹ ಕಲ್ಲ ಬೈದು ಕೊಡೆ (ಪ್ರಾಥರಾ. ೬-೪೭); "ವಾಗ್ದೇವಿ ಬಂದಳು ದಗಡಿ" ಎಂದು ಘಟ್ಟಿಯಾಗಿ ಉಚ್ಚರಿಸುತ್ತ . . . ನೆಲದ ಮೇಲೆ ಬಿದ್ದು ಹೊರಳಿದರು (ವಾಗ್ದೇವಿ. ೪೦).

[ ←ಮರಾ. ಧಗಡೀ, ಧಾಂಗಡೀ./ತೆಲು. ಧಗಿಡಿ, ಧಗಿಡೀ ]

**ಧಗಡಿ₂** 'ದಾಗುಡಿ' ನೋ.

**ಧಗದ್ಧಗಿತ** (ಗು). ಧಗಧಗ ಎಂದಂ ಸದ್ದುಮಾಡುವ ; ಧಗಧಗಿಸುವ : ಧೃತ ಧಗದ್ಧಗಿತರವ ನಿರ್ಮಳಶಿಖಾಳಿಯುಂ ಸತತಗತಿಪಥಮನಡರ್ವುಜ್ಜ್ವಳ ಜ್ವಾಲೆಯುಂ . . . ನೋಡಿ ಗಜಗಮನೆ ಕನಸೆಂದು ಬಗೆವನ್ನೆಗಂ (ಆದಿಪು. ೭-೨೭ ರಗಳೆ). [ ಸಂ. ]

**ಧಗದ್ಧಗಿಸು** 'ಧಗಧಗಿಸು' ನೋ.

**ಧಗಧಗನೆ** (ಅ). ಧಗಧಗ ಎಂದು; ತೀಕ್ಷ್ಣವಾದ ಜ್ವಾಲೆಯನ್ನು ಚಿಮ್ಮಿ; ಪ್ರಜ್ವಲಿಸಿ: ಸಿಡಿಲು ತಗಲಿದ ಮರ ಧಗಧಗನೆ ಉರಿದು ಹೋಯಿತು (ರೂಢಿ).

**ಧಗಧಗಧಗನೆ** (ದ್ವಿರುಕ್ತಿ) : ಧಗಧಗಧಗನೆ ಪೊತ್ತುವ ಜ್ವಾಲೆಗಳ ಮಾಲೆ ಭುಗುಭುಗುಭ ಗಿಲ್ಬುಗಿಲ್ಬುಗಿಲೆಂದು ಡಾವರಿಸೆ (ಜೈಮಿಭಾ. ೮-೪೯).

[ <ಧಗ + – ಅನೆ$_1$ ]

**ಧಗಧಗಿಲ್** (ನಾ). ತೀಕ್ಷ್ಣವಾಗಿ ಉರಿಯುಂವುದನ್ನು ಅನುಕರಿಸುವ ಶಬ್ದ : ಧಗಧಗಿಲ್ ಧಗಧಗಿಲ್ ಘರಿಘರಿಲ್ ಘರಿಘರಿಲ್ . . . ಧಗಧಗಿಲ್ ಛಿಮಿಛಿಮಿಲ್ ಛುರಿಛುರಿಲ್ ಛಟಛಟೆಂದು . . . ಕೆಂಗಿಡಿಗೆದಱಿ ದಾವಾಗ್ನಿ ಮುತ್ತಿತ್ತು ನಾಲ್ದೆಸೆಯನು (ಹದಶಾ. ೧೦-೬).

**ಧಗಧಗಿಸು,** ಧಗದ್ಧಗಿಸು (ಕ್ರಿ). ೧. (ಬೆಂಕಿ) ಧಗಧಗವೆಂದು ಉರಿ ; ಪ್ರದೀಪ್ತವಾಗು ; ಪ್ರಜ್ವಲಿಸು : ದೆಸೆಗಳಂ ದಹಿಸುತ್ತೆ ರಸೆಯನಲ್ಲಾಡಿಸುತೆ . . . ಒಗೆದುದು ಮಹಾವಿಷಂ ಧಗಧಗಿ[ಪಾಠಾಂ. ಛಳಛಳಿ, ದಳದುಳಿ]ಸಿ ಮುಳಿದು ಬೆಂಬತ್ತಿತು ಮಹಾವಿಷಂ (ನಂಬಿರ. ೧-೧೪) ; ಧಗಧಗಿಸಿ ಮಸಗಿ ದಳ್ಳುರಿ ನೆಗೆತರೆ (ಬಂಹರಿ. ೮-೩೦) ; ಉಬ್ಬುತುಂಪರಿಗೆ ಧಗ ಧಗಿಸುತಡುಗಬ್ಬುಗಳನಾಹುತಿಗೊಳುತ್ತಂ . . . ಭಾಳನೇತ್ರನ ನಿಬ್ಬರದ ಭಾಳಾಂಬಕಾಗ್ನಿಗೆ ಸಮವೆನಿಸುತಿರಲು (ಬಸಪು. ೪೪-೩೦) ; ವಿಕಟ ವಿಕ್ರಮ ವಿಸ್ಫುಲಿಂಗಪ್ರಕರದಲಿ ಧಗಧಗಿಸುತಿದೆ ಸಾಯಕವ ನಿಲಿಸಾ ನೀನೆನುತ ಭಂಗಿಸಿತು ಪರಿವಾರ (ಕುವ್ಯಾದ್ರೋ. ೧೯-೨೨); ಗಗನದಲಿ ಬಳಿಕಸುರಪತಿ ಧಗಧಗಿಪ ಕಿಚ್ಚನು ಕಂಡು ಬೆಚ್ಚಿದು ಬೆಗಡಿನಲಿ ಬೆಸಸಿದನು (ತೊರರಾ. ೫-೮-೩೯);ಬಿದಿರುಮೆಳೆ ಧಗಧಗಿಸೆ ಘನ ಹೆಬ್ಬಿದಿರು ಛಟಛಟರೆನಲುವುರಿಯೊಳು ಕದಳಿಗಳು ಸಿಮಿಸಿಮಿಸೆ (ನಳಚ. ೬-೭) ; ಹಗಲೆಲ್ಲ ಧಗಧಗಿಸಿ, ಇರುಳು ಮುಗಮುಗಿಸಿ ಬೆಳಗು ಬಂದಿತು ದುಃಖದುಮ್ಮಾನಗಳ ಕುಡಿದು ಸುಖದ ಸುಮ್ಮಾನಗಳ ಹೆಚ್ಚಿಯಿರಿಸಿ (ನಲಮು. ೪೩-೧೩). ೨. ಸುಟ್ಟುಹೋಗು ; ಉರಿದುಹೋಗು ; ದಹಿಸಿಹೋಗು : ಧಗಧಗಿಸಿದಱುವತ್ತುಸಾವಿರ ಸಗರರನು ಸಂಸ್ಕಾರಮುಖದಲಿ ತೆಗೆಯಲೋಸುಗ ತಪದಲಿದ್ದನು ಕಮಲ ಗರ್ಭಂಗೆ (ತೊರರಾ. ೦-೦೨-೦೩). ೩. ಥಳಥಳಿಸಂ ; ಮಿರುಗು : ಅಗಣಿತ ಕಲಶಗಳಿಂದ ಸೌಧದ ಸಾಲು ಧಗಧಗಿಸಲು ಕಂಡರವರು (ಅಂಜಚ. ೭-೨೦೬) : ಕಣ್ಗೆ ತೋಱಿದನಿಂದ್ರಚಾಪದೊಳು ಮೂಡಿದ ನೃಪನಂತೆ ಮಿಗೆ ತೋರಮುತ್ತಿನ ತೊಡಿಗೆಯೊಡನೆ ಧಗಧಗಿಸುವ ಲಾವಣ್ಯದಿಂದ (ಭರಚ. ೧-೪೪). **ಧಗದ್ಧಗಿಸು : ೪.** (ರಭುಳ) ಹೆಚ್ಚಾಗು ; ಪ್ರಖರವಾಗು : ಮಂದರಮಹೀಧರಪ್ರಮಾಣದಾಲಿಗೋಡುವ ಲೋಹಪಿಂಡಮಂ . . . ಕರಗಿಸಲಾರ್ಪ ಘರ್ಮಮೊರ್ಮೆ ಮಾಣದೆ ಧ[ಪಾಠಾಂ. ದ]ಗದ್ಧಗಿಸುತ್ತು ಮಿರ್ಪುದು (ವರ್ಧಪು. ೧೧-೩ ವ) ; ಒಗೆವ ದಿನೇಶನಂ ಹರಿವ ಸಿಂಧುವ ನೂದುವ ಗಾಳಿಯುಂ ಧಗದ್ಧಗಿಸುವ ಕಿಚ್ಚುಂ . . . ದೈವಮೆಂದೆಱಗುವಾತನೆ ದೇವವಿಮೂಢನಾಗನೆ (ಪಸಾರ. ೪೬೩). 'ದಹಿಸು' ಪರಾ.

[ <ಧಗ + – ಇಸು$_3$ ]

**ಧಗಮು** 'ದಗವಂ' ನೋ.

**ಧಗಮೆನ್** (ಕ್ರಿ). ಧಗ್ಗನೆ ಉರಿ : ಮಗನೆ ಪದಿನಾಲ್ಕು ವರುಷದ ಮಗನ್ನೆ ನಿನ್ನನ್ನನೊರ್ವನಂ ಪಗೆವಡೆಯೆಡ್ದು ಗೆಲೆನೆಂಬುದು ಕೈವೇಟಲ್ಲಿರ್ದ ಧಗಮೆನೆ ಸೈರಿಸುವುಪಾಯಮಾವುದು ಕಱುವೇ (ಪಂಪಭಾ. ೧೧-೯೧). [ಧಗ+ಎನ್$_1$]

**ಧಗಲ್** (ನಾ). ಒಂದಂ ಅನುಕರಣ ಶಬ್ದ. 'ಧಗಲಿಡು' ಪರಾ.

**ಧಗಲಿಡು** (ಕ್ರಿ). ತೀಕ್ಷ್ಣವಾಗಿ ಉರಿ; ಭುಗಿಲಿಡು : ಪುಟನೆಗೆವ ಕಿಡಿಗಳ ತೇಜಿಗಳ ಭುಗಿಭುಗಿಪ ಕೆಮ್ಮುರಿ ರಥದ ಸಾಲ್ಗಳೊಳೊಗುವ ಕೆಂಡಗಳ ಧಗಲಿಡುವ ಕಾಲಾಳ ಕಡುಹಿನ ಹೊಗರಿನಲಿ ಹೊದರೆದ್ದು ದೈತ್ಯನ ವಿಗಡದಳವನು ಮುಸುಕಿದನು (ಅಂಬಿಕಾ. ೧೬-೩೭). [ ಧಗಲ್ + ಇಡು$_1$ ]

**ಧಗಿಲ್,** ಧಗಿಲು (ನಾ). ಒಂದು ಅನುಕರಣ ಶಬ್ದ: ಧಂ ಧಗಿಲ್ ಧಗಿಲ್ ಧಗಿಲೆನುತಟ್ಟ ತಟ್ಟದುದು ಮುಟ್ಟಿತು ಸುಟ್ಟಿತು ತಿಂದು ತೇಗಿದತ್ತಗಿಯದೆ ನಿಂದ ಪೂಗಣೆಯುನಂ ಪಣೆಗಣ್ಣುರಿ ಹಂಪೆಯಾಳ್ದನಾ (ಗಿರಿಕ. ೮-೪೭). **ಧಗಿಲು :** ಯುಗಜುಗ ಪ್ರಳಯವಹಂದೂ ಕಾಣೆನಿಂದೂ ಕಾಣೆ ಧಗಿಲು ಭುಗಿಲೆಂದುರಿವಂದೂ ಕಾಣೆನಿಂದೂ ಕಾಣೆ (ಬಸವ. ೫೪೨) ; ಧಗಿಲು ಭುಗಿಲೆಂದು ಮುಸುಕಿದ ಮಹಾಜ್ವಾಲೆ ಇದೇನೊ (ಸಿದ್ಧವ. ಕ. ೧೯-೫೪) ; ಧಗಿಲು ಭುಗಿಲೆನುತೆ ಮಾಮುಸಕದಿ ಮಸಗಿ ತೊನೆದು ಬಸುಱಂ ಹೊಸೆದು (ತಿರುರ. ದೇ. ೧೮-೩).

**ಧಗಿಲು** 'ಧಗಿಲ್' ನೋ.

**ಧಗೆ** 'ದಗೆ$_1$' ನೋ.

**ಧಗ್ಗನೆ** (ಅ). ಬೇಗನೆ; ಒಮ್ಮಿಂದೊಮ್ಮೆ : ಇದು ಧಗ್ಗನೆ ಉರಿಯುತ್ತದೆ. ಉರಿಯುವಾಗ ಸುಟ್ಟ ಕಾಗದದ ವಾಸನೆ ಬರುತ್ತದೆ (ಗೃಹವಿ. ೬೨).

[ ಧಗ್$_0$ + – ಅನೆ$_1$ ]

**ಧಟ** (ನಾ). ೧. ತಕ್ಕಡಿ; ತ್ರಾಸು : "ಧಟ–ದಿಬ್ಬದ ತೂಲೆ" (ನಾಚಿರಾ. ೬); "ಧಟಃ–ತಕ್ಕಡಿ" (ಸಿದ್ಧಾಂತಿ. ೩೯೦). ೨. ದಿವ್ಯಗಳಲ್ಲಿ ಒಂದು ; ತಕ್ಕಡಿ ಯಿಂದ ಪರೀಕ್ಷಿಸುವ ದಿವ್ಯ : 'ದಿವ್ಯ' ಪರಾ. ೩. [ಜ್ಯೋತಿ] ತುಲಾ ರಾಶಿ : "ಧಟ = ತುಲಾರಾಶಿ" (ಜಾತತಿ. ಪರಿ. ೩೭೭). [ ಸಂ. ]

**ಧಟಧಟ** (ನಾ). ಒಂದಂ ಅನುಕರಣ ಶಬ್ದ : ಸೆಳೆವುತೆ ಹಿಮ್ಮೆಟ್ಟುತೆ ನಿಂದಿರುತಂ ಪದತಳದಿಂ ಧಟಧಟ ಕೆಟ್ಟಿನುತಂ [ಪಾಠಾಂ. ಪದತಳದೊಳೆ ತಟಗಿರ್ರಂದೆನುತಂ] ಮೃದುಗತಿಯೊಳ್ ಘಲಘಲಕೆಂದೆನುತಂ (ಭೃಂಗೀರ.ಹ. ೪೭೦-೧೧).

**ಧಟಿ$_1$** (ನಾ). ೧. ಹರಕುಬಟ್ಟೆ; ಚಿಂದಿಬಟ್ಟೆ. ೨. ಲಂಗೋಟಿ; ಕೌಪೀನ.

[ ಸಂ. ಧಟೀ ]

**ಧಟಿ$_2$** (ನಾ). ಶಿವ. [ ಸಂ. ಧಟಿನ್ ]

**ಧಟಿನಿ** (ನಾ). ಉಡಿದಾರ; ಕಟಿಸೂತ್ರ. [ ಸಂ. ಧಟಿನೀ ]

**ಧಟ್ಟಣೆ** (ನಾ). ೧. ಅಬ್ಬರ; ಆಟೋಪ; ಉರವಣೆ : ಉರುಪರಾಕ್ರಮ ತೇಜ ಪಡುವಣ ತರಣಿಯಾದುದು ಧಟ್ಟಣೆಯ ಧರಧುರಕೆ ನಿರ್ದ್ರವಜಿಹ್ವೆ ಯಾದುದು ನಿಮಿಷನಿಮಿಷದಲಿ (ಕುವ್ಯಾಸ. ೨-೧೦೩) : ವಾದ್ಯಧ್ವನಿಯ ಧಟ್ಟಣೆ ಧಾತುಗೆಡಿಸಿತು ಜಗದ ಜೋಡಿಗಳ (ಕುವ್ಯಾಅ. ೧೯-೧೫) ; ಅರಸ ಕೇಳವರಬ್ಬರುಬ್ಬಿನ ಧುರದಧ [ಪಾಠಾಂ. ಥ]ಟ್ಟಣೆ ಪಸರಿಸಿತು ಸುರನರರನಾ ಸಮಯದಲಿ (ಕುವ್ಯಾಗ. ೫-೫೬) ; ನಿನ್ನವನೆನಿಸುವಂತಕನಾಜಿ ಭಜಿಸುತ್ತಿಹೆನು ನಿಮ್ಮಡಿಯ ದಿನದ ಭೋಗವದಾ ಚತುರ್ದಶಮನುಗಳಿರವಾತಂಗೆ ಮಿಗಿಲೇ ಮನುಜರಿನ್ನೆಂತಂಜದಿಹರಂತಕನ ಧಟ್ಟಣೆಗೆ (ನಿಭಾಗ. ೪-೦೬-೨೭) : ಕುಶಿಕಸುತ ತತ್ಪುತ್ರರೆಡೆಗೈದಿ ಬಿನ್ನವಿಸೆ ವಿಸದ ನುಡಿಗಳ ಕೇಳುತವರು ಫಲವಿಸಾಯುದಿರೆ ರಸೆಯೊಳತಿದುರ್ಘಟದೊಳೇ ಪರಿಯ ಧಟ್ಟಣೆಯ ವ[ಪಾಠಾಂ.ರ] ಚನದಿಂ ಗೈದರ್ಶಿಸೆ (ವಂಕಾರಾ.೧-೧೮-೧೨):ಭೀಮನ ಧಟ್ಟಣೆಯ ದೆಸೆಯಿಂದ ಜರಾಸಂಧನ ನಾಲಗೆಯು ನಿರ್ದ್ರವವಾಯಿತು (ರಾಜಸೂ. ೨೪). ೨. ಘಟ್ಟಣೆ ; ಏಟು ; ಹೊಡೆತ : ಏಳುದಿನ ಪರಿಯಂತ ಧರಣೀ ಪಾಲಕುಲಕೌಸ್ತುಭನು . . . ಅಮರಾದ್ರಿಯನು ಬಲಗೊಂಡು ಕಾಲನನು ಜವಗೆಡಿಸಿ ತಿರುಗಿದಡೇಳುಸಾವಿರ ಕಲ್ಪನೆಗಳಾ ಘಾಲಿಗಳ ಧಟ್ಟಣೆಯಲಾದವು (ನಿಭಾಗ. ೫-೧ ೨೯). [ಧಟ್ಟಿಸು+–ಅಣೆ$_4$./ಮರಾ. ದಟಾವಣೇ, ದಟಣೇ]

**ಧಟ್ಟಿ** 'ದಟ್ಟಿ$_1$' ನೋ.

**ಧಟ್ಟಿಸು** 'ದಟ್ಟಿಸು$_2$' ನೋ.

**ಧಟ್ಟುಟಿ** (ನಾ). (?) : ತೊಳ್ಪುಟಿ, ಧಟ್ಟುಟಿ, ಮುಮ್ಮುಟಿ, ಮಣ್ಮುಟಿ, ಚಪ್ಪುಟಿ (ಶಬ್ದಾನು. ೧೪೦ ವ್ಯಾಖ್ಯಾ). "ತೆಂಗಿದಾಟ ; ಹಾವಳಿ" (ಪ್ರಭಣ್ಣ). [ ? ]

**ಧಟ್ಟೈಸು** 'ದಟ್ಟಿಸು$_2$' ನೋ.

**ಧಡ$_1$** 'ತಡ$_2$' ನೋ.

**ಧಡ$_2$** (ನಾ). ಮುಂಡ; ಅಟ್ಟೆ: "ಅಟ್ಟೆ, ದಿಂಡು, ಧಡ" (ಕಂಸುಹು. ೭೮) ; ಧಡವು ನಿಡಿದಾಗಿ ಪುಚ್ಛದ ಕಡೆಗೆ ಸಣ್ಣಾಗುತ್ತ ಹೋಗಿರುತ್ತದೆ (ಮುಂಬಯಿ. ೫-೫೫) ; ಶಿವಪ್ಪನ ಧಡ ಒಂದೆಡೆ ಹಾಗು ರುಂಡವೊಂದೆಡೆ ಬಿದ್ದಿತ್ತು (ಶಿಲಾಮು .೨೦) ; ನೀನು ಆಕೆಯನ್ನು ಹುಡುಕಿ ತರದಿದ್ದರೆ ನಿನ್ನ ಸಿರವು ಧಡದ ಮೇಲೆ ಉಳಿಯಲಾರದೆಂಬುದನ್ನು ಲಕ್ಷ್ಯದಲ್ಲಿಟ್ಟುಕೋ (ಅಂಬಿಕೆ. ೩೯). [ <ಪ್ರಾ. ಧಡ ]

**ಧಡ$_3$** 'ದಿಡ' ನೋ.

**ಧಡಂ** (ನಾ). ಒಂದು ಅನುಕರಣ ಶಬ್ದ : ನಿಸ್ಸಾಣಧ್ವನಿ ತಂಬಟಸ್ಫುಟ ಧಡಂ ಧಂ ನಾದ (ಎಕ. VIII, ಸಾಗರ. ೧೫-೨೭; 1218).

**ಧಡಂಧುಡುಕಿ** = ಒಂದು ಬಗೆಯ ಆಟ; ಪ ಮಧ್ಯ ಒಂದು ಕಂಭಕ್ಕೆ ಜೋಡಿಸಿರುವ ಉದ್ದವಾದ ಮರದ ತುಂಡಿನ ಎರಡೂ ಕಡೆಗಳಲ್ಲಿ ಒಬ್ಬೊಬ್ಬರಾಗಲೀ ಅನೇಕರಾಗಲೀ ಕುಳಿತು ಕೆಳಕ್ಕೂ ಮೇಲಕ್ಕೂ ಚಲಿಸಿ ಆಡುವ ಆಟ. ಇಂಗ್ಲೀಷಿನ see-saw ಎಂಬ ಆಟಕ್ಕೆ ಸಮಾನವಾದುದು. ಸಂಸ್ಕೃತದಲ್ಲಿ ಇದನ್ನು 'ಉಚ್ಚಾವಚಕ್ರೀಡೆ' ಎಂದು ಕರೆದಿದ್ದಾರೆ.

**ಧಡಕ್**, ಧಡಕು (ನಾ). ೧. ಒಂದು ಅನುಕರಣ ಶಬ್ದ : ಧಡಕ್, ಧಡಕ್ ಎಂದು ಸದ್ದು ಮಾಡುತ್ತಾ ರೈಲು ಹೊರಟಿತು (ರೂಢಿ). **ಧಡಕು :** ೨. ಕುಲುಕಾಟ : ವಿದ್ಯಾರ್ಥಿಗಳು ಬಾಗಿಲಿಗೆ ಹಾಯ್ದರು. ಆದರೆ ಪ್ರತಿ ಧಡಕಿಗೆ ಅದು ಕಿರ್ರೆಂದು ಒದರಿ ಇದ್ದಕ್ಕಿದ್ದಂತೆ ಇರುತ್ತಿತ್ತು (ರಕ್ತಧ. ೧೫೮) ; ಬಂಡಿ ಉಯ್ಯಾಲೆಯಂತೆ ತೂಗಾಡುತ್ತಿತ್ತು. ರಸ್ತೆಯಲ್ಲಿ ಕಲ್ಲು ಗಳೇನೂ ಇರದಿದ್ದುದರಿಂದ ಧಡಕಿರಲಿಲ್ಲ (ಬೆಂದಜೀ. ೫).

**ಧಡಕಸ** (ನಾ). ರಭಸ ; ವೇಗ : ಧಡಕಸದಿಂದ ತಾ ಖಡ್ಗವ ಸೆಳೆದಾನು ಬಿಡದೆ ಕಡಿವೆನೆನುತಾಲಿವರನ್ನು (ಸಾನಂಗ. ೦೯). [ ? ]

**ಧಡಕು** 'ಧಡಕ್' ನೋ.

**ಧಡಕ್ಕನೆ** (ಅ). ಒಮ್ಮೆಲೆ ; ತಕ್ಷಣ ; ಕೂಡಲೆ : ನೀನು ಬರುವುದೊಂದೇ ತಡ, ಧಡಕ್ಕನೇ ಆರಾಮುಕುರ್ಚಿಯ ಮೇಲೆ ಬಹಳ ದಣಿದವನಂತೆ ಬಿದ್ದು ತೇಕುತ್ತ ಉಶ್, ಉಶ್, ಎನ್ನುವಿ (ಬ್ರಹ್ಮಜೀ. ೦೯೪). [ ಧಡಕ್ + –ಅನೆ$_1$]

**ಧಡಗ** (ನಾ). (?) : ಕಡಗವ ಕೊಟ್ಟೇನೆಂದು ಸಡಗರದೆನ್ನ ತಂದ ಕಡಗ ಕೇಳಿದರಲ್ಲಿ ಕಡಗ ಅಂಬರದಲ್ಲಿ ಗುಡುಗ ಮುಂಗೈ ಮೇಲಿನ ಗಿಡುಗ ಎತ್ತಿನ ಮ್ಯಾಲಿನ ಧಡಗ ಹೋಗೆನುತಾನೆ (ಕನಕ. ೮೮-೫). [ ? ]

**ಧಡಧಡ** (ನಾ). ಒಂದು ಅನುಕರಣ ಶಬ್ದ. 'ಧಡಧಡನೆ' ಪರಾ.

**ಧಡಧಡನೆ** (ಅ). ಬೇಗಬೇಗನೆ : ಧಡಧಡನೆ ಅಂಬುಧಿಯಾ ದಾಟಿ ಸೀತೆಗೆ ಗುರುತಾ ಕೊಡಕೊಡುತ್ತ ಕುಸ್ತುರಿಸಿದಂತ ಹನುಮಂತಾ (ವಾದಿಕೀ. ೨೮-೧). [ ಧಡಧಡ + –ಅನೆ$_1$ ]

**ಧಡಧಡಿ** 'ಧಡಧಡೀತ' ನೋ.

**ಧಡಧಡಿಸು$_1$** 'ದಡದಡಿಸು' ನೋ.

**ಧಡಧಡಿಸು$_2$** (ಕ್ರಿ). ಧಡಧಡನೆ ಹರಿ ; ರಭಸದಿಂದ ಪ್ರವಹಿಸು : ರಕ್ತಬೀಜಂಗೇರು ಕಾಣಿಸಲೊಡನೆ ಭುಗುಳಿಸಿ ಮೇರೆಯಿಲ್ಲದ ರಕುತ ಧಡಧಡಿಸಿತ್ತು ಕುಂಭಿನಿಗೆ (ಅಂಬಿಕಾ. ೪೧-೨೭). [ ಧಡಧಡ + –ಇಸು$_3$ ]

**ಧಡಧಡೀತ**, ಧಡಧಡಿ (ಅ). ಮುಂಚುಮರೆಯಿಲ್ಲದೆ; ಬಹಿರಂಗವಾಗಿ; ನಿಸ್ಸಂಕೋಚವಾಗಿ: ಧಡಧಡೀತ ಮನ್ಯಾಗ ಸೊಸೀ ಇದಾಳ, ಮತ್ತೊಂದ ಮದವೀ ಮಾಡತ್ಯಾನಂದರ ಯಾರರ ಹೆಣ್ಣ ಕೊಟ್ಟಾರು? (ನಿಸರ್ಗ. ೨೦೦). **ಧಡಧಡಿ :** ಹಗಲೀಗೇ ಸರಸವಾಡ್ತೀಯೇನೆ ಬಂದವನ ಜತೆಗೆ ಧಡಧಡೀ ಜಗಲಿಯ ಮೇಲೆ ? (ಮೂರುದಾ. ೧೭೭). [ ←ಮರಾ. ಧಡಧಡೀತ ]

**ಧಡಪಡ**, ದಡಬಡ$_2$ (ನಾ). ೧. ಆತುರ; ವೇಗ. 'ಧಡಪಡಿಸು' ಪರಾ. ೨. ಗದ್ದಲ; ಗಲಾಟೆ;ಅಬ್ಬರ: ಕಿಟ್ಟಿಯ ಧಡಪಡವನ್ನು ಕೇಳಿ ಪುಸ್ತಕದತ್ತ ಲಕ್ಷಕೊಡದೆ ಸದ್ದು ಕೇಳತೊಡಗಿದಳು (ಗಂಮೂಯಿ. ೧೩) ; ೩. ಈಗ ಹೀಗೆ ಮನೆಯೊಳಗ ಧಡಪಡಮಾಡಿದರೆ? (ಅಶೋಕ. ೭೨). ಶ್ರಮ; ಪ್ರಯತ್ನ; ದುಡಿಮೆ : ನಮ್ಮ ಧಡಪಡ ಸರ್ವರ ಕಲ್ಯಾಣದ ಸಲುವಾಗಿ ನಡೆದಿತ್ತು (ದೀಪಹ. II, ೩೭೦). 'ಧಡಪಡಿಸು' ಪರಾ. **ದಡಬಡ$_2$ :** ೧. ಕೆಲಸವನ್ನು ಬೇಗ ಮುಗಿಸಬೇಕೆಂದು ದಡಬಡ ಅಂತ ಮಾಡಿದರೆ ಕೆಲಸವೇ ಕೆಟ್ಟುಹೋಗುತ್ತದೆ (ರೂಢಿ).

**ಧಡಪಡ ಮಾಡು, ದಡಬಡ ಮಾಡು** = ೧. ಅಬ್ಬರಮಾಡು ; ಗದ್ದಲ ಮಾಡು: ಕಾರಣವಿಲ್ಲದೆ ಯಾಕೆ ಹೀಗೆ ಧಡಪಡ ಮಾಡುತ್ತಿದ್ದೀ ? (ರೂಢಿ). **೨. ಪ್ರಯತ್ನಮಾಡು ; ಶ್ರಮಪಡು :** ನೀನು ಕಲಿಯಬೇಕು . . . ಒಬ್ಬ ಒಳ್ಳೆಯ ಆಫೀಸರನ ಅಥವಾ ಡಾಕ್ಟರನ ಕೈಹಿಡಿಯಬೇಕು ಎಂದು ನಾನು ಇಷ್ಟೆಲ್ಲ ಧಡಪಡ ಮಾಡುತ್ತಿರುವೆ (ಕ್ಷಿತಿಜ. ೭೭). ೩. ಚಡಪಡಿಸು; ಒದ್ದಾಡು : ರೋಗಿಯು ಹಿಂಡಿ ತೆಗೆದಂತೆ ನಿಃಸತ್ವನೂ ಚಿಂತಾತುರನೂ . . . ಧಡಪಡ ಮಾಡುವವನೂ ಆಗಿರುವನು (ಓಷಧೀ. ೬). ೪. ಆತುರ ಪಡು : ಇದರಲ್ಲೆಲ್ಲ ದಡಬಡ ಮಾಡಿದರೆ ಕೆಲಸವೇ ಕೆಟ್ಟುಹೋಗುತ್ತೆ (ಮುನಿಮಾ. ೧೪೩). [ ←ಮರಾ. ಧಡಪಡ, ಧಡಫಡ, ಧಡಬಡ]

**ಧಡಪಡಿಸು**, ತಡಪಡಿಸು, ತಡಫಡಿಸು, ದಡಪಡಿಸು, ದಡಬಡಿಸು$_2$ (ಕ್ರಿ). ೧. ಆತುರಪಡು; ತವಕಿಸು; ಗಡಿಬಿಡಿಮಾಡು : ನನ್ನನ್ನು ಜೇಲಿಗಟ್ಟಲು ಬ್ರಿಟಿಶ್ ಸರಕಾರವೇ ಟೊಂಕಕಟ್ಟಿ ನಿಂತಿರುವಾಗ ಇವನು ಇಷ್ಟು ಧಡಪಡಿಸಿದನಲ್ಲ ! (ಮನಬಿ. ೪೨) ; ಅಂಥ ಮನೆಗೆ ಆಸುಪಾಸಿನ ಜನ ಹೆಣ್ಣು ಕೊಟ್ಟು ದಿವ್ಯಸಂಬಂಧ ಬೆಳೆಸಲು ಹೇಗೆ ಧಡಪಡಿಸಲಿಲ್ಲವೋ – ಅರಿಯೆ! (ದೀಪನಿ. ೨೩). ೨. ಪ್ರಯತ್ನಮಾಡು : ತಮ್ಮ ಹೆಸರಿನ ಸುತ್ತಲೂ ಒಂದು ಹೊಳಪು ಹೆಣೆಯಬೇಕೆಂದು . . . ಅದಕ್ಕಾಗಿ ಚಡಪಡಿಸಿ, ಧಡಪಡಿಸಿ, ಹಗಲು ರಾತ್ರಿ ಒಂದು ಮಾಡಿ, ಅವಿಶ್ರಾಂತವಾಗಿ ಬೆವರು ಸುರಿಸುತ್ತಾರೆ (ಗಾಳಿಪ. ೮೩) ; ಐದುವರ್ಷಗಳವರೆಗೆ ಧಡಪಡಿಸಿದರೂ ಆಧ್ಯಾತ್ಮಿಕ ದೃಷ್ಟಿಯಿಂದ ಯಾವ ಫಲವೂ ನನಗೆ ದೊರೆಯಲಿಲ್ಲ(ಮಹಾಯೋ. ೧೮೩) ; ನಿನ್ನದೊಳ್ಳೆಯದಾಗಲಿಯೆಂದೇ ನಾನು ಧಡಪಡಿಸಿದೆ (ಸಮಜೀ. ೦೯೮) ; ಎಲ್ಲಾ ಅದಕ್ಕೆ, ಅದರ ಉನ್ನತಿಗೆ ಎಂದೇ ಧಡಪಡಿಸುತ್ತಾರೆ (ದೀಪಹ. I, ೧೬). ೩. ಚಡಪಡಿಸು ; ಒದ್ದಾಡು; ಕಳವಳಿಸು : ಪಾಪ! ಬಡ ಮನೋಹರನಂತೂ ಒಂದೇ ಸವನೆ ಧಡಪಡಿಸುತ್ತಿರಬಹುದು (ತುಬ್ಬಣ್ಣ. ೨೨೨) ; ಬೇಟೆಗಾರರ ಸಪ್ಪಳವನ್ನು ಕೇಳಿ ಚಿಗರೆಗಳು ನಿಲ್ಲುವ ಹಾಗೆ ಬಾಗಿಲಮುಂದೆ ವಾಸವಾಗಿದ್ದ ಗೋಪಿಯು ಮಾತ್ರ ಕಿವಿಗಳನ್ನು ನಿಮಿರಿಸಿ ನಿಲ್ಲುತ್ತದೆ, ಧಡಪಡಿಸುತ್ತದೆ (ಫಲಸಂ. ೪). **ತಡಪಡಿಸು :** ೧. ಓಡೋಡಿ ಬಂದಿರುವೆ ಹಡೆದವ್ವ ತಡೆದರು ಒಡೆಯಗೆ ಉಣಸಲು ತಡಪಡಿಸಿ ಬಂದರೆ ಓಡೆಲ್ಲಿ ಹೋದೆಯೊ ಎನ ತಂದೆ (ಸಿದ್ಧವು. ೪-೮). **ತಡಫಡಿಸು :** ೧. ಆಕೆಯು ತಡಫಡಿಸುತ್ತ ರಾಮನ ಬಳಿಗೆ ಹೋಗಿ (ತುಳಸೀ.೨೨೭). ೩. ನಿರ್ಮಲೆ ತಡಫಡಿಸುತ್ತ ಹಾಸಿಗೆಯಲ್ಲಿ ಎದ್ದೇ ಕುಳಿತಳು (ಮೂರುದಾ. ೨೧೭). **ದಡಪಡಿಸು :** ೧. "ದಡಪಡಿಸು–ಒದ್ದಾಡು ; ಗಡಿಬಿಡಿ ಮಾಡು" (ಜಾನಕೋ. ೧). **ದಡಬಡಿಸು$_2$:** ೧. ಸದ್ದುಕೇಳಿ ಹೆಂಗಸರೆಲ್ಲ ದಡಬಡಿಸುತ್ತ ಎದ್ದು ಹೋದರು (ರೂಢಿ). [ ಧಡಪಡ + –ಇಸು$_3$ ]

**ಧಡಯು** ‘ ಧಡೆ$_1$ ’ ನೋ.

**ಧಡರ್** (ನಾ). ಒಂದು ಅನುಕರಣ ಶಬ್ದ : ಬೆದಚಿ ಎದೆ ಧ[ಪಾಠಾಂ. ಧ] ಡರೆಂದು ಬಡಿಯಲು (ಸಮ್ಮಿಶ್ರಾ. ೧೧-೭೮).

**ಧಡಲ್** (ನಾ). ಒಂದು ಅನುಕರಣ ಶಬ್ದ : ಆನೆಪಟಾಕಿ ಹಚ್ಚಿದ ತಕ್ಷಣ ಧಡಲ್ ಎಂದು ಸಿಡಿಯಿತು (ರೂಢಿ).

**ಧಡಲ್ಬಾಜಿ** (ನಾ). ಒಂದು ಬಗೆಯ ಪಟಾಕಿ; ದೊಡ್ಡ ಆನೆಪಟಾಕಿ : ನೆಲಕ್ಕೆ ಅಪ್ಪಳಿಸಿ ಗರ್ಜಿಸುವ ‘ನೆಲಗುಮ್ಮ’, ಹೆಡೆಬಿಚ್ಚಿದ ಹಾವಿನ ಮರಿಯಂತಹ ತಾಳೆಮಡಲಿನ ‘ಧಡಲ್ಬಾಜೀ’ (ಮೂರುದಾ. ೩೧೭); ಧಡಲ್ಬಾಜಿ ಸಪ್ಪಳವ ಬೇಡುವದು ಡೊಳ್ಳು ಡೊಂಬರಾಟ( ಜೀವಲ. ೯೫-೯); ಪಟಾಕ್ಷಿ, ಚಟಾಕಿ, ಧಡಲ್‌ಬಾಜಿ . . . ಮೊದಲಾದ ಶಬ್ದಗಳು ಅನುಕರಣದಿಂದಲೇ ಬಂದುವು (ಭಾಷಾಶಾ. ೫). [< ಧಡಲ್ ]

**ಧಡವ** (ನಾ). ದಾಂಡಿಗ; ಟೊಣಪ: ಹತ್ತುವರ್ಷದ ಧಡವ ಆಗಿದ್ದೀಯೇ. ಇನ್ನೂ ಬರೆಯಲು ಬರುವುದಿಲ್ಲವೆ ? (ರೂಢಿ) ‘ಗಡವ’ ಪರಾ. [ ? ]

**ಧಡವೆ** (ನಾ). ದಾಂಡಿಗಿತ್ತಿ; ಟೊಣಪೆ : ಹನ್ನೆರಡು ಹದಿಮೂರು ವರ್ಷದ ಧಡವೆಯರಾಗಿ ಏನ್ರೇ ಅದು ಆಡೋದು? (ಕನಕ. ೯೭). [ಧಡವ+ –ಎ$_2$]

**ಧಡಾಡಿ** (ನಾ). ಜಬರ್ದಸ್ತು; ಜೋರು : ಭಾಳ ಧಡಾಡಿ ಆಸಾಮಿ (ಧನಂಜ. ೩೧). [ ← ಮರಾ. ಧಡಾಡೀ ]

**ಧಡಾರ್** (ನಾ). ಒಂದು ಅನುಕರಣ ಶಬ್ದ. ‘ ಧಡಾರನೆ ’ ಪರಾ.

**ಧಡಾರನೆ** (ಅ). ಜೋರಾಗಿ ; ರಭಸವಾಗಿ : ಒಳಗೆ ನಡೆದು ಧಡಾರನೆ ಬಾಗಿಲು ಮುಚ್ಚಿಕೊಂಡು ಹೊರಟೇ ಹೋದರು (ಮೂಪ್ರೇಮ. ೧೭೭).
[ ಧಡಾರ್ + – ಅನೆ$_1$ ]

**ಧಡಿ** ‘ ತಡಿ$_2$ ’ ನೋ.

**ಧಡಿಕೆ** (ನಾ). ಕುಲುಕಾಟ ; ತುಯ್ದಾಟ : ಗಾಡಿಯ ಧಡಿಕೆಗೆ ಒಳಗೆ ಕುಳಿತವರ ಮೈ ನುಗ್ಗುನುಚ್ಚಾಗುತ್ತಿತ್ತು (ಕಂಬಹು. ೩೮); ಬೀದಿಯ ಪ್ರತಿಯೊಂದು ಏರಿ – ಇಳಿಜಾರಿನ ಧಡಿಕೆಗೆ ಕೆಸರು ಅಲುಗಾಡಿ ಕೆಳಗೆ ಬಿದ್ದು . . . ಪ್ರಯಾಣಿಕರನ್ನು ತೊಂದರೆಗೀಡುಮಾಡಿದಂತಾಗುತ್ತಿತ್ತು (ಬೆಂಜನ್. ೩೦೪). [ <ಧಡಕ್ ]

**ಧಡಿಗ** ‘ ದಡಿಗ ’ ನೋ.

**ಧಡಿಗತನ** (ನಾ). ದುಷ್ಟತನ ; ನೀಚತನ : ಕಡನ ಕೊಟ್ಟವರೊಡನೆ ಧಡಿಗತನ ಮಾಡುವ ಭ್ರಷ್ಟ ಬಡವರಿಗೆ ಕೊಟ್ಟ ನುಡಿ ನಡೆಸದವ ಭ್ರಷ್ಟ (ಪುರಂದ. ೪-೧೫೮-೧). [ ಧಡಿಗ (< ದಡಿಗ ) + – ತನ ]

**ಧಡಿದೋತರ** ‘ ದಡಿದೋತ್ರ ’ ನೋ.

**ಧಡಿಯು$_1$** ‘ದಡಿಯಂ$_1$’ ನೋ.

**ಧಡಿಯು$_2$** ‘ಧಡೆ$_1$’ ನೋ.

**ಧಡೂತಿ.** ದಡೂತಿ (ನಾ). ೧. ಗಟ್ಟಿಮುಟ್ಟಾಗಿರುವುದು : ಧಷ್ಟಪುಷ್ಟ; ದೃಢಕಾಯ : ಆರೋಗ್ಯಶಾಸ್ತ್ರದ ಗಂಧವನ್ನೇ ಅರಿಯದ ಹಳ್ಳಿಗರು ಎಷ್ಟೊಂದು ಧಡೂತಿಗಳಾಗಿದ್ದಾರೆ (ಮೂಲಾನ. ೮೫) ; ಮುದುಕಿ ಧಡೂತಿಯಾಗಿದ್ದಳು (ಎದಿರೀ. ೩೯). ೨. (ಸೀರೆ, ಧೋತರ ಮೊದಲಾದುವು) ಒತ್ತಾಗಿ ನೆಯ್ದಿರುವಿಕೆ; ತೂಕವಾಗಿರುವಿಕೆ : ಸೀರೆ ಧಡೂತಿಯಾಗಿದೆ. ಬಾಳಿಕೆ ಬರುತ್ತದೆ (ರೂಢಿ). **ದಡೂತಿ :** ೧. ದೊಂದಿಮಾಸೆಯ ಆ ವ್ಯಕ್ತಿ ಉದ್ದವಾಗಿ ದಡೂತಿಯಾಗಿದ್ದನು (ಪುನರು. ೨೫). ೨. ಎಲ್ಲಾ ಸೀರೆಗಳನ್ನೂ ನೋಡಿ “ಅಕ್ಕ, ಇದು ತುಂಬ ಚೆನ್ನಾಗಿದೆ ! ದಡೂತಿಯಾಗಿದೆ ! ಇದನ್ನು ಉಟ್ಟುಕೊ” ಎಂದಳು (ಇಬದು. ೭೩). ೩. ಶಕ್ತಿ; ಸಾಮರ್ಥ್ಯ; ಸತ್ತ್ವ ; ಯೋಗ್ಯತೆ : ಹನ್ನೊಂದನೇ ದಿನ ಅವರವರ ದಡೂತಿಯಿದ್ದಷ್ಟು ದಾನ ಧರ್ಮಗಳನ್ನು ಕೊಡುತ್ತಿದ್ದರು (ಹುಟ್ಟಿಹ. ೭೯).
[ ← ಮರಾ. ಧಡೋತೀ, ಧಡೌತಾ ]

**ಧಡೆ$_1$**, ಡಡಯಂ, ದಡಿಯು$_2$, ದಡೆ$_3$, ದಡೆಯು, ಧಡಯಂ. ಧಡಿಯು$_2$, ಧಡೆಯಂ (ನಾ). ಹತ್ತು ಅಥವಾ ಹನ್ನೆರಡು ಸೇರುಗಳ ಒಂದು ಅಳತೆ; ಮಣದ ನಾಲ್ಕನೆಯ ಒಂದು ಭಾಗ : ಮಾಡಿಕೆಯಾಗಿ ೧೨ ಸೇರಿಗೆ ಒಂದು ಧಡೆ, ೪ ಧಡೆಗೆ ಒಂದು ಮಣ (ಕಭಾಗೆ. ೩೮೯) ; ಧಡೆ ಬತ್ತಾಸನ್ನೂ ನಾಲ್ಕುಸೇರು ಪುಟಾಣಿಯನ್ನೂ ಬಹಳ ಸೋತಪರಂತೆ ಖರೀದಿ ಮಾಡುತ್ತಾರೆ (ಕೃಷ್ಣಹೊ. ೪೭) ; ನನಗೆ ಧಡೇ ಬಂಗಾರ ಇಡಸತಾನು (ರಕ್ತಧ್ವ. ೧೩೦). **ದಡಯು :** ವಂದು ಮಣುವಿಂಗೆ ದಡಯು ನಾಲ್ಕುಂ ಪಂಚೇರು ಛಂದದೊಳೆಂಟು ಡಾಶೇರು ಷೋಡಶಮುಕ್ಕುಂ (ಭಾಸ್ಕರ. ೭೫-೭). **ದಡಿಯು$_2$ :** ಒಂದು ದಡಿಯು ಹುಣಸೆಹಣ್ಣು ತಾ (ರೂಢಿ). **ದಡೆ$_3$ :** ಬೆಲ್ಲ ವಿದ್ದ ಕಡೆ ನೊಣ, ದಡೆ ನಾಲ್ಕಕ್ಕೆ ಮಣ (ಗಾದೆ). **ದಡೆಯು:** ಶಶಿ ಖಂಡು ಗಕಿಪ್ಪತುಮಣ ಶಶಿ ಮಣುವಿಗೆ ದಡೆಯು ನಾಲ್ಕು ತಪ್ಪದು ಬಟಿಕಂ ಶಶಿ ದಡೆಯುಕೆ ಸೇರ್ ಪತ್ತುಂ ಶಶಿ ಸೇರಿಂಗಂ ಪಾವು ನಾಲ್ಕು ತಪ್ಪದು ನಿರುತಂ (ವ್ಯವಹಾ. ಅನುಬಂಧ. I, ೨). **ಧಡಯು:** ವೇಷಭೂಷಣಗಳನ್ನು ಬದಲಾಯಿಸಿ . . . . ಒಂದು ಧಡಯು ಬಂಗಾರ ಸಹಿತವಾಗಿ ಲಗ್ನಮಾಡಿಸಿದರಂತೆ (ಕಭವಿ. ೪೧೯). **ಧಡಿಯು$_2$ :** ಒಂದು ಧಡಿಯು ಬೆಲ್ಲ ಹೊತ್ತು ತರಲು ಆಗಲಿಲ್ಲವೆ ? (ರೂಢಿ). **ಧಡೆಯು :** ಪಂಚೇರು ಧಡೆಯು ಮಣ ಪ್ರಮಾಣ ತಾದುವುಗಳಿಂದ . . . ವ್ಯಾಪಾರ ಮಾಡುವಂತೆ ಕಟ್ಟಳೆ ಮಾಡಿಸಿದರು (ಚಾಮವಂ. ೧೦೯). [ ←ಮರಾ. ಧಡಾ ]

**ಧಡೆ$_2$** (ನಾ). ಒಂದು ಬಗೆಯ ಕರುಳುರೋಗ ; ಕಾಲರಾ : ನಾನಾ ಧಡೇದ ಬ್ಯಾನಿ ಬಂದು ಸತ್ತಾ ಅಂತ ನಾ ಸುಳ್ಳು ಹೇಳೂದಿಲ್ಲ (ಗ್ರಾಮಾಯ. ೩೨). [ ←ಮರಾ. ಧಡಾ ]

**ಧಡೆಯು** ‘ಧಡೆ$_1$’ ನೋ.

**ಧಡ್ಡ** ‘ದಡ್ಡ$_2$’ ನೋ.

**ಧಣಂ** (ನಾ). ಒಂದು ಅನುಕರಣ ಶಬ್ದ. ‘ಧಣಮ್ಮನೆ’ ಪರಾ.

**ಧಣಗರಿ** (ನಾ). ಎತ್ತುಗಳಲ್ಲಿ ಒಂದು ಜಾತಿ : ಎತ್ತುಗಳಲ್ಲಿ ಸೋರಟೀ . . . ಧಣಗರೀ, ಖಿಲಾರೀ, ಹಣಬಿರಿ, ಚೆಲ್ಲರಿ ಎಂಬ ೮ ಜಾತಿಗಳುಂಟು (ಕಭಾಗೆ. ೫೭). [ ? ]

**ಧಣಧಣ** (ನಾ). ಒಂದು ಅನುಕರಣ ಶಬ್ದ : ಧಣಧಣಮೆಂದುಲಿದೊಡನೇಂ ತಣಿದುಟಿವರೆ ನೀಂ ಧನಂ ಧನಂ ಧನಮೆನಲ್ (ಚಿಕವಿ. ೭-೧೩೩). [ ಸಂ. ]

**ಧಣಧಣತ್ಕೃತಿ** (ನಾ). ಧಣಧಣ ಎಂಬ ಶಬ್ದ : ಸಿಡಿಲ ಮಣಿ ತಾ ಕಾರ್ಮುಕದೊಳುಗ್ಘಡಿಸುವಂತಿರೆ ಧಣಧಣ[ಪಾಠಾಂ. ಧಣಧಣ]ತ್ಕೃತಿ ಜಡಿಯೆ (ತೊರರಾ. ೩-೭-೫೦). [ ಸಂ. ]

**ಧಣಧಣಿರು** (ನಾ). ಒಂದು ಅನುಕರಣ ಶಬ್ದ : ಮೊರೆವ ಶಂಖಮೃದಂಗ ಭೇರಿಗಳುಬಿಬಿ ಧಣ[ಪಾಠಾಂ. ಧಂ]ಧಣಿರನಲು ಮಿಗೆ ಮೋಹರಿಸಲಾ ನಿಸ್ಸಾಳತತಿ ಘನವಾದ್ಯ ಘೋಷಿಸಲು (ನಳಚ. ೩-೭೩).

**ಧಣಮ್ಮನೆ** (ಅ). ಧಣಂ ಎಂದು : ಅನುಕರಣಕ್ಕೆ–ಖಣಿಲ್ಲನೆ . . . ಧಣಮ್ಮ[ಪಾಠಾಂ. ಮ್ಮೆ]ನೆ ಘೊಟ್ಟನೆ (ಶಮದ. ೧೪ ಪ್ರಯೋ). [ಧಣಂ + – ಅನೆ$_1$]

**ಧಣಾ** (ನಾ). ಒಂದು ಅನುಕರಣ ಶಬ್ದ : ತ್ರಿದಶರಬ್ಬರಿಸಿ ಆನಕ ದುಂದುಭಿ ಶಂಖ ಧಂ ಧಂ ಧಣಾ ಸರಿಗಮಪಧನೀಯೆಂದೆನುತ . . . ತಾಡಿಸಿದರು (ವಿದಾಕ್ಷ. ೯೨-೨).

**ಧಣಾರ್** (ನಾ). ಲೋಹದ ಪಾತ್ರೆಗಳು ಬೀಳುವಾಗ ಉಂಟಾಗುವ ಸದ್ದನ್ನು ಅನುಕರಿಸುವ ಶಬ್ದ : ಅಟ್ಟದ ಮೇಲಿನಿಂದ ಪಾತ್ರೆ ಧಣಾರ್ ಎಂಬ ಸದ್ದಿನೊಂದಿಗೆ ಬಿದ್ದಿತು (ರೂಢಿ).

**ಧಣಿ** ‘ದನಿ$_2$’ ನೋ.

**ಧಣಿಧಣಿ** (ನಾ). ಒಂದು ಅನುಕರಣ ಶಬ್ದ : ಪರನು ಧಣಿಧಣಿ ಎಂದು ರೂಪಾಯಿ ಸುರಿದನು (ಹುಟ್ಟಿಹ. ೧೪).

**ಧಣಿಯು, ಧನಿಯು₁** (ನಾ). ೧. ಒಡೆಯಂ; ಯಜಮಾನ : ಧಣಿಯರ ಮನಿ ಮುಂದ ಕಾವಲು ಮಾಡಣ್ಣ (ಅರಳು.೪೩೦-೭). **ಧನಿಯು₂ :** ೨. ಹಣವಂತ; ಧನಿಕ : "ಉಳ್ಳವ, ಒಡೆಯ, ರೊಕ್ಕಸ್ತ, ಧನಿ(ಯು)" (ಕಂಸುಹು. ೭೯). [ <ಪ್ರಾ. ಧಣಿಅ./ಸಂ. ಧನಿಕ ]

**ಧಣಿರ್** (ನಾ). ಒಂದು ಅನುಕರಣ ಶಬ್ದ : ಹಟ್ಟೀಲಿ ಒಳಕಲ್ಲು ಕೊಟ್ಟಿಗೇಲಿ ಸೇದೋ ಬಾವಿ ಹೊಕ್ಕು ಕುಟ್ಟದರೆ ಧಣಿರೆಂಬೋ ಒನಕೆಯ ಕೆತ್ತಿಸಿದಪ್ಪಾಜಿ ಸುಖ ಬಾಳೊ (ನಾಪದ. ೧೩೪).

**ಧಣು₁** (ನಾ). ಮೆಚ್ಚಿಕೆಯನ್ನು ಸೂಚಿಸುವ ಮಾತು ; ಕೊಂಡಾಟದ ನುಡಿ : "ಅರರೆ ಧಣು ಭಾಪು ಭಳಿರೇ ಧಿರುರೇ ಮರ್ಯಾ ಪೂತುರೆ ಪಾಯ್ಕು ಚಾಗು ಸಲೆ ಸುಂದರೆಯೆನೆ ಕೊಂಡಾಟದ ನುಡಿ" (ಛಾರನಿ. ೪೭) ; ಕೈದುಡುಕು ಕಿರ್ದರು ಧಣು ದರುರಿ ಜಗಜಟ್ಟಿ ಭಾಪ್ಪೆನುತ (ಸಾಳ್ವಭಾ. ೨೨-೭೭).

**ಧಣುಧಣು (ದ್ವಿರುಕ್ತಿ) :** ವೀರ ಧಣುಧಣು ಪೂತುರೇ ಬಿಲುಗಾಜ (ಕುಮಾವ್ಯಾಭೀ. ೪-೧೫) ; ಅರರೆ ಧಣುಧಣು ಪೂತು ಪಾಯಿಕು ಸರಿಯ ಕಾಣೆನು ಭಾಪೆನುತ ವಿಸ್ತರಿಸಿ ದಾನವವೈರಿ ಕರ್ಣನ ಹಿರಿದು ಹೊಗಳಿದನು (ಕುಮಾವ್ಯಾಕ. ೨೩-೧೭) ; ಖಂಡಿಸಿದೆ ನೀನಿವನ ಧಣುಧಣುವೆನುತೆ ಪೊಗಳಿದರು (ರಾಮಾಸಂ. ೬-೭-೨೮).

**ಧಣು₂** (ನಾ). ಮಲ್ಲಯುದ್ಧದ ಒಂದು ಪಟ್ಟು (?) : ಕರವಳಯ ತಳಹತ್ತ ಡೊಕ್ಕರ ಶಿರವ ಧಣು ಧಣುವಟ್ಟ ತಳ ಮೊಪ್ಪರ ದುವಂಗುಲ ಕಂದ ಡೊಕ್ಕರ ತೋರಹತ್ತದಲಿ . . . ತೋಱಿದರು ಕೌಶಲವ (ಕುಮಾವ್ಯಾವಿ. ೬-೨೯). [ ? ]

**ಧಣುರೆ** (ನಾ). ಒಂದು ಕೊಂಡಾಟದ ನುಡಿ : ಲೇಸು ಲೇಸೆಲೆ ಪಾರ್ಥ ಧಣುರೆ ಸೆಬಾಸು ಕಾಣೆವು ತಾವು ಬದುಕಿದ್ದೀಸುಕಾಲ ಮಹಾಸುಭಟರ ಪರಿಮಿತವುಂಟವರ್ಗೆ ಈಸು ದೃಢಮನವಿಲ್ಲ (ಕೋಗಯು. ೧೮-೫೩). 'ಧಿರುರೆ', 'ಭಳಿರೆ' ಪರ್ಯಾ.

**ಧಣುವಟ್ಟ** 'ದಣುವಟ್ಟ' ನೋ.

**ಧಣುವಟ್ಟೆ** 'ದಣುವಟ್ಟೆ' ನೋ.

**ಧಣ್ಣಗವಾಡಿ** (ನಾ). ಒಂದು ಊರಿನ ಹೆಸರು : ಶ್ರೀಮತ್ ಶ್ರೀಪುರುಷ ಮಹಾರಾಜರ್ ಪೃಥುವೀರಾಜ್ಯಂಗೆಯೆ ಕೆಸುಗೊಳವೊಡೆಯ ಬಿನಾಮ್ಮಜ್ಜಿ ಧಣ್ಣಗವಾಡಿಯಂ ಬ್ರಹ್ಮಾದೇಯಂಗೊಟ್ಟಂ (ಎಕ. IV. ಹೆಗ್ಗಡ. ೪-೩ ; ಸು. 750). [ ಧಣ್ಣಗ₀ + ಪಾಡಿ₂ ]

**ಧಣ್ಣಕುತ್ತಾರೆವಿಗುರವಿ** (ನಾ). ಒಬ್ಬಾಕೆಯ ಹೆಸರು : ಶ್ರೀಪೆರುಮಾಳು ಗುರುವಡಿಗಳಾ ಶಿಷ್ಯ ಧಣ್ಣಕುತ್ತಾರೆವಿಗುರವಿ × × × ಡಿಸ್ಸಿದಾರ್ (ಎಕ. II, ೭-೦ ; ಸು. 700). [ ? ]

**ಧತ್ತೂರ** (ನಾ). ಒಂದು ಬಗೆಯ ಗಿಡ ; ಉಮ್ಮತ್ತ ; ಮದ್ದುಗಣಿಕೆ : "ಧ[ಪಾಠಾಂ. ದು]ತ್ತೂರಮಾ ಕನಕಮುನ್ಮತ್ತಮೆನಿಸಿಕ್ಕು" (ಮಂಗರಾ. ೩೮-೨೭). [ ಸಂ. ]

**ಧತ್ತೂರಿ** 'ದತ್ತೂರ' ನೋ.

**ಧತ್ವ** (ನಾ). [ವ್ಯಾಕ] ಧಕಾರ : ಯತ್ವ ಮಿಶ್ರ ಧತ್ವಕ್ಕೆ ದತ್ವಮುತ್ವಕ್ಕೆತ್ವಂ (ಶಮಂದ. ೨೭೬). [ ಸಂ. ]

**ಧಧಾಂ** (ನಾ). ಒಂದು ಅನುಕರಣ ಶಬ್ದ : ಮುಟ್ಟಿದುದು ಕುಲನಗ ಪ್ರಾತಮಂ ವೀರಬಲ್ಲಾಳನೃಪಂ ಸೂಳೈಸವೇಟ್ಟಿಕ್ಕಸರ ಸಮರಧಾರೀ ಧಧಾಂ ಧಾಂ ಧಧಾಂಧ ಧ್ವನಿ (ಸೂಕ್ತಿಸು. ೧೮-೧೭).

**ಧನ** (ನಾ). ೧. ದುಡ್ಡು ; ಹಣ : "ದ್ರವಿಣಂ ದ್ರವ್ಯಂ ವಸ್ವರ್ಥ ವಿತ್ತ . . . ಧನವೇಕಾರ್ಥಂ" (ವಸ್ತುಕೋ. ೨೯-೧೨) ; ಧನಮಂ ಮರ್ಯಾದೆಯಿಂದಾರ್ಜಿಸಿ (ಶಂರಾಮಾ. ೩-೧೬೧) ; ಧನಮುಳ್ಳನೆಗಂ ವೇಶ್ಯಾಂಗನೆ ಪ[ತ್ರು]ಗುಂ (ಬಂಹರಿ. ೪-೩೧). ೨. ಸಂಪತ್ತು ; ಐಶ್ವರ್ಯ : "ದ್ಯುಮ್ನಂ . . . ಧನಂ, ಹಿರಣ್ಯಂ, ವಸು, ವಿಭವಂ-ಈ ೧೫ ಒಡವೆಯ ಪೆಸರ್" (ಹಲಾಯು. ೧೪-೮೦) ; ಧನಮೆಂಬುದು ವಿಭುಗೆ ಯಶೋಧನಂ (ಆದಿಪು. ೧೪-೭೪) ; ಧನವ ಬೇಡಿದಡೀವೆ (ಬಸವ. ೭೦೭) ; ಸರ್ವಋತುಗಳೊಳು ಫಲವಿಡಿದೊಱಗುವ ತರುಕುಲಂ ಬತ್ತದೊಂದೇ ಪರಿಯಲಿಹ ಸರೋವರವೆಮ್ಮ ಧನವು (ಹಡಕಾ. ೮-೭) ; ಧನವನುಳ್ಳ ಮಹಾತ್ಮನಾವುದ ನೆನೆದೊಡದು ಕೈಸಾರುವುದು (ಕುಮಾವ್ಯಾಉ. ೪-೫೫). ೩. ಗೋಧನ ; ಪಶುಸಂಪತ್ತು : "ಗೋವೃಂದಂ, ಗೋಧನಂ, ಧನಂ-ಈ ಮೂಱು ತುಱುವಿನ ಹಿಂಡು" (ಹಲಾಯು. ೪೪-೧೦೭) ; "ಗೋ ಮಹಿಷ ಪ್ರಭೃತಿ ಪಶುಸ್ತೋಮಂ ಪ್ರಧನಂ ಧನಾಹ್ವಯಂ" (ವಸ್ತುಕೋ. ೯೦-೧೪). ೪. [ಜ್ಯೋತಿ] ಜಾತಕನ ಜನ್ಮಲಗ್ನದಿಂದ ಎರಡನೆಯ ಸ್ಥಾನ : ಸಹಜಾಯವ್ಯಯ ಧನ ದಶ ಸುಹೃದ್ಗೃಹಸ್ಥಾಯಿಯಾಗೆ ತತ್ಕಾಲದೊಳಾ ಗ್ರಹಮಂತದು ತಾತ್ಕಾಲಿಕ ಸುಹೃದ್ಗ್ರಹಂ ಪರಯುತಂ ದ್ವಿಷದ್ಗ್ರಹಮೆನಿಕುಂ (ಜಾತತಿ. ೩-೧೭). ೫. [ಗಣಿತ] ಅಧಿಕ ಚಿಹ್ನೆ; ಸಂಕಲನವನ್ನು ಸೂಚಿಸುವ ಚಿಹ್ನೆ ; + ಗುರುತು : ವರ್ಗಮೂಲಕ್ಕೆ ಧನ, ಋಣ ಚಿಹ್ನೆಗಳೆರಡನ್ನೂ ಕೊಡದೆ ಒಂದೇ ಮೂಲವು ಕೊಡಲ್ಪಟ್ಟದೆ (ಗಣಿಜ. ೧೪) ; ಬ್ರಹ್ಮಗುಪ್ತ ಹೇಳಿರುವಂತೆ : "ಧನ ಮತ್ತು ಋಣ ಇವುಗಳ ಗುಣಲಬ್ಧ ಋಣ ; ಎರಡು ಋಣಗಳದ್ದು ಧನ ; ಧನವನ್ನು ಧನದಿಂದ ಗುಣಿಸಿದರೆ ಧನ" (ತತ್ವಪ್ರಾ. ೪೭೦) ; ಋಣವಸ್ತುಕಣಗಳು ಧನ ಆಧಾರಬಿಂದುವನ್ನು (Nucleus) ಸುತ್ತುವರಿದು ಪರಮಾಣುಗಳುಂಟಾಗಿವೆ (ನಿಶಉ. ೨೩೦). ೬. [ಜ್ಯೋತಿ] ಮನೆ ಕಟ್ಟುವಾಗ ನೋಡುವ ಒಂದು ಲೆಕ್ಕಾಚಾರ ; P ಮನೆಯ ನಿವೇಶನದ ಉದ್ದಸಂಖ್ಯೆಯನ್ನು ಅಗಲಸಂಖ್ಯೆಯಿಂದ ಗುಣಿಸಿ ಬಂದ ಫಲವೇ ಕ್ಷೇತ್ರಫಲ. ಅದನ್ನು ಎಂಟರಿಂದ ಗುಣಿಸಿ, ಹನ್ನೆರಡರಿಂದ ಭಾಗಿಸಿದರೆ ಉಳಿಯುವ ಶೇಷವೇ ಧನ. ಕ್ಷೇತ್ರಫಲವನ್ನು ಮೂರರಿಂದ ಗುಣಿಸಿ, ಎಂಟರಿಂದ ಭಾಗಿಸಿದರೆ ಉಳಿಯುವ ಶೇಷವೇ ಋಣ. ಋಣಕ್ಕಿಂತ ಧನ ಹೆಚ್ಚಾಗಿದ್ದರೆ ಶುಭ : ಪದಮಂ ರಂಧ್ರುದಿನೊತ್ತಿಯೆತ್ತು ಗಜದಿಂ ಕೊಳ್ ಮಿಕ್ಕುದಕ್ಕುಂ ಧನಂ ತದವಾಪ್ತಂ ನಗಸಂಗುಣಂ ಫಣಿಹೃತಂ ಶೇಷಂ ಬಿಯಂ ಲಬ್ಧಮಂತದು ತಾನಾ ಮನೆಗಾಯಂ (ಲೋಕೋಪ. ೩-೨೦).

**ಧನಕನಕ** = ಹಣ ಮತ್ತು ಹೊನ್ನು : "ಧನಕನಕವಾಚಕಂ ರೈ ಶಬ್ದಂ" (ವಸ್ತುಕೋ. ೧೨೫-೪೨) ; ಧನಕನಕಮುಳ್ಳನಕ ದಿನಕರನವೋಲಕ್ಕು ಧನಕನಕ ಹೋದ ಮಱುದಿನ ಹಾಳೂರ ಶುನಕನಂತಕ್ಕು (ಸರ್ವಜ್ಞ. ೧೨೩೭); ಕಪ್ಪಕಾಣಿಕೆಗಳನ್ನು ತಂದು ಧನಕನಕಸಂಗ್ರಹ ಮಾಡಿಕೊಳ್ಳಬೇಕಾಗಿತ್ತು (ವಚಭಾ. ೮೦). **ಧನಕನಕವಸ್ತುವಾಹನ** = ಐಶ್ವರ್ಯ, ವಾಹನ ಮೊದಲಾದುವು. **ಧನದಾತ** = ಹಣವಂತ; ಧನಿಕ: ಧನದಾತಂ ಕಿಱಿದಾಗಿ ದೊಡ್ಡಿತನೆ ಲಿಂಗಂ ದೊಡ್ಡದಾದಂದು ನಿರ್ಧನಂ (ಲೋಕೋಪ. ೧೧-೫). **ಧನಧಾನ್ಯ** = ಸಂಪತ್ತು ಮತ್ತು ಆಹಾರಧಾನ್ಯ : ಧನಧಾನ್ಯದಿಂ ಪೂರ್ಣವಾದಿಳೆಯೊಡೆತನವ ತನ್ನಿಂ ತಾನೆ ತೊಱಿದು (ಕರ್ಣವೃ. ೯-೮). **ಧನಧಾನ್ಯ ಸಮೃದ್ಧಿ** = ಸಂಪತ್ತು ಹಾಗು ದವಸಧಾನ್ಯಗಳಿಂದ ತುಂಬಿರುವುದು : ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರವು ಧನಧಾನ್ಯ ಸಮೃದ್ಧಿಯಿಂದ ಕೂಡಿದ್ದಿತು (ರೂಢಿ). **ಧನಮುಳ್ಳಂ, ಧನವುಳ್ಳವ**=ಹಣವನ್ನುಳ್ಳವನು; ಹಣವಂತ : ಧನಮುಳ್ಳನುಮಂ ಬಿಡದೊಯ್ಯನೆ ಸಾಯದೆ ಬಂದಿವಿಡಿದವಂ ಬಾಟ್ಗಿಂದಂದನವರತಂ ಜನರಂ ಪಿಡಿದ ನರಂಗೆರಡುಂಟೆ ಬಗೆವೊಡಿನ್ನೀ ಜಗದೊಳ್ (ಧರ್ಮಾಮೃ. ೩-೧೯೭); ಧನಮುಳ್ಳನುಮಿಲ್ಲದನುಂ ಮನದಾಣ್ಮನುಮೊತ್ತೆಯಾಣ್ಮನುಂ ನೆರೆವೆಡೆಯೊಳ್ ತನಗೆ ಸರಿಯೆನಿಪ ಬರ್ದಿನ ವನಿತೆಗೆ ಸಲೆ ಸಂದುದುಱಿದರೊಳ್ ಸಂದಪುದೇ (ಲೀಲಾವ. ೩-೮೭);

ಪ್ರತ್ಯಯಕ್ಕೆ–ಧನಮುಳ್ಳಂ, ಧಾನ್ಯಮುಳ್ಳಂ, ಗುಣಮುಳ್ಳಂ (ಶಮದ. ೩೦೭ ಪ್ರಯೋ) ; ಹಡೆದುಂಬ ಸೂಳೆಯಂತೆ ಧನವುಳ್ಳವರನಱಿಯಱಿ ಬೋಧಿಸಲು ಪ್ರಾರ್ಥಿಸಲು ಮುನ್ನ ನಾನಱಿಯೆನಯ್ಯಾ (ಬಸವ. ೪೧೩). ಧನಮುಳ್ಳಾತ = ಧನದಾತ : ಧನಮುಳ್ಳಾತಂ ದಿಟಂ ಜಾಣೊಡೆಯನಧಿಕ ನುರ್ವೀಶ್ವರಂ ಮನ್ಮಥಂ ಸಜ್ಜನನೆಲ್ಲಾ ವಿದ್ಯೆಯೊಳ್ ಬಲ್ಲವಂ (ದಶಕು. ೮–೭೯). [ ಸಂ. ]

**ಧನಂಗುಳಿ** (ನಾ). ಹಣವನ್ನು ಗಳಿಸುವ ಸ್ವಭಾವವುಳ್ಳವನು : ಆಟಂಗುಳಿ, ಲಂಚಂಗುಳಿ, ಧನಂಗುಳಿ (ಶಬ್ದಾನು. ೩೮೩ ಪ್ರಯೋ).

[ ಧನ + – ಗುಳಿ$_2$ (< – ಕುಳಿ$_3$) ]

**ಧನಂಜಯ** (ಗು). ೧. ಧನವನ್ನು ಗೆಲ್ಲುವ. (ನಾ). ೨. ಬೆಂಕಿ ; ಅಗ್ನಿ : ಗಿರಿಶಲಲಾಟಲೋಚನಧನಂಜಯದಿಂ ಪಂದಗ್ಧನಾದ ಭಾಸುರಕುಸುಮೇಷು . . ಜಲಕ್ಕನುದ್ಭವಿಪನೆಂಬವೊಲ್ (ರಾಜಶೇ. ೧೧–೬೦). ೩. ಅಗ್ನಿಯ ಅಧಿದೇವತೆ : "ಸ್ವಾಹಾಪ್ರಿಯಂ ಸಪ್ತರಸನನಪ್ಪಿತ್ತಂ ಧನಂಜಯಂ . . . ವಿರೋಚನನೆನಿಸ್ಕುಂ" (ಮಂಗರಾ. ೧೪–೬) : ತೂಗಿ ಬಾಣವ ಹೂಡಿ ಶಿವಿವರೆಗಾಗಿ ಬರಸೆಳೆದಾರಿ ಬೊಬ್ಬಿಱಿದಾಗಲಿಂತೆಂದನು ಧನಂಜಯನಾ ಧನಂಜಯಗೆ (ಕುಮ್ಮಾಅ. ೨೦–೨೪). ೩. ಅರ್ಜುನನಿಗಿರುವ ಹತ್ತು ಹೆಸರು ಗಳಲ್ಲಿ ಒಂದು ; ಈ ಯುಧಿಷ್ಠಿರನ ರಾಜಸೂಯಯಾಗದ ಸಮಯ ದಲ್ಲಿ ಹೇರಳವಾದ ಧನರಾಶಿಯನ್ನು ಅರ್ಜುನನು ಸಂಪಾದಿಸಿ ತಂದುದರಿಂದ ಅವನಿಗೆ ಈ ಹೆಸರು ಬಂದಿತು : ನಸುನಗುತರ್ಜುನನು ಫಲುಗುಣ ಧನಂಜಯ ಜಿಷ್ಣು ಸಿತವಾಹನ ವಿಜಯ ಬೀಭತ್ಸು ಪಾರ್ಥ ಕಿರೀಟಿ ಮೊದಲಾದ ವಿನುತ ಕೃಷ್ಣನು ಸವ್ಯಸಾಚಿಗಳೆನಿಪ ಪೆಸರನು ತಿಳುಹಿ (ಕುಮ್ಮಾವಿ. ೬–೪೭). 'ದಶನಾಮ' ನೋಡಿ. ೪. ಶರೀರದಲ್ಲಿರುವ ನಾಗ, ಕೂರ್ಮ, ಕೃಕರ, ದೇವದತ್ತ ಮತ್ತು ಧನಂಜಯವೆಂಬ ಪಂಚ ವಾಯುಗಳಲ್ಲಿ ಒಂದು : "ಶೀರ್ಷದಲಿಹಾನಿಲಂ ಧನಂಜಯನಕ್ಕು" (ಮಂಗರಾ. ೧೫–೧೨) : ಶಿವ ಜೀವರೊಂದಾದಲ್ಲಿ ಪ್ರಾಣ ಅಪಾನ . . . ಧನಂಜಯ ಎಂಬ ದಶವಾಯುಗಳ ಗಮನಾಗಮನದ ವಿಷಯವ್ಯಾಪ್ತಿಗಳು ಅಡಗಿ ಆತ್ಮಲಿಂಗಸಂಬಂಧಿಯಾದೆನು (ಸಿದ್ಧೇವ. ೧೦೩–೩೨೦). 'ಧನಂಜಯ ವಾಯು' ನೋಡಿ. ೫. ದಶರೂಪಕವೆಂಬ ಲಕ್ಷಣಗ್ರಂಥವನ್ನು ಬರೆದವನು : ಗ್ರಂಥಕರ್ತೃವಾದ ಧನಂಜಯ ಗ್ರಂಥಾಂತ್ಯಶ್ಲೋಕದಲ್ಲಿ . . . ಅದರ ಹೆಸರನ್ನು ಸೂಚಿಸಿದ್ದಾನೆ (ದಶರೂ.XII, ೩೬೦೯). [ ಸಂ. ]

**ಧನಂಜಯಲೋಚನ** (ನಾ). ಕೆಂಡಗಣ್ಣ ; ಶಿವ : ಕಾಲಕಂಧರವರ ದೇವ ದೇವ ಹರಿರಾಜ ಧನಂಜಯಲೋಚನಾಂಧಕಾಸುರಹರ . . . ಪಾಲಿಸಾ (ಹಮ್ಮೀರ. ೮–೮೯). [ ಧನಂಜಯ + ಲೋಚನ ]

**ಧನಂಜಯವಾಯು** (ನಾ) = ಧನಂಜಯ ೪ : ನುಡಿ ನುಡಿಯಲಿಕ್ಕೆ ಬುದ್ಧಿಯ ಮಾಡಿಸುವದೊಂದು ಧನಂಜಯವಾಯು . . . ಹಸ್ತದಲ್ಲಿ ದೇವದತ್ತವಾಯು ಜಿಹ್ವೆಯಲ್ಲಿ ಧನಂಜಯವಾಯು (ಚನ್ನಪ. ೩೬–೧೩) ; ಧನಂಜಯವಾಯು ನೀಲವರ್ಣ (ಸಿದ್ಧೇವ. ೧೧೯–೩೬೪) ; ಧನಂಜಯ ವಾಯುವಿನಿಂ ಶೋಕಮೋಹಂಗಳಹವು (ವಿವೇಕ. ೩೨).

[ ಧನಂಜಯ + ವಾಯು ]

**ಧನಂಜಯಾಂಬಕ** (ನಾ). = ಧನಂಜಯಲೋಚನ : ಪಾಂಡುಪುತ್ರನಾತಂ ಜಡಿದೊತ್ತೆ ಜಾಱಿ ಪೆಱಸಾರ್ವನೆ ಧೀರಧನಂಜಯಾಂಬಕಂ (ಶಬಶಂ. ೪–೪೪). [ ಧನಂಜಯ + ಅಂಬಕ ]

**ಧನಂಬಡೆ** (ಕ್ರಿ). ಐಶ್ವರ್ಯವನ್ನು ಸಂಪಾದಿಸು : ತಾಯುಮಂ ವನಿತೆ ಯುಮಂ ಬಿಸುಟ್ಟು ಪರದಾಡಿ ಧನಂಬಡೆಯಲ್ಕೆ ಪೋಗೆ (ಮಹಾನೀ. ೪–೧೧೭); ಸಂಸ್ಕೃತದ ನಿತ್ಯಬಿಂದುಗೆ–ಗುಣಂಗೊಂಡಂ . . . ಪ್ರಿಯಂ ನುಡಿದಂ ; ಧನಂಬಡೆದಂ (ಶಮದ. ೧೭೭ ಪ್ರಯೋ). [ ಧನ + ಪಡೆ$_1$ ]

**ಧನಕೋ** (ಗು). ೧. ಸಾಲ ಕೊಡುವ ; ಲೇವಾದೇವಿಯ : ಋಣಕೋ ಜನರ ಹೊಲಮನೆಗಳನ್ನು ಜಪ್ತ ಮಾಡಿಸಿ, ದನಕರುಗಳನ್ನು ಮಾರಿಸಲು ಹಂಬಲಿಸುವ ಧನಕೋ ಜನರು ಅಥರ್ವದ ಅರ್ಥಶಾಸ್ತ್ರವನ್ನೇ ಹಿಂಬಾಲಿಸು ತ್ತಾರೆ (ಭಾರಸಂ. ೧೭೩). (ನಾ). ೨. ಬಡ್ಡಿವ್ಯವಹಾರ ಮಾಡುವ ವನು ; ಲೇವಾದೇವಿ ಮಾಡುವವನು : ವಿಶ್ವಾಸ ಅವನ ಬಿನ್ ವ್ಯಾಜದ ಧನಕೋ ಆಗಿದ್ದ (ದೀಪಹ. I, ೧೬೮). [ ← ಮರಾ. ಧನಕೋ ]

**ಧನಕೋಶ** (ನಾ). ಹಣವನ್ನು ಶೇಖರಿಸುವ ಸ್ಥಳ ; ಕೋಶಾಗಾರ ; ಭಾಂಡಾರ ; ಖಜಾನೆ : ಧನಕೋಶಂ ನವಹೇಮತಾಮರಸಕೋಶಂ ದೇಶಮಾ ಸೈಕತಾವನಿದೇಶಂ ಸಹಕಾರಿ ಸಾರಸಹಕಾರಂ ಮಂತ್ರಿ ಮಂದಾ ನಿಳಂ . . . ತಾನಾಗೆ ತದ್ವನದೊಳ್ ದರ್ಪಕಚಕ್ರವರ್ತಿ ಮೆಱೆವಂ ಸಪ್ತಾಂಗಸಾಮ್ರಾಜ್ಯಮಂ (ಚಂದ್ರಪು. ೧೧–೫೯).

[ ಧನ + ಕೋಶ ]

**ಧನಕ್ಷಯ** (ನಾ). ಹಣ ಹಾಳಾಗುವುದು; ದ್ರವ್ಯಹಾನಿ : ಶುಸಕಶಕುನಮಂ ಪೇಟ್ವೆಂ . . . ಹಿಂದೆ ವಕ್ರಿಸೆ ಮುಂದೆ ತಿರ್ದೆ ಸಮಂತು ಮುಂದೆ ಧನಕ್ಷಯಂ (ಲೋಕೋಪ. ೧೨–೨೪) ; ಧನಕ್ಷಯವನುಂ ದ್ರವ್ಯಾರ್ಜನೆಯನುಂ ಗೃಹ ಛಿದ್ರವನುಂ ತನಗಾದಪಮಾನವನುಂ ಪ್ರಕಟಿಸಲಾಗದು (ವಿವೇಕ. ೧೫೦).

[ ಧನ + ಕ್ಷಯ ]

**ಧನಗರ** (ನಾ). ೧. ಕುರಿ ಕಾಯುವವನು ; ಕುರುಬ : ಧನಗರರು– ಇವರು ಕಾನಡಾಜಿಲ್ಲೆಯಲ್ಲಿ . . . ಇರುತ್ತಾರೆ (ಕಭಾಗ. ೧೭೫). ೨. ಏನೂ ತಿಳಿಯದವನು ; ದಡ್ಡ. [ ← ಮರಾ. ಧನಗರ ]

**ಧನಗಾಹಿ** (ನಾ). ಹಣವನ್ನು ಕಾಯುವವನು ; ಕೋಶವನ್ನು ರಕ್ಷಿಸುವ ವನು ; ಭಂಡಾರಿ : ಸುರಪ ನಾಯಕನಗ್ನಿಯಿಂಧನಿ ಮರುತ ಬೋಪನು ಯಮನು ಗೋವನು ವರುಣನಸಗನು ಹರನು ಹರಸುವ ಯಕ್ಷ ಧನಗಾಹಿ (ಕೌಶಿರಾ. ೧೦–೬೭). [ ಧನ + ಕಾಹಿ ]

**ಧನಚಿಹ್ನೆ** (ನಾ). = ಧನ ೫ : ಈ ದೂರಗಳು ಕನ್ನಡಿಯ ಮುಂದುಗಡೆ ಇದ್ದರೆ ಧನಚಿಹ್ನೆಯನ್ನು ಹಾಕಬೇಕು (ಭೌತವಿ. ೧೭೨). [ ಧನ + ಚಿಹ್ನೆ ]

**ಧನದ** (ಗು). ೧. ಐಶ್ವರ್ಯವನ್ನು ಕೊಡುವ. (ನಾ). ೨. ಕುಬೇರ : " ಧನದಂ ಕುಬೇರನಳಕಾಧಿನಾಯಕಂ ಗುಹ್ಯಕೇಶ್ವರಂ ವೈಶ್ರವಣಂ " (ವಸ್ತುಕೋ. ೮–೪೬): "ಪೊನ್ನೊಡೆಯ ತಿಸುಳಿಗೆಳೆಯನುಮೆನ್ನಲ್ ತಾಂ ಧನದ ನಕ್ಕು" (ಕವಿಕಂ. ೩೯); ಧನದಂ ಕಾಂಚನಪಂಚರತ್ನಮಯಮಂ ರೈವೃಷ್ಟಿಯಂ ಮಾಡುವಲ್ಲಿ (ಆದಿಪು. ೭–೩೪); ಧನದನ ಕಾಂಚನಮಿವರನುದಿನಮೊರೆವ ಸುವರ್ಣರಜದ ತೂಕಕ್ಕೆ ಪರಲ್ ಕನಸಿನೊಳಮೂಱದೆನಿಸುವ ಧನಪತಿಗಳ ಬಚ್ಚ ರಾಪಣಂಗಳೊಳುಂಬಂ (ಪುಷ್ಪಪು. ೨–೮೭) ; ಆ ಮಹಾಂತಕ ವರುಣ ಧನದರು ಕೊಟ್ಟರಂಬುಗಳ (ಕುಮ್ಮಾಅ. ೭–೭) ; ಹಿರಿಯಳ್ಗೆ ಧನದಂ ಕಿಱಿಯಳ್ಗೆ ರಾವಣ ಕುಂಭಕರ್ಣ ವಿಭೀಷಣ ಶೂರ್ಪನಖಿಯರುದ್ಭವಿಸಿದರ್ (ರಾಮಾಶ್ವ. ೧೩–೧೫). ೩. ಐಶ್ವರ್ಯವಂತ ; ಶ್ರೀಮಂತ. ೨, ೩ : ಅಳಕಾಪುರಿಯೆನೆ ಧನ ದಾವಳಿಯಿಂದಮರಾವತಿಯೆನೆ ವಿಬುಧಾಶ್ರಯದಿಂ ವಿಳಸದ್ಭೋಗಾವತಿಯೆನೆ ಸಲೆ ಭೋಗಿಗಳಿಂ ಬಬಾಪ್ಪು ಮಾಳಿಗೆ ರಯ್ಯಂ (ಎಇ. XV, ೩೧೫; 1172 ); (ಶಾಶಮಂ. ೮೧೮ ನೋ). ೪. ಧನವನ್ನು ದಾನ ಮಾಡುವವನು. ೨, ೩, ೪ : ಅತಿಭೋಗಿಸೇವ್ಯಮನ್ತದು ಪೆಸರ್ವೆತ್ತು ರಂಜಿಸುವ ಭೋಗವತೀ ಪುರದನ್ತೆ ಭಾವಿಸಲ್ಕದು ಧನದ ಪ್ರಸೇವ್ಯಮಳಕಾಪುರದನ್ತೆನೆ ಬಳ್ಳಿಗಾವೆ ಗಾವುದೊ ಪಡಿಪಟ್ಟಣಂ (ಎಕ. VII, ಶಿಕಾರಿ, ೧೦೦–೩೭; 1120). ೨, ೪ : ಧನದಂ ಭಿಕ್ಷುಸಖಂಗೆಳ್ಳನಿತಂ ಧನವಿಾಯದಾದನಾ ನಾಮಂ ಸುಮ್ಮನೆ ಬಂದುದೆಂದು ನಗುತಂ ಧನದಾಪ್ತನನಲ್ಲಿ ಮನ್ನಿಪರ್ ಘನಧನದರ್ (ರಾಜಶೇ. ೩–೯೫). ೩, ೪ : ಧನದರಲ್ಲದ ಧನದರಿಲ್ಲ ತಕ್ಕರಲ್ಲದೆ ಟಕ್ಕರಿಲ್ಲ ಜನ್ನಮಲ್ಲದೆ ಬನ್ನಮಿಲ್ಲ (ಅಜಪು. ೧–೩೦ ವ). [ ಸಂ. ]

**ಧನದನಿವಾಸ** (ನಾ). ೧. ಕುಬೇರನ ವಾಸಸ್ಥಾನ. ೨. ಶ್ರೀಮಂತನ ವಾಸಸ್ಥಾನ. ೧, ೨: ಧನದನಿವಾಸದಿಂ ಮಣಿಮಯೋಜ್ಜ್ವಳದೇವಕುಲಂಗಳಿಂದೆ ನಂದನವನದಿಂ . . . ಪೌದನಪುರವೊಪ್ಪುತಿರ್ಪುದಮರಾವತಿಯಂತೆ ಸುವರ್ಣಗೋಪುರಂ (ಪಾರ್ಶ್ವಪು.೧-೧೧೧). [ ಧನದ + ನಿವಾಸ ]

**ಧನದಭವನ** (ನಾ). ಕುಬೇರನ ಅರಮನೆ: ಧನದಭವನಮೆನಿಪ ಸಿರಿಯ ಬಚ್ಚರಾವಣಂಗಳಿಂ ಪೊದಟ್ಟಿ [ಕಾವ]ಣಂಗಳಿಂ (ಪಂಪಭಾ. ೧-೫೮ ರಗಳೆ). [ ಧನದ + ಭವನ ]

**ಧನದಮಿತ್ರ** (ನಾ). ಕುಬೇರನ ಗೆಳೆಯ ; ಶಿವ : ಉದ್ರಿಕ್ತಸತ್ವಾವೇಶಂ ಕಲ್ಯಾಣಭೂಭೃತ್ಸದನ ಧನದಮಿತ್ರಂ ಧರಾಧಾರಧರ್ಮಂ . . . ನಂದಿಕೇಶಂ ಮಹೇಶಂ (ರಾಜಶೇ. ೧-೧). [ ಧನದ + ಮಿತ್ರ ]

**ಧನದಸಖ** (ನಾ).=ಧನದಮಿತ್ರ : ಅನಘನಪ್ಪ ಹಲಾಯುಧನನಾ ಧನದಸಖನನುರಾಗನಾಗುತ ತೆಗೆದು ಬಿಗಿಯಪ್ಪಿ (ಬಸಪು. ೨೫-೪೯) ; ಶಿಶಿರಗಿರಿಸುತೆಯರಸ ಸರಸಗುಣಗಣನಿಖಿಳಋಷಿಹೃದಯ ನಿಲಯ ಧನದಸಖ ಜಿತಗೆಜದನುಜ . . . ಜಯಜಯತು (ಸೌಂದಪು. ೧೩-೧) [ ಸಂ. ]

**ಧನದಾಚಲ** (ನಾ). ಕುಬೇರನು ವಾಸಿಸುವ ಬೆಟ್ಟ ; ಕೈಲಾಸಪರ್ವತ : ಧನದಾ[ಪಾಠಾಂ. ಕನಕಾ]ಚಲಕ್ಕೆ ಬಡಗಣದೆಸೆ ವಿಜಯಾರ್ಧಾಚಲಕ್ಕೆ ತೆಂಕಣದೆಸೆ . . . ಮ್ಲೇಚ್ಛದೇಶಮಿರ್ಪುದಪಾರಂ (ಪಂರಾಮಾ. ೪-೩೭). [ ಧನದ + ಅಚಲ ]

**ಧನದಾಚಟ** (ನಾ). = ಧನದಾಚಲ : ಅದು ಕನಕಾದ್ರಿಯಂ ತಾಳಿ × × × ಸ್ತುತಿಕರಂ ಧನದಾಚಟದಂ × × × (ಸೌಇಇ. XX, ೭೯-೯; 1119). [ <ಸಂ. ಧನದಾಚಲ ]

**ಧನದಾದ್ರಿ** (ನಾ). = ಧನದಾಚಲ : ವಿವಿಧವಿನೋದಸುಖಂ ವೈಶ್ರವಣಂ ಧನದಾದ್ರಿಯೊಳ್ ಸುಖಂ ವಸಿಯಿಸುವಂತವನಿಪನಾ ಮಾಡದೊಳುದ್ಧವಾಂಬುನಿಧಿ ವಿಶ್ವಸೇನನನುದಿನಮಿರ್ಕುಂ (ಶಾಂತಿಪು. ೯-೧೪೯). [ ಧನದ + ಅದ್ರಿ ]

**ಧನದಾನ** (ನಾ). ಹಣವ ರೂಪದಲ್ಲಿ ಕೊಡುವ ದಾನ ; ದ್ರವ್ಯದಾನ : ಸುರೇಶ್ವರಂ ವಿಲೋಕನದಿನಹೀಶ್ವರಂ ವಿಭವವರ್ಣನೆಯಿಂದೆ ಧನೇಶ್ವರಂ ವಿನೂತನ ಧನದಾನದಿಂ ನೆರೆದರ್ (ಶಾಂತಿಪು. ೯-೪೩); ಆದರದಿಂ ಗೋದಾನಂ ಸ್ತ್ರೀದಾನಂ ವಸ್ತ್ರದಾನವಿಭಕುಲದಾನಂ ಭೂದಾನಂ ಧನದಾನಂ ಶ್ರೀದಾನಂ ಗುಡುತುಮೊಪ್ಪಿದಂ ಗಿರಿರಾಜಂ (ಗಿರಿಕ. ೩-೭೩) . ಧನಲಕ್ಷ್ಮೀದೇವಿ ನಿಮಗೊಲಿಯಬೇಕೆಂದು, ಮನದಣಿಯೆ ಧನದಾನ ಮಾಡಿ ನಮಗಿಂದು (ಕಎಪು. ೧೫-೨). [ ಧನ + ದಾನ ]

**ಧನದಾನುಜ** (ನಾ). ಕುಬೇರನ ಸಹೋದರ ; ರಾವಣ : ಕಂಡಾ ಧನಪ ದಿಗ್ಭಾಗದಲಿ ಧನದಾನುಜನ ಪುರವರವ (ತೊರರಾ. ೫-೧-೩೭). [ ಧನದ + ಅನುಜ ]

**ಧನದಾಪ್ತ** (ನಾ).=ಧನದಮಿತ್ರ : ಧನದಂ ಭಿಕ್ಷುಸಖಂಗೆಳ್ಳನಿತಂ ಧನಮಿಹಾಯದಾದನಾ ನಾಮಂ ಸುಮ್ಮನೆ ಬಂದುದೆಂದು ನಗುತುಂ ಧನದಾಪ್ತನನಲ್ಲಿ ಮನ್ನಿಪರ್ ಘನಧನದರ್ (ರಾಜಶೇ. ೨-೯೫). [ ಧನದ + ಆಪ್ತ ]

**ಧನದಾಹಿ** (ನಾ). ಹಣದ ದಾಹವುಳ್ಳವನು ; ಧನದ ದುರಾಸೆಯುಳ್ಳವನು : ಅಂತರಂಗಜೀವನದಲ್ಲಿ ಆಸೆಬುರುಕರು, ಧನದಾಹಿಗಳು ಆಗಿ ಯಾವುದೇ ಆಕೃತ್ಯಕ್ಕೆ ಹೇಸದ ಜನ . . . ನಮ್ಮ ನಾಯಕರಾಗಿ (ಭಾರದ. ೪೭೧). [ ಸಂ. ಧನದಾಹಿನ್ ]

**ಧನಧವ** (ನಾ). ಐಶ್ವರ್ಯಕ್ಕೆ ಅಧಿಪತಿಯಾದವನು ; ಕುಬೇರ : ದಿನಕರಂ ಬಂದುದಯವಾದನೊ ಧನಧವಂ [ಪಾಠಾಂ. ವರಂ] ಬೈಚಿಟ್ಟ ನಿಧಿಯೋ ಕನಕಗಿರಿ ಮೂಡಿದುದೊಯೆನಲುಜ್ಜ್ವಲಿತವಾಗಿರಲು (ಬಸಪು. ೫-೫೮). [ ಧನ + ಧವ ]

**ಧನನಾಥ** (ನಾ).= ಧನಧವ: ಅಮರನಾಥ ಮಹಿಪನಾಥ ಸರಿನ್ನಾಥ ಧನನಾಥ ಸನಾಥಮಪ್ಪ ದಿಕ್ಪಾಲರ ಕೇಳೀಪ್ರಾಸಾದಂಗಳಿಂದಂ (ಅಜಿಪು. ೭-೨೦ ವ). [ ಧನ + ನಾಥ ]

**ಧನನಾಶ** (ನಾ). ಸಂಪತ್ತು ಹಾಳಾಗುವಿಕೆ : ಧನುಜೇಜ್ಯಂ ಕುಜಗೇಹದೊಳ್ ನಿಲೆ ಪರಸ್ತ್ರೀಲೋಲನಾಳಾಪದಿಂ ಧನನಾಶಂ (ಜಾತತಿ. ೧೭-೨೯). [ ಧನ + ನಾಶ ]

**ಧನಪ** (ನಾ). = ಧನಧವ : "ಧನಪನಂ ಏಕಕುಂಡಲನೆಂಬುದು" (ಮಂಗರಾ. ೧೩೮-೧) ; ಧನಪ ವಿಷ್ವಕ್ಸೇನ ವೈದ್ಯಾಶ್ವಿನಿಗಳಿಗೆ ಸರಿಯೆನಿಪ ಷಣ್ಮುಖನನುಜ (ಹಸಾರ. ೨೮-೪). [ ಸಂ. ]

**ಧನಪತಿ** (ನಾ). ೧. = ಧನಧವ : "ಧನಪತಿ ಯಕ್ಷಂ ಶ್ರೀದಂ ಮನುಷ್ಯಧರ್ಮಂ . . . ಗುಹ್ಯಕೇಶ್ವರಂ ವೈಶ್ರವಣಂ" (ವಸ್ತುಕೋ. ೮-೪೬) : ಧನಪತಿಯೆಂಬಭಿಧಾನಂ ತನಗೆಂತನ್ವರ್ಥರಕ್ಷಕಂಗೆಂದು ಕುಬೇರನ ನಿಳಿಕೆಯ್ವರ್ ನಿಜಮಪ್ಪನುಪಮಧನದಿಂದೆ ಚೆನ್ನವರದರ್ ಪುರದೊಳ್ (ಕುಸುಮಾ. ೨-೧೧೨) ; ನುತೆ ಸುರಪತಿಯುಂ ಸ್ವಾಹಾಪತಿಯುಂ ಪಿತೃಪತಿಯುಮಸುರಯಾದಃಪತಿಯುಂ ರಯಪತಿಯುಂ ಧನಪತಿಯುಂ ಪಶುಪತಿಯುಮೆನಿಸಿದಾಶಾಪತಿಗಳ್ . . . ಇರ್ದರ್ (ಪುಷ್ಪಪು. ೧೧-೮೦) ; ನೀ ಯಕ್ಷೇಶನಲ್ಲಿಗೆ ಹೋಗಿ ಬೇಡುವುದೀ ಸರೋರುಹವಾವ ಘನ ಧನಪತಿಯುದಾರನಲೆ (ಕುವ್ಯಾಅ. ೧೧-೪೮). ೨. ಧನಿಕ ; ಶ್ರೀಮಂತ : ರವಿಚಾಪಕ್ಷೇತ್ರದೊಳ್ ನಿಂದೊಡೆ ಧ[ಪಾಠಾ. ಜ]ನಪತಿ ಸತ್ಪೂಜಿತಂ ದಾರುಣಂ ವೈದ್ಯವಿವಂ ತಕ್ಷೋಪಜೀವ್ಯಂ (ಜಾತತಿ. ೧೭-೧೭) ; ಅತಿಶುದ್ಧವರ್ಣದಿಂದಂ ಕ್ಷಿತಿಪತಿ ಸಾಮಾನ್ಯವರ್ಣದಿಂದೆ ಧನಪತಿ (ಲೋಕೋಪ. ೧೧-೩೦) ; ಕಳನೊಳಗಲಗುಡಿದ ಕಲಿಯಂತೆ ಧನಪತಿ ಸುಲಿಗೆವಡೆದಂತೆ . . . ಹಂಪಳಿದಿರ್ದನಸುರೇಂದ್ರ (ತೊರರಾ. ೬-೨೭-೭) ; ಕೋಡುಳ್ಳವನೈ ನೀನೆಂಟು ಪಾಡುಳ್ಳವನಹುದು ಭಳಿರೆ ಧನಪತಿ ರವಿಗಂ ನೋಡಿ ಬಡ ಕಾಣಿ ಸೊಡರಂ ನೀಡುವೊಲ್ಲುಡಿದೆಯ್ದಿದರದೆ ನಡೆನಡೆಯೆಂದರ್ (ಹಮ್ಮೀರ. ೨-೧೧೮). [ ಧನ + ಪತಿ ]

**ಧನಪತಿತ್ವ** (ನಾ). ಧನದ ಒಡೆತನ : ಪ್ರಜಾಪತಿಬ್ರಹ್ಮನು ಮೊಮ್ಮಗನಾದ ವೈಶ್ರವಣನಲ್ಲಿ ಪ್ರೀತಿಗೊಂಡು ಅವನಿಗೆ ಅಮರತ್ವ ಧನಪತಿತ್ವ ಲೋಕಪಾಲತ್ವ . . . ಇವುಗಳನ್ನು ಕೊಟ್ಟನು (ವಚಭಾ. ೪೦೩). [ ಸಂ. ]

**ಧನಪತಿಪ್ರಿಯ** (ನಾ). = ಧನದಮಿತ್ರ : ಮನಸಿನೊಳು ಗರ್ವಿಸಿದ ಸಿರಿಯಾಳನ ಮದಾಪಹರಾರ್ಥಮಾಗಲು ಧನಪತಿಪ್ರಿಯನಾ ಹಲಾಯುಧನಂ ಮೆಚ್ಚಿದನಂದು (ಬಸಪು. ೨೫-೫೨). [ ಧನಪತಿ + ಪ್ರಿಯ ]

**ಧನಪತಿಮಿತ್ರ** (ನಾ). = ಧನದಮಿತ್ರ : ಧರೆಯೆ ರಥ ವನಜಾಸನನು ರಥಸೂತನಾ ಶೈಲೇಶ ಧನಪತಿಮಿತ್ರ ಸುರಕುಲಸಾರ್ವಭೌಮಂಗೆ (ಅಮೃತ. ೬-೧) ; ಧನಪತಿಮಿತ್ರ ಗಾತ್ರರುಚಿನಿರ್ಜಿತಮಿತ್ರ ಕರಾಲಕಾಲಮರ್ದನ (ರಾಜಶೇ. ೧೦-೫೯). [ ಧನಪತಿ + ಮಿತ್ರ ]

**ಧನಪದಿಕ್ಕು** (ನಾ). ಉತ್ತರ ದಿಕ್ಕು : ಕಂಡಾ ಧನಪದಿಗ್ಭಾಗದಲಿ ಧನದಾನುಜನ ಪುರವರವ (ತೊರರಾ. ೫-೧-೩೭). [ ಧನಪ + ದಿಕ್ಕು ]

**ಧನಪಸಖ** (ನಾ). = ಧನದಮಿತ್ರ : ಧನಪಸಖನೊಲಿದಾಗ ನಿಜರೂಪಮಂ ತೋಱಿ . . . ಸಾಯುಜ್ಯವನು ಕೊಡುವೆ ಬಾಯೆಂದು ಕರೆದೊಡೆ (ಪ್ರಾಢರಾ. ೧೦-೫೦). [ ಸಂ. ]

**ಧನಪಾಲ, ಧನಪಾಳ** (ನಾ). ಧನವನ್ನು ರಕ್ಷಿಸುವವನು ; ಕುಬೇರ. **ಧನಪಾಳ** : ಧನಪಾಳನ ಪುಣ್ಯಮನೆಯ್ದೆ ನುನಯದಿಂ ಧಾರೆಗೊಂಡು ನಿಜರಾಜ್ಯಮನಿತ್ತು ನೃಪಂ ಪುರಮಂ ಪೊಱಮಡಲನುಗೆಯ್ಯಲ್ ಶಂಭುರೂಪುದೋಱಿದನಾಗಳ್ (ತ್ರಿಪುವಿ. ೫೯-೧೧). [ ಸಂ. ]

**ಧನಪಾಳ** 'ಧನಪಾಲ' ನೋ.

**ಧನಬಲ, ಧನಬಳ** (ನಾ). ೧. ಹಣದ ಬಲ; ಸಂಪತ್ತಿನ ಸಾಮರ್ಥ್ಯ: ತನ್ನ ಧನಬಲದಿಂದ ವಿದೇಶೀವ್ಯಾಪಾರದಲ್ಲಿಯೂ ಅದು . . . ಪ್ರಬಲಿಸಲು ಶಕ್ತವಾಗಿತ್ತು (ಹಣಪ್ರ. ೩೧೨). **ಧನಬಳ**: ೨. ಒಂದು ಬಗೆಯ ತೆರಿಗೆ: ಅಲ್ಲಿ ಮನ್ನೆಯ ನಿಬನ್ದದ ಕಿಱುದೆಱೆಗಳವಾವುವೆನ್ದಡೆ ಮನೆವಣಂ ಪಿರಿಯ ರವಣಂ ಧನಬಳಂ ಕಾಳಗೊಲ್ಚು . . . ಇ ನ್ತೀ ನ ಡೆ ವ ತೆಱೆಗಳ್ (ಸೌಇಇ. XX, ೪೭-೩೭; 1074). [ ಧನ + ಬಲ್ಮ ]

**ಧನಬಳ** 'ಧನಬಲ' ನೋ.

**ಧನಮದ** (ನಾ). ಅಷ್ಟಮದಗಳಲ್ಲಿ ಒಂದು; ಐಶ್ವರ್ಯದ ಸೊಕ್ಕು; ಶ್ರೀಮಂತಿಕೆಯ ಅಹಂಕಾರ: ಧನಮದ ಪೊತ್ತಲ್ಲಿ ದರಿದ್ರವಾಗಿ ಕಾಡಿತ್ತು ಮಾಯೆ ಹರಿಶ್ಚಂದ್ರಂಗೆ (ಸಿದ್ಧವ. ಕ. ೧೫೫-೫೨೦); ಧನಮದದಿ ಕುಲಮದದಿ ವಿದ್ಯಾಘನದಿ . . . ದ್ವಿಜಗುರುವನು ವಿಘಾಡಿಸಿ (ಕುವ್ಯಾಉ. ೩-೪೦). [ ಧನ + ಮದ ]

**ಧನರಕ್ಷಕ** (ನಾ). ಸಂಪತ್ತನ್ನು ಕಾಪಾಡುವವನು; ಕುಬೇರ: ಧನರಕ್ಷಕನುಮಕೃತ್ರಿಮಜಿನಗೃಹಮಂ ನೋಡಿ ಸಮವಸೃತಿಯಂ ಪದೆದಿಂಬಿನೆ ಮಾಡಿಸ್ಕಂ (ಪಾರ್ಶ್ವಪು. ೧೩-೧೮). [ ಧನ + ರಕ್ಷಕ ]

**ಧನರಕ್ಷೆ** (ನಾ). ಸಂಪತ್ತಿನ ರಕ್ಷಣೆ: ಧನರಕ್ಷೆಗೆ ಲೋಭಂ ನಿಜತನುರಕ್ಷೆಗೆ ಪುಸಿ ನಿಜಾತ್ಮರಕ್ಷೆಗೆ ಭಯಮೆಂಬಿನಿತುಮಕಾರಣಮಿಮಱೊಳಗನಪೇಕ್ಷಕನೆನಿಸಿ ನೆಗಟ್ದನಿಱಿವ ಬೆಡಂಗಂ (ಗದಾಯು. ೩-೮). [ ಧನ + ರಕ್ಷೆ ]

**ಧನರೇಖೆ** (ನಾ). [ಸಾಮುದ್ರಿ] ಸಿರಿವಂತನಾಗುವುದನ್ನು ಸೂಚಿಸುವ ಅಂಗೈಯ ಗೆರೆ: "ಮಧ್ಯಮರೇಖೆಯು ಧನರೇಖೆಯೆನಿಸುಗು" (ಸಾಮುಲ. ೯೭-೧೧); ಈ ರೇಖೆಯೆ ಧನರೇಖೆಯಿದಾರಯ್ಯಂ ನುಡಿಗುಮುವನ ಪೇರ್ಮೆ ಸಿರಿಯಂ ನೋಱೆಪ್ಪರ್ ಧನದರುಮಿಮಾ ಶ್ರೀರಮಣಂ ಕೊಟ್ಟ ಕತದೆ ಧನಿಕರೆನಿಸ್ಕುಂ (ವಸ್ತವಂ. ೫-೩೫). 'ಅರ್ಥರೇಖೆ' ಪರಾ. [ ಧನ + ರೇಖೆ ]

**ಧನಲಕ್ಷ್ಮಿ** (ನಾ). ಐಶ್ವರ್ಯದ ಅಧಿದೇವತೆ: ಧನಲಕ್ಷ್ಮಿದೇವಿ ನಿಮಗೊಲಿಯಬೇಕೆಂದು, ಮನದಣಿಯೆ ಧನದಾನ ಮಾಡಿ ನಮಗಿಂದು (ಕಏಪು. ೧೫-೨).

**ಧನಲಕ್ಷ್ಮಿಪೂಜೆ** = ದೀಪಾವಳಿಯ ಮೂರನೆಯ ದಿನ ಮಾಡುವ ಲಕ್ಷ್ಮಿಯ ವಿಶೇಷವಾದ ಪೂಜೆ: ಧನಲಕ್ಷ್ಮಿಪೂಜೆಯಾ ದಿನವಾದುದೆಂದು ಮನೆಬಾಗಿಲಿಗೆ ನಾವು ಬಂದಿರುವೆವಿಂದು (ಕಏಪು. ೧೫-೨).

[ ಧನ + ಲಕ್ಷ್ಮಿ ]

**ಧನಲಾಭ** (ನಾ). ಹಣದ ಗಳಿಕೆ; ಐಶ್ವರ್ಯವನ್ನು ಸಂಪಾದಿಸುವುದು: ಅವನೀಪತಿಗಳನೋಲೈಸಿ ಪಡೆವ ಧನಲಾಭದಿನುನ್ನತಗಿರಿಗುಹಾಂತರಾಳಸ್ಥಿತಿಲಾಭಂ ಪೂಜ್ಯಂ (ಪಂಚತಂ. ೧೩೪-೨); ಧನಲಾಭಮ[ನೊಳ್ಪನೆಸಂ ಕನಕಮ]ನೋಪವರ ಕೂಟಮಂ ಕಬ್ಬಿಲೆಯೆ ತಿಳಿವುಗುಂ ಮುಂಬಗಲೊಳ್ (ಲೋಕೋಪ. ೧೨-೩೫). [ ಧನ + ಲಾಭ ]

**ಧನಲೋಭ** (ನಾ). ಹಣದ ಅತ್ಯಾಶೆ; ಸಿರಿಯ ದುರಾಸೆ: ತನುಲೋಭ ಮನಲೋಭ ಧನಲೋಭ ಮುಂದುಗೆಡಿಸಿ ಕಾಡಿಹುವೆನ್ನ (ಬಸವ. ೩೧೫).

[ ಧನ + ಲೋಭ ]

**ಧನಲೋಭಿ** (ನಾ). ಹಣದ ದುರಾಸೆಯುಳ್ಳವನು; ಜಿಪುಣ.

[ ಸಂ. ಧನಲೋಭಿನ್ ]

**ಧನವಂಚಕ** (ನಾ). ಹಣದ ವಿಷಯದಲ್ಲಿ ಮೋಸಮಾಡುವವನು: ಪೆಱರ್ ಧನವಂಚಕರ್ ಕರುಣಮಿಲ್ಲದೆ ಕೊಂದರ್ (ಧರ್ಮಾಮೃ. ೧೨-೧೨೦); ಭಕ್ತಿಯೆಳ್ಳನಿತಿಲ್ಲ . . . ತನುವಂಚಕ ಮನವಂಚಕ ಧನವಂಚಕ ನಾನಯ್ಯಾ (ಬಸವ. ೩೦೭); ಮೊದಲಿಸಲುಂ ಪ್ರಾಣವಂಚಕನಾದವಂಗಂ ಲಿಂಗಭಕ್ತಿ ಸುವೇಧಿಸದು ಧನವಂಚಕಂಗೆ ಸುಸಾಧ್ಯವಾಗದದು (ಬಸಪು. ೩೯-೧೯).

[ ಧನ + ವಂಚಕ ]

**ಧನವಂತ** (ನಾ). ಶ್ರೀಮಂತ; ಸಾಹುಕಾರ; ಹಣವಂತ: "ಆಢ್ಯಃ, ಸಮೃದ್ಧಃ, ಧನವಾನ್, ಇನಃ, ಇಭ್ಯಃ, ಧನೀ, ಈಶ್ವರಃ – ಈ ೭ ಧನವಂತಂ" (ಹಲಾಯು. ೩೯-೨೦೦); ಧನವಂತಂ ಶುಚಿವಿಕ್ರಯಕ್ಕೆ ಕುಶಲಂ ಮೇಧಾವಿ ರೋಗಾನ್ವಿತಂ . . . ನಿಡಿಯಂ ಚಲತ್ವಶರೀರಂ ತುಂಗನಾಸಂ ಸ್ವಬಂಧುನಿಕಾಯಕ್ಕುಪಕಾರಿ ತೆತ್ತಿಗನೆನಿಕ್ಕುಂ ತೌಲಿಗೇಹೋದ್ಭವಂ (ಜಾತತಿ. ೧೭-೭); ಧನವಂತಂ ಸ್ನಿಗ್ಧತ್ವಚನ ನೂನಸೌಖ್ಯಂ ಮೃದುತ್ವಚಂ (ಲೋಕೋಪ. ೧೧-೩೫); ಸ್ಥೂಲಭಾಗ್ಯಪ್ರಾಣಿ ಭಾಷ್ಪುರೆ ಲೋಲಕಾರುಣ್ಯಾತ್ಮ ಭಲರೇ ಪಾಲಿತಾರ್ಥನಿಕಾಯ ಭಲರೇ ಭಲರೆ ಧನವಂತ (ಬಸಪು. ೩೦-೨೫); ಕಾಮವನ್ನು ಬಿಟ್ಟರೆ ಧನವಂತನಾಗುತ್ತಾನೆ (ವಚಭಾ. ೦೮೧).

[ ಸಂ. ಧನವತ್ ]

**ಧನವಂತ್ರಿ** 'ಧನ್ವಂತ್ರಿ' ನೋ.

**ಧನವಿಕಾರ** (ನಾ). ೧. ಐಶ್ವರ್ಯದಿಂದ ಉಂಟಾಗುವ ಅವಗುಣ; ಧನಮದ. ೨. ಹಣದ ಮೇಲಿನ ಮೋಹ,–ಆಸೆ: ಲಿಂಗವಿಕಾರಿಗೆ ಅಂಗವಿಕಾರವೆಂಬುದಿಲ್ಲ ಜಂಗಮವಿಕಾರಿಗೆ ಧನವಿಕಾರವೆಂಬುದಿಲ್ಲ (ಬಸವ. ೭೯೫); ತನು ಮನವನಂಡಲೆವ ಧನವಿಕಾರದ ಭಯ ನೋಡಾ (ಸಿದ್ಧೇವ. ೪೫-೧೨೮). [ ಧನ + ವಿಕಾರ ]

**ಧನವಿಕಾರಿ** (ನಾ). ಐಶ್ವರ್ಯದ ಮದವುಳ್ಳವನು: ಮನವಿಕಾರಿಗೆ ಲಿಂಗವೆಲ್ಲಿಯದೊ ಧನವಿಕಾರಿಗೆ ಪ್ರಸಾದವೆಲ್ಲಿಯದೊ (ಸಿದ್ಧವ. ಕ. ೪೦೮-೧೩೦೪).

[ ಸಂ. ಧನವಿಕಾರಿನ್ ]

**ಧನವಿಧೇಯಕ** (ನಾ). ಹಣಕಾಸಿನ ಮಸೂದೆ: ಧನವಿಧೇಯಕಗಳ ಮತ್ತು ಇತರ ವಿತ್ತವಿಧೇಯಕಗಳ ಸಂಬಂಧವಾಗಿ . . . ಒಂದು ವಿಧೇಯವನ್ನು ಮಂಡಿಸುವುದು ಸಂಸತ್ತಿನ ಉಭಯಸದನಗಳಲ್ಲಿ ಯಾವುದೊಂದರಲ್ಲಾದರೂ ಪ್ರಥಮತಃ ಪ್ರಾರಂಭವಾಗಬಹುದು (ಭಾಧಾಕ. ೫೨).

[ ಧನ + ವಿಧೇಯಕ ]

**ಧನವಿಹೀನ** (ನಾ). ಹಣವಿಲ್ಲದವನು; ಬಡವ: ಅಶ್ವಮೇಧವು ಘನವೆನಿಸಿ ಬಹುದಕ್ಷಿಣಾನ್ವಿತವಾಗಬೇಕದಕೆ ಧನವಿಹೀನನು ನಾನು ರಣಹತ ಮನುಜಪತಿಗಳ ಸುತರು ಬಾಲಕರನವರತವತ್ಯಂತಶೋಕಾಕ್ರಾಂತರಾಗಿಹರು (ತಿಮ್ಮಅ. ೧-೧೭); ಧನವಿಹೀನಗೆ ತನ್ನ ಕುಲ ಜಾತಿ ಧರ್ಮಂಗಳನುಗೂಡಿ ಕೊನೆಸಾಗುವುವೆ (ಕರ್ಣಾವೃ. ೯-೨೨). [ ಧನ + ವಿಹೀನ ]

**ಧನವು** (ನಾ). ಹಣ; ಧನ: ತನುವಿನ ಧನವಿನ ಪೆಂಡಿರ ತನಯನ ಕಡುಮೋಹದಿಂದೆ ನೀನಿಂತಾದ್ಯೆ (ಧರ್ಮಾಮೃ. ೧೪-೭೭); ರಾಜ್ಯನಿವಹದೊಳ್ಧನವಿಗಂ ಬಗೆಯಿಲ್ಲ ಮುನ್ನ ಕೌರವನು ಸೇದಿಹನೆಲ್ಲ ಪಣಗಳಂ ಪುಜಿಗಳಲಿ ಹರಣವನ್ನುಳಿಸಿ ಬಿಟ್ಟು (ತುರಂಗ. ೮೦-೭). 'ದನವು' ಪರಾ. ℙ ಇದನ್ನು 'ಕದ, ಕದವು', 'ದನ, ದನವು' ಮುಂತಾದ ಶಬ್ದಗಳ ಸಾದೃಶ್ಯದಿಂದ ಮಾಡಿಕೊಳ್ಳಲಾಗಿದೆ. [ <ಸಂ. ಧನ ]

**ಧನವ್ಯಸನ** (ನಾ). ಸಪ್ತವ್ಯಸನಗಳಲ್ಲಿ ಒಂದು; ಹಣ ಕೂಡಿಡುವುದರಲ್ಲಿ ಅತಿಯಾದ ಆಸಕ್ತಿ: ತನುವ್ಯಸನ ಮನವ್ಯಸನ ಧನವ್ಯಸನ ವಾಹನವ್ಯಸನ ಉತ್ಸಾಹವ್ಯಸನ ಸೇವಕವ್ಯಸನ ಮತ್ಸರವ್ಯಸನವೆಂಬ ಸಪ್ತವ್ಯಸನಂಗಳ ಸ್ವಪ್ನದಲ್ಲಿ ನೆನೆಯದೆ (ವಚಸಂ. ೪೫೩-೮೯); ತನುವ್ಯಸನ ಮನವ್ಯಸನ ಧನವ್ಯಸನ ರಾಜ್ಯವ್ಯಸನ ವಿಶ್ವವ್ಯಸನ ಉತ್ಸಾಹವ್ಯಸನ ಸೇವಕ(ಸೇವಕಾ)ವ್ಯಸನ ಎಂಬ ಸಪ್ತವ್ಯಸನಂಗಳ ಸಂಹಾರವ ಮಾಡಿದ ನಿರ್ವ್ಯಸನಿಯ ನೋಡಾ (ಸಿದ್ಧೇವ. ೦೫೮-೪೭೭). 'ಸಪ್ತವ್ಯಸನ' ಪರಾ. [ ಧನ + ವ್ಯಸನ ]

**ಧನವ್ಯಯ** (ನಾ). ಹಣದ ವೆಚ್ಚ; ಧನವ್ಯಯ: ಅರ್ಥಶಾಸ್ತ್ರವು ಧನಾರ್ಜನೆ ಮತ್ತು ಧನವ್ಯಯ ಉದ್ಯೋಗದಲ್ಲಿ ನಿರತರಾಗಿರುವ ಮನುಷ್ಯರನ್ನು ಕುರಿತು ವಿಚಾರ ಮಾಡುತ್ತದೆ (ಭಾರದ. ೩೫೨).

[ ಧನ + ವ್ಯಯ ]

**ಧನಸಂಗ್ರಹ** (ನಾ). ೧. ಹಣವನ್ನು ಕೂಡಿಡುವುದು: ಕೇಂದ್ರ ಸರ್ಕಾರಕ್ಕೂ ಪ್ರಾಂತ ಅಥವಾ ಸ್ಥಳೀಯ ಧನಸಂಗ್ರಹಸಂಸ್ಥೆಗಳಿಗೂ ಯಾವ ಸಂಬಂಧಗಳು ಏರ್ಪಟ್ಟಿವೆ (ಹಣಪ್ರ. ೨೨೭). ೨. ಒಬ್ಬಾತನ ಹೆಸರು: ಮನ್ನೆಯವಲ್ಲಭನುಂಮೆನಿಸಿದ ಹಿರಿಯ ಧನಸಂಗ್ರಹನೆ ಮಗ(ಂ) ಸನ್ನಪತಸಂ . . . ಧನಸಂಗ್ರಹನ ಮಗ (ಸೌಇಇ. XX, ೭೧-೩೩ : 1109) : ಶ್ರೀಕೈಲಾಸನೃಪಂ ಜಗತ್ತಿಳಕನುದ್ದಾಮಧಾಮಂಗೆ . . . ಸಂಗ್ರಾಮರಾಮಂ ಜಯಶ್ರೀಕಾನ್ತಂ ಧನಸಂಗ್ರಹಂ ತನಯಂ (ಸೌಇಇ. XX, ೩೦೯-೧೮ ; 12ನೆಯ ಶತ). [ ಧನ + ಸಂಗ್ರಹ ]

**ಧನಸಂಚಯ** (ನಾ). = ಧನಸಂಗ್ರಹ ೧: ಕೃಷಿ ಗೋರಕ್ಷಣ ವಾಣಿಜ್ಯಗಳಿಂದ ಧನಸಂಚಯ ಮಾಡಿ ತದ್ವಾರಾ ಜಗತ್ತನ್ನು ಪೋಷಿಸುತ್ತಾ ಐಶ್ವರ್ಯವನ್ನು ಭೋಗಿಸತಕ್ಕದ್ದು (ಮಾಧವ. ೩೯೫).
[ ಧನ + ಸಂಚಯ ]

**ಧನಸಂಪತ್ತಿ** (ನಾ). ಹಣಕಾಸು ; ಐಶ್ವರ್ಯ : ಧನಸಂಪತ್ತಿ ವಿಭುತ್ವವೃತ್ತಿ ಘನದೋರ್ದರ್ಪಪ್ರಭಾವ್ಯಾಪ್ತಿ . . . ತನ್ನೊಳಳವಟ್ಟಿರ್ಪಂತಿರಲ್ (ನೇಮಿಪು. ೧-೭೮) ; ಅಜ್ಞಾನದಿಂದಲೂ ಧನಸಂಪತ್ತಿಯಿಲ್ಲದ್ದರಿಂದಲೂ . . . ಆ ಪ್ರದೇಶದ ಜನರು ಎದುರಿಗಿರುವ ಪ್ರಯೋಜನವನ್ನು ರೂಢಿಸಲಾಗದಿರಬಹುದು (ಹಣಪ್ರ. ೧೨೬). [ ಧನ + ಸಂಪತ್ತಿ ]

**ಧನಸಂಸ್ಥ** (ನಾ). [ಜ್ಯೋತಿ] ಜಾತಕನ ಜನ್ಮಲಗ್ನದಿಂದ ಎರಡನೆಯ ಸ್ಥಾನದಲ್ಲಿರುವವನು : ಖರರುಜ್ಜಂದನನೊಂದಿದಂದುದಯದೊಳ್ ರೋಗಾನ್ವಿತಂ . . . ಧನಸಂಸ್ಥನಾಗಧನನಕ್ಕುಂ (ಜಾತತಿ. ೧೮-೧೪).
[ ಸಂ. ]

**ಧನಸಹಾಯ** (ನಾ). ಆರ್ಥಿಕ ನೆರವು ; ಹಣದ ಪೂರೈಕೆ : ಆ ಕನ್ಯೆಯರ ಪಾಣಿಗ್ರಹಣ ಮಾಡುವುದರಿಂದ ಮಂಡಲೇಶ್ವರರಿಗೆ ಜನ ಧನಸಹಾಯ ಮಾತ್ರವಲ್ಲದೆ ಆ ಸಾಮಂತರಿಗೂ ದೊಡ್ಡವರೊಡನೆ ನಂಟುತನ ಬೆಳೆಸಿದೆವೆಂಬ ಮಾನ ಗೌರವಗಳೂ ಉಂಟಾಗುತ್ತಿದ್ದುವು (ಶಾಂತಲಾ. ೯೩); ಸರ್ಕಾರದ ಧನಸಹಾಯ ಪಡೆದು ಖಾಸಗಿಸಂಸ್ಥೆಗಳು ಬೆಳೆದಿವೆ (ರೂಢಿ).
[ ಧನ + ಸಹಾಯ ]

**ಧನಸ್ಥಾನ** (ನಾ). [ಜ್ಯೋತಿ] ಎರಡನೆಯ ಸ್ಥಾನ: ದಿವಸೇಂದ್ರಂ ಕೇಂದ್ರ ಲಾಭಾಷ್ಟಮ ನವಮ ಧನಸ್ಥಾನದೊಳ್ ಭೌಮನಿಂ . . . ಲಗ್ನದಿನುಪಚಯ ತೂರ್ಯಾಂತ್ಯದೊಳ್ ಮಾಟ್ಕುಮೊಳ್ಪಂ (ಜಾತತಿ. ೧೦-೩) ; ಅಮರೇಜ್ಯಂ ಕೇಂದ್ರ ಲಾಭಾಷ್ಟಮ ಸಹಜ ಧನಸ್ಥಾನದೊಳ್ ಲಗ್ನದಿಂ ಪಂಚಮಷಷ್ಠೈಕಾದಶಾಸ್ತದ್ವಿತನು ನವಮಪಾತಾಕರ್ಮಂಗಳೊಳ್ . . . ಪೂಜ್ಯನಕ್ಕುಂ (ಜಾತತಿ. ೧೦-೦೦). [ ಧನ + ಸ್ಥಾನ ]

**ಧನಹರಿ** (ನಾ). ಒಂದು ಬಗೆಯ ಸುಗಂಧದ್ರವ್ಯ : "ರಾಕ್ಷಸೀ, ಚಂಡಾ, ಧನಹರೀ . . . ಗಣಹಾಸಕಃ–೭ ಕರೀಕಚೋರಂ, ಬಲರಾಕ್ಷಸೀಗಡ್ಡೆ" (ಸಿದ್ಧಾಂತಿ. ೧೪೧). [ ಸಂ. ಧನಹರೀ ]

**ಧನಹಾರಿ** (ನಾ). = ಧನಹರಿ : "ರಾಕ್ಷಸೀ–ತುಳಸಿ, ಚಂಡೆ, ಧನಹಾರಿ" (ಓಷಧಿ. ೧೩೭). [ < ಸಂ. ಧನಹರೀ ]

**ಧನಹೀನ** (ನಾ). ಧನವನ್ನು ಕಳೆದುಕೊಂಡವನು ; ದರಿದ್ರ : ಧರ್ಮನಿಮಿತ್ತವಾಗಿ ಧನಹೀನನಾದಾತಂಗೆ ಬಡತನವಾದೊಡಂ ಒಪ್ಪುವಂ (ಪಂಚತಂ. ೩೦೧-೧೧) ; ಲಿಂಗಮುದ್ರವಿಲ್ಲದೆ ಕಟಿಗಾಗಿ ದೊಡ್ಡಿತಾಗಿರಲ್ ಧನವಂತನಪ್ಪಂ ಉದ್ದವಾಗಿರಲ್ ಧನಹೀನನಪ್ಪಂ (ಶೋಕೋಪ. ೧೧-೫ ಟೀಕೆ) : ಧನಹೀನು ಧನಮಿತ್ರಂ ಧನಮುಳ್ಳವನಾವನಸ್ವರೂಪಂ ಚಿದ್ರೂಪನಿವಾಸಿಯಾನದರ್ಕಂದೆನಗಮುವಂಗಂ ವಿದೂಷಕರ್ ಪಗೆವೊಯ್ದರ್ (ದಶಕು. ೬-೮೧) ; ಧನಹೀನರು ಸೇರಿ ಬರುತಿರೆ ಧನವುಳ್ಳ ಜನರು ಪಾತಕಿಯ ಕಂಡಂತೆ ತನುವ ಕೊಂಕಿಪರು (ಕರ್ಣವ . ೯.೧೫). [ ಧನ + ಹೀನ ]

**ಧನಾಕಾಂಕ್ಷೆ** (ನಾ). ಹಣದ ಆಶೆ : ಅವಳಿಗೆ ತಂದೆಯ ವಿಷಯದಲ್ಲಿರುವ ಪ್ರೀತಿಯು ಧನಾಕಾಂಕ್ಷೆಯಿಂದಲ್ಲವೆಂದೂ ವಿಶದವಾಯಿತು (ಕವಿಕ. ೨೪).
[ ಧನ + ಆಕಾಂಕ್ಷೆ ]

**ಧನಾಗಮ** (ನಾ). ಹಣದ ಪ್ರಾಪ್ತಿ ; ಧನಲಾಭ : ತನಗೆ ಧನಾಗಮಮಂ ಕಾಣದೆ (ನೇಮಿಪು. ೪-೫೩ವ) ; ಪ್ರಾಜ್ಞನಾಗಿರ್ಪವನಧಿಕಾರಿಯಾದಂದು . . . ಯಶವಹುದಮಿತ ಧನಾಗಮವಪ್ಪುದು ನಾಕಲೋಕದ ಸುಖವಹುದು (ಇಂಚಾಪ. ೧೭೩-೫೧). [ ಧನ + ಆಗಮ ]

**ಧನಾಢ್ಯ** (ಗು). ೧. ಶ್ರೀಮಂತಿಕೆಯಿಂದ ಕೂಡಿದ : ಗೃಹೋಪಕಂಠವನಭೂಜಮೆ ಕಲ್ಪಮಹೀಜದೊಪ್ಪಮಂ ತಳೆಯೆ ಧನಾಢ್ಯ ದಂಪತಿಯೆ ತದ್ಭವದಂಪತಿಯಂದಮಂ ಪುದುಂಗೊಳಿಸೆ ಪುರಂ ವಿರಾಜಿಪುದು ದೇವಕುರುಪ್ರತಿಮಾನಮೆಂಬಿನಂ (ಚಂದ್ರಪು. ೧೧-೭೨). (ನಾ). ೨. ಹಣವಂತ ; ಸಿರಿವಂತ : "ಹೊನ್ನುಳ್ಳವಂ ಧನಾಢ್ಯನೆನಿಕ್ಕು" (ಮಂಗರಾ. ೭೦-೧೬) ; ಉದಯಿಸಿದಾಲಯಕ್ಕುಪಚಯಾಲಯದಲ್ಲಿ ಸಮಸ್ತಸೌಮ್ಯರೊಂದಿದೊಡತಿಧನ್ಯನೆಂಗುಮವರಾಯೆಡೆಯೊಳ್ ನೆಲಸಲ್ ಧನಾಢ್ಯಂ (ಜಾತತಿ. ೧೨-೩೩).
[ ಧನ + ಆಢ್ಯ ]

**ಧನಾದೇಶ** (ನಾ). ಅಂಚೆಯ ಮೂಲಕ ಹಣವನ್ನು ಕಳಿಸುವ ವ್ಯವಸ್ಥೆ ; ಮನಿಯಾರ್ಡರು : ಇತ್ತೀಚೆಗೆ ಧನಾದೇಶದ ಶುಲ್ಕವನ್ನು ಏರಿಸಿದ್ದಾರೆ (ರೂಢಿ). [ ಧನ + ಆದೇಶ ]

**ಧನಾಧಿಕ** (ನಾ). = ಧನಾಢ್ಯ೨: "ಧನಿ ಧನಾಧಿಕನಾಢ್ಯಂ" (ವಸ್ತುಕೋ. ೭೨-೭೫). [ ಧನ + ಅಧಿಕ ]

**ಧನಾಧಿಪ** (ನಾ). ೧. ಶ್ರೀಮಂತ ; ಧನಿಕ : ಜಿನೇಂದ್ರಮಂದಿರಮಂ . . . ಕೀರ್ತಿ ಧೀಂಕಿಡೆ ದೆಸೆಗಂ ವಿಳಾಸದೊಳು ಮಾಡಿಸಿದಂ ಭರದಿಂ ಧನಾಧಿಪಂ (ಪುಣ್ಯಾಸ್ರ. ೮-೪). ೨. ಸಂಪತ್ತಿನ ಒಡೆಯ; ಕುಬೇರ. [ ಧನ+ ಅಧಿಪ ]

**ಧನಾಧೀಶ್ವರ** (ನಾ). = ಧನಾಧಿಪ ೨: "ಧನಾಧೀಶ್ವರಂ ಬಲನುಂ ಪಟ್ಟಣಮೇಕಕುಂಡಲಮೆನಿಕ್ಕುಂ" (ನಾನಾರ. ೧೪೮). [ ಧನ + ಅಧೀಶ್ವರ ]

**ಧನಾಧ್ಯಕ್ಷ** (ನಾ). ೧. = ಧನಾಧಿಪ ೨: "ಐಳಬಿಳಃ, ಪೌಲಸ್ತ್ಯಃ . . . ಧನಾಧ್ಯಕ್ಷಃ, ಉತ್ತರಾಶಾಪತಿಃ . . . ಪುಣ್ಯಜನೇಶ್ವರಃ–ಈ ೧೭ ಕುಬೇರನ ಪೆಸರ್" (ಹಲಾಯು. ೧೪-೭೮) ; "ಯಕ್ಷಂ ಮನುಷ್ಯಧರ್ಮಂ ನೃವಾಹನ ಧನಾಧ್ಯಕ್ಷನುತ್ತರದಿಗ್ವರಂ . . . ಎನೆ ಕುಬೇರನೆನಿಸಿಕ್ಕು" (ಮಂಗರಾ. ೧೬-೧೫) ; ಮತ್ತಮಾ ಧನಾಧ್ಯಕ್ಷನ ಕಟಿದ ವಸುಧಾರೆ (ಮಹಾನೇ. ೮-೪೨ ವ). ೨. ಕೋಶಾಧಿಕಾರಿ ; ಭಂಡಾರಿ. [ ಧನ + ಅಧ್ಯಕ್ಷ ]

**ಧನಾಯೆ** (ನಾ). ಹಣವನ್ನು ಸಂಪಾದಿಸುವ ಆಸೆ; ಧನಲೋಭ : "ತೃಷ್ಣಾ, ಅಭಿಲಾಷಾ . . . ಧನಾಯಾ, ಗರ್ಧನಾ–ಈ ೭ ಕಾಂಕ್ಷೆ" (ಹಲಾಯು. ೭೦-೨೦೯). [ ಸಂ. ಧನಾಯಾ ]

**ಧನಾರ್ಜನೆ** (ನಾ). ಹಣದ ಸಂಪಾದನೆ : ಕರ್ಮಗಳಲಿ ಧನಾರ್ಜನೆಗಳಲಿ ಶರ್ಮ ಪುತ್ರೋತ್ಪತ್ತಿ ಕರದಿಂ ನಿರ್ಮಲಿನದಮೃತತ್ವವಾಗದು ತ್ಯಾಗಮುನವಿರದೆ (ಗಗತಾ. ೧೬-೨೩) ; ಮಾನವನು ಸರ್ವ ಪ್ರಯತ್ನದಿಂದಲೂ ಧನಾರ್ಜನೆ ಮಾಡಬೇಕು (ಶುಕ್ರಾರ. ೮೭ ಟೀಕೆ).
[ ಧನ + ಅರ್ಜನೆ ]

**ಧನಾರ್ಥಿ** (ನಾ). ಹಣವನ್ನು ಬಯಸುವವನು : ಜಯಲಕ್ಷ್ಮೀಧಾಮ ಧನಾರ್ಥಿಯೆನಲ್ಲಿಂ (ಪಂಚತಂ. ೧೯೪-೦೪). [ ಸಂ. ಧನಾರ್ಥಿನ್ ]

**ಧನಾಶಾವೃದ್ಧಿ** (ನಾ). = ಧನಾಯೆ : "ಧನಾಶಾವೃದ್ಧಿ ಧನಾಯಾಪ್ಯೆ" (ವಸ್ತುಕೋ. ೭೨-೭೫). [ ಸಂ. ]

**ಧನಾಶ್ರಯ** (ನಾ). ಕೋಶಾಗಾರ ; ಭಂಡಾರ : "ಆ ಲತಿಕಾಸಮೂಹ ಗುರುಗುಂಜಿ ಧನಾಶ್ರಯ ಗುಂಜವಾಚಕಂ" (ನಾನಾರ. ೧೩೪).
[ ಧನ + ಆಶ್ರಯ ]

**ಧನಾಶ್ರೀ** (ನಾ). [ಸಂಗೀತ] ಒಂದು ರಾಗದ ಹೆಸರು : ನಮ್ಮ ಧನ್ಯಾಸಿಯನ್ನೇ ಹೋಲುವ 'ಧನಾಶ್ರೀ' ರಾಗದ ರೂಪವರ್ಣನೆಯನ್ನು ಹೀಗೆ ಹೇಳಲಾಗಿದೆ (ಭಾರದ. ೫೪೩). [ಸಂ.]

**ಧನಿ**$_1$ 'ದನಿ$_1$' ನೋ.

**ಧನಿ**$_2$ (ನಾ). ೧. ಹಣವಂತ; ಧನಿಕ: "ಧನಿ ಧನಾಧಿಕನಾಢ್ಯಂ" (ವಸ್ತುಕೋ. ೬೨-೬೫) ; ನಿಲೆ ಬುಧಂ . . . ಉತ್ಕಟಕೌಲಿಗಳೊಳಾಚಾರ್ಯಂ ಬಹುಸ್ತ್ರೀಸುತಂ ಗುರುಭಕ್ತಂ ಧನಿ [ಪಾಠಾಂ. ದಾನಿ] ಸತ್ಯವಾಕ್ಯನೆನಿಕುಂ (ಜಾತತಿ. ೧೭-೨೨). ೨. ಒಡೆಯ ; ಯಜಮಾನ ; ಸ್ವಾಮಿ : ನಾಲ್ವತ್ತುಕೋಟಿ ಸಂಪತ್ತಿಗೆ ಅವನು ಧನಿಯಾಗಿದ್ದನು (ಬುದ್ಧಜಾ. ೧೩೪) ; ಬಡಬಗ್ಗರು ಕೈಒಡ್ಡಿದಾಗ ನೀಡೂ ಧನಿ ಬಾಪೂಸಾಬ (ಗ್ರಾಮಾಯ. ೨೬) ; ಧನಿಯ ಹೆಂಡತಿ ಕಂಡರೆ . . . ಶಿಕ್ಷೆ ಕೂಡ ಸಿಗಬಹುದಿತ್ತು (ರಕ್ತರೂ. ೨). ೩. ಧನಾಧಿಪ ; ಕುಬೇರ : "ಐಳಬಿಳಃ, ಪೌಲಸ್ತ್ಯಃ . . . ಧನೀ, ಪುಣ್ಯಜನೇಶ್ವರಃ– ಈ ೧೭ ಕುಬೇರನ ಪೆಸರ್" (ಹಲಾಯು. ೧೪-೭೯) ; ಸುರಪತಿ ಕೇಳ್ ಶಿಖಿ ಕೇಳ್ ಯಮ ಕೇಳ್ . . . ಧನಿ ಕೇಳ್ ಶಿವ ಕೇಳ್ ದುರುಳನೊಡಲ ಮೇಲಿನ್ನಿರೆನಿರೆನೆನೆಂದಡುಪ್ರವಪೊಲ್ ತಲೆ ತಿರು ಗಿ ದು ದು (ವೀರೇಜ. ೧-೬೩) ; ಧನಿ ಧನದನೆಂಬ ನಾಮಂ ತನಗೇಕೆ ಪರಾರ್ಥರಕ್ಷಕಂಗೆ ಕುಬೇರಂಗೆನುತಿಟಿಕೆಯ್ವರ್ ತಮ್ಮಯ ಧನದನೆಂಕೆಯನಡಾಯದಾ ಪುರದ ಸಿರಿವಂತರ್ (ಶಾಂತೀಶ್ವ. ೧-೧೨೦) ; ಬೇಡು ಬೇಡು ದಾನವೇಂದ್ರನೊ ಯಿಂದ್ರಪದವೋ . . . ಭೂನಾಥ ಹರಿಶ್ಚಂದ್ರನಂತೆ ಸಾಮ್ರಾಜ್ಯವೊ ಧನಿಯಂತೆ ನವನಿಧಿಗಳೋ (ನವಮೋ. ೦೯-೬೨). ೪. ಬುದ್ಧ : "ಬುದ್ಧನದ್ವಯವಾದಿ ದಶಬಲಂ ಜಿನನತನುಜಿದ್ಧರ್ಮವಾನ್ ಶೌಕ್ಯನಾ ಸುಗತನಾ ಲೋಕಜಿದ್ಧನಿ ಸಮಂತಭದ್ರನೆನಲ್ಕೆ ಬೌದ್ಧಂ" (ಮಂಗರಾ. ೭-೨೩). [ಸಂ. ಧನಿನ್]

**ಧನಿಕ** (ನಾ). ಹಣವಂತ ; ಸಿರಿವಂತ ; ಸಾಹುಕಾರ : ಹೃದಯದೊಳೆನ್ನವರ್ ಪೆಱರವರ್ ಧನಿಕರ್ ಬಡವರ್ ಸಮಂತು ಬೇಡದವರಡುರ್ತು ಬೇಡಿದವರೆನ್ನದೆ . . . ಕೋಶಗೃಹಂ ಬಱಿದಾಗೆ ಕೊಟ್ಟು (ಚಂದ್ರಪು. ೬-೮೧) ; ಲೆಕ್ಕವಿಲ್ಲದೆ ಬಾಳ್ವ ಧನಿಕನನಕ್ಕಱಿಂದೀರ್ವೆದು ಸಾಸಿರದೊಕ್ಕಲಾಗಿ ಬರ್ದುಂಕು ನೀನೆಂದುಱಿ ಪರಸಿದಂತ (ಬಸವು. ೧-೩೪) ; ಧನಿಕನಂತೆ ಸಮಸ್ತಸುಖ ಸಂಜನಿಸುವುದೆ ಸರ್ವಕ್ಕೆ ಸಾಧನ ಧನ (ಕುವ್ಯಾಲು. ೪-೫೫) ; ಧನದಾಸೆಗಾಗಿ ನಾ ಧನಿಕರ ಮನೆಗಳ ಕೊನೆಬಾಗಿಲಲಿ ನಿಂದು ತೊಳಲಿ ಬಳಲಿದೆನೊ (ಪುರಂದ. ೪-೧೨೬-೧) ; ಕೊಟ್ಟ ಧನಿಕರು ಬಂದು ನಿಷ್ಠುರದ ಮಾತಾಡಿ ಕೆಟ್ಟ ಬೈ ಬೈಯುವರು (ಕಎಪು. ೨೨-೧). [ಸಂ.]

**ಧನಿಯ**$_1$ 'ಧಣಿಯ' ನೋ.

**ಧನಿಯ**$_2$ (ನಾ). ಸ್ತುತಿಪಾತ್ರ ; ಧನ್ಯ ; ಕೃತಾರ್ಥ : ಮನದ ಭಾವಗಳ ಪೂರ್ಣದಿನೊರೆಯಲರಿತ ಕವಿ . . . ಅನುರೂಪದಿಂದ ವಾಸ್ತವಗೊಳಿಪ ಕೃತಿಚತುರ ಧನಿಯರಿವರೆಲ್ಲಿಹರೊ ? (ಮಂಕುಕ. ೫೬೭).

[<ಪ್ರಾ. ಧಣಿಅ./ಸಂ. ಧನ್ಯ]

**ಧನಿಯ**$_3$ (ನಾ). ಕೊತ್ತುಂಬರಿಬೀಜ ; ಹವೀಜ : ವಾಯುವಿಳಂಗ, ಹಿಪ್ಪಲಿ, ಬೆಲ್ಲ, ಧನಿಯ . . . ಒಂದು ವರ್ಷಕ್ಕಿಂತಲೂ ಹೆಚ್ಚಾಗಿ ಹಳೆಯದಾಗಿರಬೇಕು (ಸಕವ್ಯ. XIII, ಪ್ರಸ್ತಾವನೆ) ; ಧನಿಯ, ಸಾಸಿವೆ, ಹುಚ್ಚೆಳ್ಳು ಮೊದಲಾದುವುಗಳನ್ನು ಸ್ವಲ್ಪಸ್ವಲ್ಪವಾಗಿ ಅನುಕೂಲವಾದ ಸ್ಥಳಗಳಲ್ಲೆಲ್ಲಾ ಬೆಳೆಯುತ್ತಾರೆ (ವ್ಯವಮ. ೪೪). [<ಸಂ. ಧನ್ಯಾ]

**ಧನಿಷ್ಠಾ**$_1$ (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ ; ಫೆಬ್ರುವರಿ ತಿಂಗಳ ೨ನೆಯ ತಾರೀಖಿನಿಂದ ೧೫ನೆಯ ತಾರೀಖಿನ ಮಧ್ಯದ ಅವಧಿಯಲ್ಲಿ ಪ್ರಾರಂಭವಾಗುವ ಮಳೆ : (ಮಗ್ನಜಿ. IV, ೭೬೪). [ಸಂ. ಧನಿಷ್ಠಾ]

**ಧನಿಷ್ಠ**$_2$ (ನಾ). ಬಹಳ ಧನವುಳ್ಳವನು ; ದೊಡ್ಡ ಶ್ರೀಮಂತ. [ಸಂ.]

**ಧನಿಷ್ಠೆ** (ನಾ). ೧. ಬಹಳ ಹಣವಂತಳಾದ ಹೆಂಗಸು. ೨. [ಜ್ಯೋತಿ] ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಇಪ್ಪತ್ತಮೂರನೆಯದು : "ಧನಿಷ್ಠಾ, ಶ್ರವಿಷ್ಠಾ–ಈ ೨ ದನಿಷ್ಠೆ" (ಹಲಾಯು. ೧೦-೫೧) ; ಧನಿಷ್ಠೆ ಮೊದಲೆನೆ ಭಗಣಾ (ಜಾತತಿ. ೨೪-೧೫) ; ಅಶ್ವಿನಿ ಭರಣಿ ಕೃತ್ತಿಕೆ . . . ಶ್ರವಣ ಧನಿಷ್ಠೆ . . . ರೇವತಿಗಳೆಂಬಿಪ್ಪತ್ತೇಳು ತಾರೆಗಳು (ವಿವೇಕ. ೨೫೪). [ಸಂ. ಧನಿಷ್ಠಾ]

**ಧನಿಸುತ** (ನಾ). ಕುಬೇರನ ಮಗ ; ನಳಕೂಬರ : ಭದ್ರನೊ ದತ್ತಕನೊ ಪಂಚಾಳನೋ ಮೇಣ್ ಕೂಚಿಮಾರನೊ ಮೇಲೆ ಧನಿಸುತನೋ ಜಯಂತನೊ ಕಾಮನೋ ಎನಲು (ಬಸವು. ೪೦-೧೪). [ಧನಿ$_2$ + ಸುತ]

**ಧನು** (ನಾ). ೧. ಬಿಲ್ಲು ; ಧನುಸ್ಸು : "ಧನು ಕೋದಂಡಂ ಬಾಣಾಸನಮಸ್ತ್ರಂ ಕಾರ್ಮುಕಾಖ್ಯಮದು ಚಾಪಂ" (ವಸ್ತುಕೋ. ೫೫-೧೭) ; ಧನು ಕಾಪಂ ಗಿಕ್ಷುದಂಡಂ (ಆದಿಪು. ೩-೯೧) ; ಧನುವುಂ ಕರ್ಬಿನ ಬಿಲ್ ಗಡಂ (ಕಾವ್ಯಾವ. ೭೫೨) ; ಧನುವಿನ ಟಂಕೃತಂ ವಿಶಿಖಘೀಂಕೃತಂ . . . ವನಜಭವಾಂಡಮಂ ಪುದಿಯೆ (ಜಗವಿ. ೧೫-೫) ; ಧನುವಂ ಕೊಂಡೊತ್ತಿ . . . ಠಾಯ್ಪಿನಿಂ ದೇಱಿಸುವ ಸರಭಸಕ್ಕುರ್ವಿ ತರ್ಗಿತ್ತು ನಾಗೇಂದ್ರನ ಭೋಗಂ (ಕುಸುಮಾ. ೧೧-೪೫) ; ಧನು ತನಗೆ ನೆಗಹಲ್ಕೆ ಕೃಷ್ಣಾಜಿನವೊ ಸಾಲಗ್ರಾಮದೇವರೊ (ಕುವ್ಯಾಅ. ೧೫-೧೭). ೨. ನಾಲ್ಕು ಹಸ್ತಗಳ ಒಂದು ಅಳತೆ ; ಧನುವೆಂಟು ನಾಲ್ಕು ನಾಲ್ಕಂತನುಕ್ರಮದಿನುದಯಮೆನಿಪ ಮೂಱುಂ ಪೀಠಂ ಘನವೈಡೂರ್ಯಮಯಂ ಭರ್ಮನಿರ್ಮಿತಂ ಪಂಚರತ್ನಸಂಚಿತ ಮೆಸೆಗುಂ (ಪಾರ್ಶ್ವಪು. ೧೬-೩೦) ; ವ್ಯಂತರದೇವರ್ಕಳೆಲ್ಲರುತ್ಸೇಧವು ಸಂತತ ಹತ್ತುಧನುಗಳು (ದ್ವಾದಶಾ. ೬-೧೫೨). ೩. [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಒಂಬತ್ತನೆಯದು ; ಮೂಲಾ, ಪೂರ್ವಾಷಾಢ ಮತ್ತು ಉತ್ತರಾಷಾಢದ ಒಂದು ಪಾದ ಸೇರಿ ಧನೂರಾಶಿಯಾಗುತ್ತದೆ : ಚರರಾಶಿ ಕುಳೀರ ತುಲಾಧರ ಮೃಗ ಮೇಷಂ ಘಟೋಕ್ಷ ವೃಶ್ಚಿಕ ಸಿಂಹಂ ಸ್ಥಿರರಾಶಿ ಧನು ಝಷಂ ಸುಂದರಿ ಮಿಥುನಂ ದ್ವಿಸ್ವಭಾವರಾಶಿಗಳೆನಿಕುಂ (ಜಾತತಿ. ೧-೨೩) ; ಧನು ಮಿಥುನಂ ಘಟಂ ವನಿತೆ ಗೋಪತಿ ವೃಶ್ಚಿಕಮೆಂಬ ಲಗ್ನಮೇಟನೆಯದು (ಲೋಕೋಪ. ೨-೫೨) ; ಧನುಗೆವರೆ ದೇವಗುರು ಮಿಂಬಿನಲಿ ತಿಳಂ ಪಟ್ಟಿಯುಪ್ಪು ಮುಂ ಘನಮಕ್ಕುಂ (ಅಟ್ಟಿಮ. ೧೨-೧೪೭) ; ವನಿತೆಯೊಳು ಕಮಲಾರಿಯಿದ್ದನು ಕನಕ ಮನ್ಮಥನೆಡೆಯೊಳಿದ್ದನು ಧನುವಿನೊಳಗಿನತನುಜನಿದ್ದನು ಭಗಣ ಚಕ್ರದಲಿ (ಕೌಶಿರಾ. ೧೩-೪೪). 'ದ್ವಾದಶರಾಶಿ' ಪರಾ. [ಸಂ.]

**ಧನುಕೋಟಿ** (ನಾ). = ಧನುಷ್ಕೋಟಿ ೧ : "ಬಿಲ್ಲ ಕೊಪ್ಪಟನಿ ಧನುಕೋಟಿಯೆಂದೆನಿಸಿತ್ತು" (ಮಂಗರಾ. ೭೭-೩೩). [ಧನು + ಕೋಟಿ$_1$]

**ಧನುಗೊಳ್** (ಕ್ರಿ). ಬಿಲ್ಲನ್ನು ತೆಗೆದುಕೊಳ್ಳು : ಕಡುಗಾಯ್ದು ಕೋಪದಿಂ . . . ಗಾಂಡಿವಿಯುಂ ಧನುಗೊಂಡೊಡೆ (ನೇಮಿಪು. ೧೦-೫೪).

[ಧನು + ಕೊಳ್$_1$]

**ಧನುಧಾರಿ** (ನಾ). ೧. ಬಿಲ್ಲನ್ನು ಧರಿಸಿದವನು ; ಧನುರ್ಧಾರಿ. ೨. ಅರ್ಜುನ: ಯೋಗೇಶನಿಂದ ಧನುಧಾರಿಯಲ್ಲಿ ಅನಿಮೇಷ ಭೇದವಾಯ್ತು (ಹೃದಸ. ೯-೧೧). [ಸಂ. ಧನುಧಾರಿನ್]

**ಧನುರಾಗಮ** (ನಾ). ಅಸ್ತ್ರಪ್ರಯೋಗಗಳನ್ನು ಕುರಿತ ಶಾಸ್ತ್ರ ; ಧನುರ್ವಿದ್ಯೆ: ಇನಿಬರೊಳಗೀತನೊರ್ವನೆ ಧನುರಾಗಮದೆಡೆಗೆ ಕುಶಲನಕ್ಕುಂ (ಪಂಪಭಾ. ೨-೫೫) ; ಆ ಗಗನೇಚರನುಂ ಧನುರಾಗಮವಿದ್ಯಾಗವ್ಯೆಕನಿಧಿ ವಿದ್ಯೆಗಳಿಂ ಪೋಗದೆ ಕಾದುತ್ತಿರೆ (ಶಾಂತಿಪು. ೪-೨೫). [ಸಂ.]

**ಧನುರಾಸನ** (ನಾ). [ಯೋಗ] ಬಿಲ್ಲಿನಾಕಾರದಲ್ಲಿ ಶರೀರವನ್ನು ಬಾಗಿಸುವ ಒಂದು ಆಸನ : ಮುಖ್ಯವಾದ ಕೆಲವು ಆಸನಗಳು : ೧. ಉತ್ತಾನಾಸನ . . . ೨೧. ಧನುರಾಸನ (ಭಾರದ. ೧೭೭). [ಸಂ.]

**ಧನುರಿ** (ನಾ). ನಾಲ್ಕು ಬಗೆಯ ಶಿಲ್ಪಗಳಲ್ಲಿ ಒಂದು; ಬಿಲ್ಲಿನಂತೆ ಬಾಗಿರುವ ರಚನೆ : ಧನುರಿ ಮಧುರಿ ಸಾಧಾರಿಣಿ ಪಾಸಿಯೆಂಬ ರೇಖಾ ಚತುಷ್ಕದೊಳಂ ಚಾರುತೆವೆತ್ತು (ಮಹಾನೀ. ೧೫-೨೭ ವ). **P** ಇದಂ ಸಾಮುದ್ರಿಕ ಲಕ್ಷಣಗಳನ್ನು ಹೇಳುವಾಗಲೂ 'ಬಿಲ್ಲಿನಂತೆ ಬಾಗಿರುವ ರೇಖೆ' ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. [ ? ]

**ಧನುರ್ಗತಿ** (ನಾ). ಬಿಲ್ಲಿನ ಆಕಾರ : ಗುದಸ್ಥಾನದಲ್ಲಿ ಆಧಾರಚಕ್ರ ಪೃಥ್ವಿ ಎಂಬ ಮಹಾಭೂತ ಚತುಃಕೋಣ ಚೌದಳ ಪದ್ಮ . . . ಲಿಂಗಸ್ಥಾನದಲ್ಲಿ ಸ್ವಾಧಿಷ್ಠಾನಚಕ್ರ ಅಪ್ಪುವೆಂಬ ಮಹಾಭೂತ ಧನುರ್ಗತಿ ಷಡುದಳ ಪದ್ಮ (ಅವಚಂ. ೪೪-೧೮೫). [ ಸಂ. ]

**ಧನುರ್ಗುಣ** (ನಾ). ಬಿಲ್ಲಿನ ಹೆದೆ; ಸಿಂಜಿನಿ : ಧನುರ್ಗುಣವೇಗತಾಡನಾ ಕಳಿತವಿಕೀರ್ಣಕೋಷ್ಠಮನೆ ಕೂರ್ಮವಿನಿಷ್ಠುರಪೃಷ್ಠಭಾಗಮೆಂದು . . . ಧರಿತ್ರಿ ಬಂದು ನಿಶ್ಚಳತೆಯಿನಿರ್ಪಳಲ್ತೆ ಭುಜಮಂಡಳದೊಳ್ ವಸುಧಾಧಿನಾಥನಾ (ಚಂದ್ರಪು. ೩-೨೦) ; ಚಂಡ ಧನುರ್ಗುಣಮಂ ನೀವಿ ಜೇವೊಡೆಯ ಲೊಡನೆ (ಶಬಶಂ. ೪-೧೭ ವ). [ ಸಂ. ]

**ಧನುರ್ಗುಣಕ್ವಣಿತ** (ನಾ). ಬಿಲ್ಲಿನ ಹೆದೆಯನ್ನು ಮಿಡಿದಾಗ ಆಗುವ ಧ್ವನಿ; ಧನುಷ್ಟಂಕಾರ : ಜಾಣ್ಣಾತು ಧನುರ್ಗುಣಕ್ವಣಿತಮಂ ಪುಷ್ಪಾಸ್ತ್ರ ನಿಂದಾಗಳಾಗಿಸೆ ಪಣ್ಯಾಜನಮಿರ್ದುದೋಲಗದೊಳ್ (ರಾಜಶೇ. ೧೨-೪೭). [ ಧನುರ್ಗುಣ + ಕ್ವಣಿತ ]

**ಧನುರ್ಗೇಹಜ** (ನಾ). [ಜ್ಯೋತಿ] ಧನುರಾಶಿಯಲ್ಲಿ ಹುಟ್ಟಿದವನು : ಬಸಿವಾಯಂ ಕವಿ ವಾಗ್ಮಿ ದೀರ್ಘಮುಖಕಂಠಂ ಧಾರ್ಮಿಕಂ ತ್ಯಾಗಿ . . . ನಿಪುಣಂ ಮಹೋದ್ಯಮಿ ನಿಗೂಢಾಂಸಂ ಧನುರ್ಗೇಹಜಂ (ಜಾತತಿ. ೧೭-೯). 'ದ್ವಾದಶರಾಶಿ' ಪರಾ. [ ಸಂ. ]

**ಧನುರ್ಗೃಹ** (ನಾ). ೧. ಬಿಲ್ಲುಗಾರ. ೨. ಕ್ಷೇತ್ರಪರಿಮಾಣವನ್ನು ಅಳೆಯುವುದಕ್ಕಾಗಿ ಬಳಸುವ ಒಂದು ಮಾನ; ಇಪ್ಪತ್ತೇಳು ಅಂಗುಲಗಳ ಒಂದು ಅಳತೆ : ಕ್ಷೇತ್ರಪರಿಮಾಣವನು ಯೋಜನವನು ಧನುರ್ಹಸ್ತದಿಂ ಮಾಡುವದು ಮತ್ತಮಾ ಧನುರ್ಗೃಹಹಸ್ತವು ನಾಲ್ಕಾಗಲೊಂದು ಧನುವೆನಿಸುವದು (ವಿವೇಕ. ೩೦೦). [ ಸಂ. ]

**ಧನುರ್ಜ್ಯಾರವ** (ನಾ). ಬಿಲ್ಲಿನ ಹೆದೆಯ ಟಂಕಾರ; ಸಿಂಜಿನಿಯ ಧ್ವನಿ : ಧನುರ್ಜ್ಯಾರವಂ ಬಳೆಯಲ್ ಜೇವೊಡೆಗೆಯ್ದು (ನೇಮಿಪು. ೧೨-೮). [ಸಂ.]

**ಧನುರ್ಜ್ಯಾರುತಿ** (ನಾ). = ಧನುರ್ಗುಣಕ್ವಣಿತ : "ಧನುರ್ಜ್ಯಾರುತಿಯೊಳ್ ಟಂಕಾರಂ" (ವಸ್ತುಕೋ. ೮೦-೩೯). [ ಸಂ. ]

**ಧನುರ್ದಂಡ** (ನಾ). ಬಿಲ್ಲು; ಧನಸ್ಸು : ಅನ್ಯದುರ್ಧರನಿಜಧನುರ್ದಂಡಮಂ ತದ್ವಜನಿಗೆ ಕೋಪಕುಟಿಲದಕ್ಷಿಣದಿಕ್ಪಾಲಭ್ರುಕುಟೀವಿಭ್ರಮಮಂ ಮಾಡಲ್ಪಡೆಯುದೆಯುಂ (ಆದಿಪು. ೧೪-೧೦೩ ವ) ; ಆಹವಶೌಂಡಮಿಾ ಧನುರ್ದಂಡಮುಮುಳ್ಳನಂ ದ್ರುಪದನಂದನೆ ಸಂಧಿಯನಾಗಲೀವೆನೇ (ಗದಾಯು. ೦-೭೩) ; ಶಬರಶಂಕರಂ ಪ್ರಚಂಡಧನುರ್ದಂಡಮಂ ಕೆಯ್ಕೊಂಡು ತಿರುವೊಯ್ದು ಜೇವೊಡೆದು ಬಾಣಮಂ ಪೂಡಿ ತೆಗೆನೆಱೆದೆಚ್ಚಾಗಳ್ (ಶಬಶಂ. ೪-೪೭ ವ). [ ಸಂ. ]

**ಧನುರ್ಧರ** (ನಾ). ಧನುಸ್ಸನ್ನು ಹಿಡಿದಿರುವವನು; ಬಿಲ್ಲುಗಾರ : ಮಾನಸಮಂತೆಚ್ಚು ಮೆಚ್ಚಿಸಿದಂ ದೇವರುಮಂ ಧನುರ್ಧರರುಮಂ ವಿದ್ವಿಷ್ಟವಿದ್ರಾವಣಂ (ಪಂಪಭಾ. ೩-೬೩) ; ಪ್ರವಿಪುಲಧನುರ್ಧರಂ ಶ್ಯಾಮವರ್ಣನಾಯವ್ಯಯಕ್ರಿಯಾರುಚಿ . . . ಯುವತಿಮಧ್ಯಮ ದ್ರೇಕ್ಕಾಣಂ (ಜಾತತಿ. ೧೯-೧೭) ; ಜವನೆರ್ದೆ ಬಿರ್ಚುವ ತೆಱದಿಂ ತವುತರ್ಪುದುಮುಭಯಬಲಧನುರ್ಧರಸೈನ್ಯಂ (ಪಂರಾಮಾ. ೧೩-೫೩) ; ದಿಕ್ಕುಗಳೇಣು ಮುಱಿಯಲು ಹೊಕ್ಕೆಸುವ ಬಿಲುಜಾಣರುರವಣೆ ಲಜ್ಜಿಸಿತು ಲೋಕದ ಧನುರ್ಧರರ (ಕುವ್ಯಾಭೀ. ೪-೧೭). [ ಸಂ. ]

**ಧನುರ್ಧರಪ್ರಾಯ** (ಗು). ಅನೇಕ ಬಿಲ್ಲುಗಾರರಿಂದ ಕೂಡಿರುವ : ಚಿಲಾತಾವರ್ತರೆಂಬಿರ್ವರ್ ಮ್ಲೇಚ್ಛರಾಜರ್ ಧನುರ್ಧರಪ್ರಾಯಮುಮ ಶ್ವೀಯ ಬಹಳಮುಂ ಹಾಸ್ತಿಕಸಾಧನಮುಮಪ್ಪ ತಮ್ಮ ಬಲಮನೊಂದು ಮಾಡಿ ಕೂಡಿಕೊಂಡು (ಆದಿಪು. ೧೩-೫೭ ವ). [ ಸಂ. ]

**ಧನುರ್ಧರಫಾಲನೇತ್ರ** (ನಾ). ೧. ಬಿಲ್ಲುಗಾರರಲ್ಲಿ ಶಿವನಿಗೆ ಸಮಾನನಾದವನು. ೨. ದ್ರೋಣಾಚಾರ್ಯ : ಸಾತ್ಯಕಿ ಬಿಲ್ಲನಿಳುಹಿದನುತ್ತಮಾಂಗಕೆ ಕರಯುಗವ ಚಾಚುತ್ತ ಬಿನ್ನೈಸಿದ ಧನುರ್ಧರಫಾಲನೇತ್ರಂಗೆ (ಕುವ್ಯಾದ್ರೋ. ೧೧-೮). [ ಧನುರ್ಧರ + ಫಾಲನೇತ್ರ ]

**ಧನುರ್ಧಾರಣ** (ನಾ). ೧. ಬಿಲ್ಲನ್ನು ಹಿಡಿಯುವುದು. ೨. ಪ್ರೌಢಿಗೀತಾಗಮದ ಹದಿನಾರು ಭೇದಗಳಲ್ಲಿ ಒಂದು : ಕವಚಾಗಮ ವರಾಹ ತಂತ್ರ . . . ಪಶುಬಂಧಸಂಹಿತೆ ದಂಡಧರತಂತ್ರ ಕುಶತಂತ್ರ ಧನುರ್ಧಾರಣ ಶಿವಜ್ಞಾನ ವಿಜ್ಞಾನ . . . ಭರತ ಆತೋದ್ಯವೆಂದು ಪ್ರೌಢಿಗೀತಾಗಮದ ಷೋಡಶಭೇದಂಗಳು (ವಿವೇಕ. ೭೧). [ ಸಂ. ]

**ಧನುರ್ಧಾರಿ** (ನಾ). = ಧನುರ್ಧರ : ದ್ರೇಕ್ಕಾಣದೇವತೆಯು ಮನುಷ್ಯನ ಮುಖ ಮತ್ತು ಕುದುರೆಯ ಶರೀರವುಳ್ಳವನೂ ಧನುರ್ಧಾರಿಯೂ . . . ಆಗಿರುವನು (ಜಾತತಿ. ೧೯-೨೫ ಟೀಕೆ). [ ಸಂ. ಧನುರ್ಧಾರಿನ್ ]

**ಧನುರ್ಬಲ, ಧನುರ್ಬಳ** (ನಾ). ೧. ಬಿಲ್ಲುಗಾರರ ಪಡೆ; ಧನುರ್ಧಾರಿಗಳ ಸೈನ್ಯ : ಕೀಱು ಬಂದುವು ಹಯಂ ರಣಭೂಮಿಗೆ ತೇರ್ ತೆರಳ್ದು ಬಂದುವು ತಱಿಸಂದು ಬಂದುವು ಕಡಂಗಿ ಧನುರ್ಬಲಮಿರ್ವಲಂಗಳೊಳ್ (ಪಂರಾಮಾ. ೧೩-೯೫). ೨. ಬಿಲ್ಲಿನ ಬಲ : ಈಗ ನಾನು ನಿನಗೆ ದಾರಿ ಕೊಟ್ಟರೆ, ಮಿಕ್ಕವರೂ ಹೀಗೆಯೇ ನನ್ನನ್ನು ಧನುರ್ಬಲದಿಂದ ಆಜ್ಞೆ ಮಾಡಿಯಾರು (ವಚಭಾ. ೪೧೦). **ಧನುರ್ಬಳ** : ೧. ಅಂತು ಚತುರ್ಭುಜನಗುರ್ವಾದ ಧನುರ್ಬಳಂ ಕಟೀವ ಶರಾಸಾರದಿಂ . . . ತರ್ಗಿ ಮುಗ್ಗುವುದಂ ಕಂಡು (ನೇಮಿಪು. ೭-೫೪ ವ). [ ಸಂ. ]

**ಧನುರ್ಬಳ** 'ಧನುರ್ಬಲ' ನೋ.

**ಧನುರ್ಭಂಗ** (ನಾ). ಬಿಲ್ಲನ್ನು ಮುರಿಯುವುದು. [ ಸಂ. ]

**ಧನುರ್ಭೇದನ** (ನಾ). = ಧನುರ್ಭಂಗ. [ ಸಂ. ]

**ಧನುರ್ಮಧ್ಯ** (ನಾ). ಬಿಲ್ಲಿನ ಮಧ್ಯಭಾಗ; ಬಾಣ ಹೂಡುವ ಸ್ಥಳ; ಬಿಲ್ಲನ್ನು ಕೈಯಲ್ಲಿ ಹಿಡಿಯುವ ಸ್ಥಳ. [ ಸಂ. ]

**ಧನುರ್ಮಾಸ** (ನಾ). ಸೂರ್ಯನು ಧನುರಾಶಿಯಲ್ಲಿರುವ ಅವಧಿ; ಸಾಮಾನ್ಯವಾಗಿ ಡಿಸೆಂಬರ್ ಹದಿನಾಲ್ಕನೆಯ ತಾರೀಖಿನಿಂದ ಜನವರಿ ಹದಿನಾಲ್ಕನೆಯ ತಾರೀಖಿನವರೆಗಿನ ಕಾಲ; **P** ಈ ಅವಧಿಯಲ್ಲಿ ಬೆಳಗಿನ ಜಾವದಲ್ಲಿ ವಿಶೇಷವಾದ ಪೂಜೆ, ವ್ರತಗಳನ್ನು ಆಚರಿಸಲಾಗುವುದು : ಧನುರ್ಮಾಸದಂಥ ಪ್ರಸಂಗದಲ್ಲಿ ಹುಗ್ಗಿಯ ಸಮಾರಂಭವಾಗಲಿಲ್ಲ (ಸ್ಮೃತಿಚಿ. ೦೪೭) ; ಧನುರ್ಮಾಸದಲ್ಲಿ ಬೆಳಗ್ಗೆ ಎದ್ದು ಸ್ನಾನಾದಿಗಳ ನಂತರ ಹುಗ್ಗಿ ಪೊಂಗಲುಗಳನ್ನು . . . ತಿಂದು ಕುಡಿಯಬೇಕೆಂಬ ಋತುಧರ್ಮಗಳು ಎಂಥ ಹಿತಕರ್ತವ್ಯಗಳೋ ನಕ್ಷತ್ರಗಳ ಗೆಳೆತನವನ್ನು ಬಯಸುವುದು ಅಂಥ ಹಿತಕರ್ತವ್ಯಗಳಲ್ಲೊಂದು (ನಕ್ಷತ್ರ. ೨). [ ಸಂ. ]

**ಧನುರ್ಮುಷ್ಟಿ** (ನಾ). ಕ್ಷೇತ್ರಪರಿಮಾಣವನ್ನು ಅಳೆಯುವುದಕ್ಕಾಗಿ ಬಳಸುವ ಒಂದು ಮಾನ : ಪಟ್ಟಣಾದಿಕವನೇ ಧನುರ್ಮುಷ್ಟಿಹಸ್ತದಿಂ ಮಾಡುವದು (ವಿವೇಕ. ೩೦೦). [ ಸಂ. ]

**ಧನುರ್ಲತೆ** (ನಾ). ೧. ಬಿಲ್ಲು; ಧನುಸ್ಸು : ಧನುರ್ಲತಾಗುಣನಿನಾದಮನಾಲಿಸಿ ಕೇಳಲುಂ ಮನಂ ಬೆರ್ಚದೆ ಸಿಂಹಪೋತಕಮನೋವಲುವಾಕೆಯ ದೋಹಳಂ ಕರಂ ಪೆರ್ಚಿದುದಾ ಗುಣಾರ್ಣವನ ಮುಂದಣ ಬೀರಮನಂ[ದೆ] ತೋರ್ಪವೋಲ್ (ಪಂಪಭಾ. ೦-೧೪೨) ; ವಿಳಾಸದಿಂದಮೇಱಿಸಿದಲರ್ವಿಲ್ಲನೈಕ್ಷವ ಧನುರ್ಲತೆ . . . ಎನಿಪ್ಪವೊಲಾಂತರ್ಳಾಕೆಯಾ ಪಸದನದೊಳ್ ಜಗತ್ತ್ರಿತಯ

ಚಿತ್ರವಿಮೋಹನಶಕ್ತಿಯೇೞ್ಗೆಯಿಂ (ಚಂದ್ರಪು. ೬-೬೬) ; ನಿನ್ನ ಧನುರ್ಲತಾ ಹತಿಯ ಬಾಸುಳೆ ಪೂಗಳ ಮಾಲೆಯೊಳ್ಚತಂ ನಿನ್ನಯ ಮುಷ್ಟಿಯುದ್ದವಾದು ಮತ್ತದಪೂಜೆ ನಿಜಂ ಧನಂಜಯಾ (ಶಬಶಂ. ೫-೪೧). ೨. ಒಂದು ಬಗೆಯ ಬಳ್ಳಿ ; ಸೋಮಲತೆ. [ ಸಂ. ಧನುರ್ಲತಾ ]

**ಧನುರ್ವಂಶ** (ನಾ). ಬಿಲ್ಲಿನಂತೆ ಬಾಗಿದ ಬೆನ್ನುಮೂಳೆಯುಳ್ಳುದಂ : ಪರಿಪೂರ್ಣಗ್ರೀವನುಮತಿವಿಶಾಲೋರಸ್ಸ್ಥಳನುಂ ಧನುರ್ವಂಶನುಂ ವಿಪುಲೋಪಚಿತಾಂಸನುಂ (ಅಜಿಪು. ೪-೩೦ವ). 'ವಂಶ' ಪರಾ. [ ಸಂ. ]

**ಧನುರ್ವರ್ಮ** (ನಾ). ಬಿಲ್ಲಿನ ಹೊದಿಕೆ,- ಗವಸಣಿಗೆ: "ಬಿಲ್ಲ ಗವಸಣಿಗೆ ಧನುರ್ವರ್ಮವೆನಿಸಿಕ್ಕು" (ಮಂಗರಾ. ೮೭-೫೩). [ ಸಂ. ]

**ಧನುರ್ವಳ** (ನಾ). = ಧನುರ್ಬಲ ೧ : ಯಾದವಪತಾಕಿನೀಪತಿ ಧನುರ್ವಳಕ್ಕೆ ಕೆಯ್ವಾಸುವುದುಂ (ನೇಮಿಪು. ೭-೮೫ ವ). [ <ಸಂ. ಧನುರ್ಬಲ ]

**ಧನುರ್ವಾತ** (ನಾ). ದೇಹವು ಬಿಲ್ಲಿನಂತೆ ಸೆಟೆಯುವ ಒಂದು ಬಗೆಯ ವಾತರೋಗ ; ಸೆಟೆರೋಗ : ಬೆಳ್ಳುಳ್ಳಿ, ಚಿತ್ರಮೂಲದ ರಸದಲ್ಲಿ ಕೊಡಲು ಅಷ್ಟವಿಧ ಧನುರ್ವಾತಂಗಳು ಮಾಣುವುವು (ವಿವ್ಯವಿ. ೪೭) ; ಪಾಂಡುರೋಗ, ಶ್ವಾಸ, ಖಾಸ, ಜ್ವರ, ಧನುರ್ವಾತ ಮುಂತಾದ ರೋಗಂ ಬಿಡುಗಡೆಯಹುದು (ಸಕವೈ. ೧೭೯) ; ವಾತವಿಕಾರ, ಸನ್ನಿ, ಧನುರ್ವಾತ ಮುಂತಾದವುಗಳಿಗೆ ಆಯಾವರಿತು ಕಲ್ಕ, ಬಿಸಿ ಮೊದಲಾದವುಗಳನ್ನು ಹಾಕಲು ಬಲ್ಲವಳಾಗಿದ್ದಳು (ಶಾಂತಲಾ. ೩೨೬). [ ಸಂ. ]

**ಧನುರ್ವಾಯು** (ನಾ). = ಧನುರ್ವಾತ : ದಪ್ಪದುಟಿಯ, ಧನುರ್ವಾಯು ಹಿಡಿದ ಕಂಠದ . . . ರಾಜಕುಮಾರ ಕೋರ್ಚಗೀನ್ ಅನಂತರ ಬಂದನು (ಪುನರು. ೪೫೮). [ ಸಂ. ]

**ಧನುರ್ವಿದ್ಯೆ** (ನಾ). ಬಿಲ್ವಿದ್ಯೆ : ನೆಱೆಯೆ ಧನುರ್ವಿದ್ಯೆಯ ಕಣ್ದೆಱೆವಿನೆಗಂ ಕಲ್ತ ನಿಮ್ಮ ಮಕ್ಕಳ ಮೆಯ್ಯೊಳ್ ಮೆಱೆದಪ್ಪೆನೆನ್ನ ವಿದ್ಯೆಯಂ (ಪಂಪಭಾ. ೨-೬೫) ; ಕೃಪಾಚಾರ್ಯನೆಂಬ ಬ್ರಾಹ್ಮಣನು ವೃಷ್ಣಿವಂಶದ ರಾಜರಿಗೂ ಇತರ ರಾಜರಿಗೂ ಧನುರ್ವಿದ್ಯೆಯನ್ನು ಹೇಳಿಕೊಡುತ್ತಿದ್ದನು (ವಚಭಾ. ೧೭).

[ ಸಂ. ಧನುರ್ವಿದ್ಯಾ ]

**ಧನುರ್ವೀಣೆ** (ನಾ). ಒಂದು ಬಗೆಯ ತಂತೀವಾದ್ಯ : ಧನುಸ್ಸಿನ ಹಂಬಿನ ಮೇಲೆ ಬಾಣ ಹರಿದು ನಾದೋತ್ಪತ್ತಿ ಮಾಡಿ, ಈಗಿನ ಪಿಟೀಲುವಾದ್ಯಕ್ಕೆ ರೂಪ ಕೊಟ್ಟ ಕಾರಣ, ಈ ವಾದ್ಯದ ಪ್ರಾಚೀನರೂಪಕ್ಕೆ ಧನುರ್ವೀಣಾ ಎಂದು ಹೆಸರು ಬಂದಿದೆ (ಸಂಗೀಜಂ. ೧೧೪) ; ಧನುರ್ವೀಣೆ ಅಥವಾ ಪಿಟೀಲಿನ ಪೂರ್ವ ಮಾದರಿಯಾದ ರಾವಣಾಸ್ತ್ರವು ಇಂದಿನ ಪಾಶ್ಚಾತ್ಯಪಿಟೀಲು ರೂಪಿತವಾದುದರಲ್ಲಿ ಬಹು ಪ್ರಭಾವವನ್ನು ಬೀರಿದೆ (ಭಾರದ. ೫೪೫).

[ ಸಂ. ಧನುರ್ವೀಣಾ ]

**ಧನುರ್ವೇದ** (ನಾ). ಆಯುರ್ವೇದ, ಧನುರ್ವೇದ, ಗಾಂಧರ್ವವೇದ ಮತ್ತು ಅರ್ಥಶಾಸ್ತ್ರಗಳೆಂಬ ನಾಲ್ಕು ಉಪವೇದಗಳಲ್ಲಿ ಒಂದು ; ಅಸ್ತ್ರಪ್ರಯೋಗಗಳನ್ನು ಕುರಿತು ಹೇಳುವ ವೇದ ; ಬಿಲ್ವಿದ್ಯೆ : ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕಾಯುರ್ವೇದ ಧನುರ್ವೇದ ಹಸ್ತ್ಯಶ್ವತಂತ್ರ ರತ್ನಪರೀಕ್ಷೆಗಳುಮಂ . . . ಉಪದೇಶಂಗೆಯ್ದು (ಆದಿಪು. ೮-೬೦ ವ); ಯಾದವವಂಶಜರುಂ ನಾನಾ ದೇಶ ನರೇಂದ್ರರುಂ ಘಟೋದ್ಭವನ ಧನುರ್ವೇದಮನೆ ಕಲಲ್ ಬಂದಾಳಾದರ್ (ಪಂಪಭಾ. ೨-೩೬); ಪರಶುರಾಮನ ಕಂಡು ಹೊಕ್ಕನು ಗರುಡಿಯನು ದ್ವಿಜನೆಂದು ಕಲಿತನು ವರ ಧನುರ್ವೇದವನು ಪಡೆದನು ದಿವ್ಯಮಾರ್ಗಣವ (ಕುಮ್ಯಾಕ. ೯-೩೧) ; ಉಪವೇದ ಚತುರ್ವಿಧಂಗಳಲ್ಲಿ ಧನುರ್ವೇದವು ಶತ್ರುಜಯಾರ್ಥವಾಗಿಯೇ ಮಂತ್ರಾಸ್ತ್ರಪ್ರಯೋಗಾದಿಗಳಂ ಕಲ್ಪಿಸುವುದು (ವಿವೇಕ. ೪) ; ಅನುಪಮ ಧನುರ್ವೇದದುರುಮಂತ್ರಶಕ್ತಿಯಿಂ ತೀವಿದ ಮಹಾಶರವನು ತೆಗೆದಾರ್ದು ಫಲುಗುಣನೆಚ್ಚನು (ಜೈಮಿಭಾ. ೧೩-೪೭). [ ಸಂ. ]

**ಧನುರ್ವೇದಿ** (ನಾ). ಧನುರ್ವೇದವನ್ನು ಅಭ್ಯಾಸಮಾಡಿದವನು : ಧನುರ್ವೇದಿಯುಂ ಶಬ್ದವೇದಿಯುಮಪ್ಪ ಬಿಲ್ಲ ಬಿನ್ನಣಿಯನೊರ್ವನಂ ಕರೆದು ನಿಚ್ಚಂ ವಕ್ರಿಸುತ್ತಿರ್ಪ ನಿಚ್ಚಲವಕ್ಕಿಯನೆಚ್ಚು ಬಾಯೆಂದು ಪೇೞ್ವುದುಂ (ಪಂಚತಂ. ೧೨೭-೧೪). [ ಸಂ. ಧನುರ್ವೇದಿನ್ ]

**ಧನುರ್ಹಸ್ತ** (ನಾ). = ಧನುರ್ಮುಷ್ಟಿ (?) : ಕ್ಷೇತ್ರಪರಿಮಾಣವನು ಯೋಜನವನುಂ ಧನುರ್ಹಸ್ತದಿಂ ಮಾಡುವವದು ಮತ್ತಮಾ ಧನುರ್ಗ್ರಹ ಹಸ್ತವು ನಾಲ್ಕಾಗಲೊಂದು ಧನುವೆನಿಸುವದು (ವಿವೇಕ. ೩೦೦). [ಸಂ.]

**ಧನುವಟ್ಟೆ** 'ದಣಿವಟ್ಟೆ' ನೋ.

**ಧನುಶ್ರುತಿ** (ನಾ). = ಧನುರ್ವೇದ : ಕೃಪನನುಜೆಯನು ತಂದು ದ್ರೋಣಂಗುಪಯಮವ ಮಾಡಿದನು ಹರ್ಷದಿ ದ್ರುಪದ ಬಂದೀ ದ್ರೋಣನೊಡನಱಿದನು ಧನುಶ್ರುತಿಯ (ಕುಮ್ಯಾಆ. ೬-೩೩). [ ಸಂ. ]

**ಧನುಶ್ಶಲಾಕೆ** (ನಾ). = ಧನುರ್ದಂಡ : ಮಣಿಯನೆ ಕಾತ ಕಲ್ಪಲತೆ ಸಿಂಜಿನಿಯಂ ತೆಗೆದಿಟ್ಟ ಪುಷ್ಪಮಾರ್ಗಣನ ಧನುಶ್ಶ[ಪಾಠಾಂ. ನುಃಶ]ಲಾಕೆ ಮುಗುಳೇಱಿದ ಮಲ್ಲಿಗೆ ಸುತ್ತುತಂ ನಭೋಮಣಿರುಚಿಯಿಂ ತೆಱಂಬೊಳೆವ ಪದ್ಮಿನಿ ತಾನೆನಿಸುತ್ತೆ ತಾಳ್ದ ಸನ್ಮಣಿಪಿಣಿಲಚ್ಚಮುತ್ತು ಕನಕಾಂಬರದಿಂ ಕಮಳಾಕ್ಷಿ ತೋಱಿದಳ್ (ರಾಜಶೇ. ೧೦-೧೭).

[ ಸಂ. ಧನುಶ್ಶಲಾಕಾ ]

**ಧನುಷ್ಕೋಟಿ** (ನಾ). ೧. ಬಿಲ್ಲಿನ ತುದಿ ; ಕೊಪ್ಪು ; ಗೊಲೆ: "ಧನುಷ್ಕೋ[ಪಾಠಾಂ. ನುಃಕೋ]ಟಿ ಕೊಪ್ಪು ಗೊಲೆಯೆನಿಸಿರ್ಕುಂ" (ಕವಿಕಂ. ೮೧). ೨. ರಾಮೇಶ್ವರದ ಬಳಿಯಲ್ಲಿದ್ದ ಒಂದು ತೀರ್ಥಕ್ಷೇತ್ರ: ವರ ಧನುಷ್ಕೋಟಿಯಲ್ಲಿ ಮಿಂದೀಶ್ವರಪದಾಂಬುಜಕೆಱಗಿ (ಕುಮ್ಯಾಆ. ೧೯-೧೫). ೩. [ಜ್ಯೋತಿ] ಧನೂರಾಶಿ. ೨, ೩ : ಮಕರ ಕರ್ಕಟಕ ಹರಿ ಮಿಥುನದಿಂ ದನಿಮೇಷನಿಕರದಿಂ ದ್ರೋಣಂ ತಿಮಿಸಾನಂಗಳಿಂದೊಪ್ಪುತಕಳಂಕಮೆನೆ ಧನುಷ್ಕೋಟಿಯಿಂ ಬೆರೆದತುಳ ವೃಷಕೆ ನೆಲೆವನೆಯಿದೆನಿಸಿ . . . ರಂಜಿಸಿತು ವಾರಾಶಿ ರಾಶಿರಾಶಿಯನಾಂತ ಗಗನದಂತೆ (ಶ್ರೀರಾಮು. ೩-೩೯). [ ಸಂ. ]

**ಧನುಷ್ಟಂಕಾರ** (ನಾ). ಬಿಲ್ಲಿನ ಹೆದೆಯನ್ನು ಮಿಂಡಿದಾಗ ಆಗುವ ಧ್ವನಿ ; ಸಿಂಜಿನಿಯ ಧ್ವನಿ; ಬಿಲ್ಲಿನ ಟಂಕಾರ : ತುರಗಗರ್ಜನೆ ರಥದ ಚೀತ್ಕೃತಿ ವರ ಧನುಷ್ಟಂಕಾರ ಕಪಿಯಬ್ಬರಣೆ . . . ಅರರೆ ಹೊದಱಿದ್ದವು (ಕುಮ್ಯಾವಿ. ೬-೬೩). [ ಸಂ. ]

**ಧನುಷ್ಟಂಕೃತ** (ನಾ). = ಧನುಷ್ಟಂಕಾರ : ಲಲಿತಭ್ರೂಕಾರ್ಮುಕಂ ಕೇಕರರುಚಿ ನನೆಗೋಲ್ ಕುಂತಳಂ ಮೌರ್ವಿ ಮಂಜೀರಲಸದ್ಧ್ವಾನಂ ಧನುಷ್ಟಂಕೃತಮೆನೆ . . . ಪಂಚೇಷು ಗೆಲ್ಲಂಬಡೆವಿನಮಿಸುಗುಂ (ಜಗವಿ. ೩-೩೩).

[ ಸಂ. ]

**ಧನುಷ್ಪಟ** (ನಾ). ಒಂದು ಬಗೆಯ ಮರ; ಮೊರಲೆ; ಪ್ರಿಯಾಲಂ; "ಮೊರಟೆಗಿಡ" (ಅಮರ. ಟೀಕೆ). [ ಸಂ. ]

**ಧನುಷ್ಪಾಣಿ** (ನಾ). ಧನಸ್ಸನ್ನು ಹಿಡಿದಿರುವವನು ; ಧನುರ್ಧಾರಿ : ನಡೆಗೊಂಡನಡವಿಕೇಳ್ವಟ್ಟೆಯೊಳಿಳಾತ್ಮಜಾವಲ್ಲಭಂ . . . ಭೀಷಣ ಧನುಷ್ಪಾಣಿಯಾಗಿ (ಶ್ರೀರಾಮಾ. ೧೨೭-೫೫). [ ಸಂ. ]

**ಧನುಸ್ಸು** (ನಾ). ೧. ಬಿಲ್ಲು : ಮನಸ್ಸು, ಪಯಸ್ಸು, ಯಶಸ್ಸು, ಶಿರಸ್ಸು, ಧನಸ್ಸು (ಶಬ್ದಾನು. ೧೩೩ ಪ್ರಯೋ). ೨. ವೃತ್ತದ ಒಂದು ಭಾಗ ; ಕಮಾನು. ೩. [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಒಂಬತ್ತನೆಯದು; ಧನೂರಾಶಿ : ಖಗೋಳದಲ್ಲಿ ಮೇಷ ವೃಷಭ ಮಿಥುನ ಕರ್ಕಟ ಸಿಂಹ ಕನ್ಯೆ ತುಲೆ ವೃಶ್ಚಿಕ ಧನುಸ್ಸು ಮಕರ ಕುಂಭ ಮೀನವೆಂಬ ಪನ್ನೆರಡು ರಾಶಿಗಳೇ . . . ನಾಲ್ಕು ನಾಲ್ಕು ಪಾದಗಳಿಂದ ನೂಱೆಂಟಾಗಿ (ವಿವೇಕ. ೨೫೮) ; ಲಗ್ನವು . . . ಮಿಥುನ ಮೀನ ಧನುಸ್ಸು ಕನ್ಯಾರಾಶಿಗಳಾದರೆ ಉತ್ತರದಲ್ಲಿ ರುತ್ತದೆ (ಜಾತಕಿ. ೪-೧೭ ಟೀಕೆ). [ ಸಂ. ಧನುಸ್ ]

**ಧನೂರಾಶಿ** (ನಾ).=ಧನುಸ್ಸು ೩: ಧನೂರಾಶಿಯ ಮೊದಲನೆಯ ದ್ರೇಕ್ಕಾಣ ದೇವತೆಯು ಮನುಷ್ಯನ ಮುಖ ಮತ್ತು ಕುದುರೆಯ ಶರೀರವುಳ್ಳವನೂ ಧನುರ್ಧಾರಿಯೂ . . . ಆಗಿರುವನು (ಜಾತತಿ. ೧೯-೨೫ ಟೀಕೆ). [ ಸಂ. ]

**ಧನೇಶ** (ನಾ).=ಧನಾಧಿಪ ೨: ನೆಜ಼ಿದಿಂತಿವರಾನಲಾರ್ಪರೇ ಸಂದ ಸುರೇಂದ್ರನುಂ . . . ಧನೇಶನನುಂ (ನೇಮಿಪು. ೧೧-೧೦೩); ಪಲಬರ್ಥನಪರ್ತಮ್ಮೊಳಗಲಕೆಯುಳೊರ್ವಂ ಧನೇಶನೆಂದೇಳಿಸುತಂ (ತ್ರಿಪುವಿ. ೭-೨೫).
[ ಧನ + ಈಶ ]

**ಧನೇಶ್ವರ** (ನಾ). ೧. ಧನಾಧಿಪತ್ತಿ; ಕುಬೇರ: ಸುರಪತಿ ಸೂತ್ರಧಾರ ನಮುರಾವಳಿ ಶಿಲ್ಪಿಗಣಂ ಧನೇಶ್ವರಂ ಬರೆದು[ದ]ಪವಣ್ಗೆ ಜಾಣ್ಗೆವರೆ ನಿರ್ಮಿಸಿದಂ ಪುರಮಂ (ಶಾಂತಿಪು. ೯-೧೫೮); ಸರಸಿಧಿನಾಯಕನ ದಿಶಾವರದೆಡೆಯೊಳ್ನಟ್ಟ ಕಲ್ ಧನೇಶ್ವರನ ದಿಶಾವರದೆಡೆಯೊಳ್ ಪುಟ್ಗಿಗೆ ದೇವರ ತೋಂಟಂ ಮೇರೆ (ಎಕ. VII. ಶಿಕಾರಿ. ೯೯-೪೭; 1113); ಪುಷ್ಪಕದಲ್ಲೆ ತಂದನು ಧನೇಶ್ವರನಾ ತಪೋವನಕೆ (ಕುಮ್ಮಾಅ. ೭-೪). ೨. ಐಶ್ವರ್ಯವಂತ; ಹಣವಂತ: ಬುದ್ಧಿವಂತಂ ಧನೇಶ್ವರನುರ್ವೀಪತಿ (ಜಾತತಿ. ೧೪-೧೩). [ ಧನ + ಈಶ್ವರ ]

**ಧನೋತ್ಕರ** (ನಾ). ಹಣದ ಮೊತ್ತ; ಸಂಪತ್ತು: ಧನೋತ್ಕರಮುಂ ಮೆಯ್ಕುರವುಂ ಕಳತ್ರಭರಮುಂ ಸಂಕ್ಲೇಶಮಂ ಮಾಡುಗುಂ (ಜೀವಸಂ. ೧೪-೨೭). [ ಧನ + ಉತ್ಕರ ]

**ಧನ್ಯ** (ಗು). ೧. ಧನವನ್ನು ಕೊಡುವ; ಧನಲಾಭಕ್ಕೆ ಕಾರಣವಾದ. (ನಾ). ೨. ಹಣವಂತ; ಸಿರಿವಂತ; ಧನಿಕ: ಮುಸಲಭವಂ ಧನ್ಯಂ ಮಾನಸಮೇತಂ ಬಹುವಿಧಕ್ರಿಯಾಶಕ್ತನವಂ (ಜಾತತಿ. ೧೩-೧೧); ಸುಭಗನುದ್ದಮೆನಿಪ್ಪೆದೆಯಾತಂ ಧನ್ಯಂ (ಲೋಕೋಪ. ೧೦-೮). ೩. ಅದೃಷ್ಟಶಾಲಿ; ಪುಣ್ಯಶಾಲಿ; ಸುದೈವಿ: "ಸುಕೃತೀ, ಪುಣ್ಯವಾನ್, ಧನ್ಯಃ – ೩ ಪುಣ್ಯವುಳ್ಳವನ ಪೆಸರು, ಒಳ್ಳೆಯ ಅದೃಷ್ಟವಂತನು" (ಸಿದ್ಧಾಂತಿ. ೨೭೮); ಕ್ಷೇಮಂಕರತೀರ್ಥಕರನ್ನಪಕುಮಾರಾಗಂ ಧನ್ಯಂ ಕನಕಚಿತ್ರೆಗಂ ವಜ್ರಾಂಕಿತ ತಳವಿಳಸಿತಂ ಪವಿತ್ರಂ ಪುತ್ರಂ (ಶಾಂತಿಪು. ೭-೧೧೫); ನೀನೊಲಿದವನೇ ಧನ್ಯ ಜಗಕ್ಕೆ ಪಾವನ (ಬಸವ. ೫೦೭); ಧನ್ಯರೆಮ್ಮವೊಲದಾರ್ ಮುನ್ನಾದವರ್ (ಜಗವಿ. ೩-೫); ನಿಮ್ಮ ದೆಸೆಯಿಂದೇಸು ಧನ್ಯರೊ ನಾವು (ಕುಮ್ಮಾಉ. ೪-೩೮); ಏನು ಧನ್ಯಳೋ ಲಕುಮಿ ಎಂಥಾ ಮಾನ್ಯಳೊ ಸಾನುರಾಗದಿಂದ ಹರಿಯು ತಾನೆ ಸೇವೆ ಮಾಡುತಿಹಳು (ಪುರಂದ. ೧-೭೭ ಪಲ್ಲವಿ); ಸಕಲಮಂತ್ರಾಸ್ತ್ರವಿದನೀ ರಣಕಲಾಪಂಡಿತಂ ತಾನೆ ಗುರುವಹನೆನಲ್ ಧನ್ಯನೈಸಲೆ ರಾಮಚಂದ್ರಂ (ಶ್ರೀರಾಮಾ. ೩೦-೭೭). ೪. ಗುಣವಂತ; ಸದ್ಗುಣಿ; ಸಜ್ಜನ: ಅಗಣಿತಪುಣ್ಯನಬ್ಬೆಯೊಡವುಟ್ಟಿದ ಮಾವನಶೇಷಶಾಸ್ತ್ರಪಾರಗನತಿಧನ್ಯನೆಂದು ಪರಿಭಾವಿಸಿ ಬಂದೊಡವಜ್ಞೆಗೆಯ್ದು ನಾಯ್ಬುಗದೆಡೆಯೆಲ್ಲಮಂ ಪುಗಿಸಿ (ಸುಕುಮಾ. ೨-೭೩). ೫. ಕರ್ತವ್ಯವನ್ನು ನೆರವೇರಿಸಿದವನು; ಕೃತಕೃತ್ಯ; ಕೃತಾರ್ಥ: ಇಂದು ಕೃತಕೃತ್ಯನಾದೆಂ ದೇವ ಸಡೆ ತಂದೆ ಇಂದಾನು ಧನ್ಯನಾದೆಂ ದೇವ ಕರುಣಿಸಿದೆ (ಇಹರ. ದೇ. ೩೭-೮); ಧನ್ಯನಾದೆಂ ಪುಣ್ಯನಾದೆಂ ಮಾನ್ಯನಾದೆಂ . . . ಯತಿವರಂಗಿಂದೆನ್ನುವಂ ಕೊಟ್ಟು (ಬಸಪು. ೨೪-೧೮); ನಿನ್ನ ನೋಡಿ ಧನ್ಯನಾದೆನೊ ಹೇ ಶ್ರೀನಿವಾಸ (ಪುರಂದ. ೩-೭ ಪಲ್ಲವಿ); ಧನ್ಯನಾಂ! ಧನ್ಯೆ ನೀಂ! ಧನ್ಯಮಿಾ ರವಿಕುಲಂ! (ಶ್ರೀರಾಮಾ. ೧೮-೪೮೩); ನಿನ್ನ ದರ್ಶನದಿಂದ ನನ್ನ ಪಾಪವೆಲ್ಲ ತಾ ಹೋಯಿತು ನಾನು ಧನ್ಯನಾದೆನು (ಕೀಷರ. ೧). ೬. ಧನ; ಸಂಪತ್ತು. [ ಸಂ. ]

**ಧನ್ಯಂಗಿರು** (ಕ್ರಿ). ಧನ್ಯವೆಂದು ಭಾವಿಸು; ಕೃತಾರ್ಥನೆಂದು ತಿಳಿ: ಛಂದೋವೇದೀನಟಂ ನೀಂ ಕೊಳದೊಡಮಿದೆ ಕೊಳ್ಳೆಂದೆನೆಂದಂದೆ ಧನ್ಯಂಗೆತ್ತಾಂ ಸಿಗ್ಗಾಗೆ; ನೀನಕ್ಕಮ ಕೊಳುವುಳಮಂ, ನೀಡೆ ತಪ್ಪೇನೊ ದೇವಾ! (ಗಿಳಿವಿಂ. VII, ಸಮರ್ಪಣ). [ ಧನ್ಯ + ಗಿರು (<ಗಿಜು) ]

**ಧನ್ಯತೆ** (ನಾ). ೧. ಐಶ್ವರ್ಯವಂತಿಕೆ; ಸಂಪತ್ಸಮೃದ್ಧಿ. ೨. ಅದೃಷ್ಟ; ಸುದೈವ; ಸೌಭಾಗ್ಯ: ಕ್ಷಿತಿಯೊಳಿಂತನ್ಯಾಯದಿಂದವಹಿತವನಾಚರಿಸಲ್ಕೆ ಮಿಗೆ ಧನ್ಯತೆಯನೀವುದು ಚೋದ್ಯವಲ್ಲಾ . . . ಭಕ್ತಸ್ಥಿತಿಗೆ ಕೂರ್ತಿಹೆ ಭಕ್ತವತ್ಸಳ ಭಕ್ತಪರತಂತ್ರ (ಬಸಪು. ೫೦-೭೩); ಒಂದು ಭಲದಿಂದೆ ತನ್ನ ಕುವರಿಗೆ ಮರುತ್ಸುಖನಲ್ಲದೆ ಅನ್ಯರಂ ಪತಿಯಾಗಿ ವರಿಸಬೇಕೆಂಬ ಚೈತನ್ಯಮಿಲ್ಲೇನು ಮಾತುವೇನಿನ್ನು ನಿನಗೀವ ಧನ್ಯತೆಗೆ ಬಾಹಿರಂ ತಾನಾದೆನು (ಜೈಮಿಭಾ. ೯-೭). ೩. ಕೃತಾರ್ಥತೆ; ಕೃತಕೃತ್ಯತೆ; ಸಾರ್ಥಕತೆ: ಕಣ್ಣಿರುವ ನಿಮಗೆ ಕಣ್ಣ ಧನ್ಯತೆಯೆ ತಿಳಿಯದಲ್ಲಾ (ಚಂದ್ರಸ. ೪೫-೧೭); ನಿನ್ನಂಥ ಒಬ್ಬ ಸಚ್ಛಿಷ್ಯನನ್ನು ಪಡೆಯುವುದರಲ್ಲೇ ಗುರುವಿನ ಧನ್ಯತೆಯಿದೆ (ಹೊಸಕ್ಕಿ. ೩೮). [ ಸಂ. ಧನ್ಯತಾ ]

**ಧನ್ಯವಾದ** (ನಾ). ೧. ಕೃತಜ್ಞತೆಯ ನುಡಿ; ಕೃತಜ್ಞತಾ ಪೂರ್ವಕವಾದ ಪ್ರಶಂಸೆ ಹಾಗು ವಂದನೆ: ಸಭೆಯ ಕಡೆಯಲ್ಲಿ ನೆರವಾದವರೆಲ್ಲರಿಗೂ ಕಾರ್ಯದರ್ಶಿಗಳು ಧನ್ಯವಾದವನ್ನು ಹೇಳಿದರು (ರೂಢಿ). ೨. (ವಿಶೇಷವಾಗಿ ಕ್ರೈಸ್ತರು) ದೇವರಿಗೆ ಸಲ್ಲಿಸುವ ಕೃತಜ್ಞತೆ: ಅವನು ಆಗಾಗ್ಗೆ ಪ್ರಭುಭೋಜನ ಧನ್ಯವಾದಸಮರ್ಪಣ ಆರಾಧನೋತ್ಸವ ಮೊದಲಾದ ಸಮಾರಂಭಗಳಲ್ಲಿ ಕಡ್ಡಾಯವಾಗಿ ಹಾಜರಿ ಹಾಕಬೇಕಾಗಿತ್ತು (ಪುನರು. ೩೭೨). ೩. ಮೆಚ್ಚುಗೆ; ಪ್ರಶಂಸೆ; ಹೊಗಳಿಕೆಯ ಮಾತು: ಶೇಷಣ್ಣನವರು ಕೀರ್ತಿಶೇಷರಾದರು. ಬದುಕಿದ್ದಷ್ಟು ದಿನ ನಿಮಿಷ ನಿಮಿಷವನ್ನೂ ಧನ್ಯವಾದಗಳಿಂದ ಕಳೆದರು (ಗಾನಕ. ೭).
[ ಧನ್ಯ + ವಾದ₃ ]

**ಧನ್ಯಾಸಿ** (ನಾ). [ಸಂಗೀತ] ಒಂದು ರಾಗದ ಹೆಸರು: ಸಮಸ್ತರಾಗಂಗಳೊಳಗೆ ರಾಮಕ್ರಿಯೆ ಭೂಪಾಳಿ . . . ಬಿಲಹರಿ ಧನ್ಯಾಸಿ ಕಲ್ಯಾಣಿ . . . ಮಧ್ಯಮಾವತಿಯೆಂಬ ಮೂವತ್ತಾಱು ರಾಗಂಗಳೇ ಮುಖ್ಯವಾಗಿ ಬಳಕೆಯಿಂದಧುನಾತನರಲ್ಲಿ ಪ್ರಸಿದ್ಧಗೊಂಡಿರ್ಪುವು (ವಿವೇಕ. ೨೩೪); ಧನ್ಯಾಸಿ ಎಂದು ಈ ರಾಗದ ಪ್ರಾಚೀನನಾಮ . . . ೮ನೇ ಮೇಳಕರ್ತ ಹನುಮತೋಡಿಯಲ್ಲಿ ಜನ್ಯ. ಉಪಾಂಗರಾಗ. ಕರುಣಾರಸಪ್ರಧಾನರಾಗ. ಸಾಧಾರಣ ಗಾಂಧಾರ, ಶುದ್ಧಧೈವತ, ಕೈಶಿಕಿನಿಷಾದಗಳು ಜೀವಸ್ವರಗಳು (ಸಂಗೀಚಂ. ೧೫೩); ಪಲ್ಲವಿ ಶೇಷಯ್ಯರ್ ಅವರು ಧನ್ಯಾಸಿರಾಗದ ಆಲಾಪನೆ ಮತ್ತು ಪಲ್ಲವಿಯನ್ನು ೮ ಗಂಟೆಗಳ ಕಾಲ ಹಾಡಿದರು (ಸಂಗೀತ. ೪೭); ನಮ್ಮ ಧನ್ಯಾಸಿಯನ್ನೇ ಹೋಲುವ "ಧನಾಶ್ರೀ" ರಾಗದ ರೂಪವರ್ಣನೆಯನ್ನು ಹೀಗೆ ಹೇಳಲಾಗಿದೆ (ಭಾರದ ೫೪೩). [ ಸಂ. ]

**ಧನ್ಯೆ** (ನಾ). ೧. ಪುಣ್ಯವಂತೆ; ಭಾಗ್ಯವಂತೆ: ಅಸ್ಮಂ ಶರಚ್ಚಂದ್ರನನಿಲ್ಸೆ ಕರಂ ಧನ್ಯೆ ತತ್ಕನ್ಯೆಯಕ್ಕುಂ (ಲೋಕೋಪ. ೧೧-೫೦); ಧನ್ಯ ನಾಂ! ಧನ್ಯೆ ನೀಂ! ಧನ್ಯಮಿಾ ರವಿಕುಲಂ! (ಶ್ರೀರಾಮಾ. ೧೮-೪೮೩). ೨. ದಾದಿ. ೩. ಒಂದು ಬಗೆಯ ನೆಲ್ಲಿ; ಬೆಟ್ಟನೆಲ್ಲಿ. ೪. ಕೊತ್ತುಂಬರಿ; ಧನಿಯಂ.
[ ಸಂ. ಧನ್ಯಾ ]

**ಧನ್ವ** (ನಾ). ೧. ಬಿಲ್ಲು; ಧನುಸ್ಸು: "ಅಸ್ತ್ರಂ, ಧನುಃ, ಇಷ್ವಾಸಃ, ಕೋದಂಡಃ, ಧನ್ವ . . . ದ್ರುಣಾ – ಈ ೯ ಬಿಲ್ಲು" (ಹಲಾಯು. ೭೭-೩೦೦); ನೊದೆ ನಾಣಲ್ಪೆತ್ತ ಬಲ್ಪಜಧನ್ವಂಗಳಂ ಮಿಗಿಲಾಗಿ ಸಂಗ್ರಹಂಗೆಯ್ಯಬೇಕು (ಭಾರಶಾಂ. ೫೨೮-೮೮). ೨. ಮರುಭೂಮಿ: "ಮರುಧನ್ವಾಹ್ವಯಮೂಷರಮಿಾರಿಣಂ" (ವಸ್ತುಕೋ. ೨೭-೨); "ನೀರಿಲ್ಲದಿಳೆ ಮರುಧನ್ವಮಕ್ಕು" (ಮಂಗರಾ. ೨೮-೨). [ ಸಂ. ಧನ್ವನ್ ]

**ಧನ್ವಂತರಿ** (ನಾ). ೧. ಸೂರ್ಯ; ನೇಸರು. ೨. ದೇವತೆಗಳ ವೈದ್ಯ: ಮೂಲಿಕೆ ಲಿಂಗವ ಪೂಜಿಸಿ ಮರಣದೂರತ್ವ ದುಃಖಸಮಿಾಪತ್ವ ಪಡೆದರು ನೋಡಾ ಧನ್ವಂತರಿಗಳು (ಸಿದ್ಧವ. ಕ. ೧೮೨-೬೧೧); ಧನ್ವಂತರಿ ನಮ್ಮಾ ದಾಶರಥಿ (ಅಹಲ್ಯ. ೧೧೪-೧೧); ನನ್ನ ಧನ್ವಂತರಿ ಪ್ರಯೋಗಕ್ಕೆ ಸಮಾನ

ವಾದ ಔಷಧವು ಎಲ್ಲಿಯೂ ಇಲ್ಲ (ನಿಷ್ಕಾಮ. ೩೨). ೯ ದೇವತೆಗಳು ಮತ್ತು ರಾಕ್ಷಸರು ಸಮುದ್ರಮಥನ ಮಾಡಿದಾಗ ಈತನು ಕ್ಷೀರ ಸಮುದ್ರದಲ್ಲಿ ಅಮೃತಕಲಶದೊಂದಿಗೆ ಉದಿಸಿ, ಆಯುರ್ವೇದ ವನ್ನು ಪ್ರಚಾರಮಾಡಿದನು. [ ಸಂ. ]

**ಧನ್ವಂತ್ರಿ,** ಧನವಂತ್ರಿ (ನಾ). = ಧನ್ವಂತರಿ ೨: "ಔಷಧಾಚಾರ್ಯರೆನೆ ಧನ್ವಂತ್ರಿಯೆನಿಸಿಕ್ಕು" (ಮಂಗರಾ. ೧೧೫-೭). **ಧನವಂತ್ರಿ** : ತನುಶುದ್ಧರಾದ ರೆಂಬೋದು ಮಾಕೆ ಧನವಂತ್ರಿ ವೈದ್ಯನೆ ನಿನಗೆ ತೋರಿತು ಕಾಣೊ (ಮೋಕ್ಷದೀ. ೨೪-೨೦). [ <ಸಂ. ಧನ್ವಂತರಿ ]

**ಧನ್ವನ** (ನಾ). ಒಂದು ಬಗೆಯ ಗಿಡ: "ಪಿಚ್ಛಿಲಃ–ಧನ್ವನ, ಚಿಳ್ಳಿ" (ಓಷಧಿ. ೯೭); "ಮಹಾಬಲ–ತವಾಲ, ಧನ್ವನ, ಮೊಸಳೆ" (ಓಷಧಿ. ೧೧೭). [ ಸಂ. ]

**ಧನ್ವಯಾಸ** (ನಾ). ಒಂದು ಬಗೆಯ ಗಿಡ; ತುರುಚೆ: "ಯಾಸಃ, ಯವಾಸಃ, ದುಸ್ಪರ್ಶಃ, ಧನ್ವಯಾಸಃ, ಕಾನಾಶಕಃ . . ., ದುರಾಲಭಾ–೧೦ ತೀಟಕಸಂಧಿ ಹೆಸರುಗಳು. ನಸುಗುನ್ನೇ ಹೆಸರುಗಳು. ತುರುಚೀಬಳ್ಳಿ" (ಸಿದ್ಧಾಂತಿ. ೧೩೩). [ ಸಂ. ]

**ಧನ್ವಿ** (ನಾ). ೧. ಬಿಲ್ಲುಗಾರ; ಧನುರ್ಧರ: ತುಡೆ ಧನ್ವಿ ಸರಲನೊರ್ವಂ ಗೆಡೆವುಗೆ ಮತ್ತೊರ್ವನವನನದು ತಱಿವವೊಲ್ (ಶಾಂತಿಪು. ೬-೨೯); ಒರ್ವನೆ ಧನ್ವಿಯೆನಲ್ ಸಕಲೋರ್ವರೆಯುಂ ಕಾದು ತನ್ನ ಬಾಣದ ಮೊನೆಯೊಳ್ ಪೂರ್ವಲವಮಂ ತವಿಸಿದಂ (ಪಂಪರಾಮಾ. ೨-೬೨); ಧನ್ವಿ ಪದಾತಿವ್ರಾತಟಂಕಾರದಿನುರುಕಹಳಾಜಾಲಫೂತ್ಕಾರದಿಂ . . . ವಿಷ್ಟಪಮಂ ಶಬ್ದಾತ್ಮಕಂ ಮಾಡಿದುದುಭಯಮಾಹೀಭೃಚ್ಚಮೂಚಕ್ರವಾಳಂ (ಚಂದ್ರಪ್ರ. ೧೦-೬೭); ನಗರಾಜನಂತಚಲಾಂಗನಾಗಿ ಧನ್ವಿಯುತೆ ಲಕ್ಷ್ಮೀಕಾಗ್ರಚಿತ್ರನೆನಿಸಿ (ರಾಜಶೇ. ೧೦-೫೭ ಪ); ನಿಶ್ಚಿತ ನಾರಾಚವಯ ತೂಣೀರಮಂ ಧರಿಸಿ . . . ಕಲಿ ಧನ್ವಿ ಹಳುವ ಹೊಕ್ಕನು ಹೊಮ್ಮರೆಯ ಹಿಂದೆ (ಶ್ರೀರಾಮಾ. ೨೩೫-೧೯೦). ೨. ಒಂದು ಬಗೆಯ ಮರ; ಕೆಂಪು ಮತ್ತಿಮರ: "ಬಿಲ್ವರಂ ಧನ್ವಿಯಕ್ಕು" (ಮಂಗರಾ. ೩೬-೧೮). ೩. ಅರ್ಜುನ. ೪. ವಿಷ್ಣು. ೫. ಶಿವ. [ ಸಂ. ಧನ್ವಿನ್ ]

**ಧಬಕ** (ನಾ). (ಉಕ) ದಡ್ಡ; ಹೆಡ್ಡ: ಎತ್ತು ಮೂಟೆ ಹೊತ್ತಂತೆ ಡಿಗ್ರಿಗಳನ್ನು ಹೊರಲು ಬಂದ ಧಬಕರು ಉಮೇಶನ ಪ್ರತಿಭೆಯನ್ನು ಕಂಡು ದಿಙ್ಮೂಢರಾಗಿ ಶರಣು ಬಂದಿದ್ದರು (ದಾಕೂಟ. ೩). [ ? ]

**ಧಬಕಿ** (ನಾ). (ಉಕ) ದಡ್ಡಿ; ತಿಳಿಗೇಡಿ ಹೆಂಗಸು; ಮೂರ್ಖ ಹೆಂಗಸು: ಆಕೇನು ಧಡ್ಡಿ, ಧಬಕಿ ? ತಿಳಿಸಿ ಹೇಳಿದ ಮ್ಯಾಲೆ ಯಾಕ ತಿದ್ದಿಕೊಳ್ಳೊದಿಲ್ಲಾ (ವೈನಿ. ೦೭೭). [ ಧಬಕ + – ಇ₂ ]

**ಧಬಧಬೆ,** ದಬದಬೆ (ನಾ). (ಉಕ) ತಡಸಲು; ಜಲಪಾತ: ನದಿಯ ಮುಖಿ, ಧಬಧಬೆ ಮುಂತಾದವುಗಳನ್ನು . . . ತೋರಿಸಿ ಕಲಿಸುವುದರಿಂದ ಆಗುವಷ್ಟು ಲಾಭವು ಬರೇ ಬಾಯಿಯಿಂದ ಬೇಕಾದಷ್ಟು ಹೇಳಿದರೂ ಆಗುವದಿಲ್ಲ (ವಿಜಾಭೂ. ೩); ಕನ್ನಡ ಜಿಲ್ಲೆಯೊಳಗಿನ ಪ್ರಸಿದ್ಧ ಧಬಧಬೆಯಾದ ಗೇರಸೊಪ್ಪೆ (ಅಂಬಿಕೆ. ೨೭). **ದಬದಬೆ**: ಎನ್ನನುಳಿದು ಪೋಗದಿರಿ ನೀವೆಂದು ಪೇಳುವಳು ಕೇಳ್ಬೋರ್ಗರೆವ ದಬದಬೆಯು ಸರದಿಂ ನದೀರವಣಿ ನೇಬುಗೆಯೊಳು (ಮಹಾಂಕೇ.೨೨-೩೮).
[ ←ಮರಾ. ಧಬಧಬಾ, ಧಬಧಬೀ ]

**ಧಮಕಿ** (ನಾ). ಬೆದರಿಕೆ; ಗದರಿಕೆ: ಗಂಡನಾಗುವವನ ಬಗ್ಗೆ ಯೋಚಿಸುತ್ತಿರಲಿ . . . ಯಾವುದರದೂ 'ಧಮಕಿ' ಇಲ್ಲದಿರುವುದು ಸರಿಯಲ್ಲ (ಮೂರುದಾ. ೧೦೩); ಜಮೀನ್ದಾರನ ಧಮಕಿಗೆ ಏನು ಉತ್ತರ ಕೊಡುವುದು, ಇದೇ ವಿಚಾರಣೀಯ ವಿಷಯವಾಗಿತ್ತು (ಜಮೀನ್ದಾ. ೬೨); ನೀ ದಾದಾಗ ಕೊಟ್ಟ ಧಮಕೀಯಿಂದ ಪುಷ್ಕಳ ಫಾಯದೇ ಆಗೇದ (ದೀಪಹ. II, ೨೮೦). ಧಮಕಿ ಹಾಕು = ಬೆದರಿಕೆ ಹಾಕು: ಕುಡಿಯೋದಕ್ಕ ರೊಕ್ಕಾ ಕೊಡಿರಂತ ಧಮಕೀ ಹಾಕೂದೇನು . . . ಸಿಕ್ಕವರನ್ನು ಹಿಡಿದು ಬಡಿಯೂದೇನು (ಮಣ್ಣುಹೆ. ೩೮) [ ←ಮರಾ. ಧಮಕೀ, ಧಮಕಾ; ಹಿಂ. ಧಮಕೀ ]

**ಧಮಣಿ** 'ದಮಣಿ' ನೋ.

**ಧಮಣಿಗ** (ನಾ). ದಮಣಿಗಾಡಿ ಹೊಡೆಯುವವನು; ಪೆಟ್ಟಿಗೆ ಗಾಡಿ ಹೊಡೆಯುವವನು: ಇಬ್ಬರೂ ಅದರೊಳಗಿಂದ ಕೆಳಗಿಳಿದರು. ಧಮಣಿಗನು ಅವರ ಗಂಟು ಗದಡಿಗಳನ್ನು ಕಟ್ಟೆಯ ಮೇಲೆ ಇಟ್ಟನು (ರಕ್ತಧ್ವ. ೧೦೦). [ ಧಮಣಿ (<ದಮಣಿ) + – ಗ₂ ]

**ಧಮನ** (ನಾ). ಒಂದು ಬಗೆಯ ಹುಲ್ಲು; ಲಾಳದ ಕಡ್ಡಿ. [ ಸಂ. ]

**ಧಮನಿ** (ನಾ). ೧. ಕೊಳವಿ; ನಳಿಕೆ; ನಾಳ: "ಧಮನಿಯೆನೆ ಕೊಳವಿ" (ಮಂಗರಾ. ೬೧-೨೦); ಕೆಂಗೆಂಡದ ಧಮನಿಯುಂ ಸುಖಮೆಂದು ಮುದ್ದಿಸಲ್ಪೋಗೆ ಸುಖಮನೀವುದೆ (ಪಂಕಾರಾ. ೨-೯-೧೭). ೨. ರಕ್ತನಾಳ; ನರ; ನಾಡಿ: ಧಮನಿ, ಗಮನಿ, ಲೋಲೆ, ಧೃತಿ, ಸರ್ವಗಾ ಎಂಬೈದು ನಾಮವನುಳ್ಳ ನಾಡಿಯು ತಾನು ಏಕರೂಪವಾಗಿಯೇ ಆಲದ ಬೀಳಿನ ಹಾಗೆ ನೂಲಿನಂತೆ ಐದು ಬೆರಳಿಗೂ ಪ್ರಧಾನವಾದ ಹೆಬ್ಬೆಟ್ಟಿನ ಮೂಲದಲ್ಲಿರುವ ನರದ ಮೇಲೆ ಸಣ್ಣನಾಗಿ ಕಾಣಬರುವುದು (ಸಕವೈ. ೧೦); ವೈದಿಕವಲ್ಲದೆ ಶೂರಶಿಖಾಮಣಿಯು ನೆತ್ತರೂ ನಮ್ಮ ಧಮನಿಯಲ್ಲಿ ಆಡುತ್ತಿತ್ತು ಎನ್ನುವುದಕ್ಕೆ ಅವು ಸಾಕ್ಷಿಯಾಗಿವೆ (ದೀಪಹ. II, ೯೪). ೩. ಕೊರಳು; ಕಂಠ: "ಕೊರಲುಮಾಸ್ಯಂ ಗಳಂ ಧಮನಿ ಕಂಧರ ಶಿರೋಧರಮದಾ ಗ್ರೀವಮೆನಿಸಿಕ್ಕು" (ಮಂಗರಾ. ೯೫-೭). [ ಸಂ. ]

**ಧಮ್ಮ₁,** ದಮ್ಮ₁, ದರುಮ, ದರ್ಮ, ಧರುಮ (ನಾ). ೧. ದಾನ; ಧರ್ಮಕಾರ್ಯ: ರಾಜರಕ್ಷಿತಂ ಧಮ್ಮ[ಂ] (ಕಇಅ. ೧೦-೩-೩೪೭; 1062); ಇ ಧಮ್ಮಕ್ಕಾರಾನುಂ ಅಡ್ಡಂ ಬಂದವರು ಅಯ್ನೂರ್ವ್ವಸ್ವಾಮಿಗಳ್ಗೆದಿರಾದವರು (ಸೌಇಇ. XX, ೧೩೯-೧೮; 1163); ಪಾರಣೆಯ ಜಂಗಮಾರಾ[ಧ]ನೆಗೆ ಕೊತ್ತಸಿಗೆ ಇ (ಈ) ಧಮ್ಮಕ್ಕೆ [ಇ]ದು ವಿವರ ಎಂದು ನಾಗರಸ[ರು] ಕೊಟ್ಟ ಸಾಸನ (ಎಇ. XXI, ೧೪-೭೫; 1260); ಯಾ ಧಮ್ಮಕ್ಕೆ ಅವನಾನೊಬ್ಬ ತಪ್ಪಿದಡೂ ಗಂಗೆಯ ತಡಿಯ ಖಪಿಲೆಯ ಕೊಂದ ಪಾಪದಲಿ ಹೋಹರು (ಎಕ. IX, ಬೆಂಗಳೂ. ೮-೨೯; 1440). **ದಮ್ಮ₁** : ೧. ಈ ದಮ್ಮವನಟಿದವರ್ ಕವಿಲೆಯುಂ ಬಾಣರಾಸಿಯು ಪನಟಿದ ಪಾಪಕ್ಕೆ ಪೋಪರ್ (ಎಕ. X, ಚಿಂತಾಮ. ೩೦-೦೭; 1047); ಉಜಿದೆ ನಿಜ ದಮ್ಮಮಂ ಮೇಣ್ ಕಱುಪಿಂದ ಪೆಱರ ದಮ್ಮಮಂ ಮೇಣಳಿವಂತೆಟಿಗೊಳುವಂ ಪುಳುಕೊಣ್ಣ ದೊಟಱುವತ್ತುಸಹಸ್ರಮುದು ಭವಿಸಿಕು (ಎಕ. VI, ತರೀಕೆ. ೬೨-೨೭; 1104?). ೨. ಧರ್ಮ; ನೀತಿ: "ಧರ್ಮ–ದಮ್ಮ" (ಶಮದ. ೨೬೧ ಪ್ರಯೋ); ಮನೆವಾಟ ದಮ್ಮವ ವೆಲ್ಲವಂ ನೀನೆ ಬಲ್ಲೆ (ಪಂಚತಂ. ೦೩೦-೭); ದಮ್ಮವಿಮ್ಮಡಿಯಾಯ್ತು ದನುಜರ ಹೆಮ್ಮೆ ಕರಿಮೊಳೆಯೋಯ್ತು (ಅಕ್ರೂಚ. ೬-೩೨). ೩. ಧರ್ಮದ ಅಧಿದೇವತೆ; ಯಮ: "ಜವನಱಂ ದಮ್ಮನು" (ಶಬ್ದಮಂ. ೦೩); "ದಮ್ಮನೆಂದೆನಲಂತಕಂ" (ಕಶರ. ೫೦). ೪. ತತ್ತ್ವೋಪದೇಶ: ವಿಮಲವಾಹನ ಜಿನಪತಿಯಂ ಪ್ರದಕ್ಷಿಣಂಗೆಯ್ದು ಪೂಜಿಸಿ ಪೊಡೆವಟ್ಟು ದಮ್ಮ [ಪಾಠಾಂ. ಧರ್ಮ]ಮಂ ಕೇಳ್ದು (ಅರ್ಧನೇ. ೨-೪೨ ವ). **ದರುಮ** : ೨. ದರುಮದ ಚರಕಂ ನನ್ನಿಯ ಪೊರ್ಕುಳಮರಿವು ಸಮಾಧಿ ಧೃತಿಯುವಿರೆ ನೇಮಿ ಅರಮನೆ ನಯವಿನಯಮುಮಂ ಹಿತಕಾ ಪರಿಷದದೊಳವಂ ನಡೆಸುಸಿದಂ (ಸಾನಂದ. ೩-೦೦). **ದರ್ಮ** : ೧. ಮಲ್ಲಿಕಾರ್ಜುನರಾಯ ಮಹಾರಾಯರಿಗೆ ದರ್ಮ್ಮವಾಗಿ ಬಿಟು ದರ್ಮ್ಮಶಾಸನಗಳನೂ ಬರಸಿ ಕೊಡಹೇಳಿ (ಎಕ. X, ಬಾರಿಂಗ್. ೦೪-೪; 1465). ೫. ಪುಣ್ಯವುಂಟಾಗುವಿಕೆ; ಪುಣ್ಯ ಸಂಪಾದನೆ: ಸಾಳುವ ನರಸಿಂಗರಾಜವೊಡಯರಿಗೆ ದರ್ಮ್ಮವಾಗ

ಬೇಕೆಂದು ಯಿಾಸ್ವರಿನಾಯಕರು ಎಳ × × × (ಎಕ. X, ಬಾರಿಂಗ್. ೧೯-೬ ; 1472). **ಧರುಮ :** ೨. ಧರುಮವಕೆನ್ನ ಮಾರಿ, ತಾನು ಕರುಮಬಾಹ್ಯ ಆಗಿಹನು (ನಡದಾ. I, ४३೦). ೬. ಮತ : ನನ್ನ ಕಾಣದ ಮುನ್ನ ಕಾಣೆ ನಾ ನಿನ್ನನೆಂದು ಸಾರುವವ್ವೆಸೆ ಧರುಮಂಗಳೆಲ್ಲ (ಗೀವಿಂ. ೫೬-೩).

[ <ಪ್ರಾ. ಧಮ್ಮ./ಸಂ. ಧರ್ಮ ]

**ಧಮ್ಮ₂** 'ದಮ್ಮ₃' ನೋ.

**ಧಮ್ಮಕಾಳು** (ನಾ). ದಪ್ಪವಾದ ಕಾಳು,- ಬೀಜ; ದಡಿಗಾಳು : ಗಿಡ್ಡಕಾಳು ಧಮ್ಮಕಾಳು ಮೊದಲಾದ ಕನಿಷ್ಠಪ್ರತಿಯ ನೆಲ್ಲುಬೀಜವನ್ನು ಬಿತ್ತಿ ಅಕ್ಕಿಯನ್ನು ಕೆಡಿಸಿಕೊಳ್ಳುತ್ತಾರೆ (ಕೃಷಿಪ್ರ. ೬೪).

[ ಧಮ್ಮ₂ (<ದಮ್ಮ₃) + ಕಾಳು₂ (<ಕಾಟ್ಟು₂) ]

**ಧಮ್ಮಗಳ್** (ನಾ). ಬಿಟ್ಟಿಯಾಗಿ ಕೊಡುವ ಹೆಂಡ : ಧಮ್ಮಗಳ್ಳೀಟಿವುತಂ (ಬಾಹುಪು. ೧೦-೧೩೭). [ ಧಮ್ಮ₁ + ಕಳ್₃ ]

**ಧಮ್ಮಗುದ್ದಿ** (ನಾ). ದಪ್ಪವಾದ ಮರದ ತಂಡು : ಹಮ್ಮುಯೆಂಬೊದೆ ಎಮ್ಮೆ ಗಮ್ಮುಯೆಂಬೋದೆ ಹಗ್ಗ ಹೆಮ್ಮೆಯೆಂಬೊದೆ ಆದಕ್ಕೆ ಧಮ್ಮಗುದ್ದಿ (ಪುರಂದ. ३-೫೫-೧). [ ಧಮ್ಮ₂ (<ದಮ್ಮ₃) + ಗುದ್ದಿ (<ಗುಂದಿ₃) ]

**ಧಮ್ಮಪದ** (ನಾ). ಬುದ್ಧನ ವಚನಗಳ ಸಂಕಲನ : ಧಮ್ಮಪದ ಥೇರಗಾಥಾ ಥೇರೀಗಾಥೆಗಳೂ, ಸುತ್ತನಿಪಾತದ 'ಸುತ್ತ' ವೆಂಬ ಹೆಸರಿನ ಶುದ್ಧಗಾಹೆಗಳೂ 'ಗಾಥಾ' (ಬುದ್ಧಪ. ೫ ಪ್ರವೇಶ). [ ಧಮ್ಮ₁ + ಪದ₂ ]

**ಧಮ್ಮಮಗ್ಗ** (ನಾ). [ಬೌದ್ಧ] ಧರ್ಮಮಾರ್ಗ; ಬುದ್ಧನು ಪ್ರತಿಪಾದಿಸಿದ ಆರ್ಯ ಅಷ್ಟಾಂಗಿಕ ಮಾರ್ಗ; ಸಮ್ಯಕ್‌ದೃಷ್ಟಿ, ಸಮ್ಯಕ್‌ಸಂಕಲ್ಪ, ಸಮ್ಯಕ್‌ವಾಕ್, ಸಮ್ಯಕ್‌ಕರ್ಮಾಂತ, ಸಮ್ಯಕ್ ಆಜೀವ, ಸಮ್ಯಕ್ ವ್ಯಾಯಾಮ, ಸಮ್ಯಕ್‌ಸ್ಮೃತಿ, ಸಮ್ಯಕ್‌ಸಮಾಧಿ- ಇವೇ ಆ ಮಾರ್ಗದ ಎಂಟು ಅಂಗಗಳು : ಮಾರನಂ ಮುರಿದು ಸಂಬುದ್ಧನೆಮ ಗಗ್ಗಂ ನಿಬ್ಬಾಣವೊಂದೆ, ತಣ್ಣೆಯರಣ್ಮಮಂ ತರಿದು, ತೋರ್ದಸರಿ ಯಟ್ಠಂಗಿಕದ ಧಮ್ಮಮಗ್ಗಂ (ಗೀವಿಂ. ४೫-೮). 'ಸಮ್ಯಕ್‌ದೃಷ್ಟಿ' ಪರಾ.

[< ಸಂ. ಧರ್ಮಮಾರ್ಗ ]

**ಧಮ್ಮಸ** 'ದಮ್ಮಸಂ' ನೋ.

**ಧಮ್ಮಸವಿಕ್ಕು** (ಕ್ರಿ). ನೆಲವನ್ನು ಕುಟ್ಟಿ ಸಮಂಮಾಡು ; ಧಮ್ಮಸುಮಾಡು: ಹೊತ್ತ ಅರೆಬಂಡೆಯಂ ಹೆಗಲಿಂದೆ ಹಾಯ್ಕಿ . . . ಬದ್ಧನಿಯ ಚಪ್ಪಳಿ ಗಳುಣ್ಮುವೋಲಪ್ಪಳಿಸಿ ತೋಳ್ಗಳಿಂ ಜಂಘೆ ಧಮ್ಮಸವಿಕ್ಕಿ ಕುಪ್ಪಳಿಸಿ . . . ವಾನರರಸಂಖ್ಯಪಂಕ್ತಿಗಳೆಸೆದುವಲ್ಲಲ್ಲಿ (ಶ್ರೀರಾಮಾ. ೫೯३-३३೮).

[ ಧಮ್ಮಸ (<ದಮ್ಮಸು) + ಇಕ್ಕು ]

**ಧಮ್ಮಿಲ್ಲ** (ನಾ). ಹೆಣೆದು ಮುಡಿಕಟ್ಟಿ ಅಲಂಕರಿಸಿದ ಕೂದಲು, – ಕೇಶ ರಚನೆ; ತುರುಬು ; ಮುಡಿ; ಕಬರಿ: "ಕಬರಿ ಧಮ್ಮಿಲ್ಲ ಕಚೋದ್ಬಂಧನಂ" (ವಸ್ತುಕೋ. ೭೦-३೦) ; "ವೇಣೀ, ಧಮ್ಮಿಲ್ಲಃ, ಕುಂತಳಃ, ಕಬರೀ – ಈ ೪ ಮುಡಿ" (ಹಲಾಯು. ೮೭-೩೭೬) ; "ಕಬರಿ ಕುಂತಳಂ ವೇಣಿ ಧಮ್ಮಿಲ್ಲ ಮೆನಲಾ ಕಟ್ಟುಮುಡಿ" (ಮಂಗರಾ. ೯४-೬) ; ಮೊಗಮಂ ತಾವರೆ ಕಣ್ಣನುತ್ಪಳದಳಂ ಧಮ್ಮಿಲ್ಲಮಂ ಸೋಗೆ ಸೆಳ್ಳುಗುರಂ ಕೇದಗೆ . . . ಆರಾಧಿಸಿ ಪೋಲ್ತುವೆನ್ನದೆ ಸರೋಜಾತಾದಿ ನಿಸ್ಸಾರವಸ್ತುಗಳೊಳ್ ಪೋಲಿಸುವಂತುಟೇಮ್ಮರುಳನೇ ರೂಪಂ ವಿಚಿತ್ರಾಂಗಿಯಾ (ಆದಿಪು. ೬-೮೫) ; ದುಶ್ಶಾಸನಂ ತನಗಂ ಮೆಲ್ಲನೆ ಮೃತ್ಯು ಸಾರೆ ತೆಗೆದಂ ಧಮ್ಮಿಲ್ಲಮಂ ಕೃಷ್ಣೆಯಾ (ಪಂಪಭಾ. ೭-೫) ; ಬಿಟ್ಟಿರ್ದ ಧಮ್ಮಿಲ್ಲಮುಂ ಪೊಸತೊಂದೊಪ್ಪ ಮನೀಯೆ . . . ಬಂದತ್ತು ಗೋಪೀಜನಂ (ಜಗವಿ. ೩-೮೯) ; ಉರಮಿಂಬಿಲ್ಲ ಪಯೋಧರದ್ವಯದ ಕೊರ್ಬಿಂಗೆ . . . ಬೆನ್ನಿಂಬಿಲ್ಲ ಧಮ್ಮಿಲ್ಲಬಂಧುರ ಸೀಮಾವಳಯಕ್ಕೆ (ಗಿರಿಕ. ४-೫೮) ; ಧಮ್ಮಿಲ್ಲದುರುಭರಕೆ ನಟಣೆಯಲಿ ಬಳುಕಿದುದು ಕೊರಳು (ತೊರರಾ. ३-४-೬) ; ನಸುವಣ್ಣದುಟಿಯರ್ಗೆ ಕಿಸುವಣ್ಣಗಣ್ಣರ್ಗೆ ಸಸಿನಾದ ಧಮ್ಮಿಲ್ಲದವರ್ಗೆ ಒಸೆದುಡತೊಡಲು ಕೊಟ್ಟು (ಭೃರಸೂ. ३೮३) ; ಬಲುಮುಡಿಗಳುಂಟು ಭಾವೆಯರ ಧಮ್ಮಿಲ್ಲದೊಳ್ ಹೊಳಹು ಮುರುಹುಂಟು ನಾಟ್ಯದ ವನಿತೆಯರೊಳು (ರುಕ್ಮಾಂಗ. ४-೧೯) ; ಧಮ್ಮಿಲ್ಲವನು ರಚಿಸು, ಮೆಯ್ಯ ಸಿಂಗರಿಸು (ಯಶೋಧ. ४೭-೧೫) ; ಸಿಲ್ಕಿದು ವೆನಲ್ಕೆ ರಜನಿಯ ಕುರುಳ ಧಮ್ಮಿಲ್ಲಕ್ಕೆ ಪೂವರಿಲ್ಗಳಂತೆವೋಲಲ್ಲಲ್ಲಿ ತೋರ್ದುವಯ್ ಮಿಸುಗುವ ಮಿಸುನಿ ತಾರೆ (ಶ್ರೀರಾಮಾ. ३೬೦-೮೭೯).

[ ಸಂ. ]

**ಧಮ್ಮಿಲ್ಲದ್ಯುತಿ** (ನಾ). ಮಂಡೆಯಂ ಹೊಳಪು ; ತುರುಬಿನ ಕಾಂತಿ : ಪಿರಿದುಂ ಮಾಡಿತ್ತು . . . ಸುರಸ್ತ್ರೀಯರಪಾಂಗಾಕ್ಷಿಪ್ರಭಾಸಂಚಯದಿನುದಿತ ದೇಹಾಂಶುಸಂದೋಹದಿಂ ಮೇದುರಧಮ್ಮಿಲ್ಲದ್ಯುತಿಸ್ತೋಮ ದಿನಧರಮಯೂಖಾಳಿಯಿಂದೆತ್ತಲುಂ ಪಾಂಡುರಿತಂ ಪೈಶಂಗಿತಂ ಕರ್ಬುರಿತ ಮರುಣಿತಂ ವ್ಯೋಮರಂಗಂ ಬೆಡಂಗಂ (ಚಂದ್ರಪು. ೧३-೭೭).

[ ಧಮ್ಮಿಲ್ಲ + ದ್ಯುತಿ ]

**ಧಮ್ಮೇತ** (ನಾ). ಬಾವಿಯಿಂದ ನೀರನ್ನು ಧರ್ಮಾರ್ಥವಾಗಿ ಎತ್ತುವ ಏತ : ಬಾಡನ ಹಟ್ಟಿಯಲು ಧಮ್ಮೇತದ ಸ್ಥಳದಿಂ ತೆಂಕಲು ತಕ್ಕಿಲವು (ಎಇ. XIV, ३೬३-४೦ ; 1173) ; ಹರಿವ ಕಿಱುವಳ್ಳದಿಂ ಪಡುವಲು ಧಂಮೇತದ ಬಾವಿಯಿಂ ತೆಂಕಲು ತೋಟ ಮತ್ತ × × × (ಸೌಇಇ. XV, ೦३೮-೩४ ; 1174). 'ಧರ್ಮೇತ' ಪರಾ. [ ಧಮ್ಮ₁ + ಏತ₁ ]

**ಧರ** (ನಾ). ೧. ಬೆಟ್ಟ ; ಪರ್ವತ : "ಅಚಳಃ, ಶಿಲೋಚ್ಚಯಃ . . . ಧರಃ, ಅದ್ರಿಃ, ಕುಧ್ರಃ- ಈ ೧೪ ಬೆಟ್ಟು" (ಹಲಾಯು. ३೬-೧೧). ೨. ವಿಷ. 'ಧರಭೋಗಿ' ಪರಾ. ३. ಖಡ್ಗ. [ ಸಂ. ]

**ಧರಣ₁** (ಗು). ೧. ಧರಿಸಿರುವ ; ಹೊತ್ತಿರುವ : ಆಧಾರವಾಗಿರುವ. (ನಾ). ೨. ಧರಿಸುವಿಕೆ : "ಧರಣಂ, ಧಾರಣಂ . . . ಧಾರ್ಯಂ ಈ ೬ ತಾಳ್ಕೆ" (ಕಾಶಕ. ೦३೮). ३. ಆಧಾರ. ४. ಅಣೆಕಟ್ಟು ; ಕಟ್ಟೆ. ೫. ಸೂರ್ಯ. ೬. ಚಿನ್ನದ ಅಥವಾ ಬೆಳ್ಳಿಯಿಂದ ಮಾಡಿದ ಒಂದು ಬಗೆಯ ನಾಣ್ಯ ; ಗದ್ಯಾಣದ ಅರ್ಧಭಾಗ : "ನಾಲ್ಕು ಹಾಗಂ ಪಣ ಮಯ್ದು ಪಣಂ ಧರಣಂ ಧರಣದ್ವಯಂ ಗದ್ಯಾಣಂ" (ಪಸಾರ. ೯४) ; ಪೂಸವ ನಕ್ಕಂ ಚೌಲಕ್ಕಂ ಧರಣಂ (ಇಆ. VIII, ३೮೭-೫೯ ; ೨ನೆಯ ಶತ) ; ಮತ್ತೊನ್ದು ಈಸ್ವರಲಯಕ್ಕೆ ಕೊಟ್ಟ ಧರಣಂ ಎವ(೦)ಙ್ಗಲ್ಗಳೊನ್ದು (ಸೌಇಇ. XI-1, ೩೫-೯ ; 933) ; ಕಿಱಿಯ ದೀಪಾವಳಿಯಲು ಕಿಱುವ ಅರುವಣಂ ಗದ್ಯಾಣ ೧ ಧರಣ ೧ (ಸೌಇಇ. XX, ೦೦೯-३೦ ; 1148) ; ಪ್ರತಾಪಕೆ ಪಣವು ಬಾಣಂ ಪ್ರತಾಪಕಂ ಧರಣವೆರಡು ಚೌಲಂ ನಾಲ್ಕುಂ (ವ್ಯವಹಾ. ಅನುಬಂಧ. I, ೫) ; ಬೆಳೂರು ಗದ್ದೆಯಲ್ಲಿ ಕಂದಾಯ ಅಯಿದು ಹೊನ್ನು ಧರಣದ ಭೂಮಿಗೆಯಲ್ಲ ಚತುಸ್ಸೀಮೆ ವಿವರ (ಎಕ. XIV, ತಿರುಮ. ೧೬४-೧೯ ; 1663) ; ರಾಮಟೆಂಕೀನಾಣ್ಯವು ಕಟಾಕಟಿ ನಾಲ್ಕು ತೊಲಿ ಇರುತ್ತಿತ್ತು . . . ಕಾಲುಪಾಲಿನ ನಾಣ್ಯಕ್ಕೆ ಧರಣವೆನ್ನುವರು. ಅದು ೧ ತೊಲಿ ತೂಕವಿರುತ್ತಿತ್ತು (ಕಥಾಗೆ. ३೮೦) ; ಪಾವಲೆ ಇಲ್ಲದಿದ್ದರೆ ಧರಣ ಕೊಡಬಾರದೆ ? (ಗಾದ). ೭. ಒಂದು ತೂಕದ ಪ್ರಮಾಣ; ಕಾಲು ತೊಲೆ; ಹತ್ತು ಪಲದ ತೂಕ : ಭಂಗಿಸೊಪ್ಪಿನ ರಸದಿಂ ಮರ್ದಿಸಿ ಮೂರು ಧರಣ ತೂಕವಂ ಜೇನುತುಪ್ಪವೆರಸಿ ಕೊಡಲು ಸಕಲವಾದ ಅತಿಸಾರವೂ ಗುಣವಹುದು (ಸಕವೈ. ೩३४) ; ಗ ೧ ತೂಕ ಶರ್ಕರೆ, ಧರಣ ತೂಕ ಏಲಕ್ಕಿಯನು ಹಾಕಿ . . . ಉಣ್ಣಲು ಬಹುಮೂತ್ರಕೃಚ್ಛ್ರ, ಮೇಹ ಮುಂತಾಗಿ ಮಾಣ್ಗುಂ (ಸಕವೈ. ೩೮೫) ; ವಟಕಗಳಿಗೆ ತಕ್ಕಂತೆ ಗುಡಪಾಕ ಮಾಡಿ ಕಲಸಿ ಜೊತೆಗೆ ಒಂದೊಂದು ಧರಣ ( ಕಾಲು ತೊಲ ) ಯವಕ್ಷಾರ, ಸದ್ಯಕ್ಷಾರ . . . ಸೇವಿಸಿದರೆ ಶ್ವಾಸಕಾಸ . . . ಅತಿಸಾರ ಗಳೆಲ್ಲಾ ನಾಶವಾಗುವುವು (ಸಕವೈ. ಪರಿ. ४४೭). [ ಸಂ. ]

**ಧರಣ₂** 'ಧರಣ₆' ನೋ.

**ಧರಣಿ₁** (ನಾ). ೧. ಇಳೆ; ಭೂಮಿ; ಪೃಥ್ವಿ; ನೆಲ: "ಸ್ಥಿರೆ ಧರಣಿ ಧಾತ್ರಿ ಮೇದಿನಿ ಧರಿತ್ರಿ ಧರೆಯುವನಿ ಪೃಥ್ವಿ ರಸೆ ವಸುಧೆ ವಸುಂಧರೆ ಕು ಮಹಿ ಜಗತಿ ವಿಶ್ವಂಭರೆ ಗೋ ಕ್ಷ್ಮಾ ಕ್ಷೋಣಿ ಭೂಮಿ ಭೂ ಗೋತ್ರ ನೆಲಂ" (ವಸ್ತುಕೋ. ೨೬-೧); ಮೆಚ್ಚಿ ನಾನಿ ಧರಣಿಯುಳಿರವಾನೆನ್ದು ಸನ್ಯಾಸನಂ ಗೆಯ್ದು (ಎಕ. II, ೮೮-೩; ಸು. 700); ಧರಣಿಯಂ ವಿಕ್ರಾಂತದಿಂದಂ ರಸಾತಲದಿಂ ದೆತ್ತಿದನಾವಂ (ಪಂಪಭಾ. ೬-೪೧); ಧರಣಿಗೆ ಧೈರ್ಯಮಂಬುಧಿಗೆ ಗುಣ್ಪು ಸಹಸ್ರಕರಂಗೆ ತೇಜಂ . . . ತನ್ನದೊಂದಿರವಿನೊಳಾದುವು (ಕಾದಂಪೂ. ೨೪೩); ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ ಹರದ ಕುಳ್ಳಿರ್ದ (ಬಸವ. ೧೧೫); ಧರಣಿಯನೊಕ್ಕಲಿಕ್ಕಿ ದಿಗಧೀಶರನೊತ್ತಿ ಮೆಟ್ಟಿ (ಗಿರಿಕ. ೬-೫). ೨. ಭೂಮಿದೇವಿ; ಭೂಮಿತಾಯಿ: ಧರಣಿ ನುಂಗುವಳಿಬ್ಬರನು ಸಂಗರವ ಜಯಿಸದ ನೃಪನ ದೇಶಾಂತರವ ಚರಿಸದ ಪಂಡಿತನನು (ಕುವ್ಯಾಉ. ೩-೨೨). 'ಧರಣಿಜಾತೆ' ಪರಾ. ೩. ರಾಜ್ಯ: ಧರಣಿಯಂ ಪಚ್ಚಾಳ್ವಂ (ಪಂಪಭಾ. ೧೩-೮೫). ೪. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: "ಧರಣಿ ಶಶಿಯೆನಲೊಂದು" (ಮಂಗರಾ. ೧೦೩-೮). ೫. [ಛಂದ] ಅಕ್ಷರಗಣಗಳಲ್ಲಿ ಒಂದಂ; ಮಗಣ (— — —): ಗುರುಲಘುಮಿಶ್ರಂ ಮೂಱಕ್ಕರದಿಂ ಗಣಮಿಡು ಲತಾಂಗಿ ಬರೆದೆಂಟುಗಣಂ ಧರಣಿ ಜಲಾಗ್ನಿ ಮರುದ್ವ್ಯೋಮ ರವಿ ಶಶಾಂಕೇಂದ್ರನಿಲಯಮಿವು ಗಣನಾಮಂ (ಛಂದೋಂಬು. ೧-೩೬). ೬. ಒಂದು ದೇವತೆಯ ಹೆಸರು; ಪ್ಲೇಗಿನಮ್ಮ: ಹೊತ್ತಿನಂತೆ ಮತ್ತಾರ ನೆನೆದೇವು ಹುತ್ತದಲ್ಲಿರುವೋ ಧರಣೀಯ ಧರಣಿ ಕಾಳಿಂಗನ ಹೊತ್ತಿನಂತೆ ಎದ್ದು ನೆನೆದೇವು (ನನ್ನೂರು. ೩೧). ೭. (?): ಆಶಿಯ ಆರಿಕೆಯ ಕರವಿಡಿದು ಭವವಾಸನೆ ಲೇಸು ತಸಗೆಂದು ಅನುದಿನವು ಆದಕ್ಕೆ ಧರಣಿಯೆಂಬರು (ಉದ್ಯೋಪ್ರ. ೭-೩೭-೨೨).

ಧರಣಿಯಮರ=ಧರಣೀಸುರ: ಧರಣಿಯಮರರ ಸೇವೆಯನು ವಿಸ್ತರಿಸಿ (ಕುವ್ಯಾಉ. ೫-೬೭); ಧರಣಿಯಮರರ ಶಾಪವದು ಪರಿಹರಿಸುವುದೆ (ನಿಭಾಗ. ೧-೧೧-೫೯). [ ಸಂ. ]

**ಧರಣಿ₂**, ಧರಣ₃, ಧರಣೆ (ನಾ). ಕೊಟ್ಟ ಮಾತಿನ ಅಥವಾ ಕೋರಿಕೆಯ ಪೂರೈಕೆಗಾಗಿ ಒತ್ತಾಯಪಡಿಸುವ ಉದ್ದೇಶದಿಂದ ಆದಕ್ಕೆ ಸಂಬಂಧಿಸಿದವರ ಸಮಕ್ಷದಲ್ಲಿ, ಉದ್ದೇಶ ಫಲಿಸುವವರೆಗೂ ಕದಲದೆ ಪಟ್ಟು ಹಿಡಿದು ಕುಳಿತುಕೊಳ್ಳುವಿಕೆ: ಅಂದೇ ಸಂಪನ್ನೂ ಅರ್ಧದಿನ ಕೆಲಸಕ್ಕೆ ಹೋಗದೇ ಕಚೇರಿಯ ಮುಂದೆ ಧರಣೀ ಕೂತು ಆಚರಿಸಲು ಯೋಚಿಸಿದರು (ಅಪನಾ. ೧೧೧). **ಧರಣ₃**: ಅವರು ಧರಣ ಕೂತು ಸಾಧಿಸಿಕೊಂಡರು (ರೂಢಿ). **ಧರಣೆ**: ಫವುಜಿಗೆ ಕರಾರು ಬಾಕಿ ಮಾಡಬೇಕಾದ್ದಕ್ಕೆ ದಂಗೆ ಧರಣೆ ಆಗಿರುವುದನ್ನು ತಿಳಿದು (ಹೃದರ. ೭೧).

ಧರಣಿ ಮುಷ್ಕರ = ಕೋರಿಕೆಯ ಪೂರೈಕೆಗಾಗಿ ಪಟ್ಟು ಹಿಡಿಯುವುದು: ತಮ್ಮ ಬೇಡಿಕೆಗಳ ಪೂರೈಕೆಗಾಗಿ ಒತ್ತಾಯಿಸಿ ಕಚೇರಿಯವರೆಲ್ಲರೂ ಇಂದು ಧರಣಿ ಮುಷ್ಕರವನ್ನು ಪ್ರಾರಂಭಿಸಿದರು (ರೂಢಿ). **ಧರಣಿ ಹಿಡಿ, ಧರಣ ಹಿಡಿ** = ಧರಣಿಮುಷ್ಕರವನ್ನು ಮಾಡು: ತಮ್ಮ ಅಹವಾಲಿಗೆ ಸರಿಯಾದ ಪ್ರತಿಕ್ರಿಯೆ ಸಿಗದಿದ್ದಾಗ ಶ್ರಮಜೀವಿಗಳು ಧರಣಿ ಹಿಡಿಯದೆ ಬೇರೆ ಮಾರ್ಗವಿಲ್ಲ (ರೂಢಿ); ಆ ದುರಾಗ್ರಹಿ ಇನ್ನೂ ಮನೆಯಲ್ಲಿ ಕುಳಿತು ಧರಣ ಹಿಡಿಯುತ್ತಿದ್ದರೆ, ಆದನ್ನು ನೋಡುವುದೆಂತು ಎಂಬ ಭೀತಿ (ಕರುಳ. ೭೧). **ಧರಣಿ ಹೂಡು** = ಧರಣಿಹಿಡಿ: ಅವರು ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಇಂದಿನಿಂದ ಧರಣಿಹೂಡಿದ್ದಾರೆ (ರೂಢಿ). **ಧರಣೇಸಂಪು** = ಧರಣಿಮುಷ್ಕರ: ಅವನ ಪ್ರೇಯಸಿ . . . ಒಮ್ಮೊಮ್ಮೆ ಧರಣೇಸಂಪು ಹೂಡಿ ನೆಲವನ್ನಪ್ಪಿ ಮಲಗಿಬಿಡುತ್ತಾಳೆ (ಗಾಳಿಪ. ೧೧).

[ ← ಹಿಂ. ಧರನಾ; ಮರಾ. ಧರಣೇ ]

**ಧರಣಿಜ** (ನಾ). ೧. ಭೂಮಿಯಲ್ಲಿ ಹುಟ್ಟಿದುದಂ; ಗಿಡ; ಮರ: "ತರು ವನಸ್ಪತಿ ಸಾಲಮಂಘ್ರಿಪಂ ದ್ರು ದ್ರುಮಂ ಧರಣಿಜಂ . . . ಕುಜಮೆನಲು ವೃಕ್ಷಕ್ಕೆ ನಾಮಮಕ್ಕುಂ" (ಮಂಗರಾ. ೩೧-೧). ೨. ಭೂಮಿದೇವಿಯ ಮಗ; ಅಂಗಾರಕ; ಮಂಗಳಗ್ರಹ: ಧರಣಿಜಗೃಹಮೆನಿಪ ಕೊಂಟಣೆಯ ರಾಶಿಯೊಳ್ ನಿಂದ ಗುರುವನೀಕ್ಷಿಸೆ ಶನಿ . . . ಮಡಿಗುಮವಂ (ಜಾತತಿ. ೬-೨೧). ೩. ನರಕಾಸುರ. [ ಸಂ. ]

**ಧರಣಿಜಾತ** (ನಾ). = ಧರಣಿಜ ೧: ಪರಿಪರಿಯ ಘನಸಾರಚಂದನಧರಣಿಜಾತಾಮೋದಶೀತಳ ಪರಮಸಂಗಶಿಗಂಗಮಂ ತಾನೊಗ್ಗುತಂ ಶಿವನು (ಬಸಪು. ೨೬-೪೪). [ ಸಂ. ]

**ಧರಣಿಜಾತೆ** (ನಾ). ಭೂಮಿಯ ಮಗಳು; ಭೂಜಾತೆ; ಸೀತೆ: ನಡೆಯುತೆಲವನೆಯಂಗಳಕ್ಕಲ್ಲಿ ನಿಂದಳು ಧರಣಿಜಾತೆ (ಶ್ರೀರಾಮಾ. ೨೩೯-೨೫೮).

[ ಸಂ. ಧರಣಿಜಾತಾ ]

**ಧರಣಿಜೆ** (ನಾ). = ಧರಣಿಜಾತೆ: ಧರಣಿಜೆಯನುಯ್ದು ಲಂಕಾಪುರೇಶನಂತಪ್ಪ ಗಂಡರುಂ ಸತ್ತರ್ ನಿತ್ತರಿಸದೆ (ಧರ್ಮಾಮೃ. ೪-೨೩೯); ಹರಿಗೆ ಧರಣಿಜೆ ಲಕ್ಷ್ಮಣಂಗಾ ತರುಣಿಯೂರ್ಮಿಳೆ ಕೀರ್ತಿಯೆಂಬಳ ಭರತದೇವಗೆ ಇತ್ತು ಶತ್ರುಘ್ನದನನಿಗಿತ್ತು ಮಾಲಿನಿಯ (ಕೌಶಿಂ. ೨-೫೯). [ ಸಂ. ಧರಣಿಜಾ ]

**ಧರಣಿಧರ** (ನಾ). ೧. ಭೂಮಿಯನ್ನು ಹೊತ್ತಿರುವುದಂ. ೨. ವಿಷ್ಣು: "ವಿಷ್ಣುಃ, ಕೃಷ್ಣಃ . . . ಗೋವಿಂದಃ, ಧರಣಿಧರಃ, ಸುಪರ್ಣಕೇತುಃ . . . ಗದಾಧರಃ – ಈ ೪೫ ನಾರಾಯಣನ ಪೆಸರ್" (ಹಲಾಯು. ೫-೨೩). ೩. ಪರ್ವತ. ೪. (ಅಷ್ಟ)ದಿಗ್ಗಜ. ೫. ಆಮೆ; ಕೂರ್ಮ. ೬. ಆದಿಶೇಷ. ೭. ರಾಜ: ಧರಣಿಧರ ನಮ್ಮ ದುರ್ನೀತಿಯಂ ನೋಡದಿರು (ಜೈಮಿಭಾ. ೨೪-೩೮). [ ಸಂ. ]

**ಧರಣಿಪ** (ನಾ). ಭೂಮಿಯನ್ನು ಪಾಲಿಸುವವನಂ; ಅರಸ; ರಾಜ; ಭೂಪಾಲ: ಧರಣಿಪನಂ ಬೀಟ್ಕೊಂಡಾತುರದಿಂ . . . ಶಿವಭದ್ರಂ ಬರಲ್ (ಉದ್ಭಟ. ೭-೫); ಧರಣಿಪಂ ಮೊದಲಾಗಿ ತಾವೊಂದೊಂದು ದಿನದಲ್ಲಿ ನರರು ಸರ್ಬರು ಬಂದು ನೋಡಲು (ಬಸಪು. ೩೪-೩೧); ಧರಣಿಪನ ಸಂತೈಸಿದನು ಮುನಿವರನು (ಕುವ್ಯಾಉ. ೪-೧೨೨). [ ಸಂ. ]

**ಧರಣಿಪತಿ** (ನಾ). = ಧರಣಿಪ: ಧರಣಿಪತಿ ಕೀರ್ತಿದೇವಂ ನಿರುತಂ ಪೊಂಕಮ್ಮಿತ್ತಾದುದೆನಿಸಿದಂ (ಸಮುಪ. ೧-೪೬); ಧರಣಿಪತಿಯಪ್ಪ ಚಕ್ರೇಶ್ವರನೊಳ್ ಧುರಧರರೆಗೆ ವಂದು (ನೇಮಿಪು. ೧೧-೯೭); ಧರಣಿಪತಿ ಧರ್ಮಜನ ಮುಖಸಂದರುಶನವ ಮಾಡಿದನು (ಕುವ್ಯಾಅ. ೪-೪೧).

[ ಧರಣಿ₁ + ಪತಿ₂ ]

**ಧರಣಿಪಾಗ್ರಣಿ** (ನಾ). ರಾಜರಲ್ಲಿ ಶ್ರೇಷ್ಠನಾದವನಂ: ಕೇಳ್ಗುಣಮಣಿಯೆ ಧರಣಿಪಾಗ್ರಣಿಯೆ (ಜೈಮಿಭಾ. ೧೨-೫). [ ಧರಣಿಪ + ಅಗ್ರಣಿ ]

**ಧರಣಿಪಾಧ್ವರ** (ನಾ). ರಾಜಸೂಯಯಾಗ: ನಿಮ್ಮ ಕೃಪೆಯುಲಿ ಧರಣಿಪಾಧ್ವರ ಸಿದ್ಧಿಯಾಯ್ತು ನಿರಂತರಾಯದಲಿ (ಕುವ್ಯಾಸ. ೧೧-೭).

[ ಧರಣಿಪ + ಅಧ್ವರ ]

**ಧರಣಿಪಾಲ, ಧರಣಿಪಾಳ** (ನಾ). ಭೂಮಿಯನ್ನು ಪಾಲಿಸುವವನಂ ರಾಜ: ಧರಣಿಪಾಲಾಜ್ಞಾಧಿಮುದ್ರಾಸಮಂಕಿತಮಾಗಿರ್ದುದು ಕಾರಣಂ ತಲೆಯ ಮೇಲಿಟ್ಟಾದರಂ ಮಾಡರೇ (ಬಾಧಪು. ೧-೪೨); ಧರಣಿಪಾಲ ಮೃಗಂಗಳನು ಸಲೆ ಬರಿಸಿ ಸದೆದನು (ಕುವ್ಯಾಅ. ೧೪-೧೮). **ಧರಣಿಪಾಳ**: ಈ ಧರಣಿಪಾಳತನೂಜೆಗೆ ಮತ್ತಿನನ್ಯಕನ್ಯಾವಳಿಗಳ್ ಸಮಾನತೆಯನೆಯ್ದುವರಾರೊ ಸಮಸ್ತಲೋಕದೊಳ್ (ಬಾಧಪು. ೧೧-೧೭೦).

[ ಧರಣಿ₁ + ಪಾಲ₄ ]

**ಧರಣಿಪಾಲಕ** (ನಾ). = ಧರಣಿಪ: ಧರಣಿಪಾಲಕನಾಗ ಕಳುಹಿದಡರಿಯುವರಸಂ ಮರಳಿ ಬರುತಂ (ಬಸಪು. ೫೩-೪೬). [ ಧರಣಿ₁ + ಪಾಲಕ ]

**ಧರಣಿಪಾಳ** 'ಧರಣಿಪಾಲ' ನೋ.

**ಧರಣಿಭೃತ್ತು** (ನಾ). ೧. ಬೆಟ್ಟ; ಪರ್ವತ. ೨. ದೊರೆ; ರಾಜ. ೧, ೨: ಜನಚಿತ್ತಾಹ್ಲಾದಪಾದು ಸಕಲಧರಣಿಭೃನ್ಮಸ್ತಕನ್ಯಸ್ತಪಾಗಿರ್ಪಿನಮುಚ್ಚಂಡ ಪ್ರತಾಪೋದಯಮರಿಕುಮುದಾಭೋಗವಿಧ್ವಂಸಿಯಾಗಿರ್ಪಿನಂ . . . ಒಳ್ಪಂ ಪೆತ್ತುದಾತ್ತಂ ಬೆಳಗುಗೆ ಜಗಮಂ ಗೋಪಮಾರ್ತಂಡದೇವಂ (ಜಗವಿ. ೧-೪). [ ಸಂ. ಧರಣಿಭೃತ್ ]

**ಧರಣಿಮಂಡಲ** (ನಾ). ಭೂಮಂಡಲ; ಪೃಥ್ವಿ : ಧರಣಿಮಂಡಲಮಧ್ಯದೊಳಗೆ ಮೆರೆಯುತಿಹ ಕರ್ನಾಟದೇಶದೊಳಿರುವ ಕಾಳಿಂಗನೆಂಬ ಗೊಲ್ಲನ ಪರಿಯ ನಾನೆಂತು ಪೇಳ್ವೆನು (ಗೋಹಾಡು. ೧-೧). [ ಧರಣಿ₁+ಮಂಡಲ ]

**ಧರಣಿಮತ್ಸ್ಯನ್ಯಾಯ** (ನಾ). ಲೌಕಿಕನ್ಯಾಯಗಳಲ್ಲಿ ಒಂದು; ನೀರಿನಿಂದ ಹೊರಗೆ ಬಂದು ನೆಲದ ಮೇಲೆ ಬಿದ್ದಿರುವ ಮೀನಿನ ದೃಷ್ಟಾಂತ; P ಆಶ್ರಯವನ್ನು ಕಳೆದುಕೊಂಡಿರುವುದನ್ನು ಸೂಚಿಸುವ ನ್ಯಾಯ. ಇದರ ಪರಿಣಾಮ ನಾಶವೆಂಬ ಅರ್ಥದಲ್ಲಿ ಉಪಯೋಗವಾಗುತ್ತದೆ: ಪರಚಕ್ರಕ್ಕೆಡೆಮಾಡಿ ಧಂತ್ರಿಯು ತರುಣಿಯರ್ಬಾಲವೃದ್ಧರನೆಯ್ದೆ ಅರಸ ಕೇಳ್ಪಿಟ್ಟು ನೀವಿಲ್ಲಿರುತಿರಲಿನ್ನು ಧರಣಿಮತ್ಸ್ಯನ್ಯಾಯವೆನೆ ಕೇಳ್ದು (ತ್ರಿಭುತಿ. ೪-೧೮). [ ಧರಣಿ₁ + ಮತ್ಸ್ಯ₂ + ನ್ಯಾಯ ]

**ಧರಣಿರುಹ** (ನಾ).=ಧರಣಿಜ ೧ : ತಮ್ಮಲ್ಲಿರ್ದ ಪಕ್ವಫಳಮಿರದೀವೆಯೆಂಬತ್ತಿಯುಮುಳಪಣ್ಬಾರದಿಂದುರೆ ಬದರಿ ಧರಣಿರುಹ ಸಲೆ ವಿರಾಜಿಸುತಿರ್ದವಾ ಬನದೊಳು (ನವಮೋ. ೪-೨೫). [ ಸಂ. ]

**ಧರಣಿವರ** (ನಾ).=ಧರಣಿಪ : ಕೀಳಿನ ಹೊಲೆಯರಿಗೆ ಶಿವಭಕ್ತಿಮಹಿಮೆಯ ದಳವಿಯೇ ತಿಳಿಯಲಿಕೆ ಬಿಜ್ಜಳಧರಣಿವರ ಕೇಳು (ಬಸಪು. ೫೭-೪೯). [ ಧರಣಿ₁ + ವರ₃ ]

**ಧರಣಿವಲ್ಲಭ** (ನಾ). = ಧರಣಿಪ : ಅನುಮತಿಸಿ ಸಕಲರಾಜ್ಯೋದ್ಧರಣ ಕರಣಮನಿತ್ತು ಬಿಜ್ಜಳಧರಣಿವಲ್ಲಭನು (ಬಸಪು. ೫-೧೯). [ಧರಣಿ₁+ವಲ್ಲಭ]

**ಧರಣಿಸಂಭೂತೆ** (ನಾ).=ಧರಣಿಜಾತೆ : ಧರಣಿಸಂಭೂತೆ ಊರ್ಮಿಳೆಯೊಡನೆ ಮಾತಾಡಿ ಮುಗಿವನಿತರೊಳ್ (ಶ್ರೀರಾಮಾ. ೪೪-೪೫೭). [ ಸಂ. ಧರಣಿಸಂಭೂತಾ ]

**ಧರಣಿಸುತ** (ನಾ). ಮಂಗಳಗ್ರಹ; ಕುಜಗ್ರಹ : ಧರಣಿಸುತಾಂಶದೊಳ್ ಪ್ರಹರಣಾನಲ ಸಾಹಸಧಾತುವಿಂ (ಜಾತತಿ. ೧೧-೪) : ಧರಣಿಸುತ ಮೃಗವೇಜ ನಿಂದಿರೆ ಶಶಿಜ ವಿನಯುದಲಿ ತರಣಿಸುತ ಜೂಕದಲಿ ಮೆಚಿದಿರೆ . . . ಪುತ್ರೋದಯಗಳಾದುವು ಭೂಪ ದಶರಥಗೆ (ಕಾಶಿರಾ. ೦-೬೬). [ ಧರಣಿ₁ + ಸುತ ]

**ಧರಣಿಸುತೆ** (ನಾ). = ಧರಣಿಜಾತೆ : ಅಂತೆನಿಪ ವೆಣ್ಣಮೆಯ್ಮನ ಕಾಂತೆ ಗುಣವ್ರಾತೆ ಧರಣಿಸುತೆಗಂ ಮಿಗಿಲೆಂಬಂತೊದವಿದ ಪತಿಭಕ್ತಿಯಂನಾಂತೆಸೆದಳ್ ಪೋಟಕಬ್ಬೆಯೆಂಬಳ್ ಪೆಸರಿಂ (ಛಂದೋಂಬು. ೧-೨೧). [ಸಂ. ಧರಣಿಸುತಾ]

**ಧರಣಿಸುರ** (ನಾ). ಭೂಮಿಯ ಮೇಲಿರುವ ದೇವತೆಯೆಂದು ಭಾವಿಸಲಾದವನು; ಭೂಸುರ; ಬ್ರಾಹ್ಮಣ : ಧರಣಿಸುರಂ ಮನದೊಳ್ ಕೊಕ್ಕರಿಸದೆ ಕಪಿಳನ ಸಪಜ್ಞಿಭೋಜನಮಂ ಸ್ವೀಕರಿಸಿದಂ (ಶಾಂತೀಶ್ವ. ೬-೩೪) ; ಧರಣಿಸುರರಾ ಪಾದರಕ್ಷೆಯ ಸರಿಯ ತೂಕಕೆ ಬಾರವಾದರು (ಬಸಪು. ೫೫-೫೭) ; ಧರಣಿಸುರನೆಂದೆನ್ನ ಠಕ್ಕಿಸಿ ಶರವ ಬೇಡಿದೆ (ಕುಮ್ಮಾಳ. ೯-೩೨). [ ಧರಣಿ₁ + ಸುರ ]

**ಧರಣೀಂದ್ರ₁** (ನಾ). (?) : ಹರನ ಕೊರಳಲ್ಲಿಪ್ಪ ಕರೋಟಿಮಾಲೆಯ ಶಿರದ ಲಿಖಿತವ ಕಂಡು ಮರುಳುತಂಡಗಳು ಓದಿ ನೋಡಲು ಇವನಜ ಇವ ಹರಿ ಇವ ಸುರಪತಿ ಇವ ಧರಣೀಂದ್ರನಿವನಂತಕನೆಂದು ಹರುಷದಿಂದ ಸರಸವಾಡಿತ್ತ ಕಂಡು (ಬಸವ. ೫೪೯).

[ P ಇದು 'ಧರಣೀಧ್ರ' ಎಂಬುದರ ಅಪಲಿಖಿತವಿರಬಹುದು ]

**ಧರಣೀಂದ್ರ₂** (ನಾ). [ಜೈನ] ಪಾರ್ಶ್ವನಾಥ ತೀರ್ಥಂಕರನ ಯಕ್ಷ : ಧರಣೀಂದ್ರನೆನಭವನ ಕಿಂಕರನಂ (ಆದಿಪು. ೯-೧೧೧) ; ವಂದನಾಭಕ್ತಿಗೆ ವಂದ ಧರಣೀಂದ್ರನಂ ಕಂಡು ತತ್ಸೌಂದರ್ಯಮಹಿಮೆಗೆ ನಿದಾನಂಗೆಯ್ದು ಭವನಾಮರಲೋಕದೊಳ್ ಧರಣೀಂದ್ರನಾಗಿ ಪುಟ್ಟಿದಂ (ಶಾಂತಿಪು. ೭-೮೩ ವ); ದೇವರ್ ಬಿಲ್ವಿಡಿವಂತು ಬಲ್ಲಡೆಯೆ ವಜ್ರಾವರ್ತ ಚಾಪಕ್ಕೆ ಮೇಣ್ ದೇವೇಂದ್ರಂ ಧರಣೀಂದ್ರನಲ್ಲದುಟಿದರ್ ಬಿಲ್ಗೊಯ್ದು ನಿಲ್ವನ್ನರಾರ್ (ಪಂಪಾಭಾ. ೯-೫೬) ; ಈ ನಾಗಾಲಯದ ಧರಣೀಂದ್ರಂಗೆ ತೋಜ ಪೊಡೆವಟ್ಟು ಬಾಯೆಂದು ಬೇಜಿಕೊಂದು ಮನೆಯೊಳಿರಿಸಿದ ಚರುಗಮಂ ಕುಡುವುದುಂ (ಧರ್ಮಾಮೃ. ೧೧-೧೫೪).

[ P ಇದು 'ಧರಣೀಂದ್ರ' ಎಂಬುದರ ಅಪಲಿಖಿತವಿರಬಹುದು ]

**ಧರಣೀಕಂದ** (ನಾ). ಒಂದು ಬಗೆಯ ಗಡ್ಡೆ : "ವಕ್ರಕಂದಃ-ಧರಣೀಕಂದ" (ಒಷಧಿ. ೧೪೭). [ ಸಂ. ]

**ಧರಣೀಚಕ್ರ** (ನಾ). ೧. ಭೂಮಂಡಲ : ಧರಣೀಚಕ್ರಮನೊಪ್ಪುಗೊಳ್ ಬಗೆಯದಿರ್ವಿದ್ವೇಷಮಂ (ಗದಾಯು. ೭-೪೪) . ಧರಣೀಚಕ್ರದೊಳಗರ್ಗ ಮುಗ್ಗಳಮಿಳಾದೇವಾನ್ವವಾಯಂ (ಸುಕುಮಾ. ೬-೪೭); ಧರಣೀಚಕ್ರಮುಮಂ ವಿಯತ್ತಳಮುಮಂ ಗಂಟಿಕ್ಕುವರ್ . . . ಮಳಲೊಳಂ ನೀರ್ಪಾಡುವರ್ ಜೋಡೆಯರ್ (ಧರ್ಮಾಮೃ. ೩-೧೩೪). ೨. ಭೂಮಂಡಲದ ಜನ : ಧರಣೀಚಕ್ರಂ ಪದಪಂಕರುಹಮನೀ ತೆಱದಿನಗಲದೋಲಗಿಸುವುದಂ ನಿರವಿಸುತಿರ್ದುದು (ಪಾರ್ಶ್ವಪು. ೭-೧೧೭). [ ಸಂ. ]

**ಧರಣೀಜ** (ನಾ). ೧. = ಧರಣಿಜ ೧ : ನೆಱೆಯೆ ಪಣೆಮುಟ್ಟೆ ಕೈವಂದೆಱಗಿದುದಿದು ದೇವ ನಿನಗೆ ಹೃದಯಂ ತಾನೆತ್ತಱದುದೆನವೇಡ ಧಾರಿಣಿಯೆಱೆಯಂಗೆಱಗುವುದು ಚೋದ್ಯಮೇ ಧರಣೀಜಂ (ಚಂದ್ರಪು. ೭-೯೪). ೨. =ಧರಣಿಜ ೨: ಧರಣೀಜಂ ಪದಿನೈದು . . . ದೈತ್ಯಗುರುವಿಪ್ಪತ್ತೊಂದು ಸಂವತ್ಸರಂ ಪರಮೋಚ್ಚಾಂಶದೊಳೊಂದಿ ನಿಂದೊಡದು ಪಿಂಡಾಯುಷ್ಯಮಕ್ಕುಂ (ಜಾತತಿ. ೮-೧೧). [ ಸಂ. ]

**ಧರಣೀಜಾತ** (ನಾ). = ಧರಣಿಜ ೧ : ತೋರವಣ್ಗೊಂಗಲಿಂ ಕಳೆದೊಪ್ಪಕ್ಕೊಳಗಾದ ಚೂತ ಧರಣೀಜಾತಂಗಳಿಂ . . . ಪಡೆದುದಾನಂದಮಂ ನಂದನಂ (ಮಹಾನೀ. ೪-೨೩). [ ಸಂ. ]

**ಧರಣೀತಲ, ಧರಣೀತಳ** (ನಾ). ನೆಲ; ಭೂಮಿ; ಭೂತಳ. **ಧರಣೀತಳ:** ಧರಣೀತಳ ಘನತಮಮಂ ಕರಗಿಸಿ ಭಾಸ್ವತ್ಕರಂಗಳಿಂ ಗಗನತಳಕ್ಕೆರದಡರ್ವ ವಿಸ್ಫುರದ್ದಿನಕರನಂ ಚಿತ್ರಾಂಗದಾವನೀಶಂ ಕಂಡಂ(ಆದಿಪು. ೧೭-೪೮) ; ತಳಕ್ಕೆ-ಕರತಳ, ಕೆಂದಳ, ತಟ್ಟತಳ, ತಳಹಗ್ಗ, ಧರಣೀತಳ (ಶಮದ. ೨೫೮ ಪ್ರಯೋ) ; ಮಾಚಯ್ಯಂಗೆಱಗಲೊಡನೆ ಆತನುಂ ತಾವಿಬ್ಬರುಮಸಂಖ್ಯಾತ ಭಕ್ತಗಣಗಂಗಳಿಗೆ ಧರಣೀತಳದೊಳಷ್ಟಾಂಗದಂಡಪ್ರಣಮಮಂ ಮಾಡಿ (ಬಸಪು. ೫೭-೫೭). [ ಸಂ. ]

**ಧರಣೀತಳ** 'ಧರಣೀತಲ' ನೋ.

**ಧರಣೀಧರ** (ನಾ). ೧. ವಿಷ್ಣು : ಧರಣೀಧರಂ ದ್ರುಹಿಣನಷ್ಟದಿಕ್ಪಾಲಕರ್ ಭರದಿಂದ ಬಂದು ಹೊಱಹುಯ್ಯಲಂ ತಾಗೆ (ಲಶಿಚಂ. ೧೭-೧೮). ೨. ಬೆಟ್ಟ; ಪರ್ವತ : "ಧರಮದ್ರಿ ಕುಧರಂ . . . ಪರ್ವತಂ ಧರಣೀಧರಂ ಶೃಂಗಿ ಸಾನುಮಂತಂ ಗೋತ್ರಮೆನಲು ಬೆಟ್ಟಕ್ಕೆ ನಾಮಂ" (ಮಂಗರಾ. ೨೯-೧) ; ಧರಣೀಧರಂಗಳ್ಪೆವತ್ತೆರಡಱೊಳಂ ಚೆಲ್ವುವೆತ್ತ ಜಿನಗೃಹಂ (ಸುಕುಮಾ. ೧೧-೫೧). [ ಸಂ. ]

**ಧರಣೀಧರಣ** (ನಾ). ೧. ಭೂಮಿಯನ್ನು ಹೊತ್ತಿರುವುದು; ಬೆಟ್ಟ. ೨. ಭೂಮಿಯನ್ನು ಧರಿಸಿರುವವನು; ಭೂಮಂಡಲಕ್ಕೆ ಆಧಾರವಾಗಿರುವವನು : ಹರಿಯೆ ಧರಣೀಶಕ್ತಿ ತಾನೆಂದೊರೆವನಲ್ಲದೆ ಹರನೆ ಧರಣೀಧರಣನೆಂದೊರೆಯನು (ಬಸಪು. ೫೭-೨೭). [ ಸಂ. ]

**ಧರಣೀಧವ** (ನಾ). ಭೂಮಿಯ ಒಡೆಯಂ; ಅರಸ; ರಾಜ: ಧರಣೀಧವ ಪೇಟಿನಗಾ ವ ಮಲ್ಲಣ ಚೋಳ ಮೂರ್ಖನಯನಾರಿಗಳೆಂಬರ ಚಾರಿತ್ರಮಂ (ಉದ್ಭಟ. ೧೨-೨೯). [ ಸಂ. ]

**ಧರಣೀಧ್ರ** (ನಾ). ೧. ಪರ್ವತ: ಧರಣೀಧ ಂಗಳ್ಗಮುಬ್ಬಪ್ರತತಿಗ (ಮೊಸೆಗುಂ) ಕೂಡೆ ಜೀಮೂತನಾಮಂ (ವಸು. ಕೋ. ೧೧೯-೬). ೨. ಆದಿಶೇಷ: ಸಿದ್ಧಾಂತ ಮುನೀಂದ್ರರಿಂದ್ರಧರಣೀಧ್ರನಿಭಕ್ಷಮರೀಡ್ಯಸತ್ಕ್ರಮರ್ (ಧರ್ಮಾಮೃ. ೧-೨೭). ೩. ಆದಿಕೂರ್ಮ. [ ಸಂ. ]

**ಧರಣೀನಾಥ** (ನಾ). = ಧರಣೀಧವ: ಧರಣೀನಾಥರ ಸಾಮಂತರ ದಂಡೇಶ್ವರರ ಪಡೆವಳರ ಕಲಿಗಳ . . . ಗೃಹವೀಧಿಗಳಿನಾ ಪುರಂ ರಂಜಿಸುಗುಂ (ಉದ್ಭಟ. ೧-೮೦); ಧರಣೀನಾಥರನೆಯ್ದೆ ಕಾಣಿಸಿಕೊಳುತ್ತುಂ . . . ಅನತರನೀಗಳ್ ಕಾಯುತುಂ ಬಂದು (ಶಾಂತೀಶ್ವ. ೩-೬೨). [ ಸಂ. ]

**ಧರಣೀಪತಿ** (ನಾ). = ಧರಣೀಧವ: ಆನೆಯಂ ಕುದುರೆಯಂ ಧರಣೀಪತಿ ಸಾಟಿ ಬೀಱಿದಂ (ಚಂದ್ರಪು. ೬-೮೦). [ ಸಂ. ]

**ಧರಣೀಪಾಲ, ಧರಣೀಪಾಳ** (ನಾ). = ಧರಣೀಧವ: ಧರಣೀಪಾಲ ಸಹಸ್ರಸಂವೃತನೆನಲ್ ಸಂದಿರ್ದುಮೇಕಾಕಿಯಂತಿರೆ . . . ತನ್ನಂ ಬಗೆವಂ ತನೂಜರಹಿತಂ ವಿಶ್ವಂಭರಾವಲ್ಲಭಂ (ಕಾದಂಪೂ. ೩-೨೭); ಧರಣೀಪಾಲ ಸುತರ್ಕಳಂ ತೃಣಸಮಾನರ್ಗಂಡು (ಮಹಾನೇ. ೯-೧೦೫); ಧರಣೀಪಾಲರೊಳ ಗಗ್ಗಳೆಯನ್ನೆ ಧರ್ಮಜನು (ಕುಮಾ.ಉ. ೮-೧೨೦). **ಧರಣೀಪಾಳ**: ವರಸಿಂಹಾಸನದಿಂದಮೆಟ್ಟು ಧರಣೀಪಾಳಂ . . . ಸದ್ಭಕ್ತಿಯಿಂ ಪೋಗಿ (ಬಾಧಪು. ೩-೧೩). [ ಸಂ. ]

**ಧರಣೀಪಾಳ** 'ಧರಣೀಪಾಲ' ನೋ.

**ಧರಣೀಪಾಳಕ** (ನಾ). = ಧರಣೀಧವ: ಧರಣೀಪಾಳಕ ದಂಡನಾಯಕ ಮಹಾಸಾಮಂತ ಮಂತ್ರಿವ್ರಜಂಬೆರಸಾಸ್ಥಾನದೊಳಿರ್ದು (ಪುಷ್ಪಪು. ೯-೧೦೮); ಧರಣೀಪಾಳಕನಾ ಕುಮಾರಕನ ವಕ್ತ್ರಾಲೋಕನಂಗೆಯ್ದು (ಬಾಧಪು. ೧೨-೭೬). [ ಸಂ. ಧರಣೀಪಾಲಕ ]

**ಧರಣೀಪುತ್ರ** (ನಾ). ಅಂಗಾರಕ; ಮಂಗಳಗ್ರಹ. 'ಧರಣೀಪುತ್ರನಿವಾಸ' ಪರಾ. [ ಸಂ. ]

**ಧರಣೀಪುತ್ರನಿವಾಸ** (ನಾ). [ಜ್ಯೋತಿ] ಮೇಷ ಮತ್ತು ವೃಶ್ಚಿಕ ರಾಶಿ; ಅಂಗಾರಕನ ಕ್ಷೇತ್ರ: ಧರಣೀಪುತ್ರನಿವಾಸದೊಳ್ ನಿಲೆ ಬುಧಂ ಕೂಟಕ್ರಿಯಾವೇದಿ ತಸ್ಕರನದ್ರವ್ಯನಸತ್ಯವಾದಿ . . . ನಾಸ್ತಿಕಂ (ಜಾತತಿ. ೧೭-೨೨). [ ಸಂ. ]

**ಧರಣೀಪೂಜ್ಯ** (ನಾ). ೧. ಭೂಮಂಡಲಕ್ಕೆ ಗೌರವಾರ್ಹವಾದುದು: ಧರಣೀಪೂಜ್ಯಂ ಭವ್ಯೋತ್ಕರವಂದ್ಯಂ ಕಾವ್ಯರತ್ನಮುಮಳಯಶಶ್ಶ್ರೀಕರಂ (ಧರ್ಮಾಮೃ. ೧೪-೧೬೫). ೨. ಭೂಮಂಡಲಕ್ಕೆ ಗೌರವಾರ್ಹನಾದವನು; ಲೋಕಪೂಜ್ಯ. [ ಸಂ. ]

**ಧರಣೀಭರ** (ನಾ). = ಧರಣೀಭಾರ: ಭರತನನೇಕಾಧ್ವರಭರನಿರತಂ ಜಸಮುಟಿಯೆ ಕಟಿಯೆ ಭೂಪರ್ ಪಲರಾದರಿಸಿದ ಧರಣೀಭರಮಂ ಧರಿಯಿಸಿದಂ ಪ್ರತಿಮನೆಂಬನಪ್ರತಿಮಬಲಂ (ಪಂಪಭಾ. ೧-೬೪). [ ಸಂ. ]

**ಧರಣೀಭರ್ತೃ** (ನಾ). = ಧರಣೀಧವ: ಧರಣೀಭರ್ತೃ ಭುಜಂಗಸೇನನವನೀಸಾಮ್ರಾಜ್ಯಮಂ ಕೀರ್ತಿಶೇಖರನೊಳ್ ನೆರ್ಮಿಸಿ (ಅನಂಪು. ೨-೫೭). [ ಸಂ. ]

**ಧರಣೀಭಾರ** (ನಾ). ರಾಜ್ಯದ ಹೊಣೆ; ಆಡಳಿತದ ಹೊಣೆ; ರಾಜ್ಯಭಾರ: ಧರಣೀಭಾರಮನಾರೊ ಪೊತ್ತಪರಿದಂ ನೀಂ ಪೋಗಿ ಭಾಸ್ವತ್ತಪೋಭರಮಂ ತಾಳ್ದಿದೊಡೆ (ವರ್ಧಪು. ೨-೬೦); ಧರಣೀಭಾರಕ್ಕೆ ಯಶೋಧರನನೊಡಂಬಡಿಸಿ . . . ಕಂಭಂದಪ್ಪಿದ ಕರಿಯಂತೆ ತಪೋವನಕ್ಕೆ ನಡೆದನಿಳೇಶಂ (ಯಶೋಚ. ೨-೧೩). [ ಸಂ. ]

**ಧರಣೀಭೃತ್ಪತಿ** (ನಾ). ೧. ರಾಜರಲ್ಲಿ ಶ್ರೇಷ್ಠನಾದವನು. ೨. ಪರ್ವತಗಳಲ್ಲಿ ಶ್ರೇಷ್ಠವಾದುದು. ೧, ೨: ದೊರೆವೆತ್ತುನ್ನತಿಯಿಂ . . . ವಸುಂಧರೆಗೆ ತಾಂ ಮಧ್ಯಸ್ಥಮಾದೊಳ್ಪಿನಿಂ ಧರಣೀಭೃತ್ಪತಿಪೂಜ್ಯಮಾದ ಮಹಿಮಾವಷ್ಟಂಭದಿಂ ನಾಡೆ ಸುಂದರಮಾಗಿರ್ದುದು ಪೋಲ್ತು ಮಂದರನಗಂ ಸಾಹಿತ್ಯಸರ್ವಜ್ಞನಂ (ಮಲ್ಲಿಪು. ೧-೬೯). [ ಸಂ. ]

**ಧರಣೀಮಂಡನ** (ನಾ). ಭೂಮಂಡಲಕ್ಕೆ ಅಲಂಕಾರಪ್ರಾಯವಾದುದು. ಧರಣೀಮಂಡನನೊಪ್ಪುಗುಂ ಮಳಯದೇಶಂ ತನ್ಮಹೀಶ್ರೀಗೆ ಕುಂಜರಶೈಲಂ ತೊಡವಂತದಕ್ಕೆ ತಿಳಕಂ ವೇಗಾವತೀಸಿಂಧು (ಪಾರ್ಶ್ವಪು. ೮-೫೭). [ ಸಂ. ]

**ಧರಣೀಮಂಡಲ, ಧರಣೀಮಂಡಳ** (ನಾ). = ಧರಣಿಮಂಡಲ: ವರಶೃಂಗಾರರಸಪ್ರವಾಹಮತುಳಾಲಂಕಾರಸಂಶೋಭಿತಂ ಧರಣೀಮಂಡಲಲಾಲಿತಂ (ಬಾಧಪು. ೧-೫೦); ಕೊಂಡಗುಳಿಯೊಳು ಕೇಶಿರಾಜನಖಂಡಿತಪ್ರತಿಭಾಷೆ ಧರಣೀಮಂಡಲ[ಪಾಠಾಂ. ಳ] ದೊಳತಿಕೀರ್ತಿಯಾಯಿತ್ತೀ ಕಟಕವಱಿಯೆ (ಬಸವಪು. ೩೬-೫೯). **ಧರಣೀಮಂಡಳ**: ಧರಣೀಮಂಡಳದಲ್ಲಿ ಸಾರತರಸೌಖ್ಯಕ್ಕೆ ಕೇಯೋ ಸೀಮೆ (ಬಾಧಪು. ೨-೫೫). [ ಸಂ. ]

**ಧರಣೀಮಂಡಳ** 'ಧರಣೀಮಂಡಲ' ನೋ.

**ಧರಣೀಮಾರ್ಗ** (ನಾ). ಭೂಮಿಯ ಮೇಲ್ಮೈ; ಭೂತಳ; ಭೂಮಾರ್ಗ: ಅತಿಶಯಪಂಚರುಚಿಪ್ರತಿಕೃತಿಹರಿತಂ ತಾಮ್ರಕೃಷ್ಣಪೀತಸಿತಶ್ರೀಧೃತಮಾಗಿ ಸೂಯಿಯಾಣದ ವಿತಾನಮಂ ಪೋಲ್ತುದಖಿಳಧರಣೀಮಾರ್ಗಂ (ಶಾಂತಿಪು. ೧೦-೨೨). [ ಸಂ. ]

**ಧರಣೀರಕ್ಷಣ** (ನಾ). ರಾಜ್ಯದ ಕಾಪು: ಧರಣೀರಕ್ಷಣಮಂತ್ರಾಕ್ಷರಮಂ . . . ಪೊನ್ನೊರೆಯಿಂದಂ ಬರೆದಂತಾ ನೃಪನ ತೋಳ ಬಾಳ್ಗೊಗರೆಸೆಗುಂ (ಮಲ್ಲಿಪು. ೩-೧೫); ಧರಣೀರಕ್ಷಣದಕ್ಷದಕ್ಷಿಣಭುಜಂ ಲಕ್ಷ್ಮೀಧರಂ ಮೈದುನಂ (ಪಂರಾಮಾ. ೯-೧೪೩). [ ಸಂ. ]

**ಧರಣೀರಾಯ** (ನಾ). ದೊರೆ; ರಾಜ: ಧರಣೀರಾಯರೆಲ್ಲರ ಗೆಲಿದು ತಂದನು . . . ಅನುಪಮಿತಮೌಲ್ಯವನಮಲಮೌಕ್ತಿಕವ (ಕುಮಾ.ಆ. ೧೬-೬). [ <ಧರಣಿ$_1$ + ರಾಯ ]

**ಧರಣೀರುಹ** (ನಾ). = ಧರಣಿಜ ೧: ತ್ರಿದಶಧರಣೀರುಹದೊಳೊಳುಗಂಪು ಮಿರ್ಪವೊಲಖಿಳಭಕ್ತರೊಳು ಪೂರವಾಗಿಹ ನಿಮ್ಮ ಕೃತಿಯಂ ಪಾರವೆಯ್ದಿಸಿ ಪೊರೆವುದು (ಬಸವಪು. ೧-೭). [ ಸಂ. ]

**ಧರಣೀವರಾಹ** (ನಾ). ೧. ಭೂಮಂಡಲವನ್ನು ತನ್ನ ಕೋರೆದಾಡೆಗಳಿಂದ ಎತ್ತಿಹಿಡಿದ ವರಾಹ: ಗೋಡೆಗಳ ಮೇಲೆ . . . ಈ ವಿಗ್ರಹಗಳಿವೆ: ರತಿ–ಮನ್ಮಥ . . . ಹೂಮಾಲೆ ಹಿಡಿದ ಭೂದೇವಿ, ಧರಣೀವರಾಹ, ಕಾಳಿಂಗಮರ್ದನ (ಹೊಯ್ಸಳವಾ. ೧೪೩). ೨. ವಿಜಯನಗರದ ರಾಜರಿಗೆ ಸಲ್ಲುತ್ತಿದ್ದ ಒಂದು ಬಿರುದು: ಧರಣೀವರಾಹ ಕಠಾರಿಯ ಸಾಳ್ವ ಬಿರಿದಂತೆಂಬರ ಗಂಡ (ಸೌಇಇ. XX, ೨೩೬-೬; 1566). [ ಸಂ. ]

**ಧರಣೀವಲ್ಲಭ** (ನಾ). = ಧರಣಿಪ: ಧರಣೀವಲ್ಲಭನಾಜ್ಞೆಯಿಲ್ಲದೆನಗೆಂತುಂ ಬರ್ಪುದೌಚಿತ್ಯಮಲ್ತು (ಪಂರಾಮಾ. ೧೧-೧೦೦); ಧರಣೀವಲ್ಲಭ ನೀಂ ಮಹಾಮಹಿಮೆಯಿಂ ಬಂದು . . . ಸಮಂತಿರು (ನೇಮಿಪು. ೩-೧೯); ಧರಣೀವಲ್ಲಭ ತನ್ಮುನಿನಿರೀಕ್ಷಣಕ್ಷಣದೊಳಲರ್ದು ಕಡವಿನ ಮರಗಳ್ ಪರಿಗತರೋಮಾಂಚತೆಯಿಂ ದೊರೆಮಾಡಿದುದೆನ್ನ ತನುವುಮಂ ನೆಟಿ ತನ್ನೊಳೆ (ಚಂದ್ರಪು. ೨-೯೯). [ ಸಂ. ]

**ಧರಣೀವಳಯ** (ನಾ). ೧. ಭೂಲೋಕ; ಭೂಮಂಡಲ. ೨. ಭೂಮಂಡಲದ ಜನ: ಧರಣೀವಳಯಂ ಚೀ ಎನೆ ಪರಧನಮಂ ಕಪಟವೃತ್ತಿಯಿಂ ವಂಚಿಸಿ ಕೊಂಡು (ಪಂಚತಂ. ೧೭೨-೨೩); ಒಳಗೆ ಕುಜನರು ಹೊಱಗೆ ಧರಣೀವಳಯಮಾನ್ಯರು (ಕುಮಾ.ಸ. ೧-೩೪). [ ಸಂ. ಧರಣೀವಲಯ ]

**ಧರಣೀಶ** (ನಾ). ದೊರೆ; ರಾಜ : ಧರಣೀಶಂ ದಯೆಗೆಯ್ದು ಮಗ್ರಮಹಿಷೀ ಸಂಪತ್ತಿ ಯಂ . . . ಪುತ್ರಮೋಹರಸಾಸ್ವಾದನತೃಪ್ತಿಯಿಲ್ಲವೆನುತುಂ (ಮಲ್ಲಿಪು. ೩-೧೦೭) ; ಧರಣೀಶನ ಯಂತ್ರದ ಕತ್ತುರಿನೀರೆಸೆವಸಿಯ ಧಾರೆ ಯಗ್ರದೊಳೊರ್ವಳ್ ಸ್ಮರನಸಿಯ ಧಾರೆಯಗ್ರದೊಳಿರವಿಂತುಟು ವಿಜಯ ಲಕ್ಷ್ಮಿಗೆಂಬವೊಲಿರ್ದಳ್ (ಚಂದ್ರಪು. ೭-೧೩೩) ; ಧರಣೀಶಂ ಕವಿದೊತ್ತಿ ಮುತ್ತಿ ಪೊಸನೀರಂ ಸೂಸುವ . . . ಕಾಮಿನೀವೃಂದಮಂ ಪಿರಿದಾನಂದದಿ ನೊಲ್ದು ನೋಡಿ (ಉದ್ಭಟ. ೯-೧೩೦). [ ಸಂ. ]

**ಧರಣೀಶಕ್ತಿ** (ನಾ). ಭೂಮಿಗೆ ಆಧಾರವಾದ ಶಕ್ತಿ : ಹರಿಯೆ ಧರಣೀಶಕ್ತಿ ತಾನೆಂದೊರೆವನಲ್ಲದೆ ಹರನೆ ಧರಣೀಧರಣನೆಂದೊರೆಯನು (ಬಸಪು. ೩೭-೩೭). [ ಸಂ. ]

**ಧರಣೀಶಾವಾಸ** (ನಾ). ಅರಮನೆ ; ರಾಜಭವನ : ಸಿಂಗದ ಸಿಸು ಬಳೆ ವೊಂದಂದದಿಂದಾರ್ಪು ತೇಜಸ್ಸ್ಫುರಿತಂ ವಿಕ್ರಾಂತಮೆಂಬೀ ಗುಣವೊಡವೆಳೆ ಯುತ್ತಿರ್ಪಿನಂ ನಂದನಂ ತದ್ಧರಣೀಶಾವಾಸದೊಳ್ ಶೋಭಿಸುತಿರೆ ಬಳೆದಂ (ಚಂದ್ರಪು. ೩-೧೦೪). [ ಧರಣೀಶ + ಆವಾಸ ]

**ಧರಣೀಶ್ವರ** (ನಾ). ೧. = ಧರಣೀಶ: ಧರಣೀಶ್ವರ ವಚನಾಮೃತಪರಿಷೇಕದೆ . . . ಪರಮೇಶ್ವರಿ ಮಗನನೆಂದು ಪೆತ್ತಂತೊಸೆದಳ್ (ಅಜಿಪು. ೩-೧೫) ; ಧರಣೀಶ್ವರಸುತೆಯಾಗಿಯುಮರಣ್ಯದೊಳ್ ಬಿಟ್ಟು ಸಾವ ದುಷ್ಕರ್ಮಫಲಂ ದೊರೆಕೊಂಡತ್ತೆನಗೆ (ಪಂರಾಮಾ. ೧೪-೫೫) ; ಸೊಗಯಿಸುವುದು ಧರಣೀಶ್ವರ ಗೇಹ ವಿಶಾಲವಜ್ರನಿರ್ಮಿತಶಾಳಂ (ಚಂದ್ರಪು. ೧-೩೫೮). ೨. ಶಿವ. ೩. [ಗಣಿತ] ಹದಿನಾರು ಎಂಬ ಸಂಖ್ಯೆಯ ಸಂಕೇತ ; ℙ ಹದಿನಾರು ಜನ ಚಕ್ರವರ್ತಿಗಳು ಪುರಾಣಪ್ರಸಿದ್ಧರು. ಆದುದರಿಂದ 'ಧರಣೀಶ್ವರ' ಎಂಬ ಶಬ್ದಕ್ಕೆ ೧೬ ಎಂಬ ಅರ್ಥ ಬರುತ್ತದೆ: ಎರಡುಂ ಮೂಱುಂ ನಾಲ್ಕುಂ ಗುರುವಿಂ ಪ್ರಸ್ತರಿಸಲಾಬುನಿಧಿ ಗಜ ಧರಣೀಶ್ವರ ಗಣ ಮೊಗೆಗು ಮ ವರ್ಗಂ ಸರಸಿಜಭವವಿಷ್ಣುರುದ್ರಸಂಜ್ಞೆಗಳಕ್ಕುಂ (ಛಂದೋಂಬು. ೫-೩). [ ಸಂ. ]

**ಧರಣೀಸಮುತ್ಥಿತ** (ನಾ). ನೆಲದಿಂದ ಮೇಲೆ ಎದ್ದುದು: ಧರಣೀ ಸಮುತ್ಥಿತಂ ಪಾಂಸು ರೇಣು ಚೂರ್ಣಾಭಿಧಾನಕಂ ಕ್ಷೋದಂ ಧೂಳಿ ರಜಂ ಪರಾಗಮೊಂದಿಪ್ಪ ತೆರಳ್ದು ಪುದಿದಿರ್ದುದಕ್ಕುಮದು ಪಿಂಜಳಕಂ (ವಸ್ತುಕೋ ೯೦-೧೩). [ ಸಂ. ]

**ಧರಣೀಸುತ** (ನಾ). ೧. ಅಂಗಾರಕ. ೨. ಭೂದೇವಿಯ ಮೊಮ್ಮಗ ; ಭಗದತ್ತ : ಧರಣೀಸುತನಟ್ಟಿದಂ ದಿಕ್ಕರಿ ಕೆಡೆದುದು ನರಶರಂಗಳಿಂ ಭುವನಮುಂಮಿಸ್ಸುರಿಯದಿರದು (ಪಂಪಭಾ. ೧೧-೮೬). ℙ ಇದು 'ಧರಣಿಜಸಂತ', ಎಂಬುದರ ಅಪಲಿಖಿತವಿರಬೇಕು. [ ಸಂ. ]

**ಧರಣೀಸುತೆ** (ನಾ). ಭೂಸುತೆ ; ಸೀತೆ : ಅಭಿರಾಮಗುಣಗಣವಶೀ ಕರಣೀಯತಾಸುಕರಣೀಯ ಧರಣೀಸುತೆಯುಂ (ಎಕ. II (R), ೧೩೮-೨೪ ; 1120). [ ಸಂ. ಧರಣೀಸುತಾ ]

**ಧರಣೀಸುರ** (ನಾ). = ಧರಣಿಸುರ : ಧರಣೀಸುರರಂ ವಿಮಲಾಧ್ವರಮಂ ಸಜ್ಜನರಂ . . . ಭೂವರರೊಲ್ದು ರಕ್ಷಿಸದೊಡಾರ್ಪೊರೆವವರ್ (ಉದ್ಭಟ. ೨-೨೬) ; ಉಲ್ಲಾಸಭಕ್ತಿರತಿಸ್ಥಿರರು ಧರಣೀಸುರರು ಹರವೇಷಧರರಘ ಹರರು ಚಿದ್ವರರು (ಬಸಪು. ೪೬-೯) ; ಅನೆಯನು ತಂದಿತ್ತು ಧರಣೀಸುರನ ಮನ್ನಿಸಿ . . . ಕಳುಹಿದನು (ಕುಮ್ಮಾಅ. ೨೩-೫೨). [ ಸಂ. ]

**ಧರಣೀಹಾರ** (ನಾ). ಭೂಮಿಗೆ ಸರದಂತೆ ಅಲಂಕಾರಪ್ರಾಯಂ ವಾದುದಂ : ಧರಣೀಹಾರಂ ಹಸ್ತಿನಪುರ ಮಮರಪುರೋಪಹಾಸಿ ಭೂವನಿತೆಯ ಕರ್ಪುರದ ಕರಂಡಗೆ ಸೌಖ್ಯದ ಪರವರಿ ಪೊಸವೇಟದಿರ್ಕೆ ಸಬ್ಬಿನ ತಾಣಂ (ಶಾಂತಿಪು. ೯-೧೩೪). [ ಸಂ. ]

**ಧರಣೆ** 'ಧರಣ್ಯೆ' ನೋ.

**ಧರಣೇಂದ್ರ** (ನಾ). [ಜೈನ] ಪಾರ್ಶ್ವನಾಥತೀರ್ಥಂಕರನ ಯಕ್ಷ : ಧರಣೇಂದ್ರನಱಿದು ಭೋಂಕೆನೆ ಧರಾತಳಂ ಬಿರಿಯೆ ನೆಗೆದು ಬರ್ಪಂ (ಆದಿಪು. ೯-೧೦೦) ; ಧರಣೇಂದ್ರನ ಸತಿಯರ್ಗಂ ಸುರರಾಜನ ಪೆಂಡವಾಸದೊಳ್ವೆಂಡಿರ್ಗಂ ಕರಮೆನ್ನರಸಿಯರಯ್ಯೂರ್ವರುಮಗ್ಗಳಮವರನೆಂತು ಬಿಸುಟಾನಿರ್ಪೆಂ (ಧರ್ಮಾಮೃ. ೧೪-೪೦). [ ಸಂ. ]

**ಧರತಿ**, ಧರ್ತಿ (ನಾ). (ವಿಶಿಷ್ಟವಾದ) ಶೈಲಿ ; ರೀತಿ ; ಧೋರಣೆ ; ಧಾಟಿ : ಕೆಲಸಾನ ಆಟಿಗೆ ಮಾಡೂವ ಸೂಟಿಗೆ ಹಸನಾದ ಧರತಿಗೆ ಮೆಚ್ಚಿದೆ ಗರತಿಗೆ (ಗಂಗಾತ. ೩೩-೧೨) ; ಪಲ್ಲವಿಗಳ ಸೊಲ್ಲಿತ್ತುವ ಧಾಟಿ ಧರತಿಗಳು ಅನೇಕವಿವೆ (ಕರ್ನಾಕ. ೩೭೭) ; ಅವಳು ನಗುವ 'ಧರತಿ' ಪೂರ್ಣ ಹಾಗೆಯೇ ಇದೆ (ಹೊಸಕ್ಷಿ. ೧೯೭) ; ಅಹಾ ! ಏನು ಧಾಟಿ ! ಅಹಾ ! ಏನು ಹಾಡುವ ಧರತಿ ! (ಕನ್ನಜಾ. ೪೨). **ಧರ್ತಿ :** ಇಂದಿರೆಯ ಮಾತಿನ ಧರ್ತಿ ಮೋಜಿನದೆನಿಸಿ ಎಲ್ಲರೂ ಬಿದ್ದು ಬಿದ್ದು ನಕ್ಕರು (ಕೂನಕಾ. ೧೦) ; ತಾನು ಅನಿಕೇತ, ಅನಂತಪ್ರವಾಸಿ ಎನ್ನುವ ಧರ್ತಿಯಲ್ಲಿದ್ದಾಳೆ (ದೀಪಹ. II, ೧೭೫).
[ ←ಮರಾ. ಧರತೀ, ಧರ್ತೀ ]

**ಧರಧುರ**, ದರದುರ (ನಾ). ೧. ಆರ್ಭಟ ; ಕೋಲಾಹಲ ; ರಭಸ ; ಅಬ್ಬರ ; ಆಡಂಬರ : ನೆಱೆ ನಂಬೊ ನೆಱೆ ನಂಬೊ ಧರಧುರವಿಲ್ಲದೆ ಸಾವ ವೇದಿಗಳಂತೆ (ಬಸವ. ೦೬೯) ; ಬಿರಿಯಲಬುಜಭವಾಂಡವಿದೆ ಕಪಿವರನ ಕಳಕಳ ದೇವದತ್ತದ ಧರಧುರದ ದೆಖ್ಖಾಳವಿದೆ ಗಾಂಡಿವದ ಬೊಬ್ಬೆಯಿದೆ (ಕುಮ್ಮಾವಿ. ೭-೪) ; ತುರಗಹೃದಯಧ್ವನಿಯ ಸಿಡಿಲಿನ ಧರಧುರದ ಗರ್ಜನೆಯ . . . ಬಜಿನ ಬರವನು ವಿರಚಿಸುವೊಡೆ ವಿಧಾತೃಗಳವಲ್ಲ (ಕುಮ್ಮಾಉ. ೩-೭೩) ; ಗಿರಿಯ ಮುತ್ತಿದ ಮುಗಿಲವೊಲು ಹೊಗೆ ಹೊರಳಿಗಟ್ಟಿತು ಮೇಲೆ ದಳ್ಳುರಿ ಧರಧುರದಲೊಳಬೀಳುತಿದ್ದವು ಕಿಡಿಯ ಚೂಣಿಯಲಿ (ಕುಮ್ಮಾದ್ರೋ. ೧೯-೪೫) ; ನಿಸ್ಸಾಳಕೋಟಿಯ ಧರಧುರದ ದೆಖ್ಖಾಳದಲಿ ತಲೆದೋಱಿದನು ಪಾರ್ಥ (ಕುಮ್ಮಾಕ. ೪-೧೯). ೨. ಹೆಚ್ಚಳ ; ಅತಿಶಯ; ಆಧಿಕ್ಯ : ಹರೆದ ಬಲ . . . ಮೊರೆವ ಬಹುವಿಧವಾದ್ಯರಭಸದ ಧರಧುರದ ಕೆಂಧೂಳಿಯಲಿ ಮೋಹರಿಸಿ ಮುಸುಕಿತು ಭೀಮಸೇನನ ರಥದ ಬಳಿಸಿನಲಿ (ಕುಮ್ಮಾಕ. ೧೯-೭) ; ಬೆರಳಲಂಬನು ತೂಗಲುರಿ ಫೂತ್ಕರಣೆಯಲಿ ಪಂಠಿಸಿತು ಸಾಯ್ಲಿನ ಧರಧುರದ ಬೆಳುನೊರೆಯ ಲಹರಿಯ ವಿಷದ ಲೋಳೆಗಳ (ಕುಮ್ಮಾಕ. ೨೫-೫) ; ಹೊಱವಡಲಿ ಜನವೈದೆ ಮಧುರಾಪುರಕೆ ನೋಡುವ ಬಲ್ಲ ಹಬ್ಬದ ಧರಧುರದ ಸಂಭ್ರಮುವನಾ ಹೊಳೆಲೊಪ್ಪವನು (ನಿಥಾಗ. ೧೦-೩೪-೧೯). ೩. ತೀವ್ರತೆ ; ತೀಕ್ಷ್ಣತೆ : ಬರಬರಲು ರಿಪುಭಟನ ಹೊಯ್ಲುಗಳ ಧರಧುರಕೆ ಕಲಿ ಸಾತ್ಯಕಿಯ ತರಹರಣೆ ತಗ್ಗಿತು ಮಹಿಮೆ ಮುಗ್ಗಿತು ಮುಱಿದುದಗ್ಗಳಿಕೆ (ಕುಮ್ಮಾದ್ರೋ. ೦೪-೧೦). ೪. ಉಗ್ರವಾದ ಕಾಳಗ ; ತೀವ್ರವಾದ ಯುದ್ಧ ( ? ) : ಅಸಂಖ್ಯಾತ ನಿವಾತಕವಚರಂ ಧರಧುರದೊಳ್ ತಳತಾಳುಕನಿಕಾಯಮುಮಂ [ಪಾಠಾಂ. ಧುರಂಧರೋದ್ಯತ್ತಾಳ ತಳತ್ತಾಳನಿಕಾಯಮುಮಂ] ಸಾಯಕಸಘಾತದಿಂ ಯಮಪುರಕ್ಕೆ ಕಳುಪಿ (ಜಗವಿ. ೧೫-೫ ವ). **ದರದುರ :** ೫. ಶ್ರೇಷ್ಠ ; ಅಧಿಕ ; ದುರಂಧರ : ಆನು ನಿಮ್ಮ ಭಕ್ತಿಯಲ್ಲಿ ದರದುರನೆಂಬೆ ದಿಟಕ್ಕೆ ಬಂದರೆ ಕಾಣದಂತಡ್ಡಮೊಗ ವಿಕ್ಕುವೆಗರುಡಂಗೆ ಘಟಸರ್ಪನ ತೋಱುವಂತೆ (ಬಸವ. ೩೦೦).
[ ? ]

**ಧರಭೋಗಿ** (ನಾ). ೧. ವಿಷವನ್ನುಳ್ಳುದಂ ; ಹಾವು. ೨. ಖಡ್ಗವನ್ನು ಬಳಸುವವನಂ ; ಖಡ್ಗಯುದ್ಧದಲ್ಲಿ ಸಂತೋಷಿಸುವವನು. ೧, ೨ : ಜಳನಿಧಿವೋಲು(ಲ್) ಗಭೀರನಹಿರಾಜನವೋಲು(ಲ್) ಧರಭೋಗಿ ಚಂದ್ರ ಮಂಡಳದವೊಲೀ(ಲೀ)ಕ್ಷಣಪ್ರಿಯಂ . . . ಎನುತ್ತೆ ಬಣ್ಣಿಸುತವಿಪ್ಪುದು ಧಾರಿಣಿ ಚೀಲಗೌಂಡನ (ಕಇ. IV, ೧೧-೩೦ ; 1121).
[ ಸಂ. ಧರಭೋಗಿನ್ ]

**ಧರಸೋಡಿ** (ನಾ). ಹೊಲ ಗದ್ದೆಗಳ ಮೇರೆಯನ್ನು ಗೊತ್ತುಮಾಡು ವಾಗ ಅಂಕುಡೊಂಕಾಗಿರುವ ಅಂಚನ್ನು ನೇರವಾಗಿರುವಂತೆ ಅಕ್ಕಪಕ್ಕದ ಭೂಮಿಯ ಭಾಗವನ್ನು ಸರಿಪಡಿಸುವ ಪದ್ಧತಿ: ಧರಸೋಡಿ ಕೊಡುವಾಗ ಹ ಎಂಬಲ್ಲಿ ನ ಎಂಬಲ್ಲಿ ಸಹ ಕಂಪಾಸುಯಿಟ್ಟು ಅಂತರ ತೆಗೆದು ಉಳಿದ ಅಂತರದಲ್ಲಿ ಕೂಡಿಸಿಕೊಳ್ಳಬೇಕು. ಅದಕ್ಕೆ ಹೊರಗಿನದು ಧರಸೋಡಿ ಅಂದರೆ ಬಿಟ್ಟುಬಿಡತಕ್ಕದ್ದು (ಭೂಮಿಅ. ೪೬).

[ ←ಮರಾ. ಧರಸೋಡ ]

**ಧರಾಗ್ರ** (ನಾ). = ಧರಣೀತಲ : ಸುರನರರಾಜಕಂ ಸಭೆ ಧರಾಗ್ರಮೆ ಕೂಡೆ ಸಮಗ್ರರಂಗಂ (ನೇಮಿಪು. ೮-೧೬೫) ; ವಿದಿತವಾಯುಶ್ರೀಯು ಕೀರ್ತಿಯು ಸದಮಳ ಜ್ಞಾನಾಭಿವೃದ್ಧಿಯು ಒದಗಿ ಬಾಳುತ್ತಿಪ್ಪರವಿರತವೀ ಧರಾಗ್ರದೊಳು (ಬಸಪು. ೪೮-೩೨). [ ಸಂ. ]

**ಧರಾಚಕ್ರ** (ನಾ). = ಧರಣೀಚಕ್ರ ೧: ಪೆಱ[ನಾ]ವಂ ಧರಾಚಕ್ರಕ್ಕೆಱೆಯಂ ಕೆಳೆಯುಪ್ಪವಂ ನೆಱೆ ಯಾರೆಣೆಯೆಂಬನ್ನಂ ಕುಱಿತಬ್ಧಿಗೆ ಬನ್ನಮಂ (ಕವಿರಾ. ೨-೧೨೫) ; ಬೆಸಕೆಯ್ದತ್ತು ಸಮುದ್ರಮುದ್ರಿತಧರಾಚಕ್ರಂ (ಪಂಪಭಾ. ೧-೧೧೦) ; ತಿಱ್ರನೆ ತಿರುಗುವ ಧರಾಚಕ್ರಭ್ರಾಂತಿಯೊಳ್ ತಮಗೆ ಚಿತ್ತಭ್ರಾಂತಿಯಾಗೆ (ಗದಾಯು. ೮-೨೦ ವ). [ ಸಂ. ]

**ಧರಾತಲ, ಧರಾತಳ** (ನಾ). = ಧರಣೀತಲ : ಮಾನಕ್ಕೆ ದೊರಕಲು ಸಂತಸದಿ ಕೊಂಡಧಿಕಸಂಭ್ರಮವಾಂತು ಪರಿತರಲೆಡಹೆ ಅಕ್ಕಿ ಧರಾತಲ [ಪಾಠಾಂ. ಳ]ದೊಳೊಗಲು (ಬಸಪು. ೨೬-೧೬) ; ಆ ಸತ್ಯೇಶಚಾಮಯನ ಸಾಂಗಭಾಷೆ ಧರಾತಲ[ಪಾಠಾಂ. ಳ]ದೊಳುತ್ತುಂಗವಾಯಿತು (ಬಸಪು. ೩೬-೫೮). **ಧರಾತಳ** : ಪಱೆಯ ಧರಾತಳಮಂ ಗುಣದಱಿವನೊಡಂಬಡದ ಕಾಪುದಂಗೀಯದದರ್ಕಱಿಪೆ ದೆಸೆಗಳ್ಗೆ ಕೆಮ್ಮನೆ ಮೊಱಗುವಿರೇಂ ಮೊಱಗಿದಂತೆ ಕೊಳ್ವುವೆ ಮಱೆಗಳ್ (ಕಾವ್ಯಸಾ. ೪೩೬ ಶೂದ್ರಕ) ; ಧರಾತಳಮಂ ಕೊಟ್ಟನಿವಂ ಜಳಾಂಜಳಿಯುಮಂ ನಾಂ ಕೊಟ್ಟೆನಿಲ್ಲ (ಗದಾಯು. ೫-೩೦) ; ಬುಡಸಹಿತ ಬಲುಮರ ಧರಾತಳಕುಡಿದು ಬಿದ್ದವು (ತೊರರಾ. ೧-೧೦-೧೪).

[ ಸಂ. ]

**ಧರಾತಳ** 'ಧರಾತಲ' ನೋ.

**ಧರಾತ್ಮಜ** (ನಾ). = ಧರಣಿಸುತ: "ವಕ್ರಃ, ಅಂಗಾರಕಃ . . . ಧರಾತ್ಮಜಃ – ಈ ೫ ಮಂಗಳನ ಪೆಸರ್" (ಹಲಾಯು. ೯-೪೬). [ ಸಂ. ]

**ಧರಾತ್ಮಜೆ** (ನಾ). = ಧರಣಿಜಾತೆ : ತಿಂಗಳ್ಗನೆಯ ಮಿಗಮೆ. . . ಬರುತಿರೆ ಧರಾತ್ಮಜಾವದನಮಂ ತನ್ನ ಸದನಂಗೆತ್ತು (ಶ್ರೀರಾಮಾ. ೨೩೧-೮೨).

[ ಸಂ. ಧರಾತ್ಮಜಾ ]

**ಧರಾದಾನ** (ನಾ). ಭೂಮಿಯನ್ನು ದಾನವಾಗಿ ಕೊಡುವುದು; ಭೂದಾನ : ಷೋಡಶಮಹಾದಾನಗಳನ್ನು ಮಾಡಬೇಕೆಂದು ನಿಶ್ಚಯಿಸಿ . . . ಎಲ್ಲವನ್ನೂ ಮಾಡಿದರು. ಅವು ಯಾವವೆಂದರೆ . . . ೧೧. ಧರಾದಾನ ೧೨. ವಿಶ್ವಚಕ್ರದಾನ (ಚಾಮವಂ. ೯೬). 'ಷೋಡಶದಾನ' ಪರಾ.

[ ಸಂ. ]

**ಧರಾಧರ** (ನಾ). ೧. ಭೂಮಿಯನ್ನು ಹೊತ್ತಿರುವಂಥದು : ಧುರದಗ್ಗಳದ ಗಮನಕೆ ಕರಿಗಳಡೆಗೆಡವು ಧರಾಧರದ [ಪಾಠಾಂ. ದಿಶಾವಳಿಯ, ಧರಾತಳದ, ಧರಾತಳಕೆ] (ತೊರರಾ. ೬-೨೬-೬). ೨. ಪರ್ವತ : ಆಯುಂ ಶ್ರೀಯುಂ ವಿಜಯಮುಮಾಯತಿಯುಂ ನೃಪತಿ ನಿನಗೆ ನಿಜಸಂತತಿಯುಂ ನ್ಯಾಯದೆ ಪೆರ್ಚುವುದಕ್ಕೀ ತೋಯಧಿ ಧರ[ಣೀಧ]ರಾಧರ ಸ್ಥಿತಿವರೆಗಂ (ಕವಿರಾ. ೩-೨೦೬) ; ಅನ್ಯದೈವಧರಾಧರಾಶನಿ ಅನ್ಯದೇವಾರ್ಣವಕಳಶಭವ (ಬಸಪು ೫೩-೪). 'ಧರಾಧರಧರ' ಪರಾ. ೩. ವಿಷ್ಣು. ೪. ದೊರೆ; ರಾಜ : ಚೌಪಳಿಗೆಗಳೊಳ್ ಧರಾಧರಧುರಂಧರಬಂಧುರ ರಾಜಕಂ . . . ಅವ್ವಳಿಸಿರೆ (ಪಂಪಭಾ. ೩-೫೩). [ ಸಂ. ]

**ಧರಾಧರಧನ್ವ** (ನಾ). (ಮೇರು) ಪರ್ವತವನ್ನು ಬಿಲ್ಲಾಗಿ ಮಾಡಿಕೊಂಡವನು ; ಶಿವ : ಧನಪತಿಮಿತ್ರ ಗಾತ್ರರುಚಿ ನಿರ್ಜಿತಮಿತ್ರ . . . ಧರಾಧರಧನ್ವ ಶಶಾಂಕಖಂಡಮಂಡನ (ರಾಜಶೇ. ೧೦-೫೯).

[ ಸಂ. ಧರಾಧರಧನ್ವನ್ ]

**ಧರಾಧರಧರ** (ನಾ). ೧. ಬೆಟ್ಟವನ್ನು ಎತ್ತಿ ಹಿಡಿದವನು. ೨. ಭೂಮಿಯನ್ನು ಮೇಲೆತ್ತಿದವನು ; ವಿಷ್ಣು. ೩. ಕೃಷ್ಣ : ದೋರ್ಗರ್ವದಿಂದಾಂತ ವೈರಿ ಧರಾಧೀಶಬಲಕ್ಕೆ ಗಾಂಡಿವಧರಂ ಗಂಗಾಧರಂ ತುಂಗಶಕ್ತಿಧರಂ ವಜ್ರಧರಂ ಧರಾಧರಧರಂ ಶ್ರೀ ಕೀರ್ತಿ ವಿದ್ಯಾಧರಂ (ಪಂಜತಂ. ೮-೬) ; ಸಾಹಸದೊಳ್ ಧರಾಧರಧರಂ ಭುಜವೀರ್ಯ್ಯ ನಿಜಪ್ರತಾಪಸನ್ನೋಹದೊಳರ್ಜ್ಜುನಂ . . . ವಿಷ್ಣುನೃಪಾಳನೊಳಾರಿದಿರ್ಪ್ಪರ್ವರ್ (ಎಕ. VI, ಕಡೂರು. ೫೧-೧೧, 1169). 'ಗಿರಿಧರ' ಪರಾ.

[ ಸಂ. ]

**ಧರಾಧರಧೈರ್ಯ** (ನಾ). ಬೆಟ್ಟದಂತೆ ಅಚಲವಾದ ಸ್ಥೈರ್ಯವುಳ್ಳವನು : ಗುರುಸನ್ನಿಧಿಯೊಳ್ಮನ್ನಂ ಪರಿಣತಿವಡೆದಿರ್ದ ಸಕಳವಿದ್ಯೆಯನೀಗಳ್ ಪರಿವಿಡಿಗೆಯ್ವಂತೆ ಕಳಾಧರನಾದಂ ಶ್ರೀಧರಂ ಧರಾಧರಧೈರ್ಯಂ (ಮಲ್ಲಿಪು. ೪-೧೩೪). [ ಧರಾಧರ + ಧೈರ್ಯ ]

**ಧರಾಧರೇಂದ್ರ** (ನಾ). ದೊಡ್ಡ ಬೆಟ್ಟ; ಪರ್ವತಗಳಲ್ಲಿ ಶ್ರೇಷ್ಠವಾದುದು: ದುರ್ವ್ವಾರಾರಿಧರಾಧರೇಂದ್ರಕುಳಿಶಂ ಶ್ರೀವಿಷ್ಣುಭೂಪಾಳನಾರ್ದ್ದರ್ಬ್ಬರ್ಟ್ಟಲ್ ಸೆಡೆದೋಡಿ ಪೋಗಿ ಭಯದಿಂದಾಬಂದನೀಬಂದನೆಂದುರ್ಬ್ಬೀಪಾಳರ ಕಣ್ಗೆ ಲೋಕವನಿತುಂ ತದ್ರೂಪವಾಗಿರ್ಪ್ಪುದುಂ ಸರ್ಬ್ಬಂ ವಿಷ್ಣುಮಯಂ ಜಗತ್ತೆನಿಪುದೇಂ ಪ್ರತ್ಯಕ್ಷಮಾಗಿರ್ದ್ದುದೋ (ಎಕ. V, ಬೇಲೂರು. ೧೬೧-೧೯ : ಸು. 1160). [ ಧರಾಧರ + ಇಂದ್ರ ]

**ಧರಾಧಾರ** (ನಾ). ೧. ದೊರೆ; ರಾಜ : ಪಾರಾವತಮಂ ಗಿಡಿಗಂ ಘೋರೆಂದೋರಂತೆ ಮುಟ್ಟೆ ಬೆನ್ನಟ್ಟೆ ಧರಾಧಾರನೆಯನ್ನಂ ಕಾವುದಕಾರಣಮಿಾ ಶ್ಯೇನಕೋಪಮುಪಗತಪಾಪಾ (ಶಾಂತಿಪು. ೯-೮೮). ೨. ಬೆಟ್ಟ; ಪರ್ವತ. 'ಧರಾಧಾರಧರ್ಮ' ಪರಾ. [ ಸಂ. ]

**ಧರಾಧಾರಧರ್ಮ** (ನಾ). ೧. (ಮೇರು)ಪರ್ವತವನ್ನೇ ಬಿಲ್ಲನ್ನಾಗಿ ಮಾಡಿಕೊಂಡವನು ; ಶಿವ. ೨. ಬಹುಜನರು ಆಶ್ರಯಿಸಿರುವ ಶೈವಧರ್ಮದಲ್ಲಿ ನಿರತನಾದವನು ; ಬಸವೇಶ್ವರ. ೧, ೨ : ಶ್ರೀಶೈಲಾದಿಪ್ರಸಿದ್ಧಂ . . . ಧನದಮಿತ್ರಂ ಧರಾಧಾರಧರ್ಮಂ (ರಾಜಶೇ. ೧-೧).

[ ಸಂ. ಧರಾಧಾರಧರ್ಮನ್ (ಧರಾಧಾರ + ಧರ್ಮ + – ) : (ಧರಾ + ಆಧಾರ + ಧರ್ಮ + – ) ]

**ಧರಾಧಿಪ** (ನಾ). = ಧರಣಿಪ : ಪುಣ್ಯಕಥೆಯಂದದೆ ಭಾವಿಸಿ ಕೇಳ್ವುದಾ ಧರಾಧಿಪನ ಶರನ್ನಿಶಾಸರಕಳೋಜ್ಜ್ವಳಮಂ ಜಸಮಂ ಜಗಜ್ಜನಂ (ಚಂದ್ರಪು. ೨-೬) ; ಧರಾಧಿಪನತುಳಹರುಷದ ಹೊನಲಿಸಲಿ ಹೊಡಱಿದ್ದು . . ನುಡಿದನು (ತೊರರಾ. ೧-೫-೧೦) ; ಸಂತಾನಕಾಮಿ ಧರಾಧಿಪಂ . . ಪುತ್ರಾಭಿಪಾಂಥೆಯಾ ಸಮಾಧಿಯೊಳ್ ತಾನಿರಲ್ (ಶ್ರೀರಾಮಾ ೧೨-೩೦೬).

[ ಸಂ. ]

**ಧರಾಧಿಪತಿ** (ನಾ). = ಧರಣಿಪ : ತದ್ಧರಾಧಿಪತಿ ತನ್ಮುನಿನಾಥರ ಪಾದಪದ್ಮದೊಳ್ ಬಿಟ್ಟಿದ್ದು (ನೇಮಿಪು. ೨-೨೪) ; ಬರೆ ಬಳಪಾ ಧರಾಧಿಪತಿ ಕಾಲನ ದಾಟಿಯ ಮೂಲಕರ್ತೃವೀ ನರಪತಿಯೆಂಬಿನಂ ನಡೆದು (ಮುಹಾನೇ. ೫-೮೧).

[ ಸಂ. ]

**ಧರಾಧಿಪತ್ಯ** (ನಾ). ಭೂಮಿಯ ಒಡೆತನ : ಧರಾಧಿಪತ್ಯಪತಿಯಾಗದವಂ ಧರಣೀಶಪುತ್ರನೇ (ಮುಹಾನೇ. ೪-೬೪) ; ತಂದಳು ಮತ್ತೆ ವಲ್ಕಲವ ವನನಿವಾಸಧರಾಧಿಪತ್ಯದ ಜನಪತನದುಡುಗೊಱೆಯಿದೀಗೆಂದೆನುತ (ತೊರರಾ. ೨-೩-೪೫). [ ಸಂ. ]

**ಧರಾಧೀಶ** (ನಾ). = ಧರಣಿಪ : ಈಬಂದಂ ಧರಾಧೀಶನೆಂಬರವಂ ಪೊಂಪುಟಿವೋಗೆ (ಆದಿಪು. ೧೨-೧೨೭) ; ಚಂಪಾಪುರದ ಧರಾಧೀಶನಪ್ಪ ಸೂರ್ಯವರ್ಮಮಹಾರಾಜನ ಸುತಂ ಸಾಮಾನ್ಯಮಲ್ಲೆಂಬುದುಂ (ಮಹಾಪು. ೯-೪೫ ವ). [ ಸಂ. ]

**ಧರಾಧೀಶ್ವರ** (ನಾ). = ಧರಣಿಪ : ಸ್ತಿಮಿತಸಾಗರ ಧರಾಧೀಶ್ವರನವಿನಶ್ವರ ಸುಖಾನುಭವನಿರತಂ (ಶಾಂತಿಪು. ೧-೭೩ ವ) ; ಧಿಗಿಲೆಂದುದು ಧರಾಧೀಶ್ವರನ ತಂದೆಯ ಹೃದಯದಲಿ (ಕುವ್ಯಾ.ಕ. ೧-೨). [ ಸಂ. ]

**ಧರಾಧ್ರು** (ನಾ). = ಧರಾಧರ ೨ : ಪ್ರತಾಪಮಿನನಂ ಘನಧೈರ್ಯಗುಣಂ ಧರಾಧ್ರುವಮಂ . . . ಗೆಲ್ದು ತೋಱದಾ ಭೂಪನ ಖಡ್ಗವೊಂದೆ ಸಲೆ ಗೆಲ್ದುದೆ ವೈರಿನರಾಧಿನಾಥರಾ (ರಾಜಶೇ. ೩-೭). [ ಸಂ. ]

**ಧರಾನಂದನೆ** (ನಾ). = ಧರಣಿಜಾತೆ : ಧರಾನಂದನೆಯ ಪಾಣಿಗ್ರಹಣದುಜ್ಜುಗದನಿತ ಪೇಳ್ದಿಚ್ಚಟಿಸಿದನು ಮೇಲಣ ಮಹೋತ್ಸವವ (ತೊರರಾ. ೧-೧೩-೮). [ ಸಂ. ಧರಾನಂದನಾ ]

**ಧರಾಪುತ್ರಿ** (ನಾ). = ಧರಣಿಜಾತೆ ; ಪಂತದಿಂ ಪಾಡಿನಿಂದೊಬ್ಬರೊಬ್ಬರ ಕಾಡಿ ಕರಬಿಂದೆ ಬಂದರಿಲ್ಲಿಗೆ ಧರಾಪುತ್ರಿಯಂ ಕೈವಿಡಿಯೆ (ಶ್ರೀರಾಮಾ. ೪೧-೩೭೨). [ ಸಂ. ಧರಾಪುತ್ರೀ ]

**ಧರಾಭಾಗ** (ನಾ). ಭೂಮಿ ; ನೆಲ : ಆ ಮರುತಾತ್ಮಪ್ರಭವಂ ಮರುಜ್ಜವದಿನೆಯ್ತಂದುದ್ಧತಂ ಕೌರವೇಶ್ವರನೂರುದ್ವಯಮಂ ಗದಾಪರಿಘದಿಂ ಪೊಯ್ಯಲ್ ಧರಾಭಾಗದೊಳ್ ಗಿರಿ ಬೀೞ್ವಂತಿರೆ ಬಿಟ್ಟಂ (ನೇಮಿಪು. ೧೨-೨೦೨). [ ಸಂ. ]

**ಧರಾಭಾರ** (ನಾ). ಆಡಳಿತದ ಹೊಣೆ ; ರಾಜ್ಯಭಾರ : ನೀನೆ ಜಟ್ಟಿಗನೈ ಮುನ್ನಿನೂರಂಟುವೇಡ ಮಗನೇ ಕೈಕೊಳ್ ಧರಾಭಾರವಂ (ಪಂಪಭಾ. ೧-೮೦) ; ನಿನಗಸ್ಮದ್ವಚನಂ ವಿಧೇಯಮದಱಿಂ ಕೈಕೊಳ್ ಧರಾಭಾರಮಂ (ಪಂಚಾವಾ. ೭-೮೩) ; ಸಂಸಾರಕ್ಕೆ ಪೇಸಿ . . . ಅರಿಂಜಯಂಗೆ [ರಾಜ್ಯಾಭಿಷೇಕಂ ಮಾಡಿ] ಧರಾಭಾರಮನೊಪ್ಪಿಸಿ (ಧರ್ಮಾಮೃ. ೪-೨೭೯). [ ಸಂ. ]

**ಧರಾಮಂಡಲ**, ಧರಾಮಂಡಳ (ನಾ). ಧರಣಿಮಂಡಲ; ಭೂಮಂಡಲ; ಪೃಥ್ವಿ : ಮುಂ ಕೋಟ ಮಂದಿ ಕುದುರೆಗೆ ಧರಾಮಂಡಲಂ ಸಂಕುಲದ ಪಾದ್ಯಧ್ವನಿಗೆ. ದಿಶಾಮಂಡಲಂ . . . ಸಂಕೋಚವೆನೆ ಬಂದು ಪಿಡಿದು ಪಾರ್ಥನ ತುರಗಮಂ ಕಟ್ಟಿ ಬಳಸಿ ಪದ್ಮವ್ಯೂಹಮಾಗಿ ನಿಂದಾರ್ದುದಾ ಸೇನೆ ನಲಿದು (ಜೈಮಿಭಾ. ೧೭-೯). **ಧರಾಮಂಡಳ** : ಅಕ್ಕಣನ ಸುತಂ ಸಾಸ್ತನೊಳಕ್ಕುಂ ದೊರೆ ಚಾರುದತ್ತ ಬಲಿ[ಸಿ]ಬಿಗುತ್ತಂ ಮಿಕ್ಕ ನರನಾತನಾರ್ಬ್ಬ[ರ್]ಗಕ್ಕುಮೆ ದೊರೆಯಾಗಲೀ ಧರಾಮಣ್ಡಳದೊಳ್ (ಸೌಇಇ. XX, ೫೫-೩೪ ; 1081) [ ಸಂ. ]

**ಧರಾಮಂಡಳ** 'ಧರಾಮಂಡಲ' ನೋ.

**ಧರಾಮರ** (ನಾ). = ಧರಣಿಸುರ: ಚಾರಿತ್ರಶುದ್ಧರ್ ಧರಾಮರರೀ ಬ್ರಾಹ್ಮಣರೆಂದು ಕೊಂಡುಕೊನೆದಾ ಪಟ್ಟಂಡೆಭೂಮಂಡಲೇಶ್ವರನೋರಂತೆ ನೆಗಟ್ಟಿಕೂಡೆ ನೆಗಟ್ದತ್ರೈತ್ರಂ ದ್ವಿಜನ್ಮಾನ್ವಯಂ (ಆದಿಪು. ೧೫-೨೦) ; ಪರಸುವ ಧರಾಮರರ ಪರಕೆಯ ರವಂಗಳಿಂ (ಅಜಿಪು. ೪-೭) ; ಧಾಮನಾಮಧೇಯಗ್ರಾಮದೊಳಿರ್ಪಂ ಧರಾಮರಂ ವಿಮುಂಚಿಯೆಂಬಂ (ಪಂಚಾಮಾ. ೬-೩೨ ವ) ; ಧರಾಮರರಂ ಕನಿಷ್ಠಕುಲದ ಮನುಜರಿಗೆ ಸೋಂಕಲಾಗದಿದೆಂಬುದೊಂದುಂಟೇ (ಬಸಪು. ೫೫-೩೫). [ ಸಂ. ]

**ಧರಾಮರತ್ವ** (ನಾ). ಬ್ರಾಹ್ಮಣ್ಯ ; ಬ್ರಾಹ್ಮಣನಾಗಿರುವಿಕೆ : ಪಡೆಯಬಾರದ ದಿವ್ಯಮಪ್ಪ ಧರಾಮರತ್ವಮನಮ್ಮ ನೀಂ ಪಡೆದು ಮತ್ತದನೊಲ್ಲದಿಲ್ಲಿಗೆ ಪಂದು . . . ಪೊರ್ದಿದೈ ಜಿನದೀಕ್ಷೆಯಂ (ಧರ್ಮಾಮೃ. ೦-೬೬). [ ಸಂ. ]

**ಧರಾಮರಪತಿ** (ನಾ). ೧. ಭೂಮಿಗೆ ಇಂದ್ರನಂತಿರುವವನಂ ; ದೊರೆ ; ರಾಜ : ಇರೆ ಚಂದ್ರಂ ತೊಲೆಯೊಳ್ ಹಿಮಕಿರಣಸುತಾದಿ ಗ್ರಹತ್ರಯಂ ನೋಡೆ ಧರಾಮರಪತಿ (ಜಾತತಿ. ೨೦-೭). ೨. ಶ್ರೇಷ್ಠನಾದ ಬ್ರಾಹ್ಮಣ : ಕಮಂಡಲು ಪಳಚ್ಚನೆಸದಿರ್ದುದು ಶುದ್ಧಾಂತಃಕರಣೋಪಾಧ್ಯಾಯಾಂತೇವಾಸಿಯಪೊಲಾಧರಾಮರಪತಿಯಾ (ಅನಂಪು. ೨-೪೪). [ ಸಂ. ]

**ಧರಾರುಹ** (ನಾ). ಮರ ; ವೃಕ್ಷ : ಪೆಡೆಯೆತ್ತಿ ನಲಿವ ನಾಗಂಗಳಂ ಕೊನೆಗೊಂಬುಗಳೊಳ್ ತಾಳ್ದು . . . ಮಾಣಿಕ್ಯದ ಮರಂಗಳಂತಿರಂದಂಬೆತ್ತ ಚಂದನಧರಾರುಹಂಗಳಿಂ (ಶಬಶಂ. ೩-೩೫ ವ). [ ಸಂ. ]

**ಧರಾವರ** (ನಾ). ರಾಜ ; ದೊರೆ : ಅಂತು ಬಂದ ನಾರದನನಾದರದಿಂದಾ ಧರಾವರಂ ಸಮುಚಿತಾಸನದೊಳಿರಿಸಿ (ನೇಮಿಪು. ೧೧-೭೮ ವ). [ ಸಂ. ]

**ಧರಾವರೆ** (ನಾ). ಶ್ರೇಷ್ಠವಾದ ಭೂಮಿ : ಪಲಕಾಲಂ ಭರತಧರಾವರೆಯೆಲ್ಲಂ ಭೋಗಭೂಮಿಯಾಗಿರೆ . . . ಭೋಗಭೂಮಿಜರ್ ಸುಖದಿನಿರಲ್ (ಸಮಪ. ೨-೯). [ ಸಂ. ಧರಾವರಾ ]

**ಧರಾವಲಯ**, ಧರಾವಳಯ (ನಾ). = ಧರಾಮಂಡಲ: ಅಡಿದಳಿರ್ಗೆ ಧರಾವಲಯಂ ಕಡುವೆಟ್ಟಿತ್ತಾಗೆ ನಡೆಯಲಱಿಯದೆ ಮನುಜರ್ ಸೆಡೆಯೆ ಹಯಾದಿಗಳಿಂದಂ ನಡೆಯಿಸಿದಂ ಕಲಿಸಿ ವಾಹನಾರೋಹಣಮಂ(ಪಂಚಾವಾ. ೧-೭೬). **ಧರಾವಳಯ** : ಅಂತು ನಿರಂತರಂ ಧರಾವಳಯಮೆಲ್ಲಂ ಬಲಮಯಮಾಗೆಯುಂ ... ಅಗುರ್ವಾಗಿ ನಡೆಯೆ (ವರ್ಧಮಾ. ೮-೫೦ ವ) ; ಧರಾವಳಯಮಂ ಪ್ರಚಂಡಭುಜದಂಡದೊಳ್ ತಾಳ್ದಿದಂ (ಮಲ್ಲಿಪು. ೩-೧೨) ; ಶೂರತ್ವದೊಳೀ ಧರಾವಳಯದೊಳ್ ವಿಭು ಕೇಶವರಾಜನೊಪ್ಪುವಂ (ಸೌಇಇ. XX, ೨೪೮-೩೪ ; 1228) ; ಧರಾವಳಯಪೂಜಿತನಾ ಜಿತಶತ್ರುಭೂಭುಜಂ ಮಗಳ್ದಿರು ಮಾನಳಿಯನುಮಂ ಮುಂದಿಟ್ಟು ಪುರಮನರಮನೆಯುಮಂ ಪೊಕ್ಕು (ಮಹಾಪು. ೪-೫೮). [ ಸಂ.]

**ಧರಾವಲ್ಲಭ** (ನಾ). = ಧರಣಿಪ : ಆ ಧರಾವಲ್ಲಭಂ ಮಂಥರೆಯ ಭೀಷಣೈಕಾಂತತೆಗೆ ಬಗೆಗರಗಿ (ಶ್ರೀರಾಮಾ. ೨೩-೭೦೪). [ ಸಂ. ]

**ಧರಾವಳಯ** 'ಧರಾವಲಯಂ' ನೋ.

**ಧರಾವಿಭಾಗ** (ನಾ). ಭೂಭಾಗ ; ದೇಶ : ಪನ್ನಗಕೇತನಂಗೆ ಧರಾವಿಭಾಗಮನಿತ್ತು . . . ಬನ್ನವಿಲ್ಲದೆ ಬಾಟ್ವುದೇಂ ಪುಟುವಾನಸಂಗೆನಗಕ್ಕುಮೇ (ಪಂಪಭಾ. ೯-೧೭). [ ಸಂ. ]

**ಧರಾಸುತ** (ನಾ). = ಧರಣಿಸಂತ. [ ಸಂ. ]

**ಧರಿತ್ರಿ** (ನಾ). ೧. ನೆಲ ; ಭೂಮಿ ; ಪೃಥ್ವಿ : "ಸ್ಥಿರೆ ಧರಣಿ ಧಾತ್ರಿ ಮೇದಿನಿ ಧರಿತ್ರಿ ಧರೆಯವನಿ ಪೃಥ್ವಿ . . . ಭೂಮಿ ಭೂ ಗೋತ್ರೆ ನೆಲಂ" (ವಸ್ತುಕೋ. ೨೬-೧) ; ಧರಿತ್ರಿಯಂ ಜೀಯನೆ ಬೇಡಿಕೊಳ್ಳದೆ ವಿರೋಧಿನರೇಂದ್ರರನೊತ್ತಿಕೊಂಡುಂ (ಪಂಪಭಾ. ೧-೧) ; ನಿನಗಾರ್ ದೊರೆ ಮಾನವರೀ ಧರಿತ್ರಿಯೊಳ್ (ಪುಷ್ಪಪು. ೮-೬೭) ; ವಿರಹ ವಿಸ್ಮೃತಿ ಕೇವಳಮೇ ಧರಿತ್ರಿಯೊಳ್ (ನಳಚಂ. ೬೩); ಅವಗೆ ಧರಿತ್ರಿಯೊಳಗೆಣೆಯಾವನೈ ಭೂಪಾಲ (ಕುವ್ಯಾ.ಉ. ೩-೭೩). ೨. ಜನ : ಮಗನೆಂಬಂತು ಧರಿತ್ರಿ ನಿನ್ನನುಜರಂ ಕೈಕೊಂಡು ಮುಂ ಪೂಣ್ದ ನನ್ನಿಗೆ ಬನ್ನಂ ಬರಲೀಯದಾರ್ತಸಗಿದೀ ವಿಖ್ಯಾತಿಯುಂ ಕೀರ್ತಿಯುಂ ಮುಗಿಲಂ ಮುಟ್ಟಿದುದಲ್ತೆ (ಪಂಪಭಾ. ೧-೮೧). [ ಸಂ. ಧರಿತ್ರೀ ]

**ಧರಿತ್ರೀಜಾತ** (ನಾ). = ಧರಾರುಹ : ಆತಪಂ ಪಿರಿದಾದಡಂ ಸಂಪ್ರೀತಿಯಲಿ ಬಂದೇಱದಡೆ ಚಂದ್ರಾತಪದೊಳಿರಿಸುವ ಧರಿತ್ರೀಜಾತ ಜಾತಿಗಳ (ಬಸಪು. ೧೯-೫೯). [ ಸಂ. ]

**ಧರಿತ್ರೀತಳ** (ನಾ). ಭೂಲೋಕ ; ಭೂಮಿ : ಅಪ್ರಮಿತಮುನಿಪಾಳಿಯೊಳ್ ವರ್ಧಮಾನಮುನಿ ನೆಗಟ್ದನೀ ಧರಿತ್ರೀತಳದೊಳ್ (ಸುಕುಮಾ. ೧-೨೪). [ ಸಂ. ಧರಿತ್ರೀತಲ ]

**ಧರಿತ್ರೀತಿಳಕ** (ನಾ). ಭೂಲೋಕಕ್ಕೆ ತಿಲಕದಂತೆ ಭೂಷಣಪ್ರಾಯಂ ವಾದಂದು: ಆ ಕುರುಜಾಂಗಲವಿಷಯಮಹೀಕಾಂತೆಗೆ ಪೊಸತೆ ಸಮೆದ ಮುತ್ತಿನ ಮುಡಿ ಧಾತ್ರೀಕರ್ಣಪೂರಮವನಿಸ್ತ್ರೀಕರಲೀಲಾಂಬುಜಂ ಧರಿತ್ರೀ ತಿಳಕಂ (ಶಾಂತಿಪು. ೯ ೧೩೮). [ ಸಂ. ಧರಿತ್ರೀತಿಲಕ ]

**ಧರಿತ್ರೀಧವ** (ನಾ). = ಧರಣಿಪತಿ: ಅವರವರ ಮತಗಳ ಧರಿತ್ರೀಧವ ನೊರೆಯಲು (ಶಂಕರಚಾ. ೧೧-೬). [ ಸಂ. ]

**ಧರಿತ್ರೀನಾಥ** (ನಾ). = ಧರಣಿಪ: ಕುಸುಮದತ್ತಂಗೆ ಧಾತ್ರೀನಾಥ ಪದವಿಯಂ ಕೊಟ್ಟಾ ನರಪತಿ ಬಟ್ಟಿಕ ದೀಕ್ಷೆಯಂ ಕೈಕೊಂಡಂ (ಯಶೋಧ. ೪-೭೭). [ ಸಂ. ]

**ಧರಿತ್ರೀಪಾಲ, ಧರಿತ್ರೀಪಾಳ** (ನಾ). = ಧರಣಿಪ: ಕೇಳು ಜನಮೇಜಯ ಧರಿತ್ರೀಪಾಲ ನಿಮ್ಮಯ ಪೂರ್ವಪೃಥ್ವೀಪಾಲರಿದ್ದರು ಗುಪ್ತದಿಂದ ವಿರಾಟನಗರಿಯಲಿ (ಕುವ್ಯಾವಿ. ೨-೧). **ಧರಿತ್ರೀಪಾಳ**: ವನದೇವಂ ಕಂಡೋಲಗಿಸಿದಂ ಧರಿತ್ರೀಪಾಳಂಗೆ ನಗೇಂದ್ರಸಾರವಸ್ತೂತ್ಕರಮಂ (ವರ್ಧಮಾ. ೯-೬೩). [ ಸಂ. ]

**ಧರಿತ್ರೀಪಾಳ** 'ಧರಿತ್ರೀಪಾಲ' ನೋ.

**ಧರಿತ್ರೀಮಿತ್ರ** (ನಾ). ಇಡೀ ಭೂಲೋಕಕ್ಕೆ ಗೆಳೆಯನಂತಿರುವವನು; ಲೋಕಕ್ಕೆ ಉಪಕಾರಿಯಾದವನು: ಎಲ್ಲಿ ಬಂದುದೊ ತುರಂಗಂ ಕೇಳಿಯೇಕಾದುದೀ ಶಿಶುವಿಂತೇಕಳಿದತ್ತೊ . . . ಕೋಪಿಸಿ ಚೋಳಾಧಿಪನೇಕೆ ಕೊಲ್ವನೊ ಧರಿತ್ರೀಮಿತ್ರನಂ ಪುತ್ರನಂ (ರಾಜಶೇ. ೧೪-೪೬). [ ಸಂ. ]

**ಧರಿತ್ರೀರಮಣ** (ನಾ). = ಧರಣಿಪ: ಪತ್ರೀಂದ್ರವಾಹನಂ ಬಳಿಕ್ಕೈದೆ ಪಾಂಡವ ಧರಿತ್ರೀರಮಣರಿದಿರ್ಗೊಂಡರು (ಜೈಮಿಭಾ. ೨-೪೬). [ ಸಂ. ]

**ಧರಿತ್ರೀವಲ್ಲಭ** (ನಾ). = ಧರಣಿಪ: ರತ್ನಕಂಬಲಮನಾ ಧರಿತ್ರೀವಲ್ಲಭಂ ಮುಹುರ್ಮುಹುರಾಲೋಕನಕುತೂಹಳಚಿತ್ತನಾಗಿ ವಿಸ್ಮಯಂಬಟ್ಟು (ಸುಕುಮಾ. ೧೧-೧೧೫ ವ). [ ಸಂ. ]

**ಧರಿತ್ರೀಸ್ತುತ್ಯ** (ನಾ). ಲೋಕದ ಹೊಗಳಿಕೆಗೆ ಪಾತ್ರನಾದವನು; ಲೋಕಪೂಜ್ಯ: ಸೂರ್ಯಮಿತ್ರಬ್ರತಿಪತಿಗವಧಿಜ್ಞಾನವೊಟ್ಟಿರ್ದುದಂ ಕಂಡು ಧರಿತ್ರೀಸ್ತುತ್ಯಂ . . . ತುಷ್ಟನಾದಂ ಪರಮಜಿನಮತಾಂಭೋಜಿನೀ ರಾಜಹಂಸಂ (ಸುಕುಮಾ. ೩-೪೮). [ ಸಂ. ]

**ಧರಿಯಿಸು** 'ಧರಿಸು' ನೋ.

**ಧರಿಸು, ಧರಿಯಿಸು** (ಕ್ರಿ). ೧. (ಕೈಯಲ್ಲಿ) ಹಿಡಿ; ತೆಗೆದುಕೊಳ್ಳು: ಹರಕೆಯನು ಕೈಕೊಂಡಮಿತವಿಕ್ರಮನಿಷುಧಿಚಾಪಕೃಪಾಣವನು ಧರಿಸಿ ಗಮಿಸಿದನು ಮುನಿಯೊಡನೆ (ತೊರರಾ. ೧-೯-೪೩). ೨. ಹೊರು; ನಿರ್ವಹಿಸು; ಹೊತ್ತುಕೊಳ್ಳು: ರುಂಪರಿ ರುಜೆಗೆ ಸರಿದಳು ಧರಿಸಲಾಱದೆ ವೈರಿವಾಹಿನಿಯು (ತೊರರಾ. ೬-೧೭-೧೩). ೩. ತಾಳು; ತಳೆ: ತನುವಿನಲ್ಲಿ ಸುಖವ ಧರಿಸಿಕೊಂಡಡೆ ಆ ತನುವಿಂಗೆ ಕೊಱತೆ ನೋಡಾ (ಅವಚಂ. ೯೬-೪೩೨); ಮಧುಸೇಕಮನಾದರಿಸದೆ ವಕುಳಂ ಮುಕುಳಮನರಲಂ ಧರಿಸಿದುದು ಕೊಂಬುಕೊಂಬಿನೊಳೆಲ್ಲಂ (ಚಂದ್ರಪ್ರ. ೨-೯೨); ಶಿರದೊಳು ಧರಿಸಿಯವರ ನಿಜಾಜ್ಞೆಯಂ (ಬಸಪು. ೪೮-೨೦); ಬಂಜೆ ಗರ್ಭವ ಧರಿಸುವಳು ಧನಧಾನ್ಯಗೋಧನಸಂಪದಾದಿಗಳು ಭರಿತವಾಗಿಹವಾ ಮುನಿಪನಿಹ ಧರಣಿಯಲಿ (ತೊರರಾ. ೧-೫-೬೧); ಪರಮಪವಿತ್ರೋದಕವ ಹಸ್ತದೊಳಾಂತಾ ಶಿರದೊಳು ಧರಿಸಿಕೊಂಡು (ಮೋಹತ. ೬-೪೪); ನಕ್ಷತ್ರಮಯ ರಾತ್ರಿಯಂ ಧರಿಸಿ ಸೂರ್ಯನ ಶೋಭಿಪಂತೆ . . . ಪೊಳೆದುದು ಕಣ್ಗೆ ಮಂಗಳದಮರ ಮೂರ್ತಿ (ಶ್ರೀರಾಮಾ. ೧೩-೩೪೩). ೪. (ಉಡುಪು, ಆಭರಣ ಮೊದಲಾದುವನ್ನು) ತೊಡು; ಹಾಕಿಕೊಳ್ಳು; ಧಾರಣೆಮಾಡು: ಏಕ ಮುಖದ ರುದ್ರಾಕ್ಷಿಯ ಒಂದನೆ ಪಶ್ಚಿಮದಲ್ಲಿ ಧರಿಸುವುದಯ್ಯ (ಅದವ. ೧೮-೪೫); ನೆನೆದು ಭೋಂಕೆನಲೆದ್ದು ರುದ್ರಾಕ್ಷಿಯಂ ಧರಿಸಿ (ಸಂಬಿರ. ೧೯-೭೨); ಮಗುವು ವೇಷವ ಧರಿಸಿ ದೂರದಲಗಲಿ ಹೋಗಲು ತನ್ನ ಚಿತ್ತಕೆ ಥಗೆಯ ಡಾವರವಾಯ್ತು (ಕುವ್ಯಾದ್ರೋ. ೬-೬೪); ಧರಿಸಿದನು ನವರತ್ನಖಚಿತಾಭರಣ ದಿವ್ಯಾಂಬರ ಸುಮಾಲ್ಯಸುಗಂಧನಿಕರವನು (ನಳಚ. ೨-೧೧); ಮಿಱುಪ ಕಿರೀಟವುಂಟದನಂದು ಧರಿಸಿತಿಲ್ಲಱಿ ಮನದೊಂದು ಲೀಲೆಯೊಳು (ಭರಚ. ೧-೩೪); ಜಡೆಯೊಡೆಯೊಳು ಗಂಗೆಯ ಮುಡಿದಿಡಂಡೆಯಾಗಿ ಧರಿಸಿದ . . . ಚೆನ್ನ ನಂಜುಂಡನಡಿದಾವರೆಗೆಱಗುವೆನು (ಕಂಸವಿ. ೧-೭); ಇನ್ನಿಬ್ಬರು ಒಳ್ಳೇ ಉಡುಪು ಧರಿಸಿದ್ದ ಗಂಡಸರು ಬಂದಿದ್ದರು (ಚಂಗಾಳ್ಕ. ೪೭೫). ೫. ತಿಲಕ, ವಿಭೂತಿ, ಗಂಧ, ಮುದ್ರೆ, ನಾಮ ಮುಂತಾದುವುಗಳನ್ನು ಹಚ್ಚಿಕೊಳ್ಳು, - ಇಟ್ಟುಕೊಳ್ಳು: ನಿಮ್ಮ ಲಾಂಛನವ ಧರಿಸಿಪ್ಪ ಉದರಪೋಷಕ ನಾನಯ್ಯಾ (ಬಸವ. ೩೪೧); ಭಸಿತ ರುದ್ರಾಕ್ಷಾದಿ ಮುದ್ರೆಗಳ ನಿರ್ಮಲತೆಯಿಂ ಧರಿಸಿ ಚರಿಸುತ ಚರ್ಮ ದುರ್ಮುದ್ರೆಗಳನೇ . . . ಧರಿಸುವುದುಚಿತವೇ ಹೇಳು (ಬಸಪು. ೩-೪೮). ೬. ತೊಡಿಸು; ಮುಂಡಿಸು; ತೊಟ್ಟುಕೊಳ್ಳುವಂತೆ ಮಾಡು: ಕೆಲರು ಹೂವಿನ ಹಾಸಿಗೆಯ ಕೋಮಲೆಗೆ ಸಮೆದರು ಕೆಲರು ಚಿಗುರಿನ ತೊಡವ ಧರಿಸಿದರು[ಪಾಠಾಂ. ನಾನಾ ವಿವಿಧ ಶೈತ್ಯೋಪಚಾರವ ರಚಿಸಿ] (ನಳಚ. ೦-೪೧). ೭. ಪಡೆ; ಹೊಂದು: ಕೋಲು ಧರಿಸಿದವೆಱಕೆಗಳನೆನೆ ಚಾಳಿಸಿತು ಪಡೆ (ಕುವ್ಯಾದ್ರೋ. ೧-೭೦); ರಕ್ತಜಲದಲಿ ಕರುಳ ಹೂಮಾಲೆಯಲಿ ವೀರರಣಾಭಿಷೇಕವನು ಧರಿಸಿ . . . ಮನದುಬ್ಬರದಲಿಟ್ಟಾಡಿದರೆ ದಿಟ ಕೃತಕೃತ್ಯ ತಾನೆಂದ (ಕುವ್ಯಾಕ. ೮-೩೯); ಲತಾಂಗಿಯ ದಕ್ಷಿಣಹಸ್ತಂ ಧರಿಸಿತು ಸಿರಿದುಂ ಚೆಲ್ವಿಕೆಯಾ (ಜಯುಕಾ. ೨-೧೪); ವಿಶೇಷವಮಾಂದ್ಯವನಾಂತು ದೊಳ್ಳಡೆ ಬಳಲ್ಕೆಯಂ ಧರಿಸಿ (ಜಬಪು. ೪-೧೧); ಶರ್ಮ ಎಂಬ ಉಪಪದವನ್ನು ಬ್ರಾಹ್ಮಣರಲ್ಲದೆ ಅನ್ಯರು ಧರಿಸುತ್ತಿದ್ದಿಲ್ಲವೆಂಬುದನ್ನು ಜ್ಞಾಪಕವಿಡಬೇಕು (ಕರ್ಣಾಆ. ೭). ೮. (ವ್ರತ ಮೊದಲಾದುವನ್ನು) ಕೈಕೊಳ್ಳು; ಆಚರಿಸು: ಪಾಶುಪತ ಸುವ್ರತವ ಧರಿಸಿದುದಾ ಸುಪರ್ವಸ್ತೋಮ (ಕುವ್ಯಾಕ. ೬-೩೩). ೯. ತಡೆ; ತಡೆಹಿಡಿ; ನಿರೋಧಿಸು; ನಿಲ್ಲಿಸು: ವರನದಿಗಳಲಿ ಮುಳುಗಿ ಮೂಗಿನ ಬೆರಳಲೂರ್ಧ್ವಶ್ವಾಸಪವನನ ಧರಿಸಿ ಕಾಲತ್ರಯಜಪಾನುಷ್ಠಾನಹೋಮದಲಿ . . . ನೇಮಾಚರಿಸುವುದು (ಕುವ್ಯಾಕ. ೧೧-೬೦). ೩, ೯: ಶಶಿರವಿಗಳ ನೆಱಿ ಧರಿಸಿ ಸಂತೋಷದೆ ಪಶುಪತಿಯಂತೆ ರಾಜಿಸುತ . . . ರಂಜಿಸಿದುದಾ ಬನ ದೊರೆಯಂತೆ (ಕಂಸವಿ. ೨-೩೦). ೧೦. ಒಳಕೊಳ್ಳು; ಒಳಗೊಂಡಿರು: ಕ್ಷೀರಾಬ್ಧಿ ಹರಿಯ ಧರಿಸಿಕೊಂಡಿಹುದು (ಕಂಸವಿ. ೫-೪೨). ೧೧. ಆಧಾರವಾಗು; ಆಸರೆಯಾಗು: ಅಗ್ನಿ ವಾಯುವ ಧರಿಸಿ ವಾಯು ಆಕಾಶವ ಧರಿಸಿ ಆಕಾಶ ಅಪ್ಪುವ ಧರಿಸಿ (ಮೋಲಿಮಾ. ೨-೨). **ಧರಿಯಿಸು**: ೨. ಪಲ ರಾದರಿಸಿದ ಧರಣೀಭರಮಂ ಧರಿಯಿಸಿದಂ ಪ್ರತಿಮನಂಬನಪ್ರತಿಮಬಲಂ (ಪಂಪಭಾ. ೧-೬೪); ಧರಿಯಿಸಿ ಮಂದರಮಂ ಕೂರ್ಮರೂಪದಿಂ (ಜಗವಿ. ೮-೮೩); ಕಡು ಸೊಗಯಿಸುವೀ ಕುಸುಮದ ಫಲಮೇ ಪೊಡವಿಯನೆಲ್ಲಮ ನೊಂದೇ ತೋಳೊಳ್ ಗಡಣದಿ ಧರಿಯಿಪುದಪ್ಪುದು ನಿಶ್ಚಯಂ (ಜಯುಕಾ. ೨-೪೬). ೩. ಪರಮಜಿನೇಂದ್ರವಾಣಿಯೆ ಸರಸ್ವತಿ ಬೇಱದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು (ಆದಿಪು. ೧-೯); ಹರಿ ಪರ್ಜನ್ಯಧನುವಂ ಸಂಹರಿಸಲೊಡಂ ಜೈತ್ರಚಾಪಮಂ ಜಿನಚಂದ್ರಂ ಧರಿಯಿಸಿದಂ (ಶಾಂತಿಪು. ೧೦-೧೩೫); ಮಲಮಂ ಧರಿಯಿಸಿ ನಾಣಂ ತೊಲಗಿಸಿ ನಿರ್ಗ್ರಂಥಮಿರ್ದು (ಧರ್ಮಾಮೃ. ೧-೧೧೩); ಎಟ್ಟಿ ಸುಟ್ಟುರೆಯವೊಲಪ್ಪದರ್ಥಮನುಪಾರ್ಜಿಸುವಲ್ಲಿ ನಿಜಾಭಿಮಾನಮಂ ಧರಿಯಿಸುವಲ್ಲಿ ಚಾದಗೆವೊಲಪ್ಪುದು ತಪ್ಪದಮಾತ್ಮಲಕ್ಷಣಂ (ಕಾವ್ಯಸಾ. ೪೨೨). ೪. ಧರಿಯಿಸಿ ಮಣಿಮೇಖಲೆಯಂ ಕರಮೆಸೆದತ್ತಲಘು ಜಘನೆಯತಿಘನಜಘನಂ (ಜಗವಿ. ೧೦-೧೦೩). ೭. ಆನಿದಱಂದಮಂ ಧರಿಯಿಸಲ್ವೇಟ್ಕೆಂದು ನೀಲೋತ್ಪಲಪ್ರಿಯನಿನ್ನುಂ ನೆಱೆ ಪೆರ್ಚಿತು

ಕ್ಕ್ಯುಯುತುಂ ತಾನಿರ್ಪನೆಭ್ಯಾಸದಿಂ (ಧರ್ಮಾಮೃ. ೩-೧೭೭) ; ಇರೆ ನವಪದ್ಮ ರಾಗಚಷಕಂ ನಿಜಹಸ್ತತಳಾಗ್ರದೊಳ್ ಮನೋಹರಿ . . . ನವೋದಿತಚಂದ್ರ ಬಿಂಬಮುಂ ಧರಿಯಿಸಿದಿಂದ್ರುದಿಗ್ವನಿತೆಯಂತೆಸೆದಳ್ ಮಧುಪಾನಗೋಷ್ಠಿ ಯೊಳ್ (ಜಗವಿ. ೧೬-೧೧೫) ; ಇರದಧಿಕಭ್ರಾಂತತೆಯಂ ಧರಿಯಿಸಿ ಕಡುಗಂದಿ ಜಿನುಗುವಾಬಿಡಿಯಾದಂತಿರೆ ತೋರ್ಪೀ ಪರಿಜನವುಂ ಹರಿಸದೊಳೊಡಗೂಡಿ ತೋಜು ಚರಣಾಂಬುಜಮಂ (ಚಂದ್ರಪು. ೫-೧೫) ; ಈ ಚಿತ್ರದ ಪಡಿರೂಪಂ ಧರಿಯಿಸಿದಾ ಚೆನ್ನಿಗನಲ್ಲದೆಯುಳಿದವರೆನ್ನಯ ಸೋದರರು (ಜಯುಕಾ. ೩-೭೫) ; ಅರಸುಗುಣಂಗಳನತಿಭೀಕರಕಾಂತಂಗಳನವಂ ವಿಯಚ್ಚರರಾಜಂ ಧರಿಯಿಸಿದಂ ಜಳನಿಧಿ ಜಳಚರಚಯಮುಮಂ ರತ್ನಚಯಮುಮಮಂ ಧರಿಯಿಪ ವೊಲ್ (ಕಾವ್ಯಾವ. ೨೪೯). ೮. ನಿಷ್ಠುರವಪ್ಪ ಬಾಹ್ಯತಪಮಂ ಧರಿಯಿಸಿದಂ ಸೂರ್ಪನಂದು ಮಹಾ ಯಾ ತ ಪ ಮಂ (ಧರ್ಮಾಮೃ. ೬-೩೭) ; ಸಮಸ್ತ ಬುಧವರ್ಮದದಿ ಧರಿಯಿಸುವ ರತ್ನತ್ರಯಸುರತ್ನಗಿರಿ ಪೆರ್ಮೆವಡೆದುದು (ಸಾಳ್ವಭಾ. ೧-೭). ೧೦. ಧರಿಯಿಸೆ ತನ್ನಾಜ್ಞೆ ವಸುಂಧರೆಯಂ ಧರೆ ತಾಳ್ದಿ ತನ್ನ ವಿಶದಯಶೋವಲ್ಲರಿಯಂ ವಿದ್ವದ್ಗೋಷ್ಠೀನಿರತಂ ಸುಖಸಂಕಥಾ ವಿನೋದದೊಳಿರ್ದಂ (ಮಲ್ಲಿಪು. ೩-೨೫) ; ಶರಧಿಯ ನದಿಗಳ್ ಧರಿಯಿಸ ಲಾರ್ತಪುವೆ ತೊಱೆಯ ನೀರಂ ಕೆರೆಗಳ್ ಧರಿಯಿಸಲಾರ್ಕುಮೆ ಭಾವಿ ಗಳರಿದೆನಿಸುವ ತೊಱೆಯ ನೀರ್ಗಳಂ ತಾಳ್ದು ಗುಮೇ (ಧರ್ಮಾಮೃ. ೩-೧೩೪). ೧೨. ಪಾಲಿಸು ; ರಕ್ಷಿಸು : ಧರೆಯಂ ಸದ್ಧರ್ಮಾಶ್ರಯು ಧಡೆಯಂ . . . ಆಕಲ್ಪಂ ನೀಂ ಧರಿಯಿಸೆ ತಪಮದೆ (ಚಂದ್ರಪು. ೯-೪೧).

[ ಧರಣ$_1$ + -ಇಸು$_3$ ]

**ಧರುಮ** 'ಧರ್ಮ$_1$' ನೋ.

**ಧರೆ** (ನಾ). ೧. ನೆಲ ; ಭೂಮಿ ; ಭೂಲೋಕ : "ತಿರೆ ಪೊಡವಿ ರತ್ನವಸಿಟಿಳ್ ಧರೆಯೆಳೆಯೆಂಬೆನ್ನಲಿರದೆ ಧಾರಿಣಿಯಕ್ಕುಂ" (ಕವಿಕಂ. ೪೭) ; ಧರೆ ರತ್ನಗರ್ಭಮಾದುದು ಸುರರೆಲ್ಲಂ ಹರ್ಷಗರ್ಭರಾದರ್ (ಆದಿಪು. ೭-೫೬) ; ಧರೆ ಕಂಪಂಗೊಳ್ವಿನಂ ಪೆರ್ವಡೆಗಳೆರಡುವೋರೊಂದಱೊಳ್ ತಾಗೆ ತೂರ್ಯಸ್ವರಮುಂ . . . ಕ್ಷುಭಿತಜಲನಿಧಿಧ್ವಾನದಂತಾದುದೆತ್ತಂ (ಪಂಪಾಭಾ. ೧೩-೩೭) ; ಮಱೆಯಿಲ್ಲದೆ ಪೊಯ್ಯಾರಿಂ ಬೆಳೆಗುಮೆ ಧರೆ (ಧರ್ಮಾಮೃ. ೧-೪೯) ; ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ (ಬಸವ. ೩೯೮) ; ಧರೆಯಂ ಮೂಱಡಿ ಮಾಡಿದ ಹರಿ ಬರ್ಪೊಡೆ ತಡವೆ (ಜಗವಿ. ೧೧-೩೨) ; ಧರೆ ಬೀಜಂಗಳ ನುಂಗೆ ಬೇಲಿ ಹೊಲನೆಲ್ಲಂ ಮೇದೊಡಂ (ಸೋಮೇಶ. ೨೯) ; ಕರೆವ ಕಹಳೆಗಳ ಮಹಾರವದೊಳಗೆ ಧರೆ ನಡುಗೆ (ನಂಬಿರ. ೭-೧೫೦) ; ಧರೆಯಂ ಸ್ಥಿರೆಯೆನಿಸಿದಂ . . . ಅದೇಂ ಸಮರ್ಥನೊ ಪದ್ಮಂ (ಪುಷ್ಪಪು. ೩-೨) ; ಧರೆಯೊಳೀ ಹೊತ್ತಿನಲಿ ನಿನಗೆ . . . ಅದಾವುದು ಕೊಱತೆ (ಕುಮ್ಮಾಉ. ೩-೭೮). ೨. ಭೂಲೋಕದ ಜನ ; ಜನತೆ : ಧರೆ ಬಣ್ಣಿಸೆ ಸೈಯುಡಿಯೊಳ್ . . . ಹರಿಹರಭವನಂಗಳನಚ್ಚರಿಯೆನೆ ಮಾಡಿಸಿದಂ (ಪಂಚತಂ. ೧೧-೧೫) ; ಧರೆ ಕೊಂಡು ಕೊನೆದು ಬಣ್ಣಿಪುದರಿದೆ (ಧರ್ಮಾಮೃ. ೪-೨೬೫) ; ಧರೆಗಾಚಾರಮನಱೆಪಲ್ ಗುರುವಿಂ ಕೃತವಿದ್ಯನಾದ ಕೃಷ್ಣಂ ಗುರುವಂ ಗುರುದಕ್ಷಿಣೆಯಂ ಬೇಡಿನೆ (ಜಗವಿ. ೬-೧೪) ; ಧರೆಯೊಳಗೆ ಕಡು ಮೂರ್ಖರಿವರಿಬ್ಬರು ಕಣಾ ದುರಿಯೋಧನನು ದಶಶಿರನು (ಕುಮ್ಮಾಉ. ೩-೧೭). ೩. ರಾಜ್ಯ : ಧರೆಯಂ ಕುಡುವಂದೆನಗಂ ಗುರು ತನಗಂ ರಾಜ ನಾಮಮಂ ಕೊಟ್ಟೊಡೆ ನೋಡಿರೆ ತನಗೀಗಳ್ ರಾಜಾಧಿರಾಜನೆಂದಿಟ್ಟು ಕೊಂಡನಡಕಿಲ್ವಿಸರಂ (ಆದಿಪು. ೧೪-೭೪) ; ಕುರುಪತಿಯಂ ವಿಷ್ಣು ಬೇಡಿದಂ ಧರೆಯಾರೆಯಂ (ಶಬ್ದ. ೬೪ ಪ್ರಯೋ) ; ಸಕಲ ಧರೆಯ ಜನವೈತಹುದು ಗಡ (ನಿಭಾಗ. ೧೧-೩೪-೧೯). ೪. ಮಣ್ಣು ; ಧೂಳು : ಬೆಂದ ಮಡಕೆ ಮರಳಿ ಧರೆಯ ಕೂಡಬಲ್ಲುದೆ (ಸಿದ್ಧೇವ. ೨೧೨-೬೨೧). ೫. ಭೂದೇವಿ : ರವೆ ಧರೆಯರಿಂದಲಾಲಿಂಗಿತ್ವದಿ ಕಮಲಜಾದಿಗಳಿಂದ ತುತಿಸಿಕೊಳ್ಳುತ ಹೃದಯ ಕಮಲದೊಳಗಿರುವ ಶ್ರೀ ವಿ ಜ ಯ ವಿ ಠ ಲ ನ ಕಂಡೆ (ವಿದಾಕೃ. ೫೭-೫). ೬. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : "ಶಶಾಂಕ ಸೋಮಂ . . . ವಸುಧಾತಳಮಾ ಸಿತಕರ ರಸೆ ಧರೆ ಇಳೆ ರೂಪವೈಕಮೊಂದಱ ನಾಮಂ" (ವ್ಯವಹಾ. ೯-೧) ; ಗಿರಿ ಗಿಣೆ ದಿವಿಗಿರಿ ಗುಣಿದಿವಿ ಗಿರಿ ಗುಣನಿಕರಂ ಪುರಗಣಿತಂ ಧರೆ ಧರೆ ಧರೆ ಧರೆ ಧರೆ ಧರೆ ಧರೆ ಧರೆ ಧರೆಯಂ ಪರಿಗಣಿತಂ (ಭಾಸ್ಕರ. ೪೪-೩). ೭. [ಛಂದ] ಅಕ್ಷರ ಗಣಗಳಲ್ಲಿ ಒಂದು ; ಮಗಣ ( – – – ) : ಆದಿಯ ಮಧ್ಯಾಂತದೆ ಗುರುವಾದೊಡೆ ಶಶಿ ಸೂರ್ಯ ವಾಯು ಗುರುವಿರೆ ಧರೆ ಮತ್ತಾದಿಯ ಮಧ್ಯಾಂತದೆ ಲಘುವಾದೊಡೆ ಜಲ ವಹ್ನಿ ಗಗನ ಲಘುವಿಂ ನಾಕಂ (ಛಂದೋಂಬು. ೧-೩೭ ಅಡಿಪದ್ಯ) ; ಧರೆ ಜಲ ನಿಶಾಕರಂ ಸುರಪುರಗಣಮುಂ ಶುಭಮೆನಿಕ್ಕುಂ (ಛಂದೋಂಬು. ೧-೪೪).

[ ಸಂ. ಧರಾ ]

**ಧರೆಮೋಜು** (ನಾ). ಪ್ರಪಂಚವೇ ಸಂತೋಷದಿಂದ ತುಂಬಿರುವಂತೆ ತೋರುವಿಕೆ ; ಅತಿಯಾದ ಸಂತೋಷ : ಸರಗೀಯ ಕೊಂಡ್ಹೊಂಗ ಸರದಿತ್ತ ನನ ಮನವು ಸರಿಬಾರದವರು ಇದರೀಗಿ ಬಂದರ ಧರೆಮೋಜಿನ ಮನವು ನೆಲ ನೋಡಿ (ಕನ್ನಜಾ. ೧೧೭). [ ಧರೆ + ಮೋಜು ]

**ಧರ್ತಿ** 'ಧರತಿ' ನೋ.

**ಧರ್ಮ** (ನಾ). ೧. ಜಗತ್ತಿನ ಸ್ಥಿತಿಗತಿಗಳ ದೃಷ್ಟಿಯಿಂದ ದೃಢವಾಗಿ ಹಿಡಿಯಬೇಕಾದಂದ,–ನಿಷ್ಠೆಯಿಂದ ಪಾಲಿಸಬೇಕಾದಂದು ; ವಾಡಿಕೆ ಯಾಗಿ ಬಂದ ವಂತಸಂಬಂಧವಾದ ಅನುಷ್ಠಾನ ; ಕಟ್ಟಳೆ ; ವಿಧಿ ; ಆಚಾರ; ಸಂಪ್ರದಾಯ; ವಿಹಿತವಾದ ಆಚರಣೆ: ಈ ಸಂಸೃತಿಯೊಳ್ ಧರ್ಮಾಧರ್ಮಸ್ಥಿತಿಯೆ ವಲಂ ಸ್ವರ್ಗನರಕಸುಖದುಃಖಕರಂ (ಆದಿಪು. ೫-೭೭) ; ದಯವಿಲ್ಲದ ಧರ್ಮವದೇವುದಯ್ಯಾ . . . ದಯವೇ ಧರ್ಮದ ಮೂಲ ವಯ್ಯಾ (ಬಸವ. ೨೪೭) ; ಧರ್ಮಮನಾದಿಯಿನೊದವಿದ ಕರ್ಮದ ಕೇಡಿಂಗೆ ಮೂಲಂ (ಜೀವಸಂ. ೨೧೩-೧) ; ಧರ್ಮಂ ಧಾರ್ಮಿಕನಿಂದೆ ನಿಲ್ವುದು (ಅನಂಪು. ೩-೭೬) ; ಧರ್ಮದಾಧಾರದಲಿಹುದು ಜಗ ಧರ್ಮವುಳ್ಳನನಾಶ್ರ ಯಿಸುವುದು ಧರ್ಮವೇ ನೂಕುವುದು ಜನ್ಮಾಂತರದ ಪಾತಕವ . . . ಆ ಧರ್ಮವನು ಬಿಟ್ಟಹುದು ಬದುಕಲ್ಲ (ಕುಮ್ಮಾಉ. ೪-೫೯) ; ಧರ್ಮವೆಂದರೆ ಮನುಷ್ಯನು ಇಹಪರದೃಷ್ಟಿಯಿಂದ ಸುಖಕ್ಕಾಗಿ ಮಾಡಬೇಕಾದ ಕೆಲಸಗಳು (ಹಿಂದಸಾ. ೧೪೯). ೨. ಪುಣ್ಯ : "ಧರ್ಮಃ, ಪುಣ್ಯಂ, ವೃಷಃ, ಶ್ರೇಯಃ, ಸುಕೃತಂ–ಈ ೫ ಪುಣ್ಯದ ಪೆಸರ್" (ಹಲಾಯು. ೨೦-೧೨೫) ; ಇದನಾರಾನೊ ಲಿಪ್ಪೋರ[ವ]ರ್ತ್ತ ಧರ್ಮಮಾರಾರಿದಾ ಕೆಡಿಪ್ಪೋರವರ್ತ್ತೆ ಪಾಪ (ಸೌಇಇ. XX, ೯-೨೦ ; ಸು. ೮ನೆಯ ಶತ) ; ಧರ್ಮಕೆ ಕೈಬಾರದೀ ಕಾಲ ಪಾಪಕರ್ಮಕೆ ಮನಸೋಲೋದೀ ಕಲಿಕಾಲ (ಪುರಂದ. ೧-೧೨೦ ಪಲ್ಲವಿ). ೩. ಚತುರ್ವಿಧ ಪುರುಷಾರ್ಥಗಳಲ್ಲಿ ಒಂದು ; ಸದ್ಗತಿಗೆ ಸಾಧನವಾದ ಅನುಷ್ಠಾನ : "ಧರ್ಮಾದಿ ಪುರುಷಾರ್ಥಮಕ್ಕು" (ಮಂಗರಾ. ೭೭-೧೨) ; ಪರಮಸುಖಪದ ಶ್ರೀಧರ್ಮಕಾಮಾರ್ಥಮೋಕ್ಷಸ್ಥಿರವಿಷಯ ವಿಶೇಷಾಖ್ಯಾನವಿಖ್ಯಾತತತ್ತ್ವಂ (ಕವಿರಾ. ೩-೨೦೦) ; ಧರ್ಮಾರ್ಥಕಾಮಮುಮೆಂಬಿವು ಧರ್ಮಾರ್ಥಿಜನಕ್ಕೆ ನೆಱೆದ ನೆರ್ಮಂತವಱೊಳ್ ಧರ್ಮಂ ಪ್ರಧಾನಮರ್ಥಂ ಧರ್ಮಾಂಘ್ರಿಪಫಲಮದರ್ಕೆ ರಸಮದು ಕಾಮಂ (ಆದಿಪು. ೧೧-೫೦) ; ಅರ್ಥದಿಂ ಧರ್ಮವನು ಧರ್ಮ ದಿನರ್ಥವನು ಧರ್ಮಾರ್ಥವೆರಡನು ವ್ಯರ್ಥಕಾಮದಲಳಿಯಲೇ ರಾಜ್ಯಾಭಿ ಲಾಷೆಯಲಿ (ಕುಮ್ಮಾಸ. ೧-೨೪) ; ಧರ್ಮ ಅರ್ಥ ಕಾಮ ಮೋಕ್ಷವೆಂಬ ಚತುರ್ವಿಧಫಲಪದಂಗಳ ನಾನೊಲ್ಲೆನಯ್ಯಾ (ಅಬಂಡೀ. ೧೬೦-೨೨). ೪. ಕರ್ತವ್ಯ : ಮಕ್ಕಳಿಗೆ ಬುದ್ಧಿ ಹೇಳುವುದು ತಂದೆ ತಾಯಿಗಳ ಧರ್ಮ (ರೂಢಿ). ೫. ಯಮರಾಜ: "ಯಮನರ್ಕಸುತಂ ಧರ್ಮಂ . . . ಅಂತಕಂ ಕೀನಾಶಂ" (ವಸುಕೋ. ೮-೪೧) ; "ಯಮಂ ಧರ್ಮನಂತಕಂ . . . ಕೀನಾಶಂ ಕೃತಾಂತನಕ್ಕುಂ" (ಮಂಗರಾ. ೧೫-೧೧) ; ಧರ್ಮನಂ ಮೊದಲಿಸಲ್

ಪೋದಂ ಪುತ್ರನನಱಸಲ್ಪೋದನೆ ಯಮಪುರಕೆ ಮುಕ್ತಬಾಣಂ ದ್ರೋಣಂ (ಗದಾಯು. ೩-೨೫); ಸುರಪತಿ ದಹನಂ ಧರ್ಮಂ ನಿರುತಿ ವರುಣನನಿಳನ್ನೈಳ ಬಿಳನೀಶ ಮಹೀಶ್ವರನಿಂದುವೆಂಬ ದಿಕ್ಪಾಳರುಮಂ ದಶದಿಶೆಯೊಳಿರಿಸಿ ಪರಿಕರಸಹಿತಂ (ಚಂದ್ರಪ್ರ. ೧೨-೧೧೩). 'ಧರ್ಮಜ' ಪರಾ. **೬. ಪಾಂಡವರಲ್ಲಿ ಹಿರಿಯ ; ಯುಧಿಷ್ಠಿರ. ೨, ೬ :** ಸುತಧರ್ಮ್ಮಂ ರಿಪುಭೀಮನರ್ಜ್ಜುನಯಶಂ ವಿದ್ವಿಷ್ಟಭೂಭೃದ್ಯಮಂ ... ಭಾಸ್ವತ್ಸುಮಿತ್ರೋದ್ಭವಂ ಕ್ಷಿತಿಪಾಳಂ ನರಸಿಂಹದೇವಂ (ಎಕ. V, ಬೇಲೂರು. ೧೯೩-೪೩ ; 1161). **೭. ಗುಣ ; ಸ್ವಭಾವ ; ಲಕ್ಷಣ :** "ಧರ್ಮಃ, ಸ್ವಭಾವಃ, ಆತ್ಮಾ – ಈ ೩ ಸ್ವಭಾವಂ" (ಹಲಾಯು. ೧೭೯-೯೭) ; "ಧರ್ಮಂ ಗುಣಸ್ವಭಾವವಾಚಿ" (ವಸ್ತುಕೋ. ೧೭೯-೭೧) ; ಬಗೆಯಲ್ಕೆ ಧರ್ಮದಿಂ ಕ್ಷತ್ರಧರ್ಮವ ವರ್ಗೆ ವಿರುದ್ಧಂ (ಗದಾಯು. ೩-೩೫) ; ಪೆಱವರ ಧರ್ಮಂಗಳನೇತೆಱದಿಂದುಂ ತಂದು ಪೆಱವರೊಳ್ ಪತ್ತಿಸಿ ಕಣ್ದೆಱೆಯೆ ಚತುರೋಕ್ತಿ ಕೃತಿಯೊಳ್ ನೆಱೆದಿರೆ ಪೇಳ್ವುದು ಸಮಾಧಿಯೆನೆ ಪೆಸರ್ವಡೆಗುಂ (ಕಾವ್ಯಾವ. ೩೧೯) ; ಶೈಶವದಲ್ಲಿ . . . ಉಷಾ ಬೆಳೆಯುತ್ತಿದ್ದಳು. ಬೆಳೆಯುವದೇ ಅವಳ ಧರ್ಮವಾಗಿತ್ತು (ಸಮುಜೀ. ೧೨೩೩). **೮. ಬಿಲ್ಲು ; ಚಾಪ :** ಸ್ಮರವೈರಿಧರ್ಮವಕ್ಷೋಜೆ ಸ್ಮರಹರಕಾಂಡಚತುರಾವತಾರಮಂಥ್ಯೇ (ಪ್ರಾಭರಾ. ೬-೨೨). **೧, ೮ : ಗುಣ** ಮೇಱಿದ ಧರ್ಮಂ ಮಾರ್ಗಣತತಿಯಂ ಲಕ್ಷ್ಯಸಿದ್ಧಿಯೊಳ್ ಕೂಡಿ ನೃಪಾಗ್ರಣಿಯನಿಹಸೌಖ್ಯದಿಂದಮೆ ತಣಿಪುದದೆ ಪರಮಸುಖೈಕಕಾರಣಮಲ್ತೇ (ಪುಷ್ಪಪು. ೩-೧೧). 'ದಶಧರ್ಮಧಾರಿ' ಪರಾ. **೯. ನ್ಯಾಯ ; ನೀತಿ :** ಧರ್ಮವೆಂಬುದು ಪರಮಪದವಾ ಧರ್ಮವನು ಬಿಟ್ಟಿಹುದು ಬದುಕಲ್ಲರಸ ಕೇಳೆಂದ (ಕುಮ್ಯಾಉ. ೪-೫೯) ; ಸತಿ ಸಹಜಾತ ಸುತರುಗಳ ತವಿಸುವುದು ತಾ ಧರ್ಮವಲ್ಲ (ತೊರರಾ. ೪-೨-೩೦) ; ಧರ್ಮವೇ ಜಯವೆಂಬ ದಿವ್ಯಮಂತ್ರ ಮರ್ಮವನ್ನಱಿತು ಮಾಡಲು ಬೇಕು ತಂತ್ರ (ಪುರಂದ. ೨-೭೫ ಪಲ್ಲವಿ) ; ಆತನೇ ಪಾಲಿಸುವನಿವನ ಭೂತಳಮಂ ನಿಜಾತಿಶಯಧರ್ಮದಿಂದೆಳ್ಳನಿತು ದೋಷಮಿಲ್ಲದೆ (ಜೈಮಿಭಾ. ೧೭-೧೩). **೧೦. ದತ್ತಿ ; ದಾನ ; ಉಚಿತವಾಗಿ ಕೊಟ್ಟುದು :** ಈ ಧರ್ಮಮಂ ಕಿಡಿಸಿದಾತ ವಾರಣಾಸಿಯೊಳು ಕುರುಕ್ಷೇತ್ರದೊಳು ಸಾಸಿರ್ವ್ವ x x ರ ಸಾಸಿರ್ವ್ವ ಕವಿಲೆಯು ಕೊನ್ದ ಪಂಚಮಹಾಪಾತಕ[ವಕ್ಕು] (ಸಾಇಇ. XX, ೩೨-೪೪ ; 1045) ; ಈ ಧರ್ಮ್ಮವ ನೋನ್ತಿರ್ ಕಿಡಿಸಿದವರಧೋಗತಿಗಿಳಿವರು (ಸಾಇಇ. XX, ೧೭೫-೬೨ ; 1190) ; ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ ಮೊಳ ಹಾಕಿ ನೋಡಿದ (ಗಾದೆ) ; ಕೆಟ್ಟು ನಂಟರ ಸೇರಬೇಡ, ಕೊಟ್ಟ ಧರ್ಮ ತಿರುಗಿ ಕೇಳಬೇಡ (ಗಾದೆ). **೧೧. ನಿಷ್ಠೆ ; ಶ್ರದ್ಧೆ ; ಭಕ್ತಿ :** (ಕ). **೧೨. ಮತ ; ದರ್ಶನ :** ಜೈನಧರ್ಮವು ವಿಶ್ವದ ಅತ್ಯಂತ ಪ್ರಾಚೀನಧರ್ಮಗಳಲ್ಲೊಂದಾಗಿದೆ (ಭಾರದ. ೧೬೮) ; ಇತರ ಪಂಥದವರು 'ಮತ', 'ದರ್ಶನ', 'ಸಿದ್ಧಾಂತ' ಎಂದು ಯಾವುದನ್ನು ಹೆಸರಿಸುವರೋ ಅದನ್ನು ಬುದ್ಧನು "ಧರ್ಮ" ಎಂದು ಕರೆದನು (ಭಾರದ. ೧೯೧). **೧೩. ದಯೆ ; ಕರುಣೆ; ಕೃಪೆ :** ಬೆಂದ ಮನವೆನ್ನ ಮತಿಗೆಡಿಸಿ ಕಾಡಿತ್ತು ಎನ್ನ ತಂದೆ ಕೂಡಲಸಂಗಮದೇವಾ ಇವ ಮಾಣಿಸು ನಿಮ್ಮ ಧರ್ಮ (ಬಸವ. ೪೯) ; ದೇವರ ಧರ್ಮದೊಳೊಂದು ಬೇಂಟೆ ದೊರೆಕೊಂಡರೆ ಕೂಡಲಸಂಗಮದೇವಂಗರ್ಪಿತವ ಮಾಡುವೆ (ಬಸವ. ೯೦೭) ; ನೀನೆ ಬಂದಾಳ್ದಾಡೆ ಯುಕ್ತಿ ಕೊಂಬುದೆ ದೇವ ನೀನೇ ಬಂದಾಳೆನಲು ಧರ್ಮವುಂಟೇ ದೇವ (ನಂಬಿರ. ೭-೧೫೨). **೧೪. ರೀತಿ; ಕ್ರಮ :** ಶೆಟ್ಟರು ವೃತ್ತಿಯಿಂದ ವ್ಯಾಪಾರಿ. ಅದೇ ಧರ್ಮದಿಂದ ಸಾಕಷ್ಟು ಸಂಪಾದಿಸಿದ್ದರು (ಹೊಸಕ್ಷಿ. ೩೩). **೧೫. ಒಂದು ಬಗೆಯ ತೆರಿಗೆ :** ಒಂದು ಹೊಲದ ಮೇಲೆ ಹಾಕಬಹುದಾಗಿದ್ದ ತೆರಿಗೆಗಳಿವು–ಸಿದ್ಧಾಯ, ಅರಸರ ಸೇಸೆ, ಕಾಣಿಕೆ, ದಾಯ, ಧರ್ಮ ಇತ್ಯಾದಿಗಳು (ಕಶಾಅ. ೪೦೫). **೧೬. ನ್ಯಾಯವಾದ ಬಡ್ಡಿ :** ಧನವೆಲ್ಲ ಮಲ್ಲಿಕಾರ್ಜುನನ ಧರ್ಮವ್ಯಯದದೆನೆ ಧರ್ಮದೊಳಗೆಮ್ಮ ಭಾಗೆಯರ್ಥದಲಿ ಬೆಳೆವನಿತು ಧರ್ಮವನಾದೊಡಂ ಕರುಣಿಸೆಮಗೆ (ಸಿದ್ಧರಾ. ೮-೫) ; ಒಡಲಿಲ್ಲದುಸುರುಂಟೆ ನಿಮಗೆನ್ನ ಮೇಲೆ ಬಪ್ಪೊಡವೆಯಿಲ್ಲೆನೆ ಧರ್ಮವುಂಟೆ ಕೆಡುವೊಡವೆಯಂ ಕೊಡೆ ಕಂಡು ಕೆಡದ ಧರ್ಮವ ಕೊಡುವೆನೇ ಎನಲು (ಸಿದ್ಧರಾ. ೮-೬) ; ಈತ ಕದ್ದು ತಂದೆಮ್ಮರ್ಥದೊಳಗೆಮ್ಮ ಭಾಗೆಯಂ ಕೊಡು ಕೊಡದೊಡದಱ ಬೆಂಬಳಿಯ ಧರ್ಮವನಾದೊಡಂ ಕೊಡೆಂದೆನೆ ಕೊಡಂ (ಸಿದ್ಧರಾ. ೮-೮). **೧೭. ಬಿಟ್ಟಿ ; ಪುಕ್ಕಟೆ :** ನೀನೇನು ಧರ್ಮಕ್ಕೆ ಕೆಲಸ ಮಾಡುತ್ತಿಲ್ಲ. ಸಂಬಳ ತೆಗೆದುಕೊಂಡ ಮೇಲೆ ಸರಿಯಾಗಿ ಕೆಲಸ ಮಾಡು (ರೂಢಿ). **೧೮. ಯಜ್ಞ; ಯಾಗ. ೧೯. ಯಜ್ಞದಲ್ಲಿ ಸೋಮಪಾನ ಮಾಡುವವನು. ೨೦. ಶಿವ. ೨೧. ಅರಸ ; ದೊರೆ. ೨೨. ಉತ್ಪಾತ. ೨೩. ವಿಷ ; ಗರಳ :** "ಗಿರಿಶನೊಳು ಕಾಲನೊಳು ಪುಣ್ಯದೊಳು ಬಿಲ್ಲಿನೊಳು ಗರಳದೊಳ್ ಕ್ರತುವಿನೊಳು ಧರ್ಮಮಕ್ಕು" (ಮಂಗರಾ. ೧೪೮-೪೪) ; "ಅರಸುತ್ಪಾತಂ ಬಿಲು ವಿಷ ಹರ ಪುಣ್ಯಂ ಯಜ್ಞಮಹಿಂಸೆ ಯಮ ಚಾರಿತ್ರಂ ನಿರುತದಿ ದಶ ಧರ್ಮಾಖ್ಯಂ" (ನಾನಾಕಂ. ೧೧೯). **೨೪. [ಕಾವ್ಯಮೀ] ಉಪಮಾಲಂಕಾರದಲ್ಲಿ ಎರಡು ವಸ್ತುಗಳ ನಡುವೆ ಇರುವ ಸಾಧಾರಣ ಧರ್ಮ,– ಸಾಮಾನ್ಯ ಧರ್ಮ :** ಉಪಮೇಯಮುಮುಪಮಾನಮುಮುಪಮಾವಾಚಕಮುಮಂತೆ ಧರ್ಮಮುಮಿವರಲ್ಲಪವರ್ತಿಸೊಂದೆರಡುಮೂರ್ಚಪಲಾಕ್ಷಿಯಿದೆಂಟು ಬಗೆಯ ಲುಪ್ತೋಪಮೆಗಳ್ (ನರಜ. ೧೦-೩). **೨೫. [ಜ್ಯೋತಿ] ಜನ್ಮಲಗ್ನದಿಂದ ಒಂಬತ್ತನೆಯ ಸ್ಥಾನ :** ಸಿತನಿಂ ಧರ್ಮ ಧನಾರಿ ಪಂಚಮ ದಶಾಯುಸ್ಥಾನದೊಳ್ ಮಂದನಿಂ ತ್ರಿತಯಾರಾತಿ ಸುತಾಂತ್ಯದೊಳ್ . . . ಇಂದ್ರಮಂತ್ರಿ ಶುಭದಂ ಶೇಷಂಗಳೊಳ್ ನಿಂದಿತಂ (ಜಾತತಿ. ೧೦-೧೧) ; ದನುಜೇಜ್ಯಂ ಧರ್ಮ ಕರ್ಮ ತ್ರಿ ತನು ಧನ ಚತುಷ್ಪಂಚ ರಂಧ್ರಾಯದೊಳ್ . . . ಲೇಸೆನಿಕ್ಕುಂ (ಜಾತತಿ. ೧೦-೧೨). 'ಧರ್ಮನಿವಾಸ' ಪರಾ. **೨೬. = ಧರ್ಮಧ್ಯಾನ :** ಆರ್ತ ರೌದ್ರ ಧರ್ಮ ಶುಕ್ಲಾಭಿಧಾನಧ್ಯಾನಚತುಷ್ಟಯಮುಮಂ (ಸುಕುಮಾ. ೩-೩೯ ವ) ; ಪರಿಹರಿಸಿ ಚಿತ್ತದಿಂದಾರ್ತರೌದ್ರಮುಂ ಧರ್ಮ ಶುಕ್ಲಮೆಂಬೀಯೆರಡುಂ ಸ್ಥಿರಮಾಗೆ ದಿವ್ಯಮುನಿಪಂ ನಿರಂತರಧ್ಯಾನಯೋಗತತ್ಪರನಾದಂ (ಮಲ್ಲಿಪು. ೧೧-೪೪). 'ಧ್ಯಾನಚತುಷ್ಟಯ' ಪರಾ. **೨೭. ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಹದಿನೈದನೆಯವನು ; ಧರ್ಮನಾಥ :** ವಿಮಳ ಅನಂತ ಧರ್ಮ . . . ವರ್ಧಮಾನರೆಂಬಿಪ್ಪತ್ತುನಾಲ್ವರ್ ತೀರ್ಥಕರರ್ (ಚಾವುಂಪು. ೪೦೨). **೨೮. = ಧರ್ಮದ್ರವ್ಯ :** ಚೇತನಾರಹಿತಮಜೀವತತ್ತ್ವಂ ಅದು ಗತಿಸ್ಥಿತ್ಯವಗಾಹಶರೀರಾದಿ ವರ್ತನಾಹೇತು ಧರ್ಮಾಧರ್ಮಾಕಾಶ ಪುದ್ಗಲ ಕಾಲಭೇದದಿಂ ಪಂಚವಿಧಂ (ಆದಿಪು. ೧೦-೬೩ ವ) ; ಲೋಕಾಕಾಶದಲ್ಲಿ ಧರ್ಮ ಎಂಬುವ ಒಂದು ದ್ರವ್ಯವಿದೆ. ಈ ದ್ರವ್ಯವು ಜಗತ್ತಿನಲ್ಲಿ ಹವೆಯು ಇರುವಂತೆಯೇ ಇರುತ್ತದೆ . . . ಇದು ಆತ್ಮನ ಗಮನಕ್ಕೆ ಸಹಾಯಮಾಡುತ್ತದೆ (ಜೈನಪ. ೩೪೦). **೨೯. ದ್ವಾದಶಾನುಪ್ರೇಕ್ಷೆಗಳಲ್ಲಿ ಒಂದು ; ಧರ್ಮವನ್ನು ಕುರಿತ ಚಿಂತನೆ :** ಅಧ್ರುವಮಶರಣಮೇಕತ್ವಮನ್ಯತ್ವಮಶುಚಿತ್ವಂ ಸಂಸಾರಂ ಲೋಕಮಾಸ್ರವಂ ಸಂವರೆ ನಿರ್ಜರೆ ಬೋಧಿದುರ್ಲಭ ಧರ್ಮಸ್ವಾಖ್ಯಾತಮೆಂಬುವ ಪನ್ನೆರಡುಮನುಪ್ರೇಕ್ಷೆಯಂ ಕ್ರಮದಿನನುಸ್ಮರಿಸುತ್ತುಮಿರ್ಪನ್ನೆಗಂ (ಅಜಿಪು. ೬-೬೧ ವ). 'ದ್ವಾದಶಾನುಪ್ರೇಕ್ಷೆ' ಪರಾ. **೩೦. [ದ್ವೈತ] ನಲವತ್ತು ವಿಧವಾದ ಗುಣಗಳಲ್ಲಿ ಒಂದು:** ರೂಪ, ರಸ, ಗಂಧ, ಸ್ಪರ್ಶ . . . ಧರ್ಮ, ಅಧರ್ಮ, ಸಂಸ್ಕಾರ . . . ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಸಾ. ೨೭೫). **೩೧. [ಯೋಗ] ಮೂರು ಬಗೆಯ ಚಿತ್ತ ಪರಿಣಾಮಂಗಳಲ್ಲಿ ಒಂದು :** ನಿರೋಧ, ಸಮಾಧಿ, ಏಕಾಗ್ರತಾ ಎಂಬ ಮೂರು ವಿಧವಾದ ಚಿತ್ತಸ್ಥಿತಿಗಳು ಧರ್ಮ ಲಕ್ಷಣ ಅವಸ್ಥಾ ಎಂಬ ಸೂಕ್ಷ್ಮ

ಸ್ಥೂಲರೂಪವಾದ ಚಿತ್ತಪರಿಣಾಮಗಳೆನ್ನಲ್ಪಡುವುವು (ಹಿಂದಸಾ. ೧೦೩). P ಧರ್ಮವನ್ನು ಬೇರೆ ಬೇರೆ ವಿಧಗಳಾಗಿ ವಿಂಗಡಿಸುತ್ತಾರೆ. "ಧರ್ಮ-೨: (ಅ) ಪ್ರವೃತ್ತಿಧರ್ಮ, ನಿವೃತ್ತಿಧರ್ಮ (ಮಹಾಭಾ. ಶಾಂತಿ. ೨೪೦-೬, ಅನುಶಾಸನ. ೨೧೧). (ಆ) ವಿದಿತ (ವ್ಯಕ್ತ), ಅವಿದಿತ (ಅವ್ಯಕ್ತ) (ಕೇನ. ೨-೪ ಭಾ). (ಇ) ಪಶಂಧರ್ಮ, ಪತಿಧರ್ಮ (ಕ್ರಿಯಾಸಾರ. ಉಪದೇಶ. ೩). ಧರ್ಮ-೩: (ಅ) ದ್ವಿಜಾತಿಯ: ಅಧ್ಯಯನ, ಇಜ್ಯಾ, ದಾನ (ಗೌಧಸೂ. ೧೦-೧; ೮-೯ಭಾ; ಭಾಗ. ೧೧-೩೯; ಕಾಠಕ. ೨೮). (ಆ) ಬ್ರಾಹ್ಮಣರಿಗೆ ವಿಶೇಷವಾಗಿರುವ: ಪ್ರವಚನ (ಅಧ್ಯಾಪನ), ಯಾಜನ, (ಶುದ್ಧನಾದವನಿಂದ) ಪ್ರತಿಗ್ರಹ (ಗೌಧಸೂ. ೧೦-೨; ೭-೧ ಭಾ.; ಧರ್ಮಸಿಂ. ಪೂ. ೩-೨೪೦). ಅಥವಾ- ಯಾಜನ. ಅಧ್ಯಾಪನ, ಶುದ್ಧ ಪ್ರತಿಗ್ರಹ (ಮನು. ೧೦-೭೬-೪೧೧) (ಇ) ನಿತ್ಯಕರ್ಮ, ನೈಮಿತ್ತಿಕಕರ್ಮ, ಕಾಮ್ಯಕರ್ಮ (ವ್ಯಾಸಸ್ಮೃತಿ, ೩-೧; ಛಾಂದೋಗ್ಯ. ೧೧೬೫). (ಈ) ಕಾಯಿಕ, ವಾಚಿಕ, ಮಾನಸಿಕ (ಚರಕ. ೧೧-೫೪). (ಉ) ಸತ್ಯ, ತಪಸ್ಸು, ಅಧ್ಯಯನಾಧ್ಯಾಪನ (ತೈತ್ತಿರೀ. ೩.೨೩). (ಊ) ಯಜ್ಞ, ದಾನ, ತಪಸ್ಸು (ಗೀತಾಭಾ. ೧೮-೩). (ಋ) ದೈವ, ಪಿತ್ರ್ಯ, ಮಾನುಷ (ಬೃಹದಾ. I, ೫೬). (ೠ) ಹೀನ, ಮಧ್ಯಮ, ಉತ್ತಮ (ಚರಕ. ೨೨೭). (ಎ) ಫಲಭೋಗದ ದೃಷ್ಟಿಯಿಂದ: ಸಂಚಿತ, ಆರಬ್ಧ, ಆಗಾಮಿ (ತೈತ್ತಿರೀ. ೪). (ಏ) ಸಾತ್ತ್ವಿಕ, ರಾಜಸ, ತಾಮಸ (ಗೀತಾಭಾ. II ೧೮-೨೩-೨೫). (ಐ) ಶಸ್ತ್ರಚಿಕಿತ್ಸೆಯ: ಪೂರ್ವಕರ್ಮ, ಪ್ರಧಾನ ಕರ್ಮ, ಪಶ್ಚಾತ್ ಕರ್ಮ (ಸುಶ್ರುತ). (ಒ) ಪೂಜಾರಾಧ್ಯ, ಪುಣ್ಯಯಜ್ಞ, ದೃಢಚರ್ಯಾ (ಆದಿಪು. ೧೫-೧೬ ವ). (ಓ) ಶಸ್ತ್ರಕರ್ಮ, ಕ್ಷಾರಕರ್ಮ, ಅಗ್ನಿಕರ್ಮ (ಚರಕ. II ೧೪-೩೫). (ಔ) ಕರ್ಮ, ಅಕರ್ಮ, ವಿಕರ್ಮ (ಗೀತಾಭಾ. ೨೫೨). (ಅಂ) ಮೃದಂಗವಾದನದ: ತ್ವಂಕ್ಯ, ಆಲಿಂಗ್ಯ, ಊರ್ಧ್ವಕ (ವಿಚಿಂ. ೪-೩೯೪). (ಅಃ) ಪರಸ್ವಾನಭಿದ್ಯತೆ, ಸರ್ವಸತ್ತ್ವಸೌಹಾರ್ದ, ಕರ್ಮಫಲಶ್ರದ್ಧೆ (ಮಹಾಭಾ. ಅನುಶಾಸನ. ೧೩-೫). (ಕ) ಪರಸ್ವಗ್ರಹಣ, ಅಶಾಸ್ತ್ರೀಯಹಿಂಸೆ, ಪರದಾರಗ್ರಹಣ (ಮನು. ೧೨-೭). ಧರ್ಮ-೫: (ಅ) ವರ್ಣಧರ್ಮ, ಆಶ್ರಮ-, ಗುಣ-, ವರ್ಣಾಶ್ರಮ-, ನಿಮಿತ್ತ- (ಗೌಧಸೂ. ೧-೧-ಭಾ). (ಆ) ಅಹಿಂಸಾ, ಸತ್ಯ, ಅಕ್ರೋಧ, ಶೌಚ, ಇಂದ್ರಿಯಸಂಯಮ (ಮನು - ಗೌಧಸೂ. ೧೦-೧ ಭಾ). (ಇ) ಸತ್ಯ, ಅಕ್ರೋಧ, ದಾನ, ಅಹಿಂಸಾ, ಪ್ರಜನನ (ವಸಿಷ್ಠ - ಗೌಧಸೂ. ೧೦.೫೧ ಭಾ). (ಈ) ಶಬ್ದಪ್ರವೃತ್ತಿಗೆ ನಿಮಿತ್ತವಾದವು: ಜಾತಿ, ದ್ರವ್ಯ, ಗುಣ, ಕ್ರಿಯೆ, ಸಂಬಂಧ. (ಉ) ಯೋಗಾಭ್ಯಾಸದ: ಪ್ರಾಣಾಯಾಮ, ಧ್ಯಾನ, ಪ್ರತ್ಯಾಹಾರ, ಧಾರಣಾ, ಸ್ಮರಣ (ವಾಯುಪು. I-೧೦-೭೧). ಧರ್ಮ-೮: (ಅ) ಕ್ಷಮೆ, ಸತ್ಯ, ದಯೆ, ದಾನ, ಶೌಚ, ಇಂದ್ರಿಯನಿಗ್ರಹ, ದೇವಪೂಜೆ, ಹವನ, ಸಂತೋಷ, ಸ್ತೇಯವರ್ಜನ (ಧರ್ಮಸಿಂ. ೧-೮). (ಆ) ಧರ್ಮದ (i) ಇಜ್ಯಾ, ಅಧ್ಯಯನ, ದಾನ, ತಪಸ್ಸು, ಸತ್ಯ, ಕ್ಷಮಾ, ದಮ, ಅಲೋಭ (ಮಹಾಭಾ. ವನ. ೨-೭೫). (ii) ತಪ, ಸತ್ಯ, ಕ್ಷಮಾ, ದಯ, ಶೌಚ, ದಾನ, ಯೋಗ, ಬ್ರಹ್ಮಚರ್ಯ (ವಾಮನ. ಅ. ೨೨-ಸಂ. ೧೫೧). ಧರ್ಮ-೯: ಸಾರ್ವವರ್ಣಿಕ ಧರ್ಮಗಳು: ಅಕ್ರೋಧ, ಸತ್ಯವಚನ, ಸಂವಿಭಾಗ, ಕ್ಷಮಾ, ಸ್ವಪತ್ನಿಯಲ್ಲಿ ಪ್ರಜನನ, ಶೌಚ, ಅದ್ರೋಹ, ಆರ್ಜವ, ಭೃತ್ಯಭರಣ (ಮಹಾಭಾ. ಶಾಂತಿ. ೬೦-೭, ೮). ಧರ್ಮ-೧೦: (ಅ) ಆತ್ಮನ: ಉತ್ತಮ ಕ್ಷಮೆ, ಮಾರ್ದವ, ಆರ್ಜವ, ಶೌಚ, ಸತ್ಯ, ಸಂಯಮಂ, ತಪಸ್ಸು, ತ್ಯಾಗ, ಆಕಿಂಚನ್ಯ, ಬ್ರಹ್ಮಚರ್ಯ (ತತ್ತ್ವಪ್ರ. ೯-೩.೨೫, ೩.೨೬; ಪೂರ್ವಪು. ೧೧-೧೦೩, ೧೦೪). (ಆ) ಭೈಕ್ಷ್ಯ, ಅಸ್ತೇಯಂ, ಶೌಚ, ಅಪ್ರಮಾದ, ಅವ್ಯವಾಯಂ, ಭೂತದಯೆ, ಕ್ಷಮಾ, ಅಕ್ರೋಧ, ಗುರುಶುಶ್ರೂಷಾ, ಸತ್ಯ (ವಾಯುಪು. I-೮-೧೭೬, ೧೭೭)" (ಶ್ರೀವತ್ಸ. ೨೦೮).

**ಧರ್ಮ ಕೊಡು**=ದಾನವಮಾಡು: ಕಷ್ಟದಲ್ಲಿರುವವರಿಗೆ ಧರ್ಮ ಕೊಡಲು ಹಿಂಜರಿಯಬಾರದು (ರೂಢಿ). **ಧರ್ಮದ ಬಡ್ಡಿ** = ನ್ಯಾಯವಾದ ಬಡ್ಡಿ: ಧರ್ಮದ ಬಡ್ಡಿಯ ಮೇಲೆ ಹಣ ಕೊಡುವ ವಿಷಯದಲ್ಲಂತೂ ಯಾವ ಸಂದೇಹವೂ ಇರಲಾರದು (ಯೋಧಪು. ೩೦). **ಧರ್ಮದ ಮದುವೆ** = ತೆರ ಇಲ್ಲದೆ ಹೆಣ್ಣನ್ನು ತಂದುಕೊಳ್ಳುವುದು. **ಧರ್ಮದ ಮೇರು**= ಧರ್ಮದ ಆಚರಣೆಯಲ್ಲಿ ಮೇರುವಿನ ಉನ್ನತಿಯನ್ನು ಪಡೆದವನು; ಒಂದು ಬಿರುದು: [ಗು]ಣಸಂಪನ್ನಂ ಸ್ಥಿರನುಡಿವಾತಂ ಧರ್ಮ್ಮದ ಮೇರು ಸೋಮೇಸ್ವರ[ದಾ]ಸಿ ಪಾ × × × ವಯ್ಯಂ (ಸೌಇಇ. XX, ೨೮-೩೮; 1034); ವಿಪ್ರಕುಳಪ್ರದೀಪರೀಶ್ವರಚರಣಾಬ್ಜಭೃಂಗರಧಿಕಸ್ವರ್ಲೆ ಧರ್ಮ್ಮದ ಮೇರುಗಳ್ (ಸೌಇಇ. XX, ೫೭-೦೩; 1084). **ಧರ್ಮ ನೀಡು** = ಧರ್ಮ ಕೊಡು: ಪ್ರವಾಹಪರಿಹಾರನಿಧಿಗೆ ಆ ಸಂಸ್ಥೆಯು ಉದಾರವಾಗಿ ಧರ್ಮ ನೀಡಿತು (ರೂಢಿ). **ಧರ್ಮ ಬೇಡು**= ದಾನ ಬೇಡು: ಕೆಲವರು ಸೋಮಾರಿಗಳಾಗಿ ಧರ್ಮ ಬೇಡುವುದನ್ನೇ ಅಭ್ಯಾಸ ಮಾಡಿಕೊಂಡು ಬಿಡುತ್ತಾರೆ (ರೂಢಿ). **ಧರ್ಮ ಮಾಡು** = ೧. ಸತ್ಕರ್ಮವನ್ನು ಮಾಡು; ಪುಣ್ಯಕಾರ್ಯ ಮಾಡು: ಧರ್ಮ ಮಾಡುತ್ತೇನೆಂದು ಸುಳ್ಳು ಹೇಳಿ ಧನಾರ್ಜನೆ ಮಾಡುತ್ತಾನೆ (ಜಾತಕ. ೧೭-೧೦ ಟೀಕೆ). ೨. ದಾನ ಮಾಡು: ಇಂಥಾ ಜನ್ಮಾ ನೋಡೋ ಧರ್ಮಾ ಮಾಡೊ (ಬಾಸಿಗ. ೬೭-೩); ಧರ್ಮ ಮಾಡಿದರೂ ಮರ್ಮ ತಿಳಿಯಬೇಕು (ಗಾದೆ). **ಧರ್ಮ ಹಾಕು** = ಧರ್ಮ ಕೊಡು: ಆಗರ್ಭಶ್ರೀಮಂತರಾದವರು ಹಿಂದಿನ ಕಾಲದಲ್ಲಿ ಪ್ರತಿನಿತ್ಯ ಧರ್ಮ ಹಾಕುವುದಕ್ಕಾಗಿಯೇ ಸ್ವಲ್ಪ ದ್ರವ್ಯವನ್ನು ಮೀಸಲಾಗಿಡುತ್ತಿದ್ದರು (ರೂಢಿ). [ ಸಂ. ]

**ಧರ್ಮಏತ್ತ** (ನಾ). = ಧರ್ಮೇತ (?): ಶ್ರೀ[ಮ][ದಾ]ಹವಮಲ್ಲದೇವರಲ್ಲಿ ಮೂನೂಱು ಗದ್ಯಾಣಂ ಧರ್ಮಏತ್ತಜಿಗ್ಗಿಯ್ಯೆ ಪ[ಞ್ಚಾ]ರ ಸಂಪಜವಾಗಿ ಪ್ಪಡೆದಂ ಊರಂ ವಿದ್ವಜ್ಜನಕ್ಕಾದರದರೊಳ್ ಭರಣಂಗೆಯ್ದು (ಸೌಇಇ. XI-i, ೪೫-೪೭; 980). [P ಇದು 'ಧರ್ಮಏತ' ಎಂಬುದರ ಅಪಲಿಖಿತ]

**ಧರ್ಮಏತ** 'ಧರ್ಮೇತ' ನೋ.

**ಧರ್ಮಂಗೆಯ್** (ಕ್ರಿ). ೧. ಪುಣ್ಯಕಾರ್ಯವನ್ನು ಮಾಡು: ಧರ್ಮಂಗೆಯ್ಯಲ್ ಬಯಸುಗುಮೊರ್ಮೆ ಜನಾಗಮಮನೋಜೆಯಿಂ ಕೇಳ್ದ ನರಂ (ಸಮುಪ. ೩-೩೦); ಧರ್ಮಂಗೆಯ್ವನ ಫಲಮನಿಲ್ಲಿಯ ಮನ್ನಣೆಯುಮಂ ಮಹಿಮೆಯುಮನಱಿಪುತಿರ್ಪುದನೊಳ್ಕಿತ್ತು ಬಗೆದು ಭಾವಿಸಿ ನೋಟ್ಪುದು (ಬಂಹರಿ. ೧೦-೧೨ ವ). ೨. ದಾನಮಾಡು: ಬಸವಯ್ಯಂ ರುದ್ರಹೋಮಂಗೆಯ್ದು ಸಹಸ್ರಭೋಜನಮಾಡಿ ಬಲಿಯಂ ಕಳೆದು ಧರ್ಮ್ಮಂಗೆಯ್ದು (ಎಕ. IV, ಹೆಗ್ಗಡ. ೦೬-೭; 1021). [ ಧರ್ಮ + ಕೆಯ್$_1$ ]

**ಧರ್ಮಂಬೆಱು** (ಕ್ರಿ). ಧರ್ಮದೀಕ್ಷೆಯನ್ನು ಪಡೆ: ಆ ಮುನಿನಾಥಂ ಜನಮಾರ್ಗಮನೀಯೆ . . . ಶುಕ್ರನುಮಾ ವಿನುತ ಬೃಹಸ್ಪತಿಯುಮಂತೆ ಧರ್ಮಂಬೆತ್ತರ್ (ನೇಮಿಪು. ೫-೨೭). [ ಧರ್ಮ + ಪೆಱು$_1$ ]

**ಧರ್ಮಂಬೇಟ್** (ಕ್ರಿ). ನ್ಯಾಯವಾದುದನ್ನು ಹೇಳು; ಧರ್ಮಸಮ್ಮತವಾದುದನ್ನು ತಿಳಿಸು: ಕರ್ಮಮುಳ್ಳಂ ಮನುಷ್ಯಭವಂಬಡೆದು ಧರ್ಮಮಂ ಮಱೆದು ನೆಗಟ್ವೊಡಂ . . . ಧರ್ಮಂಬೇಟಲ್ ಬಲ್ಲವರುಮೇಗೆಯ್ವರ್ (ಜೀವಸಂ. ೭೨-೨೪ವ). [ ಧರ್ಮ + ಪೇಟ್ ]

**ಧರ್ಮಕಂಟಕ**(ನಾ). ೧. ಧರ್ಮಕ್ಕೆ ಉಂಟಾಗುವ ತೊಂದರೆ,-ವಿಪತ್ತು. ೨. ಧರ್ಮಕ್ಕೆ ಹಾನಿಯನ್ನುಂಟುಮಾಡುವವನು : ಧರಣಿಯ ಲಿ ಮುರವೈರಿಯಿರ್ದಡೆ ನಿರುತ ತಮಗೀ ವಿಧಿಯೆ ದುಷ್ಪರ ಶಿರವನುಟಿ ಚಂಡಾಡದಿಹನೇ ಧರ್ಮಕಂಟಕರ (ನಿಭಾಗ. ೧-೧೩-೧೧).
[ ಧರ್ಮ + ಕಂಟಕ ]

**ಧರ್ಮಕಥನ** (ನಾ). ಧರ್ಮವನ್ನು ಕುರಿತು ಹೇಳುವುದು,-ವ್ಯಾಖ್ಯಾನ ಮಾಡುವುದು; ಧರ್ಮಬೋಧೆ : ಮುನಿಪತಿ ವಾಚನೆಯಿಂ ಪೃಚ್ಛನೆಯಿನನುಪ್ರೇಕ್ಷೆಯಿಂ . . . ಧರ್ಮಕಥನದಿಂದಂ ವಿನುತಸ್ವಾಧ್ಯಾಯವೆಂಬ ತಪಮಂ ತಳೆದಂ (ಸುಕುಮಾ. ೪-೧೮).
[ ಧರ್ಮ + ಕಥನ ]

**ಧರ್ಮಕಥೆ** (ನಾ). ಧಾರ್ಮಿಕ ವ್ಯವಹಾರವನ್ನು ತಿಳಿಸುವ ಕಥೆ : ಇತ್ತ ಮೇಘರಥಂ . . . ಧರ್ಮಕಥೆಯಂ ಪಲರ್ಗೆ ಪೇಟುತ್ತಿರ್ಪನ್ನೆಗಂ (ಶಾವುಂಪು. ೩೦೮) ; ವೇಸುವದಣ್ಣನಾಯಕಂ . . . ಧರ್ಮ್ಮಕಥಾಪ್ರಸಂಗದಿಂ ಧರ್ಮ್ಮಕಾರ್ಯ್ಯತತ್ಪರನಾಗಿ (ಸೌಇಇ. XX, ೧೩೭-೩೬ ; 1161).
[ ಧರ್ಮ + ಕಥೆ ]

**ಧರ್ಮಕರ** (ನಾ). ೧. ಧರ್ಮವನ್ನು ಮಾಡುವವನು. ೨. ಬಿಲ್ಲನ್ನು ಹಿಡಿದಿರುವವನು. ೧, ೨ : ಕನಕನಗೇಂದ್ರಧರ್ಮಕರನಾಗಿಯುಮುನ್ನತ ಧರ್ಮಹಂತೃ . . . ಎಂದೆನಿಸಿರ್ದನಹೀಂದ್ರಭೂಷಣಂ (ರಾಜಶೇ. ೧೪-೧೪೪).
[ ಸಂ. ]

**ಧರ್ಮಕರಕ** (ನಾ). ಭಿಕ್ಷುಗಳು ಉಪಯೋಗಿಸುವ ನೀರಿನ ಪಾತ್ರೆ : ಸ್ಥವಿರನು [ಒಂದು] ಧರ್ಮಕರಕದಲ್ಲಿ ನೀರು ಹಿಡಿದುಕೊಂಡು (ಬುದ್ಧ ಪ. ಮಿಲಿಂದ. ೯೩). [ ಧರ್ಮ + ಕರಕ ]

**ಧರ್ಮಕರ್ತ** (ನಾ). ದೇವಸ್ಥಾನದ ಖರ್ಚಿನ ಮೇಲ್ವಿಚಾರಕ; ಧರ್ಮದರ್ಶಿ ; ಧರ್ಮಾಧಿಕಾರಿ : (ಶ). [ ಧರ್ಮ + ಕರ್ತ ]

**ಧರ್ಮಕರ್ಮ**(ನಾ). ೧. ಧಾರ್ಮಿಕ ಕಾರ್ಯ ; ಯಜ್ಞ, ಯಾಗ, ಪೂಜೆ ಮೊದಲಾದ ಕರ್ಮ : ಜನ್ಮಕುಲಧನಜಾತಿವರ್ಣಪ್ರಭೇದವಂ ಗಣಿಸದೆಯೆ ಮನದ ಹೃದಯದ ಧರ್ಮಕರ್ಮವನೆ ಹಿಡಿದು ಮನ್ನಣೆಮಾಡಿ (ಶ್ರೀರಾಮಾ. ೭-೧೯೧) ; ವೇದಗಳೂ ವೇದೋದಿತ ಧರ್ಮಕರ್ಮಗಳೂ ಅಳಿಸಿ ಹೋಗುವ ಕಲಿಯುಗದಲ್ಲಿ ಸ್ಮೃತಿಗಳನ್ನು ಕೇಳುವರಾರು ? (ಭಾರದ. ೭೮). ೨. ಪುಣ್ಯ ಕರ್ಮ ; ಪುಣ್ಯಸಂಪಾದನೆಯ ಕಾರ್ಯ.

ಧರ್ಮಕರ್ಮ ಸಂಯೋಗ = ೧. ಪುಣ್ಯಕರ್ಮ ಫಲಿಸುವಿಕೆ ; ಅದೃಷ್ಟ ಕೂಡಿಬರುವಿಕೆ : ಧರ್ಮಕರ್ಮ ಸಂಯೋಗದಿಂದ ಆದೇ ವೇಳೆಗೆ ಅವರೂ ಅಲ್ಲಿಗೆ ಬಂದುದರಿಂದ ನನಗೆ ಅವರ ದರ್ಶನ ಆಯಿತು (ರೂಢಿ). ೨. ಆಕಸ್ಮಿಕ. [ ಧರ್ಮ + ಕರ್ಮ ]

**ಧರ್ಮಕಹಳೆ** 'ಧರ್ಮಗಹಳೆ' ನೋ.

**ಧರ್ಮಕಾಯ** (ನಾ). ಧರ್ಮರೂಪವಾದ ದೇಹವುಳ್ಳವನು ; ಧರ್ಮವೇ ಶರೀರವಾಗಿರುವವನು : ಬುದ್ಧನ ಪಾರ್ಥಿವವಾದ ಕಾಯ ಕಣ್ಮರೆಯಾದರೂ ಆತ 'ಧರ್ಮಕಾಯ'ನಾಗಿ ಶಾಶ್ವತನಾಗಿದ್ದಾನೆ (ಭಾರದ. ೧೯೩).
[ ಧರ್ಮ + ಕಾಯ ]

**ಧರ್ಮಕಾರ್ಯ** (ನಾ). ೧. ಧರ್ಮ ಅಥವಾ ಮತಸಂಬಂಧವಾದ ಆಚರಣೆ ; ಸದಾಚಾರ. ೨. ಸತ್ಕರ್ಮ ; ಪರೋಪಕಾರದ ಕೆಲಸ ; ಪುಣ್ಯಕಾರ್ಯ : ಆದಿಭಟ್ಟಾರಕವ್ಯತಿಕರಸ್ಥಿತಿಯನಾನಂದನೆಂಬಂ ಧರ್ಮಕಾರ್ಯನಿಮಿತ್ತಂ ಬಂದಟಿಪಿದೊಡೆ (ಆದಿಪು. ೧೭-೪೯ ವ); ಮೃತ್ಯುಪಾಶದಲ್ಲಿ ಸಿಕ್ಕಿರುವ ಚತುರಂಗಸೇನೆಯನ್ನು ಮೃತ್ಯುವಿನಿಂದ ಬಿಡುಗಡೆ ಮಾಡಿದರೆ ಅದು ಒಂದು ದೊಡ್ಡ ಧರ್ಮಕಾರ್ಯವಾಗುತ್ತದೆ (ವಚಭಾ. ೨೫೦).
[ ಧರ್ಮ + ಕಾರ್ಯ ]

**ಧರ್ಮಕುಮಾರ** (ನಾ). ಯಮಂಧರ್ಮನ ಮಗ ; ಧರ್ಮರಾಯ ; ಯುಧಿಷ್ಠಿರ : ಪಾಂಡವರಾಯ ಧರ್ಮಕುಮಾರ ಗೆಲಿದನು ಕೌರವೇಶ್ವರನ (ಕುಮಾ.ಕ. ೪ ಸೂಜನ). [ ಧರ್ಮ + ಕುಮಾರ ]

**ಧರ್ಮಕೃತ್ಯ** (ನಾ). = ಧರ್ಮಕಾರ್ಯ ೨ : ಭಾಷೆಯನ್ನು ಯಾರೂ ಯಾರ ಉಪಕಾರಕ್ಕೆ ಕಲಿಯುವುದಿಲ್ಲ ; ಅದು ಧರ್ಮಕೃತ್ಯವೂ ಅಲ್ಲ ; ಉಸಿರಾಟದಂತೆ ಅದು ಸ್ವಾಭಾವಿಕವೂ ಅಲ್ಲ (ವಿಚಾಮಂ. ೧೮).
[ ಧರ್ಮ + ಕೃತ್ಯ₂ ]

**ಧರ್ಮಕ್ಷೇತ್ರ** (ನಾ). ೧. ಧರ್ಮವು ಬೆಳೆಯಲು ಯೋಗ್ಯವಾದ ಕ್ಷೇತ್ರ ; ಪುಣ್ಯಕ್ಷೇತ್ರ ; ಪವಿತ್ರಕ್ಷೇತ್ರ ; ತೀರ್ಥಕ್ಷೇತ್ರ : ಅಂತು ಧರ್ಮಕ್ಷೇತ್ರಂಗಳಂ ವಿಹರಿಸಿ ವಿನೇಯಜನಾಶಯಕುಶೇಶಯಂಗಳನಲರ್ಚುತಂ ಬಂದು (ಆದಿಪು. ೧೦-೬೮ ವ) ; ಅಮರಾನೀಕಮನೇಕಂ ಕ್ರಮಯುಗವಿನ್ಯಸ್ತಮಸ್ತಕಂ ಬಳಸಿರೆ ವಿಶ್ರಮಿಸುವವೋಲ್ ಧರ್ಮಕ್ಷೇತ್ರಮದಾವುದೆನೆ ಸಮವಸರಣ ದೆಡೆಯನೆ ನಡೆದಂ (ಶಾಂತಿಪು. ೧೨-೩೧) ; ಧರ್ಮಕ್ಷೇತ್ರವೇ ಕರ್ಮಕ್ಷೇತ್ರ (ಭಾರದ. ೧೧೧). ೨. ಭಾರತ. ೩. ಧಾರ್ಮಿಕನಾದ ವ್ಯಕ್ತಿ. [ಧರ್ಮ+ಕ್ಷೇತ್ರ]

**ಧರ್ಮಗತಿ** (ನಾ). ೧. ಧರ್ಮದ ಮಾರ್ಗ; ಧರ್ಮದ ಹಾದಿ: ಧರ್ಮಗತಿಯ ತಾರತಮ್ಯವ ತಿಳಿವೊಡೆ ಪೆರ್ಮೆಯ ಬಿಟ್ಟು ಬೇಸಱದೆ ನಿರ್ಮಲಮತಿಯಾಗಿ ನೀ ನಡೆ ಮಿಥಿಲೆಗೆ ಧರ್ಮವ್ಯಾಧನ ಬಳಿಗೆ (ಹದಿಬ. ೩-೪೯). ೨. ನ್ಯಾಯವಾದ ಕ್ರಮ,-ರೀತಿ ; ಸರಿಯಾದ ನಡವಳಿಕೆ : ದುಷ್ಟಬುದ್ಧಿಯ ತಂದೆ ಪ್ರೇಮಮತಿ ಮತಿಗೆಟ್ಟು ಧರ್ಮಗತಿಯಂ ಬಿಟ್ಟು (ಪಂಚತಂ. ೧೭೬-೩೧) ; ಗೆಲವಿದೆಂತುಟೊ ತನ್ನ ಸೋಲಿದು ಬಳಿಕ ಸೋತರೆ ಧರ್ಮಗತಿಯನು ತಿಳಿದು ಹೇಳಲಿ ತತ್ಸಭಾಸದರೆಂದಳಿಂದುಮುಖಿ (ಕುಮಾ.ಸ ೧೪-೮೦). [ ಧರ್ಮ + ಗತಿ ]

**ಧರ್ಮಗರಣಿಗ** (ನಾ). ಧರ್ಮಕಾರ್ಯಕ್ಕೆ ಮಾಡುವ ವ್ಯಯವನ್ನು ಬರೆಯುವವನು; ಧರ್ಮಕಾರ್ಯಗಳ ಲೆಕ್ಕವನ್ನಿಡುವವನು: ಪಾಲಿಪು ಕೊಳ್ಳಿಯುಂ ಅರಮನೆ ತಾಣದ ಭಾಗವುಂಮ್ ಅರ್ಚ್ಚಕಮ್ಮಿನ್ತಿಯೆಕೆ ಕೊಟ್ಟ ಸೇನವರಸರುಂ ಧರ್ಮ್ಮಗರಣಿಗರುಂ (ಎಕ. VI, ಕೊಪ್ಪ. ೩೭-೧೦ ; ಸು. 675?). [ ಧರ್ಮ + <ಕರಣಿಕ ]

**ಧರ್ಮಗಹಳೆ, ಧರ್ಮಕಹಳೆ, ಧರ್ಮಗಾಳೆ** (ನಾ). ಯುದ್ಧದಲ್ಲಿ ಗೆದ್ದವರು ಕರುಣೆಯಿಂದ ಯುದ್ಧವನ್ನು ನಿಲ್ಲಿಸುವ ಸೂಚನೆಗಾಗಿ ಊದಿಸುವ ಕಹಳೆ: ಮುಱಿಯಲಿಱಿದು ಪಾಳೆಯ ಪರಿಯಂತರ ಒಱಲಿಸಿ ಧರ್ಮಗಹಳೆಯ [ಪಾಠಾಂ. ಗಾಳೆಯನು] ನೆಱಿಗಲಿ ರಾಮ ತಿರುಗಿದನೊಯ್ಯನೆ ತನ್ನುಳುವ ಭಟರ ಮೋಹರದೊಳು (ಕುರಾಸಾಂ. ೧೫-೧೨೦) ; ಬರಲು ಬಹುದು . . . ದುರ್ಧರದ ಸಾಹಸರೆಂದು ಅಡ್ಡೈತರೆ ವಿಭೀಷಣ ಧರ್ಮಗಹಳೆಗಳುಲಿಯಲಿತ್ತೆರದಿ (ಜರಾಮಾ. ೨೬೨-೭೪). **ಧರ್ಮಕಹಳೆ :** ತಿಮ್ಮಣ್ಣನಾಯಕನು ಧರ್ಮಕಹಳೆಯನ್ನು ಹಿಡಿಸಿದನು. ಕದನವು ನಿಂತಿತು (ಕವೀರ. ೧೨೨) ; ದಂಡಿನವರ ತಿಳುವಳಿಕೆಗೆ ಕೂಚುನಗಾರಿ, ಧರ್ಮಕಹಳೆ ಮೊದಲಾದ್ದನ್ನು ಉಪಯೋಗಿಸುತ್ತಿದ್ದಂತೆ ತಿಳಿಯಬರುವ ಸಂಗತಿಯು . . . ಸೇನೆಯಲ್ಲಿ ಒಂದು ವಿಧವಾದ ತರಬಿಯತ್ತು ಇತ್ತೆಂದು ತೋರಿಸುವುದು (ಚಿತ್ರಪಾ. ೭ ಉಪೋದ್ಘಾತ). **ಧರ್ಮಗಾಳೆ :** ಪಾಳೆಯ ಪರಿಯಂತ ಮುಱಿಯಲಿಱಿದು ಧರ್ಮಗಾಳೆಯ ದನಿಯನೆಲ್ಲರನು ಕೇಳಿಸುತೊಯ್ಯನೆ ತಿರುಗಿದನಂದು ಕಟ್ಟಾಳು ಕಾಟಣ್ಣ ಲೀಲೆಯೊಳು (ಕುರಾಸಾಂ. ೪೨-೭೮) ; ದಾಳಿಯಂ ಮಾಡಿದುದು ಪರಗಣಂ ಪುರದ ಪೆರ್ಬಾಗಿಲೊಳ್ ಗಾಡದಿಂ ಧರ್ಮಗಾಳೆಯನಿರದೆ ಪಿಡಿಸಿ ತಿರುಗಿತು ವಿಜಯಯುದುತ್ಸವದೊಳು (ಚಬಪು. ೪೪-೪೭) ; ಸಾವಿಗೆ ಭಯಗೊಂಡು ಬೇಡಿಕೊಳ್ಳವರನು ಕಾವೆನು ಭಯ ಬೇಡೆಂದು ತೀವಿದ ಧರ್ಮಗಾಳೆಯ ಹಿಡಿಸಿದನಾ ಭೂವರನಂಜರಾಜೇಂದ್ರ (ಕಂನವಿ. ೧೭-೪೫). 'ದಮ್ಮಗಹಳೆ' ಪರಾ. [ ಧರ್ಮ + ಕಹಳೆ ]

**ಧರ್ಮಗಳ್** (ನಾ). ಉಚಿತವಾಗಿ ಕೊಡುವಕಳ್ಳು; ದಾನವಾಗಿ ಕೊಡುವ ಮದ್ಯ: ನೆರೆದೆಲ್ಲರ್ ಕಳ್ಗುಡಿಯುತ್ತಿರೆ ಬಡವರ್ಗಲ್ಲಿ ಧರ್ಮಗಳ್ಳೆಂದೆಱೆವರ್ (ಧರ್ಮಾಮೃ. ೧-೧೪೪). 'ಧರ್ಮಗಳ್ಗುಡಿ' ಪರಾ. [ ಧರ್ಮ + ಕಳ್$_3$ ]

**ಧರ್ಮಗಳೆ** (ನಾ). (ಲಕುಲೀಶ) ಯತಿಯ ಧರ್ಮದಂಡ; ಯೋಗದಂಡ: ಹರನರಸಂ ಸುರರ್ನ್ನರರದ ಗುಣ್ಡು ಜಟಾವಳಿ ತೊಂಗಲಿನ್ದ್ರ ದುರ್ಧರಗಿರಿ ಸೇತು ಧರ್ಮ್ಮಗಳೆಯಂಕದ ಮುದ್ದಳೆ ಧೂಮ ವೇಳೆ ವಿಸ್ಫುರಿತ ಶಿವಾಗಮಂ ಸುರಿಗೆಯಾಗಿರೆ ಪಾಪವನೊತ್ತಿ ಕುತ್ತಿ ನಿಷ್ಠುರಮಿಱಿದಿನ್ತು ಕೊನ್ದ ತಪದಂಕಮಿದೀ ತಪದಂಕಕಾಱಿನ (ಎಕ. XII, ಶಿರಾ. ೨೯-೬೮ : 943). [ ಧರ್ಮ + ಗಳೆ (<ಗಱೆ) ]

**ಧರ್ಮಗಳ್ಗುಡಿ** (ಕ್ರಿ). ಉಚಿತವಾಗಿ ಕಳ್ಳನ್ನು ಕುಡಿ; ಬಿಟ್ಟಿ ಹೆಂಡ ಕುಡಿ: ಕಳ್ಳೊಳ್ ಬೊಟ್ಟನಿಟ್ಟುಕೊಂಡು ಕೆಲದರ್ಗ್ಗಲ್ಲಂ ಬೊಟ್ಟಿಟ್ಟು ಕಿಱಿಯರ್ಪಿರಿಯರಱಿದು ಪೊಡಮಟ್ಟು ಧರ್ಮಗಳ್ಗುಡಿವರ್ಗ್ಗಲ್ಲಂ ಮಿಸಲ್ಗಳ್ಳನೆಱೆದು (ಪಂಪಭಾ. ೪-೮೭ ವ). [ ಧರ್ಮಗಳ್ + ಕುಡಿ$_1$ ]

**ಧರ್ಮಗಾಮಿ** (ನಾ). ಧರ್ಮಮಾರ್ಗದಲ್ಲಿ ನಡೆಯುವವನು: ಧರ್ಮಗಾಮಿಗಳಾದ ಅವರು ಹೆಚ್ಚುಕಡಮೆಯಾಯಿತೆಂದರೆ ಸುಮ್ಮನಿರುವುದಿಲ್ಲ (ವಚಭಾ. ೨೯). [ ಸಂ. ಧರ್ಮಗಾಮಿನ್ ]

**ಧರ್ಮಗಾಮುಂಡ** (ನಾ). ಒಬ್ಬಾತನ ಹೆಸರು: ಶ್ರೀಪಾಲನಾಮಾಸ್ಯ ಧರ್ಮ್ಮಗಾಮುಣ್ಡ ಪುತ್ರಜಃ ಪ್ರಾತಿಷ್ಟಿಪಚ್ಛಿಲಾಪಟ್ಟಂ ಸ್ಥೇಯಾದಾಚನ್ದ್ರ ತಾರಕಂ (ಸೌಇಇ. XX, ೯-೧೪ ; ಸು. ೩ನೆಯ ಶತ).

[ ಧರ್ಮ + ಗಾಮುಂಡ ]

**ಧರ್ಮಗಾರಿಯ** (ನಾ). = ಧರ್ಮಕಾರ್ಯ೨ : ಯಿಾ ಮರಿಯಾದೆಯಲು ಧರ್ಮ್ಮಗಾರಿಯವನು ನಡಸುವರು (ಎಕ. XI, ಹೊಳಲ್ಕೆ. ೭೫-೨೦ : 1405 ?). [ <ಸಂ. ಧರ್ಮಕಾರ್ಯ ]

**ಧರ್ಮಗಾಳೆ** 'ಧರ್ಮಗಹಳೆ' ನೋ.

**ಧರ್ಮಗುಣ** (ನಾ). ೧. ಸತ್ಕರ್ಮವನ್ನು ಮಾಡುವ ಗುಣ; ಸದ್ಗುಣ: ವನಜದ್ವಿಟ್ಸುತನೊಂದಿದಂದುದಯದೊಳ್ ಪ್ರಾಜ್ಞಂ . . . ಜಾಮಿತ್ರಕೇತನದೊಳ್ ಧರ್ಮಗುಣಾನ್ವಿತಂ (ಜಾತತಿ. ೧೪-೧೦). ೨. ಬಿಲ್ಲಿನ ಹೆದೆ: ಸೊಗಯಿಪ ಧರ್ಮಗುಣಂಗಳನಗಲಿದೊಡಾಕ್ಷಣದೊಳನ್ಯರಂ ಕೊಂದವ ಮಂಬುಗಳೆಂದಡೆ ವಿರಹಿತಧರ್ಮಗುಣರ್ ಪೆಱರಂ ವಿಘಾತಿಸು ವುದದ್ಭುತಮೋ (ಬಾಧಪು. ೧೩-೬೩) ೧, ೨ : ಕೃತವಿದ್ಯರ ಭೀಕರಶರತತಿ ಮೊಳೆತೇವಂತೆ ಸಮೆದು ಬಿಱೆ ಸಂಗರದೊಳ್ ಗತಿಗಂತುಟು ಧರ್ಮಗುಣಚ್ಯುತದಿನಧೋಗತಿಗೆ ಬೀೞ್ವುದೊಂದಚ್ಚರಿಯೇ (ಗದಾಯು. ೪-೩೩) ; ಕಡುವೇಗಿ ಧರ್ಮ್ಮ ಗುಣಮಂ ಬಿಡುವುದು ಖರದೂಷಣಾನ್ವಿತಂ ಮೂದಲೆಯಂ ಪಡೆದುದು ಬಲ್ಲಾಳನ ದಿಟನುಡಿಯೊಳ್ಪಡಿಯಾಗಲಾಪ್ಪುದೇ ರಾಮಶರಂ (ಎಕ. V, ಬೇಲೂರು. ೦೭೫-೯; 1186)

[ ಧರ್ಮ + ಗುಣ ]

**ಧರ್ಮಗುತ್ತಿ** (ನಾ). ಒಂದು ಬಗೆಯ ಬತ್ತ: ಕುಂದದ ಚಂದ್ರಲೇಖೆ . . . ನಿರಂತರಮೊಪ್ಪುವ ಧರ್ಮಗುತ್ತಿಯೆಂಬಂಪದನೇಕ ನಾಮವೆಸೆಗುಂ ಮೃದುಬಂಧುರ ಗಂಧಶಾಲಿಗಳ್ (ಮಲ್ಲಕಾ. ೪-೭೮). [ ? ]

**ಧರ್ಮಗುರು** (ನಾ). ಧರ್ಮಮಾರ್ಗವನ್ನು ಉಪದೇಶಿಸುವ ಗುರು: ಶ್ರೀಪುನ್ನಾಗಸ್ವಾಮಿ × × × ಧರ್ಮ್ಮಗುರುಗಳಲ್ಲಿ ಜವಳಿ[ಗು]ಳವಂ ಮನ್ನಣೆ ಪ್ರತಿಪತ್ತಿವೆರಸು ಬ್ರಹ್ಮಪುರಿಗೆ ಕೇರಿಯು [ಕೆ]ಯ್ಯುಮಂ . . . ಪಡೆದು (ಸೌಇಇ. XI-i, ೬೪-೧೮ ; 1028) ; ಡಾ. ಆಬಟ್‌ರು ಆಗ ಟಿಳಕರ ಧರ್ಮಗುರುವಾಗಿದ್ದರೆಂದು ಹೇಳಲಡ್ಡಿಯಿಲ್ಲ (ಸ್ಮತಿಚಿ. ೧೮೬).

[ ಧರ್ಮ + ಗುರು$_2$ ]

**ಧರ್ಮಗೇಹ** (ನಾ). ೧. ಧರ್ಮಕ್ಕೆ ಆಶ್ರಯವಾದುದು; ಧರ್ಮದ ನೆಲೆ: ನಿಜನೇತ್ರಂ ಲೋಕನೇತ್ರಂ ನಿಜಭರಣಮಿಳಾಚಕ್ರಭಾರಾವಹಂ ಮೇಣ್ ನಿಜವಾಹಂ ಧರ್ಮಗೇಹಂ ನಿಜಧನು ದನುಜಾರಾತಿಜಾತಾಧಿವಾಸಂ . . . ಕುಡುಗೆ ಮಗತುಳ ಶ್ರೇಯಮಂ ಶೈಲಜೇಶಂ (ರಾಜಶೇ. ೧-೨). ೨. [ಜ್ಯೋತಿ] ಜಾತಕನ ಜನ್ಮಲಗ್ನದಿಂದ ಒಂಬತ್ತನೆಯ ಸ್ಥಾನ.

[ ಧರ್ಮ + ಗೇಹ ]

**ಧರ್ಮಗೊಡ್ಡು** (ನಾ). ೧. ಕುಂದಾಚಾರದಲ್ಲಿ ನಿಷ್ಠೆ; ವ್ಯವಹಾರಜ್ಞಾನವಿಲ್ಲದಿರುವಿಕೆ: ಧರ್ಮಗೊಡ್ಡಿನ ಹುಚ್ಚನೀ ನಮ್ಮವನ ಕಯ್ಗೆ ಈ ಶಾಸನವು ದೊರೆಪಟ್ಟು (ಮಂತ್ರಶ. ೧೩-೧೦). ೨. ವ್ಯವಹಾರಜ್ಞಾನವಿಲ್ಲದಿರುವ ವ್ಯಕ್ತಿ; ಕರ್ಮಠ. [ ಧರ್ಮ + ಗೊಡ್ಡು$_1$ ]

**ಧರ್ಮಗೊಳಗ** (ನಾ). ಕಣದ ಧಾನ್ಯರಾಶಿಯಲ್ಲಿ ಧರ್ಮಕ್ಕಾಗಿ ಮೊಟ್ಟಮೊದಲು ತೆಗೆದಿಡುವ ಒಂದು ಕೊಳಗದಷ್ಟು ಧಾನ್ಯ: ಅದಱ ಸೀಮೆ ಮೂಡಲು ವಿರಟನ ದಿಬ್ಬೆ ಬಡಗ ಕೈರವಿಯ ಹಳ್ಳ ತೆಂಕ ಕೆಱೆಯ ಹಳ್ಳಂ ಮೇರೆ ಕೆಱೆಯ ಕೊರಲು ದೇವಗೊಳಗಂ ಧರ್ಮಗೊಳಗವೆರಡು ದೇವರ ನಂದಾದೀವಿಗೆಗೆ ಬಿಟ್ಟ ಗಾಣವೆರಡು (ಎಕ. XI, ಚಳ್ಳಕೆ. ೨೦-೩೭; 1087). 'ದೇವಗೊಳಗ' ಪರಾ. [ ಧರ್ಮ + ಕೊಳಗ$_1$ ]

**ಧರ್ಮಗೋಷ್ಠಿ** (ನಾ). ಧಾರ್ಮಿಕ ಪ್ರವಚನಗಳ ಸಭೆ, – ಕೂಟ: ಮಸೀದಿಗಳಲ್ಲಿ ಕೊರಾನಿನ ಪಠನದ ಮೂಲಕ ನಡೆಯುವ ಸನ್ಮಾರ್ಗಬೋಧನೆಯೂ ಹಿಂದೂದೇವಾಲಯಗಳಲ್ಲಿ ನಡೆಯುವ ಧರ್ಮಗೋಷ್ಠಿಗಳೂ . . . ಉತ್ತಮವೂ ಉದಾತ್ತವೂ ಆದ ಸಮಾಜನಿರ್ಮಾಣಕ್ಕೆ ನೆರವಾಗುತ್ತಿವೆ (ಶಿಕ್ಷದ. ೬೩). [ ಧರ್ಮ + ಗೋಷ್ಠಿ ]

**ಧರ್ಮಗೌರವ** (ನಾ). ಧರ್ಮದ ಬಗೆಗೆ ಇರುವ ಆದರ; ಧರ್ಮವನ್ನು ಕುರಿತ ಶ್ರದ್ಧೆ: ಈ ಕ್ರೂರಜನರ ನಡತೆಯಿಂದ ನಿನ್ನ ಧರ್ಮಗೌರವವೆಲ್ಲಾ ಹೋಗಿ ಬಿಟ್ಟಂತೆ ಕಾಣುತ್ತದೆ (ವಚಭಾ. ೯೯).

[ ಧರ್ಮ + ಗೌರವ ]

**ಧರ್ಮಗ್ರಂಥ** (ನಾ). ಮತದ ಪ್ರಕ್ರಿಯೆ, ತತ್ತ್ವ, ವಿಧಿ ಮುಂತಾದುವುಗಳನ್ನು ವಿವರಿಸುವ ಗ್ರಂಥ; P ವೇದ, ಬೈಬಲ್ಲು, ಕೊರಾನು ಮುಂತಾದುವು: ವೈದಿಕರೂ ಅವೈದಿಕರೂ ಪರಸ್ಪರರ ಧರ್ಮಗ್ರಂಥಗಳ ಅಧ್ಯಯನವನ್ನು ಮಾಡಬಹುದಲ್ಲವೆ? (ಮಾಧವ. ೪೨೧); ಲಕುಲೀಶ–ಪಾಶುಪತದ ಧರ್ಮಗ್ರಂಥಗಳು ದೊರಕಿದಂತೆ ಕಾಳಾಮುಖರ ಧರ್ಮಗ್ರಂಥಗಳು ಪ್ರತ್ಯೇಕವಾಗಿ ದೊರೆತಿಲ್ಲ (ಕಶಾಅ. ೧೩೩).

[ ಧರ್ಮ + ಗ್ರಂಥ ]

**ಧರ್ಮಗ್ಲಾನಿ** (ನಾ). ಧರ್ಮದ ಹಾನಿ; ಧರ್ಮ ನಷ್ಟವಾಗುವಿಕೆ: ಕೃಷ್ಣಾವತಾರವಾದದ್ದು ದ್ವಾಪರಯುಗದ ಅಂತ್ಯದಲ್ಲಿ ನಡೆದ ಧರ್ಮಗ್ಲಾನಿಯ ಕಾರಣದಿಂದ (ಭಾರದ. ೧೦೪); ಅರ್ಜುನನ ಅಳಲಿಗೆ ಕಾರಣ . . . ವರ್ಣಸಾಂಕರ್ಯ, ವರ್ಣಸಾಂಕರ್ಯದಿಂದ ಧರ್ಮಗ್ಲಾನಿ, ಧರ್ಮಗ್ಲಾನಿಯಿಂದ ನರಕಪ್ರಾಪ್ತಿ (ಭಾರದ. ೧೧೨). [ ಧರ್ಮ + ಗ್ಲಾನಿ ]

**ಧರ್ಮಘಾತಕ** (ನಾ). ೧. ಧರ್ಮದ ಉಲ್ಲಂಘನೆ; ಧರ್ಮದ್ರೋಹ: ನನ್ನನ್ನು ಕೋರದೆಯೇ ನೀನು ಆ ರಾಜನ ಸಹವಾಸ ಮಾಡಿದ್ದು ಧರ್ಮಘಾತಕವೇನಲ್ಲ (ವಚಭಾ. ೩೯೫). ೨. ಧರ್ಮವನ್ನು ಉಲ್ಲಂಘಿಸುವವನು; ಧರ್ಮದ್ರೋಹಿ. [ ಧರ್ಮ + ಘಾತಕ ]

**ಧರ್ಮಚಕ್ರ** (ನಾ). ೧. ಧರ್ಮಸಾಮ್ರಾಜ್ಯ; ಧರ್ಮವುಳ್ಳ ಚಕ್ರಾಧಿಪತ್ಯ. ೨. ಧರ್ಮರಕ್ಷಣೆ ಮಾಡಿದ ಚಕ್ರಾಯುಧವನ್ನು ಧರಿಸಿದವನು; ವಿಷ್ಣು. ೧, ೨: ಪ್ರತಿಪಾಲಿತಧರ್ಮಚಕ್ರಂ . . . ಈ ಚಳುಕ್ಯನಾರಾಯಣದೇವನೀಗೆಮಗೆ ಮಂಗಳಕಾರಣಮುತ್ಸವಂಗಳಂ (ಗದಾಯು. ೧-೧). ೩. ಬುದ್ಧ. ೪. [ಬೌದ್ಧ] ಧರ್ಮದ ಸಂಕೇತವಾದ ಚಕ್ರ: ಭರತಖಂಡದ ರಾಷ್ಟ್ರ

ಧ್ವಜದಲ್ಲಿ . . . "ಧರ್ಮಚಕ್ರ" ವಿಶ್ವಸಾಮರಸ್ಯವನ್ನು ಸಾಕ್ಷಾತ್ಕರಿಸಿದ ವೈದಿಕಋಷಿಗಳ ದಿವ್ಯಸಂದೇಶದ ಪ್ರತೀಕ (ಪುಕ್ಕಾರ. ೪೭ ಪೀಠಿಕೆ) : ಸಕಲ ಜಗತ್ತಿಗೂ ಮಾರ್ಗದರ್ಶಕವಾಗಿರಬೇಕೆಂದು ನೆಹರೂ ಅವರು ವೇದ ಪ್ರಶಂಸಿತವಾದ ಆದಿತ್ಯನ ಧರ್ಮಚಕ್ರವನ್ನೂ . . . ರಾಷ್ಟ್ರಧ್ವಜದಲ್ಲಿ ಅಳವಡಿಸಿ (ಪುಕ್ಕಾರ. ೧೩೦ ಪೀಠಿಕೆ) ; ಎಂತಾದರು ಈ ದುರಂತಕಿಹುದೆ ಕೊನೆಯ ಅಂಕವು? 'ಸಂಭವಾಮಿ ಯುಗೇಯುಗೇ' ಅಗೋ ಧರ್ಮಚಕ್ರವು (ನಲಮು. ೪೦-೨೪) ; ಬೌದ್ಧರಿಗೆ (ಹೀನಯಾನ) ಪೂಜಾರ್ಹವಾದ ಸಂಕೇತಗಳನ್ನು ಮೂರು ಗುಂಪುಗಳನ್ನಾಗಿ ವಿಭಾಗಿಸಬಹುದು . . . (iii) ಉದ್ದೇಶಿತ: ಸ್ತೂಪ, ಧರ್ಮಚಕ್ರ ಮತ್ತು ತ್ರಿರತ್ನಚಿಹ್ನೆಗಳು ಇದರಲ್ಲಿ ಮುಖ್ಯವಾದುವು (ಭಾರದ. ೪೯೫). 'ಧರ್ಮಚಕ್ರಪ್ರವರ್ತನ' ಪರಾ. ೫. [ಜೈನ] ತೀರ್ಥಂಕರರು ವಿಹಾರ ಮಾಡುವ ಸಮಯದಲ್ಲಿ ಆತನ ಮುಂದೆ ಚಲಿಸುವ, ಸೂರ್ಯನನ್ನು ಮೀರಿಸುವ ಪ್ರಕಾಶದಿಂದ ಕೂಡಿದ, ಸಾವಿರ ಅರಗಳನ್ನುಳ್ಳ ಚಕ್ರ : ಜಿನಚಂದ್ರದೇವಂ ನಡೆಯೆ ಧರ್ಮಚಕ್ರಂ ಮುಂದೆ ನಡೆಯೆ (ಶಾಂತಿಪು. ೧೩-೧೪ ವ) ; ಪಸರಿಸಿದ ಕುತೀರ್ಥಧ್ವಾಂತಮಂ ತೂಳ್ದಿ . . . ಪೆಂಪಿಂ ವಿಶದವಿಭವತೇಜಶ್ಚಕ್ರವರ್ಕಂಬೊಲುದ್ಯೋತಿಸು ಸಕಲಧಾತ್ರೀಚಕ್ರದೊಳ್ ಧರ್ಮಚಕ್ರಂ (ಅಜಿಪು. ೧-೧೬) ; ಪಡೆದಚ್ಚರಿಯಿಂ ಸಹಸ್ರಭಾನು ತ್ವಿ [ಡ] ದುದ್ಯೋತಿ ಸುರೇಂದ್ರಕಲ್ಪಿತಾರ್ಘ್ಯಂ ಕಿಡೆ ದುರ್ಮತದುಸ್ತಮ ಪ್ರಭಾವಂ ನಡೆಗುಂ ಸಂದಿಸಿ ಮುಂದೆ ಧರ್ಮಚಕ್ರಂ (ವರ್ಧಮಾ. ೧೪-೨೭). ೬. ಯಕ್ಷರ ತಲೆಯ ಮೇಲೆ ಸಮವಸರಣಕಾಲದಲ್ಲಿ ಇರುವ ಚಕ್ರಾಕಾರವಾದ ಒಂದು ಬಗೆಯ ಆಭರಣ : ಧರ್ಮಚಕ್ರಪರಚಕ್ರಮನಾಕ್ರಮಿಸಲ್ಕೆ ಸಾಲ್ದ ಭಾಸುರತರ ತೀವ್ರತೇಜದಪರಾಜಿತೆ ಮಾಟ್ಕೆಮತಿಪ್ರಕಾಶಮಂ (ಮಲ್ಲಿಪು. ೧-೯) ; ನಾಲ್ಕುಂ ದೆಸೆಯೊಳಂ ಧರ್ಮಚಕ್ರಮಂ ಧರಿಯಿಸಿರ್ಪ ಯಕ್ಷೇಂದ್ರರಿಂ . . . ಪ್ರಥಮಪೀಠಮಕ್ಕುಂ (ಪಸಾರ. ೫೬೬). ೭. ಚಕ್ರಾಕಾರವಾದ ಒಂದು ಬಗೆಯ ಆಭರಣವನ್ನು ಧರಿಸಿರುವವನು : ಆದಜ ನಾಲ್ಕುಂ ದಿಙ್ಮುಖಂಗಳೊಳ್ . . . ಧರ್ಮ ಚಕ್ರರ್ ಯಕ್ಷರ್ಕಳಿರ್ವರ್ (ಮಹಾನೇ.೧೫-೬೪ ವ). [ಧರ್ಮ + ಚಕ್ರ$_1$]

**ಧರ್ಮಚಕ್ರಪ್ರವರ್ತನ** (ನಾ). ೧. [ಬೌದ್ಧ] ಧರ್ಮಚಕ್ರವನ್ನು ಚಲಿಸುವಂತೆ ಮಾಡುವುದು. ೨. "ಬುದ್ಧನು ಮಾಡಿದ ಮೊತ್ತಮೊದಲನೆಯ ಉಪದೇಶಕ್ಕೆ 'ಧರ್ಮಚಕ್ರಪ್ರವರ್ತನ' ವೆಂದೂ ಆತನ ವಚನಗಳ ಮಣಿಹಾರಕ್ಕೆ 'ಧರ್ಮಪದ'ವೆಂದೂ ಹೆಸರು" (ಭಾರದ. ೧೯೩) : ನಾಲ್ಕು ಆರ್ಯಸತ್ಯಗಳನ್ನು ಭಗವಂತನು ತನ್ನ ಮೊದಲ ಶಿಷ್ಯರಿಗೆ ವಿಶದೀಕರಿಸಿದನು. ಈ ಪ್ರಸಂಗವನ್ನು "ಧರ್ಮಚಕ್ರಪ್ರವರ್ತನ" ಎಂದು ಕರೆದಿದ್ದಾರೆ. ಇಲ್ಲಿ 'ಚಕ್ರ'ವೆಂದರೆ 'ರಾಜ್ಯ'. ಭಗವಂತನು ಧರ್ಮರಾಜ್ಯವನ್ನು 'ಪ್ರವರ್ತನ' ಮಾಡಿದನೆ ಹೊರತು 'ಸ್ಥಾಪನ' ಮಾಡಲಿಲ್ಲವೆಂಬ ಒಳ ಅರ್ಥವನ್ನು ಇಲ್ಲಿ ಗಮನಿಸಬಹುದು (ಭಾರದ. ೧೯೬) ; ಭಗವಂತನು ಧರ್ಮಚಕ್ರಪ್ರವರ್ತನವನ್ನು ಗೈದಾಗ . . . ಅನೇಕ ದೇವತೆಗಳೂ ಧರ್ಮವನ್ನು ಕಂಡುಕೊಂಡರು (ಬುದ್ಧಪ. ಮಿಲಿಂದ. ೨೫). [ಧರ್ಮಚಕ್ರ + ಪ್ರವರ್ತನ]

**ಧರ್ಮಚಕ್ರಮುದ್ರೆ** (ನಾ). [ಶಿಲ್ಪಶಾ] (ಬುದ್ಧನ) ಮೂರ್ತಿಶಿಲ್ಪದ ಒಂದು ಭಂಗಿ, -ಮುದ್ರೆ : ವೈರೋಚನನ ಪ್ರತಿಮೆಯು "ಧರ್ಮಚಕ್ರಮುದ್ರೆ" ಇಂದಲೂ ಅಕ್ಷೋಭ್ಯಬುದ್ಧನ ಪ್ರತಿಮೆಯು 'ಭೂಮಿಸ್ಪರ್ಶ' ಮುದ್ರೆಯಿಂದಲೂ . . . ಕೂಡಿರುತ್ತವೆ (ಭಾರದ. ೫೦೪).

[ಧರ್ಮಚಕ್ರ + ಮುದ್ರೆ]

**ಧರ್ಮಛತ್ರ**, ಧರ್ಮಛತ್ರ (ನಾ). ಧರ್ಮಾರ್ಥವಾಗಿ ಊಟ ವಸತಿಗಳನ್ನು ಒದಗಿಸುವ ಸ್ಥಳ : ಮೈಸೂರಿನಲ್ಲಿರುವ ಪೂರ್ಣಯ್ಯನವರ ಧರ್ಮಛತ್ರವು ಹಿಂದಿನ ಕಾಲದಿಂದಲೂ ಬಡಬಗ್ಗರಿಗೆ ಆಶ್ರಯ ನೀಡುತ್ತಿದೆ (ರೂಢಿ). **ಧರ್ಮಛತ್ರ** : ರಂಗವ್ವನ ಮಠಾರವೇನು ಧರ್ಮಛತ್ರ ಕೆಟ್ಟು ಹೋಯ್ತು ? (ರಂಗವ ೩೨) ; ಆ ಧರ್ಮಛತ್ರದ ಆವಾರದಲ್ಲಿ . . . ವಸುಮತಿಯೂ ಒಬ್ಬಳಾಗಿ ನಿಂತಳು (ಮತ್ತುಮ. ೧೪೫).

[<ಸಂ. ಧರ್ಮಸತ್ರ]

**ಧರ್ಮಚರಿತ** (ನಾ). = ಧರ್ಮಚಾರಿ : ಧರ್ಮಚರಿತ ದುರಿತದೂರ . . . ಪ್ರಪಂಚರಹಿತ ಪರಾಪರ (ಸಿದ್ಧೇವ. ೩-೭). [ಧರ್ಮ + ಚರಿತ]

**ಧರ್ಮಚಾರಿ** (ನಾ). ಧರ್ಮಮಾರ್ಗದಲ್ಲಿ ನಡೆಯುವವನು ; ಧರ್ಮವನ್ನು ಆಚರಿಸುವವನು : ಧರ್ಮವೇ ಖಂಡಿತವಾಗಿಯೂ ಧರ್ಮಚಾರಿಯನ್ನು ರಕ್ಷಿಸುತ್ತದೆ (ಭಾರದ. ೧೯೩). [ಸಂ. ಧರ್ಮಚಾರಿನ್]

**ಧರ್ಮಚಿಂತಾಪನ್ನೆ** (ನಾ). ಧರ್ಮಾಚರಣೆಯ ಕ್ರಮವನ್ನು ಕುರಿತು ಚಿಂತೆಗೆ ಒಳಗಾದವಳು : ನಿನ್ನ ನೆನೆದಂಗನೆಗೆ ಬಹುದು ಪತಿವ್ರತಾಭಾವ ಎನ್ನನುಜ್ಞೆಗೆ ಧರ್ಮಚಿಂತಾಪನ್ನೆಯಾಗದಿರೆಂದು ಕೃಪೆಯುಲ್ಲಿ ತನ್ನ ಸಿರಿಕರ ತಳವನಿರಿಸಿದನುತ್ತಮಾಂಗದಲಿ (ಕುಮಾ.ಭಾ. ೦೬-೫೨).

[ಸಂ. ಧರ್ಮಚಿಂತಾಪನ್ನಾ]

**ಧರ್ಮಚಿಂತಾಯಕ** (ನಾ). ಧರ್ಮವನ್ನು ಕುರಿತು ಚಿಂತಿಸುವವನು : ಸಿದ್ಧಾರ್ಥಸೆಟ್ಟಿಯುಂ . . . ಭಾನುದತ್ತಶೆಟ್ಟಿಯು ಧರ್ಮಚಿಂತಾಯಕನಪ್ಪ ಧನದತ್ತನ ಸಮೀಪದೊಳಿರಿಸಿ (ಮಹಾನೇ. ೪-೧೧೯ ವ).

[ಧರ್ಮ + ಚಿಂತಾಯಕ]

**ಧರ್ಮಚಿಂತೆ** (ನಾ). ಧರ್ಮದಲ್ಲಿ ಆಸಕ್ತಿ ; ಧರ್ಮವನ್ನು ಕುರಿತ ಎಣಿಕೆ ; ಧರ್ಮಬುದ್ಧಿ : "ಉಪಾಸ್ತಿಃ, ಧರ್ಮಚಿಂತಾ-ಈ ೨ ಧರ್ಮಬುದ್ಧಿ" (ಹಲಾಯು. ೧೩೭-೮೫) ; ಅನುಪಮ ಧರ್ಮಚಿಂತೆ . . . ಕಿಂಕರರ ಪರಿವರ್ತನಕ್ರಿಯೆಯ ಸಮ್ಮದದೊಳ್ ಸಲೆ ಕೂಡಿ ತದ್ಧರಾವರನಖಿಳಾವನೀವಳಯಮಂ ಪರಿಪಾಲಿಸುತಿರ್ದಂ (ಮಹಾನೇ. ೩-೨೨). [ಸಂ. ಧರ್ಮಚಿಂತಾ]

**ಧರ್ಮಚಿತ್ತ** (ನಾ). ಧರ್ಮಬುದ್ಧಿ ; ಧರ್ಮಿಷ್ಠತೆ : ಬರ್ಮಗಾವುಣ್ಡಂ ಧರ್ಮಚಿತ್ತದೊಳ್ಮೆಗಳ್ದು . . . ಧಾರಾಪೂರ್ವ್ವಕದಿಂ ಬೆಂಗೇರಿಯ ಕೆಱೆಯ ಕೆಳಗೆ ಬಿಟ್ಟ ಗಟ್ಟಿ ಮತ್ತರೂನ್ದು (ಸಾಇಇ. XX, ೩೫-೧೦ ; 1055).

[ಧರ್ಮ + ಚಿತ್ತ]

**ಧರ್ಮಚ್ಯುತ** (ನಾ). ಧರ್ಮವನ್ನು ಬಿಟ್ಟವನು ; ಧರ್ಮಭ್ರಷ್ಟ : ಧರ್ಮಮಾರ್ಗದಿಂದ ದೂರವಾದವನು : ರಾಜನನ್ನು ಕೊಂದು ಧರ್ಮಚ್ಯುತನಾದ ಇವನಿಗೆ ಪೂಜೆ ಮಾಡಿದೆಯಲ್ಲಾ, ಇಂಥ, ನೀನು ಧರ್ಮಾತ್ಮ ಹೇಗಾದೀಯೆ ? (ವಕಥಾ. ೮೩). [ಧರ್ಮ + ಚ್ಯುತ]

**ಧರ್ಮಚ್ಯುತಿ** (ನಾ). ೧. (ಕೈಕೊಂಡ) ಧರ್ಮವನ್ನು ಬಿಡುವುದು ; ಧರ್ಮಭ್ರಷ್ಟತೆ. ೨. ಬಿಲ್ಲನ್ನು ಬಿಟ್ಟುಹೋಗುವುದು ; ಬಿಲ್ಲಿನಿಂದ ಚಿಮ್ಮಿ ಮುಂದಕ್ಕೆ ಹೋಗುವುದು. ೧, ೨ : ಧೃತಧರ್ಮಚ್ಯುತಿಬಾಣಸಂಹತಿಗೆ ಬದ್ಧಾವೈಕೃತಂ ವಾರಣಕ್ಕೆ ತಪಃಸಂಗತಿ ರಾತ್ರಿಗೆ . . . ಜನಕ್ಕಿಲ್ಲಲ್ಲಿ ಬೇಱೆಲ್ಲಿಯುಂ (ಪುಷ್ಪಪು. ೨-೩೯). [ಧರ್ಮ + ಚ್ಯುತಿ]

**ಧರ್ಮಛತ್ರ** 'ಧರ್ಮಚತ್ರ' ನೋ.

**ಧರ್ಮಜ** (ಗು). ೧. ಧರ್ಮಬುದ್ಧಿಯಿಂದ ಹುಟ್ಟಿದ. (ನಾ). ೨. ಯಮನ ಧರ್ಮನ ಮಗ ; ಪಾಂಡವರಲ್ಲಿ ಹಿರಿಯ ; ಯುಧಿಷ್ಠಿರ: "ಪಾಂಡವಂ ಧರ್ಮಜಂ ಯುಧಿಷ್ಠಿರನು ಧರ್ಮಪುತ್ರನೆಂದೆನಿಕು" (ಮಂಗರಾ. ೭೮-೩) ; ಕಃ ಕೇನಾರ್ಥೀ ಕೋ ದರಿದ್ರಃ ಎನುತುಮನಿತುಮಂ ಧರ್ಮಜಂ ಸೂಱೆಗೊಟ್ಟಂ (ಪಂಪಭಾ. ೬-೪೦) ; ಹರಿ ಕೇಳ್ ಧರ್ಮಜ ಕೇಳ್ ಸುರೇಂದ್ರಸುತ ಕೇಳ್ ಮಾದ್ರೀಸುತರ್ ಕೇಳಿಮಿರ್ವರುಮಿಂತೆಯ್ದಿದುದಲ್ತೆ . . . ಭೀಮಪ್ರತಿಜ್ಞಾಕ್ಷರಂ (ಗದಾಯು. ೮-೬೪) ; ಜೂಜನಾಡಿ ಧರ್ಮಜ ಮುಖ್ಯರಳಿದರು (ಬಸಪು. ೪೪-೬೪) ; ಮಾರುವದ ಖುರ ನಾಲ್ಕುಱಿ ಮಣಿಚಾರು ಕನಕವ ಸುರಿದು ಧರ್ಮಜ ತೇರನೇಱಿದನು (ಕುಮಾ.ಭೀ. ೧-೬೨) ;

ನಿರ್ಮಲವಾಜಿಯಂ ಸಂವೇಗಂ ತಂದು ನಿಲಿಸಿದಂ ಧರ್ಮಜನ ಸಮ್ಮುಖದೊಳಿರೆ (ಜೈಮಿಭಾ. ೫-೧೧). ೩. ಬಿಳಿಯ ಹಕ್ಕಿ ; ☞ ಧರ್ಮಜನೆಂದರೆ ಪಾಂಡವ. 'ಪಾಂಡವ' ಶಬ್ದಕ್ಕೆ 'ಬಿಳಿಹಕ್ಕಿ' ಎಂಬರ್ಥವೂ ಉಂಟು : ಸುರಪತಿಯ ಬೆಳ್ಳಡಿಯ ರಥಚರಣದ ಪಾವಕನ ಮುನಿಯ ಧರ್ಮಜನ ಲಸತ್ತುರಗದ ಗಜಗಂಡದ ಭಾಸುರವಾದ್ಯದ ಪೆಸರ ಖಗಕುಳಂ ಕರಮೆಸೆಗುಂ (ರಾಜಶೇ. ೫-೬೦). ೪. ಔರಸಪುತ್ರ. [ ಸಂ. ]

**ಧರ್ಮಜನಕ** (ನಾ). ೧. ಯಮನ ತಂದೆ ; ಸೂರ್ಯ. ೨. ಧರ್ಮವನ್ನು ಪ್ರಚಾರ ಮಾಡುವವನು; ಧರ್ಮಿಷ್ಠ. ೧, ೨ : ಕಮಳಾನಂದನಕಾರಿ ಚಾರುಕಮಳ ಪ್ರೋದ್ಭಾಸಿಹಸ್ತಂ ವಿರೋಧಿಮದಧ್ವಾಂತವಿಭೇದಿ ಧರ್ಮ್ಮಜನಕಂ ಸನ್ಮಾರ್ಗ್ಗವಿದ್ಯೋತನಂ . . . ಲೋಕಮನೆಲ್ಲಂ ಬೆಳಗುತ್ತಮಿರ್ಕ್ಕೆ ದೊರೆವೆತ್ತಾದಿತ್ಯನತ್ಯೂರ್ಜ್ಜಿತಂ (ಎಕ.VI, ಕಡೂರು. ೬೬-೩೮ ; 1172). [ ಧರ್ಮ + ಜನಕ ]

**ಧರ್ಮಜಾಗೃತಿ** (ನಾ). ಧರ್ಮವು ಉಚ್ಛ್ರಾಯಸ್ಥಿತಿಯಲ್ಲಿರುವುದು : ಭಾರತದಲ್ಲಿ ಅನೇಕ ಮಹಾತ್ಮರು ಜನಿಸಿ ಧರ್ಮಜಾಗೃತಿಯನ್ನುಂಟು ಮಾಡಿದ್ದಾರೆ (ರೂಢಿ). [ ಧರ್ಮ + ಜಾಗೃತಿ ]

**ಧರ್ಮಜ್ಞ** (ನಾ). ಧರ್ಮವನ್ನು ಬಲ್ಲವನು : ಧರ್ಮಜ್ಞರಧರ್ಮಮೆನೆ ಮಾರ್ಧಕರಸಂಬದ್ಧಮೆನೆ . . . ಸಮುದ್ರಕ್ಷೋಭದಂತೆ ಘೂರ್ಣಿಸುವ ಜನಕ್ಷೋಭಮಂ ಕೈಕೊಳ್ಳದೆ (ಜಗವಿ. ೨-೫೩೮) ; ಕಾರುಣಿಕರ್ ಧರ್ಮಜ್ಞರ್ ಚಾರಿತ್ರಸಮೇತರೆನಿಪ ನಿಮ್ಮನ್ನರನಾಗಾರತೆಯಿಂ ಪಾವನ ಮನಗಾರತೆಯಿಂದೆಸಗುವೆಸಕಮಿಂ ಪೆಱತುಂಟೇ (ಚಂದ್ರಪ್ರ ೯-೪೦); ಧರ್ಮ್ಮಜ್ಞನೇ ಧರ್ಮ್ಮಜಂ ಬಲವದ್ವೈರಿಮದಪ್ರತಾಪಹ[ರ]ನೇ ಅಮ್ಮಮ್ಮ ತಾನನ್ತಕಂ . . . ಬುಧನುತ ಶ್ರೀನಾಕಭೂಪಾಳಕಂ (ಸೌಇಇ. XX, ೩೧೩-೬ ; ಸು. 12ನೆಯ ಶತ) ; ನೀನಲಾ ಧರ್ಮಜ್ಞನೆಂದಾ ಮಾನಿನಿಯರ ವಿವಾಹದಲಿ ನೀನೇನ ಮಾಡಿದೆ ಬೇಸಱಿಸಿ ಬಳಲಿಸಿದೆ ಬಾಲಕಿಯ (ಕುವ್ಯಾಸ. ೧೦-೪೦) ; ಜನನಿ ಶಿಶುವನು ಸತ್ಕುಲೀನನು ವಿನುತ ಸದ್ವರ್ತನೆಯ ಸತ್ಪುರುಷನು ಸದಾಚಾರವನು ಸಜ್ಜನನಧಿಕ ಸದ್ಗುಣವ ಜನಪನೈಶ್ವರಿಯವನು ಧರ್ಮಜ್ಞನು ಯಶೋಲಭ್ಯವನು ಸಲಹುವ ನೆನಹಿನವೊಲಭಿಮಾನರಕ್ಷೆಯ ಸತಿಯ ಕಪಿಕಂಡ (ತೊರರಾ. ೫-೩-೨೫). [ ಸಂ. ]

**ಧರ್ಮಜ್ಞತೆ** (ನಾ). ಧರ್ಮವನ್ನು ತಿಳಿದಿರುವಿಕೆ; ಧರ್ಮಜ್ಞನಾಗಿರುವಿಕೆ: ಯತಿಗಳಾದಿರಿ ನೀವು ರೋಷಚ್ಯುತರಲೇ ಬಳಿಕೇನು ಧರ್ಮಜ್ಞತೆಯ ನೆಲೆಗಳನಱಿದ ಮನವೆಱಗುವುದೆ ಕಾಳಗಕೆ (ಕುವ್ಯಾಉ. ೬-೨೧).

[ ಸಂ. ಧರ್ಮಜ್ಞತಾ ]

**ಧರ್ಮಡೋಣಿ** (ನಾ). (ದನಕರು ಮೊದಲಾದುವುಗಳು ನೀರು ಕುಡಿಯುವುದಕ್ಕಾಗಿ) ಧರ್ಮಾರ್ಥವಾಗಿ ಕಟ್ಟಿಸಿದ ತೊಟ್ಟಿ ಅಥವಾ ದೋಣಿ : ನಂಮ ಗ್ರಾಮಕೆ ಧರ್ಮಡೋಣಿಗೆ ನೀರ ಹೊಯಿವದಕೆ ಉರಿಗೆ ಪಡುವಲು ಅಲದ ಮರನ ಪಟಿಯನು ಧರ್ಮವಿತದ ನೀರ ಯೆತುವದಕೆ ನಾಲು ಸರ್ವಮಾನ್ಯವಾಗಿ ಬಿಟೆಉ . . . ಗಟ ತಿಂಮೋಜ ಗೊಪುಲಪಲಿ ಮಲ್ಲೋಜಯಿವರು ಮುಂತಾದ ವೋಜುಗಳು ಧರ್ಮಡೋಣಿಗೆ ನೀರ ಎತುವ ಕಬಿನದ ಏತದ ಬಾನೆ ಕಬಿನದ ಕಟ್ಟು ಯಿಷ್ಟಂ ಧರ್ಮವನು ತಪದೆ ನಡಸಿ ಬಾಹೆಉ (ಸೌಇಇ. IX-ii, ೬೭೦-೯ ; 1559).

[ ಧರ್ಮ + ಡೋಣಿ$_2$ (<ದೋಣಿ$_3$) ]

**ಧರ್ಮತತ್ಪರ** (ನಾ). ಧರ್ಮದ ಆಚರಣೆಯಲ್ಲಿ ಆಸಕ್ತನಾದವನು ; ಧರ್ಮಪರಾಯಣ : ಸಕಳಾಗಮಕೋವಿದರೆಂದು ಧರ್ಮ್ಮತತ್ಪರರಿವರೆಂದು ಕೂರ್ತ್ತು ಮಲಯಾಳ ತಪೋನಿಧಿ ದೇವಸಿಂಗಿಜೀಯರ ಪದಯುಗ್ಮಮಂ ಪಡೆದು ಕಟ್ಟಿದರ್ (ಸೌಇಇ. XX, ೪೯-೫೮ ; 1076?).

[ ಧರ್ಮ + ತತ್ಪರ ]

**ಧರ್ಮತನಯ** (ನಾ). ೧. ಯುಧಿಷ್ಠಿರ; ಧರ್ಮರಾಯ : ಶಶಾಂಕಸಂಕಾಶಯಶೋಧವಳಿತಭುವನಂ ತಾಗಿದನವಯವದಿಂ ಬಂದು ಧರ್ಮತನಯನ ಬಲದೊಳ್ (ಪಂಪಭಾ. ೧೧-೩೯) : ಒಡವುಟ್ಟಿದನೆಂದಱಿದೊಡೆ ಕುಡುಗುಂ ರಾಜ್ಯಮನೆ ಧರ್ಮತನಯಂ ನಿನಗಾಂ ಕುಡಲಾರ್ತೆನಿಲ್ಲ (ಗದಾಯು. ೫-೧೯). ೨. ಧರ್ಮವನ್ನು ತನ್ನ ಬಳಿ ಕಲಿತ ಶಿಷ್ಯ, – ವಿದ್ಯಾರ್ಥಿ : ರಾಮದೇವಾಚಾರ್ಯನ ಧರ್ಮತನಯನಾದ ಜಯದೇವಪಂಡಿತನಿಗೆ . . . ಪೂಜಾರ್ಥವಾಗಿ ಕೊಟ್ಟನು (ಕರ್ನಾಅ. ೮೯). ೩. ಧರ್ಮಶಾಸ್ತ್ರದ ಪ್ರಕಾರ ಮಗನೆನಿಸಿಕೊಳ್ಳುವವನು. [ ಧರ್ಮ + ತನಯ ]

**ಧರ್ಮತೂಂಬು** (ನಾ). ಧರ್ಮಾರ್ಥವಾಗಿ ಕಟ್ಟಿಸಿದ ತೂಬು : ಇದುವೆ ಸೂದೂಱು ನೊಯ್ಯಮಾಲರಯ್ಯಮ್ಮನ್ಗೆ ಧರ್ಮತೂಂಬುಂ ಕೊಟ್ಟರ್ (ಎಕ. XIV, ತಿರುಮ. ೨೫೩-೧೩ ; ಸು. 800). [ ಧರ್ಮ + ತೂಂಬು ]

**ಧರ್ಮದ** (ನಾ). ಧರ್ಮ ಮಾಡುವವನು; ಧರ್ಮಿಷ್ಠ : ಪ್ರಿಯಮಾದುದು ಧರ್ಮಂ ಪೃಥ್ವಿಯ ಸೂನುವಿನಿಂದಧರ್ಮವಂತದು ತಾನಪ್ರಿಯಮಾಯ್ತು ತನಗೆ ಸಹಚಾರಿಯಿಂದಮೇನಾ ಧರಾಧಿಪಂ ಧರ್ಮದನೋ (ವರ್ಧಮಾ. ೭-೫೫) ; ಧರ್ಮದರಾಗೆ ಮೇಗೆ ಸುಖಿಯಪ್ಪುದು ಸಂದೆಯಮೆಂದುಗೆಯ್ಯದಿರ್ಪೊಂದು ಮರುಳ್ತನಂ ತಗುಳ್ದವಂದಿರಂ (ಬಂಹರಿ. ೧೧-೧೩).

[ ಸಂ. ]

**ಧರ್ಮದರ್ಶಿ** (ನಾ). ಛತ್ರ, ದೇವಾಲಯ, ಮಠ ಮುಂತಾದ ಸಾರ್ವಜನಿಕ ಸಂಸ್ಥೆಗಳಿಗೆ ಸೇರಿದ ಆಸ್ತಿಯನ್ನು ನೋಡಿಕೊಳ್ಳುವ ಗೌರವ ಸದಸ್ಯ; ಟ್ರಸ್ಟಿ : ದೇವಸ್ಥಾನಕ್ಕೆ ಹೀಗೆ ಬಂದ ದತ್ತಿಗಳನ್ನು ರಕ್ಷಿಸಲು ನಾಲ್ಕಾರು ಜನರನ್ನು ಧರ್ಮದರ್ಶಿಗಳಾಗುವಂತೆ ಕೇಳಿಕೊಳ್ಳುತ್ತಿದ್ದರು (ಕಶಾಅ. ೧೬೯) ; ಕಂದಾಯ ರಾಜ ಅಥವಾ ರಾಜಾಧಿಕಾರಿಗಳ ಸ್ವಂತ ವೇತನವಲ್ಲ ; ಅದು ಪ್ರಜೆಗಳಿಗೆ ಸೇರಿದುದು. ಅದಕ್ಕೆ ಅವರು ಬರಿಯ ಧರ್ಮದರ್ಶಿ ಮಾತ್ರ (ಭಾರದ. ೩೬೦) ; ಅಂತರರಾಷ್ಟ್ರೀಯ ಹಣಕಾಸಿನ ವಿಷಯಗಳ ಬಗ್ಗೆ ಧರ್ಮದರ್ಶಿ (Trustee) ಅಥವಾ ಏಜೆಂಟ್ ಆಗಿ ವರ್ತಿಸುವುದು ಮೊದಲನೆಯ ಬಗೆಯ ಕಾರ್ಯಾಚರಣೆಯಾಗಿದೆ (ಅಂತಸಂ. ೧೪೬). [ ಸಂ. ಧರ್ಮದರ್ಶಿನ್ ]

**ಧರ್ಮದರ್ಶಿಮಂಡಲಿ** (ನಾ). ಧರ್ಮದರ್ಶಿಗಳ ಸಮಿತಿ : ಭಗವಂತನಿಂದ ಸಂಸ್ಥಾಪನೆಗೊಂಡಿದ್ದ ಈ ಸುಸ್ಥಿರ ಸಂಸ್ಥೆಗೆ ಕೇವಲ ಮಾನವೀಯ ಸಂಸ್ಥೆಯಾದ ಧರ್ಮದರ್ಶಿಮಂಡಲಿಯ ರಕ್ಷಣೆ ಅತ್ಯಗತ್ಯವಾಗಿತ್ತು (ಪುನರು. ೩೯೩). [ ಧರ್ಮದರ್ಶಿ + ಮಂಡಲಿ ]

**ಧರ್ಮದಾಯ** (ನಾ). ಸಾರ್ವಜನಿಕ ಧರ್ಮಕಾರ್ಯಗಳನ್ನು ನಡೆಸುವುದಕ್ಕಾಗಿ ಬಿಟ್ಟುಕೊಟ್ಟ ದತ್ತಿ, – ಕಾಣಿಕೆ, – ದೇಣಿಗೆ : ಪೂರ್ವದಿಂದ ನಡೆದುಬರುತ್ತಿರುವ ದೇವದಾಯ ಬ್ರಹ್ಮದಾಯ ಧರ್ಮದಾಯ . . . ಉಂಬಳಿ ರಕ್ತಕೊಡಗೆ ಮುಂತಾದುವೇನೂ ಹೆಚ್ಚುಕಡಮೆಯಾಗದಂತೆಯೂ . . . ನಮ್ಮ ಕರಣಿಕರು ಎಚ್ಚತ್ತಿರಬೇಕು (ಬಿರುಗಂ. ೩೬-೨೦).

[ ಧರ್ಮ + ದಾಯ$_2$ ]

**ಧರ್ಮದೀಕ್ಷೆ** (ನಾ). ಯಾವುದಾದರೂ ಒಂದು ಮತಕ್ಕೆ ಸೇರಿಸಿಕೊಳ್ಳುವಾಗ ಮಾಡುವ ಸಂಸ್ಕಾರ : ಕ್ರಿಸ್ತೀಯಧರ್ಮದ ಅಭ್ಯಾಸವಾದ ನಂತರ ನಾಲ್ಕುತಿಂಗಳಿಗೆ ಮುಂಬಯಿಯ ಭೇಂಡೀಬಜಾರದಲ್ಲಿರುವ ಅಮೆರಿಕನ್ ಮಿಶನ್ನದ ಚರ್ಚಿನಲ್ಲಿ ಧರ್ಮದೀಕ್ಷೆ ಕೊಟ್ಟರು(ಸ್ಮೃತಿಚಿ. ೧೮೬).

[ ಧರ್ಮ + ದೀಕ್ಷೆ ]

**ಧರ್ಮದೂರ** (ನಾ). = ಧರ್ಮಚ್ಯುತ : ಧರ್ಮದೂರನು ನಿನ್ನವನು ಸತ್ಕರ್ಮಬಾಹಿರನಾತ್ಮರಚಿತವಿಕರ್ಮದೋಷದೊಳಿಳಿವ ನಿನ್ನವನೆಂದನಾ ವಿದುರ (ಕುವ್ಯಾಉ. ೬ರಿ೩. ೩-೧೩ ಹೆಚ್ಚಿನ ಪದ್ಯ).

[ ಧರ್ಮ + ದೂರ ]

**ಧರ್ಮದೃಷ್ಟಿ** (ನಾ). ಧಾರ್ಮಿಕ ಪ್ರಜ್ಞೆ ; ಧರ್ಮಪರತೆ : ನಮ್ಮ ರಾಯನ ಧರ್ಮದೃಷ್ಟಿಯು ಆಶ್ಚರ್ಯಕರವಾದದ್ದು ! (ಶಾಕುಂತ. ೭೭-೧೬) ; ಮನ ವಚನ ಕಾಯಗಳಲ್ಲೂ ಸತ್ಯನಿಷ್ಠೆ, ಧರ್ಮದೃಷ್ಟಿ, ನ್ಯಾಯಪರತೆ – ಇವು ವ್ಯಾಪಿಸಿದಲ್ಲದೆ ಶಿವಾನುಗ್ರಹ ದೊರೆಯದು (ಶಕ್ತಿ.ವಿ. ೬೪). [ಧರ್ಮ + ದೃಷ್ಟಿ]

**ಧರ್ಮದೇವತೆ** (ನಾ). ಧರ್ಮದ ಅಭಿಮಾನಿದೇವತೆ ; ಧರ್ಮದ ಅಧಿದೇವತೆ : ಬಿಲ್ವಫಲ ಲಿಂಗವ ಪೂಜಿಸಿ ನಮ್ಮ ಪ್ರಥಮಪಾದವ ಪಡೆದರು ನೋಡಾ ಧರ್ಮದೇವತೆಗಳು (ಸಿದ್ಧವ. ಕ. ೧೯೩-೬೦೦) ; ಧರ್ಮದೇವತೆಯೇ ಈ ರೂಪವನ್ನು ತಳೆದು ಬಂದು ನ್ಯಾಯವನ್ನು ತೀರ್ಪು ಮಾಡುತ್ತಿರುವಳು (ಕವಿಕ. ೧೯) ; ಗೀತಾಂಜಲಿಯು ಪದ್ಯಗಳಲ್ಲಿ ವೇದಾಂತದ ಪರಿಪಾಕವಿದೆ. ಧರ್ಮದೇವತೆಯ ಅವತಾರವಿದೆ (ಧರ್ಮಸಾ. ೮೨). [ಧರ್ಮ + ದೇವತೆ]

**ಧರ್ಮದೇಶನ** (ನಾ). ಧರ್ಮೋಪದೇಶ ; ಧರ್ಮಬೋಧನೆ : "ಅನಿತ್ಯ–ದುಃಖ–ಅನಾತ್ಮ" ಎಂಬ ಈ ಮೂರು ತತ್ತ್ವಗಳನ್ನು ಭಗವಂತನು ತನ್ನ ಮೊದಲಿನ ಮೂರು ಧರ್ಮದೇಶನಗಳಲ್ಲಿ ಸ್ಪಷ್ಟಪಡಿಸಿದ್ದಾನೆ (ಭಾರದ. ೨೦೦). [ಧರ್ಮ + ದೇಶನ]

**ಧರ್ಮದೇಶನೆ** (ನಾ). = ಧರ್ಮದೇಶನ : ಯೇಸು ತನ್ನ ಧರ್ಮದೇಶನೆಯನ್ನು ಪ್ರಾರಂಭಿಸಿದಂದಿನಿಂದ . . . ಡಂಭಾಚಾರವನ್ನೂ, ಆಷಾಢಭೂತಿತನವನ್ನೂ . . . ಅಣಕಿಸುತ್ತಿದ್ದನು (ಗೂಲ್ಮೋ.ಥಾ. VI, ಮುನ್ನುಡಿ). [ಸಂ. ಧರ್ಮದೇಶನಾ]

**ಧರ್ಮದ್ರವ್ಯ** (ನಾ). [ಜೈನ] ಜೀವ, ಪುದ್ಗಲ, ಧರ್ಮ, ಅಧರ್ಮ, ಕಾಲ ಮತ್ತು ಆಕಾಶವೆಂಬ ಆರುಬಗೆಯ ದ್ರವ್ಯಗಳಲ್ಲಿ ಒಂದು ; ಲೋಕಾಕಾಶವನ್ನು ವ್ಯಾಪಿಸಿರುವ ಈ ಅಖಂಡ, ಅಮೂರ್ತ ದ್ರವ್ಯವು ಉದಾಸೀನಭಾವದಿಂದ ಜೀವ, ಪುದ್ಗಲಗಳ ಗತಿಗೆ ಸಹಾಯಕವಾಗಿರುತ್ತದೆ : ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಮೆಂಬ ಷಡ್ದ್ರವ್ಯಂಗಳ ಗುಣಪರ್ಯಾಯಮುಮಂ . . . ವ್ಯಾಖ್ಯಾನಂಗೆಯ್ಯಲ್ (ಸುಕುಮಾ. ೩-೩೯ ವ) ; ಜೀವ–ಪುದ್ಗಲಗಳೆರಡರಲ್ಲಿಯೂ ಕ್ರಿಯಾಶೀಲತೆಯು ಇದೆ. ಇವು ಒಂದು ಸ್ಥಾನದಿಂದ ಇನ್ನೊಂದು ಸ್ಥಾನಕ್ಕೆ ಹೋಗುವಾಗ, ಸ್ಥಳಾಂತರದ ಕ್ರಿಯೆಗೆ–ಗತಿಗೆ–ಉದಾಸೀನಭಾವದಿಂದ ಸಹಾಯ ಮಾಡುವ ದ್ರವ್ಯಕ್ಕೆ (Medium of Motion) ಧರ್ಮದ್ರವ್ಯವೆಂದು ಜೈನರು ಹೇಳುತ್ತಾರೆ (ಜೈನಪ. ೬೨೨); ಧರ್ಮದ್ರವ್ಯ (Principle of Motion), ಜೀವ ಮತ್ತು ಅಜೀವ ದ್ರವ್ಯಗಳ ಸಂಚಾರಕ್ಕೆ ಸಹಾಯ ಮಾಡುವುದು (ಭಾರದ. ೧೯೬). [ಧರ್ಮ + ದ್ರವ್ಯ]

**ಧರ್ಮದ್ರೋಹ** (ನಾ). ೧. ನಿಯಮವನ್ನು ಮೀರುವುದು ; ಕರ್ತವ್ಯಚ್ಯುತಿ ; ಧರ್ಮದ ಉಲ್ಲಂಘನೆ : ಮತ್ತಾಗ್ಗಿರ್ಗಂ ಸಲ್ಲದೀ ಬಸದಿಯೊಡಮೆಯನತ್ಯುದ್ವೃತ್ತಿಂಗನ್ನದು ತಾನೆಟ್ಟಿಗುತ್ತಿಂಗ್ರ್ರಾಮಕ್ಕೆ × × ಧರ್ಮ್ಮದ್ರೋಹಂ (ಸೌಇಇ. XI-I, ೫೩-೭೭ ; 1007) ; ಉದ್ರೇಕದಿಂ ಮುನಿವರನೊಳಾಡಿ ತಪ್ಪಿದ ಗುರುದ್ರೋಹಮೊಂದು . . . ಇದಟಿ ಸುಗಡಕೆ ಧರ್ಮದ್ರೋಹಮ್ಮೆದಾಗದಿಹುದೆ ತನಗಶ್ವಮಂ ಕಂಡು ಕೊಂಡೊಯ್ಯದಿರಲು (ಜೈಮಿಭಾ. ೪-೨) ; ಆಕ್ಷೇಪಿಸುವದೂ ಇದ್ದದ್ದರಲ್ಲಿ ಹೆಚ್ಚುಕಡಿಮೆ ಮಾಡಹೋಗುವವೂ ಧರ್ಮದ್ರೋಹವೇ ಸರಿ (ಮಾಧವ. ४४೧). ೨. ಧರ್ಮಕ್ಕೆ ದ್ರೋಹ ಬಗೆಯಂವವನು : ಧರ್ಮದ್ರೋಹಚಕ್ರಂ ಸುಗಿದು ಪುಗೆ ದಿಶಾಚಕ್ರಮಂ (ಮಲ್ಲಿಪು. ೧೯-೨೫೩). [ಧರ್ಮ + ದ್ರೋಹ]

**ಧರ್ಮದ್ರೋಹಪರ** (ನಾ). ಧರ್ಮದ್ರೋಹದಲ್ಲಿ ತೊಡಗಿದವನು,–ಆಸಕ್ತನಾದವನು : ಅನ್ಯಾಯಿಗಳಿಗೆತ್ತಣ ದೈವ ಧರ್ಮದ್ರೋಹಪರರಿಂಗೆ ಜಯವದೆತ್ತಣದು (ಕಾಶಿರಾ. ೨೬-೯). [ಸಂ.]

**ಧರ್ಮದ್ರೋಹಿ** (ನಾ). = ಧರ್ಮದ್ರೋಹಪರ : ಪಾಪಿಗಳುಂ ಧರ್ಮದ್ರೋಹಿಗಳುಂ ತಮ್ಮನಱಿಯಲೀಯದೆ ದಿವಸಕ್ರಮದಿಂ ಬಳೆದ ಪಾಪದಿಂದಂ ಮಹಾನರಕದೊಳ್ಬಿರ್ದು ಬಹುದುಃಖಮನುಣ್ಬರ್ (ಧರ್ಮಾಮೃ. ೪-೯೨) ; ಗಾಹುಂಗತಕದಲುಳಿವ ಧರ್ಮದ್ರೋಹಿ ತಾನಲ್ಲ (ಕುವ್ಯಾದ್ರೋ. ೧೯-೪೩). [ಸಂ. ಧರ್ಮದ್ರೋಹಿನ್]

**ಧರ್ಮಧರ** (ನಾ). = ಧರ್ಮರಕ್ಷಕ : ಗಟ್ಟಿಯ ಪಾಟಿಯನಟಿದು ಬೆಳೆವೆನೆಂಬನುಂ ಧರ್ಮದ ಪಾಟಿಯನಟಿದು ಸುಖಮಂ ಪಡೆವೆನೆಂಬನುಂ ಬೇಳಪ್ಪರ್ ಬುದ್ಧಿಯೊಡೆಯನಾಗನದಱನೆಡೆಯುಡುಗದೆ ಧರ್ಮಧರನ [ಪಾಠಾಂ. ಧರ್ಮಜರ]ಪ್ಪುದು (ಜೀವಸಂ. ೨೨೩-೧೯). [ಸಂ.]

**ಧರ್ಮಧ್ಯಾನ** (ನಾ). [ಜೈನ] ಆರ್ತಧ್ಯಾನ, ರೌದ್ರಧ್ಯಾನ, ಧರ್ಮಧ್ಯಾನ ಮತ್ತು ಶುಕ್ಲಧ್ಯಾನಗಳೆಂಬ ನಾಲ್ಕು ಬಗೆಯ ಧ್ಯಾನಗಳಲ್ಲಿ ಒಂದು ; ಧರ್ಮವಿಷಯಗಳನ್ನು ಸದಾ ನೆನೆಯುತ್ತಿರುವುದು ; ಸಾಧಕನು ಸಾಮ್ಯತೆಯನ್ನು ಅಭ್ಯಾಸ ಮಾಡುವುದಕ್ಕಾಗಿ ಯಾವ ಧ್ಯಾನವನ್ನು ಅನುಷ್ಠಾನ ಮಾಡುವನೋ ಅದಕ್ಕೆ ಧರ್ಮಧ್ಯಾನವೆಂದು ಹೆಸರು. ರಾಗದ್ವೇಷಗಳನ್ನು ಬಿಟ್ಟು ಅರ್ಥಾತ್ ಸೌಮ್ಯಭಾವದಿಂದ ಜೀವಾದಿ ಪದಾರ್ಥಗಳನ್ನು, ಅವು ಯಾವ ಸ್ವರೂಪದಲ್ಲಿರುವುವೋ ಅವೇ ರೂಪಗಳಿಂದ ಧ್ಯಾನಿಸುವುದು ಧರ್ಮಧ್ಯಾನ. ಇದರಲ್ಲಿ ಆಜ್ಞಾವಿಚಯ, ಅಪಾಯವಿಚಯ, ವಿಪಾಕವಿಚಯ ಮತ್ತು ಸಂಸ್ಥಾನವಿಚಯಗಳೆಂಬ ನಾಲ್ಕು ಒಳಭೇದಗಳಿವೆ. ಜೈನ ಗ್ರಂಥಗಳಲ್ಲಿ ಇನ್ನೂ ಹಲವಾರು ಒಳಭೇದಗಳು ನಿರೂಪಿತವಾಗಿವೆ: ವ್ಯುತಕಸೆಜ್ಜೆಯೊಳಿರ್ದು ಸಂನ್ಯಸನಂಗೆಯ್ದು ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಧ್ಯಾನಿಸುತಿರ್ಪನ್ನೆಗಂ (ವಡ್ಡಾರಾ.೨೯-೨) ; ಮುನ್ನಮಾಜ್ಞಾವಿಚಯಮಪಾಯವಿಚಯವಿಪಾಕವಿಚಯಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮಧ್ಯಾನಮಂ ಧ್ಯಾನಿಸುತ್ತುಂ (ಆದಿಪು. ೧೦-೧೪ ವ) ; ದುರಿತವೃಕ್ಷದ ಬೇರಂ ಧರ್ಮ[ಪಾಠಾಂ. ಶುಭ]ಧ್ಯಾನಮೆಂಬ ಕುಠಾರದಿಂ ಕಡಿಯುತ್ತಿರೆ (ಜೀವಸಂ. ೧೮೧-೬) ; ತವದಾಜ್ಞಾವಿಚಯಮಪಾಯವಿಚಯವೆನೆಯುಂ ವಿಪಾಕವಿಚಯಂ ಸಂಸ್ಥಾನವಿಚಯವೆನೆಯುಂ ಪೆಸರ್ವೆತ್ತುವು ನಾಲ್ಕುಂ ತವ್ಯೊಳೆಸೆಯೆ ಧರ್ಮಧ್ಯಾನಂ (ಪುಷ್ಪಪು. ೧೯-೩೩) ; ಅಪಾಯವಿಚಯಂ ಉಪಾಯವಿಚಯಂ ಜೀವವಿಚಯಂ ಅಜೀವವಿಚಯಂ ವಿಪಾಕವಿಚಯಂ ವಿರಾಗವಿಚಯಂ ಭವವಿಚಯಂ ಸಂಸ್ಥಾನವಿಚಯಂ ಆಜ್ಞಾವಿಚಯಂ ಕಾರಣವಿಚಯಮೆಂದಿಂತು ಧರ್ಮಧ್ಯಾನಂ ಪತ್ತು ತೆಱನಪ್ಪುದು (ಪಸಾರ. ೫೯೩). 'ಧರ್ಮಯೋಗ' ಪರಾ. [ಧರ್ಮ + ಧ್ಯಾನ]

**ಧರ್ಮಧ್ವಜ** (ನಾ). ೧. ಧರ್ಮದ ಸಂಕೇತವಾದ ಧ್ವಜ: ಧರ್ಮರಾಜನು ಸಿಂಹಪೀಠವನು ಅಡರಿದೊಲು ಧರ್ಮಪ್ರಾಣವು ಧರ್ಮಧ್ವಜದ ನೆಳಲಿನಲೀ ಧರ್ಮಚೇತನವ ಪ್ರತಿಬಿಂಬದಂತಿರುವ ನೃಪಧರ್ಮದಿಂ ಪಾಲಿಸುತ್ತಿರಲಿಲ್ಲಿ ಇಲ್ಲಿ (ಕಪಪು. ೫೫-೧೮). ೨. (ಆಲಂ) ಧರ್ಮದ ಹೆಸರಿನಲ್ಲಿ ಸ್ವಾರ್ಥವನ್ನು ಸಾಧಿಸುವವನು ; ಧರ್ಮಿಷ್ಠನ ವೇಷ ಹಾಕಿಕೊಂಡವನು ; ಆಷಾಢಭೂತಿ : "ಧರ್ಮಧ್ವಜಃ, ಲಿಂಗವೃತ್ತಿಃ–ಈ ೨ ತಪೋವೇಷಗೊಂಡವಂ" (ಹಲಾಯು. ೬೭-೨೫೧) ; "ಬ್ರಹ್ಮರೊಳು ತಪವೇಷಗೊಂಬವಂ ಧರ್ಮಧ್ವಜಂ ಲಿಂಗವೃತ್ತಿಯಕ್ಕುಂ" (ಮಂಗರಾ. ೭೫-೭) ; ವನಿತಾಪುತ್ರರತಂ ವಿಲಜ್ಜನಲಸಂ ಧರ್ಮಧ್ವಜಂ . . . ವ್ಯಾಗಪ್ರೋದ್ಭವಂ (ಜಾತಿತಿ. ೧೭-೧೦). [ಧರ್ಮ + ಧ್ವಜ]

**ಧರ್ಮಧ್ವಜಿ** (ನಾ). = ಧರ್ಮಧ್ವಜ ೨. [ಸಂ. ಧರ್ಮಧ್ವಜಿನ್]

**ಧರ್ಮನಂದನ** (ನಾ). ಯಮನ ಮಗ ; ಪಾಂಡವರಲ್ಲಿ ಹಿರಿಯ ; ಧರ್ಮರಾಜ ; ಯುಧಿಷ್ಠಿರ : ಆಗಳ್ ಧರ್ಮನಂದನಂ ಮುಕುಂದಂಗೆ ಬಱಿಯನಟ್ಟಿ ಬರಿಸಿ (ಪಂಪಭಾ. ೧೧-೪೭) ; ಎನಗಿದಯುಕ್ತಮೆಂದಿರದೆ

ವೆರ್ಬುಸಿಯೊಳ್ಪುದಿದಿರ್ದ ಧರ್ಮನಂದನನನೆ ಧರ್ಮನಂದನನೆನಲ್ಕೊರೆ . . . ಪೇಡಿಯಾಗಿ ಮತ್ಸ್ಯನ ಮನೆಪೊಕ್ಕ ಪಾರ್ಥನನೆ ಪಾರ್ಥನೆನಲ್ಕೊರೆ ಗಂಡರೆಂಬರೇ (ಗದಾಯು. ೩-೩೬) ; ರಾಜಪರಿವಾಟಿಗಳ ಪಂಥದ ಜೂಜ ಬಲ್ಲರೆ ಕರೆಯ ಬಾರದಡಾ ಜನಾರ್ದನನಾಣೆಯೆಂದನು ಧರ್ಮನಂದನನು (ಕುವ್ಯಾಸ. ೧೩-೪೦). [ ಧರ್ಮ + ನಂದನ ]

**ಧರ್ಮನಿರ್ಣಯ** (ನಾ). ಧರ್ಮದ ನಿಯಮ,–ಸಿದ್ಧಾಂತ : ಆವುದಿದಕನು ನೀತಿಯೆನೆ ಧೌಮ್ಯಾದಿ ಸುಜನವ್ರಾತ ನಿಶ್ಚೈಸಿದರು ಮನದಲಿ ಧರ್ಮ ನಿರ್ಣಯವ (ಕುವ್ಯಾಅ. ೩೨-೩೯) ; ನಾಭಿಯಿಂದವೆ ಕೆಳಗೆ ಕೈವಹಾಡುವುದು ಸಲ್ಲದು ಗದೆಯ ಕದನದಲಿ ಚಲಿಸಲಾಗದು ಧರ್ಮನಿರ್ಣಯದೊಳಗಿದೊಂದೆ ಭಾಷೆ ಮಾಡಿದಿರಳಿದಿರನ್ಯಾಯದಲಿ ಕೋಂದಿರಿ ಕೌರವೇಶ್ವರನ (ಕುವ್ಯಾಗ. ೮-೨೩). [ ಧರ್ಮ + ನಿರ್ಣಯ ]

**ಧರ್ಮನಿರ್ಣಾಯಕ** (ಗುಂ). ಧರ್ಮವನ್ನು ಕುರಿತು ನಿರ್ಧಾರ ಮಾಡುವ,– ನಿಶ್ಚಯಿಸುವ : ಧರ್ಮನಿರ್ಣಾಯಕ ಪ್ರಮಾಣವು ವೇದ (ಭಾರದ. ೪೯).
[ ಸಂ. ]

**ಧರ್ಮನಿವಾಸ** (ನಾ). [ಜ್ಯೋತಿ] ಜನ್ಮಲಗ್ನದಿಂದ ಒಂಬತ್ತನೆಯ ಸ್ಥಾನ : ಕನ್ನೆನಿರೆ ಲಗ್ನದೊಳ್ ಕ್ಷತತನು ವಿತ್ತಸ್ಥಾನದೊಳ್ ಕದನ್ನಭುಜಂ ಧರ್ಮನಿವಾಸದೊಳಘಕರನನ್ಯನಿಲಯದೊಳ್ ರವಿಗೆ ವೃದ್ಧಿಫಲಮಂ ಪಡೆಗುಂ (ಜಾತತಿ. ೦೮-೯). [ ಧರ್ಮ + ನಿವಾಸ ]

**ಧರ್ಮನಿಶ್ಚಯ** (ನಾ). = ಧರ್ಮನಿರ್ಣಯ : ಈ ನುಡಿಯ ಸಲಿಸಿದೊಡೆ ಇವನಪಮಾನಹತನಿದು ಧರ್ಮನಿಶ್ಚಯವೇನು ಸಂಶಯವಿಲ್ಲೆನುತ ನುಡಿದುದು ಮುನಿಸ್ತೋಮ (ಕುವ್ಯಾಅ. ೨೨-೪೦) ; ಧರ್ಮನಿಶ್ಚಯವನ್ನು ತಿಳಿದ ನನ್ನಂಥವನು ಅನ್ಯರ ಕೈಸೇರಿದ ಹೆಂಗಸನ್ನು . . . ಹೇಗೆ ಇಟ್ಟುಕೊಳ್ಳುವುದು ? (ವಚಭಾ. ೪೧೨). [ ಧರ್ಮ + ನಿಶ್ಚಯ ]

**ಧರ್ಮನಿಷ್ಠ** (ನಾ). ಧರ್ಮದಲ್ಲಿ ನಿಷ್ಠೆಯುಳ್ಳವನು, – ಶ್ರದ್ಧೆಯುಳ್ಳವನು; ಧರ್ಮಿಷ್ಠ : ವಸುಧೆಯೊಳು ಧರ್ಮನಿಷ್ಠರನೊಯ್ವ ಮಾರ್ಗವದು ಸೆಸಿನವದು ಸಾರೆಯದು ಸ್ವಸ್ಥವದು ಸೌಖ್ಯವದು (ಸಾನಂಚ. ೪-೯೯) ; ಅಧರ್ಮಶೀಲರು ಪರರು ನೀವತಿ ಧರ್ಮನಿಷ್ಠರು (ಕುವ್ಯಾಸ. ೧-೧೦).
[ ಧರ್ಮ + ನಿಷ್ಠ ]

**ಧರ್ಮನಿಷ್ಠೆ** (ನಾ). ಧರ್ಮದಲ್ಲಿ ಇಟ್ಟಿರುವ ಅಚಲವಾದ ನಂಬಿಕೆ, – ಶ್ರದ್ಧೆ: ಧರ್ಮನಿಷ್ಠೆಯಿಂದ ಭಾರತೀಯ ಸಾಮಾಜಿಕ ಜೀವನವೇ ಬೆಳಗಿತು (ಭಾರದ. ೩೮೮) ; ಕಠಿಣವಾದ ಧರ್ಮನಿಷ್ಠೆಯಿಂದ ನಡೆಯುವವಳು ಅಜ್ಜಿ (ಕಂಬಹು. ೪೪). [ ಧರ್ಮ + ನಿಷ್ಠೆ ]

**ಧರ್ಮಪಟ್ಟು** (ನಾ). ಧರ್ಮದ ವಿವರಣೆ; ದಾನದ ಪಟ್ಟಿ, – ದಾಖಲು: ಯಿ ಧರ್ಮಪಟ್ಟಿನಲ್ಲಿ ಅಡ್ಡಿ ನಡಸಿದರೆ ಮಂಕ್ಕಾದಲ್ಲಿ ಹಂದಿಭಕ್ಷಣೆ ಮಾಡಿದ ಹಾಗೆ ಯೆಂದು ಬರೆಸಿ ಕೊಟ್ಟ ಧರ್ಮಪರವಾನೂ (ಎಕ. IX, ಚನ್ನಪ. ೧೧೪-೧೭ ; 1767). [ ಧರ್ಮ + ಪಟ್ಟು$_3$ (<ಪಟ್ಟೆ$_3$) ]

**ಧರ್ಮಪತ್ತನ** (ನಾ). ೧. ಶ್ರಾವಂತಿ ನಗರ. ೨. ಮೆಣಸು.
[ ಧರ್ಮ + ಪತ್ತನ ]

**ಧರ್ಮಪತ್ನಿ** (ನಾ). ವಿಧಿಪೂರ್ವಕವಾಗಿ ಮದುವೆಯಾದ ಹೆಂಡತಿ : ಧರ್ಮಪತ್ನಿ ಬಾಯಟಿದು ಕೊರಲ್ಗೆ ಪಾಯ್ದು ಪರಿದಾಡುವ ಬಾಲಕನಾದ ಶೋಕದಿಂ ಗಟಗಟ ಕಣ್ಣ ನೀರ್ ಸುರಿಯೆ ಚಿಂತಿಪ ಪಾರ್ವನ ಶೋಕದೊಂದು ಪೊಂಪುಟಿಯನೆ ನೋಡಿ (ಪಂಪಭಾ. ೩-೨೫) ; ನೀವಿಾ ಯತಿ ಸ್ವರೂಪಮಂ ಕೈಕೊಂಡ ವಾರ್ತೆಯಂ ನಿಮ್ಮ ಮುನ್ನಿನ ಧರ್ಮಪತ್ನಿಯಪ್ಪ ಕೋಮದತ್ತೆ . . . ಅಱಿದು (ಸುಕುಮಾ. ೫-೭೪) ; ಧರ್ಮಪತ್ನಿಯನ್ನು ಬಿಟ್ಟವನ ಹೆಸರನ್ನು ಎತ್ತುವುದಕ್ಕೆ ಯಾರಿಗೆ ತಾನೆ ಮನಸ್ಸು ಬಂದೀತು ? (ಶಾಕುಂತ. ೧೦೭-೩). [ ಸಂ. ಧರ್ಮಪತ್ನೀ ]

**ಧರ್ಮಪಥ** (ನಾ). ಧರ್ಮದ ಹಾದಿ,–ಮಾರ್ಗ : ಭಲರೆ ನೃಪೇಂದ್ರಾ ದಯೆಯೊಳ್ ನೆಲೆಗೊಳಿಸಿದ ಮನಮಂ . . . ಧರ್ಮಪಥದೊಳ್ ಸಲೆ ಸಂದಪೆ ಕಾಲಲಬ್ಧಿ ಪೊಲಗೆಡಿಸುವುದೇ (ಯಶೋಚ. ೧-೭೯) ; ಧರ್ಮಪಥ ಹುಲುವಟ್ಟೆಯೆನಿಸಿದ ಹವ್ವಿನಲಿ ಕೆಡಬೇಡ ನೀತಿಯ ನೆವ್ವಿದವ ಕೆಡನೆಂದು ನಾರದ ನುಡಿದನರಸಂಗೆ (ಕುವ್ಯಾಉ. ೯-೧೩). [ ಸಂ. (ಧರ್ಮ+ಪಥಿನ್+–)]

**ಧರ್ಮಪದ್ಧತಿ** (ನಾ). = ಧರ್ಮಪಥ: ಧರ್ಮಪದ್ಧತಿಯನೀಕ್ಷಿಸಲಿವಳನಿಂದು ವಿಾಱುವುದು ಮತವಲ್ಲೆಂದವಂ ತಿಳಿದನು (ಜೈಮಿಭಾ. ೧೧-೩೦).
[ ಧರ್ಮ + ಪದ್ಧತಿ ]

**ಧರ್ಮಪರ** (ನಾ). ಧರ್ಮದಲ್ಲಿ ವಿಶೇಷವಾದ ಶ್ರದ್ಧೆಯುಳ್ಳವನು ; ಧರ್ಮನಿಷ್ಠ ; ಧರ್ಮಿಷ್ಠ : ನಿರ್ದ್ರವ್ಯನಂ ಸೂಳೆಯರ್ ಖಳನಂ ಧರ್ಮಪರರ್ . . . ಬಿಡುವಂತೆ ರಾಜ್ಯದಳಿಪಂ ಬಿಟ್ಟಂ ಖಗಾಧೀಶ್ವರಂ (ಧರ್ಮಾಮೃ. ೫-೪೩) ; ಧರ್ಮಪರರ್ಗಲ್ಲದೆಮ್ಮಯ ನಿರ್ಮಲಚಾರಿತ್ರ ವಿಂಬುಕೆಯ್ಯದು (ಯಶೋಚ. ೧-೬೪) ; ದೈವಬಲವವರಲ್ಲಿ ನೀವೇ ದೈವ ಹೀನರು ಧರ್ಮಪರರವರ್ಸೈವರೂ ಸತ್ಪುರುಷಶೀಲರು ನೀವಧಾರ್ಮಿಕರು (ಕುವ್ಯಾಭೀ. ೧-೨೩). [ ಸಂ. ]

**ಧರ್ಮಪರವಾನಿಗೆ** (ನಾ). = ಧರ್ಮಪರವಾನು : ಸೈದುಮುಹಮ್ಮದು ಅಕಲಶಾ ಖಾದ್ರಿಯವರಿಗೆ ಬರಸಿ ಕೊಟ್ಟ ಧರ್ಮಪರವಾನಿಗೆ ಕ್ರಮವೆನ್ನೆಂದರೆ (ಎಕ. IX, ಚನ್ನಪ. ೧೧೪-೬ ; 1767).
[ ಧರ್ಮ + ಪರವಾನಿಗೆ (<ಪರವಾನಗಿ) ]

**ಧರ್ಮಪರವಾನು** (ನಾ). ದತ್ತಿ ಅಥವಾ ದಾನ ಕೊಟ್ಟುದಕ್ಕಾಗಿ ಬರೆಸಿದ ಶಾಸನ ; ದಾನಶಾಸನ : ಯಿ ಧರ್ಮಪಟ್ಟನಲ್ಲಿ ಅಡ್ಡಿ ನಡಸಿದರೆ ಮಕ್ಕಾದಲ್ಲಿ ಹಂದಿಭಕ್ಷಣೆ ಮಾಡಿದ ಹಾಗೆ ಯೆಂದು ಬರೆಸಿ ಕೊಟ್ಟ ಧರ್ಮ ಪರವಾನೂ (ಎಕ. IX, ಚನ್ನಪ. ೧೧೪-೧೭ ; 1767).
[ ಧರ್ಮ + ಪರವಾನು (<ಪರವಾನಾ) ]

**ಧರ್ಮಪರಾಙ್ಮುಖ** (ನಾ). ಧರ್ಮದ ಬಗೆಗೆ ಉದಾಸೀನತೆಯನ್ನು ಹೊಂದಿದವನು : ಧರ್ಮಪರಾಙ್ಮುಖರನ್ನು ಉಪಾಯಾಂತರದಿಂದ ದಂಡಿಸಿ ಮಾಡುವ ಧರ್ಮರಕ್ಷಣವು ಅಧರ್ಮವಾಗಬಹುದೋ ? (ಮಾಧವ. ೩೬೨).
[ ಧರ್ಮ + ಪರಾಙ್ಮುಖ ]

**ಧರ್ಮಪರಾಙ್ಮುಖತೆ** (ನಾ). ಧರ್ಮದ ಬಗೆಗೆ ವಿಮುಖವಾಗಿರುವುದು,– ಉದಾಸೀನತೆ: ಕೃತಕಾರ್ಯದ್ವೇಷವೊ ವಿಶ್ರುತ ಧರ್ಮಪರಾಙ್ಮುಖತೆಯೊ ಅವಹೇಳನವೋ (ಶಾಕುಂತ. ೬೭-೨). [ ಧರ್ಮ + ಪರಾಙ್ಮುಖತೆ ]

**ಧರ್ಮಪರಾಯಣ** (ನಾ). =ಧರ್ಮಪರ: ನಿಮ್ಮಯ್ಯಂ ಧರ್ಮಪರಾಯಣಂ ಮಹಾಪುರುಷಂ (ಚಾವುಂಪು. ೨೯೪) ; ಅವನ ಮಗನೂ ಈಗ ತಂದೆಯಂತೆಯೇ ಧರ್ಮಪರಾಯಣನಾಗಿದ್ದಾನೆ (ವಚಭಾ. ೨೮). [ ಧರ್ಮ + ಪರಾಯಣ ]

**ಧರ್ಮಪರಿಣಾಮ** (ನಾ). (ವಸ್ತುವಿನ) ಸ್ವಭಾವ ಅಥವಾ ಗುಣದಲ್ಲಿ ಆಗುವ ಬದಲಾವಣೆ,–ವ್ಯತ್ಯಾಸ : ಬಾಹ್ಯವಸ್ತುಗಳಲ್ಲೂ ತಂತುಗಳಿಂದ ಆಗತಕ್ಕ ಪಟಾದಿ ಪರಿಣಾಮವು ಧರ್ಮಪರಿಣಾಮ (ಹಿಂದಸಾ. ೧೦೩).
[ ಧರ್ಮ + ಪರಿಣಾಮ ]

**ಧರ್ಮಪಾನೀಯ** (ನಾ). ಧರ್ಮಾರ್ಥವಾಗಿ (ದಾರಿಗರಿಗೆ) ಕೊಡುವ ನೀರು ಅಥವಾ ಪಾನೀಯ : ಪೂರ್ವಪದಾಂತ್ಯಕ್ಕೆ ದೀರ್ಘಮುಂ ಉತ್ತರಪದಾದಿಗೆ ಲೋಪಮುಮಾಗಿ–ಕಾಂಸ್ಯತಾಳ–ಕಂಸಾಳ ; ಧರ್ಮ ಪಾನೀಯ–ದವ್ಮಾಣಿವೆಂದಾಯ್ತು (ಶಮದ. ೨೯೩ ಪ್ರಯೋ).
[ ಧರ್ಮ + ಪಾನೀಯ ]

**ಧರ್ಮಪಾಲ** (ನಾ). ಧರ್ಮವನ್ನು ರಕ್ಷಣೆಮಾಡುವವನು ; ಧರ್ಮಿಷ್ಠ : ನಿನ್ನಂತಾವಂ ಜನ್ಮಸಾಫಲ್ಯಮನಱಿ ಪಡೆದಂ ಭೂಪರೊಳ್ ಧರ್ಮಪಾಲಂ (ಬಾಧಪು. ೩-೬೨). [ ಧರ್ಮ + ಪಾಲ$_4$ ]

**ಧರ್ಮಪಾಲನ** (ನಾ). ಧರ್ಮವನ್ನು ರಕ್ಷಿಸುವುದು ; ಧರ್ಮದ ರಕ್ಷಣೆ : ಧರ್ಮಪಾಲನರೂಪವಾದ ತಪಶ್ಚರ್ಯವನ್ನು . . . ಹೆಚ್ಚು ಕಠಿಣತರವಾಗಿಯೇ ಅಲ್ಲ, ಉಗ್ರತರವಾಗಿಯೂ ಆಚರಿಸಬೇಕಾಗುವದು (ಮಾಧವ. ೩೬೫). [ ಧರ್ಮ + ಪಾಲನ ]

**ಧರ್ಮಪೀಠ** (ನಾ). ೧. ಧರ್ಮದ ತಳಹದಿ,-ಬುನಾದಿ: ರಾಜ್ಯವಾಗಲಿ ಕೋಶವಾಗಲಿ ಧರ್ಮಪೀಠದ ಮೇಲೆ ಸ್ಥಾಪಿತವಾದಾಗ ಭೂಷಣವಾಗುವುದು (ದಾನಚಿಂ. ೧೬೫). ೨. ಧರ್ಮಪ್ರಸಾರ ಮಾಡುವ ಸ್ಥಳ ; ಮಠ : ಸಂನ್ಯಾಸಿಗಳು ಧರ್ಮಪೀಠದಿಂದ ಮಾಡುವ ಉಪದೇಶಗಳನ್ನು ಜನರು ಶ್ರದ್ಧೆಯಿಂದ ಲಾಲಿಸಬೇಕು (ರೂಢಿ). ೩. ನ್ಯಾಯಾಲಯದಲ್ಲಿ ನ್ಯಾಯಾಧೀಶನು ಕುಳಿತುಕೊಳ್ಳುವ ಸ್ಥಳ : ಧರ್ಮಪೀಠದಲ್ಲಿ ಕುಳಿತು ನ್ಯಾಯಾಧೀಶನು ಕೊಡುವ ತೀರ್ಪನ್ನು ಜನರು ಒಪ್ಪಬೇಕು (ರೂಢಿ). [ ಧರ್ಮ + ಪೀಠ ]

**ಧರ್ಮಪುತ್ರ** (ನಾ). ೧. ಧರ್ಮಪತ್ನಿಯಲ್ಲಿ ಹುಟ್ಟಿದ ಮಗ. ೨. ನ್ಯಾಯಶಾಸ್ತ್ರದ ದೃಷ್ಟಿಯಿಂದ ಮಗನೆಂದು ಪರಿಗಣಿತನಾಗುವವನು. ೩. ಪಾಂಡವರಲ್ಲಿ ಹಿರಿಯ ; ಯುಧಿಷ್ಠಿರ : "ಪಾಂಡವಂ ಧರ್ಮಜಂ ಯುಧಿಷ್ಠಿರನು ಧರ್ಮಪುತ್ರನೆಂದೆನಿಕು" (ಮಂಗರಾ. ೭೮-೩) ; ಧರ್ಮದೊಳ್ ನಿರ್ಮಲಚಿತ್ತಂ ಧರ್ಮಪುತ್ರಂ (ಪಂಪಭಾ. ೧೪-೬೪) ; ಆ ಧರ್ಮಪುತ್ರಂ ದಯಾಪರನೆಂದೆಲ್ಲರ ಪೇೞ್ದ ಮಾತು ಪುಸಿಯಾಯ್ತಾ ಕಾರ್ಮುಕಾಚಾರ್ಯನಂ . . . ಕೊಂದಾಗಳ್ (ಗದಾಯು. ೩-೨೩) ; ಹಯಮೇಧಸತ್ರಸಾಧನಕೆ ವೇದವ್ಯಾಸಮುನಿ ಧರ್ಮಪುತ್ರನಂ ಬೋಧಿಸಿ ಮರಳ್ದಂ (ಜೈಮಿಭಾ. ೨-೪೭). [ ಧರ್ಮ + ಪುತ್ರ ]

**ಧರ್ಮಪುರ** (ನಾ). = ಧರ್ಮಪುರ: ವಿನುತಚಳುಕ್ಯವಂಶಪತಿ ವಿುಕ್ಕರಿಕೇಸರಿ ಸನ್ನ ವಿಕ್ರಮಾರ್ಜುನವಿಜಯಕ್ಕೆ ಧರ್ಮಪುರಮೆನ್ದು ಮದೀಯಮಿದೆನ್ದು ಕೀರ್ತಿಶಾಸನಮನೆ ಕೊಟ್ಟ ಶಾಸನದ ಪಂಪನನಾ ಬಿರುದೊಂದು ಜೈನಶಾಸನದ ನೆಗಟ್ಟಿಯ ವೃಷಭಪರ್ವತಮನ್ತದು ತಾನೆ ಪೇೞದೇ (ಕನ್ನಸು. ೩೨-೧೧-೯) ; ಭ್ರಾತರ್ದ್ಧರ್ಮಪುರಂ ಪ್ರಯಾಮ ಕಿಮತೋ ಜೈನಾಭಿಷೇಕೋತ್ಸವ ಕ್ಷೀರಪ್ಲಾವಿತತುಂಗ ಶೃಂಗ ವೃಷಭಕ್ಷೋಣೀಧ್ರ ವಿೂಕ್ಷಾಮಹೇ ಯಾತ್ರಾಯಾತಸಮಸ್ತಭವ್ಯ ಜನತಾ ಸನ್ಮಾನದಾನೋದ್ಯತಂ ಪಂಪಾರ್ಯಾನುಜಮತ್ರ ಭೀಮತನುಜಂ ಸಮ್ಯಕ್ತ್ವರತ್ನಾಕರಂ (ಕನ್ನಸು. ೩೨-೧೧-೮). [ ಧರ್ಮ + ಪುರ$_2$ ]

**ಧರ್ಮಪೋಷಕ** (ನಾ). ೧. ಧರ್ಮಕ್ಕೆ ಸಹಾಯಕವಾದುದು : ಧರ್ಮ ಪೋಷಕವಾದ ಅರ್ಥ ಕಾಮಗಳೆ ಜೀವನದ ಪುಷ್ಟಿ ಮತ್ತು ಸಾರ್ಥಕ್ಯ ಸಂಪಾದಕ (ಹುಕ್ಕಾರ. ೧೧೭ ಪೀಠಿಕೆ). ೨. ಧರ್ಮವನ್ನು ಕಾಪಾಡುವ ರಾಜನೇ ಮೊದಲಾದವರು : ನಾಲ್ವಡಿ ಕೃಷ್ಣರಾಜ ಒಡೆಯರು ಧರ್ಮ ಪೋಷಕರಾಗಿದ್ದರು (ರೂಢಿ). [ ಧರ್ಮ + ಪೋಷಕ ]

**ಧರ್ಮಪ್ರಕಾಶನ** (ನಾ). ಧರ್ಮವನ್ನು ಬೆಳಕಿಗೆ ತರುವುದು ; ಧರ್ಮ ಪ್ರಚಾರ : ಧರ್ಮಪ್ರಕಾಶನ ಕುಂಠಿತವಾದ ಕಾಲದಲ್ಲೆಲ್ಲ ವಸಿಷ್ಠಾದಿ ಅಧ್ಯಾತ್ಮಸಂಪನ್ನರೆ ರಾಷ್ಟ್ರನಾಯಕರಾಗಿ ಧರ್ಮಸಂರಕ್ಷಣೆ ಮಾಡುತ್ತಿದ್ದಾರೆ (ಹುಕ್ಕಾರ. ೧೨೨ ಪೀಠಿಕೆ). [ ಧರ್ಮ + ಪ್ರಕಾಶನ ]

**ಧರ್ಮಪ್ರಚಾರ** (ನಾ). ಧರ್ಮದ ಪ್ರಸಾರ ; ಧರ್ಮವನ್ನು ಹರಡುವಿಕೆ : ವಾಸ್ಕೋಡಿಗಾಮನು ಇಂಡಿಯಾಕ್ಕೆ ಬಂದ ಮೇಲೆ ಕ್ರೈಸ್ತಮತದ ಧರ್ಮ ಪ್ರಚಾರವು ಅಧಿಕವಾಗಿ ಬೆಳೆಯಿತು (ರೂಢಿ). [ ಧರ್ಮ + ಪ್ರಚಾರ ]

**ಧರ್ಮಪ್ರಚಾರಕ** (ನಾ). ಧರ್ಮವನ್ನು ಜನತೆಯಲ್ಲಿ ಪ್ರಚಾರಮಾಡುವವನು : ಅಶೋಕನು ಮಹಿಷಮಂಡಲಕ್ಕೂ ಧರ್ಮಪ್ರಚಾರಕರನ್ನು ಕಳುಹಿಸಿದ್ದನೆಂದು ಬೌದ್ಧಗ್ರಂಥಗಳಿಂದ ತಿಳಿದ.ಬರುತ್ತದೆ (ಕರ್ನಾಅ. ೨). [ ಧರ್ಮ + ಪ್ರಚಾರಕ ]

**ಧರ್ಮಪ್ರತಿಪಾಳ** (ನಾ). ಧರ್ಮವನ್ನು ಕಾಪಾಡುವವನು; ಧರ್ಮಿಷ್ಠ : ಮಹಾಮಹೇಶ್ವರಂ ಸಮಯಧ[ರ್ಮ್ಮ]ಪ್ರತಿಪಾಳರುಮಪ್ಪ ಕಾಚೆಯ ಸಾಹಣಿ[ಯುಂ] . . . ಧಾರಾಪೂರ್ವ್ವಕಂ ಮಾಡಿಕೊಟ್ಟರು (ಸೌಇಇ. XX, ೨೨೮-೧೨ ; 1207). [ ಸಂ. ಧರ್ಮಪ್ರತಿಪಾಲ ]

**ಧರ್ಮಪ್ರತಿಪಾಳಕ** (ನಾ). = ಧರ್ಮಪ್ರತಿಪಾಳ : ಕಿರಿಯ ಗೋವಣರಸ ಧರ್ಮಪ್ರತಿಪಾಳಕನಿಂ[ದ]ರಸನ ಮಗ ಆಹುಮಲ್ಲರಸ . . . ಭೂಮಿಯುಂ ಸರ್ವ್ವನಮಸ್ಯಮಾಗಿ ಬಿಟ್ಟರು (ಸೌಇಇ. XX, ೮೫-೧೮ ; 1124). [ ಸಂ. ಧರ್ಮಪ್ರತಿಪಾಲಕ ]

**ಧರ್ಮಪ್ರತಿಪಾಳನ** (ನಾ). ಧರ್ಮವನ್ನು ಸಂರಕ್ಷಿಸುವುದು,-ಆಚರಿಸುವುದು : ವೀರಬಣಂಜಸಮಯಧರ್ಮ್ಮಪ್ರತಿಪಾಳನ ವಿಶುದ್ಧ ಗುಡ್ಡಧ್ವಜ ವಿರಾಜಿತಾನೂನ . . . ಆಚಾರಕಲಿಗಳಪ್ಪ ಶ್ರೀಮದಯ್ಯಾವ್ವರ್ಸ್ವಾಮಿಗಳುಂ (ಸೌಇಇ. XI-ii, ೧೪೮-೭ ; 1099). [ ಸಂ. ಧರ್ಮಪ್ರತಿಪಾಲನ ]

**ಧರ್ಮಪ್ರತಿಷ್ಠಾಪಕ** (ನಾ). ಧರ್ಮವನ್ನು ಸ್ಥಾಪಿಸುವವನು : ರಾಮನು ಇಂದಿಗೂ ನಮಗೆ ಧರ್ಮಪ್ರತಿಷ್ಠಾಪಕನೆಂದು ಅವತಾರವಾಗಿ ತೋರುವವನು (ಪ್ರಬಂಧ. ೫೩). [ ಧರ್ಮ + ಪ್ರತಿಷ್ಠಾಪಕ ]

**ಧರ್ಮಪ್ರತಿಷ್ಠಾಪನೆ** (ನಾ). ಧರ್ಮವನ್ನು ನೆಲೆಗೊಳಿಸುವಿಕೆ: ಅಧರ್ಮವು ತಲೆದೋರಿದಾಗ ಮಹಾತ್ಮರು ಧರ್ಮಪ್ರತಿಷ್ಠಾಪನೆಯನ್ನು ಮಾಡಲು ಶ್ರಮಿಸುತ್ತಾರೆ (ರೂಢಿ). [ ಧರ್ಮ + ಪ್ರತಿಷ್ಠಾಪನೆ ]

**ಧರ್ಮಪ್ರಭಾವ** (ನಾ). ೧. ಧರ್ಮದ ಮಹಿಮೆ,-ವರ್ಚಸ್ಸು : ಅವಂ . . . ಧರ್ಮಪ್ರಭಾವಮಂ ದಿವಿಜಲೋಕಕ್ಕೆ ಮೆಚ್ಚುಯುತ್ತಂ ನಿಜನಿವಾಸಕ್ಕೆ ಬಂದು (ವರ್ಧಮಾ. ೬-೪೬ವ) ; ಕಂಟಕನಲಾ ಧರ್ಮಪ್ರಭಾವಕ್ಕೆ ಕೌರವೇಶ್ವರನು (ಕುಮ್ಯಾಗ. ೩-೨). ೨. ಯಮಧರ್ಮನ ಮಹಿಮೆ,-ಶಕ್ತಿ. ೧, ೨ : ಸತ್ಪುರುಷನಂತೆ ನಿಷ್ಕಪಟಮಹಿಮಾವಳಂಬಿಯುಂ ಯಾಮ್ಯದಿಶೆಯಂತೆ ಧರ್ಮಪ್ರಭಾವವಿಭಾವಿತಮುಮೆಂಬ ಮಹನೀಯ ಮಹಿಮೆಯುಂ ತಳೆದು (ಪುಷ್ಪಪು. ೯-೩೦ ವ). [ ಧರ್ಮ + ಪ್ರಭಾವ ]

**ಧರ್ಮಪ್ರಭಾವನೆ** (ನಾ). [ಜೈನ] ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಕೊನೆಯದು : ನಿಶ್ಶಂಕೆಯುಂ . . . ವಾತ್ಸಲ್ಯಮುಂ ಧರ್ಮಪ್ರಭಾವನೆಯು ಮೆಂದು ಎಸೆವಂಗಮೆಂಟಱಿಂ ರಂಜಿಸುವ ಮಹಾನರ್ಘ್ಯಮಪ್ಪ ದರ್ಶನಮಂ . . . ಕೈಕೊಂಡು (ಧರ್ಮಾಮೃ. ೧-೭೮) ; ಕಡೆಯಲುಳಿದಿರ್ದ ಪಲ್ಯಪ್ರಮಿತಕಾಲದೊಳ್ ಧರ್ಮಪ್ರಭಾವನಾಪ್ರಕಾಶಮೆಲ್ಲಂ ವಿಚ್ಛಿತ್ತಿಯನೆಯ್ದಿ (ಶಾಂತಿಪು. ೬-೩೭ ವ). [ ಧರ್ಮ + ಪ್ರಭಾವನೆ ]

**ಧರ್ಮಪ್ರವರ** (ನಾ). ೧. ಶ್ರೇಷ್ಠವಾದ ಧರ್ಮ. ೨. ಧರ್ಮದ ಆಚರಣೆಯಲ್ಲಿ ಶ್ರೇಷ್ಠನಾದವನು; ಧರ್ಮಿಷ್ಠ : ಅವರು ನಿಮಗತಿಭಕ್ತರೈ ಬಾಂಧವರೆಲೇ ತಪ್ಪೇನು ಧರ್ಮಪ್ರವರರಿಗೆ ನೀವೊಲಿದಿರೆಂದನು ಕೌರವರ ರಾಯ (ಕುಮ್ಯಾಸ. ೧೬-೯). [ ಧರ್ಮ + ಪ್ರವರ ]

**ಧರ್ಮಪ್ರವಚನ** (ನಾ). ಧರ್ಮವನ್ನು ಕುರಿತು ಮಾಡುವ ವ್ಯಾಖ್ಯಾನ : ಧರ್ಮದ ಬಗೆಗೆ ತಿಳಿವಳಿಕೆಯನ್ನುಂಟುಮಾಡಲು ಅಲ್ಲಲ್ಲಿ ಧರ್ಮಪ್ರವಚನಗಳು ನಡೆದರೆ ಒಳ್ಳೆಯದು (ರೂಢಿ). [ ಧರ್ಮ + ಪ್ರವಚನ ]

**ಧರ್ಮಪ್ರವರ್ತಕ** (ನಾ). ಧರ್ಮವನ್ನು ಪ್ರಚಾರ ಮಾಡುವವನು; ಧರ್ಮದ ಪ್ರೇರಕ : ಸೃಷ್ಟಿಕರ್ತನು . . . ಮಹಾತ್ಮರಾದ ಧರ್ಮ ಪ್ರವರ್ತಕರ ಮುಖಾಂತರವಾಗಿ ಜ್ಞಾನರಾಶಿಯನ್ನು ಹಂಚಿಕೊಟ್ಟಿರುವನು (ಮಾಧವ. ೪೧೪). [ ಧರ್ಮ + ಪ್ರವರ್ತಕ ]

**ಧರ್ಮಪ್ರವರ್ತನ** (ನಾ). ಧರ್ಮಕ್ಕೆ ಉಂಟಾಗುವ ಪ್ರಚೋದನೆ : ತ್ರಿಜ್ಞಾನಧರರು ಪುಟ್ಟಿ . . . ಸಕಲಭುವನವಿಹಿತಧರ್ಮಪ್ರವರ್ತನಹೇತುವಪ್ಪುದಱಿಂ ಧರ್ಮನಾಥರೆಂದನ್ವರ್ಥನಾಮಮನಿಟ್ಟು ಪೋದರ್ (ಜಾಮ್ರಪು. ೧೭೩). [ ಧರ್ಮ + ಪ್ರವರ್ತನ ]

**ಧರ್ಮಪ್ರವೃದ್ಧಿ**(ನಾ). ಧರ್ಮದ ಏಳಿಗೆ; ಧಾರ್ಮಿಕ ಕರ್ಮಾನುಷ್ಠಾನದ ಮೇಲ್ಮೆ,-ಹೆಚ್ಚಳ: ಎಲ್ಲಿಯವು ಧರ್ಮಪ್ರವೃದ್ಧಿಗಳೆಲ್ಲಿಯದು ಯಜ್ಞಾದಿ ಕರ್ಮವಿವೆಲ್ಲವಂ ತಾಂ ಹೇಳಲೇನಿನ್ನೆಂತು ಸಂದಹವು (ಬಸವು. ೩೩-೬). [ ಧರ್ಮ + ಪ್ರವೃದ್ಧಿ ]

**ಧರ್ಮಪ್ರಸಂಗ** (ನಾ). ಪುಣ್ಯದ ವಿಚಾರ,-ಸಂಗತಿ,-ವಿಷಯಂ: ಬಿಜ್ಜಲ ಮಹಾರಾಜಂ ಬಿಜಯಂಗೆಯ್ದು . . . ಅನಿಬರುಮೊಂದಾಗಿ ಬಂದು ಕುಳ್ಳಿರ್ದ್ದು ಕೋಡಿಯಮಠದ ಧರ್ಮ್ಮಪ್ರಸಂಗಮಂ ಮಾಪ್ಪುದುಂ (ಎಕ. VII, ಶಿಕಾರಿ. ೧೦೩-೩೩; 1162); ಕುವರ[ಮ]ಲಿದೇವಂ . . . ಸುಖ ಸಂಕಥಾವಿನೋದದಿಂ ರಾಜ್ಯಂಗೆಯ್ಯುತಿರ್ದ್ದದೊಂದು ದಿವಸಂ ಧರ್ಮಪ್ರಸಂಗವಾಗೆ . . . ಒದವಿದ ಸರಸಿಜಮರ್ಕ್ಕಭ್ಯುದಯದಿನಲರ್ವನ್ತೆ ಜನದ ಮನ[ಮ]ಲರ್ವಿನೆಗಂ ಸದಯೋಕ್ತಿಯುಕ್ತಿಯಿಂ ವಿಭೂ [ವು] ಳಿಯಣ್ಣಂ ಧರ್ಮ್ಮಪ್ರಸಂಗಮಂ ಪುಟ್ಟಿಸಿದಂ (ಕಇ. IV, ೩೮-೪೦.; 1187); ಕೋಣ ವತ್ತಿಯ ಸೆಟ್ಟಿಕವ್ವೆ ಮಾಡ್ಸಿದ ಸಾತೆಯನಹಳ್ಳಿಯ ಹರಿಹರೇಶ್ವರದೇವರ ಧಂರ್ಮ್ಮಪ್ರಸಂಗವಂ ಬಿಂನಪಂಗೆಯ್ದು ಆ ದೇವರ ಶ್ರೀಕಾರ್ಯಕ್ಕೆ ಹಡೆದ ವ್ರಿತ್ತಿ (ಕಇ. IV, ೧-೯೯; 1204). [ ಧರ್ಮ + ಪ್ರಸಂಗ ]

**ಧರ್ಮಪ್ರಿಯ** (ನಾ). ೧. ಧರ್ಮದಲ್ಲಿ ಆಸಕ್ತಿಯುಳ್ಳವನು; ಧರ್ಮಿಷ್ಠ: ಯಥಾ ರಾಜಾ ತಥಾ ಪ್ರಜಾ ಎಂಬವೊಲೋಜೆಯೊಳೋಜೆಗೊಂಡು ಧರ್ಮಪ್ರಿಯರಾದರ್ ಪ್ರಜೆಗಳುಂ (ಆದಿಪು. ೧೬-೪೦). ೨. ಧರ್ಮರಾಜನಲ್ಲಿ ಪ್ರೀತಿಯುಳ್ಳವನು. ೧,೨: ಪಾರ್ಥನಂತೆ ಧರ್ಮಪ್ರಿಯನುಂ...ನಿಚ್ಚಗಲಿಯಂತೆ [ಧರ್ಮದೊಳ್] ನಿಶ್ಶಂಕನುಮಪ್ಪುದು (ಧರ್ಮಾಮೃ. ೪-೪೬). [ ಧರ್ಮ + ಪ್ರಿಯ ]

**ಧರ್ಮಫಲ** (ನಾ). ವಿಹಿತವಾದ ಕರ್ಮಗಳ ಆಚರಣೆಯಿಂದ ದೊರೆಯುವ ಫಲ,-ಲಾಭ: ನಮ್ಮನ್ನು ನಾವು ಕೊಂದುಕೊಂಡು ಏನು ಧರ್ಮಫಲ ಸಾಧಿಸಿದ ಹಾಗಾಯಿತು? (ವಚಧಾ. ೩೨೮). [ ಧರ್ಮ + ಫಲ$_1$ ]

**ಧರ್ಮಬಂಧಿತ** (ಗು). ೧. ಧರ್ಮದ ನಿಬಂಧನೆ ಅಥವಾ ಕಟ್ಟಿಗೆ ಒಳಗಾದ. (ನಾ). ೨. ಧರ್ಮದ ಕಟ್ಟಿಗೆ ಒಳಗಾದ ವ್ಯಕ್ತಿ: ನಾನೇನು ಮಾಡಲಿ? ನಾನಿಂದು ಧರ್ಮಬಂಧಿತಳು (ನಿಕಉ. ೨೦೨). [ ಧರ್ಮ + ಬಂಧಿತ ]

**ಧರ್ಮಬಲ** (ನಾ). ಧರ್ಮದ ಪ್ರಭಾವ,-ಸಾಮರ್ಥ್ಯ: ಎತ್ತಲೊಲೆವುದು ಧರ್ಮಬಲ ತಾನತ್ತಲೊಲೆವುದು ದೈವ ದೈವವದೆತ್ತಲೊಲೆದಿಹುದತ್ತ ವಿಜಯಶ್ರೀಯ ಕುಡಿನೋಟ (ಕುವ್ಯಾದ್ರೋ. ೪-೨). [ ಧರ್ಮ+ಬಲ$_2$ ]

**ಧರ್ಮಬಹಿರ್ಮುಖ** (ನಾ). ಧರ್ಮದಿಂದ ವಿಮುಖನಾದವನು: ಬಳಿಮುಖ ಧರ್ಮಬಹಿರ್ಮುಖ ಚಳಮತಿ ನೀಂ ರೌದ್ರಭಾವಮಂ ತಳೆದಿಂತೇಕೊಳಪುಗುವೆ ಘೋರದುರ್ಗತಿಗಳೊಳ್ (ನೇಮಿಪು. ೩-೭೫). [ ಧರ್ಮ + ಬಹಿರ್ಮುಖ ]

**ಧರ್ಮಬಾಹಿರ** (ನಾ). ೧. ಧರ್ಮಕ್ಕೆ ಹೊರತಾದುದು: ಈ ನಿಯಮಕ್ಕೆ ಹೊರಗಾದ ಉದಾಹರಣಗಳು ಎಲ್ಲಿಯಾದರೂ ಕಂಡುಬಂದರೆ ಅವು ಕೇವಲ ಅಪವಾದವೆಂದಾಗಲಿ, ಧರ್ಮಬಾಹಿರವೆಂದಾಗಲಿ ತಿಳಿಯಬೇಕು (ಮಾಧವ. ೩೨೬). ೨. ಧರ್ಮವನ್ನು ಉಲ್ಲಂಘನೆ ಮಾಡಿದವನು; ಧರ್ಮಭ್ರಷ್ಟ: ಧರ್ಮಬಾಹಿರನೂ ಕಠಿನಹೃದಯನೂ ದುಷ್ಟನೂ . . . ಆದ ರಾಜನನ್ನು ತನ್ನ ಸ್ವಾಮಿಯೆಂದು ಸ್ವೀಕರಿಸಲು ಹುಸೇನರು ಹೇಗೆ ಒಪ್ಪಲಿಲ್ಲವೋ (ರಾಮರಾ. ೯೬). [ ಧರ್ಮ + ಬಾಹಿರ ]

**ಧರ್ಮಬಾಹಿರತೆ** (ನಾ). ಧರ್ಮಭ್ರಷ್ಟತೆ; ಧರ್ಮಕ್ಕೆ ಹೊರತಾಗಿರುವಿಕೆ: ಗೋವಿಂದರಾಯರ ಧರ್ಮಬಾಹಿರತೆ-ನೀತಿಬಾಹಿರತೆಯನ್ನು ಶ್ರೀಗಳವರ ನಿದರ್ಶನಕ್ಕೆ ತರಬೇಕು (ಸಮಜೀ. ೩೬). [ ಧರ್ಮಬಾಹಿರ+-ತೆ$_3$ ]

**ಧರ್ಮಬುದ್ಧಿ** (ನಾ). ೧. ಸತ್ಕರ್ಮದಲ್ಲಿ ಆಸಕ್ತಿ; ಸದಾಚಾರ: ವಿಟ್ಟರಸಂಗಳು . . . ಧರ್ಮ್ಮಬುದ್ಧಿಯಿಂ ಪಡೆದು ನಿಜಾರ್ತ್ಥದಿಂದೆಸೆಯೆ ನಿರ್ಮ್ಮಿಸಿದಂ ವ್ರಿಡಗೇಹಮಂ (ಸೌಇಇ. XX, ೧೧೫-೪೪; 1146); ನಿನ್ನನ್ನು ನೋಡಿದ ಮೇಲಾದರೂ ನನಗೆ ಧರ್ಮಬುದ್ಧಿ ಬರುವುದು ಬೇಡವೇ? (ಪ್ರತಾಪ. ೧೩). ೨. (ದೇವರ) ಸೇವೆ; ಉಪಾಸನೆ; ಆರಾಧನೆ: "ಉಪಾಸ್ತಿಯೆನೆ ಧರ್ಮಬುದ್ಧಿಯದು" (ಮಂಗರಾ. ೧೩೬-೩೯). [ ಧರ್ಮ + ಬುದ್ಧಿ ]

**ಧರ್ಮಬೋಧನೆ** (ನಾ). ಧರ್ಮವನ್ನು ಕುರಿತು ಮಾಡುವ ಉಪದೇಶ; ಧರ್ಮದ ಬಗೆಗೆ ಅರಿವನ್ನುಂಟುಮಾಡುವಿಕೆ: ಅವರೆಲ್ಲರೂ ತಮ್ಮ ಧರ್ಮಬೋಧನೆಯನ್ನು ಕೇಳಲು ಅವಕಾಶ ಕೊಟ್ಟರೆದ್ದರು (ಕಶಾಅ. ೧೬೮). [ ಧರ್ಮ + ಬೋಧನೆ ]

**ಧರ್ಮಬೋಧೆ** (ನಾ). = ಧರ್ಮಬೋಧನೆ: ಧರ್ಮವಿಪ್ಲವಪರಿಸ್ಥಿತಿಯುಂಟಾದಾಗ ಮಹಾತ್ಮರು ಅವತರಿಸಿ ಜನರಿಗೆ ಧರ್ಮಬೋಧೆಯನ್ನೂ ತತ್ತ್ವಬೋಧೆಯನ್ನೂ ಮಾಡುತ್ತಿದ್ದರು (ಭಾರದ. ೨೬೯). [ ಧರ್ಮ + ಬೋಧೆ ]

**ಧರ್ಮಬ್ರಿಯ** 'ಧರ್ಮಪ್ರಿಯ' ನೋಡಿ.

**ಧರ್ಮಭಗಿನಿ** (ನಾ). ೧. ಒಡಹುಟ್ಟಿದವಳು; ಸಹೋದರಿ. ೨. ಧಾರ್ಮಿಕ ದೃಷ್ಟಿಯಿಂದ ಅಥವಾ ನ್ಯಾಯಶಾಸ್ತ್ರದ ದೃಷ್ಟಿಯಿಂದ ಸಹೋದರಿಯೆನಿಸಿದವಳು: ನಮ್ಮಲ್ಲಿ ಧರ್ಮಕ್ಕೆ ಅಂಥಾ ಸಂಕುಚಿತಾರ್ಥವಿಲ್ಲದಿದ್ದರೂ ನಾವೂ ಸ್ವಲ್ಪ ಹೆಚ್ಚುಕಡಿಮೆ ಅಂಥಾ ಅರ್ಥದಲ್ಲಿಯೇ ಧರ್ಮಭ್ರಾತ, ಧರ್ಮಭಗಿನಿ, ಧರ್ಮಾಚಾರ್ಯ, ಧರ್ಮಾಧಿಕಾರಿ ಎಂಬಿತ್ಯಾದಿಯಾಗಿ ಅನ್ನುತ್ತೇವೆ (ಆರ್ಯಧ. ೧೧); ಒಂದೇ ಮತದವರಾದ ಸ್ತ್ರೀಪುರುಷರು ಪರಸ್ಪರ ಧರ್ಮಭ್ರಾತರು, ಧರ್ಮಭಗಿನಿಯರು (ಆರ್ಯಧ. ೧೧ ಅಡಿಟಿ). [ ಸಂ. ಧರ್ಮಭಗಿನೀ ]

**ಧರ್ಮಭಂಡಾರ** (ನಾ). ಧರ್ಮದ ಕೋಶ,-ನೆಲೆ: ಹರಿಗನ ಧರ್ಮಭಂಡಾರದಂತೆ ಸಾರವಾದುದು . . . ಧರ್ಮಪುರಂ (ಪಂಪಭಾ. ೧೪-೫೬). [ ಧರ್ಮ + ಭಂಡಾರ (<ಬಂಡಾರ) ]

**ಧರ್ಮಭೂತಜ್ಞಾನ** (ನಾ). [ವಿಶಿಷ್ಟಾ] (ದೀಪಕ್ಕೆ ಪ್ರಭೆಯಂತೆ) ಜೀವಾತ್ಮ ಪರಮಾತ್ಮರನ್ನು ಆಶ್ರಯಿಸಿಕೊಂಡಿರುವ ದ್ರವ್ಯವಿಶೇಷ; ಇದು ಸಕಲ ವ್ಯಾಪಾರಗಳಿಗೂ ಕಾರಣಭೂತವಾಗಿದೆ. ಇತರ ವಸ್ತುಗಳಿಗೆ ಪ್ರಕಾಶಕವಾಗಿಯೂ ಸ್ವಯಂಪ್ರಕಾಶವಾಗಿಯೂ ಇದೆ. ಇದು ಪ್ರತಿ ಜೀವಕ್ಕೂ ಬೇರೆ ಬೇರೆಯಾಗಿದೆ: ಧರ್ಮಭೂತಜ್ಞಾನ, ವಿಶಿಷ್ಟಾದ್ವೈತಜ್ಞಾನ ಮೀಮಾಂಸೆಯ ಆಧಾರ. ಅದು ಜಗತ್ತು, ಆತ್ಮ, ಬ್ರಹ್ಮ ಇವುಗಳ ಸ್ವರೂಪವನ್ನು ಅರಿಯಲು ಬೇಕಾದ ಬೆಳಕು ನೀಡುತ್ತದೆ (ತತ್ವಪ್ರಾ. ೩೨೫); ಆತ್ಮ ದ್ರವ್ಯಗಳೂ ಸ್ವಯಂಪ್ರಕಾಶವಾಗಿ ಜ್ಞಾನಶಬ್ದಕ್ಕೆ ಗೋಚರವಾದುದರಿಂದ ವ್ಯತ್ಯಾಸ ತೋರುವುದಕ್ಕಾಗಿ ಧರ್ಮಭೂತಜ್ಞಾನವೆಂದು ಇದು ವ್ಯವಹರಿಸಲ್ಪಡುವುದು (ಹಿಂದಸಾ. ೨೩೯). [ ಸಂ. ]

**ಧರ್ಮಭೂಮಿ** (ನಾ). ೧. ಧರ್ಮಕ್ಕೆ ಆಶ್ರಯವಾದ ಭೂಮಿ; ಧರ್ಮಕ್ಷೇತ್ರ: ಮಹಾಪು(೦)ಣ್ಯನದೀತೀರದಲು ಪ್ರಖ್ಯಾತವಾಗಿರ್ದ್ದ ಧರ್ಮ್ಮಭೂಮಿಯಂ ಶ್ರೀಮನ್ಮಹಾಪ್ರಧಾ[ನಂ] . . . ಕಂಡು (ಸೌಇಇ. XX, ೧೫೪-೪೫; 1172); ಭಾರತವು ಜಗತ್ತಿನ ಸತ್ಯಪ್ರೇಮಿಗಳ ದೃಷ್ಟಿಯಲ್ಲಿ ಧರ್ಮಭೂಮಿಯೆಂಬ ಯಶಸ್ಸನ್ನು ಪಡೆದಿದೆ (ಭಾರದ. ೪೬). ೨. ಭಾರತ. [ ಧರ್ಮ + ಭೂಮಿ ]

**ಧರ್ಮಭೂಷಣ** (ನಾ). ಧರ್ಮವೇ ಆಭರಣವಾಗುಳ್ಳವನು; ಧರ್ಮಿಷ್ಠ: ಆ ಮುನಿಮುಖ್ಯಶಿಷ್ಯತಿಲಕಂ ನೆಗಟ್ಟಂ ಸಲೆ ಧರ್ಮಭೂಷಣಂ (ಖಮದ. ೧-೧೯). [ ಧರ್ಮ + ಭೂಷಣ ]

**ಧರ್ಮಭ್ರಂಶ** (ನಾ). = ಧರ್ಮಬಾಹಿರತೆ : ಗಂಡನೊಡನೆ ಬಾಳುವುದು ಹೆಂಗಸಿಗೆ ಧರ್ಮಭ್ರಂಶವೆಂಬ ಈ ಕುಶಿಕ್ಷಣವನ್ನು ನಿನಗೆ ಕೊಟ್ಟವರು ಯಾರು ? (ಬಂಕಿಮ. ೩೨೧). [ ಧರ್ಮ + ಭ್ರಂಶ ]

**ಧರ್ಮಭ್ರಷ್ಟ** (ನಾ). = ಧರ್ಮಬಾಹಿರ ೨: ಅನೃತವನ್ನು ಹೇಳಿದರೆ ಪಾಪ ಬರುತ್ತದೆ. ತಾನೂ ಧರ್ಮಭ್ರಷ್ಟನಾಗುತ್ತೇನೆ ಎಂದು ಧರ್ಮರಾಜನು ನಿರಾಕರಿಸುತ್ತಾನೆ (ಭಾರದ. ೧೦೩). [ ಧರ್ಮ + ಭ್ರಷ್ಟ ]

**ಧರ್ಮಭ್ರಷ್ಟತೆ** (ನಾ). = ಧರ್ಮಬಾಹಿರತೆ : ಜಗತ್ತಿನಲ್ಲಿ ಈಗ ಹಲವು ವೈದಿಕಧರ್ಮಗಳೂ ಹಲವು ಅವೈದಿಕಧರ್ಮಗಳೂ ಪ್ರಚಲಿತವಾಗಿರಲಿಕ್ಕೆ . . . ಮನುಷ್ಯನ ಧರ್ಮಭ್ರಷ್ಟತೆಯೇ ಕಾರಣವು (ಮಾಧವ. ೪೧೯). [ ಸಂ. ಧರ್ಮಭ್ರಷ್ಟತಾ ]

**ಧರ್ಮಭ್ರಾತ** (ನಾ). ೧. ಒಡಹುಟ್ಟಿದವನು; ಸಹೋದರ. ೨. ಧಾರ್ಮಿಕವಾಗಿ ಅಥವಾ ನ್ಯಾಯಶಾಸ್ತ್ರದ ದೃಷ್ಟಿಯಿಂದ ಸಹೋದರ ನೆನಿಸಿಕೊಳ್ಳುವವನು : ನಮ್ಮಲ್ಲಿ ಧರ್ಮಕ್ಕೆ ಅಂಥಾ ಸಂಕುಚಿತಾರ್ಥವಿಲ್ಲ ದಿದ್ದರೂ ನಾವೂ ಸ್ವಲ್ಪ ಹೆಚ್ಚುಕಡಿಮೆ ಅಂಥಾ ಅರ್ಥದಲ್ಲಿಯೇ ಧರ್ಮ ಭ್ರಾತಧರ್ಮಭಗಿನಿ, ಧರ್ಮಾಚಾರ್ಯ, ಧರ್ಮಾಧಿಕಾರಿ ಎಂಬಿತ್ಯಾದಿಯಾಗಿ ಅನ್ನುತ್ತೇವೆ (ಆರ್ಯಧ. ೧೧). [ ಸಂ. ಧರ್ಮಭ್ರಾತೃ ]

**ಧರ್ಮಮಾತೆ** (ನಾ). (ಕ್ರೈಸ್ತರಲ್ಲಿ ಜ್ಞಾನಸ್ನಾನ ಮಾಡಿಸುವಾಗ) ರಕ್ಷಣೆಯ ಹೊಣೆಯನ್ನು ಹೊತ್ತವಳು; P ಇದು ಇಂಗ್ಲೀಷಿನ 'God Mother' ಎಂಬುದರ ಅನುವಾದ ; ನನ್ನನ್ನು ನಿಮ್ಮ ಜತೆಗೆ ಕರಕೊಂಡು ಹೋಗಿರಿ . . . ನೀವು ನನ್ನ ಧರ್ಮಮಾತೆಯಾಗಿರಿ (ಸ್ಮೃತಿಚಿ. ೨೪೪). [ ಧರ್ಮ + ಮಾತೆ ]

**ಧರ್ಮಮಾರ್ಗ** (ನಾ). ಧರ್ಮಸಮ್ಮತವಾದ ಮಾರ್ಗ; ನ್ಯಾಯವಾದ ದಾರಿ,-ಕ್ರಮ; ಸನ್ಮಾರ್ಗ : ಭವಪ್ರಭವಜೀವಿಗೆ ನಿರ್ಮಲಧರ್ಮ ಮಾರ್ಗದೊಳ್ ಮನಮೊಸೆದಾಗಳುಂ ನಡೆಯವೇಟ್ಪುದು (ಪಂಚತಂ. ೫೯-೧೭); ತಂಮ ತನ್ನೊಡಹುಟ್ಟಿದಾತನುಯೆಂದು ಕಾಂಬುದೆ ಧರ್ಮಮಾರ್ಗವು (ಕೌಶಿರಾ. ೩೭-೭೨) ; ಮೆಚ್ಚಿವ ನಾನಾಬಗೆವಸ್ತುಗಳನು ದಯೆವೆರೆಸುತೆ ಧರ್ಮಮಾರ್ಗದಲಿ ಕರೆದಾ ಕ್ಷಣ ಕ್ರಯಕೀವ ಹೆರೆದರ ಸುರುಚಿರಗೃಹ ಗಳೊಪ್ಪಿದುವು (ಕಂಠವಿ. ೬-೫೧). [ ಧರ್ಮ + ಮಾರ್ಗ ]

**ಧರ್ಮಮಾಹಾತ್ಮ್ಯ** (ನಾ). ಧರ್ಮದ ಹಿರಿಮೆ,-ಘನತೆ,-ಹೆಚ್ಚಳ : ಪೇಳ್ದನವನೀಶಂ ಧರ್ಮಮಾಹಾತ್ಮ್ಯಮಂ (ಸಮಪ. ೪-೯೦). [ ಧರ್ಮ + ಮಾಹಾತ್ಮ್ಯ ]

**ಧರ್ಮಮೀಮಾಂಸಾಶಾಸ್ತ್ರ** (ನಾ). ವೇದಾರ್ಥನಿರ್ಣಯ ಮಾಡಲು ಆಧಾರಭೂತವಾದ ಶಾಸ್ತ್ರ ; ಜೈಮಿನಿಮಹರ್ಷಿಗಳಿಂದ ಪ್ರವೃತ್ತ ವಾದ ಶಾಸ್ತ್ರ ; ಪೂರ್ವಮೀಮಾಂಸಾಶಾಸ್ತ್ರ : ಉಪನಿಷತ್ತುಗಳು ವೇದಗಳಿಗೆ ಸೇರಿದ ಗ್ರಂಥಗಳಾದುದರಿಂದ ವೇದವ್ಯಾಖ್ಯಾನವಾದ ಧರ್ಮಮೀಮಾಂಸಾಶಾಸ್ತ್ರ, ಪೂರ್ವಮೀಮಾಂಸೆ ಎಂದೂ ವೇದಾಂತ ವ್ಯಾಖ್ಯಾನವಾದ ಬ್ರಹ್ಮಮೀಮಾಂಸಾಶಾಸ್ತ್ರ ಉತ್ತರಮೀಮಾಂಸೆ ಎಂದೂ ವ್ಯವಹಾರ (ಹಿಂದಸಾ. ೧೮೫). [ ಸಂ. ]

**ಧರ್ಮಮೀಮಾಂಸೆ** (ನಾ). = ಧರ್ಮಮೀಮಾಂಸಾಶಾಸ್ತ್ರ : ಜೈಮಿನಿ ಸೂತ್ರಕ್ಕೆ ಪೂರ್ವಮೀಮಾಂಸೆ, ಧರ್ಮಮೀಮಾಂಸೆಯೆಂದೂ ಬಾದರಾಯಣ ಸೂತ್ರಕ್ಕೆ ಉತ್ತರಮೀಮಾಂಸೆ, ಬ್ರಹ್ಮಮೀಮಾಂಸೆಯೆಂದೂ ವ್ಯವಹಾರ (ಹಿಂದಸಾ. ೧೮೪). [ ಧರ್ಮ + ಮೀಮಾಂಸೆ ]

**ಧರ್ಮಮೂಢ** (ನಾ). ಧರ್ಮದ ಬಗೆಗೆ ಸರಿಯಾದ ಜ್ಞಾನವಿಲ್ಲದವನು : ಜಗತ್ತು ಧರ್ಮಮೂಢರಿಂದ ಹಾಗೂ ನೀತಿಬಾಹಿರರಿಂದ ತುಂಬಿರುವುದನ್ನು ನೋಡಿ ಕವಿಯ ಮನಸ್ಸು ಅಧೀರವಾಗುವುದು (ಗೊತ್ತು. ಗು. ೨೭). [ ಧರ್ಮ + ಮೂಢ ]

**ಧರ್ಮಮೂಲ** (ನಾ). ೧. ಧರ್ಮವನ್ನು ಆಧಾರವಾಗಿ ಉಳ್ಳದು : ತಿಳಿದು ನೋಡಿರೆ ರಾಮ ಧರ್ಮಸ್ಥಳಕೆ ನೀವು ಸಹಾಯವಿನಿಬರ ಗೆಲವು ನಿರ್ಮಳಧರ್ಮಮೂಲವೊ ಧರ್ಮವಿರಹಿತವೊ (ಕುವ್ಯಾಗ. ೬-೫). ೨. ಧರ್ಮಕ್ಕೆ ಆಧಾರವಾದ ಗ್ರಂಥ ; ವೇದ, ಆಗಮ ಮೊಂತಾದುವು. [ ಧರ್ಮ + ಮೂಲ ]

**ಧರ್ಮಮೇಘ** (ನಾ). [ಯೋಗ] ಧ್ಯಾನಾಭ್ಯಾಸದಿಂದ ಲಭಿಸುವ ಆನಂದ ; P ಸಮಾಧಿಯಲ್ಲಿ ಸಂಪ್ರಜ್ಞಾತ ಸಮಾಧಿ, ಅಸಂಪ್ರಜ್ಞಾತ ಸಮಾಧಿ ಎಂದು ಎರಡು ಬಗೆ. ಸಂಪ್ರಜ್ಞಾತವು ಒಂದು ಆಲಂಬನವನ್ನು ಕುರಿತು ಮಾಡುವ ಸಮಾಧಿ. ಅದು ಸವಿಕಲ್ಪ. ವಿರಕ್ತನಾದವನ ಸಾಧನೆಯು ನಿರಾಲಂಬ, ನಿರ್ವಿಕಲ್ಪ. ಅದಕ್ಕೆ ಅಸಂಪ್ರಜ್ಞಾತವೆಂದು ಹೆಸರು. ಈ ಸಮಾಧಿಯಲ್ಲಿ ವಿವೇಕವುಂಟಾ ಗುತ್ತದೆ. ಇದು ಪರಮಸಿದ್ಧಿ : ಧ್ಯಾನಾಭ್ಯಾಸದಿಂದ ಬರತಕ್ಕ ಆನಂದಕ್ಕೆ ಧರ್ಮಮೇಘವೆಂದು ಹೆಸರು (ಹಿಂದಸಾ. ೧೧೯). [ ಸಂ. ]

**ಧರ್ಮಯುದ್ಧ** (ನಾ). ೧. ಮರೆ ಮೋಸವಿಲ್ಲದೆ ಮಾಡುವ ಯುದ್ಧ ; ಧರ್ಮಸಮ್ಮತವಾದ ಕಟ್ಟಳೆಗಳಿಗೆ ಅನುಸಾರವಾಗಿ ನಡೆಸುವ ಯುದ್ಧ : ಸಮಸ್ತಜನಸಂಹರಣಕಾರಣಮಪ್ಪರಣದೊಳೇವಂದಪುದೆಂದು ಧರ್ಮಯುದ್ಧ ಮನೆ ತಮ್ಮೊಳ್ ಸಮಕಟ್ಟಿ (ಆದಿಪು. ೧೪-೧೦೦ ವ); ಪೆಱತನಿನ್ನೆನಗೆ ನುಡಿಯ ಲೆಡೆಯುಲ್ಲ ಧರ್ಮಯುದ್ಧಮಂ ನೋಡಲ್ವೇಟ್ಕುಂ (ಪಂಪಭಾ. ೧೩-೯೦ ವ) ; ಆ ಪ್ರಸ್ತಾವದೊಳ್ ಧರ್ಮಯುದ್ಧಮಂ ನೆನೆದು ಇಱಿಯೆಂ ಬಿಟ್ಟನೆಂಬೀ ಬಿಱುಬಿಂದಂ ಬೀಸಿ ಗದೆಯ ಗಾಳಿಯ ಕೋಟಿಚ್ಚಱಿಸಿದುದು ಭೀಮನಂ ಮೆಯ್ಮಱೆದವನಂ (ಗದಾಯು. ೮-೩೧ ವ). ೨. ಧರ್ಮರಕ್ಷಣೆಗಾಗಿ ಮಾಡುವ ಯುದ್ಧ ; ಜೇಹಾದ್ ; P 'Crusade' ಎಂಬ ಆಂಗ್ಲ ಪದವನ್ನು ಕೆಲವುವೇಳೆ 'ಧರ್ಮಯುದ್ಧ' ಎಂದು ಅನುವಾದ ಮಾಡುತ್ತಾರೆ. [ ಧರ್ಮ + ಯುದ್ಧ ]

**ಧರ್ಮಯೋಗ** (ನಾ).=ಧರ್ಮಧ್ಯಾನ: ಚಿತ್ತವನಾತ್ಮನೊಳಡಗಿಸೆ ನಿಶ್ಚಯ ದುತ್ತಮ ಧರ್ಮಯೋಗವದು (ಭರಚ. ೬೯-೩೭) ; ಅಱಿವು ಬೆಳಗು ಸುಖ ಕಿಱಿದಾಗಿ ತೋಱುತ ಮಱೆಸುತಹುದು ಧರ್ಮಯೋಗ ಅಱಿವು ಬೆಳಗು ಸುಖ ಪಿರಿದಾಗಿ ತೋಱುತ ಮಱೆಸದಿಹುದು ಶುಕ್ಲಯೋಗ (ಭರಚ. ೬೯-೩೮). [ ಧರ್ಮ + ಯೋಗ ]

**ಧರ್ಮರಕ್ಷಕ** (ನಾ). ಧರ್ಮವನ್ನು ಕಾಪಾಡುವವನು : ಧರ್ಮರಕ್ಷಕಂ ಜಲಧಿಮುದ್ರಿತಧರಾಧೀಶ ಪಾವನ ಶಿವನ ಕಳೆಯಂಶ ಚೆನ್ನಾನಿನೀಶ ಸೌರಂಭಾಳಿಯಿಂದ ಸತ್ಕೇಂದ್ರನೆಸೆದಂ (ಭಾವಚಿಂ. ೪-೨೦). [ ಧರ್ಮ+ರಕ್ಷಕ ]

**ಧರ್ಮರಕ್ಷಣ**(ನಾ).=ಧರ್ಮರಕ್ಷಣೆ: ಧರ್ಮರಕ್ಷಣ ಮಾಡುವದಕ್ಕಾಗಿ ಅವರು ಸ್ವತಃ ಕೃತಘ್ನತೆಯ ಪಾಪಕ್ಕೆ ಗುರಿಯಾದದ್ದು ಅವರ ಸ್ವಾರ್ಥತ್ಯಾಗದ ಲಕ್ಷಣವಾಗಿರುವದು (ಮಾಧವ. ೩೬೧). [ ಧರ್ಮ + ರಕ್ಷಣ ]

**ಧರ್ಮರಕ್ಷಣೆ** (ನಾ). ಧರ್ಮವನ್ನು ಉಳಿಸುವುದು,-ಕಾಪಾಡುವುದು : ಆತ್ಮರಕ್ಷಣೆಗಿಂತ ಧರ್ಮರಕ್ಷಣೆಯು ಪ್ರಿಯವಾಯಿತು (ಭಾರದ. ೩೮೮). [ ಧರ್ಮ + ರಕ್ಷಣೆ ]

**ಧರ್ಮರತ** (ನಾ). ಧರ್ಮದಲ್ಲಿ ಮಗ್ನನಾದವನು ; ಧರ್ಮಾಸಕ್ತಿಯುಳ್ಳ ವನು : ಧರ್ಮಸ್ವಾಮಿ ಜಿನೇಶ್ವರಧರ್ಮರತಂ ಸಾರ್ಥವಾಹಕಂ . . . ಬೀಡಂ ಬಿಟ್ಟಂ (ವರ್ಧಮಾ. ೬-೭). [ ಧರ್ಮ +ರತ ]

**ಧರ್ಮರತಿ** (ನಾ). ಧರ್ಮದಲ್ಲಿ ಆಸಕ್ತಿ, - ಪ್ರೀತಿ : ಅಭಿವಿನುತ ಧರ್ಮ ರತಿಯುಂ ಸ್ವಭಾವವೈರಾಗ್ಯಭಾವಮುಂ ಸರ್ವಭವಾನುಭವವಿರಕ್ತತೆಯುಂ ದುರ್ಲಭಮದು ಭವ್ಯಪ್ರಬೋಧಿಯೆನಿಕ್ಕುಂ (ಸುಕುಮಾ. ೧೩-೩೭) ; ಇದೆಂಥ ಗುರುಭಕ್ತಿ, ಇದೆಂಥ ಧರ್ಮರತಿ, ಇದೆಂಥ ನಿಯಮನಿಷ್ಠೆ! (ಶರಜ. ೪೯೪). [ ಧರ್ಮ + ರತಿ$_1$ ]

**ಧರ್ಮರಾಜ** (ನಾ). ೧. ಯಮಂ : "ಶಮನಃ . . . ಧರ್ಮರಾಜಃ, ಯಮಃ . . . ಶ್ರಾದ್ಧದೇವಃ . . . ಈ ೧೬ ಜವನ ಪೆಸರ್" (ಹಲಾಯು. ೧೩-೬೩). ೨. ಬುದ್ಧ : ಬೌದ್ಧಪ್ರಪಂಚದಲ್ಲಿ . . . ಬುದ್ಧನು 'ಧರ್ಮರಾಜ,' ಆತನ ಶಿಷ್ಯಪ್ರಧಾನನಾದ ಸಾರಿಪುತ್ರನು 'ಧರ್ಮಸೇನಾ ಪತಿ' (ಭಾರದ.೧೯೩). ೩. ಜಿನ. ೪. ಪಂಚಪಾಂಡವರಲ್ಲಿ ಹಿರಿಯವನು; ಯುಧಿಷ್ಠಿರ : ಉಭಯಸೈನ್ಯಂಗಳಂ ಕಂಡತ್ತ ರಾಜರಾಜನುಮಿತ್ತ ಧರ್ಮ ರಾಜನುಮೊಡನೊಡನೆ ಕೆಯ್ವೀಸಿದಾಗಳ್ (ಪಂಪಭಾ. ೧೦-೬೫ವ); ಪರಹಿತ ಕಾರ್ಯಮಂ ನೆಱೆಯೆ ಮಾರ್ಪೆಡೆಗಂ ಸಲೆ ಧರ್ಮರಾಜಂ (ಸೌಇಇ. XX, ೭೬-೩೪; 1118); ಧರ್ಮರಾಜನಿಗೆ "ಅಣ್ಣಾ! ಧರ್ಮಮಾರ್ಗದಿಂದಲೇ ರಾಜ್ಯ ಪಡೆದುಕೋ . . ." ಎಂದು ಹೇಳಿದನು!! (ವಚಭಾ. ೧೨೦). ೫. (ಧರ್ಮದಿಂದ ಆಳುವ) ರಾಜ; ದೊರೆ. [ ಧರ್ಮ + ರಾಜ ]

**ಧರ್ಮರಾಜಜನಕ** (ನಾ). ಯಮನ ತಂದೆ; ಸೂರ್ಯ : ಇರದೆಯ್ದುವಂ ದೋಷಾಕರನವನಂ ನೋಡಲಾಗದೆಂದಾ ದಿನಪಂ ವರಧರ್ಮರಾಜಜನಕಂ . . . ನೀಳಗಿರಿಯಂ ಸಾರ್ದಂ (ಹಮ್ಮಿರ. ೩-೧೩).
[ ಧರ್ಮರಾಜ + ಜನಕ ]

**ಧರ್ಮರಾಜ್ಯ** (ನಾ). ಸತ್ಯ, ನ್ಯಾಯ, ನಿಷ್ಪಕ್ಷಪಾತತೆಗಳನ್ನುಳ್ಳ ರಾಜ್ಯ; ಸುರಾಜ್ಯ: ಭಗವಂತನು ಧರ್ಮರಾಜ್ಯವನ್ನು 'ಪ್ರವರ್ತನ' ಮಾಡಿದನೆ ಹೊರತು 'ಸ್ಥಾಪನ' ಮಾಡಲಿಲ್ಲ (ಭಾರದ. ೧೯೬). [ ಧರ್ಮ + ರಾಜ್ಯ ]

**ಧರ್ಮರಾಯ** (ನಾ). ೧. ಯುಧಿಷ್ಠಿರ : ಕ್ಷಮೆಯೊಳ್ ಧರ್ಮರಾಯ ಶಕ್ತಿಗೆ ಭೀಮ . . . ಶ್ರೀಕೃಷ್ಣರಾಜವಡೆಯರ್ಯೆಯನವರು (ಎಕ. III (R), ಗುಂಡ್ಲುಪೇ. ೮೦-೫; 1673); ಕುದುರೆ ಇಲ್ಲಿಯೇ ಉಳಿದುಬಿಟ್ಟು ಧರ್ಮರಾಯನ ಯಾಗ ನಿಂತುಹೋದೀತು (ಬಿದುರಿ. ೮ ಪ್ರಸ್ತಾವನೆ). ೨. ಸತ್ಯವಂತ; ನ್ಯಾಯವಂತ; ಧರ್ಮಿಷ್ಠ. [ ಧರ್ಮ + ರಾಯ ]

**ಧರ್ಮರುಚಿ** (ನಾ). ಧರ್ಮಪ್ರಿಯ; ಧರ್ಮಿಷ್ಠ : ಸ್ಥಿರಸತ್ಯವ್ರತಿಯೆಂದು ಧರ್ಮರುಚಿಯೆಂದಾ ಧರ್ಮಪುತ್ರಂ ದಯಾಪರನೆಂದೆಲ್ಲರ ಪೇೞ್ದಿ ಮಾತಾ ಪುಸಿಯಾಯ್ತು ಕಾಮುರ್ಕಾಚಾರ್ಯನಂ . . . ಕೊಂದಾಗಳ್ (ಗದಾಯು. ೩-೨೪); ರಾಜಗುರು, ಧರ್ಮರುಚಿ, ಶಿಷ್ಯತತಭಕ್ತನ್, ಯೋಧಾಗ್ರ ಗಣ್ಯನ್ (ಅಶ್ವತ್ಥಾ. ೧೭-೩೭೩). [ ಧರ್ಮ + ರುಚಿ ]

**ಧರ್ಮಲಂಡ** (ನಾ). ಧರ್ಮವಿರೋಧಿ; ಧರ್ಮದ್ರೋಹಿ : ಅವರೆಲ್ಲ ಅವನ ಮೇಲೆ ಧರ್ಮಲಂಡನೆಂಬ ಆಪಾದನೆ ಹೊರಿಸಿ . . . ವಿಚಾರಣೆಗೆ ಗುರಿಮಾಡಿದ್ದರು (ಬಂಜನ್. ೧೫೯); ಅವರು ಧರ್ಮಲಂಡರಾಗಿ, ಹೇಡಿಗಳಾಗಿ . . . ತಮ್ಮ ಸರ್ವಸ್ವವನ್ನು ಯವನರಿಗೆ ಅರ್ಪಿಸಿ ನಿಷ್ಕ್ರಿಯರಾಗಿ ನೋಡುತ್ತಿದ್ದರು (ರಾಜ್ಯೋದ. ೩); ಧರ್ಮಲಂಡ ತಾನು! ಮತ್ತೆ ಮೊದಲಿಗೆ "ಶ್ರೀ" ಅಂತ ಬೇರೆ ಹಚ್ಚಿಕೊಳ್ಳೋದು! (ಅಶ್ವಮೇ. ೧೯).
[ ಧರ್ಮ + ಲಂಡ$_1$ ]

**ಧರ್ಮಲುಪ್ತೆ** (ನಾ). = ಧರ್ಮಲುಪ್ತೋಪಮೆ : ಧರ್ಮಲುಪ್ತೆಯೆಂತೆನೆ ಚಂದ್ರಂಗಿಂದ್ರಂಗೆ ಹರಿಶ್ಚಂದ್ರಂಗೆಣೆಯೆಂದೊಡಾವ ಚಂದಂ ಚಿಕ ದೇವೇಂದ್ರಂಗೆ ಸದ್ಗುಣಾಬ್ಧಿ ಗುಪೇಂದ್ರಂಗೆಣೆಯೆಂಬುದೊಂದೆಯುಂದಮೆ ನಿಕ್ಕಂ ಇದೞೊಳ್ ಚಂದ್ರೇಂದ್ರ ಹರಿಶ್ಚಂದ್ರರಂ ದೊರೆಗೊಳಿಸುವೆಡೆಯೊಳಾಹ್ಲಾದಕರತ್ವೈಶ್ವರ್ಯಸತ್ಯವಾಕ್ಯತ್ವಂಗಳೆಂಬ ಸಮಾನಧರ್ಮಂಗಳಂ ಪೇೞದಿರ್ಪುದಱಿಂ ಧರ್ಮಲುಪ್ತೆಯಾದುದು (ಅಪ್ರತಿ. ೩೪-೨೦).
[ ಸಂ. ಧರ್ಮಲುಪ್ತಾ ]

**ಧರ್ಮಲುಪ್ತೋಪಮೆ** (ನಾ). [ಕಾವ್ಯಮೀ] ವಾಚಕಲುಪ್ತೆ, ಧರ್ಮಲುಪ್ತೆ, ಧರ್ಮವಾಚಕಲುಪ್ತೆ, ವಾಚಕೋಪಮೇಯಲುಪ್ತೆ, ಉಪಮಾನಲುಪ್ತೆ, ವಾಚಕೋಪಮಾನಲುಪ್ತೆ, ಧರ್ಮೋಪಮಾನಲುಪ್ತೆ ಮತ್ತು ಧರ್ಮೋಪಮಾನವಾಚಕಲುಪ್ತೆ ಎಂಬ ಎಂಟು ಬಗೆಯ ಲುಪ್ತೋಪಮೆಗಳಲ್ಲಿ ಒಂದು; ಸಾಧಾರಣಧರ್ಮಕ್ಕೆ ಲೋಪವಾಗಿರುವ ಉಪಮಾಲಂಕಾರ; P 'ಇವಳ ಮುಖವು ಚಂದ್ರನಂತಿದೆ' ಎಂಬ ವಾಕ್ಯದಲ್ಲಿ 'ಮುಖ'–ಉಪಮೇಯ, 'ಚಂದ್ರ'–ಉಪಮಾನ, 'ಅಂತೆ'–ಉಪಮಾವಾಚಕ. 'ಕಾಂತಿಯಲ್ಲಿ' ಎಂಬ ಪದವಿಲ್ಲ. ಅದೇ ಧರ್ಮ. ಅದು ಲುಪ್ತವಾಗಿರುವುದರಿಂದ ಧರ್ಮಲುಪ್ತೆ. ಉದಾ : ಅನಿಮಿಷ ಚಾಪದಂತೆ ಸಿರಿ ಶಾರದನೀರದಕಾಂತಿಯಂತೆ ಯೌವನ ದೆಸಕಂ ತೃಣಾಗ್ರಗತವಾಃಕಣಿಕಾಗಣದಂತೆ ಸಂದ ಜೀವನಂ (ಪಂಚತಂ. ೫೯-೧೬). [ ಸಂ. ಧರ್ಮಲುಪ್ತೋಪಮಾ ]

**ಧರ್ಮವಂತ** (ನಾ). ೧. ಸದ್ಗುಣಿ; ಸದಾಚಾರಸಂಪನ್ನ; ಧರ್ಮಿಷ್ಠ : ಈತನು ಧರ್ಮವಂತ, ರೂಪವಂತ, ಗುಣವಂತ (ವಚಭಾ. ೧೭೧). ೨. ಉದಾರಿ; ದಾನಶೀಲ : ದುಡ್ಡು ಎಲ್ಲಿಂದೋ ಬರುತ್ತದೆ. ಬಡವರಿಗಾಗಿ ಧರ್ಮವಂತರು ಕಳಿಸುತ್ತಾರೆ (ಮತ್ಸ್ಯಮ. ೧೩೫).
[ ಸಂ. ಧರ್ಮವತ್ ]

**ಧರ್ಮವಣ್ಣಿಗೆ** (ನಾ). (?) : ಚೈತ್ರಪವಿತ್ರ ಅತಿಥಿಯಭ್ಯಾಗತ ತಪೋಧನರ ಗ್ರಾಸಕ್ಕೆ ಬಿಟ್ಟ ತಕ್ಕಿಲ ಮತ್ತರ್ ೧ ಅಲ್ಲಿಂ ಪಡುವಲು ಸಮಸ್ತಪ್ರಾಣಿಗಳ್ಗೆ ಬಿಟ್ಟ ಧರ್ಮವಣ್ಣಿಗೆಗೆ ಕಂಬ ೪೫೦ (ಸೌಇಇ. IX-i, ೨೯೭-೬೮; 1176).
[ ಧರ್ಮ + ? ]

**ಧರ್ಮವತಿ** (ನಾ). [ಸಂಗೀತ] ಒಂದು ರಾಗದ ಹೆಸರು : ಧರ್ಮವತಿ–ಜನಕರಾಗ ೧೧ನೇ ದಿಶಿಚಕ್ರದಲ್ಲಿ ೫ನೇ ಮೇಳ. ಕ್ರಮಸಂಖ್ಯೆ ೫೯ (ಸಂಗೀಚಂ. ೧೬೫). [ ಸಂ. ಧರ್ಮವತೀ ]

**ಧರ್ಮವತ್ತಳೆ, ಧರ್ಮವತ್ಥಳೆ** (ನಾ). ದಾನಪತ್ರ; ದಾನಶಾಸನ : ಧರ್ಮವತ್ತಳೆಯ ಶಾಸನಮರ್ಯಾದೆಯಲ್ ತಿಱುವ ಸಿದ್ಧಾಯ (ಎಇ. XV, ೭೯-೨೦; 1050); ಲಕ್ಷ್ಮಮಂಡಲಿಕಂ ನಿರ್ಮಳ ಧರ್ಮವತ್ತಳೆಯ ನಷ್ಟೋದ್ಧಾರಮಂ ಮಾಡಿದಂ (ಎಇ. XV, ೩೪೧-೩೨; 1071); ೫೦ ಗದ್ಯಾಣ ಪೊಂನಂ ಪಿಂಡಾದಾನದಿಂದಂ ಧರ್ಮವತ್ತಳೆಯಿಂ ತಿಱುವಂತಾಗಿ ಧಾರಾ ಪೂರ್ವಕಂ ಮಾಡಿ ಆಚಂದ್ರಾರ್ಕತಾರಂಬರಂ ಕೊಟ್ಟರ್ (ಸೌಇಇ. XI-ii. ೧೫೪-೬೩; 1104) : ತುಂಬುಳದ ಮಹಾಜನಂ ನೂರನಾಲ್ವದಿಂಬಗ್ಗಂ ಧಾರಾಪೂರ್ವಕಂ ಮಾಡಿ ಬಿಟ್ಟ ಧರ್ಮವಾಪೂರಲು ಧರ್ಮವತ್ತಳೆಯಾಗಿ ತಿಱುವ ಸಿದ್ಧಾಯದ ಪೊಂನೊಳಗೆ ವ್ಯಾಖ್ಯಾನದುಪಾಧ್ಯಾಯಗ್ಗೆ ಗದ್ಯಾಣ ಮೆಂಟು (ಸೌಇಇ. IX-i, ೧೬೫-೨೦; 1107). **ಧರ್ಮವತ್ಥಳೆ** : ಯಾವ ಕಾಲಕ್ಕಂ ಪೂರಾಯಂ ಹೀನಾಯಮೆನ್ನದೆ ವರ್ಷನಿಬನ್ಧದಿಂ ಧರ್ಮವತ್ಥಳೆಯಾಗಿ × × × (ಎಕ. XI, ದಾವಣ. ೧೧೩-೨೫; 1062).
[ ಧರ್ಮ + ಪತ್ತಳೆ ]

**ಧರ್ಮವತ್ಥಳೆ** 'ಧರ್ಮವತ್ತಳೆ' ನೋ.

**ಧರ್ಮವನಚಾರಿ** (ಗು). ತಪೋಭೂಮಿಯಲ್ಲಿ ಅಥವಾ ಆಶ್ರಮದಲ್ಲಿ ಸಂಚರಿಸುವ : ಆವನಿಂದಾದೊಡಂ ಹತಿ ತಾಂ ಸಂಭವಿಸಿತ್ತೊ ಧರ್ಮವನಚಾರಿಪ್ರಾಣಿವರ್ಗಕ್ಕೆ . . . ಎಂದು ತೊಳಲ್ವುದೆನ್ನಯ ಮನಂ ನಿರ್ನ್ಯಸದೇನೊಂದುಮಂ (ಶಾಕುಂತ. ೬೩-೨೦)
[ ಸಂ. ಧರ್ಮವನಚಾರಿನ್ ]

**ಧರ್ಮವರ್ತನೆ** (ನಾ). ಒಳ್ಳೆಯ ನಡತೆ; ಸತ್ಯಮಾರ್ಗದ ಆಚರಣೆ; ಸದಾಚಾರ: ನೆಟ್ಟನನಂತನಾಥನಪವರ್ಗಮನೆಯ್ದಿದನಂತರಂ ಕರಂ ಕೆಟ್ಟುದು ಧರ್ಮವರ್ತನೆ (ಬಾಧಪು. ೧೭-೯೭). [ ಧರ್ಮ + ವರ್ತನೆ ]

**ಧರ್ಮವರ್ಧನ** (ನಾ). ಧರ್ಮದ ಏಳಿಗೆ,–ಅಭಿವೃದ್ಧಿ : ಈಶನ ಭವನ ಮುಮ್ಮುಕುನ್ದ ಭವನಂಗಳನಿಂಬಿನೆ ಮಾಡಿ ಧರ್ಮವರ್ದ್ಧನದೆ ಕನೀಯನನ್ದನನ ರಾಜ್ಯಮನೀಕ್ಷಿಸುಗೆ (ಎಕ. X, ಮುಳಬಾ. ೩೮-೩೨; ಸು. 890).
[ ಧರ್ಮ + ವರ್ಧನ ]

**ಧರ್ಮವಾದಿನಿ** (ನಾ). ಧರ್ಮದ ಪರವಾಗಿ ವಾದಿಸುವವಳು ; ಧರ್ಮದ ಪಕ್ಷಪಾತಿ : ಅವಳು ಧರ್ಮವಾದಿನಿ. ಪತಿಯು ದೇವರೆಂದು ಭಾವಿಸಿದ್ದಳು (ಕಾವೇರಿ. ೨೮). [ಸಂ. ಧರ್ಮವಾದಿನೀ]

**ಧರ್ಮವಿಘಾತಕ** (ನಾ). ಧರ್ಮವನ್ನು ಕೆಡಿಸುವವನು ; ಧರ್ಮವನ್ನು ನಾಶಪಡಿಸುವವನು ; ಧರ್ಮದ್ರೋಹಿ ; ದುರ್ಮಾರ್ಗಿ : ಸುನೀತನಾ ಧರ್ಮಜನು ಧರ್ಮವಿಘಾತಕರು ನಾವೆಮ್ಮ ಕಳುಹುವುದೆನುತ ಹೋಟಿ ವಂಟ (ಕುವ್ಯಾಸ. ೧೨-೫೭) ; ಅನ್ಯರನ್ನು ಬಲಾತ್ಕರಿಸುವ ದುಷ್ಟರು, ಅಧಾರ್ಮಿಕ ನೀಚಸ್ವಾರ್ಥಪರಾಯಣರಾದದ್ದರಿಂದ ಅವರು ಧರ್ಮ ವಿಘಾತಕರಾಗುವರು (ಮಾಧವ. ೪೮೭). [ಧರ್ಮ + ವಿಘಾತಕ]

**ಧರ್ಮವಿಚಾರ** (ನಾ). ೧. ಧರ್ಮದ ವಿಷಯ,- ದೃಷ್ಟಿ : ಧರ್ಮವಿಚಾರ ದೊಳಂ ಜಿನಧರ್ಮಮೆ ಮಿಗಿಲೆಂದು ನಂಬಿ ಭಾಸ್ಕರದೇವಂ . . . ಸದ್ಧರ್ಮ ಕಥಾಲಾಪದಿಂದಮಿರ್ದು (ಧರ್ಮಾಮೃ. ೮-೧೦೨). ೨. ಧರ್ಮದ ವಿಷಯ ದಲ್ಲಿ ನಡೆಯುವ ಚರ್ಚೆ. [ಧರ್ಮ + ವಿಚಾರ]

**ಧರ್ಮವಿಜಯ** (ನಾ). ಧರ್ಮದಿಂದ ಗೆಲ್ಲುವವನು ಇದು . . . ಶ್ರೀಮದಜಿತಸೇನಭಟ್ಟಾರಕಚರಣಕಮಲಚಂಚರೀಕಂ ಧ ರ್ಮ ವಿ ಜ ಯ ಶ್ರೀಮಚ್ಚಾವುಂಡರಾಜವಿರಚಿತ ತ್ರಿಷಷ್ಟಿಲಕ್ಷಣಮಹಾಪುರಾಣದೊಳ್ ಪುಷ್ಪ ದಂತಪುರಾಣಂ (ಚಾವುಂಪು. ೧೨೯). [ಧರ್ಮ + ವಿಜಯ]

**ಧರ್ಮವಿಜಯಿ** (ನಾ). ಧರ್ಮವು ತನ್ನ ಕಡೆ ಇಲ್ಲವೆಂದು ತಿಳಿದರೆ ಸೋಲುವವನು ; ಅಹಿಂಸಾಮಾರ್ಗದಿಂದ ಗೆಲ್ಲಬಹುದಾದವನು : ಅರ್ಥವಿಜಯಿಯುಂ ಅಸುರವಿಜಯಿಯುಂ ಧರ್ಮವಿಜಯಿಯುಮೆಂ ದರಸುಗಳ್ ಮೂವರಪ್ಪರ್ . . . ಅವಱೊಳುತ್ತಮಸ್ವಭಾವಮಪ್ಪರ್ ಧರ್ಮವಿಜಯಿಗಳ್ ಸಾಮಲಕ್ಷಣಮುಪ್ಪುಪಾಯದಿಂ ಸಾಧ್ಯರ್ (ಚಾವುಂಪು. ೩೦೮). [ಸಂ.ಧರ್ಮವಿಜಯಿನ್]

**ಧರ್ಮವಿನಾಶಿ** (ನಾ). = ಧರ್ಮವಿಘಾತಕ : ಆ ಶಕುನಿ ಪೂರ್ವಾರ್ಜಿತದ ಡೊಳ್ಳಾಸದಲಿ ಡಾವರಿಸಿ ಧರ್ಮವಿನಾಶಿ ನಕುಲನ ಗೆಲಿದು ಬೊಬ್ಬಿಱಿದವ ನಿಪನ ಜಱಿದ (ಕುವ್ಯಾಸ. ೦೪-೦೪). [ಸಂ. ಧರ್ಮವಿನಾಶಿನ್]

**ಧರ್ಮವಿನೋದ** (ನಾ). ಧರ್ಮದಲ್ಲಿ ಸಂತೋಷಗೊಳ್ಳುವವನು : ಎಸೆವ ಸಕವರ್ಷಮುಂ ಮಾಣಿಸಿ ವಿಕ್ರಮವರ್ಷಮೆಂದು ತನ್ನಯ ಪೆಸರಂ ವಸುಮತಿ ನೆಗಳ್ಚಿದ ಸಾಹಸಿಗಂ ಜಗದೇಕದಾನಿ ಧರ್ಮ್ಮವಿನೋದ (ಸೌಇಇ. XX, ೯೩-೩೦ ; ?). [ಧರ್ಮ + ವಿನೋದ]

**ಧರ್ಮವಿಪ್ಲವ** (ನಾ). ಧರ್ಮವು ನಷ್ಟವಾಗಿ ಹೋಗುವಿಕೆ,-ಲೋಪ ವಾಗುವಿಕೆ : ಲೋಕದಲ್ಲಿ ಧರ್ಮವಿಪ್ಲವಪರಿಸ್ಥಿತಿಯುಂಟಾದಾಗ ಮಹಾತ್ಮರು ಅವತರಿಸಿ ಜನರಿಗೆ ಧರ್ಮಬೋಧೆಯನ್ನೂ ತತ್ವಬೋಧೆ ಯನ್ನೂ ಮಾಡುತ್ತಿದ್ದರು (ಭಾರದ. ೨೬೯). [ಧರ್ಮ + ವಿಪ್ಲವ]

**ಧರ್ಮವಿರೋಧಿ** (ನಾ). ಧರ್ಮವನ್ನು ದ್ವೇಷಿಸುವವನು : ಧರ್ಮ ವಿರೋಧಿಗಳಂ ದುಷ್ಕರ್ಮಪರ್ಯೋಧಿಗಳಂ ... ನಿರ್ಮೂಳಿಸುಗೆ ಗಜೇಂದ್ರುಂ ಪೆರ್ಮೆಯ ಯಕ್ಷಂ (ವರ್ಧಪು. ೧-೮). [ಸಂ. ಧರ್ಮವಿರೋಧಿನ್]

**ಧರ್ಮವಿವಾಹ** (ನಾ). ಧರ್ಮಾರ್ಥವಾಗಿ ಮಾಡುವ ಮದುವೆ : ಧರ್ಮ ಸ್ಥಳದಲ್ಲಿ ಈ ಸಲ ನಡೆದ ಧರ್ಮವಿವಾಹದ ಸಂದರ್ಭದಲ್ಲಿ ಅನೇಕ ಮದುವೆ ಗಳಾದುವು (ರೂಢಿ). [ಧರ್ಮ + ವಿವಾಹ]

**ಧರ್ಮವಿಹೀನ** (ನಾ). ೧. ಧರ್ಮದಿಂದ ದೂರವಾದುದು ; ನೀತಿಯಿಂದ ಹೊರತಾದುದು : ಧರ್ಮವಿಹೀನವಾದ ಈಗಿನ ರಾಜಕೀಯ ಪರಿಸ್ಥಿತಿ ಯನ್ನು ನೋಡಿದರೆ . . . ಸುರಕ್ಷಿತತೆಯ ನಂಬಿಗೆಯು ಎಲ್ಲಿ ಉಳಿದದೆ (ಮಾಧವ. ೩೮೮). ೨. ಸದ್ಗುಣವಿಲ್ಲದವನು ; ಧರ್ಮಲಂಡ : ಸಕಳ ಧರ್ಮ[ಪಾಠಾಂ. ಪುಣ್ಯ] ವಿಹೀನರುಗಳಂ ... ಅಲ್ಪಶೀಲರನೆಮ್ಮನುದ್ಧರಿಸಿ (ಬಸವು. ೫೭-೪೪). [ಧರ್ಮ + ವಿಹೀನ

**ಧರ್ಮವೀರ** (ನಾ). ೧. ಧರ್ಮಕ್ಕಾಗಿ ಅಥವಾ ಯಾವುದೇ ಮಹೋ ದ್ದೇಶಸಾಧನೆಗಾಗಿ ಹಿಂಸೆ ಅಥವಾ ಸಾವಿಗೆ ಬಲಿಯಾಗುವವನು ; ಹುತಾತ್ಮ : ಆರ್ಕಿಮಿಡಿಸನಿಗೆ ಧರ್ಮವೀರನ (Martyr) ಸಾವು ಬಂತು (ಶಿಲ್ಪನಾ. ೮೯) ; ಧರ್ಮವೀರರ ತ್ಯಾಗಶೀಲವೂ ಸನ್ಯಾಸಿಗಳ ಆನಂದವೂ ವ್ರತಶೀಲರ ಸಂಯಮಶಕ್ತಿಯೂ ಆದ ಯೇಸುಭಗವಾನ್ ನಮ್ಮ ನ್ನುದ್ಧರಿಸು (ಪುನರು. ೦೭೮). ೨. [ಕಾವ್ಯಮೀ] ವೀರರಸದ ಒಂದು ಪ್ರಭೇದ; ದಾನವೀರ, ಧರ್ಮವೀರ, ದಯಾವೀರ ಮತ್ತು ಯುದ್ಧ ವೀರ ಎಂಬ ನಾಲ್ಕು ಬಗೆಯ ರಸಗಳಲ್ಲಿ ಒಂದು: ಭರತನು ದಾನವೀರ, ಧರ್ಮವೀರ, ಯುದ್ಧವೀರ-ಎಂದು ವೀರರಸವನ್ನು ಮೂರು ಪ್ರಕಾರವಾಗಿ ವಿಂಗಡಿಸುತ್ತಾನೆ ; ದಯಾವೀರವನ್ನು ಇವುಗಳ ಜೊತೆಗೆ ಕೆಲವರು ಸೇರಿಸು ತ್ತಾರೆ . . . ಧರ್ಮರಾಯನಲ್ಲಿ ಕಾಣಬರತಕ್ಕದ್ದು ಧರ್ಮವೀರವೆನ್ನುತ್ತಾರೆ (ಭಾರಮೀ. ೪೦೦). ೩. ಧರ್ಮವೀರ ಎಂಬ ರಸಕ್ಕೆ ಆಧಾರನಾದ ನಾಯಕ. [ಧರ್ಮ + ವೀರ]

**ಧರ್ಮಪುರ** (ನಾ). ಒಂದು ಸ್ಥಳದ ಹೆಸರು ; ℙ ಕನ್ನಡದ ಆದಿಕವಿ ಪಂಪನು ನೆಲಸಿದ್ದ ಊರು : ಹರಿಗನ ಧರ್ಮಭಂಡಾರದಂತೆ ಸಾರಮಾ ದುದು ಬಿಟ್ಟಗ್ರಹಾರಮಾ ಬಚ್ಚೆಸಾಸಿರದೊಳಂ ಧರ್ಮಪುರಂ (ಪಂಪಭಾ. ೦೪-೫೦) ; ಜಿನವಲ್ಲಭಂ ಸಬ್ಬಿನಾಡ ನಟ್ಟನಡುವಣ ಧರ್ಮ್ಮಪುಂದುತ್ತರ ದಿಗ್ಭಾಗದ ವೃಷಭಗಿರಿಯೆಂಬನಾದಿಸಂಸಿದ್ಧತೀರ್ತ್ಥದ ದಕ್ಷಿಣದಿಶಾಭಾಗದೀ ಸಿದ್ಧಶಿಲೆಯೊಳ್ತಮ್ಮ ಕುಲದೈವಮಪ್ಪ ನ್ನ ಜಿನಬಿಂಬಂಗಳುಮಂ . . . ಮಾಡಿಸಿದಂ . . . ಬರೆದುದೆ ತಾಂಬ್ರಶಾಸನಮದೇಯಮ ಧರ್ಮಪುರಂ ನೆಗಟ್ಟೆವೆತ್ತರಿಗನ ಕೊಟ್ಟುದೇ ನೆಗಟ್ಟ ಪಂಪನ ಪೆತ್ತುದೆ ಪೇಟಿಮೆಸ್ಸು ನೀಮ್ಮರುಳೆ ಪಲರ್ಮ್ಮೆಯುಂ ಪಲಬರಂ ಬೆಸಗೊಳ್ಳದೆ ಪೋಗಿ ನೋಡ ಸುನ್ದರವೃಷಭಾಚಳೋನ್ನತಶಿಳಾತಳದೊಳ್ಬರೆದಕ್ಕರಂಗಳಂ (ಕನ್ನಸು. ೩೨-೧೧-೮,೯). [< ಧರ್ಮಪುರ]

**ಧರ್ಮವೃಂದ** (ನಾ). ಕರ್ತವ್ಯಗಳ ಸಮೂಹ : ಒಂದರೊಡನೊಂದಾಗಿ ಬಂದು ನಿಂದಿಹ ಧರ್ಮವೃಂದದಲಿ ಪೂರ್ಣಮನ ಹೊಂದಿಸುತಲಿ (ಕಎಪು. ೫೨-೨). [ಧರ್ಮ + ವೃಂದ]

**ಧರ್ಮವೃತ್ತಿ** (ನಾ). ಧರ್ಮದ ಕೆಲಸ ; ಧಾರ್ಮಿಕಕಾರ್ಯ : ಶ್ರೀಯುಂ ಕೂರಿಸಿ ತಾಳ್ದಂ ಶ್ರೇಯೋನಿಧಿ ಧರ್ಮವೃತ್ತಿಯುಂ ಪೆರ್ಚಿಸುತುಂ (ಬಾಧಪು. ೧೨-೧). [ಧರ್ಮ + ವೃತ್ತಿ]

**ಧರ್ಮವೃದ್ಧಿ** (ನಾ) ಪುಣ್ಯದ ಏಳಿಗೆ,-ಹೆಚ್ಚಳ: ನಿಟಲನ್ಯಸ್ತಕರಾಬ್ಜಸಂಪುಟ ವಿನಮ್ರಾತ್ಮಾಂಗರಂ ಭಕ್ತಿಲಂಪಟರಂ ತನ್ಮುನಿ ಧರ್ಮವೃದ್ಧಿ ನಿಮಗೆಂದಾ ನಾಲ್ವರಂತಸ್ತ್ರಮಃಪಟಮಂ ಪಿಂಗಿಸಿ (ಶಾಂತಿಪು. ೭-೯). [ಧರ್ಮ+ವೃದ್ಧಿ]

**ಧರ್ಮವೃಕ್ಷ** (ನಾ). ಧರ್ಮಾರ್ಥವಾಗಿ ನಟ್ಟ ಮರ,-ಸಾಲುಮರ : ಒಡೆದು ತಟಾಕವ ಧರ್ಮವೃಕ್ಷಗಳನು ಕಡಿದು . . . ಕಣ್ಗೆಡಿಸಿದರೇಳ್ವೆನೆದನು (ಕಂನವಿ. ೪-೦೪). [ಧರ್ಮ + ವೃಕ್ಷ]

**ಧರ್ಮವೊಳಲ್** 'ಧರ್ಮವೊಟಲ್' ನೋ.

**ಧರ್ಮವೊಟಲ್, ಧರ್ಮವೊಳಲ್** (ನಾ). ಒಂದು ಊರಿನ ಹೆಸರು ; ℙ ಈಗಿನ ಧಾರವಾಡಜಿಲ್ಲೆಯ ಡಂಬಳ : ಪರಮಮಹಾದೇವಿ ಧರ್ಮ್ಮವೊಟಲನಾಳುತ್ತಿರೆ ಅಲ್ಲಿ ಕೊಟ್ಟುದು ಪದಿರ್ಕ್ಕಣ್ಣುಗ ಮಣ್ಣು (ಎಕ. XII, ಶಿರಾ. ೨೪-೩೯ ; ಸು. 900) ; ಶ್ರೀಮತ್ ಬಾಚಯ್ಯಸೆಟ್ಟಿಯರ ಳಿಯಂ ಗೋತ್ರಪವಿತ್ರಂ ಬಿರಯ್ಯಸೆಟ್ಟಿಯರ್ ಧರ್ಮ್ಮವೊಟಲ ನಗರ ಜಿನಾಳಯಕ್ಕೆ . . . ಕೊಟ್ಟ ಮೊಕ್ಕಿಯ ಪೊಸವೊಂಗದ್ಯಾಣ ೩೫ (ಸೌಇಇ. XI-i, ೯೪-೭ ; 1058). **ಧರ್ಮವೊಳಲ್ :** ಮಹಿಮೋನ್ನತರಪ್ಪ ಶ್ರೀಮದ್ಧರ್ಮವೊಳಲ ಪದಿನಱುವರು(ವರ್) ಸೆಟ್ಟಿಗಳು ಮಹಾನಗರಮುಂ (ಮು)ಮಿರ್ದ್ದು (ಇಆ. X, ೦೪೭-೦೫; 1095). [ಧರ್ಮ + ಪೊಟಲ್]

**ಧರ್ಮವ್ಯಯ** (ನಾ). ಧರ್ಮಕ್ಕಾಗಿ ಮಾಡುವ ಖರ್ಚಿನ ಹಣ : ತನ್ನ ಸಖನಂ ಧರಾಮರನನ್ವಯದಿಂ ಬರಿಸಿ ರುದ್ರದತ್ತಂಗಿತ್ತಂ ಮುನ್ನಿನ ಲೆಕ್ಕದ ಪೊನ್ನುಂ ಪನ್ನೆರಡಬ್ದಕ್ಕೆ ತಕ್ಕ ಧರ್ಮವ್ಯಯಮುಂ (ನೇಮಿಪು. ೩-೮೫). [ ಧರ್ಮ + ವ್ಯಯ ]

**ಧರ್ಮವ್ರಯ,** ಧರ್ಮಬ್ರಯ (ನಾ). ದಾನ, ಧರ್ಮಗಳಿಗಾಗಿ ಮಾಡುವ ವೆಚ್ಚ : ಗುಣಶಾಸನದಿನಾಳ್ವರ ಸತ್ರಕ್ಕೆ ಮತ್ತನ್ನೂರ್ಟು ಮನೆಯೆರಡು ಅನ್ತು ಧರ್ಮ್ಮವ್ರಯಕ್ಕಂ ಉಪಬಿಯಕ್ಕಂ ಮತ್ತಮ್ಮೂರ್ನೂಱು (ಎಇ. XX, ೬-೩೧ : 1012). **ಧರ್ಮಬ್ರಯ :** ತವಗಂ ಮಹಾಜನಕ್ಕಂ ಪ್ರಜೆಗಂ ಮಾಡಿದ ವ್ಯವಸ್ಥೆಯುಂ ಧರ್ಮ್ಮಬ್ರಯದುಪಬಿಯದ ಮಾನ್ಯದ ಭೂಮಿಯ ನಿವೇಶನದ ಪ್ರಮಾಣಮೆನ್ತೆನೆ (ಎಇ. XX, ೬-೧೫ ; 1012) ; ಮಾನ್ಯದ ಸತ್ರದ ಧರ್ಮ್ಮಬ್ರಯದುಪಬಿಯದನ್ತನಿತುವೆಡೆಯ ಕೆಯ್ಮತ್ತರ್ಯ್ನೂಱುಮ ನಲ್ಲಿಯಲ್ಲಿಯ ನಿವೇಶನಂಗಳುವನೆನಿತು ದುಷ್ಕಾಲವಾದಡಂ ಮಹಾಜನಂ ಕಾದೂಡುವರ್ (ಎಇ. XX, ೬-೪೪ ; 1012). [ ಧರ್ಮ + ವ್ರಯ ]

**ಧರ್ಮವ್ಯಚ್ಛೇದ** (ನಾ). ಧರ್ಮದ ನಾಶ,–ಲಯ : ಅಂತು ಧರ್ಮ ವ್ಯಚ್ಛೇದವಾದ ಕಾಲದೊಳ್ (ಅನಂಪು. ೪-೧೩೫ ವ). [ಧರ್ಮ+ವ್ಯಚ್ಛೇದ]

**ಧರ್ಮಶಪಥ** (ನಾ). ಧರ್ಮದೃಷ್ಟಿಯಿಂದ ಮಾಡಿದ ಪ್ರತಿಜ್ಞೆ : ನಾನು ಸತಿಯಾಗಿ ಇದುದ್ದು ನಿಜವಾಗಿದ್ದರೆ, ಭಗವಂತನೆ ಸಾಕ್ಷಿಯಾಗಿರುವ, ನೀನು ಸಹಸಾ ಎಂದೆಂದಿಗೂ ನಿನ್ನ ಧರ್ಮಶಪಥ ಉಲ್ಲಂಘಿಸಲಾರಿ (ಇಪ್ಪಕ. ೨೨೨). [ ಧರ್ಮ + ಶಪಥ ]

**ಧರ್ಮಶರಣ** (ನಾ). ಧರ್ಮವೇ ಆಶ್ರಯವಾಗಿರುವವನು; ಧರ್ಮವನ್ನು ಮೊರೆಹೊಕ್ಕವನು,–ನಂಬಿದವನು : ಯಾರು ಆತ್ಮದೀಪರಾಗಿ . . . ಧರ್ಮದೀಪರಾಗಿ, ಧರ್ಮಶರಣರಾಗಿ, ಅನನ್ಯಶರಣರಾಗಿ ವಿಹರಿಸುವರೋ ಆ ಶಿಕ್ಷಾಕಾಮರು, ನನ್ನ ಭಿಕ್ಷುಗಳಲ್ಲಿ ಅತ್ಯಗ್ರರಾಗುವರು (ಭಾರದ. ೨೦೧). [ ಧರ್ಮ + ಶರಣ ]

**ಧರ್ಮಶಾಲೆ** (ನಾ). ೧. ಪ್ರವಾಸಿಗಳು ಇಳಿದುಕೊಳ್ಳುವುದಕ್ಕಾಗಿ ಏರ್ಪಡಿಸಿರುವ ಮನೆ ; ಧರ್ಮಛತ್ರ : ತಿರುಕನೋರ್ವನೂರ ಮುಂದೆ ಮುಱುಕು ಧರ್ಮಶಾಲೆಯಲ್ಲಿ ಒಱಗಿ ಇರಲು ಅಲ್ಲೆ ಒಂದು ಕನಸ ಕಂಡನು (ಕನಕ. ೨೦೩-೧) ; ನಿನಗೆ ಅರಮನೆ ಯಾವುದು, ಧರ್ಮಶಾಲೆ ಯಾವುದು ಇಷ್ಟು ಸಹ ತಿಳಿಯುವುದಿಲ್ಲವೊ ? (ಮುಂಬಯಿ. ೪-೧೫೨). ೨. ಬಡವರ ವಸತಿಗಾಗಿ ಏರ್ಪಡಿಸಿದ ಆಶ್ರಯ : ಹಳ್ಳಿಹಳ್ಳಿಗಳಿಂದ ಬಂದ ನಿರ್ಗತಿಕರ ಬಿಡಾರವಾಗಿತ್ತು ಈ ಪಟ್ಟಣದ ಧರ್ಮಶಾಲೆ (ಮಹ್ನಮ. ೧೩೧). [ ಸಂ. ಧರ್ಮಶಾಲಾ ]

**ಧರ್ಮಶಾಸನ** (ನಾ). ೧. = ಧರ್ಮಸಾಧನ ೨ : ಇಂದರಸವೊಡೆಯರು ತಮಗೆ ಪುಣ್ಯಾರ್ಥವಾಗಿ ಬರಸಿದ ಧರ್ಮ್ಮಶಾಸನದ ಕ್ರಮವೆಂತೆಂದರೆ (ಎಕ. VIII, ಸಾಗರ. ೧೬೪-೧೮ ; 1498) ; ನೀವು ನಿಮ್ಮ ಶಿಷ್ಯಪಾರಂಪರ್ಯ ವಾಗಿ ಆಧಿಕ್ರಯದಾನ ಪರಿವರ್ತನೆಗೆ ಸಲ್ಲುವ ಹಾಗೆ ಅನುಭವಿಸಿಕೊಂಡು ಬರುಲುಳ್ಳವರು ಯಂದು ಕೊಟ್ಟ ಭೂದಾನ ಧರ್ಮಶಾಸನ (ಎಕ. XIV, ಮೈಸೂರು. ೧೧೪-೬೮ ; 1663). ೨. ಧರ್ಮದಿಂದ ಆಳುವವನು : ಕಟ್ಟುಕೊಡಗೆ, ಧರ್ಮಶಾಸನ ಎಂಬ ಬಿರುದುಗಳನ್ನು ಉತ್ತಮ ಜನರಿಗೆ ಕೊಡುವಲ್ಲಿ ಇವರು ನಾಡು ಹಾಗೂ ಗಾವುಡರ ಪ್ರತಿನಿಧಿಗಳಾದ ಅಧಿಕಾರಿ ಗಳೊಂದಿಗೆ ಸಹಕರಿಸುತ್ತಿದ್ದರು (ತುಳುನಾ. ೧೧೨). [ ಧರ್ಮ + ಶಾಸನ ]

**ಧರ್ಮಶಾಸ್ತೃ** (ನಾ). ಧರ್ಮಾಧರ್ಮಗಳನ್ನು ಕುರಿತು ಜನತೆಗೆ ಅಪ್ಪಣೆ ಕೊಡಿಸುವವನು ; ಧರ್ಮವನ್ನು ವಿಧಿಸುವವನು,–ಶಾಸನ ಮಾಡು ವವನು : ಕವಿ ಧರ್ಮಶಾಸ್ತೃವೆಂಬದಟವೆಸರ್ಗೆ ಸಿಲ್ಕದೆ ಜನಂ ತನಗೊಪ್ಪುತೆ ಮರ್ಚಿ ನಚ್ಚಿ ಮೋದದೆ ಪುದುವಾಳ್ವವೋಲ್ ವಿಧಿಸುವಂ ಬಿಸವಂದಮೆ ಲೋಕಶಾಸನಂ (ಸಂಸಪ. ೩೯-೧೦). [ ಧರ್ಮ + ಶಾಸ್ತೃ ]

**ಧರ್ಮಶಾಸ್ತ್ರ** (ನಾ). ೧. ಸದಾಚರಣೆಯ ವಿಧಿ, ನಿಯಮಗಳನ್ನು ನಿರೂಪಿಸುವ ಶಾಸ್ತ್ರ; ಮನು, ಪರಾಶರ ಮೊದಲಾದವರಿಂದ ರಚಿತ ವಾದ ಸ್ಮೃತಿ : ಎರಡ(ಎಂಟ)ನೆಯ ದೀಕ್ಷಾನ್ವಯಕ್ರಿಯೆಯೊಳ್ ಅವತಾರ ವೆಂಬುದು ತನ್ನನಾಶ್ರಯಿಸಿದ ಭವ್ಯಜನಕ್ಕೆ ವೇದಮುಂ ಪುರಾಣಮುಂ ಧರ್ಮಶಾಸ್ತ್ರಮುಂ ಚಾರಿತ್ರಮುಂ . . . ಎಂಬ ದಶವಿಧದೊಳಲ್ಲಿ ಮೊದಲ ವೇದಮೆಂಬುದು (ಚಾವುಂಪು. ೨೨೧) ; ಬಣ್ಣಸರಂಗೊಳ್ವಂತೆ ಧರ್ಮಶಾಸ್ತ್ರಂ ಪೇಟ್ವರ್ (ಸಮಪ. ೩-೭೬) ; ಹಿರಿಯರಿದೆ ಸಾಮಾಜಿಕರು ಸಚ್ಚರಿತರಿದೆಲಾ ಸ್ತ್ರೀಮತವನುತ್ತರಿಸಲಾಗದೆ ಧರ್ಮಶಾಸ್ತ್ರದೊಳೆಂದಳಿಂದುಮುಖಿ (ಕುವ್ಯಾಸ. ೧೪-೮೪) ; ಈ ದಿವ್ಯಸಂದೇಶ ಉಪನಿಷತ್ತು, ಗೀತಾ, ಬ್ರಹ್ಮಸೂತ್ರ, ಇತಿಹಾಸ, ಪುರಾಣ, ಧರ್ಮಶಾಸ್ತ್ರ . . . ಇತ್ಯಾದಿ ನಾನಾ ಪ್ರಣಾಳಿಕೆಗಳ ಮೂಲಕ . . . ತನ್ನ ಪ್ರಭಾವವನ್ನು ಬೀರಿದೆ (ಮುಕ್ಸಾರ. ೯೬ ಟೀಕೆ). ೨. ನ್ಯಾಯಶಾಸ್ತ್ರ : ಅಕಟೆಮ್ಮ ಧರ್ಮಶಾಸ್ತ್ರದಿ ಮರಣದಂಡಕೆಡೆಯಿರೆ, ಪರರ ಬಾಗಿಲಿಗೆ ನೀತಿಭಿಕ್ಷೆಗೆ ಬರುವವೇನಿಂತು (ಗೊಲ್ಗೊಥಾ. ೬-೧೬೫). [ ಧರ್ಮ + ಶಾಸ್ತ್ರ ]

**ಧರ್ಮಶಾಸ್ತ್ರಜ್ಞ** (ನಾ). ಧರ್ಮಶಾಸ್ತ್ರವನ್ನು ತಿಳಿದವನು. [ ಸಂ ]

**ಧರ್ಮಶೀಲ** (ನಾ). ಸದಾಚಾರಸಂಪನ್ನ ; ಧರ್ಮಿಷ್ಠ : ಧರ್ಮಶೀಲರಿ ಗಳಿವದೆತ್ತಣ ಧರ್ಮವರ್ತಿಗಳದೆಲ್ಲ ಮಾಡಿದ ಕರ್ಮ ನಿಷ್ಫಲವೆಂಬ ನೀತಿ ಯದಿಲ್ಲಿ ಕಂಡುದಲ (ಕೌಶಿರಾ. ೧೯-೭೩) ; ಧರ್ಮಶೀಲರೊಡನೆ ಒತ್ತಾಯದ ಪ್ರಯತ್ನದಿಂದ ವ್ಯವಹರಿಸ ಹೋಗುವದು . . . ತಮ್ಮ ರಾಷ್ಟ್ರೋದ್ಧಾರತೆ ಯನ್ನು ಮುಂದೆ ಮಾಡಿದಂತಾಗುವದಿಲ್ಲವೊ? (ಮಾಧವ. ೪೬೫). [ ಸಂ. ]

**ಧರ್ಮಶೀಲೆ** (ನಾ). ಒಳ್ಳೆಯ ನಡತೆಯುಳ್ಳವಳು ; ಗುಣವಂತೆ ; ಧರ್ಮಿಷ್ಠೆ. [ ಸಂ. ಧರ್ಮಶೀಲಾ ]

**ಧರ್ಮಶ್ರದ್ಧೆ** (ನಾ). ಧರ್ಮದಲ್ಲಿ ಆಸಕ್ತಿ,–ನಿಷ್ಠೆ : ಭಾರತೀಯರ ಜೀವನ ದಲ್ಲಿ ಧರ್ಮಶ್ರದ್ಧೆ ಜೀವನಾದ್ಯಂತವನ್ನೂ ಸಂಪೂರ್ಣವಾಗಿ ಆವರಿಸಿದೆ (ಭಾರದ. ೩೨೬); ಅವರ ಧರ್ಮಶ್ರದ್ಧೆಯ ದೃಢತೆಯು ಬಲು ಬೆಲೆಯುಳ್ಳದ್ದು (ಮಾಧವ. ೩೭೭). [ ಧರ್ಮ + ಶ್ರದ್ಧೆ ]

**ಧರ್ಮಶ್ರವಣ** (ನಾ). ೧. ಧಾರ್ಮಿಕ ತತ್ತ್ವಗಳ ನಿರೂಪಣವನ್ನು ಕೇಳು ವುದು : ಧರ್ಮಶ್ರವಣಾನಂತರಮಿಂತೆಂದು ಬಿನ್ನಪಂಗೆಯ್ದರ್ (ಶಾಂತಿಪು. ೭-೬೬ ವ) ; ವಿತತಧರ್ಮಶ್ರವಣವಂತ್ಯಕಾಲದೊಳಗಾಶ್ರಿತ ಪರ್ವವಿಭವ ವೇಣುಗಳೊಳು . . . ಅಲ್ಲದಾ ನಾಡೊಳಿಲ್ಲೆಂದ ವಿಶ್ವಾಮಿತ್ರನು (ಹಚಕಾ. ೨-೧೧); ಧರ್ಮಶ್ರವಣಾನಂತರಮೊರ್ಮೆಯೆ ತಮ್ಮಿರ್ಮರಾಯುರವಸಾನಮಂ . . . ಮುನಿಗಳಂ ಬೆಸಗೊಂಡರ್ (ಶಾಂತೀಶ್ವ. ೭-೪೩) ; ಅವಧರಿಸು ಮುರ ವೈರಿ ಧರ್ಮಶ್ರವಣಕೋಸುಗ ಬಾರೆವಾವ್ ಪಾರ್ಥಿವರ ಪಂಥದ ಕದನ ವಿದ್ಯಾಕಾಮವೆಮಗಾಯ್ತು (ಕುವ್ಯಾಉ. ೧-೩೧) ; ಅವನಿಪತಿ ಚಿತ್ತೈಸು ಧರ್ಮಶ್ರವಣಮುಖದಲಿ . . . ಸುಷೇಣಾದಿಗಳು ಸತಿಸಹಜಾತಸುತರು ಗಳ ತವಿಸುವುದು ತಾ ಧರ್ಮವಲ್ಲೆಂದವರು ನುಡಿಯಲು (ತೊರರಾ. ೪-೨-೩೦) ; ಧರ್ಮಶ್ರವಣವಿದೇತಕೆ ಮೂರ್ಖಗೆ (ಪುರಂದ. ೨-೧೭೭ ಪಲ್ಲವಿ). ೨. ಧಾರ್ಮಿಕ ತತ್ತ್ವಗಳ ಬಗೆಗೆ ಮಾಡುವ ವ್ಯಾಖ್ಯಾನ,–ಪ್ರವಚನ: ಎನಗುಱದಿರ್ಕುಮೆ ನಿನ್ನ ಪೇಟ್ದ ಧರ್ಮಶ್ರವಣಂ (ಪಂಪಭಾ. ೯-೪೫) ; ಶ್ರವಣಾಮೃತಮೆನೆ ಧರ್ಮಶ್ರವಣಂ ಮೃದುಮಧುರರುಚಿರಗಂಭೀರರವಂ ಶ್ರವಣದಿನಾಱಿಸಿದು ವಿವಿಧವಿನೇಯಮನಿಂತು ಶಾಂತಿಜಿನನಪವೃಜಿನಂ (ಶಾಂತಿಪು. ೧೨-೨೩) ; ಹೈಂಗರ ಸಭಾಮಂಟ [ಪದಲು ವೈ]ಗಿನ ಧರ್ಮ್ಮ ಶ್ರವಣಕ್ಕೂ ತಮ್ಮ ವಕ್ಖಾಣಶಾಲೆಯಲು ತರ್ಕ್ಕಶಾಸ್ತ್ರಮಂ ವ್ಯಾಖ್ಯಾನಮಾಡು ವಂತಾಗಿ ಬಿಟ್ಟ ಗದ್ಯಾಣ ೩೦ (ಸೌಇಇ. XI-ii, ೧೫೯-೩೨ ; 1111) ; ದುಃಖ ದೊಳ್ ಸೈರಿಸುವುದೆಂದು ನಿಮ್ಮ ಪೇಟ್ದ ಧರ್ಮಶ್ರವಣಮೆನಗೆಯೊ ನಿಮಗಮ ಕ್ಕುಮೊ ಪೆ ೞಿಂ (ಜೀವಸಂ. ೨೨-೪೦ ವ). [ ಧರ್ಮ + ಶ್ರವಣ ]

**ಧರ್ಮಶ್ರವಣಂಗೆಯ್** (ಕ್ರಿ). ಧರ್ಮೋಪದೇಶವನ್ನು ಮಾಡು; ಧಾರ್ಮಿಕ ತತ್ತ್ವಗಳನ್ನು ನಿರೂಪಿಸು: ನೀಂ ತಪ್ಪದೆ ನುಡಿಯೆಂದು ಧರ್ಮಾಧಿಕರಣಂ ಧರ್ಮಶ್ರವಣಂಗೆಯ್ದು ಸಿರದಿರ್ಪುದುಂ (ಪಂಚತಂ. ೧೭೬-೧೯). [ಧರ್ಮಶ್ರವಣ + ಕೆಯ್$_1$]

**ಧರ್ಮಶ್ರವಣಂಗೆಯ್ಸು** (ಕ್ರಿ). ಧಾರ್ಮಿಕ ತತ್ತ್ವಗಳನ್ನು ಕೇಳುವಂತೆ ಮಾಡು: ದೇವರುಳ್ಳೊಡೆ ಧಾರಿಣೀಶ್ವರನ ಮುಂಗಡೆ ತೋಱಲಾಗದೆ ತೋರ್ಪನೆಂಬವನುರ್ವಿಯೊಳ್ ಎಂದು ಧರ್ಮಶ್ರವಣಂಗೆಯ್ಸುತಿರ್ಪನು (ಧರ್ಮಾಮೃ. ೫-೨೪೭). [ಧರ್ಮಶ್ರವಣ + ಕೆಯ್ಸು]

**ಧರ್ಮಸಂಕಟ** (ನಾ). ಪರಸ್ಪರ ವಿರುದ್ಧವಾದ ಎರಡು ಬಗೆಯ ಕರ್ತವ್ಯಗಳಲ್ಲಿ ಯಾವುದನ್ನು ಮಾಡಬೇಕು ಎಂಬುದು ನಿಶ್ಚಿತವಾಗಿ ತಿಳಿಯದೆ ಉಂಟಾಗುವ ಪೇಚಿನ ಪರಿಸ್ಥಿತಿ; ಇಕ್ಕಟ್ಟಿನ ಪ್ರಸಂಗ; ಉಭಯ ಸಂಕಟ: 'ಧರ್ಮಸಂಕಟ' ಎಂದರೆ ಒಂದಕ್ಕೊಂದು ವಿರೋಧವಾದ ಕರ್ತವ್ಯಗಳಲ್ಲಿ ಯಾವುದನ್ನು ಮಾಡುವುದು ಎಂಬುದು ನಿಶ್ಚಯವಾಗಿ ತಿಳಿಯದೆ ಭ್ರಾಂತಿಯಾಗುವ ಸ್ಥಿತಿ (ವ್ಯಾಸಜಿ. ೩೦೯); ಇಂದ್ರ ಮತ್ತು ಅಗ್ನಿಯು ಶಿಬಿಯ ಮನೋದಾರ್ಢ್ಯವನ್ನು ಪರೀಕ್ಷಿಸುವುದಕ್ಕೋಸ್ಕರ ಅವನಿಗೊಂದು ಧರ್ಮಸಂಕಟವನ್ನು ತಂದಿಡುತ್ತಾರೆ (ಭಾರದ. ೧೦೩); ಭಾವನೊಡನೆ ಮಾತನಾಡದೆ ಈ ಧರ್ಮಸಂಕಟ ಬಗೆಹರಿಯುವಂತಿಲ್ಲ (ವಾತ್ಸಲ್ಯ. ೩೫೮); ಅವನು ಎದುರಿಸಬೇಕಾಗಿ ಬಂದ ದೊಡ್ಡ ಧರ್ಮಸಂಕಟ . . . ಪ್ರಮಿತ್ಯೂಸನ್ನೆ ಪರ್ವತಾರಣ್ಯದ ಹೆಬ್ಬಂಡೆಗೆ ಬಂಧಿಸಿ ಬೆಸೆಯಬೇಕಾಗಿ ಬಂದದ್ದು (ಬದ್ಮಪ್ರ. XLVI, ಪೀಠಿಕೆ). [ಧರ್ಮ + ಸಂಕಟ]

**ಧರ್ಮಸಂತತಿ** (ನಾ). ೧. ಧರ್ಮಪತ್ನಿಯಿಂದ ಪಡೆದ ಸಂತಾನ: ಧರ್ಮಸಂತತಿನಿಮಿತ್ತಂ ಧರ್ಮಪತ್ನೀಪರಿಗ್ರಹಮಂ ಕೈಕೊಳವೇಟ್ಪುದು (ಪುಷ್ಪಪು. ೧೨-೯೫); ಸಹಜಂ ಮುನ್ನಮೆ ದೇವ ನಿನ್ನ ಮನದೊಳ್ ವೈರಾಗ್ಯಮುಂಟಾದೊಡಂ ಮಹಿಶಂ [ಯಂ] ರಕ್ಷಿಪ ಧರ್ಮಸಂತತಿನಿಮಿತ್ತಂ ರಾಜ್ಯಮಂ ತಾಳ್ದಿ ನಿಸ್ಪೃಹನಾಗಿರ್ಪವೊಲಿರ್ದನಿನ್ನೆವರಂ (ಪುಷ್ಪಪು. ೦೩-೬೫). ೨. ಧಾರ್ಮಿಕವಾಗಿ ಮಗನಂತಿರುವವನು. [ಧರ್ಮ + ಸಂತತಿ]

**ಧರ್ಮಸಂತಾನ** (ನಾ). ೧.=ಧರ್ಮಸಂತತಿ ೧. ೨. ಒಂದೇ ಧರ್ಮವನ್ನು ನಂಬಿರುವ ಜನರ ಗುಂಪು ಮತ್ತು ಆ ಗುಂಪಿಗೆ ಸೇರಿದವನು: ಸೂಳೆಗೆ ಹುಟ್ಟಿದ ಕೂಸಿನಂತೆ ಆರನಾದಡೆಯೂ ಅಯ್ಯಾ ಅಯ್ಯಾ ಎನಲಾಱೆ ಚೆನ್ನಯ್ಯನೆಮ್ಮಯ್ಯನು ಚೆನ್ನಯ್ಯನ ಮಗ ನಾನು ಕೂಡಲಸಂಗನ ಮಹಾಮನೆಯೊಳು ಧರ್ಮಸಂತಾನ ಭಂಡಾರಿ ಬಸವಣ್ಣನು (ಬಸವ. ೩೪೭). [ಧರ್ಮ + ಸಂತಾನ]

**ಧರ್ಮಸಂತೆ,** ಧರ್ಮಸಂಥೆ (ನಾ).=ಧರ್ಮಸಂಸ್ಥೆ: ಎಲ್ಲರುಂ ಕುಳ್ಳಿರಿಸಿಯೆ ಕೇಳ್ದು [ಧ]ರ್ಮ್ಮಸಂಥೆಯೆನಿಸಿಯೆ ಮಾಯ್ದೇವರಸಂ ಮಾಡಿದ ಧ(ಂ)ರ್ಮ್ಮಂ ಧರೆಯೊಳಗಿದು ಧರ್ಮ್ಮಸಂತೆಯಾಚಂದ್ರಾರ್ಕ್ಕಂ (ಸೌಇಇ. XX, ೧೭೫-೩೩; 1190). **ಧರ್ಮಸಂಥೆ:** ಮಾಯಿದೇವ ದಣ್ಣನಾಯಕಂ ತಂಮಾಳ್ಕೆಯ ಮೂವತ್ತಾಱುಂ ಬಾಡದ ರಾಜಧಾನಿ ಬೇವಿನೂರಲು ಧರ್ಮದಾರವೆಯುಮಂ ಧರ್ಮ್ಮಸಂಥೆಯುಂ ಮಾಡಿ (ಸೌಇಇ. XX, ೧೭೫-೫೩; 1190). [< ಧರ್ಮಸಂಸ್ಥೆ]

**ಧರ್ಮಸಂಥೆ** 'ಧರ್ಮಸಂತೆ' ನೋ.

**ಧರ್ಮಸಂದೇಶ** (ನಾ). ಧರ್ಮದ ಬೋಧೆ: ಇತಿಹಾಸ ಪುರಾಣಗಳು, ಅತ್ಯುತ್ತಮ ಕಾವ್ಯಗಳು, ಶಿಲ್ಪಕಲೆಗಳು ಇವುಗಳ ಮೂಲಕ ಧರ್ಮಸಂದೇಶ ಸರ್ವತ್ರ ಪ್ರಸರಿಸುವಂತಾಯಿತು (ಖುಕ್ನಾರ. ೧೦೭ ಪೀಠಿಕೆ). [ಧರ್ಮ + ಸಂದೇಶ]

**ಧರ್ಮಸಂಸ್ಥಾಪನೆ** (ನಾ). ಅಳಿದುಹೋಗುತ್ತಿರುವ ಧರ್ಮವನ್ನು ಪುನಃ ಪ್ರತಿಷ್ಠಿಸುವುದು,-ಸ್ಥಿರಗೊಳಿಸುವುದು: ವಿದ್ಯಾರಣ್ಯರನ್ನು ಹರಿಹರನು "ಧರ್ಮಸಂಸ್ಥಾಪನೆಗೆ ಹುಟ್ಟಿದ ಪರಂಜ್ಯೋತಿಯ ಅಪರ ಅವತಾರ"ವೆಂದೆ ಪ್ರಶಂಸಿಸಿದ್ದಾನೆ (ಖುಕ್ನಾರ. ೧೧೦ ಪೀಠಿಕೆ). [ಧರ್ಮ + ಸಂಸ್ಥಾಪನೆ]

**ಧರ್ಮಸಂಸ್ಥೆ** (ನಾ). ಅಗತ್ಯವಿರುವ ದರಿದ್ರರಿಗೆ ಸಹಾಯ ಮಾಡುವ ಸಂಘ: ಬಡವರ ಹಿತಚಿಂತನೆಗಾಗಿ ಅನಾಥಾಲಯ, ಧರ್ಮಸಂಸ್ಥೆ, ಅಶಕ್ತ ಪೋಷಕಸಂಘ ಮುಂತಾದುವುಗಳನ್ನು ಸ್ಥಾಪಿಸಿರುತ್ತಾರೆ (ರೂಢಿ). [ಧರ್ಮ + ಸಂಸ್ಥೆ]

**ಧರ್ಮಸಂಹಿತೆ** (ನಾ). = ಧರ್ಮಶಾಸ್ತ್ರ ೧: ಶಿವಪುರಾಣದ ಧರ್ಮಸಂಹಿತೆಯೊಳಜಸುತಗೆ ಶಿವನು ವಿಷಮಂ ಧರಿಸಿ ಚಂದ್ರಧರನಾದುದಂ . . . ಪೇಳ್ದಪೆಂ (ಲಶಿಚಂ. ೧೨ ಸೂಚನೆ). [ಧರ್ಮ + ಸಂಹಿತೆ]

**ಧರ್ಮಸಖಾಯಿ** (ನಾ). ಧರ್ಮಕಾರ್ಯದಲ್ಲಿ ಸಹಾಯಕನಾದವನು,-ಜೊತೆಗಾರ: ತಂನ ಧರ್ಮ್ಮಸಖಾಯಿಯಪ್ಪ ತಣ್ಣಂತುಳದಾಸರಿಗೆ ಸಂತಾನಗಾಮಿಯಾಗಿ ಕೊಟ್ಟ ಪ್ರಸಾದ ಮಾನ ೧ (ಮ್ಯಾಆರಿ. ೧೯೪೭, ೩೦-೨೨; 1314). [ಧರ್ಮ + ಸಖಾಯಿ$_0$ (<ಸಹಾಯಿ)]

**ಧರ್ಮಸತ್ರ** (ನಾ). ಪ್ರಯಾಣಿಕರು ಮೊದಲಾದವರಿಗೆ ಪುಕ್ಕಟೆಯಾಗಿ ವಸತಿ, ಊಟಗಳನ್ನು ಒದಗಿಸಲಾಗುವ ಮನೆ; ಛತ್ರ: ಇದೇನು ಮನೆಯೋ ಧರ್ಮಸತ್ರವೋ? (ರೂಢಿ). [ಧರ್ಮ + ಸತ್ರ]

**ಧರ್ಮಸಭೆ** (ನಾ). ೧. ನ್ಯಾಯವನ್ನು ನಿರ್ಣಯಿಸುವುದಕ್ಕಾಗಿ ಸೇರುವ ಸಭೆ; ನ್ಯಾಯಾಸ್ಥಾನ. ೨. ಮತಸಂಬಂಧವಾದ ವಿಷಯಗಳನ್ನು ಕ್ರಮಪಡಿಸುವುದಕ್ಕಾಗಿಯೂ ಆದೇಶಗಳನ್ನು ನೀಡುವುದಕ್ಕಾಗಿಯೂ ಸೇರುವ ಸಭೆ: ಪೂರ್ವಾಚಾರಪರಾಯಣರು ಆಗಿಂದಾಗ್ಗೆ ಧರ್ಮಸಭೆಗಳನ್ನು ನಡಸಿ, ಸದ್ಧರ್ಮದ ಸ್ವರೂಪವನ್ನು ಶೋಧಿಸಿ ಸ್ಥಿರಪಡಿಸಲು ಪ್ರಯತ್ನಿಸಿದರು (ಭಾರದ. ೨೦೩). ೩. [ಜೈನ] ಕೇವಲಜ್ಞಾನ ದೊರಕಿದ ಮೇಲೆ ತೀರ್ಥಂಕರನು ಧರ್ಮೋಪದೇಶ ಮಾಡುವ ಸಭೆ; ಸಮವಸರಣಮಂಟಪ: ಮಹಾವೀರನ ಧರ್ಮಸಭೆಯಲ್ಲಿ (ಸಮವಸರಣ) ಎಲ್ಲ ಜಾತಿಯ ಜನರೂ ಇರುತ್ತಿದ್ದರು (ಜೈನಪ. ೫೦). [ಧರ್ಮ + ಸಭೆ]

**ಧರ್ಮಸಾಕ್ಷಿ** (ನಾ). ಧರ್ಮದ ಪ್ರಮಾಣ,-ಸಾಕ್ಷಿ: ಸಾವಂತ ಮನ್ನೆಯ ಮಂಡಲೇಶ್ವರರು ಪೊಡವಿ ತಮ್ಮನಿತಱಲಿ ರಾವಣನಡಗಿರದವೋಲಾಣೆ ಭಾರದ ಗಡಿಯ ಕೊಟ್ಟರು ಬಳಿಕ ತಮ್ಮಯ ಧರ್ಮಸಾಕ್ಷಿಯಲಿ (ತೊರರಾ. ೪-೯-೨೨). [ಧರ್ಮ + ಸಾಕ್ಷಿ]

**ಧರ್ಮಸಾಧನ** (ನಾ). ೧. ಧರ್ಮವನ್ನು ಗಳಿಸುವಿಕೆ: ಪಾತ್ರಕ್ಕೆ ಧರ್ಮಸಾಧನಮಪ್ಪ ಧನಮಂ ಕುಡೆ ಕೊಟ್ಟಂಗಂ ಕೊಂಡಂಗಂ ಉಭಯಲೋಕದೊಳ್ ಹಿತಮಕ್ಕುಂ (ಚಾವುಂಪು. ೧೩೭); ಅರ್ಥಸಾಧನ ಧರ್ಮಸಾಧನವರ್ಥ ಧರ್ಮದಲುಭಯಲೋಕಕನರ್ಥಸಾಧನ ಕಾಮವೆಂದನು ಮುನಿ ನೃಪಾಲಂಗೆ (ಕುವ್ಯಾಸ. ೧-೨೮); ಪಾರಮಾರ್ಥಿಕ ಧರ್ಮಸಾಧನಕ್ಕೆ ಐಹಿಕವ್ಯವಹಾರದ ತೃಪ್ತಿಯು ಬೇಕು (ಮಾಧವ. ೩೮೭). ೨. ಧರ್ಮಕಾರ್ಯವನ್ನು ನಡೆಸಿಕೊಂಡು ಹೋಗುವುದಕ್ಕಾಗಿ ಹಾಕಿಕೊಟ್ಟ ದತ್ತಿ; ಧರ್ಮಶಾಸನ: ಚವುಡಿಸೆಟ್ಟರಿಗೆ ಹೂವಿನ ಚೆನಯ್ಯನು ಕೊಟ ಧರ್ಮಸಾಧನದ ಸಂಬಂಧ ನನ್ನ ಕ್ಷೇತ್ರವು ಅಡಹಾಗಿಲು ನೀವು ಆ ಕ್ಷೇತ್ರವನು ಬಿಡಿಸಿ (ಎಕ. II (R), ೩೨೮-೩; 1537); ಸ್ಥಾನಿಕ ಅಪಾಜಿ ಪೂಜೆಯನು ಸಮರ್ಪಿಸಿಕೊಂಡುಯಿರೆಂದು ಕೊಟ್ಟ ಧರ್ಮಸಾಧನ (ಎಕ. IX, ಹೊಸಕೋ. ೧-೧೪; 1559).
☞ ಧರ್ಮಸಾಧನಗಳು–ಅಹಿಂಸೆ, ಕ್ಷಮೆ, ಸತ್ಯ, ಅಲೋಭ, ಲಜ್ಜೆ, ಶ್ರದ್ಧೆ, ಇಂದ್ರಿಯನಿಗ್ರಹ, ದಾನ, ಯಜ್ಞ, ತಪ, ಧ್ಯಾನ. [ಧರ್ಮ + ಸಾಧನ]

**ಧರ್ಮಸಾಮ್ರಾಜ್ಯ** (ನಾ). ಧರ್ಮವೇ ಪ್ರಧಾನವಾಗಿರುವ ರಾಜ್ಯ. [ ಧರ್ಮ + ಸಾಮ್ರಾಜ್ಯ ]

**ಧರ್ಮಸಾರ** (ನಾ). ಧರ್ಮದ ತಿರುಳು, – ಸತ್ತ್ವ : ನೀನು ಧರ್ಮಸಾರವನ್ನು ಬಲ್ಲವನು (ಭೀಷ್ಮಜ. ೩೦೯). [ ಧರ್ಮ + ಸಾರ₃ ]

**ಧರ್ಮಸಾರಥಿ** (ನಾ). ಧರ್ಮವನ್ನು ನಡೆಸಿಕೊಂಡು ಹೋಗುವವನು : ಶ್ರೀಮದ್ಭೀಮರಸಸ್ಸರ್ವ್ವಗುಣಜನಸಂಸ್ತೂಯಮಾನ ಧರ್ಮ್ಮಸಾರಥಿ ಚತುಸ್ಸಮಯಾಶ್ರಯ ಸಕಳಭುವನವಿಖ್ಯಾತಕೀರ್ತ್ತಿ (ಕಇಅ. ೮೫–೧೮–೧೯, 932). [ <ಸಂ. ಧರ್ಮಸಾರಥಿ ]

**ಧರ್ಮಸಾವರ್ಣಿಕ** (ನಾ). ಹದಿನಾಲ್ಕು ಮನುಗಳಲ್ಲಿ ಒಬ್ಬ ; ಹನ್ನೊಂದನೆಯ ಮನು : ಸಕಲಧರ್ಮಪದ್ಧತಿಪ್ರವರ್ತಕರಾಗಿ ಶಿವಪ್ರಸಾದದಿಂ ಲೋಕಾಧಿಪತ್ಯಂಗೈದು ಸ್ವಾಯಂಭುವ . . . ಧರ್ಮಸಾವರ್ಣಿಕ . . . ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳೊಳಗೆ(ವಿವೇಕ. ೩೦೯). [ಸಂ.]

**ಧರ್ಮಸಿದ್ಧ** (ನಾ). ಧರ್ಮಶಾಸ್ತ್ರವನ್ನು ಚೆನ್ನಾಗಿ ಬಲ್ಲವನು ; ಧರ್ಮಾಚರಣೆಯಲ್ಲಿ ಸಿದ್ಧಿಯನ್ನು ಪಡೆದವನು : ನೀನು ಧರ್ಮಸಿದ್ಧನಾಗಿ ಕಾಣುತ್ತೀಯೆ ; ನಿನಗೆ ತಿಳಿಯದ್ದೇ ಇಲ್ಲವೆಂದು ನನಗೆ ತೋರುತ್ತದೆ (ವಚಭಾ. ೧೫೭). [ ಧರ್ಮ + ಸಿದ್ಧ ]

**ಧರ್ಮಸುತ** (ನಾ).=ಧರ್ಮಪುತ್ರ ೨ : ಲಜ್ಜಾಭರದಿಂದಂ ತಲೆಯನೆಱಗಿದಂ ಧರ್ಮಸುತಂ (ಗದಾಯು. ೬–೩೯) ; ಧರ್ಮಮಯವೀ ಯಜ್ಞ ನೀನೇ ಧರ್ಮಸುತನೆಂದಿದ್ದೆವಿಲ್ಲಿ ವಿಕರ್ಮವಾಯಿತು (ಕುವ್ಯಾಸ. ೮೩೧) ; ಹಯಮಂ ಬಿಟ್ಟು ನೆಲದೆಱೆಯ ಧರ್ಮಸುತನಂ ಕಂಡು ಬದುಕುವುದು ಲೇಸು (ಜೈಮಿಭಾ. ೧೯–೯); ಧರ್ಮಸುತನಿಂದೆಯುಂ ಮಿಗೆ ಧಾರ್ಮಿಕನೆನಿಪವನ ಮೊಮ್ಮನಂದದೊಳೊಗೆದಂ . . . ಚಾಮರಾಜನಾದಿಬಿಡೌಜಂ (ಚಕವಿ. ೨–೬೨). [ ಧರ್ಮ + ಸುತ ]

**ಧರ್ಮಸೂಕ್ಷ್ಮ** (ನಾ). ಧರ್ಮದ ರಹಸ್ಯ,–ಮರ್ಮ : ರಾಯ ಮುನ್ನವೆ ತನ್ನ ಸೋತಬುಜಾಯತಾಕ್ಷಿಯ ಬಳಿಕ ಸೋತರೆ ಧರ್ಮಸೂಕ್ಷ್ಮದಲಿ ರಾಯ ಸಭೆಯಲಿ ಹಿರಿಯರಱದರಾಯತವನಱುಹಿದರೆ ಬಹೆನೆಂದಾ ಯುವತಿ ಬಿನ್ನಹ ಮಾಡಿದಳು (ಕುವ್ಯಾಸ. ೧೯–೫೨) ; ಧರ್ಮಸೂಕ್ಷ್ಮವನ್ನು ಅರಿಯದೆ ಯಾವ ಕಾರ್ಯವನ್ನೂ ಮಾಡಬಾರದು (ನೀತಿಚಿಂ. X, ೧೧) ; ಪಾಂಡವರೇ! ನೀವು ಹುಡುಗರು; ಧರ್ಮಸೂಕ್ಷ್ಮವನ್ನರಿಯಿರಿ (ವಚಭಾ. ೮೧). [ ಧರ್ಮ + ಸೂಕ್ಷ್ಮ ]

**ಧರ್ಮಸೂತ್ರ** (ನಾ). ಸನಾತನ ಹಿಂದೂಜನಾಂಗದ ವರ್ಣಾಶ್ರಮಾಚಾರ, ರಾಜಧರ್ಮ ಮೊದಲಾದ ಆಚಾರ ವ್ಯವಹಾರಗಳನ್ನು ವಿಧಿಸುವ ಸೂತ್ರರೂಪವಾದ ಸ್ಮೃತಿಗ್ರಂಥ; P ಗೌತಮಧರ್ಮಸೂತ್ರ, ಬೋಧಾಯನಧರ್ಮಸೂತ್ರ, ಆಪಸ್ತಂಬಧರ್ಮಸೂತ್ರವೆಂಬ ಮೂರು ಧರ್ಮಸೂತ್ರಗ್ರಂಥಗಳು ಈಗ ಉಪಲಬ್ಧವಾಗಿವೆ. ಧರ್ಮಸೂತ್ರಗಳು ಆಚಾರವ್ಯವಹಾರಗಳನ್ನು ವಿಧಿಸುವಂತೆ, ಗೃಹ್ಯಸೂತ್ರಗಳು ಹಿಂದೂಜನಾಂಗದಲ್ಲಿ ಸಂಸಾರಿಗಳು ಅನುಸರಿಸಬೇಕಾದ ಪುಂಸವನ, ಸೀಮಂತ, ಜಾತಕರ್ಮ, ವಿವಾಹ, ಅಂತ್ಯೇಷ್ಟಿ ಮೊದಲಾದ ಸಂಸ್ಕಾರಗಳ ಕ್ರಮವನ್ನು ವಿಧಿಸುತ್ತವೆ. ಸ್ಮೃತಿಗಳು ಶ್ಲೋಕರೂಪವಾಗಿರುತ್ತವೆ. ಇವು ಸೂತ್ರರೂಪವಾಗಿವೆ : ಗೌತಮಧರ್ಮಸೂತ್ರ (೧–೨) ವಶಿಷ್ಠಧರ್ಮಸೂತ್ರಗಳಲ್ಲಿ "ಸ್ಮೃತಿಯು ಧರ್ಮದ ಆಧಾರ" ಎಂದು ಹೇಳಿದೆ (ಭಾರದ. ೫೦). [ಧರ್ಮ + ಸೂತ್ರ ]

**ಧರ್ಮಸೂತ್ರಕಾರ** (ನಾ). ಧರ್ಮಸೂತ್ರಗಳನ್ನು ರಚಿಸಿದವನು : ಆಪಸ್ತಂಬಾದಿ ಧರ್ಮಸೂತ್ರಕಾರರು ಭರತಖಂಡದ ಸಮಗ್ರ ಸಾಮಾಜಿಕ ನೀತಿಯಲ್ಲಿ ಐಕ್ಯವನ್ನೂ ದಾರ್ಢ್ಯವನ್ನೂ ಉಂಟುಮಾಡಿದರು (ಹುಕ್ಕಾರ. ೧೦೩ ಪೀಠಿಕೆ). [ ಸಂ. ]

**ಧರ್ಮಸೆರೆ** (ನಾ). ಮದುವೆಯಾಗುವುದು ಕಷ್ಟವಾಗಿರುವ ಹೆಣ್ಣಿನ ಸ್ಥಿತಿ ; ಕನ್ಯಾಸೆರೆ : ವಯಸ್ಸಿಗೆ ಬಂದಿರುವಳು. ಬ್ರಹ್ಮಲಿಖಿತವಿದ್ದರೆ ಈ ವರುಷ ಧರ್ಮಸೆರೆಯನ್ನು ಬಿಡಿಸಬೇಕೆಂದಿರುವೆ (ಜಯಂತ. ೨೭೫).

ಧರ್ಮಸೆರೆ ಬಿಡಿಸು=ಮದುವೆಯಾಗುವುದು ಕಷ್ಟವಾಗಿರುವ ಹೆಣ್ಣಿಗೆ ಮದುವೆ ಮಾಡಿಸು : ಅಂಗಹೀನ ಹುಡುಗಿಯರಿಗೆ ಮಂಗಳಸೂತ್ರ ಕಟ್ಟಿಸುವುದಕ್ಕೆ 'ಧರ್ಮಸೆರೆ ಬಿಡಿಸುವುದು' ಅಥವಾ 'ಕನ್ಯಾಸೆರೆ ಬಿಡಿಸುವುದು' ಎಂದು ಹೇಳುತ್ತಾರೆ (ಧರ್ಮಸೆ. ಮುನ್ನುಡಿ) ; ಲೀಲೀ ಲಗ್ನದಾಗ ಆಕೀದು ಧರ್ಮಸೆರೆ ಬಿಡಿಸಿದರಾತು (ಧರ್ಮಸೆ. ೮೮). [ ಧರ್ಮ + ಸೆರೆ₂ (<ಸೆಱೆ₂) ]

**ಧರ್ಮಸೇನ** (ನಾ). ಒಬ್ಬಾತನ ಹೆಸರು: ಶ್ರೀಕಿತ್ತೂರಾ ವೆಳ್ಮಾದದಾ ಧರ್ಮ್ಮಸೇನ ಗುರವಡಿಗಳಾ ಶಿಷ್ಯರ್ (ಎಕ. II, ೨೯–೧ ; ಸು. 700). [ ಸಂ. ]

**ಧರ್ಮಸ್ತಂಭ** (ನಾ). ಧರ್ಮಕಾರ್ಯಗಳ ವಿವರಗಳನ್ನು ಕೆತ್ತಿರುವ ಕಂಭ : ಶ್ರೀಮುಕುಟೇಶ್ವರದೇವಸ್ಥಾನದ ಮುಂದೆ ಧರ್ಮಸ್ತಂಭವನ್ನು ಊರಿದನು (ಕರ್ಣಾಅ. ೫೫). [ ಧರ್ಮ + ಸ್ತಂಭ ]

**ಧರ್ಮಸ್ಥಲ, ಧರ್ಮಸ್ಥಳ** (ನಾ). ೧. ಧರ್ಮದ ನೆಲೆ ; ಧರ್ಮಕ್ಕೆ ಆಶ್ರಯವಾದ ಸ್ಥಿತಿ. **ಧರ್ಮಸ್ಥಳ** : ೧. ಈ ಶಾಸನಮರ್ಯಾದೆಯಂ ಮೀಱಿದವರು ಧರ್ಮಸ್ಥಳವ ಕೆಡಿಸಿದವರು . . . ಸಮಯದ್ರೋಹರು ರಾಜದ್ರೋಹರು (ಎಕ. II, ೩೩೩–೩೦ ; 1206) ; ತಿಳಿದು ನೋಡಿರಿ ರಾಮ ಧರ್ಮಸ್ಥಳಕೆ ನೀವು ಸಹಾಯವು (ಕುವ್ಯಾಗ. ೬–೫). ೨. ದಕ್ಷಿಣಕನ್ನಡ ಜಿಲ್ಲೆಯ ಒಂದು ಪ್ರಸಿದ್ಧ ತೀರ್ಥಕ್ಷೇತ್ರ : ಪಡುಬಿದ್ರೆಯಲ್ಲಿ ಜರಗುವ ಡಕ್ಕೆಬಲಿ, ಧರ್ಮಸ್ಥಳದಲ್ಲಿ ಹದಿನೆರಡು ವರ್ಷಗಳಿಗೊಮ್ಮೆ ನಡೆವ 'ನಡಾವಳಿ' ಎಂಬ ಉತ್ಸವ . . . ಇವುಗಳು ಪ್ರಾಮುಖ್ಯವಾದುವುಗಳಾಗಿವೆ (ತುಳುನಾ. ೨೫೩). ೩. ನ್ಯಾಯವನ್ನು ನಿರ್ಣಯಿಸುವ ಸ್ಥಳ ; ನ್ಯಾಯಾಸ್ಥಾನ : ಆ ಕಾಂತೆಯರೆನ್ನ ತನ್ನ ಪತಿಯೆಂದೊರೊರ್ವರೊಳ್ ಕಾದು ತಿರ್ಪಿನೆಗಂ ಮಾಣಿಸಿಯಿರ್ದ ನಾಲ್ವರವರಂ ಧರ್ಮಸ್ಥಳಕಟ್ಟಿದರ್ (ಪದ್ಯಸಾ. II, ೬೧೨ ; ಧರ್ಮಪ). ೪. ಪವಿತ್ರವಾದ ಸ್ಥಳ ; ಪುಣ್ಯಸ್ಥಳ. [ ಧರ್ಮ + ಸ್ಥಲ ]

**ಧರ್ಮಸ್ಥಳ** 'ಧರ್ಮಸ್ಥಲ' ನೋ.

**ಧರ್ಮಸ್ಥಾಪಕ** (ನಾ). ಧರ್ಮವು ನೆಲೆಗೊಳ್ಳುವಂತೆ ಮಾಡುವವನು ; ಧರ್ಮವನ್ನು ಪ್ರತಿಷ್ಠಾಪಿಸುವವನು : ನೀವು ನಿಜವಾಗಿಯೂ ಧರ್ಮಸ್ಥಾಪಕರೇ ಸರಿ (ಮಾಧವ. ೩೮೭). [ ಧರ್ಮ + ಸ್ಥಾಪಕ ]

**ಧರ್ಮಸ್ಥಾಪನೆ** (ನಾ). ಧರ್ಮವನ್ನು ನೆಲೆಗೊಳಿಸುವುದು. [ ಧರ್ಮ + ಸ್ಥಾಪನೆ ]

**ಧರ್ಮಸ್ಥಿತಿ** (ನಾ). ನ್ಯಾಯವಾಗಿರುವಿಕೆ ; ಧರ್ಮದ ನೆಲೆ : ಗಣಧರದೇವರುಮಂ ಮುನಿಗಣಮುಮನತಿಭಕ್ತಿಭರದೆ ಬಂದಿಸಿ ಭವ್ಯಾಗ್ರಣಿಗಳ್ ಬಱಿಯಂ ಮಾನವ ಗಣಭೂಮಿಯೊಳಿರ್ದು ಕೇಳ್ದು ಧರ್ಮಸ್ಥಿತಿಯಂ (ಮಹಾನೇ. ೩–೫); ಧ್ಯಾನಿಸುವೆಂ ಧರ್ಮಜನಾಧೀಶನನೀ ಪಂಚದಶಸುತೀರ್ಥಾಧಿಪನಂ ಮಾನಿತಧರ್ಮಸ್ಥಿತಿಯಂ . . . ಒಲವಿಂ (ಬಾಧಪು. ೧೬–೩೯೬) ; ಪತಿಗಳಿವರಂಜಿದರು ಧರ್ಮಸ್ಥಿತಿಯನಱದವರಳುಕಿದರು . . . ಕೃಷ್ಣ ನೀನೆ ಗತಿಯೆನುತ ಬಾಯ್ಬಿಡಲು ಲಜ್ಜಾಸ್ಥಿತಿಯನುಳುಹಿದ ದೈವ ನೀ ಮೈದೋಱದೈ ತನಗೆ (ಕುವ್ಯಾಅ. ೨–೧೩). [ ಧರ್ಮ + ಸ್ಥಿತಿ ]

**ಧರ್ಮಸ್ವ** (ನಾ). ಧಾರ್ಮಿಕಕಾರ್ಯಗಳಿಗಾಗಿ ಕೊಟ್ಟ ದತ್ತಿ ; ಧರ್ಮನಿಧಿ : ಧಾರ್ಮಿಕಶಿಕ್ಷಣವನ್ನು ಕೊಡಬೇಕಾದ ಕಟ್ಟುಪಾಡುಳ್ಳ ಯಾವುದಾದರೂ ಧರ್ಮಸ್ವಕ್ಕೆ ಅಥವಾ ನ್ಯಾಸಕ್ಕೆ ಅಧೀನವಾಗಿ ಆ ಸಂಸ್ಥೆಯು ಸ್ಥಾಪಿತವಾಗಿದ್ದಲ್ಲಿ (ಭಾಧಾನ. ೧೭). [ ಸಂ. ]

**ಧರ್ಮಹಂತೃ** (ನಾ). ೧. ಧರ್ಮವನ್ನು ಹಾಳುಮಾಡುವವನು. ೨. [ವಿಶೈ] ಕಾಲಯಮನನ್ನು ನಾಶಮಾಡಿದವನು. ೧, ೨: ಕನಕನಗೇಂದ್ರಧೈರ್ಯಕರನಾಗಿಯುಮುನ್ನತಧರ್ಮಹಂತೃ[ಪಾಠಾಂ.ತ್ಯ] ಸಂಜನಿತಪರಾರ್ಥನಾಗಿಯುಮುದಗ್ರಪರಾರ್ಥಹರಂ ಪ್ರದತ್ತಕಾಮನುಮೆನಿಸಿರ್ದು ಕಾಮಮಥನಂ . . . ಎಂದೆನಿಸಿರ್ದನಹೀಂದ್ರಭೂಷಣಂ (ರಾಜಶೇ. ೧೪-೧೪೪). [ ಸಂ. ]

**ಧರ್ಮಹಸ್ತ** (ನಾ). ೧. ರಕ್ಷಣೆಯನ್ನು ನೀಡುವ ಕೈ ; ಅಭಯಹಸ್ತ : ಅವನತಗ್ಗೆ ಧರ್ಮ್ಮಹಸ್ತವನವಯವದಿಂ ನೀಡಿ ಚಾಣ × × ಯೊಳವರತ [ವಂ] ಕೊಂಡುಂ ಧಾರ್ಮ್ಮಿಕನೆನಿಸುವನೀ ಜಯಕೇಸಿದೇ × × ವಿಪರೀತ (ಸೌಇಇ. XX, ೧೦೭-೩೮ ; 1138). ೨. ದಾನವನ್ನು ಮಾಡುವವನು. [ ಸಂ. ]

**ಧರ್ಮಹಾನಿ** (ನಾ). ಧರ್ಮದ ನಾಶ ; ಧರ್ಮಕ್ಕೆ ಒದಗುವ ಕೇಡು,– ತೊಂದರೆ : ನಿನ್ನಂತಪ್ಪ ದುರ್ಮಂತ್ರಿಯ ಕಾರಣದಿಂ ಪಿಂಗಳಕಂಗೆ ಧರ್ಮಹಾನಿಯುಂ ಯಶೋಹಾನಿಯುಮಾಗಿ ಮಾಣದೆ ಪ್ರಾಣಹಾನಿಯುಮಾಗಲಿರ್ದುದು (ಪಂಚತಂ. ೧೬೮-೩) ; ಏಕೆ ನಾಚಿಕೆ ಧರ್ಮಹಾನಿ ವ್ಯಾಕುಳತೆಯುನ್ನೇಕೆ . . . ಏಕೆ ಭಯ ನಮಗಿನ್ನು (ಕುವ್ಯಾದ್ರೋ. ೧೯-೪೦). [ ಧರ್ಮ + ಹಾನಿ ]

**ಧರ್ಮಹೀನ** (ನಾ). ೧. ಧರ್ಮಕ್ಕೆ ದೂರವಾದದ್ದು ; ಧರ್ಮಬಾಹಿರವಾದದ್ದು : ರಾಷ್ಟ್ರವು . . . ಧರ್ಮಹೀನವಾದ ಮಾಯಾವೀ ಯುದ್ಧಕ್ರಮವನ್ನು ಕೈಕೊಂಡು ಶಾರೀರಬಲವನ್ನು ಕಳಕೊಳ್ಳುವದು (ಮಾಧವ. ೪೯೭). ೨. ನೀತಿ, ನ್ಯಾಯಗಳನ್ನು ಬಿಟ್ಟವನು ; ಅಧರ್ಮಿ ; ಧರ್ಮಬಾಹಿರ : ಅಲ್ಲಿ ನೀನು ಸುಯಿಧಾನದಿಂ ರಕ್ಷಿಸಲು ಧರ್ಮಹೀನನ ಸಾರೆ ನಿಲ್ಲೆನೆಂದು ನೆಲದಲಡಗಿ ಹೋಗುತ್ತಲದೆ (ಉರಿಪಿ. ಕ. ೯-೧೫) ; ದೈವದೂರರು ಧರ್ಮಹೀನರು ನೆಯ್ದು ನೆಯ್ಗೆಗಳೆನುತ ಮಿಗೆ ಬಿಸುಸುಯ್ದುತಿರ್ದರು ಕರ್ಣ ಕೃಪ ಗುರು ನಂದನಾದಿಗಳು (ಕುವ್ಯಾದ್ರೋ. ೧೪-೪೭). [ ಧರ್ಮ + ಹೀನ ]

**ಧರ್ಮಾಂತರ** (ನಾ). ತನ್ನ ಮತವನ್ನು ಬಿಟ್ಟು ಬೇರೆ ಮತವನ್ನು ಸ್ವೀಕರಿಸುವುದು; ಮತಾಂತರ : ಭಾರತೀಯ ವಿದ್ಯಾರ್ಥಿಗಳನ್ನು ಕಂಡು "ನೀನು ಧರ್ಮಾಂತರವಾಗುವುದು ಸಾಧ್ಯವೇ" ಎಂದು ಕಿವಿಯಲ್ಲುಸಿರುವ ಪಾದ್ರಿ (ಸಮಜೀ. ೧೫ ಪೀಠಿಕೆ) ; ಆ ದಿನಗಳಲ್ಲಿ ಧರ್ಮಾಂತರವೆಂದರೆ ಜನಕ್ಕೆ ಮೃತ್ಯುವಿಗಿಂತ ಭಯಂಕರವೆನಿಸಿತ್ತು (ಸ್ಮೃತಿಚಿ. ೭). [ ಸಂ. ]

**ಧರ್ಮಾಂಧ** (ನಾ). ತನ್ನ ಮತವನ್ನು ಕುರಿತು ಅತ್ಯಭಿಮಾನವೂ ಅನ್ಯ ಮತಗಳನ್ನು ಕುರಿತು ದ್ವೇಷವೂ ಉಳ್ಳವನು ; ಸ್ವಮತಾಭಿಮಾನದಿಂದ ವಿವೇಕವನ್ನು ಕಳೆದುಕೊಂಡವನು; ಮತಾಂಧ: ಧರ್ಮಾಂಧರೀಯೋಹೂದ್ಯರ್ (ಗೂಲ್ಡೊಥಾ. ೭-೧೫) ; ಮುಕ್ತಿಯ ಸರ್ಟಿಫಿಕೇಟ್‌ಗಾಗಿ . . . ಧರ್ಮಾಂಧರ ಆಷಾಢಭೂತಿ ನೀತಿಗಳಿಗೆ ಕೊನೆ ಮೊದಲೇ ಇಲ್ಲ (ಜೀವಾತ್ಮ. ೩೦೭). [ ಧರ್ಮ + ಅಂಧ ]

**ಧರ್ಮಾಂಧತೆ** (ನಾ). ತನ್ನ ಮತವನ್ನು ಕುರಿತು ಅತ್ಯಭಿಮಾನವನ್ನೂ ಅನ್ಯಮತಗಳನ್ನು ಕುರಿತು ದ್ವೇಷವನ್ನೂ ಹೊಂದಿರುವಿಕೆ : ಸಂಪ್ರದಾಯದ ಸೆರೆಯಲ್ಲಿಯೂ ಧರ್ಮಾಂಧತೆಯ ತಳದಲ್ಲಿಯೂ ಸಿಕ್ಕುಬಿದ್ದ ಅವರ ಪ್ರೀತಿಯು . . . ಈಗ ಎಚ್ಚರಾಗಿತ್ತು (ಸಮಜೀ. ೩೪೧). [ ಸಂ. ಧರ್ಮಾಂಧತಾ ]

**ಧರ್ಮಾಗಮ** (ನಾ). ಧಾರ್ಮಿಕ ವಿಧಿನಿಯಮಗಳ ಗ್ರಂಥ ; ನ್ಯಾಯಶಾಸ್ತ್ರ : ಧರ್ಮಾಗಮ, ಧರ್ಮಾಸನ, ಧರ್ಮಾಧ್ಯಕ್ಷ, ಧರ್ಮಾಧಿಷ್ಠಾನ, ಧರ್ಮಾಧಿಕರಣ ಇತ್ಯಾದಿಗಳಲ್ಲಿ ಧರ್ಮಕ್ಕೆ ನ್ಯಾಯ ಎಂದರ್ಥವು (ಆರ್ಯಧ. ೧೧). [ ಧರ್ಮ + ಆಗಮ ]

**ಧರ್ಮಾಗ್ರೇಸರ** (ನಾ). ಧರ್ಮಾಚರಣೆಯಲ್ಲಿ ಶ್ರೇಷ್ಠನಾದವನು : ಜನರು 'ಇವನೇ ಮಧ್ಯಮ ಪಾಂಡವ!' ಎಂದರು . . . 'ಅಸ್ತ್ರವಿದ್ಯಾಗ್ರಗಣ್ಯ' ಎಂದರು ; 'ಧರ್ಮಾಗ್ರೇಸರ' ಎಂದರು (ವಚಭಾ. ೨೩). [ ಧರ್ಮ + ಅಗ್ರೇಸರ ]

**ಧರ್ಮಾಚರಣ** (ನಾ). ಸದಾಚಾರ ಪರಿಪಾಲನೆ ; ಧರ್ಮಾನುಷ್ಠಾನ : ಈಗ ಗರ್ಭಿಣಿಯಾದ ಈಕೆಯನ್ನು ಧರ್ಮಾಚರಣಾರ್ಥವಾಗಿ ಪ್ರತಿಗ್ರಹಿಸುವುದು (ಶಾಕುಂತ. ೬೬-೮). [ ಧರ್ಮ + ಆಚರಣ ]

**ಧರ್ಮಾಚರಣೆ** (ನಾ). = ಧರ್ಮಾಚರಣ : ಧರ್ಮಾಚರಣೆಯಲ್ಲಿಯೂ ಈಕೆ ಪರಾಧೀನೆ (ಶಾಕುಂತ. ೧೫-೧೦) ; ವಿವಾಹವು ಹೆಂಗಸರಿಗೆ ಧರ್ಮಾಚರಣೆಗೆ ಏಕಮಾತ್ರ ಸೋಪಾನವಾಗಿರುವುದು (ಕಪಾಕುಂ. ೩೧). [ ಧರ್ಮ + ಆಚರಣೆ ]

**ಧರ್ಮಾಚಾರ** (ನಾ). = ಧರ್ಮಾಚರಣ. [ ಧರ್ಮ + ಆಚಾರ ]

**ಧರ್ಮಾಚಾರ್ಯ** (ನಾ). ಮತದ ಗುರು ; ಧರ್ಮಗುರು ; ಮತಾಚಾರ್ಯ : ಧರ್ಮಾಚಾರ್ಯ, ಧರ್ಮಾಧಿಕಾರಿ . . . ಇತ್ಯಾದಿ ಪ್ರಯೋಗಗಳಲ್ಲಿ ಧರ್ಮವೆಂದರೆ ಮತವೆಂದೇ ಅರ್ಥಮಾಡಬೇಕು (ಆರ್ಯಧ. ೧೦) ; ಈ ದಿವ್ಯ ಸೌಂದರ್ಯದ ಕಾವ್ಯಮಯವಾದ ಅನುಭವವನ್ನು ಭಾರತೀಯ ಧರ್ಮಾಚಾರ್ಯರು ನಾನಾಬಗೆಯಾಗಿ ಹಾಡಿದ್ದಾರೆ (ಸೌಂದಸ. ೧೧೩). [ ಧರ್ಮ + ಆಚಾರ್ಯ ]

**ಧರ್ಮಾತ್ಮ** (ನಾ). ೧. ಧರ್ಮದಲ್ಲಿ ಶ್ರದ್ಧೆಯುಳ್ಳವನು ; ಸದಾಚಾರ ಸಂಪನ್ನ ; ಧರ್ಮಿಷ್ಠ : ಕುರುಭೂಪಾಲನು ಪಾಂಡುಪುತ್ರರು ಮಹಾಧರ್ಮಾತ್ಮರೆಂದಿತ್ತನೇ (ಸೋಮೇಶ. ೫೪) ; ಪ್ರಕಟಪಾಪರಿಗಹುದು ಸಾಮ್ರಾಜ್ಯಕವು ಧರ್ಮಾತ್ಮರಿಗೆಯಿ ಪರಿ ವಿಕಟತೆಯಸುರರಾಜ್ಯವೆಂಬುದು ಪೌರಜನ ಮಚಣಿಗಿ (ಕುವ್ಯಾಆ. ೮-೪೯) ; ಧರ್ಮಾತ್ಮನೆಂದರೆ ಪುಣ್ಯಾತ್ಮನು (ಆರ್ಯಧ. ೧೧). ೨. ದಯಾವಂತ ; ದಾನಶೀಲ : ಅನಾಥನಾದ ಆ ಬಾಲಕನು ಧರ್ಮಾತ್ಮರ ಸಹಾಯದಿಂದ ವಿದ್ಯಾಭ್ಯಾಸವನ್ನು ಪೂರೈಸಿದನು (ರೂಢಿ). [ ಸಂ. ಧರ್ಮಾತ್ಮನ್ ]

**ಧರ್ಮಾತ್ಮಜ** (ನಾ). = ಧರ್ಮಪುತ್ರ ೨: ಅರಿಯಂತಿಯರಿಯಂ ಕಟುತ್ತತಿಯೆನುತ್ತಾರ್ದಿಟ್ಟಮತ್ರಂ ನಭೋಂತರದೊಳ್ ತಾಂ ಶಿಶುಪಾಲಮಸ್ತಕ ಸಮೇತಂ ಪಾಱಿ ಧರ್ಮಾತ್ಮಜಾಧ್ವರದೊಳ್ ಬಾಯಿನಮಂ ಸುರಾಂಗನೆಯರೀವಂತಾಯ್ತು (ಜಗವಿ. ೧-೬೨). [ ಧರ್ಮ + ಆತ್ಮಜ ]

**ಧರ್ಮಾದಾಯ** (ನಾ). ೧. ಧರ್ಮಕಾರ್ಯಗಳಿಗಾಗಿ ಸರಕಾರವು ಪ್ರತಿ ವರ್ಷವೂ ವಿಹಾಸಲಾಗಿರಿಸುವ ಮೊತ್ತ. ೨. ದಾನಕ್ಕಾಗಿ ಕೊಡುವ ಹಣ ; ಧರ್ಮಕಾರ್ಯಕ್ಕಾಗಿ ತೆಗೆದಿಡುವ ಹಣ ; ದೇವರ ಹಣ : ಭಂಗಾರ ಬೆಳ್ಳಿಯ ಖರೀದಿಗೆ ಅಡತಿ ಧರ್ಮಾದಾಯ, ದಲಾಲಿ ಹಾಂಗೂ ಹಕ್ಕಶಾಯಿಯ ದರಗಳು (ಪಾನು ೧೨, ಕಲಮು ೨೪) (ಮುಂಬವ್ಯಾ. ೧೫ ಪ್ರಸ್ತಾವನೆ) ; ನಾವು ಖರೀದಿ ಮತ್ತು ವಿಕ್ರಯದ ಜಿನಸುಗಳ ಮೇಲೆ ಹೊರಿಸುವ ಪಾಠಶಾಲಾ ಅಥವಾ ಧರ್ಮಾದಾಯವೆಂಬ ಬಾಬು ಸೋಲಾಪುರದ ವೀರಶೈವ ಲಿಂಗಾಯತರ ಸಂಸ್ಕೃತಪಾಠಶಾಲೆಗಾಗಿ ತೆಗೆದು ಕೊಳ್ಳೋಣಾಗುತ್ತದೆ (ಮುಂಬವ್ಯಾ. ೩ ಅಡಿಟಿ) ; ಧರ್ಮಾದಾಯ–ನೂರು ರೂಪಾಯಿಗೆ ಅರ್ಧಾ ಆಣೆ (ಮುಂಬವ್ಯಾ. ೧೩). [ ಧರ್ಮ + ಆದಾಯ ]

**ಧರ್ಮಾಧಿಕರಣ** (ನಾ). ೧. ನ್ಯಾಯವನ್ನು ನಿರ್ಣಯಿಸುವ ಆಡಳಿತ ಶಾಖೆ ; ನ್ಯಾಯಾಲಯ ; ನ್ಯಾಯಸ್ಥಾನ : ತಳವಾಱು . . . ನಾವಿದನುಮವನ ಪೆಂಡತಿಯುಮಂ ಪಿಡಿದೊಡಗೊಂಡು ಪೋಗಿ ಧರ್ಮಾಧಿಕರಣದ ತಾಣಾಂತರದೊಳಿರಿಸಿದಂ (ಪಂಚತಂ. ೭೫-೩) ; ಧರ್ಮಾಧಿಷ್ಠಾನ, ಧರ್ಮಾಧಿಕರಣ–ಇತ್ಯಾದಿಗಳಲ್ಲಿ ಧರ್ಮಕ್ಕೆ ನ್ಯಾಯ ಎಂದರ್ಥವು(ಆರ್ಯಧ.೧೧). ೨. ನ್ಯಾಯವನ್ನು ನಿರ್ಣಯಿಸುವ ಅಧಿಕಾರಿ; ನ್ಯಾಯಾಧಿಪತಿ:

ಧರ್ಮಾಧಿಕರಣಂಗಳಲ್ಲಿಗೆ ಬಂದು ತಂತಮ್ಮ ವೃತ್ತಾಂತಮಂ ಸವಿಸ್ತರಂ ಪೇೞೆ ಕೇಳ್ದು . . . ಶಿರವಾರವಲ್ಲಭನದು ಅವರ್ಗೆ ಪತಿಯಕ್ಕುಂ ಎಂದು ಧರ್ಮಾಧಿಕರಣಂಗಳ್ ಪೇೞ್ದು ಪೋದರ್ (ಪದ್ಮಸಾ. II, ೬೧೩ ವ; ಧರ್ಮಪ).

**ಧರ್ಮಾಧಿಕರಣದವರ್** = ನ್ಯಾಯವನ್ನು ನಿರ್ಣಯಿಸುವ ಅಧಿಕಾರಿಗಳು : ಧರ್ಮಾಧಿಕರಣದವರ್ ನಾವಿದನಂ ಕರೆದು . . . ಬೆಸಗೊಂಡೊಡೆ (ಪಂಚತಂ. ೭೯-೬); ಹೆದಱದಿರು ತೆಕ್ಕದಿರು ಅಂಜದಿರು ಲೋಗರಿಟ್ಟುದೊ ನಿನ್ನ ಕೃತಕವೋ ಹೇಳು ಧರ್ಮಾಧಿಕರಣದವರಂ ಕರಸುವೆಂ ನುಡಿಸುವೆಂ ಕಾವೆನೆಂದವನಿಪಂ ಬೆಸಗೊಂಡಡೆ (ಹಜಕಾ. ೧೩-೭) [ಧರ್ಮ + ಅಧಿಕರಣ]

**ಧರ್ಮಾಧಿಕಾರ** (ನಾ). ೧. ಧರ್ಮದಿಂದ ರಾಜ್ಯಭಾರ ಮಾಡುವುದು; ಧಾರ್ಮಿಕ ಆಚರಣೆಗಳು ಸರಿಯಾಗಿರುವಂತೆ ನೋಡಿಕೊಳ್ಳುವ ರಾಜ್ಯಭಾರ : ಪುರುಕುಲದ ಅರಸರಿಂದ ಧರ್ಮಾಧಿಕಾರದಲ್ಲಿ ನಿಯುಕ್ತನಾದ ನಾನು, ಆಶ್ರಮವಾಸಿಗಳ ನಿರ್ವಿಘ್ನವಾದ ಕ್ರಿಯೆಯನ್ನು ತಿಳಿಯುವುದಕ್ಕೆ ಈ ಧರ್ಮಾರಣ್ಯಕ್ಕೆ ಬಂದಿರುವೆನು (ಶಾಕುಂತ. ೧೩-೧೪). ೨. ಧರ್ಮವನ್ನು ಅನುಸರಿಸುವ ಹಕ್ಕು,-ಅಧಿಕಾರ : ಕ್ಷತ್ರಿಯ-ವೈಶ್ಯವರ್ಣದವರಿಗೆ ವೈದಿಕ ಧರ್ಮಾಧಿಕಾರವೂ ವೈದಿಕ ಸಂಸ್ಕಾರಗಳೂ ಇದ್ದೇ ಇರುವವು (ಮಾಧವ. ೪೦೪). [ಧರ್ಮ + ಅಧಿಕಾರ]

**ಧರ್ಮಾಧಿಕಾರಿ** (ನಾ). ೧. ನ್ಯಾಯಾಧೀಶ; ನ್ಯಾಯಾಧಿಕಾರಿ : "ಪ್ರಾಡ್ವಿವಾಕಃ, ಅಕ್ಷದರ್ಶಕಃ -೨ . . . ನ್ಯಾಯನಿರ್ಣಾಯಕನ ಹೆಸರುಗಳು. ಜಡ್ಜಿ, ಮುನಸೀಫ್, ಧರ್ಮಾಧಿಕಾರಿ" (ಸಿದ್ಧಾಂತಿ. ೨೩೬). ೨. ಮಠಾಧಿಕಾರಿ; ಮಠಾಧಿಪತಿ : ಧರ್ಮಾಚಾರ್ಯ, ಧರ್ಮಾಧಿಕಾರಿ . . . ಇತ್ಯಾದಿ ಪ್ರಯೋಗಗಳಲ್ಲಿ ಧರ್ಮವೆಂದರೆ ಮಠವೆಂದೇ ಅರ್ಥಮಾಡಬೇಕು (ಆರ್ಯಧ. ೧೦); ಹನ್ನೆರಡನೆಯ ಶೈದಿ ಧರ್ಮಾಧಿಕಾರಿಯೊಬ್ಬನ ಮಗಳು (ಪುನರು. ೧೪೩). ೩. ರಾಜನು ಮಾಡಿದ ದಾನ, ಧರ್ಮಗಳನ್ನು ಹಂಚಲು ನಿಯುಕ್ತನಾಗಿದ್ದ ಅಧಿಕಾರಿ. [ಸಂ. ಧರ್ಮಾಧಿಕಾರಿನ್]

**ಧರ್ಮಾಧಿಕ್ರಮ** (ನಾ). ಧರ್ಮದ ಅನುಸರಣೆ; ಧರ್ಮಾನುಷ್ಠಾನ : ಬರಿಯ ಇಷ್ಟಪೂರ್ತಗಳು ದಾನಗಳು-ಇವುಗಳನ್ನು ಮಾಡಿದವರಿಗೆ ಧರ್ಮಾಧಿಕ್ರಮದಲ್ಲಿ ದಕ್ಷಿಣಾಮಾರ್ಗದಿಂದ ಗತಿಯಾಗುವುದೆಂದೂ . . . ತಿಳಿಯಬಹುದಾಗಿದೆ (ಬ್ರಹ್ಮಭಾ. ೪೩). [ಧರ್ಮ + ಅಧಿಕ್ರಮ]

**ಧರ್ಮಾಧಿಷ್ಠಾನ** (ನಾ). ನ್ಯಾಯಾಲಯ; ನ್ಯಾಯಾಸ್ಥಾನ : ಧರ್ಮಾಸನ, ಧರ್ಮಾಧ್ಯಕ್ಷ, ಧರ್ಮಾಧಿಷ್ಠಾನ, ಧರ್ಮಾಧಿಕರಣ ಇತ್ಯಾದಿಗಳಲ್ಲಿ ಧರ್ಮಕ್ಕೆ ನ್ಯಾಯ ಎಂದರ್ಥವು (ಆರ್ಯಧ. ೧೧). [ಧರ್ಮ + ಅಧಿಷ್ಠಾನ]

**ಧರ್ಮಾಧ್ಯಕ್ಷ** (ನಾ). ೧. ನ್ಯಾಯಾಧೀಶ; ನ್ಯಾಯಾಧಿಪತಿ : ತದಾಭರಣವೃತ್ತಾಂತಮಂ ಪೇೞ್ವುದುಮರಸಂ ಧರ್ಮಾಧ್ಯಕ್ಷರುಂ ಬರಿಸಿ ವಿಚಾರಿಸಿಮೆನೆ (ಚಾವುಂಪು. ೪೩೪); ಧರ್ಮಾಸನ, ಧರ್ಮಾಧ್ಯಕ್ಷ . . . ಇತ್ಯಾದಿಗಳಲ್ಲಿ ಧರ್ಮಕ್ಕೆ ನ್ಯಾಯ ಎಂದರ್ಥವು (ಆರ್ಯಧ. ೧೧). ೨. ವಿಷ್ಣು. ೩. ಮತ-ಧರ್ಮ, ನೀತಿ-ನಿಯಮಗಳ ಪಾಲಕ,-ರಕ್ಷಕ : (ಕ). ೪. ಮಠಾಧಿಪತಿ. [ಧರ್ಮ + ಅಧ್ಯಕ್ಷ]

**ಧರ್ಮಾನುಜ** (ನಾ). ೧.ಧರ್ಮರಾಯನ ತಮ್ಮ; ಅರ್ಜುನ: ಜಗದ್ಗುರು ಪೆಂಬರ್ . . . ಧರ್ಮಾನುಜಂಗೇಕೆ ಕಿಂಕರನಾದಂ (ಗದಾಯು. ೩-೪೩); ವಾಸವನ ಸೂನು ಮೃತನಾದನೇ ಧರ್ಮಾನುಜಂ ಪ್ರಾಣಮಂ ತೊಱೆದನೇ (ಜೈಮಿಭಾ. ೨೩-೫೪). ೨. ಧರ್ಮರಾಯನ ತಮ್ಮಂದಿರಾದ ಭೀಮ, ನಕುಲ, ಸಹದೇವ. [ಧರ್ಮ + ಅನುಜ]

**ಧರ್ಮಾನುಪ್ರೇಕ್ಷೆ** (ನಾ). [ಜೈನ] ಹನ್ನೆರಡು ಅನುಪ್ರೇಕ್ಷೆಗಳಲ್ಲಿ ಒಂದು; ಧರ್ಮಪ್ರಾಪ್ತಿಯಿಂದ ಅಭ್ಯುದಯ, ನಿಶ್ರೇಯಸಗಳು ದೊರೆಯುವುದೆಂಬ ಭಾವನೆ : ಆ ಧರ್ಮಾನುಪ್ರೇಕ್ಷೆಯಂ ಮೋಕ್ಷಾರ್ಥಮಾಗೆ ನೀನಿಂ ನೆಗಟಲ್ವೇಳ್ಕುಂ (ಜೀವಸಂ. ೨೦೫ ಅಡಿಟಿ); ಪನ್ನೊಂದುತೆಱದ ಗೃಹಸ್ಥಧರ್ಮದೊಳು ಪತ್ತುತೆಱದ ಭೇದ ರತ್ನತ್ರಯಾತ್ಮಕಧರ್ಮದೊಳಂ ನೆಗೞ್ದಡಲ್ಲದೆ ಪರಪೆರರ್ಮೋತ್ತಮಮುಕ್ತಿಸುಖಂ ದೊರಕೊಳ್ಳದೆಂದು ಚಿಂತಿಸುವುದು ಧರ್ಮಾನುಪ್ರೇಕ್ಷೆ (ಶ್ರಾವಕಾ. ೧೪೭-೩). 'ದ್ವಾದಶಾನುಪ್ರೇಕ್ಷೆ' ಪರಾ. [ಧರ್ಮ + ಅನುಪ್ರೇಕ್ಷೆ]

**ಧರ್ಮಾನುರಕ್ತ** (ಗು). ಧರ್ಮದಲ್ಲಿ ಆಸಕ್ತಿಯುಳ್ಳ: ಶ್ರೀಕಣ್ಠಪರಮೇಶ್ವರ ಚರಣಕಮಳಭಕ್ತಿಯಿಂ ಧರ್ಮಾನುರಕ್ತಚಿತ್ತದಿಂ . . . ಬಿಟ್ಟ ವ್ರಿತ್ತಿ (ಎಕ. VIII, ಸೊರಬ. ೪೭೬-೧೧; 991). [ಧರ್ಮ + ಅನುರಕ್ತ]

**ಧರ್ಮಾನುರಕ್ತಿ** (ನಾ). ಧರ್ಮದ ಬಗೆಗಿರುವ ಆಸಕ್ತಿ,-ಒಲವು. [ಧರ್ಮ + ಅನುರಕ್ತಿ]

**ಧರ್ಮಾನುರಾಗ** (ನಾ). ೧. ಧರ್ಮದಲ್ಲಿರುವ ಆಸಕ್ತಿ,-ಶ್ರದ್ಧೆ : ಧರ್ಮಾನುರಾಗದಿಂ . . . ಜಿನಧರ್ಮದ ಪೆರ್ಮೆಗೆ ರಾಗಿಸರೆ ಭವ್ಯರಜೀವಿನ ದಿವ್ಯರ್ (ಶಾಂತಿಪು. ೧೨-೩೭); ಅನೇಕ ದೇವಕಾಂತೆಯರಂ ಧರ್ಮಾನುರಾಗದಿಂ ಕಲ್ಪಿಸಿ ಕಟಿಪುವುದುಂ (ಮಹಾನೇ. ೮-೪೨ ವ). ೨. ದಾನಮಾಡುವುದರಲ್ಲಿ ಆಸಕ್ತಿ; ದಾನಬುದ್ಧಿ : ಧರ್ಮ್ಮಾ [ನು] ರಾಗದಿಂ × × × ಕೊಟ್ಟರೀ ಧರ್ಮ್ಮಮಂ (ಸೌಇಇ. XX, ೪೮-೨೦; 1074). [ಧರ್ಮ + ಅನುರಾಗ]

**ಧರ್ಮಾನುರಾಗಿ** (ನಾ). ಧರ್ಮದಲ್ಲಿ ಆಸಕ್ತಿಯುಳ್ಳವನು; ಧರ್ಮಿಷ್ಠ : ಮತ್ತಮುಱಿದ ದೇಶಾಧೀಶ್ವರರುಂ ಧರ್ಮಾನುರಾಗಿಗಳಲ್ಲದೆ ಪರಾಂಗನಾಪೇಕ್ಷಕರಲ್ಲರ್ (ಧರ್ಮಾಮೃ. ೪-೨೦೩); ಪೊಲ್ಲಮೆಯೊಳಡಂಗಿ ಕಿಡದೆ ಧರ್ಮಾನುರಾಗಿಯಪ್ಪುದು (ಜೀವಸಂ. ೧೨೪-೪ ವ). [ಸಂ. ಧರ್ಮಾನುರಾಗಿನ್]

**ಧರ್ಮಾನುಷ್ಠಾನ** (ನಾ). ವಿಹಿತವಾದ ಕರ್ಮಗಳ ಆಚರಣೆ : ಧರ್ಮಾನುಷ್ಠಾನದ ಆವಶ್ಯಕತೆಯನ್ನು ಒತ್ತಿ ಹೇಳುವುದೇ ಸ್ಮೃತಿಗಳ ಮುಖ್ಯೋದ್ದೇಯ (ಭಾರದ. ೫೦). [ಧರ್ಮ + ಅನುಷ್ಠಾನ]

**ಧರ್ಮಾನುಸರಣ** (ನಾ). = ಧರ್ಮಾನುಷ್ಠಾನ : ಧರ್ಮಾನುಸರಣದಿಂದಲೆ ಉಳಿದ ಪುರುಷಾರ್ಥಗಳೂ ಸಿದ್ಧಿಸುತ್ತವೆ (ಶುಕ್ಲಾರ. ೧೦೪ ಟೀಕೆ). [ಧರ್ಮ + ಅನುಸರಣ]

**ಧರ್ಮಾಪೋಹ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು; ಅಪಹ್ನುತಿ ಅಲಂಕಾರದ ಒಂದು ಭೇದ : ಕುಸುಮಂಗಳೆಂಬ ಮಾತದು ಪುಸಿ ದಹನಮಯಂಗಳೆಂಬುಗಳ್ ಮನಸಿಜನಾ ಜಸಮಱಿಯೆ ಸುಡುವುದೆ (ವ)ದೆಯಂ ಬಿಸಿಯುವಿವೆಂದಿಂತೆ ಪೇೞೆ ಧರ್ಮಾಪೋಹಂ (ಕವಿರಾ. ೩-೧೮೪); ಸ್ಮರನಸ್ತ್ರಸಮಿತಿಯದು ನಿರ್ಭರಮಂಗಮನುರ್ಚಿ ಪೋಗೆಯುಂ ಪೋಬೞಿಯುಂ ದೊರೆಕೊಳಿಸಲಾಗದದಱಿಂ ಶರತತಿಯಲ್ತೆಂಬುದಿಂತು ಧರ್ಮಾಪೋಹಂ (ಕವಿರಾ. ೩-೧೮೫). P ಒಂದು ವಸ್ತುವಿನಲ್ಲಿರುವ ಸಹಜವಾದ ಧರ್ಮವನ್ನು ಅಲ್ಲಗಳೆದು ಬೇರೆಯ ಧರ್ಮವನ್ನು ಆರೋಪಿಸುವುದು. ಇಲ್ಲಿ ಮೊದಲನೆಯ ಪ್ರಯೋಗದಲ್ಲಿ 'ಮನ್ಮಥನ ಬಾಣಗಳು ಹೂವುಗಳು' ಎಂಬ ಮಾತು ಸುಳ್ಳು. ಅವು ಅಗ್ನಿರೂಪಗಳು. ಇಲ್ಲಿ ಕುಸುಮಧರ್ಮವನ್ನು ಅಲ್ಲಗಳೆದು ಅಗ್ನಿಧರ್ಮವನ್ನು ಆರೋಪಿಸಲಾಗಿದೆ. ಆದುದರಿಂದ ಧರ್ಮಾಪೋಹಾಪಹ್ನುತಿ. ಎರಡನೆಯ ಪ್ರಯೋಗದಲ್ಲಿ ಮನ್ಮಥನ ಬಾಣಗಳ ಸಮೂಹವು ಶರೀರವನ್ನು ಭೇದಿಸಿಕೊಂಡುಹೋದರೂ ಹೋದ ಮಾರ್ಗವನ್ನು ಕಂಡುಹಿಡಿಯಲಾಗುವುದಿಲ್ಲ. ಆದುದರಿಂದ ಇವು ಬಾಣಗಳ ಸಮೂಹವಲ್ಲ. ಬಾಣಗಳಾಗಿದ್ದರೆ ಹೋದ ಸ್ಥಳ ಮತ್ತು ಹೊರಕ್ಕೆ ಬಂದ ಸ್ಥಳಗಳನ್ನು ಗೊತ್ತುಮಾಡಬಹುದಾಗಿತ್ತು ಎಂಬಲ್ಲಿ ಬಾಣಗಳನ್ನು ಬಾಣಗಳಲ್ಲ ಎಂದು ನಿಷೇಧ ಮಾಡಿದೆ. ಇಲ್ಲಿ ಬೇರೊಂದನ್ನು ಆರೋಪಿಸಿಲ್ಲ. ಇದು ಹಿಂದಿನ ಉದಾಹರಣೆಗಿಂತ ಸ್ವಲ್ಪ ಬೇರೆಯಾಗಿದೆ. ದಂಡಿಯು ಇದನ್ನು 'ಸ್ವರೂಪಾಪಹ್ನುತಿ' ಎಂದು ಹೇಳಿದ್ದಾನೆ. [ಧರ್ಮ + ಅಪೋಹ]

**ಧರ್ಮಾಯತ್ತ** (ನಾ). ಧರ್ಮದಿಂದ ಕೂಡಿದುದು ; ಧರ್ಮಸಮ್ಮತವಾದುದು : ನ್ಯಾಯಾರ್ಜಿತವಿತ್ತಂ ಧರ್ಮಾಯತ್ತಮೆನಿಪ್ಪ ರಾಜವೃತ್ತಂ ತನಗೇಕಾಯತ್ತಮಾಗೆ ಧರೆಯುಂ ಜೀಯೆನಿಸಿದನಿಂತುದಾತ್ತಚರಿತರುಮೊಳರೇ (ಪಂರಾಮಾ. ೨-೭೦). [ ಧರ್ಮ + ಆಯತ್ತ$_2$ ]

**ಧರ್ಮಾರಣ್ಯ** (ನಾ). ಋಷಿಗಳು ವಾಸಿಸುವ ಅರಣ್ಯ ; ತಪೋವನ ; ಧರ್ಮವನ್ನು ಶಿಷ್ಯನಿಗೆ ಉಪದೇಶಿಸುವ ಸ್ಥಳ ; ☞ ಸಾಮಾನ್ಯವಾಗಿ ಅರಣ್ಯದ ಮೃಗಾದಿಗಳಲ್ಲಿರುವ ದ್ವೇಷಾದಿಗಳು ಮಾಯವಾಗಿರುವ ಕಾಡು ; ಋಷ್ಯಾಶ್ರಮ : ಧರ್ಮಾಧಿಕಾರದಲ್ಲಿ ನಿಯುಕ್ತನಾದ ನಾನು ಆಶ್ರಮವಾಸಿಗಳ ನಿರ್ವಿಘ್ನವಾದ ಕ್ರಿಯೆಯನ್ನು ತಿಳಿಯುವುದಕ್ಕೆ ಈ ಧರ್ಮಾರಣ್ಯಕ್ಕೆ ಬಂದಿರುವೆನು (ಶಾಕುಂತ. ೧೩-೧೬) ; ಸಾವಿರಾರು ರಾಕ್ಷಸರನ್ನು ಕೊಂದು ರಾ ಮ ನು ಆ ಧರ್ಮಾರಣ್ಯವನ್ನು ಕ್ಷೇಮಗೊಳಿಸಿದನು (ವಚಭಾ. ೪೦೫). [ ಧರ್ಮ + ಅರಣ್ಯ ]

**ಧರ್ಮಾರ್ಥ** (ಗು). ೧. ಉಚಿತವಾದ ; ಪುಕ್ಕಟೆಯಾದ : ಧರ್ಮಾರ್ಥ ದಾನಗಳು ಮತ್ತು ಧರ್ಮಾರ್ಥ ದಾನಗಳ ಸಂಸ್ಥೆಗಳು (ಭಾಧಾನ. ೨೯೫). (ನಾ). ೨. ಸಹಾಯ ಮಾಡುವ ಮನೋಧರ್ಮ ; ಧರ್ಮದೃಷ್ಟಿ : ರೋಗಿಗಳಿಗೆ ಧರ್ಮಾರ್ಥವಾಗಿ ಔಷಧ ಕೊಡುವ ಏರ್ಪಾಡು (ತೀಮೋಡ. ೩೪). ೩. ಪುಕ್ಕಟೆ ; ಬಿಟ್ಟಿ : ಧರ್ಮಾರ್ಥವಾಗಿ ದೋಣಿ ನಡೆಸುತ್ತೇನೆ (ವಚಭಾ. ೩). [ ಸಂ. ]

**ಧರ್ಮಾರ್ಥಿ** (ನಾ). ಧರ್ಮವನ್ನು ಆಚರಿಸುವ ಬಯಕೆಯುಳ್ಳವನು ; ಪುಣ್ಯಸಂಪಾದನೆ ಮಾಡಲು ಬಯಸುವವನು : ಇಂತಪ್ಪ ಧರ್ಮಾರ್ಥಿ [ಪಾಠಾಂ. ರ್ಮವರ್ತಿ]ಯೆನ್ನ ಮನೆಯೊಳಿರಲ್ವೇಡ (ವಡ್ಡಾರಾ. ೧೫೧-೮): ಧರ್ಮಾರ್ಥಿಗಳ್ಗೆ ಧರ್ಮಮುಮನಾಗಳುಂ ಪ್ರತಿಬೋಧಿಸಿ (ಚಾವುಂಪು. ೨೦೭) ; ಧರ್ಮಪುತ್ರನಪ್ಪ ಯುಧಿಷ್ಠಿರಂ ಧರ್ಮಾರ್ಥಿಯುಂ ಯಶೋರ್ಥಿಯುಮಾಗಿ ರಾಜಸೂಯಯಾಗಂಮಾಡಲುದ್ಯೋಗಂಗೆಯ್ದು (ಪಂಚತಂ. ೨೩೫-೨೦). [ಸಂ. ಧರ್ಮಾರ್ಥಿನ್ ]

**ಧರ್ಮಾವರ್ಣವಾದ** (ನಾ). [ಜೈನ] ದರ್ಶನಮೋಹನೀಯಕರ್ಮದ ಆಸ್ರವಗಳಲ್ಲಿ ಒಂದು ; ಧರ್ಮವನ್ನು ಕುರಿತ ನಿಂದೆ ; ಧರ್ಮನಿಂದೆ: ಜಿನೋಪದಿಷ್ಟಧರ್ಮಂ ನಿರ್ಗುಣಂ ತದುಪಸೇವಿಗಳಸುರರಪ್ಪರೆಂಬ ಅಸದುತ್ತರಸಮೂಹಂ ಧರ್ಮಾವರ್ಣವಾದಂ (ತತ್ತ್ವಪ್ರ. ೨೬೦). 'ಅವರ್ಣವಾದ' ಪರಾ. ☞ ಇದರಲ್ಲಿ ಕೇವಲ್ಯವರ್ಣವಾದ, ಶ್ರುತಾವರ್ಣವಾದ, ಸಂಘಾವರ್ಣವಾದ, ಧರ್ಮಾವರ್ಣವಾದ ಮತ್ತು ದೇವಾವರ್ಣವಾದ ಎಂಬ ಐದು ಬಗೆಗಳಿವೆ. ಕೇವಲಿ ಮೊದಲಾದ ವಿಷಯವಲ್ಲಿ ದೋಷೋದ್ಘಾಟನೆಯು ದರ್ಶನಮೋಹನೀಯಕರ್ಮಾಸ್ರವವಾಗುತ್ತದೆ. [ ಧರ್ಮ + ಅವರ್ಣವಾದ ]

**ಧರ್ಮಾವಳಿ** (ನಾ). ಧರ್ಮಗಳ ಸಮೂಹ ; ಧರ್ಮವಿಚಾರಗಳ ವಿವರ : ತಿಳುಹು ಧರ್ಮಜ ಸಕಲ ಧರ್ಮಾವಳಿಯ ಸಾರವನು (ಕುವ್ಯಾಅ. ೨೩-೩೪). [ ಧರ್ಮ + ಆವಳಿ$_1$ ( = ಆವಲಿ) ]

**ಧರ್ಮಾವಾಸ** (ನಾ). ಧರ್ಮದ ನೆಲೆ ; ಧರ್ಮಕ್ಕೆ ಆಶ್ರಯವಾದ ಸ್ಥಳ: ಪಾವನನದಿಗಳಾಡುಂಬೊಲ ವಿಪುಳಧರ್ಮಾವಾಸ ವಿಪುಳಪುಣ್ಯದ ಪಕ್ಕೆ ಕೀರ್ತಿವಿರ್ದ ಶಿವಭಕ್ತಿಯಾಗಾರವಖಿಳದೇಶಾವಳಿದು ನಾಯಕರತ್ನ (ತ್ರಿಭುತಿ. ೨-೧೧). [ ಧರ್ಮ + ಆವಾಸ ]

**ಧರ್ಮಾವಿರುದ್ಧತ್ವ** (ನಾ). ಧರ್ಮಕ್ಕೆ ಅವಿರೋಧವಾಗಿರುವಿಕೆ ; ಧರ್ಮಸಮ್ಮತವಾಗಿರುವಿಕೆ : ಧರ್ಮಾವಿರುದ್ಧತ್ವ : ಭಾರತೀಯ ಅರ್ಥಶಾಸ್ತ್ರವು ಧರ್ಮ, ಮತ, ನೀತಿ, ಅಧ್ಯಾತ್ಮ ಇವುಗಳನ್ನು ವಿರೋಧಿಸುವುದಕ್ಕೂ ನಿರಾಕರಿಸುವುದಕ್ಕೂ ಹೋಗುವುದಿಲ್ಲ (ಭಾರದ. ೩೫೩).
[ ಸಂ. ]

**ಧರ್ಮಾಸನ** (ನಾ). ನ್ಯಾಯನಿರ್ಣಯ ಮಾಡುವಾಗ ನ್ಯಾಯಾಧೀಶನು ಕುಳಿತುಕೊಳ್ಳುವ ನ್ಯಾಯಪೀಠ : ಧರ್ಮಾಗಮ, ಧರ್ಮಾಸನ, ಧರ್ಮಾಧ್ಯಕ್ಷ . . . ಇತ್ಯಾದಿಗಳಲ್ಲಿ ಧರ್ಮಕ್ಕೆ ನ್ಯಾಯ ಎಂದರ್ಥವು (ಆಯ್ಧ. ೧೧); ಧರ್ಮಾಸನ ಹೊರಳುತಿವೆ ಸಿಂಹಾಸನ ಉರುಳುತಿವೆ (ಗರಿ. ೧೧೫-೧೯).
[ ಧರ್ಮ + ಆಸನ ]

**ಧರ್ಮಾಸೂಯೆ** (ನಾ). (ಅನ್ಯ) ಮತವನ್ನು ಕುರಿತ ಅಸಹನೆ : ಧರ್ಮಾಂಧರೀ ಯೇಹೂದ್ಯರಿವರಿಗೀ ಯೇಸುವಿನೊಳಿರುವ ಧರ್ಮಾಸೂಯೆಗಾಂ ದುಡುಕಿ ಗಂಡೋಲಿಗಳ ಗೂಡಿಗೆಸೆದ ಕಲ್ಲಂತಾಗದಿರದು (ಗೊಲ್ಗೊಥಾ. ೭-೧೯೭). [ ಧರ್ಮ + ಅಸೂಯೆ ]

**ಧರ್ಮಾಸ್ತಿಕಾಯ** (ನಾ). [ಜೈನ] ಜೀವ, ಪುದ್ಗಲ, ಧರ್ಮ, ಅಧರ್ಮ ಮತ್ತು ಆಕಾಶ ಎಂಬ ಐದು ಬಗೆಯ ಅಸ್ತಿಕಾಯಗಳಲ್ಲಿ ಒಂದು ; ಬಹುಪ್ರದೇಶದಲ್ಲಿ ವ್ಯಾಪಕವಾಗಿರುವ ಧರ್ಮದ್ರವ್ಯ : ಪುಣ್ಯಪಾಪಮೆಂಬುದು ಗಂಧರ್ವನಗರವಿಳಾಸಮುಂ ಧರ್ಮಾಸ್ತಿಕಾಯಮೆಂಬುದು ಮರುಮರೀಚಿಕಾನಿಕಾಯಂಗಳುಂ . . . ಜೀವಿತ ಮರಣಂಗಳೆಂಬಿವಬೊಟ್ಟಳಮುಂ ಪುಸಿಯ ಪೊಟ್ಟಳಮುಮಕ್ಕುಂ (ಶಾಂತಿಪು. ೮-೧೩೨ ವ) ; ಜೀವಾಸ್ತಿಕಾಯಂ ಪುದ್ಗಲಾಸ್ತಿಕಾಯಂ ಧರ್ಮಾಸ್ತಿಕಾಯಂ ಅಧರ್ಮಾಸ್ತಿಕಾಯಂ ಆಕಾಶಾಸ್ತಿಕಾಯಮೆಂಬ ಪಂಚಾಸ್ತಿಕಾಯನಿಕಾಯಮುಮಂ . . . ವ್ಯಾಖ್ಯಾನಂಗೆಯ್ಯಲ್ (ಸುಕುಮಾ. ೩-೩೪ ವ) ; ಅಣುಗಳ ಪುಂಜವೇ ಪುದ್ಗಲದ್ರವ್ಯವು. ಅದರಲ್ಲೂ ಅಸಂಖ್ಯಾತ ಅಂಶಗಳಿರುವುವು. ಅವುಗಳಿಗೆ ಪ್ರದೇಶವೆಂದು ಹೆಸರು . . . ಅಸ್ತಿಕಾಯವೆಂದರೆ ಬಹುಪ್ರದೇಶವುಳ್ಳ ವಸ್ತುವೆಂದರ್ಥ . . . ಜೀವಾಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ ಆಕಾಶಾಸ್ತಿಕಾಯ, ಪುದ್ಗಲಾಸ್ತಿಕಾಯ ಎಂದು ವ್ಯವಹಾರವಿರುವುದು (ಹಿಂದಸಾ. ೮೧). 'ಪಂಚಾಸ್ತಿಕಾಯ' ಪರಾ. ☞ ಇದು ಅನಂತ ಹಾಗೂ ಗುರುವೂ ಲಘುವೂ ಅಲ್ಲದ ಗುಣವುಳ್ಳದು. ಇದರ ರೂಪವು ಯಾವಾಗಲೂ ಪರಿಣಾಮವನ್ನು ಹೊಂದುತ್ತಿರುತ್ತದೆ. ಇದು ನಿತ್ಯ. ಗತಿಕ್ರಿಯಾಯುಕ್ತವಾದ ದ್ರವ್ಯಗಳ ಕ್ರಿಯೆಯಲ್ಲಿ ನಿಮಿತ್ತಭೂತವಾಗಿರುತ್ತದೆ. ಇದು ಯಾವುದರ ಕಾರ್ಯವೂ ಅಲ್ಲ.
[ ಧರ್ಮ + ಅಸ್ತಿಕಾಯ ]

**ಧರ್ಮಾಸ್ಪತ್ರೆ** (ನಾ). ರೋಗಿಗಳಿಗೆ ಪುಕ್ಕಟೆಯಾಗಿ ಔಷಧೋಪಚಾರ ಮಾಡುವ ಆಸ್ಪತ್ರೆ ; ಉಚಿತ ಚಿಕಿತ್ಸೆ ನೀಡುವ ದವಾಖಾನೆ : ಹೇಗಿದ್ದರೂ ಧರ್ಮಾಸ್ಪತ್ರೆ. ಅದರಲ್ಲೂ ಇಲ್ಲಿ ಬರುವವರು ಎಲ್ಲ ನಿರ್ಗತಿಕರು (ದೀಪದ. ೯೭). [ ಧರ್ಮ + ಆಸ್ಪತ್ರೆ ]

**ಧರ್ಮಿ** (ಗು). ೧. ಒಳ್ಳೆಯ ಗುಣವುಳ್ಳ ; ಪುಣ್ಯಕಾರ್ಯಗಳನ್ನು ಆಚರಿಸುವ. ೨. ನಿಯಮಗಳನ್ನು ಪಾಲಿಸುವ ; ಕರ್ತವ್ಯಗಳನ್ನು ತಿಳಿದುಕೊಂಡ. (ನಾ). ೩. ಲಕ್ಷಣಗಳನ್ನುಳ್ಳದು ; ವಿಶಿಷ್ಟಗುಣ ಅಥವಾ ಸ್ವಭಾವಕ್ಕೆ ಆಶ್ರಯವಾದುದು : ನೇರವಾಗಿ ಧರ್ಮಿಯನ್ನು ಹೇಳದೇ ಗೌಣವಾದ ಧರ್ಮಗಳನ್ನು ಹೇಳಿಬಿಟ್ಟು ಅದರಿಂದ ಧರ್ಮಿಯಿರುವುದನ್ನು ಊಹಿಸಿಕೊಳ್ಳಿ ಎನ್ನುವುದು ಯಾವ ನ್ಯಾಯ ? (ಭಾರಮೀ. ೧೩೭) ; ಆತ್ಮ, ಅನಾತ್ಮ—ಎಂಬ ಧರ್ಮಿಗಳನ್ನು ಇವುಗಳ ಧರ್ಮಗಳನ್ನೂ (ಬೃಹ್ಮಭಾ. ೨ ಅಡಿಟಿ). ೪. ಸದಾಚಾರಿ ; ಧರ್ಮಿಷ್ಠ : ಧರ್ಮಿಗಂ ಕೊಲೆಯೇ ಮಂತ್ರಿಗಮಿಚ್ಚಕಾಟಿತನಮೇ (ಗದಾಯು. ೫-೪೭) ; ದೇ ವಂ ಗಾ ಟಿ ದೆ ಧರ್ಮಿಯೊ ಬಡಿದರ್ (ಪುಷ್ಪಪು. ೧೨-೮೭) ; ಧರ್ಮಿಯನು ಜನವಾಶ್ರಯಿಸುವುದು (ಕುವ್ಯಾಉ. ಓರಿಇ. ೩-೧೩. ಹೆಚ್ಚಿನ ಪದ್ಯ) ; ಹೊಲಗೇರಿಯಾಲಿ ಹುಟ್ಟು ಎಲುವಿನ ಗೃಹವಾಸ ಸಲೆ ಧರ್ಮಿ ದಾನಿಯೆನಿಸದೆ ಹಾರುವನು ಕುಲಕಿ ಹೋರಿಹನು (ಸರ್ವಜ್ಞ. ೯೬೦). ೫. ಕರುಣೆಯುಳ್ಳವನು ; ದಯಾಮಯ : ಕೂಡಲಸಂಗಮದೇವಾ ನೀನೆನಗೊಳ್ಳಿದನಾದರೆ ಎನ್ನ

ಹೊಗಳತೆಗಡ ಬಾರಾ ಧರ್ಮಿ (ಬಸವ. ೩೮೭) ; ಎನ್ನ ಜನ್ಮವ ತೊಡೆದನೀ ಧರ್ಮಿ ಎನ್ನ ಜನ್ಮವನತಿಗಳೆದನೀ ಧರ್ಮಿ (ಬಸವ. ೪೮೧) ; ಪಶು ಪಂಕದಲ್ಲಿರೆಬ್ಬಿಸುವ ಧರ್ಮಿಯ ಕಾಣೆ (ದೀಕ್ಷಾಬೋ. ೧೫-೨೪) ; ಸೊಡರು ಲಂಚವ ಕೊಂಡು ಕೊಡುವದೊಪ್ಪಚಿ ಬೆಳಗ ಪೊಡವಿಗೆ ಸೂರ್ಯ ಬೆಳಗೀವೊಲ್ ಲಂಚವನು ಹಿಡಿಯನವ ಧರ್ಮಿ (ಸರ್ವಜ್ಞ. ೧೩೧೭). ೭. [ನಾಟ್ಯ] "(ನಾಟ್ಯ) 'ಧರ್ಮಿ' ಎಂದರೆ ನಟರು ಆಚರಣೆಯಲ್ಲಿಟ್ಟುಕೊಂಡಿರತಕ್ಕ "ಸಮಯ" ಅಥವಾ ಸಂಪ್ರದಾಯ. ಆಡುವ ಮಾತನ್ನು ಸಂಗೀತದಲ್ಲಿ ಹೇಳುವುದು, ನರ್ತನ ಮಾಡುತ್ತ ನಡೆದು ಬರುವುದು, ಸ್ವಗತದಲ್ಲಿ ಹತ್ತಿರವಿರುವ ನಟರೂ ಆಡಿದ ಮಾತನ್ನು ಕೇಳದಂತಿರುವುದು–ಇತ್ಯಾದಿ" (ಸಂನಾಟ. ೧೨).

[ ಸಂ. ಧರ್ಮಿನ್ ]

**ಧರ್ಮಿಷ್ಠ** (ನಾ). ಧರ್ಮದಲ್ಲಿ ಅತ್ಯಂತ ಶ್ರದ್ಧೆಯುಳ್ಳವನು ; ಧರ್ಮಮಾರ್ಗದಲ್ಲಿ ನಡೆಯುವವನು ; ಧರ್ಮಾತ್ಮ : ಅನಲ್ಪಬುದ್ಧಿ ಸುಖಿ ಧರ್ಮಿಷ್ಠ ಕಲಾವೇದಿ ಸತ್ಯರತಂ ಶಾಸ್ತ್ರವಿದಂ . . . ಕನ್ಯಾನಿವಾಸೋದ್ಭವಂ (ಜಾತತಿ. ೧೭-೬) ; ಅರಸ ಧರ್ಮಿಷ್ಠನು ಯುಧಿಷ್ಠಿರ ಧರಣಿಪತಿಯುತ್ತಮನು ಪವನಜ ನರರು ವಿನಯಾನ್ವಿತರು (ಕುವ್ಯಾಸ ೧೨-೫೨) ; ಪಾಂಡವರು ಧರ್ಮಿಷ್ಠರು (ನೀತಿಚಿಂ. I, ೧೪). [ ಸಂ. ]

**ಧರ್ಮೇತ,** ಧರ್ಮಏತ(ನಾ). =ಧರ್ಮ್ಮೇತ : ಪುರಿಕರನಗರದ ಅಯ್ನೂರ್ಬ್ಬರೆ ನಡೆಯಿಸುವನ್ತು ಮಾಡಿ ಧರ್ಮ್ಮೇತಮುಮಂ . . . ಸಾನನ್ದದೆ ಶ್ರೀಸಾನ್ನಿಸೆಟ್ಟಿ ಪರಿರಕ್ಷಿಸಿದಂ (ಸೌಇಇ. XX, ೫೫-೩೦ ; 1082) ; ಕೋಟೆಯ ಕೆಯ್ಯ ಸ್ಥಳದೊಳಗೆ ಪಾತ್ರ ಪಾವುಳಕ್ಕೆ ಬಿಟ್ಟ ಮತ್ತರು ಇಂನೂಱ ಇಪ್ಪತ್ತು . . . ಧರ್ಮ್ಮೇತಕ್ಕೆ ಹತ್ತು (ಕಇ. II, ೧೭-೪೪ ; 1122) ; ನಾಗವಾವಿಯ ಖಂಡಸ್ಫುಟಿತ ಜೀರ್ನ್ನೋ(ರ್ಣ್ಣೋ)ದ್ಧಾರಕ್ಕಮಲ್ಲಿಯ ಧರ್ಮ್ಮೇತಕ್ಕಂ . . . ಕೊಕ್ಕಳಗೇರಿಯ ಹಾಳಹಸುಗೆಯೊಳಗೆ ಸರ್ವನಮಶ್ಯ(ಸ್ಯ)ವಾಗಿ ಬಿಟ್ಟ ಮತ್ತರಾಱು (ಎಇ. XVIII, ೨೧೭-೪೦ ; 1162); ಕೆಱೆಯ ಕೆಳಗಣ ಧರ್ಮ್ಮೇತದ ಭಾವಿಯಿಂ ತೆಂಕಲುಂ ಬಡಗಲುಂ (ಸೌಇಇ. IX-i, ೩೭೭-೨೭ ; 1229) ; [ಧ]ರ್ಮೇತದ ಕೆಯ್ಯ ಪಡುವಣ ಬಡಗಣ ಗುಡ್ಡೆ (ಸೌಇಇ. XX, ೩೩೫-೧ ; ಸು. 13ನೆಯ ಶತ). **ಧರ್ಮಏತ** : ತಿಂಮಣನಾಯಕರು ತಂಮ ವೊಡೆಯಗೆ ಪು[ಂ]ಣ್ಯವಾಗಲೆಂದು ಸೋಗೆಯ ಧರ್ಮಏತಕ್ಕೆ ಕೊಟ್ಟ ದಣಾಯಕರ ಪುರ (ಸೌಇಇ. IX-ii, ೫೦೩-೬ ; 1516). [ಧರ್ಮ + ಏತ$_1$]

**ಧರ್ಮೈಕರಕ್ಷಕ** (ನಾ). ನ್ಯಾಯವನ್ನು ರಕ್ಷಿಸುವ ಏಕೈಕ ವ್ಯಕ್ತಿ ; ಧರ್ಮಪಕ್ಷಪಾತಿ : ನೀವು ಮಾಡಿದ ಸತ್ಯಭಾಷೆಗೆ ನೀವಲಾ ತಪ್ಪಿದಿರಿ ನೋಟಕರಾವು ಮಧ್ಯಸ್ಥಿತರಲೇ ಧರ್ಮೈಕರಕ್ಷಕರು (ಕುವ್ಯಾಗ. ೮-೨೪).

[ ಧರ್ಮ + ಏಕ + ರಕ್ಷಕ ]

**ಧರ್ಮೋತ್ತರ** (ಗು). ಧರ್ಮಪ್ರಧಾನವಾದ ; ಧಾರ್ಮಿಕ ವಿಚಾರಗಳಿಂದ ಪರಿಪೂರ್ಣವಾದ : ಶಿವಮತದೊಳುಚ್ಚರಿಪ ಶಿವಪುರಾಣಂಗಳಂ ಶಿವಧರ್ಮ ಧರ್ಮೋತ್ತರಪ್ರಸಂಗಂಗಳಂ . . . ಪೇಳುತುಂ (ನಂಬಿರ. ೯-೧೧೨).

[ ಧರ್ಮ + ಉತ್ತರ ]

**ಧರ್ಮೋತ್ಸವ** (ನಾ). ಧಾರ್ಮಿಕ ಉತ್ಸವ; ಧಾರ್ಮಿಕ ಕಾರ್ಯಗಳ ಆಚರಣೆ : ಬಗೆ ಧರ್ಮೋತ್ಸವಮೆಲ್ಲಿತಲ್ಲಿಗೆ . . . ತನ್ನಂ ತಡವಿಲ್ಲದುಯ್ಯೆ (ಶಾಂತಿಪು. ೭-೭೭). [ ಧರ್ಮ + ಉತ್ಸವ ]

**ಧರ್ಮೋದಕ** (ನಾ). ಮೃತರಾದವರಿಗೆ ಮರಣದಿನದಿಂದ ಹತ್ತನೆಯ ದಿನ ಎಂದರೆ ದಶಾಹದಂದು ಜ್ಞಾತಿಗಳೂ ಬಂಧುಗಳೂ ಕೊಡುವ ತಿಲೋದಕ : ಹಿಂದಿನ ದ್ವೇಷವನ್ನು ನೆನಪಿನಲ್ಲಿಟ್ಟುಕೊಂಡು ಅಣ್ಣನಿಗೆ ಧರ್ಮೋದಕವನ್ನು ನೀಡಲು ಸ್ವಂತ ತಮ್ಮನೇ ಬರಲಿಲ್ಲ (ರೂಢಿ).

[ ಧರ್ಮ + ಉದಕ$_2$ ]

**ಧರ್ಮೋದಯ** (ನಾ). ೧. ಧರ್ಮದ ಅಭಿವೃದ್ಧಿ.–ಏಳಿಗೆ : ಕೃತಯುಗದೊಳ್ ಧರ್ಮೋದಯದತಿಸುಖದುನ್ನತಿಗಳಿಂದಮಿಪ್ಪುದು ಲೋಕಂ (ಲಾಸ್ಕರಂ. ೦-೩). ೨. ಧರ್ಮದ ಬಗೆಗೆ ಉಂಟಾಗುವ ಎಚ್ಚರ,–ತಿಳಿವಳಿಕೆ. [ ಧರ್ಮ + ಉದಯ ]

**ಧರ್ಮೋದ್ಧಾರ** (ನಾ). ೧. ಧರ್ಮವನ್ನು ಎತ್ತಿಹಿಡಿಯುವುದು ; ಧರ್ಮಸಂರಕ್ಷಣೆ: ಧರ್ಮ್ಮೋದ್ಧಾರಮಂ ಮಾಡಿದವರ ಮಹಿಮೆಯಂತೆಂದೊ × × × (ಸೌಇಇ. XX, ೨೨೪-೧೧ ; 1296). ೨. ಧರ್ಮವನ್ನು ರಕ್ಷಿಸುವವನು,–ಎತ್ತಿಹಿಡಿಯುವವನು : ಶೂರಧೀರನುದಾರಧರ್ಮೋದ್ಧಾರ ವಿವಿಧವಿಚಾರ ಸುಜನಾಧಾರ ರಿಪುಸಂಹಾರ. . . ಸುಜನ ಸ್ವಾಮಿಕಾರ್ಯಾಗಾರನೆನಿಸುವ ಮಂತ್ರಿಯುಂಟೇ ರಾಯ ನಿನಗೆಂದ (ಕುವ್ಯಾಸ. ೧-೭೦).

[ ಧರ್ಮ + ಉದ್ಧಾರ ]

**ಧರ್ಮೋದ್ಧಾರಕ** (ನಾ). ಧರ್ಮವನ್ನು ಎತ್ತಿಹಿಡಿಯುವವನು ; ಧರ್ಮಸಂರಕ್ಷಕ : ಕೃಷ್ಣನು ಧರ್ಮೋದ್ಧಾರಕನಾದನು (ಪುಕ್ಕಾರ. ೧೬೨ ೫೬೭೯). [ ಧರ್ಮ + ಉದ್ಧಾರಕ ]

**ಧರ್ಮೋದ್ಯೋಗ** (ನಾ). ಧರ್ಮಕಾರ್ಯ ; ಧರ್ಮದಿಂದ ಕೂಡಿದ ಆಚಾರ,–ವ್ಯವಹಾರ : ಆಗಣವಿಾಗಣಮಿವೆನ್ನವೆನ್ನದೆ ಧರ್ಮ್ಮೋದ್ಯೋಗದಿಂದ ರಕ್ಷಿಸುವರ್ (ಸೌಇಇ. XI-i, ೫೨-೮೦ ; 1007) ; ಪಾಪೋದ್ಯೋಗಮನೆ ಬಿಸುಟು ಧರ್ಮೋದ್ಯೋಗದೊಳಡರಿರ್ಪ ಜೈನರಣ್ಣ ವಿದಗ್ಧರ್ (ಧರ್ಮಾಮೃ. ೩-೨೦೯) ; ಧರ್ಮೋದ್ಯೋಗಾನುರಾಗೋಲ್ಲಸಿತಹೃದಯನುದ್ಯದ್ವಿಭೂಷಾವಳೀರೋಚಿರ್ಮಾಳಾಚಿತ್ರಿತಾಭ್ರಂ . . . ಸೌಧರ್ಮೇಂದ್ರಂ ಬಂದಂ (ಚಂದ್ರಪು. ೧೨-೪೩). [ ಧರ್ಮ + ಉದ್ಯೋಗ ]

**ಧರ್ಮೋದ್ಯೋಗಿನಿ** (ನಾ). ಧರ್ಮಕಾರ್ಯದಲ್ಲಿ ನಿರತಳಾಗಿರುವವಳು : ಕಂಚಲಮಹಾದೇವಿಯರ ಮಹಿಮೋನ್ನತಿಕೆಯೇ ದೊರೆತೆನೆ . . . ನಿತ್ಯಪ್ರವರ್ತ್ತಿತ ದಯಾದಾನಧರ್ಮ್ಮೋದ್ಯೋಗಿನಿ (ಸೌಇಇ. XX, ೪೭-೧೧ ; 1045).

[ ಸಂ. ಧರ್ಮೋದ್ಯೋಗಿನೀ ]

**ಧರ್ಮೋಪದೇಶ** (ನಾ). ೧. ಧರ್ಮಶಾಸ್ತ್ರ. ೨. ಧಾರ್ಮಿಕತತ್ತ್ವಗಳನ್ನು ಬೋಧಿಸುವುದು : ಆತನುಮಾ ಪೇಟ್ದ ಧರ್ಮೋಪದೇಶಮುಮಂ ಬಿಟ್ಟು ತನ್ನ ಮುನ್ನಿನ ದುಷ್ಟಮಂತ್ರಿಗಳ ಮಾತಂ ಕೈಕೊಂಡಂ (ಪಂಚತಂ. ೧೩೬-೧೩) ; ಧರ್ಮೋಪದೇಶಮಿಲ್ಲದೆ ಕರ್ಮಮನುಪಶಮಿಪ ಚರಿತಮಿಲ್ಲದೆ ದುಃಖಕ್ಕಾರ್ಮನೆನಿಸಿರ್ದ ಲೌಕಿಕಧರ್ಮದೊಳೆಸಗುವನೆ ಸಮಯಮೂಢಂ (ಧರ್ಮಾಮೃ. ೫-೨೪೨) ; ದೇಶಂ ಧರ್ಮೋಪದೇಶಂ ಶ್ರುತಬಲಮೆ ಬಲಂ . . . ಆದತ್ತನೆ ತನಗೆ ಜಗತ್ಸಿದ್ಧರಾದ್ಧಾಂತಚಕ್ರಾಧೀಶಂ ಸಪ್ತಾಂಗಸಾಮ್ರಾಜ್ಯದಿನಿಳಿಗೆಸೆದಂ ವೀರನಂದಿವ್ರತೀಂದ್ರಂ (ಚಂದ್ರಪು. ೧-೨೯) : ನೀನೇನೂ ನಮಗೆ ಧರ್ಮೋಪದೇಶವನ್ನು ಮಾಡಬೇಕಾದುದಿಲ್ಲ (ಕವಿಕ. ೨೮). ೩. [ಜೈನ] ಸ್ವಾಧ್ಯಾಯದ ಐದು ಅಂಗಗಳಲ್ಲಿ ಒಂದು : ಸ್ವಾಧ್ಯಾಯವು ವಾಚನೆ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶ ಎಂದು ಐದು ಬಗೆಯಾಗಿದೆ . . . ದುರ್ಮಾರ್ಗದಿಂದ ತಿರುಗಿಸುವುದಕ್ಕೂ ಸತ್ಯಮಾರ್ಗವನ್ನು ತೋರಿಸುವುದಕ್ಕೂ ಧರ್ಮಾರ್ಥವಾಗಿ ಉಪದೇಶಿಸುವುದು ಧರ್ಮೋಪದೇಶ ಸ್ವಾಧ್ಯಾಯವು (ಜೈನಧ. ೮೮).

[ ಧರ್ಮ + ಉಪದೇಶ ]

**ಧರ್ಮೋಪದೇಶಂಗೆಯ್** (ಕ್ರಿ). ಧರ್ಮವನ್ನು ಕುರಿತು ಉಪದೇಶಿಸು : ನಭೋಯಾನದೊಳ್ ಕಿಱಿದು ಪೊಳ್ತಾಗೆಯುಂ . . . ಧರ್ಮೋಪದೇಶಂಗೆಯುತ್ತುಮುತ್ತಮತೀರ್ಥೇಶ್ವರಂ ವಿಹಾರಿಸೆ (ಶಾಂತಿಪು.೧೨-೨೩ ವ) ; ಆ ಕೇಸರಿಗಾಸುರಕರ್ಮಂಗೆಯ್ಯಲ್ವೇಡೆಂದು ಧರ್ಮೋಪದೇಶಂಗೆಯ್ದು ಪರಲೋಕಕ್ಕುತ್ತರಸಾಧಕನಾಗಿ ನಡೆವೆಂ (ಪಂಚತಂ. ೧೩೭-೨).

[ ಧರ್ಮೋಪದೇಶ + ಕೆಯ್$_1$ ]

**ಧರ್ಮೋಪದೇಶಕ** (ನಾ). ೧. ಧರ್ಮತತ್ತ್ವಗಳನ್ನು ಉಪದೇಶಮಾಡುವವನು; ಧರ್ಮಗುರು. ೨. ಮತಪ್ರಚಾರಕ: ಅಶೋಕಮಹಾರಾಜನು ಬನವಾಸಿಗೆ ಧರ್ಮೋಪದೇಶಕರನ್ನು ಕಳುಹಿಸಿದ್ದನೆಂಬ ಮಹಾವಂಸದ ವಚನದಿಂದ ದೃಢವಾಗುತ್ತದೆ (ಕರ್ನಾಅ. ೨). [ ಧರ್ಮ + ಉಪದೇಶಕ ]

**ಧರ್ಮೋಪದೇಶಿ** (ನಾ). ಧಾರ್ಮಿಕತತ್ತ್ವಗಳನ್ನು ಬೋಧಿಸುವವನು; ಧರ್ಮೋಪದೇಶಕ: ಧರ್ಮೋಪದೇಶಿಯಪ್ಪಂ ದುರ್ಮನನೇ ಶಾಂತನಾಪ್ತನಲ್ಲಂ ರುದ್ರಂ (ಸಮುಪ. ೮-೬೫). [ ಸಂ. ಧರ್ಮೋಪದೇಶಿನ್ ]

**ಧರ್ಮೋಪನಯನ** (ನಾ). ಧರ್ಮಾರ್ಥವಾಗಿ ಮಾಡುವ ಮುಂಜಿ: ಇಂದು ದೇವಸ್ಥಾನದಲ್ಲಿ ಧರ್ಮೋಪನಯನವನ್ನು ಏರ್ಪಡಿಸಿದ್ದರು (ರೂಢಿ). [ ಧರ್ಮ + ಉಪನಯನ ]

**ಧರ್ಮೋಪಮಾನಲುಪ್ತೆ** (ನಾ). [ಕಾವ್ಯಮೀ]ಲುಪ್ತೋಪಮಾಲಂಕಾರದ ಒಂದು ಪ್ರಭೇದ; ಉಪಮಾನ ಉಪಮೇಯಂಗಳಲ್ಲಿರುವ ಸಾಧಾರಣಧರ್ಮವೂ ಉಪಮಾನವೂ ಉಕ್ತವಾಗದಿರುವುದು: ಧರ್ಮೋಪಮಾನಲುಪ್ತೆಯೆಂತೆನೆ:– ಗಂಡೇಟ್ಟಿಂದೂರಂ ಕೈಕೊಂಡಿರೆ ನೀಂ ಕೊಂಗುನಾಡ ಪೆಱಗೋಂಟೆಗಳಂ ಕೊಂಡುದುದಂ ಕೊನರಿಪುದದು ದಂಡಾ ಪೂಪಂಬೊಲಲ್ತೆ ಚಿಕದೇವೇಂದ್ರಾ (ಅಪ್ರತಿ. ೩೭-೧೧); ಇದಱೊಳ್ ಅಂದೂರಂ ಪೆಱಗೋಂಟೆಗಳಂ ಕೊಂಡೈ ಎಂಬ ಉಪಮೇಯಮಂ ಪೊಲ್ ಎಂದು ವಾಚಕಪದಮಂ ಪೇಟ್ದು ಕೋಲಂ ಕಜ್ಜಾಯಂಗಳಂ ನುಂಗಿದನೆಂಬ ಉಪಮಾನಮಂ ಕಡುಗೆಯ್ಮೆ ಮೆಲ್ಗೆಯ್ಮೆಗಳೆಂಬ ಸಾಧಾರಣಧರ್ಮಮುಮಂ ಪೇಳದಿರ್ಪುದಱಿಂ ಧರ್ಮೋಪಮಾನಲುಪ್ತೆಯಾದುದು (ಅಪ್ರತಿ. ೩೮-೧). [ ಸಂ. ಧರ್ಮೋಪಮಾನಲುಪ್ತಾ ]

**ಧರ್ಮೋಪಮಾನವಾಚಕಲುಪ್ತೆ** (ನಾ). [ಕಾವ್ಯಮೀ] ಲುಪ್ತೋಪಮಾಲಂಕಾರದ ಒಂದು ಪ್ರಭೇದ; ಉಪಮಾನ ಉಪಮೇಯಗಳಲ್ಲಿರುವ ಸಾಧಾರಣಧರ್ಮವೂ ಉಪಮಾನವೂ ಉಪಮಾವಾಚಕ ಶಬ್ದವೂ ಲೋಪವಾಗಿರುವುದು: ಧರ್ಮೋಪಮಾನವಾಚಕಲುಪ್ತೆಯೆಂತೆನೆ:–ಪೊಸಊರಂ ಮುತ್ತಿದುದಂ ಮಸಗಿ ಮಹೀಶೂರಸುಭಟರೆಯ್ದಿದುದಂ ತಾಂ ವಿಸುಗುವಿನಂ ಮೂಗರಿದುದನೆಸವಂತಂ ಕೋಕಿಲಾಮ್ರಮೆಂದುಮಂದಂ ಇದಱೊಳ್ ಎಸವಂತರಾವು ತನ್ನ ಮೂಗು ಪೋದುದುಂ ಕೋಗಿಲೆ ಬರ್ಪುದುಂ ಮಾಂಬಳಂ ಬಿಟ್ಟಂತಾಕಸ್ಮಿಕಮಾದುದೆಂಬಲ್ಲಿ ಮೂಗರಿದುದೆಂಬ ಉಪಮೇಯಮಾತ್ರಮಂ ಪೇಟ್ದು ಇದರ್ಕುಪಮಾನಮಾದ ಆಮ್ರಪತನಮಂ ಆಕಸ್ಮಿಕಮೆಂಬ ಸಮಾನಧರ್ಮಮುಮಂ ಅಂತೆಯೆಂಬ ವಾಚಕಪದಮುಮಂ ಪೇಳದಿರ್ಪುದಱಿಂ ಧರ್ಮೋಪಮಾನವಾಚಕಲುಪ್ತೆಯಾದುದು (ಅಪ್ರತಿ. ೩೮-೧೩). [ ಸಂ. ಧರ್ಮೋಪಮಾನವಾಚಕಲುಪ್ತಾ ]

**ಧರ್ಮೋಪಮೆ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು; ಉಪಮಾಲಂಕಾರದ ಒಂದು ಪ್ರಭೇದ; ಉಪಮಾನ ಉಪಮೇಯಗಳಲ್ಲಿರುವ ಸಾಧಾರಣಧರ್ಮವು ಮಾತಿನಲ್ಲಿ ಉಕ್ತವಾಗಿರುವುದು: ತಳಿರ್ಗಳವೋಲ್ ಮೆಲ್ಲಿದುವೀ ತಳಂಗಳಳಿಕುಳದವೋಲ್ ವಿನೀಳಂಗಳ್ ನಿನ್ನಳಕಾಳಿಗಳೆಂಬುದನಾಕುಳಮಿಲ್ಲದೆ ವಿಬುಧರಱಿಗೆ ಧರ್ಮೋಪಮೆಯಂ (ಕವಿರಾ.೩-೬೧); ☞ ಈ ಪ್ರಯೋಗದಲ್ಲಿ 'ತಳಿರ್ಗಳವೋಲ್ ಮೆಲ್ಲಿದುವೀ ತಳಂಗಳ್' ಎಂಬಲ್ಲಿ ಉಪಮಾನವಾದ ತಳಿರುಗಳಲ್ಲೂ ಉಪಮೇಯವಾದ ಅಂಗೈಯಲ್ಲೂ ಇರುವ ಸಮಾನಧರ್ಮವಾದ ಮೆಲ್ಪು ಶಬ್ದತಃ ಹೇಳಿದೆ. ಆದುದರಿಂದ ಧರ್ಮೋಪಮೆ. ಉಳಿದ ಪ್ರಯೋಗಗಳಲ್ಲೂ ಹೀಗೆಯೇ ಸಮನ್ವಯ ಮಾಡಿಕೊಳ್ಳಬೇಕು; ಧರ್ಮೋಪಮೆಗೆ ಜಲನಿಧಿವೊಲ್ ಗಂಭೀರಂ ಬಲವೈರಿಯವೊಲ್ ಸಮಗ್ರವಿಭವಸನಾಥಂ ಕುಲಗಿರಿವೊಲ್ ನಿಷ್ಕಂಪಂ ಬಲಿಯಂತವೊಲಧಿಕದಾನಿ ದಾನವಿನೋದಂ (ಕಾವ್ಯಾವ. ೭೭೭). [ ಧರ್ಮ + ಉಪಮೆ ]

**ಧರ್ಮೋಪಮೇಯಲುಪ್ತೋಪಮೆ** (ನಾ). [ಕಾವ್ಯಮೀ] ಲುಪ್ತೋಪಮಾಲಂಕಾರದ ಒಂದು ಪ್ರಭೇದ; ಸಾಧಾರಣಧರ್ಮವೂ ಉಪಮೇಯವೂ ಉಕ್ತವಾಗದಿರುವುದು; ☞ ಇದು ಎಂಟು ವಿಧವಾದ ಲುಪ್ತೋಪಮೆಯಲ್ಲಿ ಸೇರಿಲ್ಲ: ಧರ್ಮೋಪಮೇಯಲುಪ್ತೋಪಮೆ: ಎಳ್ಳನಿತು ನಿನ್ನ ಮಾತಂ ಕೇಳ್ವೆನೆಂದೆಣಿಕೆಗೊಳ್ಳದಿರು ಪರಿಚರ್ಯೆ ಮನೆವಾಳ್ತೆಯೆಂದೆಂಬ ತಳ್ಳಿಯಪಳಲ್ಲ ನೀನೆಂದುದಂ ಮಾಡೆನೆಂದಾ ಚಂಡಿ ಚಂಡಿಗೊಳಲು ಮುಳ್ಳಿಡಿದ ಮರನೇಱಿದಂತಾದುದಿಹಪರಕಿದೊಳ್ಳಿತಾದಪುದೆ ಬಂದುದು ತಪೋಹಾನಿಯೆಂದಳ್ಳೆಯೊಳ್ ಕೋಲ್ಗೊಂಡ ತೆಱದೊಳುದ್ದಾಲಕಂ ಚಿಂತಿಪಂ ಪ್ರತಿದಿನದೊಳು. ಈ 'ಮುಳ್ಳಿಡಿದ ಮರನೇಱಿದಂತಾದುದು' ಎಂಬಲ್ಲಿ 'ಚಂಡಿಯನ್ನು ಮದುವೆ ಮಾಡಿಕೊಂಡದ್ದು' ಎಂಬ ಉಪಮೇಯವಾಗಲಿ 'ಹಿಂಸೆ ಕೊಡುವುದು' ಎಂಬ ಧರ್ಮವಾಗಲಿ ಉಕ್ತವಾಗಿಲ್ಲ (ಕೃಪಿಡಿ. ೨೫೭): (ಜೈಮಿಭಾ. ೧೦-೨೪ ನೋ.) [ ಧರ್ಮ + ಉಪಮೇಯ + ಲುಪ್ತೋಪಮೆ ]

**ಧರ್ಮ್ಯ** (ಗು). ೧. ಧರ್ಮಸಮ್ಮತವಾದ; ಪುಣ್ಯಕರವಾದ. (ನಾ). ೨. ನ್ಯಾಯಯುಕ್ತವಾದುದು: ಯಾರು ಸರ್ವಾಧಾರನಾದ ನನ್ನ ಸಂಬಂಧಿಯಾದುದರಿಂದ ಧರ್ಮ್ಯವೆನಿಸುವ ನನ್ನ ಪ್ರೀತಿಸಾಧನವಾದ ಇದುವರೆಗೆ ನಿರೂಪಿತವಾದ ತತ್ತ್ವವನ್ನು ಶ್ರದ್ಧೆಯಿಂದ . . . ಉಪಾಸನ ಮಾಡುತ್ತಾರೆಯೋ ಅವರೇ ನನ್ನ ಭಕ್ತರು (ಭಾತತ್ತ್ವ. ೧೨೮). [ ಸಂ. ]

**ಧರ್ಷ** (ನಾ). ೧. ಧೈರ್ಯ; ದಿಟ್ಟತನ; ಧಾರ್ಷ್ಟ್ಯ. ೨. ಸೊಕ್ಕು; ಗರ್ವ. ೩. ದೂಷಣೆ; ನಿಂದೆ. ೪. ನಪುಂಸಕ; ಕೊಜ್ಜೆ. [ ಸಂ. ]

**ಧರ್ಷಣ** (ನಾ). ೧. ಅಪಚಾರಮಾಡುವುದು; ನೋಯಿಸುವುದು. ೨. ಮೇಲೆ ಬೀಳುವುದು; ಆಕ್ರಮಿಸುವುದು; ಆಕ್ರಮಣ. ೩. ಅಪಮಾನ. ೪. ಸಂಭೋಗ. ೫. ಅತ್ಯಾಚಾರ. [ ಸಂ. ]

**ಧರ್ಷಣಿ** (ನಾ). ನೀತಿಗೆಟ್ಟವಳು; ವ್ಯಭಿಚಾರಿಣಿ: "ಪುಂಶ್ಚಲೀ ಧರ್ಷಣೀ . . . ಪಾಂಸುಲಾ–೮ ಹಾದರಗಿತ್ತಿಯ ಹೆಸರುಗಳು" (ಸಿದ್ಧಾಂತಿ. ೧೬೯). [ ಸಂ. ]

**ಧರ್ಷಿಣಿ** (ನಾ). = ಧರ್ಷಣಿ: "ಪಾಂಸುಳಾ, ಬಂಧಕೀ, ಸ್ವೈರಿಣೀ . . . ಧರ್ಷಿಣೀ, ಕುಲಟಾ, ಅವಿನೀತಾ, ಅಭಿಸಾರಿಕಾ–ಈ ೧೦ ಹಾದರಗಿತ್ತಿ" (ಹಲಾಯು. ೮೧-೩೪೨). [ ಸಂ. ಧರ್ಷಿಣೀ ]

**ಧವ** (ನಾ). ೧. ಗಂಡಸು; ಪುರುಷ. ೨. ಗಂಡ; ಪತಿ: "ಕಾಂತಃ, ಕಮಿತಾ, . . . ಧವಃ . . . ಅನುಕಃ – ಈ ೧೪ ಗಂಡಂ" (ಹಲಾಯು. ೮೩-೩೪೩); ನಿನ್ನ ಧವನುಗ್ರನತಿದುಶ್ಚರಿತ್ರಂ ಸಂತತಂ (ಅರಾಜ.೧೬-೩); ನವದಶೈಕಾದಶ ಸಂಖ್ಯೆಯ ಧವರ ನೆಱೆ ವರಿಸಿರ್ದ ವಾಜ್ಮಾಶಿವೆಯರೆಣೆಯೇ ನಾಗಮಾಂಬಾಸತ್ಪತಿವ್ರತೆಗೆ (ತಿಮ್ಮಶಾಂ. ೧-೧೨). ೩. ಒಡೆಯ; ಯಜಮಾನ; ಅಧಿಪತಿ: ಉದಯದ್ಗ್ರಹದ್ರೇಕ್ಕಾಣಂ ಮೊದಲಾಗಿರೆ ಮಂದಣಿಪ್ಪತ್ತೆರಡನೆ ತ್ರ್ಯಂಶಾಂಶದ ಪತಿಯ ಗುಣದೆ ಮೇಣ್ ತತ್ಸದನದ ಧವಗುಣದೆ ಸಾವು ಸಮನಿಸಿ ಬಕ್ಕುಂ (ಜಾತತಿ. ೨೩-೨೧). 'ದಿಗ್ಧವ' ಪರಾ. ೪. ಒಂದು ಬಗೆಯ ಗಿಡ: "ಧವಃ, ಅರ್ಜುನಃ . . . ಮೋಕ್ಷಃ–ಎಂಬಿವು ಮರಂಗಳು ಮಪ್ಪುವು" (ಹಲಾಯು. ೧೩೫-೨೭). [ ಸಂ. ]

**ಧವಗೇಡಿ** (ನಾ). ಒಡೆಯನಿಲ್ಲದವನು; ಅನಾಥ; ದಿಕ್ಕಿಲ್ಲದವನು: ದಯೆಗೆಯ್ದು ಧವಗೇಡಿಯೆನಿಸದವರ ಅವಿರಳನೇ ಗುರು ನಮಸ್ತೇ (ಮ್ಮಲಾರ. ೧೮೮-೧). [ ಧವ + ಕೇಡಿ₁ ]

**ಧವಡ₁**, ದವಡ (ನಾ). ೧. ಹುಂಬ; ಅವಿವೇಕಿ: ಧವಡರೈ ನೀವ್[ಪಾಠಾಂ. ಧವಡತನದಲಿ,ಕವಡುತನದಲಿ]ದಿಟ್ಟರಹಿರಂಗವಣೆಯೊಳ್ಳಿತು ನಿಮ್ಮ ನಿಜವನು ವಿವರಿಸಾ ನೀವಾರು (ಕುವ್ಯಾಸ. ಓರಿ೩. ೨-೮೩). **ದವಡ**: ೨. ಹಟಮಾರಿ: ಕಳ್ಳ ಹಾದರಿಗ ಕೊಯ್ಕು ದವಡ ಬಾಜಾರ ಪಲ್ಲರನೆಲ್ಲ ನೆರವಿದೆ (ಬಿಜ್ಜರಾ. ೮-೪೨). ೩. ಕೆಡುಕ; ನೀಚ; ದುಷ್ಟ. 'ಅತಿದವಡ' ಪರಾ. [←ಮರಾ. ಧವಡ ]

**ಧವಡ₂** (ನಾ). (?) : ವರ್ಗಚತುರ್ಥಾಕ್ಷರಂಗಳ್ಗೆ ಘಟಿಯಿಂ . . . ಧಟಂ, ಧಾಳಿ, ಧಾರಿ, ಧವಳಂ (ಧವಡಂ) (ಶಮದ. ೧೫ ಪ್ರಯೋ). [ ? ]

**ಧವಡತನ,** ದವಡತನ (ನಾ). ೧. ಹುಂಬತನ ; ಅವಿವೇಕ : ಕೈತವದ ಭಂಡರು ನೀವೊ ನಾವೋ ಸಾಕದಂತಿರಲಿ ಧವಡತನ[ಪಾಠಾಂ. ದವಡತನ, ಕವಡುತನ]ದಲಿ ದಿಟ್ಟರಹಿರಂಘವಣೆಯೊಳ್ಳಿತು ನಿಮ್ಮ ನಿಜವನು ವಿವರಿಸಿರೆ ನೀವಾರು ಹೇಳೆಂದನು ಜರಾಸಂಧ (ಕುವ್ಯಾಸ. ೩-೭೪). ೨. ಹಟವಾರಿತನ. **ದವಡತನ :** ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಧವಡ$_1$ + – ತನ ]

**ಧವಲ,** ಧವಳ (ಗುಂ). ೧. ಬಿಳಿಯ ; ಶುಭ್ರವಾದ. 'ಧವಲಪಕ್ಷ' ಪರಾ. ೨. ಅಂದವಾದ ; ಸುಂದರವಾದ. ೩. ಶ್ರೇಷ್ಠವಾದ ; ಘನತೆಯಿಂದ ಕೂಡಿದ. (ನಾ). ೪. ಬಿಳುಪು. ೫. ಶ್ರೇಷ್ಠವಾದ ಎತ್ತು. ೬. ಒಂದು ಬಗೆಯ ಕರ್ಪೂರ ; ಚೀನಿಕರ್ಪೂರ. ೭. ಒಂದು ಬಗೆಯ ಗೀತಪ್ರಬಂಧ ; ವಿವಾಹ ಮೊದಲಾದ ಮಂಗಳಕಾರ್ಯಗಳಲ್ಲಿ ಹಾಡುವ ಆಶೀರ್ವಾದಪರವಾದ ಹಾಡು ; P ಇದು ನಾಲ್ಕು, ಆರು ಅಥವಾ ಎಂಟು ಪಾದಗಳಿಂದಲೂ ಸಾಮಾನ್ಯವಾಗಿ ಆರು ಮಾತ್ರೆಯ ಗಣಗಳಿಂದಲೂ ಕೂಡಿರುತ್ತದೆ : ಶುಭಮುಹೂರ್ತದೊಳು ಕಲ್ಯಾಣಮಂಟಪದಿ ಕುಳಿತು ರಾಣಿಯರು ಸಹಿತಿಲ್ಲಿ ಧವಲಶೋಭನಗಳಂ ಜಾಣತನದಿಂ ಕೇಳಿ ಪರಕೆಯುಂ ಕೈಕೊಂಡು (ಬೀಳವಂ. ೩-೧೧೮) ; ಆ ಧವಲದ ಕವಿಗಳ ಕೊಂಡಾಟದ ನಾದವೊಪ್ಪಿದುದು (ಗುರುಚ. ೪೭೫). **ಧವಳ :** ೧. ಧವಳಧೌತ ದುಕೂಲಾಂತರೀಯಮುಂ . . . ಪ್ರಸೂನರಚನಾವಿಚಿತ್ರಶೇಖರನುಂ . . . ಗಾರುಡಮಣಿಪ್ರಭಾವಿಭಾಸಿತಮಣಿಯಂಗುಳೀಯನುಮಾಗಿ (ವರ್ಧಮಾ. ೧೨-೩೩ ವ) ; ಚತುರ್ಥಸ್ನಾನದೊಳ್ ಧವಳಮಂಗಳಾಲಂಕೃತೆಯಾಗಿ ನಿಜಮನಃಪ್ರಿಯನ ಸೂಟಿಗೆ ವಂದು. (ಚಂದ್ರಪು. ೩-೮೩ವ) ; ಶಂಖಧವಳಕಂಠದೊಳ್ ಪತ್ತುವಿಡಿದೇಕಮುಖೀರುದ್ರಾಕ್ಷವೊಂದು ತೆಱಂಬೊಳೆಯೆ (ರಾಮಾಶ್ವ. ೪೦-೩೫). ೪. "ಗೌರಃ, ಶ್ವೇತಃ, ಸಿತಃ, ಶುಭ್ರಃ, ವಳಕ್ಷಃ, ಧವಳಃ . . . ಪಾಂಡುರಃ– ಈ ೧೨ ಬಿಳಿದು" (ಹಲಾಯು. ೧೩೦-೪೭) ; ಶರದದ ಮುಗಿಲ್ಗಳೆಸೆದುವತಿಧವಳಂಗಳ್ (ಜಗವಿ. ೪-೬೦) ; ಚೆಂದುಟಿ ಹವಳವು ಸುಲಿಪಲ್ಲು ಧವಳವು (ಇಂಚಾಪ. ೮೮-೩೭). ೭. ಧವಳಗಜೇಂದ್ರಮುಂ ಧಳವಚಾಮರಮುಂ ಧವಳಾತಪತ್ರಮುಂ . . . ಬೆರಸಪ್ಪುದಿಕ್ತಟಂ ಧವಳಿಸೆ ಕೀರ್ತಿಯಿಂ ಧವಳ[ಪಾಠಾಂ. ಬೆಳಗೆ]ಮಂಗಳಗೇಯದಿನೊಪ್ಪೆ ಬರ್ಪ ಕೌರವಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ (ಗದಾಯು. ೫-೪೧); ವಿವಾಹಗೇಹವನು ನೋಡುತ್ತ ಬರಬರಲಲ್ಲಿ ಮಂಗಳಾರತಿವಿಡಿದು ಧವಳಮಂ ಹಾಡುತಿರಲು (ಸಿದ್ಧರಾ. ೮-೪೯) ; ನುಣ್ದನಿಯ[ಯಿ]ಂ ಧವಳಾಖ್ಯಮಂ ಸುವಾಸಿನಿಯರೊಱಲ್ದು ಪಾಡಿಯೆನುತಿರ್ಪ ರವಂ ಪರೆದಿರ್ದುದೆಲ್ಲಿಯುಂ (ನಳಚಂ. ೪೩೫) ; ಇಕ್ಕೆಲದಿ ಕಳಸ ಕನ್ನಡಿವಿಡಿದು ಮುತ್ತೈದೆಯರು ಧವಳಮಂ ಪಾಡಲು (ಲಶಿಚಂ. ೧೫-೩೫) ; ಎಲ್ಲಿಯುಂ ಪಾಡುತಿಹ ಧವಳಶೋಭಾನೆಗಳನೆಲ್ಲಮಂ ತ್ರಿಗುಣಾತ್ಮ ತೋರುತ್ತೆ (ಪರಶು. ೪-೬೩). 'ಧವಳಾರ್$_2$' ಪರಾ. ೮. ಪಂಚಮಹಾವಾದ್ಯಗಳಲ್ಲಿ ಒಂದು ; ಶಂಖ : ಶೃಂಗವಾದ್ಯವೆಂಬ ಕೊಂಬು ತಮ್ಮಟವೆಂಬ ಹಲಿಗೆ ಶಂಖವೆಂಬ ಧ[ಪಾಠಾಂ. ದ]ವಳ ಭೇರಿಯೆಂಬ ಬಾಜಾ ಜಯಘಂಟೆಯೆಂಬ ಜಾಗಟೆ ಇತ್ತೆಱದ ಪಂಚಮಹಾವಾದ್ಯಂಗಳಂ (ವಿವೇಕ. ೩೩೭). [ ಸಂ. ]

**ಧವಲಚಾಮರ,** ಧವಳಚಾಮರ (ನಾ). ಬಿಳಿಯ ಚಾಮರ, – ಚವರಿ : ವಿಳಾಸಿನೀನಿಕರಕರಾಂದೋಳಿತ ಧವಲಚಾಮರಸ್ತೋಮಮಯೂಖಂಗಳುಂ ತತ್ಕೇಕರಕಾಂತಿಸಂತಾನಂಗಳುಮಮೃತಪಯೋಧಿ ಲಹರಿಕಾಲಾವಣ್ಯಮಂ ಬೀಱಲ್ (ಮಹಾನೇ. ೧೧-೦೩೬ ವ). **ಧವಳಚಾಮರ :** ಧವಳಚಾಮರಮುಂ ಧವಳಾತಪತ್ರಮುಂ . . . ಬೆರಸಪ್ಪುದಿಕ್ತಟಂ ಧವಳಿಸೆ ಕೀರ್ತಿಯಿಂ (ಗದಾಯು. ೫-೪೧); ನಲಿದು ನರ್ತಿಪಂಚೆಗಳೆನೆ ಬೀಸುವ ಧವಳಚಾಮರಂಗಳ್ (ಪುಷ್ಪಪು. ೫-೧೭). [ ಧವಲ + ಚಾಮರ ]

**ಧವಲಚ್ಛತ್ರ,** ಧವಳಚ್ಛತ್ರ (ನಾ). (ಅರಸೊತ್ತಿಗೆಯ ಚಿಹ್ನೆಯಾದ) ಬಿಳಿಯ ಕೊಡೆ ; ಶ್ವೇತಚ್ಛತ್ರ : ಧವಲಚ್ಛತ್ರಚ್ಛಾಯೆಯಿನವನೀಚಕ್ರಕ್ಕೆ ಚಂಡಕರತಾಪಂ ಸಂಭವಿಸದೆನೆ ತನ್ನ ಜಸದಿಂ ಧವಳಿಸಿದಂ ಧವಳಕೀರ್ತಿ ದಿಗ್ಭಿತ್ತಿಗಳಂ (ಪಂರಾಮಾ. ೧೦-೧೦೮). **ಧವಳಚ್ಛತ್ರ :** ಉನ್ನತಧವಳಚ್ಛತ್ರಚ್ಛನ್ನವಿಯತ್ತಳನನಿಂದುಕುಳತಿಳಕನನಿಂತನ್ನೆಯದಿಂದೀ ಪಟುವಿನೊಳೆನ್ನರಸನನಿಂತು ಬಿದಿಯೆ ತಂದಿಕ್ಕುವುದೇ (ಪಂಪಭಾ. ೨-೮೨) ; ಕಿಕ್ಕಿಱಿಗಿಱಿದ ಧವಳಚ್ಛತ್ರಂಗಳೊಳ್ ತಳ್ಪೊಯ್ದು (ಶಾಂತಿಪು. ೧೦-೨೦ ವ) ; ಮಾರಾರಿಯ ಕಾರುಣ್ಯದಿಂ ಬಂದ ದಂಡಿಗೆಯ ಧವಳಚ್ಛತ್ರದ . . . ಬಿಂಕದ ಬಾಹತ್ತರ ನಿಯೋಗಂ (ನಂಬಿರ. ೮-೧೭) ; ಧವಳಚ್ಛತ್ರದೆಡಬಲಕೊಲೆವ ಚೌರಿಗಳ . . . ಕುಮಾರವರ್ಗದ ಸುಳಿವುಗಳ ಸೌರಂಭದಲಿ ಹೊಱವಂಟನಾ ಭೂಪ (ಕುವ್ಯಾಸ. ೧೨-೯೮). [ ಸಂ. ]

**ಧವಲತೆ,** ಧವಳತೆ (ನಾ). ಬಿಳುಪು ; ಗೌರವರ್ಣ : ಅವಿಶೇಷದಿನುದ್ಗಮದೊಳ್ ಧವಲ[ಪಾಠಾಂ. ಳ]ತೆ . . . ವಿವಿಕ್ತವರ್ಣವ್ಯವಸ್ಥೆಯಿಂದೊಂದಿರ್ಕುಂ (ಕಾವ್ಯಾವ. ೮೯೪). **ಧವಳತೆ :** ಸಲಿಲಂ ನಿರ್ಮಳಮಾದುವು ತಳೆದುದಾಗಸಂ ಧವಳತೆಯಂ (ಗಿರಿಕ. ೯-೭೪) ; ಪೊರೆಪೊರೆಯಾಗಿ ದಳವೇಱಿ ಬಹಳತರ ಧವಳತೆಯನಾಂತ ಮುಗಿಲ ಮೊತ್ತಮೊತ್ತಲುಂ ಬಿತ್ತರಂಬಡೆಯೆ (ಜಾಧಪು. ೪-೭೭ ವ); ತೊಳೆದರೆ ಮಸಿಗೆ ಧವಳತೆಯುಂಟೆ (ಕಾಶಿರಾ. ೩೭-೪೭). [ ಸಂ. ಧವಲತಾ]

**ಧವಲಪಕ್ಷ,** ಧವಳಪಕ್ಷ (ನಾ). ೧. ಬಿಳಿಯ ರೆಕ್ಕೆ. ೨. ಬಿಳಿಯ ರೆಕ್ಕೆಗಳನ್ನುಳ್ಳ ಪಕ್ಷಿ. ೩. ಶುಕ್ಲಪಕ್ಷ. **ಧವಳಪಕ್ಷ :** ೩. ವೈಶಾಖಮಾಸದ ಧವಳಪಕ್ಷದ ಪಂಚಮಿಯ ಶುಭದಿವಸದಭಿಜಿಲ್ಲಗ್ನದಲಿ ಮೂರ್ಧಾಭಿಷೇಚನದ ವಿವರವಾಯ್ತು (ತೊರರಾ. ೨-೧-೧೪). [ ಧವಲ + ಪಕ್ಷ ]

**ಧವಲಯಶ,** ಧವಳಯಶ (ನಾ). ಶುಭ್ರವಾದ ಕೀರ್ತಿ ; ಕಳಂಕರಹಿತವಾದ ಯಶಸ್ಸು : ಧವಲ[ಪಾಠಾಂ. ಳ]ಯಶದಿಂ ಬೊಮ್ಮದೇವಂ ಭುವನವಂದಿತನಾಗಿ ಪರಮೋತ್ಸವದೊಳಾ ಕಲ್ಯಾಣಕಟಕದೊಳೆಂದಿನಂತಿರ್ದ (ಬಸಪು. ೩೪-೩೭). **ಧವಳಯಶ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ಧವಲಯಶಸ್ ]

**ಧವಲಾಂಗ,** ಧವಳಾಂಗ (ನಾ). ಬಿಳಿಯ ಬಣ್ಣದ ಮೈ, – ದೇಹ : ಸ್ವಚ್ಛತರ ಧವಲಾಂ[ಪಾಠಾಂ. ಳಾಂ]ಗದತಿಮನೋಹರ ಪೀತಪುಚ್ಛದ . . . ಕೋಮಲ ತುರಂಗಮಂ ಸಾಧಿಸಿ ಮಹಾಕ್ರತುವನಾಚರಿಪೊಡೆ (ಜೈಮಿಭಾ. ೨-೨೭). **ಧವಳಾಂಗ :** ಧವಳಾಂಗ[ಪಾಠಾಂ. ಳಾರ]ಪ್ರಭೆ ದೆಸೆಯಂ ಧವಳಿಸಲಮರಾವತೀ ನಗರದಿಂದಾಗಳ್ . . . ಸುರಗಜಮದಿರದೆ ಬಂದತ್ತಾಗಳ್ (ತ್ರಿಪುವಿ. ೬೩-೬). [ ಧವಲ + ಅಂಗ$_2$ ]

**ಧವಲಾಕ್ಷತ,**ಧವಳಾಕ್ಷತ (ನಾ). ಬಿಳಿಯ ಅಕ್ಷತೆ : ಶಿವದೇವ್ಯಾದಿ ಸವಿತ್ರೀನಿವಹಮುಂ . . . ಪರಸುತ್ತಿಕ್ಕುವ ಧವಲಾಕ್ಷತಮಮರೆ ಮಸ್ತಕಾಗ್ರದೊಳ್ (ಮಹಾನೇ. ೧೧-೧೧೪). **ಧವಳಾಕ್ಷತ :** ಧವಳಾಕ್ಷತಕುಸುಮಚರುಪ್ರವರ ಸುಗಂಧಪ್ರದೀಪಫಳಪರಿಕರದಿಂ . . . ಅರ್ಘ್ಯಮೇನೊಪ್ಪಿದುದೋ (ವರ್ಧಮಾ. ೧೨-೨೭). [ ಸಂ. ]

**ಧವಲಾಗಾರ,** ಧವಳಾಗಾರ (ನಾ). ೧. ಸುಣ್ಣ ಬಳಿದ ಮನೆ. ೨. ಸೌಧ; ಹರ್ಮ್ಯ; ಅರಮನೆ. **ಧವಳಾಗಾರ:** ೨. ಧವಳಾಗಾರತರತ್ತರಂಗಬಹಳಂ . . . ಇಳಾಮಧ್ಯದೊಳಿಟ್ಟ ಪಾಲ್ಗಡಲೆನಲ್ ಸಾಕೇತಮೇಂ ಸಾಲ್ವುದೋ (ಅನಂಪು. ೧-೮೮) ; ಆಗಾರಕ್ಕೆ–ಕ್ಷೀರಾಗಾರ–ಕೀರಾರ, ಕೀಲಾರ . . . ಧವಳಾಗಾರ–ಧವಳಾರ (ಶಮದ. ೨೯೫ ಪ್ರಯೋ). 'ಧವಳಾರ$_3$' ಪರಾ. [ ಧವಲ + ಆಗಾರ ]

**ಧವಲಾತಪತ್ರ,** ಧವಳಾತಪತ್ರ (ನಾ). = ಧವಲಚ್ಛತ್ರ : ಧವಲಾತಪತ್ರ ವಾರಣವಿವಿಧಧ್ವಜಚಾಮರಂಗಳಿಂ ರಾಜ್ಯಶ್ರೀಗಿವು ತೊಡವೆಂದವನೊಲ್ಲದೆ ಭುವನೇಶಂ ರಾಜಭವನಮಂ ಪೊಱಮಟ್ಟಂ (ಪಂರಾಮಾ. ೩-೪೮). **ಧವಳಾತಪತ್ರ :** ಧವಳಾತಪತ್ರಮಡ್ಡಂ ದಿವಸಕೆ ಸಲಲೀಯದಂತಿರ್ಪುದು ವಿಚಳದ್ಧವಳಿಮಚಮರರುಹಂ ಬೀಸುವ ನೆವದಿಂ ಪಾಱಿ ಬೀಸುವುದು ನೃಪಗುಣಮಂ (ಗದಾಯು. ೯-೧೧) ; ತನ್ನು ಖೇಂದುವನಭೀಕ್ಷಿಸಲ್ಕೆದಿದ ಚಂದ್ರಬಿಂಬದಂತಿರೆ ಧವಳಾತಪತ್ರಂ (ರಾಜಶೇ. ೧೦-೧೪). [ ಧವಲ + ಆತಪತ್ರ ]

**ಧವಲಾಯತ,** ಧವಳಾಯಂತ (ನಾ). = ಧವಲಾಗಾರ ೨ : ಗೌರಿಯರಸಂ ನಿರ್ಮಿಸಿದ ಶೃಂಗಾರಸಿಂಹಾಸನವೊ ಶಿವನ ವಿಹಾರಧವಲಾ [ಪಾಠಾಂ. ಳಾ] ಯತವೊ ಶಂಕರರಚಿತಮಂಟಪವೊ (ಬಸವು. ೧೩-೧೫). **ಧವಳಾಯತ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಧವಲ + ಆಯತ$_4$ ]

**ಧವಲಿ** (ನಾ). ಬಿಳಿಯ ಹಸು,-ಆಕಳು. [ ಸಂ. ಧವಲೀ ]

**ಧವಲಿತ,** ಧವಳಿತ (ಗು). ೧. ಬಿಳಿದಾಗಿಸಿದ; ಅಚ್ಚ ಬಿಳಿದಾಗಿ ಮಾಡಿದ. **ಧವಳಿತ :** ೧. ಅಚ್ಚಬೆಳ್ದಿಂಗಳೊಳ್ ಸುಧಾಧವಳಿತೋತ್ತುಂಗ ರಮ್ಯಹರ್ಮ್ಯದೆರದನೆಯ ನೆಲೆಯ ಚೌಪಳಿಗೆಯ ಮುಂದಣ ರಮ್ಯಹರ್ಮ್ಯಾಗ್ರದೊಳೆ (ಪಂಪಭಾ. ೪-೫೩ ವ) ; ರಾಕ್ಷಸರಾಜಂ ಕೇಳ್ದು ದಂಷ್ಟ್ರಾಕಿರಣಧವಳಿತಾಸ್ಥಾನನಿಂತೆಂದನಾಗಳ್ (ಜಗವಿ. ೩-೪೫). (ನಾ). ೨. ಬಿಳುಪು; ಬಿಳಿಯ ಬಣ್ಣ : ಆಗಳಾಗಳೆಸೆಯೆ ಪಾಸುವ ವಸುಧಾಲೇಪದಿನತಿವಿಶಾಲಭಿತ್ತಿ [ ಬಿಭ್ರದ್ಭಾ ]ಗವೆಲ್ಲಂ ಧವಳಿತಮಾದುವು (ವರ್ಧಮಾ. ೧೧-೬೯ ವ). ೩. ಶಿವ : ಒಬ್ಬ ಕೆಂಚನೊಬ್ಬ ಕರಿಕನೊಬ್ಬ ಶುದ್ಧಧವಳಿತನೆಂತಯ್ಯಾ ಲಿಂಗವೆ (ಬಸವ. ೫೪೩). [ ಸಂ. ]

**ಧವಲಿಮ,** ಧವಳಿಮ (ಗು). ೧. ಬಿಳಿಯ ಬಣ್ಣದ ; ಬಿಳುಪಾದ: ಅವಿರಳ ಪಯೋನಿಧಿಯುನಟ್ಟಹಾಸಂ ಮಾಡುವವೊಲಿರ್ದುದಾ ಪುರಂ ಪ್ರಾಸಾದ ಕೋಟೆಗಳ ಧವಲಿ [ಪಾಠಾಂ. ಳಿ]ಮ ಸುಧಾಕೀರ್ಣರುಚಿಗಳಿಂ (ಜ್ಞಮಿಭಾ. ೧೧-೬೫). (ನಾ). ೨. = ಧವಲತೆ : ಸರ್ವಾಂಗಭಸಿತದಿಂ ನರೆಯಿಂ ಕಾರುಣ್ಯದಿನತಿಧವಲಿಮದಿಂ ಪುಣ್ಯಂ ಪಣ್ಣಾದ ತೆಱದೆ ತಾಪಸರಿರ್ಪರ್ (ಗಿರಿಕ. ೦-೬೩). **ಧವಳಿಮ :** ೧. ವಿಚಳದ್ಧವಳಿಮಾಚಮರರುಹಂ ಬೀಸುವ ನೆವದಿಂ ಪಾಱಿ ಬೀಸುವುದು ನೃಪಗುಣವಂ (ಗದಾಯು. ೯-೧೧). ೨. ಅಮೃತತರ ರದನರುಚಿಸಂಕ್ರಮದಧವಳಿಮಮಧರವಿದ್ರುಮಂ ನರ್ತಕಿಯಾ (ರಾಜಶೇ. ೧೩-೮೦) ; ದಶರಥನ ಕೀರ್ತಿಯೋಲೂಳಿದುದಯ್ ಭಸ್ಮಧವಳಿಮರಾಶಿ (ಶ್ರೀರಾಮಾ. ೧೨೦-೩೨೮). [ ಸಂ. ಧವಲಿಮನ್ ]

**ಧವಲೆ** (ನಾ). = ಧವಲಿ. [ ಸಂ. ಧವಲಾ ]

**ಧವಲೋತ್ಪಲ,** ಧವಳೋತ್ಪಳ (ನಾ). ಬಿಳಿಯ ನೈದಿಲೆ : ಇಡೆ ಶಶಿಮುಖಿಯರ್ ಕಂಡಾಗಡೆ ಧವಲೋತ್ಪಲ [ಪಾಠಾಂ. ಳೋತ್ಪಳ]ದ ನಡುವೆ ಚಂದನರಸಮಂ ಬಿಡೆ ತೀವಿಕೊಂಡು ನಡೆನಡೆದೊಡನೊಡನಿಟ್ಟಟ್ಟು ಜೊನ್ನಮಂ ಪಸರಿಸಿದರ್ (ಗಿರಿಕ. ೪-೩೮). **ಧವಳೋತ್ಪಳ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಧವಲ + ಉತ್ಪಲ ]

**ಧವಳ** 'ಧವಲ' ನೋ.

**ಧವಳಕ** (ನಾ). ಬೆಳ್ಳಗಿರುವವನು ; ಗೌರಾಂಗ : ಹಿರಿಯ ಬೊಮ್ಮನು ಕೆಂಚ ಕಿಱಿಯ ಹರಿ ತಾ ಕರಿಗ ಪುರಹರನು ಶುದ್ಧಧವಳಕನು [ಪಾಠಾಂ. ಧವಳಾಂಕ] ಇವರುಗಳು ಸರಿಯೆ ದೈವಕ್ಕೆ (ಸರ್ವಜ್ಞ. ೨೧೯). [ ಸಂ. ಧವಲಕ ]

**ಧವಳಕಮಳ** (ನಾ). ಬಿಳಿಯಬಣ್ಣದ ತಾವರೆ : ಸಮುತ್ತುಂಗಮಂಗಳಸ್ತೂಪಂಗಳಂ ಧವಳಕಮಳದಳಾಳಂಕೃತಂಗಳೆಂಬ ಸಂಕೆಯನನುಕರಿಸೆಯುಂ (ಬಾಧಪು. ೧೬-೨೨೫ ವ). [ ಧವಳ (=ಧವಲ) + ಕಮಳ (=ಕಮಲ) ]

**ಧವಳಗಜ** (ನಾ). ಬಿಳಿಯ ಆನೆ ; ಐರಾವತ : ಇಂದ್ರಾಣೀಯುಕ್ತನಿಂದ್ರಂ ಧವಳಗಜಸಮಾರೋಹಣಂಗೆಯ್ದು . . . ಬಂದಂ (ಬಾಧಪು. ೧೬-೩೩೭). [ ಧವಳ (=ಧವಲ) + ಗಜ ]

**ಧವಳಗಜೇಂದ್ರ** (ನಾ). ಶ್ರೇಷ್ಠವಾದ ಬಿಳಿಯ ಆನೆ : ಧವಳಗಜೇಂದ್ರಮುಂ ಧವಳಚಾಮರಮುಂ . . . ಬೆರಸಷ್ಟದಿಕ್ತಟಂ ಧವಳಿಸೆ ಕೀರ್ತಿಯಿಂ (ಗದಾಯು. ೫-೪೧). [ ಧವಳ (=ಧವಲ) + ಗಜೇಂದ್ರ ]

**ಧವಳಗಿರಿ** (ನಾ). ೧. ಹಿಮಾಲಯ ಪರ್ವತ : ಇಂದಿನ ಬೆಳಕಿಗೆ ಕಣ್ಣು ತೆರೆದು, ಧ್ವಜವೆತ್ತಿ ಹಿಡಿಯುಲಿದೆ ಧವಳಗಿರಿ ! (ನಲಮು. ೪೫-೨೦) ; ಧವಳಗಿರಿಯಿಂದ ಕನ್ಯಾಕುಮಾರಿಯವರೆಗೆ ಬಿಡುಗಡೆಗೆ ಕಾದಿಹುದು ಒಂದು ಖಂಡ (ದೀಪಮು. ೩೧-೧೭). ೨. ಹಿಮಾಲಯಪರ್ವತದ ಒಂದು ಅತ್ಯುನ್ನತ ಶಿಖರ : ಉನ್ನತದಲ್ಲಿ ಎವರೆಸ್ಟ್ ಶಿಖರಕ್ಕೆ ಎರಡನೇದು ಧವಳಗಿರಿ (ಭೂಗೋಳ. ೩೦). [ಸಂ. ಧವಲಗಿರಿ ]

**ಧವಳಗ್ರೀವ** (ನಾ). ಬಿಳಿಯ ಕೊರಳು ; ಬೆಳ್ಳನೆಯ ಕಂತ್ರಿಗೆ : ಧವಳಗ್ರೀವಾವೇಷ್ಟಿತ ಸುವರ್ಣಪರಿಪೂರ್ಣಶೃಂಖಳಾಬಂಧಮದೇಂ ಧವಳಾಂಬೋಧರ ಪರಿರಂಭವಿಳಾಸಿನಿಯ ಚಿರರುಚಿಯನಭಿನಯಿಸಿದುದೋ (ಮಲ್ಲಿಪು. ೮-೧೫೩). [ ಧವಳ (=ಧವಲ) + ಗ್ರೀವ ]

**ಧವಳಚಮರರುಹ** (ನಾ). ಬಿಳಿಯ ಚಾಮರ : ಧವಳಚಮರರುಹಪವನನವಮಾನಂಗೆಯ್ದು ಕಂದ ನಿಷ್ಪುರಚೀರೀರವ ಮುಖಪರುಷಕಾನನಪವಮಾನನ ಸೋಂಕನಾಸೆಗೆಯ್ಕಲ್ ಬಗೆದೈ (ಪಂರಾಮಾ. ೭-೧೧). [ ಧವಳ (=ಧವಲ) + ಚಮರರುಹ]

**ಧವಳಚಾಮರ** 'ಧವಲಚಾಮರ' ನೋ.

**ಧವಳಚ್ಛತ್ರ** 'ಧವಲಚ್ಛತ್ರ' ನೋ.

**ಧವಳತಲ್ಪ,** ಧವಳತಳ್ಪ (ನಾ). ಬೆಳ್ಳನೆಯ ಹಾಸಿಗೆ ; ಶುಭ್ರವಾದ ಹಾಸಿಗೆ : ಜಳಶಯನನವತರಿಸುವುದಂ ತಿಳಿದಲ್ಲಿಂ ಮುನ್ನ ದುಗ್ಧವಾರಿಧಿ ತಳ್ಪಚ್ಛಳದಿಂದವತರಿಸಿತ್ತಾ ನಿಳಯದೊಳೆನೆ ಧವಳತಲ್ಪಮೆಸೆದುದನಲ್ಪಂ (ಜಗವಿ. ೩-೭೪). **ಧವಳತಳ್ಪ :** ಶರದದ ಬೆಳ್ಮುಗಿಲ್ವೊಱೆಯಿನುಣ್ಮುವ ನಿರ್ಮಳಮೌಕ್ತಿಕಕ್ಕೆ ತಾರಿ ದೊರೆಯೆನೆ ಪುಟ್ಟಿದಂ ಧವಳತಳ್ಪಯುಗಾಂತರದೊಳೆ ನಮೇರುಶೇಖರಧರನಾತ್ಮನೂತ್ನವಯಸಂ (ಚಂದ್ರಪು. ೪-೬೧). [ ಸಂ. ಧವಲತಲ್ಪ ]

**ಧವಳತಳ್ಪ** 'ಧವಳತಲ್ಪ' ನೋ.

**ಧವಳತೆ** 'ಧವಲತೆ' ನೋ.

**ಧವಳದಂತ** (ನಾ). ಬೆಳ್ಳನೆಯ ಹಲ್ಲು : ವನಲಕ್ಷ್ಮೀಕಾಂತೆಯ ಕಾಂತಧವಳದಂತಾಳಿಯವೊಲ್ ಸೊಗಯಿಸಿತು ಕುಂದಕುಟ್ಮಲನಿಕರಂ (ಚಂದ್ರಪು. ೩-೯೫). [ ಧವಳ (=ಧವಲ) + ದಂತ$_1$ ]

**ಧವಳದಂತಿ** (ನಾ). = ಧವಳಗಜೇಂದ್ರ : ಧವಳದಂತಿಯ ಹೆಗಲಿನಲಿ ರಾಘವನ ಕಂಡೆನು (ತೊರರಾ. ೫-೩-೭೧). [ ಧವಳ (=ಧವಲ) + ದಂತಿ ]

**ಧವಳದ್ಯುತಿ** (ನಾ). ಬೆಳ್ಳನೆಯ ಕಾಂತಿ : ಧವಳದ್ಯುತಿಯಿಂ ದೆಸೆಯುಂ ಧವಳಿಸುತುಂ . . . ಧವಳೇಂದುಕಾಂತವಿರಚಿತಧವಳಾಗಾರಂಗಳೊರ್ಮೆಯುಂ ರಮ್ಯತರಂ (ಕುಸುಮಾ. ೩-೯೧). [ ಸಂ. ಧವಲದ್ಯುತಿ ]

**ಧವಳಪಕ್ಷ** 'ಧವಲಪಕ್ಷ' ನೋ.

**ಧವಳಪ್ರಾಸಾದ** (ನಾ). = ಧವಲಾಗಾರ ೨ : ವಿವಿಧಮಣಿಶಬಲಿತಂ ರಮ್ಯವಿಧಾನ ಸುವರ್ಣಕಲಶಕಿರಣೋದ್ಯೋತಂ ಅವಿರಳಮಾದ್ಯಸಮೇತಂ ಧವಳಪ್ರಾಸಾದ ಸಾರದೇವಾಗಾರಂ (ಜಗವಿ. ೩-೨೩). [ ಸಂ. ಧವಲಪ್ರಾಸಾದ ]

**ಧವಳಮರೀಚಿ** (ನಾ). ಬೆಳ್ಳನೆಯ ರಶ್ಮಿ, - ಕಾಂತಿ : ದುಕೂಲದ ಧವಳಮರೀಚಿಯುಂ ಭಸಿತದ ಪ್ರಭೆಯುಂ ದಟ್ಟೈಸಿ ಮೇಱಿಯೆ (ಬಸರ. ೪-೭೩). [ ಧವಳ (=ಧವಲ) + ಮರೀಚಿ ]

**ಧವಳಯಶ** 'ಧವಲಯಶ' ನೋ.

**ಧವಳಯಶೋನಿಧಿ** (ನಾ). ಶುಭ್ರವಾದ ಕೀರ್ತಿಗೆ ಆಶ್ರಯನಾದವನು : ಅಖಿಳಕಳಾಪ್ರವೀಣನನಿಮಿತ್ತಬಾನ್ಧವಂ ಮನುಚರಿತಂ ಧವಳಯಶೋನಿಧಿ ಯೆನೆ ಪೆಂಪುವಡೆದು ಜಗದೊಳಗೆ [ಕೊ]ವ್ವಿಮಯ್ಯ ನೆಗೞ್ದಂ (ಸೌಇಇ. V, ೮೪೫-೨೩ ; 1066). [ ಸಂ. ಧವಲಯಶೋನಿಧಿ ]

**ಧವಳರಥ** (ನಾ). ೧. ಬಿಳಿಯ ರಥ. ೨. ಬಿಳಿಯರಥವನ್ನು ಹೊಂದಿದವನು: ಧವಳಹಯಂ ಧವಳರಥಂ ಧವಳೋಷ್ಣೀಷಂ ಶಶಾಂಕಸಂಕಾಶ ಯಶೋಧವಳಿತಭುವನಂ ತಾಗಿದನವಯವದಿಂ ಬಂದು ಧರ್ಮತನಯನ ಬಲದೊಳ್ (ಪಂಪಭಾ. ೧೧-೩೯). [ ಧವಳ (=ಧವಲ) + ರಥ ]

**ಧವಳಲೋಚನೆ** (ನಾ). ಹೊಳಪಿನ ಕಣ್ಣುಗಳುಳ್ಳವಳು : ಧವಳಲೋಚನೆಯ ಕಟಾಕ್ಷಾಳೋಕಂ ಮುತ್ತಿನ ರಘುಂಪಾಳಂ ಕವಿದಂತೆ ಬಳಸಿದುದು ತತ್ಕುಜಮಂ (ಚಂದ್ರಪು. ೭-೧೦೩). [ ಸಂ. ಧವಲಲೋಚನಾ ]

**ಧವಳವಸನ** (ನಾ). ಬಿಳಿಯ ಬಟ್ಟೆ : ಧವಳವಸನಂಗಳೊಳವಿತರವಸ್ತ್ರ ಸಾಧಾರಣ ವಿವಾದದೊಳಂ ತಾಂ ವ್ಯವಹರಿಕುಮಂಶುಕಾಖ್ಯಾನ (ವಸ್ತುಕೋ. ೧೪೦-೧೩೨). [ ಧವಳ (=ಧವಲ) + ವಸನ ]

**ಧವಳವಿಲೋಚನ** (ನಾ). ಹೊಳಪಿನ ಕಣ್ಣು ; ಕಾಂತಿಯುಕ್ತವಾದ ಕಣ್ಣು : ಧವಳವಿಲೋಚನಂ ಧವಳಚಾಮರವಾಗೆ ಲಲಾಟಪಟ್ಟವೊಪ್ಪುವ ಪೊಸವಟ್ಟವಾಗೆ . . . ಪೋಲ್ತು ತೋಱುವುದಸಿತೋತ್ಪಲೇಕ್ಷಣೆಯ ಯೌವನಲಕ್ಷ್ಮಿಯ ರಾಜ್ಯಲಕ್ಷ್ಮಿಯಂ (ಆಜಿಪು. ೨-೨೫) ; ಧವಳಾತಪತ್ರಮುಂ ಧವಳವಿಲೋಚನೋತ್ಪಲವಧೂಜನವುಂ ಬೆರಸಷ್ಟದಿಕ್ತಟಂ ಧವಳಿಸೆ ಕೀರ್ತಿಯಿಂ (ಗದಾಯು. ೫-೪೧) ; ಧವಳವಿಲೋಚನಂ ಪೊಳೆವ ಪೂವನೆ . . . ಜಾತ್ಯರುಣಾಧರಾಂಶು ಪಲ್ಲವಮನೆ ಪೋಲೆ (ಅರ್ಧನೇ. ೩-೫೮). [ ಸಂ. ಧವಲವಿಲೋಚನ ]

**ಧವಳವಿಲೋಚನೆ** (ನಾ). = ಧವಳಲೋಚನೆ : ಜವನಿಕೆಯಂ ಕಳೆಯೆ ರಂಗದೊಳ್ಕಣ್ಗೆಸೆದಳ್ ಧವಳವಿಲೋಚನೆ (ಮಲ್ಲಿಪು. ೮-೩೮). [ ಸಂ. ಧವಲವಿಲೋಚನಾ ]

**ಧವಳವಿಷಯ** (ನಾ). ಒಂದು ನಾಡಿನ ಹೆಸರು ; ಬೆಳುವಲನಾಡು : ಪಾಳಯತಿ ಮಹಾಶ್ರೀಮತಿ ವಿನಯಾಂಬುಧಿನಾಮ್ನೀ ಧವಳವಿಷಯಂ ಸರ್ವ್ವಂ (ಮುಂಬಂಇ. X, ೧೯೦-೪ ; 902) ; (ಎಇ. XIII, ೧೯೨-೪ ; 902 ನೋ). P ಇದು 'ಬೆಳ್ವೊಲ' ಎಂಬುದರ ಸಂಸ್ಕೃತೀಕರಣ. [ ಧವಳ (=ಧವಲ) + ವಿಷಯ ]

**ಧವಳಸರ್ಷಪ** (ನಾ). ಬಿಳಿಯ ಸಾಸುವೆ : ದೂರ್ವಾಂಕುರ ಸಿತಾಕ್ಷತ ಧವಳ ಸರ್ಷಪ ವರಫಲಾವಳಿಯ ತರಿಸಿದನು (ಕುವ್ಯಾಕ. ೧-೨೮). [ ಧವಳ (=ಧವಲ) + ಸರ್ಷಪ ]

**ಧವಳಸ್ತಂಬೇರಮ** (ನಾ). = ಧವಳಗಜ : ಧವಳಸ್ತಂಬೇರಮಂ ಗೋಪತಿ ಹರಿ ಸಿರಿ ಪೂವಾಲೆ ಪೂರ್ಣೇಂದುಬಿಂಬಂ . . . ಎಂದಿಂತಿವನಾರ್ನಿನ್ನಂದದಿಂ ಸುಂದರಿ ಕನಸುಗಳಂ ಕಾಣ್ಬ ಸೈಪಿಂಗೆ ನೋಂತರ್ (ಮಲ್ಲಿಪು. ೧೧-೧೨೦). [ ಧವಳ (=ಧವಲ) + ಸ್ತಂಬೇರಮ ]

**ಧವಳಹಯ** (ನಾ). ೧. ಬಿಳಿಯ ಕುದುರೆ. ೨. ಬಿಳಿಯ ಕುದುರೆಗಳಿಂದ ಕೂಡಿದವನು ; ಬಿಳಿಯ ಕುದುರೆಗಳನ್ನುಳ್ಳವನು : ಧವಳಹಯಂ ಧವಳರಥಂ ಧವಳೋಷ್ಣೀಷಂ . . . ತಾಗಿದನವಯವದಿಂ ಬಂದು ಧರ್ಮತನಯನ ಬಲದೊಳ್ (ಪಂಪಭಾ. ೧೧-೩೯). [ ಧವಳ (= ಧವಲ) + ಹಯ ]

**ಧವಳಹಾಸ** (ನಾ). ಬೆಳ್ಳನೆಯ ನಗೆ : ಹೊರಗೆ ನೀಲಾಕಾಶ, ಮುಗಿಲು, ತೊರೆ, ತೆರೆ, ಕಾನು, ಹಿಮಗಿರಿಯ ಕಂದರದ ಧವಳಹಾಸ (ನಡಬಂ. ೪೦-೪). [ ಧವಳ ( = ಧವಲ) + ಹಾಸ್ಯ ]

**ಧವಳಾಂಗ** 'ಧವಲಾಂಗ' ನೋ.

**ಧವಳಾಂಗಪ್ರಭೆ** (ನಾ). ಬೆಳ್ಳನೆಯ ದೇಹಕಾಂತಿ : ಧವಳಾಂಗಪ್ರಭೆ ದೆಸೆಯಂ ಧವಳಿಸೆ [ ತನಿಗಂಪನಾಳ್ದು ಕಡುದಣ್ಪೆನಸುಂ ] ಕವಿತರೆ ನೀಡಿದನಾಗಳ್ ದಿವಿಜೇಭಕರಾನುಕಾರಿ ನಿಜಕರಯುಗವಮಂ (ಕಾದಂಪೂ. ೯೩೮). [ ಧವಳ ( = ಧವಲ) + ಅಂಗಪ್ರಭೆ ]

**ಧವಳಾಂಬರ** (ನಾ). = ಧವಳವಸನ : ರುಚಿರಮೆನಿಸಿರ್ದ ಧೌತ ಧವಳಾಂಬರದಿಂ ಕರಮೆಸೆದಂ (ಕಾದಂಪೂ. ೭೮). [ ಧವಳ ( = ಧವಲ) + ಅಂಬರ ]

**ಧವಳಾಂಶು** (ನಾ). ಶುಭ್ರವಾದ ಕಿರಣ : ಧವಳಾಂಶೂಜ್ಜ್ವಳಿತಂಬು ದೀಧಿತಿಯಿನಾ ರತ್ನಾಕರಂ ಕೂಡೆ ಬಣ್ಣವುರಂ ತೀವಿದ ಪಾಟಿಕ್ಕೆಯಿಂ ದೆಸೆವಿನಂ ಚೆಲ್ವಾದನಬ್ಜೋದರಂ (ಜಗವಿ. ೧-೪೯). [ ಧವಳ ( = ಧವಲ) + ಅಂಶು ]

**ಧವಳಾಕ್ಷ** (ನಾ). = ಧವಳವಿಲೋಚನ : ಅನುಲೇಪಾತಿಶಯಪ್ರಭಾವದಿಂ . . . ಕರವೊಪ್ಪಿ ತೋರ್ಪ ಧವಳಾಕ್ಷಂ ಶೋಭಿತಾಂಗಂ ಭುಜಾನನಮುಂದಿಂ ತಿವಗಣ್ಯಪುಣ್ಯಜನಿತಂ ಜೀವಕ್ಕೆ ನಿವ್ಯಾಕುಲಂ (ಸುಕುಮಾ. ೫-೩೭). [ ಸಂ. ಧವಲಾಕ್ಷ ]

**ಧವಳಾಕ್ಷತ** 'ಧವಲಾಕ್ಷತ' ನೋ.

**ಧವಳಾಕ್ಷತೆ** (ನಾ). ಬಿಳಿಯ ಅಕ್ಷತೆ : ವಿಕೀರ್ಯಮಾಣಪ್ರಸವ ಧವಳಾಕ್ಷತಾ ಸಾರ ಪ್ರಕಾಶವಿಶದಮುಂ . . . ಎನಿಸಿ ಗೋವರ್ಧನ ನಗಂ ಸೊಗಯಿಸೆ (ಜಗವಿ. ४-೮೨). [ ಸಂ. ಧವಲಾಕ್ಷತಾ ]

**ಧವಳಾಕ್ಷಿ** (ನಾ). = ಧವಳಲೋಚನೆ : ಧವಳಾಕ್ಷಿ ಸುಧಾಧವಳಿತಗವಾಕ್ಷ ಜಾಳಾಂತರಂಗಳೊಳ್ ವದನವನಿಟ್ಟವಳೋಕಿಸುವವಳಿಂದಂ ಧವಳಿಸಿದುವೊ ಕಣ್ಣವೆಳ್ಪು ದಿಗುಭಿತ್ತಿಗಳಂ (ಸುಕುಮಾ. ೧೧-೯) ; ರವಿಯಂ ಕಂಡುದರಿಂದಂ ಧವಳಾಕ್ಷಿ ಜನೇಂದ್ರಸಮಯವರ್ಧನನಂ . . . ಪಡೆವೈ (ಧರ್ಮಾಮೃ. ೧೦-೧೭). [ ಸಂ. ಧವಲಾಕ್ಷೀ ]

**ಧವಳಾಗಾರ** 'ಧವಲಾಗಾರ' ನೋ.

**ಧವಳಾತಪತ್ರ** 'ಧವಲಾತಪತ್ರ' ನೋ.

**ಧವಳಾತಪವಾರಣ** (ನಾ). = ಧವಲಾತಪತ್ರ : ಧವಳಾತಪವಾರಣಮುಂ ಪ್ರವಿಮಳ ಚಮರಜಮುನಸಮುಹಾಸನಮುಂ ಭುವನಪ್ರಭುವಿಂಗಿತ್ತಂ (ಪಾರ್ಶ್ವಪು. ೧೧-೦೮). [ ಧವಳ ( = ಧವಲ) + ಆತಪವಾರಣ ]

**ಧವಳಾಪಾಂಗ** (ನಾ). ೧. ಬೆಳ್ಳಗೆ ಹೊಳೆಯುವ ಕಡೆಗಣ್ಣು. ೨. ಚೆಲುವಾದ ಕಡೆಗಣ್ಣುಳ್ಳುದು : ಧವಳಾಪಾಂಗಂ ಕೇಕಾರವಮುಖರಂ ಹರಿತಶಾಬಲಾಂಕಕಳಾಪಂ ಸವಿಲಾಟಂ ಸೊಗಯಿಸಂಗುಂ ಸುವಿನೀಲಾಯತ ತಗಳಂ ಪಯೋದಾಗಮದೊಳ್ (ಕವಿರಾ. ೩-೭); ಧವಳಾಪಾಂಗಮರೀಚಿಗಳ್ ಪುದಿದುವೆಂಬನ್ನಂ ಕಪೋಳಂ ಬೆಳರ್ತುವು (ಮಲ್ಲಿಪು. ४-೯೮) ; ಧವಳಾಪಾಂಗ ಮರೀಚಿ ಮಂಡಳಿಸಿ ನಿಂದಂತಿರ್ಪ ಕರ್ಪೂರಕರ್ಣಾವತಂಸಂ (ಅನಂಪು. ೭-೯೦). [ ಧವಳ (= ಧವಲ) + ಅಪಾಂಗ ]

**ಧವಳಾಬ್ಜ** (ನಾ). = ಧವಳಕಮಳ : ಧವಳಾಬ್ಜಸಿತಚ್ಛತ್ರಂ ನವೀನ ಕಳಹಂಸಧವಳಚಾಮರನಿದಿರ್ವಪ್ಪುಲೆಸೆವಂ ನಿನಗುತ್ಪಲಧವಲಂ ಶರದವನಿಪಾಲಕಂ ಕವಿಧವಳಾ (ಲೀಲಾವ. ೫-೪೩) ; ಧವಳಾಬ್ಜ ಗೌರಹಂಸ ಪ್ರವರನ ಮೇಲಬ್ಜರಾಗರುಚಿಯೆನಿಪಬ್ಜೋದ್ಭವನೇಂ ಬೆಳಗುತ್ತಿರ್ದನೊ ಧವಳಾಭ್ರದ ಮೇಲೆ ಬೆಳಗುವೆಳನೇಸಱವೋಲ್ (ಜಗವಿ. ೧-೩೭). [ ಧವಳ ( = ಧವಲ) + ಅಬ್ಜ ]

**ಧವಳಾಭ್ರ** (ನಾ). ಬೆಳ್ಮುಗಿಲು ; ಬಿಳಿಯ ಮೋಡ : ಅಬ್ಜೋದ್ಭವನೇಂ ಬೆಳಗುತ್ತಿರ್ದನೊ ಧವಳಾಭ್ರದ ಮೇಲೆ ಬೆಳಗುವೆಳನೇಸಱವೋಲ್ (ಜಗವಿ. ೧-೩೭). [ ಧವಳ ( = ಧವಲ ) + ಅಭ್ರ ]

**ಧವಳಾಯತ** 'ಧವಲಾಯಂತ' ನೋ.

**ಧವಳಾರ₁** 'ದವಳಾರ₂' ನೋ.

**ಧವಳಾರ₂, ಧವಳಾರ, ದವಳಾರ₃** (ನಾ). ೧. [ಸಂಗೀತ] ಒಂದು ಬಗೆಯ ಗೀತೆ : ಧವಳಾರಮಂ ಪಾಡುವರು ಮಾಂಗಲ್ಯ ಪಾರ್ವತಿಯು ಹರ್ಮ್ಯವಿದು ನೋಡೆಂದು ಬಿನ್ನವಿಸಿದಂ ಮುನಿಪನು (ರಾಘಶ. ೭-೭೪) ; ಧವಳಾರ ಸೋಭಾನಾ (ಮಡಿಕ್ಸಾ. VI, ೧೫೨೫). **ಧವಳಾರ** : ೧. ರಾಗ=ತೋಡಿ, ಧವಳಾರ, ಏಕತಾಳ (ಸಮುಮ. ೨೫). ೨. ಒಂದು ರಾಗದ ಹೆಸರು : ಕೆಲವೊಂದು ಮಂಗಳಗೀತಗಳನ್ನು ನಮ್ಮ ದೇವಾಲಯಗಳಲ್ಲಿ ಹಾಡುವ ವಾಡಿಕೆಯಿದೆ. ಅದರಲ್ಲಿ 'ಧವಳಾರ'ವೆಂಬ ಅಪೂರ್ವವಾದ ರಾಗವನ್ನು ಕೇಳಿದ್ದೇನೆ (ಜಾನಗೀ. ೧೧೭). **ದವಳಾರ₃** : ೧. ಚಿಕ್ಕಲಿಗ ಮುದ್ದವ್ವೆಯರ್ಗಂ ವ್ಯಕ್ತದಿಂ ದವಳಾರಮಂ ಪಾಡಿ ಸಂತತಂ ನಕ್ಷ್ಕರ ಜೂಟಶರಣರ ಸೇವೆಯಂ ಮಾಡಿ (ಪ್ರಭುಪು. ೯-೧೩೩) ; ಸೂಳೆಯರು ದವಳಾರ ಶೋಭನಗಳನು ಪಾಡುತಲಿ ಇದಿರುಗೊಂಡರು (ಶಂಕರದಾ. ೫-೨೭). [ಧವಳ ( = ಧವಲ) + ಅರ? ./ಸಂ. ಧವಲ ]

**ಧವಳಾರ₃** (ನಾ). ಸುಣ್ಣ (?) : ಎಳೆ ತುಪ್ಪ ನೂಲು ಧವಳಾರದ ಭಂಡಿ ಕಳುಕು ಅಡುಗಬ್ಬು ಹೊಗೆದೆಱೆ ಕಬ್ಬಲದೆಱೆ ಮಗ್ಗದೆಱೆ ಕಾವಲಿದೆಱೆ . . . ಎಲ್ಲವನೂ ಕಾರುಣ್ಯಂ ಮಾಡಿ ಧಾರಾಪೂರ್ಬ್ಬಕಂ ಮಾಡಿ ಕೊಟ್ಟರು (ಎಕ. VI, ಕಡೂರು. ೪೯-೪೦ ; 1291) ; ಧವಳಾರದ ಭಂಡಿ ಅಡುಗಬ್ಬಿನ ಭಂಡಿ . . . ಬಿಟ್ಟು (ಎಕ. XVI, ಚಿಕ್ಕನಾ. ೭೧-೨೫ ; ?). [ ? ]

**ಧವಳಿತ** 'ಧವಲಿತ' ನೋ.

**ಧವಳಿಮ** 'ಧವಲಿಮ' ನೋ.

**ಧವಳಿಸು** (ಕ್ರಿ). ೧. ಬೆಳ್ಳಗಾಗು ; ಅಚ್ಚಬಿಳುಪಾಗು : ಧವಳಗಜೇಂದ್ರಮುಂ ಧವಳಚಾಮರಮುಂ . . . ಬೆರಸಷ್ಟದಿಕ್ತಟಂ ಧವಳಿಸೆ ಕೀರ್ತಿಯಿಂ ಧವಳಮಂಗಳಗೇಯದಿನೊಪ್ಪಿ ಬರ್ಪ ಕೌರವಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ (ಗದಾಯು. ೫-೪೧) ; ಅಕಳಂಕಚಂದ್ರ ವಾಕ್ಚಂದ್ರಿಕೆಯಿಂ ಧವಳಿಸೆ ದಿಗಂಬರಶ್ರೀಭವ್ಯಪ್ರಕರಚಕೋರಂ ನಲಿದುದು (ಪಂರಾಮಾ. ೧-೧೩) ; ಅನಿಮಿಷವಧು ಕತ್ತುರಿಗದಡಿನ ಚಳಯಂಗೊಟ್ಟಳಲ್ಲಿ . . . ಕಡೆಗಣ್ಣ ಕಾಂತಿ ಧವಳಿಸುವಿನೆಗಂ (ಅನಂಪು. ೬-೪೬) ; ಮಹೋತ್ಪಲ ಮಿತ್ರನಿದಿರಿನಲಿ ಧಾತು ಧವಳಿಸಬಲ್ಲುದೇ ಖದ್ಯೋತಕೀಟಕದ (ತೊರರಾ. ೩-೭-೩೮). ೨. ಹೊಳೆ ; ಮಿರುಗು : ತೆಱೆದ ಕಣ್ಗಳೊಳೆ ಧವಳಿಸಿದ ನಿಜವದನವುಂ (ಆದಿಪು. ೭-೨೭ ರಗಳೆ) ; ಮಿಸುಗಿ ದರ್ಪಣ ಧವಳಿಸಿದುದು ಭೂಪನ ಶಶಿಮುಖಿ ಗರ್ಭವ ಧರಿಸೆ (ಕಂನವಿ. ೪-೫೯). ೩. ಸುಣ್ಣವನ್ನು ಬಳಿ ; ಬಿಳಿಯ ಬಣ್ಣವನ್ನು ಲೇಪಿಸು : ಬೀಸುವ ಚಾಮರಂಗಳ ಪೊಳಪಿನೊಳವೆತ್ತಿದ ಬೆಳ್ಗೊಡೆಗಳ ಬೆಳ್ಪಿನೊಳಂ ದೆಸೆಗಳೆಲ್ಲಂ ಧವಳಿಸಿದನ್ನವಾಗೆ (ಪಂಪಭಾ. ೩-೫೪ ವ) ; ನಸುನಗೆ ದಶನಪ್ರಭೆಯಿಂದೆ ಕೂಡಲಾ ದೆಸೆ ಧವಳಿಸಿದವೊಲಾಯ್ತು (ಕಾದಂಪೂ. ೪೮೨ ರಗಳೆ) ; ಒಳಗೆ ಶೋಧಿಸಿ ಹೊಱಗೆ ಧವಳಿಸಿ ಭಾವದಿಂದ ಗುಡಿತೋರಣವ ಕಟ್ಟಿದೆನಯ್ಯಾ (ಸರ್ವವ. ೭೫-೪೨೧) ; ನಯನಪ್ರಭೋಜ್ಜ್ವಲಜ್ಯೋತ್ಸ್ನೆಯಿನಾದಂ ಕನ್ನೆ ಮುನ್ನ ಧವಳಿಸಿ ಭೂಷಾಚಯಮಣಿಗಣನಿಚಯದೆ ತಾಂ ಬಯಲಂ ಚಿತ್ರಿಸಿದಳ್ (ಚಂದ್ರಪು. ೫-೧೧೫) ; ಕಡುಚೆಲ್ವ ಮೇಲ್ವಲಗೆ ನೆಲಗಟ್ಟುಗೋಡೆಗಳ ಗಡಣಮುಂ ಧವಳಿಸಲು ನೃಪಕೀರ್ತಿ ದಶದಿಕ್ಕಿನೆಡೆಗೆ ಶೀವಿದ ತೆಱದೊಳಿಸೆಯೆ . . . ಬರೆದರು (ಭಾವಚಿಂ. ೫-೨೫). ೪. ಬೆಳ್ಳಗಾಗುವಂತೆಮಾಡು ; ಬೆಳಗು : ಭವನಾಂತರಮಂ ನೆಱೆ ಧವಳಿಸುತಿರ್ದಪುದೀ ತುಱುಗಿವೊಗಣ್ಬೆಳಗು ಪುಂಡರೀಕೇಕ್ಷಣನಾ (ಕಾದಂಪೂ. ೪೨೦) ; ಬಾಯ್ದೆಱೆಯಂ ಧವಳಿಸೆ ನಿಜದಂತಕಾಂತಿ ಸಂತಾನಂಗಳ್ . . . ನೆಱೆನುಡಿದಳ್ (ಮಲ್ಲಿಪು. ೪-೮೭) ; ಧವಳಿಸಿತೆವುಂಚಿ ಕೌಮುದಿ ಧೌತಧಾತ್ರಿಯಂ ಸುಪ್ತಜನರಾತ್ರಿ (ಶ್ರೀರಾಮಾ. ೨೭೪-೧೮). [ಧವಳ (= ಧವಲ) + – ಇಸು₃ ]

**ಧವಳೇಕ್ಷಣೆ** (ನಾ). = ಧವಳಲೋಚನೆ : ಧವಳೇಕ್ಷಣೆ ಬಾಯ್ದೆಱೆಯಂ ಧವಳಿಸೆ ನಿಜದಂತಕಾಂತಿಸಂತಾನಂಗಳ್ . . . ನೆಱೆ ನುಡಿದಳ್ (ಮಲ್ಲಿಪು. ೪-೮೭). [ ಸಂ. ಧವಲೇಕ್ಷಣಾ ]

**ಧವಳೇಕ್ಷು** (ನಾ). ಬಿಳಿಯ ಕಬ್ಬು ; ರಸದಾಳಿ ಕಬ್ಬು : ಧವಳೇಕ್ಷುಚ್ಛಾಯ ನಿಷಣ್ಣವಪುಗಳಂದದೊಳೆ ನೆಗಟ್ದ ಬಣ್ಣಮನಾ ಶೈಶವದಿಂ ಕಾಕಳಿಯೊಳ್ ಚಕ್ರವರ್ತಿಯಂ ಪಾಡಿ ಶಾಳಿಗೋಪಿಯರೆಸೆದರ್ (ಶಾಂತಿಪು. ೧೦-೧೩೮) ; ಕಳಮ ದ್ರಾಕ್ಷೆ ಧವಳೇಕ್ಷುಗಳ ವನವೀಥಿಗಳನೀಕ್ಷಿಸುತರಸನೈತಂದ (ತೊರರಾ. ೧-೬-೧೦) ; ಮದನದಿಗ್ವಿಜಯಕ್ಕೈದುವನೆಂದು ಸ್ವಧನುಗಳ ಮುದದೆ ಪೂಜೆವೊಡಿಟ್ಟಂತೆ ಒದಗಿದ ಧವಳೇಕ್ಷುದಂಡವೋಲಗದ ಚೌಸದನದೆ ಪೂಗಳೊಪ್ಪಿದುವು (ಕಂನವಿ. ೨೦-೩೨). [ ಧವಳ (= ಧವಲ) + ಇಕ್ಷು ]

**ಧವಳೋತ್ತರೀಯ** (ನಾ). ಬಿಳಿಯ ಮೇಲಂಪಸ್ತ್ರ, – ಶಲ್ಯ : ಇಟ್ಟ ವಿಭೂತಿಯು ತೊಟ್ಟ ರುದ್ರಾಕ್ಷಿಯ ಹೊದೆದ ಧವಳೋತ್ತರೀಯದ ಉಟ್ಟ ತಳಿರ್ಗಾಸೆಯ . . . ಶೈವಶೃಂಗಾರಂ ಸರ್ವಾಂಗದೊಳ್ ಬಳೆಯೆ (ನಂಬಿರ. ೧೭-೧೧೫). [ ಧವಳ (= ಧವಲ) + ಉತ್ತರೀಯ ]

**ಧವಳೋತ್ಪಳ** 'ಧವಲೋತ್ಪಲ' ನೋ.

**ಧವಾದಿನಿ** (ನಾ). ಗಂಡನನ್ನು ನುಂಗಿದವಳು ; ಗಂಡನ ಸಾವಿಗೆ ಕಾರಣಳಾದವಳು : ಕುಲವಿನಾಶಿನಿ ಧವಾದಿನಿ ಪಾಪಿ ದುರ್ವಾರ್ಗಕಲಿತೆ ಸುರಪತಿಯಂತಜೇಯನು ಗಿರಿಯಂತೆ ಚಲನೆಯಿಲ್ಲದನಂ . . . ಪಲವುವಿಧ ಕರ್ಮದಿಂ ಸಂತಾಪಗೊಳಿಸುತಿಹೆ (ವೆಂಕಾರಾ. ೨-೧೨-೨೦).
[ ಸಂ. ಧವಾದಿನೀ ]

**ಧವಿತ್ರ** (ನಾ). (ಯಜ್ಞದ ಅಗ್ನಿಗೆ ಗಾಳಿಹಾಕಲು ಉಪಯೋಗಿಸುವ) ಕೃಷ್ಣಾಜಿನದಿಂದ ಮಾಡಿದ ಬೀಸಣಿಗೆ. [ ಸಂ. ]

**ಧಸ್** (ನಾ). ಒಂದು ಅನುಕರಣ ಶಬ್ದ : ಆ ಸಮಯದಲ್ಲಿ ಅವಳ ಎದೆ ಧಸ್ ಅಂದಿತು (ಮಂಜುಳ. ೯೧).

**ಧಸಕ್** (ನಾ). ಒಂದು ಅನುಕರಣ ಶಬ್ದ. 'ಧಸಕ್ಕೆನ್ನು' ಪರಾ.

**ಧಸಕ್ಕೆನ್ನು** (ಕ್ರಿ). ಹೌಹಾರು ; ನಡುಗು : ಬ್ರಾಹ್ಮಣಿಯ ಎದೆಯು ಧಸಕ್ಕೆಂದಿತು (ಹುಟ್ಟಹ. ೫೩) ; ಆಚಾರ್ಯರ ಎದೆ ಧಸಕ್ಕೆಂದಿತು (ಸಮುಜೀ. ೧೧೭). [ ಧಸಕ್ + ಎನ್ನು (<ಎನ್₁) ]

**ಧಸರಿ** (ನಾ). ಒಂದು ಬಗೆಯ ಸೊಪ್ಪು : ಬಹುಮೂತ್ರವಾಗಿ ಇರುವಂಥವರುಗಳಿಗೆ . . . ಕೊಡುವಂಥಾ ಮೇಲೋಗರಗಳು – ಗಣಜಿಲೆಸೊಪ್ಪು . . . ಮಜ್ಜಿಗೆ, ಹೊನಗೊನ್ನೆ, ಧಸರಿ, ಬೇವಿನಹೂವು, (ವಿಶ್ವವಿ.೧೫೭).
[ ? ]

**ಧಸವಂಧ** 'ದಶವಂಧ' ನೋ.

**ಧಸಿಕೆ** (ನಾ). ಆಕಸ್ಮಿಕ ಭಯ, ದುಃಖ ಮೊದಲಾದುವುಗಳಿಂದ ಮನಸ್ಸಿಗೆ ಉಂಟಾದ ಆಘಾತ, – ಪೆಟ್ಟು : ರಾತ್ರಿ ಕೆಟ್ಟಕನಸುಗಳು ಬೀಳುತ್ತವೆ. ಮನಸಿನಲ್ಲಿ ಧಸಿಕೆ ಕುಳಿತಿದೆ (ಕುರಿಹಿಂ. ೪೨). [ ←ಮರಾ. ಧಸಕಾ ]

**ಧಸ್ಸೆನ್ನು** (ಕ್ರಿ). ಹೌಹಾರು ; ಭಯಹೊಂದು : ಆ ದೃಶ್ಯವನ್ನು ಕಂಡು ನಾರಾಯಣಶಾಸ್ತ್ರಿಯ ಹೊರತು ಉಳಿದವರೆಲ್ಲರ ಎದೆಗಳು ಧಸ್ಸೆಂದವು! (ಅಂಬಿಕೆ. ೧೩) ; ಕಕ್ಕನ ಎದೆ ಧಸ್ಸೆಂದಿತು (ಕನಕ. ೩೧).
[ ಧಸ್ + ಎನ್ನು (<ಎನ್₁) ]

**ಧಳಂ** 'ಧಱಂ' ನೋ.

**ಧಳಧಳನೆ** (ಅ). ದಡದಡನೆ ; ಸರಸರನೆ : ಹೆಳವನಲ್ಲಿಗೆ ಗಂಗೆ ಧಳಧಳನೆ ಬರ್ಪಂತೆ (ದೀಕ್ಷಾಬೋ. ೪೫-೧೧) ; ಧಳಧಳ[ಪಾಠಾಂ. ದಳದಳ]ನೆ ಪುಳಕದಗೆ ನಳನಳಿಸೆ ಕಣ್ಗಳೊಳು ಗಳಗಳನೆ ಬಾಷ್ಪಂ ಗಳಿದೊಗುತಿರೆ (ಸಾನಂಚ. ೧-೬೫); ಆನಂದಾಶ್ರು ಕಣ್ಗಳೊಳ್ ಧಳಧಳ[ಪಾಠಾಂ. ದಳದಳ]ನೆ ಸುರಿಯೆ (ಪದ್ಮರಾ. ೭-೨೮). [<ಧಳಂ + – ಅನೆ₁ ]

**ಧಟ** (ನಾ). (?) : ಆದಿಗ್ರಹಣಾದನ್ಯತ್ರಾಪಿ – ಘಟಿಯಂ, ಝಳಂ, ಠಕ್ಕು, ಢೊಕ್ಕರಂ, ಧಟಿಂ[ಪಾಠಾಂ. ಳಂ],ಭರಂ (ಭಾಷಾಭೂ. ೧೧ ವೃತ್ತಿ) ; ವರ್ಗ ಚತುರ್ಥಾಕ್ಷರಂಗಳ್ಗೆ – ಘಟಿಯಂ, ಝಾಟಿಗೆ . . . ಢೊಕ್ಕರಂ, ಧಟ [ಪಾಠಾಂ.ಳಂ], ಧಾಳಿ, ಧಾರಿ, ಧವಳಂ (ಧವಡಂ) (ಶಮದ. ೧೫ ಪ್ರಯೋ).
[ P ಇದು 'ದಟ' ಎಂಬುದರ ಪರ್ಯಾಯರೂಪವಿರಬಹುದು ]

**ಧಟಿಂ,** ಧಳಂ (ನಾ). ಒಂದು ಅನುಕರಣ ಶಬ್ದ : ಖಟಿಲ್ಲನೆ . . . ಧಟ ಮ್ಮೆನೆ, ಘಟಿಲ್ಲನೆ – ಇವು ಮೊದಲಾದ ಮಹಾಪ್ರಾಣಾನುಕರಣಂಗಳ್ ನಿತ್ಯಬಟಂಗಳ್ (ಶಮದ. ಪರಿ. ೧). **ಧಳಂ :** ಕೋಳಾಹಳೋತ್ಕರ ನಿಸ್ಸಾಳ ಧಳಂ ಧಳಂ ಧಳರವಂ ಪರ್ಬಿತ್ತು ಮೂಲೋಕವಂ (ಗಿರಿಕ. ೬-೫೪).

**ಧಳಂಧಳಂ, ಧಳಂಧಳ, ಧಳಧಳಂ** (ದ್ವಿರುಕ್ತಿ) : ನಿಸ್ಸಾಳಧ್ವನಿ ಧಳಂ ಧಳಮ್ಮೆನೆ (ತಿರುನಾ. ದೇ. ೨೩೨-೧) ; ಕೋಕಿಳಕಳ ನಿಸ್ಸಾಳ ಧಳಂಧಳಂ ಧಳಂಧಳ ನಿನಾದಮುಣ್ಮೆತ್ತಾಗಳ್ (ಗಿರಿಕ. ೮-೩) ; ಧಳಧಳಂ ಜೊಜ್ಜೊಂಬ ದಟದಟ ದೊಳದೊಳೆಂಬೀ ಧ್ವನಿಗಳವನಿಗೆ ಭಯವನೀವುತಿರೆ (ಸಾನಂಜ. ೮-೦೩) ; ಧಳಧಳಂ ಧಳಧಳಂ ಧಳಮೆಂಬ ಶಬ್ದಸಮ್ಮಿಳಿತ ಕೋಣಪ್ರಹಾರ ದಿನುಣ್ಮಿದತಿರವಂ . . . ಆವರಿಸಲು (ಜಿಬಪು. ೩೮-೧). 'ಧಟಮ್ಮನೆ' ಪರಾ.

**ಧಟಗ** (ನಾ). ಒಂದು ನಾಯಿಯ ಹೆಸರು : ಲೋಕನೆಂಬುದು ಎಟ್ಟಿತ್ತೈದು ಪಂದಿಯಂ ಕೊನ್ದತ್ತು, ಇದುವೆರಸಿ ಯಿೂ ನಾಯಕ ಧಟಗನೆಂಬುದು ಪಿರಿಸನ್ದಿ ಮಗ ಯಿಪ್ಪತ್ತಟು ಪನ್ದಿಯಂ ಕೊನ್ದನ್ (ಎಕ. X, ಮುಳಬಾ. ೮೫-೨ ; ಸು. 975). [ ? ]

**ಧಟಮ್ಮನೆ** (ಅ). ಧಳಂ ಎಂಬ ಸದ್ದಿನೊಂದಿಗೆ : ಅನುಕರಣಕ್ಕೆ – ಖಣಿಲ್ಲನೆ . . . ಧಟಮ್ಮನೆ, ಭೋರನೆ ಎಂಬಿವಾದಿಯಾಗಬಿವುದು (ಶಮದ. ೧೪ ಪ್ರಯೋ) ; ಘುಳುಮ್ಮನೆ ಧಟ[ಪಾಠಾಂ. ಳು]ಮ್ಮನೆ ಮೊದಲಾದುವು ಮಹಾಪ್ರಾಣಾಕ್ಷರವುಳ್ಳ ಅನುಕರಣಗತ ನಿತ್ಯಬಟಗಳಾದ ಪದಗಳು (ಶಬ್ದಾನು. ೧೪೧ ವ್ಯಾಖ್ಯಾ). [ಧಟಂ + – ಅನೆ$_1$]

**ಧಾಂ** (ನಾ). ಒಂದು ಅನುಕರಣ ಶಬ್ದ : ಕುಳ ಭೂಭೃನ್ಮಸ್ತಕಂ ಸೀಳೆ ಧಾತ್ರಿಗೆ ತಾಂ ಪರ್ಬಿದುದುರ್ಬಿ ಧಾಂ[ಪಾಠಾಂ. ದಾಂ]ಧಳಧಳ ಸ್ವಾರೋರು ಭೇರೀರವಂ (ರಾಜಶೇ. ೬-೩೧) ; ಬಳೆದು ನೆಗೆತಂದು ಧಾಂ[ಪಾಠಾಂ. ದಾಂ] ಧಳಧಳಂಧಳ ಧ್ವನಿಯುಳರ್ಕೆಗೊಳೆ (ರಾಜಶೇ. ೬-೪೪).

**ಧಾಂಧಾಂ** (ದ್ವಿರುಕ್ತಿ) : ಧಾಂಧಾಂ ಧಾಂಧಳಂಬಿಕ್ಕಿದ ಕುಡುಹಿನ ನಿಸ್ಸಾಳಘೋಷಕ್ಕೆ ರಾಯರ್ ಕೆಡೆದರ್ (ಸೂಕ್ತಿಸು. ೧೮-೨).

**ಧಾಂಡಿಗ** 'ದಾಂಡಿಗ' ನೋ.

**ಧಾಂಡಿಗಿತ್ತಿ** (ನಾ). ಕಸುವುಳ್ಳವಳು ; ಗಟ್ಟಿಗಿತ್ತಿ : ಧಾಂಡಿಗಿತ್ತಿಯೊಬ್ಬಳು ಇದ್ದಕ್ಕಿದ್ದಂತೆ ಒಳಗೆ ಬಂದಳು (ರೂಢಿ).
[ ಧಾಂಡಿಗ (<ದಾಂಡಿಗ) + – ಇತ್ತಿ ]

**ಧಾಂದಲೆ,** ದಾಂದಲೆ, ದಾಂಧಲೆ (ನಾ). ಗದ್ದಲ ; ಗಲಾಟೆ ; ಹಾವಳಿ ; ಕೋಲಾಹಲ : ಒಂದು ಕಡೆ ಮರಾಠರ ಧಾಂದಲೆ, ಮತ್ತೊಂದು ಕಡೆ ನಿಜಾಮನ ಉಪಟಳ (ಸುವರ್ಣ. ೩೯೯) ; ಹಿಂಡು ಹೊಲೆಯರಿಗೆ ಬೆಳತನಕ ಧಾಂದಲೆ ಹಾಕಲಿಕ್ಕೆ ಅವಕಾಶ ಕೊಟ್ಟಾನ (ಗಂಗಾಸಾ. ೧೧೩) ; ಯಾರಾರೆ ಧಾಂದಲೆ ಹಾಕತಾರ. ಅದನ್ನೆಲ್ಲಾ ಥಮ್ಮಣಿ ಮಾಡತೀವಿ (ಧನಂಜ. ೩೧). **ದಾಂದಲೆ:** ಅಲ್ಲೇ ನೀ ಎಟ್ಟದು ದಾಂದಲೇ ಹಾಕೂದು? (ಹೂಬಿಸಿ. ೧೧); ಈ ದಾಂದಲೆ ಏಕೆ ಬೇಕು? (ತುಳುನಾ. ೯). **ದಾಂಧಲೆ :** ದೇವರ ಉತ್ಸವ ದಲ್ಲೂ ದಾಂಧಲೇನಾ ? (ನಮ್ಮೂ. ೫೯) ; ಬಲಿಷ್ಠರಾದವರು ಪ್ರಬಲಿಸಿ ದಾಂಧಲೆ ಮಾಡಿ ದೊರೆತಷ್ಟು ದ್ರವ್ಯವನ್ನು ವಿವಿಧ ವಿಧಗಳಲ್ಲಿ ದೋಚು ತ್ತಿದ್ದರು (ಪ್ರಮಹ. ೨೦). [ ←ಹಿಂ. ಧಾಂಧಲ್ ; ಮರಾ. ಧಾಂದಲ್ ]

**ಧಾಂಧೂಂ** 'ಧಾವಂಧೂಮ' ನೋ.

**ಧಾಕ** (ನಾ). ಹೆದರಿಕೆ ; ದಿಗಿಲು ; ಭಯ ; ಆತಂಕ : ಇಷ್ಟು ಜನರು ಕೂಡಿದಾಗ ನಿರ್ಣಯಕ್ಕೆ ಬರೋದು ಅವಸರದ ಕೆಲಸ ಅದೀತೇನೋ ಅಂತ ನನಗ ಧಾಕ (ಹೆದರಿಕೆ) ಅದ (ನಿಹಾರ. ೨೦). [ ←ಹಿಂ. ಮರಾ. ಧಾಕ್ ]

**ಧಾಟಿ$_1$** (ನಾ). ಆಕ್ರಮಣ ; ಮುತ್ತಿಗೆ ; ದಾಳಿ (?) : ಪುರುಡಿನ ಗರುಡಿ ಸೊರ್ಕಿನಿರ್ಕೆ ಮುಳಿಸಿನ ಬೆಳಸು . . . ಬಲ್ ಚದುರ **ಚಾವಡಿ** ಚಢಾಳ ದೋಳಿ ಬೇಟದ ಧಾಟಿ ಸಿಂಗರದ ರಂಗಭೂಮಿ . . . ರಾಜಸುವ ಸೂಳೆಗೇರಿ (ಪದ್ಮರಾ. ೮-೮೭). 'ದಾಟಿ' ಪರಾ. [ <ಸಂ. ಧಾಟೀ ]

**ಧಾಟಿ$_2$** 'ದಾಟಿ$_2$' ನೋ.

**ಧಾಡಧಾಡ** (ನಾ). ಒಂದು ಅನುಕರಣ ಶಬ್ದ : ಗೆಲವಿಂದಂ ಮದ್ದುಗುಂಡಂ ತುಂಬಿ ಹಾರಿಸುತ ಧಾಡಧಾಡೆಂಬ ರವದಿಂ (ಕೃಷ್ಣವಿ. ೫-೯೩).

**ಧಾಡನೆ** (ಅ). ರಭಸದಿಂದ ; ಇದ್ದಕ್ಕಿದಂತೆ : "ಧಾಡನೇ" ಬಿದ್ದೆದ್ದು ರೋದನಮಾಡಿದಳು ಕಲ್ಕರಗುವಂತೆಯೆ (ಪಾರ್ವಪ. ೧-೩೨).
[ ಧಾಡ್$_0$ + ಅನೆ$_1$ ]

**ಧಾಡಸಿ** 'ಧಾಡಸಿ' ನೋ.

**ಧಾಡಸೀ,** ಧಾಡಸಿ (ಗು). ೧. ದಿಟ್ಟತನದ ; ಅಪಾಯವನ್ನು ಲೆಕ್ಕಿಸದ ; ಸಾಹಸ ಪ್ರವೃತ್ತಿಯ. ೨. ದುಡುಕಿನ ; ದುಡುಕುತನದ : ವಾಮನ ರಾಯರೇ ನಿಮ್ಮದು ಬಹು ಧಾಡಸೀ ಸ್ವಭಾವ (ಜೀಟಿನಾ. ೨೩೦). **ಧಾಡಸಿ:** ೧. ಉಡುಪೀಯವರು ಭಾಳ ಧಾಡಸಿ ಮಂದಿ (ರಕ್ತಧ್ವ. ೨೨). ೨. ಹಿರಿಯ ಮಗ ಧೀರನ ಧಾಡಸಿ ಪ್ರಕರಣವೊಂದು ಕರುಳು ಕೊರೆಯುತ್ತಿತ್ತು (ಸಾವಿಲು. ೧೬೦). [ ←ಮರಾ. ಧಾಡಸೀ, ಧಾಡಶೀ ]

**ಧಾಡಸೀತನ** (ನಾ). ದುಡುಕು ; ದುಡುಕುತನ : ವ್ಯಾಪಾರದಲ್ಲಿಯೂ ಕೂಡ ನಾನೇನೂ ಧಾಡಸೀತನ ಮಾಡುತ್ತಿದ್ದಿಲ್ಲ (ಗೀಜುಗಿ. ೪೭) ; ಅನುಭವ, ಧಾಡಸೀತನ ಆತನಿಗೆ ವಯಸ್ಸಿನ ಮಾನದಿಂದ ಬರಲಿಲ್ಲ (ದೀಪಹ. II, ೪೨೦). [ ಧಾಡಸೀ + – ತನ ]

**ಧಾಡಿ,** ದಾಡಿ$_3$ (ನಾ). ಕೇಡು ; ತೊಂದರೆ ; ವಿಪತ್ತು ; ರೋಗ : ನನಗೇನಾಗಿದೆ ಧಾಡಿ, ಗುಂಡಕಲ್ಲ ಹಾಗಿದ್ದೀನಿ (ಮರಳಿ. ೧೭೦) ; ಅವನಿಗೇನು ಧಾಡಿ, ಊರ ತುಂಬ ಸ್ನೇಹಿತರು, ಎಲ್ಲೋ ಂಡಿ ತೀರ್ಥ ಆಗಿರುತ್ತೆ (ನಟಸಾ. ೫) ; ಅಲ್ಲಿಕ್ಕೇನಾತೋ ಧಾಡೀ ನಿನಗ ಏಳು (ತಿರುಗು. ೨೦) ; ನಾಲ್ಕುವರ್ಷ ಕಣ್ಣು ಮುಚ್ಚಿ ಕುಳಿತಿ ಅಂದರ ಆ ಹೊಲಕ್ಕೂ ಧಾಡಿ ಬರತದ (ಅಶೋಕ. ೫೭). **ದಾಡಿ$_3$ :** ಇನ್ನು ಹತ್ತು ದಿನ ರಾತ್ರಿ ಎಲ್ಲಾ ಜಾಗರಣೆ ಮಾಡಿದರೂ ಈ ದೇಹಕ್ಕೆ ದಾಡಿಯಿಲ್ಲ (ಪದ್ಮಸ. ೨೩೩) ; ನನಗೆ ದಾಡಿ ಬರಲಿಕ್ಕಿಲ್ಲ (ಮರಮ. ೨೫೭). [ ←ಮರಾ. ಧಾಡ್ ]

**ಧಾತ** (ನಾ). ೧. ಬ್ರಹ್ಮ ; ಸೃಷ್ಟಿಕರ್ತ : ಧಾತ ಮಾಡುವ ತಟಪಟಯದೆ ಕಾಡುವ ಕಮ್ಮಟದೇಹಿಗಳ ನೋಡಾ (ಕೋಲಶಾಂ. ೭-೨೫) ; **ಧಾತೃ** ಶಬ್ದದ ತಕಾರಕ್ಕೆ – ಧಾತ, ಮಾಂಧಾತ (ಶಮದ. ಕಿ. ೮೪ ಪ್ರಯೋ) ; ಧಾತನೆಣ್ಣೆಯ ಗಾಣದೆಳ್ಳುಕಾಳೆಲೆ ನೀನು (ಮಂಕುಕ. ೩೫೭). ೨. ದ್ವಾದಶಾದಿತ್ಯರಲ್ಲಿ ಒಬ್ಬನು: ಧಾತಾ, ಅರ್ಯಮಾ, ಮಿತ್ರ, ವರುಣ . . . ತ್ವಷ್ಟ, ವಿಷ್ಣುಗಳೆಂಬವರೇ ಕ್ರಮದಿಂ ದ್ವಾದಶಾದಿತ್ಯರು (ವಿವೇಕ. ೨೬೭).
[ ಸಂ. ಧಾತೃ ]

**ಧಾತಕಿ** (ನಾ). ಆರೆಹೂವು ; "ಮರಾಟಿಮೊಗ್ಗು" (ಸಂಕನಿ) : ಓಷ್ಟೋದಕ ಗೂಡ ಧಾತಕೀ ಸಂಯೋಗದಿಂದಮೆಂತು ಮದವಿಕಾರಮಸೆದಪ್ಪುದು ಅಂತೆ (ಆದಿಪು. ೩-೯ ವ) ; 'ಧಾತಕೀಕುಸುಮ' ಪರಾ. [ ಸಂ. ಧಾತಕೀ ]

**ಧಾತಕೀಕುಸುಮ** (ನಾ). ಆರೆ ಹೂವು : "ಅಗ್ನಿಜ್ವಾಲಾ, ಸುಭಿಕ್ಷಾ, ಧಾತಕೀ, ಧಾತುಪುಷ್ಪಿಕಾ ಈ ೪ ಧಾತಕೀಕುಸುಮ" (ನಾಚಿರಾ. ೧೧೦) ; "ಅಗ್ನಿಜ್ವಾಲಾ, ಸುಭಿಕ್ಷಾ, ಧಾತಕೀ, ಧಾತುಪುಷ್ಪಿಕಾ–೪ ಧಾತಕೀಕುಸುಮ" (ಸಿದ್ಧಾಂತಿ. ೧೪೦) ; ಧಾತಕೀಕುಸುಮ, ಲೋಧ್ರ, ಮಂಜಿಷ್ಠೆ, ಲಾಮಂಚ,

ಶ್ರೀಗಂಧ ಇಷ್ಟನೂ ಸಮಾಂಶವಾಗಿ ನೀರಿಂದ ಅರೆದು ಮೈಗೆ ಲೇಪಿಸಲು ಸಕಲಗ್ರಹಗಳು ಹರವಹವು (ವೈದ್ಯಸಾ. II, ೧೫) ; ಮಂಜಿಷ್ಟೆ, ಧಾತಕೀ ಕುಸುಮ, ತಾವರೆಕುಸುಮ . . . ಪಾಕದಲ್ಲಿಳಿಪಿ ಶರೀರಕ್ಕೆ ಲೇಪಿಸೆ ಪಿತ್ತ ಜ್ವರ, ಉನ್ಮಾದ, ಮೂರ್ಛೆ ಸಹ ಮಾಣುವುವು (ಸಕವೈ. ೮೫). [ಸಂ.]

**ಧಾತಕೀಖಂಡ** (ನಾ).=ಧಾತಕೀಷಂಡ; P ಮಧ್ಯಲೋಕದಲ್ಲಿರುವ ಒಂದು ದ್ವೀಪ. ಇದರ ಒಳಭಾಗದಲ್ಲಿ ಧಾತಕೀವೃಕ್ಷವಿದೆ. ಇದು ರತ್ನ ಮಯವಾಗಿದೆ. ಅದರಿಂದಲೇ ಈ ದ್ವೀಪಕ್ಕೆ ಧಾತಕೀಖಂಡವೆಂದು ಹೆಸರು ಬಂದಿದೆ. ಇದು ನಾಲ್ಕು ಲಕ್ಷ ಯೋಜನ ವಿಸ್ತಾರವಾಗಿದೆ. ಇದರ ನಾಲ್ಕು ಕಡೆಯಲ್ಲೂ ಕಾಲೋದಧಿ ಸಮುದ್ರವಿದೆ. ಇದಕ್ಕೆ ಅಧಿಪರುಗಳು ವ್ಯಂತರದೇವರಾದ ಪ್ರಭಾಸ ಮತ್ತು ಪ್ರಿಯ ದರ್ಶನರು : ಜಂಬೂದ್ವೀಪಂ ಲವಣಸಮುದ್ರಂ ಧಾತಕೀಖಂಡದ್ವೀಪಂ ಕಾಳೋದಕಸಮುದ್ರಂ ಪುಷ್ಕರವರದ್ವೀಪಂ ಪುಷ್ಕರವರಸಮುದ್ರಂ (ತತ್ತ್ವಪ್ರ. ೧೨೫). [ಸಂ.]

**ಧಾತಕೀಷಂಡ** (ನಾ). [ಜೈನ] ಪುಷ್ಕರದ್ವೀಪದಲ್ಲಿ ಒಂದು ಭಾಗ; ಧಾತಕೀ ಎಂಬ ವೃಕ್ಷ ಪ್ರಧಾನವಾಗಿರುವ ದ್ವೀಪ : ಆನೀ ಭವಕ್ಕೆ ಮೂಡಣೆಯ ಭವದೊಳ್ ಈ ಧಾತಕೀಷಂಡದ ಮೂಡಣ ಮಂದರದ . . . ಪಾಟಳಿಗ್ರಾಮದೊಳ್ . . . ನೆಲಸಲೊಡಂ (ಆದಿಪು. ೩-೩೩ ವ) ; ಧಾತಕೀಷಂಡದ ಮೂಡಣಮಂದರದ ಪೂರ್ವವಿದೇಹದ ಸೀತಾನದಿಯ . . . ದಕ್ಷಿಣಶ್ರೇಣಿಯೊಳ್ (ಶಾಂತಿಪು. ೬-೮೪ ವ) ; ಲವಣಸಮುದ್ರಮಂ ನಾಲ್ಕು ಲಕ್ಷ ಯೋಜನದಗಲದಿಂ ಬಳಸಿರ್ದುದು ಧಾತಕೀಷಂಡದ್ವೀಪಂ (ಸುಕುಮಾ. ೧೧-೫೦ ವ) ; ಉದ್ಧತೋಲ್ಬಣ ರೋಷಂ ಪರಿಯಿಟ್ಟು ಮುತ್ತಿದ ಪೊಲಿಕ್ಕಂ ಧಾತಕೀಷಂಡವಿಖ್ಯಾತಣಭದ್ರಂ ಸಸಮುದ್ರಮಂ ಬಳಸಿ ಜಂಬೂದ್ವೀಪವಿನ್ಯಾಸಮಂ (ಚಂದ್ರಪ್ರ. ೧-೭೨). [ಸಂ.]

**ಧಾತಾರ** (ನಾ). ಬ್ರಹ್ಮ ; ಸೃಷ್ಟಿಕರ್ತ: "ಬ್ರಹ್ಮಾ-ಧಾತಾರಂ" (ಕಾಶಕ್ಕ. ೨೮೦) : ಭರ್ತಾರಂ, ಭರ್ತೃ ; ಧಾತಾರಂ, ಧಾತೃ ; ಹೋತಾರಂ, ಹೋತೃ (ಭಾಷಾಭೂ. ೧೧೦ ಪ್ರಯೋ). [ಸಂ. ಧಾತೃ]

**ಧಾತು** (ನಾ). ೧. ಮೂಲವಸ್ತು ; ಮೂಲಘಟಕ,- ಅಂಶ,- ಸತ್ತ್ವ : ಆಚಾರಲಿಂಗವಿಡಿದು ಗುರುಲಿಂಗವ ಕಾಣಬೇಕು . . . ಪ್ರಸಾದಲಿಂಗ ವಿಡಿದು ಮಹಾಲಿಂಗವ ಕಾಣಬೇಕು ಇಂತೀ ಷಡುಸ್ಥಲದ ಧಾತುವ ಸಂಬಂಧಿಸಿ ಒಂದು ಮಾಡಿಕೊಂಡಿಪ್ಪ ಈ ಕರಸ್ಥಲದ ಅನುವ ಗೋಹೇಶ್ವರನ ಶರಣ ಸಂಗನ ಬಸವಣ್ಣ ಬಲ್ಲ (ಅವಚಂ. ೧೬೮-೭೫೬) ; ಕಲ್ಲುಪ್ಪು ಕರ್ಪೂರವು ಸೊಲ್ಲೆರಡು ಧಾತೊಂದು ಖುಲ್ಲನೊಳ್ಳಿದನ ರೂಪೊಂದು ಗುಣದೊಳಗೆ ಎಲ್ಲ ಅಂತರವು (ಸರ್ವಜ್ಞ. ೮೧೨). ೨. ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಮಹಾಭೂತಗಳು. ೩. ಆಕಾಶವನ್ನು ಬಿಟ್ಟು ಉಳಿದ ಭೂತಗಳು : "ಅಂಬರವರ್ಜಿತ ಪಂಚಭೂತದೊಳ್ . . . ಶೀಲಮಿಂತಿವಕೆ ಧಾತುವೆನಿಕ್ಕು" (ನಾನಾರ. ೮೩). ೪. ದೇಹದೊಳಗಿನ ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜೆ, ಶುಕ್ರಗಳೆಂಬ ಏಳು ಮುಖ್ಯವಾದ ಘಟಕಗಳು ; ಸಪ್ತಧಾತುಗಳು : ಪಂಚೇಂದ್ರಿಯ ಸಪ್ತಧಾತು ಹಂಚು ಹಜಿಮಾಡಿ ಕಾಡಿಹುವಯ್ಯಾ (ಬಸವ. ೪೭) ; ಜಲಧಿ ಮಾತೃಕೆ ವಾರಕುಲಗಿರಿಗಳು ವಿಭಕ್ತಿ ದ್ವೀಪ ಸರ್ಪಾವಳಿ ಮುನೀಶ್ವರರುಗಳ ಧಾತುಗಡಣದ ವೇದಿಗಳ ತಿಳಿದು . . . ನಡೆವವರುಗಳು ನಿರ್ಮಳ ದಲೆಡಹದೆ ಬೆರಸಿಕೊಂಬರು ಮುಕ್ತಿರಾಜ್ಯವನು (ಕುವ್ಯಾಉ. ೪-೩೪) ; ಧಾರುಣಿಯ ಲಂಪಟರು ಕದನವ ಹಾರಿ ಬಂದರು ಗಡ ಕೃತಾಂತನ ಭೂರಿ ಭೂತದ ಧಾತುವಾಯಿತು ಲೇಸುಲೇಸೆಂದ (ಕುವ್ಯಾಭೀ. ೦-೪) : ಧಾತು ಏಳನು ಕಲೆತು ಭೂತ ಪಂಚಕವಾಗಿ ಓತು ದೇಹವನು ಧರಿಸಿರ್ದ ಮನುಜರ್ಗೆ ಜಾತಿ ಎತ್ತಣದು (ಸರ್ವಜ್ಞ. ೯೭೫) ; ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು, ಮೇದೋಧಾತು, ಅಸ್ಥಿಧಾತು, ಮಜ್ಜಧಾತು, ಶುಕ್ಲಧಾತು ಎಂದು ಏಳು ತೆರನಾಗಿವೆ (ಸಕವೈ. ೯೮). ೫. ದೇಹದೊಳಗಿನ ವಾತ, ಪಿತ್ತ, ಕಫಗಳೆಂಬ ಮೂರು ದ್ರವ್ಯಗಳು: ಒಂದೊಂದು ಧಾತುವಿನ ಹೆಚ್ಚುಗೆಯಿಂದಲೂ ಎರಡು ಧಾತುಗಳ ಮಧ್ಯಮ ಮಾಂದ್ಯಗಳ ವ್ಯತ್ಯಾಸಗಳಿಂದಲೂ ಪುಟ್ಟುವ ಸನ್ನಿದೋಷವಾರು (ಸಕವೈ. ೦೫೦) ; ಅನ್ನೋದಕ ಅಗ್ನಿಗಳೆಂಬ ಮೂರರಿಂದ ಹುಟ್ಟುವುದು ವಾತ, ಪಿತ್ತ, ಶ್ಲೇಷ್ಮ ವೆಂಬ ಮೂರು ಧಾತುಗಳು (ಹಸಾರ. ೯-೩ ಟೀಕು). ೬. ಲೋಹ ; ಖನಿಜ: ಧಾತುವಿನ ಪಾತ್ರೆಗಳನ್ನು ಬಳಸುವ ಮನೆಗಳು ತೀರ ವಿರಳವಾಗಿದ್ದವು (ಪ್ರೇಮಾಶ್. ೨೪೮) ; ಸುಟ್ಟ ಆದಿರು ಶುದ್ಧವಾಗಿ ಧಾತುವಾಗುತ್ತದೆ (ಕಲ್ಲೊಳ. ೦೮-೨): ಅರರೆ! ಧಾತು ಪ್ರಕರದರಸನೆನಿಸುವ ಕನಕ! ಅರಿಯೆಯಾ ನಿನಗೆಂತು ಬಂದುದೀ ದೇಹಂ ? (ಪಂಚಿಕೆ. ೧೬೭-೧೧) : ಭೂತ ಭವಿಷ್ಯಗಳ ಮಾತ್ತೇಳಿ ಒಲಿಸುವರು ಧಾತು ಬಂಗಾರ ಮಾಡುವರು (ಸಿದ್ಧಪು. ೨೨-೧೪). ೭. ಆತ್ಮ ; ಪರಮಾತ್ಮ ; ಪರಬ್ರಹ್ಮ. 'ಧಾತುಂಗೆಡು' ಪರಾ. ೮. ಕಣ್ಣು, ಕಿವಿ, ಮೂಗು, ನಾಲಗೆ ಮತ್ತು ಚರ್ಮಗಳೆಂಬ ಐದು ಜ್ಞಾನೇಂದ್ರಿಯ ಗಳು. ೯. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ (ಪಂಚಮಹಾ ಭೂತಗಳ) ಐದು ಗುಣಗಳು ; ಪಂಚ ತನ್ಮಾತ್ರೆಗಳು : ವಿಕಳನಾದೆನು ಪಂಚೇಂದ್ರಿಯ ಧಾತುವಿನಿಂದ ಮತಿಗೆಟ್ಟೆನು ಮನದ ವಿಕಾರದಿಂದ (ಬಸವ.೪೩). ೧೦. ಮೂಳೆ; ಎಲುಬು: "ಅಸ್ಥಿ, ಧಾತು, ಕೀಕಸಂ, ಕುಲ್ಯಂ- ಈ ೪ ಎಲ್ವು" (ಹಲಾಯು. ೧೦೪-೧೦). ೧೧. ಕಾವಿಬಣ್ಣದ ಕಲ್ಲು ; ಕೆಂಪು ಬಣ್ಣದ ಶಿಲೆ ; ಗೈರಿಕ : "ಗೈರಿಕಂ, ಧಾತುಃ-ಈ ೨ ಜಾದು" (ಹಲಾಯು. ೨೮-೦೬) ; "ಗೈರಿಕಂ ಧಾತುವೆನೆ ಜಾಜಕ್ಕು" (ಮಂಗರಾ. ೩೦-೩) ; ಧಾತು ರಕ್ತಾಶೋಕಕಿಸಲಯವಿಭಾಸಿಭಾಸುಸಟಾಕಲಾಪಮಲ್ಲಾಡೆ (ಪಂಚತಂ. ೩೫-೧೩) ; ದಾರುಣರಕ್ತವಕ್ತ್ರಮೃಗರಾಜಯುಗಕ್ಕೆ . . . ಸಧಾತು ಕುಭೃದ್ಯುಗಕ್ಕೆ ಸಿಂದೂರಿತ ಗಂಧಸಿಂಧುರಯುಗಕ್ಕೆಣೆಯೆಂಬಿನಮಣ್ಮಿ ಕಾದಿ ದರ್ ಕೌರವರಾಜನುಂ ಕುರುಕುಲಾಂತಕನುಂ ರುಧಿರಾಕ್ತಮೂರ್ತಿಗಳ್ (ಗದಾಯು. ೮-೧೭) ; ಮಹೋತ್ಪಲಮಿತ್ರನಿದಿರಿನಲಿ ಧಾತು ಧವಳಿಸಬಲ್ಲುದೇ (ತೊರರಾ. ೩-೭-೩೮). ೧೨. ಸ್ವಭಾವ ; ಸಹಜವಾಗಿರುವಿಕೆ ; ವಿಶಿಷ್ಟ ವಾದ ಗುಣ ; ಇರವು ; ಸ್ಥಿತಿ : ಪೂತುರೇ ರಣವೆಂಬುದೆಮ್ಮಯ ಧಾತು ಕಲಿ ಮೂದಲಿಸಿ ಕರೆದರೆ ರಾಜ್ಯಸಿರಿಯೇಕೆ (ಕುವ್ಯಾದ್ರೋ. ೦೫-೨೫) ; ಬನದ ಸೀತೆಯು ಧಾತನಟಿ ಹೋಗೆನೆ . . . ಲಂಕಾನಗರಿಗೈತಂದ (ತೊರರಾ. ೬-೪೩-೧) ; ಮಾತು ಮುನ್ನಿನವೋಲು ಬಳಕೆಯ ರೀತಿ ಮುನ್ನಿನವೋಲು ಚಿತ್ತದ ಧಾತು ಬೇಟಿಂದಾಯ್ತು (ನಿಭಾಗ. ೧೦-೭೨-೨೪) ; "ಇಳೆಯಾದಿ ಭೂತಂಗಳಲಿ ಪಂಚಲೋಹದಲಿ ಹಲವು ವರ್ಣದಲಿ ಸ್ವಭಾವದಲಿ ರಸ ಎಧಿರ ವೆಲುಮಾಂಸ ಮೊದಲಾದ ದೇಹದಲಿ ಧಾತುವೆಂಬಭಿಧಾನ ವರ್ತಿಸಿರ್ಕುಂ" (ಮಂಗರಾ. ೦೪೬-೩೪). ೧೩. ರೇತಸ್ಸು ; ಶುಕ್ಲ ; ವೀರ್ಯ : "ಧಾತು ರೇತಂ ಶುಕ್ಲಂ" (ವಸ್ತುಕೋ. ೭೨-೩೦) ; ರುಧಿರ . . . ಶುಕ್ಲಮೆಂಬ ಸಪ್ತ ಧಾತುಗಳ್ ಕ್ರಮದಿಂ ವರ್ಧಿಸಲಾ ಜೀವನಾದೊಡೆ ಆಯಾ ಧಾತುಮಯ ನಾಗಿ ಪುರುಷನ ಗರ್ಭದಲ್ಲಿ ಮಾಸತ್ರಯಮಿರ್ದು (ವಿವೇಕ. ೩೩೫). ೧೪. ಶಕ್ತಿ; ಸಾಮರ್ಥ್ಯ. 'ಧಾತುಗೆಡಿಸು', 'ಧಾತುಂಗೆಡು' ಪರಾ. ೧೫. ಧೈರ್ಯ. 'ಧಾತುಗುಂದು' ಪರಾ. ೧೬. ಅರುವತ್ತು ಸಂವತ್ಸರಗಳಲ್ಲಿ ಒಂದು; ಹತ್ತನೆಯ ಸಂವತ್ಸರ : ಮತ್ತಮಾ ವರುಷವೇ ಪ್ರಭವ . . . ಧಾತು . . . ಅಕ್ಷಯವೆಂದರುವತ್ತು ತೆಱನಾಗಿಹುದು (ವಿವೇಕ. ೩೨೦). ೧೭. ಎಚ್ಚರ; ಪ್ರಜ್ಞೆ : ಪ್ರಜ್ಞೆ ತಪ್ಪಿ ಮಂಚದ ಮೇಲೆ ಬಿದ್ದುಕೊಂಡಿದ್ದ ರಂಗಮ್ಮನಿಗೆ ಶೈತ್ಯೋಪಚಾರ ಮಾಡಿ ಧಾತು ಬರುವಂತೆ ಮಾಡಿದ್ದರಂತೆ (ಮಲೆಮ. ೯೬೭). ೧೮. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : ತುರಗ ಹಯಂ ಧಾತು . . . ಸ್ವರ ಸಾಗರ ಪರ್ವತಾದ್ರಿಯೇಟರ ನಾಮಂ (ವ್ಯವಹಾ. ೯-೭).

೧೯. [ವ್ಯಾಕ] ಕ್ರಿಯಾಪದದ ಮೂಲರೂಪ ; ಪ್ರತ್ಯಯರಹಿತವಾದ ರೂಪ : ಧಾತುಗನೇಕಾಕ್ಷರಕಾಖ್ಯಾತವಿಭಕ್ತಿಗಳ ಮೊದಲೊಳಿಸು ತಾನಕ್ಕುಂ ಹೇತು ಪ್ರಯೋಗದೊಳ್ (ಶಾಬ್ದಾವ. ೪೧೭) ; ಕ್ರಿಯೆಯರ್ಥದ ಮೂಲಂ ಪ್ರತ್ಯಯರಹಿತಂ ಧಾತು . . . ಧಾತುಗೆ ವಿಭಕ್ತಿಯಾಖ್ಯಾಗಿರ್ಕುಂ (ಶಮದ. ೨೧೭) ; ಸಂಧಿ, ಸಮಾಸ, ತದ್ಧಿತ, ಆಖ್ಯಾತ, ಧಾತು, ಅಪಭ್ರಂಶ, ಅವ್ಯಯಮೆಂಬಷ್ಟಪ್ರಕಾರವಂ ಪ್ರಪಂಚಿಸುವ ವ್ಯಾಕರಣದೋಷವಿಲ್ಲದೆ (ವಿವೇಕ. ೨೪೧) ; ಕ್ರಿಯೆಯನ್ನು ತಿಳಿಸುವ ಪ್ರಕೃತಿಯೇ ಧಾತು (ಮಧ್ಯಮ. ೭೧). ೨೦. [ಸಂಗೀತ] ಹಾಡಿನ ಸಾಹಿತ್ಯಕ್ಕೆ ಪೂರಕವಾಗಿ ಬರುವ ದ್ರವ್ಯ ; ☞ ಪ್ರಾಚೀನ ಸಂಗೀತಶಾಸ್ತ್ರದ ಪ್ರಕಾರ ಸ್ವರ, ಪದ, ಬಿರುದ, ಪಾಟ, ತೇನ (ತೇನಕ ಅಥವಾ ತೆನ್ನ), ತಾಳಗಳೆಂಬ ಆರು ದ್ರವ್ಯಗಳು. ಆಧುನಿಕ ಸಂಗೀತಶಾಸ್ತ್ರದ ಪ್ರಕಾರ ರಾಗ, ಗಮಕ, ವರ್ಣಮಟ್ಟುಗಳು. ಒಳ್ಳೆಯ ಸಂಗೀತದಲ್ಲಿ 'ಧಾತು' ಮತ್ತು 'ಮಾತು'ಗಳೆರಡೂ ಹೊಂದಿಕೊಂಡಿರುತ್ತವೆ. ಭರತಕೋಶದಲ್ಲಿ 'ಧಾತು' ಎಂಬುದು, (ವಾದ್ಯಗಳನ್ನು) ಬೇರೆ ಬೇರೆ ರೀತಿಯಿಂದ ಬಾರಿಸುವಾಗ ಅಥವಾ ನುಡಿಸುವಾಗ ಹೊರಡುವ ಬೇರೆ ಬೇರೆ ರೀತಿಯ ಸ್ವರವಿಶೇಷವೆಂದೂ ಇದರಲ್ಲಿ ವಿಸ್ತಾರ, ಆವಿದ್ಧ, ವ್ಯಂಜನ ಮತ್ತು ಕರಣಗಳೆಂಬ ನಾಲ್ಕು ಬಗೆಗಳಿವೆಯೆಂದೂ ವಿವರಿಸಲಾಗಿದೆ : ಕಳಪಿಕಪಂಚಮಾಂಚಿತ ಮೃದುಧ್ವನಿಯುಂ ಗೆಲೆವಂದು ಸುಸ್ವರಂ ಲಳಿ ಲುಳಿ ಧಾತು ರೀತಿ ಗತಿಯೋಜೆ ಬಜಾವಣೆ . . . ಬೆಡಂಗು ಭಂಗಿ ಸಂಗಳಿಸೆ ಸುಕಂಠೆ ಪಾಡಿ ಪುದಿದಳ್ ಮುದಮಂ ನರನಾಥಚಿತ್ತದೊಳ್ (ಕುಸುಮಾ. ೧-೩೭) ; ಜಾತಿ ಲಯ ತಾಳ ರೀತಿ ಗಮಕಂ ಯತ[ತಿ] ತೋಪು ಕಳಾಸ ಧಾತು ಮೇಣತಿರಸಭಾವಬಿಂಕಂ . . . ರುಚಿರಗಾನಸುತಾಳದ ಮಾರ್ಗಮೊಪ್ಪಮಂತತಿ ಚತುರತ್ವದಿಂದಭಿನಯಂಗಳನೂಹಿಸುತಾಡಿ ತೋಱಿದರ್ (ಚಿಕ್ಕದೇ. ೧೩೩) ; ಪೂರ್ಣಕಂಠದಿಂದ (ಧಾತು ಮತ್ತು ಮಾತು) ಮಹಾವೈದ್ಯನಾಥ ಅಯ್ಯರ್ ಅವರು ಹಾಡುತ್ತಿದ್ದರು (ಸಂಗೀತ. ೯). [ ಸಂ. ]

**ಧಾತುಕ್ಷಯ** (ನಾ). ೧. ದೇಹದೊಳಗಿನ ರಸಾದಿ ಧಾತುಗಳು ಕಡಮೆಯಾಗುವುದು. ೨. ವೀರ್ಯನಾಶ : ಧಾತುಕ್ಷಯದಿಂದ ರಕ್ತವು ಕ್ಷೀಣಿಸಿ ಹೊಟ್ಟೆಯೊಳಗಿನ ಅಂತ್ರಗಳು ದುರ್ಬಲವಾಗಿ ಅನ್ನವು ಚನ್ನಾಗಿ ಜೀರ್ಣವಾಗಲಾರದೆಂದು ವೈದ್ಯಶಾಸ್ತ್ರದ ಸಿದ್ಧಾಂತವಿರುವದು (ಬ್ರಹ್ಮಜೀ. ೨೨). ೩. ನಿತ್ರಾಣ ; ದೌರ್ಬಲ್ಯ ; ನಿಶ್ಶಕ್ತಿ : ಧಾತುಕ್ಷಯಂ ಮನಃಪ್ರತಿಘಾತಂ ಪುಟ್ಟಿಸುಗುಮೊಂದುಮಾಲಸ್ಯಮನಪ್ರೀತಿಯಿನಸಹ್ಯತೆಯಿನಭಿಜಾತೋಜ್ಜ್ವಲಂ ಭಣತೆಯಿಂದಮದನಱಿಗಱಿವಂ (ಶೃಂಗಾರ. ೨-೨೯). [ ಧಾತು + ಕ್ಷಯ ]

**ಧಾತುಕ್ಷೀಣತೆ** (ನಾ). = ಧಾತುಕ್ಷಯ ೨ : ವೀರ್ಯವು ನೀರಿನಂತೆ ತೆಳ್ಳಗಾಗುವದು . . . ಧಾತುಕ್ಷೀಣತೆಯು ಹೆಚ್ಚಾಗುವುದು (ಬ್ರಹ್ಮಜೀ. ೨೦). [ ಧಾತು + ಕ್ಷೀಣತೆ ]

**ಧಾತುಗತ** (ಗು). ಮೂಳೆಯೊಳಗೆ ಸೇರಿಕೊಂಡಿರುವ ; ಅಸ್ಥಿಗತವಾದ : ಸರ್ವವಿಷಮಜ್ವರ, ಏಕಾಹಿಕ, ದ್ವ್ಯಾಹಿಕ, ತ್ರ್ಯಾಹಿಕ, ಚಾತುರ್ಥಿಕ, ಸನ್ನಿಪಾತ ಧಾತುಗತಶ್ವಾಸಹರಂ (ವಿಷ್ಣುವಿ. ೧೭). [ ಧಾತು + ಗತ$_2$ ]

**ಧಾತುಗರ್ಭ** (ನಾ). [ಬೌದ್ಧ] ಬುದ್ಧನ ಅವಶೇಷಗಳನ್ನು ಕಾಯ್ದಿಟ್ಟಿರುವ ಕಟ್ಟಡ ; ಚೈತ್ಯಾಲಯ ; ಡಾಗೋಬ ; ಪಗೋಡ : ಈ ರಾಜ್ಯಗಳಿದ್ದ ಪ್ರದೇಶದಲ್ಲಿ ಭಾರತೀಯ ಶಿಲ್ಪಗಳೂ, ಬೌದ್ಧಸ್ತೂಪಗಳೂ, ಧಾತುಗರ್ಭಗಳೂ ವಿಶೇಷವಾಗಿ ದೊರೆತಿವೆ (ಭಾರದ. ೩೪೧) ; 'ಪಾಗನ್'ನ ರಾಜ . . . ಬೌದ್ಧಧರ್ಮವನ್ನು ಸ್ವೀಕರಿಸಿ ದೇಶದಲ್ಲೆಲ್ಲ ಧಾತುಗರ್ಭಗಳನ್ನು ಕಟ್ಟಿಸಿ . . . ಬರ್ಮಾ ಇತಿಹಾಸದಲ್ಲಿ ಸುವರ್ಣಯುಗವನ್ನು ಆರಂಭಿಸಿದ (ಭಾರದ. ೩೪೧). [ ಧಾತು + ಗರ್ಭ ]

**ಧಾತುಗುಂದು** (ಕ್ರಿ). ೧. ಶಕ್ತಿಗುಂದು; ದುರ್ಬಲವಾಗು ; ನಿರ್ವಿಣ್ಣವಾಗು : ಘಾತಿಯಲಿ . . . ಧಾತುಗುಂದಿದನಳ್ಳಿಱಿದವಳ್ಳಿಗಳು (ಕುಮಾವ್ಯಾ. ೧೪-೧೧) ; ಅಂಗಜನವುಪಟಳದಿ ಕಡುನೊಂದು ಧಾತುಗುಂದಿಹಳಾ ತರುಣಿ (ನಳಚ. ೨-೪೭) ; ಮಸಗಿದುದು ಕೆಂದೂಳಿ ಗಗನವ ಮುಸುಕಿದರೆ ರವಿ ಧಾತುಗುಂದಿ ಪಸರಿಸಿತು ಎಣ್ದೆಸೆಯಾ (ರಾಮಚ. ೯೮) ; ಅಡಿಗಡಿಗೆ ಧಾತುಗುಂದುವ ಧೈರ್ಯಮೆಸೆಯಲೆಸೆದರ್ ಶಿವನ ಬೆಂಕೊಂಡು ಸುರಸತಿಯರು (ಚೆಬಪು. ೧೯-೩೨) ; ದ್ಯೂತಕೇಳಿಯೊಳಜ್ಞಾತವಾಸದೊಳಂದು ಧಾತುಗುಂದದೆ ಪಾಂಚಾಲಿ ಓತು ಪಾಂಡವರನೊಲಿಸಿ ಹದಿಬದೆಯರ ಬೈತಲೆವಣಿಯೆನಿಸಿದಳು (ಹದಿಬ. ೩-೪೮). ೨. ಧೈರ್ಯಗುಂದು; ಕಂಗೆಡು: ಈತನಿನ್ನೇನ ತಂದಪನೆಂದು ಚಿತ್ತದಲಿ ಧಾ[ಪಾಠಾಂ. ದಾ]ತುಗುಂದದಿರಿ ಮುಱುಗದಿರಿ (ಸೋಮಚ. ೨-೧೨೨) ; ಧಾತುಗುಂದಿದೆ ಪತಿಯ ಕಾಣದೆ ಭೀತಿಯುಲಿ ನಿಮ್ಮಡಿಯ ಕಂಡೆನು (ನಳಚ. ೫-೩೭). [ ಧಾತು + ಕುಂದು$_1$ ]

**ಧಾತುಗೆಡಿಸು** (ಕ್ರಿ). ಶಕ್ತಿಗುಂದಿಸು ; ದುರ್ಬಲಗೊಳಿಸು; ಸತ್ವಗುಂದಿಸು: ರಜನೀಚರರ ಥಟ್ಟಣೆ ಧಾತುಗೆಡಿಸಿತು ದಿಟ್ಟರುಬ್ಬಟೆಯ (ಕುಮಾವ್ಯಾದ್ರೋ. ೧೫-೨೩) ; ಈತನೆಮ್ಮುವ ತನ್ನ ಮೂಗಿನ ಮಾತರಿಶ್ವನ ಬಿಱುಬಿನಲಿ ನೆಱೆ ಧಾತುಗೆಡಿಸಿದನು (ತೊರರಾ. ೫-೮-೪೩). ೨. ಧೈರ್ಯಗುಂದಿಸು ; ಹೆದರಿಸು : ತನ್ನನೀ ಪರಿ ಧಾತುಗೆಡಿಸುವುದುಚಿತವೇ (ತೊರರಾ. ೩-೧೧-೪೧). [ ಧಾತುಗೆಡು + – ಇಸು$_3$ ]

**ಧಾತುಗೆಡು** (ಕ್ರಿ). ೧. ಶಕ್ತಿಗುಂದು ; ದುರ್ಬಲವಾಗು : ಬಳಲು ; ಆಯಾಸಗೊಳ್ಳು : ಧೃತಿಗೆಟ್ಟು ಮನ ಧಾತುಗೆಟ್ಟರೆ ಅಪ್ಪುದು ತಪ್ಪದು (ಬಸವ. ೭೮೭) ; ಸತಿ ಮಾಯಾಮೋಹವಾಚ್ಛಾದಿಸೆ ನೆಱೆ ಧೃತಿಗೆಟ್ಟಂ ವೃಥಾ ಧಾತುಗೆಟ್ಟಂ (ರಕ್ಷಾಶ. ೫೩); ಈರೈದುಪವಾಸದಿಂ ಧಾ[ಪಾಠಾಂ. ದಾ]ತುಗೆಟ್ಟಱಿಯದೀ ವ್ಯಾಘ್ರಪುರವಂ ಪೊಗಲು ವ್ಯಾಘ್ರಪುರವಾದುದೆಮಗೆ (ಸೋಮಚ. ೨-೮೮) ; ಯಕ್ಷನಿಟ್ಟ ನಿಪಾತತೃಣಮಂ ನೆಗಪಲಾಱದೆ ಧಾತುಗೆಟ್ಟರು ವಿಷ್ಣುಧಾತರು ತಾವೆ ಘನವೆಂದು (ಬಸಪು. ೫೪-೪೭) ; ಘಾಸಿಯಾದರು ಘಾಯವಡೆದು ವಿಳಾಸವಳಿದುದು ರಿಪುಭಟನ ಗೆಲುವಾಸೆ ಬೀತುದು ಧಾತುಗೆಟ್ಟುದು ಸರಳ ಸಾರದಲಿ (ಕುಮಾವ್ಯಾದ್ರೋ. ೬-೨೦) ; ಟೆಬ್ಬರಿಸುವನೆ ಕಲಿಭೀಮನುಬ್ಬಟೆಯರಿಗಳಾಹವಧೀರರಾದರೆ ಧಾತುಗೆಡುವವನೆ (ಕುಮಾವ್ಯಾಕ. ೧೨-೨೭) ; ನೆಗ್ಗಿದುದು ಧರೆ ಭಟರ ಘಾಯದ ಲಗ್ಗೆಗಮರೇಶ್ವರರು ಸರಕನು ಹುಗ್ಗಿದರು . . . ದಿಗ್ಗಜಂಗಳು ಧಾತುಗೆಟ್ಟವು (ನಿಭಾಗ. ೧೦-೪೯-೫೭) ; ಆ ತುರಂಗಮವ ಬಿಡು ಧಾತುಗೆಡಬೇಡೆನುತ್ತಾತನಂ ನರನೆಚ್ಚನಂ (ಜೈಮಿಭಾ. ೧೩-೬). ೨. ಧೈರ್ಯಗುಂದು ; ಕಂಗೆಡು ; ತಬ್ಬಿಬ್ಬಾಗು : ಓತು ನಡೆಗೊಂಡು ಕಂಗೆಟ್ಟು ಮಗುಳೆಯ್ತಂದು ಭೀತಿಯಿಂದೆಱಗಿ ಕಿಂಕರವಾರ್ಣಮಂ ತೋಱೆ ಧಾತುಗೆಡಬೇಡೆಂದು ಮಲ್ಲಿಕಾರ್ಜುನನ ಸುಖಿಸದನಕ್ಕೆ ಕೊಂಡೊಯ್ದನು (ಸಿದ್ಧರಾ. ೪-೪೭): ಏನು ಮಾಡಲಯ್ಯ . . . ಧಾತುಗೆಟ್ಟು ಬೆಳ್ಳಿ ಬಂಗಾರದಲಿ ಮೆಱೆವ ಧೂರ್ತೆಯರ ನೋಡುವೀ ಚಕ್ಷುರಿಂದ್ರಿಯಕೆ (ಕನಕ. ೮೪-೧). ೩. ಎಚ್ಚರತಪ್ಪು ; ಪ್ರಜ್ಞೆತಪ್ಪು ; ನಿಶ್ಚೇಷ್ಟಿತನಾಗು: ಧಾತುಗೆಟ್ಟನು ಭೀಮ ಮುಸುಕಿತು ಭೀತಿ ನಮ್ಮೆಲ್ಲರನು (ಕುಮಾವ್ಯಾಗ. ೭-೪೫). ೪. ಕಳೆಗುಂದು ; ನಿಸ್ತೇಜವಾಗು : ಕಂಠಮಾಲೆಯೊಳ್ವಾಸಿನಾಯಕರತ್ನಮಂ ತೆಗೆದು ಬಿಸುಟಂತೆ ಧಾತುಗೆಟ್ಟುದೆ ತಮ್ಮ ಬಲಂ (ಜೈಮಿಭಾ. ೧೩-೫೮). ೫. ಆಕಾರವನ್ನು ಕಳೆದುಕೊಳ್ಳು ; ರೂಪುಗೆಡು : ಪವನಬಲ ಪರಿದಳಿತ ಕದಳೀನಿವಹದಲಿ ನಭ ಧಾತುಗೆಟ್ಟುದು ರವಿಗೆ ಕಾಪಥವಾಯ್ತು (ಕುಮಾವ್ಯಾದ್ರೋ. ೩-೧೧.) ೬. ಆತ್ಮಸ್ವರೂಪವನ್ನು ಕಳೆದುಕೊಳ್ಳು : ಹಸಿದು ತಾರಕೂಟವ ಕೇಳಹೋದರೆ ಕೂಟವೆದ್ದು ಬಡಿದರು ಸಾಕಾರ ಮೊದಲು ಧಾತುಗೆಟ್ಟೆಯಲ್ಲಾ ಪರಶಿವಾ (ಸರ್ವವ. ೬-೧೨೧). [ ಧಾತು + ಕೆಡು$_1$ ]

**ಧಾತುಗೊಳ್** (ಕ್ರಿ). ಎಚ್ಚರಗೊಳ್ಳು ; ಚೇತನಗೊಳ್ಳು : ಮೊದಲ್ ಚೇತನಂಗೊಂಡೆಟ್ಟ ಲಕ್ಷ್ಮಣನ ಶೈತ್ಯೋಪಚಾರದಿಂ ರಾಘವಂ ಧಾತು ಗೊಂಡರೆಗಳಿಗೆ ಪರ್ಯಂತಂ ಮೋನವಿರ್ದು (ಅದ್ಭುತ. ೩೪-೨೪). [ ಧಾತು + ಕೊಳ್$_1$ ]

**ಧಾತುಜ್ಞ** (ನಾ). ಚಿನ್ನ ಮೊದಲಾದ ಖನಿಜಗಳ ಪರೀಕ್ಷೆಯಲ್ಲಿ ಬಲ್ಲಿದ : ಧಾತುಜ್ಞರ್ ಸಂತತ ತನುಧಾತುಜ್ಞರ್ ಭೂರಿ ಸಾರಧಾತುಜ್ಞರ್ ಸದ್ಧಾತುಜ್ಞರ್ ನೆರೆದಿರ್ದರ್ ಕೌತುಕ ಹಮ್ಮೀರ ವೀರರಾಜನ ಸಭೆಯೊಳ್ (ಹಮ್ಮೀರ. ೨-೧೦೩). [ ಸಂ. ]

**ಧಾತುತಪ್ಪು** (ಕ್ರಿ). ಎಚ್ಚರ ತಪ್ಪು ; ಪ್ರಜ್ಞೆ ತಪ್ಪು : ಸಿಡಿಲು ಬಡದ್ಹಾಂಗಾಯ್ತು. ಧಾತುತಪ್ಪಿ ಬಿದ್ದಿದ್ದೆ (ಕಾನೂರು. ೧೩೩). [ ಧಾತು + ತಪ್ಪು$_1$ ]

**ಧಾತುನಷ್ಟ** (ನಾ). ೧. ವೀರ್ಯನಾಶ : ಎಲೆ ಬಂಗಾರವನ್ನು . . . ಮೂಱು ತೂಕ ಪರ್ಯಂತರ ಶರೀರಧಾತುನಷ್ಟಕ್ಕೆ ಜೇನುತುಪ್ಪದಲ್ಲಿ ಗುಳಿಗೆಯಾಗಿ ಕೊಡುವುದು (ವಿಷ್ಣವಿ. ४೦). ೨. ಚೈತನ್ಯಗುಂದುವಿಕೆ ; ಬಲಹೀನತೆ. [ ಧಾತು + ನಷ್ಟ ]

**ಧಾತುನಾಶ** (ನಾ). = ಧಾತುನಷ್ಟ ೨ : ವಾತದೋಷದಿಂದ . . . ಧಾತು ನಾಶದಿಂದ ಹುಟ್ಟಿದ ತೃಷ್ಣೆ ಐದು ಪ್ರಕಾರ (ವೈದ್ಯಸಾ. I. ೧೮೫). [ ಧಾತು + ನಾಶ ]

**ಧಾತುನಾಶನ** (ನಾ). ೧. ದೇಹದ ಸಪ್ತಧಾತುಗಳನ್ನು ನಾಶಮಾಡುವಂಥದು. ೨. = ಧಾತುನಷ್ಟ ೨. ೩. ಹುಳಿ ಅಂಬಲಿ,-ಗಂಜಿ. [ ಧಾತು + ನಾಶನ ]

**ಧಾತುಪ** (ನಾ). ದೇಹದೊಳಗಿನ ಸಪ್ತಧಾತುಗಳಲ್ಲಿ ಪ್ರಮುಖವಾದುದು,- ಮೊದಲನೆಯದು ; ರಸ ; ಅನ್ನರಸ ; ಅನ್ನಕ್ಷೀರ. [ ಸಂ. ]

**ಧಾತುಪಾಠ** (ನಾ). [ವ್ಯಾಕ] ಕ್ರಿಯಾಪದದ ಮೂಲರೂಪಗಳು ಮತ್ತು ಅವುಗಳ ಅರ್ಥಗಳನ್ನು ತಿಳಿಸುವ ಭಾಗ : ಪ್ರತಿವ್ಯಾಕರಣಕ್ಕೂ ಒಂದು ಧಾತುಪಾಠವು ಸೇರಿದೆಯೆಂದು ಹೇಳುವುದು ಸಂಪ್ರದಾಯ (ಕಾಶಕ. VII, ೩೬೮). [ ಧಾತು + ಪಾಠ ]

**ಧಾತುಪುಷ್ಟಿ** (ನಾ). ೧. ದೇಹದ ಸಪ್ತಧಾತುಗಳ ಬೆಳವಣಿಗೆ. ೨. ವೀರ್ಯವೃದ್ಧಿ. ೩. ದೈಹಿಕ ಸಾಮರ್ಥ್ಯ,-ಶಕ್ತಿ. [ ಧಾತು + ಪುಷ್ಟಿ ]

**ಧಾತುಪುಷ್ಪಿಕೆ** (ನಾ). = ಧಾತಕಿ. [ಸಂ. ಧಾತುಪುಷ್ಪಿಕಾ ]

**ಧಾತುಭಾವ** (ನಾ). (?) : ಈ ತೆಱದ ಕರುಣಾಂತರಂಗವ್ರಾತದೊಳ್ಬಳಿವಿಡಿದು ಬಳಲುವ ಧಾತುಭಾವಂ ವಿಕರಿಸದುಯೆಂದಿಹುದು ಕೃಷ್ಣೋಕ್ತಿ (ವಿವೇಶ. ೯-೫೧). [ ಧಾತು + ಭಾವ ]

**ಧಾತುಮಲ**, ಧಾತುಮಳ (ನಾ). ೧. ಇಂದ್ರಿಯಗಳಿಂದ ಹುಟ್ಟುವ ಕೊಳೆ ; ಬೆವರು ಮೊದಲಾದುವು : ಧಾತುಮಲಾದಿ ದೋಷಸಹಿತಂ ಪೊಱಗುಗ್ರದುರಂತ ಕರ್ಮ ಸಂಘಾತವಿಭಾಗ ಮತ್ತೊಳಗೆ ಬೋಧದ ಭಾಗಮದತ್ತ (ಜೀವಸಂ. ೧೨೮-೧೮) ; ಮೆಯ್ಯ ಪೊರೆಗಳಿಂತು ಮೂಱುಭಾಗಂ ಅಲ್ಲಿ ಪೊಱಗಣ ಭಾಗಂ ಧಾತುಮಲಾದಿ ದೋಷಸಹಿತಂ (ಜೀವಸಂ. ೧೨೮-೧೮ ವ). ೨. ಸೀಸ. **ಧಾತುಮಳ** : ೧. ಧಾತುಮಳ[ಪಾಠಾಂ. ಲ] ದೋಷರಹಿತಂ ವೀತನಖಶ್ಮಶ್ರುಕೇಶಲೋಮಂ . . . ಮನೋಹರರೂಪಂ (ಆದಿಪು. ೬-೩೮). [ ಸಂ. ]

**ಧಾತುಮಳ** 'ಧಾತುಮಲ' ನೋ.

**ಧಾತುಮಾಕ್ಷಿಕ** (ನಾ). ಗಂಧಕ ಹಾಗು ಕಬ್ಬಿಣಗಳ ಸಂಯೋಗದಿಂದಾದ ರಾಸಾಯನಿಕ ದ್ರವ್ಯ : "ಧಾತುಮಾಕ್ಷಿಕ-ಮಾಕ್ಷಿಕಭೇದ" (ಓಷಧಿ. ೫೦). [ ಸಂ. ]

**ಧಾತುಮಾಕ್ಷಿಕಚೂರ್ಣ** (ನಾ). ಒಂದು ಬಗೆಯ ಔಷಧಿ ಚೂರ್ಣ : ಧಾತುಮಾಕ್ಷಿಕಚೂರ್ಣಂ:- ಕಬ್ಬಿಣದ ಪುಡಿ, ಎಳ್ಳು, ಶುಂಠಿ, ಹಿಪ್ಪಲಿ, ಮೆಣಸು . . . ಎಂಬಿವಂ ಸಮಾನಂಕೊಂಡು ಇವೆಲ್ಲರ ಸಮಾನ ಧಾತುಮಾಕ್ಷಿಕಚೂರ್ಣಂ ಇದಂ ಜೇನುತುಪ್ಪದೊಳು ಕಲಸಿ ಗುಳಿಗೆಯಂ ಮಾಡಿ ಬಳಿಕ ಹಾಲಲ್ಲಿ ಕುಡಿಯಲು ಹಲವುಕಾಲದಿಂ ಕೂಡಿಬಂದ ಪಾಂಡುರೋಗ ಹರವೆಂದು ಪೊಗಳಲ್ಪಟ್ಟಿರುವುದು (ವಿಷ್ಣವಿ. ೩೪). [ ಧಾತುಮಾಕ್ಷಿಕ + ಚೂರ್ಣ$_2$ ]

**ಧಾತುರಸ** (ನಾ). ೧. ಕರಗಿದ ಲೋಹ ; ಲೋಹರಸ : ಖನಿಜಕ್ಕೆ ಉಷ್ಣತೆ ತಗಲಿ ಅದರಿಂದ ಧಾತುರಸ ಹೊರಟದ್ದರಿಂದ ಜನರಿಗೆ ಅದು ತಿಳಿದಿರಬಹುದು (ಮುಂಬಯಿ. ४-೯೧). ೨. ಕೆಂಪುವರ್ಣದ ರಸ : ವದನಸರೋಜದೀ ಪರಿಮಳಕ್ಕೆಱಗಿರ್ದಳಿಯೆಂಬ ಚೆಲ್ವನೊಲ್ದೊದವಿದ ಕುಂತಳಂ . . . ಅರುಣಾಧರ ಧಾತುರಸಾನುಲೇಪನಂ ಪುದಿದ ಕಪೋಲ ಭಿತ್ತಿ ಮೆಱೆಗುಂ ಪದಪಿಂ ಮೃಗಶಾಬನೇತ್ರೆಯಾ (ಮಲ್ಲಿಕಾ. ೬-೭೬). [ ಧಾತು + ರಸ ]

**ಧಾತುರೇಣು** (ನಾ). ಕಾವಿಯ ಕಲ್ಲಿನ ಧೂಳು ; ಗೈರಿಕ ಧಾತುವಿನ ಧೂಳು : ಬಳಸಿದುದರ್ಕವಾಜಿ ಖುರಘಟ್ಟಿತಮಾದಪರಾದ್ರಿಯಿಂದಮುಚ್ಚಳಿಸಿದ ಧಾತುರೇಣುವೆನೆ . . . ಸಂಜೆಯ ಕೆಂಪುಲೋಕಮಂ (ಚಂದ್ರಪ್ರ. ೮-४). [ ಧಾತು + ರೇಣು ]

**ಧಾತುಲಕ್ಷಣ** (ನಾ). ೧. ವಾತ, ಪಿತ್ತ, ಕಫಾದಿಗಳ ಲಕ್ಷಣ. ೨. ವೇದಗಳಲ್ಲಿ ಬರುವ ಕೆಲವು ಕ್ರಿಯಾಪ್ರಕೃತಿಗಳನ್ನು ಕುರಿತ ಒಂದು ಗ್ರಂಥ. [ ಧಾತು + ಲಕ್ಷಣ ]

**ಧಾತುವಾದ** (ನಾ). ೧. ಅದುರಿನಿಂದ ಲೋಹವನ್ನು ತೆಗೆಯುವ ವಿದ್ಯೆ ; ಖನಿಜಶಾಸ್ತ್ರ : ಧಾತುವಾದೋಪಾಧ್ಯಾಯನ ಕಯ್ಗೆವಂದ ಸುವರ್ಣಪಾಷಾಣಮೆಂತು ಪಿಂಡೀಬದ್ಧದಹನತಾಪನತಾಡನಕ್ರಿಯೆಗಳಿಂ ಶುದ್ಧಲೋಹಮಕ್ಕುಮಂತೆ ಭವ್ಯನುಂ ಮನುಷ್ಯಭವಕ್ಕೆ ವಂದಲ್ಲಿ . . . ಶ್ರಾವಕನಪ್ಪುದು (ಜೀವಸಂ. ४-೯ ವ). ೨. ಕ್ಷುದ್ರಲೋಹಗಳಿಂದ ಚಿನ್ನವನ್ನು ಸಿದ್ಧಪಡಿಸುವ ವಿದ್ಯೆ : "ರಸವಾದ" (ನಾನಾರ. ೬. ೧೪) : ದಿವಸಾಧೀಶನೊಳೊಂದಿನಿಂದ ಶಶಿಯಿಂ ಯಂತ್ರಂಗಳಂ ಬಲ್ಲನ್ಯೆಂದವನಿಂದಂ ನಿಪುಣಂ ದಿನೇಶಸುತನಿಂದಂ ಧಾತುವಾದಪ್ರಿಯಂ . . . ಎನಿಕುಂ (ಜಾತತಿ. ೧೫-೧). [ ಧಾತು + ವಾದ$_2$ ]

**ಧಾತುವಿಜ್ಞಾನ** (ನಾ). ಖನಿಜಶಾಸ್ತ್ರ. [ ಧಾತು + ವಿಜ್ಞಾನ ]

**ಧಾತುವೃದ್ಧಿ** (ನಾ). ವೀರ್ಯವೃದ್ಧಿ ; ಶುಕ್ಲವೃದ್ಧಿ : ಶರೀರಕಾಂತಿ, ಕಂಠಶುದ್ಧಿ, ಅಗ್ನಿಪಟುತ್ವ, ಧಾತುವೃದ್ಧಿ ಸಹ ಉಂಟಾಗುವುದು (ಸಕಮ್ಮ. ೨೧೪). [ ಧಾತು + ವೃದ್ಧಿ ]

**ಧಾತುವೈರಿ** (ನಾ). ಗಂಧಕ. [ ಸಂ. ಧಾತು ವೈರಿನ್ ]

**ಧಾತೂವಾದ** (ನಾ). = ಧಾತುವಾದ ೨ : ನಾರು ಬೇರಂಜನಂ ಘುಟಿಕೆ ಮೂಲಿಕೆ ಬಿಲದ್ವಾರ ರಸಸಿದ್ಧಿ ಧಾತೂವಾದ ವಶ್ಯ ಕುಟಿಲಾರಾಧನಂ . . . ಪರಕಾಯಪ್ರವೇಶಮಂ ಬಯಸುವ ವಿಕಾರಿಸಿದ್ಧರು ಸರಿಯೆ ಸಿದ್ಧರಾಮಂಗೆ (ಸಿದ್ಧರಾ. ೧-೯). [ ☞ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ ]

**ಧಾತ್ರ** (ನಾ). ೧. ನಿರ್ಮಾಪಕ ; ಸಂರಕ್ಷಕ. ೨. ಆಧಾರನಾದವನು ; ಆಕರನಾದವನು. ೩. ಬ್ರಹ್ಮ. ೪. ವಿಷ್ಣು. ೫. ಆತ್ಮ ; ಪರಬ್ರಹ್ಮ. ೬. ಬ್ರಹ್ಮಸೃಷ್ಟಿಯ ನಂತರ ಉಳಿದ ಜಗತ್ತನ್ನು ಸೃಷ್ಟಿಸಿದ ಸಪ್ತಋಷಿಗಳು. ೭. (ವಿವಾಹಿತ)ಸ್ತ್ರೀಯ ಉಪಪತಿ ; ವಿಂಡ. ೮. ನಲವತ್ತೊಂಬತ್ತು ವಾಯುಗಳಲ್ಲಿ ಒಂದು. ೯. ಕ್ರಮಪಡಿಸುವವನು ; ವ್ಯವಸ್ಥಿತವಾಗಿ ಇಡುವವನು. ೧೦. ವಿಧಿ ; ಅದೃಷ್ಟ.

೧೧. [ಛಂದ] ಬ್ರಹ್ಮಗಣದ ಒಂದು ವಿಧ ; ಒಂದುಂ ಗುರುಂ ಒಂದುಂ ಲಘುವಿನಿಂದ ಕೂಡಿದ ಗಣ (—U) : ಬ್ರಹ್ಮಗಣಮೆಂತೆಂದೊಡೆ :- ಬ್ರಹ್ಮಂ ದ್ರುಹಿಣಂ ಧಾತೃ ಸುರಪ (ಛಂದೋಂಬು. ೫-೨೪೦ ವ). ೧೨. [ವೀಶೈ] ರುದ್ರನ ನೂರುಂ ಹೆಸರುಂಗಳಲ್ಲಿ ಒಂದು : ಕಪಾಲೀಶ . . . ಧಾತೃ ವಿಧಾತೃ . . . ಎಂಬ ದಶರುದ್ರರುಂ ಬ್ರಹ್ಮಾಂಡದೂರ್ಧ್ವ ದೇಶದಲ್ಲಿಹರು . . . ಸರ್ವಜ್ಞರೆನಿಸಿರ್ಪರು ವಿವೇಕ. ೩೩೩). [ ಸಂ. ]

ಧಾತೃಪುತ್ರ (ನಾ). ಬ್ರಹ್ಮನ ಮಗ ; ನಾರದ : ಇರೆ ಸರಸಿಜೋದರನಾದರದಿಂದಂ ಧಾತೃಪುತ್ರನಂ ಬೆಸಗೊಂಡಂ (ನೇಮಿಪು. ೧೧-೬೩).

[ ಧಾತೃ + ಪುತ್ರ ]

ಧಾತೃಸೃಷ್ಟಿ (ನಾ). ಬ್ರಹ್ಮನ ಸೃಷ್ಟಿ : ಆವುದು ಧಾತೃಸೃಷ್ಟಿಗೆ ಮೊದಲ್ ಹುತಹವ್ಯಮನಾಂಪುದಾವುದಿನ್ನಾವುದು ಹೋತೃ ಶಬ್ದಗುಣಮಾವುದವಾವುವು ಕಾಲಕರ್ತೃಗಳ್ (ಶಾಕುಂತ. ೧-೧). [ ಧಾತೃ + ಸೃಷ್ಟಿ ]

ಧಾತ್ರ (ನಾ). ಬ್ರಹ್ಮ; ಸೃಷ್ಟಿಕರ್ತ: "ಅರಲಿಚ ನಾಲ್ಮೊಗ ನುಡಿವೆಣ್ಣಿಟಿಯ . . . ಬಿದಿಯು ಬೊಮ್ಮಂ ಪರಿಕಿಸೆ ಸಲೆ ಬೇದಬಿಜ್ಜೆಗನುಮೆನೆ ಧಾತ್ರಂ" (ಕವಿಕಾಂ. ೩೯) ; ಏಂ ಜಾಣನೋ ಧಾತ್ರಂ ರೂಪನಿಷ್ಪಾದನವಿಧಿಯೊಳ್ (ಆದಿಪು. ೩-೯೧) ; ಉಜ್ವಳಾಂಗಿಯಂ ಧವಳಗುಣದೆ ನಿರ್ಮಿಸಿದನಾಗವೇಟ್ಕುಂ ಧಾತ್ರಂ [ಪಾಠಾಂ. ಪ್ರೋಕ್ತಂ] (ಕಾದಂಪೂ. ೬೬೧) ; ನಮ್ಮ ಕೊಳ್ಕೊಡೆಗೆ ತಕ್ಕೆಡೆಯುಂ ಸಮಕಟ್ಟಿ ಕೊಟ್ಟನೇಂ ಧನ್ಯನೊ ಧಾತ್ರಂ (ಪಂರಾಮಾ. ೩-೭) ; ಧಾತ್ರಪಂಚಮಶಿರಪಾತ್ರ ಪನ್ನಗಯಜ್ಞಸೂತ್ರ (ಭೈರವೇ. ೧-೪).

[ ಸಂ. ಧಾತೃ ]

ಧಾತ್ರಿ (ನಾ). ೧. ದಾದಿ ; ಸಾಕುತಾಯಿ ; ಉಪಮಾತೆ : "ಧಾತ್ರೀ, ಉಪಮಾತಾ—ಈ ೨ ದಾದಿ" (ಹಲಾಯು. ೮೪-೩೫೩) ; "ಓತು ಸಾಕಿದ ಧಾತ್ರಿ ದಾದಿಯೆನಿಸಿಕ್ಕುಂ" (ಮಂಗರಾ. ೯೩-೧೩) ; ಧಾತ್ರಿಯೊಳನ್ಯರ ತೇಜೋಮಾತ್ರಮನಾಂ ಸಲಿಸೆನೆಂಬ ತೆಱದಿಂ ಪೊಯ್ಯಲ್ ಧಾತ್ರಿಯ ಕಯ್ಯಿಂ ನಿಮಿರ್ದಂ ಕ್ಷತ್ರಶಿಖಾಮಣಿ ಮಣಿಪ್ರದೀಪಾಂಕುರಮಂ (ಪಂರಾಮಾ. ೩-೧೩೫) ; ವರಣಮಾಲಿಕೆಯನ್ನು ಕೈಯಲ್ಲಿ ಹಿಡಿದು ಧಾತ್ರೀಸಮೇತಳಾಗಿ ಸಭಾಮಂಟಪಕ್ಕೆ ಬಂದು ನಿಂತಳು (ಆರ್ಯಕೀ. ೪). ೨. ತಾಯಿ ; ಜನನಿ. ೩. ನೆಲ; ಭೂಮಿ; ಇಳೆ : "ಸ್ಥಿರೆ ಧರಣಿ ಧಾತ್ರಿ ಮೇದಿನಿ ಧರಿತ್ರಿ ಧರೆ . . . ಭೂಮಿ ಭೂ ಗೋತ್ರೆ ನೆಲಂ" (ವಸುಕೋ. ೩೬-೧) ; ಮಾರಿ ಪಸವಿಟ್ಟಿ ಬಱಂ ಪೆಱವುಂ ಭಯಂಗಳಾಕುಲಿತೆಗಳಿಲ್ಲ ಧಾತ್ರಿ ಪುಸಿಪೋಗದು . . . ಬಣ್ಣಿಸಲಾನಱಿಯೆಂ ವಿದೇಹಮಂ (ಆದಿಪು. ೧-೫೩) ; ಧಾತ್ರಿಯುಮನೀ ಹುತಾಶನಪುತ್ರಿಯುಮಂ ಬಱಿದೆ ಸೋಲ್ತನಲ್ಲಂಜೂದಿಂ (ಗದಾಯು. ೧-೬೦) ; ಕಾಳೆಗದೊಳ್ತಡಂಗಡಿದು ಮುಂದಣ ಥಟ್ಟನವುಂಕಿ . . . ಮೆಟ್ಟಿ ತಿವಿದಾಳ್ತನವಚ್ಚರಿಯಾಯ್ತು ಧಾತ್ರಿಯೊಳ್ (ಎಕ. VI, ತರೀಕೆ. ೪೫-೩೫: 1196 ; ಹರಿಶ್ಚಂದ್ರಭೂನಾಥನೊಳಗಸತ್ಯವನು ಕಾಣಿಸಲು ಬಲ್ಲರು ಧಾತ್ರಿಯೊಳು ಮುನ್ನ ಹುಟ್ಟಿದವರಿಲ್ಲ (ಹಚಕಾ. ೩-೩೦) ; ನಿಂದ ಭರಕ್ಕೆ ಧಾತ್ರಿ ನಡುಗುತ್ತಿರೆ ಮೆಟ್ಟಲಯಕ್ಕೆ ದಿಗ್ಗಜಂ ಪಿಂದಡಿಯಿಟ್ಟು ಬೆರ್ಚುತಿರೆ (ಅನಂಪು. ೫-೯೮) ; ಪುತ್ರ ಕಳತ್ರ ಪರಿಗ್ರಹ ಗಾತ್ರ ಧನೈಶ್ವರ್ಯಮೆಂಬಿವಾರ್ಗಮನಿತ್ಯಂ ಧಾತ್ರಿಯೊಳ್ (ಪುಷ್ಪಪು. ೧೩-೩೭) ; ಸುಯೋಧನ ನರಸಿಯಲ್ಲಾ ಧಾತ್ರಿ (ಕುವ್ಯಾಕ. ೩-೫೪). ೪. ಭೂಲೋಕದ ಜನ ; ಜನತೆ : ತುಱುಗೆಮೆ ನೀಳ್ದ ಪುರ್ವು ನಿಡುಗಣ್ . . . ಎಂದು ಧಾತ್ರಿ ಪೊಗೞ್ಗಂ ಪೊಗೞ್ವನ್ನರೆ ಕುಂತಿ ಮಾದ್ರಿಗಳ್ (ಪಂಪಭಾ. ೧-೧೦೮) ; ಧಾತ್ರಿ ಪೞಿವಂತು ತನ್ನಂ ಧಾತ್ರೀಜನಮಡಸಿ ಪಿಡಿದು ಪರಿಭವಿಸುವುದುಂ ಮಿತ್ರಂ ಶೆಲಭಕ್ಕನೆ ಮುನಿ ನೇತ್ರೇಂದ್ರಿಯಲೋಭದಿಂದಮಂದಘಮಟ್ಟಂ (ಪಂರಾಮಾ. ೪-೮೫). ೫. ನೆಲ್ಲಿಗಿಡ ಮತ್ತು ಅದರ ಕಾಯಿ ; ಆಮಲಕ: "ಧಾತ್ರೀ, ಆಮಳಕೀ, ಶಿವಾ—ಈ ೩ ನೆಲ್ಲಿ" (ಹಲಾಯು. ೧೦೧-೪೬೪).

೬. [ಛಂದ] ಅಕ್ಷರಗಣಗಳಲ್ಲಿ ಒಂದುಂ; ಮೂರು ಗುರುಂಗಳಿರುವ ಗಣ; ಮಗಣ (— — —) : ಗುರು ಮೂಱಾಗಿರೆ ಧಾತ್ರಿ ಮುಂತೆರಡು ಬಿಣ್ಪಂ ತೋಯುಂ (ಛಂದೋಂಬು. ೧-೩೫). [ ಸಂ. ಧಾತ್ರೀ ]

ಧಾತ್ರಿಕೆ (ನಾ). ೧.=ಧಾತ್ರಿ ೧: ಅನಂತರಮುಮರ ಧಾತ್ರಿಕಾನಿಕಾಯಮುಮಂ . . . ಜಗತ್ಪತಿ ಪಿತೃಗಳುಮಂ ಬೀೞ್ಕೊಂಡು (ನೇಮಿಪು. ೮-೧೬೭ ವ) ; ಉತ್ಸವೋನ್ಮತ್ತ ಧಾತ್ರಿಕಾ [ಪಾಠಾಂ. ಧಾತ್ರೇಯಿಕಾ] ನಿಕಾಯವಿಕೀರ್ಣ ಪಿಷ್ಟಾತಕ ಚೂರ್ಣ ಸಂಜಾತಪಿಂಜರವರ್ಣಪಲಿತಶ್ಮಶ್ರುಕೂರ್ಚೋಪವಿದ್ಧ ವೃದ್ಧಕಂಚುಕಿಸಂಚಯಮುಮಂ (ಚಂದ್ರಪು. ೩-೯೭ ವ). ೨. = ಧಾತ್ರಿ ೫.

[ ಸಂ. ಧಾತ್ರಿಕಾ ]

ಧಾತ್ರಿಜ (ನಾ). ೧. ಭೂಮಿಯ ಮಗ. ೨. ಅಂಗಾರಕ. ೩. ನರಕಾಸುರ. 'ಧಾತ್ರಿಜಾಂತಕ' ಪರಾ. ೪. ಮರ ; ವೃಕ್ಷ. [ <ಸಂ. ಧಾತ್ರೀಜ ]

ಧಾತ್ರಿಜಾಂತಕ (ನಾ). ನರಕಾಸುರನನ್ನು ಕೊಂದವನು; ಕೃಷ್ಣ ; ವಿಷ್ಣು: ಧಾತ್ರಿಜಾಂತಕ ಕಪಟನಾಟಕಸೂತ್ರ ಪರಮಪವಿತ್ರ . . . ರಕ್ಷಿಸು ನಮ್ಮನನವರತ (ಹರಿಸಾ. ೯). [ ಧಾತ್ರಿಜ +ಅಂತಕ ]

ಧಾತ್ರಿಜೆ (ನಾ). ದಾದಿಯ ಮಗಳು · ಕನ್ನಿಕೆ ಧಾತ್ರಿಜೆಯಂತಿರದೆ ಕುಮಾರಿಕೆಯ ಮನದ ಪರಿಚಾರಿಕೆಯುಂ ರಥಮಂ ನಡೆಯಿಸೆಂಬುದುಂ (ಶಾಂತಿಪು. ೫-೧೧೧). ೨. ಭೂಮಿಯ ಮಗಳು ; ಸೀತೆ. [ <ಸಂ. ಧಾತ್ರೀಜಾ ]

ಧಾತ್ರಿಧರ (ನಾ). ಬೆಟ್ಟ ; ಪರ್ವತ : ಲಾಕ್ಷ ಕೃಶಾನು ಧಾತ್ರಿಧರ ಕಾಷ್ಠಗಳೆಂಬಿವು ಕೀಲಕಾಹ್ವಯಂ (ನಾನಾರ. ೧೦೩). [ <ಸಂ. ಧಾತ್ರೀಧರ ]

ಧಾತ್ರಿಪ (ನಾ). ಭೂಮಿಯ ಒಡೆಯ,-ರಾಜ ; ಭೂಲೋಕದ ಒಡೆಯ: ಧಾತ್ರಿಪ ಫಣಿಪರ್ ಖೇಚರಪ ತ್ರಿದಶಪರೆಯ್ದೆ ವಿಶ್ವಕರ್ಮಂ ಬರೆದಂ ಚಿತ್ರಪಟಮಂ ದಲೆನೆ ಭುವನತ್ರಿತಯಂ ಕಾಣಲಾದುದಭವನ ಸಭೆಯೊಳ್ (ಶಾಂತಿಪು. ೯-೬೯). [ ಸಂ. ಧಾತ್ರೀಪ ]

ಧಾತ್ರಿಪತಿ (ನಾ). ಭೂಮಿಯ ಒಡೆಯ ; ರಾಜ ; ದೊರೆ : ವಿಷಧಿಪರೀತ ಧಾತ್ರಿಪತಿ ವಾರಿಧಿಯಿಂ ಮಹಿಮಾಳಯಂ ಗಜದ್ವಿಷದಿನಘೋರ ಭೂರಿಭುಜನನ್ನನನಿಂ ಪಡೆವೈ ತನೂದರೀ (ನೇಮಿಪು. ೭-೧೦೮) ; ಧನವೆ ಸಾಧನವರಸಿಗಾ ಧನವನಿತು ದೊರಕೊಳಲಿದಿರದಾರ್ಗೆ ಧಾತ್ರಿಪತಿಗಳಲಿ (ಕುವ್ಯಾಸ. ೧-೭೦).

[ ಸಂ. ಧಾತ್ರೀಪತಿ ]

ಧಾತ್ರಿಪಾಲ (ನಾ). ಭೂಮಿಯನ್ನು ಕಾಪಾಡುವವನು ; ರಾಜ ; ದೊರೆ : ಧಾತ್ರಿಪಾಲನೇ ಕೇಳು ನಿನ್ನಯಾ ಮಿತ್ರನೋರ್ವನೂ ಕಾದಿ ರಣದೊಳು ಪೃಥ್ವಿಗೊರಗಿಹ (ರತ್ನಾಕ. ೩೦). [ ಸಂ. ಧಾತ್ರೀಪಾಲ ]

ಧಾತ್ರಿವಲ್ಲಭ (ನಾ). ಭೂಮಿಯ ಒಡೆಯ; ರಾಜ; ದೊರೆ: ಭವದನುಜಕ್ಷಯಮಂ ಧಾತ್ರಿವಲ್ಲಭಂ ಕಂಡು ಸಂಧಿಮಾಡಲ್ ಶೋಕಾನಿವಹಂ ಬಗೆವಂ ಧರ್ಮಜನವನಾ ಕೃತಕಪ್ರತಿಜ್ಞೆಯಂ ಕೇಳ್ದಱಿಯಾ (ಗದಾಯು. ೪-೬).

[ ಸಂ. ಧಾತ್ರೀವಲ್ಲಭ ]

ಧಾತ್ರಿಸರ (ನಾ). (?) : ಲಲಿತ ಶ್ರೀಮುದ್ರೆ ಊರ್ಧ್ವತಿಲಕ ತಪ್ತಲಾಂಛನ ಹೊಳೆವ ದ್ವಾದಶನಾಮ ತುಲಸಿ ದಂಡೆ ಕಳಧೌತಮಿರ್ಾಂಗಾರಾ ನಳಿನಾಕ್ಷ ಧಾತ್ರಿಸರ ಗಳದೊಳೊಪ್ಪ ಶ್ಲಾಘ್ಯ ಬಲು ವೈರಾಗ್ಯಭಾಗ್ಯದ (ಪ್ರಸಕೀ. ೪೪-೩). "ನೆಲ್ಲೀಕಾಯಿ ಸರ" (ಪ್ರಸಕೀ. ಟಿಪ್ಪಣಿ).

[ ಧಾತ್ರಿ + ಸರ೫ ; ℗ ಇದು ನಳಿನಾಕ್ಷದಾ ತ್ರಿಸರ ಎಂದು ಇರುಬಹುದೆ ? ]

ಧಾತ್ರೀಜನ (ನಾ). ೧. ದಾದಿಯರು: ನಿರ್ವರ್ತಿತ ತ್ರಿಭುವನಪತಿಭವೋತ್ಸವನಾಗಿ ಸಮವಯಾದಿ ವಿಜಯವಯಸ್ಯರುಮನಮರ ಧಾತ್ರೀಜನಮುಮಂ . . . ನಿಯೋಜಿಸಿ (ಶಾಂತಿಪು. ೧೧-೮೦ ವ) ; ಮಾತೃಗಣಪೂಜಾವಿಧಾನ ತತ್ಪರರಾದ ಧಾತ್ರೀಜನಂಗಳೊಳಂ (ಕಾದಂಪೂ. ೪೧೩). ೨. ಭೂಲೋಕದ ಜನ : ಪರಿವಾರ ಸಮುದ್ಧರಣ ಧಾತ್ರೀಜನರಕ್ಷಾಮಣಿ ಸಾಹಸವಿದ್ಯಾಧರಿ

ಸಕಳಕಳಾವತಿ ಶ್ರೀಮತ್ತ್ರಿಭುವನಮಲ್ಲ ವಿಶಾಳವಕ್ಷಸ್ಥಳ [ನಿವಾಸಿನಿ]ಯರಪ್ಪ ಪಟ್ಟಮಹಾದೇವಿ (ಸೌಇಇ. XX, ೬೦-೯; 1094). ೧, ೨: ಗೋತ್ರಾರಿ ಬೆಸಸೆ ನೆಗಟ್ದಪಗೋತ್ರಾರಿಯ ಶೈಶವೋಚಿತಕ್ರಿಯೆಗೆಲ್ಲಂ ಧಾತ್ರೀಜನಮಾಗಿಸಿದಂ ಧಾತ್ರೀಜನಚಾರುಚತುರದೇವೀಜನಮಂ (ಪುಷ್ಪಪು. ೧೨-೩೪).

[ ಸಂ. ]

**ಧಾತ್ರೀಜಾತ** (ನಾ). ಗಿಡ ; ಮರ : ಒಂದನೊಂದಟಿಗೂಳೊತ್ತಿ ಪಾಱಲು ಮುಂದೆ ಪೇರುರಿಯೊಗೆದು ಬೇಯಲು ಮಂದವಾಗಿ ನೆಗಳ್ದ ಧಾತ್ರೀಜಾತ ಜಾತಿಗಳ (ಬಸವು. ೧೯-೩೭). [ ಸಂ. ]

**ಧಾತ್ರೀತನಯ** (ನಾ). ಮಂಗಳಗ್ರಹ ; ಅಂಗಾರಕ ; ಕುಜ : ಇರೆ ಧಾತ್ರೀ ತನಯಂ ದಿನೇಶಗೃಹದೊಳ್ ಸ್ವಲ್ಪಾಂಗನಾಸೂನು ದುರ್ಗರತಂ ಕ್ಲೇಶ ಸಹಿಷ್ಣು ನಿಸ್ಸನೆನಿಕುಂ (ಜಾತತಿ. ೧೭-೨೦). [ ಸಂ. ]

**ಧಾತ್ರೀತನಯೆ** (ನಾ). ಭೂಮಿಯ ಮಗಳು ; ಸೀತೆ.

[ ಸಂ. ಧಾತ್ರೀತನಯಾ ]

**ಧಾತ್ರೀತಲ, ಧಾತ್ರೀತಳ** (ನಾ). ಭೂತಳ ; ಭೂಲೋಕ : ಆ ವಧು ಬೆರ್ಚಿ ತದ್ವಸನಮಂ ಧಾತ್ರೀತಲಕ್ಕಿಕ್ಕಿ ಪಾದನಿಘರ್ಷಕ್ಕೊಳಗಾಗಿಸುತ್ತುಮಿರೆ ಕಂಡು (ಮಹಾನೇ. ೩-೧೩೦) ; ಇನ್ನೆಲ್ಲಿಯದು ಸದುಭಕ್ತಿ ಬೀತುದಲ್ಲಾ ಹರಹರಾ ಧಾತ್ರೀತಲ[ಪಾಠಾಂ. ಳ]ದೊಳೆಂದೆನುತ ಭಕ್ತವ್ರಾತವುಮ್ಮಳಿಸುತ್ತ (ಬಸವು. ೩೭-೨೨). **ಧಾತ್ರೀತಳ** : ಶ್ರುತದೇವೀವಚನಾಮೃತಂ ಶ್ರುತಕಥಾಳಾಪಂ . . . ಮ[ಹೋಮ್ಮರ್ಗಲ್ಲಾ]ಸಿ ವಾರಾಶಿವಾರಿತಧಾತ್ರೀತಳಗೀತಿ ನಿರ್ಮಳ ಯಶಂಗಾರೂಢಸರ್ವಜ್ಞ ಭೂಪತಿಗೊಲ್ದಾಗಳುಮಾಗೆ ಮಂಗಳ ಮಹಾ ಶ್ರೀಯುಂ ಜಯಶ್ರೀಯುಮಂ (ಪಂಪಭಾ. ೧೪-೬೨) ; ಬಳಾಚ್ಯುತರ್ ನಡೆದುಬಂದಂತೆಯ್ದಿದರ್ ತಾಭರೂಧರಮಂ ಸಂಗತತುಂಗಶೃಂಗ ಕುಳಮಂ ಧಾತ್ರೀತಳಖ್ಯಾತಮಂ (ನೇಮಿಪು. ೭-೭೮). [ ಸಂ. ]

**ಧಾತ್ರೀತಳ** 'ಧಾತ್ರೀತಲ' ನೋ.

**ಧಾತ್ರೀಧರ** (ನಾ). ಬೆಟ್ಟ ; ಪರ್ವತ : ಹರಹಾಸಕ್ಕೊಂದೆರಟು ದಿಕ್ಕರಿ ರದನಕ್ಕೆರಟ್ಟೊಮ್ಮೆಟು . . . ಕೈಲಾಸಧಾತ್ರೀಧರಕೆಂಟೊಂಬತ್ತು ಮೇಲಾಗಿರೆ ಪಸರಿಸಿದಂ ಕೀರ್ತಿಯಂ ನಾಗವರ್ಮಂ (ಛಂದೋಂಬು. ೧-೨೩) ; ಪರಮ ಸ್ಯಾದ್ವಾದ ವಿದ್ಯಾನಿಶಿತಕುಲಿಶದಿಂ ತೀವ್ರಮಿಥ್ಯಾತ್ವಧಾತ್ರೀಧರಮಂ ಮುಂ ನುಚ್ಚುನೂಱಪ್ಪಿನೆಗಮೊಡೆದು. . . ವಿಖ್ಯಾತಿವೆತ್ತೀ ಧರೆಗಾಚಾರ್ಯಾಕಳಂಕ ವ್ರತಿಯ ಚರಣಮಂ ವಂದಿಪೆಂ ಭಕ್ತಿಯಿಂದಂ (ಬಾಧಪು. ೧-೧೯).

[ ಸಂ. ]

**ಧಾತ್ರೀಧವ** (ನಾ). ದೊರೆ ; ರಾಜ : ನಿಜಸಾಮರ್ತ್ಯದಿಂದಾದ್ಯ ಧಾತ್ರೀ ಧವರಂ ತಾಂ ತನ್ನೊಳುಜ್ಜೀವಿಸಿ ಪೆಸರ್ವಡೆದಂ ವೀರಬಲ್ಲಾಳದೇವಂ (ಎಕ. V, ಅರಸೀ. ೧೨೭-೨೨ ; 1185); ಶಿವಸಮಯಿ ನಸುನಗತ ಧಾತ್ರೀಧವನ ಮುಖವಂ ನೋಡಿ ತಾನಿಂತೆಂದು ಬೆಸಸಿದನು (ಬಸವು. ೫೦-೩೪). [ ಸಂ. ]

**ಧಾತ್ರೀಪತಿ** (ನಾ). = ಧಾತ್ರೀಧವ : ಧಾತ್ರೀಪತಿಗಜಿಪಿ ಮರುತ್ಸುತ್ರಂ ಬಟಿಯಟ್ಟಿ ಕರೆಸಿ ತೋಱಲ್ . . . ದ್ರೌಪದಿಯಂ (ಗದಾಯು. ೮-೪೪).

[ ಸಂ. ]

**ಧಾತ್ರೀಪುತ್ರಿ** (ನಾ). ೧. ದಾದಿಯ ಮಗಳು: ಧಾತ್ರೀಪುತ್ರಿಯ ಮಾತನೆಯ್ದೆ ಕೇಳ್ದಾತನಂ ನೋಡಿ (ಶಾಂತಿಪು. ೫-೧೦೯ ವ). ೨. ಭೂಮಿಯ ಮಗಳು ; ಸೀತೆ. [ ಸಂ. ಧಾತ್ರೀಪುತ್ರೀ ]

**ಧಾತ್ರೀಫಲ, ಧಾತ್ರೀಫಳ** (ನಾ). ನೆಲ್ಲಿಗಿಡ ಮತ್ತು ಅದರ ಕಾಯಿ ; ಆಮಲಕ : ಹೊಳಿಕೌಮರ, ಧಾತ್ರೀಫಲ, ನೀರುಗಣಿಗಲು (ಪ್ರಾಶಿಗಿ. ೧೨-೨೦೦). **ಧಾತ್ರೀಫಳ** : ತ್ರಿದ್ವ್ಯೇಕದಿನಾಂತರಿತ ಬದರಾಕ್ಷ ಧಾತ್ರೀ ಫಳ[ಪಾಠಾಂ. ಬದರಾಕ್ಷಾಮಲಕ]ಪ್ರಮಾಣಾಹಾರಂಗಳುಮಪ್ಪ ಮಿಥುನಂ ಗಳ್ಗೆ ಸಂಭೋಗ್ಯಮಾಗಿ ಸಲೆ (ಆದಿಪು. ೬-೪೮ ವ). [ ಸಂ. ]

**ಧಾತ್ರೀಫಳ** 'ಧಾತ್ರೀಫಲ' ನೋ.

**ಧಾತ್ರೀರಜ** (ನಾ). ಭೂಮಿಯ ಧೂಳಂ : ಎತ್ತೆತ್ತಲುಂ . . . ಮುಸುಕಿತ್ತೀ ಜಗಮೆಲ್ಲಮಂ ಬಳಪದ ಪ್ರಕ್ಷುಣ್ಣ ಧಾತ್ರೀರಜಂ (ವರ್ಧಮಾ. ೪-೩೪).

[ ಸಂ. ಧಾತ್ರೀರಜಸ್ ]

**ಧಾತ್ರೀರುಹ** (ನಾ). ಮರ ; ಗಿಡ : ವಿಯುತ್ತಳದಿಂ ತಮಾಲಧಾತ್ರೀರುಹ ಮೂಲಭೂತಲಕೆ ಪರ್ವನಂ . . . ಚಾರಣಯೋಗಿಯುಂ ನೃಪತಿ ಕಂಡಂ (ಚಂದ್ರಪು. ೩-೬೯); ಮನದಿಂ ಬೇಗಂ ಮುಟ್ಟಿದಂ . . . ಪವನನಂದನನನಿಂದ್ಯ ಗುಣನೆಸೆವಶೋಕಧಾತ್ರೀರುಹಮಂ (ಕಾವ್ಯಾವ. ೧೦೬) : (ಶಮದ. ೧೦೬ ಪ್ರಯೋ ನೋ). [ ಸಂ. ]

**ಧಾತ್ರೀವಲ್ಲಭ** (ನಾ). ಭೂಮಿಯ ಒಡೆಯಂ ; ರಾಜ ; ದೊರೆ : ಧಾತ್ರೀ ವಲ್ಲಭಂನಿಜ ರ ಾಜಭವನದೊಳಂ ರಾಜಧಾನಿಯೊಳಮೆಡೆವಱಿಯದೆ . . . ಪಿರಿದುಮೊಸಗೆಯಂ ಮಾಡಿಸುತ್ತುಂ (ಬಾಧಪು. ೬-೪೪ ವ). [ ಸಂ. ]

**ಧಾತ್ರೀಶ** (ನಾ). ಭೂಮಿಯ ಒಡೆಯ ; ರಾಜ ; ದೊರೆ : ಧಾತ್ರೀಶನ ಸಾಂದ್ರಮನಸ್ಪೂತ್ರದೊಳಾ ಸತಿಯ ಗುಣಗಣೋದ್ಗಮತತಿಯಂ ಚಿತ್ರ ವಿಧದಿಂ ತೊಡರ್ಚಿದ ಧಾತ್ರಂ ಮುಂ ಮಾಲೆಗಾಱರೊಡನಾಡಿದನೋ (ಚಂದ್ರಪು. ೩-೨೮); ಏತ್ರೀಶ ಕೇಳ್ಕೌತುಕವನೇಳುದಿನಮಹೋರಾತ್ರಿಗಳೊಳಂ ಬಿಡದೆ ಕಾದಿದರ್ (ಜೈಮಿಭಾ. ೨೫-೩೮). [ ಸಂ. (ಧಾತ್ರೀ + ಈಶ) ]

**ಧಾತ್ರೀಶಾಜ್ಞೆ** (ನಾ). ಅರಸನ ಅಪ್ಪಣೆ ; ರಾಜಾಜ್ಞೆ : ಧಾತ್ರೀಶಾಜ್ಞೆಯ ನುಣ್ಮೆದತ್ತು ಪೊಟಲೊಳ್ ಪಾಪಪ್ರತೀಪದ್ವಿಪೈಕತ್ರಾಸಪ್ರದಘುಣ್ಯಾ ಕೇಸರಿರವಂ (ಚಂದ್ರಪು. ೨-೧೦೯). [ ಧಾತ್ರೀಶ + ಆಜ್ಞೆ ]

**ಧಾತ್ರೀಸುತೆ** (ನಾ). ದಾದಿಯ ಮಗಳು : ಅ[ಜ್ಜ]ರನಾಪ್ತರನೞಕಿಯ [ಬೆಜ್ಜ]ರಮೊಡನಾಡಿ ಬೆಳೆದ ಧಾತ್ರೀಸುತೆಯಂ ಗು[ಜ್ಜ]ರನಡಪದ ಡವಕೆಯ ಮಜ್ಜನದ ವಿಳಾಸವತಿಯರಂ . . . ಮಗಳ್ಗೆ ಬ ಟಿ ವ ಟಿ ಗೊ ಟ್ಟಂ (ವರ್ಧಮಾ. ೩-೯೮). [ ಸಂ. ಧಾತ್ರೀಸುತಾ ]

**ಧಾತ್ರೀಹವನ** (ನಾ). ಕಾರ್ತೀಕಮಾಸದಲ್ಲಿ ತೋಟ ಮುಂತಾದ ವನ ಪ್ರದೇಶದಲ್ಲಿ ನೆಲ್ಲಿಯ ಮರದ ಬುಡದಲ್ಲಿ ವಿಧ್ಯುಕ್ತವಾಗಿ ನಡೆಸುವ ಒಂದು ಹೋಮ ; P ಈ ಹೋಮವಾದ ಮೇಲೆ ವನಭೋಜನ ನಡೆಸುವ ಪದ್ಧತಿ ಸಂಪ್ರದಾಯವಾಗಿದೆ. [ ಸಂ. ]

**ಧಾತ್ರೇಯಿ** (ನಾ). ದಾದಿಯ ಮಗಳು ; ಉಪಮಾತೆಯ ಮಗಳು : "ಉಪಮಾತೃ ಧಾತ್ರಿ ತತ್ಪುತ್ರಿ ಪೇೞ್ ಧಾತ್ರೇಯಿಯುಂ ಭುಜಿಷ್ಯೆಯು ಮಕ್ಕುಂ" (ಪಸು.ಕೋ. ೫೭-೨೫). [ ಸಂ. ಧಾತ್ರೇಯೀ ]

**ಧಾತ್ರೇಯಿಕ** (ನಾ). ದಾದಿಯ ಮಗ ; ಉಪಮಾತೆಯ ಮಗ : ದಾದಿಯ ಮಗಂ ಧಾತ್ರೇಯಿಕಂ (ಶಾಮಶಾ. ೮-೨೦೬). [ ಸಂ. ]

**ಧಾತ್ವಂಗ** (ನಾ). [ಸಂಗೀತ] ಸಂಗೀತದ ಅಂಗ,-ಭಾಗ ; P "ಧಾತು ವೆಂದರೆ ಪ್ರಬಂಧದ ಅವಯವ. ಅದು ನಾಲ್ಕು ವಿಧ; ಉದ್ಗ್ರಾಹವು ಮೊದಲನೆಯದು ; ನಂತರ ಮೇಲಾಪಕ ಧ್ರುವಗಳು, ಮತ್ತು ಆಭೋಗ ; ಇವುಗಳ ಲಕ್ಷಣವನ್ನು ಕ್ರಮವಾಗಿ ಹೇಳಲಾಗುವುದು. ಪ್ರಬಂಧದ ಮೊದಲನೆಯ ಭಾಗವು ಉದ್ಗ್ರಾಹವೆಂದು ಪ್ರಸಿದ್ಧ ವಾಗಿದೆ-ಮೊದಲಿನಲ್ಲಿ ಗೀತವನ್ನು ಎತ್ತಿಕೊಳ್ಳುತ್ತದೆ-ಎಂದರೆ ಇದ ರಿಂದ ಗೀತವು ಪ್ರಾರಂಭಿಸಲ್ಪಡುತ್ತದೆ ಎಂಬುದರಿಂದ (ಈ ಹೆಸರು ಬಂದಿದೆ). ಉದ್ಗ್ರಾಹ ಧ್ರುವಗಳೆರಡನ್ನೂ ಪರಸ್ಪರವಾಗಿ ಒಟ್ಟು ಗೂಡಿಸುವ ಕಾರಣದಿಂದ ಪ್ರಬಂಧದ ಎರಡನೆಯ ಭಾಗವು ಮೇಲಾಪಕವೆಂದು ಹೇಳಿದೆ. ಶಾಶ್ವತವಾಗಿ ಇರುವುದರಿಂದ (ಇದ್ದೇ ತೀರಬೇಕಾದುದರಿಂದ) ಮೂರನೆಯ ಅವಯವವು ಧ್ರುವವೆಂಬ ಸಂಜ್ಞೆಯನ್ನು ಪಡೆದಿದೆ. ಪ್ರಬಂಧದ ಆಭೋಗವನ್ನು ಎಂದರೆ ಪರಿಪೂರ್ತಿಯನ್ನು ಮಾಡುವುದರಿಂದ ಪ್ರಬಂಧದ ನಾಲ್ಕನೆಯ

ಅವಯಂವವು ಆಭೋಗವೆಂದಂ ಸ್ಮೃತವಾಗಿದೆ" (ಚತುಷ್ಟ. ೮೧) : ಉದ್ಗ್ರಾಹ ಧ್ರುವ ಮೇಲಾಪಕ ಆಭೋಗಂಗಳೆಂಬ ನಾಲ್ಕುಂ ಧಾತ್ವಂಗಂಗಳಿಂ (ಚಂದ್ರಪ. ೧೫-೭೩ ವ). [ ಧಾತು + ಅಂಗ ]

**ಧಾತ್ವರ್ಥ** (ನಾ). [ವ್ಯಾಕ] ಧಾತುವಿನ ಅಭಿಪ್ರಾಯಂ, – ಆಶಯಂ : ಪ್ರಕೃತಿಗಳಂ ಧಾತ್ವರ್ಥದ ವಿಕಲ್ಪದಿಂದಱಿದು ಸಮಱಿಕೊಳ್ವುದು ಬಹುರೂಪಕಮನದಂ ಪೇಟಲಾಕ್ಕ ಸಕಳಂ ವಾಕ್ಪತಿಯುಮಾಱಿಂ (ಕಾವ್ಯಾವ. ೪೩೦). [ ಧಾತು + ಅರ್ಥ ]

**ಧಾನುಷ್ಕ**(ನಾ). ಬಿಲ್ಲುಂಬಾಣಗಳಿಂದ ಯುದ್ಧಮಾಡುವವನು; ಬಿಲ್ಗಾರ: ಆಚೂಲಸ್ವಸ್ತಿಕಬದ್ಧವಿಚಿತ್ರವಸ್ತ್ರದ್ವಯೋದ್ದಾಮ ಧಾನುಷ್ಕಂ (ಆದಿಪು. ೧೫-೪೫ ವ) : ಅತ್ಯುತ್ಕೃಷ್ಟವಂಶಂಗಳನ್ವಿತಸದ್ದುರ್ಮಗುಣಂಗಳಸ್ಸ್ರತತಿಗಳ್ ನಿಸ್ತ್ರಿಂಶ ಧಾನುಷ್ಕಸಂಗತಿಯಿಂದಂ ಪರಮರ್ಮಭೇದಿಗಳೆನಲ್ ತೀಕ್ಷ್ಣಂಗಳುಂ ಮಾಂಸಲೋಹಿತವಕ್ತ್ರಂಗಳುಮಾದುವೆನ್ನರುಮನೇಂ ದುಸ್ಸಂಗಮೇಗೆಯ್ಯದೋ (ಪಂರಾಮಾ. ೧೫-೫೦). [ ಸಂ. ]

**ಧಾನುಷ್ಕತೆ** (ನಾ). ಬಿಲ್ಲುಗಾರಿಕೆ ; ಬಿಲ್ವಿದ್ಯೆಯ ಜಾಣ್ಮೆ ; ಬಿಲ್ಪಲ್ಮೆ : ನಿನ್ನ ಧಾನುಷ್ಕತೆಯಿನಾಂ ಜಗದಿ ಜಸವಡೆವೆ! ಉದ್ದಂಡ ಬಾಳಣುಗ! (ಹಬ್ಬಿರ. ೮-೨೦). [ ಸಂ. ಧಾನುಷ್ಕತಾ ]

**ಧಾನುಷ್ಕಬಲ, ಧಾನುಷ್ಕಬಳ** (ನಾ). ಬಿಲ್ಗಾರರ ಪಡೆ : ಅನೇಕ ವರ್ಣಾಕೀರ್ಣತ್ರಿಸರವೇಣಿಕಾಗಾಢಗ್ರಥಿತತ್ರಪುಷಕೋಶ . . . ಪ್ರಾಪ್ತಖಡ್ಗಧೇನುಕಮಾಂಧ್ರಧಾನುಷ್ಕಬಲಂ[ಪಾಠಾಂ. ೪೦] (ಆದಿಪು. ೧೫-೪೫ ವ). **ಧಾನುಷ್ಕಬಳ** : ಎಡಱ ಕಡಲೊಳ್ ಮಹಾರ್ಣವಂ . . . ತಾಪವೋಲ್ ಭರದಿಂದಾಗಡೆ ತಡೆಯದೆ ಕಡುಗಾಯ್ಪುಂಡಡುರ್ತು ಭೋರೆಂದು ತಾಗೆ ಧಾನುಷ್ಕಬಳಂ (ನೇಮಿಪು. ೧೩-೨೦೭). [ ಧಾನುಷ್ಕ + ಬಲ ]

**ಧಾನುಷ್ಕಬಳ** 'ಧಾನುಷ್ಕಬಲ' ನೋ.

**ಧಾನುಷ್ಕಾನೀಕ** (ನಾ).=ಧಾನುಷ್ಕಬಲ : ಧಾನುಷ್ಕಾನೀಕದೊಳಾ ಧಾನುಷ್ಕಾನೀಕವಶ್ವದಟಮಶ್ವದೊಳ್ . . . ತಾಗಿದುವಾಗಳ್ (ನೇಮಿಪು. ೧೧-೧೫೦). [ ಧಾನುಷ್ಕ + ಅನೀಕ ]

**ಧಾನುಷ್ಮತೆ** (ನಾ).=ಧಾನುಷ್ಕತೆ : ಸವನಕರ್ಮದಲೀತ ದಾಷ್ಯಂತಿವೊಲು ಧಾನುಷ್ಮತೆಯಲುಗ್ರಾಹವದಲರ್ಜುನ ಪವನನಂದನರಬ್ಬರಿಗೆ ಸಮನು (ನಿಭಾಗ. ೧-೮-೯). [ ಸಂ. ಧನುಷ್ಮತ್ತಾ ]

**ಧಾನೆ** (ನಾ). ೧. ಹುರಿದ ಯವೆ ಅಥವಾ ಅಕ್ಕಿ ; ಕಾಚಿಕ್ಕಿ : "ಧಾನಾ ಯೆಂಬುದು ಉಮ್ಮುಗೆ" (ಹಲಾಯು. ೯೭-೪೩೧) ; "ಪರಿಭೃಷ್ಟಂ ಯವಮದಱಿಗೆ ಧಾನಾನಾಮಂ" (ವಸ್ತುಕೋ. ೯೩-೧೧). ೨. ಹುರಿದ ಧಾನ್ಯದ ಹಿಟ್ಟು ; ಹುರಿಹಿಟ್ಟು. ೩. ಕಾಳು ; ಧಾನ್ಯ. ೪. ಕೊತ್ತುಂಬರಿಬೀಜ ; ಧನಿಯಂ. [ ಸಂ. ಧಾನಾ ]

**ಧಾನ್ಯ** (ನಾ). ೧. ಕಾಳು ; ದವಸ : ಉಳ್ಳ ಪ್ರತ್ಯಯಕ್ಕೆ–ಧನಮುಳ್ಳಂ, ಧಾನ್ಯಮುಳ್ಳಂ, ಗುಣಮುಳ್ಳಂ (ಶಮದ. ೨೦೭ ಪ್ರಯೋ) : ಶಮಿಾ, ಶಿಂಬಿ –ಧಾನ್ಯದ ತೊಗಟು (ನಾಚಿರಾ. ೬) ; ಕದಿರೆಂದು ಧಾನ್ಯದ ತೆನೆಗೆ ನಾಮವಕ್ಕುಂ (ಶಬ್ದಮಂ. ೭೭) : ಇನಕುಲಾನ್ವಯತಿಲಕ ಚಿತ್ರೈಸೇನಗೆ ಸವಿಯಹುದಿನ್ನು ಧಾನ್ಯದ ತನುವನೀಕ್ಷಣ ಬೇಕು ದೇವರು ತರಿಸಿ ನೀವೆಂದಾ (ರಾಮಾಚ. ೧೧-೩೧) ; ದೇಶ ಕೋಸಲವಿಹುದು ಧನ ಧಾನ್ಯ ಜನ ತುಂಬಿ ಸರಯೂನದಿಯ ಮೇಲೆ (ಶ್ರೀರಾಮಾ. ೬-೧೫೭) : ಧಾನ್ಯ ಧನವಾಗದೇ, ಮಾನ್ಯ ಪೂಜ್ಯನಾಗನೇ ? (ಗಾದೆ). ೨. ಕೊತ್ತುಂಬರಿಬೀಜ ; ಧನಿಯಂ. ೩. "ಭತ್ತ" (ಲೋಕೋಪ. ೯-೭೭ ಟೀಕೆ) ; ನೆಲದಾಟನರೆದು ಪಾಲೊಳ್ ಕಲಸಿ ಬಟಿಕ್ಕಲ್ಲಿ ಬೆಣ್ಣೆಗೊಂಡೇಟುದಿನಂ ನಿಲಿಸಿಟ್ಟು ಧಾನ್ಯದೊಳ್ ಕರ್ಣಲೇಪನಂಗೆಯ್ಯೆ ಕರ್ಣವರ್ಧನಮಕ್ಕುಂ (ಲೋಕೋಪ. ೯-೭೭). ೪. ಒಂದಂ ತೂಕದ ಪ್ರಮಾಣ ; ನಾಲ್ಕು ಎಳ್ಳಿನ ತೂಕ : ಪರದರ ಪುತ್ರಿಗೆತ್ತಣದೊ ವೀಣೆಯ ಜಾಣಱಿವಂತು ಬಳ್ಳವೋ ಪರಿಕಿಸೆ ಮಾನವೋ ಪಡಗೆಯೋ ಮೊಱನೋ ಪಸರಕ್ಕಿದಂದು ಬಿತ್ತರಿಸುವ ಧಾನ್ಯಮೋ ಪೊಸತಿದೆಂದಡೆ (ಮಹಾನೀ. ೪-೧೦೨).

**ಧಾನ್ಯದ ಸುಂಕಂ**=ಭತ್ತ, ಜೋಳ, ಗೋದಿ ಮೊದಲಾದ ಧಾನ್ಯಗಳ ಕವಚದ ಮೊನಚಾದ ತಂದಿ ; ಊಬು : "ಕಿಂಶಾರುಃ–ಧಾನ್ಯದ ಸುಂಕು" (ಒಷಧಿ. ೩೩). [ ಸಂ. ]

**ಧಾನ್ಯಕ** (ನಾ). ೧. ಕೊತ್ತುಂಬರಿಬೀಜ ; ಧನಿಯಂ ; ಹವೀಜ : "ಕುಸ್ತುಂಬುರು, ಧಾನ್ಯಕಂ–ಈ ೨ ಕೊತ್ತುಂಬರಿ" (ಹಲಾಯು. ೧೧೧-೪೬೩) ; ಕುಸುಂಭಕಾರ್ಪಾಸಸರ್ಷಪ ಜೀರಕಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ (ಆದಿಪು. ೬-೭೩ ವ). ೨. ಭತ್ತ : "ಸ್ತಂಬಕಂ ಧಾನ್ಯಕಂ ವ್ರೀಹಿ" (ವಸ್ತುಕೋ. ೯೪-೧೭). [ ಸಂ. ]

**ಧಾನ್ಯಕಚೂರ್ಣ** (ನಾ). ಕೊತ್ತುಂಬರಿಬೀಜದ ಪುಡಿ; ಧನಿಯದ ಪುಡಿ: ಸಮನಾಗಿ ಕೂಡಿ ಪೊಸತುಪ್ಪಮೆಣ್ಣೆವೊಸರಳೆಗಳೆಂಬಿವಂ ಧಾನ್ಯಕಚೂರ್ಣಮನಿಕ್ಕಿ ಕಾಸಿದಂದುತ್ತಮಗಂಧಂ ತಾನೆನಿಪ್ಪ ತುಪ್ಪಮದಕ್ಕುಂ (ಲೋಕೋಪ. ೮-೪೧). [ ಧಾನ್ಯಕ + ಚೂರ್ಣ ]

**ಧಾನ್ಯಕೋಷ್ಠ** (ನಾ). ದವಸ ಧಾನ್ಯಗಳನ್ನು ಸಂಗ್ರಹಿಸಿಡುವ ಕಣಜ ; ಹಗೇವು ; ಕಂಸೂಲ : "ಧಾನ್ಯಕೋಷ್ಠಂ ಕುಸೂಲಂ" (ಮಂಗರಾ. ೬೩-೧). [ ಧಾನ್ಯ + ಕೋಷ್ಠ ]

**ಧಾನ್ಯಕೋಷ್ಠಕ** (ನಾ).=ಧಾನ್ಯಕೋಷ್ಠ : "ಕುಸೂಲಂ, ಧಾನ್ಯಕೋಷ್ಠಕಂ–ಈ ೨ ಕುದಿರು" (ಹಲಾಯು. ೫೩-೧೫೭). [ ಧಾನ್ಯ + ಕೋಷ್ಠಕ ]

**ಧಾನ್ಯತ್ವಚ** (ನಾ). ಧಾನ್ಯದ ಮೇಲಿನ ಸಿಪ್ಪೆ ; ತುಷ : "ಧಾನ್ಯತ್ವಚಂ ತುಷಂ ತಾನಕ್ಕುಂ" (ವಸ್ತುಕೋ. ೯೫-೩೦). [ ಸಂ. ಧಾನ್ಯತ್ವಚ್ ]

**ಧಾನ್ಯಪುಟ** (ನಾ). (ಔಷಧಗಳ ತಯಾರಿಕೆಯಲ್ಲಿ) ಧಾನ್ಯದ ನಡುವೆ ಅಡಗಿಸಿಟ್ಟು ಶಾಖ ಕೊಡುವುದು : ಬೆಲ್ಲವತ್ತದ ಬೇರಿನ ಚಕ್ಕೆ . . . ಪಾಕವ ಮಾಡಿ ಇಳುಹಿ ಪೂಜೆಯ ಮಾಡಿ ಧಾನ್ಯಪುಟದಲ್ಲಿರಿಸಿ . . . ತೆಗೆದುಕೊಳ್ಳಲು (ಸಕವ್ಯ. ೧೪೫) ; ಚೆನ್ನಾಗಿ ಕಲಸಿ ಬಾಯಿಕಟ್ಟಿ ಒಂದು ಪಕ್ಷ ಧಾನ್ಯಪುಟದಲ್ಲಿರಿಸಿ . . . ಪ್ರಾತಃಕಾಲದಲ್ಲಿ ಗ ೪ ತೂಕವಂ ಸೇವಿಸುವುದು (ಸಕವ್ಯ. ೩೧೪). [ಧಾನ್ಯ + ಪುಟ]

**ಧಾನ್ಯಮಂಜರಿ** (ನಾ). ಕಾಳಂ ತುಂಬಿದ ತೆನೆ,– ಕದಿರಂ : ತಿಳಿದ ತಡಿದಡಿಯ ಮಡಿಗಳ ಜಳದೊಳ್ ರಂಜಿಸುವ ಧಾನ್ಯಮಂಜರಿಯ ನೆಬಲ್ ವೊಳೆಯ ತೆನೆವೋದುವಿವು ಬೇಗ್ಗಳೆನಿಪುವು ಬೆಳೆದ ಕಟವೆ ಭೂಸಾರತೆಯಿಂ (ಚಂದ್ರಪು. ೧-೯೩). [ ಧಾನ್ಯ + ಮಂಜರಿ ]

**ಧಾನ್ಯಮಂಜರಿಕೆ** (ನಾ).=ಧಾನ್ಯಮಂಜರಿ : ತಿಂಗಳ್ಗೆ ಮೂಱು ಮಟಿಗಳ್ ಪಿಂಗದೆ ಪದನಾಗಿ ಕೊಳ್ಪುವಲ್ಲಿಯ ಬೆಳೆಯುಂ ಕಂಗದ್ಭುತಮಂ ಪೆರ್ಚಿಪುದಂಗೀಕೃತ ಬಹಳ ಧಾನ್ಯಮಂಜರಿಕೆಗಳಿಂ (ಪಾರ್ಶ್ವಪು. ೪-೬). [ ಧಾನ್ಯ + ಮಂಜರಿಕೆ ]

**ಧಾನ್ಯಮದ್ಯ** (ನಾ). ಕಾಳುಂಗಳಿಂದ ತಯಾರಿಸಿದ ಮದ್ಯ : ಧಾನ್ಯದಿಂದ ತಯಾರಿಸಿದ ಏಲ್, ಬಿಯರ್, ಪೋರ್ಟರ್, ಮೊ. ಮದ್ಯ; ಧಾನ್ಯಮದ್ಯ (Malt-Liquor. ಇಂಕನಿ). [ ಧಾನ್ಯ + ಮದ್ಯ ]

**ಧಾನ್ಯರೇಖೆ** (ನಾ). [ಸಾಮುಂದ್ರಿ] ದವಸ ಧಾನ್ಯಗಳ ಸಮೃದ್ಧಿಯನ್ನು ಸೂಚಿಸುವ ಹಸ್ತರೇಖೆ : ಮಣಿಬಂಧಕ್ಕೆ ವಾಮಭಾಗದಲ್ಲಿ ಧಾನ್ಯರೇಖೆಯಿರುವುದು (ಸಾಮುಲ. ೬೩-೧೪). [ ಧಾನ್ಯ + ರೇಖೆ ]

**ಧಾನ್ಯವೃದ್ಧಿ** (ನಾ). ಅಧಿಕವಾದ ದವಸ ಧಾನ್ಯಗಳ ಬೆಳೆ; ಕಾಳುಂಬೆಳೆಗಳ ಸಮೃದ್ಧಿ : ಧಾನ್ಯವೃದ್ಧಿಯುಂಟಾಗಿ ಅವರು ಸುಖದಿಂದ ಜೀವಿಸುವರು (ಸಾಮುಲ. ೬೩-೧೪). [ ಧಾನ್ಯ + ವೃದ್ಧಿ ]

**ಧಾನ್ಯವ್ಯಸನ** (ನಾ). ಹತ್ತು ಬಗೆಯ ವ್ಯಸನಗಳಲ್ಲಿ ಒಂದು; ಕಾಳುಗಳನ್ನು ಸಂಗ್ರಹಿಸುವ ಗೀಳು: ತನುವ್ಯಸನ ರಾಜ್ಯವ್ಯಸನ ವಿಶ್ವವ್ಯಸನ ಸ್ತ್ರೀವ್ಯಸನ ಧಾನ್ಯವ್ಯಸನ ದ್ರವ್ಯವ್ಯಸನ ವಿದ್ಯಾವ್ಯಸನ ಉತ್ಸಾಹಕವ್ಯಸನ ಸೇವಕವ್ಯಸನ ಕಾಷ್ಠವ್ಯಸನಗಳೆಂಬ ದಶವ್ಯಸನಗಳಿಂ ಹಸಗೆಟ್ಟು (ವಿವೇಕ. ೨೪೭). 'ಸಪ್ತವ್ಯಸನ' ಪರಾ.

[ ಧಾನ್ಯ + ವ್ಯಸನ ]

**ಧಾನ್ಯಶೀರ್ಷಕ** (ನಾ). ತೆನೆ; ಕದಿರು: "ಕಣಿಶಂ, ಧಾನ್ಯಶೀರ್ಷಕಂ–ಈ ೨ ತೆನೆ" (ಹಲಾಯು. ೯೫-೪೨೫). [ ಧಾನ್ಯ + ಶೀರ್ಷಕ ]

**ಧಾನ್ಯಶೂಕ** (ನಾ). ಕಾಳಿನ ಮೇಲಿರುವ ಉಬು: "ಧಾನ್ಯಶೂಕಂ, ಕಿಂಶಾರು–ಈ ೨ × × ×" (ಹಲಾಯು. ೯೫-೪೨೫). [ ಧಾನ್ಯ + ಶೂಕ ]

**ಧಾನ್ಯಸಂಚಯ** (ನಾ). ಕಾಳು, ದವಸಗಳ ಸಂಗ್ರಹ: ಶಿಲಾಪ್ರೌಢಧಾನ್ಯಸಂಚಯೋಪಭೋಗಿಜನನಿವಾಸಿಗಳಪ್ಪ ಸಂವಾಹಂಗಳುಮಂ (ಆದಿಪು. ೮-೬೪ ವ). [ ಧಾನ್ಯ + ಸಂಚಯ ]

**ಧಾನ್ಯಸಮಿತಿ** (ನಾ). ವಿವಿಧ ಬಗೆಯ ಧಾನ್ಯಗಳು: ಪುದಿದ ತಱಿಗೆಲೆಗಳಂ ಕಂಡುದಱಿಂದಂ ಧಾನ್ಯಸಮಿತಿ ನೀರಸಮಕ್ಕುಂ (ಆದಿಪು. ೧೫-೪೩).

[ ಧಾನ್ಯ + ಸಮಿತಿ ]

**ಧಾನ್ಯಸುಂಕ** (ನಾ). ೧. ದವಸರೂಪದಲ್ಲಿ ಕೊಡುವ ತೆರಿಗೆ: ಬೆಳೆದದ್ದರಲ್ಲಿ ಕಾಲುಭಾಗವನ್ನೇ ಧಾನ್ಯಸುಂಕಕ್ಕೆ ವಿಾಸಲಿಡಲಾಯಿತು (ರೂಢಿ). ೨. ದವಸಗಳ ಮೇಲೆ ಹಾಕುವ ತೆರಿಗೆ: ಧಾನ್ಯಸುಂಕವೇ ಮೊದಲಾದ ಕಂದಾಯಗಳನ್ನು, ವಸೂಲಾದ ಕೂಡಲೆ ತಾಲ್ಲೂಕುಖಜಾನೆಗೆ ತಲುಪಿಸುವ ಕೆಲಸ ತಳವಾರನದು (ರೂಢಿ). [ ಧಾನ್ಯ + ಸುಂಕ ]

**ಧಾನ್ಯಾಂಶ** (ನಾ). ಕಾಳಿನ ತುಂಡು,–ನುಚ್ಚು: "ಕಣಮುಕ್ಕುಂ ಧಾನ್ಯಾಂಶಮುಂ" (ವಸ್ತುಕೋ. ೧೩೭-೧೦೭). [ ಧಾನ್ಯ + ಅಂಶ ]

**ಧಾನ್ಯಾಗಾರ** (ನಾ). ದವಸಗಳನ್ನು ಸಂಗ್ರಹಿಸಿಡುವ ಉಗ್ರಾಣ; ಕಣಜ: 'ಮಳಿಗೆ' ಎಂಬುದು ಮೇಲೆ ಹೇಳಿದ ಸಾರ್ವಜನಿಕ ಧಾನ್ಯಾಗಾರವನ್ನು ಸೂಚಿಸಬಹುದು. ಇಂತಹ ಧಾನ್ಯಾಗಾರಗಳು ಈಗ ಇಲ್ಲವಾದರೂ . . . ಹಿಂದೆ ಕೆಲವು ಊರುಗಳಲ್ಲಿ ಅವುಗಳಿಗಾಗಿ ವಿಾಸಲಾಗಿದ್ದ ಮನೆಗಳನ್ನು ಕಾಣಬಹುದಾಗಿದ್ದಿತು (ಕಶಾಅ. ೩೫೫).

[ ಧಾನ್ಯ + ಆಗಾರ ]

**ಧಾನ್ಯಾಗುರು** (ನಾ). ಒಂದು ಬಗೆಯ ಅಗುರು,–ಧೂಪ: "ಧೂಪಾಗುರುಃ–ಧಾನ್ಯಾಗುರು" (ಓಷಧಿ. ೬೨). [ ಧಾನ್ಯ + ಅಗುರು$_{1}$ ]

**ಧಾನ್ಯಾಮ್ಲ** (ನಾ). ಹುಳಿಮಜ್ಜಿಗೆ ಸೇರಿಸಿ ಮಾಡಿದ ಅಂಬಲಿ,–ಗಂಜಿ: "ಧಾನ್ಯಾಮ್ಲಂ, ಆರನಾಳಂ, ಸಂಧಾನಂ, ಕಾಂಜಿಕಂ, ಸೌವೀರಂ–ಈ ೫ ಅಂಬಿಲಂ" (ಹಲಾಯು. ೫೩-೧೬೩). [ ಧಾನ್ಯ + ಆಮ್ಲ ]

**ಧಾನ್ವನ** (ಗು). ಮರುಭೂಮಿಯಲ್ಲಿರುವ: 'ಧಾನ್ವನದುರ್ಗ' ಪರಾ.

[ ಸಂ. ]

**ಧಾನ್ವನದುರ್ಗ** (ನಾ). ಮರುಭೂಮಿಯಿಂದ ಸುತ್ತುವರಿಯಲ್ಪಟ್ಟು ಪ್ರವೇಶಿಸಲು ದುಸ್ಸಾಧ್ಯವಾದ ದುರ್ಗ; ಧನ್ವದುರ್ಗ; ಸ್ಥಳದುರ್ಗ: ಅನತಕ್ಷತ್ರಿಯರೊತ್ತುಗೊಂಡ ಗಿರಿದುರ್ಗಕ್ಕುಗ್ರವಜ್ರಾಗ್ನಿ . . . ಧಾನ್ವನದುರ್ಗಕ್ಕೆ ಬೃಹಲ್ಲಯಾಗ್ನಿಯೆನೆ ತನ್ನುದ್ವೃತ್ತತಾಪಾಗ್ನಿ ನೀಟ್ಚಿನಸುಂ ಪರ್ವಿ ವಿಗುರ್ವಿಸಲ್ (ಪುಷ್ಪಪು. ೫-೫೦). [ ಧಾನ್ವನ + ದುರ್ಗ ]

**ಧಾಪಿಸು** (ಕ್ರಿ). ಜೋರಾಗಿ ಶ್ವಾಸೋಚ್ಛ್ವಾಸ ಮಾಡು; ಏದುಸಿರು ಬಿಡು; ಉಬ್ಬಸಪಡು: ಕುಂಬಾರನ ಕುಲಿಮಿಯ ತಿದಿಯಂತೆ ಧಾಪಿಸುತಿಪ್ಪುದು (ಉದ್ಯೋಪ್ರ. ೬-೩೦-೫). [ ಧಾಪು + –ಇಸು$_{3}$ ]

**ಧಾಪು** (ನಾ). ಉಸಿರು; ಶ್ವಾಸ: ಮೂರುಗಾವುದ ದೂರದಿಂದ ಒಂದೇ ಧಾಪಿನಲ್ಲಿ ಓಡಿಬಂದು (ದೀಪಹ. II, ೩೪೮). [ ←ಮರಾ. ಧಾಪ್ ]

**ಧಾಬಳಿ, ಡಾವಳಿ, ಧಾವಳಿ$_{2}$** (ನಾ). ೧. ಮಡಿಗಾಗಿ ಉಟ್ಟುಕೊಳ್ಳುವ ಉಣ್ಣೆಯ ಒರಟಾದ ಬಟ್ಟೆ: ಮಡಿ ಯಾಕ? ಧಾಬಳಿ ಕೊಡು ಅವಗ (ಸಾವಿಉ. ೧೫); ಜಾನಕೀಬಾಯರು ಅಸ್ತವ್ಯಸ್ತವಾಗಿ ಉಟ್ಟುಕೊಂಡಿದ್ದ ಧಾಬಳಿ (ಸಮುಜೀ. ೭ ಓಟಿಕೆ). **ಡಾವಳಿ:** (೬). **ಧಾವಳಿ$_{2}$:** ೧. ದತ್ತನು ಮಗನಲ್ಲ ಧಾವಳಿ ಮಡಿಯಲ್ಲ ಭಟ್ಟನು ಭಟನು ತಾನಲ್ಲ (ಇಂಜಾಪ. ೧೭೦-೪೨); ಆಚಾರ್ಯರೇ ದಾವ ಊರು ಅಂದರೆ ಧಾವಳಿ ಮೂರು ಹಣ ಎಂದರಂತೆ (ಗಾದೆ). ೨. ನಯವಾದ ಉಣ್ಣೆಯ ಬಿಳಿಯ ಕಂಬಳಿ; ಉಣ್ಣೆಯ ಹೊದಿಕೆ; ಶಾಲು: ಒಂದು ಒಳ್ಳೇ ಮುಂಡ್ಯದ ಧಾವಳಿ . . . ಕೊಟ್ಟರಾಯಿತೆಂದರು (ಕಭವಿ. II, ೨೨೩); ಹೆಗಲ ಮೇಲಿನ ಧಾವಳಿಯನ್ನೇಕೆ ಕೆಳಗೆಸೆದ ಸೆಲೀಮಾ (ಹುರುಂನಾ. ೦೪೭).

**ಧಾಬಳಿ ಹಚ್ಚಿಕೊಳ್ಳು, ಧಾಬಳಿ ಹಚ್ಚಿಗೊಳ್ಳು** = (ಮಡಿಯ ಸಲುವಾಗಿ) ಧಾಬಳಿಯನ್ನು ಉಟ್ಟುಕೊಳ್ಳು: ಅಜ್ಜ ಧಾವಳಿ ಹಚ್ಚಿಕೊಂಡು ನೀರಿಗೆ ಹೋಗಿದ್ದರು (ವೀನಾದ. ೨೪); ಬೀ. ಏ. ಕ್ಕ ಬಂದರೂ ಧಾಬಳೀ ಹಚ್ಚಿಗೊಂಬೂದನ್ನೇನು ಬಿಡವಲ್ಲಿ (ದೀಪಹ. II, ೧೩).

[ ?./ ಮರಾ. ಧಾಬಳೇ, ಧಾಬಳ, ಧಾಬಡೀ./ತಮಿ. ತಾವಳಿ; ತೆಲು. ಧಾವಳಿ ]

**ಧಾಬೆ** (ನಾ). ದನದ ಹಕ್ಕೆ; ಕೊಟ್ಟಿಗೆ: ಬಾಪೂಸಾಹೇಬ ಧಾಬೆಯಲ್ಲಿಯೇ ನಿಂತು ಆ ಕೆಲಸ ಮಾಡಿಸಬೇಕಾಯಿತು (ಗ್ರಾಮಾಯ. ೦೪); ಕಾಕಾನ ದನದ ಧಾಬೇದಲ್ಲಿ . . . ಇಜ್ಜೋಡಿನ ದನ ಸಿಗುವಂತಿಲ್ಲ (ದೀಪಹ. I, ೧೩).

[ ← ಮರಾ. ಧಾಬೇ = ಮಣ್ಣಿನ ಛಾವಣಿಯುಳ್ಳ ಮನೆ; ಹಿಂ. ಧಾಬಾ = ಮಣ್ಣಿನ ಮಾಳಿಗೆ ]

**ಧಾಮ** (ನಾ). ೧. ಆಶ್ರಯಸ್ಥಾನ; ವಾಸಸ್ಥಾನ; ಮನೆ: "ಧಾಮ, ನಿಕೇತನಂ, ಸದನಂ . . . ನಿವಸನಂ, ಆಲಯಃ–ಈ ೩೧ ಮನೆ" (ಹಲಾಯು. ೪೯-೧೩೭); "ಮಂದಿರಂ ಧಾಮ ವಸಿತಂ . . . ಮನೆಗೆ ಪೆಸರಕ್ಕು" (ಮಂಗರಾ. ೫೮-೭); ಅರ್ಹಂತ್ಯಲಕ್ಷ್ಮೀಧಾಮಂ ಮಾಟ್ಕೆಮ್ಮ ಹೃತ್ಪದ್ಮಮನಜಿತಜಿನೇಂದ್ರಕ್ರಮಾಂಭೋರುಹಶ್ರೀ (ಅಜಿಪು. ೦-೦); ರಾಮಂಗೆ ಸುಕವಿಕಳ್ಪರಾಮಂಗೆ . . . ಸಕಳಗುಣಗಣಧಾಮಂಗೆಣೆಯೊಳರೆ ವಸುಮತೀಮಂಡಳದೊಳ್ (ಶಾಸಮಂ. ೦೪೬೦; 1151); ಜಿತಕಾಮನತಿಭೀಮ ಸುಖಧಾಮ . . . ಸೋಮಧರ ಸಲಹುಗೆಮ್ಮ (ಸಿದ್ಧರಾ. ೦-೦); ಈ ಮಹಿಮನಿರ್ದಲ್ಲಿಹುದು ಪರಿಣಾಮವೆಂದು ಶಿವಾಲ್ಯದೊತ್ತಿನ ಧಾಮದೊಳಗಾಶ್ರಯಿಸಿದಂ ಸತಿಶಿಷ್ಯಸಹವಾಗಿ (ಶಂಕದಾ. ೬-೪೭). ೨. ನೆಲೆ; ಸ್ಥಳ; ಜಾಗ: ವಾಮೆಯರಿಗೆಲ್ಲ ವಾಮಾಂಗಸೂಚನೆ ಶುಭದ ಧಾಮವೆಂದೆನುತ . . . ಅವನೀಜಾತೆಯತುಲಸಂತಸವ ತಳೆದು (ವೆಂಕಾರಾ. ೫-೦೦-೪೫). ೩. ಕಿರಣ; ರಶ್ಮಿ: "ಉಸ್ರಃ, ಧಾಮ, ವಸುಃ . . . ಕರಃ, ಪಾದಃ, ವಿರೋಚಃ, ಗೌಃ–ಈ ೩೨ ರಶ್ಮಿಗಳ ಪೆಸರ್" (ಹಲಾಯು. ೮-೩೯); ಸೋಮಧಾಮವಾವೃತ ಜಟಾಪಟಲವೇಷನಾಶಾಮಯ ಭಯಾತೀತನೂತನಾಂಗಂ . . . ಪ್ರೇಮದಿಂದೆಮಗೆ ಭಕ್ತಿಯನೀಗೆ (ಸಿದ್ಧರಾ. ೦-೦). ೪. ಹೊಳಪು; ಕಾಂತಿ; ತೇಜಸ್ಸು; ಬೆಳಕು: "ತೇಜದಲ್ಲಿಯುಂ ಧಾಮಮೆಂಬುದು" (ಹಲಾಯು. ೧೩೩-೧೨); "ಕಾಂತಿಯುಂ ಧಾಮಮುಮೆಂಬುದು" (ಮಂಗರಾ. ೧೩೯-೬); ಸೋಮನೊಳು ತಿಳಿಜೊನ್ನ ರವಿಯೊಳು ಧಾಮ ದರ್ಪಣದೊಳಗೆ ನಿರ್ಮಳ . . . ಎಸೆವಂತೆ (ಶಂಕದಾ. ೦-೪೭). ೫. ಘನತೆ; ಗೌರವ; ಠೀವಿ; ವೈಭವ. ೬. ಶಕ್ತಿ; ಸಾಮರ್ಥ್ಯ; ಪ್ರತಾಪ: ಸ್ಥಿರಪೂರ್ಣಧಾಮ ಧಾಮಪ್ರಬಲ ಬಲವಂತ ಶ್ರುತಿಸಕಲಸಾಮ ಸಾಮಸ್ತುತ್ಯ ಪಂಪಾಧಿಪತಿ ವಿರೂಪಾಕ್ಷ ಕರುಣಿಸುವುದೆಮಗೆ (ಹಚಕಾ. ೦-೩). ೭. ದೇಹ; ಶರೀರ. ೮. ಗುಂಪು; ಹಿಂಡು; ತಂಡ.

[ ಸಂ. ಧಾಮನ್ ]

**ಧಾಮಕ** (ನಾ). = ದಾಮಂ : ಅಸುಕೆಯ ಪೊಸದಳಿದುರ್ಬಟುಗಲಿಂ . . . ಅಮರಪುಸವದ ಧಾಮಕಪರೀತಧಮನಿಗಳಿಂದಂ (ಮಹಾನೇ. ೮-೧೧೧). [ ☞ ಇದು ದಾಮಂಕ ಎಂಬುದರ ಅಪಲಿಖಿತವಿರಬಹುದು. ]

**ಧಾಮಣ** (ನಾ). ವಿಷವಿಲ್ಲದ ಸರ್ಪಗಳಲ್ಲಿ ಒಂದು ಬಗೆ: ನಿರ್ವಿಷಸರ್ಪಗಳಲ್ಲಿ ಹೆಬ್ಬಾವು ಶ್ರೇಷ್ಠ. ಇವಲ್ಲದೆ ಮಣ್ಣುಮುಕ್ಕ, ಧಿವಡ, ಧಾಮಣ, ಅಧೇಲಾ, ಹಸರುಹಾವು ಮುಂತಾದ ಜಾತಿಗಳು ಹಲವುಂಟು (ಕಥಾಗೆ. ೬೭). [ ←ಮರಾ.ಧಾಮಣ ; ಹಿಂ. ಧಾಮಿನ್ ]

**ಧಾಮಧೂಮು**, ದಾಮದೂಮ, ಧಾಂಧೂಂ (ನಾ). ೧. ಗಡಿಬಿಡಿ ; ಗೊಂದಲ ; ಅಲ್ಲೋಲಕಲ್ಲೋಲ ; ಕ್ಷೋಭೆ : ನಡೆದ ಧಾಮಧೂಮಿನಲ್ಲಿ ಜಯಚಂದ್ರನ ದೇಹವು ಅನೇಕರ ತುಳಿತಕ್ಕೆ ಸಿಕ್ಕಿ ಜರ್ಝರಿತವಾಯಿತು (ಭಾಇಪ್ರ. ೩೩೮). **ದಾಮದೂಮು** : ೨. ನಾಶ ; "ಬೀಳು ; ಹಾಳು" (ಜಾನಕೋ. ೪) : ಕಿಡುಕಿಚ್ಚು ಹರವರಿಯ ಬಂಜದಡವಿಯ ನಿಮಿಸದೊಳ್ ದಾಮದೂಮುಮಂ ಮಾಡದಿಹುದೆ (ಸಮ್ಯಕ್ತ್ವ. ೧-೪೮) : "ಧಾಳಾಧೂಳಿ ಮಾಡುವುದು" (ಸಮ್ಯಕ್ತ್ವ. ಕೋಶ). **ಧಾಂಧೂಂ** : ೧. ಶತ್ರುಗಳ ಧಾಂಧೂಂ ಶಬ್ದಗಳು ಕಿವಿಗೆ ಬೀಳುತ್ತಲೇ ಉಳಿದಿದ್ದ ರಾಜಪುತ್ರರ ರಮಣಿಯರೆಲ್ಲರೂ ಸ್ವಹಸ್ತದಿಂದ ಮಾಡಿದ ಚಿತೆಗಳನ್ನೇರಿ . . . ನಭೋಮಂಡಲದಲ್ಲಿ ಲೀನರಾದರು (ಛತ್ರಪತಿ. ೧೪೧).

**ಧಾಂಧೂಂ ಮಾಡು** = ದುಂದುವೆಚ್ಚಮಾಡು ; ಸಿಕ್ಕಾಪಟ್ಟೆ ವೆಚ್ಚ ಮಾಡು : ಸುಮ್ಮನೆ ಇದ್ದರೆ ಗೂಂಡಾಗಳು ಧಾಂಧೂಂ ಮಾಡಿ ಎಲ್ಲ ಹಾಳು ಮಾಡಿಬಿಡುತ್ತಾರೆ (ರೂಢಿ). [ ←ಮರಾ. ಧಾಮಧೂಮ್ ]

**ಧಾಮನಿಧಿ** (ನಾ). ತೇಜೋನಿಧಿ ; ಸೂರ್ಯ. [ ಸಂ. ]

**ಧಾಮಾರ್ಗವ** (ನಾ). ೧. ಒಂದು ಬಗೆಯ ಸಸ್ಯ ; ಉತ್ತರಣೆ ; ಅಪಾಮಾರ್ಗ. ೨. ಕಹಿ ಹೀರೆ ಬಳ್ಳಿ. [ ಸಂ. ]

**ಧಾಯಿಟಿಹೂವು** (ನಾ). ಧಾತಕೀಕುಸುಮ : ಧಾಯಿಟಿಹೂವು (ದಾದಿ ಹೂವು) (ಮುಂಬವ್ಯಾ. ೧೬೧). 'ಧಾತಕಿ' ಪರಾ. [ ಧಾಯಿಟಿ (☞ ←ಮರಾ. ಧಾಯಟೀ) + ಹೂವು (<ಪೂ) ]

**ಧಾಯ್ಯ** (ನಾ). ಯಾಗಮಂತ್ರಗಳೊಂದಿಗೆ ಸೇರಿಸಿ ಹೇಳುವ ಮಂತ್ರ : ಅಗ್ನಿಯಲ್ಲಿ ಸಮಿತನು ಹಾಕಿ ಉದ್ದೀಪನಗೊಳಿಸಲು ಹೇಳುವ ಮಂತ್ರ : "ಸಾಮಿಧೇನೀ, ಧಾಯ್ಯಾ–೨ ಅಗ್ನಿಯನ್ನು ಮೊದಲು ಪ್ರಜ್ವಲಿಸುವ ಹಾಗೆ ಮಾಡುವದಕ್ಕೆ ಹೇಳಬೇಕಾದ ವೇದಮಂತ್ರಕ್ಕೆ ಹೆಸರು" (ಸಿದ್ಧಾಂತಿ. ೧೮೯). [ ಸಂ. ಧಾಯ್ಯಾ ]

**ಧಾರ** (ನಾ). ೧. ಧಾರಾಕಾರವಾಗಿ ಮಳೆ ಸುರಿಯುವಿಕೆ ; ಜೋರಾಗಿ ಮಳೆಬರುವಿಕೆ. ೨. ಇದ್ದಕ್ಕಿದ್ದಂತೆ ಬೀಳುವ ಸುರಿಮಳೆ. ೩. ಆಳವಾದ ಜಾಗ ; ಕುಳಿ ; ಗರ್ತ. ೪. ಮಂಜು ; ಹಿಮ ; ತುಷಾರ. ೫. ಅಲೆ ; ತರಂಗ. ೬. ರೋಗ ; ವ್ಯಾಧಿ. ೭. ಭಯದ ನುಡಿ: "ತುಷಾರ ತರಂಗ ರೋಗ ಭೀತ್ಯುಕ್ತಿ ಗರ್ತಸೂತ್ರವಿವು ಧಾರಸಮಾಹ್ವಯಂ " (ನಾನಾರ. ೧೩). [ ಸಂ. ]

**ಧಾರಕ** (ಗು). ೧. ಧರಿಸಿರುವ ; ಹೊತ್ತಿರುವ ; ಹೊಂದಿರುವ. 'ಕರ್ಣಧಾರಕ', 'ಲಿಂಗಧಾರಕ' ಪರಾ. (ನಾ). ೨. (ವಸ್ತುವಿಗೆ) ಆಧಾರವಾದುದು, ಪಾತ್ರೆ, ಪೆಟ್ಟಿಗೆ ಮುಂತಾದುವು. ೩. ಕಂಭ ; ಸ್ತಂಭ : "ಧಾರಕಂ ಸ್ತಂಭಮೆನಿಸಿಕ್ಕು" (ಮಂಗರಾ. ೫೯-೧೩). ೪. ಧರಿಸಿದವನು ; ತಾಳಿದವನು ; ಕೈಕೊಂಡವನು : "ಧರಕಃ, ಧರಮಾಣಃ, ಧಾರಕಃ, ಈ ೩ ತಾಳ್ವಂ" (ಕಾಶಕ್ಕ. ೧೨೮) ; ವೀರಶೈವಾಚಾರ ದೀಕ್ಷಾಧಾರಕನನತಿ ನಿರ್ವಿಶೋಭಯುಕರ್ಮನಿರ್ಮಾಲನ (ಬಸಪು. ೩-೪೯). ೫. ಆಧಾರನಾದವನು ; ಬೆಂಬಲಿಗ : ನಿನೆದವರಿಗೆ ನಾನು ಧಾರಕನಾಗಿ ನಿಲ್ಲುತ್ತೇನೆ (ರಾಜಸೂ. ೧೧೧). ೬. ಜೀವನಾವಶ್ಯಕವಸ್ತು ; ಜೀವಿಸುವುದಕ್ಕೆ ಅಗತ್ಯವಾದ ದ್ರವ್ಯ : ಆವಶ್ಯಕತೆಗಳು (Necessaries), ಪ್ರಿಯಕರಗಳು (Comforts) ಮತ್ತು ಭೋಗಪರಿಕರಗಳು (Luxuries) . . . ಈ ಮೂರು ಜಾತಿಯ ದ್ರವ್ಯಗಳನ್ನು ರಾಮಾನುಜ ಗೀತಾಭಾಷ್ಯದಲ್ಲಿ ಧಾರಕ, ಪೋಷಕ, ಭೋಗ್ಯಕ ಎಂದು ಕರೆದಿದೆ (ಭಾರದ. ೩೫೫). [ ಸಂ. ]

**ಧಾರಣ** (ನಾ). ೧. ಹಿಡಿಯುವಿಕೆ ; ಧರಿಸುವಿಕೆ ; ಆಧಾರವಾಗಿರುವಿಕೆ : ಅವಕಾಶ, ವ್ಯೂಹನ, ಪಚನ, ಸಂಗ್ರಹಣ, ಧಾರಣವೆಂದು ಆಕಾಶಾದಿ ಪಂಚಮಹಾಭೂತಗಳ ಕೃತ್ಯಗಳು (ಹಿಂದಸಾ. ೨೪೮); ಕರ್ಮದಿಂದ ವ್ಯಕ್ತಿಯ ಧಾರಣವಾಗುತ್ತದೆ (ಪ್ರಬಂಧ. ೧೧೮). ೨. ಆಧಾರವಾದುದು : ಅನೂನ ದಾನಗುಣದರ್ಪಿತಪೂರಣನಿಷ್ಟತುಷ್ಟದಾ[ಧಾ]ರಣಂ . . . ಅಮ್ಮನ ಗಂಧವಾರಣಂ (ಗದಾಯು. ೧-೧೭). ೩. (ಉಡುಪು, ಆಭರಣ ಮೊದಲಾದುವನ್ನು) ತೊಡುವಿಕೆ ; ಹಾಕಿಕೊಳ್ಳುವಿಕೆ : ಒಂದು ಫೇತ್ಕಾರಿಣೀ ತಂತ್ರೋಕ್ತ ಕವಚವನ್ನು ಕೊಟ್ಟು ಕಳಿಸುವೆನು, ಅದನ್ನು ಧಾರಣಮಾಡಿ ನೋಡಿರಿ (ಕುರಿಹಿಂ. ೧೬೭). ೪. ತಾಳುವಿಕೆ ; ಸಹಿಸುವಿಕೆ ; ತಾಳ್ಮೆ. ೫. ಜೋಪಾನವಾಗಿ ಉಳಿಸಿಕೊಂಡು ಬರುವಿಕೆ ; ಕಾಪಾಡುವಿಕೆ ; ಪಾಲನೆ ; ಪೋಷಣೆ. ೬. ಹೊಂದಿರುವಿಕೆ ; ಪಡೆದಿರುವಿಕೆ. ೭. ಪ್ರತ್ಯಕ್ಷಜ್ಞಾನದ ನಾಲ್ಕು ಅಂಗಗಳಲ್ಲಿ ಒಂದು ; ಒಮ್ಮೆ ನೋಡಿ ತಿಳಿದ ವಸ್ತುವನ್ನು ಮತ್ತೊಮ್ಮೆ ನೋಡಿದಾಗ ಗುರುತು ಹಿಡಿಯುವುದಕ್ಕೆ ಕಾರಣವಾದ ಶಕ್ತಿ ; ಸ್ಮರಣಶಕ್ತಿ : ಒಂದನೆಯದರಲ್ಲಿ ಅವಗ್ರಹ, ಈಹಾ, ಅವಾಯ, ಧಾರಣ ಎಂದು ನಾಲ್ಕುವಿಧ . . . ಅನಂತರ ಯಾವಾಗ ನೋಡಿದರೂ ಗುರುತುಹಿಡಿಯುವ ಸ್ಮರಣೆಗೆ ಕಾರಣವಾದ ಜ್ಞಾನಧಾರಣೆ (ಹಿಂದಸಾ. ೮೫). ೮. ಅಂಕೆಯಲ್ಲಿಡುವಿಕೆ ; ನಿಗ್ರಹ. ೯. ಉಪವಾಸವ್ರತವನ್ನು ಹಿಡಿಯುವಿಕೆ ; ಉಪವಾಸಾಚರಣೆ. 'ಧಾರಣಪಾರಣೆ' ಪರಾ. ೧೦. [ಯೋಗ] ಯೋಗದ ಎಂಟು ಅಂಗಗಳಲ್ಲಿ ಒಂದು ; ಇಂದ್ರಿಯಪ್ರವೃತ್ತಿಗಳನ್ನು ನಿರೋಧಿಸಿ ಚಿತ್ತವನ್ನು ಹೃತ್ಕಮಲದಲ್ಲಿರುವ ಪರಮಾತ್ಮನಲ್ಲಿ ದೃಢವಾಗಿ ನೆಲೆಗೊಳಿಸುವುದು : ಯಮನಿಯಮ ಸ್ವಾಧ್ಯಾಯಧ್ಯಾನಧಾರಣಮೋನಾನುಷ್ಠಾನಜಪಸಮಾಧಿ ಶೀಳಸಂಪನ್ನರ್ (ಸೌಇಇ. XX, ೪೬-೧೬ ; 1072) ; ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ಯೋಗನಿಷ್ಠೆ (ವಿವೇಕ. ೧೪೩) ; ವಶವ ಮಾಡಿದ ಚಿತ್ತವಾತ್ಮನ ವ್ಯಸನದಲ್ಲಿರೆ ಧಾರಣವು (ಅಮೃತ. ೬-೮೦). [ ಸಂ. ]

**ಧಾರಣಪಾರಣೆ** (ನಾ). ಒಂದು ದಿವಸ ಉಪವಾಸ, ಮರುದಿವಸ ಊಟ ಈ ಕ್ರಮದಲ್ಲಿ ಮಾಡುವ ಒಂದು ವ್ರತ : (ಕ). [ ಧಾರಣ + ಪಾರಣೆ₁./ಮರಾ. ಧಾರಣಪಾರಣ, ಧಾರಣಾಪಾರಣಾ ]

**ಧಾರಣಯೋಗ** (ನಾ). = ಧಾರಣ ೧೦ : ಅನವಚ್ಛಿನ್ನ ತೈಲಧಾರೆಯಂತೆ ಶಿವಧ್ಯಾನಮಂ ಮಾಡುತಿರಲು ಆ ಧ್ಯಾನಾಕಾರದಿಂ ಕರಿಗೊಂಡ ವಸ್ತುವಿನೊಳು ಆ ಮನವು ನಿಶ್ಚಲವಾಗಲದೇ ಧಾರಣಯೋಗ ನೋಡಾ (ಅಖಂಡೇ. ೨೨೦-೬೧) ; ಅದೇ ನಾದಬಿಂದು ಅದೇ ಪರಬ್ರಹ್ಮಸ್ವರೂಪವಾಗಿಯು ಕಳೆಗಳಿಗೆ ಆಧಾರವಾಗಿಯುಯಿರುವುದು ಯಿದೇ ದಾ[ಧಾ]ರಣಯೋಗ (ತತ್ತ್ವಚಿಂ. ೨೭-೪). [ ಧಾರಣ + ಯೋಗ ]

**ಧಾರಣಶಕ್ತಿ** (ನಾ). ೧. ಆಧಾರವಾಗಿರುವ ಶಕ್ತಿ ; ಧರಿಸುವ ಸಾಮರ್ಥ್ಯ : ಪೃಥ್ವಿಯಲ್ಲಿ ಧಾರಣಶಕ್ತಿಯೂ . . . ಆಕಾಶದಲ್ಲಿ ವ್ಯಾಪನಶಕ್ತಿಯೂ ಸ್ವಾಭಾವಿಕವಾಗಿ ನೆಲೆಸಿರುವುದನ್ನು . . . ಕಾಣಬಹುದಾಗಿದೆ (ಶಕ್ತಿವಿ. ೩೦). ೨. ತಡೆಯುವ ಶಕ್ತಿ ; ಸಹಿಸುವ ಶಕ್ತಿ : ಧಾರಣಶಕ್ತಿ ಚೆನ್ನಾಗಿದ್ದುದರಿಂದ ಇಂಥ ಖಾಯಿಲೆಯಿಂದ ಪಾರಾದರು (ರೂಢಿ). ೩. ನೆನಪಿಡುವ ಶಕ್ತಿ : ಒಮ್ಮೆ ಅನುಭವಿಸಿದ ಬಿಂಬಗಳನ್ನು ಅಳಿಯದಂತೆ ಉಳಿಸಿಕೊಳ್ಳುವುದಕ್ಕೆ ಧಾರಣಶಕ್ತಿಯೆಂದು ಹೆಸರು (ಶಿಕ್ಷದ. ೫೨೧). [ ಧಾರಣ + ಶಕ್ತಿ ]

**ಧಾರಣಹಾರಣ** (ನಾ). = ಧಾರಣಪಾರಣೆ : ಧಾರಣಹಾರಣಬ್ರತದೊಳಿಂ ತೊಡಲಂಜದೆ ಮಾಡಿ ನೈಷ್ಠಿಕಾಯಾತದೊಳೊಪ್ಪಿ . . . ಕಾಮಾರಿಯ ನರ್ಚಿಸಲ್ಕೆ ನಲಿದಿರ್ಪ್ಪ ಮುನೀಶ್ವರ ನೀ ಧ್ರುವೇಶ್ವರ (ಸೌಇಇ. XI-i, ೯೭-೩೨ ; 1062). [ < ಧಾರಣಪಾರಣೆ ]

**ಧಾರಣಾವಂತ** (ನಾ). ಸ್ಮರಣಶಕ್ತಿಯುಳ್ಳವನು. [ ಸಂ. ಧಾರಣಾವತ್ ]

**ಧಾರಣಾವ್ರತ** (ನಾ). ಉಪವಾಸ ವ್ರತ; ಅನಶನ ವ್ರತ: ಅವುಗಳನ್ನು ಪಡೆಯಲು ಬೇರೆ ಗತಿಗಾಣದೆ ನಂಜರಾಜಯ್ಯನ ಮನೆ ಮುಂದೆ ಸಾಲುಸಾಲಾಗಿ ಧಾರಣಾವ್ರತ ಹಿಡಿದು ಅವರು ಕುಳಿತುಬಿಟ್ಟರು (ಒಡಳ. ೬೯). [ ಸಂ. ]

**ಧಾರಣೆ₂** 'ಧಾರಣೆ' ನೋ.

**ಧಾರಣೆ₁** (ನಾ). ೧. ಹಿಡಿಯುವಿಕೆ; ಧರಿಸುವಿಕೆ ; ಆಧಾರವಾಗಿರುವಿಕೆ: ಓರೆಪೋರೆಯೊಳಾಡಿ ಧರ್ಮದ ಧಾರಣೆಯ ಧಟ್ಟಿಸುವದಿದು ಗಂಭೀರರಿಗೆ ಗರುವಾಯಿಯೇ (ಕುವ್ಯಾಸ. ೦೯-೮೪). ೨. ಪಾಲನೆ ; ಪೋಷಣೆ : ಇಲ್ಲಿ ಕರ್ಮವೆಂದರೆ ತನ್ನ ಮತ್ತು ಸಮಾಜದ ಧಾರಣೆ ಹಾಗೂ ವಿಕಾಸಕ್ಕಾಗಿ . . . ಪ್ರತಿಯೊಬ್ಬನೂ ಮಾಡತಕ್ಕ ಕರ್ತವ್ಯವು (ವಚರ. ೮೮). ೩. ಪ್ರತ್ಯಕ್ಷಜ್ಞಾನದ ನಾಲ್ಕು ಅಂಗಗಳಲ್ಲಿ ಒಂದು ; ಒಮ್ಮೆ ನೋಡಿ ತಿಳಿದ ವಸ್ತುವನ್ನು ಮತ್ತೊಮ್ಮೆ ನೋಡಿದಾಗ ಗುರುತು ಹಿಡಿಯುವುದಕ್ಕೆ ಕಾರಣವಾದ ಶಕ್ತಿ ; ಸ್ಮರಣಶಕ್ತಿ : ಧಾರಣೆಯು (Perceptual Retention) ಇಂದ್ರಿಯಜ್ಞಾನದ ವಿಷಯವನ್ನು ಸ್ಥಿತಿಶೀಲವಾಗಿ ಮಾಡುವುದು . . . ಧಾರಣೆಯಲ್ಲಿ ಬಂದ ಬಳಿಕ ಇಂದ್ರಿಯಜ್ಞಾನವು ಪರಿಪೂರ್ಣವಾಗುವುದು (ಜ್ಞಾನಧ. V, ಉಪೋದ್ಘಾತ). ೪. ಸನ್ಮಾರ್ಗದಲ್ಲಿರುವ ನಿಷ್ಠೆ, – ಸ್ಮರಣೆ, – ಧೃತಿ. ೫. [ಯೋಗ] ಯೋಗದ ಎಂಟು ಅಂಗಗಳಲ್ಲಿ ಒಂದು ; ಇಂದ್ರಿಯಪ್ರವೃತ್ತಿಗಳನ್ನು ನಿರೋಧಿಸಿ ಚಿತ್ತವನ್ನು ಹೃತ್ಕಮಲದಲ್ಲಿರುವ ಪರಮಾತ್ಮನಲ್ಲಿ ನೆಲೆಗೊಳಿಸುವುದು : ಜಾಗ್ರತ್ಸ್ವಪ್ನಸುಷುಪ್ತಿಯಲಿ ಅತಿಶೀಘ್ರದಿಂ ತೋರಿಸುವ ತೋರ್ಕೆಯು ಭರ್ಗನೆಂದೇ ಕಾಣುತಿಹುದೇ ಧಾರಣೆಯುಯೆಂದ (ಜ್ಞಾನಸಿಂ. ೦೭-೩೫); ಧಾರಣೆಯೆಂದರೆ ಶುಭವಾದ ಆಶ್ರಯವಾದ ನಾಭಿಚಕ್ರ, ಹೃದಯ, ಜಿಹ್ವಾಗ್ರ, ನಾಸಾಗ್ರ, ಶಿರಸ್ಸು ಮೊದಲಾದ ಶರೀರದವಯವದಲ್ಲಿ ಅಥವಾ ಹೊರಗಿನ ಶುಭವಾದ ಮಂಗಳಕರವಾದ ವಸ್ತುವಿನಲ್ಲಿ ಚಿತ್ತವನ್ನು ಸ್ಥಿರವಾಗಿ ನಿಲ್ಲಿಸುವ ಅಭ್ಯಾಸ ಮಾಡುವುದು. ಇದೇ ದೇಶಬಂಧವು (ಹಿಂದಸಾ. ೦೦೭) ; ಸಂಪ್ರಜ್ಞಾತ ಸಮಾಧಿಯ ಸಿದ್ಧಿಗೋಸ್ಕರ ನಾಭಿಚಕ್ರ, ಹೃದಯ, ನಾಸಿಕಾಗ್ರ ಇತ್ಯಾದಿ ಸಾನಗಳಲ್ಲಿ ಚಿತ್ತವನ್ನು ಸ್ಥಿರಪಡಿಸುವುದರ ಪೆಸರು ಧಾರಣೆ ಎನಿಸುವುದು (ಮುಮುಕ್ಷು. ದ್ವಿತೀಯಸೋಪಾನ). [ ಸಂ. ಧಾರಣಾ ]

**ಧಾರಣೆ₂, ದಾರಣೆ, ಧಾರಣಿ** (ನಾ). ಪೇಟೆಯ ವಸ್ತುಗಳ ಮಾರಾಟದ ಬೆಲೆ : ಊರೊಳಗಿದ್ದ ತಂಬುಲಿಗರ್ ಹುಟ್ಟಿದ ಧಾರಣೆಯಿಂ ರೊಕ್ಕಮಾಡಿ ಕುಡುವರ್ (ಮುಂಬರಾ. XII, ೦೫-೪೯ ; 1223); ಧಾನ್ಯಮಂ ಗಣಿಸಿ ಕೂಡುತ್ತದೆಟ ವೃದ್ಧಿಯಂ ಬಯಸಿ ಧಾರಣೆಯ ತರ್ಗಂ ಹೋರುವವನು (ವೀಶೈಪು. ೯-೦೭-೩೯) ; ಹನ್ನೆರಡೊನ್ನಿಗೆ ಖಂಡುಗ ಇನ್ನೂಟಿಂ ಕೊಡಲು ಮತ್ತೆ ಆ ಧಾರಣೆಯೊಳಂ ಮುನ್ನೂಟು ಹೊನ್ನಿಂಗೆ ಕೊಡರೆ ಸನ್ನುತಮತಿ ಬತ್ತವೆನಿತು ಖಂಡುಗಮಕ್ಕುಂ (ಭಾಸ್ಕರ. ೨೦-೦) ; ಅಳತೆಯಲ್ಲಿ ತಟವಟವುಂಟಾಗದೆ ಧಾರಣೆಯಲ್ಲಿ ಹೆಚ್ಚು ಕುಂದಿಲ್ಲದೆ (ಸೌಗಂಧಿ. ೭೬೭-೦೪) ; ವರ್ತಕರು ಮನಸೀ ಧಾರಣೆಗಳನ್ನು ಏರಿಸದಂತೆ ಸರ್ಕಾರವು ತಡೆದು ಧಾರಣೆಯನ್ನು ಗೊತ್ತುಪಡಿಸಬೇಕು (ಭಾರದ. ೩೬೦). ದಾರಣೆ: 'ದಾರಣೆವಾಸಿ' ಪರಾ. ಧಾರಣಿ : ಊರುಊರಲಿ ಧನ ಸೂರೆ ಬಿಟ್ಟರೆ ಏನು ಮಾರುವ ಧಾರಣಿ ಏರಿ ಇಳಿದರೇನು (ವಿಸಾಸು. ೪೮-೩) ; ಮುಂದಿಗೆಲ್ಲ ಯಾವ ಧಾರಣೆಯಿಂದ ಕೊಡುತ್ತೀಯೋ ಅದೇ ಧಾರಣೆಯಿಂದ ಕೊಡು (ಪ್ರಣಸ. ೦೩). [ ?./ಮರಾ. ಧಾರಣ./ತಮಿ. ತಾರಣ್ಣೈ; ತೆಲು. ದಾರಣ ]

**ಧಾರಣೆವಾಸಿ, ದಾರಣೆವಾಸಿ** (ನಾ). =ಧಾರಣೆ₂ : ಧಾರಣೆವಾಸಿ ದಿನದಿನಕ್ಕೆ ಗಗನಕ್ಕೇರುತ್ತಿದೆ (ರೂಢಿ). ದಾರಣೆವಾಸಿ: ಒಳವ್ಯಾಪಾರದಲ್ಲಿ ದಾರಣೆವಾಸಿಗಳೂ ಹೊರವ್ಯಾಪಾರದಲ್ಲಿ ಮಾರುಂವೆಯು ದರವೂ ಹಣದ ಬೆಲೆಯನ್ನು ಅಳೆಯುವುವು (ಹಣಪ್ರ. XVII, ವಿಷಯಸಂಗ್ರಹ).

[ ಧಾರಣೆ₂ + ವಾಸಿ₁ ]

**ಧಾರಪೂರ್ಬಕ** 'ಧಾರಾಪೂರ್ಬಕಂ' ನೋ.

**ಧಾರಯಿಸು** (ಕ್ರಿ). ತಾಳು ; ಹೊಂದಿರು ; ಧರಿಸು : ಆರೋಗ್ಯಭಾಗ್ಯವನು ಮನಕೆ ತನುಗೆಂತಂತೆ ಹಾರಯಿಸುವೊಡೆ ಹಲವು ಸರಳನೀತಿಗಳ ಧಾರಯಿಸು ನೆನಸಿನಲಿ ನುಡಿಯಲ್ಲಿ ನಡತೆಯಲಿ ಪಾರಾಗು ಸುಳಿಯಿಂದ (ಮಂಕುಕ. ೮೦೭). [ ಧಾರಣ + – ಇಸು₃ ]

**ಧಾರಯ್ಸು** (ಕ್ರಿ). ಧಾರೆಯಾಗಿ ಸುರಿಸು ; ಧಾರಾಕಾರವಾಗಿ ಎರಚು : ಕಾಮಿನೀವೃಂದವುಂ ಪಿರಿದಾನಂದದಿನೊಲ್ದು ನೋಡಿ ನಗುತುಂ ಬೆಳ್ಪಂ ಪ್ರಸಾರಿಪ್ಪ ಸಚ್ಛರದಿಂದೂಪಳಶೃಂಗಮುಕ್ತವಿಮಳಾಂಭೋಧಾರೆ ಧಾರಯ್ಸಿದು (ಉದ್ಭಟ. ೯-೧೨೦). [ ಧಾರ + – ಇಸು₃ ]

**ಧಾರವಾಡಿ** (ನಾ). ಹಳೆಯ ಕಾಲದ ಒಂದು ಚಿನ್ನದ ನಾಣ್ಯ ; ಧಾರವಾಡದಲ್ಲಿ ಟಂಕಿಸಿದ ನಾಣ್ಯ : ಧಾರವಾಡಿ . . . ಕಿಮ್ಮತ್ತು ರೂ. ೩, ಆ. ೮ (ಕಥಾಗಿ. ೨೮೦) ; ಇನ್ನೂ ಇತರ ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು, ಯಾವವೆಂದರೆ :– ೧ ಗಬರು ೧ ಮೊಹರು . . . ೧ ಧಾರವಾಡಿ (ಚಿತ್ರಶಾ. ೦೦೪). [ < ಧಾರವಾಡ₃ ]

**ಧಾರಾಕಾರ** (ನಾ). ಏಕಪ್ರಕಾರವಾದುದು ; ಸತತವಾದುದು ; ಬಿಡುವಿಲ್ಲದಿರುವುದು : ಮೋಡ ನೂತೇ ನೂಲುವದು ಬಿಳಿ ದಾರ ಧಾರಾಕಾರದಿ (ನೆಲಮು. ೦೦-೦೭).

**ಧಾರಾಕಾರವಾಗಿ** = ಎಡೆಬಿಡದೆ ; ಒಂದೇಸಮನೆ : ಕಣ್ಣಿಗಳ ಮೇಲೆ ಕಣ್ಣೀರು ಧಾರಾಕಾರವಾಗಿ ಪ್ರವಹಿಸುತ್ತಿತ್ತು (ಪುನರು. ೦೯೫) ; ಮಳೆ ಧಾರಾಕಾರವಾಗಿ ಸುರಿಯಿತು (ಪುನರು. ೩೯೯). [ ಸಂ. ]

**ಧಾರಾಗೃಹ** (ನಾ). ತಾಪನಿವಾರಣೆಗಾಗಿ ಏರ್ಪಡಿಸಿದ, ಕಾರಂಜಿ ಮೊದಲಾದುವುಗಳಿಂದ ಧಾರೆಯಾಗಿ ನೀರನ್ನು ಎರಚುವ ಮನೆ ; ನೀರು ಸಿಂಪಡಿಸುವ ಏರ್ಪಾಟಿರುವ ಮನೆ ; ಕಾರಂಜಿಮನೆ : ಎಲ್ಲಿ ಕೊಳನೆಲ್ಲಿ ತಣ್ಬುಟಿಲೆಲ್ಲಿ ಲತಾಭವನಮೆಲ್ಲಿ ಧಾರಾಗೃಹಮಂತಲ್ಲಿಯೆ ತೊಡರ್ದಲ್ಲಿಯೆ ನಿಂದಲ್ಲಿಯೆ ರಮಿಸಿದಳಾಕೆ ಮರು[ದಾ]ತ್ಮಜನೊಳ್ (ಪಂಪಭಾ. ೩-೦೯) ; ತಳಿರ ತಳಿರ ಜೊಂಪಂ ಕೂಡೆ ಸೇಡಾಗಿರಲ್ ಕೆಯ್ ಕೊಳೆ ಕುಳಿರ್ವವು ಬಂದತ್ತೊಳಗುಟಿದೆನಿಕುಂ ಧಾರಾಗೃಹಂ ಚಂದ್ರಕಾಂತೋಪಳದೊಳೆ ಸವೆದಿರ್ದಂತಾಲಿ ಕೋಡುತ್ತುಮಿರ್ಕುಂ (ಶಾಂತಿಪು. ೮-೦೪) ; ಬಿಡದೆ ಸುರಿವ ಸೋನೆಯ ಸೋನೆಯುಂ ತಳೆದ ಸಹಕಾರವುಂ ತಳೆದು ರತಿಪತಿಯ ಧಾರಾಗೃಹದಂತಿರ್ದ ಮಾಧವೀಲತೆಯ ಜೊಂಪಂಗಳೊಳಂ (ಮಲ್ಲಿಪು. ೨-೩೩) ; ಸರಸಿ ಪೊಲ್ಲುದು ಚಿತ್ತಜನ ನಿಯಂತ್ರಯಂತ್ರಧಾರಾಗೃಹಮಂ (ಚಂದ್ರಪು. ೭-೦೪೪). [ ಸಂ. ]

**ಧಾರಾಗೃಹೀತ** (ನಾ). ಧಾರಾಪೂರ್ವಕವಾದ ದಾನದಲ್ಲಿ ಪಡೆದುದು ; ವಿಧಿಪೂರ್ವಕವಾಗಿ ಪಡೆದುದು,–ಸ್ವೀಕರಿಸಿದುದು. [ ಸಂ. ]

**ಧಾರಾಗ್ರ** (ನಾ). ಅಲಗಿನ ತುದಿ,–ಮೊನೆ. [ ಸಂ. ]

**ಧಾರಾಟ** (ನಾ). ೧. ಚಾತಕಪಕ್ಷಿ : ಎಲೆ ಧಾರಾಟವೆ ಕಾಲಕಾಲದೊಳ ಗಾಪತ್ತಾಪ ವಿಶ್ರಾಂತಿಯುಂ ತಳೆಯುತ್ತಿಪ್ಪ ಪಯೋ[ಧ]ರಂಗೆ ಘನದಾನ ಶ್ರೇಷ್ಠವೆ ಪೇಳಲುಜ್ವಲಮಾಗಿಪ್ಪುದು ಪುಟ್ಟುವಾಗಲೆ ವಿದಾಹವ್ಯಾಧಿ ಪೀಡಾಮಹೀಜಲತಾಜೀವನ ಜೀವನಪ್ರಕೃತಿ ನೋಡಿಂತೆನ್ನ (ಅಪ್ರಶ. ೩೯). ೨. ಕುದುರೆ. ೩. ಮೋಡ. ೪. ಮದಿಸಿದ ಆನೆ ; ಮದ್ದಾನೆ.

[ ಸಂ. ]

**ಧಾರಾದತ್ತ** (ನಾ). ಧಾರೆ ಎರೆದು ಕೊಟ್ಟ ದಾನ ; ಧಾರಾಪೂರ್ವಕವಾಗಿ ದಾನ ಮಾಡಿದುದು. [ಸಂ.]

**ಧಾರಾಧರ** (ನಾ). ೧. ಮೋಡ ; ಮೇಘ : "ಅಭ್ರಂ, ಅಬ್ದಃ, ಘನಃ . . . ಧಾರಾಧರಃ, ಧೂಮಯೋನಿಃ, ಜೀಮೂತಃ, ಬಲಾಹಕಃ– ಈ ೧೧ ಮುಗಿಲ ಪೆಸರ್" (ಹಲಾಯು. ೧೧–೫೫) ; ಕರಿಕಳಭಂಗಳ್ ಬಿಸವಲ್ಲರಿಗೆತ್ತಿ ಱಗುತ್ತುಮಿರ್ಪ ಧಾರಾಧರಪುಷ್ಕರಧಾರೆಗಳಂ ಕರಪುಷ್ಕರದಿಂ ಬರೆ ತೆಗೆದುವಂದರಣ್ಯಾಂತರದೊಳ್ (ಜಗವಿ. ೯–೨೪). ೨. ಸ್ರವಿಸುವ ತುಂಟಿ ಯುಳ್ಳುದು. ೧, ೨ : ಅದು ಧಾರಾಧರಮಬ್ಬದಂತೆ ಪೊಳೆಯಂತಾವರ್ತ ಯುಕ್ತಂ . . . ಉದಂಚಚ್ಚಂದ್ರಬಿಂಬಂಬೊಲಭ್ಯುದಯ ಶ್ರೀಕರಲಕ್ಷಣಾಂಕ ಮೆನಿಸಿತ್ತಾ ರಾಜವಾಜಿದ್ವಯಂ (ರಾಜಶೇ. ೧೨–೧೦೨). [ಸಂ. (ಧಾರಾ + ಧರ ; ಧಾರಾ + ಅಧರ)]

**ಧಾರಾನಾಥ** (ನಾ). ೧. ಧಾರಾಪಟ್ಟಣದ ದೊರೆ ; ಮಾಳವ ರಾಜ. ೨. ಭೋಜರಾಜ. P 'ಧಾರಾ' ಎಂಬುದು ಈಗಿನ ಮಧ್ಯಪ್ರದೇಶದ 'ಧಾರ್' ಎಂಬ ಪಟ್ಟಣ : ಧಾರಾನಾಥ ಮಹಾಭಯಜ್ವರಕರಂ ಚೋಳೀಯೋ ಗ್ರಕಾಳಾನ್ತಕಂ (ಎಕ. VII, ಶಿಕಾರಿ. ೧೨೪–೬ ; 1077). [ಸಂ.]

**ಧಾರಾನಿಳಯ** (ನಾ). = ಧಾರಾಗೃಹ : ಮಂಗಲಸವನಸಮಯಾನಂತರಂ ಜಾನಕಿ ನೀರಾಜನ ವಿರಾಜಮಾನೆ ಧಾರಾನಿಳಯಜಲಯಂತ್ರಪುತ್ರಿಕೆಯಂತೆ ನಯನಪುತ್ರಿಕೆಗೆ ಮಣಿಭೂಷಣಮೆನಿಸಿ (ಚಂರಾಮಾ. ೫–೪೦ ವ). [ಸಂ. ಧಾರಾನಿಲಯ]

**ಧಾರಾಪಂಚಕ** (ನಾ). [ಅಶ್ವಶಾ] ಕುದುರೆಯ ಆಸ್ಕಂದಿತ, ಧೌರಿತಕ, ರೇಚಿತ, ವಲ್ಗಿತ ಮತ್ತು ಪ್ಲುತಗಳೆಂಬ ಐದು ಬಗೆಯ ನಡಗೆಗಳು; P ಈ ಐದು ಬಗೆಗಳ ಇನ್ನೊಂದು ಪಟ್ಟಿ ಹೀಗಿದೆ : "ವಿಕ್ರಮಾ (ಸಾಮಾನ್ಯ ನಡಗೆ), ಪುಲಕಾ (ನಾಗಾಲೋಟ), ಪೂರ್ಣಕಂಠೀ (ಮುಖ ನೆಟ್ಟಗಿಟ್ಟುಕೊಂಡು ಓಡುವುದು), ತ್ವರಿತಾ (ಸ್ವ ಇಚ್ಛೆ ಯಂತೆ ವೇಗವಾಗಿ ಓಡುವುದು), ನಿರಾಲಂಬಾ (ಪೆಟ್ಟು ಕೊಟ್ಟ ಮೇಲೆ ಓಟ): (ನಕುಲನ ಅಶ್ವಶಾಸ್ತ್ರ, ಧಾರಾಧ್ಯಾಯ, ಪ. ೧, ೨.)" (ಶ್ರೀವತ್ಸ. ೨೨೩): ವಾಜಿಯುಂ ಧಾರಾಪಂಚಕದೊಳ್ ವಿಚಿತ್ರಲಯದಿಂ ತಾಮೇಱೆ ಬರ್ಪೀ ಮಹಾಧೀರರ್ ಕಾಲ್ನಡೆಯೊಳ್ ನೃಪಾವಸಥದಿಂ ಬರ್ಪಂದವಾಮಂದಮೋ (ಚಂರಾಮಾ. ೬–೧೮೦). [ಸಂ.]

**ಧಾರಾಪಾತ** (ನಾ). ೧. ಮಳೆಯ ಧಾರೆಯ ಹೊಡೆತ. ೨. ಖಡ್ಗ ಧಾರೆಯ ಹೊಡೆತ. ೧, ೨ : ಪಿರಿದುಂ ಸಂಗರಂಗದೊಳ್ ಕವಿವ ಧಾರಾಘಾ [ಪಾ] ತದಿಂ ಪಾಱುಗಚ್ಚರಿಯಲ್ತುದ್ಗತ ರಾಜಹಂಸನಿವಹಂ (ಮಲ್ಲಿಕಾ. ೫–೧೧೧). [ಸಂ.]

**ಧಾರಾಪೂರ್ಬಕಂ,** ಧಾರಪೂರ್ಬಕ (ಅ). = ಧಾರಾಪೂರ್ವಕಂ. **ಧಾರಾಪೂರ್ಬಕಂ ಮಾಡು, ಧಾರಪೂರ್ಬಕಮಾಡು** = ವಿಧಿವತ್ತಾಗಿ ನೀರನ್ನು ಎರೆದು ದಾನಮಾಡು : ಬ್ರಹ್ಮಶಕ್ತಿಗೆ ಧಾರಾಪೂರ್ಬ್ಬಕಂ ಮಾಡಿ (ಎಕ. VI, ಕಡೂರು. ೩೨–೧೮ ; 1139) ; ಕೇತಲದೇವಿಯರು ಚಂಡೇಶ್ವರ ದೇವರ್ಗ್ಗೆ ಧಾರಪೂರ್ಬ್ಬಕ ಮಾಡಿ ಒಱಟನ ಕೋಲಲು ಬಿಟ್ಟ ಕೆಯಿ ಮತ್ತ ೧೪ (ಸೌಇಇ. XX, ೫೦–೨೩ ; 1077). [<ಸಂ. ಧಾರಾಪೂರ್ವಕಂ]

**ಧಾರಾಪೂರ್ವಂ** (ಅ). = ಧಾರಾಪೂರ್ವಕಂ : ಪಲವು ಜೈನಾಗ್ರಹಾರಂಗಳ ನಾಗಳ್ ಕೊಟ್ಟನಲ್ಲಿ ರತ್ನತ್ರಯಮಂಜುಳ ಜೈನೋಪಾಧ್ಯಾಯರ ಬಳಗಕ್ಕೆ ಹಿರಣ್ಯಕಾದಿ ಧಾರಾಪೂರ್ವಂ (ಬಾಧಪು. ೧೭–೩೮೦). [ಸಂ.]

**ಧಾರಾಪೂರ್ವಕ** (ಅ). ಧಾರೆಸಹಿತವಾಗಿ ; ವಿಧಿವತ್ತಾಗಿ : ವರ್ಷಂಪ್ರತಿ ಮೂಱು ಗದ್ಯಾಣ ಪೊನ್ನನಾಚಂದ್ರಾರ್ಕ್ಕತಾರಂಬರಂ ಸಲ್ವನ್ತಾಗಿ ಧಾರಾ ಪೂರ್ವ್ವಕವಾಗಿ ಕಾಲಂ ಕರ್ಚ್ಚಿ ಬಿಟ್ಟರ್ (ಸೌಇಇ. XX, ೧೦೪–೨೪ ; 1183) ; ಧಾರಾಪೂರ್ವಕವಾಗಿ ಮದುವೆಯಾದ ಹೆಣ್ಣು (ಭಾರದ. ೧೮೩). [ಸಂ.]

**ಧಾರಾಪೂರ್ವಕಂ** (ಅ). ಧಾರೆಸಹಿತವಾಗಿ ; ವಿಧಿವತ್ತಾಗಿ : ಆ ಧರಾ ಮಹಂಗೆ ಧಾರಾಪೂರ್ವಕಮಪ್ಪ ಪದದೊಳ್ ಶುಕ್ರನೆಂದಂ (ನೇಮಿಪು. ೫–೨೨ ವ) ; ಧಾರಾಪೂರ್ವಕವಾಗಿ ಕೊಟ್ಟರವರಂ ತಾಮಾಕ್ಷಣಂ ಹರ್ಷದಿಂ (ದಿವ್ಯಜ. ೧೩–೪೯).

**ಧಾರಾಪೂರ್ವಕಂ ಮಾಡು** = ವಿಧಿವತ್ತಾಗಿ ನೀರನ್ನು ಎರೆದು ದಾನ ಮಾಡು : ತೆಱೆಯಳತೆಯ ಪಿರಿಯ ಕೋಲೊಳ್ ಧಾರಾಪೂರ್ವ್ವಕಂ ಮಾಡಿ ಬಿಟ್ಟ ನೆಲಂ (ಸೌಇಇ. XX, ೨೧–೬೪ ; 1019). **ಧಾರಾಪೂರ್ವಕ ಮಾಗು** = ಧಾರಾಪೂರ್ವಕವಾಗಿ ಮದುವೆಯಾಗು,–ಪರಿಗ್ರಹಿಸು : ಧಾರಾಪೂರ್ವಕಮಾದ ಪೆಣ್ಗಳೊಳವರ್ ಪ್ರತ್ಯೇಕಮೇಕೈಕ ಪತ್ನೀರಾಗ ವ್ರತಿಕರ್ ಮದಕ್ಷಯನಿಮಿತ್ತಂ ಕಾಮಮಂ ತೀರ್ಚುವರ್ (ರತ್ನಾಶ. ೬೩). [ಸಂ.]

**ಧಾರಾಭಿಷೇಕ** (ನಾ). ಧಾರೆಯೆರೆದು ಮಾಡುವ ಅಭಿಷೇಕ : ಮಾಗಧಾದಿ ವ್ಯಂತರಾಮರರ್ ಮಾಡಿದ ಧಾರಾ [ಪಾಠಾಂ. ಪಾದಾ] ಭಿಷೇಕದೊಳಂ ಪೌರರ್ ಮಾಡಿದ ನಳಿನೀಪತ್ರಪುಟಪ್ರಸಾದಿತ ಸಾರಜಳಪಾದಾಭಿಷೇಚನ ದೊಳಂ ಅಭಿಷೇಕವಿಧಿಯಂ ನಿರ್ವರ್ತಿಸಿ (ಆದಿಪು. ೮–೭೯ ವ) ; ಧಾರಾಭಿಷೇಕ ಮಿದುವೆ ತಪೋರಾಜ್ಯಕ್ಕೆನಿಸೆ ಸುರಿವ ಮಱೆ ಘನರುತಿ ತೂರ್ಯಾರವಮಾಗೆ ಮುನೀಂದ್ರಂ ಬೇರೂಱಿದ ಬೀಟಲಂತೆ ಮರಮೊದಲಿರ್ದಂ (ಚಂದ್ರಪು. ೧೧–೧೪). [ಸಂ.]

**ಧಾರಾಮದ** (ನಾ). ಧಾರೆಯಾಗಿ ಸುರಿವ (ಆನೆಯ) ಮದೋದಕ ; ಎಡೆಬಿಡದೆ ಸುರಿವ ಮದಜಲ : ಧಾರಾಮದದಿಂದೆ ನೆಲಂ ಬೈರಗಿ ಬೀಟ್ವುದದಿಂದೆ ಬಿಡುತಪ್ಪ ಮಹಾವಾರಣಘಟೆಯಿಂ ನಿಚ್ಚಂ ಕಾರಂ ಕೈಕೊಂಡು ಮೆಱೆವುದಾತನ ರಾಜ್ಯಂ (ಸೂಕ್ತಿಸು. ೫–೮). [ಸಂ.]

**ಧಾರಾರಶ್ಮಿ** (ನಾ). (ಖಡ್ಗದ) ಅಲಗಿನ ಹೊಳಪು ; ಖಡ್ಗಧಾರೆಯಿಂದ ಹೊಮ್ಮುವ ಕಾಂತಿ : ಮಕುಟರತ್ನದ ಲಹರಿ ಖಡುಗದ ವಿಕಟ ಧಾರಾರಶ್ಮಿ ದೀಪಪ್ರಕರದಲಿ ಥಳಥಳಿಸೆ ರವಿಯವೊಲೆಸೆದನಾ ದ್ರೋಣ (ಕುಮ್ಯಾದ್ರೋ. ೧–೩೮). [ಸಂ.]

**ಧಾರಾಲಯ** (ನಾ). ೧. ಕುದುರೆಯ ಐದು ಬಗೆಯ ನಡಗೆಯ ಲಯ. ೨. ಧಾರಾಗೃಹ. ೧, ೨ : ವನವಲ್ಲೀಲಾಸ್ಯದಿಂ ಜೀರ್ಕೊಟವಿಯುಂನನು ಬದ್ದಾಳಿಯಿಂ ವಾರನಾರೀಜನಮಂ ಧಾರಾಲಯೋದ್ಯದ್ಗತಿಚತುರತೆಯಿಂ ವಾಜಿಯುಂ ಸೌರಭಾಲಂ ಬನದಿಂ ಗೋಸರ್ಗಮಂ ಲಾಲಿತ ಕುಶಲವ ಸಾಂಗತ್ಯದಿಂ ರಾಮಸೀಮಂತಿನಿಯುಂ ಪೋಲ್ತಲ್ಲಿ ನಿಚ್ಚಂ ಸುಱೆವುದು ಬಹಳಾಮೋದಪೂರಂ ಸಮೀರಂ (ಪುಷ್ಪಪು. ೨–೨೪). [ಸಂ. (ಧಾರಾ + ಲಯ ; ಧಾರಾ + ಆಲಯ)]

**ಧಾರಾವರುಷ** (ನಾ). ಧಾರಾಕಾರವಾಗಿ ಸುರಿಯುವ ಮಳೆ : ತುತ್ತ ನೀಡಿದರಮರಪತಿಗೆ ಘೃತವೆತ್ತಿ ಧಾರಾವರುಷದಲಿ ಶಿಖಿ ತುತ್ತ ನಾಲಗೆ ಗೊನೆಗಳಲಿ ಕೈಕೊಂಡು ಹುರಿಗೊಂಡ (ನಿಭಾಗ. ೧–೮–೩೭). [<ಸಂ. ಧಾರಾವರ್ಷ]

**ಧಾರಾವರ್ತ** (ನಾ). ಧಾರಾಕಾರವಾದ ಮಳೆ ; ಸುರಿಮಳೆ : ಕಾರಮೇಘ ವೆದ್ದು ಧಾರಾವರ್ತ[ಪಾಠಾಂ. ರ್ತಿ] ಸುರಿವಾಗ ಧಾರಿಣಿಯೆಲ್ಲವು ಮುಳುಗಿತ್ತು ನೋಡಾ (ಅವಚಂ. ೭೬–೩೪೦) ; ಧಾರಾವರ್ತವೆನಿಸಿ ಕಾರ್ಮುಗಿಲಿಂ ಕಱೆವ ಪೆರ್ಮಟೆಯೊಳಮಂಜದೆ . . . ತಳೆರ್ದು ನಡೆವಾಗಳ್ (ಜಗವಿ. ೩–೮ ವ). [ಸಂ.]

**ಧಾರಾವರ್ಷ** (ನಾ). ೧. = ಧಾರಾವರುಷ. ೨. ಒಬ್ಬಾತನ ಹೆಸರು ; P ಧ್ರುವನೆಂಬ ರಾಜನಿಗೆ ಇದ್ದ ಹೆಸರು : ಧಾರಾವರ್ಷಶ್ರೀವಲ್ಲಭ ಮಹಾರಾಜಾಧಿರಾಜಸ್ಯ ಪುತ್ರಃ (ಎಕ. III (R), ನಂಜನ. ೨೭೮–೫೦ ; 808). [ಸಂ.]

**ಧಾರಾವರ್ಷಕಂ** (ಅ). = ಧಾರಾಪೂರ್ವಕಂ : ದೇವರ್ಗೆ ತಿರು[ವ]ಮುದಿಙ್ಗೆ ಬಿಟ್ಟ ಭೂಮಿಯುಮಂ ಕಲ್ವಟ್ಟಿ ಕೊಡುವುದಕ್ಕೆ ತಿರುವಾಯಿಮೊೞಿ ಪುದಿಯಿನಾಲ್ ಒಡೆಯಾರ್ ಧಾರಾವರ್ಷಕಂ ಈವನು . . . ಈಶಾನ ಈಶ್ವರ ಮುದಿಯಾರ್ಗ್ಗೆ ಕೊಟ್ಟುದು ಒಡೆಯಾರ್ಕ್ಕೆ ಕಮ್ಮ್ಕೆ ಧಾರಾವರ್ಷಕಂ . . . ಕೊಟ್ಟ ತಿವಳಿ ೧ (ಮೈಆರಿ. ೧೯೪೬, ೨೮-೮ ; 1032). [ ಸಂ. ]

**ಧಾರಾವಾಹಿ** (ಗು). ೧. ಎಡೆಬಿಡದ; ಅವಿಚ್ಛಿನ್ನವಾದ ; ಸಂತತವಾದ. (ನಾ). ೨. ಸಂತತವಾದುದು ; ಎಡೆಬಿಡದುದು : ನವೀನವೂ ಮಹತ್ತರವೂ ಆದ ಸ್ವಯಂದರ್ಶನವು . . . ಕಲ್ಪನೆಯೊಳಗೂ ಜೀವನದೊಳಗೂ ಸಂತತವಾಗಿ ಧಾರಾವಾಹಿಯಾಗಿ ಪ್ರವಹಿಸುತ್ತಲಿರುವುದು (ಪ್ರಬಂಧ. ೧೩೬). ೩. ಅನುಕ್ರಮವಾಗಿ, ಭಾಗಶಃ ಅನೇಕ ಸಂಚಿಕೆಗಳಲ್ಲಿ ಪ್ರಕಟವಾಗುವ ಕಥೆ, ಕಾದಂಬರಿ ಮೊದಲಾದುದು : ಈಚೀಚೆಗೆ ನಿಯತಕಾಲಪತ್ರಿಕೆಗಳಲ್ಲಿ ಬರುತ್ತಿರುವ ಧಾರಾವಾಹಿಗಳು ಜನಪ್ರಿಯವಾಗಿವೆ(ರೂಢಿ). [ ಸಂ. ಧಾರಾವಾಹಿನ್ ]

**ಧಾರಾವಾಹಿಜ್ಞಾನ** (ನಾ). ತಿಳಿದುಕೊಂಡ ವಿಷಯವನ್ನು ಕುರಿತು ಮತ್ತೆ ಮತ್ತೆ ಚಿಂತನೆ ಮಾಡುವುದು: ಒಂದು ವಿಷಯದ ಜ್ಞಾನವುಂಟಾದ ಬಳಿಕ ಉಂಟಾಗುವ ಆದೇ ವಿಷಯದ ಧಾರಾಕಾರವಾದ ಜ್ಞಾನವನ್ನು ಧಾರಾವಾಹಿಜ್ಞಾನ (ಅನುವ್ಯವಸಾಯ)ವೆಂದು ಹೇಳುವರು (ಜೈನಧ. XI, ಉಪೋದ್ಘಾತ). [ ಧಾರಾವಾಹಿ + ಜ್ಞಾನ ]

**ಧಾರಾಸಂಪಾತ** (ನಾ). ಎಡೆಬಿಡದೆ ಸುರಿವ ಮಳೆ ; ಒಂದೇ ಸಮನೆ ಸುರಿಯುವ ಮಳೆ ; ಆಸಾರ : "ಧಾರಾಸಂಪಾತಃ, ಆಸಾರಃ—ಈ ೨ ಮೞೆ" (ಹಲಾಯು. ೧೧-೫೯) ; "ಧಾರಾಸಂಪಾತಮುದಾಸಾರಂ" (ವಸ್ತುಕೋ. ೧೧-೬೧). [ ಸಂ. ]

**ಧಾರಾಸಾರ** (ನಾ). = ಧಾರಾಸಂಪಾತ : ಚಾರುನಯನಾಪಾಂಗ ಧಾರಾಸಾರ ಪಿಯೂಷದಲಿ ಲೀಲೋದಾರನಿಧಿ ಮೆೞೆಸುತ್ತಲಿರ್ದನು ಭೋಜನದ ಸವಿಯ (ನಿಭಾಗ. ೧೧-೧೩-೧೨) ; ಧಾರಾಸಾರ ಸುರಿವ ಮುನ್ನಾಕಾಶದಂತೆ ಮೇಘಾಚ್ಛನ್ನವಾಗುತ್ತಿದೆ (ಹಚ್ಚೆರ. ೨೩-೨). [ ಸಂ. ]

**ಧಾರಾಹತಿ** (ನಾ). ಅಲಗಿನ ಏಟು,-ಹೊಡೆತ : ಧಾರಾಹತಿಯಿಂ ಖಂಡಿಸದಾರಂ ಜಿನನಾಥನುೞಿಯಲುೞಿದರನೇಕಾಕಾರಂ ಲೋಕಾಕಾರದೊಳೋರಗಲಮೆನಿಪ್ಪ ಕಾಲಚಕ್ರಮಮೋಘಂ (ಪಂರಾಮಾ. ೧-೪೭).
[ ಸಂ. ]

**ಧಾರಾಳ** (ನಾ). ೧. ಸಮೃದ್ಧಿ; ವಿಪುಲತೆ. ೨. ಅಡೆತಡೆಯಿಲ್ಲದಿರುವುದು; ಹಿಡಿತವಿಲ್ಲದಿರುವುದು ; ಸಂಕೋಚವಿಲ್ಲದಿರುವುದು. ೩. ಉದಾರಬುದ್ಧಿ ; ಔದಾರ್ಯ ; ದಾನಶೀಲತೆ : ಧಾರಾಳಿದ್ದವನ ಹತ್ತಿರ ಹೇರಾಳ ಕೇಳಬಹುದು (ಗಾದೆ).

**ಧಾರಾಳವಾಗಿ**=೧. ವಿಪುಲವಾಗಿ; ಹೇರಳವಾಗಿ ; ಯಥೇಚ್ಛವಾಗಿ, ಸಮೃದ್ಧವಾಗಿ : ಎಲ್ಲವನ್ನು ಮನೆಯಾಕೆ ಧಾರಾಳವಾಗಿ ಬಡಿಸಿದಳು (ರಂಗಕ. ೧೨೬) ; ತರಕಾರಿಗಿಡಗಳಿಗೆ ಸಮಯಕ್ಕೆ ಸರಿಯಾಗಿ ಧಾರಾಳವಾಗಿ ನೀರು ಹಾಕಬೇಕು (ಆಡುಸಾ. ೧೨೭). ೨. ನಿಸ್ಸಂಕೋಚವಾಗಿ ; ಅಡೆತಡೆಯಿಲ್ಲದೆ ; ಮುಕ್ತಕಂಠದಿಂದ : ರಸಿಕತೆ, ಪಾಂಡಿತ್ಯ ಮತ್ತು ಕಲಾಭಿಮಾನ ಇವುಗಳು ರಾಯನ ವೈಯುಕ್ತಿಕ ಗುಣವಿಶೇಷಗಳೆಂದು ಧಾರಾಳವಾಗಿ ಹೇಳಬಹುದು (ಕೃದೇವ. ೧೧). ೩. ಉದಾರಬುದ್ಧಿಯಿಂದ: ಗೋಮತೀತೀರದಲ್ಲಿ ಧಾರಾಳವಾಗಿಯೂ ನಿರಾತಂಕವಾಗಿಯೂ ಹತ್ತು ಅಶ್ವಮೇಧಯಾಗಗಳನ್ನು ನಡಸಿದನು (ವಚಭಾ. ೪೧೪) ; ಒಬ್ಬ ಪರೀಕ್ಷಕರು ಅಂಕಿಗಳನ್ನು ಕೊಡುವಾಗ ಹಿಡಿತದಿಂದಿದ್ದರೆ ಮತ್ತೊಬ್ಬರು ಧಾರಾಳವಾಗಿರಬಹುದು (ಶಿಕ್ಷದ. ೩೪೪).

[ ಸಂ. ಧಾರಾಲ./ತಮಿ. ತಾರಾಳ ; ಮಲ. ತೆಲು. ಧಾರಾಳ ]

**ಧಾರಾಳತನ** (ನಾ). = ಧಾರಾಳತ್ವ : ಧಾರಾಳತನದಲ್ಲಿ ತಂದೆಯನ್ನೂ ಮೀರಿಸುವ ಮಗ ಈತ (ರೂಢಿ). [ ಧಾರಾಳ + – ತನ ]

**ಧಾರಾಳತೆ** (ನಾ). = ಧಾರಾಳತ್ವ : ಅವರ ಧಾರಾಳತೆ ಅನೇಕರ ಜೀವನಕ್ಕೆ ಮಾರ್ಗವಾಯಿತು (ರೂಢಿ). [ ಧಾರಾಳ + – ತೆ$_{3}$ ]

**ಧಾರಾಳತ್ವ** (ನಾ). ಬಿಡುಗೈಯ ಗುಣ ; ದಾನಶೀಲತೆ ; ಔದಾರ್ಯ : ಅಪ್ಪಾಜಿಯ ಅನ್ನದಾನ ಧಾರಾಳತ್ವವನ್ನು ಹೊಗಳಿ ಮಾತನಾಡುತ್ತಿದ್ದರು (ಚೆಂಗಾಳ್ವ. ೧೭೨). [ ಸಂ. ಧಾರಾಲತ್ವ]

**ಧಾರಾಳಿ** (ನಾ). ಉದಾರಿ ; ದಾನಶೀಲ : ಒಬ್ಬರು ದುಡ್ಡು ಹೆಚ್ಚು ಖರ್ಚು ಮಾಡಿದರು ಎಂದರೆ ನಾವು ಅವರನ್ನು 'ಧಾರಾಳಿ' ಎನ್ನುತ್ತೇವೆ (ಆಳನಿ. ೧೭೨) ; ಅವನ ಹೆಂಡತಿಯು ಧಾರಾಳಿಯಾಗಿದ್ದಳು (ನೀತಿಚಿಂ. VI, ೧೩); ಮನೆಯ ತುಂಬ ಧಾರಾಳಿಗಳೇ (ದಾನಚಿಂ. ೧೦೩).
[ ಧಾರಾಳ + – ಇ$_{3}$ ]

**-ಧಾರಿ** (ಪ್ರ). ಧರಿಸಿರುವವನು, ಹೊಂದಿರುವವನು ಎಂಬರ್ಥದಲ್ಲಿ ಹತ್ತುವ ತದ್ಧಿತ ಪ್ರತ್ಯಯ. 'ಖದ್ದರಧಾರಿ', 'ತಿರುನಾಮಧಾರಿ' ಪರಾ. [ ಸಂ. ಧಾರಿನ್ ]

**ಧಾರಿಡು** (ಕ್ರಿ). ಧಾರೆಯಾಗಿ ಸುರಿ ; ಧಾರಾಕಾರವಾಗಿ ಹರಿ : ಸಿಡಿವ ತಲೆಗಳ ಬಳಿವಿಡಿದು ಧಾರಿಡುವ ರಕುತದಲೆರಡು ಬಲದಲಿ ಹಿಡಿದ ದೀವಿಗೆ ನಂದಿದವು (ಕುಮಾದ್ರೋ. ೧೬-೧೭) ; ಶರ ಶರಾಸನ ಖಡ್ಗ ಕವಚವ ಧರಿಸಿ ಧಾರಿಡುವಶ್ರುಕಣದುಬ್ಬರದ ಚಿಂತಾಭಾರದಲಿ ಹೊೞವಂಟನಾಶ್ರಮವ (ತೊರರಾ. ೩-೯-೧೪). [ ಧಾರ + ಇಡು$_{1}$ ]

**ಧಾರಿಣಿ** (ನಾ). ೧. ನೆಲ ; ಭೂಮಿ ; ಪೃಥ್ವಿ "ತಿರೆ ಪೊಡವಿ ರನ್ನವಸಿೞಿಳ್ ಧರೆಯಿಳೆಯೆಂದೆನ್ನಲಿರದೆ ಧಾರಿಣಿಯುಕ್ಕುಂ" (ಕವಿಕಂ. ೪೭) ; ಶ್ರೀರಮಣಿ ಗೌರಿ ಸಚಿ ಧಾರಿಣಿಯ ಪುತ್ರಿ . . . ಜಯಧಾರೆ ಜಸಧಾರೆ ನಯಧಾರೆ ಭಯಹಾರೆ ಪತಿಭಕ್ತೆ ಧೃತಶಕ್ತೆಯೆನೆ (ಎಕ. III (R), ಹೆಗ್ಗಡ. ೬೦-೨೮ ; 1057) ; ಧಾರಿಣಿಯುಂ ಮಗುೞ್ಚಿ ಕುಲಪರ್ವತಮುಂ ನೆಲೆಯಿಂ ತೆರಳ್ಚಿ . . . ಆರಿದಿರಾಂತೊಡಂ ಜವನ ಬಾರಿಗೆ ಸೋವತಮಾಗಿರೆ ಮಾೞ್ಪೆಂ (ಪಂರಾಮಾ. ೯-೧೩೩) ; ಧಾರಿ[ಪಾಠಾಂ. ರು]ಣಿಯ ಜನರೆಲ್ಲರೂ ಹೇಡಿ ಮಾಸ್ತಿ ಎಂದ ಬಳಿಕ ವೀರತ್ವವೆಲ್ಲಿಯದೋ (ಮಾಧೂಳ. ೪೮೦-೧೦೨) ; ಸ್ಫಟಿಕೋಪಲಂಗಳಿಂ ಧಾರಿಣಿ ಕೂಡೆ ಹಪ್ಪಳಿಗೆಯೊತ್ತಿದುದೋ . . . ದಿಟಕೆ ತಾನೆನಿಸಿತ್ತಮೃತಾಂಶುರಶ್ಮಿಯಿಂ (ಚಂದ್ರಪು. ೮-೩೯) ; ಆರು ಹಿತವರು ನಿನಗೆ ಮೂೞು ಮಂದಿಗಳೊಳಗೆ ನಾರಿಯೋ ಧಾರಿಣಿಯೊ ಬಲು ಧನದ ಸಿರಿಯೋ (ಪುರಂದ. ೧-೧೩೨ ಪಲ್ಲವಿ). ೨. ರಾಜ್ಯ : ಗುಣಹಾನಿಗೆ ಬೆರ್ಚದೆ ಧಾರಿಣಿಯುಂ ಪ್ರಣಯದಿನಿಳೇಶನಿತ್ತೊಡಮೇಂ ಲಕ್ಷ್ಮಣನೀಯಲೀಯನೆಂಬುದ ನೆಣಿಸಳೆ (ಪಂರಾಮಾ. ೬-೧೦೭). ೩. ಸುಷುಮ್ನಾನಾಡಿಯ ನಾಲ್ಕು ಪಾರ್ಶ್ವಗಳಲ್ಲೂ ಇರುವ ನಾಲ್ಕು ನಾಡಿಗಳಲ್ಲಿ ಒಂದು : ಸುಷುಮ್ನಾ ನಾಡಿಗೆ ನಾಲ್ಕು ದಿಕ್ಕುಗಳಲ್ಲೂ ಇಡಾ, ಪಿಂಗಳಾ, ವಜ್ರಿಕಾ, ಧಾರಿಣೀ ಎಂಬ ನಾಲ್ಕು ನಾಡಿಗಳಿರುವವು (ಪಸಾರ. ೮-೩ ತಾತ್ಪರ್ಯ).
[ ಸಂ. ಧಾರಿಣೀ ]

**ಧಾರಿಣಿಧವ** (ನಾ). ದೊರೆ ; ಅರಸ : ನೂರಂ ಕಲಿವನೆ ಪಂಡಿತ ನೂರಂ ಉಳಿಸಿದನೆ ಧನಿಕ ನೂರೂರಾಳ್ವನೆ ಧಾರಿಣಿಧವನೌಷಧಿಕನು ನೂರಕೆ ನಂಜುಂಡಲಿಂಗ ನತಜನಸಂಗಾ (ಪಂಚಶ. ೨೯-೪೦). [ ಸಂ. ಧಾರಿಣೀಧವ ]

**ಧಾರಿಣೀಚ್ಛಾಯ** (ನಾ). [ಅಶ್ವಶಾ] ಬಿಳಿಯ ಬಣ್ಣದ್ದಾಗಿದ್ದು ಅಲ್ಲಲ್ಲಿ ಕಪ್ಪು ಛಾಯೆಯುಳ್ಳ ಕುದುರೆ : ನಾನಾವರ್ಣದೊಳವಿಚ್ಛಿನ್ನಾನನದ ಸ್ನಿಗ್ಧ ಬಹುಳ ರುಚಿ ಛಾವಿಪೊಡಿಂ ತಾನಧಿಕವಾಗಿ ದೇಹಸ್ಥಾನಕದೊಳ್ ನೆಗೞೆ ಧಾರಿಣೀಚ್ಛಾಯ ಹಯಂ (ಅಶ್ವಶಾ. ೩-೪೭). 'ತಳಚ್ಛವಿ' ಪರಾ.
[ ಸಂ. (ಧಾರಿಣೀ + ಛಾಯಾ + –) ]

**ಧಾರಿಣೀಚ್ಛಾಯಿ** (ನಾ). = ಧಾರಿಣೀಚ್ಛಾಯಂ : ತಿಳಿಗೊಳನ ಬಿಳಿಯ ತಾವರೆಯಲರ್ಗಳ ಗೊಂದಣಿ(ಳಿ)ಪ ಕಾಮುರ್ಗಿಲ್ಗಳ ರುಚಿಯಂ ತಳೆದು ಥಳಥಳಿಸಿ ತೊಳತೊಳತೊಳಗುತ್ತಿರ್ಪಂದು ಧಾರಿಣೀಚ್ಛಾಯಿ ಹಯಂ (ಅಶ್ವಶಾ. ೩-೪೮). [ ಸಂ. ಧಾರಿಣೀಚ್ಛಾಯಿನ್]

**ಧಾರಿಣೀಧವತೆ** (ನಾ). ದೊರೆತನ ; ರಾಜನ ಪದವಿ : ಈ ದಿವ್ಯಕಾವ್ಯಮಂ ಭಕ್ತಿಯೊಳು ನೂರೆಂಟು ಬಾರಿ ವಾಚಿಸಿ ಕೇಳಿದರಿಗಹುದು ಧಾರಿಣೀಧವತೆ ಮನದಿಷ್ಟಸಾಧನಗಳುಂ ಕೈಸಾರ್ಗುಮತಿವೇಗದೆ (ವೆಂಕಾರಾ. ೫ ಫಲಸ್ತುತಿ. ೧೭). [ ಸಂ. ಧಾರಿಣೀಧವತಾ ]

**ಧಾರಿಣೀಪತಿ** (ನಾ). ಭೂಮಿಯ ಒಡೆಯಂ ; ರಾಜ ; ದೊರೆ : ಪುತ್ರದೋಹಳಕಾರಣಮಂ ಧಾರಿಣೀಪತಿಗೆ ಸವಿಸ್ತರಂ ಬಿನ್ನವಿಸೆ (ಚಂದ್ರಪು. ೩-೭೨ ವ). [ ಸಂ. ]

**ಧಾರಿಣೀಶ** (ನಾ). = ಧಾರಿಣೀಪತಿ : ಆರುಮಟವಿಯದವೊಲೀ ಕಾನನ ದೊಳಿರ್ದನಾಂ ಧಾರಿಣೀಶರಭೂಷಣಂಗಳೇತಕೆ ನಮಗೆ (ಜೈಮಿಭಾ. ೨೧-೪೨). [ ಸಂ. (ಧಾರಿಣೀ + ಈಶ) ]

**ಧಾರಿಣೀಶಯನ** (ನಾ). ನೆಲದ ಮೇಲೆ ಮಲಗುವುದು : ಒಳ್ಪೊತ್ತು ನಿಂದುಣ್ಬುದಾರಯುಮಸ್ನಾನಮಚೇಳ ಸಂಯಮುಮದಂತೋನ್ಮಾರ್ಜನಂ ಧಾರಿಣೀಶಯನಂ ರೋಚಿನಿಸಿರ್ದ ಮೂಲಗುಣಮಿಪ್ಪತ್ತೆಂಟುಮಂ ತಾಳ್ದಿದಂ (ಸುಕುಮಾ. ೩-೪೭). [ ಸಂ. ]

**ಧಾರಿಸು** (ಕ್ರಿ). ಅಲಗಿನಿಂದ ಸೀಳು,– ಕತ್ತರಿಸು : ವೀರಶರಣರ ನೋಡು ಕೈಯೊಳು ಚೂರಿ ಹಿಡಿದಿಹರಾಡಿಕೊಳುವರ ಧಾರಿಸುವರ್ (ಬಿಜ್ಜಪು. ೭೦-೪೮). [ ಧಾರೆ + –ಇಸು₃ ]

**ಧಾರುಣಿ** (ನಾ). ನೆಲ ; ಭೂಮಿ ; ಪೃಥ್ವಿ : "ಧರಣಿ ಧಾರು[ಪಾಠಾಂ. ರಿ]ಣಿ ಧಾತ್ರಿ ಭೂರ್ಭೂಮಿ ಮಹಿ ವಸುಂಧರೆ . . . ಸರ್ವಂಸಹಾಖ್ಯೆಯೆನೆ ನೆಲಕೆ ನಾಮಂ" (ಮಂಗರಾ. ೨೮-೧) ; ಸಿಂಹಪೀಠದೊಳೆಸೆದಿರ್ದು ಧಾರುಣಿಗೆ ಚೋದ್ಯಮನಾಗಿಪ ನಂಬಿಯಣ್ಣನೊಪ್ಪಿದಂ (ನಂಬಿರ. ೪-೩) ; ಧಾರುಣಿ ಯೊಳೊಱಗಿರ್ದ ಶರಣಶರೀರವಂ ನೋಡುತ್ತ . . . ಬರುತಿರಲು (ಬಸಪು. ೨೨-೧೨) ; ಧಾರುಣಿಯ ಲಂಪಟರು ಕದನವ ಹಾರಿ ಬಂದರು ಗಡ (ಕುಮಾಭೀ. ೧-೪). [ <ಸಂ. ಧಾರಿಣೀ ]

**ಧಾರುಣಿಯಾಣ್ಮ** (ನಾ). = ಧಾರಿಣಿಧವ : ಧಾರುಣಿಯಾಣ್ಮನಿದಕೆ ಮಾರ್ನುಡಿ ಯಾವುದೆಂದು ಚಿಂತಿಸುತ ಮಗುಳಿಂತೆಂದನು (ಸೌಂದಪು. ೪-೭೭). [ ಧಾರುಣಿ + ಅಣ್ಮ (<ಆಳ್ಮ) ]

**ಧಾರುಣಿರುಹ** 'ಧಾರುಣೀರುಹ' ನೋ.

**ಧಾರುಣೀಜಾತ** (ನಾ). = ಧಾರುಣೀರುಹ : ದೂರದಲಿ ನೆಳಲೊಪ್ಪಿ ತೋಱುವ ಧಾರುಣೀಜಾತಾವಳಿಗಳೊಳು . . . ವಿಹರಿಸುವರು (ಬಸಪು. ೧೯-೪೭). [ <ಸಂ. ಧಾರಿಣೀಜಾತ ]

**ಧಾರುಣೀತಲ, ಧಾರುಣೀತಳ** (ನಾ). ಭೂತಳ ; ಭೂಲೋಕ : ಧಾರುಣೀತಲ[ಪಾಠಾಂ. ಳ]ಕವತರಿಸಿ ಸುಕುಮಾರನಂ ತಕ್ಕೈಸುತಂ (ಬಸಪು. ೫೦-೩). **ಧಾರುಣೀತಳ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ <ಸಂ. ಧಾರಿಣೀತಲ ]

**ಧಾರುಣೀತಳ** 'ಧಾರುಣೀತಲ' ನೋ.

**ಧಾರುಣೀಧರ** (ನಾ). ಬೆಟ್ಟ ; ಪರ್ವತ : ಕಕುದ್ಧಾರುಣೀಧರದ ಮೇಲಣ ಗವಿಯ ಶಾಂತನಂಜೇಶ ಜಯ ಸುಪ್ರಕಾಶ (ವೀಶೈಪು. ೫-೧-೨). [<ಸಂ. ಧಾರಿಣೀಧರ ]

**ಧಾರುಣೀನಾಥ** (ನಾ). = ಧಾರಿಣಿಧವ : ಶೈವದೀಕ್ಷಾಲಿಂಗಿತನನಂತ್ಯಜ ನೆನುತ್ತಮೆ ಹೇಂಗೆ ನುಡಿಯಲುಬಹುದು ಹೇಳಾ ಧಾರುಣೀನಾಥ (ಬಸಪು. ೫೭-೭೭). [ <ಸಂ. ಧಾರಿಣೀನಾಥ ]

**ಧಾರುಣೀಪತಿ** (ನಾ). = ಧಾರಿಣಿಧವ : ಧಾರುಣೀಪತಿಯಿದಿರೊಳೊಪ್ಪುಚಿ ದೂರದಲಿ ಕಂಡಸಮ ಬಸವಕುಮಾರನಂ (ಬಸಪು. ೫-೧೫) ; ನಿನ್ನ ವೈಭವಕೆ ಆರು ಸರಿಯೈ ಕರ್ಣ ನಡೆನಡೆ ಧಾರುಣೀಪತಿಯಾಗು (ಕುಮಾಉ. ೧೦-೦೦). [ <ಸಂ. ಧಾರಿಣೀಪತಿ ]

**ಧಾರುಣೀರುಹ, ಧಾರುಣಿರುಹ** (ನಾ). ಗಿಡ ; ಮರ ; ವೃಕ್ಷ : ಧಾರುಣೀ ರುಹತತಿಯೊಳಾ ಕಲ್ಪವೃಕ್ಷವಾ ಮಾರುತಾಶನಿಗಳೊಳು ಶೇಷಂ . . . ಎಂತಧಿಕವೆಂತಾರಯ್ಯಲೆಲ್ಲ ಶೈವದೊಳು ಮಿಗಿಲೆನಿಸುವೀ ವೀರಶೈವವದು (ವೀಶೈಪು. ೭-೩-೨). **ಧಾರುಣಿರುಹ** : ಕಣಿಯೊ ಪರುಷದ ನಿಧಿಯೊ ಚಿಂತಾಮಣಿಯ ನಂದನಮೋ ದಿವಿಜಧಾರುಣಿರುಹಂಗಳ ನೆಲೆಯೊ (ಬಸಪು. ೧-೩೯). [ <ಸಂ. ಧಾರಿಣೀರುಹ ]

**ಧಾರುಣೀವಲಯ, ಧಾರುಣೀವಳಯಂ** (ನಾ). ಭೂಮಂಡಲ ; ಪೃಥ್ವಿ : ಸಕಳೇಶ್ವರನೆ ಬಲ್ಲನು ಧಾರುಣೀವಲ[ಪಾಠಾಂ. ಳ]ಯದೊಳೆಸೆವ ನಿಮ್ಮನು ವಿನಿರವೆನುತ (ಬಸಪು. ೭೧-೭೨) **ಧಾರುಣೀವಳಯ** : ಮೇಲಿನ ಪ್ರಯೋ ಗದ ಪಾಠಾಂತರವನ್ನು ನೋಡಿ. [ <ಸಂ. ಧಾರಿಣೀವಲಯ ]

**ಧಾರುಣೀವಳಯ** 'ಧಾರುಣೀವಲಯಂ' ನೋ.

**ಧಾರುಣೀಶ** (ನಾ). ದೊರೆ ; ರಾಜ : ನಿಡುಮಾರನೆಂಬಾ ಧಾರುಣೀಶನು ವೀರಶೈವಾಚಾರ್ಯಮಾರ್ಯನುದಾರಿ ತಾನಾಳ್ದ (ಬಸಪು. ೫೦-೪೩). [ < ಸಂ. ಧಾರಿಣೀಶ ]

**ಧಾರುಣೀಷಣ** (ನಾ). ನೆಲವನ್ನು ಪಡೆಯುವ ಆಸೆ ; ರಾಜ್ಯದಾಸೆ : ಸತ್ಯವೆನಿಪ್ಪ ಸಬಳದಲಿ ಧಾರುಣೀಷಣ ದರ್ಪವೆಂಬಾ ತೋರ ಕರಡಿಯನಿಱಿದು ಸಮಯಾಚಾರವೆಂಬಾ ತೋಮರದಿನಘ ಖಡ್ಗಿಯಂ ಹಱಿಸಿ (ಬಸಪು. ೩೪-೩೪). [ <ಸಂ. ಧಾರಿಣೀಷಣ ]

**ಧಾರುಣೀಸುತೆ** (ನಾ). ಭೂಮಿಯ ಮಗಳು ; ಸೀತೆ : ಧಾರುಣೀಸುತೆಯು ವೊಲು ದೃಢಮನಸ್ಕರದಾರು ? (ಮಂಕುಳ. ೨೭೭). [ < ಸಂ. ಧಾರಿಣೀಸುತಾ ]

**ಧಾರುಣೀಸುರ** (ನಾ). ಭೂಸುರ ; ಬ್ರಾಹ್ಮಣ : ಧಾರುಣೀಸುರ ಕರ್ಮ ಜನ್ಮವು ಕ್ರೂರಕರ್ಮವಲಾ (ಬಸಪು. ೩-೪೫). [ <ಸಂ. ಧಾರಿಣೀಸುರ ]

**ಧಾರೆ** (ನಾ). ೧. ಪ್ರವಾಹ : ಈ ಜಲಪಾತವು ನಾಲ್ಕು ಧಾರೆಗಳಾಗಿ ಧುಮುಕುತ್ತದೆ (ಕಪಪು. ೭-೭೦). ೨. ಮೇಲಿನಿಂದ ಹರಿದು ಬರುವ ನೀರು, ಎಣ್ಣೆ ಮೊದಲಾದ ದ್ರವಪದಾರ್ಥಗಳ ಹರಿಯುವಿಕೆ : "ಓಘಃ, ಪ್ರವಾಹಃ, ವೇಣೀ, ಧಾರಾ, ಸ್ರೋತಃ, ರಯಃ – ಈ ೬ ತೊಱೆಯ ಹರಿಹು" (ಹಲಾಯು. ೧೦೦-೪೭) : "ಧಾರೆ ಪ್ರವಾಹವೋಘಂ ವೇಣಿ ರಯಮೆನಲು ನೀರ ಹರಿಯಕ್ಕು" (ಮಂಗರಾ. ೧೨೩-೧೨) : ಕ್ಷೀರಂ ದಧಿ [ಘೃ]ತ ಸಿತಮಧುಧಾರಾಳಿಯ ಲಕ್ಕೆಗಡುಗೆಗೊಟ್ಟ [ಸೊಂ]ಟಗೆ ಕರ್ಪೂರದಿ ಪೂರಣೆಮಾಡಿ ಮನೋರಾಗದೆ ಚಿತ್ರವಿಧದ ಪೂಜಾವಿಧಿಯಂ (ಸೌಇಇ. XX, ೪೯-೫೦ ; 1076 ?) ; ಕೋಪಿ ಮಜ್ಜನಕ್ಕೆಱೆದರೆ ರಕ್ತದ ಧಾರೆ (ಬಸವ. ೭೫೦) ; ಧಾರೆಗಳವನಿಯನೊಳಪೊಕ್ಕೋರಂತುಚ್ಚಳಿಸಿ ಮಿಱು ತಿರೆ . . . ತೆಱಪುಗುಡದೆ ಕಱೆದುವು ಮಳೆಗಳ್ (ಗಿರಿಕ. ೯-೪೯). ೩. ಎಡೆ ಬಿಡದೆ ಸುರಿವ ಮಳೆ ; ಧಾರಾಕಾರವಾಗಿ ಬೀಳುವ ಮಳೆ. ೪. (ಕತ್ತಿ ಮೊದಲಾದುವುಗಳ) ಹರಿತವಾದ ಅಂಚು,– ಅಲಗು,– ಬಾಯಿ : ಭೂಮಂಡಳಪತಿಯ ಖಡ್ಗಧಾರಾಜಳದೊಳ್ ಸಾಮ್ರಾಜ್ಯಲಕ್ಷ್ಮಿ ಸಲೆ ನೆಲಸಿರ್ಪಳ್ (ಕಾದಂಪೂ. ೧೧) ; ಶಿವಾಚಾರವೆಂಬುದೊಂದು ಬಾಳ ಬಾಯ ಧಾರೆ (ಬಸವ. ೭೮೯) ; ಪೊಸಮಸೆಯ ಧಾರೆಯೊಳ್ತಳ್ತಸೆದಿರೆ ಜಸದಗೆ ಗಳಂತೆ ಮುತ್ತುಗಳಿದಿರಾದ ಸುಹೃತ್ಕರಿಶಿರಮಂ ಪೋಳ್ದಿಸಿ ಮಿಸುಪುದು ಸೋಯಿದೇವಭೂವಲ್ಲಭನ (ಎಕ. V, ಚನ್ನರಾ. ೨೦೩-೧೮ ; 1223) ; ಚಪಳ ವಿಶಾಳಲೋಚನೆ ಜಯಾಂಗನೆ ಧಾರೆಯೊಳಿರ್ದು ನೋಡಿ ಮನ್ನಿಪಳೆನೆ

(ಅನಂಪು. ૩-೭) ; ನೀ ಸಹಿತ ನಿನ್ನೆಣೆಗಳಹ ಸೈಂಧವನನೀ ರಾಧೇಯು ಶಕುನಿಗಳ ರಣದೊಳಗೆ ಭೀಮಾರ್ಜುನರ ಮಾರ್ಗಣದ ಧಾರೆಗೆ ವೀರನಾರಾಯಣನೆ ಸೇರಿಸಿ ಕೊಡುವನು (ಕುವ್ಯಾ.ಸ. ೧೩-೭೮) ; ಕೂರಲಗ ಧಾರೆಯ ನಿರೀಕ್ಷಿಸುತ (ತೊರರಾ. ೩-೪-೦೫) ; ಹೆಂಗೊಲೆ ವೀರರಿಗೆ ವೈಸಿರಿಯೆ ತಂಗಿಗೆ ಪಾಟಿ ಬರುಹವೆ ಕೊರಳ ಖಡುಗದ ಧಾರೆ ಲೇಸೆಂದ (ನಿಭಾಗ. ೧೦-೩-೧೧) ; ಬಾನ ನೀಲಿಯ ಕುಡಿದು ನಕ್ಷತ್ರಗಳ ಮುಡಿದು ಮೋಡ– ಕುಡಿಮಿಂಚುಗಳ ಧಾರೆ ಹಿಡಿದು (ನಲಮು. ೫೦-೩). ೫. (ಮದುವೆಯಲ್ಲಿ) ಕೈನೀರೆರೆಯುವಿಕೆ ; ಕನ್ಯಾದಾನ : ನಾಳೆ ಶುಕ್ರವಾರ ಧಾರೆ (ನಾಲ್ಕುಮ. ೧೮) ; ಧಾರೆಸಮಯಕ್ಕೆ ಯಾಕೆ ಬರಲಿಲ್ಲ ? (ಸೋಕುಗ. ४೦). ೬. ದಾನ ಮಾಡುವಾಗ ಎರೆಯುವ ನೀರು ಮೊದಲಾದುವು : ಜನಮೇಜಯನು ಮುನ್ನಿತ್ತ ಅಗ್ರಹಾರವಿದು ಪುನರಪಿ ಸಮಗ್ರದಲ್ಲುದ್ಧರಿಸಿ ಧಾರೆಯನಗ್ರದಿಂದಿಂದೆಱೆದು . . . ಸಲಹಿ (ಬನವು. ೫೭-४೫) ; ತೋರಣವಿಂದಿರವಿಲ್ಲು ವೃಷ್ಟಿಯೇ ಸಂಗತಧಾರೆಯಾಲಿವರಲೊಪ್ಪುವ ಮುತ್ತಿನ ಸೇಸೆಯಾಗೆ ತಾರಂ ಗಗನಸ್ಥಳೀರಮೆಯುಮೊಂದಿದರೊಂದು ವಿವಾಹಲೀಲೆಯಂ (ರಾಜಶೇ. ೮-೧೧೮). ೭. ಸಾತತ್ಯ ; ಎಡೆಬಿಡದಿರುವಿಕೆ ; ನಿರಂತರತೆ : ಒಂದರ ಹಿಂದೆ ಒಂದು ಬರುವ ಅವಸ್ಥೆಗಳಲ್ಲಿ ಐಕ್ಯತೆ ಮತ್ತು ಧಾರೆ (ನಿರಂತರತೆ) ಇರಬಲ್ಲದು (ಜೀವಾತ್ಮ. ૩೨೭). ೮. [ಅಶ್ವಶಾ] ಕುದುರೆಯ ಆಸ್ಕಂದಿತ, ಧೌರಿತಕ, ರೇಚಿತ, ವಲ್ಗಿತ ಮತ್ತು ಪ್ಲುತಗಳೆಂಬ ಐದು ಬಗೆಯ ನಡಗೆಗಳು : ಐದು ಧಾರೆಗಳೆಂದ ತಿದ್ದುವಡೆವುದು. ಐದು ಧಾರೆಗಳು ಆವುವೆಂದರೆ ಆಸ್ಕಂದಿತ, ಧೌರಿತಕ, ರೇಚಿತ, ವಲ್ಗಿತ, ಪ್ಲುತ (ಅಶ್ವಟೀ. ३೪-೭). 'ಧಾರಾಪಂಚಕ', 'ಪಂಚಧಾರೆ$_1$' ಪರಾ.

**ಧಾರೆಯನೆಱೆ** = ಧಾರೆಯೆಱೆ ೨ : ತನುಗುಳ್ಳ ಸರ್ವರಾಜ್ಯವನು ವಿಶ್ವಾಮಿತ್ರಮುನಿಗೆ ಧಾರೆಯನೆಱೆದ[ಪಾಠಾಂ. ದಾನವನಿತ್ತ]ನವನೀಶನು (ಹರಿಶ್ಚ. ೮-೩೩). **ಧಾರೆಯಾಗಿಸು** = ಧಾರೆಯೆಱೆ ೨ : ಹೃದಯವನ್ನು ತನ್ನನ್ನಲ್ಲದ ಬೇರೆಯವರಿಗೆ ಧಾರೆಯಾಗಿಸಿದ್ದೇನೆಂದು ಆನಂದ ಬಗೆದ (ಕಮನ. ३೩೩). **ಧಾರೆಯಾಗು** = ಕನ್ಯಾದಾನವಿಧಿ ಪೂರೈಸು,–ಪೂರೈಕೆಯಾಗು : ಧಾರೆಯಾದ ನಂತರ ಕೈತೊಳೆಸಿ ಗಂಡಿನ ಕೈಯಿಂದ ಹೆಣ್ಣಿನ ಕೊರಳಿಗೆ ತಾಲಿ ಕಟ್ಟಿಸುತ್ತಾರೆ ಜೋಯಿಸರು (ನನ್ನೂರು. ४೦).

[ ಸಂ. ಧಾರಾ ]

**ಧಾರೆಕಂಕಣ** (ನಾ). ಧಾರೆಯೆರೆದು ಕೊಡುವಾಗ ಹೆಣ್ಣಿಗೆ ತೊಡಿಸುವ ಕಡಗ,–ಬಳೆ : ಧಾರೆಕಂಕಣ ಚೂಡ್ಕ ತೋಳ್ಬಾಯಿತ . . . ವೀರಮುದ್ರಿಕೆಯ ಗಂಭೀರಳಿಟ್ಟು (ಕರ್ನಾಕ. ३೩೭). [ ಧಾರೆ + ಕಂಕಣ ]

**ಧಾರೆಗಟ್ಟು** (ಕ್ರಿ). ಧಾರಾಕಾರವಾಗು ; ಎಡೆಬಿಡದೆ ಸುರಿ : ಸೃಷ್ಟಿಕರ್ತನ ಭಾವನಾಪ್ರವಾಹವೇ ಕಾವ್ಯರೂಪದಿಂದ ಧಾರೆಗಟ್ಟಿ ಹರಿಯುತ್ತಿರುವುದೊ ಎಂದೆನಿಸುವುದು (ಮುಂಗಾಪು. ೭೦) ; ಶರೀರದಲ್ಲಿಯ ಬೆವರು ಧಾರೆಗಟ್ಟುವ ತನಕ ದುಡಿಯುವೆನು (ಬ್ರಹ್ಮಜೀ. ೦४४) ; ಕಣ್ಣೀರು ಧಾರೆಗಟ್ಟಿ ಹರಿಯ ಹತ್ತಿದವು (ವ್ಯಸಿ. ೦೫) ; ಕಣ್ಣೀರು ಧಾರೆಗಟ್ಟಿಹವು ಕೊಳ್ಳ ತುಂಬಿ (ಸಿದ್ಧಪು. ೫-೯४). [ ಧಾರೆ + ಕಟ್ಟು$_1$ ]

**ಧಾರೆಗಱೆ** (ಕ್ರಿ). ಧಾರಾಕಾರವಾಗಿ ಸುರಿಸು : ಮಿಗೆ ವಸುಧಾರೆಗಱೆದದಱಿಂದ ವಸುಮತಿಯು ಭೂಲಲನೆಗಾ ರತ್ನಗರ್ಭೆಯು ಮೇಲೆನಿಸಿದಾ ಪೆಸರೆರಡು ಸಮ್ಮೇಳವಾಯ್ತು (ಸಾಳ್ವಭಾ. ೩૩-४). [ ಧಾರೆ + ಕಱೆ$_1$ ]

**ಧಾರೆಗಾಳೆ** (ನಾ). ಒಂದು ಬಗೆಯ ಕಹಳೆ : ಪರಮ್ಪರಂ ಪಳಂಚಲೆದು ಬಂದಡೆ ವಿಕ್ರಮಚಕ್ರಿ ತಂನನಾದರಿಸಿ ವಿ[ಳ್ಳಾ]ಸದಿಂ ಧವಳಶಂಖಮನಗ್ಗದ ಧಾ[ರೆ]ಗಾಳೆಯಂ ಬಿರುದಿನ ತಾಮಮಂ . . . ಅಚ್ಚರಿಯೆನೆ ಪೆತ್ತ ಪೆಂಪಿನಳವಾರಳವೀಶ್ವರದಣ್ಣನಾಥನ (ಸೌಇಇ. XX, ೭४-೧೩ ; 1112).

[ ಧಾರೆ? + ಕಾಳೆ (<ಕಹಳೆ) ]

**ಧಾರೆಗೆದಱು** (ಕ್ರಿ). ಧಾರೆಯಾಗಿ ಹರಡು ; ಧಾರಾಕಾರವಾಗಿ ಪಸರಿಸು : ಅದಱ ಕರ್ಣಚಮರದ ರೆಱಂಕೆಯಂತೆ ಜಲ್ಲನೊಟ್ಟಿ ಧಾರೆಗೆದಱಿ ಪೀರ್ದೈಸಿ ಸೂಸುವುಭಯಕಟದ ಸೊರ್ಕುಕದಡಿನ ತೆರ್ಕೆಗಡಲ್ಗಳ್ (ಅನಂಪು. ೧३-३೦ ವ). [ ಧಾರೆ + ಕೆದಱು$_1$ (<ಕೆದಱ್$_1$) ]

**ಧಾರೆಗೊಳ್** (ಕ್ರಿ). ಧಾರಾಪೂರ್ವಕವಾಗಿ ಪಡೆ ; ದಾನವಾಗಿ ಸ್ವೀಕರಿಸು : ಗೊಳಿಗನ ಕಟ್ಟೆಯಲ್ಲಿ ಮಹಾಜನಂಗಳ ಕೈಯ್ಯಲು ಧಾರೆಗೊಂಡ ಕೆಯಿ ಮತ್ತರು ಮೂಱು (ಸೌಇಇ. IX-I, ३३३-೫೦ ; 1215).

[ ಧಾರೆ + ಕೊಳ್$_1$ ]

**ಧಾರೆಣ್ಣೆ** (ನಾ). (ನಂದಾದೀವಿಗೆಗೆ) ಸದಾ ಪೂರೈಸಬೇಕಾದ ಎಣ್ಣೆ : ದೇವರ ನಂದಾದೀವಿಗೆ ನಡೆವಂತಾಗಿ ಗಾಣಂಗಳನಿತೊಡವನಿತಱಲುಂ ಹೊಯ್ವ ಗಾಣಗಳಲು ಪ್ರತ್ಯೇಕ ನೋಡಿ ಕೊಂಬಂತಾಗಿ ಬಿಟ್ಟ ಧಾರೆಣ್ಣೆ ಯದ್ದ ಸೊಳಸ (ಕಇ. I, ३೫-४೦ ; ಸು. 1186). [ ಧಾರೆ + ಎಣ್ಣೆ ]

**ಧಾರೆನೀರು** (ನಾ). ಕನ್ಯಾದಾನವಿಧಿಯಲ್ಲಿ ವರನ ಕೈಗಳಲ್ಲಿ ವಧುವಿನ ಕೈಗಳನ್ನಿರಿಸಿ ಧಾರೆ ಎರೆಯುವ ನೀರು.

[ ಧಾರೆ + ನೀರು$_1$ (< ನೀರ್$_1$) ]

**ಧಾರೆಮುಹೂರ್ತ** (ನಾ). ಕನ್ಯೆಯನ್ನು ಧಾರಾಪೂರ್ವಕವಾಗಿ ದಾನ ಮಾಡುವ ಲಗ್ನ,–ಸಮಯ : 'ಇವತ್ತೇನು ದಿಬ್ಬಣ ಧಾರೆಮುಹೂರ್ತಕ್ಕೆ ಬರಾ ತರಾ ಇಲ್ಲ !' ಅಂತಾ ಹೇಳ್ತಾ ಇದ್ದ (ಮಲಮ. ೭೫೦).

[ ಧಾರೆ + ಮುಹೂರ್ತ ]

**ಧಾರೆಯೆರೆ** 'ಧಾರೆಯೆಱೆ' ನೋ.

**ಧಾರೆಯೆಱೆ, ಧಾರೆಯೆರೆ** (ಕ್ರಿ). ೧. ಕನ್ಯಾದಾನ ಮಾಡು ; ಮದುವೆಮಾಡಿಕೊಡು : ಧಾರೆಯೆಱೆದನು ದ್ರುಪದ ಪಾಂಡುಕುಮಾರರಿಗೆ ನಿಜಸುತೆಯನು (ಕುವ್ಯಾಆ. ೧೭-೬೫). ೨. ಧಾರಾಪೂರ್ವಕವಾಗಿ ದಾನಮಾಡು : ಆ ನೆಲನ ದೇವರ್ಗ್ಗೆ ಧಾರೆಯೆಱೆದು ಕೊಟ್ಟು ತಮ್ಮ ಧರ್ಮ್ಮಂ ಮಾಡಿ ಪ್ರತಿಪಾಳಿಸಿದರ್ (ಸೌಇಇ. XX, ३೧-೭३ ; 1019) ; ಹಿಡಿಯದಿರು ಮುರವೈರಿ ಪಾರ್ಥನ ಬಿಡುಬಿಡೀತನ ಖಡ್ಗಕಿದೆಯೆನ್ನೊಡಲು ತನ್ನನೆ ಧಾರೆಯೆಱೆದೆನು ನಯನವಾರಿಯಲಿ (ಕುವ್ಯಾಕ. ೧೭-४) ; ಭೂಸುರರಿಗೊಲಿದು ಊರುಗಳ ನೂಱಗ್ರಹಾರವ ಧಾರೆಯೆಱೆದಿತ್ತಂತೆ ಫಲ ಕೈಸೇರುವದು (ಹರಿಸಾ. ೧೦೬). **ಧಾರೆಯೆರೆ** : ೧. ಮಗಳನ್ನು ಧಾರೆಯೆರೆದು ನರಸಿಂಹಯ್ಯನಿಗೆ ಒಪ್ಪಿಸಿದರು (ಕೀಲುಗೊಂ. ೩೫) ; ಇಂದು ಧಾರೆಯೆರೆಯುವ ದಿನ (ಮೂಲಾನ. ೧३४) ; ಪಂಡಿತರು . . . ಅಧಿಕ ಸಂತೋಷದಿಂದ ತಮ್ಮ ಹೃದಯಮಣಿಯಂತಿದ್ದ ಮಗಳನ್ನು ಪ್ರಭುಗಳಿಗೆ ಧಾರೆಯೆರೆದು ಕೊಟ್ಟರು (ಶಾಂತಲಾ. ೧೦೮). ೩. ಸಮರ್ಪಿಸು ; ನೀಡು : ಉಪಯುಕ್ತವಾದ ಗ್ರಂಥಗಳ ಬೆಳವಣಿಗೆಗೆ ತಮ್ಮ ಸರ್ವಸಾಹಸವನ್ನೂ ಧಾರೆಯೆರೆಯುವುದು ಅವರ ವಿದ್ಯಾಪ್ರೇಮವನ್ನು ವ್ಯಕ್ತಪಡಿಸುತ್ತದೆ (ನೀಗಟ್ಟು. ೭४) ; ಇರುವ ಪ್ರೀತಿಯ ಧಾರೆಯೆರೆ ದಿರಿ, ಮಮತೆ ಹೂಗಳ ಸುರಿದಿರಿ (ನಲವು. ೫३-೫).

**ಧಾರೆಯೆರೆದು ಕೊಡು**=ಮದುವೆ ಮಾಡಿಕೊಡು : ಮಗಳನ್ನು ಎಂಟನೆಯ ವರುಷದಲ್ಲಿಯೇ ಧಾರೆಯೆರೆದು ಕೊಡದ್ದು ದೊಡ್ಡ ಅಪರಾಧವೂ ಆಗಿದ್ದಿತು (ಗಂಗಾಸಾ. ३೭). [ ಧಾರೆ + ಎಱೆ$_1$ ]

**ಧಾರೆವಟ್ಟಲು** (ನಾ). ೧. ಅಭಿಷೇಕಕ್ಕಾಗಿ ದೇವರ ತಲೆಯ ಮೇಲೆ ತೂಗುಬಿಟ್ಟ ಧಾರಾಪಾತ್ರೆ. ೨. ಸೋಸುವ ಪಾತ್ರೆ : ಮನ ಧಾರೆವಟ್ಟಲು ಕೂಡಲಸಂಗನ ಶರಣರು ಹಿಡಿಯದ ಭಂಡವನು ಆರಾದೊಡಾಗಲಿ ಹೋಗಲೀಯರಯ್ಯಾ (ಬಸವ. ३३८) ; ಈರ್ಬ್ಬದು ತಲೆಯನರಿದು ಧಾರೆವಟ್ಟಲಲಿ [ಪಾಠಾಂ. ನಿ]ಕ್ಕಿ ಧಾರುಣಿಯ ಮೇಲೆ ತಂದಿರಿಸಿದವರಾರೋ (ಅವಚಂ. ೬೭-३४೦) ; ಧಾರೆವಟ್ಟಲ ಕಳೆದುಕೊಂಡು ನೀರ ಸೋದಿಸಿ ನೋಡಿದರೆ ದೂರದಲಿ ಕಾಣಬರುತ್ತಿಹುದು ನೋಡಾ (ಅವಚಂ. ೭೫-३३೦). ೩. ಜರಡಿ :

ಲಿಂಗದಲ್ಲಿ ಕಠಿಣವುಂಟೆ . . . ಪ್ರಸಾದದಲ್ಲಿ ಅನುರುಚಿಯುಂಟೆ ಈ ತ್ರಿವಿಧ ದಲ್ಲಿ ಭಾವಭೇದವನಱಸುವೆನು ಕೂಡಲಸಂಗಮದೇವಾ ಧಾರೆವಟ್ಟಲೆನ್ನ ಭಕ್ತಿ (ಬಸವ. ೨೮೫); ಬಿಟ್ಟು ರಸವನುಱಿ ಕಸವ ಪಿಡಿವ ಧಾರೆವಟ್ಟಲ ಪೋಲ್ವ ದೂಸಕರು (ನಾಗಕು. ೧-೭೨). [ಧಾರೆ + ಬಟ್ಟಲು(<ಬಟ್ಟಲ್)]

**ಧಾರೆಸೀರೆ** (ನಾ). ಧಾರೆಯೆರೆದು ಕೊಡುವಾಗ ಹೆಣ್ಣಿಗೆ ಉಡಿಸುವ ಸೀರೆ : ಪೆಟ್ಟಿಗೆಯ ಮೇಲೆ ಮುಚ್ಚಳಕ್ಕೆ ಬಿಗಿದ ಧಾರೆಸೀರೆ ಮತ್ತು ಕುಪ್ಪಸ (ನನ್ನೂರು. ೮೩). [ಧಾರೆ + ಸೀರೆ]

**ಧಾರೆಹುಳಿ** 'ದಾರೆಹುಳಿ' ನೋ.

**ಧಾರೋದಕ** (ನಾ). = ಧಾರೆನೀರು : ಧಾರೋದಕದಿಂದ ಯಥಾವಿಧಿಯಾಗಿ ಧಾರೆಯೆರೆದು ... ಶಾಂತಲೆಯನ್ನು ಆ ಮಹಾಭಾಗನಿಗೆ ಇತ್ತರು (ಶಾಂತಲಾ. ೧೦೮). [ಸಂ.]

**ಧಾರೋಷ್ಣ** (ಗು). ೧. (ಹಾಲು) ಕರೆಯುವಾಗ ಧಾರೆಯಲ್ಲಿ ಇರುವಷ್ಟು ಬಿಸಿಯ: ಆರೋಗ್ಯವುಳ್ಳ ದನದ ಆಗ ತಾನೆ ಕರೆದ ಧಾರೋಷ್ಣ ಹಾಲು ಕುಡಿಸುವುದು (ಮನಮ. ೨೩). (ನಾ). ೨. ಆಗ ತಾನೇ ಕರೆದ ಬೆಚ್ಚನೆ ಹಾಲು : ಏಲಕ್ಕಿ, ಜೀರಿಗೆಯು ಸಮಸಕ್ಕರೆಗೂಡಿ ನಿತ್ಯವು ೨ ವರಹತೂಕವು ಧಾರೋಷ್ಣದಲ್ಲಿ ತೆಗೆದುಕೊಳ್ಳಲು ಪಿತ್ತಹರ (ಸಕವ್ಯ. ೧೩೩). [ಸಂ.]

**ಧಾರ್ತರಾಷ್ಟ್ರ** (ನಾ). ೧. ಧೃತರಾಷ್ಟ್ರನ ಮಗ; ಕೌರವ; (ವಿಶೇಷವಾಗಿ) ದುರ್ಯೋಧನ ; ೱ ನೂರು ಜನ ಧಾರ್ತರಾಷ್ಟ್ರರ (ಧೃತರಾಷ್ಟ್ರನ ಪುತ್ರರ) ಹೆಸರುಗಳ ಪಟ್ಟಿ ಹೀಗಿದೆ : ದುರ್ಯೋಧನ, ದುಶ್ಶಾಸನ, ದುಸ್ಸಹ, ದುಶ್ಶಲ, ಜಲಸಂಧ, ಸಮ, ಸಹ, ವಿಂದ, ಅನುವಿಂದ, ದುರ್ಧರ್ಷ, ಸುಬಾಹು, ದುಷ್ಪ್ರಧರ್ಷಣ, ದುರ್ಮರ್ಷಣ, ದುರ್ಮುಖ, ದುಷ್ಕರ್ಣ, ಕರ್ಣ, ವಿವಿಂಶತಿ, ವಿಕರ್ಣ, ಶಲ, ಸತ್ವ, ಸುಲೋಚನ, ಚಿತ್ರ, ಉಪಚಿತ್ರ, ಚಿತ್ರಾಕ್ಷ, ಚಾರುಚಿತ್ರ (ಶರಾಸನ), ದುರ್ಮದ, ದುರ್ವಿಗಾಹ, ವಿವಿತ್ಸು, ವಿಕಟಾನನ, ಊರ್ಣನಾಭ, ಸುನಾಭ, ನಂದ, ಉಪನಂದಕ, ಚಿತ್ರಬಾಣ, ಚಿತ್ರವರ್ಮ, ಸುವರ್ಮ, ದುರ್ವಿರೋಚನ, ಅಯೋಬಾಹು, ಮಹಾಬಾಹು, ಚಿತ್ರಾಂಗ, ಚಿತ್ರಕುಂಡಲ, ಭೀಮವೇಗ, ಭೀಮಬಲ, ಬಲಾಕೀ, ಬಲವರ್ಧನ, ಉಗ್ರಾಯುಧ, ಸುಷೇಣ, ಕುಂಡೋದರ, ಮಹೋದರ, ಚಿತ್ರಾಯುಧ, ನಿಷಂಗೀ, ಪಾಶೀ, ವೃಂದಾರಕ, ದೃಢವರ್ಮ, ದೃಢಕ್ಷತ್ರ, ಸೋಮಕೀರ್ತಿ, ಅನೂದರ, ದೃಢಸಂಧ, ಜರಾಸಂಧ, ಸತ್ಯಸಂಧ, ಸದಸ್ಸುವಾಕ್, ಉಗ್ರಶ್ರವ, ಉಗ್ರಸೇನ, ಸೇನಾನೀ, ದುಷ್ಪರಾಜಯ, ಅಪರಾಜಿತ, ಪಂಡಿತಕ, ವಿಶಾಲಾಕ್ಷ, ದುರಾಧರ, ದೃಢಹಸ್ತ, ಸುಹಸ್ತ, ವಾತವೇಗ, ಸುವರ್ಚಸ (ಬಹ್ವಾಶೀ), ಆದಿತ್ಯಕೇತು, ನಾಗದತ್ತ, ಅಗ್ರಯಾಯಿ, ಕವಚೀ, ಕ್ರಥನ, ದಂಡೀ, ದಂಡಧಾರ, ಧನುರ್ಗ್ರಹ, ಉಗ್ರ, ಭೀಮರಥ, ವೀರಬಾಹು, ಅಲೋಲುಪ, ಅಭಯ, ರೌದ್ರಕರ್ಮ, ದೃಢರಥಾಶ್ರಯ, ಅನಾಧೃಷ್ಯ, ಕುಂಡಭೇದೀ, ವಿರಾವೀ, ಚಿತ್ರಕುಂಡಲ, ಪ್ರಮಥ, ಪ್ರಮಾಥೀ (ವೀರ್ಯವಾನ್), ದೀರ್ಘರೋಮ, ದೀರ್ಘಬಾಹು, ಮಹಾಬಾಹು, ವ್ಯೂಢೋರು, ಕನಕಧ್ವಜ (ಕುಂಡಾಶೀ), ವಿರಜಾ. ಹೀಗೆ ಧೃತರಾಷ್ಟ್ರನಿಗೆ ನೂರು ಜನ ಗಂಡುಮಕ್ಕಳೂ ದುಶ್ಶಲಾ ಎಂಬ ಹೆಣ್ಣುಮಗಳೂ ಗಾಂಧಾರಿಯಲ್ಲಿ ಜನಿಸಿದರು. ಯುಯುತ್ಸು ಎಂಬುವನು ಧೃತರಾಷ್ಟ್ರನಿಗೆ ವೇಶ್ಯೆಯಲ್ಲಿ ಹುಟ್ಟಿದ ಮಗ. ಹೀಗೆ ಧಾರ್ತರಾಷ್ಟ್ರರು 'ನೂರೊಂದು ಮಂದಿ' ಎಂದು ಮಹಾಭಾರತದ ಆದಿಪರ್ವದ ೧೧೭ನೆಯ ಅಧ್ಯಾಯದಲ್ಲಿ ಹೇಳಿದೆ (ಗೋರಖಪುರದ ಪ್ರತಿ). ಇವರ ಹೆಸರು ಮತ್ತು ಆನುಪೂರ್ವಿಯಲ್ಲಿ ಬೇರೆ ಬೇರೆ ಪ್ರತಿಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವು ಕಂಡುಬಂದಿದೆ. (ಶ್ರೀವತ್ಸ. ೨೨೩ ನೋ) : ಕೆಡೆದನಿಳಾಭಾಗದೊಳ್ ಧಾರ್ತರಾಷ್ಟ್ರಂ (ಪಂಪಭಾ. ೧೩-೯೬) ; ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ (ಗದಾಯು. ೬-೩೦). ೨. ಕೊಕ್ಕು ಮತ್ತು ಕಾಲು ಕಪ್ಪಾಗಿರುವ ಹಂಸ ಪಕ್ಷಿ : "ಕರಿಯವಪ್ಪ ಕಾಲ್ಗೊಂಗಂಗಳಿಂ ಧಾರ್ತರಾಷ್ಟ್ರಂಗಳೆಂಬುದು" (ಹಲಾಯು. ೪೨-೯೯) : "ಆ ಕಾಲ್ಗೊಗಂ ಕಪ್ಪನಲು ಧಾರ್ತರಾಷ್ಟ್ರವೆನಿಕು" (ಮಂಗರಾ. ೫೦-೭). ೧, ೨ : ಭ್ರೂಲತೆಯ ಸುರಚಾಪದುರುಕೇಶಾಳಿಗಳ ಕಾರ್ಮುಗಿಲಪಾಂಗದ ಸಾಲ ಕುಡಿಮಿಂಚುಗಳ ನೂಪುರರವದ ಮೊಳಗುಗಳ ಆ ಲತಾಂಗಿಯ ಗಮನವೇ ಮಳೆಗಾಲದಂತಿರೆ ಧಾರ್ತರಾಷ್ಟ್ರಕುಲಾಳಿ ನಿಲುವುದೆ ಪವನಜನ ಸಂಪ್ರತಿಯ ಸೇರುವೆಗೆ (ಕುಮ್ಯಾಉ. ೬-೧೭) ; ಅಹಿತರುಗಳಂ ಧಾರ್ತರಾಷ್ಟ್ರರಂ ಕೂಡಿಕೊಂಡಿಹುದಱಿಂದಚಲನಾಗಿಹೆನೆಂದು ಹರಿಯೊಡನೆ ಬಹ ಪಾರ್ಥನಂ ಕರೆದು ಮೂದಲಿಪ ತೆಱದಿಂದೆ ವಿಂಧ್ಯಾದ್ರಿ ಮುಂದೆಸದುದು (ಜೈಮಿಭಾ. ೧೦-೨). [ಸಂ.]

**ಧಾರ್ಮಿಕ** (ಗು). ೧. ಧರ್ಮಕ್ಕೆ ಸಂಬಂಧಪಟ್ಟ ; ಮತ ಅಥವಾ ದರ್ಶನಕ್ಕೆ ಸಂಬಂಧಿಸಿದ : ವಿಚಾರಪರ ತಾತ್ವಿಕ ಧಾರ್ಮಿಕಗ್ರಂಥಗಳು ರವೀಂದ್ರರನ್ನು ಸಾಹಿತ್ಯಲೋಕದ 'ಗುರುದೇವ'ನನ್ನಾಗಿ ಮಾಡಿವೆ (ಧರ್ಮಸಾ. ೮೧) ; ಯಾವುದಾದರೂ ಧಾರ್ಮಿಕ ಅಥವಾ ಸಾಂಪ್ರದಾಯಿಕ ಸಂಸ್ಥೆಯ ಕಾರ್ಯಕಲಾಪಗಳ ಸಂಬಂಧದ ಯಾವನಾದರೂ ಪದಧಾರಿಯಾಗಲಿ . . . ಯಾವುದಾದರೂ ವಿಶಿಷ್ಟ ಸಂಪ್ರದಾಯಕ್ಕೆ ಸೇರಿದವನಾಗಿ ಇರಬೇಕೆಂದು ಉಪಬಂಧವನ್ನು ಮಾಡಿರುವ ಯಾವುದೊಂದು ವಿಧಿಯು ಅಮಲಿಗೂ ಬಾಧಕವಾಗತಕ್ಕುದಲ್ಲ (ಭಾಧಾನ. ೯). ೨. ಧರ್ಮಬುದ್ಧಿಯ; ಧರ್ಮಿಷ್ಠನಾದ : ಆ ಬಡಗೆಟ್ಟ ಬಡ ಹುಡುಗರು ಉಣ್ಣುವ ಸಂಭ್ರಮ ನೋಡಿ, ಆ ಧಾರ್ಮಿಕ ವೈದ್ಯನಿಗೆ ಪರಮಸಂತೋಷವಾಯಿತು (ಮುಂಬಯಿ. ೪-೭೮). (ನಾ). ೩. ಧರ್ಮದಿಂದ ಕೂಡಿದುದು ; ಪುಣ್ಯಕರವಾದುದು: ಕೃತಯುಗವಾದುದು ಕಲಿಯುಗವಿತಿ ಧಾರ್ಮಿಕಮಾಯ್ತು ವಿಕ್ರಮಾದಿತ್ಯನೃಪಂ ಪ್ರತಿಪಾಳಿಪ ರಾಷ್ಟ್ರಂ (ಎಇ. XXVIII, ೫-೯ ; 1082). ೪. ಧರ್ಮವನ್ನು ಆಚರಿಸುವವನು : ಬಸವಾಯಂ ಕವಿ ವಾಗ್ಮಿ ದೀರ್ಘಮುಖಕಂಠಂ ಧಾರ್ಮಿಕಂ ತ್ಯಾಗಿ . . . ಧನುರ್ಗೇಹಜಂ (ಜಾತತಿ. ೧೭-೯) ; ಧರ್ಮಂ ಧಾರ್ಮಿಕನಿಂದೆ ನಿಲ್ವುದದಱಿಂದು ಧಾರ್ಮಿಕಾಗ್ರೇಸರಂ ಧರ್ಮಂ (ಅನಂಪು. ೩-೬೩) ; ಶಾಪಥವೇಕೆ ನಿಮಗಿದು ಪಾಂಡುಪುತ್ರರು ನೀವು ಧಾರ್ಮಿಕರು (ಕುಮ್ಯಾಆ. ೧೬-೩೪) ; ಫಲಸಂಪ್ರಸರ ಛತ್ರವನೆಸಗಿಯುಪವನ ವೆಸೆದುದೈ ಧಾರ್ಮಿಕನವೊಲು ಯದುರಾಯನಿದಿರಿನಲಿ (ಕುಮ್ಯಾಉ. ೬-೨೪). ೫. ಬಿಲ್ಲನ್ನು ಹಿಡಿದಿರುವವನು. ೪, ೫ : ಮಾಣಿಯ ಕೌಂಕುಟಿ ಚರಿತ ಪುರಾಣದ ಕವಳಿಗೆ ಸಮಾನಮಾಯ್ತು ಮಳಿವಟೋಬಾಣಂ ತೆಕ್ಕನೆ ತೀವಿದ ತೂಣೀರತಳಾಗ್ರಭಾಗದೊಳ್ ಧಾರ್ಮಿಕನಾ (ಅನಂಪು. ೨-೪೫). [ಸಂ.]

**ಧಾರ್ಮಿಕಜನ** (ನಾ). ಧರ್ಮದಲ್ಲಿ ಶ್ರದ್ಧೆಯುಳ್ಳ ಜನ; ಧರ್ಮಿಷ್ಠರಾದ ಮಂದಿ : ಧಾರ್ಮಿಕಜನಜನಿತಾನಂದಸಂದೋಹವಿದ್ಯಾರಸದೊಳ್ ಸಂಸಾರ ಸಾರೋದಯವಿರಚಿತದೊಳ್ ವಾಗ್ವಧೂಮುದ್ರೆಯೊಳ್ ಮುದ್ರಿಸಿ ನಿಂದತ್ತಾದಿತೀರ್ಥೇಶ್ವರನ ಚರಿತದೊಳ್ ವಾಕ್ಯಮಾಣಿಕ್ಯಕೋಶಂ (ಆದಿಪು. ೧೭-೭೯). [ಧಾರ್ಮಿಕ + ಜನ]

**ಧಾರ್ಮಿಕಜಿಜ್ಞಾಸೆ** (ನಾ). ೧. ಧರ್ಮವನ್ನು ಕುರಿತ ಆಸಕ್ತಿ, ಕುತೂಹಲ. ೨. ಧರ್ಮವನ್ನು ಕುರಿತ ವಾದ : ಅನುಭವಮಂಟಪದಲ್ಲಿ ನಡೆದ ಧಾರ್ಮಿಕಜಿಜ್ಞಾಸೆಯ ಸಮಯದಲ್ಲಿ ಅಪಾರವಾದ ವಚನರಾಶಿ ನಿರ್ಮಾಣವಾಯ್ತು (ಶೂನ್ಯಕು. ೨೫). [ಧಾರ್ಮಿಕ + ಜಿಜ್ಞಾಸೆ]

**ಧಾರ್ಮಿಕತತ್ವ** (ನಾ). ಧರ್ಮಕ್ಕೆ ಸಂಬಂಧಿಸಿದ ಸಿದ್ಧಾಂತ : ಶೂನ್ಯ ಸಂಪಾದನೆಯಲ್ಲಿ ಅನೇಕ ಧಾರ್ಮಿಕತತ್ವಗಳ . . . ಪ್ರಸಕ್ತಿ ಬರುತ್ತದೆ (ಶೂನ್ಯಕು. ೧೨೯). [ಧಾರ್ಮಿಕ + ತತ್ವ$_1$]

**ಧಾರ್ಮಿಕತನ** (ನಾ). ಸದಾಚಾರಸಂಪನ್ನತೆ ; ಗುಣವಂತಿಕೆ ; ಧರ್ಮಪರತೆ : ವಿದೇಹ ಪರಂಪರೆಯ ನೃಪರ ಚರಿತವನು ಕೊಂಡಾಡಿ ಜನಕನ ನಿರತಿಶಯವಂಶಪ್ರಸಿದ್ಧಸ್ಫುರಿತಧಾರ್ಮಿಕತನವನೊರೆದನು ಮುನಿ ವಸಿಷ್ಠಂಗೆ (ತೊರರಾ. ೧-೧೬-೨೦). [ ಧಾರ್ಮಿಕ + – ತನ ]

**ಧಾರ್ಮಿಕತೆ** (ನಾ). = ಧಾರ್ಮಿಕತನ : ಅಜಂತಾಕಲೆಯಲ್ಲಿನ ಮಾನವೀ ಲಕ್ಷಣ, ಸಂತೋಷ, ನಯವಾದ ಉದ್ದೀಪನ, ಪರಿಶುದ್ಧ ಧಾರ್ಮಿಕತೆ ಇವೆಲ್ಲವೂ ರಜಪೂತ ಕಲೆಯಲ್ಲಿದೆ (ಭಾರದ. ೫೩೯). [ಸಂ. ಧಾರ್ಮಿಕತಾ ]

**ಧಾರ್ಮಿಕವೃತ್ತಿ**(ನಾ). ೧. ಧರ್ಮಕ್ಕೆ ಸಂಬಂಧಪಟ್ಟ ವೃತ್ತಿ,-ನಡವಳಿಕೆ. ೨. ಬಿಲ್ಲನ್ನು ಹಿಡಿದಿರುವುದು. ೧, ೨: ವಿತತಗುಣಮಾರ್ಗಣಾಸಕ್ತತೆಯಿಂದನವರತ ಮೋಕ್ಷಸಂಧಾನವಮನಸ್ಕತೆಯಿಂ ಧಾರ್ಮಿಕವೃತ್ತಿಯಿನತಿಶಯಿಪಂ ನೇಮಿಚಂದ್ರಸೈದ್ಧಾಂತೀಶಂ (ಚಂದ್ರಪು. ೧-೩೪). [ ಧಾರ್ಮಿಕ + ವೃತ್ತಿ₂ ]

**ಧಾರ್ಮಿಕಶಿಕ್ಷಣ** (ನಾ). ಮತೀಯ ತತ್ತ್ವಗಳ ಹಾಗೂ ಆಚಾರಗಳ ಬೋಧನೆ: ರಾಜ್ಯನಿಧಿಯಿಂದ ಸಂಪೂರ್ಣವಾಗಿ ಪೋಷಿತವಾದ ಯಾವುದೇ ವಿದ್ಯಾಸಂಸ್ಥೆಯಲ್ಲಿ ಯಾವ ಧಾರ್ಮಿಕ ಶಿಕ್ಷಣವನ್ನೂ ಕೊಡತಕ್ಕುದಲ್ಲ (ಭಾಧಾನ. ೧೬). [ ಧಾರ್ಮಿಕ + ಶಿಕ್ಷಣ ]

**ಧಾರ್ಷ್ಟಿಕ** (ಗು). ದಿಟ್ಟನಾದ ; ಧೈರ್ಯವಂತನಾದ. [ಸಂ. ]

**ಧಾರ್ಷ್ಟ್ಯ** (ನಾ). ೧. ಉದ್ಧಟತನ ; ಔದ್ಧತ್ಯ ; ಕೊಬ್ಬು : ಬಿನ್ನಪಂಗೆಯ್ವುದೆ ಧಾರ್ಷ್ಟ್ಯಂ ಸೇವೆಯುಂ ಚಾಪಲಂ . . . ಈವುದೆ ವಿಭವದ ಗರ್ವಂಬೊಲಾದಪ್ಪುದೀಗಳ್ (ಕಾದಂಉ. ೧೧೨) ; ಏದೊರೆ ಪೆಂಪೊ ಲಕ್ಷ್ಮೀನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕಂ ... ಎಂದೆನಿಪ್ಪ ದುಗ್ಧೋದಧಿತಲ್ಪನಂ ನರನಭಿಷ್ಟುತಿಗೆಯ್ವುದು ಧಾರ್ಷ್ಟ್ಯಮಲ್ಲವೇ (ಜಗನಿ. ೧-೨೦) ; ಬಂಗಾಳಿ ಭಾಷೆಯ ಪರಿಚಯವಿಲ್ಲದ ನಾನು ಠಾಕೂರರ ಶೈಲಿಯ ಪ್ರಸ್ತಾಪ ಮಾಡಿರುವುದು ಒಂದು ದೃಷ್ಟಿಯಿಂದ ಧಾರ್ಷ್ಟ್ಯ (ನಿಬಂಧ. II, IX ಮುನ್ನುಡಿ). ೨. ದಿಟ್ಟತನ ; ಕೆಚ್ಚು ; ಧೈರ್ಯ : ಸರ್ ಕೆ. ಶೇಷಾದ್ರಿ ಅಯ್ಯರ್ ಅವರ ಧಾರ್ಷ್ಟ್ಯದಿಂದಲೂ . . . ದೇಶವು ಹೊಸರೂಪವನ್ನೇ ತಾಳಿತು (ಮೈವಾಸು. ೨೦). [ಸಂ. ]

**ಧಾರ್ಷ್ಣ್ಯ** (ನಾ). ಉದ್ಧಟತನ ; ಜೋರು ; ಜುಲುಮು ; ಒರಟುತನ. [ಸಂ. ]

**ಧಾಲಕೆ ?** (ನಾ). (?) : ಸ್ವಸ್ತ್ಯಕಾಳವರಿಷದೇವ ಶ್ರೀಪ್ರುಥು(ಥಿ)ವೀವಲ್ಲಭ ಮಹಾರಾಜಾಧಿರಾಜನಾನೆವೆಡೆ(ಡ)ಜ್ಞಂ ಮದಗಜಮಲ್ಲಂ ಧಾಲಕೆ ನಲ್ಲಾತಂ ಶ್ರೀಕನ್ನರದೇವನ ರಾಜ್ಯಮುತ್ತರೋತ್ತರಂ ಸಲುತ್ತಿರೆ (ಇಆ. XII,೨೫೭-೨; 951). [ P ಇದು 'ಧಲಕೆ' ಎಂಬುದರ ಅಪಲಿಖಿತವಿರಬಹುದು ]

**ಧಾವ** (ನಾ). (ಉಕ) ಬಂಡಿಯ ಗಾಲಿಗಳಿಗೆ ಸಂತ್ತಲೂ ಬಡಿದಿರುವ ಕಬ್ಬಿಣದ ಪಟ್ಟಿ ; ಚಕ್ರದ ಪಟ್ಟಿ ; ಗಾಡಿಪಟ್ಟಿ ; ಗಾಡಿಯ ಹಳಿ : ಧಾವ ಬಿಗಿಸುವುದಕ್ಕೆ ಗಾಡಿಯ ಗಾಲಿಗಳನ್ನು ಕಮ್ಮಾರನ ಮನೆಗೆ ಕಳಿಸಿದೆ (ರೂಢಿ). [ ←ಮರಾ. ಧಾವ ]

**ಧಾವಂತ**, ದಾವಂತ (ನಾ). ೧. ಅವಸರ ; ಗಡಿಬಿಡಿ ; ತರಾತುರಿ : ನಮ್ಮ ಧಾವಂತದಲಿ ನಮಗೆ ಕಾಣುವುದೆಲ್ಲ ಕೋಳಿ ಬೆದಕಿದ ಬೂದಿರಾಶಿ (ಶಿಲಾಲ. ೫೬-೬) ; ಈ ದಿನ ರಜ. ಧಾವಂತವೇನೂ ಇಲ್ಲ (ಜೀವಾತ್ಮ. ೧೩೪) ; ಈಗ ಇಷ್ಟೊಂದು ಏದುಸಿರು ಬರುವಂಥ, ಕೆಲಸಕಾರ್ಯಗಳ ಧಾವಂತವಿರಲಿಲ್ಲ (ನಿಬಂಧ. II, ೩೧). ೨. ಕಕ್ಕುಲತೆ ; ಮೋಹ ; ಮಮಕಾರ : ಊರು, ಕೇರಿ, ದೇಶ ಅಂತ ಧಾವಂತ ಮಾಡಬಾರದು. ದೇಶವೆಲ್ಲ ನಮ್ಮ ಸಂಸಾರ . . . ಅಂತ ಭಾವಿಸಬೇಕು (ಚಂಗೂಲಿ. ೧೨). ೩. ಕಠಿನವಾದ ಕೆಲಸ ; ಘನವಾದ ಕಾರ್ಯ (?) : ನನಗೇನ ಅಡಿಗೆ ಧಾವಂತೇನ ಬಿಡ (ರಕ್ತಧ್ವ. ೨೨೦). ೪. (?) : ಅಷ್ಟಾಂಗ ಬಂಧಕವು ಆಸನದ ಬಂಧಕವು ದೃಷ್ಟಿ ಕುಡುರಿಸುವ ಧಾವಂತ ಬಂಧಕವು (ಚಿದಾಕೋ. ೧೦೦-೬). **ದಾವಂತ**: ೫. ಬಳಲಿಕೆ ; ಸಂಕಟ ; ಆಯಾಸ ; ಶ್ರಮ : ನಡೆಯಿಂದ ದಾ[ಪಾಠಾಂ. ಧಾ]ವಂತವಾಯಿತು (ವಂಕಾರಾ. ೨-೨೪-೫೨) ; ಬಲರಾಮನಿಗೆ ಹಸಿವಿನ ದಾವಂತದಿಂದ ವಾಸನಾಶಕ್ತಿ ಎರಡರಷ್ಟಾಗಿ ಭಕ್ಷ್ಯಗಳನ್ನಿಟ್ಟಿದ್ದ ಅಲಮಾರು ವಿನ ಬಳಿಗೆ ಅಂಬು ಎಸೆದಂತೆ ಆತ ಹೋಗಿನಿಂತನು (ಕೊನಷ್ಟ. ೨೬). [?./ತಮಿ. ತಾವನ್ತ ; ತೆಲು. ದಾವಂತ ]

**ಧಾವಂತಪಡು**, ದಾವಂತಬಡು (ಕ್ರಿ). ೧. ಆತುರಪಡು : ನೀವೇ ಬೀಗರಾಗುವ ಹಾಗೆ ಧಾವಂತಪಡುತ್ತಿದ್ದೀರಲ್ಲಪ್ಪಾ (ರಾಗಿಜ. ೧೫೨). **ದಾವಂತಬಡು** : ೨. ಬಳಲಿಕೆಯನ್ನು ಹೊಂದು ; ಬಳಲು ; ಆಯಾಸಪಡು : ದಾವಂತಬಡುತ ತನ್ನಿಚ್ಛೆಯನೆ ಘೋಷಿಸುವ ಭಾವ ವೆಂತಹ ಭಕುತಿ (ವಿುಂಕುಕ. ೫೮೦). [ ಧಾವಂತ + ಪಡು₁ ]

**ಧಾವಕ** (ಗು). ೧. ಶುದ್ಧಿಗೊಳಿಸುವ ; ತೊಳೆಯುವ. 'ಅಸಿಧಾವಕ' ಪರಾ. ೨. ಓಡುವ; ವೇಗವಾಗಿ ಹೋಗುವ. [ಸಂ. ]

**ಧಾವತಿ**, ದಾವತಿ (ನಾ). ೧. ದಣಿವು ; ಬಳಲಿಕೆ ; ಆಯಾಸ ; ಶ್ರಮ : ಈಸು ಧಾವತಿಯಿಂದೆ ನಾ ಕಡುಘಾಸಿಯಾದೆನು ಬೆಂದ ಹುಣ್ಣಾನು ಕೀಸುವರೆ ಕಂಬಿಯಲಿ ಕೀಳಕಟೆಂದಳಾ ಮಾಯೆ (ಪ್ರಭುಲೀ. ೭-೯೪) ; ಭಾವಿಸಿ ಗುಳಿಗೆಯನಿತ್ತರೆ ಜ್ವರಗಳ ಧಾವತಿ ಪರಿಹರವಹುದು (ಸಾಳ್ವಸಾಂ. ೦೯) ; ನಾನಾ ತರದ ದುಃಖ ಧಾವತಿಯಿಂದೆ ಆತ್ಮ ಕೆಟ್ಟು ನಷ್ಟವಾಗಿ ಹೋಯಿತ್ತು ನೋಡಾ (ಅಖಂಡೇ. ೧೦-೭) ; ಇಬ್ಬರೂ ತನಗಾಗಿ ಪಡುತ್ತಿದ್ದ ಧಾವತಿ ಕಂಡು ಅವಳು ನಕ್ಕಳು (ಶನಿಸಂ. ೧೧೮). ೨. ನೋವು ; ತೊಂದರೆ ; ದುಃಖ : ಭವವುಳ್ಳನ್ನಕ್ಕರ ಧಾವತಿ ಮಾಣದು ಶರೀರ ಉಳ್ಳನ್ನಕ್ಕರ ಅವಸ್ಥೆ ಮಾಣದು (ಅವಚಂ. ೩೦-೧೨೫) ; ಅಯ್ಯ ನಿಮ್ಮ ಮಹಂತರ ಕೂಡಿಯಗಲುವ ಧಾವತಿಯಿಂದ ಸಾವುದೇ ಕರ ಲೇಸು ಕಂಡಯ್ಯ (ಮಹಾದೇ. ಬ. ೬೦-೧೪೯) ; ಈ ಸತಿಯನೀ ಶುಚಿಯನೀ ಪತಿವ್ರತೆಯ ನಾನೀಸು ಧಾವತಿ ಗೊಳಗುಮಾಡಿದೆನು (ಹಡಕಾ. ೧೨-೪೬) ; ಸ್ಮೃತಿಪುರಾಣದೊಳು ತೊಳಲಿ ಕಂಗಾಣದಲೆ ಪರಿಪರಿಯ ಮಾರ್ಗಗಳ ಪಿಡಿಪಿಡಿದು ಧಾವತಿಯೊಳು ಬಳಲುವರು (ವಂಕಾರಾ. ೫-೨೦-೧೩) ; ದೇವನಲ್ಲಿ ಬಕುತಿಭಾವದಲ್ಲಿ ನಿಷ್ಠೆ ನೋವಿಗೆ ಹೆದರಬೇಡವ್ವ ಸಂಸಾರದಿ ಧಾವತಿ ತಿಳಿದು ನಡೆಯವ್ವ (ಸಿದ್ಧಪು. ೧-೭೫). ೩. ದುಡಿಮೆ ; ಕೆಲಸ ; ಉದ್ಯೋಗ; ಪರಿಶ್ರಮ : ತನ್ನ ತಾನರಿಯುವ ಧಾವತಿ ಹಗುರವಲ್ಲ (ಬಾಳಬ. ೨೦) ; ಧಾವತಿ ಮುಗಿದ ಮೇಲೆ ನೆಲದ ಮೇಲೆ ಅವನ ದೃಷ್ಟಿ ಬಿತ್ತು (ಕೈಹಿಕಾ. ೧೦೬) ; ಆಯುಧವನು ಹೂಡದೇನೆ ಆದ ಪಾರ್ಥಸಾರಥಿ ಯುದ್ಧವೆ ಸ್ಥಿರವಾದರೂನು ಶಾಂತಿಗಾಗಿ ಧಾವತಿ (ನೆಲಮು. ೪೦-೮). ೪. ಗಡಿಬಿಡಿ ; ಅವಸರ : ಬಹಳ ಧಾವತಿಯಲ್ಲಿ ಹೊರಟು ಬರಬೇಕಾಯ್ತು (ರೂಢಿ). **ದಾವತಿ** : ೧. ಕಿತಕಂ ದೇವತೆಗೇಕೆ ಪೇಟೆ ಪರಸಿ ಗಂಡಂ ಬೇಡಿಕೊಂಡೆನ್ನ ಪೆಂಡತಿಗಿತ್ತ್ಯೆ ಪುಟಿತೊಂದು ಪೆಣ್ಣಾನಿದನೊಲ್ಲಳ್ಳೀನೆ ಕೊಳ್ಳಾದ ದಾವತಿಯಕ್ಕುಂ (ಅರ್ಥನೇ. ೭-೫೦) ; ಬಲು ದಾವತಿಯಾಯ್ತು ಮಂತ್ರಿ ನಿನಗೆ (ಜನರಾ. ೬-೧೩೪); ಸಂಸ್ಕೃತಿಯ ದಾವತಿಯ ಕಳೆದು ಘನಮುಕ್ತಿ ಯೆಂದೆಂಬ ಭಾವೆಯೊಡವೆರಸಿ (ಕೈಕವ. ೧-೧-೫); ಹೈಮಾವತಿಯ ಅಡಿಗೆಯ ದಾವತಿಯನ್ನು ತಪ್ಪಿಸುವುದು (ಎರಸಿ. ೧೧೨). ೨. ತನ್ನ ಸುತನಾದ ಮಲು ಹಣಗೆ ಆತನು ದಾ[ಪಾಠಾಂ. ಧಾ]ವತಿಯಿಲ್ಲದಂತೆ ದಿನಕ್ಕೆ ಸಾವಿರ ಹೊನ್ನ ಬಳಸಿ ಸುಖಿಮಿರಲಿಯೆಂದು (ಭೈರಸೂ. ೪೯). ೩. "ದಾವತಿ = ದುಡಿಮೆ ; ಕೆಲಸ"(ಜಾನಕೋ. ೪); ಹೊತ್ತ ಹೊರೆಗಳಿಂದ ನೆತ್ತಿ ಬೋರೆಯು ಹರಳೊತ್ತಿ ಪಾದವು ಬೊಕ್ಕೆಯೊಡೆದು ಹಸ್ತಕೆ ದಾವತಿಯಿಲ್ಲವೆಂದೆನಲಾಗ (ಅಮುಸಾಂ. ೬-೫) ; ಹಿರಿಯ ಗೌಡನು ದಾವತಿಗಳನ್ನು ಹಂಚಿ ಹಾಕುವುದರಲ್ಲಿಯೂ ... ಕೆಲಸ ಸರಿಯಾಗಿ ನಡೆದಿದೆಯೊ ಇಲ್ಲವೊ ಎಂಬುದನ್ನು ನೋಡುವುದರಲ್ಲಿಯೂ ತನ್ನ ಎಲ್ಲ ವೇಳೆಯನ್ನು ಕಳೆಯುತ್ತಿದ್ದನು (ಮತಂಟ. ೫೨). 'ಧಾವಂತ' ಪರಾ.

ದಾವತಿ ಬೀಳು = ಕಷ್ಟಪಡಂ ; ಶ್ರಮಿಸು : (ಈ). ದಾವತಿ ಮಾಡು = ದಾವತಿ ಬೀಳು : (ಈ). [ ?./ಮರಾ. ಧಾವತೀ ]

**ಧಾವತಿಗೆಡು** (ಕ್ರಿ). ಕೆಲಸವಿಲ್ಲದಿರು : ಧಾವತಿಗೆಟ್ಟು ನಾ ತಿರುಗೆನು ಕರುಣೆಯ ತೀವಿದ ಸಾಕಾರ ನೀನಿರಲು (ಸಿದ್ಧಪು. ೬-೩). [ಧಾವತಿ+ಕೆಡು$_1$]

**ಧಾವತಿಗೊಳ್**, ದಾವತಿಗೊಳ್, ಧಾವತಿಗೊಳು, ಧಾವತಿಗೊಳ್ಳು (ಕ್ರಿ). ೧. ಆಯಾಸಪಡು ; ಬಳಲು; ದಣಿ: ದೇವ ನಿಮ್ಮ ಪೂಜಿಸಿ ಧಾ[ಪಾಠಾಂ. ದಾ]ವತಿಗೊಂಬಡೆ ಆ ದಾವತಿಯಿಂದ ಮುನ್ನಿನ ವಿಧಿಯೇ ಸಾಲದೆ (ಅವಚಂ. ೧೭-೬೬) ; ಕಾಯ ಕಲ್ಪಿತಕ್ಕೆ ಒಳಗು ಜೀವ ಭವಕ್ಕೊಳಗು ಈ ಉಭಯದ ತಾವನರಿಯದೆ ಧಾವತಿಗೊಂಬರೆಲ್ಲರು (ನಗೆಮಾ. ೪೧೯-೨೭) ; ಅನ್ಯರಾಳಾಗಿ ದುಡಿದು ಧಾವತಿಗೊಂಡು ಧನವನಾರ್ಜಿಸಿ (ಹಡಕಾ. ೧೨-೨೯). ೨. ಶ್ರಮಪಡಂ ; ಕಷ್ಟಪಡು ; ದುಡಿ ; ಕೆಲಸಮಾಡು : ಹಲವು ಕಾಲ ಧಾ[ಪಾಠಾಂ. ದಾ]ವತಿಗೊಂಡು ಒಟ್ಟಿದ ಹಿದಿರೆಯು ಒಂದು ಮಿಡುಕುಟಲ್ಲಿ ಬೇವಂತೆ (ಬಸವ. ೨೦೩). **ದಾವತಿಗೊಳ್** : ೧. ಮೇಲಿನ 'ಅವಚಂ. ೧೭-೬೬' ಪ್ರಯೋಗದ ಪಾಠಾಂತರವನ್ನು ನೋಡಿ. **ಧಾವತಿ ಗೊಳು** : ೧. ದ್ವೈತತಂತ್ರಾಖ್ಯವೆ ಬಿಂಬ ಕ್ರಿಯವೇ ತಿಳಿ ಧಾವತಿಗೊಳದಿರಿ ಇದನೆ ತೊರದು ವ್ಯರ್ಥ (ವಿಶ್ವಸು. ೨೭-೧೫). **ಧಾವತಿಗೊಳ್ಳು** : ೧. ಕೈಗೆ ಕೈಗಳ ಪಿಡಿವುತೊರ್ವರೊರ್ವರನಪ್ಪಿ ಬನದಿ ಧಾವತಿಗೊಳ್ಳುತೆ ಸುಯ್ದುಂಬ ಬೀರುತೆಡೆಯಾಡುತೆ (ಪಂಕಾರಾ. ೨-೨೦-೧೨) ; ಭಾವನಂದನದಲ್ಲಿ ಯಾವ ಹೂವರಳಲು ಧಾವತಿಗೊಳ್ಳುತೆ ಕೋಗಿಲೇ ! ಯಾವ ನೂತನ ನನ್ನಿ ಕಾವನ ಶರಕೆಂದು ಕೂಗುವಿ ನೀ ಹೇಳು ಕೋಗಿಲೇ ! (ಗರಿ. ೨೭-೮). ೨. ಹಿಂದೆ ಧಾವತಿಗೊಂಡು ಫಲವೇನಿಂದು ಕೆಡಿಸದ ರಾವಣನೆಂದಳಲಿತ್ತು ಕಪಿಸೇನೆ (ಕಾಶಿರಾ. ೪೩-೩೫) ; ಶೃಂಗಾರದಲ್ಲಿ ಬೇರಿಳಿಸಿ, ವೀರದಲ್ಲಿ ಕುಡಿವರಿದು, ಹಾಸ್ಯಾದಿಗಳಲ್ಲಿ ಹಬ್ಬುಗೊಂಡು ಶಾಂತಿಯಲ್ಲಿ ನೆಲಸಿ ನಿಲ್ಲುವಂತೆ ರಸಿಕತೆಯು ಧಾವತಿಗೊಳ್ಳುತ್ತದೆ (ಸುವರ್ಣ. ೪೨). [ ಧಾವತಿ + ಕೊಳ್$_1$ ]

**ಧಾವತಿಗೊಳಿಸು** (ಕ್ರಿ). ೧. ಬಳಲಿಸು ; ಆಯಾಸಪಡಿಸಂ : ಆ ಮನಸ್ಸು ಸಂಕಲ್ಪ ವಿಕಲ್ಪದಿಂದ ಹಿಡಿಯುತ್ತ ಬಿಡುತ್ತ ಬೇಕು ಬೇಡ ಎಂಬೆರಡರಲ್ಲಿ ಸರ್ವರನ್ನೂ ಧಾವತಿಗೊಳಿಸುತ್ತಿರುವುದು (ಅವಚಂ. ೩೯೨-೭೪ ಭಾವಾನುವಾದ). ೨. ದುಃಖಿಗೊಳಿಸಂ ; ತೊಂದರೆಪಡಿಸು : ಹಸಿವು ನೀರಡಿಕೆ ನಿದ್ರಾಲಸ್ಯವಾಗಿ ಸೇದಿಸಿ ಹೋಗಿ ಹೊಕ್ಕಲ್ಲಿ ಹೊಕ್ಕು ಧಾವತಿಗೊಳಿಸಿ ಹುಸಿಗೆ ಹೊಂಕೊಳಿಸುವೆಂ (ಹಡಕಾ. ೯-೧೪) ; ಒಬ್ಬುಳ್ಳ ಮಗ ದುರುಳನಾಗಿ ಜಡನಾಗಿ ಧಾವತಿಗೊಳಿಸದೆ ನಡೆದು ಹರದಾಡಿ ಗಳಿಸಿದಪೆನೆಂಬುದನು ನವ್ಮೊಡಲು ಹದುಳಿಪ್ಪಲ್ಲಿ ಕಂಡೆವು (ಸೋಮಚ. ೧-೯೭).

[ ಧಾವತಿಗೊಳ್ + – ಇಸು$_3$ ]

**ಧಾವತಿಗೊಳು** 'ಧಾವತಿಗೊಳ್' ನೋ.

**ಧಾವತಿಗೊಳ್ಳು** 'ಧಾವತಿಗೊಳ್' ನೋ.

**ಧಾವತಿಪಡು** 'ಧಾವತಿಬಡು' ನೋ.

**ಧಾವತಿಬಡು**, ದಾವತಿಪಡು, ದಾವತಿಬಡು, ಧಾವತಿಪಡು (ಕ್ರಿ). ದಣಿ; ಬಳಲು ; ಆಯಾಸಪಡು : ಗೋವ ಕಾಯಲು ಪೋಗಿ ಧಾವತಿಬಟ್ಟು ಬಹು ದೇವಕಿದೇವಿಯ ಈವಾಗ ಬಂದೆನು (ಪುರಂದ. ೦-೮೦-೦) ; ಧಾವತಿ ಬಟ್ಟು ಬಂದಿರಿ ಬಳಲಿದಿರಿಯೆಂದಾ ವಿಭು ವೈದುನರ್ಗೊರೆದ (ಭರಜ. ೭೪-೬೬). **ದಾವತಿಪಡು** : ಇವರು ಆತನ ಪರಮಮಿತ್ರರೆಂದೇ ಇಲ್ಲಿಯ ತನಕ ದಾವತಿಪಟ್ಟು ಬಂದಿದ್ದಾರೆ (ಅರಗಿ. ೧೨). **ದಾವತಿಬಡು** : ಪದ್ಮಾವತಿ . . . ನೆಟ್ ದಾವತಿಬಡುತ್ತಳವಳಿವ ಕಾಷ್ಠಾಂಗಾರಕನ ಕಂಡು ಕ್ಷಿತಿಯೊಳಿವನಿಂತಿಲ್ಲ ಬಿಡದ ಧೃತಿಬಡುವ ನರನೆಂದು ವಿಟಗದ್ದುತದಿ ತೋಟಿಸಲು (ಜೀವಂಚ. ೩-೫). **ಧಾವತಿಪಡು** : ಕುಲಕೆ ದುರ್ಯಶವಮಡಸಿತೆಂದು ಧಾವತಿಪಟ್ಟು ಜಲಧಿಯಂ ಕಟ್ಟಿ (ಪಂಕಾರಾ. ೬-೬೩-೨೮). [ ಧಾವತಿ + ಪಡು$_1$ ]

**ಧಾವನ** (ನಾ). ೧. ಓಡುವುದು. ೨. ಹರಿಯುವುದಂ. ೩. ಆಕ್ರಮಣ ; ಮಂತ್ರಿಗೆ. ೪. ಉಜ್ಜುವುದಂ ; ತೊಳೆಯುವುದಂ ; ಶುದ್ಧಗೊಳಿಸುವುದಂ : "ಧಾವನಂ ತೀಡುವುದೆನಿಕ್ಕು"(ಮಂಗರಾ. ೧೦೦-೨೫). 'ದಂತಧಾವನ' ಪರಾ. [ ಸಂ. ]

**ಧಾವನಿ** (ನಾ). ಒಂದು ಬಗೆಯ ಗಿಡ ; ನರಿಹೊನ್ನೆಗಿಡ : "ಕ್ರೋಷ್ಟು ವಿನ್ನಾ, ಸಿಂಹಪುಚ್ಛೀ, ಕಲಶೀ, ಧಾವನೀ, ಗುಹಾ–ಈ ನರಿಬಾಲದ ಹುಲ್ಲು, ನರಿಬಾಲದ ಹೊನ್ನೆ" (ಸಿದ್ಧಾಂತಿ. ೧೦೭). [ ಸಂ. ಧಾವನೀ ]

**ಧಾವಲ್ಯ**, ಧಾವಳ್ಯ (ನಾ). ಬಿಳುಪು ; ಬಿಳಿಯ ಬಣ್ಣ : ಮಿಸುಪ ನಯನಂಗಳೋ ತನ್ನೊಳಗೆ ತೋರುವೀಶಾಂಘ್ರಿನಖಧಾವಲ್ಯವೋ (ಅರಾಜ. ೫-೨); ಮದಧಾರಾಸಾರದಿಂ ಧಾರಿಣಿಯನಣಿಯರಂ ನಾಂದು ತದ್ಗಂಧಧಾವಲ್ಯದ ಮಿಂಚಿಂದೆಲ್ಲ ದಿಕ್ಕಂ ತೊಳಗಿ ಬೆಳಗುತಂ . . . ಒಪ್ಪಿದುದು ಮುದಿತ ನೀಲಾಚಲಾಭಂ ಮದೇಭಂ (ಮಲ್ಲಕಾ. ೪-೬೨೦). 'ಧಾವಲ್ಯಗಾತ್ರ' ಪರಾ. **ಧಾವಳ್ಯ** : ನೀರಿನಲ್ಲಿ ಶೈತ್ಯವು ತಗ್ಗಿಗೆ ಇಳಿಯೋಣವೂ, ಭೂಮಿಯ ಮೇಲೆ ಇರೋಣವೂ . . . ಅಣುತ್ವವೂ ಧಾವಳ್ಯವೂ ಅಣಗದೆ ಇರೋಣವೂ ಈ ಮೊದಲಾದ ಗುಣಗಳು ಉಂಟು (ಅನಂಶ. ೪೬). [ ಸಂ. ]

**ಧಾವಲ್ಯಗಾತ್ರ** (ನಾ). ಬೆಳ್ಳನೆಯ ಮೈಬಣ್ಣದವನು ; ಗೌರಾಂಗ : ಧಾತ್ರಪಂಚಮಶಿರಪಾತ್ರ ಪನ್ನಗಯಜ್ಞಸೂತ್ರ ತ್ರಿನೇತ್ರ ಧಾವಲ್ಯಗಾತ್ರ (ಭೈರವೇ. ೦-೪). [ ಧಾವಲ್ಯ + ಗಾತ್ರ ]

**ಧಾವಳಿ$_1$** 'ದಾವಣಿ$_2$' ನೋ.

**ಧಾವಳಿ$_2$** 'ಧಾಬಳಿ' ನೋ.

**ಧಾವಳ್ಯ** 'ಧಾವಲ್ಯ' ನೋ.

**ಧಾವಿಸು** (ಕ್ರಿ). ವೇಗವಾಗಿ ಚಲಿಸು ; ಓಡಂ : ಧಾವಿಸಿತ್ತತಿಜವದಿ ಕಡವೆ ಹಿಂಡೊಂದು (ಶ್ರೀರಾಮಾ. ೧೫೬-೧೧೦) ; ಅನಾಥ ಜೀವದಂತೆ ರೈಲು ಧಾವಿಸುತ್ತಿತ್ತು (ರೂಪಸ. ೧) ; ಪುರುಷರು . . . ಗಲಭೆ ನಡೆಯುತ್ತಿದ್ದ ಸ್ಥಳಕ್ಕೆ ಧಾವಿಸಿದರು (ಯೋಧರು. ೧). [ ಧಾವನ + – ಇಸು$_3$ ]

**ಧಾಶತ್ತು$_1$** (ನಾ). ಹೆದರಿಕೆ ; ಭಯ ; ದಿಗಿಲು : (ಈ).

[ ←ಪಾರ. ಹಿಂ. ಮರಾ. ದಹಶತ್ ]

**ಧಾಶತ್ತು$_2$** (ನಾ). ದಿಟ್ಟತನ ; ಧೈರ್ಯ : (ಈ). [ <ಸಂ. ಧೃಷತ್ ]

**ಧಾಳ** 'ಡಾಲು$_2$' ನೋ.

**ಧಾಳಾಧೂಳಿ** 'ದಾಟಾದಾಟಿ' ನೋ.

**ಧಾಳಿ** 'ದಾಟಿ' ನೋ.

**ಧಾಳಿಕಾರ** 'ದಾಟಿಕಾಟಿ' ನೋ.

**ಧಾಳಿಕ್ರಮ** (ನಾ). ಆಕ್ರಮಣದ ರೀತಿ,–ಬಗೆ : ಅರಸರ್ದ್ದಾಳಿಕ್ರಮದೊಳ್ ಶಿವಾಪಂನ ಪಿಡಿದು ಮಗುಳೆ ಬಂದು ಪೂವಿನ ಪಡಂಗಿಲಿಯುಪ್ಪಯಣವೀಡಿನೊಳ್ (ಸೌಇಇ. IX-1, ೦೦೦-೨೯ ; 1045).

[ ಧಾಳಿ (<ದಾಟಿ ) + ಕ್ರಮ ]

**ಧಾಳಿಗೊಳ್** (ಕ್ರಿ). ಆಕ್ರಮಣಕ್ಕೆ ಈಡಾಗು,–ಒಳಗಾಗು : ಧಾಳಿಗೊಂಡವರೊಳಗೆ ಮುನ್ನಿನ ಕಾಲನೇಮಿಯ ಪರಿಯ ಕದನವ ಹೋಲಿಸಲು ಬಹುದಲ್ಲಿ (ಕುಮ್ಮಾಅ. ಓರಿಇ. ೨೬-೨೭). [ ಧಾಳಿ (<ದಾಟಿ) + ಕೊಳ್$_1$ ]

**ಧಾಳಿಡು** 'ದಾಟಿಯಿಡು' ನೋ.

**ಧಾಳಿನಡೆಸು** (ಕ್ರಿ). ೧. ಮೇಲೆ ಬೀಳಂ; ಮುತ್ತು ; ಮುಂತ್ರಿಗೆ ಹಾಕಂ; ಆಕ್ರಮಣ ಮಾಡಂ: ಮುಷ್ಕರದ ಸಮಯದಲ್ಲಿ ವಿದ್ಯಾರ್ಥಿಗಳು ಪೋಲೀಸ್ ಠಾಣೆಯ ಮೇಲೆ ಧಾಳಿ ನಡೆಸಿದರು (ರೂಢಿ). ೨. (ಬರಹ ಅಥವಾ ಮಾತಿನ ಮೂಲಕ) ಪ್ರತಿಭಟಿಸಂ ; ವಿರೋಧಿಸು : ಸಾವು ಹೇಳಿಕೊಡುವವರ ಮೇಲೆಲ್ಲ ಪತ್ರಿಕೆಯಲ್ಲಿ ಧಾಳಿ ನಡೆಸೋಣ (ಶಾಲಮ. ೫೪).

[ ಧಾಳಿ (<ದಾಟಿ) + ನಡೆಸು$_1$ (<ನಡೆಯಿಸು) ]

**ಧಾಳಿಯಿಡು** 'ದಾಟಿಯಿಡು' ನೋ.

**ಧಾಳಿವರಿ** 'ದಾಳಿವರಿ' ನೋ.

**ಧಾಟಾಧಾಟಿ** 'ದಾಟಾದಾಟಿ' ನೋ.

**ಧಾಟಿ** 'ದಾಟಿ' ನೋ

**ಧಾಟಿಡು** 'ದಾಟಿಯಿಡು' ನೋ.

**ಧಾಟಿವರಿ** 'ದಾಳಿವರಿ' ನೋ.

**ಧಿಂ** (ನಾ). ಒಂದು ಅನುಕರಣ ಶಬ್ದ. 'ಧಿಮ್ಮನೆ' ಪರಾ.

**ಧಿಂಧಿಂ** (ದ್ವಿರುಕ್ತಿ) : ಧಿಂಧಿಂ ಧಿಮಿಕ್ಕು ಧಿಮಿಕೆಂದಿಂದೀವರಲೋಲಲೋಚನೆಯ ಮುಂದೊಲವಿಂ ವೃಂದಾರಕವಧುವೊರ್ವಳ್ ಕುಂದದ ಜಾಣಿಂದ ಮುರಜಮಂ ಬಾಜಿಸಿದಳ್ (ಬಾಧವು. ೬-೮೮); ತಂದೋಂ ಧಿತ್ತೋಂ ಥೋಮೆಂದೆನುತುಂ ಧಿಂಧಿಂ ಧಿಮಿಧೀಧಿಮಿತೆಂದೆನುತಂ (ತುಂಗಭ. ೩).

**ಧಿಂಕಿಡು** 'ಧೀಂಕಿಡು' ನೋ.

**ಧಿಂಕು** 'ಧೀಂಕು' ನೋ.

**ಧಿಂಗು, ಡಿಂಗು$_2$, ದಿಂಗು** (ನಾ). ೧. "ಉಲ್ಲಾಸ; ಸಂತೋಷ" (ಪ್ರಭಣ್ಣ) : ಹೊಂಗಿತಿತ್ತಲು ವಿಜಯ ದುರ್ಜಯ ನುಂಗಿತಿತ್ತಲು ರಾಯಭೇರಿ ಮೃದಂಗ ವಿತ್ತಲು ಬಾಯ ಹೊಯ್ಲು ಗ್ಗಳವತ್ತ ಮೊಳಗಿದುದು ಧಿಂಗುಯಿತ್ತಲು ಧುರದ ಭಾರಿಯ ಕಂಗೆಡಿತೆ ಮೇಣತ್ತ (ಅಂಬಿಕಾ. ೩೮-೪೪). **ಡಿಂಗು$_2$:** ೨. ಆಡಂಬರ; ಠೀವಿ ; ಡೌಲು : ಈಗ ನೋಡಿದರೆ ಅಂಗಳದಲ್ಲಿ ಚಪ್ಪರ ಸಹ ಡಿಂಗು ಆಗಿ ಬಿಟ್ಟದೆ (ಮರವು. ೮೪). **ದಿಂಗು :** ೩. ಅಬ್ಬರ ; ಗದ್ದಲ ; ಕೋಲಾಹಲ : ಬಲಸಹಿತಲೆ ದಿಂಗಿನಿಂದೈತಂದು ಸಾಗರನ ಬಲುಸಾಹಸಂಗಳ ಮುರಿದು (ತುರಂಗ. ೨೧-೪೭).

**ದಿಂಗಾಗು** = ಠೀವಿಯಿಂದ ಕೂಡಿರು ; ಜೋರಾಗಿರು: ಇನ್ನೂ ಮೀಸೆ ಹುಟ್ಟದ ಬೋಳ, ಆಗಲೆ ಆ ಹುಡುಗೀನ ಕಟ್ಕೊಂಡು ಏನು ದಿಂಗಾಗಿದಾನೆ (ಮಲೆಮ. ೧೮೭). [ ←ಮರಾ. ಧಿಂಗಾ ]

**ಧಿಕು** (ನಾ). ತಿರಸ್ಕಾರವನ್ನು ಸೂಚಿಸುವ ಒಂದು ಮಾತು,–ನುಡಿ.

**ಧಿಕುಧಿಕು** (ದ್ವಿರುಕ್ತಿ): ಮುಕುತಿಯ ಒಲ್ಲೆ ಮುಕುತಾರ್ಥ ಇದನೆ ಬೇಕು ಧಿಕುಧಿಕು ಈ ಸೌಖ್ಯ ಬೇಡದವನ ಜನ್ಮ (ಮೋಕ್ಷದೀ. ೩೯-೨). [ ಸಂ. ಧಿಕ್ ]

**ಧಿಕ್ಕನೆ** (ಅ). ಕೂಡಲೆ ; ಬೇಗನೆ : "ತುರಿಹಂ, ಭೋರೆನೆ, ಭೋಂಕನೆ, ಚೆಕ್ಕನೆ, ಗಟಿಗಟನೆ, ಧಿಕ್ಕನೆ, ಘಟಿಲನೆ, ಬೇಗಂ – ಈ ೮ ಶೀಘ್ರಂ" (ಕಳಸಾ. ೧೩-೨೨೯) ; "ಚೆಕ್ಕನೆ ಧಿಕ್ಕನೆ ಭೋರನೆಯುನೆ ಭೋಂಕನೆನಲು . . . ಗಟಿಗಟನೆ . . . ಘ[ಟಿ]ಲನೆನ್ನಲದು ಶೀಘ್ರಾರ್ಥಂ" (ಕವಿಕಂ. ೧೧೦); ಧಿಕ್ಕನೆ ಮನೆಯ ಶೆಟ್ಟಿ ಬಂದನಾ ಹೊತ್ತಿನೊಳು (ಕಾರಿರ. ದೇ. ೨೮೫-೬) ; ಇತ್ತ ಸದ್ಗುರುಮೂರ್ತಿಯಂ ಕಾಣುತ್ತ ಧಿಕ್ಕನೆ ಹೆದಱಿ ಸಂಭ್ರಮಿಸುತ್ತ ಬಸವನು . . . ಸಾಷ್ಟಾಂಗದೊಳೆಱಗಿ ನಮಿಸಿ (ಬಸವು. ೪-೫೮) ; ಮಾಂಧಾತ ಸುತ್ಯಾಗವ ಬೇಡ ಬಂದವಗೆ ರಾಗದಿಂದೊಡಲ ಧಿಕ್ಕನೆ ಸೀಳ್ದು ಭಾಗವ ಕೊಟ್ಟುದನಱಿಯಾ (ಮೋಹತ. ೫-೫೪) ; ಧಿ[ಪಾಠಾಂ. ದಿ]ಕ್ಕನೇಳಿನ್ನು ಮುನ್ನಿನ ಭೋಗದಿಂದ ಶತಕೋಟಿ ಮಡಿ ಮಿಗಿಲಪ್ಪುದು (ಗುಭಜ. ೩-೧೦೬) ; ಸಂಸಾರ ಧಿಕ್ಕನೆ ಬಿಟ್ಟು ತಂದೆಗೆ ತಿರಿದು (ಷತಿಲ. ೩-೧೨೨). 'ದಿಕ್ಕನೆ' ಪರಾ. [ ಧಿಕ್$_0$ + – ಅನೆ$_1$ ]

**ಧಿಕ್ಕರಣೆ** (ನಾ). ತಿರಸ್ಕಾರ: ನಿಂದೆ ; ಧಿಕ್ಕಾರ : ಸಗರನಂದನರುಂ ಯೊಳಿದ್ದರು ಮುನಿಯ ಧಿಕ್ಕರಣೆಯ ವಿಘಾತಿಯಲಿ (ತೊರರಾ. ೧-೧೩-೧೨). [ ಸಂ. ಧಿಕ್ಕರಣ ]

**ಧಿಕ್ಕರಿಸು** (ಕ್ರಿ). ೧. ಹೀಯಾಳಿಸು ; ನಿಂದಿಸು ; ತಿರಸ್ಕರಿಸು; ಕಡೆಗಣಿಸು ; ಕೀಳುಮಾಡು : ನಿನಗೆ ತರಳತೆಯಿದೆತ್ತಣಿಂ ಬಂದುದೆಂದು ಧೈರ್ಯಮೆ ಧಿಕ್ಕರಿಸುವಂತೆಯುಂ ಅತಿಲಜ್ಜಿತೆಯಾಗಿ (ಕಾದಂಬ. ೭೫) ; ಜಾಯಿಲನ ಬಡನಡುವಂ ಚಕ್ಕನೆ ತುಂಡಿಸಿ ಮಲೆಯುತೆ ಧಿಕ್ಕರಿಸಿತ್ತತುಳ ಕೋಪನೀಡಂ ಕ್ರೋಡಂ (ಗಿರಿಕ. ೧-೧೦೫) ; ಹಿರಿಯರೆವೆಂದು ಧಿಕ್ಕರಿಸಿ ಬಯ್ವುದು ತಕ್ಕುದೆ (ಶಮದ. ೨೨೦ ಪ್ರಯೋ) ; ಇಂತು ಕಿನ್ನರ ಬೊಮ್ಮದೇವ ಮಹಂತನಂ ಧಿಕ್ಕರಿಸಿ ನುಡಿಯಲು (ಬಸವು. ೨೯-೨೨); ದಿಕ್ಕರಿನಿಕುರುಂಬಮನುರುಮುದದಿಂ ಧಿಕ್ಕರಿಸುವ ಗಜಘಟೆ (ಜಯಕಾ. ೬-೧೮) ; ಮೃಡನ ಧಿಕ್ಕರಿಸುವೆನೆಂದು ಕೋಪವ ತಾಳಿ ನಡೆದ ಮನ್ಮಥ ಸೂಟಿಯಲಿ (ಮೋಹತ. ೬-೨೭) ; ರಕ್ಕಸನು . . . ಸರ್ವರ ಸೊಕ್ಕಿ ಮೆಕ್ಕಸವಾಗಿ ಗರ್ವದಿ ಧಿಕ್ಕರಿಸಿ ನುಡಿವ (ಅಮೃತ. ೩-೫೩). [ ಧಿಕ್ಕರಣೆ + – ಇಸು$_2$ ]

**ಧಿಕ್ಕವಣೆ** (ನಾ). [ಸಂಗೀತ] (?) : ಝುಂಕಾರದ ಸುಸಿರಿಕೆಯಂ ನೋಡಿ ಸಂಚದೊಳ್ ಸುಸಂಚನೆನಿಸಿ ಕರಂಗಳ ಬಹುರೇಖೆಯ ಚಾರಣೆಯ ಧಿಕ್ಕವಣೆಯ ನೇವಣೆ ಬೊಲ್ಲವಣೆಯ ಬೆಡಂಗು ಬಿತ್ತರಿಕೆಯಂ ಬೀಱಿ ಬಾಜಿಸುತ್ತಿರೆಯುಂ (ಶಾಂತೀಶ್ವ. ೭-೯೩ ವ). [ ? ]

**ಧಿಕ್ಕಾರ** (ನಾ). ೧. ನಿಂದೆ ; ತಿರಸ್ಕಾರ ; ಅಗೌರವ : ಮಾರಿತಾಹಂಕಾರನಂ ಹೂಂಕಾರಮುದಧಿಕ್ಕಾರನಂ ಗತಮಾರಕರ್ಮವಿಕಾರನಂ ವೀರಾವತಾರನನು (ಬಸವು. ೫-೧೬) ; ಪ್ರಾಚೀನಸಂಪ್ರದಾಯ ಪಾಲಿಸಿದ ಭಾರತೀಯರಿಗೆ . . . ಸಾರ್ವಜನಿಕಸ್ಥಳಗಳಲ್ಲಿ ಧಿಕ್ಕಾರ (ಮುಕ್ತಾರ. ೧೧೫ ಟೀಕೆ). ೨. ತಿರಸ್ಕಾರಕ್ಕೆ ಯೋಗ್ಯವಾದುದು ; ಹೀನಾಯ : ತಾಯಿಯ ಮಾತು ನಿನಗೂ ಧಿಕ್ಕಾರವಾಗಿದೆ (ಕಾವೇರಿ. ೨೯). [ ಸಂ. ]

**ಧಿಕ್ಕಿಟ** (ನಾ). ಒಂದು ಅನುಕರಣ ಶಬ್ದ : ಟಕ ವಿಕಟ ಧಿಕ್ಕಿ[ಪಾಠಾಂ. ಕ್ಕ]ಟ ಧಿಕಟ ಧಿಮ್ಮಿಕಟವೆಂಬಾ ರವವೆಸೆವ ಕೇಳಿಕೆಯನಾಡಿಸುತ್ತಿದ್ದಹರು (ಬಸವು. ೩೭-೮) ; ನೀರಿನೊಂದಿಗೆ ಆರು ಬಿಂದಿಗೆ ಹೇರಿ ನೆತ್ತಿಯ ಮೇಲಕೆ, ಹಾರಿ ಧಿಕ್ಕಿಟ, ಕುಣಿದನಕ್ಕಟ ನೀರು ಹೊರಗಡೆ ಚೆಲ್ಲದೆ (ಕಎವು. ೩೮-೭).

**ಧಿಕ್ಕೃತ** (ಗು). ೧. ತಿರಸ್ಕರಿಸಿದ ; ಕಡೆಗಣಿಸಿದ : "ಅವರೀಣಂ ಧಿಕ್ಕೃತಂ" (ವಸ್ತುಕೋ. ೧೦೭-೫೦). (ನಾ). ೨. ಬೈಗುಳು ; ನಿಂದೆ. [ ಸಂ. ]

**ಧಿಕ್ಕೃತಿ** (ನಾ). = ಧಿಕ್ಕಾರ ೧. 'ಧಿಕ್ಕೃತಿಗೈ' ಪರಾ. [ ಸಂ. ]

**ಧಿಕ್ಕೃತಿಗೈ** (ಕ್ರಿ). ತಿರಸ್ಕಾರ ಮಾಡು ; ಅಂಗೀಕರಿಸದಿರು : ಹಿಮಕಣಸಂಗತ ಕುಂದವನಳಿವೊಲ್ ಹಿತವಾಗನುಭವಿಸಲುಮಿಾಕೆಯ ಧಿಕ್ಕೃತಿಗೈಯಲುಮಾರೆಂ (ಶಾಕುಂತ. ೭೭ ಅಡಿಟ). [ ಧಿಕ್ಕೃತಿ + ಗೈ (<ಕೆಯ್$_1$) ]

**ಧಿಕ್ಕೃತೆ** (ನಾ). ತಿರಸ್ಕಾರವನ್ನು ಹೊಂದಿದವಳು ; ತಿರಸ್ಕೃತೆ : ಎನ್ನಂ ಧಿಕ್ಕೃತೆಯಾಗಿ ತನ್ನ ಜನಮುಂ ಬೆನ್ನಂಟಬಂದುಕ್ಕೆಯಪ್ಪನ್ನಂ (ಶಾಕುಂತ. ೮೫-೭). [ ಸಂ. ಧಿಕ್ಕೃತಾ ]

**ಧಿಗಿಲ್** (ನಾ). ಒಂದು ಅನುಕರಣ ಶಬ್ದ : ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲಗವ್ವಾ (ಬಸವ. ೩೭೪) ; ಜಗದಾಧಾರಕನದಟಿಂ ಧಿಗಿಲೆನೆ ಮೇಲೇಱಿ ತುಳಿದು ರಾಕ್ಷಸನಸುವಂ ತೆಗೆದು (ಜಗವಿ. ೬-೭೭) ; ಬೆದಱಿತಾಯಾಸ್ಥಾನ ಧಿಗಿಲೆಂದುದು ಧರಾಧೀಶ್ವರನ ತಂದೆಯ ಹೃದಯದಲಿ (ಕುವ್ಯಾಕ. ೧-೨) ; ಧೊಕ್ಕು ಧಡ ಸಬುದಗಳಲಿಳೆ ಗುಮ್ಮಿಕ್ಕೆ ಕೂರುಮನಱಿಚೆ ದಿಗ್ಗಜ ಧಿಕ್ಕು ಧಿಗಿಲೆನೆ ಧೈರ್ಯಬಲರೊದಗಿದರು ಸರಿಸದಲಿ (ತೊರರಾ. ೪-೪-೨೭). 'ದಿಗಿಲ್' ಪರಾ.

**ಧಿಗಿಲನೆ** (ಅ). ೧. ಕೂಡಲೆ ; ಬೇಗನೆ ; ಸರಕ್ಕನೆ : ಧಿಗಿಲನೆ ಮನಂ ಬೆದಱಿ ಪರವೆ ಕಾಣುತ್ತಲ್ಲಿ (ನಂಬಿರ. ೯-೧೧೧) ; ಯೋಗವಟ್ಟಿಗೆಯ ಏಱಿ ಸಡಿಲಿಸಿ ಧಿಗಿಲನೆದ್ದನು (ನಿಭಾಗ. ೪-೩-೩೮) ; ಧಿಗಿಲನೆದ್ದಳು ಕುಸುಮಾಜಿ ಕೈಮುಗಿದಿಂದು . . . ಸುಗತನಿವಾಸಕೆ ಪೋಪೆನೆಂದಳು (ಭರಜ. ೬-೧೧) ; ಆಱು ಖಂಡದ ನೃಪರು ಚಕ್ರಿಗೆ ತೊಂಡರವನೆಮ್ಮ ಮನೆಗೆ ಧಿಗಿಲನೆಯ್ದುವನೇನು (ಭರಜ. ೩೭-೪೯). ೨. ಭಯದಿಂದ ಕೂಡಿ ; ನಿಬ್ಬೆರಗಾಗಿ : ಧಿಗಿ[ಪಾಠಾಂ. ಲೆ]ನೆ, ಭುಗಿಲನೆ, ಭೋರನೆ ಎಂಬನುಕರಣಪದಂಗಳ್ ಬರೆಯುಂ . . . ಅವ್ಯಯಪದಂಗಳಪ್ಪುವು (ಶಮದ. ೩೦೦ ವೃತ್ತಿ). 'ದಿಗಿಲನೆ' ಪರಾ. [ ಧಿಗಿಲ್ + – ಅನೆ$_1$ ]

**ಧಿಟ್ಟ** 'ದಿಟ್ಟ$_1$' ನೋ.

**ಧಿಟ್ಟತನ** 'ದಿಟ್ಟತನ' ನೋ.

**ಧಿವಾಕು** 'ದಿವಾಕು' ನೋ.

**ಧಿಮಿ** (ನಾ). ಒಂದು ಅನುಕರಣ ಶಬ್ದ: ಧೀಂಧಿಂ ಧಿಮಿ ಧೀ ಧಿಮಿ ತ್ರೆಂದೆನುತಂ (ತುಂಗಭ. ೨).

ಧಿಮಿಧಿಮಿ (ದ್ವಿರುಕ್ತಿ): ಬೊಗರಿಯಂತೆಯೆ ತಿಗರಿಯಂತೆಯೆ ನೆಗೆದು ಕುಣಿದನು ಧಿಮಿಧಿಮಿ (ಕಎಪು. ೩೮-೮).

**ಧಿಮಿಕಿಟ** (ನಾ). ಒಂದು ಅನುಕರಣ ಶಬ್ದ: ಮದ್ದಳೆಗಳಂ ಹರುಷದಿಂ ಧಿಂ ಧಿಮಿಕಿಟೆಂದು ಧ್ವನಿಮಾಡೆ (ಗುರುಚಾ. ೧-೧೯).

**ಧಿಮಿಕು** (ನಾ). ಒಂದು ಅನುಕರಣ ಶಬ್ದ: ತದ್ಧಿಮಿ ಧಿಮಿಕೆಂದು ಕುಣಿಸೆ ಕುಣಿದಾಡುತ್ತ (ವಿದಾಕ್ಕ. ೯೪-೩).

**ಧಿಮಿಕ್ಕು** (ನಾ). ಒಂದು ಅನುಕರಣ ಶಬ್ದ: ಧಿಂಧಿಂ ಧಿಮಿಕ್ಕು ಧಿಮಿಕೆಂದಿಂದೀವರಲೋಲಲೋಚನೆಯ ಮುಂದೊಲವಿಂ ವೃಂದಾರಕವಧು ಪೂರ್ವಾಳ್ ಕುಂದದ ಜಾಣಿಂದ ಮುರಜಮಂ ಬಾಜಿಸಿದಳ್ (ಬಾಧಪು. ೬-೮೮).

**ಧಿಮುಕ** (ನಾ). ತಟ್ಟುವಿಕೆ; ಚುಕ್ಕುಬಡಿಯುವಿಕೆ: ಅತ್ತಾನ ಕಾಡ್ಯಾನ ಮತ್ತೇನು ಬೇಡ್ಯಾನ ಮೆತ್ತಮೆತ್ತನ ಧಿಮುಕವ ಕೊಟ್ಟರ ಗಪ್ಪುಚಿಪ್ಪಾಗಿ ಮಲಗ್ಯಾನ (ಗರತಿ. ೮೫); "ಏಟು" (ಗರತಿ. ಕೋಶ). [?]

**ಧಿಮ್ಮನೆ** (ಅ). ಕೂಡಲೆ; ತಟ್ಟನೆ: ಧಿಮ್ಮನೆ ಭೀಷ್ಮನಡಹಾಯ್ದು ಸೆಳೆದು ಕೊಂಡನು ಖಡುಗವನು (ಕುವ್ಯಾಸ. ೧೦-೨೬); ಎನಲಂ ಧಿಮ್ಮನೆ ಕೊಳದೊಳಗೆ ನಿಂದನು ಮುಕುಂದನು ಸುರಪಸುತನಾನನವ ನೋಡುತದೇನದೇನೆನೆ ಬಿಕ್ಕಿ ಬಿರಿದಳುತ ತನಯನಳಿಯದೆ ಮಾಣ ಗಗನಧ್ವನಿಯೊಳಾದುದು ವಾರ್ತೆ (ಕುವ್ಯಾದ್ರೋ. ೮-೬); ಧರಣಿಪತಿ ಮುನಿಸಾರ್ವಭೌಮನ ಬರವ ಕಾಣುತ ಧಿ [ಪಾಠಾಂ.ದಿ] ಮ್ಮನುರುವಿಷ್ಟರವನಿಳಿದಿದಿರ್ವಂದು (ತೊರರಾ. ೧-೯-೨೦); ಆ ನುಡಿಗೆ ಸುಕೇತು ಕಿಸುಗಣ್ಣಿ ಗಜೆಗೊಂಡು ತನ್ನಾತೇರಿನೆಳೆಗೆ ಧಿಮ್ಮನೆ ಧುಮ್ಮುಕ್ಕಿ (ರಾಮಾಶ್ವ. ೯೫-೨೪); "ರಭಸದಿಂದ" (ಪ್ರಭಣ್ಣ); ಧಿಮ್ಮನೇ ಬರಲಿಹರು ಈ ದಿನ ಹುಂ ಮಾಹಾಶಯರು (ಅರರೋ. ೩). 'ದಿಮ್ಮನೆ' ಪರಾ. [ಧಿಂ + – ಅನೆ$_1$]

**ಧಿಮ್ಮಿಕಿಟ** (ನಾ). ಒಂದು ಅನುಕರಣ ಶಬ್ದ: ಟಕ ವಿಕಟ ಧಿಕ್ಕಟ ಧಿಕಟ ಧಿಮ್ಮಿಕಿ [ಪಾಠಾಂ. ಕ]ಟವೆಂಬಾ ರವವೆಸೆವ ಕೇಳಿಕೆಯನಾಡಿಸುತಿದ್ದಹರು (ಬಸಪು. ೩೬-೮).

**ಧಿಮ್ಮೆನ್** (ಕ್ರಿ). ಧಿಂ ಎಂದು ಶಬ್ದವಾಗು: ದಂಧಣಂ ಧಳಧಳ ಧಳಂಧಳ ಧ್ವನಿಗೆ ದಿಕ್ಸಂಧಿಗಳ್ ಸಡಿಲಲಾ ಫಣಿಪ ದಿಕ್ಕರಿಗಳ ಶಿರಂ ಧಿಮ್ಮೆನುತ್ತೆ ಕಿವುಡೆಸೆಯಲಾ . . . ಜಗದೊಳಂಧಕಾಸುರನ ಭೇರೀರವಂ ಪೊಣ್ಮಿದಾದು (ಜೆಬಪು. ೪೭-೩೦). [ಧಿಂ + ಎನ್$_1$]

**ಧಿರು** (ನಾ). ಭಲೆ, ಭಾಪು ಎಂಬಂತೆ ಮೆಚ್ಚಿಕೆಯನ್ನು ಸೂಚಿಸುವ ಒಂದು ಮಾತು,–ಕೊಂಡಾಟದ ನುಡಿ: ಧಿರು ಮಾಧವಿಯೂರ್ವಸಿ ಹೋಯಿರೆ ನಚ್ಚಣಿ ರಂಭೆ ಭಲ ತಿಲೋತ್ತಮೆ ... ಎನೆ ಪೊಗಟ್ಟಿರಲ್ತೆ ಸುರಭಾರತಿಯರ್ (ಅನಂಪು. ೪-೯೧); ಮುಂದೆ ಪಾಯುವಧಾರು ರಿಪುನೃಪ ಬಂದಿಕಾಱವಧಾರು ಧಿರುಪಯವೆಂದು ಕಳಕಳ ಗಜಬು ಮಿಗೆ ಕುರುಭೂಮಿಗೈತಂದ (ಕುವ್ಯಾದ್ರೋ. ೧-೧೯).

ಧಿರುಧಿರು (ದ್ವಿರುಕ್ತಿ): ಪೂತು ಸಾರಥಿ ಭಾಪು ಮಝರೇ ಸೂತ ಧಿರುಧಿರು ಎನುತ ರಥಿಕವ್ರಾತ ಮಿಗೆ ಬೋಳೈಸಿಕೊಂಡರು ಹಯದ ವಾಘೆಗಳ (ಕುವ್ಯಾಭೀ. ೪-೯೩); ಹಳುರೆ ಧಿರುಧಿರು ಭಾಪು ಮಝ ಮಂಗಳೆ ಮಹಾಸತಿಯಾದಿವಾಯಾಲಲನೆಯವಧಾರೆಂಬ ದನಿ ಕೇಳಿಸಿತು ರಘುಪತಿಯ (ತೊರರಾ. ೬-೫೩-೪೯).

**ಧಿರುರೆ, ಧೀರುರೆ** (ನಾ). = ಧಿರು: "ಅರರೆ ಧಣಂ ಭಾಪು ಭಳಿರೇ ಧಿರುರೇ [ಪಾಠಾಂ. ಧೀರುರೆ] ಮಝಭಾ ಪೂತುರೆ ಪಾಯ್ಕು ಚಾಗು ಸಲೆ ಸುಂಪುರೆಯೆನೆ ಕೊಂಡಾಟದ ನುಡಿ" (ಭಾರನಿ. ೪೬); ಧಿರುರೆ ಪಾಯುವಧಾರೆನಲು ಸತಿಯರ ಸಮೇಳದಲಬಲೆ ಮಣಿಬಂಧುರದ ಹಾವುಗೆಯಿಂದ ಬಂದಳು ಮಜ್ಜನದ ಮನೆಗೆ (ತೊರರಾ. ೧-೧೪-೧೪); ಭಾಪುರೆ ಧಿರುರೆ ತಿರುರೆ ಝಣಾರೆಂಬ ನುಡಿಗಳೊಪ್ಪಿದುವು (ಭರಜ. ೬೩-೪೬); ಸುರರು ಭಾಪು ಧಿರುರೆ ಎನಲು ಹರಿ ಸುರೇಂದ್ರು ಜೀಯವೆನಲು (ಸುಸಾರ. ೪೧-೩). **ಧೀರುರೆ**: ಮೇಲಿನ 'ಭಾರನಿ' ಪ್ರಯೋಗದ ಪಾಠಾಂತರವನ್ನು ನೋಡಿ.

**ಧಿವಡ** (ನಾ). ವಿಷವಿಲ್ಲದ ಸರ್ಪಗಳಲ್ಲಿ ಒಂದು ಬಗೆ: ನಿರ್ವಿಷಸರ್ಪಗಳಲ್ಲಿ ಹೆಬ್ಬಾವು ಶ್ರೇಷ್ಠ. ಇವಲ್ಲದೆ ಮಣ್ಣುಮುಕ್ಕ, ಧಿವಡ, ಧಾಮಣ, ಆಧೇಲಾ, ಹಸರುಹಾವು ಮುಂತಾದ ಜಾತಿಗಳು ಹಲವುಂಟು (ಕಭಾಗಿ. ೬೬).

[?]

**ಧಿಷಣ** (ನಾ). ೧. ಬುದ್ಧಿವಂತ; ಮೇಧಾವಿ; ಪಂಡಿತ: "ಪ್ರತಿಭಾ ಸಂವಿತ್ಪ್ರಜ್ಞಾಮತಿ . . . ಪ್ರತಿಪತ್ತಿ ಧೀ ಮನೀಷಾನ್ವಿತನಪ್ಪಂ ಪಂಡಿತಂ ವಿಪಶ್ಚಿದ್ಧಿಷಣಂ" (ವಸ್ತುಕೋ. ೯೮-೩); ಧಿಷಣರ ಕೃತಿಗಳೊಳೆಸೆವಭಿಲಷಿತ ಗುಣಂಗಳನೆ ಬಿಸುಟು . . . ದೋಷಾವಿಮಷಮನೆ ಪೊರ್ದಿರ್ಪುವಲ್ತೆ ಕುಕವಿ ಬಕಂಗಳ್ (ಆದಿಪು. ೧-೨೨); ಎಸೆವ ಸತ್ಯ ತ್ಯಾಗ ಶೌರ್ಯೋಚಿತ ವ್ಯವಸಾಯೇತರನಪ್ಪವಂಗೆ ಧಿಷಣರ್ ನಿಮ್ಮಂದಿಗರ್ . . . ಈವುದೆ ಖಗೇಂದ್ರಚಕ್ರವರ್ತಿತ್ವಮಂ (ಪಂಚತಂ. ೨೨೬-೮); ಧಿಷಣನೆನಿಪ್ಪ ಮಂತ್ರಿ ಗುಚಿತಂ ಪತಿಕಾರ್ಯಂ (ಜಗವಿ. ೫-೬೪). ೨. ದೇವತೆಗಳ ಗುರು; ಬೃಹಸ್ಪತಿ: "ವಾಚಸ್ಪತಿಃ, ಆಂಗಿರಸಃ, ಬೃಹಸ್ಪತಿಃ, ಗುರುಃ, ಜೀವಃ, ಧಿಷಣಃ, ತ್ರಿದಶಾಚಾರ್ಯಃ,ಚಿತ್ರಶಿಖಂಡಿಪ್ರಸೂತಿಃ (ಕಥ್ಯತೇ)–ಈ ೮ ಬೃಹಸ್ಪತಿಯ ಪೆಸರ್" (ಹಲಾಯು. ೯-೪೭); ದಂಡದೊಳ್ ರೋಹಿಣೀನಂದನನಂತಾ ದ್ವಂದ್ವದೊಳ್ವಿಶ್ರುತಮೆನೆ ಧಿಷಣಂ ಕರ್ಕಿಯೊಳ್ಸಂತಮಿಂತಿರ್ಪಿನಂ . . . ಪುತ್ರನಂ ಪೆತ್ತಳಾಗಳ್ (ಸುಕುಮಾ. ೧೦-೨೬); ಆ ದೇವರ್ಷಿನಿಕಾಯಂ ಧಿಷಣಯುತಂ ಮನದೊಳ್ಪಿಂದಿಂತು ಪೊಗಳ್ದುದು (ವಿಷ್ಣುಪು. ೨-೧೬೦). ೩. (ಆಧ್ಯಾತ್ಮಿಕ ವಿಷಯಂಗಳಲ್ಲಿ) ಗುರು. [ಸಂ.]

**ಧಿಷಣೆ** (ನಾ). ಬುದ್ಧಿಶಕ್ತಿ; ಪ್ರಜ್ಞೆ: "ಬುದ್ಧಿಃ, ಮನೀಷಾ, ಧಿಷಣಾ, ಧೀಃ . . . ಚೇತನಾ–೧೪ ಬುದ್ಧಿಯ ಹೆಸರುಗಳು" (ಸಿದ್ಧಾಂತಿ. ೪೪).

[ಸಂ. ಧಿಷಣಾ]

**ಧಿಷ್ಣ್ಯ** (ನಾ). ೧. ರಾಕ್ಷಸರ ಗುರು; ಶುಕ್ರಾಚಾರ್ಯ: "ಉಶನಾಃ, ಶುಕ್ರಃ, ಕಾವ್ಯಃ, ದೈತ್ಯಗುರುಃ, ಭಾರ್ಗವಃ, ಕವಿಃ, ಧಿಷ್ಣ್ಯಃ–ಈ ೭ ಶುಕ್ರನ ಪೆಸರ್" (ಹಲಾಯು. ೯-೪೮). 'ಧಿಷ್ಣ್ಯಶಿಷ್ಯ' ಪರಾ. ೨. ಸ್ಥಾನ; ಜಾಗ; ನಿವಾಸ; ಮನೆ: "ಆವಾಸಃ . . . ಮಂದಿರಂ, ಧಿಷ್ಣ್ಯಂ, ಧಾಮ . . . ನಿವಸನಂ, ಆಲಯಃ – ಈ ೩೧ ಮನೆ" (ಹಲಾಯು. ೪೯-೧೩೬); ಧಿಷ್ಣ್ಯವರಧರ ವಿಗತತೃಷ್ಣಾಘ ರಜತಗಿರಿಧಿಷ್ಣ್ಯ (ಪದ್ಮರಾ. ೭-೧); ತುಷ್ಟಮಾನಸರಾಗಿ ತಿರುಗಿ ತಾವಿಱಿದಿರ್ದ ಧಿಷ್ಣ್ಯಕ್ಕೆ ಬರುತ (ವರ್ಷವ. ೩-೪೨). ೩. ಬೆಂಕಿ; ಅಗ್ನಿ: "ಧಿಷ್ಣ್ಯಂ ಗೃಹರ್ಕ್ಷ ಪಾವಕನಾಮಂ" (ವಸ್ತುಕೋ. ೧೨೦-೧೩). 'ಧಿಷ್ಣ್ಯನೇತ್ರ' ಪರಾ. ೪. ತಾರೆ; ನಕ್ಷತ್ರ: "ರಿಕ್ಷಮುಡು ತಾರೆ ತಾರಗೆ ನಕ್ಷತ್ರಂ ಜ್ಯೋತಿ ತಾರಕಂ ಭಂ [ಧಿಷ್ಣ್ಯಂ]" (ವಸ್ತುಕೋ. ೧೪-೭೮). 'ಧಿಷ್ಣ್ಯವರ' ಪರಾ. ೫. ನಕ್ಷತ್ರಪುಂಜ; ಅಶ್ವಿನೀ, ಭರಣೀ ಮೊದಲಾದ ಇಪ್ಪತ್ತೇಳು ನಕ್ಷತ್ರಗಳು. ೬. ಬುದ್ಧಿವಂತ; ಧೀಮಂತ; ಮೇಧಾವಿ. ೭. ಬ್ರಹ್ಮ; ಚತುರ್ಮುಖ: "ಭವನಂ ನಕ್ಷತ್ರ ಧೀಮಾನ್ವನಜಜವಿವು ಧಿಷ್ಣ್ಯಾಭಿಧಾನಂ" (ನಾನಾರ. ೬೦). ೮. ಭಕ್ತ (?): ಧಿಷ್ಣ್ಯಗಣಸೇವ್ಯೋನ್ಮದಿಷ್ಣು ದನುಜ ನಿರಾಕರಿಷ್ಣು ಜಯ ವಿಶ್ವನಾಥ (ಪದ್ಮರಾ. ೭-೧). [ಸಂ.]

**ಧಿಷ್ಣ್ಯನೇತ್ರ** (ನಾ). ಕೆಂಡಗಣ್ಣ ; ಶಿವ : ಧಿಷ್ಣ್ಯನೇತ್ರಾಪತ್ರಪಿಷ್ಣು ದಕ್ಷ ಸಹಿಷ್ಣು . . . ಜಯ ವಿಶ್ವನಾಥ (ಪದ್ಮರಾ. ೭-೧).
[ ಧಿಷ್ಣ್ಯ + ನೇತ್ರ ]

**ಧಿಷ್ಣ್ಯವರ** (ನಾ). ನಕ್ಷತ್ರಗಳ ಒಡೆಯಂ ; ತಾರಾಪತಿ ; ಉಡುಪತಿ ; ಚಂದ್ರ. 'ಧಿಷ್ಣ್ಯವರಧರ' ಪರಾ. [ ಧಿಷ್ಣ್ಯ + ವರ$_3$ ]

**ಧಿಷ್ಣ್ಯವರಧರ** (ನಾ). ಚಂದ್ರನನ್ನು ಧರಿಸಿದವನು ; ಶಿವ: ಧಿಷ್ಣ್ಯವರಧರ ವಿಗತತೃಷ್ಣೌಘ ರಜತಗಿರಿಧಿಷ್ಣ್ಯ . . . ಜಯ ವಿಶ್ವನಾಥ (ಪದ್ಮರಾ. ೭-೧).
[ ಸಂ. ]

**ಧಿಷ್ಣ್ಯಶಿಷ್ಯ** (ನಾ). ಶಂಕ್ರಾಚಾರ್ಯನ ಶಿಷ್ಯ ; ರಾಕ್ಷಸ ; ಅಸುರ : ಧಿಷ್ಣ್ಯಶಿಷ್ಯಾರಿನಂತ ಕೃಷ್ಣಕಂಕಾಳಕರ . . . ಜಯ ವಿಶ್ವನಾಥ (ಪದ್ಮರಾ. ೭-೧). [ ಧಿಷ್ಣ್ಯ + ಶಿಷ್ಯ ]

**ಧಿಙ್ಞನೆ** (ಅ). ಜೋರಾಗಿ ; ಗಿರ್ರನೆ ; ರಭಸವಾಗಿ : ಹೊಡೆದ ನಿಷ್ಠುರಹತಿ ಗಂಧ್ರ್ವಮೆಗೊಂಡು ಪೇರೊಡಲ ಧಿಙ್ಞನೆ ತಿರುಗಿಸುತೆ (ಮೋಹತ. ೩೮-೬೦).
[ ಧಿಙ್$_0$ + – ಅನೆ$_1$ ]

**ಧೀ** (ನಾ). ಅರಿವು ; ಬುದ್ಧಿ ; ಜಾಣ್ಮೆ ; ವಿವೇಕ : "ಪ್ರೇಕ್ಷಾ, ಪ್ರಜ್ಞಾ, ಪ್ರತಿಭಾ, ಧೀಃ, ಧಿಷಣಾ . . . ಉಪಲಬ್ಧಿಃ – ಈ ೧೩ ಬುದ್ಧಿ" (ಹಲಾಯು. ೫೫-೧೭೯) ; ಗಾಯತ್ರಿಯನೆ ಪರಮಮಂತ್ರಮೆಂದಾರ್ಯರ್ ಧೀಯಂ ಪ್ರಚೋದಿಸೆಂದನುದಿನದಿ ಬೇಡಿದರು ಶ್ರೇಯಸ್ಸು ಧೀಮಹಿಮೆ (ಮಂಕುಕ. ೫೪೬) ; ಧೀಯೆಂದರೆ ಶಾಸ್ತ್ರದಿಂದಲೂ, ಅನುಭವದಿಂದಲೂ, ಹಿತಾಹಿತವನರಿಯುವ ಬುದ್ಧಿಯು (ಆಯುರ್ಧ. ೨೨೨). [ ಸಂ. ]

**ಧೀಂಕಿಡು, ದಿಂಕಿಡು, ದೀಂಕಿಡು, ಧಿಂಕಿಡು** (ಕ್ರಿ). ೧. ನೆಗೆ; ಜಿಗಿ; ಎಗರು; ಹಾರು : "ಧೀಂಕಿಡುವುದೆಂದುಂ, ಕೊಣಕಿಡುವುದೆಂದುಂ, ಸರಳಿಸಿತೆಂದುಂ ದಾಂಟುವುದರ್ಕೆ ಪೆಸರ್" (ಕಶಸಾ. ೭-೧೧೧) ; ಉಪವನತಳದೊಳ್ ತಳ್ತು ದೆಂಬಂತೆ ದಿಗ್ರಾಜಿಗಳೊಳ್ ಧೀಂ[ಪಾಠಾಂ. ಧಿಂ]ಕಿಟ್ಟುದೆಂಬಂತೆ . . . ಒಗೆದತ್ತುತ್ತಾರರಾಗಂ ತ್ರಿಭುವನಭವನೋದ್ಭೇದಿ ಶಂಖಪ್ರಣಾದಂ (ಕಾದಂಬ. ೮೨೪) ; ಮುಂಕೊಂಡು ಧೀಂಕಿಟ್ಟು ಪಾಯುತ್ತಮುರುತ್ತೋಡುತ್ತ ಪೀಱು ತ್ತುಡಸಿ ಕೆಡಪಿತೊಂದೇಣನಂ ಚಿತ್ರಕಾಯಂ (ಗಿರಿಕ. ೧-೯೫) ; ನೆಲಗಟ್ಟನೊಳ್ ಮೆಱೆದು ಮಾರ್ಪೊಳೆಯುತ್ತಿರೆ ಕಂಡು ಕುಂತಲಂ ಕೆದಱೆ ಕುಚಂ ಕದಕ್ಕದಿಸೆ . . . ಇದೊಂದು ದೂಳಿಚಿತ್ರದ ಖಣಮೆಂದು ಮೈಯೊರಸಿ ಧೀಂಕಿಡುವರ್ ಕಡೆಯೊಳ್ ಲತಾಂಗಿಯರ್ (ಅನಂಪು. ೭-೪೪); ಧೀಂಕಿಟ್ಟನಲ್ಲಿಂದೆ ಕಲಿ ಹನುಮನಾ ರಣದೊಳಂಕಿತದ ಕುಶನ ಬಾಣಂಗಳಿಂ (ಜೈಮಿಭಾ. ೨೧-೧೦) ; ಅಬುಲ್‌ಫಜಲ್, ಧೀಂಕಿಟ್ಟು ಬಂದು . . . ಪ್ರಶ್ನಿಸಿದ (ನೂರಜ. ೧೪) ; ಓಡು, ಧೀಂಕಿಡು, ಹರಿ, ಧಾವಿಸು (ಕಂನುಹು. ೮೦). ೨. ಹಬ್ಬು ; ಚಾಚು ; ಪಸರಿಸು ; ದಾಂಗುಡಿಯಿಡು : ಸಂತತಂ ಸೌಭಾಗ್ಯಲತೆ ಧೀಂಕಿಡುತಿರಲ್ (ಮಾನರ. ಹ. ೬೫-೩೨) ; ನಿಸ್ಸಾಳಧ್ವನಿ ದಿಕ್ತಟಕ್ಕೆ ಧೀಂ[ಪಾಠಾಂ. ದಿಂ]ಕಿಡೆ ಭೇರೀರವಂ ಬೊಮ್ಮಾಂಡವನಡರೆ (ನಂಬಿರ. ೧೮-೯೯) ; ನಾನಾಪಟಹಪಟು ನಿನಾದಂ ನಭಕ್ಕಾಕ್ಷಣಂ ಧೀಂಕಿಡೆ (ಕುಸುಮಾ. ೩-೨೮) ; ಇಂತು ತಪೋಬೀಜಂ ಚಿತ್ತಭೂಮಿಯೊಳ್ ಬೇರೂಱಿ . . . ನಿಷ್ಠೆಯೊಳ್ ಕುಡಿವರಿದು ಪರಿದು ಪರ್ವಿ ಪುರಹರನರಸಿಯ ಮೆಲ್ಲಡಿಗಳ್ಗೆ ನಿಲ್ಲದೆ ಧೀಂಕಿಡೆ (ಗಿರಿಕ. ೩-೧೨ ವ). ೩. ಮುಂದುವರಿ ; ಮುನ್ನುಗ್ಗು : ಪೊಡೆಯಲರಾತನಕ್ಷಿಗಮಗೋಚರಮಾಗಿರೆ ನೀಟ್ಕಿ ನೋಡಿ ಧೀಂಕಿಡುವ ರಥಧ್ವಜಾಗ್ರಮನದುಂ ಮಸುಳುತ್ತಿರೆ ತೇರ ಧೂಳಿಯುಂ ಬಿಡೆ ನಡೆ ನೋಡಿ (ಜಗವಿ. ೫-೧೦೦) ; ಝುಗಝುಗಿಸಿ ಹೊಳೆ ಹೊಳೆವ ಬಾಯ್ದಾರೆಗಳ ಬೆಳಗಿನ ದಾಳಿ ಧೀಂಕಿಡೆ ಮೊಗೆದವರ್ಜುನನಂಬು ರಿಪುಚತುರಂಗಜೀವನವ (ಕುಮ್ಮಾಭೀ. ೮-೫೧). **ದಿಂಕಿಡು :** ೧. "ದಿಂಕಿಡು ದಾಂಟು ಮಿಳ್ಳಿಸೆನೆ ಸರಳಿಸನೆ ಕೊಣಕಿಡುವುದಕ್ಕು" (ಶಬ್ದಮಂ. ೩೨) ; ಪರಿವ ಲೋಹಿತದಿಂ ಪರಿದಂಬರಕ್ಕೆ ದಿಂ[ಪಾಠಾಂ. ಧಿಂ]ಕಿಡುವ ಶಿರಂಗಳಿಂದತಿ ಭಯಂಕರಮಾದುದು ಸಂಗರಾಂಗಣಂ (ಪಂರಾಮಾ. ೧೩-೧೧೪) ; ಜಳಮ್ಮೃಣಾಳನಾಳಮಂ ಜಳವ್ಯಾಳಮೆಂದು ಕೆಲದ ಬಿಲದಿಂ ಪಿಡಿಯಲೆಂದು ದಿಂ[ಪಾಠಾಂ. ಧೀಂ]ಕಿಡುವ ವಿಷಾಪಹಾರಶಾಲೂರಜಾಲಂಗಳೊಳಂ (ಚಂದ್ರಪ್ರ. ೫-೪೦ ವ). ೨. ಅಷ್ಟದಿಗ್ಭಿತ್ತಿಯಂ ದಿಂ[ಪಾಠಾ. ಧೀಂ]ಕಿಟ್ಟತ್ತು ರಘುಪ್ರವೀರವಿಜಯಪ್ರಸ್ಥಾನಭೇರೀರವಂ (ಪಂರಾಮಾ. ೧೨-೧೭). ೩. ಕಡುದೀರ್ಘ ಗುಹೆ ಬಲು ಕಾಲ ಮುಚ್ಚಿದ್ದು ಬಾಯ್ಬಿಡುವಾಗ ಜೆಂಕಿ ದಿಂಕಿಡದೆ (ಭರತ. ೨೮-೭೬). **ದೀಂಕಿಡು :** ೧. ನಲಿನಲಿದು ದೀಂ[ಪಾಠಾಂ. ಧಿಂ]ಕಿಟ್ಟು ತಾಯ ಮುಂದೆ ಪರಿವೆಳಗಱುವಿನಂತೆ (ವರ್ಧಪು. ೧೧-೯೯ ವ) ; ಜಿಂಕೆಯೊಲು ದೀಂಕಿಡುವ ಸೋಂಕು ಸೊಗವೇ (ಗರಿ. ೪-೭). **ಧಿಂಕಿಡು :** ೧. ಜಲಧಿಯನು ಧಿಂಕಿಟ್ಟು ಸೀತಾಲಲನೆಗುಂಗುರವಿತ್ತು (ಅಜ್ಞಾವಿ. ೧೪-೧೦). ೩. ಪಂಚವಟಿಯಿಂದ ಅಣ್ಣ ರಾವಣನಲ್ಲಿಗೆ ಓಡಿಹೋದ ಶೂರ್ಪಣಖಿಯಂತೆ ಗಾಢಾಂಧಕಾರದ ಕಾಡಿಗೆ ಧಿಂಕಿಟ್ಟುದು (ಹಗಲಿ. ೪೮). [ ಧೀಂಕು + ಇಡು$_1$ ]

**ಧೀಂಕು,** ದಿಂಕು, ದೀಂಕು, ಧಿಂಕು (ನಾ). ೧. ನೆಗೆತ ; ಜಿಗಿತ ; ಹಾರಿಕೆ. 'ಎರಲೆಧೀಂಕು', 'ಧೀಂಕಿಡು' ಪರಾ. **ದೀಂಕು :** ೧. ದಿಂಕಿಂ ತೆಗೆನೆಱೆದಿಸೆ ಚಾಪಂ ಕುಟಿಲತೆಗೆಟ್ಟು . . . ಬಿಲ್ಲ ಕೊಪ್ಪು ಕೊಡಂಕೆಯ ಕೊಪ್ಪಿನ ಪೊಲಮುರೆ (ಶಾಂತಿಪು. ೪-೪೩). 'ಎರಲೆದಿಂಕು', 'ದಿಂಕುಗೊಳ್', 'ದಿಂಕುವಾಱು' ಪರಾ. ೨. ಉಲ್ಲಾಸದಿಂದ ಕುಣಿದಾಡುವಿಕೆ, – ಕುಪ್ಪಳಿಸುವಿಕೆ : (+). **ದೀಂಕು :** ೧. 'ದೀಂಕಿಡು' ಪರಾ. **ಧಿಂಕು :** ೧. ಮುಱಿಗಱಿಗೆಯೊಂದು ಧಿಂಕಾದತ್ತು ಹುಡುಗನೆನಿಸುವ ಪಾರ್ವನಾ ಪರಶುರಾಮನೆಚ್ಚಂಬಿಗೊಳಗಾದುದಬ್ಧಿ (ವೀಶೈಪು. ೨-೩-೦೪). [ ? ]

**ಧೀಂದ್ರಿಯ** (ನಾ). ಮನಸ್ಸು, ಕಣ್ಣು, ನಾಲಗೆ, ಮೂಗು, ಚರ್ಮ ಮತ್ತು ಕಿವಿಗಳೆಂಬ ಆರು ಜ್ಞಾನೇಂದ್ರಿಯಂಗಳು : "ಧೀಂದ್ರಿಯಂ – ಮ ನೋ ೯ ನೇ ತ್ರಾ ದಿ ಮನೋನೇತ್ರಜಿಹ್ವಾಘ್ರಾಣತ್ವಕ್‌ಶ್ರೋತ್ರಗಳ ಹೆಸರು" (ಸಿದ್ಧಾಂತಿ. ೪೭). ☞ ಕೆಲವರು ಮನಸ್ಸನ್ನು ಬಿಟ್ಟು ಐದುಂ ಜ್ಞಾನೇಂದ್ರಿಯಂಗಳೆಂದು ಹೇಳಿದ್ದಾರೆ. ಕೆಲವರು ಮನಸ್ಸನ್ನೂ ಸೇರಿಸಿ ಆರುಂ ಎಂದು ಹೇಳಿದ್ದಾರೆ. [ ಧೀ + ಇಂದ್ರಿಯ ]

**ಧೀತೃಷ್ಣೆ** (ನಾ). ಬುದ್ಧಿಯ ಬಯಕೆ ; ಜ್ಞಾನಪಿಪಾಸೆ : ನಿನ್ನೀ ಮೇರು ಕೃತಿಯ . . . ಮಾನಸಸರೋವರದಿ ಪೂರ್ಣತೃಪ್ತಿಯನೀಂಟಿ ಶಾಂತವಾದುದು ನನ್ನ ಧೀತೃಷ್ಣೆ (ಅಗ್ನಿಹಂ. ೯೯-೭). [ ಧೀ + ತೃಷ್ಣೆ ]

**ಧೀಬಿಗರ್ತ ?** (ನಾ). ನರಕಕೂಪ (?) : ಧರ್ಮ್ಮಮನಿದಂ ಪರಿಪಾಲಿಸಿದಂಗೆ ಸರ್ಬ್ಬಪಾಪಕ್ಷಯಮುಪ್ಪುದ್ದ ತಿಕ್ಕೆಯಿನಿದಕ್ಕಳಿವಂ ಬ ಗೆ ದ ೦ ಗ ಶೇ ಷ ಮ ೦ ಶ ಕ್ಷ ಯ ವಕ್ಕುಮಾ ಖಳನಿಳಾಮರ ಗೋನಿವಹಂಗಳಂ ಸ್ವಹಸ್ತಕ್ಷತಿಗೆಯ್ದ ಪಾತಕನಮಂ ನೆಱೆ ಬೀಳುವ ಧೀಬಿಗರ್ತ್ತದೊಳ್ (ಶಾಸಪ. ೯೭ ; ೧೦೭೯). [ ? ]

**ಧೀಮಂತ** (ನಾ). ೧. ಬುದ್ಧಿವಂತ ; ಜಾಣ ; ಮೇಧಾವಿ : ಮಹಾಮಹಿಭುಜರ್ ಶೌರ್ಯೋಗ್ರಧೀಮಂತರಂಕದ ಸಾಮಂತರುದಾರವೀರವಿಭವಶ್ರೀಮನ್ನೆಯರ್ (ಪುಷ್ಪಪು. ೮-೩೯) ; ಕುವರವಿಷ್ಣು ಯೋಗ್ಯಪುತ್ರ, ಧೀಮಂತ, ಸತ್ತ್ವಶಾಲಿ (ಶಾಂತಲಾ. ೩೮). ೨. ಜ್ಞಾನಿ ; ಪಂಡಿತ : ಧೀಮಂತಂ ದೇವದೇವಂ ಪುಲಿಗಿರಿನಗರೀಶಾಸನಾಂಕಂ ಮೃಗಾಂಕಂ (ಸೋಮೇಶ. ೧) ; ಧೀಮಂತರುದ್ದೀಪ್ತ ಚಿತ್ತದುಳಿವನು ಮೆರೆವ ನಾರಣನ ಕರುಣಾಕಟಾಕ್ಷ (ಮಲೆದೇ. ೫೮-೯). [ ಸಂ. ಧೀಮತ್ ]

**ಧೀಮಂತಿಕೆ** (ನಾ). ಬುದ್ಧಿವಂತಿಕೆ ; ಜಾಣ್ಮೆ : ಕಾವೇರಿಯ . . . ದರ್ಶನ ತೆಗೆದುಕೊಂಡವರಲ್ಲಿ ಸ್ವಾತಂತ್ರ್ಯ, ಧೀಮಂತಿಕೆ, ಗಂಭೀರತೆಯನ್ನು ತುಂಬಿ ಕಳಿಸುತ್ತಿದೆ (ಅವತಂ. ೨೯). [ ಧೀಮಂತ + – ಇಕೆ ]

**ಧೀಮಣಿ** (ನಾ). ೧. ಬುದ್ಧಿವಂತರಲ್ಲಿ ಶ್ರೇಷ್ಠ ; ಮಹಾಮೇಧಾವಿ : ಬಲದೇವಧೀಮಣಿ ತನಯಳಂ ಬಸವಂಗೆ ಭಕ್ತಿಯೊಳಿತ್ತು ಶರಣೆಂದ (ಬಸಪು. ೪ ಸೂಚನೆ) ; ಭೂಮಿಯೊಳು ಕೇಳುವವೆ ಕಾಂಬವೆ ವೇಮಧೀಮಣಿ

ನಿಮ್ಮೊಳಲ್ಲದೆ ಸೋಮನೇಮ ಕಪರ್ದರೂಪಾ ಸತ್ಯಸಲ್ಲಾಪ (ಬಸಪು. ೪೬-೭೯). ೨. ಪಂಡಿತಶ್ರೇಷ್ಠ : ಒಡನೆ ಚಾವಡಿಗೆಯ್ದಿ ಧೀಮಣಿಗಳಂ ಕರೆಸಿ (ಗುರುಚಾ. ೧೯-೬೪). [ <ಸಂ. ಧೀಮನ್ಮಣಿ ]

**ಧೀಮತಿ** (ನಾ). ಜಾಣೆ ; ಬುದ್ಧಿವಂತೆ "ಪ್ರಾಜ್ಞಾ, ಧೀಮತೀ–೨ ಬಹಳ ಬುದ್ಧಿಯುಳ್ಳವಳು" (ಸಿದ್ಧಾಂತಿ. ೧೭೦). [ ಸಂ. ಧೀಮತೀ ]

**ಧೀಮಾಯಿ** (ನಾ). ಜಡತೆ ; ಮಾಂದ್ಯ ; ಚುರುಕಿಲ್ಲದಿರುವಿಕೆ : ತಮ್ಮ ಅಧಿಕಾರ ತಮ್ಮ ಘನತೆಗೆ ತಕ್ಕುದಲ್ಲವೆಂಬ ಭಾವನೆಯಿಂದಲೋ ಅಥವಾ ಸ್ವಾಭಾವಿಕ ಧೀಮಾಯಿ ಇಂದಲೋ, ಅವರು ಕೆಲಸವನ್ನು ಹೊತ್ತು ಮುತವರ್ಜಿ ತೋರಿಸುತ್ತಿರಲಿಲ್ಲ (ಕಲಿನ. ೩೧೬).

[ ←ಮರಾ. ಧಿಮಾಈ, ಧಿಮ್ಮಾಈ ]

**ಧೀಮೂಢತೆ** (ನಾ). ಬುದ್ಧಿಯಿಲ್ಲದಿರುವಿಕೆ ; ತಿಳಿವಳಿಕೆಯಿಲ್ಲದಿರುವಿಕೆ ; ಮೂಢತ್ವ : ಮೈಮುಟ್ಟಿ ಮನಮುಟ್ಟಿ ಬರುವೆ, ರೂಪವ ನೋಡೆ ನೀ ಮೂಡಿ ಬುದ್ಧಿಯೊಳು ನೆಡುವೆ, ರಸವನು ಸವಿಯೆ ಧೀಮೂಢತೆಯ ನೊಡೆದು ನಿಲ್ಲಿಸುವೆ ಚಿತ್ತವನು (ಗರಿ. ೯-೩). [ ಧೀ + ಮೂಢತೆ ]

**ಧೀಯುತ** (ನಾ). = ಧೀಮಂತ ೧ : ಧೀಯುತರು ನವನಾಥಸಿದ್ಧರಜೋಯಾ ಸಾಧ್ಯಪ್ರವರಮುಖ್ಯಮಹಾಯತೀಂದ್ರರು ಬಂದರೀಶನನೋಲಯಿಸಲೆಂದು (ಬಸಪು. ೧-೪೧) ; ಧೀಯುತಂ ನೀನುಗ್ರಕೋಪಮಂ ಬಿಡಬೇಹುದು (ವೀಶೈಪು. ೩-೧೧-೩೮). [ ಧೀ + ಯುತ ]

**ಧೀರ** (ಗು). ೧. ಧೈರ್ಯದಿಂದ ಕೂಡಿದ ; ದಿಟ್ಟತನದ. ೨. ಸ್ಥಿರವಾದ ಮನಸ್ಸುಳ್ಳ ; ದೃಢತೆಯುಳ್ಳ : ಧೀರ ಪಗಲ್ಪೊಣೆಯಾಂಡಂ ರಾರಾಜಿಸು ತಿರ್ಪ ಪುಷ್ಪಕಂ . . . ತಾರಾದ್ರಿಗೆ ಬಂದುದಭವನಾಜ್ಞೆಯೊಳಾಗಳ್ (ತ್ರಿಪುವಿ. ೧೩-೩೦). ೩. ಗಂಭೀರವಾದ ; ಉದ್ವೇಗವಿಲ್ಲದ : ಅತಿಕುಶಲ [ಸ]ಲೀಲಾಚಾರ ಲೋಕೋಪಕಾರೋದಿತ ಪರಮಗುಣ್ಯೈಕೋದಾರ ಧೀರಾಧಿಕಾರಂ (ಕವಿರಾ. ೩-೩೦೯). 'ಧೀರಪ್ರಕೃತಿ' ಪರಾ. ೪. ಮನೋಹರವಾದ. (ನಾ). ೫. ಧೈರ್ಯ ; ದಿಟ್ಟತನ ; ಎದೆಗಾರಿಕೆ : ಅರಿದರಿದು ತೆಗೆವವನ ಧೀರವು ಹಿರಿದು ನೋಡೆನಲಖಿಳದೇವರ ನೆರವಿ ಭಾಪೆನೆ (ಕೌಶಿರಾ. ೩-೪೩). 'ಧೀರನಿಧಿ' ಪರಾ. ೬. ಧೈರ್ಯಶಾಲಿ ; ದಿಟ್ಟ : ಧೀರಂ ಮದೀಯುತನಯಂ ಮಾರನಿಭಂ ತೊಟಿದನೆನ್ನ ಕಾರಣದಿಂದಂ ಚಾರುತರಸ್ತ್ರೀಯುರಂ (ನೇಮಿಪು. ೩-೩೮) ; ನಮ್ಮ ಕೂಡಲಸಂಗನ ಶರಣರು ಧೀರರು ಉಳಿದವರೆಲ್ಲಾ ಅಧೀರರು (ಬಸವ. ೪೪೪) ; ಧೀರಂ ಧೀರಂಜಿತಂ ನಿಃ ತಡೆದಿರದೆ ಯಶಸ್ಸಾಧನಂ ಸಾಧನಂ (ಜಗವಿ. ೧೫-೫೬) ; ಧೀರಾ ನಮೋಸ್ತು ಗುಣಗಣಧುರಾರಾಜಿತ ತಪಃಕ್ರಮೋದಿತ ಶೂರಾ (ಜೀವಸಂ. ೧೦೬-೫೩) ; ಧೀರಂ ಪಿಂಗಳಲೋಚನಂ ನಿಶಿತದಂಷ್ಟ್ರಂ ಭೀಷ್ಮ ವಕ್ತ್ರಂ . . . ವಿರಾಜಿಸಿದುದುದ್ಯದ್ಭೀಕರಂ ಸೂಕರಂ (ಗಿರಿಕ. ೧-೧೦೦) ; ಕಿಟ್ಟಿ ಕರವಾಳ್ಗಳೆಮನಗಂ . . . ಬೆದಱದೆ ನಿಂದಟ್ಟಿಯುನೆ ನುಡಿವರಿವರ ನೆಗೞ್ಚಿ ಕರಂ ಪಿರಿದ ಧೀರರಕಟ ಕುಮಾರರ್ (ಯಶೋಚ. ೧-೬೦) ; ಧೀರಂ ದಿವ್ಯಮಹತ್ವಸತ್ವಮಹಿತಂ ಭರ್ಗೋಪಮಂ ಭಾಸುರಾಕಾರಂ (ವೃಷವಿ. ೩೭-೩). ೭. ಬುದ್ಧಿವಂತ ; ಜಾಣ : ಧೀರನಪ್ಪನುಮಂ ಹಾಸ್ಯಂ ಮಾಳ್ಪಳ್ . . . ವಿನೀತನಂ ದೂರದಿಂ ನೋಡಿ ಪಾತಕನಿವನೆಂದು ತಿಳಿದು ಪೋಗಲಿಂದಿರೆ ನಂಬದಿರ್ (ಕಾದಂಪೂ. ೫೪೯). ೮. ಪಂಡಿತ ; ವಿದ್ವಾಂಸ : "ಧೀರಃ, ಧೀಮಾನ್ . . . ಮತಿಮಾನ್–ಈ ೨೮ ವಿದ್ವಾಂಸರ್" (ಹಲಾಯು. ೫೫-೧೭೭). ೯. ಸಮುದ್ರ ; ಕಡಲು. ೧೦. ಕೇಸರ ; ಕುಂಕುಮಕೇಸರಿ. ೧೧. ಗೌತಮ ಬುದ್ಧ. [ ಸಂ. ]

**ಧೀರತನ** (ನಾ). = ಧೀರತೆ ೧ : ಶರಣು ದಶರಥರಾಮದೂತಗೆ . . . ಧೀರ ತನದಲಿ ಅಕ್ಷಕುಮಾರನ ಪ್ರಾಣವನು ಕೊಂಡಗೆ (ಕನಕ. ೧೩-೧).

[ ಧೀರ + -ತನ ]

**ಧೀರತನು** (ನಾ). ದೃಢವಾದ ಶರೀರವುಳ್ಳವನು : ಧೀರತನು ಧುರದುಂಡಿ ಹನುಮಯ್ಯರಿಂ ಸೇವಿಸಿದ ನಿಮ್ಮಂಘ್ರಿಕಮಲವ ದೂರ ಮಾಡದೆ ಸಲಹಯ್ಯ (ಕನಕ. ೭-೩). [ ಧೀರ + ತನು ]

**ಧೀರತೆ** (ನಾ). ೧. ಕೆಚ್ಚು ; ದಿಟ್ಟತನ ; ಧೈರ್ಯ : ವಸುಮತಿ ಸಾಕ್ಷಿ ಧೀರತೆಗೆ . . . ರಿಪುಬ್ರುಜೆ ಮಂಡಳಮೆಯ್ದೆ ಸಾಕ್ಷಿ ಸಾಹಸಕೆ (ಸೌಇಇ. XX, ೪೬-೩೦ ; 1072) ; ಧೀರತೆಯನೊಡನೆ ತೊಱೆದು ತಪೋರಮಣಸಹಸ್ರ ಮಂತು ಬಳಸಿರ್ಪನೆಗಂ ತಾರಾನಿಕರಂ ಬಳಸಿದ ಮೇರುವಿನಂತಿರ್ದನಾ ಜಗತ್ರಯತಿಲಕಂ (ಅನಂಪು. ೯-೭೮). ೨. ದೃಢತೆ ; ಸ್ಥೈರ್ಯ. 'ಧೀರತೆಗಿಡಂ' ಪರಾ. [ ಸಂ. ಧೀರತಾ ]

**ಧೀರತೆಗಿಡು** (ಕ್ರಿ). ಸ್ಥೈರ್ಯವನ್ನು ಕಳೆದುಕೊಳ್ಳು ; ದಾರ್ಢ್ಯವಿಲ್ಲದಾಗು : ಧೀರತೆಗಿಡದೆ ಪರೀಷಹವೀರರನುಗ್ರೋಗ್ರತಪದೊಳಂ ಗೆಲ್ದು (ಶಾಂತಿಪು. ೪-೧೦೯). [ ಧೀರತೆ + ಕಿಡು (<ಕೆಡು$_1$) ]

**ಧೀರತೆವಿಡಿ** (ಕ್ರಿ). ದಿಟ್ಟತನವನ್ನು ಹೊಂದು ; ಕೆಚ್ಚಿನಿಂದ ಕೂಡಿರು : ಅರಿವಿನ ಬೇಲಿಯು ತಲೆಮೆಟ್ಟಿ ಧೀರತೆವಿಡಿಯುತ ಹಾರುತ ನೆಗೆಯುತ ಚಿದ್ಘನಜಪಲಿಯು ಸಾಗುತಿರೆ (ಪ್ರಬಂಧ. ೧೦೮). [ ಧೀರತೆ + ಪಿಡಿ$_1$ ]

**ಧೀರತ್ವ** (ನಾ). ೧. ಕೆಚ್ಚು ; ಧೈರ್ಯ : ಊರಿಂಗೆ ದೊರೆ ರೂಪು . . . ರಾಜಂಗೆ ಧೀರತ್ವ ರೂಪು (ಸರ್ವಜ್ಞ. ೭೦೮). ೨. ದೃಢತೆ ; ಸ್ಥೈರ್ಯ : ನನೆಗೋಲ್ ನಟ್ಟು ಕೊನರ್ತವೊಲ್ ಪುಳಕಮುಣ್ಮಿತ್ತು . . . ದಿಟದಿಂ ಹೃದ್ಗೇಹಮಂ ತನ್ನಿತಂಬಿನಿ ಪೊಕ್ಕಂತಿರೆ ಕಂಪನಕ್ಕೆ ತನು ಕೈಗೊಟ್ಟತ್ತು ಧೀರತ್ವಮಂ ಮನದಿಂ ಸುಯ್ ಪೊಱಗಣ್ಗೆ ಪೊತ್ತಡಕುಮಂತಿರ್ದತ್ತು ಭೂಪಾಲನಾ (ಕಾವ್ಯಸಾ. ೫೬೦) ; ನೀನೀಗ ಧೀರತ್ವವಳಿದು ಮೇರೆಯ ಮೀಱು ಬಲು ಮೋಹವಾರಿಧಿಯೊಳು ಮುಳುಗುವುದೆ (ಕಂನವಿ. ೯-೧೫೨). [ ಸಂ. ]

**ಧೀರನಿಧಿ** (ನಾ). ಧೈರ್ಯಕ್ಕೆ ಆಕರನಾದವನು ; ಧೈರ್ಯನಿಧಿ ; ಧೈರ್ಯಸ್ಥ : ಧೀರನಿಧಿ ಬಿಟ್ಟಿದೇವನೊಳೋರಗೆ ಬಲ್ಲಾಳನಿಂತು ನರಸಿಂಹ ಸುತಂಗಾರೆಣೆ (ಯಶೋಚ. ೧-೧೩). [ ಧೀರ + ನಿಧಿ ]

**ಧೀರಪ್ರಕೃತಿ** (ನಾ). ಗಂಭೀರಸ್ವಭಾವ: ಧೀರಪ್ರಕೃತಿಗೆ ಸೌಮ್ಯಾಕಾರಕ್ಕನು ಗುಣಮೆನಿಪ್ಪ ನಯವಿನಯವಚಸ್ಸಾರತೆಗೆ ಮೆಚ್ಚಿ ರಘುಕುಲವೀರಂ ಕಾಣ್ಕ ದೃಷ್ಟಿಯಿಂದೀಕ್ಷಿಸಿದಂ (ಪಂರಾಮಾ. ೧೧-೪೦). [ ಧೀರ + ಪ್ರಕೃತಿ ]

**ಧೀರಪ್ರಶಾಂತ** (ನಾ). = ಧೀರಶಾಂತ : ನಾಯಕನಲ್ಲಿ ಧೀರೋದಾತ್ತ, ಧೀರಲಲಿತ, ಧೀರೋದ್ಧತ, ಧೀರ(ಪ್ರ)ಶಾಂತ ಎಂದು ನಾಲ್ಕು ವಿಧ . . . ಧೀರ(ಪ್ರ)ಶಾಂತನಲ್ಲಿ ವಿಶೇಷಗುಣಗಳಿಲ್ಲ. ಮೇಲೆ ಹೇಳಿದ ನಾಯಕ ಸಾಮಾನ್ಯಲಕ್ಷಣಗಳು ಮಾತ್ರ ಇರುತ್ತವೆ. (ಇವರು ಪ್ರಾಯಿಕವಾಗಿ ಬ್ರಾಹ್ಮಣರು ಅಥವಾ ವೈಶ್ಯರು). ಉದಾಹರಣೆ :–ಮಾಧವ, ಚಾರುದತ್ತ (ಕೃಪಿಡಿ. ೩೦೯) ; ವೀರಶೃಂಗಾರದ ಪ್ರಧಾನನಾಯಕ 'ಧೀರಲಲಿತ', ದಾನವೀರ–ಧರ್ಮವೀರ–ಶಾಂತರಸಗಳಲ್ಲಿ ಪ್ರಧಾನನಾಯಕ 'ಧೀರಪ್ರಶಾಂತ' (ಧ್ವನ್ಯಾಲೋ. ೧೫೮ ಅಡಿಟಿ). [ ಧೀರ + ಪ್ರಶಾಂತ ]

**ಧೀರಮೂರ್ತಿ** (ನಾ). ಧೈರ್ಯವಂತ ; ದಿಟ್ಟ : ಮೊಸಳೆಯೆ ರಾಜಾಧಿರಾಜನು ನೀರೊಳು ಇಲಿ ಬಿಲದೊಳು ಧೀರಮೂರ್ತಿ (ಇಂಚಾಪ. ೩೩೩-೫೪).

[ ಧೀರ + ಮೂರ್ತಿ ]

**ಧೀರಲಲಿತ** (ನಾ). [ಕಾವ್ಯಮೀ]ಕಾವ್ಯ ಅಥವಾ ರೂಪಕದ ನಾಯಕರಲ್ಲಿ ಒಂದು ಭೇದ ; ಮೃದುಸ್ವಭಾವದವನೂ ಸಂಗೀತ, ಸಾಹಿತ್ಯದಲ್ಲಿ ಆಸಕ್ತನೂ ಆದ ನಾಯಕ : ಧೀರೋದಾತ್ತ ಧೀರೋದ್ಧತ ಧೀರಲಲಿತ ಧೀರಶಾಂತರೆಂಬ ಚತುರ್ವಿಧ ಶೃಂಗಾರನಾಯಕರಿಂ (ವಿವೇಕ. ೩೩೮) ; ಧೀರಲಲಿತನ ವಿಶೇಷಗುಣಗಳು–ಮೃದುಸ್ವಭಾವ, ಸಂಗೀತಸಾಹಿತ್ಯಗಳಲ್ಲಿ ಆಸಕ್ತನಾಗಿ ನಿಶ್ಚಿಂತನಾಗಿ ಸುಖವಾಗಿ ಇದ್ದುಬಿಡುವಿಕೆ. ಉದಾಹರಣೆ–ವತ್ಸರಾಜ (ಸಂನಾಟ. ೧೭). [ ಧೀರ + ಲಲಿತ ]

**ಧೀರವಶಿ** (ನಾ). ವಿದ್ವಾಂಸರಿಗೆ ವಶವಾಗುವವನು: ಶ್ರೀರಾಮನಾಹ್ಲಾದ ರೂಪಿ. ಔದಾರ್ಯನಿಧಿ . . . ಮತ್ಸರವಿದೂರನತ್ಯಂತಶಾಂತಿಖನಿ. ಪ್ರಿಯ ಭಾಷಿ. ಹಿತಸಖಂ. ಮಿತಮಾರ್ಗಿ. ಧೀರವಶಿ (ಶ್ರೀರಾಮಾ. ೫೭-೯೪).
[ ಸಂ. ಧೀರವಶಿನ್ ]

**ಧೀರಶಾಂತ** (ನಾ). [ಕಾವ್ಯಮೀ]ಕಾವ್ಯ ಅಥವಾ ರೂಪಕದ ನಾಯಕರಲ್ಲಿ ಒಂದು ಭೇದ; ರಸಿಕನೂ ಮಾರ್ದವವುಳ್ಳವನೂ ಶುಚಿಯೂ ಸುಖಿಯೂ ಪ್ರಸನ್ನನೂ ಮನೋಹರನೂ ಆಗಿದ್ದು, ಬ್ರಾಹ್ಮಣನೋ ಅಥವಾ ವಣಿಜನೋ ಆಗಿರುವ ನಾಯಕ: ಧೀರೋದಾತ್ತ ಧೀರೋದ್ಧತ ಧೀರಲಲಿತ ಧೀರಶಾಂತರೆಂಬ ಚತುರ್ವಿಧ ಶೃಂಗಾರ ನಾಯಕರಿಂ (ವಿವೇಕ. ೩೩೮); ಧೀರೋದಾತ್ತಲಲಿತರೀ ಧಾರಿಣಿಯೊಳ್ ನೆಗಟ್ದಿ ಧೀರಶಾಂತೋದ್ಧತರೆಂದಾರಯೆ ಪೇಟ್ದೀ ಗುಣಯುತರೋರಂತಿರೆ ನಾಲ್ವರಾದರ್ (ರಸರ. ೩-೭೩ ಸೂತ್ರ); ಧೀರಶಾಂತನಲ್ಲಿ ವಿಶೇಷಗುಣಗಳಿಲ್ಲ. ನಾಯಕ ಸಾಮಾನ್ಯಲಕ್ಷಣವೇ ಅವನ ಗುಣಗಳು (ಅವನು ಸಾಮಾನ್ಯವಾಗಿ ಬ್ರಾಹ್ಮಣ ಅಥವಾ ವೈಶ್ಯನಾಗಿರುತ್ತಾನೆ). ಉದಾಹರಣೆ – ಮಾಧವ, ಚಾರುದತ್ತ (ಸಂನಾಟ. ೧೮). [ ಧೀರ + ಶಾಂತ ]

**ಧೀರಾರಾಧಿತ** (ಗು). ಜ್ಞಾನಿಗಳಿಂದ ಪೂಜಿತವಾದ: ಧೀರಾರಾಧಿತಪಾದ ಪದ್ಮನಖಿಲಪ್ರತ್ಯಂತವಿದ್ಯೋದಿತಂ (ವಸ್ತುವಂ. ೧೦೮).
[ ಧೀರ + ಆರಾಧಿತ ]

**ಧೀರುರೆ** 'ಧಿರುರೆ' ನೋ.

**ಧೀರೈಸು** (ಕ್ರಿ). ಧೈರ್ಯದಿಂದ ಎದುರಿಸು: ದೂರದ ಸೀಮೆಗೆ ನಾರಿ ನಾನೊಬ್ಬಳೆ ಧೀರೈಸನಾರೆ ದಿನಗಳ (ನಾಪದ. ೬೮).

**ಧೀರೈಸಿಕೊಳ್ಳು** = ಧೈರ್ಯ ತಂದುಕೊಳ್ಳು; (ಮನಸ್ಸಿಗೆ) ಸಮಾಧಾನ ಹೇಳಿಕೊಳ್ಳು: ದೂರದ ಅಕ್ಕಯ್ಯ ಸುಖದಾಗೆ ಇದ್ದಾಳೆಂದು ಧೀರೈಸಿಕೊಂಡೆ ಮನದಾಗೆ (ನಾಪದ, ೬೮). [ ಧೀರ + – ಇಸು ]

**ಧೀರೋದಾತ್ತ** (ಗು) ೧. ಆಳವಾದ ಮತ್ತು ಉನ್ನತವಾದ: ಧೀರೋದಾತ್ತ ಗುಣೋತ್ತರನಾರಯೆ ಚಿಕದೇವರಾಯನತಿರವಿತೇಜಂ(ಅಪ್ರತಿ.೩೪-೧೭); ಜನಕಜಾರಮಣ ಧೀರೋದಾತ್ತ ವಕ್ಷವಾರ್ಧಿಯ ನೀಲನಾವೆಯೊಳ್ ತೇಲಿದನು ಶಾಂತಿಯ ತುರೀಯಕೆ (ಶ್ರೀರಾಮಾ. ೧೭೪-೩೪೭); ಇಂತಹ ಪ್ರತಿಮೆಯಲ್ಲಿ ಧೀರೋದಾತ್ತಗುಣಗಳೂ ಮಾನವ ಮೈತ್ರಿಯ ಲಕ್ಷಣಗಳೂ ಸೇರಿ ಪ್ರತಿಮೆಯ ಬಹುಮುಖತೇಜಸ್ಸನ್ನು ಉಜ್ವಲಿಸುತ್ತವೆ (ಬಧ್ರಪ್ರ. Lxvii ಟೀಕೆ). (ನಾ). ೨. ಧೀರನೂ ಉದಾತ್ತವಾದ ಗುಣಗಳಿಂದ ಕೂಡಿದವನೂ ಆದ ವ್ಯಕ್ತಿ; ಗಂಭೀರನೂ ಸದ್ಗುಣಿಯೂ ಆದವನು: ಬಸವರಾಜಂ ಲಿಂಗಸದರ್ಥಂ ಜಂಗಮಸುರತರುಸಾರಹೃದಯಂ ಧೀರೋದಾತ್ತಂ ಸತ್ಯಸಂಧಂ ದಯಾನಿಧಿ (ಬಸರ. ೧೩-೫೦); ಚಚ್ಚರ ಬೆಸಸು ಬೆಸನಾವುದೆಂದು ಧೀರೋದಾತ್ತನೆರಡುಕೈಮುಗಿಯಲು (ಹಚಕಾ. ೮-೪೮); ಧೀರೋದಾತ್ತಂ ಜಲಧಿಗಭೀರಂ (ನಳಚಂ. ೧೫೦); ಚೆಲ್ಲಿದ ಕರಣಂಗಳಂ ಮೆಲ್ಲನೆ ಸಂತೈಸಿಕೊಂಡು ಧೀರೋದಾತ್ತ ಸಾರ್ವಭೌಮಂ ಮುಂದಣ್ಗೆ ನಡೆತರುತ್ತಂ (ರಾಜಶೇ. ೭-೭೧ ವ). ೩. [ಕಾವ್ಯಮೀ] ಕಾವ್ಯ ಅಥವಾ ರೂಪಕದ ನಾಯಕರಲ್ಲಿ ಒಂದು ಭೇದ; ಉದಾತ್ತನೂ ಗಂಭೀರನೂ ಆದ ನಾಯಕ: ಧೀರೋದಾತ್ತ ಧೀರೋದ್ಧತ ಧೀರಲಲಿತ ಧೀರಶಾಂತರೆಂಬ ಚತುರ್ವಿಧ ಶೃಂಗಾರನಾಯಕರಿಂ (ವಿವೇಕ. ೩೩೮); ಧೀರೋದಾತ್ತನಲ್ಲಿರುವ ವಿಶೇಷ ಗುಣಗಳೇನೆಂದರೆ:– ಸುಖದುಃಖಗಳಿಂದ ಚಲಿತವಾಗದಿರುವ 'ಮಹಾಸತ್ತ್ವ', ಗಾಂಭೀರ್ಯ, ಕ್ಷಮೆ, ಆತ್ಮಶ್ಲಾಘನೆ ಮಾಡಿಕೊಳ್ಳದಿರುವುದು, ಸ್ಥೈರ್ಯ, ವಿನಯದಿಂದ ಮುಚ್ಚಿದ ಅಹಂಕಾರ, ಹಿಡಿದ ಕೆಲಸವನ್ನು ಸಾಧಿಸುವ ಸಾಮರ್ಥ್ಯ. ಉದಾಹರಣೆ:– ದುಷ್ಯಂತ, ರಾಮ, ಜೀಮೂತವಾಹನ, ಹರಿಶ್ಚಂದ್ರ ಇತ್ಯಾದಿ (ಕೈಪಿಡಿ. ೩೦೯). [ ಧೀರ + ಉದಾತ್ತ ]

**ಧೀರೋದಾರ** (ನಾ).= ಧೀರೋದಾತ್ತ ೨: ತನಯನನೆತ್ತಿಕೊಳುತ ಮಂತ್ರಿಯನು ಮಾತಾಡಿಸುತ ಸತಿಯನೋವುತ್ತ ನಕ್ಷತ್ರಕನ ಕೂಡುತ್ತರಂಗುಡುತ ರಣ್ಯಮಂ ನೋಡುತ್ತ ನಡೆದ ಧೀರೋದಾರನು[ಪಾಠಾಂ. ನಾ ಭೂಪಾಲನು] (ಹಚಕಾ. ೧೦-೧). [ ಧೀರ + ಉದಾರ ]

**ಧೀರೋದ್ಧತ** (ನಾ). [ಕಾವ್ಯಮೀ] ಕಾವ್ಯ ಅಥವಾ ರೂಪಕದ ನಾಯಕರಲ್ಲಿ ಒಂದು ಭೇದ; ದರ್ಪ, ಮಾತ್ಸರ್ಯ, ಅಹಂಕಾರ, ರೌದ್ರ, ಚಾಂಚಲ್ಯ, ಆತ್ಮಶ್ಲಾಘನೆ ಮುಂತಾದ ವಿಶೇಷ ಗುಣಗಳಿಂದ ಕೂಡಿದ ನಾಯಕ ಅಥವಾ ಪ್ರತಿನಾಯಕ: ಧೀರೋದ್ಧತನಲ್ಲಿರುವ ವಿಶೇಷಗುಣಗಳೇನೆಂದರೆ:– ದರ್ಪಮಾತ್ಸರ್ಯಗಳು, ಮಾಯಾಮೋಸಗಳು, ಅಹಂಕಾರ, ರೌದ್ರ ಚಾಂಚಲ್ಯಗಳು, ಆತ್ಮಶ್ಲಾಘನೆ. (ಪ್ರತಿನಾಯಕನು ಸಾಮಾನ್ಯವಾಗಿ ಧೀರೋದ್ಧತನಾಗಿರುತ್ತಾನೆ). ಉದಾಹರಣೆ:– ದುರ್ಯೋಧನ, ರಾವಣ (ಕೈಪಿಡಿ. ೩೦೯); ನಾಯಕರಲ್ಲಿ ಧೀರೋದಾತ್ತ, ಧೀರಲಲಿತ, ಧೀರೋದ್ಧತ, ಧೀರಶಾಂತ ಎಂದು ನಾಲ್ಕುವಿಧ (ಸಂನಾಟ. ೧೭); ವೀರರೌದ್ರದ ಪ್ರಧಾನ ನಾಯಕ 'ಧೀರೋದ್ಧತ' (ಧ್ವನ್ಯಾಲೋ. ೧೩೪ ಅಡಿಟಿ).
[ ಧೀರ + ಉದ್ಧತ ]

**ಧೀವರ** (ನಾ). ೧. ಬುದ್ಧಿಯಿಂದ ಶ್ರೇಷ್ಠನಾದವನು; ಬುದ್ಧಿವಂತ; ಜ್ಞಾನಿ: ಹರುಷದಿಂ ತಾನುಂ ಬಸವಧೀವರನುಮುಖಿಳನಿಯೋಗದೋಲಗವೆರಸಿ ಬರುತಿಪ್ಪೆಡೆಯೊಳು (ಬಸಪು. ೫-೧೯); ವರದ ಮಹಿಮಾನ್ವಿತನೆ ಧೀವರನುರುಜಿತೇಂದ್ರಿಯ ಪರಮಚಿದ್ಘನ (ಮಡಿಭ. ೪). ೨. ಬೆಸ್ತರವನು; ಮೀನುಗಾರ; ಜಾಲಗಾರ: "ಕೈವರ್ತಃ, ಧೀವರಃ, ದಾಶಃ, ಮತ್ಸ್ಯಬಂಧೀ, ಜಾಳಿಕಃ – ಈ ೫ ಜಾಲಗಾಱಂ" (ಹಲಾಯು. ೯೭-೪೪೦); "ಧೀವರ ಜಾಳಿಕ ದಾಶನಾಮ ಮೀಂಗುಲಿಗಂ" (ವಸ್ತುಕೋ. ೬೬-೪೪); ಕರೆಸಿದನು ಧೀವರನ ನಯ್ಯಂಗರಸಿಯಾಗಲಿ ನಿನ್ನ ಮಗಳೆನಲು (ಕುವ್ಯಾಆ. ೩-೩೭); ಪ್ರಳಯ ಕಾಲದೇಕಾರ್ಣವದೊಳುನ್ನತ್ತ ಕಚ್ಛಪ ಮತ್ಸ್ಯಯುಗಮಂ ತೆಗೆವ ಧೀವರೋತ್ತಂಸರೂಪಂ ಹರಂ (ಪದ್ಮರಾ. ೧೦-೧೩೪); ಧೀವರಗೆ ಬೇಡಿದುದನಿತ್ತು ಕಳುಹೆ (ಪ್ರೌಢರಾ. ೧೧-೩೩). ೩. ಬೇಟೆಗಾರ; ಬೇಡ; ವ್ಯಾಧ: ಹಸ್ತಮನಾ ಪಾವಿನ ಪಲ್ಗೆ ಕೊಟ್ಟು ಸತ್ತಾತನ ಪೊಟಲೊಳೆ ಮುಖ್ಯನಪ್ಪ ಧೀವರ[ಪಾಠಾಂ. ದೀವರ, ದೀವಳ]ನಾದಂ (ಅರ್ಧನೇ. ೩-೮೫); ಪಿಡಿದೊಂದು ಪೆರ್ಬುಲಿಯನೊರ್ವಂ ಕಕ್ಷದಿಂದೊತ್ತಿ ತನ್ನ ಗೃಹಕ್ಕೆಟ್ಟಿರುತಿರ್ದನೊಂದೆಡೆಯೊಳುದ್ಧದ್ದೀವರಂ ಧೀವರಂ (ಜಗವಿ. ೧೭-೩೦); ಬಂದ ಸುಜನಮ್ಮಗ ಧೀವರಂ[ಪಾಠಾಂ. ನಖಿಳ ಮುನಿಪಾವನಂ, ನಖಿಳ ಮುನಿಪಾವಕಂ, ದುರ್ಬೋಧಭಾವಕಂ] ಕಪಟಪಟು ಕೌಶಿಕಂ ವಾಸಿಷ್ಠಮುನಿ ಹೋದ ಹೊತ್ತನಱಿದು (ಹಚಕಾ. ೩-೫); ಹೇವವಿಲ್ಲದೆ ಕಾದಬೇಹುದು ಧೀವರರ ಪೋಲ್ ತಡಿಕೆವಲೆಯಲಿ ಲಾವುಗೆಯ ಹೊಯ್ದಂದವಲ್ಲೆನುತೆಚ್ಚನಾ ಪಾರ್ಥ (ಕುವ್ಯಾಕ. ೩೩-೩೮); ಗಗನಗಹನದೊಳೆ ಗವಿಯಿಪ ಖಗಕ್ಕೆ ಪತ್ರೀಂದ್ರ ಧೀವರಂ ಬೀಸಿದ ರೇಣುಗಣ ನವಜಾಲಕೊಳಗಾಯ್ತೊಗುಮಿಗೆಯಿಂದನಿಮಿಷ ಪ್ರತಾನಂ ಚಿತ್ರಂ (ರಾಜಶೇ. ೬-೯೩). [ ಸಂ. ]

**ಧೀವರೆ** (ನಾ). ಬೇಡಿತಿ; ಶಬರಿ: ಪೊಸಮುತ್ತಿನ ಪುಟ್ಟುವ ನೀರೊ ತೋರ್ಪ ಬೆಳ್ದಿಂಗಳ ಬಯ್ಕೆಯೋ ಜಗದ ಧೀ[ಪಾಠಾಂ. ದೀ]ವರೆಯರ್ಕಳ ಕಣ್ಣ ಬೆಳ್ಪು ಬೆಳ್ಳಂಗೆಡೆದತ್ತೊ ಪೇಟಿಮೆನೆ ನಿರ್ಮಲವಾದುದು ನೀರಜಾಕರಂ (ಅರ್ಧನೇ. ೫-೧೦೦). [ ಧೀವರ + – ಎ ]

**ಧೀವರ್ತನೆ** (ನಾ). ಬುದ್ಧಿಪೂರ್ವಕವಾದ ಆಚರಣೆ; "ಬುದ್ಧಿಯ ನಡತೆ" (ಮಂಕುಕ. ಕೋಶ): ದೈವವೆನಿಸಿರುತೆ ವಿಶ್ವಪ್ರಕೃತಿಶಕ್ತಿಯಲಿ ಜೀವವಾಸನೆಗಳಲಿ ಪೂರ್ವಕೃತವೆನಿಸಿ ಧೀವರ್ತನೆಯಲಿ ಪೌರುಷವೆನಿಸಿ ಪರಸತ್ತ್ವ ತ್ರೈವಿಧದೊಳಿರುತಿಹುದು (ಮಂಕುಕ. ೧೫೦).
[ ಧೀ + ವರ್ತನೆ ]

**ಧೀವಶ** (ನಾ). ೧. ಬುದ್ಧಿಗೆ ವಶವಾದಂದು. ೨. ಕೆಚ್ಚು; ಧೈರ್ಯ: ಆಳ ನೋಯಿಸಿ ನೋಡುತಿಹ ಹೀಹಾಳಿ ತಾನೇಕಕಟಕಟ ದೊರೆಯಾಳ ಧೀವಶವೆನುತ ಸಹದೇವಾದಿಗಳು ಜಱೆದು (ಕುಮ್ಮಾಕ. ೧೧-೯೯). ೩. ಉದ್ಧಟತನ; ಧಾರ್ಷ್ಟ್ಯ: ತಪೋವನದೊಳಿಂದೆಮ್ಮ ನೀಂ ಕೊಱಚಾಡಲೆಂದು ಬೀಡಂ ಬಿಟ್ಟೆಯಱಿದಱಿದು ನಿನ್ನ ಧೀವಶವೆಂದನಂ (ಹರಿಕಾ. ೮-೫). [ ಸಂ. ]

**ಧೀವಶಿ** (ನಾ). ದಿಟ್ಟ; ಶೂರ; ಸಾಹಸಿ: ಇನ್ನೇಕೆ ನುಡಿದೆನ್ನ ನಾಚಿಸುವೆ ಭೂಪಾಲ ನಿನ್ನಂತೆ ಸತ್ಯರುತ್ತಮರಧಿಕಧೀವಶಿಗಳುನ್ನತ ಶಿವೈಕ್ಯರಿಳೆಯೊಳಗಿಲ್ಲ (ಹರಿಕಾ. ೧೧-೨೯); ಭಟರು ಬಳಲಿದರಿಂದು ರಣವುತ್ಕಟವು ಧೀವಶಿಗಳು ಮಹಾರಥರಟಕಟಸುತಿದೆ (ಕುಮ್ಮಾದ್ರೋ. ೧೫-೪೨).
[ ಸಂ. ಧೀವಶಿನ್ ]

**ಧೀವಸ** 'ದೀವಸ' ನೋ.

**ಧೀವಸತನ** (ನಾ). ಎದೆಗಾರಿಕೆ; ಧೈರ್ಯ: ಬಿಸಿಲು ಮಳೆ ಚಳಿಗಳಿಗೆ ಸಲೆ ಸೈರಿಸುವ ದೇಹವೆ ನಿನ್ನದಿದು ಧೀವಸತನಕ್ಕಾ[ಪಾಠಾಂ. ದೀವಸಿಕೆಗಾ]ವಂಜುವೆವು ಕೆಲಸಾರು ನೀನೆಂದ (ತೊರರಾ. ೨-೩-೩೫).
[ ಧೀವಸ (<ದೀವಸ) + – ತನ ]

**ಧೀವಸಿ** 'ದೀವಸಿ' ನೋ.

**ಧೀವಸಿಗ** 'ದೀವಸಿಗ' ನೋ.

**ಧೀವಾಸ** (ನಾ). ಮನಸ್ಸಿನ ಆಶಯ; ಮನೋರಥ; ಸಂಕಲ್ಪ: ಆ ಸರೋಜಾನನೆಯು ಬಲು ಧೀವಾಸವೆಂತುಟೊ ತಪವದೆತ್ತ ಶಿರೀಷ ಕುಸುಮಾಧಿಕ ಸುಕೋಮಲಗಾತ್ರ ತಾನೆತ್ತ (ನಿಭಾಗ. ४-೫-೨೮)). [ ಸಂ. ]

**ಧೀಶಕ್ತಿ** (ನಾ). ಬುದ್ಧಿಶಕ್ತಿ; ಪ್ರಜ್ಞೆ: ವೈಜ್ಞಾನಿಕ ಅನ್ವೇಷಣೆಗೆ ಬೇಕಾದ ಧೀಶಕ್ತಿಯಿಂದಲೂ . . . ಜೀವವನ್ನು ಪಡೆಯದಿರುವ ಮತಶ್ರದ್ಧೆ ಶ್ರದ್ಧೆಯಲ್ಲ (ಶುಕ್ಲಾರ. ೪ ಪೀಠಿಕೆ). [ ಧೀ + ಶಕ್ತಿ ]

**ಧೀಸಚಿವ** (ನಾ). ಬುದ್ಧಿಶಾಲಿಯಾದ ಮಂತ್ರಿ; ಸಲಹೆಗಳನ್ನು ಕೊಡಲು ಸಮರ್ಥನಾದ ಮಂತ್ರಿ: "ಮಂತ್ರೀ, ಧೀಸಚಿವಃ, ಅಮಾತ್ಯಃ – ೩ ಆಲೋಚನೆಯನ್ನು ಹೇಳುವ ಮಂತ್ರಿಯ ಹೆಸರುಗಳು" (ಸಿದ್ಧಾಂತಿ. ೨೩೫).
[ ಧೀ + ಸಚಿವ ]

**ಧುಂಧುಮಾರ** (ನಾ). ೧. ಒಂದು ಬಗೆಯ ಹುಳು; ಇಂದ್ರಗೋಪ. ೨. ಮನೆಯಿಂದ ಹೊರಬರುವ ಹೊಗೆ. ೩. ಹಲ್ಲಿ. [ ಸಂ. ]

**ಧುಡುಂ** (ನಾ). ಒಂದು ಅನುಕರಣ ಶಬ್ದ. 'ಧುಡುಮ್ಮಿಱು' ಪರಾ.

**ಧುಡುಮಿಸು** (ಕ್ರಿ). ಧಾವಿಸು: ಕೂಡಲೇ ಸಲೂನಿನಲ್ಲಿ ಧುಡುಮಿಸುತ್ತೀರಿ (ಗಾಳಿಪ. ೮೧). [ ಧುಡುಂ + – ಇಸು$_3$ ]

**ಧುಡುಮ್ಮಿಱು** (ಕ್ರಿ). ಎರಡೂ ಕೈಗಳಿಂದ ನೀರಿನಲ್ಲಿ ಧುಡುಂ ಎಂದು ಶಬ್ದ ಮಾಡು: ಮನೋಜಸುಖಾರ್ಣವಮಧ್ಯದೊಳ್ ಮನಂಗುಡುತ ಮುಮುರ್ಚುತೀಸುತೆ ಧುಡುಮ್ಮಿಱಿಯುತ್ತಮೆ ಪಾಂಥನೊಪ್ಪಿದಂ (ಗಿರಿಕ. ೨-೧೯). [ಧುಡುಂ + ಇಱು$_1$ ]

**ಧುಡುಮ್ಮಿಱಿವೊಯ್** (ಕ್ರಿ). "ನೀರನ್ನು ಟುಮಕಿ ಹೊಡೆ" (ಪ್ರಭಣ್ಣ): ಮೇಲಕೆ ಪುಟನೆಗೆವ ಧುಡುಮ್ಮಿಱಿವೊಯ್ವ ತಿರಿವ ತೇಂಕಾಡುವ ಮುಳುಗಿಪ . . . ಅಬಲಾಸಂತತಿ . . . ಅರಸನ ಬಗೆಯಂ ಬಂಧಿಸಿತು (ಜಯಕಾ. ೧೧-೪೧).
[ ಧುಡುಮ್ಮಿಱು + ಪೊಯ್$_1$ ]

**ಧುಡುಮ್ಮಿಱಿವೊಯ್ಲು** (ನಾ). ಎರಡೂ ಕೈಗಳಿಂದ ನೀರನ್ನು ಸಶಬ್ದವಾಗಿ ಹೊಡೆಯುವಿಕೆ: ವಿಳಸದ್ವಿಮಲಾಬ್ಜದ ಕಳಿವೂವಿಂ ಕಳಿದೆಸೆವೆಸಳ ನಡುವೆ ತಮ್ಮಯ ಕರತಳದ ಧುಡುಮ್ಮಿಱಿವೊಯ್ಲಿಂದೇಳ್ವಮಲಾಂಬುಕಣಂ ಬಿಳ್ದು ತಳತಳಿಸುತ್ತಿರೆ (ಜಯಕಾ. ೧೧-೫೧).
[ ಧುಡುಮ್ಮಿಱು + ಪೊಯ್ಲು ]

**ಧುತ್** (ನಾ). ಒಂದು ಅನುಕರಣ ಶಬ್ದ. 'ಧುತ್ತೆನ್' ಪರಾ.

**ಧುತ** (ಗು). ೧. ಅಲ್ಲಾಡಿಸಿದ; ಕಲಕಿದ; ಕಂಪನಗೊಳಿಸಿದ. ೨. ಬಿಟ್ಟ; ತ್ಯಜಿಸಿದ. (ನಾ). ೩. [ನಾಟ್ಯ] ತಲೆಯನ್ನು ಮೆಲ್ಲನೆ ಎಡಕ್ಕೂ ಬಲಕ್ಕೂ ಅಡ್ಡಲಾಗಿ ತಿರಂಗಿಸುವುದು: ಪಲ್ಲಟದಿಂದೆಡಬಲಕಂ ಮೆಲ್ಲನೆ ತಿರುಪಲ್ಕೆ ಶಿರಮನದು ಧುತಮೆನಿಕುಂ (ಲಾಸ್ಯರಂ. ೧-೭೯); ಧುತಂ ವಿಧುತಂ . . . ಸಮಂ ಪಾರ್ಶ್ವಾಭಿಮುಖಂ-ಈ ಹತ್ತೊಂಬತ್ತುಂ ಶಿರೋಭೇದಂಗಳ್ (ಲಾಸ್ಯರಂ. ೧-೭೮ ವ). [ ಸಂ. ]

**ಧುತಿಪುರ** (ನಾ). ಒಂದು ಊರಿನ ಹೆಸರು: ಧುತಿಪುರೇ ನಿವರ್ತನಾನಿ ಅಷ್ಟ (ಎಇ. V, ೮-೫; 650). [ ಧುತಿ$_0$ + ಪುರ$_2$ ]

**ಧುತ್ತೂರ** 'ದುತ್ತೂರ' ನೋ.

**ಧುತ್ತೂರಮತ್ತ** (ನಾ). ದತ್ತೂರಿಯನ್ನು ಸೇವಿಸಿ ಭ್ರಮೆಗೊಂಡವನು,–ಹುಚ್ಚು ಹಿಡಿದವನು: ಧುತ್ತೂರಮತ್ತರೊಳ್ ಸ್ತಂಭಕುಂಭಾದಿಗಳೆಲ್ಲಂ ಶಾತಕುಂಭಾಭಾಸಂಗಳಾಗಿ ತೋರ್ಪಂತೆ (ಚಂದ್ರಪು. ೮-೫೫ ವ). P ದತ್ತೂರಿಯನ್ನು ಸೇವಿಸಿದವರಿಗೆ ಲೋಕವೆಲ್ಲ ಹಳದಿಯಾಗಿ ಕಾಣುವುದೆಂಬ ನಂಬಿಕೆಯಿದೆ. [ ಧುತ್ತೂರ (<ದುತ್ತೂರ) + ಮತ್ತ$_3$ ]

**ಧುತ್ತೆನ್** (ಕ್ರಿ). ಧುತ್ ಎಂದು ಕಾಣಿಸು; ದಿಢೀರನೆ ಎದುರಿಗೆ ನಿಲ್ಲು: ಮುರಾರಿಯ ಸಮಸ್ಯೆ ಧುತ್ತೆಂದು ಬಂದಿತು (ಮುಗಿಮು. ೮); ಮಗಳ ಮದುವೆಯ ಚಿಂತೆ ಧುತ್ತೆಂದು ಮುಂದೆ ನಿಂತು ಎದೆಯನ್ನು ಚೂರುಚೂರು ಮಾಡಿತು (ಅಪವಾ. ೧೧೫); ಜೀವಮಾನದಲ್ಲಿ ಎಂದೂ ಕಾಣದ ಸಮಸ್ಯೆಗಳು ಅವರ ಮುಂದೆ ಧುತ್ತೆಂದು ನಿಂತುವು (ಮುತ್ತೈದೆ. ೧೬); ಅನ್ನದ ಸಮಸ್ಯೆ 'ಧುತ್ತೆಂದು' ಬಾಯ್ದೆರೆದು ನುಂಗಲು ನಿಂತಿತು (ಬರಹಾ. ೯೨).
[ ಧುತ್ + ಎನ್$_1$ ]

**ಧುತ್ತ್ಯಾ** (ನಾ). ೧. ಅನಿರೀಕ್ಷಿತವಾಗಿ ಬಂದು ಎದುರಿಗೆ ನಿಲ್ಲುವವನು. ೨. ದಾಂಡಿಗ; ದಡಿಯ: ಎಂಟು ಜನಾ ಹಾವನೂರವರು, ಧುತ್ತ್ಯಾನಂತವರು ಬಂದರ ಅಸಗೊಳ್ಳಲಿಲ್ಲರಿ ಅಂವಾ (ಗ್ರಾಮಾಯ. ೨೪೦).
[ ←ಮರಾ. ಧುತ್ಯಾ ]

**ಧುನಿ** (ನಾ). ನದಿ; ಹೊಳೆ: "ಹ್ರದಿನಿ ತರಂಗಿಣಿ . . . ಸಮುದ್ರಸತಿ ಧುನಿ ತೊಱೆ" (ವಸ್ತುಕೋ. ೨೩-೧೧); "ನದಿ ತರಂಗಿಣಿ ತಟನಿ ಧುನಿ . . . ಎನೆ ತೊಱೆಗೆ ನಾಮಂ" (ಮಂಗರಾ. ೧೨೨-೧೧); ಧುನಿ ಶಶಿ ನಿಟಿಲಾಕ್ಷಂ . . . ಪಂಚಾಸ್ಯದಿಂದಮಾಶ್ವರನೆಸೆದಂ (ತ್ರಿಪುವಿ. ೩೪-೧೮); ಗೋಮತಿ ಸಮಾಖ್ಯದ ಧುನಿಯದೊಂದುಂಟು (ತಿಮ್ಮಕಾಂ. ೧೧-೩೭); ಮುಂತೆ ನಿಲುವೀಯ್ಯದತಿಘೋರಲೋಹಿತದ ಧುನಿ ಲವಣಾಬ್ಧಿಯೊಳ್ ಕೆಡೆವೊಲು (ವೆಂಕರಾ. ೬-೩೬-೪೨); ಹೊಸಸೃಷ್ಟಿಯ ಕನಸೊಂದನು ಬಗೆಗೊಂಡನೊ ನಲ್ಲಂ . . . ಈ ವನಕಂದರವಂ, ಮಂಜುಳನಾದಿನಿ ಧುನಿಯಂ, ಸ್ವರ್ಣಾರುಣನಭಮಂ (ಮಾಂದಳಿ. ४३-೧೧). [ ಸಂ. ]

**ಧುನಿಕುಮಾರಕ** (ನಾ). ನದಿಯ ಮಗ; ಗಾಂಗೇಯ; ಭೀಷ್ಮ: ಧುನಿಕುಮಾರಕ ನುಡಿದನು (ತಿಮ್ಮಕಾಂ. ೨-೬೬). [ ಧುನಿ + ಕುಮಾರಕ ]

**ಧುನಿಬಾವಾ** (ನಾ). ಸಾಂಬ್ರಾಣಿ ಮೊದಲಾದ ಸುಗಂಧದ್ರವ್ಯಗಳ ಹೊಗೆ ಹಾಕಿ ಮೈಕಾಯಿಸಿಕೊಳ್ಳುವ ಸಾಧು,–ಗೋಸಾಯಿ: ಶಿವನ ನಕಲು ಮಾಡುವ ಧುನಿಬಾವಾಗಳೂ ಇಲ್ಲಿದ್ದರು (ಪರಿಹಾ. ೧೫೯೫).
[ ಧುನಿ$_0$ (P← ಹಿಂ. ಧೂನೀ) + ಬಾವಾ ]

**ಧುನಿರಾಣಿ** (ನಾ). ನದಿಗಳ ಅರಸಿ; ಮಹಾನದಿ: ಧುನಿರಾಣಿ ಗಂಗೆಯೆ ನಿನಗೆ ನೆನವಿಹುದೇನಾ ಶುಭಗಳಿಗೆ (ಗೀವಿಂ. ೧೧-೫). [ ಧುನಿ + ರಾಣಿ ]

**ಧುಪ್ಪುಧುಪ್ಪು** (ನಾ). ಒಂದು ಅನುಕರಣ ಶಬ್ದ: ಇರ್ವರು ಧುಪ್ಪುಧುಪ್ಪೆಂಬಂತೆ ಹೊಡೆದಾಡುತಿರ್ದರಾಹವದೆ (ಮೋಹತ. ३೮-३೭). 'ದುಪ್ಪುದುಪ್ಪು' ಪರಾ.

**ಧುಬಲಿ** (ನಾ). ದಪ್ಪವಾದ ಹೆಂಗಸು ; ಟೊಣಪಿ : ನಮ್ಮವ್ವ ! ಏನು ಕಾಟ ಈ ಧುಬಲೀರದು ! (ಎತ್ತಿ.ಕ್ಕ. ೯೭) ; ಗೋಲ ಉಟಗೊಂಡು ಧುಬಲಿ ಬರತದಲ್ಲ, ಅದರ ಜೋಡಿ ಹೋಗಿದ್ದಾಳು ಹವಾ ತಿನ್ನಲಿಕ್ಕೆ ! (ಎತ್ತಿ.ಕ್ಕ.೧೨೨). [<ಡುಬಲಿ./ಮರಾ. ಢಬುಲಾ]

**ಧುಮ್** (ನಾ). ಒಂದು ಅನುಕರಣ ಶಬ್ದ. ಧುಮ್ಮೆನ್' ಪರಾ.

**ಧುಮಧುಮಲಾಡು** (ಕ್ರಿ). ದುಮುಗುಟ್ಟು ; ಸಿಡುಕು ; ಕೋಪವನ್ನು ವ್ಯಕ್ತಪಡಿಸು : ಹಬ್ಬದ ದಿನದಿಂದಲೂ ಸೊಸೆಯು ಮೇಲೆ ಆಕೆ ಧುಮ ಧುಮಲಾಡುತ್ತಲೇ ಇದ್ದಾಳೆ (ಲಕ್ಷ್ಮೀಪ್ರ. ೯೫). [←ತೆಲು. ದುಮದುಮಲಾಡು]

**ಧುಮಶ್ಚಕ್ರಿ** (ನಾ). ಗೊಂದಲ; ಗಲಾಟೆ: ಈ ಪ್ರಕಾರ ಆ ಜನವಸತಿಯಿಂದ ದೂರವಾಗಿದ್ದ ಗೃಹದಲ್ಲಿ ತಾಸೆರಡು ತಾಸು ಧುಮಶ್ಚಕ್ರಿಯು ನಡೆದರೂ ಯಾರಿಗೂ ಗೊತ್ತಾಗಲಿಲ್ಲ (ಮಂಜುಕ. ೭೪). [←ಮರಾ. ಧುಮಶ್ಚಕ್ರೀ]

**ಧುಮುಕು** 'ದುಮ್ಮಿಕ್ಕು' ನೋ.

**ಧುಮ್ಮನೆ** (ಅ). ಧುಮ್ ಎಂಬ ಶಬ್ದದೊಡನೆ: ಅನುಕರಣಕ್ಕೆ–ಖಣಿಲ್ಲನೆ, ಖಟಿಲ್ಲನೆ, ಭಮ್ಮನೆ, ಧುಮ್ಮನೆ [ಪಾಠಾಂ. ಧುಮ್ಮೆನೆ] (ಶಮದ. ೧೪ ಪ್ರಯೋ). [ಧುಮ್ + – ಅನೆ$_1$]

**ಧುಮ್ಮಿಕ್ಕು** 'ದುಮ್ಮಿಕ್ಕು' ನೋ.

**ಧುಮ್ಮಿಡು** (ಕ್ರಿ). ಕೆಳಗೆ ಇಳಿ ; ಬೀಳು : ಮುಡಿಯುಳಿದ ಶಿರೋಜ ಧುಮ್ಮಿಟ್ಟು–ನೆಲದೊಳಗೀಜ ಮೂರ್ಜಡೆಗಳುಗಟ್ಟಿ ತನು ಬಾಗಿ ಬಳಲುತಲಿ (ಹನುಮು. ೨೯–೩). [ಧುಮ್ + ಇಡು$_1$]

**ಧುಮ್ಮುಚಿ** 'ದುಮಂಜಿ' ನೋ.

**ಧುಮ್ಮೆನ್** (ಕ್ರಿ). ಧುಮ್ ಎಂದು ಶಬ್ದಮಾಡು: ಧುಡುಹೆಂಬ ಧುಮ್ಮೆಂಬ ಘೋರೆಂಬ ಭೋರೆಂಬ ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟೆ (ಇಹರ. ದೇ. ೪೨–೨). [ಧುಮ್ + ಎನ್$_1$]

**ಧುರ$_1$** 'ದುರ' ನೋ.

**ಧುರ$_2$** (ನಾ). ೧. ನೊಗ. ೨. ಬಂಡಿಯು ಈಸಿನ ಮುಂಭಾಗ ; ಗಾಡಿ ಯಲ್ಲಿ ನೊಗವನ್ನು ಕಟ್ಟುವ ಭಾಗ ; ಮೂಕಿ. ೩. ಕಡಾಣಿ ; ಕಡೆ ಗೀಲು. ೪. ಉಚ್ಚಸ್ಥಾನ ; ಗೌರವಪೂರ್ಣವಾದ ಸ್ಥಾನ. ೫. ಭಾರ; ಹೊಣೆ ; ಜವಾಬ್ದಾರಿ : ದೊರೆತನದ ಜಟಿಲಗಳ, ಕುಟಿಲಗಳ, ಕಠಿನಗಳ ಭರತನುಳಿಸಿದನೆ ರಾಮನ ತೀರ್ಪಿಗೆಂದು ? ಅರಿವಿಗಿಹ ಕರ್ತವ್ಯಭಾರವನು ತಾನರಿತು ಧುರವ ಧರಿಸಿದನವನು (ಮಂಕುಕ. ೭೦೯). [ಸಂ. ಧುರ್]

**ಧುರಂಧರ** (ಗು). ೧. ಭಾರವನ್ನು ಹೊರುವ, – ಹೊತ್ತಿರುವ. ೨. ಹೊಣೆಗಾರಿಕೆಯನ್ನು ಹೊತ್ತಿರುವ. (ನಾ). ೩. ಭಾರ ಹೊರಲು ಯೋಗ್ಯವಾದ ಪಶು; ಹೊರೆ ಹೊತ್ತುಕೊಳ್ಳಲು ಅರ್ಹವಾದ ಪ್ರಾಣಿ : "ಧೂರ್ವಹಃ, ಧುರ್ಯಃ, ಧೌರೇಯಃ, ಧುರೀಣಃ, ಧುರಂಧರಃ–ಈ ಬಂಡಿ, ಗೋಣಿ, ನೇಗಲು ಮುಂತಾದ ಭಾರವನ್ನು ಹೊತ್ತು ಕೆಳೆಯುವ ಎತ್ತು ಮುಂತಾದ ದನಗಳ ಹೆಸರುಗಳು" (ಸಿದ್ಧಾಂತಿ. ೨೯೩). ೪. ಹೊಣೆಯನ್ನು ಹೊರುವವನು ; ಮುಖಂಡ ; ನಾಯಕ ; ಮುಂದಾಳು ; ವಿಚಿತ್ರವೀರ್ಯನಂ ಗಾಂಗೇಯಂ ಧರಾಭಾರ ಧುರಂಧರನಂ ಮಾಡಿ (ಪಂಪಭಾ. ೧–೭೩ ವ). 'ಧುರಂಧರಿಕೆ' ಪರಾ. ೫. ಕೆಲಸವನ್ನು ನಿರ್ವಹಿಸುವವನು ; ಸಮರ್ಥ : ಸಹದೇವನಾತನ ಸವಹರೆಯ ನಕುಲಾಂಕನಿವರಾಹವಧುರಂಧರರು (ಕುಮ್ವಾಭೀ. ೨–೧೫) ; ಅಸಹಾಯಶೂರ ಧೈರ್ಯದೆ ಪರಾಕ್ರಮಧೀರನಸಮಕೀರ್ತಿಯ ವಿಸ್ತಾರ ಜಸದ ಕಾರ್ಯಕೆ ಧುರಂಧರ ನಂಜರಾಜೇಂದ್ರ ರಸೆಯು ತೊಟಿದು ಪೋದ ನಿಂದು (ಕಂನವಿ. ೧೯–೯೪.) 'ಕಾರ್ಯಧುರಂಧರ' ಪರಾ. [ಸಂ.]

**ಧುರಂಧರತೆ** (ನಾ). ೧. ಹೊಣೆಗಾರಿಕೆ ; ಜವಾಬ್ದಾರಿ ವಹಿಸಿಕೊಳ್ಳು ವುದು : ವಿಶ್ವವಿಶ್ವಂಭರಾ ಧುರಂಧರತೆಗಂ ವೀರಶ್ರೀನಿವಾಸವಿಳಾಸಕ್ಕಂ. . . ತಾನೊರ್ವನೆ ನಿರುಪಮಜನ್ಮಭೂಮಿಯಾಗಿ (ಶಾಂತಿಪು. ೩–೪೯ ವ) ; ರಾಜ್ಯಭರಧುರಂಧರತೆಗೆ ಕುಮಾರಂ ತರುಣನಾದೊಡಂ ನೀಮೆ ಸಾಲ್ವಿರ್ (ಮಲ್ಲಿಪು. ೯–೯೯). ೨. ಸಾಮರ್ಥ್ಯ : ಈ ರಣಧುರದೊಳ್ ಧುರಂಧರತೆಯಿಂ ಹರಿಕಂಧರನೆಂಬನೊಡ್ಡಿದಂ (ವರ್ಧಮಾ. ೪–೫೦). [ಸಂ. ಧುರಂಧರತಾ]

**ಧುರಂಧರಿ, ಧುರಂಧುರಿ** (ನಾ). ೧. ಅದ್ದೂರಿ ; ವೈಭವ ; ಭವ್ಯತೆ : ನಿನ್ನ ಮನಿ ಲಗ್ನದ ಧುರಂಧರಿ ನೋಡಿದರ ಜಮಖಂಡಿ ಮಹಾರಾಜನ ಲಗ್ನ ನೆನಸೂ ಹಂಗ ಆಯ್ತು (ಗಂಮಾಯಿ. ೧೩೪) ; ಕಲ್ಯಾಣಮಂಟಪವು ಹೇಗಾಗಿದೆ . . . ಏನು ಕೇಳುವಿಯಪ್ಪ ! ಎಷ್ಟು ಧುರಂಧುರಿಯಿಂದ ಮಾಡಿರುವಿ (ಕನಕ. ೬೫). **ಧುರಂಧುರಿ** : (ಗು). ೨. ಸಡಗರದ ; ಅದ್ದೂರಿಯಾದ : ಹಗಲಾಗಲಿ ಧುರಂಧುರಿ ಜಾತ್ರಿ ನಿದ್ದಿಗಿರಲಿ ರಾತ್ರಿ (ಹಾಡುಪಾ. ೪೨–೫). [←ಮರಾ. ಧುರಂಧರೀ, ಧುರಂಧುರೀ]

**ಧುರಂಧರಿಕೆ** (ನಾ). ಮುಂದಾಳುತನ ; ಮುಖಂಡತ್ವ : ಧುರಧುರಂಧರಿಕೆ ಯನು ತಾನೇ ಧರಿಸಿ ಕಳುಹಿದನಿಂದ್ರಜಿತುವನು (ತೊರರಾ. ೬–೨೦–೬). [ಧುರಂಧರ + – ಇಕೆ]

**ಧುರಂಧುರಿ** 'ಧುರಂಧರಿ' ನೋ.

**ಧುರಕೋಲಾಹಳಿಗ** (ನಾ). ಯುದ್ಧದಲ್ಲಿ ಕೋಲಾಹಲವನ್ನು ಮಾಡು ವವನು ; ಶೂರ : ರಣದಗ್ಗಳಿಯ ಸುಭಟರ ಜಯಿಸು ಧುರಕೋಳಾಹಳಿಗ ನೆನಿಸು (ಕುಮ್ವಾದ್ರೋ. ಓರಿ೫. ಪರಿ. ೨೭೯). [ಧುರ$_1$ (<ದುರ) + ಕೋಳಾಹಳ (=ಕೋಲಾಹಲ) + – ಇಗ]

**ಧುರಗಲಿ** 'ದುರಗಲಿ' ನೋ.

**ಧುರಗಳ್ಳ** (ನಾ). ಯುದ್ಧದಿಂದ ಪಲಾಯನ ಮಾಡುವವನು,–ತಪ್ಪಿಸಿ ಕೊಳ್ಳುವವನು ; ರಣಹೇಡಿ : ವೀರರಂಗವ ಬಿಟ್ಟು ನೀನೀ ಚೋರರಂಗವ ಕಲಿತೆ ಹೊಸತೇ ನಾರಿಗಳನು ತಂದೆ ನೀ ಧುರಗಳ್ಳ ಹಸನಾಯ್ತು (ಕಾಶಿರಾ. ೧೯–೨೮). [ಧುರ$_1$ (<ದುರ) + ಕಳ್ಳ$_1$]

**ಧುರಚಮತ್ಕೃತಿ** (ನಾ). ಯುದ್ಧದಲ್ಲಿ ತೋರುವ ಕೌಶಲ,–ಚಾತುರ್ಯ: ಜೋದರ ಧುರಚಮತ್ಕೃತಿ ಬೆಡಗನಿತ್ತುದು ದೇವಸಂತತಿಗೆ (ಕುಮ್ವಾಭೀ. ೪–೮೬). [ಧುರ$_1$ (<ದುರ) + ಚಮತ್ಕೃತಿ]

**ಧುರಧರ** (ನಾ). ಜವಾಬ್ದಾರಿಯನ್ನು ಹೊರುವವನು ; ಹೊಣೆಗಾರ : ಎಂದಾದಪನೀ ಲಲನೆಗೆ ನಂದನನುರುರಾಜ್ಯಭಾರಧುರಧರನೆಂಬೀ ಸಂದೇಹ ಮೆನ್ನ ಮನದೊಳ್ ಕುಂದದೆ ನೆಲಸಿರ್ದುದೆಂದು ಬಿನ್ನಯಿಸಲೊಡ (ಬಾಹುಪು. ೩–೫೮). [ಸಂ.]

**ಧುರಧರಣಿ** (ನಾ). = ಧುರಧರೆ : ಅಧಾಸುರಧ್ವಂಸಧರುಧರಣಿಯಂತೆ ನೀಲಕಂಠನೃತ್ಯಾಡಂಬರಮುಂ (ಕುಸುಮಾ. ೧–೭೪ ವ) ; ಧುರಧರಣಿ ಪೆಣ ಮಯಮಾಗೆ ಭಯಂಕರಮನಾಳ್ದುದಾಹವರಂಗಂ (ಮಹಾನೇ.೧೨–೬೪) ; ಪರಿ ವಿತಪರಿವಾರ ತುರಗಸಹಿತ ರಾಮ ಧುರಧರಣಿಯೊಳು ಮಾಜಾಂತು ಇರದೆ ನಿಂದನು ಸುರುತಾಳನ ಸಕಲ ಮೋಹರಕಿದಿರಾಗಿ ಬೇಗದೊಳು (ಕುರಾಸಾಂ. ೪೩–೫೮). [ಧುರ$_1$ (<ದುರ) + ಧರಣಿ$_1$]

**ಧುರಧರೆ** (ನಾ). ಕಾಳಗದ ಕಣ ; ಯುದ್ಧಭೂಮಿ ; ರಣರಂಗ : ನೆತ್ತರ ಪೆರ್ಮಟಿ ಕಟಿದಿತ್ತುಪೇಂದ್ರನಿಂ ಧುರಧರೆಯೊಳ್ (ಪಂರಾಮಾ. ೯–೬೬) ; ಶರಣೆನುತಂಜಿ ಬಂದು ಮಱೆವೊಕ್ಕಡೆ ಕಾವೆಡೆಯಲ್ಲಿ ವಜ್ರಪಂಜರ . . . ಧುರಧರೆಯಲ್ಲಿ ಕಾಳಕೃತಾಂತನೆನುತ್ತ ಬಣ್ಣಿಕುಂ ವರವಿಬುಧವ್ರಜಂ (ಕಇ. IV, ೧–೬೮ ; 1204) ; ಧುರಧರೆಯಲ್ಲಿ ಸೋಲ್ತು ತಮವೇಳ್ತುರಗಾ ಕೃತಿಯಿಂ ವರೂಥಮಂ ಧರಿಯಿಸಿ (ತ್ರಿಪುವಿ. ೭–೫೨). [ಧುರ$_1$ (<ದುರ) + ಧರೆ]

**ಧುರಧಾರಿಣಿ** (ನಾ). = ಧುರಧರೆ : ಧುರಭರವಮನಾಂಪ ತನಗದು ಸಿರಕ್ಕೆ ಸಿವುಡೆನಿಸೆ ತೆರ್ಕೆಯಿಂ ಶುಂಡಂ ದೋಃಪರಿಘಾಸಿಯಿಂದೆ ಪೊಯ್ದಂ ಕರಿಕರಮಂ ಪಱಿದು ಪಾಱಿ ಧುರಧಾರಿಣಿಯೊಳ್ (ಮಹಾನೇ. ೧೨-೬೮).
[ ಧುರ₁ (<ದುರ) + ಧಾರಿಣಿ ]

**ಧುರಧೀರ** (ನಾ). ಯುದ್ಧಮಾಡುವುದರಲ್ಲಿ ಶೂರನಾದವನು ; ರಣಧೀರ : ಧರಣೀಶಂ ಧುರಧೀರನಾಗೆ ಧನಮುಳ್ಳಂ ತ್ಯಾಗಿಯಾಗಲ್ . . . ದೊರೆವೊಲ್ ಚೆನ್ನಕೆ ಸೌರಭಂ (ಸೋಮೇಶ. ೧೧) ; ಧುರಧೀರ ಸಾಹಸ ಚಿತ್ರಸೇನನುದಾರಗುಣನಿಧಿ ಬಂದು ಕಂಡನು ಮಿತ್ರಭಾವದಲಿ (ಕುವ್ಯಾ.ಉ. ೧೧-೨೮) ; ಧುರಧೀರ ಸೇದಿರಾಜಂ ಗುರುತರ ಗಣಪದಮನಿತ್ತು ಸುರಶತಿ ಪೊಗಳುತ್ತಿರೆ ಮೆಱೆದೊಪ್ಪುವ ಪುಲಿಗೆಱೆಪುರಪತಿ ಸೋಮೇಶನೊಲ್ದು ಪಾಲಿಕೆ ನಮ್ಮಂ (ತ್ರಿಪುವಿ. ೨೫-೧) ; ಧುರಧೀರ ರಕ್ತಬೀಜಾಸುರನಂ ಭಕ್ಷಿಸುವುದಕ್ಕೆ ಬಾಯ್ದೆಱೆದಿರ್ದಾ ವರದುರ್ಗಿಯ ಪಲ್ಗಳವೊಲ್ ಪಿರಿದುಪ್ಪರ ಗೋಂಟೆದೆನೆಗಳೊಪ್ಪಿದವಮುಮು (ಹಮ್ಮಿ.ರ. ೧-೬೧).
[ ಧುರ₁ (<ದುರ) + ಧೀರ ]

**ಧುರಧುರಂಧರ**(ನಾ). ಹೋರಾಟದಲ್ಲಿ ಮುಂದಾಳು: ವರಯುಧಾಮನುತ್ತಮೌಂಜಸನುರು ಶಿಖಂಡಿ ಸುಚೇಕಿತಾನರು ಧುರಧುರಂಧರ ವೀರ ಪಾಂಚಾಲಕ್ಷಿತೀಶ್ವರರು (ಕುವ್ಯಾ.ಉ. ೧೧-೨೨) ; ವಿಮಲ ಸಹಣಿಗಳವರ ಕರೆಯೆನುತ ಧುರಧುರಂಧರರೊಱಲಿದರು (ಕುವ್ಯಾ.ಭೀ. ೪-೪೭) ; ವಿರಚಿಸಿದನಾ ವೀರ ದಶಕಂಧರಶಿರಃಕಂತುಕವಿನೋದದ ಧು[ಪಾಠಾಂ. ಧ]ರ ಧುರಂಧರ ದುಷ್ಟದೋರ್ದಂಡಪ್ರತಾಪಕವ (ತೊರರಾ. ೬-೫೨-೩).
[ ಧುರ₁ (<ದುರ) + ಧುರಂಧರ ]

**ಧುರಧುರೀಣತೆ** (ನಾ). ಯುದ್ಧದ ಮುಂದಾಳುತನ,-ನಾಯಕತ್ವ : ಸರಿಯದಾರ್ಶೈ ನಿನಗೆ ನಂಬುಗೆಗೆರವ ತಾರದೆ ಸ್ವಾಮಿಕಾರ್ಯದ ಧುರಧುರೀ[ಪಾಠಾಂ. ಧುರದ ಪರಿ]ಣತೆ ನಿನ್ನೊಳಾಯ್ತು (ತೊರರಾ. ೬-೩೮-೧೯).
[ ಧುರ₁ (<ದುರ) + ಧುರೀಣತೆ ]

**ಧುರಪರಿಷ್ಕೃತ** (ನಾ). ಅನೇಕ ಯುದ್ಧಗಳನ್ನು ಮಾಡಿ ದಕ್ಷತೆಯನ್ನು ಪಡೆದವನು; ಯುದ್ಧಪರಿಣತ: ಎಲವೋ ಧುರಪರಿಷ್ಕೃತನಲ್ಲ ಸಾರ್ಸುಡು ನಿನ್ನ ಸಾಹಸವ (ತೊರರಾ. ೬-೪೪-೨). [ ಧುರ₁ (<ದುರ) + ಪರಿಷ್ಕೃತ ]

**ಧುರಪಲಾಯನ** (ನಾ). ಯುದ್ಧಮಾಡಲಾರದೆ ಅಂಜಿ ಓಡಿಹೋಗುವುದು ; ಹೋರಾಟದಿಂದ ಪಲಾಯನ ಮಾಡುವಿಕೆ : ಆರ ದಳವದು ಧುರಪಲಾಯನ ಚಾರುದೀಕ್ಷಿತರಾಯ್ತು (ಕುವ್ಯಾ.ಕ. ೧೪-೯).
[ ಧುರ₁ (<ದುರ) + ಪಲಾಯನ ]

**ಧುರಭರ** (ನಾ). ಯುದ್ಧದ ವೇಗ; ಕದನದ ತೀವ್ರತೆ : ಧುರಭರವಮನಾಂಪ ತನಗದು ಸಿರಕ್ಕೆ ಸಿವುಡೆನಿಸೆ ತೆರ್ಕೆಯಿಂ ಶುಂಡಂ ದೋಃಪರಿಘಾಸಿಯಿಂದೆ ಪೊಯ್ದಂ ಕರಿಕರಮಂ ಪಱಿದು ಪಾಱಿ ಧುರಧಾರಿಣಿಯೊಳ್ (ಮಹಾನೇ. ೧೨-೬೮). [ ಧುರ₁ (<ದುರ) + ಭರ ]

**ಧುರಮಂಡಲ** (ನಾ). = ಧುರಧರೆ : ಧುರಮಂಡಲದೆ ದೇವರ ಪಾದಪದ್ಮವ ಹರುಷದೆ ಕಾದು ಬೆಸಸಿದ ಪಿರಿದು ಸೇವೆಯ ಮಾಳ್ಪೆಮೆಂಬೂಳಿಗದರ ಬಿರುದಿನ ನುಡಿಗಳೊಪ್ಪಿದುವು (ಕಂನವಿ. ೮-೪೩). [ ಧುರ₁ (<ದುರ) + ಮಂಡಲ ]

**ಧುರಮುಖ** (ನಾ). ಯುದ್ಧದ ಮುಂಚೂಣಿ : ಧುರಮುಖದೊಳಂತಕನ ಹಸಿವಡಗೆ ಮಾರಿ ಕೊಕ್ಕರಿಸಿ (ಹಚಕಾ. ೧೧-೧೪).
[ ಧುರ₁ (<ದುರ ) + ಮುಖ ]

**ಧುರವಿಜಯ** (ನಾ). ಯುದ್ಧದಲ್ಲಿ ಗೆದ್ದವನು,-ಜಯಶಾಲಿಯಾದವನು: ವರಚಂದ್ರಗಿರಿಯ ಸುಪರಿಷ್ಕರಣವನಾಕ್ರಮಿಸಿರಲ್ಕೆ ಸೈನ್ಯಸಮೇತಂ ಧುರವಿಜಯನನಿಕ್ಕೇರಿಯ ಮುರಿಯಪನಂ ಕಳುಹಿ ಮಗುಳ್ದದಂ ವಶಗೆಯ್ದಂ (ಕೆಳನೃ. ೧೧-೫೬). [ ಧುರ₁ (<ದುರ) + ವಿಜಯ ]

**ಧುರವಿಶಾರದ** (ನಾ). ಯುದ್ಧದಲ್ಲಿ ನಿಷ್ಣಾತ ; ಹೋರಾಟದಲ್ಲಿ ನಿಪುಣ ; ಶೂರ : ಧುರವಿಶಾರದನಹೆ ವಿರಾಟನ ಹಿರಿಯ ಮಗ ನೀನು (ಕುವ್ಯಾ.ಭೀ. ೫-೨೫). [ ಧುರ₁ (<ದುರ) + ವಿಶಾರದ ]

**ಧುರಾವನಿ** (ನಾ). = ಧುರಧರೆ : ನೆತ್ತರ ತೆಱೆಗಳ್ ಪರಿದವು ಸುತ್ತುಂ ಬಳಸು ಧುರಾವನೀಮಂಡಳದೊಳ್ ಸತ್ತ ಚತುರಂಗವಿನಿತೆನಲತ್ತಳಗಂ ಬಗೆದು ನೋಟ್ಟಡಾ ಬ್ರಹ್ಮಂಗಂ (ಮಹಾನೇ. ೧೨-೦೩೫) ; ಪರಿಹರಿಸಿ ನರನಂ ಧುರಾವನಿಯೊಳಡೆಗೆಡಹಿ ಹರನೆಂದು ಮೆಟ್ಟಿ ಮಲ್ಲಡಿ ಸೋಂಕುಮಾತ್ರದಿಂದರುಣಜಲಮಂ ಕಾಱಿದಂ (ಚೆಬಪು. ೫೩-೫೬).
[ ಧುರ₁ (<ದುರ) + ಅವನಿ ]

**ಧುರಾವಹ** (ನಾ). ಹೊಣೆಯನ್ನು ಹೊರುವವನು ; ಹೊಣೆಗಾರ : ನೀವು ಕೌರವ ಸರ್ವದಳದ ಧು[ಪಾಠಾಂ. ದು]ರಾವಹರಲೇ ಬಾಣಸೃಷ್ಟಿ ಕೃತಾವಧಾನವ ತೋಱೆನುತ ನೃಪನೆಚ್ಚು ಬೊಬ್ಬಿಱಿದ (ಕುವ್ಯಾ.ಶ. ೨-೫೫).
[ ಸಂ. ]

**ಧುರೀಣ** (ಗು). ೧. ಭಾರವನ್ನು ಹೊತ್ತ,-ವಹಿಸಿಕೊಂಡ ; ಹೊಣೆಗಾರಿಕೆಯನ್ನು ವಹಿಸಿಕೊಂಡಿರುವ,-ಹೊತ್ತಿರುವ. (ನಾ). ೨. ದಕ್ಷನಾದವನು ; ಸಮರ್ಥ ; ನಿಪುಣನಾದವನು : ತಳ್ತೀಸಾಡಿದಂ ಕೋಟಿಗೊರ್ವನೆ ಬಿಲ್ಗೊಂಡು . . . ಧನುರ್ಧರಧುರೀಣಂ ದಧರ್ರರಂ ಲಕ್ಷ್ಮಣಂ (ಪಂರಾಮಾ. ೧೪-೧೬೭) ; ಅಪಾರವಾಗಿ ದುಡಿದ ಪಾಶ್ಚಾತ್ಯ ಸೇವಾಧುರೀಣರಲ್ಲಿ . . . ಇವನೂ ಉನ್ನತಸ್ಥಾನವನ್ನು ಪಡೆದಿದ್ದಾನೆ (ಪಾಶ್ಚಾವಿ. ೪೯೬). ೩. ಮುಂದಾಳು ; ಅಗ್ರಗಣ್ಯ ; ನಾಯಕ : ಆಧುನಿಕ ಪ್ರಪಂಚದ ಕೆಲವೊಂದು ಮುಖ್ಯಮುಖ್ಯ ಸಂಗತಿಗಳು ಭಾರತದ ಪ್ರಮುಖ ಧುರೀಣರ ಹಾಗು ಸಾರ್ವಜನಿಕ ಸೇವಾನಿರತಜನರ ಮನಸ್ಸನ್ನು ಸೆಳೆದಿದ್ದವು (ಮಹಾಯೋ. ೨೯) ; ಕ್ರಾಂತಿದೇವಿಯ ಪರಮಭಕ್ತರೂ ಸ್ವಾತಂತ್ರ್ಯ ಚಳವಳದ ಧುರೀಣರೂ ಆಗುವರು (ಜಗಸಂ. ೨) ; ಸಾಮ್ಯವಾದ ಮತ್ತು ಮಾನವತಾವಾದದ ಧುರೀಣರ ಅಭಿಪ್ರಾಯದ ಮೇರೆಗೆ ಸಾಮಾಜಿಕ ಸುಲಿಗೆಯ ಸಾಧನವನ್ನು ಸಿದ್ಧಪಡಿಸುವುದಕ್ಕಾಗಿ ಧರ್ಮವು ಸುಳ್ಳುಸುಖದ ಕಲ್ಪನೆಯನ್ನೀಯುತ್ತದೆ (ಧರ್ಮಸಾ. ೧೧). ೪. ಭಾರ ಹೊರುವ ಪ್ರಾಣಿ ; ನೊಗವನ್ನು ಹೊರುವ ಎತ್ತು : "ಧುರೀಣ ಧೌರೇಯ ಧುರ್ಯನಾಮುಮ ಭದ್ರಂ" (ವಸ್ತುಕೋ. ೬೯-೩); "ಧೂರ್ವಹಃ, ಧುರ್ಯಃ, ಧೌರೇಯಃ, ಧುರೀಣಃ, ಧುರಂಧರಃ-ಈ ಬಂಡಿ, ಗೋಣಿ, ನೇಗಲು ಮುಂತಾದ ಭಾರವನ್ನು ಹೊತ್ತು ಸೆಳೆಯುವ ಎತ್ತು ಮುಂತಾದ ದನಗಳ ಹೆಸರುಗಳು" (ಸಿದ್ಧಾಂತಿ. ೨೯೩). [ ಸಂ. ]

**ಧುರೀಣತೆ**(ನಾ). ೧.ಕಾರ್ಯಚತುರತೆ,-ಸಾಮರ್ಥ್ಯ. ೨. ಮುಂದಾಳುತನ ; ನಾಯಕತ್ವ ; ಪ್ರಾಮುಖ್ಯತೆ : ಜಾನಕಿಬಾಯಿಯ ಧುರೀಣತೆಯು ಮನೆಯಲ್ಲಿ ತೀರ ಪ್ರಖರವಾಗಿತ್ತು (ಸಮಜೀ. ೭೩). [ ಸಂ. ಧುರೀಣತಾ ]

**ಧುರೀಣತ್ವ** (ನಾ). ಮುಂದಾಳುತನ ; ನಾಯಕತ್ವ : ಕುಸ್ತಿಯಲ್ಲಿ ಭಾಗವಹಿಸಲು ಪಾದಳ್ಳಿಯ ಕುಸ್ತಿಗಡಿಗಳು ದಾದಾನ ಧುರೀಣತ್ವದಲ್ಲಿ ಬಂದಿದ್ದರು (ಗ್ರಾಮಾಯ. ೫೧). [ ಸಂ. ]

**ಧುರ್ಯ** (ನಾ). ೧. ಸಮರ್ಥ ; ಚತುರ ; ಕಾರ್ಯಧುರಂಧರ : ಧನುರ್ಜೇಜ್ಯಂ . . . ನಿಲೆ . . . ದಂಪತಿಕ್ಷೇತ್ರದೊಳ್ ಧನವಂತಂ ಧರಣೀಶಕಾರ್ಯಭರಧುರ್ಯಂ ಸತ್ಕಳಾಕೋವಿದಂ (ಜಾತತಿ. ೦೭-೨೯) ; ನಿಜಗುರು ಸಪರಿಯ ಕ್ಷೀಣನಂ ಗುರುಚರಣಗಂಧಾಘ್ರಾಣನಂ ಗುರುಕಾರ್ಯಧುರ್ಯನನು (ಬಸಪು. ೩೯-೫೩) ; ಜಕ್ಕಣಾಚಾರ್ಯ ಭಕ್ತಿಸಾಕಾರ್ಯ ಪರಮಶಿವಸಮುಯ ಧುರ್ಯ (ಪ್ರಾಶರಾ. ೧೧-೮). ೨. ಪ್ರಮುಖಸ್ಥಾನದಲ್ಲಿರುವವನು ; ಆಡಳಿತಗಾರ. ೩. ಸಚಿವ. ೪. ಮುಂದಾಳು ; ನಾಯಕ ; ಅಗ್ರಗಣ್ಯ. ೫. (ಬಂಡಿಯ ಮುಕಿಗೆ ಹೊಂದಿಸಿರುವ)

ಭಾರವನ್ನು ಹೊರುವ ಕುದುರೆ, ಎತ್ತು ಮೊದಲಾದುವು ; ಗಾಡಿಗೆ ಕಟ್ಟುವ ದನ : "ಧುರ್ಯಃ, ಧೌರೇಯಃ-ಈ ೨ ಹೂಟದೆತ್ತು" (ಹಲಾಯು. ೪೪-೧೦೦); "ಧುರ್ಯಂ ತಿದ್ದಿ ದುಕ್ಷವದು" (ವಂಗರಾ. ೩೩-೧). ೬. ಚತುರತೆ ; ಸಾಮರ್ಥ್ಯ : ಅವರೊಳೊಂದೊಂದಕ್ಕೊಡಂಬಡಿಸಿ ಸಾಂಗದಿಂದ ಪುರಾಣ ಸೂಕ್ತ್ಯರ್ಥಂಗಳೊಳು ಬಹು ಸವು ಯಿ ಗ ಳ ಚಿತ್ರಂಗಳೊಳಗಹುದಹುದೆನಿಸಿ ಚಾತುರ್ಯಧುರ್ಯದಲಿ (ಬಸವು. ೩೩-೩೫). [ ಸಂ. ]

**ಧುರ್ಯೆ** (ನಾ.) ಗರ್ಭಿಣಿ ; ಬಸುರಿ : "ವರಧುರ್ಯೆ [ಪಾಠಾಂ. ದುರ್ಯೆ] ಸತ್ವೆಯಂತರ್ವರ್ತ್ನಿ ಗುರ್ವಿಯೆಂದರೆ ಗರ್ಭಿಣಿಯೆನಿಕ್ಕು" (ವಂಗರಾ. ೯-೧೭).

[ಸಂ. ಧುರ್ಯಾ]

**ಧುವನ** (ಗು). ೧. ಅಲ್ಲಾಡಿಸುವ ; ನಡುಗಿಸುವ. (ನಾ). ೨. ಅಲ್ಲಾಡಿಸುವುದು ; ಕಂಪನ. ೩. ಬೆಂಕಿ ; ಅಗ್ನಿ. [ ಸಂ. ]

**ಧುವಿತ್ರ** (ನಾ). ೧. ಯಾಗದಲ್ಲಿ ಅಗ್ನಿಯನ್ನು ಉರಿಯಿಸಲು ಕೃಷ್ಣಾಜಿನದಿಂದ ತಯಾರಿಸಿದ ಬೀಸಣಿಗೆ: "ಧುವಿತ್ರಂ [ಪಾಠಾಂ. ಧವಿತ್ರಂ] . . . ಯಜ್ಞದಲ್ಲಿ ಅಗ್ನಿಪ್ರಜ್ವಲನ ಮಾಡುವುದಕ್ಕೋಸ್ಕರ ಕೃಷ್ಣಾಜಿನದಿಂದ ಮಾಡಲ್ಪಟ್ಟ ಬೀಸಣಿಗೆ ಹೆಸರು, ಹುಲ್ಲೇಚರ್ಮದ ಬೀಸಣಿಗೆ" (ಸಿದ್ಧಾಂತಿ. ೨೨೦). ೨. ಬೀಸಣಿಗೆ. [ ಸಂ. ]

**ಧುಸುಮುಸಿ** 'ಧುಸುಮುಸು' ನೋ.

**ಧುಸುಮುಸು,** ದುಸುಮುಸಿ, ದುಸುಮುಸು, ಧುಸುಮುಸಿ (ನಾ). ಅಂತಸ್ತಾಪ ; ದುಮುಗುಡುವಿಕೆ ; ಆಂತರಿಕ ಕೋಪ ; ಕೋಪದಿಂದ ಒಳಗೊಳಗೇ ಸಿಡಿಮಿಡಿಗೊಳ್ಳುವುದು : ರಾಣಿಯ ಮನಸ್ಸಿನಲ್ಲಿ . . . ಮದುವೆಯ ಕಾರಣದಿಂದ ಒಳಗಿಂದೊಳಗೆ ಧುಸುಮುಸು ಇದ್ದದ್ದು ನಿನಗೆ ಗೊತ್ತೇ ಅದೆ (ಮಂಜುಕ. ೧೦೨). **ದುಸುಮುಸಿ :** ನಾನು ವೈನಿಯವರೊಂದಿಗೆ ಇಲ್ಲದ ದುಸುಮುಸಿ ಬಿಟ್ಟುಬಿಟ್ಟುದಕ್ಕೆ ವತ್ಸಲೆಗೂ ಎಷ್ಟೊಂದು ತೃಪ್ತಿ! (ವೈನಿ. ೧೧೧) ; ನಮ್ಮ ನಮ್ಮ ಜಗಳಾಟ, ದುಸುಮುಸಿ ಇವು ನಡಿಯೋವ (ಗಂಮಾಯಿ. ೨೦). **ದುಸುಮುಸು :** ಗಾಡಿಯಲ್ಲಿದ್ದ ಪ್ಯಾಸೆಂಜರರು ದುಸುಮುಸು ಶುರುಮಾಡಿದರು (ಬಂಗಬ. ೧೪೭). **ಧುಸುಮುಸಿ :** ಮದುವೆಮನೆಯಲ್ಲೇ ಬೀಗರ ಧುಸುಮುಸಿ ಶುರು ಆಗಿಬಿಟ್ಟಿತು (ರೂಢಿ).

**ದುಸುಮುಸುಗುಟ್ಟು**=ಸಿಡಿಮಿಡಿಗೊಳ್ಳು ; ದುಮುಗುಟ್ಟು : ದುಸುಮುಸುಗುಟ್ಟುವ ಸತಿಸುತರಿಂದಲಿ ಹಸಗೆಟ್ಟದ್ದೇನೊ (ಜಗದಾ. ೩೧೮-೨). **ದುಸುಮುಸು ಮಾಡು, ದುಸುಮುಸಿ ಮಾಡು, ಧುಸುಮುಸಿ ಮಾಡು**=ದುಸುಮುಸುಗುಟ್ಟು : ದುರುಗಮ್ಮನಂತೆ ಮುಖ ಮಾಡಿ ದುಸುಮುಸು ಮಾಡೋದು ಒಂದು ಬುಟ್ಟು ಬೇರೆ ಇನ್ನೇನೂ ನಾ ಕಾಣೆ (ಬಂಗಬ. ೧೩) ; ಸದ್ಯಕ್ಕೆ ನೀನು ನಲನೊಡನೆ ದುಸುಮುಸು ಮಾಡುತ್ತಿರುವುದನ್ನು ಬಿಟ್ಟು ಬಿಡು (ನಲದ. ೬೦); ತಂದೆ ತಾಯಿಯ ಸಂಗಡ ದುಸುಮುಸಿ ಮಾಡಿರದಿದ್ದರೂ ಕಿರಣಲೇಖೆಗೆ ಅದು ಯಾವುದೂ ಅನ್ಯಾಯವೆಂದು ಅನಿಸುತ್ತಿದ್ದಿಲ್ಲ (ಇಪ್ಪತ. ೪೧೨) ; ಅವರು ಮೆಲ್ಲ ಮೆಲ್ಲನೆ ನಮ್ಮಂತೆ ಮನೆಯಲ್ಲಿ ಕೆಲಸ ಮಾಡಲಾರಂಭಿಸಿದರು. . . . ಒಂದೂ ಅಪಶಬ್ದವನ್ನಾಡಲಿಲ್ಲ. ಎಂದೂ ಧುಸುಮುಸಿ ಮಾಡಲಿಲ್ಲ (ಸ್ಮೃತಿಚಿ. ೩೬೨). **ಧುಸುಮುಸು ಹಾಯು** = ದುಸುಮುಸುಗುಟ್ಟು : ಅವೂ ಧುಸುಮುಸು ಹಾಯುವ ಕ್ಷುದ್ರಗುಣಾ ಕಲೀತಾವಲ್ಲ ಅಂತ ಚಿಂತಿ ಬಿದ್ದದ (ಕಾಗೆಕ. ೧೧೦). [ ←ಮರಾ. ಧುಸ್‌ಮುಸ್ ]

**ಧುಸ್ತೂರ** (ನಾ). = ಧುಸ್ತೂರ. [ ಸಂ. ]

**ಧುಸ್ತೂರ** (ನಾ). ಉಮ್ಮತ್ತಿಗಿಡ ; ದತ್ತೂರ. [ ಸಂ. ]

**ಧುಳಧುಳ** (ನಾ). ಒಂದು ಅನುಕರಣ ಶಬ್ದ. 'ಧುಳಧುಳನೆ' ಪರಾ.

**ಧುಳಧುಳನೆ** (ಅ). ಧುಳಧುಳ ಎಂಬ ಶಬ್ದದೊಡನೆ ; ವೇಗವಾಗಿ : ಬಂದರು ಧುಳಧುಳನಬಲೆಯರಾ ಗಾಡಿಕಾಱನಿದ್ದೆಡೆಗೆ (ಭರತ. ೪-೧೧೭).

[ ಧುಳಧುಳ + – ಅನೆ$_1$ ]

**ಧುಳುಧುಳು** (ನಾ). ಒಂದು ಅನುಕರಣ ಶಬ್ದ : ಛಟಿಲ್ ಛಟಿಲೆಂಬ ಕಟಿಪಟನಿಟಿಲು ನಿಱುಲೆಂಬ ಧುಳುಧುಳುಂ ದೊಪ್ಪೆಂಬ ಗುಜುಗುಜು ಧಳಧಳಂ ಜೋಱೆಂಬುದಱದಱದೊಳದೊಳೆಂಬೀ ಧ್ವನಿಗಳವನಿಗೆ ಭಯವನೀವುತಿರೆ (ಸಾನಂಚ. ೮-೧೩) ; ಕಲಕಿ ಸಾಗರ ತುಳುಕಿ ಜಲ ದುಂ ಧುಳುಧುಳುಂ . . . ಎನಿಪ ಹೆಣ್ಗಳದ ಘೋಷಗಳೆಸಗಿ ಘುಮ್ಮಿಡಿದವು ನಭೋಂತರವ (ಅನಂರಾ. ೫-೪-೫೨).

**ಧೂಢಸೆಲ** (ನಾ). ಒಂದು ಬಗೆಯ ಸಸ್ಯ ; ಕಾಡುತೆಂಗು : ಡಡ್ಡಸಲ, ಧೂಢಸೆಲ, ಬೆಟ್ಟತೆಂಗು, ಕಾಡುತೆಂಗು (ವೃಜಿಗಿ. ೮-೧೪೦). [ ? ]

**ಧೂತ** (ಗು). ೧. ನಡುಗಿದ ; ಕಂಪನಗೊಂಡ. ೨. ಕೊಡವಿದ ; ಝಾಡಿಸಿದ. 'ಪದಧೂತಧೂಳಿ' ಪರಾ. ೩. ತೆಗೆದು ಹಾಕಿದ ; ನಿವಾರಿಸಿದ ; ನಾಶಮಾಡಿದ. 'ಧೂತಪಾಪೆ' ಪರಾ. ೪. (ಗಾಳಿಯಿಂದ) ಹರಡಿದ ; ವ್ಯಾಪ್ತವಾದ ; ಹಬ್ಬಿದ ; ಚದರಿದ. 'ಧೂತಧೂಮ' ಪರಾ. ೫. ಬಿಟ್ಟ ; ತೊರೆದ ; ತ್ಯಜಿಸಿದ ; ಮುಕ್ತವಾದ. 'ಧೂತಪಾಪ' ಪರಾ. ೬. ಶುಚಿಮಾಡಿದ ; ಸ್ವಚ್ಛಗೊಳಿಸಿದ. (ನಾ). ೭. ಬಿಟ್ಟುದು ; ತ್ಯಜಿಸಿದುದು : "ತ್ಯಕ್ತಂ, ಹೀನಂ, ವಿಧುತಂ, ಸಮುಜ್ಝಿತಂ, ಧೂತಂ, ಉತ್ಸೃಷ್ಟಂ–೬ ಬಿಡಲ್ಪಟ್ಟದು" (ಸಿದ್ಧಾಂತಿ. ೩೫೨).

[ ಸಂ. ]

**ಧೂತಧೂಮ** (ನಾ). ಹರಡಿದ ಹೊಗೆ ; ಹಬ್ಬಿದ ಹೊಗೆ : ಕಾಸಿದವು ಫಣಿಕುಲವ ಮೇಣ್ದೊಳ್ಪಸದಲಿ ಡಾವರಿಸಿದವು ಕಿಡಿ ಧೂತಧೂಮದಲಿ (ಕುವ್ಯಾಆ. ೨೦-೬೦). [ ಧೂತ + ಧೂಮ ]

**ಧೂತಪಾತಕ** (ನಾ). ಪಾತಕವನ್ನು ಕಳೆದುಕೊಂಡ ವ್ಯಕ್ತಿ ; ಪಾಪದಿಂದ ಮುಕ್ತನಾದವನು : ನೀತಿವಿದ ಕೇಳ್ಳಿದಿದರು ನಿಮ್ಮಾತಗಳು ಹಿಮಗಿರಿಗೆ ಹರಿಪವಪೂತಪುಣ್ಯನದೀವಿಗಃ ಹನಧೂತಪಾತಕರು (ನಿಭಾಗ. ೧-೯-೪೧).

[ ಧೂತ + ಪಾತಕ ]

**ಧೂತಪಾಪ** (ಗು). ಪಾತಕದಿಂದ ಮುಕ್ತವಾದ; ಪವಿತ್ರವಾದ: ಅಂಧಕಾಸುರನ ಸುಕುಮಾರನೆನಿಸುವ ತಾ ಕಂ ಧರಾವಲಯದ ಕಕುದ್ಗಿರಿಯ ದಕ್ಷಿಣದೊಳಂ ಧೂತಪಾಪಸಂಕುಲಭವಿಷ್ಯಚ್ಛೇಲಲೋಲೈಶ್ಚಸತ್ಪರ್ವಕಾ ಕಂಧರದೊಳ್ . . . ತಪದಿಂದಿರ್ದನು (ವೀಶ್ವಪು. ೩-೨೦-೩೫). [ಧೂತ+ಪಾಪ]

**ಧೂತಪಾಪೆ** (ನಾ). ೧. ಪಾಪವನ್ನು ನಾಶಮಾಡುವವಳು,–ಕಳೆಯುವವಳು. ೨. ಪಾಪಮುಕ್ತೆ ; ನಿರ್ದೋಷಿ ; ಪಾಪವಿರಹಿತೆ. ೩. ಕಾಶಿಯಲ್ಲಿರುವ ಒಂದು ನದಿಯ ಹೆಸರು ; P ಈ ನದಿಯ ವಿಷಯವು ಕಾಶೀಖಂಡದ ೫೯ನೆಯ ಅಧ್ಯಾಯದಲ್ಲಿದೆ. ಭೃಗುವಂಶದ ವೇದಶಿರನೆಂಬ ಮಹರ್ಷಿಯ ಮಗಳು ಧೂತಪಾಪೆ ಎಂಬುವಳು ತಪಸ್ಸಿನ ಮೂಲಕ ಜಗತ್ತಿನಲ್ಲಿ ತಾನು ಅತ್ಯಂತ ಪವಿತ್ರಳಾಗಿರುವಂತೆ ಬ್ರಹ್ಮನಿಂದ ವರವನ್ನು ಪಡೆದಳು. ಒಮ್ಮೆ ಧರ್ಮಪುರುಷನು ಇವಳನ್ನು ಮೋಹಿಸಿ ತಾನು ನದಿಯಾಗುವಂತೆ ಶಾಪವನ್ನು ಪಡೆದನು ಮತ್ತು ಇವಳು ಶಿಲೆಯಾಗುವಂತೆ ಶಪಿಸಿದನು. ಧೂತಪಾಪೆಯು ಚಂದ್ರಶಿಲೆಯಾಗಿ ಚಂದ್ರೋದಯಕಾಲದಲ್ಲಿ ದ್ರವವಾಗಿ ನದಿಯ ರೂಪದಿಂದ ಧರ್ಮನನ್ನು ಸೇರಿದಳು. ಅವಿಮುಕ್ತಕ್ಷೇತ್ರವೆಂದು ಪ್ರಸಿದ್ಧವಾದ ಕಾಶೀಕ್ಷೇತ್ರದಲ್ಲಿ ಧೂತಪಾಪಾನದೀ ಮತ್ತು ಧರ್ಮನದಿಗಳು ಐಕ್ಯರೂಪದಿಂದಿವೆಯೆಂದು ನಂಬಿಕೆಯಿದೆ. ೧, ೨, ೩ : ಗೋಮತಿ ಧೂತಪಾಪೆ . . . ಸಮಸ್ತದೇವತಾವರಣೆ ಕವೇರಕನ್ಯೆ ಕೆಳಗೊಂಡಳನೇಕನದೀವಿಳಾಸಮುಂ (ರಾಜಶೇ. ೨-೭) ; ಪುತ್ರನೊರ್ಮಂ ರಾಜನಣುಗಿಯೆ ಜಗನ್ಮಾತೆ ಮಿತ್ರನಭವಂ ಧೂತಪಾಪೆ ತನ್ನರಸಿ . . . ಎಂದು ಘೋಷಿಪುದೆಂ ಬೊಲರ್ಣವಂ ಬಾಯ್ವಿಡುತ್ತಿರ್ಪುದೆಂದುಂ (ಶ್ರೀರಾಮ. ೩-೨೦).

[ ಸಂ. ಧೂತಪಾಪಾ (ಧೂತ + ಪಾಪ + –) ]

**ಧೂತಾಂಗ** (ನಾ). [ಬೌದ್ಧ] "ಭಿಕ್ಷುವು ಧೌತನಾಗಬೇಕಾದರೆ ಆಚರಿಸಬೇಕಾದ ಹದಿಮೂರು ವಿಶೇಷನಿಯಮಗಳು" (ಬುದ್ಧ.ಪ. ಮಿಲಿಂದ. ೨೬ ಕೋಶ); ❡ ಧೂತಾಂಗಗಳು ೧೩. ಅವುಗಳ ವಿವರವು 'ವಿನಯಂ', 'ವಿಸುದ್ಧಿಮಗ್ಗ' ಮತ್ತು 'ಮಿಲಿಂದಪಞ್ಹ' ಗಳಲ್ಲಿ ದೊರಕುತ್ತದೆ. ಅವು ಯಾವುವೆಂದರೆ : ೧. ಪಂಸುಕೂಲಿಕ ಅಂಗ : ತೇಪೆ ಹಾಕಿದ ವಸ್ತ್ರಗಳನ್ನು ಧರಿಸುವುದು. ೨. ಪೇಚೀವರಿಕ ಅಂಗ: ಮೂರು ವಸ್ತ್ರಗಳನ್ನು ಮಾತ್ರ ಧರಿಸುವುದು. ೩. ಪಿಂಡಪಾತಿಕ ಅಂಗ : ಭಿಕ್ಷೆಗಾಗಿ ಸಂಚರಿಸುವುದು. ೪. ಸಪದಾನಿಕ ಅಂಗ : ಭಿಕ್ಷೆಗಾಗಿ ಸಂಚರಿಸುವಾಗ ಯಾವ ಮನೆಯನ್ನೂ ಬಿಡದಿರುವುದು. ೫. ಏಕಾಸನಿಕ ಅಂಗ : ಕುಳಿತು, ಒಂದೇ ಸಲಕ್ಕೆ ಊಟ ಮುಗಿಸುವುದು. ೬. ಪತ್ತಪಿಂಡಿಕ ಅಂಗ: ಭಿಕ್ಷಾಪಾತ್ರೆಯೊಂದರಿಂದಲೇ ಊಟ ಮಾಡುವುದು. ೭. ಖಲುಪಚ್ಛಾಭತ್ತಿಕ ಅಂಗ: ಒಂದು ಸಲ ಊಟಮಾಡಿದ ಮೇಲೆ ಮತ್ತೆ ಏನೂ ತಿನ್ನದಿರುವುದು. ೮. ಆರಞ್ಞಿಕ ಅಂಗ : ಅರಣ್ಯದಲ್ಲಿ ವಾಸಿಸುವುದು. ೯. ರುಕ್ಖಮೂಲಿಕ ಅಂಗ : ವೃಕ್ಷಮೂಲದಲ್ಲಿ ವಾಸಿಸುವುದು. ೧೦. ಅಬ್ಭೋಕಾಸಿಕ ಅಂಗ : ಬಯಲಿನಲ್ಲಿ ವಾಸಿಸುವುದು. ೧೧. ಸುಸಾನಿಕ ಅಂಗ : ಶ್ಮಶಾನದಲ್ಲಿ ವಾಸಿಸುವುದು. ೧೨. ಯಥಾಸಂಥತಿಕ ಅಂಗ : ವಾಸಿಸುವುದಕ್ಕೆ ಯಾವ ಎಡೆ ಸಿಕ್ಕಿದರೆ ಅದರಲ್ಲಿ ತೃಪ್ತನಾಗಿರುವುದು. ೧೩. ನೇಸಜ್ಜಿಕ ಅಂಗ : ಕುಳಿತಿರುವ ಹಾಗೆಯೇ (ಎಂದಿಗೂ ಮಲಗಿಕೊಳ್ಳದೆ) ನಿದ್ರೆ ಮಾಡುವುದು. ಈ ಧೂತಾಂಗಗಳನ್ನು ಆಚರಿಸುವುದರಿಂದ, ಅಧ್ಯಾತ್ಮಜೀವನಕ್ಕೆ ಅಡ್ಡಿಯಾಗುವ "ಕ್ಲೇಶ" (ಕಿಲೇಸ)ಗಳನ್ನು ಕಳೆದುಕೊಳ್ಳಬಹುದು. ಇಂಥ ಕ್ಲೇಶಗಳು ಹತ್ತು. ಅವು ಯಾವುವೆಂದರೆ :–ಲೋಭ, ದ್ವೇಷ, ಮೋಹ, ಮಾನ, ದೃಷ್ಟಿ, ವಿಚಿಕಿತ್ಸೆ, ಸ್ತ್ಯಾನ, ಔದ್ಧತ್ಯ, ಅಹ್ರೀಕ ಮತ್ತು ಅನೌತ್ರಪ್ಯ : ಪೂರ್ವದಲ್ಲಿ ಮಾಡಿದ ಪಾಪಕರ್ಮಗಳ ಫಲದಿಂದ ಈ ಶಾಕ್ಯಪುತ್ರರಾದ ಶ್ರಮಣರು ಪರಿವ್ರಜಿಸುವರು ; ಧೂತಾಂಗಗಳನ್ನೂ ಕಾಪಾಡುವರು (ಬುದ್ಧ.ಪ. ಮಿಲಿಂದ. ೨೬); ಹದಿಮೂರು ಧೂತಾಂಗಗಳಲ್ಲಿ ಹಲವನ್ನು ಆಚರಿಸಿದರು (ಜೀನಾಬೌ. ೯೦). [ಧೂತ + ಅಂಗ]

**ಧೂತಿ** (ನಾ). ಅಲುಗಾಡಿಸುವುದು; ಬೀಸುವುದು. 'ಧೂತಿಸು' ಪರಾ. [ಸಂ.]

**ಧೂತಿಸು** (ಕ್ರಿ). (ಚಾಮರವನ್ನು) ಬೀಸು : ಆತಪತ್ರವನಾಂತಿರ್ದೊಗ್ಗಿಮಾಳಿಲೆ ಮಗುಳೆ ದೂ[ಧೂ]ತಿಸೆಲೆ ರೋಹಿಣಿ ಸಿತಚಾಮರವ ಶೈಲಜಾತೆಯುಗಕ್ಕೆ . . . ರತಿ ತೋಱು ಕೈಪಿಡಿಯನೆಂಬ ಕಳಕಳವೆಸದುದು (ಮಲೇಪು. ೧–೫೧). [ಧೂತಿ + – ಇಸು₃]

**ಧೂನನ** (ನಾ). ೧. ಅಲುಗಾಡಿಸುವಿಕೆ ; ಬೀಸುವಿಕೆ. ೨. ಕಂಪಿಸುವಂತೆ ಮಾಡುವಿಕೆ. ೩. [ನಾಟ್ಯ] ಇಪ್ಪತ್ತು ಬಗೆಯ ಕರಕರ್ಮಭೇದಗಳಲ್ಲಿ ಒಂದು: ಧೂನನ, ಶ್ಲೇಷ, ವಿಶ್ಲೇಷ, ಕ್ಷೇಪ, ರಕ್ಷಣ, ಮೋಕ್ಷಣ, ಪರಿಗ್ರಹ, ನಿಗ್ರಹ, ಉತ್ಕೃಷ್ಟ, ಆಕೃಷ್ಟ, ವಿಕೃಷ್ಟ, ತಾಡನ, ದೋಡನ, ಛೇದ, ಭೇದ, ಸ್ಫೋಟನ, ಮೋಟನ, ವಿಸರ್ಜನ, ಆಹ್ವಾನ, ತರ್ಜನ – ಈ ಇಪ್ಪತ್ತುಕ ಕರ್ಮಭೇದಂಗಳ್ (ಲಾಸ್ಯರಂ. ೪–೧೩ ವ). [ಸಂ.]

**ಧೂಪ** (ನಾ). ೧. ಬೆಂಕಿ ತಗುಲಿದಾಗ ಸುವಾಸನೆಯನ್ನು ಬೀರುವ ಒಂದು ಬಗೆಯ ಅಂಟುಪದಾರ್ಥ ; ಸಾಂಬ್ರಾಣಿ, ಹಾಲುಮಡ್ಡಿ, ಗುಗ್ಗುಳ ಮುಂತಾದ ಸುಗಂಧಪದಾರ್ಥ: ❡ ದೇವತಾರ್ಚನ ವಿಧಿಯಲ್ಲಿ ಕೆಲವು ಧೂಪಭೇದಗಳು ವಿವರಿಸಲ್ಪಟ್ಟಿದೆ. ೧. **ಪಂಚಾಂಗ ಧೂಪ :** ಚಂದನ, ಕುಂಕುಮ, ಹೊಸಕರ್ಪೂರ, ಗುಗ್ಗುಳ ಮತ್ತು ಅಗರು–ಈ ಐದು ಸುಗಂಧದ್ರವ್ಯಗಳನ್ನು ಹಾಕಿ ಧೂಪವನ್ನು ಕೊಡುವುದು. ೨. **ಷಡಂಗಧೂಪ :** ಸಕ್ಕರೆ, ತುಪ್ಪ, ಜೇನುತುಪ್ಪ, ಗುಗ್ಗುಳ, ಅಗರು, ಚಂದನ ಈ ಆರು ದ್ರವ್ಯಗಳನ್ನು ಹಾಕಿ ಧೂಪವನ್ನು ಕೊಡುವುದು. ೩. **ಅಷ್ಟಾಂಗಧೂಪ :** ಗುಗ್ಗುಳ, ಅಗರು, ತೇಜಪತ್ರ, ಶ್ರೀಗಂಧ, ಕರ್ಪೂರ, ಬಾಲಕ, ಕುಷ್ಠ ಮತ್ತು ಹೊಸ ಕುಂಕುಮ–ಈ ಎಂಟು ದ್ರವ್ಯಗಳನ್ನು ಹಾಕಿ ಧೂಪವನ್ನು ಕೊಡುವುದು. ೪. **ದಶಾಂಗಧೂಪ :** ಮಧು, ಮುಸ್ತ, ಘೃತ, ಗಂಧ ಗುಗ್ಗುಳ, ಅಗರು, ಶೈಲಜ, ಸರಲ, ಸಿಹ್ಲ(ಲೋಬಾನ ಅಥವಾ ಹಾಲುಮಡ್ಡಿ) ಮತ್ತು ಸಿದ್ಧಾರ್ಥ (ಬಿಳಿಸಾಸಿವೆ)–ಈ ಹತ್ತು ದ್ರವ್ಯಗಳನ್ನು ಹಾಕಿ ಧೂಪವನ್ನು ಕೊಡುವುದು. ೫. **ದ್ವಾದಶಾಂಗ ಧೂಪ :** ಗುಗ್ಗುಳ, ಚಂದನ, ಪುತ್ರ, ಕುಷ್ಠ, ಅಗರು, ಕುಂಕುಮ, ಜಾತೀಕೋಷ, ಕರ್ಪೂರ, ಜಟಾಮಾಂಸಿ, ಬಾಲಕ, ತ್ವಕ್(ಲವಂಗ) ಮತ್ತು ಲಾಮಂಚ–ಈ ಹನ್ನೆರಡು ದ್ರವ್ಯಗಳನ್ನು ಹಾಕಿ ಧೂಪವನ್ನು ಕೊಡುವುದು. ೬. **ಷೋಡಶಾಂಗಧೂಪ :** ಗುಗ್ಗುಳ, ಸರಲ, ದಾರು (ದೇವದಾರು), ಪತ್ರ, ಚಂದನ, ಹ್ರೀವೇರ, ಅಗರು, ಕುಷ್ಠ, ಬೆಲ್ಲ, ಸರ್ಜರಸ, ಘನ(ಕೊನ್ನಾರಿಗಡ್ಡೆ), ಹರೀತಕಿ, ನಖಿ, ಲಾಕ್ಷಾ, ಜಟಾಮಾಂಸಿ, ಶೈಲಜ–ಈ ಹದಿನಾರು ದ್ರವ್ಯಗಳನ್ನು ಹಾಕಿ ಧೂಪವನ್ನು ಕೊಡುವುದು : ಆ ದಂಪತಿಯುಂ ಪುದುಂಗೊಳಿಸಿ ಲೋಕಾಶ್ಚರ್ಯಮಂ ಮಾಡಿ ಕೊಂಡುದು ಕೃಷ್ಣಾಗರು ಧೂಪಧೂಮನಿವಹಂ ಕೃಷ್ಣೋರಗಂ ಕೊಳ್ವವೋಲ್ (ಆದಿಪು. ೫–೨೩); ಒಂದು ತೊಲೆ ಪೊಸ ಧೂಪಮಂ ತಂದು (ಕೊಂಗುರ. ದೇ. ೧೫೨–೨೨); ಧೂಪದೆಣೆಗೊಲ್ದು ಚಂದ್ರಕಲಾಪಂಗರ್ಪಿಸುವೆನೆನ್ನ ದೇಹವನು (ಉದ್ಭಟ. ೧೧–೧೨೧); ಅಮರದವಳ್ಳಿ, ರಾಸ್ನೆ . . . ಶುಂಠಿ ಇವು ಸಮಾನವಾಗಿ ಕೂಡಿ ಇಷ್ಟರ ಸಮಾಂಶ, ಗುಗ್ಗುಳದ ಧೂಪವನ್ನು ಸಹ ತುಪ್ಪದಲ್ಲಿ ಅಟ್ಟು . . . ಸೇವಿಸಲು ವಾತಜ್ವರಂ ಮಾಣ್ಗು (ಸಕವ್ಯ. ೬೮). ೨. (ಸಾಂಬ್ರಾಣಿ, ಹಾಲುಮಡ್ಡಿ ಮುಂತಾದ) ಸುವಾಸನೆಯ ಪದಾರ್ಥಗಳಿಂದ ಹೊರಡುವ ಹೊಗೆ : ಆಗಳಾಚಾರಧೂಪಗ್ರಹಣಾಂಜನಕ್ಲೇದಸಮಾಕುಲಾಕ್ಷಿಪರಿಮ್ಲಾನ(ತಾ)ಬೀಜಾಂಕು (ರೀಭೂತ) ರ ಕರ್ಣಪೂರಪಾಟಳ ಗಂಡರೇಖಮುಖಮಂಡಳಜ್ಯೋತಿಃಪ್ರಭೆಯೊಂದು ಲೀಲಾಲಕ್ಷ್ಮಿಗಾವಾಸಮಾಗಿರೆ (ಶಾಂತಿಪು. ೬–೧೮ ವ); ಮುಗಮುಗಿಪ ಧೂಪದಿಂ ಜೊಂಡಗರ್ಬಿನಿಂಪಂ ಫಲಂಗಳಿಂದುಣಿಸಿಂ . . . ಬಗೆಗೊಳಿಕುಂ ಚಿತ್ರಶಾಲೆ (ಮದಚಿ. ೧೦–೨೬); ನಲಿದು ಬೀಸುವ ಧೂಪವೆಣ್ಣೆಸಗಳಂ ಮುಟ್ಟೆ (ಕೊಂಗುರ. ದೇ. ೧೫೩–೬); ಧೂಪಿತ ದಿಙ್ಮಂಡಲದಿಂದಾಪತದಳಿನೀವಿತಾನಕಾಘ್ರಾತದಿನುದ್ವಾಪಿತೋಷ್ಮಾಯಮಾಣಸುಧೂಪದಿನಾಂ ಧರ್ಮನಾಥನಂ ಪೂಜಿಸುವೆಂ (ಬಾಧಪು. ೮–೧೪೯); ಶೈತ್ಯ ಸೌರಭ್ಯ ಮಾಂದ್ಯಮೆಂಬ ತ್ರಿವಿಧಮದಸಮೃದ್ಧಮಾದ ಪನ್ನೀರು ಲಾಮಂಚ ಅಗರು ಕೃಷ್ಣಾಗರು ಧೂಪ ಶ್ರೀಗಂಧ ಪುಷ್ಪವೃಕ್ಷ ದಿವ್ಯಮೂಲ ಪರಿಮಳಮೃಗ ಕರ್ಪೂರವೃಕ್ಷ ಹಿಮಾದಿ ಸಂಪರ್ಕದಿಂ ರಮ್ಯಮಾದ ಮಂದಮಾರುತ ಸ್ಪರ್ಶನದಿಂದ ಪ್ರೇಕ್ಷಣೀಯಮಾಗಿರ್ಕು (ವಿವೇಕ ೨೦೩): ಧೂಪ ಹಾಕಿದರೆ ಪಾಪ ಹೋದೀತೆ (ಗಾದೆ). ೩. ಹೊಗೆ; ಧೂಮ: ಎಡೆಗೊಡದು ಬೇಂಟೆ ದಿಗುಬಂಧನಂ ಮಾಡು ಕಾಡೊಡೆಯನು ನೋನು ಸೊಕ್ಕಿನ ಧೂಪಮಂ ಬೀಸು (ಹಪಕಾ. ೫–೨೯). ೪. ಗುಗ್ಗುಳದ ಮರ : "ಶ್ರೀವಾಸಃ–ದೇವದಾರು, ಧೂಪ" (ಓಷಧಿ. ೧೬೭); ಚಿಲಕಧೂಪ, ಚಿಲಕಡಿ, ಗುಗ್ಗುಳಧೂಪ, ಮಡ್ಡಿಮರ, ಮಾದಿ, ಚಿತ್ತ, ಧೂಪ (ವೃಜಿಗಿ. ೧೩–೨೩೬).

**ಧೂಪದ ಕಡ್ಡಿ** = ಧೂಪದ ಬತ್ತಿ ; ಊದುಗಡ್ಡಿ ; ಊದುಬತ್ತಿ : ದೇವರ ಮುಂದೆ ಧೂಪದ ಕಡ್ಡಿ ಉರಿಯುತ್ತಿದೆ (ರೂಢಿ). **ಧೂಪದ ಕೊಡ**= ಧೂಪ ಹಾಕುವ ಪಾತ್ರೆ,–ಉಪಕರಣ; "ಸುಗಂಧದ್ರವ್ಯ, ಶಿವಪೂಜೆಗೆ ಉಪಯೋಗವಾಗುವ ವಸ್ತು" (ಶರಸಾ. ೨೪–೮). **ಧೂಪದ ಗಿಡ** = ಧೂಪ

೪ : "ಕುಂಭುಂ, ಉಲುಖಲಕಂ, ಕೌಶಿಕಃ, ಗುಗ್ಗುಲುಃ, ಪುರಃ – ೫ ಗುಗ್ಗುಳ ಗಿಡ, ರಾಳದ ಗಿಡ, ಧೂಪದ ಗಿಡ" (ಸಿದ್ಧಾಂತಿ. ೧೦೫). **ಧೂಪದ ಬತ್ತಿ** = ಊದಿನಬತ್ತಿ : ದೇವರ ಮುಂದೆ ಹಚ್ಚಿಸಿಟ್ಟಿರುವ ಧೂಪದ ಬತ್ತಿ ಘಮ ಘಮಿಸುತ್ತಿದೆ (ರೂಢಿ). **ಧೂಪದ ಮರ** = ಗುಗ್ಗುಳದ ಮರ : "ಸರ್ಜರಸ = ಧೂಪದಮರಂ" (ಶಾಶಕ್ಕ. ೯೭); ಧೂಪದ ಮರ, ಸಾಲುಧೂಪ, ಬಿಳೀ ಗುಗ್ಗಲ, ಬಿಳೀಡಾಮರ್, ಹಾಗಡಮರ, ಉಗುಳುಧೂಪ (ಪ್ರಾಣಿಗಿ. ೭೭-೧೫೭೭). **ಧೂಪ ದೀಪ ನೈವೇದ್ಯ** = ಮೂರ್ತಿಪೂಜೆಯ ಮೂರು ಪ್ರಮುಖ ಅಂಗಗಳು ; ಧೂಪ ಹಾಕುವುದು, ದೀಪ ಬೆಳಗುವುದು ಮತ್ತು ಆಹಾರ ಪದಾರ್ಥವನ್ನು ಅರ್ಪಣೆ ಮಾಡುವುದು : ದೇವರಂಗ ಭೋಗಕ್ಕ ಧೂಪ ದೀಪ ನೈವೇದ್ಯಕ್ಕ ತಪೋಧನರಾಹಾರದಾನಕ್ಕಮೆಂದು . . . ಅಡಕೆದೋಂಟ ಕಮ್ಮವಿಪ್ಪತ್ತೆಯ್ದು (ಕಇ. IV, ೧೦-೬೩ ; 1121). **ಧೂಪಮಂ ತೋಱು**=(ಆಲಂ) ಮನಸ್ಸನ್ನು ಕೆರಳಿಸು,-ಉದ್ರೇಕಗೊಳಿಸು : ಮನದ ಪಿಶಾಚಕ್ಕೆ ವಚನರಚನಾಧೂಪಮಂ ತೋಱಿ ವಿರಹವಿಕಾರಮಂ ಕೆಳರ್ಚಿ ನಿನ್ನೊಳಾಕೆಯಂ ಕೂಡುವುಪಾಯಮನೀಗಳೆ ಮಾಡಿದಪೆಂ (ಅನಂಪು. ೧೧-೩೭ವ). [ಸಂ.]

**ಧೂಪಂಗುಡು** 'ಧೂಪಂಗೊಡು' ನೋ.

**ಧೂಪಂಗೊಡು**, ಧೂಪಂಗುಡು (ಕ್ರಿ). ೧.=ಧೂಪವಿಕ್ಕು ೧ : ವರದೈವಕೆ ಧೂಪಂಗೊಡೆ ಪೊರೆಯದೆ ಮಾಣ್ದಪುದೆ ಕೊಟ್ಟ ಪೂಜಕನಿರವಂ (ಮಲ್ಲಿಕಾ. ೧-೪೧). **ಧೂಪಂಗುಡು** : ೨. =ಧೂಪವಿಕ್ಕು ೨ : ಕಸ್ತೂರಿ ಒಂದು ಭಾಗೆ, ಶ್ರೀಗಂಧಂ ಎರಡು ಭಾಗೆ . . . ಕೊಂಡು ಅರೆದು ಪುಟವನಿಕ್ಕಿ ಜೇನುತುಪ್ಪ ಸಕ್ಕರೆಗಳಂ ಕೂಡಿ ಧೂಪಂಗುಡಲ್ ಉದಯಭಾಸ್ಕರನೆಂಬ ಸಾದಪ್ಪುದು (ಲೋಕೋಪ. ೭-೫೪ ಟೀಕೆ). [ಧೂಪ + ಕೊಡು$_1$]

**ಧೂಪಂದೋಱು** (ಕ್ರಿ). ೧. ಧೂಪವನ್ನುಹಾಕು. ೨. (ಆಲಂ) ಕೆರಳಿಸು ; ಉದ್ರೇಕವನ್ನುಂಟುಮಾಡು : ನಾನವನ ಬಱಿ ಇರ್ದು ಮರುಳ್ಗೆ ಧೂಪಂದೋಱುತಾ ಮನಃಕ್ಷೋಭಂ ತೆರೆವಂಸಗೆ ಊದಿದೆನ್ (ಅಶ್ವತ್ಥಾ. ೩-೪೭). [ಧೂಪ + ತೋಱು]

**ಧೂಪಕ** (ನಾ). ೧. ಸುವಾಸನೆಯ ಹೊಗೆ ; ಧೂಪ. ೨. ಸುಗಂಧ ದ್ರವ್ಯಗಳನ್ನು ಮಾಡುವವನು ಮತ್ತು ಮಾರುವವನು; ಸುಗಂಧಕಾರ. **ಧೂಪಕದಂಟು** = ಹಾಲುಮಡ್ಡಿ, ಗುಗ್ಗುಳ ಮುಂತಾದ ಸುಗಂಧ ದ್ರವ್ಯಗಳ ಅಂಟು : ಭೀಮಗುಂಡರಸನು ತಂನಾಳ್ಕೆಯೊಳು ಕಾ[ಳ್ದು]ಗೆ ಯಲಿ ಕೊಟ್ಟ . . . ಮ ೧೨ ಮನೆ ೧ ಮತ್ತಂ ಬೆಳ್ಳಗಲಿಯಲಿ ಕುದುರೆ ಮಾಱಿದಡೆ ಧೂಪಕದಂಟಿಗೆ ಮ ೧ (ಸೌಇಇ. XX, ೨೨೭-೨೭ ; 1306). [ಸಂ.]

**ಧೂಪಗುಂಡಿಗೆ** (ನಾ). ಧೂಪವನ್ನು ಹಾಕುವ ಪಾತ್ರೆ : ಸೂರ್ಯಕಾಂತದ ಧೂಪಗುಂಡಿಗೆಯೊಳಳವಱಿಯದೆ ಸಜ್ಜೆವಳನಿಕ್ಕಿದ ಕೇಶಸಂಸ್ಕಾರದ ಕಾಲಾ ಗರುಧೂಪಂ (ಆದಿಪು. ೫-೨೨ ವ) ; ಧೂಪಗುಂಡಿಗೆಯೊಳಳವಱಿಯದೆ ಸಜ್ಜೆವಳನಿಕ್ಕಿದ ಕೇಶಸಂಸ್ಕಾರದ ಧೂಪದ ಪೊಗೆ ಪುದಿದು ಕೊಳೆ (ಚಾವುಂಪು. ೨೭) ; ಕೋಪದಲ್ಲಿ ಶಿವಕಳೆಯದ ಕರಡಿಗೆಯನೆ ಮುಱಿದ ಧೂಪ[ಪಾಠಾಂ. ಧೂಪದ] ಗುಂಡಿಗೆಯನೊಡೆದ ದೀಪಾರತಿಯ ನಂದಿಸಿದ . . . ಪಾಪಕರ್ಮ ಕೂಡಲ ಸಂಗಮದೇವಾ ನಿಮ್ಮ ಶರಣ (ಬಸವ. ೯೦೦). [ಧೂಪ + ಗುಂಡಿಗೆ$_1$]

**ಧೂಪಘಟ** (ನಾ). ಧೂಪ ಹಾಕುವ ಪಾತ್ರೆ : ಪದಿನಾಱು ಧೂಪಘಟಂಗಳಿಂದಮೊಪ್ಪಿ ತತ್ಕನಕಶಾಲಾಭ್ಯಂತರದೊಳ್ (ಆದಿಪು. ೧೦-೩೦ ವ) ; ಒಂದೊಂದು ನಾಟ್ಯಶಾಲೆಯ ಮುಂದೊಂದೊಂದೆನಿಸಿ ಧೂಪಘಟಮುಂ ಪದಿನಾಱಿಂದೆಸೆದಿರ್ದುವು ಪದಿನಾಱುಂ ದಿವಮುಮನಡರೆ ಸುರಭಿಧೂಮಸ್ತೋಮಂ (ಚಂದ್ರಪು. ೧೫-೫೪); ಪ್ರಶಸ್ತವಸ್ತುವಿಸ್ತಾರಗೋಪುರಸ್ತೂಪಧೂಪಘಟಮಂಡಳೀಮಂಡಿತ ಶ್ರೀಮಂಡಪ ಮಧ್ಯಾಧ್ಯಾಸಿತ ವಿಚಿತ್ರ ಪೀಠತ್ರಯಾಗ್ರಮಂ . . . ಅಳಂಕರಿಸಿ (ವರ್ಧಪು. ೧೭-೧೭ ವ); **ಕೆಲಂಬರ್** . . . ಮಗಮಗಿಸುವಗರು ಧೂಪದ ಪೊಗೆಯ ಪೊದಱ್ ಕವಲ್ವರಿದು ನೊಗದಿಂದೊಗೆದು ಸಮಾವರಿಸುವ ಧೂಪಘಟಂಗಳಂ ಕರಪಲ್ಲವದಿಂ ಪಿಡಿದು ನಡೆಯೆಯುಂ (ಪಾರ್ಶ್ವಪು. ೧೭-೩೫೫ ವ). [ಧೂಪ + ಘಟ]

**ಧೂಪದಾನಿ** (ನಾ). ಧೂಪ ಹಾಕುವ ಪಾತ್ರೆ,-ಕರಂಡಕ : ಧೂಪದಾನಿಗಳು ನಡೆಯುಲಿರುವ ಧರ್ಮಕಥಾಶ್ರವಣದಿಂದ ತೃಪ್ತವಾಗಿಯೋ ಎಂಬಂತೆ ಸಂತೋಷದಿಂದ ಧೂಪಮೇಘಗಳನ್ನು ಸೃಜಿಸುತ್ತಿದ್ದುವು (ನಡದಾ. II, 1452) ; ಪುರೋಹಿತನ ಮುಂದೆ ಧೂಪದಾನಿಯನ್ನು ತಂದಿಟ್ಟು ಬಾಗಿಲ ಬಳಿಯಲ್ಲಿಯೇ ನಿಂತಿದ್ದ ಕಾತ್ಯಾಯಿನಿಯ ಮೇಲೆಯೆ ಅವನ ದೃಷ್ಟಿಸಮಸ್ತವೂ ಕೇಂದ್ರೀಕೃತವಾಗಿತ್ತು (ಪುನರು. ೬೭). [ಧೂಪ + ದಾನಿ]

**ಧೂಪಧೂಮ** (ನಾ). ಧೂಪದಿಂದ ಹೊರಟ ಸುವಾಸನೆಯ ಹೊಗೆ : ನವಧೂಪಧೂಮಧೂಸರಿತನಭೋವಿವರಂ (ಆದಿಪು. ೧೦-೨೯) ; ನೆಱೆ ಶೀವಿಪುರದೊಳಗೆ ಧೂಪಧೂಮಂ ಕೂಡೆ (ಶಿರುರ. ದೇ. ೬-೬) ; ಕಾಳಾಗುರು ಪ್ರಮುಖಧೂಪಧೂಮಂಗಳಿಂ . . . ಪೂಜಿಸಿದಂ (ಪುಷ್ಪಪು. ೯-೫) ; ಅಗರು ಚಂದನಂಗಳ ಧೂಪಧೂಮದಾಮೋದಮುಂ ಮೂಗಿಂಗೆ ನಲ್ಗಂಪನೀಯಂ ದಿಹುದು (ಶ್ರೀರಾಮಾ. ೧೦೫-೧೫೭) ; ಎಲ್ಲೆಲ್ಲೂ ಸೃಷ್ಟಿದೇವಿಗಿಟ್ಟ ಧೂಪ ಧೂಮಾ ಲಹರಿಲಹರಿ ಕಂಪಬಳ್ಳಿ ; ಚಿತ್ರರಂಗ ಭೂಮಾ ದಾಂಗುಡಿಗಳ ಬಿಡುತಲಿತ್ತು (ನಾದಲೀ. ೮೪-೧೩). [ಧೂಪ + ಧೂಮ]

**ಧೂಪಧೂಮಘಟ** (ನಾ). = ಧೂಪದಾನಿ : ವಿವಿಧಮಣಿಪ್ರಕಾರವಿರಾಜಿತ ಧೂಪಧೂಮಘಟಮೆಸೆದಿರ್ಕುಂ (ಆದಿಪು. ೧೦-೨೯). [ಧೂಪಧೂಮ + ಘಟ]

**ಧೂಪಧೂಮ್ರ** (ನಾ).=ಧೂಪಧೂಮ : ವಿತತನಾನಾಧೂಪಧೂಮ್ರಜನಿತ ಘನಾವಳಿ ಮುಸುಂಕಿದಂದದೊಳತಿತಮಂ ಪರ್ಬಿದುದು (ಬಸಪು. ೧೧-೪೮). [ಧೂಪ + ಧೂಮ್ರ]

**ಧೂಪಪಾತ್ರೆ** (ನಾ). = ಧೂಪದಾನಿ : "ಸುಗಂಧದ್ರವ್ಯಗಳನ್ನು ಹೊಗೆ ಹಾಕುವ ಪಾತ್ರೆ : ಧೂಪಪಾತ್ರೆ ; ರಂಧ್ರಗಳಿರುವ ಮುಚ್ಚಳವುಳ್ಳ ಸುಗಂಧ ದ್ರವ್ಯಸಂಪುಟ" (Cassolette. ಇಂಕನ್ನಿ). [ಧೂಪ + ಪಾತ್ರೆ]

**ಧೂಪಭಾಜನ** (ನಾ). = ಧೂಪದಾನಿ : ಚರು ಮಣಿಪರ್ಯಾಣಕ್ಕೆ ಬಿಡು ಮುತ್ತಿನ ಸೇಸೆಗೆ ಧೂಪಭಾಜನಕ್ಕೆ . . . ಪುಣ್ಯನದೀಜಲಪೂರ್ಣರತ್ನ ಭಾಸುರಕಲಶಕ್ಕೆ ಮೇಱೆ ಪವಣಿಲ್ಲೆನೆ ಪೂಜಿಸಿದಂ ರಘೂದ್ವಹಂ (ಪಂರಾಮಾ. ೧೨-೭). [ಧೂಪ + ಭಾಜನ]

**ಧೂಪಮಾನೆಯ** (ನಾ). ಧೂಪಕ್ಕಾಗಿ ಕೊಟ್ಟ ಭೂದಾನ : ದೀಪ ಮಾನೆಯ ಕೊಟ್ಟ ಧೂಪಮಾನೆಯ ಕೊಟ್ಟ ಸೋಪಾನ ಕಟ್ಟಿ ಭೀಮೆಯೊಳು ಇಳಿಯುದಕೆ ಸೋಪಾನಮಾನೆ ವತನಿತ್ತ (ಶರಚ. ೩೩೨) ; (ಕನ್ನಜಾ. ೩೦೭ ನೋ). 'ದೀಪಮಾನೆಯ' ಪರಾ. [ಧೂಪ + ಮಾನೆಯ (<ಮಾನ್ಯ)]

**ಧೂಪಮಿಕ್ಕು**, ಧೂಪವಿಕ್ಕು, ಧೂಪಿಕ್ಕು (ಕ್ರಿ). ೧. ಗುಗ್ಗುಳ, ಸಾಂಬ್ರಾಣಿ ಮೊದಲಾದ ಸುಗಂಧವಸ್ತುಗಳ ಹೊಗೆಹಾಕು ; ಧೂಪಹಾಕು. ೨. (ಆಲಂ) ಉದ್ರೇಕಗೊಳಿಸು ; ಕೆರಳಿಸು ; ಆವೇಶಗೊಳಿಸು : ಸಾಹಸಿಯ ಆವೇಶಕೆತ್ತಿದಾರತಿಯಾಯ್ತುಡವಿವೇಕೆ : ಧೂಪಮಿಕ್ಕಿತು ಹಗಿನ ಗಂಪು (ಶ್ರೀರಾಮಾ. ೪೧೭-೮೧). **ಧೂಪವಿಕ್ಕು** : ೧. ತನಗೆ ನೇಮಂ ಕೊಂಗುಲಿಯ ಧೂಪವಿಕ್ಕುವುದು (ಕೊಂಗುರ. ದೇ. ೧೫೨-೧೧). ೩. ಹೊಗೆ ಹಾಕು : ನಖವೆಂಬ ಗಂಧದ್ರವ್ಯವ ಹಸುವಿನ ತುಪ್ಪವೆರಸಿ ಧೂಪವಿಕ್ಕಲು ಶಿಶುವಿಗೆ ಸುಖವಹುದು (ವೈದ್ಯಸಾ. II, ೧೭) ; ಲೊಕ್ಕಿ ಸೊಪ್ಪು, ಕೊಮ್ಮೆ ಸೊಪ್ಪು . . . ಚೂರ್ಣಿಸಿ ಧೂಪವಿಕ್ಕಲು ಸನ್ನಿಪಾತ ಗುಣವಹುದು (ಸಕವ್ಯ. ೧೮೧). **ಧೂಪಿಕ್ಕು** : ೨. ಏರ್ಪಡೆದ ಮರದ ಮೆಯ್ಯಿಂ ಸೋರ್ದ ಕಂಪಿನಂಟುಗಳುರಿಯೆ ಧೂಪಿಕ್ಕಿದವೊಲಾಯ್ತು ಹನುಮನಾವೇಶಕ್ಕೆ ಗಂಧ ಧೂಮಂ (ಶ್ರೀರಾಮಾ. ೪೦೯-೩೦). [ಧೂಪ + ಇಕ್ಕು]

**ಧೂಪವರ್ತಿ** (ನಾ). ಸುಗಂಧವಸ್ತುಗಳಿಂದ ತಯಾರಿಸಿದ ಬತ್ತಿ ; ಊದು ಕಡ್ಡಿ ; ಅಗರಬತ್ತಿ : ಸುರದಾರು ಪೂತಿ ಮುರೆ ಸಜ್ಜರಸಂ ಲಘುಲಾಕ್ಷೆ ಯಿವರ ಚೂರ್ಣಮಂನಿಂಬಾಗರಳೆಯೊಳೆ ಪುದಿದು ಪೊತ್ತಿಸೆ ಸುರಭಿಸ್ರುತಂ ಧೂಪ ವರ್ತಿಯಿದು ಕೇವಳಮೇ (ಲೋಕೋಪ. ೭-೩೩) ; ಕದಂಬದೂವಿನಿಡುಕು ಱೆಗೊಳ್ ಮಡಂಗಿದ ಧೂಪವರ್ತಿಯು ಕರಂಡಕಂಗಳಿಂ (ಚಂದ್ರಪು. ೮-೪ ವ).
[ ಧೂಪ + ವರ್ತಿ ]

**ಧೂಪವರ್ತಿಕೆ** (ನಾ). = ಧೂಪವರ್ತಿ : ಯುವತಿಯರ ಮುಡಿಗಳೊಳ್ ಧೂಪವರ್ತಿಕಾಧೂಮಲೇಖೆವಿಡಿದಿವು ಮೊರೆಯುಂತ್ತಿವೆ ಕೇಳಿಸಿದಪುವಂ ಗೋದ್ಭವಶಿಕ್ಷಿತ ವಂಶವಾದ್ಯಮಂ ಸಭೆಗಳಿಗಳ್ (ವರ್ಧಪು. ೫-೭).
[ ಧೂಪ + ವರ್ತಿಕೆ ]

**ಧೂಪವಿಕ್ಕಿಸು** (ಕ್ರಿ). ಹೊಗೆಯನ್ನು ಹಾಕಿಸು : ನಖ ಎಂಬ ಗಂಧದ್ರವ್ಯ, ಹಸುವಿನ ಹಲ್ಲುಗಳಿಂದ ಧೂಪವಿಕ್ಕಿಸಲು ಶಿಶುವಿಗೆ ಸುಖವಹುದು. (ಗ್ರಹ ಹರವಹುದು.) (ವೈದ್ಯಸಾ. II, ೨೦).
[ ಧೂಪವಿಕ್ಕು (<ಧೂಪಮಿಕ್ಕು ) + – ಇಸು$_3$ ]

**ಧೂಪವಿಕ್ಕು** 'ಧೂಪಮಿಕ್ಕು' ನೋ.

**ಧೂಪಹಾಕು** (ಕ್ರಿ). ೧. ಸುಗಂಧವಸ್ತುಗಳ ಹೊಗೆ ಹಾಕು ; ಧೂಪ ವಿಕ್ಕು : ನೀವು ದೃಢದಿ ಹೋಗಿ ದೇವರ ಗುಡಿಗೆ ಧೂಪಾ ಹಾಕ್ರಿ (ಕನ್ನಜಾ. ೧೬೭). ೨. ಹೊಗೆಹಾಕು : ಗೂಗೆಯ ಎಡಪಕ್ಕದ ಗರಿ, ಜೇನುತುಪ್ಪ . . . ಕಾಗೆಯ ಪಿಷ್ಟೆ ಇವಂ ಸಮಾನವಾಗಿ ಚೂರ್ಣವಂ ಮಾಡಿ . . . ಈ ಚೂರ್ಣವನ್ನೇ ಧೂಪ ಹಾಕುವುದು (ಸಕಲವೈ. ೧೧೯). ೩. (ಆಲಂ) ಉದ್ರೇಕಗೊಳಿಸು ; ರೇಗಿಸು ; ಕೆರಳಿಸು : ಅವನಿಗೆ ಚೆನ್ನಾಗಿ ಧೂಪ ಹಾಕಿ ಬಂದಿದ್ದೇನೆ (ರೂಢಿ). [ ಧೂಪ + ಹಾಕು (<ಪಾಯ್ಕು$_1$) ]

**ಧೂಪಳಿಸು** (ಕ್ರಿ). ನಿಟ್ಟುಸಿರು ಬಿಡು : ಧೂಪಳಿಸುತೆಡೆಗೆಡೆಗೆ ಸ್ವೈರಿಸುತಾ ಪುರಂಧ್ರಿಋ ಮರಳಿ ಮರಕಲಾಪಭನ್ನೆಯು ನೆಟ್ಟದೃಷ್ಟಿಯೊಳಿರ್ದರೀಕ್ಷಿಸುತ (ಅಂಬಿಕಾ. ೩೪-೬೬); "ಮೂರ್ಛೆಹೋಗು ; ಭ್ರಮೆಗೊಳ್ಳು" (ಪ್ರಭಣ್ಣ).
[ < ದೂಪಿಸು$_1$ ]

**ಧೂಪಾಮೋದ** (ನಾ). ಧೂಪದ ಕಂಪು,–ಪರಿಮಳ : ತೆಱೆಯುದೆ ರನ್ನದ ಪಡಿಗಳ್ ತೆಱೆದುವು . . . ಮೊಱೆದು ಪಾಱುವ ಪಱಿಮೆಗಳೊಡನುಣ್ಮಿ ಪೊಣ್ಮೆ ಧೂಪಾಮೋದಂ (ಶಾಂತಿಪು. ೭-೧೭) ; ಅವಿರಳಧೂಪಾಮೋದಸಂಸಂಗಿ ಭೃಂಗಾನ್ವಿತಂ . . . ಎಸೆವುದು (ಚಂದ್ರಪು. ೧-೧೫೦) ; ಬಗೆಗೊಳಿಪ ಧೂಪಾ ಮೋದದೊಳ್ಪೊಱೆದ ದವನದ ಸೀಗುಱಿಯಂ ಪೊಂಬಾಳೆಯ ಚಾಮರವಮಂ . . . ಕೆಲಕೆಲದೊಳ್ ಪಿಡಿದು (ರಾಜಶೇ. ೧೩-೪೫ ವ).
[ ಧೂಪ + ಆಮೋದ ]

**ಧೂಪಾಯಿತ** (ಗು). ೧. ಪರಿಮಳಿತವಾದ; ಸುಗಂಧಪೂರಿತ. ೨. ನೊಂದ; ಕ್ಲೇಶಗೊಂಡ; ಬಳಲಿದ; ಆಯಾಸಗೊಂಡ; ದಣಿದ. ೩. ಕಾಯಿಸಿದ; ಕಾದ ; ಸಂತಪ್ತ. (ನಾ). ೪. ಕಾಯಿಸಿದುದು ; ಸಂತಪ್ತ ವಾದುದು : "ಸಂತಾಪಿತಃ, ಸಂತಪ್ತಃ, ಧೂಪಾಯಿತಃ, ಧೂಪಿತಃ, ದೂನಃ–ಶಿ ಬಿಸಿಲು, ಸೆಕೆ ಮುಂತಾದವುಗಳಲ್ಲಿ ಹೋಗಿ ಹೊರಡುವಂತೆ ವಣಗಿಸಿ ಕಾಯಿಸಲ್ಪಟ್ಟಂಥಾದ್ದು" (ಸಿದ್ಧಾಂತಿ. ೩೫೦). [ ಸಂ. ]

**ಧೂಪಾರತಿ** (ನಾ). ೧. ಸುಗಂಧವಸ್ತುಗಳಿಂದ ಆರತಿ ಎತ್ತುವುದಕ್ಕೆ ಉಪಯೋಗಿಸುವ ಸಾಧನ,–ಉಪಕರಣ ; ಧೂಪಾರತಿಯನ್ನು ಮಾಡುವ ಹಿಡಿಯುಳ್ಳ ಪಾತ್ರೆ,–ಸಾಧನ : ತಿರುಮಲದೇವಿ ಅ(೦)ಮ್ಮ ನವರು ಶ್ರೀವಿಠಲದೇವರಿಗೆ . . . ಸಮರ್ಪಿಸ್ತ ಚಿ(೦)ನ್ನದ ಹರಿವಾಣ ೧ . . . ನಾಗಾರತಿ ೧ ಧೂಪಾರತಿ[೧] (ಸೌಇಇ. IV, ೨೭೩–೪೨ ; 1513) ; ಬಾಗಿಲಲ್ಲಿಯ ಧೂಪಾರತಿಯೊಳಗಿಂದ ಅಂಗಾರವನ್ನು ಹಚ್ಚಿಗೊಂಡಳು (ಗಂಗಸಾ. ೯). ೨. ಧೂಪದಿಂದ ಮಾಡುವ ಆರತಿ : ಮಹದಾಕಾಶವೇ ಅಕ್ಷತೆ ಪರಾಪರವೆ ಪತ್ರೆ ಪುಷ್ಪ ನಿರ್ಮಳವೆ ಲಿಂಗಾರ್ಚನೆ ಮಹಾಪ್ರಕಾಶವೆ ಪೂಜೆ ನಿತ್ಯನಿರಂಜನವೆ ಧೂಪಾರತಿ [ಪಾಠಾಂ. ಧೂಪ ದೀಪಾರತಿ] (ಅವಚಂ. ೬೪–೩೭೪) ; ಮಜ್ಜನಕ್ಕೆಱೆದು ಧೂಪಾರತಿಗಳಂ ಕೊಟ್ಟು ಸಜ್ಜನಸ್ನೇಹದಿಂ ಭಕುತಿಯಂ ಮುಂದಿಟ್ಟು (ಪಾಗೀರ. ದೇ. ೨೫೫–೧೯) ; ಧೂಪಾರತಿಯ ನಾ ಮಾಡಲಿಲ್ಲ ಒಂದು ದೀಪವನಾದರೂ ಹಚ್ಚಲಿಲ್ಲ (ಪುರಂದ. ೧–೧೭೭–೮) ; ನರುಗಂಪಿನ ನವ್ಯೊಲವಿನ ಧೂಪಾರತಿ ಸ್ವೀಕರಿಸುತ ಹಾಲ್ಗಡಲೊಳು ಹರಿಯಂದದಿ ಎಂದುಮಿಂತೆ ನಲಿನಲಿದಿರು (ಗೋಕುನಿ. ೩೧–೫) ; ಮೂರು ಮಿನೀಟನಲ್ಲಿ ಧೂಪಾರತಿ ಮುಗಿಸಿ ಮಂಗಳಾರತಿಗೇ ಬಾದುಬಿಟ್ಟದ್ದ (ವೈನಿ. ೨೨೦). 'ದೂಪಾರತಿ' ಪರಾ.
[ ಧೂಪ + ಆರತಿ$_1$ ]

**ಧೂಪಾರ್ತಿ** (ನಾ). ಧೂಪ ಹಾಕುವ ಪಾತ್ರೆ; ಧೂಪದಾನಿ : "ಧೂಪಾರ್ತಿ= ಶಿವಪೂಜೆಯಲ್ಲಿ ಸಾಂಬ್ರಾಣಿ (ಸುಗಂಧದ್ರವ್ಯ)ಮೊದಲಾದುವನ್ನು ಹಾಕಲು ಅನುವಾದ ಅಗ್ನಿಯ ಪಾತ್ರೆ" (ಶರಸಾ. ೨೪–೮) ; "ಧೂಪ ಸುಡುವ ಪಾತ್ರೆ : ಧೂಪದಾನಿ ; ಧೂಪಾರ್ತಿ" (Censer. ಇಂಕನಿ). [ < ಧೂಪಾರತಿ ]

**ಧೂಪಿಕ್ಕು** 'ಧೂಪಮಿಕ್ಕು' ನೋ.

**ಧೂಪಿತ** (ಗು). ೧. ಸುಗಂಧವಸ್ತುಗಳಿಂದ ವಾಸನೆ ಹಿಡಿದಿರುವ ; ಧೂಪದ ಹೊಗೆ ಹಾಕಿದ ; ಸುಗಂಧದ್ರವ್ಯಗಳಿಂದ ಪರಿಮಳಿತ ಮಾದ : ಧೂಪಿತದಿಙ್ಮಂಡಲದಿಂಮಾಪತದಳಿನೀವಿತಾನಕಾಘ್ರಾತದಿನುದ್ವ್ಯಾಪಿ ತೋಷ್ಮಾಯಮಾಣಸುಧೂಪದಿನಾಂ ಧರ್ಮನಾಥನಂ ಪೂಜಿಸುವೆಂ (ಬಾಧಪು. ೮–೧೪೯). ೨. ನೊಂದ; ಕ್ಲೇಶಗೊಂಡ ; ಬಳಲಿದ ; ಆಯಾಸಗೊಂಡ. ೩. ಪ್ರಚೋದನೆಗೊಂಡ ; ಉದ್ದೀಪ್ತವಾದ : ಮಧುರಸ್ಮಿತಕಟಾಕ್ಷ ನಿರೀಕ್ಷಣಂಗಳಲಿ ಧೂಪಿತಸ್ಮರವಶತೆಯಲಿ ತದ್ರೂಪವನು ನೆನೆವುತ್ತ ಭವಭಯ ತಾಪವನು ಕಳೆದೈದಿದರು (ನಿಭಾಗ. ೧೧–೧೦೨–೩೪). ೪. ಕಾಯಿಸಿದ ; ಸಂತಪ್ತಗೊಂಡ. (ನಾ). ೫. ಕಾಯಿಸಿದಂದು ; ಸಂತಪ್ತವಾದಂದು : "ಸಂತಾಪಿತಃ, ಸಂತಪ್ತಃ, ಧೂಪಾಯಿತಃ, ಧೂಪಿತಃ, ದೂನಃ–ಶಿ ಬಿಸಿಲು, ಸೆಕೆ ಮುಂತಾದವುಗಳಲ್ಲಿ ಹೋಗಿ ಹೊರಡುವಂತೆ ವಣಗಿಸಿ ಕಾಯಿಸಲ್ಪಟ್ಟಂಥಾದ್ದು" (ಸಿದ್ಧಾಂತಿ. ೩೫೦). 'ಧೂಪಾಯಿತ' ಪರಾ. [ ಸಂ. ]

**ಧೂಪಿಸು$_1$** 'ದೂಪಿಸು$_1$' ನೋ.

**ಧೂಪಿಸು$_2$** (ಕ್ರಿ). ೧. ಸುಗಂಧವಸ್ತುಗಳ ಹೊಗೆಯನ್ನು ಹಾಕು ; ಧೂಪಹಾಕು ; ಪರಿಮಳವನ್ನುಂಟುಮಾಡು : ಚೆನ್ನೆಸೆದು ಮಹಿಷಾಕ್ಷಿ ಗುಗ್ಗುಳವಂ ಧೂಪಿಸಿ[ಪಾಠಾಂ. ನಿಧೂಪಿಸಿ, ನಿರೂಪಿಸಿ] ಸೋಮಧಾರಿಗೆ ತನ್ನ ತೂಕವನಿಕ್ಕಿಯಂತರ್ಧೂಪವಂ ಕೊಟ್ಟು (ಬಸಪು. ೪೩–೨೦) ; ಹಲವು ಪರಿಯ ಸುಗಂಧಧೂಪಂಗಳನು ಧೂಪಿಸಿ[ಪಾಠಾಂ. ಸಮರ್ಪಿಸಿ] (ಪ್ರಭುಲೀ. ४–४३) ; ಮಲಯಜವನನುಲೇಪನಂಗೆಯ್ದು ಧೂಪಿಸಿದ ಬಿಳಿಯ ಪಟ್ಟೆಯನುಟ್ಟು . . . ಸೌಂದರಂ ವನಕೆ ಪೊಱಮಟ್ಟನು (ಸೌಂದಪು. ೧೧–೧೧) ; "ಸುಗಂಧ ದ್ರವ್ಯವನ್ನು ಹಚ್ಚು" (ಪ್ರಭಣ್ಣ). ೨. ಹೊಗೆ ಹಾಕು,–ಹಾಯಿಸು; ಹೊಗೆಕೊಡು : ಸ್ವಯಂಪತಿತ ಸಾರಪಕ್ವಫಳಬೀಜಮಂ . . . ಬೃಹ ತೀತ(ಫ)ಳಕ್ಷಾರವಾರಿಯೊಳ್ ಪುದಿದುಕೊಂಡು ಧೂಪಿಸಿ ವಿಳಂಗದಿಂ ತುಪ್ಪದಿಂ (ಲೋಕೋಪ. ೬–೬). ೩. ಹೊಗೆಯಾಡು ; ಹೊರಸೂಸು ; ಸುಳಿವು ತೋರು : ತನ್ನ ಕಾರ್ಯಸೀಮೆಯನ್ನು ಮೀರಿದ ಸುಗ್ರೀವನ ಗೈಮೆ ಎಂಬುದು ಒಂದಿಷ್ಟು ಅಧಿಕಪ್ರಸಂಗವೇ ಆಯಿತೆಂದು ರಾಮನ ಆ 'ಕಡೆ ಗಣ್ಣ'ನಲ್ಲರಳದ ಕಿನಿಸಿನಲ್ಲಿ ಧೂಪಿಸುತ್ತಿದೆ (ಪಾರ್ತಿಸು. ೯೭). ೪. (ಆಲಂ) ಇಲ್ಲವಾಗು ; ನಾಶವಾಗು : ವಾಣಿವಲ್ಲಭಗಾದುದತಿನಿತ್ರಾಣ ನಾಲಿಗೆ ನೆತ್ತಿಗಡರ್ದುದು ಧೈರ್ಯ ಧೂಪಿಸಿತು (ಅಂಬಿಕಾ. ४೦–४೫).
[ ಧೂಪ + – ಇಸು$_3$ ]

**ಧೂಪೋದ್ಧಾರ** (ನಾ). ಧೂಪವನ್ನು ಎತ್ತುವುದು ; ಧೂಪದ ಅರ್ಪಣೆ ; ಧೂಪಹಾಕುವುದು : ಮೂಱುಂ ಪೊತ್ತುಮರ್ಚನಾ ಪುರಸ್ಸರಂ ಧೂಪೋದ್ಧಾರಂಗೆಯ್ದು ನಿರಂತರ ತ್ರಿಸಂಧ್ಯಾಸೇವೆಯುಮೆಂದೆಂಟು ತೆಱದ ಪೂಜೆಯು ಮನರ್ಕಪೂಜೆಯುಮುಮಂ ಮನ್ನಿಸಿ (ಆದಿಪು. ೧೫-೧೩೪). [ ಧೂಪ + ಉದ್ಧಾರ ]

**ಧೂಮ** (ನಾ). ೧. ಹೊಗೆ : "ಧೂಮಮೆನೆ ಹೊಗೆಯಕ್ಕು" (ಮಂಗರಾ. ೧೪-೮) ; ಆ ದಂಪತಿಯಂ ಪುದುಂಗೊಳಿಸಿ ಲೋಕಾಶ್ಚರ್ಯಮಂ ಮಾಡಿ ಕೊಂದುದು ಕೃಷ್ಣಾಗರುಧೂಪಧೂಮನಿವಹಂ ಕೃಷ್ಣೋರಗಂ ಕೊಲ್ವವೋಲ್ (ಆದಿಪು. ೫-೨೩) ; ಚಾಮರಿಯರ್ ಧೂಮಂಪೊಕ್ಕ ಕಣ್ಣಂತೆ ನೋಡಲಾಱದಿರೆ (ಧರ್ಮಾಮೃ. ೪-೧೫೯) ; ಅಪ್ಪುವಿನ ಯೋಗದ ಕಾಷ್ಠ ಹೊತ್ತುವಲ್ಲಿ ಮೆತ್ತನೆ ತವುದ ಧೂಮ ಶುಷ್ಕದ ಅಪ್ಪುವಿನ ಗುಣ (ಮೋಕ್ಷಮಾ. ೬-೨೪) ; ಕಪಿಯುಂ ಗಾಣಿಗ ಮಾವು . . . ವಿಧವೆಯುಂ ಕೊಂದಾಟಮುಂ ಧೂಮಮುಂ ನಿಪುಣರ್ ಕಂಡರೆ ಪೋಗರ್ಪ್ಪೆ (ಸೋಮೇಶ. ೬೮); ಧೂಮಂ ಪಿಂಗಿದ ಶಿಖಿಯಂತೆ . . . ತೊಳಗಿದಂ ಭೂಪಾಲಂ (ನಳಚಂ. ೭೨೮) ; ಧೂಮಚುಂಬಿತ ಚಿತ್ರದಂತೆ ಸನಾಮರಿದ್ದುದು (ಶಂಖ್ಯಾಳ. ೩೭-೩) ; ಮುಸುಕುವ ಮರ್ಬಿನಿಸ್ಸಿಡುವ ಬಾಣ ತುಪಾಕದ ಧೂಮದುರ್ಬುಗಂ (ಚಿಕವಿ. ೬-೧೭). ೨. ಮೋಡ ; ಮೇಘ. ೩. ಉಲ್ಕೆ ; ಬಾಲಚುಕ್ಕೆ. 'ಧೂಮಕೇತು' ಪರಾ. ೪. ಒಂದು ನರಕದ ಹೆಸರು : ಮತ್ತಂ ಪೂತಿವಕ್ತ್ರ ರಕ್ತಪೂತಿ ಮೃತ್ತಿಕೆ ಕಣ ಧೂಮವೆಂಬೈದು ಮಂತ್ರಿನರಕಂಗಳಿಂ ಸುತ್ತಿ ಭೀಮವೆಂಬರಸುನರಕವಿಹುದು (ವಿವೇಕ. ೦೮೦). 'ಧೂಮಪ್ರಭೆ' ಪರಾ. ೫. ಒಂದು ಬಗೆಯ ಮರ: (ಮೃಜಿಗಿ. ೩೧-೬೦೬); ಪಶ್ಚಿಮಘಟ್ಟದ ಕಾಡುಗಳ ಅತಿ ಎತ್ತರವಾದ ಮರ ಇದುಧೂಮ (ಹಸುಹೋ ೨೬೩). ೬. ರಾವಣನ ಒಬ್ಬ ಮಂತ್ರಿಯ ಹೆಸರು: ಧೂಮನೆನಿಸಿದೆ ಹಿಂದೆ ಮತ್ತಾ ಧೂಮಕೇತುವೆನಿಪ್ಪೆ ರಣದಲಿ (ಕೌ ಶಿ ರಾ. ೨೦-೭). ೭. = ಧೂಮಾಯ : ಪಸರಿಸೆ ತರದಿಂ ಧ್ವಜಧೂಮಸಿಂಹಶುನಕೋಕ್ಷಖರ ಗಜಧ್ವಾಂಕ್ಷಂಗಳ್ ದೆಸೆಯಿಂದೆ ಮೂಡಣಾಳ್ಗಂ ದೆಸೆಯಾಯಂ ಶುಭದಮಲ್ಲಿ ಪೆಱವಶುಭಂಗಳ್ (ಲೋಕೋಪ. ೩-೧೯) ; ವಿವಿಧವಾದ ಪ್ರಾಸಾದಾದಿಗಳು ಎಂಟು ವಿಧವಾದ ಗಜ, ಉಷ್ಟ್ರ (ಒಂಟೆ) . . . ಧ್ವಜ, ಧೂಮ, ಶ್ವಾನ ಎಂಬ ಆಯಗಳನ್ನರಿತು ನಿರ್ಮಾಣವಾಗತಕ್ಕದೆಂದೂ . . . ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಭಾರದ. ೮೦). ೮. [ದ್ವೈತ] ಪರಮಾತ್ಮ ; ವಿಷ್ಣು : ಅಜ್ಞಾನಾದಿಗಳನ್ನು ನಿರಾಕರಿಸುವುದರಿಂದ ಧೂಮನೆಂದು ಪರಮಾತ್ಮನಿಗೆ ಹೆಸರು (ಹಸಾರ. ೬-೨ ಟೀಕು).

**ದೂಮಮಾಡು**=(ಸುಟ್ಟು) ಹೊಗೆಯೇಳುವಂತೆ ಮಾಡು ; ಹಾಳು ಮಾಡು ; ನಾಶಮಾಡು : ಧೂಮಮಾಡಿದನೆನಿಸದಿರ್ದಡೆ ನಾಮವನು ನಾ ಕಳೆಸಿಕೊಂಬೆನು ನಾಮಶೂನ್ಯರ ಮಾ ಡಿ ಿ ಡು ವೆ ನು ರಾಮಸೇನೆಯನು (ಕೌಶಿರಾ. ೨೦-೭). [ ಸಂ. ]

**ಧೂಮಕರ** (ನಾ). ಹೊಗೆಯನ್ನುಂಟುಮಾಡುವವನು ; ಅಗ್ನಿ : ಹರಿಮುಖಸುರರ್ ಭೀತಿಯಿಂ ನುಡಿಯುಡುಗಿ ಧೂಮಕರನನೀಕ್ಷಿಸೆ (ಪದ್ಮರಾ. ೧೦-೨೨೧). [ ಸಂ. ]

**ಧೂಮಕುಣಿಕೆ** (ನಾ). ಒಂದು ಬಗೆಯ ಸಸ್ಯ : ಮೋಹಲತೆಯುಂ ಧೂಮಕುಣಿಕೆಯುಂ . . . ಕೃತಾಂಜಲಿಯುಂದು ಮುಟ್ಟಿದರೆ ಮುರುಟುವವನು (ಕಾಮಶಾ. ೧೦-೨೬೪) ; ಕೆಂಗೊಡದ ಲಿಂಗಮುಂ ಕರ್ಪೂರ ಧೂಮಕುಣಿಕೆ ಬೀಜ ಜೇನುತುಪ್ಪ ಪಾದರಸ ಇವೆಲ್ಲವು ಕೊಡುವದು (ಕಾಮಶಾ. ೧೦-೨೬೮). [ ಧೂಮ ? + ಕುಣಿಕೆ ]

**ಧೂಮಕೇತನ** (ನಾ). ೧. ಹೊಗೆಯನ್ನು ಧ್ವಜವಾಗಿ ಉಳ್ಳವನು ; ಅಗ್ನಿ : "ವಸು ಸಿತೇತರಗತಿ ಸ್ವಾಹಾಪ್ರಿಯಂ . . . ಧೂಮಕೇತನಂ ಶುಚಿ ವಿರೋಚನನೆನಿಕ್ಕುಂ" (ಮಂಗರಾ. ೧೪-೬). ೨. ಧೂಮಕೇತು ; ಉಲ್ಕೆ. [ ಧೂಮ + ಕೇತನ ]

**ಧೂಮಕೇತು** (ನಾ). ೧. ಹೊಗೆಯನ್ನು ಧ್ವಜವಾಗಿ ಉಳ್ಳವನು ; ಅಗ್ನಿ : ನುತವರಪ್ರಸಾಧಿ ಪರಸಮಯ ನಿರ್ಧೂಮ ಧೂಮಕೇತುಂ ಶಿಷ್ಟ ಪರಿಪಾಲಕಂ (ಗುರುಚಾ. ೧೫-೩) ; ಕೋಪದಿಂ ತನ್ನ ನಿಟಿಲ ಧೂಮಕೇತುವಿನ ನಯನಮಂ ತೆರೆಯಲಿರ್ದಪನು (ನವಮೋ. ೫-೧೧). ೨. ಹೊಗೆಯಂತೆ ಕಾಣಿಸಿಕೊಳ್ಳುವ ಒಂದು ಉಲ್ಕೆ ; ಆಕಾಶದಿಂದ ಕೆಳಕ್ಕೆ ಬೀಳುವ ತೇಜಃಪುಂಜವಾದ ವಸ್ತು ; ಬಾಲಚುಕ್ಕೆ : ಆಂಜನೇಯನೊಡರಿಸೆ ಲಂಕಾ ದಹನಮನಸುರೇಂದ್ರ ವಿನಾಶಹೇತುಗಳ್ ಧೂಮಕೇತುಗಳ್ ನೆಗೆದುವೆನಲ್ (ಪಂಪರಾಮಾ. ೧೧-೧೯೫) ; ತೋಱುತಿರ್ದ್ದನು ಧೂಮಕೇತುವಿನಂತೆ ಕಪಿಪಡೆಗೆ (ಕೌಶಿರಾ. ೨೪-೩೪) ; ಮೇಳವಿಸಿದವು ಧೂಮಕೇತು ದಿಶಾಳಿಯಲಿ ರಥಕೇತು ದಂಡದ ಮೇಲೆ ಹದ್ದೆ ಬಿಗಿದವು ಕಲಿಖರದೂಷಣಾದಿಗಳ (ತೊರರಾ. ೩-೫-೮) ; ಮೂಡಿದವು ಪ್ರತಿಸೂರ್ಯ ಧೂಮಕೇತುಗಳು ಓಡಾಡಿದವು ಬೀದಿನಲಿ ಹದ್ದು ಕಾಗೆಗಳು (ಕನಕ. ೨೧೨-೧೨) ; ಕಂಜಬಾಂಧವನ ರಥದಶ್ವಗಳು ಬೆದರಿದವು ಧೂಮಕೇತು ಮೂಡಲು (ನವಮೋ. ೧೨-೭೩) ; ಧೂಮಕೇತುಗಳ್ ದೆಸೆದೆಸೆಗೆ ಮುಸುಂಕೆ (ರಾಮಾಶ್ವ. ೬೬-೮) ; ಪಡುವಲಲ್ಲಿ ಧೂಮಕೇತು ಬಾಲ ಬೀಸಿ ಮೂಡಿರೆ (ಅರಳು. ೨೪೭-೩). ೩. (ಆಲಂ) ಅಮಂಗಳವನ್ನುಂಟುಮಾಡುವುದು ; ಅನಿಷ್ಟಕರವಾದುದು : "ಉನ್ನತ ತೀವ್ರ ಶಕ್ತನಹ ಸರ್ಪಾರ್ಚಿಯೊಳು ಮಹೋತ್ಪಾತದೊಳು ಧೂಮಕೇತುವದೆನಿಕ್ಕುಂ" (ಮಂಗರಾ. ೦೪೪-೨೫) ; "ಮಹೋತ್ಪಾತಂ ಪಾವಕಂ ಧೂಮಕೇತುವೆನಿಕ್ಕುಂ" (ನಾನಾರ. ೩೪) ; ಧಾರೆಯ ಮಿಗೆ ಹಿಡಿದ ಖಂಡೆಯವೊ ಕಾಮನ ಹಗೆಗೆ ಹುಟ್ಟಿದ ಧೂಮಕೇತುವೊ ರೂಪು ಸುರಸತಿಯ (ಕುವ್ಯಾಆ. ೮-೩) ; ಈ ನಿರ್ಣಯವು ಯೋಗ್ಯವಿದ್ದರೂ ರಾಜಕೀಯ ಧೂಮಕೇತುವಾಗಿದೆ (ನಾರಜ. ೪೩). ೪. ಅಮಂಗಳವನ್ನುಂಟುಮಾಡುವವನು ; ಅನಿಷ್ಟವನ್ನುಂಟುಮಾಡುವವನು : ನುಡಿದನ್ತೆಗಣ್ಣಂ ಸಮರಧನಂಜಯ ವೈರಿ ಕುಳಾನ್ತಕಮರಿಬ[ ಲ ]ಧೂಮಕೇತುಯಾಪಮಲ್ಲನಂಕಕಾಱಂ (ಕಇಆ. ೪೮-೫-೧೪ ; 973) ; ಫಣಿಪತಿಕೇತನ ಧೂಮಕೇತುವುಂ ಪಾಂಡವಬಲಪ್ರದೀಪನುಂ . . . ಎನಿಸಿದ ಭೀಮಸೇನಂ (ಗದಾಯು. ೨-೧ ವ) ; ತ್ರಿದಶಾರಿ ಧೂಮಕೇತುವನುದರದೊಳೀ ದೇವಿ ತಳೆದುದರ್ಕಿದೆ ದೃಷ್ಟಾಂತದ ಧೂಮಲೇಖೆಯೆನೆ ಕರ್ಪೊಗೆವಿದ ರೋಮಾಳಿ ರಂಜಿಕುಂ (ಜಗವಿ. ೨-೯೧). [ಧೂಮ + ಕೇತು]

**ಧೂಮಜ್ವಾಲೆ** (ನಾ). ಹೊಗೆಯಿಂದ ಕೂಡಿದ ಬೆಂಕಿ ; ಉರಿ : ನೆಗೆವ ಧೂಮಜ್ವಾಲೆಗಳ್ ಬಿಟ್ಟ ಪರ್ಗಿಡಿಗಳ್ ಪೊಣ್ಮುವ ಪೂತ್ಕ್ರಿಯಾರಭಸಮಾದಂ ಭೀತಿಯಂ ಮಾಡೆ (ವರ್ಧಪು. ೦೪-೬೪). [ ಧೂಮ + ಜ್ವಾಲೆ ]

**ಧೂಮಧೂಸರಿತ** (ಗು). ಹೊಗೆಯಿಂದ ಆವೃತವಾಗಿ ಮಲಿನವಾದ ಗಿರಣಿಗಳ ಧೂಮ–ಧೂಸರಿತ ಬಂದರಗಳಲ್ಲಿ ಎಂದು ಮೆರೆವು ದೊ ನಿಮ್ಮ ತ್ಯಾಗಧ್ವಜವು! (ಗಂಗಾತ. ೫೩-೯). [ ಧೂಮ + ಧೂಸರಿತ]

**ಧೂಮಧ್ವಜ** (ನಾ). ೧. ಹೊಗೆಯನ್ನು ಲಾಂಛನವಾಗಿ ಉಳ್ಳವನು ; ಬೆಂಕಿ ; ಅಗ್ನಿ : "ವಸು ವೈಶ್ವಾನರನಾಶುಶುಕ್ಷಣಿ ಹುತಾಶಂ . . . ಧೂಮಧ್ವಜಂ ಪಾವಕಂ" (ವಸ್ತುಕೋ. ೭-೩೯); ವಾಮನಪದಹತಿ ವಿದಳಿತ ಜೀಮೂತ ವಿಮುಕ್ತಬಹುಳಜಲಧಾರೆಗಳಿಂದಾ ಮುನಿಜನಾಪಕಾರಕಧೂಮಧ್ವಜನೆಯ್ದೆ ನಂದಿಪೋದತ್ತಾಗಳ್ (ಅರ್ಥನೇ. ೬-೩೫) ; ಭೂಮಿಯಂದದೊಳು ಸರ್ವಕ್ಕಾಶ್ರಯಮಪ್ಪವಾದೆಯ್ಯೆ . . . ಧೂಮಧ್ವಜಂಬೊಲರಿವಿಧ್ವಂಸನಾಪಾಯಮಂತೀ ಜಗತ್ಪ್ರಾಣವೈ (ವೀಶೈಪು. ೫-೬-೨). ೨. ಮೂರು ಎಂಬ ಸಂಖ್ಯೆಯ ಸಂಕೇತ : ಭುಜಪಕ್ಷಯುಗ ಧೂಮಧ್ವಜ ಪಾದಗುರುವಿನೊಳಜನಿರ್ದ ರಸದೊಳಂ ಪೆಱವೆಡೆಗಳೊಳಧೋಕ್ಷಜಗಣಮಾದೊಡದುವೆ ಚಿತ್ರಿಕೆ (ಛಂದೋಂಬು. ೫-೨೪೯ ಅಡಿಟ). ℙ ಗಾರ್ಹಪತ್ಯ, ಆಹವನೀಯ ಮತ್ತು ದಕ್ಷಿಣಾಗ್ನಿ ಎಂದು ಅಗ್ನಿ ಮೂರು ಎಂಬುದರ ಮೇಲೆ ಈ ಅರ್ಥ ಬಂದಿದೆ. [ ಧೂಮ + ಧ್ವಜ ]

**ಧೂಮಧ್ವಜಾಕ್ಷ** (ನಾ). ಅಗ್ನಿಯನ್ನು ಕಣ್ಣಾಗಿ ಉಳ್ಳವನು ; ಕೆಂಡಗಣ್ಣ; ಶಿವ : ಭಕ್ತಜನಪ್ರೇಮಿಯಾನತಕಲ್ಪಕುಜ ಕುಮುದಸಖಿಗೋಪ ಧೂಮಧ್ವಜಾಕ್ಷ ದುರಿತವ ಪಱಿದು ಪಾಲಿಪುದು (ಪ್ರಾಭರಾ. ೧-೧).
[ ಸಂ. (ಧೂಮಧ್ವಜ + ಅಕ್ಷಿ + -) ]

**ಧೂಮಪಟ** (ನಾ). "(ಸೈನಿಕ ಕಾರ್ಯಾಚರಣೆಗಳನ್ನು ಮರೆಸಿಡಲು ಉಪಯೋಗಿಸುವ) ಹೊಗೆಯ ತೆರೆ, ಧೂಮಪಟ" (Smoke Screen. ಇಂಕನಿ). 'ಧೂಮಗೋಳ' ಪರಾ. [ ಧೂಮ + ಪಟ$_2$ ]

**ಧೂಮಪತಾಕ** (ನಾ). = ಧೂಮಧ್ವಜ ೧ : ಹರಿ ಕೇಳ್ ಧೂಮಪತಾಕ ಕೇಳ್ ನಿರುತಿ ಕೇಳ್ (ಶಮದ. ೨೩೦ ಪ್ರಯೋ). [ ಧೂಮ + ಪತಾಕ ]

**ಧೂಮಪತಾಕೆ** (ನಾ). ಹೊಗೆಯ ಚಿಹ್ನೆ, - ಪತಾಕೆ : ಧೂಮಪತಾಕೆ ಮುದ್ಗ್ರವತೀವ ಭಯಂಕರಸಪ್ತಜಿಹ್ವೆಗಳ್ . . . ಒಪ್ಪಿ ಸಂತತಂ ಹೇಮನಿಭಾಂಗನಾದನಲನಿಂದ್ರಸಮೀಪದೊಳಿರ್ದಂ (ನಳಚಂ. ೨೩೮).
[ ಧೂಮ + ಪತಾಕೆ ]

**ಧೂಮಪಾನ** (ನಾ). ೧. (ಕೆಲವು ರೋಗಗಳ ನಿವಾರಣೆಗಾಗಿ) ಹೊಗೆಯನ್ನು ಸೇದುವುದು, -ಕುಡಿಯುವುದು : ರೂಕ್ಷಾಹಾರ . . . ಧೂಮಪಾನೆ, ಮಧುರಾಹಾರ, ನಸ್ಯ, ವಮನ, ಸೇಕ, ಉಪವಾಸ ಮೊದಲಾದಂಥಾ ಪಾನಾಹಾರವಿಹಾರಗಳೆಂಬ ಔಷಧಗಳಿಂದ ಅತ್ಯುಗ್ರವಾದ ಶ್ಲೇಷ್ಮ ಶಮನವಹುದು (ವೈದ್ಯಸಾ. I, ೨೮); ಧೂಮಪಾನ.-ಕುರುಟಿಗೆ ಸೊಪ್ಪು, ಅಮರದ ವಳ್ಳಿ . . . ಗರುಗದ ಸೊಪ್ಪು-ಇವುಗಳ ರಸದಿಂದ ಪಟ್ಟೆ ಅರಿವೆಯನಾದರು, ಸಣ್ಣಪಾವಡೆಯನಾದರು ಪ್ರತ್ಯೇಕನಾಗಿ ಪ್ರತಿದಿನವೂ ಭಾವನೆಯ ಮಾಡಿ ಆ ಪಾವಡೆಗೆ ಮಣಿಶಿಲೆಯ ಚೂರ್ಣವ ತೊಡೆದು ಅದು ಬತ್ತಿಯ ಮಾಡಿ ಔಡಲದ ದಂಟಿನಿಂದ ಹೊಗೆಯು ತೆಗೆದುಕೊಳ್ಳುವುದು (ಸಕವೈ. ೨೨೭). ೨. (ಚುಟ್ಟಾ, ಬೀಡಿ, ಸಿಗರೇಟು ಮುಂತಾದ) ಹೊಗೆಬತ್ತಿಯನ್ನು ಸೇದುವುದು, -ಕುಡಿಯುವುದು: ತಾವು ಧೂಮಪಾನ ಮಾಡುವುದಕ್ಕೇನೂ ಅಡ್ಡಿಯಿಲ್ಲವಷ್ಟೆ ? (ಚಿನ್ನಬೀ. ೫೨) ; ಇಬ್ಬರು ಚೆಟಿನ್‌ರು ಒಬ್ಬ ಸ್ನೇಹಿತನ ಮನೆಯ ಬಾಗಿಲಿನಲ್ಲಿ ಕುಕ್ಕರಗಾಲಿನಲ್ಲಿ ಕುಳಿತುಕೊಂಡು ಉದಾಸೀನರಾಗಿ ಧೂಮಪಾನ ಮಾಡಿ ಉಗಿಯುತ್ತಿದ್ದರು (ಮಲೆನಾ. ೦೬೮) ; ಧೂಮಪಾನವನ್ನು ನಿಷೇಧಿಸಿದೆ (ರೂಢಿ). [ ಧೂಮ + ಪಾನ$_2$ ]

**ಧೂಮಪ್ರಭೆ** (ನಾ). [ಜೈನ] ರತ್ನಪ್ರಭೆ, ಶರ್ಕರಾಪ್ರಭೆ, ವಾಲುಕಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಃಪ್ರಭೆ ಮತ್ತು ಮಹಾತಮಃಪ್ರಭೆ ಎಂಬ ಏಳು ನರಕಗಳಲ್ಲಿ ಐದನೆಯದು : ಅರಿಷ್ಟೆಯೆಂಬ ಪೆಸರನ್ನುಳ್ಳ ಧೂಮಪ್ರಭೆಯೆಂಬಯ್ದನೆಯ ನರಕಬಿಲಂಗಳೆಲ್ಲಂ ಮೂಱು ಲಕ್ಕಮಕ್ಕುಂ (ಅಜಿಪು.೧೧-೬ ವ) ; ಇರ್ಪತ್ತು ಸಾಸಿರ ಯೋಜನಬಾಹುಲ್ಯದಿಂ ಧೂಮಪ್ರಭೆಯೆಂಬಯ್ದನೆಯ ನರಕಂ (ಸುಕುಮಾ. ೧೧-೪೧ ವ); ಮೂಱು ಲಕ್ಕೆ ಬಿಲದಿಂ ಪುದಿದಿರ್ದಯ್ದನೆಯದೆನಿಪ ಧೂಮಪ್ರಭೆಯೊಳ್ (ಮಲ್ಲಿಪು. ೧೩-೧೫೦) ; ಅಮೃತಮತಿಯಷ್ಟವಂಕಂಗೆ ಮರುಳ್ಗೊಂಡತ್ತೆ ಗಂಡನಂ ವಿಷದಿಂ ಕೊಂದು ಮಡುರ್ತು ಯಮಂ ಕೊಲೆ ಪಂಚಮನರಕದೊಳಿಟ್ಟಿಳರಸ ಧೂಮಪ್ರಭೆಯೊಳ್ (ಯಶೋಚ. ೪-೫೭). [ ಧೂಮ + ಪ್ರಭೆ ]

**ಧೂಮಮಾರ್ಗ** (ನಾ). ಯಜ್ಞಯಾಗಾದಿಗಳನ್ನು ಮಾಡಿದವರು ಪರಲೋಕಕ್ಕೆ ಹೋಗುವ ಮಾರ್ಗ: ಮೂರುಗತಿ-ದೇವತೋಪಾಸಕರ ದೇವಯಾನ . . . ಇಷ್ಟಾಪೂರ್ತಗಳನ್ನು ಮಾಡಿದವರ ಪಿತೃಯಾಣ (ಇದಕ್ಕೆ ಕೃಷ್ಣಮಾರ್ಗವೆಂದೂ, ಧೂಮಮಾರ್ಗವೆಂದೂ ಹೆಸರು) (ಅಮೃತ. ೭-೨೨ ಟೀಕು). [ ಧೂಮ + ಮಾರ್ಗ ]

**ಧೂಮಮಾಲಿಕೆ** (ನಾ). ಹೊಗೆಯ ಸಾಲು, -ಪಂಕ್ತಿ, -ಪರಂಪರೆ : ಸಮುದ್ರದ ನೀರು ಹೀರುವ ಹಾಗೆ ಬಿರುಘಾಳಿ ಬೀಸಲು ಧೂಮಮಾಲಿಕೆಗಳು ಏಳುತ್ತವೆ (ಅನಂಶ. ೫೦). [ ಧೂಮ + ಮಾಲಿಕೆ ]

**ಧೂಮಮಾಳೆ** (ನಾ). = ಧೂಮಮಾಲಿಕೆ : ಭ್ರಾಜಿತ ಧೂಮಮಾಳೆ ಮಧುಪಾವಳಿ ಕೇಸುರಿ ಕೆಂದಳಿರ್ ತದುರ್ವೀಜಮುದಗ್ರವಹ್ನಿಯೆನೆ . . . ಪೊತ್ತಿಸಿದ ದೀಪಮೆನಿಪ್ಪವು ತಳ್ತಶೋಕೆಗಳ್ (ಶಾಂತಿಪು. ೭-೧೩೨).
[ ಧೂಮ + ಮಾಳೆ$_1$ (= ಮಾಲೆ) ]

**ಧೂಮಯೋನಿ** (ನಾ). ಹೊಗೆಯಿಂದ ಉತ್ಪನ್ನವಾದುದು ; ಮೋಡ : "ಸ್ತನಯಿತ್ನು ವಾರಿವಾಹಂ ಘನಾಘನಂ ಧೂಮಯೋನಿ . . . ಬಳಾಹಕಂ ಜೀಮೂತಂ" (ವಸ್ತುಕೋ. ೧೧-೫೮); "ವಾರಿಧರಮಬ್ದಂ . . . ಧೂಮಯೋನಿ . . . ಜೀಮೂತಮೆನಲು ಮೇಘಕ್ಕೆ ನಾಮಂ" (ಮಂಗರಾ. ೧೩-೩).
[ ಸಂ. ]

**ಧೂಮರಾಶಿ** (ನಾ). ಹೊಗೆಯ ರಾಶಿ, -ಗುಂಪು : ಇಡಿದ ಧೂಳಿಯ ಧೂಮರಾಶಿಯ ಪಡೆ ವಿರಾಟನ ಮಗನ ಕಂಗಳಿಗೊಡನೊಡನೆ ದಾವಾಗ್ನಿಯಂತಿರೆ ತೋಱಿತಿದಿರಿನಲಿ (ಕುವ್ಯಾವಿ. ೬-೩). [ ಧೂಮ + ರಾಶಿ ]

**ಧೂಮಲ,** ಧೂಮಳ (ಗು). ೧. ಬೂದುಬಣ್ಣದ. (ನಾ). ೨. ಕಪ್ಪು ಮತ್ತು ಕೆಂಪು ಬಣ್ಣಗಳ ಮಿಶ್ರಣದಿಂದ ಉಂಟಾದ ಬಣ್ಣ ; ಊದಾಬಣ್ಣ ; ಬೂದುಬಣ್ಣ ; ಹೊಗೆಬಣ್ಣ : "ಧೂಮಲಂ [ಪಾಠಾಂ. ಳಂ] ಧೂಮ್ರಮೆನೆ ಕೆಂಪುಗೂಡಿದ ಹಸುರು" (ಮಂಗರಾ. ೧೩೧-೨೧). **ಧೂಮಳ:** ೨. "ಧೂಮ್ರಃ, ಧೂಮಳಃ-ಈ ೨ ಕೆಂಪುಹಸುರುಮಪ್ಪುದು" (ಹಲಾಯು. ೧೨೨-೫೨). [ ಸಂ. ]

**ಧೂಮಲಿಪಿ** (ನಾ). ಒಂದು ಬಗೆಯ ಗೂಢಲಿಪಿ : ಲಿಪಿಗಳ ವಿವರ-ಗಗನಲಿಪಿ, ಧೂಮಲಿಪಿ, ಜಲಲಿಪಿ . . . ಯಿಾ ಅಗಣಿತ ಲಿಪಿಗಳ ನೋಡಲಱಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲಾ (ಭಾಸ್ಕರ. ೭೭-೪). [ ಧೂಮ + ಲಿಪಿ ]

**ಧೂಮಲಿಸು** (ಕ್ರಿ). ಹೊಗೆಯ ಬಣ್ಣವನ್ನು ತಾಳು ; ಬೂದುಬಣ್ಣಕ್ಕೆ ತಿರುಗು : ಬಗೆಯ ನಸು ಧೂಮಲಿಸಿ ಹೊಗರುಮೀಸಂಜೆ ನಿನ್ನೆಗರಿಕೆಯ ಸುತ್ತಲು ಕರಗುತಿಹುದು (ಗೀವಿಂ. ೪-೧೯). [ಧೂಮಲ + - ಇಸು$_3$]

**ಧೂಮಲೇಖೆ** (ನಾ). ಹೊಗೆಯ ಗೆರೆ, -ರೇಖೆ : ತ್ರಿದಶಾರಿ ಧೂಮಕೇತುವನುದರದೊಳೀ ದೇವಿ ತಳೆದುದರ್ಕಿದೆ ದೃಷ್ಟಾಂತದ ಧೂಮಲೇಖೆಯೆನೆ ಕರ್ಪೊದವಿದ ರೋಮಾಳಿ ರಂಜಿಕುಂ ದೇವಕಿಯ (ಜಗವಿ. ೨-೯೧) ; ನಾವೆಯೊಳ್ ನಿಂದ ಭರತಂ ಧೂಮಲೇಖೆಯೆನೆ ನೋಡುತಂ (ಶ್ರೀರಾಮಾ. ೧೭೧-೨೭೦). [ ಧೂಮ + ಲೇಖೆ ]

**ಧೂಮವರ್ಣ** (ಗು). ಹೊಗೆಯ ಬಣ್ಣ ; ಬೂದುಬಣ್ಣ.
[ ಧೂಮ + ವರ್ಣ ]

**ಧೂಮವ್ರಾತ** (ನಾ). ಹೊಗೆಯ ಸಮೂಹ, -ದಟ್ಟಣೆ : ಎಳೆಯ ರವಿರಶ್ಮಿಯಲಿ ಪ್ರೇತಾಂಗಗಳ ಧೂಮವ್ರಾತದ[ಪಾಠಾಂ. ಜ್ವಾಲೆಯ] ಲಿ . . . ಆಯುಷವಳಿದು ಹೋಗದೆ ದಿನದಿನದೊಳು (ಕುವ್ಯಾಉ. ೩-೫೭).
[ ಧೂಮ + ವ್ರಾತ ]

**ಧೂಮಶಕಟ** (ನಾ). ಹಬೆಯಿಂದ ಓಡುವ ಗಾಡಿ ; ಹೊಗೆಬಂಡಿ ; ರೈಲುಗಾಡಿ ; ಉಗಿಬಂಡಿ : ರಾಮಶರ್ಮನು ಆ ರಾತ್ರಿಯ ಧೂಮಶಕಟದಲ್ಲಿ ವಿಜಯನಗರಕ್ಕೆ ಹೋದನು (ಲಕ್ಷ್ಮೀಪ್ರ. ೨೭೭) ; ಕನ್ನಡದ ಕುಲಕ್ಕೇ ಸೇರಿ ಹೋಗಿರುವ ಪದಗಳನ್ನು ಕಿತ್ತೊಗೆದು ಹೊಗೆಬಂಡಿ (ಅಥವಾ ಧೂಮಶಕಟ), ನ್ಯಾಯಸ್ಥಾನ ಮೊದಲಾದವನ್ನು ಬಳಸಬೇಕೆಂದು ಯಾರನ್ನೂ ಒತ್ತಾಯಪಡಿಸುತ್ತಿರಲಿಲ್ಲ (ನಂಟರು. ೨೩).
[ಧೂಮ + ಶಕಟ ]

**ಧೂಮಸಂಹತಿ** (ನಾ). ಹೊಗೆಯ ಸಮೂಹ, -ಗುಂಪು : "ಧೂಮ್ಯಾ, ಧೂಮಸಂಹತಿಃ-ಈ ೨ ಪೊಗೆ" (ಹಲಾಯು. ೧೨-೭೭).
[ ಧೂಮ + ಸಂಹತಿ ]

**ಧೂಮಸ್ತೋಮ** (ನಾ). = ಧೂಮಸಂಹತಿ : ಕಾಳಾಗರು ಧೂಪೋದ್ದಾಮ ಧೂಮಸ್ತೋಮ ಜಲ ಜೀಮೂತ ಸಮುದಯ ಶ್ಯಾಮಳಮುಂ . . . ಎನಿಸಿ ಗೋವರ್ಧನ ನಗಂ ಸೊಗಯಿಸೆ (ಜಗವಿ. ೯-೮೩ ವ) ; ವಜ್ರಜಂಘನುಂ ಶ್ರೀಮತಿಯುಂ ಸೆಜ್ಜೆಗೃಹದೊಳು ನಿದ್ರೆಗೆಯ್ದಿರೆ ಸೆಜ್ಜೆವಳಂ ಧೂಪಘಟ ಮನುದ್ದೀಪಿಸಿ ಗವಾಕ್ಷಮಂ ತೆಱೆಯಲ್ಮಱೆದು ಪೋಗೆಯಾ ಧೂಮ ಸ್ತೋಮದಿಂ[ಪಾಠಾಂ. ಧೂಮದಿಂ]ಮರಣಮನೆಯ್ದಿ (ಪುಣ್ಯಾಸ್ರ. ೧೦-೧ ವ); ತಲೆಗೆ ಕಂಬಳಿ ಕವಿಚಿಕೊಂಡು ಮೇಲಕ್ಕೆ ಅಡರುವ ಧೂಮಸ್ತೋಮವನ್ನು . . . ಹೀರಿ ಹೀರಿ (ನಂಟರು. ೩೮). [ ಧೂಮ + ಸ್ತೋಮ ]

**ಧೂಮಳ** 'ಧೂಮಲ' ನೋ.

**ಧೂಮಾಂಕ** (ನಾ). ಧೂಮಧ್ವಜ ; ಅಗ್ನಿ ; ಬೆಂಕಿ : ಧೂಮಾಂಕ ರಾಮಾಕ್ಷ ಶ್ಯಾಮಾಂಗ ವಾಮಾಲಲಾಮಾಂಕ ವಾಮಾಂಗ ಹೇಮಾಗ ಧಾಮಾರಿಕಾ ಮಾಂತಕ (ಉದ್ಭದೀ. ೩೦-೩೭). [ ಧೂಮ + ಅಂಕ$_2$ ]

**ಧೂಮಾಕ್ಷ** (ನಾ). ಈಶ್ವರ ; ಶಿವ : ಸಾಮಜವೇಱಿ ಸತ್ತಿಗೆಯ ನೆರಳಿನಲ್ಲಿ ಧೂಮಾಕ್ಷನಂತಿಹನಾರೊ (ಕಂಸವಿ. ೧೩-೫೭).
[ ಸಂ. (ಧೂಮ + ಅಕ್ಷಿ + –) ]

**ಧೂಮಾದಿಮಾರ್ಗ** (ನಾ). = ಧೂಮಮಾರ್ಗ : ವಿದಿತ ಧೂಮಾದಿಮಾರ್ಗ ದೊಳರ್ಚಿರಾದಿಮಾರ್ಗದೊಳಯ್ದಿ ಮರಳಲ್ಲಿಲ್ಲವಾತಂ ಪೂರ್ಣಪದವೆ ತಾನಾದ ಕತದಿಂದೆ (ಅನುಸಾ. ೭-೭-೧೩) ; ಮಿಸುಪ ಕೈವಲ್ಯವಿಷಯವದು ಕಾರಣಂ ಕರ್ಮಯೋಗದುರು ಧೂಮಾದಿಮಾರ್ಗ (ವೀಶ್ಮಪು. ೫-೨೦ ೫). [ಸಂ. ]

**ಧೂಮಾಯ** (ನಾ). [ವಾಸ್ತು] ಕಟ್ಟಡದ ನಿರ್ಮಾಣ ಕ್ರಮದಲ್ಲಿ ನೋಡಬೇಕಾದ ಎಂಟು ಬಗೆಯ ಆಯ ಪ್ರಕಾರಗಳಲ್ಲಿ ಒಂದು ; P ಹಿಂದಿನ ಕಾಲದಲ್ಲಿ 'ಆಯ'ವನ್ನು ನಿರ್ಣಯಮಾಡಿಕೊಳ್ಳದೆ ಮನೆಯನ್ನು ಕಟ್ಟುತ್ತಿರಲಿಲ್ಲ. ಆಯವು ಸರಿಯಾಗಿರದಿದ್ದರೆ ಆ ಮನೆಯಲ್ಲಿ ವಾಸಿಸುವವರಿಗೆ ಅನಿಷ್ಟವುಂಟಾಗುವುದೆಂಬ ನಂಬಿಕೆ ಯಿತ್ತು. ಮತ್ಸ್ಯಪುರಾಣದ ೨೫೦ನೆಯ ಅಧ್ಯಾಯದಲ್ಲಿ ಆಯದ ವಿಷಯವು ವಿವೃತವಾಗಿದೆ. ಯಜಮಾನನ ಮೊಳದಿಂದಲಾಗಲಿ, ಗೇಣಿನಿಂದಲಾಗಲಿ ನಿವೇಶನದ ಉದ್ದ, ಅಗಲಗಳನ್ನು ಅಳೆದು ಉದ್ದದ ಸಂಖ್ಯೆಯನ್ನು ಅಗಲದ ಸಂಖ್ಯೆಯಿಂದ ಗುಣಿಸಿ ೮ ರಿಂದ ಭಾಗಿಸಲು ೧ ಉಳಿದರೆ ಅದು ಧ್ವಜಾಯ, ೨ ಉಳಿದರೆ ಅದು ಧೂಮಾಯ. ಹೀಗೆಯೇ ೩ ಉಳಿದರೆ ಸಿಂಹಾಯ, ೪ ಉಳಿದರೆ ಶುನಕಾಯ, ೫ ಉಳಿದರೆ ವೃಷಭಾಯ, ೬ ಉಳಿದರೆ ಖರಾಯ, ೭ ಉಳಿದರೆ ಗಜಾಯ ಮತ್ತು ನಿಶ್ಶೇಷವಾದರೆ ಕಾಕಾಯ. ಧ್ವಜಾ ಯಕ್ಕೆ ಯಾವ ಕಡೆ ಬೇಕಾದರೂ ಬಾಗಿಲಿರಬಹುದು, ಆದರೆ ಪಶ್ಚಿಮದಿಕ್ಕಿನ ಬಾಗಿಲು ಶ್ರೇಷ್ಠ. ಸಿಂಹಾಯಕ್ಕೆ ಉತ್ತರದ ಬಾಗಿಲು, ವೃಷಭಾಯಕ್ಕೆ ಪೂರ್ವದ ಬಾಗಿಲು ಮತ್ತು ಗಜಾಯಕ್ಕೆ ದಕ್ಷಿಣದ ಬಾಗಿಲು ಇರಬೇಕೆಂದು ಹೇಳಿದೆ. 'ಕಾಲಾಮೃತ'ವೆಂಬ ಜ್ಯೋತಿಷ್ಯಗ್ರಂಥದಲ್ಲಿ–ನಿವೇಶನದ ಉದ್ದದ ಅಳತೆಯು ಅಗಲದ ಅಳತೆಗಿಂತ ಕಾಲು ಭಾಗ ಅಧಿಕವಾಗಿ ಸಮಸಂಖ್ಯೆಯಾಗಿದ್ದರೆ ಧ್ವಜಾಯ, ಕಾಲುಭಾಗ ಕಮ್ಮಿಯಾಗಿ ಸಮಸಂಖ್ಯೆಯಾಗಿದ್ದರೆ ಗಜಾಯ, ಕಾಲು ಭಾಗ ಕಮ್ಮಿಯಾಗಿ ಬೆಸಸಂಖ್ಯೆಯಾಗಿದ್ದರೆ ಸಿಂಹಾಯ, ಕಾಲುಭಾಗ ಅಧಿಕವಾಗಿ ಬೆಸಸಂಖ್ಯೆಯಾಗಿದ್ದರೆ ವೃಷ ಭಾಯ, ಹೆಚ್ಚು ಕಮ್ಮಿಗಳಿಲ್ಲದೆ ಸಮಸಂಖ್ಯೆಯುಳ್ಳದ್ದಾದರೆ ಕಾಕಾಯ, ಅರ್ಧ ಅಧಿಕವಾಗಿ ವಿಷಮಸಂಖ್ಯೆಯಾಗಿದ್ದರೆ ಖರಾಯ, ಕೇವಲ ವಿಷಯಸಂಖ್ಯೆಯುಳ್ಳದ್ದಾದರೆ ಶುನಕಾಯ, ಅರ್ಧಾರ್ಧಿಕ ವಾಗಿ ಸಮಸಂಖ್ಯೆಯುಳ್ಳದ್ದಾದರೆ ಧೂಮಾಯ—ಎಂದು ಹೇಳಿದೆ. ಅಲ್ಲದೆ, ಎಂಟು ದಿಕ್ಕುಗಳಲ್ಲಿ ಯಾವ ದಿಕ್ಕಿಗೆ ಯಾವ ಆಯವು ಶ್ರೇಷ್ಠವೆಂಬುದನ್ನು ವಿವರಿಸಿ, ಗಜಶಾಲೆ. ಗೋಶಾಲೆ ಮೊದಲಾದ ವುಗಳಿಗೆ ಬೇರೆ ಬೇರೆ ಆಯಗಳನ್ನು ಹೇಳಿದೆ. ಧ್ವಜಾಯವು ಎಲ್ಲ ಆಯಗಳಿಗಿಂತಲೂ ಶ್ರೇಷ್ಠವಾದುದೆಂದು ನಿರೂಪಿತವಾಗಿದೆ. ಇವೇ ಅಲ್ಲದೆ ಬೇರೆ ಬೇರೆ ರೀತಿಗಳಿಂದ ಆಯದ ವಿಷಯವನ್ನು ವಿವರಿಸಿರುವುದೂ ಉಂಟು : ವಿಸ್ತಾರವಾಗಿ ಉದ್ದ ಅಗಲವನು ಅಳದು ವೊಟ್ಟುಗೂಡಿಕೊಂಡ ಕೋಲು ಯೆಷ್ಟೋ ಅದನು ೩ ಹೆಚ್ಚಿ . . . ಅದು ೮ರಿಂದ ಭಾಗಿಸಿ ಉಳಿದವು ಆಯಂಗಳೂ ೧ ವುಳದರೆ ಧ್ವಜಾಯ, ೨ಕ್ಕೆ ಧೂಮಾಯ (ಆಯಟೀ. ೧-೫); ತಱುವಾಯಿಂದೆ ಧ್ವಜಾಯಂ, ಧೂಮಾಯಂ . . . ವಾಯಸಾಯಂ–ಈ ಎಂಟು ಆಯಂಗಳುಂ ಮೂಡಲ್ ಮೊದಲಾಗಿ ಸವ್ಯದಿಂದೆ ಎಂಟು ದಿಕ್ಕಿನಲ್ಲಿಯುಮಿರ್ಪುವು (ಲೋಕೋಪ. ೩-೧೯ ಟೀಕೆ).
[ ಧೂಮ + ಆಯ$_1$ ]

**ಧೂಮಾವಳಿ** (ನಾ).=ಧೂಮಾಳಿ$_1$: "ಧೂಮಾವಳಿ ಧೂಮ್ಯೆ" (ವಸ್ತುಕೋ. ೧೦೩-೩೦). [ ಧೂಮ + ಆವಳಿ$_1$ (= ಆವಲಿ) ]

**ಧೂಮಾಳಿ$_1$** (ನಾ). ಹೊಗೆಯ ಸಮೂಹ,–ದಟ್ಟಣೆ : ಆ ಕುಂಕುಮ ವಾರಿಧಾರೆಗಳ ಸಜ್ಜಾಳಾಳಿ ಧೂಮಾಳಿ ಷಟ್ಚರಣಂಗಳ್ ನೆಗೆದಾಡುತಿರ್ಪ ವೆನಲಾ ಕಾಮುಪ್ರತಾಪಾಗ್ನಿ ಯೆಟ್ದುರಿವಂತಿರ್ದುದು ನೋಟ್ಪ ಕಾಮುಕ ಜನಕ್ಕಾ ವಾರಿಕೇಳೀಹ್ರದಂ (ನೇಮಿಪು. ೧೩-೩೩). ಢಾಳಿಸುವ ಪರಿಧೌತ ಮೌನ ಕರಾಳ ತೇಜೋಗರ್ಭ ತಪಧೂಮಾಳಿಯಲಿ ಮೇಘಾಳಿ ಮಸಗಿದುದು (ಕುಮ್ಯಾಅ. ೫-೧೦). [ ಧೂಮ + ಆಳಿ$_4$ (=ಆಲಿ$_4$) ]

**ಧೂಮಾಳಿ$_2$** (ನಾ). [ಸಂಗೀತ] ಒಂದು ತಾಳದ ಹೆಸರು : ನಮ್ಮ ದೇಶದ ಸಂಗೀತದಲ್ಲಿ ರೂಪಕ (ದಾದರಾ) . . . ತ್ರಿವುಡೆ (ಥಮಾರ), ಧೂಮಾಳಿ, ಎಕ್ಕಾ ಎಂಬ ಹಲವು ತಾಳಪದ್ಧತಿಗಳಿರುವುವು (ಬಾಲಪ್ರ. II. ೧೧೪೦).
[ ? ]

**ಧೂಮ್ಯ** (ನಾ). ಹೊಗೆಯ ಸಮೂಹ,–ಗುಂಪು : ಬಳಿಗುಂ ತಕ್ಷಣ ಶಾಂತ ಸಾಂಧ್ಯರುಚಿವಹ್ನಿಜ್ವಾಲಧೂಮ್ಯಂ (ಚಿಕವಿ. ೭-೧೧). 'ಧೂಮ್ಯೆ' ಪರಾ.
[ ಸಂ. ಧೂಮ್ಯಾ ]

**ಧೂಮ್ಯಾಟ** (ನಾ). ೧. (ನೀರಿನೊಳಗಾಡುವ) ಒಂದು ಬಗೆಯ ಪಕ್ಷಿ ; ಕುಕ್ಕುಟಹಕ್ಕಿ : "ಕಳಿಂಗಃ, ಭೃಂಗಃ, ಧೂಮ್ಯಾಟಃ–೩ ಕುಕ್ಕುಟಿಯೆಂಬ ಹಕ್ಕಿಯ ಹೆಸರುಗಳು, ಆಂಧ್ರದಲ್ಲಿ ಕೂಕಲಮೂಗ ಪಕ್ಷಿ" (ಸಿದ್ಧಾಂತಿ. ೦೫೮). ೨. ಚಾತಕ ಪಕ್ಷಿ : "ಭೃಂಗಃ, ಕಳಿಂಗಃ, ಧೂಮ್ಯಾಟಃ, ಸಾರಂಗಃ, ಚಾತಕಃ–ಈ ೫ ಚಾದಗೆ" (ಹಲಾಯು. ೪೩-೯೫). [ ಸಂ. ]

**ಧೂಮ್ಯೆ** (ನಾ). = ಧೂಮ್ಯ : "ಧೂಮಾವಳಿ ಧೂಮ್ಯೆ" (ವಸ್ತುಕೋ. ೧೦೩-೩೦) ; "ಧೂಮ್ಯಾ, ಧೂಮಸಂಹತಿಃ– ಈ ೨ ಪೊಗೆ" (ಹಲಾಯು. ೧೩-೬೬). [ ಸಂ. ಧೂಮ್ಯಾ ]

**ಧೂಮ್ರ** (ಗು). ೧. ಹೊಗೆಯ ಬಣ್ಣದ ; ಬೂದುಬಣ್ಣದ : ಅರಸಿಯರ ಕಣ್ಣನೀರ್ಗಳ ಬೆರಸಿದ ಕಾಡಿಗೆಯ ಕರ್ಪು ಪೋಲ್ತತ್ತು ಕುಚಾಂತರದೊಳ್ ಬೀಱುತ್ತುಂ ತತ್ಪರಿತಾಪಜ್ವಲನಧೂಮ್ರಧೂಮಚ್ಛವಿಯುಂ ಆಜಿಪು. ೧೦-೪೪). ೨. ಮಂಕಾದ ; ಮಾಸಲುಬಣ್ಣದ. (ನಾ). ೩. ಬೂದು ಬಣ್ಣ ; ಹೊಗೆಯಬಣ್ಣ : "ಧೂಮ್ರ ಧೂಸರ ನಾಮಂ" (ವಸ್ತುಕೋ. ೧೦೮-೬೪) ; ವೀರಂ ಗೌರಂ ರೌದ್ರಮಹಾರಕ್ತಂ . . . ಕಾರುಣ್ಯಂ ಧೂಮ್ರಂ (ಕಾವ್ಯಾವ. ೮೩೭). ೪. ಅಚ್ಚಕೆಂಪು ; ಕಡುಗೆಂಪು. ೫. ಕಪ್ಪು ಮತ್ತು ಕೆಂಪುಬಣ್ಣಗಳ ಮಿಶ್ರಣ ; ಊದಾಬಣ್ಣ : "ಧೂಮ್ರಃ, ಧೂಮಳಃ–ಈ ೨ ಕೆಂಪು ಹಸುರುಮುಪ್ಪುದು" (ಹಲಾಯು. ೧೨೨-೫೨) ; "ಧೂಮ್ರಃ, ಧೂಮಲಃ, ಕೃಷ್ಣಲೋಹಿತಃ–೩ ಕಪ್ಪುಕೆಂಪು ಬೆರತ ಬಣ್ಣ. ಅಂದರೆ ಕಾಮರ್ಗಿಲ ಕೆಂಬಾರದ ಬಣ್ಣ" (ಸಿದ್ಧಾಂತಿ. ೪೮). ೬. ಒಂದು ಬಗೆಯ ಧೂಪ,–ಸುಗಂಧದ್ರವ್ಯ ; ಲೋಬಾನ : ಅನವರತ ಸಂಧುಕ್ಷ್ಯಮಾಣ

ಕಾಲಾಗುರುಧೂಪಧೂಮ್ರಸುರಭಿಪರಿಮಳವಿಳದಳಿತಾಳಾಕುಳೀಕೃತ ಕನ್ಯಾ ಪರಿವಾರ (ಶಾಂತಿಪು. ೫-೧೦೫ ವ). ೭. ಪಾಪ ; ದುಷ್ಟತನ ; ಕೆಟ್ಟತನ. ೮. ಹೊಗೆ ; ಧೂಮ. 'ಧೂಪಧೂಮ್ರ', 'ಧೂಮ್ರವರ್ಣ' ಪರಾ. [ ಸಂ. ]

**ಧೂಮ್ರಕ** (ನಾ). ಬೂದುಬಣ್ಣದ ಪ್ರಾಣಿ; ಒಂಟೆ ; ಉಷ್ಟ್ರ. [ ಸಂ. ]

**ಧೂಮ್ರಚ್ಛದ** (ನಾ). ಹೊಗೆಯ ಬಣ್ಣದ ಪಕ್ಕಗಳುಳ್ಳ ಒಂದು ಬಗೆಯ ಪಕ್ಷಿ ; ಚೆಂಬೂತ : "ಧೂಮ್ರಚ್ಛದಂ ಚೆಂಬೊತಮೆಂದೆನಿಕ್ಕುಂ" (ಮಂಗರಾ. ೫೨-೧೧). [ ಸಂ. ]

**ಧೂಮ್ರಪತ್ರ** (ನಾ). ಹೊಗೆಸೊಪ್ಪು ; ತಂಬಾಕು. 'ಧೂಮ್ರಪತ್ರೆ' ಪರಾ. [ ಧೂಮ್ರ + ಪತ್ರ./ ತೆಲು. ಧೂಮ್ರಪತ್ರ ]

**ಧೂಮ್ರಪತ್ರೆ** (ನಾ). ಬೂದಿಯ ಬಣ್ಣ ಅಥವಾ ಅಚ್ಚಕೆಂಪು ಬಣ್ಣದ ಎಲೆಗಳನ್ನುಳ್ಳ ಒಂದು ಬಗೆಯ ಸಸ್ಯ ; ಹೊಗೆಸೊಪ್ಪು : "ಗುಂದ್ರಣೀ – ಧೂಮ್ರಪತ್ರೆ" (ಓಷಧಿ. ೫೦) ; "ಗೃಧ್ರಪತ್ರ – ಧೂಮ್ರಪತ್ರೆ" (ಓಷಧಿ. ೫೦). [ ಧೂಮ್ರ + ಪತ್ರೆ ]

**ಧೂಮ್ರಪಾನ** (ನಾ). ಹೊಗೆಬತ್ತಿಯನ್ನು ಸೇದುವುದು : ಧೂಮ್ರಪಾನದ ಆತುರವು ಹೆಚ್ಚಾಯಿತು (ತುಟಮಿ. ೪೭). 'ಧೂಮಪಾನ' ಪರಾ. [ ಧೂಮ್ರ + ಪಾನ$_2$ ]

**ಧೂಮ್ರಪಾನಿ** (ನಾ). (ತಪಸ್ಸಿನ ಕಾಲದಲ್ಲಿ) ಹೊಗೆಯನ್ನು ಮಾತ್ರ ಸೇವಿಸುವವನು : ಧೂಮ್ರಪಾನಿಗಳೂ, ಪಂಚಾಗ್ನಿ ಸಾಧನಿಗಳೂ ಆದ ನೈಷ್ಟಿಕ ತಾಪಸಿಗಳಿಗೂ ಸಹ ಕಾಮತಾಪವನ್ನುಂಟು ಮಾಡತಕ್ಕ ವಸಂತರಾಜನ ... ವಿರಾಜಮಾನನಾಗಿದ್ದಾನೆ (ಮಂಜುಕ. ೧೧). [ ಸಂ. ಧೂಮ್ರಪಾನಿನ್ ]

**ಧೂಮ್ರವಕ್ತ್ರ** (ನಾ). (ಕೋಪದಿಂದ) ಕೆಂಪಡರಿದ ಮುಖ ; ಕೆಂಪೇರಿದ ಮುಖ : ಧೂಮ್ರವಕ್ತ್ರದ ಸ್ವೇದಬಿಂದುಗಳ ಜಡಿವ ರೋಷದ ಭರದಲಿ ... ಕಡಿಕಡಿದು ಬಿಸುಟನು ಗುರುಸುತನು ಸಾರಥಿಯ ರಥಹಯುವ (ಕುಮ್ಯಾಕ. ೧೪-೩೦). [ ಧೂಮ್ರ + ವಕ್ತ್ರ ]

**ಧೂಮ್ರವರ್ಣ** (ನಾ). ೧. ಹೊಗೆಯ ಬಣ್ಣ ; ಬೂದುಬಣ್ಣ : ಚೇಳು ಕಚ್ಚಿದರೆ ... ಕಚ್ಚಿದ ಗಾಯ ಅತಿವೇದನೆಯುಳ್ಳದಾಗಿಹುದು. ಧೂಮ್ರ ವರ್ಣ ಉಳ್ಳದಾಗಿಹುದು (ವೈದ್ಯಸಾ. II, ೧೯೦). ೨. ಅಚ್ಚಕೆಂಪು ; ಕಡು ಗೆಂಪು. ೩. ಧೂಪ ; ಸುಗಂಧದ್ರವ್ಯ. ೪. ಒಂದು ಬಗೆಯ ಸಸ್ಯ. [ ಧೂಮ್ರ + ವರ್ಣ ]

**ಧೂಮ್ರಾಂಬರ** (ನಾ). ಹೊಗೆಯ ಬಣ್ಣದ ಬಟ್ಟೆ ; ಬೂದು ವರ್ಣದ ವಸ್ತ್ರ : ಮೆಲ್ಲನೆ ಮಲಗಿಸುತ ಹಿಮಚೂರ್ಣಮಂ ಎದೆಯೊಳಂ ಪರಪಿ ಧೂಮ್ರಾಂಬರವ ಒದ್ದೆಗೈದದನು ಬಾಸಣಿಸಿ ... ಬಹು ಶೈತ್ಯೋಪ ಚಾರಮಂಗೈವುತಿರೆ (ನವಮೋ. ೬-೫೭) ; ಆಳಿಯರು ಧೂಮ್ರಾಂಬರವ ಪೊದಿಸಿ ... ಪೊರವಳಿಯುದೊಳಗೆಯುತಿ ಜಾಗ್ರದಿಂ ಕಾಯ್ದಿರಲು (ನವಮೋ. ೩೬-೩೮). [ ಧೂಮ್ರ + ಅಂಬರ ]

**ಧೂಮ್ರಾಂಶ** (ನಾ). ಹೊಗೆಯ ಕಣ,–ಅಂಶ: ವಿಜ್ಞಾನಿಗಳು ಈ ಮೋಡ ಗಳು ಧೂಮ್ರಾಂಶಗಳಿಂದ ಆಗಿರಬೇಕೆಂದು ನಂಬಿದ್ದಾರೆ (ಆಕಾಶ. ೧೭). [ ಧೂಮ್ರ + ಅಂಶ ]

**ಧೂಮ್ರಾಕ್ಷ** (ಗು). ೧. ಬೂದುಬಣ್ಣದ ಕಣ್ಣುಳ್ಳ. (ನಾ). ೨. ರಾವಣನ ಮಂತ್ರಿಯಾಗಿದ್ದ ಒಬ್ಬ ರಾಕ್ಷಸನ ಹೆಸರು : ಆತು ನಿಂದನು ಕಪಿಬಲಕೆ ಬಳಿಕಾ ತಮಿಸ್ರಾಚರ ವನೇಚರ ದೂತಧೂಳೀಪಟಲಪಟುಧೂಮ್ರಾಕ್ಷ ಗರ್ಜಿಸುತ (ತೊರರಾ. ೬-೧೭-೧೮). [ ಸಂ. (ಧೂಮ್ರ + ಅಕ್ಷಿ +–)]

**ಧೂಮ್ರಾರ್ಚಿ** (ನಾ). ಹೊಗೆಯಿಂದ ಕೂಡಿದ ಬೆಂಕಿಯ ಜ್ವಾಲೆ: ಮೇಲೆ ಧೂಮ್ರಾರ್ಚಿಯಾ ನೀಲರಕ್ತಂ (ವೀಶೈಪು.೨-೧೧-೩೧). [ ಧೂಮ್ರ + ಅರ್ಚಿ ]

**ಧೂಮ್ರಾವರ್ತ** (ನಾ). = ಧೂಮ್ರಾವರ್ತನ : ಪುಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಂ ಉದ್ವರ್ತನಂ ಚಿತ್ರವರ್ತಮೆಂಬಾಱುಮಣ್ಕೆಗಳೊಳಂ ... ಮಯ ಮಾಂಡವ್ಯ ವಿಶ್ವಕರ್ಮರೆಂಬ ಮರ್ತ್ಯಚಿತ್ರಕರ್ ಬರೆದ ಚಿತ್ರಂಗಳೊಳಂ (ಚಂದ್ರಪು. ೧೫-೭೦ ವ). [ಸಂ. ]

**ಧೂಮ್ರಾವರ್ತನ** (ನಾ). ಚಿತ್ರಗಳಿಗೆ ಬಣ್ಣ ಹಾಕುವುದರಲ್ಲಿ ಒಂದು ರೀತಿ : ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತನ[ಪಾಠಾಂ. ಕ] ಮುದ್ವರ್ತನಂ ಚಿತ್ರಪ್ರವರ್ತನಮೆಂಬಾಱುಂ ತೆಱದಣ್ಕೆಯುಮಂ ಚಿತ್ರ ಚಿತ್ರಾರ್ಧ ಚಿತ್ರಾಭಾಸಮೆಂಬ ಮೂಱುಂ ಪ್ರಕಾರಮುಮಂ (ಮಲ್ಲಿಪು. ೫-೪೩). [ ಸಂ.]

**ಧೂಯ್ಯ** (ನಾ). (?): ಆ ಗ್ರಾಮಕ್ಕೆ ಸಲುವ ಗದ್ದೆ ಬೆದ್ದಲು ತೋಟ ತುಡಕೆ ಅಡುಮನೆ ಕಳ ಕೊಟಾರ ಸುಂಕ × × × ಸುವರ್ನಾದಾಯ ಅಣೆ ಅಚು ಕಟ್ಟು ಂಗ್ಗ ಮನೆವಣಗೂಡೆ ಧೂಯ್ಯ ಮೊದಲಾದ ಆ ಸಕಲ ಸ್ವಾಂಮ್ಯ ಸಹವಾದ ಯಿ ಗ್ರಾಮದ ಚತುಸೀಮೆಯೊಳಗೆ (ಎಕ. III, ತಿರುಮ. ೪೯-೧೨ ; 1526). [ ? ]

**ಧೂರ್ಜಟಿ** (ನಾ). ಶಿವ ; ಈಶ್ವರ : "ಭವನೀಶಂ ಶಂಭು ರುದ್ರಂ ... ಮೃಡಂ ಧೂರ್ಜಟಿ ಫಣಿಕಟಕಂ ವಾಮದೇವಂ ವೃಷಾಂಕಂ" (ವಸ್ತುಕೋ. ೩-೧೩) ; ನುಡಿಯದೆ ಪೋಗಲೀಯೆನೆಲೆ ಪೋದೊಡೆ ಧೂರ್ಜಟಿಯಾಣೆ ಮಿಱಿ ಪೋದೊಡೆ ಕಲಿಭೀಮನಾಣೆಯೆನೆ (ಗದಾಯು. ೪-೪೫) ; ಧೂರ್ಜ ಟಿಯುಮಧಾರೆಂದೆನುತರ್ಜುನವರದಂಗೆ ಗುಗ್ಗಳವನರ್ಪಿಸುತುಂ (ಉದ್ಭಟ. ೧೧-೮೦) ; ತಾರಕಾಸುರಗೆ ... ವರಧೂರ್ಜಟಿಯಿಂದಲುದಿಸಿದ ನಂದನ ನಿಂದ ಕೇಡಹುದು (ಮೋಹತ. ೫-೧೬) ; ಧೂರ್ಜಟಿ ಜಟಿಲಜಟಾಮಾಲಿ ಕಾಲಾಂತಕಂ ಶಂಕರಂ (ರಾಜಶೇ. ೧೪-೧೫೩) ; ಅದರ್ಕಾ ಧೂರ್ಜಟಿ ... ದೂಱಿದಿರೆನ್ನನೆಂಬುದುಂ (ರಾಮಾಶ್ವ. ೧೩೬-೧೯) ; ಧೂರ್ಜಟಿಯೆ ನರರೂಪ ಮಂ ತಾಳ್ದಿದನೆನಲ್ಕೆ ಬ್ರಹ್ಮಸುಲಗ್ನಮನನೊರ್ವ ತೇಜಸ್ವಿಋಷಿಧ್ಯಾನಸ್ಥ ನಾಗಿರ್ದಂ (ಶ್ರೀರಾಮಾ. ೧೩೩-೨೧೨). ೨. [ಛಂದ] ಒಂದು ಗುರು, ಎರಡು ಲಘುಗಳು ಬರುವ ನಾಲ್ಕು ಮಾತ್ರೆಗಳ ಒಂದು ಗಣ : ಗಿರಿಶಂ ಧೂರ್ಜಟಿ ಶರ್ವಂ ಪುರಾರಿ ಪುರರಿಪುವೆನಿಪ್ಪುವಿಂತಯ್ದು ಬರೆ ಶಶಿ ಪುರ ವಿಷಯಾದ್ರಿಯೊಳಿರದಿರ್ಕೆ ಪುರಾರಿಯೆಂಬ ಗಣಂ (ಛಂದೋಂಬು. ೪-೨೨೮). [ ಸಂ. ]

**ಧೂರ್ತ** (ಗು). ೧. ಮೋಸದ ; ವಂಚನೆಯ ; ಅಪ್ರಾಮಾಣಿಕವಾದ : ಧೂರ್ತಜನಂ ನಿಜವ್ಯಸನಮಂ ಪರಿತರ್ಪಿಸಲೆಂದಧರ್ಮದೊಳ್ ವರ್ತಿಸು ವಂತು ಯೋಚಿಸುಗುಮುಳ್ಳರಂ (ಪಾರ್ಶ್ವಪು. ೩-೬೮) . ೨. ವಿಷಯ ಲಂಪಟನಾದ ; ವಿಟವೃತ್ತಿಯುಳ್ಳ ; ಕಾಮುಕನಾದ ; ಪಟಿಂಗತನದ. (ನಾ). ೩. ದುರುಳ; ದುಷ್ಟ; ಕೆಡುಕುಮಾಡುವವನು: "ದುರುಳನೆನಲ್ ಧೂರ್ತನಾಮಂ" (ಚತುನಿ. ೮೨) ; ಬನಮೆನ್ನಾಳ್ವ ಬನಂ ನಿಶಾಬಲವಿದಿಂ ತಸ್ಮದ್ಬಲಂ ಧೂರ್ತನೈ ನಿನಗೀ ಪೊಟ್ಟಱೊಳಿತ್ತ ಬರ್ಪದಟನಿಂತಾರಿತ್ತ ರೆಂದಾಂತೊಡೆ (ಪಂಪಭಾ. ೩-೩೪) ; ಆ ಪುರದೊಳ್ ದ್ಯೂತವ್ಯಸನ ವಿಕಳ ಭೂತಿಯಾಷಾಢಭೂತಿಯೆಂಬ ಧೂರ್ತನೊರ್ವನಿರ್ಪಂ (ಪಂಚತಂ. ೭೦-೯) ; ಕ್ರೂರರತ್ಯಧಮರುದ್ರೇಕಿಗಳು ದುರ್ಜನಾಕಾರಿಗಳು ಧೂರ್ತ [ಪಾಠಾಂ. ಕಾರ ದುರ್ನೀತ] ರೊಳಗಾಗಿ ಶರಣೆನಲು ನಿಜವೈರಮಂ ಬಿಡುವರು (ಹಚಕಾ. ೮-೨೧) ; ನಿಮ್ಮ ಕೆಡಿಸುವರಲ್ಲ ಧೂರ್ತರು ತಮ್ಮ ಮತದಲಿ ತಾವೆ ಕೆಟ್ಟರು (ಕುಮ್ಯಾವಿ. ೩-೧೦೮) ; ಧೂರ್ತರೀ ತೆರದಿನಾರ್ಯರಂ ಕೊಲುತಿರ್ದರ್ (ಶ್ರೀರಾಮಾ. ೧೯೧-೪೧೦). ೫. ಮೋಸಗಾರ ; ವಂಚಕ ; ಮಾಯಾವಿ ; ಕಪಟಿ: "ಕಿತವಂ ಮಾಯಾವಿ ಧೂರ್ತಂ" (ವಸ್ತುಕೋ. ೯೯-೬) ; "ದಾಂಡಾ ಜನಿಕಃ, ಕುಹಕಃ ... ಧೂರ್ತಃ ... ಮಾಯಿಾ – ಈ ೧೧ ಮಾಯಾವಿ" (ಹಲಾಯು. ೫೮-೧೯೪) ; ಪರವಿನೀತರು ಕೆಲರು ಕೆಲಬರು ಧೂರ್ತರಾಗಿಹರು

(ಕುಮಾರವ್ಯಾ. ೧೩-೯); ನಿಜಶ್ರೇಯಪ್ರಾಪ್ತಿಗೆ ಶುಂಠತನದಲಿ ಮೆಚ್ಚಿದ ಕರಣಿಕ ಧೂರ್ತರನು ಕಂಡ (ಕೌಶಿಂ. ೧೦-೩೦). **೬.** ವಿಟ; ಕಾಮುಕ; ಸ್ತ್ರೀಲೋಲ: "ಷಿಡ್ಗ – ಧೂರ್ತ" (ಓಪಧಿ. ೧೭೩); ಧೂರ್ತಂ ತಂಬುಂಕೆ ಕತ್ತುರಿನೀರ್ತುಟಾಗಿದ ಮೊಗದಿನಲೆದುವಬಲೆಯ ಮೊಲೆಗಳ್ (ಲೀಲಾವ. ೧೩-೧೩೪). **೭.** ಉಮ್ಮತ್ತಿಗಿಡ; ದತ್ತೂರಿ: "ಉನ್ಮತ್ತಃ, ಕಿತವಃ, ಧೂರ್ತಃ, ದುತ್ತೂರಃ, ಕನಕಾಹ್ವಯಃ, ಮಾತುಲಃ, ಮದನಃ – ೭ ಉಮ್ಮತ್ತೀಗಿಡದ ಹೆಸರುಗಳು, ಉಮ್ಮತ್ತಗಿಡ" (ಸಿದ್ಧಾಂತಿ. ೧೩೦). **೮.** ಜೂಜುಕೋರ. **೯.** ತುಂಟ; ಕಿಡಿಗೇಡಿ: ಮಗನು ಕನಲದೆ ಮಾಣನೆನಗಿನ್ನೆಗವೆನುತ್ತೈತಂದು ಕಂಡಳು ಮಗನ ಕೆಲಸವನೆತ್ತ ಹೋದನೊ ಧೂರ್ತನೆಂದೆನುತ (ನಿಘಾಗ. ೧೦-೮-೨೫). [ಸಂ.]

**ಧೂರ್ತಕ** (ನಾ). **೧.** ಮೋಸಗಾರ; ಕಪಟಿ: ವರಧೂರ್ತಕನೊಂದೆಸಗಲ್ ಪುರಕಿಲ್ಲಾ ಕೇಡು ಬರ್ಪುದಿದು ಸಿದ್ಧಾಂತಂ (ಮಲ್ಲಿಕಾ. ೧-೨೫). **೨.** ನರಿ. [ಸಂ.]

**ಧೂರ್ತಕಾಮಿ** (ನಾ). ವಂಚಕನಾದ ಕಾಮುಕ; ಶಠ: ಧೂರ್ತಕಾಮಿಯ ಪೋಲು ಕಂಡ ಶ್ರೀಶಂಭುವಿನ ಬಾಣಾಗ್ನಿಯು ನಮ್ಮ ಪಾಪವನ್ನೆಲ್ಲ ಸುಟ್ಟು ರುಹಲಿ (ಧನ್ಯಾಲೋ. ೬೯). [ಧೂರ್ತ + ಕಾಮಿ₁]

**ಧೂರ್ತಜನ** (ನಾ). ಕೆಟ್ಟ ಜನ; ದುರುಳ ಮಂದಿ; ಕಪಟಿಗಳಾದ ಜನ: ಜಗತ್ಪೂತಮೆನಿಸಿದ ಮಹಾಪೂತಜಿನಾಲಯಕ್ಕೆ ಬಂದನೇಕ ಧೂರ್ತಜನ ಮನಸಮ್ಮೋಹನತಮಃಪಟಮಂ ಚಿತ್ರಪಟಮನಾ ಚೈತ್ಯಾಲಯದ ಕೆಲದ ಪಟ್ಟಸಾಲೆಯ ಮುಂತೆ ನೇಱು (ಆದಿಪು. ೩-೪೫ ವ); ಸೇವಕಂ ಮೊದಲೊಳ ರಸಂಗು ತದನಂತರಂ ಪ್ರಧಾನರ್ಗಂ . . . ಸಲುಗೆಯನುಳ್ಳವರ್ಗಂ ಧೂರ್ತ ಜನಕ್ಕಂ ಭೀತನಾಗಿರಲ್ವೇಳ್ಕುಂ (ಪಂಚತಂ. ೫೨-೧೮); ಕೀರ್ತಿಯಹುದರಿ ಭಟನ ಸಮರದೊಳಾರ್ತರಲಿ ಕಾದಿದರೆ ಸೇರದು ಧೂರ್ತಜನ ನಗದಿಹುದೆ ರಾವಣನಧಿಕಬಲನೆಂದು (ತೊರರಾ. ೬-೪೫-೩೫). [ಧೂರ್ತ + ಜನ]

**ಧೂರ್ತತನ** (ನಾ). **೧.** ಮೋಸಗಾರಿಕೆ; ಕಪಟತನ; ವಂಚಕತ್ವ: ಆ ಪಾತಕಂ ನರಕಗತಿಗೆಯ್ದುವ ಧೂರ್ತತನದಿಂ ಕುಟಿಲಮಾರ್ಗಾಂತರ್ಗತನಾಗಿ ಪೋಗೆ (ಪಂಚತಂ. ೭೧-೧೯); ಧೂರ್ತತನದಿಂ ಕಾದಿ ಕೂಡುವೆನಾರ್ತು ಪರಿಯಂತರದಲಾ ತ್ರೈಮೂರ್ತಿಯನು ಮೂದಲಿಸಿದಲ್ಲದೆ ಮುಕುತಿ ಯಿಲ್ಲೆಂದ (ಕೌಶರಾ. ೨೩-೧೯); ಇಷ್ಟೆಲ್ಲ ದೊಡ್ಡಮನುಷ್ಯ, ಸಾಧು ಮನುಷ್ಯ ಅಂತಾರಲ್ಲ. ಎಂಥ ಧೂರ್ತತನ ತೋರಿಸಿದರು (ವಜ್ರಮುರುದಾ. ೧೩೪) **೨.** ಶಠವೃತ್ತಿ; ವಿಟವೃತ್ತಿ: ನಿನ್ನ ಧೂರ್ತತನವನ್ನರಿತಿರುವುದರಿಂದ ಮತ್ತೆ ತಪ್ಪಿಸಿಕೊಳ್ಳದಂತೆ ಬಾಹುಪಾಶದಲ್ಲಿ ಕಟ್ಟಿಹಾಕುವೆನು (ಧನ್ಯಾಲೋ. ೬೩ ಅಡಿಟಿ). [ಧೂರ್ತ + – ತನ]

**ಧೂರ್ತತ್ವ** (ನಾ). ಮೋಸ; ಕುತಂತ್ರ; ಕಪಟ; ವಂಚನೆ. [ಸಂ.]

**ಧೂರ್ತಭಂಜನ** (ನಾ). ದುರುಳರನ್ನು ನಾಶಮಾಡುವವನು; ದುಷ್ಟರನ್ನು ಸಂಹರಿಸುವವನು; ಪರಮಾತ್ಮ: ಧೂರ್ತಭಂಜನ [ಪಾಠಾಂ. ಪಾರ್ಥಸಾರಥಿ] ಕಾಗಿನೆಲೆಯಾದಿಕೇಶವನ ಸಂಕೀರ್ತನೆಯ ಮಾಡಿ ಸುಖಿಯಾಗೊ ಮನ (ಕನಕ. ೧೦೯-೩). [ಧೂರ್ತ + ಭಂಜನ]

**ಧೂರ್ತಲಕ್ಷಣ** (ನಾ). ಮೋಸಗಾರನ ಲಕ್ಷಣ; ವಂಚಕನ ಲಕ್ಷಣ: ನಾನು ಮಾಡಿದ ಆತ್ಮಸಮರ್ಪಣವು ಅತಿವಿನಯಗೂಡಿದ ಧೂರ್ತಲಕ್ಷಣವಾಯಿತು (ವಚಕಾ. ೮೮). P ಧೂರ್ತಲಕ್ಷಣಗಳು ಆರು ವಿಧ: "ಅತ್ಯಾಚಾರ, ಅನಾಚಾರ, ಅತಿನಿಂದೆ, ಅತಿಸ್ತುತಿ, ಅತಿಶೌಚ, ಅಶೌಚ" (ಶ್ರೀವತ್ಸ. ೨೨೭). [ಧೂರ್ತ + ಲಕ್ಷಣ]

**ಧೂರ್ತವಿದ್ಯೆ** (ನಾ). ಮೋಸಗಾರಿಕೆ; ಕಪಟತನ: ಒಲಿದುದನು ಬೇಡೆನೆ ದುಷ್ಟಕೌರವ ನಮ್ಮ ನಟ್ಟಿದ ಧೂರ್ತವಿದ್ಯೆಯಲಿ (ಕುಮಾಭಾ. ೦೬-೪೯). [ಧೂರ್ತ + ವಿದ್ಯೆ]

**ಧೂರ್ತಶಿಖಾಮಣಿ** (ನಾ). ದೊಡ್ಡ ಮೋಸಗಾರ; ಮಹಾವಂಚಕ: ಆ ಧೂರ್ತಶಿಖಾಮಣಿ ನಾರಾಯಣಭಟ್ಟಂಗೆ ನಂಬುಗೆಯನೆಂತು ಮಾಚ್ಚಿಂ (ಪಂಚತಂ. ೨೨೯-೦೯). [ಧೂರ್ತ + ಶಿಖಾಮಣಿ]

**ಧೂರ್ತೆ** (ನಾ). **೧.** ಮೋಸಗಾತಿ; ವಂಚಕಿ: ರಾಕ್ಷಸಾಂಶಕೆಯೆಂದು ನೀನೆಱು ಧೂರ್ತೆಯುಂ (ಮುಪತಿ. ೩-೪); ವನಜಾಕ್ಷಿ ದೋಷಿಯಲ್ಲದ ನಿನಗೆ ಕರಂ ಪೊಲ್ಲಗೆಯ್ದೆನೆಂದಿರದಾತ್ಮಾಂಗನೆಯ ಪದಕ್ಕೆಱಗಿದನೆನ್ನನುಮುಱಿಗುಮೆ ಧೂರ್ತೆಯಪ್ಪ ಕಾಂತೆಯ ಮನಮಂ (ಪಂಚತಂ. ೭೮-೨); ಕಪಟಿಯರು ಧೂರ್ತೆಯರು ಹಾಸ್ಯದ ಕುಪರಿಯರು (ಬಸವು. ೪೦-೫೪). **೨.** ಕಾಮುಕಿ ಯಾದವಳು. [ಸಂ. ಧೂರ್ತಾ]

**ಧೂರ್ತೋಕ್ತಿ** (ನಾ). ಮೋಸದ ಮಾತು; ಕಪಟದ ನುಡಿ: ಬೇಗಂ ಕ್ಷುರಭಾಂಡಮನೀಯೆಂದು ಬೇಡಿದೊಡವಳ್ ಧೂರ್ತೋಕ್ತಿಯಿಂ ತನ್ನ ದೋಷಮಂ ಪರಿಹರಿಸಲಿದೊಂದು ಉಪಾಯಮಾಡುದೇದು ಚಾಳಂ ಕಲ್ಲ ಮೇಲೀಡಾಡಿದೊಡೆ (ಪಂಚತಂ. ೭೮-೧೮). [ಧೂರ್ತ + ಉಕ್ತಿ]

**ಧೂರ್ವಹ** (ಗು). **೧.** ಭಾರವನ್ನು ಹೊರುವ. (ನಾ). **೨** ಭಾರಹೊರುವ ಎತ್ತು ಮುಂತಾದ ಪ್ರಾಣಿ: "ಧೂರ್ವಹಃ, ಧುರ್ಯಃ, ಧೌರೇಯಃ, ಧುರೀಣಃ, ಧುರಂಧರಃ–೫ ಬಂಡಿ, ಗೋಣಿ, ನೇಗಲು ಮುಂತಾದ ಭಾರವನ್ನು ಹೊತ್ತು ಕೆಳೆಯುವ ಎತ್ತು ಮುಂತಾದ ದನಗಳ ಹೆಸರುಗಳು" (ಸಿದ್ಧಾಂತಿ. ೨೯೩). **೩.** ಕಾರ್ಯವನ್ನು ನಿರ್ವಹಿಸುವವನು. [ಸಂ.]

**ಧೂಲ** 'ದೂಲ' ನೋ.

**ಧೂಲಿ, ಧೂಳಿ** (ನಾ). **೧.** ಮಣ್ಣಿನ ಪುಡಿ,-ರಜ,-ರೇಣು; ದೂಳು. **೨.** ಪುಡಿ; ಚೂರ್ಣ: "ಚೂರ್ಣಂ ಧೂಲಿ[ಪಾಠಾಂ. ಳಿ] ಪಾಂಸು ರೇಣು ಕ್ಷೋದಮಾ ರಜಂ ಸಣ್ಣಹುಡಿಯೆಂದೆನಿಕ್ಕುಂ" (ಮಂಗರಾ. ೮೪-೨೩). **೩.** ನಿರ್ದಿಷ್ಟವಾದ ಒಂದು ಸಂಖ್ಯೆ: (ಕ). **ಧೂಳಿ**: **೧.** "ಪಾಂಸುಃ, ಕ್ಷೋದಃ, ರೇಣುಃ, ಚೂರ್ಣಂ, ಧೂಳೀ, ರಜಃ–ಈ ೬ ಧೂಳಿ" (ಹಲಾಯು. ೭೩-೨೮೯); ನೆಲನುಮಾಕಾಶಮೊಂದೊಂದಱೊಳ್ ತಾಗಿದ ಬೇಗದೊಳಂಬರಂಬರಂ ನೆಗೆದ ಧೂಳಿಯೊಳ್ ದೆಸೆಯಱಿಯದೆಯುಂ (ಪಂಪಭಾ. ೧೦-೭೦ ವ); ಕೆಳವಳಿಸುವ ಕಪಿಯ ಭೂತ ಹೊಡೆದು ಚೇಳೂಱ ಧಾಳಿಯೊಳು ನಿಂದು ಧೂಳಿಯ ಹೊಯ್ವುತ್ತಿದೆ (ಅದವ. ೧೫-೩೨); ಸುರತರುಣೀ ಚಳಾಳಕವ್ಯಗೋದ್ವವರೇಣು . . . ಧೂಪದೊಳ್ ಪೊರೆದಿರೆ ಧೂಳಿಯಂತೆ ತರಲಾರ್ತುದಮರ್ತ್ಯರ ಚಿತ್ತವೃತ್ತಿಗಂಬರತಲಯಾನಮಲ್ಲ ದವನೀತಲಯಾನಮಿದೆಂಬ ಶಂಕೆಯಿಂ (ಅನಂಪು. ೫-೪೨); ತರುಣಿಗೆ ಅರಿವಿಧುಂತುದನಾಯ್ತು ರಥಪದಕೆಳೆತ ಧೂಳಿಯಲಿ (ಕುಮಾರವ್ಯಾ. ೪-೫೮); ಧೂಳಿ ಧಟ್ಟಸಲಟ್ಟಿ ಸುಂಟರುಗಾಳಿ ಬೀಸಿತು (ತೊರರಾ. ೩-೫-೮); ಬಾಲೆಯರ ಸಮ್ಮೇಳವೆಂಬೀ ಧೂಳಿ ಬಿದ್ದರೆ ಕಾಹುದೇ ಕಣ್ಣಾಲಿ (ನಿಘಾಗ. ೬-೭-೧೧); ಸುಟ್ಟುರಿಗೆ ಧೂಳಿ ತರಗೆಲೆ ತಿರ್ರನೆಯ ಸುತ್ತುವೋಲ್ (ಶ್ರೀರಾಮಾ. ೨೭-೭೧೩). [ಸಂ.]

**ಧೂಲಿದೂಸರ** (ನಾ). ಧೂಳಿನಿಂದ ತುಂಬಿದುದು; ಧೂಳಿನಿಂದ ಬೂದಿ ಬಣ್ಣವಾದುದು: ಆಗ ಪುಷ್ಪಪರಾಗಗಳ ಲೇಪನದಿಂದ ಅವುಗಳ ದೇಹಗಳು ಧೂಲಿದೂಸರವಾದಂತಾಗಿರಲು, ಅವಕ್ಕೆ ಒಂದು ಬಗೆಯ ಶೋಭೆಯುಂಟಾಗಿತ್ತು (ಮಾಧವ. ೪೪). [<ಸಂ. ಧೂಲಿಧೂಸರ]

**ಧೂಲಿಶಾಲ, ಧೂಳೀಶಾಳ** (ನಾ). = ಧೂಳೀಶಾಲ: ಕೈಲಾಸಾಚಳಮನೇಱ ಧೂಲಿ [ಪಾಠಾಂ. ಳೀ] ಶಾಲದಿಂ ತಗುಳ್ದು ಪೂರ್ವೋಕ್ತವರ್ಣನೋಪೇತಮಪ್ಪ ವೃಷಭನಾಥನಾಸ್ಥಾನಮಂಟಪಮಂ ನೋಡುತ್ತುಂ (ಆದಿಪು. ೦೩-೮೩ ವ). **ಧೂಳಿಶಾಳ**: ಅಡಱೊಳ್ ಪರ್ಯಂತದೇಶಂಬಿಡಿದು ಬಳಸಿಯುಂ ಸುತ್ತುಗೊಂಡೆಯ್ದೆ ನೀ[ಳ್ದಿರ್ಪ]ದು ನಾನಾರತ್ನಪಾಂಶು ಪ್ರಕರಪರಿಕರಂ ಧೂಳಿಶಾಳ[ಂ] ವಿಶಾಳಂ (ವರ್ಧಮಾ. ೧೩-೪೦). [ಸಂ.]

**ಧೂಳೀಪಟಲ,** ಧೂಳೀಪಟಲ (ನಾ). ಧೂಳಿನ ಆವರಣ, – ತೆರೆ : ಕಿವಿಯುಂ ಮುಚ್ಚಿತ್ತು . . . ಧೂಳೀಪಟಲಪಿಹಿತಕೇತುದ್ವಿಪಾನೀಕ ಘಂಟಾನಿವಹವ್ಯಾಪಾರಂ (ಆದಿಪು. ೧೪–೯೪). **ಧೂಳೀಪಟಲ :** ಪಾದಾಭಿಘಾತವಿಚಲಂ ಮೇದಿನ್ಯುತ್ಥಿತವಿಶಾಲಧೂಳೀಪಟಲಾಚ್ಛಾದಿತ ಗಗನಂ ನಡೆದುದು ಪಾದಾತಂ ಚತುರಶೀತಿಕೋಟಿಪ್ರಮಿತಂ (ಆದಿಪು. ೧೧–೩೩) ; ಲೋಕೈಕಮಿತ್ರನಿರೆ ಪೆಜಿರ್ಗೇಕೆಯೊ ಪೃಥುತೇಜವೆಂದು ಸ್ವೈರಿಸದ ವೊಲತ್ಯಾಕೀರ್ಣಂ ಮುಸುಳಿಸಿತು ದಿವಾಕರಕಿರಣಮುನುದಗ್ರಧೂಳೀಪಟಲಂ (ಪುಷ್ಪಪು. ೫–೪೧) ; ಪದಘಾತಧೂಳೀಪಟಲ ಪರಿಚುಂಬಿಸಿದುದಂಬರವ (ಕುಮ್ಮಾಆ. ೧೮–೪೦). [ ಸಂ. ]

**ಧೂಳೀಪ್ರತಾನ,** ಧೂಳೀಪ್ರತಾನ (ನಾ). = ಧೂಳೀಪಟಲ : ಕುಲಿಶನಿಭ ಶಿಲಾಭೇದಿಬಾಣಂಗಳುಂ ಭೇದಿಸವೆಂಬಂತಾಯ್ತುತಿಕ್ಷೋಭದಿಸುಭಯಬಲ ಕ್ಷೋಭಧೂಳೀ[ಪಾಠಾಂ. ಳೀ]ಪ್ರತಾನಂ (ಆದಿಪು. ೧೪–೯೫). **ಧೂಳೀಪ್ರತಾನ:** ದೊರೆಗೆವಂದುರ್ವಿ ಕೈಮಿಕ್ಕ ಪೆರ್ಚಿಂ ರೋದಸ್ಯಾಭಾಗವುಂ ತೀವಿದುದಖಿಳ ಬಳೋದ್ಧೂತಧೂಳೀಪ್ರತಾನಂ (ವರ್ಧಮಾ. ೮–೯೩). [ ಸಂ. ]

**ಧೂವಳಿಸು** (ಕ್ರಿ). (?) : ಹಾವಳಿಸಿ ಧೂವಳಿಸಿ ಕಾವಳಿಸಿದಹಿತರೊಳಗಾವರಿಸಿ (ಜಿನಮು. ೨೦–೪೦). 'ಧೂಪಳಿಸು' ಪಠಾ. [ ? ]

**ಧೂಸರ** (ಗು). ೧. ಬೂದಿಬಣ್ಣದ ; ಧೂಳಿನ ಬಣ್ಣದ. ೨. ಬಿಳಿ ಹಾಗು ಹಳದಿ ಬೆರೆತ ಬಣ್ಣದ : ವಿಮಲವಕ್ಷಸ್ಥಲನುಂ ದೀರ್ಘಾಯುತಬಾಹು ಯುಗಳನುಂ ಪರ್ಯುಕ್ಷಿತಚಂದನಾಂಗರಾಗಧೂಸರೋರುದಂಡನುಂ (ಕಾದಂಪೂ. ೯೯೭). (ನಾ). ೩. ಬೂದುಬಣ್ಣ : "ಧೂಮ್ರ ಧೂಸರ ನಾಮಂ" (ವಸ್ತುಕೋ. ೧೧೮–೬೪) ; ಉದಕಂ . . . ಧೂಸರಂ ಪೊನ್ನ ಬಣ್ಣದ ಮಣ್ಣೊಳ್ ಪರೆಲಾಗಿ ಕೆಂಪೆಸೆವ ಮಣ್ಣೊಳ್ ಕೈಪೆಯಾಗಿರ್ಕುಂ (ಲೋಕೋಪ. ೫–೮) ; ಆ ಸೇನಾರಜದಿಂ ಪರಿಧೂಸರಮಾದುರುನಿಜಾಂಗಮುಂ ತೊಳೆಯಲ್ಕೆಂದು (ರಾಜಶೇ. ೭–೨೭). [ ಸಂ. ]

**ಧೂಸರಿತ** (ಗು). ೧. ಬೂದುಬಣ್ಣವಾದ : ಬೂದುಬಣ್ಣದಿಂದ ಕೂಡಿದ : ನವಧೂಪಧೂಮಧೂಸರಿತ ನಭೋವಿವರಂ (ಆದಿಪು. ೧೦–೨೯) ; ತತ್ಪ್ರವಾಹಾವಿರಳಸಮುಚ್ಚಳದಗುರುಧೂಪಧೂಮಧೂಸರಿತಸುರಸರಣಿ ಮಣಿಮಯಧೂಪಘಟಸಮೇತಮುಂ ಅಪ್ಪ ಜಾತರೂಪಮಯ ವಿಶಾಳಶಾಳಂ ಬಳಸೆ ವಿಳಸಿತಮಾದ ಸಮುದ್ಯದುದ್ಯಾನಭೂಮಿಯಲ್ಲಿ (ವರ್ಧಪು. ೧೫–೯೭ ವ). ೨. ಮಲಿನವಾದ ; ಮಾಸಲಾದ. (ನಾ). ೩. ಮಲಿನವಾದುದು ; ಮಾಸಲಾದುದು : ಚಳಗಳಕಂಬಳಂ ಚಳನಕಂಪಿತತುಂಗಕಕುದ್ಬರಂ . . . ಖುರೋಚ್ಚಳದುರುರೇಣುಧೂಸರಿತನಗ್ರವಿಶೀರ್ಣ ವಿಷಾಣನಾತ್ತಮಾಂಸಳತನು ಬಂದುದಂದು ಮುಹುರುತ್ಥ ಬೃಹದ್ರುವನೊಂದು ಪುಂಗವಂ (ಚಂದ್ರಪು. ೨–೨೮). [ ಸಂ. ]

**ಧೂಸರು** (ನಾ). ಬಣ್ಣಗುಂದುವಿಕೆ ; ಮಲಿನವಾಗುವಿಕೆ : ಪರಿತಾಪ ದಿನಲವರ್ಣಿಸೊಳ್ ಪೊರಳ್ದು ಮೇಣ್ ಧೂಸರಾಂತ ಬಿಸಖಂಡಗಳಿಂ ಪರಿಮಳಿಪ ನಿನ್ನ ಮೆಲ್ಲೊಡಲ್ (ಶಾಕುಂತ. ೩೯ ೭೯). [<ಸಂ. ಧೂಸರ]

**ಧೂಳ್** 'ದೂಳಿ' ನೋ.

**ಧೂಳಾಟ** 'ದೂಳಾಟ' ನೋ.

**ಧೂಳಿ** 'ಧೂಲಿ' ನೋ.

**ಧೂಳಿಕ** (ನಾ). ಒಂದು ಬಗೆಯ ಸಸ್ಯ ; ರಾಗಿ : "ಧೂಳಿಕಂ ರಾಗಿಯುದು" (ಮಂಗರಾ. ೧೧೧–೪). [ ? ]

**ಧೂಳಿಕಡವ** 'ದೂಳಿಗಡವ' ನೋ.

**ಧೂಳಿಕಾಕೇಳಿ** (ನಾ). ಮಣ್ಣಿನ ಆಟ ; ಧೂಳಾಟ : ಸುರಕುಮಾರರ್ ಧೂಳಿಕಾಕೇಳಿಯೊಳ್ . . . ಜಿನಾರ್ಭಕನ ಮೇಲೆಲ್ಲಂ ರಜೋಜಾಳಮುಂ ಕಡುಪಿಂದಂ ಕೆದಱುತ್ತುಂ (ಬಾಹುಪು. ೯–೫೫). [ ಸಂ. ಧೂಲಿಕಾಕೇಳಿ ]

**ಧೂಳಿಕೇಳಿ** (ನಾ). = ಧೂಳಿಕಾಕೇಳಿ : ಮಾಣದೆ ಧೂಳಿಕೇಳಿಗೆ ಕ[ಪಾಠಾಂ. ಮೊಳಿಗೆಗ]ಡಂಗುವ ಸಾರ್ಚಿದ ತಾಯ ಜಂಘೆ ನಿಶ್ರೇಣಿಯೊಳಾಗೆ ಮೆಟ್ಟಿ ತೊಡೆಯೇಱುವ . . . ಕಂಡರ ಹಸ್ತತಾಳಕಲ್ಯಾಣರವಕ್ಕೆ ನರ್ತಿಸುವಮುದ್ದು ಗಳೊಪ್ಪುಗುಮಾ ಮುಕುಂದನಾ (ಮಲ್ಲಕಾ. ೭–೧೭೧); (ಸೂಕ್ತಿಸು. ೭–೬೭ ನೋ.) [ ಧೂಳಿ (=ಧೂಲಿ) + ಕೇಳಿ$_3$ ( =ಕೇಲಿ ) ]

**ಧೂಳಿಕೋಂಟೆ** 'ಧೂಳಿಗೋಂಟೆ' ನೋ.

**ಧೂಳಿಗಡವ** 'ದೂಳಿಗಡವ' ನೋ.

**ಧೂಳಿಗಾಲ್** (ನಾ). ಧೂಳಿನಿಂದ ಕೂಡಿದ ಕಾಲು : ತತ್ಪುರರಾಜಸ್ತುತ್ಯನತ್ಯಾತುರಭುಜಗಮಹಾಶಯ್ಯೆಯುಂ ಧೂಳಿಗಾಲೊಳ್ ತ್ವರಿತಂ ಬಂದೇಱಿ ಪಟ್ಟಿರ್ದೆಡದ ಕರದೊಳಾ ಶಾರ್ಙ್ಗಮುಂ ಕೊಂಡು ಭೋಂಕಲ್ (ನೇಮಿಪು. ೧೩–೯೨). [ ಧೂಳಿ (=ಧೂಲಿ) + ಕಾಲ್$_1$ ]

**ಧೂಳಿಗೆದಱು** (ಕ್ರಿ). ೧. ಧೂಳೆಬ್ಬಿಸು. ೨. ನಾಶಮಾಡು: ಕಾಳಗಕೆ ನೆರೆದಖಿಳ ದೂತರ ಧೂಳಿಗೆದಱಿದು [ಪಾಠಾಂ. ಡಹಿದು] ಮೃತ್ಯುವಿನ ಗೋನಾಳಿಯಲಿ ಚಾಚಿದನು ಚಾಪಳಚಂದ್ರಹಾಸಕವ (ತೊರರಾ. ೧–೮–೩೫).
[ ಧೂಳಿ (=ಧೂಲಿ) + ಕೆದಱು$_1$ (<ಕೆದಱ್$_1$)]

**ಧೂಳಿಗೈ** (ಕ್ರಿ). ಹಾಳುಮಾಡು ; ನಾಶಮಾಡು : ಬಾಲಕಿಯ ರೂಪದಲಿ ಬಂದಿಹ ಕಾಲಮೃತ್ಯುಕಣಾ ಮಹೀಸುತೆ ಧೂಳಿಗೈಯದೆ ಬಿಡಳು ರಾಕ್ಷಸ ಕುಲವ (ಆನಂರಾ. ೫–೨–೫೧). [ ಧೂಳಿ ( =ಧೂಲಿ) + ಗೈ (<ಕೆಯ್$_1$) ]

**ಧೂಳಿಗೊಳಗ** (ನಾ). ಒಂದು ಬಗೆಯ ಅಳತೆ (?) : ಶ್ರೀಮದಂಗಜೇಶ್ವರ ದೇವರಂಗಭೋಗಕ್ಕ . . . ತಪೋಧನರಾಹಾರದಾನಕ್ಕವೆಂದು . . . ಕೊಳದ ಕೆಳಗೆ ಹಕ್ಕಲು ಮತ್ತರು ಮೂಱು ಆಯ ಹೊಂಗೆ ಬೇಳೆ ಧೂಳಿ ಗೊಳಗ ೧ (ಕಇ. IV, ೧೧–೬೫, 1121). [ ಧೂಳಿ? + ಕೊಳಗ$_1$ ]

**ಧೂಳಿಗೋಂಟೆ,** ಧೂಳಿಕೋಂಟೆ, ಧೂಳಿಗೋಟೆ (ನಾ). ಪುಡಿಪುಡಿಯಾದ ಕೋಟೆ; ಧ್ವಂಸವಾದ ಕೋಟೆ; ಧೂಳಾದ ದುರ್ಗ : ಧೂಳಿಗೋಂಟೆಯ ಕೊಂಡಳಿದು ರಾಜಾಲಯಕೆ ಬರೆ (ಸಂಭಪು. ೦೮–೮೯) ; ಆ ನಗರಿಯ ಧೂಳಿಗೋಂಟೆಯ ಕೊಳಲೆಂದಾ ನಾಡ ನಾಡಮನ್ನೆಯರು ಆನದೆ ಬಂದು ಮುತ್ತಿದ ರಾರ್ಭಟೆಯಿಂ (ನೇಮಿಸಂ. ೧೨–೭೨) ; ಮಲೆತರಂ ದಿಂಡುದಱಿವುತ್ತಮಿದಿರಾದ ದುರ್ಗಂಗಳಂ ಧೂಳಿಗೋಂಟೆಗಳ ಕೊಂಡು (ಚಬಪು. ೨೩–೩೦). **ಧೂಳಿಕೋಂಟೆ :** ಕೋಂಟೆಗೆ – ತಟಿಗೋಂಟೆ, ಧೂಳಿಕೋಂಟೆ, ಹತ್ತುಗೋಂಟೆ (ಶಮದ. ೨೯೮ ಪ್ರಯೋ) ; ನಡೆದು ಬಂದಾ ನೇಮಿ ಕಂಡನು ಕಂಪಿಲ ಪೊಡವಿಪತಿಯ ಪೌಜುಗಳನು ಕೆಡಹಿ ಕೋಂಟೆಯ ಧೂಳಿಕೋಂ[ಪಾಠಾಂ. ಗೋಂ]ಟೆಯ ಕೊಳ್ಳಿಮೆಂದೊಡನೆ ನುಡಿದನು ಖಾನರಿಗೆ (ಕುರಾಸಾಂ. ೩೯–೧೧). **ಧೂಳಿಗೋಟೆ :** ಉಚ್ಚಙ್ಗಿಯುಂ ಮುತ್ತಿ ದುರ್ದ್ಧರ ತೇಜೋನಿಧಿ ಧೂಳಿಗೋಟೆಯನೆ ಕೊಣ್ಡಾ ಕಾಮದೇವ (ಎಕ. II, ೩೩೫–೧೪; 1195); ದನುಜರಥಪುರು ಧೂಳಿಗೋಟೆಯ ಕ್ಷಣಕೆ ಕೊಂಡರದಿಂದ್ರನಮರಾವತಿಯ ವ್ಯಾಹೃತಿಯ (ಸಂಭಪು. ೭–೨೩); ಇಂದು ನಾಳಿನಲಿ ಧೂಳಿಗೋಟೆಯ ಕೊಂಡು ಲಂಕೆಯ ಹಾಳುಮಾಡಿ ನರೇಂದ್ರ ತನ್ನಯ ಬಾಲಕಿಯ ಕೊಂಡೊಯ್ಯದಿರನು (ತೊರರಾ. ೬–೬–೫೭); ಧಾಳಿಯೊಳಗೆ ವೈರಿನೃಪರ ದುರ್ಗಂಗಳ ಧೂಳಿಗೋಟೆಯ ಕೊಂಡ ಧೀರ (ಕಂನವಿ. ೮–೭೭). 'ದೂಳಿಗೋಂಟೆ' ಪಠಾ.

**ಧೂಳಿಗೋಟೆಯಾಗು** = ಧೂಳಿಗೋಟೆವೋಗಂ : ಕೋಟೆಮನ್ನೆಥರ ಬಾಣಂಗಳ ಮುಸುಕವ ನೋಟದೊಳಗೆ ತೋಱುತಹಳೆ ಪಾಟ ಯಾರವಳಿಗೆ ನಾಳೆ ನಿನ್ನದೆ ಧೂಳಿಗೋಟೆಯಹುದು ಕಾಣಲೊಡನೆ (ಭರತ. ೩೭–೯೪). **ಧೂಳಿಗೋಟೆವೋಗು** = ಹಾಳಾಗು ; ನಾಶವಾಗಂ : ವಿಷ್ಣು ಮಹೀಪತಿ ಧೂಳಿಗೋಟೆವೋದುದು ತಳಕಾಡು ತಲೆಮಲೆ ಪೆರ್ವ್ವಯಲಾದುದು (ಮೈಆರಿ. ೧೯೪೦, ೧–೨೦; ಸು. 12ನೆಯ ಶತ).

[ ಧೂಳಿ (=ಧೂಲಿ) + ಕೋಂಟೆ]

**ಧೂಳಿಚಿತ್ರ** (ನಾ).=ದೂಳಿಚಿತ್ರ : ಇದೊಂದು ಧೂ[ಪಾಠಾಂ. ದೂ]ಳಿಚಿತ್ರದ ಖಣಮೆಂದು ಮೈಯ್ಯೊರಸಿ ಧೀಂಕಿಡುವರ್ ಕಡೆಯೊಳ್ ಲತಾಂಗಿಯರ್ (ಅನಂಪು. ೬-೪೪). [ ಧೂಳಿ (= ಧೂಲಿ) + ಚಿತ್ರ ]

**ಧೂಳಿಗೋಟೆ** 'ಧೂಳಿಗೋಟೆ' ನೋ.

**ಧೂಳಿಜಾಡಿಸು** (ಕ್ರಿ). ಧೂಳನ್ನು ಕೊಡಹು,-ಒದರು : ಧೂಳಿಜಾಡಿಸಿ ಸುರುಳಿ ಬಿಚ್ಚಿದ ನಕಾಶದಲಿ ಮೂಡಿಸಿರಿ ಹೊಸಬಾಳ ಸಂಚಿಕೆಯನು (ನೆಲಪಮು. ೩೦-೧೬). [ ಧೂಳಿ ( = ಧೂಲಿ) + ಜಾಡಿಸು ]

**ಧೂಳಿಡಿಸು** (ಕ್ರಿ). ೧. ಧೂಳಾಗುವಂತೆ ಮಾಡು : ೨. ಹಾಳುಮಾಡು : ರಥಗಳಲಿ ಲಟಕಟಿಸಿ, ದುರ್ಗಗಳ ಧೂಳಿಡಿಸಿ, ಜನಜನವನೇ ಬಡಿದು ಸೆರೆಹಿಡಿದು ತರಲು (ಪಾರಸಿ. ೬-೧೪೫). [ಧೂಳ್ (<ದೂಳಿ) + ಇಡಿಸು$_1$]

**ಧೂಳಿತ** (ನಾ). (ಪವಿತ್ರವಾದ) ಭಸ್ಮ,-ಬೂದಿ: ಕೊಡುವೆ ನೀ ನಂಬೆಂದು ಮೃಡಮೂರ್ತಿ ಭಸಿತವ ಬಿಡದೆ ಧರಿಸಿ ಧೂಳಿತವನು ತಡೆಯದದನ್ ಕೈಯ್ಯೊಳಿಡಲದ ಸೆಱಗಿಗೆ ಕಡುವೇಗದಿಂದ ಹರಸುತ (ಅಮುಸಾಂ. ೧-೫). [ ಸಂ. ಧೂಲಿತ ]

**ಧೂಳಿಧೂಸರ** (ನಾ). = ಧೂಲಿದೂಸರ : ಧೂಳಿಧೂಸರದ ಸಂಧ್ಯಾಂಗನೆಯ ಬಗೆಯನಂಗೀಕರಿಸಿ . . . ಎಸೆದಿರ್ದಳು (ಭಿಕ್ಷಾ. ೩-೩೩). [ ಧೂಳಿ (= ಧೂಲಿ) + ಧೂಸರ ]

**ಧೂಳಿಧೂಸರಿತ** (ಗು). ೧. ಧೂಳಿನಿಂದ ಆವೃತವಾದ,-ಮುಸುಕಾದ : ನೋಡು ನೋಡೆಲೆ ಮಗನೆ ನಿನ್ನೊಡನಾಡಿಮಕ್ಕಳು . . . ಸಂತೋಷದಲಿ ನಿನ್ನೊಡನಾಡುತಿದ್ದರೆ ನೀನು ಹಸಿದಿಂತಾಡುವೈ ನೆಱೆ ಧೂಳಿಧೂ[ಪಾಠಾಂ. ದೂ]ಸರಿತಾಂಗನೆಂದೆನಿಸಿ (ನಿಭಾಗ. ೧೦-೧೦-೫೦). (ನಾ). ೨. ಹಾಳಾದುದು ; ಮಣ್ಣುಪಾಲಾದುದು : ದಾದಾನ ಆಶೆ-ಆಕಾಂಕ್ಷೆ, ಅವನು ಕಲ್ಪಿಸಿಕೊಂಡ ಮನೋಮಂದಿರ ಧೂಳಿಧೂಸರಿತವಾಗುತ್ತವೆ (ದೀಪಹ. II, ೩೩೦). [ ಧೂಳಿ (= ಧೂಲಿ) + ಧೂಸರಿತ ]

**ಧೂಳಿಪಟ** (ನಾ). ಮುರಿದುಬಿದ್ದು, ಹುಡಿಹುಡಿ ಯಾಗುವಿಕೆ ; ನಾಶವಾಗುವಿಕೆ: "ಧೂಳಿಪಟ, ಧೂಳೀಪಟ್ಟ-ಧೂಲೀಪಟ" (ತದ್ಭಕೋ. ೫೦); ಕೋಟೆಗ × × × ನಾಟ್ಟಿತಿದನೊಪ್ಪೊಡೆ ನಿಶಾರ್ದ್ಧದೆ ಧೂಳಿಪಟಂಗಳಾಗವೇ (ಎಕ. VIII (S), ಸೊರಬ. ೫೮೭-೧೯ ; 1207) ; ಆಕ್ಷೇಪಕ್ಕೆ . . . ಮುತ್ತಿದನೋ ಇಂದೆ ಕೋಟೆ ಧೂಳಿಪಟಂ [ಪಾಠಾಂ. ಧೂಳಿಪಟ್ಟಂ] (ಶಮುದ. ೫೭ ಪ್ರಯೋ). 'ದಿಶಾಪಟ' ಪರಾ.

**ಧೂಳಿಪಟ ಮಾಡು** = ನಾಶಗೊಳಿಸು ; ಹಾಳುಮಾಡು ; ಪುಡಿಪುಡಿ ಮಾಡು : ನಿಮಿಷಕೆ ಧೂಳಿಪಟ ಮಾಡಿದನು ಕರ್ಣನ ಮನ್ನಣೆಯ ಭಟರ (ಕುವ್ಯಾ ಕ. ೧೩-೧೫) ; ಚಾಮರವ ಗೋವಳಿಗೋಲ ಡೊಂಕಣಿಯೊಡ್ಡನೆತ್ತಿದ ಸಿಂಧ ಸೀಗುರಿಯ ಧೂಳಿಪಟ ಮಾಡಿದನು (ಕುವ್ಯಾಕ. ೩೪-೧೦) ; ಮುತ್ತಿಗೆಯಿಕ್ಕಿ ಸಾಂಬಳ್ಳಿಯ ಸೆಳೆದವನೊತ್ತಿ ಬಂದೆಮ್ಮ ರಾಜ್ಯಗಳ ಸುತ್ತಿಸುಳಿದು ಧೂಳಿಪಟ ಮಾಡೆ ನಮಗಿನ್ನೆತ್ತಣ ದೊರೆತನವೆಂದ (ಕಂನವಿ. ೧೭-೬೬) ; ಕೌರವನ ಸೇನೆಯನ್ನು ಧೂಳಿಪಟ ಮಾಡಿ ತೊಲಗಿಸಿ ಬಿಡುತ್ತೇನೆ (ಕಸಾಚಿ. ೭೯). **ಧೂಳಿಪಟವಾಗು** = ಸಂಪೂರ್ಣ ನಾಶವಾಗು ; ಮಣ್ಣುಪಾಲಾಗು :ಅಗ್ಗಿ ತಗ್ಗದ ನೆಲೆಗೋಟೆ ಧೂಳಿಪಟವಾಗದ ದುರ್ಗ್ಗಕುಳಂ (ಎಇ V, ೧೬-೧೦; 1121) ; ಉಲ್ಲಾಸದಿಂ ಮೆಟ್ಟುವ ಪದದೊಳಿಳೆ ಧೂಳಿಪಟವಾಗೆ (ಬಸಪು. ೧೭-೦೭) ; ಆದಿತ್ಯರ ಮನೆಯು ನೆಱೆ ಧೂಳಿಪಟವಾಯ್ತು (ಬಸಪು. ೫೬-೩೩) ; ಧೂಳಿಪಟವಾಯಿತು ಹಿರಣ್ಯಪುರಾಲಯದ ನೆಲೆಗಟ್ಟು (ಕುವ್ಯಾಅ. ೧೩-೪೭). [ ಸಂ. ಧೂಲಿಪಟ ]

**ಧೂಳಿಪಟ್ಟ** (ನಾ). = ಧೂಳಿಪಟ: ಘನಸಂಗ್ರಾಮದೆ ಭೈರಾದೇವಿಯ ಸೀಮೆಯನುರೆ ಧೂಳಿಪಟ್ಟಮಂ ವಿರಚಿಸಿದಂ (ಕೆಳನೃ. ೩-೮೩). [ ಸಂ. ಧೂಲಿಪಟ್ಟ ]

**ಧೂಳಿಮಾಕಾಳ** (ನಾ). ಈಶ್ವರನ ಒಂದು ರೂಪ ; ಕಾಲಭೈರವ : ಸಿದ್ಧರಾಮಯ್ಯನೆಂದಾತಂಗೆ ಗಿರಿಜಾತೆ ಕೊಟ್ಟ ಹೆಸರಂ ಬಿಟ್ಟು ಧೂಳಿಮಾ[ಪಾಠಾಂ. ಧೂಳಿಮಹ]ಕಾಳನೆಂದು ನೀತಿಗೆಡೆ ಕುಲದೈವವೆಸರಿಂದ ಕರೆದು (ಸಿದ್ಧರಾ. ೨-೯) ; ಧೂಳಿಮಾಕಾಳನೇ ಮೈಗೊಂಡು ಬೀಸುತಿರೆ ನಿಮ್ಮ ಬೇವೇ ತಂಪು ಸೂಸುತಿರಲು (ಗಂಗಾತ. ೫೦-೫). [ಧೂಳಿ(=ಧೂಲಿ) + ಮಾಕಾಳ]

**ಧೂಳಿಮಾರುತ** (ನಾ). ಧೂಳಿನಿಂದ ತುಂಬಿದ ಬಿರುಗಾಳಿ : ಮರಳು ಕಾಡುಗಳಲ್ಲಿ ಧೂಳಿಮಾರುತ (Dust Storms)ಗಳಿಗೆ ಬಹಳ ಹೆದರಬೇಕು (ಭೂವಿವ. ೨೫೭). [ ಧೂಳಿ (=ಧೂಲಿ) + ಮಾರುತ ]

**ಧೂಳಿಮುಕ್ಕು** (ಕ್ರಿ). ಮಣ್ಣುಮುಕ್ಕು ; ನಾಶವಾಗು. [ ಧೂಳಿ ( = ಧೂಲಿ ) + ಮುಕ್ಕು$_1$ ]

**ಧೂಳಿವಿಡು** (ಕ್ರಿ). ೧. ಧೂಳನ್ನು ಏಳಿಸು ; ಧೂಳುಂಟುಮಾಡು : ಕಡೆವಾಯ ಕೆನ್ನೆತ್ತರ ಹೊಲಸಿಂಗೆ ಪೋಗದೆ ಮುಸುಱುವ ನೊಣವಿಂಗೆ ಕೆರಳ್ದು ಝಾಡಿಸುತೊಡೆಯೆ ಜೀರೆಟ್ಟ ಹೆಟ್ಟಿಗಳ್ ಮೇಲೆ ಪಳಂಚಿ ಧೂಳಿವಿಡುತಿರೆ (ಕುಸುಮಾ. ೧೪-೨೯ ವ). ೨. (ಆಲಂ) ಒಣಗು ; ನಿರ್ದ್ರವವಾಗು (?) : ತೇರ ಧೂಳಿಯಂ ಬಿಡೆ ನಡೆ ನೋಡಿ ಧೂಳಿಯುಮಡಂಗಿರೆ ಕೃಷ್ಣನ ತೇರಧೂಳಿಯಪ್ಪೊಡಮಿರದಾಯ್ತೆನುತ್ತಬಳೆ ಧೂಳಿವಿಡುತ್ತಿರೆ ಬಾಯ್ಬಲುಂಬಿದಳ್ (ಜಗವಿ. ೫-೧೦೦). [ ಧೂಳಿ ( = ಧೂಲಿ) + ಇಡು$_1$ ]

**ಧೂಳಿಶಾಳ** 'ಧೂಲಿಶಾಲ' ನೋ.

**ಧೂಳಿಸು** (ಕ್ರಿ). ೧. ಹುಡಿ ಹರಡು, ಕೀಟಗಳ ಹತೋಟಿಗೆ . . . ಪುಡಿಯನ್ನು ಧೂಳಿಸಬೇಕು (ಕೀಟಬಿ. ೭೪). ೨. ಧೂಳನ್ನೆಬ್ಬಿಸು ; ಧೂಳು ಹರಡುವಂತೆ ಮಾಡು : ಬಂದನು ಶಿಖಂಡಿ ರಥವನ್ನಡರಿ ಧೂಳಿಸುತ್ತೆಂದು ಬಿಲ್ಲಂ ಪಿಡಿದು (ತುರಂಗ. ೪೭-೩೩). ೩. ಲೇಪಿಸು ; ಪೂಸು : ವಿಭೂತಿಯ ಗುಳಿಗೆಯನು ನೆಗ್ಗೊತ್ತಿ ಸರ್ವಾಂಗದಲಿ ಧೂಳಿಸಿದ[ಪಾಠಾಂ. ಲೇಪಿಸಿದ] (ಕುವ್ಯಾಕ. ೭-೧೦;) ವರವಿಭೂತಿಯನೆಸೆವ ಸರ್ವಾಂಗದೊಳ್ ಧೂಳಿಸಿ (ಜಬಪು. ೫೦-೪೭) ; ೪. ನಾಶಮಾಡು : ಆಳು ಅವನಾಗಿರ್ದು ಲೋಕವ ಧೂಳಿಸುವ ಸತ್ವಾದಿರಕ್ಷಣೆ ದಾಳಿಯವನೊಪ್ಪಿಸುವುದುಚಿತವೆ(ಜನಭಾ.೪೭-೪೪). [ ಧೂಳಿ ( = ಧೂಲಿ) + ಇಸು$_2$ ]

**ಧೂಳೀಕೇಳಿ** (ನಾ). ದೂಳಿನಲ್ಲಿ ಆಡುವ ಆಟ ; ಮಣ್ಣಾಟ : ನುತವಾರಸ್ತ್ರೀಕುಚಾಗ್ರಚ್ಯುತಮೃಗಮದಕಾಶ್ಮೀರಕರ್ಪೂರಧೂಳೀಕೃತಧೂಳೀಕೇಳಿ ಚಂಚದ್ಭ್ರಮರಚಲಶಿಖಂಡಂ . . . ಲೀಲೆಯಿಂ ಬಾಲಕನೆನೆ ಸುಳಿದಂ ಸ್ವೈರಚಾರಂ ಸಮೀರಂ (ರಾಜಶೇ. ೧೦-೭೭). [ ಸಂ. ಧೂಲೀಕೇಲಿ ]

**ಧೂಳೀಚಿತ್ರ** (ನಾ). ಬಣ್ಣಬಣ್ಣದ ಪುಡಿಯಿಂದ ರಚಿಸಿದ ಚಿತ್ರ : ಧೂಳೀಚಿತ್ರದೋಜೆಯುಮಂ . . . ಪರಿಭಾವಿಸಿ ನೋಡಿ (ಮಲ್ಲಿಪು.೫-೪೨) ; ಆಯಾಮ ವಿಸ್ತಾರಮೆಂಬ ಮಾನದ್ವಯದೊಳಂ ರಸಚಿತ್ರಂ ಧೂಳೀಚಿತ್ರ ಮೆಂಬೆರಡೋಜೆಯೊಳಂ . . . ಆಳವಡೆ (ಚಂದ್ರಪು.೧೫-೭೦ ವ) ; ಮೂವಿಧ ರಸಚಿತ್ರದ ಧೂಳೀಚಿತ್ರದ ಕಡುಬಿನ್ನಣದೆರಡು ತೆಱಂ . . . ಭೂವನ ಕಣ್ಗೆಸೆದಂ ಪುಟ್ಟಿಸಿತು (ಜಯುಕಾ. ೩-೬). [ ಸಂ. ಧೂಲೀಚಿತ್ರ ]

**ಧೂಳೀದೂಸರ** (ನಾ). = ಧೂಲಿದೂಸರ : ದೆಸೆಗಳೇ ವಾಸಸ್ಸು ರಾಜ್ಯ ಪ್ರಸರಣವು ನಿರ್ಲಜ್ಜ ಜಟೆ ರಂಜಿಸುವ ಧೂಳೀದೂಸರದ ಗಂಗಾಧರನಪೋಲು (ಕುವ್ಯಾಉ. ೪-೧೧೧). [ <ಸಂ. ಧೂಲೀಧೂಸರ ]

**ಧೂಳೀಧೂಸರ** (ಗು). ೧. ಧೂಳಿನಿಂದ ತುಂಬಿದ ; ಧೂಳಿನಿಂದ ಬೂದಿ ಬಣ್ಣಕ್ಕೆ ತಿರುಗಿದ: ಧೂಳೀಧೂಸರ ವರರತ್ನಾಳಿಗಳಂ ಕಂಡ ದೂಸಱಿಂದಂ ಧರಣೀಪಾಳಕಮುನಿಪರ್ ಪಂಚಮಕಾಲದೊಳಣಮಾಗರಲ್ತೆ ಋದ್ಧಿ ಪ್ರಾಪ್ತರ್ (ಆದಿಪು. ೧೫-೩೮). (ನಾ). ೨. = ಧೂಲಿದೂಸರ : ಧೂಳೀಧೂಸರದ ರಥದೊಳಗೆ ನಿಂದಾ ಶಕ್ರಸಾರಥಿ ನುಡಿಸಿದನು ನರನ (ಕುವ್ಯಾಅ. ೭-೧೯). [ ಸಂ. ಧೂಲೀಧೂಸರ ]

**ಧೂಳೀಧ್ವಂಸ** (ನಾ). ಮಣ್ಣುಪಾಲಾಗುವಿಕೆ ; ನಾಶ ; ಹಾಳಾಗುವಿಕೆ : ನೆಲಕ್ಕೂ ಭೂಮಿಗೂ ನಡುವೆ ಮಿಂಚು ಬಡಿಯುವುದು. ಇಂಥ ಬಡಿತಕ್ಕೆ ಮರಗಳೂ ಕಟ್ಟಡಗಳೂ ಧೂಳೀಧ್ವಂಸವಾಗುವುದುಂಟು (ಬಾಲಪ್ರ. III, ೧೨೬೪). [ಸಂ. ಧೂಲೀಧ್ವಂಸ]

**ಧೂಳೀಪಟ** (ನಾ). = ಧೂಳಿಪಟ : ಎಷ್ಟು ಸಾಮ್ರಾಜ್ಯಗಳು ಧೂಳೀಪಟವಾಗಿವೆ (ನನದಿ. ೩೮).

ಧೂಳೀಪಟ ಮಾಡು= ಧೂಳಿಪಟವಮಾಡು ; ನಾಶವಮಾಡು ; ಹಾಳುಮಾಡು: ಎಲ್ಲರನ್ನೂ ಧೂಳೀಪಟ ಮಾಡಿ ಹೇಳಹೆಸರಿಲ್ಲದೆ ಮಾಡಿಬಿಡುತ್ತಿದ್ದೆ (ಕುರುಕ್ಷೇ. ೯೮) ; ರಾಯ ರಾಮಲಿಂಗನ ಸೂಚನೆ ಕೇಳಿದೊಡನೆಯೆ ಬಿರುಗಾಳಿಯಂತೆ ಶತ್ರುಗಳ ಮೇಲ್ಬಿದ್ದು ಧೂಳೀಪಟ ಮಾಡಿದನು (ಅಳಿ. ೩೨).

[ಸಂ. ಧೂಲೀಪಟ]

**ಧೂಳೀಪಟಲ** 'ಧೂಲೀಪಟಲ' ನೋ.

**ಧೂಳೀಪಟ್ಟ** (ನಾ). = ಧೂಳಿಪಟ : ಮುನ್ನಿದನೋ ಇಂದೆ ಕೋಂಟೆ ಧೂಳೀಪಟ್ಟಂ [ಪಾಠಾಂ. ಧೂಳಿಪಟಂ] (ಶಮದ. ೩೭ ಪ್ರಯೋ.); ಇದಿರಾದ ಬಲುದುರ್ಗಗಳನು ಧೂಳೀಪಟ್ಟಮಂ ಮಾಡುತ (ಸಮ್ಯಕ್ತ್ವ. ೮-೨೭). ೨. ಧೂಳಿನ ರಾಶಿ,_ಒಟ್ಟಿಲು : ''ಧೂಳೀಪಟ್ಟಮೆನಲ್ಕಡರಿ ಧೂಳಿ ಪುಟ್ಟಿದುದಕ್ಕುಂ" (ಭಾರನಿ. ೬೭). [ಸಂ. ಧೂಲೀಪಟ್ಟ]

**ಧೂಳೀಪ್ರತಾನ** 'ಧೂಲೀಪ್ರತಾನ' ನೋ.

**ಧೂಳೀಪ್ರಾಕಾರ** (ನಾ). = ಧೂಳೀಶಾಲ : ಆ ಧೂಳೀಪ್ರ[ಪ್ರಾ]ಕಾರದಿಂದೊಳಗೆ ನಾಲ್ಕುಂ ದಿಶಾಭಾಗದೊಳಮಿನ್ನೇಸಱುಮಿರ್ಬದಲುವಾಗಿ ನೀಳ್ದ ಪೆರ್ವೀದಿಗಳ ನಟ್ಟನಡುವೆ (ವರ್ಧಮಾ. ೧೩-೩೮ ವ).

[ಸಂ. ಧೂಲೀಪ್ರಾಕಾರ]

**ಧೂಳೀಶಾಲ,** ಧೂಳೀಶಾಳ (ನಾ). [ಜೈನ] ಸಮವಸರಣಮಂಟಪದ ಮೊದಲನೆಯ ಪ್ರಾಕಾರ : ಕೈಳಾಸಾಚಳಮನೇಱಿ ಧೂಳೀ[ಪಾಠಾಂ. ಲಿ] ಶಾಲದಿಂ ತಗುಳ್ದು ಪೂರ್ವೋಕ್ತವರ್ಣನೋಪೇತಮಪ್ಪ ವೃಷಭನಾಥನಾಸ್ಥಾನ ಮಂಟಪಮಂ ನೋಡುತ್ತುಂ (ಆದಿಪು. ೧೩-೮೨ವ). **ಧೂಳೀಶಾಳ :** ವಲಯಾಕೃತಿಯಿಂದಿದನೇಂ ಬಳಸಿದುದೊ ಸುರೇಂದ್ರಚಾಪಮಂಡಲಮೆನೆ ಬಳ್ವಳ ಬಳೆದ ಪಂಚರತ್ನದ ಬೆಳಗಿಂದಂ ಬೆಳವುದಲ್ಲಿ ಧೂಳೀಶಾಳಂ (ಆದಿಪು. ೧೦-೨೩) ; ಪಂಚರತ್ನಧೂಳೀಶಾಳದಿಂ ಪರಿವೇಷುಗೊಂಡ ಸಮವಸರಣ ಮಂಡಳಮಂ ಪುಗುವ ಸಹಸ್ರಾಕ್ಷನ (ಮಲ್ಲಿಪು. ೧೪-೨೦೦).

[ಸಂ. ಧೂಲೀಶಾಲ]

**ಧೂಳೀಶಾಳ** 'ಧೂಳೀಶಾಲ' ನೋ.

**ಧೂಳೀಸಾಳ** (ನಾ). = ಧೂಳೀಶಾಲ : ರುತುಮಾನದ ದ್ವಾರಕುಟ್ಟಿಮ ಮೊದಲ್ಗೊಂಡು ಧೂಳೀಸಾಳಂಬರಮಂತರಾಳಚಕ್ರವಾಳಸ್ಥಳದೊಳೆಲ್ಲಂ ಕಿಕ್ಕಿಱಿಗಿಱಿದು (ಶಾಂತಿಪು. ೧೩-೨೩೦ ವ). [ಸಂ. ಧೂಲೀಸಾಲ]

**ಧೂಳು** 'ದೂಳಿ' ನೋ.

**ಧೂಳುಭೂಮ** (ನಾ). ಮದುವೆಯ ಸಂದರ್ಭದಲ್ಲಿ ಗಂಡು ಹೆಣ್ಣನ್ನು ಒಟ್ಟಿಗೆ ಕೂರಿಸಿ ಸಂಜೆಯ ಹೊತ್ತು ಹಾಕುವ ಊಟ : ವಧೂವರರನ್ನು ಧೂಳುಭೂಮಕ್ಕೆ ಕೂರಿಸಿದ್ದಾರೆ (ರೂಢಿ).

[ಧೂಳು (<ದೂಳಿ) + ಭೂಮ₁ (<ಭೂವ)]

**ಧೂಳುಮಚಿಕೆ** (ನಾ). ಘರ್ಷಣೆಯಾಗುವುದನ್ನು ತಪ್ಪಿಸಲು ರಥಕ್ಕೆ ಹಾಕಿರುವ ಮರದ ಅಥವಾ ಕಬ್ಬಿಣದ ಕಾಪು;-ಸಾಧನ : "ರಥಗುಪ್ತಿಃ, ವರೂಥಃ- ಈ ೨ ಧೂಳುಮಚಿಕೆ" (ನಾಚಿರಾ. ೧೩೪).

[ಧೂಳು (<ದೂಳಿ) + ಮಚಿಕೆ]

**ಧೂಳೆಬ್ಬಿಸು** (ಕ್ರಿ). ೧. ಧೂಳು ಏಳುವಂತೆ ಮಾಡು ; ಧೂಳನ್ನು ಏಳಿಸು : ಕುದುರೆಗಳು ಧೂಳೆಬ್ಬಿಸುತ್ತಾ ಓಡಿದವು (ರೂಢಿ). ೨. ಮಣ್ಣುಪಾಲುಮಾಡು ; ಹಾಳುಮಾಡು : ಇವತ್ತು ಇವರ ಮಾನ ಮರ್ಯಾದೆಯೆಲ್ಲಾ ಧೂಳೆಬ್ಬಿಸಿಬಿಡ್ತೀನಿ (ರಂಗವ. ೩೩೯). ೩. (ಅಲಂ) ತಿರಂಗು ; ಅಲೆದಾಡು : ಅವನ ಎಣಿಕೆಯಲ್ಲಿ-ಆ ಸ್ನೇಹಿತರು ಬಂದದ್ದಾದರೆ, ನಾಲ್ಕು ದಿನ ನಗರವನ್ನೆಲ್ಲ ಧೂಳೆಬ್ಬಿಸಬಹುದು – ಎಂದಿತ್ತು (ಅಳಿ. ೧೦೭). ೪. ಕೀಟಲೆಮಾಡು : ಸುಮ್ಮನೆ ಧೂಳೆಬ್ಬಿಸುವುದೇ ಅವನ ಸ್ವಭಾವ (ರೂಢಿ). [ಧೂಳು (<ದೂಳಿ) + ಎಬ್ಬಿಸು (<ಎಟ್ಟಿಸು)]

**ಧೂಳೆರಚು** (ಕ್ರಿ). ೧. ಮಣ್ಣನ್ನು ಎರಚು. ೨. (ಅಲಂ) ಕಳಂಕಗೊಳಿಸು ; ಕೆಟ್ಟ ಹೆಸರನ್ನು ತರು : ವಂಶದ ಮೇಲೆ ಧೂಳೆರಚಿದೆಯಲ್ಲ (ಕಗದ್ಯ. II, ೨೯).

[ಧೂಳು (<ದೂಳಿ) + ಎರಚು (<ಎಱಚು)]

**ಧೂಳೋದಕ** (ನಾ). [ವೀಶೈ] "ಗುರು ಮನೆಗೆ ಬಂದಾಗ ಪಾದ ತೊಳೆದ ತೀರ್ಥ" (ಶರಸಾ. ೨೪-೭). [ಟಿ: ಇದು 'ಧೂಳ್ಯುದಕ' ಎಂಬುದರ ಅಶುದ್ಧವಾದ ರೂಪ]

**ಧೂಳ್ಗೋಂಟೆ** 'ದೂಳಿಗೋಂಟೆ' ನೋ.

**ಧೃತ** (ಗು). ೧. ತಳೆದ; ಧರಿಸಿದ: ಧೃತದೇವೇಂದ್ರವಿಮಾನರುಂದ್ರಮಹಿಮಂ . . . ಕಲಧೌತತುಂಗಕಲಶಂ ಚೆಲ್ವಾಯ್ತು ರಾಜಾಲಯಂ (ಆದಿಪು. ೬-೧೦೭) ; ಆರೋಪಿತಚಾಪಂ ಸಂಧಾರಿತಕವಚಂ ಧೃತೋಗ್ರಶರಧಿಯುಗಂ ತಾನಾರಂದಮಲ್ಲಮಂ (ಪಂಪಭಾ. ೮-೧೨) ; ಧೃತ ಪಂಚರತ್ನಮಂ ರಾಗಿತೆಯೊಳ್ ಭೂಷಣಮಂನಾಂಪ ತೆಱದಿಂದೆ ವಿರಾಗಿತೆಯೊಳ್...ಆಂತನಾ ವಿಭು ತಪಮಂ (ಚಂದ್ರಪು. ೧೬-೨) ; ಧೃತಪಂಕರುದ್ರಮಯಾಳಿಕಂ ಧೃತ ವಿಶೀರ್ಣಾಗೋಚ್ಚಶೃಂಗಂ . . . ಬರುತಿದ್ದುದುದ್ಧತಘನಧ್ವಾನೋತ್ಕರಂ ಶಾಕ್ವರಂ (ಕುಸುಮಾ. ೧೦-೧೪೩) ; ಧೃತನಿದ್ರಾಲಸ್ಯಭಾರಂ ತೊಲಗೆ (ಸೂಕ್ತಿಸು. ೯-೬೩) ; ಧೃತಚಕ್ರವಾಕಿನೀಪರಿಪೂತನಾಕಿನೀ . . . ಎನುತಿರ್ದರು (ವೀಶೈಪು. ೩-೨೩-೬೪). ೨. ಹಿಡಿದ ; ಧೃತಕನಕವೇತ್ರಲತೆ ಚಿತ್ರಿತಮಾಗೆ ಕರಾಂಗುಳೀಯಕಪ್ರಭೆಯಿಂದಂ ಪ್ರತಿಹಾರಪದವಿಯಂ ತಳೆದು (ಪುಷ್ಪಪು. ೧೩-೧೦೫). ೩. ಹೊಂದಿದ ; ಪಡೆದಿರುವ : ಧೃತನಾನಾವರ್ಣವರ್ಣಚ್ಛವಿಸಮುದಯಸಂದರ್ಶನೀಯಂ . . . ಪೌರರ್ಗೆ ಪಂಚೇಂದ್ರಿಯಸುಖದೊದವಂ ನಂದನಂ ಮಾಟ್ಪುದೆಂದುಂ (ಚಂದ್ರಪು. ೦-೧೧೨). ೪. ಕಾಪಾಡಲ್ಪಟ್ಟ ; ರಕ್ಷಣೆಗೊಂಡ. ೫. ಇಟ್ಟ ; ಇಡಲ್ಪಟ್ಟ. ೬. ನಿರ್ಧರಿಸಿದ ; ದೃಢವಾದ. ೭. ತಯಾರಾದ ; ಸಿದ್ಧವಾದ. ೮. ಉಪಯೋಗಿಸಿದ ; ಬಳಸಿದ. (ನಾ). ೯. ಹೊರುವುದು ; ತಳೆಯುವುದು ; ಧರಿಸುವುದು ; ಧಾರಣೆ. [ಸಂ.]

**ಧೃತಕಂಟಕ** (ನಾ). ಮುಳ್ಳುಗಳನ್ನು ಪಡೆದಿರುವುದು ; ಮುಳ್ಳುಗಳನ್ನುಳ್ಳದ್ದು : ಧೃತಕಂಟಕಮಾದೊಡಮುನ್ನತಿಯಿಂ ಕೇತಕಿಯೊಳೆಱಗಿದುದು ಮಧುಕರಂ (ಗಿರಿಕ. ೨-೬೪). [ಧೃತ + ಕಂಟಕ]

**ಧೃತಕಂಬಲ** (ನಾ). ಕಂಬಲನೆಂಬ ಸರ್ಪವನ್ನು ಧರಿಸಿದವನು ; ಶಿವ : ನಿಜಾಂಗಧೃತಕಂಬಲ ಧನಂಜಯ ಮದಂಬಕ (ರಾಜಶೇ. ೧೩-೫೪).

[ಧೃತ + ಕಂಬಲ]

**ಧೃತಕಳಾಕಳಾಪ** (ನಾ). ೧. ಅರುವತ್ತುನಾಲ್ಕು ಕಲೆಗಳನ್ನು ಪಡೆದವನು. ೨. ಹದಿನಾರು ಕಲೆಗಳನ್ನು ಹೊಂದಿದವನು. ೧, ೨ : ಅರಿಗೋತ್ರಭೇದಿ ವಿಬುಧೇಶ್ವರನಲ್ಲಂ ಧೃತಕಳಾಕಳಾಪಂ ದೋಷಾಕರನಲ್ಲಂ (ಕವಿರಾ. ೩-೧೧೨).

[ಧೃತ + ಕಳಾಕಳಾಪ (= ಕಲಾಕಲಾಪ)]

**ಧೃತಗೋತ್ರ** (ನಾ). (ಮಂದರ) ಪರ್ವತವನ್ನು ಹೊತ್ತವನು; ಕೂರ್ಮ: ಚಿತ್ರವದನೇವೇಳುವೆನು ಧೃತಗೋತ್ರನುತ್ಸಾಸದಲಿ ವರವೇದತ್ರಯಂಗಳ ನುಗುಳಿದನು ಕಾರುಣ್ಯನಿಧಿಯೆಂದ (ನಿಭಾಗ. ೨-೩-೩೨).

[ಧೃತ + ಗೋತ್ರ₁]

**ಧೃತಚಂದ್ರ** (ನಾ). ಚಂದ್ರನನ್ನು ಧರಿಸಿದವನು ; ಶಶಿಧರ ; ಶಿವ ಮಳೆಯರಾಜನ ಕಥೆಯ ಕೇಳ್ದರ್ಗೆ ಧೃತಚಂದ್ರ ಮನದಿಷ್ಟಮೀವನು (ಪ್ರೌಢರಾ. ೯-೬೫). [ ಧೃತ + ಚಂದ್ರ₂ ]

**ಧೃತದೀಕ್ಷ** (ನಾ). ವ್ರತವನ್ನು ಹಿಡಿದವನು ; ವ್ರತವನ್ನು ತೊಟ್ಟವನು : ಧಾತ್ರಿಯೊಳಾವನ್ನಾಭಯಸತ್ರದೆ ಧೃತದೀಕ್ಷರಲ್ತೆ ಪುರುಕುಲದರಸರ್ (ಶಾಕುಂತ. ೨೮-೫೦). [ ಸಂ. (ಧೃತ + ದೀಕ್ಷಾ + –) ]

**ಧೃತಧೈರ್ಯ** (ನಾ). ಧೈರ್ಯವನ್ನು ಉಳ್ಳವನು ; ದಿಟ್ಟ : ಧೃತಧೈರ್ಯಂ ತುಂಗಶೌರ್ಯಂ ರಜತಶಿಖರಿಧಾಮಂ . . . ಪಂಪಾಧಿನಾಥಂ (ಉದ್ಭಟ. ೧೨-೧೩೮). [ ಧೃತ + ಧೈರ್ಯ ]

**ಧೃತನವಶಶಿ** (ನಾ). ಬಾಲಚಂದ್ರನನ್ನು ಧರಿಸಿದವನು ಶಿವ: ಅತಿಶಯ ಮಹಿಮಂ ಧೃತನವಶಶಿವಿಶ್ರುತವರಗುಣಗಣಧಾಮಂ (ಹರಿಶ್ಚ. ೨-೧೦).
[ ಧೃತ + ನವಶಶಿ ]

**ಧೃತಮಂಡಲಿ** (ನಾ). ಒಂದು ಬಗೆಯ ಸಸ್ಯ : "ತ್ರಿಪದಿ ಧೃತಮಂಡಲಿ [ಪಾಠಾಂ. ೪] ಮರಾಳಪದಿಯೆನೆ ಹಂಸಪಾದಿ" (ಮಂಗರಾ. ೪೨-೩೯). [ ಸಂ. ]

**ಧೃತಮನೋರಥ** (ನಾ). ದೃಢವಾದ ಮನಸ್ಸುಳ್ಳವನು ; ಸ್ಥಿರಮನಸ್ಕ : ಆ ಪುರಮನಾಳ್ವನುದ್ಗತ ಗೋಪುರಮಂ ವಿಜಿತ ಶಕ್ರ ಧನಪತಿ ವರುಣ ತ್ರೈಪುರಮಂ ಧರಣೀಮಣಿ ನೂಪುರಮಂ ಧೃತಮನೋರಥಂ ಪದ್ಮರಥಂ (ಅನಂತಪು. ೩-೧೯). [ ಧೃತ + ಮನೋರಥ ]

**ಧೃತಮೋಹ** (ನಾ). ಮೋಹಕ್ಕೊಳಗಾದವನು : ಹಾಹಾಧ್ವನಿ . . . ಸುತ್ತಿರ್ದೊಡದಂ ಸಾಹಸಿಗಂ ಕೇಳ್ಗಂ ಧೃತಮೋಹಂ ಕೇಳ್ಗಮೆ ಜಿತಾರ್ತ ಕುಮಾರೀರವಮಂ (ಶಾಂತಿಪು. ೬-೩೩). [ ಧೃತ + ಮೋಹ ]

**ಧೃತರಜ** (ನಾ). ಧೂಳಿನಿಂದ ಕೂಡಿದುದು : ಧೃತರಜನನಿಲಂ ದಿತಿಜಪ್ರತಿಕೂಲಂ ಹರಿಗೆ ಸೈನ್ಯದರ್ಶನದನುಕೂಲತೆಯಂ ಮಾಡಿವಂ (ಜಗವಿ. ೧೫-೧೫).
[ ಧೃತ + ರಜ$_1$ ]

**ಧೃತರಾಷ್ಟ್ರ** (ನಾ). ೧. ಸ್ಥಿರವಾದ ಚಕ್ರಾಧಿಪತ್ಯವನ್ನು ಉಳ್ಳವನು. ೨. ಒಳ್ಳೆಯ ಅರಸ. ೩. ಒಳ್ಳೆಯ ಅರಸನಿಂದ ಆಳಲ್ಪಟ್ಟ ದೇಶ. ೪. ಕುರುವಂಶದ (ದುರ್ಯೋಧನ ಮುಂತಾದ ನೂರು ಜನ ಕೌರವರ ತಂದೆಯಾದ) ಅಂಧ ದೊರೆ : "ಅಂಧರಾಜನನೆ ಧೃತರಾಷ್ಟ್ರನಕ್ಕುಂ" (ಮಂಗರಾ. ೭೮-೩) ; ಧೃತರಾಷ್ಟ್ರಂ ನುಡಿದಾರ್ತನೇ ಹರಿ ಭರಂಗೆಯ್ದಾರ್ತನೇ (ಪಂಪಭಾ. ೧೦-೧೦) ; ಧೃತರಾಷ್ಟ್ರಕ್ಷಿತಿಪಾಲ ಕೇಳ್ ಜನನಿ ಕೇಳ್ ಗಾಂಧಾರಿ (ಗದಾಯು. ೬-೩೫); ಭರತವಂಶದೊಳ್ಳೆದು ಮಿಗೆ ನೂರ್ವರು ಕುಮಾರರು ಪಾಂಡು ಧೃತರಾಷ್ಟ್ರರಿಗೆ ಜನಿಸಿದರು (ಕುವ್ಯಾಆ. ೪ ಸೂಚನೆ). ೫. ಒಂದು ಹಾವಿನ ಹೆಸರು : ಬಳಿಕ ಧೃತರಾಷ್ಟ್ರನೆಂಬ ದುರ್ವ್ಯಾಳಪತಿ ನುಡಿದನು (ಜೈಮಿಭಾ. ೨೪-೨೦). ೬. ಒಬ್ಬ ಗಂಧರ್ವನ ಹೆಸರು : ಪುರಂದರಂ ಧೃತರಾಷ್ಟ್ರನೆಂಬ ಗಂಧರ್ವಂಗೆ ನೇಮಿಸಿದನು (ಜೈಮಿಭಾ. ೫-೪೦). ೭. ಒಬ್ಬ ಯಕ್ಷನ ಹೆಸರು : ಹೇಮಕೂಟಪರ್ವತದಲ್ಲಿ ಮಣಿಭದ್ರ . . . ಧೃತರಾಷ್ಟ್ರ ಪೂರ್ಣಭದ್ರ ವಿರೂಪಾಕ್ಷರೆಂಬವರು ಮೊದಲಾದ ಕೋಟಿಯಕ್ಷರ ಪಟ್ಟಣಂಗಳುಂ (ವಿವೇಕ. ೨೧೭). ೮. ಒಂದು ಬಗೆಯ ಪಕ್ಷಿ. ೯. (ಆಲಂ)ಕುರುಡ ; ಅಂಧ.
[ ಸಂ. ]

**ಧೃತವೇತ್ರ** (ನಾ). ದಂಡವನ್ನು ಹಿಡಿದುಕೊಂಡವನು : ಧೃತವೇತ್ರಂ ಚಾರುಚೀನಾಂಬರರಚಿತಶಿರೋವೇಷ್ಟನಂ . . . ಅವನಿಪನೊಡ್ಡೋಲಗ ಕೈಕೈದೆ (ಚಂದ್ರಪು. ೨-೭೪). [ ಧೃತ + ವೇತ್ರ ]

**ಧೃತವ್ರತ** (ನಾ) ೧. ಶ್ರೇಷ್ಠವಾದ ವ್ರತಗಳ ನಿಯಾಮಕ : ಎಲೈ ಅಗ್ನಿಯೇ, ಧೃತವ್ರತನೂ, ಸಕಲರಿಗೂ ಪ್ರಭುವೂ, ಪ್ರಕಾಶಮಾನನೂ ಆದ ವರುಣನೂ ನೀನೆ (ಋಕ್ಸಾರ. ೧೭). ೨. ವ್ರತವನ್ನು ಹಿಡಿದವನು.
[ ಧೃತ + ವ್ರತ ]

**ಧೃತಶಕ್ತಿ** (ನಾ). ೧. ವೀರನನ್ನು ಹೊಂದಿದವಳು ; ಪರಾಕ್ರಮಿಯ ಹೆಂಡತಿ. ೨. ಸಮರ್ಥರಾದವರನ್ನು ಪೋಷಿಸುವವಳು ; ಶೂರರಿಗೆ ಆಶ್ರಯವನ್ನು ಕೊಡುವವಳು. ೧, ೨ : ಶ್ರೀರಮಣಿ ಗೌರಿ . . . ಪತಿಭಕ್ತಿ ಧೃತಶಕ್ತಿಯೆನೆ ಸನ್ದೀ ವೀರನಿಧಿಯುಂ ಚಲದ ವಾರಿನಿಧಿಯುಂ ಗುಣದ ಚಾರುನಿಧಿಯುಂ ನೆಗರ್ದ ದೇಕಲೆಯನಿನ್ನೀ ನಾರಿಜನರನ್ನಮನದಾರೊ ಮಾಡಿವರ್ (ಎಕ. IV, ಹೆಗ್ಗಡ. ೧೮-೨೯ ; 1057). ೧೧೬-೧೧). [ ಸಂ. ಧೃತಶಕ್ತಾ ]

**ಧೃತಶಶಿಖಂಡ** (ನಾ). ಚಂದ್ರಕಳೆಯನ್ನು ಧರಿಸಿದವನು ; ಶಿವ : ಧೃತಶಶಿಖಂಡ ಜಿತಸುಮಕಾಂಡ ವಿತರಣಶೌಂಡ ಭೃತಜಗದಂಡ (ಶಾಕುಂತ.
[ ಧೃತ + ಶಶಿಖಂಡ ]

**ಧೃತಶಶಿಶಕಲ** (ನಾ). = ಧೃತಶಶಿಖಂಡ: ಧೃತಶಶಿಶಕಲಂ ಕೃತಭವನಕುಲಂ . . . ನುತಗಿರಿಜಾರಮಣಂ (ವೃಷವಿ. ೩೪-೬೫). [ ಧೃತ + ಶಶಿಶಕಲ ]

**ಧೃತಶಸ್ತ್ರ** (ನಾ). ಶಸ್ತ್ರವನ್ನು ಧರಿಸಿದವನು ; ಶಸ್ತ್ರಧಾರಿ : ಕೊಲಬಹುದು ಧೃತಶಸ್ತ್ರನಾದಡೆ ಕೊಲುವೆನೆಂಶಾಚಾರ್ಯಸುತನನು ತಿಳಿಯ ಹೇಳೆಂದೆಸುತ ಬೀಡಿಕೆಗಾಗಿ ನಡೆತಂದ (ನಿಭಾಗ. ೧-೪-೩೦). [ ಧೃತ + ಶಸ್ತ್ರ ]

**ಧೃತಶೈತ್ಯ** (ನಾ). ತಂಪನ್ನು ಹೊಂದಿರುವುದು ; ಶೈತ್ಯವನ್ನೊಳಗೊಂಡಿರುವುದು: ಧೃತಶೈತ್ಯಂ ಧಾರಾಜಲಯುತಮನುಕಂಪಾನ್ವಿತಂ ದಲೆನಿಸಿಯುಂ . . . ರಿಪುನೃಪರ್ಗೀವುದಧಿಕತಾಪೋದಯಮಂ (ಚಂದ್ರಪು. ೨-೩).
[ ಧೃತ + ಶೈತ್ಯ ]

**ಧೃತಸತ್ತ್ವ** (ನಾ). ಗರ್ಭಿಣಿ : "ಗುರ್ವಿಣಿ ಧೃತಸತ್ತ್ವಯುಮಂತರ್ವತ್ನಿಯೆನಿಪ್ಪೊಡಾಕೆ ಗರ್ಭಿಣಿಯೆನಿಕ್ಕುಂ" (ವಸ್ತುಕೋ. ೫೪-೧೪).
[ ಸಂ. ಧೃತಸತ್ತ್ವಾ ]

**ಧೃತಸೋಮ** (ನಾ). = ಧೃತಚಂದ್ರ : ಧೃತಸೋಮ ಗತಕಾಮ ಚಿರಲಿಂಗ ವರಸಂಗ . . . ಗಿರಿಜೇಶ (ಹಚಕಾ. ೧-೫). [ ಧೃತ + ಸೋಮ ]

**ಧೃತಿ** (ನಾ). ೧. ಹಿಡಿದುಕೊಳ್ಳುವುದು ; ತೆಗೆದುಕೊಳ್ಳುವುದು. ೨. ತಾಳುವಿಕೆ ; ಧರಿಸುವುದು. ೩. ಪಡೆಯುವುದು ; ಹೊಂದುವುದು. ೪. ಧೈರ್ಯ ; ಧೀರತನ ; ಎದೆಗಾರಿಕೆ ; ಕೆಚ್ಚು : ಧೃತಿಯ ನವಳಂಬಿಸಿ . . . ನಡೆವಾಗಳ್ (ಲೀಲಾವ. ೬-೪೯) ; ಪೊಜಗತುಳ ಧೃತಿಯ ನಾಂತಂ ನೆಟ್ ಮನದೊಳ್ ತಳೆದನೆಸೆವ ಕುಸುಮಾವಳಿಯಂ (ಕುಸುಮಾ. ೧೦-೧೦೩) : ಮರಳಿ ಧೃತಿಯಿಂದೆದ್ದು ಕೋಪಾತುರನು ತುರಗವನೊದೆದು ಕೆಡಹಲು (ಕೌಶಿರಾ. ೨೬-೨೯) ; ಪೆಣ್ಣಾದೊಡಂ ನೀನೆನಗೆ ಮತಿಯೊಳಂ ಧೃತಿಯೊಳಂ ಗಂಡಿಗೆಣೆ (ಶ್ರೀರಾಮಾ. ೨೧೫-೧೨೬). ೫. ತಾಳ್ಮೆ ; ಸಹನೆ ; ಸಂಯಮ : ಧೃತಿ ಬಂದಾಗಲೆ ಮಾಣೆಂಬ ತೆಱದೆ ಪೇಸಿದನರಸಂ (ಯಶೋಚ. ೨-೫೩) ; ವಿರತಿ ವಿವೇಕ . . . ಧೃತಿ ಸ್ಮೃತಿ . . . ತಪಸ್ಸು ಯೋಗ ನಿಶ್ಚಯ ಮುಂತಾದ ಸಾತ್ವಿಕಗುಣಗಳಿಂ ಸುಖಮಹಿತೋರ್ಧ್ವಲೋಕಂಗಳಂ ಸಾರ್ದು (ವಿವೇಕ. ೨೪೭) ; ಅಱಿದು ಪಂಚಾರ್ಥವನು ಧೃತಿಯನು ಮೆಱೆದು ಮನವನು ನಿಲಿಸಿ ತನ್ನೀ ದಿವ್ಯಮೂರ್ತಿಯಲಿ ಆಱಿಯದಿತರವನಿರಲು ನೀವೆನ್ನಟಿಕೆಯಲಿ ನಾಲುಕು ಯುಗಗಳುತ್ತರಿಸಲಾ ನಿಮಗಂದು ಮೈದೋಱದೆನು ನಾನೆಂದ (ನಿಭಾಗ ೧೦-೪-೨). ೬. ಸ್ಥಿರವಾಗಿರುವುದು ; ಅಚಲತೆ ; ಸ್ಥೈರ್ಯ : ಆತನ ಮಾತಂ ಕೇಳ್ದಪಗತಶೋಕನುಮುಪಗತವಿವೇಕನುಮಾಗಿ ಧೃತಿಯಂ ತಾಳ್ದು (ಅಜಿಪು. ೯-೬ವ) ; ಧೃತಿಯಿಂ ಮಚ್ಚರಿಸುವ ಪರ್ವತಮಂ ತಾನಿಕ್ಕಿ ಮೆಟ್ಟಿದಂತಿರೆ . . . ಇರ್ದಂ ಯೋಗಧುರ್ಯನಚಲಿತಧೈರ್ಯಂ (ಅರ್ಧನೇ. ೬ ೨೦) ; ಅರ್ಥಬಂಧುಸುತಾದಿಗಳ ಪ್ರಾಪ್ತ್ಯಪ್ರಾಪ್ತಿಗಳಲ್ಲಿ ಹರ್ಷಶೋಕವಿಲ್ಲದಿರ್ಪುದೇ ಧೃತಿಯೆನಿಸುವುದು (ವಿವೇಕ. ೧೪೯) ; ಧೃತಿಯು ಶ್ರದ್ಧಾ ಸುಖವಿವಿದಿಷಾವಿವಿದಿಷಮೆಂಬತಿಶಯಗಳೈದು ವಿಧಮರಿತು ಮತ್ತದ ತಿಳಿದು ಮತಿಯಿಂದ ಮತ್ತುಸಿರಿ ಕೊನೆಗಾಣಲೆಸಗುವುದೆ ಧೃತಿ(ವೆಂಕಾರಾ. ೩-೭-೪೩);

ಹಾನಿವೃದ್ಧಿಯಿಂ ಮತಿಗೆ ವಿಕೃತಿ ತೋರದಿರಲದೆ ಧೃತಿ(ವೇದಾಂಪ. ೩-೫-೧೭). ೭. ಸಂತೋಷ; ಆನಂದ; ಉಲ್ಲಾಸ. 'ಧೃತಿವೆಟು' ಪರಾ. ೮. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಚಂದ್ರನಾದೊಡೆ ಅಮೃತ . . . ಧೃತಿ ಶಶಿನಿ ಚಂದ್ರಿಕೆ . . . ಕಾಮದಾಯಿನಿಯೆಂಬ ಷೋಡಶಕಲೆಗಳಿಂ ಭರಿತನಾಗಿ (ವಿವೇಕ. ೩೬೭). ೯. ಒಂದು ಬಗೆಯ ಸಸ್ಯ: "ಧೃತಿ [ಪಾಠಾಂ. ದ್ಯುತಿ]ಯೆನಲು ಮುಷ್ಟಿಯುತ್ಕಕ್ಕ" (ಮಂಗರಾ. ೪೫-೪೮) ೧೦. ಒಂದು ನಾಡಿಯ ಹೆಸರು: ಧಮನಿ, ಗಮನಿ, ಲೋಲೆ, ಧೃತಿ, ಸರ್ವಗಾ ಎಂಬೈದು ನಾಮವನುಳ್ಳ ನಾಡಿಯು . . . ಕಾಣಬರುವುದು (ಸಕವೈ. ೧೦). ೧೧. ವಿಶ್ವೇದೇವತೆಗಳಲ್ಲಿ ಒಬ್ಬ ದೇವತೆಯ ಹೆಸರು. 'ವಿಶ್ವೇದೇವ' ಪರಾ. ೧೨. ಮನಸ್ಸಿನ ಹದಿನಾರು ಬಗೆಯ ವಿಕಾರಗಳಲ್ಲಿ ಒಂದು: ಐತರೇಯೋಪನಿಷತ್ತಿನಲ್ಲಿ ಸಂಜ್ಞಾನ (ಚೇತನಭಾವ) . . . ಪ್ರಜ್ಞಾನ, ಮೇಧಾ, ದೃಷ್ಟಿ, ಧೃತಿ, ಮತಿ, ಮನೀಷಾ . . . ಈ ಹದಿನಾರು ಮನಸ್ಸಿನ ವಿಕಾರಗಳೆಂದಿರುವವು (ಅಮೃತ. ೬-೩೭ ಟೀಕು). ೧೩. [ಛಂದ] ಅಕ್ಷರ ಛಂದಸ್ಸಿನಲ್ಲಿ ಹದಿನೆಂಟನೆಯ ಛಂದಸ್ಸಿನ ಹೆಸರು: ಉಕ್ತೆ ಅತ್ಯುಕ್ತೆ . . . ಧೃತಿ ಅತಿಧೃತಿ . . . ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೧-೪೭ವ). ೧೪. [ಜ್ಯೋತಿ] ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಎಂಟನೆಯದು: ವಿಷ್ಕಂಭ ಪ್ರೀತಿ . . . ಧೃತಿ ಶೂಲ . . . ಬ್ರಹ್ಮ ಐಂದ್ರ ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೩೩೦); ಯೋಗಗಳತಿಶಯವನರಿಯೆಯ ಪೇಳುವೆ ವೃತಿಯು ಧೃತಿ ವಿಷ್ಕಂಭ ಶೂಲವು (ಗಗತಾ. ೪-೭೯). 'ಧೃತಿಯೋಗ' ಪರಾ. ೧೫. [ಕಾವ್ಯಮಿ] ಮೂವತ್ತಮೂರು ಸಂಚಾರೀಭಾವಗಳಲ್ಲಿ ಒಂದು; ಜ್ಞಾನ, ಅಭೀಷ್ಟಪ್ರಾಪ್ತಿ ಮುಂತಾದುವುಗಳಿಂದ ಆಸೆಯು ಪೂರ್ಣವಾಗುವುದು; ಸಂತುಷ್ಟಿ; ತೃಪ್ತಿ: ಧೃತಿ ನಿದ್ರಾ ವೇಗ . . . ಇವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೫); ಮತಿ ಲಜ್ಜೆ . . . ಧೃತಿ ತರ್ಕ ಉನ್ಮಾದ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ ಪರಿವರ್ಧಿಸಿ (ವಿವೇಕ. ೩೩೭); ಜ್ಞಾನ ಮೊದಲಾದವುಗಳಿಂದ ಉಂಟಾಗುವ ಸಂತುಷ್ಟಿಯೇ ಧೃತಿ (ಭಾರಮೀ. ೩೪೭). ; ೧೬. [ಯೋಗ] ಧ್ಯೇಯವಸ್ತುವಿನಲ್ಲಿ ಅಚಲವಾಗಿ ಮನಸ್ಸನ್ನು ನೆಲೆಗೊಳಿಸುವುದು; ಧಾರಣ. 'ಧೃತಿತ್ರಯ' ಪರಾ. ೧೭. [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ನಾಲ್ಕನೆಯದು: ದ್ವಾದಶಾಂಗದೊಳ್ ಪೇಟ್ದ ಆದಾನ ಪ್ರೀತಿ ಸುಪ್ರೀತಿ ಧೃತಿ . . . ಎಂಬಯ್ವತ್ತುಮೂಱು ಗರ್ಭಾದಿ ನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ವ); ೭ನೇ ತಿಂಗಳ ಗರ್ಭವತಿಗೆ . . . ಅತ್ತಿಹಣ್ಣಿನ ರಸವು ಸಹ ಮಂತ್ರಪೂರ್ವಕ ಉದರದ ಮೇಲೆ ಬೀಳುವಂತೆ ಹಾಕುವುದೇ ಧೃತಿಯೆಂಬ ನಾಲ್ಕನೆ ಕರ್ಮವು (ಪುರುಜ. ೧೯೯). 'ದೀಕ್ಷೆ' ಪರಾ. ೧೮. [ನ್ಯಾಯ] ದೇವರಿದ್ದಾನೆಂದು ಸಾಧಿಸುವ ಹೇತುಗಳಲ್ಲಿ ಒಂದು; ಈ ವಿಶ್ವವು ಕುಸಿದು ಬೀಳದಂತೆ ಧಾರಣೆ ಮಾಡುವ ಕಾರ್ಯದಿಂದ ಅದಕ್ಕೆ ಕಾರಣಭೂತನಾದವನು ಒಬ್ಬನು ಇರಲೇಬೇಕು–ಅವನೇ ದೇವರು ಎಂದು ತಾರ್ಕಿಕರು ಸಾಧಿಸುತ್ತಾರೆ: ಧೃತಿಯೆಂದರೆ ಭೂಗೋಳ ಖಗೋಳ ಮೊದಲಾದ ವಸ್ತುಗಳನ್ನು ಧರಿಸುವ ಪುರುಷನಿರಬೇಕು (ಹಿಂದಸಾ. ೧೩೭). [ಸಂ.]

**ಧೃತಿಗಿಡಿಸು** 'ಧೃತಿಗೆಡಿಸು' ನೋ.

**ಧೃತಿಗಿಡು** 'ಧೃತಿಗೆಡು' ನೋ.

**ಧೃತಿಗುಂದು** (ಕ್ರಿ). ಎದೆಗುಂದು; ಧೈರ್ಯವನ್ನು ಕಳೆದುಕೊಳ್ಳು: ಪರಿಜನಮಾಮೆ ದಲ್ ನಿನಗೆ ನೀಂ ಧೃತಿಗುಂದದಿರು (ಕುಸುಮಾ. ೧೪-೧೧೮); ಪುರಹರನಿಟ್ಟ ಪುಲ್ಲ ಮುಱಿಯುಂ ಮುರವೈರಿ ವಿರಿಂಚಿ ಮುಖ್ಯ ನಿರ್ಜರರದ ನೆತ್ತಲಾಱದೆ ವಲಂ ಧೃತಿಗುಂದಿದರ್ (ರಾಜಶೇ. ೧೩-೩೪).
[ಧೃತಿ + ಕುಂದು$_1$]

**ಧೃತಿಗೆಡಿಸು, ಧೃತಿಗಿಡಿಸು** (ಕ್ರಿ). ಅಧೈರ್ಯವನ್ನುಂಟುಮಾಡು; ಎದೆಗೆಡಿಸು: ಅತಿಕಾಂಕ್ಷೆಯೆಂಬಗಳತಿ ವಿಸ್ಮಯವಾಗಿ ಕ್ಷಿತಿಯನೊಡೆದು ನಾಗತಿಯು ಧೃತಿಗೆಡಿಸುತ ಬಳಸಿಹುದಾ ಪುರದೊಳು (ತ್ರಿಪುಸಾಂ. ೪-೪೦); ದಿನದಿಂದ ದಿನಕ್ಕೆ ಆತನನ್ನು ಧೃತಿಗೆಡಿಸುತ್ತಿದ್ದವು ಅಂಥವೇ (ವಾತ್ಸಲ್ಯ. ೩೭೬). **ಧೃತಿಗಿಡಿಸು**: ಮೂದಲಿಸಿ ಧೃತಿಗಿಡಿಸಿ ಬೆಂಕೊಣ್ಣು ಮತ್ತಂ (ಎಕ. II, ೩೪೦-೩೭; ಸು. 1175). [ಧೃತಿ + ಕೆಡಿಸು$_1$]

**ಧೃತಿಗೆಡು, ಧೃತಿಗಿಡು** (ಕ್ರಿ). ಧೈರ್ಯವನ್ನು ಕಳೆದುಕೊಳ್ಳು; ಅಧೈರ್ಯಪಡು; ಎದೆಗುಂದು: ಮದನ ಮದೋದ್ರೇಕದಿನೆನ್ನಿದಿರೊಳ್ ಧೃತಿಗೆಟ್ಟು ಸಿಗ್ಗಿನಿಂ ತನ್ನೊಳ್ ಷೊಲ್ಲದನೆತ್ತಾಚರಿಸುಗುಮೋ (ಕಾದಂಪೂ. ೮೩೫); ಮತಿಗೆಟ್ಟೆನು ಮನದ ವಿಕಾರದಿಂದ ಧೃತಿಗೆಟ್ಟೆನು ಕಾಯವಿಕಾರದಿಂದ (ಬಸವ. ೪೩); ವ್ರತಿಗಳ್ . . . ಮತಿಗೆಟ್ಟರ್ ಧೃತಿಗೆಟ್ಟರ್ (ಗಿರಿಕ. ೮-೩೩); ಇನಿತು ಧೃತಿಗೆಡಲೇಕೆ (ಬಸಪು. ೩೫-೩೩); ಪಟುಭಟರು ಧೃತಿಗೆಟ್ಟು ದೆಸೆದೆಸೆಗಳಲಿ ಮಿಗೆ ಸಾಲಿಟ್ಟು ಸರಿದರು (ಕುವ್ಯಾಕ. ೧೯-೯೮). **ಧೃತಿಗಿಡು**: ಧೃತಿಗಿ[ಪಾಠಾಂ. ಗೆ]ಡಬೇಡ ಧೈರ್ಯವನಾಂತು ಬಾರೆಂದು ರತಿರಾಜ ಮೂದಲಿಸಿದನು (ಮೋಹತ. ೧೩-೯೩). [ಧೃತಿ + ಕೆಡು$_1$]

**ಧೃತಿತ್ರಯ** (ನಾ). [ಯೋಗ] ಸಾತ್ತ್ವಿಕಿ, ರಾಜಸಿ ಮತ್ತು ತಾಮಸಿ ಎಂಬ ಮೂರು ಬಗೆಯ ಧೃತಿ,–ಯೋಗಾಂಗವಾದ ಧಾರಣ; ಈ ಯೋಗಾಭ್ಯಾಸದಿಂದ ಮನಸ್ಸು, ಪ್ರಾಣ, ಇಂದ್ರಿಯವ್ಯಾಪಾರಗಳನ್ನು ಹತೋಟಿಯಲ್ಲಿಟ್ಟುಕೊಂಡು ಬೇರೆ ಕಡೆಗೆ ತಿರುಗದಂತೆ ಮಾಡುವುದು ಸಾತ್ತ್ವಿಕೀಧೃತಿ; ಫಲಾಪೇಕ್ಷೆಯಿಂದ ಮನಸ್ಸು, ಪ್ರಾಣ, ಇಂದ್ರಿಯಂಗಳನ್ನು ಬಿಗಿಹಿಡಿದು ಮಾಡುವ ಧ್ಯಾನ ರಾಜಸೀಧೃತಿ; ನಿದ್ರೆ, ಭಯ, ಶೋಕ, ವಿಷಾದ, ಮದ ಇವೊಂದನ್ನೂ ಬಿಡದೆ ದುರ್ಬುದ್ಧಿಯಿಂದ ಕೂಡಿರುವುದು ತಾಮಸೀಧೃತಿ. ಹೀಗೆ ಭಗವದ್ಗೀತೆಯಲ್ಲಿ ಧೃತಿತ್ರಯದ ವಿವರಣೆ ಇದೆ: ತಾಪತ್ರಯ ಕರ್ಮತ್ರಯ . . . ಧೃತಿತ್ರಯ ಗುಣತ್ರಯ ಶಕ್ತಿತ್ರಯ ಕಾಲತ್ರಯ (ವೇದಾಂಪ. ೪-೧೮-೪). [ಧೃತಿ + ತ್ರಯ]

**ಧೃತಿಯುಕ್ತ** (ಗು). ೧. =ಧೃತಿಯುತ ೧. (ನಾ). ೨. =ಧೃತಿಯುತ ೨: ಧೃತಿಯುಕ್ತರ್ ಶೌರ್ಯಯುಕ್ತರ್ ಕುರುಕುಲಧರಣೀಶರ್ಕಳ್ (ಮಹಾನೀ. ೧೩-೯). [ಸಂ.]

**ಧೃತಿಯುತ** (ಗು). ೧. ಧೀರತೆಯನ್ನು ಹೊಂದಿದ; ಧೈರ್ಯವುಳ್ಳ: ಧೃತಿಯುತಕ್ಷತ್ರಿಯನು ವೇದಪ್ರತಿಯುತಶ್ರೋತ್ರಿಯನಹಿಂಸಾರತನು ಮಹಪುರುಷನು (ಕುವ್ಯಾಅ. ೩೩-೪೧). (ನಾ). ೨. ಧೀರ; ಧೈರ್ಯಶಾಲಿ: ಪತಿಯ ಮುಸುಕಿದನಾ ಸುಮಂತನು ಧೃತಿಯುತರ ನೆಱೆಗಾಹಲಿರಿಸಿದ ಸುತರ ಬಳಿಗಟ್ಟಿದನು ದೂತರ ಬೇಗ ಬಹುದೆನುತ (ಕೌಶಿರಾ. ೪-೭).
[ಸಂ.]

**ಧೃತಿಯೋಗ** (ನಾ). =ಧೃತಿ ೧೪: ಧೃತಿಯೋಗಕೆ ರವಿ: ೪೨ ಗಳಿಗೆ ಮೇಲೆ ತ್ಯಾಜ್ಯಾ (ಭಾಸ್ಕರ. ೭೦-೮). [ಧೃತಿ + ಯೋಗ]

**ಧೃತಿವೆಟು** (ಕ್ರಿ). ಉತ್ಸಾಹದಿಂದ ಕೂಡಿರು; ಉಲ್ಲಾಸಗೊಳ್ಳು; ಸಂಭ್ರಮಪಡು: ಧೃತಿವೆತ್ತಾತವದಿಗ್ಜಯೋದ್ಯಮಭವದ್ಭೇರೀಪ್ರಣಾದಕ್ಕೆ ಕಂಪಿತಮಪ್ಪಾದಿಯ ಕೂರ್ಮನಂ ಫಣಿಪನಂ . . . ಭೂಮಿ ಬಿಸುಟ್ಟು ಬಂದು ಪಿರಿದುಂ ನಿಶ್ಚಿಂತದಿಂ ಸುಪ್ರತಿಷ್ಠಮಾಗಿರ್ಪುದು ಸುಪ್ರತಿಷ್ಠಿತ ಪಟಿಷ್ಠೋದ್ದಂಡದೋರ್ದಂಡದೊಳ್ (ಅರ್ಧನೇ. ೪-೩೪); ಧೃತಿವೆತ್ತಂ ನೃಪಕಂತುವೀ ತೆಱದಿಂ (ಕುಸುಮಾ. ೧೦-೧೦೪). [ಧೃತಿ + ಪೆಱು$_1$]

**ಧೃತಿಹೀನ** (ನಾ). ಧೈರ್ಯವಿಲ್ಲದವನು : ಕ್ಷಿತಿಯೊಳು ಧನಾಢ್ಯರುಂ ಸಕಲ ವ್ಯವಹಾರಿಗಳು ಧೃತಿಹೀನರೆರಡನೆ ಕುಬೇರರೆಂದೆನಿಸುವರು. . .ವೈಶ್ಯರು (ನವಮೋ. ೨-೪೧). [ಧೃತಿ + ಹೀನ]

**ಧೃಷ್ಟ** (ಗು). ೧. ಧೈರ್ಯವುಳ್ಳ ; ಕೆಚ್ಚಿನ ; ಆತ್ಮವಿಶ್ವಾಸದ. ೨. ದಯೆಯಿಲ್ಲದ ; ಕ್ರೂರವಾದ ; ಒರಟಾದ. ೩. ನಾಚಿಕೆಯಿಲ್ಲದ ; ಲಜ್ಜೆಯಿಲ್ಲದ. ೪. ವಿಷಯಲಂಪಟನಾದ ; ದುರ್ಮಾರ್ಗಿಯಾದ. ೫. ಮುಂದೆ ನುಗ್ಗುವ ಸ್ವಭಾವದ ; ಧಾರ್ಷ್ಟ್ಯದ ; ದುಡುಕಂತನದ. ೬. ದುರಭಿಮಾನದ; ಗರ್ವದಿಂದ ಕೂಡಿದ. (ನಾ). ೭. ಆತ್ಮವಿಶ್ವಾಸವುಳ್ಳವನು ; ಗಟ್ಟಿಗ ; ಧೈರ್ಯಶಾಲಿ : ಧೃಷ್ಟಂ ವರವಕ್ರೋಕ್ತಿವಿಶಿಷ್ಟಂ . . . ಎನಿಪ್ಪ ದೂತಮುಖ್ಯನಂ (ಪಾರ್ಶ್ವಪು. ೨-೫೦). ೮. ಧಾರ್ಷ್ಟ್ಯವುಳ್ಳವನು; ಉದ್ಧಟ; ದಂಡಂಕಿನವನಂ : "(ಧೃಷ್ಟ) ನಾತಂ ವಿಯಾತಂ" (ವಸ್ತುಕೋ. ೯೯-೭) ; "ವಿಯಾತಾ. ಧೃಷ್ಟಃ – ಈ ೨ ಬಗೆಯದವಂ" (ಹಲಾಯು. ೬೧-೨೦೭); "ಧೃಷ್ಟಃ, ಧೃಷುಃ, ವಿಯಾತಃ– ೩ ದಿಟ್ಟತನವುಳ್ಳವನ ಪೆಸರು" (ಸಿದ್ಧಾಂತಿ. ೩೨೯) ; ಈ ಕಥೆ ಗುಣ್ಪುವೆತ್ತುದವರುಂ ಜ್ಞಾನರ್ಧಿಸಂಪನ್ನರೆಂದಿರದಾಂ ಧೃಷ್ಟನೆನೀ ಕಥಾಬ್ಧಿಯುಮನೇನೀಸಲ್ವೆನಂದಂದೆನೋ (ಆದಿಪು.೧-೩೫). ೯. [ಕಾವ್ಯಮೀ] ದಕ್ಷಿಣ, ಧೃಷ್ಟ, ಅನುಕೂಲ ಮತ್ತು ಶಠ ಎಂಬ ನಾಲ್ಕು ಬಗೆಯ ಶೃಂಗಾರನಾಯಕರಲ್ಲಿ ಒಂದು ವಿಧ; "ಧೃಷ್ಟನೆಂದರೆ, ತನ್ನ ಪತ್ನಿಯಲ್ಲಿ ಅಪರಾಧ ಮಾಡಿ ದೋಷಗಳು ಸ್ಪಷ್ಟವಾಗಿದ್ದು ತಾನು ಆಕ್ಷೇಪಣೆಗೆ ಗುರಿಯಾದರೂ ನಾಚಿಕೆ ಪಟ್ಟುಕೊಳ್ಳದವನಂ" (ಕೈಪಿಡಿ. ೨೦೦); ಆಗಳರಸನಾ ಧೃಷ್ಟನ ಖಾತ್ಮಾಸವಿಮಾಕರಣಾನ್ಯಾಯಮಾದ ಮುಳಿಸುಂ ತಿಳಿಪುಮಿರ್ವರ್ಗಮುಬ್ಬೆಗಮುಂ ಪಡೆದುದೆಂದಿಂತೆಂದಂ (ಚಂದ್ರಪು. ೮-೫೪ವ) ; ಶೃಂಗಾರನಾಯಕರಲ್ಲಿ ದಕ್ಷಿಣ, ಧೃಷ್ಟ, ಅನುಕೂಲ, ಶಠ ಎಂದು ನಾಲ್ಕು ವಿಧ (ಸಂನಾಟ. ೧೮).
[ಸಂ.]

**ಧೃಷ್ಣು** (ಗು). ೧. ಕೆಚ್ಚಿನ; ದಿಟ್ಟತನವುಳ್ಳ; ಧೈರ್ಯವುಳ್ಳ. ೨. ನಾಚಿಕೆಯಿಲ್ಲದ ; ನಿರ್ಲಜ್ಜೆಯ. ೩. ಬಲವುಳ್ಳ ; ಪ್ರಭಾವವುಳ್ಳ. (ನಾ). ೪. ದಿಟ್ಟತನವುಳ್ಳವನು ; ಉದ್ಧಟ : "ಧೃಷ್ಟ, ಧೃಷ್ಣು, ವಿಯಾತ" (ನಾಚಿರಾ. ೬); "ಧೃಷ್ಟಃ, ಧೃಷ್ಣುಃ, ವಿಯಾತಃ–೩ ದಿಟ್ಟತನವುಳ್ಳವನ ಪೆಸರು" (ಸಿದ್ಧಾಂತಿ. ೩೨೯). [ಸಂ.]

**ಧೇನಿಕೆ, ಗೇಣಿಕೆ, ಗೇನಿಕೆ** (ನಾ). ಯೋಚನೆ; ಧ್ಯಾನಿಸುವಿಕೆ : ಎದೆ ಶೀವಿ, ಕಣ್ ತುಂಬಿ ನಲುಮೆ ಹರಿದಾಡಿತ್ತು ತಾಯ ಧೇನಿಕೆ, ಎಣಿಕೆ ಆದರಲ್ಲಿ ಮುಳುಗೆ (ಬಿಪಾಸಿ. ೩೭-೮). **ಗೇಣಿಕೆ:** "ಗೇಣಿಕೆ–ವಿಚಾರ; ಕಲ್ಪನೆ" (ಜಾನಕೋ. ೫೦). **ಗೇನಿಕೆ :** ಕೈಯೋಗೆ ಕಾಸಿದ್ದರೆ, ಕುಣಿದಾಡಿಸಿಬಿಡುವೆ. ಮತ್ತೆ ಮನಸ್ಸಿನೊಳಗೆ ಗೇನಿಕೆ ಹಾಕ ಹತ್ತಿದ (ಕೊತಕಾ. ೩೨). 'ಧೇನಿಸು' ಪರಾ.
[<ಧ್ಯಾನ +– ಇಕೆ]

**ಧೇನಿಸು, ಗೇಣಿಸು, ಗೇನಿಸು, ಜಾನಿಸು** (ಕ್ರಿ). ೧. ಚಿಂತಿಸು ; ಧ್ಯಾನ ಮಾಡು : ಈಸು ಪುಣ್ಯವ ಮಾಡಿ ದಿನದಿನ ಧೇನಿಸೆ (ವೃಕಂಂವ. ೩-೪೪) ; ಮನೋಭಾವವ ಧೇನಿಸಿ ನೋಡುತ್ತ (ವಿದಾಕ್ಕ. ೧-೪೪) ; ಅಹರ್ನಿಶೀ ಧೇನಿಸುವೆ ನಿನ್ನನ್ನು (ಜಗದಾ. ೧೬೮) ; ತವುಗೊಗ್ಗಿದುದನು ಧೇನಿಸಿ ಜೀರ್ಣಿಸಿ ನಭದಲಿ ನೆಗೆದು ಸೊಬಗನು ವರ್ಣಿಸಿ (ಚಿಂತನ. ೮೦-೨೩). ೨. ಯೋಚಿಸು; ವಿಚಾರಿಸು ; ಬಗೆ : ಧೇನಿಸಿದರೀ ಜಗದೊಳೆಲ್ಲಿಯು ಕಾಣೆ ನಿನಗನುರೂಪ ಪುರುಷನ (ಪಾರ್ವಪ. ೨-೪೭) ; ಪದ್ಮಾವತಿಯು ಮನದಲ್ಲಿ ಧೇನಿಸಿದಳು (ಸಮುಜೀ. ೮೭). ೩. ನೆನೆಸಿಕೊಳ್ಳು ; ಸ್ಮರಿಸು : ಆಗ ಕಂಡ ಅವಳನ್ನು ಅನಂತನು ಚೆನ್ನಾಗಿ ಧೇನಿಸಿಕೊಂಡ (ಕಾಗಿಕ. ೫೩). **ಗೇಣಿಸು :** ೨. ಅವಳನ್ನು ಮುಂದೆ ಕೂಡ್ರಿಸಿಕೊಂಡು ಬಲು 'ಖುಷಿ'ಯಿಂದ ಮಕ್ಕಳಾದ ಮೇಲೆ ಉತ್ತಮ ನಡೆತನವನ್ನು ಮಾಡೋಣವೆಂದು ಗೇಣಿಸುತ್ತಾನೆ (ಕನ್ನಜಾ. ೬೦). **ಗೇನಿಸು :** ೨. ಏನು ಮಾಡಲಿ . . . ಎಂದು ಮನಸ್ಸಿನೊಳಗೆಯೇ ಗೇನಿಸುತ್ತಿದ್ದಳು (ಕೊತಕಾ. ೪೩) ; ಬಿದ್ದುಕೊಂಡೇ ಗೇನಿಸತೊಡಗಿದಳು (ಮಾಲತಿ. ೧) ; ಗೇನಿಸಿ ಗೇನಿಸಿ ಜಂಪುಹತ್ತಲು ಒಂದು ಕನಸು ಸುಳಿಯಿತು (ಪವನ. ೩೭). **ಜಾನಿಸು:** ೧. "ಜಾನಿಸು–ಧ್ಯಾನೇ" (ಶಮಧಾ) ; ದೇವರಂ ಜಾನಿಸುತ್ತಂ ಪಂಚನಮಸ್ಕಾರಮಂ ಮನದೊಳುಚ್ಚರಿಸುತ್ತಂ (ವಡ್ಡಾರಾ. ೧೦೦-೧೭) ; ಜಿನೇಂದ್ರನಂ ಬಗೆವ ಮನಂ ಗಡಂ ಪಳಿಗುಬ್ಬಿ ಜಾನಿಪ ಕಣ್ಗಡಂ (ಆದಿಪು. ೨-೬೦) ; ಮುನ್ನಿನಂದದೊಳ್ ಮನಂಗೊಂಡು ಜಾನಿಸುತಿರ್ದಂ (ಕಾದಂಉ. ೪೪೭). ೨. ಈ ನುಡಿಯನ್ನು ಕೇಳಿ ಭೀಷ್ಮಕಭಗಿನಿ ಜಾನಿಸಿ ನುಡಿದಳು ಜಾಣೆ (ಕಾಮುಕ. ೧-೨೭) ; ಎಂದಿಗವನ ಪಡಿಮೊಗದೊಳು ಸಂದಪೆನೆಂದೆದೆವಿಡದೆ ಜಾನಿಪಳು (ಹದಿಬ. ೭-೨೯) ; ರಘುಪ್ರವರನುಂ ಮನಮಂಜುಗಿ ಇನಿಸುಂ ಪೊಟ್ಟು ಜಾನಿಸಿ (ರಾಮಾಶ್ವ. ೨೦-೨೪). ೩. ಆನಂದವ ಮಾಡು ಮಾಡುತೊಪ್ಪುವುತ್ತಮಾಂಗಿಯಂ ಜಾನಿಸಿದಂ ನೃಪಾಲಕಂ (ಉದ್ಭಟ. ೩-೧೧೧). ℙ ಇಲ್ಲಿ ಒಟ್ಟಿಗೆ ಪರಿಶೀಲಿಸಿರುವ 'ಧೇನಿಸು' ಎನ್ನುವ ಶಬ್ದದ ಪರ್ಯಾಯರೂಪಗಳ ವ್ಯುತ್ಪತ್ತಿಯ ಬಗ್ಗೆ ಅನುಮಾನವಿದೆ. 'ಧೇನಿಸು', 'ಜಾನಿಸು' ಎನ್ನುವ ರೂಪಗಳು 'ಧ್ಯಾನ' ದಿಂದಲೂ, 'ಗೇಣಿಸು', 'ಗೇನಿಸು' ಎನ್ನುವ ರೂಪಗಳು 'ಜ್ಞಾನ' ದಿಂದಲೂ ನಿಷ್ಪನ್ನವಾಗಿರಬೇಕು. ಇದು ಪರಿಶೀಲನಾರ್ಹ.
[<ಧ್ಯಾನ +– ಇಸು]

**ಧೇನು** (ನಾ). ೧. ಆಕಳು ; ಹಸು ; ಗೋವು : ಮೊಸರಂ ದುಗ್ಧಮನಾಜ್ಯಮುಂ ಸೆಗಣಮಂ ಧಾನ್ಯಂಗಳಂ ಧೇನುವಂ . . . ಬಸೆಯಂ ತನ್ನಿದಿರಾಗಿ ಬರ್ಪುವವ(ನಿಂ)ಕಣ್ಬಂತುಟತ್ಯುತ್ತಮಂ (ಲೋಕೋಪ. ೧೨-೪೮); ಹರಿಶ್ಚಂದ್ರ ಭೂಭುಜಂ ತನ್ನ ಸಾರ್ದರ . . . ತನ್ನಂತೆ ಮಾಳ್ಪನ್ನತಿಕೆಯಂ ಕಂಡು . . . ಮುಗುವಟ್ಟುದಮರರ ಧೇನು [ಪಾಠಾಂ. ಹಯಂ] (ಹಚಕಾ. ೧-೪೨) ; ಧೇನುಮಹಾತ್ಮ್ಯೆಯನಿತೊಂದು ದೊಡ್ಡಿತೇಂ (ರಾಮಾಶ್ವ. ೧೦೪-೮) ; ನಾನು ಅತಿಶಯವಾದ ಸ್ತುತಿಯ ಮೂಲಕ ಧೇನುವಿಗೆ ಆಹ್ವಾನ ಕೊಡುತ್ತೇನೆ (ಪುಂಕ್ಕಾರ. ೨೭೯). ೨. ಹೊಸದಾಗಿ ಕರುಹಾಕಿರುವ ಹಸು ; ಈದ ಆಕಳು ; ಎಳಗಂದಿ : "ಧೇನು ನವಸೂತಿ . . . ನೈಚಿಕಿಯೆನಿಕುಂ" (ವಸ್ತುಕೋ. ೯೦-೭) ; "ಧೇನುಃ, ನವಪ್ರಸೂತಾ–ಈ ೨ ಎಳಗಂದಿ" (ಹಲಾಯು. ೪೫-೧೧೫) ; "ಎಳಗಂದಿ ಧೇನುವಕ್ಕು" (ಮಂಗರಾ. ೫೪-೪). ೩. ಬಯಸಿದುದನ್ನು ಕೊಡುವ ದೇವಲೋಕದ ಹಸು; ಕಾಮಧೇನು: "ಸುರಭಿ ಸುರಪಶು ಧೇನುವೆನೆ ಕಾಮಧೇನುವಿಗೆ ಪೆಸರೆನಿಕ್ಕುಂ" (ಮಂಗರಾ. ೯-೩೦). ೪. ಹೆಣ್ಣಾನೆ ; ಪಿಡಿ : "ವಶಾ ಕರಿಣೀ ಧೇನು ಕರೇಣುಗಳ್ ಗಜವಧೂಪರ್ಯಾಯದೊಳ್ ವರ್ತಿಕುಂ" (ವಸ್ತುಕೋ. ೮೭-೩೦). ೫. ಬ್ರಾಹ್ಮಣರಿಗೆ ಕೊಡುವ ಹಸು ಅಥವಾ ಅದರ ಬದಲಾಗಿ ಇನ್ನು ಯಾವುದಾದರೂ ವಸ್ತುಗಳ ದಕ್ಷಿಣೆ,–ದಾನ. ೬. ಭೂಮಿ. ೭. ಖಡ್ಗ ; ಅಸಿಧೇನು : ಮುನಿಯಂತೆ ಕರಿಯಂತೆ ಶಶಿಯಂತೆ ಭಟನಂತೆ ವನಕುಸುಮದಂತೆಯಾಶಾನ್ಯವ್ಯಭವದಂತೆ ಘನತರವ್ರತವಶಾರೋಹಿಣೀ ಧೇನು ಸಂಸುರಭಿ ವೃಷಯುಕ್ತವಾಗಿ . . . ವೈಶಾಖಶಬ್ದದೊಳ್ ಪ್ರಜವಮೆಸೆದುದು (ಚಿಬಪು. ೧೧-೧೮). [ಸಂ.]

**ಧೇನುಕ** (ನಾ). ೧. ಕತ್ತೆಯ ಆಕಾರದ ಒಬ್ಬ ರಾಕ್ಷಸ ; ಧೇನುಕಾಸುರ : ಆ ಮಹಾ ತಾಳವನಮಂ ಧೇನುಕನೆಂ ರಾಸಭರಾಕ್ಷಸಂ ಕಾದಿರ್ಪಂ (ಜಗವಿ. ೪-೩೯ವ) ; ಸುರರು ಭಾಪೆನೆ ತಾಳವನವನು ಬೆರಸಿ ಮುಟಿದರು ಬಾಲಕೇಳಿಯ ಪರಿಣತರು ಧೇನುಕನಸಚ್ಯುತರಾಮರುರವಣಿಸಿ (ನಿಘಾಗ. ೧೧-೧೫ ಸೂಚನೆ). ೨. [ಕಾಮಶಾ] ಒಂದು ವಿಧವಾದ ರತಿಬಂಧ ; ಹಸುವಿನಂತೆ ಅಂಬೆಗಾಲಿನ ಬಂಧದಲ್ಲಿರುವ ಸ್ತ್ರೀಯನ್ನು ಪುರುಷನು ಗೂಳಿಯ ರೀತಿಯಲ್ಲಿ ಸಂಭೋಗಿಸುವುದು : ಸ್ತ್ರೀಯು ಪಶುವಿನ ಹಾಗೆ

ವ್ಯಗಾಲು ಮೇಲೆಯೆರಡು ಕೈಗಳನಿಕ್ಕಿ ಮೆಲ್ಲನೆ ನಡೆಯಲ್ಕೆ ಗೂಳಿಯಂತೆ ಎತ್ತುಗಳ ರವಂಗೆಯ್ಯುತ್ತಾ ಪುರುಷ ಧ್ವನಿಸುತ್ತಾ ನಡೆಯುತ್ತಿರೆ ಧೇನುಕ ವೆಂಬ ಕರಣಂ (ಕಾಮಶಾ. ೬-೧೪೯). [ ಸಂ. ]

**ಧೇನುಕಕರಣ** (ನಾ). = ಧೇನುಕ ೨ : ಬಾಗಿ ಪದಯುಗಕೆ ಕಾಮಿನಿ ಕೆಯ್ಗಳ ನಿಟ್ಟೊಯ್ಯನಡಿಯಿಡಲ್ ಪ್ರಿಯನಡರ್ದಿಂಬಾಗಿ ತಳವೂರು ಪೃಷ್ಠ ವಿಭಾಗದೆ ಮನ ವೊಲ್ದು ನೆರೆಯೆ ಧೇನುಕಕರಣಂ ಪುನ್ನವಿ. ೧೪-೩೩). [ ಸಂ. ]

**ಧೇನುಕುಚ** (ನಾ). ಹಸುವಿನ ಕೆಚ್ಚಲು : ಸುಗಂಧಿಯೆಂಬ ವಿಷಯಮುಂಟು ದಱೊಳ್ ಕರಪೀಡನಂ ಧೇನುಕುಚದೊಳ್ ಬಂಧನಂ ಕಚದೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಚಂದ್ರಪು. ೩-೯ವ). [ ಧೇನು + ಕುಚ ]

**ಧೇನುಕೆ** (ನಾ). ೧. ಹೊಸದಾಗಿ ಕರು ಹಾಕಿರುವ ಹಸು; ಈದ ಆಕಳು; ಎಳಗಂದಿ. ೨. ಹೆಣ್ಣಾನೆ ; ಪಿಡಿ : "ಪಿಡಿಯಾನೆಯಲ್ಲಿಯುಂ ಧೇನುಕಾ, ಗಣಿಕಾ ಎಂಬುದು" (ಹಲಾಯು. ೧೩೩-೧೩). ೩. ಆನೆಯ ಹೆಣ್ಣು ಮರಿ ; ಮರಿ ಹೆಣ್ಣಾನೆ : "ಎಳೆಯ ಪಿಡಿಯಾನೆಯಲ್ಲಿ ಅನುಗೊಳಿಸಿ ಧೇನುಕಾ ಗಣಿಕಾಯೆನಿಪುದು"(ಮಂಗರಾ.೧೩೯-೭). ೪. (ಯಾವುದಾದರೂ) ಹೆಣ್ಣುಪ್ರಾಣಿ. ೫. ಕಠಾರಿ ; ಸುರಿಗೆ ; ಚೂರಿ : "ಬಾಲಕರೇಣು ಶಸ್ತ್ರ ದನುಜಂ ಪಶುವಿಂತಿವು ಧೇನುಕಾಖ್ಯ" (ನಾನಾರ. ೯೯). [ ಸಂ. ಧೇನುಕಾ ]

**ಧೇನುವಿಗ್ರಹಣ** (ನಾ). ಹಸುಗಳನ್ನು ಸೆರೆಹಿಡಿದೊಯ್ಯುವುದು ; ಗೋಗ್ರಹಣ : ಧೇನುವಿಗ್ರಹಣವನು ಮಾಡಿದನಂದು ಕುರುರಾಯ (ಕುವ್ಯಾವಿ. ೪-೬೧). [ ಸಂ. ]

**ಧೇನುಷ್ಯೆ** (ನಾ). ೧. ಸಾಲ ತೀರುವವರೆಗೂ ಹಾಲು ಕರೆದುಕೊಳ್ಳಲು ಸಾಲ ಕೊಟ್ಟವನ ವಶದಲ್ಲಿರುವ ಹಸು : "ಧೇನುಷ್ಯಾ-ಬಂಧಕೇ-ಸೆರೆ ಯಾಲ್ಲಿ ಸಿಕ್ಕಿದ ಆಕಳಿಗೂ ಅಡವು ಹಾಕಲ್ಪಟ್ಟ ಆಕಳಿಗೂ ಹೆಸರು" (ಸಿದ್ಧಾಂತಿ. ೩೯೫). ೨. ಕ್ಷೀರಾಗಾರದಲ್ಲಿರುವ ಹಸು. [ಸಂ. ಧೇನುಷ್ಯಾ ].

**ಧೇಯ** (ಗು).. ೧. ಇಡಬೇಕಾದ. ೨. ತೆಗೆದುಕೊಳ್ಳಬೇಕಾದ. ೩. ಉತ್ಪತ್ತಿಯಾಗುವ. (ನಾ). ೪. ಉತ್ಪತ್ತಿಯಾದುದು. [ ಸಂ. ]

**ಧೈಂಚ** (ನಾ). ಒಂದು ಬಗೆಯ ಸಸ್ಯ: ಮುಳ್ಳು ಜೀನಂಗಿ, ಧೈಂಚ (ಮೈಜಿಗಿ. ೬೯-೧೪೧೪). [ ? ]

**ಧೈಂಡಿ** (ನಾ). (ಮೊಸರು) ಗಟ್ಟಿಯಾದುದು ; ಗಡ್ಡೆ ; ಗರಣೆ : ಒಳ್ಳೆಯ ಹೆಪ್ಪು ಹಾಕಿದ ಧೈಂಡಿ ಮೊಸರು (ರಂಗಳ. ೧೩೬) ; ಅವರೆಕಾಯಿ ಹುಳಿ, ಹುರುಳಿ ಹಪ್ಪಳ ಮತ್ತು ಧೈಂಡಿ ಮೊಸರು (ಮನೋನಂ. ೩೧೦). [ ? ]

**ಧೈನುಕ** (ನಾ). ಹಸುಗಳ ಸಮುದಾಯ ; ಆಕಳ ಹಿಂಡು. [ ಸಂ. ]

**ಧೈರಿಯ** (ನಾ). ದಿಟ್ಟತನ ; "ಧೈರ್ಯ" (ಪ್ರಭಣ್ನ). [< ಸಂ. ಧೈರ್ಯ ]

**ಧೈರ್ಯ** (ನಾ). ೧. ದಿಟ್ಟತನ ; ಕೆಚ್ಚು ; ಎದೆಗಾರಿಕೆ : "ಧೈರ್ಯದೊಳು ಹೊನ್ನಿನೊಳು ಕ್ರೂರದೊಳು ... ಪರುಷವಕ್ಯ" (ಮಂಗರಾ. ೧೫೦-೫೧); ಎಲ್ಲಿತ್ತೊ ಧೈರ್ಯಮುಪಶಮಮೆಲ್ಲಿತ್ತೊ ಜಿತೇಂದ್ರಿಯತ್ವಗುಣಮೆಲ್ಲಿತ್ತೋ ಎಲ್ಲಿತ್ತೊ ನಿನ್ನ ಶೌರ್ಯಮದಲ್ಲಿತ್ತುಪಭೋಗರಾಗವಿಷಯದ್ವೇಷಂ (ಕಾದಂಪೂ.೭೭೫); ಮಱವುಗೆ ಕಾವಂ ಯುದ್ಧಧುರನ್ಧರಂ ಧೈರ್ಯಧರಾಧರಂ (ಸೌಇಇ. XI-i, ೯೨-೮; 1054 . ಧೈರ್ಯಂ ಘೋರತಪಂ ಪರೀಷಹ ಸಮೂಹಪ್ರಾಪ್ತಿಯೊಳ್ ಸಂದ ತಾತ್ಪರ್ಯಂ (ಚಂದ್ರಪು. ೧-೩) ; ಧೈರ್ಯಂ ಸರ್ವಪರೀಷಹಾನ್ವಯ ಜಯಂ (ಜೀವಸಂ. ೩-೩) ; ತಳಿರು ಬಾಡದೆ ಧೈರ್ಯಸುರುಜದ (ಕುವ್ಯಾಸ. ೧೪-೮೬) ; ಬಳಿಕ ಧೈರ್ಯಂ ಸರ್ವತ್ರಸಾಧನ ವೆಂಬ ವಿಳಸಿತ ವಾಕ್ಯಾರ್ಥವನು ತಿಳಿದವನೀಶ್ವರನಲೆವ ವಿಷಾದವ ತೊಳೆದು ವಿವೇಕಜಲದೊಳು (ಕುರಾಸಾಂ. ೪೩-೩೩) ; ನಡೆತಂದನಾ ವೀರಭದ್ರಂ ಧೈರ್ಯರಸಸಮುದ್ರಂ (ವೀಶೈಪು. ೩-೩-೪೩) ; ತೃಷ್ಣೆಯ ದೇವಿಯೆ ನಿನಗಿದೊ ನಮನವು ಧೈರ್ಯವಿಪ್ಲವಕಾರಿಯೆಂದೆ ಮೂರು ಲೋಕದ ನಾಥನಾದರು ವಿಷ್ಣುವು ವಾಮನನಾದ ನಿನ್ನಿಂದೆ (ಇಂಚಾಪ. ೧೪೩-೯೫). ೨. ಅಚಲವಾಗಿರುವುದು ; ಗಾಂಭೀರ್ಯ ; ನಿಶ್ಚಲತೆ ; ದೃಢತೆ : "ಪಾಷಾಣಮುಂ ಪರ್ವತಂ ಧೈರ್ಯಂ ಗ್ರಾವಸಮಾಜ ಯಂ"(ನಾನಾರ.೧೦೭ . ೩. ಸಹನೆ ; ಶಾಂತತೆ ; ತಾಳ್ಮೆ. [ ಸಂ. ]

**ಧೈರ್ಯಂಗಿಡು** ' ಧೈರ್ಯಂಗೆಡು ' ನೋ.

**ಧೈರ್ಯಂಗೆಡು, ಧೈರ್ಯಂಗಿಡು, ಧೈರ್ಯಗೆಡು** (ಕ್ರಿ). ಎದೆಗುಂದು ; ಅಧೈರ್ಯಪಡು ; ಧೈರ್ಯವನ್ನು ಕಳೆದುಕೊಳ್ಳು : ಧೈರ್ಯಂಗೆಟ್ಟಿತ್ತು [ಪಾಠಾಂ ಕೆಟ್ಟಿತ್ತು] ಸರ್ವಾಕ್ಷಮುಮೆನಿಪುದಱೊಳ್ವರ್ತಿಸುತಿರ್ಪೆನಿಂತೀ ತಿರ್ಯಗ್ಜಾತಿತ್ವದೊಳ್ (ಕಾದಂಉ. ೭೦೩) ; ಎಡರು ಬಂದಡಸಿರಲು ಧೈರ್ಯಂಗೆಡುವರೇ (ಕಾಶಿರಾ. ೯-೩೭). **ಧೈರ್ಯಂಗಿಡು** : ಮಱುಗಿಸೆ ಪರೀಷಹಂಗಳ್ ನೆಱೆ ಧೈರ್ಯಂಗಿಡುವರನ್ಯಯತಿಗಳ್ (ಸಮಪ. ೭-೩೦) ; ನಿಷ್ಕಂಪಿತಶರೀರನಾಗಿ ಧೈರ್ಯಂಗಿಡದಿರಲ್ವೇಟ್ಕುಂ (ವರ್ಧಪು. ೧೩-೧೧ವ). **ಧೈರ್ಯಗೆಡು** : ಇವನ ಕೆಡುನಿಬ್ಬರದ ಧಾಳಿಗೆ ಧೈರ್ಯ [ಪಾಠಾಂ. ಧಾತು]ಗೆಟ್ಟುದು ಕೂಡೆ ಕುರುಸೇನೆ (ಕುವ್ಯಾದ್ರೋ. ೧೬-೧೩). [ ಧೈರ್ಯ + ಕೆಡು$_1$ ]

**ಧೈರ್ಯಕ್ಷತಿ** (ನಾ). ಕೆಚ್ಚಿನ ನಾಶ,-ನಷ್ಟ ; ಎದೆಗೇಡು ; ಅಧೈರ್ಯ : ದುರ್ಯೋಧನನ ಮನದ ಧೈರ್ಯಕ್ಷತಿಗೆ ಮನಃಕ್ಷತನಾಗಿ ಸಿಗ್ಗಾಗಿ ತಲೆಯಂ ಬಾಗಿ ಧರ್ಮನಂದನನಿರೆ (ಗದಾಯು. ೬-೩೯ವ). [ ಧೈರ್ಯ + ಕ್ಷತಿ ]

**ಧೈರ್ಯಗುಂದು** (ಕ್ರಿ). ಧೈರ್ಯಕುಗ್ಗು : ಅಸಮಸಾಹಸಿ ಧೈರ್ಯಗುಂದದೆ ದೆಸೆಯ ನೋಡದೆ ಕಾದುತಿರೆ (ಕಾಶಿರಾ. ೩೬-೩೩).
[ ಧೈರ್ಯ + ಕುಂದು$_1$ ]

**ಧೈರ್ಯಗುಣ** (ನಾ). ಸ್ಥಿರತ್ವ ; ನಿಶ್ಚಲತೆ : ಕ್ಷಿತಿಪತಿಯ ಧೈರ್ಯಗುಣ ಪರ್ವತಮಂ ತಱಗೆಲೆಗಳೊಟ್ಟಲಂ ತೂಳ್ದುವವೋಲ್ ಅತಿವೇಗದೆ ಪಾಱಿಸಿದುದು ಸುತವಿರಹಪ್ರಳಯಪರುಷಪವನಾಘಾತಂ (ಚಂದ್ರಪು. ೫-೯).
[ ಧೈರ್ಯ + ಗುಣ ]

**ಧೈರ್ಯಗೆಡಿಸು** (ಕ್ರಿ). ಭಯಪಡಿಸು ; ಎದೆಗೆಡಿಸು : ಜರ್ಝರದ ಡಿಂಡಿಮ ಡಮರು ಪಟಹದ ಧರಧುರದ ದನಿ ಧೈರ್ಯಗೆಡಿಸಿತು ಸಕಲಸಾಗರವ (ಕುವ್ಯಾಕ. ೧೦-೮). [ ಧೈರ್ಯ + ಕೆಡಿಸು$_1$ ]

**ಧೈರ್ಯಗೆಡು** 'ಧೈರ್ಯಂಗೆಡು' ನೋ.

**ಧೈರ್ಯಗೊಳಿಸು** (ಕ್ರಿ). ಧೈರ್ಯವನ್ನು ತುಂಬು.
[ ಧೈರ್ಯಗೊಳ್ಳು + - ಇಸು$_3$ ]

**ಧೈರ್ಯಗೊಳ್ಳು** (ಕ್ರಿ). ಕೆಚ್ಚನ್ನು ಪಡೆದುಕೊಳ್ಳು, - ಹೊಂದು ; ಧೈರ್ಯಶಾಲಿಯಾಗು. [ ಧೈರ್ಯ + ಕೊಳ್ಳು$_1$ (< ಕೊಳ್$_1$) ]

**ಧೈರ್ಯದರಿದ್ರ** (ನಾ). ಕೆಚ್ಚನ್ನು ಕಳೆದುಕೊಂಡವನು ; ಎದೆಗುಂದಿದವನು ; ಎದೆಗೇಡಿ : ಘನವಿಕರ್ಮದ ವಿಲಗದಲಿ ನಿಜತನುಜಶೋಕದ ತಗಹಿನೊಳಗರ್ಜನನು ಧೈರ್ಯದರಿದ್ರನಾದನು (ಕುವ್ಯಾದ್ರೋ. ೮-೩೩).
[ ಧೈರ್ಯ + ದರಿದ್ರ ]

**ಧೈರ್ಯನಿಧಿ** (ನಾ). ಕೆಚ್ಚಿನ ಆಗರ,-ಆಶ್ರಯಸ್ಥಾನ ; ಬಹಳ ಧೈರ್ಯಶಾಲಿ ; ಅಚಲವಾಗಿರುವವನು: ಧೈರ್ಯನಿಧಿ ಕೊಂಡಕುಂದಾಚಾರ್ಯರ ಚರಣಂಗಳೊಲೆದು ನೆಲಮುಟ್ಟದ ತಾತ್ಪರ್ಯಮನಱಿದೆಂ (ಅರ್ಧನೇ. ೧-೧೪) ; ಅಡಿಗೆಱಗಿ ನಡೆದನಾ ಧೈರ್ಯನಿಧಿ ಭೂಪಾಲನು (ಹಚಕಾ. ೮-೬೦).
[ ಧೈರ್ಯ + ನಿಧಿ ]

**ಧೈರ್ಯಪರ** (ಗು). ೧. ಧೀರತ್ವವನ್ನು ಹೊಂದಿದ ; ಧೀರನಾದ : ಧೈರ್ಯಪರ ಗೃದ್ಧಪಿಂಛಾಚಾರ್ಯ ಪಟ್ಟಸಿಂಹನಂದಿ ಜಗತೀಖ್ಯಾತಾಚಾರ್ಯ ಪ್ರಭಾವಮತ್ಯಾಶ್ಚರ್ಯಮದಂ ಪೊಗಟ್ವಡಬ್ಜಜಂಗಮಸಾಧ್ಯಂ (ಮಹಾನೇ. ೧-೧೪). (ನಾ). ೨. ಧೀರ ; ಅಚಲನಾಗಿರುವವನು : ಧೈರ್ಯಪರಸ್ವಪರತಪಸ್ಕಾರ್ಯರ್ ತತ್ತ್ವಾರ್ಥಕರ್ತೃಗಳ್ ಜಿನಮತತಾತ್ಪರ್ಯರ್ (ಸುಕುಮಾ. ೧-೧೩). [ ಸಂ. ]

**ಧೈರ್ಯಯುತ** (ನಾ). = ಧೈರ್ಯಪರ: ಧೈರ್ಯಯುತಧರ್ಗರಸೇನಾ ಚಾರ್ಯರ್ . . . ದಯೆಗೆಯ್ಗೆ ವಿಮಳರತ್ನತ್ರಯಮಂ (ಧರ್ಮಾಮೃ. ೦-೦೩). [ ಸಂ. ]

**ಧೈರ್ಯವಂತ** (ನಾ). = ಧೈರ್ಯಶಾಲಿ: ಸುಕುಮಾರಸ್ವಾಮಿಯನಹೊ ಸೂರಾ ಅಹೊ ಮಹಾಪುರುಷ ಆಹೊ ಧೈರ್ಯವಂತ ಅಹೊ ಸಂಸಾರಭೀರು . . . ಎಂದು ದೇವತೆಗಳ್ ಪೊಗಟ್ಟಿ ಕಳಕಳಧ್ವನಿಯುಂಮಂ ದೇವದುಂದುಭಿಯ ರವಮುಮಂ ಯಶೋಭದ್ರೆ ನೋಡಿ (ವಡ್ಡಾರಾ. ೩೯-೩೦).

[ ಸಂ. ಧೈರ್ಯವತ್ ]

**ಧೈರ್ಯಶಾಲಿ** (ನಾ). ದಿಟ್ಟತನವುಳ್ಳವನು ; ಕೆಚ್ಚು ತುಂಬಿದವನು : ಅವನು ತುಂಬ ಧೈರ್ಯಶಾಲಿ (ರೂಢಿ). [ ಸಂ. ಧೈರ್ಯಶಾಲಿನ್ ]

**ಧೈರ್ಯಸ್ಖಲನ** (ನಾ). ಎದೆಗೆಡುವಿಕೆ ; ಹೆದರುವಿಕೆ : ಜಲಪ್ರಪೃಷ್ಟಮಾಟ್ದು ಧೈರ್ಯಸ್ಖಲನಾರ್ಥಂ ಬೆಟ್ಟುಗಳ್ ಸಿಡಿಲ್ದೊಡೆದು ಪೆರ್ಮಟೆಗಳಿಗಿದೊಡೆ ಯೋಗೋತ್ಕಲಿತಮನರ್ ಬಯಲೋರ್ಪರ್ಥ್ಯಾಗಮದೊಳ್ (ಪುಲ್ಲಶಾ. ೩-೧೦೩). [ ಧೈರ್ಯ + ಸ್ಖಲನ ]

**ಧೈರ್ಯಸ್ಥ** (ನಾ). ಭಯಪಡದವನು ; ಧೈರ್ಯವನ್ನು ಕಳೆದುಕೊಳ್ಳದವನು ; ಧೈರ್ಯಶಾಲಿ : ಅವನು ಬಹಳ ಧೈರ್ಯಸ್ಥನಾದ ಮನುಷ್ಯ (ರೂಢಿ). [ ಸಂ. ]

**ಧೈರ್ಯಾವಲಂಬೆ** (ನಾ). ದಿಟ್ಟತನವನ್ನು ಅವಲಂಬಿಸಿರುವವಳು ; ಧೀರೆ : ಧೈರ್ಯಾವಲಂಬೆಯೆನಿಸಿದ ಭಾರ್ಯೆಯ ಧೀರಾಭಿಧಾನಮಂ ತಾಳ್ದುಗುಂ (ಶೃಂಗಾರ. ೩-೩೭).

[ ಸಂ. ಧೈರ್ಯಾವಲಂಬಾ ( ಧೈರ್ಯ + ಅವಲಂಬ + – ) ]

**ಧೈವತ** (ನಾ). [ಸಂಗೀತ] ಸಪ್ತಸ್ವರಗಳಲ್ಲಿ ಆರನೆಯದು : ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಗಳೆಂಬ ಸಪ್ತಸ್ವರಮುಮಂ (ಅಜಿಪು. ೫-೩೦ವ) ; ಶೃಂಗಾರಾರ್ದ್ರಂ ಕಕುಂಭಜನಿತಂ ಧೈವತಂ ಸಂಗ್ರಹ ನ್ಯಾಸಾಂಗಂ . . . ಮಧ್ಯಮಂ ಮಂದ್ರಮೆಂಬೀ ಪಾಂಗಿಂ ವೇಳಾವಳಿಯ ನೊಲವಿಂ ಪ್ರೌಢೆ ಪಾಡುತ್ತುಮಿರ್ದಳ್ (ಲೀಲಾವ. ೩-೩೦) ; ಮಧ್ಯಮ ಧೈವತ ಷಡ್ಜ ಪಂಚಮ ನಿಷಾದ ರುಷಭ ಗಾಂಧಾರಂಗಳೆಂಬ ಸಪ್ತಸ್ವರ ಸಂಯೋಗಸಂಜಾತ ದೇಶೀಯರಾಗಂಗಳಂ . . . ವಲಿ ಹವಣಿ ರಾಯಂ ಗಳಿಂದಾಳಾಪನಂಗೆಯ್ದು (ಬಾಳಪು. ೯-೧ ವ) ; ಷಡ್ಜಮಾ ಋಷಭಮಾ . . . ಧೈವತಂ ಸುನಿಷಾದಮೋರಂತೆ ಸಪ್ತಸ್ವರಂಗಳಕ್ಕು (ಮಂಗರಾ. ೩೩-೩) ; ಕ್ರಮವಾಗಿ ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದ ಎಂದು ಸಪ್ತಸ್ವರಗಳ ಹೆಸರುಗಳು (ಸಂಗೀಜಂ. ೦೫).

[ ಸಂ. ]

**ಧೊಕ್** (ನಾ). ಒಂದು ಅನುಕರಣ ಶಬ್ದ.

**ಧೊಕ್ಕನೆ** = ಧೊಕ್ ಎಂಬ ಶಬ್ದದೊಡನೆ : ಪೇರುರಮಂ ಧೊಕ್ಕನೆ ಕುತ್ತಿ ಚಕ್ಕನೆ ಭುಜದ್ವಂದ್ವಂಗಳಿಂದೆತ್ತಿ (ಎಕ. VI, ತರೀಕೆ. ೪೫-೩೩; 1196).

**ಧೊಕ್ಕನೆ** (ಅ). ಕೂಡಲೇ ; ತಕ್ಷಣ ; ಬೇಗನೆ : ಇಕ್ಕಲ್ ಧೂಪಮನದು ತಾಂ ಧೊಕ್ಕನೆ ಫಣಿವೃಶ್ಚಿಕಾಖುವಿಷಮಂ ಕಳೆಗುಂ (ಖಮದ. ೧೭-೯೪) ; ಧೊಕ್ಕನೆ ಪೊಜಿಮಟ್ಟು ಶ್ರೀಕೃಷ್ಣ ಸಲೆ ಪೌಜಿಕ್ಕ ಪೇಳಿಸಿದ ಭೂಭುಜರ (ಮೋಹತ. ೩೭-೩). 'ದೊಕ್ಕನೆ' ಪರಾ. [ ಧೊಕ್ + – ಅನೆ$_1$ ]

**ಧೊಣೆ** 'ದೊಣೆ$_1$' ನೋ.

**ಧೊಪ್** (ನಾ). ಒಂದು ಅನುಕರಣ ಶಬ್ದ.

**ಧೊಪ್ಪನೆ** = ಧೊಪ್ ಎಂಬ ಶಬ್ದದೊಡನೆ : ಧೊಕ್ಕನೆ, ಧೊಪ್ಪನೆ, [ಪಾಠಾಂ. ಧೋಪೆನೆ] ಭೋಂಕೆನೆ (ಭಾಷಾಭೂ. ೧೦ ವೃತ್ತಿ) ; ಅನುಕರಣಕ್ಕೆ- ಋಣಿಲ್ಲನೆ . . . ಧೊಪ್ಪನೆ[ಪಾಠಾಂ. ಧೊಪ್ಪನೆ, ಧೂಪ್ಪನೆ] ಪೊಟ್ಟನೆ (ಶಮದ. ೧೯ ಪ್ರಯೋ).

**ಧೊಪ್ಪನೆ** (ಅ). ಧೊಪ್ ಎಂದು ಶಬ್ದವಾಗುವಂತೆ ; ಒಮ್ಮೆಲೆ : ತಿರುನೀಲಕಂಠರುಬ್ಬರಿಸುತ್ತ ಪರಿತಂದು ಚರಣತಳದಲ್ಲಿ ಧೊಪ್ಪನೆ ಕೆಡೆದು (ತಿರುರ. ದೇ. ೨೫-೩೦) ; ಸುಭದ್ರೆ ನಡೆತಂದು ನೆಲಕೆ ಧೊಪ್ಪನೆ ಕೆಡೆದು ಸಭೆಯಲಿ ಹಲುಬಿದಳು (ಕುಮಾವ್ಯಾದ್ರೋ. ೭-೧೩) ; ಧೊಪ್ಪನೆ ಕೆಡೆದು ಹೊರಳಿದನು (ಕೌಶಿರಾ. ೩೩-೫೭) ; ಹಾ ರಣಧೀರ ಹಾಹಾಯೆಂದು ಧೊಪ್ಪನೆ ಕೆಡೆದಳಾ ತಾರೆ (ಕೊರರಾ. ೪-೫-೩).

**ಧೊಪ್ಪುಧೊಪ್ಪನೆ** (ದ್ವಿರುಕ್ತಿ): ಧೊಪ್ಪುಧೊಪ್ಪನೆ ಕಲ್ಗಳಿಂದಿದುರುತೋಡು ವಾಡುಗಳಂ ಕರಂ ತಪ್ಪುವಂತಿರೆ ಮೆಲ್ಲಮೆಲ್ಲನೆ ಬಂದು (ವೃಷವಿ. ೧೧-೬೪).

[ ಧೊಪ್ + – ಅನೆ$_1$ ]

**ಧೊಪ್ಪಳಿಸು** (ಕ್ರಿ). ಧೊಪ್ ಎಂದು ಉರುಳು,-ಕುಸಿ : ಎರಡನೆಯ ಕ್ಷಣಕ್ಕೆ 'ಆಯ್ಯೋ' ಎಂದು ಕಿರುಚಿ ನೆಲಕ್ಕೆ ಧೊಪ್ಪಳಿಸಿದಳು (ಕುಂಡಿಕೂ. ೩೫) ; ಕುಣಿಯ ಎದುರಿಗೆ ನಿಲ್ಲಿಸಿದ ಹೊಡೆಮಂಚದ ಮೇಲೆ ಅದು ಧೊಪ್ಪಳಿಸಿ ಎರಗಿತು (ಕುಂಡಿಕೂ. ೩೦೩). [ < ಧೊಪ್ + – ಇಸು$_3$ ]

**ಧೊರಯ್ಗ** (ನಾ). (?) : ಕನ್ನಕವಾಳನ ಘಟಿಕೆ ಧೊರಯ್ಗಂ ವೈರಿ ಕಾಳಾನಳಂ ಚಣ್ಣಮಾರ್ತ್ತಣ್ಡಂ (ಎಕ. VIII, ಸೊರಬ. ೮೯-೨ ; 912) ; ಗುಣಕೆ ಧೊರಯ್ಗ ಸುಭಟಚೂಡಾಮಣಿ ಸತ್ಯರತ್ನಾಗರಂ ತೇಜಾಗರಂ ಶ್ರೀಮತ್ಸಾನ್ತಿವರ್ಮ (ಎಕ. VIII, ಸೊರಬ. ೪೭೭-೧೧; 991). [ ? ]

**ಧೊರೆ** 'ದೊರೆ$_3$' ನೋ.

**ಧೊರೆಪೂಜೆ** (ನಾ). ವೈಭವದಿಂದ ಮಾಡುವ ಪೂಜೆ,-ಆರಾಧನೆ : ಸುರಹರಿ ನಮ ದೇವರ ಕಾಳಿ ಧೊರೆಪೂಜೆ ಮಾಡುವೆನ (ಮಲ್ಲಿಗೆ. ೩).

[ ಧೊರೆ ( < ದೊರೆ$_3$ ) + ಪೂಜೆ$_2$ ]

**ಧೋ** (ನಾ). ಒಂದು ಅನುಕರಣ ಶಬ್ದ. 'ಧೋಯೆನ್' ಪರಾ.

**ಧೋಧೋ** (ದ್ವಿರುಕ್ತಿ) : ರಾತ್ರಿಯಲ್ಲಿ ಧೋಧೋ ಮಳೆ ಬಿದ್ದಿತು (ಬಿಂದ್ವಜಾ. ೧೩) ; **ಧೋಧೋಕಾರ** = ಮಳೆಯ ಹೊಡೆತದ ಶಬ್ದ : ಏಕಪ್ರಕಾರವಾಗಿ ಸುರಿಯುವ ಮಳೆಯ ಧೋಧೋಕಾರ (ವಾತ್ಸಲ್ಯ. ೩).

**ಧೋಂಕಾರ** (ನಾ). ಒಂದು ಅನುಕರಣ ಶಬ್ದ : ನಮ್ಮ ತನು ಮನ ಆತ್ಮಗಳಲ್ಲಿ ಆ ಧೋಂಕಾರದ ಶಂಖನಾದ ದುಮುದುಮಿಸತೊಡಗಿತು (ಮುಕ್ತಿ. ೫೫).

**ಧೋಕಾ, ದೋಕಾ, ಢೋಕಾ** (ನಾ). ೧. ಅನರ್ಥ; ಅಪಾಯ : ಧೋಂಡೂ ಬಾಯಿಗೆ ತುಳಸಿಯನ್ನು ಕಸಬಿನ ಕಣದಲ್ಲಿ ನಿರಂತರ ಬಿಡುವುದು ಧೋಕಾದ್ದೆಂದು ಅನಿಸತೊಡಗಿತ್ತು (ದೀಪಹ. II, ೪೦೭). **ದೋಕಾ :** (೬). **ಢೋಕಾ :** ೨. ಮೋಸ ; ವಂಚನೆ ; ಅದರಲ್ಲೇನು ಢೋಕಾ ಇಲ್ಲ (ಒಡಮು. ೩). [ ← ಹಿಂ. ಧೋಕಾ, ಧೋಖಾ ; ಮರಾ. ಧೋಕಾ ]

**ಧೋತರ** 'ಧೋತ್ರ' ನೋ.

**ಧೋತಿ** 'ಧೋವತಿ' ನೋ.

**ಧೋತ್ರ, ದೋತರ, ದೋತ್ರ, ಧೋತರ** (ನಾ). ೧. ಉಡುವ ಬಟ್ಟೆ,-ವಸ್ತ್ರ : ಕೂಡೆ ಕುಳ್ಳಿರ್ದಖಿಳ ವಿಪ್ರರ ನೋಡಿ ಮೆಲ್ಲನೆ ಧೋತ್ರ ದರ್ಭೆಯ ಗೂಡ ಸಂವರಿಸುತ್ತ ಸಭೆಯಿಂದೆದ್ದನಾ ಪಾರ್ಥ (ಕುಮ್ಯಾಆ. ೦೫-೯) ; ನೆಲ ಕೆಳಲ್ಲ ಬಹಿರ್ವಾಸ ಪಲ್ಕ ಧೋತ್ರಂಗಳ (ವೀರವಿ. ೪-೧೧) ; ಕಟ್ಟಿದಿರಿನೊಳ್ ತೋರ್ಪ ಮಟ್ಟಿಯ ಮರುಳ್ ವಿಪ್ರರುಟ್ಟ ಧೋತ್ರಂಗಳಂ ಸೆಳೆದು ಭಂಗಿಸಿ (ಚಬಪು. ೩೨-೪೫) ; ಧೋತ್ರಗಳನ್ನು ಉಡುಗೊರೆಯಾಗಿ ಕಳುಹಿದ್ದಳು (ದೇವೀಚಾ. ೫). ೨. ಭುಜದ ಮೇಲೆ ಹಾಕಿಕೊಳ್ಳುವ ವಸ್ತ್ರ ; ವಲ್ಲಿ ; ಉತ್ತರೀಯ : "ವಿಪರ್ಯಸ್ತಕಂ ಧೋತ್ರಮಕ್ಕು" (ಮಂಗರಾ. ೭೭-೯) ; ತೆಗೆ ಶಿಲವನೌಪಾಸನದ ಕೊಳವಿಗಳ ಧೋತ್ರವ ಪುಸ್ತಕವ (ತೊರರಾ. ೫-೮-೭೦) ; ಜರಿಯ ಧೋತ್ರವನ್ನು ಹೊದ್ದುಕೊಂಡು ಸ್ವಯಂ ವೆಂಕಪ್ಪ ನಾಯಕರು ದಯಮಾಡಿಸಿ (ಶ್ರೀರಾಯ. ೧೪೭). **ದೋತರ :** ೧. ದೋತರ ಉಟ್ಟುಕೊಂಡು ಬೀದಿಯೊಳಗೆ ನೀರು ಹೊತ್ಕೊಂಡು ಹೋಗುವ

ಯಾವುದೊ ಅನಾಥ ಬಡ ವಿಧವಾ ಕಾಣಿಸ್ತಾಳೆ (ಸಂಧ್ಯಾಕಾ. ೪೫); 'ಈತನ ತಪವಿನ್ನೂ ತೀರದಿರೆ ವಿಘ್ನಕೆ ನಿಮ್ಮಯ ವಾಣಿಯ ತಂದಿರೆ' ಎನ್ನುವೆ ನಾ ಮುನಿ ದೋತರವೆಳೆದು (ಗಣೇಶ. ೧೧-೨೨೭); ಒಂದು ಚಕ್ಕಡಿಯು ಬರುತ್ತಿತ್ತು . . . ಹಿಂದಕ್ಕೂ ಮುಂದಕ್ಕೂ ದೋತರ ಬಿಗಿದುದರಿಂದ ಅದರಲ್ಲಿ ಯಾರಿರುವರೆಂಬುದು ತಿಳಿಯುತ್ತಿರಲಿಲ್ಲ (ರಕ್ತಧ್ವ. ೧೨). ೨. ಧಡಿಯ ದೋತರವನ್ನು ಹೆಗಲ ಮೇಲೆ ಸರಿಯಾಗಿ ಒಗೆದುಕೊಂಡು ಒಂದು ಮೂಲೆಗೆ ಹೋಗಿ ಬಾಯೊಳಗಿನ ತಾಂಬೂಲವನ್ನು ಉಗುಳಿ ಬರುತ್ತ ನುಡಿದ (ಅಶೋಕ. ೪).

**ಧೋತ್ರ:** ೧. ಎಸೆವ ದೋತ್ರದಿನುಜ್ಜ್ವಲಿಪ ಕಟಿದೇಶಂ (ಪದ್ಮರಾ. ೫-೧೭); ನುತ ಪಲ್ಲವಮೆ ದೋತ್ರಮುಂ ಬಹಿರ್ವಾಸಮುಂ ತತಪಿಕಸ್ವರಮೆ ವೇದಸ್ವರಂ . . . ಎಸೆಯೊಂದಶೋಕವೃಕ್ಷಂ ಮೆರೆದುದು (ಪದ್ಮರಾ. ೫-೨೮); ದೋತ್ರ ದೊಡ್ಡದಾದರೆ ಗೋತ್ರ ದೊಡ್ಡದೇ (ಗಾದೆ). **ಧೋತರ:** ೧. ಹಳೆಯ ಮಾದರಿಯ ಅಂಗಿ, ಅಂಥದೇ ಕೋಟು, ಒಂದು ಧೋತರ (ರತ್ನಗೋ. ೫); ಪಾದಗಳನ್ನೂ ಮುಚ್ಚುವಂತೆ ಉಟ್ಟ ಶುಭ್ರವರ್ಣದ ಧೋತರ (ಆಜೋಲೀ. ೧೩೦); ನನಗೆ ಒಂದು ಜೋಡಿ ಧೋತರ ಬರುತ್ತವೆ ಎಂದು ಮತ್ತಷ್ಟು ಹಿಗ್ಗಾಯಿತು (ವೃನಿ. ೧೭೯); ಮೈಯಾಗೆ ಒಂಟೀ (ಪಟ್ಟಿ) ಧೋತರವಾ ಧರಿಸ್ಯಾರೋ (ಹುಟ್ಟಿಹ. ೧೦೦); ಕೋಟು ಶರ್ಟುಗಳನ್ನು ತೆಗೆದು, ಧೋತರದ ಮೇಲೆ ಮಲಗಿದ್ದ ರಾಯರು (ಫಲಸಂ. ೫೦). ೨. ಧೋತರದಿಂದ ಹಣೆಯ ಮೇಲಿನ ಬೆವರು ಹನಿಗಳನ್ನು ಒರೆಯಿಸಿಕೊಂಡರು (ಹೆಂಡುಟ. ೦೦೦); ಧೋತರವನ್ನು ಹೊದ್ದುಕೊಂಡು ಶೆಟ್ಟಿಯ ಮನೆಗೆ ಹೋಗೋಣ ನಡೆಯಿರಿ (ಹಳ್ಳಿಬ. ೧೯). 'ಧೋವತಿ' ಪರಾ.

[ ←ಮರಾ. ಧೋತ್ರ್, ಧೋತ್ರಾ, ಧೋತರ್ ; ಹಿಂ. ಧೋತರ್, ಧೋತರಾ./ತುಳು. ದೋತ್ರ ]

**ಧೋಬಿ, ಡೋಬಿ, ದೋಬಿ, ದೋಭಿ** (ನಾ). ಬಟ್ಟೆಗಳನ್ನು ಒಗೆದು ಮಡಿಮಾಡುವ ಕಸಬಿನವನು; ಅಗಸ; ಮಡಿವಾಳ; ರಜಕ: ನಮ್ಮ ಧೋಬಿ ಬಟ್ಟೆಗಳನ್ನು ಚೆನ್ನಾಗಿ ಒಗೆಯುತ್ತಾನೆ (ರೂಢಿ). **ಡೋಬಿ:** ಅಗಸ, ಡೋಬಿ, ಮಡಿವಾಳ (ತುಳುನಾ. ೧೭೩); ರೈಲಿನಲ್ಲಿ ಹಜಾಮರಿದ್ದಾರೆ ಡೋಬಿಗಳೂ ಇದ್ದಾರೆ (ಅಳಿನಿ. ೩). **ದೋಬಿ:** ಅದಲು ಬದಲಾಗಿ ಹುದೀಯಂಗಿಯೆನ್ನುತ ದೋಬಿಯ ಬರಿದೆ ದೂರುವರೆ (ಚಂದ್ರವೀ. ೦೦೭-೨೨). **ದೋಭಿ:** ದೇವಭಾವದ ಹೊಳೆಗೆ ಮರುಳುಕಡ ಸಾಬಿ, ಕಲ್ಲು ಕಡವನ್ನು ಗುಡಿ ಭಟ್ಟನೇ ದೋಭಿ (ಗಣೇಶ. ೭೦-೪).

[ ←ಹಿಂ. ಮರಾ. ಧೋಬೀ ]

**ಧೋಯೆನ್** (ಕ್ರಿ). ಧೋ ಎಂದಂ ಕೂಗಂ: ಈಯಲಿಟಿಯಲ್ ಶರಣ್ಬಾಗೆ ಕಾಯಲ್ ಕ್ಷತ್ರಿಯರೆ ಬಲ್ಲರಲ್ಲದೆ ಬ್ರಹ್ಮರ್ ಧೋಯೆನಲುಂ ಬಲ್ಲರ್ ಕೊಲೆ ಧೋಯೆನಲುಂ ಬಲ್ಲರಿಟಿಯಲವರೆತ್ತಬಿಪರ್ (ಗದಾಯು. ೨-೧೭). ℗ ಗದಾಯುದ್ಧಸಂಗ್ರಹದಲ್ಲಿ ತೀನಂಶ್ರೀಯವರು ಸ್ವೀಕರಿಸಿರುವ ಪಾಠಾಂತರ 'ಅವಿಧೋ' ಎನ್ನುವುದು. ಈ ಶಬ್ದವನ್ನೂ ನಿಘಂಟಿನಲ್ಲಿ ಸ್ವೀಕರಿಸಲಾಗಿದೆ. 'ಅವಿಧೋ' ಪರಾ. [ ಧೋ + ಎನ್₁ ]

**ಧೋರ₁** 'ದೋರ್ಕ' ನೋ.

**ಧೋರ₂** (ನಾ). ಒಂದು ಬಗೆಯ ವಾದ್ಯ; ನಗಾರಿ; ಭೇರಿ: ಕಾಹಳವೆಂಬ ಗೌರಿಕಾಳೆ ದುಂದುಭಿಯೆಂಬ ಧೋರ . . . ವಾದ್ಯಂಗಳಂ (ವಿವೇಕ. ೨೩೭). [ ? ]

**ಧೋರಣ** (ನಾ). ೧. (ಆನೆ, ಕುದುರೆ, ರಥ ಮೊದಲಾದ) ವಾಹನ: "ಅದಿದೆನ್ನದ ವಾಹನವಾವುದಾದೊ[ಡಂ] ಪತ್ರ ಯುಗ್ಯ ಧೋರಣನಾಮಂ" (ವಸ್ತುಕೋ. ೮೮-೪೦); "ಪಕ್ಷಮಾ ವಾಹನಂ ಧೋರಣಂ ರಥ ಹಯಂ" (ಮಂಗರಾ. ೮೫-೨೫); "ಯಾನಂ, ಯುಗ್ಯಂ, ಪತ್ರಂ, ಧೋರಣಂ ೪ ಸರ್ವಂ ವಾಹನಂ – ನಾನಾ ಬಗೆಯಾದ ಸಕಲ ವಾಹನಗಳಿಗೂ ಹೆಸರುಗಳು" (ಸಿದ್ಧಾಂತಿ. ೨೫೪). ೨. ಕುದುರೆಯ ನಡಗೆಯಲ್ಲಿ ಒಂದು ಪ್ರಕಾರ. ೩. ಚುರುಕಾಗಿ ಹೋಗುವುದು; ಚಟುವಟಿಕೆಯಿಂದ ನಡೆಯುವುದು. ೪. ಗಂರಿ; ಧ್ಯೇಯ: (+). ೫. ಕ್ರಮ; ಧಾಟಿ: (+). ೬. ಶೈಲಿ; ರೀತಿ: (+). ೭. ವಿಚಾರಧಾರೆ; ಆಲೋಚನೆಯ ಮಾರ್ಗ: ಎಲ್ಲೋ ವಿಳಾಸ ತಪ್ಪಿ ಬಂದಿರಬೇಕು ಎಂಬ ಧೋರಣದಿಂದ ಆ ಆಗಂತುಕನನ್ನು ಅವರು ಪ್ರಶ್ನಿಸಿದ ಹಾಗಿತ್ತು (ಹೊಸಕ್ಷ. ೯೦); ಆದಷ್ಟು ವಸತಿಗಳನ್ನು ತಪ್ಪಿಸಿದಾರಿ ಹಿಡಿಯುವ ಧೋರಣವನ್ನಿಟ್ಟುಕೊಂಡೆವು (ಮೇದಿನಿ. ೧೨೯). ೮. ವರ್ತನೆ; ವೃತ್ತಿ; ನಡವಳಿಕೆ: ತಮ್ಮ ಸಂಸ್ಥೆಯ ಆಡಳಿತವನ್ನು ನೋಡಲು ಧೋರಣವನ್ನು ಕಾಯಲು ನಿರ್ದೇಶಕರ ಮಂಡಲವೊಂದನ್ನು ಆರಿಸುತ್ತಾರೆ (ತಕ್ಕಡಿ. ೪೭). ೯. ಒಲವು; ಪ್ರವೃತ್ತಿ: (+). [ ಸಂ. ]

**ಧೋರಣೆ** (ನಾ). ೧. (ರಚಿಸುವುದರಲ್ಲಿ) ಒಳ್ಳೆಯ ಶೈಲಿ,-ರೀತಿ: (+). ೨. ಧಾಟಿ; ಕ್ರಮ: ವ್ಯಾನೇಜರರಿಗೆ ಅಧ್ಯಕ್ಷರ ಧೋರಣೆ ಸರಿ ಬೀಳಲಿಲ್ಲ (ದುಂಡಿಕ. ೧೫೯); ವಿಶಿಷ್ಟಾದ್ವೈತ ಧೋರಣೆಯು ಇಲ್ಲಿ ಒಂದು ವೈಲಕ್ಷಣ್ಯವನ್ನು ತೋರಿಸುತ್ತದೆ (ಭಾರದ. ೨೫೯); ಈ ಪ್ರಜಾಸತ್ತಾತ್ಮಕ ಧೋರಣೆಯು ಸಾಹಿತ್ಯವನ್ನಾದರೂ ಆವರಿಸಿದೆ (ಪ್ರಬಂಧ. ೧); ನೀವು ಈಗ ಎಂತಹ ಅನುಚಿತ ಧೋರಣೆಯನ್ನು ತಳೆದಿದ್ದೀರಿ (ಹಳ್ಳಿಬ. ೨೨೯); ಇದುವರೆಗೆ ಕಾಂಗ್ರೆಸ್ ಮುಂದಾಳುಗಳ ಧೋರಣೆಯಲ್ಲಿ ತಿಲಕ್ ನಂಬಿಕೆಯನ್ನಿಟ್ಟಿದ್ದರು (ಸ್ವಾವೀರ. ೫೯). ೩. ವಿಚಾರಧಾರೆ; ಆಲೋಚನೆಯ ಮಾರ್ಗ: ಒಂದೇ ರೀತಿಯ ವಿಚಾರವನ್ನೂ ಧೋರಣೆಗಳನ್ನೂ ಬೆಳಸಿಕೊಂಡು ಬಂದಿದ್ದೇವೆ (ದೂರಸ. ೪೦); ಅವಳಿಗೆ ನನ್ನ ಮಾತುಗಳು, ವಿಚಾರಗಳು ಮತ್ತು ಧೋರಣೆಯ ಬಗ್ಗೆ ಸಂಪೂರ್ಣ ಅರಿವಿದ್ದಿತು (ಜೀಮಂತ. ೨೫೫); ಪತ್ರದ ಧೋರಣೆಯನ್ನು ತಿಳಿದುಕೊಂಡು ದೇಸಾಯರಿಗೆ ಅವಮರ್ಯಾದೆಯಾದಂತಾಯಿತು (ಗಂಮಾಯಿ. ೯೮). ೪. ವರ್ತನೆ; ವೃತ್ತಿ; ನಡವಳಿಕೆ: ಇವರೆಲ್ಲರ ಮಧ್ಯೆ ತಟಸ್ಥ ಧೋರಣೆಯನ್ನು ವಹಿಸುವವಲೆಂದರೆ ಮುದುಕಿ (ಹಳ್ಳಿಹಾ. ೧೦೭); ಬರ್‌ಬ್ಯಾಂಕ್ . . . ತನ್ನ ಧೋರಣೆಗಳಲ್ಲಿ ಟೀಕೆ ಅಥವಾ ತರ್ಕಕ್ಕೆ ಅವಕಾಶ ಕೊಡದವನು (ಸಸ್ಯಕ. ೩೩). ೫. ಗತ್ತು; ಠೇಂಕಾರ; ಹಮ್ಮು: ಅವರು ತುಂಬ ಧೋರಣೆಯಿಂದ ಮಾತನಾಡುವರು (ರೂಢಿ); ಅವನು ತುಂಬ ಧೋರಣೆಯ ವ್ಯಕ್ತಿ, (ರೂಢಿ). ೬. ನಿಲವು: ಈಗಿನ ಸಾಹಿತ್ಯದ ಧೋರಣೆ ಪ್ರಾಚೀನಸಾಹಿತ್ಯಕ್ಕೆ ಹೊಂದುವುದಿಲ್ಲ (ರೂಢಿ); ೭. (ಆಲಂ) ಉದಾಸೀನತೆ; ಅಲಕ್ಷ್ಯ: ದುರ್ಯೋಧನನ ಆಶ್ರಯದಲ್ಲಿದ್ದುಕೊಂಡು ಪಾಂಡವರನ್ನು ಧೋರಣೆಯಿಂದ ನೋಡುತ್ತಿದ್ದನು (ವಚಥಾ. ೧೮); ರಭಸ ಪ್ರವೃತ್ತಿಯನ್ನೋ ಧೋರಣೆಯನ್ನೋ ಅವಲಂಬಿಸಿದರೆ ತಪ್ಪಾಗುವುದು ಅನಿವಾರ್ಯ (ಕನ್ನಸಂ. ೧೭೩); ಇದಕ್ಕೆ ಬಹುಮಟ್ಟಿಗೆ ಇಂಜಿನಿಯರಿಂಗ್ ಖಾತೆಯ ಧೋರಣೆಯೆ ಕಾರಣ (ಶಿಕ್ಷದ. ೭೩೫. [ ಸಂ. ಧೋರಣ ]

**ಧೋವತಿ, ದೋವತಿ, ಧೋತಿ** (ನಾ). ಗಂಡಸರು ಉಡುವ ಬಟ್ಟೆ; ಪಂಚೆ; ಧೋತ್ರ: ಬಂದನಿತ್ತಲು ಪಾರ್ವನೊಲಿದಂದು ಪೂಸಿದ ವಿಭೂತಿ ರುದ್ರಾಕ್ಷಿ ಧೋವತಿಯೆಸೆಯೆ (ಕನ್ನರ. ದೇ. ೧೩೩-೧೫); ಮಿಗಿಲು ಧೋ[ಪಾಠಾಂ. ದೋ] ವತಿ ದರ್ಭೆ ಸಂಬಳಿಗೆಗಳನೊಂದೆಡೆಯಲಿ ಮಡಗಿ (ಬಸವು. ೫೭-೨೮). **ದೋವತಿ:** ದೋವತಿಯುಂ ಪಾದರಕ್ಷೆಯುಂ [ಪಾಠಾಂ. ಧೋತ್ರಮುಮಂ ಪಾದರಕ್ಕೆಯುಂ] ಸುತ್ತಿ (ಸಮುಪ. ೧೪-೧೫೪); ಪುಲಿದೊವಲ ದೋವತಿಯ ನಿರ್ಮಲಂ . . . ವಿರೂಪಾಕ್ಷನೊಪ್ಪಿದಂ (ಶಾರಿರ. ದೇ. ೨೯೭-೧೭); ಜನ್ನಿವಾರವಂ ನೇರಗಟ್ಟ ದೋವತಿಯಂ ಮಲ್ಲಗಾಸೆಯನುಟ್ಟು (ವೃಷವಿ. ೩೮-೯೦೨). **ಧೋತಿ:** ಒಟ್ಟಿಗೆ ನಾಲ್ಕು ಧೋತಿಗಳನ್ನು ಕೊಂಡುಕೊಳ್ಳಬೇಕು (ರೂಢಿ). 'ಧೋತ್ರ' ಪರಾ.

[ <ಸಂ ಧೃತವಸ್ತ್ರ ?./ಹಿಂ. ಧೋವತೀ, ಧೋತಿ ; ಮರಾ. ಧೋತೀ./ತೆಲು. ದೋವತಿ, ದೋತಿ ]

**ಧೌತ** (ಗು). ೧. ತೊಳೆದ ; ಸ್ವಚ್ಛವಮಾಡಿದ ; ಶುಭ್ರಗೊಳಿಸಿದ : ತರುಣೋರಗನವನಿರ್ನಿರ್ಮೋಕರುಚಿರಮೆನಿಸಿರ್ದ ಧೌತಧವಳಾಂಬರದಿಂ ಕರಮೆಸೆದಂ . . . ನರೇಂದ್ರಂ (ಕಾದಂಪೂ. ೭೮) ; ಶ್ರೀಮದಮರಮಣಿಮ ಕು ಟ ರ ಂ ಜಿ ತ ರತ್ನಧಾಮಾಂಬುಧಾರಾಧೌತತಾಮರಸಾಂಘ್ರಿಯುಗಲ ವೀರನಾಥನುದ್ದಾಮಸುಖವನೀವುದೆಮಗೆ (ಶ್ರೀಪಾಲ. ೧-೧). ೨. ಬೆಳ್ಳಗಿರುವ ; ಕಾಂತಿಯುಕ್ತವಾದ : ಎಂದಾಗಳ್ ಅಮಿತತೇಜಂ ದಂತಾಂಶುಧೌತಕಪೋಳಫಳಕನಾಗಿ (ಆದಿಪು. ೪-೮೦ವ). (ನಾ). ೩. ತೊಳೆದುದು ; ಶುಭ್ರವಾದುದು ; ಸ್ವಚ್ಛವಾದುದು : "ನಿರ್ಣಿಕ್ತಂ, ಪ್ರಕ್ಷಾಳಿತಂ, ಧೌತಂ – ಈ ೩ ತೊಳೆಯಲ್ಪಟ್ಟುದು" (ಹಲಾಯು. ೬೮-೩೫೪) ; "ಧೌತಮೆನಲು ಪ್ರಕ್ಷಾಳಿತಮದೆನಲು ತೊಳೆವುದಕ್ಕೆ ನಾಮಂ" (ಮಂಗರಾ. ೭೭-೮) ; ಅಸಿಲತೆ ರಣಧೌತಮದಿ [ಪಾಠಾಂ. ರಣಧೌತಿಮದಿಂ] ಮಸಿಮುಸುಡನ ಜೀವಕಟ್ಟಿನಿಂ ಕಂದಿದೊಡೆಣ್ದೆಸೆಯನಡರ್ದನ್ನ ಕೀರ್ತಿಪ್ರಸರದ ಕುಡಿ ಕೈಪೆಸೊರೆಯ ಕುಡಿಯವೊಲಕ್ಕುಂ (ಯಶೋಚ. ३-೫೫). ೪. ಬೆಳ್ಳಗಿರುವುದು: "ಧೌತಂ ಸಿತಂ ಗೌರಮರ್ಜುನಂ . . . ನಿಜ ಶ್ವೇತಮಕ್ಕು" (ಮಂಗರಾ. ೧೩೦-೩೩). ೫. ಬೆಳ್ಳಿ; ರಜತ. ೬. ಮಡಿ ಮಾಡಿದ ಬಟ್ಟೆ; ಒಗೆದ ಬಟ್ಟೆ: ಒಂದುದಯದಲ್ಲೆದ್ದು ಸುಸ್ನಾನಮಂಗೈದು ಚಂದದಿಂ ಧೌತಮುಮನುಟ್ಟು (ನವಮೋ. ೧೧-೬) ; ಅಸುರೇಂದ್ರ ಸ್ನಾನವ ಮಾಡಲಿರಿದು ತರುಣಿಯರು ಧೌತಮನೀಯ್ಯಳ ವಟ್ಟು ಮಣಿಖಚಿತಪಾವುಗೆಗಳಾ ತ್ವರಿತದಿಂದೀಯ್ಯಲವನಡಿಯುಂಗಂಗಳಿ ಗವುರ್ಚೆ (ನವಮೋ. ೧೮-೪೦). ೭. (ಆಲಂ) ಮಸೆದುದು ; ಹರಿತಮಾಡಿದುದು : "ನಿಶಾತಂ, ನಿಶಿತಂ, ಧೌತಂ, ತೇಜಿತಂ – ಈ ೪ ಮಸೆದುದು" (ಹಲಾಯು. ೭೮-೩೩೦) ; "ಧೌತಂ ತೇಜಿತಂ ಮಸೆವ ತೆಱನಕ್ಕು" (ಮಂಗರಾ. ೮೮-೩೮). [ಸಂ.]

**ಧೌತಕೀರ್ತಿ** (ನಾ). ಧವಳಕೀರ್ತಿ ; ಶುದ್ಧವಾದ ಯಶಸ್ಸು : ಅನವದ್ಯಜನಾಗಮವಿದ್ಯನಿದ್ಧದುಗ್ಧೋದಧಿಧೌತಕೀರ್ತಿವಿಶದಂ ಭರತಾವನಿರಾಜಪೂಜಿತಂ (ಶಾಂತಿಪು. ೦-೨೫). [ಧೌತ + ಕೀರ್ತಿ]

**ಧೌತವಲ್ಕಲ** (ನಾ). ಬೆಳ್ಳಗಿರುವ ನಾರುಬಟ್ಟೆ: ಧೌತವಲ್ಕಲಮನಲುಂಬು ವಕ್ಷಮಣಿಯುಂ ಸಮೆವೀ ವ್ಯವಸಾಯಮಾತ್ರಮುಂ (ಕಾದಂಪೂ. ३३೪). [ಧೌತ + ವಲ್ಕಲ]

**ಧೌತವಸನ** (ನಾ). = ಧೌತವಸ್ತ್ರ ; ಕುಶಜಾತಪವಿತ್ರಮಾತ್ರಧೌತವಸನ ಮುದ್ರಿಮೌಂಜಿ ಮೃಗತುಂದಿಯೆರಟ್ಬೆಸ ಕೋ ವ ಣ ಂ ಗ ಳ ೦ ಬಿ ವು ಕದುರಯ್ಯಮಾದ ವಟುವೇಷಮನಾಂತು (ವರ್ಧಪು. ೧೬-೪) ; ಪರಿವೃತ ಧೌತವಸನಸಮಂಚಿತ ಕೋಮಳ ಕಳೇವರರುಂ (ರಾಜಶೇ. ೪-३೭ವ). [ಧೌತ + ವಸನ]

**ಧೌತವಸ್ತ್ರ** (ನಾ). ಮಡಿಮಾಡಿದ ಬಟ್ಟೆ ; ಶುಭ್ರವಸ್ತ್ರ : ತದ್ದರ್ಮಕಳಸಾರೋಹಣಮಾಗಿ ನೆಱೆಯನಿರ್ವ್ವಹಿಸಿದಗ್ಗಂಗಾಜಳಧೌತವಸ್ತ್ರಪವಿತ್ರೀಕ್ರಿತೋತ್ತಮಾಂಗೆಯರಪ್ಪರ್ ಶ್ರೀಮದಕ್ಕಂ ನಾಲಬರಸಿಯರು (ಕಇಅ. ೪೪-೫-೫೭; 973) ; ತೀರ್ಥಸ್ನಾನಾರ್ಥಂ ಪರಸ್ಥಾನಂಗೆಯ್ವ ವಾನಪ್ರಸ್ಥಜನಂಗಳ ಧೌತವಸ್ತ್ರಪವಿತ್ರಾಕ್ಷಸೂತ್ರಂಗಳಂ ತಮ್ಮ ಕವಲ್ಗೊಂಬುಗಳೊಳ್ ನೇಱಿಸಿಕೊಂಡಿಂಬಿನೊಳವರೊಡನೆ ನಡೆವ ಸಾರಂಗಸಮೂಹಮುಮಂ (ಪಂಚತಂ. ೧೮೯-३) ; ಪ್ರಾತಃಸಮಯದೊಳ್ ಜರಾಸಂಧಚಕ್ರವರ್ತಿ ಪಾವನಜಳಸ್ನಾನಪವಿತ್ರಗಾತ್ರನುಂ ಧೌತವಸ್ತ್ರಪರಿಧಾನನುಮಾಗಿ (ನುಹಾನೇ. ೧೧-೧೪೦ವ). [ಧೌತ + ವಸ]

**ಧೌತಾಂಬರ** (ನಾ). ೧. = ಮಡಿಬಟ್ಟೆ : "ಮರಣದೊಳು ಧೌತಾಂಬರದೊಳು ಮಡಿ" (ಶಬ್ದಮಂ. ೯೫) ; ಮಡಿಯೆಂಬುದು ಧೌತಾಂಬರದೆಡೆಯೊಳ್ಪಡಿಯೆಂಬುದಲ್ಲದಂಡದೊಳೀಗಂ ಪಿಡಿಯೆಂಬುದು ಕರಿಣಿಯೊಳೆಡೆವಿಡದಿರ್ಪುವು ಬೇಱೆ ಮತ್ತಮಿಲ್ಲಾ ನಾಡೊಳ್ (ವೀರವಿ. ೧-೪೮). ೨. ಬಿಳಿಯಂ ಬಟ್ಟೆ : ಅಂಬರಮೆಲ್ಲಂ ಕೂಡೆ ಧೌತಾಂಬರದ ನವವಿತಾನಂಬೊಲಿಂಬಾದುದು (ರಾಜಶೇ. ೧೧-೬೭). [ಧೌತ + ಅಂಬರ]

**ಧೌತಾಂಶುಕ** (ನಾ). = ಧೌತವಸ್ತ್ರ : ಧೌತಾಂಶುಕದೊಳಗೆ ತಂಬುಲವ ಕಟ್ಟಿದರು (ಕುಮ್ಮಾ.ಆ. ೧೮-೮). [ಧೌತ + ಅಂಶುಕ]

**ಧೌತಿ** (ನಾ). [ಯೋಗ] ಧೌತಿ, ಬಸ್ತಿ, ನೇತಿ, ತ್ರಾಟಕ, ನೌಲಿಕ ಮತ್ತು ಕಪಾಲಭಿತ್ತಿ ಎಂಬ ಹಠಯೋಗದ ಆರು ಅಂಗಗಳಲ್ಲಿ ಒಂದು ; ನಾಲ್ಕು ಅಂಗುಲ ಅಗಲದ, ಹದಿನೈದು ಮೊಳ ಉದ್ದದ ವಸ್ತ್ರವನ್ನು ನೆನೆಸಿ ಸ್ವಲ್ಪ ಸ್ವಲ್ಪವಾಗಿ ನುಂಗಿ ಪುನಃ ಅದನ್ನು ಗುದದ್ವಾರದ ಮೂಲಕ ಹೊರಗೆ ತೆಗೆಯಬೇಕು. ಈ ಧೌತಿಕರ್ಮದಿಂದ ಕೆಮ್ಮು, ಕುಷ್ಠ ಮುಂತಾದ ಇಪ್ಪತ್ತು ವಿಧ ಶ್ಲೇಷ್ಮರೋಗಗಳೂ ವಾಸಿಯಾಗುವುವು : ಬಿಳಿಯ ಪಾವಡೆಯನೊಂದು ತುದಿಯಂ ಪಿಡಿದು ಮತ್ತೊಂದು ತುದಿಯ ಮೆಲ್ಲನೆ ಹೃದಯಪರ್ಯಂತಮಾಗಿ ನುಂಗಿ ತೆಗೆವುದೂ ಧೌತಿಯೆನಿಪುದು (ಶಿವಪ್ರ. ೬-೫). [ಸಂ.]

**ಧೌತೋದಕ** (ನಾ). ಶುದ್ಧವಾದ ನೀರು : ವಿಮಲಧೌತೋದಕ . . . ಸಕಲಭೋಗಾಹುತಿಗೆ ಪೋಷೋದಕವೆನಿಪುದೀ ಪರಮಪಾದೋದಕಂ (ಶಂಕದಾ ೧೦-೬೦). [ಧೌತ + ಉದಕ]

**ಧೌರಿತಕ** (ನಾ). [ಅಶ್ವಶಾ] ಕುದುರೆಯ ಚಲನೆಯಲ್ಲಿ ಒಂದು ಪ್ರಕಾರ ; ಕುಕ್ಕುಲೋಟ : "ಧೌರಿತಕಂ, ಬಿರುನಡೆ, ಭರದಾಂಡ್" (ಸಿದ್ಧಾಂತಿ. ३೫೦). 'ಪಂಚಧಾರೈ' ಪರಾ. [ಸಂ.]

**ಧೌರೇಯ** (ನಾ). ೧. ಭಾರ ಹೊರಲು ಯೋಗ್ಯವಾದ ಎತ್ತು, ಕುದುರೆ ಮುಂತಾದ ಪ್ರಾಣಿ : "ಧುರ್ಯ್ಯಃ, ಧೌರೇಯಃ – ಈ ೨ ಹೂಟದೆತ್ತು" (ಹಲಾಯು. ೪೪-೧೧೦) ; "ಧೂರ್ವಹಃ, ಧುರ್ಯ್ಯಃ, ಧೌರೇಯಃ, ಧುರೀಣಃ, ಧುರಂಧರಃ – ೫ ಬಂಡಿ, ಗೋಣಿ, ನೇಗಲು ಮುಂತಾದ ಭಾರವನ್ನು ಹೊತ್ತು ಶೆಳೆಯುವ ಎತ್ತು ಮುಂತಾದ ದನಗಳ ಹೆಸರುಗಳು" (ಸಿದ್ಧಾಂತಿ. ३೯೩). ೨. ಭಾರವನ್ನು ಹೊತ್ತಿರುವವನು ; ಹೊಣೆಗಾರಿಕೆಯನ್ನು ವಹಿಸಿಕೊಂಡವನು; ಜವಾಬ್ದಾರಿಯನ್ನು ಹೊತ್ತಿರುವವನು: ಚಾಳುಕ್ಯರಾಜರಾಜ್ಯಭಾರಧೌರೇಯನುಂ (ಕಇಅ. ೫-३-೧೪೭ ; 1058) ; ಅರ್ಥಿಜನತಾಸುರಭೂಜಾರಾಮಂ ಧರ್ಮೋದ್ಯಮಧೌರೇಯನುದಾತ್ತಚಿತ್ತನಭಿನವಪಂಪಂ (ಪಂರಾಮಾ. ೬-೧) ; ವಿಶ್ವವಿಶ್ವಂಭರಾಭಾರಧಾರಣಾಧೌರೇಯನುನುಮಾಸಾದಿತ ಯುವರಾಜಪದವಿವಿರಾಜನುಮಾಗಿ (ವರ್ಧಮಾ. ೬-೬೮ ವ). ३. ಕುದುರೆ ; ಅಶ್ವ. [ಸಂ.]

**ಧೌರೇಯಕ** (ನಾ). = ಧೌರೇಯ. [ಸಂ.]

**ಧ್ಯಾತೃ** (ನಾ). ಧ್ಯಾನ ಮಾಡುವವನು : ಆ ಧ್ಯಾನಯೋಗಮಾರ್ಹತ್ಯಮಯದೊಳ್ ಧ್ಯಾನಂ ಧ್ಯೇಯಂ ಧ್ಯಾತೃ ಫಲಮೆಂದು ಚತುರಂಗಮಕ್ಕುಂ (ಆದಿಪು. ೮-३೮ ವ) ; ಧ್ಯಾತೃಹೃದಯಮಹಾಘಶಮಲವ್ರಾತಪರ್ವತವಜ್ರನನು . . . ತಾಪಕ್ಲೇಶಜಲನಿಧಿಸೇತುವನು ನೆನೆವುದು ತದಂಘ್ರಿಸರೋಜವನ ಬಿಡದೆ (ನಿಭಾಗ. ೩-೧೩-೩೯) ; ಧ್ಯಾನದಾಧಿಕ್ಯದ ವಿವೇಕದಿಂ ಧ್ಯಾತೃವಾ ಧ್ಯಾನಾದಿ ಭೇದವಳಿದಾ ಧ್ಯೇಯ ಸುಸ್ವರೂಪ (ವೀಶೈಪು. ೫-೧೭-೧೬). [ಸಂ.]

**ಧ್ಯಾನ** (ನಾ). ೧. ಚಿಂತನೆ ; ಮನಸ್ಸಿನಲ್ಲೇ ಯೋಚನೆ ಮಾಡುವುದು ; ಮನನ : "ಲಕ್ಷಣಂ ದರ್ಶನಂ ಧ್ಯಾನಮವಲೋಕನಂ ನೋಟಮಕ್ಕು" (ಮಂಗರಾ. ೯३-३); ಧ್ಯಾನದೊಳಭವಂ ನೆಱೆದಿನಿಸಾನುಮನರೆಮುಚ್ಚಿ ಕಣ್ಗಳಂ (ಪಂಪಭಾ. ೮-೧३) ; ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯಾ (ಬಸವ. ೫೦೬) ; ಶಿವನುತಿಧ್ಯಾನದೊಳು ಮೂರ್ಛೆವೋದರ್ಕಲರು (ತಿರುರ. ದೇ. ೧೫-೪) ; ವನಜನಾಭಧ್ಯಾನಸುಧೆಯಲಿ ನನೆದು ಹೊಂಗಿದ ಕರಣ ಹೊರೆಯೇಱಿತ್ತು ನಿಮಿಷದಲಿ (ಕುಮ್ಮಾದ್ರೋ. ೦-३३) ; ಬಿನ್ನಹ ಗುರುವೇ ಧ್ಯಾನಕೆ ಬೆ ಸಜಾದಾಗ ನಿನ್ನನಾದಿಯಂ ಮಾಡಿಕೊಂಡು ಕನ್ನಡದೊಳಗೊಂದು ಕಥೆಯು

ಪೇಳುವೆನದು ನಿನ್ನಾಜ್ಞೆ ಕಂಡ್ಯ ನನ್ನೊಡೆಯ (ಭರತೇ. ೧-೩) ; ಒಂದು ಸಂಜೆ ಸಂಚಾರ ಹೊರಟು ಯಾವುದೋ ಧ್ಯಾನದಲ್ಲಿ ನಡೆಯುತ್ತಿರುವಾಗ (ಭಾವಗೀ. ೧೩). ೨. ಗಮನ ; ಲಕ್ಷ್ಯ: ಹಾಗದ ಕೆರಹ ಹೊಱಗೆ ಕಳೆದು ದೇಗುಲಕ್ಕೆ ಹೋಗಿ ದೇವರಿಗೆ ನಮಸ್ಕಾರವ ಮಾಡುವನಂತೆ ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ (ಬಸವ. ೧೯೯). ೩. ಆತ್ಮನನ್ನು ಯಾವಾಗಲೂ ಧ್ಯಾನಿಸುತ್ತಿರುವುದು ; ಆತ್ಮಚಿಂತನೆ ; ತಪಸ್ಸು : ಧ್ಯಾನಮರೀಚಿಯಿಂ ಬೆದಱಿ ಘಾತಿತಮಸ್ತಮಂ (ಆದಿಪು. ೧೦-೧೭) ; ಧ್ಯಾನ ನಿಶಿತಖಡ್ಗದಿನಘಸಂಕುಳಮೆಯ್ದೆ ಬೆದಱಿ (ಶಾಂತಿಪು. ೯-೩೭) ; ಪ್ರಾಯಶ್ಚಿತ್ತಂ ವಿನಯಂ ವೈಯ್ಯಾವೃತ್ಯಂ ಜಿನಂಗೆ ಕೂಡದು ದೋಷಾಪಾಯತಿಯಿಂ ಧ್ಯಾನಂ ಸ್ವಾಧ್ಯಾಯವ್ಯುತ್ಸರ್ಗಮುಂಟು (ಅಜಿಪು. ೧೩-೩೦) ; ಧ್ಯಾನಂ ಮುಕ್ತಿಪ್ರಾಪ್ತಿವಿಧಾನಂ (ಮಲ್ಲಿಪು. ೧೪-೭೭) ; ಮುಖದಲ್ಲಿ ಮಂತ್ರ ಹೃದಯದಲ್ಲಿ ಧ್ಯಾನ ಪ್ರಾಣದಲ್ಲಿ ಲಿಂಗ ನೆನಹು ಕರಿಗೊಂಡ ಶಿವಾತ್ಮ ಶರಣನ ಹೃದಯವೇ ಪರಮೇಶ್ವರಂಗೆ ನಿವಾಸಸ್ಥಾನ (ನೆಲೆವನೆ)ಯಾಗಿಪ್ಪುದಯ್ಯ (ಸಿದ್ಧೇವ. ೮೫-೨೩೩) ; ಶೋಧಿಸಿದ ನಿಜಚೈತನ್ಯ ತಾನೆಂದೆಂಬುದೇ ಧ್ಯಾನ (ಅಮೃತ. ೬-೮೦) ; "ದೇಹಾದಿಗಳ ಎಚ್ಚರವಿಲ್ಲದೆ ತಾನು ಬ್ರಹ್ಮವೆಂದಿರುವುದು" (ಅಮೃತ. ಟೀಕು) ; ಧ್ಯಾನವೆಂದರೆ ಇತರ ವಿಷಯಗಳಲ್ಲಿ ಹೋಗದೆ ಆತ್ಮ ವಿಷಯದಲ್ಲೇ ಮನಸ್ಸನ್ನು ಸ್ಥಿರವಾಗಿಡುವ ಅಭ್ಯಾಸ (ಹಿಂದಸಾ. ೩೨೦). 'ಆತ್ಮಧ್ಯಾನ' ಪರಾ. ೪. [ಯೋಗ] ಯೋಗದ ಅಷ್ಟಾಂಗಗಳಲ್ಲಿ ಒಂದು ; ಮನಸ್ಸನ್ನು ಒಂದೇ ವಿಷಯದಲ್ಲಿ ಸ್ಥಿರವಾಗಿ ಇಡುವುದು ; ಏಕಾಗ್ರತೆ : "ತತ್ವಾದಿ ಚಿಂತನಂ ತಾಂ ಧ್ಯಾನಂ" (ವಸ್ತುಕೋ. ೩೦-೧೮) ; ಯಮನಿಯಮಸ್ವಾಧ್ಯಾಯಧ್ಯಾನಧಾರಣಮೋನಾನುಷ್ಠಾನ ಜಪಸಮಾಧಿ ಶೀಳಸಂಪನ್ನನಾರ್ (ಸೌಇಇ. XX. ೪೭-೦೭; 1072); ಮೀಂಬುಲಿಗನ ಹಕ್ಕಿಯಂತೆ ನೀರ ತಡಿಯಲ್ಲಿದ್ದು ಮೂಗ ಹಿಡಿದು ಧ್ಯಾನವ ಮಾಡು[ವಿ]ರಯ್ಯಾ (ಬಸವ. ೫೭೯) ; ಯಮನಿಯಮ . . . ಧ್ಯಾನಧಾರಣಸಮಾಧ್ಯಷ್ಟಾಂಗಯೋಗನಿಷ್ಠೆ (ವಿವೇಕ. ೦೪೩) ; "ಧ್ಯಾನ (ಅದನ್ನೇ ಎಡೆಬಿಡದೆ ನೆನೆಯುವುದು)" (ಅಮೃತ. ೨-೩೭ ಟೀಕು) ; ಯಮನಿಯಮ . . . ಧ್ಯಾನಧಾರಣಸಮಾಧಿಗಳೆಂಬ ಅಷ್ಟಾಂಗಯೋಗದೊಳಗೆ (ಅಜಂಡೀ. ೨೧೯-೫೫) ; ಪ್ರಾಣಾಯಾಮ ಪ್ರತ್ಯಾಹಾರ ಧಾರಣ . . . ಧ್ಯಾನಸುಸಮಾಧಿಗಳ ಸಾಧಿಸಲು (ಗಗತಾ. ೧೦-೬೮) ; ಧ್ಯಾನವೆಂದರೆ ಧ್ಯೇಯವಸ್ತುವಿನಲ್ಲಿ ಚಿತ್ತಸ್ಥಿರೀಕರಣವು (ಹಿಂದಸಾ. ೧೧೬) ; ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬ ಈ ಎಂಟೂ ಆವಶ್ಯಕ (ಭಾಧರ. ೧೩೭). 'ಅಷ್ಟಾಂಗಯೋಗ' ಪರಾ. ೫. ರಾಜಯೋಗದ ಹದಿನೈದು ಅಂಗಗಳಲ್ಲಿ ಒಂದು : ರಾಜಯೋಗಕ್ಕೆ . . . ಅಂಗ ತಾ ಹದಿನೈದು . . . ಯಮ ಪ್ರಥಮ ನಿಯಮವೆರಡು . . . ಹದಿನಾಲ್ಕು ಧ್ಯಾನವು ಚಿತ್ತಕರಿ ಹದಿನೈದನೇಯದು ಸಮಾಧಿ (ಜ್ಞಾಸಿಸಿ. ೧೭-೧೪). 'ರಾಜಯೋಗ' ಪರಾ.

**ಧ್ಯಾನ ಮಾಡು** = ಚಿಂತನೆ ಮಾಡು ; ಧ್ಯಾನಿಸು : ಇದರಲ್ಲಿ ಸ್ಥೈರ್ಯ ವುಂಟಾದರೆ ಮುಂದಕ್ಕೆ ಧ್ಯಾನ ಮಾಡುವುದಕ್ಕೆ ಅರ್ಹತೆಯುಂಟಾಗುತ್ತದೆ (ಭಾಧರ. ೧೭೪) ; ಧ್ಯಾನ ಮಾಡುತ್ತ ಕುಳಿತ ಕೂಡಲೆ ಗುರುವಿನ ಧ್ಯಾನಸ್ಥ ಮೂರ್ತಿಯು ಪ್ರತ್ಯಕ್ಷ ನನ್ನ ಎದುರಿಗೆ ಬಂದು ನನಗೆ ಯಾವುದೂ ಪೀಡಾ ಗುತ್ತದೆ ! (ಮಾಧವ. ೯೩) ; ಇಲ್ಲಿಯೂ ಕುಳಿತು ಧ್ಯಾನ ಮಾಡುತ್ತಾರೆ ; ನದಿದಂಡೆಯಲ್ಲಷ್ಟೇ ಅಲ್ಲ (ಆಳನಿ. ೧೦೦). ☞ ಜೈನರ ಪ್ರಕಾರ ಆರ್ತಧ್ಯಾನ, ರೌದ್ರಧ್ಯಾನ, ಧರ್ಮಧ್ಯಾನ ಮತ್ತು ಶುಕ್ಲಧ್ಯಾನ ಎಂದು ಧ್ಯಾನದಲ್ಲಿ ನಾಲ್ಕು ಬಗೆ. ಈ ಒಂದೊಂದರಲ್ಲೂ ಉಪಭೇದಗಳಿವೆ. [ ಸಂ. ]

**ಧ್ಯಾನಂಗೈ** (ಕ್ರಿ). ಚಿಂತನೆಮಾಡು ; ಧ್ಯಾನಮಾಡು ; ಧ್ಯಾನಿಸು : ಸಕಲವಿಶ್ವವನಾ ವಿರಾಡ್ರೂಪೆಂದು ಧ್ಯಾನಂಗೈಯುವುದೆ ನಿಶ್ಚಯದವಸರ ಸಮಾಹಿತಿಯು (ಗಗತಾ. ೧೪-೪೩). [ ಧ್ಯಾನ + ಗೈ (<ಕೆಯ್$_1$) ]

**ಧ್ಯಾನಂಬೆಱು** (ಕ್ರಿ). = ಧ್ಯಾನಂಗೈ : ಭಕ್ತಿಯಿಂ ತತ್ಪದಧ್ಯಾನಂಬೆತ್ತು ದಯಾಬ್ಧಿಯಂ ಘನತಪಂಗೆಯ್ದೊಚ್ಚತಂ ಮೆಚ್ಚಿಪೆಂ (ಶಬಶಂ. ೨-೮೯).
[ ಧ್ಯಾನ + ಪೆಱು$_1$ ]

**ಧ್ಯಾನಗಮ್ಯ** (ಗು). ೧. ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರ ವಾಗುವ. (ನಾ). ೨. ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರ ವಾಗುವುದು : ಶಿಲೆಯಿಂದ, ಮರದಿಂದ . . . ಮಂರಳಿನಿಂದ ಧ್ಯಾನಗಮ್ಯ ವಾದ ಮನೋಮಯಮೂರ್ತಿಯಾಗಿ ಮತ್ತು ರತ್ನಾದಿಗಳಲ್ಲಿ ನಿರ್ಮಿಸಿ ಕೊಂಡು ಪೂಜಿಸಬಹುದೆಂದು ಆಧಾರವಿದೆ (ಭಾರದ. ೭೮). ೩. ಏಕಾಗ್ರತೆ ಯಿಂದ ಕೂಡಿದ ಚಿಂತನೆಗೆ ಗೋಚರನಾಗುವವನು ; ಪರಮಾತ್ಮ.
[ ಧ್ಯಾನ + ಗಮ್ಯ ]

**ಧ್ಯಾನಗಮ್ಯೆ** (ನಾ). ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರ ವಾಗುವವಳು : ಎಲೆ ಮಾತೆ ! ನೀಂ ಭಕ್ತವತ್ಸಲೆ ಸಾಜಂ ! ಧ್ಯಾನಗಮ್ಯೆ ಸಾಜಂ ! (ರಾಮಾಶ್ವ. ೭೩-೧೧).
[ ಸಂ. ಧ್ಯಾನಗಮ್ಯಾ (ಧ್ಯಾನ + ಗಮ್ಯ + –)]

**ಧ್ಯಾನಗೋಚರ** (ನಾ). ಏಕಾಗ್ರಚಿಂತನೆಯಿಂದ ಕಾಣಿಸುವವನು : ಧ್ಯಾನಗೋಚರನಾಗಿ ವನಿತೆಯ ಮಾನಿಸದಲಿಹ ಪರಮಹಂಸನು ಮಾನುಷಾ ಕೃತಿಯಾಗಿ ತೋಱಿದ ಬಾಹ್ಯರಚನೆಯಲಿ (ಕುವ್ಯಾಆ. ೧೭-೩೩).
[ ಧ್ಯಾನ + ಗೋಚರ ]

**ಧ್ಯಾನಚತುಷ್ಟಯ** (ನಾ). [ಜೈನ] ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನ : ಆರ್ತರೌದ್ರಧರ್ಮ ಶುಕ್ಲಾಭಿಧಾನಧ್ಯಾನಚತುಷ್ಟಯಮಾಮುಂ (ಸುಕುಮಾ. ೩-೩೯ ವ).
[ ಧ್ಯಾನ + ಚತುಷ್ಟಯ ]

**ಧ್ಯಾನಚಿತ್ತ** (ನಾ). ಏಕಾಗ್ರಚಿತ್ತದಿಂದ ಚಿಂತನೆ ಮಾಡುವವನು ; ಧ್ಯಾನದಲ್ಲಿ ಮನಸ್ಸನ್ನಿಟ್ಟವನು : ಶಿವಸಂಗಧ್ಯಾನಚಿತ್ತಂ ಶಿವಚರಣಲತಾ ಪುಷ್ಪವೃಂದಾಯಮಾನಂ (ನಂಬಿರ. ೨ ಸೂಚನ). [ ಧ್ಯಾನ + ಚಿತ್ತ ]

**ಧ್ಯಾನತತ್ಪರ** (ನಾ). = ಧ್ಯಾನಪರಾಯಣ : ಹಗಲು ಹಸಿವಿನ ಚಿಂತೆ ಇರುಳು ವಿಷಯದ ಚಿಂತೆ . . . ಇವು ಮಾದಲ್ಲದೆ ಸದಾಶಿವನ ಧ್ಯಾನತತ್ಪರನಾಗಿ ಶಿವತತ್ವವಿಚಾರದೊಳಗಿರಲೊಲ್ಲನು ನೋಡಾ (ಸಿದ್ಧೇವ. ೪೫-೧೨೮) ; ಹುಕ್ಕನು ... ಕೈಜೋಡಿಸಿ ಕಣ್ಣು ಮುಚ್ಚಿಕೊಂಡು ಗುರುಧ್ಯಾನತತ್ಪರನಾಗಿ ಕುಳಿತುಕೊಂಡುಬಿಟ್ಟನು (ಮಾಧವ. ೯೭). [ ಧ್ಯಾನ + ತತ್ಪರ ]

**ಧ್ಯಾನದರ್ಶಿತ** (ಗು). ಧ್ಯಾನಕ್ಕೆ ಗೋಚರವಾಗುವ ; ಧ್ಯಾನದಿಂದ ತೋರಿ ಸಲ್ಪಟ್ಟ : ಕೇವಲ ಧ್ಯಾನದರ್ಶಿತಾನುಭವಗಳಿಂದಲೂ ಸೌಂದರ್ಯಾನುಭವ ಸಾಧ್ಯ (ಸೌಂದಸ. ೭೮) ; ಧ್ಯಾನದರ್ಶಿತ ದೇವತೆಗಳ ಈ ವರ್ಣನೆಯೇ ಮುಂದಿನ ಶಿಲ್ಪಕಲಾಚಾರ್ಯರ ಪರಿಭಾವನೆಯ ವಸ್ತುಗಳಾಗಿ, ಭಾರತೀಯ ದೇವದೇವತಾವಿಗ್ರಹಗಳ ಮಾದರಿಗಳೂ ಆದುವೆನ್ನುವುದು ಗಮನಾರ್ಹ ವಾದ ಸಂಗತಿ (ಸೌಂದಸ. ೯೯). [ ಧ್ಯಾನ + ದರ್ಶಿತ ]

**ಧ್ಯಾನನಿಯೋಗವಾದ** (ನಾ). [ಅದ್ವೈತ] ಪರಬ್ರಹ್ಮದ ಚಿಂತನೆಯಿಂದ ಉಂಟಾದ (ನಿಯೋಗವೆಂಬ) ಪುಣ್ಯಸಂಸ್ಕಾರದ ಮೂಲಕ ಮೋಕ್ಷವು ಲಭ್ಯವಾಗುವುದೆಂಬ ಸಿದ್ಧಾಂತ, – ತತ್ತ್ವ : ಇದರಲ್ಲಿ ಧ್ಯಾನನಿಯೋಗ ವಾದ, ನಿಷ್ಪ್ರಪಂಚೀಕರಣನಿಯೋಗವಾದ ಇವೇ ಮೊದಲಾದ ಪ್ರಭೇದ ಗಳಿರುವುವು (ಹಿಂದಸಾ. ೩೩೫). [ ಧ್ಯಾನ + ನಿಯೋಗ + ವಾದ$_2$ ]

**ಧ್ಯಾನಪರ** (ಗು). ೧. (ಪರಮಾತ್ಮನ) ಚಿಂತನೆಯಲ್ಲಿ ಮನಸ್ಸನ್ನಿಟ್ಟ. (ನಾ). ೨. (ಪರಮಾತ್ಮನ) ಚಿಂತನೆಯಲ್ಲಿ ಮನಸ್ಸನ್ನಿಟ್ಟವನು : ಆ ನಗರದೊಳ್ಕುಂತಳೇಶ್ವರಂ ನಿರ್ಮಲಜ್ಞಾನದಿಂ . . . ಧ್ಯಾನಪರನಾಗಿ ರ್ಪನು (ಜೈಮಿಭಾ. ೩೦-೪೩) ; ಬಾಲ್ಯದಿಂದೆ ನೀನಗಧರಧ್ಯಾನಪರನಾಗಿರ್ಪೆ (ಜೈಮಿಭಾ. ೩೦-೭೦). [ ಸಂ. ]

**ಧ್ಯಾನಪರಾಯಣ** (ನಾ). ಚಿಂತನೆಯಲ್ಲಿ ಆಸಕ್ತನಾದವನು, – ಮಗ್ನನಾದವನು,— ತನ್ಮಯನಾದವನು : ತ್ರಿಜಗದ್ಗುರುವೇ ಗುರುವೆಂದು ತತ್ಪದಸರಸಿಜಧ್ಯಾನಪರಾಯಣನಾಗಿ (ಆದಿಪು. ೧೬-೭೨ವ).
[ ಧ್ಯಾನ + ಪರಾಯಣ ]

**ಧ್ಯಾನಬಲ** (ನಾ). ಧ್ಯಾನದಿಂದ ಉಂಟಾಗುವ ಶಕ್ತಿ; ಸತತವಾದ ಚಿಂತನೆಯಿಂದ ಒದಗುವ ಬಲ; ಆಧ್ಯಾತ್ಮಿಕ ಚೈತನ್ಯ : ನಿಯಾಮಿಸುವ ನಾಂತು ಜಟಿಸುವ ವಾಗ್ವಿಷಯ್ಯದಲೆಂತು ಮಾಯಾವಿಲಯಮಪ್ಪುದು ಧ್ಯಾನಬಲಮಿರದೇ (ಗಗತಾ. ೧೦-೩೦). [ ಧ್ಯಾನ + ಬಲ$_2$ ]

**ಧ್ಯಾನಮಗ್ನ** (ನಾ). = ಧ್ಯಾನಪರಾಯಣ : ಆಗ ತ್ರಿಕಾಲಜ್ಞಾನಿಯಾದ ಋಷಿಯು ಸ್ವಲ್ಪ ಹೊತ್ತು ಧ್ಯಾನಮಗ್ನನಾದನು (ಮಣಿಸ. ೬೫).
[ ಧ್ಯಾನ + ಮಗ್ನ ]

**ಧ್ಯಾನಮುದ್ರೆ** (ನಾ). ಚಿಂತನೆಯಿಂದ ಕೂಡಿದ ಮುಖಭಾವ : ಲಕ್ಷ್ಯೈಕಾಗ್ರತೆಯಿಂ ಧ್ಯಾನಮುದ್ರಾಸಮನ್ವಿತನಾಗಿ ಕುಳ್ಳಿರ್ದ (ವಿವೇಕ. ೧೦೨); ಅವನ ಮುಖ ಧ್ಯಾನಮುದ್ರೆಯಿಂದ ಗಂಭೀರವಾಗಿತ್ತು (ಪುನರು. ೩೩). [ ಧ್ಯಾನ + ಮುದ್ರೆ ]

**ಧ್ಯಾನಯೋಗ** (ನಾ). = ಧ್ಯಾನ ೩ : ಧ್ಯಾನಯೋಗಾದಿಗಳಿಂ ತನ್ನೊಳ ಹೊಱಗೆಲ್ಲಮುಂ ದೇವತಾತಾದಾತ್ಮ್ಯಮಂ ಪಡೆದು (ವಿವೇಕ. ೧೦೩) : ಶುದ್ಧಪ್ರಸಾದಜ್ಯೋತಿಯು ಧ್ಯಾನಿಸುವುದೇ ಧ್ಯಾನಯೋಗ (ಅಜಂಡೀ. ೨೨೦-೮೦) ; ಮೂರನೆಯದದು ಧ್ಯಾನಯೋಗವು (ಗಗತಾ. ೨೦-೦೮); ದೇಹೇಂದ್ರಿಯವಿಷಯಗಳನ್ನೆಲ್ಲಾ ದೃಶ್ಯಭಾವದ ಅಕ್ಷರವನ್ನು ಮಾಡಿಕೊಂಡು ಆತ್ಮಧ್ಯಾನದಲ್ಲಿಯಿರುವದೇ ಧ್ಯಾನಯೋಗಯೆಂಬುವದು (ತತ್ವಚಿಂ. ೨೭-೦೪). [ ಧ್ಯಾನ + ಯೋಗ ]

**ಧ್ಯಾನಯೋಗಿ** (ನಾ). ಧ್ಯಾನ ಮಾಡುವವನು; ತಪಸ್ವಿ : ಧ್ಯಾನಯೋಗಿಯು ಏಕಾಂತಮನಸ್ಕನಾಗಿ, ಪ್ರತ್ಯೇಕನಾಗಿ ಭಾವಗಳನ್ನು ಚರ್ಚಿಸುತ್ತಾನೆ (ಬಂಕಿಮ. XXII, ಮುನ್ನುಡಿ). [ ಸಂ. ಧ್ಯಾನಯೋಗಿನ್ ]

**ಧ್ಯಾನಶೀಲ** (ಗು). ೧. ಚಿಂತನಶೀಲವಾದ; ಯೋಚನಾಪರ. (ನಾ). ೨.ಧ್ಯಾನಮಗ್ನನಾದವನು; ಚಿಂತನಶೀಲ. [ ಸಂ. ]

**ಧ್ಯಾನಸ್ಥ** (ಗು). ೧. = ಧ್ಯಾನಶೀಲ ೧ : ಧ್ಯಾನ ಮಾಡುತ್ತ ಕುಳಿತ ಕೂಡಲೆ ಗುರುವಿನ ಧ್ಯಾನಸ್ಥಮೂರ್ತಿಯು ಪ್ರತ್ಯಕ್ಷ ನನ್ನ ಎದುರಿಗೆ ಬಂದು ಕುಳಿತುಕೊಳ್ಳುವುದರಿಂದ, ಆ ದಿವ್ಯಮೂರ್ತಿಯ ದರ್ಶನಾನಂದದೊಳಗೆ ನನಗೆ ಯಾವುದೂ ಬೇಡಾಗುತ್ತದೆ ! (ಮಾಧವ. ೯೨). (ನಾ). ೨. = ಧ್ಯಾನಶೀಲ ೨: ಧ್ಯಾನಸ್ಥನಾಗುವ ಮೊದಲು ಹೀಗೆ ಕರ್ತವ್ಯಭ್ರಷ್ಟನಾಗಿ ಕುಳಿತುಕೊಳ್ಳುವದು ಯೋಗ್ಯವಲ್ಲೆಂದು ಪಶ್ಚಾತ್ತಾಪಪಡುವೆನು (ಮಾಧವ. ೯೨); ಧ್ಯಾನಸ್ಥನಾಗಿರುವ ತಪಸ್ವಿಯೊಬ್ಬನ ತಲೆಯನ್ನು ಕತ್ತಿ ಹಿಡಿದಿರುವ ಸೈನಿಕನೊಬ್ಬನು ಕತ್ತರಿಸಿದ್ದಾನೆ (ಕಶಾಅ. ೩೪೭). [ ಸಂ. ]

**ಧ್ಯಾನಾತೀತ** (ನಾ). ಚಿಂತನೆಗೆ ಮೀರಿದುದು; ಪರಾತ್ಪರವಸ್ತು; ಪರಮಾತ್ಮ : ಧ್ಯಾನ ಮೌನವನಱಿಯೆ ಧ್ಯಾನಾತೀತ ತಾನೆಯಾಯಿತ್ತಾಗಿ ಜ್ಞಾತೃಜ್ಞಾನಜ್ಞೇಯಂಗಳೆಲ್ಲವೂ ಮೀಱಿ ಅಭಿನವಮಲ್ಲಿಕಾರ್ಜುನನಲ್ಲಿ ಪರಮಸುಖಿಯಾದೆನು (ವಚಸಂ ೫೦೫-೪೨). [ ಧ್ಯಾನ + ಅತೀತ ]

**ಧ್ಯಾನಾಧೀನ** (ಗು). ಚಿಂತನೆಗೆ ಒಳಗಾಹ; ಧ್ಯಾನಪರವಾದ : ಸುಧರ್ಮಾಚಾರ್ಯರುಜ್ಜಯಂತಪರ್ವತದೊಳಾಧ್ಯಾತ್ಮಧ್ಯಾನಾಧೀನಮಾನಸರಾಗಿ ಘಾತಿಕರ್ಮಂಗಳಂ ಘಾತಿಸಿ ಕೇವಲವಿಭೂತಿಯಂ ಪಡೆದು (ಸುಕುಮಾ. ೪-೨ವ); ಧ್ಯಾನಾಧೀನಮನಂ ಮುನೀಂದ್ರನಿರೆ ಕರ್ಮಂ ಘಾತಿಸಂಘಾತಮಾ ಧ್ಯಾನೋಗ್ರಾನಳನಿಂದಮಂದುರಿಯೆ (ಮಹಾನೇ. ೩-೧೪೩). [ ಸಂ. ]

**ಧ್ಯಾನಾನಂದ** (ನಾ). ಪರಬ್ರಹ್ಮದ ಚಿಂತನೆಯಿಂದ ದೊರಕುವ ಆನಂದ: 'ಥಿಯೊರಿಯಾ' ಎಂದರೆ 'ಧ್ಯಾನಾನಂದ'. ಅದು ದೇವನ ಒಂದು ಲಕ್ಷಣ. ಮನುಷ್ಯನ 'ಧ್ಯಾನಾನಂದ' ಅನುಭವವು ದೇವನ 'ಧ್ಯಾನಾನಂದ'ದ ಅಂಶವೇ ಎಂದು ಹೇಳಬಹುದು (ಧರ್ಮಸಾ. ೧೪೪). [ ಧ್ಯಾನ + ಆನಂದ ]

**ಧ್ಯಾನಾರೂಢ** (ನಾ). ೧. ಧ್ಯಾನವನ್ನು ಕೈಕೊಳ್ಳುವುದು; ಪರತತ್ತ್ವದ ಚಿಂತನೆ: ಶ್ರೀನಾ[ರೀ]ನಿಳೆಯಂ ಶ್ರೀವಿಮಾನಾಂಬರ ದಿಬ್ಯಸ್ಥಾ[ನಾ] [ಮೋ]ದಿ ಚೂಡಾಮಣಿಮುನಿಪಂ ಧ್ಯಾನಾರೂಢದೆ ನೋಡಿ ತಾವೊಪ್ಪೆ ಕೇವಳಜ್ಞಾನ ಪ್ರಸಿದ್ಧಮೋಂ ಪ್ರಕಟಿಸಿದ (ಕಇಅ. ೩೮-೫೨-೨; ?). ೨. ಧ್ಯಾನವನ್ನು ಕೈಗೊಂಡವನು. [ ಧ್ಯಾನ + ಆರೂಢ ]

**ಧ್ಯಾನಿ** (ನಾ). ಪರತತ್ತ್ವವನ್ನು ಕುರಿತು ಚಿಂತಿಸುವವನು; ಧ್ಯಾನಶೀಲ : ವಿಗತೇಂದ್ರಿಯಾ ಮನೋವಿಷಯನಭವಾನವರತಂತರ್ಗತಧ್ಯಾನಿ (ಬಸಪು. ೫೩-೧) ; ಕಣ್ಣಿನಲ್ಲಿ ಕಾಮ ಮನದಲ್ಲಿ ಕ್ರೋಧ . . . ಅಱುಹಿನಲ್ಲಿ ಮಾಯಾ ಉಳ್ಳನ್ನಕ್ಕರ ಎಂತು ಭಕ್ತನೆಂಬೆ . . . ಎಂತು ಧ್ಯಾನಿಗಳೆಂಬೆ ಎಂತು ಅನುಭಾವಿಗಳೆಂಬೆ (ಸಿದ್ಧೇವ. ೯೦-೨೭೫). [ ಸಂ. ಧ್ಯಾನಿನ್ ]

**ಧ್ಯಾನಿಸು** (ಕ್ರಿ). ೧. ಪರತತ್ತ್ವವನ್ನು ಕುರಿತು ಚಿಂತಿಸು; ಧ್ಯಾನಮಾಡು: ಶುಕ್ಲಧ್ಯಾನಮಂ ಧ್ಯಾನಿಸಿ ಎಂಟು ಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ಪೋದರ್ (ವಡ್ಡಾರಾ. ೧೧೪-೦೭) ; ನಾಲ್ಕುಂ ಧರ್ಮಧ್ಯಾನಮಂ ಧ್ಯಾನಿಸುತ್ತುಂ (ಆದಿಪು. ೧೦-೧೪ವ) ; ಇಂತೀ ತ್ರಿಶುದ್ಧಿಗಳಿಂ ಧ್ಯಾನಿಸುವೆಮ್ಮನೋತೆಱಗುವೆಮ್ಮಂ ಬಾದಿಪೆಮ್ಮಂ ತ್ರಿಕಾಲಗಯೋಗರ್ ಪರಮೇಶ್ವರರ್ ಪರಸುಗಿಂ ವಾತ್ಸಲ್ಯದಿಂ (ಶಾಂತಿಪು. ೧-೫) ; ಪ್ರಶಸ್ತಧ್ಯಾನಮಂ ಧ್ಯಾನಿಸುವಾಗಳ್ (ಅಜಿಪು. ೮-೨೮ವ) ; ಜಾನಿಪೊಡೆ ಚತುರ್ಭುಜನಂ ಧ್ಯಾ[ಪಾಠಾಂ. ಜಾ] ನಿಪುದೋ ಮೋಣ್ದಶಾವತಾರದ ರೂಪಂ ಧ್ಯಾ [ಪಾಠಾಂ. ಜಾ] ನಿಪುದೊ (ಸಮುಪ. ೮-೧೪೫); ಷಡ್ವಸ್ತುವಂ ಷಟ್ಚಕ್ರಭುವನೇಜಮಧ್ಯದೊಳ್ ಧ್ಯಾನಿಸಿ (ಪದ್ಮರಾ. ೨-೪೮) ; ರುದ್ರಾಣಿ ಘನಧೈರ್ಯದಿಂದೆ ಸಾನುರಾಗದೆ ತನ್ನ ಹೃತ್ಕಮಲಮಧ್ಯದೊಳ್ ಧ್ಯಾನಿಸಿದಳೀಶನಂ (ಚಬಪು. ೩೭-೩). ೨. ಚಿಂತನೆ ಮಾಡು; ಗಮನದಲ್ಲಿಡು; ಆಲೋಚಿಸು : ಗಗನಮಂ ಪೃಥ್ವಿಯಂ . . . ಭದ್ರವೀರಸೌಂದರ್ಯಮಂ, ಧ್ಯಾನಿಸುತೆ ಭಾವಿಸುತೆ ರೂಪಿಸುತೆ ಕಾಮಿಸಿದನಾ ಭೂಮಿಪಂ (ಶ್ರೀರಾಮಾ. ೮೨-೩೧೦) ; ಪರಿಭಾವಿಸು ! ಆಸ್ವಾದಿಸು ! ಧ್ಯಾನಿಸು ! ಒಂದಾಗು ! (ಅನಿಕೇ.೦೮-೧೦). ೩. ಆತ್ಮಚಿಂತನೆ ಮಾಡು; ಆತ್ಮವನ್ನು ಕುರಿತು ಚಿಂತಿಸು: ದೇಹ ಬೇಱಾತ್ಮ ಬೇಱೆಂದಾತ್ಮ ಕಲೆಯ ಮುನ್ನೊಲ್ದು ಧ್ಯಾನಿಸಿದ ಫಲದಿಂದ ದೊರೆಕೊಂಡುದಾ ರಾಯಗಾ ರೂಪು (ಭರಚ. ೦-೫೪); ಧ್ಯಾನಿಸಿದನೊಂದೆರಡು ಗಳಿಗೆ (ಜೈಮಿಭಾ. ೦೦-೩೭).
[ ಧ್ಯಾನ + –ಇಸು$_3$ ]

**ಧ್ಯಾಮ** (ನಾ). ೧. (ಒಂದು ಬಗೆಯ) ಸುಗಂಧಪೂರಿತವಾದ ಹುಲ್ಲು; ಸುವಾಸನೆಯನ್ನು ಬೀರುವ ಹುಲ್ಲು. ೨. ಹಂಚೀಕಡ್ಡಿ : "ಕತ್ತೃಣಂ ಪೌರಂ, ಸೌಗಂಧಕಂ, ಧ್ಯಾಮಂ [ಪಾಠಾಂ. ಧ್ಯಾಯಂ], ದೇವಜಗ್ಧಕಂ, ರೌಹಿಷಂ – ೬ ಕಾಚೀಹುಲ್ಲು, ಕಾಚೀಕಡ್ಡಿ, ಹಂಚೀಕಡ್ಡಿ, ಬರಗುಕಡ್ಡಿ, ಇವುಗಳೆಲ್ಲಕ್ಕೂ ಹೆಸರುಗಳು" (ಸಿದ್ಧಾಂತಿ. ೧೫೧). [ ಸಂ. ]

**ಧ್ಯಾಸ, ದ್ಯಾಸ** (ನಾ). ೧. ಚಿಂತನೆ; ಧ್ಯಾನ : ಈ ಸಾಧನಶಾಸ್ತ್ರದಲ್ಲಿಯ ಭವತಾರಕರು ಹೇಳುವ ಮೊದಲನೆಯ ಅಂಶವು ನ್ಯಾಸ ಮತ್ತು ಧ್ಯಾಸ ಎಂಬುದು (ಪರಪ. ೫೮) ; ರಂಗಕ್ಕನಿಗೆ ಮಾತ್ರ ಆ ಶೀರೆಯ ಧ್ಯಾಸ ಬಿಡಲಿಲ್ಲ (ದೀಪಪ. II, ೦೨೨). ೨. ಎಚ್ಚರ; ಪ್ರಜ್ಞೆ; ಅರಿವು : ಅಲ್ಲಿದ್ದವರಿಗೆ . . . ಅಜಿತ ಮನೋರಮೆಯ ವಿಷಯದಲ್ಲೂ ಧ್ಯಾಸವಿರಲಿಲ್ಲ (ಶೀಪ್ರಶ್ನೆ. ೫೨) ; ನಾನು ಎರಡು ಸಲ ಕೂಗಿದೆ, ನಿನಗೆ ಇತ್ತ ಧ್ಯಾಸವೇ ಇರಲಿಲ್ಲ (ಮಲಮ. ೫೭); ಅವನ 'ಧ್ಯಾಸ'ವೇನೂ ಅತ್ತ ಇದ್ದ ಹಾಗಿಲ್ಲ (ದಂಗಾಗ್. ೭). ೩. ನೆನಪು; ಜ್ಞಾಪಕ. ನನಗೆ ಬಂದೂನ ಕ್ರಾಪಿನದೇ ಧ್ಯಾಸ (ವ್ಯನಿ. ೭೦) : ಅವರ ಧ್ಯಾಸವೇ ಉಳಿಯಲಿಲ್ಲ (ಕನಕ. ೨೭). ೪. ಲಕ್ಷ್ಯ; ಗಮನ : ಬರೇ ತಿನೂವರ ಕಡೇನ ಧ್ಯಾಸಾ (ದೀಪಪ. II, ೫೭).

ದ್ಯಾಸ : ೨. "ಸ್ವಾಮಿಗೆ ಯಾಕೋ ಹೊರಗಿನ ದ್ಯಾಸೇ ಇಲ್ಲ" ಎಂದು ಅವರ ಗಮನವನ್ನು ತನ್ನತ್ತ ಸೆಳೆದ (ಸುವಸಂ. ೭೯). ೩. ನೆನಪು : (ದ್ಯಾಸ-ನೆನಪು ಜಾನಕೋ. ೪).

ಧ್ಯಾಸ ಬರು = ಗಮನಕ್ಕೆ ಬರು ; ಲಕ್ಷ್ಯಕ್ಕೆ ಬರು : ಅವನ ದನಿ ಸೋತಿದ್ದುದು ಧ್ಯಾಸ ಬಂದಿತು ಮೇಖಲೆಗೆ (ಅಳಾಕ. ೧೫೬).

[ ←ಮರಾ. ಧ್ಯಾಸ ]

**ಧ್ಯೇಯ** (ಗು). ೧. ಉದ್ದೇಶಿಸಿದ ; ಲಕ್ಷಿಸಿದ : ಸಮಾಧಿಯೆಂದರೆ ಈ ಧ್ಯಾನವೆಂಬ ಅತಿ ಸ್ವಚ್ಛಚಿತ್ತವೃತ್ತಿಪ್ರವಾಹಕ್ಕೂ ಧ್ಯೇಯವಸ್ತುವಿಗೂ ಭೇದ ತೋರದೆ ಧ್ಯೇಯವಸ್ತು ಸ್ವರೂಪದಲ್ಲೇ ಲೀನವಾಗುವಿಕೆ. ಇದನ್ನು ಧ್ಯೇಯಮಾತ್ರಸ್ಫೂರ್ತಿಯೆನ್ನುವರು (ಹಿಂದಸಾ. ೧೦೬). (ನಾ). ೨. ಲಕ್ಷ್ಯ ; ಉದ್ದೇಶ ; ಗುರಿ : "ಉದ್ದೇಶ ; ಗುರಿ ; ಧ್ಯೇಯ" (Cause. ಪತ್ರಿನಿ. ೧೩) ; ಜೀವನಕ್ಕೆ ಧ್ಯೇಯವೊಂದಿದೆಯೆಂಬುದನ್ನು ಅರಿಯುವುದೆ ಕಷ್ಟ (ಜುಕ್ಕಾರ ೧. ೬೬೩) ; ನಿರಂತರ ಸೇವೆಯೇ ನದಿಗಳ ಧ್ಯೇಯ (ನವದಿ. ೧೭) ; ಜೈನರಂತೆ ಶೈವರೂ ಸರ್ವಭೂತಹಿತವನ್ನೇ ತಮ್ಮ ಉಚ್ಚ ಧ್ಯೇಯವನ್ನಾಗಿ ಮಾರ್ಪಡಿಸಿಕೊಂಡರು (ಸಾಹಿಸ. ೦೩೪). ೩. ಧ್ಯಾನದ ವಸ್ತು,-ಗುರಿ : ಪ್ರಾಯೋಪಗಮನವಿಧಿಯಿಂ ಕಾಯಮನಳವಡಿಸಿ ವಿಮಳಶುದ್ಧಧ್ಯಾನಂ ಧ್ಯೇಯ [ಪಾಠಾಂ. ದೇಯ, ಥೇಯ]ದೊಳಮರೆ ಮುಮುಕ್ಷುಜ್ಯಾಯಂ ಪಂಡಿತಸಮಾಧಿವಿಧಿಯಂ ತಳೆದಂ (ಅನಂಪು. ೪-೩೭). ೪. ಆದರ್ಶ. 'ಧ್ಯೇಯಜೀವಿ', 'ಧ್ಯೇಯವಾದಿ' ಪರಾ. [ ಸಂ. ]

**ಧ್ಯೇಯಜೀವಿ** (ನಾ). ಉತ್ತಮ ಉದ್ದೇಶವನ್ನಿಟ್ಟುಕೊಂಡಿರುವವನು ; ಆದರ್ಶವಾದಿ : ಮೈ ಮನಸ್ಸನ್ನು ಮನ್ನಿಸದೆ, ಒಂದು ಕ್ಷಣ ಕುಳ್ಳಿರಲೂ ಒಲ್ಲದೆ, ಕರ್ಮನಿರತರಾಗುವುದು ಧ್ಯೇಯಜೀವಿಗಳ ಹುಚ್ಚು (ಕಬಸಾ. IX. ೬೬೪). [ ಸಂ. ಧ್ಯೇಯಜೀವಿನ್ ]

**ಧ್ಯೇಯವಸ್ತು** (ನಾ). ಧ್ಯಾನ ಮಾಡಬೇಕಾದ ವಸ್ತು ; ಪರಮಾತ್ಮ : ಧ್ಯಾನಯೋಗದ ಧ್ಯೇಯವಸ್ತುವೆ ತಾನೆನುತ (ಗಗತಾ. ೦೬-೩೯) ; ಸಮಾಧಿಯೆಂದರೆ ಈ ಧ್ಯಾನವೆಂಬ ಅತಿಸ್ವಚ್ಛಚಿತ್ತವೃತ್ತಿಪ್ರವಾಹಕ್ಕೂ ಧ್ಯೇಯವಸ್ತುವಿಗೂ ಭೇದ ತೋರದೆ ಧ್ಯೇಯವಸ್ತುಸ್ವರೂಪದಲ್ಲೇ ಲೀನವಾಗುವಿಕೆ (ಹಿಂದಸಾ. ೧೦೬). [ ಧ್ಯೇಯ + ವಸ್ತು ]

**ಧ್ಯೇಯವಾದ** (ನಾ). ಉತ್ತಮವಾದ ಉದ್ದೇಶದ ಸಾಧನೆಯನ್ನು ಪ್ರತಿಪಾದಿಸುವ ವಾದ ; ಆದರ್ಶವಾದ : ಧ್ಯೇಯವಾದದ ಆಂತರಿಕ ಸ್ಫೂರ್ತಿಯು ಆತ್ಮದ ಅಮರವಾದ ಆಕಾಂಕ್ಷೆಗಳೊಳಗಿಂದಲೇ ಉದ್ಭವಿಸುತ್ತಿರುವುದು (ಪ್ರಬಂಧ. ೧೧೧) ; ಅವನು ಜೀವನದ ಎಲ್ಲ ವಿಷಯಗಳನ್ನೂ ಧ್ಯೇಯವಾದದ ದೃಷ್ಟಿಕೋನದಿಂದ ನೋಡುವ ಮನುಷ್ಯ (ದೂರಸ. ೪).

[ ಧ್ಯೇಯ + ವಾದ₃ ]

**ಧ್ಯೇಯವಾದಿ** (ನಾ). = ಧ್ಯೇಯಜೀವಿ : ಮೊದಲಿನಿಂದಲೂ ಕನ್ನಡರು ವೀರರು, ಉದಾತ್ತರು, ಧ್ಯೇಯವಾದಿಗಳು (ಭಾಷಾಶಾ. ೨೫೮).

[ ಸಂ. ಧ್ಯೇಯವಾದಿನ್ ]

**ಧ್ಯೇಯಸಾಧನೆ** (ನಾ). ಉದ್ದೇಶದ ಸಾಧನೆ ; ಗುರಿಯನ್ನು ಮುಟ್ಟಲು ಮಾಡುವ ಪ್ರಯತ್ನ : ಧ್ಯೇಯಸಾಧನೆಯ ಪ್ರಯತ್ನವೂ ಮಾನವನ ಸಹಜಪ್ರವೃತ್ತಿಯೇ ಹೊರತು ಕೃತಕವಲ್ಲ (ಜುಕ್ಕಾರ. ೦ ೬೬೩).

[ ಧ್ಯೇಯ + ಸಾಧನೆ ]

**ಧ್ರುಪದ** 'ದುರಪದ' ನೋ.

**ಧ್ರುವ** (ಗು). ೧. ಸ್ಥಿರವಾದ ; ಅಚಲವಾದ. ೨. ನಿಶ್ಚಿತವಾದ ; ಸಂಶಯವಿಲ್ಲದ ; ದೃಢವಾದ. ೩. ನಿತ್ಯವಾದ ; ಬದಲಾಗದ ; ಶಾಶ್ವತ ; ನಿರಂತರ ; ಸತತ. (ನಾ). ೪. ನಿತ್ಯವಾದುದು ; ಸ್ಥಿರವಾದುದು ; ಶಾಶ್ವತವಾದುದು : "ಸತತಂ . . . ಧ್ರುವಮವಿರತಂ [ನಿರಂ]ತರಮಜಸ್ರಮೆನೆ ತಾಂ ನಿತ್ಯಂ" (ವಸ್ತುಕೋ. ೧೦೯-೬೭) ; "ನಿತ್ಯಂ ಧ್ರುವಂ ಶಾಶ್ವತಮದು ಸನಾತನಮನಶ್ವರಂ ಸ್ಥಿರಮೆನಿಕ್ಕು" (ಮಂಗರಾ. ೮-೨೫) ; ಧ್ರುವವಲಾ ರಾಜಾಗತೋಧರ್ಮವು ವಿದಿತವಿದ ನೀವಜಾಯಿರೇ (ಬಸವು. ೫೫-೮) ; ದಿವಿಜರಿಪು ಕೇಳೆಲವೊ . . . ಧ್ರುವವು ನಿನಗಾಯುಷ್ಯವೆಂಬುತ್ಸವದಿ ನಮ್ಮನು ಕೆಣಕಿ ಲಯಮೃತ್ಯುವಿನ ಕೈವಶವಾದ ನೀನೆಂದಸುರಹರ ನುಡಿದ (ತೊರರಾ. ೬-೫೦-೦೩) ; ಅಧ್ರುವವನು ತೂರಿ, ಧ್ರುವದೆದೆಯನು ತೋರಿ . . . ಪುಣ್ಯಸವಿಾರನು ಬರುತಿಹನು (ಶಾಂಜಜ. ೨೩-೭). ೫. ಉತ್ತಾನಪಾದರಾಯನ ಮಗ ; ಧ್ರುವಲೋಕದ ಅರಸು : ಲೋಕೋತ್ತರದ ಪದದಲಿ ನಿಂದನಾ ಧ್ರುವನಧಿಕತೇಜದಲಿ' (ನಿಭಾಗ. ೪-೯ ಸೂಚನೆ) ; ಕರಿ ಧ್ರುವ ಬಲಿ ಪಾಂಚಾಲಿ ಅಹಲ್ಯೆಯ ಪೊರೆದವ ನೀನಂತೆ (ಪುರಂದ. ೨-೭೧-೧) ; ಜಲಜಾಕ್ಷಭಕ್ತಿಯಿಂ ಪ್ರಹ್ಲಾದನಾಗಿ ನಿಶ್ಚಲ ಹರಿಧ್ಯಾನ್ಯದಿಂ ಧ್ರುವನಾಗಿ (ಜೈಮಿಭಾ. ೨೯-೧೪). ೬. ಒಂದು ನಕ್ಷತ್ರದ ಹೆಸರು. "ಧ್ರುವಃ, ಔತ್ತಾನಪಾದಿಃ – ೨ ಧ್ರುವನಕ್ಷತ್ರದ ಹೆಸರು" (ಸಿದ್ಧಾಂತಿ. ೩೦). 'ಧ್ರುವನಕ್ಷತ್ರ' ಪರಾ. ☞ ಧ್ರುವನು ನಾರದರಿಂದ ಮಂತ್ರೋಪದೇಶವನ್ನು ಪಡೆದು ತಪಸ್ಸನ್ನಾಚರಿಸಿ, ಸಾಮ್ರಾಜ್ಯವನ್ನಾಳಿ ಬಳಿಕ ಧ್ರುವಮಂಡಲವಾದನೆಂದು ಪುರಾಣಗಳಲ್ಲಿ ಹೇಳಿದೆ. ೭. ಎಂಟು ಜನ ವಸುಗಳಲ್ಲಿ ಒಬ್ಬ. 'ಅಷ್ಟವಸು' ಪರಾ. ೮. ಭೂಮಿಯ ಅಕ್ಷದ ಉತ್ತರ ಹಾಗು ದಕ್ಷಿಣದಿಕ್ಕಿನ ಕೇಂದ್ರಬಿಂದುಗಳು ; ಉತ್ತರಧ್ರುವ ಮತ್ತು ದಕ್ಷಿಣಧ್ರುವ : ಭೂಮಿಯು ತನ್ನ ಮೈಸುತ್ತು ಸರ್ವಕಾಲವೂ ತಿರುಗುತ್ತಿದ್ದಾಗ್ಯೂ ಅದರ ಬುಡ, ತಲೆ, ಇವೆರಡು ಬಿಂದುಗಳು ಸ್ಥಿರವಾಗಿ ಇರುತ್ತವೆ. ಈ ಸ್ಥಿರಬಿಂದುಗಳನ್ನು ಧ್ರುವಗಳೆಂದೆನ್ನುವರು (ಮುಂಬಯಿ. ೬-೬೦) ; ಪೂಜಕನೂ ಪೂಜ್ಯನೂ ಬೇರೆ ಬೇರೆ ಎಂಬುದರ ಕಲ್ಪನೆಗೂ ಇಬ್ಬರೂ ಒಂದೇ ಎಂಬ ಕಲ್ಪನೆಗೂ ಎರಡು ಧ್ರುವದ ಅಂತರ (ಭಾರದ. ೨೮೪) ; ಇಂದ್ರಿಯಾನುಭವಕ್ಕೆ ಪ್ರತಿಭಾನವೂ ಭಾವನೆಗೆ ಆಲೋಚನೆಯೂ ಎದುರು ಧ್ರುವಗಳಂತಿವೆ (ಶಿಕ್ಷದ. ೬೩೩). ೯. ಅಯಸ್ಕಾಂತದ ಪ್ರತಿತುದಿಯಲ್ಲೂ ಇರುವ ಪ್ರದೇಶ : ಕಬ್ಬಿಣವನ್ನು ಆಕರ್ಷಿಸುವ ಗುಣವನ್ನೇ ಕಾಂತತ್ವವೆಂದು (Magnetism) ಕರೆಯುವರು. ಈ ಗುಣವು ಕಾಂತದ ತುದಿಯಲ್ಲಿ ಹೆಚ್ಚಾಗಿದೆ . . . ಹೀಗೆ ಈ ಗುಣವು ಕೇಂದ್ರೀಕೃತವಾಗಿರುವ ಸ್ಥಾನಗಳನ್ನು ಕಾಂತದ ಧ್ರುವಗಳೆಂದು (Poles) ಕರೆಯುತ್ತೇವೆ (ಭೌತವಿ. ೩೧೦). ೧೦. ಕಂಬ ; ಗೂಟ : "ಧ್ರುವಂ ಶಂಕ್ವಾಖ್ಯಂ" (ವಸ್ತುಕೋ. ೩೧-೭) ; "ಗೂಂಟ ಮತ್ತೆ ಶಿವಕಂ ಧ್ರುವಂ ಪುಳಕಮೆನಿಸಿಕ್ಕು" (ಮಂಗರಾ. ೮೫-೨೭). ೧೧. (ಕೊಂಬೆ, ರೆಂಬೆಗಳನ್ನು ತರಿದ) ಮರದ ಬೊಡ್ಡೆ,-ಕಾಂಡ ; ಮೋಟುಮರ ; ಮರದ ತುಂಡು : "ಸ್ಥಾಣುಃ, ಧ್ರುವಃ, ಶಂಕುಃ–೩ ಮೋಟಿನ ಹೆಸರು. ಗೂಟ, ಮೇಕು" (ಸಿದ್ಧಾಂತಿ. ೧೧೧). ೧೨. ಎಣ್ಣೆಯ ಗಾಣದಲ್ಲಿ ಉಪಯೋಗಿಸುವ ಮರದ ತುಂಡು,-ದಿಮ್ಮಿ. ೧೩. [ಜ್ಯೋತಿ] ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಹನ್ನೆರಡನೆಯದು ; ☞ ಇದೊಂದು ಶುಭ ಯೋಗವೆಂದು ಹೇಳುತ್ತಾರೆ : ವಿಷ್ಕಂಭ ಪ್ರೀತಿ ಆಯುಷ್ಮಾನ್ ಸೌಭಾಗ್ಯ ಶೋಭನ ಅತಿಗಂಡ ಸುಕರ್ಮ ಧೃತಿ ಶೂಲ ಗಂಡ ವೃದ್ಧಿ ಧ್ರುವ ವ್ಯಾಘಾತ ಹರ್ಷಣ ವಜ್ರ ಸಿದ್ಧಿ ವ್ಯತೀಪಾತ ವರೀಯಾನ್ ಪರಿಘ ಶಿವ ಸಿದ್ಧ ಸಾಧ್ಯ ಶುಭ ಶುಕ್ಲ ಬ್ರಹ್ಮ ಐಂದ್ರ ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳು (ವಿವೇಕ. ೩೨೦) ; ಯೋಗಗಳತಿಶಯವನರಿಯ್ಯೆಯ್ಯ ಪೇಳುವೆ ವ್ಯತಿಯು ಧೃತಿ ವಿಷ್ಕಂಭ ಶೂಲವು . . . ಧ್ರುವ ಪರಿಘ (ಗಗತಾ. ೪-೬೯). ೧೪. [ಸಂಗೀತ] ಒಂದು ತಾಳದ ಹೆಸರು : ಬೇಗದಿ ಧ್ರುವ ಮಠೆಯವು ಪಡಿಮಠೆಯವು ಯೇಗ್ಯೆಯಲಡತಾಳಗಳು (ತರ್ಕಕಾ. ೭-೫೬) ; ಧ್ರುವ, ಮಠ್ಯ, ರೂಪಕ, ಜಂಪೆ, ತ್ರಿಪುಟ, ಅಟ್ಟ,

ಏಕವೆಂಬ ಸಪ್ತತಾಳಭೇದಂಗಳಂ (ವಿವೇಕ. ೨೩೮); ಆದಿತಾಳದಿಂದ ಧ್ರುವ, ಮಟ್ಟ, ರೂಪಕ, ಝಂಪೆ, ತ್ರಿವುಡೆ, ಅಷ್ಟ, ಏಕತಾಳಗಳು ಹುಟ್ಟಿದವು (ಯಕ್ಷಗಾ. ೨೩). ೧೫. ದೇಶೀಗೀತಗಳಲ್ಲಿ ಒಂದು ಪ್ರಕಾರ : ಸಾಮಾಜಿಕ ಜನಚೇತೋ[ರಾ]ಮಂ ಪ್ರಾಸಾದಿಕಾಂತರಾಕ್ಷೇಪಕ ವಿನಿಷ್ಕ್ರಾಮ ಪ್ರವೇಶ ಗಾನರಸಾವ್ಯುತಮೆಸಗುಂ ಧ್ರುವ ಪ್ರಯೋಗಾನುಗತಂ (ಅಜಿಪು. ೫-೧೦); ಮಾತೃಕಾದಿದೇಶೀಪ್ರಬಂಧಂಗಳೊಳಂ ಧ್ರುವಾದಿ ದೇಶೀಗೀತಂಗಳೊಳಂ (ಚಂದ್ರಪು. ೧೫-೭೨ ವ). ೧೬. ಹಾಡು ಅಥವಾ ಪದ್ಯದ ಪಲ್ಲವಿ. ೧೭. [ಅಶ್ವಶಾ] ಕುದುರೆಯ ಮೈಮೇಲಿನ ಸುಳಿ : ಧ್ರುವಮುಸ್ಕಂ ಶುಭಮೆಂದಪ್ಪುವು ಸುಟಿಗಳ್ ನೂಱುಭೇದದಿಂದಂ ತುರಗಕ್ಕವಯವದಿಂದಂ ದೊಳವಪ್ಪುವುಮಷ್ಟವಿಧಂ ಸ್ಥಾನಮವರ್ಕೆ ನೂಱಾಱಕ್ಕುಂ (ಅಶ್ವಶಾ. ೪-೧). 'ದಶಧ್ರುವ' ಪರಾ. [ ಸಂ. ]

**ಧ್ರುವಉಂಡಿಗೆ** 'ಧ್ರುವವುಂಡಿಗೆ' ನೋ.

**ಧ್ರುವಕ** (ನಾ).=ಧ್ರುವ ೧೦. "ಧ್ರುವಕಃ, ಶಿವಕಃ, ಶಂಕುಃ, ಶಳಕಃ, ಕೀಳಃ, ಓ ಗುಡಿಯ ಗೂಂಟಂ" (ಹಲಾಯು. ೭೪-೨೯೭). [ ಸಂ. ]

**ಧ್ರುವಕ್ಷೇತ್ರ** (ನಾ). [ಅಶ್ವಶಾ] ಕುದುರೆಯ ದೇಹದ ಮೇಲಿರುವ ಹತ್ತುವಿಧವಾದ ರೋಮದ ಸುಳಿಗಳಿರುವ ಸ್ಥಳ : ಸಂಗತ ದಶಧ್ರುವ ಕ್ಷೇತ್ರಂಗಳ್ ಶುಭಲಕ್ಷಣಂಗಳವ್ಯತೋದ್ಭವವಾಹಂಗಳಜಮ್ಮುಗ್ಮುಳೂಕ ಭವಂಗಳ್ ಪದಿನೆಂಟುಕೋಟಿ ಜಾತ್ಯಶ್ವಂಗಳ್ (ಶಾಂತಿಪು. ೧೦-೧೨೮). 'ದಶ ಧ್ರುವ' ಪರಾ. [ ಧ್ರುವ + ಕ್ಷೇತ್ರ ]

**ಧ್ರುವಗತಿ** (ನಾ). ಶಾಶ್ವತವಾದ ಸ್ಥಿತಿ; ಮೋಕ್ಷ: ಧ್ರುವಗತಿಯನೆಗ್ಗುದಿದನು ಬಳಿಕಾ ಧ್ರುವನಖಿಳ ಸಂಸಾರ ಸುಖವಧುವವಿದೆಂದಚ್ಯುತನ ಕಿಂಕರರೊಡನೆ ಸಲವಿನಲಿ (ನಿಭಾಗ ೪-೧೦ ಸೂಚನೆ). [ ಧ್ರುವ + ಗತಿ ]

**ಧ್ರುವಜಲ** (ನಾ). ಬತ್ತದೆ ನಿಂತಿರುವ ನೀರು ; ಶಾಶ್ವತವಾದ ನೀರು : ಧ್ರುವಜಲದಲ್ಲಿ ತಾವರೆಯಂ ನೆಟ್ಟಂತೆ ಚಂದ್ರಗುಪ್ತನಲ್ಲಿ ರಾಜ್ಯಲಕ್ಷ್ಮಿಯಂ ನಿಲ್ಲಿಸಿದೆನು (ಮುದ್ರಾಮಂ. ೨೮೯) ; ಈ ಬಾವಿಯಲ್ಲಿ ಧ್ರುವಜಲವಿದೆ. ಉರಿ ಬೇಸಿಗೆಯಲ್ಲೂ ಇದರಲ್ಲಿ ನೀರಿದ್ದೇ ಇರುತ್ತದೆ (ರೂಢಿ) [ ಧ್ರುವ + ಜಲ₁ ]

**ಧ್ರುವತಾರೆ** (ನಾ). ೧. = ಧ್ರುವನಕ್ಷತ್ರ : ಒಡನೊಸೆದಾ ಕುಮಾರಕನ ಬೆಂಬಳಿಯೊಳ್ ಮಿಗೆ ಪಿಂದುಗೊಂಡು ಸಂಗಡದೊಳೆ ಕೂಡಿಬಂದರಧಿರಾಜ ಕುಮಾರಕರಂದನೇಕರುಂ ತಡೆಯದೆ ತಾರಕಾವಿತತಿಗಳ್ ಧ್ರುವತಾರೆಯ ಪಿಂದೆ ಬರ್ಪವೊಲ್ (ಬಾಥಪು. ೯-೯೨) ; ಇದೇ ಪುರಾಣೇತಿಹಾಸ ಪ್ರಸಿದ್ಧ ವಾದ ಧ್ರುವತಾರೆ (ನಕ್ಷತ್ರ. ೨೬). ೨. ಶಾಶ್ವತವಾಗಿ ಬೆಳಗುವವನು ; ಸ್ಥಿರವಾಗಿ ಪ್ರಕಾಶಿಸುವವನು : ಅವನು ವಿಜ್ಞಾನಪ್ರಪಂಚದಲ್ಲಿ ಧ್ರುವ ತಾರೆಯಾಗಿದ್ದಾನೆ (ರೂಢಿ). ೩. (ಅಲಂ) ಆದರ್ಶವಾದ ಗುರಿ : ಪರೋಪಕಾರವೇ ನನ್ನ ಜೀವನದ ಧ್ರುವತಾರೆ (ರೂಢಿ). [ ಧ್ರುವ + ತಾರೆ₂ ]

**ಧ್ರುವತಾಳ** (ನಾ). [ಸಂಗೀತ] ಒಂದು ತಾಳದ ಹೆಸರು : ಸಂಕೀರ್ಣ ಜಾತಿ ಧ್ರುವತಾಳದಲ್ಲಾದರೂ ತಂತಿಗಳು ಕಡಿದು ಹೋಗುವಷ್ಟು ಪಲ್ಲವಿ ಯನ್ನು ಗಂಟೆಗಳ ಕಟ್ಟಲೆ ಬಾರಿಸಿ, ಸಂಪ್ರೆಯಿಲ್ಲದ ಸಂಗತಿಗಳಿಂದ ಸಂಗೀತ ವನ್ನು ಅಲ್ಲಾಡಿಸಿಬಿಡುವವರಿದ್ದಾರೆ (ಗಾನಕ. ೨) ; ಧ್ರುವತಾಳ, ಮಠ್ಯತಾಳ . . . ಏಕತಾಳ ಇವೇ ಸೂಳಾದಿ ಸಪ್ತತಾಳಗಳು (ಸಂಗೀಚಂ. ೫೯). [ ಧ್ರುವ + ತಾಳ₂ (=ತಾಲ) ]

**ಧ್ರುವತ್ವ** (ನಾ). ೧. ಶಾಶ್ವತ ಸ್ಥಿತಿ ; ಸ್ಥಿರವಾಗಿರುವಿಕೆ : ಪೂರ್ವಗತ ಮೆಂಬುದು . . . ಐದು ಪದಂಗಳಿಂ ಉತ್ಪಾದ ವ್ಯಯ ಧ್ರುವತ್ವಾದಿಗಳಂ ವರ್ಣಿಸುಗುಂ (ತತ್ತ್ವಪ್ರ. ೬೦). ೨. [ಸಂಗೀತ] ವೇಗವಾದ ಲಯ,– ಗತಿ. [ ಸಂ. ]

**ಧ್ರುವ ನಕ್ಷತ್ರ** (ನಾ). (ಯಾವಾಗಲೂ ಸ್ಥಿರವಾಗಿ, ಚಲಿಸದೆ ಇರುವು ದೆಂದು ಹೇಳಲಾದ) ಒಂದು ನಕ್ಷತ್ರ : ಬಡಗದಿಕ್ಕಿಗೆ ಹಡಗ ನಡಿಸಿದರೆ, ಆ ಹಡಗಿನೊಳಗಿರುವವರಿಗೆ ಧ್ರುವನಕ್ಷತ್ರವು ಮೇಲೆ ಏರಿದಂತೆ ಕಾಣುತ್ತದೆ (ಮುಂಬಯಿ. ೪-೬೭). ತನ್ನ ಸ್ಥಿರವಾದ ಸ್ಥಾನದಲ್ಲಿ, ಮೋಡವಾದದೆ ಶುಭ್ರವಾಗಿರುವ ರಾತ್ರಿಗಳಲ್ಲಿ . . . ಈ ನಕ್ಷತ್ರವನ್ನು ನಾವು ನೋಡ ಬಹುದು. ಇದೇ ಧ್ರುವನಕ್ಷತ್ರ (ಆಕಾಶ. ೫೨) ; ಹಿಂದಿನ ಕಾಲದಲ್ಲಿ ಧ್ರುವನಕ್ಷತ್ರವನ್ನು ಮನಸ್ಸಿನ ಸ್ಥಿರತೆ ಮತ್ತು ದೃಢಸಂಕಲ್ಪಕ್ಕೆ ಸಂಕೇತವಾಗಿ ಗೌರವಿಸುತ್ತಿದ್ದರು (ಆಕಾಶ. ೭೪). [ ಧ್ರುವ + ನಕ್ಷತ್ರ ]

**ಧ್ರುವನಿಧಿ** (ನಾ). ಬ್ಯಾಂಕುಗಳಲ್ಲಿಡುವ ಶಾಶ್ವತವಾದ ಹಣ,– ಪುದು ವಟ್ಟು : ಧರ್ಮಕಾರ್ಯಕ್ಕಾಗಿ ಒಂದು ಧ್ರುವನಿಧಿಯನ್ನು ಇಡಬೇಕು (ರೂಢಿ). [ ಧ್ರುವ + ನಿಧಿ ]

**ಧ್ರುವಪೈರು** (ನಾ). ದೀರ್ಘಕಾಲ ಇದ್ದು ಫಲ ಕೊಡುವ ತೆಂಗು, ಅಡಕೆ ಮುಂತಾದ ಬೆಳೆ : ಧ್ರುವಪೈರಿನಿಂದ ಉತ್ಪತ್ತಿ ಹೆಚ್ಚು (ರೂಢಿ). [ ಧ್ರುವ + ಪೈರು (<ಪಯಿರ್) ]

**ಧ್ರುವಫಲ** (ನಾ).=ಧ್ರುವಪೈರು : (ಕಸಂಗ್ರಾ. ೧೪೯). [ ಧ್ರುವ + ಫಲ₁ ]

**ಧ್ರುವಬೇರ** (ನಾ). ಆಳವಾದ ಮೂಲವುಳ್ಳ ವಿಗ್ರಹ ; ಕದಲಿಸಲಾಗದ ಪ್ರತಿಮೆ ; ಅಚಲಪ್ರತಿಮೆ : "ಅಚಲಪ್ರತಿಮೆ" ಗಳಿಗೆ "ಮೂಲವಿಗ್ರಹ" ವೆಂದೂ ಹೆಸರು. ಇವುಗಳಿಗೆ "ಧ್ರುವಬೇರ" ಎಂದೂ ಹೆಸರುಂಟು . . . ಇವುಗಳನ್ನು ಸ್ಥಾನದಿಂದ ಸ್ಥಾನಕ್ಕೆ ಕದಲಿಸಲಸಾಧ್ಯ (ಭಾರದ. ೫೧೨). [ ಧ್ರುವ + ಬೇರ₃ ]

**ಧ್ರುವಮಂಡಲ** (ನಾ). ೧. = ಧ್ರುವಲೋಕ. ೨. = ಧ್ರುವ ೧೪ : ಧ್ರುವಮಂಡಲದೊಸರ್ವಮರ್ದಂ ಸುವಿಲಾಸದಿನುಂಡು (ಉದ್ಭಟ. ೩-೪೨). [ ಧ್ರುವ + ಮಂಡಲ ]

**ಧ್ರುವಮೃತ್ಯು** (ನಾ). ಎಂದಿಗೂ ತಪ್ಪದ ಮೃತ್ಯು,– ಮರಣ : ಕಾಲನನು ಮೀಱುವರಾರು ಪೌರಾತನಕೃತ ಧ್ರುವಮೃತ್ಯುವನು ಗೆಲುವಾತನಿಲ್ಲ (ಕುಮಾರ್ಯದ್ರೋ. ೭-೩೩). [ ಧ್ರುವ + ಮೃತ್ಯು ]

**ಧ್ರುವಯಷ್ಟಿ** (ನಾ). ಕಂಬ; ಗೂಟ : "ಧ್ರುವಯಷ್ಟಿ ಕಣೆಯಕ್ಕು" (ಮುಂಗರಾ. ೬೩-೨೭). [ ಧ್ರುವ + ಯಷ್ಟಿ ]

**ಧ್ರುವರಕ್ಷಕ** (ನಾ). ಧ್ರುವ ನಕ್ಷತ್ರವನ್ನು ಕಾಯುವ ನಕ್ಷತ್ರ,– ಬಳಸಿರುವ ತಾರೆ: ಈ ಎರಡು ನಕ್ಷತ್ರಗಳು ಅತಿ ಸಮೀಪದಲ್ಲಿದ್ದುಕೊಂಡು ಯಾವಾಗಲೂ ಧ್ರುವತಾರೆಯನ್ನು ಬಳಸುತ್ತಿರುವುದರಿಂದ ಇವಕ್ಕೆ ಧ್ರುವರಕ್ಷಕರೆಂಬ ಹೆಸರು ಬಂದಿದೆ (ನಕ್ಷತ್ರ. ೬೭). [ ಧ್ರುವ + ರಕ್ಷಕ ]

**ಧ್ರುವಲೋಕ** (ನಾ). ಧ್ರುವನಕ್ಷತ್ರಮಂಡಲ ; ಧ್ರುವಮಂಡಲ : ಸುತ್ತ ಬಳಸಿ ಪಟಲವರು ಕೋವಿಗಳನು ಕತ್ತಿಸಲವರಾರಭಟೆಯ ವ್ಯಕ್ತಿಯಿಂ ತಾರೆಗೆಗಳ ಗೂಳೆಯವಿರದೆತ್ತಿತು ಧ್ರುವಲೋಕದತ್ತ (ಕುರಾಸಾಂ. ೧೦-೩೫) ; ಕಿವುಡುಕಿಳಲು ದೆಸೆಗಳು ದೆಸೆಯಾನೆಗಳ್ಕಿವಿಯು ಕೊಡಹಲು ಮೇಘಗಳು ಧ್ರುವಲೋಕದತ್ತ ಪಾಱಲು ವಾದ್ಯರವದಿಂದ ತವೆ ಕಾಣಿಸಿದವು ಪೌಜುಗಳು (ಕುರಾಸಾಂ. ೧೨-೪೭). [ ಧ್ರುವ + ಲೋಕ ]

**ಧ್ರುವವೀಣೆ** (ನಾ). ಒಂದು ಬಗೆಯ ವೀಣೆ : ಅವನ ಬೃಹದ್‌ಗ್ರಂಥ . . . ನಾಟ್ಯಕ್ಕೆ ಸಹಾಯವಾಗುವಂತೆ ಬರೆಯಲ್ಪಟ್ಟಿದ್ದರೂ, ಸಪ್ತಸ್ವರಗಳೇ ಅಲ್ಲದೆ, ದ್ವಾವಿಂಶತಿ ಶ್ರುತಿ, ಅವುಗಳ ಪ್ರದರ್ಶನಕ್ಕೆ ಉಪಯೋಗಿಸಲಾಗುವ ಧ್ರುವವೀಣೆ, ಚಲವೀಣೆ . . . ಇವುಗಳನ್ನೆಲ್ಲಾ ವಿವರಿಸಿದ್ದಾನೆ (ಭಾರದ. ೫೩೮). [ ಧ್ರುವ + ವೀಣೆ ]

**ಧ್ರುವವುಂಡಿಗೆ, ಧ್ರುವಉಂಡಿಗೆ** (ನಾ). ಶಾಶ್ವತವಾದ ಮಾನ್ಯ : ಮಹಾ ಜನಂಗಳು . . . ತವೆಗ್ಮಾಳು ಸರ್ವೈಕಮತ್ಯವಾಗಿ ಹಳ್ಳಿಗಳನು ಧ್ರುವ ವುಣ್ಡಿಗೆಯಾಗಿ ಹಚ್ಚಿಕೊಣ್ಡು ಕ್ರಮವೆನ್ತೆನ್ದಡೆ (ಎಕ. VI, ತರೀಕೆ. ೫೩-೩ ; 1290 ?). **ಧ್ರುವಉಂಡಿಗೆ**: ಬೀಚರಸಯ್ಯಂಗಳು ತ(ಂ)ಮ್ಮ ಸಮ್ಮಿನ ಒಂದಂ ವೃತ್ತಿಗೆ ಆ ದಶಕದ ಮಹಾಜನಂಗಳನೊಡಂಬಡಿಸಿ ಹಸುಗೆಯಂ

ಧ್ರುವಉಂಡಿಗೆಯಾಗಿ ಹಿಡಿದ ದೋ×ಯಗದ್ದೆ ಕಂಬಂ ನೂಱಯಿಂವತ್ತುಮಂ ಧಾರಾಪೂರ್ಬ್ಬಕಂ ಮಾಡಿ ಕೊಟ್ಟರು (ಸೌಇಇ. IX-1, ೩೯೫-೩೫ ; 1172) ; ತೆಂಕಾತೂರು ಯಿಂತಿನಿಸಜಲಿಯುಂ ಪ್ರತಿಪ್ರತ್ತಿ ವಿಭಾಗಂ ಮಾಡಿಯಿಕ್ಕಿದ ಉಂಡಿಗೆ ಧ್ರುವಉಣ್ಣಿಗೆ . . . ಈ ಧ್ರುವಉಣ್ಣಿಗೆಯನಳಿಹಿ(ಪಿ)ದವರು . . . ಗ್ರಾಮದ್ರೋಹಿಗಳು (ಮೈಆರಿ, ೧೯೩೦, ೫೯-೩ ; 1226).
[ ಧ್ರುವ + ಉಂಡಿಗೆ ]

**ಧ್ರುವಸ್ಥಾನ** (ನಾ). ಭೂಮಿಯ ಅಕ್ಷದ ತುದಿ,-ಕೊನೆ.
[ ಧ್ರುವ + ಸ್ಥಾನ ]

**ಧ್ರುವೀಕರಣ** (ನಾ). ವಿವಿಧ ರಾಜಕೀಯ ಪಂಗಡಗಳಲ್ಲಿರುವ ಶಕ್ತಿಗಳು ಯಾವುದೋ ಒಂದು ಕಾರಣಕ್ಕಾಗಿ ಒಟ್ಟು ಸೇರುವಿಕೆ : ಚುನಾವಣೆಯ ಸಮಯದಲ್ಲಿ ಯಾವಯಾವ ರಾಜಕೀಯಪಕ್ಷಗಳು ಧ್ರುವೀಕರಣ ಹೊಂದುತ್ತವೆಯೋ ಹೇಳಲಾಗುವುದಿಲ್ಲ (ರೂಢಿ). [ ಸಂ. ]

**ಧ್ರುವೆ** (ನಾ). ೧. (ಯಜ್ಞ ಮಾಡುವಾಗ ಉಪಯೋಗಿಸುವ) ಮರದ ಸೌಟು,-ಸಟ್ಟುಗ. ೨. ಕುರುಂಟಿಗೆ ಗಿಡ. ೩. ಶಾಲಪರ್ಣೀ ಗಿಡ ; ಮೂರೆಲೆಹೊನ್ನೆ : "ವಿದಾರಿಗಂಧಾ, ಅಂಶುಮತೀ, ಶಾಲಪರ್ಣೀ, ಸ್ಥಿರಾ, ಧ್ರುವಾ – ೫ ಮೂರೆಲೆಹೊನ್ನೆ ಹೆಸರು" (ಸಿದ್ಧಾಂತಿ. ೧೩೪). ೪. [ಅಶ್ವಶಾ] ಕುದುರೆಯ ದೇಹದ ಮೇಲಿರುವ ರೋಮದ ಸುಳಿ : ತನುವಂ ಧ್ರುವೆಯಂ ಸತ್ವಮನನಃಪಮವರ್ಣಪ್ರಕಾರಮಂ ಪದಗತಿಯಂ ಸ್ವನಮಂ ಛಾಯೆಯನಾರಯ್ದು ನಿತಱಿಂ ಪೇೞ್ದುದಪ್ಪವಿಧ ಲಕ್ಷಣಮಂ (ಅಶ್ವಶಾ. ೧-೧೭) ; ಈರಯ್ದುಂ ಧ್ರುವೆಗಳ್ ಸ್ಥಾನಾರುಹಮಲ್ಲದೊಡಮಯ್ದು ವರ್ಷದೊಳಟಿಗುಂ (ಅಶ್ವಶಾ. ೬-೬). [ ಸಂ. ಧ್ರುವಾ ]

**ಧ್ರುವೋನ್ಮುಖತ್ವ** (ನಾ). (ಅಯಸ್ಕಾಂತವು) ಧ್ರುವಗಳ ಕಡೆ ಅಭಿಮುಖವಾಗುವಿಕೆ,-ತಿರುಗುವಿಕೆ : ಲೋಹಚುಂಬಕದ ಮುಖ್ಯ ಗುಣಗಳು ಯಾವವೆಂದರೆ, ಅದು ಕಬ್ಬಿಣವನ್ನು ಎಳೆದುಕೊಳ್ಳುತ್ತದೆ ; ಸೂಜಿಯ ಮೊನೆಯ ಮೇಲೆ ತಿರುಗಲಿಕ್ಕೆ ಬರುವ ಹಾಗೆ ಅದರದೊಂದು ಪಟ್ಟಿಯನ್ನು ಇಟ್ಟರೆ, ಒಂದು ತುದಿಯು ಉತ್ತರಕ್ಕೂ ಎರಡನೇದು ದಕ್ಷಿಣಕ್ಕೂ ತಪ್ಪದೆ ಆಗುತ್ತವೆ. ಈ ಗುಣಕ್ಕೆ ಧ್ರುವೋನ್ಮುಖತ್ವವೆಂಬ ಹೆಸರು (ಮುಂಬಯಿ. ೫-೩೩೯). [ ಸಂ. ]

**ಧ್ರೌವ್ಯ** (ನಾ). ಸ್ಥಿರವಾಗಿರುವಿಕೆ ; ನಿತ್ಯತೆ : ಉತ್ಪಾದ-ಉತ್ಪತ್ತಿಯುಂ, ವ್ಯಯ – ವಿಪತ್ತಿಯುಂ, ಧ್ರೌವ್ಯ – ಧ್ರುವತ್ವಮುಂ ಎಂದಿವಱೊಳ್, ಯುಕ್ತಂ–ಕೂಡಿದುದು, ಸತ್–ಸಲ್ಲಕ್ಷಣಮಕ್ಕುಂ (ತತ್ತ್ವಪ್ರ. ೨೯೭) ; ವಸ್ತುಸ್ವರೂಪವು ಉತ್ಪಾದ, ವ್ಯಯ, ಧ್ರೌವ್ಯ (ಸ್ಥಿರ) ಎಂಬ ಮೂರು ರೂಪವಾಗಿದೆ (ಭಾರದ. ೧೮೦). [ ಸಂ. ]

**ಧ್ವಂಕೃತಿ** (ನಾ). ಧ್ವಂ ಎಂಬ ಶಬ್ದ : ಶಂಖ ಕಹಳಾಧ್ವಾನದಂತೆ ಕೇಳಲದೆ ಧ್ವಂಕೃತಿಯೆನಿಪುದು (ಶಿವಪ್ರ. ೬೩-೧). [ ಸಂ. ]

**ಧ್ವಂಸ** (ನಾ). ೧. ಕೆಳಗೆ ಬೀಳುವುದು ; ಪತನ. ೨. ಮರೆಯಾಗುವುದು; ಕಾಣದಾಗುವುದು. 'ಅಪಧ್ವಂಸ' ಪರಾ. ೩. ಇಲ್ಲವಾಗಿಸುವುದು; ಹೋಗಿಸುವುದು. ೪. ನಾಶ ; ನಷ್ಟ ; ಅಳಿವು : ಅಂಧಾಸುರಧ್ವಂಸ ಧುರಧರಣಿಯಂತೆ ನೀಲಕಂಠ ನೃತ್ಯಾಡಂಬರಮುಂ (ಕುಸುಮಾ. ೧-೭೪ ವ).

**ಧ್ವಂಸ ಮಾಡು** = ನಾಶಮಾಡು ; ಹಾಳುಮಾಡು : ಶತ್ರುಗಳನ್ನು ಧ್ವಂಸಮಾಡುವ ಹಟತೊಟ್ಟು, ಸನ್ಮಾರ್ಗವನ್ನುಲ್ಲಂಘಿಸಿದ ಪರಶುರಾಮನೆಂಬ ತಾಪಸನಿಗೆ ಈ ಧನುಸ್ಸು ಧರ್ಮೋಪದೇಶಮಾಡಿದೆ (ಧನ್ವಾಲೋ. ೩೩ ೩೭) ; ಅವರು ಯಾರ್ಯಾರ ಮನೆಗಳನ್ನು ಹಗಲಿನಲ್ಲೇ ಸುಟ್ಟು ಧ್ವಂಸ ಮಾಡಿದ್ದರು . . . ಎಂದು ಬಣ್ಣಿಸುವುದನ್ನು ಕೇಳಿದಾಗ ಅವಳಿಗೆ ಅವರ ವಿಷಯದಲ್ಲಿ ಭಯವಲ್ಲದೆ ಇನ್ನಾವ ಭಾವನೆಯೂ ಬರಲಿಲ್ಲ (ಆಳಿಸಿ. ೧೧೩).
[ ಸಂ. ]

**ಧ್ವಂಸಕ** (ಗು). ೧. ನಾಶಪಡಿಸುವ. (ನಾ). ೨. ನಾಶಮಾಡುವವನು. ೩. (ಅತಿಯಾದ ಕುಡಿತದಿಂದ ಉಂಟಾಗುವ) ಒಂದು ಬಗೆಯ ರೋಗ. [ ಸಂ. ]

**ಧ್ವಂಸನ** (ನಾ). ೧. ಕೆಳಗೆ ಬೀಳಿಸುವಿಕೆ. ೨. ಪತನ ; ಬೀಳುವುದು. ೩. ಇಲ್ಲವಾಗುವುದು ; ಹೋಗುವುದು. ೪. ನಾಶಪಡಿಸುವಿಕೆ ; ಹಾಳುಮಾಡುವುದು : ದಶಮುಖಧ್ವಂಸನ ಸೇವಾಸಮಾಜದಂತೆ ಪ್ಲವಗಪ್ರಕೀರ್ಣಮುಂ (ಕುಸುಮಾ. ೧-೨೨ ವ). ೫. ನಾಶ ; ಅಳಿವು. ೬. ಚಲ್ಲಾಪಿಲ್ಲಿ ಮಾಡುವುದು ; ಚದುರಿಸುವುದು . ೭. ಚಿಮುಕಿಸುವುದು. [ ಸಂ. ]

**ಧ್ವಂಸನೀಯ** (ಗು). ೧. ನಾಶವಾಗಬೇಕಾದ. (ನಾ). ೨. ಇಲ್ಲವಾಗುವುದು ; ಹೋಗುವುದು. [ ಸಂ. ]

**ಧ್ವಂಸಿ** (ನಾ). ೧. ಬೀಳುವುದು ; ಪತನ. ೨. ಬೀಳಿಸುವುದು. ೩. ನಾಶಮಾಡುವುದು. ೪. ನಾಶಮಾಡುವವನು : ನಾಂ ಕಂಡ ದಕ್ಷಾಧ್ವರಧ್ವಂಸಿಯನುಱುವುಹಿಮಾವೇಷ್ಟನಂ ಶ್ರೇಷ್ಠನಂ (ವೀರವಿ. ೫-೭೮).
[ ಸಂ. ಧ್ವಂಸಿನ್ ]

**ಧ್ವಜ** (ನಾ). ೧. ಬಾವುಟ ; ಪತಾಕೆ : "ವೈಜಯಂತೀ, ಪತಾಕಾ, ಕೇತುಃ, ಕೇತನಂ, ಧ್ವಜಃ – ಈ ೫ ಪಟ(ಹಳ)ಯಿಗೆ" (ಹಲಾಯು. ೭೫-೩೦೪) ; ಧ್ವಜಮಂ ಖಂಡಿಸಿ ಪೊಟ್ಟು ಬಾಣದೊಳೆ ಧೃಷ್ಟದ್ಯುಮ್ನನಂ ನೆಟ್ಟನೊಟ್ಟಜೆಯಿಂ ತೂಳ್ದಿ ಶಿಖಂಡಿಯಂ (ಪಂಪಭಾ. ೧೧-೫೯) ; ಧ್ವಜ ದರ್ಪಣ ಚಂಚಚ್ಚಮರಜ ಮಣಿ ಭೃಂಗಾರ ಸುಪ್ರತಿಷ್ಠಿತತಾಳವೃಜನ ಕಳಶಾತಪತ್ರಂ ತ್ರಿಜಗತ್ಪತಿಗಪ್ಪಮಂಗಳಂ ಸೊಗಯಿಸುಗುಂ (ಅಜಪು. ೪-೪೧) ; ವಾಯುಸುತ ಖಾತಿಯಲಿ ಹಲಗೆಯಡಾಯುಧವ ಕೊಂಡರಿಭಟನ ಮೇಲ್ವಾಯಿದಡೆ ಸಮ್ಮುಖವ ಬಿಟ್ಟನು ಧ್ವಜದ ಕಂಭದಲಿ ಆಯುಧವ ಕೊಂಡ್ಯೆದಿದಡೆ ಹಗೆ ಮಾಯವಾದನು (ಕುಮಾದ್ರೋ. ೧೩-೫೭) ; ಸೇನೆಯಂ ಸಂಹರಿಸಿ ತಮ್ಮ ಕಾವಲು ಮಾಡಿಕೊಂಡು ಧ್ವಜಮಂ ನೆಟ್ಟು (ಸಾಗಂಧಿ. ೨೫೬-೨೦) ; ಅಟ್ಟಳೆಗಳ ಮೇಲೆ ಧ್ವಜಗಳು ಹಾರುತ್ತಿದ್ದುವು (ಕಣಾಅ. ೩೪೭) ; ಗಿರಣಿಗಳ ಧೂಮ ಧೂಸರಿತ ಬಾಂದಳದಲ್ಲಿ ಎಂದು ಮೆರೆವುದೊ ನಿಮ್ಮ ತ್ಯಾಗಧ್ವಜವು ! (ಗಂಗಾತ. ೫೩-೧೧). ೨. ಗುರುತು ; ಚಿಹ್ನೆ. ೩. ಪುರುಷನ ಜನನೇಂದ್ರಿಯ ; ಶಿಶ್ನ : ಧ್ವಜವೆತ್ತಿ ಪೊಱಗಿದಾಣ್ಮನ ನಿಜಕಟಿತಟದೊತ್ತು ಗೊಂಡು ಕಾಮಿನಿ ಪದಪಂಕಜಮಿಟ್ಟು ಚುಂಬಿಸುತಂ ಗಜಗೃಹಜಲಮೊಗೆ ಪೊಲೊಂದೆ ಮುದಮೆನಿಸಿರ್ಕುಂ (ಮನ್ಮವಿ. ೦೯-೪೩) ; ಪುರುಷನತಿಕಾಮದಿಂ ತರುಣಿಯೊರ್ವಳ ಲಜ್ಜೆಯೞಿದೆಡೆಯೊಳೀ ಧ್ವಜವನಿಟ್ಟಂ (ಜನವ. ೯-೫೫). ೪. [ವಾಸ್ತು] ಕಟ್ಟಡದ ನಿರ್ಮಾಣ ಕ್ರಮದಲ್ಲಿ ಅನುಸರಿಸಬೇಕಾದ ಎಂಟು ಆಯಪ್ರಕಾರಗಳಲ್ಲಿ ಒಂದು : ಪಸರಿಸೆ ತರದಿಂ ಧ್ವಜ ಧೂಮ ಸಿಂಹ ಶುನಕೋಕ್ಷಖರಗಜಧ್ವಾಂಕ್ಷಂಗಳ್ ದೆಸೆಯಿಂದೆ ಮೂಡನಾಳ್ದುಂ ದೆಸೆಯಾಯಂ ಶುಭದಮಲ್ಲಿ ಪೆಱವಶುಭಂಗಳ್ (ಲೋಕೋಪ. ೩-೧೯) ; ವಿವಿಧವಾದ ಪ್ರಾಸಾದಾದಿಗಳು ಎಂಟು ವಿಧವಾದ ಗಜ, ಉಷ್ಟ್ರ ( ಒಂಟೆ ), ಖರ, ಸಿಂಹ, ವೃಷ, ಧ್ವಜ, ಧೂಮ, ಶ್ವಾನ ಎಂಬ ಆಯಗಳನ್ನರಿತು ನಿರ್ಮಾಣವಾಗತಕ್ಕದೆಂದೂ . . . ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಭಾರದ. ೮೦). P ಈ ವಿವರಣೆಯಲ್ಲಿ ವ್ಯತ್ಯಾಸಗಳಿವೆ. 'ಧೂಮಾಯ' ಪರಾ. [ ಸಂ. ]

**ಧ್ವಜಗಂಭ** (ನಾ). ಹಡಗು ಅಥವಾ ದೋಣಿಯ ಪಟವನ್ನು ಕಟ್ಟುವ ಕಂಬ ; ಕೂವೆಕಂಬ : ಹಡಗಿನ ಧ್ವಜಗಂಭ ತುದಿಯನ್ನಡರುತೊಂದು ವಿಹಂಗ ಕುಳ್ಳಿರಲು (ಗಗತಾ. ೦೫-೨೭). [ ಧ್ವಜ + ಕಂಭ ]

**ಧ್ವಜದ್ರುಮ** (ನಾ). ಎತ್ತರವಾದ ಮರ ; ತಾಳಿಮರ ; ತಾಲವೃಕ್ಷ : "ತಳಂ ತಾಳ ಧ್ವಜದ್ರುಮಂ " (ಮಂಗರಾ. ೩೪-೯). [ ಸಂ ]

**ಧ್ವಜಪಟ** (ನಾ). ಬಾವುಟ ; ಪತಾಕೆ : ಆ ತೋರ್ಪುದಾ ತೋರ್ಪುದೆ ಬಾನೊಳ್ ಧ್ವಜಪಟಂ (ಶಮದ. ೧೯೫ ಪ್ರಯೋ) ; ಧ್ವಜಪಟವ್ಯಂದ ಪಲ್ಲವಿತ ಮಲ್ಲೆಡೆಯೊಳ್ ನೆಟಿ ಕೀಲಿಸಿರ್ದ ಪೀನಜನಮನಃಪ್ರಮೋದಕರ ಮೌಕ್ತಿಕ ಪ್ರಚ್ಛಿತಮುದ್ಭಟೋದ್ಯ ಭಾವಜನನದಕ್ಷರತ್ನಕಳಶಾವಳಿಸತ್ಪಳಿತಂ ದಲಾಗಿ (ಬಾಧಪು. ೧-೧೬೭). [ ಧ್ವಜ + ಪಟ್ಟ ]

**ಧ್ವಜಪಟೀವಾತ** (ನಾ). ಬಾವುಟದ ಬಟ್ಟೆಯಂ ಹಾರಾಡಂವಾಗ ಉಂಟಾಗುವ ಗಾಳಿ : ಕಿವಿ ಶಬ್ದಂಗಿಡೆ ಘಂಟಿಕಾಘನಠಣತ್ಕಾರಂಗಳಿಂದೆಯ್ದೆ ದಿಙ್ಮಿವಹಂ ಮೇಘಕುಳಂ ಚಳಧ್ವಜಪಟೀವಾತಂಗಳಿಂ ಕೂಡೆ ತೂಳ್ದೆ ವಿಯನ್ಮಂಡಲಮಧ್ಯದೊಳ್ ಬಹುತರಂ ನಕ್ಷತ್ರಸಂಛನ್ನವಾಗೆ ವಿಮಾನಾವಳಿ ಕೋಪದಿಂದ ತಳರ್ದಂ ವಿದ್ಯಾಧರಾಧೀಶ್ವರಂ (ಚಂದ್ರಪು. ೬-೧೪). [ ಸಂ. ]

**ಧ್ವಜಭಂಗ** (ನಾ). ೧. ಬಾವುಟ ಮುರಿದು ಬೀಳುವಿಕೆ. ೨. ಶಿಶ್ನವು ಏಳದಿರುವಿಕೆ; ನಪುಂಸಕತ್ವ; P ಇದರಲ್ಲಿ ಐದು ವಿಧ: "ವಾತಿಕ, ಪೈತ್ತಿಕ, ಶ್ಲೇಷ್ಮಿಕ, ಸಾನ್ನಿಪಾತಿಕ, ರಕ್ತಜ" (ಶ್ರೀವತ್ಸ. ೩೨೭). [ ಧ್ವಜ + ಭಂಗ ]

**ಧ್ವಜಭೂಮಿ** (ನಾ). ಬಾವುಟವನ್ನು ನೆಟ್ಟಿರುವ ಭೂಮಿ: ಧ್ವಜಭೂಮಿಯ ಬಳಯಿಗೆಗಳೊಡನೊಡನೆ ಬಳೆದು ಬಳಸೆಯುಂ ದಶಾಂಗಕಲ್ಪನೃಕ್ಷನಂದನ ವನಮಂ ಮಾಲ್ಯಾಂಗಮುಯುಮೆಂಬ ಸಂದೆಗದೊಳೊಂದಿಸೆಯುಂ (ಬಾಧಪು. ೧೬-೨೨೫ ವ). [ ಧ್ವಜ + ಭೂಮಿ ]

**ಧ್ವಜಮಯ** (ಗು). ಪತಾಕೆಗಳಿಂದ ಕೂಡಿದ ; ಬಾವುಟಗಳಿಂದ ಆವೃತ ವಾದ : ಧ್ವಜಮಯಮುಂಬರಂ ಗಜಮಯಂ ಭುವನಂ ಪ್ರಳಯ ಪ್ರಚಂಡ ಭೂಭುಜಮಯಮಷ್ಟದಿಗ್ವಳಯಂ (ಪಂಪಭಾ. ೯-೯೪) ; ಧ್ವಜಮಯ ಮಂಬರಂ ಕರಿತುರಂಗವರೂಥಸಮುಸ್ತಶಸ್ತ್ರಭೃಧ್ವಜಮಯಮುರ್ವಿ (ಮಹಾನೇ. ೧೨-೧೪). [ ಸಂ. ]

**ಧ್ವಜಮುದ್ರೆ** (ನಾ). ಸಂಕಲ್ಪ, ಪೂಜೆ, ಜಪ ಮುಂತಾದುವುಗಳಲ್ಲಿ ಮಾಡುವ ಹಸ್ತಮುದ್ರೆಗಳಲ್ಲಿ ಒಂದು : ವಸ್ತ್ರಮುದ್ರೆ ಚಕ್ರಮುದ್ರೆ ಮಹಾಮುದ್ರೆ ಶೋಧಿನೀಮುದ್ರೆ . . . ಧ್ವಜಮುದ್ರೆ ಲಿಂಗಮುದ್ರೆ . . . ಸಂಹಾರಮುದ್ರೆಯೆಂಬಾದಿಯಾಗಿ ಸಕಲಮುದ್ರೋಪಮುದ್ರಾಬಂಧ ಲಕ್ಷಣಗಳಂ ಗುರುಮುಖದಿಂದಱಿತು (ವಿವೇಕ. ೧೦೩). [ಧ್ವಜ + ಮುದ್ರೆ]

**ಧ್ವಜವಂದನೆ** (ನಾ). (ದೇಶ ಮುಂತಾದುವುಗಳ ಸಂಕೇತವಾದ) ಬಾವುಟಕ್ಕೆ ಗೌರವಸೂಚಕವಾಗಿ ಸಲ್ಲಿಸುವ ವಂದನೆ, -ನಮಸ್ಕಾರ: ಸ್ವಾತಂತ್ರ್ಯದಿನಾಚರಣೆಯಂದು ಎಲ್ಲರೂ ಧ್ವಜವಂದನೆಯನ್ನು ಸಲ್ಲಿಸಬೇಕು (ರೂಢಿ). [ ಧ್ವಜ + ವಂದನೆ ]

**ಧ್ವಜಸ್ತಂಭ** (ನಾ). ಬಾವುಟವನ್ನೇರಿಸುವ ಕಂಬ : ಭೋಗಮಂಟಪದ ಸಮ್ಮುಖದೊಳ್ ಧ್ವಜಸ್ತಂಭಮಂ ನಿಲಿಸಿ (ಕೆಳನೃ. ೯-೯೭) ; ಡೆಂಕಣಿ ಎಂಬುದು ಕನ್ನಡಕೋಶಕಾರರು ಹೇಳುವ ಧ್ವಜಸ್ತಂಭವಲ್ಲವೆಂದೂ, 'ಅದೊಂದು ಭವ್ಯವಾದ ಆಯುಧವಿಶೇಷ' ವೆಂದೂ . . . ಪ್ರತಿಪಾದಿಸಿದ್ದಾರೆ (ಕಶಾಅ. ೩೪೭) ; ಯಜ್ಞಕುಂಡಗಳೆಲ್ಲ ದಯಾವೃಕ್ಷಕ್ಕೆ ಕುಂಡಗಳಾದವು. ಯಜ್ಞಸ್ತಂಭಗಳೆಲ್ಲ ಅಹಿಂಸಾಧ್ವಜಸ್ತಂಭಗಳಾದವು ! (ದಾನಚಿಂ. ೮).
[ ಧ್ವಜ + ಸ್ತಂಭ ]

**ಧ್ವಜಾದಂಡ** (ನಾ). = ಧ್ವಜಸ್ತಂಭ : ಧ್ವಜಾದಂಡಂಗಳೆಂಬ ಭುಜಾದಂಡಂಗಳಂ ನೆಗಪಿ (ಬಾಧಪು. ೧೨-೩೦ ವ). P ಇದು 'ಭುಜಾದಂಡ' ಎಂಬುದರ ಸಾದೃಶ್ಯದಿಂದ ಮಾಡಿಕೊಂಡ ರೂಪ.
[ < ಸಂ. ಧ್ವಜದಂಡ ]

**ಧ್ವಜಾಯ** (ನಾ). = ಧ್ವಜ ೪ : ಧ್ವಜಾಯಂ, ಧೂಮಾಯಂ . . . ವಾಯ ಸಾಯಂ – ಈ ಎಂಟು ಆಯಂಗಳುಂ ಮೂಡಲ್ ಮೊದಲಾಗಿ ಸವ್ಯದಿಂದೆ ಎಂಟು ದಿಕ್ಕಿನಲ್ಲಿಯುಮಿರ್ಪುವು (ಲೋಕೋಪ. ೩-೧೯ ಟೀಕೆ). ; ವಿಸ್ತಾರವಾಗಿ ಉದ್ದ ಅಗಲವನು ಅಳದು ಪೊಟ್ಟುಗೂಡಿಕೊಂಡ ಕೋಲು ಎಷ್ಟೋ ಅದನು ೨ ಹೆಚ್ಚಿ . . . ಅದಂ ೮ಱಿಂದ ಭಾಗಿಸಿ ಉಳಿದವು ಆಯಂಗಳೂ ೧ ಉಳಿದರೆ ಧ್ವಜಾಯ (ಆಯಟೀ. ೦-೫). 'ಧೂಮಾಯಂ' ಪರಾ.
[ ಧ್ವಜ + ಆಯ$_1$ ]

**ಧ್ವಜಾರೋಹಣ** (ನಾ). ಬಾವುಟವನ್ನು ಏರಿಸುವಿಕೆ : ಧ್ವಜಾರೋಹಣ ವೆಂಬ ಉತ್ಕೃಷ್ಟ ವಿಧಾನಂ, ಆದಿಕಲ್ಯಾಣಂ, ಪ್ರತಿಷ್ಠಾವಿಧಾನದೊಳಾದಿ ಕಲ್ಯಾಣಮೆಂದು ಬುಧಾಃ–ವಿದ್ವಜ್ಜನಂಗಳು . . . ಪೇಳ್ವರು (ಪ್ರತಿಷ್ಠಾ. ೩-೨) ; ಶಾಲೆಯಲ್ಲಿ ಧ್ವಜಾರೋಹಣ ನಡೆಯಿತು (ರೂಢಿ).
[ ಧ್ವಜ + ಆರೋಹಣ ]

**ಧ್ವಜಿ** (ನಾ). ಹೆಂಡವನ್ನು ತಯಾರಿಸಿ ಮಾರುವವನು ; ಈಡಿಗ : ಚಕ್ರಿ ಯೊಬ್ಬಗೆ ಹತ್ತು ಕಡಿಕರ ಲೆಕ್ಕವಂತಾ ಚಕ್ರಿ ಹತ್ತಱ ಲೆಕ್ಕದೊಳಗಾ ಧ್ವಜಿ ಕಣಾ ಧ್ವಜಿ ಹತ್ತಱ ಸಮಾನ (ಕುಮ್ಮಾಉ. ೯-೧೦೩). [ ಸಂ. ಧ್ವಜಿನ್ ]

**ಧ್ವಜಿನಿ** (ನಾ). ಬಾವುಟವನ್ನು ಹಿಡಿದಿರುವ ಸೈನ್ಯ ; ಧ್ವಜವನ್ನು ಹೊಂದಿದ ಪಡೆ,–ದಂಡು : "ಪೃತನಾನೀಕ ಧ್ವಜಿನೀ ಪತಾಕಿನೀ . . . ಅಕ್ಷೌಹಿಣಿ ತಾಂ" (ವಸು ಕೋ. ೮೩-೭) ; ವಿಜಯಾರಂಭಪುರಸ್ಸರವಿಜಯ ಗಜಂಗಳನೆ ಹಿಡಿದು ಘೂರ್ಜರರಾಜಧ್ವಜಿನಿಯನಿಱಿದೋಡಿಸಿ ಭುಜ ವಿಜಯದೆ ವಿಜಯನುಮನಿಟಿಸಿದಂ ನರಸಿಂಹಂ (ಪಂಪಭಾ. ೧-೩೭) ; ಧ್ವಜಿನೀ ಮಧ್ಯದೊಳೊರ್ವರೋ ಎನಲುಮಿಲ್ಲೆಂಬಂತು ವಿದ್ಯಾಧರವ್ರಜಮುಳ್ಕಾಡಿದು ದುಗ್ರಶಸ್ತ್ರತತಿಯಿಂ (ಶಾಂತಿಪು. ೯-೩೭) ; ವಿಜಯಾರ್ಥನಗಕ್ಕಿತ್ತಿದನಜೇಯ ದೋಶ್ಶಾಲಿ ರಾವಣಂ ನಿಜವಿಜಯಧ್ವಜಿನಿಗಳಬ್ಧಿಗಳೇಟುಂ ನಿಜಸೀಮಾವಪ್ರ ಮೇದಿಯಿಂ ತಳರ್ದುವೆನಲ್ (ಪಂರಾಮಾ ೧೦-೧೯೭) ; ನಿಜಭುಜದರ್ಪಮಂ ಮುಱಿವೆನೆನ್ನದಟಂ ತವೆ ತೋರ್ಪೆನಾಂತ ತದ್ಧ್ವಜಿನಿಯನಿಕ್ಕಿ ಭೂತಗಣ ಕೌತಣಮಂ ಮಿಗೆ ಮಾಳ್ಪೆಂ (ರಾಜಶೇ. ೬-೩೯). [ ಸಂ. ಧ್ವಜಿನೀ ]

**ಧ್ವಜಿನೀಪತಿ** (ನಾ). ಸೇನಾಧಿಪತ್ಯವನ್ನು ವಹಿಸಿಕೊಂಡವನು ; ಪಡೆವಳ ; ಸೇನಾಪತಿ ; ದಳವಾಯಿ : ಅಂತಲ್ಲಿ ಬೀಡಂ ಬಿಟ್ಟು ಮುನ್ನಿನಂತೆ ಪಶ್ಚಿಮಖಂಡಮುಮನಖಂಡಪ್ರತಾಪಧ್ವಜನಂದು ತನ್ನ ಧ್ವಜಿನೀ ಪತಿಯನಟ್ಟಿ ಬಾಯ್ಕೇಳಿಸಿ ಚಕ್ರರತ್ನಮಂ ಮುಂದಿಟ್ಟು (ಆದಿಪು. ೧೩-೫೭ವ).
[ ಸಂ. ]

**ಧ್ವಜಿನೀಪತಿತ್ವ** (ನಾ). ಸೇನಾಪತಿಯ ಅಧಿಕಾರ,– ಪದವಿ ; ಸೈನ್ಯಾಧಿ ಪತ್ಯ : ಮುಟಿಯಾನೆ ರಿಪುಪ್ರಭೇದನೋತ್ಪನ್ನ ಜಯಾಭಿರಾಮನೆನಗೀತನೆ ನಚ್ಚಿನ ಪಟ್ಟದಾನೆಯೆಂದೇಂ ನೆಱೆ ನಚ್ಚಿ ಮಾಡಿದನೊ ವಿಷ್ಣುನೃಪಂ ಧ್ವಜಿನೀಪತಿತ್ವಮಂ (ಎಕ. VI, ಚಿಕ್ಕಮ. ೧೬೦-೪೪ ; 1108 ?).
[ ಸಂ. ]

**ಧ್ವಜಿನೀಮುಖ್ಯ** (ನಾ). = ಧ್ವಜಿನೀಪತಿ : ಧ್ವಜಿನೀಮುಖ್ಯಕುಮಾರ ಮಂಡಳಿಕಮಂತ್ರಿಮ್ಲೇಚ್ಛ ರಾಜಾಂಗನಾವ್ರಜ (ಪಾರ್ಶ್ವಪು. ೧೧-೧೦೩).
[ ಸಂ. ]

**ಧ್ವನನ** (ನಾ). ೧. ಶಬ್ದ ಮಾಡುವುದು ; ಸದ್ದು ಮಾಡುವುದು. ೨. ಸೂಚನೆ ಕೊಡುವುದು ; ಸುಳಿವು ಕೊಡುವುದು. ೩. ಗುನುಗುಟ್ಟುವುದು. ೪. [ಕಾವ್ಯಮಿ] ವ್ಯಂಜನಾವೃತ್ತಿ ; ವಾಚ್ಯ ಮತ್ತು ಲಕ್ಷ್ಯ (ಅಭಿಧಾ ಮತ್ತು ಲಕ್ಷಣಾವೃತ್ತಿಗಳನ್ನು ತಿಳಿಸುವ) ಅರ್ಥ ಕ್ಕಿಂತಲೂ ಭಿನ್ನವಾದ ಅರ್ಥವನ್ನು ತಿಳಿಸುವ ವ್ಯಂಜನಾವ್ಯಾಪಾರ; ಸೂಚ್ಯಾರ್ಥ : ಅಭಿಧೆಯೂ ಅಲ್ಲದೆ, ಲಕ್ಷಣೆಯೂ ಅಲ್ಲದೆ, ಅನುಭವ ಗೋಚರವಾದ ಶಬ್ದವ್ಯಾಪಾರವೆಂದರೆ ಧ್ವನನವೇ ಸರಿ (ಧ್ವನ್ಯಾಲೋ. ೪೭) ; ಇವು ಮುಖ್ಯಾರ್ಥವೂ ಆಗುವುದಿಲ್ಲ, ಲಕ್ಷ್ಯಾರ್ಥವೂ ಆಗುವುದಿಲ್ಲ ; ಇಂಥ ಅರ್ಥವು 'ವ್ಯಂಗ್ಯಾರ್ಥ' ವೆನ್ನಿಸುತ್ತದೆ, ಇದಕ್ಕೆ 'ಧ್ವನಿ', 'ಧ್ವನನ', 'ದ್ಯೋತನ' ಮುಂತಾದ ಹೆಸರುಗಳೂ ಉಂಟು (ಕೈಪಿಡಿ. ೧೭೭).
[ ಸಂ. ]

**ಧ್ವನನಮಾರ್ಗ** (ನಾ). ಸೂಚ್ಯವಾಗಿ ತಿಳಿಸುವ ರೀತಿ ; ವ್ಯಂಗ್ಯಾರ್ಥ ವಿಧಾನ : ಮಾನವ್ಯ ವ್ಯಕ್ತಿತ್ವದ ಕೆಲ ಮನೋಭಾವಗಳು ಧ್ವನನಮಾರ್ಗದಿಂದ ರೂಪಿಸಲ್ಪಡುವುವು (ಸಮ್ಮಕಾ. ೧೨೫). [ಧ್ವನನ + ಮಾರ್ಗ]

**ಧ್ವನಿ** (ನಾ). ೧. (ಕಂಠದಿಂದ ಹೊರಡುವ) ಸಪ್ಪಳ; ಸದ್ದು : "ನಾದಂ ಸ್ವರಂ ಘೋಷಮಾ ಶಬ್ದಮಾ ರವಂ ಗರ್ಜನಂ ಘೋಷಣಂ ಧ್ವನಮಾ ನಿನದಮಾ ಧ್ವನಿಯೆನಿಕ್ಕುಂ" (ಮಂಗರಾ. ೯-೩೦) ; ಸುಡುವ ಮನೆಯ ನಡುವಿನಿಂದ ಕರೆಯುವ ಮಗುವಿನ ಧ್ವನಿಯಂತೆ 'ಮೇ' ಎನ್ನುವ ಧ್ವನಿಯೂ ಕೇಳಿಸಿತು (ಕಾಲೂರ. ೬ ಕಥಾಸಾರ). ೨. (ವಾದ್ಯಗಳ) ನಾದ,-ಸ್ವರ : ಮೃದುವಾದ ವೀಣಾನಾದದಂತೆ ಘಂಟಾನಾದದ ಕಡೆಯಂತೆ ಕೇಳಲದೆ ಧ್ವನಿಯನಿಪುದು (ಶಿವಪ್ರ. ೬೨-೧೧). ೩. (ಸಂಗೀತಗಾರನ) ಕಂಠ ; ಶಾರೀರ. ೪. ಪ್ರತಿಧ್ವನಿ ; ಮಾರ್ದನಿ. ೫. "ಧ್ವನಿಯೆಂದರೆ ವಾತಾವರಣದ ತೆರೆಗಳು" (ಮುಂಬಯಿ. ೫-೧೧೪). ೬. [ಭಾಷಾಶಾ] ಉಚ್ಚಾರಣಾಂಗಗಳಿಂದ ಉತ್ಪಾದಿತವಾಗಿ ಭಾಷೆಯಲ್ಲಿ ಬಳಕೆಯಾಗುವ ಸದ್ದು ; ಸ್ವನ. ೭. [ಕಾವ್ಯಮೀ] ವಾಚ್ಯಾರ್ಥ, ಲಕ್ಷ್ಯಾರ್ಥ ಮತ್ತು ವ್ಯಂಗ್ಯಾರ್ಥ ಎಂಬ ಮೂರು ಬಗೆಯ ಅರ್ಥಗಳಲ್ಲಿ ಒಂದು ; ವಾಚ್ಯಾರ್ಥ ಮತ್ತು ಲಕ್ಷ್ಯಾರ್ಥಕ್ಕಿಂತ ಭಿನ್ನವಾದ ಶಬ್ದ ಅಥವಾ ಅರ್ಥದ ಸಾಮರ್ಥ್ಯದಿಂದ ತೋರುವ ಅರ್ಥವಿಶೇಷ ; "ಕಾವ್ಯದಲ್ಲಿ ಪ್ರಧಾನವೂ ಪರಮಾರ್ಥವೂ ಆಗಿ ನಿಲ್ಲುವ ವ್ಯಂಗ್ಯಾರ್ಥಕ್ಕೆ 'ಧ್ವನಿ' ಎಂದು ಹೆಸರು" (ಭಾರಮೀ. ೪೮) : ಇಂದ್ರ ಚಂದ್ರಾಂಕದಿಂ ವ್ಯಾಕರಣಮುಂ ವಿಲಸಿತಧ್ವನಿಗಳಿಂ . . . ಕಾವ್ಯಮುಂ ಪೋಲ್ತು ರಂಜಿಸುವುದಾ ನಂದನಂ ನಂದನಂ (ಪದ್ಮರಾ. ೮-೨೬) ; ಧ್ವನಿಯೆ ಕಾವ್ಯದ ಜೀವವೆಂದು ಲಕ್ಷಣಶಾಸ್ತ್ರದಲ್ಲಿ ಹೇಳಿದೆ (ಭಾರದ. ೯೩) ; 'ಧ್ವನಿ'ಯು ವ್ಯಾಪಕತತ್ತ್ವ ; ಎಲ್ಲ ಅಲಂಕಾರಗಳಿಗೂ ಸಾರ್ಥಕ್ಯವನ್ನು ಕಲ್ಪಿಸುವ ಅಲಂಕಾರ್ಯ (ಧ್ವನ್ಯಾಲೋ. ೩೩ ಅಡಿಟಿ). ೮. ಒಂದು ಅಲಂಕಾರ: ಧ್ವನಿಯೆಂಬುದಲಂಕಾರಂ ಧ್ವನಿಯಿಸುಗುಂ ಶಬ್ದದಿಂದಮರ್ಥದೆ ದೂಷ್ಯಂ (ಕವಿರಾ. ೩-೨೦೮). ◘ ಕವಿರಾಜಮಾರ್ಗಕಾರನ ಪ್ರಕಾರ ಧ್ವನಿಯೆಂಬುದು ಅಲಂಕಾರ. ಇದು ವಿಮರ್ಶನಾರ್ಹ. ೯. ವ್ಯಂಗ್ಯಾರ್ಥ ಪ್ರಧಾನವಾದ ಕಾವ್ಯ ; ಧ್ವನಿಪೂರ್ಣವಾದ ಕಾವ್ಯ; ಉತ್ತಮಕಾವ್ಯ: ಆವೆಡೆಯೊಳಂ ವಾಚ್ಯದತ್ತಣಿಂದಧಿಕಮಪ್ಪ ವ್ಯಂಗ್ಯಮುನುಳ್ಳುದುತ್ತಮ ಕಾವ್ಯಂ ಆ ಕಾವ್ಯಮುಂ ಧ್ವನಿಯೆಂದು ಪೂರ್ವಾಚಾರ್ಯರಿಂ ಪೇಟ್ಪಟ್ಟುದು (ರಸರ. ಪರಿ. ೧, ೧೦೮) ; ಇಂಥ ಧ್ವನಿಯುಳ್ಳ ಕಾವ್ಯವಿಶೇಷವನ್ನೂ ಧ್ವನಿಯೆಂದು ಕರೆಯುವುದುಂಟು . . . ಯಾವುದರಲ್ಲಿ [ವಾಚ್ಯವಾದ] ಅರ್ಥವಾಗಲಿ [ವಾಚಕವಾದ] ಶಬ್ದವಾಗಲಿ, ತಾವು ಅಧೀನವಾಗಿ ನಿಂತು ವ್ಯಂಗ್ಯಾರ್ಥವನ್ನು ಅಭಿವ್ಯಕ್ತಗೊಳಿಸುವುವೋ ಆ ಕಾವ್ಯವಿಶೇಷವು ಧ್ವನಿಯೆಂದು ವಿದ್ವಾಂಸರ ಹೇಳಿಕೆ (ಭಾರಮೀ. ೫೨) ; ಎಲ್ಲಿ 'ಅರ್ಥ'ವಾಗಲಿ ಅಥವಾ 'ಶಬ್ದ'ವಾಗಲಿ, (ಅನುಕ್ರಮವಾಗಿ) ತನ್ನನ್ನು ಅಥವಾ ತನ್ನ ಅರ್ಥವನ್ನು ಅಪ್ರಧಾನವಾಗಿಸಿಕೊಂಡು, ಆ ವ್ಯಂಗ್ಯಾರ್ಥವನ್ನು ಸೂಚಿಸುವುವೋ-ಆ ಕಾವ್ಯವಿಶೇಷವನ್ನು ಪಂಡಿತರು ಧ್ವನಿಯೆಂದು ಕರೆದಿದ್ದಾರೆ (ಧ್ವನ್ಯಾಲೋ. ೨೬).

**ಧ್ವನಿ ಕೂರು**=ಗಂಟಲು ಕಟ್ಟು; ಗಂಟಲಿನ ಬಾಧೆಯಿಂದ ಸರಿಯಾಗಿ ಧ್ವನಿ ಹೊರಡದಿರು : ಭಾಷಣದ ದಿನ ಬೆಳಗ್ಗೆ ಧ್ವನಿ ಕೂತುಹೋಗಿತ್ತು ಎನ್ನುವುದಕ್ಕಿಂತ ಹೂತುಹೋಗಿತ್ತು ಎಂದರೆ ಸತ್ಯಕ್ಕೆ ಹತ್ತಿರವಾಗಬಹುದು (ನಂಟರು. ೩೭). **ಧ್ವನಿ ಬೀಳು** = ಧ್ವನಿ ಕೂರು : ನೆಗಡಿಯಿಂದ ಅವರ ಧ್ವನಿ ಬಿದ್ದುಹೋಗಿದೆ (ರೂಢಿ). **ಧ್ವನಿಮಾಡು**=ಸ್ವರ ಹೊರಡಿಸು; ಕೂಗು: ಧ್ವನಿ ಮಾಡಿದರೆ ಹನಿ ಬಿಟ್ಟೇತೇ ? (ಗಾದೆ). **ಧ್ವನಿ ಹೂತುಹೋಗು**=ಧ್ವನಿ ಕೂರು: ಗಂಟಲುಬೇನೆಯಿಂದ ಅವರ ಧ್ವನಿಹೂತುಹೋಗಿದೆ (ರೂಢಿ). [ಸಂ.]

**ಧ್ವನಿಕಾರ**(ನಾ). [ಕಾವ್ಯಮೀ] ಧ್ವನಿತತ್ತ್ವವನ್ನು ಪ್ರತಿಪಾದಿಸಿದವನು ; ಆನಂದವರ್ಧನ : ಒಂದು ವೇಳೆ ಧ್ವನಿಕಾರನೂ ಆನಂದವರ್ಧನನೂ ಬೇರೆ ಬೇರೆಯೆಂದೂ ಆನಂದವರ್ಧನನು ವೃತ್ತಿಭಾಗವನ್ನು ಮಾತ್ರ ಬರೆದನೆಂದೂ ಒಪ್ಪಿಕೊಂಡರೂ, ಇಬ್ಬರಿಗೂ ಕಾಲದಲ್ಲಿ ಬಹಳ ಅಂತರವುಂಟೆಂದು ಹೇಳುವ ಹಾಗಿಲ್ಲ (ಭಾರಮೀ. ೬೨). ◘ "ಧ್ವನಿಕಾರಿಕೆಗಳನ್ನು ಬರೆದವನೇ ಬೇರೆ, ವೃತ್ತಿಕಾರನಾದ ಆನಂದವರ್ಧನನೇ ಬೇರೆ-ಎಂದು ಹೇಳುವವರು ಕಾರಿಕಾಕಾರನನ್ನು "ಧ್ವನಿಕಾರ"ನೆಂದು ನಿರ್ದೇಶಿಸುವುದು ರೂಢಿಯಾಗಿದೆ" (ಭಾರಮೀ. ೬೨ ಅಡಿಟಿ). [ಸಂ.]

**ಧ್ವನಿಕಾವ್ಯ** (ನಾ). [ಕಾವ್ಯಮೀ] ವ್ಯಂಗ್ಯಾರ್ಥಪ್ರಧಾನವಾದ ಕಾವ್ಯ; ಉತ್ತಮಕಾವ್ಯ : ಒಂದು ಕಾವ್ಯದಲ್ಲಿ ವಾಚ್ಯಕ್ಕಿಂತಲೂ ವ್ಯಂಗ್ಯಾರ್ಥವೇ ಅತಿಶಯವಾಗಿದ್ದರೆ ಆ ಕಾವ್ಯವು 'ಧ್ವನಿಕಾವ್ಯ', 'ಉತ್ತಮಕಾವ್ಯ' ವಾಗುವುದು (ಕೈಪಿಡಿ. ೧೮೨). [ಧ್ವನಿ + ಕಾವ್ಯ]

**ಧ್ವನಿಗಯ್** 'ಧ್ವನಿಗೆಯ್' ನೋ.

**ಧ್ವನಿಗುಡು** 'ಧ್ವನಿಗೊಡು' ನೋ.

**ಧ್ವನಿಗೆಯ್, ಧ್ವನಿಗಯ್, ಧ್ವನಿಗೈ** (ಕ್ರಿ). ೧.ಶಬ್ದ ಮಾಡು ; ಸದ್ದು ಮಾಡು: ಚಿಲಿಮಿಲಿ ಧ್ವನಿಗೆಯ್ದು ವಿಹಂಗಮಂಗಳೆಟ್ಟಟ್ಟಿ ಕುಟುಕಂ ಕೊಳಲ್ಕಿರದೆ ಪಾಱಿದುವೆಣ್ದೆಸೆಗಂ ಪ್ರಭಾತದೊಳ್ (ಕುಸುಮಾ. ೧೧-೮೫). **ಧ್ವನಿಗಯ್** : ೧. ಎಂಟುದಿಕ್ಕಿನ ಹಗ್ಗಗಳನೊತ್ತಿ ಪಿಡಿದೀರೆಂಟಾಳು ಧ್ವನಿಗಯ್ಯೆ ಬಳಿಕ ಉಂಟಲ್ಲವೆಂಬಂತಡಿಯಿಡುನಿಕ್ಕುವುದದು ತುಂಟಕುದುರೆಯೆಂಬಂತೆ (ಕುರಾಸಾಂ. ೯-೫೫). **ಧ್ವನಿಗೈ** : ೧. ಪಕ್ಷಿಕುಲಂಗಳುಂ ತತ್ತತ್ಕಾರ್ಯಗಳಾದ ಹಾಡುವ ಕಂಠವ ಧ್ವನಿಗೈವ ಕರೆಯುವ .... ಪರಮೇಶ್ವರ ಸೃಷ್ಟಿಯೊಳು ಜೀವಬುದ್ಧಿ ವಿಶೇಷವೈಲಕ್ಷಣ್ಯಕ್ಕೆ ನಿದರ್ಶನಗಳಾಗಿರ್ಕುಂ (ವಿವೇಕ. ೨೧೨). ೨. ಹೇಳು ; ನುಡಿ ; ಅಭಿಪ್ರಾಯಪಡು: ಈಗಾಗಲೇ ಕೆಲಕೆಲವು ಕವಿಗಳು ಈ ರೀತಿಯಲ್ಲಿ ಧ್ವನಿಗೈದಿರುವರು (ಪ್ರಬಂಧ. ೧೬೨). [ಧ್ವನಿ + ಕೆಯ್$_1$]

**ಧ್ವನಿಗೈ** 'ಧ್ವನಿಗೆಯ್ ನೋ.

**ಧ್ವನಿಗೊಡು, ಧ್ವನಿಗುಡು** (ಕ್ರಿ). ಶಬ್ದವನ್ನುಂಟುಮಾಡು; ಧ್ವನಿಮಾಡು; ಕೂಗು : ಎಮಗೆ ಕೇಳಬಹಾಂಗೆ ಧ್ವ[ಪಾಠಂ. ದ]ನಿಗೊಟ್ಟು ಕರೆಯಲಿಲ್ಲಿಗೆ ಬಾರದಿಹನೇ (ಬಸವು. ೨೪-೩೫) ; ಬಳ್ಳಿಗಳೊಳು ಮಂಜುಳಧ್ವನಿಗೊ[ಪಾಠಾಂ. ಗು]ಡದ ಪರಮೆ ಪರಮೆಗೆ ಸಂತಸಂ ಜನಿಸದರಲರಲ ನವಪರಿಮಳಂಗಳಿಂದು ಜಡಿಯದೆಳೆಗಾಳಿಯೆಳಗಾಳಿಯಿಲ್ಲದಿಹ ಬನವಿಲ್ಲವಾ ನಾಡೊಳು (ಚಬಪು. ೧೧-೫). **ಧ್ವನಿಗುಡು:** ಬಹಳ ಶಂಖ ಧ್ವನಿಗುಡಲು ಬಿಱುಗಹಳೆಗಳು ಪರಸಮಯಕಾನನದಹನವೆನುತಂ ಮೊರೆಯಲು (ಬಸಪು. ೫೦-೧೭). 'ದನಿಗೊಡು' ಪರಾ. [ಧ್ವನಿ + ಕೊಡು$_1$]

**ಧ್ವನಿಜಾರು** (ನಾ). "ಒಂದು ಧ್ವನಿಯಿಂದ ಮತ್ತೊಂದು ಧ್ವನಿಗೆ ಹೋಗುವಾಗ, ಧ್ವನ್ಯಂಗಗಳಲ್ಲಿ ಮಾಡುವ ಕ್ರಮೇಣವಾದ ವ್ಯತ್ಯಾಸ" (Glide, ಇಂಕನಿ) : ಹೀಗೆಯೇ ಇಕಾರಾಂತ ಹಾಗು ಎಕಾರಾಂತ ಪ್ರಕೃತಿಗಳಿಗೆ ತೃತೀಯೆಯ ಪ್ರತ್ಯಯಗಳು ಸೇರುವಾಗ - ಯ - ಎಂಬ ಧ್ವನಿಜಾರು ಬಂದು ಹೋಗುವುದೂ ಉಂಟು (ದ್ರಾವಿವಿ. ೨೨೩).

[ಧ್ವನಿ + ಜಾರು$_2$ (<ಜಾಱು$_2$)]

**ಧ್ವನಿತ** (ಗು). ೧. ಶಬ್ದಮಾಡಿದ ; ಸದ್ದುಮಾಡಿದ. ೨. ವ್ಯಂಗ್ಯವಾಗಿ ಸೂಚಿಸಿದ ; ಸೂಚ್ಯ. (ನಾ). ೩. ವ್ಯಂಗ್ಯವಾಗಿ ತೋರುವುದು ; ವ್ಯಂಜಿತವಾದುದು; ಸೂಚ್ಯವಾದುದು : ಯಾವ ಲಕ್ಷ್ಯದಲ್ಲಿ ಶಬ್ದದಿಂದ ನೇರವಾಗಿ ವಾಚ್ಯವಾಗಿರದ ಮತ್ತು ಕೇವಲ ಶಬ್ದಶಕ್ತಿಯಿಂದ ಧ್ವನಿತವಾಗುತ್ತಿರುವ, ಅಲಂಕಾರವಿರುವುದೋ, ಅದು ಮಾತ್ರ ಶಬ್ದಶಕ್ತಿಮೂಲ ಧ್ವನಿ (ಧ್ವನ್ಯಾಲೋ. ೮೮) ; ನಮ್ಮ ಅಂತರಾತ್ಮದಿಂದಲೋ ಇತರ ವಸ್ತು

ಮತ್ತು ವ್ಯಕ್ತಿಗಳಿಂದಲೋ ಧ್ವನಿತವಾಗುವ ಭಾವಗಳು ನಮ್ಮ ಆಲೋಚನೆಯನ್ನು ಬಹುವಾಗಿ ರೂಪಿಸುತ್ತವೆ (ಶಿಕ್ಷದ. ೫೫೨) ; ಇದು ಅವನ ನಾಟಕಗಳಲ್ಲಿ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಧ್ವನಿತವಾಗಿದೆ (ಬದ್ಧಪ್ರ. XXXIV, ೬೬೩೪) ; ಇಲ್ಲಿ ಎರಡೂ ಪುರುಷಗಳ ಪ್ರಯೋಗದಿಂದ ನೃಪತುಂಗನಲ್ಲದ ವ್ಯಕ್ತಿ ಗ್ರಂಥಕಾರನಾಗಿರಬೇಕೆಂದು ಸ್ಫುಟವಾಗಿ ಧ್ವನಿತವಾಗಿದೆ (ಕಸಾಜ. ೫೪); ಕಾವ್ಯದಲ್ಲಿ . . . ರಸವು ಯಾವಾಗಲೂ 'ವ್ಯಂಗ್ಯ' ಅಥವಾ 'ಧ್ವನಿತ'ವಾಗುವುದೆಂದೂ ಹೇಳಿಬಿಟ್ಟರೆ ಕಾವ್ಯಾತ್ಮವಿಚಾರವಾಗಿ ಇರತಕ್ಕ ಪರಸ್ಪರ ಭಿನ್ನಾಭಿಪ್ರಾಯಗಳು ಹೋದಂತಾಗುತ್ತದೆ (ಕೈಪಿಡಿ.೧೭೪). ೪. ಶಬ್ದಮಾಡುವಂಥದು ; ಧ್ವನಿಮಾಡುವಂಥದು : "ಸ್ವನಿತಂ, ಧ್ವನಿತಂ—೨ ಕೂಗುತ್ತಿರುವಂಥಾದ್ದು, ಮೊರೆಯುತ್ತಿರುವಂಥಾದ್ದು" (ಸಿದ್ಧಾಂತಿ. ೩೪೮). ೫. ಶಬ್ದ ; ಧ್ವನಿ. ೬. (ಮೋಡದ) ಗರ್ಜನೆ ; ಮೊಳಗು.

ಧ್ವನಿತವಾಗು = ವ್ಯಂಗ್ಯವಾಗಿ ಸೂಚಿತವಾಗು ; ಸೂಚ್ಯವಾಗು ; ವ್ಯಂಜಿತವಾಗು : ಇಲ್ಲಿ ನಿದರ್ಶನಾಲಂಕಾರದಿಂ ಸಾಳುವಮಲ್ಲನ ಗುಣಂಗಳ್ ವರ್ಣಿಪೊಡಶಕ್ಯಮೆಂದು ಪೇಳ್ವ ಅಸಾಧಾರಣ ತದ್ವಿಶೇಷಂಗಳಂ ಪ್ರಕಾಶಿಸುವಲ್ಲಿ ತತ್ಪರಮಾದಾಕ್ಷೇಪಾಲಂಕಾರಂ ಧ್ವನಿತಮಾಯ್ತು (ರಸರ. ಪರಿ. ೧ ೧೩೧). [ ಸಂ. ]

**ಧ್ವನಿತಂತು** (ನಾ). ಶಬ್ದವನ್ನು ಹೊರಡಿಸಲು ಸಹಾಯಕವಾಗುವ ಸೂಕ್ಷ್ಮವಾದ ನರ : (Vocal-Chord. ಇಂಕನಿ). [ ಧ್ವನಿ + ತಂತು$_1$ ]

**ಧ್ವನಿತತ್ತ್ವ** (ನಾ). = ಧ್ವನಿತತ್ವ : ಧ್ವನಿತತ್ತ್ವದಿಂದ ಒಂದು ವಿಷಯ ಚೆನ್ನಾಗಿ ಸ್ಥಾಪಿತವಾಗುತ್ತದೆ. ಯಾವುದನ್ನೇ ಆಗಲಿ ನೇರವಾಗಿ ವಿವರಿಸಿ ಹೇಳದೆ, ಅದರ ಕಾರ್ಯಕಾರಣಗಳನ್ನು ತಿಳಿಸಿ ಸೂಚಿಸಿಬಿಡುವುದೇ ಶ್ಲಾಘ್ಯ (ಭಾರಮಿ. ೩೨೯). [ ಧ್ವನಿ + ತತ್ತ್ವ ]

**ಧ್ವನಿತತ್ವ** (ನಾ). [ಕಾವ್ಯಮಿ] ವ್ಯಂಗ್ಯಾರ್ಥವು ಕಾವ್ಯದ ಸಾರ ಎಂಬ ತತ್ತ್ವ ; ವಾಚ್ಯಾರ್ಥ, ಲಕ್ಷ್ಯಾರ್ಥಗಳಿಂದ ಭಿನ್ನವಾದ ಅರ್ಥವೇ ಮುಖ್ಯವೆಂಬ ಸಿದ್ಧಾಂತ : ವ್ಯಂಜಕತ್ವದ ವೈಶಿಷ್ಟ್ಯವನ್ನು ವಿವರಿಸುವ ನಮ್ಮ ಧ್ವನಿತತ್ವವು ಅನೇಕ ಭಿನ್ನಾಭಿಪ್ರಾಯಗಳನ್ನು ದೂರಮಾಡುವುದೆಂದೂ . . . ನಂಬುತ್ತೇವೆ (ಧ್ವನ್ಯಾಲೋ. ೨೦೮). [ ಧ್ವನಿ + ತತ್ವ$_1$ ]

**ಧ್ವನಿತಾರ್ಥ** (ನಾ). ವ್ಯಂಜಿತವಾದ ಅರ್ಥ ; ವ್ಯಂಜನಾವ್ಯಾಪಾರದಿಂದ ತೋರುವ ಅರ್ಥ; ವ್ಯಂಗ್ಯಾರ್ಥ: ಸಸ್ಯಜೀವನದಿಂದ ಪ್ರಾಣಿಜೀವನಕ್ಕೆ ಇದನ್ನು ಅನ್ವಯಿಸಿಕೊಂಡರೆ ವಸ್ತುವಿನ ಹಿಂದೆ ಧ್ವನಿತಾರ್ಥ ಬೇಕಾದ ಹಾಗಿರುವುದು ಕಂಡುಬರುತ್ತದೆ (ಬಂಕಿಮ. ೩೦) ; ನವೀನಾಲಂಕಾರಿಕರು ಕಾವ್ಯದಲ್ಲಿ ಧ್ವನಿತಾರ್ಥಕ್ಕೆ ಇರುವ ಪ್ರಾಧಾನ್ಯದ ಮೇಲೆ ಕಾವ್ಯಗಳನ್ನು ವಿಭಾಗ ಮಾಡಿರುತ್ತಾರೆ (ಕೈಪಿಡಿ. ೧೮೨) ; ಕಾವ್ಯಾತ್ಮಕ ಎನ್ನುವ ಶಬ್ದದ ಧ್ವನಿತಾರ್ಥಗಳನ್ನು ನಾವು ಎಚ್ಚರಿಕೆಯಿಂದ ಯೋಚಿಸಿದರೆ ಸಾಕು ; ಉತ್ತರ ಕೂಡಲೇ ತಾನಾಗಿಯೇ ಹೊಳೆಯುತ್ತದೆ (ಸಾಹಿಪ್ರ. ೬೨) ; ಮೇಲೆ ಉದ್ಧರಿಸಿದ ಪೊನ್ನನ ಅವತರಣಿಕೆಯ ಧ್ವನಿತಾರ್ಥವೆಂದು ತೋರುವುದು (ಸಾಹಿಸ. ೨೩). [ ಧ್ವನಿತ + ಅರ್ಥ ]

**ಧ್ವನಿತೆಗೆ** (ಕ್ರಿ). ೧. ಶಬ್ದವನ್ನು ಹೊರಡಿಸು. ೨. ಮಾತನಾಡು : ಯಾರ ಗಂಟಲೂ ಬೊಬ್ಬಿರಿದು ಧ್ವನಿತೆಗೆಯುವಷ್ಟು ಶಕ್ತಿಯುತವಾಗಿದ್ದಂತೆ ಕಾಣಿಸಲಿಲ್ಲ (ಅಳನಿ. ೧೫೮). [ ಧ್ವನಿ + ತೆಗೆ$_1$ ]

**ಧ್ವನಿಪರಿವರ್ತನೆ** (ನಾ). ೧. ಕಂಠ ಬದಲಾಗುವಿಕೆ. ೨. [ಭಾಷಾಶಾ] ಸ್ವರಗಳ ಬದಲಾವಣೆ, – ರೂಪಾಂತರ: ಸಿಥಿಯನ್ – ದ್ರಾವಿಡ ವರ್ಗಗಳ ಬಾಂಧವ್ಯವನ್ನು ಬೆಸೆಯುವಷ್ಟು, ಧ್ವನಿಪರಿವರ್ತನೆ ಹಾಗೂ ಧ್ವನಿಸ್ಥಾಯಿತ್ವದ ನಿಯಮಗಳು ಈ ಹೋಲಿಕೆಯಲ್ಲಿ ಅಡಗಿವೆಯೆ ? (ದ್ರಾವಿವಿ. ೩೮). [ ಧ್ವನಿ + ಪರಿವರ್ತನೆ ]

**ಧ್ವನಿಪೆಟ್ಟಿಗೆ** (ನಾ). ಧ್ವನಿತಂತುಗಳಿರುವ ಗಂಟಲ ಕುಹರ : ಧ್ವನಿಪೆಟ್ಟಿಗೆಯಿಂದ ಧ್ವನಿ ಹೊರಡುತ್ತದೆ (ರೂಢಿ). [ ಧ್ವನಿ + ಪೆಟ್ಟಿಗೆ ]

**ಧ್ವನಿಪ್ರತಿಫಲಕ** (ನಾ). "ಭಾಷಣವೇದಿಕೆ, ಮೊ.ಗಳ ಮೇಲೆ ಹಾಕಿರುವ, ಶ್ರೋತೃವೃಂದದ ಕಡೆಗೆ ಧ್ವನಿಯನ್ನು ತಿರುಗಿಸಲು ಸಹಾಯವಾಗುವ ಮೇಲ್ಕಟ್ಟು" (Sounding-board. ಇಂಕನಿ). [ ಧ್ವನಿ + ಪ್ರತಿಫಲಕ ]

**ಧ್ವನಿಪ್ರಸ್ಥಾನ** (ನಾ). [ಕಾವ್ಯಮಿ] ಧ್ವನಿಯು ಕಾವ್ಯದಲ್ಲಿ ಪ್ರಮುಖವಾದ-ದೆಂದು ಹೇಳುವ ವ್ಯವಸ್ಥೆ : ಧ್ವನಿಪ್ರಸ್ಥಾನದವರು ವ್ಯಂಗ್ಯವೆಂದು ಕರೆಯುವ ಅರ್ಥವನ್ನೆಲ್ಲಾ, ಅಭಿಧಾವೃತ್ತಿ, ಲಕ್ಷಣಾವೃತ್ತಿಗಳೆಂದು ಮೊದಲಿನಿಂದಲೂ ಶಾಸ್ತ್ರಕಾರರು ಒಪ್ಪಿಕೊಂಡಿರುವ ಶಬ್ದವ್ಯಾಪಾರಗಳಿಂದಲೇ ಸಾಧಿಸುವುದು ಅಶಕ್ಯವೆ ? (ಭಾರಮಿ. ೩೩೪). [ ಧ್ವನಿ + ಪ್ರಸ್ಥಾನ ]

**ಧ್ವನಿಭ್ರಮೆ** (ನಾ). ಉಚ್ಚಾರಣೆಯಿಂದ ಶಬ್ದದ ಸ್ವರೂಪದ ಬಗೆಗೆ ಉಂಟಾಗುವ ಭ್ರಾಂತಿ : ಬೇರೊಬ್ಬರು ಹಸ್ತಪ್ರತಿಯನ್ನು ಓದಿ ಹೇಳಿ ಪ್ರತಿಕಾರನು ಅದನ್ನು ಬರೆದುಕೊಳ್ಳುವಾಗ ಧ್ವನಿಭ್ರಮೆ (Phonetic Confusion) ಆಗುವುದುಂಟು (ಭಾರಪ. ೭೧). [ ಧ್ವನಿ + ಭ್ರಮೆ ]

**ಧ್ವನಿಮಗ್ನ** (ನಾ). ೧. ಧ್ವನಿಯನ್ನು ಆಲಿಸುವುದರಲ್ಲಿ ತಲ್ಲೀನನಾದವನು, –ಮುಳುಗಿದವನು. ೨. ವ್ಯಂಗ್ಯಾರ್ಥವನ್ನು ಅಳವಡಿಸುವುದರಲ್ಲಿ ನಿರತನಾಗಿರುವವನು. ೧, ೨ : ಪದಶಬ್ದಕಾತರನಾಗಿಹನೀತನು . . . ಧ್ವನಿಮಗ್ನನೀತನು ಕವಿಯಂತೆ ಕಾದಲನಿಹನು (ಇಂಚಾಪ. ೮೧-೯೪). [ ಧ್ವನಿ + ಮಗ್ನ ]

**ಧ್ವನಿಮಾ** (ನಾ). [ಭಾಷಾಶಾ] ಸ್ವರ ; ಧ್ವನಿ; P ಭಾಷಾಶಾಸ್ತ್ರದಲ್ಲಿ 'Phoneme' ಎಂಬ ಪದಕ್ಕೆ ಸಮಾನಾರ್ಥವಾಗಿ ಬಳಸುವ ಪಾರಿಭಾಷಿಕ ಶಬ್ದ : ಕೊಡಗುಭಾಷೆಯಲ್ಲಿ ಒಟ್ಟು ೩೨ ಧ್ವನಿಮಾಗಳು ಇರುವಂತೆ ತೋರುತ್ತದೆ (ದ್ರಾವಿವಿ. ೧೩೮) ; ತಮಿಳು ವರ್ಣಮಾಲೆಗೆ Phonemic ಪದ್ಧತಿ ಅನುಸರಿಸಿ ಲಿಪಿವ್ಯವಸ್ಥೆಯಾಗಿದ್ದಿತು. ಅಲ್ಲಿ ಘೋಷ ಮತ್ತು ಅಘೋಷ ಸ್ಪರ್ಶಗಳು ಸ್ವತಂತ್ರಧ್ವನಿಮಾಗಳಾಗಿರದೆ, ಉಪಧ್ವನಿಮಾಗಳಾಗಿವೆ (ಭಾಷಾಶಾ. ೧೦೩). 'ರೂಪಿಮಾ', 'ಸ್ವನಿಮಾ' ಪರಾ P 'ಧ್ವನಿಂ ಮಾತೀತಿ ಧ್ವನಿಮಾ'. ಸ್ವರವನ್ನು ಅಳೆಯುವುದು, ಅದರ ಕಾರ್ಯಗಳನ್ನು ಗುರುತಿಸುವುದು ಇತ್ಯಾದಿ ಅರ್ಥಗಳನ್ನು ಹೇಳಬಹುದು. ಭಾಷಾಶಾಸ್ತ್ರವು ಬೆಳೆಯುತ್ತಿರುವಾಗ ಇಂಥ ಕೆಲವು ಶಬ್ದಗಳನ್ನು ವಿದ್ವಾಂಸರು ಹೊಸದಾಗಿ ಟಂಕಿಸುತ್ತಾರೆ. ಅವುಗಳನ್ನು ಒಪ್ಪಿಕೊಳ್ಳಬೇಕು. [ ಸಂ. ]

**ಧ್ವನಿಮಾರ್ಪಾಟು** (ನಾ). ೧. = ಧ್ವನಿಪರಿವರ್ತನೆ ೧. ೨. = ಧ್ವನಿಪರಿವರ್ತನೆ ೨ : ನೋಹಿ, ಚೆಪ್ಪು, ಕತ್ತಲೆ, ಹೆಮ್ಮೆ – ಇವು . . . ನೋಂಪಿ, ಬೆಳ್ಪು, ಕಟ್ತಲೆ, ಪೆರ್ಮೆ ಈ ಮಾತುಗಳ ರೂಪಾಂತರಗಳು, ತಕ್ಕ ಧ್ವನಿಮಾರ್ಪಾಟುಗಳಿಂದ (Phonetic Changes) ಸಿದ್ಧಿಸತಕ್ಕವು (ಕಬಸಾ. ೧೨೨). [ ಧ್ವನಿ + ಮಾರ್ಪಾಟು ]

**ಧ್ವನಿಮುದ್ರಕ** (ನಾ). ೧. ಧ್ವನಿಮುದ್ರಿಕೆಯಲ್ಲಿ ಧ್ವನಿಯನ್ನು ಸಂಗ್ರಹಮಾಡಿಕೊಳ್ಳಲು ಬಳಸುವ ಉಪಕರಣ, –ಯಂತ್ರ: ನಮ್ಮ ಮನೆಯಲ್ಲಿ ಒಳ್ಳೆಯ ಧ್ವನಿಮುದ್ರಕವಿದೆ (ರೂಢಿ). ೨. ಧ್ವನಿಮುದ್ರಣವನ್ನು ಮಾಡಿಕೊಳ್ಳುವವನು : ಅವನು ಧ್ವನಿಮುದ್ರಕನಾಗಿ ಕೆಲಸಮಾಡುತ್ತಿದ್ದಾನೆ (ರೂಢಿ). [ ಧ್ವನಿ + ಮುದ್ರಕ ]

**ಧ್ವನಿಮುದ್ರಣ** (ನಾ). ಧ್ವನಿಮುದ್ರಿಕೆಯಲ್ಲಿ ಧ್ವನಿಯನ್ನು ಸಂಗ್ರಹಮಾಡಿಕೊಳ್ಳುವಿಕೆ: ಆ ಚಲನಚಿತ್ರದ ಧ್ವನಿಮುದ್ರಣ ಚೆನ್ನಾಗಿದೆ (ರೂಢಿ). [ ಧ್ವನಿ + ಮುದ್ರಣ ]

**ಧ್ವನಿಮುದ್ರಣಯಂತ್ರ** (ನಾ). = ಧ್ವನಿಮುದ್ರಕ ೧ : ಧ್ವನಿಮುದ್ರಣಯಂತ್ರದಿಂದ ಸಂಗ್ರಹಿಸಿದ್ದು (ಕಜಕಾ. ೨೦ ಪ್ರಸ್ತಾವನೆ).
[ಧ್ವನಿಮುದ್ರಣ + ಯಂತ್ರ]

**ಧ್ವನಿಮುದ್ರಿಕೆ** (ನಾ). ೧. ಧ್ವನಿಯನ್ನು ಮುದ್ರಿಸಿದ ತಟ್ಟೆ, ಟೇಪು ಮೊದಲಾದ ಸಾಧನ. ೨. ಧ್ವನಿಸಂಗ್ರಹ ಮಾಡಿಕೊಳ್ಳುವ ತಟ್ಟೆಯಾಕಾರದ ಸಲಕರಣೆ : ಮೇಘಮಲ್ಹಾರವನು ಹಾಡಿ ಮಳೆಯನು ಕರೆದ ಗಾಯಕನ ಧ್ವನಿಮುದ್ರಿಕೆಯನೆ ತಂದು (ಅರರೋ. ೨೮); ದಶಾಂಶ ವರ್ಗೀಕರಣಪದ್ಧತಿಯಂತೆ ಗ್ರಂಥಾಲಯದಲ್ಲಿ ಅವ್ಯಾಹತವಾಗಿ ಕೊಳ್ಳಲಾಗುವ ಓಲೆಗ್ರಂಥ, ಹಸ್ತಪ್ರತಿ, ಪುಸ್ತಕ, ಧ್ವನಿಮುದ್ರಿಕೆ, ಚಲನಚಿತ್ರ (Films), ಸೂಕ್ಷ್ಮಪತ್ರಕ (MicroCard) ಮುಂತಾದವುಗಳನ್ನು . . . ವಿಭಜಿಸಲಾಗುತ್ತದೆ (ಗ್ರಂಥಾಲ. ೧೮) ; ಅಂತು ನನ್ನ ಬರಹ ಧ್ವನಿಮುದ್ರಿಕೆಯಲ್ಲ ಎಂಬುದನ್ನು ಹೇಳಿ, ತಮ್ಮ ಮುಂದಕ್ಕೆ ಅದನ್ನು ಇರಿಸುತ್ತಿದ್ದೇನೆ (ಜಾನಗೀ. VI ಪ್ರಸ್ತಾವನೆ). [ಧ್ವನಿ + ಮುದ್ರಿಕೆ]

**ಧ್ವನಿಮುದ್ರಿಸು** (ಕ್ರಿ). ಧ್ವನಿಯನ್ನು ಧ್ವನಿಮುದ್ರಿಕೆಯಲ್ಲಿ ಸಂಗ್ರಹಮಾಡಿಕೊಳ್ಳು : ಅವರು ಭೈರವಿರಾಗದಲ್ಲಿ 'ಚಿಂತಯ ಮಾಂ' ಎಂಬ ಕೀರ್ತನೆಯನ್ನು ಹಾಡುತ್ತಿದ್ದಾಗ . . . ಮಹಾರಾಜರು ಅದನ್ನು ಎಡಿಸನ್ನನ ಫೋನೋಗ್ರಾಫಿನಲ್ಲಿ (ಮೇಣದ ಸುರುಳಿಯ ಮೇಲೆ) ಧ್ವನಿಮುದ್ರಿಸಿಕೊಂಡರು (ಸಂಗೀತ. ೩೦). [ಧ್ವನಿ + ಮುದ್ರಿಸು]

**ಧ್ವನಿಯಿಸು** 'ಧ್ವನಿಸು' ನೋ.

**ಧ್ವನಿರಮ್ಯ** (ಗು). ೧. ಕೇಳಲು ಚೆನ್ನಾಗಿರುವ, – ಮನೋಹರವಾದ. ೨. ಧ್ವನಿಶಕ್ತಿಯ ಮೂಲಕ ರಮ್ಯವಾದ : ಸೂಚ್ಯತೆಯಿಂದ ಚೆಲುವಾದ : ಧ್ವನಿರಮ್ಯವಾದೊಂದೆ ಪದವನಿಟ್ಟುದರಿಂದೆ ಕವಿವಾಣಿ ಶೋಭಿಪುದಲ್ತೆ (ಇಂಚಾಪ. ೬೬-೩೦). [ಧ್ವನಿ + ರಮ್ಯ]

**ಧ್ವನಿಲೇಖನ** (ನಾ). ಧ್ವನಿಯನ್ನು ಮುದ್ರಿಸಿಕೊಳ್ಳುವುದು : ಸ್ವಲ್ಪ ದಿವಸಗಳನ್ನು ಜಾನಪದ ಗೀತೆಗಳ ಧ್ವನಿಲೇಖನಕ್ಕಾಗಿಯೂ ಕಳೆದೆ (ಜಾನಗೀ. V, ಪ್ರಸ್ತಾವನೆ). [ಧ್ವನಿ + ಲೇಖನ]

**ಧ್ವನಿವರ್ಧಕ** (ನಾ). ೧. ಧ್ವನಿಯನ್ನು ಹೆಚ್ಚಿಸುವುದು. ೨. ಮೂಡಿದ ಶಬ್ದವನ್ನು ಹೆಚ್ಚುಮಾಡುವ ಸಾಧನ : (ಧ್ವನಿಗ್ರಾಹಕವನ್ನು ಕಿವಿಗಿಟ್ಟುಕೊಳ್ಳದೆ ನಿಸ್ತಂತುವಾರ್ತಾಧ್ವನಿಯನ್ನು ಗಟ್ಟಿಯಾಗಿ ಕೇಳಲಾಗುವ) ಧ್ವನಿವರ್ಧಕ (ಯಂತ್ರ) (Loud-Speaker. ಇಂಕನಿ); ಆದರೆಡೆಯಲ್ಲಿ ಧ್ವನಿವರ್ಧಕಗಳು ಉಪನ್ಯಾಸಕನ ಭಾಷಣವನ್ನು ಹೊರಸೂಸಲು ಆತುರವಾಗಿದ್ದವು (ಗೋಪುರ. ೦೨೯) ; ಮುಂದುಗಡೆಯೇ ಧ್ವನಿವರ್ಧಕ ಮಿನುಗುತ್ತಾ ಭರವಸೆ ಕೊಡುತ್ತಿತ್ತು (ನಂಟರು. ೩೯) ; ಹೊರಗಡೆಗೆ ಧ್ವನಿವರ್ಧಕಗಳನ್ನು ಏರ್ಪಡಿಸಿದ್ದರು (ಕಲಾಸಾ. ೮೮). [ಧ್ವನಿ + ವರ್ಧಕ]

**ಧ್ವನಿವಾದ** (ನಾ). = ಧ್ವನಿತತ್ತ್ವ : ಕಾವ್ಯಕ್ಕೆ ವ್ಯಾಖ್ಯಾನವೇ ಕೂಡದೆಂದು ಧ್ವನಿವಾದದ ಅಭಿಪ್ರಾಯವಲ್ಲ (ಭಾರಮೀ. ೩೩೦). [ಧ್ವನಿ + ವಾದ]

**ಧ್ವನಿವಾಹಕ** (ನಾ). "ಒಂದು ಕೋಣೆಯಲ್ಲಿ ಮಾಡಿದ ಶಬ್ದಗಳನ್ನು, ಅಥವಾ ಆಡಿದ ಮಾತುಗಳನ್ನು, ಮತ್ತೊಂದು ಕೋಣೆಯಲ್ಲಿ ಗ್ರಹಿಸಿ ಬರೆಯಲಾಗುವಂತೆ ಧ್ವನಿವೃದ್ಧಿಮಾಡುವ ಸಲಕರಣೆ : ಧ್ವನಿವಾಹಕ" (Dictograph. ಇಂಕನಿ). [ಧ್ವನಿ + ವಾಹಕ]

**ಧ್ವನಿವಿಕಾರ** (ನಾ). ೧. [ಕಾವ್ಯಮೀ] (ಭಯ, ದುಃಖ ಮೊದಲಾದುವುಗಳಿಂದ ಉಂಟಾದ) ಧ್ವನಿಯ ಬದಲಾವಣೆ ; ಸ್ವರವಿಕಾರ : 'ಕಾಕು' ಅಥವಾ ಧ್ವನಿವಿಕಾರದಿಂದ ಬೇರೆ ಅರ್ಥವು ತೋರುವುದುಂಟಷ್ಟೆ (ಧ್ವನ್ಯಾಲೋ. ೨೦೭). ೨. [ಭಾಷಾಶಾ] ಮಾತಿನ ವರ್ಣಗಳು ತೇದು ಹೋಗುವಿಕೆ ; ವರ್ಣಕ್ಷಯ : ಎತ್ವಕ್ಕೆ ಇತ್ವ, ದ್ವಿತ್ವಕ್ಕೆ ಲೋಪ – ಎಂಬೀ ಧ್ವನಿವಿಕಾರಗಳು ಸೇರಿವೆ (ಸಂಶೋಧ. ೮೭). [ಧ್ವನಿ+ ವಿಕಾರ]

**ಧ್ವನಿವಿಜ್ಞಾನ** (ನಾ). ಕಿವಿಗೆ ಕೇಳುವ ಸ್ವನಗಳನ್ನು ಕುರಿತಾದ ಶಾಸ್ತ್ರ, – ಸಿದ್ಧಾಂತ : ಧ್ವನಿವಿಜ್ಞಾನ (Acoustics. ಇಂಕನಿ) ; ಇಂಗ್ಲಿಷಿನಲ್ಲಿ ಬರೆಯುವಾಗ ಧ್ವನಿವಿಜ್ಞಾನದ ವಿವರಣೆ ನೀಡುವ ಸಂದರ್ಭದಲ್ಲಿ ಕೆಲವು ನಿಯಮಗಳನ್ನು . . . ಬರೆಯುವರು (ದ್ರಾವಿ. X, ಮೊದಲಮಾತು).
[ಧ್ವನಿ + ವಿಜ್ಞಾನ]

**ಧ್ವನಿಶಾಸ್ತ್ರ** (ನಾ). = ಧ್ವನಿವಿಜ್ಞಾನ : "ಶ್ರವಣವಿದ್ಯೆ, ಧ್ವನಿಶಾಸ್ತ್ರ" (Acoustics. ಪಾರಿನಿ. ೨). [ಧ್ವನಿ + ಶಾಸ್ತ್ರ]

**ಧ್ವನಿಸಂಕೇತ** (ನಾ). ಧ್ವನಿಯನ್ನು ಗುರುತಿಸುವ ಸಂಕೇತ : ವ್ಯವಹಾರ ಕ್ರಮಸರಣಿಯಲ್ಲಿ ಮಾನವನು ಮುಟ್ಟಿದ ಮುಖ್ಯಘಟ್ಟವೆಂದರೆ ಧ್ವನಿಸಂಕೇತವುಳ್ಳ ವರ್ಣಮಾಲೆಯನ್ನು ಆಚರಣೆಗೆ ತಂದದ್ದು (ಮುದ್ರಕ. ೮).
[ಧ್ವನಿ + ಸಂಕೇತ]

**ಧ್ವನಿಸಂಪತ್ತು** (ನಾ). ಉತ್ತಮವಾದ ಶಾರೀರ ; ಸಮೃದ್ಧವಾದ ಶಾರೀರ ; ಕಂಠದ ಉತ್ಕೃಷ್ಟತೆ : ಮಹಾವೈದ್ಯನಾಥ ಅಯ್ಯರ್ ಅವರ ಶಾರೀರವು ಧ್ವನಿಸಂಪತ್ತಿನಿಂದ ಕೂಡಿತ್ತು (ಸಂಗೀತ. ೩).
[ಧ್ವನಿ + ಸಂಪತ್ತು]

**ಧ್ವನಿಸಾಂಗತ್ಯ** (ನಾ). ಧ್ವನಿಗಳ ಹೊಂದಾಣಿಕೆ, – ಹೊಂದಿಕೆ ; ಸ್ವರಮೈತ್ರಿ : ಈ ಇಂಪಿಗೆ ಅವುಗಳ ಧ್ವನಿಸಾಂಗತ್ಯವೇ (Concordance) ಕಾರಣ (ಸಂಗೀಹಂ. ೧೨). [ಧ್ವನಿ + ಸಾಂಗತ್ಯ]

**ಧ್ವನಿಸು**, ಧ್ವನಿಯಿಸು (ಕ್ರಿ). ೧. ಧ್ವನಿಯನ್ನು ಹೊರಡಿಸು ; ಶಬ್ದಮಾಡು. ೨. ಸೂಚ್ಯವಾಗು ; ಹೊರಬೀಳು ; ಸೂಚಿತವಾಗು : ಅಶೇಷವಾಗಿ ಆದ್ಯಂತವಾಗಿ ವಿಮರ್ಶಿಸಿ ನಿನಗೆ ತಿಳಿದಂತೆ ಮಾಡು ಎಂದಾಗ ತಿಳಿದು ಮಾಡು ಎಂಬ ಅರ್ಥವೇ ಧ್ವನಿಸುತ್ತದೆ (ಭಾರದ. ೧೦೯). ೩. ಸೂಚ್ಯವಾಗಿ ಹೇಳು ; ಸೂಚಿಸು : ಇಲ್ಲಿ ಕಾಮಿಯೊಬ್ಬನ ಪ್ರೇಯಸೀಚುಂಬನೇಚ್ಛೆಯನ್ನು ಇದು ಚಾಟುರೂಪವಾಗಿ ಧ್ವನಿಸುತ್ತದೆ (ಧ್ವನ್ಯಾಲೋ. ೪೦ ಅಡಿಟಿ). **ಧ್ವನಿಯಿಸು** : ೧. ವಂಶಂ . . . ಬಿದಿರ್ವಳಿಳಾದ ಗಾಳಿಯ ಪುದುವಿಂ ಧ್ವನಿಯಿಸುವ ವೇಣು ಕೀಚಕಮಕ್ಕುಂ (ವಸ್ತುಕೋ. ೩೬-೧೮). ೩. ಇದನ್ನು ನಮ್ಮ ಕವಿಗಳು ಧ್ವನಿಯಿಸದೆ ಇಲ್ಲ (ಸಾಹಿವಿ. ೩೦). ೪. ವ್ಯಂಗ್ಯಾರ್ಥವನ್ನು ಕೊಡು, – ಸೂಚಿಸು : ಧ್ವನಿಯೆಂಬುದಳಂಕಾರಂ ಧ್ವನಿಯಿಸುಗುಂ ಶಬ್ದದಿಂದಮರ್ಥದೆ ದೂಷ್ಯಂ (ಕವಿರಾ. ೩-೨೦೯).
[ಧ್ವನಿ + – ಇಸು]

**ಧ್ವನ್ಯಂತರ** (ನಾ). ಬೇರೆ ಬೇರೆ ಧ್ವನಿ, – ಸ್ವರ, – ನಾದ : ಇಂದೂ ಸಾಮಗಾನವನ್ನು ಕೇಳಿದಲ್ಲಿ ಏಳು ಧ್ವನ್ಯಂತರಗಳಿರುವುದೂ ಪ್ರಮಾಣದಲ್ಲಿ ಸ್ವಲ್ಪ ವ್ಯತ್ಯಾಸ ವಿದ್ದರೂ . . . ಸ್ಥೂಲವಾಗಿ ಅವು ನಮ್ಮ ಖರಹರಪ್ರಿಯ ರಾಗವನ್ನು ಹೋಲುವುದೂ ಗಮನಾರ್ಹವಾದುವು (ಭಾರದ. ೩೩೭).
[ಧ್ವನಿ + ಅಂತರ]

**ಧ್ವನ್ಯಕ್ಷರ** (ನಾ). ಧ್ವನಿಕಂಪನಗಳು ಮಾರ್ಪಾಟುಗೊಂಡು ಆದ ಅಕ್ಷರ ; ಟೈಪು : "ಧ್ವನ್ಯಕ್ಷರ (ಮುದ್ರಣ)" (Phonotype. ಇಂಕನಿ).
[ಧ್ವನಿ + ಅಕ್ಷರ]

**ಧ್ವನ್ಯನುರೂಪತೆ** (ನಾ). ಸ್ವರಗಳ ಸಮಾನತೆ, – ಸಾದೃಶ್ಯ : ದ್ರಾವಿಡಭಾಷೆಗಳಲ್ಲಿ ಕಾಣುವ ಧ್ವನ್ಯನುರೂಪತೆ (Phonetic-Correspondence) ಯ ನಕ್ಷೆಯಲ್ಲಿ ಆದಷ್ಟೂ ಕನ್ನಡಲಿಪಿಯನ್ನೇ ಬಳಸಿದೆ (ದ್ರಾವಿ. ೩೦೩).
[ಧ್ವನಿ + ಅನುರೂಪತೆ]

**ಧ್ವನ್ಯರ್ಥ** (ನಾ). [ಕಾವ್ಯಮೀ] ಸೂಚ್ಯವಾದ ಅರ್ಥ; ಸಾಂಕೇತಿಕವಾದ ಅರ್ಥ: ಧರೆಯ ಮೇಲಣ ವೈರಿನೃಪರ ದಂಡಿಸಿ ತಂದ ವರವಸ್ತುಚಯವೆಸೆದಿರಲು ಮೆಚ್ಚುವುದು ಮೈಸೂರೆಂದೆಂಬ ನಾಮವದೊಂದುರುತರ ಧ್ವನ್ಯರ್ಥವಾಗ (ಕಂಠವಿ. ೨-೨೬). [ಧ್ವನಿ + ಅರ್ಥ]

**ಧ್ವನ್ಯಾತ್ಮಕ** (ಗು). ೧. ಧ್ವನಿಯಿಂದ ಕೂಡಿದ. (ನಾ). ೨. ಸೂಚ್ಯವಾದುದು; ವ್ಯಂಗ್ಯಾರ್ಥದಿಂದ ಕೂಡಿದುದು: ಹೇಳಬೇಕಾದ ವಿಷಯ ಎಂಬುದು ಧ್ವನ್ಯಾತ್ಮಕವಾದ ರಸಕ್ಕೆ ಇಲ್ಲವೆ ರಸಾಭಾಸಕ್ಕೆ ಅಂಗವಾಗ ಬಹುದು (ಧ್ವನ್ಯಾಲೋ. ೧೩೪). [ಸಂ.]

**ಧ್ವಸ್ತ** (ಗು). ೧. ಬಿದ್ದ; ಪತನಹೊಂದಿದ. ೨. ನಾಶಹೊಂದಿದ; ಹಾಳಾದ. ೩. ನಾಶಪಡಿಸಿದ; ಭಂಗಪಡಿಸಿದ: ಕವಿಮಲಾನಂದಕರಂ... ಧ್ವಸ್ತತಮಸ್ತಮಂ ಹೃತನಿಶಾಟೋಪನೊಳ್ದೀಗೆ ಗೌತಮಗೋತ್ರಾಂಬುಜ ಷಂಡಚಂಡಕಿರಣಂಗಾದಿತ್ಯನುತ್ಸಾಹವಂ (ಪಂಚತಂ. ೩-೧೩): ಧ್ವಸ್ತದುರಸುರ ಸುರಶಿರಸ್ತಟೋಪರಿಪರಿವ್ಯಸ್ತಪದ ಪದನಖಗಭಸ್ತಿವ್ಯಸ್ತಲೋಕ ... ಸಮಸ್ತ ಶುಭ ಶುಭದಾಯಕ (ಪದ್ಮರಾ. ೩-೧); ಧ್ವಸ್ತಕರಾಲಜಲಂಧರ ಶರ್ವ ಸಮಸ್ತ ಕವಿಸ್ತವಲೋಲ (ಉದ್ಭದೇ. ೩-೭೦). ೪. ಕಳೆದುಹೋದ. (ನಾ). ೫. ಕೆಟ್ಟ ಮಾತು; ನಿಂದೆ: "ಕೆಟ್ಟ ನುಡಿ ಧ್ವಸ್ತಮೆಂಬುದು" (ಹಲಾಯು. ೨೩-೧೪೧); "ಕೆಟ್ಟ ಮಾತು ಧ್ವಸ್ತಮಕ್ಕು" (ಮಂಗರಾ. ೨೬-೨). ೬. ಜಾರಿ ಬಿದ್ದುದು; ಪತನ ಹೊಂದಿದುದು: "ಸ್ರಸ್ತಂ, ಧ್ವಸ್ತಂ, ಭ್ರಷ್ಟಂ, ಸ್ಕನ್ನಂ, ಪನ್ನಂ, ಚ್ಯುತಂ, ಗಳಿತಂ–೭ ಜಾರಿಬಿದ್ದದ್ದು, ಕಳಚಿ ಕೊಂಬುವದು, ತಪ್ಪಿಹೋಗಿರುವದು" (ಸಿದ್ಧಾಂತಿ. ೩೫೧). [ಸಂ.]

**ಧ್ವಸ್ತದಿತಿಜ** (ನಾ). ರಾಕ್ಷಸನನ್ನು ನಾಶಮಾಡಿದವನು; ಅಸುರನನ್ನು ಸಂಹಾರಗೊಳಿಸಿದವನು: ಧ್ವಸ್ತದಿತಿಜಂ ನತಸಮಸ್ತವಿಬುಧಂ ಭುವನ ವಿಸ್ತರಣಪಾದನೆಸೆದಂ ಫಣಿಪತಲ್ಪಂ (ಜಗವಿ. ೦-೫೦). [ಧ್ವಸ್ತ + ದಿತಿಜ]

**ಧ್ವಾಂಕ್ಷ** (ನಾ). ೧. ಕಾಗೆ; ವಾಯಸ: "ಅರಿಷ್ಟಃ, ಕರಟಃ. . .ಧ್ವಾಂಕ್ಷಃ, ಚಿರಂಜೀವೀ, ವಾಯಸಃ – ಈ ೧೦ ಕಾಗೆ" (ಹಲಾಯು. ೪೧-೯೨); "ಕಾಕಂ ಚಿರಾಯು . . . ಧ್ವಾಂಕ್ಷಂ . . . ಕರಟಮೆನೆ ಕಾಗೆ" (ಮಂಗರಾ. ೫೦-೪); ನೀಂ ಧ್ವಾಂಕ್ಷನೆಯಪ್ಪುದಱಿಂದತ್ಯಂತ ಮಾಂಸಭಕ್ಷಣಕಾಂಕ್ಷಿತನುಂ ಸ್ವಭಾವ ಚಪಲನುಮಾಗಿರ್ಪೆ (ಪಂಚತಂ. ೨೫೫-೧೦). ೨. ಬಕಪಕ್ಷಿ: "ಬಕಕಾಕಯುಗಂ ಧ್ವಾಂಕ್ಷಂ" (ವಸ್ತುಕೋ. ೧೨೦-೧೮); "ಬಕದಲ್ಲಿಯುಂ ಧ್ವಾಂಕ್ಷಮೆಂಬುದು" (ಹಲಾಯು. ೧೩೪-೨೧); "ಧ್ವಾಂಕ್ಷಃ – ಕಾಗೆ, ವಿ ಶಾ ನು ತಿ ನ್ನು ವ ಕೊಕ್ಕರೆ" (ಸಿದ್ಧಾಂತಿ. ೪೨೩). ೩. [ವಾಸ್ತು] ಕಟ್ಟಡದ ನಿರ್ಮಾಣ ಕ್ರಮದಲ್ಲಿ ಅನುಸರಿಸಬೇಕಾದ ಎಂಟು ಬಗೆಯ ಆಯ ಪ್ರಕಾರ ಗಳಲ್ಲಿ ಒಂದು; ವಾಯಸಾಯ: ಪಸರಿಸೆ ತರದಿಂ ಧ್ವಜ ಧೂಮ ಸಿಂಹ ಶುನಕೋಕ್ಷಖರಗಜ ಧ್ವಾಂಕ್ಷಂಗಳ್ ದೆಸೆಯಿಂದೆ ಮೂಡಣಾಳ್ಗಂ ದೆಸೆಯಾಯಂ ಶುಭದಮಲ್ಲಿ ಪೆಱವಶುಭಂಗಳ್ (ಲೋಕೋಪ. ೩-೧೯). 'ಧೂಮವಾಯಂ' ಪಾಠ. [ಸಂ.]

**ಧ್ವಾಂಕ್ಷಧ್ವಜ** (ನಾ). ೧. ಕಾಗೆಯ ಚಿಹ್ನೆಯುಳ್ಳ ಪತಾಕೆ; ಕಾಕಧ್ವಜ: ಅಂತು ಯುಗಾಂತ ವಾತಹತ ಕುಲಗಿರಿಯ ನೆಲೆಯಿಂ ತಳರ್ವಂತೆ ತಳರ್ದು ಧ್ವಾಂ[ಪಾಠಾಂ. ದೋ]ಕ್ಷಧ್ವಜಮಂಬರತಳದೊಳ್ ಮಿಳಿರೆ ತನಗಿದಿರು ಬರ್ಪ ರಥಕ್ಕೆ ತನ್ನ ಥಮನಾಸನ್ನಮಾಗೆ ಪರಿಯಿಸಿ (ಪಂಪಭಾ. ೧೨-೧೩೭). ೨. ಕಾಕಧ್ವಜವನ್ನುಳ್ಳವನು; ಕರ್ಣ. [ಧ್ವಾಂಕ್ಷ + ಧ್ವಜ]

**ಧ್ವಾಂಕ್ಷಬಲ** (ನಾ). = ಧ್ವಾಂಕ್ಷಸಂದೋಹ: ಧ್ವಾಂಕ್ಷಬಲಂ ಬೆರಸರಿಜಯ ಕಾಂಕ್ಷೆಯಿಂ (ಪಂಚತಂ. ೨೩೮-೧೭). [ಧ್ವಾಂಕ್ಷ + ಬಲ₂]

**ಧ್ವಾಂಕ್ಷಶತ್ರು** (ನಾ). ಕಾಗೆಯ ವೈರಿ; ಗೂಬೆ: ಧ್ವಾಂಕ್ಷಶತ್ರುವೇ ನಿನ್ನಯ ದಯೆಯಿಂ ಗಾಣಬಿಜ್ಜೆಯೊಳಿನಿತಂ ಬಲ್ಲಿದನಾದೆಂ (ಅದ್ಭುತ. ೨೫-೧೧). [ಧ್ವಾಂಕ್ಷ + ಶತ್ರು]

**ಧ್ವಾಂಕ್ಷಸಂದೋಹ** (ನಾ). ಕಾಗೆಗಳ ಗುಂಪು,–ಸಮೂಹ: ಕುಸುರಿಗರುಳಿಂ ದುದಿರುವಡಗಿನ ಬಸಗೆ ಬಂದೆಱಗಿದವುಲೂಕಧ್ವಾಂಕ್ಷಸಂದೋಹ (ಕುಮಾಭೀ. ೪-೪೫). [ಧ್ವಾಂಕ್ಷ + ಸಂದೋಹ]

**ಧ್ವಾಂಕ್ಷಾರಾತಿ** (ನಾ). = ಧ್ವಾಂಕ್ಷಶತ್ರು: "ಉಲೂಕಃ, ಕೌಶಿಕಃ, ಧ್ವಾಂಕ್ಷಾರಾತಿಃ, ನಿಶಾಟನಃ – ಈ ೪ ಗೂಗೆ" (ಹಲಾಯು. ೪೧-೯೩). [ಧ್ವಾಂಕ್ಷ + ಆರಾತಿ]

**ಧ್ವಾಂತ** (ನಾ). ೧. ಕತ್ತಲೆ; ಅಂಧಕಾರ: "ತಿಮಿರಂ ಸಂತಮಸಂ ಧ್ವಾಂತಮಂಧಕಾರಂ ತಮಂ ತಮಿಸ್ರಮದಕ್ಕುಂ" (ವಸ್ತುಕೋ. ೧೧-೬೩); "ತಿಮಿರ ಮವನಿಚ್ಛಾಯೆಯಂಧಕಾರಂ ಧ್ವಾಂತಮರ್ದ ಕತ್ತಲೆಯೆನಿಕು" (ಮಂಗರಾ. ೫೦-೮); ಪಸರಿಸಿದ ಕುತೀರ್ಥ ಧ್ವಾಂತಮಂ ತೂಳ್ದಿ ಭವ್ಯಪ್ರಸರಕಮಲ ಬೋಧಾವಾಪ್ತಿಯಂ ತಾಳ್ದಿ (ಅಜಿಪು. ೧-೧೬); ಪೊಕ್ಕಳಾ ಕನ್ನೆಯುಮವ ನಿತಲಾಲಿಂಗಿತಾನೇಕಶಾಖಾಜನಿತಧ್ವಾಂತಾಂತರಾಲ ಪ್ರಬಲವಟಮನೇಗಿಯ್ಯ ಮುದ್ವೇಗವೇಗಂ (ಪಂರಾಮಾ. ೮-೭); ಚಕ್ರರವಿ ದೈತ್ಯಧ್ವಾಂತಮಂ ಗೆಲ್ದ ಭೂಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮಂ (ಜಗವಿ. ೧-೧); ಪರಮತಧ್ವಾಂತ ಪ್ರಚಂಡಭಾಸ್ಕರಂ (ಪದ್ಮರಾ. ೧-೨೦); ಬಳಿಗುಂ ತತ್ಕ್ಷಣ ಶಾಂತಸಾಂಧ್ಯರುಚಿವಹ್ನಿಜ್ವಾಲಧೂಮ್ಯಂ ಸಮುಜ್ಜ್ವಳ ಸಂಧ್ಯಾಂಶುರಸಾಲಪಲ್ಲವನವಗ್ರಾಸಾತಿ ಮೇದಸ್ವಿ ಕೋಕಿಳಿಬ್ಬಂದಂ ರಜನೀಮುಖಾರುಣನವಾಸೃಕ್ಪಾನದೃಪ್ಯಾಸುರಾವಳಿ ತಾನೆಂಬಿನಮುರ್ಬಿ ಜರ್ಬಿ ಜಗಮಂ ಧ್ವಾಂತಂ ಸಮಂತನ್ನೆಗಂ (ಚಕವಿ. ೬-೧೧). ೨. ಒಂದು ನರಕದ ಹೆಸರು: ರೌರವ ಧ್ವಾಂತ ಶೀತ . . . ಕಾಲಸೂತ್ರಗಳೆಂಬುವೇ ಎಂಟು ನರಕಂಗಳು (ವಿವೇಕ. ೧೭೪). [ಸಂ.]

**ಧ್ವಾಂತಧ್ವಂಸಿ** (ನಾ). ಕತ್ತಲೆಯನ್ನು ನಾಶ ಮಾಡುವವನು; ಸೂರ್ಯ. [ಸಂ. ಧ್ವಾಂತಧ್ವಂಸಿನ್]

**ಧ್ವಾಂತಬಂಧ** (ನಾ). ಕತ್ತಲೆಯ ಕಟ್ಟು: ದಿನಕರಕರನಿಕರಂಗಳ್ ಘನವಿವರ ಪ್ರಸರಮಾಗಿಯುಂ ತಮ್ಮಂ ಕಂಡನಿತಱೊಳೆ ತೆರಳ್ದಿನ್ನಾ ಮನೋಗತಧ್ವಾಂತ ಬಂಧಮಳಱತ್ತಲ್ಲಂ (ಕವಿರಾ. ೩-೬೫). [ಧ್ವಾಂತ + ಬಂಧ]

**ಧ್ವಾಂತವಿಧ್ವಂಸನ** (ಗು). ೧. ಕತ್ತಲೆಯನ್ನು ನಾಶಮಾಡುವ: ರಿಪುದುರ್ಗ ಧ್ವಾಂತವಿಧ್ವಂಸನಖರಕರನೀ ಬಂದನೀ ಬಂದನೆನ್ನೋರ್ವಿಗರ್ವೋರ್ವೀಧ್ರ ಸಂಭೇದನಪವಿಧರನೀಬಂದನೀಬಂದನು (ರಾಜಶೇ. ೬-೧೭). (ನಾ). ೨. ಕತ್ತಲೆಯನ್ನು ನಾಶಮಾಡುವವನು. ೩. ಸೂರ್ಯ. ೪. ಚಂದ್ರ. [ಧ್ವಾಂತ + ವಿಧ್ವಂಸನ]

**ಧ್ವಾಂತಹರ** (ನಾ). ೧. ಕತ್ತಲೆಯನ್ನು ನಾಶಮಾಡುವವನು; ಸೂರ್ಯ. ೨. ಚಂದ್ರ: "ಧ್ವಾಂತಹರಂ ದ್ವಿಜರಾಜನರ್ಣವಪ್ರಿಯತನಯಂ" (ವಸ್ತುಕೋ. ೧೨-೬೮). [ಧ್ವಾಂತ + ಹರ₂]

**ಧ್ವಾನ** (ನಾ). ಧ್ವನಿ; ಶಬ್ದ; ನಾದ: "ಹ್ರಾದಃ, ನಾದಃ . . . ಧ್ವಾನಃ . . . ಘೋಷಃ–ಈ ೮ ಧ್ವನಿ" (ಹಲಾಯು. ೨೩-೦೩೭); ರೋದೋಂತರ್ಭಾಗ ದೊಳ್ ದುಂದುಭಿಗಳೆಸೆಯೆ ಮಾಂಗಲ್ಯಗೀತಪ್ರಣಾದಂ ವಾದಿತ್ರಧ್ವಾನ ದೊಳ್ . . . ತಳರ್ದಂ ರಾಗದಿಂ ಸಾರ್ವಭೌಮಂ (ಆದಿಪು. ೧೧-೧೪); ಚಕಿತೋದ್ಯತ್ಪಕ್ಷಿಪಕ್ಷಸ್ವನದೊಳಮರ್ದ ಕೋಳಾಹಳಧ್ವಾನದಿಂ . . . ವಿಂಧ್ಯಂ ನಡುಗೆ (ಕಾದಂಪೂ. ೧೫೩); ಆಗಳಖಿಳ ಜಯಜಯಧ್ವಾನಮೊದವೆ (ಪಂರಾಮಾ. ೧೧-೩೪ ವ); ಅತಿಧ್ವಾನದಿಂದೆಬ್ಬಿಸಿದಳಬ್ಬರಿಸಿ ಗಂಡಸಂ ಮನೆಯೊಳೊಱ ಗಿರ್ದವರನು (ಸಿದ್ಧರಾ. ೨-೧); ಉಲಿವುತಿರ್ದುದು ಜಯಜಯಧ್ವಾನದಲಿ ಸುರಕಟಕ (ಕುಮಾರ. ೬-೨೦೧); ಓ ಲಕ್ಷ್ಮಣಾ ಓ! ಎಂಬಾ ಮಹಾ ಧ್ವಾನಮಸುರನುಸಿರಿಂದುರ್ಕಿ ರೋದಿಸಿತು (ಶ್ರೀರಾಮಾ. ೨೩೮-೨೬೭). [ಸಂ.]

**ಧ್ವಾನಿತ** (ಗು). ಸದ್ದುಮಾಡಿದ; ಶಬ್ದವನ್ನುಂಟುಮಾಡಿದ: ಧ್ವಾನಿತ ದೇವದುಂದುಭಿರವಂ . . . ಒಪ್ಪಿದುದು ರಾಜಿತ ರಾಜಗೃಹಾಂತರಾಳ ದೊಳ್ (ಶಾಂತಿಪು. ೬-೭೪). [ಸಂ.]

# ನ



**ನ** (ನಾ). ೧. ಕನ್ನಡ ವರ್ಣಮಾಲೆಯ ನಲವತ್ತನೆಯ ಅಕ್ಷರ: ವ್ಯಂಜನಗಳು :–ವರ್ಗೀಯ : ಕ ಖ ಗ ಘ ಙ . . . ತ ಥ ದ ಧ ನ (ಕೈಪಿಡಿ. ೩). ೨. ಶೂನ್ಯದ ಸಂಕೇತ ; ಸೊನ್ನೆ : "ನಿರುತದಿಂ ಕಟಪ[ಯ] ಮೆನಲೊಂದು . . . ಅಙ ಞ ಥ ಳವೊಂಬತ್ತು ನಂ ಸೊನ್ನೆಯಿಂತಿ ವಕ್ಷರಸಂಜ್ಞೆಯಕ್ಕು" (ಮಂಗರಾ. ೧೧೪–೧೧). ೩. [ಛಂದ] ಅಕ್ಷರಗಣ ಗಳಲ್ಲಿ ಒಂದು ; ಮೂರು ಲಘುಗಳುಳ್ಳ ಗಣ ; ನಗಣ (ᑌ ᑌ ᑌ) : ಮಯರಸತಜಭನಲಗವಿನಿಚಯಮೆಂಬಿವು ನಿಯಮದಿಂ ಗಣಾಕ್ಷರಮಕ್ಕುಂ (ಛಂದೋಂಬು. ೧–೩೭) ; "ಯಮಾತಾರಾಜಭಾನಸಲಗಂ" ಎಂಬ ಸೂತ್ರದಲ್ಲಿ, ಕ್ರಮವಾಗಿ ಮೂರು ಮೂರಕ್ಷರಗಳನ್ನು ತೆಗೆದುಕೊಂಡರೆ ಮೊದಲನೆ ಯಕ್ಷರವು ಗಣದ ಹೆಸರನ್ನು ಸೂಚಿಸುವುದು (ಕೈಪಿಡಿ. ೭೦).

**ನಂಗಮ್ಮ** (ನಾ). ಒಬ್ಬಾತನ ಹೆಸರು : ಗೆದೆಯ ಪನ್ನೆರಡಱ ನಾಱ್ಗಾವುಣ್ಡ ಸೀಬಳ್ಳಿಯೆಱಹಯ್ಯನ ಜೇಷ್ಠಪುತ್ರ ನಂಗಮ್ಮನ ಮಗ ಜೋಗಯ್ಯಂಗೆ ದಯಗೆಯ್ದು ಕೊಟ್ಟ ಸ್ಥಿತಿ (ಎಕ. VIII, ಸೊರಬ. ೪೭೭–೧೮ ; 991).

[ ? + ಅಮ್ಮ$_1$ ]

**ನಂಗರಿ** 'ನಾಂಗರಂ$_1$' ನೋ.

**ನಂಗರು** 'ಲಂಗರು' ನೋ.

**ನಂಗಲಿ** (ನಾ). ಒಂದು ಊರಿನ ಹೆಸರು : ನಙ್ಗಲಿಯ ಸೆಟ್ಟಿಯಂ ಪೆತ್ತದ ಕೆಱೆಯ × × × ಳಗೆ ಮಾತಗೆ ದೇವಭೋಗಮ್ ಪದಿಕೊರ್ಳ ಕಳನ್ ಇಱಿಸಿದೊಮ್ (ಮೈಆರಿ. ೧೯೨೩, ೫೩–೪ ; 788) ; ವಿಷ್ಣುವರ್ಧನ ಹೊಯ್ಸಳದೇವರು ಮೂಡಲ ನಂಗಲಿಯ ಪಡಿಯಗಟ್ಟಂ . . . ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರ್ದ್ದು (ಎಕ. V, ಹಾಸನ. ೧೦೨–೧೨ ; 1123) ; ತಳಕಾಡು ಗಂಗವಾಡಿ ನೊಳಂಬವಾಡಿ ಕೊಂಗು ನಂಗಲಿ ಕೊಯತೂರ್ತ್ತರೆಯೂರುಚ್ಚಂಗಿ . . . ಎಂದಿವು ಮೊದಲಾಗೆ ಪಲವು ದುರ್ಗಗಳಂ ಕೊಂಡು (ಎಕ. II, ೩೮೪–೧೨; 1128) ; ಕೊಂಗು ನಂಗಲಿ ಬನವಸೆ . . . ಯಿಂತೀ ಸಮಸ್ತದುರ್ಗಂಗಳ . . . ಕೊಂಡು (ಎಕ. VII, ಶಿವಮೊ. ೪೦–೫೩ ; 1180). [ ? ]

**ನಂಗಲ್ಲು** 'ಲಂಗರು' ನೋ.

**ನಂಗಿಲು** (ನಾ). ಅಂಗುಳಿನ ಹಿಂಭಾಗದಲ್ಲಿ ಇಳಿಬಿದ್ದಿರುವ ಮಾಂಸದ ತುಂಡು ; ಕಿರುನಾಲಗೆ : ಮೆತು ಅಂಗುಳಿನ ಹಿಂದಕ್ಕೆ ಸಡಿಲವಾಗಿ ನಡುವೆ ಚಾಚಿಕೊಂಡಿರುವುದು ನಂಗಿಲು (ಕಿರ್ನಾಲಗೆ) . . . ಗೊರಕೆಯ ಸದ್ದಾಗುವಾಗ ನಂಗಿಲು ಕಂಪಿಸುತ್ತದೆ (ಕವಿಕೋ. I, ೬೦). [ ? ]

**ನಂಚು$_1$** 'ನಂಜು$_1$' ನೋ.

**ನಂಚು$_2$** (ಕ್ರಿ). (ಕರಾ) ನಂದಿಸು : ಆರಿಸು : ದೀಪ ನಂಚಿ ಮಲಗಿರಿ, ಮಧ್ಯರಾತ್ರಿಯಾಯಿತು (ಋಢಿ). [<ನಂದಿಸು$_1$ ]

**ನಂಜ$_1$** (ನಾ). ೧. ನಂಜುಳ್ಳವನು ; ವಿಷವನ್ನುಂಡವನು ; ನಂಜುಂಡ ಶಿವ. ೨. ಒಬ್ಬಾತನ ಹೆಸರು. 'ನಂಜಯ್ಯ' ಪರಾ.

ನಂಜನ **ಗೂಡು**, ನಂಜಲುಗೂಡು = ಮೈಸೂರು ಜಿಲ್ಲೆಯ ಕಪಿಲಾ ನದಿಯ ತೀರದಲ್ಲಿರುವ ಒಂದು ಪವಿತ್ರ ಕ್ಷೇತ್ರ : ನಂಜನಗೂಡ್ನಾದೀಲಿ ಕಲ್ಲಿಲ್ಲ ಮುಳ್ಳಿಲ್ಲ (ನಾಡಪ. ೧೦೧) ; ನಂಜಲುಗೂಡ ನಂಜುಂಡೇಶ್ವರ ದೇವರ ಸಮೀಪದಲಿ ನೆಲಸಿದ ವೀರಭದ್ರದೇವರ ಕಲ್ಲುಮಂಟಪದಲ್ಲಿ ನಿವಾಸಿ ಮಠದ ಧರ್ಮಕ್ಕೆ ನಡದುಬಹ ಮಹತ್ತಿನ ಆರೋಗಣೆಯ ಸಯಿದಾನಂ ಮಾಡಿ ಕೊಟ್ಟ ಗ್ರಾಮದ ಧರ್ಮಶಾಸನದ ಕ್ರಮವೆಂತೆಂದರೆ (ಎಕ. III (R), ಗುಂಡ್ಲುಪೇ. ೭೭–೬ ; 1476); ಪ್ರಧಾನ ದೇವರಾಜಯಗಳ ನಂಜಲುಗೂಡಲು ಮಾ × ಸಿ × × ×ಯ ನಂಜರಾಯಗಳು ಕೊಟ ಗ್ರಾಮ (ಎಕ. III (R), ನಂಜನ. ೨೭೩–೩೦ ; 1488). [ ನಂಜು$_2$ + – ಅ$_7$ ]

**ನಂಜ$_2$** 'ನಂಜೆ' ನೋ.

**ನಂಜನೆಲ** 'ನಂಜೆನೆಲ' ನೋ.

**ನಂಜಪ್ಪ** (ನಾ). = ನಂಜ$_1$ ೧ : ನಂಜಪ್ಪ ಬೆಳೆದನೆ ನಂಜುಬಟ್ಟಲ ಹೂವ (ನಾಡಪ. ೦೦೦). [ ನಂಜ$_1$ + ಅಪ್ಪ$_1$ ]

**ನಂಜಯ** 'ನಂಜಯ್ಯ' ನೋ.

**ನಂಜಯ್ಯ, ನಂಜಯ** (ನಾ). ೧. = ನಂಜ$_1$ ೧ : ನಂಜಯ್ಯ ಸೋತನು ಚಾಮುಂಡಿ ಗೆದ್ದಳು (ನಾಡಪ. ೦೦೨). ೨. ಒಬ್ಬಾತನ ಹೆಸರು : ನಂಜಯ್ಯನು ಬಸವರಾಜದೇವರನು ಪ್ರತಿಷ್ಠೆಯನು ಮಾಡ್ಸಿ (ಎಕ. IV (R), ಚಾಮರಾ. ೩೯೨–೬ ; 1487). **ನಂಜಯ :** ೨. ನಂಜಯ ಧರ್ಮವ ಬರಿಸಿದ (ಎಕ. III (R), ನಂಜನ. ೯೦–೨ ; 1432) ; ಸಾಲಿಗಾಮಿಯ ಪಂಡಿತ ಮಾದಿರಾಜರು ಬರೆದ ಶಾಸನ ಕಲುಕುಟಿಗ ದೇವೋಜ ಮಾಡಿದ ರೂವಾರಿ ನಂಜಯ (ಮೈಆರಿ. ೧೯೨೭, ೪೯–೧೩ ; ? ). [ನಂಜ$_1$ + ಅಯ್ಯ$_1$]

**ನಂಜವಟ್ಟಲು** 'ನಂದಿಬಟ್ಟಲು' ನೋ.

**ನಂಜಾರೆ** (ನಾ). ಒಂದು ಬಗೆಯ ಗಿಡ ; ಸುರಸೆ : "ನಾಕುಲೀ, ಸುರಸಾ . . . ಹಾವುಕಣ್ಣಿನ ಗಿಡ, ನಂಜಾರೇಗಿಡ, ಮುಂಗೀವೋವುಗಿಡ" (ಸಿದ್ಧಾಂತಿ. ೦೩೮). [ ? ]

**ನಂಜಿಡಿ** (ಕ್ರಿ). ೧. ವಿಷದಿಂದ ಕೂಡಿರು, – ತುಂಬಿರು : ನೀನೆಲಗೆ ! ನಂಜಿಡಿದ ಪಾವಂತೆ ಮೋಸದಿನಡಂಗಿರ್ದು ಮನೆಯೊಳ್, ಗುಟ್ಟಿನೊಳೆ ನೆತ್ತರನ್ ಪೀರ್ದಳೇ ! (ಅಂತಿಗೊ. ೨೪–೫೦೭). ೨. (ಆಲಂ) ದ್ವೇಷದಿಂದ ತುಂಬಿರು ; ಮತ್ಸರದಿಂದ ಕೂಡಿರು : ಮೆಱೆವ ದಂಪತಿಗಳಭಿನವಿಸೆ ಮಂಜರಂ ಮಱಿಗಿಳಿಗಳಂ ನಿರೀಕ್ಷಿಸುವಂತೆ ನಂಜಿಡಿದ ಮನದವಾತ್ಯಂ ನೋಡಿ ತನ್ನ ಸುತನಂ ಬೈಯುತಿಂತೆಂದನು (ಜೈಮಿಭಾ. ೩೧–೩೨).

[ ನಂಜು$_2$ + ಇಡಿ$_2$ ]

**ನಂಜಿಡು** (ಕ್ರಿ). ವಿಷವನ್ನು ಬೆರಸು,–ಸೇರಿಸು : ಸಲ್ಲಲಿತವಹ ಪುಣ್ಯಕಾವ್ಯ ಕಥನದೊಳು ಮುನ್ನಿಲ್ಲದುದ ನುಡಿದುಳ್ಳುದಂ ಪೂಳ್ದು ಹುಲ್ಲುಹೊಲನೆಲ್ಲವಂ ಪೊಗಳಿ ಸುಧೆಯೊಳಗೆ ನಂಜಿಡುವಂತೆ ಮೇಳವಿಸಿ ಪೇಳೆ (ಸಿದ್ಧರಾ. ೧–೫).

[ ನಂಜು$_2$ + ಇಡು$_1$ ]

**ನಂಜಿನಕೊರಡು** (ನಾ). ವಿಷಫಲಗಳನ್ನು ಕೊಡುವ ಒಂದು ಬಗೆಯ ಮರ ; ವಿಷವೃಕ್ಷ ; ಕಾಸರ್ಕ : ನಂಜಿನಕೊರಡು, ಕಾಸರ್ಕನ ಮರ, ವಿಷಮುಷ್ಟಿ, ಇಟ್ಟೆ (ಮೈಜಿಗಿ. ೭೩–೧೪೮೩), ಹಂಬುಕಳ್ಳಿ. ನಂಜಿನಕೊರಡು, ಸಮುದ್ರಪಾಲ, ಕಾಚಿ, ಬದನೆ, ಉರುಳಗಡ್ಡೆ (ನಮ್ಮನು. ೨೩೮).

[ ನಂಜು$_2$ + ಕೊರಡು? ]

**ನಂಜಿಲಿ** (ನಾ). ವಿಷಯುಕ್ತವಾದ ಒಂದು ಬಗೆಯ ಇಲಿ : ಧರೆಯೊಳ್ ನಂಜಿಲಿ ನಲ್ಲಿಱುಂಪೆ ಮೊದಲಾದೆಲ್ಲಂ ವಿಷಗ್ರಾಹಿಗಳ್ (ಖಮದ. ೧–೭೯).

[ ನಂಜು$_2$ + ಇಲಿ$_1$ ]

**ನಂಜು₁, ನಂಚು₁, ನೆಂಚು, ನೆಂಜು** (ಕ್ರಿ). (ಊಟದೊಂದಿಗೆ ರುಚಿಗಾಗಿ ಉಪ್ಪಿನಕಾಯಿ, ಪಲ್ಯ, ಗೊಜ್ಜು, ಚಟ್ನಿ ಮುಂತಾದುವನ್ನು) ಸ್ವಲ್ಪ ಸ್ವಲ್ಪ ತಿನ್ನು, – ನೆಕ್ಕು, – ಬಾಡಿಸಿಕೊಳ್ಳು: "ನಂಜು–ಈಷಲ್ಲೇಹನೇ (ನಂಚಿಕೊ), ವಿಷೇ ಚ" (ಶಮಧಾ); ಸವಿವ ವಸ್ತುವನುಂಬ ವಸ್ತುವ ಕುಡಿವ ನಂಜುವ ಸುರಿವವುಳವಸ್ತುಗಳ ಅವನೀಶಗರಸಿಯರಿಗೆ ಬಡಿಸಿದರು (ಭರತೇ. ४-೪೦); ಮುಂಜುಮುಳಿ ಬರ ಲೇಸು ಪಂಜು ಇರುಳಲಿ ಲೇಸು ನಂಜುತ್ತ ಲುಣುವ ಹಾದರದ ಕಳ್ಳಂಗೆ ಬಂಜೆ ಲೇಸು (ಸರ್ವಜ್ಞ. ೧೭೪೦); ಎಲ್ಲರೂ ... ಉಪ್ಪಿನಕಾಯಿ ತರಿಸಿಕೊಂಡು, ನಂಜುತ್ತಾ ಹಿಗ್ಗಿನಿಂದ ಊಟ ಮಾಡಿದರು (ಕುಡಿಕೂ. ೩೩೭). **ನಂಚು₁**: ನಂಚುವುದಕ್ಕೆ ಹುಚ್ಚೆಳ್ಳಿನ ಚಟ್ನಿ ಬಿಟ್ಟು ಇನ್ನೊಂದನ್ನು ಕಾಣ (ದಾನಚಿಂ. ೪೪). **ನೆಂಚು**: ನಿಂಬೆಯ ಹಣ್ಣಿನ ಹುರಿಹಣ್ಣ ನೆಂಚುತ (ಜ್ಞಾನಚಿ. ೩೯–೧೪೩). **ನೆಂಜು**.

**ನಂಜಿಕೊಳ್ಳು, ನಂಚಿಕೊಳ್ಳು, ನೆಂಜಿಕೊಳ್ಳು** = (ಊಟದೊಂದಿಗೆ ವ್ಯಂಜನಸಾಮಗ್ರಿಯನ್ನು) ಸ್ವಲ್ಪ ಸ್ವಲ್ಪ ತಿನ್ನು; ಬಾಡಿಸಿಕೊಳ್ಳು: ಊಟದಲ್ಲಿ ನಡುನಡುವೆ ಉಪ್ಪಿನಕಾಯಿಯನ್ನು ನಂಜಿಕೊಂಡರೆ ಅದೆಂತಹ ಸ್ವಾರಸ್ಯ! (ನಾಣ್ಣುಡಿ. ३४); ಅದರೊಡನೆ ನಂಜಿಕೊಳ್ಳಲು ವ್ಯಂಜನ ಸಾಮಗ್ರಿ ಬೇಡವೇ? (ನಂಟರು. ೧೧೯); ನಂಜಿಕೊಳ್ಳಲು ಮಧ್ಯಾಹ್ನದ ಪಲ್ಯವಿತ್ತು (ಧೂಮಮ. ೧೦೦); "ಅವದಂಶಃ, ಉಪದಂಶಃ ... ಭೋಜನದಲ್ಲಿ ಬಾಡಿಸಿಕ್ಕೊಂಬುವ ಉಪ್ಪಿನಕಾಯಿ ಮೊದಲಾದವುಗಳು. ನಂಚಿಕೊಳ್ಳತಕ್ಕದ್ದು" (ಸಿದ್ಧಾಂತಿ. ३೭४); ನೆಂಜಿಕೊಳ್ಳುವುದಕ್ಕೆ ತಾಳದ ಆದರೆ ಆಗಬಹುದು (ನನ್ನೂರು. ೫೭). [ದೇ.॥ ತೆಲು. ನಂಜು, ನಂಚು]

**ನಂಜು₂** (ನಾ). ೧. ವಿಷ; ಗರಳ: "ಗರಲಂ ನಂಜು ವಿಷಂ" (ವಸ್ತುಕೋ. ೧೯–೮); "ಬಿಸದೊಳೀಷಲ್ಲೇಹನದೊಳು ನಂಜೆಂದೆಂಬ ಶಬ್ದ ಸಲ್ಗುಂ ಸತತಂ" (ಶಬ್ದಮಂ. ೪೪); ಬಾಯ್ವಿಟ್ಟೊಡನೆ ಕಿಟಿಕಿಟಿದೆ ನಂಜನೂಡಿ ಬಟ್ಟಿ ಬಳೆದೊಡಾಹಾರದೊಳೊಡಲ್ ತಗುಳ್ದೊಂ (ವಡ್ಡಾರಾ. ೧೪೬–३೪); ಇನಿಯವು ಮೊದಲೊಳ್ ನಂಜಿನ ಪನಿವೊಲ್ ಬಟ್ಟಿಕೆಯ್ದೆ ಮುಳಿದು ಕೊಂದಿಕ್ಕುವುವು (ಆದಿಪು. ೧೪–೧३೫); ಸುಯೋಧನಂ ... ಮನದೊಳಾ ದೇವದಿಂ ದೇವಕೀನಂದನನ ಮೇಲೆವಾಯ್ವುದುಂ ನಂಜಿನ ಮೇಲೆವಾಯ್ವ ನೊಟವಿನಂತುರುಳ್ತರೆ ಪಾಯ್ದುಂ (ಪಂಪಭಾ. ೯–೫೯ ವ); ಯದುಕುಲ ಜಲನಿಧಿಯೊಳ್ಪುಟ್ಟಿದೆಯಮರ್ದುಂ ನಂಜುಮೊಡನೆ ಪುಟ್ಟುವವೋಲ್ (ಗದಾಯುಂ. ೭–೫೭); ಅವಳ ವಚನ ಬೆಲ್ಲದಂತೆ ಹೃದಯದಲ್ಲಿಪ್ಪುದು ನಂಜು ಕಂಡಯ್ಯಾ (ಬಸವ. ೧೦೦); ಗಾಳಿಯಳ್ಳಿಯನಿಟಿಯಲಗ್ನಿಜ್ವಾಲೆಯಲಿ ತಟ್ಟಿಯುವೆ ಕಡುಹಿನ ಕಾಳಕೂಟದ ನದಿಗೆ ನಂಜಿನ ಹೊನಲು ಬೆರೆಸಿದರೆ ವಾಳೆಯುವೆ (ಕುಮ್ಮಾಸ. ೧೪–೬೧); ನಂಜಿಗೆ ಮದ್ದಿಲ್ಲ, ಬಂಜೆಗೆ ಮಕ್ಕಳಿಲ್ಲ (ಗಾದೆ). ೨. ವಿಷವನ್ನುಳ್ಳುದು; ಹಾವು; ಸರ್ಪ: ಕಂಜಸಂಭವಪಿತನು ಬಂದನು ನಂಜಿನಲಿ ಪವಡಿಸುವ ಬಂದನು (ಕುಮ್ಮಾಉ. ೮–೫೧). ೩. ರಕ್ತವು ವಿಷಪೂರಿತವಾಗಿರುವಿಕೆ, – ಕಲ್ಮಷಯುಕ್ತವಾಗಿರುವಿಕೆ: (ಶ). ೪. ಕಷ್ಟ; ಹಿಂಸೆ; ತೊಂದರೆ: ನಂಜು ನಿನಗದು ಲಿಂಗಮುದ್ರೆ ಸುರಂಜಿಸುವ ಕುಲ ಬೇಡ ನಾನಿದಕಂಜುವವನಲ್ಲ (ಬಸವಪು. ३೭–३೬). ೫. ಮಾನಸಿಕವಾದ ಅಶಕ್ತತೆ, – ನಿಸ್ಸತ್ವ: (ಶ). ೬. (ಮಾತಿನಲ್ಲಿಯ) ಕೊಂಕು; ಅಸೂಯೆ; ಅಹಿತ: ಅವಳ ಮಾತಿನಲ್ಲಿ ಬರೀ ನಂಜೇ ತುಂಬಿದೆ (ರೂಢಿ).

**ನಂಜಾಗು** = ೧. ವಿಷಪ್ರಾಯವಾಗು; ವಿಷವಾಗು: ನೆಲನೆ ಬಾಯ್ದೆಱೆದಪ್ಪುದು ಆಕಾಶಂ ಮೇಗೆ ಕವಿದಪ್ಪುದು ಗಾಳಿಯೆ ನಂಜಾದುದು (ಶಾಂತಿಪು. ೭–೪೪ ವ); ನಾರಿ ತನ್ನ ಮನೆಯಲ್ಲಿ ಕಳುವೊಡೆ ತಾಯ ಮೊಲೆವಾಲು ನಂಜಾಗಿ ಕೊಲುವೊಡೆ ಇನ್ನಾರಿಗೆ ದೂಱುವೆನಯ್ಯಾ (ಬಸವ. ३೬); ಮೊಲೆವಾಲುಂ ನಂಜಾದೊಡೇನಂ ವಿಚಾರಿಪೆಂ (ವಾಗೀರ. ದೇ. ३೭೧–೭). ೨. ವಿರೋಧವಾಗು; ಪ್ರತಿಕೂಲವಾಗು; ವಿಷಮಿಸು: ಸ್ವರವು ಕೋಗಿಲೆಯೆಂದು ಮೌನವ ಧರಿಸಿ ... ಕುರುಳು ಮಧುಕರಗಳೆಂದಳವಳಿದು ಹೆದಱುವಳರಸಿಗಾದುದು ತನ್ನ ತನು ನಂಜಾಗಿ ವಿರಹದಲಿ (ಜೀವಂಚ. ೧೦–೩೪); ಹೆಚ್ಚು ಅಳಬೇಡ ನಂಜಾದೀತು (ಕುಸುಸಂ. ३೩೩); ಇಂದಿನ ಇಂದುವಿನ ಮೇಲೆ ಹಿಂದಿನ ಕರಿನೆರಳು ಮುಂದಿನ ಭಯ ನಂಜಾಗಿರೆ ಇಂದು ಕಂದುಗೊರಳು! (ಕಲ್ಲೋಲ. ೬೦–೩); ತೆಂಗಿನ ಮರದ ಹಸಿಗೊದಮಟ್ಟೆಗಳನ್ನು ಕಡಿದರೆ ಗಿಡಕ್ಕೆ ನಂಜಾಗುತ್ತದೆ (ರೂಢಿ). ೩. (ಗಾಯ ಮೊದಲಾದುವುಗಳು ಕೊಳೆತು ಕೀವು ತುಂಬಿ) ವಿಷಪ್ರಾಯವಾಗು: ಗಾಯ ನಂಜಾಗಿ ಊದಿಕೊಂಡಿದೆ (ರೂಢಿ). 'ನಂಜುರೋದಕ' ಪರಾ.

**ನಂಜಿನ ಸುಳಿ** = ವಿಷವೃತ್ತ; ವಿಷಚಕ್ರ; ಅನ್ಯೋನ್ಯಾಶ್ರಯವುಳ್ಳ ದೋಷ; ಒಂದನ್ನೊಂದು ತೀವ್ರಗೊಳಿಸುವ ಕ್ರಿಯೆಪ್ರತಿಕ್ರಿಯೆಗಳ ವ್ಯೂಹ: ಉತ್ಪನ್ನ ಹೆಚ್ಚಾದಂತೆ ಕೆಲಸಗಾರರ ನಿರುದ್ಯೋಗತನ ಇನ್ನೂ ಬೆಳೆಯುವದು ... ಇದರಿಂದ ಉತ್ಪಾದನೆಯ ಗತಿಯು ಇನ್ನೂ ಮುಂದವಾಗಿ ನಿರುದ್ಯೋಗಿತನ ಇನ್ನೂ ಬೆಳೆಯುತ್ತದೆ. ಇದೊಂದು ನಂಜಿನ ಸುಳಿ (ಮೂವಾದ. ೧೩३). ᑭ ಇದು ಇಂಗ್ಲಿಷಿನ Vicious circle ಎಂಬುದರ ಅನುವಾದ.

**ನಂಜಿನುರುಳಿ** = ವಿಷದ ಗುಳಿಗೆ: ಕಾಂತೆಯರ ಮೆಲ್ನುಡಿಯುಂ ನಂಜಿನುರುಳಿಯೆನ್ನದೆ ಮುದ್ದುನುಡಿಯೆಂದೊಡಂ ... ತನ್ನ ಕೇಡಂ ಬಗೆವನಲ್ಲದೆ ಸುಖಮಂ ಬಗೆಯಂ (ಧರ್ಮಾಮೃ. ೭–೧೫೫). **ನಂಜಿನೊಡೆಯ** = ಹಾವುಗಳ ಒಡೆಯ; ಆದಿಶೇಷ: ನಂಜಿನೊಡೆಯನ ಮೇಲೆ ಮಲಗಿ ತಮದೊಳ್ ಪರಂಜ್ಯೋತಿಮಯನಾಗಿ ಬೆಳಗುವನ ಚರಣಕಂಜವ ಭಜಿಸು ಕಂಡ್ಯ ಮನವೆ (ಪುರಂದ. ೫–೧೦೭–३). **ನಂಜು ಕಾರು** = ಕರುಬು; ಹೊಟ್ಟೆಕಿಚ್ಚು ಪಡು: ನೆರೆಹೊರೆಯವರನ್ನು ನೋಡಿ ನಂಜುಕಾರೋದೇ ಅವರ ಸ್ವಭಾವ (ರೂಢಿ). **ನಂಜುನುಡಿ** = ಚುಚ್ಚುಮಾತು; ಕರುಬಿನ ಮಾತು; ಮಾತ್ಸರ್ಯದ ಮಾತು: ಕೆಲವರು ನಂಜುನುಡಿಗಳನ್ನಾಡಿ ಬೇರೆಯವರ ಮನಸ್ಸನ್ನು ನೋಯಿಸುವುದರಲ್ಲಿ ಸಂತೋಷಪಡುತ್ತಾರೆ (ರೂಢಿ).

[ದೇ.॥ ತಮಿ. ನಞ್ಚು; ಮಲ. ನಞ್ಚು; ತುಳು. ನಂಜು, ನಂಜಿ; ಪರ್ಜಿ. ನೆಂಜಿ]

**ನಂಜುಂಡ** (ನಾ). ೧. ವಿಷವನ್ನು ಕುಡಿದವನು; ವಿಷಕಂಠ; ಶಿವ; ᑭ ಸಾಮಾನ್ಯವಾಗಿ ಮೈಸೂರುಜಿಲ್ಲೆಯ ಕಪಿಲಾನದಿಯ ದಡದಲ್ಲಿರುವ ನಂಜನಗೂಡಿನಲ್ಲಿ ನೆಲಸಿರುವ ದೇವರು: ಶ್ರೀನಂಜುಂಡದೇವರಿಗೆ ... ಸಲುವ ಪುರ (ಎಕ. III, ನಂಜನ. ೧೦–೪; 1517); ಪಿಂಜರಿಯ ನಗಮೊ ... ಸುಧೆಯಾ ರಂಜಿಪ ರಾಶಿಯೊ ತಾನೆನೆ ನಂಜುಂಡನ ಸದನವೊಂದು ಸಲೆ ಶೋಭಿಸುಗುಂ (ಹಮ್ಮೀರ. ೮–೩೪); ಬಿಡದೆ ಭಕ್ತರ ಸಲಹುವ ಚೆನ್ನ ನಂಜುಂಡನಡಿದಾವರೆಗೆಱಗುವೆನು (ಕಂಸವಿ. ೦–೭); ನಂಜುಂಡಿಸಲೇನು ಗತಿ? ಅಂಜುವರೆ ಹ್ರಸ್ವಮತಿ? ಅವನಿಲ್ಲವುದದೆ ಕೆಲಸಕಾಗಿ; ನಂಜುಂಡನನು ಕರೆದು ಕೂಗು! (ಪಾಂಚಜ. ४४–೬). 'ಅಮರ್ದುಂಡ' ಪರಾ. ೨. 'ರಾಮನಾಥಚರಿತೆ' ಎಂಬ ಕಾವ್ಯವನ್ನು ಬರೆದ ಕನ್ನಡದ ಒಬ್ಬ ಕವಿಯ ಹೆಸರು: ಮಾಧವನಾತ್ಮಜ ನಂಜುಂಡನಾನೊದವಿ ಪೇಳಿದೆನೀ ಕೃತಿಯ (ಕುರಾಸಾಂ. ೧–೭३).

[ನಂಜು₂ + <ಉಣ್ + – ಅ₇]

**ನಂಜುಂಡೀಶ್ವರ** 'ನಂಜುಂಡೇಶ್ವರ' ನೋ.

**ನಂಜುಂಡೇಶ್ವರ** (ನಾ). = ನಂಜುಂಡ ೧: ಶ್ರೀಕಪಿಲಾಕೌಂಡಿಲ್ಯ ಸಂಗಮದ ನಂಜುಂಡೇಶ್ವರದೇವರಿಗೆ ಅಂಗರಂಗಭೋಗವಿನಿಯೋಗಕ್ಕೆ; ... ನಡಸುವಂತಾಗಿ (ಎಕ. III (R), ನಂಜನ. ೧३೫–೫; 1399); ಕಪಿಲಾಕೌಂಡ್ಯನ್ಯಸಂಗಮದಲಿ ಪ್ರಸನ್ನರಾದ ಶ್ರೀನಂಜುಂಡೇಶ್ವರ ದೇವರಿಗೆ ... ಸಮರ್ಪಿಸಿದರು (ಎಕ. III (R), ಗುಂಡ್ಲುಪೇ. ३४–೬; 1480)

ಶ್ರೀನಂಜುಂಡೇಶ್ವರಸ್ವಾಮಿಯವರ ಸಂನಿಧಿಗೆ (ಎಕ್. III, ನಂಜನ. ೧–೧; 1545); ಭೂಕೈಲಾಸಪತಿಯಾದ ನಂಜುಂಡೇಶ್ವರಸ್ವಾಮಿಗೂ ಜಗಜ್ಜನನಿಯಾದ ಪಾರ್ವತೀದೇವಿಗೂ . . . ಸಮರ್ಪಣೆ ಮಾಡಿರುವ ವಸ್ತುಗಳು (ಮಹಾವಂ. II, ೧೨೭). [ ನಂಜುಂಡ + ಈಶ್ವರ ]

**ನಂಜುಂಡೇಸ್ವರ**, ನಂಜುಂಡೀಸ್ವರ (ನಾ). = ನಂಜುಂಡ ೧ : ಶ್ರೀ ನಂಜುಂಡೇಸ್ವರದೇವರ ಅಮೃತಪಡಿಗೆ . . . ಸರ್ವಮಾನ್ಯವಾಗಿ ಕೊಟೆವು (ಎಕ್. III (R), ಗುಂಡ್ಲುಪೇ. ೨೯–೩; 1546). **ನಂಜುಂಡೀಸ್ವರ** : ಕಿಳ್ಕಿನಾಡಾಳ್ವರ್ ನಂಜುಣ್ಡೀಸ್ವರವೊಡೆಯರ್ಗ್ಗೆ . . . ಬಯಲುಮಂ ಬಿಟ್ಟು (ಎಕ್. III (R), ಹೆಗ್ಗಡ. ೧೦೯–೧೧; 1087).

[ > ನಂಜುಂಡೇಶ್ವರ ]

**ನಂಜುಗಣ್ಣು** (ನಾ). ದೃಷ್ಟಿದೋಷವಿರುವ ಕಣ್ಣು; ಸರಿಯಾಗಿ ಕಾಣದ ಕಣ್ಣು : ಚಿಟವುಡಲದ ಹರಳ . . . ತಿರುಳಂ ನಿಂಬೇಹುಳಿಯಲ್ಲಿ ತಳಿಗೆಯ ಮೇಲೆ ತೇದು ಹಚ್ಚಲು ನಂಜುಗಣ್ಣು ಮಾಣ್ಗುಂ (ವಿಶ್ವವಿ. ೬೩). [ ನಂಜು₂ + ಕಣ್ಣು (< ಕಣ್) ]

**ನಂಜುಗುಡಿ** (ಕ್ರಿ). ವಿಷವನ್ನು ಕುಡಿ,– ಪಾನಮಾಡು: ಸರೋಜಷಂಡಮನಾನತರಿಪು ಪೊಕ್ಕು ದಿವ್ಯವಚನಮನದನಂತೇಸುಂ ಬಗೆಯದೆ ಕುಡಿದಜ್ಞಾನತೆಯಿಂ ನಂಜುಗುಡಿದರಂತಿರೆ ಕೆಡೆದಂ (ಪಂಪಭಾ. ೮–೪೦). [ ನಂಜು₂ + ಕುಡಿ₁ ]

**ನಂಜುಗೂಳು** (ನಾ). ೧. ವಿಷಮಿಶ್ರಿತವಾದ ಆಹಾರ : ನಂಜುಗೂಳು ತಿಂದ ನಾಯಿ ಸತ್ತುಹೋಯಿತು (ರೂಢಿ). ೨. "ಸತ್ತ ಸುದ್ದಿ ಕೇಳಿ ಉಣ್ಣುವುದು" (ಜಾನಕೋ. ೯). [ ನಂಜು₂ + ಕೂಳು₂ (< ಕೂಟ್₁) ]

**ನಂಜುಗೊರಲ**, ನಂಜುಗೊರಳ (ನಾ). ಕೊರಳಲ್ಲಿ ನಿಂತ ವಿಷವುಳ್ಳವನು; ಕರಿಗೊರಲ ; ವಿಷಕಂಠ ; ಶಿವ : ನಂಜುಗೊರಲನ ಗಾಡಿಯಂ ನೋಡಿ ಬಗೆಯೊಳಚ್ಚರಿವಡುತುಂ (ಕಬ್ಬಿಗಕಾ. ೦೭೯); ಆ ಭೃಂಗಂ ಜಿನುಗಲ್ ಬಲ್ಲವರಂ ಬಗೆಗೊಳಿಸಿತು ನಂದನವನಿತೆ ನಂಜುಗೊರಲನಳಿಕದ ಲೋಚನದ ಧನಂಜಯನುಗ್ರತೆಯಂ ನೆಱೆ ನಂದಿಪ ಕಂಜಾಸ್ತ್ರನ ಮುಂದೂದುವ ಶಂಖಧ್ವನಿಯೆಂಬಂದದೊಳು (ಜಯಕಾ. ೧೦–೮). **ನಂಜುಗೊರಳ** : ಜಂಗಮಪ್ರಾಸಾದದೂಷಕರ ಭಂಜಿಸುತ ಯಮನಧಿಕನಾರಕಪುಂಜದಲಿ ಕಿಡಹುವ ನೆನುತಮಿಹ ನಂಜಿಗೊರಳನ ವಾಕ್ಯವಂ ಕೇಳ್ದಱಿಯಿರೇ ಮುನ್ನ (ಬಸವು. ೫೯–೨೨); ಕುಂಜರ ಕೊಲಲಟ್ಟೆ ಬರೆ ರಾಜಬೀದಿಯೊಳಂಜಿ ನಿಮ್ಮಯ ಬಸತಿಯನು ನಂಜುಗೊರಳ ಶಿವಶರಣರು ಹೊಕ್ಕರೆ ಎಂಜಲ ನೊಣವಹರು (ಅಬ್ಬಲೂ. ೪–೨೭). [ ನಂಜುಗೊರಲು + –ಅ₇ ]

**ನಂಜುಗೊರಲು**, ನಂಜುಗೊರಳು (ನಾ). ವಿಷವು ನಿಂತಿರುವ ಕೊರಳು ; ವಿಷಯುಕ್ತವಾದ ಕಂಠ : ಕಿಂಜೆಡೆಗಳ ಮಂಕುಟದ ನಂಜುಗೊರಲಿನ ಕಂಚೋದ್ಭವಶಿರಕರನು (ಅಬ್ಬಲೂ. ೨–೬೩). **ನಂಜುಗೊರಳು** : ರಂಜಿಪ ರವಿಕೋಟಿತೇಜದಿಂದುರವಣಿಪಂ ಕಂಜಪದಯುಗಳ ಪೊಳೆವಾ ನಂಜುಗೊರಳಭವ . . . ರಕ್ಷಿಸೆನ್ನುಮಂ (ಸಿದ್ಧೇಶ. ೨–೪); ರಂಜಿಸಿಯೆ ಹೊಳೆಹೊಳೆವ ಮೊಗಗಳ ನಂಜುಗೊರಳಿನ ದಶಭುಜದ ಬಲು ಕುಂಜರಾಜಿನ ಭವ ಸಲಹೈ ಕಳಸನಾಥ ಶಿವಾ (ದೇವೀಮ. ೮–೩೭). [ ನಂಜು₂ + ಕೊರಲು (< ಕೊರಲ್) ]

ನಂಜುಗೊರಳ 'ನಂಜುಗೊರಲ' ನೋ.

ನಂಜುಗೊರಳು 'ನಂಜುಗೊರಲು' ನೋ.

**ನಂಜುಜೋಗಿ** (ನಾ). ವಿಷವನ್ನು ಹೋಗಲಾಡಿಸುವ ವೈದ್ಯ ; ವಿಷವೈದ್ಯ ; ಜಾಂಗಲಿಕ : "ವಿಷವೈದ್ಯಃ, ಜಾಂಗಲಿಕಃ – ೨ ವಿಷವನ್ನು ಇಳಿಸುವ ವೈದ್ಯನ ಹೆಸರು, ಅಂದರೆ ನಂಜುಜೋಗಿ, ಪಂಡಿತ" (ಸಿದ್ಧಾಂತಿ. ೭೪). [ ನಂಜು₂ + ಜೋಗಿ₁ ]

**ನಂಜುಜ್ವರ** (ನಾ). (ಹರಿಗೆಯ ನಂತರ ಬರುವ) ಜ್ವರ; ಸನ್ನಿ : (ಕಿಸಂಗ್ರಾ. ೧೦೪). [ ನಂಜು₂ + ಜ್ವರ ]

**ನಂಜುಣ್** (ಕ್ರಿ). ವಿಷವನ್ನು ಸೇವಿಸು, – ಕುಡಿ : ನಂಜುಂಡ ಜೀವದ ಬಂಜೆತನವಳಿಯಿತು ಕೆಂಜೆಡೆಯವನ ದಯದಿಂದ (ಸಿದ್ಧಪು. ೩–೧೦). [ ನಂಜು₂ + ಉಣ್ ]

**ನಂಜುದಿನ್** (ಕ್ರಿ). = ನಂಜುಣ್ : ಇನ್ನವಪ್ಪ ಬನ್ನವೆನವರಾರೊ ಸೈರಿಸುವರಿನ್ನೆವರಂ ಪೆಱತಾದೊಡಾಗಳೇ ತವೆ ಜವದಿಂದೆ ಕಿಚ್ಚುವೊಗಲಣ್ಮದೆ ನಂಜುದಿನಲ್ಕೊಡರ್ಚದಿರ್ಕುವೆ (ಕಾದಂಋ. ೭೦). [ ನಂಜು₂ + ತಿನ್ ]

**ನಂಜುನೀರ್**, ನಂಜುನೀರು (ನಾ). ವಿಷಪೂರಿತವಾದ ನೀರು; ವಿಷಜಲ: ಸುಡುವುದು ನಂಜುನೀರ್ ಪಿಡಿದು ನುಂಗುವುವಲ್ಲಿಯ ಮಾಂಗಳ್ . . . ಮೈಯೊಳರ್ದಿಡುವುವು ಪತ್ರಪುಷ್ಪಫಲಸಂಕುಲದಂದದ ಶಸ್ತ್ರಕೋಟಿಗಳ್ (ಆದಿಪು. ೫–೮೮). **ನಂಜುನೀರು** : "ವಿಷತೃಣೋದಕ = ನಂಜುಪುಲ್ಲುಂ, ನಂಜುನೀರುಂ" (ನೀತಿವಾ. ೧೮–೯). [ ನಂಜು₂ + ನೀರ್₁ ]

ನಂಜುನೀರು 'ನಂಜುನೀರ್' ನೋ.

**ನಂಜುನೆತ್ತರ್** (ನಾ). ವಿಷಪೂರಿತವಾದ ರಕ್ತ; ವಿಷರಕ್ತ : ಎಲೆ ಮಡದಿ, ಇದೆ ಕೊಳ್ ಕೊಡು ರಿಸಿಗಳ ನಂಜುನೆತ್ತರಿಂ ತುಂಬಿರ್ಕುಂ (ಅದ್ಭುತ. ೩೦–೧೭). [ ನಂಜು₂ + ನೆತ್ತರ್ ]

**ನಂಜುಪುಲ್ಲು**, ನಂಜ್ಪುಲ್ಲು (ನಾ). ಒಂದು ಬಗೆಯ ಹುಲ್ಲು; ವಿಷದಿಂದ ಕೂಡಿದ ಹುಲ್ಲು ; ವಿಷತೃಣ : "ವಿಷತೃಣೋದಕ – ನಂಜುಪುಲ್ಲುಂ, ನಂಜುನೀರುಂ" (ನೀತಿವಾ. ೧೮–೯). **ನಂಜ್ಪುಲ್ಲು** : ಕಾಸಿಹುಲ್ಲು, ಕುಂತಿಹುಲ್ಲು, ಅಂಚೀಹುಲ್ಲು, ನಂಜ್‌ಹುಲ್ಲು, ಬಿಳೀದೊಡ್ಡ ಕಾಚಿಹುಲ್ಲು (ವ್ಯಾಜಿಗಿ. ೨೭–೫೦೭). [ ನಂಜು₂ + ಪುಲ್ಲು (< ಪುಲ್) ]

ನಂಜುಬಟ್ಟಲು 'ನಂದಿಬಟ್ಟಲು' ನೋ.

**ನಂಜುಮುಳ್ಳು** (ನಾ). ವಿಷಪೂರಿತವಾದ ಮುಳ್ಳು : ಮರನೇಱಿ ಬಿದ್ದನೋ ನೀರೊಳದ್ದನೊ ನಂಜುಮುಳ್ಳಡಿಯನು ನಟ್ಟು ನಡೆಗೆಟ್ಟನೋ (ಸಿದ್ಧರಾ. ೨–೪೩). [ ನಂಜು₂ + ಮುಳ್ಳು (< ಮುಳ್) ]

**ನಂಜುರಂಜಿಕೆ** (ನಾ). ಒಂದು ಬಗೆಯ ಸಸ್ಯ : "ತ್ವಗ್ಜೀವಿ ಸೇಗುಡಿತ ನಂಜುರಂ[ಪಾಠಾಂ. ಅಂ]ಜಿಕೆ" (ಮಂಗರಾಕ. ೪೨–೩೭). [ ? ]

**ನಂಜುರುಳಿ** (ನಾ). ವಿಷದ ಉಂಡೆ, – ಗುಳಿಗೆ : ಇರುಳುರಗಂ ವೃತ್ತಿಂದಂ ಕ್ಷರಿತದೆ ಪೊಱಮಟ್ಟು ಕಾಱ್ ವಿಷಮಂ ಪಿಟ್ಟಂ ಪರಿದಂಜಲಿಸಲ್ಕಿಷದುಬ್ಬರದಿಂ ನಂಜುರುಳಿಯೆನಿಸಿ ಮೈಱಿವಾ ಪಿಟ್ಟಂ ಮೆಲ್ಲದ (ಧರ್ಮಾಮೃ. ೨–೧೯೨); ಇನನಸ್ತಂಗತನಾಗೆ . . . ಜೀವನಮೆಂಬುಬ್ಬೆಗದಿಂದೆ ನಂಜುರುಳಿಯಂ ಪೋ ನುಂಗಿದಲ್ ಪೇಟದಬ್ಬಿನಿಯೆಂಬಂತೆವೊಲಾಯ್ತು ಕುಟ್ಮಳಿತ ಕಂಜಾತೋದರದಿಂದಿರಂ (ಚಂದ್ರಪು. ೮–೧೫). [ ನಂಜು₂ + ಉರುಳಿ₁ ]

**ನಂಜುರುಳಿ** (ನಾ). ಒಂದು ಬಗೆಯ ವಿಷದ ಹುಳು : "ವಿಷಿಃ – ನಂಜುರುಳಿ" (ಕಾಶಕ್ಕ. ೫೯). [ ನಂಜು₂ + ಉರುಳಿ ? ]

**ನಂಜುರೋಧಕ** (ನಾ). ಗಾಯ ಮೊದಲಾದುವು ಕೊಳೆತು ರಕ್ತವು ವಿಷವಾಗುವುದನ್ನು ತಡೆಗಟ್ಟುವುದು ; ಪೂತಿನಾಶಕ: ಜೋಸೆಫ್ ಲಿಸ್ಟರನ ನಂಜುರೋಧಕ(ಆಂಟಿಸೆಪ್ಟಿಕ್)ಚಳವಳಿಯ ಅನಂತರ, ನಿರಪಾಯಕರವಾಗಿ, ಕೊಳೆಯದೆ ಇರುವಂತೆ, ಹೆಣಗಳ ರಕ್ತನಾಳಗಳೊಳಕ್ಕೆ . . . ದ್ರಾವಣಗಳಂಥ ನಂಜುರೋಧಕಗಳನ್ನು ಚುಚ್ಚಿ ಹೋಗಿಸುವುದು ಜಾರಿಗೆ ಬಂದಿತು (ಕವಿಕೋ. I, ೨೩). [ ನಂಜು₂ + ರೋಧಕ ]

**ನಂಜುಹಿಡಿ** (ಕ್ರಿ). ೧. ವಿಷಪೀಡಿತವಾಗು. ೨. (ಆಲಂ) ಕೆಟ್ಟುಹೋಗು; ಅಹಿತವಾಗು : ತನ್ನ ಗಂಡನ ಜೀವನ ನಂಜುಹಿಡಿದು ಹಾಳಾಗುತ್ತಿದ್ದರೂ ಅವಳು ಆ ಜೀವನವನ್ನೇ ಪಟ್ಟುಹಿಡಿದು ಮುಂದುವರಿಸುತ್ತಿದ್ದಳು (ಪುನರು ೩೭೧). [ ನಂಜು₂ + ಹಿಡಿ₁ (< ಪಿಡಿ₁) ]

**ನಂಜೂಡು** (ಕ್ರಿ). ೧. ವಿಷವನ್ನು ಉಣ್ಣಿಸು, – ಕುಡಿಸು : ನೆಱೆ ನಂಜೂಡಿ ಕೊಲಬಂದ ಭಾವದುಷ್ಟಗೆ ಹಿತದ ಮುಕುತಿಯನೀವೆನೆಂಬುದನಱುಹುವಂತಿರೆ . . . ಉಂಡನು ಮೊಲೆಯನುಱೆ ಹಿಡಿದು (ನಿಭಾಗ. ೧೦-೫-೩೮). ೨. ವಿಷವನ್ನು ಲೇಪಿಸು, – ಸವರು : ನಂಜೂಡಿದಂಬಿನಂತೆ ಬಸಿಱೊಳಿರ್ದಲಗಿನಂತೆ ಮಮ್ಮಲ ಮಱುಗಿಸುವ ಮಕ್ಕಳುಮಂ . . . ನಂಬಿ (ಧರ್ಮಾಮೃ. ೯-೩೩); ಬಾಡಿದಲರಱೆಪೆ ನೆಱೆ ನಂಜೂಡಿದ ಸೂಜಿಗಳನೊಳಿಪಿ ತುಂಬಿಯೊಲವನೇನಾಡಿದಳೊ ಸೂಜಿಗಳ ಕೂರ್ಪೊಣೆದ ಮೊನೆಯಲರ ಮೇಲೆ ನಾನಾವಿಧದಿಂ (ಅರ್ಧನೇ. ೩-೧೦೦). [ ನಂಜು$_2$ + ಊಡು$_1$ ]

**ನಂಜೂಱು** (ಕ್ರಿ). ವಿಷವು ಸೇರು, – ಅಂಟು : ಉಗ್ರಾಗ್ನಿ ಪತ್ತಿದೊಡಂ ಬೇಯದ ಕಂಟಕಾಮಯಸಮೂಹಂ ತೋಱದೊಂಭತ್ತು ಭೇದದ ನಂಜೂಱದ ಮುಪ್ಪು ಬಾರದ ಯುವತ್ವಂ ತೀರದುತ್ಕರ್ಷಣಂ (ಅಸಂಪು. ೬-೧೭). [ ನಂಜು$_2$ + ಊಱು$_1$ ]

**ನಂಜೆ**, ನಂಜ$_2$ (ನಾ). ನೀರಾವರಿ ಭೂಮಿ ; ಗದ್ದೆ : ಯೀ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ ವಾಸ್‌ಪಯಿರು . . . ಹಲ ಉಪಾಧಿಗಳೂ ಸಹ ಸೇರ್‍ಸಿ ಕೊಟ್ಟೆವಾಗಿ (ಸೌಇಇ. IX-ii, ೪೬೩-೭; 1470) ; ಈ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ . . . ಅಷ್ಟಭೋಗ ತೇಜಸಾಮ್ಯಗಳನು ಸರ್ವಮಾನ್ಯವಾಗಿ ಆಚಂದ್ರಾರ್ಕಸ್ಥಾಯಿಯಾಗಿ ಅನುಭವಿಸಿಕೊಂಡು (ಸೌಇಇ. IX-ii, ೪೬೬-೫; 1472). 'ನಂಜೆನೆಲ' ಪರಾ. **ನೆಂಜ್ಞ**: ಎಲ್ಲ ನಂಜವಾ? ಪುಂಜವಾ ? ಬೈಲುಗದ್ದೆ, ಬೆಟ್ಟುಗದ್ದೆ, ಕಾಡುಬೀಡು ಎಲ್ಲ ಕೂಡಿ ಅಷ್ಟಾಗುತ್ತದೆಯಾ ? (ಚೋಳಗಿ. ೩೯). 'ನಂಜನೆಲ' ಪರಾ. [ ದೇ.॥ ತಮಿ. ನನ್ಸೈ ; ಮಲ. ನಞ್ಞ ]

**ನಂಜೆನೆಲ**, ನಂಜನೆಲ (ನಾ). = ನಂಜೆ : ಸತ್ಯಾಭರಣನಲೂರ ನಂಜೆನೆಲನು ಮಾ ೨ ಉಭಯಂ ನೆಲ x x x ಯಾಗಿ ಅನುಭವಿಸಿಕೊಂಡು (ಸೌಇಇ. IX-ii, ೪೬೩-೧೩ ; 1470). **ನಂಜನೆಲ** : ನಂಜನೆಲದಲೂ [ಮರ] ಹೊಱತಾಗಿ ಆ ವೂರ ಆಳತೆಯಲಿ ಸುಂಣಾಊರಲಿ ಮಾ ೨ ಸತ್ಯಾಭರಣ ನಲೂರ ನಂಜೆನೆಲನು ಮಾ ೨ (ಸೌಇಇ. IX-ii, ೪೬೩-೧೨; 1470).
[ ನಂಜೆ + ನೆಲ ]

**ನಂಜೊಱೆವಾಯ್** (ನಾ). ವಿಷವನ್ನು ಸಂಗ್ರಹಿಸುವ ಬಾಯಿ ; ವಿಷವು ಸ್ರವಿಸುವ ಬಾಯಿ : ಜುಂಜುಱುದಲೆಯೂರ್ಧ್ವರೋಮ ಕೆಮ್ಮೀಸೆ ಕೈಪಂಜುಗಳೆನೆ ಬೆಂಕೆಗಣ್ಣು ನಂಜೊಱೆವಾಯ ಗೋದಣೆವಲ್ಲ ಭೂತಗಳ್ ಮುಂಜುಳವೆನೆ ನೆಗಹಿದುವು (ಮೋಹತ. ೩೯-೧೧).
[ ನಂಜು$_2$ + ಒಱೆ$_1$ + ಬಾಯ್ ]

**ನಂಜ್ಪುಲ್ಲು** 'ನಂಜುಪುಲ್ಲು' ನೋ.

**ನಂಟ**, ನೆಂಟ (ನಾ). ೧. ಕೊಳ್ಕೊಡೆಯಿಂದಾದ ಸಂಬಂಧವುಳ್ಳ ವ್ಯಕ್ತಿ ; ಬಂಧು ; ಸಂಬಂಧಿ : "ಆತ್ಮೀಯಃ, ಸ್ವಜನಃ, ಬಂಧುಃ, ಆಪ್ತಃ, ಜ್ಞಾತಿಃ, ಬಾಂಧವಃ–ಈ ೬ ನಂಟರ್" (ಹಲಾಯು. ೬೪-೩೫೫) ; "ಸಜ್ಜನ ನಾಪ್ತನಾ ಜ್ಞಾತಿ ಬಾಂಧವಂ ಬಂಧುವೆಂದೆನೆ ನಂಟನಕ್ಕು" (ಪಂಗಂರಾ. ೯೨-೧೧) ; ತಾಯ್ ಕಟಿದೊಡೆ ಬಂದ ನಂಟರ್ ನಡಪೆ ಬಳೆದೊಡಾ ನಂಟರುಂ ಕಟಿದುಳ್ಳರೆಲ್ಲಂ ಸತ್ತು (ವಡ್ಡಾರಾ. ೭೬-೧೭) ; ನವ್ಯೊವಜರ್ ಜಸಂಬಡೆದ ಭಾರ್ಗವರವ್ವದಱಿಂದಂ ನಂಟರುಮುಂಗಮಹೀಪತೀ (ಪಂಪಭಾ. ೧೨-೫೭); ಸಾವೆಡೆಗೆ ನಂಟರಿಲ್ಲೆಂದಱೆ ನೀಂ (ವರ್ಧಪು. ೯-೬೪); ಎಡರಿಗಂ ತಾನಾಗದಂ ನಂಟನೇ (ಸೋಮೇಶ. ೨೨) ; ಆವಸರದಲಾಪವನೆ ನಂಟನು (ಕೌಶಿರಾ. ೧೯-೩೨) ; ಅಣ್ಣತಮ್ಮಂದಿರನ್ನು ನೆಂಟರೆನ್ನಬಹುದೆ . . . ಅಣ್ಣತಮ್ಮಂದಿರು ಗ್ರಹಚಾರ ತಪ್ಪಿದರೆ ದಾಯಾದಿಗಳಾಗುವರೇ ಹೊರೆತು ನೆಂಟರು ಪವಿತ್ರ ಎಂದಿಗೂ ಆಗುವುದಿಲ್ಲ (ನೆಂಟರು. ೪) ; ಅಕ್ಕಿ ಮೇಲೆ ಆಸೆ, ನಂಟರ ಮೇಲೆ ಪ್ರೀತಿ (ಗಾದೆ) ; ಕೆಟ್ಟು ನಂಟರ ಸೇರಬೇಡ, ಕೊಟ್ಟು ಧರ್ಮ ತಿರುಗಿ ಕೇಳಬೇಡ (ಗಾದೆ). ೨. ಆಪ್ತವ್ಯಕ್ತಿ ; ಸ್ನೇಹವುಳ್ಳ ವ್ಯಕ್ತಿ : ನಂಟರಂ ಬಿಟ್ಟು ಪಗೆಯಂ ಕೂಡುವ . . . ಮರುಳಂ ಪೋಲ್ಕುಂ (ಧರ್ಮಾಮೃ. ೧೦-೮೩); ಆರಿಗಾರೂ ಇಲ್ಲಾ ಕೆಟ್ಟವಂಗೆ ಕೆಳೆಯಿಲ್ಲಾ ಜಗದ ನಂಟ ನೀನೆ ಅಯ್ಯಾ ಕೂಡಲಸಂಗಮದೇವಾ (ಬಸವ. ೨೫) ; ಈ ಕಡುನಂಟನ ಸತಿಯು ರೂಪು ಸೋಲಿಸಿತೆನ್ನಂ (ಆಸಂಪು. ೧೧-೫೦) ; ಹೋಹ ನಂಟನನಿನಿತು ದೂರಕ್ಕೆ ಕಳುಹಿ ಬರಲವನೊಡನೆ ನಡೆವ ಮನೆ ಮಂದಿಯೆನೆ, ನೆಗೆದ ಹನುಮನ ಕೂಡೆ ಬಂಡೆ ಗಿಡು ಮರ ಬಳ್ಳಿಗಳ್ ಪಾರಿದು ವಿನಿತು ಗೆಂಟರ್ಗೆ (ಶ್ರೀರಾಪಟ. ೪೦೭-೧೧೫); ಆಪತ್ತಿಗಾದವನೆ ನಂಟ (ಗಾದೆ).

**ನೆಂಟ** : ೧. ಗಂಟನೊಬ್ಬರ ಕೈಯಲಿಡುವಾತ ಮೂರ್ಖ ನೆಂಟರಿಗೆ ಸಾಲವನು ಕೊಡುವಾತ ಮೂರ್ಖ (ಪುರಂದ. ೧-೬೨-೧) ; ಬಂಟನಲ್ಲವೆ ನಾನು ದೀನರ ನೆಂಟನಲ್ಲವೆ ನೀನು ನಿನ್ನೊಳಗುಂಟೆ ನಿರ್ದಯ (ಹರಿಕಥಾ. ೭೧); ಗೋವಳಂಗರಸುತನವಾದ ಬಳಿಕ ಪೊಡವಿಯಂ ಕಂಡು ನಡೆವನೆ ಮುಳಿದು ಮಾವನಂ ಬಡಿದವಂ ನೆಂಟರನಱಿವನೆ (ಜೈಮಿಭಾ. ೬-೫೨) ; ಸ್ವಂತ ನೆಂಟರಿಗೆ ಜ್ಞಾತಿಯನ್ನು ಹೋಗಲಾಡಿಸಿದ್ದನು (ದೇವೀಜೌ. ೧೦೦). ೨. ಬಸವ ಬಸವಾಯೆಂದಡೆಯ್ದದೆ ಪಲವುಸುರಲೇನು ಮಸೆದ ಹಗೆಗಳು ನೆಂ[ಪಾಠಾಂ. ನಂ] ಟರಪ್ಪರು (ಬಸಪು. ೭-೨೫).

**ನಂಟರ ತೊಟ್ಟು** = ಆಪ್ತರ ಕೆಲಸಗಳಿಗೆ ಒದಗುವವನು ; ಒಂದು ಬಿರುದು : ಪರನಾರೀಪುತ್ರಕ ನಣ್ಬರ ತೊಟ್ಟು ಕೆಳೆಗೆ ಕುಪ್ಪಾರ್ತ ಪಿಸುಣ ಗಡಸರ್ಪ ತೊದಟ್ಟರ ಬೀವ ಬಾವನ ಬಟ್ಟ ಗುಣ್ಣ ಚಕ್ರಜೆಡ್ಡುಗಂ (ಎಕ. II, ೩೦೭; ಸು. 950). **ನಂಟರ ಮಾರಿ** = ಸಂಬಂಧಿಗಳಿಗೆ ಕೇಡು ಬಗೆಯುವವನು ; ವಿಶ್ವಾಸಘಾತುಕ : ಲೋಕದೊಳದನಾಡಿರ್ಕರುಳ್ ಕತ್ತರಿ ನಂಟರ ಮಾರಿ ತುತ್ತುಮಿಂಚಿದೊಡೊಡನುಂಡು ಮತ್ತೆ ತೊಡೆ ಮಿಂಚಿದೊಡಾ ಖಳನಿಂತು ಮಾಡಿದಂ (ಆಸಂಪು. ೧೧-೪೪). **ನಂಟರಿಷ್ಟರು**, ನೆಂಟರಿಷ್ಟರು = ಬಾಂಧವರು ಮತ್ತು ಸ್ನೇಹಿತರು ; ಆಪ್ತೇಷ್ಟರು ; ಬಂಧುಮಿತ್ರರು: ಗರುಡನನೊಳ್ಳೆ ತುಡುಕುವುದುಂಟಲೇ ಲೋಕದಲಿ ರಾಯನ ನಂಟರಿಷ್ಟರೊಳಧಿಕನಲ್ಲಾ ಕರ್ಣ ಕಿಱುಕುಳನೆ (ಕುಮಾದ್ರೋ. ೧೫-೭) ; ಪದವಿ ತಪ್ಪಿದ ಮೇಲೆ ನಂಟರಿಷ್ಟರೆ ನಮಗೆ ಕಟ್ಟಟ್ಟ ಹಗೆ ಕಾಣ ಕೊನೆಗೆ (ಇಂಚಾಪ. ೯೨-೫೦) ; ನೆಂಟರಿಷ್ಟರು ಉಂಟು ನೆರೆಹೊರೆ ಎನಗುಂಟು . . . ಒಂಟಿಯಾಗಿ ಪೋಗುವಾಗ ಸಂಗಡ ಒಬ್ಬರಕಾಣೆ (ಪುರಂದ. ೩-೨-೨) ; ನಿನಗೋಸ್ಕರ ಹಿಂದೆ ನೆಂಟರಿಷ್ಟರನ್ನು ಬಿಟ್ಟೆ (ವಚಭಾ. ೪೩) ; ನೆಂಟರಿಷ್ಟರೆಲ್ಲ ಧೈರ್ಯ ಹೊಂದಿದರು (ಕೌಲೂರ. ೧೪. ಕಥಾಸಾರ).
[ ನಂಟು$_2$ + – ಅ$_7$ ./ತಮಿ. ನಟ್ಟ, ನಣ್ಬ ; ತುಳು. ನಂಟೆ, ನೆಂಟೆ ; ತೆಲು. ನಂಟು ]

**ನಂಟತನ**, ನೆಂಟತನ (ನಾ). ಸಂಬಂಧ ; ಬಾಂಧವ್ಯ : ಸುಣ್ಣದ ತುಯ್ಯಲ ಬಣ್ಣವೊಂದೆ ಎಂದರೆ ನಂಟತನಕ್ಕೆ ಉಣ್ಣಬಹುದೆ (ಬಸವ. ೧೫೦); ದೊಡ್ಡವರ ನಂಟತನ ಬಡವನಿಗೆ ಭಂಡಾಟ (ಗಾದೆ). **ನೆಂಟತನ**: "ಜ್ಞಾತೇಯವೆಂದರ ಜ್ಞಾತಿತನ, ಬಂಧುತಾ ಅಂದರೆ ನೆಂಟರ ಗುಂಪು, ನೆಂಟತನಕ್ಕೂ ಹೆಸರೆಂದು ಕೆಲವರೆನ್ನುವರು" (ಸಿದ್ಧಾಂತಿ. ೧೫೪). [ ನಂಟ + –ತನ ]

**ನಂಟರ್ತನ** (ನಾ). ಬಾಂಧವ್ಯ ; ಸಂಬಂಧ ; ನಂಟು : ಮಹಾಶ್ವಾಪದ ಪ್ರಕರಾಮಾತ್ಯರೊಳಂ ಗಜಾಧಿಪರೊಳಂ ನಂಟರ್ತನಂ [ಪಾಠಾಂ. ತಾಂ ನರ್ತನಂ]ಗೊಂಡನಪ್ರಕಟಂ ನೀತಿವಿರುದ್ಧಮಾದೆಡೆಯೊಳಂ ತಾನೆಂಬ ಸನ್ಮಂತ್ರಿಯುಂ ವಿಕಳಂ ಮಾಡುವಂ (ಪಂಚತಂ. ೯೭-೮) ; ಪೆಸಿದ ಕೃತಾಂತಂ ಗೆತ್ತಿದ ಜೋನಂ ತನುವೆಂದುತ್ತಮರಱೆದುಱೆದರದಱ ನಂಟರ್ತನಮಂ (ಮಲ್ಲಿಪು. ೯-೬೭) ; ಕಳ್ಳರ ನಂಟರ್ತನಮುಂ ಕಳ್ಳರ ದೆಸೆಯಿಂದೆ ಧನಮನ ಜಿಸುವುದುಮಾ ಕಳ್ಳರ್ಗೆಡೆಗುಡುವುದುಮದು ಕಳ್ಳತನಂ ಬ್ರುತದ ಹಾನಿಯೆಂಬಂ ಜೈನಂ (ಸಮಯ. ೫-೪೫). [ < ನಂಟ + – ತನ ]

**ನಂಟಸ್ತ, ನೆಂಟಸ್ತ** (ನಾ). ಬಾಂಧವ್ಯವುಳ್ಳವನು; ಬಂಧು. 'ನಂಟಸ್ತಿಕೆ' ಪರಾ. **ನೆಂಟಸ್ತ.** 'ನೆಂಟಸ್ತಿಕೆ' ಪರಾ. [ <ನಂಟು$_2$ + – ಸ್ತ ]

**ನಂಟಸ್ತನ, ನೆಂಟಸ್ತನ** (ನಾ). = ನಂಟತನ : ಸಮುದ್ರದ ನಂಟಸ್ತನ ಉಪ್ಪಿಗೆ ಬಂಡಾಟ (ಹುಟ್ಯಹ. ೬೯) ; ಯೋಗ್ಯರಾದವರೊಂದಿಗೆ ನಂಟಸ್ತನ ಮಾಡಬೇಕು (ರೂಢಿ). **ನೆಂಟಸ್ತನ :** ಈ ಗೆದ್ದಲಿರಾಯನ ನೆಂಟಸ್ತನ ಸಾಹಿತ್ಯದೊಡನೆ ಅಷ್ಟೇ ಅಲ್ಲ, ಕಂಬಳಿಯೊಡನೆಯೂ ಇದೆಯೋ—ಎಂದು ಕೊಂಡೆ (ಮುಂಗಾಪು. ೧೬). 'ದೊಡ್ಡಸ್ತನ' ಪರಾ.

[ < ನಂಟಸ್ತ + – ತನ ]

**ನಂಟಸ್ತಿಕೆ, ನೆಂಟಸ್ತಿಕೆ** (ನಾ). = ನಂಟತನ : ಆ ಎರಡು ಮನೆತನಗಳ ನಡುವೆ ಮದುವೆಯ ನಂಟಸ್ತಿಕೆ ಕೂಡ ಬೆಳೆದಿತ್ತು (ನೊಳಂಬ. ೬೩) ; ಈಗಿನ ಕಾಲದಲ್ಲಿ ನಂಟಸ್ತಿಕೆ ಹೆಚ್ಚಿದಷ್ಟೂ ಸಂಸಾರ ನಿಭಾಯಿಸುವುದು ಕಷ್ಟ (ರೂಢಿ). **ನೆಂಟಸ್ತಿಕೆ :** ನೆಂಟಸ್ತಿಕೆ ಬೆಳೆಸುವುದಕ್ಕಾಗಿ ನೀವೆ ಬಿಟ್ಟೂರಿಗೆ ಹೋಗ ಬೇಕಾಗುವುದು (ಝಾರಾಣಿ. ೩೩) ; ಹೋಗಲೇಬೇಕೆಂದು ಯೋಚಿಸಿ ಕೂಡಲೇ ಹೋಗಲು ಇಲ್ಲಿ ಚಿನ್ನದ ಕೊಪ್ಪರಿಗೆಯಿದೆಯೋ ಅಥವಾ ಕುಬೇರನ ನೆಂಟಸ್ತಿಕೆಯಿದೆಯೋ ? (ವಾತ್ಸಲ್ಯ. ೨೪). 'ದೊಡ್ಡಸ್ತಿಕೆ' ಪರಾ.

[ ನಂಟಸ್ತ + – ಇಕೆ ]

**ನಂಟಿಕೆ** (ನಾ). = ನಂಟತನ : ತಂಟೆಯುಂವನ ನಂಟಿಕೆ ಸಲ್ಲ, ಒಂಟಿಯಾಗಿ ಹೋಗಸಲ್ಲ (ಗಾದೆ). [ ನಂಟ + – ಇಕೆ ]

**ನಂಟಿತಿ, ನೆಂಟಿತಿ, ನೆಂಟಿತ್ತಿ** (ನಾ). ನಂಟರವಳು ; ಸಂಬಂಧಿಯಾದವಳು: (+). **ನೆಂಟಿತಿ :** ಮನೆಗೆ ಬಂದ ನೆಂಟಿತಿಯರಿಗೆ ಉಡುಗೊರೆಯಾಗಿ ಕೊಡಲು ತಂದಿದ್ದ ಸೀರೆಗಳ ವಿಚಾರ ಸಲಹೆ ಕೊಡುವ ನೆವದಿಂದ . . . ತಿಳಿಯಲು ಪ್ರಯತ್ನಿಸುತ್ತಿದ್ದನು (ಮಲೆಮ. ೨೨೦). **ನೆಂಟಿತ್ತಿ :** ಮನೆಯ ಮಗಳೂ ನೆಂಟಿತ್ತಿಯ ಹಾಗೆ ಮದುವೆಯ ದಿನವೇ ಬಂದಿದ್ದಾಳೆ (ರೂಢಿ).

[ ನಂಟ + – ಇತಿ$_1$ (< – ಇತ್ತಿ) ]

**ನಂಟು$_1$** (ಕ್ರಿ). ತಾಗು ; ಕೂಡು ; ಸೇರು: ಅವು ತಾಮುರ್ಚಟ್ಟನೊಳೊರ್ಮೆ ಕಂಡು ಕಿಡಿಯುಂ ಕೆಂಡಂಗಳುಂ ಸೂಸೆ ನಂಟುವ [ಪಾಠಾಂ. ಗಂಟುವ, ತಾಗುವ, ನಂಟದ]ವೊಲ್ ಬೆಟ್ಟನೊಳೊಂದು ಬೆಟ್ಟು ಭವಬದ್ಧಕ್ರೋಧದಿಂ ಕಾಯ್ದು ತಾಗುವುದುಂ (ಅರ್ಜನೇ. ೪-೧೩೦).

[ ದೇ.॥ ತಮಿ. ನಣ್ಣು, ನಣುಜ್ಕು, ನಣುಕು ]

**ನಂಟು$_2$, ನೆಂಟು** (ನಾ). ೧. ಸಂಬಂಧ ; ಬಾಂಧವ್ಯ : "ನಂಟಣ್ಪನಿಕ್ಕುಂ" (ಶಬ್ದಕ್ಕೆ. ೬೯) ; ಜವನೊಡವುಟ್ಟು ಮಾರಿಯೊಡನಾಡಿ ಲಯಾಗ್ನಿಯ ನಂಟು . . . ಸಿಡಿಲ ಸಂಗಡವಿನಾಶನ ಬೆಂಕೆಗಣ್ಣ ಬಾಂಧವನೆನೆ ಶೌರಿ ಮರ್ದಿಸಿದ ನಪ್ರತಿಮಲ್ಲರೆನಿಪ್ಪ ಮಲ್ಲರಂ (ಜಗವಿ. ೬-೭೩) ; ಕೆಳೆತನದ ನಂಟು [ಪಾಠಾಂ. ಬಂಧು] ವಿಷಯದ ಬಂಧುಮಾತುಗಳ ಬಲದೊಳಾಂ ಕವಿಯೆಂದು ಕವಿರಾಯ ನೆಂದು ವೆಗ್ಗಳಿಸಿ . . . ನಂಟನೀಡಾಡಿ ಮಲೆತು (ಹಜಕಾ. ೧-೩೦) ; ಕರಕಷ್ಟರೊಳು ನಂಟದೇತಕಳಿ ಶುಭವನೆಣಿಸು (ವೆಂಕಾರಾ. ೫-೯-೬) ; ಹಳಗನ್ನಡಕ್ಕೂ ತಮಿಳಿಗೂ ಇರುವ ನಿಕಟವಾದ ನಂಟು ನೋಡಬೇಕಾದುದು (ದ್ರಾವಿವಿ. ೧೧೨) ; ಸಮುದ್ರದ ನಂಟು ಉಪ್ಪಿಗೆ ಬಡತನ (ಗಾದೆ). 'ನಂಟು ಗಾಣಿಸು' ಪರಾ. ೨. ಪ್ರೀತಿ ; ಪ್ರೇಮ : ನಂಟಂ ಬಯಸುತ್ತಿನಿಯನ ನಂಟಿ ಮಹಾತುರದಿನಪ್ಪಿ ಮಿಗೆ ಪುಳಕಿಸುತುಂ . . . ಜೋಡೆಯರ್ನೆರೆ ಯುತಂದೆಸೆದರ್ (ಉದ್ಭಟ. ೧೦-೧೧೩) ; ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೆ ! (ಸಖೀಗೀ. ೪೬-೯೬೦). **ನೆಂಟು :** ೧. ಸ್ತುತಿಯಿಲ್ಲ ನಿಂದೆಯಿಲ್ಲ ನೆಂಟಿಲ್ಲ [ಪಾಠಾಂ. ನೆಂಟಿಲ್ಲ, ನೆಂಟರಿಲ್ಲ] ಹಗೆಯಿಲ್ಲ ಅಳುಹಿಲ್ಲ ಮುಳಿಹಿಲ್ಲ ತಾನೆಂಬ ನೆನಹಿಲ್ಲವಾಗಿ (ಆದವ. ೧೬೦-೨೮೫) ; ರಾಮಣ್ಣನ ನೆಂಟೂ ನಮಗೆ ಗಂಟುಬೀಳುತ್ತದೊ ಏನೋ (ಮಹಾಗ. ೩೩೦) ; ಅಕ್ಕನ ಹಗೆ ಭಾವನ ನೆಂಟು (ಗಾದೆ).

ನಂಟು ಮಾಡು, ನೆಂಟು ಮಾಡು=ಸಂಬಂಧವನ್ನು ಮಾಡು; ಬಾಂಧವ್ಯ ವನ್ನು ಬೆಳೆಸು : ವಧುವಂ ತಂದೀಯೆ ಮುನ್ನಿನ್ನ ಚಿತ್ತದೊಳಿರ್ದಂದದೆ ನಂಟು ಮಾಡಿ ಸಿರಿಯಿಂದೆನ್ನೊಳ್ ಸಮಂ ಮಾಟ್ಪಿಂ (ವರ್ಧಪು. ೭-೩೪) ; ನೀರೆಱೆದೋವಿದವರ ಕಾಲ ಕುಂಟು ಮಾಡುವ ಬೇಲದಂತೆ ಕಂಟಕವನು ಕಾಣಿಪರು ಕೆಲಂಬರು ನಂಟು ಮಾಡುವ ಮಾನ್ಯರಿಗೆ (ಪ್ರಭುಂಜ. ೧-೨೨) ; ಒಂದೇ ಗಂಡುದೇವರ ಒಕ್ಕಲಾಗಿದ್ದರೂ ಹೆಣ್ಣುದೇವರು ಬೇರೆ ಬೇರೆ ಯಾಗಿದ್ದರೆ ನೆಂಟು ಮಾಡುವುದುಂಟು (ಹುಟ್ಯಹ. ೨೩).

[ <ನಂಟು$_1$./ತಮಿ. ನಟ್ಪು, ನಣ್ಪು ; ತುಳು. ತೆಲು. ನಂಟು ]

**ನಂಟುಗಾಣಿಸು** (ಕ್ರಿ). ಹೊಂದಾಣಿಕೆಯನ್ನುಂಟುಮಾಡು; ಹೊಂದಿಸು: ಒಂಟಿದಂಡಿಗೆಯೊಳು ಹಲವು ದಂಡಿಗೆಯೊಳು ನಂಟುಗಾಣಿಸಿ ಶ್ರುತಿಮುಟ್ಟಿ ಮಂಟಪ ಗುಮುಗುಮುಗುಮ್ಮನೆ ಕೊರಳೆದೆಗುಂಟಾಗಿ ಠಾಯೆದೋಱಿದರು (ಭರತೇ. ೧೮-೧೩೬). [ ನಂಟು$_2$ + ಕಾಣಿಸು ]

**ನಂಟುಗೊಳುಹ** (ನಾ). ಹೊಂದಾಣಿಕೆಯನ್ನುಂಟುಮಾಡಿಕೊಳ್ಳುವಿಕೆ ; ಸಂಬಂಧವನ್ನು ಸ್ವೀಕರಿಸುವಿಕೆ ; ಸಮನ್ವಯಂ ಮಾಡಿಕೊಳ್ಳುವಿಕೆ : "ಸಾಮ ಎಂದೊಡೆ ವಿನಯದಿಂ ನಂಟುಗೊಳುಹ" (ನಾಚಿರಾ. ೫).

[ ನಂಟು$_2$ + ಕೊಳುಹ ]

**ನಂಟುತನ, ನೆಂಟುತನ** (ನಾ). = ನಂಟತನ : ಹರಿ ಕರಿಕಳಭದುರುಬಂಧುತ್ವ ಫಣಿ ಮುಂಗುಲಿಯ ನಂಟುತನ . . . ಇರ್ದುದು ಬನದೊಳಾ ಮುನಿಯ (ಕೊರಲಾ. ೧-೫-೪೩) ; ಕೂಳ ಬೆಮೆಯಲಿ ನಂಟುತನ ದಾಕ್ಷಿಣ್ಯಪರನಾಗಿ (ಮಡಿಭ. ೨೩) ; ಎಂದುಪಾಯದಿ ಮಮತೆ ನಂಟುತನ ತೋರಿ ಮುಂದು ವರಿಯಲು ; ಮನದಿ ಸಂದೇಹ ಮೀರಿ (ಕವಿಪು. ೧೨-೧೫) ; ಆ ಕನ್ಯೆಯರ ಪಾಣಿಗ್ರಹಣ ಮಾಡುವುದರಿಂದ . . . ಆ ಸಾಮಂತರಿಗೂ ದೊಡ್ಡವರೊಡನೆ ನಂಟುತನ ಬೆಳೆಸಿದೆವೆಂಬ ಮಾನಗೌರವಗಳೂ ಉಂಟಾಗುತ್ತಿದ್ದುವು (ಶಾಂತಲಾ. ೯೭). **ನೆಂಟುತನ :** ನೆಂಟುತನ ಹೊಸೆವ ಕಾಲೂರ್ಮದುವೆ ಪಿರಿದು (ಕಾಲೂರ. ೩೯-೪೫). [ ನಂಟು$_2$ + – ತನ ]

**ನಂಟುಭಕ್ತಿ** (ನಾ). ಬಾಂಧವರ ಮೇಲಿರುವ ಮೋಹ : ಸಂಸಾರಬಂಧು ಗಳೆನ್ನವರೆಂದೊಡೆ ನಂಟು[ಪಾಠಾಂ. ಟ]ಭಕ್ತಿ ನಾಯಕನರಕ ಇಂತೆಂದುದು ಕೂಡಲಸಂಗನ ವಚನ (ಬಸವ. ೮೯) ; ಅಣ್ಣತಮ್ಮ ಹೆತ್ತಣ್ಣ ಗೋತ್ರ ವಾದರೇನು ಲಿಂಗಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯಾ ನಂಟುಭಕ್ತಿ ನಾಯಕನರಕ (ಬಸವ. ೭೧೩). [ ನಂಟು$_2$ + ಭಕ್ತಿ ]

**ನಂಟುವೊಱೆ** (ನಾ). ನೆಂಟತನದ ಸಂಬಂಧ, – ಬಾಂಧವ್ಯ : ಈ ಅಪ ದೆಸೆಯುಂ ಕಂಡೊಂದು ಬಕಂ ಬೆಳರ್ತು ಮುಂಂಗಾಣದೆ ತನ್ನ ನಂಟು ವೊಱೆಯ ಮಿಾಂಗಳ್ಗೆ ಮುಂತೆ ಬಟ್ಟೆ ಯಾವುದೆಂದಾವಗಮಗಲದೆ ಚಿಂತಾ ಪರನಾಗಿರ್ಕುಂ (ರಾಮಾಶ್ವ. ೫೧-೨೫). [ ನಂಟು$_2$ + ಪೊಱೆ$_3$ ]

**ನಂಟುವಳಿ** (ನಾ). ಬಾಂಧವ್ಯ ; ನಂಟತನ : ನಂಟುವಳಿ ಜನ್ನಿಪುದು ತತ್ಸತಿಯ ದೆಸೆಯಿಂ (ಅಂಬಿಕಾ. ೩೩-೨೩). [ ನಂಟು$_2$ + – ವಳಿ$_1$ ]

**ನಂಡುಲಿ** (ನಾ). (ಕರಾ) ಮಳೆ ಬಿದ್ದು ಮಣ್ಣು ಸ್ವಲ್ಪ ಹಸಿಯಾಗಿರು ವಾಗ ಬಿತ್ತುವುದು : ಇಷ್ಟು ಬೇಗನೆ ಮಳೆ ಬರುತ್ತದೆಯೆಂದು ಯಾರಿಗೆ ಗೊತ್ತು, ಕಡುಲಿಯಂತೂ ತಪ್ಪಿತು, ಇನ್ನು ನಂಡುಲಿಗಾದರೂ ಬಿತ್ತಬೇಕು (ರೂಢಿ). 'ಕಡುಲಿ' ಪರಾ. [ ? ]

**ನಂತರ$_1$** (ನಾ). ತರುವಾಯದ ಕಾಲ : ಹರನ ಪಾದಂಗಳಿಗೆ ವಂದಿಸಿ ಸುರರು ನಂತರದಲ್ಲಿ ಗಿರಿಜೆಯ ಚರಣಸರಸಿಜಗಳನು ನಮಿಸುವರು (ಪಾರ್ವತಿಪ. ೩೦).

[ < ಅನಂತರ$_1$ ]

**ನಂತರ$_2$** (ಅ). ತರುವಾಯ ; ಆಮೇಲೆ : ಕಲ್ಲು ಕಾಮಗಾರಿ ಕರ್ಚ ೨೦ ವರಹ ಕೊಟ್ಟುಯಿಧಾಳೆ ಬಾವಿ ತೀರಿದಲಿ ನಂತ್ರರ ಬೋವಿಗಳಿಗೆ ವುಡುಗರೆ ೧೦ ಹ ಕೊಟ್ಟುಯಿಧಾಳೆ (ಮ್ಯಆರಿ. ೧೯೨೯, ೯೭-೯; ಸು. 1764) ;

ಈ ವೆನೀಸಿಯನರು . . . ಪುನಃ ತನ್ನ ಆಸ್ಥಾನಕ್ಕೆ ಹಿಂದಿರುಗಿ ಬರುವ ಭರವಸೆಯನ್ನು ಅವರಿಂದ ಪಡೆದ ನಂತರವೇ . . . ಏರ್ಪಾಡು ಮಾಡಿಸಿದನು (ಪ್ರವಾಇ. II, ೮). [ < ಅನಂತರ್ಮ ]

**ನಂದ** (ನಾ). ೧. ಸಂತೋಷ ; ಆನಂದ ; ಸಂಖ. 'ನಂದವಿಡಂ' ಪರಾ. ೨. ಕೃಷ್ಣನ ಸಾಕುತಂದೆ ; ನಂದಗೋಪ : ನಂದಾದಿಗೋಪರಿಂದು ಪುರಂದರಮಹಮೆಂದು ಹರ್ಷದಿಂ ಸಂಭ್ರಮಿಸಲ್ (ಜಗವಿ. ೪-೭೭) ; ನಂದ ನಿತ್ತಲು ಕೇಳ್ದು ವಸುದೇವನ ತದುಕ್ತಿಗಳ ನೊಂದು ಶಂಕಿಸಿ ಚಿತ್ತದೊಳಗೆ ಮುಕುಂದನನು ಮಟಿವೊಕ್ಕು ಮರಳಿದು ಬಂದನಾ ಮುಮ್ಮಾರ್ಗದಿಂದ ನಿಜಾಲಯಕ್ಕೊಲಿದು (ನಿಭಾಗ. ೧೦-೫-೨೭); ಮಂದಗಮನೆ ಇವನಾರೆ ಪೇಳಮ್ಮ . . . ನಂದನ ಕಂದ ಮುಕುಂದ ಕಾಣಮ್ಮ (ಪುರಂದ. ೨-೭೦-೧). 'ನಂದನಂದನ' ಪರಾ. ೩. ಚಾಣಕ್ಯನಿಂದ ರಾಜ್ಯವನ್ನು ಕಳೆದುಕೊಂಡ ಪಾಟಲೀಪುತ್ರದ ಒಬ್ಬ ರಾಜ ಮತ್ತು ಅವನ ವಂಶದ ಹೆಸರು : ಪಾಟಳೀಪುತ್ರವೆಂಬುದು ಪೊಲಿಲದನಾಳ್ವೊಂ ನಂದವಂಶದೊಂ ಪದ್ಮನೆಂಬೊಂ (ವಡ್ಡಾರಾ. ೧೫೦-೧೩) ; ನಂದರಿಗೆ ಮಂತ್ರಿಯಾದ ರಾಕ್ಷಸನು ಚಂದ್ರಗುಪ್ತನ ದೆಶೆಯಿಂದ ಭೀತನಾಗಿ ಆ ರಾಜ್ಯದಲ್ಲಿ ನಿಲ್ಲಲಶಕ್ಯವಾದ ಕಾರಣ ಇಲ್ಲಿಗೆ ಬಂದನೋ ! (ಮುದ್ರಾಮಂ. ೨೭೦). ೪. ಕುಬೇರನ ನವನಿಧಿಗಳಲ್ಲಿ ಒಂದು. ೫. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : ನವ, ಪದಾರ್ಥ, ರಂಧ್ರ, ನಂದ . . . ನಾಟ್ಯಾಂಗ ಇಂತಿನಿತುಂ ೯ಕ್ಕೆ ಪೆಸರು (ವ್ಯವಹಾ. ೧೧-೩). ೬. [ಛಂದ] ಒಂದು ವರ್ಣವೃತ್ತದ ಹೆಸರು : ದಿನೇಶನಿಂದತ್ತ ನೀಲಕಂಠರ್ ತನೂದರೀ ನಿಲ್ಕೆ ನಂದ[ಪಾಠಾಂ. ನಿಲ್ಕನಂಗ]ಮಕ್ಕುಂ(ಛಂದೋಂಬು. ೨-೭೧). [ ಸಂ. ]

**ನಂದಕ** (ನಾ). ೧. ಸಂತೋಷಗೊಳಿಸುವಿಕೆ ; ಆನಂದಗೊಳಿಸುವಿಕೆ. ೨. ಸಂತೋಷ ; ಆನಂದ. ೩. ಕತ್ತಿ ; ಖಡ್ಗ. ೪. ವಿಷ್ಣುವಿನ ಕತ್ತಿ,- ಖಡ್ಗ : ನಂದಕಮಂ ದಿವಿಜಗಣಾನಂದಕವಂ ಕೊಂಡು ಚೇದಿಪತಿಯೊಳ್ ಪೊಣರ್ದಂ ಮಂದರಧರಂ (ಜಗವಿ. ೭-೯೭) ; ಘನಕರಿಗಿಕ್ಕಿದಂಕುಶಮಿದಬ್ದ ಮುಕುಂದನ ನಂದಕಾಯುಧಂ (ರಾಜಶೇ. ೮-೦೦೦) ; ಓಹೋ, ಈ ನಂದ ಕಾಸಿಯು ಬಂದಿತು (ಭಾಸನಾ. ೫೧). ೫. ಕಪ್ಪೆ. ೬. ಕೃಷ್ಣನ ಸಾಕುತಂದೆ. ೭. [ಛಂದ] ಒಂದು ವರ್ಣವೃತ್ತದ ಹೆಸರು : ಬಂದು ವಹ್ನಿಯೊಳ್ ನಿಂದೊಡಾಲಗಂ ಸುಂದರಾಂಗಿ ಕೇಳ್ ಸಂದ ನಂದಕಂ (ಛಂದೋಂಬು. ೨-೭೭).

[ ಸಂ. ]

**ನಂದಕಿ** (ನಾ). = ನಂದಕ ೪ : ಭವನ ಶೂಲದ ಗಾಯದಿಂದವೆ ಕವಲುದಲೆಯಾದವರು ಬಲು ಮಾಧವನ ನಂದಕಿಯಿಂದ ಮೂಳಿಗಳಿದ್ದ ಬೆನ್ನವರು (ಕಾಶಿರಾ. ೨೦-೧೫). [ ಸಂ. ನಂದಕ ]

**ನಂದಗಿರಿ** (ನಾ). ಒಂದು ನಾಡಿನ ಹೆಸರು ; ಈಗಿನ ಕೋಲಾರ ಜಿಲ್ಲೆಯ ನಂದಿಬೆಟ್ಟದ ಸುತ್ತುಮುತ್ತಲಿರುವ ಪ್ರದೇಶವಿರಬಹುದು : ಮಹಾರಾಜಾಧಿರಾಜ ಕೊಳಾಲಪುರವರೇಶ್ವರ ನನ್ದಗಿರಿನಾಥಂ (ಎಕ. III, ನಂಜನ. ೧೫೫-೩; ಸು. 970) ; ಮಹಾರಾಜಾಧಿರಾಜಂ ಕೋಳಾಳಪುರ ವರೇಶ್ವರಂ ನನ್ದಗಿರಿನಾಥಂ ಜಯದುತ್ತರಂಗಂ ಗಂಗಚೂಡಾಮಣಿ . . . ವಿಕ್ರಮಾದಿತ್ಯದೇವರ್ (ಸೌಇಇ. XX, ೩೫-೩; 1055) ; ಮಹಾರಾಜಾಧಿರಾಜ ಪರಮೇಶ್ವರಂ ಕೋಳಾಲಪುರಪರೇಶ್ವರಂ ನಂದಗಿರಿನಾಥಂ ಮಂದ ಗಜೇಂದ್ರಲಾಂಛನಂ (ಎಕ. VII, ಶಿವಮೊ. ೪-೮೭; 1122).

[ ನಂದ + ಗಿರಿ$_1$ ]

**ನಂದಗೋಕುಲ** (ನಾ). ೧. ಯಮುನಾನದೀತೀರದಲ್ಲಿರುವ ಒಂದು ಸ್ಥಳದ ಹೆಸರು ; ಕೃಷ್ಣನ ಸಾಕುತಂದೆಯಾದ ನಂದಗೋಪನು ಇದ್ದ ಸ್ಥಳ : ಉತ್ತರಿಸಿ ಯಮುನೆಯನು ಹರಿಯನು ಹೊತ್ತುಕೊಂಡುರದೊಳಗೆ ಹೋಗಿ ಯದೂತ್ತಮನು ನಟ್ಟಿರುಳು ಹೊಕ್ಕನು ನಂದಗೋಕುಲವ (ನಿಭಾಗ. ೧೦-೪-೧೭). ೨. (ಅಲಂ) (ಮಕ್ಕಳಿಂದ ತುಂಬಿ) ಆನಂದಮಯವಾದ ಸಂಸಾರ, - ಕುಟುಂಬ : ಮಂತರವಾಡೇ ನಂದಗೋಕುಲವಾಗಬಹುದು (ದೀಪಹ. II, ೨೦೯) ; ಅವರ ಸಂಸಾರ ನಂದಗೋಕುಲವಾಗಿದೆ (ರೂಢಿ). [ ನಂದ + ಗೋಕುಲ ]

**ನಂದದೀವಿಗೆ** 'ನಂದಂ' ಪರಾ.

**ನಂದನ** (ನಾ). ೧. ಸಂತೋಷಗೊಳಿಸುವಿಕೆ ; ಆನಂದಗೊಳಿಸುವಿಕೆ. ೨. ಆನಂದ ; ಸಂತೋಷ : ನಂದನನಾವುದ ನಂದನನಂತಪ್ಪ ನಂದನಂ ಜನಿಕೆ ತಮಗೆಂದು ಧರೆಯೊಳಾನಂದದಿಂ ಬಯಸದವರಿಲ್ಲಾ (ವರ್ಧಪು. ೧೩-೧೦೪) ; ಶಂಕರ ನಿಮ್ಮ ಶ್ರೀಪದವ ಸಂದು ನಿಜದಿಂ ಧ್ಯಾನಿಸುವುದೇ ನಂದನಂ ವ್ಯಾಮೋಹದಿಂ ಘನವೆಂದು ಶಂಕರದಾಸಿ ಪೇಳಿದ ಜಡೆಯ ಶಂಕರಗೆ (ಶಂಕದಾ. ೧೭-೧೦). 'ಚೇತೋನಂದನ' ಪರಾ. ೩. ಮಗ ; ತನಯ ; ಪುತ್ರ : "ತನಯಂ ಸ್ತನಂಧಯಂ ತೋಕಂ ಸುತಂ ಸೂನು ತನುಜನಾತ್ಮಜನಪತ್ಯಂ ತುಕ್ ಪ್ರಸೂತಿ ನಂದನನೆನಲು ಪುತ್ರನೆನಿಸಿಕ್ಕು" (ಮಂಗರಾ. ೯೦-೯) ; ನಿನಗೆ ಭರತಾವನೀತಲಮೆನಿತನಿತುಮನಾಳ್ವನೊರ್ವ ನಾದಪ್ಪಂ ನಂದನಂ (ಆದಿಪು. ೮-೨೮) ; ನಿಜನಂದನರಂ ನೀನಿರೆ ನೃಪೇಂದ್ರ ಕೊಲ್ವರುಮೊಳರೇ (ಅಜಿಪು. ೧೦-೩೮) ; ನಂದನಜನ್ಮೋತ್ಸವದೊದವಿಂದಂ ಪರಿತಂದು ಪೂರ್ಣಪಾತ್ರಮ ತ್ಯಾನಂದವೊದವಲ್ಕೆ ಪರಿಜನಮೆಂದೆಳೆಕುಳಿ ಗೊಳ್ವ ಸೈಪು ಸಮನಿಸಿದಪುದೋ (ಕಾದಂಪೂ. ೩೩೩) ; ಆ ಕನಸುಗಳನನು ಕ್ರಮದಿಂ ಕೇಳ್ದು . . . ತತ್ಫಲಮನಱಪಲಂದಿಂತೆಂದಂ . . . ಮೃಗರಾಜನಿಂ ಪುರುಷಸಿಂಹಂ ಪುಟ್ಟುಗುಂ ನಂದನಂ (ಜಗವಿ. ೨-೮೩) ; ನಂದನನಕ್ಕುಂ ನಮಗಿನ್ನೆಂದಧಿಪನಮೋಘವಚನದಿಂ ವನಿತೆ ಮಹಾನಂದವ ನಾಂತಂಬುದರವದಿಂದಾನಂದಿಪ ಮಯೂರವನಿತೆವೊಲಾದಳ್ (ಚಂದ್ರಪು. ೧೩-೨೦) ; ಆ ಜಂಪತಿಗಳ್ಗೆ ಕಳಾರಾಜಿತಮತಿಗಳ್ಗೆ ತತ್ಸಹಸ್ರಾರದ ವಿಭ್ರಾಜಿತಸುರಪರನುರುತರತೇಜಂ ನಂದನಸಮಾಖ್ಯನಂದನನಾದಂ(ವರ್ಧಪು. ೧೩-೧೦೨ ; ನಂದನನೆಳಮೆಯ ಕೈಮೆಯನಂದಿಂಗಾ ನಂದಗೋಪನಾಲಿಸಿ ನಲಿದಂ (ಜಿಕವಿ. ೪-೧೯೪). 'ನಂದನನಂದನ' ಪರಾ. ೪. ಇಂದ್ರನ ತೋಟ, - ಉದ್ಯಾನವನ : ಸಾರಸಹಂಸಕೋಕಿಳಕುಳಧ್ವಾನೋತ್ಕರಂ ಚೆಲ್ವನಾಯ್ತು ಕರಂ ಸ [ಕ್ರ] ನಿಳಿಂಪದಂಪತಿಗಳಿಂದಾ ನಂದನಂ ನಂದನಂ (ಪಂಪಭಾ. ೫-೮೦) ; ನಂದನದಂದದಿಂದೆಸೆವಿನಂ ಬನಮಂ ಮನದಟ್ಟಱಿಂದೆ ಸಂಕ್ರಂದನಸನ್ನಿಭಂ . . . ವಿಶ್ವನಂದಿವಿಭು ಮಾಡಿಸಿದಂ (ವರ್ಧಪು. ೨-೨) ; ವನ ಇಂದ್ರನ ನಂದನದಂತಿದೆ (ಶಾಂತಲಾ. ೧೦) ; ಇನ್ನು ಎಲ್ಲಿಗೋಟ ನಂದನದ ತೋಟ! (ಗರಿ. ೯೯-೧೩). 'ನಂದನವನ' ಪರಾ. ೫. ತೋಟ ; ಉದ್ಯಾನವನ : ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇನಾಗಿಯುಮೇನೊ ತೀರ್ದಪು[ದೆ] ತೀರದೊಡಂ ಮಱಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್ (ಪಂಪಭಾ. ೪-೨೯) ; ಸುಳಿವಂಚೆಗಳಿಲ್ಲದುದಿಲ್ಲ ನಂದನಂ (ಜಗವಿ. ೨-೧೦) ; ಪ್ರಚುರಚಂದನನಂದನ ಗಂಧದಿಂ ದಿಶಾಪರಿಧಿಯನೆಯ್ದೆ ಬಾಸಣಿಸುತಿರ್ಪುದು ಸುಗಂಧಿಮಂಡಲ ವಿಳಾರಮಣೀರಮಣೀಯಕುಂಡಲಂ (ಚಂದ್ರಪು. ೩-೧೦) ; ಮರುಭೂಮಿ ನಗುವ ನಂದನವಪ್ಪುದಿದನೀಂಟೆ (ಶ್ರೀರಾಮಾ. ೧೪-೩೩೭). ೧, ೫ : ರಾಜಕೀರಚ್ಛದಾನಿಳಲೋಲತ್ಕಣಿಶಾಳಿಶಾಳಿ ಜನಚೇತೋನಂದನಂ ನಂದನಂ (ಜಗವಿ. ೨-೨) ; ಘನತರಭದ್ರಶಾಳದಿನಿತ್ತೆಡೆಮಾಡದೆ ನಂದನಕ್ಕೆ ನಂದನದಿನದೊಂದು ಬೇಗದೊಳೆ ಸೌಮನಸಕ್ಕೆ ತಗುಳ್ದು ಮತ್ತೆ ಸೌಮನಸದಿನೆಯ್ದಿ ಪಾಂಡುಕವನಕ್ಕಡರ್ದತ್ತು ಸುರೇಂದ್ರವಾರಣಂ (ಚಂದ್ರಪು. ೧೩-೧೦೪). ೬. ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತಾರನೆಯದು : ಮತ್ತಮಾ ವರುಷವೇ ಪ್ರಭವ ವಿಭವ . . . ನಂದನ . . .

ಅಕ್ಷಯವೆಂದೞವತ್ತು ತೆಱನಾಗಿಹುದು (ವಿವೇಕ. ೩೨೦) ; ನಂದನಸಂವತ್ಸರದ ಪಾಲ್ಗುಣ ಶು ೧ ಲು . . . ಗುಡಿಯ ಜಿರ್ಣಉದರ ಮಾಡಿದ ವಿವಾರ (ಎಕ. III (R), ನಂಜನ. ೩೩೨-೨; 1663). ೭. ಶಿವ. ೮. ವಿಷ್ಣು. ೯. [ಜೈನ] ರುಚಕಾಚಲದ ಜಿನನಿಲಯದ ಎಂಟು ಶಿಖರಗಳಲ್ಲಿ ಒಂದು : ಜಿನನಿಲಯರುಚಿರರುಚಕಾಚಲದ ಪೂರ್ವದಿಗ್ಭಾಗದ ವೈಡೂರ್ಯ ಕಾಂಚನಕನಕಾರಿಷ್ಟದಿಕ್ಸ್ವಸ್ತಿಕನಂದನಾಂಜನಮೂಲಕಂಗಳೆಂಬೆಂಟುಂ ಕೂಟಂ ಗಳೊಳ್ (ಆದಿಪು. ೭-೩ ವ). ೧೦. [ಸಂಗೀತ] ಒಂದು ರಾಗದ ಹೆಸರು.
[ ಸಂ. ]

**ನಂದನಂದನ** (ನಾ). ನಂದಗೋಪನ ಮಗ ; ನಂದಕುಮಾರ ; ಕೃಷ್ಣ : ಅಂತು ವಿಜಯಮಂಗಳಂ ನೆಗೞೆ ಗೋಕುಲಮಂ ಪೊಕ್ಕು ನಂದನಂದನಂ ಗೋಪಾಲವಿನೋದಮೆ ನಿತ್ಯೋತ್ಸವಮಾಗೆ ಸುಖದಿಂದಿರ್ಪನ್ನೆಗಂ (ಜಗವಿ. ೪-೫೮ ವ) ; ನಂದನಂದನಸನ್ನಿಭನು ಸಾನಂದದಿಂದಲೆ ನಮ್ಮುವನಂ ಕೃಪೆ ಯಿಂದ ಸಲಹಂಗೆ ದೇವ ಜಗದಾರಾಧ್ಯ ಗುರುರಾಯ (ಕುಮ್ಮಾ.ಆ. ೧-೧೨).
[ ನಂದ + ನಂದನ ]

**ನಂದನಚರ** (ನಾ). [ಜೈನ] ಹಿಂದಿನ ಜನ್ಮದಲ್ಲಿ ಮಗನಾಗಿದ್ದು ಸಂಸಾರ ಚಕ್ರದಲ್ಲಿ ಸುತ್ತುತ್ತಿರುವವನು : ಅರಸನುಮಾಗಳ್ ನೆತ್ತದ ಭರದಿಂ ಕೊಳ್ಳೆನುತುಮಿಕ್ಕೆ ನವಿಲಿಂ ಕೊಳ್ಳೆಂದರೆನುತ್ತೆ ಪಿಡಿದುದುದಂಬಾಚರಿ ಕುರ್ಕುರಿ ನೊಂದು ಬೀೞ್ವ ನಂದನಚರನಂ (ಯಶೋಚ. ೩-೪೨). [ ಸಂ. ]

**ನಂದನಬನ** (ನಾ). = ನಂದನವನ ೨ : ಕಾಗೆ ನಂದನಬನದೊಳಗಿರ್ದರೇನು ಕೋಗಿಲೆಯಾಗಬಲ್ಲುದೇ ಹೇಳಾ (ಬಸವ. ೯೮) ; ಹಿರಿಯ ಜಕ್ಕಿಯಂಮೆಯು ಕೆಱೆಯ ಹಿಂದಣ ನಂದನಬನದೊಳಗೆ ಗದೆ ಸಲಗೆ ಖ ೨ (ಎಕ. II (R), ೫೩೫-೮; 1250). [ ನಂದನ + ಬನ ]

**ನಂದನವನ** (ನಾ). ೧.ಇಂದ್ರನ ವನ,-ಉದ್ಯಾನವನ : ನಂದನವನದೊಳ ಗೇನೇಂ ಬಂದಪೊ ಮರನೆಂದು ಕಂತು ಬೆಸಗೊಳೆ ಮಾವಿಂ ಬಂದಿರ್ದುವೆಂದು ಬಿನ್ನವಿಪಂದದೆ ಕೋಗಿಲೆಗಳುಲಿದುವಾವುದ್ರುಮದೊಳ್ (ಅಜಿಪು. ೭-೧೩) ; ನಂದನವನಮಧ್ಯದ ಕೊಳದಿಂದಗಲದ ಹಂಸಮಿಥುನಮೆನೆ . . . ನಲಿಯು ತಿರ್ದರಾ ದಂಪತಿಗಳ್ (ಜಗವಿ. ೨-೫೨) ; ನಂದನವನಸಂಭವಹರಿಚಂದನ ಸಂತಾನ . . . ಕುಸುಮಕೋಟಿಯಂ (ಪುಷ್ಪಪು. ೧೧-೪೪) ; ನಮ್ಮ ದೊರೆ ನಂದನವನಕ್ಕೆ ಬೇಂಟೆವೋಗಿ ತಂದಿರ್ಪನೀ ಕಂದರ್ಪನಂದನನನ್ ! (ಚಂದ್ರಸ. ೩೯-೧). ೨. (ಸುಂದರವಾದ) ತೋಟ ; ಉದ್ಯಾನವನ : ಬರಿಸುವೆನಿಂದು ನಂದನವನಾಂತರದಲ್ಲಿಗೆ ಕಾಂತನಂ ಸಮಾಂತರಿಸುವೆನಂತ ನೆಂತಸುಖಸಂಗತಮಂಗಳಕಾರಣಂಗಳಂ (ಕವಿರಾ. ೨-೧೦೧) ; ನೀನುಮಮಾಮುಂ ಕಿಱಿಯಂದೊರ್ವರುಪಾಧ್ಯಾಯರ ಪಕ್ಕದೊಳೋದುಮಂದು ನಂದನವನ ದೊಳಗೆ ನೀನೆನ್ನ ಪೂಣ್ದ ಪ್ರತಿಜ್ಞೆಯಂ ನೆನೆದಾ (ವಡ್ಡಾರಾ. ೧೨೫-೫) ; ನಂದನವನಪವನಂ ಬಟ್ಟವಂದೊಡಗೊಂಡೊಯ್ದು ಪುಗಿಸೆ ಬನಮಂ ಪುಗಲೆಂಬೊಂದನ್ನಭೃತಕಾಣತಿವಂದಂತಾಯ್ತತನು ಬೆಸಸೆ ಕುಸುಮಾ ವೋದಂ (ಶಾಂತಿಪು. ೮-೩) ; ಶ್ರೀಕಾಳಂ ದೇವತಾರ್ಚನಂಗೆಯ್ವುದಕ್ಕಂ ದೇವರ್ಗ್ಗೆ ನಂದ್ನವನಂ ಮಾಡ್ಪುದಕ್ಕಂ . . . ಬ್ರಹ್ಮಲಿಂಗಿಭಟರ್ಗ್ಗೆ ಕೊಟ್ಟುದು (ಮೈಆರಿ. ೧೯೯೭, ೨೮-೦೭; 1032) ; ಆ ದ್ವಿತೀಯ ಮುನೀಶ್ವರ ನಗ್ರಮುನೀಶ್ವರಾದೇಶದಿಂ ನಂದನವನೋದ್ದೇಶದೊಳಿರ್ದ ಜನ್ಮಾಂಧಕಿ ಯಲ್ಲಿಗೆ ಬಂದು ಮುಂದೆ ನಿಂದು (ಸುಕುಮಾ. ೫-೨೩ ವ) ; ನಂದನವನಂಗಳಿಂ ಮಾಕಂದಮಹೀಜಾತರಂಜಿತೋದ್ಯಾನಗಳಿಂ ಸೌಂದರತೆವಡೆದು ತೋಱುವ ನಂದಿಗ್ರಾಮಕ್ಕೆ ಬಂದನಾ ನೃಪತನಯಂ (ಪುಣ್ಯಾಸ್ರ. ೩-೯).
[ ನಂದನ + ವನ ]

**ನಂದನವಿಮಾನ** (ನಾ). [ಜೈನ] ಸ್ವರ್ಗಲೋಕದಲ್ಲಿರುವ ಒಂದು ಸ್ಥಳದ ಹೆಸರು : ವರಾಹಾರ್ಯನುಂ ನಂದನವಿಮಾನದೊಳ್ ಮಣಿಮಕುಟ ಕೇಯೂರಮಣಿಕುಂಡಲವಿಭೂಷಣನಾಗಿ ಮಣಿಕುಂಡಲನೆಂಬೊಂ ದಿವಿಜ ನಾದಂ (ಆದಿಪು. ೫-೭೦ ವ). 'ವಿಮಾನ' ಪರಾ.
[ ನಂದನ + ವಿಮಾನ ]

**ನಂದನಾವಲಿ,** ನಂದನಾವಳಿ (ನಾ). ವನಗಳ ಗುಂಪು,-ಸಮೂಹ : ಊರ್ಜಿತವಸಂತಂ ಸಂತತಂ ನಂದನಾವಲಿಗೆಲ್ಲಂ ರತಕೇಳಿರಾಗವನಿಶಂ ಸ್ತ್ರೀಪುಂವ್ರಜಕ್ಕೆಲ್ಲಮುಜ್ಜ್ವಲಚಂದ್ರಾತಪವೊರ್ಮೆಯುಂ ರಜನಿಜಾತ ಕ್ಕೆಲ್ಲಮಾ ದೇಶದೊಳ್ (ಜಗವಿ. ೨-೩). **ನಂದನಾವಳಿ :** ಕರಜಳಧರ ಕಳಧೌತೋತ್ಕರವರ್ಷದೆ ವಂದಿ ನಂದ[ನಾ]ವಳಿಗಳ ವಿಸ್ತರಿಪುವೆನೆ ದಾನಮಖಿ ಳೋರ್ವ್ವರೆಗೆ ವಿಚಿತ್ರೋಕ್ತಿ ರೂಪವಿದ್ಯಾಧರಿಯ (ಸೌಇಇ. XX, ೪೯-೩೭; 1076 ?). [ ನಂದನ + ಆವಲಿ ]

**ನಂದನಾವಳಿ** 'ನಂದನಾವಲಿ' ನೋ.

**ನಂದನೆ** (ನಾ). ಮಗಳು ; ತನುಜೆ : "ವೇಣ್ ದುಹಿತೆ ನಂದನೆ ಪುತ್ರಿ ಸುತೆಯೆನಿಕ್ಕುಂ" (ಮಂಗರಾ. ೯೧-೯) ; ಈ ಭುಜಾದಂಡಮುಂ . . . ಈ ಧನುರ್ದಂಡಮುಮುಳ್ಳಿನಂ ದ್ರುಪದನಂದನೆ ಸಂಧಿಯುನಾಗಲೀವೆನೇ (ಗದಾಯು. ೧-೭೩) ; ಕಮಲಭವ ಜಗವಱಿಯೆ ನಂದನೆಯ ಏದೆಯನು ನೆಱೆ ಮಾಡಿಯರೆವೇಣ್ಣಾದನೀಶ್ವರನಿಂದ್ರಗಿಂದ್ರರ ಹಾದಿಯದು ನಗೆಯು ತ್ತಣವರನು ಹೇಳಲೀನೆಂದ (ತೊರರಾ. ೧-೫-೩೭) ; ನಂದನೆ ನೊಂದಪಳೆಂ ದೊಲ್ದಿಂದುಧರಂ ಪಿಡಿದು ನೆಗಪಿ ನಿಜಕರದಿನವಳ್ತಂದಣ್ಣೆವಾಲನೀಂಟದಂ (ವೃಷವಿ. ೯-೮೨). [ ಸಂ. ನಂದನಾ ]

**ನಂದನೋತ್ಕರ** (ನಾ). = ನಂದನಾವಲಿ : ಶರತ್ಪವನತಾಪದಿಂ ಕೊರಗಿ ಕೂಡೆ ಕೋರೈಸಿದಾ ನರೇಶ್ವರವಧೂಕದಂಬಕಮನಾಱಿಸಲ್ಕಾಗಳಬ್ಜರೇಣು ಗಳನೆತ್ತಿಬಂದುದಿದಿರ್ವರ್ಪವೋಲ್ ನಂದನೋತ್ಕರಂಬಿಡಿದು ಮಾರುತಂ ಚಳತರಂಗೆಯಿಂ ಗಂಗೆಯಿಂ (ಆದಿಪು. ೧೧-೫೩). [ ನಂದನ + ಉತ್ಕರ ]

**ನಂದಯಂತಿ** (ನಾ). [ಸಂಗೀತ] ಒಂದು ರಾಗದ ಹೆಸರು : ಗಾಂಧಾರಿ ರಕ್ತೋಗಾಂಧಾರಿ . . . ನಂದಯಂತಿ ಕರ್ಮಾವ್ಮಭಚಾರಿಣಿ ಕೌಶಿಕಿಯೆಂಬ ಹತ್ತು ರಾಗಂಗಳು ಮಧ್ಯಮಗ್ರಾಮದಿಂ ಪುಟ್ಟಿದವು (ವಿವೇಕ. ೨೩೩).
[ ಸಂ. ನಂದಯಂತೀ ]

**ನಂದವರ್ತಿ** (ನಾ). = ನಂದಿಬಟ್ಟಲು : ನಂದವರ್ತಿಯನೊಲಿವನೆಮ್ಮ ಶಂಕರ ನೆಂಬ ಮಂದ್ಯೆಪ ಕಂಪೆ ಸಾಲ್ವಸ್ಮೆದು ಶಶಿಧರಗೆಂಬ (ಬಸರ. ೭-೫೩).
[ <ಸಂ. ನಂದ್ಯಾವರ್ತ ]

**ನಂದವಾಡಿಗೆ** (ನಾ). ಒಂದು ಊರಿನ ಹೆಸರು: ನವಿಲೆಯ [ಜಟೆ]ಯ ಸಂಕರ ದೇವಾಲಯಮುಮಂ ನನ್ದವಾಡಿಗೆಯೊಳ್ ಶ್ರೀನಾಗಲೇಶ್ವರಮುಂ(ಂ) ನಲ್ಲಿಯ ಮಟಮುಮಂ (ಸೌಇಇ. XI-i, ೧೦೩-೨೭; ?). [ ? ]

**ನಂದವಿಡು** (ಕ್ರಿ). ಸಂತೋಷಗೊಳಿಸು ; ಆನಂದಪಡಿಸು : ಅಂದು ಗುರುಮನವೊಲಿದು ಪಾರ್ಥನ ನಂದವಿಟ್ಟನು ತನ್ನ ವಿದ್ಯಾವೃಂದವನು ತಾನೀವೆನೆನುತಲಿ ದ್ರೋಣ ಹರುಷಿಸಿದ (ಸಂಭವ. ೧೮-೧೯).
[ ನಂದ + ಇಡು$_1$ ]

**ನಂದವಿಲ್ಮುಡಿ** (ನಾ). ಒಬ್ಬಾತನ ಹೆಸರು : ನನ್ದವಿಲ್ಮುಡಿಯುರಾ ಮಗನೆ ಪಲಿಪಱೆ (ಎಇ. IX, ೨೦-೬ ; 800). [ ? ]

**ನಂದಳಕ** 'ನಂದು' ಪರಾ.

**ನಂದಾಉಳ** 'ನಂದು' ಪರಾ.

**ನಂದಾತ್ಮಜ** (ನಾ). = ನಂದನಂದನ : ನಾರಾಯಣ ನಾಗಶಯನ ನಂದಾತ್ಮಜ ಮಾರಜನಕ ಮಂಜುಳಾಂಗ ಸಾರಸನಯನ ಸಕಲಲೋಕೇಶ್ವರ ಸಾರಿದೆ ಸಲಹೆನ್ನನೊಲಿದು (ಶತಸಾಂ. ೬೧-೩). [ ನಂದ + ಆತ್ಮಜ ]

**ನಂದಾದೀಪ** 'ನಂದು' ಪರಾ.

**ನಂದಾದೀಪ್ತಿ** 'ನಂದು' ಪರಾ.

**ನಂದಾದೀವಿಗೆ** 'ನಂದು' ಪರಾ.

**ನಂದಾದ್ಯುತಿ** 'ನಂದು' ಪರಾ.

**ನಂದಾಪುರ** (ನಾ). ಒಂದು ಊರಿನ ಹೆಸರು ; ಈಗಿನ ಮಂಗಳೂರಿನ ಸಮೀಪದ ಒಂದು ಹಳ್ಳಿ, ಹಿಂದೆ ಇದು ನಂದರಅರಸರ ರಾಜಧಾನಿಯಾಗಿತ್ತು : ನನ್ದಾಪುರದೊಳ್ ಕೇಶೇಶ್ವರಮುಮಂ ಕೋಹಳ್ಳಿಯೊಳ್ ದಾನವಿನೋದತ್ರೈಪುರುಷದೇವರ ಸಾಲೆಯುಂ . . . ಮಾಡಿಸಿ (ಸೌಇಇ. XI-i, ೧೦೩-೨೦ ; ?). [ ನಂದ + ಪುರ$_2$ ]

**ನಂದಾಬೆಂಕಿ** 'ನಂದು' ಪರಾ.

**ನಂದಾಬೆಳಕು** 'ನಂದು' ಪರಾ.

**ನಂದಾವನ** 'ನಂದು' ಪರಾ.

**ನಂದಾವಳ** 'ನಂದು' ಪರಾ.

**ನಂದಾವುಳ** 'ನಂದು' ಪರಾ.

**ನಂದಾವೆಳಕು** 'ನಂದು' ಪರಾ.

**ನಂದಿ** (ನಾ). ೧. ಸಂತೋಷಗೊಳಿಸುವವನು ; ಮಗ. ೨. ಸಂತೋಷಪಡುವವನು : ಅಂತು ದುಶ್ಶೀಲ ದುರಾಚಾರ ದುರ್ಯಶೋನಂದಿಯಾದ ವಿಶಾಖನಂದಿ . . . ಪರಿಭ್ರಮಣಪರಿಣತನಾಗಿ ತೊಟಲ್ದೊಂ (ವರ್ಧಪು. ೨-೩೬ ವ). ೩. ಶಿವನ (ವಾಹನವಾದ) ಒಬ್ಬ ಅನುಚರ ; ಬಸವ : "ನಂದಿ ತಂದುಮಕ್ಕಂ" (ಮಂಗರಾ. ೫-೧೪) ; ಏಱೆ[ಯೆ] ನಂದಿ[ಯನಾ] . . . ಭೂತನಾಥಂ ಬಂದಂ (ಪಂಪಭಾ. ೧೨-೦೩೪) ; ನಾದಪ್ರಿಯ ನಂದಿಯ ನೇಱೆಕೊಂಡು ಅತೀತನ ಮೇಲೆ ಆನಂದಸಿಂಹಾಸನವಿಕ್ಕಿ ಕುಳ್ಳಿತ್ತು ಕೂಡಲಸಂಗಮದೇವರ ದೇಪತ್ತ ಕೆಟ್ಟಿತ್ತು (ಬಸವ. ೯೩೦) ; ಆ ರಜತಗಿರಿ ಶಿಖರದೊಳ್ ಮದನಾರಿಯುಂ ಗೌರಿಯುಮುಚಿತಲೀಲಾರಚಿತಸುಖಸಂಕಥಾಪ್ರಸಂಗಕೌತುಕದೊಳಿರಲು ವೀರ ವೀರಕ ನಂದಿರೇಣುಕ . . . ಪ್ರಮಥರೋಲೈಪ ಸಮಯದೊಳು (ಬಸಪು. ೦-೫೨) ; ನಂದಿಯನು ಏಱೆದನ ಜಡಿದಿರನ ಸೂಡಿದನ ಕಂದನ ಬೇಡಿ ನಲಿದಾನು ನೆಗವುತ್ತ ಮುಂದೆ ಪೇಳುವೆನು (ಸರ್ವಜ್ಞ. ೦) ; ಶಂಕರನ ಮುಂದೆ ನಂದಿಯೂ ಅಷ್ಟು ವಿಧೇಯತೆ ಇಂದ ನಮ್ರತೆಯಿಂದ ನಿಲ್ಲುತ್ತಾನೋ ಇಲ್ಲವೋ (ಸುಪಸಂ. ೮೦) ; ಕೆಂದಬಣ್ಣದ ಬಿಲು ಚೆಂದ ಚಂದ ಹೋರಿಗಳು ನಂದಿಯ ಹಂಗ ಮೈಮಾಟ ಹಂಡ ಬಂಡ ದೊಂದಿ ನಡೆದವು ಸಾಲುಗೊಂಡು (ಸಿದ್ಧಪು. ೦೭-೨೦). 'ನಂದಿವಾಹನ' ಪರಾ. ೪. ಬಸವನ ವಿಗ್ರಹ,-ಮೂರ್ತಿ : ನಂದಿಗಳು ಗಾತ್ರದಲ್ಲಿ ದೊಡ್ಡದಾಗಿವೆ (ಮೈವಾಸ್ತು. ೧೧೦). ೫. ಒಂದು ಬಗೆಯ ಮರ : "ಪುಂಗವಪೆನಲ್ ನಂದಿ" (ಮಂಗರಾ. ೩೭-೦೯) ; ನಂದಿ, ಬೋಳಂದರು, ಬೆಲ್ಮತ್ತಿ (ಮೈಜಿಗಿ. ೪೯-೯೭೪) ; ಮರಗಳು : ಹೆಸವ, ಹೆಬ್ಬಲಸು . . . ತಡಸಲು, ಶಪಸಿ, ನಂದಿ, ಕುಂಕುಮ, ಸಂಪಿಗೆ (ನಮ್ಮನು. ೨೩೬). 'ನಂದಿಮರ', 'ನಂದಿವೃಕ್ಷ' ಪರಾ. ೬. [ಜೈನ] ಸಂಘಗಳಲ್ಲಿ ಒಂದು ಬಗೆ : ಸಂಘಗಳು : ಮೂಲ, ನಂದಿ, ಯಾಪನೀಯ, ಯಾಪನೀಯ ನಂದಿ, ದ್ರಾವಿಡ, ಶ್ರೀಸಂಘ, ಕಿತ್ತೂರು (ಕಶಾಅ. ೮೭). 'ನಂದಿಸಂಘ' ಪರಾ. ೭. ಜೈನಮುನಿಗಳ ಗಣಗಳಲ್ಲಿ ಒಂದು ಬಗೆ : ಗಣಗಳು ದೇವ, ಸೇನ . . . ನಂದಿ, ಗ(ಕ)ವಾಟ . . . ಆಜಿ (ಕಶಾಅ. ೮೭). ೮. ಒಬ್ಬ ಜೈನಯತಿಯ ಹೆಸರು : × × × ಪೌತ್ರ ನನ್ದಿಮುನಿಪ × × × ಮಾಯ್ಯಾನ × × × (ಎಕ. II, ೧೧೧-೩; ಸು. 700). ೯. ಗ್ರಾಮಾಧಿಕಾರಿ (?) : ಸೀಮಾಂತರಸ್ಯ ಸಾಕ್ಷಿಣಾಂ ಕೊತ್ತಮಜ್ಜಲದ ನಂದಿಯರು ಹಡದ ನಡೆದು ವೊಡೆಯರು ಗಣಿಗನೂರ ಅನವಕರು ತಲಕಾಡಹನ್ನುಮರು ಮದ್ದೂರ ಗಣೆಯರುಂ (ಎಕ. III (R), ನಂಜನ. ೨೬೨-೨೬ ; 969). ೧೦. (?) : ನನ್ದಿಯ ಸ್ಥಾನ ಮುಮೆನಾಯಗ ×× ಮುನಿಚಿಪೆನಂದಜಿಡ್ಗೆ ವನ್ದಿಬ್ಬು ತುರುವನಿಕ್ಕಿಸಿ ಸತ್ತಂ (ಎಕ. IX, ದೇವನ. ೯೨-೯ ; 900 ?).

**ನಂದಿ ಬಿಡು** = ಸತ್ತವರಿಗಾಗಿ ಮಾಡುವ ಅಪರಕರ್ಮದ ಸಂಬಂಧದಲ್ಲಿ ಒಂದು ಮರಿಯೆತ್ತನ್ನು ಸ್ವತಂತ್ರವಾಗಿ ಓಡಾಡಲು ಬಿಡು : ಸತ್ತಾತನು ವಂಶದ ಹಿರಿಯನಾದುದರಿಂದ ಉತ್ತರಕ್ರಿಯೆ ಮಾಡುವಾಗ ಯಾವುದಕ್ಕೂ ಕಡಮೆ ಮಾಡದೆ, ನಂದಿ ಬಿಡುವುದಕ್ಕೂ ಕೈಹಿಡಿಯಲಿಲ್ಲ (ರೂಢಿ). **ನಂದಿಯ ಕುಣಿತ** = ನಂದಿಕೋಲನ್ನು ಹಿಡಿದು ಮಾಡುವ ಕುಣಿತ : ಆ ದಿನದ ಉತ್ಸವದಲ್ಲಿ ನಂದಿಯ ಕುಣಿತ ಬಹಳ ಆಕರ್ಷಣೆಯುಳ್ಳುದಾಗಿತ್ತು (ರೂಢಿ). **ನಂದಿಯ ಕೋಲು** = ನಂದಿಚಿಹ್ನೆಯ ಧ್ವಜವನ್ನುಳ್ಳ ಕೋಲು ; ನಂದಿಕಂಬ : ಆಕೆ ಕುರೂಪಿ ; ನಂದಿಯ ಕೋಲಿನಂತೆ ಉದ್ದವಾದ ಸೊರಗಿದ ದೇಹ (ಭೂಮಿತಾ. ೭೨). **ನಂದಿಯ ಧ್ವಜ** = ನಂದಿಧ್ವಜ ೩: ನಂದಿಯ ಧ್ವಜವನ್ನು 'ನಂದೀಕೋಲು' 'ನಂದೀಕಂಬ' ಎಂದೂ ಕರೆಯುತ್ತಾರೆ (ರೂಢಿ). **ನಂದಿಯ ಪಳವಿಗೆ, ನಂದಿಯ ಹಳವಿಗೆ** = ನಂದಿಧ್ವಜ ೧: ನಂದಿಯ ಪಳವಿಗೆ ಮೀಳಿರುತೆ ದುಂದುಭಿರವದೊಳಗೆ . . . ಪೊಕ್ಕಂ (ಶ್ರೀಪುವಿ. ೩೨-೭೯ ; ಇಂದುಚೂಡನು ಸುತ್ತಿದೋಲೆಯನೊಂದು ನಂದಿಯ ಹಳವಿಗೆಯನಾಗಳು ಹಿಡಿದುಕೊಂಡು . . . ಕಣಜಂಗಳಿಗೆ ಪರಿತಂದು (ಬಸಪು. ೫೨-೦೬). **ನಂದಿಯುಂಗುರ**=ಶಿವಭಕ್ತರು ಧರಿಸುವ ಬಸವನ ಕೆತ್ತನೆಯುಳ್ಳ ಉಂಗುರ.

[ ಸಂ. ನಂದಿನ್ ]

**ನಂದಿಕ** (ನಾ). ಶಿವನ ವಾಹನ ; ನಂದಿ ; ಬಸವ. 'ನಂದಿಕೇಶ' ಪರಾ.

[ ಸಂ. ]

**ನಂದಿಕಂಬ** (ನಾ). ನಂದಿಯ ವಿಗ್ರಹವಿರುವ, ಅಲಂಕೃತವಾದ ಉದ್ದವಾದ ಕಂಬ : (+). 'ನಂದಿಕೋಲು' ಪರಾ.

[ ನಂದಿ + ಕಂಬ$_1$ (<ಕಂಭ) ]

**ನಂದಿಕಲ್ಲುಸೊಪ್ಪು** (ನಾ). ಒಂದು ಬಗೆಯ ಸೊಪ್ಪು : (ಮೈಜಿಗಿ. ೧೨-೨೨೦). [ ? + ಸೊಪ್ಪು$_2$ ]

**ನಂದಿಕಾಡ** (ನಾ). ಒಬ್ಬಾತನ ಹೆಸರು : ಕೂಡಲೂರ್ಪ್ಪಾಡಿ ಒಡೆಯ ನನ್ದಿಕಾಡನಾ ಎಱನಾಗನಾ ವ್ಯವಹಾರದನ್ತರಂ ಸಾಲವಿಲ್ಲಾಮ್ (ಎಕ. X, ಕೋಲಾರ : ೭-೩ ಸು. 760). [ ? ]

**ನಂದಿಕೆ** (ನಾ). (ದೀಪ ಮೊದಲಾದುವು) ನಂದುವಿಕೆ; ಆರಿಹೋಗುವಿಕೆ: ಒಂದಿಕೆ, ಒಂದಿಕೆಗಳ್; ನಂದಿಕೆ, ನಂದಿಕೆಗಳ್ (ಶಬ್ದಾನು. ೫೬೮ ಪ್ರಯೋ).

[ ನಂದು + -ಇಕೆ ]

**ನಂದಿಕೇಶ** (ನಾ). ೧. = ನಂದಿಕೇಶ್ವರ ೧ : ಶ್ರೀಸದಾಶಿವನೊಡನೆ ಗರ್ವಿಸಿ . . . ವ್ಯಾಸದೇವಂ ಕೈಯನೆತ್ತಿದೊಡಾ ಸಮಯದಲಿ ನಂದಿಕೇಶನು ಕೀಸಿ ಮುಱಿಯನೆ ಆತನೆರಡು ಕರಂಗಳಂ ಮುನಿದು (ಬಸಪು. ೫೪-೪೯) ; ಎಲೆ ಗುರುವೆಯಾ ಶುಕ್ರಗಾ ಮಂತ್ರವೇತೆಟದೆ ನೆಲೆಯಾಯ್ತಿದು ಪೇಳ್ವುದೈ ನಂದಿಕೇಶ (ವೀಶೈಪು. ೨-೧೩-೨೦). ೨. ಈಶ್ವರ ; ಶಿವ. ೧, ೨ : ಶ್ರೀಶೈವಶ್ರೇಯಮುಂ ಮಾಳ್ಕೆಮಗನವರತಂ ನಂದಿಕೇಶಂ ಮಹೇಶಂ (ರಾಜಶೇ. ೦-೦). [ ನಂದಿಕ + ಈಶ ]

**ನಂದಿಕೇಶ್ವರ** (ನಾ). ೧. ಈಶ್ವರನ ಪ್ರಮಥಗಣದಲ್ಲಿ ಪ್ರಮುಖನಾದವನು ; ಬಸವ : ನಂದಿಕೇಶ್ವರ ಭೃಂಗಿನಾಟ್ಯ ನಮ್ಮ ಲಿಂಗನ ಮುಂದೆ (ಬಸವ. ೫೬೩) ; ಮೃಡ ಮೃಡಾಣಿ ಕುಮಾರ ಗಣಪತಿ ಮೃಡಸಮಾನದ ನಂದಿಕೇಶ್ವರ (ಸಾನುಚ. ೯-೯) ; ಮನ್ಮಥದಿಂದಯೋನಿಜನಾಗಿಯೊಗೆದನು ನಂದಿಕೇಶ್ವರನೆಂಬ ಪೆಸರಿಂದಾ ಶಿಲಾದಂಗೆ (ಬಸಪು. ೨-೧೦) ; ಚಂದಯ್ಯ ಪ್ರೀತಿಯ ನಂದಿಕೇಶ್ವರನ ಮುನ್ನ ಕಂದ ಗಣಪದೇವಯ್ಯ ಅಂದದ ಶಿವಶರಣರುಯಿರುತಿರೆ ಚಂದವನೇನ ಬಣ್ಣಿಸುವೆ (ಕಪೂತ. ೬-೫೬). ೨. ಈಗಿನ ಬಿಜಾಪುರಜಿಲ್ಲೆಯ ಬಾದಾಮಿ ಹತ್ತಿರದ ಒಂದು ಗ್ರಾಮದ ಹೆಸರು. [ ನಂದಿಕ + ಈಶ್ವರ ]

**ನಂದಿಕೇಶ್ವರಶೈವ** (ನಾ). [ಶೈವ] ಶೈವಮತದ ಎಂಟು ಪ್ರಭೇದಗಳಲ್ಲಿ ಒಂದು : ಶೈವಮತದಲ್ಲಿ ನಾವು ಎಂಟು ಪ್ರಭೇದಗಳನ್ನು ಕಾಣಬಹುದು. (೧) ದ್ವೈತ ಪಾಶುಪತ, (೨) ದ್ವೈತಶೈವಸಿದ್ಧಾಂತ, (೩) ದ್ವೈತಾದ್ವೈತಲಕುಲೀಶ ಪಾಶುಪತ, (೪) ವಿಶಿಷ್ಟಾದ್ವೈತಶೈವ, (೫) ವಿಶೇಷಾದ್ವೈತ (ವೀರಶೈವ), (೬) ನಂದಿಕೇಶ್ವರಶೈವ, (೭) ರಸೇಶ್ವರಶೈವ, (೮) ಕಾಶ್ಮೀರ ಶೈವ (ಭಾರದ. ೨೦೦). [ ನಂದಿಕೇಶ್ವರ + ಶೈವ ]

**ನಂದಿಕೇಶ್ವರಸಂಹಿತೆ** (ನಾ). [ಶೈವ] ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಗಳಲ್ಲಿ ಒಂದು : ಸ್ಥಿರಸಂಹಿತೆ ಸ್ಥಾಣುಸಂಹಿತೆ ಮಹತ್ಸಂಹಿತೆ ನಂದಿಸಂಹಿತೆ ನಂದಿಕೇಶ್ವರಸಂಹಿತೆ ಏಕಪಾದಪುರಾಣ ಶಂಕರಾಗಮ ನೀಲಭದ್ರತಂತ್ರ ಶಿವಭದ್ರಾಗಮ ಕಾಲಭೇದಾಗಮ ಶ್ರೀಮುಖಾಗಮ ಶಿವಶಾಸನಾಗಮ ಶಿವರೇಖಾಗಮ ದೇವೀಮತವೆಂದು ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಂಗಳು (ವಿವೇಕ. ೭೦). 'ನಂದಿಸಂಹಿತೆ' ಪರಾ. [ ನಂದಿಕೇಶ್ವರ + ಸಂಹಿತೆ ]

**ನಂದಿಕೋಲು** (ನಾ). = ನಂದಿಕಂಬ : ಆನ್ನಿಜ ಸುಲದಿ ಕಂಬಕಂ ಕುಲಿಶಾವನ ಶಿತಾಗ್ರ ನಂದಿಕೋಲು ಸಂಗಮೇಶ್ವರನ ನುಡಿಗೆ ಸಬಳ ಶಾಸ್ತ್ರಿಕಸಯಲ್ಲಿ ಕತ್ತಿ ತೆಡಾಯ ಖಡಲ್ಲಿಡೆಯಲ್ಲಿ ಬಿಲ್ಲು ನಾರಾಚ ಗದೆ ಸೂಲ್ಲಿ ಚಿಕ್ರ ವಂಕ್ಕಿ ಚೂರ್ರಿ ಜಯ ಬಾಡಿಶೃಂಗಾರ ತೊಡಪೂ ಸಂಣ ಚಂದ್ರಾಯುಧಾ ಚಿಲುತಲಿ ಮೊದಲಾದಾ ಬತ್ತೀಶಾಯುಧಾ (ಎಕ. XVI, ಗುಬ್ಬಿ. ೭೪-೨೦; ಸು. 1672) ಒಂದು ನಂದಿಕೋಲಿನಷ್ಟು ಆಳ ಅವ (ದೀಪಹ. I, ೮೯); ಗಣೆ ಅಥವಾ ನಂದಿಕೋಲನ್ನು ಮೆರಸುತ್ತ ಒಯ್ಯುವುದು (ಕರ್ನಾಪೂ. II, ೬೯).

**ನಂದಿಕೋಲು ಕುಣಿತ** = ನಂದಿಕಂಬವನ್ನು ಹಿಡಿದು ಮಾಡುವ ನೃತ್ಯ : ನಂದಿಕೋಲು ಕುಣಿತದಲ್ಲಿ ಆ ಕಂಬಕ್ಕೆ ಕಟ್ಟಿರುವ ತಾಳಗಳು, ಕುಚ್ಚುಗಳು, ತಾಳಹಾಕಿದಂತೆ ಶಬ್ದಮಾಡುತ್ತವೆ (ರೂಢಿ). **ನಂದಿಕೋಲು ಕುಣಿಸು** = ನಂದಿಕಂಬವನ್ನು ಹಿಡಿದು ಕುಣಿ: ನಂದಿಕೋಲು ಕುಣಿಸ್ತಾ ಇದ್ದೀಯಾ? (ತುಂಗಭ. ೩). [ನಂದಿ + ಕೋಲು$_1$ (<ಕೋಲ್$_1$)]

**ನಂದಿಗುಂದ** (ನಾ). ೧. ಒಬ್ಬಾತನ ಹೆಸರು : ನಂದಿಗುನ್ದರ್ಗೆ ದಾನಂ ಗೊಟ್ಟದು ಕೆಸುಗೊಳದ ಮಾಜನಂ ಒನ್ದಡುವು ಮರ್ದೂರೊಳ್ (ಎಕ. IV, ಹೆಗ್ಗಡ. ೪-೩೬; ಸು. 750). ೨. ಒಂದು ಊರಿನ ಹೆಸರು : ನನ್ದಿಗುನ್ದದ ಪಸುಪೊನ್ನಮೊಟಿಯಿಂ × × × ಗಾಣಿಗಾವುಣ್ಡನಾಡೆಲ್ಲ ಪಾಟಿದೊಡಂ (ಎಕ. IX, ದೇವನ. ೪೨-೬; ಸು. 900 ?). [ ? ]

**ನಂದಿಗೊಳಿ** (ನಾ). ಒಂದು ಊರಿನ ಹೆಸರು : ಶ್ರೀಮದಿಱಿವನೊಟಮ್ಬಾಧಿರಾಜರ ನನ್ದಿಗೊಳಿಯ ಗವುಣ್ಡ × × ಮಿಯಾ ಭಸಪ್ಪಕೆ . . . ದೇವ ಭೋಗ × × × ಎಲ್ಲ ಸಲ್ಬುದು (ಎಕ. IX, ಹೊಸಕೋ. ೩೭-೧೦; ಸು. 950). [?]

**ನಂದಿಣಿಗೆ** (ನಾ). ಒಂದು ಊರಿನ ಹೆಸರು : ನನ್ದಿಣಿಗೆ ನಾಮಗ್ರಾಮ (ಮೇ)ಪೂರ್ವ್ವಸ್ಯಾಂದಿಶಿ (ಇಆ. VII, ೪೪-೪೨; 10ನೆಯ ಶತ). [ ? ]

**ನಂದಿತ** (ಗು). ಸಂತೋಷಗೊಂಡ ; ಸಂತುಷ್ಟವಾದ : ನಂದಿತಾಮಳ ಭಕ್ತಿರಸ ಸಾನಂದಪುಳಕಂಗಳು ತನುವಿನೊಳ್ ಸಂದಣಿಸೆ ದಂಡಪ್ರಣಾಮವನಿಕ್ಕಿ ವಂದಿಸುತ (ಬಸಪು. ೨-೨೦). [ ಸಂ. ]

**ನಂದಿದೇವ** (ನಾ). ಒಬ್ಬಾತನ ಹೆಸರು : ಆಚಾರ್ಯಪುರುಷ ಇಱಿದು ಬಸಮಟಿಯದೆ ಬೀಟಿಬ್ಬೊರನ್ ತೆಜಿನ ಮೆಚ್ಚದೊಂ ಪಿಸುಣರ ಪೊಸವೊ ಕುರಿಲಂ ಪೊ × × ವ ಈಯದೆ ಈಜಿಯದೆ ನನ್ನಿ ನುಡಿಯದೆ ನನ್ದಿದೇವಂ ಗಟಿಸ್ಸಿಮುಯ್ಯುಮ್ಪಡೆ ದೊಂಗರ ಅಲೆದೊಂ ಮೂದಲಿಪೊಂ (ಎಇ. XXIV, ೨೬-೧೩; ಸು. 885). [ ನಂದಿ + ದೇವ ]

**ನಂದಿದ್ರುಮ** (ನಾ). ನಂದಿಮರ ; ನಂದಿವೃಕ್ಷ : ಅಲ್ಲಿ ಸೌಧರ್ಮೇಂದ್ರಂ ನಂದಿದ್ರುಮದೊಳ್ ಮಣಿಮಯಶಿಬಿಕಾಯಾನಮನಿಟಿಪುವುದುಂ (ಶಾಂತಿಪು. ೧೦-೧೦೨ವ). [ ನಂದಿ + ದ್ರುಮ]

**ನಂದಿಧ್ವಜ** (ನಾ). ೧. ನಂದಿಯ ಚಿಹ್ನೆಯುಳ್ಳ ಧ್ವಜ,-ಬಾವುಟ : ಎತ್ತಿಸಿದ ನಂದಿಧ್ವಜಂಗಳ ಮೊತ್ತದ ಪತಾಕೆಗಳ ಪಲ್ಲವಸತ್ತಿಗೆಯ ಸಾಲುಗಳನೇಕವ್ಯಾಸಹಸ್ರಗಳಿಂ . . . ದೇವಾ ಪ್ರವೃತ್ತಿ ಬಂದೆಸೆಯೆ (ಬಸಪು. ೫೬-೫೩) ; ಬಿಂಕದ ಬಿರುದಿನ ನಂದಿಧ್ವಜವಿತತಿ ಪುರದೊಳಿರ್ದುದು ಚೆಲ್ವಿಂ (ಹಮ್ಮೀರ. ೧-೬೫) ; ಶ್ರೀವೃಷಭರಾಜನನುಯಾರೋಹಣಂಗೈಯೆ . . . ಬಿರುದ ಕೊಂಡಾಡಿ ಕೈವಾರಿಸುವ ಚಂಡಕೀರ್ತಿಗಳು ಮುಂವಿಡಿದ ಶ್ರೀನಂದಿಧ್ವಜವೂ (ನವಮೋ. ೨೨-೫೦). ೨. ನಂದಿಯ ಚಿಹ್ನೆಯುಳ್ಳ ಧ್ವಜವನ್ನು ಹೊಂದಿದವನು ; ಶೈವ : ದೇವಾಂಗರು 'ನಂದಿಧ್ವಜ' ರೆಂದು ಹೇಳಿದೆ (ಕರ್ನಾಪೂ. II, ೨೦). ೩. ನಂದಿಯ ಚಿಹ್ನೆಯುಳ್ಳ ಧ್ವಜವನ್ನು ಹೊಂದಿರುವ ಕೋಲು ; ನಂದಿಕಂಬ ; ನಂದಿಕೋಲು : (+).
[ ನಂದಿ + ಧ್ವಜ ]

**ನಂದಿನಾಗರಿ** (ನಾ). ಒಂದು ಬಗೆಯ ಲಿಪಿ : ನಂದಿನಾಗರಿ ಕನ್ನಡ ಮತ್ತು ಗ್ರಂಥಲಿಪಿಗಳನ್ನು ಉಪಾಧ್ಯಾಯರು ಬಾಲಕರಿಗೆ ಹೇಳಿಕೊಡುತ್ತಿದ್ದಿರಬೇಕು. ಆ ಕಾಲದ ಶಾಸನಗಳೂ ಕೂಡ ಕನ್ನಡ, ಗ್ರಂಥ ಮತ್ತು ನಂದಿನಾಗರಿಲಿಪಿಗಳಲ್ಲಿರುವುದು ಗಮನಾರ್ಹ (ಕಶಾಅ. ೨೪೨) ; ಅದರ ಕೆಳಗೆ ನಂದಿನಾಗರಿ ಅಕ್ಷರಗಳಲ್ಲಿ "ಷಣ್ಮುಖದಾಸ" ಎಂದಿದೆ (ಹೊಯ್ಸವಾ. ೧೫೦).
[ ಸಂ. ನಂದಿನಾಗರೀ ]

**ನಂದಿನಾಥ** (ನಾ). = ನಂದಿಕೇಶ್ವರ ೧ : ಇಂದುಧರನನುಮತದೊಳಾದಿಯು ನಂದಿನಾಥನು ಬಸವನಾಮದಿ ಬಂದಪಂ ಶಿವಭಕ್ತಿಯಂ ವಸುಮತಿಗೆ ಪಸರಿಸಲು (ಬಸಪು. ೨ ಸೂಚನೆ) ; ನಂದಿನಾಥನಂ ಭೃಂಗವೀರೇಶ ಷಣ್ಮುಖ ಸಂದಿಪ ವಿಘ್ನೇಶ್ವರನು ಇಂದುಧರನ ಎಡಬಲದಲ್ಲಿ ಸೂರಿಯ ಚಂದ್ರರು ಮೆರೆದು ರಾಜಿಪರು (ಕಪೋತ. ೫-೧೩). [ನಂದಿ + ನಾಥ ]

**ನಂದಿನಿ** (ನಾ). ೧. ಸಂತೋಷವನ್ನುಂಟುಮಾಡುವವಳು; ಆನಂದವನ್ನು ಕೊಡುವವಳು ; ಮಗಳು. ೨. ಕಾಮಧೇನುವಿನ ಮಗಳು ; ವಸಿಷ್ಠ ಮಹರ್ಷಿಯ ಹೋಮಧೇನು : ಸರಸಚರಿತನೆ ನಂದಿನಿಯ ಪರಿಚರಿಯೆಯನು ಹಗಲಿರುಳು ತಪ್ಪದೆ ವರವ ಪಡೆಯುವವರೆಗೆ ಮಾಡುವದೆಂದು ಮುನಿಯುಸುರಿ ಪರಸಿದನು (ರಘುವಂ. ೧-೯೦). ೩. ಒಂದು ಬಗೆಯ ವೃಕ್ಷ ; ನಂದಿಮರ : "ನಂದಿನೀ – ಹರೇಣುಕ, ಹಸು, ನಂದಿಯ ಮರ, ಎತ್ತುನಾಲಗೆ" (ಒಷಧಿ. ೮೩). ೪. ಒಂದು ನಾಡಿಯ ಹೆಸರು : ಪೂರ್ವ ದಿಕ್ಕಿನ ನಂದಿನೀ ಎಂಬ ನಾಮಾಂತರವುಳ್ಳ ಧಾರಿಣೀನಾಡಿಯಲ್ಲಿ ಶುಕ್ಲವರ್ಣನಾಗಿ ವಾಸುದೇವ, ದಕ್ಷಿಣದಲ್ಲಿ ಪಿಂಗಳಾನಾಡಿಯಲ್ಲಿ ಪಿಂಗಳವರ್ಣನಾಗಿ ಸಂಕರ್ಷಣ, ಮಧ್ಯದಲ್ಲಿ ಸುಷುಮ್ನಾನಾಡಿಯಲ್ಲಿ ರಕ್ತವರ್ಣನಾಗಿ ನಾರಾಯಣ—ಹೀಗೆ ೫ ರೂಪಗಳಿಂದ ಭಗವಂತನಿರುವನು (ಹಸಾರ. ೪೭೬). ೫. ನಾದಿನಿ : "ಸ್ವಸೃತನಯಂ ಸ್ವಸ್ರೀಯಂ ಪೆಸರಿಂ ನಾದುನಿ ನನಾಂದೃ ನಂದಿನಿಯೆನಿಕುಂ" (ವಸ್ತುಕೋ.೫೬-೨೪). P ಇದು 'ನಾದಿನಿ' ಎಂಬುದರ ಅಪಲಿಖಿತವಿರಬಹುದು. [ ಸಂ. ನಂದಿನೀ ]

**ನಂದಿನೆಲಬೇವು** (ನಾ). ಒಂದು ಬಗೆಯ ಸಸ್ಯ : (ಮೈಜಿಗಿ. ೪೮-೫೨).
[ ? ]

**ನಂದಿಪತಾಕ** (ನಾ). = ನಂದಿಧ್ವಜ ೧ : ನಂದಿಪತಾಕಮುದಬ್ಧಿಸದಾಮಂದರ ಮಂದಿರ ಚಂದ್ರಕಲಾ . . . ಸುಬಂಧು ಜಯಾ (ಕಾಲಾಸ್ಕ. ೧-೪-೧೬).
[ನಂದಿ + ಪತಾಕ ]

**ನಂದಿಪತಾಕೆ** (ನಾ). = ನಂದಿಧ್ವಜ ೧ : ಕಣಿಯ ಕುಣಿಕಿಲ ಬಂಡಿಯುಂ ಬಚ್ಚಣಿಸಿ ನಂ[ಪಾಠಾಂ. ಮಂ]ದಿಪತಾಕೆಗಳ ತೋರಣವನದಟಿಸೊಳಲಂಕರಿಸಿ (ಬಸಪು. ೫೫-೫). [ ನಂದಿ + ಪತಾಕೆ ]

**ನಂದಿಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು : ಸನತ್ಕುಮಾರಪುರಾಣ ನಾರಸಿಂಹಪುರಾಣ ನಂದಿಪುರಾಣ ಶಿವಧರ್ಮಪುರಾಣ

ದೂರ್ವಾಸ ಪುರಾಣ ನಾರದೀಯಪುರಾಣ ಕಪಿಲಪುರಾಣ ಮಾನವಪುರಾಣ ಉಶನಃಪುರಾಣ ಬ್ರಹ್ಮಾಂಡಪುರಾಣ ವಾರುಣಪುರಾಣ ಕಾಳೀಪುರಾಣ ವಾಸಿಷ್ಠಲೈಂಗಪುರಾಣ ಸಾಂಬಪುರಾಣ ಸೌರಪುರಾಣ ಪರಾಶರಪುರಾಣ ಮರೀಚಿಪುರಾಣ ಭಾರ್ಗವಪುರಾಣವೆಂಬವೇ ಆಯಾ ನಾಮಧೇಯಮುಳ್ಳವರಿಂ ನಿರೂಪಿತಮಾದ ಹದಿನೆಂಟು ಉಪಪುರಾಣಂಗಳು (ವಿವೇಕ. ೮).
[ ನಂದಿ + ಪುರಾಣ ]

**ನಂದಿಬಟ್ಟಲು,** ನಂಜವಟ್ಟಲು, ನಂಜುಬಟ್ಟಲು, ನಂದಿವಟ್ಟ, ನಂದಿವಟ್ಟಲು (ನಾ). ಸುವಾಸನೆಯಾದ ಬಿಳಿಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ; ತಗರ; ನಂದ್ಯಾವರ್ತ; ಮಂಜಟಿ: "ನಂದ್ಯಾವರ್ತ . . . ನಂದಿಬಟ್ಟಲ ಹೂವು" (ಗಂಗಾಮ. ೧೬೭); ಮನೆಯ ಮುಂದೆ ಚಮನ್, ರೋಜಾ, ಡೇರಾ, ನಂದಿಬಟ್ಟಲು ಗಿಡಗಳ ಮಧ್ಯೆ ಪನ್ನೇರಿಳೆ ಹಣ್ಣಿನ ಮರ (ಹೊಸಕ್ಷಿ. ೧೨೩). **ನಂಜವಟ್ಟಲು:** ನಂಜವಟ್ಟಲಿನ ಗಿಡದ ತುಂಬ ಹೂವು ಅರಳಿದೆ (ಊಧಿ). **ನಂಜುಬಟ್ಟಲು:** ನಂಜಪ್ಪ ಬೆಳೆದನೆ ನಂಜುಬಟ್ಟಲ ಹೂವ ಮಲ್ಲಯ್ಯ ಬೆಳೆದನೆ ಮರುಗವ (ನಾಪದ. ೧೦೦). **ನಂದಿವಟ್ಟ:** "ನಂದಿವಟ್ಟಮದು ತಗರಸಂಜ್ಞಕಂ ತಾನಕ್ಕುಂ" (ವಸ್ತುಕೋ. ೩೮-೩೫); ಪೊಕ್ಕುಟು ನಂದಿವಟ್ಟದರಲಂ ಚೆಲ್ವಿಂದು ಗುರ್ಕರ್ಡೆ ಕೇದಗೆಯುಂ . . . ಕೈಮಿಗೆ ಪುಷ್ಪಾಸ್ತ್ರನ ಪಂಚಬಾಣಮಿವಳೆಂಬಾಶಂಕೆಯುಂ ಮಾಡಿದಳ್ (ಧರ್ಮಾಮೃ. ೭-೨೦೭); ನಂದಿವಟ್ಟದ ಪಾಯವಟ್ಟಮುಮಂ ಕಾಂಚಿವಾರದ ಕಾಂಚಿಯುಮಂ . . . ವಿವಿಧ ಕಿಸಲಯದ ಕಿಸಲಯಮಂಮಂ ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು (ಚಂದ್ರಪ್ರ. ೭-೧೧೪ ವ); ಪಾದರಿ ಪಾರಿಜಾತವು ನಂದಿವಟ್ಟವು ಹಾದರಿ ತುಂಬುರ ಜಾಲಿ (ದೇವಾಂಪು. ೬-೨೬೦). **ನಂದಿವಟ್ಟಲು:** "ನಂದ್ಯಾವರ್ತಃ–ನಂದಿವಟ್ಟಲು, ಮಾನಿನ ಭೇದ" (ಓಷಧಿ ೮೪); ಗುಲಾಬಿ, ನಂದಿವಟ್ಟಲು . . . ಮೊಲ್ಲೆ, ಮಲ್ಲಿಗೆ, ಇರವಂತಿಗೆ ಇವುಗಳಲ್ಲಿ ಕೆಲವು ಕೊಲ್ಲೆಗಳನ್ನು ಕೆಲವು ಅಂಟುಗಳನ್ನು ಮಾಡಿ ಹಚ್ಚಬೇಕು (ಕೃಷಿಪ್ರ. ೨೦೦).
[ ದೇ.॥ ತಮಿ. ನನ್ದಿಯಾವಟ್ಟ; ತುಳು. ನಂದಿಬಟ್ಟಲ್ ]

**ನಂದಿಮರ,** ನಂದಿಯ ಮರ (ನಾ). ಒಂದು ಬಗೆಯ ಮರ; ನಂದಿವೃಕ್ಷ: "ಕಚ್ಚಃ –ನಂದಿಮರ" (ಓಷಧಿ. ೨೦); ಅದೂರದಿಂದಾಲಾಪನೆಗೆ ಮೊದಲ್ಗೆಯ್ದುದೊರ್ ಖಂಜನಂ. ಹಿಂಬಾಲಿಸಿದುಪದಂ . . . ಇಲ್ಲಿ ಬಿದಿರ ತುದಿಯಿಂದಲ್ಲಿ ನಂದಿಮರದಿಂದಿತ್ತ . . . ಎತ್ತ ಕಿವಿಯಿತ್ತೊಡತ್ತಣಿಂದೆ (ಶ್ರೀರಾಮಾ. ೪೮೦-೧೭೦). **ನಂದಿಯ ಮರ:** "ಜಟಾವೃಕ್ಷಃ–ನಂದಿಯ ಮರ" (ಓಷಧಿ. ೬೦); ಹೊಳೆಯ ದಡದ ಮೇಲಣ ನಂದಿಯ ಮರನ ಒತ್ತಿನಲು (ಎಕ. VIII, ತೀರ್ಥಹ. ೧೯೦-೩೬; 1407). [ ನಂದಿ + ಮರ$_1$ ]

**ನಂದಿಮುಖಿ** (ನಾ). ನಂದಿಯ ಎದುರು,–ಸಮಕ್ಷ (?): ಹಾರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡುವಲ್ಲಿ ನಂದಿಮುಖಿವಲ್ಲದೆ ಮಾಡಲಾಗದು ವಿಭೂತಿಯಲ್ಲದೆ ಮತ್ತೇನನೂ ಮಾಡಲಾಗದು (ಬಸವ. ೭೦೪).
[ ನಂದಿ + ಮುಖ ]

**ನಂದಿಮುದ್ರೆ** (ನಾ). ನಂದಿಯ ಗುರುತು; ವೃಷಭನ ಚಿಹ್ನೆ: ಮಂದಿಸುತ ಮುಂದೆಸೆಯೊಳಿರಲಂತವರ ಹಣೆಗಳಲಿ ನಂದಿಮುದ್ರೆಯನೊತ್ತಿ (ಬಸಪು. ೫೦-೪೭). [ ನಂದಿ + ಮುದ್ರೆ ]

**ನಂದಿಮೆಟ್ಟಲು** (ನಾ). ಬಸವನ ವಿಗ್ರಹಗಳನ್ನು ಎರಡು ಕಡೆಗಳಲ್ಲೂ ಹೊಂದಿರುವ ಮೆಟ್ಟಲು; ದೇವಾಲಯಗಳ ಶಿಲ್ಪರಚನೆಯ ಒಂದು ಭಾಗ: ಮೊದಲು ನಾಲ್ಕು ಗರ್ಭಗುಡಿಗಳು . . . ಒಂದೇ ಸಾಲಿನಲ್ಲಿದ್ದವೆಂದು, ಅನಂತರ ಐದನೆಯ ಗರ್ಭಗುಡಿಯನ್ನು ಸೇರಿಸಲಾಯಿತೆಂದು ಅಂತರಾಳಗಳಿಂದಲೂ ನಂದಿಮೆಟ್ಟಲುಗಳಿಂದಲೂ . . . ಸ್ಪಷ್ಟವಾಗಿದೆ )ಹೊಯ್ಸವಾ. ೧೩೫). [ ನಂದಿ + ಮೆಟ್ಟಲು ]

**ನಂದಿಯಮರ** 'ನಂದಿಮರ' ನೋ.

**ನಂದಿಯಾಲ,** ನಂದ್ಯಾಲ (ನಾ). ಒಂದು ಊರಿನ ಹೆಸರು: ಶ್ರೀನಿವೃತ್ತಿನೀತರಾ ಕೆಱುಯಾ ಮಗನ್ದಿಕರ್ಕಡುವಟ್ಟಯರಿನ್ದವ್ ವಲ್ಲವರಸರಿನ್ದಂ ಕೊಱಗ್ಗೊಣ್ಡಿಪಟಂ ಸೂಡಿದೊರಾ ಅನುಜೋಇನ್ದುಕನಲ್ಗೊಳಿ ನನ್ದಿಯಾಲರಾವಿಟ್ಟದುಪಡೆವ್ಯೆಲಾಮುಅಮಸಪಾಲುವ್ (ಎಕ. VI, ಚಿಕ್ಕಮ. ೫೦-೩; ಸು. 480); ಮಣಿಯಡೆಗುರೆಯ ನಂದಿಯಾಲ ಸೀವಪ್ಪಾಲ ನಾಣ್ಡಱಿಯ ಮದಣ್ಣ (ಮೈಆರಿ. ೧೯೩೪, ೭೮-೩೬; ?). **ನಂದ್ಯಾಲ:** ಮಣಿಗ್ರಾಮಶ್ರೇಣಿ ಚತುಃಸಾಮನ್ತ ಟೆಗುರೆ ಅಮಣಿಯ ನಂದ್ಯಾಲ ಸೀಂಬಾಲದೇಶ ಪ್ರಕೃತ್ಯಾಧ್ಯಕ್ಷರಾಣಾಂ (ಮೈಆರಿ. ೧೯೩೦, ೩-೨೦; ಸು. 500); ಶೀಯುವಲ್ಲವರಸರು ಟೆಗುರೆಯರುಂ ಮಣಿಯರುನ್ನಂದ್ಯಾಲರುಂ ಶೀವಪ್ಪಾಲರುಂ ಚಾತುರ್ವೈರ್ದ್ಯಮುಮಱಿಯೆಂ ಪೆತ್ತಾ ಎಲ್ಲಾ ಸಾಮನ್ತರು ಮತ್ತಾಣೆಉಂ ಸಾಕ್ಷಿ (ಮೈಆರಿ. ೧೯೪೦, ೧-೩೪; ಸು. 788); ಶ್ರೀಮನ್ಮಹಾಮಂಡಲೇಶ್ವರ ನಂದ್ಯಾಲದ ವೀರರಾಜ ಶ್ರೀರಂಗರಾಜಗಳ ಮಕ್ಕಳು (ಎಕ. X, ಮುಳಬಾ. ೪-೧೨; 1547). [ ? ]

**ನಂದಿಯುಂಡಿಗೆ** (ನಾ). ನಂದಿಯ ಚಿಹ್ನೆ,–ಮುದ್ರೆ; ವೃಷಭನ ಮೊಹರು: ತಾಮ್ರಪರ್ಣಿಯ ಮುತ್ತುಗಳುಂ ನಂದಿಯುಂಡಿಗೆಯ ಮಿಸುನಿಯ ಪೊಂಗಳುಂ . . . ಬಸವನ ಮನೆಯ ಮುಂದೆ ಸುರಿದು ರಾಸಿಯಾಗಿರೆ (ಬಸರ. ೧೨-೬೪); ಪಡಿಪೊನ್ನ ಜಾಳಿಗೆಯನಂತದು ಸೌಂದರಂ ಕೈಕೊಂಡು . . . ನಂದಿಯುಂಡಿಗೆಯ ರಾಯಸವಿರಲು ಕಂಡದಕೆ ವಂದಿಸಿ ನಿಜೋತ್ತಮಾಂಗದೊಳಿಟ್ಟು (ಸೌಂದಪು. ೧೯-೧೧). [ ನಂದಿ + ಉಂಡಿಗೆ$_3$ ]

**ನಂದಿಲಿಪಿ** (ನಾ). ಒಂದು ಬಗೆಯ ರಹಸ್ಯ ಲಿಪಿ: ದೇವಲಿಪಿ ನಂದಿಲಿಪಿಯಾ ಅಗಣಿತ ಲಿಪಿಗಳ ನೋಡಲಱಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲಾ (ಭಾಸ್ಕರ. ೭೭-೭).
[ ನಂದಿ + ಲಿಪಿ ]

**ನಂದಿವಟ್ಟ** 'ನಂದಿಬಟ್ಟಲು' ನೋ.

**ನಂದಿವಟ್ಟಲು** 'ನಂದಿಬಟ್ಟಲು' ನೋ.

**ನಂದಿವರ್ಧನ** (ನಾ). ೧. ಈಶ್ವರ; ಶಿವ. ೨. ಮಗ; ತನಯ. ೩. ಸ್ನೇಹಿತ; ಮಿತ್ರ. ೪. ನಂದಿಮರ ಮತ್ತು ಅದರ ಹೂವು: "ತುನ್ನಃ, ಕುಬೇರಃ, ಕುಣಿಃ, ಕಚ್ಚಃ, ಕಾಂತಕಲಃ, ನಂದಿವೃಕ್ಷಃ–೬ ನಂದೀಯಂಬುವ ಮರದ ಹೆಸರು. ಬಸವನ ಗಿಡ, ನಂದಿವರ್ಧನಹುವ್ವ ಪ್ರಸಿದ್ಧ" (ಸಿದ್ಧಾಂತಿ. ೧೪೦). ೫. ಒಂದು ಬಗೆಯ ದೇವಸ್ಥಾನದ ರಚನೆ. ೬. [ಜ್ಯೋತಿ] ಹುಣ್ಣಿಮೆಯ ಅಥವಾ ಅಮಾವಾಸ್ಯೆಯ ಹೆಸರು; ಪಕ್ಷದ ಕೊನೆಯ ದಿವಸ. [ ಸಂ. ]

**ನಂದಿವಳ್ಳಿ** (ನಾ). ಒಂದು ಊರಿನ ಹೆಸರು: ಕಿಱುವಳ್ಳಿ ಬಾಳಪುರ ಇತ್ಯೇಶಾಂತೇಗ್ರಾಮಾಣಾಂ ಮಧ್ಯೇ ನೆಜ್ಗಿಯೂರ್ನನ್ದಿವಳ್ಳಿ ಸಹಿತಸ್ಸುಳ್ಳಿಯೂರ್ನಾಮಗ್ರಾಮೋದತ್ತಃ (ಎಕ. X, ಕೋಲಾರ. ೬೩-೩೮; 757).
[ ನಂದಿ + ಪಳ್ಳಿ$_1$ ]

**ನಂದಿವಾಹ** (ನಾ . = ನಂದಿವಾಹನ. [ ನಂದಿ + ವಾಹ ]

**ನಂದಿವಾಹನ** (ನಾ). ವೃಷಭನನ್ನು ವಾಹನವಾಗಿ ಉಳ್ಳವನು; ಶಿವ: ಮುಕ್ಕಣ್ಣ ಅಂದದಹಿಕುಂಡಲ ಚತುರ್ಭುಜ ನಂದಿವಾಹನ ಗೌರಿಸಹಿತಂ ಮುಂದೆ ನಿಂದು ಮಹೇಶನೀಶನು ಪಾಶಧರಕರನು (ಬಸಪು. ೨೭-೨೬).
[ ನಂದಿ + ವಾಹನ ]

**ನಂದಿವಾಳ** (ನಾ). ಒಂದು ಬಗೆಯ ಹೂವು: ಮಲ್ಲಿಗೆಯುಂ . . . ನಂದಿವಾಳ ಮುಡಿವಾಳ ಸೌಗಂಧಿ ಕಣಗಿಲು ಚಂಪಕಾ ಸಲ್ಲಲಿತ ಪಾರಿಜಾತಾದಿ ಬಹುಪುಷ್ಪಗಳ ನಲ್ಲೆಯರುರುಯತಿಜಶನದಿಂ ತಿರಿತಂದು (ನವಮೋ. ೨೪-೫೯). [ ? ]

**ನಂದಿವೃಕ್ಷ** (ನಾ). = ನಂದಿವಂರ; "ನಂದಿವೃಕ್ಷಃ–ನಂದಿವುರ" (ಒಷಧಿ. ೮೪); ಅಶ್ವತ್ಥಾಕಾಶವುಪ್ಪ ನಂದಿವೃಕ್ಷ (ನಾಚಿರಾ. ೬) ; ಕೆಂಪುಗಂಧಗಿರಿ, ನಂದಿವೃಕ್ಷ . . . ಗಂಧಗರಿಗೆ (ಪ್ರುಜಿಗಿ. ೧೯–೩೪೮). [ ನಂದಿ + ವೃಕ್ಷ ]

**ನಂದಿಸಂಘ** (ನಾ). [ಜೈನ] ಜೈನಸಂಘದ ಪ್ರಭೇದಗಳಲ್ಲಿ ಒಂದು : ನಂದಿಸಂಘದರುಂಗಳಾನ್ವಯದ ಗುಣಸೇನಪಣ್ಡಿತದೇವರ್ಗ್ಗೆ . . . ಕೊಟ್ಟರು (ಎಕ. I, ೭೨–೪೩; 1059) ; ಸ್ವಸ್ತಿಶ್ರೀ ರಾಜಾಧಿರಾಜ ಕೊಂಗಾಳ್ವನಬ್ಬೆ ಪೋಚಬ್ಬರಸಿಯರ್ದ್ರವಿಳಗಣದ ನನ್ದಿಸಂಘದರುಙ್ಗಳ ನ್ವಯದ ಗುಣಸೇನಪಣ್ಡಿತದೇವರ ಗುಡ್ಡಿ ವಾಡಿಸಿದ ಬಸದಿ (ಎಕ. I, ೬೮–೧ ; ?) ; ಈ ಸಂಪ್ರದಾಯದಲ್ಲಿ . . . ಬೌದ್ಧರ ಮಹಾಸಾಂಘಿಕರಂತೆ ನಂದಿಸಂಘ ಗಣಸಂಘ ದೇವಸಂಘ ಮೊದಲಾದ ಸಂಘಪ್ರಭೇದಗಳಿದ್ದರೂ ಈ ಗ್ರಂಥಗಳು ಸರ್ವಸಮ್ಮತಗಳಾಗಿರುವುವು (ಹಿಂದಿಸಾ. ೭೪). [ ನಂದಿ + ಸಂಘ ]

**ನಂದಿಸಂಹಿತೆ** (ನಾ). [ಶೈವ] ಚಂದ್ರಜ್ಞಾನಾಗಮದ ಹದಿನಾಲ್ಕು ಭೇದ ಗಳಲ್ಲಿ ಒಂದು : ಸ್ಥಿರಸಂಹಿತೆ ಸ್ಥಾಣುಸಂಹಿತೆ ಮಹತ್ಸಂಹಿತೆ ನಂದಿ ಸಂಹಿತೆ ನಂದಿಕೇಶ್ವರಸಂಹಿತೆ . . . ದೇವೀಮತವೆಂದು ಚಂದ್ರ ಜ್ಞಾನಾಗಮದ ಪದಿನಾಲ್ಕು ಭೇದಂಗಳು (ವಿವೇಕ. ೭೦). 'ನಂದಿಕೇಶ್ವರ ಸಂಹಿತೆ' ಪರಾ. [ ನಂದಿ + ಸಂಹಿತೆ ]

**ನಂದಿಸು₁**, ನೊಂದಿಸು (ಕ್ರಿ). ೧. (ದೀಪ, ಉರಿ, ಬೆಳಕು ಮೊದಲಾದು ವನ್ನು) ಆರಿಸು ; ಇಲ್ಲದಂತೆ ಮಾಡು : ಕಪ್ಪಂಗವಿಯಾಗಿ ಕವಿವ ದ್ರುಪದವಿಳಯಾನಳನಂ ದ್ರೋಣಂ ಮಹಾದ್ರೋಣ ಪುಷ್ಕಳಾವರ್ತಕಂ ಗಳೆಂಬ ವಿಳಯಕಾಳನೀಳಜಳಧರವರ್ಷಂಗಳಿಂ ನಂದಿಸೆಯುಂ ನಂದದೆ ಮುಟ್ಟಿವರೆ (ಪಂಪಭಾ. ೧೨–೨೦ವ) ; ತಮ್ಮೊಚಿಂಕೆಯ ಗಾಳಿಯಿಂ ಪೊಗೆಯಂ ನಂದಿಸಲೀಯದೆ ಹೋಮಾನಲಪ್ರಜ್ವಲನಮನೆಸಗುವ ಸೋಗೆನವಿಲ್ಗಳಿಂ ಸೊಗಯಿಂಸುವುದು (ಕಾದಂಪೂ. ೨೨೩) ; ಜಿನಧರ್ಮಮೆಂಬ ನೀರಿಂ ಕರ್ಮ ಮೆಂಬ ಕಿರ್ಚಂ ನಂದಿಸದೆ ... ಇರ್ದೊಡೆ ಶಾಶ್ವತಸುಖಂ ದೊರೆಕೊಳ್ಳದು (ಧರ್ಮಾವ್ಮ. ೭–೯೭) ; ತಳ್ಪೊಯ್ದ ವಾರಾಸಿಯಿಂ ತದ್ಗಿರಿ ವಹ್ನಿಜ್ವಾಲೆಯಂ ನಂದಿಸಿ ಬಟೆಕ ಜರಾಸಂಧಸೇನಾಸಮೂಹಾಂತರಮಂ ಕಾಲಾಗ್ನಿರುದ್ರಂ ಪುಗುವ ತೆಱದೆ ದೈತ್ಯಾಂತಕಂ ಬಂದು ಪೊಕ್ಕಂ (ಜಗವಿ. ೮–೪೭) ; ಶಿಶಿರೋಪಚಾರಮಂ ಲಲನೆಗೆ ಮಾಳ್ಪಂದು ಘೃತದಿಂ ಕಿರ್ಚಂ ನಂದಿಪ ತೆಱವಾಗಿ ತೋಱುತಿದೆ (ಗಿರಿಕ. ೪–೧೧೩); ತರುಣ ಪಾಶುಪತಾಸ್ತ್ರವಾದಿಯ ದಿವ್ಯಮಾರ್ಗಣವ ಪುರಹರನ ಕೃಪೆಯಿಂದ ಪಡೆದಂತರಿಗಳನು ಸಂಹರಿಸಿ ನಿನ್ನಯ ಪರಿಭವಾಗ್ನಿಯ ನಂದಿಸುವೆ (ಕುವ್ಯಾಅ. ೪–೩೦). ೨. ನಾಶ ಮಾಡಂ; ಕೊನೆಗಾಣಿಸು ; ಕೊಲ್ಲು : ಉರಃಪ್ರದೇಶವನಿಸೆ ನೆತ್ತರೊಕ್ಕು . . . ಜೋಲ್ದೊಡಾದಮ ನಸುನೊಂದು ನಂದಿಸದೆ ತನ್ನನೆ ನಿಂದಿಸಿದಂ ದಿನೇಶಜಂ (ಪಂಪಭಾ. ೧೨–೧೧೭). ೩. ನಿವಾರಿಸು ; ಕಳೆ : ರವಿಚಂದ್ರರ್ ನಿಲೆ ಸಿಂಹಲಗ್ನದೊಳಿಳಾಜಾತಾರ್ಕಜರ್ ನೋಡೆ ನೇತ್ರವಿಹೀನಂ . . . ಆ ದುರಿತಮಂ ನಿಶ್ಶೇಷಮಾ‌ರ್ ನಂದಿಪರ್ (ಜಾತತಿ. ೩೦–೩೮) ; ತತ್ಪುರ ದೊಳಿರ್ದ ವಿಶಾಖನಂದಿ ಪಸಿವಂ ನಂದಿಸಲೆಂದು ಲಂದಣಿಗರ ಮಂದಿರಕ್ಕೆ ಪೋಪವಂ ಮುಂದೆ ಸಂದಣಿಸಿ ನಿಂದ ನೆರವಿಯಂ ಭೋಂಕೆನೆ ಕಂಡು (ವರ್ಧಪು. ೩–೧೨ವ) ; ತಂದೆಯ ಮಸದಾಗ್ರುಹವಂ ನಂದಿಸುವೆನೆನುತ್ತ ಮಂಗಿದ ಕೈವೆರಸಾಗಳ್ ತಂದೆಯೊಳನೇಂದಳೆಂದರವಿಂದಾನನೆ ಮಧುರವಚನ ರಚನೆಗಳಿಂದಂ (ಪುಣ್ಯಾಸ್ರ. ೭೭). **ನೊಂದಿಸು** : ೧. ಭೀಮನಂ ಕಿಳುಪಿ ನಾನಾಪರಿಯಲಿ ನೊಂದಿಸಿದ ಶೋಕಶಿಖಿಯನ್ನಾಗ ಬಳಿಕ ಯಮನಂದನನು (ತುರಂಗ. ೯೩–೩೨) ; ಅಡವಿಯಲ್ಲಿ ಅಡಿಗೆ ಮಾಡಿಕೊಂಡು ನೊಂದಿಸದೆ ಹೊರಟು ಹೋಗುತ್ತಾರೆ (ಮುಂಬಯಿ. ೩–೩) ; ಬಂಡಾಯದ ಬೇಗೆಯನ್ನು ಕಾಲಲ್ಲಿ ತುಳಿದು ನೊಂದಿಸಿಬಿಟ್ಟಿತು (ಇಪ್ಪಕ. ೧೯೪). [ ನಂದು + – ಇಸು₃ ]

**ನಂದಿಸು₂** (ಕ್ರಿ). ಸಂತೋಷಗೊಳಿಸು ; ಆನಂದಪಡಿಸು : ಒಂದು ದಾರಿಯಲೀಗ ಕ್ಷಣದಲ್ಲಿ ಸಾಗಿ ವಂದಿಸುವೆ ನಂದಿಸುವೆ ಮಾತಿನನುರಾಗಿ (ಕವಿಪು. ೧೨–೪). [ ನಂದನ + – ಇಸು₃ ]

**ನಂದಿಸೇನ** (ನಾ). ಒಬ್ಬ ಜೈನಯತಿಯ ಹೆಸರು : ಉರುಸತ್ವನ್ನನ್ದಿಸೇನ ಪ್ರವರಮುನಿವರನ್ದೇವಲೋಕಕ್ಕೆ ಸನ್ದಾರ್ (ಎಕ. II, ೮೮–೪; ಸು. 700). [ ನಂದಿ + ಸೇನ ]

**ನಂದಿಸೋಪಾನ** (ನಾ). = ನಂದಿಮೆಟ್ಟಿಲು : ತಂಗಿಯವ್ವಾ ಹೋಗಿ ತಗಹಾರ ಭಾಸಿಂಗ ನಂದಿಸೋಪಾನದ ಸಸಲೀಗಿ (ಮಲ್ಲಿಗ. ೭೯). [ನಂದಿ+ಸೋಪಾನ]

**ನಂದಿಹಾಳ** (ನಾ). ಒಂದು ಬಗೆಯ ಜೋಳ : ಮೂರ ತಿಂಗಳ ಜೋಳ, ದೊಡ್ಡಜೋಳ . . . ನಂದೀಹಾಳ ಈ ಆರು ಜಾತಿಗಳನ್ನು ಮುಖ್ಯ ಪೈರುಗಳಾಗಿ ಬಿತ್ತುವರು (ಕಥಾಗ. ೨೭೧). [ ? ]

**ನಂದೀಮುಖಿ** (ನಾ). ಒಂದು ಬಗೆಯ ಗೋದಿ : ನಂದೀಮುಖಿಯೆಂಬ ಸಣ್ಣವಾಗಿಯೂ ಉದ್ದವಾಗಿಯೂ ಇರುವ ಗೋದಿಯು ಶೀತ ಒಗರು (ಅಷ್ಟಾಂಗ. ೦೧೩). [ ? ]

**ನಂದೀಶ** (ನಾ). = ನಂದಿಕೇಶ್ವರ ೧: ನಂದೀಶಂ ವೀರಭದ್ರಂ ಘನರವನಚಲಂ (ಗಿರಿಕ. ೧೦–೭೩) ; ನಂದೀಶ ವೀರಭದ್ರ ಸ್ಕಂದ ಗಜಾನನಮುಖಾಖಿಲ ಪ್ರಮಥಗಣಂ . . . ಎಸೆದಿರ್ಕುಂ (ಉದ್ಭಟ. ೧೨–೧೨೩) ; ನಿರುತದಿಂ ದಶವೀರಘೋರಾಪರಿಮಿತೋತ್ಕಟಪಟುತಪವನಾಚರಿಸಿದನು ನಂದೀಶನತಿ ಶಯವತಿಶಯವಿದೆನಲು (ಬಸಪು. ೨–೧೩). [ ನಂದಿ + ಈಶ ]

**ನಂದೀಶ್ವರ** (ನಾ). ೧. = ನಂದಿಕೇಶ್ವರ ೧: ಆದಿಶಿವಲಿಂಗಕ್ಕೆ ವಾಹನವಾದ ನಂದೀಶ್ವರನೆ ಮತ್ತೆ ಶಿಲಾದಮುನಿಗುದಯಿಸಿದ ಪರಿಯಂ ಪೇಳ್ವೆನು (ಬಸಪು. ೧ ಸೂಚನೆ) ; ನಂದೀಶ್ವರವಂಶಜನಿವನೆಂದಱಿಪುವ ತೆಱದೊಳಮಳ ಗಗನಾಂಗಣದೊಳ್ ಸ್ಪಂದದ ಬಂಕದ ಬಿರುದಿನ ನಂದೀಧ್ವಜವಿತತಿ ಪುರ ದೊಳಿರ್ದುದು ಚೆಲ್ವಿಂ (ಹರಿಶ್ಚಂ. ೧–೭೩) ; ಬೇಗದಿಂದ್ಯದಿ ನಂದೀಶ್ವರಂ ಗರುಡನಂ ಪೋಗದಿರ್ತಲೆಯನಾಭರಣಕ್ಕೆ ತಾರೆಂದು ನಾಗಭೂಷಣನಟ್ಟಿದಂ ತನ್ನನೀಯದೊಡೆ ನಿನಗೆ ಬಹುದುಪಹತಿಯೆನೆ (ಜೈಮಿಭಾ. ೧೪–೨೦). ೨. [ಜೈನ] ಮಧ್ಯಮಲೋಕದ ಎಂಟನೆಯ ದ್ವೀಪ. ೩. ಜೈನರ ಒಂದು ವ್ರತ,–ಹಬ್ಬ ; P ಕಾರ್ತೀಕ, ಫಾಲ್ಗುಣ, ಆಷಾಢ–ಈ ಮೂರಂ ತಿಂಗಳಂಗಳ ಕಡೆಯ ಎಂಟುದಿನಗಳಲ್ಲಿ ನಂದೀಶ್ವರವೆಂಬ ದ್ವೀಪದಲ್ಲಿ ಸೌಧರ್ಮಾದಿ ಇಂದ್ರರು ಅದೇ ಸಮಯದಲ್ಲಿ ಲೋಕದ ಜನರೂ ಈ ರೀತಿ ಪೂಜಿಸುತ್ತಾರೆ. ಇದಕ್ಕೆ ನಂದೀಶ್ವರ ಎಂದು ಹೆಸರು : ಇತ್ತ ದಾದಿಯುಂ . . . ನಂದೀಶ್ವರದೆಂಟುದಿವಸಮಭಿಷೇಕ ಮುಮರ್ಚನೆಯುಮುಪ್ಪೋಪವಾಸಮುಮುಮಂ ಮಾಡಿ (ಪದ್ಮಾರಾ. ೦೦೭–೫); ಶಕವರ್ಷಮೆಂಟುನೂಱಕೆ ಕಡೆಯೊಳಱುಪತ್ತುಮೂಱು ಸಂದಂದು ಜಗತ್ಪ ಕಟ ಪ್ಲವಸಂವತ್ಸರದ ಕಾರ್ತಿಕಂ ಮುದಮನೀಯೆ ನಂದೀಶ್ವರದೊಳ್ (ಆದಿಪು. ೦೬–೭೬) ; ಶಕವರ್ಷಂ ಪಂಚದಶಾಧಿಕ ನವಶತವಾಗೆ ವಿಜಯ ಸಂವತ್ಸರ ಕಾರ್ತಿಕ ನಂದೀಶ್ವರದಿನದೊಳ್ ಪ್ರಕಟಿಸಿದುದು ರತ್ನನಿಂದಜಿತ ಪುರಾಣಂ (ಅಜಿಪು. ೧೨–೩೪) ; ಭವಭವದೊಳ್ ಕಟ್ಟಿದನೇಕವಿಧದ ದುಷ್ಕರ್ಮಮಂ ಕಟಲ್ಚಲ್ ಪುಣ್ಯಾಸ್ರವದೊಳ್ ನೆರೆಯಲ್ ಭವ್ಯರ್ಗಿವೆ ದಿವಸಮನಲ್ಕೆ ಬಂದ ನಂದೀಶ್ವರದೊಳ್ (ಪುಷ್ಪಪು. ೩–೧೨೪) ; ಚಂದಣ ವರ್ಣಿಯು ನಂದೀಶ್ವರದ ನೋಂಪಿಯ ಕಥೆ ಒಂದು ಚಂಪೂಗ್ರಂಥ (ಯಕೋಸಂ. ೭೭ ಪೀಠಿಕೆ). 'ತಿಱುನಂದೀಶ್ವರ' ಪರಾ. ೪. ಬಾಹುಬಲಿ ವಿಗ್ರಹದ ಮುಂದಿರುವ ಮಂದರವೆಂಬ ತೇರಿನ ಭೇದಗಳಲ್ಲೊಂದು: ಬಾಹುಬಲಿವಿಗ್ರಹ . . . ಇದರ ಮುಂದಿರುವ "ತೇರ"ಗೆ ಮಂದರವೆಂಬ ಹೆಸರು. ಮಂದರಗಳಲ್ಲಿ ನಂದೀಶ್ವರ ಮತ್ತು ಮೇರು ಎಂಬ ಭೇದಗಳಿವೆ (ಹೊಯ್ಸವಾ. ೨೦೭).

ನಂದೀಶ್ವರದಷ್ಟಮಿ = ನಂದೀಶ್ವರವ್ರತವನ್ನು ಆಚರಿಸುವ ಅಷ್ಟಮಿ: ಜೈನಶಾಸನಗಳಲ್ಲಿ ಮುಖ್ಯವಾಗಿ ಎರಡು ಹಬ್ಬಗಳ ಅಥವಾ ವ್ರತಗಳ ಪ್ರಸಕ್ತಿ ವಿಶೇಷವಾಗಿ ಬರುತ್ತದೆ. 'ಜೀವದಯಾಷ್ಟಮಿ' ಎಂಬ 'ಪರ್ವ' ಒಂದು; ಮತ್ತೊಂದು 'ನಂದೀಶ್ವರದಷ್ಟಮಿ'; ಎರಡನೆಯ ಪರ್ವಕ್ಕೆ 'ಕಿಱುನಂದೀಶ್ವರ' ಎಂಬ ಹೆಸರೂ ಉಂಟು (ಕಶಾಅ. ೯೯). ನಂದೀಶ್ವರದ್ವೀಪ = ಜೈನರು ನಂದೀಶ್ವರನೋಂಪಿಯ ಕಾಲದಲ್ಲಿ ಜಿನನನ್ನು ಪೂಜಿಸಲು ಹೋಗುವ ದ್ವೀಪ: ನಂದೀಶ್ವರದ್ವೀಪಮಹಾಚೈತ್ಯಾಳಿಯೊಳ್ ಪಾವನತರನವಸಂಗೀತಕಕ್ರೀಡೆಯಂಮಾಡಿ ಮನಃಪ್ರಹ್ಲಾದಮಂ ತಾಳ್ದುವನನವರತಂ ಶ್ರೀಧರಂ ಕೇಳಿಶೀಳಂ (ಚಂದ್ರಪು. ೪-೭೬). ನಂದೀಶ್ವರನೋಂಪಿ = ನಂದೀಶ್ವರ ೩: ನಂದೀಶ್ವರನೋಂಪಿಯ ಸಮಯದಲ್ಲಿ ದಾನ ಮಾಡುವುದು ಶ್ರೇಷ್ಠವೆಂದು ಶಾಸನವೊಂದು ಹೇಳುತ್ತದೆ (ಕಶಾಅ. ೯೯). [ ಸಂ. ]

**ನಂದೀಶ್ವರಂಗೆಯ್** (ಕ್ರಿ). ನಂದೀಶ್ವರವ್ರತವನ್ನು ಮಾಡು,-ಆಚರಿಸು: ಫಾಲ್ಗುಣಮಾಸದ ನಂದೀಶ್ವರದಂದಱುವರುಂ ಕೊಡಗೂಸುಗಳುಮಾಸಂಗೆಯ್ದು ಬಳಿದಿಗರ್ಚನೆಯಂ ಕೊಂಡು ಪೋಗಿ ದೇವರನರ್ಚಿಸಿ ನಂದೀಶ್ವರಂಗೆಯ್ದು ಬಂದಿಸಿ (ವಡ್ಡಾರಾ. ೧೧೩-೦೮).

[ ನಂದೀಶ್ವರ + ಕೆಯ್$_1$ ]

**ನಂದು, ನೊಂದು$_1$** (ಕ್ರಿ). ೧. (ಬೆಂಕಿ, ಬೆಳಕು ಮೊದಲಾದುವು) ಆರಿಹೋಗು; ಇಲ್ಲವಾಗು: "ನಂದು – ವಿನಾಶೇ, ಗತತೇಜಸಿ ಚ (ಬೆಳಕು ತಪ್ಪಿಹೋಗು)" (ಶಮುಧಾ); ಇಂದುಕಿರಣಂಗಳಿಂದಂ ಚಂದನರಸದಿಂದೆ ಮಾಗಿಯಾ ನೀರಿಂದಂ ನಂದದು ಪರಿತಾಪಾನಳನಿಂದಱಿದಂ ನಿನ್ನ ಮೆಯ್ಯ ಕಾಮಜ್ವರಮಂ (ಕವಿರಾ. ೩-೧೭೪); ಹೋಮಾಗ್ನಿಯನೆಱಂಕೆಯ ಗಾಳಿಯಿಂ ನಂದಲೀಯದುರಿಪುವ ರಾಜಹಂಸೆಗಳುಮಂ (ಪಂಪಭಾ. ೧-೧೧೩ ವ); ಕಿಚ್ಚು ನಂದಿದೊಡೆ ಮತ್ತಮಿಂಧನಮನಿಕ್ಕಲೆಂದು ಕೊಡಲಿಗೊಂಡು ಪುಳ್ಳಿಯಂ ಪೋಟಿಸ್ವಾಗಳ್ (ಚಾವುಂಪು. ೩೭೪); ಮನಬೀಸರವೆಂಬ ಗಾಳಿ ಬೀಸಿತ್ತು ವಿದ್ಯಾಮುಖದ ಜ್ಯೋತಿ ನಂದಿತ್ತು (ಅವಚಂ. ೪೦-೧೭೦); ಮರೀಚಿ ನಂದುವ ಸೊಡರ ಕುಡಿವೆಳಗಿನಂತೆ (ವರ್ಧಪು. ೧೦-೪೯ವ); ಕಿಚ್ಚು ನೀರಿಂದ ನಂದುವುದದು ನೆಯ್ಯಿಂದ ಹೆಚ್ಚುವುದಂತೆ ಕಾಮಾಗ್ನಿ ಸಚ್ಚಿದಾನಂದಾತ್ಮರಸದಿ ನಂದುವುದದು ಹೆಚ್ಚುವುದಬಲೆಯರಿಂದ (ಭರತೇ. ೬೩-೪೦). ೨. ಶಮನವಾಗು; ಕುಂದು; ನಾಶವಾಗು: ಎರ್ದೆಗೆಟ್ಟನೀಗಳೀ ದಿಟ್ಟಿ ಮರಳ್ದು ನಂದಿದಪುದು (ಕಾದಂಪೂ. ೦೯೯); ತಂದೆಯನಗಲ್ದ ವಿರಹಂ ನಂದದೆ ಕಾರ್ಪಾಸಶಿಖಿಯೊಲೊಳಗೊಳಗಟಲಂ ಸಂಧಿಸೆ ನಿಲಲಾಱದೆ ನಿಜಮಂದಿರದೊಳ್ ರಾಜ್ಯಸುಖಪರಾಙ್ಮುಖನಾದಂ (ಅನಂಪು. ೧೦-೩೩); ಹೆಚ್ಚಿತು ಧರ್ಮ ಧರೆಯೊಳು ದುರ್ಮಾರ್ಗದ ಕಿಚ್ಚಿನೇಳಿಗೆ ನಂದಿತು (ಕಂನವಿ. ೩-೧೦); ನಂದಿದರು ದುಸ್ಸತ್ವದ ಮನಸತ್ವೋನ್ನತರು ರಾಮಕೃಷ್ಣಾದಿಗಳು ದಿವ್ಯಭೂತಿಗಳು (ಮಲದೇ. ೪೧-೧). 'ನಂದಿಸು$_1$' ಪರಾ. ೩. ಕಳೆಗುಂದು; ತೇಜೋಹೀನವಾಗು; ಮಂಕಾಗು: ಕಡುನಂದಿ ಕುಂದಿ ಸಮ್ಯಕ್ಕಲದೀಪಕಂಗೆ ಮಗುಟ್ದಂದುಸಿರ್ದರ್ ಸಚಿವರ್ವಿಷಾದದಿಂ (ಉದ್ಭಟ. ೧೦-೪೦). **ನೊಂದು$_1$**: ೧. ಸವತಿಮತ್ಸರವು ಪ್ರಪಂಚದಲ್ಲಿ ಹೆಣ್ಣಿನ ಪಾಲಿಗೆ ಬಂದ ನೊಂದದ ಕಿಚ್ಚು (ಕನ್ನಜಾ. ೧೦೩). ೨. ಅತ್ರಿಯ ಸುತನೆ ನಿನ್ನಯ ಕಳೆಯು ನೊಂದುಗುವೆಂದು ಸುರಗುರು ನಳಿನವೈರಿಗೆ ಶಾಪವಿತ್ತನು (ಸಂಭಪ. ೧೨-೩); ಎಂದಿಗಾನುಂ ನಿನ್ನ ಪೂರ್ವಋಣಗಳ ಲೆಕ್ಕ ನೊಂದಬೇಕೆಂದಿರ್ದೊಡಿಂದೆ ಮೊದಲನಿಡು (ಮಂಕುಳ. ೭೩೭).

ನಂದದೀವಿಗೆ, ನಂದಾದೀವಿಗೆ = ಆರದೆ ಇರುವ ದೀಪ; (ದೇವರ ಮುಂದೆ) ನಿರಂತರವಾಗಿ ಉರಿಯುವ ದೀಪ,-ಜ್ಯೋತಿ: ಜಿನಚಂದ್ರಕುಮಾರಂ. . .ಪೋಲ್ತು ಕನಕರುಚಿಯಿಂದಮಾ ಪಳಿಕಿನ ಕೊಡನೊಳಗಿರ್ದ ನಂದದೀವಿಗೆಯಿರವಂ (ಶಾಂತಿಪು. ೦೦-೪೩); ಮೂಲಸ್ಥಾನಕಲಿದೇವಸ್ವಾಮಿಗೆ ವಿಷ್ಣುದೇವರ್ಗ್ಗೆ ನನ್ದದೀವಿಗೆಗಂ ನಿವೇದ್ಯಕ್ಕಂ ಶ್ರೀಖಣ್ಡಕ್ಕಂ ಧೂಪಕ್ಕಂ ಮೊದಲ್ಗೊಟ್ಟ ಗದ್ಯಾಣಂ ಪದಿನೈಯ್ದು (ಸೌಇಇ. XI-1, ೯೩-೩೩; 1054); ಈ ಪೊನ್ನ ವೃದ್ಧಿಯೊಳಂ ಕೆಯ್ಯ ಗುತ್ತಗೆಯೊಳಂ ಗಂಧಧೂಪನಿವೇದ್ಯ ನಂದದೀವಿಗೆಗಂ ಅಱ್ಟಿಸುವ ಮಾಣಿಯ ಜೀವಿತಕ್ಕಂ ಕುಡುವುದು (ಕಇ. II, ೯-೨೮; 1075); ಶ್ರೀಮಾದವಯದೇವಗೆ ಸ್ನಾನಕ್ಕೆ ಆ ಕವಿಲೆಯ ಬಿಟ್ಟ ನನ್ದನವನ ಮಾಡಿಸಿ ನಂದಾದೀವಿಗೆಯಂ ಮಾಲೆ ಪೂವ ನದಿಯ ಸಿಲ × × × ಬ್ರಹ್ಮಚಾರಿಯ × × × ನದೊಳು (ಎಕ. IV, ಗುಂಡ್ಲುಪೇ. ೮೪-೬; 1000?); ಮತ್ತಂ ದೇವರ್ಗೆ ನನ್ದಾದೀವಿಗೆಗಿತ್ತ ಗಾಣವೊನ್ದದಕೆ ಕರವಂದ ತಳಭೋಗವುಸತು ಮೊದಲಾಗೆ ಸರ್ವಬಾಧಾಪರಿಹಾರಂ (ಸೌಇಇ. XI-1, ೩೩-೬೪; 1007); ದೇವರ್ಗ್ಗೆ ಒನ್ದು ನನ್ದಾದೀವಿಗೆ ಚನ್ದ್ರಸೂರ್ಯ್ಯರ್ಕೃತಂ ಕುನ್ದದೆ ನಡೆವನ್ತಾಗೆ (ಎಕ. XIV, ಮಳವ. ೧೨೪-೦; 1014); ನಂದಾದೀವಿಗೆಯ ನಡೆಸಿಹೆವೆಂಬವರ ಮುಖವ ನೋಡಲಾಗದು (ಬಸವ. ೨೨೩); ಶಂಕರ, ಮಧ್ವ, ರಾಮಾನುಜರಂಥ ಆಚಾರ್ಯರು . . . ಭಗವದ್ಗೀತೆಯಿಂದ ಸ್ಫೂರ್ತಿ ಪಡೆದಿದ್ದಾರೆ; ತಮ್ಮ ಬಾಳ ನಂದಾದೀವಿಗೆಯನ್ನು ಹೊತ್ತಿಸಿಕೊಂಡಿದ್ದಾರೆ (ಧರ್ಮಸಾ. ೦೨೭). ನಂದಳಕ = ನಂದದೀವಿಗೆ (?): ನಯಿವೇದ್ಯ ನಂದಳಕ ನಿತ್ಯಚಿತ್ರ (ಸೌಇಇ. ೦೦೩೨. ಉಡುಪಿ. ೩೪೦-೮; ?). ☞ ಇದು 'ನಂದಾವೆಳಕು' ಎಂಬುದರ ಅಪಲಿಖಿತವಿರಬಹುದು. ನಂದಾಉಳ, ನಂದಾವಳ, ನಂದಾವುಳ = ನಂದದೀವಿಗೆ: ಶ್ರೀಬಿಕ್ಕಿದೇವಯ್ಯಗಳ ಕಯ್ಯಲು ಶ್ರೀಮಧುಕನಾಥದೇವರಿಗೆ ಮೂಱುನಂದಾಉಳವನೂ ಆಚಂದ್ರಾರ್ಕಸ್ಥಾಯಿಯಾಗಿ ನಡಸುವಂತಾಗಿ ಕೊಟ್ಟುದು (ಸೌಇಇ. XX, ೩೭೭-೯; ಸು.14ನೆಯ ಶತ); ನೈವೇದ್ಯ ನಂದಾವಳ ಪೂಜಾರಿಯ[ ಜಿ ]ತಸತ್ರ (ಸೌಇಇ. XX, ೨೨೯-೨೬; 1369 ?); ನಂದಾವೈಳಕೆ ನೂರು ಗಾಣದ ಮಾನೆಣ್ಣೆ ಸಲುವದು (ಎಕ. VIII, ಶಿವಮೊ. ೬೯-೨೬; 1320). ನಂದಾದೀಪ = ನಂದದೀವಿಗೆ: ಹೊಂದಿ ನಿದ್ರೆಯ ದೇವ ನಂದಾದೀಪವ ಅಂದು ಪ್ರಜ್ವಳಿಸುತ ಮಿಂದುಟ್ಟು ಪೊಂದಟ್ಟೆಯ ಮಣಿವ್ಯಂದದ ಭೂಷಣ ಸಿಂಧೂರಸೀಮಂತದಲಿಟ್ಟು (ಪ್ರಸಭಾ. ೦೯-೦); ವಿಜ್ಞಾನಮಂದಿರದಲ್ಲಿ ಒಂದು ಪ್ರಕಾಶವಾದ ನಂದಾದೀಪ ನಂದಿದಂತೆ ಆಯಿತು (ಸಸ್ಯಳ. ೭೬); ಅರ್ಚಕ ಜನ್ನಯ್ಯ . . . ನಂದಾದೀಪಕ್ಕೆ ಎಣ್ಣೆ ಸುರಿದು . . . ಧ್ವಜಮರದ ಕಟ್ಟೆಯ ಹತ್ತಿರ ಬಂದಿದ್ದರು (ಪದ್ಮಸ. ೨೨೭). ನಂದಾದೀಪ್ತಿ = ನಂದದೀವಿಗೆ: ಆ ಪುರದಲ್ಲಿ ಪುಟ್ಟಿದ ದ್ರವ್ಯದಲ್ಲಿ ರುದ್ರಾಭಿಸೇಕ ಅಮ್ರುತ್ತಪಡಿ ನಂದಾದೀಪ್ತಿ . . . ಮುಂತಾಗಿ ನಡೆಯಬೇಕೆಂದು ಆ ಪುರವನೊ . . . ಕೊಟೆವು (ಎಕ. XV$^I$ ಚಿಕ್ಕನಾ. ೮೩-೧೯; 1529); ದೇವಸ್ಥಾನ ೩ಕ್ಕೆ ಅಮ್ರುತಪಡಿ ನಂದಾದೀಪ್ತಿ ಮುಂತಾದ ದೇವಕಾವೆಚ್ಚಕ್ಕೆ . . . ಉಂಡಿಗೆ ವಿವರ (ಎಕ. VII, ಶಿವಮೊ. ೨-೮೨; 1641); ಬಿನ್ನಹ ಸ್ಥಾನಿಕ ತಂಮಣನು ಗಣಾಚಾರದ ಕಟ್ಟುಗೆಯ ತೆರುವ ಹಣವನು ಸಿವರಾತ್ರಿ ಪುಣ್ಯಕಾಲದಲೂ ಧಾರಾಪೂರ್ವಕವಾಗಿ ನಂದಾದೀಪ್ತಿಗಂ . . . ನಂದಾದೀಪ್ತಿಯನು ನಡಸುದು (ಎಕ. VII, ಶಿವಮೊ. ೨೦-೧೦; ?). ನಂದಾದ್ಯುತಿ = ನಂದದೀವಿಗೆ: ಕಡವೂರ ವೀರೇಶ್ವರದೇವರಿಗೆ ಅಮ್ರುತಪಡಿ ನಂದಾದ್ಯುತಿ ಆಗರಂಗವಯಿಭೋಗಕ್ಕೆ . . . ಸಮರ್ಪಿಸ್ತೆವು (ಎಕ. XI, ಹೊಳಲ್ಕೆ. ೮೧-೮; 1640). ನಂದಾಬೆಂಕಿ = ಆರದೆ ಇರುವ ಬೆಂಕಿ; ನಿರಂತರವಾಗಿ ಉರಿಯುವ ಅಗ್ನಿ: ಆ ಬೆಂಕಿ ನಿನ್ನೆ ಮೊನ್ನೆಯದಾಗಿರಲಿಲ್ಲ; ಅನೇಕ ದಿನಗಳಿಂದ ಇಪ್ಪತ್ತುನಾಲ್ಕು ಗಂಟೆಯೂ ಆರದೆ ಸಜೀವವಾಗಿದ್ದ 'ನಂದಾಬೆಂಕಿ'ಯಾಗಿತ್ತು (ಮಲಮ. ೬೭೪). ನಂದಾಬೆಳಕು, ನಂದಾವೆಳಕು = ನಂದದೀವಿಗೆ: ಆ ಕಿಮಿಸೆಟಯರು . . . ಸಂಕ[ ರ ] ನಾರಾಯಣ ( ೦ ) ದೇವರಿಗೆ ಕಟಿಕಂಡ ತೆಱು ಒಂದು ನಂದಾಬೆಳಕು ವರುಶ ೧ದಕಂ ಯೆಂಣೆ ಹಾನೆ ೩೬ನು ನಡಸುವರು

(ಸೌಇಇ. IX-11, ೪೧೯-೨೩; 1380) ; ನೂಱು ಬತ್ತದ ಮಣ್ಣು ಯಾಱು ಪಸುವಂ ಮಾದೇವರ್ಗ್ಗವಾ ಪಳ್ಳಿಗೊಣ್ಡ ದೇವಗಂ ನನ್ದಾವೆಳಕಿಂಗೆ ಕೊಟ್ಟಂ (ಎ.ಕ.IV, ಗುಂಡ್ಲುಪೇ. ೩೩-೨೭; 1049); ಅಡಿಗನಂ ಭಾಗವ ಹಿತ್ತಿಲ ಮೇಲೆ ವೊಂದು ನಂದಾವೆಳಕು . . . ಮೊ[ಲ] ಗಡಿಯಿಂದಲುವೊಂದು ನಂದಾ ವೆಳಕು . . . ಗುಡಿಯ ಹಿತಿಲ ಮೇಲೆ ಒಂದು ನಂದಾವೆಳಕು (ಕಇ. III, ೪-೧೭; 1339) ; ಸಂಬರನಾರಾಯಣದೇವರ ಅಮೃತಪಡಿಗೆ × × × ಪ್ರತಿ ದಿನ ೧ ಕಂ ನಾಡಹಾನೆ ೩ ನಂದಾವೆಳಕಿಂಗೆ . . . ನಡೆಸುವ ಯೆಂಣೆ ವರುಷ ೧ ಕಂ ಹಾನೆ ೨ಡನೂ ನಡೆಸುವಂತಾಗಿ (ಸೌಇಇ. IX-11, ೪೦೩-೧೦; 1357). ನಂದಾವನ = ಸದಾಕಾಲವು ಹೂವು ಬಿಡುವ ತೋಟ: ಪ್ರತಿ ದಿನವೂ ಶಿರುಪಡಿವಾಳ ಸಮರ್ಪಿಸುವ ನಂದಾವನ ಮಾಡುವ ಸಂಬಳ ೬ ವರಹ (ಎಕ. XIV, ಶ್ರೀರಂಗ. ೯೩-೩; 1535) ; ದೇವರ ನಂದಾದೀವಿಗೆ ಕೆಱೆಯ ಕೆಳಗಣ ನಂದಾವನವಿಯಿಪ್ಪನು ಸರ್ವ್ವಮಾನ್ಯವಾಗಿ ನಡಸಿ ಬಹಾಂಗೆ ಬಿಟ್ಟ ಮಗ್ಗ ತೋಟ (ಎಕ. XIV, ತಿರುಮ. ೨೪೩-೫; ?). **ನಂದಿ ಪೋಗು, ನಂದಿ ಹೋಗು, ನೊಂದಿ ಹೋಗು** = ೧. ಇಲ್ಲವಾಗು; ನಾಶವಾಗು; ಶಮನ ವಾಗು: ವಾಮನಪದಹತಿವಿದಳಿತ ಜೀಮೂತವಿಮುಕ್ತಬಹಳಜಲಧಾರೆ ಗಳಿಂದಾ ಮುನಿಜನಾಪಕಾರಕ ಧೂಮಧ್ವಜನೆಯ್ದೆ ನಂದಿ ಪೋದತ್ತಾಗಳ್ (ಅರ್ಧನೇ. ೬-೩೫); ನಾನೆಂಬ ಜೀವರು ನಂದಿಹೋಗುವರ್ಸೆಯವದಿರಿಗಹುದೆ ಶಿವಪದವು (ಸಂಭಪ. ೧೩-೫೦). ೨. ಆರಿಹೋಗು; ಬೆಳಕನ್ನು ಕಳೆದು ಕೊಳ್ಳು: ಕಪಾಲಕುಂಡಲೆಯು . . . ಕೊಡಡಿಯನ್ನು ಬಿಟ್ಟು ಹೊರಗೆ ಹೊರಬಿದ್ದದ್ದೇ ತಡ ಮನೆಯ ದೀಪವು ನೊಂದಿಹೋಯಿತು (ಕಪಾಕುಂ. ೦೧೯). **ನಂದೆವೊಯ್** = ನಂದುವಂತೆ ಹೊಡೆ; ನಾಶವಾಗುವಂತೆ ಮಾಡು: ಧೂರ್ಜಟಿಯ ನೊಸಲ ಕಣ್ಣಿಂ ಸ್ಮರು ನಂದೆವೊಯ್ದಂ (ಮಲ್ಲಿಪು. ೨-೫೬) ; ಉರಿಲಿಂಗಮನಾಲಿಂಗಿಸಲುಂ ಯುಗಾಂತಹುತವಹನಂ ನಂದೆ ವೊಯ್ಕುಲಂ (ಜಗವಿ. ೭-೮೪ವ) ; ತಳ್ತು ಚುಂಬನಮನೆಸಿರ್ಪೆ ತತ್ತದುಚಿತ ಕ್ರಿಯೆಯಿಂದಮೆ ನಂದೆವೊಯ್ದು (ಚಂದ್ರಪು. ೮-೯೪) ; ಮನಸ್ತಾಪಮಂ ಧೃತಿ ಸಾಂದ್ರಚಂದ್ರಿಕೆಯಿಂ ನಂದೆವೊಯ್ದು (ರಾಜಶೇ. ೧೩-೯೭ವ).

[ದೇ.॥ ತಮಿ. ನನ್ಮು, ನತು, ನುತು, ನೊನ್ಮು, ನೊತು]

**ನಂದುರಿ** (ನಾ). ಒಂದು ಬಗೆಯ ಮರ: ಕೆಂಪುಗಂಧಗಿರಿ, ನಂದಿವೃಕ್ಷ. ಟೂನಮರ, ನೊಗೆ, ನಂದುರಿ, ಬೆಳಂದಿ, ಗಂಧಗರಿಗೆ (ಮೃಜಿಗಿ. ೧೯-೩೪೮).

[?]

**ನಂದುವ** (ನಾ). ಒಂದು ವಂಶದ ಹೆಸರು (?): ಜಕ್ಕಿಯಬ್ಬೆ ನಾಟಿಗ್ಗೆ ವೃಣ್ದಿಗೆಯ್ಯುತ್ತಿರೆ ನಣ್ದುವರ ಕಲಿಗಂ ಪೆರ್ಗ್ಗಡೆತನಂ ಗೆಯ್ಯೆ (ಎಕ. VII, ಶಿಕಾರಿ. ೨೧೯-೧೨; 918). [?]

**ನಂದೆ** (ನಾ). ೧. ಶಕ್ತಿದೇವತೆ; ದುರ್ಗೆ; ಪಾರ್ವತಿ. ೨. [ಜ್ಯೋತಿ] ಎರಡೂ ಪಕ್ಷಗಳ ಪಾಡ್ಯಮಿ, ಷಷ್ಠಿ ಮತ್ತು ಏಕಾದಶಿ ತಿಥಿಗಳು: ಅಭಿಧಾನಕ್ರಮದಿಂ ನಂದೆ ಭದ್ರೆ ಜಯೆ ರಿಕ್ತೆ ಪೂರ್ಣೆಯೆನಿತುಂ ಪ್ರತಿಪತ್ಪ್ರ ಭೃತಿದಿನಂಗಳುಂ (ಲೋಕೋಪ. ೧-೨) ; ನಂದಾ ಭದ್ರಾ ಜಯಾ ರಿಕ್ತಾ ಪೂರ್ಣೆಯೆಂದು ಪಾಡಿವಾದಿಯಾಗಿ ತಿಥಿಪಂಚಕಂಗಳಕ್ಕುಂ (ಪಸಾರ. ೬೭) ; ನಂದೆಯೆನಿಸು ಭದ್ರೆಯೆನಿಸು ಒಂದಾಗಿ ಅರ್ಥಿಸಲು ಅಂದಿನ ತಿಥಿಗೆ ಸವನಾಗೆ ಗ್ರಹಣ ತಾ ಮುಂದೆ ಬಂದಿಕ್ಕು (ಸರ್ವಜ್ಞ. ೧೫೭೦) ; ೫೦ ತಿಥಿಗಳಲ್ಲಿ ನಂದಾ, ಭದ್ರಾ, ಜಯಾ, ರಿಕ್ತಾ, ಪೂರ್ಣಾಯೆಂಬ ಸಂಕೇತವು ಪಾಡ್ಯ ಮೊದಲು ಪಂಚಮಿವರೆಗೂ ಆಗುವುವು. ಹೀಗೆ . . . ಅಮಾವಾಸ್ಯೆ ಪರ್ಯಂತ ೬ ಸಲ ಸುತ್ತಿಬರುವವು (ಹಸಾರ. ೩೯೮ ಪದ್ಯಾರ್ಥ). [ಸಂ. ನಂದಾ]

**ನಂದ್ಯಾಮ್ಲ** (ನಾ). ಒಂದು ಬಗೆಯ ಸಸ್ಯ: "ಕೋಶಾಮ್ರಃ-ನಂದ್ಯಾಮ್ಲ" (ಒಷಧಿ. ೪೧). [?]

**ನಂದ್ಯಾಲ** 'ನಂದಿಯಾಲ' ನೋ.

**ನಂದ್ಯಾವರ್ತ** (ನಾ.) ೧. = ನಂದಿಬಟ್ಟಲು: "ಗಂಧರಾಜಃ – ಶ್ರೀಗಂಧ, ನಂದ್ಯಾವರ್ತ, ಜವಾದಿ" (ಒಷಧಿ. ೪೭) ; ಕುಂದ ಮುಚುಕುಂದ ಮಂದಾ ರೇಂದೀವರನಂದ್ಯಾವರ್ತ . . . ಮಲ್ಲಿಕಾದ್ಯನೇಕ ಸುರಭಿಕುಸುಮಂಗಳಂ ಸಜ್ಜುಕಮಪ್ಪವಂ ಪುಟ್ಟಿಯೊಳ್ ತೀವಿಕೊಂಡು (ಪಂಚತಂ. ೧೧೭-೩) ; ನಂದ್ಯಾವರ್ತದ ಪೂವಂ ತಂದುಱೆ ನೋಣವೂಱೆದೆಡೆಗೆ ಪೂಸುಗೆ (ಖಮದ. ೧೩-೧೧೭) ; ನಂದ್ಯಾವರ್ತದ ಹೂವನ್ನು ಧರಿಸಿದರೆ – ನೇತ್ರದಲ್ಲಿ ಹುಟ್ಟಿದ ಹೂವು, ಕಾಯಿ ಮುಂತಾದ ರೋಗಗಳಂ ಪರಿಹರಿಸಿ . . . ವಿರಹವೇದನೆ ಯನ್ನು ಪರಿಹರಿಸುವುದು (ಸಕವೈ. ೪೪); ಪಾರಿಜಾತ, ನಂದ್ಯಾವರ್ತ . . . ಮೊದಲಾದ ಹೂಗಳೂ ಅಲ್ಲಿ ಬೇಕಾದಷ್ಟು ಇದ್ದವು (ಕರ್ಣಾಜ. ೧೫೫). ೨. ಪಶ್ಚಿಮದ ಬಾಗಿಲಿಲ್ಲದ ಒಂದು ಬಗೆಯ (ವರ್ತುಲಾಕಾರದ) ವಿಶಿಷ್ಟಾಕೃತಿಯ ಕಟ್ಟಡ: ದಿಕ್ಸ್ವಸ್ತಿಕಮೆಂಬ ಸಭಾಭೂಮಿಯುಂ ನಂದ್ಯಾವರ್ತಮೆಂಬ ಶಿಬಿರನಿವೇಶಮುಂ (ಆದಿಪು. ೧೫-೩ವ) ; ಸರ್ವತೋ ಭದ್ರಾಹ್ವಯವಿಶೇಷದಿಂ ನೋಂಪಿಯ ವಿಶೇಷಮುಂ ನಂದ್ಯಾವರ್ತ ರಮಣೀಯತೆಯಿಂ ನಂದನವನಾಂತರಾಳಮುಂ ಸ್ವಸ್ತಿಕವಿಸ್ತಾರದಿಂ ವಿವಾಹಮುಮನನುಕರಿಸಿ ಶೋಭಿಸುವುದು (ಸುಕುಮಾ. ೧೦-೫೦ವ) ; ಮಣಿ ಸತ್ತಿಗೆಯ ಮೊಗಮಂಟಪದ ಬಣ್ಣವಟ್ಟಿಗೆಯ ಅಮಳಗುಳಿಯ ನಂದ್ಯಾ ವರ್ತದ ತೋರಣದೋರಣದ ಲೋವೆಯ ಮದನಗ್ಗೆಯ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡವಾಗಿ ರಂಜಿಕುಂ (ರಾಮಾಶ್ವ. ೫೪-೨೫). ೩. ಒಂದು ಬಗೆಯ ದೊಡ್ಡ ಮೀನು: "ನಂದ್ಯಾವರ್ತಃ-ನಂದಿವಟ್ಟಲು, ಮೀನಿನ ಭೇದ" (ಒಷಧಿ. ೪೪). ೪. [ಅಶ್ವಶಾ] ಒಂದು ಬಗೆಯ ಚಿಹ್ನೆ,-ಗುರುತು: ಶ್ರೀವತ್ಸಂ ಕನ್ನಡಿ ನಂದ್ಯಾವರ್ತಂ ವರ್ಧಮಾನಕಂ ಸ್ವಸ್ತಿಕ ಮೆಂಬೀ ವಿವಿಧಲಾಂಛನಂಗಳನಾಮಿಸಿದ ವಾಜಿಗಾಯು ತ್ರಿಂಶದ್ವರ್ಷಂ (ಅಶ್ವಶಾ. ೫-೩೭). ೫. ದೇಹದ ಮೇಲೆ ಇರುವ ಒಂದು ಗುರುತು (?): ನಾಭಿರಾಜಾಂಗಸಂಗತಮಪ್ಪ ನಂದ್ಯಾವರ್ತದಂತೆ ಸೊಗಯಿಸುವ ನಂದ್ಯಾವರ್ತಂಗಳೊಳಂ (ಆದಿಪು. ೬-೧೦೬ ವ). ☞ ಇದು ವಕ್ಷಸ್ಥಳ ದಲ್ಲಿರುವ ಶ್ರೀವತ್ಸಲಾಂಛನವಿರಬಹುದು: (ಚಾವುಂಪು. ೩೭೧ ನೋ).

[ಸಂ.]

**ನಂದ್ಯಾವರ್ತವಿಮಾನ** (ನಾ). [ಜೈನ] ಒಂದು ಸ್ವರ್ಗದ ಹೆಸರು: ವಾನರಾರ್ಯನುಂ ನಂದ್ಯಾವರ್ತವಿಮಾನದೊಳ್ ಸುರನಾರೀಮನೋಹರಂ ಮನೋಹರನೆಂಬನಿಮಿಷನಾದಂ (ಆದಿಪು. ೫-೭೦ ವ).

[ನಂದ್ಯಾವರ್ತ + ವಿಮಾನ]

**ನಂಬರು** (ನಾ). ೧. ಅಂಕೆ; ಸಂಖ್ಯೆ: ನಿನ್ನದು ಎಷ್ಟನೆಯ ನಂಬರು? (ರೂಢಿ). ೨. ಪರೀಕ್ಷೆ ಮುಂತಾದ ಮೌಲ್ಯಮಾಪನದಲ್ಲಿ ಕೊಡುವ ಗುಣಾಂಕ: ನೀವು ರಷ್ಯನ್ ಮತ್ತು ಲೆಖ್ಖದಲ್ಲಿ ಹೆಚ್ಚು ನಂಬರುಗಳನ್ನು ತೆಗೆದುಕೊಳ್ಳುವವರೆಗೆ ನಿಮ್ಮನ್ನು ಅದರಲ್ಲಿ ಸೇರಿಸಿಕೊಳ್ಳುವುದಿಲ್ಲ (ಶಾಲಮ. ೬೫) ; ಎಲ್ಲದರಲ್ಲೂ ಹೆಚ್ಚು ನಂಬರು ಗಳಿಸಿ ತರಗತಿಗೇ ಅವನು ಮೊದಲಿಗ ನಾಗಿದ್ದಾನೆ (ರೂಢಿ). ೩. ಸರಕಾರಿದಾಖಲೆಯಲ್ಲಿ ಒಂದು ಅಂಕೆ ಯನ್ನು ಪಡೆದಿರುವ ಜಮೀನು: ನೂರಿಪ್ಪತ್ತು ನಂಬರುಗಳು ಖಾಸಗಿ ಜಮೀನು ಎಂಬ ಆಧಾರ ಸಿಕ್ಕಿತು (ಗ್ರಾಮಾಯ. ೪) ; ದೂರದಿಂದಲೇ ಒಂದು ನಿಟ್ಟಿನಿಂದ ಮತ್ತೊಂದು ನಿಟ್ಟಿಗೆ ಕೈಮಾಡಿ ಅವೆಲ್ಲ ತನ್ನ ನಂಬರು ಗಳೇ ಎಂದು ಇದ್ದು ಬಿದ್ದ ಹೊಲಗಳನ್ನು ತೋರಿಸಿದಾಗ ರಾಧಕ್ಕನ ತಂದೆ ಹಿರಿ ಹಿರಿಹಿಗ್ಗಿದರು (ಗಂಗಾಸಾ. ೪೫) ; ಖಾತೆ ಇಲ್ಲ, ಎಕರೆ ಇಲ್ಲ, ನಂಬರಿಲ್ಲ, ಇದೇನ್ಬುದ್ಧಿ ನೀವೆ ಹಿಂಗ್ಮಾಡ್ತೀರಿ (ಹುಟ್ಟಿಹ. ೧೩೮).

**ನಂಬರ ಮನೆ** = (ಉಕ) ಊಟದ ಮನೆ; ಖಾನಾವಳಿ: ರಾಮಣ್ಣನಿಗೆ ಎರಡಾಣೆ ಕೊಟ್ಟು ನೇರವಾಗಿ ನಂಬರ ಮನೆಯಲ್ಲಿ ಊಟಮಾಡಿ ಬಂದ (ಜೀದಾನ. ೩೫) ; ಊಟ ಮಾಡುವ ನಂಬರ ಮನೆಗೆ ಹೋದರೆ ತನ್ನ ಹೆಸರು

"ಅ–ಬ" ಎಂದು ಹೇಳುತ್ತಾನೆ! (ಮೋಹಿನೀ. ೧೩೭); ನಂಬರ ಮನೀಕಿಂತಾ ಸೋವಿ ಮಾಡಿ ತೋರಿಸತೀನಿ (ವೈನಿ. ೩೮೭).

[ ←ಇಂ. Number ]

**ನಂಬಿ** (ನಾ). ೧. ಭಕ್ತ. ೨. ದೇವಾಲಯದ ಅಧಿಕಾರಿ, –ಸ್ಥಾನಿಕ: ಗೋಪಾಲದೇವರ ಸ್ಥಾನೀಕ ನಂಬಿಯರು ಗಡಬಡೆಯರು ಯಾ ಧರ್ಮ್ಮಕೆ ಸಹಾಯಿ ಖಿಡೆಯದಲ್ಲಪ್ಪನವರು (ಎಕ. XI, ಚಿತ್ರದು. ೬–೩೭; 1338); ಆ ದೇವರ ನಂಬಿಗಳು ತೆಱುವ ವಿಭೂತಿ (ಎಕ. X (S), ಮಾಲೂರು. ೯೪–೧೮; 1406); ನಿರೂಪದಿಂದ ನಂಬಿಗಳು ಅಪಚಿ ಅನತಪಗಳಿಗೆ (ಸೌಇಎ. ೧೯೩೪, ಪುಂಗನೂರು. ೧೫೬–೪; 1419); ಗೋವಿಂದರಾಜದೇವರ ನೈವೇದ್ಯ ಪ್ರಸಾದ ವನೂ ತಿರುಪತಿಯ ವರಿಗೆ ಕಾಣಿಪರಾಗಿ ನಾಲ್ಕು ಹರಿವಾಣಊ ನಂಬಿಗಳಿಗೆ ಒಂದು ಹರಿವಾಣವೂ . . . ಕೊಟ್ಟು (ಸೌಇಇ. IX–ii, ೪೬೩–೨; 1407); ಪುರೋಹಿತವರ್ಗ (Priests) (ಬ್ರಾಹ್ಮಣರೂ, ಇತರರೂ) ಆಚಾರ್ಯ . . . ನಂಬಿ, ನಂಬಿದಿ, ಪಾಡಿಯ (ತುಳುನಾ. ೧೭೧). ೨. ತಮಿಳುನಾಡಿನ ಅರುವತ್ತುಮೂವರು ಪುರಾತನರಲ್ಲಿ ಒಬ್ಬ; ನಂಬಿಯಣ್ಣ: ನಂಬಿ ಕರೆದೊಡೋ ಎಂದೆ ತೆಲುಗ ಜೊಮ್ಮಯ್ಯಂಗೆ ಒಲಿದೆ ದೇವಾ (ಬಸವ. ೫೦೯); ಹರ ತಾಂ ಕುಂಟಣಿಯಾಗೆ ನಂಬಿಯೊರೆದಂ (ಸೋಮೇಶ. ೭೪); ಪುಷ್ಪದತ್ತಾಖ್ಯನನಿಳೆಯುಱಿಯಲ್ ನಂಬಿಯೆಂದಿಟ್ಟು ಮತ್ತಂ ಹರ ನೀನೊಲ್ದು ಕಥಾಸಾರವನವಧರಿಸೈ ಶ್ರೀವಿರೂಪಾಕ್ಷಲಿಂಗಾ (ನಂಬಿರ. ೧ ಸೂಚನೆ); ಕುಂಬಾಱ ಗುಂಡಯ್ಯ ನಂಬಿ ತ್ರಿಯಂಬಕಂ ನಿಂಬವ್ವೆ ನಿಂಬಂ ಕಂಬಿಯಲಿ ಭೈರಯ್ಯನುದ್ಭಟದೇವರ್ (ಸಾನಂಚ. ೯–೮೦); ಹಲವು ಸೂಳೋರಂತೆ ನಂಬಿಯ ಬಳಿಗೆಲಸವಂ ಮಾಡಲಾಱದೆ ಬಳಲಿಕೆಯನಾಱಿಸಿ ಕೊಳಲು ಬಂದಡವಿಯೊಳಗಿರ್ದ್ದ (ಬಸಪು. ೧೮–೧೩).

[ ದೇ.ಶ ತಮಿ. ನಮ್ಬಿ; ಮಲ. ನಮ್ಬಿ; ತುಳು. ಕೊಡ. ತೆಲು. ನಂಬಿ ]

**ನಂಬಿಕಸ್ತ** (ನಾ). ನಂಬಿಕೆಗೆ ಅರ್ಹನಾದವನು; ವಿಶ್ವಾಸಕ್ಕೆ ಯೋಗ್ಯನಾದವನು: ಅವನೊಬ್ಬ ನಂಬಿಕಸ್ತನಾದ ಸೇವಕ (ರೂಢಿ).

[ < ನಂಬಿಕೆ + –ಸ್ತ ]

**ನಂಬಿಕಸ್ತಿಕೆ** (ನಾ). = ನಂಬಿಕೆ: ಅವನ ನಂಬಿಕಸ್ತಿಕೆ ಯಾರಾದರೂ ಮೆಚ್ಚುವಂಥದು (ರೂಢಿ). [ ನಂಬಿಕಸ್ತ + –ಇಕೆ ]

**ನಂಬಿಕೆ** (ನಾ). ಶ್ರದ್ಧೆ; ವಿಶ್ವಾಸ: ಬೆಳ್ಳಿ, ಬಂಗಾರ ಕೈಯಲ್ಲಿದ್ದರೆ . . . ಬೇಕಾದ ವಸ್ತುಗಳನ್ನು ಕೊಳ್ಳುವ ಶಕ್ತಿ ಬರುವುದೆಂದು ಜನರಿಗೆ ದೃಢವಾದ ನಂಬಿಕೆ (ಹಣಪ್ರ. ೧೬): ಇಂದು ನನ್ನ ನಂಬಿಕೆ ಸಡಿಲವಾದಂತೆ ಭಾಸವಾಗುತ್ತಿದೆ (ಬಾಡಿಅ. ೩೮೦).

**ನಂಬಿಕೆ ಮೂಡಿಸು** = ವಿಶ್ವಾಸವನ್ನು ಹುಟ್ಟಿಸು; ಭರವಸೆಯನ್ನುಂಟುಮಾಡು ವಿಷಯವನ್ನು ಒಳಹೊಕ್ಕು ನೋಡಿದರೆ ತಾನವಳಿಗೆ ಕಟ್ಟುಗೊಂಡಿದ್ದುದಾಗಿಯೂ ಅಲ್ಲಿ ನಂಬಿಕೆ ಮೂಡಿಸಿದ್ದುದಾಗಿಯೂ ಅವನು ತಿಳಿದುಕೊಂಡಿದ್ದನು (ಪುನರು. ೧೩೮). **ನಂಬಿಕೆ ಹುಟ್ಟಿಸು** = ವಿಶ್ವಾಸವುಂಟಾಗುವಂತೆ ಮಾಡು; ನಂಬಿಸು: ನನ್ನ ಮಾತಿನಲ್ಲಿ ಅವರಿಗೆ ನಂಬಿಕೆ ಹುಟ್ಟಿಸಲು ಬಹಳ ಶ್ರಮಪಡಬೇಕಾಯಿತು (ರೂಢಿ). **ನಂಬಿಕೆ ಹುಟ್ಟು** = ವಿಶ್ವಾಸವುಂಟಾಗು; ನಂಬು: ಅವರ ಮಾತಿನಲ್ಲಿ ನನಗೆ ಎಳ್ಳಷ್ಟೂ ನಂಬಿಕೆ ಹುಟ್ಟಲಿಲ್ಲ (ರೂಢಿ).

[ ನಂಬು + –ಇಕೆ./ತಮಿ. ನಮ್ಬಿಕ್ಕೈ, ನಮ್ಪಕ; ಮಲ. ನಮ್ಬಿಕ್ಕ; ತುಳು. ನಂಬಿಗೆ; ತೆಲು. ನಮ್ಮಕ, ನಮ್ಮಿಕೆ, ನಮ್ಮಿಗ ]

**ನಂಬಿಕೆದ್ರೋಹ** (ನಾ). ವಿಶ್ವಾಸವುಳ್ಳವರಿಗೆ ಕೆಡುಕುಮಾಡುವಿಕೆ; ವಿಶ್ವಾಸಘಾತುಕತನ "ನಂಬಿಕೆದ್ರೋಹ, ವಿಶ್ವಾಸಘಾತುಕತೆ" (Breach of trust. ಪಾರಿನಿ. ೧೦); ಪಾಲುದಾರ ನಂಬಿಕೆದ್ರೋಹ ಮಾಡಿದ್ದರಿಂದ ಕೋರ್ಟಿಗೆ ಹೋಗಬೇಕಾಯಿತು (ರೂಢಿ). [ ನಂಬಿಕೆ + ದ್ರೋಹ ]

**ನಂಬಿಕೆದ್ರೋಹಿ** (ನಾ). ನಂಬಿಸಿ ಮೋಸಮಾಡುವವನು; ವಿಶ್ವಾಸಘಾತುಕ. [ ನಂಬಿಕೆ + ದ್ರೋಹಿ ]

**ನಂಬಿಗ** (ನಾ). ನಂಬಲು ಯೋಗ್ಯನಾದವನು; ವಿಶ್ವಾಸಯೋಗ್ಯ: ಇದೆ ಸಮಯವಣ್ಣ ಇದೆ ಸಮಯ ತಮ್ಮ ನಮ್ ನಿಮ್ಮ ಆತ್ಮಗಳಿಗೆ. ಅಂಬಿಗನು ಬಂದ ನಂಬಿಗನು ಬಂದ ಬಂದದ ದಿವ್ಯಗಳಿಗೆ (ಹೃದಸ. ೧–೮).

[ ನಂಬಿಗೆ (<ನಂಬುಗೆ) + –ಅ$_7$ ]

**ನಂಬಿಗಸ್ತ** (ನಾ). = ನಂಬಿಕಸ್ತ: (+). [ <ನಂಬುಗೆ + –ಸ್ತ ]

**ನಂಬಿಗಸ್ತಿಕೆ** (ನಾ). = ನಂಬಿಕಸ್ತಿಕೆ: (+). [ ನಂಬಿಗಸ್ತ + –ಇಕೆ ]

**ನಂಬಿಗೆ** 'ನಂಬುಗೆ' ನೋ.

**ನಂಬಿರ** (ನಾ). (?): ಇವೆಲ್ಲವನು ದೇವರ ಅಮೃತಪಡಿ ನಂದಾದೀಪ ಪಡಿದೀಪ ಗಂಧ ವಸ್ತ್ರವಯಿಭೋಗ ಪರ್ವತಿಥಿ ನಂಬಿರ ಹೂವಡಿಗ ಪೊಗಬುರಜ ಮುತ್ತಾದ ವಿನಿಯೋಗವನು ನಡಸಿ ಬಹರುಯೆಂದು ಸಮರ್ಪಿಸಿದ್ದು (ಎಕ. III, ತಿರುಮ. ೩೭–೧೬; 1513).

[ ಈ ಇದು 'ನಂಬಿ' ಎಂಬುದರ ಅಪಲಿಖಿತವಿರಬಹುದು ]

**ನಂಬಿಸು** (ಕ್ರಿ). ೧. (ಸ್ನೇಹ, ಆಪ್ತತೆ, ಧರ್ಮ ಮುಂತಾದುವುಗಳ ವಿಷಯದಲ್ಲಿ) ನಂಬಿಕೆಯನ್ನುಂಟುಮಾಡು; ವಿಶ್ವಾಸವನ್ನುಂಟುಮಾಡು; ಭರವಸೆ ಮೂಡಿಸು; ಶ್ರದ್ಧೆಯನ್ನುಂಟುಮಾಡು: "ನಂಬಿಸು – ಅನುಮೋದನೇ" (ಶಮಧಾ); ಈ ರೂಪಂ ತೋಱಿ ನಂಬಿಸಿ ನಿಮ್ಮ ಪ್ರಾಣಕ್ಕಪಾಯಮಂ ಮಾಡಲ್ ಬಗೆದು (ವಡ್ಡಾರಾ. ೧೭೬–೧೯); ನಂಬಿದ ಬರವುಮಂ ನಂಬದ ಬರವುಮನಱಿದು . . . ನಂಬದುದಂ ನಂಬಿಸಲುಂ ನಂಬಿದುದಂ ಬಿಡಿಸಲುಂ .... ನಿಮ್ಮಡಿಯ ಕಲದೊಳಾನೆ ಬಲ್ಲೆಂ (ಪಂಪಭಾ. ೫–೪೩ ವ); ತನಗಲ್ಲದೊಡಲ್ಗೊಡಮೆಗೆ ಮನಮಿಟ್ಟಪವರ್ಗಮಾರ್ಗಮಂ ಪೊರ್ದದೆ ತನ್ನನೆ ತಾನೆ ನಂಬಿಸುವೊಡಾತ್ಮನಂತು ಪೇಟಾತ್ಮವಂಚಕರ್ ಪೆಱರೊಳರೇ (ಅಜಿಪು. ೩–೫೫); ಮಕ್ಕಳ ಕೈಯ ಮಾಣಿಕವಂ ಗುಗ್ಗುರಿಯಂ ತೋಱಿ ನಂಬಿಸಿ ಕೊಳ್ವಂತೆ (ಧರ್ಮಾಮೃ. ೧೦–೮೩); ಎಂತಕ್ಕೆ ನಾ ನಿಮ್ಮ ದೇವರೆಂದಱಿದೆನು ಇಂತಾಗಿ ನೀವೆನ್ನನಾರೆಂದಱಿಯರಿ ನಂಬಲಱಿಯೆ ನಂಬಿಸಲಱಿಯೆ (ಬಸವ. ೩೭೮); ಹಿಂದೆ ನಂಬಿಸಿ ಭೀಷ್ಮ ಗುರುವನು ಕೊಂದ ಗೆಲುವಿನಲುಬ್ಬಬೇಡ (ಕುಮ್ಯಾಕ. ೩–೫). ೨. ಹಾಲುಣಿಸು; ಹಾಲುಕೊಡು: ಕಂಬನಿಯನೊಗುತಾ ಮಱಿಯ ಪಯ್ಯಂಬನದು ನಕ್ಕುತ್ತ ಮೋಹದಿ ನಂಬಿಸುತ್ತಸುವುಳಿವುಳಿದುದಯ್ಯೋ ವಿಮೋಹ ಕಷ್ಟವಲ (ಸಾಳ್ವಭಾ. ೫–೩೮).

[ ನಂಬು + –ಇಸು. / ತೆಲು. ನಮ್ಮಿಂಚು ]

**ನಂಬಿಸುಹ** (ನಾ). ನಂಬಿಸುವಿಕೆ; ಭರವಸೆಯನ್ನುಂಟುಮಾಡುವಿಕೆ: "ಸ್ವಾಂತಮೆನೆ ಸಾಮವೆನೆ ನಂಬಿಸುಹಮುಕಂ" (ಮಂಗರಾ. ೧೩೫–೩೭).

[ ನಂಬಿಸು + –ಹ$_2$ ]

**ನಂಬು** (ಕ್ರಿ). ೧. (ಸ್ನೇಹ, ಆಪ್ತತೆ, ಧರ್ಮ ಮುಂತಾದುವುಗಳ ವಿಷಯದಲ್ಲಿ) ನಂಬಿಕೆಯಿಡು; ವಿಶ್ವಾಸವಿಡು; ಭರವಸೆಯನ್ನು ಹೊಂದು: "ನಂಬು–ವಿಶ್ವಾಸೇ" (ಶಮಧಾ); ಆ ಲಘುಗಳಲ್ಲದ ತಾಣದೊಳಂ ಲಘುವಾಗಮಕ್ರಮದೆ ನಂಬುಗೆ ಲಾಘವದೋಷಮಂ (ಕವಿರಾ. ೧–೧೩೭); ಧರ್ಮಮಂ ಕೇಳ್ದು ಮೆಚ್ಚಿ ನಂಬಿ ಶ್ರಾವಕವ್ರತಂಗಳಂ ಕೈಕೊಂಡು ಶ್ರಾವಕನಾಗಿ (ವಡ್ಡಾರಾ. ೧೭೬–೯); ನಂಬು ನಂಬೆನ್ನ ಕಣ್ಣಿಂ ಕಿಡಿಯುಂ ಕೆಂಡಂಗಳುಂ ಸೂಸಿದಪುವಹಿತರಂ ನೋಡಿ ಪಂಕೇಜವಕ್ತ್ರೇ (ಪಂಪಭಾ. ೭–೧೩); ತುಱುಗಾಳ್ಗಳನಿರ್ವರುಮಂ ಕಱುಪಿ ಸುಯೋಧನನ ಬಾಟ್ಟುದಂ ನಂಬಿದಿರೇ (ಗದಾಯು. ೩–೭೮); ಅಂಬುವನೆಱೆವಾಗಳ್ ಪ್ರತಿಬಿಂಬಿಸೆ ಕೆಯ್ನಾರೊಳವಳ ವದನಂ ಪಥಿಕಂ ನಂಬಿ ನಲಿದೀಂಟಿದಂ (ಗಿರಿಕ. ೩–೩೬); ಅವನಿಪಾಲರು ಕಂಗಳಿಂದವೆ ಕಿವಿಗೆ ಕರವೊಳ್ಳಿದರು ಕಂಡುದನವರು ನಂಬರು ಕೊಂಡೆಯದ ನುಡಿಗೇಳ್ದು ನಂಬುವರು (ಕುಮ್ಯಾದ್ರೋ. ೧೮–೩); ತು ಕಳ್ಳ ಪರರನ್ನು

ನಂಬ (ಗಾದೆ). ೨. ನೆಮ್ಮು ; ಆಧರಿಸು ; ಆಶ್ರಯಿಸು : ನಯಮಂ ನಂಬುವೊಡೆನ್ನ ಪೇಟ್ವ ಸತಿಯಂ ಕೈಕೊಂಡಂ (ಪಂಪಭಾ. ೦-೭೭) ; ಅಧರ್ಮ ಯುದ್ಧದೆ ನರಂ ಕೊಲ್ವಲ್ಲಿ ಕಂಡುಂ ತುಪೇಕ್ಷಿಸಿ ನೀಮುಂ ನಡೆ ನೋಡು ತಿರ್ದಿರೆನೆ ಮತ್ತಿನ್ನಾರನಾಂ ನಂಬುವೆಂ (ಪಂಪಭಾ. ೧೦-೮೩) ; ಜ್ಞಾನಕ್ಕೆ ಲೇಪವಾದವನಿರವು ತುಪ್ಪವ ನಂಬಿದ ಬತ್ತಿಯಂತೆ ಕಾದ ಲೋಹದ ಜಲ ದಿರವಿನಂತೆ (ಮೋಳಿವಾ. ೪-೧೧) ; ನಂಬದಿರು ಈ ದೇಹ ನಿತ್ಯವಲ್ಲ ಅಂಬು ಜಾಕ್ಷನ ಭಜಿಸಿ ಸುಖಿಯಾಗು ಮನವೆ (ಪುರಂದ. ೦-೨೭ ಪಲ್ಲವಿ).

ನಂಬೆ ನುಡಿ = ನಂಬಿಸು ; ವಿಶ್ವಾಸವನ್ನುಂಟುಮಾಡು: ಆನಲ್ಲಿಗೆ ಪರ್ಪೆನೆಂ[ದಾ ಪಾಣ್ಬ]ನಂ ನಂಬೆ ನುಡಿದು (ಪಂಪಭಾ. ೮-೭೨ವ). ನಂಬೆ ಪಡು = ನಂಬಲ್ಪಡು : ಕೊಲ್ಲದ ಪುರುಷಂ ಎಲ್ಲರಿಂ ನಂಬೆ ಪಡುವನುಂ ಪೂಜ್ಯನುಂ ಅಕ್ಕುಂ (ತತ್ತ್ವಪ್ರ. ೨೭೧).

[ ದೇ.॥ ತಮಿ. ನಮ್ಬು ; ಮಲ. ನಮ್ಬು ; ತುಳು. ನಂಬು, ನಮ್ಬು ; ಕೊಡ. ನಂಬ್ ; ತೆಲು. ನಮ್ಮು ]

**ನಂಬುಗೆ, ನಂಬಿಗೆ** (ನಾ). ೧. ನಂಬಿಕೆ ; ಶ್ರದ್ಧೆ ; ವಿಶ್ವಾಸ : "ವಿಸ್ರಂಭಃ, ವಿಶ್ವಾಸಃ – ಈ ೨ ನಂಬುಗೆ" (ಹಲಾಯು. ೧೨೭-೮೪) ; ಕನಸುಗಂಡುದಂ ತಮಗೆ ನೇಸರ್ಮೂಡೆ ಪೇಟ್ದೊಡೆ ನಂಬುಗೆಯಾಗಿ ಉಬ್ಬೆಗಂಬಟ್ಟು (ಪದ್ಮರಾ. ೧೦೦-೧೯) ; ಆರ್ ಕೆಲಂಬರರಸನನೋಲೈಸುವರ್ ಅವರೈಶ್ವರ್ಯಂ ಪರಾಧೀನವಾಗಿಹುದು . . . ಜೀವಿಸುಹವುಂ ನಂಬುಗೆಯಿಲ್ಲದುದು (ಪಂಚತಂ. ೧೩೩-೪) ; ತಳ್ಪಿಲ್ಲದೆ ಪಿರಿದಾದರದಿಂ ಕೊಲ್ಲದ ಧರ್ಮವನೆ ಪಿಡಿಗೆ ನಂಬುಗೆಯಿಂದಂ (ಧರ್ಮಾಮೃ. ೦-೧೯೭) ; ಶಂಭುಪದಭಕ್ತಿ ನಂಬುಗೆಯ ಹಂಬಲು ಬೇಕು (ದೀಕ್ಷಾಬೋ. ೮೯-೦೦) ; ಗುರುಗಳಲಿ ನಂಬುಗೆ ನಿರರ್ಥಕವಾಯ್ತೆನುತ ಕುರುರಾಯ ಬಿಸುಸುಯ್ದ (ಕುಮಾರವ್ಯಾ. ದ್ರೋ. ೪-೫). ೨. ಭಾಷೆ ; ಮಾತುಕೊಡುವಿಕೆ ; ಆಣೆ. 'ನಂಬುಗೆಗೊಳ್ಳು' ನೋ. ನಂಬಿಗೆ : ೧. ಜಂಗಮದೊಳಗೆ ಲಿಂಗಯ್ಯನಿದ್ದಾನೆಂದು ನಂಬಿಗೆಯುಳ್ಳರೆ ತೋರುವ ಕೂಡಲಸಂಗಯ್ಯ (ಬಸವ. ೦೮೭) ; ಭಾಷೆಗೆಡುಕನಿಗೆ ನಂಬಿಗೆ [ಪಾಠಾಂ. ಬುಗೆ] ಯೇತಕೆ (ಪುರಂದ. ೨-೭೪-೫) ; ನಿಂಬೆಗಿಂ ಹುಳಿಯಿಲ್ಲ ತುಂಬೆಗಿಂ ಕಿರಿದಿಲ್ಲ ನಂಬಿಗೆಯಿಂದಧಿಕ ಗುಣವಿಲ್ಲ (ಸರ್ವಜ್ಞ. ೨೩೫) ; ನನ್ನ ಬೆಂಬಲದ ನಂಬಿಗೆಯ ಮಂದಿರ ನೀನು (ಉಯ್ಯಾಲೆ. ೯೦-೦೭) ; ಗೋಂಬೆಗೆ ಕೈಮುಗಿದರೂ ನಂಬಿಗೆ ಇರಬೇಕು (ಗಾದೆ). [ ನಂಬು + – ಗೆ ]

**ನಂಬುಗೆಗೆಡು** (ಕ್ರಿ). ವಿಶ್ವಾಸವನ್ನು ಕಳೆದುಕೊಳ್ಳು ; ಭರವಸೆಯನ್ನು ಕಳೆದುಕೊಳ್ಳು: ತಂಬುಲಿಗರ್ ನಂಬುಗೆಗೆಟ್ಟವರಂತೆ ಪೆಱಸಾರೆ (ಧರ್ಮಾಮೃ. ೨-೭೯). [ ನಂಬುಗೆ + ಕೆಡು$_1$ ]

**ನಂಬುಗೆಗೆಯ್** (ಕ್ರಿ). ನಂಬು ; ವಿಶ್ವಾಸವಿಡು : ಬಗೆ ನಿಲುಕದತುಳ ಕೈವಲ್ಯಪರಿವೃತರಜತನಗವೃಷಭವಾಯ್ತೊ ಹೇಳೆಂಬ ಸಂಶಯಕೆ ನಂಬುಗೆಗೆಯ್ದು ಪುಂಗವನ ನುತದೇವಪುಂಗವಂ ನಲಿದೇಱಿ ಕಣ್ಗೆಸೆದನು (ಸೋಮನಾ. ೪-೮೦). [ ನಂಬುಗೆ + ಕೆಯ್$_1$ ]

**ನಂಬುಗೆಗೇಡು** (ನಾ). ನಂಬಿದವರಿಗೆ ಮೋಸಮಾಡುವಿಕೆ ; ವಿಶ್ವಾಸ ದ್ರೋಹ : ಈ ಉಪ್ಪಿಗೆ ನಂಬುಗೆಗೇಡನ್ನು ಅಹಿತವನ್ನು ಮನಸ್ಸಿನಲ್ಲಿಯೇ ನಡೆಯಿಸಿದಿರಾದರೂ, ನಿಮ್ಮ ಗತಿಯೇನು (ಪಟ್ಟಅ. ೫೫-೧).

[ ನಂಬುಗೆ + ಕೇಡು ]

**ನಂಬುಗೆಗೇಳು** (ಕ್ರಿ). ನಂಬಿಕೆಯ ಮಾತನ್ನು ಒಪ್ಪು ; ವಿಶ್ವಾಸವಿಡು ; ಭರವಸೆಯಿಡು : ಹೇಳಿದೀ ಕುಱುಹುಗಳು ತಪ್ಪವು ಕೇಳಿದೈ ಹನುಮಂತ ನಂಬುಗೆಗೇಳದಿದೆ ಮನವೇನಮಾಡುವೆನೆಂದಳಾ ಸೀತೆ (ತೊರರಾ. ೫-೩-೮೯).

[ ನಂಬುಗೆ + ಕೇಳು (<ಕೇಳ್) ]

**ನಂಬುಗೆಗೊಡು** (ಕ್ರಿ). ನಂಬಿಕೆಯನ್ನುಂಟುಮಾಡು ; ಭರವಸೆಯನ್ನು ಕೊಡು; ವಿಶ್ವಾಸವನ್ನುಂಟುಮಾಡು: ನುಡಿದೊಡವೆಯಂ ಕೊಡುವೆನೆಂದು ನುಡಿದಂದದಿಂ ನಡೆವೆನೆಂದೊಬ್ಬರೊಬ್ಬರಿಗೆ ನಂಬುಗೆಗೊಟ್ಟು [ಪಾಠಾಂ. ಯಿತ್ತು] (ಹಚಕಾ. ೧೧-೨೭) ; ಸುದತಿ ತಪ್ಪದುಯೆಂದು ನಂಬುಗೆಗೊಡಲಾ ವಿಧುಮುಖಿ ನಲಿದಿರುತಿರ್ದಳ್ (ಜೀವಂಸಾಂ. ೧೬-೫೨) ; ಇವನ ಪ್ರಾಣಗಳಿಗೆ ತಪ್ಪದೆನಾದರೆ ಶಿವನ ಪಾದಗಳಾಣೆಯೆನುತ ಧವಳಸರೋಜಾಕ್ಷಿಗೆ ನಂಬುಗೆಗೊಟ್ಟು ಕುವರನನೊಡಗೊಂಡು ಬಂದ (ಮೋಹತ. ೩೫-೫೩) ; ಶರಣು ಹೊಕ್ಕರಿಗೆ ನಂಬುಗೆಗೊಟ್ಟು ಮುಂದಕ್ಕೆ ತೆರಳಿದನಾ ಖಾನನಾಗ (ಕಂನವಿ. ೧೧-೫೭). [ ನಂಬುಗೆ + ಕೊಡು$_1$ ]

**ನಂಬುಗೆಗೊಳ್, ನಂಬುಗೆಗೊಳ್ಳು** (ಕ್ರಿ). ೧. ನಂಬಿಕೆಯನ್ನು ಹೊಂದು; ವಿಶ್ವಾಸವನ್ನು ಪಡೆ ; ಭರವಸೆಯನ್ನು ಹೊಂದು : ಬೇಹಡೆವೊಡನೆ ಬಾ ತೋರ್ಪೆನೆ ಹೈ ಬಂದಪೆಂ ತೋಱಿ ಕೊಡಿರಯ್ಯ ಎಂದು ಪೊಡಮಟ್ಟು ನಂಬುಗೆಗೊಂಡು ಹೋದನಾ ಪುರುಷಯೊಡನೆ (ಸಿದ್ಧರಾ. ೨-೪೨). ನಂಬುಗೆಗೊಳ್ಳು : ೨. ಪ್ರಮಾಣವನ್ನು ಪಡೆ ; ಭಾಷೆಯನ್ನು ಪಡೆ : ಕೃಶಾನು ನಂಬುಗೆಗೊಂಡನಾ ನೃಪನ [ಪಾಠಾಂ. ವರವನು ಕೊಟ್ಟನಾ ನೃಪಗೆ] (ಕುಮಾರವ್ಯಾ. ಸ. ೫-೦೫) ; ರಾಗದೆ ಮದನನ ಕೈಯ ನಂಬುಗೆಗೊಂಬ ಭೋಗದ ರತಿದೇವಿಯಂತೆ ಭೂಗಧೀಶ್ವರ ಕಂಠೀರವೇಂದ್ರಗೆ ಕೈಲಾಗಿತ್ತಳೊರ್ವಬ್ಜನೇತ್ರೆ (ಕಂನವಿ. ೨೪-೭೭) ; ಇಂತೆಂದು ಪೇಳಿ ನಂಬುಗೆಗೊಂಡು ಗುರು ವರ್ಯ ಕಂತುವಿಂ ಬೀಳ್ಕೊಂಡು ಪೊರಮಡಲು (ನವಮೋ. ೫-೧೯).

[ ನಂಬುಗೆ + ಕೊಳ್$_1$ ]

**ನಂಬುಗೆಗೊಳ್ಳು** 'ನಂಬುಗೆಗೊಳ್' ನೋ.

**ನಂಬುಗೆದಾಳು** (ಕ್ರಿ). ನಂಬಿಕೆಯನ್ನು ಹೊಂದು ; ವಿಶ್ವಾಸವನ್ನು ಇಡು: ಪೇಳಿದತಿಗುಹ್ಯದಲಿ ನಂಬುಗೆದಾಳಿ ವಾಙ್ಮನಕಾಯಗಳಲದ್ವೈತವನೆ ಬಳಸಿ (ಗಗತಾ. ೧೭-೨೧). [ ನಂಬುಗೆ + ತಾಳು$_1$ (<ತಾಳ್$_1$) ]

**ನಂಬುಗೆದೋಱು** (ಕ್ರಿ). ವಿಶ್ವಾಸವುಂಟಾಗು ; ಒಪ್ಪು : ಮೂಱುಭಾಗದ ಸಂಶಯವು ಕೆಲಸಾರಿತವನೀಸುತೆಗೆ ನಂಬುಗೆದೋಱದಿರೆ ತುದಿಯಂಶದಲಿ ಹನುಮಂತನಾ ಪದನ ಮಾಱುನುಡಿಯುರದಿರಲು (ತೊರರಾ. ೫-೩-೯೧).

[ ನಂಬುಗೆ + ತೋಱು ]

**ನಂಬುಗೆಯೀ** (ಕ್ರಿ). ಭಾಷೆಯನ್ನು ನೀಡು; ವಚನ ಕೊಡು: ಅರ್ಧರಾತ್ರಿಯ ಹೊತ್ತಿನೊಳಗಾಗಿ ಸುಗುಣಾನಿರುದ್ಧನ ತಹೆನೆಂದು ನಗುತ ನಿರ್ಧರವಾಗಿ ನಂಬುಗೆಯಿತ್ತು ಬೀಳುಕೊಂಡೆದ್ದಳು (ಮೋಹತ. ೩೦-೧೧).

[ ನಂಬುಗೆ + ಈ$_2$ ]

**ನಂಬುಗೆವಂತ** (ನಾ). ನಂಬಿಕೆಗೆ ಪಾತ್ರನಾದವನು ; ಭರವಸೆಯಿಡಲು ಅರ್ಹನಾದವನು : ಸಾಷ್ಟಾಂಗವೆಱಗಿ ನಂಬುಗೆವಂತರೆದ್ದು ಸಂತುಷ್ಟದಿ ಬೀಳ್ಕೊಂಡರು (ಭರಚ. ೩೮-೧೨೩) ; ಅರಮನೆಗಾಗಿ ನಂಬುಗೆವಂತರತ್ತ ತಮ್ಮರಸಿಯರ್ಕಳನೊಯ್ಯಲಿತ್ತ ಅರುಹನಾಲಯಕೆಯ್ದಿ ತಂದೆಯ ಬಳಿಗಾಗಿ ಬರುತಿರ್ದನಾ ಯುವರಾಜ (ಭರಚ. ೫೮-೩೮). [ ನಂಬುಗೆ + – ವಂತ ]

**ನಂಬುಗೆವಡೆ** (ಕ್ರಿ). = ನಂಬುಗೆದಾಳು : ಅಂಬುಜಭವ ಭವೇಂದ್ರಾದಿ ದೇವತೆಗಳ ನಂಬುಗೆವಡೆದ ರಕ್ಕಸರ ಕಂಬುಚಕ್ರಾಂಕಿತ ನಿಮ್ಮೊಳು ಮಥನಿಸಿ ಮುಂಬರಿದರು ಯಮಪುರಿಗೆ (ಮೋಹತ. ೩೭-೩೪). [ ನಂಬುಗೆ + ಪಡೆ$_1$ ]

**ನಂಬುಗೆವಿಡಿ** (ಕ್ರಿ). = ನಂಬುಗೆದಾಳು : ಶಂಭುಪದಭಕ್ತಿ ನಂಬುಗೆವಿಡಿದು ಅಗಲದೆ ಇರಬಲ್ಲರೆ ಶರಣ (ಸಿದ್ಧೇವ. ೯೪-೨೮೭) ; ಪ್ರಮಿತವಚನದಲುದಿಸಿದೊಡೆ ವಿಕ್ರಮದ ಬಗೆ ಬಳಿಕಱಿಯಬಹುದೆಂಬಮುರರಿಪುವಿನ ನುಡಿಗೆ ನಂಬುಗೆವಿಡಿದನರುಣಸುತ (ತೊರರಾ. ೩-೧೦-೨೪). [ ನಂಬುಗೆ + ಪಿಡಿ$_1$ ]

**ನಂಬುಗೆವೆರೆ** (ಕ್ರಿ). ವಿಶ್ವಾಸ ಹೊಂದು ; ಭರವಸೆ ಪಡೆ ; ನಂಬು : ಕರಿಯಿದಿರೊಳಗಿರ್ಪಂದದು ಕರಿಯಲ್ಲೆಂದೈದಿದಂದು ಸಂಶಯಿಸುತ್ತುಂ ನಿರುಕಿಸಿ ಪಚ್ಚೆಯ ನಂಬುಗೆವೆರೆದಂತಾಯ್ತೆನ್ನ ಮನದೊಳಾದ ವಿಕಾರಂ (ಶಾಕುಂತ. ೧೦೩-೧೯೪). [ ನಂಬುಗೆ + ಬೆರೆ$_1$ ]

**ನಂಬುಗೆವೆಱು** (ಕ್ರಿ). ಶ್ರದ್ಧೆಯನ್ನು ಹೊಂದು; ನಂಬಿಕೆಯಿಂದ ಕೂಡಿರು : ನಂಬುಗೆವೆತ್ತ ಭಕ್ತಜನದಿಂದತಿರಂಜಿಪ ಚೋಳದೇಶದೊಳ್ . . . ಇರ್ಪುದು ಪೆಂಪನಾಂತು ಪೊನ್ನಾಂಬಲವೆಂಬ ನಾಮದ ಮಹಾಪುರಂ (ತ್ರಿಪುವಿ. ೭-೨). [ ನಂಬುಗೆ + ಪೆಱು$_1$ ]

**ನಂಬುಗೈ** (ನಾ). ಪ್ರತಿಜ್ಞೆಗಾಗಿ ನೀಡುವ ಕೈ : ಇದೆ, ಕುಡು ನಂಬುಗೈಯಂ ನಿನ್ನಾಣೆ, ಕುಲದೈವದಾಣೆ ! ಎಂದುಂ ಪೆಱವರೊಳೊರೆಯೆಂ (ರಾಮಾಶ್ವ. ೧೧೮-೧೩). [ ನಂಬು + ಕೈ$_2$ (<ಕೆಯ್$_2$) ]

**ನಂಬುಗೊಳ್** (ಕ್ರಿ). ನಂಬಿಕೆಯುಂಟಾಗು : ದಾಸರ ಗಂಗವು × × ದ ಕೆಲಸದ ಶಸ್ತ್ರವನೊತ್ತೆಯಿಟ್ಟು ಹೋದಡೆ ಆ ಸ್ಥಳದಲು ಇರಬೇಕೆಂದು ತಮ್ಮ ಹೆಸರನಿಕ್ಕಿಯೆಂದಡೆ ಚಿಂಚಯ್ಯನು ಕೊಟ್ಟು ನಂಬುಗೊಳೆ ಹೆಸರನಿಕ್ಕಿ ಶಸ್ತ್ರವಂ ಹೊಸಿದನು (ಎಕ. VII, ಚನ್ನಗಿ. ೩೨-೨೪೪; 1050 ?).
[ <ನಂಬುಗೆ + ಕೊಳ್$_1$ ]

**ನಂಬ್ರಾನ್** (ನಾ). ದೇವರು; ಒಡೆಯ : ನಮ್ಬಾರನ್ಗೋವದೋರಾ (ಎಇ.IX, ೧೮-೭; ಸು. 800). [ ←ತಮಿ. ನಮ್ಪಿರಾನ್ ]

**ನಕ** (ನಾ). ಉಗುರು; ನಖ : ನಖ – ನಕ ; ಪರಿಖೆ – ಪರಿಕೆ (ಶಮದ. ೨೫೫ ಪ್ರಯೋ). [ <ಸಂ. ನಖ ]

**ನಕಮಕ** (ನಾ). ಮೋಸ; ತಟವಟ : ಕೌರವಾನುಜರೂ ನಕಮಕದ ವಿದ್ಯೆಗಳ ಸಾಧಿಸಿ ದಿಕುವಿಗಂನ್ನುತ ಭಾರರಾದರು (ಜನಭಾ. ೯-೨೪); ಶಸ್ತ್ರಗಳನು ಹಾಯೆಂದು ಬಾಯ್ದೆರೆದು ನುಂಗುಹಳರಿದು ನಕಮಕದಿ ತೀಡಿದವಲಂಘ್ಯದಿಂ ಗ್ರಹಿಸಿಕೋಯೆಂದು ಕೂಗುತಲು . . . ಖಡ್ಗಮಂ ಝಳಪಿಸುತ ಬಹಳರಿದು (ಜನಮು. ೩೪-೧೭). [ ? ]

**ನಕರ, ನಖರ$_1$, ನಗರ್ತ$_2$** (ನಾ). ವರ್ತಕರ ಒಂದು ಸಂಘ; ವ್ಯಾಪಾರಿಗಳ ಒಂದು ಪಂಗಡ; ಕೊತ್ತಳಿ : ದೇವಾಳ್ಗೆವಿಷಯೇ ಕಿಱುಮುಂಡನೀರಿಣಾಂ ನಗರಸ್ಯ ದಶಪೋಭಾಗಃ (ಮೈಆರಿ. ೧೯೩೦, ೩-೧೯; ಸು. 500); ಆ ಎರಮ್ಮನುಂ ಅಯ್ನೂದಿಂಬರುಂ ನಕರಮುಂ ಸೇಣಿಯುಂ ಬಟಸುವಿಟ್ಟು ಗೆಲ್ವಲ್ಲಿ ಮೂಲವೃಡಿಯಕ್ಕೆ ಒವ್ವರ್ಳ್ಳನೆಯ್ನುಱಿಸಿದಾ (ಎಕ. VI, ಕಡೂರು. ೧೪೫-೬; ಸು. 750); ಇದಕ್ಕೆ ಸಾಕ್ಷಿ ನಾಲ್ಕು ಸಮಯಿಗಳು ನಾಡುನ್ನಕರಮುನ್ನರ ಸಾಸನಮುವಿವರೇ (ಎಇ. X, ೬೬-೫೪; 892); ಎಡೆನಾಡಟ್ಟುತ್ತಱ ಗಾವುಣ್ಡುಗಳು ಪದಿ ಎಳರ ಗಾವುಣ್ಡು × × × ನಕರಮುಂ ಏಳುಪುರಮುಂ ಪಾದಮೂಲಮುಂ ಸಾಕ್ಷಿ (ಎಕ. IV, ಚಾಮರಾ. ೧೮-೨೦; 1000 ?); ಪದಿನಱುಮಱುಂ ನಕರಮುಮಿನ್ತೀ ಧರ್ಮಮಂ ಪ್ರತಿಪಾಲಿಸುವುದು (ಎಇ. XIII, ೧೭೨-೩೭; 1055); ಶ್ರೀಮತ್ ನಕರೇಸ್ವರದೇವರ್ಗ್ಗೆ ನಕರಂ ಕೊಟ್ಟ ಸೊಂಟಿಗೆಯೊನ್ದು (ಸೌಇಇ. XI-1, ೧೧೨-೧೧; 1072); ಪುಲಿನಾಡ ಕೊಳತೂರಂ ಪಲ್ಲವಾದಿತ್ಯ ಪೂರವಾಗೆ ನಕರಂ ಮಾಡಿ . . . ಕೊಟ್ಟಂ (ಸೌಇಇ. IX-1, ೪೧-೧೬; 11ನೆಯ ಶತ); ತಿಂಮಣಗೆ ಕೊಟ್ಟ ನಕರ ಕೊಡಗೆ ಹೊಲ (ಎಕ. X (S). ಕೋಲಾರ. ೩೦೮-೪; 16ನೆಯ ಶತ); ಉದಯಾಪುರದ ನಕರಸಹಿತಂ ಪೊನ್ನುಟ್ಟದ ನಕರಕ್ಕೆ (ಎಇ. IX, ೨೩-೭; ?). **ನಖರ$_1$ :** ಸಿಂಗಗಾವುಂಡನು . . . ಮಹಾಜನ ನಖರ[ವಱ]ಯಲೆ [ಆ] ಚಂದ್ರಾರ್ಕ್ಕತಾರಂ ಸಲಲೆಂದು (ನಾಂದೇಡ್. ೧೮-೧೫; 1115); ಹೊಸಪಟ್ಟಣ ಬಸುರೆ ಪುರದ ನಖರೇಶ್ವರದೇವರ ಸನ್ನಿಧಾನದಲು ಸಮಸ್ತ ನಖರಮುಂ × × × ಮೆಯು ಅಲ್ಲಿಯ ನೆಲನುಂ ಕೂಡಿರಲು (ಸೌಇಇ. IX-1, ೩೯೩-೦೦; 1155) ತಳಕಾಡ ಸಮಸ್ತ ನಖರವು (ಮೈಆರಿ. ೧೯೩೩; ೬೦-೩; 1173); ಹುಲುಂಗೂರ ಹಂನಿರ್ವ್ವರು ಗಾವುಣ್ಡು ಸಮಸ್ತ ಪ್ರಜೆ ನಖರ ಮುಮ್ಮುರಿ ದಂಡಂಗಳಿಗೆ ಆ ಸ್ತಳದ ದನಬಳವನು ಸರ್ವನಮಸ್ಯವಾಗಿ ಬಿಟ್ಟರು (ಎಇ. XVI, ೩೩೬-೩೨; 1255); ನಾಂಡುಗ್ರಾಮ ನಖರ ಹಂಜಮಾನ ಆಚರ ಮುಂತಾಗಿ (ಸೌಇಎ. ೧೯೨೯, ಮಂಗಳೂರು. ೪೭೦-೨೫; 1297); ಯೆಳುಮೂಱ ಯೆಪ್ಪತ್ತೇಳುಮ ವೊಳಗಾದ ನಖರ ಹಂಜಮಾನದ ಸಮಸ್ತ ಹಲರು ಮುಂದಿಟ್ಟು (ಸೌಇಎ. ೧೯೩೦, ಉಡುಪಿ. ೫೭೯-೯; 1897). **ನಗರ್ತ$_2$ :** ಮತ್ಯಲಸೆಟ್ಟಿಯ ಮಗ ದೆಸವಾಣಿಕಸೆಟ್ಟಿಯೊಟಗಾದ ಮಣಲಿಯ ಸಮಸ್ತ ನಗರೆಯುಂ ಆ ಪಟ್ಟಣದ ಸಮಸ್ತ ಸಥವ (?) ಮಾಡಿಸಿ ಕೊಟ್ಟ (ಮೈಆರಿ. ೧೯೩೩, ೪೭-೨೦; 1278). 'ನಗರ್ತ' ಪರಾ. [<ಸಂ. ನಗರ ]

**ನಕರ್$_2$** 'ನಗಾರಿ$_2$' ನೋ.

**ನಕಲಿ** 'ನಕಲು' ನೋ.

**ನಕಲಿಗಾರ** (ನಾ). ಹಾಸ್ಯಕ್ಕಾಗಿ ಅನುಕರಣೆ ಮಾಡುವವನು; ಅಣಕ ಮಾಡುವವನು; ವಿನೋದಪಡಿಸುವವನು; ಹಾಸ್ಯಗಾರ : ಸ್ವಭಾವವಾಗಿ ನಕಲಿಗಾರರಾಗಿರುವವರು ಎಲ್ಲರನ್ನೂ ಗಟ್ಟಿಯಾಗಿ ನಗಿಸುತ್ತಿದ್ದರು (ಹುಟ್ಟಹ. ೨೨); ರಾಜಾಸ್ಥಾನದ ನಕಲಿಗಾರನ ಅನುಕರಣ ಮಾಡಿ ಮೃಗಗಳಂತೆ ಪಕ್ಷಿಗಳಂತೆ ಕೂಗುವದೂ ಬಾಲಕನ ಮತ್ತೊಂದು ವಿದ್ಯೆಯಾಯಿತು (ಕಥವಿ, II, ೩೨೩).
[ ನಕಲಿ (<ನಕಲು) + – ಗಾರ (< – ಕಾಱ) ]

**ನಕಲು, ನಕಲಿ** (ಗು). ೧. ನೈಜವಲ್ಲದ; ಅನುಕರಣೆಯ; ಕೃತಕವಾದ : ಪಡುವಲದ ಗಾಳಿ ಆಡಿದರೆ ತೂಗುವುದಟ್ಟೆ—ಎಂಥ ಮಾರ್ದನಿ, ಎಂಥ ನಕಲು ಕುಣಿತ ! (ನಡಬಂ. ೧೧೪-೧೮): (ನಾ). ೨. (ಬರವಣಿಗೆ, ಚಿತ್ರ ಮೊದಲಾದುವುಗಳ) ಮೂಲದ ಪ್ರತಿಕೃತಿ; ಎರಡನೆಯ ಪ್ರತಿ; ದ್ವಿಪ್ರತಿ : ಮಲಿಗೆಹೂವುಪನ್ನು ಮುಡಿಯುವದುಯಿಲವೆಂದು ಕಂಚಿಯುಲಿ ಕರಾರು ಬರದು ಕೊಟ್ಟು ಬಂದುಯಿರುತ್ತಾರೆ ಯಿದರ ನಕಲನ್ನು ನಮ್ಮ ಕುಲಸ್ತರಿಗೆ ಕಳಿಶಿರುತ್ತೇವೆ (ಎಕ. IX, ಕಾನಕಾ. ೯೦-೭೩; 1700); ಯಿ ಸನದಿ ನಕಲುನೂ ಶಿರಸ್ತೇದಾರರ ದಪ್ತರಕೆ ಬರಸಿಕೊಂಡು ಅಸಲ ಸನದುನು ಹೆಟೆ ತಿಂಮಯನ ವಶಕೆ ಕೊಡುವದು (ಎಕ. VI, ಕೊಪ್ಪ. ೪೮-೫೧; 1811); ಆ ಪ್ರತಿಯು ನೇರವಾದ ನಕಲುಗಳೇ ಇವು . . . ಅಥವಾ ಆ ಪ್ರತಿಯ ನಕಲಿನ ಮರುನಕಲಿನ ಬಳಿನಕಲುಗಳೇ ಇವು ? (ಕನ್ನಸ. ೫೯); ಆ ಪ್ರಶ್ನೆಯ ಸಂಬಂಧದಲ್ಲಿ ತಾವು ಮಾಡಿರತಕ್ಕ ತೀರ್ಮಾನದ ಒಂದು ನಕಲಿನ ಸಹಿತವಾಗಿ ವಾಪಸು ಕಳುಹಿಸಿಕೊಡಬಹುದು (ಭಾಧಾನ. ೧೨೫); ಮೊದಲೆರಡು ಕಾಗದಗಳ ನಕಲನ್ನು ಒಳಗಿಡು (ರಂಗಕ. ೦೦೭). ೩. ಅನುಕರಣೆ; ಅನುಕರಿಸಿದುದು : ಕಾವ್ಯವು ಲೋಕಸ್ಥಿತಿಯ ನಕಲಾಗಬೇಕಾಗಿಲ್ಲ (ಭಾರಮೀ. ೧೮೫); ಛಾಯಾವಾದೀ ಕವಿತೆಯನ್ನು ರವೀಂದ್ರಕಾವ್ಯದ ನಕಲು ಮಾತ್ರವೆಂದು ಭಾವಿಸುವ ಪ್ರವೃತ್ತಿ ಪ್ರಬಲವಾಗಿದ್ದ ಆ ಕಾಲದಲ್ಲಿ . . . ಆರೋಪವನ್ನು ಹೊರಿಸುತ್ತಿದ್ದರು (ಶ್ರೀಪ್ರಪ್ರ. ೧೯೦). **ನಕಲಿ :** ೧. ಅವಳು ಹೋದನಂತರ . . . ಸೇವಕರು ನಕಲಿ ಕೈಯೊಂದರಿಂದ ಕೈಪೆಟ್ಟಿಗೆಯನ್ನೇಕೆ ತೆರೆದಿರಬಾರದು ? (ಭುಸರು. ೧೦೪); ನಕಲಿ ಮಾತಲ್ಲ ಅಯ್ಯಯ್ಯೋ ತಂದೆಯೇ (ಕನ್ನಜಾ. ೨೮೫). ೪. ಅನುಕರಣೆಯಿಂದ ಕೂಡಿರುವುದು; ಅಣಕ; ಹಾಸ್ಯ; ತಮಾಷೆ; ವಿನೋದ : ನಕಲಿಗಳಲ್ಲಿ ಗ್ರಾಮದೋಷಗಳನ್ನು ಮುಖಂಡರ ರೀತಿನೀತಿಗಳನ್ನೂ ಅವರಂತಹ ಕಡೆಸುಡಿಗಳಿಂದ ಜನರ ಮುಂದಿಡುತ್ತಿದ್ದರು (ಹುಟ್ಟಹ. ೨೮). ೫. ಹಾಸ್ಯಗಾರ : ಮೆರವಣಿಗೆಯ ಮುಂದೆ ಅನೇಕ ನಕಲಿಗಳು ಹೋಗುತ್ತಿರುತ್ತಾರೆ (ಪ್ರಜಾಇ.II, ೩೦೦); ರಂಗಸ್ಥಳದಲ್ಲಿ ಬಗೆಬಗೆಯ ನಕಲಿಗಳು, ಯಕ್ಷಗಾನ . . . ದಾಸಯ್ಯಗಳ ವೇಷಗಳೆಲ್ಲಾ ಬಂದು ಜನರನ್ನು ವಿನೋದಗೊಳಿಸುತ್ತವೆ (ಹಳ್ಳಿಬಾ. ೮); ಲೋಬ್ಸಿಕ್‌ಗೆ ನಕಲಿಯವರ ಟೋಪಿ ಹಾಕಿದರೆ ಅದು ವಿಚಿತ್ರವಾಗಿ ಕಾಣುತ್ತದೆ (ಶಾಲಿಮ. ೨೦೨).

**ನಕಲಿಶ್ಯಾಮ** = ಹಾಸ್ಯಗಾರ; ಬಫೂನ : ಸರ್ಕಸ್ಸಿನಲ್ಲಿದ್ದ ನಕಲಿಶ್ಯಾಮ ಮಕ್ಕಳನ್ನೆಲ್ಲಾ ನಕ್ಕು ನಲಿಯುವಂತೆ ಮಾಡಿದನು (ರೂಢಿ). **ನಕಲು ತೆಗೆ** = ಮೂಲದಂತೆ ಪ್ರತಿಯನ್ನು ತಯಾರಿಸು : ಹಿಂದೀಚಿತ್ರ

ಕಾರರು ಪ್ರಕೃತಿಯೊಳಗಣ ರೂಪವನ್ನು ಯಾಂತ್ರಿಕರೀತಿಯಿಂದ ನಕಲು ತೆಗೆಯಲು ಯತ್ನಿಸಲಿಲ್ಲ (ಭಾಚಿತ್ರ. ೧೦). **ನಕಲು ಮಾಡು, ನಕಲಿಮಾಡು** = ೧. ಮೂಲದಂತೆ ಪ್ರತಿಮಾಡು; ಪ್ರತಿಕೃತಿಯನ್ನು ತೆಗೆ; ಪ್ರತಿಯನ್ನು ತಯಾರಿಸು : ಕೆಟ್ಟುಹೋದ ಚಿತ್ರವನ್ನು ನಕಲು ಮಾಡಿದಾಗ ಅದು ಕೆಟ್ಟದಾಗಿ ಬರೆದ ಚಿತ್ರದಂತೆಯೇ ಇರುವುದು ಸ್ವಾಭಾವಿಕ (ಭಾರದ. ೫೩೫); ವಸ್ತುವಿಗೆ ಸಮಾನವಾದ್ದರ ಸೃಜನೆಯೇ ಸಾದೃಶ್ಯ. ಕಂಡ ದೃಶ್ಯವನ್ನು ನಕಲು ಮಾಡುವುದಲ್ಲ (ಸೌಂದಸ. ೧೩೦). ೨. (ಇನ್ನೊಬ್ಬರಂತೆ) ಮಾತನಾಡಿ, ನಡೆದಾಡಿ ಅಣಕ ಮಾಡು,–ತಮಾಷೆ ಮಾಡು,–ಹಾಸ್ಯ ಮಾಡು : ತರುವಾಯ ಹದಿನೈದು ನಿಮಿಷಗಳ ಕಾಲ ಉಪಾಧ್ಯಾಯರೊಬ್ಬರು ನಕಲಿ ಮಾಡಿದರು (ರಂಗಳ. ೯೩).

[ ←ಪಾರ. ಅರ. ನಕ್ಲ್, ನಕ್ಲೀ; ಹಿಂ. ಮರಾ. ನಕಲ್, ನಕಲೀ ]

**ನಕಾರ** (ನಾ). ೧. 'ನ' ಎಂಬ ಅಕ್ಷರ : ಪ್ರಥಮಪಾದದಲ್ಲಿ ಓಂಕಾರಕ್ಕೆ ನಕಾರ ಬೀಜಾಕ್ಷರ ಆ ನಕಾರ ಉಭಯ ಕೂಡಿದ ಮತ್ತೆ ಮಃಕಾರ ಬೀಜಾಕ್ಷರ (ಸರ್ವವ. ೧೩೩–೭೭೭); ಅಸಮಾಸದೊಳಂ ದೊರೆವೆತ್ತ ಸಮಾಸದೊಳಂ ಣಕಾರದಿಂ ಪರದೊಳ್ ಸಂದಿಸಿದ ನಕಾರಂ ಣತ್ವಂ ಪ್ರಸಿದ್ಧಮುಚ್ಚರಿಸುವರ್ಗೆ ದುಷ್ಕರಮಾದುವುಂ (ಶಮದ. ೧೫೮). ೨. ನಿರಾಕರಣವನ್ನು ಸೂಚಿಸುವಿಕೆ; ಆಗುವುದಿಲ್ಲವೆಂದು ಹೇಳುವಿಕೆ : ಪ್ರಸ್ತುತ ಪರಿಸ್ಥಿತಿಯಲ್ಲಿ ನಕಾರವಲ್ಲದೆ ಬೇರೊಂದು ಉತ್ತರವಿದ್ದಿಲ್ಲ (ದಾಸಹು. ೭೫); ಅವಳಿಂದ ನಿನಗೆ ನಕಾರ ಬರದು (ದೀಪಹ. II, ೧೭೯). [ ಸಂ. ]

**ನಕಾರಾತ್ಮಕ** (ಗು). ನಿಷೇಧರೂಪವಾದ ; ನಿರಾಕೃತವಾದ ; ತಿರಸ್ಕೃತವಾದ : ಅದು ಈಗ ಸಂಪೂರ್ಣವಾಗಿಯೂ ಸಾರವನ್ನು ಕಳೆದುಕೊಂಡ ನಕಾರಾತ್ಮಕ ಬಾಳುವೆಯಾಗಿ ಉಳಿದಿತ್ತು (ದೂರಸ. ೩೯೧). [ ಸಂ. ]

**ನಕಾರಿಸು** (ಕ್ರಿ). ಬೇಡವೆನ್ನು ; ಒಪ್ಪದಿರು : ಇಂಥ ಮಸೂದೆಗೆ ಸಮ್ಮತಿಯನ್ನು ನಕಾರಿಸುವ ಹಕ್ಕು ಅರಸನಿಗೆ ಇದ್ದಾಗ್ಯೂ (ಮುಂಬಯಿ. ೬–೧೩೪).

[ ನಕಾರ + –ಇಸು$_3$ ]

**ನಕಾಶ** 'ನಕ್ಷೆ' ನೋ.

**ನಕಾಶತೆಗೆ** (ಕ್ರಿ). ೧. (ಚಿತ್ರ, ಭೂಪಟ ಮೊದಲಾದುವನ್ನು) ಚಿತ್ರಿಸು,–ರೇಖಿಸು,–ಬರೆ : (+). ೨. ಪ್ರತಿಮಾಡು ; ಪ್ರತಿಕೃತಿಯನ್ನು ತಯಾರಿಸು : (+). [ ನಕಾಶ (<ನಕ್ಷೆ) + ತೆಗೆ$_1$ ]

**ನಕಾಶೆ** 'ನಕ್ಷೆ' ನೋ.

**ನಕಾಸು** 'ನಕ್ಷೆ' ನೋ.

**ನಕಾಸುಕೆಲಸ** 'ನಕಾಸೆಕೆಲಸ' ನೋ.

**ನಕಾಸೆ** 'ನಕ್ಷೆ' ನೋ.

**ನಕಾಸೆಕೆಲಸ, ನಕಾಸುಕೆಲಸ** (ನಾ). ಕುಸುರಿಗೆಲಸ ; ಮರ, ಲೋಹ, ದಂತ ಮುಂತಾದುವುಗಳಲ್ಲಿ ಚಿತ್ರವನ್ನು ಬಿಡಿಸುವ ಕೆಲಸ; ಚಿತ್ತಾರ: ನಕಾಸೆಕೆಲಸದ ಅಲಂಕಾರದ ವಸ್ತುಗಳು ಈಗ ತುಂಬಾ ಬೆಲೆಬಾಳುತ್ತವೆ (ರೂಢಿ). **ನಕಾಸುಕೆಲಸ** : ಕಾಶಿಯಿಂದ ಬಹು ಬೆಲೆಯುಳ್ಳ ನಕಾಸುಕೆಲಸ ಮಾಡಿದ ಮೇನೆಯೊಂದನ್ನು ತರಿಸಿದನು (ಝೂರಾಜ. ೭೬).

[ ನಕಾಸೆ (<ನಕ್ಷೆ) + ಕೆಲಸ ]

**ನಕೀಬ** (ನಾ). ಸ್ತುತಿಪಾಠಕ ; ಹೊಗಳುಭಟ್ಟ ; ಚಾರಣ : ಚೋಪದಾರ ಫುಹಲದಾರ ನಕೀಬ . . . ಇವರೇ ಮೊದಲಾದವರು ಅಲಾಹಿದ ಷಾಗಿರ್ದಪೇಷಾ ಕಚೇರಿಗೆ ಸೇರಿದವರು (ಚಾಮವಂ. ೩೩೭).

[ ←ಅರ. ಹಿಂ. ನಕೀಬ್ ]

**ನಕುಲ$_1$, ನಕುಳ** (ನಾ). ೧. ಕೀರ ; ಮುಂಗುಸಿ ; ಮುಂಗುರಿ : "ವಿಷಜಡಂ ಬಭ್ರು ನಕುಲಂ ಮುಂಗುರಿಯೆನಿಕ್ಕುಂ" (ಮಂಗರಾ. ೪೯–೧೪); ಇಂತೀ ಶಾರ್ದೂಲ ವರಾಹ ಗೋಲಾಂಗೂಲ ನಕುಲಂಗಳ್ ನಾಲ್ಕುಂ ಭವದ್ದಾನಾನುಮೋದದಿಂ ಜಾತಿಸ್ಮರಂಗಳಾಗಿ ಭೋಗಭೂಮಿಗೆ ಬದ್ಧಾಯುಷ್ಯಂಗಳಾದುವು (ಆದಿಪು. ೫–೩೦ವ); ಅಹಿನಕುಲಂಗಳ್ ಹರಿಣ ಚಮೂರಂಗಳ್ ಶಾಂತರೂಪದಿಂದಿರ್ದುವಜಿತನಾಥನ ಕೆಲದೊಳ್ (ಅಜಿಪು. ೭–೬); ಪಾವಿನ ಬಾಯಿಂ ಬರ್ದುಂಕಿದ ತತ್ತಿಗಳಂ ನಕುಲಂಗಳ್ ತಿಂದುವು (ಪಂಚತಂ. ೧೭೪–೧೫); ಉಳಿದ ಬೆಳೆಯಂ ನಕುಲಹೆಗ್ಗಣಂಗಳು . . . ತಿಂದು ತಳಪಟಂ ಮಾಡಿ ನಾಡೆಲ್ಲಮಂ ಗೋಳಿಡಿಸುತಿರ್ದುವು (ಹಚಕಾ. ೩–೬೩); ಗಿರಿಜೆಸಹಿತಾ ಶಿವಂ ಪಲವು ರೂಪಂ ತಳೆದು ಕರಿ ಶರಭ . . . ಉರಗ ನಕುಲಂ ಮೊಸಳೆ ಮತ್ಸ್ಯ . . . ಚಕ್ರವಾಕರೂಪಜಾವವರ ಚರಣಾಂಬುಜಕ್ಕೆ ಶರಣು (ಲಶಿಚಂ. ೧೬–೫); ವಿವೇಕವಿಲ್ಲದೆ ವನಿತೆ ನಕುಲನ ಕೊಂದ ಗಾದೆಯ ಹನವು ಮಾಡಿದನೆನಿಸಬಾರದು (ಕಾಶಿರಾ. ೧೦–೪೫); ಶರಭನಿಭಾರಿ...ಪೂತಿವೆಕ್ಕು ನಕುಲಂ ಮರಪಾವುಗಳೆಂಬಿವಾಗಳುಂ ಕರಮೆಸೆದಿರ್ಪಿನಂ ಮೆಚ್ಚಿದುದಾ ವಿಪಿನಂ ವಿಪಿನದ್ಧಕಂದರಂ (ಶಬಶಂ. ೩–೩೪). ೨. ಪಂಚಪಾಂಡವರಲ್ಲಿ ನಾಲ್ಕನೆಯವನು ; ಮಾದ್ರೀಸುತರಲ್ಲಿ ಒಬ್ಬ : "ನರಬಾಂಧವನೆನಲ್ಕೆ ನಕುಲನೆನಿಕ್ಕು" (ಮಂಗರಾ. ೭೮–೩); ನಕುಲಂ ಕುಂತಶಸ್ತ್ರದೊಳತಿಪ್ರವೀಣನುಮಾಗಿ (ಪಂಪಭಾ. ೩–೩೭ವ); ಈತನೇ ಧರ್ಮಜನುಯೆರಡನೆಯಾತ ಭೀಮನು ಬಳಿಕ ಮೂಜನೆಯಾತನರ್ಜುನ ನಕುಲನೈದನೆಯಾತ ಸಹದೇವ (ಕುವ್ಯಾಆ. ೪–೭೦); ಗುಣದೊಳಾಯೌವನಾಶ್ವಕ್ಷಿತಿಪನೆಜಿಗಿ . . . ನರನ ಸದ್ಗುಣವನುಜ್ ಕೊಂಡಾಡಿ ಬಳಿಕ ಸಹದೇವನಕುಲಾದ್ಯರಂ ಮನ್ನಿಸಿದನು (ಜೈಮಿಭಾ. ೫–೧೦). ೧, ೨ : ಮತ್ತಮಾ ಮಹಾವನಂ . . . ಪಾಂಡವಪ್ರಕರದಂತಾತ್ತಭೀಮನಕುಲ ದ್ರುಪದಮುಂ ಅರ್ಜುನೋರ್ಜಿತಮುಂ . . . ಸ್ಥಾಣುನಿವಸನಮಾಗಿಯುಂ ಅಪರ್ಣಾನ್ವಿತಮಲ್ತು (ಚಂದ್ರಪು. ೫–೫೩ವ); ಸಹದೇವನಾಗಿ ಸಮುದಿತ ನಕುಲನಾಗಿ . . . ಹರಿಯೊಡನೆ ಬಹ ಪಾರ್ಥನಂ ಕರೆದು ಮೂದಲಿಪ ತೆಜದಿಂದೆ ವಿಂಧ್ಯಾದ್ರಿ ಮುಂದೆಸೆದುದು (ಜೈಮಿಭಾ.೧೦–೩); ಮತ್ತಮಾ ವನಂ . . . ಯುಧಿಷ್ಠಿರಸದ್ಮದಂತೆ ವೃಕೋದರನಕುಲಾಧಿಷ್ಠಿತಮುಂ . . . ಎನಿಸಿ (ರಾಜಶೇ. ೫–೭೪ವ). ೩. ಒಂದು ಬಗೆಯ ವೀಣೆ; ಎರಡು ತಂತಿಗಳುಳ್ಳ ವೀಣೆ : ನೂರುತಂತಿಗಳನ್ನು ಮೊಟ್ಟಮೊದಲಾಗಿ ಹೊಂದಿದ್ದ ವೀಣೆ, ತಂತಿಗಳ ಸಂಖ್ಯೆಯಲ್ಲಿ ಇಳುವರಿ ಹೊಂದುತ್ತಾ ಬಂದು, ಎರಡು ತಂತಿಗಳ 'ನಕುಲ' . . . ಒಂಭತ್ತು ತಂತಿಗಳ 'ವಿಪಂಚೀ' ಎಂಬ ಹೆಸರುಗಳಿಂದ ತಂತಿಗಳ ಸಂಖ್ಯೆಯಲ್ಲಿ ಏರುಪೇರು ತೋರುತ್ತದೆ (ಸಂಗೀಚಂ. ೩೧೧). **ನಕುಳ** : ೧. ತದ್ವೃತ್ತಾಂತಮೆಲ್ಲಮನಱಿದು ತತ್ಪುರಾಧೀಶಂ ದಂಡಿಸೆ ಗತಜೀವಿತನಾಗಿ ಬಂದಿಲ್ಲಿ ನಕುಳನಾದಂ (ಆದಿಪು. ೫–೩೦ವ); ಪಸುರ್ವಣಿಕ್ ಕರಿದಪ್ಪ ಮಣ್ ಕರಂ ಕಡುವಿಳಿದಪ್ಪ ಮಣ್ ನಕುಳಮೆಂಬಿವನುಕ್ರಮದಿಂದೆ ತೋಱುಗುಂ (ಲೋಕೋಪ. ೫–೨೫). [ ಸಂ. ]

**ನಕುಲ$_2$** 'ನಗಲು' ನೋ.

**ನಕುಲಾರಿ** (ನಾ). ಮುಂಗುಸಿಯ ಶತ್ರು ; ಹಾವು : "ನಕುಲಾರಿ – ಮುಂಗಲಿಯ ವೈರಿ, ಹಾವು" (ಗಂಗಾಮು. ೧೭೭). [ ನಕುಲ$_1$ + ಅರಿ$_2$ ]

**ನಕುಲೇಷ್ಟೆ** (ನಾ). (ಮುಂಗುಸಿಯು ಸೇವಿಸುವುದೆಂದು ನಂಬಲಾದ) ಒಂದು ಬಗೆಯ ಸಸ್ಯ; ಗಂಧನಾಕುಲಿ; ಭುಜಂಗಾಕ್ಷಿ: "ನಾಕುಲೀ, . . . ಗಂಧನಾಕುಲೀ, ನಕುಲೇಷ್ಟಾ, ಭುಜಂಗಾಕ್ಷೀ, ಛತ್ರಾಕೀ, ಸುವಹಾ –ರ ಸರ್ಪಾಕ್ಷಿಗಿಡದ ಹೆಸರುಗಳು" (ಸಿದ್ಧಾಂತಿ. ೧೩೧). [ ಸಂ. ನಕುಲೇಷ್ಟಾ ]

**ನಕುಳ** 'ನಕುಲ$_1$' ನೋ

**ನಕ್ಕಬಡಿ, ನಕ್ಕಬಳಿ** (ಕ್ರಿ). ಬಹಳ ಸಂಕಟಪಡು ; ದುಃಖಿಪಡು : ಪಾಪ, ಅವರು ಮಕ್ಕಳಿಲ್ಲದೆ ನಕ್ಕಬಡೀತಿದಾರೆ (ಮಲೆಮ. ೩೧). **ನಕ್ಕಬಳಿ** : ನನ್ನ ಸೊಸೆ ಗೋಳೋ ಹೇಳಬಾರದು . . . ಅಂತರಾಳದಲ್ಲಿ ಸಿಕ್ಕಿ ನಕ್ಕಬಳೀತಾ ಆದೆ (ಮಲೆಮ. ೩೭೪). [ ? ]

**ನಕ್ಕಬಳಿ** 'ನಕ್ಕಬಡಿ' ನೋ.

**ನಕ್ಕರವದ್ದಿ** (ನಾ) (?) : ತುಱುಗೆಮೆ ನೀಳ್ದ ಪುರ್ಬು ನಿಡುಗಣ್ ಪೊೞೆ ಯಲ್ಲದೆ ಬಟ್ಟತಪ್ಪ ಬಾಯ್ದೞೆ ತನುರೇಖೆಗೊಂಡ ಕೊರಲೊಡ್ಡಿದ ಪೆರ್ಮೊಲೆ ತೆಳ್ವಸಿಱ್ ಕರಂ ನೆಱೆದ ನಿತಂಬದಿಂಬುವಡೆದೊಳ್ಪೊಡೆ ನಕ್ಕರ ವದ್ದಿ ( ? )[ಪಾಠಾಂ. ನಕ್ಕರವದ್ದಿ, ನೆಕ್ಕೊರೆವೊದ್ದಿ]ತಾನೆ ಪೋ ಕೆಱುದೊಡೆ ಯೆಂದು ಧಾತ್ರಿ ಪೊಗೞ್ಗುಂ ಪೊಗೞ್ವನ್ನರೆ ಕುಂತಿ ಮಾದ್ರಿಗಳ್ (ಪಂಪಭಾ. ೧-೧೦೮). 'ನೆಕ್ಕೊರವಟ್ಟೆ' ಪರಾ. [ ? ]

**ನಕ್ಕರೀಗಿಡ** (ನಾ). ಒಂದು ಬಗೆಯ ಗಿಡ : ನಾಗರೀಗಿಡ, ನಕ್ಕರೀಗಿಡ, ಕಂದರಕ್ಕರೆ (ವೃಜಿಗಿ. ೭೯-೧೬೧೭). [ ? + ಗಿಡ (<ಗಿಡು) ]

**ನಕ್ಕಲು$_1$** (ನಾ). ಮೊರಸು ಒಕ್ಕಲು ಜನಾಂಗದಲ್ಲಿ ಒಂದು ಪಂಗಡ : (ಎಸಮ್ಮ. XV, ೪೫). [ ? ]

**ನಕ್ಕಲು$_2$** (ನಾ). ರತ್ನಕ್ಕೆ ದೋಷವನ್ನುಂಟು ಮಾಡುವ ಒಂದು ಬಗೆಯ ಬಣ್ಣ ( ? ) : ಕರ್ಕರು ಕೋಮಲಂ ಮಂದ ದೀಪಂ ಹೊಗೆಯಂ ನಕ್ಕಲಿನ ಬಣ್ಣಮುದು ಮೂರು ರತ್ನಂಗಳೊಳು ಪೊಕ್ಕು ಮಿಶ್ರಿತವಾಗಿ ದೋಷಮುಮ್ಮೆಸಗಿ ತಾ ಮೂರೊಳ್ಪೇರೆಬೇರೆ (ರತ್ನಶಾ. ೯-೫). [ ? ]

**ನಕ್ಕಿ$_1$** (ನಾ). ೧. ಬಟ್ಟೆ, ಕಸೂತಿ, ಹಾರ ಮೊದಲಾದುವುಗಳಿಗೆ ಸೇರಿಸುವ ಹೊಳೆಯುವ ಬಣ್ಣಬಣ್ಣದ ಬಿಲ್ಲೆ : ಆ ಮಗುವಿನ ಕುಪ್ಪುಲಂಗಕ್ಕೆ ನಕ್ಕಿ ಗಳನ್ನು ಇಟ್ಟು ಕಸೂತಿ ಮಾಡಿರುವುದು ತುಂಬಾ ಚೆನ್ನಾಗಿದೆ (ರೂಢಿ). 'ನಕ್ಕಿಕೆಲಸ' ಪರಾ. ೨. ಥಳಥಳಿಸಿ ಹೊಳೆಯುವ ಒಂದು ಬಗೆಯ ಪುಡಿ ; ಚಮಕಿ : ರಂಗೋಲಿಯ ಮೇಲೆ ನಕ್ಕಿ ಉದುರಿಸಿದರೆ ಚೆನ್ನಾಗಿ ಕಾಣುತ್ತದೆ (ರೂಢಿ). [←ಅರ. ನಕ್ಕೀ ; ಮರಾ. ನಕ್ಕೀ, ನಕ್ಷೀ ]

**ನಕ್ಕಿ$_2$** (ನಾ). ಖಾತರಿ ; ಖಂಡಿತ : ಪ್ರೆಸಿಡೆಂಟ ಗಾಯಕವಾಡರ ಮನೆಗೆ ಹೋಗಿ ಕೆಲಸ ನಕ್ಕಿ ಮಾಡಿಸಿಕೊಂಡು ಬಂದಿದ್ದಳು (ಕ್ಷಿತಿಜ. ೬೩).

[ ← ಅರ. ನಕೀ ; ಮರಾ. ನಕ್ಕೀ ; ನಕೀ ]

**ನಕ್ಕಿ$_3$** (ನಾ). [ಸಂಗೀತ] ತಂತೀವಾದ್ಯಗಳನ್ನು ಮಿಟುವಾಗ ಬೆರಳಿನ ತುದಿಗೆ ಹಾಕಿಕೊಳ್ಳುವ, ಉಂಗುರದಂತಹ ಸಾಧನ ; ಕೃತಕವಾದ ಉಗುರು : ರಾಗಕ್ಕೆ ತಕ್ಕಂತೆ ಮೆಟ್ಟಲುಗಳನ್ನು ವಾದ್ಯದಲ್ಲಿ ಅಳವಡಿಸಿ ಕೊಳ್ಳುವ ಸೌಲಭ್ಯವಿದ್ದು, ನಕ್ಕಿಗಳ (Plectra) ಉಪಯೋಗವೂ ಇತ್ತೆಂದು ನಿಜಗುಣರ ಈ ರಚನೆಯಿಂದ ವ್ಯಕ್ತವಾಗುತ್ತದೆ (ಸಂಗೀಚಂ. ೩೧೪).

[ ←ಮರಾ. ನಖೀ./ಸಂ. ನಖ ]

**ನಕ್ಕಿಕುಂಟೆ** (ನಾ). ಒಂದು ಕೊಳದ ಹೆಸರು : ಚಾಲದಿನ್ದ ಬೆಳೆದುನೆಪಿ ಪುಣುಸೆಯಿನ್ದ ನಕ್ಕಿಕುಣ್ಟೆಯಿಂದೆ ಒ × × ಈಶಾನ್ಯದ ಕಿಸುವಾಲಿಯಿನ್ದ ನಿನ್ದ ಕಲ್ಲಿನ್ದ (ಮ್ಯಆರಿ. ೧೯೧೪,೧೩-೬೯; 808). [ ನಕ್ಕಿ ? + ಕುಂಟೆ$_2$ ]

**ನಕ್ಕಿಕೆಲಸ** (ನಾ). ಹೊಳೆಯುವ ಬಿಲ್ಲೆಗಳಿಂದ ಮಾಡಿದ ಚಿತ್ತಾರದ ಕೆಲಸ : ನಕ್ಕಿಕೆಲಸದ ಚಪ್ಪಲಿಯ ಮೆಟ್ಟೆ ಜರತಾರಿ ಚಿಮ್ಮಲಿಲ್ಲ (ನಡೆದಾ. I, ೩೬೭). [ ನಕ್ಕಿ$_1$ + ಕೆಲಸ ]

**ನಕ್ಕಿಸು, ನೆಕ್ಕಿಸು** (ಕ್ರಿ). ನಾಲಗೆಯಿಂದ ಸವರುವಂತೆ ಮಾಡು. – ನೆಕ್ಕು ವಂತೆ ಮಾಡು,– ನೇವರಿಸುವಂತೆ ಮಾಡು : ಪೆಣ್ಣೋಡಗ . . . ತಿನ್ನುವ ಪಣ್ಣನಣುಗಂಗೆ ಕನಿಕರದೆ ಕೊಟ್ಟು ಗಂಡನಿಗೆ ತನ್ನಯ ಹಸ್ತವನು ನಕ್ಕಿಸಿದುದು (ಪ್ರಭುಶಾಂತೀ. ೩೩-೩೫). **ನೆಕ್ಕಿಸು :** ವಜ್ರಕಂಟಕಾನ್ವಿತನಪ್ಪ ಜಿಹ್ವೆಯ ಗೋವಂ ಪುಟ್ಟಿಸಿಯಾ ಗೋವಿಂ ನೆಕ್ಕಿಸಿ ಕೊಲಲ್ ಆ ಶಿರಸ್ಸಿನಸ್ಥಿ ಯೊಳ್ ಅರ್ಧಂ ಶಕ್ರಂಗೆ ವಜ್ರಾಯುಧಮಾಯ್ತು (ಧರ್ಮಪ. ೪-೧೪ ವ).

[ ನಕ್ಕು$_1$ + – ಇಸು$_3$ ]

**ನಕ್ಕಿಱಿ** (ಕ್ರಿ). ದನಗಳನ್ನು ಓಡಿಸಲು ಬಾಯಲ್ಲಿ ಶಬ್ದಮಾಡು : ಕೋ ಬಾಯೆಂದಲ್ಲಿ ಆತ್ಮಭೇದ ಅಂಬೆಯೆಂದಲ್ಲಿ ಅಱಿವಿನ ಭೇದ ಹೊಲದೋ ಎಂದು ನಕ್ಕಿಱಿವಲ್ಲಿ ಚಿದಾತ್ಮನ ಭೇದ ಇಂತೀ ಗುಣದ ಪಶು ಅಸುವಿನ ಬಲೆಯ ಕಾಯ್ದೊಪ್ಪಿಸಬೇಕು ಗೋಪತಿನಾಥ ವಿಶ್ವೇಶ್ವರಲಿಂಗಕ್ಕೆ (ತುರುಗಾ. ೫-೧೪). [ ನಕ್ಕು$_1$ + ಇಱಿ$_1$ ]

**ನಕ್ಕು$_1$, ನೆಕ್ಕು$_1$** (ಕ್ರಿ). ೧. (ರಸವನ್ನು ಹೀರಲು) ನಾಲಗೆಯಿಂದ ಉಜ್ಜು, –ತೀಡು,– ಸವರು : "ನಕ್ಕು (ನೆಕ್ಕು)–ಲೇಹನೇ" (ಶಮುಧಾ); ನರಭೋಗ ಮೆಂಬೀ ಪನಿಪುಲ್ಲಂ ನಕ್ಕೆ ತೃಷ್ಣೆ ಪೇೞ್ ಪೋದಪುದೇ (ಆದಿಪು. ೯-೫೭) ; ಅಂಜನಶಿಲಾವಿದಿಕೆಯೊಳ್ ನೆತ್ತರಿಂ ಪೊರೆದ ಕಯ್ಗಳಿಂ ಜವನಪ್ಪಳಿಸಿದಂ ತಿರ್ದ ರಕ್ತಚಂದನಚರ್ಚೆಗಳಂ ನೆತ್ತರೆ ಗೆತ್ತು ನಕ್ಕುವ ಛಳ್ಳುಗಳುಮಂ . . . ಅವಲೋಕಿಸುತ್ತುಂ ಪೋಗೆವೋಗೆ (ಕಾದಂಉ. ೩೬೯) ; ಸಿಂಧುರ[ದ] ಸಕಳಂಗಳಂ ತುರಗರಾಜಿ ನಕ್ಕಿದವು ತಗುಳೆ ಮೂರಿವಿಡುತ್ತುಂ (ವರ್ಧಮಾ. ೮-೯೮) ; ಖಡ್ಗಧಾರೆಯ ಜೇನೆಯ್ಯಂ ನಕ್ಕುವಂತೆ ಸಂಸಾರಸುಖಕ್ಕಾನಳಿಪೆ (ಪಂರಾಮಾ. ೩-೧೮) ; ಕಂಬನಿಯನೊಗುತಾ ಮಱಿಯು ಮಯ್ಯಂಬನದು ನಕ್ಕುತ್ತ ಮೋಹದಿ ನಂಬಿಸುತ್ತಸುವುಳಿದುದಯ್ಯೋ ವಿಮೋಹ ಕಷ್ಟವಲಾ (ಸಾಳ್ವಭಾ. ೫-೩೮) ; ಅರುಣೋದಯದರುಣದ್ಯುತಿ ಗಿರಿಕಟಕದ ಪಳಿಕಿನಲ್ಲಿ ಬಿಂಬಿಸೆ ಕಾಣುತ್ತರ ಣಜಲಂಗತ್ತಲ್ಲಿಯ ಹರಿಣಾರಿಯು ಮಱಿಗಳೆಯ್ದೆ ನಕ್ಕುತ್ತಿರ್ಕುಂ (ಶಬಶಂ. ೨-೩೧). **ನೆಕ್ಕು :** ೧. ಬೆಲ್ಲದ ಮೋಹಕ್ಕೆ ಸುರಗಿಯ ಬಾಯ ಧಾರೆಯಂ ನೆಕ್ಕುವಂತೆ (ಧರ್ಮಾಮೃ. ೬-೧೭೫) ; ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆನ್ನ ಬಾಳುವೆ (ಬಸವ. ೩೫) ; ಕೆಳೆಯುಂ ಪಗೆಯುಂ ದುರ್ಜನನೊಳನುತ್ತಮಂ ನೋಡೆ ದಲ್ ಶುನಕಂ ಕೂರ್ತು ಮುಳಿದುಮಪ ಕಾರವುಂ ಮೊಕ್ಕಳವಾಗಿರೆ ನೆಕ್ಕಿ ಕರ್ಚಿ ಮಾಡದುದುಂಟೇ (ಪಾರ್ಶ್ವಪು. ೪-೪೭) ; ಬೋಳೆಯಂಬಿನ ಗಾಯದ ಬಾಯ್ದೆಱೆಯಿಂದ ಬೀಳುತ ಗೋಣ್ಮುರಿ ಗೊಂಡು ಬೀಳುಗರುವ ಹಸುಳೆಯ ನೆಕ್ಕುವ ಹುಲ್ಲೆಯೊಳಿಯುಳಿದವಪ ಱೊಳಗೆ (ಸೋಮಿಸಂ. ೩-೫೩) ; ಆ ಉರಿನಾಲಗೆ ನನ್ನ ಬಹಿರಂಗವ ನೆಕ್ಕಿ ಹೋಳಿ ಯಿತು (ಅಂತರಾ. ೭) ; ನೆಕ್ಕೋ ನಾಯಿಗೆ ಲಿಂಗವೇನು ವಾಣಿಹೀರವೇನು? (ಗಾದೆ). ೨. (ಅಲಾ) ಸ್ಪರ್ಶಿಸು ; ಮುಟ್ಟು ; ಆವರಿಸು : ಮೂರ್ತಿ ಸಾಗರದ ತೆರೆಗಳಲ್ಲಿ ಕಲ್ಲೋಲಮಾಲೆಯಾಗಿ ನೆಕ್ಕ ಬರುತಿಹುದು ನಯನ ತೇಜವೇ ರೂಪಜ್ವಾಲೆಯಾಗಿ (ಅರಳು. ೪೩೩-೨೦) ; ನಮ್ಮೊಳವ ನೆಕ್ಕುಗುಂ ನಲವು (ಕಾಲೂರ. ೩೭-೪೦). ೩. ನುಂಗು ; ನಾಶಮಾಡು ; ಕಬಳಿಸು : ಸಾವಿರ ಹೆಡೆಯ ಅಜಗರ ಇಡೀ ಮೌಖರೀವಂಶವನ್ನೇ ನೆಕ್ಕಿದುದನ್ನು ನಾನು ನೋಡಿದ್ದೇನೆ (ಬಾಣಭ. ೩೮೫).

[ ದೇ.॥ ತಮಿ. ಮಲ. ತುಳು. ನಕ್ಕು ; ಕೊಡ. ನಕ್ಕ್ ; ತೆಲು. ನಾಕು ; ನಾಯ್ಕಿ. ಗಡಬ. ನಾಕ್ ; ಪರ್ಜಿ. ನೇಕ್ ]

**ನಕ್ಕು$_2$** 'ನಗ್ಗು$_1$' ಪರಾ.

**ನಕ್ಕುಳ** (ನಾ). (ಕರಾ) ಎರೆಹುಳು ; ಮಣ್ಣುಹುಳು.

[ ←ತುಳು. ನಕ್ಕು, ನಕ್ಕುರು ]

**ನಕ್ಕೆ** (ನಾ). ನರಿ. 'ನಕ್ಕೆಚಿಕ್ಕನಾಕು' ಪರಾ.

[ ದೇ.॥ ತಮಿ. ನಕ್ಕನ್ ; ತೆಲು. ನಕ್ಕ ]

**ನಕ್ಕೆಚಿಕ್ಕನಾಕು** (ನಾ). ಒಂದು ಬಗೆಯ ಸಸ್ಯ ; ನರಿಹೊನ್ನೇಗಿಡ : "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಕಾ. . . ಕೋಲ ಪೊನ್ನ ಎಂಬುವದು; ನರಿಹೊನ್ನೇಗಿಡ, ನಕ್ಕೆಚಿಕ್ಕನಾಕು" (ಸಿದ್ಧಾಂತಿ. ೧೧೭)

[ ನಕ್ಕೆ + ಚಿಕ್ಕನಾಕು ? ]

**ನಕ್ತ** (ನಾ). ೧. ರಾತ್ರಿ ; ಇರುಳು ; ನಿಶೆ : "ತಮಿಾ . . . ನಕ್ತಂ . . . ಶ್ಯಾಮಾ, ರಾತ್ರಿಃ – ಈ ೧೯ ಇರುಳಿನ ಪೆಸರ್" (ಹಲಾಯು. ೧೮-೧೦೭) ; "ಇರುಳು ತಮಿ ಯಾಮಿನೀವಸತಿರ್ನಿಶಾ ವಿಭಾವರಿ ತಮಸ್ವಿನಿ ವಾಸತೇಯಿ ನಕ್ತಮುಷೆ ಶರ್ವರಿ ದೋಷೆ ರಜನಿ ಕ್ಷಪೆ ಕ್ಷಣದೆ ಶ್ಯಾಮೆಯೆನೆ ರಾತ್ರಿಗಭಿಧಾನಮಕ್ಕುಂ"(ಮಂಗರಾ. ೨೦-೬); ಕೊಂಕಿಸಿ ನಕ್ತಸಮಯದಿ ನೋಡಿ ಮುಃಕ್ತಾ ಫಳವ ಹಳಿವ ಭುಕ್ತಿಗೆಯ್ಯದೆ ದೂರದಿಂ ರಸಾನ್ನವ ಹಳಿವ (ಲಿಂಗಪು. ೧-೩೬);

ಬೋಧಿಸಿದಡ ವನೀಶಗಹುದದು ವಿಪರ್ಯಾಯವಾದುದಾಯಿತಿನ್ನೇನು ನಕ್ತಂ ಬರಲಾಗ ಸಂಮುಖ್ಯನಂಗೋಳಿಸದಿರಲು (ಜಿನಮು. ೧೦-೩).
'ನಕ್ತಜೀವ' ಪರಾ. ೨. = ನಕ್ತಭೋಜನ. [ ಸಂ. ]

**ನಕ್ತಂಚರ** (ನಾ). ೧. ರಾತ್ರಿಯಲ್ಲಿ ಸಂಚರಿಸುವಂಥದು; ನಿಶಾಚರ. ೨. ಕಳ್ಳ ; ಚೋರ. ೩. ಗೂಬೆ. ೪. ಬೆಕ್ಕು. ೫. ಭೂತ ; ಪಿಶಾಚಿ. ೬. ರಾಕ್ಷಸ: ಚತುಸ್ತ್ರಿಂಶತ್ಸಹಸ್ರನಕ್ತಂಚರಪರಿವೃತ ಹಳಂಭೂಷಮು ಸಲಾಯುಧ ಕಾಳನೀಳವಿದ್ಯುನ್ಮಾಲ್ಯಾದಿಗಳುಂ ಬಂದು ಕೂಡೆ (ಪಂಪಭಾ. ೧೦-೨೭ ವ); ಒಡಲೊಳಗುಡಿದ ಸರಲ್ ಪೊಱಮಡುವುದಯುಷ್ಮಾಂತ ಸನ್ನಿಧಾನದೊಳೆಂತೆಂತೊಡಲಿಂಪೋದುದು ಮುನಿಸಿನ ಪೊಡರ್ಪು ನಕ್ತಂಚರಂಗೆ ಶಿಶುಸನ್ನಿಧಿಯೊಳ್ (ಪಂರಾಮಾ. ೪-೧೯); ನಕ್ತಂಚರನ ಮಸ್ತಕಮಂ ಮುಷ್ಟಿಯಿಂ ತಿವಿದು (ಜಗವಿ. ೪-೫೬ವ); ನಕ್ತಂಚರರ ರುಧಿರಪಾನಕ್ಕೆ ಬೀಭತ್ಸ . . . ಚಕೋರ ವ್ರಜಕೆ ಶಾಂತಿರಸದ ಪ್ರವಾಹಪೂರವೆನೆ ನವ ರಸೋದಯಮುಮುಮುವೆನಿಸಿದ ಓಮುಕರನೆಸೆದಿರುತಿರ್ದನು (ಜಡಕಾ. ೩-೮೫). [ ಸಂ. ] ೭. ನೈಋತಿ :"ಯಾತು . . . ನಕ್ತಂಚರಃ, ನೈಋತಃ, ಕೋಣಪಃ, ಕೈಕಸೇಯಃ – ಈ ೯ ನೈಋತಿಯ ಪೆಸರ್" (ಚಲಾಯು. ೦೩-೭೩);

**ನಕ್ತಂಚರಿ** (ನಾ). ರಾತ್ರಿಯಲ್ಲಿ ಸಂಚರಿಸುವವಳು ; ರಾಕ್ಷಸಿ : ನಿಜರಕ್ತಂ ರಿಪುಕುಕ್ಷಿಯೊಳ್ನಿಜಶಿರಂ ನಕ್ತಂಚರೀಹಸ್ತದೊಳ್ (ಗದಾಯು. ೫-೫); ನವರಕ್ತಾಸಕ್ತನಕ್ತಂಚರೀಮುಖದೊಳ್ ತೂಂತು ವು ದಾಂತರಂ ದಶಮುಖೋತ್ಪಾತಾಸಿಧಾರಾಮುಖಂ (ಪಂರಾಮಾ. ೧೦-೩೨೩).
[ ಸಂ. ನಕ್ತಂಚರೀ ]

**ನಕ್ತಕ** (ನಾ). ಕೊಳಕಾದ ಅಥವಾ ಹರಿದ ಬಟ್ಟೆ: "ನಕ್ತಕಃ, ಕರ್ಪಟಃ – ೨ ಹರುಕುಬಟ್ಟೆ, ಚಿಂದೀಬಟ್ಟೆ, ಇದು ಕೊಳೆಯುಳ್ಳ ಬಟ್ಟೆಗೂ ಹೆಸರು" (ಸಿದ್ಧಾಂತಿ. ೨೦೩). [ ಸಂ. ]

**ನಕ್ತಕರಜೂಟ** (ನಾ). ತಲೆಯಲ್ಲಿ ಚಂದ್ರನನ್ನು ಧರಿಸಿದವನು; ಶಿವ: ವ್ಯಕ್ತದಿಂ ದವಳಾರಮಂ ಮಾಡಿ ಸಂತತಂ ನಕ್ತಕರಜೂಟಶರಣರ ಸೇವೆಯಂ ಮಾಡಿ (ಪ್ರಭುಪು. ೯-೦೩೩). ℗ ಇದು ಛಂದಸ್ಸಿಗೋಸ್ಕರ ಮಾಡಿಕೊಂಡ ರೂಪ. [ <ಸಂ. ನಕ್ತಂಕರಜೂಟ ]

**ನಕ್ತಜೀವ** (ನಾ).=ನಕ್ತಂಚರ ೬: ಕುಲದಿಂ ಮಾತ್ರಮಲ್ತಿಮಾ ಸ್ವಗುಣದಿಂ ರಾಕ್ಷಸರ್ ಭಯಕೃಲ್ಲದೆ ನಯಕೆ ಸೋಲರೀ ನಕ್ತಜೀವರ್ (ಶ್ರೀರಾಮಾ. ೭೦೮-೧೯೬). [ ನಕ್ತ + ಜೀವ ]

**ನಕ್ತಭೋಜನ** (ನಾ). ಹಗಲೆಲ್ಲ ಉಪವಾಸವಿದ್ದು, ರಾತ್ರಿ ಪೂಜೆ ಮಾಡಿ ಪ್ರಸಾದವನ್ನು ಸ್ವೀಕರಿಸುವ ಒಂದು ವ್ರತ; ನಕ್ತವ್ರತ: ಪ್ರತಿ ಸೋಮವಾರವೂ ನಕ್ತಭೋಜನ, ಪಕ್ಷಪ್ರದೋಷ . . . ಈ ಪ್ರಕಾರ ನಡೆಸುತ್ತಿದ್ದನು (ಚತ್ರಪಾ. ೫೮). [ ನಕ್ತ + ಭೋಜನ ]

**ನಕ್ತಮಾಲ** (ನಾ). ಒಂದು ಬಗೆಯ ಮರ; ಹುಲಿಗಿಲು ; ಹೊಂಗೆ : "ಚಿರಿಬಿಲ್ವಃ, ನಕ್ತಮಾಲಃ, ಕರಜಃ, ಕರಂಜಃ – ೪ ಹುಲಿಗಿಲಮರದ ಹೆಸರು, ಇದಕ್ಕೆ ಹೊಂಗೇಮರವೆಂದು ಕೆಲವರು ಅರ್ಥ ಹೇಳುವರು" (ಸಿದ್ಧಾಂತಿ. ೧೧೭). [ ಸಂ. ]

**ನಕ್ತವ್ರತ** (ನಾ). = ನಕ್ತಭೋಜನ : ಯಾರು ಈ ತೀರ್ಥದಲ್ಲಿ ಸ್ನಾನವಂ ಮಾಡಿ ಉಪವಾಸವನಾದರೂ ನಕ್ತವ್ರತವನಾದರೂ ಭಕ್ತಿವ್ರತವನಾದರೂ ಮಾಡುವರೊ ಅವರೆಲ್ಲರು ಯೆನ್ನಲಿ ಸಾಯುಜ್ಯಮುಕ್ತಿಯನೈದುವರು (ಗರುಪು. ೭-೪೪-೨). [ ನಕ್ತ + ವ್ರತ ]

**ನಕ್ತಿಸು** (ಕ್ರಿ). ರಾತ್ರಿಯಾಗುವಂತೆ ಮಾಡು ; ಕತ್ತಲೆಯಾಗುವಂತೆ ಮಾಡು: (?)ಶಕ್ತಿಯಾರಂ ಸದಾಖ್ಯನಾರನಾವಗಂ ವ್ಯಕ್ತಿಸುತ ಕರಣವಾರಂ ವಿಶೇಷಣವಿಡಿದನುಕ್ತಿಸುತ ಲಿಂಗವಾರಂ ವಿನಮ್ಮತಪಡೆದು ನಕ್ತಿಸುತ ಭವನಂಗಳಾ (ಲಿಂಗಪು. ೯-೧೭). [ ನಕ್ತ + –ಇಸು ]

**ನಕ್ತೈಕಭುಕ್ತ** (ನಾ). = ನಕ್ತಭೋಜನ : ನಿತ್ಯಪ್ರಪವಾಸಿಗಳು ನಕ್ತೈಕಭುಕ್ತ ಪುನರುಕ್ತಿಯಿಂ ಧಾರಣೆಯ ಪಾರಣಾನೇಮಂಕರು (ಲಶಿಚಂ. ೩೦-೨೩). ℗ ಸಂಸ್ಕೃತ ವ್ಯಾಕರಣದ ಪ್ರಕಾರ ಇದು ಅಶುದ್ಧ ಪದ.
[ ನಕ್ತ + ಏಕಭುಕ್ತ ]

**ನಕ್ತೋಪವಾಸ** (ನಾ). = ನಕ್ತಭೋಜನ : ನಕ್ತೋಪವಾಸ ಚಾಂದ್ರಾಯಣಂ ಮೊದಲಾದ ನಿತ್ಯನಿಯಮಂಗಳು . . . ಕೊಳಲು (ಲಶಿಚಂ. ೪೩-೬).
[ ನಕ್ತ + ಉಪವಾಸ ]

**ನಕ್ರ** (ನಾ). ೧. ಒಂದು ಬಗೆಯ ಜಲಚರ ಪ್ರಾಣಿ ; ಮೊಸಳೆ ; ನೆಗಳು : "ನಕ್ರಮೆನೆ ಕುಂಭೀರಮೆನೆ ಮೊಸಳೆ ಗ್ರಾಹಮಾ ನಕ್ರ ಅವಹಾರ ಮೆನೆ ನೆಗಟಕ್ಕು" (ಮಂಗರಾ. ೧೨೦-೭); ನಿಜದೇಶಪ್ರಸ್ಥಾನಾಭಿಮುಖರ್ ಅಂತಸ್ಥಕೋಪಾವಲೇಪರ್ ಬಹಿಃಪ್ರಮೋದಂಗಳಿಂ ಸಂವೃತಾಕಾರರ್ ಗೂಢನಕ್ರಪ್ರಸನ್ನಹ್ರದಗಳಂತೆ ಪಯಣಂಬೋದರ್ (ಶಾಂತಿಪು. ೭-೩ವ); ಜಡಸ್ಥಿತಿ ನಕ್ರದೊಳ್ ಪ್ರಹರಣಶ್ರಮಂ ಮುರಳಿಯೊಳ್ . . . ಮುಹುಮಮಾತ್ರ ವರ್ತನಂ ಸೃಣಿಯೊಳಲ್ಲದಿಲ್ಲಮೆಲ್ಲಿಯುಂ (ಚಂದ್ರಪು. ೩-೯ ವ) ; ಕರಿಮಕರ ನಕ್ರಶೈವಾಳ . . . ತಿಮಿತಿಮಿಂಗಿಲೋತ್ಕರಜಳಕವ್ಯಾಳಕೋಳಾಹಳ ಧ್ವಾನವೆರಸಿ ಜಲನಿಧಿ ಮೆಱೆದುದು (ಜಡಕಾ. ೦-೩೩); ಅತನ ಮಗಳ್ . . . ನಂದನವನದ ಹೊಂದಾವರೆಯ ಕೊಳದೊಳ್ ಕಾಲಂ ತೊಳೆಯಲ್ವಾಗೆ ಅಲ್ಲಿರ್ದ ನಕ್ರಂ ಚಿಕ್ಕನೆ ಚರಣಮಂ ಪಿಡಿಯಲ್ (ಪುಣ್ಯಾಸ್ರ. ೬-೧೪ ವ); ವಾರಿಕೇಳಿಯ ಸುರನಾರಿಯರ್ಗಳ ಕಂಡು ಬೀರುತವರ್ಮರು ಸೋತು ಪಿಡಿಯೆ ವಾರಿ ಶಪಿಸಲೇಳು ದಾರುಮಾದರು ನಕ್ರಾಕಾರವನ್ಯಾಂತರಂತಲ್ಲಾ (ಭೈರವೇ. ೨-೪೦); ಕ್ರೂರನಕ್ರಾಕುಲದೊಳಡಿದಿರ್ದ ಪೆರ್ಮಡು ಗಭೀರ ನಿರ್ಮಲಜಲದೊಳೆಸೆವಂತೆ ಮನದೊಳ್ ಕಠೋರತರಭಾವಮಂ ತಳೆದು ಬಹಿರಂಗದೊಳ್ ವಿನಯಮುಳ್ಳಾತನಾಗಿ (ಕ್ಷಮಿಭಾ. ೨೮-೨೮); ಜಲದೇವಿಯರೆ, ಮಕರನಕ್ರಗಳಿಂದೆ ರಕ್ಷಿಸಿಂ (ಶ್ರೀರಾಮಾ. ೮೫-೨೦೫). ೨. ಮೀನು. 'ನಕ್ರಕೇತನ' ಪರಾ. ೩. ಒಂದು ನರಕದ ಹೆಸರು: ಪೆರದೀ ವ್ಯಕಾಸನಮುಮಿರದೆಯುವೆ ಗ್ರಾಹಕುಂಭೀರಂಗಳುಂ ನೆರದ ನಕ್ರಾಖ್ಯ ಮಿಷ್ಟು ನರಕಪ್ರಧಾನವರರಿರವೆ ಪ್ರಚಂಡಭೂಪಂಗಿವೈದುಂ (ಸಾಹಂಜ. ೫-೫೦); ಉಗ್ರ ವ್ಯಕಾಸ್ಯ ಗ್ರಾಹ ಕುಂಭಿ ನಕ್ರವೆಂಬೈದುಮಂತ್ರಿನರಕಂಗಳಿಂದೊಡ ಗೂಡಿಪ್ರಚಂಡವೆಂಬರಸುನರಕವಿಹುದು (ವಿವೇಕ. ೮೮೦). [ ಸಂ. ]

**ನಕ್ರಕೇತನ** (ನಾ). ೧. ಮೀನಿನ ಗುರುತುಳ್ಳ ಧ್ವಜ,–ಬಾವುಟ. ೨. ಮೀನಿನ ಗುರುತನ್ನು ಧ್ವಜದಲ್ಲಿ ಉಳ್ಳವನು; ಮನ್ಮಥ: ಕರಶೂಲ ನಕ್ರಕೇತನನಾಶ . . . ತನುಭವಾಂಬೋಧಿ ಬಾಡಬ ಸಂಗಮೇಶ (ಪ್ರೌಢರಾ. ೮-೧); ನಕ್ರಕೇತನ ಪಳಿವ ಕರ್ಣಾಯತೇಕ್ಷಣೆಯೆ . . . ಸಲಹು ಮೂಲೋಕಮಾತೇ (ನವಮೋ. ೦೦-೨). [ ನಕ್ರ + ಕೇತನ ]

**ನಕ್ರಚಕ್ರ** (ನಾ). ಮೊಸಳೆಗಳ ಗುಂಪು,–ಸಮೂಹ: ಪರಿಧಾವ ನಕ್ರಚಕ್ರ ಕ್ರಮಣರಮಣಸಂಜಾತಕಲ್ಲೋಳಮಾಲಾಸ್ಫುರದುದ್ಯತ್ತೀಕರಾಪಸ್ಥಗಿತಗಗನ ದಿಗ್ಮಂಡಲಂ (ಎಕ. XI, ದಾವಣ. ೪೩-೩ ; 1164). [ ನಕ್ರ + ಚಕ್ರ$_1$ ]

**ನಕ್ರಧ್ವಜ** (ನಾ). ೧. = ನಕ್ರಕೇತನ ೧ : ಶಕ್ರತನಯನ ಸಂಭವಂ ಬಳಿಕ ರೋಷದಿಂ ಚಕ್ರಾಯುಧನ ಸುತನ ಸೂತನು ಕುದುರೆಯಂ ನಕ್ರಧ್ವಜವನತುಲ ಚಾಪವಂ ಕತ್ತರಿಸಿ ವಿರಥನಂ ಮಾಡೆ (ಜೈಮಿಭಾ. ೨೨-೨೭). ೨. = ನಕ್ರಕೇತನ ೨. [ ನಕ್ರ + ಧ್ವಜ ]

**ನಕ್ರನಿದ್ರೆ** (ನಾ). ೧. ಮೊಸಳೆಯಂತೆ ನಿಶ್ಚಲವಾಗಿ ಮಾಡುವ ನಿದ್ರೆ ; ಗಾಢವಾದ ನಿದ್ರೆ. ೨. (ಆಲಂ) ಮನದಲ್ಲಿ ಕ್ರೌರ್ಯವನ್ನು ತುಂಬಿಟ್ಟು ಕೊಂಡಿರುವ ತೋರಿಕೆಯ ನಿದ್ರೆ: ರಾಕ್ಷಸರಾಜನರಮನೆಯು ತಟ್ಟ ಶೂನ್ಯತೆಯ ನಕ್ರನಿದ್ರೆಗೆ ತರಲ್ ಭಂಗಮಂ (ಶ್ರೀರಾಮಾ. ೫೭೬-೨೭).
[ ನಕ್ರ + ನಿದ್ರೆ ]

**ನಕ್ರಪದ** (ನಾ). = ನಕ್ರಕೇತನ ೨ : ತ್ರಿಪುರಹರ ನಕ್ರಪದಗಾತ್ರವನಶುಕ್ರ ನಗಪುತ್ರಿಪತಿ . . . ಭೂಚಕ್ರನುತ ನಂಜೇಶ್ವರಾ (ಗುರುಚಾ. ೧೬-೫೭).

[ ನಕ್ರ + ಪದ್ಮ ]

**ನಕ್ರಹರ** (ನಾ). ಮೊಸಳೆಯನ್ನು ಸಂಹರಿಸಿದವನು ; ವಿಷ್ಣು : ನಕ್ರಹರನು ಬಾದ ಚಕ್ರಧರನು ಬಂದ (ಪುರಂದ. ೧-೪೮-೪). [ ನಕ್ರ + ಹರ ]

**ನಕ್ಷತ್ರ$_1$** (ನಾ). ೧. ತಾರೆ ; ಉಡು ; ಚುಕ್ಕೆ : "ಭಂ, ನಕ್ಷತ್ರಂ . . . ಉಡು–ಈ ೯ ನಕ್ಷತ್ರದ ಪೆಸರ್" (ಹಲಾಯು. ೧೦-೫೧) ; "ಅಟ್ಟಲೆಂದು ಮಿಾನೆಂದು ನಕ್ಷತ್ರಮಕ್ಕು" (ಕಬ್ಬಿಕ್ಕ. ೭೯) ; ಮೂನ್ನೂಱುಪತ್ತು ನಕ್ಷತ್ರಕ್ಕೆ ಬಾಯಿಬಿಟ್ಟುಕೊಂಡಿಪ್ಪುದೆ ಸಿಂಪು ಅದು ಸ್ವಾತಿಗಲ್ಲದೆ ಬಾಯ್ದೆಱೆಯದು (ಬಸವ. ೮೦೯) ; ನಕ್ಷತ್ರವೆಷ್ಟಾದೊಡಂ ದೊರೆಯೇ ಚಂದ್ರಗೆ (ಸೋಮೇಶ. ೦೦) ; ಗಗನಪಾವಕ ಸಮಿಧ ರವಿರಶ್ಮಿಗಳೆ ಧೂಮವು ವರ್ಚಿಯೆನಿಪುದೆ ಹಗಲು ನಕ್ಷತ್ರಗಳೆ ಕಿಡಿಗಳು (ಹಸಾರ. ೭-೩) ; ಸ್ವಯಂಪ್ರಕಾಶವಾಗಿ ಆಕಾಶದಲ್ಲಿ ಮಿನುಗುತ್ತಿರುವುವೇ ನಕ್ಷತ್ರಗಳು (ಆಕಾಶ. ೪೯) ; ಮಿಂಚಿನಂಚಿನ ದೇವತಾಚರಣಸಂಚಾರದಾ ಪದಚಿಹ್ನೆಗಳ್ ಪೊಳೆದುವಮಿತನಕ್ಷತ್ರಗಳ ಪೋಲ್ (ಶ್ರೀರಾಮಾ. ೧೮-೪೭೪) ; ನಿದ್ರಾಂಗನೆಯ ಪರಮಸಖಿ, ಸ್ವಪ್ನ ಸುಂದರಿ, ವಿಭಾವರಿಯು ನಕ್ಷತ್ರಖಚಿತಾಂಬರವನುಟ್ಟು . . . ಭೂಯಾತ್ರೆಗೈಯುತಿರೆ (ಚಿತ್ರಾಂಗ. ೩-೪೪) ; ನಕ್ಷತ್ರಗಳು ವಿವಿಧ ಕಾಂತಿಗಳಿಂದ ಬೆಳಗುತ್ತಿರುವುದರಿಂದ ಕಾಂತಿಗಳಿಗನುಗುಣವಾಗಿ ನಕ್ಷತ್ರಗಳನ್ನು ಗುರುತಿಸಿದೆ (ನಕ್ಷತ್ರ. ೧೩). ೨. [ಜ್ಯೋತಿ] ಚಾಂದ್ರಮಾನಗತಿಯಲ್ಲಿ ಗಣನೆ ಮಾಡುವ ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ; P ಅಶ್ವಿನಿ, ಭರಣಿ, ಕೃತ್ತಿಕೆ, ರೋಹಿಣಿ, ಮೃಗಶಿರೆ, ಆರ್ದ್ರೆ, ಪುನರ್ವಸು, ಪುಷ್ಯ, ಆಶ್ಲೇಷೆ, ಮಖೆ, ಪುಬ್ಬೆ, ಉತ್ತರೆ, ಹಸ್ತ, ಚಿತ್ತೆ, ಸ್ವಾತಿ, ವಿಶಾಖ, ಅನೂರಾಧ, ಜ್ಯೇಷ್ಠ, ಮೂಲ, ಪೂರ್ವಾಷಾಢ, ಉತ್ತರಾಷಾಢ, ಶ್ರವಣ, ಧನಿಷ್ಠೆ, ಶತಭಿಷೆ, ಪೂರ್ವಾಭಾದ್ರ, ಉತ್ತರಾಭಾದ್ರೆ, ರೇವತಿ ಎಂಬ ಇಪ್ಪತ್ತೇಳು ನಕ್ಷತ್ರಗಳಲ್ಲಿ ಚಂದ್ರನು ಸಂಚರಿಸುತ್ತಾನೆ. ಇದು ನಕ್ಷತ್ರಮಾನದಲ್ಲಿ ಒಂದು ತಿಂಗಳಾಗುತ್ತದೆ: ಪ್ರಶಸ್ತದಿವಸವಾರ ನಕ್ಷತ್ರಮುಹೂರ್ತದೊಳ್ ಮುಂಜಿಬಂಧನಕ್ರಿಯೆಯುಂ ಮಾಡಿದ ಬಟಿಕ್ಕೆ (ವಡ್ಡಾರಾ. ೭೩-೩೧) ; ಅಶ್ವಿನಿ ಮೊದಲಾಗೆ ಅಭಿಜಿತ್ತು ಸಹಿತಮಾಗಿ ಇರ್ಪತ್ತೆಂಟು ನಕ್ಷತ್ರಂಗಳ್ (ಶೋಕೋಪ. ೦-೭ ಟೀಕೆ) ; ನಕ್ಷತ್ರ ಶಿಳಿದವನ ಸಾವು ಕ್ಷಣ ಹೊತ್ತಾದರೂ ನಿಂತೀತೇ (ಗಾದೆ). ೩. [ಗಣಿತ] ಇಪ್ಪತ್ತೇಳು ಎಂಬ ಸಂಖ್ಯೆಯ ಸಂಕೇತ : "ನಕ್ಷತ್ರಮಿಪ್ಪತ್ತೇೞಿನಿಕುಂ" (ಮಂಗರಾ. ೧೦೪-೯). ೪. [ಜೈನ] ಜ್ಯೋತಿಷ್ಕ ದೇವತೆಗಳಲ್ಲಿ ಒಂದು ಭೇದ : ಯಕ್ಷರು ಗರುಡರು ಸುರರು ನಕ್ಷತ್ರರಮರರು ನರರು ಆ ಕ್ಷಣದೊಳು ಬಂದು ನಮಿಸಿ ಬೀಳ್ಕೊಂಡರು ದೀಕ್ಷಿತರಾದ ಯೋಗಿಗಳ (ಭರಜ. ೭೦-೧೦೭).

[ ಸಂ. ]

**ನಕ್ಷತ್ರ$_2$, ನಕ್ಷತ್ರಿಕ, ನಕ್ಷತ್ರೀಕ** (ನಾ). ೧. = ನಕ್ಷತ್ರಕ ೧ : ಇಂತು ನಕ್ಷತ್ರನ ಕೂಡಾಗ ನಡೆಯುತ ಚಿಂತೆಯೊಳಗೆ ಭೂಪಾಲ (ಹರಿಸಾಂ. ೩-೩೯). **ನಕ್ಷತ್ರಿಕ** : ೨. = ನಕ್ಷತ್ರಕ ೨ : ಆ ನಕ್ಷತ್ರಿಕ ಬಂದರೆ ತನ್ನ ಕೆಲಸ ಆಗೋವರೆಗೂ ಕುಳಿತ ಜಾಗ ಬಿಟ್ಟು ಕದಲುವುದಿಲ್ಲ (ರೂಢಿ). **ನಕ್ಷತ್ರೀಕ** : ೨. ಈ ನಕ್ಷತ್ರೀಕ ಬಂದರೆ ನನ್ನ ಕೆಲಸವೆಲ್ಲಾ ಹಾಳು (ರೂಢಿ).

[ <ಸಂ. ನಕ್ಷತ್ರಕ ]

**ನಕ್ಷತ್ರಕ** (ನಾ). ೧. ಹರಿಶ್ಚಂದ್ರನನ್ನು ಪೀಡಿಸಲು ನಿಯಮಿತನಾದ ವಿಶ್ವಾಮಿತ್ರನ ಒಬ್ಬ ಶಿಷ್ಯ : ತನ್ನ ಶಿಷ್ಯಾಳಿಯೊಳು ನೋಡಿ ಹುಸಿಯ ಸೂಯಾನೀಚವೃತ್ತಿನಿರ್ದಾಕ್ಷಿಣ್ಯನಿಷ್ಕರುಣನೀತಿಗಳಲಿ ಹೆಸರುಳ್ಳ ಹಿರಿಯ ನಕ್ಷತ್ರಕನೆನಿಪ್ಪ ಮಾನಸನನೆಕ್ಕಟಿಗರೆದು ಕೈವಿಡಿದು ಕಿವಿಯೊಡ್ಡಿ ವಸುಧಾಧಿಪತಿಯ ಬಳಿವಿಡಿದು ಕಳುಹಲು ಬುದ್ಧಿಗಲಿಸಿದನು (ಹಚಕಾ. ೯-೧೫) ; ಸತಿಸುತನಕ್ಷತ್ರಕರನ್ನೊಡಗೂಡಿ . . . ಪೋಗುತ (ಹಮುಚ. ೮೪). ೨. (ಆಲಂ) ಅತಿಯಾಗಿ ಉಪದ್ರವ ಕೊಡುವ ವ್ಯಕ್ತಿ : ತಗಾದೆ ಮಾಡುವವನು ; ತಗಾದೆಗಾರ ; ಬೆಂಬಿಡದೆ ಕಾಡುವವನು: ಆ ನಕ್ಷತ್ರಕನ ಸಹವಾಸ ಬಹಳ ಕಷ್ಟಕರವಾದುದು (ರೂಢಿ). [ ಸಂ. ]

**ನಕ್ಷತ್ರಕೂಟ** (ನಾ).=ನಕ್ಷತ್ರಪುಂಜ : ಆಕಾಶದಲ್ಲಿ ಅಲ್ಲಲ್ಲಿ ಬಿಡುನಕ್ಷತ್ರಗಳನ್ನು ಕಾಣುವಂತೆ, ನಕ್ಷತ್ರಕೂಟ(Clusters)ಗಳನ್ನು ಕಾಣಬಹುದು (ಬಾಲಪ್ರ. I, ೩೪೩). [ ನಕ್ಷತ್ರ$_1$ + ಕೂಟ$_3$ ]

**ನಕ್ಷತ್ರಗುಚ್ಛ** (ನಾ). = ನಕ್ಷತ್ರಪುಂಜ : ಆಕಾಶಗಂಗೆಯ ನಕ್ಷತ್ರ ಮಹಾನಗರದಲ್ಲಿ ಒತ್ತಾಗಿ ಸೇರಿಕೊಂಡಿರುವ ಹಲವು ನಕ್ಷತ್ರಗುಚ್ಛಗಳಿವೆ (ನಕ್ಷತ್ರ. ೧೧೮). [ ನಕ್ಷತ್ರ$_1$ + ಗುಚ್ಛ ]

**ನಕ್ಷತ್ರಚಿಹ್ನೆ** (ನಾ). ನಕ್ಷತ್ರಾಕಾರದ ಗುರುತು,–ಸಂಕೇತ : (ಪಟ್ಟಿಯಲ್ಲಿ ಹೆಸರು, ಮೊ. ಕ್ಕೆ) ನಕ್ಷತ್ರಚಿಹ್ನೆ ಹಾಕು, ಚುಕ್ಕಿಗುರುತು ಹಾಕು (Star. ಇಂಕನಿ) ; ಆ ಪುಸ್ತಕದಲ್ಲಿ ವಿಶೇಷಾಂಶಗಳನ್ನು ನಕ್ಷತ್ರಚಿಹ್ನೆಯಿಂದ ಸೂಚಿಸಿದೆ (ರೂಢಿ). P ವಿಶೇಷ ವಿಷಯಗಳನ್ನು ಸೂಚಿಸಲು ಪಕ್ಕದಲ್ಲಿ ನಕ್ಷತ್ರಾಕಾರದ ಗುರುತು ಹಾಕಿ ಅಡಿಟಿಪ್ಪಣಿಯಲ್ಲಿ ವಿವರಣೆ ನೀಡುವುದು ಲೇಖಕರ ಪದ್ಧತಿ. [ ನಕ್ಷತ್ರ$_1$ + ಚಿಹ್ನೆ ]

**ನಕ್ಷತ್ರಜ್ಯೋತಿ** (ನಾ). ನಕ್ಷತ್ರದ ಬೆಳಕು,–ಪ್ರಕಾಶ : ನಕ್ಷತ್ರಜ್ಯೋತಿಯುನ್ನಿದೆ ತೂಳ್ದು ಹಿಮವಚ್ಛೈಲಾಂಶುವಂ ಮಿಾಱಿ ದಿಗ್ಧಾತ್ರೀವ್ಯೋಮವಿಭಾಗಗಾಮಿಯೆನಿಸಿತ್ತುಚ್ಛೃಂಖಳಂ ದಾಮನಂದಿ ತ್ರೈವಿದ್ಯಮುನೀಂದ್ರ ನಿರ್ಮಳಯಶಶ್ರೀ ಶುಭ್ರತಾವಿಭ್ರಮಂ (ಚಂದ್ರಪು. ೧-೩೩).

[ ನಕ್ಷತ್ರ$_1$ + ಜ್ಯೋತಿ ]

**ನಕ್ಷತ್ರಪಾಠಕ** (ನಾ). ನಕ್ಷತ್ರಗಳ ಆಧಾರದ ಮೇಲೆ ಕಾಲಗಣನೆ ಮಾಡುವವನು ; ಜ್ಯೋತಿಷಿ : ಗಳಿಗೆವಟ್ಟಲಂ ಪರಿವೇಷ್ಟಿಸಿರ್ದ ನಕ್ಷತ್ರಪಾಠಕರಿಂ (ಗಿರಿಕ. ೧೦-೨೮ವ). [ ನಕ್ಷತ್ರ$_1$ + ಪಾಠಕ ]

**ನಕ್ಷತ್ರಪಾದ** (ನಾ). [ಜ್ಯೋತಿ] ಒಂದು ನಕ್ಷತ್ರವು ಪ್ರಭಾವವನ್ನು ಬೀರುವ ಕಾಲದ ¼ ಭಾಗ : ಒಂದು ನಕ್ಷತ್ರವನ್ನು ನಾಲ್ಕು ಸಮಭಾಗಗಳನ್ನಾಗಿ ಮಾಡಿದರೆ, ಒಂದೊಂದು ಭಾಗವೂ ನಕ್ಷತ್ರದ ಒಂದು ಪಾದವಾಗುತ್ತದೆ. ಒಂದು ನಕ್ಷತ್ರಪಾದಕ್ಕೆ ೩⅓ ಡಿಗ್ರಿಗಳು (ನಕ್ಷತ್ರ. ೪೭). P ಸಾಮಾನ್ಯವಾಗಿ ಜಾತಕನ ನಕ್ಷತ್ರದ ಕಾಲವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಜಾತಕದಲ್ಲಿ ಪ್ರಥಮ, ದ್ವಿತೀಯ, ತೃತೀಯ, ಮತ್ತು ಚತುರ್ಥಪಾದವೆಂದು ಗುರುತಿಸುತ್ತಾರೆ.

[ ನಕ್ಷತ್ರ$_1$ + ಪಾದ ]

**ನಕ್ಷತ್ರಪುಂಜ** (ನಾ). ನಕ್ಷತ್ರಗಳ ಗುಂಪು,–ಸಮೂಹ : "ನಕ್ಷತ್ರಪುಂಜ ತಾರಾಪುಂಜ" (Cluster of Stars. ಪಾರಿನಿ. ೧೭) ; ಕ್ರಾಂತಿಪಥ ಮತ್ತು ನಕ್ಷತ್ರಪುಂಜ (ಆಕಾಶ. ೮೩) ; ಕೆಲವು ಗುಂಪುಗುಂಪಾಗಿ ಮೈದೋರಿ ನಕ್ಷತ್ರಪುಂಜಗಳಾಗಿ ಮೆರೆಯುವುವು (ಸಾಹಿಸ. ೧೧೩). [ ನಕ್ಷತ್ರ$_1$ + ಪುಂಜ$_4$ ]

**ನಕ್ಷತ್ರಬಾಣ** (ನಾ). ಬಾಣಬಿರುಸುಗಳಲ್ಲಿ ಒಂದು ಬಗೆ ; ಆಕಾಶಬಾಣ ; ಆಕಾಶಕ್ಕೆ ಹಾರಿ ನಕ್ಷತ್ರದಂತೆ ಮಿನುಗುವ ಒಂದು ಬಗೆಯ ಸುಡುಮದ್ದು,–ಪಟಾಕಿ: ಈ ಜಾನಸಾಲೆಯಲ್ಲಿ ಹಗಲುಬತ್ತಿ, ಹೂಬಾಣ, ಆಕಾಶಕೊಳವಿ, ಚಕ್ರಬಾಣ, ನಕ್ಷತ್ರಬಾಣ . . . ಈ ಬಾಣಗಳನ್ನು ನವರಾತ್ರ್ಯುತ್ಸವ, ದೇವತಾಉತ್ಸವ ಮುಂತಾದ ಉತ್ಸವಕಾಲಗಳಲ್ಲಿ ಹತ್ತಿಸುವಂತೆ ಕಟ್ಟಲೆ ಮಾಡಿಸಿದರು (ಚಾಮವಂ. ೧೩೭).

[ ನಕ್ಷತ್ರ$_1$ + ಬಾಣ ]

**ನಕ್ಷತ್ರಮಂಡಲ** (ನಾ). ನಕ್ಷತ್ರಗಳ ಗುಂಪು,–ಸಮೂಹ : ನಕ್ಷತ್ರಮಂಡಲದಲ್ಲಿ ೯೭ ಗೋಳಗುಚ್ಛಗಳಿವೆ (ನಕ್ಷತ್ರ. ೧೩೦) ; ನಕ್ಷತ್ರಮಂಡಲಗಳಲ್ಲಿ ಕೆಲವನ್ನಾದರೂ ಪರಿಚಯಮಾಡಿಕೊಳ್ಳಬೇಕು (ಆಕಾಶ. ೫೯) :

ನಕ್ಷತ್ರಮಂಡಲದಿನಾಚೆಯಿಂದೊಂದು ದನಿ ವಕ್ಷೋಗುಹಾಂತರದಿನೊಂದು ದನಿಯಿಂತೀ ಸಾಕ್ಷಿದ್ವಯವು ನಿನ್ನೊಳೊಂದುಗೂಡಿದೊಡದೇ ಪ್ರೇಕ್ಷೆ ಪರಬೊಮ್ಮನದು (ಮಂಕುಕ. ೬೦). [ ನಕ್ಷತ್ರ$_1$ + ಮಂಡಲ ]

**ನಕ್ಷತ್ರಮಾನ** (ನಾ). ನಕ್ಷತ್ರಗಳ ಚಲನೆಯಿಂದ ಗಣನೆ ಮಾಡುವ ಕಾಲಪ್ರಮಾಣ : ಈ ರೀತಿಯ ನಕ್ಷತ್ರಮಾನ ಕಾಲನಿರ್ಣಯದಲ್ಲಿ ಮೂರು ನಾಲ್ಕು ನಿಮಿಷಗಳಷ್ಟು ತಪ್ಪು ಕೂಡಿಬರಬಹುದು (ನಕ್ಷತ್ರ. ೬೦) ; ಸಾಯನ ಸೌರಮಾನ (ಟ್ರಾಪಿಕಲ್) ಮತ್ತು ನಕ್ಷತ್ರಮಾನ (ಸ್ಪೈಡೀರಿಯಲ್) ಮೇಷ ಸಂಕ್ರಮಣಗಳು ಒಟ್ಟಾಗಿ ಸೇರಿದ್ದವೆಂದು ಅಂದಾಜು ಮಾಡಲಾಗಿತ್ತು (ಕವಿಕೋ. I, ೪೩೪). P ನಕ್ಷತ್ರಮಾನದಿಂದ ಮಾಡುವ ಕಾಲಗಣನೆಯಲ್ಲಿ ಅರುವತ್ತು ಘಳಿಗೆಗೆ ಒಂದು ದಿವಸ, ಮೂವತ್ತು ದಿನಗಳಿಗೆ ಒಂದು ತಿಂಗಳು, ಮುನ್ನೂರಅರುವತ್ತು ದಿನಗಳಿಗೆ ಒಂದು ವರ್ಷ. ಇದನ್ನು ಆಯುರ್ಗಣನೆಯಲ್ಲಿ ಉಪಯೋಗಿಸಬೇಕು ಎಂದು ಸೂರ್ಯಸಿದ್ಧಾಂತದಲ್ಲಿ ಹೇಳಿದೆ. [ ನಕ್ಷತ್ರ$_1$ + ಮಾನ ]

**ನಕ್ಷತ್ರಮಾಲಿಕೆ** (ನಾ). ೧. = ನಕ್ಷತ್ರಮಾಲೆ ೨ : (೩). ೨. [ಛಂದ] ಇಪ್ಪತ್ತೇಳು ವೃತ್ತಗಳಿರುವ ಒಂದು ಬಗೆಯ ಕಾವ್ಯಜಾತಿ ; ತಾರಾವಳಿ : ನಿರ್ವಾಣಲಕ್ಷ್ಮೀಪತಿ ನಕ್ಷತ್ರಮಾಲಿಕೆ : ಇವರಲ್ಲಿ ೨೭ ವೃತ್ತಗಳಿವೆ (ಕವಿಚ. I, ೩೦೦). [ ನಕ್ಷತ್ರ$_1$ + ಮಾಲಿಕೆ ]

**ನಕ್ಷತ್ರಮಾಲೆ** (ನಾ). ೧. = ನಕ್ಷತ್ರಪುಂಜ : ಚರಣನಖಚಂದ್ರಮಾಲೆಗೆ ನಕ್ಷತ್ರಮಾಲೆಯನೋಲಗಿಸುವಂತೆ ಮುಕ್ತಾಫಲನೂಪುರಮಂ ತುಡಿಸಿಯುಂ (ಪಂಪಾಮಾ. ೫-೯೨ವ); ಕಗ್ಗತ್ತಲೆಯ ರಾತ್ರಿ ನಕ್ಷತ್ರಮಾಲೆಯಿಂ ಮೆರೆವಂತೆ, ಮೋಹಮೆಯ ಭಾಳದಲಿ 'ಬೆಳ್ಳಿ'ಯೊಂದೆಯೆ ಮಿರುಗುವಂದದಲಿ, ಕುಂತಲ ವನಲರಿಂದಲಂಕರಿಸಿ . . . ಮೆರೆದಳಾ ಪಾರ್ಥಿವಕುಮಾರಿ (ಚಿತ್ರಾಂಗ. ೧೯-೩೦೧). ೨. ಇಪ್ಪತ್ತೇಳು ಮುತ್ತುಗಳಿರುವ ಕಂಠಹಾರ : "ಇಪ್ಪತ್ತೇಳು ಮುತ್ತಿನ ಸರವಂ ನಕ್ಷತ್ರಮಾಲೆಯೆಂಬುದು" (ಹಲಾಯು. ೯೨-೧೦೯) ; ವಿಜಯಚ್ಛಂದಹಾರ ದೇವಚ್ಛಂದಾರ್ಧಹಾರ ರಶ್ಮಿಕಲಾಪಗುಚ್ಛ ನಕ್ಷತ್ರಮಾಲಾರ್ಧಗುಚ್ಛಮಾಣವಕಾರ್ಧಮಾಣವಕಂಗಳೆಂಬ . . . ಹಾರಂಗಳುಮಂ (ಆದಿಪು. ೮-೫೮ವ) ; ಉಗಿಯಲ್ಕಂಕುಶದಿಂ ತೊಡಂಕಿ ಪಜಿದತ್ತಂ ಸೋರ್ವ ನಕ್ಷತ್ರಮಾಲೆಗಡರ್ಪಾದ ಮನೋಜಸಾಮಜಲಸತ್ಕುಂಭಂಗಳ್ (ಪುಷ್ಪಪು. ೫-೨೭) ; ಅಮಳ ನಕ್ಷತ್ರಮಾಲೆಯನು ಕೊರಳ್ಗಮರಿಸಿದರು (ನವಮೋ. ೨೩-೩೮). ೧, ೨ : ಕಮನೀಯಾಕಾಶಗಜಕ್ಕೆ ಮಾಡಿದವದಾತಕರ್ಣಚಮರರುಹಸಮಂ ಹಿಮಕರಕರಮೆನೆ ನಕ್ಷತ್ರಮಾಲೆ[ ನಕ್ಷತ್ರಮಾಲೆ ]ಯೆನಿಸಿದುವಾಗಳ್ (ಶಾಂತಿಪು. ೮-೬೦). ೩.=ನಕ್ಷತ್ರಮಾಲಿಕೆ ೨.

[ ನಕ್ಷತ್ರ$_1$ + ಮಾಲೆ ]

**ನಕ್ಷತ್ರಮೀನು** (ನಾ). "ಐದು (ಅಥವಾ ಹೆಚ್ಚು) ತ್ರಿಜ್ಯಾಕಾರದ ಚಾಚುಗಳನ್ನುಳ್ಳ ಒಂದು ಕಂಟಕಚರ್ಮಿ ಸಮುದ್ರಪ್ರಾಣಿ "(Star-fish. ಇಂಕನಿ) : ನಕ್ಷತ್ರಮೀನುಗಳ ತಟ್ಟೆಯಂತಿರುವ ಮಧ್ಯಭಾಗದಿಂದ ಕಿರಣಗಳಂತೆ ಚಾಚಿರುವ ಐದು ತೋಳುಗಳಿರುತ್ತವೆ (ಪ್ರಾಣಿಶಾ. ೨೬೫) ; ನಕ್ಷತ್ರಮೀನು (Star-Fish) ಕಣ್ಣುಗುಳಿಹೊಂದಿದ ಮೊದಲ ಜೀವಿ (ನಿಮ್ಮದೃ. ೨). [ ನಕ್ಷತ್ರ$_1$ + ಮೀನು$_2$ ( < ಮೀನ್$^3$ ) ]

**ನಕ್ಷತ್ರರಾಶಿ** (ನಾ). = ನಕ್ಷತ್ರಪುಂಜ : ನಕ್ಷತ್ರರಾಶಿಗಳಿಗೆ ಇಟ್ಟಿರುವ ಪಾಶ್ಚಾತ್ಯಹೆಸರುಗಳೆಲ್ಲ ಗ್ರೀಕ್ ಹೆಸರುಗಳು (ನಕ್ಷತ್ರ. ೨೭) ; ನಕ್ಷತ್ರರಾಶಿಗಳಲ್ಲಿ ಒಂದೊಂದೂ ಒಂದೊಂದು ಪ್ರಾಣಿಯನ್ನು ಹೋಲುವುದು (ಆಕಾಶ. ೮೦). [ ನಕ್ಷತ್ರ$_1$ + ರಾಶಿ ]

**ನಕ್ಷತ್ರಲೋಕ** (ನಾ). ಆಕಾಶ ; ಅಂತರಿಕ್ಷ ; ಗಗನಮಂಡಲ : ಇಂಥ ತಾರಾಯುಗ್ಮಗಳು ನಕ್ಷತ್ರಲೋಕದಲ್ಲಿ ಕಂಡುಬಂದಿವೆ (ನಕ್ಷತ್ರ. ೧೩೫).

[ ನಕ್ಷತ್ರ$_1$ + ಲೋಕ ]

**ನಕ್ಷತ್ರವೀಕ್ಷಕ** (ನಾ). ನಕ್ಷತ್ರಗಳ ಗಣನೆ ಮಾಡುವವನು ; ಜ್ಯೋತಿಷಿ : "ನಕ್ಷತ್ರವೀಕ್ಷಕ ; ಜ್ಯೋತಿಷಿ" (Star-gazer. ಇಂಕನಿ). [ನಕ್ಷತ್ರ$_1$ + ವೀಕ್ಷಕ]

**ನಕ್ಷತ್ರವೀಥಿ** (ನಾ). ೧. ನಕ್ಷತ್ರಗಳ ಮಾರ್ಗ ; ಆಕಾಶಮಾರ್ಗ ; ಗಗನಮಾರ್ಗ : ಆ ಕನ್ಯಾರತ್ನಂಗಳಂ ಪ್ರಭಾಮಂಡಲದ ವಿಮಾನಾರೂಢರ್ಮಾಡಿ ನಕ್ಷತ್ರವೀಥಿಯಿಂ ಕ್ಷಣಮಾತ್ರದೊಳ್ ರಣಭೂಮಿಯನೆಯ್ದಿ (ಪಂಪಾಮಾ. ೧೧-೬೫ವ). ೨. ಅಸಂಖ್ಯಾತ ನಕ್ಷತ್ರಗಳು ಬಹು ಒತ್ತಾಗಿರುವುದರಿಂದ ಆಕಾಶದಲ್ಲಿ ಹಾಲು ಚೆಲ್ಲಿದಂತೆ ಸುತ್ತುವರಿದು ಕಾಣುವ ತೇಜಃಪುಂಜ ; ಕ್ಷೀರಪಥ ; ಆಕಾಶಗಂಗೆ : 'ರಾಜಹಂಸ' (Swan or Swan cross) ಎಂಬ ಹೆಸರನ್ನುಳ್ಳ ತಾರಾಗಣಕ್ಕೆ ನಾತಿದೂರದಲ್ಲಿಯೂ 'ನಕ್ಷತ್ರವೀಥಿ' (Milky way)ಗೆ ಸಮೀಪದಲ್ಲಿಯೂ ಈ ಅಭಿಜಿತ್ತು ಶ್ವೇತಕಾಂತಿಯಿಂದ ಉರಿಯುತ್ತಿರುವುದು (ಜ್ಯೋತಿರ್ವಿ. ೩೫) ; ನೂರು ತೇಜದ ಗೋಲ ತಿರುಗುತಿವೆ ಪರಿಧಿದಲಿ ಊರುಗೋಲಿಗೆ ಸಾಕ್ಷಿ ನಕ್ಷತ್ರವೀಥಿ (ನಲಮು. ೨೦-೨೪). [ ನಕ್ಷತ್ರ$_1$ + ವೀಥಿ ( < ಬೀದಿ ) ]

**ನಕ್ಷತ್ರವ್ಯೂಹ** (ನಾ). ಸದಾ ಒಂದು ಆಕಾರದಲ್ಲಿರುವಂತೆ ಕಾಣುವ ನಕ್ಷತ್ರಗಳ ಗುಂಪು,–ಸಮೂಹ : ಧ್ರುವನಕ್ಷತ್ರದಿಂದ ಮೇಲೆ ಸ್ವಲ್ಪ ಎಡಗಡೆಗೆ ನಕ್ಷತ್ರದಿಂದ ಸುಮಾರು ೩೦ ಡಿಗ್ರಿಗಳ ಅಂತರದಲ್ಲಿ M ಆಕಾರದ ನಕ್ಷತ್ರವ್ಯೂಹವೊಂದು ಕಾಣುತ್ತದೆ (ನಕ್ಷತ್ರ. ೨೭). [ ನಕ್ಷತ್ರ$_1$ + ವ್ಯೂಹ ]

**ನಕ್ಷತ್ರಾಕಾರ** (ನಾ). ನಕ್ಷತ್ರದ ಆಕಾರ,–ಆಕೃತಿ : ಇಡೀ ದೇಗುಲ ನಕ್ಷತ್ರಾಕಾರದ ಶ್ರೀ ಜಗಲಿಯ ಮೇಲೆ ನಿಲ್ಲುತ್ತದೆ (ಸವತಿ. ೪೫) ; ಒಂದು ಸಮಚತುರಸ್ರವನ್ನು ಅಕ್ಷದ ಮೇಲೆ ತಿರುಗಿಸುತ್ತ ಬಂದರೆ . . . ಹನ್ನೆರಡು, ಹದಿನಾರು ಶಾಖೆಗಳುಳ್ಳ ನಕ್ಷತ್ರಾಕಾರದ ತಲವಿನ್ಯಾಸಗಳು ಕಂಡುಬರುತ್ತವೆ (ಹೊಯ್ಸಳವಾ. ೧೫). [ ನಕ್ಷತ್ರ$_1$ + ಆಕಾರ$_2$ ]

**ನಕ್ಷತ್ರಾಧಿಪ** (ನಾ). ತಾರೆಗಳಿಗೆ ರಾಜನಾದವನು ; ಚಂದ್ರ : ನಿರುತ ನಕ್ಷತ್ರಾಧಿಪ ಗ್ರಹವರನಯನನಿಧಿ ತನ್ನಯುಂತಃಕರಣಯೋಗದೊಳಿರೆ . . . ಬಸವರಾಜಂಗರಿದಿದೆನಲೆಲ್ಲಾ ದಿನಂಗಳು ಶುಭದಿನಂಗಳಲಾ(ಬಸಪು. ೪-೪೪).

[ ನಕ್ಷತ್ರ$_1$ + ಅಧಿಪ ]

**ನಕ್ಷತ್ರಾನುಕೂಲ** (ನಾ). (ವಧೂವರರ) ನಕ್ಷತ್ರಗಳಿಗೆ ಹೊಂದಾಣಿಕೆಯಿರಂವಿಕೆ; P ಈ ಹೊಂದಾಣಿಕೆಯನ್ನು ಗೊತ್ತುಪಡಿಸಲು ಜ್ಯೋತಿಶ್ಶಾಸ್ತ್ರದಲ್ಲಿ ಹನ್ನೆರಡು ಕೂಟಗಳನ್ನು ಹೇಳಿ ಮೂವತ್ತಾರು ಗುಣಗಳನ್ನು ಕಲ್ಪಿಸಿದ್ದಾರೆ. ನಿರ್ದಿಷ್ಟವಾದ ಗಣನೆಯಿಂದ ನಕ್ಷತ್ರಾನುಕೂಲವನ್ನು ಜೋಯಿಸರು ಗೊತ್ತುಪಡಿಸುತ್ತಾರೆ : ಮದುವೆಗೆ ನಕ್ಷತ್ರಾನುಕೂಲ ಕೂಡಿ ಬರಬೇಕು (ರೂಢಿ). [ ನಕ್ಷತ್ರ$_1$ + ಅನುಕೂಲ ]

**ನಕ್ಷತ್ರಿಕ** 'ನಕ್ಷತ್ರ$_2$' ನೋ.

**ನಕ್ಷತ್ರೀಕ** 'ನಕ್ಷತ್ರ$_2$' ನೋ.

**ನಕ್ಷತ್ರೇಶ** (ನಾ). = ನಕ್ಷತ್ರಾಧಿಪ : "ಹಿಮಾಂಶುಃ . . . ನಕ್ಷತ್ರೇಶಃ, ಕ್ಷಪಾಕರಃ–೨೦ ಚಂದ್ರನ ಹೆಸರುಗಳು" (ಸಿದ್ಧಾಂತಿ. ೨೯). [ನಕ್ಷತ್ರ$_1$ + ಈಶ]

**ನಕ್ಷತ್ರೇಷ್ಟಿ** (ನಾ). ಒಂದು ಬಗೆಯ ಯಾಗ,–ಯಜ್ಞ : ರಾಜಸೂಯ ಅಶ್ವಮೇಧಾದಿಗಳಂ ಆಯುಷ್ಯೋಮೇಷ್ಟಿ ಕುಂಡಲೇಷ್ಟಿ ಪುತ್ರಕಾಮೇಷ್ಟಿ ನಕ್ಷತ್ರೇಷ್ಟ್ಯಾದಿಗಳಂ ಯಥಾಲಾಭವಾಗಿ ಮಾಳ್ಪಲ್ಲಿ (ವಿವೇಕ. ೦೩೪) ; ನಕ್ಷತ್ರೇಷ್ಟಿವಿಧಿಯಲ್ಲಿ ಯಾವ ಅಗ್ನಿಯು ಒಪ್ಪಿಸಿದನೋ ಮತ್ತು ಯಾವ ಅಗ್ನಿಗೆ ಒಪ್ಪಿಸಿದನೋ ಅವರಿಬ್ಬರಿಗೂ ಸಮಾನ ನಾಮ ರೂಪಗಳನ್ನೇ ಹೇಳಿರುತ್ತದೆ (ಬ್ರಹ್ಮಭಾ. ೪೮೮). [ ನಕ್ಷತ್ರ$_1$ + ಇಷ್ಟಿ ]

**ನಕ್ಷತ್ರೋದಯ** (ನಾ). ನಕ್ಷತ್ರವು ಕಾಣಿಸಿಕೊಳ್ಳುವುದು : ತ್ವದ್ವಚನಮಹೋದಧಿಯೊಳ್ ಕಿಱುದನಱಿವುದಂ ನುಡಿಮೆಂ ಚಂದ್ರೋದಯದ ಕೆಲದ ನಕ್ಷತ್ರೋದಯಮೆಸೆಯದವೊಲೆನ್ನ ನುಡಿಯೆಸೆದಪುದೇ (ಶಾಂತಿಪು. ೨-೩೭).

[ ನಕ್ಷತ್ರ$_1$ + ಉದಯ ]

**ನಕ್ಷತ್ರೋಪಜೀವಿ** (ನಾ). ನಕ್ಷತ್ರಗಳ ಬಗೆಗಿರುವ ತಿಳಿವಳಿಕೆಯಿಂದ ಜೀವನ ಸಾಗಿಸುವವನು; ಜ್ಯೋತಿಷಿ: ನಕ್ಷತ್ರೋಪಜೀವಿಗಳಾಗಿಯುಂ ಗ್ರಾಮಪುರೋಹಿತರಾಗಿಯುಂ . . . ವರ್ತಿಸುವಂಥಾ ಪಾರ್ವರೆಲ್ಲರುಂ ಚಂಡಾಲರಿಗೆ ಸಮಾನರಾಗಿರ್ಪರು (ಭಾರಶಾಂ. ೭೮-೫೦೩).

[ ಸಂ. ನಕ್ಷತ್ರೋಪಜೀವಿನ್ ]

**ನಕ್ಷುದ್ರ** (ನಾ). ಚಿಕ್ಕಮೂಗುಳ್ಳವನು: "ನಕ್ಷುದ್ರನೆಂಬವಂ ಚಿಕ್ಕಮೂಗಿನವಂ" (ಹಲಾಯು. ೯೯-೪೫೩). [ ಸಂ. ]

**ನಕ್ಷೆ, ನಕಾಶ, ನಕಾಶೆ, ನಕಾಸು, ನಕಾಸೆ** (ನಾ). ೧. (ಭೂಮಿಯ) ಸ್ಥಾನ, ಅಳತೆ, ಆಕಾರ, ಪ್ರಮಾಣಗಳನ್ನು ಗುರುತಿಸಿದ ರೇಖಾಚಿತ್ರ; ಭೂಪಟ: ಓದುವುದಕ್ಕೆ ಅನುಕೂಲವಾಗಿರುವ ಹಾಗೆ ನಕ್ಷೆಯ ಕಾಗದವನ್ನು ಕೈಲಿ ಹಿಡಿದು . . . ತಿಳಿಯತಕ್ಕದ್ದು (ಭೂಮಿಶ. ೧೩); ನಕ್ಷೆಗೂ ಭೂಮಿಯ ಆಕೃತಿಗೂ ವ್ಯತ್ಯಾಸವಿರಬಾರದು. ನಕ್ಷೆಯೆನಲಾಗಿ ಭೂಮಿಯ ಸ್ಥಿತಿಯನ್ನು ಕಾಗದದಲ್ಲಿ ತೋರಿಸುವಿಕೆಗೆ ಹೆಸರು. ಇದು ವಿಸ್ತಾರವಾದ ಭೂಪ್ರದೇಶವನ್ನು ಸ್ವಲ್ಪವಾದ ಕಾಗದದಲ್ಲಿ ಅಡಗಿಸಲ್ಪಡುವುದು (ಭೂಮಿಶ. ೩೯); ನಿಮಗೆ ಕೊಟ್ಟಿರುವ ನಕ್ಷೆಯಲ್ಲಿ ಭಾರತದ ನದಿಗಳನ್ನು ಗುರುತು ಮಾಡಿ (ರೂಢಿ). ೨. ಕಟ್ಟಡದ ಸ್ಥಾನ, ಅಳತೆ, ಆಕಾರ ಮೊದಲಾದುವನ್ನು ಸೂಚಿಸುವ ರೇಖಾಚಿತ್ರ: ನಕ್ಷೆಯ ಕಾಗದದ ಮೇಲೆ ಮನೆ ಬೆಳೆಯುತ್ತ ಬಂದ ಹಾಗೆಲ್ಲಾ ಬ್ಲಾಂಡಿಂಗ್ಸರು ಅದನ್ನು ನೋಡಿ ಹಿಗ್ಗಿದ್ದೂ ಹಿಗ್ಗಿದ್ದೇ (ಯೋಧಪು. ೨೯). ೩. (ಆಕಾರದ) ವಿವರಗಳನ್ನೊಳಗೊಂಡ ಸ್ವರೂಪ; ನೀಲಿನಕಾಶೆ: ಪೂರ್ವದ್ರಾವಿಡ ಧ್ವನಿಮಾಗಳು ಇಂದಿನ ದ್ರಾವಿಡಭಾಷೆಗಳಲ್ಲಿ ಇರುವ ಕ್ರಮವನ್ನು ಮುಂದೆ ಪಟ್ಟಿಮಾಡಿ ನಕ್ಷೆಯಂತೆ ಸಿದ್ಧಗೊಳಿಸಿ ಕೊಟ್ಟಿದೆ (ದ್ರಾವಿವಿ. ೩೦೩). ೪. ಚಿತ್ರ; ಆಕೃತಿ: ಶಾಸನದ ಮೇಲ್ಗಡೆಯಲ್ಲಿ ಸುರುಳಿ ಹಾಕಿ ಕೂತು ಹೆಡೆಯನ್ನು ಬಿಚ್ಚಿದ ಹಾವಿನ ನಕ್ಷೆಯು ಇದೆ (ತುಳುನಾ. ೬೬). **ನಕಾಶ**: ೧. ನಾನು ಆ ಪ್ರದೇಶದ ನಕಾಶವನ್ನು ಮಾಡಿಟ್ಟುಕೊಂಡಿದ್ದೇನೆ (ತೋಳಮು. ೨೬೩); ಈ ಹೋಟೆಲ್ಲಿನ ಸ್ಥಾನ ಲಂಡನ್ನಿನ ನಕಾಶದಲ್ಲಿ ಬಲು ಪ್ರಾಮುಖ್ಯಕವಾದುದು (ಸಮುಜೀ. ೬೬೮). ೩. ಧೂಳಿ ಜಾಡಿಸಿ ಸುರುಳಿ ಬಿಚ್ಚಿದ ನಕಾಶದಲಿ ಮೂಡಿತಿರಿ ಹೊಸಬಾಳ ಸಂಚಿಕೆಯನು (ನೆಲಮು. ೨೦-೧೫); ಮೂಲಲೇಖ ಯಾವ ಲಿಪಿಯಲ್ಲಿರುವುದೊ ಆ ಲಿಪಿಯ ನಕಾಶವನ್ನು ಎದುರಿಗಿಟ್ಟುಕೊಂಡೊಡನೆ ಆ ಲೇಖದ ರಹಸ್ಯವೆಲ್ಲ ಬಯಲಾಗುವಂತಿತ್ತು. ಆ ನಕಾಶದಿಂದ (ರತ್ನಗೋ. ೧೦). **ನಕಾಶೆ**: ೧. ಎರ್ಯಾಟಸ್ಥನೀಸ್ . . . ಭೂಮಿಯ ಸುತ್ತಳತೆಯನ್ನು ಲೆಕ್ಕಹಾಕಿ ಅಕ್ಷಾಂಶ ರೇಖಾಂಶಗಳನ್ನು ನಕಾಶೆಯ ಮೇಲೆ ಗುರುತು ಮಾಡಿದವನು (ಶಿಲ್ಪನಾ. ೪೯). ೩. ಸುಬೇದಾರರು ನಕಾಶೆಯನ್ನು ನೋಡುತ್ತ . . . ಒಂದು ಕೊನೆಯಲ್ಲಿ ತಮ್ಮ ರುಜುವನ್ನು ಮಾಡಿದರು (ಸಾವಿತ್ರಿ. ೬೦); ಪುಟವಿಂಗಡಣೆಗೆ ಆರಂಭಿಸುವುದಕ್ಕೆ ಮೊದಲು . . . ಪುಟಗಳ ನಕಾಶೆಯೊಂದನ್ನು ತಯಾರಿಸಿ, ಅದನ್ನು ಅನುಸರಿಸುವುದು ಕೆಲಸವನ್ನು ತ್ವರಿತಗೊಳಿಸುತ್ತದೆ (ಮುದ್ರಕ. ೩೫); ಪಟೇಲರು ಪೇಟ ಸುತ್ತಿ . . . ಕೈಯಲ್ಲಿ ನಕಾಶೆಯ ಕೊಳವೆ ಹಿಡಿದರು (ನನ್ನೂರು. ೧೯೭). ೫. (ಕಲ್ಲು, ದಂತ, ಮರ, ಲೋಹ ಮೊದಲಾದುವುಗಳ ಮೇಲೆ ಮಾಡುವ) ಕೆತ್ತನೆಯ ಕೆಲಸ,–ಕಂಸುರಿಗೆಲಸ: ಆ ದ್ವಾರವು ಬೆಳ್ಳಿಯ ನಕಾಶೆಯ ಕೆಲಸದಿಂದ ಚಿತ್ರಿತವಾಗಿದ್ದಿತು (ಶ್ರೀರಾಯ. ೪೪). **ನಕಾಸು**: ೫. ತಂಬೂರಿ, ವೀಣೆಗಳಿಗೆ ದಂತದ ಚಿನ್ನ ಬೆಳ್ಳಿಗಳ ನಕಾಸಿನ 'ಕಂಗೂರಿ' ಕಟ್ಟಿರಬೇಕು (ಸಾಹಿಜೀ. ೧೦). **ನಕಾಸೆ**: ೨. ಇದು ಸದ್ಯದ ಕರಡು ನಕಾಸೆ ಮಾತ್ರ (ಸವತಿ. ೪೫). ೫. ಕಂಬಗಳು . . . ಒಂದರಂತೆ ಮತ್ತೊಂದು ಇರುವಂತೆ ಕಂಡರೂ ಇವುಗಳ ಮಾದರಿಯಲ್ಲಿಯೂ ನಕಾಸೆಯಲ್ಲಿಯೂ ಬೇಕಾದಷ್ಟು ವೈವಿಧ್ಯವಿರುತ್ತದೆ (ಮೈವಾಸ್ತು. ೪೦).

ನಕ್ಷೆ ತಯಾರಿಸು = ನಕ್ಷೆಯನ್ನು ಸಿದ್ಧಮಾಡು: ಮನಸ್ಸಿಗೆ ಒಪ್ಪುವಂತೆ ಅವರು ಮನೆಯ ನಕ್ಷೆ ತಯಾರಿಸಿದರು (ರೂಢಿ).

[ ← ಅರ. ನಕ್ಷಾಹ್; ಹಿಂ. ನಕ್ಷಾ, ನಕಾಶೀ, ನಕ್ಕಾಶೀ; ಮರಾ. ನಕಾಶಾ, ನಕಶೀ ]

**ನಖ** (ನಾ). ೧. ಉಗುರು: "ಪಾಣಿಜಂ ಕಾಮಾಂಕುಶಂ ನಖಮೆನಲ್ಕುಗುರು" (ಮಂಗರಾ. ೯೫-೮); ಕರತಲದೊಳೆಸೆವ ಮಣಿಬಂಧದೊಳಂಗುಲಿಯೊಳ್ ನಖದೊಳ್ ನರ್ತನವಿಲಾಸಮಂ ಮೆರೆದರಿಂದ್ರಸೌಂದರಿಯರ್ಕಳ್ (ಅಜಿಪು. ೫-೩೦); ಅಂಗದೊಳಗಣ ಸವಿ ಸಂಗದೊಳಗಣ ರುಚಿ ಅಂಗನೆಯ ನಖದೊಳಗೆ ಒಂದು ಮೂರುತಿಯಾಯಿತ್ತು . . . ಗುಹೇಶ್ವರನೆಂಬ ನಿಲವ ನಖದ ಮುಖ ನುಂಗಿತ್ತು (ಅವಚಂ. ೧೫೦-೬೯೩); ಮುಖ ಮುಕುರ ಕರತಳ ತಳಿರು ನಖ ಕುಸುಮ ತೊಡಿಗೆಗಳ ಮುತ್ತು ನನೆಯಕ್ಕೆ ಪುರ್ಬಿಕ್ಷುದಂಡ (ಹಡಕಾ. ೪-೭); ನಖದಿಂ ಕೆರಂಕುದುರಿಸುವ ಸುಖಮುಂ ಬಟಿಕೊ(ಲ್ಲ)ನುರಿವ ದುಃಖಮುಮೆಂತಂತಖಿಳವಿಷಯೋಪಭೋಗದ ಸುಖಲವಮನುದುಃಖಮನಘ ನೀನಱಿಯದುದೇ (ಪುಷ್ಪಪು. ೧೩-೬೮); ಕಳಲಿಯ ನಖದಲಿ ಚಿವುಟಲಹುದು ಮುಂದೆ ಳಳಿಗೆ ಕೂರುಗುರಿಗಂಜುವುದೇ (ಮೋಹತ. ೧೧-೧೩). 'ನಖಕ್ಷತ' ಪರಾ. ೨. ಪ್ರಾಣಿಗಳ ಮೊನೆಯುಗುರು; ಪಂಜ: ಆನೆ ಅಂಕುಶಕ್ಕಂಜುವುದೆ ಅಯ್ಯಾ ಮಾಣದೆ ಸಿಂಹದ ನಖವೆಂದು ಅಂಜುವುದಲ್ಲದೆ (ಬಸವ. ೭೩೬). ೩. ಗೊರಸು; ಖುರ. 'ನಖಪುಟ' ಪರಾ. ೪. ಒಂದು ಬಗೆಯ ಗಂಧದ್ರವ್ಯ: ನಖ (ನಖಲ)(ಮುಂಬಂವ್ಯಾ. ೧೬೨). ೫. ಒಂದು ಬಗೆಯ ಸಸ್ಯ: "ಶರಃ–ಬೆಲ್ಲವತ್ತ, ನಖ, ಲೊಕ್ಕಿ, ತಾಳಮರ" (ಓಷಧಿ. ೦೩೯). ೬. [ಗಣಿತ] ಇಪ್ಪತ್ತು ಎಂಬ ಸಂಖ್ಯೆಯ ಸಂಕೇತ: "ನಖಮದಿಪ್ಪತ್ತು" (ಮಂಗರಾ. ೧೧೪-೯).

ನಖಬಣ್ಣವ ಕಾಣು = ಖುತು ಮತಿ ಯಾಗು; ಬಹಿಷ್ಠೆಯಾಗು: ಭೀಷ್ಮಕರಾಯನಾತ್ಮಸಂಜಾತೆ ನಖಬಣ್ಣವ ಕಂಡು ನಾಲ್ದಿನಗಂಡು ವೈದಿಕದಲ್ಲಿ ಮಿಂದಳುತ್ಸವದಿ (ಮೋಹತ. ೪-೨೭). **ನಖಮಾಂಸಪ್ರೀತಿ** = ಉಗುರಿಗೂ ಮಾಂಸಕ್ಕೂ ಇರುವ ಸಂಬಂಧದಷ್ಟು ಹತ್ತಿರದ ಪ್ರೀತಿ, ಅನ್ಯೋನ್ಯತೆ: ಆತನೊಡವೋಯ್ತು ಪಗೆ ನಿಮಗಾತನಿನಗ್ಗಳದ ಮಗನೆನಾಂ ನಖಮಾಂಸಪ್ರೀತಿಯೊಳೆ ನೆಗಟ್ಟಿಂ (ಪಂಪಭಾ. ೧೪-೭); ಸುಖಸಂಕಥಾವಿನೋದದಿನಖಿಳಸುಖೋಪಭೋಗಮಂ ಭೋಗಿಸುತಂ ನಿಖಿಳಬಳ ಸುಬಳನೃಪತಿಗೆ ನಖಮಾಂಸಪ್ರೀತಿಯಿಂದೊಡಂಬಡೆ ನೆಗಟ್ದಂ (ಸುಕುಮಾ. ೩-೪೧). **ನಖಮಾಂಸಸ್ಥಿತಿ** = ನಖಮಾಂಸಪ್ರೀತಿ: ಪಜ್ರಾಯುಧಂಗಂ ಹಸನ್ಮುಖಿ ಲಕ್ಷ್ಮೀಮತಿಗಂ ಪುರಾತನಭವಸ್ನೇಹಕ್ಕೆ ಪುಣ್ಯಂ ಮಹಾಸಖಮಾಗುತ್ತಿರೆ ಬಂದು ಪುಟ್ಟಿ ಗುರುವುಂ ತಾನುಂ ಮನಂಗೊಂಡರಾ ನಖಮಾಂಸಸ್ಥಿತಿಯಪ್ಪ ಪತ್ತುಗೆಗಳಿಂ ಕ್ಷೇಮಂಕರಾಧೀಶನಂ (ಶಾಂತಿಪು. ೭-೧೨೦). [ ಸಂ. ]

**ನಖಂಪಚ** (ಗು). ೧. ಉಗುರುಬೆಚ್ಚಗಿರುವ. (ನಾ). ೨. ಉಗುರು ಬೆಚ್ಚಗಾದುದು: ಮದನದವಾಗ್ನಿತಪ್ತೆಯರ ಸುಯ್ಯ ನಖಂಪಚವಾಗಿ ಬರ್ಪ ತಣ್ಗದಿರನೆಲರ್ಚಿ (ಅನಂಪು. ೭-೮೧). [ ಸಂ. ]

**ನಖಕ್ಷತ** (ನಾ). [ಕಾಮಶಾ] ಉಗುರಿನಿಂದಾದ ಗೀರು,–ಗುರುತು; P "ನಖಕ್ಷತ –೮: ಆಚ್ಛುರಿತಕ, ಅರ್ಧಚಂದ್ರ, ಮಂಡಲ, ರೇಖಾ, ವ್ಯಾಘ್ರನಖ, ಮಯೂರಪದಕ, ಶಶಪ್ಲುತಕ, ಉತ್ಪಲಪತ್ರಕ(ಕಾಮ. ೪೪)" (ಶ್ರೀವತ್ಸ. ೩೩೮). ನಖಕ್ಷತದ ಎಂಟು ಬಗೆಗಳನ್ನು ಹೀಗೆ ವಿವರಿಸುತ್ತಾರೆ. ೧. ಆಚ್ಛುರಿತಕ = ಗುರುತಾದರೂ ನೋವಾಗದಂತೆ ಜಿಗುಟುವಿಕೆ. ೨. ಅರ್ಧಚಂದ್ರ = ಅರ್ಧಚಂದ್ರಾಕಾರದ ಗುರುತು ಬೀಳುವಂತೆ ಜಿಗುಟುವಿಕೆ. ೩. ಮಂಡಲ = ವೃತ್ತಾಕಾರದ ಗುರುತು ಬೀಳುವಂತೆ ಜಿಗುಟುವಿಕೆ. ೪. ರೇಖಾ = ಒಂದು ಗೆರೆಯಾಕಾರದಲ್ಲಿ

ಗುರುತು ಬೀಳುವಂತೆ ಜಿಗುಟುವಿಕೆ. ೫. ವ್ಯಾಘ್ರನಖ = ಹುಲಿಯ ಉಗುರಿನ ಆಕಾರದ ಗುರುತು ಬೀಳುವಂತೆ ಜಿಗುಟುವಿಕೆ. ೬. ಮಯೂರಪದಕ = ನವಿಲ ಕಾಲಿನ ಗುರುತಿನಂತೆ ಗುರುತು ಬೀಳುವ ಹಾಗೆ ಜಿಗುಟುವಿಕೆ. ೭. ಶಶಪ್ಲುತಕ = ಮೊಲದ ನೆಗೆತದಲ್ಲಿ ನೆಲದ ಮೇಲೆ ನಾಲ್ಕು ಕಾಲುಗಳ ಗುರುತು ಬೀಳುವಂತೆ ನಾಲ್ಕು ಕಡೆ ಗುರುತು ಬೀಳುವಂತೆ ಜಿಗುಟುವಿಕೆ. ೮. ಉತ್ಪಲಪತ್ರಕ = ಕಮಲದ ಎಲೆಯಾಕಾರದ ಗುರುತು ಮಾಡುವಿಕೆ. ಈ ಗುರುತುಗಳ ಬಗ್ಗೆ ವಾತ್ಸ್ಯಾಯನನ ಕಾಮಸೂತ್ರದಲ್ಲಿ ವಿವರಣೆಗಳು ಸಿಕ್ಕುತ್ತವೆ: ಹಾರಗಳನೌಕ್ತಿಕದಿಂ ನಖಕ್ಷತಯುತಂ ವಕ್ಷೋಜಯುಗ್ಮಂ ಮನಂಬುಗೆ ರಾಗಂ ಮಿಗೆ ಮೇಲುದಂ ಮೆಚ್ಚಿದು ನೋಟ್ಟಬ್ಬಾಕ್ಷಿ ಕಣ್ಗೊಳ್ಪಿದಳ್ (ಪುಷ್ಪಪು. ೫-೨೮) ; ತೊಡೆ ನಡು ಕಂಠತಟಂ ಬೆಂಗಡೆ ಹೃತ್ಕಟ ಕಕ್ಷಪಾರ್ಶ್ವ ಜಘನಂ ಗುಹ್ಯಂ ಪೆಡತಲೆ ಮೊಲೆ ಮುಂಗೈ ಪಣೆ ನಿಡುದೋಳ್ ಕರ ಪೃಷ್ಠಮಿವು ನಖಕ್ಷತದೆಡೆಗಳ್ (ಮನ್ಮವಿ. ೧೩-೪) ; ಇದು ನಖಕ್ಷತವ ನಿಡುವೆಡೆ ದಂತಹತಿಯ ನೆಲೆಯಿದುವೆ (ನವಮೋ. ೧೭-೮೩).

[ ನಖ + ಕ್ಷತ ]

**ನಖಗಂಡೆ** (ನಾ). = ನಖಕ್ಷತ : ಉಸುರನೊಳದೆಗೆವುತ್ತಾ ಬಾಗಿ ತೋಳ್ತೊಡೆಯ ನಖಗಂಡೆಗಳನೊರಸಿಕೊಳುತ (ಹಚಕಾ. ೪-೩೨). [ನಖ+ಗಂಡೆ]

**ನಖಘಾತ** (ನಾ). ೧. ಉಗುರಿನಿಂದ ಗಾಯಗೊಳಿಸುವಿಕೆ. ೨. = ನಖಕ್ಷತ: ಪುಲಿಯುಗುರೋಳಿ ವಕ್ರಗತಿ ಕೋಮಲವಪ್ರಘನತ್ರಿರೇಖೆ ಮಂಡಲಕ ಶಶಪ್ಲುತಾರ್ಧಶಶಿ ತದ್ಗ್ರಹಣಂ ಶಿಖಿಭೇಕಪಾದವುತ್ಪಲಸರಸೀಜಪುಷ್ಪಯುಗಳಾಕೃತಿಸಪ್ತಮಕಂ ದ್ವಿಸಪ್ತಕಾಖಿಲನಖಘಾತಮಿಂತು ಮೆಸರ್ವೆತ್ತುವು ಷೋಡಶರೂಪಭೇದದಿಂ (ಮನ್ಮವಿ. ೧೩-೩). [ ನಖ + ಘಾತ೪ ]

**ನಖದೀಧಿತಿ** (ನಾ). ಉಗುರಿನ ಹೊಳಪು,–ಕಾಂತಿ : ಬಿಳಿದು ಕರಿದೆಂಬಾಟು ವರ್ಣದ ಹೊಲಬು ಹೊದ್ದದ ಸೂರ್ಯಕೋಟಿಯ ಹೊಳಹು ನಖದೀಧಿತಿಯ (ಕುಮ್ಮಾಛೀ. ೩-೭೫). [ ನಖ + ದೀಧಿತಿ ]

**ನಖದೀಪ್ತಿ** (ನಾ). = ನಖದೀಧಿತಿ : ನಖದೀಪ್ತಿವಿಮುಹೇಂದುಮಯೂಖಮಾನತೋಪಾಸಕಪಾಣಿಪದ್ಮವನಮಂ ಮುಗಿಸುತ್ತಿರೆ (ಪುಷ್ಪಪು. ೧೩-೧೧೯).

[ ನಖ + ದೀಪ್ತಿ ]

**ನಖನಿಕರ** (ನಾ). = ನಖಪಂಕ್ತಿ : ಉರಿದವರಸನ ನಖನಿಕರ ಹೊಗೆವೆರಸಿ ಕೌರಿಡಲೋಡಿ ಹೊಕ್ಕರು ಸರವೃಕೋದರರಸುರರಿಪುವಿನ ಪಶ್ಚಿಮಾಂಗದಲಿ (ಕುಮ್ಮಾಗ. ೧೦-೭೭). [ ನಖ + ನಿಕರ$_1$ ]

**ನಖನಿಕಾಯ** (ನಾ). = ನಖಪಂಕ್ತಿ : ನಖನಿಕಾಯದಿನುಣ್ಮುವ ಕಾಂತಿಜಾಳಮಂಜರಿ ಲಲಿತಾಂಗುಳಿಪ್ರಕರದಿಂ ಪೊಣ್ಮುಪೊಣ್ಮುವ ವಾರಿಧಾರೆಯಂತಿರೆ (ಶಾಬಿಂಪೂ. ೭೫). [ ನಖ + ನಿಕಾಯ ]

**ನಖಪಂಕ್ತಿ** (ನಾ). ಉಗುರುಗಳ ಸಾಲು,–ಸಮೂಹ: ರಾಜಸದ ಸಂಜನಿತ ಕಾಮಸ ಬೀಜಕೇಷದ ವನಜಮುಖಿ ನೋಡಿದಳು ನಖಪಂಕ್ತಿಗಳನವನಿಪನ (ಕುಮ್ಮಾಗ. ೧೦-೬೬). [ ನಖ + ಪಂಕ್ತಿ ]

**ನಖಪಂಜರ** (ನಾ). = ನಖ ೨ : ಹುಲಿಯು . . . ತನ್ನ ನಖಪಂಜರದ ಒಂದೇ ಹೊಡೆತದಿಂದ ದೊಡ್ಡದೊಡ್ಡ ಮಿಕಗಳ ಹೊಟ್ಟೆಯನ್ನು ಹರಿಯುತ್ತದೆ (ಮುಂಬಯಿ. ೪-೩೬).

[ ನಖ + ಪಂಜರ$_2$ (< ಪಂಜಾ) ]

**ನಖಪುಟ** (ನಾ). ಗೊರಸು ; ಕೊಳಗು ; ಖುರ : ಅರುಣಾಕ್ಷಂ . . . ದೀರ್ಘವಾಲಂ ಕಠಿಣ ನಖ[ಪಾಠಾಂ. ಖುರ]ಪುಟಂ ರೇಣುಭಾಳಸ್ಥಳಂ ಕರ್ಬುರನಾದಂ ವೃತ್ತಕಾರಂ ಕುಸುಮಧವಳಮಂ ತೋಟಿ ಫೇನಂ ಕರಂ ಭೀಕರಮಾಗಲೊಪ್ಪುಗುಂ ಕಾನನದೊಳಿಭಸಮಾನಂ ಲುಲಾಯಪ್ರತಾನಂ (ಮಲ್ಲಕಾ. ೩-೦೭೯) ; (ದಕಕು. ೪-೩೯ ನೋ.). [ ನಖ + ಪುಟ$_3$ ]

**ನಖಪ್ರಹಾರ** (ನಾ). ಪಂಜದ ಹೊಡೆತ : ಉದಿತಕ್ರೂರನಖಪ್ರಹಾರಭರದಿಂದ್ಯದಾಟು ದಂಷ್ಟ್ರೋಗ್ರಪಾತದಿನೇಟಿಂಟು ಸುರುಳ್ದುರುಳ್ವನೆಗಮೇಣ ಶ್ರೇಣಿಯಂ ಪಾಯ್ದು ಕೊಂದುದನೇವೇಟ್ಬುದೊ ಶತ್ರುಸಂಹರಣಕೇಳೀ ಶೀಘ್ರಮಂ ವ್ಯಾಘ್ರಮಂ (ಪುಷ್ಪಪು. ೫-೭೧).

[ ನಖ + ಪ್ರಹಾರ ]

**ನಖಭಾಗ** (ನಾ). ೧. ಉಗುರಿನ ಭಾಗ. ೨. ಆಕಾಶವಲ್ಲದುದು. ೧, ೨ : ಅವುವು ಕತ್ತಲೆವೊತ್ತವನೋಡಿಸಿ ಖಭಾಗಶೋಭೆಯ ಪಸರಿಸುತ ನಖಭಾಗದಿ ಮೇಣತ್ತಲು ತೋರುತ ಪದುಮದ ಸಿರಿಯನು ದೊರೆಕೊಳುತ (ಧ್ವನ್ಯಾಲೋ. ೯೭). [ ಸಂ. (ನಖ + ಭಾಗ ; ನ + ಖ + ಭಾಗ) ]

**ನಖಮಯೂಖ** (ನಾ). = ನಖದೀಧಿತಿ : ಶ್ರೀಪತಿಗೆ ಯುದ್ಧಮಲ್ಲ ಮಾಹೀಪತಿಗೆ ನೆಗಟ್ತೆ ಪುಟ್ಟೆ ಪುಟ್ಟಿದನಖಿಳಕ್ಷ್ಮಾಪಾಲಮೌಳಿಮಣಿಕಿರಣಾವಳಿತನಖಮಯೂಖ ರಂಜಿತಚರಣಂ (ಪಂಪಭಾ. ೧-೧೦೪) ; ಸುರಗಣಸ್ತೋಮಮಣಿಮಕುಟಮಂಡಿತ ನಖಮಯೂಖಪದತಾಮರಸಯುಗಳ ಪರಮಾರಾಧ್ಯ ಮರುಳುಸಿದ್ಧೇಶ ಸಲಹು (ಗುಭಷ. ೧-೧). [ ನಖ + ಮಯೂಖ ]

**ನಖಮರೀಚಿ** (ನಾ). = ನಖದೀಧಿತಿ : ಕೃತಕಭೀಮನ ಕೊಂದು ಮುಳುಗಿತು ಕ್ಷಿತಿಪತಿಯ ರೋಷಾಗ್ನಿಯಾತನ ಸತಿಯ ಖತಿ ಮಗ್ಗಿತು ಮಹೀಶನ ನಖಮರೀಚಿಯಲಿ (ಕುಮ್ಮಾಗ. ೧೧-೬೮). [ ನಖ + ಮರೀಚಿ ]

**ನಖಮಿತ್ತೈಲ್ಲ** (?) (ನಾ). ಒಂದು ಬಗೆಯ ಖಾದ್ಯ (?): ತಟಗು ಚಕ್ಕುಲಿ ಹೂಸಣಂಬ ಹೂರಿಗೆಗಳಂ ಅಚುಬೋನ ಫೇಣಿ ಗಾರಿಗೆ ಇಡ್ಡಲಿಗೆ ಅವುಗು ತಿಟಿಸೇವಗೆಯನು ಸರವಳಿಗೆ ಪರಡಿಗೆಯ ನಖಮಿತ್ತೈಲ್ಲ[ಪಾಠಾಂ. ನಖಿಮಲ್ಲತ್ತಿ, ನಖವಿಮುಲ್ಲಕ್ಕಿ] ಅಡ್ಡುಗೆಯನು . . . ಗಡಣಿಸುತ್ತ ಗುಡ್ಡರುಗಳಿಗೆ (ಸಿದ್ಧರಾ. ೮-೮೫). [ ? ]

**ನಖರ**$_1$ 'ನಕರ' ನೋ.

**ನಖರ**$_2$ (ನಾ). ೧. ಉಗುರು ; ನಖ : "ಕಾಮಾಂಕುಶಾಃ, ಕರರುಹಾಃ, (ಪುನರ್ನವಾಃ) ಪಾಣಿಜಾಃ, ನಖಾಃ, ನಖರಾಃ – ಈ ೫ (೬ ?) ಉಗುರ್" (ಹಲಾಯು. ೪೪–೩೫೭) ; ಭುಜಯುಗವಿಶಾಲವ ಕರತಲರಸಾಲವ ನಖರ ಮಲ್ಲಿಕಾಲವ (ಕಳವಿ. II, ೧೮೨). ೨. ಸಿಂಹ, ಹುಲಿ ಮೊದಲಾದ ಪ್ರಾಣಿಗಳ ಮೊನಚಾದ ಉಗುರು,–ಪಂಜ : ಮೃಗರಾಜನ[ಪಾಠಾಂ. ಕ, ವ]ಖರ ಬಾಣಾಳಿಗಳಿಂ ತೆಗೆನೆಟ್ಟು ಶಲ್ಯನುಟಿದಿಸೆ ಬಿದುಪಂ ಮೃಗರಾಜಂಗಳೆ ಪೊಟ್ಟುವೊಲಗಲ್ದಿನಂ ಪೊಟ್ಟುವುಗ್ರಬಾಣಾವಳಿಗಳ್ (ಪಂಪಭಾ. ೧೦-೧೦೯) ; ಕಿರಣಂ ತೀಕ್ಷ್ಣಕರಂಗೆ ತೀಕ್ಷ್ಣನಖರಂ ಸಿಂಗಕ್ಕೆ ವಜ್ರಾಯುಧಂ ಪುರುಹೂತಂಗೆ (ಪಂರಾಮಾ. ೧೧-೩೫). [ ಸಂ. ]

**ನಖರಂಜನಿ** (ನಾ). ಉಗುರು ತೆಗೆಯುವ ಸಾಧನ ; ಚಾಣ : ಶಿವನಂ ಪ್ರಮಥರಂ ತನ್ನ ಗುರುಪದಾನಂದದಿಂ ನುತಿಗೆಯ್ದು ವಂದಿಸುತೆ ಮನದೊಳಗೆ ಮುಂದಿರ್ದ ಯಾಮಿಕರ ಕರದೊಳೆ ಸೇರಿರ್ದ ನಖರಂಜನಿಯ ಮೇಲೆ ಮುದದಿಂ ಚೆಂದಮಪ್ಪಂತೆ ಕಳಿಯುತೆ ಮೂಲಮಂತ್ರದಿಂದೊಂದಿ ಮಂತ್ರಿಸೆ ಪಟ್ಟ ಭೂತಿಯಿಂ ಬಳಿಕ ತಟಿಸುಂದ ತನ್ನಖರಂಜನಿಯನೊಸೆದು ಕಳಕೊಂಡು ಲಿಂಗಜಲದಿಂದ ಕರ್ಚಿ (ಅರಾಚ. ೪-೨-೩೨).

[ < ಸಂ. ನಖರಂಜನೀ ]

**ನಖರಚ್ಛಾಯೆ** (ನಾ). = ನಖದೀಧಿತಿ: ಚತುರಂತಕ್ಷಿತಿಭಾರಮಂ ಕಳೆದುಲಾಂ ಸಾರ್ದಿರ್ದೊಡಂ ರಾಜ್ಯಮೋಹಿತನಾಗಿರ್ದಪನಿಂದುಮೆಂದು ನಖರಚ್ಛಾಯಾಕದಂಬಂಗಳಿಂ ಸುತಬಾಹಾಪರಿಘಂ ಸಮಂತು ನಗುವಂತಿರ್ದಪ್ಪುದು (ಜಂದ್ರಪು. ೪-೦೩). [ ನಖರ$_2$ + ಛಾಯೆ ]

**ನಖರಾ** (ನಾ). ಬೆಡಗು ; ಒಯ್ಯಾರ ; ಬಿನ್ನಾಣ ; ಒನಪು : ಅವಳು ನಖರಾ ಮಾಡುವ ಸುಂದರಯುವತಿಯಾಗಿದ್ದಳು (ಇತಿಶ್ರೀ. ೦೫೯).

[ ← ಅರ. ಫಾರ. ನಖರಹ್; ಹಿಂ. ಮರಾ. ನಖರಾ. ]

**ನಖರಾಯುಧ** (ನಾ). ೧. ಮೊನಚಾದ ಉಗುರುಗಳನ್ನು ಆಯುಧವಾಗಿ ಉಳ್ಳುದು; ಸಿಂಹ: "ಹರಿಃ, ಮೃಗಪತಿಃ . . . ನಖರಾಯುಧಃ, ಮೃಗರಿಪುಃ, ಸಿಂಹಃ, ಕಂಠೀರವಃ – ಈ ೯ ಸಿಂಹದ ಪೆಸರ್" (ಹಲಾಯು. ೩೬-೬೦); ಕರಿ ನಖರಾಯುಧಂ ಮುಳಿಯದನ್ನೆಗಮುಗ್ರನಿಶಾಟರಚ್ಯುತಂ ಪರಿಯಿಡದನ್ನೆಗಂ . . . ಮರ್ದಿಸಿದಂ ವೃಷನಂ ಜನಾರ್ದನಂ (ಜಗವಿ. ೫-೩೮). ೨. ಹುಲಿ. ೩. ಹಂಜ. [ ನಖರ$_2$ + ಆಯುಧ ]

**ನಖರುಚಿ** (ನಾ). = ನಖದೀಧಿತಿ: ಮಣಾದೆ ಪಾದವೆ ತೊಟ್ಟಲ್ ರೇಣುವೆ ಬಾಯ್ವೊಣ್ಣ ನಖರುಚಿಯೆ ಮೊಲೆವಾಲ್ ಮತ್ಪ್ರಾಣವೆ ನಿಮ್ಮಯ ಕರುಣಂ ಕ್ಷೋಣಿಯೊಳೆನಗಾಗೆ ಬಸವನಾದೆಂ ಬಳಿಕಂ (ಬಸರ. ೮-೬ ಪದ್ಯ); ನೆಱೆವೆಱೆ ಮೊಗದ ಮೃಗಾಕ್ಷಿಯ ಮಿಱುಗುವ ನಖರುಚಿಗೆ ಸೋಲ್ತು (ರಾಜಶೇ. ೭-೪೪).
[ ನಖ + ರುಚಿ ]

**ನಖರೇಖೆ** (ನಾ). = ನಖಕ್ಷತ: ಈ ನಿಲವೆ ಹರನನೊಲಿಸುವ ರೂಪು ಶಿವಶಿವನೆ ಪೊರೆದರಿಸಿನದ ಕಂಪು ನಖರೇಖೆ ನಗೆಮೊಗಂ ಹರಪೂಜೆಯೇಕಿದೇಕ [ ಕ್ಕ ] ಟಾ ಸೋಜಿಗಂ ಎನುತೆ ಕುಳ್ಳಿರ್ದು (ನಂಬಿರ. ೧೭-೯); ಚಂದ್ರಮುಖಿಗ ಚಕ್ರಿ ನಖರೇಖೆಯೆಂಬರ್ಧಚಂದ್ರಾಭರಣವ ತೊಡಿಸಿ (ಭರಜ. ೪೩-೧೦).
[ ನಖ + ರೇಖೆ ]

**ನಖಲು** (ನಾ). ಜೀರ್ಣವಾದುದು; ಖಿಲವಾದುದು: ಆ ಮಠ ನಖಲಾಗಿ ಅರಮನೇ ಸಿಸ್ತಿಗೆ ಕೂಡಿಬರುತಿದ್ದಲ್ಲಿ ಯಿಾ ಮಠಧರ್ಮಕೆ ಬಿಟ್ಟದು (ಎಕ. VIII, ತೀರ್ಥಹ. ೯೬-೧೫; 1664). [ ? ]

**ನಖವ್ರಣ** (ನಾ). = ನಖಕ್ಷತ: ತೋಳ ನಖವ್ರಣಕೆಱಗಿದ ಬಾಳೆಗಳಂ ನೋಟ್ಟು ಬಾಳೆ ಕಣ್ಮೇನೆಂಬಾಳೋಳಮನೊಡರಿಸೆ ಸಲೆ ನೃಪಮಾಳಿಗೆ ಪಡೆದಳ್ ಮೃಗಾಕ್ಷಿ ಪರಿಸಂಭ್ರಮಮಂ (ಶಾಂತಿಪು. ೮-೪೩); ಮೃದುತರ ಕಲುಷಾರ್ಜನವರ್ಣನಂ ನಖವ್ರಣಮೆಸೆಗುಂ (ಮನ್ಮವಿ. ೦೩-೨).
[ ನಖ + ವ್ರಣ ]

**ನಖಶಿಖಾಂತ** (ಅ). ಕಾಲುಗುರಿನಿಂದ ತಲೆಯ ಮುಡಿಯವರೆಗೆ; ಆಮೂಲಾಗ್ರ; ಮೈಯೆಲ್ಲ; ಪೂರ್ಣವಾಗಿ: ತುಂಗಕ್ಕ ಆದಾಗಲೇ ನಖಶಿಖಾಂತ ಹೊತ್ತಿಕೊಂಡಿದ್ದಳು (ಮೂರುದಾ. ೧೪೫); ರತ್ನ ಬಾಗಿಲಲ್ಲಿ ನಿಂತಿದ್ದ ಸರಸಮ್ಮನನ್ನು ಒಮ್ಮೆ ನಖಶಿಖಾಂತ ನೋಡಿದಳು (ಕುಸುಸಂ. ೩೯).
[ <ಸಂ. ನಖಶಿಖಾಂತಂ ]

**ನಖಹತಿ** (ನಾ). ೧. = ನಖಕ್ಷತ: ಕಳಂಬೊಕ್ಕು ನಿರಿಸುಗೆಯ್ದು ನಖಹತಿ ದಶನಹತಿ ಪಾದಪಾತಂ ಮುಷ್ಟಿಪಾತಮೆಂಬ ದೋಷಂಗಳಂ ಪೊರ್ದದ ನಾಲ್ಕುಂ ಸ್ಥಾನದೊಳಂ . . . ನೆಱೆದು (ಚಂದ್ರಪು. ೫-೭೭ವ). ೨. ಪಂಜದ ಹೊಡೆತ: ನರಹರಿಯು ನಖಹತಿಗೆ ಬಿಕ್ಕನೆ ಬಿರಿದ ನೆತ್ತಿಯ ಭಟರು (ಕಾಶಿರಾ. ೨೦-೦೬). [ ನಖ + ಹತಿ ]

**ನಖಾಂಕ** (ನಾ). ಉಗುರಿನಿಂದಾದ ಗುರುತು,–ಚಿಹ್ನೆ: ವಿಲಾಸದೆ ನಿಂದು ನಿರ್ಜರಸ್ತ್ರೀ ಪದೆದೊತ್ತಿ ಮೇಲುದನಭೀಕ್ಷಿಪಳುತ್ಕುಚದೊಳ್ ನಖಾಂಕಮಂ (ರಾಜಶೇ. ೩-೮೯). [ ನಖ + ಅಂಕ$_2$ ]

**ನಖಾಂಶು** (ನಾ). ಉಗುರಿನ ಕಾಂತಿ: ರಂಜಿಸುವ ವಸಂತಲಕ್ಷ್ಮಿಯ ಕಠಾಗ್ರದೊಳಿಕ್ಕಿ ನಖಾಂಶುಜಾಲಮಂ ಪಸರಿಸುತಿರ್ಪ ತನ್ನ ಕರಮಂ ವನದೇವತೆ ಪಾರಿಜಾತದೊಂದೆಸೆವಲಗೊಂಚಲಂ ಪಿಡಿದು ನಂದನದೊಳ್ ಬರುತೊರ್ವಳೊಟ್ಟಿದಳ್ (ಕಾದಂಪೂ. ೭೬೭). [ ನಖ + ಅಂಶು ]

**ನಖಾಕ್ಷಿಪ್ತ** (ಗು). ಉಗುರಿನಿಂದ ಚಿಮ್ಮಿದ,–ಮಿಡಿದ: ಬಾಲಿಕೆ ಗದ್ಗದ ಕಂಠೆ ವಾಮಕರಪಲ್ಲವಾಂಗುಳಿನಖಾಕ್ಷಿಪ್ತಾಶ್ರುಸ್ರುವೆ . . . ಬಿನ್ನಪಿಕುಂ (ಶಾಂತಿಪು. ೬-೬೩ವ). [ ನಖ + ಆಕ್ಷಿಪ್ತ ]

**ನಖಾಗ್ರ** (ನಾ). ಉಗುರಿನ ತುದಿ,–ಮೊನೆ: ದೇವರ್ಕಳ್ ಸನತ್ಕುಮಾರ ಚಕ್ರವರ್ತಿಯ ರೂಪಂ ವಾಳಾಗ್ರದಿಂ ತೊಟ್ಟು ನಖಾಗ್ರಂಬರೆಗಂ ನಖಾಗ್ರದಿಂ ತೊಟ್ಟು ವಾಳಾಗ್ರಂಬರೆಗಂ ಏಱೆಯುಮಿೞಿಯೆಯುಂ ನೀಡುಂ ಭಾವಿಸಿ ನೋಡಿ ಚೋದ್ಯಂಬಟ್ಟು (ವಡ್ಡಾರಾ. ೬೭-೨).
[ ನಖ + ಅಗ್ರ$_1$ ]

**ನಖಾನಖಿ** (ನಾ). ಪರಸ್ಪರ ಉಗುರುಗಳಿಂದ ಮಾಡುವ ಕಾದಾಟ,–ಜಗಳ: ಮಲ್ಲಾಮಲ್ಲಿ ನಖಾನಖಿಗಳ ಮಾಡಿದಲ್ಲದಿವಳು ಬಿಡಳೆನ್ನ (ಕುರಾಸಾಂ. ೩೨-೧೨೧); ಸ್ಮರಸಂಗ್ರಾಮದ ಭೋಗರಾಜರೆದಟಿಂ . . . ತದ್ರಾಜಮಂದಿರಮಂ ಘಾತಿಸಿ ರಾಜಮಂಡಲದ ಭಂಡಾರಂಗಳಂ ಸೂಱೆಗೆಯ್ದುರೆಬರ್ ಕಾದೆ ನಖಾನಖಿ ಪ್ರಬಳದಂತಾದಂತಿಯಿಂ ಕಾದಿದರ್ (ಹಮ್ಮೀರ. ೨-೮೭); ಒರ್ವರೊಳೊರ್ವರ್ ಮುಷ್ಟಾಮುಷ್ಟಿ ರಣಂ ನೆಗಳ್ದುದು ನಖಾನಖೀಸ್ಫುಟಯುದ್ಧಂ (ರಾಜಶೇ. ೬-೫೫). 'ಹಣಾಹಣಿ' ಪರಾ. [ ಸಂ. ]

**ನಖಾಯುಧ** (ನಾ). ಉಗುರೇ ಆಯುಧವಾಗುಳ್ಳುದು; ಸಿಂಹ: "ಹರಿ ಮೃಗೇಂದ್ರಂ ಪಂಚವಕ್ತ್ರಂ ನಖಾಯುಧಂ . . . ಕೇಸರಿಯೆನಲ್ ಸಿಂಹಮೆನಿಸಿಕ್ಕು" (ಮಂಗರಾ. ೪೭-೭). [ ನಖ + ಆಯುಧ ]

**ನಖಾಯುಧವೈರಿ** (ನಾ). ಸಿಂಹದ ವೈರಿ; ಆನೆ: ವಾರಣಾಗ್ರಣಿಯುಂ ಮಹಾಸ್ತಂಬೇರಮೋತ್ತಮಂನಂ ನಖಾಯುಧವೈರಿಯುಂ ದುರ್ಧಾರಕುಂಜರ ರಾಜನಂ ತನ್ನಿ (ಬಸಪು. ೫೭-೩೨). [ ನಖಾಯುಧ + ವೈರಿ ]

**ನಖಾವನೇಜನವಾರಿ** (ನಾ). ಕಾಲಿಂತೊಳೆದ ನೀರು; ಪಾದತೀರ್ಥ: ಆವನೊಬ್ಬನ ವಾಮಪಾದನಖಾವನೇಜನವಾರಿಯುನು ಭಸ್ಮಾವಶೇಷದ ಲೊಂದಿ ಸಂದರು ಸಾಧು ಸದ್ಗತಿಗೆ (ನಿಭಾಗ. ೧-೮-೩೨); ಆವನೊಬ್ಬನ ವಾಮಚರಣನಖಾವನೇಜನವಾರಿಯನು ಗೌರೀವರನು ನೆಱೆ ಧರಿಸಿ ಪಾವನನಾದನೀ ಜಗಕೆ (ನಿಭಾಗ. ೧೦-೭೪-೦೪). [ ಸಂ. ]

**ನಖಾವಳಿ** (ನಾ). = ನಖಪಂಕ್ತಿ: ತೊಳಗುವ ತಿಳಿವೆಳಗಿಂ ಶಶಿಕಳೆಯನಿೞಿಕೆಗೈದ ಭಕ್ತರೆಲ್ಲರೆ ಮಿಡುಕಂ ಕಳೆಯಲ್ ಸಲೆ ನೆಱೆವ ನಖಾವಳಿಯೆಮ್ಮಂ ಪೊರೆಗುದಾತ್ತನರಕೇಸರಿಯಾ (ಧ್ವನ್ಯಾಲೋ. ೩).
[ ನಖ + ಆವಳಿ$_1$ (= ಆವಲಿ) ]

**ನಗ$_1$** (ನಾ). ೧. ಒಡವೆ; ಆಭರಣ: ಹೊಸದಾಗಿ ಒಂದು ಬೆಳ್ಳಿ ಬಂಗಾರದ ಅಂಗಡಿಯನ್ನು ಆರಂಭಿಸಲು ಸಾಕಾಗುವಷ್ಟು ನಗಗಳನ್ನು ಹೇರಿಕೊಂಡಿದ್ದಾಳೆ (ನಾಡಿಗೇ. ೨೮೫); ಮೈತುಂಬ ನಗ ಹಾಕಿಕೊಳ್ಳಬೇಕು (ಕಾಮಿಕಾಂ. ೬೬); ಅವಳ ಮೈಮೇಲೆ ಸಾವಿರಾರು ರೂಪಾಯಿ ಬೆಲೆಬಾಳುವ ನಗಗಳಿದ್ದವು (ಗರುದಾ. ೨೫); ಒಂದು ಮಹಾಸಂಕಟ ಮಾತ್ರ ಅವನನ್ನು ಬಿಟ್ಟಿರಲಿಲ್ಲ: ತನ್ನ ಮಗಳ ಮೈಮೇಲೆ ಹಾಕಿದ್ದ 'ನಗ' ಮಗಳ ಜೊತೆ ಓಂದಿರುಗುತ್ತದೆಯೋ ಇಲ್ಲವೋ ಎಂದು (ಮಲಮ. ೨೪೭). 'ನಗನಟ್ಟು', 'ನಗನಾಣ್ಯ' ಪರಾ. ೨. ಸರಕುಗಳ ಕಟ್ಟು,–ಹೊರೆ: ಮಲೆನಾಡ ಕೊಡಲಿಪೇಟೆಯೊಳಿಟ್ಟ ಜವಳಿಗಳ ಬಲುನಗಗಳ್ಮಾರಿತೋ ಮೋಣೆಲ್ಲವೋ ಸುದ್ದಿ ಬರಲಿಲ್ಲ (ಅರ್ಜವಿ. ೩೧-೩೭); ಒಂದು ಕೂರಿಗೆ ಹೊಲಕ್ಕೆ ನಾಲ್ವತ್ತು ನಗ ಒಣಮೆಣಸಿನಕಾಯಿಗಳಾಗುವವು (ಕೃಷಿಪ್ರ. ೭೧); ಆಮೇಲೆ ನಗಗಳನ್ನು ಕಟ್ಟಿ ಮಾರಾಟಕ್ಕೆ ಕಳಿಸುವರು (ಮುಂಬಯಿ. ೩-೨೯); ಗ್ರೋಸಿನಲ್ಲಿ ನಗಗಳು ೧೪೪ ಇರುತ್ತವೆ. ೫೦ ಗ್ರೋಸ ಅಂದರೆ ೭೨೦೦ ನಗ ಕಟ್ಟಿ ಪೆಟ್ಟಿಗೆಗಳು ಆಕಬಂದ ಪೆಟ್ಟಿಗೆಯಲ್ಲಿರುತ್ತವೆ (ಮುಂಬವ್ಯಾ. ೦೪೦); ಮಾಲು ಖರೀದಿ ಮಾಡತಕ್ಕ ವೇಳೆಯಲ್ಲಿ ಗಿರಾಕಿಯರಿಗೆ ಒಂದೊಂದು ನಗ (ಡಾಗು) ತಿರುವಿಸಿ ತೋರಿಸಬೇಕಾಗುತ್ತದೆ (ಮುಂಬವ್ಯಾ. ೨೦೦); ಇಂಥಾ ೧೨ ಮಣದ ಒಂದು ನಗಕ್ಕೆ ಸೂರ್ತಿ ರೂಪಾಯಿಗಳ ಮೇಲೆ ಧಾರಣೆ ಇದ್ದು ಇದಕ್ಕೆ ಕರೋಡಗಿರಿ ದರ ರಾಶಿಗೆ ಮೂರು ರೂಪಾಯಿ ಪ್ರಕಾರ ಇರುತ್ತದೆ (ಮುಂಬವ್ಯಾ. ೨೮೭).
[ ದೇ. ॥ ತಮಿ. ನಕ್ಕೈ; ತುಳು. ತೆಲು. ನಗ./ಪ್ರಾಕೃ. ಮರಾ. ನಗ್ ]

**ನಗ₂** (ನಾ). ಹಡಗು: ಕಳೆದ ವರ್ಷ ಹೊನ್ನಾವರದಲ್ಲಿ ಬಂದರದ ಎದುರಿಗನೇ ಮಾಲು ತುಂಬಿದ ಮೂರು ನಗಗಳು ಮುಳುಗಿದುವು . . . ಇಲ್ಲವಾಗಿದ್ದರೆ ನಮ್ಮ ನಗ. ಇಲ್ಲಿಂದ ಅಕ್ಕಿ ಸಾಗಿಸಿಕೊಂಡು ರತ್ನಾಗಿರಿಯಿಂದ ಸ್ವಲ್ಪ ಮ್ಹಾಲು ತೆಗೆದುಕೊಂಡು ಮುಂದೆ ಹೋಗಬೇಕಿತ್ತು. (ಜಾರುದಾ. ೪೫); ನಡುಮುರಿಯುತ ನಗನಾವೆಗೆ, ಕೂವೆಗೆ ಉಡಿಸಿದ ಹಾಯಿಯು ಹರಿಯುತ ಬಿರಿಯುತ ಹಡಗನು ಕೀಲಿಸಿ, ತುಮುರನು ತೇಲಿಸಿ, ದಡದಲಿ ರ್ಝಾಡಿಸಿ, ದೋಣಿಯನಾಡಿಸಿ (ಕವಿಪು. ೨೬-೩). [ತುಳು. ನಗ./ಸಂ. ನೌಕಾ]

**ನಗ₃** (ನಾ). ಒಂದು ಬಗೆಯ ಸುಗಂಧದ್ರವ್ಯ; ನಖ: ಮೃಗಮದ ಶ್ರೀಖಂಡಮುಂ ಶಿರವಚ್ಚಿ ನಗ ಜವಾದಿ ಕಯಿರಗುಳಿಗೆಯುಂ ತಂದಿಟ್ಟು (ಲಿಂಗಪು. ೧೬-೪೪). [<ಸಂ. ನಖ]

**ನಗ₄** (ನಾ). ೧. ಚಲಿಸದೆ ಇರುವುದು; ಸ್ಥಾವರ; ಪರ್ವತ; ಬೆಟ್ಟ: "ಅಚಳಃ . . . ನಗಃ, ಶಿಖರೀ, ಸಾನುಮಾನ್, ಧರಃ, ಅದ್ರಿಃ, ಕುಧ್ರಃ– ಈ ೧೪ ಬೆಟ್ಟು" (ಹಲಾಯು. ೨೬-೧೧); "ಧರಮದ್ರಿ ಕುಧರಮದಹಾರ್ಯಂ ನಗಂ ಶಿಖರಿ . . . ಗೋತ್ರಮೆನಲು ಬೆಟ್ಟಕ್ಕೆ ನಾಮಂ" (ಮಂಗರಾ. ೨೯-೧); ಚಾತುರ್ಬಲಯುತನಾ ನಗವ ಬಳಸಿ ಬೀಡಂ ಬಿಟ್ಟಂ (ಆದಿಪು. ೫-೫); ಆ ವಿಂಧ್ಯನಗದೊಳಾ ನಾಯ್ ಪಾವಾಯ್ತಾ ನವಿಲೆಯ್ದು ಮಿಗ ಮಾಯ್ತು (ಯಶೋಚ. ೩-೪೫); ದೆಸೆದೆಸೆಗೆ ಹರಿಹರಿದು ಕಪಿಗಳು ವಸುಧೆಯೊಳಗಣ ನಗವ ತರುತಿರೆ (ತೊರವೆರಾ. ೧೬-೫); ಮಿಗೆ ಶಾರದಾಭ್ರದಿಂ ಚಂದ್ರಮುಂ ರೋಹಣದ ನಗದಿಂದ ಚೆಲ್ವ ರನ್ನಂ . . . ಪೂರ್ವಾದ್ರಿಯಿಂ ಝಗಝಗಿಪ ಬಾಲಾರ್ಕನುದಯಿಸಿದನು (ಭಾವಚಿಂ. ೪-೧೪); ನಗವೆತ್ತಿದ ಕೂರ್ಮನಿಗೇಂ ತಗಲಿದ ಜಲಕಣವು ಭಾರವೇ (ಶಂಕರ. ೬-೨೩); ಇಲ್ಲಿಗೀರೈದು ಹರಿದಾರಿ ದೂರದೊಳೊಂದು ತಾನಿರ್ಪುದು ನಗಂ (ಶ್ರೀರಾಮಾ. ೧೩೮-೩೬೦). 'ನಗಜಾತೆ', 'ನಗಧರ' ಪರಾ. ೨. ಮರ; ವೃಕ್ಷ: "ವೃಕ್ಷಃ, ಅಂಘ್ರಿಪಃ . . . ನಗಃ, ದ್ರುಮಃ, ಪಾದಪಃ– ಈ ೧೯ ಮರಂ" (ಹಲಾಯು. ೨೯-೨೩); "ತರುವನಸ್ಪತಿ ಸಾಲಮಂಘ್ರಿಪಂ ದ್ರು ದ್ರುಮಂ ಧರಣಿಜಂ ಶಾಖಿ ಶಿಖಿ ನಗವದ್ರಿ . . . ಕುಜಮೆನಲು ವೃಕ್ಷಕ್ಕೆ ನಾಮಮಪ್ಪುವು" (ಮಂಗರಾ. ೩೦-೧); ಪೂತಲರ್ದೊಪ್ಪುವ ಕರ್ಣಿಕಾರಭಾಸುರನಗದಂತೆ ಕಣ್ಗೆ ನಿಂದನಾಳ್ದು ಭೂರಿಸುವರ್ಣಭೂಧರಂ (ಶಬಶಂ. ೧-೩೫). ೩. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ: "ಋಷಿ ನಗ ಹಯಸ್ವರಮದೇಟು" (ಮಂಗರಾ. ೧೧೩-೮); ಯುಗ ಋತು ಗಜ ನಾಗಾಂಬರ ಮೃಗಧರ ನಗ ಷಟ್ಕಮೆನಿಪ ವೃತ್ತದ ಲೆಕ್ಕಂ ಸೊಗಯಿಸಿ ತೋರ್ಕುಂ ಗಣಿಯಿಪುದಗಣಿತ ಗುಣನಿಲಯ ನಾಗವರ್ಮನ ಮತದಿಂ (ಛಂದೋಂಬು. ೨-೨೦೦); ಸಪ್ತ, ಭಯ . . . ನಗ . . . ದ್ವೀಪ, ಅಶ್ವ ಇಂತಿನಿತುಂ ಏಕ್ಕೆ ಹೆಸರು (ವ್ಯವಹಾ. ೧೧-೩೦). ೪. ಇಪ್ಪತ್ತೇಳು ಅಂಕೆಗಳುಳ್ಳ ಸಂಖ್ಯೆ: ಸ್ಥಾನಸಂಜ್ಞೆಯ ನಡಪುದಕ್ಕೆ ಸೂತ್ರಂ:–ಏಕಂತು ಪ್ರಥಮಂ ಸ್ಥಾನಂ ದ್ವಿತೀಯಂ ದಶಸಂಜ್ಞಕಂ . . . ಸಪ್ತವಿಂಶ ನಗಚ್ಚೈವ ಅಷ್ಟವಿಂಶ ಮಹಾನಗಃ (ವ್ಯವಹಾ. ೮-೧೪). [ಸಂ.]

**ನಗಕುಲ**, ನಗಕುಳ (ನಾ). ಬೆಟ್ಟಗಳ ಸಮೂಹ; ಪರ್ವತಗಳ ಗುಂಪು: ಇರ್ದುದು ಮಹೇಂದ್ರಾಚಲಂ . . . ಮುಡಿಯಿಂ ಮುಗಿಲ್ಮುಟ್ಟೆ ನಗಕುಲ ಜಗದ ಜಟ್ಟಿ (ಶ್ರೀರಾಮಾ. ೩೬೩-೩೦). **ನಗಕುಳ**: ನಗಕುಳಕುಂಜರಂ ಜಳಧಿಕಾನನಮುರ್ವರೆಯೆಂಬಿವೆಲ್ಲಮಾವಗಮೊಳಗಾದುದೊ ಕುಳಿಶವಕ್ಷಿಗೆ (ಪುಷ್ಪಪು. ೮-೭೩). [ನಗ₄ + ಕುಲ]

**ನಗಕುಳ** 'ನಗಕುಲ' ನೋ.

**ನಗಚೂಳ** (ನಾ). ಬೆಟ್ಟದ ತುದಿ,–ಶಿಖರ: ಆ ನಗಚೂಳದೊಳ್ ಶಬರ ಬಾಲಕಿಯರ್ ವಿಧುಬಿಂಬದಲ್ಲಿ ತಮ್ಮಾನನಮಂ ನಿರೀಕ್ಷಿಸಿ (ಚಂದ್ರಪು. ೧೧-೩೨). [ನಗ₄ + ಚೂಳ₂ (= ಚೂಲ)]

**ನಗಜ** (ನಾ). ಪರ್ವತದಲ್ಲಿ ಹುಟ್ಟಿದುದು; ಆನೆ. [ಸಂ.]

**ನಗಜವಮ್ಮ** (ನಾ). ಒಬ್ಬಾತನ ಹೆಸರು: ಅಪ್ಪಯ ಸೆಟ್ಟಿಯ ಮಗ ನಗಜವಮ್ಮನ ಪಲಗ ಬೀರನೊಟೆಜಸ ರಾಜ್ಯದೊಳೆ ತುಱುಗೊಳೆ ಕಾದಿ ಸತ್ತ (ಎಕ. X, ಗೋರೀಬಿ. ೮೫-೩; ಸು. 920). [?]

**ನಗಜಾತೆ** (ನಾ). ಪರ್ವತದಲ್ಲಿ ಹುಟ್ಟಿದವಳು; ಗಿರಿಜೆ; ಪಾರ್ವತಿ: ಬೆಟ್ಟುಗಳ ರಟ್ಟೆಯುಂ ಕುಟ್ಟಿದಮರಾವತಿಯು ದಿಟ್ಟತನವಂ ನೋಳ್ಪೆನೆಂದು ನಗಜಾತೆಗೆಡೆಗೊಟ್ಟ ಗಿರಿ ಮೃಗರೂಪತಾಳಿ ಸುರಪನ ಕುಱುಹ ಕಾಣದಱುತ ಬಂದುದೋ (ಹರಿಕಾ. ೨೦೪ ಪರಿ); ಮಗನಂ ತುಱುಂಬಿನೊಳಗಿಟ್ಟು ಕೊಂಡಿರ್ದಳಾ ನಗಜಾತೆ (ವೀಶೈಪು. ೪-೮-೨೯); ಪುರಹರನೆ ಇರಿಸಿಕೊಂಡಳಿದವರ ಕಂಡು ಮನ ಮಱುಗದೇ ಅವರ ಗೊಡವೇತಕೆಂಬುದ ನನಗೆ ಅಱುಹಿಕೊಡಬೇಕೆಂದು ನಗಜಾತೆ ಬಿನ್ನವಿಸೆ (ಪ್ರಾಂತರಾ. ೬-೪೬); ನಗಜಾತೆ ಕೇಳೆಂದು ನಂದಿ ಸುಪ್ರಮಥರಿಗೆ ಗಗನಾಪಗಾಜೂಟನುಸುರುತಿರಲು (ದುರಪು. ೩-೨). [ಸಂ. ನಗಜಾತಾ]

**ನಗಜಾರಮಣ** (ನಾ). ಪಾರ್ವತಿಯ ಪತಿ; ಶಿವ: ನಗಜಾರಮಣ ನಾಗಾಸುರಚರ್ಮಾಂಬರನಿಗೆ ಮಿಗಿಲಾದ ದೈವಯಿನ್ನುಂಟೆ (ಅಬ್ಬಲೂ. ೪-೨೦). [ಸಂ.]

**ನಗಜೆ** (ನಾ). = ನಗಜಾತೆ: ನಿನಗಱುಪಲ್ ಬಂದೆಂ ಶರ್ವನ ವಧು ಶರ್ವಾಣಿಯೆಂದು ನಗಜೆಯ (ಗಿರಿಕ. ೪-೬೮). [ಸಂ. ನಗಜಾ]

**ನಗಣ** (ನಾ). [ಛಂದ] ಮೂರು ಲಘುಗಳುಳ್ಳ ಒಂದು ಅಕ್ಷರಗಣ (UUU): ಮೂಱು ಲಘುವಾಗೆ ನಗಣಂ (ಛಂದೋಂಬು. ೧೩-೧೧); ಗುರುಲಘು ಮೂಱಿರೆ ಮ–ನ–ಗಣ (ಕೈಪಿಡಿ. ೬೦). [ಸಂ.]

**ನಗಣ್ಯ** (ನಾ). ೧. ಗಣನೆಗೆ ಬಾರದುದು; ಗಣನೆಗೆ ಯೋಗ್ಯವಲ್ಲದುದು; ಕ್ಷುಲ್ಲಕ: ಆ ಹೆಬ್ಬುಲಿಯ ಕೂಗಿನ ಮತ್ತು ದೊಡ್ಡಾಗಳ ಭಯಂಕರ ರಾವದ ಇದಿರು ನಾಯಿಯ ಬೊಗಳು ನಗಣ್ಯವಾಗಿ ಬಿಟ್ಟಿತು (ಮಲೆಮ. ೨೫೦). ೨. ಗಣನೆಗೆ ಯೋಗ್ಯವಲ್ಲದವನು; ಕ್ಷುಲ್ಲಕವ್ಯಕ್ತಿ: ಯಾರನ್ನು ಪಾಪಿಗಳು, ಹೇಯರೂ ಎಂದೂ ನಗಣ್ಯರು ಎಂದೂ ಅವರು ತ್ಯಾಗಮಾಡಿ ಬಂದಿರುವರೋ ಆ ಸಂಸಾರೀ ವ್ಯಕ್ತಿಗಳೇ ಇವರಿಗೆ ಅನ್ನವನ್ನು ಒದಗಿಸುವರು (ನಿಬಂಧ. I, ೬೦). [ಸಂ.]

**ನಗತ್ತೆ** (ನಾ). ಒಂದು ಬಗೆಯ ಸಸ್ಯ: ಮಲರಗ, ನಗತ್ತೆ (ಮೈಪಿಗ. ೪೦-೭೮೮). [?]

**ನಗದಿ** 'ನಗದು' ನೋ.

**ನಗದಿಗುಮಾಸ್ತ**, ನಗದಿಗುಮಾಸ್ತೆ (ನಾ). (ಕಚೇರಿ ಮೊದಲಾದೆಡೆಗಳಲ್ಲಿ) ಹಣದ ವ್ಯವಹಾರ ನಡೆಸುವ ಗುಮಾಸ್ತ,–ಕಾರಕೂನ,–ಸರಾಫ: ನಗದಿಗುಮಾಸ್ತರೆ, ನಿಮ್ಮ ಲೆಕ್ಕಕ್ಕೂ ಎರಡುಕಾಸು ಸೇರಿತು! (ನಂಟರು. ೨೫). **ನಗದಿಗುಮಾಸ್ತೆ**: "ಬ್ಯಾಂಕಿನ ಅಥವಾ ವರ್ತಕನ ಹಣದ ಜವಾಬ್ದಾರಿಯುಳ್ಳವನು; ನಗದಿಗುಮಾಸ್ತೆ" (Cashier. ಇಂಕನಿ). [ನಗದಿ (<ನಗದು) + ಗುಮಾಸ್ತ]

**ನಗದಿಗುಮಾಸ್ತೆ** 'ನಗದಿಗುಮಾಸ್ತ' ನೋ.

**ನಗದಿಪುಸ್ತಕ** 'ನಗದುಪುಸ್ತಕ' ನೋ.

**ನಗದಿಬುಕ್ಕು** (ನಾ). = ನಗದುಪುಸ್ತಕ: ಹಣಕಾಸಿನ ಲೆಕ್ಕಾಚಾರವನ್ನು ನಗದಿ ಬುಕ್ಕಿನಲ್ಲಿ ಬರೆದಿಡಲಾಗುತ್ತಿದೆ (ರೂಢಿ). [ನಗದಿ (<ನಗದು) + ಬುಕ್ಕು]

**ನಗದಿಮಾಡು** (ಕ್ರಿ). ಹಣವನ್ನು ಕೊಡು,–ಪಾವತಿಮಾಡು: ಈ ಕುಪ್ಪೂರ ಸೀಮೆಗೆ ಮೊಗಲರ ಬಗೆ ಹಣ ಸೀಮೆಗೆ ನಗದಿಮಾಡಿದು ಗ ೯೦೦೦ ॥ ವರಹ ॥ ಸೇನಬೋವರಿಗೆ ಗ ೨೦೦೦ ॥ ವರಹ (ಎಕ. VIII, ಸೊರಬ. ೨೬೬-೧೫; 1629). [ನಗದಿ (<ನಗದು) + ಮಾಡು₁]

**ನಗದಿಲೆಕ್ಕ** 'ನಗದುಲೆಕ್ಕ' ನೋ.

**ನಗದಿವ್ಯವಹಾರ** (ನಾ). = ನಗದಂವ್ಯಾಪಾರ.

[ ನಗದಿ (<ನಗದು) + ವ್ಯವಹಾರ ]

**ನಗದಿವ್ಯಾಪಾರ** 'ನಗದಂವ್ಯಾಪಾರ' ನೋ.

**ನಗದು,** ನಗದಿ (ನಾ). ೧. ಹಣ ; ರೊಕ್ಕ ; ರೋಖು ; ಹಣಕಾಸು : ಪೇಟೆಯಲ್ಲಿ ಯಾವುದನ್ನು ಮಾರಿದ ತಕ್ಷಣ ನಗದು ಕೈಗೆ ಬರುವುದೊ, ಅಂಥ ನಗದಿಗೆ ಸಮಾನವಾದ ಹಣಪತ್ರಗಳನ್ನು (Liquid Assets) ಕೊಂಡಿಟ್ಟುಕೊಳ್ಳುತ್ತಾರೆ (ಹಣಪ್ರ. ೬೯) ; ಏನಾದರೂ ಮನೆಗೆ ಬಂದರೆ ಅವನಿಗೆ ಕೊಡುವುದಕ್ಕೆ ಎರಡುಸಾವಿರ ರೂಪಾಯಿಗಳನ್ನು ನಗದು ಇಟ್ಟಿದ್ದೇನೆ (ರಂಗಳ. ೧೩೫) ; ಹೆಂಡತಿಯು ಕೈಗೆ ೧,೫೦೦ ಪೌಂಡುಗಳನ್ನು ಕೊಟ್ಟು . . . ಉಳಿದ ನಗದು, ಸಾಮಾನ ಕೈಲಿಟ್ಟುಕೊಂಡೆ (ಗಲಿಪ್ರ. ೦೦೪) ; ಇಂದು ನಗದು ನಾಳೆ ಸಾಲ (ರೂಢಿ). 'ನಗದಂವ್ಯಾಪಾರ', 'ನಗದುಹಣ' ಪರಾ. **ನಗದಿ :** ೧. ಹಣ ನಗದಿ ಕೊಟ್ಟು ಸಾಮಾನು ಗಳನ್ನು ಕೊಂಡುಕೊಳ್ಳುವುದು ಯಾವಾಗಲೂ ಒಳ್ಳೆಯದು (ಅಡುಸಾ.೧೨೩). 'ನಗದಿವ್ಯಾಪಾರ' ಪರಾ. ೨. = ನಗದಿಗುಮಾಸ್ತ : (Cashier. ಪಾರಿನಿ. ೧೨).

[ ←ಅರ. ನಕದ್, ನಕ್ದ್; ಮರಾ. ನಕ್ಕದ್, ನಗದ್, ನಗದೀ ; ಹಿಂ. ನಕದ್, ನಕ್ದ್, ನಗದ್, ನಗದೀ ]

**ನಗದುಗುತ್ತ** 'ನಗದುಗುತ್ತೆ' ನೋ.

**ನಗದುಗುತ್ತೆ,** ನಗದುಗುತ್ತ (ನಾ). ಧನರೂಪದಲ್ಲಿ ಕೊಡುವ ಕಂದಾಯ : (ಕಿಸಂಗ್ಲಾ. ೦೪೯). **ನಗದುಗುತ್ತ :** (ವ್ಯಗಜಿ. IV, ೭೮೦).

[ ನಗದು + ಗುತ್ತೆ ]

**ನಗದುಗೇಣಿ** (ನಾ). ಧನರೂಪದಲ್ಲಿ ಕೊಡುವ ಗೇಣಿ,-ಗುಂತ್ತಿಗೆ : ಕೆಲವು ತೋಟಗಳು . . . ಬತ್ತದ ಗದ್ದೆಗಳು ನಿಗದಿಯಾದ ತಾಂಗ (ಟಂಕ ? : ಒಂದು ತರ ಹಣ) ನಗದುಗೇಣಿ ಕೊಡಬೇಕು (ಪ್ರವಾಇ. II, ೪೭೫).

[ ನಗದು + ಗೇಣಿ (<ಕೇಣ್ಮ₃) ]

**ನಗದುಧಾನ** (ನಾ). ಹಣದ ರೂಪದಲ್ಲಿ ಕೊಡಂವಿಕೆ ; ಹಣದ ರೂಪದ ಕೊಡುಗೆ : ಮಧ್ಯಸ್ಥಗಾರಿಕೆ ರುಸುಮುವನ್ನು ಮುಂಗಡವಾಗಿ ಕೊಡುವು ದಿಲ್ಲವೆ? ನಗದುದಾನದಲ್ಲಿ ಬಹುಗುಣವಿದೆ (ಕಮುಕ. ೮೦).

[ ನಗದು + ದಾನ ]

**ನಗದುನಾರಾಯಣ** (ನಾ). ಐಶ್ವರ್ಯವಂತ ; ಲಕ್ಷಾಧೀಶ್ವರ : ವ್ಯಾಪಾರ ದಲ್ಲಿ ಚೆನ್ನಾಗಿ ಮುಂದುವರಿದು, ಕೇವಲ ಎರಡು ಮೂರು ವರ್ಷಗಳಲ್ಲಿಯೇ ಅವರು ನಗದುನಾರಾಯಣರಾದರು (ರೂಢಿ). [ ನಗದು + ನಾರಾಯಣ ]

**ನಗದುಪುಸ್ತಕ,** ನಗದಿಪುಸ್ತಕ (ನಾ). ಹಣಕಾಸಿನ ಲೆಕ್ಕಾಚಾರವನ್ನು ಬರೆದಿಡುವ ಪುಸ್ತಕ ; ಖಾತೆಕಿರ್ದಿ : (Cash register. ಇಂಕನಿ). **ನಗದಿ ಪುಸ್ತಕ :** "ನಗದುಲೆಕ್ಕದ ಪುಸ್ತಕ; ನಗದಿಪುಸ್ತಕ; ರೊಕ್ಕದ ಪುಸ್ತಕ" (Cash-book. ಇಂಕನಿ). [ ನಗದು + ಪುಸ್ತಕ ]

**ನಗದುಬಹುಮಾನ** (ನಾ). ಧನರೂಪದಲ್ಲಿ ಕೊಡುವ ಬಹುಮಾನ : ಉತ್ತಮಕವಿತೆಗಳಿಗೆ ಅವನು ನಗದು ಬಹುಮಾನಗಳನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದನು (ಬಂಕಿಮು. ೧೨). [ ನಗದು + ಬಹುಮಾನ ]

**ನಗದುಬೆಲೆ** (ನಾ). ಹಣದ ರೂಪದ ಬೆಲೆ ; ಹಣ ಕೊಟ್ಟು ಕೊಳ್ಳುವ ಬೆಲೆ· ಧನಮೌಲ್ಯ ; ಸಾಲವಾಗಿ ಕೊಳ್ಳುವ ಬೆಲೆಗೆ ಬೇರೆಯಾ ದುದಂ,-ವಿರುದ್ಧವಾದುದು (Cash price. ಇಂಕನಿ).

[ ನಗದು + ಬೆಲೆ ]

**ನಗದುಲಾಭ** (ನಾ). ಹಣದ ರೂಪದಲ್ಲಿ ಬರುವ ಆದಾಯ : ಪ್ರದರ್ಶನ ಗಳಿಂದ ಪ್ರದರ್ಶಕರಿಗೆ ಆಗುವ ನಗದುಲಾಭ ಬಹಳ ಕಡಿಮೆ (ರಾಮಂರಾ. ೮೦).

[ ನಗದು + ಲಾಭ ]

**ನಗದುಲೆಕ್ಕ,** ನಗದಿಲೆಕ್ಕ (ನಾ). ಹಣಕಾಸಿನ ಲೆಕ್ಕಾಚಾರ,-ಖಾತೆ : "ನಗದು ಲೆಕ್ಕ ; ನಗದು ಲೇವಾದೇವಿ; ರೊಕ್ಕದ ಖಾತೆ" (Cash account. ಇಂಕನಿ). **ನಗದಿಲೆಕ್ಕ :** (Cash account ಪಾರಿನಿ. ೧೨).

[ ನಗದು + ಲೆಕ್ಕ ]

**ನಗದುಲೇವಾದೇವಿ** (ನಾ). = ನಗದಂಲೆಕ್ಕ : "ನಗದು ಲೆಕ್ಕ; ನಗದುಲೇವಾ ದೇವಿ; ರೊಕ್ಕದ ಖಾತೆ" (Cash account. ಇಂಕನಿ).

[ ನಗದು + ಲೇವಾದೇವಿ ]

**ನಗದುವ್ಯಾಪಾರ,** ನಗದಿವ್ಯಾಪಾರ (ನಾ). ಕೈಮೇಲೆ ಹಣ ಕೊಟ್ಟು ನಡೆಸುವ ವ್ಯಾಪಾರ ರೋಖುವ್ಯಾಪಾರ: (Terms Cash. ಪತ್ರಿನಿ. ೨೭); ನಗದುವ್ಯಾಪಾರ ತೊರೇ ನೀರಿನ ಹಾಗೆ (ಗಾದೆ). **ನಗದಿವ್ಯಾಪಾರ :** ಹಗಲು ಕೊಡು ರಾತ್ರಿ ಪಡೆ ಇಲ್ಲಿ ನಗದಿವ್ಯಾಪಾರ (ಉರ್ದುಪಾ. ೧೦೫).

[ ನಗದು + ವ್ಯಾಪಾರ ]

**ನಗದುಸಂಬಳ** (ನಾ). ಹಣದ ರೂಪದಲ್ಲಿ ಕೊಡುವ ವೇತನ : "ಆದಾಯ ಗಳು" ಎಂದರೆ . . . ನಗದುಸಂಬಳ ಮತ್ತು ಇತರ ಎಲ್ಲಾತರದ ವೇತನ (ಗ್ರಾಮಾಕ. ೮೫). [ ನಗದು + ಸಂಬಳ₁ ]

**ನಗದುಸಾಲ** (ನಾ). ಹಣದ ರೂಪದಲ್ಲಿ ಕೊಡುವ ಸಾಲ: ಈಗೀಗ ಗ್ರಾಮಸ್ಥರಿಗೆ ಸರಕಾರದಿಂದ ನಗದುಸಾಲ ದೊರೆಯುವ ಸೌಲಭ್ಯವಿದೆ (ರೂಢಿ). [ ನಗದು + ಸಾಲ₁ ]

**ನಗದುಸಿಲ್ಕು** (ನಾ). ಕೈಯಲ್ಲಿ ಉಳಿದಿರಂವ ಹಣ; ಮಿಕ್ಕ ಹಣ : ಸರಕಾರದ (Cash Balance) ನಗದುಸಿಲ್ಕನ್ನು ರಿಸರ್ವ್‌ಬ್ಯಾಂಕು ತನ್ನ ಕೈಯಲ್ಲಿಟ್ಟುಕೊಳ್ಳುವುದು (ಹಣಪ್ರ. ೩೦೭). [ ನಗದು + ಸಿಲ್ಕು₄ ]

**ನಗದುಹಣ** (ನಾ). ಸಿದ್ಧವಾಗಿರಂವ ಹಣ,-ರೊಕ್ಕ ; ರೋಖು : ಆಕೆ ತನ್ನ ಹತ್ತಿರವಿದ್ದ ನಗದುಹಣವನ್ನೆಲ್ಲಾ ಅದಕ್ಕಾಗಿ ತೆರಬೇಕಾಯಿತು (ಬಂಕಿಮು. ೦೩೨) ; ಅಷ್ಟಿಷ್ಟು ನಗದುಹಣವೂ ಇತ್ತು (ಅಲ್ಪವಿ. ೦೦೦) ; ಬ್ಯಾಂಕಿಗೆ ಹೋಗಿ ಚೆಕ್ ಕೊಟ್ಟು ನಗದುಹಣ ತೆಗೆದುಕೊಳ್ಳಬೇಕಾದರೆ ಅರ್ಧಗಂಟೆ ಕಳೆದುಹೋಯಿತು (ರಕ್ತಗೋ. ೭೭). [ ನಗದು + ಹಣ ]

**ನಗಧರ** (ನಾ). ೧. ಬೆಟ್ಟವನ್ನು ಎತ್ತಿ ಹಿಡಿದವನು; ಗೋವರ್ಧನಧರ ; ಕೃಷ್ಣ : ನಗಧರನೆತ್ತನೇ ಧನುವನೇಱಿಸನೇ . . . ಪುರ್ಬನೇಱಿಸುವ ಮಾಟ್ಕೆಯಿನಶ್ರುಮದಿಂ ಪೊಡರ್ಪು ಕೈಮಿಗೆ ರಿಪುಮರ್ದನಂ ಧನುವನೆತ್ತಿದ ನೇಱಿಸಿದಂ ಜನಾರ್ದನಂ (ಪಂರಾಮಾ. ೩-೧೦೦) ; ನಗಧರನ ನಿಶಿತನಾರಾಚ ಗಣಂ ನಡೆ ಪಾಯ್ದು ರಿಪುಭಟಾರುಣಜಲಧಾರೆಗಳಂ . . . ಪೂತನಿಯು ರಾಂತು ಕುಡಿದರ್ ಧುರದೊಳ್ ಜಗವಿ. ೭-೮೨) ; ಮುರಹರ ನಗಧರ ಮುಕುಂದ ಮಾಧವ ಗರುಡಗಮನ ಪಂಕಜನಾಭ . . . ನಮೋ ನಮೋ (ಪುರಂದ. ೩-೪೦-೧) ; ರುಕ್ಮಿಣಿ ಗಂಡುಮಗನಾಗಬೇಕೆನಲೊಡನೆ ನಗಧರ [ಪಾಠಾಂ. ಅಗಧರ, ಅಘಹರ] ಕೊಟ್ಟನಿವಳ್ಗೊಂದು ವರವನು (ಮೋಹತ. ೧೦-೧೦) ; ನಗುತಲೆಂದನು ವೈಷ್ಣವನು ಕೃತಯುಗದಿ ಹರಿ ಶ್ವೇತಾಂಗ . . . ದ್ವಾಪರದೊಳಗೆ ರಕ್ತಾಂಗ ನಗಧರಂ ಕೃಷ್ಣಾಂಗನೀ ಕಲಿಯುಗದೊಳಾಗಿಹ ನೆಂದು ವೇದಂ ಪೊಗಳುತಿರ್ಪುವು (ಶಂಕದಾ. ೧೦-೫೩). ೨. [ಜೈನ] ಲಕ್ಷ್ಮಣ : ಗಗನೇಚರಸೈನ್ಯಮಿಸುವ ಪೊಸ ಮಸೆಯ ಸರಲ್ ನಗಧರನ ಮೇಲೆ ಪಾಯ್ದುದ್ದುವು ನೆಗವಗ್ನಿಮುಖಕ್ಕೆ ಪಾಯ್ವ ಶಲಭಂಗಳವೋಲ್ (ಪಂರಾಮಾ. ೯-೬೦). 'ಅಗಧರ' ಪರಾ. [ ಸಂ. ]

**ನಗಧರೆ** (ನಾ). ವಸುಧೆ ; ಭೂಮಿ : "ಧರಣಿ ಧಾರಿಣಿ . . . ನಗಧರೆ ರತ್ನಗರ್ಭೆ ಉಂಭಿನಿ ವಿಪುಳೆ ಸರ್ವಂಸಹಾಖ್ಯೆಯೆನೆ ನೆಲಕೆ ನಾಮಂ" (ಮುಂಗರಾ. ೨೮-೧). [ ? ]

**ನಗಧ್ವನಿ** (ನಾ). ಬೆಟ್ಟದ ಬಳಿಯಲ್ಲಿ ಉಂಟಾಗುವ ಮಾರಂಕೂಗು,- ಮಾರ್ದನಿ,-ಹೊಳಲಂ : ಜನಮುಱಿಯುದನ್ನೆಗಂ ಮುನ್ನಂ ನಯಮುಱಿ

ದಟಿಪಲಾರ್ವೊಡದು ಮಂತ್ರಿಗುಣಂ ಜನವಾದಂ ನೆಗಟ್ ನಗಧ್ವನಿವೋಲನು ಕರಣವಾರ್ತೆ ಮಂತ್ರಿಯ ಗುಣಮೇ (ಕವಿರಾ. ೩-೧೪೩). [ ನಗ$_4$ + ಧ್ವನಿ ]

**ನಗನಂದನ** (ನಾ). ಬೆಟ್ಟದ ಮೇಲಿರುವ ವನ,–ಉದ್ಯಾನ : ಆ ಗಿರಿ ತಟದಿಂದವನಂ ಪೋಗಿಸಿ ತದ್ವನನಿವಾಸಮಂ ಕರುಣಿಪುದಂತಾಗದೊಡೆ ಮಗೀವುದು ನೀಡಾಗದೆ ಪೆಟಿತೆಂದನುಚಿತ ನಗನಂದನಮಂ (ಶಬಶಂ. ೨-೧೧೨). [ ನಗ$_4$ + ನಂದನ ]

**ನಗನಟ್ಟು** (ನಾ). = ನಗನಾಣ್ಯ : ಸುಬ್ಬಣ್ಣ ಹೆಗ್ಗಡೆಯವರಿಗೆ ಬೇಕಾದಷ್ಟು ಆಸ್ತಿಪಾಸ್ತಿ ನಗನಟ್ಟುಗಳಿದ್ದರೂ ತಿಮ್ಮಪ್ಪಹೆಗ್ಗಡೆಗೆ ಹೆಣ್ಣುಕೊಡುವುದಕ್ಕೆ ಹೆದರುತ್ತಿದ್ದರು ಹಡೆದ ತಂದೆ ತಾಯಿಗಳು (ಮಲಮ. ೩೩); ತೊಡುವುದಕ್ಕೆ ನಗನಟ್ಟು ಆಯಿತು (ದೇವೀಜಾ. ೩೦).

[ ದೇ.ಶ ತಮಿ. ನಗ್ಗೈನಟ್ಟು; P ತಮಿಳಿನಲ್ಲಿ ಇದನ್ನು ದ್ವಿರುಕ್ತಿಯೆಂದು ಗಣಿಸಲಾಗಿದೆ]

**ನಗನಾಣ್ಯ** (ನಾ). ಒಡವೆ, ಹಣ, ಮುಂತಾದವು; ಆಭರಣ, ಐಶ್ವರ್ಯ ಮುಂತಾದುವು : ಆ ಬಗೆ ನಗನಾಣ್ಯದಲ್ಲಿ ಒಳ್ಳೆ ಒಳ್ಳೆ ಅನರ್ಘ್ಯವಾದ ಕೆಲವು ನಗಗಳನ್ನು ಆ ಟಂಕಮುತ್ತನು ತೆಗೆದುಕೊಂಡು, ಉಳಿದ ನಗನಾಣ್ಯ ಯಾವತ್ತೂ ಕೋಟೆ ಅರಸುಗಳಿಗೆ ಕೊಟ್ಟನು (ರಾಜೇಂದ್ರ. ೪೮); ಇಂದು ಕಂಡುಬರುವ ಸರಕಾರೀ ಯಂತ್ರದ ಅಂಗೋಪಾಂಗಗಳೆಲ್ಲ . . . ಹಳೇ ನಗನಾಣ್ಯಗಳಂತೆ ಕೇವಲ ಐತಿಹಾಸಿಕ ಕುತೂಹಲದ ವಿಷಯವಾಗಿ ಉಳಿಯುವುವು (ಮಾಪಾದ. ೧೬೯); ಅಪರಿಮಿತ ನಗನಾಣ್ಯಗಳನ್ನು ಬೇರೆ ಅಮಿತಾನಂದ ಪೂರಿತವಾದ ದಾಪದಿಂದ ತೃಪ್ತನಾದನು (ಮಡಿಳ. ೯೨).

[ ನಗ$_1$ + ನಾಣ್ಯ (<ನಾಣೆಯ) ]

**ನಗಪ** (ನಾ). = ನಗಪತಿ : ನಗಪಾ[ಪಾಠಾಂ. ಪ್ರಾ]ಗ್ರದೊಳಂ ಕುಜಪ್ರತತಿಯೊಳ್ ಸರಸೀಕುಳದೊಳ್ ವಿರಾಜಿಸುತ್ತುಗ್ರನನೀಕ್ಷನಂ . . . ತಂದಪಂ (ಗಿರಿಕ. ೮-೮೭). [ ಸಂ. ]

**ನಗಪಗೆ** (ನಾ). ಪರ್ವತಗಳ ಶತ್ರು ; ನಗಾರಿ ; ಇಂದ್ರ.

**ನಗಪಗೆ ಮಗ** = ಇಂದ್ರನ ಮಗ ; ಅರ್ಜುನ : ನಗಪಗೆ ಮಗನನು ಮೃಗನೆವನದಿ ಕಾಳಗ ಮಾಡಿ ಮೆಚ್ಚಿದೆ (ವಿದಾಕ್ಕೆ.೬೬-೧). [ ನಗ$_4$ + ಪಗೆ$_2$ ]

**ನಗಪತಿ** (ನಾ). ೧. ಪರ್ವತಗಳಿಗೆ ಒಡೆಯನಾದವನು; ಪರ್ವತರಾಜ ; ಹಿಮವಂತ : ನಗಪತಿಯೆಂದುದುಂ ಸಲಿಸಿ ನಾರದನಾತನ ಕೂಡೆ ರುದ್ರನಂ ಮೃಗಧರಚೂಡನಂ ಶಿವನನರ್ಚಿಸಿ (ಗಿರಿಕ. ೯-೬೪). ೨. ಮೇರುಪರ್ವತ ; ಮೇರುಗಿರಿ : ನಗಪತಿಗಿದೆ ಪೆಟಿನೊಸಲೆನೆ ಸೊಗಯಿಪ ಪಾಂಡುಕ ವಿಶಾಲ ಶಿಳೆಯೊಳದೇಂ ದಿಟ್ಟಿಗೆ ಪಂದುದೊ (ಚಂದ್ರಪು. ೧೨-೧೧೦). ೩. ಚಂದ್ರ.

[ನಗ$_4$ + ಪತಿ$_2$ ]

**ನಗಮನೆ** (ನಾ). ಆಭರಣಗಳನ್ನಿಟ್ಟಿರುವ ಮನೆ ; ಖಜಾನೆ (?) : ಈ ಗ್ರಾಮಕ್ಕೆ ಉಂಟಾದ ಚತುಸೀಮೆಯೊಳಗುಳ್ಳ . . . ಕೋಟ ತುಡುಕಿ ನಗಮನೆ ವಣಸುಂಕ ಸುವರ್ಣಾದಾಯ ಕಲಕೊಠಾರ ಕಾಲೋಣಿ ನಿರೋಣಿಯೇನುಂಟಾದ ಸಕಲಾಯ ಸ್ವಾಮ್ಯವನು ಸರ್ವಮಾನ್ಯವಾಗಿ ಸ್ವರುಚಿಯಿಂದ ಒಡಂಬಟ್ಟು ಕೊಟ್ಟ ದಾನಶಾಸನ (ಬಟ್ಕಳ. ೨೪೦).

[ ನಗ$_1$ + ಮನೆ ]

**ನಗಯಜ್ಞ** (ನಾ). ಪರ್ವತಕ್ಕೆ ಮಾಡುವ ಒಂದು ಬಗೆಯ ಪೂಜೆ : ಮುಕುಂದಂ ನಗಯಜ್ಞೋಪಯೋಗದ್ರವ್ಯಂಗಳಂ ತಂದು ಮುಂದೆ ನಿಂದಿರ್ದ ನಂದಗೋಪಪುರೋಗಮರನನುರಾಗದಿಂ ನೋಡಿ (ಜಗವಿ. ೯-೪೦ ವ). [ ನಗ$_4$ + ಯಜ್ಞ ]

**ನಗರ** (ನಾ). ೧. ಮುಖ್ಯಪಟ್ಟಣ ; ಪುರ : "ಪತ್ತನಂ . . . ನಗರಂ, ನಗರೀ . . . ಪುರೀ – ಈ ೧೧ ಪಟ್ಟಣಂ" (ಹಲಾಯು. ೪೮-೧೩೦) ; "ನಗರಿಪುಟಭೇದನಂ ಪೂಃ ಪುರಂ ಪತ್ತನಂ . . . ನಗರಮೆನೆ ಪಟ್ಟಣಂ" (ಮಂಗರಾ. ೫೬-೩) ; ಗ್ರಾಮ್[a] ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ (ಪಡ್ಮಾರಾ. ೭-೨); ಅಳಕಾನಗರೀಶಂ ಬರ್ಪುಮೆ ತನ್ನಗರದ ಕಡೆಪಟ್ಟ ಪರದರೊರೆಗಂ ದೊರೆಗಂ(ಜಗವಿ. ೯-೦೧೬) ; ನಗರದ ಮನೆಮನೆದಪ್ಪದೆ ಸೊಗಯಿಸೆ ಬಹುವರ್ಣ ವಿವಿಧಪಟದೊಳ್ಗುಡಿಗಳ್ ನೆಗಟ್ದಿರೆ ಬಹುಪ್ರಕಾರದ ಮುಗಿಲೊಗೆದಪುವೆನಿಸಿತಾಗಳಾಕಾಶತಳಂ (ಪುಷ್ಪಪು. ೧೩-೧೬) ; ಕರೆಸಿದನು . . . ನಗರದನುಪಮ ವಾರನಾರಿಯರ (ತೊರರಾ. ೧-೫-೨೬) ; ನೋಡದೋ : ನನ್ನ ಪದತಲದಿ ಎಂಬಂತೆ ನಗರ ನಾಗರಿಕತೆಯ ಜೀವನಂ (ಪಕ್ಷಿಕಾ. ೨೯-೩೬) ; ಕನ್ನಡಿ ಹೇಗೆ ನಾಗರಿಕತೆಯ ಚಿಹ್ನವೋ ಹಾಗೆ ನಗರಕ್ಕೆ ಪ್ರಾಣಿಶಾಲೆ (ಈಳಿಕ. ೧೧೮). ೨. ವರ್ತಕರ ಸಂಘ ; ವ್ಯಾಪಾರಿಗಳ ಸಂಸ್ಥೆ ; ಕೊತ್ತಳಿ : ಶ್ರೀರಾಮಪುಣ್ಯಾವಲ್ಲಭೇನ ಲಿಖಿತಮಿದಂ ಶಾಸನಂ ಭವಗವಂಣ್ಣನು ಚನ್ದಗವುಣ್ಣನು ಎಡೆಪೊಟಲ್ಮಾಡು ಬನವಸಿಯ ನಗರಮುಂ ಸಕ್ಷಿ (ಎಕ. VIII, ಸೊರಬ. ೫೭೦-೩೮ ; ೬೭೨) ; ಅಲಂದೆಯ ನಗರಂ ದೇವರಿಗೆ ಮಾಡಿದ ಪೇಟಿಂಗಯ್ವತ್ತೆಲೆಯಂ ಬೆಟ್ಟರಿಂತಿ ನಿತುಮಂ ನಗರಮಹಾಜನ ಪಂಚಮಠಸ್ಥಾನಮಾಚಂದ್ರಾರ್ಕ್ಕಸ್ಥಾಯಿಪರಂ ನಡಯಿಸುವರು (ಎಇ. XXVIII, ೩೫-೫೮ ; 1032) ; ಐಮುವತ್ತು ಕೊತ್ತಳಿಯುಂ ನಗರದ ಪಶವರ್ತ್ತಿಗಳುಮಿಬ್ಬ್ರು (ಇಇ. V, ೩೪೩-೦೮ ; 1093). ೩. ವರ್ತಕಸಂಘದ ಸದಸ್ಯ : ಸುರಪತಿಯಂತೆ ಸರ್ವವಿಬುಧಾಶ್ರಯರ್ . . . ಅಹಿರಾಜನನ್ತೆ ನಿಖಿಳಕ್ಷಮೆಗಾಸ್ಪದರೆನ್ದೊಡಿಗಳಾದ್ಯೋರೆಯರೊ ಬಳ್ಳಿಗಾವೆಯ ಮಹಾನಗರಂಗಳೊಳೀ ಧರಿತ್ರಿಯೊಳ್ (ಎಕ. VII, ಶಿಕಾರಿ. ೧೦೦–೯೩ ; 1129) ; ಶ್ರೀಮತು ಕುಬೇರ ವಂಶಾನ್ವಯರಪ್ಪ ಶ್ರೀಮದಶೇಷ ನಗರಂಗಳು ವರ್ಷಂಪ್ರತಿ ಕೊಡುವನ್ದಾಗಿ (ಸೌಇಇ. IX-1, ೨೯೫-೩೦ ; 1172). [ ಸಂ. ]

**ನಗರಂಜಿತ** (ನಾ). [ಛಂದ] ಕೃತಿ ಛಂದಸ್ಸಿಗೆ ಸೇರಿದ ಪಾದದಲ್ಲಿ ಇಪ್ಪತ್ತು ಅಕ್ಷರಗಳನ್ನುಳ್ಳ ಒಂದು ವೃತ್ತ : ರಾಜಚತುಷ್ಟಯಮೋಳಿಯೊಳ್ಳಿತರೆ ಪಾವಕಾನಿಲರಲ್ಲಿ ಮತ್ತೋಜೆಯೊಳೊಂದಿ ಹರೀಶ್ವರರಾಗಿರೆ ಮಿಶ್ರಮಂ ದಿನನಾಥರೊಳ್ ರಾಜಿಸುತಂ ನಿಲೆ ನಾಕಿಗನಿಂದುರು ರೂಢಿವೆತ್ತಿರೆ ಸಂದುದಿಂತೀ ಜಗದೊಳ್ನಗರಂಜಿತಮೆಂಬುದು (ಛಂದೋಂಬು. ೨-೧೭೮).

[ ಸಂ. ]

**ನಗರಕ** (ನಾ). = ನಗರಪಾಲಕ : ನಗರರಕ್ಷಣೆಯು ನಗರಪಾಲಕ ಅಥವಾ ನಗರಕನೆಂಬ ಅಧಿಕಾರಿಯ ಕರ್ತವ್ಯವಾಗಿತ್ತು (ಭಾಇಪ್ರ. ೬೬).

[ <ಸಂ. ನಾಗರಕ ]

**ನಗರಜೀವನ** (ನಾ). ಪಟ್ಟಣದಲ್ಲಿ ವಾಸಿಸುವಿಕೆ ; ಪಟ್ಟಣದ ಬದುಕು : ಹಳ್ಳಿಯಜೀವನ ನಗರಜೀವನಕ್ಕಿಂತ ಸರಳವಾದುದು (ರೂಢಿ).

[ ನಗರ + ಜೀವನ ]

**ನಗರತ್ತ**, ನಗರ್ತ (ನಾ). ಪಟ್ಟಣಗಳಲ್ಲಿ ವ್ಯಾಪಾರಮಾಡುವವನು; ಒಂದು ವೈಶ್ಯ ಪಂಗಡದವನು ; ನಾಡಸೆಟ್ಟಿ : ಉಗ್ರಾಮೇಶ್ವರಕ್ಕೆ . . . ನಿರಟ್ಯೊರಾಪನ್ನಿರ್ಪ್ಪಳ್ಳಿಯ × × × ಎಲ್ಲಂ ಕಣ್ಣಗಮಾನಮುಂ ನಗರತ್ತೊರು ಪೆಚ್ಚಿಗದೇಉಗೆ ಕೊಟ್ಟರ್ (ಎಕ. IX, ಹೊಸಕೋ ೮೩-೫ ; ಸು. ೭೫೦); ಉತ್ತನೂರ ಮಡವಳದ ಗಉರಿದೇವಿಯ ಸ್ಥಾನಿಕ ಕೂರಇಕೊಳ ಆಡಪುಗಳೂ ನಗರತ್ತರೂ ಮಂಗರಸಗೆ ಕೊಟ್ಟ ಕಟಿಯ ಕಟ್ಟುಕೊಡಗಿಯ ಮಾನ್ಯದ ಗದ್ದೆಯ ಶಾಸನ (ಎಕ. X, ಮುಳಬಾ. ೧೩೦-೩ ; 1407). **ನಗರ್ತ** : ವೈರುಗಳಂ ತಂದು ತುಂಬಿ ಬ್ಯಾರವಂ ಮಾಡುವ ಬೆರಿಯರು ಬಣಜಿಗರು ನಗರ್ತರು (ಸೌಗಂಧಿ. ೧೩೫-೪) ; ತಮಿಳಿನಲ್ಲಿ ನಗರತ್ತಾರ್ ಎಂದು ಒಂದು ಜನಸಮುದಾಯಕ್ಕೆ ಹೆಸರು, ಎಂದರೆ ನಗರದವರು. ಇದು ಕನ್ನಡದಲ್ಲಿ ನಗರ್ತರು ಎಂದು ವಾಡಿಕೆಗೆ ಬಂದಿದೆ. ನಿಜದಲ್ಲಿ ಇದರ ಅರ್ಥ ನಗರದ ಎಂದು. ಆದರೆ ಈಗ ಈ ಪದ ಒಂದು ಅಂಕಿತನಾಮವಾಗಿದೆ(ನಮ್ಮನು. ೧೦೬).

ನಗರ್ತಪೇಟೆ, ನಗರ್ತರ ಪೇಟೆ = ನಗರ್ತರ ಪೇಟೆ ವ್ಯಾಪಾರಿಗಳು ಇರುವ, ಪಟ್ಟಣದ ಒಂದು ಭಾಗ.; ವ್ಯಾಪಾರ ನಡೆಯುವ ಸ್ಥಳ; ಪೇಟೆ ಬೀದಿ: ಬೆಂಗಳೂರಿನಲ್ಲಿ ನಗರ್ತಪೇಟೆಯಿದೆ (ರೂಢಿ); ಬೆಂಗಳೂರಿನ ನಗರ್ತರ ಪೇಟೆಯಲ್ಲಿ ಸರಾಫ್ ಅಂಗಡಿಗಳಿವೆ (ರೂಢಿ).
[ ←ತಮಿ. ನಕರತ್ತ, ನಕರತ್ತು./ಸಂ. ನಗರ ]

**ನಗರನಿವಾಸಿ** (ನಾ). ನಗರದಲ್ಲಿ ವಾಸ ಮಾಡುವವನು; ಪೌರ: ನಗರವು ಶುಚಿಯಾಗಿರಬೇಕಾದರೆ, ನಗರನಿವಾಸಿಗಳೇ ಹೊಣೆಗಾರರಾಗಬೇಕು (ರೂಢಿ).
[ ನಗರ + ನಿವಾಸಿ ]

**ನಗರನೈರ್ಮಲ್ಯ** (ನಾ). ಪಟ್ಟಣದ ಶುಭ್ರತೆ,–ಸ್ವಚ್ಛತೆ: ನಗರನೈರ್ಮಲ್ಯದ ಕೆಲಸವನ್ನು ಮುನಿಸಿಪಾಲಿಟಿಯು ವಹಿಸುತ್ತದೆ (ರೂಢಿ).
[ ನಗರ + ನೈರ್ಮಲ್ಯ ]

**ನಗರಪಾಲಕ** (ನಾ). ಪಟ್ಟಣವನ್ನು ಪಾಲಿಸುವವನು; ಪುರಸಭೆಯ ಸದಸ್ಯ; ಮುನಿಸಿಪಾಲಿಟಿಯ ಸದಸ್ಯ; ನಗರರಕ್ಷಕ: ನಗರಪಾಲಕರು ಇತ್ತ ಕಡೆ ಗಮನವನ್ನೇ ಕೊಡುತ್ತಿಲ್ಲ (ನಂಟರು. ೪೪).
[ ನಗರ + ಪಾಲಕ ]

**ನಗರಪಾಲಿಕೆ** (ನಾ). ಸ್ಥಳೀಯ ಆಡಳಿತಾಧಿಕಾರವುಳ್ಳ ಪುರಸಭೆ,–ಪೌರಸಂಸ್ಥೆ; ಮುನಿಸಿಪಾಲಿಟಿ: ಯಥಾಶಕ್ಯವಾಗಿ ಮೂರನೆಯ ಒಂದು ಭಾಗದ ಸದಸ್ಯರು, ಆ ರಾಜ್ಯದಲ್ಲಿಯ ನಗರಪಾಲಿಕೆಗಳ ಜಿಲ್ಲಾಮಂಡಲಿಗಳ . . . ನಿರ್ವಾಚಕಮಂಡಲಗಳಿಂದ ನಿರ್ವಾಚಿತರಾಗತಕ್ಕದು (ಭಾಧಾನ. ೯೦).
[ ನಗರ + ಪಾಲಿಕೆ ]

**ನಗರಪಿತೃ** (ನಾ). ಪಟ್ಟಣಕ್ಕೆ ತಂದೆಯಂತಿರುವವನು; ಮುನಿಸಿಪಾಲಿಟಿಯ ಮುಖ್ಯಾಧಿಕಾರಿ: ಪಟ್ಟಣದಲ್ಲಿ ಹರಡುವ ಕಾಲರಾ ಮುಂತಾದ ಸಾಂಕ್ರಾಮಿಕರೋಗಗಳ ಪ್ರತಿಬಂಧಕೋಪಾಯವನ್ನು ನಗರಪಿತೃಗಳು ಮಾಡಿಯೇ ಮಾಡುತ್ತಾರೆ (ರೂಢಿ). [ ನಗರ + ಪಿತೃ ]

**ನಗರಮಹಾಸಭೆ** (ನಾ). = ನಗರಪಾಲಿಕೆ: "ಪೌರಸಂಸ್ಥೆ, ನಗರಮಹಾಸಭೆ" (Municipal Corporation. ಪತ್ರಿನಿ. ೨೫). [ ನಗರ + ಮಹಾಸಭೆ ]

**ನಗರಮುಸ್ತೆ** (ನಾ). ಒಂದು ಬಗೆಯ ಸಸ್ಯ: (ವ್ಯಾಜಿ. ೨೮-೫೬೭).
[ ಸಂ. ನಗರಮುಸ್ತಾ ]

**ನಗರರಾಜ್ಯ** (ನಾ). ಒಂದೊಂದು ಪಟ್ಟಣವೇ ಪ್ರತ್ಯೇಕ ರಾಜ್ಯವಾಗಿರುವುದು,–ಸ್ವತಂತ್ರ ಆಡಳಿತವನ್ನು ಹೊಂದಿರುವುದು: ಕ್ರಿ.ಪೂ. ಏಳನೆಯ ಶತಮಾನದ ಹೊತ್ತಿಗೆ ಗ್ರೀಸ್‌ನಲ್ಲಿ . . . ನಗರರಾಜ್ಯಗಳು (City States) ಕಾಣಿಸಿಕೊಳ್ಳಲಾರಂಭಿಸಿದುವು (ಅರಿಶಾ. ೨೦೮).
[ ನಗರ + ರಾಜ್ಯ ]

**ನಗರಲ** (ನಾ). ಒಂದು ಊರಿನ ಹೆಸರು; P ಮೈಸೂರುಜಿಲ್ಲೆಯ ನಂಜನಗೂಡು ತಾಲ್ಲೂಕಿನ ಈಗಿನ ನಗರ್ಲೆ: ಶ್ರೀಮತ್ಪೆರ್ಮ್ಮಾನಂಗಳ್ಗೆ ವಿದ್ಯಾಧರಯ್ಯಂ ಬಿನ್ನಪಂಗೆಯ್ದು ನಗರಲ ನನ್ನಯ್ಯನ ದೇಗುಲಕ್ಕೆ ಮುತ್ತೆರೆಯಂ ಪಡೆದುಕೊಟ್ಟಂ (ಎಕ. III, ನಂಜನ. ೧೫೫-೫; 970?). [ ? ]

**ನಗರವರ್ಧಕಿ** (ನಾ). ಪಟ್ಟಣವನ್ನು ನಿರ್ಮಾಣ ಮಾಡುವವನು; ಶಿಲ್ಪಿ: ನಗರವನ್ನು ಕಟ್ಟಲು ಬಯಸುವ ನಗರವರ್ಧಕಿಯು ಮೊದಲು ನಗರದ ಸ್ಥಾನವನ್ನು ಶೋಧಿಸುವನು (ಬುದ್ಧಪ. ೪೫). [ ನಗರ + ವರ್ಧಕಿ ]

**ನಗರವಾಸ** (ನಾ). ಪಟ್ಟಣದಲ್ಲಿ ವಾಸಿಸುವಿಕೆ,–ಜೀವನ ನಡೆಸುವಿಕೆ: ನಗರವಾಸಕ್ಕಿಂತ ಗ್ರಾಮವಾಸ ಸರಳತರವಾಗಿರುತ್ತದೆ (ರೂಢಿ).
[ ನಗರ + ವಾಸ ]

**ನಗರವಾಸಿ** (ನಾ). ಪಟ್ಟಣದಲ್ಲಿ ವಾಸಿಸುವವನು; ಪಟ್ಟಣಿಗ: ನಗರವಾಸಿಗಳಿಗಿಂತ ಗ್ರಾಮೀಣರು ಹೆಚ್ಚು ಆರೋಗ್ಯಶಾಲಿಗಳು (ರೂಢಿ).
[ ಸಂ. ನಗರವಾಸಿನ್ ]

**ನಗರಶೋಧಕ** (ನಾ). ಪಟ್ಟಣದ ಕಾವಲುಗಾರ, – ಪಹರೆಯವನು.
[ ನಗರ + ಶೋಧಕ ]

**ನಗರಶೋಧನ** (ನಾ). = ನಗರಶೋಧನೆ. [ ನಗರ + ಶೋಧನ ]

**ನಗರಶೋಧನೆ** (ನಾ). ಪಟ್ಟಣದ ಪಹರೆ: ಪಾದರಿಯನಟಿಸಿ ಪಿಡಿದುರುವಣಿಸಿ ದರ್ನಗರಶೋಧನೆಯು ತಳವಾಱಿರಂತೆ ಬನದೊಳ್ಪೆಣ್ಣಳು (ಜೈಮಿಭಾ. ೮-೨೨).
[ ನಗರ + ಶೋಧನೆ ]

**ನಗರಶೋಭನೆ** (ನಾ). ಪಟ್ಟಣಕ್ಕೆ ಅಲಂಕಾರವಾಗಿರುವವಳು; ವಾರಸ್ತ್ರೀ; ಗಣಿಕೆ; P ಈ ಅಭಿಧಾನಕ್ಕೆ ಪಾತ್ರರಾದವರು ಅಸಾಮಾನ್ಯ ರೂಪವತಿಯರಾದುದರಿಂದ ನಗರದಲ್ಲಿ ಯಾರೊಬ್ಬರ ವಿಶಿಷ್ಟ ಸ್ವತ್ತೂ ಆಗದೆ, ಸಾರ್ವಜನಿಕರ ಸ್ವತ್ತಾದವರು. ಹೀಗೆಂದು ಜನಪದ ತೀರ್ಮಾನಿಸುತ್ತಿತ್ತು. ಆದುದರಿಂದ ಇವರಿಗೆ 'ನಾಗರಸ್ತ್ರೀ' ಎಂದೂ ಹೆಸರು. ಈ ವರ್ಗದ 'ಗಣಿಕೆ'ಯರು ಎಲ್ಲರಿಗೂ ಸುಲಭವಾಗಿ ಲಭಿಸುತ್ತಿರಲಿಲ್ಲ. ಇವರು ಬೆಲೆವೆಣ್ಣುಗಳಾದರೂ ಇವರ ಬೆಲೆ ತುಂಬಾ ದುಬಾರಿ, ಉದಾಹರಣೆಗೆ 'ಅಡ್ಡಕಾಸೀ' (ಅರ್ಧಕಾಶೀ) ಎಂಬ ನಗರಶೋಭನೆಗೆ ಒಂದು ರಾತ್ರಿಗೆ ಕಾಶೀನಗರದ ಹುಟ್ಟುವಳಿಯಲ್ಲಿ ಅರ್ಧದಷ್ಟು ತೆರಬೇಕಾಗಿತ್ತು. ಆಮ್ರಪಾಲಿ ಈ ವರ್ಗಕ್ಕೆ ಸೇರಿದವಳು: ತನ್ನ ರಾಜಧಾನಿಯಲ್ಲಿ ಅವಳಂತಹ ನಗರಶೋಭನೆ ಯಿಲ್ಲವಲ್ಲಾ, ಎಂದು ಬಿಂಬಸಾರನು ಖಿನ್ನನಾದನು (ಹತ್ತುಪು. ೯೯). 'ನಾಗರಸ್ತ್ರೀ' ಪರಾ. [ ನಗರ + ಶೋಭನೆ ]

**ನಗರಶ್ರೇಷ್ಠಿ** (ನಾ). ಪಟ್ಟಣದ ಪ್ರಧಾನವ್ಯಕ್ತಿ: ಚಂದ್ರಗುಪ್ತನು ಸಂತುಷ್ಟನಾಗಿ ಚಂದನದಾಸಸೆಟ್ಟಿಗೆ ಸರ್ವನಗರಶ್ರೇಷ್ಠಿಪದವಿಯನ್ನು ಕೊಟ್ಟದ್ದಾನೆ (ರಾಕ್ಷಮು. ೧೦೮). [ ನಗರ + ಶ್ರೇಷ್ಠಿ ]

**ನಗರಸಭೆ** (ನಾ). ಸ್ಥಳೀಯ ಆಡಳಿತಾಧಿಕಾರವುಳ್ಳ ಪುರಸಭೆ,–ಪೌರಸಂಸ್ಥೆ; ಮುನಿಸಿಪಾಲಿಟಿ: ಎಲ್ಲಿಯಾದರು ಕಸರು ಕಡ್ಡಿಯ ಹುಡುಕಿ ತೆಗೆಯಿರಿ ನೋಡುವ ಕೆಸರೂ ಬೇಕಾದಷ್ಟು ನಡೆಯಿರಿ ನಗರಸಭೆಗೇ ತೂರುವ (ನೆಲಮು. ೧೨-೧೮); ನಗರಸಭೆ ಮತ್ತು ಕೆಲಸಗಾರರು ಶೀಘ್ರದಲ್ಲಿ ಒಂದು ತಳಹದಿಯ ಮೇಲೆ ಒಪ್ಪಂದಕ್ಕೆ ಒಪ್ಪುವಂತಾಗಲಿ (ಆಪನಾ. ೧೩೪).
[ ನಗರ + ಸಭೆ ]

**ನಗರಸೌಂದರ್ಯ** (ನಾ). ಪಟ್ಟಣದ ಅಂದ,–ಶೋಭೆ: ನಗರಸೌಂದರ್ಯವನ್ನೂ ನಾಗರಿಕರು ಇದ್ದ ರೀತಿಯನ್ನೂ ಪ್ರವಾಸಿಗಳು ಬರೆದಿಟ್ಟಿದ್ದಾರೆ (ರೂಢಿ). [ ನಗರ + ಸೌಂದರ್ಯ ]

**ನಗರಾಖ್ಯಾನ** (ನಾ). ಪಟ್ಟಣದ ವರ್ಣನೆ: ನಗರಾಖ್ಯಾನವೆಂಬುದು ನಗರವ್ಯಾವರ್ಣನಂ (ಚಾವುಂಪು. ೧೨). [ ಸಂ. ]

**ನಗರಾಜ** (ನಾ). = ನಗಪತಿ ೧: ಮಾನಿತನಗರಾಜನತುಳಘನಹಿಮತೇಜಂ (ಹಮ್ಮೀರ. ೧-೪೩); ಕರೆತಾರೆ ಕಾಮಿನಿ ಕಮಲಜಪಿತನ . . . ನಗರಾಜವೈರಿಯ ಮಗನ ಬೀಗನ (ಕನಕ. ೯೩-೨). [ ನಗ₄ + ರಾಜ ]

**ನಗರಾಡಳಿತ** (ನಾ). ಪಟ್ಟಣದ ಮೇಲ್ವಿಚಾರಣೆ,–ಆಳ್ವಿಕೆ: ನಗರಾಡಳಿತವು ನಗರಸಭೆಗೆ ಸೇರಿದುದಾಗಿದೆ (ರೂಢಿ). [ ನಗರ + ಆಡಳಿತ ]

**ನಗರಾಧಿಕಾರಿ** (ನಾ). ಪಟ್ಟಣದ ಉಸ್ತುವಾರಿ ಮಾಡುವವನು; ಪುರದ ಮೇಲ್ವಿಚಾರಣೆಯನ್ನು ಮಾಡುವವನು: ಅನಂತರದಲ್ಲಿ ನಗರಾಧಿಕಾರಿ ಭಾವನೂ, ಆತನ ಹಿಂದೆ ಹಿಂಗಟ್ಟುಮುರಿಯುಳ್ಳ ಪುರುಷನನ್ನು ಹಿಡಿದುಕೊಂಡು ಇಬ್ಬರು ಕಾವಲುಗಾರರೂ ಬರುವರು (ಶಾಕುಂತ. ೬೫-೧).
[ ನಗರ + ಅಧಿಕಾರಿ ]

**ನಗರಿ** (ನಾ). = ನಗರ ೧: "ನಗರಿ ಪುಟಭೇದನಂ ಪೂಃ ಪುರಂ ಪತ್ತನಂ ನಿಗಮಂ ಪುರೀ ಪ್ರಜಾಸ್ಥಾನಮಾ ದುರ್ಗಮೆನೆ ನಗರಮೆನೆ ಪಟ್ಟಣಂ" (ಮಂಗರಾ. ೫೬-೩); ಚರಿಸುವುದು ರಥವೊಂದು ವಾಗೀಶ್ವರನ ಪುರಿಗೆ . . . ಉರಗರಾಜನ

ನಗರಿಗದಱಿಂ ಧರೆಯೊಳಗೆ ಹೆಸರಾದುದಾ ಭೂವ ಶಿರೋರತ್ನಂಗೆ ದಶರಥ ನೆಂಬ ಗುಣನಾಮ (ತೊರರಾ. ೧-೩-೨೦) ; ನಾಗವೇಣಿ ನಗರಿಗೆ ನಾಂ ಪೋಗಿ ಬರುವೆನೆ (ಶಾಕುಂತ. ೪೪ ಅಡಿಟ). [ ಸಂ. ನಗರೀ ]

**ನಗರಿಂಗ** (ನಾ). ಪಟ್ಟಣದಲ್ಲಿ ವಾಸಮಾಡುವವನು ; ನಾಗರಿಕ : ನಗರದಿ ಗೂಢದಲ್ಲಿ ನಡೆವ ವೇಳೆಯಲಿ ನಗರಿಗರ ಬಾಳುವೆಯ ಕೆಲವೆರಡು ಅವಸರವ ಕಂಡು (ಸವರಾ. ೫-೨). [ ನಗರ + – ಇಗ ]

**ನಗರಿಪು** (ನಾ). = ನಗಪಗೆ : ನಗರಿಪುಗೆ ಚಿಂತೆ ಸಂತಸಮೊಗೆದುದು ರವಿ ರಾಗವಳಿದಂ (ರಾಜಶೇ. ೧೩-೮೦). [ ನಗ₄ + ರಿಪು ]

**ನಗರೀಕರಣ** (ನಾ). ಪಟ್ಟಣವಾಗಿ ಮಾರ್ಪಡಿಸುವುದು ; ಪಟ್ಟಣ ಜೀವನದ ಪ್ರಭಾವವನ್ನು ಬೀರುವುದು : ಜನಪದಜೀವನದ ಮೇಲೆ ನಗರೀಕರಣದ ಪ್ರಭಾವ ಬಿದ್ದಷ್ಟೂ, ಆಧುನಿಕ ವಿದ್ಯಾಭ್ಯಾಸದ ಪರಿಚಯ ಹೆಚ್ಚಿದಷ್ಟೂ ಜನಪದದ ಮೂಲಸೊಗಸು, ದೇಸೀಸೊಗಡು ಕಡಿಮೆ ಯಾಗುತ್ತಾ ಹೋಗುತ್ತದೆ (ಸುವರ್ಣ. ೩೩). [ ಸಂ. ]

**ನಗರು** (ಕ್ರಿ). ಏದುಸಿರು ಬಿಡು ; ಏದು ; ತೇಕು : ಬಿಸಿಲಿನಲ್ಲಿ ಕಟ್ಟಿದ ಎಮ್ಮೆ ನಗರುತ್ತಿದೆ (ರೂಢಿ). [ ? ]

**ನಗರೂರ್** (ನಾ). ಒಂದು ಊರಿನ ಹೆಸರು : ನಗರೂರ ಬೆಳ್ಳಿಯರುಂ ಮಾರವೂರ ವಣ್ಣಾಕರುಂ (ಪ್ಯಾಆರಿ. ೧೯೨೭, ೧೧೮-೪೪ ; 726). [ ನಗರ + ಊರ್ ]

**ನಗರೆ₁** (ನಾ) ೧. ಒಂದು ಬಗೆಯ ಸಂವಾಸನೆಯುಳ್ಳ ಬೇರು,–ಗಡ್ಡೆ ; ಭದ್ರಮುಸ್ತೆ ; ಕೊನ್ನಾರಿ : ಮೇಲು ಚಂದನಮುಂ ನಗರೆಯುಂ ಹೋಲಿ ಸುವಡೆ ಸಮಾನಪಹುದೇ (ಬಸವು. ೪೮-೩೫) ; ಅಗರು ಚಂದನ ಪಟ್ಟಿ ರ್ಘುಲ್ಲಿ ಬಪ್ಪಂಬುಧಿ ನಗರವಾಳುವ ನರಪತಿಗೆ ನಗರೆ ಕಂಬಳಿ ಪೀಲಿಗಳನುಳ್ಳ ನಾಡಿನ ವಿಗಡಮನ್ನೆಯರು ಪಾಸಟಿಯೆ (ಕುರಾಸಾಂ. ೦೦-೨೦). ೨. ಒಂದು ಬಗೆಯ ಮರ ಮತ್ತು ಅದರ ಬೀಜ, ಕಾಯಿ, ಹಣ್ಣು : ನಗರೆ[ಪಾಠಾಂ. ೦]ಯ ಗೊಟ್ಟಿಯನರೆದಾಖುಗಳಿಕ್ಕಿದ ಹಿಕ್ಕೆ ಸಹಿತಮೆಣ್ಣೆಯೊಳೊಂದಲ್ ಬಗೆದೆಡೆಯೊಳ್ ಧೂಪಮನಿಕ್ಕುಗೆ ತದ್ಗೃಹದಿಂದೆ ಮೂಷಕಂ ಪೊಱಮಡುಗುಂ (ಜಮಡ. ೧೬-೮೪); ನಗರೆಯೆಲೆ ಕನಕಪತ್ರಮುಮೊಗನಿಯ ತಿಗುಡಿಂತಿವೆಲ್ಲಮಂ ಕೊಟ್ಟದೊಳಿಕ್ಕುಗೆ ವಾಜಿಗೆ (ಅಶ್ವಶಾ. ೧೧-೪೪) ; ಹಾಲೆ ಬಿದಿರಿಪ್ಪೆ ಹುಣಿಸಂಕೋಲೆಲಚಿಯ ಬಾಗೆ ನಗರೆ . . . ಬನ್ನಿ ಹೊನ್ನೆಯ ತರುಗಳ್ (ಹಮ್ಮೀರ. ೯-೭೯) ; ಬೆಳಲು ಬಿಲ್ವತ್ರ . . . ತುಂಬುರ ನಗರೆ ಮುಂತಾದ ಪಣ್ಗಳ ತಂದರಾಳ್ದನ ಬಳಿಗೆ (ಮೋಹತ. ೧೯-೫೬) ; ಹಾವುವೆ ಕೈಯ ಬೇರು, ನಗರೆಯ ಬೀಜ ಇವಂ ಎಣ್ಣೆಯಲ್ಲಿ ಅಟ್ಟು ಪೂಸಲು ಗಂಡಮಾಲೆಯು ಮಾಣ್ಗುಂ (ವಿವ್ಮವಿ. ೮೦) ; ನಗರೆ, ದೊಡ್ಡಕಾರೆ, . . . ಒಳ್ಳೆಕಾರೆ (ಪ್ಯಾಜಿಗಿ. ೬೬-೦೩೩೯). [ದೇ. ≈ ತೆಲು. ನಗಿರ]

**ನಗರೆ₂** 'ನಕರ₁' ನೋ.

**ನಗರೆ₃** (ನಾ). ಒಂದು ಸಂಖ್ಯೆಯ ಸಂಕೇತ (?): "ಪೇಟುವೊಡೆ ಕೇಮಿ ಆರಯೆ ಮುದ್ದಣಂ . . . ಹತ್ತು ದಶಕಂಸ ಕಾರತಯ ನಗರೆಯಾಗಿ ತೇಯುಂ . . . ಬೆಟ್ಟು ಪಣವೆನಲು ನೀರಿದೆಯೆನಿಕ್ಕುಂ" (ಮಂಗರಾ. ೦೦೨-೪). [ ? ]

**ನಗರೆವಳ್ಳ** (ನಾ). (ನಗರ್ಲೆಯಲ್ಲಿ ಹರಿಯುವ) ಒಂದು ಹಳ್ಳದ ಹೆಸರು : ಅನ್ತೆ ಬಂದು ಪಾಲಕೆರೆಗನೆ ಬಂ ಪುಣಿಸೆಯಿಂ ಅನ್ತೆ ಬನ್ದು ನಗರೆವಳ್ಳದಿ ಮೂಡಣಬೇಲಿಯಿಂ (ಎಕ. III, ನಂಜನ. ೧೩೯–೧೬ ; 915 ?). 'ನಗರಲ' ಪರಾ. [ ನಗರೆ ? + ಪಳ್ಳ ]

**ನಗರೋಪಕಂಠ** (ನಾ). ಪಟ್ಟಣದ ಸಮೀಪ ; ಪಟ್ಟಣದ ಹತ್ತಿರದ ಪ್ರದೇಶ,–ನೆರೆಹೊರೆ : ಜೀಯ ಬಲಿಗಳ ತೆಗೆಸು ನಡೆ ನಿರ್ದಾಯದಲಿ ನಿಮ್ಮಡಿಯ ಬೇಟೆಗೆ ರಾಯ ಮೃಗವೈತಂದವಿವೆ ನಗರೋಪಕಂಠದಲಿ (ಕುವ್ಯಾಆ. ೮೨-೦೫). [ ನಗರ + ಉಪಕಂಠ ]

**ನಗರ್ತ** 'ನಗರತ್ತ' ನೋ.

**ನಗಲಿಕ** (ನಾ) ಮೀನು ಹಿಡಿಯುವವನು ; ಬೆಸ್ತ (?) : ಅಟಕರಿ, ಬಣ್ಣ ಗಾರ, ಬಿಳಿಮಗ್ಗ, ದೇವಾಂಗ, ಜಾಡ, ನಗಲಿಕ, ಪಟ್ಟೆಗಾರ, ಸಾಲೆ, ಸೇಣಿಯ (ತುಳುನಾ. ೦೭೩). [ < ನಗಲು ? + – ಇಕ ]

**ನಗಲು**, ನಕುಲ್ಲು (ನಾ). ಒಂದು ಬಗೆಯ ಮೀನು : ಬಿಳಿಚ ಚಿಪ್ಪಲು . . . ನಗಲು[ಪಾಠಾಂ. ನರಗ, ನಲಗು] ಹೆಲ್ಲರು ಬಂಕುರುಂ ಹಳಲೆ ಕಪ್ಪೆ ಗಳೊಱಲೆ ಬೋಟೆ ಗಿಜಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಚ್ಚಶಾ. ೫-೪೬). ನಕುಲ್ಲು : ಬಾಣಾ ವಳಿಯ ತಡಿಕೆಯಲಿ ಹೊಯ್ವೆವು ನಕುಲಜಾತಿಯನು (ಕುವ್ಯಾಕ. ೨೨-೨೯). [ ? ]

**ನಗವರ** (ನಾ). ಶ್ರೇಷ್ಠವಾದ ಪರ್ವತ : ಹಾ ನೃಪಕುಲವಿದಿತಸುವೃತ್ತರಿರಾ ಹಾ ನಗವರಸನ್ನಿಭಚಿತ್ತರಿರಾ (ಜೀವಸಂ. ೨೪-೪೬ ರಗಳೆ). [ ನಗ₄ + ವರ₃ ]

**ನಗವಾಯ್** (ನಾ). ಮೇಲಕ್ಕೆ ಎದ್ದಿರುವ ಪೀಠ : ನಗವಾಯಿಂ ಕುಮುದಂ ಗಳಿಂ ನೆಗೆದ ಜಂಘಾಕಾಂಡದಿಂ ರನ್ನವಟ್ಟಿಗೆಯಿಂ ದಂಡಲತಾವಿಚಿತ್ರ ಮಯ ಪತ್ರಬ್ರಾತದಿಂ ಘಂಟೆಯಿಂ ಬಗೆಯಂ ಬಲ್ಪೆಱೆಗೆಯ್ವ ಪುತ್ತಳಿಗಳಿಂರಂಗ ಸ್ಥಳೀಸ್ತಂಭಮಾವಗಮೊಪ್ಪುತ್ತಿರೆ ರಂಜಿಕುಂ ಹರಿಹರಶ್ರೀದೇವತಾ ಮಂದಿರಂ (ಎಕ. XI, ದಾವಣ. ೨೫-೭೬ ; 1224) ; "ನಗವಾಯ್ ಇತ್ಯಾದಿ ಕಟ್ಟಡಕ್ಕೆ ಸಂಬಂಧಿಸಿದ ಸಂಕೇತ ಶಬ್ದಗಳು" (ಶಾಪಮಂ. ೨೯೫ ಟಿಪ್ಪಣಿ). [?]

**ನಗವೃಂದ** (ನಾ). ಪರ್ವತಗಳ ಸಮೂಹ,–ಗುಂಪು. 'ನಗವೃಂದಾಧಿಪ' ಪರಾ. [ ನಗ₄ + ವೃಂದ ]

**ನಗವೃಂದಾಧಿಪ** (ನಾ). = ನಗಪತಿ ೧ : ನಗವೃಂದಾಧಿಪ ಕನ್ಯಕಾಧಿಪತಿಗಾದಾ ತುತ್ತುತುತ್ತಿಂಗೆ ಮೆಲ್ಲಗೆ ಕೂರ್ತರ್ಪಿಸುತಿರ್ದದೊಂದು ದಿವಸಂ (ಉದ್ಭಟ. ೦೨-೦೯). [ ನಗವೃಂದ + ಅಧಿಪ ]

**ನಗವೇಣಿ** 'ನಗೆವೇಣ್' ನೋ.

**ನಗವೈರಿ** (ನಾ). ಪರ್ವತಗಳಿಗೆ ಶತ್ರುವಾದವನು,–ಇಂದ್ರ : ಭೂರುಹ ಮಿದು ದಿವ್ಯಂ ಬಿಡಬಾರದೆನಲ್ ದೇವ ರಾಜ್ಯಕಂಠಿಕೆ ತನಗಿಂ ಬಾರದು ಬರ್ಕುಂ ತನ್ನಗವೈರಿಯ ಕಂಠಕ್ಕೆ ಮತ್ಸುದರ್ಶನಚಕ್ರಂ (ಜಗವಿ. ೧೩-೩೨). [ ನಗ₄ + ವೈರಿ ]

**ನಗಶರ** (ನಾ). ಬೆಟ್ಟಗಳನ್ನು ಸಂರಿಸುವ ಬಾಣ : ನಗಶರವನ್ನು ಕವಿಸಿದ ಚಿನುಮಯಾತ್ಮಕಳಾದ ದೇವಿಯ ತನುವಿನ ಮೇಲುರುಳಿದವು ಮಹಪರ್ವತ ಗಳು (ದೇವೀಮ. ೦೬೦-೧೧). [ ಸಂ. ]

**ನಗಶಿಖರ** (ನಾ). ಬೆಟ್ಟದ ಅಗ್ರಭಾಗ,–ತುದಿ: ನಗಶಿಖರಾಗ್ರದಿಂ ಸರಭಸಂ ನೆಗೆವಚ್ಚರಿಯುನ್ನತಸ್ವನಂ ಮಿಗೆ ಮುಗಿಲಂ ಪಳಂಚಲೆದು ಪೊಯ್ಯೆ . . . ಮೇಣದು ಶೋಕರಾವಮಂ ನೆಗಳ್ದುದೊ ತಳ್ವದೆಂಬಿನಮುಳುಂಬಮದೊಪ್ಪುಗು ಮಂಬುದಸ್ವನಂ (ಶಬಶಂ. ೦-೪೭). [ ನಗ₄ + ಶಿಖರ ]

**ನಗಸಾನು** (ನಾ). ಬೆಟ್ಟದ ತಪ್ಪಲು,–ಇಳಿಜಾರು ಪ್ರದೇಶ : ನಗಸಾನು ತಲಂ ಮನುಜರ್ಗಗೋಚರಂ ಕಟ್ಟಿ ಗುಡಿಯನಿರ್ದಪರಾರ್ (ಪಂರಾಮಾ. ೦೦-೫೦) ; ಬಗಿದು ಪೊಗಲ್ಕರಿದೆಲ್ಲಿಯುಮೊಗೆದ ಮರಂ ಪೊದಱು ಬಳ್ಳಿ ಗಿಡು ವೆಂಬಿವಱಿಂ ಮಿಗಿಲೆನಿಪ ಬಲ್ಲೆ ನಗಸಾನುಗಳೊಳದಂತಾವ ಮೆಯ್ಯೊಳಂ ಪುದಿದಿರ್ಕುಂ (ಕಾವ್ಯಾವ. ೪೭). [ ನಗ₄ + ಸಾನು ]

**ನಗಸಾರ** 'ನಗಂಸಾರ' ನೋ.

**ನಗಸುತಾವರ** (ನಾ). ಪಾರ್ವತಿಯ ಪತಿ ; ಈಶ್ವರ ; ಶಿವ : ನಗಸುತಾವರ ನೊಲುಮೆ ನೆಟ್ಟನೆ ಸೊಗಸಿಹುದು ನಿನ್ನಗ್ರಜಗೆ (ತೊರರಾ. ೬-೩-೩೦). [ಸಂ.]

**ನಗಸುತೆ** (ನಾ). ಪರ್ವತರಾಜನ ಮಗಳು ; ಪಾರ್ವತಿ : ಕರೆತಾರೆ ಕಾಮಿನಿ ಕಮಲಜಪಿತನ , . . ನಗಸುತಾಪತಿಕಾಯದೊಳು ಮೂಡಿಹನ (ಕನಕ. ೯೩-೨). [ ನಗ₄ + ಸುತೆ ]

**ನಗಹರ** (ನಾ). ೧. = ನಗವೈರಿ : ನಗಹರನ ಗಣಿಕಾಶಿರೋಮಣಿ ವಿಂಗೆ ದಯಾಮತಿಯಿಂದೆ ಬೋಧಿಸ ಬಗೆದು ತಾನಿಂತೆಂದಳು (ಬಸಪು. ೪೦-೩). ೨. [ಛಂದ] ಇಂದ್ರಗಣ ; ನಗಣ : ನಗಹರೇಂದುಗಣತ್ರಿತಯಂಗಳ ಮುಂದಗಲದೀಶ್ವರನಿರ್ದೊಡೆ . . . ಅಭ್ಯುದಯಂ (ಛಂದೋಂಬು. ೨-೧೪೦). [ ನಗ$_4$ + ಹರ ]

**ನಗಾಗ್ರ** (ನಾ). ಬೆಟ್ಟದ ತುದಿ,-ಶಿಖರ : ಕ್ಷಿತಿಜಂ ಹತ್ತೆಮಿಳಿನಜಂ ಚತುರ್ಥದೊಳ್ . . . ಇರೆ ನಗಾಗ್ರದೆ ಮಡಿಗುಂ (ಜಾತಕ. ೨೩-೪) ; ಬಂದು ತಪೋನಿವೇಶನಮನೀಕ್ಷಿಸಿ ಬರ್ಪ ನಿದಾಘಕಾಲದೊಳ್ ಸಂದ ನಗಾಗ್ರದಲಿ ನಿಲವೇಳ್ಕುಮೆನುತ್ತುಮೆ ನಿಂದು (ಗಿರಿಕ. ೯-೨) [ ನಗ$_4$ + ಅಗ್ರ$_1$ ]

**ನಗಾಗ್ರಣಿ** (ನಾ). ಪರ್ವತಗಳಲ್ಲಿ ಶ್ರೇಷ್ಠವಾದುದಂ : ಅಗ್ರಹವಂ ಬಿಸುಟದುವ ನಗಾಗ್ರಣಿಯೆಂದಿದನೆ ನೋಡೆ ಬಲಗೊಳ್ವುವು ನಿರ್ವ್ಯಗ್ರತೆಯಿಂ ಚಂದ್ರಾದಿತ್ಯಗ್ರಹನಕ್ಷತ್ರತಾರಕಾನಿಕರಂಗಳ್ (ಆದಿಪು. ೨-೩೦). [ ನಗ$_4$ + ಅಗ್ರಣಿ ]

**ನಗಾಟ** (ನಾ). ಅತಿಶಯಂವಾಗಿ ನಗುವಿಕೆ : ಅವರ ನಗಾಟದ ಗದ್ದಲವನ್ನು ಕೇಳಿ ಮಗು ಎದ್ದುಬಿಟ್ಟಿತು (ರೂಢಿ). 'ಕೂಗಾಟ' ಪರಾ. [ ನಗು$_1$ + ಆಟ ]

**ನಗಾಡು** (ಕ್ರಿ). ಅತಿಶಯಂವಾಗಿ ನಗು,-ನಗೆಯಾಡು : ಮಗುವು ತಟ್ಟೆಯೊಳಗೆ ತನ್ನ ಪ್ರತಿಬಿಂಬವನ್ನು ನೋಡಿ . . . ಚಪ್ಪಾಳೆ ಹೊಡೆಯುತ್ತಾ ನಗಾಡಿತು (ಮೊಗ್ಗು. ೩೭) ; ಚಂದ್ರಾಪೀಡನು . . . ಆಡಿದ ಮಾತುಗಳನ್ನು ಕೇಳಿ ಅಲ್ಲಿ ನೆರೆದಿದ್ದ ಹೆಮ್ಮಕ್ಕಳೆಲ್ಲರು ಗೊಳ್ಳನೆ ನಗಾಡಿದರು (ನಾಗಕಾ. ೪೫); ಶೀಲೆ ನಗಾಡಿದಳು (ದೇವಸಾ. ೯೭) ; ಎಳೆಯನೂ ನಗಾಡುತ್ತಾ . . . ಕಾದು ನಿಂತನು (ಒಡ್ಡಿಉ. ೫). 'ಕೂಗಾಡು' ಪರಾ. [ ನಗು$_1$ + ಆಡು$_1$ ]

**ನಗಾತ್ಮಜೆ** (ನಾ). = ನಗಜಾತೆ. 'ನಗಾತ್ಮಜೇಶ್ವರ' ಪರಾ. [ ನಗ$_4$ + ಆತ್ಮಜೆ ]

**ನಗಾತ್ಮಜೇಶ್ವರ** (ನಾ). ಪಾರ್ವತಿಗೆ ಪತಿಯಾದವನು ; ಶಿವ : ದೇವ ಮಹೇಶ . . . ಸದ್ದೇವ ಮದೀಶದೇವ ಗರಳಾಶನದೇವ ನಗಾತ್ಮಜೇಶ್ವರಾ (ಶಬಶಂ. ೫-೨೦). [ ಸಂ. ]

**ನಗಾಧೀಶ್ವರ** (ನಾ). ಪರ್ವತಗಳಿಗೆ ಒಡೆಯನಾದವನಂ ; ಪರ್ವತರಾಜ; ಹಿಮವಂತ : ಪರಭೂಪಾಲವಿಶಾಲಮೌಳಿಮಣಿಸಂಘಾತಪ್ರಭಾಪುಂಜವಿಸ್ತರಪಾದಂ . . . ಪ್ರಚಂಡಭುಜನೊಪ್ಪಿರ್ಪಂ ನಗಾಧೀಶ್ವರಂ ( ಗಿರಿಕ. ೨-೧೦೩). [ ನಗ$_4$ + ಅಧೀಶ್ವರ ]

**ನಗಾಯತ** (ನಾ). ಪರ್ವತದಂತೆ ಎತ್ತರನಾದವನಂ ; ಪರ್ವತಸದೃಶನಾದವನಂ : ಆಯುಧವ ತನ್ನವರಿಗಿತ್ತು ನಗಾಯ [ಪಾಠಾಂ. ಗಾಯಿ, ಗಾಯು, ಘಾಯ, ಘಾಯಿ]ತನು ಮಣಿಖಚಿತಕನಕದ ಸಾಯಕವನಂಘ್ರಿಗೆ ಸಮರ್ಪಿಸಿ ಚಾಚಿದನು ಶಿರವ (ತೊರವೆರಾ. ೬-೩-೨೨). [ ನಗ$_4$ + ಆಯತ$_4$ ]

**ನಗಾರಖಾನೆ** 'ನಗಾರ್ಖಾನೆ' ನೋ.

**ನಗಾರಿ$_1$** (ನಾ).=ನಗವೈರಿ : ತ್ರಿದಶಪತಿ ಪಾರಿಜಾತಪ್ರದನಾಗದೊಡಾಧಿಪತ್ಯ ಸವನಮದಿನ್ನಾಗದು ತನ್ನಗಾರಿಗಾಗಿಪ್ಪುದು ಧಾರಾಖಡ್ಗಸವನವಂ ಮತ್ತಷ್ಟಗಂ (ಜಗವಿ. ೦೩-೩೦). [ ನಗ$_4$ + ಅರಿ$_6$ ]

**ನಗಾರಿ$_2$**, ನಕರ್ರ$_2$, ನಗಾರೆ (ನಾ). ಒಂದು ಬಗೆಯ ದೊಡ್ಡ ಚರ್ಮವಾದ್ಯ ; ಭೇರಿ: ಹೊಡೀ ನಗಾರಿ ಮೇಲೆ ಕೈಯ ಘಡಘಡ ಹೊಡೀ ನಗಾರಿ ಮೇಲೆ ಕೈಯ (ಪುರಂದ. ೨-೧೦೪ ಪಲ್ಲವಿ) ; ನಗಾರಿಯಂತೆಯು ಧ್ವನಿಯುಳ್ಳ ಕರ್ಣಗಳು (ಸಾಗಂಧಿ. ೨೬೯) ; ಅಧಿಕವಾಗಿ ತಮ್ಮ ಸಂಸ್ಥಾನದ ಪದ್ಧತಿ ಮೇರೆಗೆ ನಗಾರಿ ನವಪತ್ತುಗಳನ್ನು ಸಹ ಕೊಟ್ಟು . . . ಕಳುಹಿಸಿಕೊಟ್ಟರು (ಜಾಮವಂ. ೧೩೬) ; ತಮ್ಮ ಸೀಮೆಯ ಪದ್ಧತಿಯ ಮೇರೆಗೆ ನಗಾರಿ ನೌಬತ್ತುಗಳನ್ನೂ ಇವರು ಕಳುಹಿಸಿಕೊಟ್ಟದ್ದು (ಮಹಾವಂ. I, ೧೪೪); ಎನ್ನೆದೆಯೂ ಮೊರೆವ ನಗಾರಿ ! (ಕ್ರಾಂಚಧ್ವ. ೫೬-೬); ಹೂಣರು ಮಕ್ಕಳ ಚೆಂಡಾಟ ಮಾಡಿ, ಹೆಂಗಸರ ಬೆನ್ನಿನ ಮೇಲೆ ನಗಾರಿ ಬಾರಿಸಿದಾಗ ಭಾರತೀಯರು ಎಚ್ಚರಾದರು (ಭಾರತಿ. ೧೩೪); ಅವರು ಯುದ್ಧಕ್ಕೆ ಹೋಗುವಾಗ ನಗಾರಿಗಳನ್ನು ಬಾರಿಸುತ್ತ ಹೋಗುವರು (ಕರ್ನಾಅ. ೬೦); ನಗಾರಿಯ ಧ್ವನಿ ಮೊಳಗಿತು (ಬಾಣಆ. ೧೮). **ನಕರ್ರ$_2$**: ಬುಂದಿಯ ಅರಸರಿಗೆ ತಮ್ಮ ನಕರವನ್ನು ರಾಜಧಾನಿಯ ಬೀದಿಗಳಲ್ಲಿ ಲಾಲ್‌ದರವಾಜಿನವರೆಗೆ ಹೊಡಿಸಲು ಅಡ್ಡಿಯಿರಬಾರದು (ಅಕ್ಬ್ಬರ. ೬೦). **ನಗಾರೆ**: ಹೊಟ್ಟೆಯೂದಿಕೊಂಡು ನಗಾರೆಯಂತಾಗಿದೆ (ಪುನರ್ಮಿ. ೧೫೬).

ನಗಾರಿಯ ಬಸವ=ನಗಾರಿಗಳನ್ನು ಹೇರುವ ಬಸವ,-ಹೊರುವ ಎತ್ತು : ಸಾಲ್ಗುಡಿಗಳು, ಧ್ವಜಗಳು, ನಗಾರಿಯ ಬಸವಗಳು (ಬಿರುಗಂ. ೨೬-೧೩). [ ← ಅರ. ನಕಾರಾ, ನಕ್ಕಾರಹ್; ಪಾರ. ನಕ್ಕಾರಾ; ಹಿಂ. ನಕಾರಾ, ನಕ್ಕಾರಾ; ಮರಾ. ನಗಾರಾ ]

**ನಗಾರೆ** 'ನಗರಿ$_2$' ನೋ.

**ನಗಾರ್ಖಾನೆ**, ನಗಾರಖಾನೆ (ನಾ). ನಗಾರಿ, ನೌಬತ್ತು ಮೊದಲಾದ ವಾದ್ಯಗಳನ್ನು ಇಡುವ ಸ್ಥಳ ; ನಗಾರಿ ಮೊದಲಾದ ವಾದ್ಯಗಳನ್ನು ಬಾಜಿಸುವ ಸ್ಥಳ : ತೇರ ಬಯಲಲ್ಲಿ ಎದುರು-ಬದುರಾಗಿ ಕಟ್ಟಿದ ನಗಾರ್ಖಾನೆಗಳ ಮೇಲ್ಮೆಲೆಗಳಲ್ಲಿದ್ದ ಪಾರ್ವತಿ-ಪರಮೇಶ್ವರರ ಬಣ್ಣದ ಪ್ರತಿಮೆಗಳು, ನೋಡುವವರನ್ನು ನಿಂತಲ್ಲಿಯೆ ನಿಲ್ಲಿಸುತ್ತಿವೆ (ಜನಜೀ. ೦೯೨). **ನಗಾರಖಾನೆ**: ಈ ಇಮಾರತಿಯು ಸ್ವತಂತ್ರವಾಗಿರದೆ ಬೀಳುವ ಸ್ಥಿತಿಯಲ್ಲಿರುವ ಒಂದು ನಗಾರಖಾನೆಯಾಗಿ ಇರುತ್ತದೆ (ವಿಜಾರ್ಚ. ೨೨). [ ← ಮರಾ. ನಗಾರ್‌ಖಾನಾ; ಹಿಂ. ನಕ್ಕಾರ್‌ಖಾನಾ ]

**ನಗಾರ್ಚನೆ** (ನಾ). = ನಗಯಜ್ಞ : ತನತನಗೊಲವಿಂ ಕೈಗೆಯ್ದು ನಗಾರ್ಚನ ಪರಿಕರಂಗಳಂ ನೆರಪುವ ಗೋಧನಮನಲಂಕರಿಸುವ ಘೋಷನಿವಾಸಿಗಳಿಂದ ಮಾಯ್ತು ಕಳಕಳನಿನದಂ (ಜಗವಿ. ೪-೮೦). [ ನಗ$_4$ + ಅರ್ಚನೆ ]

**ನಗಾರ್ಯ** (ನಾ). ಗೌರವಾರ್ಹನಾದ ವ್ಯಕ್ತಿ : "ಠಕ್ಕುರ = ನಗಾರ್ಯರುಂ (ಠಕ್ಕುರರು)" (ನೀತಿವಾ. ೨೬-೯೨). [ ನಗ ? + ಆರ್ಯ ]

**ನಗಾಹಿತ** (ನಾ). = ನಗವೈರಿ : ನಿಡುಗಳಿಲೆಯ ಮೊನೆಯುರ್ಚಿದ ಜಡಧರ ಮೆಸೆದುದು ನಗಾಹಿತ ಪ್ರಣಿಧಿಯಿದೆಂದೆಡದರ್ತಿರೋಷದಿನಾ ಗಿರಿ ತೊಡರ್ಚಿ ಓಡಿದುಗ್ರಶೂಲದೊಳ್ ತೋಱುವವೋಲ್ (ಶಬಶಂ. ೩-೩೭). [ ನಗ$_4$ + ಅಹಿತ ]

**ನಗಿಸು** (ಕ್ರಿ). ೧. ನಗುವಂತೆ ಮಾಡು ; ಹರ್ಷಗೊಳ್ಳುವಂತೆ ಮಾಡಂ ; ವಿನೋದಗೊಳಿಸು : ಪಗರಣದೊಳ್ಬಿಡದ ಮೂಱುಂ ನಗಿಸುಗುಮಪ್ಪುದಱಿನಲ್ಲಿಗಂತವದೋಷಂ (ಕವಿರಾ. ೧-೬೪) ; ಆಡಿಯುಂ ಪಾಡಿಯುಂ ನಗಿಸಿಯುಂ (ವಡ್ಡಾರಾ. ೧೧೮-೦೫) ; ಬೇಡದುದಂ ಬೇಡುವ ಪುಡಿಯಾಡುವ ತೊದಲಿಂದವೆ ನುಡಿವ ನಗಿಸುವ ಬಾಲಕ್ರೀಡೆ ಮುರಾರಿಯ ಬಾಲಕ್ರೀಡೆಯನನುಕರಿಪುದಾದುದರಿಕೇಸರಿಯಾ (ಪಂಪಭಾ. ೨-೭) ; ನಗಿಸಲ್ ನುಡಿಸಲು ಮಜಿತನ ನಗೆಗಣ್ಗಳ ಚೆಲ್ವನೊಸೆದು ನೋಡಲ್ ಪಡೆಯಲ್ ನಗೆಮೊಗದ ನೀಱೆಯರ್ [ ನಗು ] ಮೊಗದಿಂದಂ ಪಕ್ಕುಗಾಣದಗಲಗಲಿರ್ಪರ್ (ಅಜಿಪು. ೫-೯೨) ; ದೇವನೊಳ್ಳಿದನೆಂದು ಮುಯ್ಯಾನಲು ಬೇಡಾ . . . ಅಳಿಸುವ ನಗಿಸುವನೊಳ್ಳಿದನೆ (ಬಸವ. ೧೪೪) ; ಸಂಪಗೆಯ ನನೆಗೆಯ್ದು ಬಿಱಿಕೊಯ್ಯಗೆ ಜಾಱುವ ತುಂಬಿ ನಗಿಸಿದುದು ಮಲ್ಲಿಗೆಯಂ (ಕಬ್ಬಿಗಕಾ. ೫೮) ; ಅಳುವವರ ನಗಿಸುವುದು ನಗುವವರನಳಿಸುವುದು ಗೆಲಿದವರ ಸೋಲಿಸಿ ಗೆಲಿಸುವುದು ಸೋತವರನೀ ವಿಪರೀತಗತಿ ವಿಧಿಗೆ (ಕುಮಾರವ್ಯಾಕ. ೧೨-೩) ; ನಗುವ ನಗಿಸುವ ನಗಿಸಿ ನಗುತ ಬಾಳುವ ವರವ ಮಿಗೆ ನೀನು ಬೇಡಿಕೊಳ್ಳೊ (ಮಂಕುತ. ೯೦೭). ೨. ಪರಿಹಾಸ ಮಾಡಿಸಂ ; ಅಪಹಾಸ್ಯ ಮಾಡಿಸಂ ; ಅವಮಾನ

ಗೊಳಿಸು : ನಿನಗೊರ್ವಂಗಲ್ಲವಸ್ಥಾಂತರಮುಮರಜನಕ್ಕೆಲ್ಲಮಿಾ ಪಾಂಗೆ ಕಾರುಣ್ಯನಿನಾದಂ ನಿನ್ನನಾದಂ ನಗಿಸುಗುಂ (ಆದಿಪು. ೩-೬) ; ಎನ್ನಂ ಲೆಕ್ಕಿಸದಿರ್ದುಂ ಕಡೆಗಿನ್ನೂ ಮಗಳೇ ನಿನ್ನಾತಂ ಸರ್ವೇಶನೇ ಜಗದೊಳ್ ನಗಿಸದೆ ಬಿಟ್ಟೊಡೆ ದಕ್ಷನೆ ನಾನೆಂದತಿ ಘೂರ್ಮಿಸಿದನು (ವೀರೇಶ. ೧-೬೪). ೩. ಪರಿಹಾಸ ಮಾಡಿಸಿಕೊಳ್ಳು ; ನಗೆಗೀಡಾಗು : ವಿನಯಮುಮೆಯಿಕ ಮುಮುಪ್ಪುದು ಸನಾಭಿಗಳ್ ಸಂಗತಂಗಳಪ್ಪೊಡೆ ಪೆಸರ್ಗೊಂಡನಿತಜಿಗೊಳೆನ್ನಂ ಸೈರಿಸನೆನೆ ಭರತಂಗೆಜಿಗಿ ಲೋಕದಿಂ ನಗಿಸುವೆನೇ (ಆದಿಪು. ೧೪-೭೭).

**ನಗಿಸಿಕೊಳ್, ನಗಿಸಿಕೊಳ್ಳು** = ಅಪಹಾಸ್ಯಮಾಡಿಸಿಕೊಳ್ಳು ; ಅವಮಾನ ಮಾಡಿಸಿಕೊಳ್ಳು : ಗುರುಗಳಂ ಕುಲವೃದ್ಧರನಾಜಿಗುಯ್ದು ಕೆಮ್ಮಗೆ ಪಗೆ ವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ (ಪಂಪಭಾ. ೧೪-೧೭) ; ಜೋವದ ದೇವತೆಗಳುಮಂ ಸೇವಿಪನೆಂದಂದು ನಗಿಸಿಕೊಳ್ಳನೆ ತನ್ನಂ (ಸಮಪ. ೯-೯೭) ; ಕಯ್ಯಲುಂಡುಂ ಬತ್ತಲಿರ್ದುಂ ನಗಿಸಿಕೊಂಡೆ ಅಯ್ಯಲಾನಿಂತು ನಾಯುಣ್ಣದ ವಿಧಿಯನುಂಡೆ ಏನೆಂಬೆನೀಶ್ವರಾ ಕಾವುದೆನ್ನಂ ದೇವ (ವಾಗೀರ. ದೇ. ೩೬೦-೫) ; ನಾಲ್ಕುಜನರಿಂದ ನಗಿಸಿಕೊಳ್ಳುವಂತ ಬಾಳಬಾರದು (ರೂಢಿ). **ನಗಿಸುವ ವಾಯು** = ನಗುವನ್ನುಂಟುಮಾಡುವ ಗುಣವುಳ್ಳ ಒಂದು ಬಗೆಯ ವಾಯು : ಸಾರಜನಕ, ಆಮ್ಲಜನಕಗಳ ಸಂಯೋಗದಿಂದ 'ನಗಿಸುವ ವಾಯು' (Laughing gas–Nitrous oxide) ಉತ್ಪನ್ನವಾಗುವುದು (ವಿಜ್ಞಾ. ಕ. ೬೮). **ನಗಿಸುವ ಹೊಗೆ** = ನಗಿಸುವ ವಾಯು : ನಗಿಸುವ ಹೊಗೆ (ಲಾಫಿಂಗಗ್ಯಾಸವು) – ಇದು ನಿರ್ಗಂಧ ವಾಯುವಿನ ಒಂದು ಬಗೆಯ ಆಮ್ಲಜವಿಕಾರವು (ಮುಂಬಯಿ. ೬-೪೧).

[ ನಗು$_1$ + – ಇಸು$_3$ ]

**ನಗು$_1$** (ಕ್ರಿ). ನಕ್ಕು$_2$ (ಭೂತನ್ಯೂ) ೧. ಸಂತೋಷ, ಹಾಸ್ಯ ಅಥವಾ ಅಪಹಾಸ್ಯ ಮುಂತಾದುವುಗಳನ್ನು ಸಶಬ್ದವಾಗಿ ಮುಖವಿಕಾರದೊಡನೆ ತೋರ್ಪಡಿಸು, – ವ್ಯಕ್ತವಾಡು : "ನಗು – ಹಸನೇ" (ಶಮುಥಾ) ; ಕಾಣದಾ ರೂಪಂ ಕಂಡು ನಕ್ಕು ದುಃಖಮಂ ಮಱೆದೊಳ್ (ವಡ್ಡಾರಾ. ೧೧೮-೩೦) ; ದಿವಿಜಾಶ್ವತ್ಥಾಮದೊಳೀ ಭುವನಂಗಳ್ ನಡುಗೆ ಶಿಶು ಸರಂಗೆಯ್ದೊಡೆ ನಕ್ಕವಯವದೆ ಕುಂಭಸಂಭವನಿವನಶ್ವತ್ಥಾಮನೆಂದು ಪೆಸರಿಡೆ ನೆಗಟ್ಟಂ (ಪಂಪಭಾ. ೩-೪೪) ; ವಿದೂಷಕನಬುತ್ತುಂ ಬಂದ ತನ್ನಂ ನಗುತುಂ ಪೋಪಂತೆ ಸಂತೋಷಂ ಮಾಡಿಸಿದುದರ್ಕೊಡಂಬಟ್ಟು ಚಾರುಹಾಸಿನಿ ನಿಜ ನಿವಾಸಕ್ಕೆ ಪೋದಳ್ (ಗದಾಯು. ೩-೧೦ ವ) ; ದಯಾಮಿತ್ರಸೆಟ್ಟಿ ಬಾಯ ತಂಬುಲಂ ಸೂಸೆ ಕಳಕಳಿಸಿ ನಕ್ಕು (ಧರ್ಮಾಮೃ. ೧-೧೭೩) ; ತರುಣಿಯ ಮುಖ ಚಂದ್ರಮನಂ ತಳ್ವದೆ ನೋಡಿ ನಕ್ಕನುದ್ಭಟದೇವಂ (ಉದ್ಭಟ. ೧೧-೩೦) ; ಉಂಡು ನಗದಿಹ ಮೋಱೆ ಅದು ಕಹಿಯ ಸೋರೆ (ಕನಕ.೫೦-೪). ೨. ತಿರಸ್ಕಾರವನ್ನು ಸೂಚಿಸು ; ಅಪಹಾಸ್ಯಮಾಡು ; ಅವಮಾನಗೊಳಿಸು : ನಾನುಮೆರಡಂ ನುಡಿದೊಡೆ ಹರಿಹರಹಿರಣ್ಯಗರ್ಭರ್ ನಗರೇ (ಪಂಪಭಾ. ೧-೮೨) ; ಮುಂ ತೊಟ್ಟಂಬನದನುಗಿದು ಕುಂದಿಸಿದಂ ಭಯದಿಂ ಕರ್ಣನೆಂದು ಲೋಕಂ ನಗದೇ (ಪಂಪಭಾ. ೧೨-೧೯೯) ; ಮುತ್ತಿದಱೆರ್ಕೆಲದೊಳ್ ಸೆಣಸುತ್ತುಂ ದಿವಮಂ ನಗ ತ್ತುಮುಪಹಾಸ್ಯಂಗೆಯ್ಯುತ್ತುಂ ಸೊಗಯಿಪುವು . . . ಖೇಚರೇಂದ್ರಪುರಂಗಳ್ (ಶಾಂತಿಪು. ೩-೨) ; ನಗದಂತು ಜಗಂ ಗುರುಗಳ್ ಪೊಗಟ್ಟಂತನುಜೀವಿಗಳ್ಗೆ ಶುಭಮಪ್ಪಂತು . . ಅಗಣಿತಗುಣನೆನಿಸಿ ನಿಲ್ವುದಾಕಲ್ಪಾಂತಂ (ಕಾದಂಪೂ. ೫೭೭) ; ಲೋಕಪಾವನವೆನಿಸಿ ಹರಿವ ಕಾವೇರಿಯಿಂ ನಾಕಮಂ ನಗುವ ನಗರಂಗಳಿಪ್ಪೋಜೆಯಿಂ (ತಿರುರ. ದೇ. ೨-೪) ; ಲೋಕಂ ನಗುವ ಮಾತನಾಡದಿರಿ (ಸಿದ್ಧರಾ. ೧-೪೧) ; ಕುಣಿಸಿ ನಗನೇ ಕವಿ ಕುಮಾರವ್ಯಾಸನುಳಿದವರ (ಕುವ್ಯಾಆ. ೧-೧೭) ; ಕರಿಗಳನು ಮುಱಿದಿಡುವ ಸಿಂಹಕೆ ನರಿಗಳಿದಿರೇ ತಾನು ನಿಮಗಂ ತರವೆ ಸಾಕಂತಿರಲಿ ಕಂಡವರೆಲ್ಲ ನಗದಿಹರೆ (ನಳಚ. ೩-೧೮). ೩. (ಅಲಂ) (ಹೂವಿಗೆ ಸಂಬಂಧಿಸಿದಂತೆ) ತೆರೆದುಕೊಳ್ಳು ; ಅರಳಂ: ಮಿಕ್ಕು ಮಾಸುವ ಬೆಳಗು ಕೆಂಪಡರ್ದ ಮುಗಿಲು ತಲೆಯಿಕ್ಕುವಬುಜಂ ನಗುವ ಕುಮುದ . . . ನಲಿವ ಜಾರೆಯರು ಸಂಜೆಯಲಿ ರಂಜಿಸಿದರು (ಸೋಮಚ. ೨-೧೦) ; ಮಲ್ಲಿಗೆ ಬಾಯ್ಬಿಟ್ಟು ನಗುತಾವೆ (ಜಗೀತ. ೧೨೯).

**ನಗು ನಗು** (ದ್ವಿರುಕ್ತಿ) : ನಗುನಗುವ ಕಣ್ಣಳಿಗೆ ಹೊಗೆಯನೂದಲು ಬೇಡ (ಮಂಕುಕ. ೮೩೩) ; ಯಾವಾಗಲೂ ನಗುನಗುತ್ತಿದ್ದ ಹುಡುಗಿ ಯಾಕೋ ಮಂಕಾದಳು (ರೂಢಿ). **ನಕ್ಕಾಡು** = ಹಾಸ್ಯದಿಂದ ವಿಶೇಷವಾಗಿ ನಗು : ಸಿಕ್ಕಿಲ್ಲ ತೀರ್ದುದಿನ್ನೆಮ್ಮ ಪಟ್ಟಣ ಸಮಿಾಪಕ್ಕೆ ತೋಱಿತು ಕಾಣ್ಬೆವೆಂದು ನಕ್ಕಾಡಿ ಕೈಹೊಯ್ದು ಸರಸವಾಡುತ ಕಾಲನಿಕ್ಕುತಿದ್ದುದು ರಾಜಕಟಕ (ಭರಚ. ೫೩-೩೦) ; ಸೋಗಿಲೆರೊಳ್ ನಕ್ಕಾಡುತುಂ ಮುದ್ದುಗರೆವುತುಂ ಲೀಲೆಯಿಂ ಮಕ್ಕಳಾಟಿಕೆಯೊಳೆಸೆದಂ ಜಗವನಾಡಿಸುವ ಸೂತ್ರಧಾರಂ ಕ್ರಮದೊಳು (ಜೈಬಪು. ೫-೩೭).

[ ದೇ. ॥ ತಮಿ. ನಕು ; ಮಲ. ನಗೆ ; ತೆಲು. ನಗು, ನವ್ವು ]

**ನಗು$_2$** (ನಾ). ೧. ನಗುವಿಕೆ : ನಗುವೊಂದು ರಸಪಾಕ ಅಳುವೊಂದು ರಸಪಾಕ (ಮಂಕುಕ. ೯೩೪) ; ಅಂತರಾಳದಲ್ಲಿ ನಗು ಕೇಳಬಂದಿತು (ಯಕ್ಷಪ್ರ. ೩) ; ಅವನ ತುಟಿಯ ಮೇಲೆ ಒಂದು ಸಣ್ಣನಗು ಸುಳಿಯಿತು (ರೂಪಸ. ೩). ೨. ಅಪಹಾಸ್ಯ : ಪರಿಹಾಸ : (ಕ). ೩. (ಹೂವು ಮೊದಲಾದವು) ಅರಳುವಿಕೆ ; ವಿಕಾಸವಾಗುವಿಕೆ.

**ನಗುಬರಿಸು** = ನಗುವನ್ನುಂಟು ಮಾಡು : ಆಗ ನಡೆದ ಘಟನೆಯು ತುಂಬಾ ನಗುಬರಿಸುವಂತಹದು (ರೂಢಿ). **ನಗುಬರು** = ನಗುವುಂಟಾಗು ; ಮೋಜೆನಿಸು : ಪ್ರಸಂಗವನ್ನು ನೆನೆಸಿಕೊಂಡಾಗೆಲ್ಲ ನಗುಬರುತ್ತೆ (ನಾಡಿಗೇ. ೧೮೨) ; ಇವರು ನಗಿಸುವುದಕ್ಕೆ ಪಡುವ ಪಡಿಪಾಟ, ಅಂಗಚೇಷ್ಟೆಗಳು ಮುಂತಾದವನ್ನು ನೋಡಿದರೆ ನಿಜವಾಗಿಯೂ ನಗುಬರುತ್ತೆ (ನಾಡಿಗೇ. ೧೮೩).

[ <ನಗು$_1$ ]

**ನಗುಗೇಡು** (ನಾ). = ನಗೆಗೇಡು : (ಕ). [ ನಗು$_2$ + ಕೇಡು ]

**ನಗುತ** (ನಾ). ಅಪಹಾಸ್ಯ ; ಹಾಸ್ಯದ ಮಾತು : ನೀನೆಲ್ಲಿ ಜನಿಸಿದೆಯದಾರ್ ತಂದೆತಾಯ್ಗಳ್ ನಿಧಾನವೆಮ್ಮೊಡನುಸುರಿಮೆಂದಜಂ ನುಡಿದನಿಂದಾ ನಗುತಮೇ ಸ್ತೋತ್ರಮಾಯ್ತು ಸರ್ವೇಶರನ ಮಹಿಮೆಯೆಂತೋ ಜಗದೊಳು (ಜೈಬಪು. ೧೮-೧೨). [ ನಗು$_1$ + – ತ$_2$ ]

**ನಗುಪಾಟಲು** (ನಾ). ಅಪಹಾಸ್ಯ ; ಹಾಸ್ಯಾಸ್ಪದವಾದುದು : ಈ ಆದರ್ಶವಾದ ಅನೇಕವೇಳೆ ನಗುಪಾಟಲಾಗುವಷ್ಟು ಮಿತಿಮೀರಿತ್ತೆಂದರೂ ಅತಿಶಯೋಕ್ತಿಯಲ್ಲ (ಭಾರಚ. ೪೭೦) ; ಪ್ರಸಿದ್ಧರಾಜರು ಬಗ್ಗಿಸಲಾರದ ಬಿಲ್ಲನ್ನು ಅಸ್ತ್ರವಿದ್ಯೆಯನ್ನರಿಯದ ಈ ಕೈಲಾಗದ ಬ್ರಾಹ್ಮಣ ಬಗ್ಗಿಸಿಯಾನೇ ? ರಾಜರಲ್ಲಿ ಬ್ರಾಹ್ಮಣರಿಗೆ ನಗುಪಾಟಲು (ವಚಭಾ. ೫೩) ; ಪ್ರಯತ್ನವು ಸಾಗದೆ ವಿಫಲವಾದರೆ ಉಪಹಾಸಕ್ಕೆ ಕಾರಣವಾಗಿ ಹೆಂಗಸರಲ್ಲಿ ನಗುಪಾಟಲಿಗೆ ಗುರಿಯಾಗಬೇಕಾಗುವುದು (ಕೋಹಿನೂ. ೪೫) ; ಅವರ ಮಧ್ಯೆ ರಂಗಣ್ಣನ ಇರವು ನಗುಪಾಟಲು (ದುಂಬಿಕ. ೭೪). 'ನಗೆಪಾಟಲು' ಪರಾ.

[ ನಗುಪಾಟು (<ನಗುಪಾಡು) + – ಅಲು (< – ಅಲ್$_2$) ]

**ನಗುಪಾಟು** 'ನಗುಪಾಡು' ನೋ.

**ನಗುಪಾಡು, ನಗುಪಾಟು** (ನಾ). = ನಗುಪಾಟಲು : ಈ ಕೆಲಸ ಸರಿಯಾಗಿ ಆಗದಿದ್ದರೆ ನಗುಪಾಡೇ ಸರಿ (ರೂಢಿ). **ನಗುಪಾಟು** : ಅವರ ಜೀವನ ನಗುಪಾಟಿಗೆ ಗುರಿಯಾಯಿತು (ರೂಢಿ).

[ ನಗು+ ಪಾಡು$_3$./ತೆಲು. ನಗುಬಾಟು ]

**ನಗುಮುಖ** (ನಾ). ನಗುವ ಮುಖ ; ನಗುವಿನಿಂದ ಕೂಡಿದ ಮುಖ ; ಹಸನ್ಮುಖ : ಅವರ ಕಣ್ಣು ಕೂಡಿದಾಗ ಅವಳು ನಗುಮುಖವನ್ನು ತೋರುತ್ತಿದ್ದಳು (ರಂಗರೋ. ೨೭). [ ನಗು$_1$ + ಮುಖ ]

**ನಗುವೊಗ** (ನಾ). = ನಗುಮುಖ : ನಗಿಸಲ್ ನುಡಿಸಲುಮಜಿತನ ನಗೆಗಣ್ಗಳ ಚೆಲ್ವನೊಸೆದು ನೋಡಲ್ ಪಡೆಯಲ್ ನಗೆಮೊಗದ ನೀರೆಯರ್ [ನಗು] ಮೊಗದಿಂದಂ ಪಕ್ಕುಗಾಣದಗಲಗಲಿರ್ಪರ್ (ಅಜಿಪು. ೫-೯೨) ; ಬಡತನದ ನಿಕೃಷ್ಟಾವಸ್ಥೆಯಲ್ಲಿಯೂ ರಾಜೀವಿ ಅನಂತನನ್ನು ನಗುಮೊಗದಿಂದಲೇ ಹುರಿದುಂಬಿಸಿದಳು (ಒಡ್ಡಉ. ೧೪೨) ; ನಗುಮೊಗದರಸಿಯಾದ ಕವಿತಾ ಸುಂದರಿಯ ವರವನ್ನು ಪಡೆಯಲು ಬಗೆಮಿಗೆ ಜಪಿಸುವ ಹಂಬಲ ಈ ಕವಿಗಿದೆ (ಸಾಸವೂ. ೧೫೦). [ ನಗು$_1$ + ಮೊಗ ]

**ನಗುಮೋರೆ** (ನಾ). = ನಗುಮುಖ : ಬೆರಗುಕಣ್ಣಿನ, ಬೆರಳಮೀಸೆಯ ಬೆರಸಿದಾ ನಗುಮೋರೆಯಾ ಅರಸನಿದ್ದನು (ಕಪು. ೩೭-೧) ; ಹೈಮವತಿ ನಗುಮೋರೆಯಿಂದ ಮುಗ್ಧದೃಷ್ಟಿಯಿಂದ ನೋಡುತ್ತ . . . ಎಂದಳು (ಎರಸಿ. ೧೧). [ನಗು$_1$ + ಮೋರೆ (<ಮೋಱೆ$^3$) ]

**ನಗುಸಾರ**, ನಗಸಾರ (ನಾ). = ನಗೆಚಾಟಿಕೆ ೧ : ಇದು ಹಗೆಸಾರವಲ್ಲ ನಗುಸಾರವೆಂದು ತಿಳಿದುಕೊ (ಕಥಾಮಂ. IV, ೧೩೫). **ನಗಸಾರ** : ಹೊಗಳು ಭಟ್ಟರನ್ನು ನಿರ್ಮಿಸಲು ಈಶ್ವರನು ಸ್ತೋತ್ರಪ್ರಿಯನೋ ? ಕೀರ್ತಿ ಕಾಮುಕನೋ ? ತನ್ನ ಪ್ರತಾಪಪ್ರದರ್ಶನಕ್ಕಾಗಿ ರಚಿಸಿದನೆಂಬುದು ಒಂದು ನಗಸಾರದ ಮಾತು (ಜೀವಾತ್ಮ. ೨೯೭) ; ಸಂಘಾನ ನಗಸಾರ ಮಾಡ್ದೆ (ಇಚನೋ. ೪೧) ; ಮತ್ತೇನು ನಗಸಾರಕ್ಕೆ ಹೇಳ್ತೀನಾ ? (ಚಂದಕೋ. ೨೮೦). 'ನಗೆಸಾರ' ಪರಾ.

ನಗುಸಾರಗಾರ = ನಗಿಸುವವನು : ಹಾಸ್ಯಗಾರ : ಅವನು ಒಳ್ಳೆಯ ನಗುಸಾರಗಾರ (ರೂಢಿ). [ ನಗು$_2$ + – ಸರ$_8$ ? ]

**ನಗೆ** (ನಾ). ೧. ನಗುವಿಕೆ : "ಚಲ್ಲೆ ನಗೆ" (ಶಬ್ದಮಂ. ೭೭) ; ಮೊಗಮೆಂಬಂ ಬುಜದರಲಾ ನಗೆಯೆಂಬ ವಿಕಾಸಮೊಪ್ಪುವದಱೊಳ್ಸಟಿಗುಂ ಮಿಗೆ . . . ಸುಯುಕ್ತರೂಪಕಮಕ್ಕುಂ(ಕವಿರಾ.೩-೨೫);ನಗೆ ಸಬ್ಬವಂ ಬಿನದಮೆಂಬಿವಱಿಂ ಲಲಿತಾಂಗನಂ ಮನಂಗೊಳಿಸುವರಿಚ್ಛೆಕಾರ್ತನದ ಲಲ್ಲೆಯ ಸಗ್ಗದ ದೇಸೆ ಕಾರ್ತಿಯರ್ (ಆದಿಪು. ೨-೭೦) ; ನಗೆಯೊಳ್ ಬಿರಿಮೆಂತಿರೆ ಬಿರಿವುವಲ್ಲಿ ಪೊಸಮಲ್ಲಿಗೆಗಳ್ (ಶಾಂತಿಪು. ೨-೯೭) ; ಪುರಜನಂಗಳ್ ಕೇಳ್ದು ಕರುಳಂ ಪಿಡಿದು ನಗೆಯೊಳ್ ಪೊರಟ್ಟರ್ (ಪಂಚತಂ. ೧೮೭-೨೨) ; ಶಾಂತರೂಪಂ ಬಿಟ್ಟು ಕ್ರೂರರೂಪಂ ಕೈಕೊಂಡು ನಗೆಯಂ ಬಿಟ್ಟು ಮುಳಿಸನೊಳಕೊಂಡು (ಧರ್ಮಾಪ್ಮ. ೭-೬೩) ; ನಗೆಗೆ ನಗೆ ಕುಂಟಣಿ ವಿವೇಕದ ಹೊಗೆಗೆ ಹೊಗೆ ಸಖಿಯಾದುದು (ಕುಮ್ಯಾಸ. ೧೨-೪೨) ; ನಗೆಯು ಬರುತಿದೆ ಎನಗೆ ನಗೆಯು ಬರುತಿದೆ ಜಗದೊಳಿರುವ ಮನುಜರೆಲ್ಲ ಹಗರಣ ಮಾಡುವುದ ಕಂಡು (ಪುರಂದ. ೧-೨೨ ಪಲ್ಲವಿ) ; ನಗೆ ತಡೆಯಲಾರದೆಯೆ ಹೊರಗೆ ಬಂದಳ್ಳೆ ಬಿರಿವಿರಿಯೆ ನಗೆ ತೊಡಗಿದನ್ . . . ನಗೆಗೆ ಮಿಾರಿರ್ದುದಾ ಧೂಮದೃಶ್ಯಂ (ಶ್ರೀರಾಮಾ. ೧೪೮-೧೮೦). ೨. ಅಪಹಾಸ್ಯ ; ಪರಿಹಾಸ ; ಕುಚೋದ್ಯ : ಮನುಮಾರ್ಗನಿಪುಣನೆನಿಸಿದ ನಿನಗಾಮಿ ರಾಜಮಾರ್ಗಮಂ ತೋಱೆ ಜಗಜ್ಜನಕೆ ನಗೆಯಲ್ತೆ (ಆದಿಪು. ೮-೧೨) ; ಎಲೆ ಧನಂಜಯ ಧರ್ಮಪುತ್ರನ ಕೊಲುವೆನುಳುಹುವದಿಲ್ಲವೆಂಬಗ್ಗಳಿಕೆಯಿದು ನಗೆಯಲ್ಲವೇ(ಕುಮ್ಯಾಕ.೧೭-೧೨). ೩. (ಹೂವು ಮೊದಲಾದವು) ಅರಳುವಿಕೆ ; ವಿಕಸಿಸುವಿಕೆ : ಕುಮುದಂ ಗಳ ನಗೆ ಬತ್ತಿದುವು ಪಾಯ್ವು ನೇಸಱಿನಾಗಳ್ [ಪಾಠಾಂ. ನೆಗೆಯುಗೆಯೆತ್ತಿ ಪೋಯ್ತು ಮುನ್ನೇಸಱಿನೊಳ್] (ಲೀಲಾವ. ೩-೫). ೪. ಸಂತೋಷ ; ಆನಂದ : ನಗೆ ಹೋಗಿ ಹೊಗೆಯಾಯ್ತು (ರೂಢಿ). ೫. ವಿನೋದ ; ತಮಾಷೆ ; ಹಾಸ್ಯ : ನಗೆಯೊಳಮಪ್ಪೊಡಮಿಂತೀ ತೆಗಟ ದುರುಕ್ತಿಗಳನೆ ಮ್ಮೊಳಿಂ ನುಡಿಯಲ್ ನೀಂ ಬಗೆಯೊಳ್ ಬೇಱೊಂದನಣಂ ಬಗೆಯಲ್ ಗಡ ನಿನಗೆ ಸುಮತಿ ಬೇಱಾಂ ಬೇಱೇ (ಕಾಮ್ಯಾವ. ೪೧೨). ೬. ಕಾಂತಿ ; ವಿಲಾಸ. 'ನಗೆಗಣ್' ಪರಾ.

ನಗೆಗೀಡಾಗು = ನಗೆಗೆ ಗುರಿಯಾಗಂ ; ಅಪಹಾಸ್ಯಕ್ಕೆ ಒಳಗಾಗು : ನೀನಿಂತು ನಗೆಗೀಡಾದ ನುಡಿಗಳಂ ನುಡಿಯುತ್ತಮೆನಗೆ ಮುಳಿಸನಾದೊಡಂ ಪುಟ್ಟಿಸಲಿಲ್ಲಂ (ಕಾದಂಉ. ೫೭೭) ; ತನ್ನೆಲ್ಲ ಸಂದೇಹಗಳು ಬರೇ ಸಂದೇಹ ಗಳಾದರೆ, ತಾನು ನಗೆಗೀಡಾಗಬಹುದು ಎಂಬ ಭಾವನೆ ಆಕೆ ಉತ್ತರಿಸದಂತೆ ತಡೆಯಿತು (ವಾತ್ಸಲ್ಯ. ೦೪೯). **ನಗೆಗೆಡೆ** = ಅಪಹಾಸ್ಯಕ್ಕೆ ಈಡಾದುದು ; ವಿಡಂಬನೆಗೆ ಗುರಿಯಾದುದು : ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಯ ಕೊಂದು ನಲಿನಲಿದಾಡುವ ತನ್ನ ಮನೆಯ ಲೊಂದು ಶಿಶು ಸತ್ತರೆ ಅದಕೆ ಮಱುಗುವಂತೆ ಅವಕೇಕೆ ಮಱುಗನು . . . ಎಂಬುದಾಗಿ ಜಾಲಗಾಱನ ದುಃಖ ಜಗಕೆಲ್ಲ ನಗೆಗೆಡೆ (ಮಹಾದೇ. ಬ. ೪೭-೧೦೯) ; ಬಗೆಯಲಱಿಯದು ನಿನಗೆ ಪುರುಷಾಮೃಗ ಮನೋವೇಗದಲಿ ನಡೆವುದು ನಗೆಗೆಡೆಯ ಮಾಡಿದೆಯಲಾ ಕಲಿಭೀಮ ನೀನಿಂದು (ಕುಮ್ಯಾಸ. ೭೦೩. ೭-೧೭) ; ಗಾಳಿಯುಱುಬೆಗೆ ಮಲೆತ ಮೇಘದ ತೋಳುಮಲ ನಗೆಗೆಡೆಯಲಾ ಕುರುಪಾಲನೆತ್ತಲು ಭೀಮನೆತ್ತಲು ಶಿವಶಿವಾ ಎನುತ (ಕುಮ್ಯಾಭೀ. ೫-೧೪) ; ಮಗಳೆ ನೀ ನಿನಗಲ್ಲದಿದೆರ್ಗೋಜೆಗಳ ನಡೆವರೆ ರಾಜ ಕುಲದಲಿ ನಗೆಗೆಡೆಯ ಮಾಡುವರೆ . . . ನೆಗಳಲಹುದೇ ಪುರುಷಸಂಗವ ನೆಂದಳಾ ಜನನಿ (ಪ್ರಭುಲೀ. ೫-೫೭). **ನಗೆಗೆಡೆಮಾಡು** = ಅಪಹಾಸ್ಯಕ್ಕೆ ಗುರಿಮಾಡಂ ; ವಿಡಂಬನೆಗೆ ಒಳಗುಮಾಡು : ಎರೆಯ ಕಡೆಗಣಿಸಿರುವ ಆಳ್ಮನೆಯ ಗೆಯ್ಮೆಯೆನೆ ಮರವೆ ನಗೆಗೆಡೆಮಾಡೆ ಮಾರೊಡ್ಡಿ ಮುನಿವಂ (ಕಾಲೂರ. ೫೧-೭೭). **ನಗೆಗೆಡೆಯಾಗು** = ಅಪಹಾಸ್ಯಕ್ಕೆ ಗುರಿಯಾಗು ; ಪರಿಹಾಸಕ್ಕೊಳಗಾಗಂ : ನಗೆಗೆಡೆಯಾಗೆ ದೈವಮೆನಗೇನನೊಡರ್ಚಿಸಿತೀಗಳ್ (ಕಾದಂಪೂ. ೮೦೯) ; ನೀಂ ಶಬ್ದಮಾತ್ರಕ್ಕೆ ಬೆರ್ಚಿದೊಡಿಂತಪ್ಪ ನಗೆಗೆಡೆ ಯಪ್ಪಿರ್ (ಪಂಚತಂ. ೪೨-೧) ; ಹೆಗರಣ ನಗೆಗೆಡೆಯಾಯಿತಲ್ಲಾ (ಬಸವ. ೩೦೦) ; ಮುನಿವರರಿಗೆ ನಗೆಗೆಡೆಯಾಗಿ ನಿಷ್ಕಾರಣಂ ಮಡಿವರೇ ಕಂದ (ಹಚಕಾ. ೦೨-೫೦) ; ನೆರವಿ ನಗೆಗೆಡೆಯಾಗೆ ಮುಸುಕಿನ ಮುರುವಿನಲಿ ಪಾಳಯವ ಹೊಕ್ಕರು (ಕುಮ್ಯಾದ್ರೋ. ೮-೪೮). **ನಗೆಯೊಡಲಾತಂ** = ಇಂದ್ರ : ನಗೆಯೊಡ ಲಾತನಂ ಹರಣಗೊಂಬವನಂ . . . ಒಳ್ಳಿದನೆಂಬರೆ ಭೂಪ ಕೂರ್ಮೆಯಿಂ (ನಳಚಂ. ೨೮೭). [ ದೇ. ॥ ತಮಿ. ನಕ್ಕೆ ]

**ನಗೆಕಾರ** 'ನಗೆಗಾಱ' ನೋ.

**ನಗೆಕಾರ್ತಿ** 'ನಗೆಗಾರ್ತಿ' ನೋ.

**ನಗೆಕಾಱ** 'ನಗೆಗಾಱ' ನೋ.

**ನಗೆಕುಂಟೆ** (ನಾ). ಒಂದು ಸ್ಥಳದ ಹೆಸರಂ : ಪುಲಿನಾಡ ನಗೆಕುಂಟೆಯಂ ಪಲ್ಲವಾದಿತ್ಯ ನೊಳಂಬ ಗಾವುಣ್ಡಂಗೆ ಕೊಡಂಗೆಯಾಗಿ ಕೊಟ್ಟಂ (ಮ್ಯಆರಿ. ೧೯೩೨, ೪೮-೧೭ ; 960). [ ನಗೆ$_0$ + ಕುಂಟೆ$_3$ ]

**ನಗೆಗಡಲ್**, ನಗೆಗಡಲು (ನಾ). ತುಂಬು ಹಾಸ್ಯ ; ಅತಿಯಾದ ನಗು, – ವಿನೋದ : ಕೌಶಿಕನೃಪ ನಗೆಗಡಲೊಳಾಳುತ . . . ಅಱುಹೆ (ಮದೇಪು. ೨೫-೨೯) ; ಬೋಡುಮಾಯಂ ತೆಱೆದೇಡಿಪ ಕೋಡಗಂಗಳಂ ನೀಡುಂನೋಡಿ ನಗೆಗಡಲೊಳೋಲಾಡುವ ಬೇಡಮೆಣ್ಗಳಿಂ . . . ವಿಜೃಂಭಿಸಿ ಕಣ್ಗೆ ಕೌತುಕಾವಹಮಾಗಿರ್ದುದಲ್ಲಿ (ರಾಜಶೇ. ೫-೫೫ ವ). **ನಗೆಗಡಲು** : "ನಗೆ ಗಡಲು" ಎಂಬ ಹೆಸರನ್ನಿಟ್ಟು ಈ ಕಥೆಯನ್ನು ಬರೆದಿದ್ದೇನೆ (ನಗೆಗ. ಸೂಚನೆ).
[ ನಗೆ + ಕಡಲ್$_2$ ]

**ನಗೆಗಡಲು** 'ನಗೆಗಡಲ್' ನೋ.

**ನಗೆಗಣ್**, ನಗೆಗಣ್ಣು (ನಾ). ಕಾಂತಿಯುಕ್ತವಾದ ಕಣ್ಣು ; ಪ್ರೀತಿ, ಸಂತೋಷ, ವಿನೋದಗಳನ್ನು ಸೂಚಿಸುವ ಕಣ್ಣು : ಮಹೀಲಲನೆಯ ನಗೆಮೊಗದಂತೆ: ತಿಳಿದ ಕೊಳಂಗಳುಮಾತನಂತಃಪುರಕಾಂತೆಯರ ನಗೆಮೊಗದ ನಗೆಗಣ್ಗಳ ಬೆಡಂಗನೆ ಕಿಱುನಗೆ ನಗುವಂತೆ (ಆದಿಪು. ೧೧-೫ ವ) ; ನಗೆಗಣ್ ಸೋರ್ವ ಕದುಷ್ಣಮಾರಿಚಯದಿಂ ಬಿಂಬಾಧರಂ ಸುಯ್ಯ ಬೆಂಕೆಗಳಿಂ ನಾಡೆ ಬೆಡಂಗುಗೆಟ್ಟಿರವಿದಿಂತೇ ಕಾರಣಂ (ಪಂಪಭಾ. ೪-೬೩) ; ನಗಿಸಲ್ ನುಡಿಸಲು

ಮಱಿತನ ನಗೆಗಣ್ಗಳ ಚೆಲ್ವನೊಸೆದು ನೋಡಲ್ ಪಡೆಯಲ್ ನಗೆಮೊಗದ ನೀರೆಯರ್ [ನಗು]ಮೊಗದಿಂದಂ ಪಕ್ಕಾಗಾಣದಗಲಗಲಿರ್ಪರ್ (ಅಜಿಪು. ೫-೯೨); ಆ ಸತಿಗೆ ಪುಟ್ಟೆ ಹರ್ಷವಿಲಾಸಂ ಮಧುಬಿಂದುವಾಳೆ ನೀಲೋತ್ಪಲದಿಂ ಸೂಸುವೊಲ್ಪನೆಗೆಗಣ್ಣಿಂ ಸೂಸಿದುವಾನಂದಬಾಷ್ಪಬಿಂದುವಿತಾನಂ (ಮಲ್ಲಿಪು. ೪-೩೦); ಬಂದರ್ ನಗೆಗಣ್ಗಳ ಚೆಲ್ಲೆಗಣ್ಗಳಲರ್ಗಣ್ಗಳ ನಿಡುಗಣ್ಗಳ ಬೆಡಂಗಿಯರ್ ಕೋಮಲೆಯರ್ (ಜಗವಿ. ೪-೦೨೪); ನಗೆಗಣ್ಗಳ ಕಾಂತಿಯು ಸೆಳ್ಳುಗುರ್ಗಳ ಕಾಂತಿಯು ಕರದ್ವಯದ ಕಾಂತಿಯ ಮಾಲೆಗಳಂ ಹೊಸ ಹೂವಿನ ಮಾಲೆಗೆತ್ತು ಬೆಲೆಗೊಟ್ಟುಕೊಂಡು ನಗಿಸಿದನೊರ್ವಂ (ಗಿರಿಕ. ೨-೮೭); ನಗೆಗಣ್ಗಳ್ ನೈದಿಲಂ ಸಾಲಿಡೆ ಬಿಗಿದ ಕುಚಂ ಬಿಂಕವಂ ಬೀಱೆ ಕಾಲಂದುಗೆ ಬಂಡುಂಡರ್ದ ಪೆಣ್ದುಂಬಿಗಳ ರವವನೊಟ್ಟೈಸೆ . . . ಬಂದರೀರ್ವರ್ ಸುಲಲಿತ ಚತುರಾಪಾಂಗೆಯರ್ ಕಾಂತೆಯರ್ಕಳ್(ಪುಣ್ಯಾಸ್ರ. ೧-೪೨). **ನಗೆಗಣ್ಣು :** ಎಳೆಯಳ ಮುಖಸರಸಿಯೊಳೆಯ್ದೆ ತುಂಬಿದ ಕಳೆಯೆನಿಪವಮಲಾಂಬುವಿನೊಳು ಪೊಳೆವ ತರಳಪಾಠೀನಗಳಂತೆ ಕಂಗೊಳಿಸಿದುವಾ ಪೆಣ್ಣ ನಗೆಗಣ್ಣು (ಶ್ರೀಭುತಿ. ೨೦-೬೩); ಓ ತಾಯೆ, ಕನ್ನಡದ ಪೆರ್ತಾಯೆ ... ಸುಳಿಗುರುಳು, ನಗೆಗಣ್ಣು ಏನು ಕಪ್ಪೆ ನಿನಗೆ–ಮುತ್ತಿಡುವ ಕಪ್ಪು ! (ಹೊಂಗಳು. ೦೫–೧೯); ಒಬ್ಬರ ಕಣ್ಣು ಮತ್ತೊಬ್ಬರ ಕೈಯಲ್ಲಿರುತ್ತದೆ ಎಂದು ನಗೆಗಣ್ಣಿನ ಮುದುಕ ನುಡಿದನು (ಪುನರು. ೩೦೪). [ನಗೆ + ಕಣ್]

**ನಗೆಗಣ್ಣು** 'ನಗೆಗಣ್' ನೋ.

**ನಗೆಗಣ್ಣೋಟ** (ನಾ). ಕಾಂತಿ ಅಥವಾ ವಿಲಾಸಯುಕ್ತವಾದ ಕಣ್ಣಿನ ನೋಟ,–ದೃಷ್ಟಿ: ಸೊಗಯಿಪ ನಗೆಗಣ್ಣೋಟ [ಪಾಠಾಂ. ಕಡೆಗಣ್ಣೊಪ್ಪ] ವಿಂತಾಗವೇಡಾ ಕೊಳದಿಂದಂ ಬಂದ ಲಕ್ಷ್ಮೀವಧುವೆನಿಸುವ ಪೆಣ್ಣಾವ ವಿಂತಾಗವೇಡಾ (ಗದಾಯು. ೮-೬೦). [ನಗೆಗಣ್ + ನೋಟ]

**ನಗೆಗಣ್ಬೆಳಗು** (ನಾ). ನಗೆಗಣ್ಣಿನ ಕಾಂತಿ,–ಹೊಳಪು: ಪಾಲ್ಗಡಲ ಮೂಲಸ್ಥಾನವೊ ಬನದ ಸಿರಿಯ ನಗೆಗಣ್ಬೆ [ಪಾಠಾಂ. ಣ್ಬೆ]ಳಗು ನಿಂದುದೊ ಸಿರಿಯ ಮುತ್ತಿನ ಬಿತ್ತೊ (ಸಾಳ್ವಭಾ. ೦೭-೮). [ನಗೆಗಣ್ + ಬೆಳಗು$_2$]

**ನಗೆಗಾರ** 'ನಗೆಗಾಱ' ನೋ.

**ನಗೆಗಾರ್ತಿ,** ನಗೆಕಾರ್ತಿ (ನಾ). ೧. ನಗೆಯನ್ನುಂಟುಮಾಡುವವಳು.; ವಿನೋದವನ್ನುಂಟುಮಾಡುವವಳು. ೨. ನಗೆಯನ್ನು ಉಳ್ಳವಳು; ವಿಲಾಸವತಿ : ಸೊಬಗಿನ ಸೋನೆಯ ನಗೆವೆತ್ತ ನಲ್ಲಳ ಮುಗುಳ ಮೊಲೆಯ ಮೋಹಿನಿಯ ಬಗಸೆಗಂಗಳ ಬಾಲೆಯುಂ ರಂಗಾಯೆಂಬ ನಗೆಗಾರ್ತಿಯನೆಂದು ಸಂಧಿಪೆನೊ (ಶತಸಾಂ. ೨೭-೪೧). **ನಗೆಕಾರ್ತಿ :** ೧. ನಗೆಕಾರ್ತಿ, ನುಡಿಕಾರ್ತಿ (ಶಬ್ದಾನು. ೨೦೦ ಪ್ರಯೋ); ಹಸತಿ = ನಕ್ಕಪಂ . . . ಹಸಂತೀ = ನಗೆಕಾರ್ತಿಯುಂ, ಕುಂಪಟಿಯುಂ (ಕಾಶಕ್ಕ. ೬೨).

[ನಗೆಗಾಱ + –ತಿ$_1$ (<–ಇತ್ತಿ)]

**ನಗೆಗಾಱ,** ನಗೆಕಾರ, ನಗೆಕಾಱ, ನಗೆಗಾರ (ನಾ). ೧. ನಗೆಯನ್ನುಂಟು ಮಾಡುವವನು; ನಗಿಸುವವನು; ನಗೆಗಾಱನಂತೆ ಕಾಡೆನುತ್ತುಂ[ಪಾಠಾಂ. ಕಮ್ಮಾರನಂತಡೆಯೆನುತ್ತುಂ] ಪೆಗೆಗಾಱನಂತೆ ಪಾಡೆನುತ್ತುಂ (ಧರ್ಮಾಮೃ. ೨–೭೦). ೨. ನಗುವವನು; ನಗೆಯನ್ನುಳ್ಳವನು : ತೋಱಿಸಿದ ದೀವಿಗೆಗೆ ಕರುಣವ ತೋಱುತಿತ್ತನು ಬಾಲವನು ನಗೆಗಾಱರಿಗೆ ನಾಟಕವ ನಟಸುತ ವೀರ ಹನುಮಂತ (ತೊರರಾ. ೫-೭-೪೫). ೩. ವಿದೂಷಕ; ಹಾಸ್ಯಗಾರ: ಅಂತು ಬಂದ ಬಸಂತದೊಳೊರ್ಮೆ ನನೆಯಂಬಂ ತನ್ನ ಮೇಳದ ಕೆಳೆಯನಪ್ಪ ನಗೆಗಾಱನಂ ಬಱಿಯಟ್ಟಿ ಬರಿಸಿ (ಕಬ್ಬಿಕಾ. ೭೨). **ನಗೆಕಾರ :** ೧. ಹಸತಿ= ನಕ್ಕಪಂ, ಹಾಸಕಃ = ನಗೆಕಾರಂ' (ಕಾಶಕ್ಕ. ೬೨); ದೇಶವಿದೇಶಗಳ ಗಾಯಕರು, ನಗೆಗಾರರು, ನರ್ತಕಿಯರು . . . ತಂತಮ್ಮ ವಿದ್ಯಾಪರಿಶ್ರಮದ ಕಲಾಪರಿಣತಿಯ ಸಾಧಕಗಳಿಂದ ಆಸ್ಥಾಯಿಕೆಯ ಮನೋರಂಜನವನ್ನು ಸಿದ್ಧಿಗೊಳ್ಳತೊಡಗುವರು (ಬಿಟ್ಟಿಅ. ೩೨-೬). **ನಗೆಕಾಱ :** ೧. ನಗೆಯೊಳ್ ಪ್ರವಣಂ ವ್ಯಾಪೃತಂ ಮೇಣ್ ನಗೆಕಾಱಂ (ಶಬ್ದಾನು. ೪೨೩ ಪ್ರಯೋ); ಅಱಿಯೆಯಾ ನೀನಿದ ನಗೆಕಾಱ ಬಗೆಕಾಱ ಮಱೆಕಾಱ ಬಲು ಟೌಳಿಕಾಱ ಅಱಿಯದಂದದೊಳೆನ್ನ ಕೇಳ್ವೆಯೆಂದವಳೊಳಗಱಿದೊತ್ತಿ ನುಡಿದಳು ನೃಪನ (ಭರಜ. ೮-೨೫). ೨. ಜಗತೀಶಂ ನೋಟ್ಟ ಕಣ್ಣಿಂ ನುಡಿವ ದನಿಗವಿಯಿಂಬಾಗಿ ಕುಳ್ಳಿರ್ದರಂದೋಳಿಗಳಿಂ ದಂಡಾಧಿಪರ್ ಮಾಂಡಳಿಕ ರಥಿಕ ಸಾಮಂತರಂತರ್ನಿಯುಕ್ತರ್ . . . ನಗೆಕಾಱರ್ ವಾದ್ಯಕರ್ ಚಿತ್ರಕರಣಾಗಿ ನವರ್ ಸೂಳೆವಾಳರ್ ಪಯಾಳರ್ (ಅನಂಪು. ೨-೨೬); **ನಗೆಗಾರ :** ೧. ನಗೆಗಾರರು, ಕವಿಗಳು ಆದ ಬೇಂದ್ರೆಯವರು ಎಷ್ಟೋ ನಗೆಹಾಡುಗಳನ್ನು ಬರೆದಿರುವದು ಸ್ವಾಭಾವಿಕವಾಗಿದೆ (ನಿರಾಳ. ೭ ಮುನ್ನುಡಿ); ಮಿಗಿಲಾದವನ ಹತ್ತಿರ ಹಗೆ ಸಲ್ಲ, ನಗೆಗಾರನ ಹತ್ತಿರ ಮೈತ್ರಿ ಸಲ್ಲ (ಗಾದೆ). ೩. ಪರದರ ಕರಣಿಕರ . . . ನಗೆಗಾರರ . . . ನಿಡುಗೇಂಗಳು ಆ ದುರ್ಗದಲ್ಲಿ ವ್ಯವಸ್ಥೆಗೊಂಡಿವೆ (ನಂಜುಂಡ. ೦೨೬). [ನಗೆ + –ಕಾಱ]

**ನಗೆಗುಂದು** (ಕ್ರಿ). ನಗೆಯನ್ನು ಕಳೆದುಕೊಳ್ಳು; ಕಾಂತಿಹೀನವಾಗು; **ಸೊರಗು :** ಪಗೆಯ ಕೆಳೆಗೊಂಡ ಪದ್ಮಿನಿ ನಗೆಗುಂದಿದಳ್ (ವೃಷವಿ. ೮-೪೪). [ನಗೆ + ಕುಂದು$_1$]

**ನಗೆಗೂಡು** (ಕ್ರಿ). ನಗುವನ್ನು ಹೊಂದು; ಸಂತೋಷಗೊಳ್ಳು : ಕಾವ್ಯಮಿದು ಭುವನದೊಳ್ಸಕಲಜನರಿಂದೆ ಸುಶ್ರಾವ್ಯಮಪ್ಪೆತೆನ್ನ ವದನಾಬ್ಜದಲ್ಲಿ ನೀನೇ ವ್ಯಾಪಿಸಿರ್ದಮಲಸುಮತಿಯಂ ತಾಯೆನಗೆ ತಾಯೆ ನಗೆಗೂಡಿ ನೋಡಿ (ಕ್ಷಮಿಭಾ. ೦-೪). [ನಗೆ + ಕೂಡು$_1$]

**ನಗೆಗೆಡು** (ಕ್ರಿ). ಆನಂದ ಕುಗ್ಗು,–ಕಡಮೆಯಾಗು : ಜಗವ ಮಾಡುವ ಗುಣ[ಣ]ಗಳಂ ತಾ ನಗೆಗೆಡನು (ನಿಭಾಗ. ೧೧-೩೪-೧೯). [ನಗೆ + ಕೆಡು$_1$]

**ನಗೆಗೇಡಿ** (ನಾ). ನಗೆಗೆ ಈಡಾದವನು; ಅಪಹಾಸ್ಯಕ್ಕೆ ಒಳಗಾದವನು : ಕುಲಜರಾವ್ ರಘುವಂಶದಲಿ ನಿಷ್ಕಲುಷರಾವ್ ಮಾರ್ಗದಲಿ ಲೋಕದ ಹಳಿವಿಗೊಳಗಿಹರಲ್ಲ ನಗೆಗೇಡಿಯಹರು ನಾವಲ್ಲ (ತೊರರಾ. ೬-೩೩-೧೦೮). [ನಗೆ + ಕೇಡಿ$_1$]

**ನಗೆಗೇಡು** (ನಾ). ಹಾಸ್ಯಾಸ್ಪದವಾದುದು; ಅವಮಾನಕರವಾದುದು : ಮೊದಲು ಜನನವನಱಿಯೆ ಮರಣದ ಹದನ ಕಡೆಯಲಿ ತಿಳಿಯೆ ನಾ ಮಧ್ಯದಲಿ ನೆಱೆ ನಾ ನಿಪುಣನೆಂಬುದು ಬಳಿಕ ನಗೆಗೇಡು (ಹರಿಸಾ. ೯೫); 'ನಾ ಬಲ್ಲೆ', 'ಗೊತ್ತಿಲ್ಲ' ಎಂಬ ವಾದದ ಹಾದಿ ಬಗೆಗೇಡು ನಗೆಗೇಡು ಹತಮತಿಯು (ಅರಳು. ೯೬-೦).

**ನಗೆಗೇಡಾಗು** = ಹಾಸ್ಯಾಸ್ಪದವಾಗು; ಅಪಹಾಸ್ಯಕ್ಕೆ ಒಳಗಾಗು ಅಱಿವು ತಲೆಕೆಳಗಾಯ್ತು ಧೈರ್ಯದ ನಿಱಿಗೆ ನಗೆಗೇಡಾಯ್ತು [ಪಾಠಾಂ. ನಗೆಗೆಡೆಯಾಯ್ತು] (ಕುಮಾವ್ಯಾವಿ. ೨-೧೨); ಕಾನನಕೆ ಬರಲೇಕೆ ರಕ್ಕಸ ಜಾನಕಿಯ ಸೆಱೆವೊಯ್ಯಲೇತಕೆ ಭಾನುಕುಲಜನ ಬದುಕು ನಗೆಗೇಡಾಯ್ತಲಾಯೆಂದ (ಕಾಶಿರಾ. ೨೨-೬೦). [ನಗೆ + ಕೇಡು]

**ನಗೆಗೇಡುಗೂಡು** (ಕ್ರಿ). ನಗೆಗೀಡಾಗು; ಅಪಹಾಸ್ಯಕ್ಕೆ ಗುರಿಯಾಗು : ಒಂದುಗಿಡಿಸಲ್ಕಿದು ಮೇಳೆಯೆನುತ್ತೆ ಪತ್ರೆಸಾರ್ದೆಸಗಿದನಿಕ್ಕಿ ಪಟ್ಟಣಕೆ ಮುತ್ತಿಗೆಯಂ ನಗೆಗೇಡುಗೂಡಿದಂ (ಚಿಕವಿ. ೫-೦೯).

[ನಗೆಗೇಡು + ಕೂಡು$_1$]

**ನಗೆಚಾಟ** (ನಾ). ವಿನೋದ; ಹಾಸ್ಯ; ಕುಚೋದ್ಯ : ಇಂದೇಕೆ ನನ್ನ ಮೇಲೆ ಇಷ್ಟೊಂದು ದಯೆ ಇವಳಿಗೆ ? . . . ಅವಳ ನಗೆಚಾಟವೇ ಆಗಿದ್ದರೆ ಸುಮ್ಮನೆ ನಾಚಿಕೆಗೇಡಾದೀತು (ಪ್ರೇಮಾಶ್ರ. ೨೩೭).

[ನಗೆ + –ಚು$_1$ + ಆಟ]

**ನಗೆಚಾಟಿಕೆ** (ನಾ). ೧. ನಗೆಚೇಷ್ಟೆ: ವಿನೋದ; ಹಾಸ್ಯ; ತಮಾಷೆ : ಆತ ತನ್ನ ನಗೆಚಾಟಿಕೆಯ ಮಾತನ್ನು ಕೇಳಿ ಮುಗಿಸಿಕೊಳ್ಳದೆ . . . ಮಾತನಾಡಿದುದನ್ನು ಕಂಡು ಅಷ್ಟೇ ಆಶ್ಚರ್ಯವಾಯಿತು (ಚಿತಂಬಾ. ೩೯);

ಅವನ ಸ್ವಭಾವಸಹಜವಾದ ನಗೆಚಾಟಿಕೆಯ ಮಾತುಗಳಿಗೆ ಆಗೀಗ ಹೊಟ್ಟೆ ತುಂಬ ನಗಲಿಲ್ಲವೆ ? (ಮೂರುದಾ. ೨೦೪); ನಗೆಚಾಟಿಕೆ ಮಾಡುವುದನ್ನಂತೂ ಮನಸ್ಸಿನಲ್ಲಿ ತರಲೇಬೇಡಿರಿ (ಬ್ರಹ್ಮಜೀ. ೯೫); ಅವನ ನಗೆಚಾಟಿಕೆಯಿಂದ ಜೀವವನ್ನು ಹಗುರ ಮಾಡಿದರು (ಕನಕ. ೧೭). ೨. ಅಪಹಾಸ್ಯ; ನಗೆಗೇಡು : ಅವಳ ತವರಿನ ಬಳಗದಲ್ಲಿ ಇದೊಂದು ನಗೆಚಾಟಿಕೆಯ ವಿಷಯವಾಗಬಾರದಲ್ಲ ಎಂದು ಕಾಳಜಿಯಾಯಿತು (ಕಾಗೆಕ. ೧೦೫).

[ ನಗೆಚಾಟ + –ಇಕೆ ]

**ನಗೆಚೇಷ್ಟೆ** (ನಾ). ಹಾಸ್ಯ ; ವಿನೋದ ; ತಮಾಷೆ : ಎಲ್ಲದರ ಬೆಲೆ ತಪ್ಪಿ ಹೋದ ಸಮಾಜಕ್ರಾಂತಿಯ ಈ ಕಾಲದಲ್ಲಿ ನಗೆಚೇಷ್ಟೆ ಯಾವುದು, ಕುಚೇಷ್ಟೆ ಯಾವುದು ಎಂಬುದನ್ನು ಹೇಳುವುದು ಬಿಗಿಯಾಗಿದೆ (ಸಾಹಿವಿ. ೧೧೪).

[ ನಗೆ+ ಚೇಷ್ಟೆ ]

**ನಗೆದೋಱು** (ಕ್ರಿ). ೧. ನಗುವನ್ನು ತೋರಿಸು; ನಗು; ಹರ್ಷವನ್ನು ಸೂಚಿಸು : ಹೇಱಿದವು ಹರುಷವನು ತನು ನಗೆದೋಱಿದವು ಮುಖಕಮಲ ಕಾಂತಿಯ ಬೀಱಿದವು ಭುಜಲತೆಗಳು (ತೊರಠಾ. ೧-೮-೨). ೨. ಅರಳು; ವಿಕಾಸವಾಗು : ಒಸರಿದುದು ಶಶಿಕಾಂತಶಿಲೆ ಧವಳಿಸಿದುದಂಬರವಂಬುನಿಧಿ ಲಳಿ ಮಸಗಿದುದು ನಗೆದೋಱಿದವು ನೈದಿಲು (ತೊರಠಾ. ೫-೩-೪).

[ ನಗೆ + ತೋಱು ]

**ನಗೆನಗು** (ಕ್ರಿ). ನಗೆಯನ್ನು ನಗು ; ನಗುವನ್ನು ತೋರು : ನಗೆನಗುತ ಕಲಕೇತಬೊಮ್ಮಣ್ಣಗಳು ಆ ಱ ಮ ಣ್ಣಂ ಪಿಡಿಯ ಪೊನ್ನುಗಳ ಮಯವಾಗೆಸೆಯಲು (ಬಸವು. ೨೮-೩೨). [ ನಗೆ + ನಗು$_1$ ]

**ನಗೆನಯನ** (ನಾ). = ನಗೆಗಣ್ : ನಗೆನಯನವಮಿಡಿಗಳರುಣಂ ಪೊಗಸಿ ಮಿಗೆ ನೀಲ್ದ ಕೇಶಪಟ್ಟಿದಿಗಳ್ಳಾನುಗುರ್ದೀಧಿತಿ ನಡೆಯಿಭಗತಿ ಸೊಗಯಿಸುವು ಪೊರ್ವಳ್ಗೆನಲ್ಕಮದು ನಿರ್ದೋಷಂ (ಕವಿಜ. ೪-೧೧). [ ನಗೆ + ನಯನ ]

**ನಗೆನಾಟಕ** (ನಾ). ನಗು ಹುಟ್ಟಿಸುವುದಕ್ಕಾಗಿಯೇ ಇರುವ ನಾಟಕ ; ಹಾಸ್ಯನಾಟಕ ; ಪ್ರಹಸನ ಹಾಸ್ಯನಾಟಕ, ಪ್ರಹಸನ ಎಂಬುದಕ್ಕೆ ಸಾಮಾನ್ಯವಾಗಿ ನಗೆನಾಟಕವೆಂದೂ ಹೇಳುತ್ತಾರೆ (ರೂಢಿ). [ನಗೆ+ನಾಟಕ]

**ನಗೆನುಡಿ** (ನಾ). ನಗುವಿನಿಂದ ಕೂಡಿದ ಮಾತು ; ಸರಸವಾದ ಮಾತು ; ಹಾಸ್ಯೋಕ್ತಿ : ದ್ರೌಪದಿಗೆ ಹರಿಯರಸಿ ನುಡಿದಳು ಸತ್ಯಭಾಮಾ ಸರಸಿಜಾನನೆ ನಗೆನುಡಿಯ ಸವ್ಯೋಳಿಪೇಳದಲಿ (ಕುವ್ಯಾಆ. ೧೫-೨೦); ಮಾತಿನಿಂ ನಗೆನುಡಿಯು, ಮಾತಿನಿಂ ಹಗೆ ಕೊಲೆಯು . . . ಲೋಕಕ್ಕೆ ಮಾತ ಮಾಣಿಕವು (ಸರ್ವಜ್ಞ. ೨೪೩); ನಗೆನುಡಿಯೊಳುಪಚರಿಸಿ ಚದುರಿನ ಬಗೆಯೊಲಿಸುವುದೆನುತ ಸೀತಾಮ್ಬುಗವಿಲೋಚನೆಗರಸುಗಳ ತೋರಿದನು ಸನ್ನೆಯಲಿ (ಅನಂರಾ. ೧-೨೩-೨೭); ಅದೊ ಅವನ ನೇಹಿಗನ ನಗೆನುಡಿ–ಅಗಲಿದರು–ಬಹನಿತ್ತೆಡೆ ! (ಗಜೇಶ. ೪೯-೧). [ ನಗೆ + ನುಡಿ$_2$ ]

**ನಗೆನೋಟ** (ನಾ). ವಿಲಾಸದಿಂದ ಕೂಡಿದ ನೋಟ ; ಹಾಸ್ಯ, ಪ್ರೀತಿ, ಸಂತೋಷಗಳನ್ನು ಸೂಚಿಸುವ ನೋಟ : ನಗೆನೋಟ ಮೆಲ್ವಾತು ಮುನಿಸು ಮೋಹನಗಳಂ ಬಗೆಯ ಬಂದವರೊಳೊಳಗೂಡಿ ಮೋಹಿಪಳ್ಳು ಗುಣಂಬನರಸಿಗೆಣೆಯಲ್ಲು (ಉದ್ಭಟ. ೧೧-೯೬); ಲಲ್ಲೆಗಣ್ಣವರ್ ನಗೆನೋಟದ ತೋರ ಧಮ್ಮಿಲ್ಲೆಯರೆಯ್ದಿತೊಗ್ಗಿನಲಿ (ಮೋಹತ. ೨೪-೧೨); ನಗೆನೋಟಂ ಪೊಸಮಾತು ರೀತಿ ಗಮಕಂ . . . ಎಲ್ಲಮವರ್ಗೆಂ ಪ್ಯೈ ಸ ಂ ದು ಮಚ್ಚೆರ್ದುದೋ (ರಾಜಶೇ. ೧೧-೮೩). [ ನಗೆ + ನೋಟ ]

**ನಗೆಪಾಟಲು** (ನಾ). = ನಗುಪಾಟಲು : ಇನ್ನೂ ನಾಟಕವಾಗುತ್ತಿರುವಾಗಲೇ ಹೀಗಾದರೆ ನಾಲ್ಕು ಜನರಲ್ಲಿ ನಗೆಪಾಟಲಲ್ಲವೇ ? (ಬಾಡಿಬ. ೧೩೪). 'ನಗುಪಾಟಲು' ಪರಾ.

**ನಗೆಪಾಟಲಾಗು** = ನಗೆಗೇಡಾಗು; ಅಪಹಾಸ್ಯಕ್ಕೊಳಗಾಗು : ತಾನು ದೀಪಾಲೆಗೆ ಇಂದು ಬಂದದ್ದು ಎಂಥ ನಗೆಪಾಟಲಾಯಿತು ಎನ್ನಿಸಿತು (ಅವತಂ. ೪೫) : ಮಹನ್ಮಹಾದೇವತೆಗಳನ್ನು ಇಷ್ಟು ನಗೆಪಾಟಲಾಗಿ ಚಿತ್ರಿಸುವ ನಮ್ಮ ದಿಗ್ದರ್ಶಕರ ದಾಷ್ಟಿಕವೆಷ್ಟೆಂದು ಹೇಳಲಿ (ನಾಡಿಗೇ. ೧೮೩).

**ನಗೆಪಾಟಲು ಮಾಡು**= ಅಪಹಾಸ್ಯಕ್ಕೀಡುಮಾಡು ; ನಗೆಗೇಡುಮಾಡು: ಸಾಮ್ರಾಜ್ಯದ ಕಾರ್ಯವನ್ನು ಬಡ ಹೆಂಗಸಾದ ನಾನು ಮಾಡಲಾದೀತೇ ? ಸುಮ್ಮನೆ ಹೊಗುಟ್ಟಿ ನಗೆಪಾಟಲುಮಾಡಲೇ ? (ದಾನಚಿಂ. ೧೬೮).

[ ನಗೆ + ಪಾಟು$_2$ ( < ಪಾಡು$_3$ ) + – ಅಲು ( < – ಅಲ್$_1$ ) ]

**ನಗೆಬಗೆ** (ನಾ). ಹಾಸ್ಯದ ರೀತಿ,–ಕ್ರಮ,–ಸೊಗಸು; ನಿನ್ನ ನಗೆಬಗೆ–ಎಂಥ ಲಗುಬಗೆಯಿಂದ ಕಣ್ಮರೆ ಸಂದೆಯೋ (ಹಾಡುಪಾ. ೪೯-೮); ಅಪ್ಸರೆಯರನ್ನು ನಗೆಬಗೆಯಿಂದ ನೋಡಿ ಅವರ ಹೃದಯವನ್ನು ಅರಿತಂತೆ (ಅಹಲ್ಯ. ೭೪-೧೩).

[ ನಗೆ + ಬಗೆ$_3$ ]

**ನಗೆಬರಹ** (ನಾ). ನಗುವನ್ನುಂಟುಮಾಡುವ ಲೇಖನ : ಶ್ರೀ ನಾಡಿಗೇರ ಕೃಷ್ಣರಾಯರ ಉತ್ತಮ ನಗೆಬರಹಗಳನ್ನು ಸಂಗ್ರಹಿಸಿ 'ನಾಡಿಗೇರರ ನಗೆಬರಹಗಳು' ಎಂಬ ಶೀರ್ಷಿಕೆಯಲ್ಲಿ ಪ್ರಥಮ ಸಂಕಲನ ೧೯೫೫ರಲ್ಲಿ ಪ್ರಕಟವಾಯಿತು (ನಾಡಿಗೇ. ಪ್ರಕಾಶಕರ ಪುಟ).

[ ನಗೆ + ಬರಹ ( < ಬರೆಪ )]

**ನಗೆಬೀರು** 'ನಗೆವೀಱು' ನೋ.

**ನಗೆಮಚ್ಚರ** (ನಾ). ಹುಸಿಮಾತ್ಸರ್ಯ ; ಹುಸಿಯಾದ ಅಸೂಯೆ,–ಹುರುಡು: ಮಾಯಾಕಾರನು ಕೃಷ್ಣೆಯಲ್ಲಿ ಪೋದನಾಯೆನುತ್ತೆ ನಲ್ಲೆಯರು . . . ಘಳಿಲನೆ ಸೋಪಾನವಿಳಿದು ನಗೆ ಮಚ್ಚರದಿ ಜಲಜಂಗಳಂ ನಾಳ ಸಹ ಕೀಳ್ದು ಪಿಡಿದು (ನವಮೋ. ೧೧-೫೪). [ ನಗೆ + ಮಚ್ಚರ ( < ಮಚ್ಚರ ) ]

**ನಗೆಮಾಡು** (ಕ್ರಿ). ಹಾಸ್ಯಮಾಡು ; ಗೇಲಿಮಾಡು : ತಮ್ಮ ಭಾವನಂ ಧನದೇವನಂ ಕರೆದೀ ನೆಗಟಂ ಬಿಡಿಸೆಂಬುದುಮಾಕೆ ತನಗೆ ನಾದುನಿಯಪ್ಪುದಱಿಂ ನಗೆಮಾಡಿ . . . ಬಿಡಿಸಿದಂ (ಸುಕುಮಾ. ೭-೧೭ ವ); ಯಾದವರ ಬಡಕರುವೆ ಬಾ ಬಾ ಎಂದು ಚಿಟಕಿಸಿ ಕರೆದು ಗುರುಸುತ ಸಾತ್ಯಕಿಯ ತಾಗಿದನು ನಗೆಮಾಡಿ (ಕುವ್ಯಾಕ. ೩-೧೭). [ ನಗೆ + ಮಾಡು$_1$ ]

**ನಗೆಮಾತು** 'ನಗೆವಾತು' ನೋ.

**ನಗೆಮುಖ** (ನಾ). ನಗುವಿನಿಂದ ಕೂಡಿದ ಮುಖ ; ಹಸನ್ಮುಖ; ನಗುಮುಖ : ನಕ್ಕರೆ ನಗಲೆವ್ವಾ ನಗೆಮುಖದ ಹ್ಯಾದೀಗಿ ನಾ ಮುಚ್ಚಿ ಮುಡಿವ ಪರಿಮಳದಾ ಹೂವ ಅವಳೊಂದು ಫಳಿಗೆ ಮುಡಿಯಲೆ (ಗರತಿ. ೧೦೭).

[ ನಗೆ + ಮುಖ ]

**ನಗೆಮೊಗ** (ನಾ) ಸಂತೋಷವನ್ನು ಸೂಸುವ ಮುಖ ; ನಗುಮುಖ : ನಗೆಮೊಗ[ ದಿ ]ಮ್ [ ಶ ] ವ್ [ ಭು ]ವನೆ ಸಂಬು ನೆನೆಯುತ್ತಿರ್ದ್ದಮ್ (ಇಆ. XX, ೭೦-೮ ; ೯ನೆಯ ಶತ); ಆತನ ಬರವಿನುತ್ಸವಕ್ಕೆ ಸಂತಸಂಬಟ್ಟು ಮಹೀಲಲನೆಯು ನಗೆಮೊಗದಂತೆ ತಿಳಿದ ಕೊಳಂಗಳುಂ (ಆದಿಪು. ೧೧-೫ ವ); ಸೊಗಯಿಸಿ ಬಂದ ಮಾಮರನೆ ತಳ್ತಿಲೆವಳ್ಳಿಯೆ . . . ನೋಟಕ್ಕೊಡೀವ ಬೆಟ್ಟುಗಳೊಳವಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಪಂಪಭಾ: ೪-೨೮); ನಗೆಮೊಗದರಸಾ ಅವಧಾರು ಕೂಡಲಸಂಗಮದೇವಾ ಬಗಿದು ಹೊಗುವೆ ನಾ ನಿಮ್ಮ ಮನವನು (ಬಸವ. ೪೮೮); ನಗೆಮೊಗಮಬ್ಜಮಾಗೆ ಬಾಯ್ದೆರೆ ಬಂದುಗೆಯಾಗೆ ಮೂಗು ಸಂಪಗೆಮುಗುಳಾಗೆ . . . ಚೆಲ್ವೊಗೆವಿನೆಗಂ ವಿನಿರ್ಮಿಸಿದ ಪೆಂಡಿರ ಜಾತಿ ಕರಂ ಮನೋಹರಂ (ಲೀಲಾವ. ೧೧-೬೧); ವರಕಸ್ತೂರಿತಿಲಕಮನರಸಿಯ ಕಡುಚೆಲ್ವ ನೊಸಲೊಳಿಟ್ಟಳ್ ಸುರಸೌಂದರಿಯೊರ್ವಳ್ ನಗೆಮೊಗಮೆಂಬುರುಚಂದ್ರಮನಲ್ಲಿ ಮೆಱೆವ ಕಱೆಯೆಂಬಿನೆಗಂ (ರಾಘಪು. ೬-೭೮); ನಗೆಮೊಗವು ಬಾಡಿದವು ಮನದೊಳು ದುಗುಡವೋಳಿಸೆ ಭೀಷ್ಮಜಗೆ (ಸಾಳ್ವಭಾ. ೩೧-೧೨). [ ನಗೆ + ಮೊಗ ]

**ನಗೆಮೋರೆ** (ನಾ).=ನಗೆಮುಖ : (ಶ). [ನಗೆ + ಮೋರೆ (<ಮೋಱೆ)]

**ನಗೆಯಾಟ** (ನಾ). ೧. ಹಾಸ್ಯ ; ತಮಾಷೆ; ಹುಡುಗಾಟಿಕೆ ; ವಿನೋದ:

ಈ ಧಗೆಯಲಿ ನಗೆಯಾಟದ ಹಗೆ ಹೂಡಿದರಾರು ? (ಸೂರ್ಯಪಾ. ೭-೭). ೨. ಹಾಸ್ಯ, ವಿನೋದಗಳಿಂದ ಕೂಡಿದ ನಾಟಕ ; ಪ್ರಹಸನ : "ಲಘು ವಾಗಿಯೂ . . . ಹರ್ಷಾಂತವಾಗಿಯೂ ಇರುವ ನಾಟಕ, ಹರ್ಷನಾಟಕ, ಪ್ರಹಸನ; ನಗೆಯಾಟ (Comedy. ಇಂಕನಿ). [ ನಗೆ + ಆಟ ]

**ನಗೆಯಾಡು** (ಕ್ರಿ). ೧. ನಗು ; ಹರ್ಷಸೂಚನೆ ಮಾಡು : ನೋಡದಿರ್ದಪೆನೆಂಬೆ ಕಣ್ ನೋಡದಿರವು . . . ನಗೆಯಾಡದಿರ್ದಪೆನೆಂಬೆ ಮುಸುಡು ನಗದಿರದು (ಸೋಮಜ. ೨-೭೨). ೨. ಗೇಲಿಮಾಡು ; ಪರಿಹಾಸಮಾಡು; ಅಪಹಾಸ್ಯಮಾಡು ; ಕಂಟೋದ್ಯಮಾಡು : ಬರಿಗೈಯಿಂದ ಮರಳಿದ ಭೃಂಗಿಯ ಪರಿಯನ್ನು ಕಂಡು ಪಾರ್ವತಿ ನಕ್ಕಳು . . . ಅವನನ್ನು ಬಹುವಾಗಿ ಜರಿದು ನಗೆಯಾಡಿದಳು (ಬಿದುರಿ. ೬೯); ನಗೆಯಾಡದಿರು ನನ್ನ ನಲುಮೆ ಒಲುಮೆಯ ಕುರಿತು (ಉಯ್ಯಾಲೆ. ೩೯-೦) ; ಬೇಲದ ಗಾತ್ರದ ತಮ್ಮುಡಿ ಹರಕನು ನೋಡದೆ ಮುಚ್ಚದೆ ಖಳರು ಸಾಸಿವೆಕಾಳಿನ ಹರರುಡೆ ಹರಕನು ನೆರೆ ನೋಡಿ ನಗೆಯಾಡಿದಪರು (ಇಂಚಾಪ. ೬೫-೧೩). ೩. ವಿನೋದದಿಂದ ನಗು ; ವಿನೋದಮಾಡು ; ಹಾಸ್ಯಮಾಡು ; ತಮಾಷೆಮಾಡು : ಈ ನನ್ನ ತೊದಲ್ನುಡಿಯ ಸಾಹಿತ್ಯವನ್ನು ಕಂಡು ತಾವು ನಗಬಹುದು; ತಾವು ಯಾವುದೇ ರೀತಿಯಿಂದಾ ನಗೆಯಾಡಿದರೂ ನನಗೆ ಸಂತೋಷವೇ ಸರಿ (ಅಮಗಾಂ. iii, ಪ್ರಸ್ತಾವನೆ) ; ಆಯುಷ್ಯದಲ್ಲಿ ಇಷ್ಟು ಬೇಗನೆ ನೀವು ಯೋಗಿಗಳೊಡನೆ ಸಂಬಂಧ ಬೆಳೆಸಿದ್ದೀರಾ ? ಎಂದು ಆ ತರುಣಿಯು ನಗೆಯಾಡಿದಳು (ಸಮುಜೀ. ೩೦೯) ; "ಅಹುದು ನಾನು ಮಾತಿನ ಮಲ್ಲ" ಎಂದು ಮಲ್ಲಪ್ಪ ನಗೆಯಾಡಿದನು (ದಾನಜಿಂ. ೪೧) ; ನಂಬದಿದ್ದ ಮಾತ್ರಕ್ಕೇನೇ ನಾನೇನೂ ನಾಸ್ತಿಕನಾಗುವುದಿಲ್ಲ ಎಂದು ತಂದೆಯು ನಗೆಯಾಡುತ್ತಾ ಹೇಳಿದನು (ಮೊಪಾಸಾ. ೪೦) ; ಇವರ ಮಾಮೂಲಿಯ ಮಾತುಗಾರಿಕೆಯು, ಕತೆಗಾರನ ಸರಸತೆಯನ್ನು ನಗೆಯಾಡುವಂತೆ . . . ಶುಭ್ರತೆಯನ್ನು ಸೇರುವುದು (ವಿಜಾಮುಂ. ೯೯). [ ನಗೆ + ಆಡು$_1$ ]

**ನಗೆಯಾನ್** (ಕ್ರಿ). ನಗುವನ್ನು ಹೊಂದು,-ಪಡೆ: ಜೊಲ್ಲು ಸುರಿವ ಮುದ್ದು ಮೊಗದಲ್ಲಿ ನಗೆಯಾಂತು ಸೊಲ್ಲಿಸುವನು ತೊದಲ್ನುಡಿಯ (ಮೋಹತ. ೧೭-೬೯). [ ನಗೆ + ಆನ್$_1$ ]

**ನಗೆಯುಡುಗು** (ಕ್ರಿ). ೧. ಸಂತೋಷ ಕಡಮೆಯಾಗು,-ಕುಗ್ಗು. ೨. ಮುಚ್ಚಿಕೊಳ್ಳು ; ಸಂಕೋಚವಾಗು : ತಲೆದೋರಿದನು ದಿನಪ ನಗೆಯುಡುಗಿ ನಾಚಿದವು ಕುಮುದಾಳಿಗಳು ಮುಂಗಾಣಿಕೆಯು ಹರುಷದೊಳಗಿದು ವಿರಹವ ಬೀಳುಕೊಟ್ಟುವು ಜಕ್ಕವಕ್ಕಿಗಳು (ಕುಮಾ್ವಭೀ. ೧-೩೮).
[ ನಗೆ + ಉಡುಗು$_1$ ]

**ನಗೆಯೆಳ್ಳು, ನಗೆಳ್ಳು** (ನಾ). (ಕರಾ) ಮಕರಸಂಕ್ರಾಂತಿಯಂದು ಸ್ತ್ರೀಯರು ಎಲ್ಲರ ಮನೆಗೆ ಸಂತೋಷದಿಂದ ಬೀರುವ ಎಳ್ಳು: ಸಂಕ್ರಾಂತಿ ಹತ್ತಿರ ಬರುತ್ತಿರುವುದರಿಂದ ಈಗಲೇ ನಗೆಯೆಳ್ಳನ್ನು ಸಿದ್ಧಪಡಿಸಿಕೊಳ್ಳಬೇಕು (ರೂಢಿ). **ನಗೆಳ್ಳು** : ಹೆಣ್ಣುಮಕ್ಕಳಿಗೆ ನಗೆಳ್ಳು ಬೀರುವುದೊಂದು ಬಹಳ ಆಸಕ್ತಿಯ ಕೆಲಸ (ರೂಢಿ). [ ನಗೆ + ಎಳ್ಳು ( < ಎಳ್ ) ]

**ನಗೆವಡಿಕಾಱ** (ನಾ). ನಗುವನ್ನುಂಟುಮಾಡುವವನು ; ಹಾಸ್ಯಗಾರ ; ವಿದೂಷಕ : ನಗೆವಡಿಕಾಱಂ ನೀಱಂ ಬಗೆಕಾಱಂ ಪಾಟಕಾಱನೊಳ್ನುಡಿಕಾಱಂ (ಕಾವ್ಯಾವ. ೩೫೫); ಕಾಱಕ್ಕೆ— ನಡೆವಳಿಕಾಱಂ . . . ನಗೆವಡಿಕಾಱಂ, ಬಗೆಕಾಱಂ (ಶಮದ. ೧೯೯ ಪ್ರಯೋ). [ ನಗೆವಡಿ$_0$ + – ಕಾಱ ]

**ನಗೆವಾತು, ನಗೆಮಾತು** (ನಾ). ನಗುವಿನಿಂದ ಕೂಡಿದ ಮಾತು; ಹಾಸ್ಯದ ನುಡಿ: ಅವರ ಸರಳತನದ ನಡತೆ, ತೀಕ್ಷ್ಣಬುದ್ಧಿಯ ಹರಿತವಾದ ನೋಟ, ನಗೆವಾತುಗಳು ಇವೆಲ್ಲ ನನಗೆ ಒಗ್ಗಿದುವು (ಕಾಲಯಾ. ೪). **ನಗೆಮಾತು** : ತಂಗಿಗೆ ಮನೆಯ ನೋವು ಮರೆಸಲೆಂದು ಏನಾದರೂ ನಗೆಮಾತು ಆಡುತ್ತಿದ್ದ (ವಾತ್ಸಲ್ಯ. ೨೦೧) ; ದೊಡ್ಡವನು ಹುಡುಗಿಯರನ್ನು ನೋಡಿ ನಗೆಮಾತನ್ನಾಡಿದಾಗ ಚಿಕ್ಕವನು ನಕ್ಕನೇ ಹೊರತು, ತಾನು ಸ್ವತಃ ಯಾವ ಮಾತನ್ನೂ ಆಡಲಿಲ್ಲ (ರಂಗವ. ೨೦೩) ; ನನ್ನ ನಗೆಮಾತಿಗೆ ಮರುಳಾಗಿ ಮೃತ್ಯುವು ಕೂಡ ಮೈಮರೆಯಿತೊ ಹೇಗೆ (ಇಂಚಾಪ. ೪೦-೮೬) ; ಇದೇನೋ ನಗೆಮಾತು ಎಂದು ನಾನನ್ನುವದರ ಸತ್ಯತೆಯು ಮನವರಿಕೆಯು ಎಷ್ಟೋ ಜನರಿಗೆ ಆಗದಿದ್ದರೆ ನಾನಿನ್ನೂ ಅನೇಕ ಉದಾಹರಣೆಗಳನ್ನು ಕೊಡಬಹುದು (ನಿರಾಧ. ೧೭೩). [ ನಗೆ + ಮಾತು$_1$ ]

**ನಗೆವೀಱು, ನಗೆಬೀರು** (ಕ್ರಿ). ನಗುವನ್ನು ಸೂಸು ; ನಗು ಹೊಮ್ಮಿಸು : ಕೃಷ್ಣನ ಮೇಲೆ ಬಾಲೆ ಕಣ್ಣೋಲದಿನಂದು ಬಿತ್ತರಿಸಿದಳ್ ನಗೆವೀಱುವ ಮುದ್ದುವೀಱುವಾಲೋಲತೆವೀಱುವುಜ್ವಲತೆವೀಱುವ ಮುಗ್ಧ ಕಟಾಕ್ಷಮಾಲೆಯಂ (ಜಗನಿ. ೧೦-೭೯). **ನಗೆಬೀರು** : ಅವನು ನನ್ನನ್ನು ನೋಡಿ ನಗೆಬೀರಿದನು (ರೂಢಿ). [ ನಗೆ + ಬೀಱು$_1$ ]

**ನಗೆವೆಣ್**, ನಗವೆಣೆ, ನಗೆವೆಣ್ಣು, ನಗೆಹೆಣ್ಣು, ನಗೆಹೆಣ್ಣೆ, ನೆಗೆಣ್ಣೆ, ನೆಗೆಣ್ಣು, ನೆಗೆವೆಣ್ಣೆ, ನೆಗೆಹೆಣ್ಣು, ನೆಗೆಹೆಣ್ಣೆ(ನಾ).೧. ಗಂಡನ ಅಣ್ಣ ಅಥವಾ ತಮ್ಮನ ಹೆಂಡತಿ; ಓರಗಿತ್ತಿ: "ಯಾತೃಗಳೆನಲ್ಕೆ ನಗೆವೆಣ್ಗಳಕ್ಕು" (ಮಂಗರಾ. ೯೩-೧೨) ; ದೂಟಿತ್ತ ಮಾವ ಮೈದುನ ನಗೆವೆಣ್ಣಾನು ಗಾಱು ಗತ್ತಲೆಮಾಡಿಯಳುತ ಮೂಱು ದಿನಕೆ ನೀನು ಬೇಱಾಗು ಹೋಗೆಂದು ಸಾಱಿ ಹೇಳಿದೊ ಮಗಳೊಡನೆ (ಅಮುಸಾಂ. ೩-೧೩೩). **ನಗವೆಣ್ಣೆ** : ೧. ವಿನಯಾನ್ವಿತೆಯಾದ ಮಲ್ಲಮ್ಮನು ಮಹದಪ್ಪಣೆ ಎಂದು ನುಡಿದು ನಗವೆಣ್ಣೆಯರನ್ನು ಹಿಂಬಾಲಿಸಿ, ಗೃಹಕೃತ್ಯಗಳ ಸಲುವಾಗಿ ಒಳಗೆ ಹೊರಟುಹೋದಳು (ಮಲ್ಲಮ್ಮ. ೬). **ನಗೆವೆಣ್ಣು** : ೧. "ಯಾ(ತಾ)ತೃವೆಂಬುದು ನಗೆವೆಣ್ಣು (ನೆಗಣ್ಣೆ ಎಂದಿರಬಹುದು)" (ಹಲಾಯು. ೮೪-೩೫೪); ಮುವ್ವರು ಮೈದುನರು ಹುಲಿಯಂಥಾ ಅವದಿರು ನಾಲುವರು ನಗೆವೆಣ್ಣು ಕೇಳು ಕೆಳದಿ (ಮಹಾದೇ. ಬ. ೧೯೩-೩೨೮) ; ಅಯ್ವರು ಭಾವದಿರಯ್ವರು ನಗೆವೆಣ್ಣು [ಪಾಠಾಂ. ನಗೆಣ್ಣು] ಅಯ್ವರಯ್ವರು ಕೂಡಿ ಕಾಡುವರು (ಶಿವಗೀ. ೧೩೫-೬೯೩). ೨. ಗಂಡನ ಅಥವಾ ಹೆಂಡತಿಯ ಸಹೋದರಿ ; ನಾದಿನಿ : ನಾ ನಿಮ್ಮ ಭಾವ ನಲ್ಲಯ್ಯನು ನೀನೆನಗೆ ನಗೆವೆಣ್ಣು (ಅವಜಂ. ೨೦೦-೯೯೩). **ನಗೆಹೆಣ್ಣು** : ೧. ನಗೆಹೆಣ್ಣು [ಪಾಠಾಂ. ನೆಗಣ್ಣ]ಯೆಂಬೋಳು ಮುಂಗೋಪಿ (ಪುರಂದ. ೪-೧೭-೪). **ನಗೆಹೆಣ್ಣೆ** : ೧. ಹೊನ್ನಮ್ಮ . . . ಗಂಡನ ಅಗಲಿಕೆಯ ದುಃಖವನ್ನು ಮರೆತು ಇದೀಗ ನಗೆಹೆಣ್ಣೆಯ ಕೆಲಸದಲ್ಲಿ ಸಹಕಾರಿಣಿಯಾಗುತ್ತಿದ್ದಳು (ಜನಜೀ. ೩೮). **ನೆಗೆಣ್ಣೆ** : ೧. ಅಲ್ಲದಂತತ್ತೀಗೆ ಬೆಲ್ಲದಂತ ನಾದೂನಿ ನೆಲ್ಲಿಕಾಯಂತ ನೆಗೆಣ್ಣೆ ಕೂಡಾಡಿ ಕಲ್ಯಾಣ ತವರ ಮರತೇನ (ಜನಗೀ. ೫೮) ; ಎಡಮನೆಯ ಬಾಗಿಲದ ಒಡತಿ ನೀ ನೆಗೆಣ್ಣೆ ಬಡಿವಾರ ಬ್ಯಾಡ ಮನೆ ಜೋಕಿ (ಜನಗೀ. ೮೧) ; ನವಿಲುಗುಂದಕ್ಕೆ . . . ನೆಗೆಣ್ಣೆಯ ಬಾಣಂತಿತನಕ್ಕೆ ಹೋಗಿದ್ದಳು (ಸಾವಿಲು. ೧೮) ; ನೆಗೆಣ್ಣೆಯಾದಂತೆ, ಒಮ್ಮೆ ಅತ್ತೆಯಾಗಿಯೂ ಅಜ್ಜಿಯಾಗಿಯೂ ಅನ್ನಿಸಿಕೊಳ್ಳುವಳು (ಗರಬಾ. ೨). **ನೆಗೆಣ್ಣು** : (೬). **ನೆಗೆವೆಣ್ಣೆ** : ೧. ನೆಗೆವೆಣ್ಣೆಯರು ದುರುಳೆಮನದೆ ಮತ್ಸರಗೊಂಡು (ಮಲ್ಲಚ. ೨-೧೯). **ನೆಗೆಹೆಣ್ಣು** : ೧. "ನೆಗೆಹೆಣ್ಣು = ಅಣ್ಣತಮ್ಮರ ಹೆಂಡಂದಿರು" (ಜಾನಕೋ. ೧೨) ; ಕಾಮವೆಂಬೊ ನೆಗೆಹೆಣ್ಣು ಎನ್ನ ಕಟ್ಟಿ ಆಳುತಾಳೆ ಕ್ರೋಧವೆಂಬೊ ಸವತಿ ಕೊಲ್ಲುತಾಳೆ (ಪುರಂದ. ೫-೧೧೨-೦). **ನೆಗೆಹೆಣ್ಣೆ** : ೧. ಅತ್ತಿಗೆ ನೆಗೆಹೆಣ್ಣೆ ಹೊತ್ತುಹೊತ್ತಿನೋಳೆನ್ನ . . . ಸೆಣಸುವರಮ್ಮ (ಪುರಂದ. ೨-೪೩-೨). [ ನಗೆ ? + ಪೆಣ್ ]

**ನಗೆವೆಣ್ಣು** 'ನಗೆವೆಣ್' ನೋ.

**ನಗೆವೆಳಗು** (ನಾ). ನಗೆಯ ಬೆಳಕು,-ಕಾಂತಿ : ನಗೆವೆಳಗಿಂ ಕೈರವಮಂ ಸೊಗಯಿಪ ಕರತಳದ ಕಾಂತಿಯಿಂ ಜಳರುಹಮಂ ನಗಿಸಿ ನಱುಸುಯ್ಯ ಕಂಪಿಂ ಮಿಗೆ ಪೊರೆದವನಲ್ಲಿ ಮಾಱುವರ್ ಮಾನಿನಿಯರ್ (ವೃಷವಿ. ೪-೮೫) ; ನಗೆವೆಳಗು ಮಲರಿದುದು ಮೊಗಕೆ (ಶ್ರೀರಾಮಾ. ೫೩೭-೨೨೨) ; ಚಿನ್ನದ

ನಗೆವೆಳಗನೆ ಚಿಮುಕಿಸುವಾಕಾಶಪಟಕ್ಕೆ . . . ದೀರ್ಘದಿಗಂತದ ಫಣಿಸಮ ರೇಖೆ ಹರಿ ಹರಿಹರಿಯಿತು ತೆರೆತೆರೆತೆರೆವೋಗಿ (ಕೋಗಿಲೆ. ೮೯-೩).

[ ನಗೆ + ಬೆಳಗು$_2$ ]

**ನಗೆವೆಳ್ಪು** (ನಾ). ನಗುವಾಗ ಕಾಣುವ ಹಲ್ಲಿನ ಬಿಳಿಯ ಬಣ್ಣದ ಕಾಂತಿ ; ದಂತಕಾಂತಿ: ಸೊಗಯಿಸಿ ಗೊಟ್ಟಿಯೊಳ್ ಪಿರಿದು ಸದ್ಗುಣಮನಿತ್ತು . . . ಮೆಲ್ಪು ಮನಂಬುಗೆ ಗಂಡನೆಂಬ ತುಂಬಿಗೆ ನಗೆವೆಳ್ಪನೋಲಗಿಸುತಿರ್ಪುದು ಮಲ್ಲಿಗೆಯಂತೆ . . . ಬುದ್ಧಿವಂತೆಯರ್ (ಲೀಲಾವ. ೧೪-೬೨) ; ಮೇಗೆ ಬಗೆಬಗೆವಣ್ಣದಲರ್ಗಳಿಂದವರಧರರಾಗ ನಗೆವೆಳ್ಪಿನಿಂ ಪಲ್ಲಟಿಸಿದುವು (ಜಿಬಪು. ೪೫-೪೦) ; ನಗೆವೆಳ್ಪಿಂಬೆಳೆಜೊನ್ನಮುಂ ಪರಿಪೆ ಕಾಂತಾಸ್ಯಾಂಬುಜಾತಂಗಳಂ ನಗಿಪರ್ (ರಾಜಶೇ. ೧೧-೮೦). [ ನಗೆ + ಬೆಳ್ಪು ]

**ನಗೆವೆಱು** (ಕ್ರಿ). ನಗುವನ್ನು ಪಡೆ ; ಹಸನ್ಮುಖಿಯಾಗು : ಸೊಬಗಿನ ಸೋನೆಯ ನಗೆವೆತ್ತ ನಲ್ಲಳ . . . ಎಂದು ಸಂದಿಪೆನೊ (ಶತಸಾಂ. ೨೭-೪೧).

[ ನಗೆ + ಪೆಱು$_1$ ]

**ನಗೆಸಾರ** (ನಾ). = ನಗಂಸಾರ : ಇದು ಒಂದು ನಗೆಸಾರದ ಮಾತಾದರೂ ಇದರಲ್ಲೊಂದು ಗೂಢಸತ್ಯವಡಗಿದೆ (ಜೀವಾತ್ಮ. ೧೫). [ನಗೆ + – ಸರ$_6$ ?]

**ನಗೆಹನಿ** (ನಾ). (ಅಲಂ) ನಗುವನ್ನುಂಟು ಮಾಡುವ ಚಿಕ್ಕಮಾತು ; ಚುಟುಕ : ರಾಜನ ಆ ಒಂದು ನಗೆಹನಿ ದಾಸೋಜನಲ್ಲಿ ಹೊಸಶಕ್ತಿಯನ್ನು ಆವಾಹಿಸಿತು (ಸವತಿ. ೪೫). [ ನಗೆ + ಹನಿ$_3$ (<ಪನಿ$_2$) ]

**ನಗೆಹಾಡು** (ನಾ). ಹಾಸ್ಯದಿಂದ ಕೂಡಿದ ಹಾಡು ; ವಿನೋದದಿಂದ ಕೂಡಿದ ಕವನ: ಬೇಂದ್ರೆಯವರ ನಗೆ-ಹಾಡುಗಳಲ್ಲಿ ಕೆಲವು ಅಣಕವಾಡು (parody) ಇವೆ (ನಿರಾಭ. ೧೧ ಮುನ್ನುಡಿ). [ನಗೆ + ಹಾಡು$_2$ (<ಪಾಡು$_2$) ]

**ನಗೆಹಾಯಿಸು** (ಕ್ರಿ). ನಗುವನ್ನು ಹೊಮ್ಮಿಸು ; ನಗು : ಒಂದನ್ನೊಂದು ಸಂಧಿಸುವಾಗ ಚಂಚಲದಳವು ನಗೆಹಾಯಿಸಿ ಕೇಳಿತು–'ಮಿತ್ರರೇ ! ಚೆನ್ನಾಗಿ ಸರಸವಾಡಿದಿರಾ?' (ಮಂಸಕೂ. ೨೨). [ನಗೆ + ಹಾಯಿಸು (<ಪಾಯಿಸು)]

**ನಗೆಹೆಣ್ಣು** 'ನಗೆವೆಣ್' ನೋ.

**ನಗೆಹೆಣ್ಣೆ** 'ನಗೆವೆಣ್' ನೋ.

**ನಗೇಂದ್ರ** (ನಾ). ದೊಡ್ಡ ಬೆಟ್ಟ : ವನಸ್ಥಲದೊಳೊಂದಿಭವಿರ್ದುದು . . . ಮದಗಜವಲ್ಲಿದಿಂದ್ರನೊಳಿದಿರ್ಚಿದ ನೀಲನಗೇಂದ್ರಮೆಂಬಿನಂ (ಪಂರಾಮಾ. ೧೧-೧೫೪). [ ನಗ$_4$ + ಇಂದ್ರ ]

**ನಗೇಂದ್ರಮೂಲ** (ನಾ). ಪರ್ವತದ ಬುಡ,–ತಪ್ಪಲು : ತಾವರೆಯಲ್ಲಿ ತಾರೆ ಜನನಂಬಡೆದಂದು ನಗೇಂದ್ರಮೂಲದೊಳ್ಪವಿಸೆ ಬಾಳೆಗಂಬ ಮೊಗೆದಂದಂ . . . ಸತಿಯಂಗಮನಾಂ ಪೊಗಳಲ್ಕೆ ಸಾಲ್ದಪೆಂ (ರಾಜಶೇ. ೭-೨೬). [ ನಗೇಂದ್ರ + ಮೂಲ ]

**ನಗೇಂದ್ರಯಜ್ಞ** (ನಾ). = ನಗಯಜ್ಞ : ನಗೇಂದ್ರಯಜ್ಞಮಂ ನೆಗಟ್ದು ಗೋಪಸವಮಾಜಂ ವಿರಾಜಿಸೆ (ಜಗವಿ. ೪-೮೨ ವ). [ ನಗೇಂದ್ರ + ಯಜ್ಞ ]

**ನಗೇಶ್ವರಜೆ** (ನಾ). ಪರ್ವತರಾಜನ ಮಗಳು ; ಪಾರ್ವತಿ ; ಗಿರಿಜೆ : ನಗೇಶ್ವರಜಾನನ ಜಂಬಾಲಜಾತಹಂಸ . . . ಪೊರೆಯಭವಾ (ಹಮ್ಮಿರ. ೨-೨). [ ಸಂ. ನಗೇಶ್ವರಜಾ ]

**ನಗೋತ್ಸಂಗ** (ನಾ). ಪರ್ವತದ ಪಕ್ಕ,–ಸಾನು : ಉತ್ತುಂಗನಗೋತ್ಸಂಗ ಮಾನೇಱುವ ಮೃಗರಾಜನಂ ಪೋಲ್ತು (ಶಾಂತಿಪು. ೫-೪೪ ವ).

[ ನಗ$_4$ + ಉತ್ಸಂಗ ]

**ನಗೋಪಕಂಠ** (ನಾ). ಪರ್ವತದ ಹತ್ತಿರದ ಸ್ಥಾನ : ಪಾಲ ಪೊನಲ್ ಪೊದಟ್ಟೊದವಿ . . . ಶೈಲದರೀಗೃಹಂಗಳುಮನೊರ್ಮೆಯೆ ತೆಕ್ಕನೆ ತೀವಿ ತತ್ಸ್ಥಳಸ್ಥಾಲಭುಜಂಗವಿಶ್ವಸಿತಪವಮಾನಗದಿಂ ಪೊಱಪೊಣ್ಮೆ ಲೋಲಕಲ್ಲೋಲ ಪರಂಪರಾಪರಿಗತಂ ಪರಿದತ್ತು ನಗೋಪಕಂಠದೊಳ್ (ಅಜಿಪು. ೪-೭೩);

[ ನಗ$_4$ + ಉಪಕಂಠ ]

**ನಗೋಪತ್ಯಕ** (ನಾ). ಪರ್ವತದ ಬುಡದ ಭೂಮಿ,–ತಪ್ಪಲು : ಬೆಳದೋರೆಂತೊಱಗಿರ್ದ ಶಾಳಿವನದಿಂ ಸೇವ್ಯಂ ನಗೋಪತ್ಯಕಂ (ಆದಿಪು. ೧-೭೪) ; ಪ್ರತ್ಯಂತದೇಶ ಭೂಭೃದವತ್ಯರನೆಬ್ಬಟ್ಟಿ ಪುಗಿಸಿ ಕಾಂತಾರ ನಗೋಪತ್ಯಕಮಂ ಕೌಸಲ್ಯಾಪತ್ಯಂಗೋಲಗಿಪೆನವರ ಹರಿವಿಷ್ಟರಮಂ (ಪಂರಾಮಾ. ೬-೧೫೪). [ ನಗ$_4$ + ಉಪತ್ಯಕ ]

**ನಗೋಪರಿಮತಲ** (ನಾ). ಪರ್ವತದ ಮೇಲ್ಭಾಗದ ಪ್ರದೇಶ; ಶಿಖರ : ವಂಶಸ್ಥಲ ನಗೋಪರಿಮತಲದೊಳ್ ವಿಚಿತ್ರಚೈತ್ಯಭವನಂಗಳಂ . . . ಪೊಟಲಂ ಮಾಡಿಸಿ (ಪಂರಾಮಾ. ೮-೭೭ ವ). [ನಗ$_4$ + ಉಪರಿಮ + ತಲ]

**ನಗೌಕಸ** (ನಾ). ೧. ಬೆಟ್ಟ ಅಥವಾ ಮರದಲ್ಲಿ ವಾಸಿಸುವಂಥದು ; ಪಕ್ಷಿ : "ಶಕುನಿ ವಿಹಗಂ ವಿಹಂಗಂ ಪತ್ರಿ ವಿಷ್ಕಿರಂ ವಿಕಿರಂ ನಗೌಕಸಂ . . . ಶಕುಂತಂ ಶಕುಂತಿಯೆನೆ ಪಕ್ಷಿ" (ಮಂಗರಾ. ೫೦-೧). ೨. ಸಿಂಹ. ೩. ಕಾಗೆ. ೪. ಶರಭ. [ ಸಂ. ನಗೌಕಸ್ ]

**ನಗ್ಗಲು** 'ನೆಗ್ಗಿಲ್' ನೋ.

**ನಗ್ಗಿ** (ನಾ). ತಗ್ಗಿಹೋದದ್ದು ; ಚಪ್ಪಟೆಯಾದುದು ; ಸೊಪ್ಪಾದುದು: ಬೆನ್ನೊಳು ತೋಳೊಳು ಮೊನೆಗಾಯವಿದೆ ತೊಡೆಯಿನ್ನೆಂತೊ ಕಟಿಗಳೊಳೆಂತೊ ನನ್ನ ನಗ್ಗಿಗಳಾದುವೀ ಮೊಲೆಗಳು ಮರುಹು ಚೆನ್ನಾಗಿ ತಾಳಿದಾ ಧೀರೆ (ಭರತೇ. ೪೨-೭). [ ನಗ್ಗು$_1$ (<ನಱುಂಕು) + – ಇ$_3$ ]

**ನಗ್ಗಿಲು** 'ನೆಗ್ಗಿಲ್' ನೋ.

**ನಗ್ಗಿಸು** 'ನೆಗ್ಗಿಸು' ನೋ.

**ನಗ್ಗು$_1$** 'ನಱುಂಕು' ನೋ.

**ನಗ್ಗು$_2$** 'ನೆಗ್ಗು$_2$' ನೋ.

**ನಗ್ಗೆತ್ತಿಸು** (ಕ್ರಿ). (ಪಾತ್ರೆ ಮೊದಲಾದುವುಗಳ) ತಗ್ಗನ್ನು ಎತ್ತಿಸು,–. ಸರಿಮಾಡಿಸು ; ತಗ್ಗೆತ್ತಿಸು : ಕಂಚುಗಾರನಿಂದ ಹಳೆಯ ಪಾತ್ರೆಗಳನ್ನು ನಗ್ಗೆತ್ತಿಸಬೇಕು (ರೂಢಿ). [ ನಗ್ಗೆತ್ತು + – ಇಸು$_3$ ]

**ನಗ್ಗೆತ್ತು** (ಕ್ರಿ). (ಪಾತ್ರೆ ಮೊದಲಾದುವುಗಳ) ತಗ್ಗನ್ನು ಸರಿಮಾಡು ; ತಗ್ಗೆತ್ತು : ಕಂಚುಗಾರ ಪಾತ್ರೆಗಳನ್ನು ನಗ್ಗೆತ್ತುತ್ತಾನೆ(ರೂಢಿ). 'ನಗ್ಗೆತ್ತಿಸು' ಪರಾ. [ ನಗ್ಗು$_2$ (<ನೆಗ್ಗು$_2$) + ಎತ್ತು$_1$ ]

**ನಗ್ನ** (ಗು). ೧. ಬತ್ತಲೆಯಾಗಿರುವ ; ಬತ್ತಲೆಯ : ಮ್ಲಾನ, ಶೂನ್ಯ, ದೀರ್ಘ, ನಗ್ನ, ರಿಕ್ತ, ಋಜು ದಿಗಂತದಿ ಗಗನಕೆದುರು ನಿಂತಿದೆ ತರು ಮಸಿಯ ಚಿತ್ರಿಸಂದದಿ (ಅನಿಕೇ. ೧೪-೧). ೨. ಸಾಗುವಳಿಯಿಲ್ಲದಿರುವ ; ಬೀಳಾದ. ೩. ಮುಚ್ಚುಮರೆಯಿಲ್ಲದ ; ಸ್ಪಷ್ಟವಾದ. 'ನಗ್ನಸತ್ಯ' ಪರಾ. (ನಾ). ೪. ಮೈಮೇಲೆ ಹೊದಿಕೆ, ಬಟ್ಟೆಗಳಿಲ್ಲದಿರುವುದು ; ದಿಗಂಬರವಾಗಿರುವುದು ; ಬತ್ತಲೆ ; ನಿರ್ವಾಣ : ಕೆಲವು ಪುರುಷ ಮತ್ತು ಸ್ತ್ರೀ ವಿಗ್ರಹಗಳು ನಗ್ನವಾಗಿಯೇ ನೃತ್ಯಭಂಗಿಯನ್ನು ತೋರಿಸುತ್ತಿರು ವುದರಿಂದ ದೇವತಾಪೂಜೆಯ ಕಾಲದಲ್ಲಿ ನಗ್ನತ್ವ ಆವಶ್ಯಕವೆಂಬ ಭಾವನೆ ಹೊಂದಿದ್ದಿರಬಹುದು (ಭಾರದ. ೧೩). 'ನಗ್ನ ನೃತ್ಯ' ಪರಾ. ೫. ಬತ್ತಲೆಯಾಗಿರುವವನು ; ದಿಗಂಬರ : "ನಗ್ನಃ, ಅವಾಸಾಃ, ದಿಗಂಬರಃ – ೩ ದಿಗಂಬರನ ಹೆಸರು, ಬತ್ತಲೆಯಾಗಿರುವವನು" (ಸಿದ್ಧಾಂತಿ. ೩೩೩). ೬. ದಿಗಂಬರ ಸಂನ್ಯಾಸಿ ; ಜೈನಭಿಕ್ಷು. ೭. ಶಿವ ; ಈಶ್ವರ. ೮. ಬರಿದಾಗಿರುವುದು ; ರಿಕ್ತವಾದದ್ದು ; ಶೂನ್ಯ : ಮಾಂಡವಿಯ ಮನದನ್ನನ್ . . . ಪತಿಪಿತೃಹೀನೆಯುಂ ದುಃಖಾತಿದೀನೆಯುಂ, ಕೌಸಲ್ಯೆಯುಂ ಕಂಡನಂತಃಪುರದ ನೆಲದ ನಗ್ನದಲಿ (ಶ್ರೀರಾಮಾ. ೧೧೫-೧೦೭). ೯. ನಿರ್ವಾಣ ಸ್ಥಿತಿಯನ್ನು ಪಡೆದವನು ; ಬುದ್ಧ : ಎವೆಯಿಕ್ಕದೆ ನೋಡಿದ . . . ಭೂಭುಜರ ಕಡಿದ ಶಿವನ ಬಲ್ಲನು, ಮುಱಿದ ದೇವಕಿಕುವರ ನಗ್ನನು[ಪಾಠಾಂ. ವೆಗ್ಗಳ]ಹಯವನೇಱಿದ (ಕನಕ. ೭೫-೨). P ದಾಸರ ಕೀರ್ತನೆಗಳಲ್ಲಿ 'ನಗ್ನ' ಎಂಬುದನ್ನು ಬುದ್ಧನಿಗೆ ಅನ್ವಯಿಸಿ

ಹೇಳಿದ್ದಾರೆ. ಬಹುಶಃ ಇದನ್ನು 'ನಿರ್ವಾಣ' ಎಂಬುದಕ್ಕೆ ಸಂವಾದಿಯಾಗಿ ಹೇಳಿರಬಹುದೇ? ೧೧. ವಂದಿ; ಮಾಗಧ; ಹೊಗಳುಭಟ; ಸ್ತುತಿಪಾಠಕ: ನಟ ನಗ್ನ ಭಗ್ನಗಾಯಕ ವಟು ಪಾಠಕ ಪಂಡಿತರ್ಕಳಭಿವರ್ಣನದುತ್ಕಟನಾದಮೆಯ್ದುದು ದಿಕ್ತಟಮಂ (ಮಹಾನೇ. ೧೧-೧೪೩). [ಸಂ.]

**ನಗ್ನಕ** (ನಾ). ೧. ನಗ್ನನಾಗಿರುವವನು; ಬತ್ತಲೆಯಾಗಿರುವವನು. ೨. ಜೈನಸಂನ್ಯಾಸಿ. ೩. ಸ್ತುತಿಪಾಠಕ. [ಸಂ.]

**ನಗ್ನಖಡ್ಗ** (ನಾ). ಒರೆಯಿರದ ಖಡ್ಗ; ಮುಚ್ಚಿರದ ಕತ್ತಿ: ಸೊಂಟದಿಂ ಜೋಲ್ದುದು ಮಹಾಭೀಳ ನಗ್ನಖಡ್ಗಂ (ಶ್ರೀರಾಮಾ. ೬೪೩-೩೫). [ನಗ್ನ + ಖಡ್ಗ]

**ನಗ್ನತೆ** (ನಾ). ೧. ಬತ್ತಲೆಯಾಗಿರುವಿಕೆ; ದಿಗಂಬರನಾಗಿರುವಿಕೆ: ಸಹಜ ನಗ್ನತೆ ನಮಗೆ, ಸಹಜ ನಖದಾಡಿಗಳು ಬಹುಯುಗದ ಸಂಸ್ಕಾರ ವಸ್ತ್ರ ಸಿಂಗಾರ (ಪಂಪಕಳ. ೨೦೪). ೨. ಅನನ್ಯತೆ; ಲೀನವಾಗಿರುವಿಕೆ: ಭೀಮಕಾಯಂ ಕಠಿನಗಂಭೀರನಾ ಯೋಗಿ ಕೌತುಕಂಬಟ್ಟರುಂ ವಿಸ್ಮಯ ಕ್ಕೆಡೆಗೊಡದೆ, ಮಗ್ನನಾದಂ ಧ್ಯಾನದದ್ವೈತ ನಗ್ನತೆಗೆ! (ಶ್ರೀರಾಮಾ. ೧೪೩-೪೧). [ಸಂ. ನಗ್ನತಾ]

**ನಗ್ನತ್ವ** (ನಾ). = ನಗ್ನತೆ ೧: ಕೆಲವು ಪುರುಷ ಮತ್ತು ಸ್ತ್ರೀ ವಿಗ್ರಹಗಳು ನಗ್ನವಾಗಿಯೇ ನೃತ್ಯಭಂಗಿಯನ್ನು ತೋರಿಸುತ್ತಿರುವುದರಿಂದ ದೇವತಾ ಪೂಜೆಯ ಕಾಲದಲ್ಲಿ ನಗ್ನತ್ವ ಅವಶ್ಯಕವೆಂಬ ಭಾವನೆ ಹೊಂದಿದ್ದಿರಬಹುದು (ಭಾರದ. ೧೩). [ಸಂ.]

**ನಗ್ನನೃತ್ಯ** (ನಾ). ಬತ್ತಲೆಯಾಗಿ ಮಾಡುವ ನೃತ್ಯ; ಬತ್ತಲೆ ಕುಣಿತ: ಈ ಆದಿವಾಸಿ ಮಾನವರ ನಗ್ನರೂಪ, ನಗ್ನನೃತ್ಯಗಳು ಅವನಿಗೆ ಬೇಸರ ವನ್ನುಂಟುಮಾಡಿದ್ದುವು (ಸ್ವಪ್ನಹೊ. ೨೪೬). [ನಗ್ನ + ನೃತ್ಯ]

**ನಗ್ನರೂಪ** (ನಾ). ೧. ಬತ್ತಲೆಯ ರೂಪ; ದಿಗಂಬರತೆ: ಈತನು ಮೌನ ವಾಗಿರುತ್ತಿದ್ದನು. ನಗ್ನರೂಪದಲ್ಲಿ ವಿಹರಿಸುತ್ತಿದ್ದನು (ಭಾರದ. ೦೬೮); ಈ ಆದಿವಾಸಿ ಮಾನವರ ನಗ್ನರೂಪ, ನಗ್ನನೃತ್ಯಗಳು ಅವನಿಗೆ ಬೇಸರ ವನ್ನುಂಟುಮಾಡಿದ್ದುವು (ಸ್ವಪ್ನಹೊ. ೨೪೬). ೨. ಮುಚ್ಚುಮರೆಯಿಲ್ಲದ ಸ್ವರೂಪ; ಸ್ಪಷ್ಟಚಿತ್ರ; ಬಹಿರಂಗ ರೂಪ: ಸೊಸೈಟಿಯ ವ್ಯವಹಾರ ದಲ್ಲಿ ನಡೆಯುತ್ತಿದ್ದ ಅನ್ಯಾಯಗಳ ನಗ್ನರೂಪ ಗೋಚರವಾಗತೊಡಗಿತು (ಮರಳಿ. ೦೦೮). [ನಗ್ನ + ರೂಪ]

**ನಗ್ನಸತ್ಯ** (ನಾ). ಯಾವ ಮುಚ್ಚುಮರೆಯೂ ಇಲ್ಲದ ನಿಜಸ್ಥಿತಿ, ಮಾತು ಮುಂತಾದುದು; ಸ್ಪಷ್ಟವಾದುದು: ನಗ್ನಸತ್ಯ ಯಾರಿಗೂ ಸೇರದು (ದಾಬುತ್ತಿ. ೨೨). [ನಗ್ನ + ಸತ್ಯ]

**ನಗ್ನಹು** (ನಾ). ೧. ಮದ್ಯದ ತಯಾರಿಕೆಯಲ್ಲಿ ಹುಳಿ ಹಿಡಿಸುವುದಕ್ಕಾಗಿ ಬಳಸುವ ಒಂದು ಬಗೆಯ ಮಾದಕದ್ರವ್ಯ; ಕಿಣ್ವ. ೨. ಮದ್ಯದ ಮೇಲೆ ಹಿಡಿಯುವ ಮುಷ್ಟು. ೩. ಮದ್ಯವನ್ನು ತಯಾರಿಸುವ ಪಾತ್ರೆ,-ಮಡಕೆ: "ಕಿಣ್ವಂ, ನಗ್ನಹುಃ – ೨ ಮದ್ಯದ ಹಿಪ್ಪೆಯಲ್ಲೂ ಮದ್ಯವ ಮಾಡುವ ದೋಣಿಯಲ್ಲೂ ವರ್ತಿಸುವದು" (ಸಿದ್ಧಾಂತಿ. ೨೭೮). [ಸಂ. ನಗ್ನಹು, ನಗ್ನಹೂ]

**ನಗ್ನಾಂಗ** (ನಾ). ೧. ಬರಿಯ ಮೈ; ಹೊದಿಕೆಯಿಲ್ಲದ ದೇಹ; ಬತ್ತಲೆಯಾದ ಶರೀರ. ೨. ಬತ್ತಲೆಯಾಗಿರುವವನು; ನಿರ್ವಾಣದಲ್ಲಿ ರುವವನು; ದಿಗಂಬರ. [ನಗ್ನ + ಅಂಗ₂]

**ನಗ್ನಾಂಗಿ** (ನಾ). ಬತ್ತಲೆಯಾಗಿರುವವಳು; ವಿವಸ್ತ್ರಳಾಗಿರುವ ಸ್ತ್ರೀ: ಕೊಳದೊಳ್ಳೊಂದು ತರತ್ತರಂಗಜಳಮಂ ಮಿಂದಲ್ಲಿ ನಗ್ನಾಂಗಿ ಪೊಕ್ಕಳಿ ನಾಚಟ್ಟಲದಿಂ ಕುಮಂತ್ರಜಪಮಂ ತದ್ವೇಷದಿಂ ಮಾಡೆ... ಮೈಗಂದಿ ಬಿಳ್ದಳಿದಂ... ಭಾಸ್ಕರಂ (ರಾಜಶೇ. ೧೩-೩೨). [ನಗ್ನಾಂಗ + – ಇ₂]

**ನಗ್ನಾಟ** (ನಾ). ೧. ಬರಿಮೈಯಲ್ಲಿ ತಿರುಗುವವನು; ಬತ್ತಲಿಗ. ೨. ಜೈನ ಸಂನ್ಯಾಸಿ; ದಿಗಂಬರ: "ನಗ್ನಾಟಃ, ದಿಗ್ವಾಸಾಃ, ಕ್ಷಪಣಃ... ನಿರ್ಗ್ರಂಥಃ, ಸಾಧುಃ – ಈ ೧೦ ಸವಣರ ಪೆಸರ್" (ಹಲಾಯು. ೫೭-೧೮೯); "ಸಾಧು ನಿರ್ಗ್ರಂಥರಾ ನಗ್ನಾಟರು" (ಮಂಗರಾ. ೬೬-೧). [ಸಂ.]

**ನಗ್ನಾವಸ್ಥೆ** (ನಾ). ೧. ವಿವಸ್ತ್ರವಾಗಿರುವ ಸ್ಥಿತಿ; ಬತ್ತಲೆ. ೨. ಹೊದಿಕೆ ಯಿಲ್ಲದಿರುವಿಕೆ; ಆವರಣಗಳಿಲ್ಲದಿರುವಿಕೆ: ನಗ್ನಬೀಜಗಳು (Gymnosperms)... ಬೀಜಗಳ ಸುತ್ತಲೂ ಇವುಗಳಲ್ಲಿ ಫಲಕೋಶದ ಕವಚವಿರುವುದಿಲ್ಲ. ಆದ್ದರಿಂದ ಬೀಜಗಳು ನಗ್ನಾವಸ್ಥೆಯಲ್ಲಿರುತ್ತವೆ (ಸಸ್ಯಶಾ. ೪). [ನಗ್ನ + ಅವಸ್ಥೆ]

**ನಗ್ನಿಕೆ** (ನಾ). ೧. ಬತ್ತಲೆಯಾಗಿರುವವಳು; ವಿವಸ್ತ್ರಳಾದ ಸ್ತ್ರೀ: "ನಗ್ನಿಕಾ, ಕೋಟವೀ – ೨ ಬಟ್ಟೆಯುಡದೇ ಬೆತ್ತಲೇ ಇರುವವಳ ಹೆಸರು ಗಳು" (ಸಿದ್ಧಾಂತಿ. ೧೫೦). ೨. ಋತುಮತಿಯಾಗದ ಹುಡುಗಿ; ಮೈ ನೆರೆಯದವಳು: "ಮೆಯ್ನೆಱೆಯಲಾದವಳಂ ನಗ್ನಿಕಾಯೆಂಬುದು" (ಹಲಾಯು. ೬೯-೩೩೦); "ಗೌರಿ, ನಗ್ನಿಕಾ, ಅನಾಗತಾರ್ತವಾ – ೩ ಮೈನೆರೆಯದೆ ಇರುವ ಪ್ರಾಯದ ಹುಡುಗಿ ಹೆಸರುಗಳು" (ಸಿದ್ಧಾಂತಿ. ೧೯೬). [ಸಂ. ನಗ್ನಿಕಾ]

**ನಗ್ನೆ** (ನಾ). ೧. = ನಗ್ನಿಕೆ ೧: "ನಗ್ನಾ, ಕೋಟವೀ – ಈ ೨ ನಗ್ನೆ" (ಹಲಾಯು. ೬೯-೩೩೯). ೨. = ನಗ್ನಿಕೆ ೨. [ಸಂ. ನನಗ್ನಾ]

**ನಚ್ಚಣ, ನಚ್ಚಣೆ, ನಚ್ಚನೆ** (ನಾ). ನರ್ತನ; ನಾಟ್ಯ; ಕುಣಿತ: "ನಚ್ಚಣ ಮೆಂದು ನರ್ತನಂ" (ಕಶಸಾ. ೨೫-೩೨೦); "ನೆನಸು ನಚ್ಚಣಮೆ ನರ್ತನಂ" (ಕವಿಕಂ. ೨೦೬); ನಚ್ಚಣಂಗಳನೊಲ್ದಾಗಿಪ ನರ್ತಕೀಸಮುದಯಂ... ತಾವಿತ್ತುವುಜ್ಜ್ವಳ ಮೋದಂಬಡೆದೀಕ್ಷಿಪಾ ಪುರಜನಕ್ಕುತ್ಸಾಹಸಂದೋ ಹಮಂ (ಉದ್ಯಟ. ೮-೩೩); ನಚ್ಚಣದ ಆ ಸಂಭ್ರಮ ಮುಗಿದ ಮೇಲೆ ಸಭೆ ಹರಿಯಿತು (ಸವತಿ. ೬); ಇನ್ನು ಈ ರತಿಗಳು – ಮೋಹನಾಂಗಿಯರಿ ಬ್ಬರಿಗೂ ಆವ ಓಲಗದಲ್ಲಿಯಾದರೂ, ನಚ್ಚಣದ ಹಸೆಯ ಮೇಲೆ ಹೊರ ತಾಗಿ ಅವಸರವಿಲ್ಲ (ಬಟ್ಟಿಅ. ೩೦೯-೮) **ನಚ್ಚಣೆ**: ನಚ್ಚಣೆಯ ಬಾಜಣೆಯ ... ಬಿಜ್ಜಣಿಗೆಯ ದೇವಾಂಗನೆಯರ ಗೊಂದಣಂ (ರಾಮಾಶ್ವ. ೬೬-೨೮). **ನಚ್ಚನೆ**: ಮಚ್ಚರದಾಯಮುಂ ಮುಱಿದು ಕೈದುಗಳಂ ತೊಱೆದುಟ್ಟು ತೊಟ್ಟ ಪೆಣ್ಬಚ್ಚವೊಡಂಬಡಂ ಪಡೆಯ ಮೈಲೆಯನಚ್ಚನೆಯಂತೆ ಸೂಲಮಂ ಬಟ್ಟಿಸಿ (ಅನಂಪು. ೧೩-೪೭). [< ಪ್ರಾ. ಣಚ್ಚಣ./ ಸಂ. ನರ್ತನ]

**ನಚ್ಚಣಪಕ್ಕಿ** (ನಾ). ನರ್ತನ ಮಾಡುವ ಹಕ್ಕಿ; ನವಿಲು: ನುಡಿಪಕ್ಕಿ ನಚ್ಚಣ ಪಕ್ಕಿಯುಮಳ್ವಕ್ಕಿ ನಡೆವಕ್ಕಿಗಳಿವು ನಿಮ್ಮ ನುಡಿ ಮುಡಿ ಮೊಲೆಗೆಣೆ ಯೆಂದೆಂಬವಿವ ನೋಡು ಮಡದಿಯೆನುತಲೈದಿದನು (ಶಾಮುವಿ. ೪-೧೨೬). [ನಚ್ಚಣ + ಪಕ್ಕಿ₁]

**ನಚ್ಚಣಿ** (ನಾ). ನಾಟ್ಯ ಮಾಡುವವಳು; ನರ್ತಕಿ: ಆರುಂ ಮೆಚ್ಚಿ ಪೊಗಟ್ವಿ ನೆಗಪೊರ್ವರ್ಳ್ ನಚ್ಚಣಿ ನರ್ತಿಸಿದಳಚ್ಚೆಯುಱಿದಚ್ಚರೆಪೋಲ್ (ಸುಕುಮಾ. ೧೦-೨೨); ಹಸನಿಸುವೆನೆ ಭೃಂಗಿಯೂರುವಸಿ ತಿಲೋತ್ತಮಾದಿ ದಿವಿಜ ಕುಸುಮಗಂಧಿನಿಯರೆ ನಚ್ಚಣಿಯರು (ಮಹಾದೇ. ಬ. ೧೧೫-೩೧೦); ಕಿಲಕಿ ನಸುಬಾಗುವುಂಚಿತವಲೆಗುಂ ಮನವೊಲೆವ ಲೋಲಿತಂ ನಚ್ಚಣಿಯಾ (ಲೀಲಾವ. ೪-೧೨೩); ಎಳಲತೆಯೆಂಬ ನಚ್ಚಣಿಯನಾಡಿಸಿ ತುಂಬಿಗಳೆಂಬ ಗಾಯಕಾವಳಿಯನಱಂಚಿನಿಂ ತಗುಳೆ ಪಾಡಿಸಿ (ಅನಂಪು. ೦-೯೨); ನಚ್ಚಣಿಯ ಕಾಲು ಮಾನಕ್ಕೆ ಕಣ್ಣಿನಲು ವಿದ್ವಚ್ಚಯಕೆ ಪರಿತೋಷವಾಗೆ ಸಮ್ಮೋಹನ ಮನಚ್ಯೊತ್ತಿದರು ತಾಳದಡಿಗಳಗಣಿತ ಶಬ್ದದುಚ್ಚರಣೆ ಸೊಗಸಾಗಲು (ಸೌಂದಪು. ೮-೩); ಹೊಲೆಯರೀ ಮೇಳದ ನಡುವೆ ಮಿಗೆ ನಲಿವ ಚೆಲು ನಚ್ಚಣಿಯನಕಟೀ ಕುಲದೊಳಗೆ ಪುಟ್ಟಿಸಿದನಜನು (ಸಾಳ್ವಭಾ. ೧೮-೪೨). 'ನರ್ತಿನಿ' ಪದಾ. [< ಪ್ರಾ. ಣಚ್ಚಣೀ./ ಸಂ. ನರ್ತನೀ]

**ನಚ್ಚಣಿಗ** (ನಾ). ನರ್ತನ ಮಾಡುವವನು ; ನರ್ತಕ : ನಚ್ಚಣಿಗರ ಬಿಚ್ಚಣಿಗೆಯಿಂ ಗಾಣರ ಗಮಕದಿಂ . . . ಓಲಗಂ ವಿರಾಜಿಸುತಿರ್ದುದು (ಉದ್ಭಟ. ೨-೧೬ ವ) ; ನಚ್ಚಣಿಗರ ನಟನೆಗೆ ಮೋಹಿಸಿದೊಡೆ ಪುಚ್ಚಣಿಯಹುದೆನು ತೊರ್ವಳ್ ಮುಗ್ಧೆಗೆಯುಸುರಿದಳು ವಿದಗ್ಧೆ (ಜಯಂಕಾ. ೧೪-೩೦) ; ವೀರ ಭಟರ ವಿದ್ವಾಂಸರಕ್ಕರಿಗರ ನೇರಣಿಗರ ನಚ್ಚಣಿಗರ ವಾರವನಿತೆಯರ ವೈದ್ಯರ ಬಚ್ಚರ ಕೇರಿಯಿಂದೆಸೆಯಿತಾ ನಗರ (ನೇಮಿಸಂ. ೧-೭೫); ನಚ್ಚಣಿಗರ ನಗೆಗಾಜರ ಬಗೆಯ ಬಲ್ಲಿಚ್ಚೆಗಾಜರ . . ಕೇರಿಗಳಚ್ಚರಿ ಮಿಗೆ ಕಣ್ಗೆಸೆದವು (ಕಂರಾಸಾಂ. ೪-೧೧೩) ; ಯಾವುದೇ ಕುಣಿತದಲ್ಲಿಯಾದರೂ ನಚ್ಚಣಿಗರು ಔಚಿತ್ಯದ ಎಲ್ಲೆಯನ್ನು ಮೀರಿದುದು ಕಾಣಲಿಲ್ಲ (ಸವಿತಿ. ೪).

[ ನಚ್ಚಣ + – ಇಗ ]

**ನಚ್ಚಣಿಗೆ** (ನಾ). = ನಚ್ಚಣಿ : ನಚ್ಚಣಿಗೆಯರ ಪೆಚ್ಚುಗೆಯಿಂ ಗಾಯಿನಿಯರಾಯತಿಯಿಂ ಮನಂಗೊಳಿಪ ತದ್ವಿವಾಹವಂಟಪಂ (ಉದ್ಭಟ. ೮-೯ ವ).

[ ನಚ್ಚಣಿಗ + – ಎ₂ ]

**ನಚ್ಚಣಿಸು** (ಕ್ರಿ). ಕುಣಿ; ನೃತ್ಯ ಮಾಡು; ನರ್ತಿಸು : ಅಂದುಗೆ ಘಲಘಲರೆನೆ ನಚ್ಚಣಿಸಿ ಮುಡಿ ಬೆನ್ನೊಳುದಿಸೆ ಕಂಕಣನಿನದ ಪೊಚ್ಚಪೊಸಜವ್ವನೆಯರಾಡಿದರು ಹೊಡೆಚೆಂಡ (ರಾಘಚ. ೭-೩೩); ಲಯಕಾಲದಲ್ಲಸವಾನಯನಾಗ್ನಿಕಣದಿಂ ಚುರ್ಚಿ ಪೆರ್ಚಿ ನಚ್ಚಣಿಪಂ ಪಿಶಾಚರೊಡನೆ (ಕೊಟ್ಟೂ.ಬ. ೩-೩೯) ; ಇದರೊಳ್ ರಾಯನಡಾಯುಧದಿಂದರಿದ ಪಗೆದಲೆಗಳಲ್ಲಿವಟ್ಟೆಯೊಳ್ನಚ್ಚಣಿಸುತ್ತಿರ್ಪನಂ ಆ ಕಾಲದೊಳ್. . .ಬಣ್ಣಿಸಿರ್ಪುದರಿಂ ಸಾಮಾನ್ಯಾಲಂಕಾರಂ (ನರಜ. ೧೦೧೪–೨೭೮ ವ). [ ನಚ್ಚಣ + – ಇಸು₂ ]

**ನಚ್ಚಣೆ** 'ನಚ್ಚಣ' ನೋ.

**ನಚ್ಚನೆ** 'ನಚ್ಚಣ' ನೋ.

**ನಚ್ಚಯ** (ನಾ). ಒಬ್ಬಾತನ ಹೆಸರು : ಶ್ರೀರಾಮರಾ ರಾಮಡಿನಾಡು ಮೂನೂಱಱ ನಾಡ್ಗಾರಸಾ ಆಳೆ ಅವರ ಮಗನ್ಗೊನ್ನಮಾರನ್ ಚೊಱದ ನಚ್ಚಯನ್ನೊಳ್ಳಟ್ಟು (ಎಕ. X, ಗೋರೀಬಿ. ೭೭-೩ ; ಸು. 750).

[ <ನರಸ + ಅಯ್₁ ( <ಅಯ್ಯ₁ ) ]

**ನಚ್ಚಿಕೆ, ನೆಚ್ಚಿಕೆ** (ನಾ). ನಂಬಿಕೆ ; ಭರವಸೆ ; ವಿಶ್ವಾಸ : ಚೋಳನ ದರ್ಪ್ಪಮಂ ಮುಱಿಯಲ್. . .ನೆಗಳ್ದ ಗೂರ್ಜ್ಜರನಂ ತುಳಿಯಲ್ಕೆ ಪಾಂಡ್ಯಭೂಪಾಳನೆ ಸಾಲ್ಕುಮೆಂಬಿನಿತು ನಚ್ಚಿಕೆ ವಿಕ್ರಮಚಕ್ರವರ್ತ್ತಿಗೆ (ಎಕ. XI, ದಾವಣ. ೩-೨೦; 1121) ; ಶತ್ರುಮಂಡಲಕೆಲ್ಲ ಕಗ್ಗಪ್ಪು ಕವಿಸಿದನು ಸಚಿವರಲಿ ಅತನೇ ನಚ್ಚಿಕೆಗೆ ಮೆಚ್ಚಿಕೆಗೆ ಹೆಸರಾಗಿ ಗುಹೆಗೆ ಕತ್ತಲೆಯಂತೆ ಮೆರೆದನಯ್ಯ (ಕವಿಸೋ. ೯೦-೨೦). **ನೆಚ್ಚಿಕೆ :** ಅವಳ ನೆಚ್ಚಿಕೆಗೆ ವಜ್ರಕರ್ಕಶವಾದ ಫಲವು ದೊರೆಯಿತು (ಕಾವ್ಯಸ. ೨೬) ; ನಂಬಿಕೆ ನೆಚ್ಚಿಕೆ ಇಲ್ಲದ ದೇಶವು ಪ್ರಜಾಪ್ರಭುತ್ವಕ್ಕೆ ಎಂದೂ ತಕ್ಕುದಾಗಲಾರದು (ಯುಕ್ತಪ್ರ. ೬೫) ; ಎಷ್ಟು ದೂರ ಹೋಗುವೆನೆಂಬ ನೆಚ್ಚಿಕೆಯಿಲ್ಲ (ನಿರಾತ. ೯೦) ; ಬ್ಯಾಂಕ್ ಕೆಲಸ ಯಾವ ನೆಚ್ಚಿಕೆ ವೆಂಕಮ್ಮನವರೇ ? (ತಾಯಿಕ. ೨೨).

[ ನಚ್ಚು₁ + – ಇಕೆ ]

**ನಚ್ಚಿಗೆ** 'ನಚ್ಚುಗೆ' ನೋ.

**ನಚ್ಚಿಸು₁, ನೆಚ್ಚಿಸು** (ಕ್ರಿ). ೧. ನಂಬುವಂತೆ ಮಾಡು ; ವಿಶ್ವಾಸವಿಡುವಂತೆ ಮಾಡು : ನಿಮ್ಮಚ್ಚ ಶರಣರ ಒಕ್ಕುದ ಮಿಕ್ಕುದ ನಚ್ಚಿಸು ಮಚ್ಚಿಸಂ ಕೂಡಲಸಂಗಮದೇವಾ (ಬಸವ. ೨೬೫). ೨. ಪ್ರೀತಿಸು : ನೌಲೀಕದಂಬಕುಜದೊಳ್ ನಲಿಗುಂ ಪ್ರವಂತ್ತಂ ಮೇಲಾದ ಸಂತಸದೆ ನಲ್ಲಳ ನಚ್ಚಿಸುತ್ತಂ (ಉರಾಜ. ೩-೨೨). **ನೆಚ್ಚಿಸು :** (ಕಿ). [ ನಚ್ಚು₁ + – ಇಸು₂ ]

**ನಚ್ಚಿಸು₂** (ಕ್ರಿ). ಕುಣಿ ; ನರ್ತನ ಮಾಡು ; ನರ್ತಿಸು : ಇಚ್ಚಿಸುವರಚ್ಚಿಗಳ ಮೋಹದ ಮಚ್ಚುಮದ್ದೊಡಲಿಟ್ಟುದೆನೆ ಸತಿ ಮೆಚ್ಚಿ ಸಭೆಯಿಚ್ಛೈಸೆ ನಚ್ಚಿಸಿದಳು ಮನೋಹರದಿ (ಸಾಳ್ವಭಾ. ೩೨-೩೦). [ < ನಚ್ಚಣಿಸು ]

**ನಚ್ಚು₁, ನರ್ಚು₁, ನೆಚ್ಚು₁** (ಕ್ರಿ). ೧. ನಂಬು; ವಿಶ್ವಾಸವಿಡು ; ಭರವಸೆಯಿಡು : "ನಚ್ಚು – ವಿಶ್ವಾಸೇ (ನಂಬು)" (ಶಮಧಾ) ; ಆಳ್ದನುಮೆನ್ನನೆ ನಚ್ಚಿ ಪೆರ್ಚಿ ಮುಂ ಪೊರೆದನಿದಿರ್ಚಿ ಕಾದುವರುಮೆನ್ನಯ ಸೋದರರ್ (ಪಂಪಭಾ. ೯-೭೦) ; ನಿನ್ನನೆ ನಚ್ಚಿದಂ ಕಂರುವಂಹೀಪತಿ (ಪಂಪಭಾ. ೧೨-೫೭) ; ಮುಗಿಲ ನೀರಂ ನಚ್ಚಿ ಡೊಣೆಯ ನೀರಂ ತುಳುಂಕಿದ ಕೋಡಗದಂದಂ ನಿನಗಕ್ಕುಂ (ಪಂಚತಂ. ೬೮-೭) ; ನಚ್ಚಿದೆಮ್ಮ ಕೋಣನ ನೀದತ್ತೆಂಬಂತೆ (ಧರ್ಮಾಮೃ. ೨-೦೦೩) ; ನಂಬರು ನೆಚ್ಚರು ಬಱಿದೆ ಕರೆವರು . . . ನಂಬದೆ ನಚ್ಚದೆ ಬಱಿದೆ ಕರೆವರ ಕೊಂಬ ಮೆಟ್ಟಿ ಕೂಗೆಂದ (ಬಸವ. ೧೧೬) ; ನಚ್ಚುಗೆ ಮನ ನಿಮ್ಮಲ್ಲಿ ಮಚ್ಚುಗೆ ಮನ ನಿಮ್ಮಲ್ಲಿ (ಮಹಾದೇ. ಬ. ೩೦-೬೬); ಕೆಡುವ ಕಾಯವ ನಚ್ಚಿ ಬಂಧುಗಳೊಡನೆ ವೈರವ ಮಸೆದು ನರಕಕ್ಕೆ ಕೆಡೆವೆನೇ ತಾನೆನುತ ರಥದೊಳು ಬಿಲ್ಲನಿಳುಹಿದನು (ಕುಮಾ.ಭೀ. ೩-೩೦). ೨. ಮೆಚ್ಚು; ಬಯಸು ; ಪ್ರೀತಿಸು : ಸೌಧರ್ಮಕಲ್ಪದೊಳ್ ದೇವರ್ಕಳ ಸಭೆಯ ನಡುವೆ ಸೌಧರ್ಮೇಂದ್ರಂ ನಿಮ್ಮ ರೂಪನಾದಮಾನುಂ ನಚ್ಚಿ ಬಣ್ಣಿಸಿದೊಡಿಂದ್ರನ ಮಾತಂ ನಂಬದೆ ನಿಮ್ಮಂ ನೋಡಲ್ ಬಂದೆಂ (ವಡ್ಡಾರಾ. ೬೭-೮) ; ನಿನ್ನ ರೂಪನೆ ನೋಡಿ ಬಾಟುಮೆನಾಗಳುಂ ಮನದರ್ತಿಯಿಂ ನಿನ್ನ ಮುದ್ದನೆ ನಚ್ಚಿ ಮೆಚ್ಚುವೆನಾಗಳುಂ (ಧರ್ಮಾಮೃ. ೩-೨೨೦). 'ನಚ್ಚಿಸು₁' ಪರಾ. △ **ನರ್ಚು₁:** ೧. ರಣಮುಖದೊಳ್ ಭೀಕರಂ ಕೊಲ್ಲೆ ನಾನೆಂಬಿನಿತಂ ತಾಂ ಸರ್ಚಿ [ಪಾಠಾಂ. ಚ್ಚಿ] ಮೆಯ್ವೆರ್ಚಿದನೊ (ಚಂದ್ರಪು. ೬-೨೫ ವ) ; ಎನಸುಮಿಾ ಮಲ್ಲನಡಿ ನರ್ಚಲವರ್ಗಮೇನನುಗೊಳ್ಳುಗುಮೋ (ಅರಾಜ. ೨-೯). **ನೆಚ್ಚು₁ :** ೧. ನಿನ್ನನೆ ನೆ[ಪಾಠಾಂ. ನ] ಚ್ಚಿ ನಿನ್ನರಲ ಬಾಣಮನರ್ಚಿಪ ಪುಷ್ಪಬಾಣನಂ ತನ್ನ ವಿಲಾಸದಿಂ ಪರಿಭವಕ್ಕೆಡೆಮಾಡಿದನೆನ್ನ ನಲ್ಲಂ (ಮಲ್ಲಿಪು. ೩-೩೭) ; ನಂಬಿ ನೆಚ್ಚಿದೆನೆಂದ ಮನವನಿಂಬುಗೊಡದಿರಿ (ದೇವಾವ. ೨೦-೩೩) ; ಇನ್ನವನ ನಂಬದಿರು ನೆಚ್ಚ[ಪಾಠಾಂ. ಕೂಡ]ದಿರು ಬೇಡೆಂದಡೆನ್ನ ಮಾತಂ ಬಗೆಯೆ ಕೈಕೊಳ್ಳೆಯಂ ದೊರ್ವ ಮುದಿಸೂಳೆ ತೆರುವಲಿಗೆ ಹಲಂಮೊರೆದಳು (ಸೋಮಪುಚ. ೨-೪೦) ; ನೆಚ್ಚದಿರು ಸಿರಿಯನು ವೃಥಾ ಮದಗಿಚ್ಚಿನುರಿಯಲಿ ಬೇಯದಿರು (ಕುಮಾ.ಸ. ೧-೫೫) ; ನೆಚ್ಚದಿರೀ ಭಾಗ್ಯ ಯಾರಿಗೂ ಸ್ಥಿರವಲ್ಲ ನಿಶ್ಚಯವೆಚ್ಚಱಿಕೆ (ಪುರಂದ. ೨-೪೫-೦) ; ಈಯುತುಲಭೂಷಣವ ತೊಡು ಸುರರಾಯನಿಗೆ ಸತಿಯಾಗು ಮರ್ತ್ಯದ ರಾಯರಸ್ಥಿರರವರ ನೆಚ್ಚದಿರೆಂದರಾ ಸತಿಗೆ (ನಳಚ. ೩-೩೦) ; ನೆಚ್ಚಿದ ಎಮ್ಮೆ ಕೋಣನನೀಯಿತು (ಗಾದೆ).

[ದೇ.॥ ತಮಿ. ನಚ್ಚು, ನತ್ತು; ತೆಲು. ನಚ್ಚು ]

**ನಚ್ಚು₂, ನರ್ಚು₂, ನೆಚ್ಚು₂** (ನಾ).೧. ನಂಬಿಕೆ ; ವಿಶ್ವಾಸ ; ಭರವಸೆ : ಆನೆ ರಿಪುಸೇನೆಗೆ ಸಾಲ್ವನವುಂಕಿ ಪೇಡಿ ಪಾಡಿಗಟ್ಟಱಿವೆಡೆಗೈಯ [ ಡಗಯ್ಯ ] ಕೈಯುಗುರೆ ಸಾಲದೆ ನಚ್ಚಿನ ಕೈದುವೇಟ್ಟುದೇ (ಕಾವ್ಯಸಾ. ೪೦೦ ಶೂದ್ರಕ) ; ಚಕ್ರೇಶನ ಬೆಸನಂ ಪೂಣ್ದು ರಾಗದಿಂದೇಱಿ ಜಗದ್ವಿನುತಾಶ್ವರತ್ನಮಂ ಪಿರಿದು ನಚ್ಚಿನೊಳ್ ಪಿಡಿದು ದಂಡರತ್ನಮನಾಗಳ್ (ಆದಿಪು. ೧೩-೩೪) ; ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು ಮಿಕ್ಕ ತೋಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ (ಪಂಪಭಾ. ೧೦-೨೩) ; ನಚ್ಚಿನ ಸೇನಾಪತಿ ಕೀರ್ತಿವರ್ಮಂ . . . ಜಗಜ್ಜನರಕ್ಷಾಮಣಿಗಾಗಳೋಲಗಿಸಿದಂ ದಂಡೇಶದಿಕ್ಕುಂಜರಂ (ಪುಷ್ಪಪು. ೭-೨೦) ; ಬೇಡಿದುದನೀವನೀಶ್ವರನೆಂಬ ನಚ್ಚಿಲ್ಲ (ಶಂಕಕುಕ. ೯೪೩). ೨. ಪ್ರೀತಿ ; ಮೆಚ್ಚು ; ಅಕ್ಕರೆ ; ಮೋಹ : ಒಲವಿಂದವಮಾ ಮಹಾಶ್ವೇತೆಯ ಬೇಗಮೊಯ್ಯೆ ಪುಗದಿರ್ಪವೆ ನಚ್ಚಿನ ಹೇಮಕೂಟಮಂ (ಕಾದಂಬ. ೫೦೩) ; ನಿನ್ನ ನಚ್ಚಿನ ರಾಮನ ದೆಸೆಯಂ ಬಿಟ್ಟನಗೊಡಂಬಟ್ಟು ಸಾಮ್ರಾಜ್ಯಸುಖಮನನುಭವಿಸನೆ ಸೀತ ವಿಹ್ವಲೀಭೂತಚಿತ್ತೆಯಾಗಿ (ಪಂರಾಮಾ. ೧೪-೧೧೯ ವ) ; ಕಿಚ್ಚಿಲ್ಲದಡುಗೆಯುಂ ನಚ್ಚಿಲ್ಲದ ಪೆಂಡತಿಯುಂ . . . ಒಪ್ಪಲಾರ್ಕುಮೆ (ಧರ್ಮಾಮೃ. ೧-೭೫) ; ದೊರೆ

ಕೊಳೆ ಸಮಾಧಿಮರಣಂ ಚರಣಾಯುಧಯುಗಳಮಟಿದು ಕುಸುಮಾವಳಿ ಯೆಂಬರಸಿಯ ಬಸಿಱೊಳ್ ಬಂದುವು ನರಯುಗಳಕಮಾಗಿ ನಚ್ಚನಚ್ಚೊತ್ತಿದವೋಲ್ (ಯಶೋಚ. ೪-೩೯) ; ನಚ್ಚಿನಣುಗಂ ಸೌಂದರಂ (ಸೌಂದಪು ೧೩-೧೮) ; ರುದ್ರಟನಿಗೆ ಅಲಂಕಾರಗಳ ನಚ್ಚು ಹೆಚ್ಚಾಗಿಯೇ ಇದೆ (ಭಾರವಿಶಾ. ೩೦). ೩. ಇಚ್ಛೆ ; ಬಯಕೆ ; ಅಪೇಕ್ಷೆ : ಅಂತಲ್ಲಿ ಪದಿನಾಲ್ಪಾಸಿರ್ವರ್ ಗಂಧರ್ವರಂ ಕೊಂದೊಡೆ ಚಿತ್ರಾಂಗದಂ ಬೆರ್ಚಿಕೊಳೆ ನಿನ್ನ ನಚ್ಚಿನ ಸೆಱೆಯನೆಂದು ಬಿಸುಟ್ಟೊಡೆ (ಪಂಪಭಾ. ೭-೩೮ ವ) ; ಕೊಳ್ ನಿನ್ನ ನಚ್ಚಿನ ಪಾಂಡವರ ತಲೆಗಳಿವೆಯೆಂದು ದುರ್ಯೋಧನನ ಮುಂದಿಕ್ಕಿದೊಡೆ (ಗದಾಯು. ೯-೩೩ ವ) ; ಅವನ ಹಾಡನ್ನು ಕೇಳಿದವರಿಗೆಲ್ಲಾ ಸನ್ಯಾಸಿಯು ತಮ್ಮ ಸುಖದುಃಖ ಆಸೆ ನಚ್ಚುಗಳನ್ನು ಹಾಡುತ್ತಿರುವಂತೆ ತೋರಿ ಅವರಲ್ಲಿ ಅವ್ಯಾಜವಾದ ಪ್ರೇಮವುಂಟಾಗುತ್ತಿದ್ದಿತು (ಶಿವರಾ. ೯೭). ೪. ಹಂಬಲ ; ಗೀಳು: ಅವರಿಗೆ ಸಂಗೀತದ ನಚ್ಚು ಬಹಳ (ರೂಢಿ). ೫. (ಆಲಂ) ಸಂಶಯ; ಅನುಮಾನ; ಅವಿಶ್ವಾಸ ; ಅಪನಂಬಿಕೆ : ವೈದ್ಯನಾಥ ಯಾರೊಬ್ಬರಿಗೂ ಅಸ್ಪದ ಕೊಟ್ಟಿರಲಿಲ್ಲ. ಚೌಕಸಿ ವ್ಯಾಪಾರ ಮಾಡುವ ನಚ್ಚು ನಚ್ಚು ಹುಡುಗನ ಹಾಗಲ್ಲ, ತನ್ನದೇ ಆದ ಒಂದು ರೀತಿಯ ವಿನಯ ನಿಶ್ಚಯದಿಂದ (ಸುಖವಿ. ೭). 'ನಚ್ಚುಜ್ವರ', 'ನಚ್ಚುಮಾತು' ಪರಾ. ೬. ಸೇಡು ; ಅಂತರಂಗ ದಲ್ಲಿಟ್ಟಿರುವ ಅಸಮಾಧಾನ : ಕ್ಯಾಶಿಯಸ್‌ಗೆ ಸೀಸರನ ಮೇಲಿರುವ ನಚ್ಚನ್ನು ತೀರಿಸಿಕೊಳ್ಳುವುದೇ ಗುರಿ (ಷೇಕ್ಸ್‌ಪಿ. ೩೧೭). △ ನಚ್ಚು₂ : ೧. ನೆನೆಯುದೆ ಕಲುಷವಶಂ ನರ್ಚಿ[ಪಾಠಾಂ. ಚ್ಚಿ]ನ ವಿದ್ಯೆಗಳಂ ಕಡಂಗಿ ಕಾದುವ ಪದದೊಳ್ (ಪಂರಾಮಾ. ೧೦-೨೦೯) ; ಹಯನಯನಾಂಬುಗಳ್ ಸುರಿಯೆ ಹರ್ಷದಿನುಣ್ಮಿದುವೆಂದು ನರ್ಚಿ[ಪಾಠಾಂ. ಚ್ಚಿ]ನಾನೆಯ ಮದವೆತ್ತಿ ಕಟ್ಟೆ ವಿಕಳತ್ವಮನೊಕ್ಕುವು (ಚಂದ್ರಪು. ೧೧-೫೭) ; ಮನದೊಳ್ ನೀಂ ಮುಳಿದರನಟೞುವನೊಸೆದರಂ ಕಾವನೆಂಬ ನರ್ಚಿ[ಪಾಠಾಂ. ಚ್ಚಿ]ನ ಜವನುಂ ನಿನಗಮಸಿಯೇಱಿನವನಾದನೆ ತಮ್ಮನೆ ಪಿಡಿವ ಕೆಯ್ದುವುಂ ಪಾಪಾಯ್ತೋ (ಪರ್ಶಪು. ೯-೭೨). ನೆಚ್ಚು₂ : ೧. ಬಟಿಕ ನೀನೆ ಪೆಸರ್ಗೆ ತಕ್ಕಂತೆ ಉಗ್ರವೋ ಆದ, ಕಾಲ್ನಡೆಯಿಂದೆ ಪಾಯಲ್ಕೆ ನೆಚ್ಚಿಲ್ಲಮಾದ, ಹಿಂಸಾನದಿಗೆ ಬರ್ಪಯ್ (ಬದ್ಧಪ್ರ. ೩೮-೬೨೧) ; ನಿಮ್ಮ ನೆಚ್ಚು ನನಗೆ ದೊರೆತಿದೆ (ಕನಕೆ. ೪) ; ಬೆಚ್ಚು ಬಿಡು. ನೆಚ್ಚ ನೆಡು ಕೆಚ್ಚೆದೆಯ ಗುಡಿಯಲ್ಲಿ (ಪಾಂಚಜ. ೫-೫). 'ನೆಚ್ಚು ಮೆಚ್ಚು' ಪರಾ.

ನಚ್ಚಿನಾಳ್, ನಚ್ಚಿನಾಳು, ನೆಚ್ಚಿನಾಳು = ವಿಶ್ವಾಸಕ್ಕೆ ಪಾತ್ರನಾದ ಭಟ; ನಂಬುಗೆಯ ಸೇವಕ ; ಆಪ್ತಸೇವಕ : ಕೈಗಳ ಮುಚ್ಚುಳಲಿ ನೆಗಹಿದಳು ರಾಮನ ನ[ಪಾಠಾಂ. ಮು]ಚ್ಚಿನಾಳ್ಗಳನಿಳಿಗದೇನು ಸಮರ್ಥೆಯೋ ಜಗಕೆ (ತೊರರಾ. ೪-೧೧-೩೦) ; ಪರಿವಾರದ ಹಿಂದೆ ಅಷ್ಟು ದೂರದಲ್ಲಿ ಬೆಂಗಾವಲಾಗಿ ಕುವರವಿಷ್ಣುವು ತನ್ನ ನಚ್ಚಿನಾಳ್ಗಳೊಡನೆ ನಡೆದಿದ್ದನು (ಸವತಿ. ೨೯೮) ; ನಚ್ಚಿನಾ[ಪಾಠಾಂ. ದಾ]ಳಿನ ಬಿನ್ನಹಕೆ ಹರಿ ಮೆಚ್ಚಿ ಮನದಲಿ ನಾಚಿ ಚಕ್ರವ ಮಂಚ್ಚಿದನು ಮುರಿದನು ಕಿರೀಟಿಯ ರಥದ ಹೊರೆಗಾಗಿ (ಕುಮ್ಯಾಭೀ. ೭-೪೭) ; ಅವನೊಬ್ಬ ಒಳ್ಳೆಯ ನೆಚ್ಚಿನಾಳು (ರೂಢಿ).

[ <ನಚ್ಚು₁./ತಮಿ. ತೆಲು. ನಚ್ಚು ]

**ನಚ್ಚುಗಿಡಿಸು (ಕ್ರಿ).** ನಂಬಿಕೆಯಿಲ್ಲದಂತೆ ಮಾಡು ; ಭರವಸೆ ಕೆಡಿಸು ; ಆತ್ಮವಿಶ್ವಾಸವನ್ನು ಕೆಡಿಸು : ದಿತಿಜನೆಚ್ಚ ಸಿಡಿಲ ಶರಮುನದಕ ಬಾಣದಿಂದೆಚ್ಚು ದನುತನೂಜನೆಚ್ಚ ವಾರ್ಧಿಗನಲಬಾಣದಿಂದೆಚ್ಚು ನಚ್ಚುಗಿಡಿಸೆ (ಪಂಪಭಾ. ೧೨-೧೩). [ ನಚ್ಚುಗಿಡು (<ನಚ್ಚುಗೆಡು) +– ಇಸು₃ ]

**ನಚ್ಚುಗಿಡು** 'ನಚ್ಚುಗೆಡು' ನೋ.

**ನಚ್ಚುಗೆ, ನಚ್ಚಿಗೆ, ನೆಚ್ಚಿಗೆ, ನೆಚ್ಚುಗೆ (ನಾ).** ನಂಬಿಕೆ ; ವಿಶ್ವಾಸ ; ಭರವಸೆ: ಮೆಚ್ಚಿದನು ಕರೆಕಂಠ ಧನದನ ನಚ್ಚುಗೆಗೆ ಮೈದೋರಿ (ಅಧ್ಯಾರಾ. ೨-೨೩); ಪೊಱಗವನ್ ಪೋಗಿರ್ದೊಡುಟಿವ ನಚ್ಚುಗೆ ಇಲ್ಲ(ಅಶ್ವಶಾ.೩೨-೬೨೧). ನಚ್ಚಿಗೆ : ಚನ್ನಮಲ್ಲಿಕಾರ್ಜುನನ ನಚ್ಚಿಗೆಗಾಗಿ ನಗ್ನಳಾದಳು (ಕನ್ನನು. ೧-೨೮೧) ; ನುಚ್ಚಿಗೆ ಬೆಚ್ಚುವವ ನೊಚ್ಚಗೆ ಮಾತಾಡಿದರೂ ನಚ್ಚಿಗೆ ಸಾಲದು (ಗಾದ). ನೆಚ್ಚಿಗೆ : ನೆಚ್ಚಿಗಿಲ್ಲದಳ ಮನೆವಾರ್ತೆ ಶ್ರಾವಣದ ಕಿಚ್ಚು ಕಾದಂತೆ (ಸರ್ವಜ್ಞ. ೧೭೩೨) ; ಹೊಲೆಯಾನ ಮಾತು ನೆಚ್ಚಿಗೆ ಮೊದಲು ನಮಗಿಲ್ಲ (ಕಜಾಗೀ. ೫೭). ನೆಚ್ಚುಗೆ : ಇನ್ನೂ ನೂರು ರಸಗಳನ್ನು ಹರಿಯಿಸಬಲ್ಲಳು . . . ಎಂಬ ನೆಚ್ಚುಗೆ ಎಲ್ಲರಲ್ಲಿಯೂ ಅಚ್ಚಳಿಯದಂತಿತ್ತು (ಸವತಿ. ೫).

[ ನಚ್ಚು₁ +– ಗೆ ]

**ನಚ್ಚುಗೆಡು, ನಚ್ಚುಗಿಡು, ನೆಚ್ಚುಗೆಡು (ಕ್ರಿ).** ನಂಬಿಕೆಯನ್ನು ಕಳೆದು ಕೊಳ್ಳು ; ಭರವಸೆಯಿಲ್ಲದಾಗು ; ಅವಿಶ್ವಾಸವನ್ನು ಹೊಂದು : ನಚ್ಚುಗೆಟ್ಟ ಬಡವನಂತೆ ಬೆಂಬಿರ್ದು ದೆಸೆಗೆಟ್ಟರಂತೆ ಚಿಂತಿಸಿ (ಧರ್ಮಾಮೃ. ೧-೧೭೮); ಕಮಳದ ಸೊಕ್ಕು ಸೋರೆ ಪೊಣರ್ವಕ್ಕಿಗಳಿಚ್ಚೆಯ ಮೆಚ್ಚು ನಚ್ಚುಗೆಟ್ಟಮಳಿನ ಬೇಂಟವೋಗುರ್ಡಿಸೆ ನೈದಿಲನೈದೆ ವಿಕಾಸಲಕ್ಷ್ಮಿ ನೈಪಮಂರ್ದಿರೆ ಜೊನ್ನ ವಕ್ಕಿಯುಪರಾಸೆಗೆ ಪೂರ್ವದ ರಾಗದುತ್ಸವಂ ಸಮನಿಸೆ ಭಾನು ಪಶ್ಚಿಮ ಪಯೋಧಿಯೊಳೊಯ್ಯನೆ ಮೆಯ್ಯನಿಕ್ಕಿದಂ (ಪುಣ್ಯಾಸ್ರ. ೧-೧೧೫). ನಚ್ಚುಗಿಡು : 'ನಚ್ಚುಗಿಡಿಸು' ಪರಾ. ನೆಚ್ಚುಗೆಡು : ನೆಚ್ಚುಗೆಡಬೇಡ ನಡೆ, ಕೆಚ್ಚೆದೆಯ ಕಲಿಯೆ ! (ಪಾಂಚಜ. ೭-೫). [ ನಚ್ಚು₂ + ಕೆಡು₁ ]

**ನಚ್ಚುಜ್ವರ (ನಾ).** ನಿರ್ದಿಷ್ಟವಾಗಿ ಗುರುತಿಸಲಾಗದಂಥ ಜ್ವರ; ಸಂಶಯ ವನ್ನುಂಟುಮಾಡುವ ಜ್ವರ : (+). [ ನಚ್ಚು₂ + ಜ್ವರ ]

**ನಚ್ಚುಮಚ್ಚು** 'ನಚ್ಚುಮೆಚ್ಚು' ನೋ.

**ನಚ್ಚುಮಾತು (ನಾ).** ಭರವಸೆಯಿಲ್ಲದ ಮಾತು ; ನಂಬಲರ್ಹವಲ್ಲದ ಮಾತು ; ಸಂಶಯದ ನುಡಿ : (+). [ ನಚ್ಚು₂ + ಮಾತು₁ ]

**ನಚ್ಚುಮೆಚ್ಚು, ನಚ್ಚುಮಚ್ಚು, ನೆಚ್ಚುಮೆಚ್ಚು (ನಾ).** ಅಚ್ಚುಮೆಚ್ಚು ; ಅತಿಯಾದ ವಿಶ್ವಾಸ ಮತ್ತು ಪ್ರೀತಿ ; ನಂಬಿಕೆ ಮತ್ತು ಮೆಚ್ಚುಗೆ : ನಚ್ಚುಮೆಚ್ಚಿನ ಶರಣರೆನ್ನ ಕಣ್ಣ ಮುಂದೆ ಬಂದು ನಿಂದಿರಲು ಎನ್ನ ತನುವ ಬಗಿದು ತನುವಿನೊಳಗೆ ಇಟ್ಟುಕೊಂಬೆನು ಎನ್ನ ಮನವ ಬಗಿದು ಮನದೊಳಗೆ ಇಟ್ಟುಕೊಂಬೆನು (ವಚಸಂ. ೨೪೦-೬೪) ; ಇಂದಿನಿತಿಂತೇಂ ಚೆಲ್ವಿನೊಂದು ಬಿತ್ತರದ ಭಂಗಿಯ ಪೊಸ ಬಣ್ಣನೆ ಮಿಣ್ಣನೆ ನಿನ್ನ ನಚ್ಚುಮೆಚ್ಚಿನ ಕಾಮ ನೊಂದು ಜಾನದೊಳೆ ಬರೆತುದು ? (ರಾಮಾಶ್ವ. ೧೩೪-೪). ನಚ್ಚುಮಚ್ಚು : ಸಂಯೋಗದ ಸುಖ ಮೈಯುಂಡವಂಗೆ ಲೋಕದ ನಚ್ಚುಮಚ್ಚಿನ ಬಲೆ ದೊಡಕು ತಪ್ಪದು (ಮಂದೇಪ. ೨೮೭-೬೮) ; ಆ ಕಮಲದ ನೆಲೆಯ ಕಾಣಲಱಿ ಯದೆ ತೊಳಲಿ ಬಳಲಿ ಜಗದೊಳಗೆ ನಚ್ಚುಮಚ್ಚಿಗೊಳಗಾಗಿ ... ನಾಚಿತ್ತೆನ್ನ ಮನವು (ಲಿಂಗವ. ೨೦-೭೯) ; ನಚ್ಚುಮಚ್ಚಿನ ಲಿಂಗವ ಗ್ರಹಿಸಿ ಮಚ್ಚು ಒಳ ಕೊಂಡಿತ್ತಯ್ಯ ಕರ್ಪುರದ ಕರಡಗೆಯ ಘಾಸಿಮಾಡಿದಂತಾಯಿತ್ತು (ಅವಚಂ. ೨೩-೯೪) ; ನಿಚ್ಚದಲಿ ತೂಪಿಱಿದು ತೂಗುವ ನಚ್ಚುಮಚ್ಚಿನ ದಾದಿಗಾಗಳು ಮೆಚ್ಚನೀವುತ ಪೆಚ್ಚುತಿರ್ದಳು ಮೋಹಿನೀದೇವಿ (ಪ್ರಭುಲೀ. ೩-೨೭) ; ಸೌಂದರೇಂದ್ರಂ ನಚ್ಚುಮಚ್ಚಿನಿಂ ಪರಮೆನಾಚಿಯರೊಳಾಸನ್ನನಾ ಗೊಪ್ಪಿರ್ದನು (ಸೌಂದಪು. ೧೨-೨). ನೆಚ್ಚುಮೆಚ್ಚು : ಅಲ್ಲಿಯೆ ಕಣ್ ಪಳಂಚಿ ಮನವಲ್ಲಿಯೆ ಕೀಲಿಸೆ ನೆಚ್ಚುಮೆಚ್ಚು ತಳ್ತಲ್ಲಿಯೆ ಸೋಲ್ತು ಪತ್ತೆ (ಆದಿಪು. ೨-೪೨). [ ನಚ್ಚು₂ + ಮೆಚ್ಚು₂ ]

**ನಚ್ಚುವೋಗು (ಕ್ರಿ).** ನಂಬಿಕೆಗೆ ಪಾತ್ರವಾಗು ; ವಿಶ್ವಾಸಕ್ಕೆ ಆಶ್ರಯಂ ವಾಗು : ದನುಜಾಂತಕನೆಂಬೀ ನಿನ್ನ ನಚ್ಚುವೋದಂಕಮೆಲವೊ ಮುನ್ನೆನ್ನನ್ನಂ ದನುಜಂ ಪುಟ್ಟದೆ ಸಂದುದು ನಿನಗೀ ಪೆಸರೆನ್ನ ಮುಂದೆಯುಂ ಸಂದಪುದೇ (ಪಂಪಭಾ. ೬-೫೪). [ ನಚ್ಚು₂ + ಪೋಗು₁ ]

**ನಚ್ಚುಹಾಕು (ಕ್ರಿ).** ನಂಬಿಕೆಯನ್ನುಂಟುಮಾಡು ; ನಂಬಿಸು : ಹುಸಿಯ ವರ್ತಮಾನಮಂ ಪುಟ್ಟಿಸಿ ನಚ್ಚುಹಾಕಿ ರಾಯರಂ ಮೈಮರೆಸಿ ಸಮಯ ಸಾಧನೆಯಂ ರಚಿಸಿ (ಕೆಳನೃ. ೪-೮). [ ನಚ್ಚು₂ + ಹಾಕು (<ಪಾಯ್ಕು₁)]

**ನಜರ್** 'ನಜರು' ನೋ.

**ನಜರಚೂಕ್** (ನಾ). ಕಣ್ತಪ್ಪು : ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ ಮತ್ತು ಅನ್ಯದೇಶೀಯವೆಂದು ಗುರುತಿಸಲಾಗದ ಶಬ್ದಗಳೆಂದರೆ– ಕಚೇರಿ . . . ನಜರಚೂಕ್, ಜಾಮು, ಜಾಹೀರ್ . . . ಶಿಕ್ಕಾ, ಇತ್ಯಾದಿ (ಭಾಷಾಶಾ. ೧೭೭). [←ಮರಾ. ನಜರ್‌ಚೂಕ್]

**ನಜರಾಣ** 'ನಜರಾಣೆ' ನೋ.

**ನಜರಾಣೆ, ನಜರಾಣ, ನಜರಾಣೆ, ನಜರಾನ, ನಜರಾನೆ** (ನಾ). ೧. ಕಾಣಿಕೆ; ಉಪಾಯನ; ಉಡುಗೊರೆ : ಅಳಿಯನಿಗೇನು ನಜರಾಣೆ ಸಿಕ್ಕಿದೆ ಎಂದರು (ಜಹಾರ. ೩೦) ; ರಾಯರು ರಾಮದುರ್ಗ ದರಬಾರಕ್ಕೆ ಹೋದಾಗ ಅಲ್ಲಿಯ ಯಜಮಾನರಿಂದ ನಜರಾಣೆಯಾಗಿ ಸಿಕ್ಕಿದ್ದಿತು (ಹೊಲಮು. ೫). ೨. ರಾಜ, ಪಾಳೆಯಗಾರರು ಮೊದಲಾದವರಿಗೆ ಒಪ್ಪಿಸಬೇಕಾಗಿದ್ದ ಕಪ್ಪಕಾಣಿಕೆ ; P ಬ್ರಿಟಿಷರ ಕಾಲಕ್ಕೆ ಕೆಲವು ರಾಜರ ದರ್ಬಾರಿನಲ್ಲಿ ಇದು ಬಲವಂತದ ಕಾಣಿಕೆಯಾಗಿತ್ತು : ಈ ಮೊಬಲಗಿನ ಜೊತೆಗೆ ಸಮಯ ಬಿದ್ದಾಗ ನಜರಾಣೆ ಎಂಬ ಹೆಸರಿನಿಂದ ಬೇಕಾದ್ದನ್ನು ದೋಚಿ ಕೊಳ್ಳುತಾ ಇದ್ದರು (ಪಾಳೆಗಾ. ೧೪) ; ಈ ಕಾಯಿದೆಯಿಂದ ಪಾರ್ಲಿ ಮೆಂಟದ ಸಮ್ಮತಿಯ ಹೊರತು ತೆರಿಗೆಯನ್ನು ಕೂಡ್ರಿಸಬಾರದೆಂದೂ ನಜರಾಣೆಯನ್ನು ತೆಗೆದುಕೊಳ್ಳಬಾರದೆಂದೂ . . . ಗೊತ್ತಾಯಿತು (ಇಂಗ್ಲ ಇ. ೧೯೦) ; ಆತನು ತನ್ನ ಊರೊಳಗೆ ಜಾಗೀರದಾರರಂತೆ ಇರುತ್ತಿದ್ದ, ಎಷ್ಟೋ ಸಾವಿರರೂಪಾಯಿ ನಜರಾಣೆ ಸಲ್ಲಿಸುತ್ತಿದ್ದ (ಜವಿಣಾ. ೧೭). **ನಜರಾಣ :** ೧. (ಮೈಗೆಜ. IV, ೭೮೦). ೨. (ರೈಸ್‌ಗೆ. ೫೫೭) ; ಪ್ರಸಕ್ತಿ ಬಂದಾಗ ನವಾಬನಿಗೆ ನಜರಾಣವನ್ನು ಜನರಿಂದ ವಸೂಲ್ಮಾಡಿ ಕೊಡುವ ಕಠಿಣಮನಸ್ಸು ಕುಲಕರಣಿಗಿರಬೇಕು (ಕಭವಿ. II, ೧೫೦). **ನಜರಾಣೆ :** ೧. ಗೋವೆಯ ಕದಂಬರು ಇವನಿಗೆ ನಜರಾಣೆಯನ್ನು ತಂದೊಪ್ಪಿಸಿದರ (ಕರ್ನಾಇ. ೩೭) ; ಯಾವನಾದರೂ ಒಬ್ಬ ಯೋಗ್ಯ ಅಧಿಕಾರಿಯನ್ನು ನಿಯಮಿಸಿ, ಮಾನಸಿಂಹನ ಯೋಗಕ್ಷೇಮವನ್ನು ತಕ್ಕೊಂಡರಾಯಿತು. ನಜ ರಾಣೆಯನ್ನು ಮಾತ್ರ ಕಳಿಸುವುದಿಲ್ಲ (ಶಿಲೋಮ. ೬೦) ; ತ ರು ವಾ ಯ ಮುಖ್ಯಾಧಿಕಾರಿಗಳನ್ನೂ ನೆಮ್ಮದಿವಂತರಾದ ಪ್ರಜೆಗಳನ್ನೂ ಕರೆಕಳುಹಿಸಿ ನಯಭಯಗಳಿಂದ ಅವರಿಂದ ನಜರಾಣೆಯನ್ನು ತೆಗೆದುಕೊಂಡು ಹಣವನ್ನು ಕೂಡಿಸಿದನು (ಒಡಕ. ೬೨). **ನಜರಾನ :** ೨. ಮಹಾರಾಜನು ನಜರಾನ ಸ್ವೀಕರಿಸುವದನ್ನು ತನ್ನ ವರಮಾನದ ಒಂದು ಮಾರ್ಗವೆಂದು ತಿಳಿದಿದ್ದನು (ದಾದಾನ. ೭೭). **ನಜರಾನೆ :** ೧. ಜನರಿಗೆ ನಜರಾನೆಗಳ ಮಾಡಿ (ಹೈದರ. ೭೨).

[ ←ಅರ. ನಜರಾನಹ್; ಹಿಂ. ನಜರಾನಾ; ಮರಾ. ನಜರಾಣಾ.]

**ನಜರಾಣಿಕೆ** (ನಾ). = ನಜರಾಣೆ : (ಕ). [ <ನಜರಾಣೆ ]

**ನಜರಾಣೆ** 'ನಜರಾಣೆ' ನೋ.

**ನಜರಾನ** 'ನಜರಾಣೆ' ನೋ.

**ನಜರಾನೆ** 'ನಜರಾಣೆ' ನೋ.

**ನಜರಿರು** (ಕ್ರಿ). ಲಕ್ಷ್ಯದಿಂದಿರು ; ಎಚ್ಚರಿಕೆಯಿಂದಿರು ; ಚೆಲುವ ನಸ ತಮ್ಮ ಸೆರಗಲಿ ಮೊಕ ತೊಳೆಯೊ ಉಗುರಲ್ಲಿ ಗಂಧ ಹದಮಾಡೊ ಚದುರೇರು ಬರ್ತಾರೆ ನಜರೀರೊ (ಹಳ್ಳಿಪ. ೧೧೮). [ ನಜರು + ಇರು$_1$(<ಇರ್$_1$) ]

**ನಜರೀಯು** (ಕ್ರಿ). ಕಾಣಿಕೆಯನ್ನು ಕೊಡು,–ಒಪ್ಪಿಸು : ಶೋಭನಾಕ್ಷತೆ ಕುಸುಮಫಲಗಳಂ ಕೊಡುವರಂ ನಜರಿತ್ತು ನಮಿಸುವರನೂ . . . ಶೋಭನಸ್ತುತಿಗಳಿಂ ಜಯಶಬ್ದಗಳ ಪೇಳ್ವ ಜನರ ಸಂಭ್ರಮವ ನೋಡು (ಅರ್ಜುವಿ. ೨೪-೩೨). [ ನಜರು + ಈಯು$_1$ (<ಈ$_2$) ]

**ನಜರು, ನಜರ್, ನಜೂರು, ನಜ್ರು, ನದರು$_1$, ನದೂರು, ನಸರ್, ನಸರು, ನೆಜರು, ನೆದರು$_1$** (ನಾ). ೧. ದೃಷ್ಟಿ ; ನೋಟ ; ಲಕ್ಷ್ಯ ; ಗಮನ : ಈ ಜನರ ಸಹಾಯದಿಂದ ಬೇರೆ ಪುಂಡರೂ ಹಾವಳಿ ಎಬ್ಬಿಸ ತೊಡಗಿದ್ದು ಪೋಲೀಸಖಾತೆಯ ನಜರಿಗೆ ಬಂದಿತು (ಜಿವರಿ. ೧೦೩) ; ಗಾಡಿ ಹತ್ತಿದ ಕೂಡಲೇ ಸ್ಕ್ವಾಟ್‌ಮಾಸ್ತರರ ನಜರು ನನ್ನ ಮೇಲೆ ಬಿತ್ತು (ವೈನಿ. ೭೪) ; ನಮ್ಮ ಅಂಥ ಯಾವ ತಪ್ಪು ನಿಮ್ಮ ನಜರಿಗೆ ಬಿದ್ದಿತೆಂದು ನೀವು ಹೀಗೆ ಅನ್ನುತ್ತಿರುವಿರಿ ? (ಅಂಬಿಕೆ. ೧೩೭) ; ಕಂಡ ಕೂಡಲೇ ಗುರುತಿಸುವ 'ನಜರು' ಅವನಿಗೆ ಮಾಸಲಾಗಿತ್ತು (ಗ್ರಾಮಾಯ. ೭೦). ೨. ಕಾಣಿಕೆ ; ಉಪಾಯನ: ವಿಕ್ರಮಸಿಂಹನು ರಾಜಸಿಂಹನನ್ನು ಶಿಬಿರದಲ್ಲಿ ನೋಡಿ ಅವನಿಗೆ ನಜರು ಒಪ್ಪಿಸಿದನು (ಬಂಕಿವು. ೨೨೫) ; ಸುಲ್ತಾನನ ಆಸ್ಥಾನಕ್ಕೆ ಹೋಗುವ ಪ್ರತಿಯೊಬ್ಬನೂ ಆತನ ಮನ ಒಲಿಸಿಕೊಳ್ಳಲು ಏನಾದರೊಂದು ನಜರನ್ನು ಒಪ್ಪಿಸಲು ತಯಾರಿರಬೇಕು (ಪ್ರವಾಇ. II, ೬೨) ; ಶ್ರೀದೇವಿಯನ್ನು ಸಾಮ್ರಾಟನಿಗೆ ವಿವಾಹ ಮಾಡಿಕೊಡುವುದಲ್ಲ. ನಜರಾಗಿ ಅವಳನ್ನು ಒಪ್ಪಿಸಬೇಕು (ಶ್ರೀರಾಯ. ೧೧೨) ; ನಗರದಿಂದ ಬಂದ ನಜರುಗಳೆಲ್ಲ ಶ್ರೇಷ್ಠವಾದುವುಗಳು (ದಾಲತ್. ೩೨). ೩. ಅಂದಾಜು; ಊಹೆ: ಮುತ್ತಿನ ಕಿಮ್ಮತ್ತು ಕೇವಲ ನಜರ ಮೇಲೆ ಇರುತ್ತದೆ (ಮುಂಬವ್ಯಾ. ೧೯೪). **ನಜರ್ :** ೨. (ರೈಸ್‌ಗೆ. ೫೫೭) ; (ಮೈಗೆಜ. IV, ೭೮೦). **ನಜೂರು :** ೨. ಬೇರೆಬೇರೊರ್ವರಿಂ ನಜೂರಂಗಳ ಪಿಡಿಸಿ ತೀರರಿದು ದೇಶಾಧಿಪರ ನೃಪಾಲಾಗ್ರಣಿಗೆ ತೋರಿಸುತ್ತುಡುಗರೆಗಳಂ ಮಾಡಿಸಿದ (ಕೃಷ್ಣವಿ. ೫ ಪಲ್ಲವಿ). 'ನಜೂರುಮಂಜರೆ' ಪರಾ. **ನಜ್ರು :** ೧. ಈಗಿನ ಕಾಲದ ಹುಡುಗರಿಗೆ ಆಶಾನಾದರೂ ಎಷ್ಟೊ ಅಂತೀನಿ. ಐದ ರೂಪಾಯಿ ಅಂದ್ರ ನಜ್ರೇ ಇಲ್ಲ ! (ದಾಕೂಟ. ೨೩). 'ನಜ್ರಿಸು' ಪರಾ. **ನದರು$_1$ :** ೧. ಎಮ್ಮ ಗರುಡಿಯೊಳ್ ಸಾಧಕಮಂ ನದರಿಂದಂ ಮಾಳ್ಪುದು (ಹಾಲಾಸ್ಯ. ೨-೧೧-೮) ; ಅದು ನಮ್ಮ ನರಸಿಂಹಯ್ಯನ ನದರಿಗೆ ಬಿತ್ತೇ ಬಿತ್ತು (ಹಹಸ. ೭೭) ; ಏನು ಶಿಕಾರಿಯ ನದರಿದೆಯೆ ? (ಮುಗಿಯು. ೨೩೧) ; ನಿಮ್ಮ ನದರಿನೊಳಗೆ ಒಂದು ನಾಲ್ಕು ಸಿದ್ದೆ ಹಾಲು ಕೊಡುವ ಎಮ್ಮೆ ಎಲ್ಲಾದರೂ ಇದೆಯೇ ? (ಸ್ವಪ್ನಹೊ. ೯೨) ; ನಿನ್ನ ನದರ ಬಿತ್ತಲೇ ದಾದಲ್ಯಾ ಬಸವಂತೀ ಮ್ಯಾಲ (ದೀಪಹ. II, ೨೫೯). ೨. 'ನದರುಗಾಣಿಕೆ' ಪರಾ. ೩. ಅವರು ಹಾಕಿದ ನದರಿಗೂ, ಆದ ಮದುವೆಗೂ ಒಳ್ಳೇ ಲಗ್ತು ಬಿತ್ತು (ಮರಮ. ೩); ಅಯ್ಯಾ ನನಗೆ ಬೈಲಿನ ನದರು ಅಷ್ಟು ಚೆನ್ನಾಗಿ ಆಗುವುದಿಲ್ಲ (ಜಿದಾಊ. ೧೬೧). ೪. ಕೆಟ್ಟ ದೃಷ್ಟಿ; ಕಣ್ಣೆಂಜಲು : ಎಂದಿಗಿಲ್ಲದ ಕಂದ ಇಂದು ನುಡಿದನೆಂದು ಬಂದ ಬಂದವರಿಗೆ ಹೇಳದಿರು ಸುಗಲವ್ವೆ ಸುಂದರಾಂಗನಿಗೆ ನದರ ಆದೀತು (ಸಿದ್ಧಪು. ೪-೧೭). **ನದೂರು :** ೨. 'ನದೂರುಗಾಣಿಕೆ' ಪರಾ. ೩. ನಮಗೆ ಇವತ್ತು 'ಕಾಯಿಸು' ಇರಬಹುದು ಅಂತ ನನ್ನ 'ನದೂರು' (ಹೊಸಕ್ಷಿ. ೪೮). **ನಸರ್:** 'ನಸರ್ಬಂದಿ' ಪರಾ. **ನಸರು:** 'ನಸರುಬಂದಿ' ಪರಾ. **ನೆಜರು :** 'ನೆಜರಿಡು' ಪರಾ. **ನೆದರು$_1$ :** ೧. ನಮ್ಮ ಗೌರಪ್ಪ . . . ಓಣ್ಯಾಗ ಹೊಂಟರ ಅತ್ತ ಇತ್ತ ನೆದರ ಹಾಯಾಣಲ್ಲ ಅವರದು (ನಡದಾ. I, ೨೯೧) ; ನಾ ಲಡಾಯಿಗೆ ಹೋಗ್ತೀನಿ, ಬರೋ ಮಟ ನಂ ಭರಮ್ಯಾನ ಮ್ಯಾಗ ನೆದರ ಇರ್ಲಿ (ಪುರುಷ. ೧೬೧). 'ನೆದರಿಡು' ಪರಾ.

ನಜರ ತಪ್ಪು = ಲಕ್ಷ್ಯವಿಲ್ಲದಾಗು ; ಗಮನಕ್ಕೆ ಬಾರದಿರು : ಕುದುರೆ ಹೋಯಿತೆ ಭಾವದ ಕುದುರೆಯೋಯಿತೆ ಕುದುರೆ ಹೋಯಿತೆ ಚದುರಮಣಿ ಎನ್ನ ನಜರ ತಪ್ಪಿ ನಿಜಮಂದಿರದೊಳಗಿನ (ಶರೀಫ. ೭೩, ಕವಿಕಾವ್ಯಪರಿಚಯ). ನಜರು ಹಾಕು, ನಜರ್ ಹಾಕು = ದೃಷ್ಟಿಹಾಯಿಸು ; ಲಕ್ಷಿಸು ; ಗಮನಿಸು ; ಗುರಿಯಿಡು : ಶ್ರೀಮಂತರಾದರೆ ಅಥವಾ ಐಶ್ವರ್ಯ ವುಳ್ಳವರಾದರೆ ಅಂಥವರು ಆ ಕೆಲಸದ ಮೇಲೆ ತಾವು ಸ್ವತಃ ನಜರು ಹಾಕಬೇಕು (ಕೃಷಿಪ್ರ. ೨೨) ; ಸುಲ್ತಾನ್, ರಾಣಿ, ಎರಡೂ ಭೇಷಾದ ಕುದುರೆ ಖಾವಂದ್ ! ಆದರೆ ರಾಣಿ ನೋಡಿ ಮಹಾರಾಜಾಸಾಹೇಬ್‌ರು ನಜರ್ ಹಾಕಿದರೆ, ಖಾವಂದ್‌ರಿಗೆ ಹೆಂಗಾಗ್ತದೋ ? (ಮಲ್ಲಿ. ೩೧).

ನಜರೊಪ್ಪಿಸು = ಕಾಣಿಕೆಯನ್ನು ಒಪ್ಪಿಸು,-ಸಲ್ಲಿಸು : ಸುಲ್ತಾನ ನಜರೊಪ್ಪಿಸಲು ದರ್ಬಾರಿಗೆ ಬರಲೇ ಇಲ್ಲವಂತೆ (ಕೃಷ್ಣಭೂ. ೨೬).
**ನಜರ್ಮಾಡು, ನದರಮ್ಮಾಡು, ನದರುಮಾಡು** = ೧. ನಜರೊಪ್ಪಿಸು : ಆ ಸರದಾರರು ರತ್ನಖಚಿತವಾದ ಹಿಡಿಯುಳ್ಳ ಒಂದು ಪಟ್ಟಾಕತ್ತಿಯನ್ನು ನಜರ್ಮಾಡಲು (ಮಹಾವಂ. II, ೩೬). ೨. ದೃಷ್ಟಿಯನ್ನು ಹಾಯಿಸು ; ಲಕ್ಷಿಸು; ಗಮನಿಸು : ಆದನಾಲಿಸಿ ಧರಣೀಪತಿ ಮುದದಿಂ ಚರಲಿಂಗರೂಪದಿಂದೆ ಮಹೇಶಂ ನದರಮ್ಮಾಡುತ್ತಿನ್ನಯ ಹೃದಯದೊಳಿರ್ಸಿದಿರ್ದುದಕ್ಕೆ ಫಲಮಾಯ್ತೆನುತುಂ (ಹಾಲಾಸ್ಯ. ೧-೪-೩೫) ; ಮದನತಿಲಕವಿಟ್ಟು ಮಧುರ ಮಾತಾಡಿ ಮುಚ್ಚಿಸುತ್ತಾ ನದರುಮಾಡಿದಳು ನವಕುಶಲಕೋವಿದರನ್ನು ಸುದತಿ ಸುಪ್ಪಾಣಿಯಾಡಿದಳು (ಸೌಂದರ. ೩-೧೨). ೩. ಅಂದಾಜು ಮಾಡು ; ಊಹಿಸು : ಐತಾಳರ ವಾಣಿಪಂಚಿಯಿಂದ ನದರು ಮಾಡಿದ ರಾಗದು (ಮರಮ. ೧೮೩).

[ ←ಅರ. ಪಾರ. ಹಿಂ. ನಜರ್ ; ಮರಾ. ನಜರ್, ನದರ್ ]

**ನಜರುಕೈದಿ** (ನಾ). ಸ್ಥಾನಬಂಧನಕ್ಕೊಳಗಾದ ಕೈದಿ,-ಬಂದಿ: ನಜರಕೈದಿ, ನಿಮ್ಮ ತಾಬೇ ಮಾಡೇನ್ರಿ. ಮುಂಜಾನೆದ್ದು ಇವನ್ನ ಚಾವಡೀಗೆ ಮುಟ್ಟಸೂ ಜವಾಬ್ದಾರೀ ನಿಮ್ಮದರಿ (ಗ್ರಾಮಾಯ. ೧೬೬). [ ನಜರು + ಕೈದಿ ]
**ನಜರುಕೈದು** (ನಾ). ನಿರ್ದಿಷ್ಟಸ್ಥಾನ ಅಥವಾ ಸರಹದ್ದಿನಿಂದ ಹೊರಗೆ ಹೋಗದಂತೆ ಲಕ್ಷ್ಯದಲ್ಲಿಡುವ ಬಂಧನ ; ಸ್ಥಾನಬದ್ಧತೆ ; ಯಾವಾಗಲೂ ಕಣ್ಣಿಗೆ ಬೀಳುವಂತೆ ಮಾಡಿರುವ ಬಂಧನ : ಕಣಬರಗಿಯಲ್ಲಿ ಶಿಬಿರಗಳನ್ನು ಕಟ್ಟಿಸಿ ನಮ್ಮನ್ನು ಅವರು ನಜರುಕೈದಿನಲ್ಲಿಟ್ಟ ು (ರಕ್ತಧ್ವ. ೨೬೧). 'ನಸರುಬಂದಿ' ಪರ್ಯಾ. [ ನಜರು + ಕೈದು₂ ]
**ನಜರುಗಾಣಿಕೆ, ನದರುಕಾಣಿಕೆ, ನದರುಗಾಣಿಕೆ, ನದುರುಗಾಣಿಕೆ** (ನಾ). ೧. = ನಜರಾಣೆ ೧ : ಅಕಬರಪಾತುಶಾಹನು ರಾಣಾರಾಯನು ಕೈವಿಡಿದು ಸಿಂಹಾಸನದೊಳ್ಕುಳ್ಳಿರಿಸಿ ಆ ಚಿತ್ತೋಡಗಡಮಂ ನಜರುಗಾಣಿಕೆಯಂ ಮಾಡಿ (ಕಳಸ್ವ. ೯-೧೮). **ನದರುಕಾಣಿಕೆ** : ೧. ಮದುವೆಯ ಕಾಲದಲ್ಲಿ ಮನೆಗೆ ಎಷ್ಟು ನದರುಕಾಣಿಕೆಗಳು ಬಂದಿದ್ದುವು ! (ಮುಗಿಯ. ೨೯೬). **ನದರುಗಾಣಿಕೆ** : ೩. = ನಜರಾಣೆ ೨ : ನದರುಗಾಣಿಕೆ ಕಪ್ಪವ ಕೊಟ್ಟು ಮಂತ್ರಿಯ ಇದಿರುಗೊಂಡರು ಹರುಷದಲಿ (ಚಂದ್ರಹಾ. ೩-೪೬). **ನದುರುಗಾಣಿಕೆ**: ೧. ಒಕ್ಕಲು, ಗೇಣಿ, ಶೀರ್ವೆ ನದುರುಗಾಣಿಕೆ ಎಲ್ಲವುಗಳ ವಿಷಯದಲ್ಲಿಯೂ ಅಷ್ಟು ಖಚಿತವಾದ, ನಿಕಟವಾದ ಜ್ಞಾನ (ಕರುಳ. ೬).

[ ನಜರು + ಕಾಣಿಕೆ (<ಕಾಣ್ಕೆ) ]

**ನಜರುಮುಜರೆ, ನಜುರುಮುಜುರೆ** (ನಾ). ಕಾಣಿಕೆಗಳನ್ನು ಒಪ್ಪಿಸಿ ಮಾಡುವ ಸಲಾಮು,-ವಂದನೆ: ಪಾಡ್ಯದ ದಿನ ಸಿಂಹಾಸನಾರೋಹಣ ಕಾಲದಲ್ಲಿ ನಡೆದಂತೆ ನಜರುಮುಜರೆಗಳನ್ನು ಒಪ್ಪಿಸಿಕೊಂಡು ಮುಹೂರ್ತ ಮಾಡಿಕೊಂಡರು (ಚಾಮವಂ. ೪೧) ; ವಿವಾಹದ ಶುಭಸಮಾಪ್ತಿಯ ಪ್ರಯುಕ್ತ ಒಂದು ರಾಜಸಭೆಯು ನಡೆಯಿತು. ನಜರುಮುಜರೆಗಳಾದವು (ಘೂರಾಡ. ೬೯) ; ಸಭಾಸದರೆಲ್ಲರೂ ಆತನಿಗೆ ನಜರುಮುಜರೆಗಳನ್ನು ಒಪ್ಪಿಸಿದರು (ರಾವಿಜ. ೭೩) ; ನಜರುಮುಜರೆಗಳಾದ ನಂತರ ಚೌಪುದಾರರು ಪರಾಕು ಹೇಳಿದರು (ದಾಲಿಪ್. ೨೩). **ನಜುರುಮುಜುರೆ** : ನಜುರು ಮುಜುರೆಗಳಿಲ್ಲದೇ ಎಲ್ಲರೂ ನವಾಬರಿಗೆ ತಲೆಬಾಗಿಸಿ ಸಭೆಯಿಂದ ಹೊರಟರು (ದಾಲಿಪ್. ೦೬). [ ನಜರು + ಮುಜರೆ ]
**ನಜುಗು** (ಕ್ರಿ). ೧. ನೆಗ್ಗು ; ಜಜ್ಜು₁: ಜುಜುಗು, ನಜುಗು, ನೆಗ್ಗು, ಪೆಣಗು (ಕಸಾಪ. ೦-೨೯೦). ೨. ಜಜ್ಜಿಹೋಗು; ನಜ್ಜುಗುಜ್ಜಾಗು: ಬುಟ್ಟಿಯ ಹಣ್ಣುಗಳೆಲ್ಲ ನಜುಗಿ ಹೋಗಿವೆ (ರೂಢಿ). 'ನಗ್ಗು₁', 'ನೆಗ್ಗು₁' ಪರ್ಯಾ.

[ ದೇ.॥ ತಮಿ. ನಚುಕ್ಕು, ನಚುಙ್ಕು ]

ಜನುರು 'ಜನರು' ನೋ.

ನಜುರುಮುಜುರೆ 'ನಜರುಮುಜರೆ' ನೋ.
**ನಜ್ಜು₁** (ಕ್ರಿ). ಜಜ್ಜು ; ಚೂರುಮಾಡು : ನಜ್ಜಿದ ಮೂಲಂಗಿಯನ್ನು ಚಟ್ನಿಯಲ್ಲಿ ಬೆರೆಸಿ ಒಗ್ಗರಣೆ ಹಾಕಿದರೆ ಚೆನ್ನಾಗಿರುತ್ತದೆ (ರೂಢಿ).

[ ದೇ.॥ ತಮಿ. ನಚೆ ; ತುಳು. ನೆಸಿಪು ; ಕೂಇ. ನಸ, ನಸಿ ]

**ನಜ್ಜು₂, ನುಜ್ಜು** (ನಾ). ನಜ್ಜಿಹೋಗಿರುವಿಕೆ ; ಜಜ್ಜಿಹೋಗಿರುವಿಕೆ ; ತಗ್ಗಿಹೋಗಿರುವಿಕೆ.

**ನಜ್ಜುಗುಜ್ಜು, ನುಜ್ಜುಗುಜ್ಜು** = ಪೂರ್ಣವಾಗಿ ಜಜ್ಜಿಹೋಗಿರುವಿಕೆ ; ಹೆಚ್ಚಾಗಿ ನಗ್ಗಿಹೋಗಿರುವಿಕೆ : ಅದರ ಚುಕ್ಕಾಣಿ ಮಾತ್ರ ಬಂಡೆಗಳ ಇರುಕಿಗೆ ಸಿಕ್ಕುಬಿಟ್ಟು ನಜ್ಜುಗುಜ್ಜಾಯಿತು (ಮಡಸ. ೮೧) ; ಕೃಷ್ಣನು . . . ಧೃತರಾಷ್ಟ್ರನ ಮುಂದೆ ಒಂದು ಕಬ್ಬಿಣದ ವಿಗ್ರಹವನ್ನು ತಳ್ಳಿದನು . . . ವಿಗ್ರಹವು ನಜ್ಜುಗುಜ್ಜಾಗಿ ಹೋಯಿತು (ವಜಭಾ. ೩೨೪) ; ಅವರಲ್ಲಿ ಹಲವರು... ಕೋಟೆಯ ಮೇಲಿನಿಂದ ಉರುಳಿಸಿದ ಗುಂಡುಕಲ್ಲುಗಳಿಗೆ ಸಿಕ್ಕಿ ನಜ್ಜುಗುಜ್ಜಾಗಿ ಸತ್ತುಹೋಗುತ್ತಿದ್ದರು (ಭಾರವೀ. ೦೬) ; ಪ್ರತಿಯೊಬ್ಬನ ಭುಜಗಳ ಮೇಲೆಯೂ ಸುಮಾರು ೧೬ ಟನ್ನುಗಳ ಭಾರವು ಒತ್ತುತ್ತಿರುವುದು, ಹಾಗಾದರೆ, ಇಷ್ಟು ಭಾರದಿಂದ ನಾವೇತಕ್ಕೆ ನುಜ್ಜುಗುಜ್ಜಾಗುವುದಿಲ್ಲವೆಂದು ಯಾರಾದರೂ ಪ್ರಶ್ನೆ ಮಾಡಬಹುದು (ಜ್ಯೋತಿರ್ವಿ. ೧೯೦) ; ಕೆಲ ತಾಸುಗಳ ತರುವಾಯ, ಈ ಬಾಡಿದ ಎಲೆಗಳನ್ನು ಒಂದು ಯಂತ್ರಕ್ಕೆ ಕೊಟ್ಟು, ನುಜ್ಜುಗುಜ್ಜುಮಾಡಿ, ಕತ್ತಲೆಕೋಣೆಗಳಲ್ಲಿ ಹರಡುವರು (ದಾಲಪ್ರ. II, ೮೩೪). **ನಜ್ಜುನಜ್ಜುಗೆಯ್** = ಚೆನ್ನಾಗಿ ಅದುಮು,-ಒತ್ತು,-ಹಿಸುಕು : ಕಲಸಲೊಡನೊಲ್ದು ನಲವಿಂ ನಲಿನಲಿಯಿಸಿ ನಜ್ಜುನಜ್ಜುಗೆಯ್ದಾ ಸೊಗದೊಳ್ ಬೆಲೆವೆಣ್ಣನುಮನೆ ಬಿಡಿಸುವ ನೆಲೆಗಂಡನೆ ನೆಗಟ್ಕೊಡವನೆ ಗಡ ಕಂದರ್ಪಂ (ಚಕವಿ. ೬-೦೬೩). [ <ನಜ್ಜು₁ ]
**ನಜ್ರಿಸು, ನದರಿಸು** (ಕ್ರಿ). ಲಕ್ಷಿಸು ; ಗಮನಿಸು : ಮುಜ್ಜೀವಿತೇಶ ರೇವಣ ನಿಪ್ಪ ಠಾವುಮಂ ನಜ್ರಿಸುತ ಕಲ್ಯಾಣಪುರದೊಳಿಟಸಲ್ಕೇಳ್ಕು (ಲಿಂಗಪು. ೨೪-೪೪). **ನದರಿಸು** : ಒದರೂತ ವೃಕ್ಷಯೆಂದು ಮುದದೊಳಗಮರಾರು ಮದನೇಶ ಭಕ್ತರ ಮೇಲೆ ವದಗಿರುತಿಹ ದಿವ್ಯಕುಂದಪುಷ್ಪಗಳನ್ನು ನದರಿಸಿ ಸುರಿದಾಗೆ ಬುಧರು (ಹಮುಚ. ೭೧). [ ನಜ್ರು (<ನಜರು) + -ಇಸು₃ ]
ನಜ್ರು 'ನಜರು' ನೋ.
**ನಟ್** (ನಾ). ಒಂದು ಅನುಕರಣ ಶಬ್ದ ; ನೆಟಿಕೆಮುರಿಯುವಾಗ, ಮರದ ರೆಂಬೆಮುರಿಯುವಾಗ ಮುಂತಾದ ಸಮಯಗಳಲ್ಲಿ ಉಂಟಾಗುವ ಶಬ್ದ : ನಟ್ಟೆಂದು ನೆಟಿಗೆ ಮುರಿ (ರೂಢಿ).
**ನಟ** (ನಾ). ೧. ನಾಟ್ಯಮಾಡುವವನು ; ಕುಣಿಯುವವನು ; ನರ್ತಕ ; ನಾಟ್ಯಗಾರ : "ನಟಃ, ನಟಕಃ, ನಾಟಕಃ, ನಟನ್-ಈ ೪ ಕುಣಿವ" (ಕಾಶಕ್ಯ. ೧೩೪) ; ಸೂತ ನಟ . . . ಪುಣ್ಯಪಾಠಕವಿಪ್ರೋದ್ಘೋತರವಮೆಸೆಯೆ ಜಯಜಯ ಗೀತಿಗಳೊರ್ಮೊದಲೆ ತಡೆಯದೆರಡುಂ ಪಡೆಯೊಳ್ (ಪಂಸಭಾ. ೦೨-೧೦೬) ; ನಟ ನಗ್ನ ಭಗ್ನ ಗಾಯಕ . . . ಪಂಡಿತರ್ಕಳಭಿವರ್ಣನದುತ್ಕಟನಾದಮೆಯ್ದಿದುದು ದಿಕ್ತಟಮಂ (ಮಹಾನೀ. ೦೦-೦೪೩) ; ನಟವಿಟಹೀನದೀನವರಯಾಚಕ . . . ನಿತ್ಯನಿಕೃಷ್ಟಭಾವಲಂಪಟಕಟಕಕ್ಷ ಮಾನಧನಮಂ ಕುಡುವಂ ಗಡೆನಿಪ್ಪವಂ ಪ್ರಿಯೇ (ಮದಶಿ. ೬-೮) ; ಸಂಗೀತಾನ್ವಿತ ಶಾಸ್ತ್ರಭಿಜ್ಞನೆನಿಪಮಂ ನಟನಕ್ಕುಂ (ಲಾಸ್ಯರಂ. ೦-೪೧). ೨. ನಟಿಸುವವನು ; ಅಭಿನಯಿಸುವವನು ; ನಾಟಕದಲ್ಲಿ ಪಾತ್ರ ವಹಿಸುವವನು : "ಶೈಲಾಲೀ, ಶೈಲೂಷಃ . . . ಭರತಃ, ನಟಃ - ಈ ೮ ನಟ್ಟುವಿಗಂ" (ಹಲಾಯು. ೯೭-೪೩೪) ; "ಶೈಲಾಲೀ, ಶೈಲೂಷಃ, ಜಾಯಾಜೀವಃ, ಕೃಶಾಶ್ವಿ, ಭಾರತಃ, ನಟಃ - ೬ ನಟ್ಟುವನ ಪೆಸರು" (ಸಿದ್ಧಾಂತಿ. ೨೬೭) ; ರಂಗಂಬೊಕ್ಕಭಿನಯಿಪ ನಟಂಗೆಣೆಯೆನಿಸುವುದು ಕಣ್ಗೆ ಲೋಕಾಕಾರಂ (ಅಜಿಪು. ೦೦-೪) ; ರಸವು ಅನುಕರ್ತನಾದ ನಟನಲ್ಲಿಯೂ ಕಾಣಿಸಿ

ಕೊಳ್ಳುತ್ತಿದೆ (ಭಾರಮಿ ; ೩೬೧). ಜನರನ್ನು ರಸಿಕರನ್ನಾಗಿ ಮಾಡುವುದು, ಮಾಡಪ್ರಯತ್ನಿಸುವುದು ರಸೋಪಾಸಕರಾದ ಕವಿ ನಟ ಸಭ್ಯರ ಧರ್ಮ (ಸಾಹಿಜೀ. ೭೮). ೩. ತಾಂಡವೇಶ್ವರ; ಶಿವ; ಈಶ್ವರ : ಅಪಗತಕಪಟದೆ ನಟನದನುಪದೇಶಂಗೆಯ್ದು ಪರಸಿ ಪೋಗೆನೆ ಪೊಡೆಮಟ್ಟು ಪಸಾದಮೆಂ[ದ]ಹರಿಗನನುಪೇಂದ್ರನಾ ದರ್ಭಶಯನ ತಳಕಿಟಿಪುವುದುಂ (ಪಂಪಭಾ. ೧೦-೧೩೦) : ಬೆಳೆದ ಮಹಾಶಾಖೆಗಳ್ ತಾಂಡವಾಡಂಬರದೊಳ್ ನಾನಾವಿಧಂ ನರ್ತಿಪ ನಟನ ಭುಜಾದಂಡಮೋ ಪೇೞಿಮೆಂಬಂತಿರೆಮೇಯು ಸ್ಕಂಧಮುಂ ಸಂಧಿಸೆ ಜರಠಮಹಾಶಾಲ್ಮಲೀವೃಕ್ಷಮಿರ್ಕುಂ (ಕಾದಂಪೂ. ೦೩೦). ೪. ಒಂದು ಜಾತಿಯ ಹೆಸರು. ೫. ಕುಲಗೆಟ್ಟ ಕ್ಷತ್ರಿಯನಿಗೆ ಹುಟ್ಟಿದ ಮಗ ; ವರ್ಣಸಂಕರದಿಂದ ಕ್ಷತ್ರಿಯನಿಗೆ ಹುಟ್ಟಿದ ಮಗ. ೬. ಒಂದು ಬಗೆಯ ಸಸ್ಯ ; ಲಾಳದ ಕಡ್ಡಿ ; ಜೊಂಡು. ೭. ಅಶೋಕವೃಕ್ಷ ;"ಅಂಗನಾಪ್ರಿಯಂ" (ಪಂಡಿತ. ೩೫೯). [ ಸಂ. ]

**ನಟಕ** (ನಾ). ೧. ನಾಟ್ಯಗಾರ ; ನರ್ತಕ : "ನಟಃ, ನಟಕಃ, ನಾಟಕಃ, ನಟನ್—ಈ ೪ ಕುಣಿವಂ" (ಕಾಶಕ. ೧೩೮); ಮಾನಿಗಳು ಮೌನಿಗಳು ಸ್ವಚ್ಛಶಿವಾನುಭಾವೇಚ್ಛಾತ್ಮಸುಖಿಗಳು ದಾನಿಗಳು ಗಾಯಕರು ನಟಕರು [ಪಾಠಾಂ. ನಟರ್ಗಳ್, ನಟಕರು] ನವರಸಾಯತರು (ಬಸವು. ೬-೧೭). ೨. ಅಭಿನಯಿಸುವವನು ; ನಟಿಸುವವನು. ೩. ಕುಣಿಯುವ ಪಕ್ಷಿ ; ನವಿಲು ; ಮಯೂರ : ಚಟಕ ಚಾಟಣಕ . . . ಟಿಟ್ಟಿಭ ತಾಮ್ರಚೂಡ ಶುಕ ನಟಕ ಕುಕ್ಕುಭ ಲಗಡ ಸಲೆ ಕೂಕಂಟಿಗ ಕರ್ಪೂರವಾಣಿ ಹಸುಬಂ ಚಿಟು ಚಟಕ ಕಬ್ಬಕ್ಕಿ ಹೆಬ್ಬಕ್ಕಿಗಳ ನೋಡಿದವು (ಮದೇಪು. ೫-೯). ೪. ಶಿವ ; ಈಶ್ವರ : ನಟ[ಟ]ಕನ ಪೆಸರೆಂದು ವಟತರು ಗರ್ವಿಸೆ ವಟವೃಕ್ಷವಾಗಿ ಭುವನದಲಿ (ಕರಜಾ. ೫-೩೭). [ ಸಂ. ]

**ನಟಕು$_1$** 'ನೆಟ್ಟಿಕೆ' ನೋ.

**ನಟಕು$_2$** (ನಾ). ನಟನೆ ; ಬೆಡಗು ; ಒನಪು ; ಒಯ್ಯಾರ : ವಿಟಪುರುಷರನು ನೋಡಿ ನಟಕುಗಳ ತೋರುತಲಿ ನೆಟಗೆಯನು ಮುರಿಯುತಲಿ ಚಟುಲೆ ನೋಡುತಿರೆ (ಹಮುಜ. ೩೪೫). [ ನಟಕ + - ಉ$_4$ ]

**ನಟಣೆ, ನಟ್ಟಣೆ** (ನಾ). ೧. ಕುಣಿತ ; ನರ್ತನ : ಸಲಿಲದ ಮೇಲೊಂದು ನಿಳೆಯ ನಿಳೆಯದೊಳಗೊಬ್ಬ ಸೂಳೆ. . . ನಟಣೆಯುಲಾಡುತ್ತಿರಲಾಗಿ ನೋಡಿದವ ಮನಸೋತು ಕೂಡಿಹೆನೆಂದಡೆ ಕೂಡಬಾರದು (ಕಲ್ಯಾಶಾಂ. ೩೦-೧೦೦) ; ನಿಟಲಾಕ್ಷನ ನಟಣೆಗೆ ನೆಲನಪ್ಪುದು (ಕುಂಬಆ.ಹ. ೩೫೧-೦೪) ; ಬೀಱಿ ನವರಸಮಂ ಸಭೆಗೆ ನಲವೇಱಿ ತನ್ನಭಿನವನಟನೆಯಂ ತೋಱಿಯಾಡುವ ಭೃಂಗಿಗೊಲಿದು ಪಿನಾಕಿ ಸಾಕೆನುತ (ಬಸವು. ೦-೫೦) ; ನಟಣೆಯಲಿ ಬಳುಕಿದುದು ಕೊರಳುತ್ಕಟ ನಿತಂಬ ಸಘಾಡತರದುಬ್ಬಟೆಗೆ ದಡದಡಿಸಿದವು ಪದಯುಗವಾ ನಿತಂಬಿನಿಯ (ತೊರರಾ. ೩-೪-೭) ; ಕಳಹಂಸೆಗಳ ಕಾಲ್ಗೆ ನಟಣೆಯನೊದವಿಸಿ. . . ಎತ್ತೆತ್ತಲುಂ ಕಾಮದೂತನಂತೆಳೆಗಾಳಿ ತೆಂಕಣಿಂ ಸುಳಿದುದು ವಸಂತಾಗಮದ ಮೊದಲೊಳು (ಜೈಪು. ೪೫-೦೩) ; ಪರಿಪರಿಯ ನಟಣೆಗಳ ಚಂದದಿಂದಂದದಿಂ ಸ್ಫುರಿಸುತಿಹ ಮೌಕ್ತಿಕದ ಮಣಿಗಳಿಂ ಗಣಿಗಳಿಂ . . . ಪಯೋನಿಧಿಯೆಸೆದುದು (ಘೋರಾಸು. ೩೮-೪೧). ೨. ನಟಿಸುವಿಕೆ ; ಅಭಿನಯ. ೩. ತೋರಿಕೆ ; ಸೋಗು ; ಕಪಟ : ಲಲನೆಯರ ನಟಣೆ ಎಂಬ ಕುಟಿಲಕ್ಕೆ ಸಿಲ್ಕಿ ಕೋಟಲೆಗೊಳ್ಳದಿರಾ ಮರುಳು ಮಾನವಾ (ಸಿದ್ಧೇವ. ೪೧-೦೧೦) ; ನಟಣೆಯಂದರಿದನಂತರದಿ ಶ್ರೀಕೃಷ್ಣನೊಲುಮೆಸಾರಥಿಯಾದ ದಾರುಕಂ ಶ್ರೀಹರಿಯ ನೆಲೆಗಾಣದರಸುತಲಿ ಶ್ರೀತುಳಸಿವನಮಾಲೆ ಪರಿಮಳದ ಮಾರ್ಗವಿಡಿದು ಬರುತಲಿ (ತುರಂಗ. ೮೯-೧೭). **ನಟ್ಟಣೆ** : ೩.ನಟ್ಟಣೆ ಬೇಡ ನಮ್ಮರಸುಗಳ್ಳನಗೊಲ್ದು ಕೊಟ್ಟ ಮೇಲಹುದು ನಿನ್ನೊಡವೆ (ಭರಜ. ೪೩-೧೩). P ಇದು ಪ್ರಾಸಕ್ಕಾಗಿ ಮಾಡಿಕೊಂಡ ರೂಪ. [ <ನಟನೆ ]

**ನಟಣೆಗೊಳ್** (ಕ್ರಿ). ನರ್ತನವನ್ನಾರಂಭಿಸು ; ಕುಣಿಯಲು ತೊಡಗು : ನಾಟ್ಯಮಾಡು : ಕಡವಿನ ಸೊವಡಿಂದೊಂದೆರಡಡಿಯಿಡುತಿರ್ದಪುದು ಗಾಳಿ ನಲಿದು ನವಿಲ್ಗಳ್ ನಡೆನಟಣೆಗೊಳುತ್ತಿರ್ದಪುವೆಡೆಯುಱುತ್ತಿರ್ಪವಂಚೆ ಸುಳಿದುವು ಮುಗಿಲ್ಗಳ್ (ಗಿರಿಕ. ೯-೩೩). [ ನಟಣೆ + ಕೊಳ್$_1$ ]

**ನಟನ** (ನಾ). ೧. ಕುಣಿತ ; ನಾಟ್ಯ ; ನರ್ತನ : "ತಾಂಡವಂ, ನಟನಂ, ನಾಟ್ಯಂ, ಲಾಸ್ಯಂ, ನೃತ್ಯಂ, ನರ್ತನಂ – ೬ ಭರತಶಾಸ್ತ್ರ ಪ್ರಕಾರ ಕುಣಿಯುವುದಕ್ಕೆ ಹೆಸರುಗಳು" (ಸಿದ್ಧಾಂತಿ. ೬೦) ; ಖೇಡನ ನರ್ತನ ಹಾಸ್ಯವನಾಡಂಬರ ನಟನ ವೇಣುವಾದನ ಗೇಯಕ್ರೀಡೆಗಳಿಂ ಗೋಪುಗಳೊಡನಾಡುತ್ತುಂ ರಾಮಕೃಷ್ಣರಿರ್ದವಸರದೊಳ್ (ಜಗವಿ. ೪-೪೮) ; ಮದನಂ ಗಂಡುವ ಯೋಗಿಯೇ . . . ನಟನದೊಳ್ ಸೋತೋಡುವಳ್ ಸೂಳೆಯೇ (ಸೋಮೇಶ. ೭೮). ೨. ಅಭಿನಯ ; ನಟನೆ. 'ನಟನಕಲೆ' ಪರಾ. [ ಸಂ. ]

**ನಟನಕಲೆ** (ನಾ). ಅಭಿನಯಿಸುವ ಕಲೆ; ಪಾತ್ರವಹಿಸುವ ಕೌಶಲ : ನಟನಕಲೆ ಎಲ್ಲರಿಗೂ ಸಿದ್ಧಿಸುವುದಿಲ್ಲ (ರೂಢಿ). [ ನಟನ + ಕಲೆ$_3$ ]

**ನಟನಾರಾಯಣಿ** (ನಾ). [ಸಂಗೀತ] ಒಂದು ಮಿಶ್ರರಾಗದ ಹೆಸರು : ಶ್ರೀರಾಗದೊಳ್ ನಟನಾರಾಯಣಿ ಯೋಗಾವತಿಯಾಗಿರ್ಕುಂ (ಹಮ್ಮಿರ. ೩-೯೦ ವ). [ ಸಂ. ನಟನಾರಾಯಣೀ ]

**ನಟನೆ** (ನಾ). ೧. =ನಟನ ೧ : ನಟನೆಯಿಂ ಕೊಂಕುತಂ ಬಳುಕಿ ಮೆಲ್ಲಡಿಯಿಡುತೆ ವಿಟವೇಷದಿಂ ವಿಳಾಸಂ ಸೂಸಲಡಿಯಿಡುತೆ (ಇಹರ. ದೇ. ೩೩-೩೩); ನನಗೇನೋ ನಾಟಕ, ನಟನೆ ಎಂದರೆ ಮೊದಲಿನಿಂದ ಹುಚ್ಚು (ರಾಯುಕ. ೬೫). ೨. ತೋರಿಕೆ ; ಸೋಗು ; ವೇಷ : ಪಾಲುಗಡಲಲಿ ಫಣಿಯ ಮಂಚದ ಮೇಲೆ ಪವಡಿಸಿ ಪರಮನೆನಿಸಿದ ಲೀಲೆಯೆತ್ತಲು ಮನುಜಭಾವದ ನಟನೆ ತಾನೆತ್ತ (ಕಾಶಿರಾ. ೪೩-೪೫). ೩. ರೀತಿ ; ಕ್ರಮ ; ವಿನ್ಯಾಸ : ಉತ್ಕಟದ ಮಂದಿರದ ವೈವಾಹಮಂಟಪವೆಸೆವ ಪಟಿಕದಿಂ ಸಮೆದ ನೆಲ ಕಟ್ಟಲ್ಲಿ ರನ್ನಗಂಭಂ ಸಾಸಿರಂಗಳಿರ್ಪ ನಟನೆಯೆಂತೆನೆ ಫಣೀಶನ ಪೆಡೆವರಲ್ಗದಿರು ತಟಮಾಯ್ದು ಮೇಲೆ ತೋರ್ಪಂತೆ (ಜೈರಮ. ೫-೧೧). [ ಸಂ. ನಟನ ]

**ನಟನೆಗೆಡಿಸು** (ಕ್ರಿ). (ಆಲಂ) ಆಟ ನಡೆಯದಂತೆ ಮಾಡು ; ಸ್ತಬ್ಧಗೊಳಿಸು ; ಚಟುವಟಿಕೆಗೆ ವಿಘ್ನವನ್ನುಂಟುಮಾಡು : ಆದಿಭೈರವನ ನಟನೆ[ಪಾಠಾಂ. ಣೆ]ಗೆಡಿಸುವ ನಗದ ರಾಯರ ಭಟರನನುಪಮಸಮರಜಯ ಸಂಘಟರನೈದರ್ಬುದವನಗ್ನಿಕುಮಾರ ತೋಱಿಸಿದ (ಕೊರರಾ. ೪-೭-೦೮). [ ನಟನೆ + ಕೆಡಿಸು$_1$ ]

**ನಟಮಂಡನ** (ನಾ). ೧.ನಟನ ಅಲಂಕಾರಸಾಮಗ್ರಿ ; ಅಭಿನಯಕಾರನ ಆಭರಣ. ೨. ಹಳದಿಬಣ್ಣದ ಒಂದು ಬಗೆಯ ಖನಿಜ ; ಹರಿದಳ. [ ಸಂ. ]

**ನಟಮಂದಿರ** (ನಾ). ದೇವಾಲಯಂದಲ್ಲಿ ಒಂದು ಭಾಗ ; ರಂಗಮಂಟಪ : ಚೆನ್ನಾಗಿ ಅಭಿವೃದ್ಧಿ ಹೊಂದಿದ ಒರಿಸ್ಸಾದೇವಾಲಯಗಳಲ್ಲಿ ಗರ್ಭಗೃಹ ಜಗಮೋಹನ್ ನಟಮಂದಿರ ಮತ್ತು ಭೋಗಮಂದಿರಗಳೆಂಬ ನಾಲ್ಕು ಭಾಗಗಳಿವೆ (ಭಾರದ. ೯೯೮). [ ನಟ + ಮಂದಿರ ]

**ನಟಯಿಸು** 'ನಟಿಸು' ನೋ.

**ನಟರಾಜ** (ನಾ). ನಾಟ್ಯದ ಅಧಿದೇವತೆ ; ತಾಂಡವೇಶ್ವರ ; ಶಿವ : ಶಿವನು ಆದಿನಟ . . ಅವನನ್ನು 'ನಾಟ್ಯಾಚಾರ್ಯ' 'ನಟರಾಜ' ಎಂದೂ ಕರೆಯುತ್ತಾರೆ (ಲಾಸ್ಯರಂ. XIV, ಪೀಠಿಕೆ) ; ಭಾರತೀಯಸಂಸ್ಕೃತಿಯ ಆವಿಷ್ಕಾರಗಳಾದ ನಟರಾಜನ ನಾಟ್ಯ, ತ್ರಿಮೂರ್ತಿಯ ವೈವಿಧ್ಯ ಪ್ರಕಾಶ, ಸಾಮಾದಿಗಾನ ಇತ್ಯಾದಿ ಕಲಾಭಿವ್ಯಕ್ತಿಗಳೂ ಆತ್ಮಸಂಸ್ಕೃತಿಯನ್ನು ಪ್ರಕಾಶಪಡಿಸುತ್ತವೆ (ಮುಕ್ತಾರ. ೧೩೪, ಪೀಠಿಕೆ). [ ನಟ + ರಾಜ ]

**ನಟರುದ್ರ (ನಾ).** =ನಟರಾಜ: ಇದು ಸಂಧ್ಯಾನಟರುದ್ರನ ವಿದಿತ ಜಟಾಕ್ಷುಬ್ಧ ಫಣಿ ಮಹಾಬಿಲಮಂ ತಳ್ವದೆ ಪುಗಲೊಗೆದಿರೆ ಪೊಳೆವಗ್ಗದ ಫಣಿಮಣಿಯೆನಿಸಿ ತರುಣರುಚಿರವಿಬಿಂಬಂ (ರಾಜಶೇ. ೧೧-೪). [ ನಟ + ರುದ್ರ ]

**ನಟವ** 'ನಟ್ಟುವ' ನೋ.

**ನಟವರ (ನಾ).** ೧. ಮುಖ್ಯನಟ ; ಸೂತ್ರಧಾರ : ಮದ್ದಳೆಯ ನುಡಿಸಿ ನಟವರ ಕಾಯಕವ ಮಾಡಿ ದೊರೆದರ್ಥದಿಂ ಚರಕೆ ಭಕ್ತಿಯಿಂ ನಡೆಸುತಿರಲು (ಪ್ರೌಢರಾ. ೩-೭). **೨. ಶ್ರೇಷ್ಠನಾದ ನಟ ; ಉತ್ತಮ ನಾಟ್ಯಕಾರ :** ಹಿಂದೆ ಒಂದು ಕಾಲಕ್ಕೆ ಆವನು ನಟವರನೆನಿಸಿಕೊಂಡಿದ್ದನು (ರೂಢಿ).

[ ನಟ + ವರ$_3$ ]

**ನಟವಿಗ** 'ನಟ್ಟುವಿಗ' ನೋ.

**ನಟಸೂತ್ರ (ನಾ).** [ನಾಟ್ಯ] ನಾಟ್ಯಶಾಸ್ತ್ರಕ್ಕೆ ಸಂಬಂಧಿಸಿದ ಸೂತ್ರ,– ನಿಯಮ: ಪಾಣಿನಿಯ ಕಾಲಕ್ಕಾಗಲೇ (ಕ್ರಿ. ಪೂ. ಸು. ೫ನೆಯ ಶತಮಾನ) ಶಿಲಾಲಿ ಕೃಶಾಶ್ವ ಎಂಬವರ ನಟಸೂತ್ರಗಳಿದ್ದುವು. ಆದರೆ ಈ ನಟಸೂತ್ರಗಳು ಮಾತುಗಾರಿಕೆಯನ್ನೊಳಕೊಳ್ಳದ ಕೇವಲ ನೃತ್ಯಕ್ಕೆ ಅನ್ವಯಿಸುತ್ತಿದ್ದುವೋ ಏನೋ ಎಂಬ ಸಂದೇಹವೂ ಇದೆ (ಭಾರಮಿ. ೧೦). [ ಸಂ. ]

**ನಟಿ (ನಾ).** ೧. ಕುಣಿಯುವವಳು ; ನಾಟ್ಯಮಾಡುವವಳು ; ನೃತ್ಯಗಾತಿ : "ನಟೀ, ಕ್ಷುದ್ರಾ – ಈ ೨ ನಟವಿಗಿತ್ತಿ'' (ಹಲಾಯು. ೯೭-೪೩೮). **೨. ನಾಟಕ, ಚಲನಚಿತ್ರಗಳಲ್ಲಿ ಅಭಿನಯ ಮಾಡುವವಳು,—ಪಾತ್ರ ವಹಿಸುವವಳು:** ಅವಳ ತಾಯಿ ಮಂಜೂಬಾಯಿ ಆ ಕಾಲದ ಪ್ರಸಿದ್ಧ ನಟಿಯೆನಿಸಿಕೊಂಡಿದ್ದಳು (ಅಭಿವಾ. ೮). **೩. ಮುಖ್ಯ ಅಭಿನಯಕಾರ್ತಿ ; ಸೂತ್ರಧಾರನ ಹೆಂಡತಿ:** ರಂಗಭೂಮಿಯ ಮೇಲೆ ನಾಟಕ ನಡೆಯುತ್ತಿರುವಾಗ . . . ನಟಿ ಸ್ವಸ್ವರೂಪದಲ್ಲಿ ಅಲ್ಲಿಗೆ ಬರುವುದಿಲ್ಲ (ಭಾರಮಿ. ೩೭೫); ಸೂತ್ರಧಾರನು ಈ ಮಂಗಳಶ್ಲೋಕವನ್ನು ಹೇಳಿ ನಟಿ, ವಿದೂಷಕ, ಪಾರಿಪಾರ್ಶ್ವಕ ಮುಂತಾದವರಲ್ಲಿ ಒಬ್ಬರು ಅಥವಾ ಅನೇಕರೊಡನೆ ಮಾತನ್ನು ಆಡುತ್ತ . . . ವಸ್ತುವಿನ ಅಥವಾ ಪಾತ್ರಗಳ ಸೂಚನೆ ಮುಂತಾದವುಗಳನ್ನು ಮಾಡಿ ಹೊರಟುಹೋಗುವನು (ಕೈಪಿಡಿ. ೨೧೨). **೪. ಬೆಲೆವೆಣ್ಣು ; ವೇಶ್ಯೆ. ೫.** ಒಂದು ಬಗೆಯ ಪರಿಮಳದ್ರವ್ಯ ; ಗೂವಗುಂತ್ರಿಗೆ : "ಸುಷಿರಾ, ವಿದ್ರುಮಲತಾ, ಕಪೋತಾಂಘ್ರಿಃ, ನಟೀ, ನಲೀ, ಧಮನೀ, ಅಂಜನಕೇಶೀ - ೭ ನಳಿ ಎಂಬುವ ಗ್ರಂಧ್ಯದ್ರವ್ಯದ ಹೆಸರುಗಳು, ಗೂವಗುಂತ್ರಿಗೆ" (ಸಿದ್ಧಾಂತಿ. ೧೨೪). [ ಸಂ. ನಟೀ ]

**ನಟಿಕೆ** 'ನೆಟ್ಟಿಕೆ' ನೋ.

**ನಟಿಕೆತೆಗೆ** 'ನೆಟಿಗೆತೆಗೆ' ನೋ.

**ನಟಿಕೆಮುರಿ** 'ನೆಟ್ಟಿಗೆಮುರಿ' ನೋ.

**ನಟಿಗೆ$_1$** 'ನೆಟ್ಟಿಕೆ' ನೋ.

**ನಟಿಗೆ$_2$ (ನಾ).** ನೆಟ್ಟುದ್ದು; ನಾಟಿದುದು : ನಾರಣಗವಡನ ಮಗ ದೇವಪ್ಪನ ಬಳಿಯ ಕಂಠದ ಹೈವಣ ವೈದ್ಯರ ಈ ಸ್ಥಳದೊಳಗೆ ತಾನು ನೆಟ್ಟ ನಟಿಗೆಯ ತಂನ ವೊಪ್ಪಸಲೊಳಗೆ ತನ್ನ ಹೆಸರ ಹಾಲಧಾರೆಗೆ ಬಿಟ್ಟ ವರಹ (ಕಇ. III, ೧೫-೭೮ ; 1533). [ < ನಡು$_1$ ]

**ನಟಿನಳಿಲು (ನಾ).** ಒಂದು ಅನುಕರಣ ಶಬ್ದ. 'ನಟಿನಳಿಲೆನ್' ಪರಾ.

**ನಟಿನಳಿಲೆನ್ (ಕ್ರಿ).** ನಟಿನಳಿಲೆಂದು ಶಬ್ದಮಾಡು : ಕಟಿಸೂತ್ರ ಕಂಕಣ . . . ತಾಟಂಕಪದಕವ ನಟಿನಳಿಲೆ [ಪಾಠಾಂ. ಲ]ನೆ ಮುಡಿದಿಟ್ಟು ಮಾಯಾನೃತ್ಯನಟಿಯಾದಳು (ಕುರಾಸಾಂ. ೩೩-೩೭). [ ನಟಿನಳಿಲು + ಎನ್$_1$ ]

**ನಟಿಯಿಸು** 'ನಟಿಸು' ನೋ.

**ನಟಿಸು, ನಟಿಯ್ಸು, ನಟಿಯಿಸು (ಕ್ರಿ).** ೧. ಕುಣಿ ; ನರ್ತಿಸು ; ನಾಟ್ಯಮಾಡು : ಕಿನ್ನರರು ನವರಸದಿ ಪಾಡಲ್ಕಾಗನಂತರಂ ಭೃಂಗೀಶ ನರ್ತನಕೆ ನಿಂದಾಗ ಹೊಸಪರಿಯ ಗತಿಗಳಂ ನಟಿಸಿ ತೋಱುತ್ತಮಿರೆ (ಬಸರ. ೧-೨೫); ಅವಳ ಕರುಣಾಮೃತವನೀಂಟಿಯಾ ಸದುಜ್ವಳ ಮೃದೂಕ್ತಿಗಳನೋಲಗಿಸಿಯಾಕೆಯ ಕಟಾಕ್ಷವಿಲಾಸದೊಡನೆ ನಟಿಸಿ (ಪದ್ಮರಾ. ೧-೩೨) ; ಅಂಗನೆಯರ ಸೋಮುರ್ಡಿಯ ವಿಲಸಿತ ಕಾರ್ಗಾಲದ ಮುಗಿಲೆಂದಾಗ ಸಲೆ ನಟಿಸುವುವು ಸೋಗೆಗಳು (ಕಂನವಿ. ೭-೭). **೨. ಅಭಿನಯ ಮಾಡು :** ತೋಱಿಸಿದ ದೀವಿಗೆಗೆ ಕರುಣವ ತೋಱುತಿತ್ತನು ಬಾಲವನು ನಗೆಗಾಱರಿಗೆ ನಾಟಕವ ನಟಿಸುತ ವೀರ ಹನುಮಂತ (ತೊರರಾ. ೫-೭-೪೫) ; ಚಲನಚಿತ್ರದಲ್ಲಿ ನಟಿಸಬಹುದು (ಬಂದಜೀ. ೧೧೮). **೩. ಸೋಗುಹಾಕು ; ತೋರಿಕೆಯ ನಟನೆ ಮಾಡು:** ರಾಜಮಹಾರಾಜರು ಜನಮೆಚ್ಚಿಗೆಗೆ ಅಷ್ಟೋ ಇಷ್ಟೋ ಧಾರ್ಮಿಕ ಚಟುವಟಿಕೆಯಲ್ಲಿ ಭಾಗವಹಿಸಿದಂತೆ ನಟಿಸುವರಷ್ಟೇ (ದಾನಚಿಂ. ೧೭೫) ; ಸೇರನ್ನು ಕೆಳಗಿಟ್ಟವನಂತೆ ನಟಿಸಿ ಸೇರಿನೊಳಗಿದ್ದ ತುಪ್ಪವನ್ನೆಲ್ಲಾ ಗೋರಿ ಹಾಕಿದ (ಚಂಗಾಳ್ಮ. ೩೯) ; ಮಲ್ಲಿ ಒಳಗೆ ಏನೋ ಕೆಲಸ ಮಾಡುವಂತೆ ನಟಿಸಿದಳು (ಜೀವರಂ. ೨೩) ; ಹುಡುಗರು . . . ದಿಗಿಲುಬಿದ್ದವರಂತೆಯೂ ನಟಿಸುವರು (ಕಳಹು. ೬೧); ತರಗತಿಯಲ್ಲಿ ಪಾಠದ ಕಡೆ ಆಸಕ್ತಿಯಿಂದಿರುವಂತೆ ನಟಿಸುವುದು (ಶಿಕ್ಷದ. ೨೦೬). **೪. ವ್ಯಕ್ತಮಾಡು ; ಪ್ರಕಟಮಾಡು ; ತೋರ್ಪಡಿಸು:** ನಿಜಜನಕಜನಿತಸ್ನೇಹರಸಾರ್ದ್ರಮಧುರಾಕ್ಷರಸಮ್ಮಿಳಿತ ಸಾತ್ವಿಕಸರಮಂ ಕೇಳ್ದು ಪುತ್ರೀಭಾವಮಂ ನಟಿಸಲೆಂದು ಶಿವಲಿಂಗಮಂ ಬೀಳ್ಕೊಂಡು ತಿರುಗಿ ನೋಡಿ (ಗಿರಿಕ. ೩-೧೦೫ ವ) ; ಬಾಲಲೀಲೆಯಂ ನಟಿಸನೆಂದಳುಪರಾ ಮಾತೆಪಿತರು (ಸಿದ್ಧರಾ. ೨-೧೧) ; ನಿಟಿಲಾಕ್ಷ ನೀನಾಡಿದ ಮಾತು ಹೃದಯಸಂಘಟಿತವೆ ಬಾಣನಿಗೆನಲು ಕುಟಿಲಬುದ್ಧಿಯ ಬಿಟ್ಟು ಬಲಿಸೂನು ಸತ್ಯಪ ನಟಿಸಿ ಬಿನ್ನಹವ ಮಾಡಿದನು (ಮೋಹತ. ೪೦-೮೯). **೫. ಚಲಿಸು ; ಚಟುವಟಿಕೆಗೊಳ್ಳು ; ಕಾರ್ಯಪ್ರವೃತ್ತವಾಗು :** ಕೆದಱಿದುದು ಕುಡಿನೋಟ ಕರಣದ ಕದಡು ಹರೆದುದು ಇಂದ್ರಿಯಾವಳಿ ತುದಿಗೊಳಿಸಿದುದು ಪವನ ನಟಿಸಿತು [ಪಾಠಾಂ. ನರಸಿದ, ನಱಿಸಿತು] ನಾಭಿ ಪರಿಯಂತ (ಕುಮ್ಯಾಗ. ೧೦-೪). **೬. ಚಲಿಸುವಂತೆ ಮಾಡು ; ಕಾರ್ಯ ಪ್ರವೃತ್ತಗೊಳಿಸು :** ತ್ರಿದೋಷಾದಿಗಳು ಪ್ರವರ್ತಿಸಲೀಯದೆ . . . ಮೂಲಿಕಾಬಂಧದಿಂ ಬಂಧಿಸಿ ಘಟಮಂ ನಟಿಸುವುದು ಹಠಯೋಗ (ಆದಪ. ೨೯-೮೭). **ನಟಯ್ಸು :** ೧. ಮೆಱೆದಿದಿರಾಗಿ ತಾಗಿದ ಗಜಾಸುರನಂ ಪಿಡಿದೆತ್ತಿ ಚರ್ಮಮಂ ಸಱಸಱಿಸಱನೆ ಸೀಳ್ದು ಬಿದಿರ್ಚ್ಚಿಯಾಡುತ ಪುಟುಟಹ ಕುಟಿಹ ಕುನಟಿ ಕಿಱಿಕಿಱಿಟವೆಂಬ ವಾದ್ಯದಿಂ ನಟಯ್ಸಿ ನಾಟ್ಯವಾಡಿದ ಮಹೇಶ್ವ[ರ] ನೀಗೆಮಗಿಷ್ಟಸಿಧಿಯಂ (ಎಕ. XVI, ಚಿಕ್ಕನಾ. ೭೦-೨೪ ; 1235). **ನಟಿಯಿಸು :** ೧. ಗಂಡಮಂಡಲತಟದೊಳ್ ನಟಿಯಿಸೆ ಮಣಿಕುಂಡಲರುಚಿಪಟಲಂ (ಪಂರಾಮಾ. ೨-೧೦) ; ಸೊಗಸಾಗಿ ಲೋಕಪ್ರಳಯತಾಂಡವಾಡಂಬರವನಳ್ತಿಯಿಂ ನಟಿ[ಪಾಠಾಂ. ಟ]ಯಿಸಿದನು (ಚಬಪು. ೧೨-೨೦). **೨.** ಅಂಗಜನೆ ಸೂತ್ರಧಾರಂ ಶೃಂಗಾರಮೆ ನಾಟಕಂ ತದಂಕಂಗಳ್ ನಾಲ್ಕುಂ ಗಂಗಳಾಗೆ ಕಾಮಿಜನಂಗಳ್ ವರ್ಗಿಗರ ತೆಱದೆ ನಟಿಯಿಸುತಿರ್ದರ್ (ಚಂದ್ರಪು. ೮-೯೨). **೩.** ಪಟುಮಾಡಿದರ್ಬೆಂಕಿಯುಂ ಶಿವನ ಚಳಿಗೆಂದು ನಟಿಯಿಸುತ್ತಿರ್ದನೀಶಂ ಶೀತಮುಮನಂದು (ಇಳರ. ದೇ. ೫೩-೧೦) ; ಕಣಿಯನು ತೊಡಬೇಡ ತೊಡುವಂತೆ ನಟಿಯಿಸು ಹಗೆಯನು ಹಾಗೆಯೆ ಕಳಿಸು (ಇಂಚಾಪ. ೨೧೪-೫೬).

[ ನಟನ + – ಇಸು$_3$ ]

**ನಟುಕು** 'ನೆಟ್ಟಿಕೆ' ನೋ.

**ನಟುವ** 'ನಟ್ಟುವ' ನೋ.

**ನಟುವಾಂಗ (ನಾ).** ತಾಳ, ರಾಗಗಳನ್ನು ಹೊಂದಿಸಿಕೊಟ್ಟು ನರ್ತಕಿಯ ಮೂಲಕ ಸರಿಯಾಗಿ ನೃತ್ಯ ಮಾಡಿಸುವುದು : ಈ ನರ್ತಕಿಯ ನರ್ತನದಲ್ಲಿ ನಟುವಾಂಗದ ಭಾಗವು ತುಂಬಾ ಅಚ್ಚುಕಟ್ಟಾಗಿತ್ತು (ರೂಢಿ).

[ ನಟುವ ( < ನಟ್ಟುವ ) + ಅಂಗ$_2$ ]

**ನಟುವಿಗ** 'ನಟ್ಟುವಿಗ' ನೋ.

**ನಟ್ಟು₁** 'ನಡು₁' ಪರಾ.

**ನಟ್ಟು₂**, **ನಟ್ಟೆ₂** (ನಾ). 'ನಡು' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ. 'ನಟ್ಟಡವಿ', 'ನಟ್ಟಿರುಳ್₁' ಪರಾ. **ನಟ್ಟೆ₂** : 'ನಟ್ಟೆಗೊಂಬು', 'ನಟ್ಟೆವಗಲ್' ಪರಾ. [ < ನಡು₂ ]

**ನಟ್ಟು₃** (ನಾ). = ನಟ್ಟುವ ೧ : ಸುಗಂಧರಾಯನು ತನ್ನ ಪ್ರಿಯಮಿತ್ರರಾದ ಅಂತರಂಗದ ಜನರಿಂದಲು ಭರತಶಾಸ್ತ್ರಮಂ ಕೂಲಂಕಷವಾಗಿ ತಿಳಿದು ಸುಗಂಧಮಹಾರಾಯನನ್ನೋಲೈಸದೆ ಇರುವರ ಜನ್ಮವಂದಿಗೆಂದು ನುಡಿವಂತೆ ಉಘ್ಘಳಿಸುತಿರುವ ನಟ್ಟರಿಂದಲುಂ (ಸೌಗಂಧಿ. ೬೭೭-೧).

[ < ಪ್ರಾ. ಣಟ್ಟ./ ಸಂ. ನಟ ]

**ನಟ್ಟು₄** (ನಾ). ನಷ್ಟ ; ಹಾನಿ. 'ನಟ್ಟೆ₂' ಪರಾ. [ < ಸಂ. ನಷ್ಟ ]

**ನಟ್ಟಗಾರ** (ನಾ). ನಾಟ್ಯಮಾಡುವವನು; ನೃತ್ಯಗಾರ ; ನರ್ತಕ : ನರ್ತಕಿಯರು ನಟ್ಟಗಾರರು ಗಾನರು[ಪಾಠಾಂ. ನಾಟ್ಯಶಿಕ್ಷಕ ಗಾಯಕ] ಭರ್ತದೇಣಿಕೆ ತಾಳದೆಸಕ ಅರ್ತಿಗಾರರ ಕೇರಿಗಳಿದು ರಾಮಯ್ಯನು ಕರ್ತ್ಯ ಬಂದನ್ನು ಶಿವಾಲಯಕೆ (ಅಬ್ಬಲೂ. ೩-೧೩೬). [ ನಟ್ಟು₃ + – ಗಾರ ( < –ಕಾಱ) ]

**ನಟ್ಟಗೊಂಬು**, **ನಟ್ಟೆಗೊಂಬು** (ನಾ). ಮರದ ಮಧ್ಯದ ಕೊಂಬೆ,–ಶಾಖೆ: "ನಟ್ಟಗೊಂಬೆಂದು ನಡುಗೊಂಬು" (ಕಬ್ಬಿಕೈ. ೧೮) ; "ನಡುಗೊಂಬೆಂದು ನಾಡೆ ತಾ ನಟ್ಟಗೊಂಬಕ್ಕು" (ಶಬ್ದಮಂ. ೨೫) ; "ನಟ್ಟಗೊಂಬೆನಲ್ ನಡುಗೊಂಬೆಯ್ದು" (ಶಶರ. ೫೩) ; ಒಂದೊಂದೆಡೆಯೊಳೊಗೆವ ದಾವಶಿಖಿಯ ಪೊಗೆಗೆ ಬೆಗಡುಗೊಂಡು ಪುಟುಗಳ್ ಬಿಟ್ಟುಪೋದ ನಟ್ಟಗೊಂಬಿನ ಜೇನ ಪುಟ್ಟಿಯುಂ ಸಾರ್ದು ಪೀರ್ವ ಜತುಕನಿಕರಂಗಳುಂ (ಚಂದ್ರಪ್ರ. ೫-೬೫ ವ). **ನಟ್ಟೆಗೊಂಬು :** ಪೆರ್ಮರದ ನಟ್ಟೆಗೊಂಬಿನ ಕವಲ್ದಲೆಯೊಳಿಟ್ಟ ಗೂಡುಗಳೊಳ್ ಗೂಡುಗೊಂಡಿರ್ದ ಕುಱುಳೆವಱಿಗಳ್ಗೆ ಕುಟುಂಕನಿಕ್ಕಿ (ಚಂದ್ರಪ್ರ. ೮-೪ ವ) ; ಲೋಪಮಿಲ್ಲದುಚಿತಾಕ್ಷರಾಗಮಕ್ಕೆ–ನಟ್ಟೆವಾನ್, ನಟ್ಟೆವನೆ, ನಟ್ಟೆಗೊಂಬು, ನಟ್ಟೆವನಿ., ಇಲ್ಲಿ ಎಕಾರಮುಚಿತವರ್ಣಾಗಮಂ (ಶಮದ. ೧೭೬ ಪ್ರಯೋ) ; ನಸುಗಾಳಿಗೊಲೆದಾಡುವೆಳಗೊಂಬೆ ಸೊಂಡಿಲಾಗಸಕದ್ದ ನಟ್ಟೆಗೊಂಬೆಸೆವ ಠಕ್ಕೆಯಮಾಗಲಸಮಶರನೆಡಬಲದೊಳ್ಟಣಿಸಿ ನಡೆದ ಮಾಮರದಾನೆಗಳ್ ಮೆಱೆದುವು (ಚೆಲಪು. ೩೫-೮) ; ವನಾಬ್ಧಿಯಲ್ಲಿ ಕಣ್ಗೊಳಿಪ ಪಡಂಗು ಮಾಮರಮದಾಗಿರೆ ಕೋಗಿಲೆ ನಟ್ಟೆಗೊಂಬಿನೊಳ್ ತಳೆದುದು ಕೂವಕಂಬದುದಿವಕ್ಕಿದ ನಾವಿಕನೋದು ಲೀಲೆಯಂ (ಶಬಶಂ. ೨-೪೪).

[ ನಟ್ಟು₂ ( < ನಡು₂) + ಕೊಂಬು₁ ]

**ನಟ್ಟಡವಿ** (ನಾ). ಕಾಡಿನ ಮಧ್ಯಭಾಗ ; ಅರಣ್ಯದ ನಡುಭಾಗ ; ದಟ್ಟವಾದ ಕಾಡು : ನಟ್ಟಡವಿಯು ನಡುವೆ ಪಸಿವುಂ ನೀರಟ್ಕೆಯುಂ ತಿಣ್ಣಮಾಗೆ (ಧರ್ಮಾಮೃ. ೨-೧೯೧); ನಟ್ಟಡವಿಯಲ್ಲಿ ಕೆಂಡದ ಮಳೆಗಱೆದು ಊರಡವಿಯನೊಂದಾಗಿ ಸುಟ್ಟಿತ್ತು ನೋಡಾ (ಆದವ. ೪೧-೧೧೬) ; ಮಗಳೆ ಮಾತೆ ಕರಂ ನಟ್ಟಡವಿ ಗುಹೆ ಗಹ್ವರಂ ಮಡುಗಿಡುವವಱೊಳ್ ಪದುಳಮರ್ಚಿಸೆನುತುಂ ನುಡಿದಂ (ಗಿರಿಕ. ೫-೪೫) ; ನಟ್ಟಡವಿಯೊಳಗೆ ತೊಱೆಯೊಳ್ ಬೆಟ್ಟುಗಳೊಳ್ ತೊಟ್ಟನೊಗೆದು ಮಟಿಯಂ ಕಱೆಗುಂ (ಅಟ್ಟಮ. ೮-೮) ; ಒಟ್ಟಿದವು ಕೈದುಗಳು ಸತ್ತಿಗೆ ಬೆಟ್ಟವಾದವು ಸಿಂಧಸಳೆಗಳು ನಟ್ಟಡವಿ ಪವಡಿಸಿದ ತೆಱನಾದುದು ರಣಾಗ್ರದಲಿ (ಕಂವ್ಯಾಭೀ. ೮-೬೪); ಬಿಟ್ಟುಬಂದ್ಯೆ ನಂದನರನಿಳು ಹಿಟ್ಟು ಬಂದ್ಯೆ ರಾಜಪುತ್ರರ ನಟ್ಟಡವಿಯಲಿ ನಿರ್ಜನಾರಣ್ಯಪ್ರದೇಶದಲಿ (ತೊರೆರಾ. ೨-೫-೪) ; ನಟ್ಟಡವಿಯ ಮನೆಯು ಕುಪ್ಪ ಕ್ಷಯ ಬಡತನವು ದುಪ್ಪರ ನೆರೆಯು ಇವು ಅಯ್ದು ಜಗದೊಳಗೆ ನಷ್ಟ ಕಾಣಯ್ಯ (ಸರ್ವಜ್ಞ. ೮೧೯) ; ನಟ್ಟಡವಿಯಲ್ಲಿದ್ದು ಕಟ್ಟಿಗೆ ತರುವವರು ಯಾರು ಅಂದ ಹಾಗೆ (ಗಾದೆ). [ ನಟ್ಟು₂ ( < ನಡು₂) + ಅಡವಿ ]

**ನಟ್ಟಣೆ** 'ನಟಣೆ' ನೋ.

**ನಟ್ಟನಡು**, **ನಟ್ಟನಡುವು** (ನಾ). ೧. ಮಧ್ಯಕ್ಕೆ ಸರಿಯಾಗಿರುವ ಭಾಗ ; ಎರಡು ಕಡೆಯ ಅರ್ಧಭಾಗ ; ಸರಿಯಾಗಿರುವ ಮಧ್ಯಸ್ಥಳ : ನಟ್ಟನಡು ಕಟ್ಟಕಡೆ ಪೆರ್ಬಟ್ಟೆ ಕರಂ ಗೊಂಟು ದೇವತಾಲ್ಯಯದ ನೆಲಲ್ಮುಟ್ಟುವೆಡೆ ನೀರ ತಡಿ ಮನೆಗಟ್ಟುವೊಡಶುಭಂ ದ್ವಿಜಾತಿವರ್ಗಕ್ಕೆಲ್ಲಂ (ಲೋಕೋಪ. ೩-೧೨) ; ಜಡೆಗಳೊ ಹೊಸಹೊಸ ಹವಳದ ಕುಡಿಗಳೊ . . . ಸುಕೃತದ ಗುಡಿಗಳೊ ಮಹಿಮೆಗಳ ನಟ್ಟನಡುಗಳೊ ಶಿವನಾ (ಗಿರಿಕ. ೧೦-೪೭) ; ಅತ್ವಂ ಬೆರಸು ಟಕಾರಕ್ಕೆ–ನಟ್ಟನಡು, ಕಟ್ಟಕಡೆ (ಶಮದ. ೧೯೩ ಪ್ರಯೋ) ; ಹುಟ್ಟುವಾಗಾಪತ್ತಿಗಾರು ಚಿಂತಿಸಿದವರು ಕಟ್ಟಕಡೆಯಲಿ ಲಯಕೆ ಯಾರ ಚಿಂತೆ ನಟ್ಟನಡುವಿನ ಬಾಳಿಗೇಕೆ ಚಿಂತಿಸುತಿರುವೆ ಕುಟ್ಟಿದವರಿಗೆ ಮಂಱುಬಟ್ಟಿಲ್ಲವೆ ಮರುಳೆ (ಪುರಂದ. ೨-೪೭-೧); ಕಟ್ಟಕಡೆ, ತುಟ್ಟತುದಿ, ನಟ್ಟನಡು, ಬಟ್ಟಬಯಲು (ಮಧ್ಯಮ. ೧೯೨) ; ಕಟ್ಟಕಡೆಯ ಪೊಂದನೀಕ್ಷಿಸುತಲಿ ತಾ ನಟ್ಟನಡುವಿನೊಳಡಿಯಿಟ್ಟು ಆಡುವ ತಾಂಡವದಾನಂದ! (ವಿಸೀಗೀ. ೩-೧೦). 'ಕಟ್ಟಕಡೆ' ಪರಾ. **ನಟ್ಟನಡುವು : ೨.** **ಕಟಿಪ್ರದೇಶ ;** ಸೊಂಟ : ನಟ್ಟನಡುವಿನೊಳೊಂದು ಪಣ್ಣೆಕವನಿಟ್ಟು (ಕಾಲೂರ. ೧೫೦-೩೨೮) ; ಶ್ರೇಷ್ಠವಾದ ಸರಿಗೆ ನಾಗಮುರಿಗೆ ನಟ್ಟನಡುವಿನಲಿ ಇಟ್ಟಳು ಒಡ್ಯಾಣ (ಕರ್ನಾಕ. ೨೮೭).

**ನಟ್ಟನಡುವಣ** = ತೀರ ಮಧ್ಯಭಾಗದ : ಸಂದುತ್ತರಭರತ ಮಧ್ಯಮಖಂಡದ ನಟ್ಟನಡುವಣೆಡೆಯೊಳ್ ಅತಿಕ್ರಾಂತಾನೇಕಚಕ್ರವರ್ತಿಗಳ ವಿಶದಯಶಃಪುಂಜಮುಮಂ (ಆದಿಪು. ೧೩-೬೯ ವ) ; ಕೈಲಾಸಮಧ್ಯಸ್ಥಿತ ಮಹಾಮೇರುವಿನ ನಟ್ಟನಡುವಣ ಮಾಣಿಕ್ಯಮಯಜ್ಯೋತಿಷ್ಯಂಭಶಿಖರ ಸಿಂಹಾಸನದೊಳ್ ಪರ್ . . . ಶಿವತೀರ್ಥಸನ್ನಿಧಾನದೊಳ್ (ಹಾಲಾಸ್ಯ. ೧-೧-೨೦ ವ). [ ನಟ್ಟು₂ ( < ನಡು₂) + ನಡು₂ ]

**ನಟ್ಟನಡುತಲೆ** 'ನಟ್ಟನಡುದಲೆ' ನೋ.

**ನಟ್ಟನಡುದಲೆ**, **ನಟ್ಟನಡುತಲೆ** (ನಾ). ೧. ತಲೆಯ ಮಧ್ಯಭಾಗ ; ಬೈತಲೆಯಿರುವ ಭಾಗ: ಬೆಟ್ಟಣುಗಿಯೆಡಮೆಯ್ಯನಡಸಿರಲ್ ನೀರ್ವಣ್ಣು ನಟ್ಟನಡುದಲೆಯೊಳಿರೆ (ಭಾವಚಿ. ೭-೧). ೨. (ಬ್ರಹ್ಮನಿಗಿದ್ದ ಐದು ತಲೆಗಳಲ್ಲಿ) ನಡುವಿನ ತಲೆ ; ಮಧ್ಯದ ತಲೆ : ಜಳಜಭವನೈದುತಲೆಯೊಳಗೊಂದು ನಟ್ಟನಡುದಲೆಯೂರ್ಧ್ವಮುಖವಾಗಿ (ಭಿಕ್ಷಾಟ. ೧-೬). **ನಟ್ಟನಡುತಲೆ : ೨.** ಕಾಮಾರಿ ರೋಷಾವೇಶದಲ್ಲಿ ಕಡುಮುಳಿದಜನ ಶಿರವೈದರೊಳಗೊಂದು ತಲೆ ನಟ್ಟನಡುತಲೆಯನು ಮುಳಿದೆಡದ ಕೈಯುಗುರಿನಿಂ ಚಿವುಟಿದಂ (ತುರಂಗ. ೭-೧೩).

[ ನಟ್ಟನಡು + ತಲೆ₁ ]

**ನಟ್ಟನಡುನೀರು** (ನಾ). ನೀರಿನ ತೀರ ಮಧ್ಯಭಾಗ ; ಹರಡಿದ ನೀರಿನ ನಡುವಿನ ಭಾಗ : ನಟ್ಟನಡು [ಪಾಠಾಂ. ನಟ್ಟ] ನೀರೊಳಗೆ ಈಸಲಾಱೆ (ಪುರಂದ. ೧-೩೭-೩). [ ನಟ್ಟನಡು + ನೀರು₁ ( < ನೀರ್₁ ) ]

**ನಟ್ಟನಡುಬೀದಿ** (ನಾ). ಬೀದಿಯ ಮಧ್ಯಭಾಗ ; ನಡುಬೀದಿ: ನಟ್ಟನಡುಬೀದಿಯೊಳು ನೆರವಿ ನೋಡಲು ಹಿಡಿದು ಹರನ ಪೂಜಾಕುಸುಮವಂ ಬೀದಿಯೊಳು ಚೆಲ್ಲೆ (ಇಱೆರ. ದೇ. ೧೧೧-೦೮). [ ನಟ್ಟನಡು + ಬೀದಿ ]

**ನಟ್ಟನಡುವಗಲ್**, **ನಟ್ಟನಡುಹಗಲ್** (ನಾ). ತೀರ ಹಗಲು ; ನಡುಹಗಲು ; ಮಧ್ಯಾಹ್ನ : ನಟ್ಟನಡುವಗಲ ಬಿಸಿಲುರಿಯಿಟ್ಟೊಡೆ ಸುಟ್ಟಪ್ಪುದೆಂಬವೊಲ್ ಪಸರಿಪುದಂ ಬಿಟ್ಟುಡುಗಿಯೊಂದೆ ಮೆಯ್ಯಂ ಮೆಟ್ಟಿರ್ಪವೊಲಿರ್ಪುವಂದು ತಾಟ ನೆಟಿಲ್ಗಳ್ (ಸೂಕ್ತಿಸು. ೧೮-೯೯) ; ಬಂದು ಬಂದು ನಟ್ಟನಡುವಗಲೊಳೋಕುಳಿಯಾಡುವೆಳವೆಂಡಿರ ಮೆಯ್ಯ ಕುಂಕುಮದಿಂದೋದಿದ ಕೆಂದಾವರೆವೂಗಳಂ ತಳೆದು . . . ಬಸಂತಂಗೆ ನೆಲೆವೀಡಾಗಿರ್ದುದು (ಕಬ್ಬಿಗಕಾ. ೩೦). **ನಟ್ಟನಡುಹಗಲ್ :** ನಟ್ಟನಡುಹ[ಪಾಠಾಂ. ವ]ಗಲೊಳಗೆ ನೆರೆಯಿತ್ತು ನೆರೆಯಿತ್ತು ಭೂಮಿ ಬೆಸಲಾದಂತಿರೆ (ಸೋಮುಚ. ೪-೫೦). [ ನಟ್ಟನಡು + ಪಗಲ್ ]

**ನಟ್ಟನಡುವಿರುಳ್** (ನಾ). =ನಟ್ಟಿರುಳ್$_1$: ಸದವುಳವುಣಿಭೂಷಿತೆ ನೀನೀ ನಟ್ಟನಡುವಿರುಳ್ ಕುದುಗುಳಿತನದಿನೀಯೆಡೆಗೆ ಪೊಲ್ಲದು ವಂದೆ ಎಂಬುದುಂ (ಸುಕುಮಾ. ೬-೨೨). [ ನಟ್ಟನಡು + ಇರುಳ್ ]

**ನಟ್ಟನಡುವು** 'ನಟ್ಟನಡು' ನೋ.

**ನಟ್ಟನಡುವೆ** (ಅ). (ಸರಿಯಾಗಿ) ಮಧ್ಯಭಾಗದಲ್ಲಿ; ಕೇಂದ್ರದಲ್ಲಿ : ಆ ತಿರ್ಯಗ್‌ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ . . . ನೆಗಟ್ದುದಿಳೆಗೆ ಜಂಬೂದ್ವೀಪಂ (ಆದಿಪು. ೧-೪೮ ವ) ; ಕಿಡಿಗುಟ್ಟಿದಂತೆ ವಿದ್ಯಾದೇವತಾಧಿಷ್ಠಿತಮಪ್ಪಂಬಿನೊಳ್ ಪಳಂಚಿ ಪುಟ್ಟಿದ ಕಿಚ್ಚಿನ ನಟ್ಟನಡುವೆ ನಿಂದುರಿವನುಮರವಂ ಜಾರಿಸಲೆಂದೆಡೆವೊಕ್ಕಗ್ನಿಕುಮಾರನಂತಿರೆ (ಶಾಂತಿಪು. ೪-೩೦ ವ) ; ಮುನ್ನಮೆ ಸಮಕಟ್ಟಿದ ಮಣಿಕುಟ್ಟಿಮದ ನಟ್ಟನಡುವೆ ಪೊಳೆವ ಪಟ್ಟವಣೆಯ ನಾಲ್ದೆಸೆಯೊಳೆಸೆವ ರತ್ನಭೃಂಗಾರುಘಟಂಗಳಿಂ . . . ಎಸೆವಭಿಷೇಕಮಂಟಪದೊಳ್ (ಕಾದಂಪೂ. ೫೭೭) ; ಇಟ್ಟ ಭಾರಕೆ ಸಿಡಿದು ತರುಣಿಯು ತಟ್ಟ ಬಿದ್ದುದು ಖಳನ ತೇರಿನ ನಟ್ಟನಡುವೆ ಸುರೇಂದ್ರಜಿತು ಪಡಿರಥಕೆ ಲಂಘಿಸಲು ಹಿಟ್ಟುದೋಱಿತು ತೇರು (ತೊರರಾ. ೫-೬-೨೬); ಆಶ್ರಮದ ನಟ್ಟನಡುವೆ ಎಳವಳ್ಳಿಯ ಮೊಗವಾಡಂ (ರಾಮಾಶ್ವ. ೧೪೯-೯) ; ಕಟ್ಟಕಡೆಯಲಿ ಮೇಯದೀರು ಬೆಟ್ಟದೊತ್ತಿಗೆ ಹೋಗದೀರು . . . ನಟ್ಟನಡುವೆ ಬಾರಯ್ಯನೆ (ಗೋಹಾಡು. ೧೨-೭೦).

[ ನಟ್ಟು$_2$ (<ನಡು$_2$) + ನಡುವೆ$_2$ ]

**ನಟ್ಟನಡುಹಗಲ್** 'ನಟ್ಟನಡುವಗಲ್' ನೋ.

**ನಟ್ಟುವ, ನಟವ, ನಟುವ, ನಟ್ಟುವ** (ನಾ). ೧. ನರ್ತಕ; ನೃತ್ಯವೃತ್ತಿಯಂವನು : ರೂವಾರಿ ಮುಚಿಯ್ಯೋಜಂಗೆ ಮತ್ತರ್ಪ್ಪನ್ನೆರಡು ನಟ್ಟುವಂಗೆ ಮತ್ತರ್ಪ್ಪನ್ನೆರಡು (ಸೌಇಇ. IX–1, ೦೦೧–೫೫ ; 1045). ೨. ನಾಟ್ಯವನ್ನು ಕಲಿಸುವ ಗುರು ; ನಾಟ್ಯಾಚಾರ್ಯ ; ನಾಟ್ಯಗುರು : ಎಳಲತೆ ಪೆಕ್ಕಣಕ್ಕೆ ತಳಿರಂ ತೆಗೆದುಟ್ಟಳದಕ್ಕೆ ನಟ್ಟುವಂ ಮಳಯಸಮೀರಣಂ (ಅನಂಪು. ೩-೧೧). **ನಟವ :** 'ನಟವಿಗ' ಪರಾ. **ನಟುವ:** ೧. ಅಲ್ಲಿ ನಾಚಿ ಆರಂಗದೇವಿ ನಟುವ ನಾಯಿನಾರು ಮಗಳು ಚಿಕನಾಚಿ (ಎಕ. X (8), ಮಾಲೂರು. ೩-೨೯ ; 1430) ; ಕವಿ ಗಮಕಿಗಳು ಗಾಯಕರು ನಟುವರ್ಗಳು ಪವನವಿದ್ಯೆಯನಾಡುವರು (ಜ್ಞಾನಜ. ೩-೮) ; ನಾನೆಷ್ಟು ಹೇಳಿದರೂ ಕೇಳದೆ ಈ ಸಭಾಸ್ಥಳದಲ್ಲಿ ನಾಚಿಕೆಯಿಲ್ಲದೆ ನುಡಿಯುವುದಕ್ಕೆ ನೀನು ನಟುವನ ಹೆಂಡತಿಯೆ (ಕೃಪಾವಿ. ೩೨); ಸ್ವಾಮಿ, ನನ್ನ ಹೆಸರು ವೆಂಕಟರಮಣ. ವಾವು ನಟುವರು (ಸುಬ್ಬಣ್ಣ. ೬೯). ೨. ಭರತಶಾಸ್ತ್ರಪರಿಣತಿಯಿಂದರ್ಜುನಂ ಭಾರತಿಕರ ದೆಸೆಯಿಂದರಮನೆಯ ನಟು[ಪಾಠಾಂ. ಟ್ಟ]ವನಾದಂ (ಕುಮಾಸೇ. ೧೦-೮೮ ವ). **ನಟ್ಟುವ :** ೧. "ಶೈಲೂಷನಂಗನಾಜೀವಿ ಭರತಂ ನಟ ಶಿಲಾಲಿಯೆನೆ ನಟ್ಟುವಂ" (ಮಂಗರಾ. ೧೧೦-೩) : ಉಟ್ಟರೆ ತೊಟ್ಟರೇನಯ್ಯ ನಟ್ಟುವರಂತೆ ಕೊಟ್ಟರೆ ಕೊಂಡರೇನಯ್ಯ ವೇಶಿಯಂತೆ (ವಚಸಂ. ೨೩೯-೫೯) ; ಗಗನಂ ನಾಟ್ಯನಿಕೇತನಂ ದಿವಿಜರೆಲ್ಲರ್ ನೋಟಕರ್ ದೇವ ನೀನೆ ಗಡಂ ನಟ್ಟುವನಾಗೆ (ಜಗವಿ. ೧೧-೭೭); ನೃತ್ಯವಿದ್ಯಾಧರನೆಂಬ ನಟ್ಟುವ ಬಂದನತ್ಯಂತಸುಖಿಯ ಸಮ್ಮುಖಕೆ (ಭರಜ. ೧೨-೫೦). ೨. ಪದಪು ಮನಕ್ಕೆ ಸೊರ್ಕು ನಯನಕ್ಕೆಸೆಯುತ್ತಿರೆ . . . ಮಾಣದಾಡಿಸಿದನಾತನನಂಗಜನೆಂಬ ನಟ್ಟುವಂ (ಆದಿಪು. ೪-೧೫) ; ಆತನ ಸಭೆಯೊಳ್ ನಟ್ಟುವನ ಮಗಳ್ ನಾಟ್ಯಮಾಲೆ ಸಾಭಿನಯದಿನಾಡುತಿರ್ದೊಡರಸಂ ಮೆಚ್ಚಿ ಚೋದ್ಯಂಬಡೆ (ಜಾವುಂಪು. ೯೭-೧೦). 'ನಟ್ಟುವಗಾರ', 'ನಟ್ಟುವಿಗ' ಪರಾ.

ನಟ್ಟುವವಿದ್ಯ = ನಾಟ್ಯಕಲೆ : ಅರ್ಜುನನ ಹೆಸರು ಭರತತಂತ್ರಿ ನಟ್ಟುವ ವಿದ್ಯವ ಬಲ್ಲನು (ಭ್ರರಸೂ. ೧೦೪). [ <ಪ್ರಾ. ಣಟ್ಟಅ./ಸಂ. ನರ್ತಕ ]

**ನಟ್ಟವಗಲ್, ನಟ್ಟೆವಗಲ್, ನಟ್ಟೆವಗಲು** (ನಾ). ಹಗಲಿನ ಮಧ್ಯಭಾಗ; ಮಧ್ಯಾಹ್ನ: "ನಡುವಗಲಲ್ಲಿ ವಿವರಿಸಲ್ ನಟ್ಟವಗಲಕ್ಕು" (ಶಬ್ದಮಂ. ೧೯); **ನಟ್ಟೆವಗಲ್ :** ನಟ್ಟೆವಗಲುರಿವಿಸಿಲ್ ಮಾಯ್ದೆನ್ನ ಬಗೆಯ ಕರಗಿಸಿ ಪೀರ್ದುಮುನ್ಮಾದಮಂ ಕರುಣೆಪನಿತರೊಳೆ...ನಿಟ್ಟಸಿದೆನತ್ತ (ಸಂಸಪ.೨೦-೭). **ನಟ್ಟೆವಗಲು :** ನಟ್ಟೆವಗಲಿಗೆ ಬಂತು . . . ಶಿಬಿರದತ್ತಕೆ ನಡೆವ (ಹೆಜ್ಜರ. ೪೧-೬). [ ನಟ್ಟು$_2$ (<ನಡು$_2$) + ಪಗಲ್ ]

**ನಟ್ಟವನೆ, ನಟ್ಟೆವನೆ** (ನಾ). ಮನೆಯ ಮಧ್ಯಭಾಗ ; ನಡುಮನೆ: "ನಡುವನೆ ನಟ್ಟವನೆಯುಮಕ್ಕುಂ" (ಕವಿಕಂ. ೦೪೪) ; ಪಸುರೆಲೆಯ ನಟ್ಟವನೆ . . . ಅಲಚೊರ್ಣಂಪದ ಮೇಲ್ಕಟ್ಟು ಚೆಲ್ವಾಗೆ ಕಣ್ಗಂ ಮನಕಮಿಂಬಾದ ಪರ್ಣಕುಟಿಯನೇರ್ಪಡಿಸಿ (ರಾಮಾಶ್ವ. ೧೪೯-೧೦). **ನಟ್ಟೆವನೆ :** "ನಟ್ಟೆವನೆಯೆಂದು ನಡುಮನೆ" (ಕಶಸಾ. ೧೬-೩೦೭); ಲೋಪಮಿಲ್ಲದುಚಿತಾಕ್ಷರಾಗಮಕ್ಕೆ –ನಟ್ಟೆವಾನ್, ನಟ್ಟೆವನೆ, ನಟ್ಟೆಗೊಂಬು, ನಟ್ಟೆವನಿ (ಶಮದ, ೧೭೬ ಪ್ರಯೋ).

[ ನಟ್ಟು$_2$ (<ನಡು$_2$) + ಮನೆ ]

**ನಟ್ಟವಳ** (ನಾ). ನಾಟ್ಯಗಾರ ; ನೃತ್ಯಕಾರ ; ಅಭಿನಯಕಾರ : ಅಂತಾ ರಾಜಭವನಾಂಗಣಮೆ ರಂಗಮಾಗೆಯುಂ ಆ ದಿವಿಜತತವಿತತಾದಿ ಮಂಗಳವಾದ್ಯಂಗಳೆ ಸಂಗೀತವಾದ್ಯಮಾಗೆಯುಂ . . . ತದಮರಭಾರತಿಕತತಿಯೆ ನೆಟ್ಟನೆ ನಟ್ಟವಳರಾಗೆಯುಂ (ನೇಮಿಪು. ೮-೧೬೦ ವ).

[ ನಟ್ಟು$_3$ + – ವಳ (< – ವಾಳ$_1$ ) ]

**ನಟ್ಟವಿ** (ನಾ). ನೃತ್ಯಗಾತಿ ; ನಾಟ್ಯಗಾತಿ : ಗರುವರೇ ನೀವೆಲವೊ ಸುರಪನ ಪುರದ ನಟ್ಟವಿಗರು ಸುಯೋಧನನರಮನೆಯ ನಟ್ಟವಿಗಳಿಗೆ ಪಾಡಹರೆ (ಕುವ್ಯಾಅ. ೧೯-೩೩). ☞ 'ನಟ್ಟವಿಗಳಿಗೆ' ಎನ್ನುವ ಶಬ್ದವು 'ನಟ್ಟವಿಗರಿಗೆ' ಎಂದಿರಬಹುದೆ? [ < ಪ್ರಾ. ನಟ್ಟಈ./ಸಂ. ನರ್ತಕೀ ]

**ನಟ್ಟವಿಗ, ನಟವಿಗ, ನಟುವಿಗ, ನಟ್ಟುವಿಗ** (ನಾ). ೧. ನರ್ತಕ ; ನಾಟ್ಯಗಾರ ; ನಟ : "ಶೈಲಾಲೀ, ಶೈಲೂಷಃ . . . ಭರತಃ, ನಟಃ–ಈ ೮ ನಟ್ಟವಿಗಂ" (ಹಲಾಯು. ೯೭-೪೩೮) ; ಸ್ವಸ್ತಿಶ್ರೀಮತ್ತ್ರಿಪುರಾನ್ತಕದೇವರ ನಟ್ಟವಿಗಮಮ್ಮಲೋಜ ಅವರ ಮುಖಮುದ್ರೆ (ಎಕ. VII (8), ಶಿಕಾರಿ. ೩೪೧-೦ ; 1100) ; ಗರುವರೇ ನೀವೆಲವೊ ಸುರಪನ ಪುರದ ನಟ್ಟವಿಗರು ಸುಯೋಧನನರಮನೆಯ ನಟ್ಟವಿಗಳಿಗೆ ಪಾಡಹರೆ (ಕುವ್ಯಾಅ. ೧೯-೩೩) ; ನವರಸೋದಯಕೆ ಪಡಿವೆಶ್ಯಾಡುವ ನಟ್ಟವಿಗರ ಕೂಟದಿಂ (ರಾಮಾಶ್ವ. ೨೩-೧೯). ೨. ನಾಟ್ಯವನ್ನು ಕಲಿಸುವವನು ; ನಾಟ್ಯಾಚಾರ್ಯ; ನಾಟ್ಯಗುರು : ಅರ್ಜುನನುಮಲ್ಲಿಯೆ ನಟ್ಟವಿಗನಾದಂ (ನೇಮಿಪು. ೦೦-೧೨೪ ವ) ; ಮಂದಾನಿಳನೆಂಬ ನಟ್ಟವಿಗನ ಪ್ರೇರಣೆಯಿಂದ ಬಾಳತಾಳಂಗಳ ಮೇಳದೊಡಗೂಡಿ ಪ್ರವಾಳವಿಳಸಿತಲತೆಗಳ್ ತಾಂಡವಾಡಂಬರಮಂ ವಿಡಂಬಿಸುವಂತಿರ್ದುವು (ಬಾಧಪು. ೩-೩೫ ವ). **ನಟವಿಗ :** ೧. ವೈತಾಳಿಕನುಂ ನಟವಿಗನುಂ . . . ಎಂದಿವರು ಯೋಗ್ಯರು (ಶ್ರಾವಕಾ. ೦೪೮-೨೩). **ನಟುವಿಗ :** ೧. ತಾಳಧಾರಿಗ ನಟುವಿಗ ಗಾಯಕರು ನೆಟಿ ಮೇಳವಡೆದ ವಾದ್ಯದವರು ಸೂಳೆಯರುಗಳು ಸುಮ್ಮಾನಿಗಳ್ ಪಣ್ಯಲಚಾಲದ ದಣಿದರಾಕ್ಷಣದೆ (ಕಂನವಿ. ೨೬-೨೭) ; ತಾಳಧಾರಿಗರು . . . ನಟುವಿಗರು . . . ಇವರೆಲ್ಲರ ಮನೆಗಳು ಸಾಲುಸಾಲಾಗಿ ಒಪ್ಪುತ್ತಿದ್ದುವು (ಕರ್ಣಾಜ. ೦೫೮). **ನಟ್ಟುವಿಗ :** ೧. ವೇದಶಾಸ್ತ್ರದವರೆ ಹಿರಿಯರೆನ್ನೆ . . . ಇವರು ಹಿರಿಯರಾಗಳೇ ಯಾಗ ನಟ್ಟುವಿಗ ಪಾಣರು (ಬಸವ. ೬೧೩).

[ ನಟ್ಟವ + – ಇಗ ]

**ನಟ್ಟವಿಗಿತ್ತಿ** (ನಾ). = ನಟ್ಟುವಗಿತ್ತಿ : "ನಟೀ, ಕ್ಷುದ್ರಾ–ಈ ೨ ನಟ್ಟವಿಗಿತ್ತಿ" (ಹಲಾಯು. ೯೭-೪೩೮). [ ನಟ್ಟವಿಗ + – ಇತ್ತಿ ]

**ನಟ್ಟವಿಸಿಲ್** (ನಾ). ಮಧ್ಯಾಹ್ನದ ಬಿಸಿಲು ; ಪ್ರಖರವಾದ ಬಿಸಿಲು : ಪರಮತಪೋನಿಧಿಗಳ್ ಸಂಚರಿಸುವ ಬಟ್ಟೆಯನಗಲ್ದು ನಟ್ಟವಿಸಿಲಾಯ್ದು ರಗಂ ಪುಡಿಯೊಳ್ ಪೊರಳುತ್ತಿರೆ ಸೋಗೆಯನೆತ್ತಿ ಸೋಗೆ ಪಿಡಿದುದು ನೆಟಲಂ (ಅನಂಪು. ೩-೩೮). [ ನಟ್ಟು$_2$ + (<ನಡು$_2$) ಬಿಸಿಲ್ ]

**ನಟ್ಟಾಟ** (ನಾ). (ನೀರ ಹರಹಿನ) ಮಧ್ಯದ ಆಳ; ಅತಿಯಾದ ಆಳ; ಹೆಚ್ಚು ಆಳ : ಟಕಾರಕ್ಕೆ—ಕಟ್ಟಾಳ್, ಕಟ್ಟುಬ್ಬಸಂ . . . ನಟ್ಟಡವಿ, ನಟ್ಟಾಟಂ, ನಟ್ಟಿರುಳ್ (ಶಮದ. ೧೮೧ ಪ್ರಯೋ). [ ನಟ್ಟ$_2$ (<ನಡು$_2$) + ಆಟ$_1$ ]

**ನಟ್ಟಿ$_1$** 'ನಾಟಿ$_1$' ನೋ.

**ನಟ್ಟಿ$_2$** (ನಾ). ನಷ್ಟ ಹೊಂದಿದವನು; ನಾಶ ಹೊಂದಿದವನು; ನಾಶವಾದವನು : ಆ ಪಕಾರಕ್ಕೆ—ಟತ್ವಂ ... ನಷ್ಟ—ನಟ್ಟಿ; ನಿಷ್ಠ—ನಿಟ್ಟಿ (ಶಮದ. ೨೮೩ ಪ್ರಯೋ). [ ನಟ್ಟ$_4$ +– ಇ$_3$./ಸಂ. ನಷ್ಟಿನ್ ]

**ನಟ್ಟಿ$_3$** 'ನಟ್ಟು$_4$' ನೋ.

**ನಟ್ಟಿ$_4$** 'ನಟ್ಟು$_5$' ನೋ.

**ನಟ್ಟಿಗಂಪು** (ನಾ). (ನಾಟಿ ಹಾಕಿರುವ) ಸಣ್ಣಸಸಿಯ ಕಂಪು, –ಸುವಾಸನೆ : ಪೊಂಬಾಳೆಯ ನಟ್ಟಿ [ಪಾಠಾಂ. ಟ್ಟಿ]ಗಂಪುಗಡಲೊಳ್ ಬುಳ್ಕಾಡಿ ಬುಳ್ಕಾಡಿ (ಅನಂಪು. ೩-೧೧). [ ನಟ್ಟಿ$_1$ (<ನಾಟಿ$_1$) + ಕಂಪು ]

**ನಟ್ಟಿಗೊಳ್** (ಕ್ರಿ). ಮನೋಹರವಾಗು; ಆಹ್ಲಾದಕರವಾಗು; ಸುಂದರವಾಗು : ಸಂಪನ್ನತೆವೆತ್ತು ನಟ್ಟಿಗೊಳೆ ಚೊಕ್ಕಣಮಾದೆಣೆಗಂಟು (ಕಮಪೂ. ೫-೩೯). [<ನಟ್ಟಿತು+ ಕೊಳ್$_1$ ]

**ನಟ್ಟಿರುಳ್$_1$**, **ನಟ್ಟಿರುಳು$_1$** (ನಾ). ಮಧ್ಯರಾತ್ರಿ; ಸರಿರಾತ್ರಿ; ನಡುರಾತ್ರಿ : ಕಂಬರಲ ಕೆಂದಳಿರಂ ಬಿಸಿಲೆಂದು ನಟ್ಟಿರುಳ್ ಮೇಳಿಸುಗುಂ ರಥಾಂಗಂ (ಮಲ್ಲಿಪು. ೨-೨೭); ಪ್ರತಿದಿವಸಂ ದಶದಶಘಟಿಮಿತಿಯಿಂ ಋತುವಾಟುಮುದಯದಿಂದುಂಟೆಂಬರ್ ಸತತಮಿವು ನಟ್ಟಿರುಳ್ವರ ಋತುಗಳ ವೊಂದೊಂದೆ ಭಾವಮನಾಳ್ಗಂ (ಶಲಾಶಾ. ೨-೭). **ನಟ್ಟಿರುಳು$_1$** : ಎಮ್ಮಾಶ್ರಮಾಂತರಕೆ ನಟ್ಟಿರುಳೊಳೇಂ ಕಾರಣಂ ಬಂದೆ (ಪದ್ಮರಾ. ೫-೩೨); ನಟ್ಟಿರುಳಿನೋಳ್ ಮನೋಹರಿಯ ಮೋಸಂಗೆಯ್ದು (ಸೌಂದಪು. ೧೮-೮); ನಟ್ಟಿರುಳಲ್ಲಿ ಕೊತವಾಲನನ್ನು ಕಾಜಿ ಬಂದು ಕಾಣುವುದು ಅಚ್ಚರಿಯ ಮಾತಾಗಿತ್ತು (ಕೊತಕಾ. ೨೭); ನಟ್ಟಿರುಳಿನಲ್ಲಿ ಆತನ ಸಾಮ್ರಾಜ್ಯವು ಅಪ್ರತಿರೂಪವಾದುದು (ಜ್ಯೋತಿವಿ. ೧೩೭). [ ನಟ್ಟ$_2$ (<ನಡು$_2$) +ಇರುಳ್ ]

**ನಟ್ಟಿರುಳ್$_2$**, **ನಟ್ಟಿರುಳು$_2$** (ಅ). ಮಧ್ಯರಾತ್ರಿಯಲ್ಲಿ; ಸರಿರಾತ್ರಿಯಲ್ಲಿ: ಮೋಹಮಯಂ ನಿಗಳಂ ಕಳತ್ರಮೆಂದಱಿಪದೆ ನಟ್ಟಿರುಳ್ ಮಱೆದು ಸಾರ್ಚಿದ ನಲ್ಲಳ ತಳ್ತ ತೋಳ್ಗಳಂ ಮೆಲ್ಲಮೆಲ್ಲನೆ ಪತ್ತುವಿಡಿಸಿ (ಹಂಪಭಾ. ೪-೧೨.; ಪಾಂಡವರ್ ನಿಜಜನನಿಸಮೇತಮಾ ಸುರಂಗದ್ವಾರದಿಂ ಪೊಱಮಟ್ಟು ನಟ್ಟಿರುಳ್ ಪೋಪಲ್ಲಿ (ನೇಮಿಪು. ೯-೩೭ ವ). **ನಟ್ಟಿರುಳು$_2$** : ಸೂಳೆ ಭಕ್ತರ ಮನಂ ನೋಡಲ್ಕನಂ ಮಿಕ್ಕು ಇಳೆಯಾಂಡಗುಡಿಯ ಹತ್ತಿರೆ ನಟ್ಟರುಳು ಬಂದು (ಇಳೆರ. ದೇ. ೫೦-೧೯); ನಟ್ಟಡವಿಯಲ್ಲಿ ಬೀಡಂ ಬಿಟ್ಟಿರಲಾ ಬಂಧುದತ್ತನಾತನ ಬೀಡಂ ನಟ್ಟಿರುಳು ಬಂದು ಬೇಡರ್ ದಟ್ಟಿಸಿ ಕೂಕಿಱಿದು ಸುತ್ತಿಮುತ್ತಿದರಾಗಳ್ (ಪುಣ್ಯಾಸ್ರ. ೮-೮): ಯದೂತ್ತಮನು ನಟ್ಟಿರುಳು ಹೊಕ್ಕನು ನಂದಗೋಕುಲವ (ನಿಭಾಗ. ೧೦-೪-೧೬).

[<ನಟ್ಟಿರುಳ್$_1$ ]

**ನಟ್ಟಿರುಳು$_2$** 'ನಟ್ಟಿರುಳ್$_1$' ನೋ.

**ನಟ್ಟಿರುಳು$_2$** 'ನಟ್ಟಿರುಳ್$_2$' ನೋ.

**ನಟ್ಟಿಲ್ಲು** (ನಾ). ೧. ಮನೆಯ ಮಧ್ಯಭಾಗ; ನಡುಮನೆ. ೨. "ಬಿಲ್ಲವರಿರುವ ಸ್ಥಳವಿಶೇಷ" (ಕೋಟಚ. ಕೋಶ) : ದೇವಬಲ್ಲಾಳನು "ಬಂಟರೇ, ನಿಮಗೆ ನಮ್ಮ ರಾಜ್ಯದಲ್ಲಿ ಯಾವ ಸ್ಥಳ ಬೇಕು ? ಬಿಲ್ಲರ ನಟ್ಟಿಲ್ಲು ಆದೀತೆ ?" ಎಂದು ಕೇಳಿದನು (ಕೋಟಚ. ೪೭).

[ ನಟ್ಟ$_2$ (<ನಡು$_2$) + ಇಲ್ಲು$_0$ (<ಇಲ್)./ತೆಲು. ನಟ್ಟಿಲ್ಲು ]

**ನಟ್ಟಿಸಮಯ** 'ನಾಟಿಸಮಯಂ' ನೋ.

**ನಟ್ಟಿಹಿತ್ತಲು** 'ನಟ್ಟಿಹಿತ್ತಿಲು' ನೋ.

**ನಟ್ಟಿಹಿತ್ತಿಲು**, ನಟಿ ಹಿತ್ತಲು (ನಾ). ನಾಟಿ ಹಾಕಿರುವ ಹಿತ್ತಿಲು; ಗಿಡ, ಸಸಿಗಳನ್ನು ನೆಟ್ಟಿರುವ ಹಿತ್ತಿಲು : ನಟ್ಟಿಹಿತ್ತಿಲಿಗೆ ನುಗ್ಗಿ ಮಿಡಿಗಳನ್ನೆಲ್ಲಾ ಕೊಯ್ಯುವನು (ಈಕಥ. ೫೦). **ನಟ್ಟಿಹಿತ್ತಲು** : ಅಂದಿನಿಂದ ಇಂದಿಗೂ ನೆಲ್ಲ ಹೊಲ . . . ನಟ್ಟಿಹಿತ್ತಲು, ಎಲೆಬಳ್ಳಿ ಹಿತ್ತಲು—ಇವುಗಳ ನಡುವೆ ಬದುಕಿದರು (ಘಾಜಾಶಾ. ೨೫೭).

[ ನಟ್ಟಿ$_1$ (<ನಾಟಿ$_1$) + ಹಿತ್ತಿಲು (<ಪಿಂತಿಲ್) ]

**ನಟ್ಟು$_1$** 'ನಡು$_1$' ಪರಾ.

**ನಟ್ಟು$_2$** 'ನಟ್ಟಿ$_1$' ನೋ.

**ನಟ್ಟು$_3$** 'ನಾಟಿ$_1$' ನೋ.

**ನಟ್ಟು$_4$**, **ನಟ್ಟಿ$_3$** (ನಾ). ೧. ನಾಟುವಿಕೆ; ನೆಲೆ ನಿಲ್ಲುವಿಕೆ : ದಿಟ್ಟ ಹಣ್ಣಿನ ಮೇಲೆ ನೇಹದ ನಟ್ಟು ಹಣ್ಣಿನ ಮೇಲೆ ಹೆಜ್ಜೆಗಳಿಟ್ಟಣಿಸಲೈದಿದಳು ನಗೆಮೊಗದಲಿ ನಿಜೇಶ್ವರನ (ತೊರೆರಾ. ೩-೮-೩೦). **ನಟ್ಟಿ$_3$** : ೨. ಎದುರು ಪಕ್ಷದ ಕಾಯನ್ನು ಹೊಡೆಯಲು ಸರಿಯಾದ ಗರ; ನಾಟುವ ಗರ : ವೀರಭದ್ರಶರಣ್ಯವೆನುತಂ ವೀರಭಕ್ತನು ಭದ್ರದಾಯವು ಸೇರಿತೆನಲಾಡುವನು ಚಿತ್ರಂ ನಟ್ಟು ನಟ್ಟ[ಪಾಠಾಂ. ಟ್ಟಿ]ಯನು ಸಾರಲಿಟ್ಟಾಡುವನು ಜಿತಸಂಸಾರಿ ಮತ್ತೀ ಪಂಚನೆಯನುಳಿಹಾರಯಿದು ಶೀಪಂಚದಾಯಂ ಬಿದ್ದಡಾಡುವನು (ಬಸಪು. ೪೩-೭): ಚೌಕ ದುಗ ನಟ್ಟಿ ಭದ್ರೆ ಶಿವಂಚದೊಚ್ಚೌಕ . . . ಇನಿತುಮಂ ಜೇಗದಿಂ ಹಾಯಿಕು,(ಕುರಾಚ. ೦೩-೫೯). [ <ನಡು$_1$ ]

**ನಟ್ಟು$_5$**, **ನಟ್ಟಿ$_4$** (ನಾ). ಒಂದು ಬಗೆಯ ಸುಂಕ,–ತೆರಿಗೆ (?) : ಆ ಭೂಮಿಯನು ಪಂಡರಿದೇವಂಗಳು ಆ ಮೂಲಿಗರೇ [ತೆ]ಱು ಸಿದ್ಧಾಯ. ನಟ್ಟು ಬೆಡೆ ಯಸ್ಸೆ ಒಸಗೆ ಜೋಡಿಯಿವನೆಲ್ಲವನೂ ಆ ಮೂಲಿಗರೇ ವಡಱು ದೇವರಿಗೆನಡಸಿ ಬಹ ಭತ್ತಂ ಮೂಡೆ(ಡೆ) ೧೦೦ (ಸೌಇಇ. IX-11, ೪೧೬-೧೦; 1877): ಯಿಾ ಕ್ಷೇತ್ರಕ್ಕೆ ತೆಱು ದೇವಸ್ವ ಅನಾಯ ನಟ್ಟೂ ಬೇಡು ಉದೂ ಆಯಿಲ್ಲಾ (ಸೌಇಇ. IX-11, ೪೨೬-೨೭; 1402). **ನಟ್ಟಿ$_4$** : ಆ ಭೂಮಿಯ ಕುಳಕ್ಕೆ ಬಂದ ಹೊಂಬಳಿಯ ನಟ್ಟಿ ಗಂ ೧ ಸುಂಕ ಕಾರಾಕ ಗ್ರಾಮ ಗದ್ಯಾಣ ಗಂ ೧ ಅಂತು ಗ ೧೪೮೩ (ಎಕ. VIII, ತೀರ್ಥಹ. ೧೯೬-೩೨; 1404). [ ? ]

**ನಟ್ಟುಕಡಿ** (ಕ್ರಿ). ಭೂಮಿಯಲ್ಲಿ ಆಳವಾಗಿ ಬೇರು ಬಿಟ್ಟ ಕರಿಕೆಯನ್ನು ಅಗೆದು ತೆಗೆ; ಹಳೆಯ ಪೈರಿನ ಕಳೆಯನ್ನು ತೆಗೆ; ಬೇರನ್ನು ಕತ್ತರಿಸು: ನಟ್ಟುಕಡಿದು, ಕಸಕಿಗೆದು, ಎಡೆಹೊಡೆದ ಕೈಯಲ್ಲಿ ಯಾವ ಕೈಲಾಸ ಹೊಳೆಯುತ್ತದೆ ? (ಪಚಸಂ. xovi, ಒಳಗೆ ಪ್ರವೇಶ); ನಟ್ಟುಕಡಿದು ಹಸನು ಮಾಡಿದ ಹೊಲವು ಎರಿಯ ಭೂಮಿಯಾಗಿದ್ದರೆ . . . ಕಡಲೆಯನ್ನು ಬಿತ್ತಬೇಕು (ಕೃಷಿಪ್ರ. ೨೬): ನಟ್ಟುಕಡಿಯಾಕ ಹೊಂಟಾವೆನಾ (ಅಜಾನಿ. ೪).

[ ನಟ್ಟು$_3$ (<ನಾಟಿ$_1$) + ಕಡಿ$_2$ ]

**ನಟ್ಟುಕಡಿಸು** (ಕ್ರಿ). ಬೇರನ್ನು ತೆಗೆಸು; ಕಳೆಯನ್ನು ಕೀಳಿಸು: ನಟ್ಟುಕಡಿಸಿದ ಮಸಾರಿ ಕೇಸರಿಯ ಜಮೀನುಗಳಾದರೂ ಅಂಥ ಹೊಲಗಳಿಗೆ ನಟ್ಟುಕಡಿಸಿದ ಪರ್ಷ ಬಿಳಿಯ ಎಳ್ಳು ಬಿತ್ತಬೇಕು (ಕೃಷಿಪ್ರ. ೨೭).

[ ನಟ್ಟು$_3$ (<ನಾಟಿ$_1$) + ಕಡಿಸು (<ಕಡಿಯಿಸು$_2$) ]

**ನಟ್ಟುಮುರಿ** 'ನೆಟ್ಟಿಮುರಿ' ನೋ.

**ನಟ್ಟುವ** 'ನಟ್ಟುವ' ನೋ.

**ನಟ್ಟುವಗರುಡಿ** (ನಾ). ನಾಟ್ಯವನ್ನು ಕಲಿಸುವ ಶಾಲೆ; ನರ್ತನಶಾಲೆ; ನಾಟ್ಯಶಾಲೆ: ಜಟ್ಟಿಗರುಡಿಗಳೊಳಂ ನಟ್ಟುವಗರುಡಿಗಳೊಳಂ ಕಂಡುದಲ್ತು (ಚಳಪಂ. ೧೬೪-೨). [ ನಟ್ಟುವ (<ನಟ್ಟುವ) + ಗರುಡಿ ]

**ನಟ್ಟುವಗಾತಿ** (ನಾ). ೧. ನೃತ್ಯಮಾಡುವವಳು; ನಾಟ್ಯಗಾತಿ: ಅವಳೊಬ್ಬಳು ನಟ್ಟುವಗಾತಿ (ರೂಢಿ). ೨. ನಾಟ್ಯಗುರುವಿನ ಹೆಂಡತಿ : (ಅ). [ ನಟ್ಟುವ (<ನಟ್ಟುವ) + – ಕಾತಿ ]

**ನಟ್ಟುವಗಾರ** (ನಾ). ನೃತ್ಯವಮಾಡುವವನು ; ನಾಟ್ಯಗಾರ : ಅವನೊಬ್ಬ ನಟ್ಟುವಗಾರ (ರೂಢಿ). [ ನಟ್ಟುವ (<ನಟ್ಟವ) + – ಗಾರ ( – ಕಾಱ) ]

**ನಟ್ಟುವಗಿತ್ತಿ** (ನಾ). = ನಟ್ಟುವಗಾತಿ : (ಕ). [ ನಟ್ಟುವ (<ನಟ್ಟವ) + – ಗಿತ್ತಿ ]

**ನಟ್ಟುವರ** (ನಾ). ನಟಶ್ರೇಷ್ಠ ; ಉತ್ತಮನಾದ ನಾಟ್ಯಗಾರ ; ನಟವರ : ಆಣಿಯಾದಂದೇ, ಮತ್ತ್ಯಾವರಿ ಸಿಂಗಾರ ಗಾಯಕರು, ವಾದಕರು, ಆಚಾರ್ಯ ನಟ್ಟುವರ ? (ನಡದಾ. I, ೪೧೨) ; ಕ್ಷೇಮವೆ ನಟ್ಟುವರ ಪನಿಲ್ಲಿ ಕಾದಿಹಿರಿ ! ಆರ ಬರವ ? (ನಡದಾ. I, ೪೧೯). [ <ಸಂ. ನಟವರ ]

**ನಟ್ಟುವಿಗ** 'ನಟ್ಟವಿಗ' ನೋ.

**ನಟ್ಟುವಿಗತನ** (ನಾ). ನಾಟ್ಯವನ್ನು ಕಲಿಸುವಿಕೆ ; ನಾಟ್ಯಾಚಾರ್ಯನಾಗಿರುವಿಕೆ : ತನ್ನೊಳಗೆ ಸಾಕಿಸುತ ನಟ್ಟುವಿಗತನವನು [ಪಾಠಾಂ. ನಟ್ಟುವತನವನದ] ನೂಕುತಲಿ ಮದ್ದಳೆಯ ತಾನೊಡಹಾಕಿ ನಗುತಲಿ ಹೋದನಲ್ಲವಮನಖಿಳ ಜಗವಟಿಯೆ (ಪ್ರಭುಲಿಂ. ೭-೩೭).
[ ನಟ್ಟುವಿಗ (<ನಟ್ಟವಿಗ) + – ತನ ]

**ನಟ್ಟುವಿತಿ** (ನಾ). = ನಟ್ಟುವಗಾತಿ : "ನಟ ಕ್ಷುದ್ರೆಯೆನೆ ನಟ್ಟುವಿತಿಗಕ್ಕು ನಾಮಂ" (ಮಂಗರಾ. ೧೧೧-೩).
[ ನಟ್ಟುವ (<ನಟ್ಟವ) + –ಇತಿ$_1$ (< – ಇತ್ತಿ) ]

**ನಟ್ಟಿ**$_1$ 'ನಾಟಿ$_1$' ನೋ.

**ನಟ್ಟಿ**$_2$ 'ನಟ್ಟು$_2$' ನೋ.

**ನಟ್ಟಿಗೊಂಬು** 'ನಟ್ಟಗೊಂಬು' ನೋ.

**ನಟ್ಟಿಡೆ** (ನಾ). ಮಧ್ಯಭಾಗ ; ನಡುಭಾಗ : ನಳಿನ ಕಲ್ಹಾರ ಕುಮುದೇಂದೀವರಂಗಳಿಂದಳಿಕುಲದ ಝುಂಕಾರದಿಂ ಮನಂಗೊಳಿಪೊಂದು ಕೊಳನದೇನಾದ ಮಾವುಪವನದ ನಟ್ಟಿಡೆಯೊಳೊಪ್ಪಿತೊ ವಿಶಾಲವಾಗಿ (ಶೀಪರಾ. ೬-೧೪).
[ ನಟ್ಟು$_2$ + ಎಡೆ$_2$ ]

**ನಟ್ಟೆಲಬು** 'ನಟ್ಟೆಲ್ವು' ನೋ.

**ನಟ್ಟೆಲು** 'ನಟ್ಟೆಲ್ವು' ನೋ.

**ನಟ್ಟೆಲ್ವು**, ನಟ್ಟೆಲಬು, ನಟ್ಟೆಲು (ನಾ). ಬೆನ್ನಿನ ಮಧ್ಯದಲ್ಲಿರುವ ಎಲುಬು ; ಬೆನ್ನೆಲುಬು ; ಬೆನ್ನುಮೂಳೆ : "ಕಶೇರುವೆಂಬುದು ನಟ್ಟೆಲ್ವು" (ಹಲಾಯು. ೧೦೪-೧೩). **ನಟ್ಟೆಲಬು** : "ನಟ್ಟೆಲಬು = ಬೆನ್ನೆಲಬು" (ಹಾಕಕೋ. ೯). **ನಟ್ಟೆಲು** : ನಿಮ್ಮ ತ್ರಿವಿಕ್ರಮನ ನಟ್ಟೆಲು(ಬು) ಖಟ್ವಾಂಗವಾಗಿ ಕೈಯಲಿದೆ ಕೇಶವನ ಕಣ್ಣು ಸೋಮೇಶ್ವರಪಾದದಲಿದೆ (ಸರ್ವಜ್ಞ. ೧೬೭-೬೩). 'ನಿಟ್ಟೆಲುವು', 'ನೆಟ್ಟೆಲುವು' ಪರಾ. [ ನಟ್ಟು$_2$ + ಎಲ್ವು ]

**ನಟ್ಟೆವಗಲ್** 'ನಟ್ಟವಗಲ್' ನೋ.

**ನಟ್ಟೆವಗಲು** 'ನಟ್ಟವಗಲ್' ನೋ.

**ನಟ್ಟೆವನೆ** 'ನಟ್ಟವನೆ' ನೋ.

**ನಟ್ಟೆವಾನ್** (ನಾ). ಆಕಾಶದ ಮಧ್ಯಭಾಗ, ನಡುಭಾಗ : ಲೋಪವಿಲ್ಲದುದುಚಿತಾಕ್ಷರಾಗಮಕ್ಕೆ—ನಟ್ಟೆವಾನ್, ನಟ್ಟವನೆ, ಕಟ್ಟಿಗೊಂಬು, ನಟ್ಟವನಿ (ಶಮದ. ೧೭೬ ಪ್ರಯೋ). [ ನಟ್ಟು$_2$ (<ನಟ್ಟು$_2$) + ಬಾನ್$_3$ ]

**ನಟ್ಟೆವಾಱು** (ಕ್ರಿ). (?) : ತೆಗೆಯದೆ ಕಾಯ್ದು ಚಮ್ಮಟಿಗೆಯಿಂ ದನಿ ಪನಿ ಕೈಕಡುಪಾಗೆ ರಾಘೆಯಿಂ ಬಿಗಿಯದೆ ನಟ್ಟು ಬೀಸಿದೊಡೆ ಪಟ್ಟುಪೊರಳ್ದಡಿ ನಟ್ಟೆವಾಱಿ ಪೈದೆಗೆದೊಡೆ ತಿಟ್ಟವಿಟ್ಟವೊಲೊಡಂಬಡೆ ತೋಱಿಸಿ ಮೆಚ್ಚಿದಾರಕರ್ ಬಗೆ ಹಯುವಾದವೊಲ್ ಬಟಕೆ ಮೆಚ್ಚಿಸುವರ್ ಉಳಿಯೊಳ್ ಕುಮಾರನಂ (ಅನಂಪು. ೬-೧೫). [ ? ]

**ನಡ** (ನಾ). ಒಂದು ಬಗೆಯಹುಲ್ಲು ; ನೀರಿನಲ್ಲಿ ಬೆಳೆಯುವ ಜೊಂಡು ; ದೇವನಾಳ : "ನಡಃ, ಧಮನಃ, ಪೋಟಗಲಃ – ಇ ದೇವನಾಳದ ಹೆಸರುಗಳು, ದೇವನಾಲೀ ಕಡ್ಡಿ ಗಳಿಗೂ ಹೆಸರುಗಳು" (ಸಿದ್ಧಾಂತಿ. ೧೩೦). [ಸಂ. ]

**ನಡಕ** (ನಾ). = ನಡತೆ. ೨. 'ಒಳ್ನಡಕ' ಪರಾ. [ <ನಡತೆ ]

**ನಡಗೆ**, ನಡಿಕೆ, ನಡಿಗೆ$_1$ (ನಾ). ೧. ನಡೆಯುವಿಕೆ ; ಚಲಿಸುವಿಕೆ : ನಿನ್ನ ಕಂಡು ಪಕ್ಷಿಗಳು ನಿಂತು ಹೌಹಾರಿ ನಿನ್ನ ನಡಗೆ ನೋಡಿ ನವಲ ಕುಣಿವುದ ಮರೆತಿತರಿ (ಕನ್ನಜಾ. ೯೧) ; ನಡೆದು ಬಾ ಕಂದಯ್ಯ ನಡಗೀಯ ನೋಡೇನ ! (ಭಾವಗೀ. ೨೦೫) ; ಕುದುರೆಯ ನಡಗೆ ತುಂಬ ಚುರುಕಾಗಿದೆ (ರೂಢಿ). 'ನಡಗೆದಾರ' ಪರಾ. ೨. ಎತ್ತುಗಳ ಒಂದು ಬಗೆಯ ಓಟ ; ಸಾಮಾನ್ಯವಾದ ನಡಗೆ : ಹೋರಿಗಳನ್ನು ಉಕ್ಕಲು ಬಿಡಬೇಡ, ನಡಗೆಯಲ್ಲಿರಲಿ (ರೂಢಿ); ನಡಗೆಯಲ್ಲೇ ಗಾಡಿ ಬಿಡು (ರೂಢಿ). **ನಡಿಕೆ** : ೧. ದಂಡಿಗೆಯನೇರಿ ಬರೆ ಸಪ್ತಋಷಿಗಳ್ ನಡಿಕೆ ಚಂಡಿಸಲು (ತುರಂಗ. ೩೦-೩೦) ; ನಾಲ್ವತ್ತರ ಮೇಲೆ ನಡಿಕೆ, ಎಂಬತ್ತರ ಮೇಲೆ ಬಡಿಕೆ, ತೊಂಬತ್ತಕ್ಕೆ ಶಯನ, ನೂರಕ್ಕೆ ಪಯಣ (ಗಾದೆ). **ನಡಿಗೆ$_1$** : ೧. "ಗಮ, ಗಮನ–ನಡಿಗೆ" (ಗಂಗಾಮ. ೧೦೨) ; ಗುಡುಗುಡು ನಡಿಗೆಯ ಸದ್ದು (ಪದ್ಯಸ. ೨೬೨) ; ಹಾವುಗಳ ನಡಿಗೆ ಬಹಳ ಮಂದವಾಗುತ್ತದೆ (ಮುಂಬಯಿ. ೨-೨೭).
[ <ನಡೆ$_1$ + – ಗೆ./ತಮಿ. ನಟಕ್ಕೈ ; ತುಳು. ನಡಕೆ; ತೆಲು. ನಡಕ ]

**ನಡಗೆದಾರ** (ನಾ). "(ಹಿಂದೆ) ಮಕ್ಕಳಿಗೆ ನಡಗೆ ಕಲಿಸಲು ಉಪಯೋಗಿಸುತ್ತಿದ್ದ ದಾರ ; ನಡಗೆದಾರ" (Lead-Strings. ಇಂಕನ್ನ).
[ ನಡಗೆ + ದಾರ$_1$ ]

**ನಡತರ** (ನಾ). ಕಡಮೆಯ ಮಟ್ಟ ; ಕೀಳುದರ್ಜೆ ; ಅತಿಸಾಧಾರಣವಾಗಿರುವಿಕೆ : ಅರಸ ಚಿತ್ತೈಸುಭಯಬಲದುಬ್ಬರದ ಬಹುವಿಧವಾದ್ಯರವದುಬ್ಬರವ ಮುಕ್ಕಳಿಸಿತು ಪಾಠಕನಿಕರನಿರ್ಘೋಷ ಸಂರರ ಕಳಕಳವೀ ಧ್ವನಿಯನುತ್ತರಿಸಿತೀ ಬಲುಗಜಬಜವ ನಡತರದೊಳಿಕ್ಕಿತು ಕರ್ಣ ಪಾರ್ಥರ ಚಾಪಟಂಕಾರ (ಕುಮಾವ್ಯಾ. ೨೨-೦೫). [ < ನಡು$_2$ + ತರ$_6$ ]

**ನಡತೆ** (ನಾ). ೧. ನಡೆಯುವಿಕೆ ; ಚಲಿಸುವಿಕೆ : ನಡತೆಯಿಂ ಗಿರಿದುರ್ಗ ಕುಡಿತೆಯಿಂ ಜಲದುರ್ಗ ಕಡುಗಲಿಗಳ ಕೋಪಗಳ ಕಿಡಿಯೊಳು ವನದುರ್ಗ ಪಡಗಿತು ಬತ್ತಿತು ಬಿಡದಾಗ ಬೆಂದುದೇವೇಳ್ವೆ (ಕಂಸವಿ. ೧೧-೦೨). ೨. ನಡವಳಿಕೆ ; ವರ್ತನೆ : ಲೋಕದೊಳಗುಳ್ಳಯೆಲ್ಲಾ ಲೌಕಿಕದಿ ನಡೆವ ನಡತೆಯಿಂ ತಾ ಪೊರ್ದದೆ ಏಕಾಕಿಯಾಗಿ ಕ್ಷಮೆಯ ಂ ಕೈಕೊಂಡು ನಿಜಾತ್ಮನೊಳಗೆ ಕಾಣ್ಬುದು ಧಮ್ಮಂ (ಭವ್ಯಾಮೃ. ೨೨) ; ಮೊನೆಗೊಡ್ಡಿ ಬಂದು ನೀವಾರೆಂದು ಬೆಸಗೊಳ್ವುದಿದಾವ ನಡತೆ ? (ರಾಮಾಶ್ವ. ೦೫೯-೭) ; ನಡತೆ ಮೇಲ್ಮೆಯ ನೀಡುವುದಱಿಂದ ಆ ನಡತೆ ಪ್ರಾಣಕೂ ಮಿಗಿಲೆಂದು ಕಾಪಾಡಿ ಕೊಳ್ಳಲಹುದು (ಕುಱಳ್. ೧-೧೪-೧). ೩. ಶೀಲ ; ಗುಣ : ಪುಲ್ಲಮಣಿಯ ನಡತೆ ಚೆನ್ನಾಗಿರಲಿಲ್ಲ (ಬಂಕಿಮ. ೨೭೭). 'ನಡತೆಗೆಡು' ಪರಾ. ೪. ಆಚಾರ–ವ್ಯವಹಾರ ; ವೃತ್ತಿ ; ಸಂಪ್ರದಾಯ : ನಮ್ಮ ಜನರಲ್ಲಿ ಬಹು ಪುರಾತನದ ನಡತೆಗಳೆಷ್ಟೋ ಉಂಟು . . . ಈ ನಡತೆಗಳು ಇಂದಿನವಲ್ಲ (ಮುಂಬಯಿ. ೪-೦೬೩).

ನಡತೆ ನುಡಿತೆ, ನಡತೆ ನುಡುತೆ = ನಡವಳಿಕೆ ಮತ್ತು ನುಡಿಯುವಿಕೆ ; ನಡೆನುಡಿ ; ಆಚಾರ – ವ್ಯವಹಾರ : ಹಿಡಿತಬಿಡಿತೆಯ ಹೆಚ್ಚುಕುಂದಿನ ನಡತೆ ನುಡಿತೆಯ . . . ಏಕತೆಯಲಿಡೆಗೊಡುವ ಸಹಜ ಸಮಷ್ಟಿಕೆಯನುಸಂರುವೆನು (ಗಗಶಾ. ೧೭-೭) ; ಮೊದಲವರಂತೆ ಹೆಣ್ಣು ಗಂಡು ಮೊದಲಿಪ್ಪಂತೆ ಚೆನ್ನ ಬಣ್ಣ ಮೊದಲಾದಂತೆ ನಡತೆ ನುಡಿತೆ ಬದಲಾಗಿನೊಂದು ನೀನ್ಸೆದದು (ಭಕ್ತಿಸ. IV, ೬-೨) ; ತಮ್ಮ ಕಡೆ ವಕೀಲರ ನಡತೆ ನುಡುತೆ ಬೇಕಾದ ಹಾಗೆ ಒಳ್ಳೇದು (ರಾಜೇಂದ್ರ. ೮೮).
[< ನಡೆ$_1$ + – ತೈ$_2$./ತಮಿ. ನಟತ್ತೈ ; ಮಲ. ನಡತ್ತೈ ; ತುಳು. ಕೊಡ. ನಡತೆ ; ತೆಲು. ನಡತ ]

**ನಡತೆಕಾಱ** (ನಾ). ಆಚಾರವಂತ ; ಸಂಪ್ರದಾಯವನ್ನು ಪಾಲಿಸುವವನು ; ವ್ಯವಹಾರವನ್ನು ನಡೆಸುವವನು ; ಉದ್ಯೋಗಸ್ಥ : ತುರಗಗಜರಥಗಳಿಂ

. . . ಪರಿಪರಿಯ ಊರೊಳಗದ ನಡತೆಕಾಱರುಗಳಿಂ ಪುರರಕ್ಷಕರ ಮಹಿಹ ಗಾಱರೆಡೆಯಾಟದಿಂದೊಪ್ಪಿತಾ ರಾಜವೀಧಿ (ಗುರುಚಾ. ೧-೩೩).

[ ನಡತೆ + – ಕಾಱ ]

**ನಡತೆಗೆಡು** (ಕ್ರಿ). ೧. ಸರಿಯಾದ ನಡತೆಯಿಲ್ಲದಿರು ; ನಡವಳಿಕೆಯನ್ನು ಕೆಡಿಸಿಕೊಳ್ಳು ; ಸಂಪ್ರದಾಯವನ್ನು ಬಿಡು : ನಡತೆಗೆಟ್ಟ ವ್ಯಕ್ತಿಗೆ ಎಲ್ಲೂ ಬೆಲೆ ದೊರಕದು (ರೂಢಿ). ೨. ಶೀಲವನ್ನು ಕೆಡಿಸಿಕೊಳ್ಳು : ನೀತಿಗೆಡು : ಅಯ್ಯೋ ಕೆಟ್ಟ ಹುಡುಗಿ ! ನೀನು ನಡತೆಗೆಟ್ಟಿರಲೇಬೇಕು (ನಿಕಲು. ೫೩). [ ನಡತೆ + ಕೆಡು$_1$ ]

**ನಡತೆವಂತ** (ನಾ). ಒಳ್ಳೆಯ ನಡವಳಿಕೆಯುಳ್ಳವನು, –ನಡೆನುಡಿಯುಳ್ಳವನು : ನೀನು ವಿದ್ಯಾವಂತ ನಡತೆವಂತ ಗುಣವಂತ ; ಇಂಥವನು ಅಸತ್ಕುಲಪ್ರಸೂತರೂ ದುರಾತ್ಮರೂ ಘಾತುಕರೂ ನಾಚಿಕೆಗೆಟ್ಟವರೂ ನಡೆಯುವಂತೆ ನಡೆಯಬಾರದು (ವಕಥಾ. ೨೫೪). [ ನಡತೆ + –ವಂತ ]

**ನಡನಡ** (ನಾ). ಒಂದು ಅನುಕರಣ ಶಬ್ದ. 'ನಡನಡನೆ' ಪರಾ.

**ನಡನಡನೆ** (ಅ). ನಡನಡ ಎಂದು : ಪಾಲಿಲಳವಲ್ಲದೆ ನಡನಡನೆ [ಪಾಠಾಂ. ಗಡಗಡನೆ] ನಡುಗಿ ಸಿಡಿಮಿಡಿಗೊಂಡೆಱಕೆಗಳೆಳಲೆ ಕೊರಲ್ಕುಸಿಯೆ ಜೋಲ್ದು ನೇಲ್ದ ಪೆರ್ಬಕ್ಕಿಗಳಿಂ (ರಾಜಶೇ. ೫-೫೫ ವ). [ ನಡನಡ + – ಅನೆ$_1$ ]

**ನಡಪತಿ** (ನಾ). ವಿವಾಹವಾಗದೆ ಗಂಡನಂತೆ ನಡೆದುಕೊಳ್ಳುವವನು : ಕಲ್ಯಾಣದಲ್ಲಿ ಮೂಳಾದೇವಿಯೆಂಬ ವಾರಾಂಗನೆಯು . . . ಜಂಗಮದೇವರಿಂದಾ ಲಿಂಗವು ಸಾಧ್ಯಮಪ್ಪುದೆಂಬುದ ತನ್ನ ನಡಪತಿಯಾದ ಭಕ್ತರಿಂದ ತಿಳಿದು (ಭೈರಸೂ. ೦೪೭). [ ನಡವು$_1$ + ಪತಿ$_2$ ]

**ನಡಪಾಡಿಸು** (ಕ್ರಿ). ಅಲೆ ; ಚೆದರಿಹೋಗು ; ಓಡು : ಗುರುಸಂಭವನ ಮಂತ್ರದ ಪಾಡಿ ನಡಪಾಡಿಸಿತು ಪಾಂಡವರ (ಕುವ್ಯಾಗ. ೧೦-೨೨).

[ ನಡವು$_2$ + ಆಡಿಸು ]

**ನಡಪಾಡು**, ನಡೆಪಾಡು (ಕ್ರಿ). ನಡೆದಾಡು ; ಸಂಚರಿಸು ; ಓಡಾಡು ; ಅಡ್ಡಾಡು : ದಾದಿಯುಂ ಸಖೀಜನಂಗಳ್ ಬೆರಸು ನಡಪಾಡುತ್ತಿರ್ದಳ ಮುಂದಾ ಕೆಯ್ಯಂ ಪರ್ದು ತಂದಿಕ್ಕಿದೊಡೆ (ವಡ್ಡಾರಾ. ೦೧೮-೦೩) ; ಪಾಡುವ ತುಂಬಿ ಕೋಡುವ ಪುಟ್ಟಿಲ್ ನಡಪಾಡುವ ರಾಜಹಂಸೆ (ಪಂಪಭಾ. ೩-೩೭) ; ಆ ಚಂದ್ರಿಕೆಯೊಳ್ ನೃಪರೂಪಚಂದ್ರಂ ಕೇಳೀಶೈಲದ ತಪ್ಪಲೊಳ್ನಡಪಾಡುತಿರ್ಪುದುಂ (ಕಾದಂಬ. ೧೪೭) ; ಮುಡಿಯ ತಡಿವಿಡಿದು ಮೆಲ್ಲನೆ ನಡಪಾಡುವ ಕಳವುಗಾಟಕಾಜನದ ಬೆಡಂಬಿಡಿದ ವಿಕಚಾಕ್ಷಿಬಿಂಬಂ ಪಡೆಗುಂ ಪಗಲೊಳಮರಲ್ದ ಕುಮುದಶ್ರೀಯಂ (ವರ್ಧಮಾ. ೧೦-೦೪) ; ನಡಪಾಡುವ ವನದೇವಿಯರಡಿಯೂಡಿದಲಕ್ತಕದ್ರವಂ ಪತ್ತಿದವೋಲ್ ಕಡುಗೆಂಪನಾಳ್ದು ಪೊಂದೊಂದೆಡೆ ವನಚರವಿದ್ಧ ಮೃಗಗಣಾರುಣಜಳದಿಂ (ಚಂದ್ರಪ್ರ. ೫-೪೯) ; ಕಾರಕಾತ್ಮಜಂ ನೋಡುತಿರ್ದನ್ ಬೆರಗುಬಡಿದು ನಡಪಾಡುತಿರ್ದೀ ದೈತ್ಯನೃಪವನಂ (ಶ್ರೀರಾಮಾ. ೨೨೪-೩೫೭). **ನಡೆಪಾಡು** : ಸಮುದಗಜಗಮನೆಯರ್ ಮುಗಿಲ ಮೇಲೆ ನಡೆಪಾಡುವೀವಾಕೆಗಳ್ ತಮಗೆ ಧರಾಗಮನಂ ಪೊಸತಪ್ಪುದಱಿಂದಮರ್ದಿರೆ ನಡೆನಡೆದು ನಡೆಯಲಾಱದೆ ಸುಱಿದರ್ (ಪಂಪಭಾ. ೭-೮೪) ; ನಡೆಪಾಡುತಿರ್ದೆಡಪಿ ಕೆಡೆವ ಜರತ್ತಾಪಸರ ಕೆಯ್ಯಂ ಪಿಡಿದೊಯ್ಯನೆತ್ತುವ ಗೋಲಾಂಗೂಲಜಾಲಮುಮಂ (ಪಂಚತಂ. ೧೧೮-೦೭) ; ಗಿಳಿ ಪಣ್ಗಳನೀಂಟುವ ಭಂಗಿಯಿಂ ವಿನೋದದೆ ನಡೆ[ಪಾಡಿ] ಚುಂಬನದ [ಚೀತ್ಕೃತಿಯಂ] ಕಲಲಾ ಜನಕ್ಕೆ ಬರ್ಪುದು ಪಿರಿದುಂ ನುಮತ್ತಚಕೋರನ್ನರವಣ್ಣಗಕನ್ಯಕಾಜನಂ (ಶಾಂತೀಶ್ವ. ೦೩-೧೪೪).

[ ನಡವು$_2$ + ಆಡು$_1$./ತೆಲು. ನಡಪಾಡು, ನಡುಪಾಡು ]

**ನಡಪಾಡುಹ** (ನಾ). ನಡೆದಾಡುವಿಕೆ ; ಓಡಾಡುವಿಕೆ ; ಸಂಚರಿಸುವಿಕೆ : "ವಿಹಾರ, ಪರಿಕ್ರಮ = ನಡಪಾಡುಹ" (ನಾಚಿರಾ. ೬).

[ ನಡಪಾಡು + – ಹ$_2$ ]

**ನಡಪು$_1$**, ನಡಹು$_1$, ನಡೆಪು$_1$ (ಕ್ರಿ). ೧. ನಡೆಯುವಂತೆ ಮಾಡು ; ನಡೆಸು ; ಗಮಿಸುವಂತೆ ಮಾಡು : ನಡುವಗಲಲ್ಲಿ ತಾಂ ನಡಪಿ ದಂತಿಗಳಿಂ ರವಿತಪ್ತಮೂರ್ಥಪಂ ಬಿಡದತಿಶೀತಲಸ್ಥಲವ ಸೇವಿಸುವಂತೆವೋಲೀ ನರೇಶ್ವರಂ ಇಡಿದನುರಾಗದಿಂ ಪ್ರಜೆಗಳಂ ನಿಜಪುತ್ರರ ಪೋಷಿಪಂದದಿಂ ನಡಪಿ ವಿವಿಕ್ತಮಾದೆಡೆಯ ಸೇವಿಸುವಂ ಸಲೆ ಶಾಂತಮಾನಸಂ (ಶಾಕುಂತ. ೬೨-೧೦೩). ೨. ಸಲಹು ; ಪೋಷಿಸು ; ಪಾಲಿಸು ; ಕಾಪಾಡು : ಎರಡುಮೂಱು ತಿಂಗಳಿಂಗೆ ತಾಯ್ ಕಟಿದೊಡೆ ಬಂದ ನಂತರ್ ನಡಪೆ ಬಳೆದೊಡಾ ನಂತರುಂ ಕಟಿದುಳ್ಳೆರೆಲ್ಲಂ ಸತ್ತು ಕುಲಕ್ಷಯಮಾದೊಡೆ (ವಡ್ಡಾರಾ. ೬೩-೦೭) ; ಮುನ್ನ ವೃಷಭನಾಥನ ನಡಪಿದ ದುಮುಂ ತಮ್ಮ ನಣ್ಪುಮಂ ಬಱೆದು ಕುರುರಾಜಾದಿಮೂರ್ಧಾಭಿಷಿಕ್ತ ಪಾರ್ಥಿವರ್ . . . ಭರತೇಶ್ವರ ಚಕ್ರವರ್ತಿಯನಾಸ್ಥಾನದೊಳ್ ಬಂದು ಕಂಡು (ಆದಿಪು. ೦೩-೫೦ವ) ; ನಡಪಿದನಜ್ಜನೆಂದು ವಿಜಯಂ ಕಡುಕೆಯ್ದುಸನೆನ್ನ ಮಮ್ಮನಾಂ ನಡಪಿದನೆಂದು ಸಿಂಧುತನಯಂ ಕಡುಕೆಯ್ದುಸಂ (ಪಂಪಭಾ. ೧೧-೧೪) ; ಪಡಿಯೊಳ್ ಪೊರಳುತ್ತುಂ ಕಂಠಗತಪ್ರಾಣನಾಗಿರ್ದುದನೀ ಗಿಳಿಯಂ ಕಂಡು ಕರುಣಿಸಿ ತಂದೆಂ ನಡಪಿ ಗಱಿಮೂಡಿದ ಬಟಿಕ್ಕಂ ಪಾಱಿ ಪೋಕುಂ (ಕಾದಂಪೂ. ೨೬೩)[1]; ವರ್ಷ ೯[೨೭] ನೆಯ ವಿಶ್ವಾವಸು ಸಂವತ್ಸರದ ಫಾಲ್ಗುಣದಮಾವಾಸ್ಯೆಯಾದಿತ್ಯವಾರ[ದ]ನ್ದು ನಡಪಿದ ಸತ್ತಿಗಂ ಬೆಸಸೆ (ಸೌಇಇ. XI-i, ೫೦-೨ ;1006) ; ತಪ್ಪುಗಮನೆ ಪುಟ್ಟಿಪೆಂ ನಡಪುವೆಂ ನಡಯಿಪೆಂ ಕೆಡಿಪೆಂ ಕೃಪಾದಿಂದಮಾನೆ (ಸಮಪ. ೧೧-೧೪) ; ಬೇವಿನ ಗಿಡುವಂ ತಂದಿಟ್ಟಾವಿನ ನೊಱೆವಾಲನೆಱೆದು ನಡಪಿದೊಡಂ ಕೇಳ್ ಬೇವಿಂಸೆ ಕೈಪೆ ಪಿಂಗದು (ಧರ್ಮಾಮೃ. ೫-೦೫೭) ; ಆಕೆಯ ನಡಪಿದ ದಾದಿಯ ಮಗಳು ಕಾಮಲತೆಯೆಂಬಳಾಕೆ ರೂಪಸಿ (ಪುಣ್ಯಾಸ್ರ. ೭-೭೪ವ). **ನಡಹು$_1$** : ೨. ಹೊಸ್ನದೇವರು ಬೆಸಸಲು ಕಾದಿ ಸುರಲೋಕಪ್ರಾಪ್ತನಾದ ಹಿಂನ್ದಾದನ್ನಹವರಂ ಲೇಸಾಗಿ ನಡಹುವರು (ಮೈಆರಿ. ೦೯೩೨, ೩೦-೪ ; 1125). **ನಡೆಪು$_1$** : ೨. ಕರಿ ಪೋಗವು ಹರಿ ಪೋಗವು ಪರಿವಾರಂ ಪೋಗವೊಡನೆ ನಡೆಪಿದ ನಾಲ್ವರ್ ನೆರವಾಗಿ ಪೋಗರಂತಕಪುರಕ್ಕೆ ಪೋಪೆಡೆಯೊಳ ರೆಸರೊರ್ವರೆ ಪೋಪರ್ (ಅಜಿಪು. ೨-೦೦೪) ; ನೆಗಳ್ದ ಭಾವಶಿವದೇವಕ್ರಜಿಯ ಮಾಣೆಯಂ ಕೈಕೊಣ್ಡು ಪೋಷಿಸಿ ಮದುವೆಯಂ ಮಾಡಿ ನಡೆಪಿದ ಧರ್ಮ್ಮಸನ್ತತಿಯ ಬ್ರಾಹ್ಮಣ ಸರ್ವ್ವಧರ್ಮ್ಮಾಧಿಕಾರಿ ಬ್ರಹ್ಮಪುರಿ ಮುಂಖ್ಯಂ (ಸೌಇಇ. XI-i, ೬೪-೦೭ ; 1028) ; ಮತ್ತಲ್ಲಿ ಜಲಕೇಳಿಯಾಡುವ ಗ್ರಾಡಿಕಾರ್ತಿಯರುಂ ಕಾಡಲೆಂದೊಳ್ಳಿಗಳಂ ತಂದು ಬಿಡಿಸಿಯವರ್ಕೆ ಪಾಲನೆಱೆದು ನಡೆಪುತಿರ್ಪನ್ನೆಗಂ (ಪಂಚತಂ. ೦೨೩-೨೦) ; ಮಗನಂ ನಡೆಪಿ ಬಾವಿಯೊಳ್ ನೂಂಕುವಂತೆ (ಧರ್ಮಾಮೃ. ೯-೦೫೭) ; ಎನ್ನ ಮಗಳ್ಗಾದ ತನುಜರಂ ಪಿಡಿದು ರಾಜ್ಯದೊಳ್ ನಡೆಪುವುದೆಂದು ನಿಲೆ ನುಡಿಯುಸಿ (ನೇಮಿಪು. ೩-೨೭ ವ).

[ ನಡೆ$_1$ + –ಪು$_1$./ತಮಿ. ನಟವು; ತುಳು. ನಡಪು; ತೆಲು. ನಡವು, ನಡುಪು ]

**ನಡಪು$_2$**, ನಡಹು$_2$, ನಡೆಪು$_2$ (ನಾ). ನಡೆಯುವಿಕೆ ; ಚಲಿಸುವಿಕೆ ; ಓಡಾಟ ; ಸಂಚಾರ. 'ನಡಪಾಡು' ಪರಾ. **ನಡಹು$_2$** : ಕಡಿತಲೆಯು ಮಿಂಚುಗಳ ಹೊಯ್ಲಿನ ಸಿಡಿಲುಗಳ . . . ಬಿಡುಮುಡುಳ ಹೊರಳಿಗಳ ಹಂಸೆಯ ನಡಹುಗಳ ನವಖಂಡದೊಳು ಹೆಣನಡವಿ ತಳಿತಿರೆ ಮೆಚ್ಚಿದಂದೈ ಸಂಗ್ರಾಮವು ಕಾರ್ಗಾಲ (ಕುವ್ಯಾಭೀ. ೪-೩೭). **ನಡೆಪು$_2$** : 'ನಡೆಪಾಡು' ಪರಾ.

[ ನಡೆ$_1$ + – ಪು$_2$./ತಮಿ. ನಟಪ್ಪು ; ಮಲ. ನಡಪ್ಪು ; ತುಳು. ನಡಪು ; ತೆಲು. ನಡವು, ನಡುಪು ]

**ನಡಪ್ಪಳ್ಳಿ** 'ನಡುಂಪಳ್ಳಿ' ನೋ.

**ನಡಪ್ರಾಯ** (ನಾ). ಹುಲ್ಲು, ಜೊಂಡುಗಳಿಂದ ತುಂಬಿರುವಿಕೆ. [ ಸಂ. ]

**ನಡಬಾವಿ** 'ನಡೆಬಾವಿ' ನೋ.

**ನಡಭಾವಿ** 'ನಡೆಬಾವಿ' ನೋ.

**ನಡಮಣ್ಣೆ** (ನಾ). ಒಂದು ಬಗೆಯ ಜಮೀನು; ಸಾಗುವಳಿ ಜಮೀನು (?): ಆತಂಗಂ ನಡಮಣ್ಣೆ ಪನ್ನಿಮ್ಮತ್ತರ್ನೆಲ್ಲ ಮಣ್ಣೆ ಖ × × × ವಕ ಸೂಳೆವಳ್ಳಿ (ಎಕ. XI, ದಾವಣ. ೧೧೯-೭; 980). [?]

**ನಡಮಾನ** (ನಾ). ಒಂದು ಬಗೆಯ ವಿಮಾನ. [ಸಂ.]

**ನಡಮುರುಕನಬಳ್ಳಿ** (ನಾ). ಒಂದು ಬಗೆಯ ಬಳ್ಳಿ: (ಕ). [? + ಬಳ್ಳಿ]

**ನಡಯಿಸು** 'ನಡೆಯಿಸು' ನೋ.

**ನಡಲು** (ನಾ). ಒಂದು ಸ್ಥಳದ ಹೆಸರು: ನೇಱಿಲೆಯುಂ ಮೂಯೊತ್ತಿಂ ನಡಪ್ಪಳ್ಳಿ ಮೂಟಣಂ ನಡಲು ಎಪ್ಪತ್ತಳ್ಳಿದತ್ತಿಟ ಕಱಿಯ ಒರಲ್ಗೋಡು (ಎಕ. VI, ಕಳಸ. ೯೫-೧೬; ಸು. 1025 ?). [?]

**ನಡವಣಿ** 'ನಡೆವಳಿ$_1$' ನೋ.

**ನಡವಳಿ** 'ನಡೆವಳಿ$_1$' ನೋ.

**ನಡವಳಿಕಸ್ತ** (ನಾ). ಒಳ್ಳೆಯ ನಡವಳಿಕೆಯುಳ್ಳವನು,-ನಡತೆಯುಳ್ಳವನು: ಈಶ್ವರರಾಯರು ಒಳ್ಳೆಯ ನಡವಳಿಕಸ್ತರಾದುದರಿಂದ ನೃತ್ಯಕಲೆಗಳಲ್ಲಿ ಅಷ್ಟಕ್ಕಷ್ಟೆ (ಕಲಾಸಾ. ೫). [ನಡವಳಿಕೆ (<ನಡೆವಳಿಕೆ) + –ಸ್ತ]

**ನಡವಳಿಕಾರ** 'ನಡೆವಳಿಕಾಱ' ನೋ.

**ನಡವಳಿಕಾಱ** 'ನಡೆವಳಿಕಾಱ' ನೋ.

**ನಡವಳಿಕೆ** 'ನಡೆವಳಿಕೆ' ನೋ.

**ನಡವಳಿತ** (ನಾ). ೧. ನಡತೆ; ನಡವಳಿಕೆ; ವರ್ತನೆ: "ನಡವಳಿತ = ನಡತೆ" (ಗಂಗಾಮ. ೧೭೭); ನುಡಿದೊಡೇನ್ನೆ ಶ್ರುತಿಸ್ಮೃತಿಗಳಂ ನಡವಳಿತದೊಳು ಶುದ್ಧಮಿಲ್ಲದೆ (ಶಂಕದಾ. ೧೨-೧೧). ೨. = ನಡೆವಳಿಕೆ ೩: ಫೂಟು ವಡವಳಿತವನ್ನು ಕುರಿತ ಸಿವಿಲ್ ಪ್ರೊಸೀಜರ್ ಕೋಡಿನ . . . ಪ್ರಕರಣದ ಮೇರೆಗೆ ಆರು ತಿಂಗಳು (ಗ್ರಾಮೂಕ. ೧೬೦). [ನಡವಳಿ (< ನಡೆವಳಿ$_1$) + –ತ$_2$]

**ನಡವೆ** 'ನಡುವೆ$_1$' ನೋ.

**ನಡಸಂಹತಿ** (ನಾ). ಹುಲ್ಲು, ಜೊಂಡುಗಳ ಸಮೂಹ,–ಗುಂಪು. [ಸಂ.]

**ನಡಸು$_1$** 'ನಡೆಯಿಸು' ನೋ.

**ನಡಸು$_2$** 'ನಡಿಸು$_2$' ನೋ.

**ನಡಹ** 'ನಡೆಹ' ನೋ.

**ನಡಹು** 'ನಡವು$_1$' ನೋ.

**ನಡಹು$_2$** 'ನಡವು$_2$' ನೋ.

**ನಡಾವಳಿ** 'ನಡೆವಳಿ$_1$' ನೋ.

**ನಡಾವಳಿಕೆ** 'ನಡೆವಳಿಕೆ' ನೋ.

**ನಡಾಳ** (ನಾ). ಒಂದು ಬಗೆಯ ಹಗ್ಗ,–ಮಿಣಿ. 'ನಡಾಳಮಿಣಿ' ಪಡಾ. [←ಮರಾ. ನಾಡಾ]

**ನಡಾಳಮಿಣಿ** (ನಾ). ನೊಗವನ್ನು ಮೂಕಿಗೆ ಬಂಧಿಸುವ ಹಗ್ಗ: (ಕ). [ನಡಾಳ + ಮಿಣಿ (<ಮಿಳಿ$_3$)]

**ನಡಿ** 'ನಡೆ$_1$' ನೋ.

**ನಡಿಕೆ** 'ನಡಗೆ' ನೋ.

**ನಡಿಗೆ$_1$** 'ನಡಗೆ' ನೋ.

**ನಡಿಗೆ$_2$, ನೆಡುಗೆ**(ನಾ). ೧. ನಡುವಿಕೆ; ನಾಟುವಿಕೆ; ಸ್ಥಿರಗೊಳಿಸುವಿಕೆ. ೨. ನಾಟಿ; ನೇಜಿ. ನೆಡುಗೆ: ೧. "ತಲ-ಪ್ರತಿಷ್ಠಾಯಾಂ, ನೆಡುಗೆಯೊಳ್" (ಕಾಶಕ. ೨೬೧).

ನಡಿಗೆಯ ಹಿತ್ತಿಲು = ನಾಟಿ ಹಾಕಿರುವ ಹಿತ್ತಿಲು; ಸಸಿಗಳನ್ನು ನಟ್ಟಿರುವ ಸ್ಥಳ: ಬಸವಂತನ ನಡಿಗೆಯ ಹಿತ್ತಿಲು ತೋಟದಲೂ (ಸಾಇಇ. IX-ii, ೪೭೬-೩೦; 1506). [<ನಡು$_1$ + –ಗೆ]

**ನಡಿಸು$_1$** 'ನಡೆಯಿಸು' ನೋ.

**ನಡಿಸು$_2$, ನಡಸು$_2$, ನೆಟಿಸು, ನೆಡಿಸು** (ಕ್ರಿ). ೧. (ಗಿಡ, ಸಸಿ ಮೊದಲಾದುವನ್ನು ನೆಲದಲ್ಲಿ) ನಡುವಂತೆ ಮಾಡು; ನಾಟುವಂತೆ ಮಾಡು: "ಪೀಲತೀತಿ ನಡಿ(ಟ್ಟ)ಸಿದವುದೆಂಬುದು" (ಕಾಶಕ. ೪೩); ದಿವ್ಯಶಕ್ತಿಪ್ರಭಾವದಿಂದ ಮಾನುಷಾರಣ್ಯಂಗಳ ಮಹಾದ್ರುಮಂಗಳಂ ತರಿಸಿ ನಡಿಸಿ (ಆದಿಪು. ೧೩-೫೨ ವ). ೨. (ಕಲ್ಲು, ಕಂಭ ಮೊದಲಾದುವನ್ನು ನೆಲದಲ್ಲಿ) ಹುಗಿಸು; ಹೂಳಿಸು; ಸ್ಥಾಪಿಸು: ಯಾತುಕೂರೊಳ್ ಚೆಲ್ಲೇಶ್ವರದ ಮುಂದೆ ಕಲ್ಲನ್ನಡಿಸಿ ಪಿರಿಯ ಕೆಱೆಯ ಕೆಱಗೆ ಮಟ್ಟೆಕಾಲುಜ್ಜ ಕೊಳಕ್ಕಂಡುಗಂ ಮಣ್ಣು ಕೊಟ್ಟರ್ (ಎಕ. III, ಮಂಡ್ಯ. ೪೧-೦೨; 950); ಕಡಲ ತಡದಡಿಯೊಳಾತಂ ನಡಿಸಿದ ಕಾಂಚನಜಗಜ್ಜಯಸ್ತಂಭಗಳ್ ಕುಡಿನಿಮಿರ್ದು ನಾಕಿನಿಳಯಮನಡರ್ವ ಯಶೋಲತೆಗಡರ್ಪನಿಟ್ಟವೊಲೆಸೆಗುಂ (ಚಂದ್ರಪು. ೭-೩೧). ೩. (ಕತ್ತಿ ಮೊದಲಾದುವನ್ನು ಮೈಯೊಳಗೆ) ನಾಟಿಸು; ಚುಚ್ಚುವಂತೆ ಮಾಡು: ತನ್ನ ಕಠಾರಿಯನ್ನು ಪೂರ್ತಿಯಾಗಿ ಅದರ ದೇಹದಲ್ಲಿ ನಡಿಸಿದಳು (ಮೀದಿಮ. ೧೧೪); ಅಡವೀಬೆಕ್ಕುಗಳು ಬೇಟೆಯ ಮೈಯೊಳಗೆ ಹಲ್ಲು ನಡಿಸಿ, ಅದನ್ನು ಕೊಲ್ಲುತ್ತವೆ (ಮುಂಬಯಿ. ೫-೩೧). **ನಡಸು$_2$**: ೩. ಫಡಫಡೆನುತ ಬಕಾಸುರನ ಮಗ ನಡಸಿದನು ಕೂರಂಬನು (ಕುವ್ಯಾದ್ರೋ. ೧೫-೬೬). **ನೆಟಿಸು**: ೨. ಗುರವನಾಯಂ ಕೊಟು ಕಲ್ಲ ನೆಟಿಸಿದನ್ (ಎಕ. VIII, ಸಾಗರ. ೧೧೧-೧೫; 986 ?). **ನೆಡಿಸು**: ೧. ತಡೆಯುದ್ದೈದಂಗುಲಕೆ ರಥವನು ನೆ[ಪಾಠಾಂ. ನ] ಡಿಸಿದನು ಹರಿ ಧರೆಗೆ ಪಾರ್ಥನ ಮುಡಿಯ ಸರಿಸಕೆ ಬಾಣ ಬಂದುದು ಕೊಲುವ ತವಕದಲಿ (ಕುವ್ಯಾಕ. ೨೫-೨೮). ೨. ಮುಂದೆಸೆಯೊಳುಱೆ ಬಸಿದ ಶೂಲವನೊಂದನಾಗಳೆ ತರಿಸಿ ನೆಡಿ[ಪಾಠಾಂ. ನಡಿ]ಸೆಂತೆಂದನು (ಬಸಪು. ೩೮-೪೬); ತೊಡೆವೆನೀ ತೋರ್ಪೀ ನಿಶಾಚರಪಡೆಯ ಭಾಗ್ಯದ ಭಾಳಲಿಪಿಯನು ನೆಡಿಸುವೆನು ನೈಶಾಟವಿಜಯಸ್ತಂಭಡಂಬರವ (ತೊರರಾ. ೩-೬-೪); ನೆ [ಪಾಠಾಂ. ನ] ಡಿಸಿದನೆರಡು ಕಂಬಮಂ (ಜೈಮಿಭಾ. ೨೬-೫೦).

ನಡನಡಿಸು(ದ್ವಿರುಕ್ತಿ): ಸಿಡಿಲ ಬೊಬ್ಬೆಯ ಧಾಳಿಯಲಿ ನಡನಡಿಸಿ ತಾಗಿ ನಿದಾಘಭೂಪನ ಹಿಡಿದು ಹೆಕ್ಕಳಿಸಿದನು ಮೇಘಾಗಮ ಮಹೀಪಾಲ (ತೊರರಾ. ೪-೬-೪). [ನಡು$_1$ + –ಇಸು$_3$]

**ನಡು$_1$, ನೆಟ್ಟು$_1$, ನೆಡು** (ಕ್ರಿ). ನಟ್ಟಿ$_1$, ನೆಟ್ಟ (ಭೂತಕೃ), ನಟ್ಟು$_1$, ನಾಟ್ಟು, ನೆಟ್ಟು$_2$ (ಭೂತನ್ಯೂ) ೧. (ಕಲ್ಲು, ಕಂಬ ಮೊದಲಾದುವುಗಳ ಕೆಳಭಾಗವನ್ನು ನೆಲದಲ್ಲಿ) ಹೂಳು; ನಿಲ್ಲಿಸು; ಸ್ಥಾಪಿಸು; ಸ್ಥಿರಗೊಳಿಸು: "ನಡು–ಸಂಸ್ಥಾಪನೇ, ಮಧ್ಯೇ ಚ" (ಶಮದ); "ಸ್ಥಾಪನ – ಮಧ್ಯದ ಸ್ಥಾನಂಗಳೊಳ್ ನಡು" (ಶಬ್ದಮಂ. ೯೪); ಅಜವರ್ಮ್ಮನ ಕಲ್ಲ ನೊಟವ್ಪುಸ್ಸುರ್ಟ್ಟೊಡೆ ಇವ್ವರ್ಗ್ಗೆ ಈ ಕಲ್ಲು ನಟ್ಟುದು (ಎಕ. XI, ಜಗಳೂ. ೦೯-೬; 907); ಮಹಾದ್ರುಮಂಗಳಂ ತರಿಸಿ ನಡಿಸಿ ನಟ್ಟ ಕಂಭಂಗಳ ಮೇಗೆ ಸಾರದಾರುಗಳನೆಡೆಗಿಱಿದಿರೆ ಪಾಸಿ ಪಸರಿಸಿ (ಆದಿಪು. ೧೩-೫೨ ವ); ಮಟ್ಟೆಕೆಱೆಯ ತೆಂಕಣ ಕಡೆಯಿಂ ಪಿರಿಯಯ್ಯ ಪುಣುಸೆವರು ನಟ್ಟ ಓಳಗಲ್ಲಿನ್ದಂ ಪಡುವಣ ತೆವರಿಂದೊಳಗೆ ಅಯ್ದು ಕೊಳಗ ಬೆದೆ ಪೂಂಬೊಲನುಂ . . . ಸಲ್ವುದು (ಎಕ. IV, ಹೆಗ್ಗಡ. ೧೬-೨೦; 1021); ಕಮ್ಮನೂರ ಬಳವಿಯೊಳು ಅಯ್ಗಣ್ಣಗಂ ಬೆಟ್ಟಲೆ ಅಯಂಗಳು ಕಲ್ಲು ನಾಟ್ಟು ಸೊಭೆ ಕೆಯ್ದಂ (ಎಕ. XIV, ಎಡತೊ. ೯೮-೧೧; 1078); ಮುತ್ತುಟಿದವರಂ ದೇವರೆನವೇಡ ಧರೆಯೊಳ್ ದೇವರೆ ನಟ್ಟಿರ್ದ ಕಲ್ಲುಮೊಟ್ಟೆವ ಮಣ್ಣುಂ (ಧರ್ಮಾಮೃ. ೮-೩೧); ಇದು ವೈರಾಗ್ಯದ ಕೊತ್ತಳದ ಮೇಲೆ ಮನ್ಮಥನು ನಟ್ಟ ವಿಜಯ ಪತಾಕೆಯಂತೆ ಕಾಣಸುತ್ತದೆ (ಕಾವ್ಯಸ. ೫೮). ೨. (ಗಿಡ, ಸಸಿ, ಬೀಜ ಮೊದಲಾದುವನ್ನು ನೆಲದಲ್ಲಿ) ಊರು; ಹಚ್ಚು; ನಾಟಿಹಾಕು: ತೆಂಗಿನೆಳನೀರುಮಂ ಕೊಳಲಿಂಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ತೆಂಗಿನ

ಮರಂಗಳುಮಂ (ಪಂಪಭಾ. ೫-೪೭ ವ) ; ಒಂದು ದೆಸೆಯೊಳಿರ್ತಡಿವಿಡಿದು ನಟ್ಟ ತಮಾಲದ ತಳಿರ್ಗೊಂಬುಗಳಿಂ ಸಮೆದ ವನಲೇಖೆಗಳುಮಂ (ಕಾದಂಬ. ೨೧೪) ; ಪೂಗಿಡುವೆಂಬ ಪೆಸರಿಂಗೆ ಕೊಳವಳ್ಳಿಯ ಗಿಡುಗಳಂ ನಟ್ಟು ನೀರೆಱೆದು ನಡೆಪೆ ಮಲ್ಲಿಗೆಯ ಪೂವಿನಂತಾಗಲಱಿಯದಂತೆ (ಧರ್ಮಾಮೃ. ೭-೭೯) ; ನೀ ನಟ್ಟ ಸಸಿ ಸುರಕುಜವಲೇ ಕೊಡದೇ ಮನೋರಥವ (ಕುಮಾ.ಅ. ೧೩-೫೪) ; ನಟ್ಟು ಧರ್ಮಭಯವನೆದೆಗೆ ಹುಟ್ಟಿಗೊಂದು ಅರ್ಥವಿತ್ತರು (ರಾಮಾನ. ೨ ನಿವೇದನೆ). ೩. (ಬಾಣ, ಕತ್ತಿ, ಮುಳ್ಳು ಮೊದಲಾದುವು) ಚುಚ್ಚು; ನಾಟು; ಒಳಹೊಗು; ಇರಿ ; ಭೇದಿಸು : ನಟ್ಟ ಸರಲ್ಗಳಿಂದಿದಕರಂಕ × ಯಿಂ ಕಿಡಿಕೆಯ್ದು (ಎಕ. II, ೧೩೮-೧೫ ; ಸು. 940) ; ತಡದಡಿಸುತ್ತುಮಿಱಿಯಲ್ ಪರಿವಾತಂ ಪಾಪೀಸೋಪಾನಮನಡರುತ್ತುಂ ಜಾಱಿವಱಿದು ಕೆಡೆದುರದೊಳ್ ನಟ್ಟ ಸುರಿಗೆ ಬೆನ್ನೊಳ್ಮೂಡೆ (ಆದಿಪು. ೨-೧೪ ವ) ; ತಡೆಯದೆ ರಾಜರಾಜನಿದಿರಂ ಬರೆ ಭೋರ್ಗರೆದೆಚ್ಚೊಡಂಬುಗಳ್ ನಡದೆ ಸಿಡಿಲ್ವುದುಂ (ಪಂಪಭಾ. ೧೧-೧೩೯); ವಾಮನನು ದರ್ಭೆಯೊಳೋವದೆ ಕುತ್ತೆ ನಟ್ಟು[ಪಾಠಾಂ. ದರ್ಭೆಯೊಳಾಸಿದೊಡಾರೆ ನಾಂಟಿ] ಶುಕ್ರನ ಬಲಗಣ್ಣುಮಾಗಳೊಡೆದತ್ತು (ಸಮುಪ. ೧೦-೯೭) ; ಬಾಲಾಭ್ಯಾಸವ ಮಾಡಹೋದರೆ ಎನ್ನ ಸುರಿಗೆ ಎನ್ನ ನಟ್ಟಿತ್ತು (ಬಸವ. ೭೨೪) ; ನಂಜುಮುಳ್ಳಡಿಯನು ನಟ್ಟು ನಡೆಗೆಟ್ಟನೋ (ಸಿದ್ಧರಾ. ೨-೪೫) ; ರೋಮಗಳೆಲ್ಲ ಬಾಣಮಯವಾಗೆ ನಟ್ಟವು ಕಣೆಗಳು (ಸಂಭಪ. ೧೬-೦೨) ; ಎಡೆಬಿಡದಿಡುವ ತುಪಾಕಿಯ ಗುಂಡಿನ ಕಡುಹಿಂದ ನಡುವ ಬಾಣಗಳ ಗಡಣದಬ್ಬರದಿಂದ ಕೂಡಿದ ರಿಪುಬಲ ಕಡಿಖಂಡವಡೆದುದು (ಕಂಸವಿ. ೩-೭೬). ೪. ನೆಲೆಗೊಳ್ಳು ; ಸ್ಥಿರವಾಗು ; ಕೀಲಿಸು ; ಅಲುಗದೆ ನಿಲ್ಲು ; ಕೂಡು : ದಿಟ್ಟ ಮನಮೆಂಬಿವು ತೊಟ್ಟನೆ ನಟ್ಟು ನಟ್ಟವೋಲ್ ಘಟಯಿಸೆ (ಆದಿಪು. ೩-೯೦) ; ಆತನ ವಿಷಮಶರಶಲಾಕೆಗಳಿಂ ಕೀಲಿತಮಾದಂತವಯವಂಗಳ್ ನಟ್ಟು ನಿಂದುವು (ಕಾದಂಬ. ೭೩೮) ; ಆಲಿ ನಿಮ್ಮಲ್ಲಿ ನಟ್ಟವು ನೋಡಯ್ಯ (ಮಹಾದೇ. ಬ. ೩೮-೮೧) ; ತನ್ನಯ ಸುಭೋಗಸಮಾಶ್ರಯಭಂಗಶಂಕೆಯಿಂದುನ್ನತ ಚಿಂತೆ ನಟ್ಟು ನಿಲೆ (ಬಾಧಪು. ೩-೮) ; ಕುಮಂತ್ರಿಗಳ ವಚನವಶಿಗಾಢದಲಿ ನಟ್ಟುದು (ಕುಮಾಭೀ. ೧-೨೫). ನೆಟ್ಟು₁ : ೧. ಸಿವಾರಗಾವುಣ್ಡರ ಮಗ ಪೊನ್ನಯ್ಯನ ದಣ್ಡಿಗೆ ನೆಟ್ಟದ ಕಮ್ಬ (ಎಕ. VI, ಕಡೂರು. ೧೦-೨೩ ; 1126?). 'ಕಿತ್ತು₁' ಪರಾ. ನೆಡು : ೧. ಆತನ ತಮ್ಮ ರಾಯನು ಅಳಿಯ ಮಾದೆಯ್ಯನುಮಿಾ ಕಲ್ಲ ನೆಟ್ಟರ್ (ಎಕ. VIII, ಸೊರಬ. ೨೩೪-೧೨ ; 999) ; ಹುಟ್ಟಿದ ಮಾರ ನೆಟ್ಟ ಕಲ್ಲು ಮತ್ತೇತರ ಇಷ್ಟದಲ್ಲಿ ಒತ್ತಿದ ಲಿಂಗಮುದ್ರೆ ಇರಲಿಕೆ ಕಿತ್ತುಕೊಂಡವ ದ್ರೋಹಿ ಎಂಬರು (ಶೂನ್ಯಸಂ. ೨೭೫-೧೫) ; ಜಂಬೂದ್ವೀಪದ ನಡುವೆ ನಿತಂಬದ ಮಣಿಕಾಂತಿ ನಿಮಿರೆ ದೆಸೆದೆಸೆಗೆ ದಿಶಾಸ್ತಂಬೇರಮಕ್ಕೆ ಬಿದಿ ನೆಟ್ಟಂಬಿನ [ಪಾಠಾಂ. ಬಿರುದಿನದೊಂಬಿನ]ಪೊಂಗಂಭಮೆನಿಸಿ ಮಂದರಮೆಸೆಗುಂ (ಪಾರ್ಶ್ವಪು. ೧-೧೦೮) ; ಜಗದ ಜಾಣರು ಸೀಮೆಯಲಿ ಹಳವಿಗೆಯ ನೆಟ್ಟರು (ಕುಮಾದ್ರೋ. ಪರಿ. ೨೭೫) ; ೬೦ ಮರಹದ ಭೂಮಿಯುಂನು ಕಲ್ಲು ನೆಟ್ಟು ಫಲಿಸಿಕೊಟ್ಟುದರಿಂದ (ಎಕ. VII, ಶಿವಮೊ. ೧೦೮-೨೦ ; 1558). ೨. ವರ್ಷದ ಯಾವ ಸಮಯದಲ್ಲಿಯೂ ಮೆಣಸಿನ ಗಿಡ ನೆಡಬಹುದು (ಆಡುಸಾ. ೧೨೮) ; ಒಂದು ದಿನ ಹಿತ್ತಿಲ ಕಡೆ ಒಂದು ತೆಂಗಿನ ಸಸಿಯನ್ನು ನೆಡುವುದಕ್ಕಾಗಿ ಗುದ್ದಲಿಯಿಂದ ಅಗೆಯುತ್ತಿದ್ದೆ (ಪ್ರತಾಪ. ೪೮). ೩. ನಗುತಲಿಱಿದುಕೊಂಡರೆ ಅಲಗು ನೆಡದಿಹುದೆ (ಬಸವ. ೭೬೧) ; ಅನ್ಯವಿಮಲಾಂಭೋಜಾತಪತ್ರಾಕ್ಷಿ ಮಾಪ್ಪುರು ಬಿಬ್ಬೋಕದಲಂಪಿನಿಂವು ಮನಮಂ ತಾಂ ನೆಟ್ಟುದೋ(ಉದ್ಭಟ.೧೧-೨೪); ಇಂತಂಗಾಲ ನೆಟ್ಟು ಕಟ್ಟುಗಿಯಲಾ ನೋವಿನಿಂ ನಡೆಯುಡುಗುತಂದು ನೊಂದು . . . ಈ ಬಲ್ದಸಿಯುಂ ತೆಗೆದಪೆನೆಂದೊಡೆ (ಉದ್ಭಟ. ೧೧-೧೦೩ ವ) ; ಬಿರಿಯೆ ಬಲುವಜ್ರಾಂಗಿ ಹಾಯ್ದುವು ಗಱಿಸಹಿತಲುಚ್ಚಳಿಸಿ ನೆಲದಲಿ ಸರಳು ನಟ್ಟವು ಕರ್ಣ ನೆನೆದನು ರುಧಿರಧಾರೆಯಲಿ (ಕುಮಾ.ಕ. ೧೧-೨೯) ; ಇಟ್ಟಡೆ ಸೆಲ್ಲೆಹ ಕಂಗಲ ಜೋಡನು ತಟ್ಟುರ್ಚಿ ಮೆಯ್ಯನುಚ್ಚಳಿಸಿ ನೆ[ಪಾಠಾಂ. ನ]ಟ್ಟಿಹುದವನಿಯನೆನೆ ರಾಮ ನೀಡಿನ ಘಟ್ಟವಾಳಿಕೆಯನೇನೆಂಬೆ (ಕುರಾಸಾಂ.೦೩-೦೦೭). ೪. ಅಪ್ಪಭೋಗಂಗಳು ಲಿಂಗದಲ್ಲಿ ಮನಮುಟ್ಟಿ ನೆ[ಪಾಠಾಂ. ನ]ಟ್ಟರಲು ಅದೇ ಅರ್ಪಿತ ಅಂಗ ಲಿಂಗಾರ್ಪಿತವಾಗಿ (ಆದವ. ೨೩-೭೨) ; ನೆಟ್ಟ ನೇಹದಲವಳು ನುಡಿಗೊಡಬಟ್ಟಳ್ಳೆ (ತೊರರಾ. ೨-೧-೩೭) ; ಪರರಾಯರ ನಿಯೋಗಿಗಳಿಗೆ ಭಯಾನಕ ರಸವು ನೆಡುವಂತೆ (ಸೌಗಂಧಿ. ೬-೧೭).

ನಟ್ಟ ಕಂಭ=ಸ್ಥಿರವಾಗಿ ನಿಲ್ಲಿಸಿದ ಸ್ತಂಭ: ಮಹಾದ್ರುಮಂಗಳಂ ತರಿಸಿ ನಡಿಸಿ ನಟ್ಟ ಕಂಭಂಗಳ ಮೇಗೆ ಸಾರದಾರುಗಳನೆಡೆಗಿಱಿದಿರೆ ಪಾಸಿ ಪಸರಿಸಿ (ಆದಿಪು. ೦೩-೫೨ವ) ; ನಟ್ಟ ಕಂಭದ ಹಾಗೆ ದಿಟ್ಟವೀರನು ಇರಬೇಕು (ಗಾದೆ). ನಟ್ಟ ಕಲ್ಲು, ನೆಟ್ಟ ಕಲ್ಲು=(ಗಡಿಯನ್ನು ಸೂಚಿಸಲು, ಶಾಸನವನ್ನು ಕೆತ್ತಲು ಅಥವಾ ಸ್ಮಾರಕಕ್ಕಾಗಲಿ) ನೆಟ್ಟಿರುವ ಕಲ್ಲು ; ಸ್ಥಾಪಿಸಿರುವ ಕಲ್ಲು : ಪ್ರಥಮಂ ದುಗ್ಗನ್ಕೆಱಿ ಮೂಡ್ಯಕಡೆ ಗೋಡೆಎ ಸಂಗ ಪೋಯರಾ ಕೆಱಿಯಿನ್ತೆಂಕೈ ನಟ್ಟ ಕಲ್ಲೆ ಪೆರ್ಗ್ಗಟನಿಯಿನ್ ಬಡಗ್ಗೆ ನಟ್ಟ ಕಲ್ಲೆ (ಎಕ. X (8), ಚಿಕ್ಕಬ. ೭೭-೧೭ ; 850) ; ಸರ್ವರಱಿಯಲು ನಟ್ಟಕಲ್ಲೆ ನಿಸದಿಳೆಯೊಳಗೆ ಸುಳಿವ ಶಾಸನವೆನಿಸಿ ಪೇಳ್ವನೀ ಸತ್ಕೃತಿಯನು (ಸಿದ್ಧರಾ. ೦-೫) ; ಸಿಂಹಪೋತನ ಮಗಳು . . . ಮಹಾದೇವಿಯ ಆಳು ಬಿಸಮನ್ ಎಂಬುವನು ನೆಟ್ಟ ಕಲ್ಲಿಗೆ ಕೆಲವು ದಾನಗಳನ್ನು ಮಾಡಿದ್ದರೆಂದು ತಿಳಿದು ಬರುತ್ತದೆ (ನೊಳಂಬ. ೨೭). ನಟ್ಟಕ್ಷಿ, ನೆಟ್ಟಕ್ಷಿ = ಚಲಿಸದೆ ಇರುವ ಕಣ್ಣು ; ಒಂದೇ ಕಡೆಗೆ ಸ್ಥಿರವಾಗಿ ದೃಷ್ಟಿಯಿಟ್ಟ ಕಣ್ಣು ; ಅಚಲವಾದ ನೋಟ : ಆತನಿಗೆ ನಟ್ಟಕ್ಷಿಯಾಗಿ (ಚಟ್ಟಅ. ೦೩೯-೦೨) ; ಚೆಲುವ ಕೃಷ್ಣನ ಮೂರ್ತಿಯನು ಭೂವಳಯದುಂಗನೆಯರು ನಿರೀಕ್ಷಿಸಿ ಬಲಿದು ನಟ್ಟಕ್ಷಿಗಳ ತೆಗೆಯದೆ ಯೋಗಿಗಳವೋಲು ಸಲೆ ಸುಖಾಬ್ಧಿಯಲಾಳುವರು (ವಿಭಾಗ. ೦೦-೩೬-೩). ನಟ್ಟಗಣ್ಣು, ನೆಟ್ಟಗಣ್ಣು = ನಟ್ಟಕ್ಷಿ : ಸ್ವಾಮಿಗೆ ಜರುಗುವ ವಿಶೇಷಪೂಜೆಗಳನ್ನು ಶಾಂತಲಾದೇವಿ ನಿಂತೇ ನಟ್ಟಗಣ್ಣಿನಿಂದ ನೋಡಿದಳು (ಸವತಿ. ೨೮೮); ನೆಟ್ಟಗಣ್ಣಿನಿಂದ ನೋಡಬೇಡ (ರೂಢಿ). ನಟ್ಟಚ್ಚ = ನಟ್ಟಕ್ಷಿ : ನಟ್ಟಚ್ಚಯಿಂದೆ ನಿಘ್ರ್ಯಣಮಿಾಕ್ಷಿಸುತ್ತುಂ (ಸಂಸಪ. ೨೨-೨). ನಟ್ಟ ದಿಟ್ಟ, ನೆಟ್ಟ ದಿಟ್ಟ = ನಟ್ಟಕ್ಷಿ : ತಾಂ ಪಿಂಗದೆ ನಟ್ಟ ದಿಟ್ಟಿಯನವಂ ಕಿಟಲೆಂದನುಗೆಯ್ದು ತೂಗಿದಂ (ಆದಿಪು. ೦೨-೦೩) ; ಬಗೆ ಬೆಚ್ಚು ನಟ್ಟ ದಿಟ್ಟಿಯನುಗಿಯಲ್ಕಂ ಬಗೆಯ ತಾಱದೆ (ಶಾಂತಿಪು. ೫-೫) ; ಕಿವಿಯಂ ಕತ್ತರಿಸಿ ಶರೀರವಂ ಸಂಕೋಚಿಸಿ ನಟ್ಟ ದಿಟ್ಟಿ[ಪಾಠಾಂ. ದಿಟಿ]ಗಳ್ವೆರಸು ನಿನ್ನನೆ ನೋಡುತ್ತುಮಿರ್ಕುಂ (ಪಂಚತಂ. ೦೭೬-೦೨) ; ಮಿಡುಕದೆ ಮೆಯ್ಯಿಕ್ಕದೆ ವನಿತಾರತ್ನಮಂ ವಪ್ರಲೇಪದೊಳ್ಪತ್ತಿದಂತೆ ನಟ್ಟ ದಿಟ್ಟಿಯುಂ ತೆಗೆಯಲಾಱದೆ ನೋಡಿ ನೋಡಿ (ಧರ್ಮಾಮೃ. ೩-೦೩೮ ಅಡಿಪದ್ಯ); ಕದಪಿನಲಿ ನೆಲಸಿದ ಕೈ ನೆಟ್ಟ ದಿಟ್ಟಿಯ ಕಾಮುಕರಲಸದೀಕ್ಷಿಸಿದರಂದವಳ (ಕಂಸವಿ. ೯-೯೪). ನಟ್ಟ ದೃಷ್ಟಿ=ನಟ್ಟಕ್ಷಿ : ನೋಡುತಿರ್ದನಸನಟ್ಟದೃಷ್ಟಿಯೊಳೊಗುವ ಜಲದಲಿ ರೋಮಪುಳಕದಲಿ (ಕುಮಾ.ಅ. ೭-೭೮). ನಟ್ಟ ಬಡಪ = ನಿರಂತರವಾಗಿ ಸುರಿಯುವ ಮಳೆ ; ಜಡಿಮಳೆ : ತುಂತುರ್ ತುಷಾರವಿಡುಕುಂಬನಿ ತಂದಲ್ಸೋನೆ ನಟ್ಟ ಬಡಪಮೆನಲ್ ಸುರಿದುವು ಬಿಡದೆ ಮುಱಿಗಳಿರುಳುಂ ಪಗಲುಂ (ಜಗವಿ. ೪-೩೨). ನಟ್ಟವನಿ, ನಟ್ಟಿವನಿ = ನಟ್ಟಬಡಪ: ಅಡಸರಿ ಬಲ್ಸರಿಯಱಿವಳೆಯಿಡುಕುಬನಟ್ಟವನಿ ತುಷಾರಂ . . . ತುಂತುರ್ ಬಿಡದಡಿಯಿಡಗೊಡದೆ ಕಱಿದುವಿರುಳುಂ ಪಗಲುಂ(ತ್ರಿಪುವಿ. ೮-೩೯); ಲೋಪವಿಲ್ಲದುಚಿತಾಕ್ಷರಾಗಮಕ್ಕೆ—ನಟ್ಟವಾನ್, ನಟ್ಟವನೆ, ನಟ್ಟಿಗೊಂಬು, ನಟ್ಟವನಿ. ಇಲ್ಲಿ ಎಕಾರಮುಚಿತವರ್ಣಾಗಮಂ (ಶಮುದ. ೦೭೭ ಪ್ರಯೋ). ನಟ್ಟಾಲಿ, ನೆಟ್ಟಾಲಿ = ನೋಟ ಬದಲಾಯಿಸಡ ಕಣ್ಣುಗುಡ್ಡೆ ; ನೇರವಾಗಿ ನೋಡುವ ಕಣ್ಣು ; ನಿಡುನೋಟದ ದೃಷ್ಟಿ : ಪದೆದಾಂ ನೋಡಿದೆನಾತನಿರ್ದ ದೆಸೆಯಂ ನಟ್ಟಾಲಿ ಬೀಳ್ವನ್ನೆಗಂ

(ಕಾದಂಬ. ೭೮೯) ; ಬಹುಕದನವುನೊಡರ್ಚಲೆಂದು ನಟ್ಟಾಲಿಗೊಂಡು ಮುಟ್ಟಿವರ್ಪನಂ ಕಂಡು (ಜಗವಿ. ೯-೩೯ ವ) ; ನೋಡಿದಳಬ್ಜಾನನೆ ನಿನ್ನ ಚಿತ್ರಪಟಮಂ ನಟ್ಟಾಲಿ ಬೀಳ್ವನ್ನೆಗಂ (ದಶಕು. ೧೦-೫೨) ; ಮಲೆಯಂ ಸಾರ್ದೋಡಿ ಬಾಲಂ ತೊನೆಯೆ ಕುಸಿದ ಗೋಣೆತ್ತಿ ನಟ್ಟಾಲಿಯಿಂ ಹವ್ವಳಿ ಸುತ್ತಂ ನೋಡಿ (ತ್ರಿಪುವಿ. ೩೭-೭೦) ; ಬಟ್ಟಲೊಳ್‌ವಿಡಿದ ಮಧುರಸವನಾ ಪೇಕ್ಷೆಯಿಂ ನಟ್ಟಾಲಿಯಿಂದೀಕ್ಷಿಸಲ್ (ಚಿಬಪು. ೧೦-೭೨) ; ಕಟ್ಟಿದಿರೊಳೊಂದು ಚಟಕೆ ನೀಡದೊಳಿರ್ದುಂ ಕಿಱುಘುಱಿಯಂ ಕುಟುಂಕಿತ್ತು . . . ಲಲ್ಲೆ ಗೆಯ್ವುದಂ ನಟ್ಟಾಲಿಯೊಳಭೀಕ್ಷಿಸಿ ಮಕ್ಕಳ ಬಯಕೆಯಿಂ ಜಾನಕಿ ಸಖಿ ಗಿಂತೆಂದಳ್ (ರಾಮಾಶ್ವ. ೧೮-೩) ; ನೆತ್ತಿ ಮುಸುಕಿನ ಕೈಯ ಗಲ್ಲದ ಕುತ್ತದಲೆ ನಟ್ಟಾಲಿಗಳ ಚಲಚಿತ್ತರಿದ್ದುದು ಸಕಲ ನಾಯಕವಾಡಿ ದುಗುಡದಲಿ (ಕುವ್ಯಾದ್ರೋ. ೪-೪). ನಟ್ಟು ನಿಲ್ = ಸ್ಥಿರವಾಗಿ ನಿಲ್ಲು; ಅಚಲವಾಗಿ ನಿಲ್ಲು : ಆವೆಡೆಯೊಳಂ ವಿಕ್ರಮಂ ಕ್ರಮಮೆನಿಸಿದುದಱಿಂ ಪರಾಕ್ರಮಧವಳ ನುಂ ಎಂತಪ್ಪ ಸಂಗ್ರಾಮದೊಳಂ ಪೋಗದೆ ನಟ್ಟು ನಿಲ್ವುದಱಿಂ ಸಮರೈಕ ಮೇರುವುಂ (ಪಂಪಭಾ. ೧೪-೩೭ವ). ನಡೆ ದಿಟ್ಟಿಸು = ನೆಟ್ಟನೋಟದಿಂದ ನೋಡು; ದುರುಗುಟ್ಟಿಕೊಂಡು ನೋಡು : ಪರಸ್ಪರರನ್ನು ನುಂಗಿ ಕೊಳ್ಳಲೆಂಬಂತೆ ಕೆಂಡಗಣ್ಣುಗಳಿಂದಿವರಂ ನಡೆ ದಿಟ್ಟಿಸುತ್ತಿರುವುದು ಇವಂಗುಳ್ಳ ಪೂರ್ವಪರಿಚಯವನ್ನು ಬಿಟ್ಟಾಡಿ ಕುಡುತ್ತಿದೆ (ಮಂತ್ರಶ. ೨೨-೬). ನೆಟ್ಟಗಣ್ಣು ಬೀಳು = ಗುಂಡ್ಡೆ ಅಲುಗಾಡದಿರು ; ಸಾವು ಸಮೀಪಿಸು.

[ ದೇ.॥ ತಮಿ. ನಟು ; ಮಲ.ನಡು ; ಕೊಡ. ನಡಿ ]

**ನಡು₂** (ನಾ). ೧. ಮಧ್ಯಭಾಗ ; ಕೇಂದ್ರ : "ನಡು–ಸಂಸ್ಥಾಪನೇ, ಮಧ್ಯೇ ಚ" (ಶಮುಧಾ) ; "ಮಧ್ಯಮಿಾಯಮೆನೆ ಮಧ್ಯಮೆನೆ ನಡುವಕ್ಕು" (ಮಂಗರಾ. ೧೩೫-೩೮) ; ಪೂವಿನ ಓಪ್ಪರಗೆ[ಯ ನಾಲ್ಕುದೆಸೆಯ ಪೊಲೆಮೇರೆಯಂ ನ]ಡು ಸರಿಯಾಗಿ ನಡದು[ಂ]ಕೊಟ್ಟರ್ (ಸೌಇಇ. XI-i, ೯-೩೪ ; 862); ಕಡೆವಿಡಿದು ಬಳಸಿ ನೀರಿರೆ ನಡು ಬತ್ತಿದ ಕೆಱೆಯನಿಂತು ಕಂಡುದಱಿಂದಂ ನಡು ನಾಡೊಳಱಂ ನೆಲಸದೆ ಕಡೆಯೊಳ್ ನೆಲೆಗೊಳ್ಗುಂ (ಆದಿಪು. ೧೫-೪೦) ; ಎತ್ತೆತ್ತಂ ನೋಟ್ಪಡೆಂತುಂ ಕಡೆ ನಡು ಮೊದಲೆಂಬೀ ವಿಭೇದಂಗಳಂ ತೋಱು ತ್ತಿಲ್ಲಂತೆಂದೆನಿಪ್ಪಾಗಸದೊಳ್ (ಚಾಧಪು. ೧-೬೦) ; ಕರಗಸದ ನಡು ಬಡ ವಾದರೆಯು ಕೊಱೆದಿಕ್ಕದೇ ತರುವ (ಸಂಭಪ. ೨೧-೩೯) ; ತುದಿ ಮೊದಲು ನಡುವೆಂಬ ಲಯದಭ್ಯುದಯವೆಂಬ ವಿಕಾರಗಳು ಸೋಂಕದ ಸನಾತನಗಾಯ್ತು ಲೀಲೆ ಮನುಷ್ಯರೂಪಿನಲಿ (ತೊರರಾ. ೧-೮-೭೨). ೨. **ಶರೀರದ ಮಧ್ಯ ಭಾಗ ; ಸೊಂಟ ; ಟೊಂಕ** : "ಅವಲಗ್ನಂ, (ವಿ)ಲಗ್ನಂ, ಮಧ್ಯಂ, ಮಧ್ಯಮಂ – ಈ ೪ ನಡು" (ಹಲಾಯು. ೮೫-೩೭೩) ; ಬಡಿ ಕೊಲ್ ಕಟ್ಟಿಱಿ ಮುಱಿ ಕಡಿ ನಡುವಂ ಕೊಱೆ . . . ನುಂಗೆಂದು ಮುಸುಱಿ ನಾರಕರಾಗಳ್ (ವರ್ಧಮಾ. ೧೨೭-೧೦) ; ಆಕೆಯ ನಡುವಿನ ಬಡತನವುಂ ಪಗೆವರ ಸಿರಿಯು ಮೊಡನೊಡನೆ ಕೆಟ್ಟುವು (ಪಂಪಭಾ. ೧-೧೪೧ ವ) ; ನಡುವುಡಿವನ್ನಮೇಱಿ ಬರಿಯೆಲ್ಬುಡಿವನ್ನಗಮೊತ್ತಿ . . . ಉರಮನಿರ್ಬಗಿಯಾಗಿರೆ ಪೋಟ್ದು (ಗದಾಯು. ೫-೪) ; ತಡೆಯದೆ ಮಗಳೆಂದಳಿಯನ ನಡುವಂ ತಟ್ಕೈಸಿಕೊಂಡು ಹಿತ್ತಲ ದೆಸೆಯೊಳ್ ಬಿಡದೋಡುವಾಕೆ ಕಾಣದೆ ಕೆಡೆದಳ್ತಲ್ಲಣದಿನಾಗಳೆಂಜಲ ಕುಱಿಯೊಳ್ (ಧರ್ಮಾಮೃ. ೨-೪೪) ; ಸಿಂಗದ ನಡು ಮುಱಿಯಲಾ ಸಿಂಗ ವೇನು ಬಾತೆ (ಬಸವ. ೬೩೪) ; ಸಡಿಲೆ ಮುಡಿ ಬಳ್ಕೆ ನಡು ದಡದಡಿಸುತ್ತಿರೆ ತೊಡೆಗಳುಣ್ಕೆ ನೂಪುರನಿನದಂ (ಕುಸುಮಾ. ೮-೯) ; ಕಾಲು ಖಂಡಿಸಿ ಬೀಳೆ ಕರುಳಿನ ಮಾಲೆಯೊಳು ತೊಡಕಿದುವು ಹಣಿದದ ಬಾಳೆಯಂದದೊಳುಡಿಯೆ ತೊಡೆ ನಡು ಮುಱಿಯೆ ಕಟಿ ಕೆದಱಿ (ಕುವ್ಯಾಭೀ. ೪-೩೦) ; ಬೈಗಿನ ಕೆಂಬಿಸಿಲ ಬೆಳಗಿಂಗೆ ದೊರೆವರ್ಪ ಪೀತಾಂಬರದುಡೆ ನಡುವಿನೊಳ್ ವಿರಾಜಿಸೆ (ರಾಮಾಶ್ವ. ೬೯-೨೦).

**ನಡುಕಲ** = ಮಧ್ಯದ ; ನಡುವೆಯ : ನಡುಕಲ ಹೆಂಡತಿಯಾದ ಕೈಕೆಯ ಹೊಟ್ಟೆಯಲ್ಲಿ ಭರತ ಹುಟ್ಟಿದನು (ನೀತಿಚಿಂ. I, ೧೩); ನಾನು ಇನ್ನೂ ಮಗು ವಾಗಿದ್ದಾಗ, ನನ್ನ ನಡುಕಲ ಅಣ್ಣ ಸಿವಿಲಿಯನ್ ಆಗಿ ನಮ್ಮ ದೇಶಕ್ಕೆ ಹಿಂತಿರುಗಿ ಬಂದಿದ್ದನು (ನಿಬಂಧ. II, ೩೪) ; ಹಿರಿಯವನು ಒಂಬತ್ತು, ನಡು ಕಲವನು ಆರು, ಕಿರಿಯವನು ಎರಡು ಆನೆಗಳನ್ನು ಹಂಚಿಕೊಂಡರು (ಕಸಾಪ. ೧-೧೨೯). **ನಡುವಣ** = ಮಧ್ಯಭಾಗಕ್ಕೆ ಸಂಬಂಧಿಸಿದ ; ಮಧ್ಯ ದಲ್ಲಿರುವ : "ಮಧ್ಯಮಂ, ಮಧ್ಯಮಿಾಯಂ, ಮಧ್ಯಂದಿನಂ – ಈ ೩ ನಡು ವಣದು" (ಹಲಾಯು. ೧೨೭-೯೦) ; ಸದಭಿಸ್ತುತಮಪ್ಪೊಂಕುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೧-೩೭) ; ಕೌರವರ್ ಕಡಲ ನಡುವಣ ಪರ್ವತದಂತಲ್ಲಾಡೆ (ಪಂಪಭಾ. ೭-೧೫ ವ) ; ಎರಡುಂ ಕೆಲದೊಳು ಮಿವರ್ ರು ಮರಸಿ ಯ ರಿ ರೆ ಸೊಗಯಿಸಿರ್ದನವನಿಪನೆರಡುಂ ಕರಿಣಿಗಳ ನಡುವಣೆಡೆಯೊಳ್ ಕರೀಂದ್ರನೊಪ್ಪುವವೊಲ್ (ಶಾಂತಿಪು. ೧-೭೫); ಪೊಸವಂದರ ನಡುವಣ ಪೂವಿನೆಸಟ ಪಾಸಿನೊಳಿರ್ದಳ್ (ಕಾದಂಬ. ೨೨೩) ; ಕಡೆಯ ದಳಂಗಳೆ ವಜ್ರಂ ನಡುವಣ ಕರ್ಣಿಕೆಯೆ ಕೇವಣಂ (ಗದಾಯು. ೩-೪೩) ; ನಕ್ಷತ್ರಗಣಂಗಳ ನಡುವಣ ಚಂದ್ರಬಿಂಬದಂತಿರ್ದ ನಂಬಿಯಣ್ಣನಂ ಕಂಡು (ನಂಬಿರ. ೨-೪೮) ; ದಿಗ್ವಾಚಿಯ ಅಣ್ಗೆ . . . ನಡುವಣಂ, ಕಡೆಯಣಂ . . . 'ನಡು' ಎಂಬುದು ಶರೀರಮಧ್ಯಮಂ ಕುಱಿತು ದಿಗ್ವಾಚಕಮಲ್ತು, ಮಧ್ಯಮಂ ಕುಱಿತು ದಿಗ್ವಾಚಕಂ (ಶಮುದ. ೧೧೦ ಪ್ರಯೋ) ; ಸುಳಿಯ ಬಹುದಂಬುಧಿಯ ನಡುವಣ ಸುಳಿಯೊಳಗೆ . . . ಕಾಣೆನು ಗೆಲುವ ಹದನನು ಮಗನೆ ಪದ್ಮವ್ಯೂಹದೊಡ್ಡಣೆಯ (ಕುವ್ಯಾದ್ರೋ. ೪-೩೭). **ನಡುವಣಂ** = ನಡುವೆ ಇರುವವನು; ಮಧ್ಯದವನು : ಪುದಿದೀ ಶ್ವೇತಾತಪತ್ರೋತ್ಕರದ ನಡುವಣಂ ವಜ್ರದಂತಂ ಸಮಂತೆತ್ತಿದ ಪಿಂಛಚ್ಛತ್ರಮಂಡಂಗಳ ನಡುವೆಸೆವಂ ವಜ್ರಬಾಹುಕ್ಷಿತೀಶಂ (ಆದಿಪು. ೪-೨೫) ; ಮೇಗಣಂ, ಕೆಟಗಣಂ, ನಡುವಣಂ (ಶಮುದ. ೧೧೦ ಪ್ರಯೋ). **ನಡುವಣಕ್ಕರ** = [ಛಂದ] ಅಂಶಗಣದ ಒಂದು ಪದ್ಯಜಾತಿಯ ಹೆಸರು ; ಐದು ಬಗೆಯ ಅಕ್ಕರಗಳಲ್ಲಿ ಒಂದು,– ನಡುವಿನದಂ : ಜಳಜಸಂಭವಗಣಮಕ್ಕೆ ಮೊದಲೊಳೆ . . . ಕಾಮಬಾಣಾ ವಳಿಯ ಪಾಂಗೆಯ್ದೆ ಗಣಮಕ್ಕೆ ನಡುವಣಕ್ಕರಕೆ ಸಖೀ (ಛಂದೋಂಬು. ೫-೨೪೪) ; ನಾಗವರ್ಮನು ೫ ಅಕ್ಕರಗಳನ್ನು ಹೇಳಿರುವನು:– ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿರಿಯಕ್ಕರ (ಕೈಪಿಡಿ. ೧೨೫) ; ನಡುವಣಕ್ಕರದ ಗಣಯೋಜನೆ . . . ಮೊದಲು ಒಂದು ಬ್ರಹ್ಮ, ನಡುವೆ ಮೂರು ವಿಷ್ಣು, ಕೊನೆಯಲ್ಲಿ ಒಂದು ರುದ್ರಗಣ (ಛಂದೋವಿ. ೧೩೯). **ನಡುವಲ, ನಡುವಳ** = ಮಧ್ಯದ ; ನಡುಕಲ : ನಡುವಲವನು ಮಾರಯ್ಯ ಮನೆಯಲ್ಲಿದ್ದಾನೆ (ದಾನಚಿಂ. ೮೩) ; ಹಿರಿಯ ಮಗನ ಕಾಲ ಮುಱಿದು ನಡುವಳ ಮಗನ ಕಯ್ಯ ಮುಱಿದು ಕಿಱಿಯ ಮಗನ ಬಾಯ ಮುಚ್ಚಿ (ಅಱಿವಮ. ೧೪೭-೫೫೯).

[ ದೇ.॥ ತಮಿ. ನಟು; ಮಲ. ಕೊಡ. ತುಳು. ನಡು; ತೆಲು. ನಡು, ನಡಿ; ಕೊಲಾ. ನಡುಮ್; ನಾಯ್ಕಿ. ನಱುಮ್; ಪರ್ಜಿ. ನಱುಬ್ ]

△ ನಡುಂಗು 'ನಡುಂಗು₁' ನೋ.

**ನಡುಕ** (ನಾ). ೧. (ಚಳಿ, ಭಯ, ಜ್ವರ ಮುಂತಾದ ಕಾರಣಗಳಿಂದ) **ಕಂಪಿಸುವಿಕೆ ; ಅದಿರುವಿಕೆ ; ನಡುಂಗುವಿಕೆ ; ಕಂಪನ** : "ವೇಪಥುಃ, ಕಂಪಃ – ಈ ೨ ನಡುಕಂ" (ಹಲಾಯು. ೯೮-೪೪೩) ; "ವೇಪಥು ಕಂಪಮೆನೆ ನಡುಕಮಕ್ಕುಂ" (ಮಂಗರಾ. ೧೧೩-೨) : ಆಗಳಾದಿತ್ಯನಾಕೆಯ ಮನದ ಶಂಕೆಯುಮಂ ನಡುಗುವ ಮೆಯ್ಯ ನಡುಕಮುಮಂ ಕಿಡೆ ನುಡಿದಿಂತೆಂದಂ (ಪಂಪಭಾ. ೧-೯೨ ವ) ; ಶೀತಂ ನಡುಕಂ ಬೆಮರುದ್ಭೂತಂ ತಲೆಬೇನೆ . . . ವಾತಜ್ವರಚೇಷ್ಟೆ ನೋಯೆ ಕಿವಿದೋಳುಗೆಗಳ್ (ಕಲ್ಯಾಕಾ. ೩-೭); ಕಾಲೊಳ್ ನಡುಕಂ ಮೆಯ್ವೆರ್ಚೆ ಗಂಟಲ್ ಕುಸಿದು ಕಿವಿಯೆಬಲ್ತಂದು ನಿಂದಿರ್ದುದೋ ರೊಂದೆಡೆಯೊಳ್ ತಾಱಿಲ್ಗಳೊತ್ತಂಬಿಡಿದು ಮೃಗಮೃಗೀವೃಂದಮೋರಂದ

ದಿಂದು (ಚಂದ್ರಪು. ೪-೪೭) ; ಭಾವದೊಳ್ ಕ ಪ್ರತ್ಯಯಮುಂಟು–ಉಡುಕಂ, ನಡುಕಂ – ಎಂಬಂತೆ (ಶಮದ. ೨೦೨ ಪ್ರಯೋ) ; ಶಿರದ ಗಂಗೆಯ ತೂಱ ತುಹಿನಾಕರನನಂಬರಕಿಟ್ಟು ಹಣೆಗಣ್ಣುರಿಯನೆಬ್ಬಿಸಿ ತನುವನೊಡ್ಡಿದನಭವ ನಡುಕದಲಿ (ತೊರರಾ. ೩-೨-೩) ; ನಡುಕಂ ಕೈಮಿಱ ದಂತಚ್ಛದಮೊಡೆ ದುಹುಹುಧ್ವಾನಮುಂ ಪೊಣ್ಮೆ . . . ಪಾಂಥರ್ತೊಡೆ ತೋಳ್ಗಳ್ಕೂಡೆ ಜಾನು ಪ್ರಹಿತಶಿರರದೇನಿರ್ದರೋ ಶೀತಭೀತರ್ (ರಾಜಶೇ. ೯-೨೨). ೨. ಅಂಜಿಕೆ; ಭಯಂ ತಲ್ಲಣ ; ಭೀತಿ : ಮೆಲ್ಲಿರ್ದಯ ನಡುಕಮುಂ ಮಾಣಿ ಸಲ್ಲಂಭ್ರುವಿಸುವಂತಿರಾ ಕಂಪಿಪಮಯಮಂಗಳುಂ (ವರ್ಧಪು. ೬-೧೨ ವ) ; ತುರಗಾಕಾರದ ಶೈಳಮನಿರದಡರ್ದೇಱದೊಡೆ ಬೆಚ್ಚಿ ನಡುಕದಿನಾಗಳ್ ತುರಗಾಶ್ರುಮನುಚ್ಚೈಶ್ರುವತುರಗೋಪಮನಿತ್ತು [ತ್ರ] ದೊಂದು ತುರಗಮ ನಿತ್ತಂ (ಬಂಹರಿ. ೮-೩೮) ; ಸೌಂದರನುಂ ತುಂಬುರನುಂ ಬೆಗಡುಗೊಂಡು ಬೆಬ್ಬಳೆವೋಗಿ ನಡುಕದ ಮಳೆ ಕಱದು . . . ಕೌತುಕರಸದೊಳವಗಾಹವಿರ್ದು (ನಂಬಿರ. ೦೮-೯೩) ; ಶ್ರೀವಳ್ಳಂತರ ಮನೆ ಅಂದರೇನೇ ನನಗೆ ನಡುಕ ಬರುತ್ತದೆ (ಪಕಿ. ೪) ; ಈ ಮಾದರಿಯ ಬೈಗುಳಗಳನ್ನು ಎಂದೂ ಕೇಳದ ಜ್ಞಾನಾಂಬೆಗೆ ನಡುಕವುಂಟಾಗಿ ಜ್ವರವೂ ಬಂದು ಗರ್ಭಕ್ಕೆ ಧಕ್ಕೆ ಬರುವಂತಾಗಿ ಬಿಟ್ಟಿತು (ಪ್ರತಾಪ. ೪೧). ೩. (ಅಲಂ) ಚಂಚಲವಾದುದಂ ; ಸ್ಥಿರವಲ್ಲದುದು : ಪೊಲಸಿನಂತಶುಚಿಯಪ್ಪ ವಾತದಂತೆ ನಡುಕಮಪ್ಪ . . . ಕೊಡದ ನೀರಂತೆ ಪೆರ್ಚಿಸಲರಿದಪ್ಪ ಸಂಸಾರಮಂ ನಂಬಿ ದರ್ಶನಮುಮಂ ವ್ರತಮುಮಂ ಕೆಡಿಸು ವುದೆಗ್ಗಿಕೆ (ಧರ್ಮಾಮೃ. ೩-೧೮೬). ೨. ೩ : ನಡುಕಮುಮಾಱಿಡಿಯುಂ ಚೂತ ಮಂಜರಿಯೊಳ್ (ಎಕ. XIII, ೩೩೨-೯೩ ; ೯೭೯).

[ < ನಡುಗು₁./ತಮಿ. ನಟುಕ್ಕ ]

**ನಡುಕಂಗಿಡು** (ಕ್ರಿ). ಕಂಪನ ನಿಲ್ಲು ; ನಡಂಗುವಿಕೆ ಇಲ್ಲದಾಗು : ಪದುಳಿಸ ದಂಗಮೆಟ್ಟಱದ ಕಣ್ಮಲರ್ . . . ನಡುಕಂಗಿಡದೂರು ಗಂದೆಯೇಱದ ಕರಘಾತಮೊಪ್ಪೆ ಸುಸಿಲಿಂ ತಣಿದೊಯ್ಯನೆ ಜಾರೆ ಜಾಱದಳ್ (ಲೀಲಾವ. ೩-೦೩). [ ನಡುಕ + ಕಿಡು ( < ಕೆಡು₁ ) ]

**ನಡುಕಂಗೊಳ್** (ಕ್ರಿ). ೧. ಕಂಪಿಸು ; ನಡಂಗು. ೨. ಭಯವನ್ನು ಹೊಂದು ; ಹೆದರು : "ಸಡೆದನೆಂದುಂ, ನಡುಕಂಗೊಂಡನೆಂದುಂ . . . ತೆಮರ್ತನೆಂದುಂ–ಈ ೮ ಭಯಂಗೊಂಡಮಂ" (ಕಶಸಾ. ೫೭-೨೨೫) ; ಇಂದ್ರಂ ವಹ್ನಿ ಧರ್ಮಂ ನಿರುತಿ ಜಲಧಿಪಂ ವಾಯು ವಿತ್ತೇಶನೀಶಂ ನಡುಕಂಗೊಳ್ವಂ ಸುರುಳ್ವಂ ಸುಗಿವವಗಿವನುಳ್ಳಳ್ಕುವಂ ಬಳ್ಕುವಂ ಪಾವದರ್ದಂತಿರ್ಪಂ ಬೆಮರ್ವಂ ಜಯವೊಡೆದ ರವಕ್ಕದ್ಭುತಂ ಕಂಸಚಾಪಂ (ಜಗವಿ. ೬-೩೦).

[ ನಡುಕ + ಕೊಳ್₁ ]

**ನಡುಕಂಬೆರು,** ನಡಂಕವೆರು (ಕ್ರಿ). ೧. ನಡಂಕವನ್ನು ಹೊಂದು ; ಕಂಪಿಸು ; ನಡಂಗು. ೨. ಭೀತಿಯನ್ನು ಹೊಂದು ; ಹೆದರು ; ಭಯಂಗೊಳ್ಳು : ನಡುಕಂಬೆತ್ತಿರ್ಪಳಂ ಸೋಂಕುವೆಯುಡಿಗಡಿಗಂ (ಶಾಕುಂತ. ೦೦-೨೪). **ನಡುಕವೆರು :** ೧. ನಡುಕವೆತ್ತಿದ ಅವಳ ಕೈಬೆರಳುಗಳು . . . ಬಳೆಗಳನ್ನು ತೆಗೆಯಲೊಲ್ಲದೆ ಹೋದುವು (ಭಾರವೀ. ೩).

[ ನಡುಕ + ಪೆರು₁ ( < ಪೆಱು₁ ) ]

**ನಡುಕಟ್ಟು₁** 'ನಡುಗಟ್ಟು₁' ನೋ.

**ನಡುಕಟ್ಟು₂** 'ನಡುಗಟ್ಟು₂' ನೋ.

**ನಡುಕಡಲು** 'ನಡಂಗಡಲ್' ನೋ.

**ನಡುಕವೆರು** 'ನಡುಕಂಬೆರು' ನೋ.

**ನಡುಕಾನನ** (ನಾ). ಅರಣ್ಯದ ಮಧ್ಯಭಾಗ ; ನಟ್ಟಡವಿ : ನಡೆದರು ಪುಣ್ಯದ ನಿಜಪುತ್ತಳಿಯಂತೆ . . . ನಡುಕಾನನವ ಹೊಕ್ಕರು ಉಗ್ರದಡವಿಯ ಮೃಢ ಬಲ್ಲನವರ ದುಃಖಗಳ (ಹರಿಸಾಂ. ೩-೩೮). [ ನಡು₂ + ಕಾನನ ]

**ನಡುಕೇರಿ** 'ನಡಂಗೇರಿ' ನೋ.

**ನಡುಕೋಣೆ** (ನಾ). ಮನೆಯ ನಡುವಿನಲ್ಲಿರುವ ಕೋಣೆ : ನಡುಮನೆ : ನರ್ಸಿಗೆ ಹೊರಗಿನಿಂದ ಉತ್ತರ ಬಾರದಿರಲು, ಅವಳಾಗಿಯೇ ನಡುಕೋಣೆಗೆ ಬಂದು ನೋಡಿದಳು (ಒಡ್ಡಿಉ. ೪೯). [ ನಡು₂ + ಕೋಣೆ₂ ( < ಕೋಣ್ ) ]

**ನಡುಕೋಲ್** 'ನಡಂಗೋಲ್' ನೋ.

**ನಡುಗಂತಿ** (ನಾ). ಎಳಗಂದಿಯಾಗಿರುವ ಸ್ಥಿತಿಯನ್ನು ದಾಟಿದ ಹಸು ; ಕರುವಿನ ಮಧ್ಯಕಾಲದಲ್ಲಿರುವ ಹಸು : ನಡುಗಂತಿಯಾದ ಹಸತಿಗೆಯ ಹಸುವಿನ ಮೊಸರು ಕಡೆದ ಹೊಸ ಬೆಣ್ಣೆಯಂ ಸೋದಿಸಿಯೊಲೆಯೊಳೆತ್ತಿ... ತುಪ್ಪಮಂ ಹಸಮಾಳ್ಪುದು (ಸೂಪಶಾ. ೨-೦೭). 'ಎಳೆಗಂತಿ' ಪರಾ.

[ ನಡು₂ + ಕಂತಿ₁ ( < ಕಂದಿ₁ ) ]

**ನಡುಗಂಬ** 'ನಡಂಗಂಭ' ನೋ.

**ನಡುಗಂಭ,** ನಡಂಗಂಬ (ನಾ). ಮಧ್ಯಭಾಗದಲ್ಲಿರುವ ಕಂಭ,–ಸ್ತಂಭ : ಅವಳ ವಿಪರೀತವೇಷಂ ತನಗೆ ರೋಷಮನೀಯೆ ಸಾಯೆ ಸದೆಬಡಿದು ಮನೆಯ ನಡುಗಂಭದೊಳಡಸಿ ಕಟ್ಟಿ ಕಳ್ಳಸೊರ್ಕಿನೊಳಮವಳ ಪೊರ್ಕುಳಿ ಯೊಳಂ ಬಟಲ್ದು ನಿದ್ರಿತನಪ್ಪುದುಂ (ಶಂಚಶಂ. ೭೪-೨೦). **ನಡುಗಂಬ :** ಸುತ್ತುಮೆಟ್ಟಿಲು ಹಂತದ ನಡುಗಂಬ (Newel. ಇಂಕನಿ).

[ ನಡು₂ + ಕಂಭ ]

**ನಡುಗಟ್ಟು₁,** ನಡುಕಟ್ಟು₁ (ಕ್ರಿ). ೧. ಸೊಂಟಕ್ಕೆ ಬಟ್ಟೆ ಮುಂತಾದು ವನ್ನು ಸುತ್ತು,–ಕಟ್ಟು : ಎಲೆ ಮರುಳೆ, ನಡುಗಟ್ಟಿ ವೀರಮಂಡಿಯನಿಕ್ಕಿ ಬಲಗೆಯ್ಯನೆಳೆದು ಕವಿಗಾನಿಸುವೆ ಸರಳಂ ! (ಗಿಲಿಎಂ. ೨೮-೦೭). ೨. (ಅಲಂ) ಟೊಂಕಕಟ್ಟು ; ಸಿದ್ಧವಾಗು ; ಸಜ್ಜಾಗು : ರಣದಲ್ಲಿ ನಡುಗಟ್ಟಿ ಹಿಮ್ಮೆಟ್ಟ ದೊಡಲೊಡ್ಡಿ ಯತ್ನದಲಿ ಬಲುಬಳಲಿ (ವಿಸೀಗೀ. ೫೩-೦೭). **ನಡುಕಟ್ಟು :** ೨. ಹೆಜ್ಜೆಹೆಜ್ಜೆಗೆ ನಿಧಿಯ ಕೊಪ್ಪರಿಗೆ ಕಾದಿಹುದು ... ಎಡವಿಬೀಳುವ ದೊಂದೆ, ಹಿಡಿದು ಅಗೆದವರಿಲ್ಲ ನಡುಕಟ್ಟಿ ನಿಂತವ ೦ ಪಡೆಯಬಹುದು (ನೆಲಮಂ. ೨೦-೨೦).

ನಡುಗಟ್ಟಿ ನಿಲ್ಲು, ನಡುಕಟ್ಟಿ ನಿಲ್ಲು = ಟೊಂಕ ಕಟ್ಟಿ ನಿಲ್ಲು ; ಸಿದ್ಧವಾಗಿ ನಿಲ್ಲು ; ಸಜ್ಜಾಗು : ನಾವೀಗ ನಡುಗಟ್ಟಿ ನಿಲ್ಲಬೇಕಾದುದು ನಮ್ಮ ಧರ್ಮ (ಸವತಿ. ೬೩) ; ಅವುಗಳ ಪಕ್ಕದಲ್ಲಿ ನಂಜರಾಜಯ್ಯನ ನಚ್ಚಿನ ಜ್ಯೋತಿಷಿ ಉಪಾಧ್ಯಾಯ ನಡುಕಟ್ಟಿ ನಿಂತಿದ್ದ (ಜದೇವ. ೦೩೨).

[ ನಡು₂ + ಕಟ್ಟು₁ ]

**ನಡುಗಟ್ಟು₂,** ನಡುಕಟ್ಟು₂ (ನಾ). ಸೊಂಟಕ್ಕೆ ಕಟ್ಟುವ ಬಟ್ಟೆ ಮುಂತಾದ ಪಟ್ಟಿ ; ಸೊಂಟಪಟ್ಟಿ : ತೊಟ್ಟಸೆವಾ ಕರಿಯ ನಡುಗ [ಪಾಠಾಂ. ಕ]ಟ್ಟನಂಗಿಗೆವೆರಸಿದ ತಲ್ಲೇಖವಾಹನುನ್ನತದೇಹಂ (ವರ್ಧಪು. ೩-೧೩). **ನಡುಕಟ್ಟು₂ :** ಬೆಳ್ಳಿಯ ನಡುಕಟ್ಟು–ನೀಲಿಯ ಮೇಲಂಗಿ (ಆರ್ಯಕ. ೦) ; ಪ್ರತಿಯೊಬ್ಬನೂ ತನ್ನ ನಡುಕಟ್ಟಿನಲ್ಲಿ ಅವಾಗಲೂ ಒಂದು ಚೂರಿಯನ್ನೋ, ಕಠಾರಿಯನ್ನೋ ಇಟ್ಟೇ ಇರುತ್ತಿದ್ದನು (ರಾಜಾಮ. ೨೦) ; ಕಾಡುಕೋಳಿ ಗಳನ್ನೂ, ಕೆಲವು ವೇಳೆ ಬೇರೆ ಪ್ರಾಣಿಗಳನ್ನೂ ಕೊಂದು ನಡುಕಟ್ಟಿನಲ್ಲಿಟ್ಟು ಕೊಂಡು ಬರುತ್ತಿದ್ದನು (ಮಲೆನಾ. ೦೨೮) ; ಅಗದೋನೆ ಭೋಗದೋನೆ ನಾಗರಾ ನಡುಕಟ್ಟನೋನೆ (ಹಳ್ಳಿಜಾ. ೫೭). [ ನಡು₂ + ಕಟ್ಟು₃ ]

**ನಡುಗಡಲ್,** ನಡುಕಡಲು, ನಡುಗಡಲು (ನಾ). ಸಮುದ್ರದ ಮಧ್ಯ ಭಾಗ ; ನಡುನೀರು : ನಡುಗಡಲೊಳ್ ಪಱಗೋಲಂ ನಡೆಯಿಸುವಂಬಿಗ ನಂತೆ (ಧರ್ಮಾಮೃ. ೬-೨೦೯); ಇಂತು ನಡುಗಡಲೊಳಾಳುವಂಗೆ ತೆಪ್ಪವಾಗುತ್ತ ಪಿಂಗುವರೆ (ಬಸರ. ೪-೩೦). **ನಡುಕಡಲು :** ನಡುಕಡಲಿನಲ್ಲಿ ಮುಳುಗು ತ್ತಿದ್ದವನಿಗೆ ತೆಪ್ಪವಾಗಿ, ಕೈಬಿಡುವಿರಾ ? (ತುಂಗಭ. ೪೧). **ನಡುಗಡಲು :** ಎಲೆ ವಿಧಾತನೆ ವ್ಯಥಾ ಹೊಳೆಯ ನಡುಗಡಲೊಳಗೆ ಸಾವೆಯುಂ ಮುಳುಗಿ ಸಿದೆಲ್ಲೆ (ತುರಂಗ. ೨-೨೭). [ ನಡು₂ + ಕಡಲ್₃ ]

**ನಡುಗಡಲು** 'ನಡಂಗಡಲ್' ನೋ.

**ನಡುಗಡ್ಡೆ** (ನಾ). ಸುತ್ತಲೂ ನೀರಿನಿಂದ ಸುತ್ತುವರಿದ ಭೂಪ್ರದೇಶ ; ದ್ವೀಪ : "ಅಂತರೀಪ – ನಡುಗಡ್ಡೆ, ದ್ವೀಪ" (ಗಂಗಾವು. ೨) ; ದಕ್ಷಿಣ ಮಹಾಸಾಗರದಲ್ಲಿ ಹಲವು ನಡುಗಡ್ಡೆಗಳುಂಟು (ಮುಂಬಯಿ. ೪-೧೦೫) ; ಆ ನಡುಗಡ್ಡೆಯ ಅಧಿರಾಣಿಯಿರಬೇಕು ಆ ಅಪೂರ್ವ ವಿಚಿತ್ರರೂಪಸಿ (ಸಿಡಿಲು. ೩೬) ; ಒಂದು ಕಾಲಕ್ಕೆ ಹಿಂದೀಉಪಸಾಗರದಲ್ಲಿದ್ದು, ಈಗ ಮುಳುಗಿಹೋದ 'ಲೆಮೂರಿಯಾ' ಎಂಬ ನಡುಗಡ್ಡೆಯಿಂದ ಇವರು ಬಂದವರು (ಭಾಷಾಶಾ.೬೬); ದೋಣಿಯು . . . ಝಾಂಝಿಬಾರ ನಡುಗಡ್ಡೆಯ ದಂಡೆಗೆ ಸ್ವಲ್ಪ ಹೊತ್ತಿನ ಮೇಲೆ ಬಂದು ತಲುಪಿತು (ಮೇದಿಮು. ೧೦೦). [ನಡು₂ + ಗಡ್ಡೆ]

**ನಡುಗಣ್** (ನಾ). ೧. ಕಣ್ಣಿನ ಮಧ್ಯಭಾಗ. 'ನಡುಗಣ್ಬೆಳಗು' ಪರಾ. ೨. (ಹಣೆಯ) ಮಧ್ಯದಲ್ಲಿರುವ ಕಣ್ಣು ; ಹಣೆಗಣ್ಣು : ಸುರನದಿಯು ಕುಂಡಲದ ನಡುಗಣ್ಣ ಪಂಚಾಸ್ಯದೀರ್ಘದುಭುಜದ . . . ನಿಜದ ಮೂರ್ತಿಯಂ ತೋಱಿಸಿದನು (ಸಿದ್ಧರಾ. ೨-೨೬) ; ಐಕಿಲ್ಗಂಜಿ ನಂಜುಂಡಂ . . . ಪಣೆಯ ನಡುಗಣ್ಣ ಕಿಚ್ಚನುಜ್ಜಳಿಸಿ ಸಜ್ಜನ ಬೆಂಬೂದಿಯಂ ಮೆಯ್ಗೆ ಪೂಸಿ ದಟ್ಟದೊವಲಂ ಪೊದೆದಗಜಿವೆರಸು ಬೆರೆವೊಡಲೊಳಿರ್ದಂ (ರಾಮಾಶ್ವ. ೧೦೫-೫). [ನಡು₂ + ಕಣ್]

**ನಡುಗಣ್ಣು**, ನೆಡುಗಣ್ಣು (ನಾ). ಅತ್ತಿತ್ತ ಚಲಿಸದ ಕಣ್ಣು ; ಒಂದೇ ಕಡೆಗೆ ಸ್ಥಿರವಾದ ದೃಷ್ಟಿಯುಳ್ಳ ಕಣ್ಣು ; ಅಚಲವಾದ ನೋಟ : ನಿಟ್ಟಡಿಯಿಂದ ಹೋಗಿ, ಚೆನ್ನನಿಗೆ ನಿಂತು, ಆತನಿಗೆ ನಡುಗಣ್ಣಾಗಿದ್ದ (ಮಂತ್ರಶ. ೮೩-೬). **ನೆಡುಗಣ್ಣು** : ನರಸಣ್ಣನು ನೆಡುಗಣ್ಣಾಗಿ ನೋಡುತ್ತ ನಿಂತುಬಿಟ್ಟನು (ನಡದಾ. I, ೪೩೬). [ನಡು₁ + ಕಣ್ಣು (<ಕಣ್)]

**ನಡುಗಣ್ಬೆಳಗು** (ನಾ). ಕಣ್ಣಿನ ಗುಡ್ಡೆಯ ಕಾಂತಿ ; ಆಲಿಯ ಹೊಳಪು : ಸಿರಿಮೊಗಮುಂ ನಸುಬಾಗಿ ಕರಂ ಭೂವರನಂ ಪುರ್ಬಿಱಿಸಿ ನಡೆ ನೋಡುವ ತರುಣಿಯ ನಡುಗಣ್ಬೆಳಗಾ ಯವೆಯಾ ಪುರ್ಬನಡರಿ ಪರಿಯೆ (ಜಯಾಕಾ. ೪-೧೩). [ನಡುಗಣ್ + ಬೆಳಗು₂]

**ನಡುಗನ್ನಡ** (ನಾ). ಮಧ್ಯಕಾಲದ ಕನ್ನಡ ; ಹಳಗನ್ನಡ ಮತ್ತು ಹೊಸ ಗನ್ನಡಗಳ ನಡುವಿನ ಕಾಲದ ಕನ್ನಡ : ಈಗ ನಾವು ಬಳಸುತ್ತಿರುವ ಭಾಷೆ "ಹೊಸಗನ್ನಡ". ಇದಕ್ಕೆ ಹಿಂದೆ ಇದ್ದ ರೂಪವನ್ನು "ನಡುಗನ್ನಡ" ವೆನ್ನುತ್ತಾರೆ (ಕೃಪಿಡಿ. ೧) ; ಅನೇಕ ದೃಷ್ಟಿಗಳಿಂದ ಹನ್ನೆರಡನೆಯ ಶತಮಾನದ ಮಧ್ಯಭಾಗವನ್ನು ಒಂದು ಪರ್ವಕಾಲವೆಂದು ಕರೆಯಬಹುದು . . . ಭಾಷೆಯ ದೃಷ್ಟಿಯಿಂದ ನೋಡಿದರೆ ಹಳಗನ್ನಡವು ನಡುಗನ್ನಡವಾಗಿ ಸಂಕ್ರಮಣವಾಗುತ್ತಿದ್ದುದು ಆ ಕಾಲದಲ್ಲಿಯೇ (ಕಶಾಅ. ೬) ; ನಡುಗನ್ನಡ –ಹೊಸಗನ್ನಡ ಕವಿತೆಗಳಲ್ಲಿ ಮತ್ತು ಆಡುನುಡಿಯಲ್ಲಿ ನೀನು, ನಾನು, ತಾನು ಎಂಬಿವಕ್ಕೆ ನೀ, ನಾ, ತಾ ಎಂಬಿವೂ ಸ್ಥಾನಿಗಳಾಗುತ್ತವೆ (ಸಂಶೋಧ. ೩೫). [ನಡು₂ + ಕನ್ನಡ₁]

**ನಡುಗಲ್** (ನಾ). ನಟ್ಟಿರುವ ಕಲ್ಲು ; ನಿಲ್ಲಿಸಿರುವ ಕಲ್ಲು : ಮುಂಚ್ಚನ್ದಿನ್ನಡುಗಲ್ಲೆ ಪಡುವಯಾಲೆ ತಾಯಾನ್ದೆಕೆಱೆಯೆ ವಡಗಾಯ್ನುಡುಗಲ್ಲೆ ಕೊತ್ತನ್ದೆಱೆಯೆ (ಎಕ. X (8), ಚಿಕ್ಕಬ. ೧೦೩-೬೪ ; 850). [ನಡು₂ + ಕಲ್₃]

**ನಡುಗಾಡು** (ನಾ). ಕಾಡಿನ ಮಧ್ಯಭಾಗ ; ಅರಣ್ಯದ ಮಧ್ಯಪ್ರದೇಶ ; ಕಾಡಿನ ಒಳಗಿನ ಪ್ರದೇಶ : ಹೊತ್ತಿಹ ಹೊಱೆಯಂ ನಡುಗಾಡಿನಲ್ಲಿ ಮುಡುಗುತ್ತೊಡೆಯರೆ ಬರಲಮ್ಮೆವೆಂದು ನುಡಿದರ್ಭಯದಿಂ (ನನ್ನಜಾ. ೨-೯೧) ; ಪರಮಕೃಪಾಕರನೆಂಬೀ ಬಿನುದಂ ಬಿಸುಟಕಟ ಶಂಕರಾ ಶಂಕರನಂ ಹರಸಿ ನಡಗಾಡೊಳಂಧೆಯಾ ಕರದಂಡಮನೆಳೆದುಕೊಂಡವೋಲ್ಕಾಡಿದೆಯ್ (ರಾಜಶೇ. ೦೩-೦೨೯). [ನಡು₂ + ಕಾಡು₂]

**ನಡುಗಾನಲ್** (ನಾ). = ನಡುಗಾಡು : ಮಿಕ್ಕ ಸರುವಿಂಗೆ ದರುವಿಂಗೆ . . . ನಡುಗಾನಲಿಂಗೆ [ಪಾಠಾಂ. ನಡುವಾನಲಿಂಗೆ, ನಳನಾನಂಲಿಂಗೆ] ತೆಕ್ಕಿಗತ್ತಲೆಗೆ . . . ಇಕ್ಕೆವನೆಯಾನೆಂದು ಬೊಬ್ಬಿಟ್ಟು ಪೇಳ್ವಂತೆ ಘೀಳಿಡುತ್ತುಲಿದುದಡವಿ (ಸೋಮಜ. ೩-೩). [ನಡು₂ + ಕಾನಲ್]

**ನಡುಗಾಲ** (ನಾ). ೧. ಮಧ್ಯಕಾಲ ; ಮಧ್ಯಂತರ ಕಾಲ. ೨. ಸ್ಥಿರವಾದ ತೀರ್ಮಾನ ಕೈಕೊಳ್ಳುವ ಮುಂಚಿನ ಕಾಲ, –ಸಮಯ; ತಾತ್ಕಾಲಿಕವಾಗಿ ನಿರ್ಣಯ ತೆಗೆದುಕೊಳ್ಳುವ ಕಾಲ.

ನಡುಗಾಲದ ವರದಿ=ತಾತ್ಕಾಲಿಕವಾದ ವರದಿ ; ಸ್ಥಿರವಲ್ಲದ ಸಂದ್ದಿ: (Interim report. ಪತ್ರಿನಿ. ೪೬). ನಡುಗಾಲದ ಸರಕಾರ=ಮಧ್ಯಕಾಲದ ಸರಕಾರ ; ತಾತ್ಕಾಲಿಕವಾದ ಆಡಳಿತ : ರಾಜ್ಯದ ಮಂತ್ರಿಮಂಡಲವು ಬಹುಮತವನ್ನು ಕಳೆದುಕೊಂಡಾಗ ರಾಜ್ಯಪಾಲರು ನಡುಗಾಲದ ಸರಕಾರವನ್ನು ನೋಡಿಕೊಳ್ಳುತ್ತಿದ್ದರು (ರೂಢಿ). [ನಡು₂ + ಕಾಲ]

**ನಡುಗಿಸು** (ಕ್ರಿ). ೧. ನಡುಗುವಂತೆ ಮಾಡು ; ಅಲುಗುವಂತೆ ಮಾಡು ; ಅಲ್ಲಾಡಿಸು : ಅಂಗವಂ ನಡುಗಿಸುತ ಬಸುಱಂ ಪೊಂಗಿಸುತವಕ್ಕಳಿಸುತಂ ವಾದ್ಯಂಗಳಿಗೆ ಬೆಚ್ಚುತ ಬೆದಱುತಂ (ಬಸವು. ೧-೪೯) ; ಮೂಲೋಕಮಂ ಮಾಗಿ ನಡುಗಿಸಿತು ಮೇಣುಡುಗಿಸಿತು ಪೆರ್ಚಿದ್ದೆಕಿಲಿಂದೆ (ಜೈಮಿಭಾ. ೨೮-೨); ಕಾಶೀಮ ಕೈ ನಡುಗಿಸುತ್ತ ಚೀಟಿ ಬರೆಯಹತ್ತಿದ (ಜೀವರಂ. ೩) ; ಒಳ್ಳಿದರ ನೆಚ್ಚರಿಸೆ ಓಡಿದು ನಡುಗಿಸುಗುಂ (ಕಾಲೂರ. ೭೭-೧೪೧). ೨. ಭಯಗೊಳಿಸು; ತಲ್ಲಣಗೊಳಿಸು : ಧಾರದೊಳರಿಗಳಂ ನಡುಗಿಸುವುದಾಗಿ ಚತುರಂಗಬಲವೆನಿಸಿತೀ ಛತ್ರವು (ಹಚಕಾ. ೭-೧೪) ; ಸಹದೇವ ನಕುಲರ ನಡುಗಿಸಿದನುಡುಗಿಸಿದನಾಟೋಪವನು ಪವನಜನ (ಕುಮಾ.ಕ. ೩-೧೩).

ನಡನಡುಗಿಸು (ದ್ವಿರುಕ್ತಿ) : ನಡನಡುಗಿಸಿ ನಲ್ಲನೆದೆಯ ಧೈರ್ಯವ . . . ಪೊಂಗೊಡವೊಲೆವೆಂಗಳು ಮುಸುಕಿತು ಮೃಡಶಪಧ್ವಂಸಿಯ ಪಿತನ (ಮೋಹತ. ೧೪-೫೧). [ನಡುಗು₁ + – ಇಸು₃]

**ನಡುಗು₁**, ನಡುಂಗು (ಕ್ರಿ). ೧. ಅದುರು ; ಅಲ್ಲಾಡು ; ಕಂಪಿಸು : "ನಡುಗು (ನಡಗು)—ಕಂಪನೇ" (ಶಮುಧಾ) ; "ಕಂಪಿಸಿದುದೆನಲ್ಕೆ ನಡುಗಿದುದು" (ಕರ್ಣಾನಿ. ೨೪); ತೆಂಕಣಗಾಳಿಯೊಳಾದ ಸೋಂಕಿನೊಳೆ ನಡುಗುವಶೋಕವಲ್ಲರಿಯ ಪಲ್ಲವದೊಳೆ ನವಚೂತಪಲ್ಲವಂ ತೊಡರ್ದವೊಲಾಗೆ (ಪಂಪಭಾ. ೩-೭೫); ಎಲರಲೆಪದಿಂ ನಡುಗುವೆಲೆದುಱುಗಲಿಂ ಕದಳೀವನಂಗಳು ಮ್ಮೆಕಿಲಡರ್ದು ನಡುಗಿದಪುವೆಂಬಂತೆಯುಂ (ಕಾದಂಉ. ೨೧೯) ; ಭಯದಿಂದಂ ನೋಡಿ ನಾಡೆ ನಡುಗುತ್ತಿರ್ದಳ್ (ಧರ್ಮಾಮೃ. ೩-೪೫) ; ನಡುಗುವ ನರೆದಲೆಯಿಂ ನರೆತು ಸಡಿಲ್ದ ಸರ್ವಾಂಗದಿಂ (ನಂಬಿರ. ೬-೨೫) ; ಸವನಿಸೆ ಹಮ್ಮದಂ ನಡುಪ ಕಾಲ್ ಬೆಮರಂ ಬಿಡುತಿರ್ಪ ಗಲ್ಲಮುಣ್ಮುವ ನವಿರ್ . . . ಇವರೊಳೊಪ್ಪೆ ನೋಡಿದರ್ (ಕಬ್ಬಿಕಾ. ೩೩೨) ; ಕರ ನಡುಗೆ ಮೈ ಬಲಿಯೆ ಹುಬ್ಬುಗಳುಱೆ ಬಿಗಿಯೆ (ಕುಮಾ.ಕ. ೦೨-೧೦). ೨. ಹೆದರು ; ಭಯಪಡು; ಭೀತಿಗೊಳ್ಳು : ನಡುಗುವುದುಂತೆ ಪಾಂಡವಬಲಂ ನಿನಗರ್ಜುನನೆಂಬನೆಂದುಮುರ್ಕುಡುಗಿ ಸುರುಳ್ದನೀಯೆಡೆಗೆ ಪೇೞ್ ಪೆಱರಾರ್ ದೊರೆ . . . ಅಂಗವಹೀತಳಾಧಿಪಾ (ಪಂಪಭಾ. ೦೨-೫೧) ; ಮುಳಿದು ಕೊಲಲಿರ್ದ ಕುಂಭನೆಂಬ ರಕ್ಕಸಂಗೆ ನಡುಗಿ ಚಂಡಕೌಶಿಕಂ ಮುಂಡಕೌಶಿಕನನೊಯ್ದು ದ್ರಿಗುಹಾಂತರದೊಳ್ ಪ್ರಯತ್ನಂ ಬೆರಸಿರಿಸಿ ಕಾವುದುಂ (ಶಾಂತಿಪು. ೬-೨೫ವ) ; ನಡುಗಿ ಪೊಡೆವಡುವುದುಂ ಮೊಱೆಯಿಡುವುದುಮೇಕಣ್ಣ (ಸಮಪು. ೯-೮೦) ; ಕಳ್ಳರ ಕೊಟ್ಟುಮಿದೆಂದೊಡೆ ಬಲ್ಲಿದರುಂ ನಡುಗುತಿರ್ಪರ್ (ಧರ್ಮಾಮೃ. ೦೨-೨೩೬) ; ಒಡೆಯರಾಡುವ ಮಾತ ಕಡೆವರಿಯಂತರ ಕೇಳಿ ಇದಿರುವೋಗಿ ಕಿಂಕರನಾಗಿ ನಡುಗುತ್ತ ಬಿನ್ನಹವ ಮಾಡುವ ಸದ್ಭಕ್ತರ ತೋಱಯ್ಯಾ (ಬಸವ. ಕ. ೧೭೬-೪೪೯) ; ಸುರನಗರಿ ನಡುಗಿತ್ತು, ಸುರಪತಿ ಹರನ ನೆನೆದನು . . . ಎನೆ ನರನ ಕಡುದುಮ್ಮಾನ ನೆಱೆ ಹೆದಱಿಸಿತು ಮೂಜಗವ (ಕುಮಾ.ದ್ರೋ. ೮-೧೦). △ **ನಡುಂಗು** : ೧. "ಝೊಂಪಿಸಿದನೆನೆ ನಡುಂಗಿದನಕ್ಕುಂ" (ಕವಿಕಂ. ೧೪೦).

ನಡಂನಡುಗು, ನಡನಡುಗು, ನಡುನಡುಗು (ದ್ವಿರುಕ್ತಿ) : ಕೆಡೆಯ ಕೃಪಂ ನಡಂನಡುಗಿ ಶಲ್ಯನುರುಳ್ವರೆ . . . ಗಗನೇಚರರ್ ಪಿಡಿದು ಕಟ್ಟಿದರಾ ಧೃತರಾಷ್ಟ್ರಪುತ್ರರಂ (ಮಹಾನೀ. ೧೦-೪೭) ; ಪರಿಭವಾ[ನಿ]ಲನಿಂ ಶೋಕಾನಲನಿರ್ಮಡಿಸೆ ನಡುನಡುಗಿ ಕಾಯ್ಪಿನೊಳ್[ಪಿ]ಡುಗಿ . . . ಇಂತೆಂದಳ್ (ಪಂಪಭಾ. ೮-೭೦ವ) ; ಬಂದ ಜಂಗಮದ ಇಂಗಿತಾಕಾರವನರಿತು ಇದಿರೆದ್ದು ವಂದಿಸಿ ಕೈಮುಗಿದು ನಡ[ಪಾಠಾಂ. ಡು]ನಡುಗಿ ಕಿಂಕರನಾಗಿ . . . ಇರಬಲ್ಲರೆ ಅದು ಮರ್ಮ (ಅವಚಂ. ೨೨೩-೧೧೧೦) ; ನುಡಿಯಲಾರದೆನಂ ಮಕ್ಕಳಿರ ನೀರಡಿಸಿದೆನು ಹಿರಿದಾಗಿಯೆಂನೆ ನಡನಡುಗಿ ದುರ್ಯೋಧನನು ದೂತರ ಕರೆದು ನೇಮಿಸಿದ (ಕುವ್ಯಾಭೀ. ೧೦-೨೪) ; ನೆಲ ಬಿರಿವಂತೆ ನಾನಾ ವಾದ್ಯರಭಸದಿ ಕುಲಗಿರಿ ನಡನಡುಗಿದುವು (ಪ್ರೋಹಚ. ೧೯-೮೭) ; ಅಂತು ಶಾಪಂಗುಡಲಾಂ ನಡುನಡುಗಿ ಕಯ್ಗಳಂ ಮುಗಿದು . . . ಏನಾದೊಡ ಮೆನಗೆ ಶಾಪಾಂತಕಾರಣಮಂ ಬೆಸಸೆಂಬುದುಂ (ಕಾದಂಸಂ. ೭೧೪) ; ಪಲವು ನಾಯ್ಗಳ ನಡುವಣ ಪುಲ್ಲೆಯಂತೆ ನಡುನಡುಗಿ (ಧರ್ಮಾಮೃ. ೬-೯೨) ; ವೇದ ವೇಧಿಸಲರಿಯದೆ ಅಭೇದ್ಯಲಿಂಗವೆಂದು ನಡುನಡುಗಿತ್ತು (ಬಸವ. ೯೫) ; ಮಡದಿ ತನ್ನಯ ಪತಿಗೆ ತೋರಲು ನಡುನಡುಗಿಯಾ ವರಕುಮಾರನ ಪೊಡವಿಪತಿಗವನೀಯೆ (ಸಂಕಪ. ೧೩-೭). ನಡನಡಂ ನಡುಗು, ನಡನಡ ನಡುಗು= ನಡಂನಡುಗಂ: ಲುಬ್ಧಕಂ . . . ಬರ್ಪುದಂ ತಡೆಯದೆ ಕಂಡು ನಡನಡಂ ನಡುಗಿ ತಲ್ಲಣಿಸಿ . . . ಪಾರಲನುವಾಗಿ ತೂಬಲ್ಗೊಂಬಿನೊಳಿರ್ಪ ವಿಹಂಗ ಸಂಕುಳದಿಂ (ಗಿರಿಕ. ೧-೧೩೮ವ) ; ನಡನಡ ನಡುಗುವಿನಮಡಸಿ ತಡೆಯದೆ ಖಳನಂ ಪಿಡಿದುಡಿಯೆ ಕಟ್ಟು (ವರ್ಧ್ಯಾರಾ. ೧೨೭-೬) ; ಗಾಳಿಗೊಡ್ಡಿದ ಸೊಡರಂತೆ ನಡನಡ ನಡುಗುವ ಕುರುಧ್ವಜನಿಯಂ ಕಂಡು . . . ಇಂತೆಂದಂ (ಪಂಪಭಾ. ೮-೧೦೦ವ) ; ನಡನಡ ನಡುಗಿ ಮಿಡುಮಿಡು ಮಿಡುಕಿ . . . ಪುಯ್ಯಲಿಡುತ್ತುಂ (ಅಜಿಪು. ೧೧-೧೧ವ).

[ ದೇ.॥ ತಮಿ. ನಟುಕ್ಕು, ನಟುಙ್ಕು ; ಮಲ. ನಡುಙ್ಙು ; ತುಳು. ನಡುಗು ; ತೆಲು. ನಡುಂಗು, ನಡುಂಕು ]

**ನಡುಗು₂** (ನಾ). ೧. (ಚಳಿ ಮುಂತಾದುವುಗಳಿಂದ) ಅದಿರುವಿಕೆ ; ಕಂಪಿಸುವಿಕೆ; ನಡುಕ; ಕಂಪನ : "ನಡುಕ=ನಡುಗು" (ಗಂಗಾಮ. ೦೭೭) ; ಪದಾರ್ಥಗಳ ಕಂಪನವೆಂದರೆ ನಡುಗು (ಮುಂಬಯಿ. ೫-೧೧೧) ; ಅದಕ್ಕೆ ನಾವು ಕಂಪ ಅಥವಾ ನಡುಗು ಎನ್ನುತ್ತೇವೆ (ಮುಂಬಯಿ. ೫-೧೦೨). ೨. ಹೆದರುವಿಕೆ ; ಭಯಂಗೊಳ್ಳುವಿಕೆ ; ಅಂಜಿಕೆ : ಈತನನ್ನು ನೋಡಿದರೆ ನನಗೆ ನಡುಗು ಬರುತ್ತದೆ (ಉರಾಚ. ೧೧) ; ತಿಳಿಯದ ಮಂತ್ರ ಹೇಳಲಾರಂಭಿಸಿದರೆ ನನಗೆ ನಡುಗು ಬರುತ್ತದೆ (ಹುಚ್ಚುಟ. ೧೨) ; ನೀನು ಹೇಳೋದು ಕೇಳಿ ನನಗೆ ನಡುಗು ಹುಟ್ಟಿತು (ಜಂಡುಟ. ೭೮).

[ <ನಡುಗು₁./ತಮಿ. ನಟುಕ್ಕು ; ಮಲ ; ನಡುಙ್ಙು; ತೆಲು. ನಡುಂಗು, ನಡುಂಕು ]

**ನಡುಗುಂಪೆಣ** (ನಾ). ಅತ್ಯಂತ ಭಯಂಗೊಂಡ ವ್ಯಕ್ತಿ : ನಡುಗುಂಪೆಣನಾಗಿ, ತನ್ನ ವರ್ಗ ಕಯ್ಯಾಣತಿದೋರುವನು (ಮಂತ್ರಶ. ೮೩-೬).

[ನಡುಗು₁ + ಪೆಣ]

**ನಡುಗುಡ್ಡ** (ನಾ). ಗುಡ್ಡದ ಬುಡಕ್ಕೂ ತುದಿಗೂ ಮಧ್ಯವಿರುವ ಪ್ರದೇಶ : (೩). [ ನಡು₂ + ಗುಡ್ಡ₂ ]

**ನಡುಗುಹೆ** (ನಾ). ಗುಹೆಯ ಮಧ್ಯಭಾಗ ; ಗವಿಯ ನಡುಭಾಗ ; ಗುಹಾಮಧ್ಯ : ಕಡುಗೆರಳಿದ ಮೃಗಾಧಿಪನ ನಡುಗುಹೆಯೊಳಿಹ ಸುಧೆಯ ಘಟವೀ ಪೊಡವಿಯೊಡೆತನ ಸದರವೇ ಕಡುಬಡವರಿಗೆ ದೊರೆಕೊಂಬುದೇ (ಕುವ್ಯಾಸ. ೧-೬೭). [ ನಡು₂ + ಗುಹೆ ]

**ನಡುಗುಳುವ** (ನಾ). = ನಡಂಗಡ್ಡೆ : "ಅಂತರೀಪಂ ನೀರ ನಡುಗುಳುವಮೆನಿಸಿಕ್ಕುಂ" (ಮಂಗರಾ. ೦೨೩-೧೩). [ ನಡು₂ + ಕುಳುವ₁ ]

**ನಡುಗೆರೆ** (ನಾ). ಕೆರೆಯ ನಡುಭಾಗ ; ಮಧ್ಯದ ಕೆರೆ : ಕೆರೆಯಲ್ಲಿ ಈಜಲು ಹೋಗುತ್ತಿದ್ದೆ . . . ನಡುಗೆರೆಯನ್ನೂ ಮೀರಿ ಹೋಗುತ್ತಿದ್ದೆ (ಧರ್ಮಶ್ರೀ. ೩೦). [ ನಡು₂ + ಕೆರೆ₂ (<ಕೆಱೆ) ]

**ನಡುಗೇರಿ, ನಡುಂಕೇರಿ** (ನಾ). ಕೇರಿಯ ಮಧ್ಯಭಾಗ ; ಬೀದಿಯ ಮಧ್ಯಭಾಗ : ನಡುಗೇರಿ ಉರಿದು ನಾನಾ ಭಟರು ಮಡಿದಾರು (ಶಿವಗೀ. ೮೧೭) ; ಮಾರನ ಚಾಪಾಗಮವಿಸ್ತಾರಮನೀಕ್ಷಿಪ ತವಂಗಮಂಗನೆಯರ ಶೃಂಗಾರರಸಂ ತೀವಿದ ನಡು[ಪಾಠಾಂ. ಡೆ]ಗೇರಿಯಿದೆನೆ ಸೂಳೆಗೇರಿ ಮಿಗೆ ಸೊಗಯಿಸುಗುಂ (ಪಾರ್ಶ್ವಪು. ೭-೩೭). **ನಡುಕೇರಿ** : ಪೆಡಗಯ್ಯ ಕಟ್ಟಿಸಿ ಪುರವರದ . . . ನಡುಕೇರಿಯೊಳೆಲ್ಲರು ನೋಡುವಂದದಿ ನಡೆಯಿಸಿದನು ಮಂತ್ರಿಯವರ (ಕುರಾಸಾಂ. ೩೬-೬೨) ; ಕಾಣಿಕೆಯನಿತ್ತಾನೆಯ ಸಜ್ಜಾರ ನಡುಕೇರಿಯೊಳಗೊಪ್ಪುತಿಹುದು (ಕಂಚವಿ. ೬-೩೨). [ನಡು + ಕೇರಿ]

**ನಡುಗೊಂಬು** (ನಾ).=ನಟ್ಟಗೊಂಬು: "ನಟ್ಟಗೊಂಬೆಂದು ನಡುಗೊಂಬು" (ಕಬ್ಬಿಕೈ. ೧೮) ; "ನಡುಗೊಂಬೆಂದು ನಾಡೆ ತಾ ನಟ್ಟಗೊಂಬಕ್ಕು" (ಶಬ್ದಮಂ. ೨೫). [ ನಡು₂ + ಕೊಂಬು₁ ]

**ನಡುಗೊಣ** 'ನಡಂಗೊಳ್' ನೋ.

**ನಡುಗೊರಲು, ನಡುಗೊರಳು** (ನಾ). ಕೊರಳಿನ ಮಧ್ಯಭಾಗ; ಕುತ್ತಿಗೆಯ ಮಧ್ಯಭಾಗ : ನಡುಗೊರಲ ಸುಳಿ ದೇವಮಣಿ (ಮಂಗರಾ. ೮೩-೩೦). **ನಡುಗೊರಳು** : ಬರುತಿಹ ಬಾಣವನು ಖಳ ಕಂಡು . . . ಬಲುಹುಶಕ್ತಿಯೊಳಿಟ್ಟೊಡನಿತನು ಮುಳಿದು ನುಂಗಿತು ಕಡಿದುದಮಮಾ ಖಳನ ನಡುಗೊರಳ (ಕೌಶಿರಾ. ೨೭-೫೫).

[ ನಡು₂ + ಕೊರಲು (<ಕೊರಲ್) ]

**ನಡುಗೊರಳು** 'ನಡುಂಗೊರಲು' ನೋ.

**ನಡುಗೊಳ, ನಡಂಗೊಣ** (ನಾ). ಪುಷ್ಕರಿಣಿಯ ಮಧ್ಯಭಾಗ ; ಸರೋವರದ ಮಧ್ಯಭಾಗ : ತೊಳೆದು ಚರಣಾನನವ ನಡುಗೊಳದೊಳಗೆ ಹೊಕ್ಕು . . . ಶೀತಳಜಲವ ಕುಡಿದು (ಕುವ್ಯಾಅ. ೧೧-೫೭). **ನಡುಗೊಣ** : ಗುರುತನುಜಂ ಕೃಪನ ಕೃತವರ್ಮನ ನುಡಿಗಳಂ ನಡುಗೊಣದಿ ನುಡಿವ ನಮ್ಮಿವರ ಮಾರೆನುಡಿಗಳಮ್ಮಾರೆಯ ಗಡಬಡೆಗಳಿಂ ಧ್ವನಿಯ ಕಡುಬೆಡಗಿನಿಂದರಿದು (ತುರಂಗ. ೭೪-೫೦). [ ನಡು₂ + ಕೊಳ₂ ]

**ನಡುಗೋಲ್, ನಡುಕೋಲ್** (ನಾ). ಸರಳಿನ ಮಧ್ಯಭಾಗ : ಬಾಣದ ಮಧ್ಯಭಾಗ : ನಡೆ ನಡುಗೋಲ್ವರಂ ದಶಮುಖಂ ಮನಮಂ ಸುಮನಶ್ಶಿಲೀಮುಖಂ . . . ಸತ್ಯಶೌಚಗುಣಸಂಪದಮೇಳಿದನಾದಂ (ಪಂರಾಮಾ. ೯-೮೫). **ನಡುಕೋಲ್** : ಭೋರೆಂದು ಕವಿವ ಬಿಸುನೆತ್ತರ್ ಕಣ್ಣಂ ಕವಿಯೆ ಸೀಂಟ ಕಳೆದು ನಡುಕೋ[ಪಾಠಾಂ. ಕಾ]ಲ್ವರಂ ನಟ್ಟ ಕೂರ್ಗಣೆಗಳಂ ಗರ್ಬುವೆರಸು ತೊಟದು ಕಳೆದು (ಪಂಪಭಾ. ೧೨-೭೪ ವ); ಸ್ಮರನ ಸರಲ್ಗಳ್ ನಡುಕೋಲ್ವರೆಗಂ ನಡೆ (ಧರ್ಮಾಮೃ. ೮-೧೬೮). [ ನಡು₂ + ಕೋಲ್₁ ]

**ನಡುಚವುಕಿಗೆ** (ನಾ). ಮೊಗಸಾಲೆಯ ಮಧ್ಯಭಾಗ : ನಡುಚವುಕಿಗೆಗೆ ಬಗಿದ ತೊಲೆಯ ಪೊಚವಳಸಿನುಗ್ಗಡದ ನಾನಾ ವರ್ಣಚಿತ್ರಪತ್ರಿಕೆಗಳಂ...ಪೊಗಳಲಳವೆ (ಜೀರವು. ೫-೧೨). [ ನಡು₂ + ಚವುಕಿಗೆ (<ಚೌಕಿಗೆ) ]

**ನಡುಜವ್ವನ** (ನಾ). ತುಂಬುಜವ್ವನ; ಏರುಯೌವನ: ಪಿಡಿದ ತುಂಬು ನೀರ ಪೊಂಗೊಡಮನಿರಿಪ ಪಡಿಮೊಗದ ನೆರೆವೀಡ ನಡುಜವ್ವನದ ಕೆಳದಿಯೊರ್ವಳಂ ಸನ್ನೆಯಿಂ . . . ಎನೆ (ರಾಮಾಶ್ವ. ೫೦-೧೭).

[ ನಡು₂ + ಜವ್ವನ ]

**ನಡುತರ** (ನಾ). ಮಧ್ಯಮ ಮಟ್ಟ,-ರೀತಿ : ಒಂದು ಅಳಕ ಹಿಟ್ಟು . . . ನಡುತರದ ಚಮಚದಲ್ಲಿ ಒಂದು ಚಮಚ ಸಕ್ಕರೆ (ಅಡುಸಾ. ೯೭).

[ ನಡು₂ + ತರ₆ (<ತರಹ) ]

**ನಡುತಲೆ** 'ನಡಂದಲೆ' ನೋ.

**ನಡುತೂತು** (ನಾ). ಮಧ್ಯದಲ್ಲಿರುವ ತೂತು,–ರಂಧ್ರ : ನಾಭಿ–ರಥದ ಗಾಲಿಯ ನಡುತೂತು (ಗಂಗಾಷಮ. ೧೮೧).

[ ನಡು₂ + ತೂತು₂ (<ತೂಂತು₂) ]

**ನಡುತೂಬು** (ನಾ). = ನಡುತೂತು : "ಪಿಂಡಿಕಾ, ನಾಭಿಃ–ಚಿ ಬಂಡಿಯ ಕಣ್ಣಿನ ನಡುತೂಬಿಗೆ ಹೆಸರು" (ಸಿದ್ಧಾಂತಿ. ೨೫೩).

[ ನಡು₂ + ತೂಬು (<ತೂಂಬು) ]

**ನಡುತೊಟ್ಟಿ** (ನಾ). = ನಡುಂಚವುಕಿಗೆ : "ಕಕ್ಷ್ಯಾ–ಉಪ್ಪರಿಗೆ, ಮನೆಗಳ ನಡುತೊಟ್ಟಿ" (ಸಿದ್ಧಾಂತಿ. ೪೧೧). [ ನಡು₂ + ತೊಟ್ಟಿ₁ ]

**ನಡುದಟ್ಟಿ** (ನಾ). ಸೊಂಟಕ್ಕೆ ಸುತ್ತಿಕೊಳ್ಳುವ ಬಟ್ಟೆ,–ವಸ್ತ್ರ ; ನಡಂಪಟ್ಟಿ : (ಕ). [ ನಡು₂ + ದಟ್ಟಿ₁ ]

**ನಡುದಲೆ**, ನಡಂತಲೆ (ನಾ). ತಲೆಯ ಮೇಲಿನ ಮಧ್ಯಭಾಗ ; ನೆತ್ತಿ : ತುಡೆ ಧನ್ವಿ ಸರಲನೊರ್ವಂಗೆಡೆವುಗೆ ಮಾತ್ರೊರ್ವನವನನದು ತಱಿವವೊಲೊಳ್ಪುಡುಗದೆ ಯಕ್ಷಪ್ರತಿಮೆಯ ನಡುದಲೆಯೊಳ್ ಬಿಟ್ಟುದಶನಿ ನಿರ್ಗಪ್ಪಿನೆಗಂ (ಶಾಂತಿಪು. ೬–೨೮) ; ನಡುದಲೆ ಗೋಣ್ ನೊಸಲ್ . . . ಪುರ್ಬುಗಳೆಂಬೆಡೆಯಂ ಮಹಾಹಿ ಕೊಂಡೊಡೆ ಗರುಡಂಗಮೆತ್ತಲರಿದೆಂದೊಡೆ ಪೇಟುಟಿದಂಗೆ ಸಾಧ್ಯಮೇ (ಲೋಕೋಪ. ೧೦–೪). **ನಡುತಲೆ** : ಪಾರ್ವನ ಕಾಲ್ ಮೋದೆ ನಡುತಲೆಯುಲಿರ್ಪುದುಮಾದುದು ನಿಮಗೆಂದು ನುಡಿದು ಕಾಯ್ಪಿನೊಳೊದೆದಂ (ಪಂಪಭಾ. ೨–೬೪). [ ನಡು₂ + ತಲೆ₁ ]

**ನಡುದಾರ** (ನಾ). ಸೊಂಟಕ್ಕೆ ಕಟ್ಟುವ ನೂಲಿನ ಅಥವಾ ಚಿನ್ನ, ಬೆಳ್ಳಿಯ ಎಳೆ ; ಉಡಿದಾರ : (ಕ). [ ನಡು₂ + ದಾರ₁ ]

**ನಡುದಾರಿ** (ನಾ). ಮಾರ್ಗದ ಮಧ್ಯ ; ದಾರಿಯ ಮಧ್ಯ ; ನಡುಮಾರ್ಗ : ಹುಲಿ . . . ಕುದುರೆಯ ಮೇಲೆ ಬೀಳಲು ಸಿದ್ಧವಾಗಿ ನಡುದಾರಿಯಲ್ಲಿ ಕುಳಿತುಬಿಟ್ಟಿತು (ಕಳಹು. ೬). [ ನಡು₂ + ದಾರಿ ]

**ನಡುದೆರಪು** (ನಾ). ನಡುವಿನ ಸ್ಥಳ,–ಅಂತರ : ಎರಡುಂ ಸಗ್ಗಂಗಳ ನಡುದೆರಪಿನೊಳಧಿಯಾದ್ಯಮನ್ಯಮಲ್ಲದ ಮಧ್ಯಾಜಿರದೊಳ್ ಧರ್ಮಗ್ಲಾನಿಯ ನರಕದೊಳಿಳಲ್ವರುಮನಕಟ ! ನೆನೆಗೆಮ ! ಕೃಷ್ಣಂ (ಜಬ್ಬಅ. ೯–೬). [ ನಡು₂ + ತೆರಪು (<ತೆಱಪು) ]

**ನಡುದೊಱೆ** (ನಾ). ನದಿಯ ಮಧ್ಯಭಾಗ ; ನಡುನೀರು : ನಡುದೊಱೆಯಲ್ಲಿ ಹುಟ್ಟುಹಾಕಿದಡೆ ಹಱುಗೋಲು ಮುಳುಗದೆ ಏಱಿದವರು ಸತ್ತರು (ಅವಚಂ. ೮೦–೩೬೦) ; ನಡುದೊ[ಪಾಠಾಂ. ತೊ]ಱೆಯೊಳಗೆ ಹಱಿಗೋಲನಿಳಿದಂತಾಯಿತ್ತೆನ್ನ ಭಕ್ತಿ (ಬಸಹಿ. ೯೮–೨೯೩).

[ ನಡು₂ + ತೊಱೆ₂ ]

**ನಡುನಾಡು** (ನಾ). ೧. (ದೇಶದ) ಮಧ್ಯಭಾಗ ; (ರಾಜ್ಯದ) ಮಧ್ಯಪ್ರದೇಶ : ಕಡೆವಿಡಿದು ಬಳಸಿ ನೀರಿರೆ ನಡು ಬತ್ತಿದ ಕೆಱೆಯನಿಂತು ಕಂಡುದಱಿಂದಂ ನಡುನಾಡೊಳಱಂ ನೆಲಸದೆ ಕಡೆಯೊಳ್ ನೆಲೆಗೊಳ್ಗುಂ (ಆದಿಪು. ೦೫–೪೦) ; ಕಡೆನಾಡ ಲಿಂಗವ ನಡುನಾಡಿಗೆ ತಂದೆನೆಂಬ ಅಹಂಕಾರವ ಮುಂದುಗೊಂಡಿದ್ದೆಯಲ್ಲಾ . . . ಗೊಹೇಶ್ವರಲಿಂಗವು ನಿನ್ನ ತಪ್ಪಿಸಿ ಹೋದುದ ಮಱೆದೆಯಲ್ಲಾ (ಅವಚಂ. ೨೦೯–೯೯೨) ; ಊರೂರ್ಗರ್ಪ್ಪದೆ ದೇವತಾನಿಳಯದಿಂ ಸದ್ವಕ್ತ್ರರಿಂ ಚೆಲ್ವುವೆತ್ತೂರೂರ್ಗರ್ಪ್ಪದೆ ಬಲ್ಲಕುಂದೆ ನಡುನಾಟು ಸಂತಂ ಬಸಂತಂ ಕರಂ (ಶಾಪವಂ. ೯೬೪) ; (ಎಇ. XIV, ೨೭೦–೦೯ ; 1181 ನೋ). ೨. (ಮೂರು ಲೋಕಗಳಲ್ಲಿ) ಮಧ್ಯದಲ್ಲಿರುವ ಲೋಕ ; ಭೂಲೋಕ ; ಮರ್ತ್ಯಲೋಕ : ನಡುನಾಡರಸದ ಪೆರ್ದೊಟ ನಡುಪಳ್ಳಿಯ ಕಾಮಧೇನು[ವಂ]ಗಣದೊಳಿನಿಪ್ಪದೆ ಪಣ್ತ ಕಲ್ಪತರುವೆಂದಡದೇವಣ್ಣಿಪುದೊ ರೂಪ ವಿದ್ಯಾಧರಿಯ (ಸಾಇಇ. XX, ೪೯–೩೫ ; ಸು. 1076 ?) ; ನಡುನಾಡು ಮೇಲ್ನಾಡು ಕೀಳುನಾಡೆಂಬ ಮುಪ್ಪೊಡವಿಯೊಡೆಯನ ಹೆಮ್ಮಗಗೆ ತಡೆಯುಂಟೆ (ಭರಜ. ೪೪–೬೬).

ನಡುನಾಡ ತೀರ್ಥ = ೧. ಭೂಲೋಕಕ್ಕೆ ಪೂಜ್ಯವಾದ ಸ್ಥಳ,–ಶ್ರೇಷ್ಠವಾದ ಪ್ರದೇಶ : ನಡುನಾಡ ತೀರ್ಥಮೆನಿಸಲ್ಪಡೆದಿಂದ್ರಪ್ರಣಯವೆಂಬ ಪರ್ವತಕಟಕಂಬಿಡಿದು ನಿಜಕಟಕಮಂ ತಾಂ ಬಿಡಿಸಿ ಮಗಂಗಿತ್ತು ಕೊಡೆಯುಮಂ ಪಟ್ಟಮುಮಂ (ಅನಂಪು. ೧೨–೨೯). ೨. ಭೂಲೋಕಕ್ಕೆ ಪೂಜ್ಯನಾದವನು ; ಓಂದಂ ಬಿರುದಂ : ಸಕಳಗುಣಸಂಪೂರ್ಣ್ಣಂ ಕಲಿಕಾಲಕರ್ಣನಮಳಚರಿತ್ರಂ ನಡುನಾಡ ತೀರ್ತ್ಥಂ ಶ್ರೀಮತ್ತೊಸಪೂರಾಯ್ಯಗಾವುಣ್ಡಂ (ಸಾಇಇ. XI–i, ೬೫–೨೯ ; 1028) ; ಬವ್ಮ[೦]ಗಣ್ದ ಎಲಪ್ಪರ್ಗಳೆ ನೆಗಟ್ದನವನೀತಳದೊಳ್ . . . ಕುನ್ದಿಗನೊಳ್ಪಡೆದಂ ನಡು[ನಾ] [ಡ] ತೀರ್ತ್ಥವೀ ಮಹಿಮೆಗಳಂ (ಸಾಇಇ. XX, ೨೯ ೧೪ ; 1034).

[ ನಡು₂ + ನಾಡು ]

**ನಡುನಿದ್ದೆ** (ನಾ). ನಿದ್ರೆಯ ಮಧ್ಯಕಾಲ ; ಗಾಢನಿದ್ರೆ : ಇದು ಬೇರೊಂದು ಕಾಲ ; ನಡುನಿದ್ದೆಯಲ್ಲಿ ಕನಸು ಬಿದ್ದ ಹಾಗೆ ತಣಿವಿಗಾಗಿ ಈ ನಾಡನ್ನು ತೆರೆದಂತಿದೆ (ಕುಸುಸಂ. ೧೫೮). [ ನಡು₂ + ನಿದ್ದೆ ]

**ನಡುನಿಲ್** (ಕ್ರಿ). (ಅಲಂ) ನಿಷ್ಪಕ್ಷಪಾತದಿಂದಿರು : ಎರಡುಂ ಪಕ್ಕಮುಮೊಂದೇ ಸರಿಯೆನೆ ನಡುನಿಂದು ನೆಗಟೞಯಾ ದ್ವಿಜವರನೊಳ್ ಕರವೊಸೆದು ತನ್ನ ಭಾರಮನಿರಿಸಿದವೊಲ್ ಪೆಂಪುಗೊಳಿಪನುತ್ತಮಪುರುಷಂ (ಜಕವಿ. ೧–೪೨). [ ನಡು₂ + ನಿಲ್ ]

**ನಡುನೀರ್**, ನಡುನೀರು (ನಾ). (ಸರೋವರ, ನದಿ ಮುಂತಾದುವುಗಳ) ನೀರಿನ ಮಧ್ಯಭಾಗ,–ಜಲಮಧ್ಯ : ಅಂಜದೆ ಪೊಕ್ಕು ನಡುನೀರೊಳಾಡುವ ವನದೇವಿಯುರ ಸೋರ್ಮುಡಿಯಿಂ ಪರೆದರಲ ಬೆರಕೆಗಂಪಿನ ಪೊಂಪುಟೞಯೊಳಂ (ಕಾದಂಪೂ. ೧೧೭) ; ಅನ್ಯಾಯದೊಳ್ಪಡೆದರ್ಥಂ ನಡುನೀರಿನೊಳಿಕ್ಕಿದೊಡಂ ಕಿಡುಗುಂ (ಧರ್ಮಾಮೃ. ೬–೧೫೮) ; ಹಿಡಿದುದ ಬಿಡದಿದ್ದರೆ ಕಡೆಗೆ ಚಾಚುವ ಅಲ್ಲದಿದ್ದರೆ ನಡುನೀರಲ್ಲದ್ದುವ ನಮ್ಮ ಕೂಡಲ ಸಂಗಮದೇವ (ಬಸವ. ೨೨೦) ; ಎಲೆ ಭಕ್ತ ನೀನೇಕೆ ನಡುನೀರೊಳಿರ್ದಪೆ (ರುದ್ರರ. ದೇ. ೨೦೦–೯) ; ನಡುನೀರೊಳೊಗೆದ ನಳಿನಮಂ ಮುಱಿಯಲೆಳಸಿ ಮಗುಳ್ದು ತೆರೆವಿಡಿದೀಸುವೆಳೆವೇಡಿತಿ (ರಾಜಶೇ. ೬–೨೪ಪ). **ನಡುನೀರು** : ಕೃಪ ಗುರುಸುತರ ನುಡಿಗಳನು ನಡುನೀರಲಿ ನೃಪಧ್ವನಿಯ ಅಱಿದರಿವರಾಲಿಸಿದರು (ಕುಮ್ವಾಗ. ೪–೪೩).

ನಡುನೀರಲ್ಲಿ ಕೈಬಿಡು, ನಡುನೀರಲಿ ಕೈಬಿಡು = ೧. ಪ್ರವಾಹದ ಮಧ್ಯದಲ್ಲಿ ಹಿಡಿತದ ಸಹಾಯವನ್ನು ತಪ್ಪಿಸು : ನಡುನೀರಲ್ಲಿ ಕೈಬಿಟ್ಟ ಹಾಗೆ (ಗಾದೆ). ೨. ನಂಬಿಕೊಂಡವರಿಗೆ ಅತ್ಯಗತ್ಯವಾದ ಸಮಯದಲ್ಲಿ ಉದ್ದೇಶಪೂರ್ವಕವಾಗಿ ಸಹಾಯ ನಿಲ್ಲಿಸು ; ಕೈಕೊಡು : ಆಕೆಯ ಅಂತಸ್ತಿನ ಭವಿಷ್ಯವೆಲ್ಲ ನನ್ನ ಕೈಯೊಳಗಿರುವಾಗ್ಗೆ ನಾನೀಗ ಆಕೆಯನ್ನು ನಡುನೀರಲಿ ಕೈಬಿಡುವುದೆ ? (ನಡದಾ. II, ೫೭೦). [ ನಡು₂ + ನೀರ್₁ ]

ನಡುನೀರು 'ನಡುನೀರ್' ನೋ.

**ನಡುನೆತ್ತಿ** (ನಾ). ತಲೆಯ ಮೇಲಿನ ಮಧ್ಯಭಾಗ ; ನಡುದಲೆ : ಮುಡುಪಂ ಬೆನ್ನಂ ಕೊರಲಂ ನಡುನೆತ್ತಿಯನೆತ್ತಿಪೊಯ್ದರೊರ್ವರನೊರ್ವರ್ (ಗದಾಯು. ೮–೧೫) ; ಎರಡುಂ ಬಾಳಕ ಪದ್ಮಕಮೆರಡುಂ ಚಂದನಮೆನಿಪ್ಪುವಂ ತೆಳ್ಗಟೞಯಿಂದೆರೆದು ನಡುನೆತ್ತಿಯೊಳ್ ಪೂಸೆ ರುಜಾರ್ತನ ತೃಷೆಯ ದಾಹದೊದವಂ ಕಳೆಗುಂ (ಲೋಕೋಪ. ೯–೨೮) ; ಆಧಾರ ಸ್ವಾಧಿಷ್ಠಾನ . . . ಆಜ್ಞೆ ಎಂಬ ಷಡಾಧಾರದ ಬಳಿವಿಡಿದು ನೆತ್ತಿಯಿಂದುತ್ತರಕ್ಕೆ ಉಚ್ಚಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಆದವ. ೧೧–೨೦) ; ನಿರವಧಿಯಿಂ ಕುಳಿರ್ವುದಕಮಂ ನಡುನೆತ್ತಿಯೊಳಾಂತು ತನ್ನ ಕಣ್ಣುರಿಗುಪಶಾಂತಿಯಂ ಪಡೆದನಿಲ್ಲಭವಂ (ದಶಕು. ೧–೫೩) ; ಒಡೆದು ನಡುನೆತ್ತಿಯನು ಝುಳಪಿಸಿ ಕಡುವೆಳಗು ಥಳಥಳಿಸಿ ತರಣಿಯ ತುಡುಕಿ ಹಾಯ್ದುದು ರಶ್ಮಿ ರಂಜಿಸಿತಖಿಳದಿಗುತಟವ (ಕುಮ್ವಾದ್ರೋ. ೧೪–೭೧) ; ನಡುನೆತ್ತಿ ಬಿರಿದು

ಮುತ್ತುಗಳೊಡೆದುಚ್ಚಳಿಸುತ್ತೆ ಪಾಟಿ (ರಾಜಶೇ. ೩-೪೦). [ನಡು$_2$+ನೆತ್ತಿ]

**ನಡುನೆಲ** (ನಾ). ಮಧ್ಯದ ಪ್ರದೇಶ,-ಸ್ಥಳ: ಸನ್ನೆಯ ಭೇರಿಕಾಱರು ನಡುನೆಲದಲ್ಲಿ ಸನ್ನದ್ಧರಾಗಿ ನೆರೆದರು (ಭರಜ. ೩೦-೨೯). [ನಡು$_2$ + ನೆಲ]

**ನಡುನೆಲೆ** (ನಾ). ಮಧ್ಯಸ್ಥಿಕೆ; ನಿಷ್ಪಕ್ಷಪಾತತೆ: ನಡುನೆಲೆಯುಳ್ಳವನ ಬದುಕು ಅೞಿವಿಲ್ಲದೆ ಸಂತತಿಗಂ ಕಾಪುಳ್ಳುದಕ್ಕುಂ (ಕುಱಳ್. ೧-೧೩-೨). [ನಡು$_2$ + ನೆಲೆ]

**ನಡುನೇಸಱ್**, ನಡುನೇಸಱು (ನಾ). ನಡುಹಗಲು; ಮಧ್ಯಾಹ್ನ: ಒಡಲಾಂತ ತನುವೀತನ ನೆವದಿಂದೆಂದು ಕಡುಗಳಲ್ದಾಕಾಶಮೆಂಬ ಮೃಡ ನುರಿಗಣ್ಣ ತೆಱೆದವೊಲು ನಡುನೇಸಱಡಸಿದುದುಂದು ಬಲ್ಪಿಸುವ (ಶ್ರೀಪಾಲ. ೪-೩೪). **ನಡುನೇಸಱು**: ನಡುನೇಸಱಲಿ ತವು ನಿಲಬಲ್ಲದೇ ಜನನಾಥ (ನಿಭಾಗ. ೩-೧೨-೩೭). [ನಡು$_2$ + ನೇಸಱ್]

**ನಡುನೇಸಱು** 'ನಡುನೇಸಱ್' ನೋ.

**ನಡುನೊಸಲು** (ನಾ). ಹಣೆಯ ಮಧ್ಯಭಾಗ: ಜಡೆಮುಡಿಯುಸಳವಡಿಸಿ . . . ಭಸಿತಲೇಪನದೊಡಲು ನಡುನೊಸಲೊಳು ತ್ರಿಪುಂಡ್ರದ ರೇಖೆಗಳು ಮೆಱೆಯೆ (ಬಸಪು. ೩-೨೭). [ನಡು$_2$ + ನೊಸಲು (<ನೊಸಲ್)]

**ನಡುನೋಟ** (ನಾ). ಸ್ಥಿರವಾದ ನೋಟ; ನೆಟ್ಟ ದೃಷ್ಟಿ: ಪಸುಳೆಗುವರಂ ತನ್ನ ಕಟ್ಟಿದಿರ ಪುರ-ಪೋತ್ತ್ರಮುಮೂರ್ತಿಯನೆಮೆಯಿಕ್ಕದ ನಡುನೋಟದಿಂ ದಿಟ್ಟಿಸುತೆ ಕುಳ್ಳಿರಲ್ (ರಾಮಾಶ್ವ. ೭೭-೪). [ನಡು$_1$ + ನೋಟ]

**ನಡುಹಗಲ್** 'ನಡುವಗಲ್' ನೋ.

**ನಡುಪಟ್ಟಿ ?** (ನಾ). (?) : ತೊಡೆಯಿಂ ಕಡುಗುದುರೆಗಳು ಮಡದಿಂ ನಡು [ವಾಕಾಂ ಡೆ]ಪಟ್ಟ ದಂತಿಯಿಂ ನಿಡುದೋಳಿಂ ಕಡುವಾಳಂ ಕೂರಸಿಯಿಂ ಕಡಂಗಿದವನಿಯಂ ಸಮಂತು ಬಸದಾಗಿಸುವಂ (ಕಾವ್ಯಾವ. ೩೩೦); ಚಿತ್ರಭವ ಚಕ್ರವರ್ತಿಯ ನಡುಪಟ್ಟ ಪಟ್ಟದಾನೆಯಂತೆ ಮಾಗವುಗಿಸುವ ಮದವುದದ ಸೊನೆಸೊನೆಯಂ ಬಿಡುವ ಬಾಳರಸಾಳಂಗಳಿಂ ಕಾಮದೇವನ ದೀವದ ಪಿಂಡಿನಂತಿರ್ಪ ಕಳಪಂಸೆಗಳಿಂ . . . ಮನಂಗೊಳಿಸಿ (ಅರ್ಧನೇ. ೪-೭೪ ವ). [ ? ]

**ನಡುಪಟ್ಟಿ** (ನಾ). ೧. ಸೊಂಟಕ್ಕೆ ಕಟ್ಟಿಕೊಳ್ಳುವ ಚರ್ಮ, ವಸ್ತ್ರ, ಲೋಹ ಮುಂತಾದಂವುಗಳ ಪಟ್ಟಿ; ಬೆಲ್ಟು: ಅವಳು ಬಿರುಬಿರನೆ ಕೈಚಾಚಿ, ನೋಟನ್ನು ಕಸಿದ-ಕೊಂಡು ತನ್ನ ನಡುಪಟ್ಟಿಯ ಕೆಳಗೆ ಬಚ್ಚಿಟ್ಟು ಕೊಂಡಳು (ಪುನರು. ೧೯೩); ಕಯ್ಯ ಪಟ್ಟದ ಖಡ್ಗವನ್ನು ನಡುಪಟ್ಟಿಯ ಒರೆಯೊಳಕ್ಕೆ ಸಶಬ್ದವಾಗಿ ನೂಂಕಿಬಿಡುವನು (ಬಿರುಗಂ. ೩೦-೬). ೨. ಸೊಂಟದಲ್ಲಿ ಧರಿಸುವ ಒಂದು ಬಗೆಯ ಆಭರಣ; ಒಡ್ಯಾಣ; ಡಾಬು. [ನಡು$_2$ + ಪಟ್ಟಿ$_2$]

**ನಡುಪಳ್ಳಿ**, ನಡಪ್ಪಳ್ಳಿ (ನಾ). ಒಂದು ಸ್ಥಳದ ಹೆಸರು: ನಡುನಾಡ ರಸದ ಪೆರ್ದ್ದೊರೆಟ ನಡುಪಳ್ಳಿಯ ಕಾಮಧೇನು[ವುಂ] ಗಣದೊಳೆನಿಪ್ಪದೆ ಪಣ್ಣು ಕಲ್ಪತರುವೆಂದಡದೇವಣ್ಣಿಪುದೊ ರೂಪವಿದ್ಯಾಧರಿಯ (ಸೌಇಇ. XX, ೪೮-೩೩; ಸು. 1076 ?). **ನಡಪ್ಪಳ್ಳಿ**: ನೇೞಲೆಯಂ ಪಡಾಯೊತ್ತಿಂ ನಡಪ್ಪಳ್ಳಿಮೂಱೂಣಂ ನಡಲು ಎಪ್ಪಳ್ಳಿ (ಎಕ. VI, ಚಿಕ್ಕಮ. ೯೩-೧೩; ಸು. 1025 ?). [ನಡು$_2$ + ಪಳ್ಳಿ$_1$]

**ನಡುಪಾಯ್** 'ನಡಂಪಾಯ್' ನೋ.

**ನಡುಪ್ರಾಯ** (ನಾ). ಮಧ್ಯವಯಸ್ಸು: ಅವರು ನಡುಪ್ರಾಯದಲ್ಲಿ ತೀರಿ ಹೋದುದರಿಂದ ಸಂಸಾರಕ್ಕೆ ಬಹಳ ಕಷ್ಟವಾಗಿದೆ (ರೂಢಿ). [ನಡು$_2$ + ಪ್ರಾಯ]

**ನಡುಬನ** (ನಾ). ಕಾಡಿನ ಮಧ್ಯಭಾಗ; ಅರಣ್ಯದ ಒಳಭಾಗ: ಸ್ವರ್ಗಸ್ಥರಾದರು ತಂದೆ ತನ್ನಣುಗನ ನಡುಬನದೊಳು ಬಿಟ್ಟ ಹಾಗೆ (ಇಂಚಾಪ. ೨೧-೯೩). [ನಡು$_2$ + ಬನ]

**ನಡುಬಾನು** (ನಾ). ಆಕಾಶದ ಮಧ್ಯಭಾಗ: ನಡುಬಾನೇಱಿದುಷ್ಣಾಂಶು ಮಂಡಲವಲ್ಲಿ ಕಡು ಸೊಗಸಿತು (ಶ್ರೀಪಾಲ. ೪-೪೮). [ನಡು$_2$ + ಬಾನು$_2$ (<ಬಾನ್$_3$)]

**ನಡುಬಾವಿ** (ನಾ). ಬಾವಿಯ ಮಧ್ಯಭಾಗ: ಶ್ರೀವಿಜಯಮುನಿ ಹೋಗಿ ತಾ ನಡುಬಾವಿಯಲಿ ಬಿದ್ದನು (ಬಸಪು. ೩೦-೧೭). [ನಡು$_2$ + ಬಾವಿ]

**ನಡುಬೀಡು** (ನಾ). ಸ್ವಲ್ಪ ಬೆಳೆ ಬೆಳೆಯುವ ಹೊಲ ಮುಂತಾದಂವು: ಕೀಳು ಮೇಲು ನಡುಬೀಡುಬೀಡು ಬಿಯ ತಪುಪೊಪ್ಪು (ಸೌಇಇ. ೧೯೩೬, ಪ್ರತ್ಯೂರು. ೧೧೪-೯; 1282). [ನಡು$_2$ + ಬೀಡು$_2$]

**ನಡುಬೀದಿ** 'ನಡುವೀದಿ' ನೋ.

**ನಡುಬೆಟ್ಟ** (ನಾ). ಬೆಟ್ಟದ ಮಧ್ಯಭಾಗ: ನಡುಬೆಟ್ಟಕ್ಕೆ ಹತ್ತುವ ವೇಳೆಗೆ ಬಿಸಿಲೇರಿಬಿಟ್ಟಿತು (ರೂಢಿ). [ನಡು$_2$ + ಬೆಟ್ಟ (<ಬೆಟ್ಟು$_2$)]

**ನಡುಬೆಟ್ಟು** (ನಾ). = ನಡುಬೆರಳು: (*). [ನಡು$_2$ + ಬೆಟ್ಟು$_3$ (<ಬೊಟ್ಟು$_1$)]

**ನಡುಬೆನ್**, ನಡಂಬೆನ್ನು (ನಾ). ಬೆನ್ನಿನ ಮಧ್ಯಭಾಗ: ಇಱಿದು ಮರದಿಂದಮಾಗಳ್ ಕೆಟಗೆಲ್ಲಂ ಪಱೆದು ಬಿರ್ದ ಶುಕಸಂತತಿಯಂ ಗಟಗಟಿಸಿ ಕಟ್ಟಿ ನಡುಬೆನ್ನಿಟವಿನೆಗಂ ಪೊತ್ತು ಪೋದನಾ ಮುದುವೇಢಂ (ಕಾದಂಪೂ. ೦೪೭); ನಡುಬೆನ್ನಂ ಸಟ್ಟನೆ ಸೀಱೆಯುಂ (ಅಜಿಪು. ೧೧-೧೦ ವ). **ನಡುಬೆನ್ನು**: ಮೂಟೆ ಹೊತ್ತು ನಡುಬೆನ್ನು ಮುರಿದುಹೋಯಿತು (ರೂಢಿ). [ನಡು$_2$ + ಬೆನ್]

**ನಡುಬೆನ್ನು** 'ನಡಂಬೆನ್' ನೋ.

**ನಡುಬೆರಳು** (ನಾ). (ಹಸ್ತದ ಅಥವಾ ಪಾದದ ಐದು ಬೆರಳುಗಳಲ್ಲಿ) ಮಧ್ಯದ ಬೆಟ್ಟು, -ಬೆರಳು: ಮಗುವಿನ ನಡುಬೆರಳಿನಲ್ಲಿ ಉಂಗುರವಿದೆ (ರೂಢಿ). [ನಡು$_2$ + ಬೆರಳು (< ಬೆರಲ್)]

**ನಡುಬೊತ್ತು**, ನಡುಹೊತ್ತು (ನಾ). = ನಡುನೇಸಱ್: ಮತ್ತದಂ ಪೊಗೆ ಹೋದ ತೞಗೆಂಡದೊಳಗೆ ನಡುಬೊತ್ತಾಗುವನ್ನೆವರ ಪಟುಚ್ಛಳಂ ಮುಚ್ಚಿರಿಸಿ (ಸೂಪಶಾ. ೨-೧). ಅಂಬರಮೆಂಬವನಿಯ ಹೊತ್ತ ಭೂಧರಮೆಂಬ ಶೇಷನ ಮಸ್ತಕದ ಕೆಂಬೆರಲೆನೆ ನಡುಬೊತ್ತಿನೊಳೆಸೆದುದು ಬಿಂಬಮಂಭೋರುಹಸಖನ (ಶ್ರೀಪಾಲ. ೪-೪೯). **ನಡುಹೊತ್ತು**: ದೂರದ ಪೊಳಲಿಗೆ ಯಾತ್ರೆ ಹೊರಟಿದ್ದೇನೆ. ನಡುಹೊತ್ತಿನಲ್ಲಿ ಆಸರೆ ಸಿಕ್ಕೀತೆಂದು ಇಲ್ಲಿಗೆ ನುಗ್ಗಿದೆವು (ಹಾಹುತ್ತ. ೯೦). [ನಡು$_2$ + ಪೊತ್ತು$_3$ (< ಪೊಟ್ಟು)]

**ನಡುಭವಗಾವುಂಡ** (ನಾ). ಒಬ್ಬಾತನ ಹೆಸರು: ಅಂಕಗವುಣ್ಣಗೆ ಪಲಮ್ಮೆಱೆ ಗಾವಣ್ಡಂ ನಡುಭವಗಾ[ವು]ಣ್ಡಂಗೆ ತೆಲುಂಗರ ಮಾರಿಗಾವುಣ್ಡನೊಳ್ಪೆಱ್ಗಿಟ (ಎಕ. IV, ಹೆಗ್ಗಡ, ೧೦೪-೦೪; 1037). [ ? + ಗಾವುಂಡ (< ಗಾಮುಂಡ)]

**ನಡುಭಾಗ** (ನಾ). ಮಧ್ಯಭಾಗ: ನದಿಯ ನಡುಭಾಗದಲ್ಲಿ ಬಹಳ ಆಳವಿದೆ (ರೂಢಿ). [ನಡು$_2$ + ಭಾಗ]

**ನಡುಮಂಡೆ** (ನಾ). = ನಡೆಂದಲೆ: ಭಂಡರಾದೆವಲಾಯೆನುತ ನಡುಮಂಡೆಯನು ತುಡುಕಿದನು ಮೆಱೆವುದ್ದಂಡಜಡೆಯನು ಕಿತ್ತು ಬೀಸಾಡಿದನು ಭೂತಳಕೆ (ನಿಭಾಗ. ೪-೨-೪); ದಂಡೆ ಕಾಣದು ನಮ್ಮೂರು ನಡುಮಂಡೆ ಸ್ಥಳವೆ ನಮ್ಮೂರು (ಪುರಂದ. ೩-೭೦-೦). [ನಡು$_2$ + ಮಂಡೆ$_1$]

**ನಡುಮಟ್ಟ**$_1$ (ನಾ). ನಡುವಿನ ಮಟ್ಟ; ಸೊಂಟದ ಸಮ: ಅವನು ನಡುಮಟ್ಟದ ನೀರಿನಲ್ಲಿ ನಿಂತಿದ್ದಾನೆ (ರೂಢಿ). [ನಡು$_2$ + ಮಟ್ಟ$_1$]

**ನಡುಮಟ್ಟ**$_2$ (ಅ). ಸೊಂಟದ ವರೆಗೆ; ಸೊಂಟದ ತನಕ: ಆ ಕೆರೆಯಲ್ಲಿ ಒಬ್ಬ ಮನುಷ್ಯನ ನಡುಮಟ್ಟ ಬರುವಷ್ಟು ಮಾತ್ರ ನೀರಿದೆ (ರೂಢಿ). [ನಡು$_2$ + ಮಟ್ಟ$_6$]

**ನಡುಮಣ್ಣು** (ನಾ). (ತಕ್ಕಮಟ್ಟಿಗೆ ಚೆನ್ನಾಗಿರುವ) ಮಧ್ಯಮವರ್ಗದ ಭೂಮಿ: (ಕಿಸಂಗ್ರಾ. ೧೬). [ ನಡು$_2$ + ಮಣ್ಣು (<ಮಣ್) ]

**ನಡುಮಧ್ಯ$_1$** (ನಾ). ನಡುಭಾಗ ; ಮಧ್ಯಭಾಗ ; ನಟ್ಟನಡು : ನಡುಮಧ್ಯದಲ್ಲಿ ನಕ್ಷತ್ರ ಉದಯವಾಗಲು . . . ಕಾಳಲಾದೇವಿ ಕಿಡಿಮುಟಿದೋಡಿದಳು ನೋಡಾ (ಸಿದ್ಧೇವ. ೪೮–೧೩೫) ; ಸುತ್ತ ಮೆರದಿಹ ಸೇನೆ ನಡುಮಧ್ಯದೊಳು ಹಿಮಕರನಾ ಚಿತ್ರಭವನವೊಯೆನಲು ರಂಜನೆವೆತ್ತ ನಿಜಬೀಡಿನಲಿ . . . ಎಸೆದನು ಕೇಳು ಕೌರವನು (ಜಿನಭಾ. ೫೬–೨) ; ಬಿಡಾರವಿರುವವನಿಗೆ ನಡುಮಧ್ಯವಾದರೇನು ? (ಗಾದೆ).
[ ನಡು$_2$ + ಮಧ್ಯ$_1$ ]

**ನಡುಮಧ್ಯ$_2$** (ಅ). ಮಧ್ಯಭಾಗದಲ್ಲಿ ; ನಟ್ಟನಡುವೆ : ನಡುಮಧ್ಯ ಇರುವಂಥ ಸೀಮೆಯನ್ನು ಕಟ್ಟಿಕೊಂಡು (ರಾಜೇಂದ್ರ. ೨೬).
[ ನಡು$_2$ + ಮಧ್ಯ$_2$ ]

**ನಡುಮಧ್ಯೆ** (ಅ). ಮಧ್ಯಭಾಗದಲ್ಲಿ ; ನಟ್ಟನಡುವೆ : ಇಬ್ಬರು ದುಷ್ಟರಿಗೆ ಜಗಳವಾಗುತ್ತಿರುವಾಗ ನಡುಮಧ್ಯೆ ಪ್ರವೇಶಿಸುವುದು ಅಪಾಯಕರ (ರೂಢಿ); ನಡುಮಧ್ಯೆ ಇವರ ಕಿತಾಪತಿ ಬೇರೆ (ರೂಢಿ). [ ನಡು$_2$ + ಮಧ್ಯೆ$_2$ ]

**ನಡುಮನೆ** 'ನಡುಮನೆ' ನೋ.

**ನಡುಮರ** (ನಾ). ವೃಕ್ಷದ ಮಧ್ಯಭಾಗ : ನಡುಮರ ಹತ್ತಿ ಬುಡ ಕಡಿದ (ಗಾದೆ). [ ನಡು$_2$ + ಮರ$_1$ ]

**ನಡುಮಾಳ** (ನಾ). ಮೈದಾನದ ಮಧ್ಯಭಾಗ ; ನಡುಬಯಲು ; "ನಟ್ಟನಡು" (ಶಮುಡ. ಸ. ೧೯೩ ಅರಿವು): ಉದಾಹರಣೆ: ಕಡುಗುದುರೆ, ಕಡುಗಾಳ್ . . . ನಡುನೆಲಂಗಂ, ನಡುಮಾಳಂ. ನ[ಡುಮಾಳಂ]. ನಿ[ಡುಮಾಳಂ] ಮುಂದೆ ನೀರಿಲ್ಲಣಮೆ ಮುಗುಳ್ಕೊಳ್ವುದಂ ಪಿಂದಣಾರ್ಗೆಂಟು (ಶಮುಡ. ಸ. ೧೯೩ ಪ್ರಯೋ). 'ನಿಡುಮಾಳ' ಪರಾ. [ ನಡು$_2$ + ಮಾಳ$_4$ ]

**ನಡುಮುರಿ$_1$** (ಕ್ರಿ). ೧. ಸೊಂಟ ಬಾಗು, – ಬಗ್ಗು : ನಡುಮುಱ[ಿ]ದು ಗುಡುಗೂಱಿ ತಲೆ ನಡುಗಿ . . . ಒಂದನಾಡಹೋಗಿ ಒಂಬತ್ತನಾಡುವ ಅಜ್ಜನಿಗಳೆಲ್ಲರೂ ಹಿರಿಯರೆ (ಚನ್ನವ. ಕ. ೧೫೯–೩೫೩). ೨. (ಆಲಂ) ಸಂಪೂರ್ಣ ಶಕ್ತಿಗುಂದು. [ ನಡು$_2$ + ಮುರಿ$_1$ ]

**ನಡುಮುರಿ$_2$** (ಕ್ರಿ). ೧. ಸೊಂಟವನ್ನು ಮುರಿದುಹಾಕು. ೨. (ಆಲಂ) ನಾಶಮಾಡು ; ಹಾಳುಮಾಡು : ಬರುತದೆ ! ಮೈತೋರದೆ ಬರುತದೆ ! ಆದೆ – ನಡುಮುರಿಯುತ ನಗನಾವೆಗೆ, ಕೂವೆಗೆ (ಕಎಪು. ೨೬–೩).
[ ನಡು$_2$ + ಮುರಿ$_2$ ( <ಮುಱಿ$_1$) ]

**ನಡುಮೂಗು** (ನಾ). ಮೂಗಿನ ಮಧ್ಯಭಾಗ ; ನಾಸಿಕದ ನಡುಭಾಗ : ನಡುಮೂಗು, ನಾಸಾಸೇತು (Bridge of the nose. ಪಾರಿನಿ. ೧೦).
[ ನಡು$_2$ + ಮೂಗು$_1$ ]

**ನಡುರಂಗ** (ನಾ). ( ದೇವಸ್ಥಾನದ ) ಮಧ್ಯಭಾಗದಲ್ಲಿರುವ ರಂಗಮಂಟಪ, ಸಭಾಮಂಟಪ ; ನವರಂಗ : ಗುಡಿಯ ಬೋದಿಗೆ ಕಲ್ಲು ನಡುರಂಗ ತಾ ಕಲ್ಲು ಕಡೆಮೂಲೆ ಸೆಟಿಗು ತಾ ಕಲ್ಲು ವರವನು ಕೊಡುವಾತ ಬೇಱೆ (ಸರ್ವಜ್ಞ. ೨೦೫). [ ನಡು$_2$ + ರಂಗ$_2$ ]

**ನಡುರಾತ್ರಿ** (ನಾ). ಮಧ್ಯರಾತ್ರಿ ; ಸಮರಾತ್ರಿ : ನಡುರಾತ್ರಿಯಿಂದ ಮುಂಜಾನೆ ನಾಲ್ಕು ಗಂಟೆಯ ತನಕ ವಿಶ್ರಾಂತಿ ತೆಗೆದುಕೊಳ್ಳುವರು (ರಾಜಪ. ೭೮). [ ನಡು$_2$ + ರಾತ್ರಿ ]

**ನಡುರಾತ್ರೆ** (ನಾ). = ನಡುರಾತ್ರಿ : ಆತನಿಗೆ ಈಗ ನಡುರಾತ್ರೆಗೆ ತನ್ನನ್ನು ಕರೆದು ಪಸೆ ತುಂಬಿದ ಕಣ್ಣುಗಳಿಂದ 'ನನ್ನನ್ನು ರಕ್ಷಿಸು' ಎನ್ನುತ್ತಿದ್ದ ತಂಗಿಯನ್ನು ಇದಿರಿಸುವುದು ಸಾಧ್ಯವಾಗಲಿಲ್ಲ (ವಾತ್ಸಲ್ಯ. ೩೩೭) ; ಈ ನಡುರಾತ್ರೆಯಲ್ಲಿ ಭೀತಿಯಿಲ್ಲದೆ ನನ್ನ ಬೆಂಬತ್ತಿ ಬಂದವನು ನೀನು ಯಾರು ? (ಬತ್ತೀಸ. ೩೦). [ ನಡು$_2$ + ರಾತ್ರೆ ]

**ನಡುವಂತರ** (ನಾ). ೧. ನಡುವೆ ಇರುವ ಸ್ಥಳ. ೨. ಮಧ್ಯದ ಅವಸ್ಥೆ, – ಕಾಲ : ಹೀಗೆ ನಡುವಂತರದಲ್ಲಿ ಕೈಬಿಟ್ಟುಬಿಟ್ಟರೆ ಯಾರು ಗತಿ ? (ರೂಢಿ).
[ ನಡು$_2$ + ಅಂತರ ]

**ನಡುವಗಲ್, ನಡುಪಗಲ್, ನಡುವಗಲು, ನಡುಹಗಲು** (ನಾ). ಹಗಲಿನ ಮಧ್ಯಭಾಗ; ಮಧ್ಯಾಹ್ನ; ನಡುಹೊತ್ತು: "ಮುಂಬಗಲ್, ನಡುವಗಲ್, ನಡೆವಗಲ್ – ಇವು ೩ ತ್ರಿಕಾಲಂಗಳ್" (ಕಶಸಾ. ೫೬–೨೫೦) ; ನಡುವಗಲ ಬಿಸಿಲ್ತನ್ನಂ ಸುಡೆ ವನಕರಿ ಕಮಳಬಂಧುವೊಳ್ದಿನಕರನೊಳ್ ಕಡುಗಾಯ್ದುನೆ ಸರಸಿಜಮಂ ಕಿಡಿಸಲ್ಕಾಂ ಪೊಕ್ಕುದಾಗ ಬಗೆಗಾ ಕೊಳನಂ (ಕವಿರಾ. ೩–೧೧೪); ನರೇಂದ್ರ ನೋಡೀ ನಡುವಗಲೊಳ್ ಚಕ್ರವಾಕವಧು ವಿರಹಿಸುವಳ್ (ಆದಿಪು. ೧೧–೬೩) ; ಕಡುಪೊತ್ತಾದುದು ರವಿಯುಂ ನಡುವಗಲೊಳ್ನಿಂದು ಕೆದಱಿದಂ ಕರತತಿಯಿಂ ಕಿಡಿಗಳನೆನೆ ಬಿಱುಬಿಸಿಲುಂ ಸುಡುತಿರೆ ನೀರಡಿಕೆ ತಿಣ್ಣಮಾದತ್ತಾಗಳ್ (ಕಾದಂಪೂ. ೧೯೭) ; ನಡುವಗಲಾದಿತ್ಯನಂತೆ ನೋಡಲರಿದು (ಧರ್ಮಾಮೃ. ೩–೧೯೭) ; ಸೊಲ್ಲಿಸಲು ಬಾರದಾನಂದದಿಂದಾಡಿ ಪಾಡಿದನು ನಡುವಗಲ ತನಕ (ಸಿದ್ಧರಾ. ೨–೧೭) ; ನಡುವಗಲೊಳ್ ಕಡುನೀರನೊಳೊಡವೆರೆದ ಬಳಲ್ಕೆಗಳೆಯಲೆಳಸಿ ಘಳಿಲನೊಳಪೊಕ್ಕು ಮೈದೊಳೆದು (ರಾಜಶೇ. ೬–೨೪೫) ; ನಡುವಗಲ ಭಾಸ್ಕರಂ ನಿಶ್ಚಲಂ ಪೊಳೆಯುತಿರ್ದಂ (ರಾಮಾಶ್ವ. ೩೧–೧೩). **ನಡುಪಗಲ್ :** ಮರುಸ್ಥಳದ ಮಾಳದೊಳ್ ನಡುವಗಲ್ವರಂ ಗ್ರೀಷ್ಮದೋಳ್ ಸುರುಳ್ವಿನೆಗಮುಟ್ಟಿ ಬೇವವರ್ಗೆ ಜೋಂಪಮಿಮ್ಮಾವು ನಿಜ್ಝರಾಂಬು ದೊರೆಕೊಳ್ವವೋಲ್ (ಆದಿಪು. ೧೩–೮೭) ; ನಡೆಯಲ್ವೇಡೆಂದು ಪೋಗಿ ಶಾಲ್ಮಲಿಗಿದವೋಲಡಿಮೊದಲಂ ಸಾರ್ದ ನೆಟಿಲ್ ನಡುವಗಲಂ ನಿಗದಿಸಿತ್ತು ಮುನಿಪತಿಗಳ್ (ಖಗೇಶ. ೩–೨). **ನಡುವಗಲು :** ನಡುವಗಲಿನ ಸನ್ನೆಯಾದುದು ಪಾದಕರೆದಬಲಕೊಲೆದು ಸಾಗಿದರು (ಭರತ. ೧೭–೦೨೪) ; ನಡುವಗಲಿನ ಬೇಸಗೆಯ ಮಾರ್ತಂಡನ ಕಡುಝಳದುಬ್ಬರಕಾಗ ಅಡಗುವ ಹಿಮದೊಲಿಪ್ಪತ್ತುಸಾವಿರಬಲ ಮಡಿದುದು (ಕಂಸವಿ. ೦೫–೮೯) ; ನಡುವಗಲಲ್ಲಿ ತಾಂ ನಡಪಿ ದಂತಿಗಳಂ ರವಿತಪ್ತಯೂಥಮಂ ಬಿಡದತಿಶೀತಲಸ್ಥಲವ ಸೇವಿಸುವಂತೆವೊಲ್ (ಶಾಕುಂತ. ೬೨–೧೦೫) ; ಬೆಳಗು ಬೈಗನು ದುಃಖ ಸುಖದ ಸಮಶೀತೋಷ್ಣದೊಳಗದ್ದಿ, ನಡುವಗಲು ಕುದಿಸಿ ಒಣಗಿಸಿ (ನೆಲಮು. ೬೪–೫). **ನಡುಹಗಲು :** ಕಂಡಿರೇ ಮುರವೈರಿ ದಳಪತಿ ಚಂಡಬಳನಹ ನಡುಹಗಲ ಮಾರ್ತಾಂಡನಂತಿರೆ ತೋಱುತ್ತೈದನೆ ರಥವ ತಿರುಹೆಂದ (ಕುಮ್ಯಾಕ. ೧೪–೩೭) ; ನಡುಹಗಲ ಸೂರ್ಯನನಳುಕಿಸುವುದೇ ಮಂಜು (ನಿಭಾಗ. ೧೦–೫೭–೪೮) ; ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳುವಿಲ್ಲ (ಗೊಲ್ಲಥಾ. ೧೦–೨೭೨) ; ನಡುಹಗಲಿನ ಆಕಾಶವನ್ನು ನೀವು ನೋಡಿರಬಹುದು (ರಾಮಾನ. ೧೦೭) ; ನಡುಹಗಲಲ್ಲಿ ಸೂರ್ಯನ ಸೆಕೆಯಿಂದ ಪಾರಾಗಲು, ತಂಪಾದ ನೆರಳಲ್ಲಿ ಮಲಗಿ ವಿಶ್ರಾಂತಿ ಪಡೆದರು (ಮಂಚಸ. ೭೯).
[ ನಡು$_2$ + ಪಗಲ್ ]

**ನಡುವಗಲು** 'ನಡುವಗಲ್' ನೋ.

**ನಡುವಗಲ್ಪಂಜು** (ನಾ). (ದೇವರ ಅಥವಾ ಹಿರಿಯ ವ್ಯಕ್ತಿಗಳ ಗೌರವಾರ್ಥವಾಗಿ) ಮಧ್ಯಾಹ್ನದಲ್ಲಿ ಉರಿಸುವ ಪಂಜು ; ಹಗಲು ದೀವಟಿಗೆ : ಪಿಡಿದೆರಳ್ ಸತ್ತಿಗೆಗಳೆರಡೆರಳ್ ಚವರಗಳ ನಡುವಗಲ್ಪಂಜುಗಳ . . . ಗದಾದಿಯಾಯುಧಮನುಱಿ ಜಡಿವುತ್ತ ಸಿಡಿಲ ಬಳಗಂಗಳೆನೆ ಬಂದುದು ಪದಾತಿಬಲಮೇನೆಂಬೆನು (ಚಿಬಪು. ೪೭–೩೭). [ ನಡುವಗಲ್ + ಪಂಜು ]

**ನಡುವಟ್ಟು** (ನಾ). ಬಿಂಬದ ಮಧ್ಯಭಾಗ ; ಮಂಡಲದ ನಡುಭಾಗ : ಒಡಲೊಳ್ ಪೊತ್ತಪನಾವ ವಸ್ತುವನಹೀಂದ್ರಂ ಕಂದದೊಳ್ ತಾರ್ಕ್ಷ್ಯನುಂ ನಡುವಟ್ಟೊಳ್ ಪಗಲಾಣ್ಮಂ . . . ತೊಡರ್ದಿರ್ಕು ಪರವಸ್ತು ವೀರ ಚಿಕದೇವೇಂದ್ರಕ್ಷಮಾಪಾಲನಂ (ಚಿಕವಿ. ೫–೨) ; ಅಚ್ಚಪೊಚ್ಚಪೊಸ ಸೇವಂತಿಗೆಯೆಸಟ್ಟಿರದ ಸುತ್ತಿನಿಂದಿನಿಸುಂ ನಡುವಟ್ಟನುಱಿದು ತಲೆಯೆಡೆಯಂ

ಬೆಳರ್ಗಿಸುವೋರೆಸಿಕ್ಕಿ ತನ್ನ ಕುಲದೇಟ್ಗಿಯಂ ನಿಟ್ಟಿಸಲ್ಕಿಱಿತಂದ ಚಂದಿರನೆಂಬ ಸಂದೆಯುಮಂ ಸಮನಿಸುತ್ತಿದೆ (ಜಿಕವಂ. ೮೧-೨೦).

[ ನಡು$_2$ + ಬಟ್ಟು$_1$ ]

**ನಡುವಟ್ಟೆ** (ನಾ). ಮಧ್ಯದಾರಿ ; ಮಾರ್ಗಮಧ್ಯ : ಪೆಸರ್ವೆತ್ತ ತೀರ್ಥ ಕ್ಷೇತ್ರಂಗಳೊಳ್ ಸಂಚರಿಸುತಿಪ್ಪನ್ನಂ ನಡುವಟ್ಟೆಯೊಳ್ ಪಲಂಬರಂ ಕರ್ವೇಡರಂ ಕಂಡೆಂ (ರಾಮಾಶ್ವ. ೭೭-೧೩). [ ನಡು$_2$ + ಬಟ್ಟೆ$_1$ ]

**ನಡುವನ** (ನಾ). ಕಾಡಿನ ಮಧ್ಯಭಾಗ; ಅರಣ್ಯದ ಮಧ್ಯಭಾಗ: ನೆರಹಿದರದಟಗಂಧರ್ವರು ಭಟವ್ರಜವ ಬಂದುದದು ನಡುವನಕೆ ಕೌರವ ವೃಂದವನು ಕರೆದರು ವಿನೋದಕೆ ಬಂದಿರ್ಕೆ ನಾರಾಚಸಲಿಲಕ್ರೀಡೆಯಿದೆ ಯೆನುತ (ಕುಮ್ಯಾಆ. ೧೫-೩೩). [ ನಡು$_2$ + ವನ ]

**ನಡುವನೆ, ನಡುಮನೆ** (ನಾ). ಮನೆಯ ಮಧ್ಯಭಾಗ : "ನೆಱ ನಡುವನೆ ನಟ್ಟವನೆಯುಮಕ್ಕು ಬುಧರಿಂ" (ಕವಿಕಂ. ೧೪೪). **ನಡುಮನೆ** : "ನಟ್ಟವನೆ ಯೆನೆ ನಡುಮನೆಯುಮಕ್ಕು" (ಶಬ್ದಕೌ. ೪೩); ಅಸುವೆವೊರಲೊನಕೆ ಗೂಟಂ ಪೊಸತಿಲು ನಡು[ಪಾಠಾಂ. ಮನೆ]ಮನೆಯ ಕಂಭವೊಲೆ ಪಡಿ ಪಾಲುಂ . . . ಸಮಸ್ತಂ ದೆಯ್ವವಿಂತಿವೆಂಬಮೂರ್ಖರ್ (ಸಮಪ. ೯-೮೨) ; ನಡುಮನೆ ಯೊಳಿರ್ದವನ ಕೋಣೆಗೊಡಗೊಂಡೊಯ್ದು ಪಡಿಗದವನಿಕ್ಕಿ ಉಮ್ಮಳಿಸಿ ಸುಜ್ಜನೆ ಸುಯ್ದು ಬಂದ ಭಕ್ತರ್ಗೆ ನೆಱ ಬೋನವಂ ಮಾಡುತಿರೆ (ಕಲಿಕಾ. ೭೭-೦೭) ; ತನ್ನ ಭಾತ್ರನಪ್ಪ ಯಜ್ಞನಂ ನಡುಮನೆಯ ಜಗಲಿಯಿಂ ತೆರಳಲಾಗದೆಂದು ನಿಯಮಾಜ್ಞೆಯಂ ಕೊಟ್ಟು ಪೋಗೆ (ಧರ್ಮಪ. ೩-೦೩ವ); ನಡುಮನೆಯೊಳಗೊಂದು ನಾಲ್ಕು ತೆಂಗಿನ ಮರ . . . ತಲೆ ಮೊದಲಿಲ್ಲದೆ ಬೆಳದು ಹಣ್ಣಾಯಿತು (ಪುರಂದ. ೨-೧೯೧ ಪಲ್ಲವಿ) ; ಊಟವಾದ ಮೇಲೆ ನಡುಮನೆಯಲ್ಲಿ ಕುಳಿತುಕೊಂಡು ಮೂವರೂ ಲೆಕ್ಕದ ಪರಿಶೀಲನೆ ಮಾಡ ತೊಡಗಿದರು (ಮುಕಳಿ. ೧೫೮) ; ವೆಂಕಮ್ಮನವರು ನಡುಮನೆಗೆ ಬಂದು ಹುಡುಗರ ಗುಂಪನ್ನು ನೋಡಿ ಸ್ವಲ್ಪ ದಿಗಿಲು ಬಿದ್ದರು (ಕಳಹು. ೧೦).

**ನಡುಮನೆ ಕಂಬ** = ಮನೆಗೆ ಆಧಾರಸ್ತಂಭದಂತಿರುವವನು ; ಮನೆಯ ಹಿರಿಯ,–ಮುಖ್ಯಸ್ಥ. [ ನಡು$_2$ + ಮನೆ ]

**ನಡುವರಿ** (ನಾ). [ನಾಟ್ಯ] ಕರಣಗಳಲ್ಲಿ ಒಂದು ಬಗೆ: ನಡುವರಿ ಮೊಸಳೆವರಿ ಜಲಶಯನಚ್ಯುತಂ ಮತ್ಸ್ಯಪುಟಂ ಲಂಕಾದಹನಮೆಂಬ ಪಲವುಂ ತೆಱದ ಕರಣಂಗಳಿಂ . . . ಎರಡುಂ ತೆಱದ ನೃತ್ಯಭೇದದಿಂದಾಡಿ (ಧರ್ಮಪ. ೨-೨೭ವ). [ ? ]

**ನಡುವಲೆ** (ನಾ). ಬಲೆಯ ಎರಡು ಬೇರೆ ಬೇರೆ ಕೊನೆಗಳನ್ನು ಭೂಮಿ ಯಲ್ಲಿ ನಾಟಿರುವ ಒಂದು ಬಗೆಯ ಬಲೆ (?) : ತಡಿಕೆವಲೆ ಕಣ್ಣವಲೆ . . . ನಡುವಲೆ ತಡೆವಲೆ ಸಿಡಿವಲೆ ನಿಡುವಲೆಗಳೊಪ್ಪಿದವು ಲುಬ್ಧಕರೊಳ್ (ಗಿರಿಕ. ೧-೮೦). 'ನಡೆವಲೆ' ಪಾ. [ ನಡು$_1$ + ಬಲೆ$_1$ ]

**ನಡುವಳಿ** (ನಾ). ಮಧ್ಯಭಾಗ : ನೀರುಳ್ಳಿ ಹಸಿಯಲ್ಲದ ಹುಡಿಯ ತುಪ್ಪದಿ ಹುರಿದು ಮತ್ತವಾ ಹೋಳುಗಳ ನಡುವಳಿಯ ಕತ್ತಿಯೊಳು ಸೀಳಿಕೊಂಡು . . . ನಾರಿಂದವು ಬಿಗಿವುದು (ಸೂಪಶಾ. ೫-೧೩) ; ಆ ಮಧ್ಯದ್ವೀಪದ ನಡುವಳಿಯ ಮಹಾಮೇರುಮಹೀಧರವೆಸದತ್ತು (ಜಯುಕಾ. ೧-೩೨).

[ ನಡು$_2$ + ಬಳಿ$_3$ (< ಬಟ್ಟೆ$_2$) ]

**ನಡುವಾಯ್, ನಡುಪಾಯ್** (ಕ್ರಿ). ೧. ನಡುವೆ ಹಾಯು ; ಮಧ್ಯೆ ಪ್ರವೇಶಿಸು. 'ನಡುವಾಯಿ' ಪಾ. **ನಡುಪಾಯ್** : ೨. ಕಾಲಕ್ಕೆ ಮುಂಚಿತವಾಗಿ ಹೊರಬೀಳು ; ಮಧ್ಯಕಾಲದಲ್ಲಿ ನೆಗೆ : ಈಂಬ ಸಿಂಹಿಕಿಶೋರಂ ನಡುಸೂಲೊಳ್ಸಿರ್ಕೆ ಕಣ್ಣಂ ತೆಱದಿ ಭಪತಿಯಂ ತಾಱಲೊಳ್ಕಂಡು ಕಾಯ್ಪಿಂ ನಡುಪಾಯ್ದಾ ತಾಯ್ಗೆ ದುಃಖಪ್ರಸವಸಮಯ ದೊಳ್ತಂದುದಂತೊಂದಲಂಪಂ (ಅನಂಪು. ೧೨-೬೨).

[ ನಡು$_2$ + ಪಾಯ್$_1$ ]

**ನಡುವಾಯಿ** (ನಾ). ಮಧ್ಯೆ ಪ್ರವೇಶಿಸುವವನು ; ನಡುವೆ ತಲೆಹಾಕು ವವನು : ಬಣಗುಗಳು ಭೀಮಾರ್ಜುನರು ಕಾರಣಿಕ ನೀ ನಡುವಾಯಿ ಧರ್ಮದ ಕಣಿ ಯುಧಿಷ್ಠಿರನೆತ್ತ ಬಲ್ಲನು ನಿನ್ನ ಮಾಯೆಗಳ (ಕುಮ್ಯಾಗ. ೮-೩೯). [ ನಡುವಾಯ್ + – ಇ$_3$ ]

**ನಡುವಾಯು** (ನಾ). ಸೊಂಟದಲ್ಲಿ ಬರುವ ವಾಯುರೋಗ, –ಸಂಧಿವಾತ: (ಕಿಸಂಗ್ರಾ. ೧೦೮). 'ಕಟಿವಾತ' ಪಾ. [ ನಡು$_2$ + ವಾಯು ]

**ನಡುವಿಡಿ** (ಕ್ರಿ). ನಡುವನ್ನು ಹಿಡಿ ; ಸೊಂಟವನ್ನು ಬಳಸು : ಉಟ್ಟಿರ್ದ ಬೆಳ್ದಳಿಂಬಂ ಸುತ್ತಿ ನಡುವಿಡಿದ ಕಟ್ಟಣ್ಮಗೇಂ ನೇವಳಂ ಬಿಗಿವುದಲ್ತೆ (ಕಾಲೂರ. ೧೪೮-೩೨೩). [ ನಡು$_2$ + ಪಿಡಿ$_1$ ]

**ನಡುವಿರುಳ್$_1$, ನಡುವಿರುಳು$_1$** (ನಾ). = ನಡುರಾತ್ರಿ : "ನಿಶೀಥಃ, ಮಹಾನಿಶಾ – ಈ ೨ ನಡುವಿರುಳ್" (ಹಲಾಯು. ೧೮-೧೦೯) ; ಜಿನಮಂದಿರ ದೊಳ್ ನಡುವಿರುಳಪ್ಪನಂ ಪೂಜಾಮ್ಯಭವವಂ ನೋಡುತ್ತಿರ್ದು (ಧರ್ಮಾಮೃ. ೨-೨೦೭) ; ನಡುವಿರುಳೊಳಿದ್ದ ಕುರುಡಂಗೆ ಆಗಸೆಯಲ್ಲಿ ಬೆಳಗಾದಂತೆ (ಬಸವ. ೨೮೭). **ನಡುವಿರುಳು$_1$**: ನಡುವಿರುಳಲ್ಲಿ ಹೊರಟವರಿಗೆ ಹೆಬ್ಬಾಗಿಲಲ್ಲಿ ಬೆಳಗಾಯಿತು (ಗಾದೆ). [ ನಡು$_2$ + ಇರುಳ್ ]

**ನಡುವಿರುಳ್$_2$, ನಡುವಿರುಳು$_2$** (ಅ). ಮಧ್ಯರಾತ್ರಿಯಲ್ಲಿ; ನಡುರಾತ್ರಿಯ ಸಮಯದಲ್ಲಿ : ನಡುವಿರುಳ್ ಕರ್ಪಟವಂ ಪೞದುಟ್ಟು ನಾಗಪುರಕ್ಕೆ ಪೋಗಿ (ಶಾಂತಿಪು. ೯-೯೦ವ) ; ನಡುವಿರುಳವರ್ ನಾಟಕಂ ನಲಿದು ಮಱೆ ದೊಱಗಿರ್ದ ಸಮಯದೊಳ್ (ಪಂಚತಂ. ೨೭೪-೧) ; ನಡುವಿರುಳಾರುಮಿಲ್ಲ ದೆಡೆಯೊಳ್ ಕೊರಲೊಳ್ ವಧು ಕೋದು ಬಳ್ಳಿಯಂ ಮಡಿಯಲೊಡರ್ಚೆ (ಪಂರಾಮಾ. ೮-೦೫) ; ತರುಣಿ ನಡುವಿರುಳೈದಿ ಕರ್ಣನ ಹೊರೆಯೊಳಾ ವಿರ್ಭವಿಸಲು (ಕುಮ್ಯಾಆ. ಓರಿ೩. ೨೩-೪). **ನಡುವಿರುಳು$_2$** : ನೆಲೆವಟ್ಟಣಕ್ಕೆ ಬರೆ ನಡುವಿರುಳು ನಡೆತಂದು ಊರ ಹೊಱಗಣ ಮಸಣವಟ್ಟಿಗೆಯೊಳಿರ ಲಂದು (ನಂಬಿರ. ೭-೫೪) ; ನಡುವಿರುಳು ಕಲಿಪಾರ್ಥನರ್ಚಿಸಿದನು ನಿಜಾಯುಧವ (ಕುಮ್ಯಾದ್ರೋ. ೯-೩) ; ಪೊಡವಿಪತಿಯೆಡೆಗೊಯ್ವೆಯಿಾತನ ಬಿಡಲಿ ಮೇಣಲ್ಲದೊಡೆ ಕೊಲಿಸಲಿ ನಡುವಿರುಳು ರಣದೊಳಗೆ ಕೊಂದುದ ಮಱೆದುದಿಲ್ಲೆಂದ (ಕೌಶಿರಾ. ೩೪-೪೭) ; ದೀವಿಗೆಯು ಕಡುಬೆಳದು ಸುಟ್ಟುದೆನಿಪ ಶಂಕೆಯ ಬೆಳಸಿ ಕಡುನಡುವಿರುಳದಕೆ ಕಿಚ್ಚಿಕ್ಕಿ ಹೊಱವಂಟ (ಸಾಳ್ವಭಾ. ೩೫-೫); ಬೇಗೆಯೊಳು ಹೋಗದಿರು ಮೂಗರೊಳು ನುಡಿಯದಿರು ಆಗದರ ನಂಬಿ ಕೆಡದಿರು ನಡುವಿರುಳು ಹೋಗದಿರು ಪಯಣ (ಸರ್ವಜ್ಞ. ೧೫೪೫). [ < ನಡುವಿರುಳ್$_1$ ]

**ನಡುವಿರುಳು$_1$** 'ನಡುವಿರುಳ್$_1$' ನೋ.

**ನಡುವಿರುಳು$_2$** 'ನಡುವಿರುಳ್$_2$' ನೋ.

**ನಡುವೀದಿ, ನಡುಬೀದಿ** (ನಾ). ಬೀದಿಯ ನಡುಭಾಗ ; ದಾರಿಯ ಮಧ್ಯಭಾಗ : ನಿಜಜನನಿ ನೀರ್ಗೆ ಪೋದ ಪೊಳ್ತಿನೊಳಾ ಕಳಕಳವಂ ಕೇಳ್ದು ನೋಡಲೆಳಸಿ ಸಡಗರಂ ಮಿಗೆ ನಡುವೀದಿಗೆ ತಡೆಯದೆ ಬಂದು (ರಾಜಶೇ. ೧೩-೯೫ವ). **ನಡುಬೀದಿ** : ಪಶು ಮಡುವಿನ ಅಗ್ಗಣಿಯ ಕುಡಿದು ನಡುಬೀದಿ ಯಲ್ಲಿ ಬರುತಿರಲು (ಸಿದ್ಧೇವ. ೪೮-೧೩೭) ; ಅವಳನ್ನು ಕುರಿತು ಯೋಚಿಸಲು ನಡುಬೀದಿ ತಕ್ಕ ಸ್ಥಳವಲ್ಲ (ದುಂಬಿಕ. ೭) ; ಏನಿಲ್ಲಿ ನಿಂತುಬಿಟ್ಟಿರಿ ಮೂಟೆಗಳ ನಿಳುಹಿ ನಡುಬೀದಿಯಲ್ಲಿ ? (ಚಂದ್ರಸ. ೪೨).

[ ನಡು$_2$ + ಬೀದಿ ]

**ನಡುವು** (ನಾ). ನಡು ; ಮಧ್ಯಭಾಗ : ವಿಾನಂಬುಱುವುವಂ ನೀರಿಲ್ಲದ ಕೆಱೆಯ ನಡುವುವಂ . . . ಇಂತೀ ಪದಿನಾಱುಂ ಕನಸುಗಳಂ . . . ಕಂಡೆನೆಂದಂಜಿ (ವಡ್ಡಾರಾ. ೮೫-೨೭) ; ನಡುವಿನಲ್ಲಿ ಅಧಿಕಾರ ಬಂದರೆ ಅವನನ್ನು ಹಿಡಿಯ ಸಲ್ಲ, ನಡುವಿನಲ್ಲಿ ಸೀರೆ ಹರಿದರೆ ಉಡ ಸಲ್ಲ (ಗಾದೆ).

[ ದೇ.॥ ತಮಿ. ನಟುವು ; ತುಳು. ನಡುವುಲು ; ತೆಲು. ನಡುಮು,]

**ನಡುವೂರು** (ನಾ). ಊರಿನ ಮಧ್ಯಭಾಗ ; ಪಟ್ಟಣದ ಮಧ್ಯಸ್ಥಳ,– ಕೇಂದ್ರಪ್ರದೇಶ : ದುರಾಸೆ ಮುಂದುಗೊಂಡು ನಾನಾ ದೇಶವ ತಿರುಗಿ ಹುಸಿಯ ಬೊಗಳಿ ವ್ಯಾಪಾರದ ಮಱಿಯಿಂದ ನಡುವೂರ ಬೀದಿ ನಡುವೆ ಕುಳಿತು (ಮುಡಿಮಾ. ೪೭–೬೪). [ ನಡು₂ + ಊರು₃ ( < ಊರ್ ) ]

**ನಡುವೆ₁**, ನಡವೆ (ನಾ). ಮನೆಯ ಮಧ್ಯದ ಭಾಗ ; ನಡುಮನೆ : ಇಷ್ಟರಲ್ಲಿಯೇ ಪುನಃ ನಡುವೆಯ ಬಾಗಿಲಲ್ಲಿ ಅಮ್ಮಯ್ಯ ಬಂದು ನಿಂತಿದ್ದರು (ಹಂಗಾಳ್ಕ-೪); ನಡುವೆಯ ಕಡೆಗೆ ಬಾಗಿಲು ತೆರೆದ ಕೋಣೆಯಿಂದ ತಂಬಾಕು ಹೊಗೆಯನ್ನು . . . ಕುಡಿಯುತ್ತಿದ್ದಂತೆ ಅವಳ ಬಯಕೆ ಕಾವೇರುತ್ತಿತ್ತು (ಪುನರು. ೦೫೭). **ನಡವೆ :** ಒಡನಾ ಪೂಧತ್ತಾಟ್ಟಾರ್ ನಡವೆಯೊಳಿನಿತೆಡೆಯನೀವುದೆನೆ (ದಿವ್ಯಚ. ೨–೯) ; ಗಣಿಕಾವನಿತಾಲಯಂ ಮೆರೆಗುಂಮವುಗಳೊಂದರ ಮುಂಬಾಗಿಲ ನಡವೆಯ ಜಗುಲಿಯ ರತ್ನಪಂಜರ ದಲ್ಲಿ (ಅರ್ಜಾವಿ. ೨೦–೩೮೪) ; ಒಬ್ಬ ಬ್ರಾಹ್ಮಣನ ಮನೇ ನಡವೆಯಲ್ಲಿ ಇಳುಕೊಂಡರು (ಕಥಾಮಂ.IV, ೨೮); ಅಂದಣಾವನೇರಿ ಬಂದಳಣ್ಣನ ಮನೆಗೆ ನಿಂದೀರು ಅಕ್ಕ ನಡವೇಲಿ ಒಳಗೀರೊ ರಂಭೇಯ ಕೇಳಿ ಬರತೀನಿ (ಹಳ್ಳಿಪ. ೦೧೨). [ <ನಡು₂./ ತೆಲು. ನಡುವ, ನಡವ ]

**ನಡುವೆ₂** (ಅ). ಮಧ್ಯೆ ; ಮಧ್ಯಭಾಗದಲ್ಲಿ : ಇತ್ತರಸನುಮಾ ಇರುಳೊಳ್ ಶ್ವೇತವೃಷಭನಂ ಕನಸಿನೊಳ್ ಕಂಡು ಪೊಟ್ಟಱಿನೋಲಗದೊಳ್ ಆಸ್ಥಾನದ ನಡುವೆ ಸಿಂಹಾಸನಮಸ್ತಕಸ್ಥಿತನಾಗಿ ತನ್ನ ಕಂಡ ಕನಸಂ ಮಂತ್ರಿಗೆ ಪೇೞ್ದೊಡೆ (ವಡ್ಡಾ. ಕಾ. ೦೦೨–೦೦) ; ರಮಣೀಯಮಪ್ಪ ಗಂಧಿಲವಿಷಯದ ನಡುವೆ . . . ನೂಱ ಪತ್ತಂ ಪೊಟಲ್ಗಳನೊಳಕೊಂಡು (ಆದಿಪು. ೦–೯೫೪); ಅಂತು ಮೇರೆದಪ್ಪಲ್ ಬಗೆದ ಮಹಾಸಮುದ್ರಂಗಳೆರಡಱ ನಡುವೆ ಕುಲಗಿರಿಯಿರ್ಪಂತಿರ್ದಶ್ವತ್ಥಾಮನಂ ಕಂಡು (ಪಂಪಭಾ. ೨–೭೩೪) ; ಮಾೞಱಂ ಬೆಳ್ಗೊಡೆಯ ನಡುವಿರ್ಪ ನೀನಿರ್ದೆಡೆಯುಮನೆಮಗಱಿಯ ದಂತಾಟಾದುದೆ ಮಗನೇ (ಗದಾಯು. ೩–೭೪) ; ದುಷ್ಟರ ನಡುವಿರ್ದ ಶಿಷ್ಟಂಗೇಗೆಯ್ದುಂ ಸುಖಮಾಗಲಱಿಯದು (ಪಂಚತಂ. ೦೪೭–೦) ; ಕೂಡಲ ಸಂಗಮದೇವ ಭಕ್ತನ ನುಡಿಯ ನಡುವೆ ರಾಶಿಯಾಗಿರ್ಪನು (ಬಸವ. ೦೪೩) ; ಬಿಡದೆ ಬೆಂಡೆದ್ದೇಳ್ವ ತಲೆಗಳ ಗಡಣ ನೀರ್ವಕ್ಕಿಗಳ ಸರಸಿಯ ನಡುವೆ ನಲಿನಲಿದಾಡುತಿರ್ದುದು ಭೀಮವನದಂತೆ (ಕುಮ್ಮಾದ್ರೋ. ೦೨–೨೩) ; ನನ್ನ ಅವರ ನಡುವೆ ಮೊದಲಿನ ಸೌಜನ್ಯವಿರಲಿಲ್ಲ (ನಾಡಿಗೇ. ೦೭).

**ನಡುನಡುವೆ, ನಡನಡುವೆ** (ದ್ವಿರುಕ್ತಿ) : ನಡುನಡುವೆ ಯಮುನ ಪಟ್ಟಣವು ಎನ್ನೊಡೆಯ ಪಂಚೇಂದ್ರಿಯ ದೈವಕರು ತಡೆಯದಂತೆ ನೀ ದಯಮಾಡೊ (ಪುರಂದ. ೩–೦೭೭–೩) ; ಈ ವನದ ನಡುನಡುವೆ ತೊಳ ತೊಳಗುತಿರುತಿಹ ಸರೋವರದೊಳೆ . . . ಮೊರೆಮೊರೆವ ಭೃಂಗಾವಳಿಯ ಗಾವಳಿಯ ಕಳಕಳಂಗಳ ನೋಡು ನೋಡು ರವಿತನಯತನಯ (ಜೈಮಿಭಾ. ೩–೩೭); ತಿಂಗಳಿಗೊಮ್ಮೆ ತರುವ ಮತ್ತು ನಡುನಡುವೆ ತರಬೇಕಾಗುವ ಸಾಮಾನುಗಳನ್ನು ಪಟ್ಟಿಮಾಡಿಟ್ಟುಕೊಳ್ಳಬೇಕು (ಅಡುಸಾ. ೫೩) ; ನಡ ನಡುವೆ ''ಚಾಯ್‌ಗರಮ್'' ದವರ ಬಾಯಿ–ಗರಮು ಗದಗವಿಸುತ್ತಿತ್ತು (ದೀಪಕ. II, ೩೪೮). [ <ನಡುವೆ₁./ತಮಿ. ನಟುವೆ ; ತುಳು. ನಡುವೆ ]

**ನಡುವೆಟ್ಟು** (ನಾ). ಬೆಟ್ಟದ ನಡು,–ಮಧ್ಯಭಾಗ : ಸಿಡಿಲಾಳ್ ತಡೆ ಯದೆಡೆಯ ನಡುವೆಟ್ಟುಗಳ್ಗೆ ಕಟ್ಟುಬ್ಬರದಿಂ ಬಂದೆಱಗುಗುಂ (ರಾಮಾಶ್ವ. ೦–೭). [ ನಡು₂ + ಬೆಟ್ಟು₂ ]

**ನಡುವೊಗು** (ಕ್ರಿ). ನಡುವೆ ಪ್ರವೇಶಿಸು ; ಮಧ್ಯೆ ತಲೆಹಾಕು : ತಗರ್ ಕಾದುವಲ್ಲಿ ನಡುವೊಕ್ಕು ನರಿ ಸತ್ತುದು (ಪಂಚತಂ. ೭೯–೦೮).

[ ನಡು₂ + ಪೊಗು(<ಪುಗು) ]

**ನಡುಸಂತೆ** (ನಾ). ೧. ಸಂತೆ ಸೇರಿರುವ ಸ್ಥಳದ ಮಧ್ಯಭಾಗ. ೨. ಸಂತೆ ಯಲ್ಲಿ ವ್ಯಾಪಾರ ಭರಾಟೆಯಿಂದ ನಡೆಯುವ ಸಮಯ,–ವ್ಯಾಪಾರದ ಸಮಯದ ಮಧ್ಯಕಾಲ : ಈಗ ನಡುಸಂತೆಯು ಹೊತ್ತು. ಜನ ನುಗ್ಗು ತ್ತಿದ್ದಾರೆ (ರೂಢಿ). ೩. ಹೇರಳವಾಗಿರುವಿಕೆ ; ಆಧಿಕ್ಯ ; ಯಥೇಚ್ಛ ವಾಗಿರುವುದು : ಎಡಬಲದೊಳಗೋಲೈಪ ಕೋಮಲೆಯರು ತೊಡೆದ ಲೇಪನವುಟ್ಟ ದುಗುಲ ಮುಡಿಹೂದಂಬುಲಗಂಪಿನ ಕಂಪಿನ ನಡುಸಂತೆ ಯಾದುದಾಸ್ಥಾನ (ಶ್ರೀಪಾಲ. ೩–೭) ; ತೆಂಗಿನ ನಡುಸಂತೆಯಲ್ಲಿ ಕಾಯಿಗೆ ಬರವೇ ? (ರೂಢಿ). [ ನಡು₂ + ಸಂತೆ₁ ]

**ನಡುಸರಕು** (ನಾ). ವ್ಯವಹಾರದಲ್ಲಿ ವಿನಿಮಯಕ್ಕಾಗಿ ಇಬ್ಬರ ನಡುವೆ ಬಳಸುವ ಸರಕು,–ಪದಾರ್ಥ : ಅಕ್ಕಿ, ಜೋಳ ಒಂದು ಉಪಯುಕ್ತ ಧಾನ್ಯವಿನಿಮಯದ ''ನಡು–ಸರಕು'' ಆಗಬಹುದು (ಮಾಪಾದ. ೦೦೪).

[ ನಡು₂ + ಸರಕು₃ ]

**ನಡುಸರು** (ನಾ). ನಡುವಿನ ಉಸಿರು ; ಮಧ್ಯೆ ಮಧ್ಯೆ ತೆಗೆದುಕೊಳ್ಳುವ ಉಸಿರು (?) : ಕಿಡಿನಯನ ಘರ್ಷಣೆಯೊಳುದ್ವಾರ್ಗಿಕಲ್ಗಳಂತೊಡನೆ ಸುರನದಿಯ ನಡುಸರು ಬಿರ್ದವಂತಾಗ ವ್ಯಡ ಪೊಡವಿಡಣೆದವ್ಯತಫಲ ಬತ್ತದಂತಾಗ ಕೊಡುತಿರ್ದ ಶರಣಜನಕೆ (ಮರುಜಾ. ೦–೯).

[ ನಡು₂ + ಉಸರು₀ ( < ಉಸಿರ್₂ ) ]

**ನಡುಸಾಲೆ** (ನಾ).=ನಡುಮನೆ : ಬಾಗಿಲು ದಾಟಿದ ಕೂಡಲೆ ಒಂದು ವಿಶಾಲ ವಾದ ನಡುಸಾಲೆ ಕಾಣುತ್ತದೆ (ಕವಿಕೋ. I, ೦೯೮) ; ಪಡಸಾಲೇ ಊಟ, ನಡುಸಾಲೇ ನಿದ್ರೆ (ಗಾದೆ). [ ನಡು₂ + ಸಾಲೆ₃ ]

**ನಡುಸುಳಿ** (ನಾ). ನಡುವೆ ಇರುವ ಸುಳಿ, – ಆವರ್ತ, – ಗರ್ತ : ಹೋಲಿಸುವಡಿದು ಮೃತ್ಯುವಿನ ಗೋನಾಳಿ ಹೊಗುವಡೆ ಕಡಲ ನಡುಸುಳಿ ಕಾಳಮೇಘದ ಮೊತ್ತವೆನೆ ರಂಜಿಸಿದುದಾ ವ್ಯೂಹ (ಕುಮ್ಮಾದ್ರೋ. ೭೦೩. ಪರಿ. ೨೭೭). [ ನಡು₂ + ಸುಳಿ₃ ( < ಸುೞಿ₂ ) ]

**ನಡುಸೂಲ್** (ನಾ). ಪ್ರಸವದ ಮಧ್ಯಸಮಯ ; ಹೆರಿಗೆಯ ಮಧ್ಯ ಭಾಗ : ಬೇನೆಯಿಂ ಧೂಳಿಡುತುಂ ಶೈಲಾಗ್ರದೊಳ್ಮುಕ್ಕುಱಿಸಿ ಪಱುಕ ದಿಂದೀಂಬ ಸಿಂಹಿಕೆಶೋರಂ ನಡುಸೂಲೊಳ್ಸಿರ್ಕ ಕಣ್ಣಂ ತೆಱಿದಿಭಪತಿಯಂ ತಾಱಲೊಳ್ಕಂಡು ಕಾಯ್ಪಿಂ ನಡುಪಾಯ್ದಾ ತಾಯ್ಗೆ ದುಃಖಪ್ರಸವಸಮಯ ದೊಳ್ಕಂದುದಂತೊಂದಲಂಪಂ (ಅನಂಪು. ೦೨–೬೨).

[ ನಡು₂ + ಸೂಲ್ ]

**ನಡುಸೆಱಂಗು** (ನಾ). ಸೆರಗಿನ ಮಧ್ಯಭಾಗ ; ಉಡಿ ; ಮಡಿಲು : ಉಕಾರಕ್ಕೆ . . . ನಿಡುದೋಳ್, ನಿಡುಮಯಣಂ, ನಡುಸೆಱಂಗಂ (ಶಮದ. ೧೪೦ ಪ್ರಯೋ). [ ನಡು₂ +ಸೆಱಂಗು ]

**ನಡುಹಗಲು** 'ನಡುವಗಲ್' ನೋ.

**ನಡುಹಣೆ** (ನಾ).=ನಡುನೊಸಲು : ಕೊರಳೊಳು ವಿಷವುಂಟು ತಲೆಯೊಳು ಹಾವುಂಟು ನಡುಹಣೆಯೊಳು ಬೆಂಕಿಯುಂಟು (ಇಂಚಾಪ. ೭೫–೬೦).

[ ನಡು₂ + ಹಣೆ₁ ( < ಪಣೆ₂ ) ]

**ನಡುಹರೆಯ** (ನಾ). ಮಧ್ಯವಯಸ್ಸು ; ಪ್ರಾಯದ ಮಧ್ಯಾವಸ್ಥೆ : ನಡುಹರೆಯದವಳು ಕಾತ್ಯಾಯನಿಕೆಯಕ್ಕ (ಮಂಗರಾ. ೮೯–೨).

[ ನಡು₂ + ಹರೆಯ ( < ಪರಯ ) ]

**ನಡುಹಾದಿ** (ನಾ).=ನಡುದಾರಿ : ನಡುಹಾದಿಯಲ್ಲಿ ವಿಮಾನದ ಪಾಡು ಕೆಟ್ಟುಹೋಯಿತು (ರಾಜವ. ೫೦) ; ಹೊರಬಂದ ಗುಂಡಣ್ಣನಿಗೆ, ಕತ್ತಲೆಯ ನಡುಹಾದಿಯ ಆಚೆ ಅಂಗಳಕ್ಕಿಳಿಯುತ್ತಿದ್ದ ಸಾಮಾನುಗಳು ಗೋಚರಿಸಿ ದುವು (ರಂಗವ. ೮೦). [ ನಡು₂ + ಹಾದಿ ( < ಪಾದಿ₁ ) ]

**ನಡುಹಾಳೆ** (ನಾ). "ಪುಸ್ತಕದ ಹಾಳೆಗಳ ನಡುವೆ ಸೇರಿಸಿದ (ಸಾ., ಬರಿಯ) ಹೆಚ್ಚುಹಾಳೆ, ನಡುಹಾಳೆ" (Interleaf. ಇಂಕನ್ನ).

[ ನಡು₂ + ಹಾಳೆ₁ ( < ಪಾಳೆ₁) ]

**ನಡುಹೊತ್ತು** 'ನಡುಬೊತ್ತು' ನೋ.

**ನಡುಹೊಳೆ** (ನಾ). ೧. ನದಿಯ ಮಧ್ಯಭಾಗ ; ನಡುನೀರು : ಇಂದು ನಾನು ಹರಿಗೋಲಲ್ಲಿ ಕುಳ್ಳಿರ್ದು ನಡುಹೊಳೆಯಲ್ಲಿ ಹೋಗಲಿಕೆ ಕಾಮ ವೆಂಬ ಕೋಡಿಯು ಅಡ್ಡಬಿದ್ದಿತ್ತು (ವಚಸಂ. ೩೯೯-೨೩) ; ನಡುಹೊಳೆಯ ಹರಿಗೋಲ ಮೂಲೆಯ ಕಡಿದಿರಾದರೆ ನಮ್ಮ ಪುಣ್ಯದ ಬಿಡುಗಡೆಯ ಕಾಲವು ಶಿವಾಯೆಂದರಸ ಬಿಸುಸುಯಿದ (ಕುಮ್ಮಾಭೀ. ೯-೩). ೨. ಒಂದು ಊರಿನ ಹೆಸರು : ನಂಜೇಗವಡ ವಿರಕ್ತಗವಡಯಿವರ ಕುಲದೇವರು ನಡುಹೊಳೆಬ್ರವೇಸ್ವರ (ಎಕ. III. (R), ಗುಂಡ್ಲು ಪೇ. ೬೧-೬೩ ; 1027).

**ನಡುಹೊಳೆಯಲ್ಲಿ ಕೈಬಿಡು** = ೧. ಹೊಳೆಯ ಮಧ್ಯದಲ್ಲಿ ಹಿಡಿತದ ಸಹಾಯವನ್ನು ತಪ್ಪಿಸು : ನಡುಹೊಳೆಯಲ್ಲಿ ಕೈಬಿಟ್ಟ ಹಾಗೆ (ಗಾದೆ). ೨. ನಂಬಿಕೊಂಡವರಿಗೆ ಅತ್ಯಗತ್ಯವಾದ ಸಮಯದಲ್ಲಿ ಉದ್ದೇಶ ಪೂರ್ವಕವಾಗಿ ಸಹಾಯ ನಿಲ್ಲಿಸು ; ನಡುನೀರಲ್ಲಿ ಕೈಬಿಡು : ನನ್ನನ್ನು ನಡುಹೊಳೆಯಲ್ಲಿ ಕೈಬಿಡಬೇಡ (ಮನಕಖೂ. ೬೮).

[ನಡು$_1$ + ಹೊಳೆ$_3$ ( < ಪೊೞೆ$_1$ ) ]

**ನಡೆ$_1$, ನಡಿ, ನೆಡೆ** (ಕ್ರಿ). ೧. (ಕಾಲುಗಳಿಂದ) ಚಲಿಸು ; ಹೋಗು ; ಗಮಿಸು : "ನಡೆ-ಗಮನೇ" (ಶಮದ) ; ಜಯದ್ರಥನಂ ಕೋಡಗಗಟ್ಟು ಗಟ್ಟಿ ಬೆನ್ನಂ ಬಿಲ್ಲ ಕೊಪ್ಪಿನೊಳಿರ್ದು ನಡೆಯೆಂದು ನಡೆಯಿಸಿ (ಪಂಪಭಾ. ೭-೩೦ವ) ; ಆ ಧರಿತ್ರೀನಾಥನತ್ಯಂತಹರುಷಾಂತರಂಗನಾಗಿ ಸಿಂಹಾಸನ ದಿಂದಿೞಿದು ಮುಂದನೇಟಡಿಯಂ ನಡೆದು (ಸುಕುಮಾ. ೮-೯೬ವ) ; ನಡೆದೊಡೆ ಕಾಲ್ನೊಂದಪುದು (ಧರ್ಮಾಮೃ. ೩-೫೫) ; ತಲೆಯಿಲ್ಲದ ಕಾಗೆ ನೆಲದಲ್ಲಿ ನಡೆಯಿತ್ತು (ಆದಪ. ೦೫-೬೩) ; ನಡೆಯುತ್ತ ನಡೆಯುತ್ತ ಬಳಲು ವರಲ್ಲದೆ ಬಟ್ಟೆ ಬಳಲುವುದೆ (ಬಸವ. ೧೧೩) ; ತಲೆ ಮೇಲಣಗೆ ಚಿಗಿದುದು ಮುಂಡ ನಡೆದುದು ನೂರು ಹಜ್ಜೆಯನು (ಕುಮ್ಮಾಕ. ೨-೨೦) ; ಭೂತಳ ದೊಳಗಂಬೆಗಾಲಿಟ್ಟು ನಡೆವಂತೆ ಚೇತನವಾದುದಂಗಜಗೆ (ಮೋಹತ. ೧೧-೫೯) ; ಪಾದಗಳಿಂದ ಹೆಚ್ಚು ದೂರ ಮತ್ತು ಜಾಗರೂಕತೆಯಾಗಿ ನಡೆಯುವುದು ಕಷ್ಟ (ನಾಡಿಗೇ. ೪೪) ; ನಡೆಯೋದು ಕಾಲ್ನಡೆ ಆಡೋದು ಪಾಲ್ಕಿ ಮೇಲೆ (ಗಾದೆ). ೨. ಮುಂದುವರಿ ; ಮುಂದೆ ಸಾಗು ; ಸಾರೋದ್ಧಾರವಾಗು : ತೊರೆಯ ತಡಿಯೊಳೋಡಮಂ ನಡೆಯಿಸುವ ಮತ್ಸ್ಯಗಂಧಿಯಂ ಕಂಡೆಮ್ಮನೀ ತೊರೆಯಂ ಪಾಯಿಸೆಂಬುದುಂ ಸಾಸಿರ್ವರೇಱಿದೊಡಲ್ಲದೀ ಯೋಡಂ ನಡೆಯದೆಂಬುದುಂ (ಪಂಪಭಾ. ೧-೬೮ವ) ; ಪನ್ನೆರಡು ಪಳ್ಳಿಗವೀ ಸ್ಥಿತಿಯೊಳ್ ಸಲ್ವುದು ಚನ್ದ್ರಾದಿತ್ಯರ್ಕ್ಕಳ್ ಉಳ್ಳನ್ನವ್ವರಂ ನಡೆವುದು (ಎಕ. IV, ಚಾಮರಾ. ೪೮-೦೩ ; 965) ; ಪಿರಿಯಂ ಜಯಕುಮಾರಂಗೆ ಕುಡುವುದು ಕೊಟ್ಟಂದು ಕುರುಕುಲಸಂಬಂಧಮವಿಚ್ಛಿನ್ನಮಾಗಿ ನಡೆಗುಂ (ಚಾವುಂಪು. ೭೮-೨೬) ; ಸಮರಾಭಿಮುಖನಾಗಿ ನಡೆವ ಫಣಿರಾಜಕೇತನನಂ ಸಂಜಯನಂಜದೆ ಮಾರ್ಕೊಂಡು (ಗದಾಯು. ೩-೪೯ ವ) ; ಪೆಜ್ಜೞಂಕದದಿ ಗೆಯನ್ದವ ಕೋಲಮುಮಕ್ಷೋಣಿಯಾಗಿ ನಡೆವ ಗದ್ಯಾಣ ಆ ಮಾರ್ಗ್ಗದೆ ಪನ್ನಾಯದಿಂದಕ್ಷೋಣಿಯಾಗಿ ನಡೆವ ಗದ್ಯಾ ೧ (ಸಾಇಇ. XX, ೪೫-೨೯ ; 1071) ; ಕೂಡಲಸಂಗನ ಶರಣರು ನಡೆದ [ಪಾಠಾಂ. ಹೋದ] ದಾರಿ ಭಯ ಕಾಣರಣ್ಣಾ (ಬಸವ. ೧೪೭) ; ಖಟಿಲೆ ನುಡಿದಟಲೆ ಬಗ್ಗಿಸಿ ಘಟಿಲನೆ ನಡೆಯೆಂದು ಜಡಿದು ಸಾರಥಿಯಂ (ಶಮದ. ೧೯ ಪ್ರಯೋ) ; ಅದ್ದುದೆತಳಕೆ ಅವನಿಯೆನೆ ಹೊದಱಿದ್ದು ನಡೆದುದು ದಂತಿಘಟೆ ಬರುತಿದ್ದ ದಗಣಿತ ರಥಪದಾತಿಗಳಾಹವಾಂಗಣಕೆ (ಕುಮ್ಮಾದ್ರೋ. ೯-೧೩) ; ಈಸುದಿನ ನಮ್ಮಗ್ಗಿ ಹೋತ್ರಕೆ ವಿನಾಸಲಳಿಯದೆ ನಡೆದುದೀಗ ವಿನಾಶಕರವಾಯ್ತುದಱಿನಾದುದು ಬರವು ನಮಗೆನಲು (ತೊರೆರಾ. ೦-೯-೨೫) ; ಲಿಪಿರಹಿತಭಾಷೆಯನ್ನು ಆಡುವವರ ವ್ಯವಹಾರವೆಲ್ಲಾ ಹೆಚ್ಚಾಗಿ ಸಂಭಾಷಣೆಯಲ್ಲೇ ನಡೆಯು ತ್ತದೆ (ದ್ರಾವಿ. ೪೫) ; ಧರ್ಮಾತ್ಮರಾದ ಮಹೀಶೂರಮನೆತನದಲ್ಲಿ ಹುಟ್ಟಿದ . . . ದೇವರಾಜಮ್ಮಣ್ಣಿಯವರಿಗೆ ಪುತ್ರನ ವಂಶವು ನಡೆಯಲಿ (ಒಡಕ. ೨೦). ೩. ತೆರಳು ; ಹೊರಡು : ಅಂತೆರಡುಂ ಪಡೆಗಳುಂ ಪಣ್ಣಿ ಪಣ್ಣಿ ಪಣ್ಣಿ ಕಾಳಗಕ್ಕೆ ನಡೆಯಲೊಡರಿಸಿದಾಗಳ್ (ಪಂಪಭಾ. ೧೧-೫೦ವ) ; ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಱಿವ ಕೆಸವರಗಲಿಗಳುಮಂ ಮತ್ತಮಣ್ಮಿ ನಡೆದಿಱಿವ ನಡೆಗಲಿಗಳುಮಂ ನೋಡಿ (ಗದಾಯು. ೯-೩೪ವ) ; ನಡೆವೆ ನಾನಿರಲೊಲ್ಲೆ ಕೈಲಾಸಪುರಕೆನುತೆ . . . ಪೊಱಮಟ್ಟಳಮ್ಮವ್ವ ಪುರಜನಂ ನೋಡುತಿರೆ (ಕಾಶಿರ. ದೇ. ೨೮೮-೩) ; ಒಡಲನೊಡೆದಾ ಜ್ಯೋತಿ ಗಗನಕೆ ನಡೆದುದಿತ್ತಲಿ ಸುರರು ಮರ್ತ್ಯರು ಸುಡುಸುಡೆಂದುದು ಸಾತ್ಯಕಿಯ ದುಷ್ಕರ್ಮವಾಸನೆಗೆ (ಕುಮ್ಮಾದ್ರೋ. ೧೪-೨೪) ; ದಶದಿಕ್ಕಿನ ಪುರಾಧಿಪರೆಡೆಗೆ ನಡೆದುದು ದಂಡು ಬಳಿಕೆಂದ (ತೊರೆರಾ. ೧-೮-೩೦) ; ನಡೆ ಮಜ್ಜನ ಭೋಜನಕೆ ಶೃಂಗಾರದ ತೊಡವುಗಳಿಡು ನೀ ಬೇಗ (ಕಂವಿ. ೯-೦೬೩). ೪. ತೊಲಗು ; ದೂರ ಸರಿ : ಉಂಬ ಜಂಗಮ ಬಂದರೆ ನಡೆಯೆಂಬರು ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ (ಬಸವ. ೧೯೪). ೫. ಆಚರಿಸು ; ಆಚರಣೆ ಮಾಡು : ಶ್ರೀಬಾಳಾ ಮೇಲ್ಪಿಱಿ ಮೇಲೆ ಸರ್ಪ್ಪದ ಮಹಾದನ್ನಾಗ್ರದುಳ್ಳಲ್ಲಪೊಲ್ ಸಾಲಾಮ್ಬಾಲ ತ ಪೊ ೯ ಗ್ರ ದಿ ನ್ನು ನಡದೊಂ ನೂಱಿಪ್ಪಸಂವತ್ಸರಂ (ಎಕ. II, ೨೨-೨ ; ಸು. 700) ; ನಡೆಯಂ ಧರ್ಮದ ಬಟ್ಟೆಯೊಳ್ ಬಿಸುಡಿಯಾ ದು ಷ್ಪಾ ಪ ದು ಮಾ ರ್ ಗ ರ್ ಮಾ ೦ (ಸುಕುಮಾ. ೦-೪) ; ಪೊಲ್ಲದಂ ಬಿಸುಟ್ಟನುಪಮಜೈನಮಾರ್ಗದೊಳೆ ತಾಂ ನಡೆಗುಂ ಪರಮೋಕ್ಷಕಾಂಕ್ಷೆಯಿಂ (ಸಮಪ. ೧-೦೮) ; ಜೈನಾಗಮದೋಜೆಯಿಂ ನಡೆ ಬುಧವ್ರಾತಕೆ ಲೇಸಾಗು (ಧರ್ಮಾಮೃ. ೪-೨೬೦) ; ನುಡಿದಂತೆ ನಡೆಯಲು ಬಾರದಯ್ಯಾ ಕೂಡಲಸಂಗನ ಶರಣರ ಭಕ್ತಿ ಬಾಳ ಬಾಯ ಧಾರೆ (ಬಸವ. ೩೦೦). ೬. ವರ್ತಿಸು ; ನಡೆದುಕೊಳ್ಳು ; ವ್ಯವಹರಿಸು : ಕಡುಗಲಿತನಮುಂ ಚಾಗದ ಪಡೆಮಾತುಂ ವಿದ್ಯೆಯುರ್ಕುಮೊರ್ವನೊಳಿಂತುಂ ನಡೆಯವು ಭುವನಾಂತರದೊಳ್ (ಆದಿಪು. ೧೨-೧೦೪) ; ದಯೆಗೆಯ್ಯೇಂ ಪ್ರಸಾದಮೆಂಬಿವು ಪೆಱರೊಳ್ ನಡೆಗೆಮ್ಮ ನಿನ್ನಯೆಡೆಯೊಳ್ ನಡೆಯಲ್ವೇಡೆನಗೆ ಕೆಳೆಯನ್ನೆ ರಾಧೇಯಾ (ಪಂಪಭಾ. ೨-೮೫) ; ನಿಮಗೆ ಕರಿಗಳ್ ದೊ ರೆ ಕೊ ಳ್ವ ನ್ನಂ ನಿಚ್ಚಲೊಂದೊಂದು ಮೃಗವನಟ್ಟುವೆವದು ಕೈಕೊಂಡಿಂತು ನಡೆವಿರಪ್ಪೊಡೆ ನಿರ್ವಹಿಪೆವಾಗ ದೊಡೋಡಿಪೋಪೆವೆನೆ (ಪಂಚತಂ. ೮೮-೧೧) ; ಒಡೆಯಂಗುತ್ತಮವಾಗೆ . . . ಗಡಿದುರ್ಗಂಗಳು ಭದ್ರಮಾಗೆ ಧನಧಾನ್ಯಂ ತೀವೆ ಭಂಡಾರದೊಳ್ ನಡೆಮ ಮಂತ್ರಿವರೇಣ್ಯನೈ (ಸೋಮೇಶ. ೬೫) ; ಪೊಡವಿಪನೊಲುಮೆಯ ಕಡುನೆಚ್ಚಿ ಗ ರ್ ವ ದಿ ನಡೆಯದಿರೆಚ್ಚಱಿಕೆ (ಪುರಂಪ. ೨-೪೫-೧) ; ನೃಪ ಹಿಂದಣಳಲನು ನೆನೆಯದೆನ್ನಪರೆಂದು ನಡೆ ಕಾಮಂಗೆ ಕೊಡದಾಗಿರ್ತ್ತಪಿರಿ ಸುತೆಯ (ಸಾಳ್ವಭಾ. ೩೧-೧೧) ; ನಿನಗಿಂತ ಹಿರಿಯರಾದವರು ಹೇಳಿದ ಮೇರೆಗೆ ನಡೆ (ಮುಂಬಯಿ. ೪-೫೯). ೭. ಕೆಲಸ ಮಾಡು ; ಕಾರ್ಯ ಮಾಡು : ಈ ಗಡಿಯಾರ ಸರಿಯಾಗಿ ನಡೆಯುತ್ತಿಲ್ಲ (ರೂಢಿ) ; ರಜಾದಿನಗಳಲ್ಲಿ ಶಾಲೆಗಳು ನಡೆಯುವುದಿಲ್ಲ (ರೂಢಿ). ೮. ಜರುಗು ; ಘಟಿಸು ; ಉಂಟಾಗು : ದೇಶದ ಮೇಲೆ ನಡೆದ ಸುದ್ದಿ ತಿಳುಕೊಳ್ಳುವುದಕ್ಕಾಗಿ ವರ್ತಮಾನಪತ್ರಗಳನ್ನು ತರಿಸುತ್ತಾರೆ (ಮುಂಬಯಿ. ೪-೮೭) ; ಆ ಊರಿನಲ್ಲಿ ಜಾತ್ರೆ ನಡೆಯುತ್ತದೆ (ರೂಢಿ) ; ಅವರ ಮನೆಯಲ್ಲಿ ಹಬ್ಬ ಹುಣ್ಣಿಮೆಗಳು ವಿಜೃಂಭಣೆಯಿಂದ ನಡೆಯುತ್ತವೆ (ರೂಢಿ). ೯. ಈಡೇರು ; ನೆರವೇರು ; ಪಾಲನೆಯಾಗು : ಲೇಸೆನಿಪ ಮಹಿಪಾಕ್ಷಿಥೂಪದ ಭಾಷೆ ನಡೆಯಲು . . . ಅರ್ಥವನೋಸರಿಸ ದಿಂತರ್ಪಿಸುತ್ತಿರೆ (ಬಸಪು. ೨೭-೯). ೧೦. ಚಲಾವಣೆಯಾಗು ; ಚಾಲತಿ ಯನ್ನು ಹೊಂದಿರು ; ಬಳಕೆಯಲ್ಲಾಗು : ಸವಕಳಿ ನಾಣ್ಯ ನಡೆಯುವುದಿಲ್ಲ (ರೂಢಿ) ; ಈಗ ಅವನಿಗೆ ಹದಿನಾಲ್ಕನೆಯ ವರ್ಷ ನಡೆಯುತ್ತಿದೆ (ರೂಢಿ). ೧೧. ಆಕ್ರಮಣ ನಡೆಸು ; ಮುಂತಳ್ಳು ; ಮೇಲೆ ನುಗ್ಗು : ನಿನಗುತ್ತರಾರ್ಧ ಮೊಂದರ್ಧನಿಮೇಷಮುಹೂರ್ತಮಾತ್ರದಿಂ ಬಾರದೆ ಕೈಗಿನಿತುವರಂ ದೇವರ್ ನಡೆವನಿತುಂ ಮೂಣ್ಪನಿತುಮಂತದಾವುದು ಗ ಹ ನ ಂ (ಆದಿಪು. ೦೩-೨೨).

೧೨. ಸಲ್ಲು; ಒಳಪಡು: ತುರಗಮೇಧಾಧ್ವರದ ಮೇಲಾರ್ಯ್ಕೆ ನಡೆದುದು ಪೆರವುಹುಹಿಜಾಪಾಲಿಗವನೀಶ್ವರರ ಮಾನ್ಯತೆಯ ಪರುಟವಣೆ ವಿಜಯಂಗೆ ಸೇರಿತು (ತೊರೆಕಾ. ೦-೭-೨೪). ೧೩. ಪ್ರವರ್ತಿಸು; ತೊಡಗು: ಎನ್ನವ ರಾದರೆ ಜನ್ನಕ್ಕೆ ನಡೆವರೆ ಎನ್ನವರಲ್ಲ ಕೂಡಲಸಂಗಾ ನಿಮ್ಮಾಣೆ (ಬಸವ. ೭೦೩). ೧೪. ಗದ್ಯ ಅಥವಾ ಪದ್ಯದ ಲಯಕ್ಕೆ ಹೊಂದಿಕೊಳ್ಳು: ಷಟ್ಪದಿ ಈಗ ಮಾತ್ರೆಗಳಿಂದ "ನಡೆ"ದರೂ ಒಮ್ಮೆ ಅಂಶಗಳಿಂದ "ನಡೆ" ಯುತ್ತಿದ್ದಿತೆಂಬುದನ್ನೂ . . . ಮರೆಯಬಾರದು (ಕೈಪಿಡಿ. ೧೪೭). ೧೫. ಪ್ರಭಾವಶಾಲಿಯಾಗು; ಯಶಸ್ವಿಯಾಗು: ನನ್ನ ಮುಂದೆ ನಿನ್ನ ಯಾವ ಆಟವೂ ನಡೆಯುವುದಿಲ್ಲ (ರೂಢಿ). 'ಕೈನಡೆ' ಪರಾ. ೧೬. ನಡಗೆಯಿಂದ ಅಳತೆ ಮಾಡು; ಹೆಜ್ಜೆಯಿಂದ ಅಳೆ (?): ರಣಾವಳೀಶ ಶ್ರೀಕಪ್ಪ ಯ್ಯನ್ ಪೃಥುವೀರಾಜ್ಯಂಗೆಯೆ ಬ × × × ರಸಕ್ಕ್‌ಟ್ಟಪ್ಪ × × × ಳ ಪೆಗ್ಗ್‌ಟ್ಟಪ್ಪನಾ ಪೊಲದಿನ್ನಡದು ಕೊಟ್ಟದು (ಎಕ. II, ೩೩-೪; ಸು. 800). ೫ ಇದು ಅನೇಕ ಕಡೆ ನಾಮಪದದೊಡನೆ ಸೇರಿದಾಗ ಬೇರೆ ಬೇರೆ ಅರ್ಥವನ್ನು ಕೊಡುತ್ತದೆ. ಉದಾಹರಣೆಗೆ-'ಆಟನಡೆ', 'ಜೀವನ ನಡೆ', 'ಮಾತುನಡೆ', 'ವ್ಯಾಪಾರ ನಡೆ' ಇತ್ಯಾದಿ. ನಡಿ: ೧೦. ಸವಿಗೊಂಡನಹಳ್ಳಿಯಿಂದು ಹೆಸರು ನಡಿಯಬೇಕು (ಎಕ. VII, ಶಿವಮೊ. ೯೩-೩೩;?). ನಡೆ: ೨. ಸುರ್ಗಚಿಂದುರುಯಿರೊ ಪರಿಯಂತ್ರ ನಡೆಯಬೇಕೆಂಯೆಂದು ಆ ಗ್ರಾಮವನು ಹುಗಿನು ಹೊಯಿಸಿ ಪಲಿಸಿಕೊಟರು (ಎಕ. VII, ಶಿವಮೊ. ೦೦೮-೩೪; 1558). ೧೭. ಬಾಳು; ಬದುಕು: ಜನರು ಕೂಡಿ ನೆಡೆಯಬೇಕೆಂದು ನಗಸಮುದ್ರದಮೆಂಬೊ ಗ್ರಾಮವನು ಹೆಸರಗಿ ಕಟಿಸಿ (ಎಕ. VII, ಶಿವಮೊ. ೦೦೮-೩೩; 1558).

ನಡೆನಡೆ₁ (ದ್ವಿರುಕ್ತಿ): ಸಮದ ಗಜಗಮನೆಯರ್ ಮುಗಿಲ ಮೇಲೆ ನಡೆಪಾಡುವಾಕೆಗಳ್ ತಮಗೆ ಧರಾಗಮನಂ ಪೊಸತಪ್ಪುದರಿಂದಮರ್ದಿರೆ ನಡೆನಡೆದು ನಡೆಯಲಾರದೆ ಸುಟಿದರ್ (ಪಂಪಭಾ. ೭-೮೪); ನಡೆನಡೆ ದೊಂಬುಮೇಡ ನಿನಗೇಕೆ. ತಪಸ್ಸಿನ ಕುತ್ತಮೆಂದು ನೇರ್ಪಡೆ ಜಡಿದಟ್ಟಿ (ಧರ್ಮಾಮೃ. ೮-೮೮); ನಡೆನಡೆದು ನಿಂದಡಿಗಡಿಗೆ ನೆನೆದು (ಸಿದ್ಧರಾ. ೦-೩೭); ಕ್ರಿಯಾಸಮಭಿಹಾರಕ್ಕೆ – ನಡೆನಡೆಯೆಂದು; ಇದಿರ್ಚಿದಿರ್ಚಿನೆ ಜಟಾಯು (ಶಮದ. ೦೯೫ ಪ್ರಯೋ); ಸಕಳೇಶನ ನಿರೂಪವಿದಕ್ಕೆ ನಡೆನಡೆ ಮಗನೆ ಹೋಹವೆನುತ್ತ (ಬಸಪು. ೪೭-೫೦); ತಿರುಹಿ ಗಾಲಿಯ ತೆಗೆದು ಮುಂಗೈಗೊಂಡು ನಡೆನಡೆದು ಅರಿಬಲವನಿಡೆ (ಕುಮಾವ್ಯಾ. ೬-೫೫). ನಡದಾಟ = ಓಡಾಟ; ಅಲೆತ; ಸಂಚಾರ: ಅತಿಯಾದ ನಡೆದಾಟದಿಂದ ಮೈಗೆ ಆಲಸ್ಯವಾಗಿದೆ (ರೂಢಿ). ನಡೆದಾಡಿಸು=೧. ನಡೆಯುವಂತೆ ಮಾಡು; ಓಡಾಡಿಸು: ಸಣ್ಣ ಮಗುವನ್ನು ಹೆಚ್ಚು ನಡೆದಾಡಿಸಬೇಡ (ರೂಢಿ). ೨. ನಡೆದುಕೊಳ್ಳುವಂತೆ ಮಾಡು: ವ್ಯವಹರಿಸುವಂತೆ ಮಾಡು: ಹುಡುಗರು ಅಸ್ತಿಗೆ ಅಧಿಕಾರಿಗಳಾಗಿ ಬಂದಾಗ ತಾವೇ ತಾವಾಗಿ ಸರ್ವಾಧಿಕಾರ ವನ್ನೂ ಸ್ವಾಧೀನಪಡಿಸಿಕೊಂಡು ಆ ಹುಡುಗರನ್ನು ಸ್ವೇಚ್ಛೆಯಂತೆ ನಡೆ ದಾಡಿಸಿಕೊಂಡದ್ದುಂಟು (ಇಪ್ಪತ. ೩೦೫). ನಡೆದಾಡು = ಓಡಾಡು; ಅಡ್ಡಾಡು: ಅರಸಂಚೆಮಟ್ ನಡೆದಾಡುತಪೆ ತಾಯೊಡನೆ (ಸಾಳ್ವಭಾ. ೩-೯); ಮೇರು ನಡೆದಾಡೆ . . . ದಿನಕರ ಕಾರಿರುಳಾಗೆಸೆಯೆ ಸತಿಯರಂ ನಂಬುವರೇ (ನನ್ನಡಿ. ೩-೪೨); ಕುಡಿತೆಗಂಗಳ ಭಾವಿನಿಯರು ನಡೆದಾಡು ತಿರ್ದರು (ಅಬ್ಬಲೂ. ೩-೦೦೮); ಹೆಚ್ಚು ನಡೆದಾಡಿ ಆಯಾಸ ಮಾಡಿಕೊಳ್ಳ ಬೇಡ (ರೂಢಿ). ನಡೆದುಕೊಳ್ಳು, ನಡಕೊಳ್ಳು = ೧. ವರ್ತಿಸು; ವ್ಯವ ಹರಿಸು: ರಾಮನು ಯಾವಾಗಲೂ ಗುರುಹಿರಿಯರಲ್ಲಿ ವಿಧೇಯನಾಗಿಯೆ ನಡೆದುಕೊಳ್ಳುತ್ತಿದ್ದನು (ವಾರಾಶ್ಚ. ೩೭); ಎಲ್ಲ ಪ್ರಜೆಗಳೂ ಇವರ ಅಪ್ಪಣೆಯ ಮೇರೆಗೆ ನಡಕೊಳ್ಳತಕ್ಕದ್ದು (ಮುಂಬಯಿ. ೯-೩). ೨. ವ್ರತ, ಪೂಜೆ ಮುಂತಾದುವನ್ನು ಆಚರಿಸಿ ಭಕ್ತಿಯನ್ನು ತೋರಿಸು: ಇವರು ಯಾವತ್ತು ಹಿಂದೂದೇವತೆಗಳಿಗೆ ನಡಕೊಳ್ಳುವರು (ಕಥಾಗ. ೦೦೫); ಪಥ್ಯ-ಉಪಚಾರವನ್ನು ಮಾಡಿದ್ದಾಯಿತು. ದೇವರು-ದಿಂಡರಿಗೆ ನಡಕೊಂಡ ದ್ದಾಯಿತು. ಏನೂ ಉಪಯೋಗವಾಗಲಿಲ್ಲ (ಹೊಸಕ್ಕ. ೦೮೪). ನಡೆದು ಬರು= ಮುಂದುವರಿ; ಮುಂದೆ ಸಾಗು: ನಾನು ಸ್ಥಾಪಿಸಿರುವ ಧರ್ಮದಾರ್ಢ್ಯವು ಬಹುಕಾಲದವರೆಗೂ ನಡೆದುಬರುವುದು (ಕಗದ್ಯ. II, ೦೦). ನಡೆದೊವಲ ಪಾಪೆ = ಚಲಿಸುವ ತೊಗಲ ಬೊಂಬೆ; ಶರೀರ; ದೇಹ: ನಡೆ ದೊವ[ಪಾಠಾಂ. ಗ]ಲ ಪಾಪೆ... ಘನರೋಗದಾಗರಂ ತಾನೆನಿಪೀಯೊಡಲಿದು ಕಾಲನ ತಿಂಗುಳ್ ಜಡವ.ನುಜರ್ ನಿತ್ಯಮೆಂದು ಮುಯ್ಯಾಟಿದಿರ್ಪರ್ (ತ್ರಿಪುವಿ. ೩೩-೦೦೨).

[ದೇ.೩ ತಮಿ. ನಟ; ಮಲ. ಕೊಡ. ನಡ; ತೆಲು. ನಡಚು, ನಡುಚು; ಕೊಲಾ. ಅಡ್ಗ್; ನಾಯ್ಕಿ. ಅರ್ಗ್]

ನಡೆ₂ (ನಾ). ೧. (ಕಾಲಿನಿಂದ) ನಡೆಯುವಿಕೆ; ನಡಗೆ; ಚಲನೆ; ಗಮನ: "ಪರಿಕ್ರಮಂ ಪರಿಸರ್ಪಮೆನೆ ನಡೆ" (ಮಂಗರಾ. ೦೩೦-೦೭); ಒರ್ವ[ನೊರ್ವ]ಳ ನಡೆಯ ನುಡಿಯ ಮುಡಿಯ ಗಾಂಪಿಂಗೆ ಮುಗುಳ್ನಗೆ ನಕ್ಕು ತನ್ನ ಕೆಳೆಯಂಗೆ ತೋರ್ಪ (ಪಂಪಭಾ. ೪-೯೩೪); ಬಾಳ ಮೊನೆ ಯಂಬಿನ ತಿಂತಿಣಿಯೊಳ್ ತಗುಳ್ದು ಕಿಕ್ಕಿರ್ದಿಗಿರ್ದಿರ್ದ ಕೊಳ್ಗುಳದೊಳಂ ನಡೆವೀ ನಡೆಗೆಂತು ನೋಂತೆಯೋ (ಪಂಪಭಾ. ೦೩-೫೩); ಕಡುಗೂರ್ಪಿಲ್ಲದ ಕರವಾಳ್ . . . ನಡೆಯಿಲ್ಲದ ಕರ್ತ ಮನಕ್ಕೆಡಂಬಡಂ ಮಾಟ್ಟುಮರ್ತಿಯಂ ಮಾಡುಗುಮೇ (ಆದಿಪು. ೬-೯೭); ಆವೆಡೆ ಹಂಸಗೀ ನಡೆಯ ಚೆಲ್ವನೆ ನೂಪುರದಿಂಚರಂ ಸ್ವರಂ ಜೇವೊಡೆದಂದಮಾಗೆ . . . ಬಂದಳದೊಂದು ಲೀಲೆಯಿಂ (ಮಲ್ಲಿಪು. ೪-೭೩); ಮರಾಳಂ ನಡೆಯೊಳುರುಪಿಕಂ ನಾದ ದೊಳ್ . . . ಭೃಂಗಂ ವಿಚಲನ್ನೀಲಾಳಕಾನೀಕದೊಳಮರ್ದೆಸೆಯಲ್ ಶೋಭಿಕುಂ ವಾರನಾರೀನಿಚಯಂ (ಉದ್ಭಟ. ೦೦-೪೩); ಬನದೊಳೆಡೆ ಯಾಡುವ ಸಬರಿಯರ ನಡೆಯನೇಡಿಸುವಂತೆ ಮೆಲ್ಲಡಿಯಿಡುವ ಪೆಣ್ಣಂಚೆ ಗಳ ಬಳಗಂಗಳ (ಕಬ್ಬಿಗಕಾ. ೦೮); ಮಾಯೆ ತನ್ನಂತೆ ನಡೆಯ ಕಲಿಸಿದಳಂಚೆ ವಿಂಡಿಗೆ ನುಡಿಯ ಕಲಿಸಿದಳರಗಿಳಿಗೆ (ಪ್ರಭುಲೀ. ೩-೩೨); ಅಂಚೆಯ ನಡೆಯನಿದಂ ತನತನುತುಂ ಮಂಚಲ್ವಿಡಿವೊಳ್ನಡ (ಜಯುಕಾ. ೨-೨); ನಡೆ ಮಂದವಾಯ್ತು ನಡುಗಡಸಿತ್ತು ಬ ಡ ತ ನಂ ನುಡಿ ಮೆಲ್ಲನಾಯ್ತು ಕೆಳವೆಯ ಮುಡಿಗಳಂ ಕಾವ ಮಡದಿಯರ್ಗೆ (ಭಾವಚಿಂ. ೨-೯). ೨. ಆಚ ರಣೆ; ನಡವಳಿಕೆ; ಆಚಾರ; ಚರ್ಯೆ; ಸಂಪ್ರದಾಯ ಎನ್ನ ನಡೆಯೊಂದು ಪರಿ ಎನ್ನ ನುಡಿಯೊಂದು ಪರಿ . . . ನುಡಿಯ ತಕ್ಕ ನಡೆಯ ಕಂಡೊಡೆ ಕೂಡಲಸಂಗಮದೇವನೊಳಗಿರ್ಪನಯ್ಯಾ (ಬಸವ. ೩೦); ಪೊಡವಿಗಚ್ಚರಿ ನಿಮ್ಮ ಭಕ್ತಿಯ ನಡೆ ಸೊಗಸದೆಮಗೀ ಹಿರಿಯತನಗೆಡದೆ ಹೊಙವಡಿ ಸಾಕು (ಬಸಪು. ೫೫-೦೯); ಸಂತೋಷ ಪರಿಣಾಮ ನುಡಿ(ನಡೆ) ತತ್ವ ನಡೆ(ನುಡಿ) ಪಾವನ ಆತನ ಸುಳುಹು ವಸಂತಗಾಳಿ (ಸಿದ್ಧೇಶ. ೦೫೫-೪೬೩); ನಿನ್ನ ನಡೆಯ ನಿನ್ನ ನುಡಿಯ ನಿನ್ನೊಳೆ ಕಂಡು ನಿನ್ನ ಮುಂದೋದಿದೆನರಸಾ (ಭರತ. ೨-೩೭); ನಡೆಯೊಳಗೆ ನುಡಿ ತುಂಬಿ ನುಡಿಯೊಳಗೆ ನಡೆ ತುಂಬಿ . . . ಲಿಂಗವ ಕೂಡಬಲ್ಲಾತನೇ ಶರಣ ನೋಡಾ (ಅಬಂದೇ. ೦೪೭-೦೩೯); ಸತ್ಯರ ನುಡಿ ತೀರ್ಥ ನಿತ್ಯರ ನಡೆ ತೀರ್ಥ ಉತ್ತಮರ ಸಂಗವದು ತೀರ್ಥ ಹರಿವ ನೀರೆತ್ತಣದು ತೀರ್ಥ (ಸರ್ವಜ್ಞ. ೮೦೦); ಪೆತ್ತರಂ ಸೋಲಿಪಂ ನಲ್ಲಮಗನೊಳ್ಪುಗುಣಂಗಳಿಂ ಮುಂಗಿಲ್ಪೊಲ್ ನಡೆಯಿಂ ನೀರಿಂ ಲೋಗರು ನಲಮೇರಿಪಂ (ಸಾನಂದ.೨-೩೦); ಅವರ ಕಡೇಲಿ ಏನು ನಡೆ ಇದೆಯೋ ಹಾಗೆಯೇ ಮಾಡಲಿ (ಬೆಳುವ. ೨೦೭); ನುಡಿ ಪುರಾತನದು ನಡೆ ಕಿರಾತನದು (ಗಾದೆ). ೩. ಶೀಲ; ನಡತೆ: ಎನ್ನಲ್ಲಿ ನಡೆಯಿಲ್ಲಾಗಿ ನಾನು ಭಕ್ತನೆಂತಪ್ಪೆನಯ್ಯಾ (ಬಸವ. ೨೯೦); ಹುಡುಗಿಯ ಗುಣವನು ಜನರು ನಿರ್ಣಯಿಪರು ತಾಯಿಯ ನಡೆಯನು

ನೋಡಿ (ಇಂಜಾಪ. ೩೦೨-೨೯). ೪. ಮುಂದುವರಿಕೆ; ಮುನ್ನಡೆ; ಪ್ರಗತಿ : ಜ್ಞಾನವಿಜ್ಞಾನಕ್ಷೇತ್ರಗಳಲ್ಲಿ ಹಲವು ಪ್ರಯೋಗಗಳನ್ನು ನಡೆಸಿ ಪಾಶ್ಚಾತ್ಯ ಜಗತ್ತು ಅಣುಬಾಂಬನ್ನು ಕಂಡುಹಿಡಿದಿದೆ. ಇಲ್ಲಿಗೆ ಪಾಶ್ಚಾತ್ಯಜಗತ್ತಿನ ನಡೆ ನಿಂತಿತು (ಭಾರದ. ೫೮೦) ; ನಮ್ಮ ಸಯ್ಪಿನ ಬಿದಿಯು ನಡೆಗೆ ತೊಡರೊದಗದೊಡೆ ಸರ್ವಮುಂ ಪುರುಷಪ್ರಯತ್ನಮುಂ ಮಾಳ್ಪೆ ನಾವ್ ! (ಚಂದ್ರಸ.೧೩-೨೧). ೫. ಪ್ರಯಾಣ; ಸಂಚಾರ: "ನಡೆ ಸಿದ್ಧಯಾತ್ರೆಯಕ್ಕು" (ಮುಂಗರಾ. ೦೨೧-೫). ೬. ಎತ್ತುಗಳು ಒಂದು ಸಲ ಒಟ್ಟಿಗೆ (ಒಂದು ರಾತ್ರಿಯಲ್ಲಿ) ನಡೆಯುವಷ್ಟು ದಾರಿ; ಸುಮಾರು ಮೂವತ್ತು ಮೈಲಿ: ಈ ಊರಿನಿಂದ ಹೊರಟರೆ ನಮ್ಮ ಎತ್ತಿನ ಗಾಡಿಯು ಎರಡು ನಡೆಯಲ್ಲಿ ತುಮಕೂರು ಸೇರಬಹುದು (ರೂಢಿ). ೭. ದಾರಿ ; ಹಾದಿ. 'ನಡೆದುಳಿ'. ಪರಾ. ೮. ದನಕರು, ಕಾಲ್ನಡೆ ಇತ್ಯಾದಿ : ಮಠದ ಧರ್ಮಕೆ ಹೇರುವ ಮಾನ್ಯದ ಎತ್ತು ನಡೆ ೫೦ ಅಯಿವತ್ತುಯೆತ್ತಿನ ಮಾನ್ಯವನೂ ಶಿವಾರ್ಪಿತವಾಗಿ ಬಿಟ್ಟಿಧೇವೆ (ಎಕ. VII, ಶಿವಮೊ. ೨೮-೧೩ ; 1670) ; ಭಾರಾವಮಾರ್ಗದ ವೈರ್ರಿಗೆ ಅರಮನೆ ಕಟ್ಟೆಲಿ ನಿಂತ್ತ ನಡೆ ೧ ವಂದಕ್ಕೆ ಹಂ (ಎಕ. X (8), ಕೋಲಾರ. ೨೫೮-೧೭ ; 1761) ; ಯಿಾ ಹುಳಿಯಾರ ಸುಂಕದಲ್ಲಿ ನಾನಾ ದಿನಶಿನ ನಡೆಗಳಿಗೆ ಬದ್ದನೆ ಪ್ರಕಾರಾ ಲೆಕ್ಕಾ ಹಾಕಿಕೊಳುತ್ತಯಿದ್ದಾರೊ ಅದೆ ಪ್ರಕಾರಕ್ಕೆ ಬದ್ದವೆ ನಿಂತ್ತ ನಡೆ ೧ಕ್ಕೆ ಕಂಟಿರಾಯಿ ೮೦೦೦೦ (ಎಕ. XVI, ಚಿಕ್ಕನಾ. ೯೦-೧೭ ; 1802) ; ಒಡಕು ಕೊಟ್ಟಿಗೆ ಹಿಡಿಯಲಾರದು, ನಡೆಗಳಿಪ್ಪತ್ತಾದವು (ಕವಿಪು. ೧೮-೦೦). 'ಕಾಲ್ನಡೆ' ಪರಾ. ೯. (ಕೆಲವು ವಿಶೇಷ ಸಂದರ್ಭಗಳಲ್ಲಿ) ನಡೆಯುವ ದಾರಿಗೆ ಹಾಕುವ ಹಾಸು; ನಡೆಮಡಿ ; ಹಡದಿ (ಉಕ) : ವಿಳಸತ್ಕಾಂತಂ ವಸಂತಂ ತಳೆರದಿರೆ ವನಶ್ರೀ ಮುದಂಬೆತ್ತು ಮುಕ್ತಾಕುಳದಿಂ ನೀಳೌಘದಿಂದಿಕ್ಕಿದ ನಡೆಗಳೊ ಪೇಟೆಂತಿ ವೆಂಬಂದದಿಂ ಕಣ್ಗೊಳಿಸುತ್ತಿರ್ದಪ್ಪುವಂತಾ ವನದೊಳಗೆಲ್ವೊರ್ಯಿಲ್ಲಿಂದ ಮಲ್ಲಿಕ್ಕ ನವ್ಯಾಮಳಪುಷ್ಪಂಗಳ್ ಜನುಂಗುತ್ತಬಗಿದ [ಮದ]ಭೃಂಗಾವಳೀ ಸಂಗದಿಂದಂ (ಕುಸುಮಾ. ೦-೦೦೩). ೧೦. ಗದ್ಯ ಅಥವಾ ಪದ್ಯದ ಲಯ,-ಓಟ : ಅವರ ಕಾವ್ಯದ ನಡೆ ಇತರರ ಕಾವ್ಯದ ರೀತಿಗಿಂತ ಭಿನ್ನವಾಗಿದೆ (ರೂಢಿ). ೧೧. ಒಂದು ಬಾರಿ ಹೊರುವಷ್ಟು ಪ್ರಮಾಣ; ಒಂದು ಹೊರೆ,-ಹೇರು ; ಸಾರಿಗೆ (ಉಕ) : ಕಲಿನಾಥ ದೇವರ ಗಂಧ ಕಸ್ತೂರಿಗೆ ಎಲೆಯ ನಡೆಗೆ ತಾರ ೧ ನು ಬಿಟ್ಟರು (ಸೌಇಇ. IX-1, ೩೪೪-೪೭ ; 1292) ; ಎತ್ತಿನ ಮಾನ್ಯ ಹದಿನೈದು ನಡೆಲು ಅಡಕೆ ಮೆಣಸು (ಎಕ. VIII, ತೀರ್ಥಹ. ೭೩-೨೨ ; 1674). ತೆಂಗಿನಕಾಯಿ, ನಡೆ ೧೧೦೦ಕ್ಕೆ ವಕ್ಕಾ ಸಾವಿರ ಅಂತ ತಿಳಿದು ಅದರ ಮೇಲೆ ಧಾರಣೆ ಇರುತ್ತದೆ (ಮುಂಬವ್ಯಾ. ೨೮೩) ; ರೈತ ಬೆಳಗಿನಿಂದ ಐದು ನಡೆ ಗೊಬ್ಬರ ಹೇರಿದ್ದಾನೆ (ರೂಢಿ). ೧೨. [ನಾಟ್ಯ] ತಟ್ಟು, ಮೆಟ್ಟು, ನಾಟು, ತಟ್ಟುಮೆಟ್ಟು, ಕುದಿತ ಮೆಟ್ಟು, ಮೈ, ಮುಡಿ, ಜಾತಿ, ಅರುಧಿ ಮತ್ತು ನಡೆ ಎಂಬ ಹತ್ತು ವಿಧವಾದ ಅಡವುಗಳಲ್ಲಿ ಒಂದು : ಮೊಗದೊಳಿನಗೆದೋರೆ ಬಿನ್ನಣದ ನಡೆ ಸೋಲಪುಡಿಳಾಯುಧರು ಕಾಲರವೆಯ ಚೆಲ್ವಡರೆ ದೇಶಿಯನಾಡುತಿರ್ದಳು ವಿಲಾಸವಿಭ್ರಮಹಾವಭಾವಮೆಸೆಯೆ (ರೇವಣ. ೩೩-೪೯).

**ನಡೆನಡೆ೩** (ದ್ವಿರುಕ್ತಿ) : ನಡನಡೆಗೆ ಬಾವುಲಿಯ ಪೊಡೆಯ ಕೊಡರುಗಳು ಘಲಘಲನೆ ಮೊರೆಯಲು ಬಿಡದೆ ತಾಟಪ ಹಲಗೆ ಘಂಘಂಘಲಿಗು ಘಲಿಲೆನಲು (ಬಸಪು. ೦೩-೦೭). **ನಡೆನುಡಿ** = ೧. ನಡಗೆ ಮತ್ತು ಮಾತು : ಕೈಕಾಲ್ ನಡೆನುಡಿಯುಳ್ಳ ಮನುಷ್ಯನಿಂದೆಂತುಂ ಕಾರ್ಯಮುಂಟು (ಪಂಚತಂ. ೩೪-೦೫) ; ನಡೆನುಡಿ ಬಳಲ್ಕೆ ಮುನ್ನಂ ಕಡುಚೆಲ್ವೆಯ ರೂಪುಗುಂಡ ಬಳಿಕಂ ನಡೆಯರ್ ನುಡಿಯರ್ ನೀರಂ ಕುಡಿಯರ್ ನಡೆ ನೋಡುತಿರ್ಪರತನುಶಿಥಿಲರ್ ಪಥಿಕರ್ (೧೦೪. ೨-೨೫). ಪಾಲಿಸಿದಳಿಂತು ನಡೆನುಡಿಗಳಂ ಕಲಿಪಲ್ಲಿ ಪರಿಯಂತಮಾ ಶಿಶುವನು (ಜೈಮಿಭಾ. ೨೮-೧೯). ೨. ನಡತೆ ; ನಡವಳಿಕೆ ; ಆಚಾರ : ಸಂಪ್ರದಾಯ ; ನಡೆನುಡಿ ಶುಚಿಯುಂಟಾದರೆ ಕೂಡಲಸಂಗನ ತೋರಿದ ಚೆನ್ನಬಸವಣ್ಣನಾಣೆ (ಬಸವ. ೭೦೮) ; ಶುಕ್ಲಶೋಣಿತದಿಂದ ತನುಮನ ಜನಿಸಿತ್ತು ತನುಮನದಿಂದ ನಡೆನುಡಿ ಜನಿಸಿತ್ತು (ಆದವ. ೨೭-೮೦) ; ನಡೆನುಡಿಯೊಳಭವನೆಂದೆನಿಸಿರ್ಪನಾ ಪುರಕೆ (ತಿರುರ. ದೀ. ೪-೫) ; ದೃಢ ಭಾವ ವೇ ತಕ್ಕವೆಡೆಗುಡದೆ ಬಲಿತವನ ನಡೆನುಡಿಯು ಬಗೆದ ಸರಿನೂಲಿನಂತೆ ಮೃಡನೊಳು ತೊಡಂಕಿ ಬಿಡದಡರ್ದುದೆನಲಾಹ ಸಡಿಫಡ ಶರಣನಿರವನಾವಂ ಬಣ್ಣಿಪಂ (ಸಾಪಂಚ. ೧-೭೯) ; ನಡೆನುಡಿ ಭಕ್ತಿ ವಸ್ತುಗಳ ಕೊಳ್ಳಿಡುವಂಜಿಕೆ ಕಾಯಶುದ್ಧಿ ಮಾಟ್ಪುಡುಮೆನಿಸಿರ್ಪ ಪಂಚಸವಿಂತಿಸ್ಥಿತಿಯಂ ತಳೆದು (ಅನಂಪು. ೪-೦೨) ; ವ್ಯಕ್ತಿಯ ನಡೆನುಡಿಗಳು, ಮನೋಭಾವಗಳು, ದೃಷ್ಟಿಧ್ಯೇಯಗಳು . . . ಇವೆಲ್ಲದರ ಮೇಲೂ ಬುದ್ಧಿಶಕ್ತಿ ತನ್ನ ನಿರ್ದಿಷ್ಟ ಪ್ರಭಾವವನ್ನು ಬೀರುತ್ತದೆ (ಶಿಕ್ಷದ. ೭೦೨). **ನಡೆನುಡಿಮುಗ್ಧ** = ಆಚಾರ, ವಿಚಾರಗಳಲ್ಲಿ ಮುಗ್ಧನಾದವನು,-ನಿಷ್ಕಪಟಿಯಾದವನು; ಶುದ್ಧವಾದ ಚಾರಿತ್ರವುಳ್ಳವನು: ಕಂಗಳ ನೋಟ ಲಿಂಗಕ್ಕೆ ಭಾರ ಅಂಗಜೀವಿಗಳ ಕೂಡೆ ಕುಡಿವನೆ ಶರಣನು ನಡೆನುಡಿಮುಗ್ಧ ಗುಹೇಶ್ವರ ನಿಮ್ಮ ಶರಣನು (ಅವಚಂ. ೮೦-೩೭೪). **ನಡೆಮಾಡು** = ೧. ಚಲಿಸು ; ಸುತ್ತಾಡು ; ಸುತ್ತಲೂ ಹಾಯು : ಕೈತಡವೆ ಕಣ್ ನಡೆಯಾಡೆ ಲತಾಂಗಿ ಕಂಡಳುಜ್ವಳಕಳಶಂಗಳಂ ಘನರಸಾಕಳಿತಂಗಳನುನ್ನತಂಗಳಂ (ಅನಂಪು. ೪-೦೦೫). ೨. ನಡೆದುಕೊಳ್ಳು ; ಆಚರಿಸು ; ವ್ಯವಹರಿಸು : ಮದನಕದಳೀವನಕುಠಾರರುಂ . . . ಪಾಪಾಟವೀಪಾವಕರುಮಪ್ಪ ಶ್ರೀಪದ್ಮಪ್ರಭಮಲಧಾರಿದೇವರು ತಪೋನಿಷ್ಠರಾಗಿ ನಡೆಯಾಡಿ (ಸೌಇಇ. IX-1, ೨೭೮-೨೯ ; 1185).

[ <ನಡ್ಯ/ತಮಿ. ನಟ್ಟೈ ; ಮಲ. ನಡ ; ತುಳು. ನಡೆ, ನಡಿ ; ತೆಲು. ನಡ]

**ನಡೆ೩** (ಅ). ಚೆನ್ನಾಗಿ ; ವಿಶೇಷವಾಗಿ ; ಅತಿಶಯವಾಗಿ : ಎಡೆಯರಿದು ತೊಳಗುವಂತಿರೆ ಸಿಡಿಲ್ದು ಪೋಯ್ತುಟ್ಟುದಾಗಳಂಗಜಕಲೆಯೊಳ್ ನಡೆ ಮೊಗವಿಕ್ಕಿ ಖಯಂಗಿಡದೊಡನುಲಿದುವು ಬೆರಲ ಕೊರಲ ನಾಲಗೆಯುಲಿಗಳ್ (ಕಾವ್ಯಸಾ. ೭೫೮ ಶೂದ್ರಕ); ಶೀಡೆ ತುಷಾರವಾಯು ನಡೆ ಕೋಡಿ ಕಡಂಗಿ ಜಲಕ್ರೀಡೆಯೊಳಂತೆ ಸೇಡುವಡೆದೊಪ್ಪಿದವೊಲ್ (ಲೀಲಾವ. ೧೪-೧೭) ; ತದವಸರದೊಳೆ ನೆಲದ ಪತಿ ಪೊಸಮೆಣ್ಣಂ ನಡೆ ಬಗ್ಗಿಸುತಂ . . . ಅತಿಶಯ ಚತುರೆಯನಿರದಾರೋಹಣಮುಂ ವಿಗೆ ಮಾಡುತಿರಲ್ (ಜಾಲಾಸ್ಯ. ೩-೧೨-೩೭); ನಡೆ ವಿಡುಕದ ಚಮರದ ನೀಳ್ದಲೆತ್ತಿದ ಕಿವಿಯ ತಮ್ಮ ಪದರಜಮುಂ ಪ್ರಾಯ್ದಡೆ ಸಿಲ್ಕದಶ್ವಗಳ್ ಧೀಂಕಿಡುವುವು (ರಾಕಚಂತ. ೪-೮). 'ನಾಡೆ' ಪರಾ. **ನಡೆ ನೋಟ** = ಚೆನ್ನಾದ ನೋಟ ; ಅತಿಶಯವಾದ ದೃಷ್ಟಿ: ನಡೆನೋಟದಿಂದೆ ಬೆಮರ್‍ಪಡೆದು ಮನೋಭವನ ಮಸಮುಮಂ ನನೆವಿಲ್ಲಂ ಪಿಡಿದಿಸುವ ಕೆಯ್ಮೆಯುಮಂ ಕೇಳ್ ನಡುಗಿಸದೊಡೆ ನಿನ್ನ ಕೆಳದಿಯಲ್ಲಂ ಕೆಳದೀ (ಲೀಲಾವ. ೧೧-೮೨). **ನಡೆ ನೋಡು** = ಚೆನ್ನಾಗಿ ನೋಡು ; ನಟ್ಟ ದೃಷ್ಟಿಯಿಂದ ನೋಡು : ನಿಡಿಯಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾರದೆ ತಡೆಯ ಪಗಲ್ ಒರಿಯುವಷ್ಟವಾ ಪುರವರದೊಳ್ (ಕಾವ್ಯಸಾ. ೦೭೮ ಶೂದ್ರಕ) ; ಮೆಲ್ಲನೆ ಮೃಗವೊಂದು ಸಾರ್ದು ನೆಟ್ಟನೆ ನಡೆ ನೋಡಿ ನರೇಂದ್ರನೆಚ್ಚು ಭೋಂಕನೆ ಮೃಗಚಾರಿಯಂ ತನಗೆ ಮಾಣದೆ ತಂದನದೊಂದು ಮಾರಿಯಂ (ಪಂಚಭಾ. ೦-೦೦೧) ; ಎಳೆವೆಂಡಿರ್ನೆಲೆವಾಡದೊಳಿಳಸಿರೆ ನಡೆ ನೋಡಿ ಸೋಲ್ತವೋಲ್ಪಂದ್ರಂ ಮಾಪೊರ್ಳಿಪ ನೆವದಿಂ ಪೊರಳ್ವಂ ಬೆಳಯುಡರಸಿಕ್ತರತ್ನಕುಟ್ಟಿಮತಳದೊಳ್ (ಕಾದಂಪೂ. ೩೦೪) ; ನಡೆ ನೋಟ್ಟರ ಕಡೆಗಣ್ಣಂ ಕಡುನಲ್ಲರ ಮನಮೊಡನೆ ಪೊತ್ತುವ ಪುರದೊಳ್ ಮಡದಿಯರ ಮೊಲೆಯನಲ್ಲದೊಡುಡಿಯವೆ ಬಳುವಳಿಕೆವಡೆದ ಬಡನಡು ಭರದಿಂ (ಅರ್ಧನೇ. ೪-೨೨); ಕೃತಕಗಿರಿಯೊಳ್ ನವಿಲೆಟ್ಟಾಡುವುದಂ

ಪಥಿಕರ್ ನಡೆ ನೋಡುವರೆರ್ದೆ ಥಕ್ಕೆವಾಜಿಸುತ್ತಿರ್ಪಿನೆಗಂ (ವರ್ಧಪು. ೨-೨೨); ತೊವಲನುಗಿದು ಕರುಳ ತೊಡಂಕಂ ಬಿಡಿಸಿ ನಡೆ ನೋಟ್ಪಿನೊಳಗೆಲು ಪಡಗಿರ್ಪುದು ಜೀವನಿರ್ಪೊಡಲ್ಲಿಗೆಪೋದಂ (ಯಕೋಜ. ೯-೧೯); ಕುಸುಮ ಮಾಲೆಯ ತಿರುಹುತೆತ್ತಿದ ಮುಸುಡಿನರೆನೋಟದಲಿ ಲಜ್ಜೆಯ ಚೆಸುಗೆಯಲಿ ನಡೆ[ಪಾಠಾಂ. ನೆಚಿ, ಮಿಗೆ]ನೋಡುತಿರ್ದಳು ಸೀತೆ ರಘುಪತಿಯ (ತೊರರಾ. ೧-೧೫-೪೯); ನಡೆ ನೋಡಿ ನಲವಿಂದ ಹರಸಿದವರು ಮತ್ತೊಡನೆ ಲಾಳಿಸಿದರುಂಬರಕೆ (ಭರತ. ೩-೧೨೯); ಜನಪತಿಯ ವದನವಂ ಕಣ್ಗೊನೆಯಿಂ ನಡೆ ನೋಡಿ ನಾಡೆ ಮುದವಂ ತಳೆದರ್ (ರಾಜಶೇ. ೪-೬).

**ನಡೆಕೆಯ್.?** (ಕ್ರಿ). (?): ಎಡೆಪಟಿಗೀ ನಡೆಕೆಯ್ದು ತಪಂ ಸಯ್ಯುವ ಮಾನ್ಯೊಳತ್ತೂರ ಸಂಘ x x ಪಡೆ ಕೊಟಿದಿನ್ನು ಪಾಟ್ಸುದರಿದು (ಎಕ. II, ೯೩-೧; ಸು. 700). [?]

**ನಡೆಕೋಲು** 'ನಡೆಗೋಲು' ನೋ.

**ನಡೆಗ** (ನಾ). ೧. ನಡೆಯುವವನು; ನಡೆಗಾರ: "ಕಸರ್, ಕಸಕಃ, ಈ ೨ ನಡೆಗಂ" (ಶಾಶಕ್ಕ.೧೫೦). ೨. ಒಳ್ಳೆಯ ನಡಗೆಯುಳ್ಳ ಒಂದು ಬಗೆಯ ಕುದುರೆ: ನಡೆಗ ನಾಗರ ಮಟಿ ಮಿಡಿವ ಚೆನ್ನಿಗರ ಮುಂಗುಡಿಯಲ್ಲೇಱುವ ಮುದ್ದುವೊಗದ ಕಡುರಭಸದ ಕಾಡಿಗೆಗಣ್ಣ ತೇಜಿಯ ಪೊಡವಿಪರಿಗೆ ತೋಱಿದರು (ಅಂಜಚ. ೬-೮೪); ನಡೆಗನನೇಱಿ ಮೇಳದವಳಂ ಪಱಿಗೇಱಿಸಿ ಕೊಂಡು ಪಕ್ಕದೊಳ್ ಗಡಣಿಸಿ ಮೇಳದೊಳ್ ನಗಿಸುತಂ ಬರೆವಾದಿಗೆ ಗೆಂಟುವೋಗಿ (ಸೂಕ್ತಿಸು. ೧೫-೩೭). [ನಡೆ$_1$ + -ಗ$_2$]

**ನಡೆಗಲ್, ನಡೆಗಲಿ$_1$** (ಕ್ರಿ). ನಡಗೆಯನ್ನು ಕಲಿ; ಓಡಾಡಲು ಕಲಿತುಕೊಳ್ಳು: ಆ ಬಾಲಕಂ ಬಾಲದುಡಿಗೆಗಳಂ ತೊಟ್ಟು ನಡೆಗಲ್ವೊಂದು ದಿವಸಂ ಗೋವ್ರಜಂಗಳೊಳ್ ಸೋಂಕುವುದನಾಂ ಕಂಡು (ಹಂಚತಂ.೦೮೭-೯); ನಡೆಗಲ್ವಂದುಂ ಬಿಣ್ಪಂ ಕೊಡೆನೆಗೆದಪುದುರ್ವಿಯುಂದು ವಾಸುಗಿ ಪಲವುಂ ಪೆಡೆಯಂ ಶಿಶುನಡೆವೆಡೆಯೊಳ್ ಪಡೆದಾಂತು ಸಹಸ್ರಫಣನೆನಲ್ ಪೆಸರ್ವಡೆದಂ (ಪಂರಾಮಾ. ೩-೭೨೯); ದೃಢಚಿತ್ತಂ ಗುಣನಿಳಯಂ ಕಡುಗಲಿ ಕಿಱಿಯಂದು ದಿವ್ಯಜಿನಮುನಿಗಳ ಮೆಲ್ಲಡಿಯಂ ಪಿಡಿದು ತಳರ್ನಡೆ ನಡೆಗಲ್ತಂ ಧವ್ಯವನಜ ವನಕಳಹಂಸಂ (ಧರ್ಮಾಮೃ.೭-೧೩); ನಡೆಗಲ್ವಲ್ಲಿಯೆ ಧರ್ಮದಲ್ಲಿ ನಡೆಯಲ್ ಕಲ್ತಂ (ಎಕ. V, ಹಾಸನ. ೭೨-೩೩; 1160); (ಶಾಶಮಂ. ೬೦೦ ನೋ); ನಡೆಗಲ್ವಂದೆ ತಳರ್ನಡೆ ನಡೆಯಿಸಿದಂ ನೃಪಕುಮಾರನೆಳೆಯಂ ಬಿಣ್ಪಂ ನುಡಿಗಲಿಂದೆ ತೊದಳ್ನುಡಿ ನುಡಿಯಿಸಿದಂ ತನಗೆ ಸೋಲ್ತ ವಾಕ್ಕನ್ನಿಕೆಯಂ (ಅರ್ಧನೇ. ೨-೩೦); ವಿಚಾರಿಪಂತಿದು ನಡೆಗಲ್ತು ಸಂಚರಿಪ ಮೇಚಕಶೈಲಮೊ . . . ಪೇಳೆನೆ ತೋಱಿದುದಾ ವರಾಹಕಂ (ಶಬಶಂ. ೪-೩). **ನಡೆಗಲಿ$_1$**: ಉಂಬೆಗಾಲಿಟ್ಟು ನಡೆಗಲಿತನು ಶ್ರಾವಕರ ಗಡಣವಾರಣ್ಯದಾವಾನಲ ವೃಢಭಕ್ತ ಪಡೆದರ್ಗರ್ತಿಯನೀವುತಿರ್ದ (ಅಬ್ಬಲೂ. ೨-೩೩).

[ನಡೆ$_2$ + ಕಲ್$_1$]

**ನಡೆಗಲಿ$_1$** 'ನಡೆಗಲ್' ನೋ.

**ನಡೆಗಲಿ$_2$** (ನಾ). ಆಕ್ರಮಣ ನಡೆಸುವ ಶೂರ; ಮುನ್ನುಗ್ಗುವ ವೀರ: ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಱಿವ ಕಸವರಗಲಿಗಳುಮಂ ಮತ್ತಮಣ್ಮಿ ನಡೆದಿಱಿವ ನಡೆಗಲಿಗಳುಮಂ ನೋಡಿ (ಗದಾಯು. ೯-೩೪ ವ).

[ನಡೆ$_1$ + ಕಲಿ$_2$]

**ನಡೆಗಲಿಸು** (ಕ್ರಿ). ನಡಗೆಯನ್ನು ಕಲಿಸು; ನಡೆಯುವುದನ್ನು ಹೇಳಿ ಕೊಡು: ನಡೆಗಲಿಸುತ್ತುಮಂಚೆಗಳನೋದಿಸುತಂ ಗಿಳಿಯಂ ಪಿಕಕ್ಕೆ ಮಾಮಿಡಿಗಳನಿಕ್ಕುತುಂ . . . ನಿರುತರಂ ತೊಲಗದಿರ್ಪುದು ಪೌರವಿಲಾಸಿನೀ ಜನಂ (ಮಲ್ಲಿಕು. ೨-೩೯). [ನಡೆ$_2$ + ಕಲಿಸು$_1$]

**ನಡೆಗಟ್ಟಿ** (ನಾ). ಹೇರನ್ನು ಹೊರುವ ಕತ್ತೆ; ಭಾರವನ್ನು ಹೊತ್ತು ನಡೆಯುವ ಕತ್ತೆ: ನಡೆಗಟ್ಟಿಗಳನಿರ್ಬರ್ಗಮೇಱಲ್ ಕೊಟ್ಟು ಪಿರಿದಾಳಂ ನೆರಂಬೇಟ್ದು ಕಿಱಿದುಂತರಂ ಕಟಿಪುತ್ತುಂ ಬಂದು (ಸುಕುಮಾ. ೨-೫೯ ವ).

[ನಡೆ$_1$ + ಕಟ್ಟಿ]

**ನಡೆಗಾಣ್** (ಕ್ರಿ). ೧. ನಡಗೆಯನ್ನು ನೋಡು: ನಡೆಗಂಡು ಕವಿವ ಕಳಹಂಸೆಯುಂ ಜಡಿವ ಸವಿನುಡಿಗೇಳ್ದು ಮುತ್ತುವರಗಿಳಿಗಳಂ, ಕೊಡಹಿ (ಹರಿಕಾ. ೪-೩೦). ೨. ನಡವಳಿಕೆಯನ್ನು ತಿಳಿ; ಆಚಾರ ವ್ಯವಹಾರಗಳನ್ನು ತಿಳಿದುಕೊಳ್ಳು; ಸಂಪ್ರದಾಯವನ್ನು ಅರಿತುಕೊಳ್ಳು: ಕಡೆಯ ದಿನದೊಳು ಮೂಱನೆಯ ಜಾವದೊಳೆಲ್ಲ ಕಡೆಯಿಂದ ಕೂಡಿದ ಪ್ರಜೆಗೆ ನಡೆಗಂಡು ಸಂಘಪೂಜೆಯ ಮಾಡಲಾ ಚಕ್ರಿ ತೊಡಗಿದನೇನ ಬಣ್ಣಿಪೆನು (ಭರತ. ೭೦-೧೦೦). [ನಡೆ$_2$ + ಕಾಣ್]

**ನಡೆಗಿಡು** 'ನಡೆಗೆಡು' ನೋ.

**ನಡೆಗುಱಿ** (ನಾ). (ಗುಂಪಿನಲ್ಲಿ) ಮುಂದಕ್ಕೆ ಹೋಗುವ ಕುರಿ: ಕೊಱಿದು ತೊಡೆಯೊಳ್ ಕಾಯ್ದು ಕೋದ ಸಂಕಲೆಯಿಂದೆ. ಕೊಱಿದು ಕಿವಿಯೊಳ್ ಕೊಱಿದು ಚಿಬುಕದೊಳ್ ನೇಣಿಂದೆ ನಡೆಗುಱಿಗಳಂ ಮಾಡಿ ಕೈಯನೆಚ್ಚು ಪರಿರದೆ ನಡೆಯಿಸೆಚ್ಚಾರ್ದುದ ಕಾಲ್ಗಳನರಿದು ಬಿಡದಿರದೆ ತಲೆಗಳಂ ತುದಿ ಮೂಗನೆಚ್ಚು ಕೆಡಪುವರಹೋ (ಸಾನಂಡ. ೪-೧೮೯ ರಗಳೆ).

[ನಡೆ$_1$ + ಕುಱಿ$_2$]

**ನಡೆಗೆಡಿಸು** (ಕ್ರಿ). ನಡಗೆಯನ್ನು ನಿಲ್ಲಿಸು; ಚಲನೆಯನ್ನು ತಪ್ಪಿಸು,- ಅಡ್ಡಿಪಡಿಸು; ನಿಲ್ಲುವಂತೆ ಮಾಡು: ವಿಟರ ಮೇಳಂಗಳಂ ಚೇಟಿಯರ ಗಡಣದಿಂ . . . ವಾರನಾರೀಜನಂ ಕಟಕದೊಳ್ಮಾಮುಕರ ನಡೆಗೆಡಿಸು ತೊಗ್ಗಿನಿಂ ಪೊಱಮಟ್ಟು ಬರುತಿರ್ದುದು (ಜೈಮಿಭಾ. ೭-೬).

[ನಡೆ$_2$ + ಕೆಡಿಸು$_1$]

**ನಡೆಗೆಡು, ನಡೆಗಿಡು** (ಕ್ರಿ). ೧. ನಡೆಯಲಾರದಾಗು; ಚಲನೆ ಇಲ್ಲವಾಗು; ಮುಂದು ಹೋಗಲು ಆಗದಿರು: ತೊಡೆ ದಡದಡಿಸೆ ನಡೆಗೆಟ್ಟು ಕಟಲಿಂಲಿಗೆ ಬಟಿಸಲ್ವ ಕಳಹಂಸಮುಂಡಲಕ್ಕಯುಶವಂ ಮಾಡಿಸಿಯುಂ. . . ತತ್ಕಾಂತೆ ಒಂದೆರಡಡಿಯನಿಡುವಲ್ಲಿ (ಕಾದಂಬ. ೩೬); ನಭಮೆತ್ತವೋದಂದೆ ನಿಸಲ್ನಡೆಗೆಟ್ಟುದು ಗಾಳಿ ರೂಪುಗೆಟ್ಟುದು ದೆಸೆ (ಜಗವಿ. ೬-೮೦); ಕಳಹಂಸ ಮಾಲೆ ಕಾಸಾರದೊಳಂಜಿ ಪೊಕ್ಕುವು ರಥಾಂಗರಥಂ ನಡೆಗೆಟ್ಟುವದ್ಭುತಂ (ಗಿರಿಶ. ೮-೦೦); ನಂಜುಮುಳ್ಳಡಿಯನು ನಟ್ಟು ನಡೆಗೆಟ್ಟನೋ (ಸಿದ್ಧರಾ. ೨-೪೫); ಮೆಲ್ಲಡಿಯ ಇಡಲಱಿಯದಿನ್ನೆನಿತು ಕಾನನದೆಡೆಯೆನುತ ಬೆಸಗೊಂಬಳೀ ಪರಿ ನಡೆನಡೆದು ನಡೆಗೆಟ್ಟು ನಿಮ್ಮಿದಳಾತ್ಮವಲ್ಲಭನ (ತೊರರಾ. ೨-೪-೧೭); ಆರು ಕರುಣಿಸುವವರು ನಡೆಗೆಟ್ಟಡವಿಯಲಿ ಬೀಳೆ (ಶಿಭಾಗ. ೩-೧೪-೧೨); ಜಡೆಗನ ತಪಗೇಡಿಯ ಸೂನು ತನ್ನಯ ಪೊಡೆಯೊಳಗಿರಲು ಬಾಲಕನ ನಿಡಿದೋಳ ಮೊದಲ ಭೂಭಾರವ ನೆಲೆದಾಳ್ದು ನಡೆಗೆಟ್ಟು ಬಿಸುಸುಯ್ದುಪಳು (ಮೋಹತ. ೧೭-೯); ೨. ಕ್ರಮಂ ತಪ್ಪು; ರೀತಿ ತಪ್ಪು: ನಾವು . . . ಮಿತಿಮೀರಿ ಅತಿರೇಕದಿಂದ ಸೊಕ್ಕಿನಿಂದ (Hubris) ನಡೆಯುತ್ತೇವೆ. ಹೀಗೆ ನಡೆಗೆಟ್ಟ ತಪ್ಪಿಗೆ ತಕ್ಕ ಶಿಕ್ಷೆ ನಮ್ಮನ್ನು ಬಡಿಯುತ್ತದೆ (ಬದ್ಧಕೃ. XXXV ಅಡಿಬ); ನಡೆಗೆಟ್ಟ ಕಟ್ಟಳೆಯೊಳಗೆ ಯಚ್ಚು ಪೆರ್ಚಿನಿಂ ಸುಡುವ ನನ್ನಿಯನುಳಿಸೆ ತಿಳಿಯದೆಡೆಗೆಟ್ಟಂ (ಕಾಲೂರ. ೧೬೧-೩೫೭). ೩. (ಸಾಮಾನ್ಯವಾದ) ಆಚರಣೆಗೆ ಅಸಾಧ್ಯವಾಗು; (ಸಾಧಾರಣವಾದ) ವ್ಯವಹಾರಕ್ಕೆ ಒಳಪಡದಿರು: ತಾ ನಡೆವಡೆ ನಡೆಗೆಟ್ಟ ನಡೆಯ ನಡೆಯಬೇಕು ತಾ ನುಡಿವಡೆ ನುಡಿಗೆಟ್ಟ ನುಡಿಯ ನುಡಿಯಬೇಕು (ಅವಚಂ. ೯೯-೪೯೮). **ನಡೆಗಿಡು**: ೧. ನಡೆಗಿಡೆ ಗಾಳಿ ಪೂಟಿ ಗಗನಸ್ಥಳಿ ಕೆಕ್ಕನೆ ಕೀವೆ ದಿಙ್ಮುಖಂ . . . ದೇವರುಂ ದಿವಿಜಕಾಂತೆಯರುಂ ಬೆಟಗಾಗೆ ಪೂಣೆವೊಕ್ಕೊಡನೊಡನಾರ್ದೆರಟ್ಟಿಡೆಯ ಬಿಲ್ವಡೆ ಬೀಱಿದುದಸ್ತ್ರವಿದ್ಯೆಯುಂ (ಪಂರಾಮಾ. ೧೩-೪೪); ನಡೆಗಿಡೆ ಗಾಳಿ . . . ಘನಾಘನಂ ಕಟಿಯೆ ಪೆರ್ಮೊಟಿ ಕೊಂಡವು ಸರ್ವಸತ್ವಮೋಗಡಿಸೆ ತದಭು

ಕಾಲಮುವನೀವಳಯಕ್ಕತಿಚೋದ್ಯಮಪ್ಪಿನಂ (ಮಹಾಪೀ. ೭-೫೪) ; ನಡೆಗಿ [ಡಾತಾಂ ಗೆ]ಡೆ ಚಿತ್ತಂ ಧೃತಿಲತೆ ಕುಡಿಗಿಡೆ ಮಾನಸಿಜ ವಿಕಾರತತಿ ಮಾನಸ್ತ ದೊಳ್ಪಡೆಗಿಡೆ . . . ವಿರಹವಿಹ್ವಳನಾದಂ (ವೃಷವಿ. ೮-೩೦) ; ಕಾಲಿಡಲಾಕ್ಕಿ ಶಿಲೆಯೊಳಾ ತುರಂಗದ ಖುರಂ ಕೀಲಿಸಿತು ಭಿನ್ನಿಸದೆ ಕೂಡೆ ಬೆಚ್ಚಂದದಿಂ ಮೇಲೆ ನಡೆಗೆಟ್ಟು ನಿಂದುದು (ಜೈಮಿಭಾ. ೧೦-೧೦). [ ನಡೆ$_2$ + ಕೆಡು$_1$ ]

**ನಡೆಗೇಡು** (ನಾ). ನಡಗೆಗೆ ಒದಗುವ ಅಡ್ಡಿ,-ತೊಂದರೆ : ಕೆಲಕೊಱಗಿರ್ದ ಬಲ್ವರವಿಯಂ ಬಲಗೈ ಜಡಿದೊಪ್ಪಿ ತೂಗೆ ನೀಳ್ದಲಿದೆಡೆಗೈಯೊಳಾವರೆಯು ಪಂದಳಿರ್ಗಳ್ನಡೆಗೇಡು ಮಾಡೆ . . . ಒಪ್ಪಿದರ್ ಕೆಲಬಲದೂರ್ಗೆ ಪೋಗಿಯಳೆ ಮಾಱಿ ಮಗುಟ್ಟಿರುತಿರ್ಪ ಗೋಪಿಯರ್ (ಲೀಲಾವ. ೫-೧೦೦).

[ ನಡೆ$_2$ + ಕೇಡು ]

**ನಡೆಗೊಳ್**, ನಡೆಗೊಳು (ಕ್ರಿ). ೧. ಚಲಿಸು ; ಹೋಗು ; ಸಾಗು ; ತೆರಳು : ಆಗಳಶ್ವತ್ಥಾಮನುಂ ಕೃಪನುಂ ಸಿಗ್ಗಾಗಿ ಹಿಮವತ್ಪರ್ವತಕ್ಕೆ ನಡೆಗೊಂಡರ್ (ಪಂಪಭಾ. ೧೩-೧೦೭ವ) ; ನಡೆಗೊಂಡತ್ತು ಮದೇಭದಾನ ಜಲಧಾರಾಸಾರದಿಂ ಪಾರ್ದುತಂ ನಡೆಗೆಟ್ಟಿರ್ಪಿನಂ. . .ರಘುತನೂಜಾಖರ್ವ ಚಾತುರ್ಬಲಂ (ಪಂರಾಮಾ. ೧೩-೩೩) ; ಒಡನೆಯ್ದಿದಃವಲರ್ಗಣ್ಗಳ್ ಬಿಡದೆ ಮನಂ ಪೋಯ್ತು ಮನದ ಪಿಂತನೆ ಧೈರ್ಯಂ ನಡೆಗೊಂಡುದು ಧೈರ್ಯದ ಬೆಂಬಿಡದೊರ್ವಳ ಜೀವಮಿರದೆ ಪೋದತ್ತಾಗಳ್ (ಜಗವಿ. ೫-೯೯). ೨. ನಡೆಯಲು ಸಮರ್ಥವಾಗು ; ಗತಿಯನ್ನು ಪಡೆ : ಆಗಳಾಗಳೆ ಪೆಟವಂ ನಡೆಗೊಂಡಂತುಂ ಕುರುಡಂ ಕಣ್ಪಡೆದಂತುಂ ಷಂಡಂ ಪುರುಷನಾದಂತುಂ ಪೆರ್ಚಿದೊಂದು ಸಂತಸದಿಂ . . .ಕರ್ವೆಟ್ಟಮನೇಱಿ ಪೋದರ್ (ರಾಮಾಶ್ವ. ೮೩-೧೩). ೩. ಹೊರಡು ; ಹೊರಬೀಳು : ಪಡೆಯಂ ನಡೆಯಲ್ಕೆ ಬೇಱಿ ಭೋರೆಂದು ಗಭೀರಸಾದದಿನದೇಂ ನಡೆಗೊಂಡುದೊ ಚಕ್ರವರ್ತಿಯಾ (ಶಾಂತಿಪು. ೧೧-೪೭) ; ಅಂತು ನಡೆಗೊಂಡು ಕುಂಡಿನೀಪುರಾಭಿಮುಖನಾಗಿ ಪೋಗುತ್ತುಮಾತ್ಮಗತದೊಳ್ ಗರುತ್ಮನನಾಮಂತ್ರಣಂಗೆಯ್ಯೆ (ಜಗವಿ. ೮-೭೯ವ). ೪. ಬಿಟ್ಟುಹೋಗು ; ತೊಲಗು ; ದೂರಸರಿ : ನಾಣ್ ನುಣ್ಚಿ ಸೋಲದೊದವಿಂ ಕಣ್ ನಸುಮುಗುಳ್ದೆಸೆಯೆ ನಸೆಯನೆಸಗುವ ಪಲವುಂ ನುಣ್ನುಡಿ ಪಸರಿಸೆ ಮನದಿಂ ಜಾಣ್ ನಡೆಗೊಳೆ ತೊಡರ್ದರಿನಿಯಕೂಟ ದೊಳಿನಿಯರ್ (ಚಂದ್ರಪು. ೮-೬೯). ೫. ಮೇಲೆ ನುಗ್ಗು ; ಆಕ್ರಮಣ ನಡೆಸು : ಬಲದಲ್ಲಮಹೇಶ್ವರನನ್ನರುಪಾಯದಲ್ವಿಷ್ಣುವಿನನ್ನರ್ವಿಜ್ಞಾನದಲ್ ಬ್ರಹ್ಮನನ್ನರ್ಯ್ಯಮ ವರುಣ ವಾಯುವ್ವ ಚೇರ ಚೋಳ ಪಾಣ್ಡ್ಯರ್ಕ್ಕಳನ್ನಡೆಗೊಂಡು ಕನ್ನರದೇವನ ಕರುಮಾಂ (ಎಕ. IV, ಹಗ್ಗಡ, ೧೭-೧೫ ; 1033). **ನಡೆಗೊಳು :** ೧. ಪೊಳೆವ ಬೆಳ್ಗೊಡೆ ಚಾಮರಂ. . .ಮುಂತಾದ ಸಕಲವಿನಿಯೋಗಸಹಿತಂ ಸೌಂದರಾಧೀಶನು ಒಲಿದು ತಿರುವಾರೂರ್ಗೆ ನಡೆಗೊಂಡ (ಸೌಂದಪು. ೫-೩೪) ; ಜೋಡಿಸಿದ ಕರಿತುರಗರಥವೆಡೆಯಾಡಿದವು ಗುಡಿಮಂಡವಿಗೆಗಳ ಹೂಡಿದೆತ್ತಿನ ಬಂಡಿಗಳು ನಡೆಗೊಂಡವಗಲದಲಿ (ತೊರರಾ. ೨-೬-೯) ; ರಾಜಮರಾಳ ಮತ್ತೇಭಸುಕುಲಕೆ ಸರೋಜಪಾಂಘ್ರಿ ಯುಗದ ಸದ್ಗತಿಯ ಮಾಜದೆ ಮನಗೊಳಿಸುವವೊಲು ನಡೆಗೊಂಡುದಾ ಜಾಣೆಯ ಸಖೀನಿವಹ (ಮೋಹತ. ೪೧-೩೭) ; ಎಡ್ಡೆಸೆಯ ಮೆಟ್ಟಿದುದು ಸಕಲ ವಾದ್ಯಂಗಳ ನಿನದಮಳ್ಳಿವಟ್ಟರಚ್ಚರಿಯರುತ್ಸವವನೀಕ್ಷಿಸಲೆಂದು ಪುರಜನಂ ನಡೆಗೊಂಡುದು (ಚಬಪು. ೬-೫೩) ; ಶರಣ್ಗೊಂಡು ಮುನಿಪ ಅತ್ತ ನಡೆಗೊಳಲಿತ್ತ ದನುಜೇಂದ್ರ ತನ್ನನದಿ ಚಿತ್ರಭವನದಿಪ ದಿನಮಂ ಶಂಕಿ ಸುತ್ತಿರಲು (ನವಮೋ. ೧೧-೧೯). [ ನಡೆ$_2$ + ಕೊಳ್$_1$ ]

**ನಡೆಗೊಳಿಸು**(ಕ್ರಿ). ೧. ನಡೆಯುವಂತೆ ಮಾಡು ; ನಡೆಸು : ಪಸುರ್ವುಲ್ಲಂ ಮೇವುತಿರ್ದ ಪೊಸವಾಣಿತಿವಲ್ಲೆ . . . ಪಟ್ಟಿರ್ದ ಕೊಣಸುಮುಂ ಬಿಟ್ಟು ಬರಲಾಱದೆ . . . ತೊರೆದ ಮೊಲೆಯಂ ಸಾರ್ಚಿ ತಣಿಯೂಡದೆ ನಡೆಗೊಳಿಸಿ ತವಕದಿಂ ಬರುತ್ತುಂ (ಪುಷ್ಪಪು. ೩-೭೭ವ). ೨. ಹೋಗುವಂತೆ ಮಾಡು; ತಳ್ಳು; ಅಟ್ಟು: ಭೂಪನ ಸೈನ್ಯಸಾಗರವ ಸಂದಿಸಿಯೆ ನಿಮಿಷಾರ್ಧದಲಿ ಯಮಮಂದಿರಕೆ ನಡೆಗೊಳಿಸಿ ಮುಖಜರ ಮಂದಿಗಿತ್ತನು ಸಕಲ ಭೂಮಿಯ ಜಾಮದಗ್ನಿಕನು (ಸಂಭಪ. ೨೬-೪೭) ; ರಿಪುಪರಿವಾರವನು ನಡೆಗೊಳಿಸಿದನು ಯಮರಾಜನಾಲಯಕೆ (ಕುಮಾರ್‌ದ್ರೋ. ೫-೧೦).

[ ನಡೆಗೊಳ್ + – ಇಸು$_3$ ]

**ನಡೆಗೊಳು** 'ನಡೆಗೊಳ್' ನೋ.

**ನಡೆಗೊಳ್ಳಿ** (ನಾ). ನಡೆದಾಡುವ ಕೊಳ್ಳಿ ; ಚಲಿಸುವ ಕೊಳ್ಳಿ : ಅಡೆ ಪೊತ್ತುವ ಬೇಸಗೆಯೊಳ್ ಪೆಡೆವಣಿ ಬಡೆ ಕಾಯ್ದು ನೆತ್ತಿ ಛಿಟಛಿಟಿಲೆನುತುಂ ನಡೆಗೊಳ್ಳಿಯಂತೆ ನಡೆದುದು ಗಿಡುಗಳ ನೆಟಿಲಾಸೆಗಹಿವನಸುವಿಡುತುಸಿರಂ (ಸೂಕ್ತಿಸು. ೧೦-೧೧೦). [ ನಡೆ$_1$ + ಕೊಳ್ಳಿ$_1$ ]

**ನಡೆಗೋಂಟೆ**, ನಡೆಗೋಟೆ (ನಾ). ೧. ಯುದ್ಧದಲ್ಲಿ ಶತ್ರುಗಳಿಂದ ರಕ್ಷಿಸಿಕೊಳ್ಳಲು ಉಪಯೋಗಿಸುವ (ಸೈನ್ಯದಿಂದ ರಚಿಸಿರುವ) ರಕ್ಷಣೆಯ ವ್ಯೂಹ : "ಜಂಗಮಃ 'ಪ್ರಾಕಾರಃ – ನಡೆಗೋಂಟೆ" (ನೀತಿವಾ. ೨೦-೭) ; ಸುಂಗರಭೂಮಿಯೊಳೊಡ್ಡಿ ನಿಂದೆಡ್ಡಮಾಗಿ ಬಗ್ಗಿಸಿ ಮೊಗ್ಗರಿ ಸುತ್ತೊಗ್ಗುಗೆಡದೆ ನಡೆಗೋಂಟೆಯಂತೆ ನೆಲೆವೆರ್ಚಿ ನಿಂದು (ಗಿರಿಕ. ೬-೫೫ವ) ; ಕಟ್ಟದಲಗಿನ ಕನ್ನಡಿಯ ತೊಲಗದ ಕಂಬದ ವೀರಘಂಟೆಯ ನಡೆಗೋಂಟೆಯ ಜಾಯಿಲದ ಪೊಂಬಟ್ಟೆಯ . . . ಬೆಳಗುಗಳ್ ಮಾರ್ತಂಡಂಗೆ ಮಾರ್ಪೊಳೆಯೆ (ಮಹಾನೀ. ೧೩-೯೯ವ); ಬಿಡದ ನಡೆಗೋಂಟೆಗಳ ಮೊಗ್ಗರಂ ನೂಂಕಿದವು ಪುರದ ಪೊಱಬಳಿಸಿನೊಳ್ ಪಡಿಯಟ್ಟಣೆಗಳೆದ್ದುವು (ಚಬಪು. ೪೩-೩೪). ೨. ರಕ್ಷಣೆಯ ಸಾಧನ : ಮುಂಚಪದೊಳು ಸುತ್ತಿ ಸುಳಿದರೊಳ್ಳೆಯ ನಡೆಗೋಂಟೆಯೊಯೆಂಬ ರೀತಿಯೊಳು (ಭರತ. ೧೩-೭೯). **ನಡೆಗೋಟೆ :** ೧. ತಾಟಿಸಿದರೊಡನೊಡನೆ ಕುಲಗಿರಿ ದೂಟಿ ಬಿದ್ದವು ಚಿತ್ರದಲಿ ನಡೆಗೋಟೆಯೆನೆ ಮಂಡಳಿಸಿ ಬಲಿದರು ತೆಕ್ಕೆವರಿಗೆಗಳ (ಕುಮಾರ್‌ಭೀ. ೪-೨೫) ; ಈ 'ನಡೆಗೋಟೆ'ಗಳು 'ತಳ' 'ಮುಳುವೇಲಿ'ಗಳಂತೆ ಪಾಳೆಯದ ಸಂರಕ್ಷಣೆಗಾಗಿಯೂ ಇದ್ದಿರಬಹುದು (ಕರ್ನಾಜ. ೫೯).

**ನಡೆಗೋಂಟೆಮಲ್ಲ**, **ನಡೆಗೋಟೆಮಲ್ಲ** = ನಡೆಗೋಟೆಯಂತೆ ರಕ್ಷಿಸುವವನು; ಏಕಾಂಗವೀರ; ಮಹಾ ಪರಾಕ್ರಮಿ; ಒಂದು ಬಿರುದು: ಮಾಬ್ಬಲಕ್ಕೆ ನಿಜಸೇನೆಗೆ ವಜ್ರದ ಕೋಂಟೆಯಾಗಿ ತೋಱುಗು ನಡೆಗೋಂಟೆಮಲ್ಲನ ಭುಜಾಬಳವೀ ಅವನೀತಳಾಗ್ರದೊಳೂ (ಎಕ XI, ಚಿತ್ರದು. ೨-೦೬; 1355) ; ಸುಭಟರಾಚಾರ್ಯ (೦) ಸತ್ಯರತ್ನಾಕರಂ ನಡೆಗೋಟೆಮಲ್ಲಂ ಗ (೦) ಣ್ಡರಗೋವಂ ಮಣ್ಡಳೀಕ ನಾರಾಯಣಂ (ಸಾಇಇ. XI-1. ೫೭-೩೦ ; 1019) ; ಶ್ರೀಮತು ಮಹಾಮಂಡಳೇಶ್ವರಂ ಉಭಯದ[ಳ]ಪಿತವಮಹ ನಡೆಗೋಟೆ ಮಲ್ಲ ಸೆಟ್ಟಿ ಸಾ[ಹಸ]ಭೀಮ ಗುಂಡರಸನು ತಂನಾಳ್ಕೆಯೊಳು ಕಾ[ಳ್ದ]ಗೆಯಲ್ಲಿ ಕೊಟ್ಟ ಮ ೧೨ ಮನೆ ೧ (ಸಾಇಇ. XX. ೨೨೬-೨೪ ; 1306).

[ ನಡೆ$_1$ + ಕೋಂಟೆ ]

**ನಡೆಗೋಟೆ** 'ನಡೆಗೋಂಟೆ' ನೋ.

**ನಡೆಗೋಟೆಕಾಱ** (ನಾ). ಸೈನ್ಯದಿಂದ ರಚಿಸಿರುವ ರಕ್ಷಣೆಯ ವ್ಯೂಹದಲ್ಲಿರುವ ಮುಂದಾಳು,-ಪರಾಕ್ರಮಿ : ನಡೆಗೋಟೆಕಾಱರು ಕೆಣಕಿದರು ಕಪಿರಾಜಸೈನಿಕವ (ತೊರರಾ. ೬ ೫೩-೨).

[ ನಡೆಗೋಟೆ (<ನಡೆಗೋಂಟೆ) + – ಕಾಱ ]

**ನಡೆಗೋಲು**, ನಡೆಕೋಲು (ನಾ). ನಡೆಯುವಾಗ ಊರಿಕೊಳ್ಳಲು ಹಿಡಿದುಕೊಳ್ಳುವ ಕೋಲು; ಊರುಗೋಲು ; ಬೆತ್ತ : ಆ ವ್ಯಕ್ತಿ ಮಿರುಮಿರನೆ ಮಿಂಚುತ್ತಿದ್ದ ಹಿಡಿಕೆಯನ್ನುಳ್ಳ ನಡೆಗೋಲನ್ನು . . . ನೆಲದ ಮೇಲೂರುತ್ತ ಹಳ್ಳಿಯ ಬೀದಿಯಲ್ಲಿ ನಡೆದು ಬರುತ್ತಿದ್ದನು (ಪುನರು. ೩೭೭); ಕಡೆಗೆ ಬಾದೇ ಬಂದ ಒಬ್ಬ ಮುದುಕ, ನಡೆಗೋಲು ಅವನೆತ್ತರ (ಶಿಲಾಂ. ೮೭-೧೭). ಏ, ನನ್ನ ನಡೆಗೋಲು ಎಲ್ಲಿ ? (ಉದಮ್ಮ. ೫೯). **ನಡೆಕೋಲು :**

ವ್ಯಾಸ್ಫೂರ್ತಿಗೆ ನಡೆಕೋಲಾದನೆ ಮರುಳ್ಗಳ ಹುರುಳೇ ಎಡರಾಳುವನೇ ಏ ಬಿನದಕೆ ನನ್ನೆಡೆಗೈತಂದೆ (ಗಜೇಶ. ೨-೪೭).

[ ನಡೆ$_1$ + ಕೋಲು$_1$ (<ಕೋಲ್$_1$) ]

**ನಡೆಗೋಳ** (ನಾ). (ಆಲಂ) (ಆತ್ಮನಿಗೆ) ನಡೆದಾಡುವ ಬಂಧನ; ದೇಹ : ಕೂಳು ನೀರನ್ನು ಕೊಂಡು ತನುವಿದು ಮೇಲೆಮೇಲುಬ್ಬರಿಸಿ ಬೆಳೆವುದು . . . ಬೀಳುವುದು ಕೊಡದಿರ್ದಡೀ ನಡೆಗೋಳದಲ್ಲಿ ನಾ ಸಿಲುಕಿ ಬಳಲದೇ ಬೇಳಸಗೊಳ್ಳದಿರು (ನಿಭಾಗ. ೯-೦೪-೦೨). [ ನಡೆ$_1$ + ಕೋಳ$_1$ ]

**ನಡೆಗೌಡ** (ನಾ). (?) : ಮುನಿಭದ್ರಗೌಡರ ಮಕ್ಕಳು . . . ರೇಗರೇವಂತ ನಡೆಗೌಡ ಸುರಿತಂಣ ಹಿರಿಯತಮ್ಮಗೌಡರು ಮುಖ್ಯವಾದ ಆತನ ಅನುಜ ಪದ್ಮಯನು (ಎಕ. VII. ಶಿವಮೊ. ೧೦೧-೦೫ ; 950 ?).

[ P ಇದು 'ನಾಡಗೌಡ' ಎಂಬುದರ ಅಪಲಿಖಿತವಿರಬಹುದೆ ? ]

**ನಡೆಚಪ್ಪರ** (ನಾ). ೧. ದಾರಿಯುದ್ದಕ್ಕೂ ಹಾಕಿರುವ ಚಪ್ಪರ : ಅಂಬರ ಸ್ಥಳವಂ ಮುಸುಕಿದಾಡಂಬರದ ನಡೆಚಪ್ಪರಂಗಳು ಬಿಂಬಿಸುವ ಧವಳಾತ ಪತ್ರವು ಚಾಮರಾದಿಗಳು (ಬಸಪು. ೬-೨೨). ೨. ಕೆಲವು ವಿಶೇಷ ಸಂದರ್ಭಗಳಲ್ಲಿ, ಮರ್ಯಾದೆಗಾಗಿ ಜನರು ಹಿಡಿದು ತರುವ ನಾಲ್ಕು ಕೋಲುಗಳುಳ್ಳ ಚಪ್ಪರದಾಕಾರದ ವಿತಾನ; ಸಿಂಧೂಪ : ನೃಪತಿಲಕರ ಪಲವು ಕೂಡೆಯಾಗಸವಂ ಪಂದಲಿಸುತ್ತಂ ಪಡೆತರೆ ನೆನೆವಿಲ್ಲಂ ರಿಪುದುರ್ಗಕೆ ನಡೆಯಿಪ ಗಡಣದ ನಡೆಚಪ್ಪರಮೆನಲೆಸಕಮಡೆದುದಾಗ (ಜಯಿಣಾ. ೮-೨೭); ಪಟ್ಟಾವಳಿಯ ನಡೆಚಪ್ಪರದ . . . ಚಾಮರದ ಘನಸಂಕುಳದಲಪನಿಯುನಂ ಬರವನೆಡಗಲಿಸಿ ನಡೆದುದು ಕೂಡೆ ಯಮುನಾನದಿಗೆ ಜನನಿವಹ (ನಿಭಾಗ. ೧೦-೦೦೦-೧೧); ರಾಜಮರ್ಯಾದೆಗಳಾದ ರಾಜದಂಡ ಛತ್ರಿ ಚಾಮರ . . . ನಡೆಚಪ್ಪರ-ಇತ್ಯಾದಿ ಬಿರುದುಗಳು ಬಂದ ಮೇಲೆ . . . ಅತ್ಯಂತ ಗೌರವದಿಂದ ಕಳೆದುಕೊಂಡು ಬರುತ್ತಾನೆ (ತಂಗಳ. ೬೦). ೩. ಯುದ್ಧಕಾಲದಲ್ಲಿ ಉಪಯೋಗಿಸುತ್ತಿದ್ದ ಒಂದು ಬಗೆಯ ರಕ್ಷಣೆಯ ಸಾಧನ: ದೆಂಕಣಗಳಂ ಮೇಳೈಸಿ ನಡೆಚಪ್ಪರವನ್ನು ನಡೆಯಿಸಿ . . . ದೂಳಿಗೋಂಟೆಯ ಕೊಳ್ಳಬೇಕೆಂಬ ಪಡಿಯಚರ ಕಳಕಲಂ ಕೆರವೊಪ್ಪಿತು (ಸಮ್ಮಳಾ. ೯-೩೦); ನಡೆಚಪ್ಪರದ ಮರ ಬದ್ದರ ದೆಂಕಣೆ ಸುಡುವ ಪೆಟಲು ಕೋಟೆಯನು ಕೆಡಪುವ ಡೆಗ್ಗೆ ಹತ್ತುವ ನಿಚ್ಚಣಿಗೆಗಳಂದೊಡನೈದಿದ ವಸಂಪ್ರಾಪ್ತ (ಕುಧಾಸಾಂ. ೩೭-೬೭). [ ನಡೆ$_1$ + ಚಪ್ಪರ ]

**ನಡೆಜಂತ್ರ** (ನಾ). ಚಲಿಸುವ ಯಂತ್ರ; ನಡೆದಾಡುವ ಯಂತ್ರ : ಅದಿತ್ಯ ವಿರಹದೊಳಮಕ್ಕೋದತವಂ ಪರ್ವುವಂತೆ ಜಗಮಂ ಜೀವಂ ಪೋದೊಡ ಮದಂಗರುಚಿ ಬೇಟಾದುದು ನಡೆಜಂತ್ರವುಲ್ಲೆ ನರರ ಶರೀರಂ (ಶಾಂತಿಪು. ೬-೯೭); ಕುಸುಮಾವಳಿದೇವಿ ಬರುತ್ತುಮಿರ್ದಳಾ ಮನಸಿಜನಾಡಿಪೊಂದು ನಡೆಜಂತ್ರದ ಪುತ್ರಿಕೆಯೆಂಬ ಭಂಗಿಯಿಂ (ಕುಸುಮಾ. ೦೩-೦೨೫).

[ ನಡೆ$_1$ + ಜಂತ್ರ ]

**ನಡೆಜಾಣ** (ನಾ). ನಡವಳಿಕೆಯನ್ನು ಚೆನ್ನಾಗಿ ತಿಳಿದವನು; ರೀತಿನೀತಿಗಳನ್ನು ಬಲ್ಲವನು : ನುಡಿಜಾಣ ನಡೆಜಾಣ ನೆಟಜಾಣ ಕಡುಜಾಣ ಜಗಕೆ ಸುಜಾಣ ಎಡೆಬಿಡದೆನ್ನಂತರಂಗದೊಳಿರು ಜಾಣರೊಡೆಯ ಚಿದಂಬರ ಪುರುಷಾ (ಭರಹ. ೭-೭೬). 'ನುಡಿಜಾಣ' ಪರಾ. [ ನಡೆ$_2$ + ಜಾಣ ]

**ನಡೆಜಾಣ್ಮೆ** (ನಾ). ವ್ಯವಹಾರದಲ್ಲಿ ಜಾಣತನ,–ಬುದ್ಧಿವಂತಿಕೆ : ನುಡಿಜಾಣ್ಮೆ ನಡೆಜಾಣ್ಮೆ ನನಗೂ ದೇವರಿಗೂ ಸಂಗಡದ ಭೂಪರು ಪೇಳಲೆಂದ (ಭರಹ. ೩೯-೦೦೭). 'ನುಡಿಜಾಣ್ಮೆ' ಪರಾ.

[ ನಡೆ$_2$ + ಜಾಣ್ಮೆ ]

**ನಡೆಜೋಡು** (ನಾ). ನಡಿಗೆಗೆ ಹೊಂದಿಕೊಳ್ಳುವ ಜೋಡಿ,–ಜೊತೆ : ಕೂಡೆ ಸಂಜಯನಟಸಿದನು ನಡೆಜೋಡಿನವು [ಪಾಠಾಂ. ಪಯಪಾಡಿನಲಿ] ವಾನೂರು ಕುದುರೆಯ ಕೂಡಿ ಕೌರವನೃಪನ ಕಾಣದೆ ಕಳವ ಚೌಕದಲಿ (ಕುಮಾವ್ಯಾಗ. ೨-೩). [ ನಡೆ$_2$ + ಜೋಡು ]

**ನಡೆಡೆಂಕಣಿ** (ನಾ). ಕೋಟೆಯ ಬುರುಜಿನ ಮೇಲೆ ಚಲಿಸುವಂತೆ ಏರ್ಪಡಿಸಿರುವ ಒಂದು ಬಗೆಯ ಆಯುಧ ; ಚಲಿಸುವ ಡೆಂಕಣಿ : ನಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ತೋಟಿದೆಡೆಗೆ ಸಿಡಿವ ಡೆಂಕಣಿ ರಾಯಡೆಂಕಣಿಗಳ ಸಾಲು ಬಿಡದೊಪ್ಪಿದವು ದುರ್ಗದೊಳು (ಕುಧಾಸಾಂ. ೫೩-೩೯). 'ಡೆಂಕಣಿ' ಪರಾ. [ ನಡೆ$_1$ + ಡೆಂಕಣಿ ]

**ನಡೆತ** (ನಾ). ನಡೆಯುವಿಕೆ ; ನಡಗೆ. [ ನಡೆ$_1$ +-ತ$_2$ ]

**ನಡೆತರ್**, ನಡೆತರು (ಕ್ರಿ). ಬರು ; ಆಗಮಿಸು : ಕಯ್ಯಿಕ್ಕು ಕಾದಲ್ ನಡೆತರ್ಪಾವೇಗದೊಳ್ ಮುಮ್ಮಟಿಸಿದ ಪಲವುಂ ರಾಜಚಿಹ್ನಂಗಳಂ ಬೆಳ್ಗೊಡೆಗಳ್ ತಳ್ಪೊಯ್ಯುದ್ದೇಂ ಕಣ್ಗೊಳಿಸಿದುದೊ ಚಳಚ್ಚಂದ್ರ ಕಚ್ಛತ್ರಪಿಂಡಂ (ಪಂಪಭಾ. ೦೩-೩೪); ಚೆಲ್ವನಾಳ್ದು ಮೆಲ್ಲನೆ ನಡೆತರ್ಪ ನೀಲಮಣಿ ಪುತ್ರಿಕೆಯಂದದಿನಾದವೊಪ್ಪಿದಳ್ (ಕಾದಂಪೂ. ೩೦); ಸಾಯಂಕಾಲ ಶೃಂಗಾರಸಮಯಮೆಂದು ಮಧುರಾಪುರಾಧೀಶ್ವರನಲ್ಲಿಗೆ ಪೋಪ ಬಗೆಯಿಂ ಕುಬ್ಜೆಯೆಂಬ ಸ್ವೈರಂಧ್ರಿ ನಡೆತರೆ (ಜಗವಿ. ೬-೧೪೭); ಉರವಣಿಸಿ ನಡೆತರುತ್ತುಂ ಗಿರಿಶಿಖರಮನೇಱಲಾಱದೆರಡುಂ ದೆಸೆಯೊಳ್ ಬರಲನುವಂ ಕಂಡು ದಿವಾಕರನಂದಿ ದಕ್ಷಿಣೋತ್ತರಾಯಣನಾದಂ (ಗಿರಿಕ. ೧-೫೩); ಕಡುಸೊರ್ಕಿಂದಲರಂಬುನಾನೆಯೆನಿಪೀ ತೆಂಗಾಳಿ ತನ್ನಿಚ್ಛೆಯಿಂ ನಡೆತಂದಪ್ಪುದು ಬೇಗದಿಂ ಬಿರಯಿ ನೀಂ ಪೋ ಪೋಗು (ಕಬ್ಬಿಕಾ. ೫೫). **ನಡೆತರು** : ಕಪ್ಪಡಿಯ ಸಂಗಮಮಂ ಪೊಕ್ಕು ಕೇರಿ ಕೇರಿಯೊಳು ನಡೆತಪ್ಪಾಗಳು ಶಂಕರಾಲಯಮಂ ಭೋಂಕನೆ ಕಂಡು (ಬಸರ. ೨-೫೦); ಆ ಸಮಯದಲ್ಲಿ ರಾಯವೇದವ್ಯಾಸಮುನಿ ನಡೆತಂದು ಗತಪರಿತೋಷನನು ಸಂತೈಸಿ ಕರಸಿದನಂದು ಸಂಜಯನ (ಕುವ್ಯಾಭೀ. ೧-೫೫); ತೆಗೆದ ತೊಟಿ ಕಾಲುವೆಗಳುದ್ಯಾನಗಳ ಕಳವೆ ದ್ರಾಕ್ಷೆ ಧವಳೇಕ್ಷುಗಳ ವನವೀಧಿಗಳನೀಕ್ಷಿಸುತರಸ ನಡೆತಂದ [ಪಾಠಾಂ. ನೈತಂದ] (ತೊರರಾ. ೧-೬-೧೧); ಸತಿಯರ ಗಡಣದಲಿ ನಡೆತಂದಳಿಂದುಮುಖಿ (ನಳಚ. ೩-೫೫); ಪರಿಪರಿ ಪಾತ್ರವೆಂಗಳು ಸಿಂಗರಿಸಿಯೆ ಹರುಷದೊಳಗೆ ನಡೆತಂದು (ಕಂಸವಿ. ೭-೦೦೭).

[ ನಡೆ$_1$ + ತರ್ ]

**ನಡೆತರು** 'ನಡೆತರ್' ನೋ.

**ನಡೆತೋರಣ** 'ನಡೆದೋರಣ' ನೋ.

**ನಡೆದಾಣ** (ನಾ). ನಡೆದಾಡುವ ಸ್ಥಳ ; ಓಡಾಡುವ ಜಾಗ ; ದಾರಿ : ಪೊಂಬೆಟ್ಟುಂ ಪೊಂಬಸಿರಂಗಿಂಬುವಸದಿಯುಮಾಲಪ್ಪೊಡೆಯಂಗೆ ನಡೆದಾಣಮುಂ . . . ಬೋಟಿಯರ್ಗೆ ಮೇಳದೆಡೆಯುಮೆನಿಸಿ ಕಣ್ಗೊಳಿಕುಂ (ರಾಮಾಶ್ವ. ೭-೫). [ ನಡೆ$_1$ + ತಾಣ ]

**ನಡೆದಾರಿ** (ನಾ). ನಡೆದಾಡುವ ದಾರಿ ; ಓಡಾಡುವ ಮಾರ್ಗ : ಆಚೀಚೆ ಹುಡುಕುತ್ತ ಜಾನೂ ಅಮ್ಮನ ಕೋಣೆಯ ಪಾರ್ಶ್ವಭಾಗದ ಇಕ್ಕಟ್ಟಾದೊಂದು ನಡೆದಾರಿಯನ್ನು ಸೇರಿದನು (ಕಾಬಯ್ಯೂ. ೨೫); ತೋಟಗಳು ಸಾಮಾನ್ಯವಾಗಿ ಚೌಕ ಇಲ್ಲ, ನಿಡುಚೌಕ ಇದ್ದು . . . ಒಳಗೆ ತಿರುಗಾಡಲು ನಡೆದಾರಿಗಳು ಇದ್ದವು (ಇಸ್ಲಾಂಸಂ. ೦೪೯). [ ನಡೆ$_1$ + ದಾರಿ ]

**ನಡೆದುಳಿ** (ಕ್ರಿ). ದಾರಿಯನ್ನು ತುಳಿ; ದಾರಿ ಸವೆಸು : ಅಡಿಯ ನೆಲದೊಳ್ ಬಿಸಿಲ್ ಕಡೆಸಾಲ ಬರೆಯುತಿರೆ ನಡೆದುಳಿದು ನೆಲ್ಲೂರ ಮನೆಗೆ ನಡೆತಂದಂ (ಕಾಲೂರ. ೦೦೨-೩೫೦). [ ನಡೆ$_2$ + ತುಳಿ$_1$ ( < ತುಟಿ$_1$ ) ]

**ನಡೆದೇಗುಲ** (ನಾ). ಚಲಿಸುವ ದೇವಸ್ಥಾನ ; (ಒಂದೆಡೆ ಸ್ಥಿರವಾಗಿರದೆ) ಉತ್ಸವದಲ್ಲಿ ಎಳೆಯುವ ದೇವರ ವಿಗ್ರಹವಿರುವ ಮಂಟಪ, ತೇರು,–ರಥ : ಪಲರಂ ರಕ್ಷಿಸಿ ಮತ್ತಂ ಪಲವಂ ನಡೆದೇಗುಲಂಗಳಂ ಮಾಡಿಸಿದಂ ನೆಲನೆಲ್ಲಮಱಿಯ ಚಟ್ಟಂ ನೆಲೆದೇಗುಲಮುಮನಿದೊಂದನೊಲ್ದೆತ್ತಿಸಿದಂ (ಎಕ. V, ಬೇಲೂರು. ೦೯೩-೯೪ ; 1160). [ ನಡೆ$_1$ + ದೇಗುಲ ]

**ನಡೆದೋರಣ,** ನಡೆತೋರಣ (ನಾ). ಎರಡು ಕಡೆ ಹಿಡಿದಿರುವ ಕೋಲುಗಳ ತುದಿಗಳಿಗೆ ಕಟ್ಟಿ, ಉತ್ಸವಾದಿಗಳ ಮುಂದೆ ಹಿಡಿದುಕೊಂಡು ಹೋಗುವ ತೋರಣ; ಚಲಿಸುವ ತೋರಣ; ಮಕರ ತೋರಣ: ಸಿರಿವೆತ್ತ ಕನಕದಂಡದ ಚಾಮರ ಸೀಗುರಿ ನಡೆದೋರಣನಿಚಯ ಪರುಠವಿಸಿರ್ದ ನಾನಾವಿಧ ಟೆಕ್ಕೆಯ ತರಳತು ನಭವನಳ್ಳಿಲ್ದುದು (ಮೋಹತ. ೧೫-೩೧). **ನಡೆತೋರಣ:** ನುಡಿವ ನಾನಾವಾದ್ಯಘೋಷಣೆ ಕಲಶ ಕನ್ನಡಿಯ ಪೆಣ್ಗಳ ರಾಗರಚನೆ ಇಡಿಕಿಲ್ದುದು ಸೆಟ್ಟಿಸಮಯರುಗಳ ಕೆಯ್ಯ ಗುಡಿ ನಡೆತೋರಣನಿಚಯ (ಮೋಹತ. ೪೦-೩೪); ರಾಜವೀಥಿಯೊಳ್ತಿದ ಪತಾಕೆಗಳ ಸೂಸುವ ಸೀಗುರಿಗಳ ಬೀಸುವ ಚಾಮರಂಗಳ ಸೊಗಯಿಪ ಧವಳ ಪತ್ರಂಗಳ ನವರತ್ನದ-ನಡೆತೋರಣಂಗಳ . . . ಸಿರಿ ಕಂಗೊಳಿಸೆ (ವೃಷವಿ. ೫-೪೪೭). [ ನಡೆ$_1$ + ತೋರಣ ]

**ನಡೆನಿಟಿಗೆ** (ನಾ). ಓಡಾಟದ ರೀತಿ,-ಸೊಗಸು; ನಡಗೆಯ ಸೊಬಗು: ನೆರವನೆಯಂ ಪೋಪ ಬರ್ಪ ಜವ್ವನಿಗರ ನಡೆನಿಟಿಗೆಯಿನಿಡಿಕಿಲ್ದ ಪಂತಿಯಿಂ (ರಾಮಾಶ್ವ. ೨೩-೭). [ ನಡೆ$_2$ + ನಿಟಿಗೆ ]

**ನಡೆಪಾಡಿಸು** (ಕ್ರಿ). ನಡೆದಾಡಿಸು; ನಡೆಯುವಂತೆ ಮಾಡು; ಚಲಿಸುವಂತೆ ಮಾಡು; ಓಡಾಡಿಸು: ಹಂಸಾವಳಿಯಂ ನಡೆಪಾಡಿಸು ಕೋಕಿಳ ನಾದಮನಾಲಿಸುಸಿರದಿರ್ಪರೆ ಮದನಾ (ಗಿರಿಕ. ೮-೭೦); ವಾರುವಮಂ ನಡೆಪಾಡಿಸಲ್ಕೆ ನೋಡುವ ಮಟಿಗಳ್ಗೆ ಪಾಲನೆಟಿವುಜ್ಜುಗವಂ ತಳೆದಿರ್ಪ ನಾವಗಂ (ನಳಚಂ. ೭೪೯). [ ನಡೆಪಾಡು ( <ನಡಪಾಡು) + - ಇಸು$_3$ ]

**ನಡೆಪಾಡು** 'ನಡಪಾಡು' ನೋ.

**ನಡೆಪು$_1$** 'ನಡಪು$_1$' ನೋ.

**ನಡೆಪು$_2$** 'ನಡಪು$_2$' ನೋ.

**ನಡೆಬಾವಿ,** ನಡಬಾವಿ, ನಡಭಾವಿ, ನಡೆಭಾವಿ (ನಾ). ಇಳಿದು ನೀರು ತುಂಬಿಕೊಳ್ಳುವಂತೆ ಸೋಪಾನಗಳಿರುವ ಬಾವಿ,-ಮೆಟ್ಟಿಲುಗಳುಳ್ಳ ಬಾವಿ,- ಕೊಳ: ಪೊಸದುರ್ಗವಂ ಪಾಟಿಸಿ ಪಿರಿಯ ನಡೆ [ಪಾಠಾಂ. ಡ] ಬಾವಿಗಳನಗುಳಿಸಿದನದಟಿಳೆಗೆ (ಬಸಪು. ೦೫-೧೦). **ನಡಬಾವಿ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ನಡಭಾವಿ:** ಅಮೃತರಸ ಪರಿಪೂರ್ಣವಾದಮೃತಸಂಜೀವಿನಿ ಎಂಬ ಹೆಸರುಳ್ಳ ಒಂದು ನಡಭಾವಿಯು ಉಂಟಾಗಬೇಕೆಂದು ದೇವರನ್ನು ಬೇಡಿ (ಶೃವಾಶ. ೩೪). **ನಡೆಭಾವಿ:** ನೂರು ಸೇದೋ ಭಾವಿ ಕಟ್ಟಿಸುವುದಕ್ಕಿಂತಲೂ ಒಂದು ನಡೆಭಾವಿ ಕಟ್ಟಿಸುವುದುತ್ತಮ (ಶೃವಾಶ. ೧೭೦).

[ ನಡೆ$_1$+ ಬಾವಿ. / ತಮಿ. ನಟ್ಟೆವಾವಿ, ನಟ್ಟೆಪಾವಿ, ನಟಪಾವಿ; ತೆಲು. ನಡಬಾವಿ ]

**ನಡೆಬೆಡಗು** (ನಾ). ನಡಗೆಯ ಸೊಗಸು,-ಒಯ್ಯಾರ: ನಡೆಬೆಡಗೋ ನಿಲುಬಗೆಯೋ ನಗುಮೊಗವೋ ತಹ ಸೊಗವೋ ಕನಸಿಗು ಇಂಥವ ಸುಳಿವೊಲ್ಲ (ಗೋಕುನಿ. ೦೩-೧೧). [ ನಡೆ$_2$ + ಬೆಡಗು ( <ಬೆಡಂಗು ) ]

**ನಡೆಭಾವಿ** 'ನಡೆಬಾವಿ' ನೋ.

**ನಡೆಮಂದಸ** (ನಾ). ಚಲಿಸುವ ಪೆಟ್ಟಿಗೆ: ರಿಪುವೆಚ್ಚಱಿದಿಟ್ಟ ಕೈದುವೆನ್ನುದರದೊಳೆಯ್ದೆ ತಳ್ತಿಡಿದಿರಲ್ ಯಮರಾಜನ ಶಸ್ತ್ರಕೋಟಿ ಕೀವಿದ ನಡೆಮಂದಸಂಬಿನೆಗಮಿರ್ಪೆನದೆಂದೊ ಮಹಾಜಿರಂಗದೊಳ್ (ಜಗವಿ. ೦೭-೮೭). [ ನಡೆ$_1$ + ಮಂದಸ ]

**ನಡೆಮಡಿ,** ನಡೆಮುಡಿ (ನಾ). ದೇವರ ಕಾರ್ಯ ಮುಂತಾದ ಶುಭ ಸಂದರ್ಭದಲ್ಲಿ ಉತ್ಸವಗಳು ನಡೆಯುವಾಗ ಉತ್ಸವದ ದಾರಿಯಲ್ಲಿ ಗೌರವಾರ್ಥವಾಗಿ ಹಾಸುವ ಮಡಿಯಾದ ವಸ್ತ್ರ,-ಬಟ್ಟೆ; ಹಡದಿ: ದೇವಾಂಗವಸೌಕ್ತಿಕದ ಸೆಱಗಿನ ಸೆರೆಯಂ ನಡೆಮಡಿಯ ಹಾಸಿ . . . ಧೂಪಾರತಿ ಘಂಟೆ ಸಹವಾಗಿ ಪ್ರಭುದೇವರ ಕರೆಯ ಬಹ ಸಂಭ್ರಮದಿಂದಿರುತ್ತಿರಲು (ಶೂನ್ಯಸಂ. ೯೯-೨೨); ನಡೆಮಡಿ ಗಂಧದಕ್ಷತೆ ಫಲಾವಳಿ ಪೂವಿನ ಮಾಲೆ ಮುತ್ತು ಕನ್ನಡಿ ಕಳಸಂ . . . ಚಾಮರಮೆಂಬಿವೊಪ್ಪಮಂ ಕುಡೆ ಜಿನದತ್ತೆಯೇಂ ನಡೆದಳೋ (ಅರ್ಥನೇ. ೧-೮೪); ಆ ನಗೆಗಣ್ಗಳ ಕಡೆಯ ಬೆಳಂತಿಗೆವೆಳಗು ಹರಿದು ಮುಂಗುಡಿಯೊಳ್ ಪಸರಿಸಲೆಸೆದುದು ನಡೆಮಡಿಯಂ ಪಾಸಿದ ತೆಱದಿ (ಜಯುಕಾ. ೫-೩೬); ಕಟ್ಟಿದ ಗುಡಿ ತೋರಣ ನಡೆಮಡಿ ಮೇಲ್ಕಟ್ಟು ಮೌಕ್ತಿಕರಂಗವಲ್ಲಿಯಿಂ ಅಲಂಕೃತವಾದ ನಿಜಾಲಯದೊಳು . . . ಕುಳ್ಳಿರಿಸಿ (ಶಾಂತೀಶ. ೯-೨೨); ನಡೆಮಡಿಗಳ ಪಾಸುತ್ತುಂ ಸಡಗರದಿಂ ಶೋಭನಂಗಳಂ ಪಾಡುತ್ತುಂ ಮುಡದಿಯರಿದಿರ್ಗೊಂಡರಲ್ಲಿ ವಿಶ್ವೇಶ್ವರನಂ (ವೀರವಿ ೯-೭೫); ನಡೆಮಡಿ ನಾಲ್ಕೆಂಟುಮಾರ್ಯೆದಲಲ್ಲಲ್ಲಿಗೊಡನೆತ್ತುವಾರತಿ ಸೇಸೆ ಇಡುವ ನಿವಾಳಿ ಢಾಳಿಸುವ ಚಾಮರಗಳಿಂದಡಿಯಿಡಿಸಿದರು ಯೋಗಿಗಳ (ಭರತ. ೩-೪೦); ಸುರರಂ ಸಮಂತು ಪೊರೆದ ಭವಂಗೀಧರೆ ಪಾಸಿದ ನಡೆಮಡಿಯೆನೆ ಕರಮೆಸೆದುದು ವಿಮಳಗುಣದಿನಾ ನದಿ ಪದಪಿಂ (ಧ್ರುಚರಿ. ೨-೫); ಹರಿಹರದೇವರು ನಡೆದು ಬರುವ ಹಾದಿಯುದ್ದಕ್ಕೂ ನಡೆಮಡಿಯನ್ನು ಹಾಸಿ ಹೂವುಗಳನ್ನು ಚೆಲ್ಲುತ್ತಿರುವರು (ತುಂಗಭ. ೭೦). **ನಡೆಮುಡಿ:** ಬಿಳಿಯ ಚತ್ರಿ ನಡೆಮುಡಿ ಕಲಶ ಕನ್ನಡಿಗಳು ಇಲ್ಲದ ಮೆರವಣಿಗೆಯೇ ಇಲ್ಲ (ಚದೇವ. ೦೯೩); ಯಾವ ಮೋತೀಬಾಯಿಗಾಗಿ ರಾಜನು ಕೆಡೆಮುಡಿಯನ್ನು ಹಾಸುತ್ತಿದ್ದನೋ ಅವಳು ಪಾಪ, ಬೀದಿ ಬೀದಿ ಅಲೆಯುತ್ತಿದ್ದಾಳೆ (ಘೂರಾಚ. ೦೦೫); ಊರಿನ ಅಗಸ "ನಡೆಮುಡಿ" ಹಾಸಿಕೊಂಡು (ದಾರಿಯುದ್ದಕ್ಕೂ ಬಟ್ಟೆ ಹಾಸಿಕೊಂಡು) ಅವರನ್ನು ನಡೆಸಿಕೊಂಡು ಬರುತ್ತಾನೆ (ಸರ್ವಜ್ಞಮ. ೧೯೨). [ ನಡೆ$_1$ + ಮಡಿ$_5$ ]

**ನಡೆಮಾಡ** (ನಾ). ಚಲಿಸುವಂತೆ ರಚಿಸಿರುವ ಒಂದು ಬಗೆಯ ಮನೆ; ವಿಮಾನ; ವ್ಯೋಮಯಾನ: "ನಡೆಮಾಡವೆಂದುಂ ವಿಮಾನಂ" (ಕಕಶಾ. ೨೮-೫೭೫); ನಡೆಮಾಡ [ಪಾಠಾಂ. ಡು] ಪಾಱಿನೆ ವ್ಯೋಮಯಾನನಾಮಂ (ಶಬ್ದಮಂ. ೧೧); "ನಡೆಮಾಡಮನೆ ಸುರವಿಮಾನಂ" (ಕಶರ. ೫೨); ಗಜೇಂದ್ರಂ ತುರಂಗಂ ನಡೆಮಾಡಂ ದಣ್ಣನಾಥೋತ್ಸವಪದವಿ ಮಹಾತೂರ್ಯಮೆಂಬಿಂತಿವಂತುಂ ಪಡೆದಂ ಚೆಲ್ವಿಂದೆ ವೀಸೋತ್ತರವಿದಿತಧರಾದೇವನಿಪ್ಪಪ್ರಭಾವಂ (ಎಇ. XIII, ೩೩೦-೦೩; ೧೨೪೨); ಅವಱ ಮುಂದೆ ಸಾಹಣೌಘದೊಳಗಿರಿಸುವ ಪಂಚಕಲ್ಯಾಣದ ಸೂಚೀಯಾನೆಗಳ್ಗೆಂದು ನಿಱಿಸಿದ ನಡೆಮಾಡಸಾಲೆಗಳಿಂದು (ಶಾಂತಿಪು. ೦೦-೦೪೭೭); ನಡೆಮಾಡಂ ನಡೆಗೊಪ್ಪುವಶ್ವತತಿ ಚೆಂಬೊನ್ನಂದಣಂ ವಾಜಿ ಪರ್ವಿಡಿ ಪೇರಾನೆ ಸುಖಾಸನಂ ತುಱುಗೆ ಬಂದರ್ಗಾಯಕರ್ವಾದಕರ್ (ಮಲ್ಲಿಪು. ೫-೭೭); ತನತು ವಿಚಿತ್ರ ಮಪ್ಪ ನಡೆಮಾಡದ ಗಾಡಿಯ ಸದ್ವಿಮಾನಮಂ ತನತು ಸುರರಮ್ಯಹರ್ಮ್ಯದ ವಿಳಾಸದ ರುಂದ್ರಫಣೀಂದ್ರಗೇಹಮಂ . . . ಇಂತು ಕನಸು ಪದಿನಾಱುಮನಂಬುಜವದನೆ ಕಂಡಳ್ (ಪುಷ್ಪಪು. ೯-೧೧೧); ನಡೆಮಾಡದೊಳಗಿರ್ದ ರಾತ್ರಿಂಚರರ್ನೋಡಿ ಮಿಡಿದು ತಂತಮ್ಮ ಬಿಲ್ಗಳನ್ನೆದೆ ಗರ್ಜಿಸುತೆ (ಶೀಪರಾ. ೧೪-೩೪); ಪಡೆವಳರೆಲ್ಲರ್ . . . ನಡೆಮಾಡಮನಡರ್ದು ಹಯಮನುಯ್ವ ಮಾರ್ಬಿಗನಂ ತಱುಬಿ ಅಱವಡೆಯಂ ಬಱಿಕೆಯ್ವ ಪವಣರಾಯನ ಕಟ್ಟಾಣತಿಯಂ ಪಾಱುತಿರ್ಪುದು (ರಾಮಾಶ್ವ. ೧೧೧-೦೭); ಆಕಾಶದೊಳಗಿಂದ ಅಥವಾ ಹವೆಯೊಳಗಿಂದ ಹೋಗುವ ವಾಹನಕ್ಕೆ ವಿಮಾನ ಅಥವಾ ನಡೆಮಾಡಂದೆನ್ನುತ್ತಾರೆ (ಮುಂಬಯಿ. ೫-೯೨). [ ನಡೆ$_1$ + ಮಾಡ$_2$ ]

**ನಡೆಮುಡಿ** 'ನಡೆಮಡಿ' ನೋ.

**ನಡೆಯಡಿ** (ನಾ). ನಡೆಯುವ ಕಾಲು; ಚಲಿಸುವ ಪಾದ: ಕಂದರ್ಪನಂಗನೆಯು . ಪ್ರಳಾಪಿಸುತ ನಡೆಯಡಿಗಳಿಂದ ಬರವರಲ್ (ನಪಮೋ. ೭-೫). [ ನಡೆ$_1$ + ಅಡಿ$_1$ ]

**ನಡೆಯಿಸು,** ನಡಯಿಸು, ನಡಸು$_1$, ನಡಿಸು$_1$, ನಡೆಸು, (ಕ್ರಿ). ೧. ನಡೆಯುವಂತೆ ಮಾಡು; ಚಲಿಸುವಂತೆ ಮಾಡು: ಜಯದ್ರಥನಂ

ಕೋಡಗಗಟ್ಟುಗಟ್ಟಿ ಬೆನ್ನಂ ಬಿಲ್ಲ ಕೊಪ್ಪಿನೊಳಿಱಿದು ನಡೆಯೆಂದು ನಡೆಯಿಸಿ (ಪಂಪಭಾ. ೭-೩೧ ವ) ; ಮ್ಲೇಚ್ಛಖಂಡಮಂ ಬಾಯ್ಕೋಳಿಸಿ ಚಕ್ರಪೂಜೆಗೆಯ್ದು ಕಟಕಮಂ ನಡೆಯಿಸಿ (ಚಾವುಂಪು. ೧೧) ; ನಡೆನಡೆಯೆಂದು ನಡೆಯಿಸಿದರ್, ಕೊಯ್ ಕೊಯ್ ಎಂದು ಕೊಯಿಸಿದರ್ (ಭಾಷಾಭೂ. ೩೦೭ ಉದಾ) ; ಪುರವರದ ನಡುಕೇರಿಯೊಳೆಲ್ಲರು ನೋಡುವಂದದಿ ನಡೆಯಿಸಿದನು ಮಂತ್ರಿಯವರ (ಕುರಾಸಾಂ. ೩೭-೬೩). ೨. ಮುಂದುವರಿಸು ; ಮುಂದೆ ಸಾಗಿಸು ; ಸಾಗಿಸಿಕೊಂಡು ಹೋಗು : ನೆಗೞ್ದೀ ಕ್ರಿಯಾವಿಶೇಷಂಗಳನಿಲ್ಲೀದಿತ್ತೆಡೆಯುಡುಗದೆ ನಡೆಯಿಸುವುದು (ಆದಿಪು. ೦೫-೦೬ವ); ಇದನ್ ತಪ್ಪದೆ ನಡೆಯಿಸಿದಾತಮ್ ಸಾಸಿರವ್ ಕವಿಲೆಯ ಕೋಡುಮ್ . . . ಸಹಶ್ರ(ಸ್ರ)ಭೋಜನವಮ್ ಕೂಡಿದ ಫಲವ್ ಅಕ್ಕುಂ (ಇಅ. XII, ೩೫೭-೧೭ ; 951) ; ಇದಂ ಕಯ್ಕೊಂಡ್ಡು ನಡೆಯಿಸಿದಾತಂಗೆ ಅನಂತ ಪುಣ್ಯ (ಎಕ. IV, ನಾಗಮಂ. ೫೦-೩೪ ; 972) ; ಇನ್ನೀ ಧರ್ಮ್ಮಮಂ ಕಾದು ನಡೆಯಿಸಿದಂಗೆ ವಾರಣಾಸಿ ಕುರುಕ್ಷೇತ್ರ ಪ್ರಯಾಗೆಯರ್ಘ್ಯತೀರ್ತ್ಥಗಂಗೆ ಗಂಗಾಸಾಗರದೊಳ್ ಸಾಸಿರ ಕವಿಲೆಯಂ . . . ಕೊಟ್ಟ ಫಲವಕ್ಕು (ಸೌಇಇ. XI-1, ೪೭-೧೯ ; 994). ೩. ಹೋಗುವಂತೆ ಮಾಡು; ಕಳಿಸು: ಅಡಿದಳಿರ್ಗೆ ಧರಾವಲಯಂ ಕಡುವೆಟ್ಟಿತ್ತಾಗೆ ನಡೆಯಲಿಱಿಯದೆ ಮನುಜರ್ ಸೆಡೆಯೆ ಹಯಾದಿಗಳಿಂದಂ ನಡೆಯಿಸಿದು ಕಲಿಸಿ ವಾಹನಾರೋಹಣಮಂ (ಪಂಚಾಮೂ. ೧-೭೬). ೪. (ರಥ ಮೊದಲಾದುವನ್ನು) ಚೋದಿಸು ; ಹೊಡೆ : ದೇವಕೀನಂದನಂ ಸ್ಯಂದನಮಂ ಕಿಱಿದು ನಡೆಯಿಸೆ (ಜಗವಿ. ೪-೮೦ವ). ೫. ಆಚರಿಸು ; ನಿರ್ವಹಿಸು ; ಜರುಗಿಸು ; ಮಾಡು : ಆವರಿಬ್ಬರೂ ನಡೆಯಿಸಿದ ಜೀವನದ ಅದ್ಭುತರಸಾಯನದ ಪ್ರಯೋಜನವು ಕನ್ನಡನಾಡಿಗೆ ಇನ್ನೂ ಆಗಬೇಕಾಗಿದೆ (ನನಲ್ಲ. ೬ ಕವಿಪರಿಚಯ). ೬. ಈಡೇರಿಸು ; ನೆರವೇರಿಸು ; ಪಾಲಿಸು: ಚಕ್ರವರ್ತಿಯೇ ತಮ್ಮ ಅಪ್ಪಣೆಯನ್ನು ನಡೆಯಿಸಿರುವೆನು (ಪಂತಸ. ೫೭) ; ದಂದುಗದ ಬಿಡುಗಡೆಗೆ ಮನೆಯೊಡವೆಗಳ ತೆತ್ತು ಪೊಂದಿದೊಸಗೆಯ ನಡೆಯಿಪುದು ಕೊರಗನೆಣಿಕೆ (ಕಾಲೂರ. ೦೬೯-೩೭೭). ೭. ಪಾಲನೆ ಮಾಡು ; ರಕ್ಷಿಸು ; ಕಾಪಾಡು : ಎಮ್ಮ ಕಾರಣದಿನಿತ್ತಣ ಪಂಬಲನೀಕೆ ಮಾಡದಂತೆನ್ನಡೆಯಿಪ್ಪುದೊಂದೆ ತೆಱನಪ್ಪುದಿದಂ ಸೆಱಗೊಡ್ಡಿ ಬೇಡಿದಂ (ಚಂದ್ರಪು. ೬-೯೬). ೮. (ಆಸಕ್ತಿ ಮುಂತಾದುವನ್ನು) ಉಂಟುಮಾಡು ; ಒದಗಿಸು ; ದೊರಕುವಂತೆ ಮಾಡು : ಕುಡಿದೊಡೆ ಸೊರ್ಕಿಸದವು ನಾಣ್ಗೆಡಿಸದವು ಮನಕ್ಕಲಂಪನೀವುವು ರತಮಂ ನಡೆಯಿಪುವೆನಿಸುವ ಮಧುಗಳನೆಡೆಯುಡುಗದೆ ಕುಡುಗುಮುಚಿತಮದ್ಯಾಂಗ ಕುಜಂ (ಆದಿಪು. ೫-೩೨) : ಪ್ರಸಾದಪರಿಮಳಮಂ ಘ್ರಾಣಕ್ಕೆ ನಡೆಯಿಸುವ ಸಂಪಗೆಯ ಮುಗುಳ ನಾವೆಯಂತೊಪ್ಪುವ ನಾಸಿಕದ . . ರೂಪುಸೌಂದರ್ಯದಿಂ (ಬಸರ. ೨-೨೬). ನಡಯಿಸು : ೧. ಮುಂದಕೆ ನಡಯಿಸಿ ಪುಲಿಮೊಗವಿಕ್ಕುವ ಬಂದರ ಕೂಡೆ ದೂರದೊಳು ನಿಂದಿಱಿದಾಡುವ ಬಲು ಭದ್ರವೆಸಗುವರಿಂದ ಕಣ್ಗೆಸೆದುದಾ ದುರ್ಗ (ಕುರಾಸಾಂ. ೩೭-೬೩). ೨. ಧರ್ಮ್ಮಂಗಳಂ ನಮಸ್ಕಂ ನಡಯಿಸಿ ಬೞಿಯವೊನ್ದು ವರ್ಷಂ ರಾಜ್ಯಮಂ ಪತ್ತುವಿಟ್ಟು (ಎಕ. II, ೩೯-೧೦೯ ; 974). ೯. ವ್ಯವಹರಿಸುವಂತೆ ಮಾಡು ; ವರ್ತಿಸುವಂತೆ ಮಾಡು. ೧, ೯ : ದೇವನಂ ತನಗೆ ಕುಂಟಣಿ ಮಾಡಿ ನಡಯಿಸುವ ತೆಱನೀ ತೆಱನೆಂಬುದಂ ತೋಱುವಂತೆ ಮೆಲ್ಲಮೆಲ್ಲನೆ ದಟ್ಟಡಿಯಿಡುತ್ತುಂ (ನಂಬಿರ. ೨-೭). ನಡಸು$_1$ : ೧. ಭೈತ್ರವುನೇಱಿಸಿ ನಡಸೆ ಕೆಲವು ದಿನಕ್ಕೆ ತಿಳಕದ್ವೀಪಮನೆಯ್ದಿ (ಪುಣ್ಯಾಸ್ರ. ೮-೮ವ) ; ಹಿಡಿವ ಬಿಡುವೊಬ್ಬುಳಿಗೆ ತಹ ಬಲನೆಡಕೆ ಹಾಯ್ಕುವ ಸುತ್ತಲೊತ್ತುವ ತಡೆವ ನಡಸುವ ಸೆಳೆವ ತಿರುಹವ ಹದಿರ ಜೋಕೆಯಲಿ ಗಡಣಿಸಿದನು (ಕುವ್ಯಾದ್ರೋ. ೩-೧೧); ಮೊಗಕೆ ಮುತ್ತುಗದೆಲೆಯ ಮುಱಿವಿಡಿದಗಲಿದುಮ್ಮಹದಿಂದ ಜನಕನ ಮಗಳ ನಡಸುತ ತಂದರೊಂದು ಮಹಾಸರೋವರಕೆ (ತೊರರಾ. ೨-೪-೧೯) ; ಕರುಣಾಳು, ಬಾ, ಬೆಳಕೆ, ಮುಸುಕಿದೀ ಮಬ್ಬಿನಲಿ, ಕೈಹಿಡಿದು ನಡಸೆನ್ನನು (ಇಂಗೀತ. ೯೭-೨). ೨. ಧರ್ಮ್ಮವ ಱಿವವರೆಲ್ಲರು ಪೊಡೆಯರಾಗಿ ಪರಿರಕ್ಷೆಗೆಯ್ದು ಸ್ವಧರ್ಮ್ಮದಿವರ್ ನಡಸುವುದು (ಇಅ. XVIII, ೩೯-೨೬ ; 999) ; ಇದವರ್ ನಡಸಿದರ್ಗ್ಗೆ ಅನನ್ತಪುಣ್ಯ[೦] (ಇಅ. XII, ೨೨೫-೦೭ ; ಸು.12ನೆಯ ಶತ) ; ಆಚಂದ್ರಾರ್ಕ್ಕರ್ ನಿತ್ಯಪಡಿ ೩ ಯಮಾನ ಹಲ ನಡಸುವುದು (ಎಕ. II, ೨೪೪-೨೨ ; ಸು.1274) ; ಶಿವಾರ್ಪಿತವಾಗಿ ನಡಸುವ ಅಗ್ರಹಾರದ ಧರ್ಮಕೆ ಉತ್ತಾರವ ಮಾಡಿಸಿಕೊಟ್ಟ ಕಾಶೀನಾಥಪುರದ ಗ್ರಾಮಕ್ಕೆ ಶಿಲಾಸ್ಥಾಪಿತ ಮಾಡಿಸಿ ಅದೆ (ಎಕ. VII, ಶಿವಮೊ. ೦೮-೦೦ ; 1714). ೩. ಸಂಪದಾದಿಗಳು ಭರಿತವಾಗಿಹವಾ ಮುನಿಪನಿಹ ಧರಣಿಯಲಿ ನೀನಾ ಮುನೀಂದ್ರನ ಬರಸಿ ಕ್ರತುವನು ನಡಸಿದರೆ ಸುತರಹರು ನಿನಗೆಂದ (ತೊರರಾ. ೧-೫-೫೯) ; ಎಮ್ಮ ಲಿಂಗವು ಕೊಟ್ಟ ಕಾಯಕವ ನಡುಸುತಿಹೆವಂತಾಗಿಯುಂ ಭವಿಯೊಡನೆ ಮಾತಾಡೆವು (ಬಸಪು. ೪೦-೩೭) ; ನಾನೀಗ ನಡಸಿರುವುದರಲ್ಲಿ ಅವಸರವೇನಾದರೂ ಕಾಣುತ್ತದೆಯೇ ? (ಅಶ್ವಮ. ೦೨) ; ನಮ್ಮ ಪ್ರಾಚೀನ ಕಾವ್ಯಗಳ ಅಭ್ಯಾಸವನ್ನು ಸೂಕ್ಷ್ಮವಾಗಿ ನಡಸಿ ಸರಿಯಾಗಿ ಅವಲೋಕಿಸಿದರೆ ನಮ್ಮ ಹಿಂದಿನ ಕವಿಗಳಿಗೂ ಲಾಕ್ಷಣಿಕರಿಗೂ ಭಾಷೆಯನ್ನು ಕುರಿತು ಪ್ರತ್ಯೇಕವಾಗಿ ವಿಚಾರ ಮಾಡುವ ಪ್ರವೃತ್ತಿಯಿತ್ತೆಂಬುದು ಓದುಗರಿಗೆ ಮನದಟ್ಟಾಗುತ್ತದೆ (ದ್ರಾವಿವಿ. ೦೦ ಹಿನ್ನಲೆ). ೬. ಘಡಘಡರ್ಜುನ ಹೋಗುಹೋಗೆಳವಡದು ಸೈಂಧವನಳಿವು ಭಾಷೆಯ ನಡಸಬಲ್ಲರೆ ಬೇಗ ಬೆಳಗಿಸು ಹವ್ಯವಾಹನನ (ಕುವ್ಯಾದ್ರೋ. ೧೪-೩೦). ೯. ದುರ್ಜನಸ್ವಭಾವಮಂ ಕಂಡು ಯತ್ನದಿಂ ನಡಸುವೊಡಂ ನೈಜಗುಣಂ ಬಿಡದು (ಪಂಚತಂ. ೦೦೫-೦) ; ಮುನ್ನ ಪರಸತಿ ಪಾರ್ವತಿಯೆಂದು ನಡಸಿತ್ತು ನುಡಿಸಿತ್ತು ಗುರುವಚನ (ಸರ್ವವ. ೫೭-೪೮೦). ೧೦. ಪ್ರಯೋಗಿಸು ; ಬಳಸು ; ಉಪಯೋಗಿಸು : ಮಡದಿ ಪಕ್ಷದಿಯುರಿಯದಲೆ ಮದದೊಡಗಿ ಕಾಣನು ಇನ್ನು ಬುದ್ಧಿಯ ನಡಸು ಸ್ವಾಮಿದ್ರೋಹಿ ಬಸವನೆಯೆಂದನಾ ಮಂತ್ರಿ (ಬಿಜ್ಜಪು. ೬೩-೫೮). ೧೧. ರೂಪಿಸು ; ಹೊಂದಿಸು ; ಸಾಧಿಸು ; ಅಳವಡಿಸು ; ಸಿದ್ಧಪಡಿಸು: ಉಕಾರಾಂತಗಳಾದ 'ಕರ್ತೃ' ಮೊದಲಾದುವನ್ನು 'ಗುರು' ಎಂಬುದರಂತೆ ನಡಸಬಹುದು (ಮಧ್ಯಮ. ೬೮) ನಡಿಸು$_1$ : ೬. ಯಿನ್ನು ತಂನ ಮಾತು ನಡಿಸಬೇಕು (ಎಕ. VII, ಶಿವಮೊ. ೦೦೪-೨೫ ; 1558). ೯. ನಾರಿ ಕೇಳ್ನಿನ್ನ ಮನೋರಥ ನೆಱೆ ಕೈಸಾರಿತು ಚೆಲುವರೆಱೆಯನ ಮೇರೆಯುಱೆತು ನಡಿಸೆಂದಾಗ ಸಖಿಯು ಪಚಾರವ ಪೇಳ್ದಳಂಗನೆಗೆ (ಕಂಸವಿ. ೧೦-೫೭). ನಡೆಸು : ೧. ಹುಟ್ಟುಗುರುಡನ ಕೈಯ ಕೋಲ ಕೊಟ್ಟು ನಡೆಸುವಂತೆ ನಡೆಸಯ್ಯಾ ಎನ್ನ (ಬಸವ. ೨೬೩) : ಪೊಡವಿಯಲಿ ಕೈಗೊಟ್ಟು ಭೋಗಂ ನಡೆಸಲಡಿಯಿಡ ಕಲಿತನು (ಬಸಪು. ೨೫-೮) ; ಕಾಲಿಲ್ಲದೆ ನಡೆಸುವ ಕೈಯಿಲ್ಲದೆ ಹಿಡಿಸುವ ಹಲ್ಲಿಲ್ಲದೆ ಮೆಲಿಸುವ (ಪುರಂದ. ೩-೦೧೯-೦) ; ದಿವಿಜರು ಪೆತ್ತ ರತ್ನವಿಮಾನಕೋಟಿಯ ಸೂತ್ರಿಸಿದವೊಲು ನಡೆಸಿದರು ಸುರವೇತ್ರಪಾಣಿಗಳು (ಸಾಳ್ವಭಾ. ೩೩-೩೮) ; ಪೊಡೆಸು ಭೇರಿಯ ನಿಂದೆ ನಡೆಸು ಮತ್ಸ್ಯೆನ್ಯಮಂ (ಜೈಪು. ೪೭-೨೨) ; ಆ ಕುದುರೆ . . . ಲೋಕಮಂ ತಣಿಸುತ್ತೈತರಲುಳಿದೆಸೆಯೊಳದನಾಕೆವಾಳರ್ತಡೆಯೆ ಬಿಡಿಸಬೇಕನಿಬರಿಂ ನೂಕದೊಡೆ ಕರ್ತೃ ತಾನಾದೊಡಂ ಪೋಗಿ ನಡೆಸುವುದು ಬಳಿಕಾ ಹಯವನು (ಜೈಮಿಭಾ. ೨-೨೯). ೨. ಈ ಧರ್ಮಮ[೦] ನಡೆಸಿದವರಿಗಕ್ಷೆ(ಕ್ಷ)ಯಪುಣ್ಯ[೦] (ಇಅ. XII, ೨೨೫-೧೯ ; ಸು. 11ನೆಯ ಶತ) ; ಹತ್ತು ಮತ್ತರದ ಭೂಮಿ ಬತ್ತುವ ಹಯನು ನಂದಾದೀವಿಗೆಯ ನಡೆಸಿಹೆವೆಂಬವರ ಮುಖವ ನೋಡಲಾಗದು (ಬಸವ. ೨೨೫) ; ಪೊಡೆಯರು ನಡಸಿ ××× ನಡೆಸುವ ಯೆಂಣೆ ವರುಶ ೧ ಕಂ ಹಾನೆ ೨ ಡನೂ ನಡೆಸುವಂತಾಗಿ (ಸೌಇಇ. IX-ii, ೪೦೫-೦೦ ; 1367) ; ಅಲ್ಲಿ ಇಂಗ್ಲಿಷ್‌ನಲ್ಲಿ ಪ್ರೌಢವಿದ್ಯಾಭ್ಯಾಸ ಮಾಡಿದವರೂ ಕನ್ನಡ ಮಾತೃಭಾಷೆಯಲ್ಲಿ ಸಂಭಾಷಣೆಯನ್ನು ನಡೆಸುತ್ತಿದ್ದುದನು

ನೋಡಿದೆ (ಚಂಗಾಳ್ಯ. ೨ ಮುನ್ನುಡಿ). ೫. ಸಕಳಮಂ ಕೌತುಕದಿ ನಡೆಸುತ ಸಕಳದೊಳು ನಡೆಯದ ಸುಜಾಣನು ಸಕಳವಳಿಯಲು ಸಕಳದೊಳು ತಾನಳಿಯದಿಹ ನಿತ್ಯ (ಬಸಪು. ೫೦-೪೪); ತೊಡಿಗೆಯಿಂದಿರ್ವರು ದೇವಪೂಜೆಯು ಮಾಡಿ ನಡೆಸಿದರಾಗಮೋಕ್ತಿಯಲಿ (ಮೋಹತ. ೩೦-೪); ದೇವರನ್ನು ಮೂಲ ದೇವರ ಗುಡಿಯ ಮುಂದೆ ಬಿಳೀಬಟ್ಟೆಯ ಮೇಲೆ ಕುಳ್ಳಿರಿಸಿ ಗುಡಿಯೊಳಗೆ ಪೂಜೆ ನಡೆಸುತ್ತಾರೆ (ನನ್ನೂರು. ೫೧). ೬. ನುಡಿದ ಭಾಷೆಯನಿಂತು ನಡೆಸಲು ಬಸವನೇ ಬಲ್ಲ (ಬಸಪು. ೩೭-೨೭); ನಮ್ಮ ಕರ್ತವ್ಯ ಒಡೆಯನ ಅಪ್ಪಣೆಯನ್ನು ತಲೆಬಾಗಿ ನಡೆಸುವುದು (ಚಂಗಾಳ್ಯ. ೪೭). ೭. ಸಟೆಯಿಲ್ಲದಂತೆ ಪ್ರಪಂಚುವಿಲ್ಲದಂತೆ ವೈಶಿಕವಿಲ್ಲದಂತೆ ನಡೆಸಯ್ಯಾ (ಬಸವ. ೬೦); ನಿಮ್ಮನೆಂದೂ ಅಗಲದಂತೆಮಾಡಿ ನಡೆಸಯ್ಯ (ಮುಹಾದೇ. ಬ. ೧೫-೧೯); ನಿಚ್ಚಂ ಪ್ರಿಯದಿಂದಂ ನೋಡುವರ್ ಮನ್ನಿಸಿ ನಡೆಸುವರೆಮ್ಮತ್ತೆವಿರ್ ದೇವಕೀದೇವಿಯರ್ (ಜಗಪಿ. ೧೨-೧೦೭); ಅರಸೊಲಿದು ನಡೆಸಿದರೆ ಸಿರಿಯಕ್ಕು ಜಸವಕ್ಕು ಕರಿತುರಗ ಬಲವು ಪಿರಿದಕ್ಕು ಮುನಿದರೆ ಕರ ನಾಶವಕ್ಕು (ಸರ್ವಜ್ಞ. ೭೩೨). ೮. ಫಡ ತೊಲಗು ಕೌರವಕೃತಾಂತನ ಪಡೆಗೆ ಪಾರಣೆಯೊಗಳೀಗಳೆ ನಡೆಸುವೆನು (ಕುಮಾವ್ಯಾದ್ರೋ. ಸಂಧಿ. ೨೮೮). ೯. ಸಾಧುತ್ವಮಂ ಕೆಡಿಸಿ ನಡೆ[ಪಾಠಾಂ. ಡ]ಸುವ ದುರಾಚಾರೆ ಕಪಟನಾಟಕತತಿಗೆ ತಾನೆ ನೆಲೆಯೆನಿಸುವಳ್ (ಕಾದಂಪೂ. ೫೩೩); ಇನಿತುಂ ಮೋಹಂ ಕೇಳೀತನಮೇಲಿಂ ಪಿರಿದುಮೆನ್ನೊಳುಂಟಪ್ಪುದಱಿಂದನಿಯತಿಕೆಯಿಂದೆ ನಡೆಸಲ್ಕಿನಿತಾದುದು ಶಿಕ್ಷೆಗೆಟ್ಟ ಕಾರಣದಿಂದಂ (ಧರ್ಮಾಮೃ. ೨-೮೧). ೧೨. ಅಟ್ಟು; ತಳ್ಳು: ಹೊಡೆದು ಹೊಡೆಚೆಂಡಾಡಿ ರಿಪುಗಳ ಗಡಣವನು ಯಮರಾಜಧಾನಿಗೆ ನಡೆಸುವೆನು (ಕುಮಾವ್ಯಾಆ. ೮-೮). ☞ ಈ ಧಾತು ಅನೇಕ ಕಡೆ ನಾಮಪದದೊಡನೆ ಸೇರಿ ವಿಶಿಷ್ಟವಾದ ಧಾತುವಾಗಿ ಬೇರೆಬೇರೆ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾಹರಣೆಗೆ 'ಉತ್ಸವ ನಡೆಸು', 'ಶಾಲೆ ನಡೆಸು' ಇತ್ಯಾದಿ.

**ನಡೆಸಿಕೊಡು, ನಡಸಿಕೊಡು** = ೧. ಮಾಡಿಕೊಡು; ಮಾಡು: ನೀನು ಸೂಚಿಸಿದಂತೆಯೇ ನಡೆಸಿಕೊಡುತ್ತೇನೆ (ವಚಭಾ. ೪). ೨. ಪಾಲಿಸು; ಈಡೇರಿಸು: ನಿನ್ನಲ್ಲಿ ಭರವಸೆಯಿಟ್ಟು ಒಂದು ಮಾತು ಹೇಳುತ್ತೇನೆ. ಅದನ್ನು ನೀನು ನಡಸಿಕೊಡಬೇಕು (ವಚಭಾ. ೬). [ ನಡೆ$_1$ + -ಇಸು$_3$ ]

**ನಡೆಯುಡುಗು** (ಕ್ರಿ). ನಡೆಯಲಾರದಾಗು; ಚಲನೆ ಇಲ್ಲದಂತಾಗು: ನಡೆಯುಡುಗಿ ಮುಪ್ಪಾಗಿ ಕಾಂತಿ ಮಸುಳಿಸಿ . . . ಬೇಱೊಂದೆಸೆಯ ಕಡೆಯೊಳಿಳಿವಂತಾದುದೀಗ (ಹಚಕಾ. ೩-೭೪); ಭಕ್ತಿ ಚಿತ್ತಮನೋವೆ ಕಂಪಿಸುತ ನಡೆಯುಡುಗೆ ಮನವಕ್ಕಱಿಂ ಕರಗೆ (ಬಸರ. ೩-೧೧೧); ನಡನಡೆದು ಕಡೆಕಡೆಗೆ ನುಡಿಯುಡಗೆ ನಡೆಯುಡುಗೆ (ಶಾಂಬೂರ. ೧೫೧-೩೩೦).

[ ನಡೆ$_2$ + ಉಡುಗು$_1$ ]

**ನಡೆಯೂಡು** (ಕ್ರಿ). ಚೆನ್ನಾಗಿ ತಿನ್ನಿಸು: ನಡೆಯೂಡೆ ಮದ್ದು ವಿಷವೊಡಲಿಂಗೆ ಹಿತವೆಂಬ ನುಡಿಯಂತೆ ಸುಖವಿಲ್ಲ ಪುಣ್ಯವುಂಟಾಳಿದ ಹಲವೆಡೆಯ ಸುಕ್ಷೇತ್ರಂಗಳೊಳಗೆ (ಹಚಕಾ. ೧೦-೩೫). [ ನಡೆ$_3$ + ಊಡು$_1$ ]

**ನಡೆಲಿಂಗ** (ನಾ). [ವೀಶೈ]-ಚಲಿಸುವ ಲಿಂಗವೆಂದು ಭಾವಿಸಲಾದವನು; ಜಂಗಮ: ಬಡವರೆಂದೆನಬೇಡಾ ಲಾಂಛನಧಾರಿಯನು ಕಂಡು ಸ್ನೇಹದಿಂದವರ ಪೂಜೆಯ ಮಾಡುವುದು ನಿಜವಡಗಿದ ರೂಪು ನಿರ್ವಯಲ ಸ್ಥಾನ ನಡೆಲಿಂಗ ಜಂಗಮ (ಬಸವ. ೪೧೫). [ ನಡೆ$_1$ + ಲಿಂಗ ]

**ನಡೆವಕ್ಕಿ** (ನಾ). (ಚಿತ್ತಾಕರ್ಷಕವಾಗಿ) ನಡೆಯುವ ಹಕ್ಕಿ; (ಮನೋಹರವಾಗಿ) ಚಲಿಸುವ ಪಕ್ಷಿ; ಹಂಸ: ನಡೆವಕ್ಕಿಯ ನಲ್ಮೆಯ ಪೊಣರ್ವಕ್ಕಿಯ ನುಡಿವಕ್ಕಿಯ . . . ಬಳಗಂ ಬಳಸಿದುದಾ ನೃಪಸತಿಯಾ (ಜಯುಕಾ. ೨-೧೮); ನಡೆವಕ್ಕಿ ನುಡಿವಕ್ಕಿ ... ಗಱಿಗಣ್ಣಕ್ಕಿಗಳಾ ನೆಲದೆಡೆಯ ಬನದೊಳಿರುತಿಹವು (ಕುರಾಶಾಂ. ೨-೩೦); ಆ ವನದ ಮಧ್ಯದೊಳು ನಡೆವಕ್ಕಿ ನುಡಿವಕ್ಕಿ ಪಾವನತ್ವವನೈದಿ ಜೀವಿಪ್ಪುವು ಭಯವನುಳಿದು (ಪ್ರಭುಪು. ೩-೧೪). 'ನುಡಿವಕ್ಕಿ' ಪರಾ. [ ನಡೆ$_1$ + ಹಕ್ಕಿ$_1$ (<ಪಕ್ಕಿ$_1$) ]

**ನಡೆವಡು** (ಕ್ರಿ). ಹೋಗು; ಚಲಿಸು; ಗಮಿಸು: ತಾಂ ತನಗೆ ಹಯಂ ತಡೆವಿಟ್ಟ ಪಾವೆಂತಂತು ನಡೆವಟ್ಟು ಕನ್ನಿಚ್ಚೆಯಿಂ ಪೋಗೆ (ರಾಮಾಶ್ವ. ೧೩೮-೦೩). [ ನಡೆ$_2$ + ಪಡು$_1$ ]

**ನಡೆವಣಿಗ** (ನಾ). ಪಾದಚಾರಿ; ಕಾಲಾಳು: ನಡೆವಣಿಗ ಘೋಳಾಯ್ಲ ಸೂಳಾಯ್ತಡಪವಳ ಬಳಿಗಾಱ ಕಮ್ಮಟ ನುಡಿಗ ಕುಂಬಱ ಕಂಚುಗಾಱರ ಕೇರಿ ಮೆಱೆದಿಹವು (ಸಾಳ್ವಭಾ. ೨-೮). [ ನಡೆ$_1$ + -ವಣಿಗ ]

**ನಡೆವಲೆ** (ನಾ). ಒಂದು ಬಗೆಯ ಬಲೆ: ಇಡುವಲೆ ಸಿಡಿವಲೆ ಕೆಱುವಲೆ ನಡೆವಲೆ . . . ಬಿಡುಂವಲೆಗಳನಿಪ್ಪವೆಸೆದುವಾ ಬೇಂಟೆಗರೊಳ್ (ಶಬಶಂ. ೩-೨೪). [ ನಡೆ ? + ಬಲೆ$_1$ ]

**ನಡೆವಳಿ$_1$**, ನಡವಣಿ, ನಡವಳಿ, ನಡಾವಳಿ (ನಾ). ೧. ನಡೆಯುವಿಕೆ; ನಡಿಗೆ: ನಡೆವಳಿಗಳಿಂದೆ ಪೊಡವಿಯನು ನಗ್ಗಿಪ ಹಸ್ತಿಗಡಣ (ನವಮೋ. ೩೦-೨೬). ೨. ನಡವಳಿಕೆ; ವ್ಯವಹಾರ; ನಡತೆ; ವರ್ತನೆ: ಬಿಕ್ಕೆಯಂ ಬೇಱುವಾನುಂಡಡವಿಯೊಳಗಿರ್ಪ ಮುನಿಗಳ ನಡೆವಳಿಯತ್ತೆತ್ತ ಯುವತಿ ಜನದನುರಾಗಂ (ಕಾದಂಪೂ. ೮೧೮); ಪಱಿಯಂ ಕೇಳ್ದೆನೊ ಮೇಣ್ಣಡೆವಟ್[ಳಿ]ಯಂ ತಪ್ಪಿದೆನೊ ಕಾಣೆ ಕಣ್ಣಿಂದಂ ಕೂರ್ತಟಲ್ದಿವರಂ ಬಗೆದೆನೊ ಪಚ್ಚಱಿದೆನೊ ಪೇಟ್ಟೋಡಿ ನಿನ್ನೊಳಂಗಾಧಿಪತೀ (ಗದಾಯು. ೫-೧೪); ☞ ಇದನ್ನು ಪ್ರಾಸಕ್ಕಾಗಿ 'ಟ' ವನ್ನಾಗಿ ತಿದ್ದಿಕೊಂಡಿರಬಹುದು; ಹಗಲಿರುಳು ಉದಯ ಬೈಗುಗಳು ಧರ್ಮವು ಎಂಬಿವು ಮನುಷ್ಯರ ನಡೆವಳಿಯನಱಿವುವು (ಪಂಚತಂ. ೧೭೨-೧೦); ಪರವಧುಗಳಿಪ್ಪುವುದುವಿಹಂ ಪರವಱಿಗುಂ ನಿನ್ನ ಮಹಿಮೆಗಿದು ನಡೆವಳಿಯೇ (ಪಂಪರಾಮಾ. ೯-೦೪೫); ನಡೆವಳಿಯೊಳ್ ತನ್ನ ಸಮಂಬಡೆವಾರುಂ ನಡೆದರಿಲ್ಲ (ಪುಷ್ಪಪು. ೦-೨೯); ಹರಿಯ ಚಕ್ರವ ತುಡುಕಿಸುವೆ ವಾನರಪತಾಕನ ರಥವ ಹಿಂದಕೆ ಮುರಿಯಲಿಸುವೆನು ಮಹಿಮರಿಬ್ಬರ ನಡೆವಳಿಯ ಕೆಡಿಸಿ (ಕುಮಾವ್ಯಾಭೀ. ೧-೪೧); ನಡೆವಳಿಯ ನೋಡಿದಿರೆ ಲೋಗರ ಮಡದಿಯರು ತನ್ನವರು ಠಕ್ಕಿನ ಕಡಲು ಕೃಷ್ಣನ ನಂಬಲಿಹಪರವಿಲ್ಲ (ಕುಮಾವ್ಯಾದ್ರೋ. ೧೪-೦೮); ನುಡಿಗೆ ನಾಚಿದನರಸ ಹಂಸದ ನಡೆ[ಪಾಠಾಂ. ಡ]ವಳಿಗೆ ಮೆಚ್ಚಿದನು (ನಳಚ. ೨-೨೦). ೩. ಸಂಪ್ರದಾಯ; ಪದ್ಧತಿ; ರೂಢಿ: ಪಿರಿಯರೆಲ್ಲರ್ನಡೆದ ನಡೆ[ಪಾಠಾಂ. ಡ]ವಳಿಯನೊಲ್ಲೆನೆಂಬುದು ಬಲ್ಲತನಮಲ್ತು (ವೃಷವಿ. ೩-೫೨ವ.) ೪. (ಸಂಘ, ಸಂಸ್ಥೆ ಮುಂತಾದುವುಗಳ ಅಧಿವೇಶನಗಳಲ್ಲಿ ನಡೆದ) ಕಾರ್ಯಕಲಾಪ, -ಕಾರ್ಯಕ್ರಮ ಮತ್ತು ಅದರ ವರದಿ: "ಕಾರ್ಯ; ವರ್ತನೆ; ನಡೆವಳಿ" (Proceeding. ಇಂಕನ). **ನಡವಣಿ**: ೨. ಧರ್ಮದ ನಡವಣಿಗೆ ಮೆಚ್ಚಿದೆನು ಸತ್ಯವು ಕೆಡದವೊಲು ರಕ್ಷಿಸಿದೆ (ತಿಮ್ಮಆ. ೮-೬೪). **ನಡವಳಿ**: ೨. ಅವರವರ ದಯ್ವದಂದಮನವರ ಮರಾಗಮದೊಳವರ ನಡವಳಿಗಳ [ಪಾಠಾಂ. ಕಥೆಗಳೊಳಂ] ನೋಡುವಡವೆ ದೂಷಿಸಿದಪ್ಪುವಿನ್ನವರನ್ಯರ್ನುಡಿಯೆ ಮುಳಿವರಾ ಸಮಯದವರ್ (ಸಮುಪ ೮-೨೧೭); ಅಳವಟ್ಟ ಪಿರಿಯ ಸಿರಿ ನಲ್ಲಳ ನಡ [ಪಾಠಾಂ. ಡೆ] ವಳಿಯೊಳ್ಪು . . . ಮನಂಗೊಳ್ಳುತಿರೆ ಪಲಕಾಲಮರಸುಗೆಯ್ಯುತ್ತಿರ್ದ್ಯ (ವರ್ಧಪು. ೧೦-೭೯); ಕುಲವಧುವಿನ ನಡವಳಿಯೊಳ್ ಕುಲಮುಮಾ್ ಚಲಮುಮಾ್ ಪತಿಬ್ರತಾಗುಣದಿಂದಂ ನೆಲಸಿಕ್ಕುಮ್ (ಸೌಇಇ. XX, ೨೪೮-೯೯; 1228); ವನಧಿಪನ ಗಾಂಭೀರ್ಯ ರವಿನಂದನನ ನಡವಳಿ ಧರೆಯ ಸೈರಣೆಯಿನಿತು ದಶರಥಸಾರ್ವಭೌಮಂಗಲ್ಲದಿಲ್ಲೆಂದ (ತೊರರಾ. ೧-೩-೨೬). **ನಡಾವಳಿ**: ೨. ನಮ್ಮ ನಡಾವಳಿಗೆ ನಮ್ಮ ಪುರಾತರ ನುಡಿಯೆ ಇಷ್ಟವಯ್ಯ (ಸಿದ್ಧವ. ಕ. ೨೬೦-೮೫೭): ಜಗತ್ತಿನ ರೀತಿನೀತಿ ನಡತೆ ನಡಾವಳಿಯ ಅನುಭವ ನನಗೆ ಸಾಕಷ್ಟಾಗಿದೆ (ಪರಿಚೀ. ೪೫): ಇದೆಲ್ಲಕ್ಕಿಂತಲೂ ಪ್ರಭಾಕರನ ಮನಸ್ಸನ್ನು

ಗಾಸಿ ಮಾಡಿದುದು ನಿರ್ಮಲೆಯ ನಡಾವಳಿ (ಕೀಮೋಹ. ೦೦೮); ಅವರಿಗೆ ಒಳ್ಳೇ ನಡಾವಳಿಯ ಬಯಕೆಯು ಹೆಚ್ಚಾಗುವ ಹಾಗೆ ತಕ್ಕ ಕಾರಣವನ್ನೇ ನೋಡಿ ಕೊಡಬೇಕು (ಮುಂಬಯಿ. ೫-೪೫) : ಕ್ರಮಬುದ್ಧ ಜೀವನವೂ ನೀತಿ ನಡಾವಳಿಗಳೂ ಮೊಳೆಯುವಂತೆ ಪ್ರೋತ್ಸಾಹಿಸಿದರು (ಕಷು. ೬-೧೩೦); ೩. ಕುಮ್ರಿ ಕಡಿಯುವ ನಡಾವಳಿಯು ಧಾರವಾಡಜಿಲ್ಲೆಯಲ್ಲಿಲ್ಲ (ಕಭಾಗ. ೫೪) : ಬೈಲುಸೀಮೆಯಲ್ಲಿ ಮಳೆ ಕಡಿಮೆ ಬೀಳುವದರಿಂದ ಮಾಳಿಗೆಮನೆಗಳನ್ನು ಕಟ್ಟುವ ನಡಾವಳಿ ವಿಶೇಷವುಂಟು (ಮುಂಬಯಿ. ೪-೧೧೮). ೫. ಧರ್ಮಸ್ಥಳದಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಒಂದು ಉತ್ಸವ,-ಹಬ್ಬ : ಉಡುಪಿಯಲ್ಲಿ ಎರಡು ವರ್ಷಗಳಿಗೊಮ್ಮೆ ನಡೆವ ಪರ್ಯಾಯ, ಪಡುಬಿದ್ರೆಯಲ್ಲಿ ಜರಗುವ ಢಕ್ಕೆಬಲಿ, ಧರ್ಮಸ್ಥಳದಲ್ಲಿ ಹದಿನೆರಡುವರ್ಷಗಳಿಗೊಮ್ಮೆ ನಡೆವ 'ನಡಾವಳಿ' ಎಂಬ ಉತ್ಸವ . . . ಇವುಗಳು ಪ್ರಾಮುಖ್ಯವಾದುವುಗಳಾಗಿವೆ (ತುಳುನಾ. ೨೫೩).

[ ನಡೆ$_{1}$ + - ವಳಿ$_{1}$. / ತಮಿ. ನಟವಟ, ನಟ್ಪೈಪಟ; ಮಲ. ತೆಲು. ನಡವಡಿ; ತುಳು. ನಡಾವಳಿ, ನಡುವಡಿ ]

**ನಡೆವಳಿ$_{2}$** (ನಾ). ನಡೆಮಡಿ; ನಡೆಯುವ ದಾರಿಗೆ ಹಾಸುವ ಮಡಿಬಟ್ಟೆ : ಸುಗ್ಗಿಯೊಳ್ ಮದುವೆಯನೆ ಕುಳಿರಗಸ ನಡೆವಳಿಯ ಹಿಗ್ಗಿನಿಂ ಬಿಡಿಸುವನು ತೊಳೆದಡೆಯ ಕೊಳೆಯಂ (ಕಾಲೂರ. ೭೪-೧೩೪) : "ನಡೆವಳಿ=ನಡೆಬಟ್ಟೆ (ಮದುವೆಯಲ್ಲಿ ಮಂಟಪದ ಸುತ್ತು ಹಾಕುವ ಬಟ್ಟೆ)" (ಕಾಲೂರ. ಅಡಿಟ).

[ ನಡೆ$_{1}$ + ವಳಿ$_{5}$ (<ವಟ್ಟ$_{6}$) ]

**ನಡೆವಳಿಕಾರ** 'ನಡೆವಳಿಕಾಱ' ನೋ.

**ನಡೆವಳಿಕಾರತನ** (ನಾ). ನಡತೆ ; ನಡವಳಿಕೆ ; ಸಂಪ್ರದಾಯ : ಶ್ರೀರಾಜ ಒಡೆಯರವರ ಸನ್ನಿಧಾನವು ಒಡ್ಡೋಲಗಕ್ಕೆ ಬಿಜಯಮಾಡಿದೊಡನೆಯೇ ಆಸ್ಥಾನಿಕರೆಲ್ಲ ಇದಿರೆದ್ದು ತಮ್ಮ ತಮ್ಮ ಮಾನಾನುಗುಣವಾಗಿ ನಮಸ್ಕರಿಸಿ ಗೌರವಿಸಿಕೊಳ್ಳಬೇಡವೆ ? ಓಲಗದ ನಡೆವಳಿಕಾರತನವಿದು (ಬಟ್ಟಿಅ.೩೮-೧೬).

[ ನಡೆವಳಿಕಾರ (<ನಡೆವಳಿಕಾಱ) + - ತನ ]

**ನಡೆವಳಿಕಾರ್ತಿ** (ನಾ). ನಡವಳಿಕೆಯನ್ನು ತಿಳಿದವಳು ; ಆಚಾರ ವಿಚಾರ ಗಳನ್ನು ಬಲ್ಲವಳು : "ನರೀ, ನಾರೀ, ಈ ೨ ನಡೆವಳಿಕಾರ್ತಿ" (ಕಾಶಕ್ಕ. ೨೪೬) [ ನಡೆವಳಿಕಾರ (<ನಡೆವಳಿಕಾಱ) + - ತಿ$_{1}$ (<- ಇತ್ತಿ) ]

**ನಡೆವಳಿಕಾಱ,** ನಡವಳಿಕಾರ, ನಡವಳಿಕಾಱ, ನಡೆವಳಿಕಾರ (ನಾ). ೧. ನಡವಳಿಕೆಯನ್ನು ತಿಳಿದವನು ; ಆಚಾರ, ವ್ಯವಹಾರಗಳನ್ನು ಬಲ್ಲವನು ; ನಡತೆವಂತ : ಕಾಱಕ್ಕೆ-ನಡೆವಳಿಕಾಱಂ, ನುಡಿವಳಿಕಾಱಂ . . . ಪಗೆಕಾಱಂ, ಬಗೆಕಾಱಂ (ಶಮದ. ೧೯೯ ಪ್ರಯೋ). **ನಡವಳಿಕಾರ** : ೧. "ನರನ್, ನರ್ತಾ, ನ್ಯಾ:, ನರಃ, ಈ ೪ ನಡವಳಿಕಾರಂ" (ಕಾಶಕ್ಕ. ೨೪೬). **ನಡವಳಿಕಾಱ** : ೨. (ದೇವಸ್ಥಾನ, ಮನೆ ಮೊದಲಾದುವುಗಳ) ವ್ಯವಹಾರಗಳನ್ನು ನೋಡಿಕೊಳ್ಳುವವನು,-ಮೇಲ್ವಿಚಾರಣೆ ನಡೆಸುವವನು : ಪೂಜಾರಿಗ ಪರಿಚಾರಕರೆಳಗಾದ ನಡವಳಿಕಾಱರ ಜೀವಿತಕ್ಕಂ . . . ಮಹಾಜನಂಗಳು ಬಿಟ್ಟ ದತ್ತಿ (ಮೈಆರಿ. ೧೯೩೨, ೪೬-೩೫ ; 1181) : ರಾಜಾರ್ತ್ಥವನೂ ತೀಱಿಸಿಕೊಡುವರು ನಡವಳಿಕಾಱ ಪ್ರಭುಗಳು (ಸೌಇಇ. IX-ii, ೪೩೩-೬೩ ; 1408) : ತಿಂಮಣರಾಯರ ಮನೆಯ ನಡವಳಿಕಾಱಂ ಹೊಂನಪ್ಪನಾಯಕರು (ಮೈಆರಿ. ೧೯೩೫, ೨೩-೨ ; 1618). **ನಡೆವಳಿಕಾರ** : ೧. "ಸರ್ತಾ, ಸರಕಃ, ಈ ೨ ನಡೆವಳಿಕಾರಂ"(ಕಾಶಕ್ಕ. ೬೩).

[ ನಡೆವಳಿ$_{1}$ + - ಕಾಱ ]

**ನಡೆವಳಿಕೆ,** ನಡವಳಿಕೆ, ನಡಾವಳಿಕೆ (ನಾ). ೧. ನಡತೆ; ನಡೆನುಡಿ ; ಆಚಾರ, ವ್ಯವಹಾರ ; ವರ್ತನೆ: ಆದರೆ ಕೃತಿಯು ಏನಾದರೂ ನುಡಿವಳಿಕೆ; ಚಾರಿತ್ರ್ಯವು ನಡೆವಳಿಕೆ. ನುಡಿವಳಿಕೆಯು ಅತ್ಯುಚ್ಚವಾಗಿ ನಡೆವಳಿಕೆಯು ಅದರ ಕನ್ನಡಿಯಂತಿದ್ದರೆ, ಆ ಮನುಷ್ಯನು ಸಾಧುವೆಂದೆನಿಸಿಕೊಳ್ಳುವನು (ಸಾಹಿಸಂ. ೩) : ಅಂದೆ ನೆಲವು ಪಡೆದೀತು ಅಮರಜೀವಂತಶಾಂತಿಯನ್ನು ಎಂದು ನಾಡ ನಡೆವಳಿಕೆಯಲ್ಲಿ ನೆಲೆಗೊಂಬುದೊಂದೆ ನಿಜವು (ಅರಳು.೧೬೫-೨) ; ನಡೆವಳಿಕೆಗಳು ಮತ್ತೂ ಉತ್ತಮಗೊಂಡು (ಮುನಿಮೂ. ೭೯). ೨. ರೂಢಿ ; ಪದ್ಧತಿ ; ಸಂಪ್ರದಾಯ : ನಮ್ಮ ಸೀಮೆಯಲ್ಲಿ ನಡೆವಳಿಕೆಗೆ ಬಂದಿರುವ ಅಳತೆಯು ಯಾವುದನ್ನು ಅನುಸರಿಸಿರುವುದು (ಭೂಮಿಅ. ೧). ೩. (ಸಂಘ, ಸಂಸ್ಥೆ, ಸಭೆ ಮೊದಲಾದುವುಗಳ ಅಧಿವೇಶನಗಳಲ್ಲಿ ನಡೆವ) ಕಾರ್ಯಕಲಾಪ,-ಕಾರ್ಯಕ್ರಮ ಮತ್ತು ಅದರ ವರದಿ : ರಾಯಲ್ ಸೊಸೈಟಿಯ ನಡೆವಳಿಕೆಗಳು (Proceedings of Royal Society. ಇಂಕನಿ). **ನಡವಳಿಕೆ** : ೧. ಅಂದಿನ ತನ್ನ ನಡವಳಿಕೆಯಲ್ಲೇನೋ ಕಳಂಕವಿದೆಯೆಂದು ಮನಸ್ಸು ಹೇಳುತ್ತಿತ್ತು (ಮುರುಕು. ೩೭) ; ಆದರೆ ನಿಮ್ಮ ನಡವಳಿಕೆಗಳು ಅರ್ಥವಾಗದೆ ಹೋದರೆ ಅವು ತಪ್ಪುಮಾಡುತ್ತವೆ (ಶಾಲಮ. ೧೪೨) ; ಅರ್ಥವಾಗದ ನಡವಳಿಕೆಯ ಕೆಕ್ಕೆ (ವಾತ್ಸಲ್ಯ. ೪೮) ; ವಿದ್ಯಾರ್ಥಿಗಳು ತಮ್ಮ ನಡವಳಿಕೆಯನ್ನು ಉತ್ತಮಪಡಿಸಿಕೊಳ್ಳಬೇಕೆಂಬ ಹುರುಪಿನಲ್ಲಿರುವಾಗ ಅವರನ್ನು ತಿದ್ದುವುದೂ ಶಿಕ್ಷಕನ ಕರ್ತವ್ಯ (ಕ್ರಿಯಾಶಿ. ೨೮). ೩. ನಡವಳಿಕೆಗಳು (Proceedings. ಪತ್ರಿನಿ. ೬೪). **ನಡಾವಳಿಕೆ** : ೨. ವ್ಯವಸಾಯದಲ್ಲಿ ಹಿಂದಿನ ನಡಾವಳಿಕೆ ಹೋಗಿಲ್ಲ (ರೂಢಿ).

[ ನಡೆವಳಿ$_{1}$ + - ಕೆ./ತಮಿ.ನಟವಟಕ್ಕೈ ; ತೆಲು. ನಡವಡಿಕ ]

**ನಡೆವಳಿಗ** (ನಾ). (ಅರಮನೆ, ದೇವಸ್ಥಾನ ಮೊದಲಾದುವುಗಳ) ವ್ಯವಹಾರಗಳನ್ನು ನೋಡಿಕೊಳ್ಳುವವನು,-ಮೇಲ್ವಿಚಾರಣೆ ನಡೆಸುವವನು ; ಪಾರಂಪತ್ತೆಗಾರ : ಪಡೆವಳ್ಳರ ಪರದೇಶಾಧೀಶರ ನಡೆವಳಿಗರ ನಲ್ಮೆಯ ಸಚಿವರ . . . ಪೊಸಪೂವಲಿಗುಡುವ ಮಡದಿಯರ ಮೊತ್ತಂ ಕಣ್ಗೊಪ್ಪಿದುದಾವುದಯದೊಳು (ಜಯಕಾ. ೧೨-೧೩). [ ನಡೆವಳಿ$_{1}$ + - ಗ$_{2}$ ]

**ನಡೆವಳಿದಪ್ಪು** (ನಾ). ನಡೆವಳಿಕೆಯ ತಪ್ಪು ; ನಡತೆ, ಆಚಾರ, ವ್ಯವಹಾರ ಗಳಲ್ಲಿಯ ದೋಷ : ನಡೆವಳಿದಪ್ಪು ಪ್ರಾಪಂಚಿಕರಿಗಿಲ್ಲದೆ ಜ್ಞಾನಮಯ ಗಿರದು (ಗಗಕಾ. ೦೬-೪೬). [ ನಡೆವಳಿ$_{1}$ + ತಪ್ಪು$_{2}$ ].

**ನಡೆವೆಣ** (ನಾ). ನಡೆಯುವ ಹೆಣದಂಥವನು ; ಸತ್ತಂತೆ ಇರುವವನು ; ನಿರ್ವೀರ್ಯ ; ಜೀವಚ್ಛವ : ನಡೆವೆಣನ ನುಡಿವೆಣನ ಸಂಸಾರದೇನವನ (ಬಸವ. ೧೫೭) ; ಸಂಸಾರವೆಂಬ ಮಹಾವ್ಯಾಧಿ ಬಾಧಿಸಿ ನಡೆವೆಣನ ಮಾಡಿ ಕಾಡುತ್ತಿದೆ ನೋಡಯ್ಯಾ (ವಚರ. ೪೩-೧೭೧) ; ಕೇಳು ನಡೆವೆಣನೇ ದರಿದ್ರನು ಸಾಲದೆನಿಸಿದ ದಕ್ಷಿಣೆಯ ಯಜ್ಞಾಳಿ ನಿಷ್ಫಲವೆಂದು ನುಡಿದನು ರಾಯ ಕೌಂತೇಯ (ಕುವ್ಯಾಅ. ೨೩-೪೩) ; ತೊಡೆಯನೇಱಲು ಬಂದ ಮಗನನು ಮಡದಿ ಪಾತಕಿ ಬೈದು ಭಂಗಿಸಿ ಜಡಿದು ನೂಕಲು ನೋಡುತ್ತಿದ್ದೆನು ಕಾಣದವನಂತೆ ನಡೆವೆಣನಪೆನ್ನೇನ ಕೇಳುವೆ (ನಿಭಾಗ. ೪-೭-೨೧) ; ಸತ್ತೆಡೆಯಾಡುವ ನಡೆವೆಣನೊಲು ಕೈಹೊತ್ತುಕೊಂಡಿದೆ ತೆರಳಿದೆನು (ಮೋಹತ. ೯-೨೧) ; ಗುಣ ಜಪ್ಪನ ಕುಲ ರೂಪುಗುಂದಿದ ನಡೆವೆಣಕೀಯಲಾಗದು ಪೆಣ್ಣ (ಹದಿಬ. ೫-೦೭). 'ನುಡಿವೆಣ' ಪರಾ. [ ನಡೆ$_{1}$ + ಪೆಣ ]

**ನಡೆವೆಱು** (ಕ್ರಿ). ನಡಗೆಯನ್ನು ಹೊಂದು ; ಚಲನೆಯನ್ನು ಪಡೆ : ಪ್ರಾಯಂ ಕೂಸಾದೊಡೇನೀ ಸಾಯಕಂ ಕೂಸಕ್ಕುಮೆ ! ಜಗದೆ ನೀಮೆ ಬಲ್ಲಪ್ಪಳ್ಳರ್ ! ಅಂ ನಡೆವೆತ್ತ ಸೀರ್ಪುಟಾಗಿವೆ ! (ರಾಮಾಶ್ವ. ೧೫೪-೨೧).

[ ನಡೆ$_{2}$ + ಪೆಱು$_{1}$ ]

**ನಡೆಸರ** 'ನಡೆಸಾರ' ನೋ.

**ನಡೆಸಾರ,** ನಡೆಸರ (ನಾ). ೧. (ನದಿ, ಕಂದಕ ಮೊದಲಾದುವನ್ನು ದಾಟಲು ಕಟ್ಟುವ) ಕೃತಕವಾದ ಮರ, ಬೊಂಬು ಮುಂತಾದುವುಗಳಿಂದ ಕಟ್ಟುವ ಸೇತುವೆ: ಕೋಟೆಯನ್ನು ಹತ್ತುವುದಕ್ಕೆ ಈ 'ಸಾರ'ಗಳನ್ನು ಕಟ್ಟುತ್ತಿದ್ದರು . . . ಸಾರ ಕಟ್ಟುವುದನ್ನು ಅನೇಕರು ನೋಡಿರಬಹುದು. 'ನಡೆಸಾರ' ಎಂಬುವು ಅಗಳನ್ನು ದಾಟಿಹೋಗುವುದಕ್ಕಾಗಿ ಉಪಯೋಗವಾಗು

ತ್ತಿದ್ದವು (ಕರ್ನಾಜ. ೫೮). ೨. ಕೋಟೆ ಮೊದಲಾದುವನ್ನು ಏರಲು ತಯಾರಿಸಿದ ಒಂದು ಸಾಧನ : ದುರ್ಗಕ್ಕೆ ನಿಚ್ಚಣಿ ಸಾರ್ಚುಂದೊಳೆ ವೀರಸೇತು ನಡೆಸಾರಂ ಬದ್ಧರಂ . . . ಪಡಿಗೋಂಟೆಯೆಂಬ ಬಹುಕೋಟಾ ಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ (ಅನಂಪು. ೧೧-೮೩); ನಡೆಸಾರಂ ನೆಲವಾಳಿಗೆ ಪೆಡಕೆಡಪುವ ಡೆಗ್ಗೆ ಬದ್ದಿರಂಗಳಿನಾರ್ದಂದೆಡೆಗುಡದಧಟಿಂ ಕೋಂಟೆಯನಡರ್ದಾ ರಿಪುಭಟರನಿಕ್ಕಿದು ಕಲಿಕಾವಂ (ತ್ರಿಪುವಿ. ೫-೧೧). ನಡೆಸರ : ೨. ಭೈರವ ಬದ್ಧರದ ನಡೆಸ [ಪಾಠಾಂ. ವ]ರದ ಡಬ್ಬುಳ ಡೆಂಕಣಿಗಳನು ತೂಱಿದರು ನಭಕೆ (ತೊರರಾ. ೬-೧೧-೧೪). 'ನಡೆಸೇತು', 'ಸಾರಮಾರಿ' ಪರಾ. [ ನಡೆ$_1$ + ಸಾರ$_1$ ]

ನಡೆಸು 'ನಡೆಯಿಸು' ನೋ.

ನಡೆಸೇತು (ನಾ). ನಡೆಯುವ ಸೇತುವೆ; ಚಲಿಸುವ ಸೇತುವೆ : ಕೇತನಾವಳಿಯೆತ್ತ ವಾದ್ಯ ಘೂರ್ಣಿಸೆ ನಡೆಸೇತುಗಳಂತಾನೆ ನಡೆಯೆ ಭೂತಳ ತುಂಬಿ ಪ್ರಾಯ್ದಳ ಬರೆ ಬಂದು ವಿನೀತಪುರದೊಳಾಗ ಹೊಕ್ಕ (ಭರಚ. ೫೮-೩೭). 'ನಡೆಸಾರ' ಪರಾ. [ ನಡೆ$_1$ + ಸೇತು ]

ನಡೆಸೊಡರು (ನಾ). (ಯಾರಾದರೂ ಓಡಾಡುವಾಗ ಕೈಯಲ್ಲಿ ಹಿಡಿದು ಮುಂದೆ ದಾರಿ ತೋರಿಸಲು ಉಪಯೋಗಿಸುವ) ದೀವಟಿಗೆ : ನಿನ್ನಂಗಣದಲ್ಲಿ ದೊಗಳುವ ಶ್ವಾನನಯ್ಯಾ ನಿನ್ನ ಮನೆಯ ನಡೆಸೊಡರಯ್ಯಾ (ವಚಸಂ. ೧೯೬-೪೮). [ ನಡೆ$_1$ + ಸೊಡರು (<ಸೊಡರ್) ]

ನಡೆಹ, ನಡಹ (ನಾ). ೧. ನಡೆಯುವಿಕೆ; ಚಲಿಸುವಿಕೆ : "ಗತಿಃ, ವಿಂಖಃ, ವಿಹಾರಃ, ಪರಿಸರ್ಪಃ, ಪರಿಕ್ರಮಃ–ಈ ೫ ನಡೆಹ" (ಹಲಾಯು. ೦೨೦-೪೧). ನಡಹ : ೨. ನಡೆದುಕೊಳ್ಳುವಿಕೆ; ವ್ಯವಹರಿಸುವಿಕೆ : ಸ್ವತಂತ್ರ ವೃತ್ತ್ಯಾನಂ ವಿವೃತ್ತಿಯೆನಲೊಲಿದಂತೆ ನಡಹಮುಕ್ಕುಂ (ಮಂಗರಾ. ೦೩೩-೩೦).

[ ನಡೆ$_1$ + – ಹ$_2$ ]

ನಡ್ಡಿಮೂಗು (ನಾ). ಚಪ್ಪಟೆಯಾದ ಮೂಗು; ತಗ್ಗಿದ ನಾಸಿಕ : "ಅವಟೀಟಃ, ಅವನಾಟಃ, ಅವಭ್ರಟಃ, ನತನಾಸಿಕಃ –೪ ಕುಳಿಮೂಗಿನವನ ಹೆಸರುಗಳು, ಚಿಕ್ಕಮೂಗುಳ್ಳವನು, ನಡ್ಡಿಮೂಗುಳ್ಳವನು" (ಸಿದ್ಧಾಂತಿ. ೦೫೭). [ ←ತೆಲು. ನಡ್ಡಿಮುಕ್ಕು ]

ನಡ್ಯ (ನಾ). ಜೊಂಡು ಹುಲ್ಲಿನ ರಾಶಿ : "ನಡ್ಯಾ, ನಡಸಂಹತಿಃ – ಹೊಲ ಗದ್ದೆಗಳ ಬದುವುಗಳಲ್ಲಿಯೂ, ತೋಟದ ಸಾರಿಗೇ ಬದುವುಗಳಲ್ಲಿಯೂ ಗುಂಪಾಗಿ ಬೆಳೆದಿರುವ ಹುಲ್ಲುಗಳ ಸಮೂಹ" (ಸಿದ್ಧಾಂತಿ. ೦೩೩).

[ ಸಂ. ನಡ್ಯಾ ]

ನಡ್ವಲ, ನಡ್ವಳ (ನಾ). ಜೊಂಡುಹುಲ್ಲು ಹೆಚ್ಚಾಗಿ ಬೆಳೆವ ಭೂಮಿ : "ನಡ್ವಾನ್, ನಡ್ವಲಃ, ನಡಪ್ರಾಯಃ,–ಶತ್ತಹುಲ್ಲು ಬಹಳವಾಗಿರುವ ದೇಶದ ಹೆಸರು, ಹುಲ್ಲುನೆಲದ ಪ್ರಾಂತ್ಯವು" (ಸಿದ್ಧಾಂತಿ. ೮೪). ನಡ್ವಳ : "ನಡ್ವಳಂ, ನಳಸಂಯುತಂ–ಈ ೨ ನಾ(ಣ)ನಲುಳ್ಳ ಭೂಮಿ" (ಹಲಾಯು. ೨೬-೪); "ನಡ್ವಳಂ ನಳಯುತಂ ನಳ್ಳುನೆಲನಕ್ಕು" (ಮಂಗರಾ. ೨೮-೨). [ ಸಂ. ]

ನಡ್ವಳ 'ನಡ್ವಲ' ನೋ.

ನಣ್ಕೆ (ನಾ). ನಂಟತನ; ಬಾಂಧವ್ಯ : ಸಂಸಾರದಪಾಯಮುಮಂ ನಿನ್ನಱಿವಿನ ಬಲ್ಮೆಯುಮಂ ಧೈರ್ಯದೊಳಾದ ಮೆಣ್ಕೆಯುಮಂ ಕಂಡಂ (ಜೀವಸಂ. ೨೬-೪೭ವ). [ <ನಣ್ಪು ? ]

ನಣ್ಪು (ನಾ). ೧. ನಂಟು; ಬಾಂಧವ್ಯ; ಸಂಬಂಧ : "ನಣ್ಪು ನಂಟು" (ಕರ್ನಾನಿ. ೨೩); ಕುಲಜನುಮಲ್ಲಂ ನಣ್ಪಿನ ಬಲಮುಂ ತನಗಿಲ್ಲ ಕಣ್ಗಮೋಳದನಾರೊಳ್ ನೆಲಸಿರನೆಲ್ಲಿಯುಮ[ವಹ]ಂ ಚಲವೆಂದು ೯೨ ಪತ್ತುವಿಡದದೊಂದುಂಟು ಗುಣಂ (ಕವಿರಾ. ೩-೧೭೨); ಬೆಳ್ಗಟ್ಟಿಯ ನರಸರ್ಕಳೇಱುವುದಂ ಕಂಡುದಟಿಂದುತ್ತಮಕುಲದವರ್ಗಳ್ಗೆ ಕುಲಜರಲ್ಲದವರೊಡನೆ ಮದುವೆಯೊಳ್ ತೊಟ್ಟ ಷಣ್ಪುಗಳಕ್ಕುಂ (ವಡ್ಡಾರಾ. ೮೭-೦೩); ಸುಯೋಧನನೆನಗೊಳ್ಳಿಕೆಯ್ದ ಕೃತಮಂ ಪೆಱಗಿಕ್ಕಿ ನೆಗಟ್ತಿ ವಯಸೆ ಷಣ್ಪಿನ ನೆವದಿಂದೆ ಪಾಂಡವರನಾನೊಳವೊಕ್ಕೊಡೆ ನೀಮೆ ಪೇಸಿರೇ (ಪಂಪಭಾ. ೯-೬೮); ರಾಗದಿಂದಿನ್ನಿವರ್ಗೆ ಮದುವೆಯಂ ಮಾಟ್ಪುದೆಂದಟ್ಟಿದಂ ನಿಮ್ಮನುಜನ್ಮಂ ನಿಮ್ಮ ನಣ್ಪಂ ಬಯಸಿ ಪದೆಪಿನಿಂದೆಮ್ಮ ವಿದ್ಯಾಧರೇಂದ್ರಂ (ಪಂರಾಮಾ. ೧೦-೧೧೪); ಎನ್ನವರೆಂದು ಪುತ್ರಪಿತೃಮಿತ್ರ ಕಳತ್ರದ ನಣ್ಪುನಾಡೆ ನೋವಂ ನಿನಗುಂಟುಮಾಡೆ (ಜೀವಸಂ ೬೮-೧೨); ಪೆಂಪಿನ ಸೊಂಪಿನ ನಣ್ಪನಾಳ್ದ ಪೊಂಗೊಡನನಮರ್ಚಿದಂತೆಸೆವುವಾ ಲಲಿತಾಂಗಿಯ ಪೀವರಸ್ತನಂ (ಕಾವ್ಯಸಾ. ೩೦೫); ನಿನ್ನಯ ಮಱುಕಕೆ ಒಡಮಱಗಿದೆನಾನ್ ಎಮ್ಮಯ ನಣ್ಪಂದಾನ್ ಸೆಳೆಗೊಂಡೆನ್ (ಬದ್ಧಪ್ರ. ೦೭-೩೪೦). ೨. ಸ್ನೇಹ; ಕೆಳೆ : ನೋಡು ನಣ್ಪಂ ನಿಮಗಮೆಮಗಮಾಮ್ನಾಯದಿಂ ಬಂದುದಿಂತೀ ಜನಧರ್ಮಂ (ಆದಿಪು. ೨-೨೦); ಪಗೆಗೆ ಕಣೆಯೊಂದುಂಟೇ ನಣ್ಪಂಗಮಾಗರಮುಂಟೆ ನೀಂ ಬಗೆಯ ಪಗೆಯುಂ ನಣ್ಪುಂ ಕಯ್ಕೊಂಡ ಕಜ್ಜದಿನಲ್ತೆ ಪುಟ್ಟುಗುಮರಸುಗಳ್ಗೆ (ಪಂಪಭಾ. ೧೩-೧೧); ಒರ್ಮೆ ಬಂದೆನಗೆ ಮಾಟ್ಪುದು ಪೆರ್ಮೆಯ ನಿಮ್ಮ ನಣ್ಪನಿಂ ಜವಿಯಿಸಿದೀ ಕದರ್ಥನೆಗೆ ಸೈರಿಪುದು (ಕಾದಂಅ. ೧೯೩); ಪಲಕಾಲದ ರಾಕ್ಷಸವಾನರವಂಶದ ನಣ್ಪನ್ನಿದಮುೞಿದುದೆಂಬುದು ಲೋಕಂ (ಪಂರಾಮಾ. ೧೦-೧೭೨); ಮಠೊಮ್ಮರ್ವಂ ನೀನೀಗಳಾಕೆಯ ನಣ್ಪನೇಕೆ ಮಾಣ್ದೆಯೆಂದಾ ಕೆಳೆಯಂಗಿಂತೆಂದಂ (ಲೀಲಾವ. ೨-೧೦೧ವ). ೩. ನಂಬಿಕೆ; ವಿಶ್ವಾಸ : ಆಗಳಾ ಮಾನವೇಂದ್ರನ ಮದಗಜಮಂ ಸದೆವಂತೆ ಮದಗಜಮಂ ಮಾಱಿದೇವನಾರ್ಪಿಂ ಸದೆಯೆ ಭಕ್ತವ್ರಜಂ ಕಂಡು ನಣ್ಪನೊಳಕೊಂಡು ಕೊಂಡಾಡುತ್ತಮಿರೆ (ವೃಷವಿ. ೧೨-೩೮ವ). ೪. ಪ್ರೀತಿ; ಅನುರಾಗ : "ನಣ್ಪನಲ್ಲಿಯುಂ ಪ್ರಸರವೆಂಬುದು" (ಹಲಾಯು. ೦೩೫-೨೪); ಪಾಂಡುರ ಕೀರ್ತಿಯೆ ನೆಗಟ್ಗಂ ಪಾಂಡುತನೂಭವರ ನಣ್ಪುಂ ನೆಗಟ್ಗಮೆ ಬೞಿಯಂ (ಜಗವಿ. ೦೫-೫೩); ಪಡೆಯದೆ ಬರ್ಕುಮೇ ಸುತನ ವಕ್ತ್ರಮನೀಕ್ಷಿಪ ಲಲ್ಲೆಗೈವ ನಣ್ಪಡಿದನುರಾಗದಿಂ ನಗಿಸುವಳ್ಕಱಿಯೊಳಪ್ಪುವ . . . ಅಡಿಗಡಿಗಂ ತೊದಳ್ನುಡಿಯನಾಲಿಪ ಸೈಪು ಸರೋರುಹೇಕ್ಷಣೇ (ವೃಷವಿ. ೨-೩೩); ತಾರೇಶಂ ನಣ್ಪಂ ಮು[ಮ]ತ್ತಾ ರೋಹಿಣಿಯಲ್ಲಿ ಕೂರ್ಪನವಳೇ ಧನ್ಯಳ್ (ನರಚ. ೫೨-೧೨೦).

[ ನಂಟು$_1$ + – ಪ್ಪು/ತಮಿ. ನಣ್ಪು; ತೆಲು. ನನ್ಪು, ನನುವು, ನನುವು ]

ನಣ್ಪುಗೆ ? (ಕ್ರಿ). (?) : ಅನ್ನೆಗಂ ಮುಂಬಯ್ತರಿರ್ವರುಂ ಬಂದದು ಕಾಣದೆ ಮಾಣದೆ ತಮ್ಮೊಳೋರೊರ್ವರಂ ನಣ್ಪುಗೆ ಕಣ್ಬರಿಗೆಟ್ಟು ಇಱಿಯಿಱಿದು ತಮ್ಮೊಳಿರ್ವರುಮಂಱಿಯಮೆಯಿಂ ಬಿಟ್ಟಿರಲ್ಕೆ (ನೇಮಿಪು. ೨-೭೦ವ). [ ? ಇದು 'ನಣ್ಪುಗೆಟ್ಟು' ಎಂಬುದರ ಸ್ಖಲಿತ ರೂಪವಿರಬಹುದು ]

ನಣ್ಪುಗೆಯ್ (ಕ್ರಿ). ಸಂಬಂಧವನ್ನುಂಟುಮಾಡು, –ಅಳವಡಿಸು : ಕಳೆಯಂ ಪತ್ತಿಸಿ ರಾಗಮಂ ನಿಲಿಸಿ ನುಣ್ಪಂ ನಣ್ಪುಗೆಯ್ದಂಪನಿರ್ಕಿಳಿಗೊಂಡೊಟ್ಟಜೆಯಂ ನಿವಾರ್ಚಿ . . . ಗೋವಳರಾಯಂ ಕೊಟಲೂದಿದಂ ನೆಗಟ್ವಿನಂ ಮಾಧುರ್ಯತೂರ್ಯಸ್ವನಂ (ಜಗವಿ. ೫-೨).

[ ನಣ್ಪು + ಕೆಯ್$_1$ ]

ನಣ್ಪುನೆತ್ತರ್ (ನಾ). ನಂಟಿನ ರಕ್ತ; ಸಂಬಂಧಿಗಳ ನೆತ್ತರು : ನೆನೆಯೆಮ್ಮ ದುರ್ವಿಧಿಯ ಅಣ್ಣಂದಿರಿರ್ವರನ್ ಸಮಸಾವು ಸತ್ತರ್ ನಣ್ಪುನೆತ್ತರನಸಾದು, ಓರೊರ್ವರಾ ಕಯ್ಯನೊರ್ಪಗಲ್ ಕೊಲೆಯಿನ್ (ಅಂತಿಗೊ. ೩-೪೭).

[ ನಣ್ಪು + ನೆತ್ತರ್ ]

ನಣ್ಪುವೆಱು (ಕ್ರಿ). ವಿಶ್ವಾಸವನ್ನು ಹೊಂದು; ನಂಬಿಕೆಯನ್ನು ಪಡೆ : ಕುಸುಮ ವಿಲೇಪನಾದಿ ಬಹುವಸ್ತುಗಳಂ ವಿಗೆ ಕೊಟ್ಟು ನಣ್ಪುವೆತ್ತಿಸೆವನನೊರ್ವನಂ ಚರನನೊಲ್ದನುಯಾಯಿಯನಿತ್ತು . . . ಕಳುಪಿದಂ (ವೃಷವಿ. ೯-೫). [ ನಣ್ಪು + ವೆಱು$_1$ ]

**ನತ** (ಗು.) ೧. ಬಾಗಿದ ; ಬಗ್ಗಿದ ; ವಕ್ರವಾದ. 'ನತಚಂಚು' ಪರಾ. ೨. ಎರಗಿದ ; ನಮಸ್ಕರಿಸಿದ ; ಮಣಿದ : ಅತಿವಿಶದಯಶೋವೃತ್ತಂ ನತಸಕಳಾರಾತಿಜನವಿತಾನಂ ಮತ್ತಂ ವಿತತಶ್ರೀಸಂಪತ್ತಂ ಶತಮಖ ಸದೃಶಾನುಭಾವನೊಲವಿಂ ಪೆತ್ತಂ (ಕವಿರಾ. ೨-೪೪) ; ನತನಾನಾಮರಮೌಳಿ ರತ್ನಕಿರಣಂ ನಾನಾಪ್ಸರಃಕೇಕರದ್ಯುತಿ ನಾನಾಚಮರೀಜಮಾಯು ಸಭೆಯಂ ತಳ್ಪೊಯ್ಯಲಿರ್ದಂ ಜಗತ್ಪತಿಯೊಡ್ಡೋಲಗದೊಳ್ (ಜಗವಿ. ೧-೨೬) ; ನತನಾನಾವನಿಪಾಲಮೌಳಿಮಣಿಮಾಲಾಸಂಘಸಂಘಟ್ಟನೋದ್ಧತರೇಣುವ್ರಜ ವರ್ಣಪೂರರಚಿತಂ ರಾಜಾಲಯಪ್ರಾಂಗಣಕ್ಷಿತಿಯಾಗುತ್ತಿರೆ ನಿಚ್ಚವಿಂತರಸು ಗೆಯ್ಯುತ್ತಿರ್ಪಂ . . . ತತ್ಖೇಚರಾಧೀಶ್ವರಂ (ಶಾಂತೀಶ್ವ. ೭-೫) ; ನತ ಸಂತತಿಚಿಂತಾಮಣಿ ಭುವನಸ್ತುತಲಿಂಗಂ ತಾನಿದೆಂದು ಪೊಗಳ್ದಂ ಭೂಪಂ (ರಾಜಶೇ. ೧೩-೫೧). ೩. ಕುಗ್ಗಿದ ; ತಗ್ಗಿದ. 'ನತನಾಸಿಕ' ಪರಾ. ೪. ಶರಣಾದ. 'ನತಜನ' ಪರಾ. (ನಾ). ೫. ಬಾಗಿದುದು ; ವಕ್ರವಾದುದು : "ವಕ್ರಂ, ವೃಜಿನಂ, ಭಂಗುರಂ, ಅವಿದ್ಧಂ, ವೇಲ್ಲಿತಂ, ನತಂ, ಜಿಹ್ಮಂ . . . ಊರ್ಮಿಮತ್-ಈ ೧೨ ಕೊಂಕಿದುದು" (ಹಲಾಯು. ೧೦೬-೧೧) ; "ನತಂ, ನಮ್ರಂ, ಬಂಧುರಂ-ಈ ೩ ಎಱಗಿರ್ದುದು" (ಹಲಾಯು. ೧೨೫-೭೫) ; "ನಮ್ರಮೆನೆ ನತಮೆನಲ್ಕೆಱಗುವುದು" (ಮಂಗರಾ. ೧೩೪-೬೨). ೬. ನಮಸ್ಕರಿಸಿದವನು ; ನಮಸ್ಕಾರ ಮಾಡಿದವನು : ನತನಾಗಿ ಕೃಷ್ಣನಿರೆ ಕುರುಪತಿಯೆಂದು (ನೇಮಿಪು. ೧೧-೨೩) ; ನತನಾದನಲ್ತೆ ಕಾಣಾತ್ತತಿರಾಗದೆ ಚಂದ್ರಭೂತಿ ಕಂದರ್ಪಮಹೀಪತಿಗೆ (ಕುಸುಮಾ. ೮-೩) ; ಬೇಡಿದುದನಿತ್ತು ಸಲಹುವೆನಂಜಲೇವುದೆನೆ ಕೃತಕೃತ್ಯನಾಗುತುಂ ನಂಬಿಯಣ್ಣಂ ನಿಂದು ನತನಾಗಿ ಶಂಭುವಂ ಹಾಡತೊಡಗಿದನಂದು (ನಂಬಿರ. ೭-೧೪೬); ಮಂದರಗಿರಿ ಧೈರ್ಯನೆಂದೆನಿಪ ಪ್ರಭೇಂದುಮುನಿಪಗೆ ನತನಹೆನೂ (ಧನ್ಯಚ. ೮); ಹರುಷದಿಂ ಮುಳುಗೆ ಗರ್ಭಂ ಜಾಱಿ ಪುರುಷತ್ವ ತ್ವರಿತದಿಂದ ವರನಾಮರಿಸೆ ಸುರಜಾಲತ್ರ್ಯಂಬಕೆ ನತರಾದರು (ಐಕೋಶು. ೧೩-೫೭). ೭. ಒಂದು ಗ್ರಹಕ್ಕೂ ಮತ್ತು ಖಗೋಳ ಮಧ್ಯರೇಖೆಗೂ ಇರುವ ಅಂತರ. 'ನತಕೋನ' ಪರಾ. [ ಸಂ. ]

**ನತಕೋನ** (ನಾ). "(ನಕ್ಷತ್ರ ಮೊ.ಗಳ) ಕ್ಷಿತಿಜದ ಕೆಳಗಿನ ಕೋನದೂರ : ನತಿ ; ಅವನತಿ . . . ನತಕೋನ" (Depression. ಇಂಕನಿ).
[ ನತ + ಕೋನ (<ಕೋಣ್ ) ]

**ನತಚಂಚು** (ನಾ). ೧. ಬಾಗಿದ ಕೊಕ್ಕು. ೨. ಬಾಗಿದ ಕೊಕ್ಕನ್ನುಳ್ಳುದು: ಕುಡಿದಳಿರನುಗುರ ಮೊನೆಯೊಳ್ ಒಡಿದುದು ನತಚಂಚು ನೀಡಿ ಗಳಕಂದಳಮಂ ಮಡಗೆದಱ ನವಾಮ್ರದ ಪೂಮಿಡಿಯಂ ಕರ್ದುಕಿದುದು ಪರಭೃತಂ ಪರಭೃತದಿಂ (ಮಲ್ಲಿಪು. ೫-೩೮). [ ನತ + ಚಂಚು₂ ]

**ನತಜನ** (ನಾ). ೧. ನಮಸ್ಕರಿಸಿದ ಜನ : ನತಜನಕಭಿಮತವೀವಪ್ರತಿಮ ನೆನಿಪ್ಪಭವಸುತನೆ ಚಿತ್ತೈಸು (ತ್ರಿಪುವಿ. ೩೨-೪೬) : ನತಜನವರದಂ ಶ್ರುತಿನುತಶುಭಗು . . . ರತಿಪತಿಹರಣಂ ಜಿತಭವಮರಣಂ ಕ್ಷಿತಿವರನಿದಿರೊಳಿ ನಿಂದಂ (ಹಮ್ಮಿರ. ೨-೧೦). ೨. ಶರಣಾದವನು : ನತಜನಾಶ್ರಯಧೇನು ಭಕ್ತವತ್ಸಲ ಕೃಪಾಕರ ಮಹಾಭಯನಿವಾರಣ ನೃಸಿಂಹ ತ್ರಾಹಿಯೆನುತಿರ್ದನಾ ಸುಧನ್ವಂ ಮಱಿಯದೆ (ಜೈಮಿಭಾ. ೧೧-೩೭). [ ನತ + ಜನ ]

**ನತದೃಷ್ಟ** (ನಾ). ಅದೃಷ್ಟಹೀನ ವ್ಯಕ್ತಿ; ದುರ್ದೈವಿ; ದುರದೃಷ್ಟಶಾಲಿ: ಒಟ್ಟಿನಲ್ಲಿ ನಾವು ಮೂವರು ಅವರ ಕುಟುಂಬದಲ್ಲಿಯ ಮೂರು ನತದೃಷ್ಟ ವ್ಯಕ್ತಿಗಳೆಂದು ಪರಿಗಣಿಸಲ್ಪಟ್ಟೆವು (ಸ್ಮೃತಿಚಿ. ೩೩); ನನ್ನಂತಹ ನತದೃಷ್ಟ ಳನ್ನು ಬಿಟ್ಟು ಅವರು ಬೇರೆ ಯಾರನ್ನಾದರೂ ಪ್ರೀತಿಸಿದ್ದರೆ ಎಷ್ಟು ಸುಖವಾಗಿರುತ್ತಿದ್ದರು ! (ದೂರಸ. ೨೯೦) ; ನೀನು ಎಂದೂ ನತದೃಷ್ಟರ ಕೈಹಿಡಿಯುವುದಿಲ್ಲ (ವಚಭಾ. ೭೭) ; ನಾನು ನತದೃಷ್ಟ (ದೀಪದ. ೧೫೨).
[ <ಸಂ. ನತಾದೃಷ್ಟ (ನತ + ಅದೃಷ್ಟ) ]

**ನತದೃಷ್ಟೆ** (ನಾ). ಭಾಗ್ಯಹೀನಳಾದವಳು ; ದುರ್ದೈವಿ : ಆಕೆ ನತದೃಷ್ಟೆ ಯಾದ್ದರಿಂದಲೇ ಎಲ್ಲವನ್ನೂ ಕಳೆದುಕೊಂಡಳು (ರೂಢಿ).
[ ನತದೃಷ್ಟ + -ಎ₂ ]

**ನತದೇಹ** (ನಾ). ಬಾಗಿರುವ ದೇಹ ; ಬಗ್ಗಿರುವ ಶರೀರ : ನತದೇಹವಂ ಸೀಳಿ ಭಿನ್ನಭಿನ್ನಂ ಮಾಡಿದೊಡೆಯಾತ್ಮರೂಪಿರ್ಪುದೇ (ವೀಶೈಪು. ೪-೭-೩).
[ ನತ + ದೇಹ ]

**ನತನಾಸಿಕ** (ನಾ). ತಗ್ಗಾದ ಮೂಗುಳ್ಳವನು ; ಚಪ್ಪಟೆಯಾದ ನಾಸಿಕ ವುಳ್ಳವನು ; ನಡ್ಡಿಮೂಗುಳ್ಳವನು : "ಅವಟೀಟಃ, ಅವನಾಟಃ, ಅವ ಭ್ರಟಃ, ನತನಾಸಿಕಃ-೪ ಕುಳಿಮೂಗಿನವನ ಹೆಸರುಗಳು, ಚಿಕ್ಕಮೂಗುಳ್ಳ ವನು, ನಡ್ಡಿಮೂಗುಳ್ಳವನು" (ಸಿದ್ಧಾಂತಿ. ೧೫೭). [ ನತ + ನಾಸಿಕ ]

**ನತಬಂಧು** (ನಾ). ಶರಣು ಬಂದವರಿಗೆ ನಂಟನಾಗಿರುವವನು : ಬಂಧುರದ ವಿದ್ಯೆಯನು ಕಲಿಸಿ ಮದಾಂಧನ ಕೊಲಿಸಿದನಲಾ ನತಬಂಧು ವನು ನಾವಗಲಿದುಳಿವೆವದೆಂತು (ವಿಭಾಗ. ೧-೧೦-೫೨).
[ ನತ + ಬಂಧು ]

**ನತಭುವನತ್ರಯ** (ನಾ). ಮೂರುಲೋಕದವರಿಂದಲೂ ನಮಸ್ಕರಿಸ ಲ್ಪಡುವವನು,-ವಂದಿಸಲ್ಪಡುವವನು ; ತ್ರಿಲೋಕಪೂಜ್ಯ : ನತ ಭುವನತ್ರಯನೀಶ್ವರಸುತನವಿರಳದಾನನಧಿಕಸಿದ್ಧಿಸಿಧಾನಂ ಧೃತಪರಶು ಗಣಪನಸ್ಮತ್ಕೃತಿಯಂ ಕೆಯ್ಕೊಂಡು ಮಾಟ್ಕೆ ನಿರ್ವಿಘ್ನತೆಯಂ (ಲೋಕೋಪ. ಟೀಕೆ ೨). [ ನತ + ಭುವನತ್ರಯ ]

**ನತಮುಖಿ** (ನಾ). ಮುಖವನ್ನು ಬಾಗಿಸಿದವಳು ; ತಲೆಯನ್ನು ತಗ್ಗಿಸಿ ದವಳು : ನನ್ನ ದೃಷ್ಟಿ ಮತ್ತು ಅವಳ ದೃಷ್ಟಿಗಳು ಒಂದು ಕ್ಷಣ ತಾಕಲಾಡಿ ದವು. ಅವಳು ಪುನಃ ನತಮುಖಿಯಾದಳು (ಹೇಮಂತ. ೧೯೪).
[ ಸಂ. ನತಮುಖೀ (ನತ+ಮುಖ+-) ]

**ನತರಕ್ಷಾಚತುರ** (ನಾ). ನಮಸ್ಕರಿಸಿದವರನ್ನು ಕಾಪಾಡುವುದರಲ್ಲಿ ಜಾಣನಾದವನು ; ಶರಣು ಬಂದವರನ್ನು ರಕ್ಷಿಸುವುದರಲ್ಲಿ ಕುಶಲ ನಾದವನು : ಶ್ರೀಚಂಡಿಕಾಮುಖೇಂದುವಿಲೋಚನರುಚಿಚಂದ್ರಿಕಾ ಚಕೋರಂ ನತರಕ್ಷಾಚತುರಂ ಭವಪಾಶವಿಮೋಚಕನೆಮಗೀಗೆ ಸೌಖ್ಯಮಂ ಶಿವಲಿಂಗಂ (ರಾಜಶೇ. ೦೧-೧). [ ಸಂ. ]

**ನತವಾಣಿ** (ನಾ). ಸರಸ್ವತಿಯಿಂದ ನಮಸ್ಕೃತಳಾದವಳು; ವಾಣಿಯಿಂದ ಪೂಜ್ಯಳಾದವಳು : ನತವಾಣಿ ಕನಕಾಚಲಶ್ರೋಣಿ ಕಾಳಾಹಿವೇಣಿ (ಕನಾಕ. ೨೨೪). [ ನತ + ವಾಣಿ₁ ]

**ನತಾಸ್ಯ** (ನಾ). ಮುಖವನ್ನು ಬಾಗಿಸಿದವನು ; ತಲೆಯನ್ನು ತಗ್ಗಿಸಿ ದವನು : ನಯದಿಂದೆಳ್ದು ನತಾಸ್ಯನಾಗಿ . . . ದಿಟ್ಟಮಾರಿಯ ಧೀರಂ ವೃಷಭೇಂದ್ರನಪ್ರತಿಮಕಾಯಂ ಮುಂದೆ ನಿಂದಿರ್ಪುದುಂ (ಗಿರಿಜ. ೧೦-೭೮).
[ ನತ + ಆಸ್ಯ ]

**ನತಿ** (ನಾ). ೧. ಬಾಗಿರುವಿಕೆ ; ವಕ್ರವಾಗಿರುವಿಕೆ. ೨. ನಮಸ್ಕಾರ ; ವಂದನೆ : ಜಿನಚರಣದೊಳಿರೆ ನತಿ ಮತಿ ಜಿನಗುಣಸಂಪತ್ತಿಯೊಳ್ ಪೊದಟ್ಟಿರೆ (ಶಾಂತಿಪು. ೭-೮೦) ; ನಿರ್ಮಳಮೌಕ್ತಿಕಾಕ್ಷತೋತ್ಕರಮ ನುಪೇಂದ್ರಪಾದದುಪ್ಪಘೂವಿಗೆ ಸೂಸಿದನುತ್ಸಹಂ ಪೊದಟ್ಟಿರೆ ವನಪಾಳಕಂ ನತಿಚಳಾಳಕ[ಪಾಠಾಂ. ವಿನತಜಾಲಕ]ನುದ್ಗತರೋಮಜಾಳಕಂ (ಜಗವಿ. ೧೪-೪೩) ; ನತಿ ನುತಿಪೂಜೆಗಳಂ ಸನ್ನುತಿ ಜಿನಪತಿಗಿಂತು ಭಕ್ತಿಯಿಂ ಮೊದಲೊಳ್ ಗೋಪತಿ ಮಾಡಿ ನೋಡಿದಂ ದಶಶತನಯನದೆ ಸಮವ ಸೃತಿಯ ಶೋಭೋನ್ನತಿಯಂ (ವರ್ಧಪು. ೧೫-೮೬) ; ನತಿಯಂ ನುತಿಯಂ ಸತ್ಸಂಗತಿಯಂ ಸಂಸ್ಕೃತಿಯನತಿಶಯಾಸ್ಪದ ಪೂಜಾತತಿಯಂ ಜಿನೇಂದ್ರಪದ ದೊಳ್ ಮತಿವಂತಂ ಮಾಟ್ಪುದರ್ಥಿಯಿಂ ಸ್ವಾರ್ಥಪರಂ (ಉಸಾರ. ೫೦) ; ಶ್ರೀಗುರುವಿಗಾಗಿ ತನುಧಾರಿಯಾಗಿ ಬಂದಂಥ ಸದಾಶಿವಗೆ ಅನಂತಾನಂತ

ನತಿಯು ಉಪಕೃತಿಯು ಒಪ್ಪಿಸುವೆವು ಇವಗೆ (ಅರಳು. ೨೪೩-೨). ೩. "(ನಕ್ಷತ್ರ. ವೊ. ಗಳ) ಕ್ಷಿತಿಜದ ಕೆಳಗಿನ ಕೋನದೂರ : ನತಿ ; ಅವನತಿ . . ನತಕೋನ" (Depression. ಇಂಕನಿ). [ಸಂ.]

**ನತಿಗೆಯ್, ನತಿಗೈ** (ಕ್ರಿ). ನಮಸ್ಕರಿಸು ; ಪೊಡಮಡು ; ಕೈಮುಗಿ : ಭಯಭಕ್ತಿಯಿಂದಡಿಗಳ್ಗೆ ಲೀಲೆಯಿಂ ದಂಡವನ್ನತಿಗೆಯ್ದು ಮುಗುಳ್ದೆಳ್ದು ನಿಂದು ಕರಯುಗವ ಮುಗಿದು (ಕುಮಾವ್ಯ. ೨-೩೧). **ನತಿಗೈ** : ಪ್ರತಿಮೆಯ ರೂಪದ ಪಂಕಜನಾಭಗೆ ನತಿಗೈದು ನಲಮೇಳುವಂತೆ ಪತಿಯು ರೂಪಡೆ ತನ್ನ ಪಾಲಿಗೆ ಬಂದ ಶ್ರೀಪತಿಯ ಪಾದವ ಭಜಿಸುವುದು (ಹದಿಬ. ೩-೭). [ ನತಿ + ಕೆಯ್$_1$ ]

**ನತಿಗೈ** 'ನತಿಗೆಯ್' ನೋ.

**ನತೆ** (ನಾ). ನಮಸ್ಕಾರ ಮಾಡಿದವಳು : ನತೆಯಾಗಿ ತತ್ಪ್ರಪಶ್ರುತ ಯುತೆಯರ ಪಕ್ಕದೊಳೆ ಪರಮನಿಷೆ ಯನರ್ಹನ್ಮತಕಥಿತಸಿಂಹ ನಿಃಕ್ರೀಡಿತಾ ದಿನೋಂಪಿಗಳನಾಂತು ನೋನುತ್ತುಮಿರಲ್ (ಮುಹಾನೇ. ೧೭-೧೩). [ ಸಂ. ನತಾ ]

**ನತೋನ್ನತ** (ಗು). ಏರು ತಗ್ಗುಗಳುಳ್ಳ ; ಹಳ್ಳತಿಟ್ಟುಗಳಿಂದ ಕೂಡಿದ ಇಳಿದೇರಿ ಮರ ಪೊದೆಯ ಚೆಲ್ವಿನ ನತೋನ್ನತವನಾದ್ರಿಸೀಮೆಯನಾ ವಿಭೀಷಣಂ ಮರೆಯಾಗೆ (ಶ್ರೀರಾಮಾ. ೮೧೭-೧೮೨). 'ನಿಮ್ನೋನ್ನತ' ಪರಾ. [ ನತ + ಉನ್ನತ ]

**ನತ್ಕುಟಕ** (ನಾ). [ಛಂದ] ಪ್ರತಿಯೊಂದು ಚರಣದಲ್ಲಿಯೂ ಹದಿನೇಳು ಅಕ್ಷರಗಳಿರುವ ಒಂದು ಸಮವೃತ್ತದ ಹೆಸರು ; ಸುಮಂಗಲಿ : ನಜಭಜಜಂಲಗಂ ಬರೆ ಸುಮಂಗಲಿಯೆಂಬರದಂ ಇದಕ್ಕೆ ನತ್ಕುಟಕ ಎಂದು ಮತ್ತೊಂದು ಹೆಸರು (ಕೃಛಂ. ೮೩). 'ನರ್ಕುಟಕ' ಪರಾ. [ ? ]

**ನತ್ತ** (ನಾ). (?) : ಮೂರು ನತ್ತದ ಸುತ್ತಲೂ ಮತ್ತು ಇತರ ಕಿಷ್ಕಿಂಧವಾದ ಕುರುಮಂದೆ ಹಿತ್ತಲುಗಳು ಮುಂತಾದ ಸ್ಥಳದಲ್ಲಿ ಬಾಂದುಗಳಿಗೆ ಬದಲು ಕಲ್ಲುಗಳನ್ನು ಹೂಳಬಹುದು (ಭೂಮಿಅ. ೨೪). [ ? ]

**ನತ್ತಿ** 'ನತ್ತು$_2$' ನೋ.

**ನತ್ತು$_1$** (ಕ್ರಿ). (ಸ್ವಾಭಾವಿಕವಾಗಿ ಅಥವಾ ಉದ್ರೇಕದಿಂದ) ಬಿಕ್ಕುತ್ತ ಮಾತನಾಡು ; ಉಗ್ಗು ; ತೊದಲು.

**ನತ್ತಿ ಮಾತಾಡು** = "(ಸ್ವಾಭಾವಿಕವಾಗಿ ಅಥವಾ ಉದ್ರೇಕದಿಂದ) ಬಿಕ್ಕುತ್ತ, ಉಗ್ಗುತ್ತ, ನತ್ತಿ,–ಮಾತಾಡು, ಹೇಳು" (Stammer. ಇಂಕನಿ) ; ನತ್ತಿ ಮಾತಾಡುವವನ ಮಾತು ಸುತ್ತಿ ತೊಳಲಿದರೆ ಪಟ್ಟು ಆದೀತೇ ? (ಗಾದ). [ ದೇ.॥ ಮಲ. ತೆಲು. ನತ್ತು ]

**ನತ್ತು$_2$, ನತ್ತಿ** (ನಾ). ಉಗ್ಗುವಿಕೆ ; ಬಿಕ್ಕುತ್ತ ಮಾತನಾಡುವಿಕೆ ; ಬಿಕ್ಕಲು : "ಉಗ್ಗು, ಬಿಕ್ಕಲು, ನತ್ತು" (Stammer. ಇಂಕನಿ). **ನತ್ತಿ** : "ಉಗ್ಗು, ಬಿಕ್ಕಲು, ತೊದಲು, ನತ್ತಿ" (Impediment in one s speech. ಇಂಕನಿ) ; ಶಾಸ್ತ್ರಿಗಳ . . . ನಾಲಿಗೆಯಲ್ಲಿ ನತ್ತಿ ಇಲ್ಲದೆ ಇದ್ದಿದ್ದರೂ ಬಹುಶಃ ಅವರು ಅದೇ ಶಿಕ್ಷಣಕ್ರಮವನ್ನು ಅನುಸರಿಸುತ್ತಿದ್ದರೆಂದು ತೋರುತ್ತದೆ (ಜ್ಞಾಪಕ. ೧೩೮) ; ಪಾರಾಯಣಕಾಲದಲ್ಲಿ ಅವರನ್ನು ನೋಡಿ ದವರು ಅವರಿಗೆ ನತ್ತಿ ಇತ್ತೆಂಬುದನ್ನು ನಂಬುತ್ತಿರಲಿಲ್ಲ (ಜ್ಞಾಪಕ. ೧೪೨). [ <ನತ್ತು$_1$./ತೆಲು. ನತ್ತಿ ]

**ನತ್ತು$_3$** (ನಾ). ಮೂಗಿನಲ್ಲಿ ಧರಿಸುವ ಆಭರಣ : ಹರಳೋಲೆ ಹೊನ್ನ ಪೂ ಮಾಣಿಕದ ಪೊಸನತ್ತು ಮೋಹನದ ಮಾಲೆ ಬಹುಭೂಷಣಂಗಳ ನಿಡುತ್ತ (ಚತುಪ್ರ. ೧-೭-೯) ; ರಜಪೂತ ಹೆಂಗುಸಿನ ಮುಖ್ಯ ಕುರುಹು ಆಕೆಯ ನತ್ತು (ಕಭಾಗ. ೦೧೪) ; ಮುತ್ತೈದೆರೆಲ್ಲರೂ ನತ್ತಿಟ್ಟು ನಲಿಯುತ ಮುತ್ತಿನಾರುತಿ ಬೆಳಗುತ ಹಾಡಿದರು (ಸಿದ್ಧಪ್ರ. ೧-೭೮) ; ಮಾನವು ಮುತ್ತಾಗಿಹುದು ನತ್ತಾಗಿ ಧರಿಸಿಕೋ ಸಿಪ್ಪು ತೆರೆಯುವ ಮುನ್ನ (ಕಲ್ಯಾಣಿ. ೯-೭) ; ಮೊಗಕ್ಕೊಪ್ಪುವ ಮಾಟಾದ ಮೂಗಿನಲ್ಲಿ ಅಂದವಾದ ನತ್ತು (ಕರಿಹಾ. ೧) ; ನತ್ತಿಗೆ ಯೋಗ್ಯಳಾದವಳು ಮುತ್ತು ಬಯಸಿದ ಹಾಗೆ (ಗಾದ).

**ನತ್ತಿನೋರು** = ಸೂಳೆಯರು ; ವೇಶ್ಯೆಯರು ; ₱ ಕೆಲವು ಪ್ರದೇಶಗಳಲ್ಲಿ ವೇಶ್ಯಾವೃತ್ತಿಯ ಜನ ಪುರುಷನನ್ನು ತನ್ನವನನ್ನಾಗಿ ಒಪ್ಪಿಕೊಳ್ಳುವುದಕ್ಕೆ ಮುಂಚೆ ಅವನಿಂದ ಒಂದು ಮೂಗಿನ ಬಟ್ಟು ಎಂಬ ಒಡವೆಯನ್ನೋ ಅಥವಾ ಒಂದು ಸೀರೆಯನ್ನೋ ಪಡೆದು ಹಿಂದಿನಿಂದ ಬಂದ ಸಂಪ್ರದಾಯವನ್ನು ಅನುಸರಿಸುವ ಕ್ರಮವಿದೆ : ಈ ಊರಿನ 'ನತ್ತಿನೋರೆಲ್ಲಾ' ಅವನ ಮನೆಯವರೇ. 'ನತ್ತಿನೋರು ಅಂದರೆ' . . . ಸೂಳೇರು (ಗುಲಾಬಿ. ೧೯). [ ←ಅರ. ನತ್ಥ್ ; ಹಿಂ. ನತ್ಥ್, ನಥ್, ನಾಥ್ ; ಮರಾ. ನಥ್./ಪ್ರಾ. ಣತ್ಥಾ ]

**ನತ್ತು$_4$** (ನಾ). ೧. ಹೇನಿನ ಸಣ್ಣ ಮರಿ ; ಸಣ್ಣಹೇನು : ಸೀರು ಸಿರವನು ತಿಂತು ನತ್ತು ನರವನು ತಿಂತು ಚಿಂತೆಯು ಜನುಮವ ತಿಂತು (ಇಂಜಾಪ. ೧೭೧-೪೪) ; ಅವಳ ತಲೆಯಲ್ಲಿ ತುಂಬ ನತ್ತು, ಹೇನುಗಳಿವೆ (ರೂಢಿ). ೨. ಕೀಟ ; ಹುಳು. [ ದೇ.॥ ತಮಿ. ನತ್ತು, ನತ್ತೈ = ಶಂಖದ ಹುಳು ; ಮಲ. ನನ್ನಿ ; ತೆಲು. ನತ್ತ = ಶಂಖದ ಹುಳು ]

**ನತ್ವ** (ನಾ). ನ ಎಂಬ ಅಕ್ಷರ : ಪರದೊಳ್ ಸ್ವರಮಿರೆ ಬಿಂದುಗೆ ದೊರೆಕೊಳ್ಗುಂ ನತ್ವಮತ್ವಂ (ಶಮದ. ೦೦೪). [ ಸಂ. ]

**ನದ** (ನಾ). ೧. ಶಬ್ದ ಮಾಡುವಿಕೆ ; ಗದ್ದಲ ಮಾಡುವಿಕೆ ; ಸಪ್ಪಳ ; ಶಬ್ದ. ೨. (ಶಬ್ದದೊಂದಿಗೆ ರಭಸವಾಗಿ ಹರಿಯುವ) ದೊಡ್ಡ ನದಿ ; ಗಂಡುತೊರೆ ; ಗಂಡುನದಿ ; ₱ ಪ್ರಸಿದ್ಧ ಸಂಸ್ಕೃತ ಟೀಕಾಕಾರ ಮಲ್ಲಿನಾಥನ ಅಭಿಪ್ರಾಯದಂತೆ ಪಶ್ಚಿಮಕ್ಕೆ ಹರಿಯುವ ನದಿ : "ಭಿದ್ಯಃ, ಉದ್ಯಃ, ನದಃ – ಈ ೩ ಗಂಡುದೊಱೆ" (ಹಲಾಯು. ೦೦೦-೪೪) ; "ನದಮುದ್ಯಮೆನೆ ಭಿದ್ಯಮೆನೆ ಗಂಡುದೊಱೆಯದು" (ಮಂಗರಾ. ೧೨೨-೧೦) ; ಪುಣ್ಯನದೀನದನಗ[ಲಾ]ವಣ್ಯವಿಭೂಷಣೆಯನೊಲ್ದು ನೋಡುತ್ತುಮಿಳಾಪುಣ್ಯಸ್ತ್ರೀಯಂ ಸಂಚಿತಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ (ಪಂಪಭಾ. ೩-೩೭) ; ಪೊಱಮಟ್ಟಭಂ ಬನದದಿಂ ನದದಿಂ ನದದಿಂದ್ರವಜ್ರನಿಷ್ಠುರವೆಱಗಿತ್ತಿಭಾಪಘನವಂ ಘನವಂ ಘನವಂಶ ಜಾಲವಂ (ಜಗವಿ. ೧೭-೯) ; ಮದವದಿಭೇಂದ್ರದಾನಸಲಿಲಂ ನದರೂಪಮನೆಯ್ದೆ . . . ರಾಗದೆಯ್ದೆದನಿರದಾ ಸುಧರ್ಮಮುನಿಪೋತ್ತಮನಾಶ್ರಮಮಂ ನೃಪೋತ್ತಮಂ (ಕುಸುಮಾ. ೪-೯೪) ; ಅಲ್ಲಿಗಲ್ಲಿಗೆ ಗವಾಸ್ಪದಗಳಿಂ ನದಗಳಿಂದಾ ದೇಶಮೊಪ್ಪಿರ್ದುದು (ಚಬಪ್ರ. ೦೦-೪). ೩. ಸಮುದ್ರ ; ಸಾಗರ. ೪. ಮೋಡ ; ಮೇಘ.

**ನದನದಿ** = ಗಂಡು ಮತ್ತು ಹೆಣ್ಣು ಹೊಳೆಗಳು : ನದ[ನ]ದ್ಯುದ್ಭೂತವಾರಿಪ್ರಸರಮೆಸ[ರ] ನೀರಂದದಿಂ ಕಾಯ್ದುದಾಕಾಶದಿಶಾಘಂ . . . ಎಂಬ ವೈಶಾಖದೊಳಾ ಯೋಗೀಶ್ವರು ಕಲ್ನೆಲೆ ನೆಲಸಿ ಹಿಮಾದ್ರೀಂದ್ರ ಮಿರ್ಪಂತಿರಿರ್ದು (ಸುಕುಮಾ. ೪-೧೩) ; ನದನದೀಕುಳದೊಳ್ ಪರಿವರ್ಧಿಕುಂ ಜಗಜ್ಜೀವನಜೀವನಂ ಮುಗಿಳಿಂ ಮುಗಿಯುಂ ಕಱವಂ ಹಿತಾರ್ಥಮಿಾ ಭೂವಳಯಕ್ಕೆ ಶಕ್ರನದು ಕಾರಣಮರ್ಚಿಪುದಿಂದ್ರಮಂ ಜನಂ (ಜಗವಿ. ೪-೭೭) ; ನದನದ್ಯೌಘಾಂಬುವಂ ಪೀರ್ದಳೆ ನೆಱಯದೆ ಬಾಯ್ವಿಟ್ಟಪೊಲ್ ಬೀಡೆಗಳ್ ಪರ್ವಿದುವು (ಚಂದ್ರಪ್ರ. ೯-೬೬). [ ಸಂ. ]

**ನದನಿಕಟ** (ನಾ). ಹೊಳೆಯ ತೀರದ ಪ್ರದೇಶ : ವಿದಲಿತ ನಲಿನೀಸುಖದಂ ನದನಿಕಟಂ ವಿವಿಧವರ್ಣಮಣಿಗಣಶೋಭಾಸದನಂ ಪರ್ವತನಿಕಟಂ ಮದಗಜ ಮದಸಲಿಲಸದನಮಟವೀನಿಕಟಂ (ಮಲ್ಲಿಪ್ರ. ೨-೦೦). [ ನದ + ನಿಕಟ ]

**ನದರಿಡು, ನೆಜರಿಡು, ನೆದರಿಡು** (ಕ್ರಿ). ೧. ಲಕ್ಷಿಸು ; ಗಮನವಿಡು

ರಾತ್ರಿವುದಯ ಸಾಯಂಕಾಲ ನದರಿಟ್ಟು ಹಸು ನಿದ್ರೆದೊಳದು ಪದವಿರ್ದ ಲಿಂಗ ಪೂಜಿಸುವಾರುಯನ್ನಂತ ಮುದಿಮೂರ್ತಿಗಾರು ಮನ್ನಿಪರು (ದೀದಕಾ. ೪-೦೫) ; ಸದಮಲಜ್ಞಾನದ ಕುದಿ ಉಕ್ಕಿ ಬರುವಾಗ ನದರಿಟ್ಟು ನಿನ್ನೊಳು ಸದಘುಲ ತತ್ವವಿ ತಿಳಕೋ ಬರಕೋ (ಶರೀಫ. ೭೭ ಕವಿಕಾವ್ಯ ಪರಿಚಯ). **ನೆಜರಿಡು** : ೧. ಒಂದೀಟು ನೆಜರಿಟ್ಟು ನಡಿ. ನಮ್ಮ ಬಿಚ್ಚು ನಷಘಷ್ಟ . . . ಕೂದರೇಲಿ ಉರುಲು ಹಾಕಾಂವ (ಪತಿಕೋ. ೭೭). **ನೆದರಿಡು** : ೧. ಸದ್ಯ ನೆದರಿಟ್ಟು ನೋಡಿಕೋ ಉದಿಸಿದ್ಯಾವಲ್ಲೆ (ಶರೀಫ. ೩೫-೧೦). ೨. ಬಯಸು ; ಕಾಮಿಸು ; ಅಪೇಕ್ಷೆಪಡು : ಮಾವೀನ ಹಣ್ಣು ಮನಿಯಾಗ ಇಟಗೊಂಡು ನೀರಲಕ್ಯಾಕ ನೆದರಿಟ್ಟ (ಗರತಿ. ೧೨೮).

[ ನದರು (<ನಜರು) + ಇಡು₁ ]

ನದರಿಸು 'ನಜ್ರಿಸು' ನೋ.

ನದರು 'ನಜರಂ' ನೋ.

**ನದರುಕಾಣಿಕೆ** 'ನಜರುಗಾಣಿಕೆ' ನೋ.

**ನದರುಗಾಣಿಕೆ** 'ನಜರಂಗಾಣಿಕೆ' ನೋ.

**ನದರುಗೆಡು** (ಕ್ರಿ). ಕಂಗೆಡು ; ದಿಗ್ಭ್ರಮೆಗೊಳ್ಳು : ಮದನಗಂಜುತ ಮಾಂದಳಿರಿಗೆದೆಬೆದರುತಳಿವಿಂಡುಗಳ ರಭಸಕೆ ನದರುಗೆಡುತ . . . ಚಂಡ ರಕ್ಕಸ ಬೆದರುತ್ತೈದಿದ ಬನದೊಳಗಜೆಯು ಕಾಬ ತವಕದಲಿ (ಅಂಬಿಕಾ. ೧೮-೮). [ ವದರು (<ನಜರು) + ಕೆಡು₁ ]

**ನದಿ** (ನಾ). **ಹೊಳೆ ; ತೊರೆ ;** ಎಂಟು ಸಾವಿರ ಧನಂಪ್ರಮಾಣಕ್ಕೆ ಕಡಮೆಯಿಲ್ಲದಷ್ಟು ದೀರ್ಘವಾಗಿಯೂ ಅಗಲವಾಗಿಯೂ ಹರಿಯುವ ಜಲಪ್ರವಾಹಕ್ಕೆ 'ನದಿ' ಎಂದು ಟೀಕಾಕಾರರು ಸೂಚಿಸುತ್ತಾರೆ : "ಸಿಂಧವಃ, ಸ್ರವಂತೀ, ತಟಿನೀ, ತರಂಗಿಣೀ, ನದೀ, ಧುನೀ . . . ರೋಧೋವಕ್ರಾ – ಈ ೨೧ ತೊಱೆ" (ಹಲಾಯು. ೧೧೧-೪೩) ; "ನದಿ ತರಂಗಿಣಿ ತಟನಿ ಧುನಿ ಸಿಂಧು . . . ದ್ವೀಪವತಿಯಾಪಗೆಯೆನೆ ತೊಱೆಗೆ ನಾಮಂ" (ಚುಂಗರಾ. ೬೨೨-೧೦) ; ಜಂಬೂದ್ವೀಪದ ಮೇರುವಿನ ಮೂಡಣ ವಿದೇಹದ ಸೀತಾನದಿಯ ಬಡಗಣ ತಡಿಯೊಳ್ (ಆದಿಪು ೩-೬೮) ; ಹರಿವ ನದಿಗೆ ಮೈಯೆಲ್ಲ ಕಾಲು ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ (ಅಪಜಂ. ೧೭೨-೭೭೫) ; ನದಿಯಂ ನಾವಿಕನಂತೆ ಪೊಕ್ಕು ಗುಱಿಯಂ ಧಾನುಷ್ಕನೆಂಬಂತೆ ತಪ್ಪದಿದಂ ಕಂಬಮನೆಚ್ಚುದು (ಪಾರ್ಶ್ವಪು. ೧೧-೧೨೦) ; ನದಿ ಕಣ್ದೆಱೆದಂತೆ ಪೊಳಂಕಿದ ಮಾನಂ ಮೊಸಳೆ ಪಾಯ್ದು ನರಪತಿಯ ವಿನೋದದ ಗುಜ್ಜಸಿಕ್ಕೆ ಪಿಡಿದತ್ತದನಧಿಪತಿ ಜಾಲಗಾಱರಿಂ ತೆಗೆಯಿಸಿದಂ (ಯಶೋಚ. ೩-೪೮) ; ಮಱುದಿವಸ ವೇದಾವತಿಯ ಸಾರ್ದರು ಬಳಿಕ್ಕವರಲ್ಲಿ ರಜನಿಯ ಪರಿಹರಿಸಿ ದಾಂಟಿದರು ನದಿಯನು ಮೂಱನೆಯ ದಿವಸ (ತೊರರಾ. ೨-೪-೯) ; ನದೀ ದಾಟ ಬದೀಲಿ ಬಿದ್ದ ಹಾಗೆ (ಗಾದೆ).

ನದಿನದ, ನದೀನದ = ಹೆಣ್ಣು ಮತ್ತು ಗಂಡು ಹೊಳೆಗಳಂ : ಮೂಱಿದ ಗಾಳಂಗಳಿಂ . . . ಸೊಗಡುಗೂಳುಗಳ ಮದ್ದುಗಳ ಮಸಕದಿಂದಂ ನದಿನದಾಳಿಯೊಳು ಘಾನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂನಾಥನು (ಹಜಶಾ. ೫-೪೪) ; ಅಂತವರಿರ್ವರುಂ ನಾನಾನದೀನದಾಂತರಾಳಸಂಪನ್ನನಪದಂಗಳಂ ಕಳಿದು ಕತಿಪಯಪ್ರಯಾಣಂಗಳಿಂ . . . ಬಂದು (ಸುಕುಮಾ. ೨-೪೫೮) ; ನದೀನದೌಘಮಾಗಳೆ ಬ ಱು ಗ ೦ ಪ ಲಾ ಯ್ತು ಕುಱಿಯುಂ ತೆವರುಂ ಸಮನಾಯ್ತುದೆತ್ತಲುಂ (ಪುಷ್ಪಪು. ೩-೪೭) ; ಕಾವಿತಾರ್ಥವನೀವಮಂದಿನ ಭೂಮಿಃ ಬಿತ್ತದೆ ಜನಿಪ ವಸ್ತುಸ್ತೋಮವನು ತಂದೀವುದದ್ರಿನದೀನದಾದಿಗಳು (ನಿಘಾಗ. ೦-೬-೮) ; ಅಕ್ಷಯವಾದ ಸರೋವರವೊಂದರಿಂದ ಅನೇಕ ದಿಕ್ಕುಗಳಲ್ಲಿ ಸಹಸ್ರಾಧಿಕ ನದೀನದಗಳು ಹೊರಹೊರಟು ಬರುವಂತೆ (ತತ್ತ್ವಪ್ರಾ. ೧೨೯). ನದಿಯ ಮಗ = (ಗಂಗಾ) ನದಿಯ ಸುತ ; ಗಾಂಗೇಯ ; ಭೀಷ್ಮ : "ನಾದೇಯಃ, ನದೀಸುತಃ – ಈ ೨ ನದಿಯ ಮಗಂ" (ಹಲಾಯು. ೮೨-೩೪೭) ; ಇದು ಮಹಾಮಖವಿಲ್ಲಿ ಪೂಜ್ಯನು ಯದುಗಳರಸನು ಭಟ್ಟನಿಲ್ಲಿಗೆ ನದಿಯ ಮಗನಿಲ್ಲಿಗೆ ಸದಸ್ಯರು ನಾರದಾದಿಗಳು (ಕುಭಾಸ. ೧೧-೩೯) ; ನದಿಯ ಮಗ ಗುರು ಗುರುತನೂಜನು ವಿದುರಭಾರದ್ವಾಜಮುಖ್ಯರು . . . ಬಹಳಾಭ್ಯುದಿತಬಲ ನೆರೆದೆದ್ದು ನಡೆದುದು ಭರದ ಪಯಣದಲಿ (ಕುವ್ಯಾಅ. ೭ರಿ೩. ೨೫-೬). **ನದಿ ಹಾಯು** = ಹೊಳೆಯನ್ನು ದಾಟು,–ಕ್ರಮಿಸು : ನದಿ ಹಾಯೋನಿಗೆ ತಿದಿ ಯಾಕೆ ? (ದುರಂನಾ. ೯೪). [ ಸಂ. ನದೀ ]

**ನದಿಗವುಂಡ** (ನಾ). ಒಬ್ಬಾತನ ಹೆಸರು : ಸದೆಯನೂರ ನದಿಗವುಣ್ಡನು ತಿಬರ್ೞರ ಮಾರಗವುಣ್ಡ (ಪ್ರಅರಿ. ೧೯೦೯, ೧೧-೭೩ ; ೨೦೦).

[ ನದಿ + ಗವುಂಡ (<ಗಾವುಂಡ) ]

**ನದಿಜ** (ನಾ). = ನದೀಜ ೩ : ಇದಿರುಗೊಂಡರು ಹಿರಿದು ಮನ್ನಿಸಿ ವಿದುರನನು ಕೊಂಡಾಡಿ ಗುರು ನೃಪ ನದಿಜ ಧೃತರಾಷ್ಟ್ರಾದಿಗಳ ಸುಕ್ಷೇಮ ಕುಶಲಗಳ ವಿದುರನಾಗಮನಪ್ರಪಂಚದ ಹದನನೆಲ್ಲವ ಕೇಳಿದರು (ಕುವ್ಯಾಅ. ೦-೧೮).

[ <ಸಂ. ನದೀಜ ]

**ನದಿಪು** (ಕ್ರಿ). (ಬೆಂಕಿ, ದೀಪ, ಉರಿ, ಬೆಳಕು, ತಾಪ ಮೊದಲಾದುವನ್ನು) ನಂದಿಸು ; ಆರಿಸು : ಭರತನ ಮೊಗದೊಳ್ ಪರ್ವಿದ ಖರ ಕೋಪಾನಲನನೆಯ್ದೆ ನದಿಪುವವೊಲ್ [ಪಾಠಾಂ. ನಂದಿಪವೋಲ್] ತನ್ಮರಕತ ಮಣಿವರ್ಣಂ ಕರಪರಿಘದಿನೊಡನೊಡನೆ ತುಳ್ಕಿದಂ ತಿಳಿನೀರಂ (ಆದಿಪು. ೦೪-೦೦೫) ; ಬಲದೇವನ ಮನದೊಳಾದ ಮುಳಿಸೆಂಬ ಕಿಚ್ಚಂ ತನ್ನ ಮೃದು ಮಧುರವಚನರಚನಾಜಲಂಗಳಿಂ ತಳಿದು ನದಿಪಿದಂ (ಪಂಪಭಾ. ೫-೨೨೮) ; ಮದನದಾವಾಗ್ನಿಯಂ ನದಿಪೆ ಮಾಡಿದ ಕಾಮನದಿಯೆನಿಸುವವು ದಿವಿಜ ದಂಪತಿಶತದೊದವಿದ ರತದ ಪದನಲ್ಲಿ (ಶಾಂತಿಪು. ೨-೯೩) ; ದವರೌದ್ರಜ್ವಲನಾದ್ಯುತಂ ಹೃದಯದೊಳ್ ಶೋಕಾಗ್ನಿ ಕೈಗಣ್ಮೆ ಪೊಣ್ಮುವ ಕಿಚ್ಚಂ ನದಿಪಲ್ಕೆ ಬರ್ಪ ತೆಱದಿಂದಂ ಕಣ್ಗಳಿಂದುಣ್ಮೆ ಪೊಣ್ಮುವ ನೇತ್ರಾಂಜನಮಿಶ್ರ ಬಾಷ್ಪಜಲಧಾರಾಬಿಂದುಗಳ್ ಕೂಡೆ (ಅಜಿಪು. ೧೦-೪೫) ; ಅಳವಿಗಱಿದ ಳುರ್ವ ಮದನಾನಳನಂ ನದಿಪಲ್ಕೆ ಪಲವುಮಮೃತದ ಪನಿಯಂ ತಳಿವಂತೆ ಧಂತರುಚಿಗಳ್ ತುಳುಂಕೆ ನೃಪಸುತನನಾರ್ಯಸುತನಿಂತೆಂದಂ (ಲೀಲಾವ. ೪-೩೫) ; ಉಂತೆ ಜಗಂಗಳಂ ತಿಗುರಿಗಂ ತರುತಿರ್ಪ ಮನೋಜನೀ ವಸಂತಂ ತಲೆದೋಱುತಿಂ ಹರನ ಕಣ್ಣುರಿಯಂ ನದಿಪಲ್ ಸಮರ್ಥನೋ (ಚಂದ್ರಪು. ೭-೪೬).

ನದನದಿಪು (ದ್ವಿರುಕ್ತಿ) : ನಿಚ್ಚಂ ಪಗಲಿನಕಾಂತದ ಕಿಚ್ಚನಿರುಳ್ ಚಂದ್ರಕಾಂತದೊಱೆಪಂ ಪಡೆದಾ ಕಿಚ್ಚ ನದ[ದ]ನದಿಪೆ [ಪಾಠಾಂ. ನದನದಿಸೆ, ಸದನಡಿಸೆ] ಮಾಡುಗುಮಚ್ಚರಿಯಂ ಪಗಲುಮಿರುಳುಮಾ ವಿಜಯಾರ್ಧಂ (ಅಜಿಪು. ೯-೨೨). [<ನಂದು ? ]

**ನದಿಮೊಗ** (ನಾ). ಹೊಳೆಯಂಪಾತ್ರ,–ಪ್ರವಾಹ: ಮೂರು ಖಂಡಗಳೇಳು ಸಾಗರಂಗಳನು ಹದಿಮೂರು ನದಿಮೊಗಗಳನು ದಾಟಿ ಬಂದೆಲ್ಲಿ ಭಾರತೀಯರ ಹೃದಯ ದೈವಸಮ್ರಾಜ ದರಬಾರ ನಡೆಸಿದನೆಲ್ಲಿ–ನೋಡಿದುವೆ ಢಿಲ್ಲಿ ! (ಕಎಕು. ೫೫). [ ನದಿ + ಮೊಗ ]

**ನದಿಯಮರ** (ನಾ). ಒಂದು ಬಗೆಯ ಮರ : "ಬೃಹತ್ಪತಿಃ, ಬೃಹಸ್ಪತಿಃ ಈಯೆರಡು ನದಿಯಮರ, ನೇಱಲ್" (೬ಷಧಿ. ೦೦೯).

[ ನದಿ + ಮರ₁ ]

**ನದಿವಾಸಿ** (ನಾ). ಹೊಳೆಯ ಬಳಿ ವಾಸಿಸುವವನು : ನದಿವಾಸಿಗಳು ವನವಾಸಿಗಳು ಗಿರಿವಾಸಿಗಳು ಗುಹ್ಯ ಗುಹೆವಾಸಿಗಳು ಇಂದ್ರಿಯಭಯಂಗಳಿಗೆ ಅಂಜಿ ಕಂದಮೂಲಾದಿಗಳ ಭಕ್ಷಿಸುವ ಕಾನನದ ಮರುಳುಗಳೆಲ್ಲಾ ಲಿಂಗ ಪ್ರಾಣಿಗಳಿಗೆ ಪ್ರಾಣಲಿಂಗ ಸಂಬಂಧಿಗಳಾದ ಪರಮಶಿವಯೋಗಿಗಳಿಗೆ ಸರಿಯೇ ಈ ಭ್ರಾಂತರೆಲ್ಲಾ (ಸಿದೇವ. ೦೦೬-೩೫೯). [ ನದಿ + ವಾಸಿ₁ ]

**ನದೀಚರ** (ನಾ). ಹೊಳೆಯಲ್ಲಿ ಸಂಚರಿಸುವುದು : ಪಿರಿದು ಪೊಳ್ತಿಂ ವನಪ್ರಚಾರದೊಳಲಸಿದ ನದೀಚರನಪ್ಪ ಯೂಥಪತಿಯಂತೆ ವನವಿಹಾರದೊಳಲಸಿ ಬಂದು ರಾವಣಮಂ ಪುಗೆ (ಶಾಂತಿಪು. ೮-೨೩೮). [ ಸಂ. ]

**ನದೀಜ** (ಗು). ೧. ಹೊಳೆಯಲ್ಲಿ ಹುಟ್ಟಿದ. (ನಾ). ೨. ಹೊಳೆಯಲ್ಲಿ ಹುಟ್ಟಿದುದು ; ನೀರಿನಲ್ಲಿ ಹುಟ್ಟಿದುದು. ೩. (ಗಂಗಾ) ನದಿಯ ಮಗ ; ಗಾಂಗೇಯ ; ಭೀಷ್ಮ : ಬಿಲ್ಲೋಜಂ ಮುನ್ನಂ ಪಿನಾಕಾಯುಧನೆ ಸಕಲಚಕ್ರಾಯುಧಂ ಜಾಮದಗ್ನ್ಯಂ ಬಲ್ಲಂ ರಾಮಂ ನದೀಜಂ (ಎಕ. VI, ಚಿಕ್ಕಮ. ೭೭-೩೯ ; 1180) ; ತತ್ಸೇನೆ ದಾವಾಗ್ನಿಯಿಂ ನೆಲೆವೆರ್ಚಿರ್ದಟವೀ ಪ್ರತಾನವೆಂಬುದಿಯುತ್ತಿರ್ದಪ್ಪುದೆಂಬಂದದಮಂ ಗೆಲೆ ಮಾಡಿತ್ತು ನದೀಜನುಗ್ರಶರಪಾತೋದ್ಭೂತಜಾತಾದ್ಭುತಂ (ಮಹಾನೇ. ೧೩-೧೬೬) ; ಮುರಹರ ಗುರು ನದೀಜರ ಬೀಳುಕೊಟ್ಟನು ಕೃಪನ ಮನ್ನಿಸಿ ಮನೆಗೆ ಕಳುಹಿದನು (ಕುಪ್ಪಾಲ. ೮-೧). ೪. ಅರ್ಜುನವೃಕ್ಷ ; ನೀರಂಹಲಸಿನ ಮರ ; ಕದಂಬವೃಕ್ಷ : ಕವಿಗಳ ಕೊಂಡಾಟ ವಿವಿಧರೂಪಗಳನ್ನು ತಾಳಿತು. ಮರಕ್ಕೆ ಅವರು ಕೊಟ್ಟಿರುವ ವಿಶೇಷಣಗಳನ್ನು ನೋಡಿ. ಷಟ್ಪದೇಷ್ಟ . . ನದೀಜ, ದಾಸವೃಕ್ಷ (ಹಸುಹೂ. ೪೬). [ ಸಂ. ]

**ನದೀಜಾತ** (ನಾ). = ನದೀಜ ೩ : ವೈರಾಗ್ಯಂ ಭೋಂಕನೆ ಕೆಯ್ಗೆ ಮನಕ್ಕಾಗಳಾ ನದೀಜಾತಂ ಸಂಸಾರಕ್ಕೇವೈಸಿ ದಯಾಧಾರಂ ಪರಮಾತ್ಮತತ್ತ್ವನಿಷ್ಠಿತನಾದಂ (ಮಹಾನೇ. ೧೩-೧೬೩). [ ಸಂ. ]

**ನದೀತನೂಜ** (ನಾ). = ನದೀಜ ೩ : ಆಗಳ್ ನದೀತನೂಜಭಾರದ್ವಾಜ ಕೃಪರವಿರಳ ಬಾಷ್ಪವಾರಿ ದುರ್ದಿನ ದೀನಾನನರಾಗಿರೆ ವಿದುರಂ ತಾನಱಿದುಮಱಿಯದಂತೆ ಶೋಕಾಕ್ರಾಂತನಾಗಿ (ಪಂಪಭಾ. ೩-೮ ವ). [ ಸಂ. ]

**ನದೀತರಣ** (ನಾ). ಹೊಳೆಯನ್ನು ದಾಟುವಿಕೆ : ಹಯಶಾಸ್ತ್ರಂ ಸೂಪಶಾಸ್ತ್ರಂ ನದೀತರಣಂ ತಾಪನವಿಂದ್ರಜಾಲಮೆಂಬಿಂ . . . ಅಖಿಲವ್ಯಾಹೋತ್ಕರಮೆಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪಪು. ४-೩೯). [ ಸಂ. ]

**ನದೀತೀರ** (ನಾ). ಹೊಳೆಯ ದಂಡೆ,-ತೀರ : ಬಾಳೆಯ ಗರ್ಭದೊಳಿರ್ದ ಬಾಳೆಯಂ ಬಾಳನುಮಂ ಕಂಡೆತ್ತಿಕೊಂಡು ಮತ್ಸ್ಯಗಂಧಿಯುಂ ಮತ್ಸ್ಯಗಂಧನುಮೆಂದು ಪೆಸರನಿಟ್ಟು ನಡಪಿ ಯಮುನಾನದೀತೀರದೊಳಿರ್ಪನ್ನೆಗಂ (ಪಂಪಭಾ. ೧-೬೮ ವ) ; ಆ ನದೀತೀರಕ್ಕೆ ಸಮಾಧಿಗುಪ್ತರೆಂಬ ದಿವ್ಯಮುನೀಶ್ವರರ್ ಬಂದಸ್ತಮಯಸಮಯದೊಳ್ ರಾತ್ರಿಪ್ರತಿಮೆಯೊಳಿರೆ (ಮಹಾನೇ. ೦೩-೧೦ ವ) ; ನದೀತೀರದ ರಮ್ಯಸ್ಥಾನ (ಜೀಸೆಹು. ೬೨). [ಸಂ.]

**ನದೀನಂದನ** (ನಾ). = ನದೀಜ ೩ : ನದೀನಂದನೋ ವಾರಣಾಸಿಯಂ ಪೊಱಮಟ್ಟೇಕೆ ಬಂದಿರಲ್ಲಿರ್ದಿರೆಂದುಂ ಬೆಸಗೊಳ್ವುದುಂ (ಮಹಾನೇ. ೯-೧೧೦ ವ) : ಈ ನದೀನಂದನನ ಬಲದಲಿ ಸೇನೆ ಶಿಸಗಂಜುವುದೆ (ಕುಪ್ಪಾಳ. ೧-೩೩). [ ಸಂ. ]

**ನದೀನಾಥ** (ನಾ). ೧. ಹೊಳೆಗಳ ಒಡೆಯ ; ಸಾಗರ ; ಸಮುದ್ರ. ೨. [ಜೈನ] ಒಂದು ಕಾಲಪ್ರಮಾಣ : ಕಿಕ್ಕಲ್ಪ ಷೋಡಶ ನದೀ[ದೀ]. ನಾಥೋಪಮಾಯುಷ್ಯಂಬರಂ ದಿವ್ಯಸುಖಮನುನಂಡು (ಮಹಾನೇ. ೦೩-೧೪೬ವ). [ಸಂ. ]

**ನದೀನಿಕಟ** (ನಾ). ತೊರೆಯ ತೀರದ ಪ್ರದೇಶ ; ಹೊಳೆಯ ತೀರ : ವಿದಳಿತ ಕಂಜವಿಲ್ಲದ ಕೊಳಂ ಗಜವಿಲ್ಲದ ಕಾಡು ಚೂತವಿಲ್ಲದ ಬನವಂಚೆಯಿಲ್ಲದ ನದೀನಿಕಟಂ . . . ಅತ್ಯುದಾತ್ತಗುಣವಿಲ್ಲದ ಮಾನವರಿಲ್ಲದೆಲ್ಲಿಯುಂ (ಪುಷ್ಪಪು. ೨-೧೦೦). [ ಸಂ. ]

**ನದೀಪೂರ** (ನಾ). ಹೊಳೆಯ ಪೂರ್ಣಪ್ರವಾಹ ; ತುಂಬುಹೊಳೆ : ಘನಶೋಕ : ಘನಾಗಮಜಳಜನಿತೋತ್ಕರ್ಷಮನನೂನಬಾಂಧವಜನಿತಾಶ್ರುನದೀಪೂರಮನುಡುಗಿಪುದಿನತೇಜವಸಂತದಂತೆ ಬಂದೀ ಕ್ಷಣದೊಳ್ (ಚಂದ್ರಪು. ೩-೦೪). [ ಸಂ. ]

**ನದೀಪ್ರವಾಹ** (ನಾ). ಹೊಳೆಯ ಪ್ರವಾಹ,-ಹರಿವು : "ಓಟ್ಯ-ನದೀಪ್ರವಾಹಂ" (ಶಮದ. ಪರಿ. ೧) ; ತೊಲಗಿರೈ ಮುನಿವರರು ಓಡಿದೇ ಹೊಳೆಯೊಳಗೆ ಹೋಗದಿರಿ ದಿಪದಿಂದೀದ ದಿವ್ಯನದೀಪ್ರವಾಹದ ಸತ್ಕೃತಮವೆನಲು ಅಲಘುಮತಿ ಕೇಳುತ್ತ ಘುಳುಘುಳುಘುಳು ವಿುಗಲು ಬಹ ನದಿಯನೀಕ್ಷಿಸಿ ತೊಲಗದಾಪೋಶನವ ಕೊಂಡನು ಜನ್ಹುಮುನಿ ನಗುತ (ನಿಘಾಗ. ೯-೮-೪೬). [ ಸಂ. ]

**ನದೀಬೂಡು** (ಗು). ನದಿಯಲ್ಲಿ ನೆರೆ ಬಂದಾಗ ನೀರಿನಲ್ಲಿ ಮುಳುಗುವ ; ಹೊಳೆ ಸಾಲಿನ : ದೇಸಾಯರ 'ನದೀಬೂಡು' ಜಮೀನು, ನಾಡಗೌಡರ 'ಮಡಿಗಟ್ಟೆ', ಕೇಶವರಾಯನ ಮಾವಿನ ಗಿಡಗಳು ನಿನ್ನ ಕಣ್ಣು ತುಂಬಲಿಲ್ಲವೆ? (ಹಳ್ಳಿಬ. ೩೩). [ ←ಮರಾ. ನದೀಬುಡ ]

**ನದೀಮಾತೃಕ** (ನಾ). ೧. ಹೊಳೆಯ ನೀರಿನಿಂದ ಬೆಳೆ ಬೆಳೆಯುವ ಭೂಮಿ ; ನೀರಾವರಿ ಭೂಮಿ : "ತೊಱೆಯ ನೀರಿಂ ಬೆಳೆವ ಭೂಮಿ ನದೀಮಾತೃಕವೆಂಬುದು" (ಹಲಾಯು. ೨೭-೬) ; "ಹೊಳೆಯ ನೀರಿಂ ಬೆಳೆವ ಮಹಿ ನದೀಮಾತೃಕಂ" (ಮಂಗರಾ. ೨೪-೪) ; ಭೂತಲವರ್ತಿಯಪ್ಪ ವಿಷಯಾಳಿ ವಿಚಾರಿಪೊಡಾವಗಂ ನದೀಮಾತೃಕ ದೇವಮಾತೃಕಮೆ (ಚಂದ್ರಪು. ೧-೯೦) ; ಅದಲ್ಲದೆಯದೆ ನದೀಮಾತೃಕಮುಂ ದೇವಮಾತೃಕಮುಮೆಂಬ ಭೇದಮುಂ ಬೇರ್ಪಡಿಸಿ (ಪುಷ್ಪಪು. ೨-೦೪೫) ; ನೂತನ ನಾರಿಕೇಳಜಲದಿಂ ಧವಳೇಕ್ಷುಗಳಾವಗಂ ನದೀಮಾತೃಕ ದೇವಮಾತೃಕದ ಪಂಗುಳಿದೊಳ್ಳಿಳಸಾಗಿ ರಂಜಿಕುಂ (ತ್ರಿಪುವಿ. ೨-೩೬) ; ಬೆಳೆವುವು ಶಾಲಿ ಪಾಮರಿಯರ ಮೊಗಸಸಿ ವೆಳಗಿಗೊಸರುವಿಂದುಕಾಂತದ ಜಲದಿಂದೆ ದೇವಮಾತೃಕ ನದೀಮಾತೃಕಗಳ ಬಗೆಗೊಳಪ್ಪಾ ನಾಡೊಳು (ತ್ರಿಭುತಿ. ೨-೦೪). ೨. ಗದ್ದೆ ; ತರೀ ಜಮೀನು. 'ದೇವಮಾತೃಕ' ಪರಾ. [ ಸಂ. ]

**ನದೀಮಾತೃಕೆ** (ನಾ).=ನದೀಮಾತೃಕ ೧ : ದೇವಮಾತೃಕೆ ನದೀಮಾತೃಕೆಯಾದ ನಾನಾವಿಧ ಬೆಳೆಯ ಭೂಮಿಗಳು ಅವಾಗ ಬೆಳೆದೊಱಗುವ ಧಾನ್ಯಸಂದೋಹಕಾವಾಸವಾಗಿರುತಿಹುದು (ನಾಗಕು. ೨-೦೫). [ ಸಂ. ನದೀಮಾತೃಕಾ ]

**ನದೀಮುಖ** (ನಾ). ಹೊಳೆಯು ಸಮುದ್ರಕ್ಕೆ ಸೇರುವ ಸ್ಥಳ; ಅಳಿವೆ: ಸ್ವಯಂಭೂರಮಣ ಸಮುದ್ರದ ಮಹಾಮತ್ಸ್ಯಂಗಳ್ಸಾಸಿರಯೋಜನದೀರ್ಘಂ ನದೀಮುಖದೊಳು ಐನೂಱು ಯೋಜನ ನೀಳಂ (ಧ್ಯಾವಕಾ. ೧೩೩) ; ನದೀಮುಖ (The mouth) ಅಂದರೆ ನದಿಯು ಸಮುದ್ರಕ್ಕೆ ಸೇರುವ ಸ್ಥಳ (ಭೂಗೋಳ. ೧೨) ; ಗಂಗಾನದಿಯಲ್ಲಿ ನದೀಮುಖದಿಂದ ಎಪ್ಪತ್ತುಮೈಲಿಗಳವರೆಗೂ ಹಡಗುಗಳು ಹೋಗುತ್ತವೆ (ಸಕಡಿ. ೩೦) ; ಈ ವಲಯದಲ್ಲಿ ನದೀಮುಖಗಳಲ್ಲಿರುವ ಮೆಕ್ಕಲುಮಣ್ಣು ನೀರಾವರಿಗೆ ಅನುಕೂಲವಾಗಿದೆ (ಶಿಲ್ಪಸಾ. ೩೬೧). [ ಸಂ. ]

**ನದೀಮುಖಖಂಡ** (ನಾ). = ನದೀಮುಖಜಭೂಮಿ: "ನದೀಮುಖಖಂಡ ಅಥವ ಡೆಲ್ಟ (Delta)" ಅಂದರೆ ಒಂದು ನದಿಯ ಮುಖಭಾಗದಲ್ಲಿರುವ ತ್ರಿಕೋಣಾಕಾರವಾದ ಭೂಮಿ (ಭೂಗೋಳ. ೧೩). [ನದೀಮುಖ + ಖಂಡ]

**ನದೀಮುಖಜಭೂಮಿ** (ನಾ). ನದಿಯು ಸಮುದ್ರಕ್ಕೆ ಸೇರುವಲ್ಲಿ ನಿರ್ಮಾಣವಾಗುವ, ಮೆಕ್ಕಲುಮಣ್ಣಿನಿಂದ ಕೂಡಿದ ನೆಲ; ಮೆಕ್ಕಲು ಭೂಮಿ; ಜಲಾನಯನ ಭೂಮಿ: "ನದೀಮುಖದಲ್ಲಿ ಇಂತಹ ತ್ರಿಕೋನಾಕಾರವಾಗಿ ಏರ್ಪಟ್ಟ ಮೆಕ್ಕಲುಭೂಮಿ : ನದೀಮುಖಜಭೂಮಿ; ಕುದುರು" (Defn. ಇಂಕನಿ) ; ನದಿಗಳು ತಮ್ಮ ಗತಿಗಳನ್ನು ಬದಲಾಯಿಸುವುದು, ನದೀಮುಖಜಭೂಮಿಗಳಿಂದು ಹೊಸ ಪ್ರದೇಶಗಳು ಸಿದ್ಧವಾಗುವುದು . . . ಮುಂತಾದುವು ಪ್ರಕೃತಿಯಲ್ಲಿಯೇ ನಡೆದಿರುವ ಘಟನೆಗಳು

(ಭಾಇಪ್ರ. ೬) ; ದಕ್ಷಿಣ ಭಾರತದ ನದಿಗಳು . . . ಸಮುದ್ರ ಸೇರುವ ನದೀಮುಖಜಭೂಮಿಯಲ್ಲಿ ಮಾತ್ರ ಅವು ಭೂಮಟ್ಟದಲ್ಲಿ ಹರಿಯುತ್ತವೆ (ನನದಿ. ೩೨). [ ಸಂ. ]

**ನದೀಮೂಲ** (ನಾ). ನದಿಯ ಉಗಮಸ್ಥಾನ ; ನದಿಯು ಹುಟ್ಟುವ ಸ್ಥಳ : "ನದೀಮೂಲ" (Source) ಅಥವ "ಉಗಮ" ಅಂದರೆ ನದಿಯು ಹುಟ್ಟುವ ಸ್ಥಳ (ಭೂಗೋಳ. ೧೨) ; ಋಷಿಮೂಲವನ್ನೂ ನದೀಮೂಲವನ್ನೂ ಗುರುಮೂಲವನ್ನೂ ಹುಡುಕಬಾರದು (ರೂಢಿ). P ಈ ರೀತಿಯಲ್ಲಿ ಮೂಲಗಳನ್ನು ಬೆದಕುತ್ತಾ ಹೋದರೆ ಅಪ್ರಿಯವಾದ ವಿಷಯಗಳೂ, ಅಪಾಯ ಪ್ರಸಂಗಗಳೂ ಉಂಟಾಗುತ್ತವೆ ಎಂಬುದು ರೂಢಿವಾಕ್ಯದ ತಾತ್ಪರ್ಯ. [ ಸಂ. ]

**ನದೀಯೋಜನೆ** (ನಾ). ನದಿಗಳಿಂದ ಉಪಯೋಗ ಪಡೆಯಲು ಅಣೆಕಟ್ಟು ಕಟ್ಟುವ ವ್ಯವಸ್ಥೆ,–ಏರ್ಪಾಡು : ನದೀಯೋಜನೆಗಳು ನಮ್ಮ ದೇಶದ ಇಂಜಿನಿಯರ್‌ಗಳ . . . ಕೆಲಸಗಾರರ ಪ್ರತಿಭೆಯ ಪ್ರತೀಕಗಳು (ನನದಿ. ೩೪). [ ಸಂ. ನದೀಯೋಜನಾ ]

**ನದೀಸರ್ಜ** (ನಾ). ಒಂದು ಬಗೆಯ ಮರ ; ಅರ್ಜುನವೃಕ್ಷ ; ಮತ್ತಿಮರ : "ನದೀಸರ್ಜಃ, ವೀರತರುಃ, ಇಂದ್ರದ್ರುಃ, ಕಕುಭಃ, ಅರ್ಜುನಃ–ಈ ತೊರೆಮತ್ತೀಗಿಡ, ಕೆಂಪುಮತ್ತೀಗಿಡ, ರಕ್ತಾರ್ಜುನವೃಕ್ಷ" (ಸಿದ್ಧಾಂತಿ. ೧೨೨). [ ಸಂ. ]

**ನದೀಸುತ** (ನಾ). = ನದೀಜ ೩ : "ನಾದೇಯಃ, ನದೀಸುತಃ–ಈ ೨ ನದಿಯ ಮಗನು" (ಹಲಾಯು. ೬೨–೩೪೬) ; ಗುರು ಗುರುಪುತ್ರ ಶಲ್ಯ ಭಗದತ್ತ ನದೀಸುತರೆಂಬ ಸಂದ ಬೀರರೆ ಮುಖ್ಯವಕ್ಕುಂ (ಪಂಪಭಾ. ೧೧–೧೨); ತ್ರಿದಶನದೀಸುತನಿಂ ತೀರದ ಕಜ್ಜಂ ಮುನ್ನಂ ಕಳಶಸಂಭವನಿಂ ತೀರದ ಕಜ್ಜಮಿನಜನಿಂ ತೀರದ ಕಜ್ಜಂ ದ್ರೋಣಪುತ್ರನಿಂ ತೀರ್ದಪುದೇ (ಗದಾಯು. ೩–೬೦) ; ಆ ನದೀಸುತನಡಿಗೆರಗಿ ರವಿಸೂನು ಕಳುಹಿಸಿಕೊಂಡು ಬಹಳ ಮನೋನುರಾಗದಲೈದಿದನು ಕುರುರಾಯನೋಲಗವ (ಕುಮ್ಮಾದ್ರೋ. ೧–೬೨). [ ಸಂ. ]

**ನದೀಸೂನು** (ನಾ). = ನದೀಜ ೩ : ಕಾನೀನಂ ದ್ರೋಣ ನದೀಸೂನುಗಳ ಬಿದಿಂಬಳಿಕ್ಕೆ ಪೆಱರೆನಗಿಲ್ಲೆಂದಾನೆ ಗೞಿತಾಶ್ರುಜಲದಿಂ ಸೇನಾಪತ್ಯಾಭಿಷೇಕಮಂ ಮಾಡಿದಪೆಂ (ಗದಾಯು. ೩–೬೬). [ ಸಂ. ]

**ನದೀಹ್ರದ** (ನಾ). ನದಿಯ ಆಳವಾದ ಭಾಗ ; ಮಡು : ಜಳಾವಗಾಹಾಸಯಿಂ ವೈತರಣಿಯ ಪಿರಿಯ ದಱಿಯಂ ಮೆಟ್ಟಿ ನುಣ್ಣಣಲಂ ಮಣಲ್ದಿಂಟೆಗೆತ್ತದು ಪರಿತಪ್ತಲೋಹರಜಸ್ಸಿಕತಿಳತಳದೊಳ್ ಮೆಯ್ಯನೀಡಾಡುವುದುಂ . . . ಅಂತಲ್ಲಿಯುಂ ಸೈರಿಸದೆ ನದೀಹ್ರದಮಂ ಪುಗುವುದುಂ (ಶಾಂತಿಪು. ೬–೯೭). [ ಸಂ. ]

**ನದುಗು₁** (ಕ್ರಿ). ಪರಾಙ್ಮುಖವಾಗು ; ಮುಖ ತಿರುಗಿಸು : ಒದವಿದ ಪುರುಡಿಂದಂ ನೋಡದು ನುಡಿಯದು ಪೊರ್ದದೆನಿತು ಕಾಲ್ವಿಡಿದೊಡಮೊಲ್ಲದು ಕಿನಿಸಿ ಕಡುಪಿನಿಂದಂ ನದುಗಿದಪುದು ತಿಳಿಯದೆಂತುಮಾರ್ ತಿಳುಪಿದೊಡಂ (ಕಾದಂಬ. ೬೬). [ ? ]

**ನದುಗು₂** (ನಾ). ಗುನುಗು : ಮಾವನ ಕಡೆಯಿಂದ ಏನೂ ಬಂದಿದೆ ಅವನಿಗೇನು ನದುಗು ? (ರೂಢಿ). [ ? ]

**ನದುರು** 'ನಜರು' ನೋ.

**ನದರುಗಾಣಿಕೆ** 'ನಜರುಗಾಣಿಕೆ' ನೋ.

**ನದುಳು** (ಗು). ೧. ಒಳಗಿರುವ ; ಹುದುಗಿರುವ ; ಮುಚ್ಚಿಟ್ಟಿರುವ : ಕೆದರಿದಾಲಿಯ ಕಿಡಿಯ ಮಾಲೆಯ ವದನದೆಗಹಿನ ದೌಂಷ್ಟ್ರ ಬಿಗುಹಿನ ನದುಳು ಜಿಹ್ವೆಯ ಗಳದ ಹ್ರುಂಹೆಯ ಸುಯ್ಲ ಹೊಯ್ಲುಗಳ ಮೇಯ ನಾಮದ ಬಧಿಯ ರೋಮದ ತ್ರಿದಳ ಕರ್ಣದ ಕದಳಿವರ್ಣದ ಮದದ ಕೇಸರಿಯುದಿಸಿ ರೋಷದಿ ಕವಿದವರಿಭಟನ (ಅಂದಿಕಾ. ೩೨–೩೮). (ನಾ). ೨. ಮುಚ್ಚಿಟ್ಟಿರುವಿಕೆ ; ಹುದುಗಿರುವಿಕೆ : ವಿಷದ ಲಹರಿಯ ಲಳಿಯ ನದುಳಿನ [ಪಾಠಾಂ. ಉಸುರಿನ] ಹ ಸ ರಿ ಕೆ ಯ ಚೂರಿಸುವ ಜಿಹ್ವಾಪ್ರಸರದುರುಫೂತ್ಕಾರದಹಿಪಂಜರದ ಮಧ್ಯದಲಿ ಎಸೆದನೈ ಲವ (ತೊರರಾ. ೬–೧೬–೯). 'ನದುಳುನಗೆ' ಪರಾ. [ ? ]

**ನದುಳುನಗೆ** (ನಾ). ಹೊರತೋರದ ನಗೆ ; ಹತ್ತಿಕ್ಕಿದ ನಗೆ ; ಅಂತರಂಗಿಕವಾದ ನಗೆ : ನೋಡಿದುದಖಿಳಖಳನಿಕರ ನದುಳು [ಪಾಠಾಂ. ಪುದಿದ]ನಗೆಗಳ ಮೊಗದ ಮುರುಹಿನ ವದನದರಮುಸುಕುಗಳಲಿದ್ದುದು (ತೊರರಾ. ೩–೬–೧೩) ; ನ[ಪಾಠಾಂ. ನು] ದುಳುನಗೆಗಳಲಿವರು ಮೂವರು ಪುದಿದ ಪರಿತೋಷದಲಿ ರಾಮನ ಪದಪಯೋಜವ ಸಾರಿದರು ಕಪಿಕಟಕನಲಿದಾಡೆ (ತೊರರಾ. ೬–೨೭–೬೨). [ ನದುಳು + ನಗೆ ]

**ನದ್ಧ** (ಗು). ೧. ಸೇರಿರುವ; ಕೂಡಿಕೊಂಡಿರುವ ; ಕಟ್ಟಿದ. (ನಾ). ೨. ಬದ್ಧನಾದವನು ; ಒಳಪಟ್ಟವನು ; ಸೇರಿದವನು : "ಬದ್ಧಃ, ನದ್ಧಃ, ಸಂಯುತಃ–ಈ ೩ ಕಟ್ಟುಪಟ್ಟವನು" (ಹಲಾಯು. ೫೬–೧೮೫) ; ಕರಿಸೇನಾಸಾರಿನದ್ಧೋತ್ತರಳಕದಳಿಕಾಕಾನನೋಚ್ಚುಂಬ್ಯಮಾನಾಂಬರಚಕ್ರಂ (ಆದಿಪು. ೪–೨೪). [ ಸಂ. ]

**ನದ್ಧ್ರೀ** (ನಾ). ಚರ್ಮದ ಪಟ್ಟಿ ; ತೊಗಲಿನ ಹಗ್ಗ : "ನದ್ಧ್ರೀ ವಧ್ರೀ ಸಂಜ್ಞೆಯದು ವರತ್ರೆಯೆನಿಕ್ಕುಂ" (ವಸ್ತುಕೋ. ೫೧–೩೬) ; ನದ್ಧ್ರೀ, ವಧ್ರೀ, ವರತ್ರಾ–೩ ತೊಗಲ ಮಿಣಿಯ ಪೆಸರು, ತೊಗಲ ಹಗ್ಗ" (ಸಿದ್ಧಾಂತಿ. ೨೩೯). [ ಸಂ. ನದ್ಧ್ರೀ ]

**ನದ್ಯಂಬು** (ನಾ). ನದಿಯ ನೀರಿನ ಆಶ್ರಯ. [ ಸಂ. ]

**ನದ್ಯಾಮ್ರ** (ನಾ). ಒಂದು ಬಗೆಯ ಸಸ್ಯ : "ಉಪಕರದಂತಿ–ನದ್ಯಾಮ್ರ" (ಓಷಧಿ. ೧೬). [ <ಸಂ. ನದ್ಯಾಮ್ರ ]

**ನದ್ಯುತ್ತರಣ** (ನಾ). ನದಿಯನ್ನು ಹಾಯುವಿಕೆ,–ದಾಟುವಿಕೆ : ಅಂತುಭಯನದಿಯ ವೈಷಮ್ಯಮುಮನಾಶ್ಚರ್ಯಂಬಟ್ಟು ನೋಡಿ ನದ್ಯುತ್ತರಣೋಪಾಯಮಾವುದೆಂದು ಬಗೆದು (ಆದಿಪು. ೧೩–೫೧ವ). [ ಸಂ. ]

**ನನವತಿ** (ನಾ). ಒಂದು ಸ್ಥಳದ ಹೆಸರು : ನೆಲ್ಲಿ ಕುಡಿಕ್ಕಿಯುವಳಿ ನನವತಿ ಸಾಗಲ ತಟಾಕಸ್ಕಾತ್ (ಮ್ಯುಆರಿ. ೧೯೩೯, ೩೦–೩೯ : 670). [ ? ]

**ನನವರಿಕೆ** 'ನೆನವರಿಕೆ' ನೋ.

**ನನಸು, ನೆನಸು₁** (ನಾ). ನಿಜಸ್ಥಿತಿ ; ವಾಸ್ತವಸ್ಥಿತಿ ; ಸತ್ಯ ; ದಿಟ ; ನಿಶ್ಚಯ : "ನನಸು = ದಿಟಂ" (ಕಮುದ. ಪರಿ. ೨) ; "ನನ್ನಿ, ನಿಕ್ಕುವಂ, ನಿಸದಂ, ಸಾಜಂ, ನೆ[ಪಾಠಾಂ. ನೆ]ನಸು, ದಿಟಂ–ಈ ೬ ಸತ್ಯಂ" (ಕಕಸಾ. ೦೩–೨೪೪) ; ಪುಳಿನಕಲಿಸರಪ್ರದೇಶದೊಳ್ ಮಱಿದೊಱಗುವೈರಾವತದಂತೆ ಪವಡಿಸಿ ಕಿಱುದಾಸಾಂ ಬೇಗದೊಳ್ ಸುಭದ್ರೆಯುಂ ಕನಸಿನೊಳ್ ಕಂಡು ನನಸೆಂದು ಬಗೆದು (ಪಂಪಭಾ. ೪–೧೧೦ವ) ; ಭೀತಿಯುಂಬಟ್ಟದನೆ ಕನಸು ಗಂಡುಮ್ಮಳಂಗೊಂಡು ಚೋದ್ಯಂ ನನಸೆಂದೆಚ್ಚತ್ತಿರುತ ತಂನೆಯ ತಲೆಯನತಿಭ್ರಾನ್ತನಂದಿಂದು ನೋಳ್ಕುಂ (ಎಕ. VII, ಶಿವಮೊ. ೬೪–೩ : 1112) ; ಕನಸೆಂದೊಡಂ ನನಸೆಂದಾಳ್ದಳ್ [ಪಾಠಾಂ. ನೆನಸೆನುತ್ತಾಂತಳ್] ಮಹಾಚಿಂತೆಯಂ (ಜಗವಿ. ೧೬–೧೦೬) ; ತಮ್ಮ ಕಲ್ಪನೆಯ ಕನಸನೆ ನನಸಿನ ನನ್ನಿ ಎಂಬಂತೆ ಏನೇನೊ ಕಣವೇಳುತಿಹುದವರ ಚಾಳಿ (ಚಂದ್ರಸ. ೧೨–೨೨); ಅವಳು ಕನಸಿನಲ್ಲಿ ಮೈತೋರಿ, ನನಸಿನಲ್ಲಿ ನಿಧಿಯನ್ನು ತೋರಿಸಿಕೊಟ್ಟಳು! (ರಾಚ್ಕೋದ. ೧೮೬). **ನೆನಸು₁** : "ನೆನಸೆಂದು ದಿಟಂ" (ಚತುವಿ. ೯೧೦) ; "ನನ್ನಿ ಸಾಜ ನೆನಸುಂ ದಿಟಮೆಂದುಸಿರಲ್ಕೆ ಸತ್ಯಮಕ್ಕುಂ" (ಕವಿಕಂ. ೧೨೧೦); "ನೆನಸೆನಲ್ ನಿಶ್ಚಯಂ" (ಕಜ. ೫೬) ; ಕನಸು ಧನದತ್ತಂ ನೆನಸೆಂದು ಭೋಂಕನೆಚ್ಚತ್ತು (ಪಂಚತಂ. ೪೧೦–೧೦) ; ಕನಸಿಂದಂ ನೆರೆದಪನರ ನೆನಸಿಂ ನೆರೆದಪ್ಪೆನೆಂದು ತರವೇಟ್ಟಪೆ ಕುಂತನಂ ((ಜಗವಿ. ೧೬–೧೦೨); ಧನುಜರಟ್ಟಿದ

ಕನಸ ಕಂಡರೆ ನೆನಸಿನಲಿ ನರರಂಜುತಿಪ್ಪರು (ಕಾಶಿರಾ. ೩೩-೮); ಮಱುವಗಲುದಯದೊಳರಸಂ ತುಱುಗಿರೆ ಕಡುಹರಿಸಮಿರುಳ ಕನಸಂ ನೆನಸೆಂದೞಿವಲಳೆಸಿಂಗರಾರ್ಯರನು ಬಿದಿಂದಂ ಕರೆಯಲಟ್ಟಿದಂ ಪಡಿಯಱರಂ (ಚಕವಿ. ೩-೧೦೦).

**ನನಸಾಗು, ನೆನಸಾಗು** = ಪ್ರತ್ಯಕ್ಷವಾಗಿ ಕಾಣುವಂತಾಗು; ವಾಸ್ತವವಾಗು: ನುಡಿದೊಡಂ ಬರೆಯಿಸಿದೊಡಂ ಕಳಿಪಿದೊಡಂ ನನಸಾಗಿ ತೋಱಲಕ್ಕುಮೆ (ಶಬ್ದರಾ. ೧೦-೧೪೪); ಅವನು ಕಾಣುತ್ತಿದ್ದ ಕನಸುಗಳೆಲ್ಲಾ ನನಸಾದವು (ರೂಢಿ): ಅಂತುದಾರಮಹೇಶ್ವರನೀಶ್ವರವರಪ್ರಸಾದವೆಲ್ಲಂ ತನಗೆ ನೆನಸಾಗೆಯುಂ ಕನಸಿನಂದದವಾಗಿ ತೋಱೆ (ಪಂಪಭಾ. ೧೧-೧೩೦ ಪ).

[ದೇ.॥ ತಮಿ. ನನವು, ನನಾ]

**ನನಸುಗಿರು** (ಕ್ರಿ). ದಿಟವೆಂದು ಭಾವಿಸು; ನಿಜವೆಂದು ಭ್ರಮಿಸು: ಅಹುದೆ! ಬರಿದೆ ಬೆದರಿದೆ, ಅಜ್ಜ, ಕನಸಂ ನನಸುಗೆತ್ತು! (ಚಂದ್ರಸ. ೨೬-೨೩).

[ನನಸು + ಗಿರು (< ಗಿಱು)]

**ನನಾಂದೃ** (ನಾ). ಗಂಡನ ಸೋದರಿ; ನಾದಿನಿ ಅಥವಾ ಅತ್ತಿಗೆ: "ನಾದುನಿ ನನಾಂದೃ ನಂ[ನಾ]ದಿನಿಯೆನಿಕುಂ" (ವಸು. ಕೋ. ೫೭-೨೪); ಋಕಾರಾಂತಕ್ಕೆ-ಪಿತೃ, ಸವಿತೃ . . . ನನಾಂದೃ, ಯಾತೃ, ಮಾತೃ, ಧಾತೃ (ಶಮದ. ೮೪ ಪ್ರಯೋ). [ಸಂ.]

**ನನೂರು** 'ನಾಲ್ನೂಱು' ನೋ.

**ನನೆ$_1$, ನೆನೆ$_2$** (ಕ್ರಿ). ನನೆತು, ನನೆದು, ನೆಂದಂ, ನೆನೆದು (ಭೂತನ್ಯೂ). ೧. ಆರ್ದ್ರವಾಗು; ಒದ್ದೆಯಾಗು; ತೋಯು: "ನನೆ-ಆರ್ದ್ರಭಾವೇ, ಪುಷ್ಪಕುಟ್ಮಲೇ ಚ (ಮೊಗ್ಗು)" (ಶಮುಧಾ); ಅಂತೆಟ್ಟಿತ್ತು ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮಂ ತೊಯ್ದು ತಳ್ಪೊಯ್ದ ಜಡೆಯುಮಂ ಕಂಡು (ಪಂಪಭಾ. ೧-೧೦೫ವ); ನಿರವಧಿಪ್ರೇಯಪ್ರೀತಿವಹನಂ ಪುಳಕದೊಳ್ ನನೆತು ಹರ್ಷದೊಳರಲ್ದು ಆನಂದಾಶ್ರುಭರದೊಳ್ ತುಳುಂಕಿ (ಆನಂಪು. ೩-೩೪ವ); ಮೊಮ್ಮಂದಿರುಗಳಳಲಿನ ಘನತೆಯನು ಕಿವಿಗೊಟ್ಟು ಕೇಳಿದು ನನೆದುದಂತಃಕರಣ ಕಂಬನಿದುಂಬಿದನು ಭೀಷ್ಮ (ಕುವ್ಯಾಭೀ. ೭-೨೪); ಎಲೆ ವನಜಾಕ್ಷ ಬೆಟ್ಟುಮಂ ಕೊಡೆವಿಡಿದು ಪಟ್ಟಿಯಂ ನನೆಯಲೀಯದವೋಲೀ ಪಾರ್ಥನಂ ರಕ್ಷಿಸುವೆ ನೀಂ ಕೃಪೆಯೊಳು (ಜೈಮಿಭಾ. ೦೭-೩೪). ೨. ನೀರನ್ನು ಹೀರಿ ಮೃದುವಾಗು,-ಮೆಂತ್ರಗಾಗು: ಕಲ್ಲೆಂತುಂ ನನೆಯದವೋಲ್ ಪೊಲ್ಲಮೆಯೊಳ್ ಕೂಡಿ ರೌರವಕ್ಕಿಟಿವವರುಂ ಸಲ್ಲಲಿತಮಪ್ಪ ಧರ್ಮಕ್ಕೆಲ್ಲಿ ಯುಮೋರಂತೆ ಬಾರರಘವಶದಿಂದಂ (ಧರ್ಮಾಮೃ. ೧೦-೧೬೭); ಉತ್ತಮದ ಸೊಪ್ಪಿಗೆಯ ಬಟ್ಟವಾಲೊಳು ನನೆಹಿ ಮತ್ತೆ ನನೆ [ಪಾಠಾಂ. ಮೆತ್ತನಾ]ದಾಗ ತೆಗೆದದನು ಪಿಟ್ಟೆಯ ಹಿಟ್ಟನೊತ್ತಿ (ಸೂಪಶಾ. ೧-೧೧). **ನೆನೆ$_2$**: ೧. ಎಱೆದರೆ ನೆನೆಯದು ಮಱೆದರೆ ಬಾಡದು ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ (ಬಸವ. ೧೯೩); ಚಿತ್ರಜಾಂತಕನೊಂದುದಿನವುದ್ವೃತ್ತತಪೋಧನ ವೇಷದಿಂ ನೆನೆವುತ್ತ ಮಳೆಯೊಳು ನಡುಗುತಂ ನಡುವಿರುಳು ನಡೆತರಲು (ಬಸಪು. ೨೭-೪೭); ಸೂಕ್ತಿಸುಧಾರಸದಿ ನೆಱೆ ನೆನೆದುದಾತನ ಮೈ ವಿಲೋಚನವಾರಿಪೂರದಲಿ (ಕುವ್ಯಾಕ. ೧೭-೨೩); ಮೊದಲೇ ಸೀಮೆಎಣ್ಣೆ ಯಲ್ಲಿ ನೆಂದ ಚಂಡು ಉರಿಯತೊಡಗಿತು (ಗೋಪುರ. ೪೪); ನೆನೆದ ಕಲ್ಲು ಮೆತ್ತಗೆ ಆದೀತೇ? (ಗಾದೆ). ೨. ಕೂಡಲಸಂಗಮದೇವ ಬಱಿಯುದಕದಲ್ಲಿ ನೆನೆವನೆ (ಬಸವ. ೦೮೪); ಧರಣಿ ನೆನೆದುದು ಗಂಧರಸಕಸ್ತುರಿಯ ಪನ್ನೀರುಗಳ ಹೊಸಲೊಡೆವೆರಸಿ (ಕುವ್ಯಾವಿ. ೧೦-೯೩). 'ನೆನೆಗಡಲೆ', 'ನೆನೆಯಕ್ಕಿ$_1$' ಪರಾ. [ದೇ.॥ ತಮಿ. ನನ್ನೈ; ಮಲ. ನನ, ನನೆ; ತುಳು. ನನೆ; ಕೊಡ; ನೆಲೆ, ನೆಲ]

**ನನೆ$_2$** (ಕ್ರಿ). ೧. ಹೂವು ಬಿಡು; ಮೊಗ್ಗಾಗು; ಮುಂಗುಳಾಗು: "ನನೆತು ದೆಂದು ನನೆವೆತ್ತುದು" (ಕಶಸಾ. ೯-೦೮೯); "ನನೆತುದು ನನೆಯೇಱಿದುದು" (ಕವಿಶಂ. ೭೭); "ನನೆತುದೆನೆ ಮೊಗ್ಗೇಱಿದುದು" (ಕಶರ. ೫೩); ತಳೆತೆತ್ತೊ ಱುಗುವಶೋಕೆಗಳುಂ ನನೆತೆಟಲ್ದ ಜಾದಿಗಳುಂ ಮುಗುಳ್ತು ಮಂಜಿವ ಮೊಲ್ಲೆಗಳುಂ (ಲೀಲಾವ. ೬-೬೦ ಪ): ಬೆಳಕು ಚೆಂಕಿ ಬೆರೆತುಕೊಂಡು ಭಾವವು ಹೊರದೂಡಿರೆ ಬಾಳು ಮೊಳೆತು ಸುಗ್ಗಿ ನನೆತು ಹೂವಿನಂತೆ ಮಾಡಿರೆ (ಗಂಗಾತ. ೨೩-೭). ೨. ಚಿಗುರು ಬಿಡು; ಅಂಕುರಿಸು. 'ನನೆವೊಯ್' ಪರಾ. [ದೇ.॥ ತಮಿ. ನನ್ನೈ; ತೆಲು. ನನಯು, ನನಚು, ನನಚು]

**ನನೆ$_3$** (ನಾ). ೧. ಅರಳದ ಹೂವು; ಮೊಗ್ಗು; ಕುಟ್ಮಲ: "ನನೆ-ಆರ್ದ್ರಭಾವೇ, ಪುಷ್ಪಕುಟ್ಮಲೇ ಚ" (ಶಮುಧಾ); "ನನೆ ಕುಟ್ಮಲಂ" (ಕಶಸಾ. ೯-೧೪೫); "ನನೆಯೆನಲು ಕುಟ್ಮಳಮಕ್ಕು" (ಕಶರ. ೫೩); ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಪಂಪಭಾ. ೧-೫೮ ರಗಳೆ); ಬನದಿಂ ಬನಕ್ಕೆ ನನೆಯಿಂ ನನೆಗಲರಿಂದಲರ್ಗೆ ಪೊರೆದು ಬರಯಿಗಳೆರ್ದೆ ಪೌವನೆ ಪಾಱೆ ಪಾಟುಗುಂ ಕಾಮನಿಕಾಮಶಿಲೀಮುಖರ ಶಿಲೀಮುಖನಿವಹಂ (ಮಲ್ಲಿಪು. ೨-೪೦); ತುಱುಗಿದ ತಳಿರಿಂ ನನೆಯಿಂ ಕಿಱು ಮಿಡಿಯಿಂದೆಸೆದುದೆಸದಳಂ ಮಾಕಂದಂ (ಕಾವ್ಯಾವ. ೨೩೩); ಸಣ್ಣ ನನೆಯೊಳಗಣ ಪರಿಮಳವ ಹೊಱಸೂಸಿ ಇದಿರಿಂಗೆಱುಹಿಸಬಲ್ಲುದೇ ವಾಯು (ದೇವಾಶ. ೬೩-೧೨೮); ಸಂಪಗೆಯ ನನೆಗೆಯ್ದ ಬೞಿಕೊಯ್ಯಗೆ ಜಾಱುವ ತುಂಬಿ ನಗಿಸಿದುದು ಮಲ್ಲಿಗೆಯಂ (ಕಬ್ಬಿಕಾ. ೫೮); ತನುಪುಳಕ ತಲೆದೋಱಿ ರೋಮಾಂಚನದ ಬಿಗುಹಡಗಿತ್ತು ಕಂಗಳ ನನೆಗಳರಳಿದವಾಯ್ತು ಭೀಷ್ಮಂಗಿತ್ತಣವಧಾವ (ಕುವ್ಯಾದ್ರೋ. ೦-೨೨); ಪೂವಳ್ಳಿಗಳ್ ನನೆಕೊನೆ ಮುಗುಳರೆ ಮುಗುಳ್ ಬಿರಿಮುಗುಳ್ಗಳೆಳ್ಕಲರ್ದ ಪೊಸಮಲರ್ಗಳಿಂದೆ ಸೊಗಯಿಸೆಯುಂ, ಮನೋಹರಮಪ್ಪುದು ಪೊಸಸುಗ್ಗಿ (ರಾಮಾಶ್ವ. ೦೭-೧). ೨. ಹೂವು; ಪುಷ್ಪ; ಕಂಸುಮ: ನನೆಯನ ಪೇಱಿ ಕೆಂದಳಿರೊಳೆಯ್ದೆ ಬಟಲ್ದೆಳಮಾವು (ಆದಿಪು. ೧-೬೪). 'ನನೆಗಣೆ', 'ನನೆವಾಸು' ಪರಾ.

**ನನೆಯ ಕೋಲ್** = ಹೂಬಾಣ; ಪುಷ್ಪಬಾಣ ನೀಂ ನಾಲ್ಕೆರಡು ಪಗಲೊಳೆ ವಮ್ಮಡಿಯನ ಕೈಯ ನನೆಯ ಕೋಲ ಕಾಲಾಟಮಂ ಕಾಣ್ಬೆ ರೆನುತೋಲಗಸಾಲೆಯಂ ಪೊಱಮಟ್ಟು (ಕಬ್ಬಿಕಾ. ೧೪೪). **ನನೆಯ ಶಿಶು** = ಮೊಗ್ಗು; ಮುಗುಳು: ಜ್ಞಾನಿಯ ಸಂಗ ನನೆಯ ಶಿಶುವಿನಂತಿರಬೇಕು ಜ್ಞಾನಿಯ ಸಂಗ ಭಾನುವಿನ ಕಾವಿನಂತಿರಬೇಕು (ಮೋಕ್ಷಮಾ. ೯೭-೩೮೫). **ನನೆಯ ಸರ** = ಪುಷ್ಪಬಾಣವನ್ನುಳ್ಳವನು; ಕಾಮ; ಮನ್ಮಥ: ನನೆಯ ಸರಂಗೆ ಚಿತ್ತದೆಡೆಯಂ ಕುಡದಿರ್ದನ ಪೆಂಪು ಜಾಣ್ ಜಸಂ . . . ಕೂರ್ಪು ಪೊಡರ್ಪೆಸೆದಿರ್ಪುದು (ಶಾಂತೀಶ್ವ. ೬-೬೨). **ನನೆಯ ಸರಲ್** = ನನೆಯ ಕೋಲ್: ನನೆಯ ಸರಲ್ಗಳುಮಂ ಕಬ್ಬಿನ ಬಿಲ್ಲುಮನೊಲ್ಲದಿಲ್ಲಿಗವತರಿಸಿದನಂಗನನೆಯ್ದೆ ಕಾಣ್ಬವೋಲ್ ಕಂಡು ನೃಪಕುಮಾರರ್ ಸ್ವಯಂವರಾಸೆಯನುಱಿದರ್ (ಶಾಂತಿಪು. ೫-೯೪); ನನೆಯ ಸರಲ್ಗಳಂತೆ ನೆಱೆದಿಂಗಳ ತಣ್ಣದಿರಂತೆ . . . ಲೋಲಲೋಚನರುಚಿ ಸುತ್ತಿಮುತ್ತಿದುದಶೇಷನೃಪಾಲಸಭಾಂತರಾಳಮಂ (ಪಂರಾಮಾ. ೫-೭೦); ಕೃತ್ರಿಮ ವಿಹಗಾವಳಿ ಶುಕಪಿಕಮೆನಲಾ ಮಂಡಪಮತಿ ಶೋಭಿಸಿದುದು ನನೆಯ ಸರಲ ನೀಱನ ಕೇಳೀವನದಂದಮನನುಕರಿಸಿ (ಜಯಕಾ. ೪-೫೦).

[<ನನೆ$_2$./ತಮಿ. ನನ್ನೈ, ನಕ್ಕೈ; ಕೊಡ. ತೊಡ. ನನ್; ತೆಲು. ನನ]

**ನನೆಕೇರ್** (ನಾ). ಮೊಗ್ಗಿನಿಂದ ನಿರ್ಮಿಸಿದ ಗೋಡೆ: ನನೆಕೇರಿಂ ಕಂಪಿನಪ್ಪಿಂ ಕುಸುಮಿತ ಲತಿಕಾದಂಡಸಂದೋಹದಿಂ . . . ಒಪ್ಪುವ ನವಸುಮನೋಮಂಡಪಕ್ಕೆಯ್ದಿ ವಂದಳ್ (ಲೀಲಾವ. ೧೦-೫೪). [ನನೆ$_3$ + ಕೇರ್$_1$]

**ನನೆಕೊನೆ** (ನಾ). ೧. ಚಿಗುರಿದ ಕುಡಿ; ಅಂಕುರ; ಮೊಳಕೆ: ನನೆಕೊನೆಯ ತಳಿರ ಪೂವಿನ ಬನವಮನಿತುಂ ಕಿಱಿಗಳುರೆ ಬೆಂಕೆಯ ಪೊಂಪುಳ್ವಿನೊಳಿ ಕೊರಗಿರ್ದ ಲತೆಗಳ ಕೊನೆಗೊನೆಯನೆ ದಹನನಳುರ್ದು ಕೊನೆಗೊನೆಗೊಡಂ (ಪಂಪಭಾ. ೫-೯೭); ಇಂದೊ ನಾಳೆಯೊ ಮತ್ತೆ ಮೈಯೆಲ್ಲ ನನೆಕೊನೆಯು

ವೈಲೆಯುಂದುರಿ ನಿಂತರೂ ಒಣಗಿಲ್ಲ ವನವು (ಕರುಶ್ರಾ. ೪೧-೩೩). ೨. (ಆಲಂ) ಹಿಗ್ಗು ; ಸಂತೋಷ ; ಆನಂದ : ನೆನಹು ನೆಮ್ಮಿತು ಶಿವನನಿತರದ ನನೆಕೊನೆಯ ತೆರಳಿಕೆಯು ತೊಡಚೆಯ ಮನದ ಸಂಚಲವೀಜುವೋದುದು ಕಲಿಧನಂಜಯನ (ಕುಮ್ಮಾಅ. ೪-೪೨) ; ಒಂದರಿಂದಿನ್ನೊಂದು ಮನೆಗಿಲ್ಲಿ ನಡೆದರೇನೆ ವಿಜಯಯಾತ್ರೆಯು ನನೆಕೊನೆ ! (ಚಿಂತನ. ೬೭-೪). 'ನನೆಕೊನೆವೋಗು' ಪರಾ.

**ನನೆಕೊನೆಯಾಗು** = ವಿಕಸಿತವಾಗು ; ಅರಳು : ನಲ್ಲನೆ ನಗೆನುಡಿಗಾಜಿನೆ ವೆಣ್ಗಲರ್ವಿಲ್ಲನೆ ನುಡಿ ಬಸಂತದೊಳು ಪಲ್ಲವಿಸುತೆ ನನೆಕೊನೆಯಾಯ್ತು ಚಿತ್ರಸುಫ[ಫು]ಲ್ಲವಲ್ಲರಿ ಬಗೆಗಾಣಿ (ವರ್ಧಜ. ೯-೨) ; ಭರತೇಶ-ಕುಸುಮಬಾಣೆಯುರ ದಿವ್ಯಪ್ರಣಯವು ಸುರತದಲ್ಲಿ ನನೆಕೊನೆಯಾಗುತ್ತದೆ (ಕಸಾಜ. ೩೭೦). [ ನನೆ$_3$ + ಕೊನೆ$_2$ ]

**ನನೆಕೊನೆಯೇರು** 'ನನೆಕೊನೆಯೇಱು' ನೋ.

**ನನೆಕೊನೆಯೇಱು**, ನನೆಕೊನೆಯೇರು (ಕ್ರಿ). ಚಿಗುರು ; ಕೊನರು ; ಮೊಳೆ ; ಅಂಕುರಿಸು : ಜನಕಜೆ ವಕ್ತ್ರದೀಪಕಲಿಕಾಕೃತಿಯಿಂ ಪುಗೆ . . . ವ ರೇಂದ್ರ ನಂದನ ಗೆ ಮನೋವಿಕಾರದೊಡನಂಗವಿಕಾರಮಂದೇಂ ಪೊದಟ್ದುದೋ ನನೆಕೊನೆಯೇಱುವಂತೆ ವನರಾಜಿ ವಂಧುಪ್ರಥಮಪ್ರವೇಶದೊಳ್ (ಕುಂದಾಮಾ. ೫-೫೦). **ನನೆಕೊನೆಯೇರು** : ಇಂತಹರ ನೆನಹು ನನೆಕೊನೆಯೇರಿ ದ್ವಾರಶಿಲ್ಪದಿ ಚಿತ್ರವರಳುತಿರೆ, ಎತ್ತ ಹೊರಳಿದರು ನೂತನ ಸೃಷ್ಟಿ (ಸಿಲಮು. ೭೦-೯). [ ನನೆಕೊನೆ + ಏಱು$_1$ (<ಏಱ್$_1$) ]

**ನನೆಕೊನೆವೋಗಿಸು** (ಕ್ರಿ). ೧. ಚಿಗುರು ಮತ್ತು ಹೂವುಗಳಿಂದ ತುಂಬಿರುವಂತೆ ಮಾಡು. ೨. ಸಂತೋಷಗೊಳಿಸು ; ಹರ್ಷಪಡಿಸು : ವನದೊಳು ಚರಿಸಿ ವಸಂತನಾ ವನವ ಭೋಂಕನೆ ಚಿಗುರೇಱಿಸುವಂತೆ ವನಧಿಮಧ್ಯದ ಧರಣಿಯು ನಿನ್ನ ಸುಳುಹಿಂದ ನನೆಕೊನೆವೋಗಿಸು ನೃಪತಿ (ಭರಜ. ೫೦-೧೩). ೧, ೨ : ಮನಸಿಜಕಲ್ಪಲತಾನಂದನಮನೆ ಬಿಂಕಕ್ಕೆ ಕೊಂಕಿದಬೞಾಜನವಂ ನನೆಕೊನೆವೋಗಿಸುತಿರ್ಪುದು ಮನುಜಮನೋಭವ ಭವದ್ವಿಲಾಸವಸಂತಂ (ಯಶೋಚ. ೬-೩). [ ನನೆಕೊನೆವೋಗು + – ಇಸು$_3$ ]

**ನನೆಕೊನೆವೋಗು** (ಕ್ರಿ). ೧. ಚಿಗುರು ; ಪಲ್ಲವಿಸು ; ಅಂಕುರಿಸು : ನನೆಕೊನೆವೋಯ್ತು ತನ್ನ ನನೆಯಿಂ ಮುದವುರ್ವಿಗೆ ತನ್ನ ಪುಷ್ಪದಿಂ ಮನಸಿಶಯಂಗೆ ಪುಷ್ಪಶರನೆಂಬ ಪೆಸರ್ ಬೆಳಗಿತ್ತು (ಜಗವಿ. ೧೪-೭೨) : ಮನಸಿಜ ಮತ್ತವಾರಣಮೊ ಕಾಮನ ಕಾರ್ಮುಕಗೇಹಮೋ . . . ನನೆಕೊನೆವೋದ ಮಾಮರನೊ ಪೇಟಿನೆ ರಂಜಿಸಿದತ್ತು ಮಾಮರು (ದಶಕು. ೪-೮೬) ; ಬೀದಿ ವರಿದುದು ಬಿಂಕ ನನೆಕೊನೆವೋದುದಾಶಾಬೀಜ ಲಜ್ಜೆಯ ಹೋದ ಮೂಗಿಗೆ ಕದಪ ಹೊಯ್ದನು (ಕುಮ್ಮಾಶ. ೦-೨೫) ; ನನೆಕೊನೆವೋದ ನವಾಮ್ರದ ನೆಳಲೊಳ್ ಮನಮಂ ತನುವಂ ಬೇರ್ಕೆಯ್ದೊರ್ವಂ ಮುನಿಕುಲತಿಲಕಂ ಯೋಗದೊಳಿರೆ ಕಂಡಂ ಜಯಭೂವರನು (ಜಯುಕಾ. ೯-೪೦). ೨. ಉಬ್ಬು ; ಉತ್ಸಾಹಿಸು ; ಹಿಗ್ಗು ; ಸಂತೋಷಗೊಳ್ಳು : ಅಂತು ಮೂರ್ಛಾಪ್ರಸಂಗನಾದ ಪನ್ನಗಪತಾಕಂಗೆ ಶಿಶಿರೋಪಚಾರಕ್ರಿಯೆಗಳಂ ಮಾಳ್ಪ ಸಂಜಯನಿರವಂ ತತ್ಪರಿಜನಂ ಕಂಡು ಪೇಟ್ ಗಾಂಧಾರಿ ಮನದೊಳಳ್ಳಿ ಬಳ್ಳಿ ನನೆಕೊನೆವೋಗಿ (ಗದಾಯು. ೩-೭೭ ವ) ; ಪುತ್ರದೋಹಳದಿಂ ಸಮನಿಸಿದುದ್ದೀವನಭಾರ[ವ]ವೆಂಬಮರ್ದಿನ ಮಟಿಯಿಂ ಮಡಲ್ತು ನನೆಕೊನೆವೋಗೆ (ಅರ್ಧನೇ. ೧-೯೨ ವ) ; ತನತನಗುರ್ವುತುಂ ಬಿಡದೆ ಕೊರ್ವುತೆ ಪರ್ವುತುಮುರ್ವಿಯೊಳ್ ಕರಂ ನನೆಕೊನೆವೋಗಿ ಮಾಯೆ ಕೊಱಚಾಡದೆ ಮಾಣ್ಬುದೆ ಹುಂಪೆಯಾಳ್ದನೇ (ಹಂಪಾಶ. ೭೮) ; ಅನುಪಮಚಿದ್ಘನಾರ್ಯರುಗಳ್ ಪಿರಿದುತ್ಸವದಿಂದೆ ಬಂದು ತಜ್ಜನಪತಿಪುತ್ರನಂ ಸಚಿವಪುತ್ರನುಮಂ ವಡೆ ನೋಡಿ ಚಿತ್ರದೊಳ್ ನನೆಕೊನೆವೋಗಿ (ರಾಜಶೇ. ೪-೮೩) ; ನುಡಿಗಬ್ಬದ ಗಬ್ಬದುಬ್ಬರದಿಂ ನನೆಕೊನೆವೋಗಿ (ರಾಮಾಶ್ವ. ೧೫೨-೬).

[ ನನೆಕೊನೆ + ಪೋಗು$_1$ ]

**ನನೆಗಣೆ** (ನಾ). ಹೂವಿನ ಬಾಣ ; ಪುಷ್ಪಬಾಣ ; ಹೂಬಾಣ : ಅಂತು ತಿರುವಿಂ ಬರ್ದುಂಕಿದ ಕಂತುವ ನನೆಗಣೆಗಳಂತೆವೋಲ್ ನಡೆತಂದರ್ ಸಂತಸದೆ (ಹಂಪಭಾ. ೯-೧೦೦) ; ಬಾಲೆಯ ಕಡೆಗಣ್ನೋಟಮೆ ಸಾಲದೆ ನನೆಗಣೆಗಳೇವುವೆಂದು ಮನೋಜಂ ಶೂಲಿಯ ನೊಸಲುರಿಗಣ್ಣಿಂ ಪೀಲಿಯ ಕಣ್ಣಿಂಬಂ (ಹಂರಾಮಾ. ೫-೪೪) ; ನನೆಗಣೆಯಂ ಸ್ಮರಂ ಪಡೆದ [ಪೂಗೊ]ಳದಂತೆವೊಲಿರ್ದುದಚ್ಚವಿಂಚಿನ ಸುಲಿಪಲ್ಗಳ್ (ಅರ್ಧನೇ. ೨-೧೪) ; ಪನೆಗಣೆ ನಡುಗುಂ ಕಾಮಿಗಳನೆಂಬ ಮಾತಿಲ್ಲಿ ಪುಸಿ ಪರಸ್ತ್ರೀರತರಂ ನನೆಯ ಮೊನೆಯ್ಯಂಬು ಮಲರಲಗಿನಂಬುಮಾ ಬನದೊಳಂರ್ಚೆ ನೋಯಿಪುದು ದಿಟಂ (ವರ್ಧಪು. ೧೧-೨೬) ; ವಸಂತಂ ವಸಂತನಂ ಕಾಮಂ ಕಾಮನಂ ಇಕ್ಷುಚಾಪಂ ಇಕ್ಷುಚಾಪಮಂ ನನೆಗಣೆ ಸಾರ್ವಂತೆ ಪಾರ್ವತಿಯಂ ನವಯೌವನಂ ಸಾರ್ವಲ್ಲಿ (ಗಿರಿಕ. ೪-೭ ವ) ; ಜಕ್ಕುಲಿಪ ಮನದ ನನೆಗಣೆಯನರಸಿಗೆ ನೋಡೆ ಸಕ್ಕಸಮವೆನಿಪ ರೂಹಿನ ಮೋಹನಂ ಜನಿಪ ಚಿಕ್ಕಹರೆಯದ ಬೆಚ್ಚದೆರಳೆಗಣ್ಮರಲ ಪೆಣ್ಮಕ್ಕಳೆಯ್ತಂದರೊಸೆದು (ಪದ್ಮರಾ. ೩-೬೭). [ ನನೆ$_3$ + ಕಣೆ$_1$ ]

**ನನೆಗಣೆಗೊನೆ** (ನಾ). ಹೂಬಾಣಗಳ ತುದಿ ; ಪುಷ್ಪಬಾಣಗಳ ಮೊನೆ : ಆ ನನೆಗಣೆಗೊನೆಯಿಂದುದಯಿಸಿದುಗ್ರಾನಲನೊಳ್ಪುರಿಯೊಳು ತದ್ವಿರಹದ ಮಾನಿನಿ ಕಣ್ಗೆ ವಿರಾಜಿಸಿದಳ್ ಸ್ವಾಹಾವಧುವೆಂಬಂತೆ (ಜಯುಕಾ. ೪-೪೨).

[ ನನೆಗಣೆ + ಕೊನೆ$_2$ ]

**ನನೆಗಣೆದೊಡು** (ಕ್ರಿ). ಪುಷ್ಪಬಾಣವನ್ನು ತೊಡು ; ಹೂಬಾಣವನ್ನು ಹೂಡು : ಕವಿದೆನ್ನನಿಸಲೆಂದು ತಿರುವಿನೊಳು ನನೆಗಣೆದೊಟ್ಟು ಹದಿವಟ್ಟು ಕಂದರ್ಪನು ಸನ್ನದ್ಧನಾಗಿ ನಿಂದು (ಸೌಂದಪು. ೧೭-೪೩).

[ ನನೆಗಣೆ + ತೊಡು$_1$ ]

**ನನೆಗಣೆಯ** (ನಾ). ಹೂವಿನ ಬಾಣಗಳನ್ನು ಹೊಂದಿದವನು ; ಕಾಮ ; ಮನ್ಮಥ : ನನೆಗಣೆಯನ ಕಣೆಗಳವೊಲು ಗೋಪರಂಗನೆಯರ ನಯನ ಮರೀಚಿ ತನುವಿನೊಳಗೆ ಪಸರಿಸಲಾ ತಾಪಸ ಮನವನಿತ್ತನು ಮನಸಿಜಗೆ (ಅಂಜಚ. ೨-೭೩) ; ಕಡುಚೆಲ್ವಂ ಪಡೆದನಾವಗಂ ನನೆಗಣೆಯಂ (ಕಬ್ಬಿಕಾ. ೦೩೭) ; ನನೆಗಣೆಯನೊಲಿದರ್ಚಿಸುವ ಮೋಹನದ ಸಿರಿಯೋ ಕಬ್ಬುವಿಲುಗಾಱನೆ ನಲವಿನಾರಾಧಿಸುವ ಮಂತ್ರಾಧಿದೇವತೆಯೋ (ಸಾಳ್ವಭಾ. ೨-೨೫) ; ನನೆಗಣೆಯನ ನೇಹದ ಜಾಳವೊ ಪೇಳೆನೆ ಗಣಿಕಾಜನವೆಸೆದುದು ಸೌವರ್ಣದ ಸೌಧದ ಮುಂಬಿನೊಳು (ಉದ್ಭಟ. ೪-೦೯). [ ನನೆಗಣೆ + – ಅ$_7$ ]

**ನನೆಗಪ್ಪಡ** (ನಾ). ತೊಯ್ದ ವಸ್ತ್ರ ; ಒದ್ದೆಯಾದ ಬಟ್ಟೆ : ಮಂದಣಿಯೆ ಚೊಕ್ಕಳದಿಂ ನೀರೊಳಾಡಿ ಮಿಂದು ಬಂದು ತಡಿಯನಡರ್ದು ನನೆಗಪ್ಪಡ ಮನುಟಿದು ಪೊಸಸೀರೆಯಂ ನಿಱಿವಿಡಿದಿಟ್ಟು (ರಾಮಾಶ್ವ. ೦೨೪-೨).

[ನನೆ$_1$ + ಕಪ್ಪಡ]

**ನನೆಗುದಿ**, ನೆನೆಗುದಿ (ನಾ). ೧. ಅರ್ಧ ಬೇಯುವುದು ; ಹೆಚ್ಚಾಗಿ ನೆನೆದು ಪೂರ್ತಿ ಬೇಯದಿರುವುದು : ಹೊತ್ತುವುದು ಸರಿಯಹುದು ನನೆಗುದಿಯಹುದು . . . ಒಣಗಿಹುದು ದೋಷವಶನಕ್ಕಿಯು ತೆಱನಪ್ಪುದು (ಸೂಪಶಾ. ೩-೧). 'ನೆನೆಗುದಿಗೊಳ್' ಪರಾ. ನೆನೆಗುದಿ: ೨. (ಆಲಂ) ಪೇಚು ; ತಳಮಳ : ಆತ ಈ ಕೆಲಸ ಮಾಡಬೇಕೋ ಬೇಡವೋ ಎಂದು ನೆನೆಗುದಿಯಿಂದ ಒದ್ದಾಡುತ್ತಿದ್ದ (ರೂಢಿ).

**ನೆನೆಗುದಿಗೆ ಬೀಳು** = ಅನಿಶ್ಚಿತವಾಗಿರು; ಅನಿರ್ಧಾರವಾಗಿರು; ಬಗೆಹರಿಯದಿರು : ಹೀಗೆ ಪ್ರಣಯ ನೆನೆಗುದಿಗೆ ಬಿದ್ದ ಮೂಲಕ ಕಿಟ್ಟಿ ಕಂಗಾಲಾದನು (ಗಂಮಾಯಿ. ೯೯) : ಸದ್ಯದ ಮಟ್ಟಿಗಂತು ಆ ವಿಲಾಸಭವನದ ನಿರ್ಮಾಣಕಾರ್ಯವು ನೆನೆಗುದಿಗೆ ಬಿದ್ದಿತು (ಸ್ವಪ್ನಲಮಿ. ೩೯) ; ಆಮೇಲೆ ಮಂತ್ರ ಆಂದೋಲನವು ನೆನೆಗುದಿಗೆ ಬಿದ್ದ ಮೇಲೆ ತಂದೆಯ ಒತ್ತಾಯದ ಮೂಲಕ ಕಾಲೇಜು ಸೇರಿದ್ದು (ದಾಸಹು. ೮೪).

[ ನನೆ$_1$ + ಕುದಿ$_3$ ]

**ನನೆಗುದಿಗೊಳ್** (ಕ್ರಿ). ತಳಮಳ ಹೊಂದಂ : ಮನಸಿಜಕರೀಂದ್ರಕಟಮೊಳ್ ಸೊನೆ ತೊಟ್ಟುನೆ ಪುಟ್ಟುವಂತೆ ವಕುಳಕ್ಕೆ ಪಸುರ್ನನೆ ಪುಟ್ಟೆ ಬಿರಯಿಯೆರ್ದೆಗಳ್ ನನೆಗುದಿ[ಪಾಠಾಂ. ಡಿ]ಗೊಂಡವು ಬಸಂತಮಾಸದ ಪುಗಿಲೊಳ್ (ಮಲ್ಲಿಪು. ೫-೧೭). [ ನನೆಗಂದಿ + ಕೊಳ್$_1$ ]

**ನನೆಗೈದುಗಾಜ** (ನಾ). ನನೆಯೆಂಬ ಆಯಂಧವನ್ನು ಹಿಡಿದವನು ; ಮನ್ಮಥ : ನನೆಗೈದುಗಾಜನೆಂದೆನಿಪ ಧೀವರ ದಿವಿಜ ದನುಜ ಮನುಜರ ಧೈರ್ಯಮೆಂಬ ಮಾತ್ಸ್ಯಂಗಳಂ ತನಗೆ ವಸವಮಾಡಿಕೊಳಲು (ಸೌಂದಪು. ೦೨-೩೨). [ ನನೆ$_3$ + ಕೈದುಗಾಜ (<ಕೆಯ್ದುಕಾಜ) ]

**ನನೆಗೊಂಬು** (ನಾ). ಹೂವುಗಳಿಂದ ತುಂಬಿದ ರೆಂಬೆ,-ಕೊಂಬೆ : ಬಂಡನುಂಡು ನನೆಗೊಂಬುಗಳಿಂ ಮೊರೆದೆಟ್ಟಿ ಭೃಂಗರಝಂಕಾರಮೆ ಮಾಟ್ಟುದಾರ ಬಗ್ಗೆಗಂ . . . ಹರ್ಷಭಾರಮಂ (ಪಂರಾಮಾ. ೦-೧೧೮) ; ನನೆಗೊಂಬಂ ನೀಳ್ಕೆ ಚಂದ್ರಾತಪಮೆ ಪುದಿದುದೆಂಬನ್ನೆಗಂ ನೋಡೆ ಚಂದ್ರಾನನೆ ಪೂವಂ ಲೀಲೆಯಿಂದಂ ತಿಱಿಯೆ (ಮಲ್ಲಿಪು. ೬-೬೬) ; ನನೆಗೊಂಬಾಣತಿಮಾಡಿ ಪಾಡುವಪುಳಿರ್ದತ್ತು ಭೃಂಗಾಂಗನಾಧ್ವನಿಯಿಂದಂ (ಸೂಕ್ತಿಸು. ೧೦-೩೦).
[ ನನೆ$_3$ + ಕೊಂಬು$_1$ ]

**ನನೆಗೊಯ್** (ಕ್ರಿ). ಹೂವುಗಳನ್ನು ಕೀಳು,-ಬಿಡಿಸು,-ತಿರಿ : ತೆಗೆದು ನನೆಗೊಯ್ದು ಬಿಡೆ ಮೇಲೆಗೆಳೆವೆಳದಳಿಗೊಂಬು ಪೋಲ್ತುದಾ ಪೂವಿನ ಸೂಳಿಗೆ ಕೊವಲಂ ಪಿಡಿದು ಮಂದಾಳಿಗಳುಲಿಯಿಂ ಪುಯ್ಯಲಿಡುವಶೋಕೆಯುತ್ಸೆಯಂ (ಚಂದ್ರಪು. ೭-೧೦೦). [ ನನೆ$_3$ + ಕೊಯ್ ]

**ನನೆಗೋಲ್** (ನಾ) = ನನೆಗಣೆ ; ನನೆಗೋಲ್ ನಟ್ಟು ಕೊನರ್ತಪೊಲ್ಸುಳಕ ಮಣ್ಮೈತ್ರಲ್ಲಿ ರಕ್ತಾಂಬುಗಳ್ ಪನಿವಂತೆರ್ದುಪು ಘರ್ಮವಾರಿ (ಲೀಲಾವ. ೩೬೪) ; ಮಿಸುಪನ್ನಯ ಪುರ್ವಿನ ಕರ್ವುವಿಲ್ಲ ನೋಟದ ನನೆಗೋಲ ಲೀಲೆಯೊಳೆ ಸೋಲಿಸುವೆಂ ಜಿತಕಾಲಶೂಲಿಯಂ (ಗಿರಿಕ. ೭-೬೭) ; ನನೆಗೋಲ್ಕಬ್ಬಿನಬಿಲ್ಮದಾಳಿಕುಳಲೀಪಾವೌರ್ವಿಯೆಂಬಸ್ತ್ರಸನ್ಮೋಜನ ಬಿಲ್ಲಂ (ಅನುಭವು. ೯-೦೧) ; ಜೊನ್ನೊಡಲಂ ನಿಮಿರ್ಚಿದಪಸಗ್ನಿಯ ತಣ್ಣದಿರಿಂದ ಮೋಹನ ನೀನುನ್ನನೆಗೋಲ್ಗಳಂ ಸಿಡಿಲ್ಗೆ ಸಾಟಿಯನಾಗಿಪೆ ಪಂಚಸಾಯಕಾ (ಶಾಕುಂತ. ೩೨-೫೭). [ ನನೆ$_3$ + ಕೋಲ್$_1$ ]

**ನನೆಗೋಲ** (ನಾ). = ನನೆಗಣೆಯಂ : ನನೆಗೋಲನಂಪಟಳದಲಿ ಭ್ರಾಂತಿಗೊಂಡಿರ್ದ ವನಚರ ಪೂತ ಸಂಪಗೆಯ ಕೊನೆಗಳ ಮುಱಿದಿಡಲಂಜಿ ತಾಪಸ ರೆಲೆವನೆಗಾತಿಯರನಪ್ಪಿದರು (ಮೋಹತ. ೭-೦೫) ; ವಿನಯದಿ ಮಾತಾಡು ಖಳರಾಯ ನಿನ್ನಯ ತನಯಳಿಗೋಸುಗ ಬಂದ ಮನೆಯಳಿಯನ ಕೂಡೆ ವಂಚ್ಚಬೇಕೆಂದು ನನೆಗೋಲನಾತ್ಮಜ ನುಡಿದ (ಮೋಹಹ. ೩೫-೨೮).
[ ನನೆಗೋಲ್ + – ಅ$_7$ ]

**ನನೆದಂಡೆ** (ನಾ). ಹೂವಿನ ದಿಂಡಂ,-ಮಾಲೆ : ಗಂಡನಿಂದಲೇ ಗಂಳದಾಳಿ, ಅರಿಷಣ, ಕುಂಕುಮ, ಮಲ್ಲಿಗೆಯ ನನೆದಂಡೆ (ಕನ್ನಜಾ. ೦೨೨).
[ ನನೆ$_3$ + ದಂಡೆ$_1$ ]

**ನನೆದುಱುಗಲ್** (ನಾ). ಹೂವಿನ ಗೊಂಚಲು,-ಗಂಟ್ಟೆ : ನೆಱೆ ಬಸಂತನ ಮದನಶರಕಂದೆಱಕದೋವಿದ ಚೆಂದಳಿರ ನನೆದುಱುಗಲೊದವಿದಶೋಕೆಗಳು ಬನದೊಳು ವಿರಾಜಿಪವು (ಸಾಳ್ವಭಾ. ೨-೩).
[ ನನೆ$_3$ + ತುಱುಗಲ್ (<ತುಱುಂಗಲ್) ]

**ನನೆದೊಡಿಗೆ** (ನಾ). ಹೂವಿನ ಆಭರಣ,-ಅಲಂಕಾರ : ಇಂತು ಜಲಕ್ರೀಡೆಗೆಂದು ಕೊಳನಂ ಪೊಕ್ಕಲ್ಲಿ ನನೆದೊಡಿಗೆಯ ನಾಯಕಿಯರುಂ ತಿಲಕದ ಲಲನೆಯರುಂ . . . ಗಿರಿಜೆಯ ಚರಣಕಮಲಕ್ಕೆ ಭರದಿಂದೆಱಗುತ್ತುಂ (ಗಿರಿಕ. ೯-೨೦ ವ). [ ನನೆ$_3$ + ತೊಡಿಗೆ (<ತೊಡುಗೆ) ]

**ನನೆದೋಱು** (ಕ್ರಿ). ಮೊಗ್ಗನ್ನು ಹೊಂದಂ; ಮುಗುಳಂ ಬಿಡಂ: ಇದಿರೊಳ್ ನನೆದೋಱಿ ವಸಂತದೂತಿಯೆನೆ ತಾನೆ ನೆಗೆಟ್ಟ ಮಾಧವಿಯೆನೆ ಸಂದದಿರ್ಮುರ್ತ್ತೆಯ ಪೂಗೊಂಚಲ ಪುದುವಿನೊಳೆಱಗಿದ ಮಂದಾಳಿಗಳ್ ಮಱೆದಪ್ಪುವೇ (ಆದಿಪು. ೧೧-೧೦೮) ; ದೇವಿ ನೀಂ ನಡೆಪಿದೆಳಲತೆ ನನೆದೋಱಿತೆಂದು ಬಿನ್ನವಿಸಿದ ಬಾಲಕಿಯರನಾಭರಣಪ್ರದಾನಾತಿ ಸನ್ಮಾನಗಳಿಂ ಸಂತೋಷಂಬಡಿಸುತಿರ್ದಳ್ (ಕಾದಂಬ. ೨೫) ; ನನೆದೋಱಿತ್ತು ವಸಂತದೂತಿ (ಮಲ್ಲಿಪು. ೫-೭) ; ಕಡವಲಪೊರ್ತ್ತು ಮೊಲ್ಲೆ ಮುಗುಳ್ತತ್ತು ಪೊದೆಟ್ಟು ಪೊಲಂ ಪಸುರ್ತುವಾಸಡಿ ಕುಡಿಯೋಱಿ ಮುತ್ತೆ ನನೆದೋಱಿ (ಕುಸುಮಾ. ೬-೦೩) ; ಮರುಗ ಮೊನೆ ನನೆದೋಱೆ ಸುರಗಿ ಜಾಜಿಯ ಕನೆಗಳರಳಿ ಪರಿಮಳದಲೆಸೆಯಲ್ಕೆ (ಹಜಕಾ. ೩-೩೨) ; ಎಲೆ ಸುಳಿದೆಡೆಗಳ [ಕಣ್]ಕಣ್ಗಲೆಯೆಡೆ ಗಂಟೊಡೆದು ಮೊನಸಿ ನನೆದೋಱಿ[ಪಾಠಾಂ. ಕೊನೆದು] ಮುಗುಳ್ತಲರ್ದು ಮಱಿದುಂಬಿಗಂ ತಂಬೆಲರ್ಗಂ ಮುದ್ದಾದುವಲ್ಲಿ ಪೊಸ ಮಲ್ಲಿಗೆಗಳ್ (ಯಶೋಚ. ೪-೫). [ ನನೆ$_3$ + ತೋಱು ]

**ನನೆನಾಱು** (ಕ್ರಿ). ಹೂವಿನಿಂದ ಗಮಗಮಿಸಂ,-ಸಂವಾಸನೆ ಬೀರಂ : ನನೆಯೆಳಗಂಪವನೆತ್ತಿಯುಮಣಂ ನನೆನಾಱಿದರಲ್ಲನೇಕಕೋಕನದ ವನಂಗಳೊಳ್ ಸುಟಿದು ತಣ್ಣಸಮಾಗದೆ . . . ತೀಡಿದುದು ತೆಂಕಣಗಾಳಿ ವಸಂತಮಾಸದೊಳ್ (ಪಂಪಭಾ. ೫-೪೧). [ ನನೆ$_3$ + ನಾಱು$_1$ ]

**ನನೆಬಿಜ್ಜಣಿಗೆ** (ನಾ). ಹೂವಿನಿಂದ ಮಾಡಿದ ಬೀಸಣಿಗೆ : ನನೆಬಿಜ್ಜಣಿಗೆಯ ತಣ್ಣೆಲರಿನಾಱಿದುಯೆನ್ನ ತನುತಾಪ (ಹಜಕಾ. ಪರಿ. ೨೧೦).
[ ನನೆ$_3$ + ಬಿಜ್ಜಣಿಗೆ ]

**ನನೆಮುಗುಳ್** (ನಾ). ಎಳೆಯ ಮೊಗ್ಗು ; ಹೊಸ ಮೊಗ್ಗು : ನನೆಪಂಗು [ಪಾಠಾಂ. ಗ]ಳ್ ಕೊನೆಮುಗುಳ್ಬಿರಿದಿರೆ ಮುಗುಳ್ಗಳಂ ತನಿಗಂಪು ತೀವಿರ್ದ ಪೊಚ್ಚಪೊಸಪೂಗಳಂ ಕೊಂಡು ಕುಕಿಲಿಱಿವುತಂ ನಡೆತಂದು (ಪುಷ್ಪರ. ಹ. ೫೨೩-೨೭) ; ನನೆಮುಗುಳ್ ನನೆಕುಸುಮ ವಸುಗಾಯ್ . . . ತೊನೆದು ತೂಗುವ ಫಲಭರಂಗಳ ಘನತರದ ಸಹಕಾರ ಸಹ ಸುರವನಕದಂಬಕ ವಸೆದುದಿದಿರಲಿ ಕಪಿಕಂಲೇಶ್ವರನ (ಶೂರಸಾ. ೫-೩ ೦೯).
[ ನನೆ$_3$ + ಮುಗುಳ್$_2$ ]

**ನನೆಮೊನೆ** (ನಾ). ಮೊಗ್ಗಿನ ತುಂದಿ,-ಅಗ್ರಭಾಗ : ತೋಳಿನೊಳೊಱಗಿ ದಿನಿಯಳ ಕರ್ಣಪೂರದೊಳೆಱೆಯ ಕತ್ತುರಿರಸವ ನನೆಮೊನೆಯಿಂದ ಲೇಖಿಸಿದ (ಸಾಳ್ವಭಾ. ೦೬-೦).

**ನನೆಮೊನೆಯಾಗು** = ಚಿಗುರಂ : ನನೆಮೊನೆಯಾಗಿ ಬಂದುವೆಳಮಾವೆಳ ಮಾವಿನ ಮುಂಚಿ ಬಂದ ಪೂವಿನ ಪೊಸಗೊಂಚಲೊಪ್ಪಿದುವು (ಶಾಂತಿಪು. ೭-೧೨೫). [ ನನೆ$_3$ + ಮೊನೆ$_1$ ]

**ನನೆಯಂಬ** (ನಾ). = ನನೆಗಣೆಯಂ : ನನೆಯಂಬಂ ತಾವರೆಪೂವಿನ ಕೈಪೊಡೆಯಿಂ ಮನೋಭವಂ ತೊಡೆವಪೊಲಾ ವನಿತೆಯ ಸಬಾಷ್ಪಲೋಚನ ಮನವನಿಪತಿ ಶೋಣಪಾಣಿತಳದಿಂ ತೊಡೆದಂ (ಮಲ್ಲಿಪು. ೪-೦೭) ; ಹೂವಿನ ಬಿಲ್ಲನೊಚ್ಚತಂಗೊಂಡರ್ಚಿಸುತ್ತಿರ್ಪ ನಿಡುಪುರ್ವಿನ ನೀಱೆಯರಿಂ ನನೆಯಂಬಂ ಕೆಯ್ಗೆಯ್ದು ಸವಿನೋಟದ ಸಾಧಾರಣೆಯರಿಂ (ಗಿರಿಕ. ೭-೧೧ ವ) ; ನೀನೀ ಪೂವಿನ ಪೊಟಲೊಳ್ ನನೆಯಂಬನೆಂಬರಸಾದೆ (ಕಬ್ಬಿಕಾ. ೩೧೯) ; ಸೊಸೆವೆಮ್ಮಲಾಂತು ಕತ್ತುರಿಗಂಧಿ ಬರೆದಳು ನನೆಯಂಬನ ಚಿತ್ರಪಠವ ವಿನಯದೆ ಕೈಕೊಂಡು ಬಂದಳು ಸ್ಮರವರತನಯನ ಶಯನಸ್ಥಳಕೆ (ಮೋಹಹ. ೩೯-೫೩). [ ನನೆಯಂಬು + – ಅ$_7$ ]

**ನನೆಯಂಬು** (ನಾ). = ನನೆಗಣೆ : ಮೊನೆಯಂಬುಗಳೊಳೆ ಪೂಣ್ಪಪಸ ನಿಬರುಮಂ ಕಿಱಿದು ಬೇಗದಿಂ ಹರಿಗನದರ್ಕನಗೆಡೆವೇಟ್ಕುಮೆಂ ಎಂಬಪೊಲನಿ ಬರುವಂ ಪೂಣ್ದನ[ತಪಂ] ನನೆಯಂಬುಗಳಿಂ (ಪಂಪಭಾ. ೩-೫೨) ; ನನೆಯಂಬಂ ಮಿಗೆ ಕಣ್ಮಲರ್ ಮಕರಮಂ ಕ್ರೋಡಧ್ವಜಂ ಪೋಲೆ (ಗದಾಯು. ೦-೬) ; ಮನೋಜಂ ನನೆಯಂಬಿನಿಂದಿಸ ತದಸ್ತ್ರಾಘಾತಜಾತಾನಿಲಂ ನಿಮಿರ್ದೋರಂತಳುರಲ್ಕೆ ಹೃತ್ಕುಟಿಯ ನಾ ಕಂದರ್ಪರಾಜೇಂದ್ರನಾ

(ಕುಸುಮಾ. ೧೧-೧೧೦) ; ಧೈರ್ಯದ ಜೋಡ ತೊಟ್ಟದಿರಾಗಿ ನಿಲಿ ನನೆಯಂಬು ನಾಟುವುವೆ (ಕುವ್ಯಾಅ. ೮-೩೫) ; ಎನ್ನ ನನೆಯಂಬಿನ ಮೊನೆಗೆ ಸಂಗಿದಹಲ್ಗೆಯಂ ನೀಮೆ ಶರಣ್ಬೊಕ್ಕುದೇನಱಿಯದುದೇ ! (ರಾಮಾಶ್ವ. ೫೬-೧೦). [ ನನೆ$_3$ + ಅಂಬು$_2$ ]

**ನನೆಯಕ್ಕಿ, ನೆನೆಯಕ್ಕಿ$_1$ (ನಾ).** ೧. ನೆನೆಯಿಸಿದ ಅಕ್ಕಿ ; ನೀರಿನಿಂದ ಒದ್ದೆ ಮಾಡಿದ ಅಕ್ಕಿ : ಮನೆಯು ಸಾರಿಸಿ ರಂಗವಲ್ಲಿಯನಿಕ್ಕಿ . . . ನನೆಯಕ್ಕಿ ಕಡಲೆ ಪಣ್ಯಾರದಿ[ಪಾಠಾಂ. ನನೆಯರಳ್ದರಳುಂಬ ಪುಣ್ಯಹರ] ನಿಖಿಲಾರ್ಚನೆಯು ವಸ್ತುಗಳ ಸಾರ್ಚಿದರು (ಮೋಹತ. ೧೮-೮೨). ೨. ಶುಭಕಾರ್ಯಗಳಲ್ಲಿ ಆಶೀರ್ವಾದಕ್ಕಾಗಿ ಉಪಯೋಗಿಸುವ ಅಕ್ಷತೆ : ತಳಿರ ತೊಟ್ಟಿಲೊಳಿಟ್ಟು ಸಣ್ಣ ಸನಗಳ ನನೆಯಕ್ಕಿಯನಿಕ್ಕಿ ಪಣ್ಣ ಬಾಯಿನವುನಣ್ಣವಳಿಯದೆ ಕೊಟ್ಟು ಚೂತವಲ್ಲಭನೆಂಬ ಪೆಸರಿಟ್ಟು (ಗಿರಿಕ. ೨-೭೧ ವ). ನೆನೆಯಕ್ಕಿ$_1$ : ೧. ನೆನೆಯಕ್ಕಿ ನೆನಗಡಲಿ ಗೊನೆಯ ಬಾಳೀಹಣ್ಣು . . . ತಗೊಂಡು ಗಂಗವ್ವ ಪೂಜೆಗ್ಹೈದಾರ (ಲೋಕಗೀ. ೧೬೨). 'ನೆನಗಡಲೆ' ಪರಾ.

[ ನನೆ$_1$ + ಅಕ್ಕಿ$_1$ ]

**ನನೆಯಿಕ್ಕು, ನೆನೆಯಿಕ್ಕು (ಕ್ರಿ).** ತೋಯಿಸು; ಒದ್ದೆ ಮಾಡು; ನೆನೆಹಾಕು : ನನೆಯಿಕ್ಕಿದ ಕಡಲೆಯ ತುರಗನಿಕಾಯಕ್ಕಱಿದು ಕಟ್ಟುವುದು (ಅಶ್ವಶಾ. ೭-೫೭). ನೆನೆಯಿಕ್ಕು : ಗರುಗದ ಸೊಪ್ಪಿನ ರಸದಲ್ಲಿ ಎರಡು ವರಹ ತೂಕ ಚೂರ್ಣವ ನೆನೆಯಿಕ್ಕಿ ಬೆಲ್ಲವ ಬೆರಸಿ ಕೊಡಲು ಪಾಂಡುರೋಗ, ಕ್ಷಯರೋಗ ಪರಿಹರ (ವೈದ್ಯಸಾ. I, ೩೩೭). [ ನನೆ$_1$ + ಇಕ್ಕು ]

**ನನೆಯೆಸಟು (ನಾ).** ೧. ಹೂವಿನ ಎಸಳು,-ದಳ. ೨. ಹೂವಿನ ಚಿತ್ರ, -ಕಸೂತಿ,-ನಕ್ಷೆ : ನನೆಯೆಸಟಂದಮಾದ ಗುಟವುಂ ಪೊಳೆಯುತ್ತಿರೆ ನೀಳ್ಪುವೆತ್ತ ಪೂವಿನ ಪೊಸಟೆಕ್ಕೆಯುಂ ಮಿಳಿರೆ . . . ಮೆಲ್ಲನೆ ನಡೆತಂದು ವಂದು ಪೊಸಮಾವೆನಿಪ್ಪುಗ್ಗಡದಗ್ಗದಾನೆಗಳ್ (ಕಬ್ಬಿಕಾ. ೨೦೧).

[ ನನೆ$_3$ + ಎಸಟು ]

**ನನೆಯೋಱು (ಕ್ರಿ).** ಹೂವು ಬಿಡು ; ಹೂವು ತುಂಬು : "ನನೆತುದೆನೆ ನನೆಯೋಱಿದುದು" (ಶಬ್ದಮಂ. ೨೨); "ನನೆತುದು ನನೆಯೋಱಿದುದೆಂದೆನುತಂ" (ಕವಿಕಂ. ೭೭) ; ನನೆಯೋಱಿದ ಮಲ್ಲಿಗೆಯಂತೆ ಪೂರ್ಣಚಂದ್ರನ ಸಿರಿಯಂತೆ ... ರುದ್ರಭಟ್ಟನ ಕವಿತಾರಸಂ ಮನಮನಿರ್ಕುಱಿಗೊಳ್ಳದು ಸಜ್ಜನರ್ಕಳಾ (ಜಗವಿ. ೧-೧೬) ; ವಿಱಿ ಮುಗಿಲಿದಿರೇಱೆ ನಿಶಿ ಹರುಷವೇಱೆ ನನೆಯೋಱೆ ಕುಂದವ್ರಜಕೆ ಕಡದಲರ ಸಿರಿಯು ಸೊಂಪೇಱೆ (ಸಾಳ್ವಭಾ. ೨೬-೧೮); ಪಳೆಯೆಲೆಯಿಕ್ಕಿ ಸಣ್ಣನನೆಯೋಱಿದ ಪಾಟಳಿಪೂವನಾಂತು ಕಂಗೊಳಿಸುವ ಕರ್ಣಕಾರ ಮಲರ್ದೀವಿದ ಮುತ್ತುಮದೆತ್ತ ನೋಳ್ಪೊಡಂ (ರಾಜಶೇ. ೯-೪೭) ; ಬನಂ . . . ನನೆಯೋಱಿದ ಸುರಯಿಯಿಂ, ಬಕುಳದಿಂ, ಸಿರಿಸದಿಂ, ಪುನ್ನಾಗದಿಂ, ಸೊಗಯಿಸಿ ತೋರ್ಕುಂ (ರಾಮಾಶ್ವ. ೫೩-೨೨).

[ ನನೆ$_3$ + ಏಱು$_1$ ( < ಏಱ್$_1$ ) ]

**ನನೆಯೊತ್ತು (ಕ್ರಿ).** ೧. ಅರಳು ; ವಿಕಾಸವಾಗು ; ಮೊಗ್ಗು ಹೊರಬರು : ಶಿವಾಚಾರಲತೆ ನನೆಯೊ[ಪಾಠಾಂ. ವ]ತ್ತೆ (ಸೋಮಚ. ೧-೭೩) ; ನನೆಯೊತ್ತೆ ಮಿಸುಪ ಮಲ್ಲಿಗೆ ನನೆಯೊತ್ತುವುದತನುಸತಿಯ ಲಾವಣ್ಯರಸಾಭಿನವನದಿ ಸುರಭಿಗಂಧದಿನೆನಸುಂ ಶೀವಿದೊಡೆ ಶೀವುವುದು ತೊದಳುಂಟೇ (ಪಾರ್ಶ್ವಪು. ೯-೫೬). ೨. (ಅಲಂ) ಸಂತಸಗೊಳ್ಳು : ಧರ್ಮಜನು ಸುರಮುನಿ ಸೂಕ್ತಿಸುಧೆಯಭಿಷೇಕದಲಿ ನವೆಯೊತ್ತಿದಂತಃಕರಣನರಮನೆಗಾಗಿ ನಡೆತಂದು (ನಿಭಾಗ. ೧ ೯-೪೫). [ ನನೆ$_3$ + ಒತ್ತು$_1$ ]

**ನನೆಲತೆ (ನಾ).** ಹೂವು ಬಿಟ್ಟ ಬಳ್ಳಿ ; ಹೂಬಳ್ಳಿ : ಚಾಮರದಿಂ ಬೀಸುವ ಬೀಸುಗಾಳಿಯ ತಣ್ಪಿನಿಂ ತೊಯ್ದು ನನೆಲತೆಗಳ ಮೇಳದ ಮನ್ನಣೆಯ ಕನ್ನೆಯರ ಲತಾಂಗಂಗಳೊಳ್ ಲಾವಣ್ಯರಸವಿಸರದ ಬಿಂದುಗಳ್ ತಲೆದೋಱಿದುವು (ಲೀಲಾವ. ೪-೧೭ ವ). [ ನನೆ$_3$ + ಲತೆ ]

**ನನೆವಾಸು$_1$ (ನಾ).** ತೊಯ್ದು ಹಾಸಿಗೆ ; ಆರ್ದ್ರವಾದ, ತಂಪಾದ ಹಾಸಿಗೆ : ತನುವಲ್ಲದತನುತಾಪಂ ತನುವಂ ಸಂಡೆ ನಿಲಿಸಲಿಂತುಮಾಱದೆ ತನುವಂ ತನುಮಧ್ಯೆಯರಲರ್ವಾಸಿನ ನನೆವಾಸಿನ ಮೇಲೆ ಪಾಸಿದರ್ ತನುತನುವಂ (ಮಲ್ಲಿಪು. ೩-೩೩). [ನನೆ$_1$ + ಪಾಸು$_2$ ]

**ನನೆವಾಸು$_2$ (ನಾ).** ಹೂವಿನ ಹಾಸಿಗೆ; ಪುಷ್ಪಶಯ್ಯೆ : ನನೆವಾಸಿನೆ ಮುತ್ತಿನ ಪಸೆ ಮನಸಿಜನನೆ ಕುವರನಲ್ಲಿ ನೆಲಸಿರೆ ಲಜ್ಜಾವನತಾಂಗಿ ಕೆಲದೊಳಿಳುಪಿದ ನನೆವಿಲ್ಲನೆ ಸುಗುಣವತಿ ಕರಂ ಮೆಱೆದಿರ್ದಳ್ (ರಾಜಶೇ. ೮-೭೧). [ ನನೆ$_3$ + ಪಾಸು$_2$ ]

**ನನೆವಿಲ್ (ನಾ).** ಹೂವಿನ ಬಿಲ್ಲು ; ಹೂಬಿಲ್ಲು ; ಪುಷ್ಪಚಾಪ : ಪುರಿದಂತಾದುವು ಪೂವಿನಂಬು ನನೆವಿಲ್ ನಿಸ್ಸಾರವಾದತ್ತು (ಮಲ್ಲಿಪು. ೧-೧೯) ; ನನೆವಿಲ್ಲನೆತ್ತುವಂತೆ ನನೆಯ ನಿಡಿಯ ದಂಡೆಗಳಂ . . . ಎತ್ತುವ ಮಾಲೆಗಾರ್ತಿಯರ ಕಟಾಕ್ಷಕುಸುಮಮಾಲೆಗಳಂ ಸೌಂದರ್ಯಧನದಿಂ ಮಾಱುಗೊಳುತ್ತರಸಂ ಬರೆವರೆ ಪೂವಿನ ಸಂತೆಯಿಂ ಪೊಱಗೆ (ಲೀಲಾವ. ೨-೨೬ ವ) ; ನನೆವಿಲ್ಲಂ ಬಿಟ್ಟು ವಿದ್ಯುಲ್ಲತೆಯ ತಿಱುವುಪೊಯ್ದಿಂದ್ರ ಕೋದಂಡಮಂ ಕೊಂಡು . . . ಮೊಲ್ಲೆಯ ನನೆಗಣೆಯಂ ತೂಗುತಂ ಕಂತುವೀಬಂದಂ (ಜಗವಿ. ೪-೨೦) ; ನನೆವಿಲ್ವಿನ್ನಣೆಯೋಪಳೊರ್ವ ವಧುವಾ ಕಾಂತಾಳಕಶ್ರೇಣಿಗೊಯ್ಯನೆ ಮುಂದಿಕ್ಕಿದ ಚಂದನಾಂಬುವನಲಂಪಂಬೆತ್ತು ತಾಂ ಪಿಂಡಿದಳ್ (ಉದ್ಭಟ. ೮-೨೦) ; ನನೆವಿಲ್ಲಾಱಡಿವೆದೆಯೋಱುವ ಪೋಲ್ವ ನಿತಾವುಣಿಯಿಂತೊಪ್ಪುವ ರೂಪಿಗೆ ಮಿನುಗುವ ವಿಱುಂಡೌವನವೇಱೆ ವಿರಾಜಿಸುತಿರೆ (ಜಯುಕಾ. ೩-೪೪) ; ನನೆವಾಸೆನೆ ಮುತ್ತಿನ ಪಸೆ ಮನಸಿಜನನೆ ಕುವರನಲ್ಲಿ ನೆಲಸಿರೆ ಲಜ್ಜಾವನತಾಂಗಿ ಕೆಲದೊಳಿಳುಪಿದ ನನೆವಿಲ್ಲನೆ ಸುಗುಣವತಿ ಕರಂ ಮೆಱೆದಿರ್ದಳ್ (ರಾಜಶೇ. ೮-೭೧). 'ನನೆವಿಲ್ಲ' ಪರಾ.

ನನೆವಿಲ್ಲ ಬಲ್ಲಹ = ಹೂಬಿಲ್ಲಿಗೆ ಒಡೆಯನಾದವನು ; ಪುಷ್ಪಬಾಣ ಪ್ರಯೋಗದಲ್ಲಿ ಶೂರನಾದವನು ; ಕಾಮ ; ಮನ್ಮಥ : "ನನೆವಿಲ್ಲ ಬಲ್ಲಹನೆನಲ್ ಪೂವಿಲ್ಲ ಕಾಮಂ" (ಕರ್ಣಾನಿ. ೮) ; ಅವಿವ ಪಜ್ಜಳಿಪ್ಪ ಜಸವೆಣ್ದೆಸೆಯೊಳ್ ನೆಲಸಿರ್ಪುದಾತನೀಗಾವಗವೆನ್ನ ಜಾಣ್ಣುಡಿಗೆ ಮೆಯ್ಸಿರಿಯಂ ನನೆವಿಲ್ಲ ಬಲ್ಲಹಂ (ಕಬ್ಬಿಕಾ.೦) ; ಜಗದ್ವಳಯಮನದಟಲೆದು ಸುಲಿದು ಕೋಟಲೆಗೊಳಿಸುವ ನನೆವಿಲ್ಲ ಬಲ್ಲಹನ ದಿಗ್ವಿಜಯಕ್ಕಾಗಿ . . . ಬೆಳಗುವಚ್ಚಬೆಳ್ದಿಂಗಳ್ ಪಿರಿದುಂ ಪೆರ್ಚಿ ಬಿಚ್ಚದೆ ನಿಬಿಡಮಾಗಿ ಬಿಡದಡರ್ದು ಕೆಡಱೆ ನಾಂದು ಪೊದಱುಗಟ್ಟಿ ಪರಕಲಿಸಿ ಪಸರಿಸುತ್ತುಮಿರೆ (ಪಾರ್ಶ್ವಪು. ೧೫-೫೦ ವ) ; ಇದು ಕುಸುಮಾಸ್ತ್ರನಸ್ತ್ರಮಿದು ದರ್ಪಕನಾರ್ಪು ಮನೋಜ ನೋಜೆ ನೋಡಿದು ನನೆವಿಲ್ಲ ಬಲ್ಲಹನ ಚೆಲ್ವಿದು . . . ಎಂದೆನಿಸಿರ್ದುದು ರೂಪು ನೀಱೆಯಾ (ರಾಜಶೇ. ೭-೬೩). ನನೆವಿಲ್ಲ ಬೀರ = ನನೆವಿಲ್ಲ ಬಲ್ಲಹ : ಬಂದು ಬಸಂತನೊಲ್ದು ಸಂವರಣೆಯನೆಯ್ದೆ ತೋಱೆ ತಲೆದೂಗಿದುಂ ನನೆವಿಲ್ಲ ಬೀರನಾ (ಕಬ್ಬಿಕಾ. ೨೦೦). ನನೆವಿಲ್ಲಾತ = ಪುಷ್ಪಧನುಸ್ಸನ್ನುಳ್ಳವನು ; ಕಾಮು ; ಮನ್ಮಥ : ನನೆವಿಲ್ಲಾತನ ಮುಕ್ಕಣ್ಣನ ತಕ್ಕಂ ನೋಡ ವೇಟ್ಕುಮೆಂದೊಲವಿಂದು ತನತನಗೆ ಬಂದು ಮುಗಿಲೊಡ್ಡಿನ ಕೆಲದೊಳ್ ಸಗ್ಗದವರ್ಗಳೆಲ್ಲರ್ ನಿಂದರ್ (ಕಬ್ಬಿಕಾ. ೨೮೯). [ ನನೆ$_3$ + ಬಿಲ್$_2$ ]

**ನನೆವಿಲ್ಲ (ನಾ).** ೧. ಹೂವಿನ ಬಿಲ್ಲುಳ್ಳವನು ; ಕಾಮ ; ಮನ್ಮಥ : ನನೆವಿಲ್ಲನೆಸೆವ ಬಿರಿದಿನ ನಾಟಕವ ಬಿಂಕವನೆ ಕಂಡೆನೆಂದು ಕಳವಳಿಸಿ ಮಂಗಳೆ ತನ್ನ ತನುಜೆಯಂ ಪಲ್ಲಕಿಯೊಳಿರಿಸಿ ಶಂಭುವನು ಬೀಳ್ಕೊಂಡು ಮನೆಗೆಯ್ತಂದಳು (ಸೌಂದಪು. ೮-೧೮) ; ಪೊಸ ಕಮ್ಮಂಗಳವೆಯ ತೆನೆಯ ತುದಿಯ ತನಿಗಂಪಂ ಭುಂಜಿಸಲೆನುತನುರಾಗದಿನವಱೊಳ್ಕುಳ್ಳಿರ್ದಾಱಡಿ ವಸುಳೆಗಳು ಅನುವಂ ಪಡೆದುವು . . . ನನೆವಿಲ್ಲನ ಪಸುರ್ಗಾವಿನ ಮಿಗಸೊಕ್ಕಿನ ಪೊಸಮಿಂಟೆಯೆನೆ (ಜಯುಕಾ. ೧-೩೯) ; ಖಳನೀ ನನೆವಿಲ್ಲಂ . . . ನಲ್ಲಂ ತೊಲಗಿದ ಪದದೊಳಗೆನ್ನೊಡಲಲ್ಲಿ ನಡುವವೊಲಿರಲ್ಕೆಯ್ದಾಣಿಸಿ

ನಿಲ್ಲದೆ ಮನವನೆಸುತ್ತಿರ್ದಪನೆಂದಳ್ವಿರಹಿಣಿ ಸಖಿಯೊಳ್ (ಉದ್ಭಟೀ. ೪-೩೫). ೨. [ಜೈನ] ಬಾಹುಬಲಿ; ಕಾವಂ : ಎತ್ತಿ ನೀನೆಣ್ಣನೊಡನೆ ಕಾದಿದಾಗ ತೊಂಭತ್ತಾಱುಸಾವಿರ ಹೆಣ್ಣು ಚಿತ್ತ ನೋಯದೆ ನಮಗೆಂಟುಸಾವಿರಕಳ ಲೊತ್ತದಿಹುದೆ ನನೆವಿಲ್ಲಾ (ಭರತ. ೫೦-೪೫). [ ನನೆವಿಲ್ + – ಅ₇ ]

**ನನೆವೂ** (ನಾ). ಬಿರಿದ ಹೂವು ; ವಿಕಸಿತ ಕುಸುಮ: ತೋಳ ಮೊದಲ್ಕನೆ ಪೂವನೆತ್ತುವಂತಿರೆ ನನೆಯಂಬುಗಳ್ಗೆ ಬೆರಲೆತ್ತುವರಲ್ಲಿಯ ಮಾಲೆಗಾರ್ತಿಯರ್ (ಮಲ್ಲಿಪು. ೨-೫೯). [ ನನೆ₂ + ಪೂ₂ ]

**ನನೆವೂದುಱುಗಲ್** (ನಾ). ಅರಳಿದ ಹೂವುಗಳ ಗೊಂಚಲು,–ಗುಚ್ಛ: ತಳಿರ್ಗಳನೊಂದು ಕೊಂಬು ನನೆವೂದುಱುಗಲ್ಗಳನೊಂದು ಕೊಂಬು . . . ತಳೆದಿಂತು ಮನೋಹರಮಾಯ್ತು ಮಾಮರಂ (ಕುಸುಮಾ. ೧೦-೧೫೫). [ ನನೆವೂ + ತುಱುಗಲ್ (< ತುಱುಂಗಲ್) ]

**ನನೆವೆರಸು₁** (ಕ್ರಿ). ಮೊಗ್ಗುಗಳಿಂದ ಕೂಡಿರು; ಪುಷ್ಪಭರಿತವಾಗಿರು : ನನೆವೆರಸಿದಸುಗೆದಳಿರುಳ್ಳುಡೆಯ ವೇಣುವಿಂ ಜನಿಸಿದ ನವೀನಮುಕ್ತಾಫಲದ ಮೂಗುತಿಯ . . . ನಿತಂಬಿನಿಯರತಿಹರುಷದಿಂ ರಂಜಿಸಿದರು (ಸೌಂದಪು. ೦೮-೦೯). [ ನನೆ₂ + ಬೆರಸು₁ ]

**ನನೆವೆರಸು₂** (ಅ). ಹೂವುಗಳಿಂದ ಕೂಡಿಕೊಂಡು; ಪುಷ್ಪಸಹಿತವಾಗಿ : ನನೆವೆರಸು ಗುಜ್ಜಮಾವಿನ ಕೊನರ್ಗಳನುಡಿದುಡಿದು ನೀಡೆ ಬೇಟದ ಪಿಡಿಯೊಳಂ ಮನವೊಸೆದು ಮೇವುತಿರ್ದುದೊ ವನಕರಿ ಪರಿದಂತೆ ದಂತಹಸಿತ ಕಟಾಕ್ಷಂ (ಅರ್ಧನೇ. ೫-೯೪); ನನೆವೆರಸುಟ್ಟು ಮಾಂದಳಿರನೊಪ್ಪಿರೆ . . . ಓಪನಿಗೆ ಪುಳಿಂದಿ ಪಾಡಿದಳೊಱಲ್ದು ಗುಣಪ್ರಿಯನಂಕಮಾಲೆಯಂ (ಲೀಲಾವ. ೮-೩೦). [ ನನೆ₂ + ಬೆರಸು₂ ]

**ನನೆವೇಱು** (ಕ್ರಿ). ಮೊಗ್ಗುಗಳನ್ನು ಪಡೆ; ಘುಂಗುಳು ಬಿಡು: "ನನೆತುದೆಂದು ನನೆವೆತ್ತುದು" (ಶಬ್ದಸಾ. ೯-೦೮೯); ತನಯಂ ಬಂದಾ ವಾರ್ತೆಗೆ ತನುಪುಳಕದ ತೆಕ್ಕೆವೆತ್ತು ಶಿಶಿರದ ಸೋಂಕಿಂ ನನೆವೆತ್ತೊಪ್ಪುವ ಮಾಲತಿಯನೆ ವಿಜಯಾವತಿ ಸಮಂತು ಪೋಲ್ತೆಸೆದಿರ್ದಳ್ (ಕುಸುಮಾ. ೦೫-೯೮). [ ನನೆ₂ + ಪೆಱು₁ ]

**ನನೆವೊಯ್** (ಕ್ರಿ). ೧. ಚಿಗುರು; ಪಲ್ಲವಿಸು : ತನಿಗರ್ಬಿನ ಸೋರ್ವ ರಸ ಪ್ರವಾಹದಿಂದವೆ ನನೆವೊಯ್ದು ಕಾಯ್ತುಱುಗಿ ಪಣ್ತುದು ಮಾಮರಂ (ಲೀಲಾವ. ೬-೧೩೮). ೨. ಉಂಟುಮಾಡು; ಹೊಮ್ಮಿಸು: ಪನಿಪುಲ್ಲಂಬು ಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ ನನೆವೊಯ್ದುಣ್ಮಿಸುತುಂ . . . ತಣ್ಣನೆ ತೀಡಿತ್ತನಸಂ ಪ್ರಭಾತಸಮಯಪ್ರೋದ್ಭೂತಶೀತಾನಿಲಂ (ಕುಸುಮಾ. ೧-೫೨). [ ನನೆ₂ + ಪೊಯ್₂ ]

**ನನೆವೊಱೆ** (ನಾ). ಹೂವುಗಳ ಭಾರ; ಪುಷ್ಪಭಾರ : ನನೆವೊಱೆಯಿಂ ಬಳ್ಕಿದ ಮಾವಿನ ಕೊಂಬಿನೊಳಳಿಯ ಮಾಲೆ ಮೊರೆಯುತ್ತಂ ಪೂವಿನ ಬಿಲ್ಲನತನು ಜೇವೊಡೆದನುಗೆಯ್ದೇಱಿಸುವ ಚೆಲ್ವನೇಂ ಬೀಱಿದುದೋ (ಪಾರ್ಶ್ವಪು. ೯-೫೩). [ ನನೆ₂ + ಪೊಱೆ ]

**ನನೆವೋಗು** (ಕ್ರಿ). ಮೊಗ್ಗು ಬಿಡು; ಮೊಗ್ಗಾಗು : ಅಧೀಶವಚನಕದಂಬಕ ಮಂಬೊಂದು ಶಂಕಣಲರೊಳ್ ನನೆವೋಯ್ತೆಂಬಿನವಾಕೆಯ ತನಂಲತೆ ತುಂಬಿದುದತಿಬಹಳಪುಲಕವಿಪುಲಶ್ರೀಯಿಂ (ಆದಿಪು. ೭-೩೦). [ ನನೆ₂ + ಪೋಗು₁ ]

**ನನೆಸು, ನೆನಸು₂, ನೆನೆಸು₂** (ಕ್ರಿ). ಒದ್ದೆಯಾಗುವಂತೆ ಮಾಡು; ತೋಯಿಸು; ಆರ್ದ್ರಗೊಳಿಸು : ನಾರದ ಕಲಹತಾತ್ಪರ್ಯದೆ ತರಳ ಕುಮಾರನ ಕೊಂದೆ ನೀನೆನುತೆ ಮಾರವಮಾತ್ಸಕೆ ರುಕ್ಮಿಣಿ ಸತ್ಯಭಾಮೆ ಕಣ್ಣೀರಿಂದ ನನೆಸಿದರೊಡಲ (ಮೋಹತ. ೩೭-೨೦). **ನೆನಸು₂ :** ಆಪ್ಲಾವ, ಅಪ್ಲವ, ಸ್ನಾನಂ–ಶಿ ಸ್ನಾನದ ಹೆಸರು. ತಲೆ ಮುಂತಾದ ಸರ್ವಾಂಗವನ್ನು ನೀರಿನಲ್ಲಿ ನೆನಸಿ ತೊಳೆಯುವಿಕೆ (ಸಿದ್ಧಾಂತಿ. ೩೦೭). **ನೆನೆಸು₂ :** ಭಟ್ಟನಿಯ ಕಣ್ಣುಗಳಲ್ಲಿ ನಾನು ಒಂದು ಅಪೂರ್ವಮಾಧುರಿಯನ್ನು ಕಂಡೆ . . . ಆ ದೃಷ್ಟಿ ನನ್ನನ್ನು ಅಭಿನವರಸದಲ್ಲಿ ನೆನೆಸುತ್ತಾ, . . . ಒಂದು ಅನನುಭೂತ ಜಗತ್ತಿಗೆ ಎಳೆದೊಯ್ಯಿತು (ಬಾಣಭ. ೩೦೪). [ ನನೆ₁ + – ಸು₁ ]

**ನನೆಹ** (ನಾ). ನೆನೆಯುವಿಕೆ; ಒದ್ದೆಯಾಗುವಿಕೆ; ತೇವಗೊಳ್ಳುವಿಕೆ : "ತೇವು ಸ್ನೇಮ ಸಮುಂದನ ಈ ಮೂಱು ನನೆಹದ ಹೆಸರು" (ನಾಚಿರಾ. ೬). [ ನನೆ₁ + – ಹ₂ ]

**ನನ್ನಗ** (ನಾ). ಒಬ್ಬಾತನ ಹೆಸರು : ನ × ಗರಮುಪ್ಪ ವಯಚಯನ್ ತುರಗ ಗೊಳ್ಳಾಗಿ ದುಗ್ಗದರಸನುಂ ತೊದಳ್ದು ವೇಳೆಯುವನಾಳು × ಪಱಿಯುತ್ತಂ ಬಪ್ಪುದ ನನ್ನಗನ್ನಾದ (ಸೌಇಇ. IX–1, ೨೨–೬ : ೯೭೩). [ ? ]

**ನನ್ನಪ** (ನಾ). ಒಬ್ಬಾತನ ಹೆಸರು : ಆಹವಶೌಣ್ಡವೀರನುದಾರು ಕಣ್ಣುವ ಭಾರದ ನನ್ನಪನೃಪಂ ಮಹಸಾಮಂತಂ (ಎಕ. IX, ಚನ್ನಪ. ೧೯೧–೦೮ ; ೯೦೦?). [ <ನನ್ನಿ ? + ಅಪ (<ಅಪ್ಪ₁) ]

**ನನ್ನಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮತ್ಪೆರ್ಮ್ಮನಂಗಳ್ಗೆ ವಿದ್ಯಾಧರಯ್ಯಂ ಬಿನ್ನಪಂಗೆಯ್ದು ನಗರಲ ನನ್ನಯ್ಯನ ದೇಗುಲಕ್ಕೆ ಮುಕ್ತೆರೆಯು ಪಡೆದು ಕೊಟ್ಟಂ (ಎಕ. III, ನಂಜನ. ೧೫೫–೫ ; ೯೭೦). [ <ನನ್ನಿ ? + ಅಯ್ಯ₁ ]

**ನನ್ನಾನನ್ನಿ, ನನ್ನಾನಿನ್ನಿ** (ನಾ). ಸಣ್ಣಸಣ್ಣದು; ಚೂರುಚೂರಾದದು; ಪುಡಿಪುಡಿ : ಸನ್ನಾಹಭೇರಿಗಳುನ್ನಾದದಿಂ ದೆಸೆ ನನ್ನಾನನ್ನಿಯಾಗೊಡೆಯ ತನ್ನ ಮೋಹರಗೂಡಿ ಚೆನ್ನರಾಮುಗ ಶೌರ್ಯದುನ್ನತಿಕೆಯೊಳೆಯ್ದಿದನು (ಕುಮಾರಾಮ. ೦೨–೨೭); ಚೆನ್ನೆಯ ನಿಟ್ಟಿಸಿ ಕಾಪನಂಬಿಂ ನನ್ನಾನನ್ನಿಯಾದರು ನೋಟಕರು (ರಾಮವಿ. ೭–೧೪೨). **ನನ್ನಾನಿನ್ನಿ :** ಬಿನ್ನಣದಿಂದೆಚ್ಚರು ರಿಪುಭಟರೆರ್ದೆ ನನ್ನಾನಿನ್ನಿಯಪ್ಪಂತೆ (ಹಂಪ್ರಸಾಂ. ೮–೩೩). [ ←ಹಿಂ. ನನ್ನಾ, ನನ್ಹಾ ]

**ನನ್ನಾನಿನ್ನಿ** 'ನನ್ನಾನನ್ನಿ' ನೋ.

**ನನ್ನಾರಿ** (ನಾ). ಒಂದು ಬಗೆಯ ಸಸ್ಯ ; ಸೊಗದೆ : ಸುಗಂಧೀಬೇರು, ಸೊಗದೇಬೇರು, ನಾಮದ ಬೇರು, ನನ್ನಾರೀಬೇರು (ಮೈಶಿಗಿ. ೪೨–೮೪೦). [ ದೇ.॥ ತಮಿ. ಮಲ. ನನ್ನಾರಿ ]

**ನನ್ನಿ** (ನಾ). ೧. ಸಹಜವಾದುದು; ವಾಸ್ತವವಾದುದು; ಸತ್ಯ; ದಿಟ; ನಿಜ; ನಿಶ್ಚಯ : "ಸತ್ಯದೊಳ್ ನನ್ನಿಯಕ್ಕುಂ" (ಕರ್ಣಾನಿ. ೫೦); "ನನ್ನಿ ಸಾಜ ನೆನಸುಂ ದಿಟಮೆಂದುಸಿರಲ್ಕೆ ಸತ್ಯಮಕ್ಕುಂ" (ಕವಿಕಂ. ೦೩೦); "ನಿಶ್ಚಯದೊಳಂ ನನ್ನಿಯೆಂದಕ್ಕು" (ಶಬ್ದರ. ೫೩); ನನ್ನಿಯನೀ ಪಲ್ಲವಮೆನೆ ಸನ್ನುತರೂಪಿಂ ವಿಪರ್ಯಯೋಪಮಮಕ್ಕುಂ (ಕವಿರಾ. ೩–೬೨); ಛಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ (ಪಂಪಭಾ. ೦೪–೬೪); ಅನೃತಂ ಲೋಭಂ ಭಯಮೆಂಬಿನಿತುಂ ನೀನಿರ್ದ ನಾಡೊಳಿರ್ಕುಮೆ ರವಿನಂದನ ನನ್ನಿ ಚಾಗಮಕ್ಕೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾದೈ (ಗದಾಯು. ೫–೦೭); ಇನ್ನರ ನಂಡಿ ಕನಸಿನೊಳಂ ನನ್ನಿಯೆನಲ್ ಕೇಳ ದಿವ್ಯಪುರುಷಂ ಪ್ರತ್ಯಕ್ಷಂ ನಿನ್ನ ಮುಂದೆ ನುಡಿಯಲ್ಕಿನ್ನುಮದೇನೆಂಬೆ ಸಂದೆಗಕ್ಕೆಡೆಯುಂಟೇ (ಕಾದಂಪೂ. ೯೧೫); ಅನ್ನವನು ಇಕ್ಕುವದು ನನ್ನಿಯನು ನುಡಿಯುವದು ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಸರ್ವಜ್ಞ. ೬೦೩); ಏವಣ್ಣ ಪೆನ್ನ ಮನದ ನನ್ನಿಯ ನೆಲೆಯಂ (ಚಿಕವಿ. ೩–೯೭). ೨. ಸತ್ಯವಂತಿಕೆ; ಸತ್ಯಸಂಧತೆ : ನೆನೆಯದಿರಣ್ಣ ಭಾರತದೊಳಂ ಪೆಱರಾರುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ . . . ಕರ್ಣನ ಕಡುನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ (ಪಂಪಭಾ. ೦೨–೨೦೭); ನನ್ನಿ ವಿನಯಂ ನಯಂ ಜಯಮುನ್ನತಧೃತಿ ಸತ್ವಮೆಂಬ ರಾಜಗುಣಂಗಳ್ ನಿನ್ನೊಳ್ ನೆಲಸಿದುವಿನ್ನುಂ ಮುನ್ನಂ ನಿನ್ನನ್ನರೊಳರೆ ರಾಜಕುಮಾರಾ (ಲೀಲಾವ. ೪–೩೭); ದಿಟಂ ನನ್ನಿಯುಳ್ಳವನೆಂದು ಬಗೆದು ಬೇಡಿದೆನುತ್ತಮದ್ವಿಜರು

ಕೊಂಬುದೆಂದು (ಹರಿಶ್ಚ. ೧೧-೨೦). ೩. ಅಕ್ಕರೆ; ಪ್ರೀತಿ; ವಿಶ್ವಾಸ: ಎನ್ನ ಭವತಿಮಿರಭಾನುವೇ . . . ಎನ್ನ ನನ್ನಿಯೆಯೆನ್ನ ಚೆನ್ನಿಗನೆಯೆನ್ನ ಗತಿಯೇ ಮತಿಯೇ ಧೃತಿಯೇ ಪತಿಯೇ (ಪದ್ಮರಾ. ೬-೩೯); ತನ್ನರಸಿ ವರಚಂದ್ರಮತಿಗೆ ವಿಭಿನ್ನ ನಾಲಕು ಜಂಬುಫಲವನು ನನ್ನಿಯಿಂದಿತ್ತಾಗ ಸುರಸೆಗೆ ಕೊಟ್ಟನೊಂದುವನು (ಸಂಭವ. ೦೯-೫೦); ನಿನ್ನಂಗಸಂಗವನ ಗಲ್ದಾಯ್ತು . . . ಎಂತು ಸೈರಿವರೊ ಕಾಂತನೊಳ್ನನ್ನಿಯುಳ್ಳರಸಿಯರ್ ದ್ರೌಪದಿ ಸುಭದ್ರೆಯರದೆಂತುಳಿವರಕಟೆಂದರು (ಜೈಮಿಭಾ. ೨೩-೫೯); ಬಲ್ಗಾಲಂಬಿಡಿದು ನೀನೆ ಗತಿಯೆಂದು ನನ್ನಿಯಿಂ ನಂಬಿದಳಂ ಮಱೆದು ಸವತಿಯೊಂದು ಪಿಸುಣ್ಗೆ ಎಱೆಯಂ ಮಾಡುವೋದಂ (ರಾಮಾಶ್ವ. ೨೨-೮). ೪. ಕೊಟ್ಟಮಾತು; ಭಾಷೆ; ವಚನ; ಪ್ರತಿಜ್ಞೆ: ಕಿಡುಗುಮೆ ರಾಜ್ಯಂ ರಾಜ್ಯದ ತೊಡರ್ವದೇವಾಟ್ಕೆ ಬಾಟ್ಕೆ ನನ್ನಿಯ ನುಡಿಯಂ ಕಿಡೆ ನೆಗಟ್ ನಾನು ಮೆರೆಡಂ ನುಡಿದೊಡೆ ಹರಿಹರಹಿರಣ್ಯಗರ್ಭರ್ ನಗರೇ (ಪಂಪಭಾ. ೧-೮೨); ಮದುವೆಯ ದಿವಸದಂದು ಬರವೇಟ್ಟುದು ನೀನೆಂದೆನ್ನನಂದು ನೀಂ ಚದುರ್ಗಿಡೆ ನುಡಿದೊಡಾಂ ನುಡಿದ ನನ್ನಿಗೆ ವಂದೆಂ (ಸುಕುಮಾ. ೬-೨೨); ನಿನ್ನಂ ಬಿಡಿಸಿದಪೆಂ ನಂಬೆನ್ನಂ ಸಂದೇಹಮಿಲ್ಲಮೆಂದೊಲವಿಂದಂ ನನ್ನಿಯನೀಯೆ (ದಶಕು. ೮-೨೮೪); ಪುಸಿ ಪೊಂದದ ಪೊಸನುಡಿಯಂ ವಸುಮತಿಯೊಳ್ ನುಡಿಯಲಕ್ಕುಮಿಾ ನೃಪಸುತನಂತಸುಂವಳಿಗುಮೆಂಬ ಬಗೆಯೊಳುಮುಸುರುವ ನನ್ನಿಗಳ ನಾಯಕರ್ವೆಱರೊಳರೇ (ರಾಜಶೇ. ೦೯-೨೦). ೫. ಒಳ್ಪೆಯೆಂದಂ; ಸರಿಯಾದುದಂ; ಸಮಂಜಸವಾದುದಂ: ನಿನ್ನಂ ತನ್ನೊಳ್ ಭೇದಂ ಮಾಡದೆ ನಲ್ಮೆಯನೆಸಗದ ನೀಱನೊಳು ಕೆನ್ನಮಿದಿರನಱಿಯದೆ ಹೋರು ವುದಿದು ನನ್ನಿಯೆ (ಜಯಕಾ. ೬-೫೦). ೬. ಚೆಲುವು; ಅಂದ; ಸೌಂದರ್ಯ.

**ನನ್ನಿ ಕಂದರ್ಪ** = ಚೆಲುವಿನಲ್ಲಿ ಮನ್ಮಥನಂತಿರುವವನು; ಒಂದು ಬಿರುದು: ಸ್ವಸ್ತಿಶ್ರೀ ಸಾಮನ್ತರಾಮನ್ನಣ್ಣಿಕನ್ದರ್ಪ ಸಿರಿವುರದೊ ಅಣ್ಣಿಗನೊಳ್ ಕಾದಿ ಸತ್ತ ಅರಕೆಲ್ಲನ ಮಗ (ಮೈಆರಿ. ೧೯೬೩, ೩೬-೨; ಸು. 950). **ನನ್ನಿಗಾಶ್ರಯಂ** = ಸತ್ಯಕ್ಕೆ ಆಶ್ರಯನಾದವನಂ; ಒಂದು ಬಿರುದಂ: ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದ ಮಹಾಮಾತ್ಯಂಯಂ ನನ್ನಿಗಾಶ್ರಯಂ ಶ್ರೀಮತು ಅಯ್ಯಪದೇವಂ ರಾಜ್ಯಂಗೆಯ್ಯೆ (ಎಕ. XI, ಚಿತ್ರದು. ೬೨-೫; 918). **ನನ್ನಿ ಚಳುಕಿ** = ಸತ್ಯವಂತನಾದ ಚಾಲುಕ್ಯ; ಒಂದು ಬಿರುದು: ಚಾಳುಕ್ಯಕರ್ಣ್ನಮಹಾರಾಜಂ ಧರಣೀಲೋಕಾಶ್ರಯನಭಿಮಾನಗಳ್ಳನಹಿತರ ಗಣ್ಡಂ ಮಾವನ ಗನ್ಧವಾರಣಂ ನನ್ನಿಚಳುಕಿ ಶ್ರೀಮತ್ ರಾಜಾದಿತ್ಯ (ಮೈಆರಿ. ೧೯೬೩, ೪೦-೫೦; 950?). **ನನ್ನಿನಾರಾಯಣ** = ಸತ್ಯಕ್ಕೆ ನಾರಾಯಣನಂತಿರುವವನು; ಸತ್ಯರಕ್ಷಕ; ಸತ್ಯಪಾಲಕ; ಒಂದು ಬಿರುದು: ಇನ್ತು ನನ್ನಿನಾರಾಯಣಂ ಸಮ್ಯಕ್ತ್ವರತ್ನಾಕರಂ . . . ಎನಿಸಿ ಶ್ರೀಮತ್ಸತ್ಯಾಶ್ರಯದೇವಳ್ ತೈಲಪಯ್ಯಂ ಮಾಸವಾಡಿನೂಱನಾಲ್ವತ್ತುಮಂ ಬೀಳ ವೃತ್ತಿಯಿನಾಳುತ್ತುಮಿರೆ (ಸೌಇಇ. XI-i, ೫೨-೩೫; 1007). **ನನ್ನಿಮಹಾರ್ಣವ** = ಸತ್ಯಕ್ಕೆ ಸಾಗರದಂತಿರುವವನಂ; ಒಂದು ಬಿರುದಂ: ವೀರಶ್ರೀ ಣೇ ತ್ರನುಂ ನನ್ನಿಮಹಾರ್ಣ್ಣವನುಂ ಕನ್ದುಕಪುರನ್ದರನುಮೆನಿಸುವ ವೀರಾಗ್ರಣಿಯ ಪರಾಕ್ರಮಮೇದೊರೆ (ಸೌಇಇ. XI-i, ೫೨-೦೪; 1008). **ನನ್ನಿ ಮಾಡು** = ದಿಟ ಮಾಡಂ; ಸತ್ಯವನ್ನಾಗಿಸಂ; ಸಾಬೀತುಗೊಳಿಸಂ: ಪೆಣನನಿಱಿದು ಪಗೆಗೊಂಡರೆಂಬ ನಾಣ್ನುಡಿಯಂ ನನ್ನಿ ಮಾಡಿ (ಪಂಪಭಾ. ೧೨-೨೯೪); ಅಂತು ಪವಡಿಸಿದ ಪರಮೇಶ್ವರಂಗೆ ಮನೋಗತಮಲ್ಲದ ಕಾಮಿನಿಯಂತೆ ಯಾಮಿನಿ ತನ್ನ ಕ್ಷಣದಾಭಿಧಾನಮಂ ನನ್ನಿ ಮಾಡಿ (ಶಾಂತಿಪು. ೧೦-೧೫೫ ಪ); ಕಳ್ಳಂಗೆ ಬೆಳ್ದಿಂಗಳ್ ಸೊಗಸದೆಂಬ ನಾಣ್ನುಡಿಯಂ ನನ್ನಿ ಮಾಡಿ (ಧರ್ಮಾಮೃ. ೨-೧೨೪); ಪ್ರಾರಬ್ಧಸ್ಯಾಂತಗಮನಂ ಮಹಾಪುರುಷಸ್ಯ ಲಕ್ಷಣಮೆಂಬ ನಾಳ್ನುಡಿಯಂ ನನ್ನಿ ಮಾಡಿ (ಸೌಇಇ. IX-i, ೨೭೩-೮೭; 1179); ಪರಮಾತ್ಮನಂ ಧ್ಯಾನಿಸುವೊಡಂತರಾತ್ಮನೊ ಪರಮಾತ ನಕ್ಕುಮೊಯೆಂಬ ಸಮಯತ್ವಮಂ ನನ್ನಿ ಮಾಟ್ಪೆನೆಂಬಂತೆ ಪಗಲುಮಿರುಳುಂ ವಸುದೇವನನೇ ಧ್ಯಾನಿಸುತ್ತಿರೆ (ಬಂಹರಿ. ೧-೫೭ ವ). **ನನ್ನಿಮಾರ್ತಂಡ** = ಸತ್ಯವನ್ನು ಪ್ರಕಾಶಪಡಿಸುವ ಸೂರ್ಯನಂತಿರುವವನಂ; ಒಂದು ಬಿರುದಂ: ಶ್ರೀನನ್ನಿಮಾರ್ತ್ತಣ್ಡ ಪಟ್ಟಳಿಗೆಯ ಎಱೆಯಂಗರಸನ ಮಗ ಚಿಣ್ಣಮ್ಮರಸ (ಮೈಆರಿ. ೧೯೪೩, ೨೭-೧; 1080). **ನನ್ನಿಯ ಗಂಗ** = ಒಬ್ಬ ಸ್ಪತನ ಹೆಸರು: ಸತ್ಯವಾಕ್ಯ ರಾಚಮಲ್ಲಪೆರ್ಮ್ಮಾನಡಿ ಪ್ರಿಥುವೀರಾಜ್ಯಂಗೆಯ್ಯುತ್ತಂ × × × ನನ್ನಿಯ ಗಂಗನ ಪರಿ ಬನ್ದು ಬೆಳ್ಗೆಱೆಯುಂ ಕುನ್ದೂರುಮಂನಿಱದು ಪೋಗೆ (ಎಕ. XII, ತಿಪಟೂ. ೫೫-೧; ಸು. 860); ಶ್ರೀಮತ್ ಪಿಟ್ಟು ವಿಪತಿಯ ಮಗ ನನ್ನಿಯ ಗಂಗನಣ್ಣೆಯೆಂಬ ಗಣ್ಡ ಬೀರನೊಟವ್ವಂ ತಾಗಿ ಶಾನ್ತರ ನೆಱೆಯರಟ್ಟದೊಡೆ (ಎಕ. X, ಗೌರೀಬಿ. ೪-೧೧, ಸು. 920); [ನ] ನ್ನಿಯ ಗಂಗಂ ಬೂತಯ್ಯಂ ಪುರಿಗೆಱ್ ಮೂನೂಱುಂ ಬೆಳ್ವೊಲ ಮೂನೂಱು ಮನಾಳುತ್ತಿರೆ (ಸೌಇಇ. XI-i, ೩೭-೫; 946); ಜಯಲಕ್ಷ್ಮೀಪತಿ ಮಾಳ ಸಿಂಗನನುಜಂ ಸತ್ಯಪ್ರಿಯಂ ಸನ್ದ ನನ್ನಿಯ ಗಂಗ ಕ್ಷಿತಿಪಾಳಕಂ (ಎಕ. VII, ಶಿವಮೊ. ೪-೭೦; 1122). **ನನ್ನಿಯ ಮೇರು** = ಒಂದು ಬಿರುದು: ಸ್ವಸ್ತಿ ಶ್ರೀಮನ್ಮಹಾಪ್ರಭು ನಂನಿಯ ಮೇರು ಕಲಿಕಾಲ ಧರ್ಮ್ಮರಾಜ ಕಬ್ಬಾಹು ನಾಡಾಳುವ . . . ಬಾಚೆಯ ಹಳ್ಳಿಯ ಗಂಡನಾರಾಯಣಸೆಟ್ಟಿಯರು (ಎಕ. VI(R), ಕೃಷ್ಣರಾ. ೭೭-೩; 1179). **ನನ್ನಿವೆಡಂಗ** = ಸತ್ಯದ ಬೆಡಗುಳ್ಳವನಂ; ಒಂದು ಬಿರುದಂ: ನನ್ನಿವೆಡಂಗಂ ತನ್ನಟ್ಟಿಯೆ ಕೊಟ್ಟು ಕೆಱೆಗೆ ಯಶಮಂ ಪಡೆದಂ (ಕಇ. II, ೪-೫; 918).

[ದೇ.॥ ತಮಿ. ನನ್ಟಿ, ನನ್ಟು; ಮಲ. ತೆಲು. ನನ್ನಿ]

**ನನಿಕರ್ತಾರ**, ನನ್ನಿಕಾರ್ತರ (ನಾ). ಒಬ್ಬಾತನ ಹೆಸರು. ಬಾಧಪರಿಹಾರಮ್ ನನ್ನಿಕರ್ತಾರ ಭಟರರ್ಗೆ ಧಾರೆ ಎಱೆದು ಕೊಟ್ಟಮ್ (ಪ್ರಾಕಕ. ೧೯೦೬, ೦೩-೧೮; 900). **ನನ್ನಿಕಾರ್ತರ**: ಸರ್ವ್ವಬಾಧಾಪರಿಹಾರ ನನ್ನಿಕಾರ್ತ್ತರ ಭಟರರ್ಗೆ ಎ × × × ಱೆದು ಕೊಟ್ಟ (ಎಕ. III, ಮೈಸೂರು. ೩೭-೫; ಸು. 990 ?). [ನನ್ನಿ + ಕರ್ತಾರ]

**ನನ್ನಿಕಾರ್ತರ** 'ನನ್ನಿಕರ್ತಾರ' ನೋ.

**ನನ್ನಿಕಾಱ** (ನಾ). ಸತ್ಯವಂತ; ದಿಟವಂತ; ಸತ್ಯನಿಷ್ಠ; ದಿಟಗಾರ: ಕಾಯಕ್ಲೇಶದಿನಡವಿಯ ಕಾಯಂ ಪಣ್ಣುಮನುದಿರ್ಪ ಶಿಂದಗಲದೆ ನಿಂದೀಯಮರ್ಕಾವ ತೆಱದಿಂ ನೋಯಿಸರ್ಕೆ ನಿನ್ನ ನನ್ನಿಕಾಱನ ಮನಮಂ (ಪಂಪಭಾ. ೭-೪೮); ಹುಸಿಯಂ ಹುಸಿಮಾತಂ ಸೈರಿಸನೆಂದುಂ ನಂನಿಕಾಱನಂನಿಗೆ ಸಂತಸಮೆಯ್ದುವನಿಂತಿದು ಭಾವಿಸೆ ಹಬ್ಬೆಯನಾಯಕಂಗೆ ಸಲೆ ಸಹಜಗುಣಂ (ಕಇ. I, ೨೫-೪೮; 1186); ಮುನ್ನೆಲ್ಲರುಂ ಸುಡುವ ಕಾಡಾವುದೆಂದು ನೋಳ್ಪನ್ನೆಗಂ ಹಲವು ಕೆಲವುರಿಯ ಬಳಗಂ ಕಂಡು ನನ್ನಿಕಾಱಂ ಕಾವ ಕಾಡತ್ತ ನಡೆವಾಗ (ಹರಿಶ್ಚ. ೧೨-೩೧); ನನ್ನಿಕಾಱರ ದೇವ ಕೇಳ್ಸಾಕಿನ್ನೆನಗೆ ಸಾಮ್ರಾಜ್ಯಸುಖಸಂಪನ್ನತೆಯ ಸೌಭಾಗ್ಯ (ತೊರರಾ. ೧-೫-೦೭).

[ನನ್ನಿ + -ಕಾಱ]

**ನನ್ನಿಗ** (ನಾ) = ನನ್ನಿಕಾಱ: ನಿನ್ನನ್ನೆನೆದಾಪೊನ್ನನ್ನಿಗ ಜಱುಚಿಲ್ಲದ ಜಾಗಿಗಳಾಣ್ಮ ಎನ್ನಯ ಮೊಗ ಮುಂದೇ ಬನ್ನಂಬೆತ್ತೆನ್ನಯ ಬಿನ್ನಪಮಂ ಮನ್ನಿಸು (ಉದ್ಭದೇ. ೩-೨೯); ನನ್ನಿಗರಿಂಪುಗಾಱರಿನಿವಾತುಗರ್ . . . ತನ್ನೊಡನಾಡೆ ನಾಡೆ ನಲಿಗುಂ ಚಿಕದೇವನೃಪಂ ಕೃಪಾಕರಂ (ಚಿಕವಿ. ೫-೧೧೦); ಇಂತೊಂದು ಮಾಟ್ಕೆಯುಂ ಪೊಱನಲ್ಮೆಯಂ ಕವಡುಗಾರ್ತಿಯ ಕಲ್ಲೆರ್ದೆಯೊಳ್ ನಾಂಟದ ನಾಡಾಡಿ ನನ್ನಿಗ ಚೆನ್ನಿಗನ ಮನೋರಥದೊಂದು ಹಯದ ಕಾಲ್ಗಳಂತಿರೆ ಕಲ್ಲೊಳ್ ಕೀಲಿಸಿರ್ಪುದುಂ ಕಂಡು (ರಾಮಾಶ್ವ. ೧೩೬-೫); ನಿಮ್ಮವರ ನನ್ನಿಗರ ಹಿಂದು ಸಿಖ್ ಮುಸಲ ಹರಿಜನರ, ನಿರ್ಮ್ಮೊಲವ ಧೀರ ಮಾನವತೆಯೇ ಅಡಿಗಡಿಗೆ ಕಾಡಿತ್ತು, ಬೆನ್ನಟ್ಟ ಬೇಟೆಯಾಡಿತ್ತು (ಅಮತಂ. ೨೦-೬).

[ನನ್ನಿ + -ಗ]

**ನನ್ನಿಗೆಡು** (ಕ್ರಿ). ಮಾತಂ ತಪ್ಪು; ಭಾಷೆ ತಪ್ಪು; ಸುಳ್ಳಾಗು: ನಾಣ್ಗೊಳ್ದು ನನ್ನಿಗೆಟ್ಟೊಗಡಿಸದೆ ನಾನಾವರ್ಣದೆಂಜಲ ತಿಂದು ಬಾಳುವ ಗನ್ನಗತಕದ ವೇಶ್ಯೆಯರ ಸುಡಲಿ (ಜೀವಂಜ. ೩-೩೭); ನನ್ನಿಗೆಟ್ಟಂತು ನುಡಿವರೆ ಸಲ್ಲದಿದು ನೀನು ಖಿನ್ನನಾಗಿರದೆ ಭಜಿಸೈ ಪಾರ್ವತೀಶ್ವರನ (ಸೌಂದಪು. ೭-೫); ಎನ್ನ ರಾಜತೇಜಕರಸ ನನ್ನಿಗೆಡಲು ಮೂಱು ತೆಪ್ಪನಿಂ ನರೇಶನೆಡೆಯ ಬಿಡುವೆನೊಪ್ಪಿದಡೆ ಗಡ (ಮದೇಪು. ೩೩-೫೭). [ ನನ್ನಿ + ಕೆಡು₁ ]

**ನನ್ನಿಗೆಯ್** (ಕ್ರಿ). ನಿಜಗೊಳಿಸು; ಸಾಬೀತುಗೊಳಿಸು; ಸತ್ಯವನ್ನಾಗಿಸು: ಬಿಸಿಯೆಲ್ಲಮಂ ಕಿದರೆ ಚಳಿಯಂದಂ ಕುದುರೆ ವೇಣ್ ಬೆಸುಗೆಯೊಳ್ ನೆಲೆ ನಿಲ್ವುದಂ ನನ್ನಿಗೆಯ್ದಂ (ಕಾಲೂರ. ೧೩೭-೩೭೮). [ ನನ್ನಿ + ಕೆಯ್₁ ]

**ನನ್ನಿಗೊಡು** (ಕ್ರಿ). ಭಾಷೆ ಕೊಡು; ಮಾತು ಕೊಡು: ಪಿರಿಯದೊಂದು ಮನೆವಾಟ್ತಿಯುಂಟೀಗಳೆ ಪೋಗಿ ಬಂದಪ್ಪೆಂ ಬಂದ ಬಟಿಕ್ಕನ್ನಂ ಮೆಚ್ಚಿದಂತೆ ಮಾಡೆಂದು ನನ್ನಿಗೊಟ್ಟು ನಂಬಿಸಿ ಪೋದೊಡೆ (ವಡ್ಡಾರಾ. ೧೭-೯).
[ ನನ್ನಿ + ಕೊಡು₁ ]

**ನನ್ನಿಗೊಳ್** (ಕ್ರಿ). ಪ್ರತಿಜ್ಞೆಯನ್ನು ಪಡೆ; ಭಾಷೆಯನ್ನು ಕೊಡುವಂತೆ ಮಾಡು; ಮಾತು ಪಡೆ: ಚಾಣಾಕ್ಯಂ ಕೇಳ್ದು ಅರಸನಂ ಕಂಡಾನರಸಿಯಾ ಬಯಕೆಯಂ ನೆಱಪುವೆನಾಯರಸಿಗೆ ಪುಟ್ಟಿದ ಕೂಸನೆನಗೀಯಲಾರ್ಪೊಡೆಂದೊಡರಸನೀವೆನೆಂದೊಡರಸಿಯುಮಂ ನನ್ನಿಗೊಂಡಾರುಮಱಿಯದಂತಿರೆ (ವಡ್ಡಾರಾ. ೧೮೭-೧೩). [ ನನ್ನಿ + ಕೊಳ್₁ ]

**ನನ್ನಿದಪ್ಪು** (ಕ್ರಿ). ಭಾಷೆ ತಪ್ಪು; ಮಾತಂ ತಪ್ಪು: ನನ್ನಿಯಹುದೆ ನಿಮ್ಮ ವಾಕ್ಯ ನನ್ನಿದಪ್ಪದಮ್ಮಯೆಂದೊಡೆನ್ನದೊಂದು ನುಡಿಯನಾಲಿಸುವುದು (ಮದೇಪು. ೩೩-೫೭). [ನನ್ನಿ + ತಪ್ಪು₁]

**ನನಿನುಡಿ** (ಕ್ರಿ). ದಿಟವನ್ನು ನುಡಿ; ಸತ್ಯವನ್ನು ಹೇಳು: ಈಯದೆ ಈಱಿಯದೆ ನನ್ನಿ ನುಡಿಯದೆ ನಣ್ಪಿದೇವಂಗಟ್ಟಿಗ್ಸಿ ಮುಯ್ವಪ್ಪಡೆದೊಂಗರ ಅಲೆದೊಂ ಮೂದಲಿಪೊಂ (ಎಇ. XXIV, ೩೭-೧೩; 885).
[ನನ್ನಿ + ನುಡಿ₁ ]

**ನನ್ನಿನೊಳಂಬ** (ನಾ). ಒಬ್ಬಾತನ ಹೆಸರು: ಆತನ ಮಗಂ ನನ್ನಿನೊಳಂಬನ್ (ಮ್ಯಎರಿ. ೧೯೩೩, ೪೮-೪; ಸು. 960); ಶ್ರೀಪೃಥ್ವೀವಲ್ಲಭ ಪಲ್ಲವಕುಲತಿಲಕ ಏಕವಾಕ್ಯಮಿಱಿವನೊಳಂಬ ಶ್ರೀಮದೆಲಿಪಯ್ಯನ ಮಗ ನನ್ನಿನೊಳಂಬನ ಬಿಟ್ಟ ಬ್ರಹ್ಮಾದೇಯಂ (ಎಕ. XI, ಹಿರಿಯೂ.೧-೩; 975).
[ ನನ್ನಿ + ನೊಳಂಬ ]

**ನನಿಮಟಲೂರ್** (ನಾ). ಒಂದು ಊರಿನ ಹೆಸರು (?): ಶೌಚಮಣಲೆಯರುಂ ನನ್ನಿಮಟಲೂರುಂ ಸನ್ಯೊನವಾಳ ಕಿಱುವೆಟ್ಟಿಗಳಾ ಪನ್ನಿರ್ವ್ವರ್ಗ್ಗಂ ರಣಪಾರರಾ ಮಣಲೆಯರಸರಾ ಸಮಾಧಿಯೆ ಸಮಾಧಿ (ಎಕ. XIV, ತಿರುಮ. ೩೫೩-೩; ಸು. 800). [ ? + ಊರ್ ]

**ನನ್ನಿವಂತ** (ನಾ). ಸತ್ಯವಂತ; ಧರ್ಮಿಷ್ಠ: ನನ್ನಿವಂತರ ದೇವ ಬಾರೈ ಮನ್ನಣೆಯ ಮದಗಜವೆ ಬಾರೈ (ಕಾಶಿರಾ. ೩೮-೬೦); ಯತಿಯು ರತಿಕನೆನಿಸಿ ಪತಿವ್ರತೆಯು ಸಿತಗೆಯೆನಿಸಿ ದಿವ್ಯವ್ರತಿಯು ಗತಿವಿಹೀನವೆನಿಸಿ ನನ್ನಿವಂತರ ಮತಿಗೆ ಸಟೆಯು ಬಿತ್ತಿದಾಗಿ (ಮದೇಪು. ೩೩-೩೭). [ ನನ್ನಿ + -ವಂತ ]

**ನನ್ನಿವಾತು** (ನಾ). ಪ್ರತಿಜ್ಞೆಯ ಮಾತು; ಶಪಥದ ನುಡಿ: ಮಱುಮಾತಿಂಗೆಡೆಯಿಲ್ಲದಂತಿರೆ ನುಡಿದ ಪಡೆಮೆಚ್ಚೆಗಂಡನ ಗಂಡವಾತುಮಂ ನನ್ನಿವಾತುಮಂ ಮುರಾಂತಕಂ ಮೆಚ್ಚಿ (ಪಂಪಭಾ. ೫-೭೫ ವ).
[ ನನ್ನಿ + ವಾತು₁ ]

**ನನ್ನಿವೇೞ್** (ಕ್ರಿ). ಸತ್ಯವನ್ನು ನುಡಿ; ನಿಜವನ್ನು ಹೇಳು: ತನ್ನರಸಿಯ ಉಱುಗಿಲ್ಲದ ನಡೆಗೆ ದೇವರ್ಕಳಂ ಸಾಕ್ಷಿಗೊಟ್ಟು ಆಗಳೆ ತನ್ನತನ್ನೆಯುಮಂ ಮನ್ನಿಸೆಂದು ನನ್ನಿವೇಟ್ದು ಸಂತವಿಟ್ಟು (ರಾಮಾಶ್ವ. ೧೭೩-೯).
[ ನನ್ನಿ + ವೇೞ್ ]

**ನನ್ನು** (ನಾ). ಅರಿಸಿನ, ಕುಂಕುಮ ಮೊದಲಾದುವನ್ನು ತೂಗುವ ಒಂದು ಬಗೆಯ ತೂಕ: ಸುಗಂಧಂಗಳಿಗೆ ಪಚ್ಚೆಕಪ್ಪುರ ಕೂರು ಒಂದಕ್ಕೆ ಹಾಗ ಪನ್ನೆಕುರು ಒಂದಕ್ಕೆ ಬೇಳೆ ಕಸ್ತುರಿ ತೊಲೆ ಒಂದಕ್ಕೆ ಬೇಳೆ ಕುಂಕುಮ ನನ್ನು ಒಂದಕ್ಕೆ ಹಾಗ ಅಗಿಲು ತೊಲೆ ಒಂದಕ್ಕೆ ಅಡ್ಡ (ಎಕ. V, ಬೇಲೂರು. ೭೫-೮೩; 1382). [ ? ]

**ನನ್ನೂಱು** 'ನಾಲ್ನೂಱು' ನೋ.

**ನಪತ್ತು** 'ನೌಬತ್ತು' ನೋ.

**ನಪರ** 'ನಫರ' ನೋ.

**ನಪಾಸು** 'ನಾಪಾಸು' ನೋ.

**ನಪಿರಿ, ನಪೂರಿ, ನೌಪೂರಿ** (ನಾ). ಒಂದು ಬಗೆಯ ವಾದ್ಯ; ತುತ್ತೂರಿ: ಚಂಬಕ ಡವುಡೆ ನಪಿರಿ ಬುರುಗುಗಳುಚ್ ಕೊಂಬಿನ ಕಾಳೆ ಮವುರಿಯ ಬೊಂಬುಳಿ ಡೋಳು ನಿಸ್ಸಾಳಗಳಬ್ಬರ ತುಂಬಿತಾಕಾಶಮಂಡಲವ (ಕಂನವಿ. ೧೪-೩); ಚಂಬಕ; ಡವುಡೆ; ನಪಿರಿ; ದುಂದುಭಿ . . . ಜಬರುಜಂಗಿ ಇತ್ಯಾದಿ (ಭಾಷಾಶಾ. ೫). **ನಪೂರಿ**: ನಿರ್ಜೀವಿ ಯಾವವೆಂದೊಡೆ... ಲೋಹವಿಡಿದ ಶಬ್ದ ತಾಳ ಕಂಸಾಳ ಗಂಟೆ ಕಹಳೆ ಕರ್ನೆ ನಪೂರಿ ಸ್ವನಾಯಿ (ವಡಸಂ. ೪೦೫-೮೯); ನುಡಿವ ಮದ್ದಳೆ ಜೋಡುಶಂಖ ನಪೂರಿಯು ಬಡಿವ ತುಡುಮು ಡಮಾಮಿಗಳು ಹೊಡೆವ ಭೇರಿಯು ದೇವದುಂದುಭಿ ಮೊದಲಾದ ಗಡಣವೆಣ್ದೆಸೆಯ ವ್ಯಾಪಿಸಿತು (ಅಬ್ಯಲೂ. ೪-೮೩); ಭೇರಿ ಹೆಗ್ಗಾಳೆ ನಪೂರಿ ನಾಗರ ಡೋಳು ಬಾರಿಸುತಿರಲು (ದೀದಕಾ. ೯-೩); ಭೇರಿ, ಕಹಳೆ, ಕರ್ನೆ, ನಪೂರಿ, ನಗಾರಿ, ಜಾಗಟೆ, ಕರಡಿ ಸಮ್ಮೇಳ (ಗುರುದ. ೧೦). **ನೌಪೂರಿ**: ಕಹಳಾ ಭೇರಿ ನಗಾರಿ ತಮ್ಮಟೆ ತುತೂರೀ ಮೌರಿ ನೌಪೂರಿಗಳ್ ಬಹು ವಾದ್ಯಾದುರು ತಾಂ ಧಳಂಧಳರವಂ ಪಬ್ಬಿತ್ತಿರಲ್ಕೆತ್ತಲುಂ (ಬೀಳವಂ. ೩-೩೭೧).
[ ←ಪಾರ. ನಫೀರೀ, ನಫೀರೂ; ಹಿಂ. ನಫೀರ್, ನಫೀರೀ, ನಫೇರೀ, ನಪ್ಫೇರೀ; ಮರಾ. ನಫೇರೀ ]

**ನಪುಂಸ** (ನಾ). = ನಪುಂಸಕ ೧: ಈರ್ವರಿಗೆ ಸೂರ್ಯಸ್ವರ ನಡೆಯಲ ನಪುಂಸನಹನೂ (ನವಮೋ. ೦೪-೪೫). [ ಸಂ. ]

**ನಪುಂಸಕ** (ನಾ). ೧. ಪುರುಷನೂ ಅಲ್ಲದ ಸ್ತ್ರೀಯೂ ಅಲ್ಲದ ವ್ಯಕ್ತಿ; ಗಂಡೂ, ಹೆಣ್ಣೂ ಅಲ್ಲದ ಮನುಷ್ಯ; ಷಂಡ. ೨. ಖೋಜ; ಕೊಜ್ಜೆ: "ಕ್ಲೀಬಃ, ವರ್ಷಧರಃ, ಷಂಡಃ, ಷಂಡಕಃ, ನಪುಂಸಕಃ – ಈ ೫ ನಪುಂಸಕಂ" (ಹಲಾಯು. ೭೧-೩೭೭); "ಷಂಡಂ ಕ್ಲೀಬನೆನೆ ನಪುಂಸಕನೆನಿಕ್ಕುಂ" (ಮಂಗರಾ. ೮೦-೮); ಮೊತ್ತಮಾ ನಾರಕರೆಲ್ಲಂ ಹುಂಡಮುಂಡಸಂಸ್ಥಾನರುಮತಿವಿರೂಕ್ಷ ಕೃಷ್ಣವರ್ಣರುಮತಿದುರ್ಗಂಧರುಂ ನಪುಂಸಕರುಂ (ಸುಕುಮಾ. ೦೦-೪೮ ವ); ನಪುಂಸಕ ವ್ಯವಹರಿಸಬಲ್ಲನೇ ಅಯ್ಯ (ಸಿದ್ಧೇವ. ೦೭೩-೫೩೩); ಅರ್ಜುನಂಗೀ ಸೂತತನವೆತ್ತಲು ನಪುಂಸಕವೇಷ ವೀಕ್ಷಿಸಲು (ಕುವ್ಯಾವಿ. ೬-೦೫). ೩. = ನಪುಂಸಕತ್ವ ೧: ಪುರುಷ ತನಕ ನಪುಂಸಕದಲಾಚರಿಸಬಲ್ಲನೆ ಸಾಕು ದೇಹಾಂತರವನಂಗೀಕರಿಸುವೆನಲಾ ತನ್ನ ಸುಡಲೆಂದ (ಕುವ್ಯಾಅ. ೮-೪೫). ೪. (ಆಲಂ) ನಿರ್ವೀರ್ಯನಾದವನು; ದುರ್ಬಲ; ಬಲಹೀನ: ಈ ನಪುಂಸಕರುಗಳ ನಂಬಿದ ನಾನು ನೀತಿಜ್ಞನೆ ಮಹಾದೇವೇನ ಹೇಳುವೆನೆನುತ ಭೀಷ್ಮನ ಹೊರೆಗೆ ನಡೆತಂದ (ಕುವ್ಯಾಭೀ. ೮-೭೭); ನಾನು ದುರ್ಯೋಧನನಿಗೆ ಧನಾಧೀನನಾಗಿ ನಪುಂಸಕನಾದ್ದರಿಂದ (ಕೃವಾಭೀ. ೩೭). ೫. [ವ್ಯಾಕ] ಮೂರು ಲಿಂಗಗಳಲ್ಲಿ ಒಂದು; ಪುಲ್ಲಿಂಗ, ಸ್ತ್ರೀಲಿಂಗಗಳಲ್ಲದ ಲಿಂಗ ಮತ್ತು ಅದಕ್ಕೆ ಅಳವಡದ ಶಬ್ದ: ಸ್ವರಮಿದಿರೊಳಕಾರಾಂತಕ್ಕಿರೆ . . . ನಪುಂಸಕಕ್ಕೆ ದಾಗಮಮಕ್ಕುಂ (ಕಾವ್ಯಾವ. ೦೦೪); ಕರ್ಣಾಟಕದೊಳ್ ಪೇನಂ ಸ್ತ್ರೀಪುಂ ನಪುಂಸಕೋಭಯ ಪುಂಸ್ತ್ರೀ ಸ್ತ್ರೀ ನಪ್ಸಮಸ್ತ ವಾಚ್ಯಾನ್ಯೂನಾವ್ಯಯಮೆಂದು ಲಿಂಗವೊಂಬತ್ತು ತೆಱಂ (ಶಮದ. ೮೮); ಕೆಲವು ಹಲವು ಎಂಬುವು

ನಪುಂಸಕ ಬಹುವಚನದ ರೂಪಗಳು (ಶಬ್ದಮ. ೯೪). ೧, ೫ : ಮನವ ನಪುಂಸಕಮೆಂದೆ ನಾನವಳನು ಕರೆತರಲಟ್ಟದೆ ಮನವು ರಮಿಸಿತದಲ್ಲಿಯೆ ವಂಚಿತ ನಾದೆನು ಪ್ರಾಣನಿಯಂತಹ ಕಿತವ (ಇಂಚಾಪ. ೮೩-೧೭).

ನಪುಂಸಕಪಕ್ಷಿಗ್ರಹ = ಒಂದು ಬಗೆಯ ಹಕ್ಕಿರೋಗ : ಮುಡುಹು ಗಳಲ್ಲಿಯೂ ಬೆನ್ನಿನಲ್ಲಿಯೂ ಕುಳಿ ಬಿದ್ದಿಹುದು. ಮೈ ಉರಿತ, ಕಾರುವಣ, ಉಚ್ಚುವಣ, ಬಾಯಾಟಿಕೆ, ಇವಿಷ್ಟು ಉಂಟಾಗಿದ್ದರೆ ನಪುಂಸಕಪಕ್ಷಿಗ್ರಹ ಹಿಡಿದಿದೆ ಎಂದರಿವುದು (ವೃದ್ಧಸಾ. II, ೧೩). [ಸಂ.]

**ನಪುಂಸಕತನ** (ನಾ). = ನಪುಂಸಕತ್ವ ೧ : ಉತ್ತರಗೋಗ್ರಹಣದ ಸಮಯಕ್ಕೆ ಅರ್ಜುನನ ನಪುಂಸಕತನ ಕೊನೆಗೊಂಡಿತು (ರೂಢಿ). [ನಪುಂಸಕ + – ತನ]

**ನಪುಂಸಕತ್ವ** (ನಾ). ೧. ಪುರುಷನೂ ಸ್ತ್ರೀಯೂ ಅಲ್ಲದಿರುವ ಸ್ಥಿತಿ ; ಕ್ಲೀಬತ್ವ ; ಷಂಡತನ : ಅರ್ಜುನನು ಊರ್ವಶಿಯ ಶಾಪದಂತೆ ಒಂದು ವರ್ಷಕಾಲ ನಪುಂಸಕತ್ವವನ್ನು ಹೊಂದಿದ್ದನು (ರೂಢಿ). ೨. [ವ್ಯಾಕ] ಪುಂ, ಸ್ತ್ರೀಲಿಂಗಗಳಿಗೆ ಸೇರದಿರುವಿಕೆ ; ನಪುಂಸಕಲಿಂಗವಾಗಿರುವಿಕೆ : ನಿತ್ಯಂ ನಪುಂಸಕತ್ವಮಪತ್ಯಕಲತ್ರಾದಿ ಶಬ್ದದೊಳ್ ಸ್ತ್ರೀಪುಂಸವ್ಯಕ್ತ್ಯಯಮಕ್ಕುಂ ಕರುಣೋಪಕ್ಕೆಗಳೊಳಂ ವಧಾಭಿಲಾಷಾದಿಯೊಳಂ (ಕಾವ್ಯಾವ. ೧೬೦). [ಸಂ.]

**ನಪುಂಸಕಲಿಂಗ** (ನಾ). = ನಪುಂಸಕ ೫ : ಪುರುಷರಂ ಪೇಳ್ವ ಶಬ್ದಂಗಳ್ ಪುಲ್ಲಿಂಗಂಗಳ್ ; ಸ್ತ್ರೀಯರಂ ಪೇಳ್ವ ಶಬ್ದಂಗಳ್ ಸ್ತ್ರೀಲಿಂಗಂಗಳ್ ; ಉಳಿದು ವೆಲ್ಲಂ ನಪುಂಸಕಲಿಂಗಂಗಳ್ (ಶಮದ. ೯೦ ವೃತ್ತಿ) ; ಪುಲ್ಲಿಂಗವೆಂತಲೂ ಸ್ತ್ರೀಲಿಂಗಮೆಂತಲೂ ನಪುಂಸಕಲಿಂಗವೆಂತಲೂ ಮೂರು ವಿಧವಾಗಿರುವುದು (ಹೊಸಗ. ೩೫) ; ಪುಲ್ಲಿಂಗವೂ ಸ್ತ್ರೀಲಿಂಗವೂ ಅಲ್ಲದ ಪದಗಳೆಲ್ಲಾ ನಪುಂಸಕ ಲಿಂಗ (ಮಧ್ಯಮ. ೩೦). [ನಪುಂಸಕ + ಲಿಂಗ]

**ನಪುಂಸಕವೇದ** (ನಾ). [ಜೈನ] ಒಂದು ಬಗೆಯ ನೋಕಷಾಯ ; ಚಾರಿತ್ರಮೋಹನೀಯದ ಭೇದಗಳಾದ ಮೂರು ಬಗೆಯ ವೇದ ಗಳಲ್ಲಿ ಒಂದು ; ೯ ಆತ್ಮನಿಗೆ ಚೈತನ್ಯರೂಪ ಪರ್ಯಾಯದಲ್ಲಿ ಮೈಥುನರೂಪವಾದ ಚಿತ್ತವಿಕ್ಷೇಪವುಂಟಾಗುತ್ತದೆ. ಇದಕ್ಕೆ ವೇದವೆಂದು ಹೆಸರು. ಇದರಲ್ಲಿ ಪುರುಷವೇದ, ಸ್ತ್ರೀವೇದ, ನಪುಂಸಕ ವೇದವೆಂದು ಮೂರು ಬಗೆಗಳಿವೆ. ಪುರುಷವೇದದ ಉದಯದಿಂದ ಸ್ತ್ರೀವಿಷಯಕವಾದ ಕಾಮವುಂಟಾಗುತ್ತದೆ. ಸ್ತ್ರೀವೇದದ ಉದಯದಿಂದ ಪುರುಷವಿಷಯಕವಾದ ಕಾಮವುಂಟಾಗುತ್ತದೆ. ನಪುಂಸಕವೇದದ ಉದಯದಿಂದ ಸ್ತ್ರೀಪುರುಷೋಭಯಾತ್ಮಕ ವಾದ ಕಾಮವುಂಟಾಗುತ್ತದೆ. ನಪುಂಸಕವೇದದಿಂದ ಉಂಟಾಗುವ ಭಾವವು ಆವಿಗೆಯಲ್ಲಿರುವ ಬೆಂಕಿಯಂತೆ ದೀರ್ಘಕಾಲವಿರುತ್ತದೆ. ಆ ಕಾರಣದಿಂದ ವ್ಯಕ್ತಿಯು ಪುರುಷಶಕ್ತಿ, ಸ್ತ್ರೀಶಕ್ತಿ ಎರಡೂ ಇಲ್ಲದವನಾಗುತ್ತಾನೆ. ಹೀಗೆ ಬೇರೆ ಬೇರೆ ವಿವರಣೆಗಳು ಜೈನಗ್ರಂಥ ಗಳಲ್ಲಿ ನಿರೂಪಿತವಾಗಿವೆ : ಮತ್ತಂ ಕಿಡಿದು ಬೇಗದಿಂ ಕ್ರಮಾಕ್ರಮದೊಳ್ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ... ಘಾತಿಸಿ (ಆದಿಪು. ೧೧-೧೪ ವ); ಅಭಿಭವಿಸಿ ನಪುಂಸಕವೇದ ಭಾವಿನೀವೇದಯುಗಳದೊಡ ನೊಡನೆ ಜಗದ್ವಿಭು ಹಾಸ್ಯರತ್ಯರತಿಶೋಕಭಯಜುಗುಪ್ಸೆಗಳನಾಟಿಯುಮಂ ಬೆಂಕೊಂಡಂ (ಮಲ್ಲಿಪು. ೧೪-೮೪) ; ಮತ್ತಂ ಕತಿಪಯಸಮಯದೊಳನು ಕ್ರಮದಿಂ ನಪುಂಸಕವೇದಂ ಸ್ತ್ರೀವೇದಮೆಂಬ ಎರಡುಮನದಿರ್ಪಿ (ಚಂದ್ರಪು. ೧೪-೬೯ ವ) ; ಸ್ತ್ರೀವೇದಂ ಪುರುಷಾಭಿಲಾಷೆಯಂ ಮಾಳ್ಪುದು ಪುರುಷವೇದಂ ಸ್ತ್ರೀಯಭಿಲಾಷೆಯಂ ಮಾಳ್ಪುದು ನಪುಂಸಕವೇದಮುಭಯಾಭಿಲಾಷೆಯಂ ಮಾಳ್ಪುದು (ಪಸಾರ. ೧೩) ; ನಪುಂಸಕವೇದಮನಡಿಯಿಟ್ಟ ಹಾಸ್ಯಾದಿಯಾಟಿ (ವರ್ಧಮ. ೧೩-೩೦). 'ನೋಕಷಾಯ' ಪರಾ. [ಸಂ.]

**ನಪುಂಸಕಶಿಲೆ** (ನಾ). ಮೂರ್ತಿಶಿಲ್ಪಕ್ಕೆ ನಿರುಪಯುಕ್ತವಾದ ಶಿಲೆ ; ಮೂರ್ತಿ ಶಿಲ್ಪಕ್ಕೆ ಉಪಯೋಗವಾಗದ ಶಿಲೆ : ಶಿಲೆಯಲ್ಲಿ ಪುಂಶಿಲೆ, ಸ್ತ್ರೀಶಿಲೆ, ನಪುಂಸಕಶಿಲೆಯೆಂದು ಮೂರು ವಿಧ. ಕಂಚಿನ ತಾಳದ ನಾದದಂತೆ ಧ್ವನಿಕೊಡುವ ಶಿಲೆಯು 'ಪುಂಶಿಲೆ' ಯೆಂದೂ, ಘಂಟಾನಾದದಂತೆ ಧ್ವನಿತ ವಾಗುವ ಶಿಲೆಯು 'ಸ್ತ್ರೀಶಿಲೆ' ಯೆಂದೂ, ತಾಳವಿಹೀನವಾದ ಶಿಲೆಯು 'ನಪುಂಸಕಶಿಲೆ' ಯೆಂದೂ ಉಕ್ತಿ ಇದೆ . .. ಸ್ತ್ರೀದೇವತಾವಿಗ್ರಹಗಳನ್ನು ಸ್ತ್ರೀಶಿಲೆಯಿಂದಲೂ, ಆಧಾರಪೀಠಾದಿಗಳನ್ನು ನಪುಂಸಕಶಿಲೆಯಿಂದಲೂ ಮಾಡಬೇಕೆಂದು ವಿಧಿಸಿದೆ (ಭಾರದ. ೭೭). [ನಪುಂಸಕ + ಶಿಲೆ]

**ನಪುಂಸಕಿ** (ನಾ). ಸ್ವರೂಪದಲ್ಲಿ ಹೆಣ್ಣಾಗಿ ಕಂಡರೂ ಹೆಣ್ತನವಿಲ್ಲದ ವ್ಯಕ್ತಿ : ಪರವಧುವಂ ನಪುಂಸಕಿಯರು ಗುರುಭಾರ್ಯೆಯರುಂ ಮುನೀಂದ್ರ ಪೌಂದರಿಯರನಂತ್ಯ ಜಾತಿಯವಳಂ ವ್ರತವುಳ್ಳಳನಂಗಹೀನೆಯಂ ಕಿರಿವ ವಳಂ ಕುಲಕ್ಷಯೆಯನಾ ಕೊಡಗೂಸುಗಳಂ ವಿದಗ್ಧನಾದರದೊಳೆ ಕೂಡಲುಂ ಬಯಸಿನೋಡಲು ಮಾಗದು ಕೂರ್ತು ಬಂದೊಡಂ (ಮದಕಿ. ೯-೨). [ನಪುಂಸಕ + – ಇ₂]

**ನಪೂರಿ** 'ನಪಿರಿ' ನೋ.

**ನಫೆ** 'ನಫೆ' ನೋ.

**ನಪ್ತಾರ** (ನಾ). ಮೊಮ್ಮಗ ; ನಪ್ತೃ : ಪಿತೃ ಮೊದಲಾದ ಶಬ್ದಗಳನ್ನುಳಿದ ಋಕಾರಾಂತ ಶಬ್ದಗಳ ಋಕಾರಕ್ಕೆ ಆರಾದೇಶ ಬರುತ್ತದೆ . . . ಸ್ವಸೃ – ಸ್ವಸಾರನು ; ನಪ್ತೃ – ನಪ್ತಾರನು ಇತ್ಯಾದಿ (ಹೊಸಗ. ೧೦೬). [ಸಂ. ನಪ್ತೃ]

**ನಪ್ತೃ** (ನಾ). ಮಗನ ಅಥವಾ ಮಗಳ ಮಗ ; ಮೊಮ್ಮಗ : "ದೌಹಿತ್ರಃ, ನಪ್ತಾ–ಈ ೨ (ಮ)ಗಳ ಮಗಂ ; ಪೌತ್ರನುಂ ಅಹಂ" (ಹಲಾಯು.೮೩-೩೫೦); "ಮಗನ ಮಗಂ ನಪ್ತೃ ಪೌತ್ರನೆನಿಕುಂ" (ವಸ್ತುಕೋ. ೫೫-೨೨) ; ಋಕಾರಾಂತಕ್ಕೆ–ಪಿತೃ, ಸವಿತೃ, ನಪ್ತೃ . . . ಧಾತೃ (ಶಮದ. ೮೯ ಪ್ರಯೋ) ; ಮಡದಿಯರಂ ಮಕ್ಕಳಂ ಮುಮ್ಮಕ್ಕಳಂ ನಪ್ತೃಗಳಂ ನಿಗ್ರಹಾನುಗ್ರಹಪೂರ್ವಕಮಾಗಿ ಸಂರಕ್ಷಣೆಯನೆಸಗು (ಭಾರತಾಂ. ೬೭-೪೧೩). [ಸಂ.]

**ನಪ್ತ್ರಿ** (ನಾ). ಮಗನ ಅಥವಾ ಮಗಳ ಮಗಳು ; ಮೊಮ್ಮಗಳು : "ನಪ್ತ್ರೀ–ಪೌತ್ರೀ, ಸುತಾತ್ಮಜಾ – ಮಗನ ಮಗಳ ಹೆಸರುಗಳು, ಮಗಳ ಮಗಳಿಗೂ ಹೆಸರು, ಮೊಮ್ಮಗಳು" (ಸಿದ್ಧಾಂತಿ. ೧೫೨). [ಸಂ. ನಪ್ತ್ರೀ]

**ನಪ್ಪು** (ನಾ). [ವ್ಯಾಕ] ನಪುಂಸಕಲಿಂಗ ಎಂಬುದರ ಸಂಕೇತ : ಪುರುಷರೆ ಪುಲ್ಲಿಂಗಂ ಸ್ತ್ರೀಯರೆ ತಾಂ ಸ್ತ್ರೀಲಿಂಗಮುಳಿದುವೆಲ್ಲಂ ನಪ್ಪಾಗಿರೆ ಸಲ್ಗುಂ ಕನ್ನಡದೊಳ್ ಪರಿವರ್ತಿಸವುಳಿದ ಲಿಂಗಮೊಳವಾಗಿರ್ದುಂ (ಶಮದ. ೯೦); ನಪ್ಪಾಗಿರೆ = ನಪುಂಸಕಲಿಂಗವಾಗಿರೆ (ಶಮದ. ೯೦ ಟೀಕೆ). [ಸಂ. ನಪ್]

**ನಪ್ಪುರಿ₁** (ಕ್ರಿ). ಗಾಡಿ, ನೇಗಿಲು ಮುಂತಾದುವುಗಳ ಚಲಿಸುವ ಎತ್ತು ಗಳನ್ನು ನಿಲ್ಲಿಸಲು, ಬಾಯಲ್ಲಿಯ ಶಬ್ದದಿಂದ ಸೂಚನೆ ಕೊಡು : ಎತ್ತುಗಳನ್ನು ಗೌಡರು ನಪ್ಪುರಿದು, ಗಾಡಿಯನ್ನು ಮನೆಯ ಮುಂದೆ ನಿಲ್ಲಿಸಿ, ಮುಖದಲ್ಲಿ ಆ ಗೆಲುವಿನ ನಗೆಯನ್ನು ಸೂಚಿಸಿದಾಗ ಅತನಿಗೆ ಪೂರ್ತಿ ಜೀವ ಬಂತು (ನನ್ನೂರು. ೧೩೪). 'ನಕ್ಕಿಟು', 'ಮುಪ್ಪುರಿ' ಪರಾ.

**ನಪ್ಪುರಿ₂** (ನಾ). "ನೇಗಿಲಿಗೆ ಅಥವಾ ಗಾಡಿಗೆ ಕಟ್ಟಿದ ಎತ್ತುಗಳನ್ನು ನಿಲ್ಲಿಸಲು ಬಾಯಲ್ಲಿ ಮಾಡುವ ಒಂದು ರೀತಿಯ ಶಬ್ದದ ಸನ್ನೆ" (ನನ್ನೂರು. ಕೋಶ). [<ನಪ್ಪುರಿ₁]

**ನಫರ್** 'ನಫರ' ನೋ.

**ನಫರ್‌ಜಾಮಿಾನು** 'ನಫರಜಾಮಿಾನು' ನೋ.

**ನಫರ, ನಪರ, ನಫರ್** (ನಾ). ೧. (ಕೀಳು ತರಗತಿಯ) ಆಳು ; ದಾಸ ; ಸೇವಕ. ೨. ವ್ಯಕ್ತಿ ; ಮನುಷ್ಯ ; ಇಸಮು : ನಿಜ, ಅಹುದು ! ಆದರೆ ಈ ಹಳೇ ನಫರನಾದ [ಮನುಷ್ಯನಾದ] ನನ್ನ ದೆಸೆಯೇನಾಗಬೇಕು ? (ಕಪಾಳು. ೮೦). 'ನಫರಜಾಮೀನು' ಪರಾ. **ನಪರ** : ೧. ನಪರನ ಹೆಂಡತಿಗೆ ಹರನ ಕಾವಲು (ಗಾದೆ). **ನಫರ್** : ೧. 'ನಫರ್‌ಜಾಮೀನ್' ಪರಾ. [←ಅರ. ಹಿಂ. ನಫರ್ ; ಮರಾ. ನಫರ್, ನಫ್ಫರ್ ]

**ನಫರಜಾಮೀನು, ನಫರ್‌ಜಾಮೀನ್** (ನಾ). ಒಬ್ಬ ವ್ಯಕ್ತಿಯು ಒಂದು ಷರತ್ತನ್ನು ಪಾಲಿಸುವುದಕ್ಕೆ ಬದ್ಧನಾಗಿ ನ್ಯಾಯಾಸ್ಥಾನದ ಎದುರಿಗೆ ಒಪ್ಪಿಕೊಳ್ಳುವಿಕೆ ; ಸ್ವಂತಜಾಮೀನು : (+). **ನಫರ್‌ಜಾಮೀನ್** : ನಫರ್‌ಜಾಮೀನ್ ಖತ್ತಿನ (recognisance) ಮೇಲೆ. ಹನ್ನೆರಡು ವರ್ಷಗಳು (ಗ್ರಾಮೂಳ. ೧೬೦). [ ನಫರ + ಜಾಮೀನು ]

**ನಫಾ** 'ನಫೆ' ನೋ.

**ನಫೆ, ನಪೆ, ನಫಾ** (ನಾ). ವ್ಯಾಪಾರದಲ್ಲಿ ಬರುವ ಆದಾಯ ; ಲಾಭ ; ಫಾಯಿದೆ ; ಕಿಫಾಯಿತ್ತು : ಈಚೆಗೆ ಒಂದಕ್ಕೆ ಎರಡರಷ್ಟು ನಫೆ, ವ್ಯಾಪಾರದಲ್ಲಿ ಬಂದದ್ದರಿಂದ ಕಾಮಗಾರಿ ಪ್ರಯತ್ನ ಮಾಡಿದೆವು (ಎಳ. XVI, ಮುದ್ರ.ಗಿ. ೦೦೬-೮ ; 1612) ; ಉತ್ತಮವಾದ ರತ್ನಗಳನ್ನು ಹನುಮಂತರಾಯನು ಅಂದಾಜು ನೋಡಿ ತಾನೇ ಕ್ರಯಕ್ಕೆ ತೆಗೆದುಕೊಂಡು ಅವುಗಳನ್ನು ನಫೆಗೆ ಮಾರುತ್ತಿದ್ದನು (ಮುಸುಗ. ೬೨) ; ವಾಸ್ತವವಾಗಿ ಬಂದ ನಫೆಯ ಮೇಲೆ ಸೇಕಡ ಹತ್ತರಂತೆ ದಳ್ಳಾಳಿಯನ್ನು ಕೊಡುವ ಪದ್ಧತಿ (ಭಾಗ್ಯಶಿ. ೨೭) ; ಅಂತೂ ಲುಕ್ಸಾನಿಲ್ಲ. ನಫೆಯಾಗಿದೆ (ಭೀಮಕಾ. ೬). **ನಪೆ** : ಈ ದಿನದ ವ್ಯಾಪಾರದಲ್ಲಿ ಆತನಿಗೆ ಹೆಚ್ಚು ನಪೆಯಾಯಿತು (ರೂಢಿ). **ನಫಾ** : ಯಾರಿಗೆ ಹ್ಯಾಗೆ ಖರೀದಿ ಮಾಡಲ್ಪಟ್ಟದೆಯೋ ಅದರ ಹಾಗೆ ಅವರು ನಫಾ ಕಿಮ್ಮತ್ತಿನಲ್ಲಿ ಸಾಮೀಲಮಾಡಿ ಹೇಳುತ್ತಾರೆ (ಮುಂಬವ್ಯಾ. ೧೯೪).

[←ಅರ. ನಫ್‌ಅ; ಹಿಂ. ನಫಾ ; ಮರಾ. ನಫಾ, ನಪ್ಫಾ ]

**ನಬಾಬ** 'ನವಾಬ' ನೋ.

**ನಬೀ** (ನಾ). ದೈವಪ್ರೇರಿತವಾದ ಧರ್ಮೋಪದೇಶಕ ; ಪೈಗಂಬರ ; ಪ್ರವಾದಿ ; ದೇವದೂತ ; "ಧರ್ಮಸ್ಥಾಪಕ" (ಜಾನಕೋ. ೯).

[ ←ಪಾರ. ಅರ. ಹಿಂ. ಮರಾ. ನಬೀ ]

**ನಬ್ಯ** (ನಾ). ಹೊಸತು ; ನವ್ಯ : "ನಬ್ಯ–ನವ್ಯ = ಹೊಸತು" (ಶಬ್ದಕೋ. ೨೦) ; ತರಿಸಿಯೊಟ್ಟೈಸಿ ನಬ್ಯ[ಪಾಠಾಂ. ವ್ಯ]ದಿವ್ಯಾಂಬರ ನಿಕರವಂ (ಬಸಪು. ೩೭–೧೮). [ <ಸಂ. ನವ್ಯ ]

**ನಭ** (ನಾ). ೧. ಬಾನು ; ಆಗಸ ; ವ್ಯೋಮ ; ಆಕಾಶ ; ಗಗನ : "ನಭಃ . . . ಗಗನಂ, ದ್ಯೌಃ–ಈ ೧೫ ಆಕಾಶಂ" (ಹಲಾಯು. ೨೨–೧೩೬) ; "ತಾರಾಪಥಂ ವ್ಯೋಮಮಂತರಿಕ್ಷಂ ನಭಂ . . . ಅಂಬರಂ ವಿಷ್ಣುಪದಮೆನಲು ಗಗನಮಕ್ಕುಂ" (ಮಂಗರಾ. ೯–೩೦) ; ಒತ್ತಿ ತಱುಂಬಿ ನಿಂದ ರಿಪುಭೂಜ ಸಮಾಜದ ಬೇರ್ಗಳಂ ನಭಕ್ಕೆತ್ತದೆ ಬಿಡದು ತನ್ನ ಮಾಱ್ಪೊಕ್ಕೊಡೆ ಕಾಯದೆ ಚಾಗದೊಳ್ಪಿನಚ್ಚೊತ್ತದೆ ಮಾಣ್ದು ಬಾಟ್ಟ ಪುಟುವಾನಸನೆಂಬನಜಾಂಡಮೆಂಬುದೊಂದತ್ತಿಯ ಪಣ್ಣೊಳಿಪ್ಪ ಪುಟುವಲ್ಲದೆ ಮಾನಸನೇ ಮುರಾಂತಕಾ (ಪಂಪಭಾ. ೫–೭೫); ನಭದಿಂದಮಿೞಿದವಂ ರಾಜಭವನಮಂ ಪೊಕ್ಕು ಪವನಸುತ ಪಾದನಖಪ್ರಭೆ ಪಸರಿಸಿ ತನಗೆ ಶಿರೋವಿಭೂಷಣಶ್ರೀಯನೀಯೆ ವಿನಮಿತನಾದಂ (ಪಂಶಾಮಾ. ೧೧–೨೭) ; ಭೋರೆನೆ ತೂರ್ಯವಂಚೆಯನಱ ಗಜಮಂ ಬಳವೈರಿ . . . ವಿಮಾನವಂ ಮಾರಹರಪ್ರಿಯಂ ವೃಷಭನಂ ಹರನೇಱ ನಭಕ್ಕೆ ಸಲ್ವುದುಂ (ಜಗವಿ. ೧–೩೬) ; ಗಗನರುಧ್ರವೊ ಅಲುಗಗುಡದಂತೆ ಕೀಲಿಸಿದ ವಜ್ರಮೊಳೆಗಳೊ ನಭದ ಲತೆ ಹಬ್ಬಿಯೊಗೆದ ನನೆಯೊ ಕಡು ಹಸಿದವೆಂದು ಶಶಿಯೆಲ್ಲಾ ಚಕೋರಕ್ಕೆ ಕೊಡುವ ಸವಿದುತ್ತುಗಳೊ . . . ಎನೆ ತಾರಾಳಿಯೆಸೆದುವಾ ಜಗದ ಜನ ನಲಿಯುತಿರಲು (ಹಜಕಾ. ೩–೮೯) ; ತೊಳಗುವ ನಭದೊಳ್ ಚಿತ್ರಾವಿಳದೃಷ್ಟಿಗವಿದ್ಯಮಾನಮೇಚಕರುಚಿಯೊಂದೆಳಸಿ ಮಿಗೆ ತೋರ್ಪ ತೆಱದಿಂ ಖಳಂಗೆ ಪೊಲನಲ್ತೆ ಕೃತಿಯೆಳ್ಲದೂ ದೋಷಂ (ಪುಷ್ಪಪು. ೧–೪೮) : ನಭವಿಂದಿಳಿವ ಗಂಗೆಯ ಧಾರೆ ಮೊಱೆದುದಾಪುರದ ಬಾಹೆಯಲಿ (ಕುವ್ಯಾಅ. ೭–೩೨) ; ಶುದ್ಧಿಸದೆ ನಭ ಧರೆಯ ಮರಮರಳ ಮಳೆಯಿಂ ? (ಮಂಕುಕ. ೪೭೪). ೨. ಮುಗಿಲು ; ಮೋಡ. 'ನಭಪ್ರಸೃತಿ', 'ನಭೋಂಗ' ಪರಾ. ೩. ಚಾಂದ್ರಮಾನ ವರ್ಷದಲ್ಲಿ ಒಂದು ತಿಂಗಳ ಹೆಸರು; ಶ್ರಾವಣಮಾಸ: "ಶ್ರಾವಣಮಾಸಮಂ ನಭವೆಂಬುದು" (ಹಲಾಯು. ೧೯–೧೧೪); "ಶ್ರಾವಣಃ, ನಭಾಃ, ಶ್ರಾವಣಿಕಃ–೩ ಶ್ರಾವಣಮಾಸದ ಹೆಸರುಗಳು" (ಸಿದ್ಧಾಂತಿ. ೩೮). ೪. ಸೊನ್ನೆ ; ಶೂನ್ಯ : "ನಭ ಸೊನ್ನೆ" (ಮಂಗರಾ. ೧೦೪–೮). ೫. [ಛಂದ] ಅಕ್ಷರಗಣಗಳಲ್ಲಿ ಒಂದು; ಆದಿಯಲ್ಲಿ ಎರಡು ಗುರುವಿರುವ ಗಣ; ತಗಣ ; (– – ∪): "ಆದಿಗುರುವೆರಡಿರಲು ನಭಮಕ್ಕು" (ಮಂಗರಾ. ೧೦೬–೨೦) ; ಇಂದು ನಭಂಗಳ್ಸರಪುರಪವನೇಂದುದ್ವಯಮಾಗಿರೆ . . . ಧರೆಗಿದು ಪೆಸರಾಯ್ತೆಲ್ಲಿಯುಮುದ್ಧವಕರಮೆನೆ ತನ್ನಿಂ (ಛಂದೋಂಬು. ೨–೧೯೦). ೬. [ಜ್ಯೋತಿ] "ಲಗ್ನದಿಂದ ಹತ್ತನೆಯ ಸ್ಥಾನ" (ಜಾತತಿ. ಪರಿ. ೩). [ ಸಂ. ]

**ನಭಃಪಯೋಜ** (ನಾ). (ಅಲಂ) ಅತ್ಯಂತ ಅಸಂಭವವಾದುದು ; ಗಗನಕುಸುಮ : ಅದಱಿಂದೆ ನಂಬಿ ಜಪಿಸಿದೊಡಿದಱಿಂ ದೊರೆಕೊಳ್ಗುಮಮಳ ಶಿವಪದಮಿಂತಲ್ಲದೆ ಪೆಱತು ಮಾರ್ಗದಿಂದಪ್ಪುದು ತಾನೆಂಬುದು ನಭಃಪಯೋಜಪ್ರಾಯಂ (ರಾಜಶೇ. ೪–೯೫). [ ಸಂ. ]

**ನಭಃಪ್ರಸೃತಿ** (ನಾ). ಮೋಡಗಳ ಗುಂಪು,–ಸಮೂಹ : ಏಱ ವಿಮಾನಮಂ ಕೃತಕ ಗಾಯಿಕೆಯರ್ . . . ಯಾನಮೇಂ ಕೀಱದುದೋ ನಭಃಪ್ರಸೃತಿಗಿಟ್ಟೆಡೆಯಿಟ್ಟೆಡೆಯಾದುದೆಂಬಿನಂ (ಶಾಂತಿಪು. ೨–೮೩). [ ಸಂ. ]

**ನಭಃಫಲ** (ನಾ). (ಅಲಂ) (ಗಗನಕುಸುಮದಂತೆ) ಅತ್ಯಂತ ಅಸಂಭವವಾದುದು : ಅದಱ ಕಾಂಕ್ಷಣಮೆಂಬುದು ಗಾವಿಲಂ ನಭಃಫಲದುಪಭೋಗಮಂ ಬಯಸಿ ಬಾಯ್ದೆಡುವಂದಮನುಂಟುಮಾಡುಗುಂ (ಜಾಧಪು. ೫–೬೩). [ ಸಂ. ]

**ನಭಶ್ಚರ** (ನಾ). ಆಕಾಶದಲ್ಲಿ ಸಂಚರಿಸುವವನು ; ಖೇಚರ ; ವಿದ್ಯಾಧರ : ಸದ್ಯಸ್ತುಭಾಜನನಪ್ಪೆನ್ನೊಳೆ ಮಾಟ್ಪುದಾಕೆಗೆ ವಿವಾಹೋದ್ಯೋಗಮಂ ರಾಗದಿಂ ಎಂದಪನಲ್ತೆ ನಭಶ್ಚರವೃಂದಾರಕಂ (ಚಂದ್ರಪು. ೬–೨೨) : ಕರಮೆಸೆದತ್ತು ದೇವನಗದಿಂ ಬನದಿಂ ಬನದಂಬಡುತ್ತೆ ಸಂಚರಿಪ ನಭಶ್ಚರಪ್ರಕರದಿಂ . . . ಖಗದಿಂ ಮೃಗದಿಂ ನಗದಿಂದೆ ಕಂದರಂ (ಶಂಶಂ. ೨–೩೬). 'ಖಚರ' ಪರಾ. [ ಸಂ. ]

**ನಭಶ್ಚರಪತಿ** (ನಾ). ಆಕಾಶದಲ್ಲಿ ವಿಮಾನದಲ್ಲಿ ಸಂಚರಿಸುವ ವಿದ್ಯಾಧರರೇ ಮುಂತಾದವರ ರಾಜ ; ಖೇಚರರಾಜ : ಅನುಕೂಲಮಿತ್ರನನುರಕ್ತ ನಾಯಿಕಾನೀಕನನುಗತ ಪ್ರಕೃತಿ ಚಿರಂತನರೆನಿಪ ಚಕ್ರವರ್ತಿಗಳ ನೆಗಟ್ದ ನೆಗೞ್ತೆ ತನ್ನಭಶ್ಚರಪತಿಯಾ (ಶಾಂತಿಪು. ೨–೫೦).

[ ನಭಶ್ಚರ × ಪತಿ ]

**ನಭಶ್ಚರಾನ್ವಯ** (ನಾ). ಖೇಚರರ ವಂಶ : ನಿಜದಿಂ ಗೂಢಂಗಳ್ ಗುಲ್ಫಜಾನುಗಳ್ ಮಂತ್ರದಂತೆ ರಕ್ತತರಂಗಳ್ ನಿಜಕರಪಾದತಲಂ ಪ್ರಪ್ರಪೆಯಂತೆ ನಭಶ್ಚರಾನ್ವಯಾಂಬರರವಿಯಾ (ಶಾಂತಿಪು. ೩–೪೫).

[ ನಭಶ್ಚರ + ಅನ್ವಯ ]

**ನಭಶ್ಚರೇಂದ್ರ** (ನಾ). = ನಭಶ್ಚರಪತಿ : ನೆಗೞ್ತೆಯೊಳ್ ತೊಡರ್ದಿರೆ ವೃದ್ಧರಾಜ್ಯಮುಮದೇನೆಸೆದತ್ತೋ ನಭಶ್ಚರೇಂದ್ರನಾ (ಆದಿಪು. ೨–೨೪): ವೈರಿಜಯಶ್ರೀ ಸೆಱೆಯಿರೆ ಭೂರಿಭುಜಾಂತರದೊಳಾಕೆ ಕಟ್ಟಿದ ಮುಕ್ತಾಹಾರಮನೆ ಪೋಲ್ತು ನವಕೇಯೂರಂ ಸೊಗಸಿತು ನಭಶ್ಚರೇಂದ್ರನ ತೋಳೊಳ್ (ಶಾಂತಿಪು. ೩–೩೫). [ ನಭಶ್ಚರ + ಇಂದ್ರ ]

**ನಭಶ್ಚಲಿ** (ನಾ). =ನಭಶ್ಚರ : ತಾಣಮಂ ತಿಳಿವುದೆ ತಡಂ ಮಹಾವೀರರಿಂ, ಪರ್ವತೋಪಮಧೀರರಿಂ ನಭಶ್ಚಲಿಗಳಿಂ . . . ಲಂಕೆಯನಿದಂ ದಹಿಸದೇ ನಿರ್ಭುದೆ ಧರಾತ್ಮಜಾವಲ್ಲಭನ ರೌದ್ರರೋಷಂ ? (ಶ್ರೀರಾಮಾ. ೫೦೩-೩೬೨). [ ಸಂ. ನಭಶ್ಚಲಿನ್ ]

**ನಭಶ್ಚುಂಬಿ** (ನಾ). ಗಗನವನ್ನು ಮುಟ್ಟುವಂಥದು ; ಅತ್ಯಂತ ಎತ್ತರವಾದುದು ; ಗಗನಚುಂಬಿ : ಜನಮನೋಮಂದಿರದ ಸುಸ್ವಪ್ನ ಗೋಪುರದ ಕಲಶಂ ನಭಶ್ಚುಂಬಿಯಾಗದಿರೆ . . . ಏನಿದುರ್ಮೇನ್ ಅನಾಗರಿಕತಾ ಶ್ರೀ ದಿಟಂ ಮುಸಣಮಾ ಪತ್ತನಮಯೋಧ್ಯೆ ತಾನಾದೊಡಂ! (ಶ್ರೀರಾಮಾ. ೧೭೩-೬೨೬). [ ಸಂ. ನಭಶ್ಚುಂಬಿನ್ ]

**ನಭಸ** (ಗು). ೧. ಮಂಜುಮುಸುಕಿದ; ಮಸುಕಾದ. (ನಾ). ೨. ಆಕಾಶ; ಆಗಸ ; ಬಾಂದಳ. ೩. ಮಳೆಗಾಲ. ೪. ಸಾಗರ ; ಸಮುದ್ರ ; ಕಡಲು. [ ಸಂ. ]

**ನಭಸಂಗಮ** (ನಾ). ಆಕಾಶದಲ್ಲಿ ಸಂಚರಿಸುವುದು ; ಖಗ ; ಪಕ್ಷಿ : "ಖಗಃ, ವಿಹಂಗಃ, ವಿಹಗಃ, ವಿಹಂಗಮಃ . . . ನಭಸಂಗಮಃ–೧೭ ಸಾಮಾನ್ಯವಾಗಿ ನಾನಾ ಬಗೆ ಪಕ್ಷಿಗಳೆಲ್ಲಕ್ಕೂ ಹೆಸರುಗಳು" (ಸಿದ್ಧಾಂತಿ. ೧೯೩). [ ಸಂ. ]

**ನಭಸ್ಥಲ, ನಭಸ್ಥಳ** (ನಾ). ೧. ಬಾಂದಳ ; ಆಕಾಶಭಾಗ ; ಗಗನತಳ : ವಿಸ್ತೀರ್ಣಮೆನಿಪ ನೀಲಪುಸ್ತರದೊಳ್ ಮುನಿಪನಿರ್ದನಪಗತ ಜೀಮೂತ ಸ್ತೋಮಮಾಗಿ ವಿಮಳನಭಸ್ಥಲ [ಪಾಠಾಂ. ಳ]ದೊಳ್ ತೊಳಪ ಚಂದ್ರ ನಂದದಿನಾಗಳ್ (ಚಂದ್ರಪು. ೩-೨) ; ಬಲದೇವಂ ಬರೆ ಕಂಡು ತದ್ವೃಷಭ ಸೇನೋರ್ವೀಶನಿಶ್ಶಿತ್ರಲಿತ್ರಲೆನುತ್ತುಂ ಪರಿತಂದು ತಾಗಿ ಕಟಿದಂ ಕೂರಂಬಿನಾಸಾರಮಂ . . . ನಭಸ್ಥ ಲಮೆತ್ತಲ್ ದೆಸೆಯೆತ್ತಲೆಂದೆನಿಸೆ ಬಾಣವ್ರಾತಘಾತಂ ತಮಂ (ಮಹಾನೇ. ೧೩-೩೬). ೨. ಶಿವನ ಒಂದು ಹೆಸರು. **ನಭಸ್ಥಳ** : ೧. ತಳರೆ ಮಹೀರಜದಿಂ ಘನವಿಳಾಸ ಗಜಘಟೆ ಯನವನಿಯುಂ ನಭಕೆ ನಭಸ್ಥಳಮಂ ನೆಲಕ್ಕೆ ತಂದಂತಳುಂಬಮಾದುದು ತದೀಯ ಚತುರಂಗಬಳಂ (ಶಾಂತಿಪು. ೧೦-೧೧೭) ; ಶರನಿಕರಂ ಕರಂ ಬಿಡದೆ ಪಾಟಿ ನಭಸ್ಥಳದೊಳ್ ನಿರಂತರಂ ಬಟುನೆಟಲಾಯ್ತು ಮುನ್ನಮದಟಿಂದೆ . . . ರಣಾಗ್ರಭೂತಳಂ (ಬಂಹರಿ. ೧೧-೧೧೯) ; ಮುಸುಕಿ ನಭಸ್ಥಳಂ ನೆಟಿಯೆ ತೀವೆ ದಿಶಾತತಿಯರ್ಕಮಂಡಲಂ ಮಸುಳೆ . . . ತೀವಿದುದಾ ಬಲಪಾದಘಾತದಿಂ ಪಸರಿಪ ಧೂಳಿ (ಮಹಾನೇ. ೧೧-೭೫). [ ಸಂ. ]

**ನಭಸ್ಥಳ** 'ನಭಸ್ಥಲ' ನೋ.

**ನಭಸ್ಫಟಿಕ** (ನಾ). ಪಾರದರ್ಶಕವಾದ ಸ್ಫಟಿಕ ; ಗಗನಸ್ಫಟಿಕ : ಅದಟಂ ದೊಳಗೆ ನಭಸ್ಫಟಿಕದ ವೇದಿವಿರಾಜಮಾನ ಮರಕತ ಮಾಣಿಕ್ಯದ ಗೋಪುರಂಗಳವಳಿಗ್ರದೊಳಂ ಪೂರ್ವೋಕ್ತ ರಚನೆಗಳ್ ಪುದಿದಿರ್ಕುಂ (ಮಹಾನೇ. ೧೫-೬೭); ಮಕರತೋರಣಾದ್ಯಲಂಕಾರಗಳಿಂದಲೂ ದ್ವಾರಸ್ಥಿತ ಶಂಖಾದಿ ನವನಿಧಿಗಳಂ ರಕ್ಷಿಸುತ್ತಿರುವ ದೇವರ್ಕಳಿಂದಲೂ ಪೊಳೆಯುತ್ತಿರುವ ನಭಸ್ಫಟಿಕಮಯ ಪ್ರಾಕಾರವಂ ನಿರ್ಮಿಸೆಂದಾಜ್ಞಾಪಿಸಿದನು (ಪುರುಚ ೧೩೪). [ ಸಂ. ]

**ನಭಸ್ಯ** (ನಾ). ಚಾಂದ್ರಮಾನ ವರ್ಷದ ಆರನೆಯ ತಿಂಗಳಿನ ಹೆಸರು ; ಭಾದ್ರಪದಮಾಸ : "ಭಾದ್ರಪದಮಾಸಮಂ ನಭಸ್ಯಮೆಂಬುದು" (ಹಲಾಯು. ೧೯-೧೧೪); "ನಭಸ್ಯಃ, ಪ್ರೌಷ್ಠಪದಃ, ಭಾದ್ರಃ, ಭಾದ್ರಪದಃ– ೪ ಭಾದ್ರಪದಮಾಸದ ಹೆಸರುಗಳು" (ಸಿದ್ಧಾಂತಿ. ೩೮). [ ಸಂ. ]

**ನಭಸ್ಸು** (ನಾ). ಆಕಾಶ; ಆಗಸ ; ಬಾಂದಳ : "ತಾರಕಿತಂ–ನಭಸ್ಸು" (ಕಾಶಕ್ಕ. ೭೮); ಪಯಸ್ಸು, ನಭಸ್ಸು, ರಜಸ್ಸು (ಶಬ್ದಾನು. ೬೯ ಪ್ರಯೋ). [ ಸಂ. ನಭಸ್ ]

**ನಭಿ** (ನಾ). ಚಕ್ರ ; "ಗಾಲಿ" (ಗಂಗಾಮ. ೧೭೮). [ ಸಂ. ]

**ನಭೋಂಗ** (ನಾ). ಮೋಡದಂತೆ ಶರೀರವುಳ್ಳವನು ; ನೀಲವರ್ಣ ; ವಿಷ್ಣು : ಜಯತು ಜನಾರ್ದನ ಜಯ ಮುರಮರ್ದನ ಜಯಶ್ರೀ ವರಾಂಗ ನಭೋಂಗ (ಕಶಸಾಂ. ೬೪-೨೨). [ ಸಂ. ]

**ನಭೋಂಗಣ** (ನಾ). =ನಭಸ್ಥಲ ೧ : ದೊಣೆಗಳನುರ್ಚುವ ತಿರುವಾಯ್ದೊ ಣರ್ಚಿ ತೆಗೆನೆಟಿಪ ಬೇಗಮುಂ ಕಾಣದೆ ಕೂರ್ಗಣೆಗಳ ಪಂದರನೆ ನಭೋಂಗಣದೊಳ್ ಕಂಡತ್ತು ದೇವಗಣಮಿನಸುತನಾ (ಪಂಪಭಾ. ೧೨-೧೮೪) ; ಇಂದ್ರದಿಗ್ದೇವಿ ನವಾರ್ಕಮಂಡಲಮನಾಂತಿರೆ ತತ್ಪ್ರಭೆಯಂ ನಭೋಂಗಣ ಶ್ರೀವಧುವೊಂದೆ ಕಾಲದೊಳೆ ತಾಳ್ದಿ ವಿರಾಜಿಸುವೊಂದು ಮಾಟ್ಕೆಯಿಂ (ಜಗವಿ. ೨-೮೭). [ ಸಂ. ]

**ನಭೋಗ** (ನಾ). ಆಕಾಶದಲ್ಲಿ ಸಂಚರಿಸುವವನು ; ದೇವತೆ ; ಸುರ ; ಅಮರ : ಮಂಜುಮಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ ಸದಾ ನಭೋಗಂ (ಜೈಮಿಭಾ. ೨೮-೬೨) ; ಸದಾನ ಭೋಗಂ . . . ಸದಾ ನಭೋಗಂ (ಚಂದ್ರಸ. ೪೪). 'ನಭೋಗಪುರ' ಪರಾ. [ ಸಂ. ]

**ನಭೋಗತಿ** (ನಾ). ೧. ಗಗನದಲ್ಲಿ ಸಂಚರಿಸುವಿಕೆ ; ಆಕಾಶಗಮನ : ನಭೋಗತಿಯಂ ಸಾಧಿಸಲಕ್ಕುಂ ಬೆಟ್ಟಗಳ ಚೂರ್ಣಂ ಮಾಡಲಕ್ಕೀಕ್ಷಿಸಲ್ ಸತಿಯಾ ಚಿತ್ತವಭೇದ್ಯಮೈ (ಸೋಮೇಶ. ೮೦). ೨. ಆಕಾಶದಲ್ಲಿ ಸಂಚರಿಸು ವವನು; ಆಕಾಶಗಾಮಿ ; ಖೇಚರ : ಬೇಗಮುಸಿರ್ ಮುಟ್ಟಿಗವರೆ ಮೇಗುಸಿಗೊಂಡೊಮ್ಮೆಗೊಮ್ಮೆಗಗಿಮೊ [ ಮು ] ಟ್ಟಿದೆ ಬಂದಾಗಳೆಟಗಿರ್ದ ನಂದು ನಭೋಗತಿಯೊರ್ವಂ ನೃಪೇಂದ್ರಪದಸರಸಿಜದೊಳ್ (ಶಾಂತಿಪು. ೯-೮೩). ೩. ಹಕ್ಕಿ ; ಪಕ್ಷಿ. [ ಸಂ. ]

**ನಭೋಗಪುರ** (ನಾ). ಆಕಾಶದಲ್ಲಿ ಸಂಚರಿಸುವ ಪಟ್ಟಣ ; ತ್ರಿಪುರ : ಹರಿಯಿಂದಂ ಹರನಿಂದೆ ಶಕ್ತಿಧರನಿಂ ನೀರಿಂದೆ ಪಾಳಾದ ದುಷ್ಕರ ಲಂಕಾ ಪುರಮಂ ನಭೋಗಪುರಮಂ . . . ಸುಸ್ಥಿರೆ ಹವಿಷ್ಯಾರಪುರಕ್ಕೆ ತೋಡಿಸ ಲೊಡಂ ಮೂಢೋಕ್ತಿ ಮಾಲೋಕದೊಳ್ (ಹವಿಷ್ಯಾರ. ೧-೬೪). [ ನಭೋಗ + ಪುರ೩ ]

**ನಭೋಗಮನ** (ನಾ). ೧.=ನಭೋಗತಿ ೧ : ನಾರದಂ ನಭೋಗಮನ [ಪಾಠಾಂ. ಮಾರ್ಗ]ದಿಂದಿಟಿದು ಬಂದು ಜನಾರ್ದನನ ವದನಾರವಿಂದಮಂ ನೋಟ್ಟುದುಂ (ಮಹಾನೇ. ೭-೧೫೦ವ). ೨. = ನಭೋಮಾರ್ಗ : ಆಗಳಾ ದೇಶಪುರುಷಂ ಬಂದನೆಂದು ಅಪ್ಸರೋಭೆಗೆಯ್ದುದಿರ್ಗೊಳೆ ಮತ್ತಮಂತೆ ನಭೋಗಮನದೊಳು ಬರೆ (ಚಾಮುಂಪು. ೭೭). [ ಸಂ. ]

**ನಭೋಜನ** (ನಾ). ಆಕಾಶದಲ್ಲಿರುವವರು ; ದೇವತೆಗಳು : ಎಲ್ಲರುಂ ಭೋಗಿಗಳ್ಪ್ರಾತಾಳಗಕರೆನಿಸರೆಲ್ಲರುಂ ವಿದ್ಯಾಧರರ್ನಭೋಜನ ರೆನಿಸರ್ (ಜೈಮಿಭಾ. ೨-೧೧). [ ಸಂ. ]

**ನಭೋದೇಶ** (ನಾ). =ನಭಸ್ಥಲ ೧: ತುಂಬಿದತ್ತಶರೀರ ಗಂಧರ್ವಗಾಯನಂ ನೀರವನಿಶಾನಭೋದೇಶಮಂ (ಶ್ರೀರಾಮಾ. ೧೬-೪೨೫). [ ಸಂ. ]

**ನಭೋನಗರ** (ನಾ). =ನಭೋಗಪುರ. 'ನಭೋನಗರ ಹರಣ' ಹರಾ. [ ಸಂ. ]

**ನಭೋನಗರಹರಣ** (ನಾ). (ಆಕಾಶದಲ್ಲಿದ್ದ) ತ್ರಿಪುರಗಳನ್ನು ನಾಶ ಗೊಳಿಸಿದವನು ; ತ್ರಿಪುರಾರಿ ; ಶಿವ : ಜಯಜಯ ನಭೋನಗರಹರಣ ಪಟುನಿಟಿಲಾಕ್ಷ ಜಯಜಯ ಜಲಂಧರಮದಾಂಧಗಜಹರ್ಯಕ್ಷ (ರಾಜಶೇ. ೧೪-೧೬೯ ರಗಳೆ). [ ನಭೋನಗರ + ಹರಣ೩ ]

**ನಭೋನಿನದ** (ನಾ). ಆಕಾಶದಿಂದ ಹೊಮ್ಮುವ ಮಾತು ; ಆಕಾಶವಾಣಿ ; ಅಶರೀರವಾಣಿ : ಇಲ್ಲಿ ನಿಲ್ಲರ್ಜುನ ತಪೋವನಕಿಲ್ಲಿ ನೆಲೆ ಶ್ರುತಿಯುವತಿ ಸೂಸುವ ಚೆಲ್ಲೆಗಂಗಳಮೊನೆಗೆ ಮಾಸಲುಗುಡದ ಮೈಸಿರಿಯ . . . ಶಿವನ ಕ್ಷೇತ್ರವಿದೆಯೆಂದುದು ನಭೋನಿನದ (ಕುಮಾರವ್ಯಾ. ೪-೪೦). [ ಸಂ. ]

**ನಭೋನೌಕೆ** (ನಾ). ಅಂತರಿಕ್ಷ ವಿಮಾನ; ಪುಷ್ಪಕ ವಿಮಾನ: ಮತ್ತ ಮತ್ತಪ್ಪಳಿಸಿದನು ಆ ನಭೋನೌಕೆ ಪಕ್ಷಸಂಜನಿತರಘುಂರಝಾವಾತಗರ್ತಕ್ಕೆ ಸಿಲ್ಕಿ ತಿರ್ರನೆ ಘುರ್ಘುರ್ಣಿರುಗಂ ತಿರುಗುವಂತೆ (ಶ್ರೀರಾಮಾ. ೪೨೯–೫೬೩). [ಸಂ. ನಭೋನೌಕಾ]

**ನಭೋಭಾಗ** (ನಾ).=ನಭಸ್ಥಲ ೧: ಅಂತು ನಭೋಭಾಗದಿಂ ಭೂಮಿ ಭಾಗಕ್ಕಿಳಿದು ತನ್ನ ಮುಂದೆ ನಿಂದರವಿಂದಬಾಂಧವನಂ ನೋಡಿ (ಪಂಪಭಾ. ೧–೯೦ ವ); ಇಂದ್ರಂ ಬರ್ಪಂತೆ ಬಂದು ಕಂಡೊಡವರೆ ನಭೋಭಾಗದೊಳ್ ಪಯಣಂಬಂದು ಚಂಪಾಪುರವನೆಯ್ದಿ ಪುರಬಹಿರಂಗೆಯೊಳ್ ಬೀಡಂ ಬಿಟ್ಟರ್ದುರ್ (ಬಂಹರಿ. ೪–೪೧ ವ). [ಸಂ.]

**ನಭೋಮಂಡಲ** (ನಾ).=ನಭಸ್ಥಲ ೧: ಆ ನಾರದಂ ನಭೋಮಂಡಲದಿಂ ಸಭಾಮಂಡಲಕ್ಕವತರಿಸೆ (ಪಂರಾಮಾ. ೩–೧೯ ವ); ಕೊಂಡುಬಂದೆಳೆನೀರ್ಗಳಂ ಸುರಿಯಲುರಿ ನಭೋಮಂಡಲವನಪ್ಪಳಿಸೆ (ಜೈಮಿಭಾ. ೧೧–೩೮); ಇನ್ನು ಬರಲಿರುವ ಆರನೆಯ ಕಾಲವಂತೂ ಹಿಂಸೆಯ ಪತಾಕೆಯನ್ನು ನಭೋಮಂಡಲಕ್ಕೆ ಹಾರಿಸುವುದೆಂದು ಸರ್ವಜ್ಞರ ವಾಣಿ (ಭಾರದ. ೧೭೩). [ಸಂ.]

**ನಭೋಮಣಿ** (ನಾ). ಸೂರ್ಯ; ಗಗನಮಣಿ; ಭಾನು: ಆ ಮಣಿ ಮೆಚ್ಚಿದುದು ತರುಣನಭೋಮಣಿ ನಿಜಸುಪುತ್ರಾಪವಿಜಿತಂ ಪರಿತಂದಾ ಮಹಿತರಾಜಶೇಖರ ಭೂವಿಶ್ವರನಂಘ್ರಿಕಮಳಮಂ ಸೇವಿಪಪೋಲ್ (ರಾಜಶೇ. ೩–೨೭). [ಸಂ.]

**ನಭೋಮಾರ್ಗ** (ನಾ). ಮೇಘಮಾರ್ಗ; ಆಕಾಶ: ಭೋಗಭೂಮಿಜರ ಕಣ್ಣಾಗಳ್ ನಭೋಮಾರ್ಗಪರ್ಯಟನಂ ಶಿಕ್ಷಿಸಿ ಪೋದರಾತ್ಮಸಿಯಮಕ್ಕಳ್ತ್ಯಾರ್ಯರಿತ್ರನ್ನೆಗಂ (ಶಾಂತಿಪು. ೬–೯); ತಾನೈರಾವತಸ್ಕಂಧದೇಶನಿಷಣ್ಣಂ ಸುರರಾಜನಾತ್ಮಶಚಿದೇವೀ ಸಂಯುತಂ... ಮೃದುಮೃದಂಗಧ್ವಾನಮುಂ ಗಾಯಕೀಜನತಾಮಂಗಲಗೇಯಮುಮಂ ಸೊಗಯಿಸಲ್ ಬಂದಂ ನಭೋಮಾರ್ಗದೊಳ್ (ಮಹಾಸೇ. ೮–೮೮). [ಸಂ.]

**ನಭೋಮಾಸ** (ನಾ). ಚಾಂದ್ರಮಾನದ ಪ್ರಕಾರ ಬರುವ ಶ್ರಾವಣ ಮಾಸ: "ಮಧು ಮಾಧವಂ ಶುಕ್ರಮಾ ಶುಚಿ ನಭೋಮಾಸಮದು ನಭಸ್ಯಮಿಷಮೂರ್ಜಂ ಸಹಂದದಮುಂದದು ಸಹಸ್ಯಂ ತಪಮಂದಾ ತಪಸ್ಯಾಖ್ಯಮೆನೆ ಚೈತ್ರಾದಿ ನಾಮಮಕ್ಕುಂ" (ಮಂಗರಾ. ೨೦–೧೧). [ಸಂ.]

**ನಭೋಯಾನ** (ನಾ). ಆಕಾಶಗಮನ; ಬಾನಿನಲ್ಲಿ ಹೋಗುವುದು: ಮತ್ತಂ ನಭೋಯಾನದೊಳ್ ಕಿಚಿದು ಪೊಟ್ಟಾಗೆಯುಂ . . . ಧರ್ಮೋಪದೇಶಂಗೆಯುತ್ತುಮುತ್ತಮತೀರ್ಥೇಶ್ವರಂ ವಿಹಾರಿಸೆ (ಶಾಂತಿಪು. ೧೨–೨೩ ವ); ನಭೋಯಾನದೆ ಕಾಲಶಂಬರ ಖಗೇಂದ್ರಂ ಬಂದು (ಮಹಾಸೇ. ೮–೦೭). [ಸಂ.]

**ನಭೋವಚನ** (ನಾ). = ನಭೋನಿನದ: ಮರುಳೆ ನೀ ಕೌಂತೇಯ ಮಾದ್ರೇಯರನು ನೋಡುವುದಿತ್ತ ನನಗುತ್ತರವನಿತ್ತುದಕವನು ಕುಡಿಯೆಂದುದು ನಭೋವಚನ (ಕುಮಾವ್ಯಾ. ಅ. ೨೩–೨೪); ನೊಂದ ನೋವೆಲ್ಲಡಗಿ ರಣದಲಿ ಹೊಂದಿದವರೇಳುವರು ಮಾರುತಿಯಿಂದ ಚಿಂತಿಸಬೇಡ ಕೇಳೆಂದುದು ನಭೋವಚನ (ಕಾಶಿರಾ. ೨೯–೨೨). [ಸಂ.]

**ನಭೋವಳಯ** (ನಾ). = ನಭಸ್ಥಲ ೧: ಬಂದು ಭವತ್ಪುರಾಗ್ರಿಮ ನಭೋವಳಯಾಂತರದಲ್ಲಿ ನಿಂದು ಪೋಗೆಂದೊಡೆ ಬಂದೆನಾಂ (ಚಂದ್ರಪು. ೬–೨೦). [ಸಂ. ನಭೋವಲಯ]

**ನಭೋವಾಣಿ** (ನಾ). ಅಶರೀರವಾಣಿ. [ಸಂ.]

**ನಭೋವೀಥಿ** (ನಾ).=ನಭೋಮಾರ್ಗ: ನಭೋವೀಥಿ[ಪಾಠಾಂ. ಧಿ] ಯೊಳುಮಾಕಾಂತೆಯು ಮಹೇಶ್ವರನು ಮಾನಿತೋನ್ನತದಿವ್ಯರತ್ನವಿಮಾನ ರೂಢಿತರಯಾನರಾಗಿ ಸುಮಾನದಿಂ ಗಮನಿಸುತ (ಬಸ. ೫೦–೨). [ಸಂ.]

**ನಮ** (ನಾ). ವಂದನೆ; ನಮಸ್ಕಾರ: "ನಮಂ [ಪಾಠಾಂ. ತಂ] ವಂದನಂ ಪೊಂಗಿ ಪೊಡಮಡುಹು" (ಮಂಗರಾ. ೦೩೭–೩೯); ನಮ ಸ್ವಸ್ತಿ (ಎಕ. II, ೨೩–೧: 700): ಎಲ್ಲರಿಗವಿಗಾಗ ನಮೊ–ಬಂಧುಗಳೆ, ಭಾಗಿಗಳೆ . . . ಕೊಳ್ಳಿರೀ ನಮವನೆನು (ಮಂಕುಕ. ೯೨೨). [ಸಂ. ನಮಸ್]

**ನಮಃಶಿವಾಯ** (ನಾ). ೧. ಶಿವನಿಗೆ ನಮಸ್ಕಾರ; P ವೀರಶೈವರು ಭಜನೆಯಂತೆ ಈ ಶಬ್ದಗಳನ್ನು ಉಚ್ಚರಿಸಂತ್ತಾರೆ. 'ನಮಃಶಿವಾಯ' ಪಂಚಾಕ್ಷರಿಮಂತ್ರವೆಂದು, 'ಓಂ ನಮಃಶಿವಾಯ' ಎಂಬುದು ಷಡಕ್ಷರಿಮಂತ್ರವೆಂದು ತಿಳಿಯಲಾಗಿದೆ: ನಮಃಶಿವಾಯ ನಮಃ ಶಿವಾಯ ಶರಣೆಂದಿತ್ತು ಲಲಾಟಲಿಖಿತ ಬರೆದ ಬಳಿಕ ಪಲ್ಲಟವ ಮಾಡಬಾರದು (ಬಸವ. ೮೭). ಶಿಥಿಲಾಕ್ಷರಂಗಳಿಂ ನಮಃಶಿವಾಯ ನಮಃಶಿವಾಯಯೆನುತ್ತೆ (ನಂಬಿರ. ೬–೨೭); ಎನ್ನ ರೇಚಕವೇ ನಮಃಶಿವಾಯ ನಮಃಶಿವಾಯ ನಮಃ ಶಿವಾಯ ಎನ್ನುತಿಪ್ಪುದು ನೋಡಾ (ಸಿದ್ಧೇವ. ೭೨–೨೦೮); ನಮಃ ಶಿವಾಯಾದಿಸುತಾಪ್ರಿಯಾಯ ತೇ (ವೃಷವಿ. ೬–೧೧). ೨. ಶಿವನಿಗೆ ಅರ್ಪಿತವಾದುದು; ಶಿವಾರ್ಪಣ: ಲೋಗರೇನನೆಂದೊಡಂ ನಮಃ ಶಿವಾಯವಾಗೆ ತನಗೆ ತಾಗಿದಚ್ಚಪರಿಮಳಂ ನಮಃಶಿವಾಯವಾಗೆ (ನಮಃರ. ದೇ. ೧೯೮–೧೩). [P ಸಂಸ್ಕೃತದಲ್ಲಿ ಇವು ಭಿನ್ನಪದಗಳು]

**ನಮಃಶಿವಾಯವಿಡಿ** (ಕ್ರಿ). ನಮಃಶಿವಾಯ ಎಂಬ ಮಂತ್ರವನ್ನು ಬಿಡದೆ ಜಪಿಸು: ಇಂತು ಪಂಚವರ್ಣದಿಂ ಶರೀರವಾಗಿ ಬೀಗಿ ಬೆಳೆದು ಸಂತತಂ ನಮಃಶಿವಾಯವಿಡಿದು ತೀವಿ ತುಳುಕಿ ತಳೆದು (ನಮಃರ. ದೇ. ೧೯೮–೧೧). [ನಮಃಶಿವಾಯ + ಪಿಡಿ$_1$]

**ನಮಕ್‌ಹರಾಮ್** 'ನಮ್ಮಕ್‌ಹರಾಮ' ನೋ.

**ನಮಕ** (ನಾ). ರುದ್ರವೆಂಬ ಮಂತ್ರ; P ಯಜುರ್ವೇದದ ಒಂದು ಭಾಗ. ನಮ ಎಂದು ಮುಗಿಯುವ ರುದ್ರಮಂತ್ರ: ಚಮಕದಿಂ ದಖಿಲಾಧಿಪತ್ಯವ ನಮಕದಿಂದಖಿಲಾತ್ಮಭಾವವನಮರ ಮನುಜ ಭುಜಂಗ ಮುಖದೊಳ್ಬಿತ್ತರಿಸುತಿರಲು (ವಿವೇಕ. ೦೨–೯೯); ಪರಮಭಕ್ತಿಲಿ ಹಿಡಿದು ಗದ್ದುಗೆ ಮೇಲೆ ಕುಳ್ಳಿರಿಸಿ ನಮಕಚಮಕಗಳಿಂದ . . . ಸ್ವಾಮಿಗಭಿಷೇಕವನು ಮಾಡಿಸಿ (ಕೊಲ್ಲಿಮಾ. ೬೦–೪). [ಸಂ.]

**ನಮಕಾನುವಾಕ** (ನಾ). ನಮಃ ಶಬ್ದದ ಆವೃತ್ತಿಯಿಂದ ಕೂಡಿದ ಯಜುರ್ವೇದದ ಒಂದು ಭಾಗ; ರುದ್ರಾಧ್ಯಾಯ: ವೇದಾಂತ ವಾಕ್ಯಗಳ ನಮಕಾನುವಾಕಗಳ . . . ನೀನುತ್ಕ್ರಮಿಸೆ ಸಾಧನವೊ ಮುಕ್ತಿಗದು (ಮಂಕುಕ. ೯೩೦). [ನಮಕ + ಅನುವಾಕ]

**ನಮತ** (ನಾ). ಒಡೆಯ; ಯಜಮಾನ: ನಮತಂ ಚಾತುರ್ವಲಮಂ ಸಮರಕ್ಕೆನುವಾಗಲೊಡ್ಡಿ ಸೇನೆ ಮುರರಿಪು ದೇವ ಮಹಾಪ್ರಸಾದ ಮೆನುತುಂ . . . ಆಕರ್ಷಿಸಿದಂ (ಮಹಾಸೇ. ೦೨–೦೭). [ಸಂ.]

**ನಮನ** (ನಾ). ೧. ಬಾಗಿಸುವಿಕೆ; ಮಣಿಸುವಿಕೆ. ೨. ಬಾಗುವುದು; ಮಣಿಯುವುದು; ನಮಸ್ಕರಿಸುವುದು; ನಮಸ್ಕಾರ; ವಂದನೆ: "ಬಳ್ಕು – ನಮನೇ" (ಶಮಧಾ); "ಮೊಟ್ಗು – ನಮನೇ" (ಶಮಧಾ); ದಾರಿದ್ರ್ಯಲಕ್ಷ್ಮಿಯೆ ನೀ ಕೊಟ್ಟ ಅಂಜನವದ್ಭುತ ಕೋಟಿ ಲಕ್ಷ ನಮನ ನಾ ಕಂಡೆನೆಲ್ಲರನಾರು ಕಾಣರು ನನ್ನ ಪರಿಚಯವಿದ್ದರು ಮುನ್ನ (ಇಂಚಾಪ. ೦೧೩–೫೫); ಈ ಗುರುವೃಂದಕ್ಕೆ ಅನಂತ ನಮನಗಳು (ದ್ರಾವಿವಿ. XII ಮೊದಲ ಮಾತು); ಆ ಮರದ ಬದಿಗೊಮ್ಮೆ ಸುಳಿದೆಯಾದೊಡೆ, ಪಥಿಕ! ಹೇ! ದೇವಿ! ನಿನಗೊಂದು ನಮನವೆನ್ನು! (ಚಿಂತನ. ೦೨–೨೦). ೩. [ಭೌತವಿ] ಬಾಗುವಿಕೆ; ಬಾಗುವ ಕ್ರಿಯೆ; ವಕ್ರನಿಯೋಜನ: ಬೆಳಕಿನ ಅಥವಾ ಇತರ ಅಲೆಗಳು ತಡೆಗಳನ್ನು ಸುತ್ತಿಕೊಂಡು ಬಂದು ಪ್ರತಿಯೋಗ ಹೊಂದುವುದರಿಂದ ಉಂಟಾದ ಘಟನೆಗೆ ನಮನ (Diffraction) ವೆಂದು ಹೆಸರು (ಭೌತವಿ. ೨೦೦). [ಸಂ.]

**ನಮಲು₁, ನೆವರು₂** (ಕ್ರಿ). ೧. ದವಡೆಹಲ್ಲುಗಳಿಂದ ಆಹಾರವನ್ನು ನುಣ್ಣಗೆ, ಸಣ್ಣಗೆ ಮಾಡಿ ತಿನ್ನು; ಅಗಿದಗಿದು ತಿನ್ನು; ಅಗಿ; ಚರ್ವಣಮಾಡು; ನುರಿಸು : ರಕ್ಕಸಿಯು ಮಾನುಗಳನ್ನು ನಮಲುತ್ತ ಆವಾಗಲಾದರೊಮ್ಮೆ ಸುರೆಯನ್ನು ಸ್ವಲ್ಪ ಸ್ವಲ್ಪ ಕುಡಿಯುತ್ತಿದ್ದಳು (ಶ್ರೀರಾಪ. ೧೧೭). ೨. ಮೆಲುಕುಹಾಕು; ಮೆಲುಕಾಡಿಸು : (+). **ನೆವರು₂** : ೧. ನೆವರಿಕೊಂಡು ಹೋಗುವವ ಬವರಕ್ಕೆ ಬಂದಾನೆ? (ಗಾದೆ).

[ ದೇ. ॥ ತುಳು. ನವುಂತು, ನವುಂಪು, ನೌಂತು, ನೌಂಪು ;
ತೆಲು. ನವಲು, ನವುಲು, ನವ್ಲು, ನೆಮರು ]

**ನಮಲು₂, ನೆಮರು** (ನಾ). ೧. ಅಗಿಯುವಿಕೆ; ತಿನ್ನುವಿಕೆ. 'ನಮಲುಗರೆ' ಪದ. ೨. ಮೆಲುಕುಹಾಕುವಿಕೆ; ಮೆಲುಕಾಡಿಸುವಿಕೆ. ನೆಮರು.

**ನಮಲು ಹಾಕು, ನೆಮರು ಹಾಕು** = ಮೆಲುಕುಹಾಕು; ಮೆಲುಕಾಡಿಸು: (+); ದನಕರುಗಳು ನೆಮರುಹಾಕುವುದು ನಿನ್ನೆ ಮೊನ್ನೆ ಕಲಿತ ಅಭ್ಯಾಸವಲ್ಲ (ಪ್ರಾಣಿಪ್ರ. ೨೫). [ <ನಮಲು₁ ]

**ನಮಲುಗರೆ** (ಕ್ರಿ). ಕಚ್ಚಿ ತಿನ್ನು; ಅಗಿದು ತಿನ್ನು : ಮಾನುಗಳನ್ನು ನಮಲುಗರೆಯುತ್ತ ಅಮ್ಮ, ಅಯೋಧ್ಯೆಗೆ ಹೋಗುವುದು ಯಾವಾಗ? ಎಂದನು (ಶ್ರೀರಾಪ. ೧೧೭). [ ನಮಲು₂ + ಕರೆ ? ]

**ನಮಶ್ಶಿವಾಯ** (ನಾ). = ನಮಃಶಿವಾಯ: ನಮಶಿವಯ ನಮಶ್ಶಿವಾಯ ನಮಶಿವಯಂ ನಮಶ್ಶಿವಾಯ ನಮಶಿವಯೆನುತಂ ಮಮತೆಯಲಿ ನೆನೆವುದೆಂದೀಕ್ರಮದಿಂದುಪದೇಶವೇಳ್ದ ಸಾನಂದೇಶಂ (ನನ್ನಚಾ. ೫-೧೫೫). [ಸಂ.]

**ನಮಸಿತ** (ಗು). ೧. ಪೂಜಿಸಿದ; ಸಮ್ಮಾನಿತ; ನಮಸ್ಕರಿಸಿದ. (ನಾ). ೨. ನಮಸ್ಕರಿಸಿದುದು: "ಅರ್ಹಿತಂ, ನಮಸ್ಯಿತಂ, ನಮಸಿತಂ, ಅಪಚಾಯಿತಂ, ಅರ್ಚಿತಂ, ಅಪಚಿತಂ – ೬ ಪೂಜಿಸಲ್ಪಟ್ಟದ್ದು, ನಮಸ್ಕರಿಸಲ್ಪಟ್ಟದ್ದು" (ಸಿದ್ಧಾಂತಿ. ೩೦೩). [ ಸಂ. ]

**ನಮಸ್ಕರಣ** (ನಾ). ನಮಸ್ಕಾರ; ವಂದನೆ. 'ನಮಸ್ಕರಣಂಗೆಯ್' ಪದ. [ ಸಂ. ]

**ನಮಸ್ಕರಣಂಗೆಯ್** (ಕ್ರಿ). ನಮಸ್ಕಾರ ಮಾಡು; ವಂದಿಸು : ಶರಣರಂ ಕಂಡಾಕ್ಷಣಂ ತನ್ನಮಸ್ಕರಣಂಗೆಯ್ಯದೆ ಪೋದನೋ (ವೃಷವಿ. ೩೦-೨೦). [ ನಮಸ್ಕರಣ + ಕೆಯ್₁ ]

**ನಮಸ್ಕರಿಸು** (ಕ್ರಿ). ನಮಸ್ಕಾರ ಮಾಡು; ವಂದಿಸು : ವಿಮಲಸ್ವರೂಪೆಗೆ ಭುವನಸ್ತುತ್ಯೆಗೆ ಯಾ ಶಾಸ್ತ್ರಪ್ರಾರಂಭದಲ್ಲಿ ನಮಸ್ಕರಿಸುವಾಶನಪ್ಪೆಂ (ಶಮದ. ೦ ವೃತ್ತಿ, ಪೀಠಿಕೆ); ಥಿಕ್ಕನೆ ಭೂಮಿಯೊಳು ಸಾಷ್ಟಾಂಗವೆರಗಿ ನಮಸ್ಕರಿಸುತಿರಲು (ಬಸಪು. ೪೭-೭೭); ತಾಯಿಗೂ ದ್ರೌಪದಿಗೂ ನಮಸ್ಕರಿಸಿ (ಜಂಗಾಳ್ಕೆ. ೨೦). [ ನಮಸ್ಕರಣ + – ಇಸು₃ ]

**ನಮಸ್ಕಾರ** (ನಾ). ೧. (ದೇವರು, ಗುರು ಹಿರಿಯರು ಮೊದಲಾದವರಿಗೆ ಗೌರವವನ್ನು ಸೂಚಿಸುವುದಕ್ಕಾಗಿ) ಬಾಗುವಿಕೆ; ವಂದನೆ; ಪ್ರಣಾಮ : "ಪಾದಗ್ರಹಣಂ, ಅಭಿವಾದನಂ ಈ ೨ ನಮಸ್ಕಾರ ಮಾಡುವುದು" (ನಾಚಿರಾ. ೧೨೯); "ತುಳಿಲೆಱಗು ಮೊಟ್ಗು ಮಣಿ ಕುಂಬಿ ಪೊಡಮಡಿಕೆಯು ನಮಸ್ಕಾರಕೆ ತವೆ ಸಂದ ನಾಮ" (ಶಬ್ದಮಂ. ೩೫); ಒಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು ಪಂಚಮಹಾವ್ರತಂಗಳನೇಱಿಸಿ ಪಡಿಕಮಣಂ ಪೇಳ್ದು ತದನಂತರಮಿಂ ಕಲ್ಪಿಸಿಮೆಂದೊಡೆ ನಮಸ್ಕಾರಂಗಳುಮಾಲೋಚನೆಗಳುಂ ನಿಯಮಮುಮುಮನೋದಿದೊಡಲ್ಲದೆ ಪೇಟಲಾಗದೆಂದೊಡೆ (ವಡ್ಡಾರಾ. ೬-೪); ಹಾಗದ ಕೆರಹ ಹೊಟಿಗೆ ಕಳೆದು ದೇಗುಲಕ್ಕೆ ಹೋಗಿ ದೇವರಿಗೆ ನಮಸ್ಕಾರವ ಮಾಡುವನಂತೆ ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲಾ (ಬಸವ. ೧೯೭); "ನಮಸ್ಕಾರ" ! ಎಂದೆದ್ದು ನಡೆದಿರೆ ವಿಭೀಷಣಂ, ಮೇಲೆಳ್ದಳನಲೆ (ಶ್ರೀರಾಮಾ. ೫೮೨-೨೦೦); ಗುರುತಿನವರನ್ನು ಕಂಡರೆ . . . ಅವರಿಗೆ ನಮಸ್ಕಾರ ಮಾಡಬೇಕು (ಪಂಬಯು. ೪-೩೪). ೨. ನಮಸ್ಕರಿಸುತ್ತೇನೆ ಎಂದು ಆದರ ಸೂಚಿಸುವುದಕ್ಕಾಗಿ ಹೇಳುವ ಮಾತು : ನಮಸ್ಕಾರ, ಬನ್ನಿ ಕುಳಿತುಕೊಳ್ಳಿ (ರೂಢಿ). ೩. ಗ್ರಂಥಗಳ ಆದಿಯಲ್ಲಿ ಬರುವ ದೇವತಾಪ್ರಾರ್ಥನೆ ಎಂಬ ನಾಂದಿಯಲ್ಲಿ ಒಂದು ವಿಧ,-ಬಗೆ.

**ನಮಸ್ಕಾರ ಹಾಕು** = ೧. ಪ್ರಣಾಮ ಮಾಡು; ವಂದಿಸು : ದೇವರಿಗೆ ನಮಸ್ಕಾರ ಹಾಕಿ ಬರುತ್ತೇನೆ (ರೂಢಿ). ೨. ವಿದಾಯ ಹೇಳು : ಆತ ಈ ಕೆಲಸಕ್ಕೆ ನಮಸ್ಕಾರ ಹಾಕಿ ಹೊರನಡೆದ (ರೂಢಿ). **ನಮಸ್ಕಾರ ಹೊಡೆ** = ೧. ನಮಸ್ಕರಿಸು; ವಂದಿಸು : ಅವನು ಅವರನ್ನು ನೋಡಿದಾಗಲೆಲ್ಲಾ ನಮಸ್ಕಾರ ಹೊಡೆದು ತನ್ನ ಬಡ್ತಿಯ ಬಗ್ಗೆ ಕೇಳುತ್ತಾನೆ (ರೂಢಿ). ೨. = ನಮಸ್ಕಾರ ಹಾಕು: ೨: ಕೆಲಸ ಮಾಡಲಾರದೆ ಆ ಕೆಲಸಕ್ಕೆ ನಮಸ್ಕಾರ ಹೊಡೆದ ಆತ (ರೂಢಿ). [ ಸಂ. ]

**ನಮಸ್ಕಾರಂಗೆಯ್** (ಕ್ರಿ). ನಮಿಸು; ವಂದಿಸು : ಅರಸು . . . ದೇವರ್ಗೆ ನಮಸ್ಕಾರಂಗೆಯ್ದು ಋಷಿಯರು ಬಂದಿಸಿ ತನ್ನ ಮನೆಗೆವೋದು (ವಡ್ಡಾರಾ. ೩೩-೧೨); ನಾರದಂಗೆ ನಮಸ್ಕಾರಂಗೆಯ್ದು ಪೀಠಾಸನದೊಳಿರಿಸುವುದುಂ (ಮಹಾನೀ. ೧೦-೯೦ ವ). [ ನಮಸ್ಕಾರ + ಕೆಯ್₁ ]

**ನಮಸ್ಕಾರಮಂತ್ರ** (ನಾ). [ಜೈನ] ಣಮೋ ಅರುಹಂತಾಣಂ ಇತ್ಯಾದಿ ಮಂತ್ರ; ಜೈನಧರ್ಮದ ಪಂಚಗುರುಗಳಿಗೆ ಸಲ್ಲುವ ನಮಸ್ಕಾರ : ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಯಾರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಲೋಏ ಸಬ್ಬ ಸಾಹೂಣಂ (ಅರ್ಹಂತರಿಗೆ ನಮಸ್ಕಾರ, ಸಿದ್ಧರಿಗೆ ನಮಸ್ಕಾರ, ಆಚಾರ್ಯರಿಗೆ ನಮಸ್ಕಾರ, ಉಪಾಧ್ಯಾಯರಿಗೆ ನಮಸ್ಕಾರ, ಲೋಕದಲ್ಲಿರುವ ಸರ್ವಸಾಧುಗಳಿಗೂ ನಮಸ್ಕಾರ) – ಇದು ಪಂಚ(ಪರಮೇಷ್ಠಿಗಳ)ನಮಸ್ಕಾರ ಮಂತ್ರ . . . ಈ ನಮಸ್ಕಾರಮಂತ್ರ ಜೈನರ ಗಾಯತ್ರಿ ಎನ್ನಬಹುದು (ಆದಿಸಂ. XI ಪೀಠಿಕೆ). [ ನಮಸ್ಕಾರ + ಮಂತ್ರ ]

**ನಮಸ್ಕಾರಮುದ್ರೆ** (ನಾ). ಪೂಜೆ ಮೊದಲಾದ ಸಂದರ್ಭಗಳಲ್ಲಿ ಮಾಡುವ ಒಂದು ಮುದ್ರೆ; ಹಸ್ತದ ಬೆರಳುಗಳನ್ನು ಹೊಂದಿಸುವ ರೀತಿ : ಗಾಯತ್ರೀಮುದ್ರೆ ಕಾಲಕಂಠಮುದ್ರೆ ಶೂಲಮುದ್ರೆ ನಮಸ್ಕಾರಮುದ್ರೆ . . . ಸಂಹಾರಮುದ್ರೆಯೆಂಬಾದಿಯಾಗಿ ಸಕಲಮುದ್ರೋಪಮುದ್ರಾಬಂಧಲಕ್ಷಣಗಳಂ ಗುರುಮುಖದಿಂದಱಿತು (ವಿವೇಕ. ೧೦೩). [ ನಮಸ್ಕಾರ + ಮುದ್ರೆ ]

**ನಮಸ್ಕಾರಿ** (ನಾ). ಮುಟ್ಟಿದರೆ ಎಲೆಗಳನ್ನು ಮುದುರಿಕೊಳ್ಳುವ ಒಂದು ಬಗೆಯ ಸಸ್ಯ; ಮುಟ್ಟಿದರೆ ಮುನಿ; ಮುಟ್ಟಲು ಮುರುಕ; "ನಮಸ್ಕಾರೀ, ಗಂಧಕಾರೀ, ಸಮಂಗಾ, ಖದಿರಾ – ೪ ಮುಟ್ಟಿದರೇ ಮುನಿವನ ಹೆಸರುಗಳು. ಮುಟ್ಟುಮುಡುಗಿಡ" (ಸಿದ್ಧಾಂತಿ. ೧೧೪). [ ಸಂ. ನಮಸ್ಕಾರೀ ]

**ನಮಸ್ಕಾರ್ಯ** (ನಾ). ನಮಸ್ಕರಿಸಲು ಯೋಗ್ಯನಾದವನು; ಪೂಜ್ಯ : ಆರ್ಯಾವಾರ್ಯಂ . . . ಸಜ್ಜನಂ ಶಿವಕಾರ್ಯಧುರ್ಯಂ ಭೂಜನನಮಸ್ಕಾರ್ಯನೆನಲೆಸೆದ (ಬಸಪು. ೨೩-೨೪). [ ಸಂ. ]

**ನಮಸ್ಕೃತಿ** (ನಾ). ನಮಸ್ಕಾರ ಮಾಡುವಿಕೆ; ವಂದನೆ : ನಮಸ್ಕೃತಿಗಗ್ರಭಾಗದೊಳ್ ಕೂಡುತುಮಿರ್ಪ ಕೆಯ್ಗಳುಮಾನಿತ್ತೆ (ಚಂದ್ರಪು. ೧೨-೧೩೩). [ ಸಂ. ]

**ನಮಸ್ಕ್ರಿಯಾವಿಧಿ** (ನಾ). ನಮಸ್ಕಾರದ ನಿಯಮ,– ಕಟ್ಟಳೆ : ನಂದೀಶ್ವರಾದ್ಯುದಿತದ್ವೀಪ ನಮಸ್ಕ್ರಿಯಾವಿಧಿಗಳಂ ನೀಂ ಮಾಡು ದೇವಾಧಿಪಾ (ಶಾಂತಿಪು. ೭-೨೫). [ ಸಂ. ]

**ನಮಸ್ತೇ** (ನಾ). ೧. ನಿನಗೆ ನಮಸ್ಕಾರ : ಶ್ರೀಮದಜಿತಭಟ್ಟಾರಕಜಿನ ನಮಸ್ತೇ ನಮಸ್ತೇ (ಅಜಿಪು. ೪–೬೫ ಗದ್ಯ); ಭವಿತನವ ಕಳೆದು ಭಕ್ತನ ಮಾಡಿ . . . . ತ್ರಿವಿಧ ಸುಖಸಮರತಿಯನವಿರತಂ ದಯೆಗೆಯ್ದು ಧವಗೇಡಿ ಯೆನಿಸದವರ ಅವಿರಳನೇ ಗುರು ನಮಸ್ತೇ (ಮ್ಯಲಾರ. ೧೮೮–೧) ;ಅನಿಟ್ಟನ್ನಪಿ ಕೈ ಮುಗಿದೆಂದೆ ಗುಲಾಬಿಗೆ: "ನಮಸ್‌ತೇ!" (ಅನಿಕೇ. ೩–೧೭). ೨. = ನಮಸ್ಕಾರ ೨ : ಹೋಗಿ ಬರುತ್ತೇನೆ ನಮಸ್ತೇ (ರೂಢಿ).

[ P ಇದು ಸಂಸ್ಕೃತದಲ್ಲಿ ನಮಃ ಮತ್ತು ತೇ ಇವು ಸೇರಿ ಆದ ಒಂದು ವಾಕ್ಯ ]

**ನಮಸ್ಯ** (ಗು).೧. ಪೂಜಿಸಬೇಕಾದ; ಪೂಜ್ಯವಾದ.(ನಾ). ೨.ನಮಸ್ಕಾರ ವನ್ನು ಪಡೆಯುವವನು; ಪೂಜ್ಯನಾದವನು : ಚತುರಾಸ್ಯನುಮಹ ಮಿಂದ್ರ ನಮಸ್ಯನುಂ . . . ಆಗಿ (ಶಾಂತಿಪು. ೦೨–೧ ವ) ; ವರಬುಧೋಪಾ ಸ್ಯನಂ ಭೂತಳನಮಸ್ಯನಂ ಹರಶರಣಸಿಂಹನಂ (ಅರಾಚ. ೧–೩೩). ೩. ತೆರಿಗೆ ವಿನಾಯಿತಿ : ನೂಱಯ್ವತ್ತು ಮ[ತ್ರ]ಕ್ಕೆಯ್ಯಂ ನಮಸ್ಯಮಾಗಿ ಬಿಟ್ಟರ್ (ಸೌಇಇ. XX, ೧೮–೪೨ ; ೯೮೦) : ನಂದಾದೀವಿಗೆಗಂ ಏಕಾದಶಿಯಭ್ಯಂಗ ದೆಣ್ಣೆಗಂ ನಮಸ್ಯವಾಗಿ ಬಿಟ್ಟ ಗಾಣ ೨ (ಸೌಇಇ. XV, ೦೨–೩೪ : 1128). 'ಸರ್ವನಮಸ್ಯ' ಪರಾ.

**ನಮಸ್ಯಂ ಬಿಡು** = ತೆರಿಗೆ ವಿನಾಯಿತಿಯೊಂದಿಗೆ ಭೂಮಿ ಮೊದ ಲಾದುವನ್ನು ಕೊಡು,–ದಾನಮಾಡು : ಶ್ರೀಮತ್ತಿಸುಪೊಳಲ ಮೂಲ ಸ್ಥಾನದ ಮಹಾದೇವರುಪಭೋಗಕ್ಕೆ ಸರ್ವ್ವಬಾಧಾ ಪರಿಹಾರಮಾಗೆ ನಮಸ್ಯಂಬಿಟ್ಟ ಸೆಣ್ಣನ ವಾಹಾಳಿಯ ಕೆಯಿ ಮತ್ತ ೧೨ (ಕೊಲ್ಲಾಶಾ. ೨–೧೪ : 1069). [ ಸಂ. ]

**ನಮಸ್ಯಿತ** (ಗು). ೧. ಪೂಜಿಸಿದ ; ಗೌರವಿಸಿದ. (ನಾ). ೨. ನಮಸ್ಕರಿಸಿ ದುದು : "ಅರ್ಹಿತಂ, ನಮಸ್ಯಿತಂ, ನಮಸಿತಂ, ಅಪಚಾಯಿತಂ, ಅರ್ಚಿತಂ, ಅಪಚಿತಂ – ೬ ಪೂಜಿಸಲ್ಪಟ್ಟದ್ದು, ನಮಸ್ಕರಿಸಲ್ಪಟ್ಟದ್ದು" (ಸಿದ್ಧಾಂತಿ. ೩೦೩). 'ನಮಸಿತ' ಪರಾ. [ ಸಂ. ]

**ನಮಸ್ಯೆ** (ನಾ). ನಮಸ್ಕಾರ; ವಂದನೆ : "ನಮಸ್ಯಾ, ವಂದನಾ – ಈ ೨ ಪೊಡವಡಿಕೆ" (ಹಲಾಯು. ೦೨೮–೯೦). [ ಸಂ. ನಮಸ್ಯಾ ]

**ನಮಾಜು**, ನಿಮಾಜು (ನಾ). ಮುಸಲ್ಮಾನರ ದೇವತಾಪ್ರಾರ್ಥನೆ : ನಮಾಜು ಮಾಡಲು ಮಸೀದಿಗೆ ಹೋಚುನು (ಶೃಗಂಬ. ೦೩೩) ; ಇಲ್ಲಿಯವರು ಬಹುಬೇಗ ಪೂಜೆ, ನಮಾಜುಗಳಲ್ಲಿ ಆಸಕ್ತರಾಗುವರು (ರೂಪಾರಾಜ. ೦೦೯) ; ಮಹಮ್ಮದಪೈಗಂಬರರು ಪ್ರತಿನಿತ್ಯ ನಮಾಜು ಮಾಡುವುದೊಂದು ಸ್ಥಳ ವಿತ್ತಂತೆ (ಮಾಧವ. ೭); ನಮಾಜು ಮಾಡುವುದಕ್ಕೆ ಹೋದಾಗ ಮಸೀದಿ ಮೇಲೆ ಬಿತ್ತು (ಗಾದೆ). **ನಿಮಾಜು** : ಜಾತಿದೇವರ ಧ್ಯಾನಕೆಸಗಿ ನಿಮಾಜು ವೆಂದ್ಯಸೂತಿಯನು ಗೈಸಿ (ಕದಂಪು. ೮೪).

[ ← ಪಾರಸ. ಮಾರ್ಝ್ ; ಹಿಂ. ಮರಾ. ನಮಾಜ್, ನಿಮಾಜ್ ]

**ನಮಿ** (ನಾ). [ಜೈನ] ಇಪ್ಪತ್ತನಾಲ್ಕು ಜನ ತೀರ್ಥಂಕರರಲ್ಲಿ ಒಬ್ಬ ; ಇಪ್ಪತ್ತೊಂದನೆಯ ತೀರ್ಥಂಕರ : ವಿನಮಿಯುಂ ನಮಿಯುಂ ನಯ ದಾಳ್ದರ್ (ಶಾಂತಿಪು. ೫–೧೪೯) ; ಶ್ರೀಪಂಚಮಹಾಕಲ್ಯಾಣೋಪೇತಂ ಕರ್ಮಗಹನದಹನಂ ಮುಕ್ತಿಶ್ರೀಪತಿಸಂಸಾರೋಗ್ರಭ(ಯೊ)ಯೋಪಹರಂ ವರದನಕ್ಕೆ ನಮಿ ತೀರ್ಥಜಿನಂ(ಕರಂ) (ಚಾವುಂಪು. ೩.೧೯); ಮುಚುಕುಂದಂ ತಾಂ ನಮಿಸ್ವಾಮಿಗಳ್ಗೊಲವಿಂಗಾಬ್ಜಕೆ ಸೇವ್ಯಮಾನಮೆನಲುಂ ಪೂಜಾ ವಿಧಾನೋತ್ಕರಂ (ಪುಣ್ಯಾಸ್ರ. ೧–೧೦೩). [ ಸಂ. ]

**ನಮಿತ** (ಗು). ೧. ಬಗ್ಗಿದ ; ಮಣಿದ : ನಮಿತೋದ್ಯತ್ಕಣಿಶಪ್ರಕೀರ್ಣ ಕಳಮಪ್ರಾಸ್ತಾತಕೇದಾರಜಾಲಮಯಂ (ಕುಸುಮಾ. ೦೦–೨೫೪) ; ನಮಿತ ಕದಳೀಫಲಸ್ತಬಕಂಗಳಂ ತೂಗಿ (ಉದ್ಭಟ. ೧೧–೧೨೩): ಪಾರ್ಥನ ನಮಿತ ಮಕುಟವ ನೆಗಹಿ ಪುಳಕಾಶ್ರುಗಳ ಪೂರದಲಿ . . . ಬಿಜಯಂಗೈದನಸುರಾರಿ (ಕುಮ್ಮಾಗ. ೦೩–೧೪). ೨. ನಮಸ್ಕರಿಸಿದ ; ವಂದಿಸಿದ : ನಮಿತಲೋಕ ವೆನಿಪ್ಪವಂ ಸಕಳೇಶ ಮಾದರಸ (ಬಸಪು. ೦೯–೩) ; ನಮಿತಜನ ದುರ್ಮಾರ್ಗ ತಪ್ರಯಾಣಕ್ಕೆ ವಿಘ್ನಮನೆಸಪ . . . ಶಾಂತಮಲ್ಲೇಶ್ವರಾ (ವೀಶ್ರೀಪು. ೬–೩–೧). ೩. [ಭೌತವಿ] ಬಾಗಿದ. 'ನಮಿತಪ್ರತಿಬಿಂಬ' ಪರಾ. (ನಾ). ೪. ನಮಸ್ಕರಿಸಲ್ಪಟ್ಟವನು : ಗುರುದೇವೇಂದ್ರ ಮುನೀಂದ್ರ ನಿಂದ್ರನಮಿತಂ ದೇವಂ ಕಥಾನಾಯಕಂ ಪುರುದೇವಂ (ಆದಿಪು. ೧–೨೫) : ನಮಿತಂ ಖಚರಾನುಚರಂ ಕ್ರಮದಿಂ ತಿಳಿಪಂತು ತನಗೆ ತನಯನ ವೃತ್ತಾಂತ ಮನಱಿವೆ . . . ಪಲವು ಸೂಟ್ಸಿಸಗೊಂಡಂ (ಪಂರಾಮಾ. ೬–೪೪). [ ಸಂ. ]

**ನಮಿತಪರ್ವ** (ನಾ). ಗೆಣ್ಣುಗಳಲ್ಲಿ ಬಾಗನ್ನುಳ್ಳದು : ಸುರಪುರಕಂಟಕ ರೆನಿಸಿದ ಸುರರಿಪುಗಳನಿರದೆ ತೂಳ್ದುವಿವೆರಡೆ ಧರಣೀಶ್ವರ ನಿನ್ನ ಶಿಲೀಮುಖಮುಂ ನರಸಿಂಹನ ನಮಿತಪರ್ವಮೆನಿಸಿದ ನಖಮುಂ (ಶಾಕುಂತ. ೯೯–೧೬೬). [ ನಮಿತ + ಪರ್ವ ]

**ನಮಿತಪ್ರತಿಬಿಂಬ** (ನಾ). [ಭೌತವಿ] ನಮನಹೊಂದಿದ ಪ್ರತಿಬಿಂಬ : ಕೋನವನ್ನು ಮಾಡುವ ನೇರದಲ್ಲಿ ಕಿರಣಗಳೆಲ್ಲಾ ಒಂದೇ ದಿಶೆಯಲ್ಲಿ ಸೇರುವುದರಿಂದ ಮೊದಲನೆಯ ನಮಿತಪ್ರತಿಬಿಂಬವು (Diffracted image) ಉಂಟಾಗುವುದು (ಭೌತವಿ. ೨೧೨). [ ನಮಿತ + ಪ್ರತಿಬಿಂಬ ]

**ನಮಿತಶಿರಸ್ಕೆ** (ನಾ). ತಲೆಯನ್ನು ಬಾಗಿಸಿದವಳು; ನಮಸ್ಕರಿಸಿದವಳು: ನಮಿತಶಿರಸ್ಕೆಯಾಗಿ ನಸಂದೂರದೊಳಂಜಲಿಹಸ್ತದಿಂ ಸಸಂಭ್ರಮೆಯಿರೆ ಯಾಕೆಯುಂ ದಯೆಯಿನೀಕ್ಷಿಸಿ (ದಿವ್ಯಸ. ೬–೨೮).

[ ಸಂ. ನಮಿತಶಿರಸ್ಕಾ ]

**ನಮಿತಾನನೆ** (ನಾ). ಮುಖವನ್ನು ತಗ್ಗಿಸಿದವಳು: ನಮಿತಾನನೆ ಲಜ್ಜಾನಿಷ್ಠ ಮೋಹಪರವಶತೆಯಿಂದೆ ಮಾಱುತ್ತರನಂ ಸಮನಿಸದಿರಲ್ (ದಿವ್ಯಸ. ೬–೪೭). [ ಸಂ. ನಮಿತಾನನಾ ]

**ನಮಿತಾರಿ** (ನಾ). ಶರಣಾಗತರಾದ ಶತ್ರುಗಳುಳ್ಳವನು ; ಶತ್ರುಗಳನ್ನು ಶರಣಾಗಿಸಿಕೊಂಡವನು : ನಮಿತಾರಿಗೆ ದಮಿತಾರಿಗೆ ಸಮಸ್ತ ಧಾತ್ರೀ ವಿಭಾಗದೊಳ್ ಭಾವಿಸೆ . . . ಪೋಲ್ಕೆಗಾವಂ ಬರ್ಪಂ (ಕಾವ್ಯಾವ. ೩೪೭).

[ ನಮಿತ + ಅರಿ ]

**ನಮಿಯಿಸು** 'ನಮಿಸು' ನೋ.

**ನಮಿಸು**, ನಮಿಯಿಸು (ಕ್ರಿ). ಬಾಗು ; ನಮಸ್ಕರಿಸು ; ವಂದಿಸು : ನಮಿಸುತಂ ಕಂಪಿಸುತೆ ಮನವೊಲಿದು ಹೊಗಳುತಂ (ಬಸರ. ೩–೧೦೮) ; ನಮಿಸಿದ ಕಾದಲರಂ ತನ್ನಮಳಕರದೊಳೆತ್ತಿ ಪರಸಿ . . . ಬೀಟ್ಕೊಂಡಂ (ಉದ್ಭಟ. ೮–೭೭); ಕಿನ್ನರಯ್ಯನ ಪಾದಪಂಕಜಕಂ ನಮಿಸುತಾ ಬಸವರಾಜನು (ಬಸಪು. ೨೮–೪೬) : ಗುರುವಿನ ದೆಳವ ಹೊಕ್ಕನು ನಮಿಸಿ ಬಿನಹ ಮಾಡಿ ದನು ನಗುತ (ಕುಮಾರಾವ್ಯ. ೧೦–೪೨) : ನಮಿಸುತೆ ಪೂಜ್ಯಕುಟಿಪದಕೆ ಬೀಳುಕೊಂಡರು ಮೂವರುಂ ಪಂಚವಟಿಗಾಗಿ (ಶ್ರೀರಾಮಾ. ೧೯೩–೪೭೮). **ನಮಿಯಿಸು** : ನಮನಮಂ ಮಾಡುವಂ ನಮಿಸುವಂ, ನಮಿಯಿಸುವಂ (ಶಬ್ದಾನು. ೫೩೪ ಪ್ರಯೋ). [ ನಮನ + – ಇಸು₃ ]

**ನಮೀಕೃತ** (ಗು). ಬಾಗಿಸಿದ; ಮಣಿಸಿದ; ಶರಣಾಗತರನ್ನಾಗಿ ಮಾಡಿದ: ದೃಢೀಕೃತತಳವರ್ಗನುಂ ನಮೀಕೃತಸಾಮಂತವರ್ಗನುಮಾಗಿ (ಚಂದ್ರಪ್ರ. ೪–೨೮ ವ). [ ಸಂ. ]

**ನಮೂದಿಸು** (ಕ್ರಿ). ಉಲ್ಲೇಖಿಸು ; ದಾಖಲೆಮಾಡು ; ಬರೆದಿಡು : ಏಜೆಂಟ್ ಅಥವಾ ಮುತಾಲಿಕನ ಹೆಸರನ್ನೂ ನಮೂದಿಸಬೇಕು (ಗ್ರಾಮಾಶ. ೬); ಪೋಲೀಸಿನವರು ಸಾಕ್ಷಿಪಟ್ಟಿಯಲ್ಲಿ ಅವನ ಹೆಸರನ್ನು ನಮೂದಿಸಿರಲಿಲ್ಲ (ಪಂಜಪಂ. ೦೦೩) ; ಈ ವಿಷಯ ರಾಜಿಗಳಿಗೂ ಗೊತ್ತಿಲ್ಲ ; ಗೊತ್ತಿದ್ದರೆ: ಕುರಾನಿನಲ್ಲಿ ನಮೂದಿಸದೆ ಬಿಡುತ್ತಿರಲಿಲ್ಲ (ತತ್ವಪ್ರಾ. ೫೭೭).

[ ನಮೂದು + –ಇಸು₃ ]

**ನಮೂದು** (ನಾ). ಉಲ್ಲೇಖ ; ದಾಖಲೆ ; ನೋಂದಣಿ.

ನಮೂದಾಗು=ನೋಂದಣಿ ಆಗು ; ದಾಖಲಿಂ ಆಗು : 'ವ್ಯಯಿಲ್ಲು' ಬರೆದು ಸಿದ್ಧವಾಯಿತು. ಇಷ್ಟರಲ್ಲಿ ನಮೂದಾಗುವದಿತ್ತು (ಸಮಜೀ. ೦೨೧). **ನಮೂದುಮಾಡು** = ಉಲ್ಲೇಖಿಸು ; ಬರೆದು ತಿಳಿಸು : 'ಡಿನ್ನರ್' ಇಷ್ಟು ಹೊತ್ತಿಗೆ ಎಂದು ಲಗ್ನಪತ್ರಿಕೆಯಲ್ಲಿ ನಮೂದುಮಾಡಿದ್ದರು (ನಾಡಿಗೇ. ೧೪೬) : ಜ್ವರ ಬಂದ ಕಾರಣ ನಮೂದುಮಾಡಿ, ಪರೀಕ್ಷೆಯ ಕತ್ತರಿಯಿಂದ ನುಸುಳಿ (ದೀಪಹ. II, ೧೮).

[ ←ಪಾರ. ಹಿಂ. ನಮೂದ್ ; ಮರಾ. ನಮೂದ್, ನಮೋದ್ ]

**ನಮೂನಿಸುಳಿ** (ನಾ). ದನದ ಮೈಮೇಲಿನ ಸುಳಿಗಳಲ್ಲಿ ಒಂದು ಬಗೆ: ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ, ದಾವಣಿಸುಳಿ, ಪರಕಲಸುಳಿ, ನಮೂನಿಸುಳಿ, ಸಿಡಕ್ಕಾಲು, ಕೋರಬಗ್ರಿ, ಕ್ಯೊವಹಲ್ಲು ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೆಸುಳಿ ಇರೋದ ತತ್ಕಾಲಾ (ಹುಟ್ಟಹ. ೧೬೫). [ <ನಮೂನೆ + ಸುಳಿ₂ (<ಸುಟ್ಟಿ₂) ]

**ನಮೂನೆ** (ನಾ). ೧. ಮಾದರಿ ; ತೆರ ; ಕ್ರಮ ; ಪ್ರಕಾರ; ರೀತಿ; ವಿಧ; ಬಗೆ : ನೋಟದಲ್ಲಿ ಒಂದು ನಮೂನೆಯ ಬಿಂಕ (ಅಲಹೂ. ೧೮) : ಆ ಮಾಸ್ತರ ಹೇಳಿದ ನಮೂನೆ ನೋಡಿದರೆ ಈಗಾಗಲೆ ಏನು ಮಾಡಿ ಕುಳಿತಾಳೊ (ಮೂರುದಾ, ೩೮) ; ಚೊಕ್ಕ ಬಂಗಾರವೇ ಬೇಕೆಂಬ ಹಟವೇಕೆ ನಿನಗೆ ಈ ಲೋಕದಲ್ಲಿ ನಾನಾ ನಮೂನೆ ಲೋಹವಿರುವಾಗ ? (ನಲಮು. ೨೭-೬); ಪಾಚಿಯು ವಿವಿಧ ನಮೂನೆಗಳನ್ನು ಬೆಳೆಸಲು ಉದ್ಯುಕ್ತನಾದನು (ಸಸ್ಯಕ. ೮೬). ೨. ರಚನಾಕ್ರಮ; ನಕ್ಷೆಯ ವಿನ್ಯಾಸ : ಆ ಕೋಟೆ ನಮೂನೆ ಯಾವ ಮೇಲೆ ಇದೆ (ರಾಜೇಂದ್ರ. ೨೪). ೩. ಚಿತ್ರಾಕೃತಿಯ ಮಾದರಿ : ಎಲ್ಲಿ ಅವನಿಗೆ ಚಿತ್ರಕಲೆಯ ಸುಂದರವಾದ ನಮೂನೆಗಳು ದೊರೆಯುತ್ತಿದ್ದವೋ ಅಲ್ಲಿಗೆ ಅವನು ಹೋಗಿಯೇ ಹೋಗುತ್ತಿದ್ದನು (ಸ್ಮಜಲ. ೧೮) ; ಅವನ ಚೌಕಳಿ . . . ಮಾಟ ಬೆಂಡೋಲೆಗಳ ನಮೂನೆ ಕಂಡಿತು ನನಗೆ (ವ್ಯನಿ. ೮); ಈಗಿನ ದಿನಗಳಲ್ಲಿ ಸುಂದರವಾದ ಹಾಗೂ ಆಕರ್ಷಕವಾದ ಅನೇಕ ನಮೂನೆಯ ಮನೆಕೆಲಸದ ಸಲಕರಣೆಗಳು ಸಿಗುತ್ತವೆ (ಅಡುಶಾ. ೩೨). ೪. ಅರ್ಜಿ, ದಾಖಲೆ ಮೊದಲಾದಂವುಗಳಲ್ಲಿ ಉಲ್ಲೇಖಿಸಬೇಕಾದ ಅಂಶಗಳನ್ನೊಳಗೊಂಡ ಪತ್ರ,-ಕಾಗದ : ಆ ಸರ್ಕಾರದವರಿಂದ ವಿಧಾಯಕವಾಗಿರುವ ನಮೂನೆಯಲ್ಲಿ ಮತ್ತು ರೀತಿಯಲ್ಲಿ ಕೊಟ್ಟಂಥ ಆವೇದನಪತ್ರದ ಮೇಲೆ (ಭೂಧಾಸ. ೫) ; ಈಗಿದ್ದ ಮರಾಟಿ ನಮೂನೆಗಳು ತೀರಿದ ಬಳಿಕ ಕನ್ನಡ ನಮೂನೆಗಳನ್ನು ಮುದ್ರಿಸಬೇಕು (ಕಶ್ನಸು. I, ೨೬). ೫. ಮಾದರಿಗಾಗಿ ಕೊಟ್ಟುದು; ಮಾಸಲೆ (ಉಕ): ನಮೂನೆಗೆ ಸ್ವಲ್ಪ ತೆಗೆದುಕೊಂಡು ಬಾ (ರೂಢಿ). ೬. (ಆಲಂ) ವಿಚಿತ್ರವಾದುದು ; ಅಸಮಾಧಾನಕರವಾದುದು : ಅವರ ಮುಖ ಒಂದು ನಮೂನೆಯಾಗಿತ್ತು (ರೂಢಿ).

[ ←ಪಾರ. ನಮೂನಾ, ನಮೂನಹ್ ; ಹಿಂ. ನಮೂನಾ ; ಮರಾ. ನಮೂನಾ, ನಮೋನಾ ]

**ನಮ್**, **ನವೆ₁** (ಕ್ರಿ). ೧. ದಂಡಿಸು ; ನರಳು ; ಕೊರಗು : ಬಳಿಕ ಪಣ್ಣುವಟದೊಳ್ಪುಳುವಾಗಿ ನಮೆಗುಂ (ಎಕ. VIII, ನಗರ. ೬೦-೧೧ ; 870); ಚಕ್ರದಿಂ ನಾಲ್ಕು ಕಾಲುಮನೊರ್ಮೊದಲೆ ಪಱಿಯಿಟ್ಟೊಡೆ . . . ಆ ಇರುಳೊಳಾಮೆ ಪಿರಿದು ವೇದನೆಯಿಂದಂ ನಮೆದುಂ ಸತ್ತು (ವಡ್ಡಾರಾ. ೧೨೦-೨೦) ; ಕೂರದರ್ ನೆಲನನೊಟ್ಟಜೆಯಿಂ ಕೊಳೆ ಕೊಟ್ಟು ಮುಟ್ಟು ಗೆಟ್ಟಿನ್ನು ಮರಣ್ಮದೊಳ್ ನಮೆದಪಂ ಯಮನಂದನಂ (ಪಂಪಭಾ. ೭-೫೫) ; ಎನಿತುಂ ದ್ರೌಪದಿ ಮುಕ್ತಕೇಶಿ ನಮೆವಳ್ (ಗದಾಯು. ೬-೨೪). ಎನ್ನ ಮಕ್ಕಳುಮಾನುಂ ದುಃಖಾಗ್ನಿಯೊಳ್ ಪುಡುಪುಡನೆ ಪುರ್ಗಿ ನಮೆವ ಪಾಪದ ಫಲಮಂ ನೀನಮೋಘಮುಣ್ಬೆಯೆಂದು ಮೂದಲಿಸಿ (ಸುಕುಮಾ. ೫-೭೮) ; ಮೊಂಟಾಗಿ ಕೈಗಳೆರಡುಂ ಗೆಂಟಾಗಿರೆ ತನಗೆ ಸಿರಿಯು ಕೂಟುಂ ಕಾಲುಂ ಕುಂಟಾಗಿ ನಮೆಯುತಿರ್ಪರ್ಟೆಂಟಣೆಸಿ ಮಹಾತಪಂಗಳಂ ಕಿಡಿಸಿದವರ್ (ಧರ್ಮಾಮೃ. ೬-೧೮೦) ; ಅಳಿಯಾಸೆಯಿಂ ನಮೆಯದಿರ್ಬೇಡಾಗ್ರಹಂ (ಅನಂಪು. ೧೧-೯೨) ; ಬಂದರೇನಪರಾಧವೇ ಇನ್ನೆಂದುಮರಿಯಂತವರು ನಮೆವರು (ಕುಮ್ಮಾಭೀ. ೧-೨೦) ; ನಮೆವ ದೀನಾಂಧಬಧಿರರಂ ದಾನ ಧರ್ಮಂಗಳಿಂ ಪಾಲಿಸುತುಂ (ರಾಮಾಶ್ವ. ೧೫-೧೯); ಆಗದುದಕೆ ಹೋಗದುದಕೆ ಆಸೆಪಟ್ಟು ಭಂಗಪಡುತೆ ನಮೆವುದೇತಕೆ? (ವಿಸೀಗೀ. ೮೫-೧೧). ೨. ಸೊರಗು; ಕೃಶವಾಗು ; ಬಡವಾಗು : "ನಮೆ–ಗುರುಯಾಪ್ಯೇ (ಬಡವಾಗು) ದಾರಿದ್ರ್ಯೇ ಚ" (ಶಮಧಾ) ; ಅಬೋಧಬೋಧಿತ ತಪೋದಾನವಿಧಾನದು ಮುಧಾಕ್ಲೇಶಾಯಾಸನಿರತರಾಗಿ ನಮೆವರ್ (ಆದಿಪು. ೨-೯೮) ; ಉಪವಾಸದೊಳ್ ನಮೆದು ನೋಂಪಿಗಳೊಳ್ ನಿಯಮಕ್ರಮಂಗಳಂ ಸಲಿಸಿದರ್ (ಪಂಪಭಾ. ೦-೧೩೬) ; ತೆರ್ಪತ್ತು ಬಿಟ್ಟು ನಮೆಯುತ್ತಿರ್ಪರ್ ನಾರಕರ್ (ಶಾಂತಿಪು. ೭-೯೯): ಲೋಕದೊಳಾಂ ಕಾಣದಿರಿಲ್ಲೇ ಕುತ್ತಂ ಪೊರ್ದಿ ನಮೆವ ಮಾನಿಸರಂ ಕೇಳೀ ಕಷ್ಟನಂದದಿಂ ಮೆಯ್ಯಾಕಾರಂಗೆಟ್ಟು ನಮೆವರಂ ಕಂಡಱಿಯೆಂ (ಧರ್ಮಾಮೃ. ೪-೯೦). ೩. ಬಡವನಾಗು : "ನಮೆ–ಗುರುಯಾಪ್ಯೇ (ಬಡವಾಗು), ದಾರಿದ್ರ್ಯೇ ಚ" (ಶಮಧಾ). ೪. ಮಹತ್ವವನ್ನು ಕಳೆದುಕೊಳ್ಳು : (೯). **ನವೆ₁** : ೧. ಮಹಾನರಕದೊಳ್ ದುಃಖಾಗ್ನಿಯಿಂ ಬೆಯ್ಯೊಡಂ ನವೆಯುತ್ತಿರ್ಪೊಡಂ (ಧರ್ಮಾಮೃ. ೩-೬೦) ; ಹಲಕಾಲ ನವೆವುತಲ್ಲಿರ್ದ ಹೆಳವಂಗೆ ಕಾಲ್ . . . ಬರಲ್ (ಸೋಮಂಶ. ೪-೬) ; ಕಟಕಟಾ ಘೋರದವಿಯೊಳಗೆಕ್ಕಟಿಯಿದೇತಕೆ ನವೆವುತಿರ್ದಪೆ (ಬಸಪು. ೧೮-೯) ; ಸತ್ಯವ ಕಾದು ಹದಿಮೂಱುಬುದ ನವದಿರಿ ಮುಂದೆ ಲೇಸಹುದು (ಕುಮ್ಮಾಉ. ೨-೦೫) ; ಮಾಪಧಿ ವಡೆದಜಾವಿಳಗೊಲಿದು (ಹರಿಸು. ೪೫) ; ನವೆವುತ್ತಿದೇನೆ ಭವರೋಗವ ನಿಲಿಸಯ್ಯಾ (ಶಂಕಕಂ. ೪೫) ; ತನ್ನ ಗಂಡನು ಎಷ್ಟು ರೀತಿಯಿಂದ ನವೆಯಬೇಕಾಗುತ್ತದಲ್ಲಾ ಎಂದು ಮನಸ್ಸು ಕರಗಿ ಕಂಬನಿ ಹರಿಯತೊಡಗಿದವು (ಗಂಮೂಯಿ. ೨೩೮). ೨. ನವೆದಂ ರೋಗಂಗಳಿಂದಂ (ರಕ್ಷಾಶ. ೨೪) ; ಕಡುಜರದಿಂ ಕರಂ ನವೆದು (ದಶಕು. ೮-೩೦೩) ; ದಾರಿದ್ರ್ಯದಿಂದಂ ನವೆದ ನಡುವನಾಶ್ರ್ಯಸಿದೆಂ . . . ಎಂದೈತರ್ಪ ಬಾಸೆಯಂ (ಭಾವಚಿಂ. ೩-೪೨). ೫. ಕ್ಷಯಿಸು ; ನಾಶವಾಗು : ಶ್ರವಣದಿಂ ಪಾತಕ ಕುಲಂಗಳು ನವೆದು ಪೋಪುವು (ಗಗಹಾ. ೦೭-೫೧).

**ನಮೆದು ನಾರುಗು** = ದೇಹದ ಸೆರೆಗಳಂ ಎದ್ದು ಕಾಣು ; ಸೊರಗಿ ಜರ್ಜರಿತವಾಗು,-ಶಿಥಿಲವಾಗು:ಉಣ್ಣದ ಮಾಯದಂಗ ನಿರ್ಜೀವಕಾವೆತ್ತು ದೆತ್ತ ವಿಫಲದ್ವಯದಾನವಿಧಾನಮೆತ್ತ ನಾನಾ ವಿಧದಿಂದುಮೇರ ನಮೆದು ನಾರುಗಿದಿರ್ಪರೊ ಜೈನದೀಕ್ಷಿತರ್ (ಶಾಂತಿಪು. ೮-೧೩೯) ; ಅವಿವರಿದು ದುಃಖದೊಳ್ ನಮೆದು ನಾರುಗಿದು ಪೊಗೆದು ಸತ್ತಲ್ಲಿ ನಿಷಾದನ ಮನೆಯೊಳ್ಪೆಣ್ಣಾಯಾಯ್ತು ನೆನೆದೊಡಾಶ್ಚರ್ಯಮಲ್ತೆ ಸಂಸ್ಕೃತಿಚಕ್ರಂ (ಸುಕುಮಾ. ೫-೧೯).

[ ದೇ.॥ ತುಳು. ನಮೆ; ತೆಲು. ನವಯು, ನವಿಯು]

**ನಮ್₂**, **ನವೆ₂** (ನಾ). ೧. ಕಾಟ ; ಪೀಡೆ ; ತೊಂದರೆ ; ಕಿರಂಕುಳ : ಕಣ್ಣನ್ ಚಿದಱಿತು ಕಟ್ಟಲೆ ಪಾರಯ್ ! ನಮೆಯಾ ಭ್ರಮೆಯಾ ಕಟ್ಟಲೆ ಪಾರಯ್ ! (ಅಕ್ಕಾ. ೨೯-೫೬೨). **ನವೆ₂** : ೨. ತಂರಿಕೆ ; ತಿನಿಸು ; ಕೆರೆತ: ತೆಕ್ಕು – ತಿರ್ಯಕ್ಕಂಡೂತಿಲೇಹನೇ (ನವೆಗೆ ನೆಕ್ಕು) (ಶಮಧಾ) ; ಆಗವನು ಲೈಲಾಕ್‌ಪೊದೆಯ ಹಿಂದೆ ಬಿದ್ದಿದ್ದುದರಿಂದ ತುರುಚಿ ಗಿಡ ಅವನ ಕೈ ಕಚ್ಚಿ ನವೆಹತ್ತಿಕೊಂಡಿತ್ತು (ಪುನರು. ೨೭೩). ೩. ಚಪಲ; ತವಕ: ಸುನಂದೆಯನ್ನು ಗಂಡ ಬಿಟ್ಟಿರುವನೆಂಬುದು ತಿಳಿದಿತ್ತು. ನಾಲಿಗೆಗೆ ನವೆ, ಮಾದಲಿಸಿ ಲೇವಡಿ ಮಾಡುವ ತವಕ (ಜಿಕಾಂಗಿ. ೨೦೦). 'ನವೆತ್ಕ' ಪಠಾ.

[ ದೇ. ॥ ತಮಿ. ನವ್ವೆ, ನವ್ವೆಪ್ಪು, ನವ್ವೆಚ್ಚಲ್ ; ತುಳು. ನವುಂಟು; ತೆಲು. ನವ ]

**ನಮೆಯಿಸು, ನವಸು, ನವೆಸು** (ಕ್ರಿ). ೧. ಕೊರಗಿಸು ; ಕಷ್ಟಕ್ಕೆ ಗುರಿಪಡಿಸು : ಪಲಕಾಲಂ ನಮೆಯಿಸಿದ ಪಗೆಯುಮಂ ನೆನೆದು (ವಡ್ಡಾ.ರಾ. ೨೧೧-೩೦); ಲೋಗರೊಡವೆಯುಂ ಝಳಿಯುಂಗೊಂಡನಿವನಂ ಪಲವು ದಿವಸಂ ನಮಯಿಸಿ ಕೊಲ್ಲಿಂ (ಸುಕುಮಾ. ೮-೩೬ ವ). ೨. ಸೊರಗಿಸು ; ಕೃಶಗೊಳಿಸು : ತಪದೊಳ್ ನಮೆದು ತಮ್ಮ ಶಿಷ್ಯರ್ಕಳುಮಂ ತಾಂ ಶಿರಿವ ಗೊರವಿ ಬೆನಕನುಮಂ ತಿರಿಯಿಪಳೆಂಬ ತೆಱದೆ ನೆಟ್ ನಮೆಯಿಸುವರ್ (ಶಾಂತಿಪು. ೮-೧೩೦) ; ಬಸಿಟ ಕುತ್ತದಂತೆ ನಮೆಯಿಸುವುದು (ಧರ್ಮಾಮೃ. ೪-೧೭೫). **ನವಸು :** ೩. ನಾಶವಾಗುವಂತೆ ಮಾಡು ; ಕೆಡಿಸು ; ಹಾಳುಮಾಡು : ವಿವಿಧ ರಕ್ಕಸರು . . . ಎನ್ನ ಕಾರ್ಯವಮಂ ನವಸಿದಲ್ಲದೆ ಮಾಣರೆಂತಿದಕುಪಾಯವೇನೆಂದು ಯೋಚನೆಗೈದನು (ವೆಂಕಾರಾ. ೫-೨-೪೩). 'ನವಸಿಗೆ' ಪರಾ. **ನವೆಸು :** ೧. ಈ ಶಿಶುವ ಶಿವಕುಮಾರಂ ತಿಳಿಯಲು ಮುಂದೆ ಮಜ್ಜನಭೋಜನಾದಿ ನಾನಾಕ್ರಿಯೆಗಳೊಳದಟ್ಟೊಳ್ ನರವೇಷ ಕಾಯುವಮಂ ನವೆಸಬೇಡೆಂದು ಕೈವೆಡೆಗೊಟ್ಟಳ್ (ಚಿಬಪು. ೫-೩೦) ; ಕುವಲಯ ಪ್ರಿಯಕಾಂತ ನಮ್ಮನೇಂ ಕಾರಣದಿ ನವೆಸುವ ಜಗನ್ಮೋಹನನೆ (ವೆಂಕಾರಾ. ೫-೪-೩೦). [ ನವೆ$_1$ + - ಇಸು$_3$ ]

**ನಮೇರು** (ನಾ). ೧. ಒಂದು ಬಗೆಯ ಮರ ಮತ್ತು ಅದರ ಹೂವು ; ಸುರಹೊನ್ನೆ; ಸುರಗಿ: ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತುಂ (ವಡ್ಡಾ.ರಾ. ೬೪-೭) ; ಸೂಡಿದ ಪಾರಿಜಾತದ ನಮೇರುವ ಬಾಸಿಗವೊಯ್ಯನೊಯ್ಯನಿರ್ಪೂಡಿದುದು (ಆದಿಪು. ೩-೩) ; ಎಱಗದೆ ಪೂತ ಚಂಪಕವನಕ್ಕೆ ನಮೇರುಮಹೀರುಹಕ್ಕೆ ಬಂಡೆಱಗುವ ಚಂಚರೀಕದವೊಲಾಕೆಯ ಕೇಕರಮನ್ಯರಾಜಕಕ್ಕೆಱಗದೆ ರಾಘವಂಗೆಱಗೆ (ಪಂರಾಮಾ. ೫-೭೦) ; ನಿನಗೆ ಶುಭವೆಂದ ವಂದಿಯು ಮನೆಯಂಗಣದೊಳಗೆ ಪಣ್ಣು ಪರ್ವಿದ ಮಂದಾರ ನಮೇರು ಪಾರಿಜಾತದ ಬನದೊಳ್ಸಿರಿ ಮೆಱೆವುದಲ್ತೆ ವನಕೇಳಿಗಳಂ (ಯಶೋಚ. ೩-೨) ; ನಮೇರುಸುಮನೋವರ್ಷಂ ಸ್ಫುಟಂ (ಎಕ. II (R), ೩೩೬-೩೦ : 12ನೆಯ ಶತ): ವನಪ್ರದೇಶದೊಳಗಿರ್ಪ ನಮೇರುವಿನಂತೆ (ಪುಷ್ಪಪು. ೯-೨೮) ; ಉದ್ಯಾನದಲ್ಲಿದ್ದ ನಮೇರುವೃಕ್ಷದಡಿಯನ್ನು ಸೇರಿದ (ಧೂಮುದು. ೬೦). ೨. ಒಂದು ಬಗೆಯ ಮರ; ರುದ್ರಾಕ್ಷಿ ಮರ. [ ಸಂ. ]

**ನಮೇರುಕುಜ** (ನಾ). = ನಮೇರು ೧ : ಪಂಕಜಮೇ ನಮೇರುಕುಜಮೇ . . . ಗಿಳಿಯೇ ಕಂಡಿರೆ ಪೇೞಿಮೆಮ್ಮ ಪತಿಯಂ (ಸುಕುಮಾ. ೧೨-೨೦). [ ನಮೇರು + ಕುಜ ]

**ನಮೇರುಕುಸುಮ** (ನಾ). ಸುರಗಿಹೂವು : ಸುರಹೊನ್ನೆಯ ಹೂವು : ಕಿವಿ ಸಾರ್ದು ಜಿನುಂಗೆ ಸೌರಭಕ್ಕಾಡುವ ತುಂಬಿಗಳಿಂ ವಿಜನಾಥನರ್ವರ್ಕೆ ಕನಲ್ದು ಮಣಿದೀಡಾಡುವವಾ ನಮೇರುಕುಸುಮಸ್ತಬಕಂಗಳ ಕರ್ಣಪೂರವಂ (ಪಂರಾಮಾ. ೩-೧೭) ; ಸುರಿದುದು ನಮೇರುಕುಸುಮದ ಸರಿ ಮೊಱಗಿದು ದಮರಪಟಹಂ (ಪುಷ್ಪಪು. ೧೪-೯೦) ; ತಾನೆಳಸದಿರ್ದೊಡಂ ಪರಮಾನಿನಿ ಮೇಲ್ವಾಯ್ದೊಡಳಿಪಿ ಮಂದರಶೈಲಂ ಸ್ಥಾನನಿವನೆನಿಸಿ ನಿಂದಳಿಮಾನಿಗೆ ಸುರಿಯದೆ ನಮೇರುಕುಸುಮಾಸಾರಂ (ಉಷಾರ. ೯೮).

[ ನಮೇರು + ಕುಸುಮ ]

**ನಮೇರುಭೂಜ** (ನಾ). = ನಮೇರು ೨ : ನಮೇರುಭೂಜಮಂ ತಳೆದ ಸುಮೇರುಮೇಖಳೆ (ಚಂದ್ರಪು. ೧೨-೫೮). [ ನಮೇರು + ಭೂಜ ]

**ನಮೋ** (ನಾ). ೧. ನಮಸ್ಕಾರ ಮಾಡುತ್ತೇನೆ ಎಂಬರ್ಥದ ಮಾತು.- ಶಬ್ದ : ಪರಮರೂಪನೇ ನಮೋ ಪರತತ್ತ್ವನೇ ನಮೋ ಆದಿಯಾರೂಢ ಭಯಂಕರನೇ ನಮೋ . . . ಎಂದು ಶ್ರುತಿಯು ಸಾರುತ್ತಿರಲು (ಬಸವ. ೫೩೭); ಹರಿ ನಮೋ ಜಯ ಭಕ್ತರಘಸಂಹರ ನಮೋ ಜಯಸಕಲ ಭುವನೇಶ್ವರ ನಮೋ ಜಯಕೃಷ್ಣ ಕೇಶವ ವಿಷ್ಣು ವಾಮನನೆ(ಕುಮ್ಮಾ.ಅ. ೨೩-೫೩); ಎಲ್ಲರಿಗಮಾಗ ನಮೋ-ಬಂಧುಗಳೆ, ಭಾಗಿಗಳೆ (ಮುಂಕುಳ. ೯೨೨). ೨. ಸಾಕು; ಸಾಕು, ಇನ್ನು ಇದರ ಗೊಡವೆ ಬೇಡ ಎಂಬರ್ಥದಲ್ಲಿ ಹೇಳುವ ಮಾತು : ಪೊಡವಿಯೊಡೆಯರಾದುದೊ ಮೋಹರವನಿದಱೊಡನೆ ಕಾದುವನಾವನಾತನೆ ಮೃಢನು ಶಿವಶಿವ ಕಾದಿ ಗೆಲಿದೆವು ಬಲಕೆ ನಮೊಯೆಂದ (ಕುಮ್ಮಾವಿ. ೬-೬) ; P ಇಲ್ಲಿ 'ನಮೊ' ಎಂಬ ಹ್ರಸ್ವರೂಪ ಛಂದಸ್ಸಿಗಾಗಿ ಮಾಡಿಕೊಂಡುದಂ; ಇದು 'ಲಂಚ' ವಾದರೆ ನಮೋ ಎನುತ್ತೇನೆ (ಗಾಳಿಪ. ೮೦).

ನಮೋನಮೋ (ದ್ವಿರುಕ್ತಿ) : ಕೂಡಲಸಂಗಮದೇವಾ ನಿಮ್ಮ ಸದ್ಭಕ್ತರಿಗೆ ನಮೋ ನಮೋ ಎಂಬೆನು (ಬಸವ. ೪೭೪) ; ನಾರಾಯಣ ತೇ ನಮೋ ನಮೋ ಭವ ನಾರದಸನ್ನುತ ನಮೋ ನಮೋ (ಪುರಂದ. ೩-೯೦ ಪಲ್ಲವಿ) ; ಎಷ್ಟು ದುಡಿದೆ ನೀನೆಷ್ಟು ಪಡೆದೆ ಹೇ ನಮೋ ನಮೋ ನಿನಗೆ (ಅರಳು. ೨೯೩-೩) ; ಅವನು ನಮೋ ನಮೋ ಎಂದು ದುಂಡತೆತ್ತು ದೈವ ಕೂಡುವನು (ಕನ್ನಜಾ. ೧೯). [ < ಪ್ರಾ. ಣಮೋ. / ಸಂ. ನಮಸ್ ]

**ನಮೋಸ್ತು** (ನಾ). ೧. ನಮಸ್ಕಾರ; ವಂದನೆ: ಅತ್ಯಂತ ರೂಪವತಿಯಪ್ಪ ಬಾಲಕಿಯು ಬರುತ್ತಿಪ್ಪುದಂ ಯತೀಂದ್ರಂ ಕಂಡು ನೋಡುತ್ತಿಪ್ಪನವಾಕೆ ಬಂದು ನಮೋಸ್ತು ಎಂದು ನಿಲಿಸಲು (ಕಗವಿ. ೯೭; ರಾಜಾವಳೀ ಕಥೆ). 'ನಮೋಸ್ತುಗೆಯ್' ಪರಾ. ೨. [ಜೈನ] ಸಂನ್ಯಾಸಿ; ಸವಣ : ಅರಸಿ ಮಂಚದಿಂದಿೞಿದು ಕೈಗಳಂ ಮುಗಿದು ನಮೋಸ್ತುದೇನೆಂದು ನುಡಿದೊಡೆ (ವಡ್ಡಾ.ರಾ. ೦೭೭-೨೨) ; ನಮೋಸ್ತುಗಳೆರ್ಪಂದದಿನಿರ್ದಂ(ನಮೋಸ್ತುಗಳೆಂದು ಸವಣರ್ಗೆ ಪೆಸರಾಯ್ತು) (ಶಮದ. ೭೫ ಪ್ರಯೋ) ; ಜಿನಮುಖಕಮಲದೊಳುದಿಸಿ ನಮೋಸ್ತುಗಳಿನಿದಪ್ಪ ನುಡಿಯೊಳು ಬಳೆದು ಜನನುತೆ ಮುಕ್ತಿಗೆ ಸಖಿಯಾದ ಶಾರದೆಗನುನಯದಿಂ ವಂದಿಸುವೆನು (ಶ್ರೀಪಾಲ. ೧-೧೧) ; ನೆಟ್ಟನೋರ್ವನೆ ಬೈಗಿನಿಂ ರವಿ ಪುಟ್ಟುವನ್ನೆಗ ಜಾನ ಜಪವಳವಟ್ಟು ನಿಲುವಾ ಪಾಲಕೀರ್ತಿ ನಮೋಸ್ತು[ ಗೆ ]ಱಗುವೆನು (ಸಾಳ್ವಭಾ. ೦-೨೨). P ಇದು ಸಂಸ್ಕೃತದಲ್ಲಿ ಒಂದು ಶಬ್ದವಲ್ಲ ವಾಕ್ಯ.

**ನಮೋಸ್ತುಗೆಯ್, ನಮೋಸ್ತುಗೈ** (ಕ್ರಿ). ನಮಸ್ಕಾರ ಮಾಡು ; ವಂದಿಸು: ತಾನೊಂದು ಬಟ್ಟೆಯೊಳ್ಪೋಗಿ ಯತೀಂದ್ರನಂ ಕಂಡು ನಮೋಸ್ತುಗೆಯ್ದು (ಪುಣ್ಯಾಸ್ರ ೩-೭೫ ವ) ; ವಿಭವದಿಂ ಗುಹೆಯನೆಯ್ದಿ ನಮೋಸ್ತುಗೆಯ್ದು ಬಾವಲಿಯಂ ಪ್ರಾರ್ಥಿಸೆ (ಕಗವಿ. ೯೨ ರಾಜಾವಳೀ ಕಥೆ). **ನಮೋಸ್ತುಗೈ :** ಶುದ್ಧ ಚಿತ್ತದೊಳು ನಮೋಸ್ತುಗೈದರೆ ಧರ್ಮವೃದ್ಧಿಯೆಂದುಱೆ ಹರಸಿದರು (ಭರತ. ೭೦-೦೦೬). [ ನಮೋಸ್ತು + ಕೆಯ್$_1$ ]

**ನಮೋಸ್ತುಗೈ** 'ನಮೋಸ್ತುಗೆಯ್' ನೋ.

**ನಮ್ಮಕ್‌ಹರಾಮ್** 'ನಮ್ಮಕ್‌ಹರಾಮ' ನೋ.

**ನಮ್ಮಕ್‌ಹರಾಮ, ನಮಕ್‌ಹರಾಮ್, ನಮ್ಮಕ್‌ಹರಾಮ್, ನಿಮಕ್‌ಹರಾಮ, ನಿಮ್ಮಕ್‌ಹರಾಮ** (ನಾ). ಉಪ್ಪಿಟ್ಟವನಿಗೆ ಎರಡು ಬಗೆಯುವವನು; ಉಂಡಮನೆಗೆ ಎರಡು ಬಗೆಯುವವನು; ಸ್ವಾಮಿದ್ರೋಹಿ ; ಕೃತಘ್ನ : ನಾನು ನಮ್ಮಕ್‌ಹರಾಮನೆನಿಸಿಕೊಳ್ಳದೆ, ಇದುವರೆಗೂ ಸ್ವಾಮಿಭಕ್ತಿಯಿಂದಲೇ ಚಾಕರಿಮಾಡಿಕೊಂಡು ಇರುತ್ತಿದ್ದೆನು (ಮಹಾಪಂ. I, ೨೩೨) ; ಬುದ್ಧೀ ಬುದ್ಧೀ ನಮ್ಮಕ್‌ಹರಾಮಾ ಬುದ್ಧಿ, ಸುಳ್ಳು ಹೇಳುತ್ತಾನೆ ನನ್ನೊಡೆಯ (ನಮ್ಮಳ್ಳಿ. ೪೬). **ನಮಕ್‌ಹರಾಮ್ :** (೩). **ನಮ್ಮಕ್‌ಹರಾಮ್ :** ಸರ್ಕಾರದ ಉಪ್ಪುತಿಂದು ಸರ್ಕಾರ ಬಯ್ಯುವವರಿಗೆ 'ನಮ್ಮಕ್‌ಹರಾಮ್' ಅಂತಾರೆ (ಪಂಜಿಕಂ. ೦೭೦). **ನಿಮಕ್‌ಹರಾಮು :** ನಮ್ಮ ಇಸ್ಲಾಂಮತವು ನಿಮಕ್‌ಹರಾಮರನ್ನು ಎಂದೂ ಹೆರುವುದಿಲ್ಲ ಮಹಾರಾಜ (ರಾಜಯೋ. ೧೩೩). **ನಿಮ್ಮಕ್‌ಹರಾಮ:** ಆ ನಿಮ್ಮಕ್‌ಹರಾಮ ಹೇಳಿದ್ದು (ರಾಜೇಂದ್ರ. ೪).

[ ← ಪಾರ. ನಮಕ್‌ಹರಾಮ್ ; ಹಿ. ನಮಕ್‌ಹರಾಮ್, ನಿಮಕ್‌ಹರಾಮ್ ; ಮರಾ. ನಿಮಕ್‌ಹರಾಮ್ ]

**ನಮ್ಮಕ್‌ಹಲಾಲ್,** ನಿಮ್ಮಕುಹಲಾಲು (ನಾ). ಉಪ್ಪಿಟ್ಟವನನ್ನು ನೆನೆಯುವವನು; ಸ್ವಾಮಿಭಕ್ತ; ಸ್ವಾಮಿನಿಷ್ಠ. ನಿಮ್ಮಕುಹಲಾಲು: ಅವರಿಗೆ ದೂರಮಾಡಿ, ಬದಲು ಅಮಲುದಾರರ ನಿಮ್ಮಕುಹಲಾಲಾಗಿ ಇರು ವಂಥವರ ನೋಡಿ ನಿಲ್ಲಿಸ್ಯಾರು ಎಂಬುದಾಗಿ ನಾವು ತಿಳಿದು ಇದ್ದೆವು (ರಾಜೇಂದ್ರ. ೧೦೪).

[ ← ಹಿಂ. ನಮಕ್‌ಹಲಾಲ್ ; ಮರಾ. ನಿಮಕ್‌ಹಲಾಲ್ ]

**ನಮ್ಮು** 'ನೆವಮ್ಮು₁'ನೋ.

**ನಮ್ಮೆ** (ನಾ). "ಹಬ್ಬ" (ಹುಲಿಹಾ. ಕೋಶ): ವಂಶಯವರೆಲ್ಲ ಸಾಲಾಗಿ ಕುಳಿತು ಪುತ್ತೂರಿ ನಮ್ಮೆಯ ಬಿರ್ದೂಟವನ್ನು ಮಾಡಿದರು (ಹುಲಿಹಾ. ೧೮೯).

[ ← ಕೊಡ. ನಮ್ಮೆ ]

**ನಮ್ಯ** (ಗು). "ಬಾಗುವ; ಬಳಂಕುವ; ನಮ್ಯ" (Litho. ಇಂಳಿನಿ).

[ ಸಂ. ]

**ನಮ್ಯತೆ** (ನಾ). ಬಾಗುವಿಕೆ; ಮಣಿಯುವಿಕೆ: ಇಂಗ್ಲಿಷ್ ಮೊದಲಾದ ಯುರೋಪಿಯ ಭಾಷೆಗಳು ಭಾಷಾಂತರಸಾಹಿತ್ಯವಿಲ್ಲದಿದ್ದರೆ ಇಂದಿನ ಪ್ರಬುದ್ಧಾವಸ್ಥೆಗೇರುತ್ತಿರಲಿಲ್ಲ, ಸುಲಭ ನಮ್ಯತೆಯನ್ನಾಗಲೀ ಹಿಗ್ಗು ಕುಗ್ಗುಗಳನ್ನಾಗಲೀ ಪಡೆಯುತ್ತಿರಲಿಲ್ಲ (ಸುವರ್ಣ. ೨೫೭). [ಸಂ. ನಮ್ಯತಾ]

**ನಮ್ರ** (ಗು). ೧. ಬಾಗಿದ; ಮಣಿದ. ೨. ಬಗ್ಗಿಸಿದ; ತಗ್ಗಿಸಿದ. 'ನಮ್ರಶಿರೋಧರೆ' ಪರಾ. ೩. ವಿಧೇಯ; ವಿನಯಶೀಲ; ವಿನಯಪೂರ್ವಕವಾದ: ಒಮ್ಮೆಯಾದರೂ ತಣಿಯಿರೆಂದು ನಮ್ರ ಬಿನ್ನಹ (ಕನ್ನಡಾ. ೯೨). 'ನಮ್ರವಚನ' ಪರಾ. ೪. (ನಾ). ನಮಸ್ಕರಿಸಿದುದು; ವಂದಿಸಿದುದು. ೫. ಬಾಗಿದುದು: "ನತಂ, ನಮ್ರಂ, ಬಂಧುರಂ–ಈ ೩ ಎಱಗಿರ್ದುದು" (ಹಲಾಯು. ೦೨೫–೭೫). ೬. [ನಾಟ್ಯ] ತೋಳಂಗಳಿಂದ ಮಾಡುವ ಹದಿನಾರು ಬಗೆಯ ಅಭಿನಯಗಳಲ್ಲಿ ಒಂದು; "ತೋಳನ್ನು ಸ್ವಲ್ಪ ಬಗ್ಗಿಸುವುದು" (ಅಾಸರಂ. ೨೬೦ ಗದ್ಯಾನುವಾದ): ಬಗೆಗೊಂಬೂರ್ಧ್ವದ ತಿರ್ಯಕ್ . . . ಕುಂಚಿತಮಂ ರಂತ [ರ]ನಮ್ರಾಖ್ಯ ಸರಳಮಾಂದೋಳಂಗಳ್ ತರುಣಿ ಪದಿನಾಱು ಭೇದದಿ ನೆರೆವುದು ಕೇಳ್ ಬಾಹುವಿಂತು ಭರತಾಗಮದೊಳ್ (ಅಾಸ್ಕರಂ. ೨–೦೨೨); ಊರ್ಧ್ವ, ಅಧೋಮುಖ, ತಿರ್ಯಕ್, ಅಪವಿದ್ಧ, ಪ್ರಸಾರಿತ, ಅಂಚಿತ, ಮಂಡಲಗತಿ, ಸ್ವಸ್ತಿಕ, ಉದ್ವೇಷ್ಟಿತ, ಪೃಷ್ಠಾನುಸಾರಿ, ಆವಿದ್ಧ, ಕುಂಚಿತ, ನಮ್ರ, ಸರಳ, ಆಂದೋಲಿತ, ಉತ್ಸಾರಿತ – ಈ ಹದಿನಾರು ತೋಳ ಭೇದಂಗಳ್ (ಅಾಸ್ಕರಂ. ೨–೦೨೨ವ). [ ಸಂ. ]

**ನಮ್ರತೆ** (ನಾ). ೧. ಹೆಮ್ಮೆಯಿಲ್ಲದಿರುವಿಕೆ; ಅಹಂಕಾರವಿಲ್ಲದಿರುವಿಕೆ; ವಿನಯಶೀಲತೆ: ಧರ್ಮಪುತ್ರನ ನಮ್ರತೆ ಭೀಮನಿಗೆ ಹಿಡಿಸಲಿಲ್ಲ (ವ್ಯಾಸಡಿ. ೯೮); ನೆಕ್ಕಿದೋವ್ ನಮ್ರತೆಯಿಂದ ಮಾರುತ್ತರವಿತ್ತನು (ಪುನರು. ೧೮೭). ೨. ನಮಸ್ಕಾರ ಮಾಡುವಿಕೆ; ನಮನ: ಜನಾಂಬಿಕಾನುಪಮಪದಾಬ್ಜಯುಗ್ಮದೊಳು ನಮ್ರತೆಯಂ ನಲವಿಂದೆ ಮಾಡಿದರ್ (ಮುಹಾನೀ. ೮–೪೩). [ಸಂ. ನಮ್ರತಾ ]

**ನಮ್ರತ್ವ** (ನಾ). ೧. ಬಾಗಿರುವಿಕೆ; ಮಣಿದಿರುವಿಕೆ. ೨. ಬಾಗುವುದು: "ಬಾಗು – ನಮ್ರತ್ವೇ" (ಶಮಂಧಾ). ೩. = ನಮ್ರತೆ. [ ಸಂ. ]

**ನಮ್ರಭಾವ** (ನಾ). = ನಮ್ರತೆ ೧: ಅವರ ನಮ್ರಭಾವ ಎಂಥವರ ಮನಸ್ಸನ್ನಾದರೂ ಸೆಳೆಯಬಲ್ಲುದು (ರೂಢಿ). [ ನಮ್ರ + ಭಾವ ]

**ನಮ್ರಮೂರ್ತಿ** (ನಾ). ವಿನಯಶೀಲನಾದವನು; ಅಹಂಕಾರವಿಲ್ಲದವನು; ಹೆಮ್ಮೆಯಿಲ್ಲದವನು: ಪಡೆವಳ್ಗಂಗೆ ರಥಾಂಗಹೇತಿ ನಡೆಯಲ್ವೇಟ್ ಬೇಗಮಿಾ ನಿನ್ನ ಪೆರ್ಮೆಡೆಯಂ ನೀನೆನೆ ನಮ್ರಮೂರ್ತಿ ಬೆಸವೆತ್ತಾ ಬೀರವಟ್ಟಕ್ಕೆ ಮೆಚ್ಚಿಪೆ . . . ಪಡೆಯಂ ಕೈಸನ್ನೆಗೆಯ್ದುದ್ಧತಂ ನಡೆಯಲ್ವೇಟ್ದುದೆ (ಶಾಂತಿಪು. ೦–೧೦೭). [ ನಮ್ರ + ಮೂರ್ತಿ ]

**ನಮ್ರವಚನ** (ನಾ). ವಿನಯದಿಂದ ಕೂಡಿದ ಮಾತು: ಅವಿತ ನಮ್ರವಚನಗಳಿಂದಲುಪಚರಿಸಲು (ಪಂಪಾರಾ. ೨–೮–೭). [ ನಮ್ರ + ವಚನ ]

**ನಮ್ರಶಿರೋಧರೆ** (ನಾ). ಕತ್ತನ್ನು ಬಾಗಿಸಿದವಳು; ಕೊರಳನ್ನು ತಗ್ಗಿಸಿದವಳು: ನಮ್ರಶಿರೋಧರೆ ಸೀತೆ ಲೋಕಸಂತ್ರಾಸಿಯ ರೂಪು ಪಾದನಖ ದರ್ಪಣದೊಳ್ ಪಲವಾಗಿ ತೋಱೆ ಕಂಡಾ ಸತಿ ಬೆರ್ಚಿ ಮುಂಚ್ಚಿದಳೆರಟ್ಟರದಿಂ ತರಲೇಕ್ಷಣಂಗಳಂ (ಪಂರಾಮಾ. ೯–೧೧೨).

[ ಸಂ. ನಮ್ರಶಿರೋಧರಾ ]

**ನಮ್ರಸ್ತ** (ನಾ). ವಿನೀತನಾದವನು; ವಿನಯಶೀಲ: ಹಸ್ತವೆರಡರಲಾತು ಊಳಿಗರ್ಹಸ್ತಕಿತ್ತರಿಯಾಣಗಳ ನಮ್ರಸ್ತರಾಗೆಲ್ಲಿದ್ದು ನಿಂದರ ನೋಡಿ ಭೂಭುಜನು (ಬಿಜ್ಜಪು. ೮೦–೨೬). [ ನಮ್ರ + –ಸ್ತ ]

**ನಯ₁** (ನಾ). ೧. ಮೃದುವಾಗಿರುವಿಕೆ; ನುಣುಪು; ಸ್ನಿಗ್ಧತೆ; ಕೋಮಲತೆ; ಸೌಕುಮಾರ್ಯ: ತುಂಬಿ ಕುರುಳ್ ತಳಿರ್ ತಳಂ . . . ಕೊನೆ ಸೆಳ್ಳುಗುರ್ಗಳ್ ಕುಡಿ ಕೋಳ್ ನಯಂ ನಯಂ ನೆಲೆ ನೆಲೆ ಭಂಗಿ ಭಂಗಿ ಪದವೆಣ್ ಬೆಳವಾರ್ಗೆಯ್ ಪೆಱತಲ್ಲಿದೆಂತೊ ಕೋಮಲತೆ ಪೇೞಿಮೆನ್ನನಿಯಳಂ ಮುಱಿಗೊಂಡುದೊ ಸೂಱಿಗೊಂಡುದೋ (ಪಂಪಭಾ. ೩–೧೨): ತ್ರಿದಶನದೀಸಲಿಲದ ಪೂರದಿನಂಗನೆ ನಯದೊಳೆಭಪಪೋತ್ತವಮಸೊಡರ್ಚೆದಳೆನೆ ಜಿನಜನನಿಗೆ ರಾಗದಿನಿಕ್ಕಿದಳೊರ್ವಳೆಮುರಿ ಚಮರೀರುಹಮಂ (ಶಾಂತಿಪು. ೯–೦೭೯); ಸುಂದಣಿಪ ತೋಳ್ಗಳಗ್ಗಳಿಪ ನಯಮಂ ಕಱಿಯೆ (ಇಹರ. ದೇ. ೩೨–೦೭); ತೈಲಲೇಪದ ನಯದ ಹೊಗರಿನ . . . ಕಾಳೋರಗನ ಕಂಡಿನಾಲಗೆಯವೋಲೆಸೆದುದಂಕುಶ ಭಟನ ಮುಷ್ಟಿಯಲಿ (ಕುಮ್ಮಾರ್ವ್ಯಾ. ೩–೫೭); ನಯವಿರಬೇಕು ನುಡಿಗಡಣದಲ್ಲಿ (ಅಭಂಡೀ. ೧೩೧–೦೦೦). ೨. ಮೆಲುಂಪು; ಸೌಮ್ಯತೆ: ಮೇಲುದಱ ಸೆಱುಗಿನಿಂ ನಯದೆ ಬೀಸಿದನಾ ಮುನಿಜೇಂದ್ರಚಂದ್ರಪ್ರಮಂ (ಕಾದಂಪೂ. ೯೨೯); ನಯದಿಂದೆ ಕೊಗ್ಗಿ ಪಱಿಗೆಣ್ಣೆಯನುಪ್ಪಂ ಬೆರಸು ಕರ್ಣಕೂಲವ್ಯಥೆಗೆ . . . ಮಾದವಸಲೆಗಳ ದಳದೊಳೊಂದು ಕಿವಿಯೊಳ್ (ಲೋಕೋಪ. ೯–೬೫); ನಯದಿಂ ಕೋಕಿಳನಾದ ನಿಮ್ಮರಸರಿಂತೇಕಾರಣಂ ಬಂದರ್ (ಅನಂಪು. ೧೧–೪೧). ೩. ಸೊಗಸು; ಅಂದ; ಕಳೆ; ಮನೋಜ್ಞತೆ: ನಯದಿಂ ರಾಜೇಂದ್ರುಚಂದ್ರುಂಗಭಿಷವ ವಿಧಿಯಂ ಮಾಡುಮೆಂ ಚಂದ್ರಿಕಾವಾರಿಯಿನೆಂಬಂತೆತ್ತಲುಂ ತಣ್ಪೆಳಗಿನ ಬಳಗಂ ಸಿಂಪಿಸಲ್ . . .ಉದಯಿಸಿತುದಯಾದ್ರೀಂದ್ರದೊಳ್ ಚಂದ್ರಬಿಂಬಂ (ಕಾದಂಬ. ೬೭೬); ನಯಮಂ ಬೀಱುವ ಚಿತ್ರಪತ್ರ ನಿಧಿಂಯೂಟಸ್ತಂಭ ಭಿತ್ತಿಚ್ಛದಾಶ್ರಯದಾಲಕ್ಷಣಮಾನಮೇಯ ಗುಣರೇಖಾಶುದ್ಧಿ ಸರ್ವಾರ್ಥ ಸಿದ್ಧಿಯ ತದ್ರುಕ್ಮವಿಮಾನವಲ್ಲಿಯುಮಿಲ್ಲೆಂಬೀ ಜಸಕ್ಕಾದುದಾಶ್ರಯಂ (ಚಂದ್ರಪು. ೧೫–೯೩): ನಯದ ಹರಿನೀಳಕುಟ್ಟಿಮಮಯದ ವಿಮಾನಂಗಳಲ್ಲಿ (ಶಾಂತೀಶ್ವ. ೧೩–೧೧೭): ನಯವುಳವಟ್ಟ ಜವ್ವನದ ರೂಢಿಯ ಗಾಡಿಯ ಪೆಂಡಿರೆಲ್ಲಮಲ್ಲಿಯೆ . . . ಪೆಸರಾದ ಸಮಸ್ತವಸ್ತುವಲ್ಲಿಯೆ ಪೆಱಕೊಂದು ಪಟ್ಟಣದೊಳಿಲ್ಲೆನೆ ಪಟ್ಟಣಮೊಪ್ಪಿ ತೋಱುಗುಂ (ಸೂಕ್ತಿಸು. ೪–೧೧೩). ೪. ಪ್ರೀತಿ; ಅನುರಾಗ: ಪುತ್ರವರಾರ್ಥಿಗಳಾಗಿ ತನ್ನ ಕಟ್ಟದಿರೊಳೆ ನಿಂದರಂ ನಯದೆ ನೋಡೆ ಮುನೀಂದ್ರನ ದಿವ್ಯದೃಷ್ಟಿಮಂತ್ರದೊಳೆ ಪೊದಳ್ದುದಾ ಸತಿಯರಿರ್ವರೊಳಂ ನವಗರ್ಭವಿಭ್ರಮಂ (ಪಂಪಭಾ. ೧–೮೫): ನಯದಿಂ ಮುನಿಪತಿ ಜಿನದೀಕ್ಷೆಯನಂಬರಚರತನೂಭವಂಗನುನಯದಿಂ ದಯೆಗೆಯ್ಯೆ (ಧರ್ಮಾಮೃ. ೮–೦೫೩). ೫. ನವಿರು; ನಾಜೂಕು; ಸೂಕ್ಷ್ಮತೆ; ಕಲಾತ್ಮಕತೆ: ನಯದಿಂದಂ ಬರೆದಂತೆಯುಂ ಕಡೆದು ತಂದಿಟ್ಟಂತೆಯುಂ . . . ಇರ್ಕುಂ ಜಿನಬಾಲರೂಪಮೆರ್ದೆಯೊಳ್ ಮುಂ ಕಂಡಗಲ್ದಿರ್ದರಾ (ಶಾಂತಿಪು. ೧೧–೦೫); ನಯದಿಂ ಪಂಪನೊಱಿಲ್ದು ಪಿರ್ರಿಸಿದ ಪೊನ್ನುಂ ಪ್ರೀತಿಯಿಂ ಪೇಟ್ದ . . .ತತ್ಕಾವ್ಯತ್ರಯಕ್ಕಂ ಜಗತ್ರಯಮುಮಂ ಮುಂ ಬೆಲೆಯಾಗಿ ಪೋಯ್ತೆನೆ (ಚಂದ್ರಪು. ೧–೭೭). ೬. [ಕಾವ್ಯಮಿಾ] ಕಾವ್ಯದ

ಹತ್ತು ಗುಣಗಳಲ್ಲಿ ಒಂದು; ಸೌಕುಮಾರ್ಯ; ಮೃದುವರ್ಣಗಳಿಂದ ಕೂಡಿರುವಿಕೆ: ಇನಿತುಮಾರ್ದವ ಮತ್ಕೃತಿಯೊಳೀ ಧರೆ ಬಣ್ಣಿಸೆ ಸಂದ ಶಂಖವರ್ಮನ ಬಗೆ ಶಾಂತಿವರ್ಮನ ನಯಂ (ಜಗವಿ. ೧-೧೧). ೭. [ಸಂಗೀತ] ಮಾರ್ದವ; ☞ ೧. ವೀಣೆಯ ತಂತಿಗೆ ಅನ್ವಯಿಸಿದಾಗ: ವೀಣೆಯ ಕಕುಭ (ಇಂದಿನ 'ಕುದುರೆ', 'ಬ್ರಿಡ್ಜ್')ದ ಮೇಲೆ ಲಾಕ್ಷಾರಸದಿಂದ ಅಂಟಿಸಿದ ಲೋಹದ ಪತ್ರಿಕಾ. ಇಂದಿನ 'ಶೇಕು' ಎಂಬ ಭಾಗ. ವೀಣಾತಂತಿಯಲ್ಲಿ ನಾದಸಮೃದ್ಧಿಯನ್ನೂ ಸ್ವರಕ್ಕೆ ನುಣುಪನ್ನೂ ಜೀವವನ್ನೂ ಕೊಡುವ ಜೀವಾ (ಇಂದಿನ 'ಜೀವಾಳ') ಎಂಬ ರೇಷ್ಮೆ, ಹತ್ತಿ ಅಥವಾ ಬಿದಿರಿನ ನೂಲು. ಇದಕ್ಕೂ ತಂತಿಗೂ ಸುಶ್ಲಿಷ್ಟವಾಗಿರುತ್ತದೆ. ೨. ಸ್ವರಕ್ಕೆ ಅನ್ವಯಿಸಿದಾಗ: ಸ್ವರದಲ್ಲಿ ಸ್ವನಿಷ್ಠವಾಗಿರುವ ನಾದಸಮೃದ್ಧಿಗೂ ರಂಜನೆಗೂ ಆಸ್ಪದವಾಗಿರುವ ಆವರ್ತಕಧ್ವನಿಗಳ ವ್ಯೂಹದಲ್ಲಿ ಪರಸ್ಪರ ಸಂಘರ್ಷವೂ ವಿರೋಧವೂ ಇಲ್ಲದಿರುವುದು; ಇದರಿಂದಾಗಿ ಸ್ವರವು ಒರಟಾಗಿರದೆ ನುಣುಪಾಗಿರುತ್ತದೆ. ೩. ಗಾನವ್ಯವಹಾರಕ್ಕೆ ಅನ್ವಯಿಸಿದಾಗ: ಒಂದು ಸ್ವರಶ್ರೇಣಿಯಲ್ಲಿರುವ ರಾಗಭಾವವನ್ನು ಮುಂದಿನ ಸ್ವರಶ್ರೇಣಿಯಲ್ಲಿರುವ ರಾಗಭಾವಕ್ಕೆ ಒಯ್ಯುವ ಅಗ್ರಸ್ವರ. ಹೀಗೆ ನಯಶಬ್ದವು ಸಂಗೀತ ವರ್ಣನಾಸಂದರ್ಭಗಳಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಪ್ರಯುಕ್ತವಾಗಿರುವುದು ಕಂಡುಬರುತ್ತದೆ: ಪದ ಕೊರಲಿಂಪನಪ್ಪುಕೆಯ [ಕೊಂಕು ನ]ಯಂ ಗಮಕಂಗಳಿಂ ಪೊದಕೊಂಡಳಿಟಿದಿಕ್ಕಿದಂತೆ ಸುತಿಯೊಳ್ ಸಮಮಾಗಿರೆ ಜಾಣನಾಂತು ಮೆಚ್ಚಿದ ತೆಱದಾಸೆವಟ್ಟಸದೆಶ್ಲಿನವೋಲ್ ದೊರೆವೆತ್ತು ಧೂಱಿದಾಱಿದ ದನಿ ಮುಟ್ಟೆ ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್ (ಪಂಪಭಾ. ೭-೮೮); "ನುಣುಪು" (ಪಂಪದೀ. ೨೬೬); ಘನ, ನಯ ಮತ್ತು ದೇಶ್ಯಗಳನ್ನು ಹಾಡುವುದರಲ್ಲಿ ಅವರು ಚೆನ್ನಾಗಿ ನುರಿತವರು (ಸಂಗೀತ. ೪೩).

**ನಯನಾಜೂಕು, ನಯನಾಜೋಕು** = ಕೋಮಲತೆ; ಸೂಕ್ಷ್ಮತೆ: ಸೂಕ್ಷ್ಮರೇಖಾವಿನ್ಯಾಸಗಳೊಂದಿಗೆ ಜಯಪುರ ಕೃತಿಗಳು ನಯನಾಜೂಕಿನ ಕೃತಿಗಳಾಗಿದ್ದವು (ಭಾರದ. ೫೩೦): ಅವಳು ಸ್ವಲ್ಪ ನಯ — ನಾಜೋಕು (ಫ್ಯಾಷನ್)ಗಳಿಂದ ಇರಲೆಂದು ನನ್ನ ಆಸೆ (ಗಂಸಮ. ೨೨). **ನಯ ಮಾಡು** = ನುಣುಪುಗೊಳಿಸು: ಅವರು ತೋಪರ ಹಾಕಿ ಮರಗಳನ್ನು ನಯ ಮಾಡಿದರು (ಗಲಿಪ್ರ. ೯೯). **ನಯವಾಗು** = ೧. ನುಣ್ಣಗಾಗು; ಮೆತ್ತಗಾಗು: ಹಿಟ್ಟು ಬಹಳ ನಯವಾಗಬೇಕೆಂದಿಲ್ಲ (ಅಡುಸಾ. ೯೬). ೨. ಕಲಾತ್ಮಕತೆಯಿಂದ ಕೂಡಿರು; ನಾಜೂಕಾಗಿರು: ಹೆಣಿಗೆ ಮತ್ತು ಕಸೂತಿ ಕೆಲಸಗಳನ್ನು ನಯವಾಗಿ ಮಾಡಿಕೊಡುತ್ತಾಳೆ (ಮುಹಾಕ್ಕ. ೮೬).

[ ದೇ.॥ ತಮಿ. ಮಲ. ತುಳು. ತೆಲು. ನಯ ]

**ನಯ್ಯ₂** (ನಾ). ೧. ಒಯ್ಯುವಿಕೆ; ತಲುಪಿಸುವಿಕೆ. ೨. ನಿರ್ವಹಿಸುವಿಕೆ. ೩. ನಡವಳಿಕೆ; ವರ್ತನೆ; ಗುಣ. ೪. ವಿವೇಕಯುತವಾದ ನಡವಳಿಕೆ; ಯೋಗ್ಯವಾದ ವರ್ತನೆ; ವಿವೇಕ; ಸದ್ಗುಣ; ದೂರದೃಷ್ಟಿ: ಜಿನ ನಿನ್ನ ಮೂರ್ತಿ ಜಿನ ನಿನ್ನ ನಯಂ ಜಿನ ನಿನ್ನ ಸಮತೆ . . . ಜಿನ ನಿನ್ನ ಕಾಣ್ಕೆ ವರ್ಣಿಸಲಳವೇ (ಪುಷ್ಪಪು. ೧೧-೫೭); ಕಲಿತರ್ಕ್ಕೆ ಬಿಲ್ಬಿದ್ದೆಯಂ, ವೇದಮಂ ನೀತಿ ನಯ ವಿನಯ ನಿಯತಿಯಂ (ಶ್ರೀರಾಮಾ. ೨೫-೬೭೦); ಸತ್ಯಭಕ್ತಿಯ ಸೇವೆಗೆಯ್ದುಮಂ ಭರತಂ ನಿತ್ಯ ಜೀವನದಿ ನೀವಾ ನಯವನನುಸರಿಸೊ (ಮಂಕುಶ. ೭೦೦). ೫. ಒಳ್ಳೆಯತನ; ವಿನಯ; ಸೌಜನ್ಯ; ಸಭ್ಯತೆ: ನಯದಿಂದಮಾ ಸರೋರುಹನಯನೆಯನಳವಡಿಸಲಾರ್ತನಿಲ್ಲಳವಡಿಪೆಂ ಭಯದಿಂದಂ (ಪಂರಾಮಾ. ೯-೧೫೭); ನಯದಿಂ ಗಂಧರ್ವವಿದ್ಯಾಪ್ರಮುಖನತಿನುತಂ ಬಂದು (ನೇಮಿಪು. ೩-೧೭೮); ನಯದಿಂದೆಳ್ದು ನತಾಸ್ಯನಾಗಿ (ಗಿರಿಕ. ೧೧-೭೮); ನಯದಿಂ ನಿನ್ನೊಳೊಡಂಬಡಂ ಪಡೆಯದಿಂದೌತ್ಸುಕ್ಯದಿಂ ತಂದ ಸಲ್ಗೆಯು ನೀಂ ಮುನ್ನಿಸು (ಶಬರಪು. ೧೭-೮೮): ನಯವಿಲ್ಲದರೊಳ್ ನಯಮಂ ಬಯಸಲ್ಕೇಂ ಬಪ್ಪುದುಂಟೆ (ನಳಚಂ. ೨೦೩): ನಯವಿದ್ದಲ್ಲಿ ಭಯವಿಲ್ಲ (ಗಾದೆ). ೬. ಭಕ್ತಿ; ಪೂಜ್ಯಭಾವ: ನಯದಿಂ ಜಿನೇಂದ್ರಚರಣದ್ವಯಮಂ ಚಿತ್ತದೊಳೆ ನಿಲಿಸಿ (ಧರ್ಮಾಮೃ. ೩-೪೫). ೭. ಔಚಿತ್ಯ; ನ್ಯಾಯ; ನೀತಿ: ನಯಮಂ ನಂಬುವೊಡೆನ್ನ ಪೇಟ್ದ ಸಕಿಯಂ ಕೈಕೊಂಡು (ಪಂಪಭಾ. ೧-೬೬): ಸನ್ಮಾರ್ಗಕ್ಕೆ ಪುಯ್ಯಾರದು ನಯಮಂ ಸಾರದನಾವ ಕಾಳೆಗದೊಳಂ ಕಣ್ಣಾರದು ನಾರದಂ (ಪಂರಾಮಾ. ೩-೧೮); ನಯಮಿದು ಶೂರಂ ಭೇದೇನ ಯೋಜಯೇತ್ತೆಂಬ ನೀತಿಯಿದನಱಿದು ನಯಜ್ಞನಯವಿದ್ವರ್ಜಿತ ನಮ್ಮೊಳ್ ಪ್ರಯೋಗಿಸಲ್ ಬಲ್ಲ ಸಚಿವನಾವಂ ದೇವಾ (ಮುಹಾನೀ. ೧೨-೧೬೨). ೮. ಸರಿಯಾದ ರೀತಿ; ಯೋಗ್ಯವಾದ ವಿಧಾನ. ೯. ರಾಜನೀತಿ; ರಾಜ್ಯಭಾರಕ್ರಮ; ಮಂತ್ರಸಿದ್ಧತನ: ಇರ್ಪ್ಪದಲ್ತು ನಯಮಿನ್ನೀ ಪೊಟ್ಟೆ ಪೊಟ್ಟಾಗೆ ನೀನೊಡಗೊಂಡುಯ್ವುದು ಕನ್ನೆಯಂ ತಡೆಯದಿರ್ (ಪಂಪಭಾ. ೫-೨೦); ನಯಮಂ ಪೇಟ್ದಾಪೆ ಸಂಧಿಮಾಡಿಱಿಯದಿರ್ಕೆತೇಯರೊಳ್ (ಗದಾಯು. ೪-೬೫): ಕೀರ್ತಿ ದಿಗ್ವಳಯಾಂತಂ ನುಡಿ ಮೇರುಶೈಲಲಿಖಿತಂ ಧರ್ಮ್ಮಂ ಜಗನ್ಮುದ್ರೆ ಭೂಷಳಮುದ್ಯಂ ಚರಿತಂ ನಯಂ ಜನನುತಂ ಶ್ರೀಸಿಂಹಭೂಪಾಳನಾ (ಎಕ. VIII, ಸೊರಬ. ೧೮೪-೧೮; 1033); ಅಮಳಗುಣನಮಳಕುಳನತ್ಯಮಳಚರಿತ್ರೈಕನಿಳಯನಮಳನಯಪ್ರಕ್ರಮನಮಳಯಶೋರೋಚಿಸ್ಸಮಾವೃತಾಶಾಳಿಯೆನಿಸಿದಂ ರೇಚರಸಂ (ಎಕ. VII, ಶಿಕಾರಿ. ೧೨೩-೩೭; 1159); "ನೀತಿ" (ಶಾಶಬ್ದಂ. ೨೭೯ ಕೋಶ); ನಯದಿಂ ಜನಕ್ಕೆ ಪುಣ್ಯೋದಯದಿಂ ಪಾರ್ಥಿವಜನಕ್ಕೆ . . . ದಯೆಮಾಡುವೆ ನೀನೆ ದಲ್ ಚಮತ್ಕೃತಿಯೊದವಂ (ಚಂದ್ರಪ್ರ. ೯-೩೪). ೧೦. ಯೋಜನೆ; ಉಪಾಯ; ಹಂಚಿಕೆ; ☞ ಸಾಮ, ದಾನ, ಭೇದ ಮತ್ತು ದಂಡ ಎಂಬ ನಾಲ್ಕು ಬಗೆಯ ಚತುರೋಪಾಯಗಳು: ಸಾಮಭೇದಮುಮಪ್ರದಾನದಂಡಮೆಂಬ ನಾಲ್ಕುಂ ನಯಂಗಳನಱಿದು (ಬಂಹರಿ. ೭-೦ ವ). 'ನಯವಿವೇಕ' ಪರಾ. ೧೧. ಶಾಸ್ತ್ರ; ತತ್ತ್ವ; ಸೂತ್ರ; ನಿಯಮ; ಸಿದ್ಧಾಂತ: ಪೂರ್ವಮೀಮಾಂಸೆಯು ಸಂಶಯಗ್ರಸ್ತವಾದ ಅಥವಾ ಅನೇಕಾರ್ಥಗರ್ಭಿತವಾದ ವೇದವಾಕ್ಯಗಳನ್ನು ಸರಿಯಾಗಿ ಅರ್ಥಮಾಡುವುದಕ್ಕೆ ಉಪಯುಕ್ತವಾದ ರೀತಿ ನಯಗಳನ್ನು ಉದಾಹರಿಸುತ್ತ, ಧರ್ಮ, ಸ್ವರೂಪವಿವೇಚನೆಯಲ್ಲಿ ತೊಡಗಿರುವ ದರ್ಶನವಾಗಿ ಏರ್ಪಟ್ಟಿದೆ (ತತ್ತ್ವಶಾ. ೨೮೫). ೧೨. ತಿದ್ದುವಿಕೆ. 'ನಯನಿಪುಣ' ಪರಾ. ೧೩. [ನಾಟ್ಯ] ಲಯಬದ್ಧವಾದ ಗತಿ; ಭಾವಸೂಚಕವಾದ ಗಮನ: "ಅನುಕರಣೆ ನಯಮೆನಿಕು" (ಮಂಗರಾ. ೨೪-೬): ರಸಭಾವಾಭಿನಯಂಗಳ್ ಪೊಸಪೆ . . . ನಯಂ ಪೊಸವೆ ಕರಣಂಗಳುಂ ನಿಪ್ಪೊಸವನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಆದಿಪು. ೯-೨೫); ನಯಗತಿ ಹಸ್ತಂಗಳ ಚಾಲಯಮತಿಕಯಿಪಂಗಹಾರದುಲ್ಲಾಸಂ ದೃಷ್ಟಿಯ ಭೇದಂ ಕರಣಂಗಳ ನಯಂ ನಯಂ ಬಡೆಯೆ ನರ್ತಿಪಮರಿಯರಿಂದಂ (ಮುಹಾನೀ. ೧೫-೫೯). ೧೪. [ಜೈನ] (ತಿಳಿಯುವವನ ಅಭಿಪ್ರಾಯಕ್ಕೆ ವಿಷಯವಾದ) ವಸ್ತುವಿನ ಏಕದೇಶ ಜ್ಞಾನ; ☞ ಜೈನಸಿದ್ಧಾಂತದಲ್ಲಿ ಸಪ್ತಭಂಗಿಯನ್ನು ಅಂಗೀಕರಿಸಿರುವುದರಿಂದ ಯಾವುದರಲ್ಲೂ ನಿರ್ಣಯವಿಲ್ಲದಿರುವುದಾಗಿ ಲೋಕವ್ಯವಹಾರವು ನಡೆಯುವುದು ಕಷ್ಟವಾಗುತ್ತದೆ. ಹೀಗಾಗಿ, ನಯವನ್ನು ಅಂಗೀಕರಿಸುತ್ತಾರೆ. ಹೇಗೆಂದರೆ ಉದಾಹರಣೆಗೆ ಗಡಿಗೆ ಇದೆಯೆ ಎಂದು ಕೇಳಿದರೆ ಗಡಿಗೆಯು ಇರುವುದೂ ಸಂಭವಿಸಬಹುದು ಎಂದು ಜೈನಸಿದ್ಧಾಂತದಂತೆ ಹೇಳಬೇಕು. ಇಲ್ಲಿ ನಿರ್ಣಯವಾಗುವುದಿಲ್ಲ. ಆದರೆ ಇದು ಪ್ರಮಾಣವಾಗಿದೆ. ಇದರಲ್ಲಿ ಗಡಿಗೆಯಿರುವುದು ಎಂಬ ಒಂದು ಅಂಶವನ್ನು (ಇರಬಹುದು ಎಂಬುದನ್ನು ಬಿಟ್ಟು) ಗ್ರಹಿಸಿದರೆ ಆಗ ಗಡಿಗೆ ಇದೆಯೆಂದು ಅರ್ಥವಾಗುತ್ತದೆ.

ಹೀಗೆ ಒಂದಂಶವನ್ನು ಗ್ರಹಿಸುವುದುಂ ನಯಂ. ಒಟ್ಟಿನಲ್ಲಿ ಸ್ಯಾದ್ವಾದದಲ್ಲಿ ಪ್ರಮಾಣವು ಸಂಶಯದಂತಿದ್ದರೂ ವ್ಯವಹಾರಕ್ಕೆ ನಯವು ಬೇಕೇಬೇಕು. ಆದುದರಿಂದಲೇ ಜೈನಸಿದ್ಧಾಂತವು ಸಂಶಯ ಸಿದ್ಧಾಂತವಲ್ಲ. ಒಂದಂಶವನ್ನು ಪರಿಗ್ರಹಿಸಿ ಲೋಕವ್ಯವಹಾರವನ್ನು ನಡೆಸಬಹುದು. " ನಯ- ೨ : ದ್ರವ್ಯಾರ್ಥಿಕ, ಪರ್ಯಾಯಾರ್ಥಿಕ (ತತ್ತ್ವಪ್ರ. ೧-೬ ವ್ಯಾ-೧೧); ನಯ-೪ : ಭಿನ್ನವೇದನಯ, ಅಚ್ಛಿನ್ನಭೇದ–, ತ್ರಿಕ–, ಚತುರ್–(ಜೈಧ. ೧೫೭). ನಯ-೭ : ನೈಗಮ, ಸಂಗ್ರಹ, ವ್ಯವಹಾರ, ಋಜುಸೂತ್ರ, ಶಬ್ದ, ಸಮಭಿರೂಢ, ಏವಂಭೂತ (ರತ್ನಕ. ೭೨೮) ; ನಯ-೯ : ನಯ–೨ + ನಯ–೭. ಅಂತರ್ಭೇದಗಳು (i) ದ್ರವ್ಯಾರ್ಥಿಕನಯದಲ್ಲಿ–ಕರ್ಮೋಪಾಧಿ ನಿರಪೇಕ್ಷ, ಸತ್ತಾಗ್ರಾಹಕ, ಭೇದವಿಕಲ್ಪನಿರಪೇಕ್ಷ ಕರ್ಮೋಪಾಧಿ ಸಾಪೇಕ್ಷ, ಉತ್ಪಾದವ್ಯಯಸಾಪೇಕ್ಷ, ಭೇದಕಲ್ಪನಾಸಾಪೇಕ್ಷ, ಅನ್ವಯ, ಸ್ವದ್ರವ್ಯಾದಿ ಗ್ರಾಹಕ, ಪರದ್ರವ್ಯಾದಿ ಗ್ರಾಹಕ, ಪರಮ ಭಾವಗ್ರಾಹಕ (೧೦), (ii) ಪರ್ಯಾಯಾರ್ಥಿಕನಯದಲ್ಲಿ – ಅನಾದಿ ನಿತ್ಯ, ಸಾದಿ ನಿತ್ಯ, ಅನಿತ್ಯಶುದ್ಧ, ಅನಿತ್ಯ ಅಶುದ್ಧ, ಅನಿತ್ಯ–ಶುದ್ಧ, ವಿಭಾವ–ಅನಿತ್ಯ–ಅಶುದ್ಧ (೬), (iii) ನೈಗಮನಯದಲ್ಲಿ–ಭೂತ, ವರ್ತಮಾನ, ಭಾವಿ, (iv) ಸಂಗ್ರಹನಯದಲ್ಲಿ–ಶುದ್ಧ, ಅಶುದ್ಧ (v) ವ್ಯವಹಾರನಯದಲ್ಲಿ–ಶುದ್ಧಾರ್ಥಭೇದಕ, ಅಶುದ್ಧಾರ್ಥ ಭೇದಕ (vi) ಋಜುಸೂತ್ರನಯದಲ್ಲಿ–ಸೂಕ್ಷ್ಮ, ಸ್ಥೂಲ (ದೇವ ಸೇನಕೃತ ನಯಚಕ್ರ–ಕನ್ನಡ ರತ್ನಕರಂಡಕ, ೭೨೮)." (ಶ್ರೀವತ್ಸ. ೨೨೪) : ಪ್ರಮಾಣನಯನಿಕ್ಷೇಪಾನುಯೋಗಸದಾದಿಗಳಿಂ ನಿಶ್ಚಯಿಸಿದ ಸಪ್ತತತ್ತ್ವಂಗಳೊಳಗೆ ಚೇತನಾಲಕ್ಷಣಮಪ್ಪುದು ಜೀವತತ್ತ್ವಮಾಜೀವ ತತ್ತ್ವಮುಂ ಸಂಸಾರಿಮುಕ್ತಭೇದದಿಂ ದ್ವಿವಿಧಮಕ್ಕುಂ (ಆದಿಪು. ೧೦–೬೩ ವ); ನಯನಿಕ್ಷೇಪಪ್ರಮಾಣಂಗಳೊಳಿ ಪಡೆದನ್ನೈಕಾಂತಸಿದ್ಧಿಪ್ರತಿಜ್ಞಾಜಯಮಂ (ಚಂದ್ರಪು. ೧–೪) ; ಅಧಿಗಮೋಪಾಯಮಂ ನ್ಯಾಸಮೆಂಬುದು ಆದನಱಿವಭಿ ಪ್ರಾಯಮಂ ನಯಮೆಂಬುದು (ತಸೂವ್ಯ. ೩೦); ದ್ರವ್ಯಾರ್ಥಿಕಮುಂ ಪರ್ಯಾ ಯಾರ್ಥಿಕಮುಂ ನೈಗಮಮುಂ ಸಂಗ್ರಹಮುಂ ವ್ಯವಹಾರಮುಂ ಋಜು ಸೂತ್ರಮುಂ ಶಬ್ದಮುಂ ಸಮಭಿರೂಢಮುಂ ಏವಂ ಭೂತನಯಮುಮೆಂದು ನಯಮೊಂಭತ್ತುಭೇದಮಕ್ಕುಂ (ಶಸಾರ. ೮೩) ; ಸಮಗ್ರ ಪದಾರ್ಥವನ್ನು ತಿಳಿಯುವುದು ಪ್ರಮಾಣ; ಏಕದೇಶವನ್ನು ತಿಳಿಯುವುದು ನಯ ಎಂದು ಪರಿಭಾಷೆ (ಹಿಂದಶಾ. ೭೬) ; ಪ್ರಮಾತೃವಿನ ಅಭಿಪ್ರಾಯಕ್ಕೆ ವಿಷಯವಾದ ಯಾವುದೊಂದೇ ಭಾವವನ್ನು ಅನುಲಕ್ಷಿಸಿ ವಿಷಯವನ್ನು ನಿರೂಪಿಸುವುದು ನಯವೆನಿಸುವುದು (ಜೈನಧ. IX. ಉಪೋದ್ಘಾತ ) ; ವಸ್ತುವಿನ ಅಂಶವನ್ನು ಗ್ರಹಿಸುವ ಜ್ಞಾತೃವಿನ ಅಭಿಪ್ರಾಯವು ನಯವು. ವಸ್ತುವನ್ನು ನಾನಾ ಸ್ವಭಾವಗಳಿಂದ ವ್ಯಾವರ್ತನ ಮಾಡಿ ಒಂದು ಸ್ವಭಾವದಲ್ಲಿ ತಂದು ನಿಲ್ಲಿಸು ವುದು (ನಯತೀತಿ ನಯಃ) ನಯವು (ಜೈನಧ. ೪). 'ನಯಮಾರ್ಗ' ಪರಾ.

**ನಯದ ಘಟ್ಟ** = ಸೌಜನ್ಯದ ಪುಂಜ ; ವಿನಯದ ಕಣಿ ; ಒಂದು ಬಿರುದು : ವನಧಿಪರೀತ ಧಾತ್ರಿ ನೆಱೆ ಬಣ್ಣಿಸುಗುಂ . . . ಗುಣ ರತ್ನರಾಸಿಯಂ ಮನಸಿಜರೂಪನಂ ನಯದ ಘಟ್ಟಿಯನಗ್ಗದ ಕಾಮಿಸೆಟ್ಟಿ ಯಂ. (ಶಿಇ. IV, ೦-೪೭ ; 1204). **ನಯಧೀರ** = ಒಂದು ಬಿರುದು : ಶ್ರೀಕಲಿನೊಳಮ್ಮಾಧಿರಾಜ ಶ್ರೀಕೊಲ್ಲಿಯರಸರಾ ತತ್ಪುತ್ರಃ ನಿಜ ರಾಮ [ನುಂ] ನಯಧೀರನುಂ ಒಡನಿಟ್ಟು ತಿಷ್ಪೆರುರಾನ್ ಬ್ರಹ್ಮದೇಯ ಕೊಟ್ಟಮ್ (ಎಶಿ. VI(R), ಶ್ರೀರಂಗ. ೬೬-೦೫ ; ?). **ನಯಮಾಗು** = ತಕ್ಕುದಾಗು ; ಉಚಿತವಾಗು : ಯೋಗ್ಯವಾಗು : ನಯವಾದು ನಯಮಾಗಿ ಕೂಡೆ ಪೊಳೆಯಲ್ ನಿಕ್ಷೇಪಮಾಕ್ಷೇಪಮಾರಯಮಿಲ್ಲೆಂದೆನಿಸಲ್ (ಪುಷ್ಪಪು. ೧–೪). [ಸಂ.]

**ನಯಂಗುಂದು**, ನಯಗುಂದು (ಕ್ರಿ). ಕಾಂತಿಗುಂದು ; ಕಳೆಗುಂದು : ಬೇಸಗೆಯ ಬಿಸಿಲ ಸೋಂಕಿಂ ವಾಸಂತೀವಲ್ಲಿ ಸರಡುವಿರ್ದಂತಿರೆ ನಿನ್ನೀ ಸುಕುಮಾರಲತಾತಿವಿಳಾಸಮಿದೇಕಾರಣಂ ನಯಂಗುಂದಿದುದೋ (ಮಲ್ಲಿಪು. ೪–೭). **ನಯಗುಂದು** : ತನ್ನೆರೆಯನತಿಚಿಂತೆಯಿಂ ಜಲಧಿ ಮುಳುಗಿದನು ಯೆನ್ನೆಂದು ಕಾಣ್ಬೆನೋಯೆನುತಲತಿತಾಪದಿಂದ ನಯಗುಂದಿ ತಲೆವಾಗಿ ಮುರುಟಿದವೊಲು ಕುಮುದಾಳಿ ಮುಗಿಯಲೊಡನೆ (ನವಮೋ. ೦೦–೪೦).
[ ನಯ$_1$ + ಕುಂದು$_1$ ]

**ನಯಂಗೆಡು** (ಕ್ರಿ). ಅಂದಗೆಡು ; ಕಳೆಗೆಡು : ಕಿಚ್ಚು ತಗುಳ್ದ ಮರದಂತೆ ನಯಂಗೆಟ್ಟು (ಧರ್ಮಾಮೃ. ೧–೧೬೮). [ ನಯ$_1$ + ಕೆಡು$_1$ ]

**ನಯಂಬಡೆ**, ನಯಪಡೆ (ಕ್ರಿ). ೧. ಮೃದುತ್ವವನ್ನು ಪಡೆ; ನುಣುಪನ್ನು ತಳೆ : ಓದಿನೊಳ್ ಮಾಧುರ್ಯಂಬಡೆದು ಪಾಡಿನೊಳ್ ಪರಿವಡೆದು ನೇಡಿಯೊಳ್ ನಯಂಬಡೆದು (ಗಿರಿಕ. ೨–೧೦೫ ವ). ೨. ಆನಂದವನ್ನು ಪಡೆ ; ಚೆಲುವನ್ನು ತಳೆ ; ಸೊಗಸಾಗಿರು : ಮೊಗ ರಾಗಮಂ ಪಡೆಯೆ ನೋಟಮನಂಗನ ಬಿಲ್ಲ ಬಲ್ಮೆಯಂ ಪಡೆಯೆ ನಯಂ ನಯಂಬಡೆಯೆ (ಆದಿಪು. ೨–೪) ; ದಿಟ್ಟಿಗೆ ನಯಂಬಡೆದ ಪೊಚ್ಚಪೊಸ ದೇಸೆಯಂ (ಅಜಿಪು. ೪–೭ ರಗಳೆ); ಮೆಲ್ಲಿದುವಾಗಿ ನಯಂಬಡೆದಲ್ಲಿಯುಮಾ ತಾಮ್ರಭಾವಮೆಸೆದಿರೆ ಪಲವುಂ ಸಲ್ಲಕ್ಷಣಂಗಳಿಂದುತ್ಪಲ್ಲಾಂಬುಜವದನೆಯಡಿದಳಿರ್ ಸೊಗ ಯಿಸುಗುಂ (ಬಂಹರಿ ೭–೨೦) ; ಪಯಗತಿ ಹಸ್ತಂಗಳ ಚಾಲಯಮತಿಶಯ ಪಂಗಹಾರದುಲ್ಲಾಸಂ ದೃಷ್ಟಿಯ ಭೇದಂ ಕರಣಂಗಳ ನಯಂ ನಯಂಬಡೆಯೆ ನರ್ತಿಪಮರಿಯರಿಂದಂ (ಮಹಾನೇ. ೧೫–೫೯). **ನಯಪಡೆ** : ೨. ಪಳುಕಿಂದ ನಯಪಡೆದ ನೆಲಗಟ್ಟು (ಸೋಮಚ. ೨–೧೫). ೩. ಸೌಮ್ಯತೆ ಯನ್ನು ಪಡೆ ; ಶಾಂತವಾಗಿರು : ಕಂಗಳ ಕಡಲಿಡುವ ಕರುಣಾಮೃತದ ನಯಪಡೆದ ನಯನಾಂಬುಜದ ಮೃಡನನು ಕಂಡು (ನಿಭಾಗ. ೪–೩–೨೭).
[ ನಯ$_1$ + ಪಡೆ$_1$ ]

**ನಯಂಬೆಱು** (ಕ್ರಿ). ೧. = ನಯಂಬಡೆ ೨ : ಪಗೆವನೊಳ್ ತಡೆಯದೆ ತಾಗುವೆಮ್ಮ ರಭಸಮಂ ಕೇಳ್ದು ವಿಮಾನಾಜಿರದೊಳಿರ್ದ ನಿಮ್ಮ ಸೊಸೆ ಬಾಡಿದ ಸಸಿ ಮಱೆಯಂ ಪೆತ್ತಂತೆ ರಾಗಿಸಿ ನಯಂಬೆತ್ತಿಂತೆಂಬಳ್ (ಶಾಂತಿಪು. ೬–೩೩ ವ). ೨. ಇಂಪನ್ನು ತಳೆ ; ಮಧುರವಾಗಿರು : ಎರಡುಂ ಬಂಚಂಗಳಿಂದಿಂಚರಮೊಸರ್ವಿನೆಗಂ ಕಿನ್ನರದ್ವಂದ್ವಮೊತ್ತುತ್ತಿರೆ ನಾನಾ ಭಂಗಿಯಿಂ ನಾರದತನಯೆ ನಯಂಬೆತ್ತುದೆಂಬಂತೆ ಪಾಡುತ್ತಿರೆ (ಕಾದಂಊ. ೧೬೪). [ ನಯ$_1$ + ಪೆಱು$_1$ ]

**ನಯಕಾರ** (ನಾ). ಪಳಗಿಸುವವನು ; ತರಬೇತಿಗೊಳಿಸುವವನು ; ಶಿಕ್ಷಕ : ಮೂವತ್ತಿರ್ವರ್ ನಯಕಾರರೀತನ ಗಜವ್ರಾತಂಗಳಂ ಕಿ ರ್ದು ವ ರ್ (ಶಾಂತಿಪು. ೫–೦೦೩). [ ಸಂ. ]

**ನಯಕಾರಿಣಿ** (ನಾ). (ಔಚಿತ್ಯದಿಂದ) ಸುಖವನ್ನುಂಟುಮಾಡುವವಳು ; (ಉಚಿತ ವರ್ತನೆಯಿಂದ) ಸಂತೋಷವನ್ನುಂಟುಮಾಡುವವಳು : ಎಣೆಯಿಲ್ಲೆನಿಸುವ ಸಲ್ಲಕ್ಷಣಯುತ ಕುಲಜನಿತವಿನುತವನಿತೆಯನಗಧಾರಿ ಣಿಯುಂ ನಯನಮನೋಹಾರಿಣಿಯುಂ ರುಗ್ಮಿಣಿಯನಖಿಳ ನಯಕಾರಿಣಿಯಂ ಕಂಡು (ಬಂಹರಿ. ೭–೨೦). [ ಸಂ. ನಯಕಾರಿಣೀ ]

**ನಯಕ್ರಮ** (ನಾ). ರಾಜ್ಯವ್ಯವಹಾರದ ನೀತಿ (?) : ಪರಹಿತದೊಳ್ ನಯಕ್ರಮದೊಳಾಯಂತಿಯೊಳ್ ಸುಚರಿತ್ರದೊಳ್ ದಯಾಪರಿಣತಿಯೊಳ್ . . . ಸುಜನಾಗ್ರಣಿ ಶಾಂತಿವರ್ಮ . . . ನಿನಗಾರ್ ದೊರೆ (ಪುಷ್ಪಪು. ೧–೮೦).
[ ನಯ$_1$ + ಕ್ರಮ ]

**ನಯಗಂಬಳಿ** (ನಾ). ನುಣುಪಾದ ಕಂಬಳಿ ; ನಯವಾದ ಉಣ್ಣೆಯ ಕಂಬಳಿ : ಅವರ ಮನೆಯ ಹಜಾರದಲ್ಲಿ ನಯಗಂಬಳಿಯನ್ನು ಹಾಸಿದ್ದಾರೆ (ರೂಢಿ). [ ನಯ$_1$ + ಕಂಬಳಿ ]

**ನಯಗಾತಿ** (ನಾ). ಉಪಾಯಗಾತಿ ; ಚೂಪುಗಾರಿಕೆಯುಳ್ಳವಳು : ಆಕೆ ತುಂಬಾ ನಯಗಾತಿಯಾದ್ದರಿಂದ ಕೆಲಸವನ್ನು ಸುಲಭವಾಗಿ ಸಾಧಿಸಿದಳು (ರೂಢಿ). [ ನಯ$_1$ + – ಕಾತಿ$_2$ ]

**ನಯಗಾರ** 'ನಯಗಾಱ' ನೋ.

**ನಯಗಾರೆ** (ನಾ). ನುಣುಪಾಗಿ ಅರೆದ ಗಚ್ಚು,-ಗಾರೆ : ನಯಗಾರೆ : ಮೆತ್ತಿಗೆ ; ಅಂಟುಪುಡಿ ; ಅಂಟುಲೇಪ (Compo. ಇಂಕನಿ).
[ ನಯ$_1$ + ಗಾರೆ$_1$ ]

**ನಯಗಾಱ,** ನಯಗಾರ (ನಾ). ೧. ಸೌಜನ್ಯಶೀಲ ; ವಿನಯಶಾಲಿ : ಸತ್ತ್ರಗರ್ಗೆ ಪಾದಪೂಜೆಯನೆಸಪ ನಯಗಾಱನ್ (ಅಕ್ಷತ್ಕಾ. ೪೧–೧೧೬).
**ನಯಗಾರ :** ೨. ಉಪಾಯಗಾರ ; ಚೂಪುಗಾರಿಕೆಯುಳ್ಳವನು : ಆತ ಬಹಳ ನಯಗಾರ (ರೂಢಿ). [ ನಯ$_1$ + – ಕಾಱ ]

**ನಯಗುಂದು** 'ನಯಂಗುಂದು' ನೋ.

**ನಯಗುಣ** (ನಾ). ಒಳ್ಳೆಯ ಗುಣ ; ಯೋಗ್ಯವಾದ ಗುಣ : (+).
[ ನಯ$_2$ + ಗುಣ ]

**ನಯಗೆಡು** (ಕ್ರಿ). ಔಚಿತ್ಯ ಕೆಡು ; ನೀತಿ ತಪ್ಪು : ದೃಷ್ಟಿಮೋಹನ ಮೂರ್ತಿಗಳು ನಯಗೆಟ್ಟ ನಾಲ್ವರು ಸಿದ್ಧರಮ್ಮನು ಬಿಟ್ಟ ಕಂಗಳಲೀಕ್ಷಿಸಿ ದರುಱ ಜಱದು ಸುಡುವಂತೆ (ಸಿಥಾಗ. ೬–೩–೧೧) ; ಬಯಲು ರೂಪಿನ ವಸ್ತು ಜೀವವೆರಕೆ ಗುಣ ನಿಯುತದಿಂದಱವು ಕಾಣ್ಕೆಗಳು ನಯಗೆಟ್ಟ ನರಸುರರಾದಿಯಾದಾಕಾರಚಯಗಳದಱ ಪರಿಯಾಯ (ಭರಚ. ೬೭–೦೨೩).
[ ನಯ$_2$ + ಕೆಡು$_1$ ]

**ನಯಚಿತ್ತ** (ನಾ). ಯೋಗ್ಯವಾದ ನಡತೆಯುಳ್ಳವನು; ವ್ಯವಹಾರವನ್ನು ಬಲ್ಲವನು. 'ನಯಂಚಿತ್ತ' ಪರಾ. [ ನಯ$_2$ + ಚಿತ್ತ ]

**ನಯಚಿತ್ತೆ** (ನಾ). ಯೋಗ್ಯವಾದ ನಡತೆಯುಳ್ಳವಳು ; ವ್ಯವಹಾರವನ್ನು ಬಲ್ಲವಳು ; ವ್ಯವಹಾರ ಚತುರೆ : ನಯಚಿತ್ತ ಚಿತ್ರಮತಿದೇವಿಯನಾ ವಿಜಯಾವತೀಮಹಾದೇವಿ ಮನಃಪ್ರಿಯದಿಂದೆ ಬರಿಸಿ ಕೊರಲಪ್ಪಿಯೆ ಪಿರಿದುಂ ಮೆಱದಳಾತ್ಮಮಹಿಮೋನ್ನತಿಯಂ (ಕುಸುಮಾ. ೧೩–೧೪೦).
[ ನಯಚಿತ್ತ + – ಎ$_2$ ]

**ನಯಜ್ಞ** (ನಾ). ರಾಜನೀತಿನಿಪುಣ : ಜಯಂವಧುಗಾಣ್ಮನಾಗಿಯು ಮಸೌಮ್ಯನೆ . . . ಮಹಿತನಾಗಿಯುಮುದ್ರುತನೇನ ಯಜ್ಞನಾಗಿಯು ಮಕೃತಜ್ಞನೇ (ಶಾಂತಿಪು. ೧೧–೬೭) ; ದಶದಿಶೆಯೊಳಿಂದುಕರರುಚಿ ಯಶಮಂ ಪರೆಪಲ್ ಪರನೃಪರುಮನೊತ್ತರಿಪಲ್ ಸಾಲ್ವುದಂ ನಯಜ್ಞಹಿತಮಿತ ವಚನಂ (ರಾಜಶೇ. ೧೩–೦೫) ; ಗೋಳಿಡುವ ದ್ರೌಪದಿಯ ಕುಡಿನೋಟದಲಿ ನೋಡಿ ಈ ನಯಜ್ಞನು ನೆಲದಲೇನನೋ ಬರೆಯುತಿಹನು (ಭಾಸನಾ. ೩೬).
[ ಸಂ. ]

**ನಯಣ** (ನಾ). [ಜೈನ] ಗಿರಿಯ ತಪ್ಪಲಿನಲ್ಲಿ ವಿಶ್ರಾಂತಿಗಾಗಿ ಕಟ್ಟಿಸಿದ ಶಿಲಾಮಂಟಪ,-ಕಲ್ಲಿನ ಗೃಹ : ಬೊಪ್ಪದೇವನ ತಾಯಿ ಜಕ್ಕಮಬ್ಬೆ ಮೋಕ್ಷತಿಳಕಮಂ ನೋಂತು ನೋಂಬರೆ ನಯಣದ ದೇವರ ಮಾಡಿಸಿ ಪ್ರತಿಷ್ಠೆಯ ಮಾಡಿಸಿದರು (ಎಕ. II, ೩೬೭–೪ ; 1120) ; ಶುಭಚಂದ್ರದೇವರ ಗುಡ್ಡಿ ಜಕ್ಕಿಮಬ್ಬೆ ಕೆಱೆಯ ಕಟ್ಟಿಸಿ ನಯಣದ ದೇವರ ಮಾಡಿಸಿದರು (ಎಕ. II, ೩೬೮–೨ ; 1120) ; ತಳಿರ ನೆಲಗಟ್ಟು ಪೊಸದಳಿರ್ಗಳ ಕಂಬಂ ತಳಿರ ಭಿತ್ತಿ ತಳಿರ ಲೋವೆ ಕೆಂದಳಿರ್ಗಳ ಜಂತೆಗಳೊಪ್ಪಿರೆ ತಳಿರೋವರಿ ತಳಿರ ನಯಣ[ಪಾಠಾಂ. ತಳಿರಾವಳಿ ತಳಿರ ಸದನ]ಮೆನೆ ಕಣ್ಗೊಳಿಕುಂ (ಪಾರ್ಶ್ವಪು. ೯–೨೯); ಅನುನಾಸಿಕ ಯಕಾರಕ್ಕೆ–ಮೋಯಿಸಿದಂ, ನೋಯಿಸಿದಂ, ಮಯಣಂ, ನಯಣಂ, ಮಾಯಂ (ಶಮದ. ೧೬ ಪ್ರಯೋ) ; ಪೂರ್ವ ನಯಣದ ಮೇಲೆ ಮತ್ತೊಂದು ನಯಣಮಂ ರಚಿಸಲ್ವೇಕೆಂದು ಪ್ರತಿಮೆ ಸೂಚಿಸಿದ ಕಾರಣಮಂಲ್ಲಿ ನೆಲಸಿತ್ತೆನೆ . . . ಕರಕಂಡುಮುಹಾರಾಜಂ ತನ್ನ ಪೆಸರೊಳಂ ತನ್ನ ತಾಯಿ ಪದ್ಮಾವತಿಯ ಪೆಸರೊಳಂ ತನ್ನಂ ಸಲಹಿದ ಬಾಲದೇವನ ಪೆಸರೊಳಂ ಮೂಱು ನಯಣಮಂ ಮಾಡಿಸಿ ಜಿನಪ್ರತಿಷ್ಠೆಗಳಂ ಮಾಡಿ (ಪುಣ್ಯಾಸ್ರ ೨–೬೯ ವ).
[< ಪ್ರಾ. ಲಯಣ, ಲೇಣ ; ಪಾಲಿ. ಲೇಣ./ಸಂ. ಲಯನ ]

**ನಯದಪ್ಪು** (ಕ್ರಿ). ನೀತಿಯನ್ನು ಮೀರು ; ಅನ್ಯಾಯ ಮಾಡು : ಮರಳಿ ಹೊಡೆ ಹಿಂಡಾಕಳನು ಗೋಪರನು ಬಿಡು . . . ನಮ್ಮರಸ ನಯದಪ್ಪಿದನು ತುಱುಸೆಱೆವಿಡಿವರೇ ನೃಪರು (ಕುಮ್ಮಾವಿ. ೭–೩೫). [ ನಯ$_2$ + ತಪ್ಪು$_1$ ]

**ನಯದಾಳ್** (ಕ್ರಿ). ಔಚಿತ್ಯವನ್ನು ಪಡೆ,-ಹೊಂದು : ಕ್ಷೋಣಿಗೆ ಹಾರವಮಲ್ತೆ ರಜತಾದ್ರಿ ತದದ್ರಿಗೆಱಂಕೆ ನೋಡುಭಶ್ರೇಣಿಗಳಂತವಂ ವಿನಮಿಯುಂ ನಮಿಯುಂ ನಯದಾಳ್ದರ್ (ಶಾಂತಿಪು. ೫–೧೪೯). [ ನಯ$_2$ + ತಾಳ್$_1$ ]

**ನಯದೃಷ್ಟಿ** (ನಾ). [ಜೈನ] ವಸ್ತುವಿನ ಒಂದು ಗುಣ, ಧರ್ಮಕ್ಕೆ ಪ್ರಾಧಾನ್ಯ ಕೊಟ್ಟು ಉಳಿದ ಗುಣ, ಧರ್ಮಗಳನ್ನು ಗೌಣವೆಂದು ಪರಿಗಣಿಸುವುದು : ಎಲ್ಲಿ ಒಂದು ಧರ್ಮಕ್ಕೆ ಪ್ರಾಧಾನ್ಯತೆ ಕೊಟ್ಟು, ಉಳಿದ ಧರ್ಮಗಳನ್ನು ಗೌಣವೆಂದು ತಿಳಿದುಕೊಳ್ಳಲಾಗುವುದೋ, ಅದಕ್ಕೆ ವಿಕಲಾದೇಶ–ಅಪೂರ್ಣದೃಷ್ಟಿಯೆಂದು ಹೇಳಲಾಗುವುದು. ಸಕಲಾದೇಶಕ್ಕೆ ಪ್ರಮಾಣದೃಷ್ಟಿಯೆಂದೂ ವಿಕಲಾದೇಶಕ್ಕೆ ನಯದೃಷ್ಟಿಯೆಂದೂ ಹೇಳಲಾಗಿದೆ (ಜೈನಪ. ೨೦೯). [ ನಯ$_2$ + ದೃಷ್ಟಿ ]

**ನಯನ** (ನಾ). ೧. ಕರೆದೊಯ್ಯುವುದು ; ಸಾಗಿಸುವುದು ; ತೆಗೆದುಕೊಂಡುಹೋಗುವುದು : ಪದಾರ್ಥ ಸಾಗಿಸುವಿಕೆಗೆ ನಯನ, ಆನಯನ ಎಂದೂ, ಇಂಗ್ಲಿಷಿನಲ್ಲಿ ಟ್ರಾನ್ಸ್‌ಪೋರ್ಟ್ ಎಂದೂ ಹೆಸರು (ಭೂವಿವ. ೨೦೦). ೨. ಚಲಿಸುವುದು ; ಗಮನ. ೩. ಕಣ್ಣು : "ದೃಕ್, ದೃಷ್ಟಿಃ, ನೇತ್ರಂ, ಲೋಚನಂ ಚಕ್ಷುಃ, ನಯನಂ, ಅಂಬಕಂ, ಈಕ್ಷಣಂ, ಅಕ್ಷಿ–ಈ ೯ ಕಣ್" (ಹಲಾಯು. ೬೭–೩೬೫) ; ಅಳಕಾನನ ನಯನಂಗಳೊಳಿ ವಳಿನೋತ್ಪಳವಿಕಾಶಮಂ ಗೆಲ್ದುದಱಂ ತಿಳಿಗೊಳನಂ ಪೋಲ್ತಿರ್ದುಂ ತಿಳಿಯದಿದೇನೆಂಬುದುಂ ತದನ್ವಯಮುದಱೊಳ್ (ಕವಿರಾ. ೧–೮೮) ; ಗಳಿತಶರಮಾಯ್ತು ಹಸ್ತಂ ಗಳಿತರಣೋತ್ಸಾಹಮಾಯ್ತು ಹೃದಯಂ ನಯನಂ ಗಳಿತಾಶ್ರುವಾಯ್ತು ಕೌರವಕುಲತಿಲಕಂಗಾ ಕುಮಾರನಂ ಕಾಣಲೊಡಂ (ಗದಾಯು. ೪–೬೦) ; ನಯನಂ ನೀಲಸರೋಜಮಂ ಸೆಣಸುಗುಂ (ಶಂರಾಮಾ. ೧–೯೫) ; ನಯನದಲ್ಲಿ ಮೂರುತಿ ತುಂಬಿ . . . ನಿಮ್ಮ ಚರಣ ಕಮಲದಲಾನು ತುಂಬಿ (ಬಸವ. ೪೯೨) ; ನಯನ ಬುದ್ಧಿಯೊಳಗೊ ಬುದ್ಧಿ ನಯನದೊಳಗೊ ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ (ಕನಕ. ೬೮–೧). ೪. ವಾಹನ. ೧, ೩, ೪ : ಜನನುತ ರಾಜಹಂಸನಯನಂ ಕಮಳಾವಸಥಂ ಕಳಾನಿಕೇತನನೆನಿಸಿರ್ದ ಪೆಂಪುಪಮಪೆತ್ತೊಡಮೇನೊ . . . ರಜಮೊಂದದ ಸತ್ತ್ವನಿಧಾನನೆಂಬ ಪೆಂಪನುಗುಣಮಾದ ಲೋಕಪಿತನೊಲ್ದು ಚತುರ್ಮುಖನೀಗೆ ರಾಗಮಂ (ಜಗವಿ. ೧–೨). ೫. ಅನ್ವಯ : ಮೂಲದಲ್ಲಿ 'ಆಕ್ಷೇಪಕ್ಕೆ' ಬೇರೆ ಉದಾಹರಣೆಯೇ ಇಲ್ಲವಾದ್ದರಿಂದ ಇದನ್ನೇ ಹೇಗಾದರೂ ನಯನ ಮಾಡುವ ಉದ್ದೇಶದಿಂದಲೋ ಎಂಬಂತೆ (ಧ್ವನ್ಯಾಲೋ. ೩೦ ಅಡಿಟಿ). ೬. ಪೋಷಿಸುವುದು ; ಪೋಷಣೆ : "ನಯಃ, ನಯಿ, ನಯುಃ, ನಾಯಃ, ನಯನಂ, ನಯನೀಯಂ, ಈ ೬ ಹೊರೆತಂ" (ಕಾಶಕ್ಕ. ೧೧೧). ೭. ಎರಡು ಎಂಬ ಸಂಖ್ಯೆಯ ಸಂಕೇತ : ಅಮರೇಜ್ಯಂ ಕೇಂದ್ರ ಲಾಭಾಷ್ಟಮಸಹಜಧನಸ್ಥಾನದೊಳ್ . . . ಧಾತ್ರೀಜನಿಂ ಕೇಂದ್ರನಿಧನ ನಯನಾಯಂಗಳೊಳ್ ಪೂಜ್ಯನಕ್ಕುಂ (ಜಾತಕ. ೧೧–೧೧); ಯಮ ನಯನ ಕರ್ಣ ಕರ ಪದ . . . ಸಮ ಉಭಯಂ ಬಾಹು ಕವಿಗಳೆರಡಱ ನಾಮಂ (ವ್ಯವಹಾ. ೯–೨) ; ಉಡುದೇವ ನಿಧಿ ನಯನೇಂದು ಸಂಖ್ಯೆಗಳೋವಿ ಶಕವರುಷಂಗಳಾಗಲು . . . ಬಸವಚರಿತೆ ಸಮಾಪ್ತವಾಯಿತ್ತು (ಬಸಪು. ೬೧–೯೨). [ ಸಂ.]

**ನಯನಕರ್ಣ** (ನಾ). ಕಣ್ಣೇ ಕಿವಿಯಾಗಿರುವುದು; ಹಾವು; ಸರ್ಪ. **ನಯನಕರ್ಣವಿಪಕ್ಷ** = ಹಾವುಗಳ ಹಗೆ; ನವಿಲು. **ನಯನಕರ್ಣವಿಪಕ್ಷಲಕ್ಷಣ** = ಧ್ವಜದಲ್ಲಿ ನವಿಲಿನ ಗುರುತನ್ನುಳ್ಳವನು; ಮಯೂರಧ್ವಜ; ಷಣ್ಮುಖ : ನಯನಕರ್ಣವಿಪಕ್ಷಲಕ್ಷಣ ಜಯತು ಸಿದ್ಧೇಶ (ಬಸಪು. ೨೦-೩೭). **ನಯನಕರ್ಣಾಶನ** = ೧. ನವಿಲು; ಮಯೂರ. ೨. ಗರುಡ. **ನಯನಕರ್ಣಾಶನವರಧ್ವಜ** = ಗರುಡಧ್ವಜ; ವಿಷ್ಣು : ನಯನಕರ್ಣಾಶನವರಧ್ವಜನಯನ ಭುವನೇಶಾರ್ಚಿತಕ್ರಮ (ಬಸಪು. ೨೦-೩೭). **ನಯನಕರ್ಣಾಹಾರ** = ೧. ನವಿಲು; ಮಯೂರ. ೨. ಗರುಡ. **ನಯನಕರ್ಣಾಹಾರವಾಹನ** = ಗರುಡವಾಹನ; ವಿಷ್ಣು. **ನಯನಕರ್ಣಾಹಾರವಾಹನನಯನ** = ಶಿವ : ನಯನಕರ್ಣಾಹಾರವಾಹನನಯನ ಭುವನೇಶಯಾನನಯನಾನಯನ ಭುವನತ್ರಯನಯನ ಕರ್ಣಾಕಲಿತಕರ್ಣ (ಬಸಪು. ೨೦-೩೭).
[ ಸಂ. ]

**ನಯನಚ್ಛದ** (ನಾ). ಕಣ್ಣಿನ ರೆಪ್ಪೆ. [ ಸಂ. ]

**ನಯನಜಲ, ನಯನಜಳ** (ನಾ). ಕಣ್ಣೀರು; ಕಂಬನಿ; ಬಾಷ್ಪ : ಬಳೆದ ಸುತಶೋಕದಿಂದೀಗಳೆ ಸುರಿಗುಮೆ ಸುರಿಯುಂಪಾ ಜಯದ್ರಥನ ಚಿತಾನಳನಿಂದಮೊಗೆದ ಪೊಗೆಗಳ್ ಕೊಳೆ ಸುರಿವೊಡೆ ಸುರಿವುವೆನ್ನ ನಯನಜಲಂಗಳ್ (ಪಂಪಭಾ. ೧೦-೧೧೯); ಕರುಣಂ ಕೈಮಿಗೆ . . . ಮುನ್ನು ಮಿಕ್ಕು ನಯನಜಲಂಗಳ್ ಸುರಿದು (ಸುಕುಮಾ ೫-೩) : ಪರಮಸುಖದಲಿ ತನುವ ಮಱೆದನು ನಯನಜಲವೊಗಲು (ಕುಮ್ಮಾಉ. ೮-೬). **ನಯನಜಳ** : "ಅಶ್ರು, ಬಾ(ಷ್ಪಂ)ರ್ಪಂ, ರೋದನಂ, ನಯನಜಳಂ, ಅಸ್ರಂ – ಈ ೫ ಕಣ್ಣ ನೀರ್" (ಹಲಾಯು. ೮೬-೩೬೫). [ ನಯನ+ಜಲ ]

**ನಯನಜಳ** 'ನಯನಜಲ' ನೋ.

**ನಯನತ್ರಯ** (ನಾ). ೧. ಮೂರು ಕಣ್ಣುಗಳು : ಲೋಕವಿಸ್ತರಣಪ್ರಭಾವನಯನತ್ರಯಂ ದೇವ ಗಂಗಾಧರಂ ಬಿಡದೆ ಸಲಹುಗೆ ನಮ್ಮನು (ಶೃಮಿಭಾ. ೧-೨). ೨. ಮುಕ್ಕಣ್ಣ; ಶಿವ : ಭುವನೇಶಯವನಭುವನನಯನ ನಯನತ್ರಯ ನಯನಕರ್ಣಾಕಲಿತಕರ್ಣ (ಬಸಪು. ೬೧-೫೦). ೩. (?) : ನಯನತ್ರಯಯುತರತ್ನತ್ರಯನಿಧಿ ಲೋಕತ್ರಯಂ ಸಲೋಕಿತ ತಾಳತ್ರಯ ಪಾಂಡುರಾತಪತ್ರತ್ರಯಮಿವು ನಿನಗಲ್ಲದಜಿತ ಪೆಱರ್ಗೊಪ್ಪುಗುಮೆ (ಅಜಿಪು. ೮-೯). [ ನಯನ + ತ್ರಯ ]

**ನಯನತ್ರಿಭಾಗ** (ನಾ). ಕಣ್ಣಿನ ಕೊನೆ; ಕಡೆಗಣ್ಣು; ಕೇಕರ : ಕುಸುಮಶರಾಸ್ತ್ರಪುಷ್ಪರಜದಿಂ ಪೊರೆದಂತಿರೆ ಬಾಷ್ಪವಾರಿಗಳ್ ಪಸರಿಸೆ ರಾಗವಗ್ಗಲಿಸೆ ಚಾರುಚಲನ್ನಯನತ್ರಿಭಾಗದಿಂ ಕುಸಿಕುಸಿದೆನ್ನನೀಕ್ಷಿಸುವಳ್ (ಕಾದಂಜ. ೮೯); ಜೀವಿತೇಶವಿಲ್ಲಿಗೆ ತೆನ್ನನಾಗ್ರಹಿಸೆ ಸೊಲ್ಲಿಸಲೊಲ್ಲದೆ ನಾಣ್ಚಿ ನೋಡಿದಳ್ ತಾಮ್ಮನದನ್ನೆಪ್ಪ ಕಳಭಾಷಿಣಿಯಂ ನಯನತ್ರಿಭಾಗದಿಂ (ಚಂದ್ರಪ್ರ. ೩-೬೨); ನಯನತ್ರಿಭಾಗದಿಂದೆನ್ನಯ ಮೊಗಮಂ ನೋಡಿ ಮಗುಳ್ದು ಮಱವಟ್ಟಂತಾಶ್ರಯಮಿಲ್ಲದ ಲತೆ ತೆಂಗಾಳಿಯೊಳಲ್ಲಾಡುವವೊಲಾಕೆ ಕಣ್ಗೆಸೆದಿರ್ದಳ್ (ವಿಕ್ರ. ೪-೯೧). [ ನಯನ + ತ್ರಿಭಾಗ ]

**ನಯನಪಕ್ಷ್ಮ** (ನಾ). ಕಣ್ಣಿನ ರೆಪ್ಪೆ; ಎವೆ : ವಿಷದ ಪುತನಿ ನಯನಪಕ್ಷ್ಮದೊಳಗಿರಲೆ ? (ಮಂಕುಳ. ೪೧೬). [ ನಯನ + ಪಕ್ಷ್ಮ ]

**ನಯನಪಾವಕ** (ನಾ). ಕಣ್ಣಿನ ಬೆಂಕಿ; ನೇತ್ರಾಗ್ನಿ : ಹರಿ ಸರೋಜಾಸನರು ಶೂಲಿಯ ಹೊರೆಗೆ ಬಂದರು ದೇವದೈತ್ಯರ ಪುರವಧವರ್ಣದ ಪೇಟೆಯಾದುದು ನಯನಪಾವಕನ ಕರೆದು ಬೆಸಸುವಡಿದು ಸಮಯ . . . ಎಂದರು ಪಾರ್ವತೀಪತಿಗೆ (ಕುಮ್ಮಾಕ. ೭-೩೪). [ ನಯನ + ಪಾವಕ ]

**ನಯನಪುತ್ರಿಕೆ** (ನಾ). ಕಣ್ಣಿನ ಗೊಂಬೆ; ಪಾಪೆ : ಜಾನಕಿ . . . ಧಾರಾನಿಳಯ ಜಲಯಂತ್ರಪುತ್ರಿಕೆಯಂತೆ ನಯನಪುತ್ರಿಕೆಗೆ ಮಣಿಭೂಷಣಮೆನಿಸಿ (ಪಂರಾಮಾ. ೫-೪೦ ವ). [ ನಯನ + ಪುತ್ರಿಕೆ ]

**ನಯನಪ್ರಭೆ** (ನಾ). ಕಣ್ಣಿನ ಕಾಂತಿ : ನಯನಪ್ರಭೋಜ್ಜ್ವಲ ಜ್ಯೋತ್ಸ್ನೆಯಿನಾದಂ ಕನ್ನೆ ಮುನ್ನ ಧವಳಿಸಿ ಭೂಷಾಚಯಮಣಿಗಣನಿಚಯದೆ ತಾಂ ಬಯಲಂ ಚಿತ್ರಿಸಿದಳೆಯ್ದೆ ಗಮನೋತ್ಸವದೊಳ್ (ಚಂದ್ರಪ್ರ. ೫-೧೦೫).
[ ನಯನ + ಪ್ರಭೆ ]

**ನಯನಮಧ್ಯ** (ನಾ). ಕಣ್ಣಿನ ಕರಿಯಂ ಗುಡ್ಡೆ,–ಆಲಿ: "ಕನೀನಿಕಾ, ನಯನಮಧ್ಯಂ, ತಾರಾ – ಈ ೩ ಕರಿಯಾಲಿ" (ಹಲಾಯು. ೮೬-೩೬೬).
[ ನಯನ + ಮಧ್ಯ ]

**ನಯನಮನೋಹರ** (ಗು). ೧. ಚೆಲುವಾದ; ಸುಂದರವಾದ; ನೋಟಕ್ಕೆ ಆಪ್ಯಾಯಮಾನವಾದ : ಹಾ ನಯನಮನೋಹರರೂಪರಿರಾ ಹಾ ನರಪಕುಲೋಜ್ಜ್ವಲಧೀಪರಿರಾ (ಜೀಪಸಂ. ೨೪-೪೫ ೧೭೪). (ನಾ). ೨. ಚೆಲುವಾದುದು; ಸುಂದರವಾದುದು : ನಯನಮನೋಹರಂ ಮನುಜನಿರ್ಮಿತಮಲ್ಲದು . . . ಎಂಬ ನಿಶ್ಚಯಮಂ ನೋಡರ್ಗೆ ವಿಸ್ಮಯರಸಾಕರಮಾ ಕರುಮಾಡಮೊಪ್ಪುಗುಂ (ಮಲ್ಲಿಪು. ೨-೭೫); ಶಾಂತವಾಗಿರುವ ತನುವಿನಿಂದ ನಯನಮನೋಹರವಾಗಿರುವ ರುದ್ರಮೂರ್ತಿ (ಮುಕಾಬ. ೩೮). [ ಸಂ. ]

**ನಯನಮನೋಹರಿ** (ನಾ). ಅಂದವಾಗಿರುವವಳು; ನೋಟಕ್ಕೆ ಆಪ್ಯಾಯಮಾನವಾಗಿರುವವಳು : ನಯನಮನೋಹರಿ ಹೃದಯಾಶ್ರಯನ ಸತೀ ಸದೃಶ ನೃಪವಧೂಮುಖತಿಳಕಂ ಪ್ರಿಯಕಾರಿಣಿಯಾ ಭೂಪಪ್ರಿಯೆಯವರ್ಗಳ್ ಸುಖದಿನಾಳುತಿರೆ ತತ್ಪುರಮಂ (ಮಹಾನೇ. ೨-೩೩).
[ ಸಂ. ನಯನಮನೋಹರೀ ]

**ನಯನಮರೀಚಿ** (ನಾ). ಕಣ್ಣಿನ ಕಿರಣ,–ಕಾಂತಿ : ನನೆಗಣೆಯನ ಕಣೆಗಳವೊಲು ಗೋಪಕಂಗನೆಯರ ನಯನಮರೀಚಿ ತನುವಿನೊಳಗೆ ಪಸರಿಸಲಾ ತಾಪಸ ಮನವನಿತ್ತನು ಮನಸಿಜಗೆ (ಅಂಜಚ. ೫-೭೩) : ನಯನಮರೀಚಿಯಂ ಕಬರಿಕಾಂತಿಯುಂ ಮಿರ್ದೆಸೆಗಿಂದ್ರನೀಲಮಾಲೆಯ ವರಮೌಕ್ತಿಕಾವಳಿಯ ರಜ್ಜುಗಳಂತಿರೆ (ಸೂಕ್ತಿಸು. ೮-೩೩೩) : ನಯನಮರೀಚಿಗಳ್ ಪುದಿಯೆ ನೀಲದ ಮಾಲೆಗಳಂತೆ . . . ಅಚ್ಚಜಾದಿಯ ಪೊಸಮಾಲೆಗಳ್ಪಿಡಿದು ಮಾಱುವ ನೀಱೆಯನಲ್ಲಿ ಮಾಲೆಗಾರ್ತಿಯೋ ಮಣಿಗಾರ್ತಿಯೋ ಎನುತೆ ನೋಟ್ಪುದು ವಿಸ್ಮಯಭಾಜನಂ ಜನಂ (ಧರ್ಮನಾ. ೨-೭೯).
[ ನಯನ + ಮರೀಚಿ ]

**ನಯನಯುಗ** (ನಾ). ಕಣ್ಣುಗಳ ಜೊತೆ; ಎರಡು ಕಣ್ಣುಗಳು : ನಯನಯುಗಂ ನಾಸಾಗ್ರಪ್ರಯುಕ್ತಮವ್ಯಕ್ತವರ್ತನಂ ಪ್ರಾಣಾಪಾನಾಯುಗಂ (ವರ್ಧಪು. ೧೫-೬೨) : ನಯನಯುಗಂ ತಳತ್ತಳಿಸೆ ದಂತಮರೀಚಿಲಸತ್ಕಪೋಳಭಿತ್ತಿಯನವಳಂಬಿಸಲ್ . . . ರಂಜಿಸಿದಂ ನಿಷಧಾಧಿನಾಯಕಂ (ನಳಚಂ. ೧೨೯); ನಯನಯುಗದಿಂ ಜಗವ ಪೊರೆದು, ನಿಟಲಾಕ್ಷಿಯಿಂ ಲಯವಡಿಸುವುದದೇನು ಶಿವಯೋಗಲೀಲೆ ? (ಮುಕ್ತಕ, ೬೧೩).
[ ನಯನ + ಯುಗ ]

**ನಯನಯುಗಳ** (ನಾ). = ನಯನಯುಗ : ಅಳಿ ನಳಿನೋತ್ಪಳರುಚಿಗಳ ನಳಕಾಸನ ನಯನಯುಗಳದಿಂ ಗೆಲ್ದಿರ್ದ್ದಂ ಕೊಳದೊಳಗೇನಂ ನೋಟ್ಪಿಗ ವಿಳಾಸಿನೀ ನಿನ್ನವೋಲದೇನತಿಶಯಮೋ (ಕವಿರಾ. ೧-೮೭).
[ ನಯನ + ಯುಗಳ (= ಯುಗಲ) ]

**ನಯನರೋಗ** (ನಾ). ಕಣ್ಣಿನ ಬೇನೆ,–ರೋಗ : ಹಿತ್ತಾಳೆಯೊಳು ನಯನರೋಗದೊಳು ಬಾಣಲೆಯೊಳು . . . ವಿಮಾನದೊಳು ಪುಷ್ಪಕಮೆನಿಕ್ಕು (ಮಂಗರಾ. ೧೫೩-೬೩) : ನಯನರೋಗದೊಳು ಭೇದನದೊಳರಿಯೆಂಬ ಶಬ್ದಂ (ಶಬ್ದಮಂ. ೧೦೫). [ ನಯನ + ರೋಗ ]

**ನಯನರೋಮ** (ನಾ). = ನಯನಪಕ್ಷ್ಮ : "ನಯನರೋಮಂ ಪಕ್ಷ್ಮಂ" (ವಸ್ತುಕೋ. ೭೧-೨೨). [ ನಯನ + ರೋಮ ]

**ನಯನವಾರಿ** (ನಾ). = ನಯನಜಲ : ಗಳಿಯಿಸುತಿರೆ ಕಬರಿಭರಂ ಗಳಿಯಿಸುತಿರೆ ನಯನವಾರಿ ನಿನ್ನಾನನದಿಂ (ಗದಾಯು. ೧-೬೩) ; ಇವರುಬ್ಬರಿಸಿದರು ಹರುಷದಲಿ ನೆನೆದರು ನಯನವಾರಿಯಲಿ (ಕುವ್ಯಾ.ಅ. ೨೦-೨೦) ; ಕೃಷ್ಣನ ವರಸುಧಾಮಯವಚನವನು ಪಂಕರುಹಮುಖಿ ಕೇಳುತ್ತ ನನೆದಳು ನಯನವಾರಿಯಲಿ (ಕುವ್ಯಾ.ಉ. ೮-೨೪). [ ನಯನ + ವಾರಿ೩ ]

**ನಯನವಿಹ್ವಲ** (ನಾ). ಕಂಗೆಟ್ಟವನು ; ದಿಗ್ಭ್ರಮೆಗೊಳಗಾದವನು : ನಯನದ್ವಯದಿಂ ತವೆ ನೋಡಲ್ ನೆಱೆಯದೆ ನಯನವಿಹ್ವಲಂ ಹರಿ ಸಹಸ್ರಲೋಚನನಾದಂ (ಶಾಂತಿಪು. ೧೦-೬೦).
[ ನಯನ + ವಿಹ್ವಲ ]

**ನಯನವೀಧಿ** (ನಾ). ಕಣ್ಣಿನ ನೋಟದ ಪರಿಧಿ,-ಹರವು: ಸರಸಿಜದ ಮಧು ಮಧುಕರನನನುಕರಿಸಿದೊಡೆ ಚಂದ್ರಿಕೆ ಚಕೋರನ ವರಿಸಿದರೆ ನಿಧಿ ಲಕ್ಷ್ಮಿ ಸುಳಿದರೆ ನಯನವೀಧಿಯಲಿ ಗರುವೆಯರು ಮೇಲಿಕ್ಕಿ ಪುರುಷನ ನೞಿಸಿದರೆ ಜಾಱುವರೆ ಸುಡಲಾ ಸರಸಿಜವನಾ ಚಂದ್ರಿಕೆಯನಾ ನಿಧಿಯನಾ ವಧುವ (ಕುವ್ಯಾ.ಅ. ೮-೩೩). [ ನಯನ + ವೀಧಿ (<ಬೀದಿ) ]

**ನಯನಶಿಖಿ** (ನಾ). ಕಣ್ಣಿನ ಬೆಂಕಿ : ನಿಟಿಲನೇತ್ರನ ನಯನಶಿಖಿಯುಬ್ಬಟೆಗೆ ಸಮ ಜೋಡಿಸಿತು ಕರ್ಣನ ಚಟುಳವಿಕ್ರಮಪವನಪಂಗತಬಾಣಶಿಖಿನಿಕರ (ಕುವ್ಯಾ.ಕ. ೧೩-೩೯). [ ನಯನ + ಶಿಖಿ ]

**ನಯನಶ್ರವಣ** (ನಾ). = ನಯನಕರ್ಣ. 'ನಯನಶ್ರವಣವೇಣಿ' ನೋಡಿ. [ ನಯನ + ಶ್ರವಣ೩ ]

**ನಯನಶ್ರವಣವೇಣಿ** (ನಾ). ಹಾವಿನಂಥ ಜಡೆಯುಳ್ಳವಳು ; ನಾಗವೇಣಿ : ಭಯಪಾಪತಾಪದೂರೆ ಜಯಜಯ ಗುಣಸಾರೆ . . . ನಯನ ಶ್ರವಣವೇಣಿ (ತೀರ್ಥಮ. ೧೧). [ ನಯನಶ್ರವಣ + ವೇಣಿ ]

**ನಯನಸಂಪ್ರೀತಿ** (ನಾ). ನೋಟ ಮಾತ್ರದಿಂದಲೇ ಉಂಟಾಗುವ ಪ್ರೀತಿ ; ಚಕ್ಷೂರಾಗ : ನಸುನಗುತ ಕಡೆಗಣ್ಣಲಂಗನೆಯೆಸೆವ ಮುಖವನು ನೋಳ್ಪನು . . . ಶಶಿವದನೆ ಯತಿಯಲಿ ಕಟಾಕ್ಷವ ಹಸರಿಸಿದಳಿಂತಿಬ್ಬರಿಗೆ ಮನ ಬೆಸುಗೆವಡೆದುದು ನಯನಸಂಪ್ರೀತಿಯಲಿ ತಮ್ಮೊಳಗೆ (ನಿಭಾಗ. ೧೦-೭೨-೨೫). [ ನಯನ + ಸಂಪ್ರೀತಿ ]

**ನಯನಸಲಿಲ** (ನಾ). = ನಯನಜಲ : ಪ್ರೇಮಪುಳಕದ ನಯನಸಲಿಲದ ರೋಮಹರ್ಷದ ಸತ್ಕಭಾವದ ಭೂಮಿಪತಿ ಮೈಯಿಕ್ಕಿದನು ಮುನಿವರನ ಚರಣದಲಿ (ಕುವ್ಯಾ.ಅ. ೪-೮). [ ನಯನ + ಸಲಿಲ ]

**ನಯನಸುಂದರತೆ** (ನಾ). ನೋಟಕ್ಕೆ ಅಂದವಾಗಿರುವಿಕೆ; ನಯನ ಮನೋಹರತೆ: ಅಳೋಕಪ್ರಿಯಜನನ ನಯನಸುಂದರತೆಯುಂ (ಶಾಂತಿಪು. ೧೨-೧೯ ವ). [ ಸಂ. ನಯನಸುಂದರತಾ ]

**ನಯನಾಂಚಲ, ನಯನಾಂಚಳ** (ನಾ). ಕಣ್ಣಿನ ಕೊನೆ ; ಕಡೆಗಣ್ಣು ; ಕಟಾಕ್ಷ : ತಮ್ಮ ನಯನಾಂಚಲಚಂದ್ರಿಕೆಯಿಂ ನವೇಂದುಕಾಂತದ ಗಿಳಿಯಂತೆ ಕೌತುಕಮನಾ ಕ್ಷಣದೊಳ್ ಕುಡೆ (ಪಂರಾಮಾ. ೧-೧೧೮) ; ವಲ್ಲಭವಾಜವಾರಣಂಗಳ ನಯನಾಂಚಲಂಗಳಿಂ ಗಳಿತಾಶ್ರುಬಿಂದುಗಳನಾನಂದಾಶ್ರುಬಿಂದುಗಳೆಂದುಂ (ಮಹಾನೇ. ೧೩-೪೪ ವ) ; ನಲಿಯುತೆ ನಯನಾಂಚಲವ ಕವಿಸಿ ನಿನಗೊಲಿವನು ಸಂದೆಗವಿಲ್ಲ (ಕರ್ನಾಕ. ೨೨೬). **ನಯನಾಂಚಳ** : ತಳರ್ವೆಳವೆಣ್ಗಳ ನಯನಾಂಚಳರುಚಿಚಂದ್ರಿಕೆಯನಾಂತು . . . ಅಲ್ಲಿಯ ಸೋಮಸೂರ್ಯವೀಧಿಗಳೆಸೆಗುಂ (ರಾಜಶೇ. ೨-೯೦) ; ಸರಾಗನಯನಾಂಚಳ ಮೊಪ್ಪಿರೆ . . . ಎಳೆಯಳೊಱಲ್ದು ಬಂದು ಮಣಿವಾಗಿಲೊಳೀಕ್ಷಿಸಿದಳ್ ಮಹೀಶನಂ (ರಾಜಶೇ. ೭-೯) ; ಸೊಂಪೊದವಿದೊಡಲ ರಾಗನಯನಾಂಚಳ ಮೊಪ್ಪಿರೆ ನೋಡಿದಳ್ ಮನೋಮುದದಿನರಾತಿಭೂಪಚಯಮೌಳಿವಿರಾಜಿತ ಪಾದಪದ್ಮನಂ (ಯಾದಶೆಂ. ೩-೭). [ ನಯನ + ಅಂಚಲ ]

**ನಯನಾಂಚಳ** 'ನಯನಾಂಚಲ' ನೋ.

**ನಯನಾಂಜನ** (ನಾ). ೧. ಕಣ್ಣಿಗೆ ಲೇಪಿಸುವ ಕಾಡಿಗೆ ; ಕಣ್ಕಪ್ಪು : ನಯನಾಂಜನಮಂಜನಮೆನೆ ನಯದಿಂ ಮುಸುಕಿದ ದುಕೂಲಮುಮಿರ್ದಿರೆ ಮೊಗದೊಳ್ ಪ್ರಿಯನಿಧಿಯಂ ಕೃತ್ಯಕುಶೇಶಯಲೋಚನೆ ನೋಡುವಂತೆ ಸೊಗಯಿಸೆ (ಲೀಲಾವ. ೭-೭೮) ; ಖಳರ ಹೃದಯದ ಗರುಡಿ ಘೂಕಾವಳಿಯ ನಯನಾಂಜನ . . . ಅದನೇವೊಗಳುವೆನು ಮಸಗಿತು ತಮಸ್ತೋಮ (ಕುವ್ಯಾದ್ರೋ. ೧೫-೨೮). ೨. ನಿಧಿ, ನಿಕ್ಷೇಪಗಳನ್ನು ಕಾಣುವ ಶಕ್ತಿಯನ್ನು ಕೊಡುವುದೆಂದು ನಂಬಲಾದ ಅಂಜನ ; ಸಿದ್ಧಾಂಜನ. [ ನಯನ + ಅಂಜನ ]

**ನಯನಾಂಬು** (ನಾ). ಕಣ್ಣೀರು ; ಕಂಬನಿ : ಪೊಳೆವಲರ್ಗಂಗಳಿಂ ನಿಳಿರ್ವ ಬೆಳ್ಪು ರಸಾತ್ಮಕಮಾಗಿ ಗಂಡಮಂಡಳತಳದಿಂದಮಿಂದಿಟಾಯುತಿರ್ದಾದೆನಲ್ ನಯನಾಂಬುಲೋಚನಂಗಳನಿರದುಣ್ಗೆ (ಕಾದಂಪೂ. ೬೯೯) ; ಸುರಿವನಯನಾಂಬುಗಳ ಮೂಗಿನ ಬೆರಳ ತೂಗುವ ಮಕುಟದವನೀಶ್ವರನು ಮೌನದೊಳಿದ್ದನೊಂದು ವಿಗಳಿಗೆ ಮಾತ್ರದಲಿ (ಕುವ್ಯಾ.ಸ. ೦೨-೫೫).
[ ನಯನ + ಅಂಬು೩ ]

**ನಯನಾಂಶು** (ನಾ). = ನಯನಮರೀಚಿ : ಶಿಶುಗೆ ನಯನಾಂಶು ದುಗ್ಧ ಪ್ರಸರದೆ ಜನ್ಮಾಭಿಷೇಕಮಂ ಮುನ್ನೊಂದಂ ಪೊಸೆಯಿಸಿ . . . ಇಂದ್ರಾಣಿ ನೆಗಪಿದಳ್ ಕೆಂದಳದಿಂ (ಚಂದ್ರಪು. ೧೨-೫೫) ; ಪೊಣ್ಮೆ ನಯನಾಂಶು ಗಗನಕೆ ತಟಿಲ್ಲತೆಯ ಪರ್ಬಂ ಪಡೆಯಲು ಬರುತಿರ್ದರಖಿಳಸ್ತ್ರೀಯರು (ಅಜಿತಪು. ೫-೧೨). [ ನಯನ + ಅಂಶು ]

**ನಯನಾಕರ್ಷಣವಿದ್ಯೆ** (ನಾ). (ಬೇರೆಯವರ) ನೋಟವನ್ನು ತನ್ನ ಕಡೆಗೆ ಸೆಳೆಯುವ ಕಲೆ,-ಸೆಳೆಯುವಿಕೆ : ನಯನಾಕರ್ಷಣವಿದ್ಯೆ ಗಂಡುವರಿಜಂ ಕೈಕೊಂಡುದೋ . . . ಪೇಟೆಂಬಿನಂ . . . ಪೊಕ್ಕಂ ಸಭಾಸದ್ಮಮಂ (ಪಂರಾಮಾ. ೩-೩೮). [ ನಯನ + ಆಕರ್ಷಣ + ವಿದ್ಯೆ ]

**ನಯನಾಗ್ನಿ** (ನಾ). (ಶಿವನ) ಕಣ್ಣಿನ ಬೆಂಕಿ : ಕಂಡನಾ ಸಮಯದೊಳ್ ಕಮಲಜಂ ಹರಕರದೆ ಖಂಡಿಸಿದ ತನ್ನುತ್ತಮಾಂಗಮಂ ರುಧಿರಜಲಮುಂಡು ಪೋಳಿಸಿದ ನಯನಾಗ್ನಿಯಂ ಪೊಗಳುತಿಹ ಸಕಲವೃಂದಾರಕರನು (ಹಬಪು. ೧೮-೦೬). [ ನಯನ + ಅಗ್ನಿ ]

**ನಯನಾತಿಥಿ** (ನಾ). ನೋಟಕ್ಕೆ ವಸ್ತುವಾದ ವ್ಯಕ್ತಿ ; ಕಣ್ಣಿಗೆ ಕಾಣಿಸುವ ವ್ಯಕ್ತಿ : ಅಂತಾ ಮಹಾತಿಥಿ ನಯನಾತಿಥಿಯಾಗಿರ್ಪುದುಂ (ಪಂರಾಮಾ. ೨-೧೪ ವ) ; ಬಟ್ಟೆಗರಱಿವಟ್ಟೆಗೆಯ ಬಾಲೆಯರ ನಯನಾತಿಥಿಗಳಾದರ್ (ರಾಮಾಶ್ವ. ೫೨-೧೧). [ ನಯನ + ಅತಿಥಿ ]

**ನಯನಾನಂದ** (ಗು). ೧. ಕಣ್ಣಿಗೆ ಸುಖಕರವಾದ ; ಅಂದವಾದ ; ಮನೋಹರವಾದ: ನಯನಾನಂದವಿಳಾಸರೂಪನಮರೀನೀಲಾಲಕಾಲೀಢ ಪಾದಯುಗಂ ಅದೇಂ ನಲಿದನೋ (ಆದಿಪು. ೫-೭೧) ; ನಯನಾನಂದ ಮೃಗಾಂಕಬಿಂಬಮುದಯಂಗೆಯ್ವರ್ಕಜಂಬಂ . . . ಪ್ರಿಯಾಗಳ್ಪಂಗೊಸೆದೀಗೆ ಮಂಗಳಮಹಾಶ್ರೀಯಂ ಜಯಶ್ರೀಯುಮಂ (ಪಂಪಭಾ. ೦೪-೩೫). ೨. ಕಣ್ಣಿಗೆ ಉಂಟಾಗುವ ಆನಂದ ; ನೋಟದ ಸುಖ : ನಯನಾನಂದಮನುಂಟುಮಾಡಿ ಮಧುವಿಂ ಕೈವಂದುದು . . . ಉದ್ಯಾನ ಮಾಲೆಯನಾವಂ ರಸಚಿತ್ರಮಾಗೆ ಬರೆವಂ (ಮಲ್ಲಿಪು. ೫-೪೪) ; ನಯನಾನಂದ ಮನಿತ್ತುದಿಂದ್ರನಟನಪ್ರಾಗಲ್ಭ್ಯದಿಂ . . . ದೇವಕಾಂತೆಯರಲ್ಲಾಡದೆ ಸಂದ ಸೆಳ್ಳುಗುರ ಸೂಚೀನರ್ತನಂ (ಅನಂಪು. ೫-೯೭).
[ ನಯನ + ಆನಂದ ]

**ನಯನಾನಂದಕರ** (ನಾ). ಕಣ್ಣಿಗೆ ಸಂತೋಷವನ್ನುಂಟುಮಾಡುವುದು ; ಅಂದವಾದುದು ; ಸೊಗಸಾಗಿರುವುದು: ನಯನಾನಂದಕರಂ ಸುಖಚಯಸಹಿತಂ . . . ಸಜ್ಜನಚಿತ್ತಪ್ರಿಯಮೆನಲೆಸೆದಿರ್ಪುದಧಿಕಮೆನೆ ಕುಸುಮಪುರಂ (ದಶಕು. ೧-೨೪). [ ಸಂ. ]

**ನಯನಾನಂದನ** (ಗುಂ). ಕಣ್ಣಿಗೆ ಸುಖಕರವಾದ,-ಆಪ್ಯಾಯನವಾದ ; ಅಂದವಾದ : ನಯನಾನಂದನದಾಮಮಂ ಹಿಮಕರಾಂಶೂದ್ದಾಮಮಂ ಕನ್ನೆ ತನ್ನಯ ಕೆಯ್ಯೊಳ್ ಕುಡೆ (ಶಾಂತಿಪು. ೫-೧೬೧). [ನಯನ+ಆನಂದನ]

**ನಯನಾಭಿರಾಮ** (ಗು). (೧). ಕಣ್ಣಿಗೆ ಸುಂದರವಾದ ; ಮನೋಹರ ವಾದ : ನಯನಾಭಿರಾಮದೇಹಂ . . . ನಯವಿನಯನಿತ್ಯಶೀಲಂ ಜಯ ಕಾಂತಾಕಾಂತನಲ್ತೆ ನಳಭೂಕಾಂತಂ (ನಳಚಂ. ೧೩೩). (ನಾ). ೨. ಕಣ್ಣಿಗೆ ಮನೋಹರನಾದವನು ; ಸುಂದರ ; ಒಂದು ಬಿರುದು : ಬಪ್ಪನಂಕ ಕಾರಿಜಂ [ಕುಮಾರ]ಂಕಭೀಮಂ ನಯನಾಭಿರಾಮಂ . . . ಶ್ರೀಮದ್ಭುವ ರಾಜಂ ಮಲ್ಲಿಕಾರ್ಜುನದೇವರು (ಸೌಇಇ. XX. ೬೧-೧೧ ; 1108). ೩. ಕಣ್ಣಿಗೆ ಸುಂದರವಾದುದು ; ಮನೋಹರವಾದುದು : ನಯ ನಾಭಿರಾಮಮೆಂಬುದುಮಿದು ಕೃಷ್ಣನಿರ್ಪ ಪುರಂ (ಮುಹಾನೀ. ೭-೧೩೧).
[ನಯನ + ಅಭಿರಾಮ]

**ನಯನಾಮೃತ** (ನಾ). ಕಣ್ಣಿಗೆ ಅಮೃತಪ್ರಾಯವಾದುದು,-ಆಪ್ಯಾಯ ಮಾನವಾದುದು ; ನೋಟಕ್ಕೆ ಸುಖಕರವಾದುದು : ನಯನಾಮೃತಕ್ಕೆ ಮತ್ತಾರಯೆ ಕರ್ಣರಸಾಯನಕ್ಕೆ ಸುರನರಜನತಾಶಯಸೌಖ್ಯಕ್ಕುದ್ಭವ ಭೂಮಿಯಿದೆನೆ ಸಂಗೀತಭೂತಳಂ ಸೊಗಯಿಸುಗುಂ (ಚಂದ್ರಪು. ೧೫-೭೦).
[ನಯನ + ಅಮೃತ]

**ನಯನಾಶ** (ನಾ). [ಕಾವ್ಯಮೀ] ಕಾವ್ಯದ ಹದಿನೆಂಟು ಬಗೆಯ ದೋಷ ಗಳಲ್ಲಿ ಒಂದು ; ಕವಿಸಂಪ್ರದಾಯಕ್ಕೆ ವಿರುದ್ಧವಾದುದು : ಅಸದರ್ಥಂ ವಿಪರೀತ ಕಲ್ಪನೆಯುಭವ್ಯಂ ದುಷ್ಕರಂ . . ನಷ್ಟಸಮಾಸಂ ನಯನಾಶರೀತಿವಿಫಲಂ ದುರ್ಲಕ್ಷಣಂ ಹಾಸ್ಯವಾಗ್ವಿಷಮಾಸೌಮ್ಯಮ ನೋಜಿಯೆಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೧-೪೭ ಅಡಿಬರಹ). 'ಅಷ್ಟಾದಶದೋಷ', 'ದುರ್ಲಕ್ಷಣ' ಪರಾ.
[ನಯ$_2$ + ನಾಶ]

**ನಯನಾಶ್ರು** (ನಾ). ಕಣ್ಣೀರು ; ಕಂಬನಿ : ಅಲ್ಲಲ್ಲಿ ಶಿವಪುರಾಣಂಗಳಂ ಕೇಳುತಂ ಸಲ್ಲೀಲೆವೆರ್ಚಿ ನಯನಾಶ್ರುವಂ ಸೂಸುತಂ (ತಿರುರ. ದೀ. ೪-೧೫).
[ನಯನ + ಅಶ್ರು]

**ನಯನಾಸ್ಪಂದ** (ನಾ). ಕಣ್ಣುಗಳನ್ನು ಅಲುಗಾಡಿಸುವಿಕೆ (?) : ವಂದಿಸಿ ದರಿವರ್ಕೈವರವರಾನಂದಜಲಪರಿಲುಳಿತ ನಯನಾಸ್ಪಂದ ಪರಿತೋಷದಲಿ ತೆಗೆದಪ್ಪಿದರು ಪಾಂಡವರ (ಕುವ್ಯಾಆ. ೧೭-೩೦). [ಸಂ.]

**ನಯನಿಪುಣ** (ನಾ). ೧. ರಾಜನೀತಿಯಲ್ಲಿ ನುರಿತವನು ; ರಾಜನೀತಿ ಕುಶಲ ; ಕೋವಿದ : ನಯನಿಪುಣರುಪಾಯಚತುಷ್ಟಯದೊಳ್ ಸಾಮ ಮನಗಣ್ಯಷಾಡ್ಗುಣ್ಯದೊಳಾರಯೆ ಸಂಧಿಯಂ ಮೊದಲ್ ಮಾಡಿಯೆ ಪೇಳ್ವರ್ (ಪಾರ್ಶ್ವಪು. ೨-೩೯). ೨. (ಪ್ರಾಣಿಗಳನ್ನು) ತಿದ್ದಿ ಪಳಗಿಸುವ ವಿದ್ಯೆಯಲ್ಲಿ ನಿಷ್ಣಾತನಾದವನು ; ಶಿಕ್ಷಾವಿಧಾನದಲ್ಲಿ ನುರಿತವನು : ನಯನಿಪುಣ ಸೂತ್ರಧಾರರ್ ನಿಯಮಿಸುವರ್ ಭದ್ರಮಂದಮೃಗ ಸಂಕೀರ್ಣಾನ್ವಯದ ನೃಪಕರಿಗಳಂ ಪ್ರಣಿಧಿಯೊಡಂಬಡೆ ಸಕಳಶಿಕ್ಷೆ ಕಣ್ಗೋಚುವಿನಂ (ಪುಷ್ಪಪು. ೨-೫೭). [ನಯ$_2$ + ನಿಪುಣ]

**ನಯನುಡಿ** (ನಾ). ಮೃದುವಾದ ಮಾತು; ಹಿತವಾದ ಮಾತು: ರಾಮನ ಮನವ ನಯನುಡಿಯಿಂದ ತಿಳುಹಿದನು (ಕುವ್ಯಾಗ. ೬-೩೫) ; ಬದ್ಧವಾದ ನಯನುಡಿಯು ಇಲ್ಲದಾತನೆ ಹೊಲೆಯ (ಪುರಂದ. ೧-೧೭೮-೩).
[ನಯ$_1$ + ನುಡಿ$_2$]

**ನಯನೋತ್ಸವ** (ನಾ). =ನಯನಾನಂದ ೨ : ನಯನೋತ್ಸವಮಂ ನವಕಳಿಕೆಯಿನ್ನುದ್ಭವಿಸೆ ಪಳದಿನೀವ ಸಂತಾನದ ಲೀಲೆಯನಾಂತು ಖಚರರಾಜಂ ಸ್ವಯಂಪ್ರಭೆಯುಮಾರ್ಕಕೀರ್ತಿಯುಂಬೆರಸಿರ್ದಂ (ವರ್ಧಪು. ೫-೪೨).
[ನಯನ + ಉತ್ಸವ]

**ನಯನೋತ್ಸವಕರಿ** (ನಾ). ಕಣ್ಣಿಗೆ ಆನಂದವನ್ನುಂಟುಮಾಡುವವಳು : ನಯನೋತ್ಸವಕರಿ ರತಿಪತಿ ಜಯಲಕ್ಷ್ಮೀಸಮಸ್ತಸತ್ಕಳಾಕೋವಿದೆ ಪುಣ್ಯ ಯಶೋರ್ಥಿನಿ ಪೆಸರ್ವೆತ್ತಳ್ ಸ್ವಯಂಪ್ರಭಾದೇವಿ ಯಾತನನುಜಾತೆ ವಲಂ (ವರ್ಧಪು. ೩-೬೩). [ಸಂ. ನಯನೋತ್ಸವಕರೀ]

**ನಯನೋತ್ಸಾಹ** (ನಾ). ಮತ್ತೆ ಮತ್ತೆ ನೋಡಬೇಕೆಂಬ ಆಸೆ ; ನೋಟದ ಆಕರ್ಷಣೆ : ನಯನೋತ್ಸಾಹಮನಿತ್ತು ದೇಹರುಚಿ ಯಿಂದೆಯ್ತಂದನಾಕಾಶಗಂಗೆಯಾ ನೀರ್ಮಾನಿಸನೆಂಬಿನಂ . . . ನಾರದಂ (ಪಂರಾಮಾ. ೩-೧೮). [ನಯನ + ಉತ್ಸಾಹ$_1$]

**ನಯನೋದಕ** (ನಾ). ಕಣ್ಣೀರು; ಕಂಬನಿ: ನಾದಿದಳು ನೃಪನಂಘ್ರಿಯನು ನಯನೋದಕದ ಧಾರೆಯಲಿ (ಕುವ್ಯಾಆ. ೨೦-೬) ; ಕೊರಗಿದಾನನದೊಸರ್ವ ನಯನೋದಕದ ಸುಯ್ಲಿನ ಹಸರಿಕೆಯಲ್ಕೆತಂದರಿರುಳು ದಶಾಸ್ಯನಿದ್ದೆಡೆಗೆ (ತೊರರಾ. ೬-೧೨-೧). [ನಯನ + ಉದಕ$_2$]

**ನಯನೋದ್ಗತ** (ಗು). ಕಣ್ಣಿನಲ್ಲಿ ಹುಟ್ಟಿದ,-ಉಂಟಾದ: ನಯನೋದ್ಗತ ಕುಸುಮಗ್ರಂಥಿಯಲ್ಲಮೊರ್ಮೆಯೆ ತೆರಳ್ದು ಕಿಡುವುದು (ಲೋಕೋಪ. ೯-೭೬). [ನಯನ + ಉದ್ಗತ]

**ನಯನೋದ್ಗಳಿತ** (ಗು). ಕಣ್ಣಿನಿಂದ ಹೊಮ್ಮಿದ,-ಸೂಸಿದ : ನಯ ನೋದ್ಗಳಿತಜಲಧಾರೆಯಲಿ ನೆನೆದುದು ಸಭೆ ವಿಷಾದದಲಿ (ಕುವ್ಯಾಸ. ೧೪-೭೩). [ಸಂ. ನಯನೋದ್ಗಲಿತ]

**ನಯನೋನ್ಮಾದ** (ನಾ). ಕಣ್ಣುಗಳಿಗೆ ನೋಟದಿಂದ ಉಂಟಾಗುವ ಆನಂದಾತಿಶಯ : ನಯನೋನ್ಮಾದಮನೀಯೆ ನುಣ್ಬರಿಜುಗಳ್ ಕಣ್ಬೇ ಟದಿಂ (ಅನಂಪು. ೩-೧೭). [ನಯನ + ಉನ್ಮಾದ]

**ನಯನೋನ್ಮಿಲನ** (ನಾ). ಕಣ್ಣು ತೆರೆಯುವಿಕೆ : ರತಿದೇವಿ ಲೀಲೆಯಿಂ ಪೊಸಪುತ್ಥಳಿ ತಿರ್ದಿ ನಯನೋನ್ಮೀಲನ ಮಾಡಿದಂತಾಯ್ತು (ಶ್ರೀಪಾಲ. ೪-೧೨೪). [ನಯನ + ಉನ್ಮೀಲನ]

**ನಯನೋಪಾಂತ** (ನಾ). ಕಣ್ಣಿನ ಕೊನೆ ; ಕಡೆಗಣ್ಣು ; ಕಟಾಕ್ಷ : "ನಯನೋಪಾಂತಃ ಅಪಾಂಗಃ—ಈ ೨ ಕಡೆಗಣ್" (ಹಲಾಯು. ೮೭-೩೭೭). [ನಯನ + ಉಪಾಂತ]

**ನಯಪಂಡಿತ** (ನಾ). ನೀತಿವಿದ; ವಿವೇಕಿ: ನೀಂ ಪ್ರಾಣಜಂ. ದೇಶಕಾಲಾನು ವೃತ್ತಿಯ ನಯದಿ ನಯಪಂಡಿತಂ (ಶ್ರೀರಾಮಾ. ೩೭೦-೫೪೯).
[ನಯ$_2$ + ಪಂಡಿತ]

**ನಯಮಂತ** (ನಾ). ವಿವೇಕಿ ; ಗುಣವಂತ : ಧಾತ್ರಿಗೆಲ್ಲಮಾಶ್ವರನಾದಂ ಭಯಮುಂ ಲೋಭಮುಮಿಲ್ಲದ ನಯಮಂತ್ರಂ ಪ್ರಜೆಗೆ ನಲ್ಲನಾಹವ ಮಲ್ಲ[ಂ] (ಕೊಲ್ಹಾಶಾ. ೯-೧೧ ; 1147).
[ಆ ಇದು 'ನಯವಂತ' ಎಂಬುದರ ಅಪಲಿಖಿತವಿರಬಹುದು ]

**ನಯಮಜು** (ಕ್ರಿ). ರಾಜನೀತಿಯನ್ನು ತಿಳಿ ; ನೀತಿನಿಪುಣನಾಗಿರು : ಅಡಪವಳಂ ಪಡೆವಳ್ಳಂ ಮಡಿವಳ್ಳಂ ಸೆಜ್ಜೆವಳ್ಳನಜ್ಜಂ ಬೆಜ್ಜಂ ಅಡವಳ ನೆಂದಿಂತಿವರಂ ಕಡಂಗಿ ಬಿಡೆ ಜಡಿಯದಿರ್ಕೆ ನಯಮಜುವರಸಂ (ಕಾವ್ಯಾವ. ೩೨೬). [ನಯ$_2$ + ಅಜಿ]

**ನಯಮಾತು** (ನಾ).=ನಯನುಡಿ : (೬). [ನಯ$_1$ + ಮಾತು$_1$]

**ನಯಮಾರ್ಗ** (ನಾ). [ಜೈನ] ವಸ್ತುವಿನ ಒಂದಂಶವನ್ನು ಮಾತ್ರ ಪರಿಗ್ರಹಿಸಿ ವ್ಯವಹರಿಸುವುದು : ಒಂದಂಶವನ್ನು ಮಾತ್ರ ಪರಿಗ್ರಹಿಸಿ ವ್ಯವಹರಿಸುವುದು ನಯಮಾರ್ಗವು (ಹಿಂದಸಾ. ೭೮). 'ನಯ$_2$' ಪರಾ.
[ನಯ$_2$ + ಮಾರ್ಗ]

**ನಯಮೂರ್ತಿ** (ನಾ). ರಾಜನೀತಿಯೇ ಮನುಷ್ಯಸ್ವರೂಪವನ್ನು ತಾಳಿದಂತಿರುವವನು: ಪ್ರಿಯೆಯು ಬರಪಾರ್ವಪೊಲಪ್ರಿಯ ಗಗನಚರೇಂದ್ರ

ರುಂದ್ರಸೇನೆಯ ಬರಪಾರ್ವಯಮೂರ್ತಿಯುಮಂ ನಯಮೂರ್ತಿಯುಮಂ ಪೊಲ್ಮರನಪಾರಪೌರುಷಪರರಂ . . . ಅಪರಾಜಿತಾನಂತವೀರ್ಯರಂ ಕಂಡು (ಶಾಂತಿಪು. ೩-೬೫). [ ನಯ್ಮ₂ + ಮೂರ್ತಿ ]

**ನಯಯುಕ್ತ** (ನಾ). ನಯಜ್ಞ; ನೀತಿವಂತ; ವಿವೇಕಿ : ನಯಯುಕ್ತರಗ್ನಿವತ್ಸ್ವಾಶ್ರಯಮೇವ ದಹಂತಿ ದುರ್ಜನಾ ಎಂಬುದನಾರಯುದಿರಿಸಿದಂದು ನಮ್ಮನ್ವಯಕಂ ಕೇಡಕ್ಕುಮಿವನನೀಗಳೆ ಕಳೆವೊಂ (ಪಾರ್ಶ್ವಪು. ೪-೬೦).
[ ನಯ್ಮ₂ + ಯುಕ್ತ ]

**ನಯವಂಚಕ** (ನಾ). ಒಳ್ಳೆಯಂತನದ ಸೋಗಿನಲ್ಲಿ ಮೋಸ ಮಾಡುವವನು : ಅವನೊಬ್ಬ ನಯವಂಚಕ (ರೂಢಿ). [ ನಯ್ಮ₂ + ವಂಚಕ ]

**ನಯವಂತ** (ನಾ). ೧. ರಾಜನೀತಿನಿಪುಣ ; ನೀತಿವಿಶಾರದ : ನಯವಂತನಾದೊಡಂ ಕೇಳ್ವುದತಿಹಿತವಚನಮಂ (ಮಹಾವಿ. ೮-೫೧). ೨. ಗುಣವಂತ. 'ನಯವಂತೆ' ಪರಾ. [ ಸಂ. ನಯವತ್ ]

**ನಯವಂತಿಕೆ** (ನಾ). ನಯ ; ಕೋಮಲತೆ ; ಸೌಕುಮಾರ್ಯ ; ಮಾರ್ದವ : ಅವರ ಗಾಯನದಲ್ಲಿ ಬಾಯಿಹಾಡುಗಾರಿಕೆಯ ಎಲ್ಲ ನಯವಂತಿಕೆ, ಚಾತುರ್ಯ ಮತ್ತು ಸೊಗಸುಗಳನ್ನು ಕೇಳಬಹುದಾಗಿತ್ತು (ಸಂಗೀತ. ೬೧). [ ನಯ್ಮ₁ + – ವಂತ + – ಇಕೆ ]

**ನಯವಂತೆ** (ನಾ). ವಿನಯವತಿ ; ಸೌಜನ್ಯಶೀಲೆ ; ಗುಣವಂತೆ : ಆಚಭೂಪನ ಕಾಂತೆ, ದಯಾವಂತೆ ಭಾಗ್ಯವಂತೆ ನಿತಾಂತಂ ಶಾಂತೆ ನಯವಂತೆ ಸತ್ಕುಳವಂತೆ ಮಹಾದೇವಿಯೆಂಬ ಪೆಸರಿಂದೆಸೆದಳ್ (ಎಇ. XX, ೧೨-೧೫; 1167). [ ನಯವಂತ + – ಎ₂ ]

**ನಯವಡೆ** 'ನಯಂಬಡೆ' ನೋ.

**ನಯವರ್ತನೆ** (ನಾ). ಸೌಜನ್ಯದಿಂದ ಕೂಡಿದ ನಡವಳಿಕೆ : ನಿನ್ನ ನುಡಿನುಣ್ಪಿಂಗೆ, ನಿನ್ನ ನಯವರ್ತನೆಗೆ, ನಾಣ್ಚುತಿಹೆನಾಂ (ಶ್ರೀರಾಮಾ. ೪೩೦-೨೬೮). [ ನಯ್ಮ₁ + ವರ್ತನೆ ]

**ನಯವಾದ** (ನಾ). [ಜೈನ] ಲೋಕವ್ಯವಹಾರಕ್ಕಾಗಿ ವಸ್ತುವಿನ ಒಂದು ಅಂಶವನ್ನು ಪರಿಗ್ರಹಿಸಬೇಕೆಂಬ ವಾದ ; ಸಮಗ್ರಜ್ಞಾನವನ್ನು ಪಡೆಯಲು ವಸ್ತುವಿನ ಒಂದೊಂದು ಅಂಶವನ್ನು ಕ್ರಮವಾಗಿ ಗ್ರಹಿಸುವುದು : ನಯವಾದಂ ನಯವಾಗಿ ಕೂಡೆ ಪೊಳೆಯಲ್ . . . ಪೇಟ್ಕರೀಗೆಮಗುಪಾಧ್ಯಾಯರ್ ಸುಖೋಪಾಯಮಂ (ಪುಷ್ಪಪು. ೧-೪) ; ವಸ್ತುವಿನ ಒಂದೊಂದು ಭಾಗ (ಧರ್ಮ)ವನ್ನು ಗ್ರಹಿಸುವ ಜ್ಞಾನವು ಸಂಪೂರ್ಣವಾಗಿ ಪ್ರಮಾಣವಾಗಲಾರದು. ಈ ವಾದಕ್ಕೆ ನಯವಾದವೆಂದು ಹೆಸರು (ಭಾತತ್ತ್ವ. ೨೨೮). 'ನಯ್ಮ₂' ಪರಾ. [ ನಯ್ಮ₂ + ವಾದ₃ ]

**ನಯವಿದ** (ನಾ). ೧. ರಾಜನೀತಿನಿಪುಣ ; ನಯಜ್ಞ : ಸದುದಿತಗುಣನದಟಿಂ ನಯವಿದನಪ್ಪಂ ಕಾಲಮಂ ನೆರಂ ತೋರ್ಕೆ ನೃಪಂ (ಕವಿರಾ. ೩-೧೪೬) ; ಕಾವುದು ನೀನೆಮ್ಮನ್ನಯವಿದ ಧರ್ಮಮಾರ್ಗದಿಂ ಗಜಪ್ಪೆರೀ (ಪಂಚತಂ. ೮೮-೬) ; ನಯವಿದನಂ ಸಾಮದಿನಪನಯನಂ ದಂಡದೊಳಿ ಗೆಲುವುದು (ಪಾರ್ಶ್ವಪು. ೨-೪೨) ; ನಯವಿದರೆಲ್ಲಮಲ್ಲಿಯೆ ಕಳಾನ್ವಿತರಲ್ಲಿಯೆ (ಪುಷ್ಪಪು. ೯-೧೬); ನಯವಿದನು ಹೊಂಬಟ್ಟಲಲಿ ವೀಳೆಯವನನಿಬರಿಗಿತ್ತು . . . ಪಾಳೆಯಕೆ ನೇಮವ ಕೊಟ್ಟನು (ಕುಮಾದ್ರೋ. ೨-೦೨). ೨. ಒಳ್ಳೆಯ ನಡತೆಯಿಂದ ಕೂಡಿದವನು ; ಸದಾಚಾರಸಂಪನ್ನ : ನಯವಿದನಪ್ಪುದಱಿಂ ದುರ್ನಯಮಂ ಬಿಸುಟೇಕಚಿತ್ತದಿಂ ನಂಬಿರ್ದಂ ... ಜಿನಪತಿಯಂ (ಧರ್ಮಾಮೃ. ೧೨-೨೫). ೩. ಸೌಜನ್ಯವುಳ್ಳವನು ; ಮಾರ್ದವದಿಂದ ಕೂಡಿದ ನಡವಳಿಕೆಯುಳ್ಳವನು: ನಯವಿದನೊಪ್ಪುವ ಬಿಯಕಾಜಿನೊಳ್ಪಿದ ಪ್ರಿಯತಮನಾಗೆ ತನ್ನ ಮುನ್ನೋಂತ ನೋಂಪಿಯ ಫಲವೆಸೆ ಬೆಲೆವೆಣ್ಣೆ (ಲೀಲಾವ. ೨-೩೪) ; (ಸೂಕ್ತಿಸು. ೮-೩೪೪ ನೋ) ; ನಯವಿದರಱಿವುದು ರತಿವಿಸ್ಮಯಕೋಪೋತ್ಸಾಹಶೋಕಹಾಸ್ಯಜಂಗುಪ್ಸಾಭಯಮೆಂಬೆಂಟುಂ ಭಾವಪ್ರಯೋಗದೊಳ್ ಸ್ಥಾಯಿಭಾವಮೆನೆ ಪೆಸರ್ವಡೆಗುಂ (ಶೃಂಗಾರ. ೨-೪). ೪. ವಿವೇಚನೆಯುಳ್ಳವನು; ವಿವೇಕಿ: ನಯವಿದನೆ ಲವ ಕೇಳು ಬಾದಳು ಮಯನ ಸುತೆ . . . ಕರ್ಪೂರದಾರತಿಯ ಕೆಂಜೊಡರ ಸೊಂಪಿನಲಿ (ತೊರರಾ. ೬-೪೬-೩೦).
[ ಸಂ. ನಯವಿದ್ ]

**ನಯವಿದೂರ** (ನಾ). ಒಳ್ಳೆಯ ನಡವಳಿಕೆಯನ್ನು ಬಿಟ್ಟವನು : ಚಿತ್ರಾಂಗದ ವಿಕರ್ಣನ ನಯವಿದೂರರ ತಂದರಿಪ್ಪತ್ತೈದು ಸಹಭವರ (ಕುಮಾಆ. ೧೯-೫೨). [ ನಯ್ಮ₂ + ವಿದೂರ ]

**ನಯವಿದ್ಯಾವಿದ** (ನಾ). ನೀತಿಶಾಸ್ತ್ರವನ್ನು ಬಲ್ಲವನು : ನಯವಿದ್ಯಾವಿದರಿಂ ಕವಿಪ್ರಕರದಿಂ ತರ್ಕಜ್ಞರಿಂ . . . ದೇವತಾಲಯದಿಂದೊಪ್ಪುವ ಗುಪ್ತವಂಶವಸುಧಾಧೀಶಾವಳೀರಾಜಧಾನಿಯನುಜ್ಜೈನಿಯನೆಯ್ದಿ ಬಂದನಜಿತಂ (ಪಂಚತಂ. ೧೯೩-೧೫). [ ಸಂ. ನಯವಿದ್ಯಾವಿದ್ ]

**ನಯವಿನಿಮಯ** (ನಾ). ರಾಜರು ಪರಸ್ಪರ ನೀತಿಗಳನ್ನು ತಿಳಿದುಕೊಳ್ಳುವುದು,–ಪರಸ್ಪರ ರಾಜ್ಯಸಂಬಂಧದ ವಿಚಾರವನ್ನು ಅರಿಯುವುದು: ನಯವಿನಿಮಯ ನಾನಾಮಂತ್ರದೂತಪ್ರಯಾಣಾಕ್ಷಯಸಮಯವಿಳಾಸೋಲ್ಲಾಸಿ ಸಂಗ್ರಾಮಿತಾಂಗಂ (ಕವಿರಾ. ೩-೨೦೩). : "ನೀತಿ ವಿನಿಮಯ" (ಕವಿರಾ. ಟಿಪ್ಪಣಿ). [ ನಯ್ಮ₂ + ವಿನಿಮಯ ]

**ನಯವಿವೇಕ** (ನಾ). ಯೋಜನೆಯ ಕುಶಲತೆ : ಮಯನ ಮತದಲಿ ವಿಶ್ವಕರ್ಮನ ನಯವಿವೇಕದಲಮಲ ಮಖಶಾಲೆಯನು ನಿರ್ಮಿಸಿದನು ಸುಲಕ್ಷಣ ಶಾಸ್ತ್ರಸೂತ್ರದಲಿ (ಕುಮಾಸ. ೬-೨೪). [ ನಯ್ಮ₂ + ವಿವೇಕ ]

**ನಯವಿಹೀನೆ** (ನಾ). ಔಚಿತ್ಯವನ್ನು ತಿಳಿಯದವಳು : ಪಾಂಚಾಲಿಯನು ಕರಸಿದಳು ನಯವಿಹೀನೆ ಸುದೇಷ್ಣೆ (ಕುಮಾವಿ. ೩-೧).
[ ಸಂ. ನಯವಿಹೀನಾ ]

**ನಯವೇಱು** (ಕ್ರಿ). ಕಳೆಯೇರು ; ಅಂದ ಹೆಚ್ಚಾಗು ; ಸೊಗಸಾಗು : ಉದಯಗಿರೀಂದ್ರಮನಿನನೇಱೆ ಸರೋಜಸಮಿತಿ ನಯವೇಱುವವೊಲ್ (ಚಂದ್ರಪು. ೬-೨) ; ಅಂತರಂಗದ ಗರ್ಭವೊಡನೊಡನೆ ಬೆಳೆವುತಿರೆ ಅಂಗಲತೆ ನಯವೇಱೆ ಬೇಱೊಂದು ಚೆಲುವಾಗೆ (ಬಸರ. ೧-೧೧೬).
[ ನಯ್ಮ₁ + ಏಱು₁ (< ಏಱ್₁ ) ]

**ನಯಶಟ್ಕ** (ನಾ). ಒಂದು ಊರಿನ ಹೆಸರು : ಶ್ರೀ[ಪ್ರಥುವೀವಲ್ಲಭ] ಮಹಾರಾಜಾಧಿರಾಜಪರಮೇ[ಶ್ವರ] ಪರಮಭಟ್ಟಾರಕಂ ನಯಶಟ್ಕ ಪುರವರೇಶ್ವರಂ (ಸೌಇಇ. XX, ೧೯-೭ ; 1016). [ ? ]

**ನಯಶಾಲಿ** (ನಾ) ೧. ನೀತಿನಿಪುಣ ; ನಯಜ್ಞ : ವೀರನುದಾರಂ ಶುಚಿ ಗಂಭೀರಂ ನಯಶಾಲಿ ಕೈದುವೊತ್ತಂ ದೇವಂಗಾರೆಜಿಗರ್ ನೃಪತುಂಗಂಗೆ (ಶಮುದ್ರ. ೧೪೦ ಪ್ರಯೋ). ೨. ಒಳ್ಳೆಯ ನಡತೆಯುಳ್ಳವನು; ಸದಾಚಾರಿ: ನಯಶಾಲಿ ವತ್ಸಗೋತ್ರಶ್ರಯಣೀಯನನೇಕಸಕಳಶಾಸ್ತ್ರಾರ್ಥವಿನಿಶ್ಚಯ ಮತಿಕೃತಿ ಮಾಧವಸೋಮಯಾಜಿ ಸಲೆ ನೆಗಟ್ದ (ಪಂಪಭಾ. ೧೪-೪೨). ೩. ವಿನಯಶಾಲಿ ; ಸೌಜನ್ಯಶೀಲ : ನಯಶಾಲಿಯಾದವ ಜಯಶಾಲಿಯಾದಾನು (ಗಾದೆ). [ ಸಂ. ನಯಶಾಲಿನ್ ]

**ನಯಶಾಸ್ತ್ರ** (ನಾ). ರಾಜನೀತಿ ; ರಾಜ್ಯಭಾರದ ಕ್ರಮವನ್ನು ಕಲಿತ ಶಾಸ್ತ್ರ : ನಯಶಾಸ್ತ್ರಕ್ರಮದಿಂ ವಿರೋಧಿನೃಪರಂ ಗೆಲ್ದು (ಪಂಚತಂ. ೧೬-೨೦); ನಯಶಾಸ್ತ್ರಂ ಧರ್ಮಶಾಸ್ತ್ರಂ ಕರತಳಕಳಿತವ್ಯಕ್ತಮುಕ್ತಾಫಳಂ . . . ಮದೀಯಾನ್ವಯರಾಜ್ಯಶ್ರೀಲತಾಲಂಬನಮೆನೆ ನೆಗಟ್ದಿಲ ಪುತ್ರ ನಿನ್ನನ್ನನಾವಂ (ಮಲ್ಲಿಪು. ೯-೮೬) ; ನಯಶಾಸ್ತ್ರಾನೀಕಮಾಕಾರಮನೆ ಪಡೆದುದೆಂಬಂತೆ ಸನ್ಮಂತ್ರಿವಿಖ್ಯಾತಿಯನಾದಂ ತಾಳ್ದ ಮಂತ್ರೀಶ್ವರತತಿ (ಶಾಂತೀಶ್ವ. ೧೫-೮೬) ; ಸಂಸ್ಥಾನವನ್ನು ನೀತಿಯುಕ್ತ ಮಾಡಲಿಕ್ಕೆ ನಯಶಾಸ್ತ್ರವಾಯಿತು (ವಿಚಾಮಂ. ೪೫). [ ನಯ್ಮ₂ + ಶಾಸ್ತ್ರ ]

**ನಯಸಂಪನ್ನ** (ನಾ). ನೀತಿವಂತ ; ನಯವಿದ : ನಯಸಂಪನ್ನನಶೀವ ಯುವ್ವನಯುತಂ ರೂಪಾನ್ವಿತಂ . . . . ಸಂಭೋಗಸಂಪ್ರಿಯನುತ್ಸಾಹಿ ಯೆನಿಪ್ಪನೊಳ್ನೆರೆವ ವೇಶ್ಯಾ ರಂಭೆಯೇಂ ಸಾಟಿಯೇ (ರಾಜಶೇ. ೧೦-೧೩೦) ; ನಯಸಂಪನ್ನನಧೀತಶಾಸ್ತ್ರನಿಚಯಂ ನಾನಾಕಲಾಶಾಲಿ . . . ಬಲದೇವ ನೆಂಬನನಘಂ ಗಾಂಭೀರ್ಯರತ್ನಾಕರಂ (ವೃಷವಿ. ೪-೯೭).

[ ನಯ$_2$ + ಸಂಪನ್ನ ]

**ನಯಸಪ್ತಭಂಗಿ** (ನಾ). [ಜೈನ] ಏಳು ಬಗೆಯಾಗಿ ನಿರೂಪಿಸಬಹುದಾದ ವಸ್ತುವಿನ ಒಂದು ಧರ್ಮವನ್ನು ಮಾತ್ರ ಹೇಳುವುದು : ನಯಸಪ್ತ ಭಂಗಿಯೊಳೇವಕಾರವಿಶೇಷವುಕ್ಕುಮೆಂದಱಿದುಕೊಂಬುದು (ಪಸಾರ. ೧೦೦) ; ಸಪ್ತಭಂಗಿಯು ಪ್ರಮಾಣಸಪ್ತಭಂಗಿಯೆಂದೂ ನಯಸಪ್ತಭಂಗಿಯೆಂದೂ ಎರಡು ವಿಧ . . . ನಯಸಪ್ತಭಂಗಿಯೆಂದರೆ ವಸ್ತುವಿನ ಒಂದು ಧರ್ಮವನ್ನು ಬೋಧಿಸುವ ವಾಕ್ಯ ಎಂದರ್ಥ (ಭಾಶತ್ತ್ವ. ೩೪೭).

[ ನಯ$_2$ + ಸಪ್ತಭಂಗಿ ]

**ನಯಸರ** (ನಾ). ಮೃದುವಾದ ದನಿ ; ಇಂಪಾದ ಸ್ವರ ; ಮಧುರವಾದ ಧ್ವನಿ : ಮೊರೆವ ತುಂಬಿಯ ಗಾಯಕರ ನಯಸರದ ಕೋಕಿಲಪಾಠಕರ . . . ಚಾತುರ ವಸಂತನೃಪಾಲ ನಡೆದನು ಪಾಂಡುವಿನ ಮೇಲೆ (ಕುವ್ಯಾಆ. ೩-೭) ; ಬೀಱುತಿರ್ದವು ನಯಸರವ ಮದವೇಱಿದೆಳೆಗೋಗಿಲೆಗಳೊಳು ನುಡಿದೋಱುತಿರ್ದವು ರಾಜಕೀರ (ತೊರರಾ. ೩-೧-೩೯).

[ ನಯ$_1$ + ಸರ$_2$ ]

**ನಯಸಾಣೆ** (ನಾ). ನಯವಾಗುವಂತೆ ಮಾಡುವುದಕ್ಕಾಗಿ ಉಜ್ಜುವಿಕೆ ; ಸಾಣೆಕಲ್ಲಿನಿಂದ ನಯ ಮಾಡಿದ ಸ್ಥಿತಿ : ಬೆಳ್ಳಕ್ಕದ ತುಂಬುವೆಱೆ ಗಳನೊಟ್ಟಿಸಿ ಮೂಸೆಯೊಳಿಟ್ಟು ತಿದಿಯೊತ್ತಿ ಕರಗಿಸಿಯುಂ . . . ನಯಸಾಣೆ ವಿಡಿದುಂ ಸಮೆದುದೆಂಬಂತಿರೆ ತಟತಟನೆ ಪೊಳೆದು ಬಿತ್ತರಂಬಡೆದ ಬಿದುಗಲ್ಲ ಸುತ್ತಣ ಮೆಟ್ಟಡಿಯಿರೆ (ರಾಮಾಶ್ವ. ೩೨-೧೭). [ ನಯ$_1$ + ಸಾಣೆ ]

**ನಯಸಾಧ್ಯ** (ನಾ). ಒಳ್ಳೆಯ ಮಾತಿನಿಂದ ವಶನಾಗುವವನು ; ಸಾಮೋಪಾಯಕ್ಕೆ ವಶನಾಗುವವನು: ವನಜಲಕೇಳಿಯರ್ಥಿಯೊಡೆಯುಂ ನಯಸಾಧ್ಯನಥೋವಲೋಕನಂ . . . ಕುಬ್ಜಶರೀರಿ ಕುಳೀರಸಂಭವಂ (ಜಾತಿ. ೧೭-೪). [ ನಯ$_2$ + ಸಾಧ್ಯ ]

**ನಯಹೀನ** (ನಾ). ೧. ವಿವೇಕಶೂನ್ಯನಾದವನು ; ಅವಿವೇಕಿ : ನಯಹೀನನಾದ ನತನಾಥನಾಳುವ ನಾಡು ದಯೆಯಿಲ್ಲದಾ ತಪಸಿ ಮಾಡುವ ತಪಂ . . . ಲಯವಾಗದೇ (ಸಮ್ಯಕ್ತ್ವ. ೪-೧೪). ೨. ಸೌಜನ್ಯವಿಲ್ಲದವನು; ಸಭ್ಯತೆಯಿಲ್ಲದವನು : ನಯಹೀನರ್ಪಿಡಿದೊತ್ತಿ ಕೆನ್ನವರೆಗಂ ಕರ್ಣಂಗಳಂ ಕೊಯ್ದು ನಿರ್ದಯದಿಂ ಪೀಡಿಸಿ (ಸುಕುಮಾ. ೬-೨೯).

[ ನಯ$_2$ + ಹೀನ ]

**ನಯಾಂಕವಚಸ್ಕ** (ನಾ). ರಾಜನೀತಿಯನ್ನು ಅರಿತ ಮಾತುಗಾರ : ಸಮದರ್ಶಿ ಸದ್ಗುಣಯುತಂ ಸತ್ಕೀರ್ತಿಯುಕ್ತಂ ನಯಾಂಕವಚಸ್ಕಂ ಪತಿಮೋಹಿನಾಮದಿನಲಂಪಿಂ ಮಂತ್ರಿಪಂ ರಂಜಿಪಂ (ರಾಜಶೇ. ೩-೨೨).

[ ಸಂ. ]

**ನಯಾಗಮ** (ನಾ). ನೀತಿಶಾಸ್ತ್ರ : ಮತಿಹೀನರಪ್ಪ ಮನುಜರ್ ಪತಂಗ ವೃತ್ತಿಯನೆ ಕೊಂಡು ಕೊಪೆಯುತ್ತಿರ್ಪರ್ ಸತತಮದೆಂತುಂ ವಿಬುಧ ಪ್ರಕೃತಿಗನಿಷ್ಟಂ ನಯಾಗಮಕ್ಕೆ ವಿರುದ್ಧಂ (ಪಂಚತಂ. ೨೦೭-೪).

[ ನಯ$_2$ + ಆಗಮ ]

**ನಯಾನುಗಾಮಿ** (ನಾ). ರಾಜನೀತಿಗೆ ಅನುಗುಣವಾಗಿ ನಡೆಯುವವನು, ವರ್ತಿಸುವವನು: ನಯಾನುಗಾಮಿಗಳು ದೇಶ ಕಾಲಾವಸ್ಥೆಗಳನ್ನು ನೋಡಿ ತಾನೇ ಕಾರ್ಯವನ್ನು ತೋರಿಸುವುದು (ಭಾಸನಾ. ೪೩).

[ ಸಂ. ನಯಾನುಗಾಮಿನ್ ]

**ನಯಾನ್ವಿತ** (ನಾ). ನೀತಿಯಿಂದ ಕೂಡಿರುವವನು : ರಾಜನೀತಿನಿಪುಣ : ನಯಮೆಸೆಯೆ ನೆಗಟ್ದ ಶಕ್ತಿತ್ರಯದೊಳ್ ಪ್ರಭುಶಕ್ತಿ ಎಸೆವವೋಲೆಸೆದಂ ತಶ್ಶಿಯುತನಯ[ಮ್ರ್ಯ]ವರೊಳಂ ನಯಾನ್ವಿತಂ ಕಾಳಿದಾಸದಣ್ಡಾಧೀಶ[ಂ] (ಕಇಅ. ೩-೨-೭೦ ; 1058). [ ನಯ$_2$ + ಅನ್ವಿತ ]

**ನಯಿಂದ** 'ನಾವಿದ$_1$' ನೋ.

**ನಯಿಸು** (ಕ್ರಿ). ಮಾಡು ; ಯೋಜಿಸು (?) : ಜಾಯೆ ನಿಜವಲ್ಲಭನಂ ರತಿಕೇಳಿಯೊಳ್ ಮನಂಬಯಸಿದ ಹಾಗೆ ತರ್ಜನ ವಿಡಂಬನ ಗರ್ಹಣ ತಾಡನಾದಿಯಂ ನಯಿಸಲ್ ಅದೇಂ ವಿರೋಧಮೋ (ಕಕಕ. ೬೮).

[ ನಯ$_2$ + – ಇಸು$_3$ ]

**ನಯಿತಾಲೀಂ** (ನಾ). ಹೊಸ ಶಿಕ್ಷಣ ಪದ್ಧತಿ ; ಕ್ರಿಯಾತ್ಮಕಶಿಕ್ಷಣ ; ಮೂಲಶಿಕ್ಷಣ : ಮಹಾತ್ಮಾಗಾಂಧಿಯವರು ಕ್ರಿಯಾತ್ಮಕಶಿಕ್ಷಣಪದ್ಧತಿ ಯನ್ನು (Basic Education) ನಿರ್ಮಿಸಿದರು . . . ಅದನ್ನು "ನಯಿತಾಲೀಂ" ಎಂದು ಕರೆದರು (ಕ್ರಿಯಾಶಿ. ೧೩೩).

[ ←ಹಿಂ. ನಯಿತಾಲೀಮ್ ]

**ನಯುತ** (ನಾ). [ಜೈನ] ಕಾಲಗಣನೆಯ ಅಪರಿಮಿತವಾದ ಒಂದು ಪರಿಮಾಣ, –ಅವಧಿ : ಹದಿನೈದು ದಿನಗಳಿಂದ ಒಂದು ಪಕ್ಷವು, ಎರಡು ಪಕ್ಷಗಳಿಂದ ಒಂದು ಮಾಸವು, ಎರಡು ಮಾಸಗಳಿಂದ ಒಂದು ಋತುವು. ಮೂರು ಋತುಗಳಿಂದ ಒಂದು ಅಯನವು, ಎರಡು ಅಯನಗಳಿಂದ ವರುಷವು, ಐದು ವರುಷಗಳಿಂದ ಯುಗವು, ಎಂಬತ್ತುನಾಲ್ಕುಲಕ್ಷ ವರುಷಗಳಿಂದ ಪೂರ್ವಾಂಗವು, ಎಂಬತ್ತುನಾಲ್ಕುಲಕ್ಷ ಪೂರ್ವಾಂಗಗಳಿಂದ ಒಂದು ಪೂರ್ವವು, ಎಂಬತ್ತುನಾಲ್ಕು ಪೂರ್ವಗಳಿಂದ ನಯುತಾಂಗವು, ಎಂಬತ್ತುನಾಲ್ಕುಲಕ್ಷ ನಯುತಾಂಗಗಳಿಂದ ನಯುತವು (ಜೈನಪ. ೩೦೭).

[ ಸಂ. ]

**ನಯುತಾಂಗ** (ನಾ). [ಜೈನ] ಕಾಲಗಣನೆಯ ಅಪರಿಮಿತವಾದ ಒಂದು ಅವಧಿ : ಎಂಬತ್ತುನಾಲ್ಕುಲಕ್ಷ ವರುಷಗಳಿಂದ ಪೂರ್ವಾಂಗವು, ಎಂಬತ್ತು ನಾಲ್ಕು ಲಕ್ಷ ಪೂರ್ವಾಂಗಗಳಿಂದ ಒಂದು ಪೂರ್ವವು, ಎಂಬತ್ತುನಾಲ್ಕು ಪೂರ್ವಗಳಿಂದ ನಯುತಾಂಗವು, ಎಂಬತ್ತುನಾಲ್ಕುಲಕ್ಷ ನಯುತಾಂಗಗಳಿಂದ ನಯುತವು (ಜೈನಪ. ೩೦೭). 'ನಯುಂತ' ಪರಾ. [ ನಯುತ + ಅಂಗ$_2$ ]

**ನಯೋಕ್ತಿ** (ನಾ). ವಿನಯದಿಂದ ಕೂಡಿದ ನುಡಿ : ಹಗಲು ಕತ್ತಲೆ ಯಾಹುದು ಕತ್ತಲೆ ಹಗಲಹುದು ತಾನಿದುವೆ ಸಲೆ ಸೋಜಿಗವಲಾ ನೀ ನೋಡಿಕೋಯೆಂದರು ನಯೋಕ್ತಿಯಲಿ (ತೊರರಾ. ೬-೧೨-೩).

[ ನಯ$_2$ + ಉಕ್ತಿ ]

**ನಯೋದಯ** (ನಾ). ರಾಜನೀತಿಯ ಏಳ್ಗೆ, –ವೃದ್ಧಿ : ಜಯವೊಡ ವುಟ್ಟಿದುದು ನಯೋದಯವೊಡವಳೆದುದು ವಿಳಾಸವೊಡನಾಡಿದುದನ್ವಯ ದೊದವು ತಾಯುಮಂ ತಂದೆಯುಮಂ ತಣ್ಪಿದುದು (ಶಾಂತಿಪು. ೧–೭೮).

[ ನಯ$_2$ + ಉದಯ ]

**ನರ$_1$** 'ನರವು' ನೋ.

**ನರ$_2$** (ನಾ). ೧. ಮನುಷ್ಯ ; ಮಾನವ ; ಪುರುಷ : "ಮನುಷ್ಯಾಃ, ಮಾನುಷಾಃ, ಮರ್ತ್ಯಾಃ . . . ಪೂರುಷಾಃ, ವಿಟ್ – ಈ ೧೨ ಮಾನಸರ್" (ಹಲಾಯು. ೩೫-೧೭೬) ; ನರಖಚರನಿಶಾಚರರಾದರದಿಂ ಬೆಸಕೆಯ್ಯೆ (ನೇಮಿಪು. ೧೪-೮೨) ; ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಿಲಿವರಯ್ಯಾ . . . ಮೊಲನಿಂದ ಕರಕಷ್ಟ ನರನ ಬಾಳುವೆ (ಬಸವ. ೧೫೮) ; ದುಗ್ಧೋದಧಿತಲ್ಪನಂ ನರನಭಿಷ್ಟುತಿಗೆಯ್ವುದು ಧಾರ್ಷ್ಟ್ಯಮಲ್ಲವೇ (ಜಗವಿ. ೧-೩೦); ನರಕರಿತುರಗವರೂಥೋತ್ಕರ ಸರಭಸಗಮನದಿನೊಗೆವ ರೇಣುವ್ರಜ ಮಂಬರದತ್ತಭಿಮುಖಮಾಗುತ್ತಿರೆ (ಕುಸುಮಾ. ೪-೧೦೩) ; ನರರನ್ನರಿಲ್ಲಾ ಇತ್ತು ಮಂಥರೆಯ ಲೋಕಕ್ಕೆ (ಶ್ರೀರಾಮಾ. ೨೭-೭೦೭). ೨. ಅರ್ಜುನನ

ಹೆಸರುಗಳಲ್ಲಿ ಒಂದು : ನರನಂ ಮುಂ ಕೊಲ್ವೆನಾಂ ಕರ್ಣನನಟ್ಟಿದುದಟಿಂ ಕೊಲ್ವೆನಾ ಭೀಮನಂ ಸಂಗರದೊಳ್ ಸೀಳ್ದಿಟ್ಟ ದುಶ್ಶಾಸನನಟಲನದಂ ನೀಗುವೆಂ (ಪಂಪಭಾ. ೧೩-೩೦) ; ನರನುಂ ನಾರಾಯಣನುಂ ಪರಿಕಿಸ ಲೆಂದೆನುತುಮಿರ್ಪುದೀ ಧರೆ (ನೇಮಿಪು. ೧೧-೧೩೪) ; ನರ ಕೊರಂಬಿನಲೆಚ್ಚ ಆವಂಗೊಲಿದೆಯಯ್ಯಾ (ಬಸವ. ೬೩). ೩. ಒಬ್ಬ ಋಷಿಯ ಹೆಸರು ; ☞ ಸ್ವಾಯಂಭುವ ಮನ್ವಂತರದಲ್ಲಿ ಧರ್ಮಮುನಿಯ ಇಬ್ಬರು ಪುತ್ರರಲ್ಲಿ ಹಿರಿಯವ. ವಿಷ್ಣು ಹಿರಣ್ಯಕಶಿಪುವನ್ನು ಸಂಹರಿಸಿದ ಬಳಿಕ ಆತನ ಸಿಂಹರೂಪ ನಾರಾಯಣನಾಗಲು,ಮನುಷ್ಯರೂಪ ನರನೆಂದು ಪ್ರಖ್ಯಾತಿಗೊಂಡಿತು. 'ನರನಾರಾಯಣಾಶ್ರಮ' ಪರಾ. ೪. ಒಬ್ಬ ಮನುಷ್ಯನ ಆಳತೆ; ಒಬ್ಬ ಪುರುಷನ ಎತ್ತರ. ೫. (?) : ನರನಾಗ ಶೈಲಸಪ್ತಂ ಷಡುರುತು ಶರಬಾಣ ಶರಧಿವಾರುಧಿ ಮತ್ತಾ ಅನಲಾಗ್ನಿ ನಯನಲೋಚನ ಹಿಮಕರ ಶಶಿಯನ್ನು ನಿಧಿಯೊಳುಳಿವದು ಮತ್ತಾ (ಭಾಸ್ಕರ. ೪೪-೫). [ ಸಂ. ]

**ನರಂ** 'ನರಮ್' ನೋ.

**ನರಂಜಿಬಳ್ಳಿ** (ನಾ). ಒಂದು ಬಗೆಯ ಬಳ್ಳಿ : ನರಂಜಿಬಳ್ಳಿ, ಹಸುರಾಣಿ ಬಳ್ಳಿ, ಭೂಚಕ್ರ ಬಳ್ಳಿ (ವೃಷಿಗಿ. ೨೪-೪೪೪). [ ನರಂಜಿ + ಬಳ್ಳಿ ]

**ನರಕ** (ನಾ) ೧. ಪಾಪ ಮಾಡಿದವರನ್ನು ಮರಣಾನಂತರ ಯಮ ಲೋಕದಲ್ಲಿ ಶಿಕ್ಷೆಗೆ ಗುರಿಪಡಿಸುವ ಸ್ಥಳವೆಂದು ಭಾವಿಸಲಾದ ಲೋಕ; ಯಮಧರ್ಮರಾಯನ ಆಳ್ವಿಕೆಗೊಳಗಾಗಿದೆಯೆಂದು ನಂಬಲಾದ ಲೋಕ; ಅಧೋಲೋಕ ; ☞ ಸ್ವರ್ಗ ಭೂಮಿಯ ಮೇಲ್ಭಾಗದಲ್ಲೂ ನರಕ ಭೂಮಿಯ ಕೆಳಭಾಗದಲ್ಲೂ ಇದೆ ಎಂಬ ನಂಬಿಕೆ ಇದೆ. ಇಲ್ಲಿ ಕೊಡುವ ಶಿಕ್ಷೆಗಳ ವಿವರದಿಂದ ಜನರು ಪಾಪಕ್ಕೆ ಹೆದರುತ್ತಾರೆಂದು ಜನಸಾಮಾನ್ಯರ ನಂಬಿಕೆ. ಮುಖ್ಯವಾದ ೨೮ ನರಕಗಳನ್ನು ಇಲ್ಲಿ ಹೆಸರಿಸಿದೆ. ಇವುಗಳ ಹೆಸರು ಮತ್ತು ಸಂಖ್ಯೆಗಳ ವಿಷಯದಲ್ಲಿ ಆಕರ ಗ್ರಂಥಗಳಲ್ಲಿ ವ್ಯತ್ಯಾಸವು ಕಂಡುಬರುತ್ತದೆ. ೧. ತಾಮಿಸ್ರ. ೨. ಅಂಧ ತಾಮಿಸ್ರ. ೩. ರೌರವ. ೪. ಮಹಾರೌರವ. ೫. ಕುಂಭಿಪಾಕ. ೬. ಕಾಲಸೂತ್ರ. ೭.ಅಸಿಪತ್ರವನ. ೮. ಸೂಕರಮುಖ. ೯. ಅಂಧ ಕೂಪ. ೧೦. ಕೃಮಿಭೋಜನ. ೧೧. ಸಂದಂಶ. ೧೨. ತಪ್ತಸೂರ್ಮಿ ೧೩. ವಜ್ರಕಂಟಕ. ೧೪. ಶಾಲ್ಮಲಿ. ೧೫. ವೈತರಣಿ. ೧೬. ಪೂಯೋದ ೧೭.ಪ್ರಾಣರೋದ. ೧೮.ವಿಶಸನ. ೧೯.ಲಾಲಾಭಕ್ಷ್ಯ. ೨೦.ಸಾರಮೇ ಯಾದನ. ೨೧. ಅವೀಚಿ. ೨೨. ಅಯಃಪಾನ. ೨೩. ಕ್ಷಾರಕರ್ದಮ. ೨೪. ರಕ್ಷೋಗಣಭೋಜನ. ೨೫. ಶೂಲಪ್ರೋತ. ೨೬. ದಂಶಶೂಕ. ೨೭. ಪರ್ಯಾವರ್ತನ. ೨೮. ಸೂಚೀಮುಖ: "ನಿರಯಃ, ದುರ್ಗತಿಃ-ಈ ೨ ನರಕಂ" (ಹಲಾಯು. ೦೦೩-೩) ; ನರಕವ್ಯಾವರ್ಣನೆಯನಾ ಭಟಾರ ರಿಂತೆಂದು ಪೇಟ್ವುದುಂ ಕೇಳ್ದಂ (ವಡ್ಡಾರಾ. ೦೩೭-೧೨) ; ನರಕದೊಳಿಪ್ಪುದ ದುಃಖಾಂತರಮಂತದು ಬಗೆವೊಡಾರ್ಗಗುರ್ವಲ್ತೆ (ಆದಿಪು. ೯-೪೭) ; ನರಕ ದೊಳಡಿಗಡಿಗೆ ಮಹಾದುರಿತದ ಫಲದಿಂದೆ ಬಿರ್ದು ನವೆವರ್ (ಧರ್ಮಾಮೃ. ೧೪-೦೩೪) ; ಆಚಾರವೆ ಸ್ವರ್ಗ ಅನಾಚಾರವೇ ನರಕ (ಬಸವ. ೨೩೯) ; ನರಕದ ವಿಚಿತ್ರದುಃಖೋತ್ಕರಮಂ ತಾವುಣುತುಮಿದಿರುಮಂ ಬಾಧಿಸುವರ್ (ವರ್ಧಪು. ೧೧-೩೩)"; ಹಿಂಸಾಪರನ ಹಿಸುಣನ ಶಠನ ಕೃಪಣನ ನರಕವಾಗಲಿ ಕೊಲ್ಲದಿದ್ದರೆ ನಾಳೆ ಸ್ಯೆಧವನ (ಕುಮಾ.ದ್ರೋ. ೬-೩೭); ರಾಜರಾದವರೆಲ್ಲರೂ ನರಕವನ್ನು ನೋಡಲೇಬೇಕು (ವಚಭಾ. ೩೯೧). ೨. ಪಾಪ ಮಾಡಿದವರು ಮರಣಾನಂತರ ನರಕಲೋಕದಲ್ಲಿ ಅನುಭವಿಸುವ ದಂಡನೆ.-ಶಿಕ್ಷೆ : ನರಕವ ಮುನ್ನಲುಂಡು ಏರಿದಾಗಿಹ ಧರ್ಮವನೆಯ್ದಿದರ್ಪ ಭೂಸುರರುಂ (ನನ್ನಚಾ. ೭-೧೯೫). ೩. ಒಬ್ಬ ರಾಕ್ಷಸನ ಹೆಸರು ; ☞ ವರಾಹಾವತಾರ ಮಾಡಿದ ವಿಷ್ಣುವಿನ ಬೆವರು ಭೂಮಿಯ ಮೇಲೆ ಬೀಳಲು ಅಲ್ಲಿ ಜನಿಸಿ, ಪ್ರಾಗ್ಜ್ಯೋತಿಷ ಪಟ್ಟಣದಲ್ಲಿ ರಾಜನಾಗಿದ್ದನು. ಕೊನೆಗೆ ಕೃಷ್ಣನಿಂದ ಸಂಹಾರವಾದನು : ನರಕನಾತಂ . . . ದಶಾಸ್ಯಾದಿಗಳಂ ಬಲಾಧಿಕಂ (ಜಗವಿ. ೧-೬೯). 'ನರಕಮರ್ದನ' ಪರಾ. ೪. [ಜೈನ] ನರಕ, ತಿರ್ಯಂಚ, ಮನುಷ್ಯ ಮತ್ತು ದೇವ ಎಂಬ ಚತುರ್ಗತಿಗಳಲ್ಲಿ ಒಂದು : ನರಕಾದಿ ಚತುರ್ಗತಿಯೊಳ್ ಬೆರಸಿದ ಜೀವಸ್ವರೂಪ ಭೇದಮನಾ ಜಿನವರಂ . . . ಪೇಟ್ದುತ್ತಿರ್ದಂ (ಶಾಂತಿಪು. ೧೭-೨೭೭). ೫. [ಜೈನ] ರತ್ನಪ್ರಭೆ, ಶರ್ಕರಾಪ್ರಭೆ, ವಾಲುಕಾಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಃಪ್ರಭೆ ಮತ್ತು ಮಹಾತಮಃಪ್ರಭೆ ಎಂಬ ಏಳು ನರಕಗಳು : ಏಟನೆಯಾ ನರಕದಾ ಪುಟು ಅಕು(ಕ್ಕು)ಮ್ (ಇಆ. X, ೬೦-೯; 878) ; ಏಟಿಂಬ ನರಕಮಾವುದೊ ಪೇಟಿಂಬ ದುರಂತದುಃಖ ದೊಳ್ ಕೆಳಿಸಿ ನಿಂದೆಟುಂ ಶರೀರಧಾತುಗಳೆಟುಂ ನರಕಂಗಳವಟ್ಟೊಳೇ ಗುಂದದವೋಲ್ (ಅಜಿಪು. ೨-೫೪) ; ನರಕಗತಿಯಲ್ಲಿ ರತ್ನಪ್ರಭೆ . . . ಮಹಾತಮಪ್ರಭೆಯೆಂಬೇಟುಂ ನರಕಂಗಳಕ್ಕುಂ (ಪಸಾರ. ೧೪೭). ೬. (ಆಲಂ) ಅಮೇಧ್ಯ : ನರಕದ ನೆಲೆ ಪೇಸಿಕೆಗಳ ಕರು ಮಸಣದ ಪುಟ್ಟು ಪಾಪದೆಟೆ ಪಾತಕದಾಗರಮದು ನೆನೆವರ್ಗೆ ಭಯಂಕರವತಿಪಾಪಕರ ಮಾದುದುದ್ವೇಗಕರಂ (ಅದಂ. ೭೪೭). ೭. ದುಃಖ ; ಯಾತನೆ ; ಕ್ಲೇಶ : ನಾಲ್ಕುಗೋಡೆಗಳ ಮಧ್ಯದಲ್ಲಿ ನಾನು ಕಂಡ ನರಕದ ಅರಿವು ಈ ಬಾಹ್ಯ ಪ್ರಪಂಚಕ್ಕಿದೆಯೇ ? (ಕಾವೇರಿ. ೧೯೫). [ ಸಂ. ]

**ನರಕಂಬುಗು, ನರಕಂಬೊಗು** (ಕ್ರಿ). ನರಕವನ್ನು ಪ್ರವೇಶಿಸು ; ನರಕಕ್ಕೆ ಹೋಗು,-ಸೇರು : ಬೇಗಂ ನರಕಂಬುಗಲ್ವೇಡಿರ್ದ ಜೀವಮುಮಂ ಅಭವ್ಯನಪ್ಪ ಜೀವನುಮಂ ಪರಮಾಗಮಮೆನಿತು ಲೇಸಾಗಿಯುಂ ಸೋಲಿಸ ಲಾಱದು (ಧರ್ಮಾಮೃ. ೭-೬೭) ; ಎನಗಟ [ಮಂತಿರೆ ಧರ್ಮಮನಱ] ಪಿ ಸಮುದ್ಧರಿಸಿದರಲ್ಲದೊಡೆ ಮಗುಟ್ ನರಕಂಬುಗೆನೇ (ವರ್ಧಪು. ೧೨-೨೮) ; ನರಕಂಬುಗಲ್ಕೆ ತಡೆಯ್ಕೆ ಮಾಯಾವಿಯಪ್ಪಾತ್ಮನೇ (ಜೀವಸಂ. ೧೪೭-೨೭).

**ನರಕಂಬೊಗು** : ಸ್ಕಂದಕುಮಾರನೆಂಬ ರಿಸಿ . . . ತನ್ನ ಶರೀರಮುಮಂ ಭಸ್ಮಂ ಮಾಡಿ ಸುಟ್ಟು ಸತ್ತೇಟನೆಯ ನರಕಂಬೊಕ್ಕಂ (ವಡ್ಡಾರಾ. ೧೮೯-೧೪) ; ನರಕಂಬೊಕ್ಕ ಪಂಚಮಹಾಪಾತಕನಕ್ಕು (ಸೌಇಇ. XX, ೨೯-೩೦ ; 1044) ; ದುರಿತೋದಯದಿಂ ನರಕಂಬೊಗಲಿರ್ದವರುಂ ಪರತ್ರೆಯಂ ಕಾಣರ್ (ಧರ್ಮಾಮೃ. ೪-೨೩೪). [ ನರಕ + ಪುಗು ]

**ನರಕಂಬೊಗು** 'ನರಕಂಬುಗು' ನೋ.

**ನರಕಕರ್ಮ** (ನಾ). ದುರ್ಗತಿಯನ್ನುಂಟುಮಾಡುವ ಕೆಲಸ ; ನರಕ ವಾಸವನು ತರುವ ಕೃತ್ಯ,-ಕಾರ್ಯ ; ಪಾಪಕೃತ್ಯ : ನರಕಕರ್ಮವ ಮಾಡಿ ಇಹದೊಳು ದುರಿತಭಾಜನನಾಗಿ ಕಡೆಯೊಳು ಪರಕೆ ಬಾಹಿರನಾಗಿ (ಕುಮಾ.ಭೀ. ೩-೨೮). [ ನರಕ + ಕರ್ಮ ]

**ನರಕಕುಂಡ** (ನಾ). ನರಕದಲ್ಲಿ ಪಾಪಿಗಳನ್ನು ಶಿಕ್ಷಿಸುವುದಕ್ಕಾಗಿ ಇರುವು ದೆಂದು ಭಾವಿಸಲಾದ ಕುಣಿ,- ಕುಳಿ,-ಘೋರವಾದ ಯಾತನೆಯ ಸ್ಥಳ ; ☞ ಇವು ಅನೇಕವಾಗಿವೆ. ಬೇರೆ ಬೇರೆ ಪುರಾಣಗಳಲ್ಲಿ ಬೇರೆ ಬೇರೆ, ಹೆಸರುಗಳಿಂದ ವರ್ಣಿತವಾಗಿವೆ. ಕಾಲಕಾಲಕ್ಕೆ ನರಕಸಂಖ್ಯೆಗಳೂ ಅವುಗಳ ವಿವರಗಳೂ ಬೆಳೆಯುತ್ತ ಹೋಗಿರ ಬಹುದು ಮತ್ತು ಇವಕ್ಕೆ ಚಾರಿತ್ರಿಕ ಹಿನ್ನೆಲೆಯಿರಬಹುದು. ಬ್ರಹ್ಮಕೈವರ್ತಪುರಾಣದಲ್ಲಿ ಎಂಬತ್ತಾರು ಕುಂಡಗಳ ಹೆಸರುಗಳು ಮತ್ತು ಯಾವ ಯಾವ ಪಾಪಿಯು ಯಾವ ಯಾವ ಕುಂಡದಲ್ಲಿ ದಂಡನೆಯನ್ನನುಭವಿಸುವನೆಂಬುದು ನಿರೂಪಿತವಾಗಿದೆ. ೧. ವಹ್ನಿ ಕುಂಡ-ಕೆಟ್ಟ ಮಾತುಗಳನ್ನಾಡುತ್ತಾ ನೆಂಟರಿಷ್ಟರ ಹೊಟೆ ಯುರಿ ಸುವವನು. ೨. ತಪ್ತಕುಂಡ-ಬ್ರಾಹ್ಮಣರಿಗೂ ಅತಿಥಿಗಳಿಗೂ ಅನ್ನ ಹಾಕದವನು. ೩. ಕ್ಷಾರಕುಂಡ-ನಿಷಿದ್ಧ ದಿನಗಳಲ್ಲಿ ಬಟ್ಟೆಗೆ ಚೌಳುಪ್ಪು

ಹಾಕಿ ಒಗೆಯುವವನು. ೪. ವಿಟ್ಕುಂಡ-ಹಿಂದಿನವರು ಬ್ರಾಹ್ಮಣರಿಗೆ ಕೊಟ್ಟಿದ್ದ ವೃತ್ತಿಗಳನ್ನು ಅಪಹರಿಸುವವನು. ೫. ಮೂತ್ರಕುಂಡ-ಬೇರೆಯವರು ಕಟ್ಟಿಸಿದ ಕೆರೆಗಳನ್ನು ಒಡೆದುಹಾಕುವವನು. ೬. ಶ್ಲೇಷ್ಮಕುಂಡ-ಒಬ್ಬನೇ ಮೃಷ್ಟಾನ್ನ ಭೋಜನ ಮಾಡುವವನು. ೭. ಗರಕುಂಡ-ತಾಯಿ-ತಂದೆ, ಹೆಂಡತಿ-ಮಕ್ಕಳನ್ನು ಸಾಕದಿರುವವನು. ೮. ದೂಷಿಕಾಕುಂಡ-ಅತಿಥಿಗಳನ್ನು ವಕ್ರದೃಷ್ಟಿಯಿಂದ ನೋಡುವವನು. ೯. ವಸಾಕುಂಡ-ಒಬ್ಬನಿಗೆ ದಾನಮಾಡಿ ಅದನ್ನೇ ಮತ್ತೊಬ್ಬರಿಗೂ ದಾನಮಾಡುವವನು. ೧೦. ಶುಕ್ರಕುಂಡ-ಜಾರ ಮತ್ತು ಜಾರಿಣಿ. ೧೧. ಅಸೃಕ್ಕುಂಡ-ಗುರುಹಿರಿಯರನ್ನು ಹೊಡೆದು ರಕ್ತಬರಿಸುವವನು. ೧೨. ಅಶ್ರುಕುಂಡ-ಭಗವಂತನ ಸ್ತೋತ್ರಗಳನ್ನು ಹಾಡುತ್ತ ಬಾಷ್ಪಗದ್ಗದಕಂಠನಾಗುವ ಭಕ್ತನನ್ನು ಗೇಲಿಮಾಡುವವನು. ೧೩. ಗಾತ್ರಮಲಕುಂಡ-ಕೊಳಕು ಮನಸ್ಸಿನವನು. ೧೪. ಕರ್ಣವಿಟ್ಕುಂಡ-ಕಿವುಡರನ್ನು ಲೇವಡಿ ಮಾಡುವವನು. ೧೫. ಮಜ್ಜಕುಂಡ-ತನ್ನ ಹೊಟ್ಟೆಗಾಗಿ ಪ್ರಾಣಿಹಿಂಸೆ ಮಾಡುವವನು. ೧೬. ಮಾಂಸಕುಂಡ-ಹಣಕ್ಕಾಗಿ ಹೆಂಗಸನ್ನು ಮಾರುವವನು. ೧೭. ನಖಕುಂಡ ಮತ್ತು ೧೮. ಲೋಮಕುಂಡ-ಶ್ರಾದ್ಧ ಮತ್ತು ಉಪವಾಸ ದಿನಗಳಲ್ಲಿ ಜಿತೇಂದ್ರಿಯನಾಗದಿರುವವನು. ೧೯. ಕೇಶಕುಂಡ-ಕೂದಲು ಸೇರಿರುವ ಮಣ್ಣಿನಿಂದ ಮಾಡಿದ ಪಾರ್ಥಿವ ಲಿಂಗವನು ಪೂಜಿಸುವವನು. ೨೦. ಅಸ್ಥಿಕುಂಡ-ಗಯೆಯಲ್ಲಿ ವಿಷ್ಣುಪಾದದಲ್ಲಿ ಪಿತೃಗಳಿಗೆ ಪಿಂಡಹಾಕದವನು. ೨೧. ತಾಮ್ರಕುಂಡ-ಗರ್ಭಿಣಿಯೊಂದಿಗೆ ಬೆರೆಯುವವನು. ೨೨. ಲೌಹಕುಂಡ-ಮುಟ್ಟುನೀರು ಹಾಕಿಕೊಂಡ ದಿನ ಆ ಹೆಂಗಸಿನ ಮತ್ತು ಪತಿ-ಪುತ್ರರಿಲ್ಲದ ಹೆಂಗಸಿನ ಕೈಯಲ್ಲಿ ಊಟಮಾಡುವವನು. ೨೩. ತೀಕ್ಷ್ಣಕಂಟಕಕುಂಡ-ಕಠೋರವಾದ ಮಾತುಗಳಿಂದ ಗಂಡನನ್ನು ಮೂದಲಿಸುವವಳು. ೨೪. ವಿಷಕುಂಡ-ವಿಷ ಕೊಟ್ಟು ಜನರನ್ನು ಕೊಲ್ಲುವವನು. ೨೫. ಧರ್ಮಕುಂಡ-ಬೆವರುಕೈಯಿಂದ ದೇವರ ವಸ್ತುಗಳನ್ನು ಮುಟ್ಟುವವನು; ೨೬. ತಪ್ತಸುರಾಕುಂಡ-ಶೂದ್ರಾನ್ನಭಕ್ಷಕ. ೨೭. ಪ್ರತಪ್ತತೈಲಕುಂಡ-ಕೋಲಿನಿಂದ ಎತ್ತುಗಳನ್ನು ಹೊಡೆಯುವವನು. ೨೮. ಕುಂತಕುಂಡ-ಈಟಿ, ಕಬ್ಬಿಣದ ಆಯುಧ, ಗಾಳ ಮೊದಲಾದುವುಗಳಿಂದ ಪ್ರಾಣಿವಧೆ ಮಾಡುವವನು. ೨೯. ಕ್ರಿಮಿಕುಂಡ-ಮೀನು ತಿನ್ನುವ ಬ್ರಾಹ್ಮಣ; ಮಾಂಸವನ್ನು ತಿನ್ನುವವನು; ದೇವರಿಗೆ ನೈವೇದ್ಯಮಾಡದೆ ತಿನ್ನುವವನು. ೩೦. ಪೂಯಕುಂಡ-ಶೂದ್ರಪೌರೋಹಿತ್ಯ, ಶೂದ್ರಶ್ರಾದ್ಧ, ಶೂದ್ರಾಂತ್ಯಸಂಸ್ಕಾರಗಳಿಂದ ಹೊಟ್ಟೆ ಹೊರೆಯುವವನು. ೩೧. ಸರ್ಪಕುಂಡ-ಕೃಷ್ಣನ ಪಾದ ಚಿಹ್ನೆಯುಳ್ಳ (ನಾಗರ) ಹಾವನ್ನು ಕೊಲ್ಲುವವನು. ೩೨. ಮಶಕಕುಂಡ-ಶಾಸ್ತ್ರನಿಯಮಕ್ಕೆ ವ್ಯತಿರಿಕ್ತವಾಗಿ ಕ್ಷುದ್ರಜಂತುಗಳನ್ನು ಕೊಲ್ಲುವವನು. ೩೩. ದಂಶಕುಂಡ-ಶಾಸ್ತ್ರನಿಯಮಕ್ಕೆ ವ್ಯತಿರಿಕ್ತವಾಗಿ ಪ್ರಾಣಿವಧೆ ಮಾಡುವವನು. ೩೪. ಗರಲಕುಂಡ-ಜೇನುನೊಣಗಳನ್ನು ಕೊಂದು ಜೇನುತುಪ್ಪವನ್ನು ತೆಗೆದುಕೊಳ್ಳುವವನು. ೩೫. ವಜ್ರದಂಷ್ಟ್ರಕುಂಡ-ನಿರಪರಾಧಿಗಳನ್ನೂ ಶ್ರೋತ್ರಿಯರನ್ನೂ ದಂಡಿಸುವವನು. ೩೬. ವೃಶ್ಚಿಕಕುಂಡ-ಹಣದ ಮೇಲಿನ ದುರಾಸೆಯಿಂದ ಪ್ರಜೆಗಳನ್ನು ದಂಡಿಸುವವನು. ೩೭. ಶರಕುಂಡ ಮತ್ತು ೩೮. ಶೂಲಕುಂಡ ಮತ್ತು ೩೯. ಖಡ್ಗಕುಂಡ-ಆಯುಧವನ್ನು ಹಿಡಿಯುವ ಅಗ್ನಿ ಹಾಗು ಸಂಧ್ಯಾವಂದನೆ ಮತ್ತು ವಿಷ್ಣುಭಕ್ತಿಗಳಿಲ್ಲದ ಬ್ರಾಹ್ಮಣ. ೪೦. ಗೋಲಕುಂಡ-ಸಣ್ಣ ಪುಟ್ಟ ತಪ್ಪಿಗಾಗಿ ಪ್ರಜೆಗಳನ್ನು ಬಂಧಿಸಿ ಸೆರೆಯಿಡುವ ರಾಜ. ೪೧. ನಕ್ರಕುಂಡ-ನೀರಿನಿಂದ ಮೇಲಕ್ಕೆದ್ದ ಮೊಸಳೆ ಮೊದಲಾದ ನೀರುಪ್ರಾಣಿಗಳನ್ನು ಕೊಲ್ಲುವವನು. ೪೨. ಕಾಕಕುಂಡ-ಕಾಮದಿಂದ ಹೆಂಗಸಿನ ಎದೆ, ನಿತಂಬ, ಮುಖಗಳ ಮೇಲೆ ಕಣ್ಣಿಡುವವನು. ೪೩. ಸಂಚಾಲಕುಂಡ-ಚಿನ್ನವನ್ನು ಕದಿಯುವವನು. ೪೪. ವಾಜಕುಂಡ-ತಾಮ್ರ, ಕಬ್ಬಿಣ ಮತ್ತು ಉಕ್ಕುಗಳ ಕಳ್ಳ. ೪೫. ವಜ್ರಕುಂಡ-ದೇವತಾಮೂರ್ತಿಗಳ ಮತ್ತು ದೇವರ ಸ್ವತ್ತಿನ ಕಳ್ಳ. ೪೬. ತಪ್ತಪಾಷಾಣಕುಂಡ-ದೇವಬ್ರಾಹ್ಮಣರ ಬೆಳ್ಳಿ, ಗೋವು, ಬಟ್ಟೆಬರೆಗಳ ಕಳ್ಳ. ೪೭. ತೀಕ್ಷ್ಣಪಾಷಾಣ ಕುಂಡ-ದೇವಬ್ರಾಹ್ಮಣರ ಹಿತ್ತಾಳೆ, ಕಂಚು ಪಾತ್ರೆಗಳ ಕಳ್ಳ. ೪೮. ಲಾಲಾಕುಂಡ-ಸೂಳೆಗಾರಿಕೆಗೆ ಅವಕಾಶ ಮಾಡಿಕೊಟ್ಟು ಹೊಟ್ಟೆಹೊರೆಯುವವನು. ೪೯. ಮಸೀಕುಂಡ-ಮ್ಲೇಚ್ಛರ ಸೇವೆಯಿಂದ ಜೀವಿಸುವವನು ಮತ್ತು ಬರಹದಲ್ಲಿ ಮೋಸಮಾಡಿ ಜೀವಿಸುವವನು. ೫೦. ಚೂರ್ಣಕುಂಡ-ದೇವಬ್ರಾಹ್ಮಣರ ದವಸಧಾನ್ಯ, ತಾಂಬೂಲ, ಆಸನಗಳನ್ನು ಕದಿಯುವವನು. ೫೧. ಚಕ್ರಕುಂಡ-ಬ್ರಾಹ್ಮಣರ ಹಣವನ್ನು ಕದಿಯುವವನು. ೫೨. ವಕ್ರಕುಂಡ-ಬ್ರಾಹ್ಮಣರಿಗೂ ನೆಂಟರಿಷ್ಟರಿಗೂ ಪ್ರತಿಕೂಲವನ್ನು ಮಾಡುವವನು. ೫೩. ಕೂರ್ಮಕುಂಡ-ಶ್ರೀಮಹಾವಿಷ್ಣು ಮಲಗಿರುವಾಗ ಅಂದರೆ ಆಷಾಢಶುದ್ಧ ಏಕಾದಶಿಯಿಂದ ಕಾರ್ತಿಕಶುದ್ಧ ದ್ವಾದಶಿಯವರೆಗೆ ನಾಲ್ಕು ತಿಂಗಳು ಚಾತುರ್ಮಾಸದಲ್ಲಿ ಆಮಿಷ ಮಾಂಸವನ್ನು ತಿನ್ನುವ ಬ್ರಾಹ್ಮಣ. ೫೪. ಜ್ವಾಲಾಕುಂಡ ಮತ್ತು ೫೫. ಭಸ್ಮಕುಂಡ-ದೇವ ಬ್ರಾಹ್ಮಣರಿಗೆ ಸೇರಿದ ತುಪ್ಪ, ಎಣ್ಣೆ ಮೊದಲಾದುವನ್ನು ಕದಿಯುವವನು. ೫೬. ದಗ್ಧಕುಂಡ-ದೇವಬ್ರಾಹ್ಮಣರ ನೆಲ್ಲೀಚಟ್ಟು, ಗಂಧ, ಎಣ್ಣೆ ಮೊದಲಾದುವನ್ನು ಕದಿಯುವವನು. ೫೭. ತಪ್ತಶೂರ್ಮಿಕುಂಡ-ಬಲಾತ್ಕಾರದಿಂದ ಇತರರ ಭೂಮಿಯನ್ನು ಆಕ್ರಮಿಸಿಕೊಳ್ಳುವವನು. ೫೮. ಅಸಿಪತ್ರಕುಂಡ-ಹಣದ ದುರಾಸೆಯ ಪರಿಣಾಮವಾಗಿ ಕತ್ತಿ ಮೊದಲಾದ ಆಯುಧಗಳಿಂದ ಜನರ ಪ್ರಾಣವನ್ನು ತೆಗೆಯುವವನು. ೫೯. ಕ್ಷುರಧಾರಕುಂಡ-ಊರು, ಪಟ್ಟಣಗಳನ್ನು ಸುಟ್ಟು ಹಾಕುವವನು. ೬೦. ಸೂಚೀಮುಖಕುಂಡ-ಇತರರ ಕಿವಿಯಲ್ಲಿ ಪಿಸುಗುಟ್ಟಿ ಪರನಿಂದೆ ಮಾಡುವವನು, ಇತರರ ದೋಷಗಳನ್ನು ಎತ್ತಾಡುವವನು. ೬೧. ಗೋಧಾಮುಖಕುಂಡ-ಮನೆಯನ್ನು ಒಡೆದು ಪಾತ್ರೆ ಪರಟೆ, ದನಕರುಗಳು, ಆಡುಕುರಿಗಳನ್ನು ಕದಿಯುವವನು. ೬೨. ನಕ್ರಮುಖಕುಂಡ-ಸಾಮಾನ್ಯವಸ್ತುಗಳನ್ನು ಕದಿಯುವವನು. ೬೩. ಗಜದಂಶಕುಂಡ-ಆನೆ, ಕುದುರೆ, ಆಳುಕಾಳುಗಳ ಕಳ್ಳ. ೬೪. ಗೋಮುಖಕುಂಡ-ಹಸು ನೀರುಕುಡಿಯುವುದನ್ನು ತಪ್ಪಿಸುವವನು. ೬೫. ಕುಂಭೀಪಾಕಕುಂಡ-ಗೋಹತ್ಯೆ, ಸ್ತ್ರೀಹತ್ಯೆ, ಯತಿಹತ್ಯೆ, ಭ್ರೂಣಹತ್ಯೆ, ಬ್ರಹ್ಮಹತ್ಯೆಗಳನ್ನು ಮಾಡಿದವನು; ತಾನು ಬೆರೆಯಲು ಉಚಿತವಲ್ಲದ ಸ್ತ್ರೀಯರೊಂದಿಗೆ ಬೆರೆಯುವವನು; ವ್ರತ, ಸಂಧ್ಯಾವಂದನೆಗಳನ್ನು ಬಿಟ್ಟವನು; ಪುಣ್ಯಕ್ಷೇತ್ರಗಳಲ್ಲಿ ದಾನ ತೆಗೆದುಕೊಳ್ಳುವವನು; ಗ್ರಾಮಪುರೋಹಿತ, ಪೂಜಾರಿ, ಶೂದ್ರರಿಗೆ ಅಡಿಗೆ ಮಾಡಿ ಜೀವಿಸುವವನು; ಋತುಮತೀವಿವಾಹವನ್ನು ಮಾಡಿಕೊಂಡಿರುವವನು. ೬೬. ಕಾಲಸೂತ್ರಕುಂಡ-ಸೂಳೆಯೊಂದಿಗೆ ಬೆರೆಯುವವನು; ಸೂಳೆಯ ಅನ್ನವನ್ನು ತಿನ್ನುವವನು. ೬೭. ಅವಟೋದಕಕುಂಡ-ಕುಲಟೆ ಮೊದಲಾದ ಆರು ಬಗೆಯ ಸೂಳೆಯರನ್ನು ಅನುಭವಿಸುವವನು. ೬೮. ಅರುಂತುದ ಕುಂಡ-ಚಂದ್ರಸೂರ್ಯಗ್ರಹಣದಲ್ಲಿ, ನಿಷಿದ್ಧಕಾಲದಲ್ಲಿ ಊಟಮಾಡುವವನು;

೭೯. ಪಾಂಶುಭೋಜಕುಂಡ–ಒಬ್ಬನಿಗೆ ಮಗಳನ್ನು ಕೊಡುವುದಾಗಿ ಮಾತುಕೊಟ್ಟು ಬೇರೊಬ್ಬನಿಗೆ ಮದುವೆ ಮಾಡುವವನು. ೭೦. ಪಾಶವೇಷ್ಟಕುಂಡ–ದತ್ತಾಪಹಾರಿ. ೭೧. ಶೂಲಪ್ರೋತಕುಂಡ–ಭಕ್ತಿಯಿಲ್ಲದೆ ಶಿವಲಿಂಗವನ್ನು ಪೂಜಿಸುವವನು. ೭೨. ಪ್ರಕಂಪನ ಕುಂಡ–ಬ್ರಾಹ್ಮಣರನ್ನು ದಂಡಿಸುವವನು, ಅವರಿಗೆ ಭಯವನ್ನುಂಟು ಮಾಡುವವನು. ೭೩. ಉಲ್ಕಾಮುಖಕುಂಡ–ಗಂಡನ ವಿಷಯದಲ್ಲಿ ಮುಖವನ್ನು ಗಂಟುಹಾಕಿಕೊಂಡು ಕಟುವಾಗಿ ಮಾತನಾಡುವವಳು. ೭೪. ಅಕೂಪಕುಂಡ–ಶೂದ್ರನೊಂದಿಗೆ ಬೆರೆಯುವ ಬ್ರಾಹ್ಮಣಿ. ೭೫. ವೇಧನಕುಂಡ–ಐದಾರು ಮಂದಿಯೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು; ವೇಶ್ಯೆ; ಸೂಳೆ. ೭೬. ದಂಡತಾಡನಕುಂಡ–ಏಳೆಂಟು ಮಂದಿಯೊಂದಿಗೆ ಸಂಪರ್ಕವಿಟ್ಟು ಕೊಂಡಿರುವವಳು; ರಂಡೆ. ೭೭. ಜಾಲಬದ್ಧಕುಂಡ–ಎಂಟಕ್ಕಿಂತಲೂ ಹೆಚ್ಚು ಜನರೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು; ಮಹಾವೇಶ್ಯೆ. ೭೮. ದೇಹಚೂರ್ಣಕುಂಡ–ಇಬ್ಬರೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು; ಕುಲಟೆ. ೭೯. ದಲನಕುಂಡ–ನಾಲ್ವರೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು; ಸ್ವೈರಿಣಿ. ೮೦. ಶೋಷಣಕುಂಡ–ಮೂವರೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು; ಧೃಷ್ಟೆ; ಪುಂಶ್ಚಲಿ. ೮೧. ಕಕ್ಷಕುಂಡ–ತನ್ನ ಜಾತಿಯ ಪರಸ್ತ್ರೀಯೊಂದಿಗೆ ಬೆರೆಯುವವನು. ೮೨. ಸೂರ್ಪಕುಂಡ–ಬ್ರಾಹ್ಮಣಸ್ತ್ರೀಯೊಂದಿಗೆ ಬೆರೆಯುವ ಕ್ಷತ್ರಿಯ ಮತ್ತು ವೈಶ್ಯ. ೮೩. ಜ್ವಾಲಾಮುಖಕುಂಡ–ಕೈಯಲ್ಲಿ ತುಲಸಿ, ಗಂಗಾಜಲ, ಸಾಲಿಗ್ರಾಮ ಮೊದಲಾದುವನ್ನು ಹಿಡಿದುಕೊಂಡು ಪ್ರಮಾಣಮಾಡಿ ಅದನ್ನು ನಡೆಸದಿರುವ ಸುಳ್ಳ,-ವಿಶ್ವಾಸಘಾತಕ; ಸುಳ್ಳುಸಾಕ್ಷ್ಯವನ್ನು ಹೇಳುವವನು. ೮೪. ಜಿಹ್ಮಕುಂಡ–ಅವರವರ ಸಂಪ್ರದಾಯದಂತೆ ನಿತ್ಯಕರ್ಮಗಳನ್ನು ಮಾಡದೆ, ದೇವರಸೇವೆಯಲ್ಲಿ ಆಸ್ಥೆಯಿಲ್ಲದೆ ಹುಸಿನಗೆ ನಗುತ್ತಾ ಕಾಲಕಳೆಯುವವನು. ೮೫. ಧೂಮಾಂಧಕುಂಡ–ದೇವಬ್ರಾಹ್ಮಣರ ಹಣವನ್ನು ಕದಿಯುವವನು,-ಕಸಿದುಕೊಳ್ಳುವವನು. ೮೬. ನಾಗವೇಷ್ಟನಕುಂಡ–ವೈದ್ಯರ ಮತ್ತು ಜೋಯಿಸರ ವೃತ್ತಿಯನ್ನು ಕಸಿದುಕೊಳ್ಳುವವನು; ಅರಗು, ಲೋಹ, ಎಣ್ಣೆ ಮೊದಲಾದುವುಗಳನ್ನು ಮಾರಾಟಮಾಡುವ ಬ್ರಾಹ್ಮಣ: ತನ್ನಿಂದಾಗಿ ಮೇರಿ ನರಕೆ ಕುಂಡಕ್ಕೆ ಬೀಳುವುದು ಮಾಸ್ತರಿಗೆ ಬೇಡವಾಗಿತ್ತು (ಕಾವೇರಿ. ೧೬೯).

[ನರಕ + ಕುಂಡ$_1$]

**ನರಕಕೂಪ** (ನಾ). ೧. = ನರಕಕುಂಡ : ಆಗಮ ತಿಳಿಯದೆ ನರಕಕೂಪದಲ್ಲಿ ಬೀಳುವಿರಲ್ಲ (ಪುರಂದ. ೪-೭೦-೨). ೨. (ಆಲಂ) ಹೊಲಸಿನ ಕುಳಿ; ಅಸಹ್ಯದ ಬಿಲ : ಶುಕ್ಲರಕ್ತೋತ್ಕರ ಕರಂಡಂಗಳು ಸದಾ ಪ್ರತ್ಯಕ್ಷಮಾಗಿರ್ದ ನರಕಕೂಪಂಗಳು (ಬಸವು. ೪೦-೭೦). [ನರಕ + ಕೂಪ$_1$]

**ನರಕಕೊಂಡ** (ನಾ). = ನರಕಕುಂಡ : ಕಡೆಗೆ ಯಮನ ಕೈಯಲ್ಲಿ ಸಿಲ್ಕಿ ನರಕಕೊಂಡದಲ್ಲಿ ಮುಳುಗೇಳುವುದೇ ನಿಶ್ಚಯ (ವಚಸಂ. ೨೧೮-೬೦).

[< ನರಕಕುಂಡ]

**ನರಕಗತಿ** (ನಾ). ೧. ನರಕದಲ್ಲಿರುವುದು; ನರಕಕ್ಕೆ ಹೋಗುವುದು; ನರಕಲೋಕವಾಸ: ರವಿಸುತ ವಿಧುಸುತರಲ್ತೆ ನರಕಗತಿಯಂ ಕುಡುವರ್ (ಜಾತಕ. ೨೩-೨೪); ಆ ಪಾತಕಂ ನರಕಗತಿಗೆಯ್ದುವ ಧೂರ್ತತನದಿಂ ಕುಟಿಲಮಾರ್ಗಾಂತರ್ಗತನಾಗಿ ಪೋಗೆ (ಪಂಚತಂ. ೭೦-೧೯); ರಾಮನಿರ್ಪೆ ಕ್ಷೇಮಭೂಮಿಯನುಳಿಯೆ ಕುಂಭಕರ್ಣನ ಬಾಯ್ಗೆ ಮಿಗಿಲಲಾ ನರಕಗತಿ ನಮಗೆ? (ಶ್ರೀರಾಮಾ. ೭೮೪-೧೭೪). ೨. = ನರಕ ೪ : ತೊಡರ್ವಂತೆ ಅಡರಿಸುವ ನರಕಗತಿಯೊಳ್ ತೊಡರ್ವುದೆ ತೊಡರದೆ ಜಿನೇಂದ್ರಮತದೊಳ್ ಹಿತದೊಳ್ (ಅಜಿಪು. ೨-೭೦); ನರಕಗತಿಗಿಟ್ಟಪೊಡಂ ನಿರ್ಜರನಿಳಯಮನೆಯ್ದಿ ಸುಖಮನುಣ್ಬೊಡಮುನ್ನರ್ ನೆರಮಲ್ಲರ್ (ಧರ್ಮಾಮೃ. ೯-೧೫೪); ನರಕಗತಿ ಸಮಮೆ ತಿರ್ಯಗ್ನರಸುರಗತಿಗಳುಮದಂತೆ ದಲ್ (ಪಾರ್ಶ್ವಪು. ೧೫-೬೨). ೩. [ಜೈನ] ನಿದ್ರಾನಿದ್ರಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ, ನರಕಗತಿ, ತಿರ್ಯಗ್ಗತಿ, ಏಕೇಂದ್ರಿಯಜಾತಿ, ದ್ವೀಂದ್ರಿಯಜಾತಿ, ತ್ರೀಂದ್ರಿಯಜಾತಿ, ಚತುರಿಂದ್ರಿಯಜಾತಿ, ನರಕಗತಿ ಪ್ರಾಯೋಗ್ಯಾನುಪೂರ್ವಿ, ತಿರ್ಯಗ್ಗತಿಪ್ರಾಯೋಗ್ಯಾನುಪೂರ್ವಿ, ಆತಪ, ಉದ್ಯೋತ, ಸ್ಥಾವರ, ಸೂಕ್ಷ್ಮ ಮತ್ತು ಸಾಧಾರಣ ಎಂಬ ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು; ಇದರ ಉದಯವಾದಾಗ ನರಕವ್ರ್ ಹೋಗಿ ನಾರಕೀಯ ಅವಸ್ಥೆ ಪ್ರಾಪ್ತವಾಗುತ್ತದೆ : ಅಂತರ್ಮುಹೂರ್ತದಿಂ ನಿದ್ರಾನಿದ್ರಾಪ್ರಚಳಾಪ್ರಚಳಾಸ್ತ್ಯಾನಗೃದ್ಧಿ ನರಕಗತಿತತ್ಪ್ರಾಯೋಗ್ಯಾನುಪೂರ್ವತಿರ್ಯಗ್ಗತಿ ತತ್ಪ್ರಾಯೋಗ್ಯಾನುಪೂರ್ವೇಕೇಂದ್ರಿಯ ವಿಕಳೇಂದ್ರಿಯ ಜಾತ್ಯಾತಪೋದ್ಯೋತ ಸ್ಥಾವರ ಸಾಧಾರಣ ಸೂಕ್ಷ್ಮಂಗಳೆಂಬ ಪದಿನಾಱುಂ ಕರ್ಮ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೦-೧೪ ವ); ನರಕಗತಿ ತತ್ಪ್ರಾಯೋಗ್ಯಾನುಪೂರ್ವಿತಿರ್ಯಗ್ಗತಿ . . . ಸ್ಥಾವರ ಸಾಧಾರಣಸೂಕ್ಷ್ಮಂ[ಗಳೆಂಬ] ಷೋಡಶಕರ್ಮಪ್ರಕೃತಿಗೆ ವಿಳಯಂ ಮಾಡಿ (ಶಾಂತಿಪು. ೧೧-೧೧೧ ವ). [ನರಕ + ಗತಿ]

**ನರಕಗಾಮಿ** (ನಾ). ನರಕಕ್ಕೆ ಹೋಗುವವನು; ನರಕಕ್ಕೆ ಪಾತ್ರನಾಗುವವನು : ಈ ಧರ್ಮ್ಮಮಾನಳಿದ ಮಹಾಪಾತಕ ××× ನರಕಗಾಮಿಯಕ್ಕು (ಸೌಇಇ. XX, ೬೮-೬೬ : 1058). [ಸಂ. ನರಕಗಾಮಿನ್]

**ನರಕಚತುರ್ದಶಿ** (ನಾ). ಆಶ್ವಯುಜ ಮಾಸದ ಕೃಷ್ಣಪಕ್ಷದ ಚತುರ್ದಶಿ; P ಶ್ರೀ ಕೃಷ್ಣನು ನರಕಾಸುರನನ್ನು ಕೊಂದುದರ ನೆನಪಿಗಾಗಿ ಆ ದಿನ ಆಚರಿಸುವ ಹಬ್ಬವೆಂದು ಸಾಮಾನ್ಯವಾಗಿ ನಂಬಲಾಗಿದೆ. ಆದರೆ ಇದಕ್ಕೆ ಪುರಾಣಗಳಲ್ಲಿ ಆಧಾರವಿದ್ದಂತಿಲ್ಲ. ನರಕಚತುರ್ದಶಿಯ ದಿನ ಮಾಡುವ ವ್ರತ ಪೂಜಾಕರ್ಮದಲ್ಲಿ ನರಕಕ್ಕೆ ಬೀಳದಿರುವಂತೆ ಆಗಲೆಂದು ಹಾರೈಕೆಯನ್ನು ಹೇಳುವ ಮಂತ್ರವಿದೆ: ಆಶಯುಜ ಬಹುಳ ಹದಿನಾಲ್ಕನೆಯ ತಿಥಿ ನರಕಚತುರ್ದಶಿ (ಬಾಹಬ್ಬ. ೦೪೫). [ನರಕ + ಚತುರ್ದಶಿ]

**ನರಕಚೋರ** (ನಾ). ಒಂದು ಬಗೆಯ ಸುಗಂಧ ದ್ರವ್ಯ,-ಕಚೋರ : ನರಕಚೋರ, ನವಸಾಗರ, ನಾಗರ ಮೋಥೆ (ಮುಂಬಪ್ಪಾ. ೧೫೬).

[ನರ$_0$ + ಕಚೋರ]

**ನರಕಜೀವಿ** (ನಾ). ನರಕದಲ್ಲಿ ತೊಳಲುವವನು; ಪಾಪಿ : ಆಕಾರವಿಲ್ಲದ ನಿರಾಕಾರಲಿಂಗವ ಕೈಯಲ್ಲಿ ಹಿಡಿದು ಕೊರಳಲ್ಲಿ ಕಟ್ಟಿದೆವೆಂಬರು ನರಕ[ಪಾಠಾಂ. ಕ]ಜೀವಿಗಳು (ಮಹಾದೇ. ಬ.೧೩೭೦-೨೯೮).

[ನರಕ + ಜೀವಿ$_1$]

**ನರಕದರ್ಶನ** (ನಾ). ನರಕವನ್ನು ನೋಡುವಿಕೆ; ನರಕದ ನೋಟ : ದ್ರೋಣನು ನಿನ್ನ ಮಾತಿನಿಂದ ಮೋಸಹೋದನು. ಆ ತಪ್ಪಿನ ಫಲದಿಂದ ನಿನಗೆ ನರಕದರ್ಶನವಾಯಿತು (ವೀಕಿಜಿಂ. IV, ೬೨); ನರಕ ತಪ್ಪಿತು ಧರ್ಮಜಂಗೆ, ದಿಟ, ಆದೊಡೇಂ? ನರಕದರ್ಶನದುಃಖ ತಪ್ಪದಾಯಿತಲ? (ಮಂಕುಕ. ೫೦೧); ಅದಕೆ ತಕಂತೆ ನಿನಗೆ ಮತ್ತೊಬ್ಬರ ನೆವದಿಂದ ನರಕದರ್ಶನವಾಯಿತು (ವಚಭಾ. ೩೯೦). [ನರಕ + ದರ್ಶನ]

**ನರಕದುಃಖ** (ನಾ). ನರಕದ ಶಿಕ್ಷೆಯಿಂದುಂಟಾಗುವ ದುಃಖ,-ಸಂತಾಪ : ಕೇವಲಮೆ ನರಕದುಃಖಂ ಕೇವಲವಿಜ್ಞಾನವಿಷಯಮಲ್ಲಶ್ರುತದೊಳ್ ಭಾವಿಪೊಡಾರ್ ನೆಱೆ ನುಡಿವರೊ ದೇವಂ ಸರ್ವಜ್ಞನೊರ್ವನೇ ನೆಱೆ ನುಡಿಗುಂ (ಅಜಿಪು. ೧೧-೧೨); ನರಕದುಃಖವ ಮತ್ತೆ ಭೋಗಿಸಬೇಕು ದೇಹಿಗಳು (ತಿಮ್ಮಸ್ತ. ೧-೩೦). [ನರಕ + ದುಃಖ]

**ನರಕನಿಳಯ** (ನಾ). = ನರಕ ೧ : ಆ ಪಾಪಿಷ್ಠ . . . ನರಕನಿಳಯಕ್ಕಾ ಪೊತ್ತುಂ ಪೋಪನೆಂದು ಮನದಂದಾಗಳ್ (ಪುಣ್ಯಾಸ್ರ. ೫-೩೭).
[ ನರಕ + ನಿಳಯ ( = ನಿಲಯ ) ]

**ನರಕಪಾತ** (ನಾ). ನರಕದಲ್ಲಿ ಬೀಳುವುದು : (Damnation, ಪಾರಿಭಾ. ೨೬).
[ ನರಕ + ಪಾತ$_1$ ]

**ನರಕಪಾಲ** (ನಾ). ಮನುಷ್ಯನ ತಲೆಬುರುಡೆ : ನರಕಪಾಲದೊಳು ತೀವಿದ ಹಸಿಯ ಗೋಮಾಂಸವ ಮೆಲುತ (ಹರಿಶ್ಚ. ೧೧-೩೦) ; ನರಕಪಾಲದ ಪಾತ್ರೆಗಳ ತಿಲದೊರಳೆಗಳ ಕೇಶೌಘದರ್ಭಾಂಕುರದಲಾಹವಯಜ್ಞದೀಕ್ಷಿತ ನಹೆನು ತಾನೆಂದ (ಕುಮಾ.ಉ. ೧೦-೧೯) ; ನರಕಪಾಲದಲ್ಲಿ ಆಸವವು . . . ತುಂಬಿದ್ದಿತು (ಕಪಾಕುಂ. ೨೫). [ ನರ$_2$ + ಕಪಾಲ$_2$ ]

**ನರಕಬಾಧೆ** (ನಾ). ೧. ನರಕದಲ್ಲಿ ಅನುಭವಿಸುವ ನೋವು ; ನರಕದ ದುಃಖ : ಮುರಹರ ನಗಧರ ಮುಕುಂದ ಎನ್ನದೆ ನರಕಬಾಧೆಗೆ ಗುರಿಯಾಗುತಿ (ಪುರಂದ. ೪-೨೫೫-೪) ; ನರಸಮಿತಿ ಕೊಂದರೆಂದಡೆ ನೆರವಾಗದೆ ನೋಡದೋಡಿದರು ನಿನ್ನವರೆಂದರೆ ನರಕಬಾಧೆಗವರೇಂ ನೆರವಪ್ಪರೆ (ನನ್ನಜಾ. ೫-೪೪) ; ಪರಲೋಕಸಾಧನಗಳು ಚರಿಸುವ ಚತುರರಿಗೆ ನರಕಬಾಧೆಗಳಿಲ್ಲ (ವಿಶಾಸು. ೮೪-೭). ೨. (ಅಲಂ) ತೀವ್ರವಾದ ಯಾತನೆ.
[ ನರಕ + ಬಾಧೆ ]

**ನರಕಬಿಲ** (ನಾ). [ಜೈನ] ನರಕ : ಅಲ್ಲಿಂದತ್ತಮೇಕರಜ್ಜುಪ್ರಮಾಣಾಂತರದೊಳಮುರಿಷ್ಟೆಯೆಂಬವೆಸರನುಳ್ಳ ಧೂಮಪ್ರಭೆಯೆಂಬಯ್ದನೆಯ ನರಕಬಿಲಂಗಳೆಲ್ಲಂ ಮೂಱುಲಕ್ಕಮಕ್ಕುಂ (ಅಜಿಪು. ೧೧-೬ ವ).
[ ನರಕ + ಬಿಲ ]

**ನರಕಭಯ** (ನಾ). ೧. ನರಕಲೋಕಕ್ಕೆ ಹೋಗುವ ಹೆದರಿಕೆ ; ನರಕಗತಿಯುಂಟಾಗುವ ಭಯಂ,-ಅಂಜಿಕೆ : ನಾಮಕೀರ್ತನೆ ಅನುದಿನ ಮಾಳ್ಪಗೆ ನರಕಭಯಗಳುಂಟೆ (ಪುರಂದ. ೨-೧೦೬ ಪಲ್ಲವಿ). ೨. ನರಕಾಸುರನ ಭಯ. ೧, ೨: ನರಕಭಯಂ ಹರಿಕಥೆಯೊಳ್ . . . ಪಿರಿದುಂ ಮುಖಭಂಗತ್ವಂ ಜರೆಯೊಳ್ಮೆಯ್ದೋರ್ಪುವಲ್ಲದಿಲ್ಲಾ ನಾಡೊಳ್ (ತ್ರಿಪುವಿ. ೨-೩೧).
[ ನರಕ + ಭಯಂ ]

**ನರಕಭಾಜನ** (ನಾ). ೧. ನರಕಕ್ಕೆ ಪಾತ್ರನಾದವನು ; ದುಷ್ಕರ್ಮಿ : ಪುರಹರನ ಪ್ರತಿಬಿಂಬವೆನಿಸಿದ ಶರಣರಂ ಧಿಕ್ಕರಿಸಿ ನಿಂದಿಸಿ ನರಕಭಾಜನರಾದಿರೀಶ್ವರದೂಷಕರು ನೀವು (ಬಸವಪು. ೫೭-೯೦): ಹಿಗ್ಗುವೆ ಯಾಕೋ . . . ಪರರ ಸೇವೆಯ ಮಾಡಿ ನರಕಭಾಜನನಾಗಿ ಮಲಳಿ ಮರಳಿ ಬಿದ್ದು ಉರುಳುವ ದೇಹಕ್ಕೆ (ಪುರಂದ. ೦-೧೨೨-೩). ೨. ನರಕಕ್ಕೆ ಸಮಾನವಾದುದು ; ಪುಣ್ಯಾಸ್ಪದವಲ್ಲದುದು: ಹರಹರ ತ್ರಾಯುಸ್ವ ಕರುಣಾಕರ ಮಹಾದೇವ ದುರಂತದ ನರಕಭಾಜನಮುಚಿತವೇ ನಿಮ್ಮಂಘ್ರಿದರ್ಶನಕೆ (ಕುಮಾ.ಅ. ೧೬-೫೭) ; ತಿರುಕರಿಲ್ಲದ ಊರು ನರಕಭಾಜನಮಕ್ಕು (ಸರ್ವಜ್ಞ. ೫೦೯).
[ ನರಕ + ಭಾಜನ ]

**ನರಕಭೂತಾಳೆ** (ನಾ). ಒಂದು ಬಗೆಯ ಗಿಡ : ಗಬ್ಬುಚೆಕ್ಕೆ, ನರಕಭೂತಾಳೆ (ಮೈಪಿಗಿ. ೩೯-೭೭೦). [ ನರಕ + ಭೂತಾಳೆ ]

**ನರಕಭೂಮಿ** (ನಾ). = ನರಕ ೧ : ಅಂತು ರತ್ನಪ್ರಭೆಯಿಂ ತೊಟ್ಟು ನಾಲ್ಕುವರೆ ನರಕಭೂಮಿವರಂ ಉತ್ಕೃಷ್ಟಮುಷ್ಣಮುಂ ಅಲ್ಲಿಂದತ್ತೆರಡುವರೆ ಭೂಮಿವರಮತಿಶೀತಮಕ್ಕುಂ (ಅಜಿಪು. ೧೧-೬ವ).
[ ನರಕ + ಭೂಮಿ ]

**ನರಕಮರ್ದನ** (ನಾ). ನರಕಾಸುರನನ್ನು ಸಂಹಾರ ಮಾಡಿದವನು ; ಕೃಷ್ಣ : ನರಕಮರ್ದನ ಕೇಳು ಕೌರವನರಿಗಳಿದಿರೆ . . . ತೊಡೆವೆನು ಕೃತಾಂತನ ಭಾಳದಕ್ಕರವ (ಕುಮಾ.ಉ. ೬-೨೫).
[ ನರಕ + ಮರ್ದನ ]

**ನರಕಯಾತನೆ** (ನಾ). ೧. ನರಕಬಾಧೆ ೧ : (೬). ೨. (ಅಲಂ) ಅತಿಯಾದ ನೋವು ; ಅಸಹನೀಯವಾದ ದುಃಖ : ವಾಸಂತಿಯು ಹೃದಯ ನರಕಯಾತನೆಯನ್ನನುಭವಿಸಿತು (ಶೀವೋಣ. ೯೨) ; ಸಹಸ್ರಾರು ಮಂದಿ, ಕೇವಲ ಭ್ರಮೆಯಿಂದಲೇ-ಸಂಶಯದಿಂದಲೇ ನರಕಯಾತನೆ ಅನುಭವಿಸುತ್ತಿದ್ದಾರೆ (ವೀರಯೋ. ೪೯). [ ನರಕ + ಯಾತನೆ ]

**ನರಕರೋಟಿ** (ನಾ). = ನರಕಪಾಲ : ಮೃತಭಸಿತಸಂ ಪಿಶಿತವನು ನರಕರೋಟಿಯೊಳು ಕೃತಕರ್ಮಭೇದನದಿ ತೀವಿ (ಸಿಂಗಿರಾ. ೦೮-೭).
[ ನರ$_2$ + ಕರೋಟಿ$_2$ ]

**ನರಕಲೋಕ** (ನಾ). = ನರಕ ೧ : ವೈರಿವರ್ಗಮನಡಿಯೊಳಿಟ್ಟುಂತೆ ನರಕಲೋಕಮಡಿಯೊಳಿರ್ದುದು (ಜೀವಸಂ. ೩೩-೧). [ ನರಕ + ಲೋಕ ]

**ನರಕವಾಸ** (ನಾ). ೧. ನರಕದಲ್ಲಿ ಇರುವಿಕೆ. ೨. (ಅಲಂ) ಘೋರ ಯಾತನೆ : ಬೇರೆ ನರಕವಿದೆಯೇ ? . . . ನಿತ್ಯ ನರಕವಾಸ ಅನುಭವಿಸುತ್ತಿರುವೆನು (ಕಾವೇರಿ. ೧೧೧). [ ನರಕ + ವಾಸ$_2$ ]

**ನರಕವಾಸಿ** (ನಾ). ನರಕದಲ್ಲಿ ವಾಸಿಸುವವನು : ಹರಿಭಕುತಿ ಉಳ್ಳವರ ಶರೀರವೆ ಕುರುಕ್ಷೇತ್ರ ಅವರು ನರರೆಂದು ಬಗೆವವರೆ ನರಕವಾಸಿಗಳು (ಪುರಂದ. ೧-೧೧೮ ಅನುಪಲ್ಲವಿ). [ ಸಂ. ನರಕವಾಸಿನ್ ]

**ನರಕವಿ** (ನಾ). (ದೈವದತ್ತ ಪ್ರತಿಭೆ ಇಲ್ಲದ) ಸಾಮಾನ್ಯಕವಿ: ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋಱಬಾರದು (ಕನಕ. ೩೩ ಪಲ್ಲವಿ).
[ ನರ$_2$ + ಕವಿ$_2$ ]

**ನರಕವೇದನೆ** (ನಾ). = ನರಕಬಾಧೆ ೧ : ಅವರು ತಾವು ಮಾಡಿದ ತಪ್ಪಿಗೆ ಬದುಕಿದ್ದಾಗಲೇ ನರಕವೇದನೆ ಅನುಭವಿಸಿದರು (ರೂಢಿ).
[ ನರಕ + ವೇದನೆ ]

**ನರಕಸ್ಥಾನ** (ನಾ). ೧. ನರಕದ ನೆಲೆ; ನರಕಲೋಕ: ನರಕಸ್ಥಾನದೊಳೆಂದು ತಾನೆನಗೆ ಬಂದಾ ದುರ್ಧರಾವಸ್ಥೆಯುಂ ಪಿರಿದೇಂ (ಶಾಂತೀಶ್ವ. ೯-೧೪೪). ೨. ಹೇಸಿಗೆಯ ನೆಲೆ : ಕ್ರಿಮಿ ಮೇಣ್ ಭಸ್ಮಂ ಮೇಣ್ವಿಷ್ಟಿ ಮೇಣ್ ಶರೀರಕ್ಕೆ ನಿಟ್ಟೆಯಿಸಾ ದೊರೆಯಿದಱೊಳ್ ಕಮನೀಯಮೊಂದುಮಿಲ್ಲಶುಚಿಮಲಾಧಿಷ್ಠಾನಮಿದುವೆ ನರಕಸ್ಥಾನಂ (ಅಜಿಪು. ೨-೫೩).
[ ನರಕ + ಸ್ಥಾನ ]

**ನರಕಾಂತಕ** (ನಾ). ೧. = ನರಕಮರ್ದನ : ಆ ನರಕಾಂತಕನೀಕೆಗೆಂಡು ಕೊಟ್ಟನೆ ನಿಜಲಕ್ಷ್ಮಿಯುಂ ಮಱಿದಂ (ಪಂಪಭಾ. ೪-೮೫). ೨. [ಜೈನ] ವಾಸುದೇವ : ಅಂತಾ ವಿದ್ಯೆಗಳಂ ನರಕಾಂತಕನಲಸದೆ ವಿಷಂ ವಿಷಸ್ಯೌಷಧಮೆಂಬಂತಿರೆ ವಿದ್ಯೆಗಳಿಂ ಗೆಲ್ದಂ (ಶಾಂತಿಪು. ೫-೬೨). [ ನರಕ + ಅಂತಕ ]

**ನರಕಾಗ್ನಿ** (ನಾ). ನರಕದಲ್ಲಿ ಶಿಕ್ಷೆ ಕೊಡಲು ಉಪಯೋಗಿಸುವ ಬೆಂಕಿ : ನರಕಾಗ್ನಿಗಳ್ಕಿ ನಿನ್ನೊಳ್ಳೆರೆಯದೊಡೀ ಕಾಮವಹ್ನಿ ಸುಟ್ಟಪುದು (ವೃಷವಿ. ೨೮-೧೧೦). [ ನರಕ + ಅಗ್ನಿ ]

**ನರಕಾಧಿಪತಿ** (ನಾ). ನರಕಲೋಕದ ಒಡೆಯ ; ಯಮ.
[ ನರಕ + ಅಧಿಪತಿ ]

**ನರಕಾಯುಷ್ಯ** (ನಾ). [ಜೈನ] ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು; ನರಕದಲ್ಲಿ ವಾಸಮಾಡುವ ಕಾಲ,— ಅವಧಿ ; ಧನ-ಧಾನ್ಯ ಪರಿಗ್ರಹ ಮೊದಲಾದುವುಗಳಲ್ಲಿ ಅತಿಯಾದ ಮೋಹ, ಹಿಂಸೆ ಮೊದಲಾದ ಪಾಪಕರ್ಮಗಳಲ್ಲಿ ಆಸಕ್ತಿ-ಇವುಗಳಿಂದ ಉಂಟಾಗುವ ಕರ್ಮಬಂಧ : ನಿವಸನೂಜರೊಡನೆ ಖೇಚರ ಗೋಚರ ವಿಭವಮನನುಭವಿಸಿ ಬಹ್ವಾರಂಭಸಂರಂಭರೌದ್ರಧ್ಯಾನಪರಿಣತನುಪಾರ್ಜಿತ ನರಕಾಯುಷ್ಯಂ ಪ್ರತ್ಯಾಸನ್ನಮೃತ್ಯುವಾಗಿ (ಆದಿಪು. ೨-೧೧ ವ); ಆ ಸಮಯದೊಳಾತಂಗೇಟನೆಯ ನರಕಾಯುಷ್ಯಂ ನೆಱಿಯೆ (ಪುಣ್ಯಾಸ್ರ. ೩-೫೪ ವ). 'ನರಕಗತಿ' ಪರಾ.
[ ನರಕ + ಆಯುಷ್ಯ ]

**ನರಕಾರಿ** (ನಾ). ೧. = ನರಕವರ್ದನ : "ಶ್ರೀವತ್ಸಂ ನರಕಾರ್ಯಧೋಕ್ಷಜ ನಜ್ರ ಪೀತಾಂಬರಂ . . . ಹೃಷೀಕೇಶಂ ಸುಪರ್ಣಧ್ವಜಂ" (ವಸ್ತುಕೋ. ೪-೨೨). ೨. [ಛಂದ] ವಿಷ್ಣುಗಣದ ಒಂದು ಬಗೆ : ವಿಷ್ಣುಗಣಮೆಂತಂ ದೊಡೆ:-೧. ಗೋವಿಂದಂ . . . ೫. ಕಂಸಾರಿ ೬. ನರಕಾರಿ (ಛಂದೋಂಬು. ೫-೨೪೦ ವ). [ ನರಕ + ಅರಿ₂ ]

**ನರಕಾವಸ್ಥೆ** (ನಾ). ನರಕಕ್ಕೆ ಬಿದ್ದಿರುವ ಸ್ಥಿತಿ ; ನರಕವಾಸ : ನರಕಾವಸ್ಥೆ ಯೊಳಿರ್ದುದಂ ನೆನೆ ಬಟ್ಟಿಂ ಧರ್ಮದಿಂದೀ ವಿಯಚ್ಚರಸಂಪತ್ತಿಗೆ ಬಂದುದಂ ನೆನೆ (ಶಾಂತೀಶ್ವ. ೯-೧೩೦). [ ನರಕ + ಅವಸ್ಥೆ ]

**ನರಕಾಸುರ** (ನಾ).=ನರಕ ೩ : ನರಕಾಸುರ ಮದಕರಿಪಂಚವದನ ಕುಸುಮಾ ಯುಧಮಂಗಳಜನ್ಮಸದನ (ಪಂಪಭಾ. ೧೬-೩೫); ಕಾಳಗದಲಿ ನರಕಾಸುರನ ಸೀಳಿ ಬಿಸಾಡಿ . . . ಸುದತಿಯರೆಲ್ಲರ ಆಳಿದ ವಸುದೇವಾತ್ಮಜಗೆ (ಪುರಂದ. ೧-೫೩೬-೨); ಆಹಾ ನಿಶಾಚರಿಯರಲ್ಲವೇ ನರಕಾಸುರನಮನೆಯ ಬಾಲಕಿ ಯರು (ಜೈಮಿಭಾ. ೨-೫೯) ; ಶ್ರೀಕೃಷ್ಣ . . . ಸತ್ಯಭಾಮೆಯ ಕಡೆಯಿಂದಲೇ ನರಕಾಸುರನನ್ನು ಕೊಲ್ಲಿಸಿದ (ಭಾಷಬ್ಬ. ೦೧೫). [ ನರಕ + ಅಸುರ ]

**ನರಕಿ** (ನಾ). = ನರಕಭಾಜನ ೧ : ನರಕಿಗಳನೆನಗೊಮ್ಮೆ ತೋಱದಿರಾ ರಾಮನಾಥಾ (ದೇದಾವ. ೩೩-೫೯) ; ಒಡಲ ಗುಣಧರ್ಮಂಗಳು ಬಿಡದೆ ನಡೆವನ್ನಕ್ಕ ಎಡವಱಿಯದ ಪೂಜೆಯ ಮಾಡಿಹೆನೆಂಬ ನರಕಿಗಳವರೆತ್ತ ಬಲ್ಲರೋ (ಜನ್ನಸ. ೫. ೫೪೫-೧೧೮೭) ; ಕೃತಘ್ನನೆ ನರಕಿ ವಿದ್ಯಾಧಮ ಮದಾಂಧನೆ ಬಾಹಿರನು (ಕುಮಾ.ಆ. ೩೩-೪೫) ; ನರಕಿಗಳು ನಾವವ್ವ ಜಗ ದೊಳು ಧರೆಗೆ ಭಾರಕರು (ಕಾಶಿರಾ. ೪-೦೫). [ ಸಂ. ನರಕಿನ್ ]

**ನರಕೀಟ** (ನಾ). ಕೀಟದಂತಿರುವ ಮನುಷ್ಯ ; ಕ್ಷುದ್ರನಾದ ಮನುಷ್ಯ ; ದುರ್ಬಳುವನುಷ್ಯ : ನರಕೀಟದ್ವಯಸಂಗರಕ್ಕೆ ಖಚರೇಂದ್ರಾಧೀಶನಿಂತೇಕೆ ಕಾತರನಪ್ಪೊಂ ಗಡಂ (ಶಾಂತಿಪು. ೩-೯೮) ; ಕಲಿಕಾಲದ . . ನರಕೀಟಂಗಳು ಜಿನರೂಪಂ ಧರಿಯಿಸುವುದರಿಂದೆಂದು ಮನದೊಳ್ಬಗೆವುದೆಂತೆನೆ (ಪಸಾರ.೩೨೨). [ ನರ₂ + ಕೀಟ₂ ]

**ನರಕೀಟಕ** (ನಾ). = ನರಕೀಟ : ಈ ನರಕೀಟಕರ ಮಾತುಗಳವೇತಕೆ ಕೋಟ ಯೇಕೋ ರುದ್ರ ನ ದ್ವಿತಿಯೆಂದು ಶ್ರುತಿ ಮೊರೆಯೆ (ಬಸಪು. ೫೪-೦೭).

[ ನರ₂ + ಕೀಟಕ₂ ]

**ನರಕು, ನೆರಕು** (ಕ್ರಿ). ಅವ್ಯಕ್ತವಾದ ಧ್ವನಿಯಿಂದ ನೋವನ್ನು ವ್ಯಕ್ತ ಪಡಿಸು,-ನಿಶ್ಶಕ್ತಿಯನ್ನು ಸೂಚಿಸು; ನರಳು: ಎಂಟು ಸಾರಿಯುಂಬಳು ಕುಂಟಿಯಾಗಿರುವಳು ನಂಟರು ಬಂದರೆ ನರಕುವಳು ಶಿವಶಿವ ನಂಟರು ಬಂದರೆ ನರಕುವ ಪೋರಿಯ ಸೊಂಟವ ಮುರಿ (ಹಾಸ್ಯಮಂ. ೫) ; ದೊರಕಿದ ಬಟ್ಟೆ ಹಳಕು ಆದರೆ ನರಕೋದು ಯಾಕೆ ? (ಗಾದೆ). **ನೆರಕು :** ಕಾಲಾಳ್ಗಳು ನೆರಕುತಿರ್ದವು ಕಾಲು ಕೈ ಪರಿದು ಘಾಯದಿಂ ಸುರಿವುತಿರ್ದವು ರಕ್ತ (ಕುರಂಗ. ೩೩-೨೦).

[ ದೇ. ೧ ಮಲ. ನರಣ್ಣು, ಞರಣ್ಣು , ನರಕ್ಕ = ನರಳುವಿಕೆ ; ತುಳು ನರಕು, ನರ್ಕು; ಕೊಡ. ನೆರಕ್; ಮಲ್ತೊ. ನಿರೆ ]

**ನರಕುಟಿ** 'ನರಗುಟಿ' ನೋ.

**ನರಕೇಸರಿ** (ನಾ). = ನರಸಿಂಹ ೧ : ಮುಳಿದ ನರಕೇಸರಿಯ ದಾಡೆಯ ಥಳಥಳತನ್ನುರವೊ ಮಹಾಸ್ತ್ರದ ಬೆಳಗೊ (ಕುಮಾದ್ರೋ. ೦೯-೦೫).

[ ಸಂ. ನರಕೇಸರಿನ್ ]

**ನರಗ₁** (ನಾ).=ನರಕ ೧ : ಪಞ್ಚಮಹಾಪಾತಕಸಂಯುಕ್ತನಾಗಿ ಪೂಶಿ ಎನ್ಪ ನರಗಕ್ಕೆ ಸಲ್ಗೆ (ಎಕ. VI, ಕೊಪ್ಪ. ೩೭-೮ ; ಸು. 675).

[ < ಸಂ. ನರಕ ]

**ನರಗ₂** (ನಾ). ೧. ಒಬ್ಬಾತನ ಹೆಸರು : ನರಗನಱಿಯೆ ತನ್ನಡಿಯನುಂ ತನ್ನ ಮಕ್ಕಳುಂ ತನ್ನೊಕ್ಕಲುಂ . . . ಪೆರ್ಮ್ಮಾಡಿಯ ಬೆಸದೊಳಿಱಿದು (ಎಕ. I, ಕಡೂರು. ೦೪೭-೫ ; 972) ; ಕಾಳನೋ ರಾವಣನೋ ಶಿಶು ಪಾಳನೋ ತಾನೆನಿಸಿ ನೆಗಟ್ದ ನರಗನ ತಲೆ ತನ್ನಾಳಾಳ ಕಯ್ಗೆವನ್ದುದು (ಎಕ. II, ೫೯-೯೫; 974). ೨. ಒಬ್ಬಾತನ ಹೆಸರು ; ಚಾಳುಕ್ಯ ವಂಶದ ಅರಿಕೇಸರಿಯಂ ತಂದೆ : ಏಟುಂ ಮಾಳವುಮುಮಂ ಪಾಟೀಟಿ ತಗುಳ್ದಿ ಱಿದು ನರಗನುರಿಪಿದೊಡೆ ಕರಿಂಕೆಟಿಸಿದಾತನ ತೇಜದ ಬೀಟಲನನುಕರಿವು ವಾದುವೊಗೆದುರಿವುರಿಗಳ್ (ಪಂಪಭಾ. ೦-೩೩). [ < ಸಂ. ನರಸಿಂಹ ? ]

**ನರಗ₃** (ನಾ). [ಛಂದ] ಪ್ರತಿಸಾಲಿನಲ್ಲಿಯೂ ಏಳು ಅಕ್ಷರಗಳಿರುವ ಉಷ್ಣಿಕ್ ಎಂಬ ನಾಲ್ಕು ಸಾಲಿನ ವರ್ಣಛಂದಸ್ಸಿನ ಒಂದು ವೃತ್ತ ; ಪ್ರತಿಸಾಲಿನಲ್ಲಿಯೂ UUU, -U-, -ಹೀಗೆ ಗಣನಿಯಮವುಳ್ಳ ವೃತ್ತ : ನರಗಮೆಂಬ ವೃತ್ತಾಕ್ಷರಹೊ ಪಾದಮಾಗುತ್ತಿರೆ ಶಶಾಂಕವಕ್ತ್ರೇ ನರಗನಾಮವೃತ್ತಂ (ಛಂದೋಂಬು. ೨-೯೦). P ನಗಣ, ರಗಣ ಮತ್ತು ಒಂದು ಗುರು ಇದು ಈ ವೃತ್ತದ ಲಕ್ಷಣ. ಈ ಲಕ್ಷಣಸಂಕೇತವೇ ಇದರ ಹೆಸರಾಗಿದೆ. [ ಸಂ. ]

**ನರಗಂಡಮಾಲೆ** (ನಾ). ಕೊರಳ ನರಗಳ ಮೇಲೆ ಗಂಟುಗಂಟಾಗಿ ಕಾಣಿಸಿ ಕೊಳ್ಳುವ ಒಂದು ಬಗೆಯ ರೋಗ : ಮಾವು, ಮಾವಿನ ಒಳನಾರು, ಎಳ್ಳೆಣ್ಣೆ, ಮೆಣಸು ಇವು ನಾಲ್ಕು ಸಹವಾಗಿ ಕೊಳ್ಳಲು ಗಂಡಮಾಲೆ, ನರಗಂಡಮಾಲೆ ಮಾಣ್ಗುಂ (ವಿಶ್ವವಿ. ೭೯).

[ ನರ₁ (<ನರವು) + ಗಂಡಮಾಲೆ ]

**ನರಗಟ್ಟು** (ನಾ). ನರಮಂಡಲ ; ನರವ್ಯೂಹ : ನರಗಟ್ಟು, ನರವಾನಿಸಂ, ಬರವಟ್ಟೆ, ತೆಱಿವೊನ್, ಬಡನಡು (ಶಬ್ದಾನು. ೩೩೨ ವ್ಯಾಖ್ಯಾ).

[ ನರ₁ (<ನರವು) + ಕಟ್ಟು₃ ]

**ನರಗತಿ** (ನಾ). ಮನುಷ್ಯ ಜನ್ಮ : ನರಗತಿಯನಿಂದು ಭೃಗುಜರ್ ತಿರ್ಯಗ್ಗ ತಿಯುಂ ಕುಜರವಿಗಳ್ . . . ಕುಡುವರ್ (ಜಾತಕ. ೨೩-೨೪).

[ ನರ₂ + ಗತಿ ]

**ನರಗಬ್ಬಿಗ** (ನಾ). = ನರಕವಿ : ಜಾಣರಿಗೆ ಸುಕವಿಗಳಿಗುಱುವ ನರಗಬ್ಬಿಗರ ಕುಕವಿಗಳ ಸಂಗಮಂ ಸಂತತಂ ತೊಱೆದು ಮೆಱೆವಾ ಅಱಿತ ಸೋಮೇಶ ನೊಲಿದಿತ್ತನಾಹತಮತಿಯ ಕುಱುಹಿನಭಿನವಮಂಗನಾಸುರ್ದ ಸತ್ಕೃತಿಯನಿದ ಜಱಿವರಾರ್ (ಮಂಗರಾ. ೩-೭). [ ನರ₂ + ಕಬ್ಬಿಗ ]

**ನರಗು** (ನಾ). ಇಕ್ಕಟ್ಟು ; ಸ್ಥಳ ಸಾಲದಿರುವಿಕೆ (?) : ಹೊರಗಿನ ಕೋಟೆಗೆ ಒಳಗಿನ ಜನ ಸಾಲಲಿಲ್ಲ. ಆ ಕೋಟೆ ನರಗಾಯಿತು, ಪಟ್ಟಣದ ಜನ ಹೊಂಡದ ನೀರಿಗೆ ಹೋಗಲು ಸಾಧ್ಯವಾಗಲಿಲ್ಲ (ಚಿಕ್ಕದಾ. ೯೭). [<ನರಕು ? ]

**ನರಗುಂಜಿ** (ನಾ). ಒಂದು ಬಗೆಯ ಸಸ್ಯ : ನರಗುಂಜಿಸೊಪ್ಪು ತಂದು ನೀರ ಬಿಟ್ಟುಕೊಂಡು ತುಳಿದು ಸೊಲ್ಲಗೆ ರಸವ ತೆಗೆದು ಅದನ್ನು ಹಸುವಿನ ಮಜ್ಜಿಗೆ ಬೆರಸಿ ಕೊಳ್ಳೆ ನೀರಕೊಂಬಿನ ವ್ಯಾಧಿ ಮಾಣ್ಗುಂ (ವಿಶ್ವವಿ. ೭೦). 'ನಱುಮಂಜಿ' ಪಠಾ. [ ? ]

**ನರಗುರಿ** 'ನರಗುಟಿ' ನೋ.

**ನರಗುರಿಗ** (ನಾ).=ನರಗುಟಿ: ನರಗುರಿಗನು ನಾನು ಪರಿಪರಿ ವಿಧದಿಂದಾಂತರಿ ಯುಲಿ ಧ್ಯಾನವಾಚರಿಸಲು ಪುಣ್ಯವೆಂದರಿಯಲು ಮನಸು ನಿಂದಿರದೆ . . . ಪಾಪದ ಕಡೆಗೆ ಪರಮಪ್ರೀತಿಬಡುವುದು (ಮೋಕ್ಷದೀ. ೨೨೨-೨೨) ; ನರ ಗುರಿಗ ನಾನು ಎನ್ನ ಎತ್ತವಲ್ಲಾ ಗುಣಂಗಳೆ ದಯವೆಂತೊ ಅವರಿಗರಹೊ (ವಿಶಾಸು. ೮೪-೫). [ ನರಗುರಿ (<ನರಗುಟಿ) + -ಗ₂ ]

**ನರಗುಟಿ**, ನರಕುಟಿ, ನರಗುರಿ (ನಾ). ಕುರಿಯಂತಹ ಮನುಷ್ಯ ; ಕ್ಷುಲ್ಲಕನಾದ ಮನುಷ್ಯ ; ವಿವೇಕವಿಲ್ಲದವನು : ನಿಮ್ಮ ಪಾಡೇನೋ ನರಗುಟಿಗಳಿರಾ (ವಚಸಂ. ೦೪೪-೩೩) ; ಇದಱ ನೆಲೆಯನಱಿಯದೆ ಈ ಮನವ ಬೆಂಬಳಿಗೊಂಡಾಡಿದವರೆಲ್ಲ ನರಗುಟಿಗಳಾದರಯ್ಯ (ಲಿಂಗವ. ೨೩-೯೩) : ನರಗುಟಿಗಳಿಗೆ ರೋಗ ದಾರಿದ್ರ್ಯ ಅಪಜಯಂಗಳು ಬರುತ್ತಿರಲು

. . . ಎಲ್ಲಿಯುದೊ ಶಿವಭಕ್ತಿ (ಚನ್ನವ. ಕ. ೨೨೧-೪೯೩) ; ನರಗುಱಿಯೆ ನಡೆ ಕಾಳಗಕೆನುತ ಹಿಡಿದೆಳೆದನುತ್ತರನ (ಕುಮ್ಯಾವಿ. ೬-೨೧) ; ಅಱಿಯನದ ನೇನುವನು ಬಾಲಕ ನರಗುಱಿಗಳುಪಚಾರವನು ಮೈಮಱೆದು ಮುನಿ ವಂದಿತನ ಚರಣವನೊಪ್ಪಿ ಮನದೊಳಗೆ . . . ಹರಿಯು ಸ್ತುತಿಸುತ (ನಿಭಾಗ. ೪-೬-೪೬). **ನರಕುಱಿ :** ನರಕುರಿ[ಱಿ]ಗಳನೆಲ್ಲ ಭರದಿ ರಕ್ಷಿವುದಕೆ ಪರಮ ಪಾವನನಾಮ ಇದು ಸಾಲದೆ (ಪುರಂದ. ೨-೭೬-೧೩) ; ಆ ಮಹಾತ್ಮನ ನರಕುಱಿಗಳೆಂತಱಿವರೈ ಶ್ರೀಗಿರಿಯಧೀಶ್ವರನ (ಅಮ್ಮ ಶ. ೨ ೦). **ನರಗುರಿ :** ವಿರಸವಿಲ್ಲದೆ ನಗೆನುಡಿಯುಳ್ಳ ಸತಿಯಳ ಹರಸದವನು ನರಗುರಿಯು (ಕಪೋಕ. ೧೮-೭೧) ; ಓ ಮಂಕು ನರಗುರಿಯೆ, ಭೂಮಿ ಬರಿ ದೋಣಿ ಕಣೊ! (ಪಾಂಡಜ. ೩೦-೧೪). 'ಕುಱಿಮಾನಿಸ' ಪರಾ. [ನರ$_2$+ಕುಱಿ$_3$]

**ನರಗೊರಲ್** (ನಾ). ನರಗಳು ಉಬ್ಬಿ ಹೊರಗೆ ಕಾಣಂಪಂತಿರಂವ ಕೊರಳಂ : ನರಗೊರಲ[ಪಾಠಾಂ. ನರೆಗೊರಳ] ನೊರೆವಾಯ ಹಾವಸೆವರಿದ ವಲ್ಗಳ ಜೋಲ್ದುಟಿಯ . . . ಕುಟುಬನು (ಬಸಪು. ೨೦-೧೧).

[ ನರ$_1$ (<ನರವು) + ಕೊರಲ್ ]

**ನರಚಲು,** ನರುಚಲು (ನಾ). ಸರಿಯಾದ ಬೆಳವಣಿಗೆ ಇಲ್ಲದುದು ; ನರಟಾದುದು ; ಪೀಚು : ಬಿಸಿಲು, ನೀರು ಇಲ್ಲದೆ ಗಿಡ ನರಚಲಾಗಿದೆ (ರೂಢಿ). **ನರುಚಲು :** ಅವನು ನೀಲದುಟಿಯ ಕಂದು ಹಳದಿ ಮೋರೆಯ ನರುಚಲಾದ ಪಡ್ಡೆಹುಡುಗ (ಪುನರು. ೪೮೦). 'ನರಟು$_2$' ಪರಾ.

[ ದೇ.॥ ತಮಿ. ನರೈಚ್ಚಲ್ ]

**ನರಜಂತು** (ನಾ). ಮನುಷ್ಯಜೀವಿ ; ಮನುಷ್ಯ : ಪುಣ್ಯಪಾಪದ ಮಿಶ್ರ ನರಜಂತುವು (ಮಂಕುಕ ೩೧೭). [ ನರ$_2$ + ಜಂತು ]

**ನರಜನ್ಮ** (ನಾ). ಮನುಷ್ಯನ ಹುಟ್ಟು ; ಮಾನವಜನ್ಮ : ನರಜನ್ಮದಲ್ಲಿ ಹುಟ್ಟಿ ಲಿಂಗಮುಖವನಱಿಯದೆ ಉದಮದ ಸೊಕ್ಕಿ ತಲೆಗೇಱಿತ್ತೆ (ಬಸವ. ೫೮೫) ; ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ (ಮಹಾದೇ. ಬ. ೨೩-೪೩) ; ಎನ್ನ ನರಜನ್ಮವಂ ಹಿಂಗಿಸಲ್ ಬಂದಿರೋ (ಲಶಿಚಂ. ೩೬-೧೪) ; ನರಜನ್ಮ ಬಂದಾಗ ನಾಲಿಗೆ ಇರುವಾಗ ಕೃಷ್ಣ ಎನಬಾರದೆ (ಪುರಂದ. ೧-೭೦ ಅನುಪಲ್ಲವಿ). [ ನರ$_2$ + ಜನ್ಮ ]

**ನರಜೀವ** (ನಾ). ಮನುಷ್ಯ : ಮೆರುಗನೊಂದುವುದು ಪೊನ್ ಪುಟಕಾದ ಬಳಿಕ ನರಜೀವವಂತು ಶುಚಿಯುಹುದು ದುಃಖಾಶ್ರುವಿಂ (ಮಂಕುಕ. ೮೬೫).

[ ನರ$_2$ + ಜೀವ ]

**ನರಜೀವಿ** (ನಾ). ಮನುಷ್ಯಜನ್ಮ ಪಡೆದವನು ; ಮಾನವ ; ಮಾಯೆಗೆ ಮರುಳಾದ ನರಜೀವಿಗಳ ಬಹಿರಂಗದ ಬಱಿಯ ಸಂಸ್ಕಾರಮಾತ್ರದಿಂದ ಭವಿ ಭಕ್ತನಪ್ಪನೆ (ಚನ್ನವ. ಕ. ೨೦೯-೪೬೭); ಯಾವತ್ತು ಪ್ರಕಾರ ದಅಪರಾಧಗಳಿಗೆ ಪಾತ್ರರಾದ ನರಜೀವಿಗಳು ನಾವು ಒಬ್ಬರನ್ನೊಬ್ಬರು ಕ್ಷಮಿಸದೆ ಇರುವುದು ಕೇವಲ ನೀಚತನವು (ಮುಂಬಯಿ. ೪-೮೬). [ ನರ$_2$ + ಜೀವಿ$_1$ ]

**ನರಟಿಸು** (ಕ್ರಿ). ೧. ಬೆಳವಣಿಗೆ ನಿಂತುಹೋಗುವಂತೆ ಮಾಡು ; ಬೆಳವಣಿಗೆಯನ್ನು ಕುಂಠಿತಗೊಳಿಸು. ೨. ಹೆಚ್ಚದಂತೆ ತಡೆ ; ಮೊಟಕು ಗೊಳಿಸು : ಯತಿಜನರ ಧೈರ್ಯವುಂ ಮುರುಟಿಪಸುರುಟಿಪನರಟಿಪರ್ ಸತಿಯರನಘಾ (ಷಶಿಲ. ೨-೬೯). [ ನರಟು$_1$ + – ಇಸು$_3$ ]

**ನರಟು$_1$** (ಕ್ರಿ). ಬೆಳವಣಿಗೆ ಹೊಂದದಿರು ; ಪೀಚಾಗು : ಕೇಶವನ ಧಾತು ಪಾಠದಲ್ಲಿ ಮಾತ್ರವಲ್ಲ, ದರ್ಪಣದ ಇತರ ಭಾಗಗಳಲ್ಲಿಯೂ ಇಲ್ಲವೆಂದು ಕಿಟ್ಟೆಲ್‌ರ ನಿಘಂಟಿನಿಂದ ಎಣಿಸಬಹುದಾದ ಕೆಲವು ಸಿದ್ಧಧಾತುಗಳನ್ನು ಕೆಳಗೆ ಕಾಣಿಸಿದ್ದೇನೆ – ಇಣಿಕು, ಕುಲಕು, ಬೆದಕು . . . ಜಜ್ಜು, ಪುಟಿ, ನರಟು, ಗಿಟ್ಟು, ಅಂಟು (ಕಸಾಪ. I, ೨೯೦).

[ ದೇ.॥ ತಮಿ. ನೆರುಟು=ಒರಟಾಗಿರುವುದು ; ತುಳು. ನರಡ್= ಬೆಳವಣಿಗೆ ಕುಂಠಿತವಾಗಿರುವಿಕೆ , ಒರಟುತನ ]

**ನರಟು$_2$,** ನರುಟು, ನರಡು$_1$ (ನಾ). ೧. (ಮಕ್ಕಳು, ಗಿಡಗಳು, ಹಣ್ಣು ಮೊದಲಾದುವುಗಳ ವಿಷಯದಲ್ಲಿ) ಸರಿಯಾಗಿ ಬೆಳವಣಿಗೆ ಹೊಂದದಿರುವಿಕೆ ; ಪೀಚುಪೀಚಾಗಿರುವಿಕೆ : ಹುಡುಗ ನರಟು, ಹತ್ತುವರ್ಷದವನಾದರೂ ಐದುವರ್ಷದ ಹುಡುಗನಷ್ಟೇ ಕಾಣುತ್ತಾನೆ (ರೂಢಿ). **ನರುಟು :** ೧. "ಹ್ಲಸಿತಂ, ಹ್ಲಸಃ, ಹ್ಲಸೀ, ಹ್ಲಸುಃ, ಹ್ಲಸ್ ಈ ೫ ನರಟು" (ಕಾಶಕ್ಕ. ೬೨). 'ನರುಟುಗೊಳ್' ಪರಾ. **ನರಡು$_1$ :** ೨. ಒರಟುತನ ; ಹುಂಬತನ. 'ನರಡ' ಪರಾ. [ < ನರಟು$_1$ ]

**ನರಟು$_3$** (ನಾ). ಗೊಣಗುಟ್ಟುವಿಕೆ ; ಗೊಣಗಾಟ. 'ನರಟುಗಾರ' ಪರಾ. [ ದೇ.॥ ತುಳು. ನರಟು = ಗೊಣಗು ]

**ನರಟುಗಾರ** (ನಾ). ಗೊಣಗುವವನು ; ತೃಪ್ತಿಯಿಲ್ಲದವನು : ನರಟುಗಾರ ಒರಟಾಡುತ್ತಾನೆ (ಗಾದ). [ ನರಟು$_3$ + – ಕಾ$_1$ (< – ಕಾಱ) ]

**ನರಡ** (ನಾ). ಒರಟ; ಹುಂಬ ; ಅನಾಗರಿಕ : ನರಡನಿಗೆ ಕೊರಡು ಕುರುಡನಿಗೆ ಕೋಲು (ಗಾದ). [ ನರಡು$_1$ (<ನರಟು$_2$) + – ಅ$_7$ ]

**ನರಡಿ** 'ನರಡು$_2$' ನೋ.

**ನರಡಿರೋಗ** 'ನರಡುರೋಗ' ನೋ.

**ನರಡು$_1$** 'ನರಟು$_2$' ನೋ.

**ನರಡು$_2$,** ನರಡಿ, ನೆರಡಿ (ನಾ). ದನ, ಆಡು, ಕುರಿ ಮೊದಲಾದುವುಗಳಿಗೆ ಬರುವ ಒಂದು ಬಗೆಯ ರೋಗ : ನರಡುರೋಗಕ್ಕೆ – ಭರದಿ ಸುಟ್ಟನೆ ಸುಯ್ಯೆ ಸೂಗುರಿಸೆ ಕಣ್ದಕ್ಕಲಿಗಳ್ ಬೀಟ್ ಮೆಯ್ ಮರವಟ್ಟಂತಿರೆ ನೋ(ಡ)ಡೆ ಪೇಟ್ ನರಡಿ[ಪಾಠಾಂ. ಪೇಟ್‌ರಡಿ]ದಾಯ್ತೆಂದೆಂದು ನಿಶ್ಚೈಸಿ (ಲೋಕೋಪ. ೯-೨೦೭) ; ನರಡಾದೆತ್ತಿನಂತೆ ನಾಲಗೆಯನುರ್ಚುವ ಪರಿಜನವುಮಂ (ಧರ್ಮಾಮ್ಮ. ೩-೨೦೬). **ನರಡಿ :** ದನಕರುಗಳಿಗೆ ದೊಡ್ಡ ಜಾಡ್ಯ ಚಪ್ಪೆಜಾಡ್ಯ ನರಡಿ ಶಿಲೆ ವಗೈರೆ ಅಂಟುಜಾಡ್ಯಗಳು ವ್ಯಾಪಿಸಿರುವದುಂಟು (ಗ್ರಾಮಾಕ. ೧೦೫) ; ಹುಚ್ಚನಾಯಿಯ ಹುಚ್ಚು ; ಕೋಳಿ ಜಡ್ಡು ; ದನಗಳ ನರಡಿ . . . ಇತ್ಯಾದಿ (ವಿಕಾಸ. I, ನಿವೇದನ). **ನೆರಡಿ :** ದನ, ಕುರಿ, ಮೇಕೆ, ಕುದುರೆಗಳಿಗೆ ಬರುವ ರೋಗ ನೆರಡಿ. ಈ ರೋಗದ ಪ್ರಾಣಿಯ ಜೊಲ್ಲು, ಸಗಣಿಗಳಲ್ಲಿ ರೋಗಾಣುಗಳು ಇರುವುವು. ಕಟುಕರು, ಚರ್ಮಹದ ಕಾರರು, ತೊಗಲು ತುಪ್ಪಟಗಳನ್ನು ಕೂಡಹಾಕಿ ಕೆಲಸಮಾಡುವವರಿಗೂ ನೆರಡಿ ಅಂಟಬಹುದು (ಕವಿಕೋ. I, ೩೬೫). [ ದೇ.॥ ತೆಲು. ನರಿಡಿ ]

**ನರಡುರೋಗ,** ನರಡಿರೋಗ (ನಾ). = ನರಡು$_2$ : ನರಡುರೋಗಕ್ಕೆ . . . ಸಿಂಧುರುಹಂ ಸಾಸಿವೆ . . . ಎಂಬಿವಂ ಕುಡುಗೆ, ಸೈತಕ್ಕುಂ ಮನೋವೇಗದಿಂ (ಲೋಕೋಪ. ೯-೨೦೭). **ನರಡಿರೋಗ :** ಆಡುಗಳಿಗೆ ಬರುವ ಅಂಟುರೋಗಗಳಲ್ಲಿ ಬೊಬ್ಬೆರೋಗ, ದೊಡ್ಡರೋಗ, ನರಡಿರೋಗ ಮೊದಲಾದುವು ಮುಖ್ಯವಾದುವು (ಕವಿಕೋ. I, ೭೨೯). [ ನರಡು$_2$ + ರೋಗ ]

**ನರತತಿ** (ನಾ). ಜನರ ಗುಂಪು ; ಜನಸ್ತೋಮ ; ಜನಸಮೂಹ : ನರ[ಪಾಠಾಂ. ಸುರ]ತತಿ ನೊಂದಳಲ್ದು ಮೊಱೆಯೋ ಮೊಱೆಯೋ . . . ಎನುತುಂ ಸುರುಳ್ದು ಸೂಗುರಿಸಿ (ಗಿರಿಕ. ೬-೬). [ ನರ$_2$ + ತತಿ$_2$ ]

**ನರತಿ** (ನಾ). ೧. ಕೂದಲು ನರೆತವಳು ; ಮುದುಕಿ : ಪೊಲತಿ, ನರತಿ, ಎಡತಿ – ಎಂಬ ಮೂಱು ಶಬ್ದದೆತ್ವಕ್ಕೆ ಸಮಾಸದಂತಿರತ್ವಂ (ಶಮದ. ೨೦೮ ಪ್ರಯೋ). ೨. ಬಿಳಿಯ ಚುಕ್ಕೆಗಳಿರುವ ಹಸು: ಆವನಾದೊಡಂ ಅಳಿಹಿದವನು ಗಂಗೆಯ ತಡಿಯಲು ಕವಿಲೆಯ ಕೊಂದ ಪಾಪದಲು ಹೋಹನು ನರತಿಯು ಕೊಂದ ಪಾಪದಲು ಹೋಹನು (ಸೌಇಇ. IX-1, ೩೭೬-೨೨; 1225). [ <ನರೆ$_2$ + – ತಿ$_1$ (<–ಇತ್ತಿ)./ತುಳು. ನರೆತಿ ]

**ನರತೆ** (ನಾ). ಗಂಡಸಿನ ಸ್ವಭಾವ ; ಪುರುಷಸ್ವಭಾವ : ನರತೆಯಣು ನಾರಿಯಲಿ ನಾರೀತ್ವ ನರನೊಳಣು ತಿರಿಚುತಿರುವುದು ಮನವ (ಮಂಕುಕ. ೪೧೩). [ ನರ$_2$ + – ತೆ$_3$ ]

**ನರತ್ವ** (ನಾ). ಮನುಷ್ಯನಾಗಿರುವಿಕೆ : ನಿರ್ಜರನಾಗಿದ್ದು ನ[ಪಾಕಾಂ. ರ್ದಮ]ರತ್ವಮಂ ಪಡೆದು [ತಾಂ] ಸುಗ್ರೀವನಾಯ್ತು ವಸುಂಧರೆಯೊಳ್ತಾನೆನೆ (ಪುಣ್ಯಾಸ್ರ. ೪-೨). [ಸಂ.]

**ನರದೇವ** (ನಾ). ಅರಸ; ರಾಜ : "ರಾಜಾ, ರಾಜನ್ಯಃ, ರಾಟ್ . . . ಪಾರ್ಥಿವಃ, ನರದೇವಃ, ಲೋಕಪಾಲಃ – ಈ ೧೨ ಅರಸು" (ಹಲಾಯು. ೬೯-೨೬೭); ನರದೇವಕುರುಪತಿ ಮತ್ತೆ ನುಡಿದನು ನಗುತ ಸೈಂಧವಗೆ (ಕುಮಾವ್ಯಾದ್ರೋ. ೮-೫೩). [ನರ೭ + ದೇವ]

**ನರಧರ್ಮ** (ನಾ). ಮನುಷ್ಯಧರ್ಮ; ಮಾನವಸ್ವಭಾವ : ಪರಿತಪಿಸುವುದು ಜೀವ ಜೀವಸರಸವನೆಳೆಸಿ ನರಧರ್ಮಸೂಕ್ಷ್ಮವಿದು (ಮಂಕುಕ. ೪೨೫). [ನರ೭ + ಧರ್ಮ]

**ನರನಂದನ** (ನಾ). ಅರ್ಜುನನ ಮಗ; ಅಭಿಮನ್ಯು : ನರನುಂ ನರನಂದನನುಂ ಗುರುವುಂ ಗುರುಸುತನುಮಾರ್ಯಭೂರಿಶ್ರವನುಂ ಸುರಸಿಂಧುಸುತನು ಮಿಂತಱುವರುಮತಿರಥರಲ್ತೆ (ಗದಾಯು. ೩-೫೦); ನರನಂದನನಾ ಸರಲಂ ಸರಭಸ[ದಿನೆ]ಚ್ಚು ನಿಜಶರದಿಂ ಭೀಕರಮಪ್ಪ ರಾಶಿಯಾದವು ಸರಲ್ಗಳಿಕ್ಕಡಿಸಿ ಬಿಟ್ಟು ಧರ್ಧಾರಿಣಿಯೊಳ್ (ಮಹಾನೀ. ೧೩-೧೨೦); ನರನಂದನನ ರಥವನು ತಱುಬಿ ನಿನ್ನಯ ತನಯನಡ್ಡೈಸಿದನು ಕೌರವರಾಯ ಖಾತಿಯಲಿ (ಕುಮಾವ್ಯಾದ್ರೋ. ೫-೧೯). [ನರ೭ + ನಂದನ]

**ನರನರ** (ನಾ). ಒಂದು ಅನುಕರಣಶಬ್ದ : ತರುಗಳನು ಕೀಳುತ್ತೆ ಬುಡದೊಡನುರುಳಿಸುತ್ತಪ್ಪಳಿಸಿ ನೆಲದೊಳು ನರನರನ್ನಲು ರೆಂಬೆಗಳ ಮುರಿ ಮುರಿಯುತೆಸೆಯುತ್ತೆ (ರಾಮಾಸಂ. ೫-೩-೫೦).

**ನರನಾಟಕ** (ನಾ). ಮನುಷ್ಯನ ನಡೆವಳಿಕೆ : ನರನಾಟಕದ ಸಂಪಾದನೆಗೆ ಕಂಡನಿತ ದೇವರ ಪಾದಕುಸುರುವೆನು (ತೊರರಾ. ೬-೪-೧೭). [ನರ೭ + ನಾಟಕ]

**ನರನಾಥ** (ನಾ). ಅರಸ; ರಾಜ : ಘನರಥ ನರನಾಥನ ಬವಣೆಯೊಳ್ ತಾವುಬಿಚೊಳಂಗಳಾಗಿ ಪೋರುತ್ತುಮಾವಿರೆ (ಶಾಂತಿಪು. ೯-೭೦ ವ); ನರನಾಥಂಗಿತ್ತು ತನ್ನಂ ನೆನೆದ ಸಮಯದೊಳ್ ಬರ್ಪೆನಾನೆಂದು ಮೆಚ್ಚಂ ಚರಿತಾರ್ಥಂ ಭಕ್ತಿಭಾರಾನತಮಣಿಮಕುಟಂ ಹರ್ಷಬಾಷ್ಪಾಂಬುವರ್ಷಂ ಗರುಡಂ . . . ತನ್ನ ಲೋಕಕ್ಕೆ ಪೋದಂ (ಶಂರಾಸೂ. ೮-೬೭); ನರನಾಥರ್ ಬೆಸಕೆಯ್ವ ಪೆಂಡಿರೆಳಸಿರ್ಪ ರೂಢಿಯ.ಂ ಗಾಡಿಯುಂ . . . ಈ ಶೌರ್ಯಮುಂ ಧೈರ್ಯಮುಂ ಹರಿಯೊಳ್ ಕಾದಿ ಕೃತಾರ್ಥಮಕ್ಕುಂ (ಜಗವಿ. ೭-೩೮). [ನರ೭ + ನಾಥ]

**ನರನಾಥಾಗ್ರಣಿ** (ನಾ). ರಾಜರಲ್ಲಿ ಶ್ರೇಷ್ಠನಾದವನು : ನರನಾಥಾಗ್ರಣಿ ನೀಂ ಮೊಗಕ್ಕೆ ಮುಳಿಸಂ ತರ್ಪನ್ನಮೇನುಂಟೆ ಸಂಗರಂ ಜಗವಿ. ೭-೪೬); ನರನಾಥಾಗ್ರಣಿ ತನ್ಮಧುಪ್ರಭುನುತಂ ತೀವ್ರಪ್ರತಾಪಂ ವಸುಂಧರೆಯಂ ರಕ್ಷಿಸುತಿರ್ಪನಂ (ನೇಮಿಪು. ೮-೨೮). [ನರನಾಥ + ಅಗ್ರಣಿ]

**ನರನಾಯಕ** (ನಾ).=ನರದೇವ: ನರನಾಯಕನಂ ನಿಂದಾನಿರದೀಗಳೆ ಕಾಂತನಂ ನೆರೆದೇನದಱಿಂದಿಲ್ಲಾ ನೆರೆದಿರ್ದಾಗೆನಾಗೆನೆ (ಕವಿರಾ. ೨-೦೨೩). [ನರ೭+ ನಾಯಕ]

**ನರನಾರಾಯಣಾಶ್ರಮ** (ನಾ). ಹಿಮಾಲಯಪ್ರದೇಶದಲ್ಲಿ ನರ ನಾರಾಯಣರು ತಪಸ್ಸು ಮಾಡಿದ ಆಶ್ರಮ, – ಪುಣ್ಯಕ್ಷೇತ್ರ; ಬದರಿಕಾಶ್ರಮ ; P ಸಹಸ್ರಕವಚನೆಂಬ ರಾಕ್ಷಸನು ಲೋಕಕಂಟಕನಾಗಿರಲು, ಅವನ ಸಂಹಾರಕ್ಕಾಗಿ ವಿಷ್ಣು, ನರ ಮತ್ತು ನಾರಾಯಣ ಎಂಬ ಇಬ್ಬರು ಋಷಿಗಳಾಗಿ ಅವತರಿಸಿದನು. ಆ ರಾಕ್ಷಸನು ಪಡೆದು ಕೊಂಡಿದ್ದ ವರಕ್ಕೆ ಅನುಸಾರವಾಗಿಯೇ ಇಬ್ಬರು ಋಷಿಗಳೂ ಸಾವಿರ ಸಾವಿರ ವರ್ಷಗಳು ತಪಸ್ಸು ಮಾಡುತ್ತಾ ಒಂದೊಂದಾಗಿ ಅವನ ಕವಚಗಳನ್ನು ಭೇದಿಸುತ್ತಿದ್ದರು. ಕೊನೆಗೆ ಇನ್ನೊಂದು ಕವಚ ಉಳಿದಿದ್ದಾಗ ಅವನು ಕಾರಣಾಂತರದಿಂದ ಸತ್ತು, ಕವಚದೊಂದಿಗೆ ಕರ್ಣನಾಗಿ ಹುಟ್ಟಿದನು. ವಿಷ್ಣುವಿನ ಅಂಶವಾದ ನರನು ಅರ್ಜುನನಾಗಿ ಹುಟ್ಟಿ ಕರ್ಣನನ್ನು ಕೊಂದನು. ನಾರಾಯಣನ ಅಂಶವಾದ ಕೃಷ್ಣನು ಅವನಿಗೆ ಸಹಾಯ ಮಾಡಿದನು ಎಂಬ ಕಥೆ ಪ್ರಚಾರದಲ್ಲಿದೆ. 'ನರ೭' ಪರಾ. [ನರ೭ + ನಾರಾಯಣ + ಆಶ್ರಮ]

**ನರಪ** (ನಾ). ದೊರೆ; ರಾಜ : ಅರಿನರಪಶಿರೋದಳನಪರಿಣತೋಗ್ರಾಸಿ ಭಯಂಕರಕರರ್ (ಪಂಪಭಾ. ೧-೨೨); ನರಪ ನೀಂ ಮುನಿದಂದು ಕೊಂದವೆ ಯೆಲ್ಲರಂ (ಧರ್ಮಾಮೃ. ೯-೨೦೪); ನರಪರೊಳಗೊಂದು ಕೋಟಿಯುಮಿರೆ ಚಾಪಬಲಕ್ಕಧೀಶನಂ ದುಂದುಭಿಯಂ ಬರಿಸಿ (ಕಾವ್ಯಾವ. ೧೪೨). [ಸಂ.]

**ನರಪತಿ** (ನಾ).=ನರಪ : ನರಪತಿಯಂ ಕಪಿಪೃತನಾಪರಿವೃತನಂ ಜಲಧಿತಟದೊಳಣಿಮಂ ಕಂಡಂ (ಕವಿರಾ. ೨-೮೯); ನರಪತಿ ಬೆನ್ನೊಳಿಟ್ಟೊನಿದಿ ರಾನ್ನುದು ವೈರಿಸಮೂಹವಿಲ್ಲಿ ಮಚ್ಚರಿಸುವರೆಲ್ಲರು (ಎಕ. III, ಮಂಡ್ಯ. ೪೧-೧೭; 950); ನರಪತಿ ತೈಲಪಂ ಬೆಸಸೆ ಘೂರ್ಜರಸೇನೆಗೆ ಸೂಚಿಯಾನೆ ಯಂ ಪರಿಯಿಸಿ ಗೆಲ್ದಂ (ಗದಾಯು. ೨-೪೭); ಗಜಪತಿ ಹಯಪತಿ ನರಪತಿ ಯೆನಿಪ ಮಹೀಪಾಲರಾಸ್ಥಾನದಲ್ (ಎಕ. VI, ೨೦೬-೯; 1057); ನರಪತಿ ಬರ್ದಿನನೆಂದಾದರದಿಂ ಗೃಹಲಕ್ಷ್ಮಿ ಬೋನಮೆತ್ತಿದುದೆಂಬಂತಿರೆ ಚೋದ್ಯಮಪ್ಪಿನಂ ಬಿತ್ತರದೆತ್ತಿದ ಬೋನದಿರವು ಚೆಲ್ವಾಯ್ತಾಗಳ್ (ಸುಕುಮಾ. ೧೦-೨೩); ನರಪತಿ ತಾನೆ ತನ್ನ ಚತುರಂಗಬಲಂ ಬೆರಸೆತ್ತಿ ಬರ್ಪುದಂ . . . ಕಂಡು (ಪುಣ್ಯಾಸ್ರ. ೫-೬೨). [ನರ೭ + ಪತಿ೨]

**ನರಪತಿತನಯ** (ನಾ). ಅರಸನ ಮಗ; ರಾಜಕುಮಾರ : ನರಪತಿತನಯನಾಯತತರಳಾಪಾಂಗದೊಳೆ ನೋಡಿ (ಕವಿರಾ. ೧-೬೦). [ನರಪತಿ + ತನಯ]

**ನರಪತಿಸೇನೆ** (ನಾ). ಅರಸನ ಸೈನ್ಯ : ನರಪತಿಸೇನೆಯೊಳೆ ಪಲಂ ರೊಳಂ ಮುಖ್ಯಂಗೆ ಗುಣದೊಳತ್ಯಧಿಕಂಗೊರ್ವರೊಳಾನುಮಿಲ್ಲದೊರ್ವನೆ ಬರೆ ತನಗೆಂದಱಿತುಕೊಳ್ಗೆ ಶಕುನದ ಮತಮಂ (ಲೋಕೋಪ. ೧೩-೨). [ನರಪತಿ + ಸೇನೆ]

**ನರಪಶು** (ನಾ) ಪಶುವಿಗೆ ಸಮಾನವಾದ ಮನುಷ್ಯ; ಪಶುವಿನಂತೆ ವರ್ತಿಸುವವನು; ಅವಿವೇಕಿ: ವಿದ್ಯೆಯಿಲ್ಲದ ನರನು ನರಪಶುವವನ ಜನ್ಮ ನಿರರ್ಥಕರ (ಕುಮಾವ್ಯಾಉ. ೩-೦೧೫); ಇರುಳು ಹಗಲು ನರಹರಿಯನು ತುತಿಸದೆ ನರಪಶುಗಳ ಕೊಂಡಾಡುತಿ (ಪುರಂದ. ೪-೧೩೫-೪); ಅವನ ಮಾತೆತ್ತಬೇಡಿರಿ ನನ್ನೆದುರು ! ನರಪಶು (ಕಮನೆ. ೧೧). [ನರ೭ + ಪಶು]

**ನರಪಾಲ, ನರಪಾಳ** (ನಾ). = ನರಪ : ನರಪಾಲಪ್ರಜವಮಾಣಲ ವಿಲಸನ್ಮಾಣಿಕ್ಯಮಾಲಾಂಶುಪಿಂಜರಿತಂ (ಆದಿಪು. ೧೪-೯೨); ನರಪಾಲು ಮೇಘರಥಂ ಪರಿಪಾಲಿಸುತಿರ್ಪಂ (ಮಹಾನೀ. ೧೬-೪). **ನರಪಾಳ**: ನರಪಾಳ ಮೌಳಿಮಾಳಾಪರಸ್ಪರಪ್ರೋತರತ್ನರುಗ್ಜಾಳದಿನಂಬರಮಿದಪೂರ್ವಂ ದಿವ್ಯಾಂಬರಮಾದುದು ಭವನಲಕ್ಷ್ಮಿಗೇಪೊಗಟ್ಟಿನಿದಂ (ವರ್ಧಪು. ೫-೩); ನರಪಾಳ ಪುತ್ರಿಯೊರ್ವಳ್ ಸುರಪತಿಗಂ ರಮಣಿಯಾಗಿ ಸುಖದಿಂದಿರ್ದಳ್ (ಪುಣ್ಯಾಸ್ರ. ೩-೮). [ಸಂ.]

**ನರಪಾಳ** 'ನರಪಾಲ' ನೋ.

**ನರಪಿಶಾಚಿ** (ನಾ). ಮನುಷ್ಯಸ್ವರೂಪದಲ್ಲಿರುವ ಪಿಶಾಚಿ,–ದೆವ್ವ : ಎಲೆ ನರಪಿಶಾಚಿ! ನನ್ನನ್ನು ನನ್ನಿದಿರಿನಲ್ಲಿಯೇ ನಾಯಿಯೆಂದು ಕರೆಯುವಷ್ಟು ದಿಟ್ಟತನವು ನಿನಗುಂಟಾದುದೇ ? (ಪಿಶಾಪ. ೨೭). [ನರ೭ + ಪಿಶಾಚಿ]

**ನರಪಿಳ್ಳೆ** (ನಾ). ೧. ಚಿಕ್ಕ ಹುಡುಗ. ೨. (ಆಲಂ) ಸಾಧಾರಣ ವ್ಯಕ್ತಿ; ಮನುಷ್ಯ ಮಾತ್ರ; ಸಾಮಾನ್ಯ ಮನುಷ್ಯ: ಅವರು ಅಲ್ಲಿಗೆ ಬಂದಿದ್ದದ್ದು ಒಂದು ನರಪಿಳ್ಳೆಗೂ ಗೊತ್ತಾಗಲಿಲ್ಲ (ವಚಭಾ. ೫೦); ಒಂದು ನರಪಿಳ್ಳೆಯ ಧ್ವನಿಯೂ ಎಲ್ಲಿಯೂ ಕೇಳಿಸುತ್ತಿಲ್ಲ (ವಾರಾಕ್ಕ. ೪೩); ನಾರಣಪ್ಪನ

ಸಾವನ್ನು ಕೇಳಿ , . . ಅಗ್ರಹಾರದ ಒಂದು ನರಪಿಳ್ಳೆಗೂ ವ್ಯಥೆಯಾಗದಿದ್ದರೂ ಕೂಡ ಎಲ್ಲರ ಹೃದಯದಲ್ಲು . . . ಕಳವಳ ಹುಟ್ಟಿತು (ಸಂಸ್ಕಾರ. ೫). [ ನರ್₂+ಪಿಳ್ಳೆ ]

**ನರಪುಂಗವ** (ನಾ). ಮನುಷ್ಯರಲ್ಲಿ ಶ್ರೇಷ್ಠನಾದವನು; ಉತ್ತಮ. [ ನರ್₂ + ಪುಂಗವ ]

**ನರಪೇತ**, ನರಪೇತು (ನಾ). ಬದುಕಿದ್ದೂ ಹೆಣದಂತಿರುವವನು; ತೀರ ಕೃಶನಾದವನು; ಜೀವಚ್ಛವ; ಕೈಲಾಗದವನು; ಅಶಕ್ತ; ದುರ್ಬಲ : ನರಪೇತರ ನರಕದಲ್ಲಿ ಹೊಸೆಯದಿರೀ ಕಗ್ಗ (ಅಕಳು. ೪೧೩-೧೩); ಬರಿಯ ಎಮಕೆ; ನರಪೇತ; ಕದಿರುಕಡ್ಡಿ (Bag of Bones. ಇಂಕನಿ). **ನರಪೇತು :** ಬೀತ ನರಪೇತುಗಳಿರಾ! ಬಾತಂಥ ಪ್ರೇತಗಳಿರಾ! (ಗರಿ. ೫೦-೪). [ ನರ್₂ + ಪೇತ ]

**ನರಪೇತಲ**, ನರಪೇತಲು (ನಾ). ೧.=ನರಪೇತ: ಹಲವಾರು ರೋಗಿಗಳು ನರಪೇತಲರಾಗಿರುತ್ತಾರೆ (ಮನೋನಂ. ೩೧೧); ಕಾಲಬಲವಿಲ್ಲದ ಶಿಖಂಡಿ ನರಪೇತಲ ಗೊರಸುತುಳಿತಕ್ಕೆ ಸಿಕ್ಕಿಬಿದ್ದ (ಚಂಡಮ. ೨೦-೦೩); ಅವನು ಮೂಳೆ ಚಕ್ಕಳಗಳ ಉದ್ದನೆಯ ನರಪೇತಲ (ಪುನರು. ೪೦೫); ಬಿಸಿಲು ಮತ್ತು ಹಸಿವಿನಿಂದ ಇನ್ನಷ್ಟು ನರಪೇತಲನಾಗಿ ಮನೆಗೆ ಬಂದು (ಸಂಸ್ಕಾರ. ೩೫). ೨. ಕೃಶವಾದುದು; ಸೊರಗಿದುದು: ಹಸಿರಿನ ಹೆಸರು ನೆನಪಿಗೂ ಬಾರದ ಹಾಗೆ ಬತ್ತಲೆ ನಿಂತ ನರಪೇತಲ ಮರಗಳು (ಹೊಸಕ್ಕ. ೭೭೪). **ನರಪೇತಲು :** ೧. ಹೆಸರು ಭೀಮಸೇನ, ನೋಡುವುದಕ್ಕೆ ನರಪೇತಲು (ಹೊಸಜಿ. ೧೪).

ನರಪೇತಲ ನಾರಾಯಣ = ಕೃಶನಾಗಿರುವವನು; ನರಪೇತ : ಎಷ್ಟೇ ತಿಂದರೂ ಅವನು ನರಪೇತಲ ನಾರಾಯಣನಾಗಿದ್ದಾನೆ (ರೂಢಿ). [ <ನರಪೇತ ]

**ನರಪೇತಲು** 'ನರಪೇತಲ' ನೋ.

**ನರಪೇತು** 'ನರಪೇತ' ನೋ.

**ನರಪೋತ** (ನಾ). ಅಲ್ಪನಾದ ಮನುಷ್ಯ : ಆ ನರಪೋತಂಗಳ್ಗಿಲ್ಲ ನಾನಂಜಲುಂಟೆ (ಶಾರ್ಕೀಸ. ೬೨). [ ನರ್₂ + ಪೋತ₂ ]

**ನರಪ್ರಾಣಿ** (ನಾ). = ನರಜಂತು : ಸೊಗಸು ಬೇಡದ ನರಪ್ರಾಣಿಯೆಲ್ಲಿ ಹುದಯ್ಯ? (ಶುಂಕುಳ. ೪೪೨). [ ನರ್₂ + ಪ್ರಾಣಿ ]

**ನರಪ್ರೇತ** (ನಾ). ೧. ಮನುಷ್ಯನ ಹೆಣ. ೨. (ಅಲಂ) ಜೀವಚ್ಛವ; ಹೇಡಿ:ಉದಾರಹೃದಯಿಗಳಾಗಿರಬೇಕಾದಂಥ ತರುಣರು ಕೂಡ ನರಪ್ರೇತರೇ ಆಗಿದ್ದಾರೆ (ಶ್ಯಾಮುಕಾ. ೨೩). [ ನರ್₂ + ಪ್ರೇತ ]

**ನರಬಲ** (ನಾ). ಪದಾತಿ ಸೈನ್ಯ; ಕಾಲಾಳುಗಳ ಪಡೆ : ನರಬಲದೊಳ್ ತುರಂಗಬಲದೊಳ್ ರಥಸಂಕುಲದೊಳ್ ಮದಾಂಧಕುಂಜರಕುಲದೊಳ್ ಸಿರಂ ಸಿಡಿಯೆ ಸೀಳೆ ಬಸುರ್ಕಡಿಯೋಗಿ ನಾಳಿ ಕೀಲ್ ಸುರಿತರೆ ಮಸ್ತಕಸ್ಥಾನದ ಮೌಕ್ತಿಕಮುಣ್ಮುವಸ್ರಗ್ಜಲಂಗಳೊಳ್ ಬೆರಸಿ ಸರಲ್ ಸಪತ್ರಮೆನೆ ಸಂದುವು ಸಂಗರರಂಗಭೂಮಿಯೊಳ್ (ಪಂಪಾಸೀ. ೭-೧೯). [ ನರ್₂ + ಬಲ₂ ]

**ನರಬಲಿ** (ನಾ). ಭೂತ, ಪ್ರೇತಗಳ ಅಥವಾ ದೇವತೆಗಳ ಪ್ರೀತ್ಯರ್ಥವಾಗಿ ಕೊಡುವ ಮನುಷ್ಯನ ಬಲಿ; ಮನುಷ್ಯನನ್ನು ಕ್ಷುದ್ರದೇವತೆಗಳ ಮೊಂದೆ ಪ್ರಾಣಿಗಳನ್ನು ಕೊಲ್ಲುವಂತೆ ಕೊಲ್ಲುವುದು: ನರಬಲಿಯನಿತ್ತ ಬಳಿಕಾ ಬಿಸಿಯ ನೆತ್ತರಿಂ ತೊರೆದ ಮಣ್ಣಿಂದಲ್ಲದೀ ಕೋಟೆ ನಿಲ್ಲದೆನೆ (ಸಮ್ಮಿಳಾ. ೨-೫೪); ಬಲಗಾಲ್ ಬುಡದಿಂ ಬಿಡುಗಡೆ ಬಿಡಿಸಲು ನರಬಲಿಯೇ ಬೇಕು! (ಗರಿ.೭೭-೦೫); ಖಾಂಡರು – ಎಂಬ ಜನರು ಪೂರ್ವದಲ್ಲಿ ನರಬಲಿ ಕೊಡುತ್ತಿದ್ದರು (ಭೂಗೋಳ. ೬೧); ನಿನ್ನ ಮಕ್ಕಳಲ್ಲಿ ಒಬ್ಬನನ್ನು ನರಬಲಿಗೋಸ್ಕರ ಕೊಡು (ನೀತಿಚಿಂ. XIV, ೦೩). [ ನರ್₂ + ಬಲಿ₂ ]

**ನರಭಕ್ಷಕ** (ನಾ). ೧. ಮನುಷ್ಯನನ್ನು ತಿನ್ನುವ ಪ್ರಾಣಿ; ಹುಲಿ, ಸಿಂಹ ಇತ್ಯಾದಿ : ಒಂದು ಸಿಂಹವು ಮನೆ ಮಾಡಿಕೊಂಡು, ಗಂಡಾಂತರವನ್ನುಂಟು ಮಾಡುತ್ತಿದೆ . . . ಆ ನರಭಕ್ಷಕನ ಹಾವಳಿಯನ್ನು ತಡೆಗಟ್ಟು (ಮಹಿಸ.೮೮). ೨. ಮನುಷ್ಯನ ಮಾಂಸವನ್ನು ತಿನ್ನುವ ವ್ಯಕ್ತಿ. ೩. ರಾಕ್ಷಸ : (+). [ ನರ್₂ + ಭಕ್ಷಕ ]

**ನರಭಕ್ಷಕಿ** (ನಾ). ಮನುಷ್ಯರ ಮಾಂಸವನ್ನು ತಿನ್ನುವ ಹೆಂಗಸು : ನನ್ನನ್ನೇಕೆ ತಿಂದುಬಿಡುವಂತೆ ನೋಡುತ್ತೀಯ, ನೀನೇನು ನರಭಕ್ಷಕಿಯಾ? (ಹಸುಹೊ. ೨೧೫). [ ನರಭಕ್ಷಕ+ –ಇ₂ ]

**ನರಭಕ್ಷಣ** (ನಾ). ೧. ಮನುಷ್ಯನನ್ನು ತಿನ್ನುವುದು: ಮನುಷ್ಯನನ್ನು ತಿನ್ನುಕೆ; ನರಭಕ್ಷಣ (Anthropophagy. ಇಂಕನಿ). ೨. (ಅಲಂ) ಜನರಿಗೆ ಮೋಸ ಮಾಡುವುದು : ಮಂತ್ರಿಮಂಡಲ ಮತ್ತು ಸರ್ಕಾರದ ಇಲಾಖೆಗಳಲ್ಲಿ ನರಭಕ್ಷಣಪ್ರವೃತ್ತಿಯ ಅಂಕುರಾರ್ಪಣೆಯಾಗುತ್ತಿತ್ತೇ ಹೊರತು, ಸೈಬೀರಿಯಾದ ಚೌಗುನೆಲದಲ್ಲಲ್ಲ (ಪುನರು. ೫೫೪). [ ನರ್₂ + ಭಕ್ಷಣ ]

**ನರಭಾಲಪಟ್ಟ** (ನಾ). ಮನುಷ್ಯನ ಹಣೆ : ಸಾಧ್ಯಪಡದಾರಿಗಂ ನರಭಾಲಪಟ್ಟವನು ಶುದ್ಧಪಡಿಸಲು ತೊಡೆದು ಪೂರ್ವದೆಲ್ಲವನು (ಮಂಕುಳ. ೬೩೩). [ ನರ್₂ + ಭಾಲಪಟ್ಟ ]

**ನರಭೋಗ** (ನಾ). ಮಾನವನಾಗಿ ಪಡೆಯುವ ಅನುಭವ: ಚರಮವೃತ್ತಿಯೊಳಗಾವ ಭಾವವು ಸ್ಫುರಿಸುವುದೋ ಅಂತಾ ಜನ್ಮಪ್ರಾಪ್ತಿಯಹುದೆಂದು ನರಭೋಗ ಶಿಲಾಭೋಗ ಪ್ರತಿಮಾಭೋಗ ದ್ರವ್ಯಭೋಗಾದಿಗಳ ವೈಚಿತ್ರ್ಯ ಮುಳ್ಳ ಲೋಕದ ಪ್ರಾಂತಂಗಳಂ ನಂದಿ ನಾರದ ಭರತ ದೇವಲಾದಿ ಪುರಾವೃತ್ತಗಳಂ ಸಮನ್ವಯಗೊಂಡು (ವಿವೇಕ. ೧೯೮). [ ನರ್₂ + ಭೋಗ ]

**ನರಮ್**, ನರಂ, ನರಮು, ನರ್ಮ್₂ (ಗು). ೧. ಕೋಪ ಮೊದಲಾದುವುಗಳ ಆವೇಶ ಇಳಿದ; ಮೆತ್ತಗಾದ; ತಣ್ಣಗಾದ : ತನಗ ಪ್ರತಿಕಾರನ ಇಲ್ಲಾ ಅಂತ ಕ್ಯಾಮರಾಯಾಗ ಅನಿಸಿದರ ತಾನ ನರಮ್ ಆಗತಾನ (ದೀಪಹ. II, ೧೦೭). **ನರಂ :** ೧. ಗರುಡಮರಿಯನ್ನು ಕಂಡ ಹಾವಿನಂತೆ "ನರಂ" (ಮೆತ್ತಗೆ) ಆಗುತ್ತಾನೆ (ಬಿಸ್ತಳ. ೧೮); ಮರುಮಾತಾಡದೆ ನರಂ ಆದ ನರಿಯಂತೆ ಈ ನರೋತ್ತಮ ತೊಲಗಿದ (ಮೂಮನೆ. ೧೦೭). **ನರಮು :** ೨. ಮೃದುವಾದ; ಕೋಮಲವಾ..; ಮೆತ್ತನೆಯ : "ನರಮು = ಮೆತ್ತನ್ನ" (ಜಾನಕೋ. ೯). ೩. ನಮ್ರನಾದ; ವಿಧೇಯನಾದ. **ನರ್ಮ್₂ :** ೨."ನರ್ಮ = ಮೆತ್ತನ್ನ" (ಜಾನಕೋ. ೯). (ನಾ). ೪. ದುರ್ಬಲತೆ; ನಿಶ್ಶಕ್ತಿ : ಅಧರ್ಮಿಗಳ . . . ಮೋಹಿಸುವ ಕಾಮಾಂಧರಟ್ಟುಳಿಯನು ಒರ್ಮೆಯಾಂ ಪೊರಲಾರೆನೆಂದಿಳಾಭಾಮಿನಿಯು ನರ್ಮದಿಂ ಕರಗಿ ಕಂದುತ್ತ ಮಿಡುಕುವಳು (ದುರಪು. ೨-೦೮).

ನರಮುಗೊಳಿಸು = ಮೆತ್ತಗೆಮಾಡು; ಬಗ್ಗುಬಡಿ : ಸತ್ಯಪ್ರತಿಜ್ಞರಾದ ರಜಪೂತರನ್ನು ಕುಟಿಲನೀತಿಯಿಂದ . . . ಸ್ವಾಧೀನಪಡಿಸಿಕೊಂಡು ನರಮುಗೊಳಿಸುತ್ತ ತನ್ನ ನೇತೃತ್ವದ ಕೆಳಗೆ ಇಟ್ಟುಕೊಳ್ಳಲುಪಕ್ರಮಿಸಿದನು (ಮಾತೃಭೂ. ೫). [ ←ಹಿಂ. ಮರಾ. ಗುಜ. ನರಮ್ ; ಪಾರ. ನರ್ಮ್ ]

**ನರಮಂಡಲ** (ನಾ). = ನರವ್ಯೂಹ : ಯಾವುದೋ ಒಂದು ತೇಜೋವಾಹಿಯು ನರಮಂಡಲವನ್ನೆಲ್ಲಾ ಆಕ್ರಮಿಸಿ ಕೌಶಿಕನೆನ್ನುವ ತನ್ನನ್ನು ಕಬಳಿಸುವಂತೆ ತೋರುತ್ತಿದೆ (ಮಹಾಕ್ಷ. ೩೭); 'ಥಿಯಾಮಿನ್' ಮನಸ್ಥಿತಿಯ ಜೀವಾತು. ನರಮಂಡಲದ ಮತ್ತು ಹೃದಯದ ಕ್ರಿಯೆಗಳು ನಡೆಯಬೇಕಾದರೆ ಇದು ಅಗತ್ಯ (ಆಹುಸ. ೬೦); ಶರ್ಕರಪಿಷ್ಟಾದಿಗಳಿಂದ ದೇಹಕ್ಕುಂಟಾಗುವ ಪ್ರಯೋಜನಗಳು . . . ಹೃದಯ, ನರಮಂಡಲ ಮತ್ತು ಪಿತ್ತಜನಕಾಂಗಗಳ ಆರೋಗ್ಯಕ್ಕೆ ನೆರವಾಗುವುದು (ಗೃಹವಿ. ೦೮). [ ನರ್₁ (<ನರವು) + ಮಂಡಲ ]

**ನರಮನುಷ್ಯ** (ನಾ). ಸಾಮಾನ್ಯಮನುಷ್ಯ ; ಮನುಷ್ಯಮಾತ್ರ : ನೀರು ಜಲಚರದೆಂಜಲು ಮೃಗಪಕ್ಷಿಗಳೆಂಜಲು ಬಳಸಹೋದಲ್ಲಿ ಕೈಕಾಲ ತೊಳೆದು ಬಾಯ ಮುಕ್ಕುಳಿಸುವಲ್ಲಿ ನರಮನುಷ್ಯರೆಂಜಲು (ವಚಸಂ. ೩೭೯-೪೩). [ ನರ್₂ + ಮನುಷ್ಯ ]

**ನರಮಹಿತ** (ನಾ). ಜನರಿಂದ ಗೌರವಿಸಲ್ಪಟ್ಟವನು ; ಜನರ ಆದರಕ್ಕೆ ಪಾತ್ರನಾದವನು : ನರಮಹಿತಾ [ಪಾಠಾಂ. ಪಾ] ನಿನಗೇನಹಿತರು ಮೊಳರೇ ಸತತ ಪರಹಿತಾಚಾರಪರಾ (ಕವಿರಾ. ೧-೮೧).

[ ನರ್₂ + ಮಹಿತ ]

**ನರಮಾಂಸ** (ನಾ). ಮನುಷ್ಯನ ಮಾಂಸ : ಹಿರಿಯರು ನರಮಾಂಸವ ಭುಂಜಿಸುವರೆ (ಬಸವ.೨೩೦) ; ಕುಂಭಂ ನರಮಾಂಸದ ಸವಿಯಿಂ ಮನುಜ ರೆಲ್ಲರಂ ಗುಪ್ತದೆ ಕೊಲ್ವುದನಱಿದು (ಶಾಂತೀಶ್ವ. ೩-೭೬) ; ಮಾಂಸವಾಗಲೆ ವೇಳ್ಕುಮಶ್ಮಂ ಮಾಂಸಮುಂ ನರಮಾಂಸಂ (ಬಸಪು. ೨೪-೭) : ರಕ್ತದ ಜಲಪಾತ ! ನರಮಾಂಸದ ನಾತ ! (ಪಾಂಚಜ. ೭೯-೯). [ ನರ್₂ + ಮಾಂಸ ]

**ನರಮಾಂಸಭಕ್ಷಕ** (ನಾ). ಮನುಷ್ಯನ ಮಾಂಸವನ್ನು ತಿನ್ನುವವನು ; ನರಭಕ್ಷಕ: ಈ ಮರ್ಮವನಱಿಯದ ಹಿರಿಯರು ನರಮಾಂಸಭಕ್ಷಕರಯ್ಯಾ (ಜನ್ನವ. ಶ. ೩೪೦-೭೦೬). [ ನರಮಾಂಸ + ಭಕ್ಷಕ ]

**ನರಮಾಂಸಭುಂಜಕ** (ನಾ). = ನರಮಾಂಸಭಕ್ಷಕ : ಅವನು ಗುರುದ್ರೋಹಿ ಆಚಾರಭ್ರಷ್ಟ ವ್ರತಗೇಡಿ ನರಮಾಂಸಭುಂಜಕ (ಜನ್ನವ. ಶ. ೨೨೬-೩೦೦).

[ ನರಮಾಂಸ +ಭುಂಜಕ ]

**ನರಮಾಲೆ** (ನಾ). ಒಂದು ಬಗೆಯ ರೋಗ : ಯವಕ್ಷಾರವನ್ನು, ಇಂಗನ್ನು, ಸುಣ್ಣವನ್ನೂ ಲೇಪವಮಾಡೆ ನರಮಾಲೆ ಕರಗಿಹೋಗುವುದು . . . ಪುಣುಗನ್ನೂ ಬೆಣ್ಣೆಯನ್ನೂ ಕೊಡಲು ಗಂಡಮಾಲೆ ಹೋಗುವುದು. ನರಮಾಲೆ ಕರಗಿಹೋಗುವುದು (ವಿವ್ಯವಿ. ೭೯). 'ನರಮಾಲಿ' ಪಠಾ. [ ? ]

**ನರಮು** 'ನರಮ್' ನೋ.

**ನರಮೃಗ** (ನಾ). ೧. = ನರಪಶು : ದ್ಯೂತ ಮೃಗಯಾ ಸ್ತ್ರೀವ್ಯಸನ ನೃಪ ಜಾತಿಗೋಸುಗರಾದವಿದಱ ರಸಾತಿಶಯಮಱಿಯದವ ನರಮೃಗ (ಕುಮಾವ್ಯಾಸ. ೦೩-೩೮) ; ನರಮೃಗಾಧಮನೆತ್ತಲುನ್ನತಪರಮತತ್ತ್ವವಿದೆತ್ತಲು (ಕುಮಾವ್ಯಾಭೀ. ೩-೭೦). ೨. = ನರಸಿಂಹ ೧ : ಗಿರಿಯ ನೆಗಹಿ ಧರಣಿಯ ತಂದು ನರಮೃಗ ಬಲಿಬಂಧ . . . ಪುರಂದರವಿಠಲ ಮನೆಗೆ ತಾ ಬಂದ (ಪುರಂದ. ೦-೮೩-೩).

**ನರಮೃಗರೂಪ** = ಮನುಷ್ಯನ ದೇಹ ಹಾಗು ಸಿಂಹದ ಮುಖವುಳ್ಳ ರೂಪ ; ನರಸಿಂಹ :- ತರಳ ಕರೆಯಲು ನೀ ತ್ವರಿತದಿ ಕಂಭದಿ ಬಂದು ನರಮೃಗರೂಪದಿಂದವನ ಕಾಯ್ದೆ (ಪುರಂದ. ೩-೧೭೦-೩). **ನರಮೃಗಶರೀರ**= ನರಮೃಗರೂಪ : ಪರಮಪುರುಷ ಭವಭುಜನಕೇಶವ ನರಮೃಗಶರೀರ ನಮೋ ನಮೋ (ಪುರಂದ. ೩-೪೧-೧). [ ನರ್₂ + ಮೃಗ ]

**ನರಮೇಧ** (ನಾ). ೧. ಮನುಷ್ಯರನ್ನು ಬಲಿಕೊಡುವ ಯಜ್ಞ : ರಾಕ್ಷಸೋತ್ತಮರೊಳಾರ್ಪಿಂತೆ ನರಮೇಧಮುಖದೀಕ್ಷೆಯಂ ಕೈಕೊಂಡರಿದಕೆ ಋತ್ವಿಜರಾರು (ಜೈಮಿಭಾ. ೧೭-೨೭) ; ನಿನ್ನ ನರಮೇಧಕಾರ್ತ್ವಿಜ್ಯಮಂ ಮಾಳ್ಪರಿದಕೆನ್ನನಾಚಾರ್ಯನಾಗಿಯೆ ವರಿಸು ತದ್ಯಾಗಮಂ ನೆಗಳ್ಚು (ಜೈಮಿಭಾ. ೦೭-೨೯) ; ನರಬಲಿ ನರಮೇಧವು ಕೇಳು ಅಶ್ವಮೇಧಕೂ ಸರಿಮೇಲು (ಗಿರಿ. ೬೯-೦೬). ೨. (ಆಲಂ) (ಹಿಂದೆ ಮುಂದೆ ನೋಡದೆ) ಮನುಷ್ಯರನ್ನು ಕೊಲ್ಲುವುದು : ಎಲ್ಲೆಲ್ಲೂ ಗೋಳಿಬಾರ್, ಮಕ್ಕಳು ಮರಿಗಳೆನ್ನದೆ ಗುಂಡಿಕ್ಕಿ ಕೊಲ್ಲುವ ನರಮೇಧ (ವಿದ್ಯಾರ. ೧೨೭) ; ಕತ್ತಿ ಹಿರಿದಾಗ ಎಲ್ಲವನ್ನೂ ಮರೆತು ನರಮೇಧವನ್ನಾಚರಿಸುವೆನು (ದಾನಚಿಂ. ೦೪೩) ; ಅವನೆಸಗಿದ ಕ್ರೂರ ನರಮೇಧದ ಪ್ರತಿಫಲವಾಗಿ ಪಡೆದಿದ್ದ ಬಿಳಿಯ ಕ್ರೂಜೆ (ಪುನರು. ೩೫೭). [ ನರ್₂ + ಮೇಧ ]

**ನರಯಜ್ಞ** (ನಾ).= ನರಮೇಧ ೨ : ಈ ನರಯಜ್ಞ ಎಂಥಾ ಔತನ ಅವರಿಗೆ ! (ವೀರಯೋ. ೩೦). [ ನರ್₂ + ಯಜ್ಞ ]

**ನರಯಣ** 'ನಾರಯಣ' ನೋ.

**ನರಯುಗ್ಮ** (ನಾ). ೧. ಇಬ್ಬರು ಮನುಷ್ಯರು. ೨. [ಜ್ಯೋತಿ] ಮಿಥುನ ರಾಶಿ : ಶನಿ ಮಕರಲಗ್ನದೊಳ್ . . . ದನುಜೇಜ್ಯಂ ತೊಲೆಯೊಳ್ ಸೌಮ್ಯನಿರಲ್ ನರಯುಗ್ಮದೊಳ್ ನರಾಧಿಪನಕ್ಕುಂ (ಜಾತತಿ. ೦೨-೩).

[ ನರ್₂ + ಯುಗ್ಮ ]

**ನರರಾಕ್ಷಸ** (ನಾ). ರಾಕ್ಷಸನಂತೆ ನಿರ್ದಯನಾದ ಮನುಷ್ಯ : ಆ ನಿಸರ್ಗವನ್ನು ನರರಾಕ್ಷಸನಂಥ ಅಥವಾ ಅಧಿಕಾರಿಗಳು ಹೇಗೆ ಕಲುಷಿತಪಡಿಸಿ ದುರಂತಕ್ಕೆ ಬಡಜನರನ್ನು ದೂಡುವರೆಂಬುದು . . . ವರ್ಣಿತವಾಗಿದೆ (ಕಾಲೂರ. ೧ ಮುನ್ನುಡಿ) ; ಹೆಂಡತಿಯ ವಿಕೃತಕೋಪವು ಅವರನ್ನು ನರರಾಕ್ಷಸನನ್ನಾಗಿ ಮಾಡಿಸಿತ್ತು (ಕಾವೇರಿ. ೮೪). [ ನರ್₂ + ರಾಕ್ಷಸ ]

**ನರರಾಶಿ** (ನಾ). = ನರಲಗ್ನ : ಕನ್ಯಾ ತುಲಾ ಮಿಥುನ ಧನುಸ್ಸು (ಪೂರ್ವಾರ್ಧ) ಕುಂಭ ಇವು ನರರಾಶಿಗಳು (ಜಾತತಿ. ೦-೩೦ ಟೀಕೆ) ; ಮಿಥುನ ಕನ್ಯಾ ತುಲಾ ಧನುಸ್ಸಿನ ಪೂರ್ವಾರ್ಧ ಕುಂಭ ಇವು ನರರಾಶಿಗಳು (ಜಾತತಿ. ೪-೧೯ ಟೀಕೆ). [ ನರ್₂ + ರಾಶಿ ]

**ನರರೋಗ** (ನಾ). ನರಗಳ ದೌರ್ಬಲ್ಯದಿಂದ ಉಂಟಾಗುವ ಒಂದು ಬಗೆಯ ರೋಗ ; ನರವ್ಯೂಹದ ಅಸ್ವಸ್ಥತೆಯಿಂದ ಉಂಟಾಗುವ ಮನೋವೈಕಲ್ಯ : ಇವೆರಡೂ ಲಕ್ಷಣಗಳು ಮಂದ ಅಥವಾ ತೀರ ಕಡಿಮೆ ಪ್ರಮಾಣದಲ್ಲಿದ್ದರೆ, ಸಾಮಾನ್ಯವಾಗಿ ಅಂತಹ ಮನೋವೈಕಲ್ಯಗಳನ್ನು ನರರೋಗ(Neurosis)ಗಳೆಂದು ಕರೆಯುತ್ತಾರೆ (ಮನೋರೋ. ೨೧) ; ನರರೋಗ ಪ್ರವೃತ್ತಿಗೂ (ನ್ಯೂರೋಟಿಸಿಸಂ) ಶರಣಾಗತಿಗೂ ನೇರವಾದ ಸಹಸಂಬಂಧವಿದೆಯೆಂದು . . . ಸಿದ್ಧಪಡಿಸಿದ್ದಾನೆ (ಕವಿಕೋ. I, ೭೩೫).

[ ನರ್₁ (<ನರವು) + ರೋಗ ]

**ನರರೋಗಿ** (ನಾ). ನರರೋಗವುಳ್ಳವನು ; ಸೌಮ್ಯರೂಪದ ಮನೋವೈಕಲ್ಯದಿಂದ ಕೂಡಿದವನು: ನರವ್ಯಾಧಿಯುಳ್ಳ(ವನು) ; ನರರೋಗಿ; ವಿಪರೀತಸೂಕ್ಷ್ಮವೇದಿಯಾದ (Neurotic. ಇಂಕನಿ) ; ನರರೋಗಿಯಲ್ಲಿ ಸಮಾಜಭಾವನೆಯು ಚೆನ್ನಾಗಿಯೇ ಇರುತ್ತದೆ (ಮನೋರೋ. ೨೧).

[ ನರ್₁ (< ನರವು) + ರೋಗಿ ]

**ನರಲ್₁**, ನರಲು, ನರಳ್, ನರಳು₁, ನೆರಳ್₁, ನೆರಳಂ₁ (ಕ್ರಿ). ೧. ನೋವಿನಿಂದ ಧ್ವನಿಮಾಡು ; ಮುಲುಕು ; ಒರಲು : "ನರಲ್ - ವೇದನಧ್ವನೌ" (ಶಮುಧಾ) ; ಸೂಲದೊಳ್ ನೊಂದು ನರಳ್ವ [ಲ್ವ] ಕಳ್ಳರಿಂ (ಕಾವ್ಯಸಾ. ೩೫೯ ಶೂದ್ರಕ) ; ಎನ್ನ ಭಯಂಕರದಂಡರತ್ನಹತಿಯಿಂ ಗಿರಿ ನೊಂದು ನರಲ್ವ [ ಪಾಠಾಂ. ಳ್ವ ] ಮಾಟಕ್ಕಿಯಂತಾಯ್ತಾಗಳ್ (ಆದಿಪು. ೦೩-೩೭) ; ಸುರಿವ ಸರಲ್ ನರಲ್ವ ಭಟರತ್ತಮುರುಳ್ವ ದಟಂ (ಪಂಪಭಾ. ೯-೩೭) ; ಸೂತಸುತನೊಂದುಗ್ರೇಷುವಿಂ ತಿಣ್ಣಮೆಚ್ಚೊಡನಾರ್ದಂ ನಸುಮೂರ್ಛೆವೋಗಿ ರಥದೊಳ್ ಭೀಮಂ ನರಲ್ವನ್ನೆಗಂ (ಪಂಪಭಾ. ೦೦-೦೪೩); ಕುರುರಾಜಂ ತೊಡೆವೇನೆಗೆ ನರಳ[ಲ]ನೆ ಕುಱುಬಾದ ತೊಡೆಯ ಬೇನೆಗೆ ಕಂಡರ್ ನರಳ್ವಂತೆ (ಗದಾಯು. ೯-೦೯) ; ಬೆರಲಿರಲೊರಲ್ಕೊರಲ್ಸರಲ್ . . . ನರಲುಂ ಮುಂಗ್ಯೆ ಸರಲುಂ ಲಾಂತವಿಮಂ ಗ್ರಾಮ್ಯರಱಿಯದುಚ್ಚರಿಸುವರ್ ಕುಳಾಂತಭ್ರಮೆಯಿಂ (ಶಮದ. ೨೮) ; ಅದೊ ಕೇಳಿಂ, ಆ ನರಲ್ವ ನರಲ್ಗಳನ್ ! (ಅಶ್ವತ್ಥಾ. ೦೪-೨೪). **ನರಲು** : ೧. ಅರೆನುಡಿವ ಸರಸವಾಡುವ ನರಲುವ ಪೊಯ್ಯುಲಿಡುವ . . . ಪಲುಂಬುವ ನುಡಿ ವಿರಸಮುಪಶ್ರುತಿಯೊಳೀಯುವೆಂತುಂ ಫಲಮಂ (ಲೋಕೋಪ. ೦೨-೩೪). **ನರಳ್** : ೧. ನರಳುತ್ತುಂ ಸುಯ್ಯುತ್ತುಂ . . . ಸೇದೆಯ ನೇಣಂ ಕರಗಮನೊಲ್ದಿತ್ತು ಸೇದಿ ನೀರ್ಗುಡಿಯೆಂದಲ್ (ದಶಕು. ೦೦-೮೧) ; ನರಳ್ವ ಮಹಾಪ್ರಜಾಳ

ಹತಿಯಿಂ ತಲೆ ತುಂಡಿಸಿ ಬಿರ್ದು ಧಾತ್ರಿಯೊಳ್ ಪೊರಳ್ವ . . . ಅತಿಭೀತರಂ ಜಱಿದು ಝುಂಕಿಸುತಿರ್ದುವು **ಭೂತಸಂಕುಳಂ** (ತ್ರಿಪುವಿ. ೨೪–೩೫) ; ನಲ್ಲದೆ ನರಳ್ವ ಪಸುಳೆಯ ನಿರ್ಮಲಾಸ್ಯಮಂ ಪುಲ್ಲೆಗಳ್ಕಂಡು (ಜೈಮಿಭಾ. ೨೮–೩೭).

**ನರಳು$_1$ :** ೧. ರುಜೆ ರೋಗಂಗಳು ಲಿಂಗದೇಹಿಗಳೆಂಬವರ ಸೋಂಕಿದಲ್ಲಿ ರೋಗದ ಇಚ್ಛೆಯನಱಿದು ನರಳಿದಲ್ಲಿ ಲಿಂಗದ ಚಿತ್ತವೆತ್ತಹೋಯಿತ್ತು (ಸರ್ವವ. ೧೩೦–೭೧೯) ; ಕಾಲು ನೊಂದಂತೆ ನೀಡಿ ನರಳುತುಂ (ನಂಬಿರ. ೬–೧೦೩) ; ಬಿದ್ದು ಹೊರಳುತ್ತು ನರಳುತೊಱಲುತ್ತ ಬಾಯ್ವಿಟ್ಟಳದಳುತ್ತಿರಲು (ಬಸಪು. ೪೫–೫೦) ; ನರಳುವಾರೋಹಕರ ರಾವ್ತರ . . . ಭಂಗವನೇನನೆಂಬೆನು ವೈರಿಸೇನೆಯಲಿ (ಕುಮಾವ್ಯಾದ್ರೋ. ೧೮–೩೪) ; ನರಳುತ್ತುಂ ತನುತಾಪದಿಪೊರಳುತ್ತುಂ . . . ಪಾಂಡ್ಯಾವನಿಪಂ ಕರೆಕರೆ ವೈದ್ಯರನೆನುತ್ತ ಲೊಱಲುತ್ತಿರ್ದಂ (ತ್ರಿಪುವಿ. ೩೩–೩೩); ಹಾಡುವ ಸಭೆಯಲ್ಲಿ ನರಳುವದುಂಟೆ? (ಗರಿ. ೭೦–೧೦) ; ಒಡಲ ತೇಯಬೇಹುದಿಲ್ಲಿ . . . ನರಳುವವರ ಮಧ್ಯದಲ್ಲಿ (ವಿಸೀಗೀ.೮೨–೪). ೨. ಪರಿತಪಿಸು ; ಸಂಕಟಪಡು : ಪ್ರಜೆಗಳು ತೆರಿಗೆಯ ಭಾರದಿಂದ ನರಳುತ್ತಿದ್ದಾರೆ (ರೂಢಿ). **ನೆರಳ್$_1$ :** ೧. ದಿಂಡುರುಳ್ವ ಪೊರಳ್ವ ನೆರಳ್ವಾ ಪರಾಕ್ರಮಿಗಳಿಂ . . . ತದ್ರಣಾಂಕಣಮೆಸೆದುದು (ಜಬಪು. ೧೬–೨೦). **ನೆರಳು$_1$ :** ೧. ನೆರಳುವ ಕರಿತುರಗದಾಲಿಗಳ ಚುಚುಗಳಿಂದಲಿರಿದಿರಿದು ಹರಿದು ತಿಂದವು ಘೂಕಚಯ (ಕೋಗಯ. ೨೩–೬).

ನರನರಳು (ದ್ವಿರುಕ್ತಿ) : ಹೊಟ್ಟೆನೋವಿನಿಂದ ನರನರಳಿ ಬೇಸತ್ತನು (ಮಧ್ಯಮ. ೦೯೩).

[ ದೇ. ‖ ತಮಿ. ನರಲ್; ಮಲ. ನರಣ್ಣು, ಞಾರಣ್ಣು; ತುಳು. ನರಲು, ನರೆಲು. ನಲ್ರು ; ಕುಡುಖ್. ನರ್ಯಾನಾ = ಅಳು; ಮಲ್ತೊ. ನಿರೆ ]

**ನರಲ್$_2$**, ನರಳು$_2$ (ನಾ). ನರಳುವಿಕೆ ; ಸಂಕಟದ ಧ್ವನಿ ; ನರಳಾಟ : ಅದೊ ಕೇಳಿಂ, ಆ ನರಲ್ವ ನರಲ್ಗಳನ್ (ಅಶ್ವತ್ಥಾ. ೧೪–೨೭೪) ; ಒಂದೆ ಕೊರಲ ನರಲನೆತ್ತಿ ಅಟ್ಟುದೆಲ್ಲ ನೆಲನ್ ತಾನ್ (ಬದ್ಧಪ್ರ. ೨೨–೪೬೭). **ನರಳು$_2$ :** ಖಂಡಿಸಿದ ಕೊರಳಿನಿಂ ಕೊರೆವೆಣದ ನರಳಿನಿಂ (ಜರಶು. ೨೯–೨೮).

[< ನರಲ್$_1$ ]

**ನರಲಗ್ನ** (ನಾ). [ಜ್ಯೋತಿ] ನಿರ್ದಿಷ್ಟವಾದ ಕೆಲವು ಲಗ್ನ(ರಾಶಿ)ಗಳಿಗೆ ಜ್ಯೋತಿಶ್ಶಾಸ್ತ್ರದಲ್ಲಿ ಹೇಳಿರುವ ಒಂದು ಸಂಜ್ಞೆ : ನರಲಗ್ನಮನೀಕ್ಷಿಸೆ ರವಿ ಸುರ ನೃಪ ಗೋಗೃಹದೊಳಗ್ನಿಹೋತ್ರಾಲಯದೊಳ್ ಗುರು ವೀಕ್ಷಿಸೆ ಶಿಲ್ಪಗೃಹಾಂತರದೊಳ್ ವೀಕ್ಷಿಸೆ ಬುಧಂ ನರಂ ಜನಿಯಿಸುಗುಂ (ಜಾತತಿ. ೪–೧೯) ; "ಮಿಥುನ ಕನ್ಯಾ ತುಲಾ ಧನುಸ್ಸಿನ ಪೂರ್ವಾರ್ಧ ಕುಂಭ ಇವು ನರರಾಶಿಗಳು. ಈ ರಾಶಿಗಳಲ್ಲೊಂದು ಲಗ್ನವಾದರೆ ನರಲಗ್ನವೆನಿಸಿಕೊಳ್ಳುತ್ತದೆ" (ಜಾತತಿ.೪–೧೯ ಟೀಕೆ). P ಮೇಲಿನ 'ಜಾತತಿ' ಪ್ರಯೋಗವು ಬೃಹಜ್ಜಾತಕದ ವ್ಯಾಖ್ಯಾನಕ್ಕೆ ಅನುಸಾರವಾಗಿದೆ. ಆದರೆ ಇದರಲ್ಲಿ ಭಿನ್ನಾಭಿಪ್ರಾಯಗಳಿವೆ. ಉದಾಹರಣೆಗೆ 'ಜಾತಕ ತಿಲಕದ ೧–೨೨'ರಲ್ಲಿ ಪುರುಷರಾಶಿಗಳು ಮೇಷ, ಮಿಥುನ, ಸಿಂಹ ತುಲಾ, ಧನುಸ್ಸು ಮತ್ತು ಕುಂಭ ಎಂದಿದೆ. ಇದು ಎಲ್ಲಾ ಗ್ರಂಥಗಳಲ್ಲಿಯೂ ಹೇಳಿರುವ ಸಂಜ್ಞೆ. ಆದರೆ ಭಟ್ಟೋತ್ಪಲನು ತುಲಾ, ಕನ್ಯಾ, ಮಿಥುನ ಮತ್ತು ಕುಂಭ ಈ ನಾಲ್ಕು ಪುರುಷಲಗ್ನವೆಂದು ಹೇಳಿದ್ದಾನೆ. [ ನರ$_2$ + ಲಗ್ನ ]

**ನರಲಿಸು**, ನರಳಿಸು (ಕ್ರಿ). ನರಳುವಂತೆ ಮಾಡು ; ಸಂಕಟಕ್ಕೆ ಗುರಿಪಡಿಸು : (ಸ). **ನರಳಿಸು :** ಉರಗ ವರ ಕಿಂಪುರುಷ ಕಿನ್ನರ ತರುಣಿಯರ ವ್ರತಗೆಡಿಸಿ ಭೋಗಿಸಿ ನರಳಿಸುವವರು (ಅಂಬಿಕಾ. ೩೪–೩೬) ; ಸಾಯೋತನಕ 'ಕಿರಿಸಳ್ಳು' ನರಳಿಸಿ ಬಿಟ್ಟೇನು (ಬೆಳುವ. ೦೪೬).

[ ನರಲ್$_1$ + –ಇಸು$_3$ ]

**ನರಲು** 'ನರಲ್$_1$' ನೋ.

**ನರಲುಲಿ** (ನಾ). ನರಳುವ ಸದ್ದು ; ನರಳಾಟ : ಪರಿಪರಿಯಾ ನರಲುಲಿಯೋಳ್ ಪಾರ್ಸಿಕರಾ ಪಾಂಗಿನೊಳೇ ಪ್ರಾರ್ಥನೆಯನ್ ಕೂಗಿ (ಪಾರಸಿ. ೨೪–೮). [ ನರಲ್$_1$ + ಉಲಿ$_2$ ]

**ನರಲೇಬಳ್ಳಿ** (ನಾ). ಒಂದು ಬಗೆಯ ಬಳ್ಳಿ : (ವ್ಯಜಿಗಿ. ೦೯–೩೪೭) 'ನರಳೆ' ಪರಾ. [ ನರಲೆ$_0$ + ಬಳ್ಳಿ ]

**ನರಲೋಕ** (ನಾ). ೧. ಮನುಷ್ಯರು ವಾಸಿಸುವ ಲೋಕ ; ಮರ್ತ್ಯಲೋಕ : ನರಲೋಕಮನಟ್ಗೀಟಿಸಿ ನರಲೋಕದ ಸುಖಮನಾತ್ಮವಿಭವದೆ ಪೊಕ್ಕಂ ಕುರುಪತಿ ವೈಶಂಪಾಯನಸರಮಂ ಪುಗುವಂತೆ ನಾಗಲೋಕಮನಾಗಳ್ (ಗದಾಯು. ೬–೧೪) ; ನರಲೋಕದಲ್ಪಸೌಖ್ಯಂ ಸ್ಥಿರಮಲ್ಲದು (ಧರ್ಮಾಮೃ. ೭–೨೨೬) ; ನರಲೋಕದ ನರಗುಱಿಗಳೆಲ್ಲ ನರಸಂಸಾರಕ್ಕೊಳಗಾದರು (ಅವಚಂ. ೨೭೭–೧೨೭೨) ; ಪುಷ್ಪದತ್ತಂ ನರಲೋಕದೊಳ್ ಪುಟ್ಟಿ . . . ಕೆಟ್ಟು ಪೋಗಲನುವಾಗಿರ್ದಪಂ (ನಂಬಿರ. ೭–೩ ವ) ; ನರಲೋಕಂ ನಡೆ ನೋಡಲಾತ್ಮಪುರಮಂ ಕೊಂಡಿಃಶಲೋಕಕ್ಕೆ ಬಂಧುರವೋದಂ ಬಡೆದಂದು ಪರ್ ನೆಗಟ್ದುದ್ಯದ್ಭೂಜರಾಧೀಶನಂ ಪಿರಿದಾಲೋಕಿಸಿ (ಉದ್ಭಟ.೧೨–೧೨೨); ಪರಲೋಕಕ್ಕೆ ಹೋದವಗೆ ನರಲೋಕದ ಗೊಡವೆಯೇ? (ಗಾದೆ). ೨. ಮರ್ತ್ಯಸಮೂಹ ; ಮನುಷ್ಯಕೋಟಿ ; ಮಾನವಕುಲ : ನರಲೋಕವೊಂದೆ ಮುನ್ನಿನ ಚರಣಾಬ್ಜಕ್ಕೆಱಗೆ ನೆಗಟ್ವ ಕೇವಲಬೋಧಂ ದೊರೆಕೊಳೆ ಸುರನರಲೋಕಂ ಚರಣಾಬ್ಜಕ್ಕೆಱಗೆ ಭರತಯತಿಪತಿ ನೆಗಟ್ದಂ (ಆದಿಪು. ೧೬–೭೪) ; ಪೆಣವೊಗೆಸುತ್ತಿ ನರಲೋಕಮೆಲ್ಲಮಂತಕಡಾಮರದೊಳೆ ಬೆಂದು ಧೂಮಮಯಮಾದ ದಿಶಾಧೂಮಂ ಕವಿದಂತಾಭೀಳಮಾಗೆ (ಶಾಂತಿಪು. ೭–೯೮ವ) ; ನರಲೋಕಶ್ರೀಕಾಂತಾವಿರಕ್ತಮಾದತ್ತು ಪರಮನಿರ್ವೇಗಪರಂಪರೆ ನೆಗಟೆ ಮುಕ್ತಿಕಾಂತಾನುರಕ್ತಮಾದತ್ತು ವಿಮಲವಾಹನನ ಮನಂ (ಅಜಿಪು. ೨–೧೦೫).

ನರಲೋಕದಲ್ಲಟ, ನರಲೋಕದಲ್ಲಣ = ಮನುಷ್ಯರಿಗೆ ಹೆದರಿಕೆಯನ್ನುಂಟು ಮಾಡುವವನು ; ಒಂದು ಬಿರುದು : ಬಿರುದಿಂಗೆ – ಗಜದುಳಿ, ಗಜಪಾಟು, ನರಲೋಕದಲ್ಲಟಂ[ಪಾಠಾಂ.ಣಂ] (ಶಮದ. ೦೭೪ ಪ್ರಯೋ) ; ನರಲೋಕದಲ್ಲಣಾ, ಗಜವೇಂಟೆಕಾಱಂ, ರಾಯಕೋಲಾಹಲಂ (ಶಬ್ದಾನು. ೨೯೫ ಪ್ರಯೋ). [ ನರ$_2$ + ಲೋಕ ]

**ನರಲೋಕಚಂದ್ರ** (ನಾ). ಭೂಲೋಕಕ್ಕೆ ಚಂದ್ರನಂತೆ ಆಹ್ಲಾದಕಾರಿಯಾದವನು : ಪರಚಕ್ರಭೂಪರಟ್ಟಿದ ಕರಿಗಳ್ ಬಿಡುತಪ್ಪ ಮದದ ಪೊನಲಿಂದೆತ್ತಂ ನರಲೋಕಚಂದ್ರನಾ ಮಂದಿರದೊಳಗೊಳಗೆಲ್ಲ ಕಾಲಮುಂ ಕೆಸಱಕ್ಕುಂ (ಕವಿರಾ. ೩–೧೮೦). [ ನರಲೋಕ + ಚಂದ್ರ$_2$ ]

**ನರಲೋಕಚರ** (ನಾ). ಮನುಷ್ಯಲೋಕದಲ್ಲಿರುವವನು ; ಭೂಲೋಕವಾಸಿ : ನೀ ನರಲೋಕಚರನಿನ್ನು ಸುರಲೇಂ ಹರಲೋಕಚರನೋಹಿಲನು (ಬಸಪು. ೪೪–೫೫). [ ನರಲೋಕ + ಚರ ]

**ನರವಂಟಿಗೆ** (ನಾ). ಒಂದು ಬಗೆಯ ಸಸ್ಯ : ನರವಂಟಿಗೆಯ ಬೇರಂ ಗೋರೋಚನವಮಂ ಸಮನಾಗಿ ಕೂಡಿ ಅರದು (ಕಾಮಶಾ. ೧೦–೨೭೭).

[ ?./ತೆಲು. ನರವಂಡು ]

**ನರವಕ್ತ್ರ** (ನಾ). ಮನುಷ್ಯನ ಮುಖವುಳ್ಳ, ಶಿವಪ್ರಮಥರಲ್ಲಿ ಒಬ್ಬ : ಹರಿವಕ್ತ್ರಂ ಕರಿವಕ್ತ್ರನಶ್ವಪರವಕ್ತ್ರಂ ಮೇಷವಕ್ತ್ರಂ ಫಣೀಶ್ವರವಕ್ತ್ರಂ ನರವಕ್ತ್ರನುಷ್ಟ್ರಪತಿವಕ್ತ್ರಂ . . . ಎಂಬರೆಸೆವರ್ವಿಶ್ವೇಶ್ವರಾಸ್ಥಾನದೊಳ್ (ರಾಜಶೇ. ೧೪–೧೫೪). [ ನರ$_2$ + ವಕ್ತ್ರ ]

**ನರವರ** (ನಾ). ಮನುಷ್ಯರಲ್ಲಿ ಉತ್ತಮನಾದವನು ; ಅರಸ : ಕ್ರಮದಿ ನೊರ್ವರೊಳೊರ್ವರೆ ಕಾದುವಂ ಎಂದು ರಣಧೀರನರವರಸಂದೋಹಂ ನುಡಿದು ನಿದ್ರೆಯ ತಳೆದಿರಲ್ (ನೇಮಿಪು. ೦೨–೩) ; ನರವರರು [ಪಾಠಾಂ. ರವರು]ರ್ವಿಯೊಳ್ ಧರೆ ಜಗತ್ತ್ರಯದೊಳ್ ಜಗಮುಂ ತ್ರಿಪಾಯುಗಳ್

ಧರಿಯಿಸಿ ನಿಂದುವು (ಜೀವಸಂ. ೦೧೬-೨೪) ; ವಾನರ ಕುಲಂ, ನರವರಂ, ವಾಲಿಯ ಸಹೋದರಂ ಸುಗ್ರೀವನಲ್ತೆ ಆ ಓಜೋನ್ವಿತಂ ? (ಶ್ರೀರಾಮಾ. ೨೭೮-೧೧). [ ನರ್$_2$ + ವರ್$_3$ ]

**ನರವರ್ಯ** (ನಾ). ಶ್ರೇಷ್ಠನಾದ ಮನುಷ್ಯ ; ಉತ್ತಮಮಾನವ : ನರವರ್ಯ ಭೀಮಸೇನ ನಾರಿಗೆ ಕುಸುಮ ತರುವೆನೆನುತ ಬೇಗ ತೆರಳಿದನು (ಪುರಂದ. ೩-೨೧೧-೧). [ ಸಂ. ]

**ನರವಲಿ** 'ನರವುಲಿ' ನೋ.

**ನರವಲು** 'ನಱುವಲ್' ನೋ.

**ನರವಾನರ** (ನಾ). ಮನುಷ್ಯನ ಆಕಾರವನ್ನು ಹೋಲುವ ಒಂದು ಬಗೆಯ ವಾನರ : ಪಾಮರ ಹರಿದಾಸನು ಅವನಲ್ಲ ನರವಾನರ ಕಾಣೊ (ಪುರಂದ. ಧಾ. ೨-೬೨-೪); ಉದ್ದತೋಳುಗಳ, ದೊಡ್ಡ ನರವಾನರ ; ಒರಾಂಗೊಟಾಂಗ್ ( = ಕಾಡುಮನುಷ್ಯ) (Orang-outang. ಇಂಕನಿ). [ ನರ್$_2$ + ವಾನರ ]

**ನರವಾಹ** (ನಾ). ಮನುಷ್ಯನನ್ನು ವಾಹನವನ್ನಾಗಿ ಉಳ್ಳವನು ; ಕುಬೇರ : ನರವಾಹಂ ಬಳ್ಕೆ ಶಕ್ರಂ ಸೆಡೆಯೆ ಹುತವಹಂ ಕಂದೆ ಕಾಲಂ ಕರಂ ಕುಂದೆ (ಶಬಶಂ. ೨-೧೧). [ ನರ್$_2$ + ವಾಹ ]

**ನರವಾಹನ** (ನಾ). ೧. = ನರವಾಹ : ಐಳಬಿಳಃ . . . ಕುಬೇರಃ, ನರವಾಹನಃ, ಗುಹ್ಯಕಃ . . . ಈ ೧೭ ಕುಬೇರನ ಪೆಸರ್" (ಹಲಾಯು. ೦೪-೭೯). ೨. (ಮನುಷ್ಯರು ಹೊರುವ) ದಂಡಿಗೆಯಲ್ಲಿ ಪ್ರಯಾಣ ಮಾಡುವವನು : "ದಂಡಿಗೆಯನೇಱುವಂ ನರವಾಹನಂ" (ಮಂಗರಾ. ೭೩-೨೭). [ ನರ್$_2$ + ವಾಹನ ]

**ನರವಿಂಡು** (ನಾ). ಮನುಷ್ಯರ ಗುಂಪು ; ಜನಸಮೂಹ : ಆ ಪರಿಯಿಂದ ಕೂಡಿದ ಇಂದ್ರಿಯವಿಕಾರದ ನರವಿಂಡುಗಳು ಕೂಡಿರ್ದು ಫಲವೇನು (ವಚಸಂ. ೪೨೪-೧೨೫). [ ನರ್$_2$ + ಪಿಂಡು$_2$ ]

**ನರವಿಂಧ್ಯ** (ನಾ). "(ಪಶುಗಳಂತಹ) ಜನರು ವಾಸಿಸುವ (ಗುಡ್ಡಗಾಡಿನಂತಹ ವಾಸಕ್ಕೆ ಕಷ್ಟಕರವಾದ) ಸ್ಥಾನ" (ಬಸವ. ಕೋಶ) : ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ ಸಲಹುತ್ತ ಶಿವಶಿವಾ ಎಂದೋದಿಸಯ್ಯಾ (ಬಸವ. ೫೮); ಒಱಲುವ ಬಳ್ಳುವಿನಂತಿಪ್ಪರಯ್ಯಾ ಮನುಜರು ನರವಿಂಧ್ಯದೊಳಗೆ (ಬಸವ. ೨೦೭). [ ನರ್$_2$ + ವಿಂಧ್ಯ ]

**ನರವು, ನರ್$_1$** (ನಾ). ೧. ಶರೀರದಲ್ಲಿ ಸ್ನಾಯುವನ್ನು ಎಲುಬಿಗೆ ಸೇರಿಸುವ ಗಟ್ಟಿಯಾದ, ತಂತುಮಯವಾದ ಅಂಗಾಂಶ ; ಸ್ನಾಯುರಜ್ಜು : ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ ತಾನೆ ಸೋದು (ಪಂಪಭಾ. ೧೩-೫೬ವ). ೨. ಅವಯವಗಳಿಂದ ಮೆದುಳಿಗೆ ಸಂವೇದನೆಗಳನ್ನೂ ಮೆದುಳಿನಿಂದ ಅವಯವಗಳಿಗೆ ಸೂಚನೆಗಳನ್ನೂ ಒಯ್ಯುವ ತಂತು,-ಸೆರೆ: ತಾನುಂ ಹಿಡಿಂಬೆಯುಮವನ ಬರಿಯ ನರವಿನಡಗಿನಿಸುವಿನೆಡೆಯ ಕೆನ್ನೆತ್ತರೊಳೋರ್ವರೋರ್ವರಂ ತಳ್ಳಿಱಿದುಂ ಬೊಬ್ಬಿಱಿದುಂ . . . ಆಡುವಾಗಳ್ (ಪಂಪಭಾ. ೧೨-೧೫೮ ವ) ; ನರವಿನ ಪುತ್ರವ್ಯೋಧ್ನದ ತವರ್ಮನೆ . . . ಕಡುಗಪ್ಪುಮೆನಿಪ್ಪ ದುಃಕಳೇವರ ಮಿದನೊಳ್ಳಿತೆಂಬರಱಿವಿಲ್ಲದವರ್ (ಸಮುಪ. ೬-೩೪) ; ನರವುಗಳ್ ತೆಗೆದು ತೋಳ್ ತನಗೆ ತಾನೆ ನೆಗೆವುದುಂ (ಧರ್ಮಾಮೃ. ೧೨-೧೧೦ವ) ; ನರವುಂ ನೆರವುಂ ದೇವರ ಬರವುಂ ತೆರವುಂ . . . ತಾಮರೆಬರ ಮತದಿಂದಂತ್ಯ ವರ್ಣಲೋಪಮನಾಳ್ಗುಂ (ಶಮದ. ೪೭) ; ಕೆಸಱಿಡುವ ರಕುತಾಂಬುಗಳ ನರವಿನ ನಾಳದೇಳಿಗೆಯ ಕಡುಮದದ ಕಾಡಾನೆ ಹೊಕ್ಕಾಡನೊಡನೆ ಕಲಕಿದ ಕೊಳನವೊಲು ಭಯವಡಸುತಿದೆ ಪವನಜನ ರಣಪಥವು (ಕುಮ್ಯಾದ್ರೋ. ೦೩-೪) ; ಮಾಂಸದ ಗೋಡೆ ಚರ್ಮದ ಹೊದಿಕೆ ನರವಿನ ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು (ಹರಿಸಾ. ೮೩). ೩. "ವಸ್ನಸಾ, ಸ್ನಾಯುಃ – ಇವು ನರದ ಪೆಸರು" (ನಾಚಿರಾ. ೦೨೦) : ನರವನುಗಿವ ನರಿಗಳುಮಂ (ಗದಾಯು. ೫-೩ ವ) ; ಸಂದುಗಳುಱಿದೊಡೆ ನರವೊಂದು ದೆಸೆಗೆ ತಱಿಸಂದೊಡೆ ಶೀತಳಜಳಮಿಶ್ರಿತ ವಸ್ತ್ರವನಳವಟ್ಟಿರೆ ಸುತ್ತಲಿನಿಸು ಬೇನೆಗಳಱಿಗುಂ (ಲೋಕೋಪ. ೯-೧೭೬); ಎನ್ನ ಕಾಯವ ದಂಡಿಗೆಯ ಮಾಡಯ್ಯಾ . . . ಎನ್ನ ನರವ ತಂತಿಯ ಮಾಡಯ್ಯಾ (ಬಸವ. ೫೦೦) ; ತನುವೆಂಬ ಮನೆಗೆ ಅಸ್ಥಿಗಳು ಚರ್ಮದ ಹಂಜರ ನರದ ಭೀಮುಗಟ್ಟು (ಅದವ. ೧೫-೩೩) ; ಒಂದು ದಸಿಯಂಗಿಲ ನಟ್ಟಡೆ ನೊಂದು ನರಗಳು ಸುಕ್ಕ ತೆಗೆಯಲು (ಬಸಪು. ೪೩-೮೪); ನರಗಳೆಲ್ಲವೂ ನಿರನಿರನೆ ಎದ್ದುನಿಂತವು (ಬಾಣಳ. ೧೩೧). ೩. ತಂತಿ : ಬೀಣೆಯಂತೆ ನರದೊಳ್ ಕೂಡಿದುದು (ಧರ್ಮಾಮೃ. ೪-೦೭೫). ೪. ಶಕ್ತಿ ; ಸಾಮರ್ಥ್ಯ. ೫. (ಆಲಂ) ಧೈರ್ಯ.

[ ದೇ. ॥ ತಮಿ. ನರಮ್ಬು ; ಮಲ. ನರಮ್ಬು, ಞರಮ್ಬು ; ತುಳು. ನರ, ನರಂಬು ; ತೆಲು. ನರಮು ; ಕೊಲಾ. ನರವ್ ; ಪರ್ಜಿ. ನೆರುಬ್ ; ಕೂ. ಡ್ರಾಂಬು ; ಕುವಿ. ನರೊಮಿ ; ಕುರುಖ್. ನರೀ ; ಮಲ್ತೊ. ನಾರು ]

**ನರವುಲಿ, ನರವಲಿ, ನರಹುಲಿ, ನರುಲಿ, ನರುಳ್ಳಿ, ನರೂಲಿ** (ನಾ). ಚರ್ಮದ ಮೇಲೆ ಏಳುವ ಸಣ್ಣಗಂಟು,-ಗಂತಿ : ಇನವಾರದಂದು ಬಸುರಿಯ ಕೊನೆಯಂ ಕೊಂಡೆಡದೆ ಬಱಿದು(ಳಸಿ) ಕೆಸಱೊಳದಂ ಪೂಟ್ದನಿತಱೊಳಾ ನರವುಲಿಯೆನಿತನಿತುಮವಿರ್ದಡೆಯುನಱಿಯದಂತಿರೆ ಪೋಕುಂ (ಲೋಕೋಪ. ೯-೧೩೦) ; ಬಿಡದೆ ಭಗಂದರಮರಿಸೆ ಕುಷ್ಠ ತದ್ರುಂ ನರವುಲಿ ದುಷ್ಟವ್ರಣಂಗಳಿಂದಱಿವುದಿವಂ (ಅಶ್ವಶಾ. ೦೨-೧) ; ನರವು [ಪಾಠಾಂ. ವ] ಲಿ ಮೊಡವಿ ಬಂಗು ನೆರೆದಾನನದ ಚಿಬ್ಬುವೆರಸಿರ್ದ ಕಂಕುಳಿನ ನಿಡಿಯೊಡಲಿನ . . . ಪೆಣ್ಗಳಂ ತರಲಾಗದು (ಜನವ. ೧೧-೧೧). **ನರವಲಿ** : ನರವಲಿ ಉದುರಿ ಹೋಯಿತು (ರೂಢಿ). **ನರಹುಲಿ** : (ಕ). **ನರುಲಿ** : "ನರುಲಿ = ಸಣ್ಣಸಣ್ಣ ವಾಳ" (ಜಾನಕೋ. ೯). **ನರುಳ್ಳಿ**: ಕೈಮೇಲೆ ಒಂದು ನರುಳ್ಳಿ ಎದ್ದಿದೆ (ರೂಢಿ). **ನರೂಲಿ** : "ನರೂಲಿ ; ಗಂಟು ; ತಂತಿ" (Pustle. ಇಂಕನಿ). [ < ನರವು ? ]

**ನರವೆ** (ನಾ). ಒಂದು ಬಗೆಯ ಗಿಡ : ನರುವಲು, ನಾರಲೆ, ನರವೆ, ಮುನ್ನು, ಮಡಿಕೆ (ಮೃಜಿಗಿ. ೬೪-೧೩೦೦). [ ? ]

**ನರವೆಣ್** (ನಾ). ಮನುಷ್ಯಲೋಕದ ಹೆಣ್ಣು ; ಮಾನವ ಸ್ತ್ರೀ : ನಿಖಿಳಾಪ್ಸರವಧು ನರವೆಣ್ಗೆಳೆಸೆಯೆ ದೇವಕಿಯ ನಂದನನೆಡಬಲದಿ (ವೋಹತ. ೦೯-೦೪). [ ನರ್$_2$ + ಪೆಣ್ ]

**ನರವೇಷ** (ನಾ). ಮನುಷ್ಯನ ವೇಷ ; ಮಾನವ ರೂಪ : ಮಜ್ಜನ ಭೋಜನಾದಿ ನಾನಾಕ್ರಿಯೆಗಳೊಂದರೊಳ್ ನರವೇಷಕಾಯಮಂ ಸವೆಸ ಬೇಡೆಂದು ಕೈವಿಡಿಗೊಟ್ಟಲೇಂ ವಿಶೇಷವೊ ಪುತ್ರಮೋಹಮಿಾ ಲೋಕದೊಳಗೆ (ಚಬಪು. ೫-೩೦). [ ನರ್$_2$ + ವೇಷ ]

**ನರವೈದ್ಯ** (ನಾ). ಮಾನವರಿಗೆ ಮಾಡುವ ರೋಗಚಿಕಿತ್ಸೆ ; ಮನುಷ್ಯರಿಗೆ ಸಂಬಂಧಿಸಿದ ವೈದ್ಯಶಾಸ್ತ್ರ : ಚಾಣಕ್ಯಂ ಸಾಮುದ್ರಿಕಂ ಶಾಲಿಹೋತ್ರಂ . . . ಕ್ಷಾರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಂ ಜ್ಯೋತಿಷಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮಂ ನೆಱಿಯೆ ಕಲ್ಪಿಸಿ ಯೋಗ್ಯರ್ ಮಾಡಿದೊಡೆ (ವಡ್ಡಾರಾ. ೪-೨). [ ನರ್$_2$ + ವೈದ್ಯ ]

**ನರವ್ಯಾಧಿ** (ನಾ). "ನರವ್ಯೂಹದ ಅಸ್ವಸ್ಥತೆಯಿಂದ ದೇಹಸ್ಥಿತಿ ಕೆಟ್ಟು ಹೋಗಿರುವುದು : ನರವ್ಯಾಧಿ (Neurosis. ಇಂಕನಿ)" : ಪ್ರಬಲ ಮನೋರೋಗ (ಸೈಕೋಸಿಸ್), ನರವ್ಯಾಧಿ (ನ್ಯೂರೋಸಿಸ್) ಮುಂತಾದ ವಿಕಾರಗಳು ದುರ್ನಡತೆಗೆ ಕಾರಣಗಳೆಂಬ ಬಹುಜನರ ನಂಬಿಕೆಗೆ ಯಾವ ಆಧಾರವೂ ಇಲ್ಲ (ಕವಿಕೋ. I, ೩೫೮). [ ನರ್$_1$ (< ನರವು) + ವ್ಯಾಧಿ ]

**ನರವ್ಯೂಹ** (ನಾ). ದೇಹದೊಳಗಿನ ನರಗಳ ರಚನೆ,–ನರಮಂಡಲ: ಮುಖ್ಯವಾಗಿ ಮಿದುಳಿನ ಅಥವಾ ನರವ್ಯೂಹದ ರಚನೆಯೊಳಗೆ ಯಾವುದಾದರೂ ತೊಂದರೆಯುಂಟಾದೊಡನೆ ಅದನ್ನು ನಾವು ಮನೋರೋಗವೆಂದು ಹೇಳುತ್ತೇವೆ (ಮನೋರೋ. ೮); ಮಿದುಳು ಗಾತ್ರದಲ್ಲಿ ದೊಡ್ಡದಾಗುವಂತಿದ್ದು, ನರವ್ಯೂಹದ ರಚನೆ ಕ್ರಮಕ್ರಮವಾಗಿ ಸಂಕೀರ್ಣತೆಗೇರುವಂತಿದ್ದು ಸಂಕೀರ್ಣಸಮಾಜಕ್ಕೆ ಅನುಗೊಳಿಸುವ ಸಂಸ್ಕರಣವನ್ನು ಪಡೆಯಲು ಅನುಕೂಲಿಸುವಂತಿವೆ (ಶಿಕ್ಷದ. ೮೬).
[ ನರ$_1$ (< ನರವು) + ವ್ಯೂಹ ]

**ನರಶಾರ್ದೂಲ** (ನಾ). ಮನುಷ್ಯರಲ್ಲಿ (ಹುಲಿಯಂತೆ) ಪರಾಕ್ರಮಿಯಾದವನು; ಶೂರ: (ಕಿ). [ ನರ$_2$ + ಶಾರ್ದೂಲ ]

**ನರಶಾಸನ** (ನಾ). ಜೀವಂತವಾಗಿ ಮನುಷ್ಯರೂಪವಾಗಿರುವ ಶಾಸನ,–ಸನದು; ಪ್ರತ್ಯಕ್ಷಸಾಕ್ಷಿ: ಬಿರುದಿನ ಬೀರದ ಪೆಸರಕ್ಕರವಂ ಪರನೃಪರ ಮೆಯ್ಯ ಪುಣ್ಗಲೆಗಳ್ ಪೋಲ್ತಿರೆ ತೋಳ್ವಲಕ್ಕೆ ಪಡೆದಂ ನರಶಾಸನವಂ ನರೇಂದ್ರಚೂಡಾರತ್ನಂ (ಮಲ್ಲಿಪು. ೩-೧೪); ಕವಿತತಿ ಬಲ್ಮೆಗೋಲಗಿಸೆ ಕಾಮಿನಿಯರ್ಸೊರ್ಬಗಿಂಗೆ ಸೋಲೆ ಬೇಟ್ಪವರ್ಗಳುದಾರವೃತ್ತಿಗೊಲವಿಂ ನರಶಾಸನವಾಗೆ ರಾಜ್ಯಮುದ್ಧವದಿನೊಡರ್ಚಿ ರೇಚಿರಾಜನೆಸೆದಂ ಜಸದಿಂ ವಸುಧೈಕಬಾಂಧವಂ (ಎಕ. VII, ಶಿಕಾರಿ. ೧೯೭-೩೨; 1182); ಕರದಿಂ ಮೆಯ್ಯೊಳ್ ಪನಿತಕ್ಕರದಂತಿರೆ ಸಾಂಜನಾಂಬುಕಣತತಿ ಕಾಮಂ ಬರೆದ ನೃಪಸುತನ ಸೊಬಗಿನ ನರಶಾಸನದಂತೆ ವಿರಹವಿಹ್ವಲೆಯಿರ್ಪಳ್ (ಚಂದ್ರಪು. ೫-೦೨೬). [ ನರ$_2$ + ಶಾಸನ ]

**ನರಶಿರಮಾಲೆ** (ನಾ). ಮನುಷ್ಯನ ತಲೆಬುರುಡೆಗಳ ಸರ; ಕರೋಟಮಾಲೆ: ಕಂಠದೊಳಂಜಿಪ ನರಶಿರಮಾಲೆ (ಪಾಂಚಜ. ೧೯-೭).
[ ನರ$_2$ + ಶಿರ$_2$ + ಮಾಲೆ ]

**ನರಶೂಲೆ** (ನಾ). ದೇಹದ ನರಗಳಲ್ಲಿ ಉಂಟಾಗುವ ನೋವು: ಆವಾವ ಠಾವಿನ ನರಶೂಲೆಗೆ, ಕಪಾಲಶೂಲೆಯ ಠಾವಿಗೆ ಶ... ಆ ಔಷಧಿಯ ನಿಕ್ಕಲು ಶೂಲೆ ಮಾಣ್ಗುಂ (ವಿಷ್ಣುವಿ. ೫೦). [ನರ$_1$ (< ... + ಶೂಲೆ$_1$]

**ನರಸ** (ನಾ). = ನರಸಿಂಹ ೧. 'ನರಸಯ್ಯ' ಪರಾ. [ < ನರಸಿಂಹ ]

**ನರಸಣ್ಣ** (ನಾ). (ಕರಾ) ಬುಡುಬುಡಿಕೆಯವನು; ಶಕುನ ಹೇಳುವವನು: ನಸುಬೆಳಕು ಹರಿಯುತ್ತಿತ್ತು . . . ಹಗಲ್ವಾಡಿಯ ಹಂಗನಕೇರಿಯಲ್ಲಿ ನರಸಣ್ಣರಿಬ್ಬರು ಹರಿಯುತ್ತಿದ್ದರು (ನಡದಾ. I, ೪೩೩); ಹಾಡುವ ಪಲ್ಲವಿಗೂಡಿಸುವ ನರಸಣ್ಣರಿಬ್ಬರೂ ಹಾಲುಮನೆಯ ಅಂಗಳದೊಳಗಾದರು (ನಡದಾ. I, ೪೩೪); ನರಸಣ್ಣ ಬಂದರೆ ನಮಗೆ ಹೆದರಿಕೆಯಾಗುತ್ತದೆ (ಪರಾವ. ೨೬). [ ನರಸ$_1$ + ಅಣ್ಣ$_1$ ]

**ನರಸತ್ವ** (ನಾ). [ಕಾಮಶಾ] ಹನ್ನೆರಡು ಬಗೆಯ ಸ್ತ್ರೀಸತ್ವಗಳಲ್ಲಿ ಒಂದು: ದೇವಸತ್ವ ಯಕ್ಷಸತ್ವ ಗಂಧರ್ವಸತ್ವ ನರಸತ್ವ ನಾಗಸತ್ವ ಕಾಕಸತ್ವ ವಾನರಸತ್ವ ಮುನಿಸತ್ವ ಪಿಶಾಚಸತ್ವ ರಾಕ್ಷಸಸತ್ವ ಕಿನ್ನರಸತ್ವ ಖರಸತ್ವವೆಂಬ ದ್ವಾದಶಸತ್ವದ ಸತಿಯರಿಂ (ವಿವೇಕ. ೨೩೯).

**ನರಸತ್ವದವಳು**=ನರಸತ್ವದ ಸ್ತ್ರೀ: ಋಜುಚಿತ್ತದಿಷ್ಟಾರ್ಗೆ ನಿಜದೊಲೊಲಿದಿರ್ಪ ನೀರಜನೇತ್ರೆಯವಳ್ ನರಸತ್ವದವಳು (ಜನವ. ೫-೨೯). ನರಸತ್ವದ ಸ್ತ್ರೀ="ಋಜುವಾದ ಚಿತ್ತದವಳು ಸಮರ್ಥರೊಳಂ ಅವ್ಯುತಪ್ರೀತಿಯುಳ್ಳವಳಂ ಉಪವಾಸದಿಂದಂಜಳುಂ ಸ್ವಲ್ಪ ಉಂಬುವಳು ಇವಳು ನರಸತ್ವದ ಸ್ತ್ರೀ" (ಕಾಮಶಾ. ೪-೬೦). [ ನರ$_2$ + ಸತ್ವ$_1$ ]

**ನರಸಮಿತಿ** (ನಾ). ಜನಸಮೂಹ; ಮಾನವಕೋಟಿ: ನರಸಮಿತಿಗೆ ಬೇಡಿದುದಂ ನಿರಂತರಂ ಕೊಟ್ಟು ಕಲ್ಪವೃಕ್ಷಂ ಪೋಗಲ್ (ಆದಿಪು. ೧೬-೪೩); ನರಸಮಿತಿ ಕೊಂದರೆಂದಡೆ ನೆರವಾಗದೆ ನೋಡದೋಡಿದರು ನಿನ್ನವರು (ನನ್ನಚಾ. ೫-೪೪). [ ನರ$_2$ + ಸಮಿತಿ ]

**ನರಸಮ್ಮ** (ನಾ). ರೋಗಿಗಳಿಗೆ ಆರೈಕೆಮಾಡುವ ದಾದಿ; ನರ್ಸ್: ಜೇಯುತಲಿರುವೆನು ಬಳಿ ಬಾರೆ ನರಸಮ್ಮ ವೈದ್ಯರ ಕರೆಸದಿರಮ್ಮ (ಚಂದ್ರವೀ. ೫೨-೬). [ ನರಸು (< ನರ್ಸ್) + ಅಮ್ಮ$_2$ ]

**ನರಸಯ್ಯ** (ನಾ). ಒಬ್ಬಾತನ ಹೆಸರು: ಪ್ರತಿಮೆಗಳೆಲ್ಲವಂ ನರಸಯ್ಯ ಮೈಸಗೆಯ್ದವಚ್ (ಎಕ. VI, ಚಿಕ್ಕಮ. ೧೩೩-೧೦; 893 ?). 'ನಚ್ಚಯ' ಪರಾ. [ ನರಸ + ಅಯ್ಯ$_1$ ]

**ನರಸಿಂಗ** (ನಾ). ೧. = ನರಸಿಂಹ ೧: ಇದು ಏನಂಗ ಮೋಹನಾಂಗ ಮದನಜನಕ ತೊರವೆಯ ನರಸಿಂಗ (ಪುರಂದ. ೧-೯೯ ಅನುಪಲ್ಲವಿ); ಕೆಂಗಿಡಿಗಣ್ಣ ಕೇಸರಿಯ ಮಸ್ತಕವ ಬಾಣಂಗಳಿಂದಿಳುಹಿ ತಾಳ್ದವರು ಕಂಗೊಳಿಸಿದರು ಕಾಂತಾರದೆ ಸಿರಿನರಸಿಂಗನ ಲೆಂಕರೆಂಬಂತೆ (ಮೋಹತ. ೧೯-೩೦). ೨. ವೇಮುಲವಾಡದ ಚಾಳುಕ್ಯರ ಒಬ್ಬ ರಾಜನ ಹೆಸರು; P ಅರಿಕೇಸರಿಯ ತಂದೆ: ನರಸಿಂಗಂಗಂ ಜಾಕಬ್ಬರಸಿಗಮಳಿಪೊದವೆ ಪುಟ್ಟಿ ಪುಟ್ಟಿಯುಮರಿಕೇಸರಿಯೆನೆ ನೆಗಟ್ದುಮರಾತಿಯ ಸರಿದೊರೆಗಂ ಬಂದೆನ ಪೊಡಾಗಳ್ ನಗಿರೇ (ಪಂಪಭಾ. ೧೪-೧೩). ೩. ಒಬ್ಬಾತನ ಹೆಸರು: ಬೆಳ್ಮಣಿಯ ಪದುಮಣ್ಣನ್ ಕರ್ಬುರೆ ಸೋಮದಿ ಮಿಟ್ಟಿಸೆಯ ನರಸಿಂಗನ್ ಸಿಮ್ಮನೂರ ಕಿಳ್ಯಮ್ಮನ್ (ಎಕ. VIII, ಸೊರಬ. ೧೦-೧೨; 800).
[ < ಸಂ. ನರಸಿಂಹ ]

**ನರಸಿಂಗಪಟ್ಟಸು** (ನಾ). ಜಟ್ಟಿಕಾಳಗದಲ್ಲಿ ಒಂದು ವರಸೆ: ಅಂತರಿಪ ನರಸಿಂಗಪಟ್ಟಸು ಮುಂತಡರೆ ತಳಹತ್ತ ಗಳಹತ್ತಂ ತುಳಿಲ ವಿಂದಾಣದಲಿ ಹರಿ ಕಾದಿ ಬಳಲಿಸಿದ (ಸಾಳ್ವಭಾ. ೨೨-೭೩).
[ ನರಸಿಂಗ + ಪಟ್ಟಸು (< ಪಟ್ಟಸ$_1$) ]

**ನರಸಿಂಗಯ್ಯ** (ನಾ). ಒಬ್ಬಾತನ ಹೆಸರು: ಜನ್ನಯ್ಯ × × × ಮಗ ನರಸಿಂಗಯ್ಯಂಗೆ ಕೊಟ್ಟ ಸಾಶನ (ಎಕ. IV, ಗುಂಡ್ಲುಪೇ. ೫೭-೬; ಸು. 900); ಅಕಳಂಕ ಮಹೇಶ್ವರಂ ದಣ್ಣಂ ಮುತ್ತಿಚಿಪೊಂ ಶ್ರೀಮತ್ ನರಸಿಂಗಯ್ಯ ನರಸಿಂಗೇಸ್ವರಮ್ಮಾಡಿಸಿ ಮಣಲೆವಾಡಿಯನಭ್ಯನ್ತರಸಿದ್ಧಿಯಾಗೆ ಬಿಟ್ಟಂ (ಎಕ. XIV, ಮೈಸೂರು. ೦೨೭-೫; ಸು. 900).
[ ನರಸಿಂಗ + ಅಯ್ಯ$_1$ ]

**ನರಸಿಂಹ** (ನಾ). ೧. ಮನುಷ್ಯನ ದೇಹ ಹಾಗು ಸಿಂಹದ ಮುಖವುಳ್ಳ ರೂಪವನ್ನು ಹೊಂದಿದ ವಿಷ್ಣುವಿನ ಹತ್ತುಅವತಾರಗಳಲ್ಲಿ ನಾಲ್ಕನೆಯದು; P ಹಿರಣ್ಯಕಶಿಪುವೆಂಬ ರಾಕ್ಷಸನನ್ನು ಕೊಲ್ಲಲು ಈ ರೂಪ ತಾಳಿ ಕಂಭದಿಂದ ಉದ್ಭವಿಸಿದ ಅವತಾರವೆಂದು ನಂಬಲಾಗಿದೆ: ಬಲಿಯಂ ಕಟ್ಟಿದನಾವನೀ ಧರಣಿ...ಂ ವಿಕ್ರಾಂತದಿಂದಂ ರಸಾತಲದಿಂದೆತ್ತಿದನಾವನಂದು ನರಸಿಂಹಾಕಾರದಿಂ ದೈತ್ಯನಂ ಚಲದಿಂ ಸೀಳ್ದವನಾವನಬ್ಧಿಮಥನಪ್ರಾರಂಭದೊಳ್ ಮಂದರಾಚಲಮಂ ತಂದವನಾವನಾತನೆ ವಲಂ ತಕ್ಕಂ ಪೆಜಿರ್ ತಕ್ಕರೇ (ಪಂಪಭಾ. ೬-೪೦); ಆಗಳಲ್ಲಿಂ ಮುಗುಳೆ ನೆಲಸಿದ ಬೇಗದಲು ಸಿರಿವೊಳಲ ನರಹರಿ ಬೇಗ ಮನುಜರ ಪ್ರಾರ್ಥನಂಗಳ ಕೊಂಬ ನರಸಿಂಹ (ಸಂಭಪ. ೮-೧೨೮); ಗಾನವಿನೋದಿ ನಮ್ಮ ತೊರವೆಯ ನರಸಿಂಹ (ಪುರಂದ. ೧-೦೨೩ ಅನುಪಲ್ಲವಿ); ನಿಂದಲ್ಲಿ ನಿಲ್ಲದಾ ನರಸಿಂಹನಿದಿರೊಳ್ಳಿ ತಂದು ನಿಂದು... ಇಂತೆಂದನು (ಚಬಪು. ೩೩-೯). ೨.=ನರಸಿಂಗ ೨: ಚಲದ ಬಲದ ಕಲಿ ನರಸಿಂಹಂ (ಪಂಪಭಾ. ೧-೩೩). ೩. ಹೊಯ್ಸಳ ರಾಜನಾದ ಒಂದನೆಯ ನಾರಸಿಂಹನ ಹೆಸರು: ನರಸಿಂಹಭೂಮಿಪಾಳನ ಕರಾಸಿ ಮುಚ್ಚರಿಪರದೆಯ ಗೂಂಟಂ ವಿದ್ಯಾಭರಣಂ ತಾನೆನೆ ರಂಜಿಪಂ . . . ಗಳಗಂ (ಎಕ. V, ಬೇಲೂರು. ೧೧೯-೪೮; 1173). ೧, ೩: ನರಸಿಂಹಂ ನರಸಿಂಹನನ್ತೆ ಮುನಿಸಿಂ ಮಾಜಿಾಂತ ವೀರಾರಿ ಭೂಪರನಣ್ಮುಟ್ಟನೊಳಿಂತು ಕಂಡೊಡೆ ಬಳಿಕ್ಕಮ್ಮಮ್ಮ ಪೋಟ್ದಿಕ್ಕಿ (ಎಕ. VI, ತರೀಕೆ. ೪೨-೧೮; 1206).
[ ನರ$_2$ + ಸಿಂಹ ]

**ನರಸಿಂಹಕ್ಷೇತ್ರ** (ನಾ). ನರಸಿಂಹದೇವರು ನೆಲೆಸಿರುವ ಪುಣ್ಯಸ್ಥಳ : ಪರಮಭಕ್ತಪ್ರಹ್ಲಾದಗೊಲಿದು ಬಂದು ನರಸಿಂಹಕ್ಷೇತ್ರವೆಂದೆನಿಸಿ ಮೆರೆದೆ (ಪುರಂದ. ೪-೪೦-೩) ; ಮಹಾನರಸಿಂಹಕ್ಷೇತ್ರಮನಾ ಹಿರಣ್ಯಕಸುತ ಪ್ರತಿಷ್ಠಿತಮನೀಕ್ಷಿಸಿದಂ (ಯಾದಜಂ. ೧೬-೧೬೭).
[ ನರಸಿಂಹ + ಕ್ಷೇತ್ರ ]

**ನರಸಿಂಹಜಯಂತಿ** (ನಾ). ನರಸಿಂಹನು ಅವತಾರಮಾಡಿದ ದಿನ ; ವೈಶಾಖಶುದ್ಧಚತುರ್ದಶಿಯಂದು ಆಚರಿಸುವ ಹಬ್ಬ : ನೃಸಿಂಹ ಅಥವಾ ನರಸಿಂಹಜಯಂತಿಯನ್ನು ವೈಶಾಖಶುಕ್ಲ ೧೪ನೆಯ ದಿನದಂದು ಆಚರಿಸುತ್ತಾರೆ (ಭಾಹಬ್ಬ ೮೪). [ ನರಸಿಂಹ + ಜಯಂತಿ ]

**ನರಸಿಂಹಾಡಂಬರ** (ನಾ). ನರಸಿಂಹನ ಆಟೋಪ,–ಅಬ್ಬರ : ಅರಿಗಳ್ ಪೆಸರ್ಗೇಳ್ದೆರ್ದೆವೊಡೆವರೆಂಬ ಶೂದ್ರಕನ ವಿಕ್ರಮಾಡಂಬರಮಂದರೆವಾನಿಸಿಕೆಯೊಳೊಂದಿದ ನರಸಿಂಹಾಡಂಬರಕ್ಕೆ ನಸುನಗುತಿರ್ಕುಂ (ಕಾದಂ.ಪೂ. ೧೦).
[ ನರಸಿಂಹ + ಆಡಂಬರ ]

**ನರಸಿಂಹಾವತಾರ** (ನಾ). ೧. ನರಸಿಂಹನ ಅವತಾರ. ೨. (ಅಲಂ) (ನರಸಿಂಹನಂತೆ) ಕೋಪಾವೇಶದಿಂದ ಕೂಡಿದ ಉಗ್ರರೂಪ : ಅವರ ನರಸಿಂಹಾವತಾರವೆಲ್ಲಾ ಇಳಿದು, ಒಮ್ಮೆ ಹೋಗಿ ಬಿದ್ದುಕೊಂಡರೆ ಸಾಕು ಎಂದೆನಿಸಿತ್ತು (ಮರಮ. ೬೭) ; ಅವರು ನರಸಿಂಹಾವತಾರ ತಾಳಿಬಿಟ್ಟಿದ್ದರು, ನಾನು ಮಾತಾಡದೆ ಬಂದುಬಿಟ್ಟೆ (ರೂಢಿ). [ ನರಸಿಂಹ + ಅವತಾರ ]

**ನರಸಿಕ್ಕು** (ನಾ). ದೇಹದಲ್ಲಿ ನರಗಳು ತೊಡಕಿಕೊಂಡಿರುವಿಕೆ: ನರಸಿಕ್ಕು, ಕಪಾಲಶೂಲೆಗೆ–ಕಡಲನಾಲಿಗೆ, ತುತ್ತ, ಸೈಂಧವಲವಣ . . . ಇವೆಲ್ಲಮಂ ಕೂಡಿ ವೇದನೆಯಾದ ಠಾವಿಗೆ ಶಸ್ತ್ರವನ್ನಿಕ್ಕಿ ಆ ಔಷಧಿಯಂ ಲೇಪಂ ಮಾಡೆ ವೇದನೆ ತೀರ್ಗುಂ (ವಿವೈವಿ. ೧೬೨).
[ ನರ$_1$ (<ನರವು) + ಸಿಕ್ಕು$_3$ (<ಸಿಲ್ಕು$_2$ )]

**ನರಸಿಗಮಂಗಲ** (ನಾ). ಒಂದು ಊರಿನ ಹೆಸರು: ಪೂಜ್ಯುಕ್ತ ಬೆಳ್ಮಾದಜ್ಞಂ ಶ್ರೀಕಳ್ಳಾಚಾರಿ ನರಸಿಗಮಙ್ಗಲದ ತೊಟುಗೊಳೊಳ್ ಸತ್ತಂ (ಎಕ. X, ಬಾರಿಂಗ್. ೪೨–೪ ; ಸು. ೯೨೦).
[ಇಪ ಇದು 'ನರಸಿಂಗಮಂಗಲ' ಎಂಬುದರ ಅಪಲಿಖಿತವಿರಬಹುದು.]

**ನರಸೀಗೆಟಿ$^3$** (ನಾ). ಒಂದು ಊರಿನ ಹೆಸರು.
ನರಸೀಗೆಟಿ$^3$ ಅಪ್ಪೊರ್ =ನರಸೀಗೆರೆಯೆಂಬ ಊರಿನವರು: ಸ್ವಸ್ತಿಶ್ರೀ ನರಸೀಗೆಟಿ$^3$ ಅಪ್ಪೊರ್ ದುಗ್ಗಮಾರ ಕೊಯಿಲ್ವಸದಿಗೆ ಅಟುಗಣ್ಣಾಗಬ್ಬೆದೆ ಮಣ್ಕೊಟ್ಟರ್ (ಮ್ಯಾಆರಿ. ೧೯೩೨, ೫೮–೧ ; ಸು. 825). [ ? ]

**ನರಸು** 'ನರ್ಸ್' ನೋ.

**ನರಸುಕ್ಕು** (ನಾ). ನರ ಉಡುಗುವಿಕೆ ; ನರ ಮುದುರಿಕೊಳ್ಳುವಿಕೆ (?): ಇಕ್ಕಡಿಯು ಬಸುಟುಚ್ಚುಗಳ ನರಸು[ಪಾಠಾಂ. ಸೊ]ಕ್ಕು ದೊಳ್ಳಾಸದ ಮಹಾ ಭಯವೆಕ್ಕಸರದಲಿ ಕಾಣಲಾದುದು ವೈರಿಬಲದೊಳಗೆ (ಕುವ್ಯಾದ್ರೋ. ೧೭–೨೬) ; ಇಕ್ಕಡಿಯ ಬಸುಟುಚ್ಚುಗಳ ನರಸುಕ್ಕುಗಳ ನಾಟಕದವೊಲು ಕೈಯಿಕ್ಕಿದಾನೆಯ ಹಿಂಡು ಮುಜಿದುದು ನಿಮಿಷಮಾತ್ರದಲಿ (ಕುವ್ಯಾಗ. ೨–೨೪).
ನರಸುಕ್ಕನಿಕ್ಕು=ನರಗಳು ಮುದುರಿಕೊಳ್ಳುವಂತೆ ಮಾಡು; ನರಗಳು ಉಡುಗಿಹೋಗುವಂತೆ ಮಾಡು : ಬಾಳ ಚಾಚಿದಳಿವಳಿನಗೆ ಗೋಣಾಳಿ ಗೊಡ್ಡಿದ ಬಂದಿಯಲಿ ತುದಿನಾಲಗೆಗೆ ನರಸುಕ್ಕನಿಕ್ಕಿದಳಿವಳು ತನಗೆಂದ (ಕೊರರಾ. ೨–೨–೩೮). [ ನರ$_1$ (<ನರವು) + ಸುಕ್ಕು$_2$ (<ಸುರ್ಕು$_2$ ) ]

**ನರಸುತ** (ನಾ). = ನರನಂದನ : ರಣಾಜಿರದೊಳರಿನೃಪರನಿಕ್ಕಿದ ನರಸುತ ನಿನ್ನೊರೆಗೆ ದೊರೆಗೆ ಗಂಡರುಮೊಳರೇ (ಗದಾಯು. ೪–೫೫) ; ಸೈಂಧವ ನೆಟ ಒಂದು ತಾಗಿದಂ ನರಸುತನೊಳ್ (ಬಂಹರಿ. ೧೨–೨೨).
[ ನರ$_2$ + ಸುತ ]

**ನರಸೇನೆ** (ನಾ). ಮಾನವ ಸೈನ್ಯ : ನರಸೇನೆಗರಿದು ಲಂಕಾಪುರದ ಬಹಿರ್ಜಲಧಿ ದಾಂಟಲೆಂತಿದು ದೇವಾಸುರರ್ಗಮರಿದೆನಿಸಿ ನರಕನ ಪುರಮಂ ಬಳಸಿರ್ದುದೊಂದು ಪೌರವಪಾಶಂ (ಜಗವಿ. ೧೨–೫). [ ನರ$_2$ + ಸೇನೆ ]

**ನರಸೊಬ್ಬ** (ನಾ). ಒಬ್ಬಾತನ ಹೆಸರು : ಸ್ವಸ್ತಿಜಂಬೂದ್ವೀಪಾಂತರೇ ಕಶ್ಚಿತ್ ವಾಸ್ತು ಪ್ರಾಸಾದ ತದ್ಗತಃ ನರಸೊಬ್ಬಸಮೋ ವಿದ್ವಾನ್ ನ ಭೂತೋ ನ ಭವಿಷ್ಯತಿ (ಇಆ. IX, ೭೪–೩ ; ಸು. 7–8ನೆಯ ಶತ).
[<ನರಸ ? ]

**ನರಸ್ಫೋಟ** (ನಾ). "ನರದ ಮೇಲಿನ ಅಥವಾ ನರಪದಾರ್ಥದ ಮೇಲಿನ ಗಂತಿ" (Neuroma. ಇಂಕನಿ). [ ನರ$_1$ (<ನರವು) + ಸ್ಫೋಟ ]

**ನರಹತಿ** (ನಾ). = ನರಹತ್ಯ : ದೇಶ ದೇಶಗಳ ನಡುವೆ ಆಗುವ ಯುದ್ಧದಲ್ಲಿ ನರಹತಿ ಅಪಾರವಾಗಿರುತ್ತದೆ (ರೂಢಿ). [ ನರ$_2$ + ಹತಿ ]

**ನರಹತ್ಯ** (ನಾ). ಮನುಷ್ಯನನ್ನು ಕೊಲ್ಲುವುದು ; ಕೊಲೆ : ನರಹತ್ಯಕ್ಕೆ ಹೆದರದವ ಕುರಿಹತ್ಯಕ್ಕೆ ಹೆದರ್ಯಾನೆ? (ಗಾದೆ). [ ನರ$_2$ + ಹತ್ಯ ]

**ನರಹತ್ಯೆ** (ನಾ).=ನರಹತ್ಯ : "ಮನುಷ್ಯನನ್ನು ಕೊಲ್ಲುವದು ; ನರಹತ್ಯೆ" (Homicide. ಇಂಕನಿ) ; ನರಹತ್ಯೆ ನಡೆದರೆ . . . ಅವನಿಗೆ ಗಲ್ಲಾಗುವುದೇ ಖಂಡಿತ ! (ಮಲಮ. ೮೧೧). [ ನರ$_2$ + ಹತ್ಯೆ ]

**ನರಹರಿ** (ನಾ).= ನರಸಿಂಹ ೧ : ಹಿರಣ್ಯಕ ಕೇಡುಗಾಲಕೆ ಮಗನ ಕೊಲಲಿರೆ ಗೂಢ ನಖದಲಿ ಸೀಳ್ದ ನರಹರಿಯಾಗಿ ದಾನವನ (ಕಾಶಿರಾ. ೧೪–೨೮) ; ಹರಿಯನ್ನು . . . ಹರಿಯೆನ್ನದಿದ್ದರೆ ನರಹರಿಯಾಣೆ (ಪುರಂದ. ೫–೧೫೩ ಅನುಪಲ್ಲವಿ) ; ಕೂಗಿದರು ಧ್ವನಿ ಕೇಳಲಿಲ್ಲವೇ ನರಹರಿಯೆ (ಕನಕ. ೧೩೬ ಅನುಪಲ್ಲವಿ). [ ನರ$_2$ + ಹರಿ$_7$ ]

**ನರಹರ್ಯಕ್ಷ** (ನಾ).=ನರಸಿಂಹ ೧ : ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ (ಉತ್ತರಾ. ೨೦–೨೫) ; ಹರನುತ ಹಲಧರನನುಜ ನರಹರ್ಯಕ್ಷ ಹರುಷದಿ ಸಲಹೆನ್ನನೊಲಿದು (ಕತಸಾಂ. ೭೪–೭೫). [ ನರ$_2$ + ಹರ್ಯಕ್ಷ ]

**ನರಹುರಿ** (ನಾ). ಹೊಸೆದುಕೊಂಡಿರುವ ನರ : Nerve Cord ನರಹುರಿ (ಕೀಟವಿ. ೨೭). [ ನರ$_1$ (<ನರವು) + ಹುರಿ$_3$ (<ಪುರಿ$_3$) ]

**ನರಹುಲಿ** 'ನರವುಲಿ' ನೋ.

**ನರಹುಳು** (ನಾ). ೧. ನರಪಿಳ್ಳೆ ; ಮನುಷ್ಯ : ಆದರೆ ರಜಿಸ್ಟ್ರಿಯಾಗುವ ತನಕ ಸುದ್ದಿ ನರಹುಳುವಿಗೆ ಸಿಗಕೂಡದು (ಮರಮ. ೧೬೦). ೨. (ಅಲಂ) ಕೈಲಾಗದವನು ; ದುರ್ಬಲ : ಎಲೆ ಯುಧಿಷ್ಠಿರ ಬಿಲ್ಲ ಹಿಡಿ ನರಹುಳುಗಳಿವದಿರ ಕವಿಸಿ ಕಾಲವ ಕೊಲುವುದೇ (ಕುವ್ಯಾದ್ರೋ. ೨–೪೩).
[ ನರ$_2$ + ಹುಳು (<ಪುಟು) ]

**ನರಳ್** 'ನರಲ್$_1$' ನೋ.

**ನರಳಾಟ** (ನಾ). ನರಳುವಿಕೆ ; ಸಂಕಟಪಡುವಿಕೆ ; ವೇದನೆಯ ಧ್ವನಿ : ಅದರಿಂದುಂಟಾಗುವ ನರಳಾಟವೂ ಆಶಾಭಂಗವೂ ತಿಳಿದು ಬರುತ್ತವೆ (ತತ್ವಪ್ರಾ. ೩೯೦) ; ಈ ನರಳಾಟದಲ್ಲಿಯೇ ಮರುದಿನ ನಸುಕಿನಲ್ಲಿ ಅವನ ಆಯುಷ್ಯವು ಮುಗಿದುಹೋಯಿತು (ಸಮಜೀ. ೪೪೨).
[ ನರಳು$_1$ (<ನರಲ್$_1$) + ಆಟ ]

**ನರಳಾಡು** (ಕ್ರಿ). ನರಳು ; ಸಂಕಟಪಡು : ಮಗು ನೋವಿನಿಂದ ನರಳಾಡುತ್ತಿದೆ (ರೂಢಿ). [ ನರಳು$_1$ (<ನರಲ್$_1$) + ಆಡು$_1$ ]

**ನರಳಿಕೆ** (ನಾ). = ನರಳಾಟ : ನಿಶಿತಖಡ್ಗನಿಘಾತವೇದನೆಯು ನರಳಿಕೆಯ ರಘುರಾಮ ನಾಮಸ್ಮರಣೆಯರುಣಕುಮಾರಕನ . . . ಕಂಡನು (ತೊರರಾ. ೩–೧೨–೪) ; ಆ ನರಳಿಕೆ, ಆ ಸಂಕಟದ ಕೂಗು ಮತ್ತಾರದೂ ಅಲ್ಲ (ಬನಸಿ. ೩೩) ; ನನ್ನ ಧ್ವನಿ ನೆಗಡಿಯ ಹಿಡಿತದಿಂದ ತುಸ ಬಿಡಿಸಿಕೊಂಡು . . . ಗುಹೆಯೊಳಗಿನ ನರಳಿಕೆಯಂತೆ ಹೊರಕ್ಕೆ ಬಂದಿತ್ತು (ನಂಟರು. ೩೯).
[ ನರಳು$_1$ (<ನರಲ್$_1$) + – ಇಕೆ ]

**ನರಳಿಸು** 'ನರಲಿಸು' ನೋ.

**ನರಳು$_1$** 'ನರಲ್$_1$' ನೋ.

**ನರಳು$_2$** 'ನರಲ್$_2$' ನೋ.

**ನರಳುದನಿ** (ನಾ). ನರಳುವ ಧ್ವನಿ ; ನರಳಾಟ : "ಓ ಓ, ಅಯ್ಯೋ . . ." ಎಂಬ ಹೆಂಗಸಿನ ನರಳುದನಿ ಅವನ ಕಿವಿದೆರೆಯನ್ನು ಮೀಟಿತು (ಪುನರು. ೪೩೪). [ ನರಳು$_2$ (<ನರಲ್$_2$) + ದನಿ$_1$ ]

**ನರಳೆ** (ನಾ). ಒಂದು ಬಗೆಯ ಬಳ್ಳಿ ; ಮಂಗರವಳ್ಳಿ : ಈ ದಿನ ನಮ್ಮ ಮನೆಯಲ್ಲಿ ನರಳೆ ಚಟ್ನಿ ಮಾಡಿದ್ದರು (ರೂಢಿ). 'ನರಲೇಬಳ್ಳಿ' ಪರ್ಯಾ. [ ದೇ.॥ ತಮಿ. ನರಳೈ ]

**ನರಾಂಗ** (ನಾ). ೧. ಮನುಷ್ಯದೇಹ : ಉಜ್ಜ್ವಲ ಬಡಬಾಬ್ಧಿವಹ್ನಿ ಯುಗಮಾಂತು ನರಾಂಗವುಮನಪ್ಪ ಕಾದುವಂತೆ (ಶಬಶಂ. ೪-೭೩). ೨. ಪುರುಷನ ಜನನೇಂದ್ರಿಯ. [ ನರ$_2$ + ಅಂಗ$_2$ ]

**ನರಾಕೃತಿ** (ನಾ). ಮನುಷ್ಯನ ಆಕಾರ,-ರೂಪ : ಆಗಳ್ ನರಾಕೃತಿಗಕ್ಕನೆ ಪೋಗಿ ರಾಜಕೀರಾಂಚಿತಜನ್ಮವನ್ನಮರ್ದಪ್ಪಿದುದು (ಉದ್ಭಟ. ೬-೧೧೫) ; ನರಾಕೃತಿಯು ಪರಬೊಮ್ಮರೂಪನು ತಿರುಹಿದನು ರಥವ (ಕುಮಾ.ದ್ರೋ. ೧೮-೩೧). [ ನರ$_2$ + ಆಕೃತಿ ]

**ನರಾದಿ** (ನಾ). ಒಂದು ಬಗೆಯ ಆಯುಧ : ಬಲ್ಲಿಹ ಬಂಕು ಬಾಣನೆದೆ ನರಾದಿ ಶೂಲ ಶಿರಾದಿ ಚೂರಿ ಚಿಕ್ಕತಾರಿ . . . ಜವದಾಡೆಗಳೆಂಬ ಬತ್ತೀಸಾಯುಧಗಳಿಂ (ವಿವೇಕ. ೨೬೩). [ ? ]

**ನರಾಧಮ** (ನಾ). ಕೀಳುಮನುಷ್ಯ ; ನೀಚ ; ಹೀನ ಮಾನವ : ನರಾಧಮರೆಮಗೆ ಪಾಡೇ ಪಥವ ಬಿಡು ಬೇಡೆನುತ ತೆಗೆದೆಚ್ಚ (ತೊರರಾ. ೬-೨೧-೩೩) ; 'ನೀನು ಹೇಡಿ' ಎಂದು ಹೇಳಿದರೆ ಕೋಪಿಸಿಕೊಳ್ಳದ ನರಾಧಮನೂ 'ನೀನು ಧೀರ' ಎಂದರೆ ಹಿಗ್ಗದ ನರನೂ ಈ ಪ್ರಪಂಚದಲ್ಲಿ ಇಲ್ಲವೇ ಇಲ್ಲ ಎಂದೇ ನನ್ನ ಅಭಿಪ್ರಾಯ (ಪಂಯಾತ್ರೆ. ೪೩) ; ಏಳ್, ಸರ್ವಶಕ್ತಿಸ್ವರೂಪಿಣಿಯೆ . . . ನರಾಧಮ ಕಪಿಪ್ರಾಣಾಪಹಾರಕ್ಕೆ ! (ಶ್ರೀರಾಮಾ. ೭೮೪-೯೦) ; ಈ ನರಾಧಮನ ಬೆದರಿಕೆಗೆ ಅಷ್ಟು ಹೆದರಿದಿರಾ ? (ಹಂಗೀತ. ೨೦೩). [ ನರ$_2$ + ಅಧಮ ]

**ನರಾಧಿಪ** (ನಾ). ಅರಸ ; ರಾಜ : ಶನಿ ಮಕರಲಗ್ನದೊಳ್ . . . ದನುಜೇಜ್ಯಂ ತೊಲೆಯೊಳ್ ಸೌಮ್ಯನಿರಲ್ ನರಯುಗ್ಮದೊಳ್ ನರಾಧಿಪನಕ್ಕುಂ (ಜಾತಕ. ೧೩-೫) ; ಪೊಲ್ಲಪಪ್ಪ ಕನಸಂ ಪರಿವೀಕ್ಷಿಸಿದಂ ನರಾಧಿಪಂ (ಬಂಹರಿ. ೬-೮) ; ಉನ್ನತಚಿತ್ತನಾದನನಿತೊಂದುಪಸರ್ಗದೊಳಾ(ಳಂ) ನರಾಧಿಪಂ (ಜೀವಸಂ. ೫೭-೩೭) ; ಖಳತನೂಭವನಿಳೆಯ ನಾಡಾಡಿಯು ನರಾಧಿಪನ್ನೆಸಲೇಯೆಂಬ ಬಳಕೆಯಲಿ ಬೊಬ್ಬಿರಿದು . . . ನಿಡುದನಿದೋಜಲಿಚ್ಚನು ರಾಘವೇಶ್ವರನ (ತೊರರಾ. ೬-೪೧-೩೫). [ ನರ$_2$ + ಅಧಿಪ ]

**ನರಾಧೀಶ** (ನಾ). = ನರಾಧಿಪ : ತ್ರಿದಶಲೋಕಕ್ಕೇರುತಿರ್ದಾ ತ್ರಿಶಂಕು ನರಾಧಿಶನ ಲಕ್ಷ್ಮಿ ಶಕ್ರನ ಮುಹಾ ಹುಂಕಾರದಿಂ ಬಿರ್ದಳೆಂಬಿನೆಗಂ . . . ಒರ್ವಳ್ ಕನ್ನೆ ಚಂಡಾಲೆ ದರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ ಬಾಗಿಲೊಳ್ (ಕಾದಂಪೂ. ೨೪). [ ನರ$_2$ + ಅಧೀಶ ]

**ನರಾಮರ** (ನಾ). = ನರಾಧಿಪ : "ನೃಪತಿ ರಾಟ್ ರಾಜಂ ನರಾಮರಂ ಪಾರ್ಥಿವಂ. . .ಎನಲ್ಕರಸಕ್ಕೆ" (ಮಂಗರಾ. ೭೮-೧). [ನರ$_2$+ಅಮರ$_3$]

**ನರಾಯುಷ್ಯ** (ನಾ). ಮನುಷ್ಯನ ಆಯುಸ್ಸು ; ನೂರು ವರ್ಷ: ಜನನಂ ಸಂಭವಿಸಿರ್ದ ಲಗ್ನಗೃಹದೊಳ್ ಪಾಪಗ್ರಹಂ ನಿಂದೊಡರ್ಧ ನವಾಂಶಂಗಳಿನಾಯುವನ್ನಜಿದು ಭಾಗಂಗೊಂಡು ನೂಜಿಂಟಜಿಂದೆ ನರಾಯುಷ್ಯದೊಳಲ್ತೆ ಕುಂದಿಪುದು ಪೆತ್ತಾ ಲಬ್ಧಮಂ (ಜಾತಕ. ೮-೮). [ ನರ$_2$ + ಆಯುಷ್ಯ ]

**ನರಾವರಣ** (ನಾ). ನರಗಳ ಆವರಣ,-ಆಚ್ಛಾದನ : ನಶ್ವರವಕ್ಷೀಯಗಳಲ್ಲಿ ನರಗಳ ಹೊರಿಯ ಮೇಲೆ, ನರಾವರಣದ (Perineural Sinus) ಕೆಳಕುಹರವಾಗಿದೆ (ಕೀಟಬಿ. ೩೩). [ ನರ$_1$ (<ನರವು) + ಆವರಣ ]

**ನರಾಶ್ವ** (ನಾ). ಕುದುರೆಯ ತಲೆ ಹಾಗು ಮನುಷ್ಯನ ಶರೀರ ಅಥವಾ ಮನುಷ್ಯನ ಮುಖ ಹಾಗು ಕುದುರೆಯ ಶರೀರವುಳ್ಳ ಒಂದು ವಿಧದ ದೇವತೆ ; ಕಿನ್ನರ ; ಕಿಂಪುರುಷ : ಹಲವು ಅಸಮಂಜಸ ಭಾಗಗಳು ಸೇರಿ ಆದ ಯಾವುದಾದರೂ ಕಾಲ್ಪನಿಕ ಪ್ರಾಣಿ (ನರಾಶ್ವ, ಕಿಂಪುರುಷ, ಮೊ. ವು) (Monster. ಇಂಕನಿ). [ ನರ$_2$ + ಅಶ್ವ ]

**ನರಿ** (ನಾ). ೧. ಉದ್ದವಾದ ಮೂತಿ ಮತ್ತು ಕುಚ್ಚಾಗಿರುವ ಬಾಲವನ್ನುಳ್ಳ (ನಾಯಿ ಜಾತಿಗೆ ಸೇರಿದ) ಮಾಂಸಾಹಾರಿಯಾದ ಒಂದು ಬಗೆಯ ಕಾಡುಪ್ರಾಣಿ ; ಜಂಬುಕ ; ☞ ಇದು ಬಹಳ ತಂತ್ರಗಾರ ಎಂದು ನಂಬಲಾಗಿದೆ : ಅಕಾಶಕ್ಕೆ ಬಾಯಂ ತೆಱೆದೊಳ್ಳೆ ಬಳ್ಳುಗಳುಮಂ ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ (ಪಂಪಭಾ. ೧೩-೫೩ ವ); ಹರಿ ಕರಿಗೆ ಮುಗ್ಗುಮಲ್ಲದೆ ನರಿಗಂ ಕೋಟಿಗಮೇಂ ಮುಳಿಗುಮೆ (ಶಾಂತಿಪು. ೩-೬೨) ; ಉತ್ತುಂಗಮಾತ್ರಮಾತಂಗಮಂ ಕೊಂದು ತಿಂಬ ಸಿಂಹನೊಂದು ನರಿಯಂ ತಿಂದುದೆಂದು ಲೋಕಮಪಹಾಸ್ಯಂಗೆಯ್ಗುಂ (ಪಂಚತಂ. ೧೪೫-೯) ; ಕಬ್ಬಿನ ತೋಂಟಮಂ ನರಿ ಪೊಕ್ಕಂತೆ (ಧರ್ಮಾಮೃ. ೨-೭೦) ; ಇಟ್ಟಿಯ ಹಣ್ಣು ನರಿ ತಿಂದು ಸೃಷ್ಟಿ ತಿರುಗಿತ್ತೆಂಬಂತೆ (ಬಸವ. ೫೭೮) ; ಕೊಬ್ಬಿ ನರಿ ಹೆಬ್ಬುಲಿಯ ಕೂಸನು ಬೇಡುವಂದದಿ ಅಳವನಱಿಯದೆ ಅಧಮ ರಥಿಕರ ಕೂಡೆ ತೊಡಕುವರೆ (ಕುಮಾ.ದ್ರೋ. ೫-೪೩) ; ಕರಿಗಳನು ಮುಱಿದಿಡುವ ಸಿಂಹಕೆ ನರಿಗಳಿದಿರೇ ತಾನು ನಿನಗಂತರವೆ (ನಳಚ. ೨-೧೮). 'ಕರಟಕ' ಪರ್ಯಾ. ೨. ಹುಲಿ. 'ನರಿಬೇಂಟೆ', 'ನರಿಮಂಗಲ' ಪರ್ಯಾ. ೩. (ಆಲಂ) ವಂಚಕ ; ಮೋಸಮಾಡುವವನು ; ತನ್ನ ಠಕ್ಕುತನವನ್ನು ಸುಳಿವು ಕೊಡದವನು : ತಾನು ಮಾಡುತ್ತಿರುವುದು ಕೇವಲ ಮುಖ್ಯವಾಗಿ ಸ್ವಾರ್ಥ ; ಅದರೊಡನೆ ಸ್ವಲ್ಪ ಪರೋಪಕಾರವೂ ಘಟಿಸುವುದಲ್ಲ, ಅಷ್ಟಾದರೂ ಕಡಿಮೆಯೆ ? ಎಂಬ ನರಿಗಳುಂಟು (ಯುಕ್ತಕ್ಕ. ೧೭೧).

**ನರಿಕೂಗು** = ಅಲ್ಪರ ಪ್ರಾರ್ಥನೆ, - ಅಹವಾಲು, - ಕೂಗು : ನರಿಕೂಗು ಗಿರಿ ಮುಟ್ಟೀತೆ ? (ಗಾದೆ). **ನರಿಮದುವೆ** : ಬಿಸಿಲಿದ್ದೂ ಮಳೆ ಬೀಳುವಿಕೆ ; ☞ ಬಿಸಿಲಿದ್ದು ಮಳೆ ಬೀಳುವಾಗ ನರಿಗೂ ನಾಯಿಗೂ ಮದುವೆ ನಡೆಯುತ್ತದೆಂದು ಜನಸಾಮಾನ್ಯರು ಹೇಳುವ ವಾಡಿಕೆ : ನರಿಮದುವೆಯಲ್ಲಿ ಕತ್ತೆಪೌರೋಹಿತ್ಯ (ಗಾದೆ). **ನರಿಯ ಬುದ್ಧಿ** = ಮೋಸಮಾಡುವ ಬುದ್ಧಿ ; ವಂಚಕತನ : ನನ್ನ ರಾಯಭಾರ ಅಯಶಸ್ವಿಯಾದುದನ್ನು ಕಂಡು ರಾಜ ನನ್ನ ಮೇಲೆ ಮುನಿದುಕೊಳ್ಳುವನೆಂದೇ ಈ ನರಿಯ ಬುದ್ಧಿಯ ಮುರಾರಿ ನನ್ನನ್ನು ಕಳಿಸಿರಲು ಸಾಕು (ಗಿರಿನ. ೧೧೯). **ನರಿಯ ಮುಖ ನೋಡು** = ಒಳ್ಳೆಯ ಶಕುನವನ್ನು ಹೊಂದು ; ಅದೃಷ್ಟವಂತನಾಗು : ಬೆಳಿಗ್ಗೆ ಎದ್ದು ನರಿಯ ಮುಖ ನೋಡಿದ್ದ ಅಂತ ಕಾಣುತ್ತೆ, ಬಡ್ತಿ ಸಿಕ್ಕಿತು (ರೂಢಿ). [ ದೇ.॥ ತಮಿ. ಮಲ. ತುಳು. ಕೊಡ. ನರಿ ; ತೆಲು. ಕೊಲಾ. ಕುವಿ. ನಕ್ಕ ]

**ನರಿಕು** 'ನಜಿಂಕು' ನೋ.

**ನರಿಕೊಂತ** (ನಾ). ಒಂದು ಬಗೆಯ ಆಟ : ನರಿಕೊಂತನ ಆಟ : ಇಲ್ಲಿಯೂ ಕೈತಾಳ ಹಾಕುವುದರ ಮೂಲಕ ಪಕ್ಷ ನಿರ್ಧಾರವಾಗುತ್ತದೆ. ನೆಲಕ್ಕೆ ಸುಮಾರು ಕಡ್ಡಿಗಳನ್ನು ನೆಟ್ಟಿರುತ್ತಾರೆ. ಅವುಗಳನ್ನು ಕಾಯುವವನು ಒಬ್ಬ, ಉಳಿದವರೆಲ್ಲ ಕಡ್ಡಿಗಳನ್ನು ಕೀಳಲಿಕ್ಕೆ ಪ್ರಯತ್ನಿಸುವರು. ಹೀಗೆ ಕಡ್ಡಿಗಳನ್ನು ಕೀಳಲು ಬಂದಾಗ, ಕಾಯುವವನು ಅವರನ್ನು ಹಿಡಿಸಿಕೊಂಡವರೇ ಕಡ್ಡಿಗಳನ್ನೂ ಕಾಯಬೇಕಾಗುತ್ತದೆ. ಕಾಯುವವನು ಹಿಡಿಯಲು

ಹೋದಾಗ, ಉಳಿದವರು ಸುಮ್ಮನಿರದೆ ಬೇರೆಕಡೆಯಿಂದ ಬಂದು ಕಡ್ಡಿಯನ್ನು ಕೀಳುವರು. ಅಷ್ಟು ಜನರನ್ನೂ ಹೆದರಿಸಿ ಕಡ್ಡಿಗಳನ್ನು ಕಾಯಬೇಕಾಗುತ್ತದೆ (ಕವಿಕೋ. I. ೭೦೯). [ ? ]

**ನರಿಕೊಂಬು** 'ನರಿಗೊಂಬು' ನೋ.

**ನರಿಗಣ್ಣು** (ನಾ). (ಆಲಂ) ತೀಕ್ಷ್ಣವಾದ ಕಣ್ಣು ; ಚುರುಕುಗಣ್ಣು : ನರ್ಸಿಯ ಕೊರಳಲ್ಲಿ ಎರಡೆಳೆಯ ಸರ ಹೇಗೆ ಬಂದುವು ಎಂಬುದೇ ಕೆಲವು ನರಿಗಣ್ಣಿನ ಕುಹಕಿಗಳ ಪ್ರಶ್ನೆಯಾಗಿತ್ತು (ಒಡ್ಡಿ.ಉ. ४೭).

[ ನರಿ + ಕಣ್ಣು (<ಕಣ್) ]

**ನರಿಗನಗಟ್ಟ** (ನಾ). ಒಂದು ಪ್ರದೇಶದ ಹೆಸರು : ಹೊನ್ನೆದೇಜ್ ಅಳಗನಹಳ್ಳ ಎತ್ತುರುಳಿ ನರಿಗನಗಟ್ಟ ಮತ್ತರನಜ್ ನಿಜ್ಯಿಂಗಲು ಏರೆಯುಮ × ಡಿಗರ ಪಳ್ಳ ಪೆಂಪುಳಿಯ ಕೆಜ್ (ಎಕ. VI. ತರೀಕೆ. ೬೭-೧೨ : 838). [ ? ]

**ನರಿಗೊಂಬು**, ನರಿಕೊಂಬು (ನಾ). (ಆಲಂ) ಅಪರೂಪದ ವಸ್ತು ; P ನರಿಯ ತಲೆಯ ಮೇಲೆ ಅತ್ಯಂತ ಅಪರೂಪವಾಗಿ ಕೆಲವು ವೇಳೆ ಕೊಂಬು ಮೂಡುವುದೆಂದು ನಂಬಿಕೆಯಿದೆ : ಕರಿಯ ರಘುಲ್ಲರಿಗಳು ಬೆಳ್ವಮ್ಮಾದಿ ಕತ್ತುರಿಯೇಣ ಪುಣುಗಿನ ಚಟ್ಟು ಹರಿಣ ಗೋರೋಚನ ಕೃಷ್ಣಾಜಿನ ಪುಲಿಚರ್ಮ ನರಿಗೊಂಬುಗಳನಿತ್ತರೊಲಿದು (ವೋಹಕ. ೧೯-೭೫). **ನರಿಕೊಂಬು** : ನರಿಕೊಂಬಿದ್ದರೂ ನರನಿಗೆ ಹೆದರಬೇಕು (ಗಾದೆ) ; ನರಿಕೊಂಬಿದ್ದರೂ ಹುರಿಯೋದು ತಪ್ಪೀತೆ ? (ಗಾದೆ).

[ ನರಿ + ಕೊಂಬು$_1$ ]

**ನರಿಚೆಂಡು** (ನಾ). ಒಂದು ಬಗೆಯ ಸಸ್ಯ : (ಶ).

[ ನರಿ + ಚೆಂಡು (<ಸೆಂಡು) ]

**ನರಿದಾವಿಳೆನಾಡು** (ನಾ). ಒಂದು ಪ್ರಾಂತದ ಹೆಸರು : ಕಲಭೋರ [ನಾ] ಅರಿ ಕಕುಸ್ಥಭಟ್ಟೋರನಾಳೆ ನರಿದಾವಿ[ಳೆ]ನಾಡುಳ್ (ಮ್ಯಆರಿ. ೧೯೩೬, ೧೭-೩ ; ಸು. 450). [ ನರಿದಾವಿಳ್$_0$ + ನಾಡು ]

**ನರಿಬಲೆ** (ನಾ). ಒಂದು ಬಗೆಯ ಬಲೆ (?) : ಊರ ಹೊಱಗೊಂದು ಗಿಡುಮರ. ಅದಱೊಳಗೆ ಅಡಗಿವರ್ಪವರು ಕಳ್ಳರು ಒಬ್ಬ ನರಿಬಲೆಯುವ ಒಬ್ಬ ಹುಲಿಬಲೆಯುವ (ಕಲ್ಯಾಶಾಂ. ೧೭-೧೦೯). [ ನರಿ + ಬಲೆ$_1$ ]

**ನರಿಬಾಲ** 'ನರಿವಾಲ' ನೋ.

**ನರಿಬಾಲದಗಂಡುಹುಲ್ಲು** (ನಾ). ಒಂದು ಬಗೆಯ ಸಸ್ಯ : ನರಿಬಾಲದ ಗಂಡುಹುಲ್ಲು, ನರಿಬಾಲಹುಲ್ಲು (ಮ್ಯಜಿಗಿ. ೩೦-೫೯೦).

[ ನರಿಬಾಲ (<ನರಿವಾಲ) + ಗಂಡು + ಹುಲ್ಲು (<ಪುಲ್) ]

**ನರಿಬಾಲದಹುಲ್ಲು** (ನಾ). ೧. ಒಂದು ಬಗೆಯ ಸಸ್ಯ : "ಕ್ರೋಷ್ಟುವಿನ್ನಾ, ಸಿಂಹಪುಚ್ಛೀ, ಕಲಶೀ, ಧಾವನೀ, ಗುಹಾ – ೫ ನರಿಬಾಲದ ಹುಲ್ಲು, ನರಿಬಾಲದ ಹೊನ್ನೆ" (ಸಿದ್ಧಾಂತಿ. ೦೦೭). ೨. ಬಿಳಿ ಕೊರ್ಲೆ ಹುಲ್ಲು : (ಶ). [ ನರಿಬಾಲ (<ನರಿವಾಲ) + ಹುಲ್ಲು (<ಪುಲ್) ]

**ನರಿಬಾಲದಹೆಣ್ಣುಹುಲ್ಲು** (ನಾ). ಒಂದು ಬಗೆಯ ಸಸ್ಯ : (ಮ್ಯಜಿಗಿ. ೭೨-೧೪೭೮).

[ ನರಿಬಾಲ (<ನರಿವಾಲ) + ಹೆಣ್ಣು (<ಪೆಣ್) + ಹುಲ್ಲು (<ಪುಲ್) ]

**ನರಿಬಾಲದಹೊನ್ನೆ** (ನಾ). = ನರಿಬಾಲದಹುಲ್ಲು ೧ : ಕ್ರೋಷ್ಟುವಿನ್ನಾ, ಸಿಂಹಪುಚ್ಛೀ, ಕಲಶೀ, ಧಾವನೀ, ಗುಹಾ – ೫ ನರಿಬಾಲದ ಹುಲ್ಲು, ನರಿಬಾಲದ ಹೊನ್ನೆ (ಸಿದ್ಧಾಂತಿ. ೦೦೭).

[ ನರಿಬಾಲ (<ನರಿವಾಲ) + ಹೊನ್ನೆ (<ಪೊನ್ನೆ) ].

**ನರಿಬಾಲಹುಲ್ಲು** (ನಾ). = ನರಿಬಾಲದ ಗಂಡುಹುಲ್ಲು : "ನ ರಿ ಬಾ ಲ ದ ಗಂಡುಹುಲ್ಲು, ನರಿಬಾಲಹುಲ್ಲು" (ಮ್ಯಜಿಗಿ. ೩೦-೫೯೦).

[ ನರಿಬಾಲ + ಹುಲ್ಲು (<ಪುಲ್) ]

**ನರಿಬಿಕ್ಕಿ** (ನಾ). ಒಂದು ಬಗೆಯ ಬಿಕ್ಕೆಯ ಮರ : ಕಲ್‌ಬಿಕ್ಕಿ, ನರಿಬಿಕ್ಕಿ (ಮ್ಯಜಿಗಿ. ೩೩-೬೩೭). [ ನರಿ + ಬಿಕ್ಕಿ$_1$ (<ಬಿಟ್ಟಿ) ]

**ನರಿಬೇಂಟೆ**, ನರಿಬೇಟೆ (ನಾ). ಹುಲಿಯ ಶಿಕಾರಿ. 'ನರಿಬೇಂಟೆಗಾರ' ಪರಾ. **ನರಿಬೇಟೆ** : ನೀನೊಬ್ಬನೇ ನರಿಬೇಟೆಗೆ ಹೋಗುವುದು ಬೇಡ (ಹುಲಿಹಾ. ೧೭).

ನರಿಬೇಟೆಯಾಡು = ಹುಲಿಯ ಶಿಕಾರಿಯನ್ನು ಮಾಡು : ಗ್ರಾಮತಕ್ಕ ನರಿಬೇಟೆಯಾಡಲು ಬರಬೇಕೆಂದು ಮಾದಪ್ಪನಿಗೆ ಹೇಳಿ ಕಳುಹಿದ (ಹುಲಿಹಾ. ೧೭). [ ನರಿ + ಬೇಂಟೆ ]

**ನರಿಬೇಂಟೆಗಾರ**, ನರಿಬೇಟೆಗಾರ (ನಾ). ಹುಲಿಯ ಶಿಕಾರಿಯನ್ನು ಮಾಡುವವನು : ಸ್ನೇಹಿತರು ನರಿಬೇಂಟೆಗಾರನನ್ನು ಎಚ್ಚರಿಸಿದರು (ಹುಲಿಹಾ. ೧೭). **ನರಿಬೇಟೆಗಾರ** : ನಾಡವರು ಅವನಿಗೆ ನರಿಬೇಟೆಗಾರ ಮಾದಪ್ಪ ಎಂದು ಗೌರವಸಂಬೋಧನೆಯನ್ನು ಬಳಸುತ್ತಿದ್ದರು (ಹುಲಿಹಾ. ೧೭). [ ನರಿಬೇಂಟೆ + – ಗಾರ (< –ಕಾಱ) ]

**ನರಿಬೇಟೆ** 'ನರಿಬೇಂಟೆ' ನೋ.

**ನರಿಬೇಟೆಗಾರ** 'ನರಿಬೇಂಟೆಗಾರ' ನೋ.

**ನರಿಮಂಗಲ** (ನಾ). "ಹುಲಿಮದುವೆ ; ಬೇಟೆಗಾರನು ಹುಲಿಯನ್ನು ಹೊಡೆದ ವಿಜಯಸಮಾರಂಭದ ಉತ್ಸವ" (ಹುಲಿಹಾ. ಕೋಶ) ; P ಕೊಡಗರಲ್ಲಿ ರೂಢಿಯಲ್ಲಿರುವ ಒಂದು ಪದ್ಧತಿ.–ಸಮಾರಂಭ : ಚೆಂಗುವಾಣಿ ಮೂರು ಸಲ ನರಿಮಂಗಲ ಮಾಡಿಸಿಕೊಂಡ ಕೆಚ್ಚೆದೆಯ ಕಲಿಯ ಮಗ (ಹುಲಿಹಾ. ೧೭). [ ನರಿ + ಮಂಗಲ ]

**ನರಿಮಾನಿ** (ನಾ). (?) : ನಾವಿಲರಿಗೆ ಖ ೬೦ ದನವ ಕಾವ × × × ४೧ ಅಂತೂ ಖ ೨೨೦ ಕೆ ಕಂಮುಗಾಳಿ ಖ ೧೨೦ ನರಿಮಾನಿ ಖ ೫ ಯೇಗೀಯ ದೀದ ಖ ೧೧ ಹಾರುವ ಬಳ್ಳಿ ಖ ४೫ (ಎಕ. VIII, ತೀರ್ಥಹ. ೧೯-೧೦೯ : 1578). [ ? ]

**ನರಿಮೀಸೆಹುಲ್ಲು** (ನಾ). ಒಂದು ಬಗೆಯ ಸಸ್ಯ : ನರಿಮೀಸೆಹುಲ್ಲು, ಜಬ್ಬುರುಕೊರ್ಲೆ ಹುಲ್ಲು (ಮ್ಯಜಿಗಿ. ೬೧-೧೨೧೮).

[ ನರಿ + ಮೀಸೆ + ಹುಲ್ಲು (<ಪುಲ್) ]

**ನರಿಮೊಗ** (ನಾ). ೧. ನರಿಯ ಮುಖ. ೨. (ಆಲಂ) ಮೋಸದ ಸುಳಿವನ್ನು ತೋರಗೊಡದ ಮುಖ : ನರಿಮೊಗದ ನಗೆಯ ಕುಡುಗೋಲ್ ಕೊಂಕು ನೆರವಿರಿದು ತುಟಿಗಳೆರ್ಕೆಲದಲ್ಲಿ ಸುಳಯುತಿರ್ದುದನಿರುಳ್ ಮರೆಸಿದುದು ಜೊನ್ನಾಯಿಯಿಂ (ಶ್ರೀರಾಮಪಟ. ३೭३-३೫೯).

[ ನರಿ + ಮೊಗ ]

**ನರಿಯುಂಬೊಳೆ** (ನಾ). ಒಂದು ಊರಿನ ಹೆಸರು : ಶ್ರೀಮತ್ ಜ್ಞಾನರಾಶಿ ಪಂಡಿತರ್ಗ್ಗೆ ಧಾರಾಪೂರ್ವ್ವಕಂ ಮಾಡಿಕೊಟ್ಟ ನರಿಯುಂಬೊಳೆಯೆರ್ಪ್ಪತ್ತಱ (ಇಆ. VIII, ೫೦-೧ : 1077) ; ನರಿಯುಂಬೊಳೆಯೆಪ್ಪತ್ತಱ ಬಳಿಯ ಕಿಱಿಯ ಬೆಳ್ಳುಂಬಟ್ಟೆಯ ಪೊಲದೊಳಗೆ (ಎಇ. XII, ३೫४-३३೯ ; 1077).

[ ? ]

**ನರಿಯುಳ್ಳಿಗೆಡ್ಡೆ** (ನಾ). ಒಂದು ಬಗೆಯ ಉಳ್ಳಿಗಡ್ಡೆ, –ಈರುಳ್ಳಿ.

[ ನರಿ + ಉಳ್ಳಿಗೆಡ್ಡೆ ]

**ನರಿವಾಲ**, ನರಿಬಾಲ (ನಾ). ಒಂದು ಬಗೆಯ ಸಸ್ಯ ; ನರಿಹೊನ್ನೆಗಿಡ : "ಪೃಶ್ನಿಪರ್ಣೀ – ನರಿವಾಲ" (ಬಾಹಟೀ. ३-३-೬೦ ವ) ; "ಪೃಥಕ್ಪರ್ಣೀ – ನರಿವಾಲ, ಹೊನ್ನೆ, ಹಗ್ಗುರುಟಿಗೆ, ಒಂದೆಲೆಹೊನ್ನೆ, ಮೂಱೆಲೆಹೊನ್ನೆ" (ಒಷಧಿ. ೧೧३). **ನರಿಬಾಲ** : ಆನೆಜೊಂಡು, ಆಪು, ನರಿಬಾಲ (ಮ್ಯಜಿಗಿ. ೭೬-೧೫೫೭). [ ನರಿ + ಬಾಲ$_1$ ]

**ನರಿವಾಲವೊನ್ನೆ**, ನರಿವಾಲಹೊನ್ನೆ (ನಾ). = ನರಿವಾಲ : "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ, ಕ್ರೋಷ್ಟುವಿನ್ನಾ, ಸಿಂಹ

ಪುಚ್ಛೀ, ಕಲಶೀ, ಧಾವನೀ, ಗುಹಾ–ಈ ೯ ನರಿವಾಲವೊನ್ನೆ" (ನಾಚಿರಾ. ೦೦೯): "ಕ್ರೋಷ್ಟುವಿನ್ನಾ–ನರಿವಾಲವೊನ್ನೆ" (ಓಷಧಿ. ೪೨). **ನರಿವಾಲಹೊನ್ನೆ**: "ಕ್ರೋಷ್ಟುವಿನ್ನೆ, ಸಿಂಹಪುಚ್ಛಿ, ಕಲಶಿ, ಧಾವನಿ, ಗುಹೆ" (ನಾಚಿರಾ. ೬); "ದೀರ್ಘವಾಲಾ–ನರಿವಾಲಹೊನ್ನೆ" (ಓಷಧಿ. ೭೭).

[ನರಿವಾಲ + ಪೊನ್ನೆ]

**ನರಿವಾಲಹೊನ್ನೆ** 'ನರಿವಾಲವೊನ್ನೆ' ನೋ.

**ನರಿಹೆಸರು** (ನಾ). ಒಂದು ಬಗೆಯ ಸಸ್ಯ: ನರಿಹೆಸರು, ಪಿಲ್ಲಿಪೆಸರ (ವೈಜಿಗಿ. ೬೦–೧೨೨೬). [ನರಿ + ಹೆಸರು₂ (<ಪೆಸಱ್)]

**ನರಿಹೊನ್ನೆ** (ನಾ). =ನರಿವಾಲ: "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ... ೪ ಕೋಲಪೊನ್ನ ಎಂಬುವದು, ನರಿಹೊನ್ನೇಗಿಡ, ನಕ್ಕಚಿಕ್ಕನಾಕು" (ಸಿದ್ಧಾಂತಿ. ೧೩೩). [ನರಿ + ಹೊನ್ನೆ (<ಪೊನ್ನೆ)]

**ನರು** 'ನಱು' ನೋ.

**ನರುಕು** 'ನಱುಂಕು' ನೋ.

**ನರುಗಂಪು** 'ನಱುಗಂಪು' ನೋ.

**ನರುಗಳ್ಳು** (ನಾ). ಕಮ್ಮನೆಯ ಹೆಂಡ; ಕಂಪುಳ್ಳ ಮದ್ಯ: ಸೇಸನಾಯ್ಕನ ಹುಳಿಗಂಪಿನ ನರುಗಳ್ಳನ್ನು ಕರಟ ತುಳುಕುವಷ್ಟರ ಮಟ್ಟಿಗೆ ಬೊಗ್ಗಿಸಿ (ಹುಲಿಮ. ೧೩). [ನರು (<ನಱು) + ಕಳ್ಳು (<ಕಳ್₃)]

**ನರುಗಾಳಿ** (ನಾ). ಕಂಪುಳ್ಳ ಗಾಳಿ; ಪರಿಮಳ ಭರಿತವಾದ ವಾಯು: ಸಂದರ್ಭಾನುಸಾರವಾಗಿ ಸೂಸುವ ಕಾವ್ಯದ ನರುಗಾಳಿಯನ್ನು ವಾಚಕರು ಸೇವಿಸಬಹುದು (ನಾಡೋಜ. ೩೪೪); ಕೆಚ್ಚೆದೆಯ ದಂಡಾಳುಗಳೇ, ನಮ್ಮ ದಾಳಿಯ ನರುಗಾಳಿಯಿಂದ ಕಂಪಣ್ಣನನ್ನು ಮುತ್ತಿ ಮುಸುರಿಸಿದ ಚೆಂದುಂಬಿಗಳೇ ಕಿವಿಗೊಟ್ಟು ಕೇಳಿರಿ (ನಡದಾ. I, ೪೪೦).

[ನರು (<ನಱು) + ಗಾಳಿ₁]

**ನರುಗು** (ನಾ). ಕಂಪು; ಸುವಾಸನೆ: ಇಂಪು, ಸೊಂಪು, ಕಂಪು, ಸೌಸವ, ಅಲಂಪು, ನರುಗು, ಸೊವಡು, ಘಮಘಮ (ಘಮುಘಮು) (ಕಂನುಹು. ೭೯).

[<ನಱು]

**ನರುಗುಗಂಬಳಿ** (ನಾ). ಕಪ್ಪು ಮತ್ತು ಬಿಳಿ ಪಟ್ಟೆಗಳನ್ನುಳ್ಳ ಕಂಬಳಿ: (೬). [ನರುಗು₀ + ಕಂಬಳಿ]

**ನರುಚಲು** 'ನರಚಲು' ನೋ.

**ನರುಟು** 'ನರಟ್ಟು₂' ನೋ.

**ನರುಟುಗೊಳ್** (ಕ್ರಿ). ಬೆಳವಣಿಗೆ ಕುಂಠಿತವಾಗು; ನರಚಲಾಗು; ಪೀಚಾಗು: "ಹ್ನಸತಿ–ನರುಟುಗೊಂಡಪುದು" (ಕಾಶಶ್ಯ. ೬೨).

[ನರುಟು (<ನರಟ್ಟು₂) + ಕೊಳ್₁]

**ನರುನೆಯ್ಯಿ** 'ನಱುನೆಯ್' ನೋ.

**ನರುಮಲ್ಲಿಗೆ** (ನಾ). ಸುವಾಸನೆಯಿಂದ ಕೂಡಿರುವ ಮಲ್ಲಿಗೆ: ಇದು ಮಣ್ಣಿನ ನರುಮಲ್ಲಿಗೆ, ಇದು ನೆಲದ ನಿಧಾನ (ಅರಳು. ೨೫೦–೫).

[ನರು (<ನಱು) + ಮಲ್ಲಿಗೆ]

**ನರುಲಿ** 'ನರವುಲಿ' ನೋ.

**ನರುವಂಜಿ** 'ನಱುಪಂಜಿ' ನೋ.

**ನರುವಲ** 'ನಱುಂಪಲ್' ನೋ.

**ನರುವಲು** 'ನಱುಂಪಲ್' ನೋ.

**ನರುವಾಯ** (ನಾ). ಒಂದು ಬಗೆಯ ಬಾಣ (?): ನೆಱೆದು ನಿರ್ವಾಯಂ ನರುವಾಯಮುಂ ಮೊನೆ ನೆರಕೆ ನಾರಾಚಂ... ಕಣಕಿನೆ ವೋಪಂ[ಬು] ಕವಲ[ಂಬುಮೆಂ]ಬಂಕದಂಬೆತ್ತ[ಲುಂ] ತುಱುಗಿ ನಡುವಿನಂ ಸಾರ್ದು ಸಾರ್ದೆ ಚ್ಚೆಚ್ಚು ಕಾದಿದರತಿರಥರೊಂದು ಜಾವಂ (ಪಂಪಭಾ. ೧೩–೬೯). [?]

**ನರುಳ್ಳಿ** 'ನರವುಲಿ' ನೋ.

**ನರೂಲಿ** 'ನರವುಲಿ' ನೋ.

**ನರೆ₁, ನರೆ₄** (ಕ್ರಿ). ೧. ಕೂದಲು ಬೆಳ್ಳಗಾಗು; ಪಲಿತವಾಗು: ತೊಗಲು ಸಡಿಲಿದ ಗಲ್ಲ ಬತ್ತಿದ ಹೆಗಲು ನರುಕಿದ ನರೆತ ಮಿಸೆಯು... ಮುಪ್ಪಿನ ಮುಗುದನೀತನು (ಕುಮಾವ್ಯಾ. ೦–೩೫); ನರೆತ ಮಂಡೆಯು ನೀರೊಗುವ ಕಂಗಳು... ಪತ್ತಿದ ಗಲ್ಲದ ನೆಱೆ ವೃದ್ಧನಡಿಯಿಟ್ಟನೊಲಿದು (ಜೀವಂಸಾಂ. ೧೭–೩೦); ನ[ಪಾಠಾಂ. ನೆ]ರೆತ ಮಂಡೆಯ ಕುಸಿದ ತೊಗಲಿನ ಜೋಲ್ವ ಹುಬ್ಬಿನ... ಶಬರಿಯ ಸುಪ್ರಸಿದ್ಧೆಯ ಸಾರ್ದರೊಲವಿನಲಿ (ತೊರರಾ. ೩–೧೨–೨೯); ನಮಗೇನು ನರೆತ ಹುಬ್ಬುಗಳಿವೆಯೆ? (ಕವಿಸೋ. ೮೯–೨೦). ೨. ಮುಪ್ಪಾಗು; ವೃದ್ಧಾಪ್ಯವನ್ನು ಹೊಂದು: "ಜರಯತಿ–ನರೆತಪಂ" (ಕಾಶಶ್ಯ. ೦೪೩); ಬೆಳುಗಡ್ಡದಿಂ ನಡುಗುವ ನರೆದಲೆಯಿಂ ನರೆತು ಸಡಿಲ್ವ ಸರ್ವಾಂಗದಿಂ... ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ನಂಬಿರ. ೬–೨೫); ಅಂದಿನೀಶ್ವರನಿಂದು ನರೆತನೆಯಂದಿನ ಚಳಿತಭಕ್ತಿಮಹಿಮೆಯದಿಂದು ನವೆಯಿತೆ (ಬಸಪು. ೫೨–೩೦); ತನ್ನ ನರೆತ ಅಜ್ಜಾನದಲ್ಲಿ ತಾ ನರೆತ ಒಂದು ಪ್ರಾಣಿ ನೆರಳು ಬೆಳಕು ಅರ್ಧಾರ್ಧವಿರುವ ಮನ; ಬದುಕಿನೊಂದು ಕಾಣ (ಅರಳು. ೧೯೫–೫). **ನರೆ₄**: ೧. ಪಲಿತಂ... ಕೂದಲು ನೆರೆತುಹೋಗುವಿಕೆ (ಸಿದ್ಧಾಂತಿ. ೦೫೭); ಅವರ ಗಡ್ಡ ಮೀಸೆಗಳು ನೆರೆತು ಹೋಗಿದ್ದವು (ಕಳಹು. ೧).

[ದೇ. ॥ ತಮಿ. ನರ್ೈ; ಮಲ. ನರೆ; ತುಳು. ನರೆವು, ನರೆ; ತೆಲು. ನರಯು, ನರಿಯು]

**ನರೆ₂, ನರೆ₈** (ನಾ). ೧. ಬೆಳ್ಳಗಾದ ಕೂದಲು; ನೆರೆಗೂದಲು: "ಪಲಿತಮೆಂಬುದು ನರೆ" (ಹಲಾಯು. ೮೮–೩೭೮); ಕಚ್ಚು–ಕೆರಕುಂ, ಜರ–ನರೆಯುಂ, ಖಾಸ–ಕೆಮ್ಮುಂ (ಪದ್ಮಾರಾ. ೫೩–೪); ತೀವಿದ ನರೆಯುಂ ಡೊಳ್ಳುಂ ದೇವವ್ರತನೆನಿಸಿ ನೆಗಟ್ದ ಯಶಮುಂ ಬೆರಸಿನ್ನೀವುದು ಹರಿಗರ್ಘ್ಯಮನೆಂದಾವನುಮಿ ಭೀಷ್ಮರಂತು ನುಡಿದರುಮೊಳರೇ (ಪಂಪಭಾ. ೬–೪೩); ಎನ್ನಟ್ಟಡುಗೆಯನುಂಡೊಡೆ ಬಿನ್ನಣಮೇನರಸ ನರೆಗಳಾಗವು (ಪಂಪಭಾ. ೮–೫೪); ನರಪತಿ ನಿನ್ನಂಗಾಲೊಳ್ ನರೆ ಬರ್ಪಿನಮುತ್ತರೋತ್ತರಂ ಪುದುವಾಟಾ (ಶಾಂತಿಪು. ೯–೫೨); ಅಂಜಿಸಿದುವು ಜವನಾಳ್ಗಳ ತೆಱದಿನೆನ್ನ ಕೆನ್ನೆಯ ನರೆಗಳ್ (ಅಜಿಪು. ೨–೭೯); ನರೆ ಬಂದನಿತಱೊಳ್ ನರರ್ ಪಿರಿಯರೆ (ಧರ್ಮಾಮೃ. ೩–೦೯೮); ನಿಮ್ಮ ನಿಜವನಱಿಯದ ಮನುಜಂಗೆ ನರೆ ಹಿರಿದಾದಡೇನು ಮನದವಗುಣ ಬಿಡದು (ಸಮೂವ. ೫–೦೭); ನರೆಯೆಂಬ ಹೊಱಸು ಮೊಗಮೆಂಬರಮನೆಯಂ ಪೊಕ್ಕೊಡೆ (ಯಶೋಚ. ೨–೦೨); ಮನದ ಶುದ್ಧಿಕೆ ತಲೆದೋರ್ಪವೊಲು ನರೆ ಮೊಳೆತುದು (ಸಿದ್ಧರಾ. ೧–೩೪); ಪಟಿಪು (ಪಟವು)–ನರೆಗಿಕ್ಕುವ ಕರ್ಪುರ (ಶಮುದ. ಪರಿ. ೧); ನರೆ ಶಿರದೊಳೊಗೆದುವು (ಕುಮುರಾ. ೫–೦೯); ನಾಯಿಗೆ ನರೆ ಬಂದರೆ ಅಜ್ಜಿ ಅನಿಸಿಕೊಂಡೀತೇ? (ಗಾದ). ೨. ಮುಪ್ಪು; ವಾರ್ಧಕ್ಯ: "ಜರೆಯುಕ್ಕು ನರೆ" (ಮಂಗರಾ. ೯೧–೧೦); "ನರೆಯೆನಲ್ ಜರೆ" (ಕಶರ. ೫೩). **ನರೆ₈**: ೧. ಭರತಂ ಕಂಡಂ ಕೆನ್ನೆಯ ನೆ[ಪಾಠಾಂ. ನ]ರೆಯಂ ದಳದಳಿಸಿ ಪೊಳೆವ ಮಣಿದರ್ಪಣದೊಳ್ (ಆದಿಪು. ೧೭–೭೦); ನೆ[ಪಾಠಾಂ. ನ]ರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡು ಹೋಗದ ಮುನ್ನ... ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೧೭೦); ಎಡೆಗೊಂಡೀ ಮುಪ್ಪುದೋಱಲ್ ನೆರೆ ನೆಗೆದು ಸಿರಂದೂಗಿ ಬೆನ್ ಬಾಗಿ (ರಕ್ನಾಶ. ೩೮); ತೆರೆಯಿಲ್ಲದೆ ನೆರೆಯಿಲ್ಲದೆ ಸೆರೆಯಿಲ್ಲದೆ ಕಿಱಿದು ಮಾಗಿ ತೆಳ್ಳಗೆ ಮೊನೆಯಾಗಿರೆ ಕಿವಿಗಳೊಳಂ ನುಣ್ಪಾಗಿರೆ ಕಟಮುಂ ವಿಕಟಮಾಗದಿರೆ [ಹರಿ] ಶುಭದಂ (ಅಶ್ವಶಾ. ೧–೨೮); ಬಾಧಿಸುವುದೀ ದೇಹವಂ ನೆ[ಪಾಠಾಂ. ನ]ರೆ ತೆರೆಗಳಿನ್ನು ಸಾಧಿಸುವುದೇನು (ಜೈಮಿಭಾ. ೦೦–೩೮); ತಲೆಯೊಳೊಂದು ನೆರೆಯಿಲ್ಲ (ಸೌಂದರಕಾ. ೩–೫೨).

[<ನರೆ₁./ತಮಿ. ನರ್ೈ; ಮಲ. ನರ; ಕೊಡ. ನೆರೆ; ತುಳು. ನರೆ; ತೆಲು. ನರೆ]

**ನರೆಕೂದಲ್** 'ನರೆಗೂದಲ್' ನೋ.

**ನರೆಕೂದಲು** 'ನರೆಗೂದಲ್' ನೋ.

**ನರೆಗಡ್ಡ** (ನಾ). ನೆರೆತ ಗಡ್ಡ ; ಬಿಳಿಯ ಗಡ್ಡ : ತೋರದ ದೇಹ ಕುಂಡಲವೆದೆ ನರೆಗಡ್ಡ ಸೇರಿದ ಚಿಂದಿ ಕುಲ್ಲಾಯಿ . . . ರತ್ನಹಾರ ದೊಳಿದ್ದನಾ ಮಂತ್ರಿ (ಭರತ. ೧೩-೯) ; ನರೆಗಡ್ಡ ನೆಲಕೆಳಲುವ ಧೋತ್ರ ಭಸಿತಾಂಗ ಧರಿಸಿದ ರುದ್ರಾಕ್ಷಿಗಳಿಂದೆ . . . ವಿಪ್ರರ ಮಧ್ಯಕೆಳ್ತಂದ (ತ್ರಿಭುತಿ. ೯-೨೪) ; ನರೆಗಡ್ಡದ ಮಿಸೆಯ ಮೇಲೆ ಕೈಯನಂತೋರಣದಿಂದೆ ಪಾಯುತೆ ಪರಾಕ್ರಮಮಂ ಸಲೆ ತೋರ್ದಂ (ಹಾಲಾಸ್ಯ. ೨-೧೧-೧೯).

[ ನರ್ $_2$ + ಗಡ್ಡ $_1$ ]

**ನರೆಗೂದಲ್**, ನರೆಕೂದಲ್, ನರೆಕೂದಲು, ನರೆಗೂದಲು (ನಾ). ನೆರೆತ ಕೂದಲು ; ಬಿಳಿಕೂದಲು : ನರೆಗೂದಲ್ಗಿಕ್ಕಿ ನುಣ್ಪಂ ಮುಡಿಯನಳ ವಡಲ್ಸೆಕ್ಕಿ . . . ಮುಸುಕನಿಟ್ಟೈದಿದಳ್ ವೃದ್ಧೆ (ದಶಕು. ೮-೧೯೭) ; ಒಂದು ನರೆಗೂದಲು ಪಣೆಯೊಳ್ ತೋಱಿದಾಗಳೆ ವೈರಾಗ್ಯಂ ಪುಟ್ಟ (ಪುಣ್ಯಾಸ್ರ. ೧೧-೧೧ ವ). **ನರೆಕೂದಲ್ :** ಹೊತ್ತ ಬೆಳ್ನರೆಕೂದಲಾ ಮುದಿ ಸೂಳೆಯರ ಪೊತ್ತಪೊಪ್ಪಿದುದಾಗಲ್ಲಿ (ಕಂಸವಿ. ೬-೧೯೦) **ನರೆಕೂದಲು :** ಇಂದಿರೆಯು ಯಜಮಾನಿಯು ತಲೆಯು ನರೆಕೂದಲು ತೆಗೆಯುವುದೇ ಮುಂತಾದ ಕೆಲಸಗಳಿಂದ ಅವಳಿಗೂ ಅಚ್ಚುಮೆಚ್ಚಾದಳು (ಬಂಕಿಮ. ೦೧೯). **ನರೆಗೂದಲು :** ಪಲಿಕ್ನಿ–ನರೆಗೂದಲುಳ್ಳ ಮುದುಕಿ (ಗಂಗಾಮ. ೨೦೦) ; ನರೆಗೂದಲ ತಲೆಯನ್ನು ಬೋಳಿಸಿಕೊಂಡಿದ್ದ ಮನುಷ್ಯನನ್ನವಳು ಅದೆ ತಾನೆ ಮೊದಲ ಬಾರಿಗೆ ಕಂಡಿದ್ದಳು (ಪುನರು. ೧೮೭).

[ ನರ್ $_2$ + ಕೂದಲ್ (<ಕೊಂದಲ್) ]

**ನರೆಗೂದಲು** 'ನರೆಗೂದಲ್' ನೋ.

**ನರೆತನ** (ನಾ). ಮುದಿತನ; ಮುಪ್ಪು. ಎಳೆತನಕ್ಕೂ ನರೆತನಕ್ಕೂ ಸಂಬಂಧವೇ ಇಲ್ಲ . . . ನರೆತನದ ಎಲೆಗಳ ಅಂಚು ನೀಟಾಗಿರುತ್ತದೆ (ಹಸುಹೊ. ೨೭).

[ ನರ್ $_2$ + –ತನ ]

**ನರೆದಲೆ**, ನೆರೆದಲೆ (ನಾ). ೧. ಕೂದಲು ನರೆತ ತಲೆ : ನಡುಗುವ ನರೆದಲೆಯಿಂ ನರೆತು ಸಡಿಲ್ವ ಸರ್ವಾಂಗದಿಂ . . . ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ಸಂಬಿರ. ೬-೨೫) ; ನರೆದಲೆ ಬೇರ್ಬಟಲ್ದ ಪಟವಲ್ . . . ಮಹೋದರಮೆಸೆಯಲ್ಕೆ ಶೋಕಿಸುತೆ ಪಿಂದನೆ ಬಂದಳ್ (ದಶಕು. ೮-೧೨) ; ನರೆದಲೆ ಜೋಲ್ದ ಪುರ್ಬು ಕುಳಿದಕ್ಷಿಯುಗಂ (ಧರ್ಮಾಮೃ. ೩-೨೭) ; ಸರಡುಪತ್ರದಲಾಳಿಗೊಂಬ ಗಡ ನಮ್ಮನೀ ನರೆದಲೆಯ ಚಾಳಕನೆನುತ್ತ ಕೋಪಿಸಿದ ಸೌಂದರಕುವರನಾ ವಿಪ್ರನ (ಸೌಂದರ್ಪು. ೩-೯). ೨. ಮುಪ್ಪಾದವಳು ; ಮುದುಕಿ : ತಾಯಿಲ್ಲದನನ್ ಸಾಕಿದ ಮುದಿಯಳ್, ಕಂದನ ಕೇಡನ್ ನೋಡಲೊ ಬಟ್ದಳ್ ? ನರೆದಲೆ, ದುಃಖದ ಮಡುವೊಳ್ ಬಿದ್ದಳ್ (ಅಶ್ವತ್ಥಾ. ೨೫-೫೦೩). **ನೆರೆದಲೆ :** ೧. ನೆರೆದಲೆಗೆ ಮುಸಿದೊಡೆದು . . . ಬಾ ಜಾಣಯೆಂಬಾ ಹಣ್ಣುಮುದುಕಿ ಸೂಳೆಯರೆಸೆದರೇನೆಂಬೆನು (ಚಬಪು. ೧೦-೭೬). [ ನರ್ $_1$ + ತಲೆ $_1$ ]

**ನರೆದಲೆಗ** (ನಾ). ೧. ಕೂದಲು ಬೆಳ್ಳಗಾದವನು ; ನರೆತ ಮಂಡೆಯವನಂ. ೨. ರಾಗಿ : ನರೆದಲೆಗನಿದು ನೆಲ್ಲು ಹಾರಕ ಬರಗು ಜೋಳವು ಕಂಬು ಉರುತರದ ರವೆ ಯವೆ ನವಣೆಯಿದೂ ನವಧಾನ್ಯವೆಂದೆನಲು(ರಾಮಧ. ೦೧-೩೨) ; ಕೆಲರು ಗೋಧಿಯ ಸಾಮೆಯನು ಕೆಲಕೆಲರು ನವಣೆಯ . . . ಕೆಲರು ನರೆದಲೆಗನನು ಪತಿಕರಿಸಿರಲು (ರಾಮಧ.೧೧-೩೩); ನರೆದಲೆಗ (ರಾಗಿ), ನೆಲ್ಲು, ಹಾರಕ, ಬರಗು, ಜೋಳ, ಕಂಬು, ಸಾಮೆ, ನವಣೆ, ಗೋಧಿ ಈ ನವಧಾನ್ಯಗಳನ್ನು ತಂದು ಸುರಿದರು (ನಾಡು.ಡಿ. ೩೧); ರೀಹಿ (ವ್ರೀಹಿ–ಬತ್ತ) ಹೆಚ್ಚೋ ನರೆದಲೆಗ (ರಾಗಿ) ಹೆಚ್ಚೋ ಎಂಬ ವಾದ ಹುಟ್ಟಿತು (ನನ್ನೂರು. ೫೫). [ ನರೆದಲೆ + –ಗ $_2$ ]

**ನರೆದೊಡು** (ಕ್ರಿ). ಬಿಳಿಯಂ ಕೂದಲನ್ನು ಹೊಂದಂ,–ಪಡೆ ; ಕೂದಲು ಬೆಳ್ಳಗಾಗು : ಕೆನ್ನೆ ನರೆದೊಟ್ಟು ಶಿಥಿಲತ್ವವಳವಟ್ಟು ನೆಱೆ ಮುನ್ನಿನಂಗ ವಿಕಾರಮಂ ಬಿಟ್ಟು ಹೋಗಿ ಧಾತಂಗಳು ಪಲ್ಲಟವಾದವು (ಸಿದ್ಧರಾ. ೦-೯೧).

[ ನರ್ $_2$ + ತೊಡು $_1$ ]

**ನರೆದೋಱು** (ಕ್ರಿ). ೧. ಬಿಳಿಕೂದಲು ಕಾಣಿಸಿಕೊಳ್ಳು. ೨. ಮುಪ್ಪಾಗಂ; ವೃದ್ಧಾಪ್ಯವನ್ನು ಹೊಂದು.

**ನರೆದೋಱದರ್** = ಮು ಪ್ಪಿ ಲ್ಲ ದ ವ ರಂ ; ದೇವತೆಗಳು : "ಅಮರ್ದುಣಿಸುಗಳ್, ಕನಸಿಲ್ಲದರ್, ನರೆದೋಱದರ್, ಎವೆಯಿಕ್ಕದರ್ . . . ಅಚ್ಚರರ್ (ಬೋಳೆಯರ್)–ಈ ೯ ದೇವರ್ಕಳ ಪೆಸರ್" (ಕಶಸಾ. ೨-೧೯). [ ನರ್ $_2$ + ತೋಱು ]

**ನರೆನವಿರ್** (ನಾ). ನರೆತ ಕೂದಲು ; ಬೆಳ್ಳಗಾದ ಕೂದಲು; ಬಿಳಿಯ ಕೂದಲು : ನರೆನವಿರ ಹೊತ್ತು ನಡುಗುವ ಮಂಡೆ ಬಿಳ್ದ ಪೊಲೆ ತೆರೆ ಮುಸುಂಕಿದ ಮುಖಂ . . . ಜೋಲ್ವ ಗಲ್ಲಂ ಮಿಸುಪ ವೃದ್ಧವನಚರಿಯೊರ್ವಳಾವಣ್ಗಗಳಂ ಸವಿದು . . . ಏಱುಂಜವ್ವನಂಬಡೆದಳು (ಸವ್ಯಕಳ. ೧೦-೪೩). [ ನರ್ $_2$ + ನವಿರ್ ]

**ನರೆಪ** (ನಾ). ಕೂದಲು ನರೆತವನು,–ಬೆಳ್ಳಗಾದವನು ; ಮುದುಕ : ಕೆವ್ವಿ ಕುವ್ವಿದೊಡೆ ತೋಳೊಳೆ ಜೀವವಿಯೋಗಮುಪ್ಪುದೆಂದಿರದೆರ್ದೆಗಪ್ಪು ದತ್ತಳಗಮಾ ನರೆಪಂ ನೆರೆಪಂದು [ಪಾಠಾಂ. ನರೆಬಂದ] ಪೊಂಗಳಂ ಸುರಿಪೊಡ ಮಾರೊ ಸೈರಿಸುವರಾತನ ಪಲ್ಲಿಲಿವಾಯ ನಾತಮಂ (ಪಂಪಭಾ. ೪-೧೦೦).

[ ನರೆಪು + –ಅ $_7$ ]

**ನರೆಪು** (ನಾ). ಕೂದಲು ನರೆಯುವಿಕೆ,–ಬೆಳ್ಳಗಾಗುವಿಕೆ. 'ನರೆಪ' ಪರಾ. [ ನರ್ $_1$ + –ಪು./ತಮಿ. ನರೈಪ್ಪು; ತೆಲು. ನರವು ]

**ನರೆಯಂಗಲ್** (ನಾ). ಒಂದು ಊರಿನ ಹೆಸರು; ಈಗಿನ ಧಾರವಾಡ ಜಿಲ್ಲೆಯ ನರೇಗಲ್ಲು: ಸ್ವಸ್ತಿ ವಿಕ್ರ(ಕ್ರ)ಮಾದಿತ್ಯ ಪ್ರಿಥು(ಥು)ವಿವಲ್ಲಭ ಲೋಕಮಹಾದೇವಿಯರಾ ಲೋಕೇಶ್ವರದಾ ನರೆಯಙ್ಗಲ್ಲ ಪನ್ನಾಸುಗಳಾನಿತ್ತ (ಇಆ. X, ೦೭೭-೨ : 7ನೆಯ ಶತ) ; ನರೆಯಂಗಲ್ಲ ಸಾಸಿರ್ವ್ವರ ತುಱುಪಿನ ಪುಯ್ಯಲೊಳ್ (ಇಆ. VI, ೦೬೩-೨ ; 780) ; ಆಚಾರ್ಯ ರಾಜಗುರು ವಿಮಳಶಕ್ತಿದೇವರುಂ ನರೆಯಂಗಲ್ಲ ಮಹಾಜನಂಗಳುಂ . . . ಇನ್ತಿವರ ಸಮಕ್ಷದಲ್ಲಿ (ಕಕುಲ. ೦೭-೧೦ ; 10ನೆಯ ಶತ).

**ನರೆಯಂಗಲ್ ಪನ್ನೆರಡು**=ಒಂದು ಪ್ರಾಂತದ ಹೆಸರು : ನರೆಯಂಗಲ್ ಪನ್ನೆರಡಱೊಳಗಣ ಉಮ್ಮಚಿಗೆಯುಂ ಸರ್ವ್ವಾಭ್ಯಂತರಸಿದ್ಧಿಯಾಗಿ . . . ಕುಡೆ (ಎಇ. XX, ೬-೧೧ ; 1012).

**ನರೆಯೇಱು** (ಕ್ರಿ). ೧. ಕೂದಲು ಬೆಳ್ಳಗಾಗು. ೨. ಮುಪ್ಪಾಗು ; ಮುದಿಯಾಗು. ೧, ೨ : ವಾರ್ಧಿಯಂತೆ ತೆರೆಯೇಱದೆ ಕೋಡಗದಂತೆ ಶಾಖೆಯೊಳ್ ನಡೆಯದೆ ಪೊಟ್ಟೆ [ಪಾಠಾಂ. ಪೋದೆ]ಪೋದ ಮರದಂತೆ ಕರಂ ನರೆಯೇಱದಿಟ್ಟು ಮುಪ್ಪಡಸದ ಮುನ್ನಮೇಕೆ ಮನುಜರ್ಮುೞಿದಿಕ್ಕರೊ ಮೋಹಮಲ್ಲನಂ (ಮಲ್ಲಿಪು. ೦೩-೯೪) ; (ಕಾವ್ಯಸಾ. ೦೦೩೧ ನೋ).

[ ನರ್ $_2$ + ಏಱು $_1$ (< ಏಱ್ $_1$) ]

**ನರೆವೆಣ್** (ನಾ). ಕೂದಲು ನರೆತ ಹೆಣ್ಣು ; ಮುದುಕಿ : ನರವೆಣ್ಗಳೊಡನಾಡೆ ಮುಪ್ಪುಹುದ್ದೆಸೆ (ಭರತ. ೭೩-೧೨). [ ನರ್ $_1$ + ಪೆಣ್ ]

**ನರೇಂದ್ರ** (ನಾ). ೧. ಅರಸ ; ದೊರೆ : ರುಂದ್ರಾಂಭೋಧಿಪರೀತ ಮಹೀಂದ್ರುರದಾರಿನ್ನರೀ ನರೇಂದ್ರಂ ಸಾಕ್ಷಾದಿಂದ್ರಂ ತಾನೆನೆ ಸಲೆ ನೆಗೞ್ದಿಂದ್ರೇಂದ್ರನ ತೋಳ ತೊಟ್ಟಿಲಾಗಿರೆ ಬಳೆದಂ (ಪಂಪಭಾ. ೦-೪೪) ; ಉದ್ವೃತ್ತ ನರೇಂದ್ರಕಂಠಕದಳೀಚ್ಛೇದೈಕದಕ್ಷಾಸಿ (ಶಾಂತಿಪು. ೨-೨೦) ; ಚತುಷ್ಪಾದಿ ತದ್ಭೇದದೊಳ್ ತಾನಿದು ಶುಂಡಾಳಂ ನರೇಂದ್ರಂ ನಿಮಗೆ ಕುಡುವ ನಾಗಿರ್ದಪಂ ನೋಡೆ ದೃಷ್ಟಂ (ಸುಕುಮಾ. ೩-೭). ೨. ವಿಷಚಿಕಿತ್ಸಕ ;

ವಿಷವೈದ್ಯ; ಗಾರುಡಿಗ. ೩. ಮಾಂತ್ರಿಕ; ಮಂತ್ರವಾದಿ: "ನರೇಂದ್ರ [ನೆನಲಾಹಿತುಂಡಿಕಂ] ಪಾರ್ಥಿವನುಂ" (ವಸು.ಕೋ. ೧೩೦-೧೭); "ನೃಪನಲ್ಲಿ ವಾದಿಯಲಿ ನರೇಂದ್ರನೆಂದೆನಿಕು" (ಮಂಗರಾ. ೧೭೪-೩೬).

[ ನರ$_2$ + ಇಂದ್ರ ]

**ನರೇಂದ್ರಚಂದ್ರ** (ನಾ). ರಾಜರಲ್ಲಿ ಚಂದ್ರನಂತೆ ಹೊಳೆಯುವವನು; ಶ್ರೇಷ್ಠನಾದ ರಾಜ: ಕೃತಿಪತಿ ನರೇಂದ್ರಚಂದ್ರಂ ಕೃತಿಯುಂ ಪೇಟ್ದಂ ಬುಧಾಬ್ಜವನಕಳಹಂಸಂ (ಕಾದಂಪೂ. ೭); ರವಿಕುಲನರೇಂದ್ರಚಂದ್ರಂ, ತನ್ನ ಕಿರುವೆಂಡಿತಿಯ ಮನಮನೆಂತಾದೊಡಂ ತನ್ನಾಸೆಗೆಳಲ್ಕೆ ತೆರಿಸಂದು ಹೊರಟನವೇಳೆಗೆ (ಶ್ರೀರಾಮಾ. ೬೭-೩೩೭). [ ನರೇಂದ್ರ + ಚಂದ್ರ$_2$ ]

**ನರೇಂದ್ರನಿಕಾಯ** (ನಾ). ರಾಜರ ಸಮೂಹ, -ಗುಂಪು: ಶಿವ ಎನುತಾ ನರೇಂದ್ರನಿಕಾಯ ನಡುಗಿತು (ಕುಮಾ.ದ್ರೋ. ೮-೪೩).

[ ನರೇಂದ್ರ + ನಿಕಾಯ ]

**ನರೇಂದ್ರವಧು** (ನಾ). ಅರಸಿ; ರಾಣಿ: ಬಾಣಸಿಗಂ ಮಾಡಮನಾ ನರೇಂದ್ರ ವಧುವಂ ತಕ್ಕಯ್ಸಿಕೊಂಡೆಟಾದಂ (ಬಂಹರಿ. ೯-೩೦).

[ ನರೇಂದ್ರ + ವಧು ]

**ನರೇಂದ್ರಾಸನ** (ನಾ). ರಾಜನ ಪೀಠ; ಸಿಂಹಾಸನ: "ಗದ್ದುಗೆ ಪಟ್ಟವಣೆ ನರೇಂದ್ರಾಸನಂ" (ಚತುನಿ. ೫೦). [ ನರೇಂದ್ರ + ಆಸನ ]

**ನರೇಯಣ** 'ನಾರಯಣ' ನೋ.

**ನರೇಶ್ವರ** (ನಾ). ಅರಸ; ದೊರೆ: ಸ್ವಸ್ತಿಸಮಸ್ತನರೇಶ್ವರಮಸ್ತಕವಿನ್ಯಸ್ತ ಶಾಸನಂ (ಆದಿಪು. ೧೩-೭೩); ಸಕಲಮೇದಿನೀತಳವನೇಕಚ್ಛತ್ರದಿಂ ಪಾಲಿಸುವ ನರೇಶ್ವರನವಂಗಚ್ಯಿದ್ರಮಾಗಿ ನಡೆವುದು (ಜೈಮಿಭಾ. ೨-೩೬).

[ ನರ$_2$ + ಈಶ್ವರ ]

**ನರ್ಕುಟಕ** (ನಾ). [ಛಂದ] ಪ್ರತಿಯೊಂದು ಪಾದದಲ್ಲಿಯೂ ಹದಿನೇಳು ಅಕ್ಷರಗಳಿರುವ ಒಂದು ವೃತ್ತ; P ನಜಭಜಜಲಗ-ಹೀಗೆ ಗಣ ನಿಯಮವಿರುವ ವೃತ್ತ. ಇದಕ್ಕೆ 'ಕನಕಾಬ್ಜನೀಯ' ಎಂಬ ಹೆಸರೂ ಇದೆ. 'ಕನಕಾಬ್ಜನೀಯ', 'ನರ್ಕುಟಕ' ಪರಾ. [ ಸಂ. ]

△ **ನರ್ಚು**$_1$ 'ನಚ್ಚು$_1$' ನೋ.

△ **ನರ್ಚು**$_2$ 'ನಚ್ಚು$_2$' ನೋ.

**ನರ್ತಕ** (ನಾ). ೧. ನೃತ್ಯ ಮಾಡುವವನು; ರಂಗದ ಮೇಲೆ ಕುಣಿಯುವವನು; ನಟ: ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ ಸಭೆ ದೇವಮರ್ತ್ಯಸಭೆ (ಆದಿಪು. ೭-೧೨೭); ವಾಣಿನಿಯು ತನ್ನ ಅಷ್ಟಾಧ್ಯಾಯಿಯಲ್ಲಿ . . . ನಾಟ್ಯಗಾರನಿಗೆ ನರ್ತಕ ಎಂಬ ಹೆಸರಿದ್ದುದನ್ನು ತಿಳಿಸುತ್ತಾನೆ (ಭಾರದ. ೫೫೦). ೨. [ಜೈನ] ಸೈನ್ಯದ ಏಳು ವಿಭಾಗಗಳಲ್ಲಿ ಒಂದು. 'ನರ್ತಕಿ' ಪರಾ. [ ಸಂ. ]

**ನರ್ತಕಾಳಿ** (ನಾ). ನರ್ತಕರ ತಂಡ, -ಸಮೂಹ: ಪ್ರಕಟಿಸಿದತ್ತು ಪದ್ಮಜನ ಪಕ್ಕದೊಳ್ . . . ಗಾಯಕಪ್ರತತಿ ವಾದಕಮಂಡಳಿ ನರ್ತಕಾಳಿ (ಪುಷ್ಪಪು. ೫-೨೦). [ ನರ್ತಕ + ಆಳಿ$_4$ (= ಆಲಿ$_4$) ]

**ನರ್ತಕಿ** (ನಾ). ೧. ನೃತ್ಯ ಮಾಡುವವಳು; ನಟಿ: ಕುಡುಪುಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪುರ್ವಿಂ ಜತಿಯಂ ತೊಡರದೆ ನಡೆಯಿಸಿ ಪುರ್ವದೆ ಕುಡುಪಿನೆ ನರ್ತಕಿಯಾ ಸಭೆಗೆ ವಾದಕಿಯಾದಳ್ (ಆದಿಪು. ೯-೩೩); ನರ್ತಕಿಯರಾಟಗಳ ನೋಡಲು ಮುತ್ತುತಿಪ ಪೆಂತರರ ಜಡಿಕೈದತ್ತು ತೊಲಗಿಸಿ . . . ಓಜೆಗೊಳಿಸಿದರಮರಪಡಿಯಬರು (ಸಾಳ್ವಭಾ. ೩೩-೩೭); ಕಡುತೋರವಲ್ಲದಗ್ಗದ ನಿಡಿದಲ್ಲದ ಕಿಟಿದುಮಲ್ಲದತಿ ಬಡವಲ್ಲದ ಮುಡುಬಲ್ಲ ದವಯವಂಗಳನೊಡರಿಸುವಂಗನೆಯೆ ಲಲಿತನರ್ತಕಿಯೆನಿಪಳ್ (ರಾಸ್ಕರಂ. ೧-೪೪); ರಂಭೆ ಮೊದಲಾದ ಅಪ್ಸರಸ್ತ್ರೀಯರೇ ಇವನ ನರ್ತಕಿಯರು (ನೀತಿಜಂ. IV, ೮). ೨. [ಜೈನ] ಸೌಧರ್ಮೇಂದ್ರನ ಏಳು ಬಗೆಯ ಸೇನಾಂಗಗಳಲ್ಲಿ ಒಂದು; P ಮರ್ತ್ಯಲೋಕದಲ್ಲಿರುವಂತೆ ದೇವಲೋಕದಲ್ಲೂ ರಾಜ್ಯಾಂಗವ್ಯವಸ್ಥೆ ಇದೆ. ಸೌಧರ್ಮೇಂದ್ರಾದಿ ಇಂದ್ರರಿಗೂ ಸೈನ್ಯವಿದೆ. ಆ ಸೈನ್ಯವನ್ನು ಅನೀಕವೆಂದು ಕರೆಯುತ್ತಾರೆ. ಆ ಸೈನಿಕರಿಗೆ ಅನೀಕದೇವತೆಗಳೆಂದು ಹೆಸರು. ಇವರಿಗೆ ವೈಕ್ರಿಯಿಕ (ನಾನಾರೂಪವನ್ನು ತಾಳಬಲ್ಲ) ಶಕ್ತಿಯಿದೆ. ಇವರು ಏಳು ಬಗೆಯ ರೂಪವನ್ನು ತಾಳಿ ಇಂದ್ರನನ್ನು ಸೇವಿಸುವ ಸೇನಾಂಗವೆನಿಸುತ್ತಾರೆ. ಅವು ಯಾವುವೆಂದರೆ ೧. ವೃಷಭ = ಎತ್ತು. ೨. ರಥ = ತೇರು. ೩. ತುರಗ = ಕುದುರೆ. ೪. ಮಂದಗಜ = ಆನೆ. ೫. ಪದಾತಿ ಅಥವಾ ಭೃತ್ಯವರ್ಗ = ಕಾಲುಬಲ. ೬. ನರ್ತಕ ಅಥವಾ ನರ್ತಕಿ = ನಾಟ್ಯಮಾಡುವವರು. ೭. ಗಂಧರ್ವ = ಸಂಗೀತಗಾರರು. ಈ ವಿವರಗಳು ಸರ್ವಾರ್ಥಸಿದ್ಧಿ ಮೊದಲಾದ ಜೈನಗ್ರಂಥಗಳಲ್ಲಿ ದೊರಕುತ್ತದೆ: ಹಸ್ತ್ಯಶ್ವರಥಪದಾತಿವೃಷಭಗಂಧರ್ವನರ್ತಕೀಪ್ರಮುಖ ಸಪ್ತಾನೀಕಸಮೇತನುಂ (ಆದಿಪು. ೬-೧೩ ವ); ಗಜತುರಗಸ್ಯಂದನಪದಾತಿ ಗವೇಂದ್ರ ಗಂಧರ್ವ ನರ್ತಕೀಪ್ರಮುಖ ಪ್ರಥಿತಸಪ್ತಾನೀಕಸಂಯುತನುಂ (ನೇಮಿಪು. ೨-೩೨ವ); ಗಜತುರಗಪದಾತಿರಥಗಂಧರ್ವನರ್ತಕೀವೃಷಭವಿಕಲ್ಪದಿಂ ಸಪ್ತವಿಧಮಂಗರಕ್ಷಕರ್ ಪದಿನಾಱುಸಾಸಿರಂ (ತತ್ತ್ವಪ್ರ. ೧೯೪); ಸಿಂಧುರಘಟಾಸಂದೋಹದಿಂ . . . ನವನರ್ತಕೀನಿವಹದಿಂ ಗಂಧರ್ವ ಸಂದೋಹದಿಂದಿದು ಸಪ್ತಾಬ್ಧಿಯೆನಲ್ಕೆ ಸಪ್ತವಿಧಸೇನಾಚಕ್ರಮೇನೊಪ್ಪಿತೋ (ಪುಷ್ಪಪು. ೧೪-೧೬). ೩. [ಸಂಗೀತ] ಒಂದು ರಾಗದ ಹೆಸರು: ನರ್ತಕಿ ಕಕುಭ ಷಡ್ಜ ಕೌಶಿಕಿ ಭ್ರುಮಾಳ ಪಂಚಮಭ್ರುಮಾಳ ಪಂಚಮಗಾಂಧಾರ ರೂಪಸಾಧಾರಣಮೆಂಬೀಳುರಾಗಂಗಳಿಂ ಸಪ್ತಸಾಧಾರಣಜಾತೀಯಂಗಳು (ವಿವೇಕ. ೨೩೩). [ ಸಂ. ನರ್ತಕೀ ]

**ನರ್ತನ** (ನಾ). ರಂಗದ ಮೇಲೆ ನಡೆಯುವ ನಾಟ್ಯಾಭಿನಯ; ನೃತ್ಯ; ನಾಟ್ಯಮಾಡುವುದು; ಕುಣಿತ: ಬೇಡನನರ್ತನ ಹಾಸ್ಯಮನಾಡಂಬರ ನಟನಮೇಣುವಾದನಗೇಯಕ್ರೀಡೆಗಳಿಂ. . . ರಾಮಕೃಷ್ಣರಿರ್ದವಸರದೊಳ್ (ಜಗವಿ. ೪-೪೮); ಗಣನಾಥವಕ್ತ್ರಸರಸೀರುಹಕೇಳಿನಿವಾಸದಲ್ಲಿ ನರ್ತನಮಂ ನೋಡರ್ಚೆ . . . ಇನಿಸು ಬಟಲ್ದ ವಾಗ್ವನಿತೆ ವಿಶ್ರಮಿಸಿರ್ಕೆ ಮದಾನನಾಬ್ಜದೊಳ್ (ಪುಷ್ಪಪು. ೧-೭); ನರ್ತನದಿಂ ನವಶಕ್ತಿಯು ಹೊಮ್ಮಿ . . . ತೋರ್ಪುದು ಸುಖದುಃಖಗಳನು! (ಪಾಂಚಜ. ೧೯-೧೫); ಸರಳಳು ವೈದ್ಯನಾಥರಲ್ಲಿ ನರ್ತನವನ್ನು ಕಲಿಯುತ್ತಿದ್ದಳು (ಕಲಾಸ. ೨೦). [ ಸಂ. ]

**ನರ್ತನಗಾತಿ** 'ನರ್ತನಗಾರ್ತಿ' ನೋ.

**ನರ್ತನಗಾರ್ತಿ**, ನರ್ತನಗಾತಿ (ನಾ). ನೃತ್ಯಮಾಡುವವಳು; ನರ್ತಕಿ: ಸುರನರ್ತಕಿಯರೊಳು ಮತ್ಸರವಾಂತರೀ ನರನರ್ತನಗಾರ್ತಿಯರ ಪರ ಮೋತ್ಸವದೆ ನೋಡುತ ಬಂದ (ಮೋಹತ. ೪೩-೩೧). ನರ್ತನಗಾತಿ: ಗುಡಿಗುಡಿಗಳ ನರ್ತನಗಾತಿಯರೊಳು ಪೆರ್ಬಡಿಸುವ ಗೀತಶಬ್ದಗಳ ವಡಿ ತಪ್ಪದೆ ಕೋಲಚಾರಿಗಳಿಂದ ಜಕ್ಕುಡಿ ಮೊಟಿದುವು ದೇವಾಲಯದಿ (ಮೋಹತ. ೧೮-೭); ತಾಳಮದ್ದಳೆಗೀತ ನರ್ತನಗಾತಿಯು ಮೇಳವಿದ್ವತ್ಸಭೆ ಸುರರ ಜಾಲಕ್ಕೆ ಹಸಿಯಿತ್ತು ಬೀಳ್ಕೊಟ್ಟ (ಮೋಹತ. ೪೩-೩೭).

[ ನರ್ತನಗಾಱ + -ತಿ$_1$ (< -ಇತ್ತಿ) ]

**ನರ್ತನಗಾಱ** (ನಾ). ನೃತ್ಯ ಮಾಡುವವನು; ನರ್ತಕ. 'ನರ್ತನಗಾರ್ತಿ', ಪರಾ. [ ನರ್ತನ + -ಗಾಱ (< -ಕಾಱ) ].

**ನರ್ತನಗೃಹ** (ನಾ). ನೃತ್ಯಮಂದಿರ; ನಾಟ್ಯಶಾಲೆ: ಜಗದೊಳ್ ನಾಟ್ಯಪ್ರಭು ಶಾಂಕಿಮರ್ದನೆನಿಪಂ . . . ಸಾಹಿತ್ಯಲೀಲಾಗೃಹಂ ಭಗವಜ್ಜೈನಮತೋಕ್ತಿ ನರ್ತನಗೃಹಂ (ಪುಷ್ಪಪು. ೧-೭೩). [ ನರ್ತನ + ಗೃಹ ]

**ನರ್ತನವಿದ್ಯೆ** (ನಾ). ನಾಟ್ಯ; ನೃತ್ಯಕಲೆ: ಮಕ್ಕಳು ನರ್ತನವಿದ್ಯೆಯ ಕಲಿತರು (ಇಂದಾಪ. ೪೭-೨೦). [ ನರ್ತನ + ವಿದ್ಯೆ ]

**ನರ್ತನಶಾಲೆ** (ನಾ). = ನರ್ತನಗೃಹ : ಮತ್ತಮಾ ವನಂಗಳಲ್ಲಿ ಚಿತ್ರಶಾಲೆ . . . ನರ್ತನಶಾಲೆ ಗಾನಶಾಲೆ ಕ್ರೀಡಾಶಾಲೆ . . . ತರುವಾಟಗಳ ತಣ್ಣೆಳಲ್ಗಳೊಳಗೆಯುಂ (ವಿವೇಕ, ೨೨೮). [ ನರ್ತನ + ಶಾಲೆ₃ ]

**ನರ್ತನಸ್ಥಳ** (ನಾ). = ನರ್ತನಸ್ಥಾನ : ರಂಗಃ – ನರ್ತನಸ್ಥಳವುಂ, ರಂಗವಲ್ಲಿಯುಂ (ಶಾಶಕ್ರ. ೨೦೪). [ ನರ್ತನ + ಸ್ಥಳ (= ಸ್ಥಲ) ]

**ನರ್ತನಸ್ಥಾನ** (ನಾ). ರಂಗಮಂಟಪ ; ರಂಗಸ್ಥಳ : "ನರ್ತನಸ್ಥಾನಮದು ರಂಗಮುಕ್ಕ್ಯ" (ಮಂಗರಾ. ೨೪-೬). [ ನರ್ತನ + ಸ್ಥಾನ ]

**ನರ್ತನೋತ್ಸವ** (ನಾ). (ಒಂದು ದಿನ ಅಥವಾ ಅನೇಕ ದಿನಗಳು ನಡೆಯುವ) ನಾಟ್ಯಕ್ಕೆ ಸಂಬಂಧಿಸಿದ ಸಂತೋಷಸಮಾರಂಭ,–ಉತ್ಸವ: ೮೬ನೆಯ ಪ್ರಕರಣದ ನರ್ತನೋತ್ಸವದಲ್ಲಿ ಎಲ್ಲ ನವೀನ ಪಾತ್ರಗಳು ಸಾಮುದಾಯಿಕವಾಗಿ ನಮ್ಮ ಚಿತ್ತದಲ್ಲಿ ನೆಲಸುತ್ತವೆ (ಸಮಜೀ. ೨೪ ಪೀಠಿಕೆ). [ ನರ್ತನ + ಉತ್ಸವ ]

**ನರ್ತಿಣಿ** (ನಾ). ನರ್ತಕಿ ; ನಾಟ್ಯ ಮಾಡುವವಳು : ನರ್ತಿಣಿಯು ತೆರದೊಳಗೆ ಲೋಕವಿದೂರ್ತಿಪುದು ತ್ರ್ಯವಾಯುಂ ಬಿಗಿಯೊಳು ಸುತ್ತಿಹುವು (ಪಬುಭಾ. ೧-೧೪) : ಸಿಡಿಲ ಮುರಜಂಬರವೆ ತೆರೆ ಅರಲ್ಪಿಡಿವ ಪುಷ್ಪಾಂಜಲಿಯು ಮಳೆ ಬೆಮರೊಡೆದ ತೆರದಿಂ ನಟಿಸೆ ಕುಡಿಮಿಂಚೆಂಬ ನರ್ತಿಣಿಯು (ಜಿರಾಮಾ. ೧೧೦-೪೬). 'ನಚ್ಚಣಿ' ಪರಾ. [ < ಸಂ. ನರ್ತಿನೀ ]

**ನರ್ತಿಸು** (ಕ್ರಿ). ೧. ಕುಣಿ ; ನಾಟ್ಯಮಾಡು : ಕುಡುಮಿಂಚಿನಂತೆ ಮೇಗೊಗೆದು ನಾರದಂ ನರ್ತಿಸಿದಂ (ಪಂಪಭಾ. ೧೨-೧೮೯) ; ಭೂತಗಣಂ ಪೇರಾನೆಯ ನೆಣನಂ ತಿಂದೆದ್ದಾನಂದದಗೆ ಕೂಡೆ ನಲಿದು ನರ್ತಿಸುತಿರ್ಕ್ಕುಂ (ಎಕ. VIII, ಸಾಗರ. ೧೦೯-೩೯ : 1042) ; ಶಾರದೆಯ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ (ಕುವ್ಯಾಆ. ೧-೫) : ನರ್ತಿಸು, ತಾಯೆ, ಆಜಬಾಯೆ, ಮಮ ಮಸ್ತಕ ನೀರೇಜದಲಿ! (ಅನಿಕೇ. ೧-೧). ೨. ಆಡು ; ಚಲಿಸು : ಭೂಭೃತ್ತಿಲಕನ ಸಿತಾತಪತ್ರದ ಕೆಲದೊಳ್ ನರ್ತಿಸಿತು ಧವಳಚಾಮರಯುಗಳಂ (ಕಾದಂಪೂ. ೪೬೨). [ ನರ್ತನ + – ಇಸು₃ ]

**ನರ್ದನ** (ನಾ). (ದನಗಳ) ಗುಟುರು ; ಗರ್ಜನೆ : ಜನಾರ್ದನನಾಡುತ್ತುಮಿರ್ದ ಪದದೊಳ್ ದೆಸೆಗಳ್ ಮಾರ್ದನಿವಿಡಲದ್ಭುತವೃಷನರ್ದನಮುಣ್ಮಿದುದದೊಂದು ವಜ್ರಾಶನಿಪೊಲ್ (ಜಗವಿ. ೫-೩೪). [ ಸಂ. ]

**ನರ್ಮ₁** (ನಾ). ೧. ಆಟ ; ಲೀಲೆ ; ಕ್ರೀಡೆ ; ವಿನೋದ. ೨. (ಶೃಂಗಾರದಲ್ಲಿನ) ಪರಿಹಾಸ; ನಗೆ: "ಸ್ತ್ರೀ ಪುರುಷರ ಪರಿಹಾಸ" (ಅಮರ. ಟೀಕೆ). ೩. ಚೆಲುವು ; ಸೊಗಸು : ಕೂರ್ಮೋನ್ನತಮೆನಿಸಿರ್ದ ಪದಂಗಳ್ ನರ್ಮಮನಾದರಿಸಿದವು ಮಡಂಗಳ್ (ಸುಕುಮಾ. ೫-೫೦ ರಗಳೆ). ೪. ಸಂತೋಷ ; ಉಲ್ಲಾಸ : ಧರ್ಮಮೆ ದೇಹಿಗ(ಮಿ)ಹಪರ ಶರ್ಮಕ್ಕೆ ಸಿದಾನಂ . . . ನರ್ಮದಿನೆಸೆಗುತ್ಕಟಸತ್ಯಮರ್ಮಂ ಪ್ರತ್ಯಕ್ಷಫಲಮನೀವುದು ಪುಸಿಯೇ (ಪುಷ್ಪಪು. ೩-೧೦೮). [ ಸಂ. ನರ್ಮನ್ ]

**ನರ್ಮ₂** 'ನರಮ್ರ್' ನೋ.

**ನರ್ಮಕಥೆ** (ನಾ). ವಿನೋದದ ಪ್ರಸಂಗ,–ಘಟನೆ : ಈ ನರ್ಮಕಥೆಯನ್ನು ತನ್ನ ಚಿತ್ತದಲ್ಲಿ ಬಚ್ಚಿಟ್ಟು ಜೋಪಾನವಾಗಿ ಕಾಪಾಡಿಕೊಂಡು ಬಂದಿದ್ದಳು (ಕಾವ್ಯಸ. ೪೯). [ ನರ್ಮ₁ + ಕಥೆ ]

**ನರ್ಮಕುಂಜ** (ನಾ). ವಿನೋದವಾಗಿ ಕ್ರೀಡಿಸುವ ಲತಾಮಂಟಪ ; ಕ್ರೀಡಾಸ್ಥಾನ ; ಕೇಳೀಸದನ : ಕವಿಯ ಹೃದಯವೆ ನರ್ಮಕುಂಜ ಕವಿತಾಸತಿಗೆ (ಗೀವಿಂ. ೨೧-೧೮). [ ನರ್ಮ₁ + ಕುಂಜ ]

**ನರ್ಮಗೋಷ್ಠಿ** (ನಾ). ವಿನೋದದ ಗೋಷ್ಠಿ ; ಸಂತೋಷಕೂಟ : ನಯಸಂಪನ್ನನತೀವಯವ್ವನಯುತಂ ರೂಪಾನ್ವಿತಂ ನರ್ಮಗೋಷ್ಠಿಯನಾಳ್ವಂ . . . ಉತ್ಸಾಹಿಯೆನಿಪ್ಪನೊಳ್ಪೆರೆವ ಪೆಣ್ಗಾ ರಂಭೆಯೇಂ ಸಾಟಿಯೇ (ರಾಜಶೇ. ೧೧-೧೫೦). [ ನರ್ಮ₁ + ಗೋಷ್ಠಿ ]

**ನರ್ಮದೆ** (ನಾ). ೧. ಸಂತೋಷಪಡಿಸುವವಳು ; ನಗಿಸುವವಳು. ೨. ಒಂದು ನದಿಯ ಹೆಸರು ; P ಭರತಖಂಡದಲ್ಲಿ ಬಹಳ ಪವಿತ್ರವಾದುದೆಂದು ಭಾವಿಸುವ ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದೆ, ಸಿಂಧು ಮತ್ತು ಕಾವೇರಿ ಎಂಬ ಏಳು ಮಹಾನದಿಗಳಲ್ಲಿ ಒಂದು : "ಮೇಖಳಕನ್ಯಾ, ನರ್ಮದಾ, ರೇವಾ – ಈ ೩ ನರ್ಮದೆ" (ಹಲಾಯು. ೧೧೧-೫೨) ; ನರ್ಮದೆಗೆ ಹೋದರೆ ಕರ್ಮ ತಪ್ಪೀತೇ? (ಗಾದೆ). [ ಸಂ. ನರ್ಮದಾ ]

**ನರ್ಮದ್ಯುತಿ** (ನಾ). ೧. ಸಂತೋಷಕರವಾದ ಬೆಳಕು : ನಿರ್ಮಲಜಲಕಲನಾದಾಹ್ಲಾದಿನಿ ನವಶಶಿನರ್ಮದ್ಯುತಿಸಂವಾದಿನಿ ಗಂಗೆ ತರಂಗಿಣಿ ಮಂಗಳವೆರೆಯೆ (ಗಡೀಶ. ೧೫-೩೮೦). ೨. [ಕಾವ್ಯಮೀ] ನಾಟಕವೇ ಮೊದಲಾದ ರೂಪಕಗಳಲ್ಲಿ ಇರಬೇಕಾದ ಅರುವತ್ತುನಾಲ್ಕು ಸಂಧ್ಯಂಗಗಳಲ್ಲಿ ಒಂದು ; ಪ್ರತಿಮುಖಸಂಧಿಯಲ್ಲಿ ಆರನೆಯ ಅಂಗ ; ಪರಿಹಾಸದಿಂದ ಹುಟ್ಟಿದ ಧೈರ್ಯ ಅಥವಾ ಸಮಾಧಾನ, ದೋಷವನ್ನು ಮುಚ್ಚಲು ಬಳಸುವ ಹಾಸ್ಯ. [ ಸಂ. ]

**ನರ್ಮಲಿ** (ನಾ). ಒಂದು ಬಗೆಯ ಗಿಡ : ಇಬ್ಬದಿಯ ಆಡಸೋಗೆ, ನರ್ಮಲೀ ಗಿಡಗಳ ಬೇಲಿಗಳಿಂದ ಬೆಲ್ಲಗೆಡ್ಡೆಯ ಬಾಳಕ ಸುಟ್ಟ ವಾಸನೆ ಮೂಗಿಗೆ ಬಡಿಯಿತು (ಮೂರುದಾ. ೯೦). [ ? ]

**ನರ್ಮವಚನ** (ನಾ). ವಿನೋದದ ಮಾತು,–ನುಡಿ : ನಾರಿಯರ ನರ್ಮವಚನಕ್ಕೆ ನಂದನದ ಮಂದಾರದಂದದಿ ಕಾಡ ಬೇವು ಹೂವಪ್ಪುದೇ (ಸಮ್ಯಕೌ. ೫-೬೬). [ ನರ್ಮ₁ + ವಚನ ]

**ನರ್ಮಸಖ** (ನಾ). = ನರ್ಮಸಚಿವ : (ಕ). [ ಸಂ. (ನರ್ಮ + ಸಖಿ + –) ]

**ನರ್ಮಸಚಿವ** (ನಾ). ಅರಸನ ಶೃಂಗಾರ ಮತ್ತು ವಿನೋದದ ಕ್ರೀಡೆಗಳಲ್ಲಿ ಜೊತೆಯಲ್ಲಿರುವವನು,–ಸಹಾಯಕ; ವಿದೂಷಕ ಮೊದಲಾದವರು ; ಆಪ್ತಸಚಿವ ; ಅಂತರಂಗದ ಸಹಾಯಕ : ಭೀಮಸೇನನುಮತದೊಳ್ ನರ್ಮಸಚಿವನುಂ ಪರಿಹಾಸಕೇಳೀಶೀಲನುಮೆನಿಸಿದ ವಿದೂಷಕನೆಂದಂ (ಗದಾಯು. ೨-೮ ವ); ಅವನಿಪತಿ ದಿನಪ್ರಥಮಯಾಮದೊಳ್ ನರ್ಮಸಚಿವಸಮನ್ವಿತಂ . . . ಮಂಗಳಗಾಯನೀಪಠ್ಯಮಂಗೀತಮನಾಲಿಸುತ್ತುಮಿರ್ಪಿನಂ (ಮಲ್ಲಿಪು. ೫-೨೮) ; ಅಂತವರ್ ನರ್ಮಸಚಿವರಂತಿಚ್ಚೆಯಂ ಪ್ರತಿಪಾಲಿಸಿ ನುಡಿವುದುಂ (ಪಂರಾಮಾ. ೧೨-೫೧ ವ) ; ನರ್ಮಸಚಿವಪ್ರಕೋಷ್ಠನಿವೇಶಿತ ಸವ್ಯಪಾಣಿಪಲ್ಲವನುಂ (ಚಂದ್ರಪು. ೭-೮೩ ವ) ; ನರ್ಮಸಚಿವಪ್ರಸಾರಿತ ಕರಪಲ್ಲವನ್ಯಸ್ತಹಸ್ತಕಮಳನುಂ . . . ಆಗಿ ನಡೆತಪ್ಪರ್ಗಳ್ (ರಾಜಶೇ. ೧೦-೧೫ ವ) ; ಅವನು ನಯಾಬನ ಅಂತರಂಗದ ಮಿತ್ರನೂ ನರ್ಮ ಸಚಿವನೂ ಆಗಿದ್ದನು (ರಾಜ್ಯೋದ. ೧೪೩) ; ಗೋವಿಂದಭಟ್ಟ, ಗೌಡರ ನರ್ಮಸಚಿವ. ಗೌಡರ ಯೋಜನೆ – ಹುಂಚಿಕೆಯ ಅಲಿಖಿತ ರೆಕಾರ್ಡಕೀಪರ್ (ದೀಪದ II, ೯೫). [ ಸಂ. ]

**ನರ್ಮಸಹಾಯ** (ನಾ). = ನರ್ಮಸಚಿವ : ಅತನುವನತಿಶಯದಿಂ ಖಾತುತತಿಗಳ್ ಬಳಸುವವೊಲೆಳಸಿ ಬಳಸಿದರಂತಾ ಕ್ಷಿತಿಪತಿಸುತನಂ ವಿಟಪಂಡಿತನಟಪರಿಹಾಸಕಾದಿ ನರ್ಮಸಹಾಯರ್ (ಅರ್ಧನೇ. ೪-೧೩೩). [ ನರ್ಮ₁ + ಸಹಾಯ ]

**ನರ್ಮಾಲಾಪ** (ನಾ). ವಿನೋದದ ಮಾತು ; ನಗೆನುಡಿ : ಪಲವುಂ ನರ್ಮಾಲಾಪಂಗಳಿಂದಮೆ ಸುಖಾಯಮಾನಸ್ವಾಂತನಾಗಿ ರಾಜಾಧಿರಾಜಂ . . . ಪೋಪೊನಂ (ಕಾದಂಬ. ೪೧೭). [ ಸಂ. ]

**ನರ್ಮೋಕ್ತಿ** (ನಾ). = ನರ್ಮಾಲಾಪ: ಪರಿಪರಿಯ ನರ್ಮೋಕ್ತಿಗಳ ಬಂಧುರ ವಿಹಾರಂಗಳನು ನೆನೆನೆಂಬುರುಹಮುಖಿಯರು ತಾಳಿದರು ಕೃಷ್ಣಾತ್ಮಭಾವನೆಯ (ನಿಭಾಗ. ೧೦-೨೬-೨೪). [ ಸಂ. ]

**ನರ್ವಲ್** 'ನಜುವಲ್' ನೋ.

**ನರ್ವಾಳಿ** (ನಾ). ಒಂದು ಬಗೆಯ ಗಿಡ : ನರ್ವಾಳಿ, ಕಿರಿಚಳ್ಳಿ (ವ್ಯಜಿಗ. ೨೪-೪೫೪). [ ? ]

**ನರ್ಸ್**, ನರಸು, ನರ್ಸು (ನಾ). ರೋಗಿಗಳಿಗೆ ಆರೈಕೆಮಾಡುವ ದಾದಿ ; ದಾಯಿ : ನಮ್ಮ ಆಫೀಸಿನಲ್ಲಿ ಕಂಪೌಂಡರ್, ಅಕೌಂಟೆಂಟ್ . . . ನರ್ಸ್ ಕೂಡಾ ನಾನೇ ನಾನು (ಸೀತಾರ. ೯೩) ; ಗುಲಾಬಿಯಂಥ ಚಂದದ ನರ್ಸ್ ಇದ್ದಾಳಾದರೆ ಅವಳನ್ನಾದರೂ ನೋಡಿ ಕಾಯಿಲೆಯ ಜನ ಬಂದಾರಲ್ಲ ? (ಜಾರುದಾ. ೧೪೦). **ನರಸು**: 'ನರಸಮ್ಮ' ಪರಾ. **ನರ್ಸು**: ಓರ್ವ ನರ್ಸಿನ ಸಹಾಯದಿಂದ ಪರೀಕ್ಷೆ ನಡೆಯಿಸಿದ ಡಾಕ್ಟರು .... ಗಾಬರಿಯ ಧ್ವನಿಯಲ್ಲಿಯೇ ಹೇಳಿದರು (ಸಮುಜೀ. ೧೦೦೯). [ ← ಇಂ. Nurse ]

**ನರ್ಸು** 'ನರ್ಸ್' ನೋ.

**ನಲ್** (ಗು). ೧. ಒಳ್ಳೆಯ ; ಉತ್ತಮವಾದ ; ಶ್ರೇಷ್ಠವಾದ : "ನಲ್ಲಂದೊಳ್ಳಿತು"(ಜತಾನಿ. ೧೦೦). 'ನಲ್ಗುಣ', 'ನಲ್ಗುದುರೆ', 'ನಲ್ತಪ' ಪರಾ. ೨. ಅಂದವಾದ ; ಸೊಗಸಾದ ; ಮನಸೆಳೆಯುವ : "ನಲ್ನಯಕ್ಕೆ ಸಕವಮದು" (ಶಶರ. ೧೨೫). 'ನಲ್ಗಾಡಿ', ನಲ್ಚಪ್ಪನೆ', 'ನಲ್ವೆಣ್' ಪರಾ. ೩. ಹಿತವಾದ ; ಪ್ರಿಯವಾದ ; ಪ್ರೀತಿಯ. 'ನಲ್ನುಡಿ$_2$', 'ನಲ್ವರಕೆ', 'ನಲ್ವಾತು' ಪರಾ. ೪. ಸವಿಯಾದ ; ಮಧುರವಾದ. 'ನಲ್ಗಂಪು'. 'ನಲ್ಗಳಲ್', 'ನಲ್ಗುಟುಕು', 'ನಲ್ದುಂಬಿಲ', 'ನಲ್ಲಂಣಿಸು' ಪರಾ. ೫. ಹರಿತವಾದ ; ತೀಕ್ಷ್ಣವಾದ. 'ನಲ್ಲಂಬು' ಪರಾ. ೬. ಅತಿಶಯವಾದ ; ಹೆಚ್ಚಾದ. 'ನಲ್ಸೊಗ' ಪರಾ.

**ನಲ್ಲದು** = ಒಳ್ಳೆಯದು : ನಲ್ಲದು ನನ್ನುಮನ್ ನನ್ನೆಗ್ಗತನಮುಮನ್ ಬಿಟ್ಟು ಕಳೆಯೀಗಳ್ (ಅಂತಿಗೂ. ೫-೮೦). **ನಲ್ಲವರ್** = ಒಲಿದವರು ; **ನಲ್ಲರು** : ಅಂತೆ ಮಾತಾಡುವ ರಾಜಕೀರ ಒಲವಟ್ಟಿಸಲಾಣದಗಲ್ದು ಪೂವಿನಂಬಾಡೆ ಲತಾವನಂಬುಗುವ ನಲ್ಲವರಲ್ಲಿಯ ನಂದನಂಗಳೊಳ್ (ಎಇ. XIII, ೪೪-೪೬ ; 1112 ; ಶಾಶಮು. ೨೦೬ ನೋ). **ನಲ್ಲವಳ್** = ಪ್ರಿಯೆ ; **ನಲ್ಲೆ** : ಅಳುರ್ವತನುಸಂತಾಪಕ್ಕುಳ್ಳಿ ನಲ್ಲವಳಿಂಬುಕೆಯ್ದೆಳವಸಲೆಯಂ ಕೇಳೀಶೈಳಂಗಳಂ . . . ನೆಚಿಗೆಯ್ದಾಕುಳಮನೆ ಕುಳಿರ್ಕೊಡಿತ್ತಾಗಳ್ ಮನಂ ಮನುಜೇಂದ್ರನಾ (ವರ್ಧಪು. ೪-೬೨). **ನಲ್ಲಾತ** = ಸ್ವಾಮಿ; ಒಡೆಯ: ನಲ್ಲಾತಂ ಶ್ರೀಮತ್ ಸೋವಯ್ಯ (ಎಕ. XI, ಚಿತ್ರದು. ೪೯-೬೦ ; 947): ಅನೆವೆಡೆ(ಡ)ಙ್ಗಂ ಮದಗಜಮಲ್ಲಂ ಥಾಲಕೆ ನಲ್ಲಾತಂ ಶ್ರೀ ಕನ್ನರದೇವನ ರಾಜ್ಯಂ (ಇಇ. XII, ೨೫೭-೨; 951); ಯಸಕ್ಕೆ ನಲ್ಲಾತಂ ಶ್ರೀಕೊಟ್ಟಿಗದೇವನ ರಾಜ್ಯಂ (ಸೌಇಇ. XI-I, ೪೩-೪; 970) ; ಪರಬಳಧೂರ್ತ್ತಂ ಕೃತಯುಗ ಚರಿತನಾಳ್ಗೆ ನಲ್ಲಾತಂ (ಸೌಇಇ. XI-I, ೯೨-೭ ; 1054).

[ ದೇ.೩ ತಮಿ. ಮಲ. ನಲ್; ತುಳು. ನಲ್, ನಲು ;
ಕೊಡ. ನಲ್ಲ; ಗೊಂಡಿ. ನೆಲಾ ]

**ನಲ$_1$** (ನಾ). ೧. ನಲಿವು ; ಸಂತೋಷ. 'ನಲಂದಳೆ', 'ನಲವೆಚ್ಚು' ಪರಾ. ೨. ಪ್ರೀತಿ ; ಮಮತೆ. 'ನಲವರಕೆ' ಪರಾ.

[ ದೇ.೩ ತಮಿ. ನಲ; ಮಲ. ನಲ = ಒಳ್ಳೆಯತನ, ಸೌಂದರ್ಯ;
ತುಳು. ನಲ = ಒಳ್ಳೆಯ ]

**ನಲ$_2$**, ನಳ$_1$ (ನಾ). ೧. ಒಂದು ಬಗೆಯ ಜೊಂಡು,- ಹುಲ್ಲು ; ಲಾಳದ ಕಡ್ಡಿ ಹುಲ್ಲು. ೨. ಕಂಪು; ವಾಸನೆ. ೩. ನಿಷಧದೇಶದ ಒಬ್ಬ ಪ್ರಸಿದ್ಧ ರಾಜ; ವೀರಸೇನನ ಮಗ; ದಮಯಂತಿಯ ಗಂಡ. ೪. ರಾಮಾಯಣದಲ್ಲಿ ಒಬ್ಬ ಕಪಿನಾಯಕನ ಹೆಸರು ; ಸುಗ್ರೀವನ ಸೇನಾಪತಿ. ೫. ಅರುವತ್ತು ಸಂವತ್ಸರಗಳಲ್ಲಿ ಐವತ್ತನೆಯದು. **ನಳ$_1$** : ೩. ಹರಿಶ್ಚಂದ್ರ ನಳ ಪುರು . . . ಚಕ್ರವರ್ತಿಗಳಕ್ಕವರ್ಗೆ ಪುಣ್ಯಶ್ಲೋಕರೆಂಬ ನಾಮಂ (ಮಂಗರಾ. ೭೮-೨); ನಳನ ನಹುಷನ ಶಾಲಿಹೋತ್ರನ ಬಲುಮೆಗಳ ಕೆಚಿದೆಂಬ . . . ಹಯಪ್ರೌಢಪ್ರತಾಪರು ಹೊಳೆವ ಮಕುಟದ ಸಾಲುಗಳ ಲೊಪ್ಪಿದರು ರಾವುತರು (ಕುವ್ಯಾಉ. ೮-೪೧) ; ಏತಡಾಯಾಸವಿವು ಜಗದ್ವಿಖ್ಯಾತನಲ್ಲಾ ರಾಯರಲ್ಲಿ ನಳನಾತಗಾದಾಪತ್ತು ಬಲ್ಲೆ ಕೇಳಿ ಪೂರ್ವದಲಿ (ತೊರರಾ. ೩-೨-೧೩). ೪. ಒದೆದ ಕೆಡಹಿದ ನಳನ ಮೈಂದನ ಸದೆದ ನೀಲನ ತುಳಿದ (ಕೌಶಿರಾ. ೨೫-೨೨); ಇಟ್ಟ ಗಿರಿಗಳ ಹಿಡಿಹಿಡಿದು ನಳನೊಟ್ಟಿದನು ಮೆಟ್ಟಿದನು ಕಟ್ಟಿದನಿಟ್ಟಣಿಸಿ ಬಹ ಗಿರಿಯನಾ ಬಳಿಸಲಿಸಿ ಬಹ ಗಿರಿಯ (ತೊರರಾ. ೬-೫-೨೨) ; ನಳ ನೀಲ ಅಂಗದ ಜಾಂಬವಂತ ದಳಪತಿಯಧಿಕ ಸುಗ್ರೀವ ಬಲವಂತ (ಪುರಂದ. ೩-೮೭-೫). ೫. ಮತ್ತಮಾ ವರುಷವೇ ಪ್ರಭವ . . . ನಳ . . . ಅಕ್ಷಯವೆಂದೆಡುವತ್ತು ತೆಜನಾಗಿಹುದು (ವಿವೇಕ. ೩೨೦). ೬. ಒಂದು ಬಗೆಯ ವಿಮಾನ ; ಕಿರುವಿಮಾನ : ಬಕ ಮರಾಳ ರಥಾಂಗ ಸಾರಸನಿಕರ ಪುಳಿನಸ್ಥಳದೊಳಿರೆ ನಳವಮಕರನಕ್ರಜಳಳೂಕ ಮಡುಗಡಲೊಳಗೆ ಸಂಚರಿಸೆ (ಅಕ್ರೂಚ. ೫-೨೬). 'ನಳವಿಮಾನ' ಪರಾ. ೭. [ ಜ್ಯೋತಿ] ಒಂದು ಬಗೆಯ ಯೋಗ. 'ನಳಯೋಗ' ಪರಾ. [ ಸಂ. ]

**ನಲಂದಳೆ** (ಕ್ರಿ). ಸಂತೋಷಪಡು ; ಸಡಗರಿಸು ; ಸಂಭ್ರಮಿಸು : ಅಕಂಪನೃಪಂ ಅಲಘುಪ್ರಿಯದಿಂದಿದಿರ್ವಂದು ನಲಂದಳೆದು ಪೊಳಲನೆಯ್ದಿಸಿ . . . ಸಕಲಸನ್ಮಾನಂ ಮಾಡಿದನು (ಜಯುಕಾ. ೪-೪೩). [ ನಲ$_1$ + ತಳೆ$_1$]

**ನಲಕ**, ನಳಕ (ನಾ). ೧. ದೇಹದ ಉದ್ದವಾದ ಎಲುಬು,- ಮೂಳೆ. ೨. ಕೈಯ ಅಥವಾ ಕಾಲಿನ ಎಲುಬು ; ಶಾಖಾಸ್ಥಿ. **ನಳಕ** : ೨. "ಕೆಯ್ಯ ಕಾಲ ಎಲ್ವು ನಳಕಯೆಂಬುದು" (ಹಲಾಯು. ೧೧೯-೧೨) ; "ನಳಕಮೆನೆ ಶಾಖಾಸ್ಥಿಯೆಂದೆನಲು ಕೈಕಾಲ ಯೆಲುವು" (ಮಂಗರಾ. ೧೧೭-೬). [ ಸಂ. ]

**ನಲಕುಪ್ಪು** (ನಾ). (?) : ಮೃಗಶಿರೆ ನಲಕುಪ್ಪಿನ ಹಾಗೆ ೩ ಆದ್ರೆ ಹವಳದ ಹಾಗೆ ೧ (ಭಾಸ್ಕರ. ೬೦-೨). [ ? ]

**ನಲಕೂಬರ**, ನಳಕೂಬರ (ನಾ). ಕುಬೇರನ ಮಗ. **ನಳಕೂಬರ**: ವೆಜತೇನುಮಂ ಬಗೆಯದೆ ನಳಕೂಬರನೊಳ್ ಕೂಡಿ ಸುಖಮಿರೆಂದಾಕೆಯ ದುಷ್ಪರಿಣಾಮಮುಮಂ ಪತ್ತುವಿಡಿಸಿ (ಪಂರಾಮಾ. ೧೧-೧೯೫ ವ) ; ಸುರರಮಣ ನಳಕೂಬರಾಧಿಕಸರಸಕಾಮುಕರಂ ಸಮುಸ್ತಾಮರರನೆಲ್ಲರ ಬಗೆಯದನಿಮಿಷ ಸತಿಯರು ಸಹಸ್ರ ನೆರೆದು ನಿನ್ನಂ . . . ಮನಸಿಜಸುಖಾಮೃತಶರನಿಧಿಯೊಳೋಲಾಡಿಸುತ್ತಿರಲ್ (ಬಸಪು. ೪೧-೧೪) ; ಉರ್ವ ನಳಕೂಬರ ಜಯಂತಾದಿ ಸುರತನುಜರುರ್ವರೆಗದೇಕೆ ಬಹರು (ಕೃಮಿಭಾ. ೩೦-೨೦).

[ ಸಂ. ]

**ನಲಕೆ** (ನಾ). ಒಂದು ಬಗೆಯ ಸುಗಂಧದ್ರವ್ಯ: (೩). [<ಸಂ. ನಲಿಕಾ]

**ನಲಗು** 'ನಲುಗು$_1$' ನೋ.

**ನಲದ** (ನಾ). ಲಾಮಂಚ ; ಉಶೀರ. [ ಸಂ. ]

**ನಲಭರಿತ** (ನಾ). ನಲಿವಿನಿಂದ ಕೂಡಿದುದು ; ಸಂತೋಷಭರಿತವಾದುದು ; ಸುಖಮಯವಾದುದು : ಅರರೆ ನೆಲ ನಲಭರಿತವಮೃತದ ಶರಧಿ ಸಾವಿರವಪ್ಪುವಂಗಡಿ ಮೆಚಿವ ಗಣಿಕಾಭವನ ಕೋಟೆಯ ಸುತ್ತಲುದ್ಯಾನ (ಕೌಶಿರಾ. ೧-೨೩). [ ನಲ$_1$ + ಭರಿತ ]

**ನಲವಿಮಾನ**, ನಳವಿಮಾನ (ನಾ). ಒಂದು ಬಗೆಯ ವಿಮಾನ ; ಚಿಲಿಚಿಪ : "ನಲವಿಮಾನ ಚಿಲಿಚಿಪ ಎಂದೊಡೆ ಸಿಸಿಲು, ಚಿಳಿಯ ವಿಮಾನೆಂದು ಎಂಬರು" (ನಾಚಿರಾ. ೩). **ನಳವಿಮಾನ**: "ನಳವಿಮಾನಃ, ಚಿಳಿಚಿಮಃ-ಈ ೨ ಕಿಱುವಿಮಾನ್" (ಹಲಾಯು. ೧೧೪-೩೬) ; "ಚಿಳಿಚಿಮವೆನಲು ನಳವಿಮಾನವೆನೆ ಕಿಱುಮಾನ ಪೆಸರೆನಿಕ್ಕುಂ" (ಮಂಗರಾ. ೧೨೦-೬). [ ಸಂ. ]

**ನಲವತ್ತು** 'ನಾಲ್ವತ್ತು' ನೋ.

**ನಲವರಕೆ** (ನಾ). ಪ್ರೀತಿಯಿಂದ ಮಾಡಿದ ಆಶೀರ್ವಾದ : ಅರಸಿ ನಲವರಕೆಯಿಂದಂ ಪರಸುತ್ತಿಂದೆನ್ನ ತಂದೆ ಬಂದನೆನುತ್ತಂ (ಕಾದಂಪೂ. ೪೯೯೩; ಕುಮಾರನನಜಿತಸೇನಮಹಾದೇವಿ ನಲವ[ಪಾಠಾಂ. ನಲ್ವ]ರಕೆಯಂ ಪರಸಿ

ಮೋಹರಸಪರವಶತೆಯಿಂ . . . ಅಪ್ಪಿ (ಚಂದ್ರಪ್ರ. ೬-೫೦ ವ) ; ನಿಜಾಂಘ್ರಿಗಳನರ್ಚಿಸುವ ಕನ್ಯಾರತ್ನಮಂ ನಿಜಕುಲಕ್ಕಿದುವೆ ಚೂಡಾರತ್ನಮೆಂದು ನೋಡಿ ಪಾರಯ್ಸಿ ಪಲವುಂ ನಲವ[ಪಾಠಾಂ. ಪಲವಂ ನಲ್ವ]ರಕೆಯಂ ಪರಸಿ (ವರ್ಧಪು. ೫-೪೭ ವ) ; ನಿಜಜನನೀಜನಕರಿರ್ವೆಡೆಗೆ ರಮಣಿವೆರಸೇಳ್ತಂದು ಪೊಡಮಟ್ಟು ನಿಂದಾಗಳ್ . . . ಇರ್ವರುಂ ನಲವರಕೆಯಿತ್ತು ಪರಿತೋಷದಿಂ ಬರಿಸಿ ಕುಳ್ಳಿರಿಸಿ (ರಾಜಶೇ. ೯-೪೨ ವ) ; ನಲವರಕೆಯಿತ್ತು ಸಂತೋಷದಿಂ ನಡೆ ನೋಡಿ ನಲಿದು (ಕುಮಾರಪು. ೭-೨೦೪). [ ನಲ್$_1$ + ಪರಕೆ$_1$ ]

**ನಲವರಿ** (ಕ್ರಿ). ಸಂತೋಷಗೊಳ್ಳು ; ಆನಂದಿಸು : ಭರದಿಂ ತಲೆಯೆತ್ತಿ ಯುರ್ಬಿ ನಭಮಂ ನುಂಗಲೊಡರ್ಚಿದಂತೆ ಮೇಘಮಂ ನೋಡಿ ದೆಸೆದೆಸೆಯಂ ಪಾಸಿಸಿ ನಲವರಿದು ಪ್ರಾಣಿಗಳೊಳ್ ತನಗದಿರದಿದಿರಾಂಪರೊರ್ವರುಮಂ ಕಾಣದೆ (ಪಂಚತಂ. ೪೭-೭). 'ನಲಿವರಿ' ಪಠಾ.
[ ನಲ್$_1$ + ಪರಿ$_2$ ]

**ನಲವರಿಕೆ** (ನಾ). ಅಭಿನಂದನೆ: "ಅಭಿನಂದಿಸುವುದು . . . ನಲವರಿಕೆ" (Congratulation. ಇಂಕನಿ) ; ಈಗೆಲ್ಲರೂ ನಲವರಿಕೆ ಸಲ್ಲಿಪರು (ಮೂರುನಾ. ೧೧೮-೬೫೦). [ ನಲವು + ಅರಿಕೆ (<ಅಱಿಕೆ) ]

**ನಲವಾನ್** (ಕ್ರಿ). ಸಂತೋಷವನ್ನು ತಳೆ ; ಆನಂದಿಸು ; ಪ್ರಸನ್ನಚಿತ್ತನಾಗು : ಏಂ ತಾಳ್ದುದೋ ಚೆಲ್ವನೀ ದೇಶಮೆಂದು ನಲವಾಂತು ಮುಂದಳೆಯುತಿರೆ (ಜೈಮಿಭಾ. ೩-೧೩). [ ನಲವು + ಆನ್$_1$ ]

**ನಲವು** (ನಾ). ೧. ಹಿಗ್ಗು ; ಸಂತೋಷ ; ಸಡಗರ : "ನಲವೆಂದೆನೆ ಸಂತೋಷಂ" (ಭಾರನಿ. ೩೩); ನಲವಿಂ ಕೃತಾರ್ಥಭಾವವನೆಯ್ದುತಿರೆ ಕಂಡು ಚಲಿಸದದಿರದೆ ಬೆನ್ನನೊಡ್ಡಿಕೊಂಡಿರೆ ಕಂಡು (ಸೇದಿರ. ದೇ. ೭೪-೧೩) : ಕೊಬ್ಬಿ ನಲವಿಂದೆ ಮಡಲಿಱಿದಡಸಿ ಬೆಳೆದು (ಸಿದ್ಧರಾ. ೨-೩೩) ; ನಲವಿಂ ಪಂದಿಯು ಬೇಂಟೆಯಾಡಿ (ಉದ್ಭಟ. ೨-೬೫) ; ನೆರೆದೋಲಗಂ ನಲವು ಕೈಮಿಗೆ ತನ್ನನೆ ನೋಡುತಿರ್ದಿನಂ (ಕಬ್ಬಿಕಾ. ೮೨) ; ಫಲವ ತಲೆಯಲಿ ಹೊತ್ತು ಬೇಗದಿ ನಲವು ಮಿಗೆ ನಡೆತಂದು (ಕುವ್ಯಾ.ಆ. ಓರಿಇ. ೪-೧೭) ; ಪರಿಮಳದಲರ ಪನ್ನೀರಿನಲಿ ತವಕದಿ ನಲವು ಇಂಗಿದ ಸತಿಯನುಪಚರಿಸಿದರು ಪಲತೆಱದಿ (ನಳಚ. ೦-೩೯) ; ಅರ್ಥಲಾಲಿತ್ಯವೆನುವ ಸತೀತ್ವವಿರದೊಡನು ಗೊಳಿಸುವಳೆ ಕವಿತಾರಮಣಿ ರಸಿಕನಿಗೆ ನಲವು ? (ಗೀವಿಂ. ೨೨-೨೪). ೨. ಪ್ರೀತಿ ; ಆದರ : ಸಿರಿ ನಲವಿಂದಮಿರ್ಪ ನೆಲೆ ಕಣ್ಗಳ ಪರ್ವಮೆನಿಪ್ಪ ಪಂಕಜೋತ್ಕರಮುಮನಿಂದುಮಂಡಲಮುಮಂ ಮೊದಲೊಳ್ ಸಮೆದ ಬ್ಜಜಂ ಮನೋಹರಮೆನೆ ಮಾಡಿದೀ ಮೊಗದ ಪೋಲ್ವೆಗೆ ಮುನ್ನೆಗಟಲ್ ತಗುಳ್ಚಿ ಬಿತ್ತರಿಸಿದಂ (ಕಾದಂಪೂ. ೭೪೩) ; ಸಕಲಬುಧಸಮಿತಿ ನೆಱೆ ಕೊಂಡುಕೊನೆಮ ನಲವಿಂದೆ ಕೀರ್ತಿಸುತ್ತಿರೆ ಮುದದಿಂ . . . ಕಾವ್ಯಾವಲೋಕಮಂ ವಿರಚಿಸುವೆಂ (ಕಾವ್ಯಾವ. ೩) ; ಯತಿಪಸಮಂತಭದ್ರನನಿಳಾ(ವಳಯಂ) ನಲವಿಂದೆ ಕೀರ್ತಿಕುಂ (ವರ್ಧಪು. ೧-೧೨) ; ನಲ್ಲನ ನಲವಿಂ ನಡೆ ನೋಡಿ (ಉದ್ಭಟ. ೨-೭೭) ; ಕಂದುಮೋಱಿಯ ರಾಯನನು . . . ಆಲಿಂಗಿಸುತ ನಲವಿಂದ ಮನ್ನಿಸಿ ತಂದನರಮನೆಗುಚಿತವಚನದಲಿ(ಕುವ್ಯಾಭೀ. ೧-೧೭). ೩. ಚೆಲುವು; ಸೌಂದರ್ಯ ; ಮನೋಹರತೆ : ಸುಲಲಿತವಹ ನಾನಾವರ್ಣಾಜ್ಞರ ಪಲವಿಧವಾಂತ ಕೇರಿಗಳು ನಲವಿಂದ ಮೆಱೆದಿಹುವು (ಕಂನವಿ. ೨-೭೪). [ ನಲ್$_1$ + – ವು./ತಮಿ. ನಲವು; ತೆಲು. ನಲುವು ]

**ನಲವುಗೆಡು** (ಕ್ರಿ). ಸಂತೋಷಗುಂದು ; ಹಿಗ್ಗು ಇಲ್ಲವಾಗು : ಎನ್ನೋಪಳಾ ಕಂದಿದೊಂದಿರವಾ ಚಿಂತಿಸುವಂದವಾ ನಲವುಗೆಟ್ಟಾಕಾರವಾ ಬಾಷ್ಪದೊಳ್ ಪೊರೆದಾಲೋಕನವಾ ಬಟಲ್ದಧರವಾ ಸುಯ್ವೊಂದು ಪಾಂಗಾ ಸ್ಮರಾತುರಮಂ ತಾಳ್ದುವ ಭಂಗಿ ಪಿಂಗಿರದದೇಂ ಬೆಚ್ಚತ್ತೊ ಮಚ್ಚಿತ್ತದೊಳ್ (ಜಗವಿ. ೦೬-೧೩೦) ; ಮುಂದುಗೆಟ್ಟಿರ್ದೆಯ ಗುಂಡಿಗೆಗಳೊಡೆದರೆಬರಾಚರಿಸಿದರ್ ನಡುಗಿದರ್ ನಲವುಗೆಟ್ಟಸಿಬರು (ಚಬಪು. ೩೦-೩೭). [ನಲವು+ಕೆಡು$_1$]

**ನಲವುದಾಳು** (ಕ್ರಿ). ಸಂತೋಷವನ್ನು ತಾಳು ; ಪ್ರಸನ್ನತೆಯನ್ನು ಹೊಂದು : ಭೂಸುರರಿಗೆ ನಿತ್ಯದಾನವ ಮಾಡಿ ನಲವುದಾಳಿದ ಭೂಮಿಪಾಲ (ಕಂನವಿ. ೨೨-೭೭). [ ನಲವು + ತಾಳು$_1$ (<ತಾಳ್$_1$) ]

**ನಲವುಮತ್ತು** (ನಾ). ಆನಂದದ ಅಮಲು ; ಸಂತೋಷದ ಗುಂಗು : ವರವನಿತ್ತು ನಲವುಮತ್ತು ನಮಗೆಂದಿಗು ಇರೆ ಹರಸೈ ಗೋಕುಲಾನಂದನಾ (ಗೋಕುನಿ. ೩೨). [ ನಲವು + ಮತ್ತು$_1$ ]

**ನಲವೆ** (ನಾ). ಸಂತೋಷಚಿತ್ತೆ ; ಹರ್ಷಿತೆ : ನುಣ್ದಾನಿಯ ನೂತನೆ ಭಾಳದ ಭಾಮಿನಿ . . . ನಗೆಗಣ್ಣಳ ನಲವೆ ನಾಸಿಕದ ನೀಱೆ (ಉದ್ಭಟ. ೫-೫೩ ವ).
[ ನಲವು + – ಎ$_3$ ]

**ನಲವೆಚ್ಚು** (ಕ್ರಿ). ಹಿಗ್ಗು ಹೆಚ್ಚು ; ಸಂತೋಷವು ಅಧಿಕವಾಗು : ಶಬರಿ ಮುದದಿಂ ಗಾಢಪರಿರಂಭಣಂಗೆಯ್ದು . . . ಬೇಂಟೆಯಂ ನೋಡುತ್ತ ನಲವೆಚ್ಚುತಂ ಪೋದಳು (ರಾಘಚ. ೧೭-೭೦).
[ ನಲ್$_1$ + ಪೆಚ್ಚು$_1$ (<ಪೆರ್ಚು$_1$) ]

**ನಲವೆರೆ** (ಕ್ರಿ). ಪ್ರೀತಿಯನ್ನು ಸುರಿಸು ; ಮಮತೆಯನ್ನು ತೋರು : ಶಿವದ ನೆಲೆಯನು ಬಲ್ಲ ವಿಪುಲಮತಿಗಳ ತಡೆದ ಧ್ಯಾನಬಿಂಬ, ನೆನೆದೊಡನೆ ಕೊಳೆ ತೊಳೆದು ನಲವೆರೆದು ನಿಲ್ಲನ್ನ ಮನದ ತುಂಬ (ಮಲೆದೇ. ೪೦-೧೧).
[ ನಲವು + ಎರೆ$_1$ (<ಎಱೆ$_1$) ]

**ನಲವೇರು** 'ನಲವೇಱು' ನೋ.

**ನಲವೇಱಿಸು** (ಕ್ರಿ). ಸಂತೋಷವನ್ನು ಹೆಚ್ಚಿಸು ; ಹರ್ಷಗೊಳಿಸು : ಕಂದಾವರೆಗಳ ಮುಗಿಸುತ ಚಾಳಕವೃಂದವ ನಲವೇರಿ[ಱಿ]ಸುತ ಚಂದ್ರಕಾಂತವ ಕರಗಿಸುತಾಗ ಪರಿಪೂರ್ಣೇಂದುವದನೆಯರೈದಿದರು (ಕಂನವಿ. ೨೦-೭೭). [ ನಲವು + ಏಱಿಸು ]

**ನಲವೇಱು, ನಲವೇರು**(ಕ್ರಿ). ಅಧಿಕವಾದ ಸಂತೋಷವನ್ನು ಹೊಂದು : ಉದಯಾಗಿರೀಂದ್ರಮಾನಿನನೇಱಿ ಸರೋಜಸಮಿತಿ ನಲ[ಪಾಠಾಂ. ಯು]ವೇಱುವ ಪೊಲ್ (ಚಂದ್ರಪ್ರ. ೭-೨) ; ಹೊಸಪರಿಯ ಬಿರಿಮುಗುಳ್ಗಳಿರೆ ಬೀಗಿ ನಲವೇಱಿ ಮಲ್ಲಿಗೆಯರಳ್ಗಳಂ ಮನವಾರೆ ತಿಱಿಯುತಂ (ಪುಷ್ಪರ. ಹ. ೫೨೪-೧೮) ; ಅಗಲದೆ ನೋಡಿನೋಡಿ ನಲವೇಱುವ ದೇವಿಯ ಭೂಪಚಕ್ರಿಯಾ ಸೊಗಯಿಪ ದೃಕ್ಚಕೋರಚಯಸೇವೆಗೆ ಮೆಚ್ಚಿ (ಕುಸುಮಾ. ೬-೧೫೩) ; ದೇಗುಲಕೆ ನಲವೇಱಿ ನಡೆತಪ್ಪಾಗ (ಬಸಪು. ೨೭-೭) ; ದಶರಥನಂದನರ ನಿರೀಕ್ಷಿಸುತ ನಲವೇಱಿದನು ಕಲಿಹನುಮ (ತೊರರಾ. ೬-೩೦-೧೭). **ನಲವೇರು** : ತೆಂಗಿನ ಗರಿ ತಲೆದೂಗಲಿ ಬಾಗಲಿ ಗಿಡಮರಗಳು ಸಹ ನಲವೇರಿ (ಕಪಪು. ೬-೧೪೯). [ ನಲವು + ಏಱು$_1$ (<ಏಱ್$_1$) ]

**ನಲಾವು** 'ನಲ್ಲಾವು' ನೋ.

**ನಲಿ$_1$** (ಕ್ರಿ). ೧. ಕುಣಿ ; ನೃತ್ಯ ಮಾಡು : ಸುತ್ತಲುಂ ಪರಿವ ಜರಿವೊನಲ್ಗಳಿಂದೆತ್ತಲುಂ ನಲಿವ ಪೊಸನವಿಲ್ಗಳಿಂ (ಪಂಪಭಾ. ೩-೨೨) ; ನಡುವಿರುಳವರ್ ನಾಟಕಂ ನಲಿದು ಮಱೆದೊಱಗಿರ್ದ ಸಮಯದೊಳ್ (ಪಂಚತಂ. ೨೭೪-೧) ; ಸರ್ವಾಂಗಸುಂದರಿ ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಲೀರಂಗದೊಳ್ (ಪಂರಾಮಾ. ೧-೭). ೨. ಹಿಗ್ಗು ; ಸಂತೋಷಪಡು ; ಆನಂದಿಸು ; ಉಲ್ಲಾಸಗೊಳ್ಳು : ತಾಮರೆಯರಲೊಳ್ ಸರಸನಿಜಾಮೋದದೊಳೊಂದಿ ನಲಿದು ಮಕರಂದರಜೋವ್ಯಾಮುಗ್ಧದೊಳೀ ಮುಂಗುಳೊಳವಾ ಮಾಟ್ಕೆಯನಱಿಸಿ ಸುಱಿವುದಳಿ ಕಿಲಕಿಲದೊಳ್ (ಕವಿರಾ. ೩-೧೫೭) ; ಮೆಯ್ವೆರ್ಚಿ ತನ್ನಿನಿಯಂ ಬಂದೊಡೆ ನಲ್ಲಳೇಂ ನಲಿದಳೊ ನಾನಾವಿಳಾಸಂಗಳಿಂ (ಆದಿಪು. ೧೨-೪೩) ; ಗಗನತಳಮೆ ಪಱಿದು ಬಿಟ್ಟುದೆನಿಪ ಬಹುಂತಟಾಕದಿಂ ಕುಕಿಲ್ವ ನಲಿವ ಕೋಕದಿಂ (ಪಂಪಭಾ. ೧-೫೦); ದೀನವೃದ್ಧದ್ವಿಜನಟಭಟಸಚ್ಚಕ್ರಯುಗ್ಮಂ ಸರುಗ್ಮಂ ನಲಿಯುತ್ತಂ ನೋಡೆ ತನ್ನಂ ಬೆಳಗುವನೆಳೆಯೊಳ್ಪೆಲ್ಲಲಾದಿತ್ಯದೇವಂ (ಸೌಇಇ. XI-i, ೪೫-೦೭ ; 980) ; ಅರರೆ ಇಂದ್ರಾಣಿಯರು ನಲಿದು

ಸೀಗುರಿಯಿಕ್ಕೆ (ಬಸರ. ೧-೧೩) ; ನಗುತ ನಲಿಯುತ್ತ ಹಾಡುತ್ತಾಡುತಾನಂದ ವೊಗೆಯುತಿರಲು (ಹಡಕಾ. ೬-೪೪) ; ಮರುಳ್ಗಳ ತಂಡಂ ನಲಿವಂತೆ ಕೊಂದಂ (ಉದ್ಭಟ. ೪-೮೪) ; ದುಶ್ಶಾಸನಂಗುಬ್ಬರಿಸೆ ರೋಮಾವಳಿ ವಿಕರ್ಣಾದಿಗಳ ಮಾನ ನಲಿಯೆ (ಕುವ್ಯಾ.ಕ. ೧-೩೦). ೩. ಸಂತೋಷದಿಂದ ಸುಳಿದಾಡು; ಲೀಲೆಯಿಂದ ಓಡಾಡು : ಖಚರೀಜನಾನನ ನವಾಂಭೋಜಂಗಳೊಳ್ ಕಂಪನೀಟ್ಕೊಳುತುಂ ನಂದನರಾಜಿಯೊಳ್ನಲಿಯುತುಂ ತದ್ರಾಜಹಂಸಂ ನಿರಾಕುಳಮಿಪ ಪಾಟ್ಕಿಗೆಂದೆ ಪೊಟ್ಟುಗಳೆವಂ ಸಂಸಾರ ಸಾರೋದಯಂ (ಆದಿಪು. ೧-೮೪) ; ಪೊಸಕೊಳಂಗಳೊಳೊಲಿದು ನಲಿವಂಚೆಯಿಕ್ಕೆಯಿಂ (ತಿರುಕ. ದೇ. ೧-೧೪) ; ಶಾರದೆಯೆ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ (ಕುವ್ಯಾ.ಆ. ೧-೩) ; ಹೊಱವೊಳಲ ರಮ್ಯೋದ್ಯಾನವೆಸೆದುದು . . . ನಲಿವ ಕಿನ್ನರಮಿಥುನದಲಿ ಮಿಗೆ ಗಳಹುವರಗಿಳಿವಿಂಡಿನಲಿ ಹೆಕ್ಕಳಿಪ ಕೋಗಿಲೆಗಳಲಿ (ತೊರರಾ. ೧-೯-೧೧) ; ತಾಯೆ . . . ನಲಿದೊಲಿದು ನರ್ತನಂಗೈಯೆನ್ನ ಜಿಹ್ವೆಯಲಿ (ಚಿತ್ರಾಂಗ. ೧-೯). ೪. ಮೆಚ್ಚು ; ಇಷ್ಟಪಡು ; ಒಲಿ : ದರ್ಪ್ಪ ವಿಷಯಂಗಳನೇಳಿಸಿ ಕಾಡಿಯಾಡಿ ಕಾಮಾರಿಯನರ್ಚ್ಚಿಸಲ್ಕೆ ನಲಿದಿರ್ಪ್ಪ ಮುನೀಶ್ವರನೀ ಧ್ರುವೇಶ್ವರ (ಸೌಇಇ. XI-1, ೯೬-೩೪ ; 1062) ; ಸಕಲಸೂರಿಗಳ ಪಾದಾರವಿಂದವ ನೆನೆದೀ ಕೃತಿಯನು ಮೇದಿನಿ ನಲಿಯೆ ಪೇಳುವೆನು (ಕಂನವಿ. ೧-೧೩) ; ಪೊಲುನೆಯ್ಕಿಸಿನ ಪೆಣಮನ್ ಮಣ್ ಮಾಡದಿರ್ಕ್ಕಾರುಮ್, ಅಱದಿರ್ಕೆ, ಅಱದೆ, ಪೊಱದೆ, ಬಯುಸಿ ಪಾರ್ದ್ದು, ನಲಿದೆಱಪ ಪರ್ದಿಂಗೆ ಸವಿಯೆರೆಯ ನಿಧಿಯಾಗೆ ಬಿಸುಟರ್ಕ್ಕೆ ಬಯಲೊಳ್ (ಅಂತಿಗೂ. ೩-೩೩). ೫. ತೂಗು ; ಅಲ್ಲಾಡು ; ಸಂಚಲವಾಗು : ಅಲರ್ಗಣ್ಗಳಮರ್ದುಗಂ ತೊದಳ್ನುಡಿಯ ತವಕಗಂ ನಲಿವ ಮೂಗಾಯ ನವನರ್ತನದ ಹಸನಿಗಂ (ಬಸರ. ೧-೧೩೦) ; ಶ್ರೀವಧು ಮುತ್ತಿನೆಕ್ಕಸರದಂತುರದೊಳ್ ನಲಿವಂತು ವಿಕ್ರಮಶ್ರೀವಧು ಬಾಹುಪೂರಕದ ಪೊಲ್ ಭುಜದೊಳ್ ನಲಿವಂತು . . . ಪಾಳಿಸಿದನುರ್ವ್ವರೆಯಂ ನರಸಿಂಹ ಭೂಭುಜಂ (ಎಕ. III, ಮಂಡ್ಯ. ೧೩೧-೧ ; 1235). ೬. ಸಂತೋಷದಿಂದ ಕೂಗು ; ಕುಕಿಲು : ಘಣಿಯುಂ ನವಿಲ್ಗಳುಂ ಪುರುಡಿಪ ಕಾಗೆಯುಂ ನಲಿವ ಕೋಗಿಲೆಯುಂ ತೊಱದೆಯ್ದೆ ವೈರಮಂ ನೆರೆದೊಡನಿರ್ದವು (ಧರ್ಮಾಮೃ. ೩-೯೦).

**ನಲಿನಲಿ** (ದ್ವಿರುಕ್ತಿ) : ಪಲರಂ ನಲಿನಲಿದಾಟಿಂದು ಕೊಂದವಂ ಯಮರಾಜಂ (ಅಜಿಪು. ೫೦-೩೬); ಕೆಲದ ಕೇರಿಯ ಸಕ್ಕಜದ ಮಕ್ಕಳೊಡನೊಕ್ಕಲಿಕ್ಕಿ ನಲಿನಲಿದು ನರ್ತಿಸುತ್ತಿರಲ್ (ನಂಬಿರ. ೩-೧೪) ; ನಲಿನಲಿದು ಹೆಚ್ಚಿ ಮೆಚ್ಚುತ್ತ . . . ಲಲನೆಯರು ನೃಪನ ಪದಯುಗಜಲರುಹದೊಳ್ ಮೆಯ್ಯನಿಕ್ಕೆ (ನನ್ನಜಾ. ೪-೩೦೫). **ನಲಿದಾಟ** = ಹಿಗ್ಗುವಿಕೆ ; ಸಂತೋಷಪಡುವಿಕೆ. **ನಲಿದಾಡಿಸು**= ಸಂತೋಷದಿಂದ ಕುಣಿದಾಡುವಂತೆ ಮಾಡು : ನಿಮ್ಮವರ ಮಾರ್ಗಣೆಗಳುಬ್ಬರಿಸಿದವು ಗಗನಾಂಗಣವ . . . ನಲಿದಾಡಿಸಿದವಾ ನಾರದಾದಿಗಳ (ತೊರರಾ. ೧-೧೧-೧೦) ; ಸೊಗಯಿಸುವ ಪರಶಿವ ನಲಿದಾಡಿಸುವ ರೂಢಿಯಲ್ಲೆಂದು ನೆಱೆ ನೊಂದು ಮಱುಗುವಳಜನ್ರುಮಾವಳು (ಪ್ರಮಿಘಾ. ೨೮-೧೮). **ನಲಿದಾಡು** = ೧. ಸಂತೋಷದಿಂದ ಆಟವಾಡು : ತಪ್ಪೊಡನೆ ನಲಿದಾಡುವ ಕಿಶೋರಕೇಸರಿಗಳಂ ಪಿಡಿದು ತೆಗೆವ ಕರಿಕಳಭಂಗಳುಮಂ (ಪಂಪಭಾ. ೧-೧೧೩ ವ) ; ಹರಿಣಂಗಳ್ ನಲಿದಾಡುತಿರ್ದುವು ಕರಂ ವ್ಯಾಘ್ರಂಗಳಂ ಪೊರ್ದಿ (ಸುಕುಮಾ. ೮-೬೧) ; ಜಳನಿಧಿಯಲ್ಲಿ ಪುಟ್ಟಿ ಜಲಜಾಕ್ಷನ ಪೇರುರಮೆಂಬ ತೊಟ್ಟಿಲೊಳ್ ಬಳೆದು ವಿಲಾಸದಿಂ ಜಲಜದೊಳ್ ನಲಿದಾಡಿ ಬಟಿಕ್ಕ ಯೌವನಂ ಮೊಳೆವುದುಮಾರುಮಂ ಬಗೆಯದಾ ನೃಪನೊಳ್ ಸಿರಿ ಕೂರ್ತು ಬಂದು ಕೋಮಳೆ ನೆರೆದಿರ್ದಳ್ (ಕಾವ್ಯಸಾ. ೩೦೭). ೨. ಬಹಳ ಹಿಗ್ಗು ; ತುಂಬ ಸಂತೋಷಪಡು : ನೆರೆ ಶುದ್ಧಾಂತಕಾಂತೆಯರ್ ನೆರೆದೊಸಗೆಯಂ ಮಾಡೆ ವೃದ್ಧಕಂಚುಕಿಗಳಂದವರೊಡನೆ ನಲಿದಾಡೆ (ಅಜಿಪು. ೪-೭೮ಗಳ) ; ಶಿರಿಕಂ ನಿಧಿವಡೆದೊಡೆಂತು ನಲಿದಾಡುಗುಮಂತಿರೆ ಜನಪದಾಬ್ಜಸೇವನೆ ದೊರೆಕೊಳೆ ಸಂಸಾರಿ ನಲಿವುದೊಲುಮಡೆ ಸುಖಮಂ (ಸಮಂಪ. ೧-೧೦೩) ; ಶರಣರ ಸಂಗದಲ್ಲಿ ನಲಿದಾಡು ಕಂಡೆಯಾ ಎಲೆ ಮನವೇ (ಮಹಾದೇ. ಬ. ೭೯-೧೯೩) ; ಭೋಯೆಂದಾಗಲರಸಂಚೆಗಳುಮಳಿವಿಂಡುಗಳು ನಲಿದಾಡೆ (ನಳಚ. ೧-೩೭). ೩. ಸಂತೋಷದಿಂದ ಕುಣಿದಾಡು,-ನೃತ್ಯಮಾಡು : ನಭದೊಳ್ ನಲಿದಾಡುವ ಸೋಗೆನವಿಲ್ಗಳ ಪಿಂಡುಗಳುಮಂ (ಪಂಪಕಂ. ೧೧೮-೧೧) ; ಆಡುವ ನಲಿದಾಡುವ ನಡೆ ನೋಡುವ ಕೊರಲಪ್ಪಿಕೊಳ್ವ . . . ಬಾಳಕ್ರೀಡೆಗಳಂ ನೋಡುತಿರ್ಪುದೊಂದಿರವಲ್ತೆ (ಸುಕುಮಾ. ೯-೧೧೧) ; ಹುಲಿ ನಲಿದು ನಿಲುಗಿಸಿ ಗೆಜ್ಜೆಗಟ್ಟಿ ನಲಿದಾಡಿತ್ತು (ಆದವ. ೧೫-೩೩) : ನಾರದನು ನಲಿದಾಡಿದನು ಗಗನದಲಿ (ತೊರರಾ. ೪-೧೩-೩೭) ; ನಲಿದಾಡೆ ಎನ್ನ ನಾಲಿಗೆ ಮೇಲೆ ಸರಸ್ವತಿದೇವಿ (ಪುರಂದ. ೧-೧೯೧ ಪಲ್ಲವಿ) ; ಲಕ್ಷ್ಮಿ ನನ್ನ ಮನೆಯಲ್ಲಿ ನಲಿದಾಡುತ್ತಿದ್ದಾಳೆ (ಕಂಬಹು. ೧೩೪); ಅವಳ ತಲೆಯಲ್ಲಿ ಹಿಂದಿನ ಎಷ್ಟೋ ಘಟನೆಗಳು ನಲಿದಾಡಿದವು (ಹಳ್ಳಹಾ. ೧೧೬). **ನಲಿನಲಿದಾಡು** = ೧. ಚಲಿಸಿ ಸುತ್ತು : ಆತನ ಮನೆಯ ಮುಂದೆ ನಭದೊಳ್ ನಲಿನಲಿದಾಡುವ ಜಂತ್ರದ ವಿಮಾನನೆಚ್ಚನುಮಾಕೆಗೆ ಗಂಡನಕ್ಕುಂ (ಪಂಪಭಾ. ೩-೩೩ ವ). ೨. ಬಹಳ ಸಂತೋಷಪಡು, -ಹಿಗ್ಗು : ಜಾಲಗಾಱನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಯ ಕೊಂದು ನಲಿನಲಿದಾಡುವ (ಮಹಾದೇ. ಬ. ೪೭-೧೦೯) ; ಆನಂದದಿಂದ ನಲಿನಲಿದಾಡುವೆ (ಬಸವ. ೩೭೭).

[ ದೇ.॥ ತುಳು. ಕೊಡ. ನಲಿ; ಕುರುಖ್. ನಲ್ನಾ ]

**ನಲಿ₂, ನಳಿ₄** (ನಾ). ಒಂದು ಬಗೆಯ ಸುಗಂಧ ದ್ರವ್ಯ : "ನಳಿಯೆಂಬ ಗಂಧ-ನಟಿ, ನಲಿ" (ನಾಚಿರಾ. ೬) ; "ಸುಷಿರಾ, ವಿದ್ರುಮಲತಾ, ಕಪೋತಾಂಘ್ರಿಃ, ನಟೀ, ನಲೀ, ಧಮನೀ, ಅಂಜನಕೇಶೀ – ೭ ನಳಿ ಎಂಬುವ ಗಂಧದ್ರವ್ಯದ ಹೆಸರುಗಳು ; ಗೂವಗುತ್ತಿಗೆ" (ಸಿದ್ಧಾಂತಿ. ೧೩೪). **ನಳಿ₄** : ಮೇಲಿನ ಪ್ರಯೋಗಗಳನ್ನು ನೋಡಿ. [ ಸಂ. ನಲೀ ]

**ನಲಿಗಚ್ಚು** 'ನಲಿಗರ್ಚು₂' ನೋ.

**ನಲಿಗರ್ಚು₁** (ಕ್ರಿ). ಪ್ರೀತಿಯಿಂದ ಕಚ್ಚು : ಆ ಶುಕಶಿಶುಪ್ರಕರಚಂಚೂಪುಟಸಂಚಯಮಂ ಚೂತಕಳಿಕಾಕುಳಮೆಂದು ನಲಿಗರ್ಚಲೆಂದಪ್ಪಳಿಪ ಕಲಕಂಠಜಾಲಕಂಗಳುಂ (ಸುಕುಮಾ. ೩-೭೦ ವ) ; ಕಳಿಕೆಗಳಂ ಪಿಕಾಳಿ ನಲವಿಂ ನಲಿಗರ್ಚುತಮುನ್ಮದಾಳಿಸಂಕುಳಮಲಗೋಂಚಲಂ ತು ಡು ಕು ತ ಂ ತನಿಪಣ್ಗಳ ಸಾರಮಂ ಶುಕಾವಳಿ . . . ಪೀರುತುಂ ವಿಳಸಿತ ಚುಂಬನಾಭಿನಯಮಂ ನೆಱೆ ತೋರ್ಪವೊಲಿರ್ದುದಾಮ್ರದೊಳ್ (ಸುಕುಮಾ. ೩-೮೯). [ ನಲಿ₁ + ಕರ್ಚು₁ ]

**ನಲಿಗರ್ಚು₂, ನಲಿಗಚ್ಚು** (ನಾ). ಪ್ರೀತಿಯಿಂದ ಕಚ್ಚಿದುದು ; ದಂತಕ್ಷತ : ನಲಿಗರ್ಚುಂ ನಖರೇಖೆಯುಂ . . . ಮೆಯ್ಯೊಳ್ಪೋಱ ರತಾಲಯಾಂಗಣದೊಳೊರ್ವಳ್ ಸೀಱ . . . ಸಿಂದಿರ್ದಳ್ (ಸೂಕ್ತಿಸು. ೧೯-೭೪). **ನಲಿಗಚ್ಚು** : ನಲಿಗಚ್ಚು ಕಚ್ಚಿ ಕಡಿಯಾಗಡೆಯೊಳನೆ ಸೀಳ್ದು ಸಿಱುಂಬಳಕಾಡದಂಟದೆ ನೆಱನೆಂದು ಭಾವದೊಳೆ ಬಳ್ಕುವ ಸೋಂಬೆಯನಿಕ್ಕು ಕಿಚ್ಚಿನೊಳ್ (ಸೂಕ್ತಿಸು. ೮-೪೩೪). [ < ನಲಿಗರ್ಚು₁ ]

**ನಲಿಗಱ** (ನಾ). ಪ್ರೀತಿಯಿಂದ ಕಚ್ಚಿದುದರ ಕಲೆ; ದಂತಕ್ಷತದ ಗುರುತು : ನಂಗಿಯುಗುಟ್ಟೊಲಿಯರ ದಶನಂಗಳ ನಲಿಗಱಗಳಲ್ಲದೆಳ್ಳಕ್ಕಿಳ್ಳಿಂಗವೆನೆ ಸಂದ ಸೊಬಗಿನ ಜಂಗಮಶಾಸನಮೆನಿಪ್ಪ ಸುರತವಿಳಾಸಂ (ಅನಂಪು. ೦-೫೯). 'ನಲಿಗರ್ಚು' ಪಾಠಾ. [ ನಲಿ₁ + ಕಱ₂ ]

**ನಲಿಗೆದಱು** (ಕ್ರಿ). ಸಂತೋಷದಿಂದ ಕೆದಕು,-ಬೆದಕು : ಕದಲೆಗದಿರನುರದಿನುರವಣಿಸಿ ನೆತ್ತಿಯಿಂ ಪೊತ್ತು ನೆಗೆದು ಚಂಚುವಿಂ ಚಲ್ಲಿಪೊಯ್ದು ನಖದಿಂ ನಲಿಗೆದಱಿ ಕೋಡಗಗಳಿನೀಡಿಯಾದು (ಅನಂಪು. ೭-೮೦ ವ).

[ ನಲಿ₁ + ಕೆದಱು₁ (< ಕೆದಱ₁) ]

**ನಲಿತ** (ನಾ). ನಲಿಯುವಿಕೆ ; ಕುಣಿದಾಟ : ಒಲೆತ, ಅಲೆತ, ನಲಿತವೊ ! ಎಲ್ಲಿ ಇದನು ಕಲಿತವೊ ? (ಸೂರ್ಯಪಾ. ೧೧೨-೧೧). [ ನಲಿ$_1$ + -ತ$_2$ ]

**ನಲಿನ,** ನಳಿನ (ನಾ). ೧. ತಾವರೆ; ಕಮಲ. ೨. ನೀರು ಹೂವು ; ಆವಲು. ೩. [ಜೈನ] ಕಾಲವನ್ನು ಅಳೆಯುವ ಒಂದು ಪ್ರಮಾಣ : ಇದೇ ರೀತಿ ಎಂಬತ್ತನಾಲ್ಕು ಮತ್ತು ಎಂಬತ್ತುನಾಲ್ಕುಲಕ್ಷ ಗಣಿತ ಕ್ರಮದಿಂದ ಕುಮುದಾಂಗ ಮತ್ತು ಕುಮುದ, ಪದ್ಮಾಂಗ ಮತ್ತು ಪದ್ಮ, ನಲಿನಾಂಗ ಮತ್ತು ನಲಿನ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಪ. ೩೦೬). **ನಳಿನ :** ೧. "ಸಹಸ್ರಪತ್ರಂ, ಶತಪತ್ರಂ . . . ಅಬ್ಜಂ, ನಳಿನಂ, ಪುಷ್ಕರಂ, ರಾಜೀವಂ, ಅರವಿಂದಂ, ಪದ್ಮಂ, ಪಂಕಜಂ–ಈ ೧೭ ತಾವರೆ" (ಹಲಾಯು. ೧೧೨-೫೭) ; ವಿಜೃಂಭಮಾಣ ನವನಳಿನಪರಿಕರಾಸ್ಕೃಷ್ಟಮಧುಕರ ರಮಣೀಯ . . . ಧರಾತಳಮನುತ್ಫುಲ್ಲ ಪಲ್ಲವ ಲೀಲಾಯಮಾನ ಮತ್ತ ಕೋಕಿಲೋಲ್ಲಾಸಿತ ಶೀತರೋದ್ದಾಮ ದುರ್ದಿನ ವನವಮನೆಯ್ದೆ ವಂದು (ಪಂಪಭಾ. ೫-೧೧ ವ) ; ಅವನತಕಾರಾತಿನೃಪ ಮಣಿಮಯ ಕಿರೀಟಪ್ರಭಾಲೀಢ ಚಳನನಳಿನಯುಗ್ಮಂ (ಸುಕುಮಾ. ೧-೭೯ ವ) ; ನಳಿನದ ಕರ್ಣಿಕೆಯೊತ್ತಿನೊಳ ಳವಡೆ ಕಣ್ಮುಚ್ಚಿ . . . ನಿದ್ರಾಸುಖದಿಂ ಕಳಹಂಸೆಯು ಮುಳಿಗಳಿರ್ಪುವು (೧೧೪. ೨-೫೫) ; ನಳಿನಂ ಕುಂದೆ . . . ಮೂಡಿದುದು ತೇಜೋಮಂದಿರಂ ಚಂದಿರಂ (ರಾಜಶೇ. ೧೧-೪೩). [ ಸಂ. ]

**ನಲಿನಗರ್ಭ,** ನಳಿನಗರ್ಭ (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ. 'ನಲಿನಗರ್ಭಾಂಡ' ಪರಾ. **ನಳಿನಗರ್ಭ :** 'ನಳಿನಗರ್ಭಾಂಡ' ಪರಾ.
[ ನಲಿನ + ಗರ್ಭ ]

**ನಲಿನಗರ್ಭಾಂಡ,** ನಳಿನಗರ್ಭಾಂಡ (ನಾ). ಬ್ರಹ್ಮಾಂಡ ; ವಿಶ್ವ : ನಲಿ[ಪಾಠಾಂ. ಳಿ]ನಗರ್ಭಾಂಡಂಗಳೆಂಬಗ್ಗಳದ ಘಟಂಗಳಶಾದಿಗಳೊಳಗೆಪಲತೆಜದ ಪಕ್ವಾನ್ನ ದಿವ್ಯಾನ್ನಂಗಳಂ ಶಿವಿ (ಬಸವು. ೮-೩೭). **ನಳಿನಗರ್ಭಾಂಡ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ ನಲಿನಗರ್ಭ + ಅಂಡ$_2$ ]

**ನಲಿನಜ,** ನಳಿನಜ (ನಾ). = ನಲಿನಗರ್ಭ. **ನಳಿನಜ :** ನಳಿನಜ ಹರಿ ವಾಸವ ನತಪದಪಂಕರುಹ ನವಿತ ಶುಭವಾಸಂ . . . ಗಳಲನೆ ಜಗದಂ ಸಲಹುಗೆ ಸಲೆ ತೋಂಟದ ಗುರು ನಿರುತವಿಲಾಸಂ (ಪಾಲಾಸ್ಕ. ೨-೧-೨). [ ಸಂ. ]

**ನಲಿನದಲ,** ನಳಿನದಳ (ನಾ). ೧. ತಾವರೆಯ ಎಸಳು ; ಕಮಲದ ದಳ. 'ನಲಿನದಲಲೋಚನ' ಪರಾ. **ನಳಿನದಳ :** ೧. 'ನಳಿನದಳಲೋಚನ' ಪರಾ. ೨. ಕಮಲದ ಎಲೆ: ನಳಿನದಳದೊಳ್ ತೀವಿರ್ದಬ್ಬೆಯು ತಳ್ತಲರ್ವಾಸು . . . ಪೂಗಂಪು ರಾಗದಲಂಪನಗ್ಗಳಿಸೆ (ಪುಷ್ಪಪು. ೨-೪೩). 'ನಳಿನದಳಪುಟ' ಪರಾ. [ ನಲಿನ + ದಲ ]

**ನಲಿನದಲಲೋಚನ,** ನಳಿನದಳಲೋಚನ (ನಾ). ತಾವರೆಯ ಎಸಳಿ ನಾಕಾರದ ಕಣ್ಣುಳ್ಳವನು ; ವಿಶಾಲಾಕ್ಷ ; ಕೃಷ್ಣ : ಸುಧನ್ವನ ಶಿರವ ನೆರಡುಕೈಗಳಿಂ ನಲಿನದಲ[ಪಾಠಾಂ. ನಳಿನದಳ]ಲೋಚನಂ ಪಿಡಿದೆತ್ತಿಕೊಂಡು ನೋಡಿನು (ಜೈಮಿಭಾ. ೧೩.೫೦). **ನಳಿನದಳಲೋಚನ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ನಲಿನದಲ + ಲೋಚನ ]

**ನಲಿನನಾಭ,** ನಳಿನನಾಭ (ನಾ). ಹೊಕ್ಕುಳಲ್ಲಿ ತಾವರೆಯುಳ್ಳವನು ; ಪದ್ಮನಾಭ ; ವಿಷ್ಣು : ನಲಿ[ಪಾಠಾಂ. ಳಿ]ನನಾಭನ ಮಗನ ಕೂರ್ಗಣೆಗಳ ನನುರಿಕಿ ತೊಳತೊಳಗುವವು . . . ವಿಶಾಲವಿಲೋಚನದ್ವಯವು (ಬಸವು. ೪-೨೭). **ನಳಿನನಾಭ :** ನಳಿನನಾಭನ ಮಧುರವಾಣೀಲುಳಿತಪರ ಮಾಶೀರ್ವಚನಪರಿಕಲಿತ ಕವಚಿತರಾಯ ಪಾಂಡವರಾಯ ಹೊಣವಂಟ (ಕುಮಾವ್ಯಾಭೀ. ೮ ೩) ; ನಳಿನನಾಭನ ನೀನು ಪಾಡೂ ಬೇಗ ಒಳಕಣ್ಣಿಂದ ಅವನ ಕಂಡು ನಲಿದಾಡೊ (ಪುರಂದ. ೨-೨೦೯ ಪಲ್ಲವಿ).
[ ಸಂ. (ನಲಿನ + ನಾಭಿ + -) ]

**ನಲಿನಬಾಂಧವ** (ನಾ). ತಾವರೆಯ ಮಿತ್ರ ; ಸೂರ್ಯ.
[ ನಲಿನ + ಬಾಂಧವ ]

**ನಲಿನಭವ,** ನಳಿನಭವ (ನಾ). = ನಲಿನಗರ್ಭ. 'ನಲಿನಭವಾಂಡ' ಪರಾ. **ನಳಿನಭವ:** ಆಕ್ಷಣ ನಳಿನಭವ ತಾನಂದು ಕೊಟ್ಟನು ಕಶ್ಯಪಾತ್ಮಜನೆಂದ ವರಗಳ (ಸಂಭಪು. ೮-೧೧) ; ಆ ನಳಿನಭವ ಶಂಕರರ ಸುಧ್ಯಾನವಾಯ್ತಾ ಸಕಲ ವಾನರಸೇನೆಗಿಂದ್ರಾದಿಗಳು ಸೇವಕರಾಯ್ತು ಪಯಣದಲಿ (ತೊರರಾ. ೬-೬-೯); ಹರಿಹರ ನಳಿನಭವರಾರಾಜ್ಞೆಯಿಂ ಲಯ ಸೃಷ್ಟಿಗೈಯುವರು (ಗಗಕಾ. ೧೨-೭೯). [ ಸಂ. ]

**ನಲಿನಭವಾಂಡ,** ನಳಿನಭವಾಂಡ (ನಾ). = ನಲಿನಗರ್ಭಾಂಡ : ಅವಿಭಕ್ತವಿನಲಿ[ಪಾಠಾಂ. ಳಿ]ನಭವಾಂಡನಿಚಯಮನುರೂಪುತುರವಣಿಸಿ ಕವಿದ ವಿಷಮಂ ನುಂಗಿದನು ಮಾಪ್ರವರನೆನಲು (ಬಸವು. ೦೩-೨). **ನಳಿನಭವಾಂಡ :** ರಾಘವನನುಜನಗ್ಗದ ಚಾಪವಸೌರ್ವೀನಿನದವನು ನೆಗಹಿದನು ನಳಿನಭವಾಂಡ ಗುಮ್ಮಿಡಲು (ತೊರರಾ. ೬-೪೩-೯). [ ನಲಿನಭವ + ಅಂಡ$_2$ ]

**ನಲಿನಮಿತ್ರ** (ನಾ). = ನಲಿನಬಾಂಧವ. [ ನಲಿನ + ಮಿತ್ರ ]

**ನಲಿನಮುಖಿ,** ನಳಿನಮುಖಿ (ನಾ). ಕಮಲದಂತೆ ಮುಖವುಳ್ಳವಳು ; ಚೆಲುವೆ : ತನ್ನನಿಯಮಂ ನೋಡಿ ನಲಿ[ಪಾಠಾಂ. ಳಿ]ನಮುಖಿ ನಗುತಂ (ಬಸವು. ೪೭-೨೩). **ನಳಿನಮುಖಿ :** ನಳಿನಮುಖಿಯರ ಸಕಲ ಸೃಷ್ಟಿಗೆ ಕಳಸವಿದು (ಕುಮಾವ್ಯಾಅ. ೧೩-೨೩) ; ಚೆಲುವೆಯೋರ್ವಳು ಒಂದು ಹೊಳೆಯೊಳಗೆ ಈಜಾಡಿ ನಲಿವುದನು ನೋಡಿ ನಳಿನಮುಖಿಯನು ಮೇಲೆ ಕರೆಸಲು (ಪುರಂದ. ೩-೦೫೦-೩). [ ಸಂ. ನಲಿನಮುಖೀ ]

**ನಲಿನಲೋಚನೆ,** ನಳಿನಲೋಚನೆ (ನಾ). ತಾವರೆಯೆಸಳಿನಂತೆ ಕಣ್ಣುಳ್ಳವಳು ; ಸುಂದರಿ : ನಲಿ[ಪಾಠಾಂ. ಳಿ]ನಲೋಚನೆಯನೊರ್ವಳನೊಸೆದು ವಿಂಗೆ ಕೊಟ್ಟ (ಬಸವು. ೨೫-೯). **ನಳಿನಲೋಚನೆ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ನಲಿನಲೋಚನಾ ]

**ನಲಿನವೈರಿ,** ನಳಿನವೈರಿ (ನಾ). ತಾವರೆಯ ಶತ್ರು ; ಚಂದ್ರ : (೬). **ನಳಿನವೈರಿ :** ನಳಿನವೈರಿಯ ಸುಳಿವು ತನ್ನಯ ಕೊಲೆಗೆ ಒಂದುದು (ಕುಮಾವ್ಯಾವಿ. ೨-೫೨). [ ನಲಿನ + ವೈರಿ ]

**ನಲಿನಸಂಭವ,** ನಳಿನಸಂಭವ (ನಾ). = ನಲಿನಗರ್ಭ : ನಲಿ[ಪಾಠಾಂ. ಳಿ]ನಸಂಭವಲಿಖಿತದುರ್ಲಿಪಿಗಳನೊರಸಿ (ಬಸವು. ೪೯-೬೨). **ನಳಿನಸಂಭವ :** ಕೃಪಾಳುವನೊಲಿದು ಹೊಗಳಿದನಜನು ವೇದಸಹಸ್ರಸೂಕ್ತದಲಿ ಬಳಿಕ ಕಾರುಣ್ಯದಲಿ ನಾಭೀನಳಿನದಲಿ ತೆಗೆದನು ವಿರಿಂಚಿಗೆ ನಳಿನಸಂಭವನೆಂಬು ಹೆಸರಾಯ್ತೆಂದು ಮೊದಲಾಗಿ (ಕುಮಾವ್ಯಾಅ. ೦೯-೩೦). [ ನಲಿನ + ಸಂಭವ ]

**ನಲಿನಸಖ,** ನಳಿನಸಖ (ನಾ). = ನಲಿನಬಾಂಧವ : ಘನಜನಿಭವನವದು ನಲಿ[ಪಾಠಾಂ. ಳಿ]ನಸಖನುದಯಕ್ಕೆ ಮುನ್ನವೆ ಗೋಡೆಗಳುವೆರಸಿ ನೆಲನ ಸರಿಸಕೆ ಬಿದ್ದು (ಬಸವು. ೫೨-೩೨). **ನಳಿನಸಖ :** ನಳಿನಸಖಕೋಟಿತೇಜವ ಮಿಾಜಿತೆಂಬವನ ಚರಣಾಂಬುಜಕ್ಕೆ ಶರಣು (ಲಕಿಚಂ. ೧೦-೭) ; ನಳಿನಸಖ ನಪರಾಂಬುರಾಶಿಯ ನಿಲುಕುತೈದನೆ ಹುಸಿದುದೀ ಮುನಿಬಳಗವಾರೋಗಣೆಗೆ ಚಿತ್ರವಿಸೆಂದ ಯಮಸೂನು (ಕುಮಾವ್ಯಾಅ. ೦೬-೪೭).
[ ಸಂ. (ನಲಿನ + ಸಖಿ + -) ]

**ನಲಿನಾಂಗ** (ನಾ). [ಜೈನ] ಕಾಲವನ್ನು ಅಳೆಯುವ ಒಂದು ಪ್ರಮಾಣ : ಇದೇ ರೀತಿ ಎಂಬತ್ತುನಾಲ್ಕು ಮತ್ತು ಎಂಬತ್ತುನಾಲ್ಕುಲಕ್ಷ ಗುಣಿತ ಕ್ರಮದಿಂದ ಕುಮುದಾಂಗ ಮತ್ತು ಕುಮುದ, ಪದ್ಮಾಂಗ ಮತ್ತು ಪದ್ಮ, ನಲಿನಾಂಗ ಮತ್ತು ನಲಿನ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಪ. ೩೦೬). [ ನಲಿನ + ಅಂಗ$_2$ ]

**ನಲಿನಾಕ್ಷ,** ನಳಿನಾಕ್ಷ (ನಾ). ೧. ತಾವರೆಯ ಎಸಳಿನಂಥ ಕಣ್ಣುಳ್ಳವನು ; ಚೆಲುವ ; ಸುಂದರ. ೨. ವಿಷ್ಣು ; ಕೃಷ್ಣ : (೬). **ನಳಿನಾಕ್ಷ :**

೨. ನಳಿನಾಕ್ಷನ ಪದಪದ್ಮತಿಗಳ ಬಟ್ಟಿಯೊಳಲಕ್ತಕಾಂಕ ಪದಪದ್ಮತಿಗಳ್ ಪೊಳೆವುವು (ಜಗವಿ. ೫-೨೬) ; ನಳಿನಾಕ್ಷ ನಿನ್ನ ಮಱಿಯ ಹೊಕ್ಕು ತಪಿಸಲು ಒಲಿದು ಧ್ರುವಗೆ ನಿಜಲೋಕವಿತ್ತವನು (ಪುರಂದ. ೩-೧೧೯-೩) ; ನಳಿನಾಕ್ಷನಿಲ್ಲ ದಧ್ವರಕುಪಕ್ರಮಿಸೆ ನಡೆಯದು (ಜೈಮಿಭಾ. ೨-೪೫).

[ಸಂ. (ನಲಿನ + ಅಕ್ಷಿ + –) ]

**ನಲಿನಿ, ನಳಿನಿ** (ನಾ). ೧. ತಾವರೆ ; ಕಮಲ. ೨. ತಾವರೆಗಳಿಂದ ತುಂಬಿರುವ ಕೊಳ ; ಕಮಲಗಳು ಹೆಚ್ಚಾಗಿ ಇರುವ ಸ್ಥಳ. ೩. ತಾವರೆಯ ದಂಟು,–ನಾಳ. **ನಳಿನಿ :** ೧. ನಳಿನಿಯ ಬಿರಿಮುಗುಳೊಳ್ಪೊಯ್ವ ಳಿಕಳಭಂ ಬೆಂಡು ನೆಗೆದು ಬಂಡುಣ್ಬವೊಲ್ . . . ಯಶೋದೆಯ ಮೊಲೆಯುಂಡಂ ನವತಮಾಲಕೃಷ್ಣಂ ಕೃಷ್ಣಂ (ಅರ್ಧನೇ. ೬-೫೫); ನಳಿನಿಯುಂನಪ್ಪಿ ತುಂಬಿಗುರುಳ್ ನೆಱೆ ನೇರ್ಪಡೆ ತಿರ್ದಿ . . . ಅದೇಂ ಸುಳಿದುದೊ ಮೆಲ್ಲನಾಳ್ದಪೊಲತಿ ಶ್ರಮಮಂ ವನಮಂದಮಾರುತಂ (ಕಬಕಂ. ೧-೫೬). ೨. ನಳಿನೀತೀರ ಲತಾಗೃಹಂಗಳ ನೆಟಲ್ ನೇರ್ಪಟ್ಟಿರಲ್ ಪಟ್ಟು . . ಪಥಾರ್ತರಿರ್ಪರ್ (ಜಗವಿ. ೯-೫೮). ೩. ನಳಿನಿಯ ನಳಿನಮನಿನನಾಕಳಿಪಂತಿರೆ ಕರದೆ ವಧುವ ಕರಮಂ ಕರದಿಂ ತಳೆದಂ ಕುಮಾರನಾದ್ರಾಂಗುಳಿದಳಕಂಟಕಿತಬಾಹುನಾಳಾನ್ವಿತಮಂ (ಚಂದ್ರಪು. ೬-೭೪). ೪. ತಾವರೆಯ ಗಡ್ಡೆ : "ಕಂದಃ, ಬಿಸಿನೀ, ನಳಿನೀ – ಈ ೩ ಅವಟ ಗೆಡ್ಡೆ" (ಚಲಾಯು. ೦೦೨-೬೦).

[ ಸಂ. ನಲಿನೀ ]

**ನಲಿನೀಮಿತ್ರ, ನಳಿನೀಮಿತ್ರ** (ನಾ). =ನಲಿನಬಾಂಧವ: ಸರೋಜಾಸನಂ ನಲಿ [ಪಾಠಾಂ. ೪]ನೀಮಿತ್ರ ಸುಪರ್ವರೆಂಬಿವು ವಿವಸ್ವಂತಾಹ್ವಯಂ (ಶಾನಾರ. ೦೦೦) . **ನಳಿನೀಮಿತ್ರ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ]

**ನಲಿಪ** (ನಾ). ಸಂತೋಷ ; ಆನಂದ ; ಉಲ್ಲಾಸ : ಕುಟುಕಿನಿಂದಾಹಾರಮಂ ಸ್ನಾನದಿಂ ನೆಲೆಯಂ ಕೂಟಮಂ ನಲಿಪದಿಂದಂ ನಲ್ಮೆಯಂ ಗೆಲ್ಲದಿಂ ಗೆಲವಂ . . . ಪೇಟಿಲ್ಲಿಯುಂ ತದ್ವಿದಂ (ಲೋಕೋಪ. ೧೨-೭). [ ನಲಿ$_1$ + –ಪ$_2$ ]

**ನಲಿಬಾಳು** (ನಾ). ಸುಖಮಯವಾದ ಜೀವನ ; ಸಂತೋಷದ ಬದುಕು : ಕಂಡೊರೆ ನುಂಗುವ ಜವನನ್ ಕಂಡರ್, ಈ ನಲಿಬಾಳನ್ ಕಡೆಬೀಳ್ಕೊಂಡರ್, ಬಯಲಾದರ್ (ಪಾರಸಿ. ೩೭-೫೩೪).

[ ನಲಿ$_2$ + ಬಾಳು$_2$ (<ಬಾಟ್$_2$) ]

**ನಲಿಯಿಸು, ನಲಿಸು** (ಕ್ರಿ). ೧. ಸಂತೋಷಗೊಳಿಸು ; ಉಲ್ಲಾಸಗೊಳಿಸು : ಆ ವಿಶ್ವೇಶ್ವರನ ಮನೋಮಧುಕರಮಂ ತಮ್ಮ ಮುಖಾರವಿಂದದೊಳ್ ನಲಿಯಿಸಿಯುಂ (ಅದಿಪು. ೮-೨೪ ವ); ಶ್ರೀಯೆರ್ದೆಗೊಂಡಿರೆ ಮುನ್ನಿಟಿದಾ ಯಳೆಯ ನೆಗಪಿ ದಾಡೆಯಿಂ ನಲಿಯಿಸಿದಾ ಮಾಯಾವರಾಹನಖಿಲಶ್ರೀಯುಮ ನೊಲ್ದೀಗೆ ವೀರನರಪತಿಗೀಗಳ್ (ಜಗವಿ. ೪-೧) ; ಈ ವರದ ಕರವೆ . . . ನುಸುಮಲರ್ದ ಲಸಜ್ಜೀವನಜಾತದ ಗರ್ಭದ ಭಾವನೆಯಂ ಬಗೆಗೆ ತಂದು ನಲಿಯಿಕುಮೆಮ್ಮಂ (ವಸ್ತುಮಂ. ೮). ೨. ಅರಳಿಸು ; ಪ್ರಫುಲ್ಲಗೊಳಿಸು : ನಲಿಯುಸುಗೆಯ್ದು ಮತ್ತಕಿಕುಮುದ್ವತಿಯಂ ಕಳಿಗುಂದದಾವಗಂ ನಲುಗದ . . . ಕಂದನಾನದೀ ಬಲಮುಗಿಸುಕುವೆಯ್ಯಮರೆ ಮೈವೆಯನಾಂತ ನವೀನಚಂದ್ರಮಂ (ಜಗವಿ. ೧-೭). **ನಲಿಸು :** ೧. ಮಿತ್ರಂ ಮದಯತಿಗೆರಿಯನಂ ನಲಿಸಿದಪಂ(ಕಾಶಕ್ಕ. ೧-೫೩). [ ನಲಿ$_1$ + – ಇಸು$_3$ ]

**ನಲಿವರಿ** (ಕ್ರಿ). ಹಿಗ್ಗಿನಿಂದ ಓಡಾಡು ; ಸಂತೋಷದಿಂದ ಓಡಾಡು ; ಸಡಗರಿಸು : ಪಲದಿವಸಕ್ಕೆಂತಾನುಂ ಕಲಹಂ ದೊರೆಕೊಂಡುದೆಂದು ಕೆಲಬರ್ ಬಿಲ್ಲಂ ಗೊಲೆಗೊತ್ತಿ ತೀವಿ ತೆಗೆದೇಂ ನಲಿವರಿದುದೊ ಜವನ ದೂತರೆನಿಸಿ ಕಿರಾತರ್ (ಪಂಪಾಮಾ. ೪-೫೭) ; ಸಿರಿಸದ ಬಾಸಿಗದೊಳ್ ನಲಿವರಿದಾಡುವ ತುಂಬಿಯಂತೆ ಪಾಣ್ಬನ ಕಣ್ಗಳ್ ಪರಿಮಳಿಯಾಡಿದುವು ತನೂದರಿಯ . . . ದೋರ್ವಲ್ಲರಿಯೊಳ್ (ಪಂಪಾಮಾ. ೯-೮೦) ; ನಲಿವರಿದು ನವೀನಮೆನಲ್ ಜಲಜಾಕ್ಷನ ಮುಂದೆ ಕುಣಿದು (ಮುಹಾನೇ. ೬-೭೪) : ಮೆಲ್ಪು(ಳ್ಪು)ವಡೆದತಿವ್ಯಾಲತೆಯಿಂದೋದಿ ನಲಿವರಿದು ಬಲವರ್ಣಂದಾ ಮಱಿಗೆರಡು ತಿಂಗಳ್ (ಅಶ್ವಶಾ. ೫-೪). 'ನಲವರಿ' ಪರಾ.

[ ನಲಿ$_1$ + ಪರಿ$_2$ ]

**ನಲಿವಾಱಿಸು** (ಕ್ರಿ). ಸಂತೋಷದಿಂದ ಹಾರಾಡುವಂತೆ ಮಾಡು : ಮದನದವಾಗ್ನಿತಪ್ತೆಯರ ಸುಯ್ಯು ನಖಿಂಪಚಮಾಗಿ ಬರ್ಪ ತಣ್ಣದಿರನೆಲರ್ಚಿ ಚಂಚುವಿನೊಳ್. . . ಉತ್ಪಲಾಗ್ರುಪತ್ರದ ಮೊಗೆದೂಡಿಪಾಡಿ ನಲಿವಾಱಿಸಿ ತೋಱಿಸಿ ಸೋಂಕಿ ನೂಂಕಿ ಕೌಮುದಿಯೊಳದೇಂ ಚಕೋರಿ ಪಿಳಗಾಡಿಸಿದತ್ತೊ ನಿಜಾಗ್ರುಶಾಬಮಂ (ಅನಂಪು. ೭-೮೧).

[ನಲಿವಾಱು$_1$ + – ಇಸು$_3$]

**ನಲಿವಾಱು$_1$** (ಕ್ರಿ). ಹಿಗ್ಗಿನಿಂದ ಮೇಲಕ್ಕೆ ಹಾರು ; ಸಂತೋಷದಿಂದ ಹಾರಾಡು ; ಆನಂದದಿಂದ ಏರು : ಇರ್ಪೋಡಿದ ಚಂಚುವಂ ತೆಱದೆಱಂಕೆ ನೆಱಿಲ್ದಿರೆ ಕಂಠನಾಳಮಂ ನೀಡಿ ವಿಯತ್ತಲಕ್ಕೊಗೆದು ಕಾರ ಮುಗಿಲ್ವನಿಯಂ ಮನಂ ಕುಳಿರ್ಗೋಡುವಿನಂ ಕರ್ದುಂಕಿ ನಲಿವಾಱಿದುವಾಱು ದುವಂದುಚಾತಕಂ (ಪಂಪಾಮಾ. ೭-೧೧೭) ; ಇಂತಿದು ಗಗನಕ್ಕೆ ನಾಡೆ ನಲಿವಾಱಿದದೊಂದು ಕಪೋತಮಂತುಮಲ್ಲಿದು ಪರಿದಿರ್ದ ಪಾವಸೆ ಮುಗಿಲ್ಮುಱಿಯೆಂಬಿನಮಿಂಬುಗೆಟ್ಟು ಕಂದಿದ ಪಟಗಂಚುಗನ್ನಡಿವೊಲೇನಿಟಿದಾದುದೊ ಚಂದ್ರಮಂಡಲಂ (ಚಂದ್ರಪು. ೯-೫) : ಚಕೋರಮಯೂರ ರಥಾಂಗ ಭೃಂಗಮಂಡಳಿ ನಲಿವಾಱಿದವ್ವುವು ತರುಂತರದಿಂದೆನಿಸಿತ್ತು ಕಣ್ಗೆ (ವರ್ಧಪು. ೫-೨೮). [ ನಲಿ$_1$ + ಪಾಱು$_1$ ]

**ನಲಿವಾಱು$_2$** (ನಾ). (ಹಕ್ಕಿಗಳ) ಸಂತೋಷದ ಹಾರಾಟ ; ಸಂಭ್ರಮದ ಹಾರಾಟ. 'ನಲಿವಾಱುವಾಱು' ಪರಾ. [ ನಲಿ$_1$ + ಪಾಱು$_2$ ]

**ನಲಿವಾಱುವಾಱು** (ಕ್ರಿ). ಸಂತೋಷದಿಂದ ಹಾರಾಡು ; ಉಲ್ಲಾಸದಿಂದ ಹಾರಾಡು: ಒಸಗೆಗಳೆಂದು ಬಿಟ್ಟ ಶುಕಶಾರಿಕೆಗಳ್ ನಲಿವಾಱುವಾಱಿ ರಾಗಿಸಿದವಿ ತಾರಿನಾಪು ಪರಿಪಾಱಿಯನೋಳಿಯಿನೋದೆ ಕೇಳ್ದು (ಶಾಂತಿಪು. ೩-೪೮). [ ನಲಿವಾಱು$_2$ + ಪಾಱು$_1$ ]

**ನಲಿವು** (ನಾ). ಹಿಗ್ಗು ; ಸಂತೋಷ ; ಆನಂದ : ನಿನ್ನ ಸುಖವೇ ಸುಖಂ ನಿನ್ನ ನಲಿವೇ ನಲಿವು (ಶಂಬಿರ. ೧-೭೧); ವ್ಯಾಗೀಬಾಳಕಜಾಲದೊಳ್ ನಲಿವಿನಿಂ ನೆಗೆದಾಡುತುಂ (ಪುಷ್ಪಪು. ೩-೯೭) ; ಪಲವುದಿನಂ ಮನಂ ಬಯಸಿ ಕಯ್ವಿಡಿದಂಗನೆಯಂಗಸಂಗದಿಂ ನಲಿವನನಾರತಂ ಪಡೆದು ರಾಜ್ಯಸುಖಂ ಸತತಂ ಸಲುತ್ತಿರಲ್ (ನಳಚಂ. ೪೮೮) ; ನಲಿವು ಮಿಗೆ ತಾನವರಡಿಗಳಂ ತೊಳೆದು ಮಂದಿಸು ವೆಡೆಯೊಳು (ಬಸಪು. ೫೭-೩೩); ನಲಿವು ಹಿಂಗಿದ ತಾಯ ಕಂಗಳ ಜಲವ ಸೆಱಗಿನೊಳೊರಸಿದನು (ಕುಮಾರ್ರೊ. ಒರಿ೩. ಪರಿ. ೨೭೮) ; ನೋವು, ನಲಿವುಗಳು ಪರಮಾತ್ಮನ ಇಷ್ಟವೆಂದು ತಿಳಿಯುತ್ತದೆ (ಧರ್ಮಸಾ. ೮೬). 'ನಲವು' ಪರಾ. [ ನಲಿ$_1$ + – ವು ]

**ನಲಿಸು** 'ನಲಿಯಿಸು' ನೋ.

**ನಲುಗಂಟಿ** (ನಾ). ಜಾನುವಾರುಗಳ ಮೇಲೆ ಹಾಕುವ ಒಂದು ಬಗೆಯ ಸಣ್ಣ ತೆರಿಗೆ : ಉಗುರ್ಣ ಪರಿಧಾನ ಬೆಡುಂಗೊಳು ಚಳಾಯ ದಾಯದೆಱಹಡುವರ ಬೀರವಣ ನಲ್ಲೆತ್ತು ನಲುಗಂಟ ನಲ್ಲಾವು ದಣ್ಣಾಯ ತವುಡೆಯೊಳಗಾದ ಸಮಸ್ತ ಕಿಱುಕುಡ:ವೆಲ್ಲಮ . . . ಧಾರಾಪೂರ್ವಕಂ ಮಾಡಿ (ಎಕ. V, ಬೇಲೂರು. ೫೯-೮೭ ; 1117). [<ನಲ್ + ಗಂಟಿ$_1$ ]

**ನಲುಗಿಡು** (ಕ್ರಿ). ಅರಿಸಿನ, ಕುಂಕುಮ ಮುಂತಾದುವುಗಳಿಂದ ಪಾದದ ಮೇಲೆ ಚಿತ್ರವನ್ನು ರೇಖಿಸು : ದಿನಾಂತದಲಿ ನದಿಯ ದಂಡೆಯನ್ನು ನಾವ್ ಸೇರಿ ಬಿಳಿಮಳಲಮಧ್ಯದಲಿ ನಲುಗಿಟ್ಟುದನ್ನು ತಿಳಿನೀರ ವಾಹಿನಿಯು ಹರಿವುದೊ ನಿಂದಿಹುದೊ ಬಳಿ ಸೇರಿ ಪರಿಕಿಸುವೆವೆಂದು ಹೋದುದನು (ವಿಸೀಗೀ. ೭೯-೦೨). [ ←ತಮಿ. ನಲಙ್ಕಿಟು ]

**ನಲುಗಿಸು** (ಕ್ರಿ). ೧. ಸುಕ್ಕುಗೊಳಿಸು; ಮುದುರಿಸು; ಮುದುಡು: ಹೂವನ್ನು ಅಷ್ಟು ಗಟ್ಟಿಯಾಗಿ ಹಿಡಿದು ನಲುಗಿಸಬೇಡ (ರೂಢಿ). ೨. ಸೊರಗುವಂತೆ ಮಾಡು; ಕೊರಗಿಸು; ಶೋಷಿಸು: ಈ ರೀತಿಯಲಿ ಮಱುಗುತಲನುದಿನವು ತತ್ಪಾಂಡುನೃಪನಂದನರು ದುಃಖದಿ ರಾಜಭೋಗಂಗಳನು ನೆಱೆ ಬಿಟ್ಟು ತನುವ ನಲ[ಲು]ಗಿಸಿಕೊಂಬರು (ತಿಮ್ಮಕೃ. ೩-೧೯); ಒಕ್ಕಲನು ನಲುಗಿಸದೆ ಲೆಕ್ಕವನು ಸಿಕ್ಕಿಸದೆ ಕಕ್ಕುಲತೆಯಿಂದ ನಡೆಯಿಸುವ ಅರಸು ತಾ ಚಿಕ್ಕಂದವಿರುವ (ಸರ್ವಜ್ಞ. ೬೨೭); ಹೊಟ್ಟೆಗೆ ಹಾಕದೆ ನಲುಗಿಸಿದ್ದಾಳೆ ಅಂತಾ ಸಾರಿಕೊಂಡು ಬಂದಾರು! (ನೀಂದನೆ. ೪೮).
[ನಲುಗು₁ + -ಇಸು₃]

**ನಲುಗು₁** (ಕ್ರಿ). ೧. ಸುಕ್ಕುಸುಕ್ಕಾಗು; ಮುದುರು: ಬಟ್ಟೆಯ ಮಡಿ ನಲುಗದಂತೆ ತೆಗೆದುಕೊಂಡು ಬಾ (ರೂಢಿ). ೨. ಅಲ್ಲಾಡು; ಅಲುಗು; ಸ್ಪಂದಿಸು: ಆವೇಶ ಅಂಗಾಂಗ ತುಂಬಿ ನರನರ ನಲುಗಿ ಅಲುಗಿ ಗೊಂದಣ ತಾಂಡವಲಾಸ್ಯ ನೃತ್ಯದಲ್ಲೀ (ಸೂರ್ಯಪಾ. ೪-೧); ಬೇಗ ಬೇಗ ಹೆಜ್ಜೆಹಾಕಿದಾಗ ಎದೆ ನಲುಗಿ ನಲುಗಿ ಕುಬುಸದ ಮಧ್ಯೆಯ ಗುಬ್ಬಿ ಕಳಚಿಹೋಗಿದ್ದಕ್ಕೆ . . . 'ಪಿನ್ನ'ನ್ನು ಹಾಕಿ 'ಫಿಟ್' ಮಾಡಿದಳು (ಹೊಸಕ್ಷಿ. ೪೭). ೩. ಒಯ್ಯಾರ ಮಾಡು; ಬಳುಕು: ಕುಟ್ಟುವ ನೆವದಿಂದ ರಟ್ಟೆಯನು ತಿರುಹುವಳು ನಿಟ್ಟಿಸಿ ನಲುಗಿ ಹಾಡುವಳು ಹಾದರದ ಮೊಟ್ಟೆ ಕಾಣಯ್ಯ (ಸರ್ವಜ್ಞ. ೧೮೪೧); ರತ್ನಾ ಮತ್ತೆ ನಾಚುತ್ತ ನಲುಗುತ್ತ ಎರಡು ವಿಡಾ ತಂದಿಟ್ಟು ಹೋದಳು (ಗಂಮಾಯಿ. ೮೭). ೪. ಕಷ್ಟಕ್ಕೆ ಗುರಿಯಾಗು; ಬಾಡು; ಕಂದು: ಕಾಕಸಂಘಾತದೊಳ್ ಸಿಕ್ಕಿರ್ದ ಕೋಗಿಲೆಯ ಮಱಿಯಂತೆ ನಲುಗಿ ಕತ್ತಲೆಯೊಳಿರ್ದ ಶೀತಳಮರೀಚಿಲಾಂಛನದಂತೆ . . . ಬಾಲಕನಿರ್ದನವರೆಡೆಯೊಳಂಜುತಳುತೆ (ಜೈಮಿಭಾ. ೨೮-೩೧); ಕಳೆಗುಂದದಾವಗಂ ನಲುಗದೆ ವಾಮದೇವನುರಿಗಣ್ಣೆಡೆವಾವುಗಳಿಂ . . . ಕಂದನಾನದೀ ಬಲಮುರಿಸಂಕುಮೆಯ್ಯುಮರೆ ಮೈಮೆಯನಾಂತ ನವೀನಚಂದ್ರಮಂ (ಚಿಕವಿ. ೧-೭); ಒಡೆದ ಕೊಳಲ ಪಾಡ ನೋಡು ಇನ್ನೆಲ್ಲಿದೆ ಸುಗ್ಗಿ ಎಂದು . . . ಮುಗ್ಗಿ ಮುರುಟಿ ನಲುಗಿತು (ನಡಬಂ. ೩೭-೮); ಕಾಯಿ, ತಾಯಿ . . . ನಲುಗಿ, ನಿನ್ನ ನೆರಳ ಸೇರಿ ನಲಿವ ಹೆಣ್ಣನು (ಹೊಂಗಳು. ೦೨-೫). ೫. ಸೊರಗು; ಕೊರಗು; ಕೃಶವಾಗು: ನಲುಗಿದಿರಿ ಹಿರಿದಾಗಿ ಜಡೆ ವಲ್ಕಲ ಫಲಾಶನದಿಂದ . . . ತನ್ನಿಂದಾದುದೀಯಾಪತ್ತು ನಿಮಗೆ (ತೊರರಾ. ೬-೫೫-೬); ನಿರ್ಬಂಧಕಿಕ್ಕಲುರೆ ಕಿರಿದುಂಡು ನಲುಗಿದಂ (ಪರಶು. ೧೪-೨೩); ಒಲಿದವರು ಬೇರಾಗಿ . . . ಕೆಲಕಾಲ ನೂಕುವರು, ನಲುಗದೆಯೆ ಕಾಣುವರು (ಇಂಗೀತ. ೫೦-೧೭); ಬಡತನದ ಬವಣೆಯಿಂದ ನಲುಗಿದ್ದ ಬಳಗದ ಗೆಳೆಯರಾರೂ ಹಣ ಕೊಡುವ ಸ್ಥಿತಿಯಲ್ಲಿರಲಿಲ್ಲ (ಜೀವನ. ೨ ಅರಿಕೆ). ೬. ಬಾಗು; ನಮಸ್ಕರಿಸು: ನಾನೇನಾಡಿದೆ ನಾ ನಿನ್ನ ಪಾಡಿದೆ ನಾ ನಿನ್ನ ನೋಡಿ ನಲುಗಿದೆ ಭೈರೂಪಾ ಸ್ವಾಮಿಯಾ ದೊಡ್ಡವನೆಂದು ಮಾರೀ ಬಿದ್ದೆ (ಹುಟ್ಟಿಹ. ೧೧೦).
[ದೇ.॥ ತಮಿ. ನಲಙ್ಕು, ನಲಕ್ಕು =ಮುದುಡಿಸು; ತುಳು. ನಲಗು; ತೆಲು. ನಲುಗು, ನಲಗು, ನಲಿಯು, ]

**ನಲುಗು₂** (ನಾ). ಹಾಡುವಾಗ ಧ್ವನಿಯನ್ನು ನಡುಗಿಸುವುದು; ಕಂಪನ; ಪಲುಕು: ಚಿಕ್ಕಪುಟ್ಟ ಕಲಹಗಳು ಬಾಳಿನ ಏಕತಾನಕ್ಕೆ ನಡುನಡುವೆ ನಲುಗಾಗಿ ಬಂದು ಸೊಗಸನ್ನು ಹೆಚ್ಚಿಸುತ್ತಿದ್ದವು (ಗಂಮಾಯಿ. ೭).
[<ನಲುಗು₁]

**ನಲುಮೆ** 'ನಲ್ಮೆ' ನೋ.

**ನಲುಮೆಕೂಟ** (ನಾ). ಪ್ರೀತಿಯ ಮೇಳ; ಸ್ನೇಹದ ಗೋಷ್ಠಿ: ಮಧುರೆ ಹೆಣ್ಣ ಬೇಟವುಳಿದು ಮರಳಿ ಬರುವೆಯಾ ನಲುಮೆಕೂಟ ಕುಣಿತಗಳಲಿ ನಮ್ಮನರಿವೆಯಾ (ಗೋಕುನಿ. ೫೪-೨).
[ನಲುಮೆ (<ನಲ್ಮೆ) + ಕೂಟ₁]

**ನಲುಮೆಯೋಲೆ** (ನಾ). ಪ್ರೇಮಪತ್ರ: ನೀಳವಾದ ನಲುಮೆಯೋಲೆಗಳನ್ನು ಅವನು ಸುಶೀಲಾನಿಗೆ ಬರೆಯುತ್ತಿದ್ದ (ಸಮುಜೀ. ೬೬೪).
[ನಲುಮೆ (<ನಲ್ಮೆ) + ಓಲೆ]

**ನಲುವು** (ನಾ). ಬಲಹೀನತೆ; ಅಶಕ್ತತೆ: (+).
[<ನಲುಗು₁./ತಮಿ. ನಲಿವು=ತೊಂದರೆ, ನಾಶ]

**ನಲ್ಕಳೆ** (ನಾ). ಒಳ್ಳೆಯ ಶೋಭೆ,-ಚೆಲುವು,-ಸೊಗಸು: ಕವಿ ಗುಣಾತೀತನ ಸ್ತರಕ್ಕೆ ಏರಿದಾಗ ಮಾತ್ರ ಆತನ ಕೃತಿ ನಲ್ಕಳೆಯಿಂದ ಮೆರೆಯುತ್ತದೆ (ಕಾವ್ಯಕು. ೨೦). [ನಲ್ + ಕಳೆ₆ (=ಕಲೆ₃)]

**ನಲ್ಕುಂಚ** (ನಾ). ಸುಂದರವಾದ ಚವರ,-ಚಾಮರ: ನೆಗಳ ಸೊಂಡಿಲ ಚಿನ್ನದಣಸಿನ ಪಲ್ಲಕ್ಕಿ ಸೊಗಯಿಪ ರತ್ನವಿಮಾನ ವಿಗೆ ನಲ್ಕುಂಚ ಕಾಳಾಂಜಿ ಮುಂತಾದ ವಸ್ತುಗಳನಿತ್ತನು ಕೃಷ್ಣ ಮಗಗೆ (ಮೋಹತ. ೦೫-೨೦).
[ನಲ್ + ಕುಂಚ]

**ನಲ್ಕೆ** (ನಾ). ನಲ್ಮೆ; ಅನುರಾಗ: ಮನ ಮೆಚ್ಚಿ ನಚ್ಚಿನ ನಲ್ಕೆಯಲಿ ಮನದನ್ನಳೆನಿಸಿದಳು (ಸಾಳ್ವಭಾ. ೧೮-೩೭). [ನಲ್ + -ಕೆ]

**ನಲ್ಗಂಪು** (ನಾ). ಸುವಾಸನೆ; ನರುಗಂಪು: ಧೂಪಮಂ ನಲ್ಗಂಪುಣ್ಮುತಿರಲಾಗಳರ್ಪಿಸಿದನಾ ಗಂಗಾಧರಂಗಟ್ಟುಱಿಂ (ಉದ್ಭಟ. ೧೧-೭೪); ಚಂದನಂಗಳ ಧೂಪಧೂಮದಾಮೋದಮುಂ ಮೂಗಿಂಗೆ ನಲ್ಗಂಪನೀಯದಿಹುದಿತ್ತಣ್ಣೆ (ಶ್ರೀರಾಮಾ. ೦೦೫-೦೫೭). [ನಲ್ + ಕಂಪು]

**ನಲ್ಗಂಪುವೀಱು** (ಕ್ರಿ). ಸುವಾಸನೆಯನ್ನು ಬೀರು; ನರುಗಂಪು ಸೂಸು: ನಲ್ಗಂಪುವೀಱೆ ಮೋಹಿಸುವ ಚೆಂಗಣಗಿಲೆಯರಲ್ಗೊಳಂ . . . ತಣ್ಗೊಳಂ ಮೆಱೆದುವು (ಪದ್ಮರಾ. ೮-೩೮). [ನಲ್ಗಂಪು + ಬೀಱು]

**ನಲ್ಗಡಲು** (ನಾ). ಸಿಹಿಯಾದ ಕಡಲು; ಇಂಗಡಲು: ಈ ಹಿಗ್ಗು ನನ್ನೆದೆಯ ನಲ್ಗಡಲನ್ನು ತುಂಬಿ ತುಳುಕುತ್ತಿದೆ (ಫಲಸಂ. ೪೮).
[ನಲ್ + ಕಡಲು (<ಕಡಲ್₂)]

**ನಲ್ಗತೆ** (ನಾ). ಒಳ್ಳೆಯ ಕಥೆ; ಸ್ವಾರಸ್ಯವಾದ ಕಥೆ: ಏನಾನುಮೊಂದು ನಲ್ಗತೆಯಂ ಪೇಟ? (ರಾಮಾಶ್ವ. ೪-೧೭). ಮೇಣಾವ ನಲ್ಗತೆಯಂ ಪೇಟ್ವೆನೋ (ರಾಮಾಶ್ವ. ೫-೧). [ನಲ್ + ಕತೆ]

**ನಲ್ಗಬ್ಬಿಗ** (ನಾ). ಒಳ್ಳೆಯ ಕವಿ; ಸತ್ಕವಿ: ಅನಿಬರ್ನಲ್ಗಬ್ಬಿಗರೊಳಮನಿತರ ಸಾಧಾರಣಾಭಿಮಾನಂ . . . ಬಳೆಯಿಕುಂ (ಅಪ್ರತಿ. ೩-೩).
[ನಲ್ + ಕಬ್ಬಿಗ]

**ನಲ್ಗಳಲ್** (ನಾ). ರುಚಿಕರವಾದ ಮಜ್ಜಿಗೆ: ಎಳನೀರ್ಗಳ ತನಿಗರ್ಬಿನ ತಿಳಿರಸದ ರಸಾಲಪಕ್ವ ಫಳಸಾರದ ನಲ್ಗಳಲ ಬಹುವಿಧದ ಪಾನಂಗಳನಲ್ಲಲ್ಲೆಱೆ ವರಾ ಪ್ರಪಾಪಾಲಿಕೆಯರ್ (ವೃಷವಿ. ೪-೩೦).
[ನಲ್ + ಕಳಲ್₀ (<ಕಟಿಲ್₃)]

**ನಲ್ಗಳವು** (ನಾ). ಲಾಭ ತರುವ ಕಳ್ಳತನ; ಹೆಚ್ಚು ಧನ ಸಿಗುವ ಚೌರ್ಯ: ತಾನುಂ ತತ್ಸಖನುಂ ಭೃತ್ಯಾನೀಕಂಬೆರಸು ಪೋಗಿ ನಲ್ಗಳವಿಂದಂ ತಾನಧಿಕ ಲಾಭಮಾದೊಡನೂನಗುಣರ್ ಮಗುಟ್ದು ಲಾಭದಿಂದಂ ಬರುತುಂ (ಧರ್ಮಾಮೃ. ೨-೧೯೦). [ನಲ್ + ಕಳವು]

**ನಲ್ಗಾಡಿ** (ನಾ). ಮನಸೆಳೆವ ಚೆಲುವು; ಮೋಹಕವಾದ ಸೌಂದರ್ಯ: ತಾಟಂಕಂಗಳ್ಕಪೋಲಸ್ಥಲಮನಲೆಯೆ ಮಧ್ಯಂ ಕರಂ ಬಳ್ಕೆ ತೋರ್ಪೊಳ್ಪೋಟಂ ನಲ್ಗಾಡಿಯಂ ಪುಟ್ಟಿಸೆ . . . ಕಾಂತಾಮಣಿಯುಗುರಿಸಿದಳ್ ತೈಲಮಂ ಬಾಲೆಗಾಗಳ್ (ಉದ್ಭಟ. ೮-೧೫). [ನಲ್ + ಗಾಡಿ₁]

**ನಲ್ಗಾದೆ** (ನಾ). ಉತ್ತಮವಾದ ನಾಣ್ಣುಡಿ,-ಜಾಣ್ನುಡಿ. 'ನಲ್ಗಾದೆಗಾಱ' ಪರಾ. [ನಲ್ + ಗಾದೆ]

**ನಲ್ಗಾದೆಗಾಱ** (ನಾ). ಉತ್ತಮವಾದ ನಾಣ್ಣುಡಿಗಳನ್ನು ಬಲ್ಲವನು,-ಕಟ್ಟಬಲ್ಲವನು: (ಚತುನಿ. ೬. I, ೪೩). [ನಲ್ಗಾದೆ + -ಕಾಱ]

**ನಲ್ಗಾಪು** (ನಾ). ಉತ್ತಮವಾದ ರಕ್ಷಣೆ ; ಭದ್ರವಾದ ಕಾವಲು: ಅಗುಂಟಿ ಮದಿಲ್ ಬಾಗಿಲ್ ಬಿಯ್ಯಗವೆಂಬಿವಱಿಂದೆ ಕಾವ ಕಾಪೇವುದೊ ಪೆಣ್ ವಿಗೆ ಪಾತಿವ್ರತ್ಯದೆ ನೆಟ್ಟಗೆ ತನ್ನಂ ಕಾವ ಕಾಪೆ ನಲ್ಗಾಪಕ್ಕು (ನೀತಿಮಂ. II, ೨೭). [ ನಲ್ + ಕಾಪು ]

**ನಲ್ಗಿರಿ** (ನಾ). ಶ್ರೇಷ್ಠವಾದ ಪರ್ವತ ; ಪವಿತ್ರವಾದ ಗಿರಿ : ವಿಪುಲ ಶ್ರೀಕಟವಪ್ರ ನಲ್ಗಿರಿಯ ಮೇಲ್ನೋನ್ನೊಂದು ಸನ್ಮಾರ್ಗ್ಗದಿನ್ ಉಪ ವಿಾಲ್ಮಾ ಸುರಲೋಕಸೌಖ್ಯದೆಡೆಯಾನ್ಮಾವೆಯ್ದಿ ಇಟ್ಟಾಳ್ ಮನವ್ (ಎಕ. II, ೯೮-೩ ; ಸು. 700). [ ನಲ್ + ಗಿರಿ$_1$ ]

**ನಲ್ಗುಟುಕು** (ನಾ). ಸವಿಯಾದ ಗುಟುಕು ; ರುಚಿಯಾದ ತುತ್ತು : ಸುಂದರಿ ಬಾರ ಸಾರಸಕಳಾಯತಲೋಚನೆ ನೋಡದಿರ್ಪುದೇ ನಿಂದೆಲೆ ರಾಜಪಕ್ಷಿ ಪೊಸಪಣ್ಗಳ ನಲ್ಗುಟು[ಪಾಠಾಂ. ಟ]ಕಿಕ್ಕು . . . ಎಂದು ಸಾರಿಕಾಬೃಂದಮರಾತಿಮಂದಿರದೊಳೆಂಬುದು ಬಂದ ಪುಳಿಂದಿಯರ್ಕಳಂ (ರಾಜಶೇ. ೫-೧೨). [ ನಲ್ + ಕುಟುಕು$_2$ ]

**ನಲ್ಗುಣ** (ನಾ). ಒಳ್ಳೆಯ ಗುಣ ; ಸದ್ಗುಣ : ಕೃತಿಪತಿಯ ನಲ್ಗುಣಂಗಳ್ ಕೃತಿವೇಟ್ಟನ ಮನಮನಲೆದು ನಲಿಯಿಸೆ ಪೇೞ್ವಾ ಕೃತಿಯೆ ಕೃತಿ (ಚಿಕವಿ. ೧-೫೦). [ ನಲ್ + ಗುಣ ]

**ನಲ್ಗುದುರೆ** (ನಾ). ಒಳ್ಳೆಯ (ಲಕ್ಷಣಗಳಿಂದ ಕೂಡಿದ) ಕುದುರೆ ; ಶ್ರೇಷ್ಠವಾದ ಅಶ್ವ : ಅಧ್ವರದ ನಲ್ಗುದುರೆ ಬಂದು ವಾಲ್ಮೀಕಿಯ ನಿಜಾಶ್ರಮದ ವಿನಿಯೋಗದುಪವನದೊಳು . . . ಪೊಕ್ಕೊಡೆ (ಜೈಮಿಭಾ. ೨೦-೫). [ ನಲ್ + ಕುದುರೆ ]

**ನಲ್ಗುನಿಗುಂಜಿ** (ನಾ). ಒಳ್ಳೆಯ ಗುಲಗಂಜಿ : ನಲ್ಗುನಿಗುಂಜಿಯೊರ್ಚಿರ ಮನೊಯ್ಯನೆ ನೇರ್ಪಡಿಸುತ್ತುಮೆತ್ತಲುಂ ಪಲ್ಗಳ ಕಾಂತಿಯಂ ಪರಪುತುಂ ನಗುತುಂ ನಡೆದರ್ ಪುಳಿಂದಿಯರ್ (ಉದ್ಭಟ. ೨-೬೦).

[ ನಲ್ + ಗುನಿಗುಂಜಿ ( < ಗುರುಗುಂಜಿ) ]

**ನಲ್ಗೆಯ್** (ಕ್ರಿ). ಶುದ್ಧಗೊಳಿಸು ; ಶುಭ್ರಗೊಳಿಸು : ಪಾಲ್ಗಡಲ ಚೆಲ್ವ ಬಂಬಲ್ದೆರೆಯನೀಳ್ಕೊಂಡು ನಲ್ಗೆಯ್ದು ತಪರಾಜದೊಡವೆರಸಿದಿನಿದದೇಂ ಸಾಲ್ಗೆ ಚೆನ್ನೆಯ್ಯ ಕಂದಲ್ ಸೊಗಸು ಸಾಟಿಯೇ (ಭಾವಚಿಂ. ೭-೮) ; "ಒಳ್ಳೆಯದನ್ನು ಮಾಡು, ಉತ್ತಮವಾಗಿ ತಯಾರಿಸು, ಹಿತವನ್ನು ಮಾಡು" (ಪ್ರಭಂ.). [ ನಲ್ + ಕೆಯ್$_1$ ]

**ನಲ್ಗೆಳದಿ** (ನಾ). ಪ್ರೀತಿಯ ಗೆಳತಿ ; ಪ್ರಿಯಸಖಿ : ಹಾ ನಲ್ಗೆಳದಿ . . . ಮಗುಟ್ ನಿನ್ನನಾವೆಡೆಯೊಳ್ ಕಾಣ್ಬೆಂ (ಮಿತ್ರಗೋ. ೫೦) : ತಾನುಂ ನಲ್ಗೆಳದಿ ಚಂದ್ರಮತಿಯುಂ ಸಲ್ಲಾಪಂಗೊಳುತಿರೆಯಿರೆ (ರಾಮಾಶ್ವ. ೧೭-೩೦).

[ ನಲ್ + ಕೆಳದಿ ]

**ನಲ್ಗೆಳೆಯ** (ನಾ). ಪ್ರೀತಿಯ ಗೆಳೆಯ ; ಪ್ರಿಯಸಖ : ಸಿರಿಯಾಳ್ವನ ಸೂನುವಿಂಗೆ ನಲ್ಗೆಳೆಯನೊ ಸೌಂದರಾಧಿಪನ ದೂತನೊ (ವೃಷವಿ. ೩೨-೩೬).

[ ನಲ್ + ಕೆಳೆಯ ]

**ನಲ್ಗೆಱೆ** (ನಾ). (ಕೈಗಳಲ್ಲಿರುವ) ಒಳ್ಳೆಯ ಲಕ್ಷಣವನ್ನು ಸೂಚಿಸುವ ರೇಖೆ ; ಶುಭರೇಖೆ : ನೀಳ್ದಿಸೆವೆಳಗೈ ಕಾಲ್ಗಳ್ ತಾಳ್ದಿರ್ಪುವು ಕೆಂದಳಂಗಳೊಳ್ ನಲ್ಗೆಱೆಯಂ (ಚಿಕವಿ. ೪ ೭೨). [ ನಲ್ + ಗೆಱೆ ]

**ನಲ್ಗೊಣಸು** (ನಾ). ಮುದ್ದಾದ ಮರಿಹುಲ್ಲೆ,– ಜಿಂಕೆಯ ಮರಿ : ನಸು ಮುಗುಳ್ದ ಕಣ್ ಪಡೆವಾಯ ದೂರ್ವೆ . . . ನೆಱೆಯೊಪ್ಪೆ ನಲ್ಗೊಣಸು ಪಟ್ಟೆಸದಿರ್ದುದವೊಂದು ತಾಣದೊಳ್ (ಶಬಶಂ. ೨-೪೦).

[ ನಲ್ + ಕೊಣಸು$_1$ ]

**ನಲ್ಜವ್ವನೆ** (ನಾ). ಚೆಲುವೆಯಾದ ಯುವತಿ ; ಸುಂದರ ತರುಣಿ : ಬಂದರಂದು ಬಲಿಷ್ಠೀಕೆವಡೆದು . . . ನಲ್ಜವ್ವನೆಯರ ಮಾನ್ಗಣ್ಣ ಬೆಳ್ವಣ್ಣ ಮೂವಣ್ಣಗೊಳಿಸಲ್ಕತಿಗಳ (ಉದ್ಭಟ. ೫-೨೬). [ ನಲ್ + ಜವ್ವನೆ ]

**ನಲ್ಜೋಡು** (ನಾ). ಒಳ್ಳೆಯ ಜೊತೆ : ಇದು ಕಣಾ ಧರ್ಮಜನ ಸತಾಭ್ಯುದಯಕೋಸುಗವೂರ್ವಶಿಯ ಶಾಪದಲಿ ಬಂದುದು ಹೊತ್ತು ನೂಕಿದೆ ನೊಂದುವತ್ಸರವ ಇದಕೆ ನಲ್ಜೋಡಾಯ್ತು ನಿರ್ವಿಘ್ನದಲಿ ದಾಂಟಿದೆ ವವಧಿಯನು (ಕುಮಾವ್ಯಾ. ವಿರಾ. ೭-೫೩). [ ನಲ್ + ಜೋಡು ]

**ನಲ್ತದ** (ನಾ). (?) : ನವಿಲೂರಾ ಸಿರಿಸಂಘದಾಚಿಗಣದಾ ರಾಜ್ಞೀಮತೀ ಗನ್ತಿಯಾರ್ ಅಮಲಂ ನಲ್ತದ ಶೀಲದಿಂ ಗುಣದಿನಾಮಿಕ್ಕೋತ್ತಮ ವಿಾರ್ಕಳೆದೊರ್ ನಮಗಿನ್ನೊದ್ಬುದುಯೆನ್ದು ಏಱಿ ಗಿರಿಯಾನ್ಸನ್ಯಾಸನಂ ಯೋಗದೊಳ್ (ಎಕ. II, ೯೭-೨ ; ಸು. 700).

[ P ಇದು 'ನಲ್ತಪ' ಎಂಬುದರ ಅಪಲಿಖಿತ ]

**ನಲ್ತಪ** (ನಾ). ಉತ್ತಮವಾದ ತಪ ; ಶ್ರೇಷ್ಠವಾದ ತಪಸ್ಸು : ನೆಱೆದಾದ ವ್ರತಶೀಲ ನೋನ್ಪಿ ಗುಣದಿಂ ಸ್ವಾಧ್ಯಾಯಸಮ್ಪತ್ತಿನಿವ್ ಕಱೆ ಇಲ್ನಲ್ತಪ ಧರ್ಮ್ಮದಾ ಸಸಿಮತಿ ಶ್ರೀಗನ್ತಿಯರ್ (ಎಕ. II, ೭೬-೨ ; ಸು. 700). [ ನಲ್ + ತಪ$_3$ ]

**ನಲ್ತೆತ್ತು** (ನಾ). ಒಂದು ಬಗೆಯ ಸಣ್ಣ ತೆರಿಗೆ : ಉಗ್ರಾಣ ಪರಿಧಾನ ಬೆಡುಂಗೊಳು ಚಳಾಯ ದಾಯದೆಱೆ ಹಡುವರ ಬೀರವಣ ನಲ್ತೆತ್ತು ನಲುಗಂಟೆ ನಲ್ಲಾವು ದಣ್ಡಾಯ ತವುಡೆಯೊಳಗಾದ ಸಮಸ್ತ ಕಿಱುಕುಡ ವೆಲ್ಲವಂ . . . ಧಾರಾಪೂರ್ವ್ವಕಂ ಮಾಡಿ (ಎಕ. V, ಬೇಲೂರು. ೫೯-೮೭ ; 1117). [ P ಇದು 'ನಲ್ತೆತ್ತು' ಎಂಬುದರ ಅಪಲಿಖಿತವಿರಬಹುದೆ ? ]

**ನಲ್ದಂಬುಲ** (ನಾ). ಸವಿಯಾದ ವೀಳೆಯ ; ರುಚಿಯಾದ ತಾಂಬೂಲ ; ನರುದಂಬುಲ : ಪೆರ್ಚುತೊಯ್ಯಗೆ ನಲ್ದಂಬುಲಮಾವಳೊತ್ತಿ ಸೊಗಸುಣ್ಮಲ್ಬುಂಬಿಪಳ್ . . . ಕಾತರು ವಿಾಗೆ ತಾಂ ಕೂಡುವಳೆಂದು ಸೌಂದರಿ ಲಸತ್ಪ್ರಂಭಾವದಿಂ ಕಾಂತನಂ (ಉದ್ಭಟ. ೮-೧೨೩). [ ನಲ್ + ತಂಬುಲ ]

**ನಲ್ದಾಣ** (ನಾ). ಒಳ್ಳೆಯ ನೆಲೆ,– ಆಶ್ರಯ : ಮುಂದಣವಧಿಯ ವನದ ವಾಸಮಂ ಕಳೆಯೆ ನೆಮ್ಮದಿಯ ನಲ್ದಾಣವೊಂದಂ ಕೃಪೆಯಿಂ ಬೆಸಸಿಂ (ಶ್ರೀರಾಮಾ. ೧೯೨-೪೪೭). [ ನಲ್ + ತಾಣ ]

**ನಲ್ದಾಯಿ** (ನಾ). ಅಕ್ಕರೆಯ ತಾಯಿ ; ಪ್ರೀತಿಯ ಜನನಿ : ಶ್ರೀಯೆ ವಾಗ್ದೇವಿಯೆ ಸೌಭಾಗ್ಯದಾಯಿಯೆ . . . ಅಕ್ಕರೆಯ ನಲ್ದಾಯಿಯೆ ಕೃತಿಗೆ ಉನ್ನತಿಯನು ಈಯೆ (ಇಂಬಾಪ. ೩-೧).

[ ನಲ್ + ತಾಯಿ ( <ತಾಯ್) ]

**ನಲ್ದೊಟ್ಟಿಲು** (ನಾ). ಅಂದವಾದ ತೊಟ್ಟಿಲು : ತಾಯ್‌ವಸಿರ್ ನೀನಾದೆ ಪುಟ್ಟುವಾಗಳ್ ಮತ್ತೆ ನಲ್ದೊಟ್ಟಿಲಾದೆ, ಜೋಗುಳವಾದೆಯೆಳೆಯಂಗೆ (ಶ್ರೀರಾಮಾ. ೩೦೬-೪೦೦). [ ನಲ್ + ತೊಟ್ಟಿಲು$_1$ ( <ತೊಟ್ಟಿಲ್$_1$) ]

**ನಲ್ದೊಡವು** (ನಾ). ಅಂದವಾದ ಆಭರಣ : ಮುಡಿಯಿಂದಡಿವರೆಗಂ ನಲ್ದೊಡವುಗಳಂ ತುಡಿಸಲೆಂದು ದಾದಿ . . . ನುಡಿದಳಿಂತಚ್ಯುತನಂ (ಗೀತಗೋ. ೭-೧೭). [ ನಲ್ + ತೊಡವು ]

**ನಲ್ನಯ** (ನಾ). ಒಳ್ಳೆಯ ರೀತಿ ; ಸರಿಯಾದ ಕ್ರಮ : ಕರಂ ರಸಿಕರಿನೆಯ್ದೆ ತಿರ್ದಿಸಿದೊಡಲ್ಲದೆ ನಿಲ್ಲದು ಚಿತ್ತಮಂತೆ ತಿರ್ದಿಸುವುದೆ ನಲ್ನಯಂ (ಜಗವಿ. ೧-೧೫). [ ನಲ್ + ನಯ$_1$ ]

**ನಲ್ನಿಶೆ** (ನಾ). ನಡುರಾತ್ರಿ ; ಮಧ್ಯರಾತ್ರಿ : ನಲ್ನಿಶೆಯೊಳ್, ಆಱ ತಿರೆ ಸಂಜೆಯುಂ. ಇರ್ಬಾಯ, ಖಡ್ಗಮನ್ ತುಡುಕಿ ಗುಱಿಯಿಲ್ಲದೆತ್ತಲೋ ತೆರಳ್ವನನ್ ನಾನ್ ತಡೆದು (ಅಶ್ವತ್ಥಾ. ೧೨-೨೪೯). [ ನಲ್ + ನಿಶೆ$_1$ ]

**ನಲ್ನುಡಿ$_1$** (ಕ್ರಿ). ಹಿತವಾದುದನ್ನು ಹೇಳು ; ಹಿತವನ್ನು ನುಡಿ : ಆಗಳಾನ್ ನೆಲ ಮುಗಿಲ ಮಕ್ಕಳಾ ದೈತ್ಯರನ್ ನಲ್‌ನುಡಿದು ನಡಪಲ್ಕೆ ನೆಗಟ್ಬೆನ್ (ಬದ್ಯಶ್ರೀ. ೧೨-೨೩೭). [ ನಲ್ + ನುಡಿ$_1$ ]

**ನಲ್ನುಡಿ$_2$** (ನಾ). ೧. ಹಿತವಾದ ಮಾತು ; ಸವಿನುಡಿ : ಸುಧರ್ಮ ಭೂಮಿಪನಂ ನಲ್ನುಡಿಯಿಂ ಬೀಳ್ಕೊಂಡು (ಉದ್ಭಟ. ೭-೬೮) ; ಅವನ

ನಲ್ನುಡಿ ತಾನುಪದೇಶಮಾಗೆ (ರಾಜಶೇ. ೧೪-೫೯) ; ಕಾಲವಶದಿಂ ಪಲತೆಱನಾದ ದುಃಖಂಗಳ್ಗೆ ಭಾಜನರಾಗಿರ್ಪ ಸೋದರರ್ಗೆ ನಲ್ನುಡಿಗಳಂ ನುಡಿದು (ಭಾರತಾಂ. ೧೪).; ನಲ್ನುಡಿ. ಅದುಂತಿರ್ಕೆ ಊಡಿದೆಯ–ಪೇೞೆನಗೆ ಪಾಂಡವರ ದಟಬದ ಬಿಸುನೆತ್ತರಿನ್ ಖಡ್ಗಮನ್? (ಅಶ್ವತ್ಥಾ. ೫-೮೦); ಒಂದುದಿನ ವಾದರೂ ಪ್ರೀತಿಯಿಂದ ನಲ್ನುಡಿಗಳನ್ನಾಡಿದವನು ನಾನಲ್ಲ (ಕುರುಕ್ಷೇ. ೧೦೩). ೨. ಅಂದವಾದ ಮಾತಂ; ಚೆಲುವಾದ ನುಡಿ: ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ (ರಾಮಾಶ್ವ. ೬-೧೭); ನಲ್ನುಡಿಗಳನ್ನು ಛಂದಸ್ಸಿನ ನೂಲಿನಲ್ಲಿ ಸುರಿದು ಮಾಲೆಗೊಳಿಸಬಲ್ಲವನೇ . . . 'ಜಾಣ'ನು (ನಾಡೋಜ. ೩೪೭); ಕನ್ನಡದ ನಲ್ನುಡಿಗಳು ಮೂಲೆಪಾಲಾಗುತ್ತಿರುವ ಈ ದಿನಗಳಲ್ಲಿ . . . ಕನ್ನಡಿಗರ ತಿಳಿನುಡಿಯಾಗಿ ಬೆಳೆಯಿಸಲು ಈ ಕೃತಿಯು ಸಹಾಯಕ (ಕಾಲೂರ. ೧೧ ಮುನ್ನುಡಿ). [ ನಲ್ + ನುಡಿ$_2$ ]

**ನಲ್ನೆಟಲ್** (ನಾ). ೧. ಹಿತವಾದ ನೆರಳು; ತಂಪಾದ ಛಾಯೆ. ೨. (ಆಲಂ) ಪ್ರೀತಿಯ ಆಶ್ರಯ. ೧, ೨: ಎಸೆವೈ ಕಲ್ಪಮಹೀಜದಂತೆ . . . ಬಣ್ಣಿಸೆ ಪುಷ್ಪಸ್ತಬಕಂಗಳಂ ನಖರುಚಿವ್ರಾತಂ ನತರ್ಗೊಲ್ದು ಸರ್ವಸಮಂ ನಲ್ನೆಟಲಿತ್ತು ಕಾವೆ (ವಸ್ತುಪಂ. ೮೫). [ ನಲ್ + ನೆಟಲ್$_1$ ]

**ನಲ್ನೋಟ** (ನಾ). ಪ್ರೀತಿಯ ನೋಟ: ಕೋಟಿ ಮೂಱೆನಿಪ್ಪ ಲೆಕ್ಕದರ್ಥ ದಾಣ್ಮನಾಗಿ ನಲ್ನೋಟಕೊಳ್ಳದೀವ ಯೌವನಾತಿರೇಕ ಮಲ್ಲಣಂ (ಉದ್ಭಟ. ೧೨-೩೫). [ ನಲ್ + ನೋಟ ]

**ನಲ್ಪರಕೆ** 'ನಲ್ವರಕೆ' ನೋ.

**ನಲ್ಪರಕೆವೆಱು** (ಕ್ರಿ). ಪ್ರೀತಿಯ ಆಶೀರ್ವಾದವನ್ನು ಪಡೆ: ಭೂದಿವಿಜರ ನಲ್ಪರಕೆವೆತ್ತು ಜೀರಿಗೆಬೆಲ್ಲದೊಪ್ಪಮೆಸೆಯಲ್ . . . ಅವನ ಕೈಗೆ ಧಾರೆಯನೆಱೆದನು (ಕ್ಷಮಿಭಾ. ೩೦-೧೬).

[ ನಲ್ಪರಕೆ (< ನಲ್ವರಕೆ) + ಪೆಱು$_1$ ]

**ನಲ್ಪು** (ನಾ). ಸುಂದರವಾದುದು; ಅಂದವಾದುದು: ಇವರ ನಲ್ಪಿನ ದೇಹ ಉತ್ತಮರ ದಾಹ (ವೀಶೈಪು. ೨-೩-೨೬). [ ನಲ್ + –ಪು$_2$ ]

**ನಲ್ಬರ** 'ನಲ್ಬರವು' ನೋ.

**ನಲ್ಬರವು, ನಲ್ಬರ** (ನಾ). ಸುಖಾಗಮನ; ಸುಸ್ವಾಗತ: ಬಾ, ಕೃಷ್ಣ, ನಲ್‌ಬರವು, ನಮ್ಮೊಳಗೆ ಸೇರು (ಹೊಂಗಳು. ೩೨-೧). **ನಲ್ಬರ**: ನಮ್ಮ ಕೌರೀ ಮನೆಗೆ ನಿಮಗಕ್ಕೆ ನಲ್ಬರಂ (ಶ್ರೀರಾಮಾ. ೨೮೯-೧೧೧).

[ ನಲ್ + ಬರವು ]

**ನಲ್ಮಗು** (ನಾ). ಸುಂದರವಾದ ಮಗು; ಅಂದವಾದ ಶಿಶು. ನಲ್ಮಕ್ಕಳು (ಬಹುವ): ಅಯೋಧ್ಯೆ . . . ಕೊರಳಿಂಚರದಿ ಪಕ್ಕಿಗಳನಣ ಕಿಸುವ ನಲ್ಮಕ್ಕಳಿಂದವಾ ಸಗ್ಗದೂರನೆ ಸೂರೆಗೊಂಡಂತೆ ಮೆರೆದುದಯ್ (ಶ್ರೀರಾಮಾ. ೬-೧೭೪). [ ನಲ್ + ಮಗು ]

**ನಲ್ಮಿಸುನಿ** (ನಾ). ಒಳ್ಳೆಯ ಬಂಗಾರ; ಅಪ್ಪಟ ಚಿನ್ನ: ವಿಶ್ವಕಥೇಶ ನೊರ್ವನೆಸಿಸಿದನುಮೇಶನೆಂದು ಬಿದಿ ಶಾಸನಮಂ ಬರೆದಿಟ್ಟು ನಟ್ಟ ನಲ್ಮಿಸುನಿಯ ಕಂಬದಂತೆಸೆದುದಾ ಗಿರಿ (ಶಬಶಂ. ೧-೩೬).

[ ನಲ್ + ಮಿಸುನಿ ]

**ನಲ್ಮೆ, ನಲುಮೆ** (ನಾ). ೧. ಪ್ರೀತಿ; ಅನುರಾಗ; ಒಲುಮೆ: "ತಕ್ಕು, ಅಟ್ಮೆಱು, ಒಲವಿಲ್, ಕಾದಲ್ಮೆ, ನಲ್ಮೆ, ಕೂರ್ಮೆ, ಎಱಕಂ, ಓವು – ಈ ೮ ಸ್ನೇಹಕ್ಕೆ ಪೆಸರ್" (ಕಶಸಾ. ೦೯-೩೯೦); ಚಲಂಗಳಿಂದಂ ವಿಲಾಸಿನೀಜನದ ನಲ್ಮೆಯುಂ ಸಂಗಮಮುಂ (ಕವಿರಾ. ೩ ೯೭); ತೆತ್ತುತನಕ್ಕೆ ತೆತ್ತುತನಮಂ ಪುಸಿನಲ್ಮೆಗೆ ಮೋದಿ ನಲ್ಮೆಯುಂ . . . ಉಕ್ಕೆವಕುಕ್ಕೆವಗೆಯ್ತುಮಂ ಪೊಣರ್ಚುತ್ತುಮುಪಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೦೫ ಶೂದ್ರಕ); ಬೆಂಬೆನ್ನನೆ ಬಾರದಂದು ಲಲಿತಾಂಗಿಯ ನಲ್ಮೆಗೆ ಬನ್ನಮಾಗದೇ (ಆದಿಪು. ೩-೧೭); ಕೈದವಮಿಲ್ಲದ ನಲ್ಮೆಯಿಂ ನಾಲಗೆಯ ತುದಿಗೆ ತಂದು ನುಡಿದಳ್ ಮತ್ತೂರ್ವಳ್ ತನ್ನಾಣ್ಮನ ದೋರ್ವಲದಗುರ್ವಂ ನಚ್ಚಿ (ಪಂಪಭಾ. ೧೧-೪೫ ವ); ಆತ್ಮಭವಂಗೆ ನಲ್ಮೆಯಿಂದುಟಿಪೆ ನಿಜಾತಪತ್ರ ಹರಿವಿಷ್ಟರ ಚಾಮರಮೆಂಬಿವಂ ಬಟಿಕ್ಕುಟಿದುದನಿತ್ತುಂ (ಚಂದ್ರಪ್ರ. ೩-೧೦೨); ಕಡುಪಿಂದಾತನೊಳಾಂತರೋಡಿ ಬನಮಂ ಪೊಕ್ಕುಂ ಪೊಡರ್ವಾರ್ದುರ್ಕಾಲ್ಪಿಡಿದುಂ . . . ನಲ್ಮೆಯುಂ ನುಡಿದುಂ ಮೆಯ್ಸಾರಿಗೆಟ್ಟುವಿಂತು ನೆಲದೊಳ್ ನಾಣ್ಗುಂದಿ ನಿಂದಿರ್ಪರ್ (ಕಬ್ಬಿಗಕಾ. ೧೬೨); ತಳುವದಡವಿಯೊಳು ತನ್ನ ತಪ್ಪಿಸಿ ಪೋದ ನಳನೊಳು ನಲ್ಮೆಯನೆಸಗಿ . . . ಕೀರ್ತಿಯ ತಳೆದೆಸೆದಳು ದಮಯಂತಿ (ಹರಿಬ. ೩-೪೬). ೨. ಅನುಗ್ರಹ; ಕೃಪೆ; ದಯೆ: ವಿಶ ನಾಥಂ ಕುಡುಗವಿಳಜನಾನಂದಮಂ ನಲ್ಮೆಯಿಂದಂ (ಕುಸುಮಾ. ೦-೦); ಪುತ್ರನನೀಕಶನಿಂ ನಲ್ಮೆಯಿಂ ಪಡೆದುಂ ಮಹೀಪತಿ ರಾಜ್ಯಮಾಳುತಮಿರ್ಪನಂ (ಹಾಲಾಸ್ಯ. ೪-೧೩-೪೩); ಅವಳ ನಲ್ಮೆಯಿಂ ಪಡೆವನಾಯ್ಯುಳಿಯುಂ ತ್ರಿಜಗತ್ಪ್ರಭುತ್ವಮಂ . . . ಆ ಮಾದೇವಿ ನಿರೀಕ್ಷಿಕೆನ್ನನತಿವೇಲದಯಾ ರಸಪೂರ್ಣದೃಷ್ಟಿಯಿಂ (ಪುರಾತ. ೧-೨). ೩. ಒಳ್ಳೆಯತನ; ಒಳಿತಂ; ಒಳ್ಳೆಯದಂ; ಒಳ್ಪು: "ನಲ್ಮೆಯೆ ಶುಭಮೊಳ್ಪು ಲೇಸು" (ಚಟುನಿ. ೮೫); ಉಮೆ ಸೌಭಾಗ್ಯದೊಳೊಳ್ಪುವೆತ್ತ ರತಿ ರೂಪಾಶ್ಚರ್ಯದೊಳು ಲಕ್ಷ್ಮಿಪಕ್ಷಮ ನಂಗೀಕರಿಸಿ × × ನಲ್ಮೆಯೊಳತಿಪ್ರಾಗಲ್ಭ್ಯದೊಳು ಸೂಕ್ತಿಲಕ್ಷ್ಮಿ (ಎಕ. VIII, ಸೊರಬ. ೦೩೮-೪೫; ಸು. 1145); ಮಗನೆಂದು ನಿಮ್ಮನಾಂ ಪೊರೆದ ಪೊಲ್ಲಮೆಯು ನಲ್ಮೆಯ ಮಾಡಿ ಕೈಕೊಂಡು ರಕ್ಷಿಸೆನೆ (ಸೌಂದಪು. ೫-೪೪); ಕಿಱುದಾಸಿಯಿಂದೆ ಜನರು ನಲ್ಮೆ ಪೊಲ್ಮೆಯನಱಿಯದೆ ನೆನೆದುದನೆಸಗಿ ಬಟಿದ ಯೌವನವನೆಲ್ಲವನು ಕಳೆವರು (ಕರ್ಣಾಪ್ಯ. ೧೧-೩೦); ಈ ಚಾಣ್ಮೆಯಾ ನಲ್ಮೆಯಾ ಗಾಡಿಯಾ ಮೋಡಿ . . . ಅರಿಗಳಪಡದು ಕೇಳೀ ಜಗತ್ರಯ ದೊಳೀ ಚೆಲುವ ವ್ಯರ್ಥಂಗ್ಯೆಯದಿರು (ಪಂಕಾರಾ. ೫-೯-೧೧); ನುಣ್ಣನಷ್ಟು ಜಾಣ್ಮೆಯಿನ್ ಕೆಡಕಿಗೊರ್ಮೆ ನಡೆದವನ್ ನಲ್ಮೆಗೊರ್ಮೆ ನಡೆದವನ್ (ಅಂತಿಗೊ. ೦೭-೩೫೨). **ನಲುಮೆ**: ೧. ಆ ಪುರಕೆ ಬಂದನೊರ್ವಂ ಭಕ್ತನೊಲುಮೆಯಿಂ ಕಾಪಾಲಿವೊಲಿವ ಶರಣಂ ತನ್ನ ನಲುಮೆಯಿಂ (ಬಸಾರ. ದೇ. ೦೦೫-೧೧); ನಿನ್ನ ಸಸಿನೆದೆಯೊಳೊಲೀರೆಮೆಯ ನಲುಮೆಯ ನೀಡ! (ಗಳವಿಂ. ೨೮-೨೭); ಎಳುನೆಲೆಯಲ್ಲಿ ನೆಲಸಿಹುದು ನಿಲುವಿನ ನಲುಮೆ (ಅರಳು. ೪೦೦-೧೭). ೪. ಸಂತೋಷ: ನಲುಮೆಯಲಿ ಮಾಡಿ ದಾಸೋಹ ಹರಸೇವೆ (ಕನ್ನಕಾ. ೨೦೭).

ನಲ್ಮೆಗೆ ದಿಬ್ಯಂಬಿಡಿ, ನಲ್ಮೆಗೆ ದಿವ್ಯಂಬಿಡಿ = ಪ್ರೇಮಕ್ಕೆ ಸಾಕ್ಷಿಯಾಗಿ ದಿವ್ಯವೆಂಬ ಪರೀಕ್ಷೆಗೆ ಒಳಗಾಗು: ಶಂತನು . . . ತನ್ಮೃಗಶಾಬಾಕ್ಷಿಯ ಕಂಪು ತಟ್ಟ ಮಧುಪಂಬೋಲ್ ಸೋಲ್ತು ಕಂಡೊಲ್ದು ನಲ್ಮೆಗೆ ದಿಬ್ಯಂಬಿಡಿ ಪಂತೆವೋಲ್ ಪಿಡಿದು (ಪಂಪಭಾ. ೧-೭೦); ಅಂಬುಜದ[ಲ]ಮನವರ್ಚಿ ನಿತಂಬಿನಿ ಪಿಡಿದಿರ್ದ ಕಱಚಮೆ ತಪ್ತಾಯಃಪಿಂಡಂಬೋಲ್ತಿರೆ ನಲ್ಮೆಗೆ ದಿವ್ಯಂ ಬಿಡಿದಳೋ ಪೇಳೆಮೆನಿಪಳಾ ವ್ಯತಿಕರದೊಳ್ (ಚಂದ್ರಪ್ರ. ೫-೦೩೧).

[ ನಲ್ + –ಮೆ$_1$./ತಮಿ. ನನ್ಮೈ, ನಲುಮೈ ]

**ನಲ್ಮೆಕಾಱ** 'ನಲ್ಮೆಗಾಱ' ನೋ.

**ನಲ್ಮೆಕಾಱಿಕೆ** (ನಾ). ನಲ್ಮೆಗಾರನ ಭಾವ; ಪ್ರೀತಿ; ಒಲುಮೆ: ಬೇಱರ ಮನೆಯಿತ್ತು ತಂಗಿಯರನು ನಲ್ಮೆಕಾಱಿಕೆವೆತ್ತ ಮೈದುನರಾ ಮೂಱು ಹೊತ್ತಾರಯ್ದುವೊಲಿದು ಮನ್ನಿಸಿದನು (ಭರತ. ೩೨-೮೫).

[ ನಲ್ಮೆಕಾಱ (< ನಲ್ಮೆಗಾಱ) + –ಇಕೆ ]

**ನಲ್ಮೆಗಾರ್ತಿ** (ನಾ). ಪ್ರೀತಿಯನ್ನು ಹೊಂದಿರುವವಳು; ಒಲವಿನವಳು; ನಲ್ಲೆ; ಪ್ರಿಯೆ: ಇದು ಮನಂಬಂದೊಡೆ ಕುರುಳಂ ಬೆರಲಂ ಬೇಡಿತ್ತವೆಂ ತೊಡಳಿಲ್ಲೆಂದು ನುಡಿದ ನಲ್ಮೆಗಾರ್ತಿಯ ನುಣ್ಣಾತಂ ಕೇಳ್ದು ಹರ್ಷಂದಾಳ್ದು (ರಾಜಶೇ. ೧೧-೦೫೭ ವ). [ ನಲ್ಮೆಗಾಱ + –$_1$ (< –ಇತ್ತಿ) ]

**ನಲ್ಮೆಗಾಱ**, ನಲ್ಮೆಕಾಱ (ನಾ). ಪ್ರೀತಿಯನ್ನು ಹೊಂದಿರುವವನು; ನಲ್ಲ; ಪ್ರಿಯ ; ಕಾದಲ ; ಓಪ. 'ನಲ್ಮೆಗಾರ್ತಿ' ಪರಾ. **ನಲ್ಮೆಕಾಱ** : 'ನಲ್ಮೆಕಾಱಿಕೆ' ಪರಾ. [ ನಲ್ಮೆ + – ಕಾಱ ]

**ನಲ್ಮೆವಾತು** (ನಾ). ಪ್ರೀತಿಯ ಮಾತು : ಏನು ಕಲಿತರೇನು ಫಲವು . . . ಕಲಿಯಲಿಲ್ಲ ನಲ್ಮೆವಾತು ದೇವಯಾನಿ ಕಲಿಪಳು (ಕವಿಸೋ. ೨೫-೧೧). [ ನಲ್ಮೆ + ಮಾತು₁ ]

**ನಲ್ಮೊಗ** (ನಾ). ಅಂದವಾದ ಮುಖ : ಅವರ ನಲ್ಮೊಗಗಳನ್ನು ಅಂಗಡಿಯೊಳಗಿನ ಹೊಗೆಯು 'ಪಾಲಿಸ್' ಮಾಡಿಬಿಟ್ಟಿತ್ತು (ಮುಂಗಾಪು. ೫೪). [ ನಲ್ + ಮೊಗ ]

**ನಲ್ಮೊರೆ** (ನಾ). ಒಳ್ಳೆಯ ಪ್ರಾರ್ಥನೆ: ಮಾನವ ಮಡಿಯಾಗಿಡಲು ದಮ್ಮಡಿಯ ತಮಡಿ ನಮಗೆ ಬೇಕೇತನಿಗೊ ನಲ್ಮೊರೆಯು ತಮಡಿ (ಗಡೀಶ. ೭೦-೬). [ ನಲ್ + ಮೊರೆ₂ ]

**ನಲ್ಲ₁** (ನಾ). ೧. ಪ್ರೀತಿಗೆ ಪಾತ್ರನಾದವನು ; ಪ್ರಿಯ : "ಕಾದಲಂ, ನಲ್ಲಂ, ಇನಿಯಂ, ಓಪಂ, ಮನದನ್ನಂ – ಈ ೫ ಪ್ರಿಯಂಗೆ ಪೆಸರ್" (ಕಶಸಾ. ೦೯-೩೮೯) ; ಅನುಪಮನಂ ಬರಿಪ್ಪೆನನುಂಬಾಗದೆ ನಲ್ಲನನೀಂದು (ಕವಿರಾ. ೨-೦೧೬); ನಿನ್ನ ನಾನನುವಿಪೆನೆನ್ನ ಮೆಯ್ಪಡವೊ ನಲ್ಲನ ಮೆಯ್ಪಡವೋ ನಿಶಾಕರಾ (ಆದಿಪು. ೦೨-೪೦) ; ನಲ್ಲಳ್ ನಲ್ಲನಂ ವ್ಯವಹಾರಿ ಪಡಪಂ . . . ನೆನೆವಂತು (ಧರ್ಮಾಮೃ. ೩-೦೯೦) ; ಒಡಲಿಲ್ಲದ ನುಡಿಯಿಲ್ಲದ ಕಡೆಯಿಲ್ಲದ ನಲ್ಲನ ಒಡಗೂಡಿ ಸುಖಿಯಾದೆ ಕೇಳಿರಯ್ಯ (ಮಹಾದೇ. ಬ. ೩೧-೬೬) ; ಎಲ್ಲರ ವರ್ಣಿಸಬಹುದು ಎನ್ನ ನಲ್ಲ ಗುರುದೇವನ ವರ್ಣಿಸಬಾರದು (ಸಿದ್ಧವ. ೧೦೬-೭೭೮) ; ಬಿಡದೆ ಸಿಂಗರಿಸಿ ನಲ್ಲರ ಗೋಷ್ಠಿಯೊಳಗಿಪ್ಪ ಮಡದಿಯರನೀಕ್ಷಿಸುತ (ಹಜಕಾ. ೪-೯) ; ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್ (ಯಶೋಚ. ೨-೪೨) ; ಕೆಳದೀ ನೀಂ ಬಲ್ಲೆಯೆಂತೆಂದನುವಿಸಿದಪೆ ಬೇಸತ್ತೆ ನಾಂ ನಲ್ಲನೇಕಿನ್ನೊಳಗಪ್ಪಂ ನೀನುಮಾನಂ ಸುಟಿಪ ಮದನನುಂ ಬಲ್ಲಿರಾವೆತ್ತ ಬಲ್ಲೆಂ (ಅನಂಪು. ೮-೦೨) ; ನಲ್ಲರ ಕಂಡು ನಗುವಳ ತನ್ನ ಬಲ್ಲಿದ ಗಂಡನ ಬೈದು ಕರೆವಳ . . . ಜಿಪ್ಪ್ಪೆ ಸೀಳಬೇಕು (ಪುರಂದ. ೨-೦೪-೪) ; ನಲ್ಲನಗಲಿಕೆಯಾಗ ಮನಕೆ ಕುಗ್ಗು (ನನಲ್ಲ. ೪-೧೧) ; ನಲ್ಲ ಮುಟ್ಟಿದ ಗಲ್ಲ, ನಲ್ಲೆಯ ಮೈಯೆಲ್ಲ ಹಿಗ್ಗಿನ ಮುಳ್ಳಿಗೆ ಸಿಕ್ಕ್ಹಂಗ (ಸಹೀಗೀ. ೫೧-೧೧). ೨. ಗಂಡ ; ಪತಿ : "ಕಾದಲನಂ ನಲ್ಲನುಮೆಂದೀ ಧರೆಯೊಳಗಿನಿಯ ನೋಪನಾ ಮನದನ್ನಂ ಸಾದರದೆ ಪತಿಯ ಪೆಸರುಗಳ್" (ಕವಿಕಂ. ೦೭೦) ; ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ ನಮ್ಮ ನಲ್ಲ ಸುಳಿಯಲಿಲ್ಲ ಸುಳಿದು ಸಿಂಗಾರವ ಮಾಡಲಿಲ್ಲ (ಬಸವ. ೮೯೯). ೩. ಒಡೆಯ; ಸ್ವಾಮಿ: ಧಾತ್ರೀಶ್ವರ ಚೂಡಾಮಣಿ ವಿಜಯಕ್ಕೆ ನಲ್ಲನಾಹವಮಲ್ಲ ಅವನೀಮಣ್ಡಳಮಂ . . . ಪಾಳಿಸಿದಂ (ಸೌಇಇ. IX-1, ೦೨೬-೦ ; 1064) ; ದಕ್ಷಿಣದಿಶಾವಿಷಯ ಗಡಿಯುಂಕವಲ್ಲಂ ವಿಬುಧಸಂದೋಹಕ್ಕೆ ನಲ್ಲಂ (ಎಕ. XI, ಚಿತ್ರದು. ೩೪-೦೩ ; 1123) ; ವೀರದ ಚಾಗದ ಕಾವ ಪೆರ್ಮ್ಮೆಗಾವಂ ತೋಣೆಯೆಂದು ಬಣ್ಣಿಪರು ಮಲ್ಲನನುದಘಯಶಕೆ ನಲ್ಲನಾ (ಎಕ. VI, ಕಡೂರು. ೩೦-೨೬ ; 1170) ; ಗುಣಕ್ಕೆ ನಲ್ಲ ಗಣೇಶಂ (ಶಮದ. ೭೫ ಪ್ರಯೋ). ೪. ಒಳ್ಳೆಯಂವನಂ ; (ಕ). ೫. ಒಳ್ಳೆಯತನ ; ಶ್ರೇಷ್ಠತೆ : "ಒಳಿತು, ನಲ್ಲ, ಲೇಸು, ಚೆನ್ನ" (ಕಂನುಹು. ೮೦). ೬. ಅಂದ ; ಚೆಲುವು : (ಕ).

**ನಲ್ಲರ್** (ಬಹುವ) ೧. ಪ್ರೀತಿಗೆ ಪಾತ್ರರಾದವರಂ: ಎರೆದರ್ ಸಂತುಷ್ಟರಾದರ್ . . . ಬಿರ್ದುಗೊಂಡಾಡುವ ಮದನಮದೋನ್ಮತ್ತೆಯರ್ ನಲ್ಲರಾದರ್ ನರರಾರ್ ನಿನ್ನನ್ನರಿನ್ನೀ ಭುವನಭವನದೊಳ್ ಗಂಗಚಕ್ರಾಯುಧಾಂಕಾ (ಕಾವ್ಯಸಾ. ೨೦೫ ಶೂದ್ರಕ). ೨. ಹಿತವರು : ಪೊಡೆವಡುವಪ್ಪಿಕೊಳ್ವ ನೆನೆಯುತ್ತಿರಿವೆಂಬ . . . ಕೈಯಿಡೆ ನಿಮಗೆಂದೊಡಂಬಡಿಪ ನಲ್ಲರಗಳ್ಕೆಗೆ ಕಣ್ಣನೀರ್ಗಳಂ ಮಿಡಿವ ಬಹುಪ್ರಕಾರಜನಸಂಕಟವೊಪ್ಪಿದುದಾ ಪ್ರಯಾಣದೊಳ್ (ಆದಿಪು. ೪-೫೭); ನಂಟರುಂ ಶಂಭುವೇ ನಲ್ಲರುಂ ಶಂಭುವೇ (ಅರಿರ. ದೇ. ೦೭೩-೦೫). ೩. ಪ್ರಿಯಪ್ರೇಯಂಸಿಯರುಂ ; ಪರಸ್ಪರ ಒಲಿದವರಂ : ಮಲ್ಲಿಗೆಗಳ್ ವಸಂತದೊಳ್ ಬಿರಿದೊಡೆ ನಲ್ಲರಂ ನೆನೆದು ನಲ್ಲರ ಮೆಲ್ಲೆರ್ದೆಗಳ್ ನಿರಂತರಂ ಬಿರಿವುವದೆಂತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ವೇಳೆಗೊಂಡುದೋ (ಆದಿಪು. ೧೧-೧೦೦) ; ನಲ್ಲರೊಳ್ಮೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಟಿಪ್ಪೊಡಾವ ಬೆಟ್ಟುಗಳೊಳವಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಪಂಪಭಾ. ೪-೨೮) ; ನಲ್ಲರ ಕೂಡುವಾಸೆಯೆ ಬರ್ದುಂಕುವುದರ್ಕೆ ನಿಮಿತ್ತಮಾಗದೇ (ಕಾದಂಉ. ೩೨೮) ; ಬೇಱೂರ್ಗೆ ಪೋದ ನಲ್ಲರ ನೆನೆದು ದೂಱಿಸುವ ನೀಱೆಯರ ನಿಡುಸುಯ್ಯ ಗಡಣದಿಂ ಜೌವನವೇಱೆಯುಂ (ಕಬ್ಬಿಕಾ. ೫೪). **ನಲ್ಲರ ಮರುಳ** = ಒಂದಂ ಬಿರುದಂ : ಮಹಾರಾಜಾ[ಧಿ]ರಾ[ಜನೆ (ನ)]ಲ್ಲರ ಮರುಳನಾನೆ[ಪೆಡೆ]ಙ್ಗಂ (ಎಇ. XIX, ೨೮೯-೪ ; 963). **ನಲ್ಲಳ್** = ೧. ಪ್ರಿಯೆ ; ಪ್ರೇಯಂಸಿ : "ಮನದನ್ನಳ್ ಕಾದಲೆಯೆಂದಿನಿಯಳ್ ತಾನೋಪಳೆಂದು ನಲ್ಲಳೆನಲ್ಕಂದನುನಯದಿಂ ಪ್ರಿಯೆ ತಾಂ" (ಕವಿಕಂ. ೦೭೨) ; ಕಿಲದೊಳ್ ನಿಲೆಯುಂ ಜ್ಯೋತ್ಸ್ನಾವಿಲಾಸದೊಳ್ ಬಗೆದನಿಲ್ಲ ನಲ್ಲಳನಿನಿಸಂ (ಕವಿರಾ. ೩-೯೪) ; ಅಗಲ್ಕೆ ಮುಳಿಸೆಂಬೆರಡುಂ ಗಡ ಕಾಳಕೂಟಮಾಗಮರ್ದಿನ ಕಾಳಕೂಟದೊಡವುಟ್ಟಿದಳೆಂದಪೆನೆನ್ನ ನಲ್ಲಳಂ (ಆದಿಪು. ೦೨-೩೮) ; ನಲ್ಲಳೊಲುಮೆಗಾಗಿ ಸಖಿ ಸಖಿ ದೂತಿಯರೆಲ್ಲರ ಮನ್ನಿಪನಂತೆ (ಭರತ. ೨-೪೫). ೨. ಹೆಂಡತಿ ; ಪತ್ನಿ : ಎನ್ನ ನಲ್ಲಳೆಯೆಂದು ಪ್ರಳಾಪಂಗೆಯ್ದು (ವಡ್ಡಾರಾ. ೦೯೧-೫) ; ಅಂತು ಕಂಡು ಮನಂಗೊಂಡೆತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡೆ (ಪಂಪಭಾ. ೦-೯೭ ವ). **ನಲ್ಲಿರ್** = (ಸಂಬೋಧನಾ ರೂಪದಲ್ಲಿ) ಒಳ್ಳೆಯವರಂ : ನಿಲ್ಲದಿರಿಂ, ಅಣ್ಣಂದಿರ್, ಓಡಿಂ. ತಡೆಯ ಪೊಟ್ಟಿಲ್ಲು, ಓ ನಲ್ಲಿರ್ (ಅಶ್ವತ್ಥಾ. ೩೩-೬೩೭). **P** ತಮಿಳಿನಲ್ಲಿ ವಂಧ್ಯವಂಪುರಂಷವಾಚಕ ಪ್ರತ್ಯಯಂವು ಗುಣವಚನಾದಿಗಳಿಗೆ ಹತ್ತಿ ಸಂಬೋಧನಾರ್ಥವನ್ನೂ ಕೊಡುತ್ತದೆ. ಉದಾ–"ನಲ್ಲೀರ್=ಒಳ್ಳೆಯವರೇ!" "ಪೆರಿಯಾಯ್= ಹಿರಿಯಂವನೇ (ಳೇ)!" (ಸಮಾಲೋ. ೨೫೨). [ ನಲ್ + – ಅ₇ ]

**ನಲ್ಲ₂** (ಗು). ೧. ಒಳ್ಳೆಯ ; ಚೆನ್ನಾದ ; ಶ್ರೇಷ್ಠವಾದ. 'ನಲ್ಲಗುಣ', 'ನಲ್ಲಪಾಲ್' ಪರಾ. ೨. ಅಂದವಾದ; ಸುಂದರವಾದ. 'ನಲ್ಲವೆಣ್' ಪರಾ. ೩. ಶುದ್ಧವಾದ ; ನಿರ್ಮಲವಾದ. 'ನಲ್ಲತೈಲ', 'ನಲ್ಲಭಕ್ತಿ' ಪರಾ. ೪. ಶುಭಕರವಾದ ; ಮಂಗಳಕರವಾದ. 'ನಲ್ಲವರಕೆ' ಪರಾ. [ ದೇ.॥ ತಮಿ. ಮಲ. ನಲ್ಲ, ತುಳು. ನಲ್, ನಲ ; ಕೊಡ.ನಲ್ಲೇ ; ತೆಲು. ನಲುವು ; ಗೊಂಡಿ. ನೆಲಾ ]

**ನಲ್ಲ₃** 'ನೆಲ್ಲ' ನೋ.

**ನಲ್ಲಂಬು** (ನಾ). ೧. ಮೋಹವನ್ನುಂಟುಮಾಡುವ ಬಾಣ : ನಲ್ಲಂಬಿಂದಿಸೆ ಪುಷ್ಪಬಾಣನೆರ್ದೆಯಂ ಬೆಂಬಿಟ್ಟು ಬೆಳ್ಳಾಗಿ ತಕ್ಕೆಲ್ಲಂ ಕೆಟ್ಟೆರ್ದೆಗೆಟ್ಟು (ಕಾವ್ಯಸಾ. ೫೫೦ ಶೂದ್ರಕ) ; ಪುಲ್ಲಶರಂಗಿಸುವೆಡೆಗಿವೆ ನಲ್ಲಂಬುಗಳೆನಿಸಿ ತುಱುಗಿ ಮಲರ್ದಲರ್ದೆಸೆವೀ ಮೊಲ್ಲೆಯುಮೊಲಿಸಿದ ನಲ್ಲರ ಲಲ್ಲೆಯುಂ ಮಾರಾರ ಮನಮುಮಂ ಸೋಲಿಸದೇ (ಆದಿಪು. ೧೧-೧೦೪) ; ಅಂಗಜಂ ಮೆಲ್ಲಗೆ ಪಾದಾರ್ದಾಗಳುಂ ಕಿನ್ನರಯುವತಿ ಮೃಗೀವ್ರಾತಮಂ ತನ್ನ ನಲ್ಲಂಬುಗಳಿಂದೆಚ್ಚೆಚ್ಚು ಮೆಚ್ಚಂ ಸಲಿಸುವಂ (ಪಂಪಭಾ. ೪-೨೩). ೨. ತೀಕ್ಷ್ಣವಾದ ಬಾಣ ; ಹರಿತವಾದ ಬಾಣ : ತನ್ನ ನಲ್ಲಂಬುಗಳಿಂದಮಾರ್ದಿರದಡಂತಿಸೆ ಭೂಭುಜರೆಲ್ಲಮಲ್ಲಿ ಬಿಲ್ಲಂಬೆಱಗಾಗೆ (ಪಂಪಭಾ. ೧೧-೪೨) ; ಅವರ ಪಿಡಿವ ಬಿಲ್ ಬಿಲ್ಲೆಮ್ಮೆಂಬುಗಳುಮವರಿತ್ತ ನಲ್ಲಂಬುಗಳೆನೆ ಬಱಗಾಯದಂತು ಚಲಮನೆ ಕಾಮೆಂ (ಪಂಪಭಾ. ೦೨-೩೯). [ ನಲ್ + ಅಂಬು₂ ]

**ನಲ್ಲಗನ್ನೆ** (ನಾ). ಒಂದಂ ಬಗೆಯಂ ಗಿಡ : ಕೊರ್ಮೆ, ಗನಿಜೆಲೆ, ಈಜಿಮುಳ್ಳು, ಕೊಂಬೆ, ನಲ್ಲಗನ್ನೆ (ಮೃಜಿಗಿ. ೦೫-೨೭೦). [ ? ]

**ನಲ್ಲಗುಣ** (ನಾ). ಒಳ್ಳೆಯ ಗುಣ ; ಸದ್ಗುಣ : ಬಳಿಯಂ ಬೆಳಗಿಪ್ಪಂ ತಾಂ ತನ್ನ ನಲ್ಲಗುಣಂಗಳಿಂ (ಸೌನಂದ. ೨-೩೪). [ ನಲ್ಲ$_2$ + ಗುಣ ]

**ನಲ್ಲತನ** (ನಾ). ಒಳ್ಳೆಯತನ ; ಸಜ್ಜನಿಕೆ : ನಲ್ಲತನಕೆ ಬಲ್ಲತನಕೆ ಲೋಕದೊಳು ನೀನಲ್ಲದುಂಟೆ ನಿನ್ನ ನಡೆಗೆ ನಲ್ಲರು ನಾರಿಯರೊಲಿವರು (ಭರತ. ೬೬-೩೯). [ ನಲ್ಲ$_2$ + -ತನ ]

**ನಲ್ಲತೈಲ** (ನಾ). ಒಳ್ಳೆಣ್ಣೆ ; ಶುದ್ಧವಾದ ಎಣ್ಣೆ ; ಅಚ್ಚ ಎಣ್ಣೆ : ನಲ್ಲತೈಲ ದೊಳಡರ್ವ ಸೊಡರಾ ಎಳ್ಳಿನಿಂದಲರುವುದೆ (ಬಸವು. ೩೦-೩೬). [ ನಲ್ಲ$_2$ + ತೈಲ$_1$ ]

**ನಲ್ಲತ್ತೂರ್** (ನಾ). ಒಂದು ಊರಿನ ಹೆಸರು : ಪುತ್ತೂರುಡೆ ಶಿವಮಾರಮ್ಮಂ ದುಣ್ಣಗೆಗ್ಗಂ ನಲ್ಲತ್ತೂರೊಡೆ ಬಗ್ಗಮನೆ ಬಳಿಗಮುಂ ಅಯ್ಯೂಮುಪ್ಪು . . . ಕೊಟ್ಟೊದು (ಎಕ. X, ಕೋಲಾರ. ೨೩೦-೩ ; ಸು. 800 ?). [ ? + ಊರ್ ]

**ನಲ್ಲಪಾಲ್** (ನಾ). "ಒಳ್ಳೆಯ ಅದೃಷ್ಟ, ಸೌಭಾಗ್ಯ" (ಅಂತಿಗೊ. ಕೋಶ) : ಈಯೊಂದು ನಲ್ಲಪಾಲಿನಗೆ ತಾನ್ ಬಂದತ್ತು (ಅಂತಿಗೊ. ೧೯-೩೮೪). [ ನಲ್ಲ$_2$ + ಪಾಲ್$_2$ ]

**ನಲ್ಲಭಕ್ತಿ** (ನಾ). ಶುದ್ಧವಾದ ಭಕ್ತಿ : ನಲ್ಲಭಕ್ತಿಯೊಳಿರ್ದು ಏಣಾದಿನಾಥ ಭೂವಲ್ಲಭನ ಭಕ್ತಿಗಾನಂದಿಸಿ (ಗುರುಬಾ. ೩-೪೩). [ ನಲ್ಲ$_2$ + ಭಕ್ತಿ ]

**ನಲ್ಲಮನ** (ನಾ). ೧. ಒಳ್ಳೆಯ ಮನಸ್ಸು. ೨. ಅನುರಾಗದಿಂದ ಕೂಡಿದ ಮನಸ್ಸು. 'ನಲ್ಲಮನಂದೋಱು' ಪರಾ. [ನಲ್ಲ$_2$ + ಮನ$_1$ ]

**ನಲ್ಲಮನಂದೋಱು** (ಕ್ರಿ). ೧. ಒಳ್ಳೆಯ ಮನಸ್ಸನ್ನು ತೋರಿಸು. ೨. ಒಲವನ್ನು ತೋರಿಸು ; ಅನುರಾಗವನ್ನು ವ್ಯಕ್ತಪಡಿಸು : ಈಕೆಯು ಮೆನಗೆರಡಱಿಯದ ನಲ್ಲಮನಂದೋಱುವುದು ಸಲ್ಗೆದೋಱುವುದುಮಾವುದು ದೋಸಂ (ಶಂಪಥಾ. ೩-೧೭ ವ). [ ನಲ್ಲಮನ + ತೋಱು ]

**ನಲ್ಲಮುದ್ದು** (ನಾ). ಪ್ರೀತಿಯ ಮುದ್ದು,-ಲಲ್ಲೆ : ನಲ್ಲಮುದ್ದಿಗೆ ಬಯಸುವಂ ಮನದಲ್ಲಿ ಕೇಳ್ವನು ನಸುತೊದಲಿಸುವ (ಬಸವು. ೪೭-೩೨). [ ನಲ್ಲ$_2$ + ಮುದ್ದು ]

**ನಲ್ಲಯ್ಯ** (ನಾ). ಒಬ್ಬಾತನ ಹೆಸರು : ದಾತಾರಂ ದೇಯಿಮಯ್ಯಸೆಟ್ಟಿಯರಗಂ ಮುಟ್ಟಿಂ [ನ]ಲ್ಲಯ್ಯನುಂ ಮರಳಯ್ಯನುಂ (ಸೌಇಇ. XX, ೧೯-೬೦ ; 1016). [ ನಲ್ಲ$_2$ + ಅಯ್ಯ$_1$ ]

**ನಲ್ಲರಿವು** (ನಾ). ಒಳಿತುಂ ಕೆಡಂಕಂಗಳ ತಿಳಿವಳಿಕೆ ; ಸದಸದ್ವಿವೇಕ : "ಒಪ್ಪುತಪ್ಪುಗಳ ಪ್ರಜ್ಞೆ ; ಸದಸದ್ವಿವೇಚನೆ . . . ಒಳುಪಿನರಿವು ; ನಲ್ಲರಿವು" (Conscience. ಇಂಕನಿ). [ ನಲ್ + ಅರಿವು (<ಅಱಿವು) ]

**ನಲ್ಲರೂಪು** (ನಾ). ಅಂದವಾದ ರೂಪ; ಸುಂದರವಾದ ರೂಪ: ನಲ್ಲರೂಪಿಲ್ಲೆಂದೊಡೀಕ್ಷಿಸು ಚೆಲ್ಲೆಗಂಗಳಿಂ (ಬಸವು. ೪೦-೦೪). [ ನಲ್ಲ$_2$ + ರೂಪು ]

**ನಲ್ಲಲರ್** (ನಾ). ಅಂದವಾದ ಹೂವು ; ಸುಗಂಧಭರಿತವಾದ ಪುಷ್ಪ : ನಲ್ಲಲರ ಕಂಪು ಪೀನಸದಲ್ಲೊಂದಿದವಂಗೆ ಸೊಗಸದಿರೆ ಕೆಟ್ಟಪುದೇ (ಉದ್ಭಟ. ೦-೧೭). [ ನಲ್ + ಅಲರ್$_2$ ]

**ನಲ್ಲಲೋಹ** (ನಾ). ಉತ್ತಮವಾದ ಧಾತು,-ಲೋಹ ; ಚಿನ್ನ : ಬೆಳ್ಳಿ ಮೊದಲಾದ ಮುರುಹು ತಾಂಬ್ರಂ ನಲ್ಲಲೋಹಂ ಕಂಚು ಮೊದಲಾದೆಲ್ಲವಂ ಒಟ್ಟೈಸಿ ತರಿಸಿ (ಬಸವು. ೧೬-೮). [ ನಲ್ಲ$_2$ + ಲೋಹ ]

**ನಲ್ಲವರಕೆ** (ನಾ). ಮಂಗಳಕರವಾದ ಹರಕೆ ; ಶುಭಾಶೀರ್ವಾದ : ಅವರ್ ನಲ್ಲವರಕೆಯಂ ಪರಸುವುದುಂ (ನೇಮಿಪು. ೯-೮೬ ವ). 'ನಲ್ವರಕೆ' ಪರಾ. [ ನಲ್ಲ$_2$ + ಪರಕೆ$_1$ ]

**ನಲ್ಲವಸ್ತು** (ನಾ). ಪ್ರಿಯವಾದ ವಸ್ತು : ಗೌರೀವಲ್ಲಭು . . . ನಲ್ಲವಸ್ತುಗಳಂ ಬಯಸುವಂ (ಬಸವು. ೨೩-೧೮). [ ನಲ್ಲ$_2$ + ವಸ್ತು ]

**ನಲ್ಲವೂ** (ನಾ). = ನಲ್ಲಲರ್ : ಅವಿರಳವಾಗಿ ಝುಂಕರಿಸುತುಂ ವನವಲ್ಲಿಯ ನಲ್ಲವೂಗೆ ಪಾಱುವ ಮದಭೃಂಗಸಂಚಯ (ಕುಸುಮಾ. ೧೪-೨೩). [ ನಲ್ಲ$_2$ + ಪೂ$_2$ ]

**ನಲ್ಲವೆಣ್** (ನಾ). ಅಂದವಾದ ಹೆಣ್ಣು ; ಸುಂದರಸ್ತ್ರೀ : ನಲ್ಲವೆಂಗಳ ಪೆತ್ತವರು ಪೆಣ್ಣ ತಂದರದಿಲ್ಲದಿದ್ದವರು ಭೂಷಣವ ಝಲ್ಲಿಪಟ್ಟಿಗಳು ಮುಂತಾದವ ತಂದಿದ್ದರೆಲ್ಲರ ಕರೆಸಬೇಕೆಂದ (ಭರತ. ೩೦-೦೬). [ ನಲ್ಲ$_2$+ ಪೆಣ್ ]

**ನಲ್ಲವೊಣರ್** (ನಾ). ನಲ್ಲರ ಜೋಡಿ ; ಪ್ರಿಯ ಪ್ರೇಯಸಿಯರ ಜೊತೆ : ಕಂದದೊಳ್ ಭುಜಲತಾವಳಿ ತಳ್ತಿರೆ ಬಾಯೊಳಗೊಂದಿ ಬಾಯ್ ತೊಡರ್ದಿರೆ ಕೂಡೆ ನಿದ್ದೆ ತಿಳಿದೆರ್ದುವು ನಲ್ಲವೊಣರ್ ನಿಶಾಂತ್ಯದೊಳ್ (ಸೂಕ್ತಿಸು. ೯-೬೦). [ ನಲ್ಲ$_2$ + ಪೊಣರ್$_2$ ]

**ನಲ್ಲವೋಗಂಡಿಕೆ** (ನಾ). ತನ್ನ ಸಮಾನರಿಲ್ಲವೆಂದು ಭಾವಿಸುವಿಕೆ ; ಅತಿಶಯವಾದ ಒಣಜಂಬ ; ಅಧಿಕವಾದ ದುರಹಂಕಾರ : "ಆಹೋಪುರುಷಿಕಾ ಎಂಬುದು ನಲ್ಲವೋಗಂಡಿಕೆ[ ಒಣಜಂಬ, ವೃಥಾದರ್ಪ ]" (ಹಲಾಯು. ೧೨೯-೯೯). [ ನಲ್ಲ$_2$ + ಪೋಗಂಡಿಕೆ ]

**ನಲ್ಲಳಿ** (ನಾ). (?) : ಮಿಸುಗುತುಮಿರ್ಪ ಬಲ್ಲೊನೆಯ ಸನ್ನೆಗೆ ಕಾಂಚನಕೇತಕೀ ದಳಪ್ರಸವದಳಂಗಳೋಲೆಗೊಡೆ ನಲ್ಲಳಿಗಪ್ಪುವು ನಂದನಂಗಳೊಳ್ (ಸೂಕ್ತಿಸು. ೪-೩೪). [ ? ]

**ನಲ್ಲಾಉ** 'ನಲ್ಲಾವು' ನೋ.

**ನಲ್ಲಾಟ** (ನಾ). ಉಲ್ಲಾಸಕರವಾದ ಆಟ ; ಚೆಲ್ಲಾಟ ; ವಿನೋದ : "ಆಟ, ಕೇಳಿ, ಚೆಣ್ಣಾಟ (ಕೂಸಾಟ), ಹುಡುಗಾಟ, ನಲ್ಲಾಟ" (ಕಂನುಹು. ೬೮) ; ಪುಲ್ಲೆಗಂಗಳೆ[ ಳೆ ]ಯರ ಚಲ್ವಿಕೆಗಳ ಕಂಡು ನಲ್ಲಾಟ ವಾಡುವೆ ಖುಲ್ಲಮನವೆ (ಮೈಲಾರ. ೧೯೮-೮). [ ನಲ್ + ಆಟ ]

**ನಲ್ಲಾಮು** (ನಾ). ಒಂದು ಬಗೆಯ ತೆರಿಗೆ : ಚಳಾಯು ದಾಯ ದೇಟಿ ಹಡುವರ ಬೀರವಣ ನಲ್ಲೆತ್ತು ನಲುಗಂಟಿ ನಲ್ಲಾಮು ದಣ್ಣಾಯ ತವುಡೆಯೊಳಗಾದ ಸಮಸ್ತ ಕಿಱುಕುಳವೆಲ್ಲವಂ (ಎಕ. V, ಬೇಲೂರು. ೩೯-೮೭ ; 1117). 'ನಲ್ಲಾವು' ಪರಾ.

[ ☞ ಇದು ' ನಲ್ಲಾವು ' ಎಂಬುದರ ಅಪಲಿಖಿತವಿರಬಹುದು ]

**ನಲ್ಲಾಲ** (ನಾ). ಒಂದು ಊರಿನ ಹೆಸರು : ಕೊಱಕುಂದವಿಷಯೋ ನಲ್ಲಾಲನಾಮಗ್ರಾಮಃ (ಮೈಆರಿ. ೧೯೨೪, ೭೯-೩೪ ; ಸು. 6ನೆಯ ಶತ). [ ? ]

**ನಲ್ಲಾವು**,ನಲಾವು, ನಲ್ಲಾಉ, ನಾಲ್ಲಾವು (ನಾ). ಒಳ್ಳೆಯ ಹಸುಗಳ ಮೇಲೆ ಹಾಕಂತ್ತಿದ್ದ ಒಂದು ಬಗೆಯ ತೆರಿಗೆ : ಎಳ್ಳು ಜೋಳ ನಲ್ಲಾವು ನಲ್ಲೆತ್ತು ಕಳಕು ಕಂಡಿಕೆವಣ . . . ಆಗಾನ್ನುಕವೊಳಗಾಗಿ ಸರ್ವಾಯ ಶುದ್ಧಿ (ಎಕ. VI, ತರೀಕೆ. ೨೦-೨೮ ; 1186); ಮಾನಿಬ್ಬರು ಮಹಾಜನಂಗಳ ಭೋಜನಕ್ಕಂ ಬಿಟ್ಟ ನಲ್ಲೆಂಮೆ ನಲ್ಲಾವು . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಸೌಇಇ. IX-1, ೩೪೯-೭ ; 1282). **ನಲಾವು :** ಶ್ರೀಕರಣ ಸುಂಕ ಪಂನಾಯ ಅಡಕೆಯ ಸುಂಕ ಹಣವೊಂದಱ ಸೇಸೆ ವೀರಸೇಸೆ ತೊಡರು ನಲಾವು ನಲ್ಲೆತ್ತು ಕಳಕು ಕಂಡಿಕೆವಣ . . . ಧಾರಾಪೂರ್ವಕಂ ಮಾಡಿ ತಾಂಮ್ರಶಾಸನಮಂ ಕೊಟ್ಟರು (ಮೈಆರಿ. ೧೯೪೦, ೩-೨೫ ; 1215). **ನಲ್ಲಾಉ :** ಗ್ರಾಮಗದ್ಯಾಣ ನಲ್ಲಾಉ ಸುಂಕ ತಳವಾರಿಕೆ (ಎಕ. VIII, ತೀರ್ಥಹ. ೧೬೮-೨೬ ; 1420). **ನಾಲ್ಲಾವು :** ನಾಲ್ಲಾವು ನಲ್ಲೆತ್ತು ಗ್ಗಪವಿ (ಎಕ. V, ಹಾಸನ. ೮೪-೩೩ ; 1230). 'ನಲ್ಲೆತ್ತು' ಪರಾ. ☞ ಇಲ್ಲಿ ಮುಖ್ಯೋಲ್ಲೇಖವನ್ನುಳಿದಂ ಮಿಕ್ಕುವು ಅಪಲಿಖಿತ. [ ನಲ್ + ಆವು ]

**ನಲ್ಲಿ**$_1$, ನಳಿ$_3$, ನಳ್ಳಿ$_2$ (ನಾ). ೧. ನಾಳ ; ಕೊಳವೆ : "ನಲ್ಲಿ – ನಾಲೀ = ನಳ್ಳಿ " (ತದ್ಭಕೋ. ೨೦). ೨. ನೀರನ್ನು ಪೂರೈಸುವ ಕೊಳವೆ ;

ಕೊಳಾಯಿ ; ನಳ : ನನ್ನ ವಾಗ್ವಾಹಿನಿ ಬೇಸಗೆ ದಿನದ ನಲ್ಲಿಯ ನೀರಿನಂತೆ ತೊಟತೊಟ ಎಂದು ಕ್ಷೀಣವಾಗಿ ಜಿನುಗುತ್ತಿತ್ತು (ನಂಟರು. ೩೯) ; ಎಲ್ಲಿ ತಿರುಗಿದರಲ್ಲಿ ಅಮೃತ ಸೂಸುವ ನಲ್ಲಿ (ಹಂಡಮು. ೮-೧೦೦) ; ಬೆಳಗ್ಗೆ ಆಕೆ ಎಂದಿನಂತೆ ನೀರಿನ ನಲ್ಲಿಯನ್ನು ತೆರೆದಿದ್ದು ಕೇಳಿಸಿತು (ಒಂಟಿದ. ೬೯). ನಳಿ₃ : ೨. ಶರೀರದಲ್ಲಿರುವ ಯಾವುದೇ ನಾಳ,– ತಂತಂ : ಬೆನ್ನ ನಳಿಯಂತೆ ಬಂಗೆ ವಂನ್ನಣೆಯುಂ ಪಿರಿದಕ್ಕು ಉನ್ನತವಕ್ಕು ಸಿರಿಯಂಕ್ಕು (ಸರ್ವಜ್ಞ. ೫೪೭). ೩. ಕೊಳವೆ ಅಥವಾ ನಾಳದಂಥ ಸಾಧನ : ಅವನು ಟೆಲಿಫೋನಿನ ನಳಿಗಳನ್ನು ಕೆಳಗಿಟ್ಟು, ಕಳ್ಳನ ಈ ಕಿವಿಮಾತುಗಳನ್ನು ಯೋಚಿಸುತ್ತ ಕುಳಿತುಕೊಂಡನು (ಕಳ್ಳಕಾ. ೧೮) ; ರಾವಜೀಕರಾರಾನ ಜೋಡುನಳಿಯ ಬಂದೂಕಿನಿಂದ ಅಗ್ನಿ ಕಿಡಿ ಸಿಡಿಯಬೇಕು (ದೀಪಹ. II, ೨೨೨). ನಳ್ಳಿ₂ : ೧. ಕೆಲವು ಮನೆಗಳಲ್ಲಿ ಕೊಳಚೆ ನೀರು ಹೋಗಲು ನಳ್ಳಿಗಳಿರುತ್ತವೆ (ಆಡುಸಾ. ೪೦).

ನಲ್ಲಿ ನಿಲ್ಲು = ನೀರು (ಕೊಳಾಯಿಯಲ್ಲಿ) ನಿಂತುಹೋಗು : ನೀರು ತುಂಬಿಟ್ಟುಕೊಳ್ಳುವಷ್ಟರಲ್ಲಿ ನಲ್ಲಿ ನಿಂತುಹೋಯಿತು (ರೂಢಿ). ನಲ್ಲಿ ಬರು = (ಕೊಳಾಯಿಯಲ್ಲಿ) ನೀರು ಬರು : ಕಾಲಕ್ಕೆ ಸರಿಯಾಗಿ ಈಚೀಚೆಗೆ ನಲ್ಲಿ ಬರದೆ ತುಂಬಾ ಕಷ್ಟವಾಗಿದೆ (ರೂಢಿ). [ < ಸಂ. ನಾಲಿ, ನಾಲೀ ]

**ನಲ್ಲಿ₃** (ನಾ). ಒಂದು ಬಗೆಯ ಭೂಮಿ (?) : ಮೂವತ್ತೆರಡು ಹೊಂನಿಗೆ ಕ್ರಯುವ ಕೊಂಡ ಮಾನಿಯ ಬೈಲ ಒಳಗೆ ನಲ್ಲಿ ಹುಲ್ಲಿ ಸಹ ಬೀಜವರಿ ಖಂ ರಕ್ಕಂ(ಎಕ. VI, ಕೊಪ್ಪ. ೩೨-೦೬ ; 1448). [ ? ]

**ನಲ್ಲಿತಿರುಪು** (ನಾ). ಕೊಳಾಯಿಯಿಂದ ಬೇಕಾದಾಗ ನೀರನ್ನು ಹರಿಬಿಡಲೂ ಬೇಡವಾದಾಗ ತಡೆಯಲೂ ಅನುಕೂಲವಾಗುವಂತೆ ಅಳವಡಿಸಿರುವ ತಿರುಪು : ನಲ್ಲಿತಿರುಪು ಸಡಿಲವಾಗಿ ನೀರು ವ್ಯರ್ಥವಾಗಿ ಸುರಿಯುತ್ತಿದೆ (ರೂಢಿ). [ ನಲ್ಲಿ₁ + ತಿರುಪು₂ ( < ತಿರಿಪು₂ ) ]

**ನಲ್ಲಿಟುಂಪೆ** (ನಾ). ೧. ಇರುವೆಗಳಲ್ಲಿ ಒಂದು ಬಗೆ. ೨. ಕರಿ ಇರುವೆ ; ಕಟ್ಟಿರುವೆ : ಧರೆಯೊಳ್ ಸಂಜಿಲಿ ನಲ್ಲಿಟುಂಪೆ ಮೊದಲಾದೆಲ್ಲಂ ವಿಷಗ್ರಾಹಿಗಳ್ (ಖಪುದ. ೧-೬೯).

[ ನಲ್ಲ₀ + ಇಟುಂಪೆ. / ತಮಿ. ತೆಲು. ನಲ್ಲ = ಕಪ್ಪು ]

**ನಲ್ಲುಗುಳು** (ನಾ). (ಮಕ್ಕಳ) ಆಕರ್ಷಕವಾಗಿರುವ ಉಗುಳು : ಉಸುರಿನಿಂದುಣ್ಮುತಿಪ ಸೊಲ್ಲುಗಳ ಗಲ್ಲುಗಳ ವಿಸರದಿಟುಬಿನೊಳೀವ ಬೊಲ್ಲುಗಳ ನಲ್ಲುಗ[ಗು]ಳ ಪಸರಿಸುವ ಕೂಸಾಟದಾಟಗಳ ನೋಟಗಳ ಪಸುಳೆ ಪರಿಶೋಭಿಸಿದಳು (ಮದೇಪು. ೧೭-೧೧).

[ ನಲ್ + ಉಗುಳು₃ ( <ಉಗುಟ್₂ ) ]

**ನಲ್ಲುಣಿಸಿಕ್ಕು** (ಕ್ರಿ). ಸವಿಯಾದ ಊಟವನ್ನು ಬಡಿಸು ; ರುಚಿಯಾದ ತಿನಿಸುಗಳನ್ನು ನೀಡು : ಪರಿಮಳವಾರಿಯಿಂ ಜಳಕಮಾಗಿಪ ನಲ್ಲುಣಿಸಿಕ್ಕುವ . . . ಬೆಳ್ಳಿಲೆಯಂ ಮಡಿದೀವ ದಿವ್ಯಚಾಮರಮನೆ ಬೀಸುವಗ್ಗದ ವಿದಗ್ಧೆಯರೊಪ್ಪಿರೆ ದೇವಿ ರಂಜಿಪಳ್ (ರಾಜಶೇ. ೪-೪೦).

[ ನಲ್ಲುಣಿಸು + ಇಕ್ಕು ]

**ನಲ್ಲುಣಿಸು** (ನಾ). ಸವಿಯಾದ ಊಟ ; ರುಚಿಕರವಾದ ಆಹಾರ ; ಒಳ್ಳೆಯ ತಿನಿಸು : ಅಱುತೆರ್ದೆಯಾಱೆ ಪೀರ್ದುಂ . . . ಗೆಲೆವಕ್ಕಿಯೆಲ್ಲಮಂ ನೆಱೆ ಬಱಿಯಟ್ಟಿ ನಲ್ಲುಣಿಸನೂಡಿಯುಮಾವ್ರದ ತೋರವಣ್ಣೊಳೊಂದಱ ರಸದಂತುಗಾಣದೆ ದಲೊಂದು ಶುಕಂ ಮಧುಸಮ್ಮದೋತ್ಸುಕಂ (ಚಂದ್ರಪ್ರ. ೭-೪೭) ; ನಸು ಬಿಸಿಯಪ್ಪ ನಲ್ಲುಣಿಸಿನಿಂ . . . ಏಸಕದ ಶೋಣ ವರ್ಣವಸನಾವೃತದಿಂ ಜನಮಾಗಳಂತು ಜೀವಿಸಿತಿನಿತಲ್ಲದಂದುಱೆವುದೇ ಹಿಮದಾಗರವಾದ ಮಾಗೆಯೊಳ್ (ಕುಸುಮಾ. ೭-೨೩) ; ಮಜ್ಜನವ ಮಾಡಿಸಿ ನಲ್ಲುಣಿಸನಿಟ್ಟನುಪಮಸ್ನೇಹದಲಿ ಸಂತುಷ್ಟತೆಯ ಮಾಡಿದಳು (ಸಾಳ್ವಭಾ. ೧೭-೩೭) ; ನಲ್ಲುಣಿಸುಗಳನಟ್ಟು ತಂದಿಹನ್ (ಶ್ರೀರಾಮಾ. ೧೫೫-೮೫). [ ನಲ್ + ಉಣಿಸು₂ ]

**ನಲ್ಲುಲಿ** (ನಾ). ೧. ಹಿತವಾದ ಮಾತು; ಒಳ್ಳೆಯ ನುಡಿ: ಗಾನದ ಮೆಲ್ಲುಲಿ ಶ್ರುತಿಶಾಸ್ತ್ರವ್ಯಾಖ್ಯಾನದ ನಲ್ಲುಲಿ . . . . ಎಸೆಗಾ ಹುರದೆಲ್ಲೆಡೆಯರ ಬೀದಿಯೊಳು (ಉದ್ಭದೇ. ೨-೩೭). ೨. ಮಧುರವಾದ ಧ್ವನಿ ; ಇಂಪಾದ ಉಲಿ : ಹೆಲನರಿನ್ ಮೊದಲೆದ್ದುದೊಂದಾರ್ಪು – ಬಲ್ಲುಲಿಯ, ನಲ್ಲುಲಿಯ ಪಾಡು, ದೀವಿಕರೆಯರೆಗಳಿನ್ ಮೊಳಗೆ ಮಾರುಲಿಗಳ್ (ಪಾರಸಿ. ೧೫-೩೫೩).

[ ನಲ್ + ಉಲಿ₂ ]

**ನಲ್ಲೂರ್, ನಲ್ಲೂರು** (ನಾ). ಒಂದು ಊರಿನ ಹೆಸರು : ತತಃ ಗ್ರಾಮ ತ್ರಯ ಸೀಮಾ ಅಶ(ಶ್ವ)ತ್ಥ ತತ ನಲ್ಲೂರ್ತಟಾಕಸ್ಯ ದಕ್ಷಿಣಾನ್ತಭಾಗ (ಮೈಆರಿ. ೧೯೪೨, ೬೫-೧೦೮ : 819). **ನಲ್ಲೂರು** : ಪೂವಿನ ಪುಲ್ಲಿಮಜ್ಜಲ ಕೂತನಿಡುನಲ್ಲೂರು ನಲ್ಲೂರು ಕೊಮರಜ್ಜುನ್ದು ಇಗ್ಗಲೂರು (ಎಕ. IX, ಬೆಂಗಳೂ. ೮೩-೬ ; ಸು. 890) ; ಇದಕ್ಕೆ ಸಾಕ್ಷಿ . . . ಕಿಱಿಯ ಮುಗುಳಿ ಮುಟಿವಳ್ಳಿ ನಲ್ಲೂರು ಪಾಗಣ್ಣ ತೇಗುರು (ಎಕ. VI, ಚಿಕ್ಕಮ. ೪೨-೨೨ ; 959) : × × × ಚ ಗಾವುಣ್ಣನುಂ ನಲ್ಲೂರೆಱೆಯಂಗ ಗಾವುಣ್ಣ × × × (ಎಕ. I (R), ೬೫-೦೨ ; 11ನೆಯ ಶತ). [ ನಲ್ಲ₂ + ಊರ್ ]

**ನಲ್ಲೂರು** 'ನಲ್ಲೂರ್' ನೋ.

**ನಲ್ಲೆ** (ನಾ). ೧. ಪ್ರಿಯೆ ; ಕಾದಲೆ : ನಕ್ಕನು ಕೃಷ್ಣ ನಲ್ಲೆಯ ಮಾತ ಕೇಳ್ದು (ಮೋಹತ. ೪-೨೨) ; ನಲ್ಲೆಯಂ ನೆನೆಯುತ್ತ ಬಿಕ್ಕಿದಂ (ಸಾನಂದ. ೭-೩) ; ಬದುಕಿನೊಳವಂ ಕಡೆಗಣ್ಣ ಕೂಡಲಿಂದರಿವಂತೆ ನಲ್ಲೆ, ನಿನ್ನೊಳವನೇತರಿಂ ನಾನರಿಯ ಬಲ್ಲೆ? (ನಿವಿಂ. ೨೦-೩೫) ; ನಲ್ಲೆ ವರಿಸಿದಳೆನ್ನ (ಅನಿಕೇ. ೯-೭). ೨. ಹೆಂಡತಿ : ನಲ್ಲೆ ಲಕ್ಷ್ಮೀಮತಿಯು ಸಹ ತಾನುಲ್ಲಸದಿ ಕುಳ್ಳಿರಲು (ನಾಗಪ. ೩೦-೫೪). [ ನಲ್ಲ₁ + – ಎ₂ ]

**ನಲ್ಲೆಣ್ಣೆ** (ನಾ). ಅಡುಗೆಗೆ ಉಪಯೋಗಿಸುವ ಎಣ್ಣೆ ; ಒಳ್ಳೆಯ ಎಣ್ಣೆ : ಎಳೆಯ ಬಾಳೆಯ ಹೂವಿನೆಸಳ ಕಾಯ್ಗಳನು ಸಂಬಳಿಸಿದಾ ಹುಡಿಗೆ ನಲ್ಲೆಣ್ಣೆ ಸುಣ್ಣವನಿಕ್ಕಿ ತಿಳಿಯಕ್ಕಿಗಟ್ಟಿನಿಂದುಕ್ಕರಿಸಿ (ಸೂಪಶಾ. ೪-೬೪).

[ ನಲ್ + ಎಣ್ಣೆ ]

**ನಲ್ಲೆತ್ತು** (ನಾ). ೧. ಒಳ್ಳೆಯ ಎತ್ತು ; ಉತ್ತಮವಾದ ವೃಷಭ : ನಲ್ಲೆತ್ತುವಿಡಿದು ನಾಡೊಳಗೆಲ್ಲಂ ಪೆಸರ್ವೆತ್ತ ಜೀವದನವಂ ಕೊಂಡೊಯ್ದುಲ್ಲಲ್ಲಿ ವೀರಪೂರ್ಣಂ ನಿಲ್ಲದೆ (ಪುಣ್ಯಾಸ್ರ. ೬-೦೮) ; ನಲ್ಲೆತ್ತು ಬಂಡಿ ಬಲವಿಲ್ಲದ ಆರಂಬ ಕಲ್ಲು ಕಸಗಳನು ಬಿಟ್ಟಾತ ಹೊಲದೊಳಗೆ ಹುಲ್ಲನೇ ಬೆಳೆವ (ಸರ್ವಜ್ಞ. ೧೩೬೦). ೨. ಒಳ್ಳೆಯ ಎತ್ತುಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ನಲ್ಲಾವು ನಲ್ಲೆತ್ತು ಕಳುಕು (ಎಕ. VI, ತರೀಕೆ. ೨೦-೨೮ ; 1185) ; ನಲಾವು ನಲ್ಲೆತ್ತು ಕಳುಕು ಕಂಡಿಕೆವಣ (ಮೈಆರಿ. ೧೯೪೦, ೩-೨೫ ; 1215) ; ನಲ್ಲೆತ್ತು ನಲ್ಲಎಡ್ಡಾಯಗೋಣಿ ಕವಡಿಯಿಲ್ಲ (ಎಕ. IV (R), ಕೊಳ್ಳೇಗಾ. ೬೨-೩೦ ; 1364) ; ಕ್ರಯ ಕಡ್ಡಾಯ ನಲ್ಲೆತ್ತು ನಲ್ಲೆಮ್ಮೆ ಪೊಂಬಳಿ × × × (ಮೈಆರಿ. ೧೯೩೪. ೫೩-೧೦ ; 1405) ; ಕ್ರಯ ಕಡಾಯ ಛಿಟ್ಟಿ ಕೊಟ್ಟು ನಲ್ಲೆತ್ತು ನಲ್ಲೆಮ್ಮೆ (ಮೈಆರಿ. ೧೯೩೪, ೨೭-೨೦ ; 1480).

[ ನಲ್ + ಎತ್ತು₂ ( < ಎಟ್ಟು₁ ) ]

**ನಲ್ಲೆಮ್ಮೆ** (ನಾ). ೧. ಒಳ್ಳೆಯ ಜಾತಿಯ ಎಮ್ಮೆ. ೨. ಒಳ್ಳೆಯ ಎಮ್ಮೆಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಈಂತಿ ಅಧಿಕಾರರವ ಅವಸಗಿ ಹಡದು ಬಂದಾತ ತಂನ ಧರ್ಮ್ಮವಾಗಿಯೆ ಪ್ರತಿಪಾಳಿಸುದು ನಲ್ಲೆಂಮೆಯ [ವ]ರಣಪ್ಪ ಶ್ರೀಮತು ಮಾರ್ಕಂಡೇಸರ (ಸಾಇಇ. IX-1, ೩೨೪-೦೪ ; 1197) ; ನಲ್ಲೆಂಮೆಯ ಉಗ್ರಾಣಿ ನಾರಣವೆಗ್ಗಡೆಯ ಗಿರಿಪಯ್ಯ ಪಿರಿಯಂಣಾಂಗಳು (ಸಾಇಇ. IX-1, ೩೪೯-೪ ; 1232) ; ಗಡುಗೆ ನಿವೇದ್ಯ ನಂದಾದೀವಿಗೆ ಪಂನಿರ್ಬ್ಬರು ಮಹಾಜನಂಗಳ ಭೋಜನಕ್ಕಂ ಬಿಟ್ಟ ನಲ್ಲೆಂಮೆ ನಲ್ಲಾವು . . . ಧಾರಾಪೂರ್ವ್ವಕಂ ಮಾಡಿಕೊಟ್ಟರು ನಲ್ಲೆಮ್ಮೆಯ ಹದಿಕೆಯನೆತ್ತುವ ಹೆಗ್ಗಡೆಗಳಾರು ಬಂದಡಂ ತಂಮ ಧರ್ಮವಾಗಿ ಪ್ರತಿ

ಪಾಳಿಸುವರು (ಸೌಇಇ. IX-I, ೩೪೯-೭ ; 1285) ; ತುಪ್ಪ ನಲ್ಲೇರು ನಲ್ಲೆಮ್ಮೆ ಹೊಡಕೆ ತಿರುಪು ಮಗ್ಗ ಮುದ್ರೆ ಕ್ರಯ . . . ಧಿಕವಾಸ ಮುಂತಾಗಿ ಯೇನುಳ ಸರ್ವ್ವಸ್ವಾಮ್ಯವನೂ ನೀಉ ಆಗುವಾಡಿಕೊಂಡು . . . ಭೋಗಿಸಿ ಬಹುದು (ಸೌಇಇ. IX-II, ೪೪೦-೨೫ ; 1419) ; ಕ್ರಯ ಕಡಾಯಭಿಟ್ಟಿಕೊಟ್ಟ ನಲ್ಲೆತ್ತು ನಲ್ಲೆಮ್ಮೆ ಮಾವಿನ ಬಿಟ್ಟ . . . ನಿಮಗೆ ಧಾರೆಯೆರೆದು ಕೊಟ್ಟು (ಮೈಆರಿ. ೧೯೩೪, ೨೭-೨೦ ; 1430).

[ ನಲ್ + ಎಮ್ಮೆ (<ಎರ್ಮೆ) ]

**ನಲ್ಲೆವೆಣ್** (ನಾ). ಪ್ರೀತಿಯ ಹೆಣ್ಣು ; ಪ್ರಿಯೆ : ಒಳ್ಳಿತಾಯ್ತುದ ಪೇಳ್ವೆ ವೆಮ್ಮಣ್ಣಗೆಂದರು ನಲ್ಲೆವೆಣ್ಣದೆ ನಾಚಿ ಬೆದಱ (ಭರಚ- ೪೦-೭೭).

[ ನಲ್ಲೆ + ಪೆಣ್ ]

**ನಲ್ಲೇರು** (ನಾ). ಒಳ್ಳೆಯ ನೇಗಿಲಿನ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ತುಪ್ಪ ನಲ್ಲೇರು ನಲ್ಲೆಮ್ಮೆ ಹೊಡಕೆ ತಿರುಪು ಮಗ್ಗ ಮುದ್ರೆ ಕ್ರಯ ಕಡ್ಡಾಯ . . . ಮುಂತಾಗಿ ಯೇನುಳ ಸರ್ವ್ವಸ್ವಾಮ್ಯವನೂ ನೀಉ ಆಗುಮಾಡಿಕೊಂಡು . . ಭೋಗಿಸಿ ಬಹುದು (ಸೌಇಇ. IX-II, ೪೪೦-೨೫ ; 1419). [ ನಲ್ + ಏರು$_3$ (<ಏರ್) ]

**ನಲ್ಲೈವರು** (?) (ನಾ). (?) : ತಗೂಡರ ಕುರುಳ ಕೊಗೂಣ್ಣೆ ಎಡತಲೆಯ ಕೊತದ ಪುಳ್ಳಿಗನುಂ ಕೆಂನ್ನೆಲ್ಲೆಯ ಬದ್ರುಷೆ ಐಯನೂಂ ನಿಟ್ಟರೆಯ ಬೋರೆ ಅಚ್ಚಗಣ್ಣನುಂ ನಲ್ಲೈವರು ಸಕ್ಷಿ (ಎಕ. III, ನಂಜನ. ೧೯೯-೧೯ ; 972 ?).

[ ℙ ಇದು 'ನಾಲ್ವರು' ಎಂಬುದರ ಅಪಲಿಖಿತವಿರಬಹುದೆ? ]

**ನಲ್ವ** (ನಾ). ದೂರವನ್ನು ಅಳೆಯುವ ಒಂದು ಪ್ರಮಾಣ; ನಾನೂರು ಹಸ್ತಗಳ ಅಳತೆ; ಫರ್ಲಾಂಗು: ಆ ಸುಧನ್ವಂ ಬಳಿಕ ಮೇದಿನಿಯದಿರ್ವಿನಂ ತೆಗೆದೆಚ್ಚ ನರ್ಜುನನ ತೇರೊಂದು ನಲ್ವಮಾತ್ರಂ ತೊಲಗಲು (ಜೈಮಿಭಾ. ೧೩-೩೦). [ ಸಂ. ]

**ನಲ್ವಗಲ್** (ನಾ). ೧. ಒಳ್ಳೆಯ ಹಗಲು. ೨. ಒಳ್ಳೆಯ ದಿವಸ ; ಶುಭ ದಿನ : ಬಱಿಕ್ಕ ಮೌಹೂರ್ತಿಕರ್ ಕೂರ್ತು ಪೇಳ್ದ ನಲ್ವಗಲೊಳ್ . . . ನಾಮಕರಣಮಂ ನಿರ್ವರ್ತಿಸುತ್ತೆ (ಚಕವಿ. ४-೮೩). [ ನಲ್ + ಪಗಲ್ ]

**ನಲ್ವಗೆ** (ನಾ). ೧. ಒಳ್ಳೆಯ ಮನಸ್ಸು ; ಸ್ನೇಹಪರವಾದ ಮನಸ್ಸು. 'ನಲ್ವಗೆಗೊಳ್' ಪರಾ. ೨. ಉಲ್ಲಾಸದಿಂದ ಕೂಡಿದ ಮನಸ್ಸು ; ಪ್ರಸನ್ನಚಿತ್ತ. 'ನಲ್ವಗೆವೆಱು' ಪರಾ. [ ನಲ್ + ಬಗೆ$_3$ ]

**ನಲ್ವಗೆಗೊಳ್** (ಕ್ರಿ). ಒಳ್ಳೆಯ ಮನಸ್ಸನ್ನು ಹೊಂದು; ಪ್ರಸನ್ನವಾಗು: ನಿನ್ನಯ ಚಾಗಮುಂ ಸಿರಿಯುಂ . . . ನನ್ನಿಯುಮಾರ್ಗಮುಚ್ಚರಿಯನಿತ್ತ ಪುವೆಮ್ಮೊಡೆಯಂಗಮಿಾ ತೆಱಂ ಪೊನ್ನದು ಕಮ್ಮಿತಾದ ತೆಱನಲ್ಲವೆ ನಲ್ವಗೆಗೊಂಡೊಡಿರ್ಪರುಂ (ಕಬ್ಬಿಕಾ. ೧೭೬). [ ನಲ್ವಗೆ + ಕೊಳ್$_1$ ]

**ನಲ್ವಗೆವೆಱು** (ಕ್ರಿ). ಸಂತೋಷಗೊಳ್ಳು ; ಉಲ್ಲಾಸದಿಂದ ಕೂಡು : ತಾವರೆಮೊಗದವರ್ಮುದ್ದುಮೊಗದ ಮಿಗೆ ಚೆಲುವಿನ ಬಟ್ಟಮೊಗದವರು ನಲ್ವಗೆವೆತ್ತು ನಡೆದರೊಗ್ಗಿನಲಿ (ಮೋಹತ. ೨೪-೧೩). [ ನಲ್ವಗೆ + ಪೆಱು$_1$ ]

**ನಲ್ವಚ್ಚ** (ನಾ). ಅಂದವಾದ ಒಡವೆ,-ಆಭರಣ : ಚಲಧಮ್ಮಿಲ್ಲಕ್ಕೆ ಚಾಂಪೇಯದ ಬಿರಿಮುಗುಳಂ . . . ಉರುಕುಚಂಗಳ್ಗೆ ಸನ್ನಾಥವೀ ಕುಟ್ಟಲಮಂ ನಲ್ವಚ್ಚಮಂ ಗೈದುಱ ತೊಡಿಸಿದರಾ ಕಾಂತೆಯರ್ಕಾಂತೆ ಗಾಗಳ್ (ಉದ್ಭಟ. ೯-೭೩). [ ನಲ್ + ಪಚ್ಚ$_2$ ]

**ನಲ್ವಡಿಗ** (ನಾ). ಸುಂದರವಾದ ಪೀಕದಾನಿ : ಒಮ್ಮೆ ವೀಳೆಯವೀಯು ತೊಮ್ಮೆ ಪನ್ನೀರ್ಗುಡುತೊಮ್ಮೆ ನಲ್ವಡಿಗವನೊದವಿಸ ತ ಒಮ್ಮೆ . . . ನಡೆಪ್ಪೆ (ಗೀತಗೋ. ೫೭-೨). [ ನಲ್ + ಪಡಿಗ ]

**ನಲ್ವಣ್ಣ** (ನಾ). ಅಂದವಾದ ಬಣ್ಣ ; ಸುಂದರವಾದ ವರ್ಣ : ನಸುಬೆಳ್ಪ ಮೇಲುದನಸಿಸು ಮುಸುಕ ತಲರ್ಗಣ್ಣ ಬಂಬಲ್ವೆಳಗುಗಳ ಸೂಸುತೆ ನಲ್ವಣ್ಣದಿನ್ನಳಿ [ಪಾಠಾಂ. ಗಿನ್ನರಿ]ಯನುಱ ಮೇಳಯಿಸಿಕೊಂಡು . . . ಕಾಂತೆಯೊರ್ವಳ್ ವಿಲಾಸದಿಂ ಚೆಲ್ವಮರೆ ಪದ್ಮರಾಜಾಂಕಮಾಲೆಯ ಬಾಜಿಸುತ್ತಿಸೆದಳ್ (ಪದ್ಮರಾ. ೮-೨೦). [ ನಲ್ + ಬಣ್ಣ ]

**ನಲ್ವತ್ತ** (ನಾ). ಒಳ್ಳೆಯ ಬತ್ತ ; ಶ್ರೇಷ್ಠ ದರ್ಜೆಯ ನೆಲ್ಲು (?) : ಸ್ವಸ್ತಿಶ್ರೀ ಅಪ್ನೋರಯ್ಯದಿವಕ್ಕರ್ ಪದಿಕ್ಕಣ್ಣುಗ ನಲ್ವತ್ತ × × × ಮರಮಸುಕೆಯೆ (ಎಕ. VI, ಚಿಕ್ಕಮ. ೫೦-೬ ; ಸು. 450 ?).

[ ನಲ್ + ಬತ್ತ$_1$ ]

**ನಲ್ವಯಕೆ** (ನಾ). ಪ್ರಿಯವಾದ ಬಯಕೆ ; ಹಾರೈಕೆ : ಸ್ಮಾಸ್ ಅಧಿಕಾರ ಪದದಿಂದ ಉರುಳಬೇಕೆನ್ನುವುದು ಅವಳ ನಲ್ವಯಕೆ (ಬದ್ಮಪ್ರ. II ೩೬೦೪).

[ ನಲ್ + ಬಯಕೆ$_2$ ]

**ನಲ್ವರಕೆ, ನಲ್ಪರಕೆ** (ನಾ). ಪ್ರೀತಿಯ ಆಶೀರ್ವಾದ; ಶುಭಾಶೀರ್ವಾದ : ಅವುಳರುಮಟ್ಟುಜನೊಬಿಲ್ದು ತೆಗೆದಪ್ಪಿ ಪರ[ಸೆ] ನಲ್ವರಕೆಗಳಿಂ (ಪಂಪಭಾ. ೯-೩) ; ಕಾರ್ಯಸಿದ್ಧಿಯಕ್ಕೆಂದು ಪರಸೆ ನಲ್ವರಕೆಗಳಿಂ (ಸುಕುಮಾ. ೨-೪೫); ಮಾತುಳಂಗಂ ಮಾತುಳಾನಿಗಂ ತುಱಿಲ್ಗೆಯ್ವುದುಮವರನೇಕ ನಲ್ವರಕೆ ಗಳ್ವೆರಸು ಪರಮೋತ್ಸವಪರಂಪರೆಯನೆಯ್ದಿ (ಪುಷ್ಪಪು. ೮-೪೯ ವ) ; ಪುರೋಹಿತರ್ ನಾಮಕರಣಂಗೆಯ್ದು, ನುಡಿದು ನಲ್ವರಕೆಯಂ (ಶ್ರೀರಾಮಾ. ೧೬-೪೩೦). **ನಲ್ಪರಕೆ** : 'ನಲ್ಪರಕೆವೆಱು' ಪರಾ. [ ನಲ್ + ಪರಕೆ$_1$ ]

**ನಲ್ವಳಿ** (ನಾ). ೧. ಒಳ್ಳೆಯ ದಾರಿ; ಸನ್ಮಾರ್ಗ: ಆರ್ಗೆ ನಲ್ವಳಿ ತಪ್ಪಿತ್ತೋ ತಪ್ಪಿತ್ತಾತಂಗೆ ಮುಕ್ತಿಯುಂ (ಸಾನಂದ. ೦೪-೪೪). ೨. ಒಳ್ಳೆಯ ವಂಶ ; ಸತ್ಕುಲ. 'ನಲ್ವಳಿಗ' ಪರಾ. [ ನಲ್ + ಬಳಿ$_3$ (<ಬಟ್$_3$) ]

**ನಲ್ವಳಿಗ** (ನಾ). ಒಳ್ಳೆಯ ವಂಶದಲ್ಲಿ ಹುಟ್ಟಿದವನು ; ಸತ್ಕುಲಪ್ರಸೂತ; ಕುಲೀನ : ಜವ ನಿಗನುಂ ಸೊಬಗನುಂ ನಲ್ವಳಿಗನುಮ್ಮೆಸಿರಿವಂತನುಂ ಚೆಲ್ವನುಮವನಾಗಿರ್ದೊಡಂ ವಿಸಾರನೆಂದುಂ ನಿನ್ನಂ (ಸಾನಂದ. ೬-೨೦).

[ ನಲ್ವಳಿ + -ಗ$_2$ ]

**ನಲ್ವಾಡು** (ನಾ). ಪ್ರೇಮಗೀತೆ ; ಪ್ರಣಯಗೀತೆ : ತರುಣವರ್ಗದ ನಲ್ವಾಡುಗಳನ್ನು ಕೇಳಬೇಕು : ತಾಳವಿಲ್ಲ ; ತಂತಿಯಿಲ್ಲ (ಹಲುನಿ. ೨೪) ; ನೀವು ಇಷ್ಟೊಂದು ನಲ್ವಾಡುಗಳನ್ನು ಬರೆದಿದ್ದೀರಿ. ಈ ಸ್ಫೂರ್ತಿಯ ನೆಲೆ ಯಾವುದು ಹೇಳಬಲ್ಲಿರಾ ? (ಸಮಜೀ. ೩೫೪). [ ನಲ್ + ಪಾಡು$_3$ ]

**ನಲ್ವಾತು** (ನಾ). ಒಳ್ಳೆಯ ಮಾತು ; ಹಿತವಾದ ನುಡಿ. 'ನಲ್ವಾತುಗುಟ್ಟು' ಪರಾ. [ ನಲ್ + ಮಾತು$_1$ ]

**ನಲ್ವಾತುಗ** (ನಾ). ಹಿತವಾದ ಮಾತುಗಳನ್ನಾಡುವವನು ; ಸವಿಮಾತುಗಳನ್ನಾಡುವವನು : ಪ್ರಜೆಗಳ್ ವೀರರೆನಿಸಿಯುಂ ವಿನಯವಂತರುಂ ನಲ್ವಾತುಗರಾಗಿಯುಂ ನನ್ನಿಗರುಂ (ಚಕವಂ. ೦೪೩-೦೭).

[ ನಲ್ವಾತು + -ಗ$_2$ ]

**ನಲ್ವಾತುಗುಟ್ಟು** (ಕ್ರಿ). ಒಳ್ಳೆಯ ಮಾತುಗಳನ್ನಾಡು : ಮುದದಿಂದೋ ಸಱಗೇಳಲೆಂದು ನಿಲೆ ಮೋನಂಗೊಂಡು ನಲ್ವಾತುಗುಟ್ಟದೆ ಮೂಣ್ದಿರ್ದೊಡೆ ನಿಷ್ಫಲಂ (ಲೋಕೋಪ. ೧೨-೫೭). [ ನಲ್ವಾತು + ಕುಟ್ಟು$_1$ ]

**ನಲ್ವಾಸು** (ನಾ). ಮೃದುವಾದ ಶಯ್ಯೆ ; ಮೆತ್ತನೆಯ ಹಾಸುಗೆ : ಆ ಚಂದ್ರನುಱಿ . . . ದಶರಥನ ಸೊಸೆಯನಿರಿಸಿದಳಂಚೆತುಪ್ಪುಳಿಂ ಸಮೆದ ನಲ್ವಾಸಿನೊಳ್ (ಶ್ರೀರಾಮಾ. ೩೨೦-೪೪). [ ನಲ್ + ಪಾಸು$_3$ ]

**ನಲ್ವಾಱವಣ್** (ನಾ). ಸವಿಯಾದ ಬಾಳೆಯ ಹಣ್ಣು ; ರಂಬೆಯಾದ ಬಾಳೆಹಣ್ಣು : ಉರುಕರ್ಣಿಕಾರದಲರಂ ನಲ್ವಾಱವಣ್ಣಂ ಮಹೀಶಂಗಿ ತ್ತಳ್ವನಪಾಲಿಕಾಂಗನೆ (ಉದ್ಭಟ. ೯-೦೨); ನಲ್ವಾಱವಣ್ಣಂ . . . ತೋಂಟಿಗಂ ಕೊಟ್ಟನೊರ್ವಂ (ಕಬ್ಬಿಕಾ. ೮೮). [ ನಲ್ + ಬಾಱವಣ್ ]

**ನಲ್ವಡಿ** (ನಾ). ಒಂದು ಊರಿನ ಹೆಸರು ; ℙ ಈಗಿನ ಬಳ್ಳಾರಿಜಿಲ್ಲೆಯ ಕುರುಗೋಡು ತಾಲ್ಲೂಕಿನ ನಲವಡಿ : ನೊಳಂಬಮಹಾದೇವಿಯು ರಂಗಮುಂ ಗಂಗೆಯೊಳಕ್ಕಿ ಬಂದ ಬ್ರಾಹ್ಮಣ ಮಾಧವಸೆಣಂಗಿಯರ್ಗೆ

ಕೃಷ್ಣಯ್ಯಂಗಂ ತುಪ್ಪದ ದೇವಯ್ಯಂಗಂ ನಲ್ವಿಡಿ ೧೨ ಖ ಕಂಪಣಂ ಒರ್ವಾರಾಯಂ ಕುಡೆ (ಸೌಇಇ. IX–1, ೯೨–೦೬ ; 1036). [ ? ]

**ನಲ್ವು** (ನಾ). ನಲಿವು; ಸಂತೋಷ : ಬಿಲ್ವಪತ್ರೆಯನೆಯ್ದೆ ಕೊಯ್ದಾತಿ ನಲ್ವಿನಿಂ ಶಿವಲಿಂಗಪೂಜೆಗೆ ಸಲ್ವ ವಸ್ತುವಿದೆಂದು ಶೋಧಿಸಿ ಸಜ್ಜೆಯೊಳು ತುಂಬಿ (ಬಸಪು. ೪೩–೨೬). 'ನಲವು$_1$', 'ನಲಿವು' ಪರಾ.

[ ನಲ್ + – ವು ]

**ನಲ್ವೆಣ್** (ನಾ). ಒಳ್ಳೆಯ ಹೆಂಗಸು ; ಪತಿವ್ರತೆ.

**ನಲ್ವೆಂಡಿರ್** (ಬಹುವ) : ಪಲನೀರ ಮುಳುಗಿ ಮುಂಗೆಡದೆ ನಲಿದೆಸಗುವ ನಲ್ವೆಂಡಿರ ನಡತೆಗೆ ಪಲನೇಮಗಳು ಪಾಸಟಿಯೆ (ಹದಿಬ. ೨–೨೩) ; ಮೂವರಂ ನಲ್ವೆಂಡಿರಂ ಕಾಮದಿಂ ಪ್ರೇಮದಿಂ ಮದುವೆನಿಂದಿರ್ದೊಡಂ (ಶ್ರೀರಾಮಾ. ೮–೦೯೧). [ ನಲ್ + ಪೆಣ್ ]

**ನಲ್ವೆಸ** (ನಾ). ಒಳ್ಳೆಯ ಕೆಲಸ ; ಉತ್ತಮ ಕಾರ್ಯ,–ಕರ್ತವ್ಯ : ಈ ಎಡರಿನೊಳ್ ನಿಮ್ಮ ನಲ್ವೆಸನ್, ಜನಮಂಜದಂತೊಳ್ಪು ನುಡಿದು, ನಂಬುಗೆಯನುಳಿಸುವುದು (ಪಾರಸಿ. ೦೯–೪೪೦). [ ನಲ್ + ಬೆಸ$_1$ ]

**ನಲ್ವೆಸರ್** (ನಾ). ಉತ್ತಮವಾದ ಹೆಸರು ; ಚೆನ್ನಾದ ಹೆಸರು : ದೇವರಾಜರಸರೆಂದುಂ ಚೆನ್ನರಾಜರಸರೆಂದುಮನ್ವರ್ಥಂಗಳಾದ ನಲ್ವೆಸರ್ಗಳನಿಟ್ಟು (ಚಿಕವಿ. ೨–೨೪). [ ನಲ್ + ಪೆಸರ್ ]

**ನಲ್ವೆಟ್ಟೆ** (ನಾ). ಸುಂದರವಾದ ಚಂದ್ರ : ಸುರನಿಮ್ನಗೆ ನಲ್ವೆಟ್ಟೆ ಕೆಂಜೆಡೆ ತಳ್ತುರಿಗಣ್ಣೆಸುಳಂ ಗರಳಂ ಭಸಿತಂ . . . ಫಣಾಧರನೊಪ್ಪಿರೆ ರಂಜಿಸಿದಂ ಗಿರಿಶಂ (ವೃಷವಿ. ೪೨–೩೪). [ ನಲ್ + ಪೆಟ್ಟೆ ]

**ನಲ್ಪೊಟ್ತು** (ನಾ). ಒಳ್ಳೆಯ ಗಳಿಗೆ ; ಶುಭಮುಹೂರ್ತ : ಬಟಿಕ್ಕೆ ರಾಜನೃಪಂ . . . ಜೋಯಿಸಿಗನಿತ್ತ ನಲ್ಪೊಟ್ತಿನೊಳೋಲಗಮಿರ್ದು . . . ಅರಸುಗೆಯ್ಯುತ್ತಿರೆ (ಚಿಕವಂ. ೪೯–೦೬). [ ನಲ್ + ಪೊಟ್ತು ]

**ನಲ್ಸೊಗ** (ನಾ). ಅತಿ ಸುಖ ; ಅತ್ಯಾನಂದ : ಒಡರ್ಚಿ ನಲ್ಸೊಗಮನಗ್ಗಿಪೊಗರ್ಗೆ ಸಮಂತು ಬೆಳ್ಪ ಸಂದಳಿದೆಸೆದಿರ್ದ ಬಾನ್ನವಿರನೊಳ್ವರಿಜಂ ತಳೆದೊಪ್ಪಿ ತೋಱಿದಂ (ಶಬಶಂ. ೫–೯). [ ನಲ್ + ಸೊಗ ]

**ನವ$_1$** (ನಾ). ಒಂದು ಸಂಖ್ಯಾವಾಚಕ ; ಒಂಬತ್ತು : "ನವ, ಪದಾರ್ಥ, ರಂಧ್ರ . . . ನಾಟ್ಯಾಂಗ, ಇಂತಿನಿತುಂ ೯ಕ್ಕೆ ಪೆಸರು" (ವ್ಯವಹಾ. ೧೧–೩) ; ನವ ನಿಧಿ ಶರ ಶಶಿ ಸಂಖ್ಯಾಪ್ರವಿಲಸಿತಂ ಶಾಲಿವಾಹನ ಶಕಾಬ್ದಂಗಳ್ (ಯಾದಜಂ. ೦೬–೦೮೬). 'ನವನಿಧಿ', 'ನವರತ್ನ' ಪರಾ. [ ಸಂ. ನವನ್ ]

**ನವ$_2$** (ಗು). ೧. ಹೊಸತಾದ ; ನವೀನವಾದ : "ನವಮಭಿನವಂ ನವೀನಂ ನೂತನಂ ನವ್ಯಮಿವು ಪೊಸತೆನಿಕು" (ಮಂಗರಾ. ೦೨೯–೦೩) ; ಅದೊರ್ಮೆ ನವಕಾವ್ಯಬಂಧರಚನಾವಿಶೇಷಂಗಳಿಂದಂ . . . ಕಳೆವನಿಂತು ಪೊಟ್ತಂ ನೃಪಂ (ಕಾದಂಪೂ. ೨೨) ; ತನ್ನ ಬಾಟಕ್ಕೆಯನ್ನೇತಱದೆಂಬ ಮೆಯ್ಮೆಱಕದಿಂ ನವಚಿತ್ರಪಟಂಬೊಲಿರ್ಪನಾ ಭೂತಳವಲ್ಲಭಂ (ನಳಚಂ. ೬೩) ; ಐತಂದುಮವೆಡೆಬಿಡದೆ ಕ್ರೌಂಚಸಾರಸಪಂಕ್ತಿ . . . ನವವರ್ಷಹರ್ಷದುನ್ಮಾದಕಲನಾದದಿಂ (ಶ್ರೀರಾಮಾ. ೦೫–೪೯೯). ೨. ಎಳೆಯ ; ತರುಣ ; ತಾಜಾ : ನವಕಂಕೇಲುದ್ಗಮಮಂ ತವೆ ಕೊಯ್ಕುಳ್ಳೆಯ್ಯನಿಕ್ಕಿ (ಉದ್ಭಟ. ೯–೬೬) ; ತೋಳ ನವಗುಂಜೆಯಿಂ ಕಿಸಲಯದ ನಿಱಿಗಳಿಂ ಭಾಳತಟದೆಡೆಯ ಕತ್ತುರಿಯ ನವತಿಲಕದಿಂ (ಲಿಂಗಪು. ೬–೨೦). 'ನವಕನ್ನೆ', 'ನವಪಲ್ಲವ' ಪರಾ. ☞ 'ನವ' ಎಂಬುದನ್ನು ಇತರ ಅನೇಕ ನಾಮಪದಗಳೊಡನೆ ಸೇರಿಸಿ ಸಮಾಸ ಗಳನ್ನು ಮಾಡುತ್ತಾರೆ.

**ನವನವ** (ದ್ವಿರುಕ್ತಿ) : ಮತಿಯು ತಾಂ ಸತ್ಯಶುಭಗಳ ನವನವಾಂಶಗಳ ಗತಿಯನರಸುತ ನಡೆಯೆ ಪೌರುಷಪ್ರಗತಿ ಮತನೀತಿ ಶಾಸ್ತ್ರಗಳು ರಾಜ್ಯ ಸಂಧಾನಗಳು ಮತಿಯ ಕಿಂಚಿದ್ವಿಜಯ (ಮಂಕುಕ. ೨೨೮).

[ ಸಂ. ]

**ನವಕ$_1$** (ಗು). ೧. ಒಂಬತ್ತರಿಂದ ಕೂಡಿದ. (ನಾ). ೨. ಒಂಬತ್ತರ ಗುಂಪು : ಬಟಿಯಂ ಸಂಜ್ವಳನಕಷಾಯಚತುಷ್ಕನೋಕಷಾಯ ನವಕ ನಾಮ ತ್ರಯೋದಶಪ್ರಕೃತಿಗಳನರೆದು (ಶಾಂತಿಪು. ೧೧–೧೧೧ ವ) ; ಇಂತು ಸೂತ್ರ ನವಕದಿಂ . . . ಪೀಠಿಕಾಕಥನಂ ಸಮಾಪ್ತಂ (ತತ್ತ್ವಪ್ರ. ೦೮೩) ; ಬಳಿಕ್ಕಂ ದ್ವೈವಿಧಪೂರ್ವದಶಂಗಳ್ ತಾವಿರೆ ಸದ್ದಿವಸಂಗಳ್ ಕೋವಿದ ಕೇಳ್ ನವಕಂಗಳ್ (ಹಾಲಾಸ್ಯ. ೪–೦೧–೯೯). ಕ್ರಮದಿ ಮೂಱಂ ಬಿಟ್ಟುದು ಪರಿದುತ್ತಮವನ್ನೈದಂ ಮೇಲೆ ನವಕವ ಸುಮುಖನಾಗಿಯೆ ನಡಿಸುವವನಾವವನಿವಂ ಧನ್ಯ (ವಿವೇಧ. ೮–೨೪). [ ಸಂ. ]

**ನವಕ$_2$** (ನಾ). ೧. ಹೊಸತನ ; ನವೀನತೆ ; ಅಪೂರ್ವತೆ : ಗುಲ್ಮಂಗಳೆಸೆವವು ವೃತ್ತವೆತ್ತತಿ ನವಕದಲಿ ಸತಿಯ (ಬಸಪು. ೪–೦೬) ; ನವಕವಿಲ್ಲದ ಕಳೆದ ಮುನ್ನಿನ ದಿವದ ತೊಟ್ಟಂ ಕಳೆಯುದರಳಂ ವಿವರದಲಿ ಶೋಧಿಸದೆ (ಬಸಪು. ೪೬–೦೫). ೨. ಹೊಸಬ ; ಅಪರಿಚಿತ : ನವಕನಿವಂ ಬಂದಂ ಮಾಣವಕಂ ತಾನೆತ್ತಣಂದಮೆಂದಾ ವಿಪ್ರಪ್ರವರನ ಸಭೆ . . . ಇನಿತು ಬೇಗಮಿಕ್ಷಿಸುತಾಗಳ್ (ವರ್ಧಪು. ೦೬–೬). [ ಸಂ. ]

**ನವಕಂಟಕ** (ನಾ). ಹೊಸದಾಗಿರುವ ಮುಳ್ಳು ; ಎಳೆಯ ಮುಳ್ಳು : ನವಕಂಟಕವಮಡಿಯಂ ನಡೆ ಸವತಿಯನಪ್ಪಿದುದನಱಿದು ಪತಿ ಪೆಗಲಿಂ ಪೊತ್ತವಳಗಿದಳ್ (ಲೀಲಾವ. ೦೩–೯೦). [ ನವ$_2$ + ಕಂಟಕ ]

**ನವಕಂಡ** (ನಾ). (?) : ಅ[ ಸು ]ಪಟ್ಟಿಗಮೊನ್ನು ದೇಗುಲಕ್ಕೆ ನವಕಣ್ಣಾದ ಪಲಗೆಯುವ ಕೊಳನುಂ ಬೀಕೆಸ್ವರಕೆ ಕೊಟ್ಟ (ಸೌಇಇ. XI–1, ೩೫–೦೨ ; 993). [ ? ]

**ನವಕಂಬಡೆ** (ಕ್ರಿ). ಹೊಸತನವನ್ನು ಪಡೆ ; ನವೀನವಾಗು : ಭವಿವಡೆದು ನವಕಂಬಡೆದ ನವ್ಯಸಹಸ್ರದಳಶತದಳಮನರ್ಪಿಸುತ (ಬಸಪು. ೩೫–೦೩).

[ ನವಕ$_2$ + ಪಡೆ$_1$ ]

**ನವಕನ್ನೆ** (ನಾ). ಎಳೆಹರಯದ ಕನ್ಯೆ ; ಹೊಸಪ್ರಾಯದ ಹುಡುಗಿ : ಎಸಳೆಸಳಿನ ಸಿರಿಸಲ ಚೆವುರಿಸುವದು ಮೈಯನ್ನೆ ಬೀಸಲು ಮೈನವಿರೇರಿದ ನೇರಿಳೆ ನವಕನ್ನೆ (ಮುಕ್ತಕಂ. ೪೪–೮). [ ನವ$_2$ + ಕನ್ನೆ$_1$ ]

**ನವಕಮಲ, ನವಕಮಳ** (ನಾ). ಆಗ ತಾನೇ ಅರಳಿದ ತಾವರೆ ; ಹೊಸದಾಗಿ ಅರಳಿದ ಕಮಲ : ನವಕಮಲೋದ್ಗಮದಿಂದುತ್ಸವಮಂ ತಾಂ ಗಂಧಗಜಕೆ ಕಮಲಿನಿ ಮಾಟ್ಪಂತೆಪೊಲರಸ ನಿನಗೆ ಪರಮೋತ್ಸವಮಂ ಮಾದೇವಿ ಮಾಟ್ಕುಮಿಮಾ ಕನಸಿಂದಂ (ಕಾದಂಪೂ. ೩೭೫). **ನವಕಮಳ** : ನವಕಮಳದಳಂಗಳ್ ಭೀಕರಂ ಬಲ್ಪುವಾಗಿರ್ಪುವೆ ತಳಕೆ ತಳಂಗಳ್ ನೋಯವೇ ಮೆಟ್ಟಿದುದೆಂದವಱಿಸಟನವಳ್ದಿರ್ ಮೆಟ್ಟಿದರ್ ಮೆಟ್ಟಿರೆಂಬಂತ ವಯವದೊಳೆ ಲೀಲಾನೃತ್ಯದಿಂ ಕಣ್ಗೆವಂದರ್ (ಆದಿಪು. ೬–೫೫).

[ ನವ$_2$ + ಕಮಲ ]

**ನವಕಮಳ** 'ನವಕಮಲ' ನೋ.

**ನವಕರಿ** 'ನೌಕರಿ' ನೋ.

**ನವಕರ್ಮ** (ನಾ). ೧. ಜೀರ್ಣೋದ್ಧಾರದ ಕೆಲಸ ; ಮುರಿದುದನ್ನು ಅಥವಾ ಜೀರ್ಣವಾದುದನ್ನು ಮತ್ತೆ ಕಟ್ಟುವ ಕೆಲಸ : ತಪೋಧನರ ವಿದ್ಯಾರ್ಥಿಮಾಣಿಗಳಾಹಾರದಾನಕ್ಕಂ ಪಾವುಳಪರಿವಾರದ ಜೀವಿತಕ್ಕಂ ದೇಗುಲದ ಖಣ್ಡಸ್ಫುಟಿತ ನವಕರ್ಮ್ಮಕ್ಕವೆಂದು ಕೊಟ್ಟ ಅಲ್ಲಿಯ ಘಳಿಯ ಮತ್ತರು ೫೦ (ನಾಂದೇಡ್. ೩–೨೨ ವ ; 1047). ೨. ನವೀನವಾಗಿ ಮಾಡಿದುದು ; ಹೊಸರಚನೆ : ವಿಶ್ವಕರ್ಮನಿರ್ಮಿತ ನವಕರ್ಮಜಾಳಾಂತರಂಗಳೊಳ್ . . . ಅಕಳಂಕಾಚಾರಸಾರನನೆ ಲಕ್ಷ್ಯಂ ಮಾಡಿ ನೋಡುವಲ್ಲಿ (ಶಾಂತಿಪು. ೬–೫ ವ). [ ನವ$_2$ + ಕರ್ಮ ]

**ನವಕರ್ಮಿಕ** (ನಾ). (?) : ನವಕರ್ಮಿಕ ಮಾಡಿರಿಪುತ ಸಿರಿವೀರ ಪುರಿಸದತ (ಮ್ಯಾಎರಿ. ೦೯೩೪ ; ೨೯). [ ? ]

**ನವಕವಿ** (ನಾ). ಹೊಸಕವಿ ; ಆಧುನಿಕ ಕವಿ : ಕನ್ನಡಿಸುವ ನವಕವಿಯುವ ನಾವನು ವಿರಹಿಣಿಯರ ಬಪಣೆಯನು (ಇಂಚಾಪ. ೨೦೦-೮೭).
[ ನವ₂ + ಕವಿ₅ ]

**ನವಕವಿತ್ವ** (ನಾ). ಹೊಸಕಾವ್ಯ ; ನೂತನ ಕಾವ್ಯ : ಈ ನುಡಿಯ ಪಾಯಂಗಳನೆನಗೆ ಪೇಟ್ಬುದಂ ನಿನ್ನೆಯ್ದಿದ ನವಕವಿತ್ವಮಂ ನೀನಭಿನಯಿಸಿ ದಂತಾಗಿರ್ದಪುದು (ಶಾಂತಿಪು. ೩-೯೩ ವ). [ ನವ₂ + ಕವಿತ್ವ ]

**ನವಕಳೆ** (ನಾ). ಒಂಬತ್ತು ಅಂಶಗಳು : ಬಿಂದುವೆ ಶಿವಾಂಶಿಕಂ ರಕ್ತ ಶಕ್ತ್ಯ್ಯಂಶಿಕವು ಚಂದ್ರಾಂಶು ಶುಕ್ಲಶೋಣಿತವೆ ಸೂರ್ಯಾಂಶುವಿವು ದ್ವಂದ್ವ ಸಮ್ಮಿಳಿತದಿಂ ಪಿಂಡವೆನಿಸಿತ್ತು ರುಧಿರಮ್ಮಾಂಸ ಚರ್ಮಾತ್ರಿವಿಧಾ ಸಂದು ಮಾತಾಂಶ್ಸಸ್ಥಿ ನಾಡಿ ರೋಮಮಮ್ಜಾರು ತಂದೆಯಂಶಗ್ನಿ ವಾಯುವು ಯಾತ್ಮಯಿಾ ತ್ರಿತಯ ಬಂಧುರ ಶಿವಾಂಶುಗಳಿಂದೆ ನವಕಳೆಯು ಸಂಯೋಗ್ಯದಿಂ ಪಿಂಡವಹುದು (ನವಮೋ. ೧೪-೪೦).
[ ನವ₁ + ಕಳೆ₆ (= ಕಲೆ₃ ) ]

**ನವಕಾಂಡ** (ನಾ). (?) : ನವರತ್ನದ ಸೌಧಂಗಳ ಸವಿವೆಳಗಾ ಪುರಮನೆಲ್ಲ ಮಾವರಿಸೆ ಜನರ್ ನವರತ್ನಪುತ್ಥಳಿಗಳೆನೆ ನವಕಾಂಡದರೆಯ್ದೆ ನೋಡ ಬಂದಂತಪ್ಪರ್ (ಹಾಲಾಸ್ಯ. ೧-೪-೭೨). [ ? ]

**ನವಕಾರಮಂತ್ರ** (ನಾ). [ಜೈನ] ಶಾಸ್ತ್ರದಲ್ಲಿ ಪ್ರಸಿದ್ಧವಾದ ಒಂದು ಸೂತ್ರ,-ಮಂತ್ರ ವಿಶೇಷ : ಜೈನಸಾಧುಗಳು ಘನಗಂಭೀರವಾಗಿ ನವ ಕಾರಮಂತ್ರವನ್ನು ಹಾಡಿದರು (ಸವತಿ. ೨೦೮).
[ ನವಕಾರ₀ (P← ಪ್ರಾ. ಣವಕಾರ) + ಮಂತ್ರ ]

**ನವಕುರುಜು** (ನಾ). ಹೊಸದಾಗಿ ನಿರ್ಮಿಸಿದ ಮಂಟಪ : ರಂಗವಾಲಿ ಯಿಂದನುಪಮದ ಕಸ್ತುರಿ ಚಳೆಯ ನವಕುರುಜಿನಿಂ ಜನಿತ ಹರುಷದೊಳೆಸಗಿ ಶರಣ ಸಹ ಬರುತಿರ್ದ ಘನಮಹಿಮ ನಂದೀಶನು (ಲಿಂಗಪು. ೭-೪೦).
[ ನವ₂ + ಕುರುಜು ]

**ನವಕೇಶವ** (ನಾ).=ನವನಾರಾಯಣ ೨: ನವಕೇಶವರುರ್ವರೆಯೊಳಗವರುಂ ಮುನ್ನಾಗಿ ಪೋದರ್ (ಧರ್ಮಾಮೃ. ೫-೨೨೨). [ ನವ₁ + ಕೇಶವ ]

**ನವಕೋಟಿ** (ನಾ). ಒಂದು ಸಂಖ್ಯೆ ; ಒಂಬತ್ತು ಕೋಟಿ : ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ ನವಕೋಟಿಬ್ರಹ್ಮರಿಗೆ ಪ್ರಳಯವ ಮಾಡುವದ ನಾ ಬಲ್ಲೆನಾಗಿ (ಬಸವ. ೩೯೦). [ ನವ₁ + ಕೋಟಿ₁ ]

**ನವಕೋಟಿನಾರಾಯಣ** (ನಾ). ೧. ನವಕೋಟಿಹೊನ್ನಿಗೆ ಒಡೆಯ ನಾದವನು ; ಒಂದು ಬಿರುದು ; P ಚಿಕ್ಕದೇವರಾಜರ ಬಿರುದು ೦ ತಮ್ಮಲ್ಲಿದ್ದ ವಸ್ತ್ರಾಭರಣ ದ್ರವ್ಯಗಳನ್ನು ಲೆಕ್ಕಮಾಡಿಸಿ ನೋಡಲು, ನವ ಕೋಟಿ ದ್ರವ್ಯವಾಗಿದ್ದುದರಿಂದ . . . ಉತ್ಸವಕಾಲದಲ್ಲಿ ನವಕೋಟ ನಾರಾಯಣ ಎಂಬದಾಗಿ ಹೊಗಳಿಸಿಕೊಳ್ಳುತ್ತ (ಮಹಾವಂ. I, ೧೫೦). ೨. ಪುರಂದರದಾಸರ (ಶ್ರೀನಿವಾಸನಾಯಕನಾಗಿದ್ದಾಗ ಇದ್ದ) ಬಿರುದು : ಬೆಳ್ಳಿ ಭಂಗಾರ ರತ್ನಪಡಿ ವ್ಯಾಪಾರಗಳಿಂದ ಕೋಟ್ಯಾವಧಿ ಧನಾರ್ಜನೆ ಮಾಡಿ ನವಕೋಟಿನಾರಾಯಣನೆಂದು ಹೊಗಳಿಸಿಕೊಂಡನು (ಕಥವಿ. ೧೭೯). ೩. ತುಂಬ ಶ್ರೀಮಂತ,-ಧನಿಕ : ನಮ್ಮ ಶೀನು ನವ ಕೋಟಿನಾರಾಯಣನಾಗ್ತಾನೆ, ನೋಡ್ತಿರಿ (ಹೇಮಕೂ. ೧೧). ೪. (ಆಲಂ) ಒಂಬತ್ತುಕೋಟಿ ಮಕ್ಕಳನ್ನುಳ್ಳವನು ; ಕೃಷ್ಣ : (+). ೫. ಹೆಚ್ಚು ಮಕ್ಕಳಿರುವವನು : (+). [ ನವಕೋಟಿ + ನಾರಾಯಣ ]

**ನವಖಂಡ₁** (ನಾ). ೧. ಭೂಮಿಯ ಒಂಬತ್ತು ವಿಭಾಗಗಳು : ಜಂಬೂ ದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯ ಎರಡಾಳಿನ ಭಾಷೆಯ (ಬಸವ. ೬೭೭) ; ನವಖಂಡ ಪೃಥ್ವಿ ಚತುರ್ದಶಭುವನ ಗ್ರಾಮದಿಂದತ್ತತ್ತ ಮುನ್ನ ಅನಾದಿಯಲ್ಲಿ ಜಂಗಮವೆ ಲಿಂಗವೆಂಬಿರಿ (ಅವಚಂ. ೪. ೩೨೩-೮೮೩). ೨. ಒಂಬತ್ತು ಚೂರು ; ಚೂರು ಚೂರು ; ಛಿದ್ರಛಿದ್ರ : ಭವ ಬದ್ಧವೈರಮುಂ ತಿಳಿದು ವಿಭಂಗಜ್ಞಾನದಿಂದೆ ಪರಿಕ್ರುದ್ಧಮನರ್ ನವಖಂಡ ಮಾಗೆ ಮಾಟ್ಪರ್ ನವನಾರಕರಂ ಪುರಾಣನಾರಕರಾಗಳ್ (ಮಲ್ಲಿಪು. ೧೩-೧೩೫); ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿಯುತ್ತಿರಲಿ (ಬಸವ. ೭೦೬). ೩. [ಜೈನ] ಇಂದ್ರಖಂಡ, ಶ್ವೇತಖಂಡ, ತಾಮ್ರಖಂಡ, ಗಭಸ್ತಿ ಖಂಡ, ನಾಗಖಂಡ, ಸೌಮ್ಯಖಂಡ, ಗಂಧರ್ವಖಂಡ, ಚಾರಣ ಖಂಡ ಮತ್ತು ಭರತಖಂಡ ಎಂಬ ಭೂಮಿಯ ಒಂಬತ್ತು ಭಾಗ ಗಳು : ನವಖಂಡಾವನಿಯೊಳಗಿರ್ಪವನೀಶರ ಹೃದಯಮೆಯ್ದೆ ಶತಖಂಡ ಮೆನಿಪ್ಪವೊಲೊಡೆಯೆ ಭೂರಿಭೇರೀರವಮೊಗೆದುದು ಚಕ್ರಿವಿಜಯಯಾತ್ರೋ ತ್ಸವದೊಳ್ (ಪಾರ್ಶ್ವಪು. ೮-೩೦). [ ನವ₁ + ಖಂಡ ]

**ನವಖಂಡ₂** (ನಾ). ಹೊಸ ಮಾಂಸ : ಕರುಳ ಹೂಗೊಂಚಲಿನ ಮೂಳೆಯ ಬಿರಿಮುಗುಳ ನವಖಂಡದಿಂಡೆಯ ಕರತಳದ ತಳಿರೆಲೆಯ ಕಡಿದೋಳುಗಳ ಕೊಂಬುಗಳ . . . ರಣವನವೆಸೆದುದೀತನ ಖಡ್ಗಚೈತ್ರದಲಿ (ಕುಮಾ.ದ್ರೋ. ೬-೪೨). [ ನವ₂ + ಖಂಡ ]

**ನವಗರ** (ನಾ). = ನವಗ್ರಹ : ಕುಟಿಲತೆ ಬಾಲಕೀಮ್ರಜದ ಕುಂತಳದಲ್ಲಿ . . . ಪಟುತರವಕ್ರಮಾ ನವಗರಂಗಳೊಳಲ್ಲದೆಯಿಲ್ಲ ನಾಡಿನೊಳ್ (ದಶಾವ. ೫-೦೨). [ ನವ₁ + ಗರ₂ ]

**ನವಗಾಯ** (ನಾ).(ಆಲಂ) ದೇಹದ ಒಂಬತ್ತು ದ್ವಾರಗಳು; ನವದ್ವಾರ: ಓಹೊ ಎನ ಜೀವಾ ಮೈಯೊಲ್ಲಾ ನವಗಾಯ (ಕನಕ. ೨೨೦ ಅನುಪಲ್ಲವಿ).
[ ನವ₁ + ಗಾಯ ]

**ನವಗುಣ** (ನಾ). ಸುಖ, ದುಃಖ, ರಾಗ, ದ್ವೇಷ, ಬುದ್ಧಿ, ಭಾವನೆ, ಪ್ರಯತ್ನ, ಧರ್ಮ ಮತ್ತು ಅಧರ್ಮ ಎಂಬ ಆತ್ಮನ ಒಂಬತ್ತು ಗುಣಗಳು : ತೇಜದ ಮಟಿಯು ನವಗುಣದ ಹೊಳಹಿನಂತೆ ವಾಯುವಿನ ಮಟಿಯ ನಾನಾ ಸುಳುಹಿನಂತೆ . . . ಇಂತಿಹ ತದ್ರೂಪು ತದ್ರೂಪಂಗಳ ಹೊದ್ದಿಹವಾದ ಕಾರಣ ಇಂತೀ ಆತ್ಮತತ್ತ್ವಭೇದದಲ್ಲಿ ಆಗುಚೇಗೆಯನಜಿಯ ಬೇಕು (ಮೋಳಿಮಾ. ೧೦-೪೦) ; ಬುದ್ಧಿ ಸುಖ ದುಃಖ ರಾಗ ದ್ವೇಷ ಪ್ರಯತ್ನ ಧರ್ಮ ಅಧರ್ಮ ಭಾವನೆಯೆಂಬ ನವಗುಣಗಳಿಂ ವ್ಯವಹರಿಸಿ (ವಿವೇಕ. ೨೪೭). P 'ಬ್ರಹ್ಮಸೂತ್ರಭಾಷ್ಯ'ದ ಪ್ರಕಾರ : ಜ್ಞಾನ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ ಎಂಬುವು ಆತ್ಮನ ನವಗುಣಗಳು. [ ನವ₁ + ಗುಣ ]

**ನವಗ್ರಹ** (ನಾ). (ಭಾರತೀಯ ಸಂಪ್ರದಾಯದಂತೆ) ಸೂರ್ಯ, ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು ಎಂಬ ಒಂಬತ್ತು ಗ್ರಹಗಳು : ಇಪ್ಪತ್ತೇಳು ನಕ್ಷತ್ರ . . . ರಾಹು ಕೇತು ನವಗ್ರಹ ಇಂತಿವರೆಲ್ಲರು ಆ ಮೇರುಮಂದಿರದ ಹೊಜ ಪ್ರದಕ್ಷಿಣವ ದಿವರಾತ್ರಿಯಲ್ಲಿ ತಿರುಗುತ್ತಿಹರು (ಚನ್ನಬ. ಕ. ೫೯೨-೧೩೨೮) ; ನವಗ್ರಹದ ನಡುವೆ ಚಂದ್ರಾದಿತ್ಯರ್ . . . ಎಸೆವ ತೆಱದಿ . . . ಮುನಿ ಕುಲದ ನಡುವಿರ್ದರಧಿಕ ವಿಶ್ವಾಮಿತ್ರ ವಾಸಿಷ್ಠರು (ಹರಿಶ್ಚಾ. ೨-೫) ; ಮಂಗಳ ಬುಧ ಬೃಹಸ್ಪತ್ಯಾದಿ ನವಗ್ರಹಂಗಳೆಲ್ಲಂ ಪುಂ ನಪುಂಸಕಲಿಂಗಂಗಳ್ (ಶಮದ. ೮೮ ಪ್ರಯೋ). [ ನವ₁ + ಗ್ರಹ ]

**ನವಗ್ರಹಜಪ** (ನಾ). ಸೂರ್ಯನೇ ಮೊದಲಾದ ಗ್ರಹಗಳ ಅನುಗ್ರಹ ಕ್ಕಾಗಿ ಶಾಸ್ತ್ರೋಕ್ತವಾದ ವಿಧಾನದಿಂದ ಮಾಡುವ ಆಯಾಯ ಗ್ರಹಗಳ ಮಂತ್ರ ಪುರಶ್ಚರಣೆ : ನವಗ್ರಹಜಪ ಮಾಡಿ, ಪೀಡೆ ಪರಿಹಾರ ವಾಗುತ್ತದೆ (ರೂಢಿ). [ ನವಗ್ರಹ + ಜಪ ]

**ನವಗ್ರಹದಾನ** (ನಾ). ನವಗ್ರಹಗಳನ್ನು ಪ್ರಸನ್ನಗೊಳಿಸುವುದಕ್ಕಾಗಿ ಮಾಡುವ ನವಧಾನ್ಯಗಳ ದಾನ : (+). P ಸೂರ್ಯನ ಪ್ರೀತ್ಯರ್ಥ ವಾಗಿ ಗೋದಿ, ಚಂದ್ರನಿಗೆ ಬತ್ತ, ಕುಜನಿಗೆ ತೊಗರಿ, ಬುಧನಿಗೆ ಹೆಸರು, ಗುರುವಿಗೆ ಕಡಲೆ, ಶುಕ್ರನಿಗೆ ಅವರೆ, ಶನಿಗೆ ಎಳ್ಳು,

ರಾಹುವಿಗೆ ಉದ್ದು ಮತ್ತು ಕೇತುವಿಗೆ ಹುರುಳಿಯನ್ನು ದಾನ ಮಾಡಬೇಕೆಂಬ ವಿಧಿಯಿದೆ. [ ನವಗ್ರಹ + ದಾನ ]

**ನವಗ್ರಹಶಾಂತಿ** (ನಾ). ಜಪ, ದಾನ, ಹೋಮಗಳಿಂದ ನವಗ್ರಹಗಳನ್ನು ಪ್ರಸನ್ನಗೊಳಿಸುವ ಪುಣ್ಯಕರ್ಮ : (೩). [ ನವಗ್ರಹ+ ಶಾಂತಿ ]

**ನವಗ್ರಹಹೋಮ** (ನಾ). ನವಗ್ರಹಗಳ ಸಂಪ್ರೀತಿಗಾಗಿ ಸಮಿತ್ತು, ಚರು, ಆಜ್ಯಗಳಿಂದ ಯಥೋಕ್ತಸಂಖ್ಯೆಯಿಂದ ವಿಧಿಪೂರ್ವಕವಾಗಿ ಮಾಡುವ ಮಂತ್ರಪೂರ್ವಕವಾದ ಹೋಮ: (೩).

[ ನವಗ್ರಹ + ಹೋಮ ]

**ನವಗ್ರಾಹಕರಿಣಿ** (ನಾ). ಹೊಸದಾಗಿ ಹಿಡಿದ ಹೆಣ್ಣಾನೆ : ಗೆಂಟನೊಳಿ ಬರುತಿರ್ದ ಯುವರಾಜನಂ ಭೋಂಕನೆ ಕಂಡು ನವಗ್ರಾಹಕರಿಣಿಯಂದದಿ ನೂರುಸ್ತಂಭವಿಧೃತೆಯಾಗಿ (ಕಾದಂಬ. ೨೩೨). [ ಸಂ. ನವಗ್ರಾಹಕರಿಣೀ ]

**ನವಗ್ರೈವೇಯಕ** (ನಾ). [ಜೈನ] ಹದಿನಾರು ಸ್ವರ್ಗಗಳ ಮೇಲೆ ಇರುವ ಸುದರ್ಶನ, ಅಮೋಘ, ಸುಪ್ರಬುದ್ಧ, ಯಶೋಧರ, ಸುಭದ್ರ, ಸುವಿಶಾಳ, ಸುಮನಸ, ಸೌಮನಸ ಮತ್ತು ಪ್ರೀತಿಂಕರ ಎಂಬ ಒಂಬತ್ತು ಕಲ್ಪಾತೀತವಾದ ಸ್ವರ್ಗಗಳು : ಆ ಪದಿನಾಱು ಕಲ್ಪಂಗಳ ಮೇಲೆ ನವಗ್ರೈವೇಯಕಂಗಳಿರ್ದುವು (ಆಜಿಪು. ೧೦-೨೯ ವ) ; ಬಱಿಯ ಮಗ್ರಿಮನವಗ್ರೈವೇಯಕಮಧ್ಯನಾಯಕನಾದಂ (ಪಂಪಾಪು. ೬-೫೭ ವ) ; ಇರ್ಪತುಮೂಱಬ್ಧಿ ಮೊದಲೆನಲ್ಮೂವತ್ತೊಂದುವರಮಾಯುಃಕ್ರಮದ ನವಗ್ರೈವೇಯಕದಮರರುಮಂ ನೋಣೆಪನೇಂ ಜವಂ ನಿರ್ಗುಣನೋ (ಮಲ್ಲಿಪು. ೧೩-೧೧೮). [ ನವ$_1$ + ಗ್ರೈವೇಯಕ ]

**ನವಚಕೋರಿ** (ನಾ). ಎಳೆಯ ಪ್ರಾಯದ ಹೆಣ್ಣುಚಕೋರಪಕ್ಷಿ: ಹೊನ್ನ ಪೆಟ್ಟಿಗೆಗಳಂ ನಲವಿಂದೆ ಬಗೆವೆಚ್ಚಿಕೊಂಡು ಬರುತಿರ್ದನುತ್ಸವದಿಂದೆ ನವ ಚಕೋರಿಗೆ ಚಂದ್ರಿಕೆಯ ಕುಟುಕುದಪ್ಪಂತೆ (ನಂಬಿರ. ೧೧-೧೨೫).

[ ನವ$_2$ + ಚಕೋರಿ ]

**ನವಚಕ್ರ** (ನಾ). [ಯೋಗ] ಕುಂಡಲಿನಿಯು ಏರುವ ಒಂಬತ್ತು ಬೇರೆ ಬೇರೆ ಸ್ಥಾನಗಳು ; ಆಧಾರಚಕ್ರ, ಸ್ವಾಧಿಷ್ಠಾನಚಕ್ರ, ಮಣಿಪೂರಕ ಚಕ್ರ, ಅನಾಹತಚಕ , ವಿಶುದ್ಧಿಚಕ್ರ, ಆಜ್ಞಾಚಕ್ರ, ಬ್ರಹ್ಮ ಚಕ್ರ, ಶಿಖಾಚಕ್ರ ಮತ್ತು ಪಶ್ಚಿಮಚಕ್ರ ಎಂಬ ಒಂಬತ್ತು ಚಕ್ರಗಳು : ಕರಣಾದಿ ಗುಣಂಗಳಿಲ್ಲದು ನವಚಕ್ರಂಗಳು ಭಿನ್ನವಾದ ಬಳಿಕ ಇನ್ನೇನೋ ಇನ್ನೇನೋ (ಅವಚಂ. ೮೭-೩೮೮) ; ನವಚಕ್ರಾಂಬುಜಂಗಳ ದಳ ಕುಳವರ್ಣಾದಿ ದೇವತೆಗಳ ತೋಱಿಕೆ ಏನೇನೂ ಇಲ್ಲದ ನಿತ್ಯನಿರಂಜನ ನಿರಾಮಯನಾದ ಶರಣಂಗೆ ನಮೋ ನಮೋ ಎಂಬೆನು (ಸಿದ್ಧೇವ. ೦೫೯-೪೭೮) ; ನವಚಕ್ರಂಗಳಲ್ಲಿ ನವಬ್ರಹ್ಮಂಗಳ ಮೂರ್ತಿಗೊಳಿಸಿ ಕಾಯದ ಕಣ್ಣಿಂದ ಕರತಲಾಮಲಕವ ನೋಡುವಂತೆ ಮನದ ಕಣ್ಣಿಂದ ನವಬ್ರಹ್ಮಸ್ವರೂಪವ ಮನದಣಿವಂತೆ ನೋಡಿ (ಘನವ. ೨೩-೦೯). 'ಷಟ್ಚಕ್ರ' ಪರಾ. [ನವ$_1$ + ಚಕ್ರ$_1$ ]

**ನವಚೂಟಿ** (ನಾ). ಅಪೂರ್ವವಾದ ಚುರುಕುತನ,-ಚಟುವಟಿಕೆ : ನವ ಚೂಟಿಯಲಿ ಕಾಯ ನಡಸಿ ಹಳದಿ ಜೋಡ ಬವರಕ್ಕೆ ನಿಲಿಸಿಯಾಡಿದರು (ಸೌಂದರಾ. ೪-೪೯). [ ನವ$_2$ + ಚೂಟಿ$_1$ (<ಸೂಟಿ$_1$) ]

**ನವಜವಾನ** (ನಾ). ತುಂಬುಹರೆಯದವನು ; ನವಯುವಕ ; ತರುಣ : ಅವರಿಗೆ ೭೫ ವರ್ಷ ಪ್ರಾಯ, ಮುದುಕರು. ಹುರುಪು ಮಾತ್ರ ನವ ಜವಾನರದು (ಕರವೀ. ೧೧೫) ; ಹರಕು ಅಂಗಿಯ ಒಬ್ಬ ದೃಢಕಾಯನಾದ ನವಜವಾನನು ಶೀಳು ಹಾಕುತ್ತಿದ್ದನು (ರಕ್ತಧ್ವ. ೦೭೨).

[ ←ಪಾರ. ಹಿಂ. ನೌಜವಾನ್ ]

**ನವಜ್ವರ** (ನಾ). ಒಂದು ಬಗೆಯ ಜ್ವರ ; ಒಂಬತ್ತು ದಿನಗಳವರೆಗೆ ತೀಕ್ಷ್ಣವಾಗಿ ಕಾಡುವ ಜ್ವರ : ತಿಗಡೆ, ರಸ, ಗಂಧಕ . . . ಇವು ಕಲ್ವದಲ್ಲಿ ಕಳ್ಳಿಯ ಹಾಲಲ್ಲೂ ಎರಡುಜಾವ ಮರ್ದಿಸಿ ರಸಶುದ್ಧಿ ಮಾಡಿಕೊಂಡು ಎರಡು ಗುಂಜಿಯ ತೂಕವನ್ನು ಅಲ್ಲದ ರಸ ಸಕ್ಕರೆ ಬೆರಸಿಕೊಡಲು ನವಜ್ವರ ಹರ (ವಿವ್ಯವಿ. ೩೩) ; ನವಜ್ವರದಲ್ಲಿಯೂ, ಸನ್ನಿಪಾತದಲ್ಲಿಯೂ, ಗರ್ಭಿಣಿಯರಲ್ಲಿಯೂ . . . ವಿರೇಚನ ಮಾಡಲಾಗದು (ಸಕವ್ಯ. ೨೬) ; ಸೌಭಾಗ್ಯವತಿ ನವಜ್ವರದಿಂದ ತೀರಿಕೊಂಡಳೆಂದು ತಿಳಿದುಬಂತು (ಸ್ಮೃತಿಚಿ. ೩೦). [ ನವ$_1$ + ಜ್ವರ ]

**ನವಟಾಕು** (ನಾ). ತೂಕದಲ್ಲಿ ಒಂದು ಸೇರಿನ ಎಂಟನೆಯ ಭಾಗ ; ತೂಕದಲ್ಲಿ ಎಂಟನೆಯ ಒಂದು ಭಾಗ ; ಅರೆಪಾವು : ನನ್ನವಳು ಒಂದು ಸಿಂಗಲ್ ಅಥವಾ ಒಂದು ನವಟಾಕು ಸಜ್ಜಿಗೆ ಮಾಡಿದರೆ ಸೇರುತುಪ್ಪ ಅಚ್ಚೇರು ದೀಪದಾಕ್ಷಿ ಖರ್ಚುಮಾಡುತ್ತಾಳೆ (ಮುಂಗಾಪು.೫೭). 'ಚಟಾಕು' ಪರಾ. [ ←ಮರಾ. ನವಟಾಂಕ ]

**ನವಠಾಣ** (ನಾ). [ಸಂಗೀತ] ಒಂಬತ್ತು ಸ್ವರಗಳು (?) : ಗಾನವೊಪ್ಪುವ ದಂಡಿಗೆಯನವಧಾನಿಸುತ ಮಿಗೆ ಮೇಳಕಾಳವನೊಡನೆ ಯಾಠಾಣವಮಾನಿತಂ ನವಠಾಣವುಂ . . . ಅನೂನಪತ್ರಂ ಪೊಟ್ಟವಣಿ ಸಾರಣಮಲರ್ದಿರಲು (ಬಸವಪು. ೦೯-೮). [ ನವ$_1$ + ಠಾಣ ? ]

**ನವಣಕ್ಕಿ** 'ನವಣೆಯಕ್ಕಿ' ನೋ.

**ನವಣೆ** 'ಲವಣೆ' ನೋ.

**ನವಣೆವಡೆ** (ಕ್ರಿ). ಸೊಗಸಾಗು ; ಅಂದವನ್ನು ಪಡೆ : ಬಿಂಕಂ ಲುಳಿವಡೆಯೆ ಲುಳಿ ನವಣೆವಡೆಯೆ ನವಣೆ ಬಹುವಿಕೆವಡೆಯೆ ಬಹುವಿಧದ ವಹಣಿಯ ಮಾರ ಚಿತ್ರದ ಗತಿಗಳೊಳ್ ಮೆಱೆದು (ಅನಂಪು. ೨-೨೮ ವ).

[ ನವಣ (<ಲವಣೆ) + ಪಡೆ$_1$ ]

**ನವಣೆ** (ನಾ). ಒಂದು ಬಗೆಯ ಧಾನ್ಯ ; ಕಂಗು : "ಪ್ರಿಯಂಗುಃ, ಕಂಗುಃ– ಈ ೨ ನವಣೆ" (ಹಲಾಯು. ೯೫-೪೨೮) ; ನವಣೆಯ ಪಿಟ್ಟಂ ನೆಲದಾಟುವ ನೊಡವೊಯ್ದುಟ್ಟು ಘೃತಸಮೇತಂ ಮೇಣ್ ದುಗ್ಧವಿಮಿಶ್ರಂ ಸೇವಿಸೆ ವೀರ್ಯವೃದ್ಧಿಯುಂ ಮೆಯ್ಯ ಪುಷ್ಟಿಯುಂ ಸವನಿಸುಗುಂ (ಲೋಕೋಪ. ೯-೪೫) : ಮರ್ದಂ ನವಣೆಯ ಪಿಟ್ಟನೊಳ್ ಕೂಡಿ ಕಿಱಿಯವಪ್ಪುಂಡೆಗಳಂ ಮಾಡಿ (ಧರ್ಮಾಮ್ಮ. ೦೨-೮೮) ; ನವಣೆ ಹಾರಕ ಬರಗು ಸಾವೆ ಮಾಸಿಗಳೆಂಬ ಧಾನ್ಯ ಐವತ್ತುಲಕ್ಷ ಖಂಡುಗ (ಶೂನ್ಯಸಂ. ೩೩೪-೦೪) ; ನವಣೆಯ ಹಾಳಲು ಬೆದ್ದತಿ ಮತ್ತರೊಂದು (ಎಕ. VI, ಕಡೂರು. ೩೭-೭೩ ; 1187 ?) ; ಬಾಗಿ ಬಳುಕುವ ತೆನೆಗಳಿಂದೆಸೆವ ತಮ್ಮ ನವಣೆಯ ಕೆಯ್ಯ ಬಳಿಯೊಳ್ (ಸಿದ್ಧರಾ. ೨-೨೩) ; ಬಲು ರಾಯರೊಲ್ಮೆ ಗಡಯುಂಬುದಲ್ಲಂ ನವಣೆಯೊಳು ಗಂಜಿ (ಹಬಪು. ೧೦-೭೦) ; ನವಣೆಯ ಬೋನಕ್ಕೆ ಹವಣಾದ ತೊಗೆಯಾಗಿ ಕವಣೆಗಲ್ಲಷ್ಟು ಬೆಣ್ಣೆಯಿಡಲೂಟದ ಹವಣ ನೋಡು (ಸರ್ವಜ್ಞ. ೦೩೦೮).

**ನವಣೆಯ ಪಾಯಸ** = ನವಣೆ ಅಕ್ಕಿಯನ್ನು ತುಪ್ಪದಲ್ಲಿ ಹುರಿದು, ಬೇಯಿಸಿ ಮಾಡುವ ಪಾಯಸ : ಅವರು ಮಾಡಿದ ನವಣೆಯ ಪಾಯಸ ಬಹಳ ರುಚಿಯಾಗಿತ್ತು (ರೂಢಿ).

[**ದೇ.** ತಮಿ. ನವರೈ = ಒಂದು ಬಗೆಯ ಬತ್ತ ; ಮಲ. ನವಿರ, ನವಿರಿ = ಒಂದು ಬಗೆಯ ಅಕ್ಕಿ ; **ತುಳು**. ನವರ, ನವರೆ ; **ತೆಲು**. ನಿವರಿ ]

**ನವಣೆಅಕ್ಕಿ** 'ನವಣೆಯಕ್ಕಿ' ನೋ.

**ನವಣೆಯಕ್ಕಿ, ನವಣಕ್ಕಿ, ನವಣೆಅಕ್ಕಿ** (ನಾ). ಹೊಟ್ಟು ತೆಗೆದ ನವಣೆ : ಚಾಬೇಸೊಪ್ಪನು ನವಣೆಯಕ್ಕಿಯನ್ನು ಕೂಡ ಕುಟ್ಟಿ ಹಿಟ್ಟು ತೊಳಸಿ . . . ಸಪ್ಪೆ ತುಪ್ಪದಿಂ ಮೆಲ್ಲಲು ಪೆನ್ನೆತ್ತರು ಪಾಣ್ಗಂ (ಸಕವ್ಯ. ೦೯೫). **ನವಣಕ್ಕಿ:** ನವಣಕ್ಕಿಯ ಹಿಟ್ಟುಕುಟ್ಟಿ ತುಪ್ಪದಲ್ಲಿ ಮೆಲ್ಲೆ ಗರ್ಭವಕ್ಕುಂ (ವಿವ್ಯವಿ. ೮). **ನವಣೆಅಕ್ಕಿ** : ಹೊನ್ನುಗೊನ್ನೆಸೊಪ್ಪು ಸಹವಾಱಲವನ್ನು ನವಣೆಅಕ್ಕಿ ಗಂಜಿಯಲ್ಲಿ ಅರೆದು ಮೂರುದಿನ ಕೊಟ್ಟರೆ ಕಲ್ಲುಂಕರಗಿ ಬೀಳುವುದು (ಸಕವ್ಯ. ಪರಿ. ೪೯೭). [ ನವಣೆ + ಅಕ್ಕಿ$_1$ ]

**ನವತ** (ನಾ). ೧. ಹೊದಿಕೆ ; ಆಚ್ಛಾದನೆ. ೨. ಉಣ್ಣೆಯ ಹೊದಿಕೆ ; ಕಂಬಳಿ : ಸ್ನಾನಂಗೆಯ್ವೆಡೆಯೋ ಮೇಣ್ ದಾನಂ ಕೊಳ್ವೆಡೆಯೊ ನವತಮಂ ಪೋಲ್ವೆಡೆಯೋ ನೀನೀ ಸಂಗ್ರಾಮಾವನಿಗೇನೆಂದೆಟ್ಟಿಪ್ಪೆ ವಿಪ್ರ ಪೆರ್ಮೆಟ್ಟಿ ನುತುಂ (ಮಹಾನೇ. ೧೨-೨೦೦). [ ಸಂ. ]

**ನವತಯಾರುಮಾಡಿಸು** (ಕ್ರಿ). ಹೊಸದಾಗಿ ಸಿದ್ಧಪಡಿಸು : ಒಂದು ಹೂವನ್ನು ಅರ್ಧಚಂದ್ರನೋಪಾದಿ ಚಿನ್ನದಲ್ಲು ಮಾಡಿಸಿ, ಅದಕ್ಕೆ ವಜ್ರಕೆತ್ತಿಸಿ, ಹೊಳೆಯುವಂಥಾದ್ದು ಒಂದು ನವತಯಾರುಮಾಡಿಸಿ, ತಮ್ಮ ಬಳಿಯ ಮಡಗಿದ್ದರು (ರಾಜೇಂದ್ರ. ೨೨೫). [ ನವ$_2$ + ತಯಾರು + ಮಾಡಿಸು ]

**ನವತರುಣ** (ನಾ).=ನವಯೌವನ ೨ : ಈಗ ಮಾತ್ರ ನಾನೊಬ್ಬ ನವತರುಣನಂತೆ ಹುರುಪಿನಿಂದ ಆಕಾಶಕ್ಕೇರುವಷ್ಟು ಪ್ರಫುಲ್ಲನಾಗಿದ್ದೆ (ಗಂಗಾವ. ೦೦೧). [ ನವ$_2$ + ತರುಣ ]

**ನವತರುಣಿ** (ನಾ). = ನವಯುವ್ವನೆ : ಈಗಿನ ನವತರುಣರಿಗಿಂತ ನವತರುಣಿಯರಲ್ಲಿ ಓದಿನ ಬಗೆಗೆ ಒಲವು ಹೆಚ್ಚು (ರೂಢಿ). [ ನವ$_2$ + ತರುಣಿ ]

**ನವತಾರುಣ್ಯ** (ನಾ). ಹೊಸಹರೆಯ ; ನವಯೌವನ : ಮಕ್ಕಳು ನವತಾರುಣ್ಯವನ್ನು ಹತ್ತುವಾಗ ಆರಂಭವಾಗುವ ಪ್ರೌಢಶಿಕ್ಷಣ ಉತ್ತಮವೆಂದು ಹಲವರು ಭಾವಿಸುವರು (ಶಿಕ್ಷದ. ೯೦). [ ನವ$_2$ + ತಾರುಣ್ಯ ]

**ನವತಾಲ** (ನಾ). [ಶಿಲ್ಪಶಾ] ಮೂರ್ತಿಶಿಲ್ಪದಲ್ಲಿ ಬಳಸುವ ಒಂಬತ್ತು ತಾಳಪ್ರಮಾಣದ ಒಂದು ಅಳತೆ : ಮಾನಾಂಗುಲ, ಮಾತ್ರಾಂಗುಲ, ದೇಹಲಬ್ಧಾಂಗುಲವೆಂಬ ಅಳತೆಗಳಿಂದ ಪಂಚತಾಲ, ನವತಾಲಾದಿ ವಿವೇಚನೆಯಿಂದ ಮೂರ್ತಿಗಳನ್ನು ರಚಿಸುವ ವಿಧಾನಗಳನ್ನೂ . . . ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಭಾರದ. ೮೦). [ ನವ$_1$ + ತಾಲ ]

**ನವತಿ** (ನಾ). ಒಂದು ಸಂಖ್ಯೆ ; ತೊಂಬತ್ತು : ಭರತಕ್ಷೇತ್ರದ ವಿಷ್ಕಂಭಂ ಜಂಬೂದ್ವೀಪದ ನವತಿಶತಭಾಗಪ್ರಮಾಣಮಕ್ಕುಂ (ಸುಕುಮಾ. ೧೧-೫೦೪); ಬಾಹುಕ್ಷೇಪದಿಂದಂ ನವತಿ ನಯನಭೇದಂಗಳಿಂ ರಂಜಿಸುತ್ತಿರ್ದುದು ಸರ್ವಾಶಾಪ್ರದೇಶಂ ಸುರಪತಿನಟನಂ ವಿಸ್ಮಯಂಬೆತ್ತುದಾದಂ (ಬಾಧಪು. ೯-೧೪). [ಸಂ.]

**ನವತುಷ್ಟಿ** (ನಾ). [ಸಾಂಖ್ಯ] ಅಂಭಸ್ಸು, ಸಲಿಲ, ಓಘ, ವೃಷ್ಟಿ, ಪಾರ, ಸುಪಾರ, ಪಾರಾಪಾರ, ಅನಂತ್ತಮಾಂಭ ಮತ್ತು ಉತ್ತಮಾಂಭ ಎಂಬ ಬುದ್ಧಿಗೆ ಸೇರಿದ ಒಂಬತ್ತು ಬಗೆಯ ತುಷ್ಟಿಗಳು : ನವತುಷ್ಟಿಗಳು–ವಿವೇಕಸಾಕ್ಷಾತ್ಕಾರವನ್ನು ಪ್ರಕೃತಿಯೇ ಮಾಡುತ್ತದೆ. ನಾವೇಕೆ ಶ್ರಮಪಡಬೇಕೆಂಬ ತೃಪ್ತಿಯೊಂದು. ಇದಕ್ಕೆ ಅಂಭಸ್ಸೆಂದು ಹೆಸರು . . . ಉತ್ತಮಾಂಭ ಎಂದರೆ ಪ್ರಾಣಿಹಿಂಸೆಯಿಲ್ಲದೆ ಸುಖವಿಲ್ಲವೆಂದು ತಿಳಿದು ವೈರಾಗ್ಯವನ್ನು ಪಡೆಯುವುದು ಒಂಬತ್ತನೆಯದು. ಈ ನವತುಷ್ಟಿಗಳು ಬುದ್ಧಿಗೆ ಸೇರಿದುವು (ಹಿಂದಸಾ. ೬೪). [ ನವ$_1$ + ತುಷ್ಟಿ ]

**ನವತೆ** (ನಾ). ಹೊಸತನ ; ನವೀನತೆ : ಮುಡುಕತೊರೆಗೆ ಹೋಗಬೇಕಾದರೆ ದೋಣಿಯಲ್ಲೇ ಪ್ರಯಾಣಮಾಡುತ್ತಿದ್ದೆವು. ಅದರ ನವತೆ ಸಮೆದರೂ ನಮ್ಮಜನಕತ್ವ ಸಮೆಯಲಿಲ್ಲ (ಕಲಸಿ. ೩೩೪) ; ಹಳೆಯ ಕರ್ಮವ ಹೊಸದು ಕೊಚ್ಚಿ ಪೌರುಷನದಿಯ ಬೆಳೆಯಿಪುದು ನವತೆಯಲಿ (ಮಂಕುಕ. ೧೬೪).

[ ಸಂ. ನವತಾ ]

**ನವತೇಜ** (ನಾ). ಹೊಸಕಾಂತಿ ; ನವೀನಶೋಭೆ : ನನ್ನಂತೆ ಲಾಂಗೂಲಯಜ್ಞದಿಂ ನವತೇಜಪುಣ್ಯಗಳ ಗಳಿಸಿ ಜೀವನ್ಮುಕ್ತರಾಗಿ ! (ಕಎಪು. ೪೩-೧೦).

[ ನವ$_2$ + ತೇಜ$_1$ ]

**ನವತ್ವ** (ನಾ). = ನವತೆ : ಮಾತೂ ಕೂಡ ನವತ್ವವನ್ನು ಪಡೆಯುತ್ತದೆ (ಧ್ವನ್ಯಾಲೋ. ೨೪೦). [ ಸಂ. ]

**ನವದಂಪತಿ** (ನಾ). ನೂತನ ದಂಪತಿ ; ಆದೇ ತಾನೇ ಮದುವೆಯಾದ ಗಂಡಹೆಂಡಿರು: ತಾನುಂ ಪತಿಯುಂ ಮಹಾ[ವಿಭವ]ತೀಕರಮೊಪ್ಪಿರೆ ಮಾಡೆ ಕಾಮದೇವಂ ಪಸೆಯೊಳ್ ಸುರೇಂದ್ರ ನವದಂಪತಿಯಿರ್ದವೊಲಿರ್ದರ್ (ಬಂಹರಿ. ೯-೮೬) ; ಅಮ್ಮ ಅಪ್ಪ ನವದಂಪತಿಗಳಂತೆ ಇನ್ನೂ ಸುಖವನ್ನು ಅರಸಿ ಹೊರಟಂತಿದೆ (ನಡದಾ. II. ೯೬೫). [ ನವ$_2$ + ದಂಪತಿ ]

**ನವದರ್ಶನಾವರಣ** (ನಾ). [ಜೈನ] ಚಕ್ಷುಸ್ಸು, ಅಚಕ್ಷುಸ್ಸು, ಅವಧಿ, ಕೇವಲ, ನಿದ್ರಾ, ನಿದ್ರಾನಿದ್ರಾ, ಪ್ರಚಲಾ, ಪ್ರಚಲಾಪ್ರಚಲಾ ಮತ್ತು ಸ್ತ್ಯಾನವೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಜ್ಞಾನಾವರಣೀಯ ಕರ್ಮಪ್ರಕೃತಿಗಳು : ಪಂಚಜ್ಞಾನಾವರಣಂಗಳುಂ ನವದರ್ಶನಾವರಣಂಗಳುಂ ದ್ವಿವೇದನೀಯಂಗಳುಮಷ್ಟಾವಿಂಶತಿಮೋಹನೀಯಂಗಳುಮೇಕೆಂದೊಡೆ (ಗೊಮ್ಮಸಾ. ೬-೪) [ ನವ$_1$ + ದರ್ಶನಾವರಣ ]

**ನವದುರ್ಗಿ** (ನಾ). ಶೈಲಪುತ್ರೀ, ಬ್ರಹ್ಮಚಾರಿಣೀ, ಚಂದ್ರಘಂಟಾ, ಕೂಷ್ಮಾಂಡಾ. ಸ್ಕಂದಮಾತಾ, ಕಾತ್ಯಾಯನೀ, ಕಾಲರಾತ್ರೀ, ಮಹಾಗೌರೀ ಮತ್ತು ಸಿದ್ಧಿಧಾತ್ರೀಎಂಬ ದುರ್ಗಾದೇವಿಯ ಒಂಬತ್ತು ರೂಪಗಳು : ಸಪ್ತಮಾತೃಕೆಯರುಂ ಉರಗಿಯರ್ ನವದುರ್ಗಿಯಂಬಿಕೆಯರನಿಬರುಂ ಧರಿಸಿದರು ಶಾಬರವನು (ಲಶಿಚಂ. ೨೩-೧೩); ವಿಷ್ಣುವಿನ ದಶಾವತಾರ . . . ಶಕ್ತಿಯ ನವದುರ್ಗಿಯರು, ಸಪ್ತಮಾತೃಕೆಯರು (ಭಾರದ. ೮೦). [ ನವ$_1$ + ದುರ್ಗಿ ]

**ನವದ್ವಾರ** (ನಾ). ೧. ಒಂಬತ್ತು ಬಾಗಿಲುಗಳು : ನರಕಕ್ಕೆ ನವದ್ವಾರ, ನಾಕಕ್ಕೆ ಒಂದೇ ದ್ವಾರ (ಗಾದೆ). ೨. ಕಣ್ಣುಗಳು, ಕಿವಿಗಳು, ಮೂಗಿನ ಹೊಳ್ಳೆಗಳು, ಬಾಯಿ, ಮೂತ್ರದ್ವಾರ ಮತ್ತು ಗುದದ್ವಾರ ಎಂಬ ದೇಹದ ಒಂಬತ್ತು ದ್ವಾರಗಳು : ಪರಿಮಳದಿಂಡೆಯ ಕಟ್ಟಿ ಪೂಜಿಸುತ್ತಿರ್ದದೋ ನವದ್ವಾರ ಶಿವಾಲಯದಾದಿ ಮಧ್ಯಸ್ಥಾನದಲ್ಲಿ (ಅವಚಂ. ೪೫-೧೯೩) ; ಬಿಸುಗುದಿಯ ನರರುಧಿರಜಲ ಜಾಳಿಸೆ ನವದ್ವಾರದಲಿ ದೈತ್ಯನ ಕುಸುಕಿರಿದು ತಿವಿತಿವಿದು ಕೊಂದನು ಕಲಿ ಜಟಾಸುರನ (ಕುವ್ಯಾಅ. ೧೦-೧೧); ನೆಲೆಗೊಂಡ ನವದ್ವಾರದ ಹೊಲೆಯೊಳು ನರಳುತ ನೀ ಬಿದ್ದೆ ಬಿಕನಾಸಿ (ಪುರಂದ. ೧-೧೦೫-೦) ; ಐದುತಿಂಗಳಿಗೆ ಕಿವಿ ಮೂಗು ಕಂಗಳುಂ ಜನಿಸಿ ನವದ್ವಾರಂಗಳಂ ತೋರ್ಪವು (ನವಮೋ. ೧೪-೫೧); ಸುರಲೋಕಕ್ಕೆ ತೆರಳುವ ತವಕದಿಂದ ಅವಳು ನವದ್ವಾರಗಳ ವಾಯುವನ್ನು ಬಲಿದು, ಪ್ರಾಣತ್ಯಾಗ ಮಾಡಿದಳು (ನಂಜುಂಡ. ೫೦). [ ನವ$_1$ + ದ್ವಾರ ]

**ನವದ್ವೀಪ** (ನಾ). = ನವಚಕ್ರ : ಚಿದ್ಬ್ರಹ್ಮಾಂಡದೊಳಗಣ ಏಳುತಾವರೆಯ ಮೇಲಿಪ್ಪ ನಿಷ್ಕಲಚಿದ್ಬಿಂದುಲಿಂಗಕ್ಕೆ ಪ್ರಾಣಪೂಜೆಯಂ[ಮಾಡೆ] ಮಹಾಜ್ಞಾನ ಬಲದಿಂದ ನವದ್ವೀಪಂಗಳ ಲಿಂಗಂಗಳ ಬೆಳಗು ಪಿಂಡಾಂಡದಲ್ಲಿ ಪ್ರಭಾವಿಸಿ ತೋರುತಿರ್ಪುದಾಗಿ ನಾನು ಸರ್ವಾಂಗಲಿಂಗಿಯಾದೆನಯ್ಯ (ಘನವ. ೩೯-೩೨); "ಆಚಾರಾದಿಯಾಗಿ ನಿರಂಜನಲಿಂಗಾಂತ್ಯವಾದ ಒಂಬತ್ತು ಲಿಂಗಗಳಿರುವ ಆಧಾರಾದಿಯಾಗಿ ಪಶ್ಚಿಮಾಂತ್ಯವಾದ ಒಂಬತ್ತು ಚಕ್ರಗಳು" (ಘನವ. ಕೋಶ). P ಇಲ್ಲಿ 'ಚಕ್ರ'ವೆಂಬ ಸ್ಥಾನವನ್ನು 'ದ್ವೀಪ'ವೆಂದು ರೂಪಕ ಮಾಡಿದೆ. [ ನವ$_1$ + ದ್ವೀಪ ]

**ನವಧಾನ್ಯ** (ನಾ). ಗೋದಿ, ಭತ್ತ, ಉದ್ದು, ಹೆಸರು, ಕಡಲೆ, ತೊಗರಿ, ಹುರುಳಿ, ಅವರೆ ಮತ್ತು ಎಳ್ಳು ಎಂಬ ಒಂಬತ್ತು ಬಗೆಯ ಧಾನ್ಯಗಳು : ನವಧಾನ್ಯ ಬೆಳೆದವನಿಗೆ ವ್ಯವಧಾನವಿಲ್ಲ (ಗಾದೆ). P ಪಿತೃಶ್ರಾದ್ಧದಲ್ಲಿ ಉಪಯೋಗಿಸಲು ಪ್ರಶಸ್ತವಾದುವು : ಭತ್ತ, ಯವೆ, ಎಳ್ಳು, ಉದ್ದು, ಗೋದಿ, ಸಾವೆ, ನವಣೆ, ಹೆಸರು ಮತ್ತು ಸಾಸುವೆ.

[ ನವ$_1$ + ಧಾನ್ಯ ]

**ನವಧಾಭಕ್ತಿ** (ನಾ). [ಜೈನ] ಶ್ರಾವಕನು ಸಾಧುಗಳ ಬಗ್ಗೆ ಭಕ್ತಿಯನ್ನು ತೋರಿಸುವ ಸಂಗ್ರಹ, ಉಚ್ಚಸ್ಥಾನ. ಪಾದಪ್ರಕ್ಷಾಲನ, ಪೂಜನ, ಪ್ರಣಾಮ, ಮನಃಶುದ್ಧಿ, ವಚನಶುದ್ಧಿ, ಕಾಯಶುದ್ಧಿ ಹಾಗು ಆಹಾರಶುದ್ಧಿಗಳೆಂಬ ಒಂಬತ್ತು ವಿಧಾನಗಳು : ನಿಜವಾದ ಶ್ರಾವಕ ಊಟದ ಹೊತ್ತಿನಲ್ಲಿ ಬಾಗಿಲದೊಳಗೆ ನಿಂತು ಸಾಧುಗಳ ಬರವನ್ನು

ಹಾರೈಸುತ್ತಲೇ ಇರುವವನು. ಸಾಧುಗಳು ಅವನ ದೃಷ್ಟಿಗೆ ಬಿದ್ದೊಡನೆಯೇ ನಿಲ್ಲಲು ಪ್ರಾರ್ಥಿಸುವವನು. ನಿಂತ ಮೇಲೆ ಸಾಧುಗಳನ್ನು ಕರೆದುಕೊಂಡು ತನ್ನ ಮನೆಯೊಳಗೆ ಹೋಗುವವನು. ಉಚ್ಚಾಸನದಲ್ಲಿ ಕೂಡಿಸುವವನು, ಪಾದಗಳನ್ನು ತೊಳೆಯುವವನು, ಪೂಜಿಸುವವನು, ನಮಸ್ಕರಿಸುವವನು. ಮನ ವಚನ ಕಾಯ ಹಾಗೂ ಅನ್ನಗಳು ಶುದ್ಧವಾಗಿರುವುವೆಂದು ಮನಃಪೂರ್ವಕ ವಾಗಿ ಹೇಳುವವನು. ಈ ಎಲ್ಲ ಕಾರ್ಯಗಳಿಗೆ 'ನವಧಾಭಕ್ತಿ' ಎಂದು ಹೇಳುವರು (ಜೈನಪಾ. ೪೭೪). 'ನವವಿಧಪುಣ್ಯ' ಪರಾ. [ ಸಂ. ]

**ನವನಲಿನ, ನವನಳಿನ** (ನಾ). [ಛಂದ] ಒಂದು ಸಾಲಿನಲ್ಲಿ ನಜಜಭರ ಎಂಬ ಗಣಗಳು ಬರುವ ಒಂದು ಬಗೆಯ ಅಕ್ಷರವೃತ್ತ: ದಿವಿಜ ದಿನಾಧಿಪ ಭಾನು ಶೀತಕರಾಗ್ನಿಯೆಂದಿವು ನೆರೆದಿಂಬೆನೆ ಬಂದೊಡಾ ಯತಿ ಹತ್ತಱತ್ತವತರಿಸಿರ್ದೊಡವಂಬುಜಾಯತಲೋಚನೇ ನವನಲಿನಂ ಕವಿರಾಜ ಹಂಸವಿನಿರ್ಮಿತಂ (ಛಂದೋಂಬು. ೨-೦೫೭). **ನವನಳಿನ:** ನವನಳಿನಂ ಮೆಱೆಗುಂ ನಜಂಜಭರಂ ಬರಲ್ (ಕೃಪಿಡಿ. ೮೩). [ ಸಂ. ]

**ನವನವತಿ** (ನಾ). ಒಂದು ಸಂಖ್ಯೆ ; ತೊಂಬತ್ತೊಂಬತ್ತು: ನವನವತಿ ಯೋಜನ ಸಹಸ್ರಾರ್ಧ್ವವನು ನೀರ್ನೆಳಲಶನವಿನಿತಿಲ್ಲವನಿಯಿಂ ಕೆಳಗೊಯ್ದು ಯಮನವರಿಕ್ಕಿ ನರಕದಲಿ ತಿವಿದು ಯಾತನೆಬಡಿಸುವರು (ನಿಶಾಗ. ೩-೦೪-೦೩). [ ನವ$_1$ + ನವತಿ ]

**ನವನವೋದಿತ** (ಗು). ಹೊಸಹೊಸದಾಗಿ ಹುಟ್ಟಿದ ; ನಿತ್ಯನೂತನವಾಗಿ ಉದಿಸಿದ : ಅವಳ ಚೇಷ್ಟೆ, ಪ್ರೀತಿ, ಸೌಜನ್ಯ, ತಾಳ್ಮೆಗಳ ಪ್ರಸಂಗಗಳು ನವನವೋದಿತವಾಗಿ ಜಾಗ್ರತಗೊಂಡು ಸ್ವಪ್ನಚಿತ್ರವನ್ನಾಡುತ್ತಿದ್ದುವು (ಜಯಂತ. ೨೭೪). [ ಸಂ. ]

**ನವನವೋನ್ಮೇಷಶಾಲಿನಿ** (ನಾ). ಹೊಸಹೊಸ ಅರ್ಥಗಳನ್ನು ಹೊಳೆಯುಂ ವಂತೆ ಮಾಡುವಂಥದು ; ನಿತ್ಯನೂತನವಾಗಿ ಜಾಗ್ರತಗೊಳಿಸು ವಂಥದು : ನವನವೋನ್ಮೇಷಶಾಲಿನಿಯಾದ ಪ್ರಜ್ಞೆ ಎಂಬುದು ಅದರ ಅತ್ಯಂತ ಸಮೀಚೀನವಾದ ವರ್ಣನೆ ಎನ್ನಬಹುದು (ಕಾವ್ಯಕು. ೧೪) ; ಬೋಧಿಧರ್ಮನ ಧ್ಯಾನಪಂಥ ನವನವೋನ್ಮೇಷಶಾಲಿನಿಯಾದ ಪ್ರತಿಭೆಯನ್ನು ಕೊಟ್ಟಿತು (ಭಾರದ. ೩೪೮) ; ಮಿಂಚಿತೆಯ್ ಕಾವ್ಯದಿವ್ಯಪ್ರಜ್ಞೆ, ನವನವೋ ನ್ಮೇಷಶಾಲಿನಿ, ನಿತ್ಯತಾಪ್ರತಿಭೆ (ಶ್ರೀರಾಮಾ. ೨-೫೦). [ ಸಂ. ನವನವೋನ್ಮೇಷಶಾಲಿನೀ ]

**ನವನವೋನ್ಮೇಷಿತ** (ಗು). ೧. ಹೊಸಹೊಸದಾಗಿ ವಿಕಾಸಗೊಳ್ಳುವ ; ನಿತ್ಯನೂತನವಾಗಿ ಜಾಗ್ರತಗೊಳ್ಳುವ. (ನಾ). ೨. ಹೊಸಹೊಸದಾಗಿ ವಿಕಾಸಗೊಳ್ಳುವಂಥದು: ನವನವೋನ್ಮೇಷಿತಂ ನಿತ್ಯ ಚಿರನೂತನಂ ರಸದರ್ಶನಾಸ್ವಾದನಂಗೈವ ಸಹಜಕವಿ (ಶ್ರೀರಾಮಾ. ೫೭-೦೦೦). [ ಸಂ. ]

**ನವನಳಿನ** 'ನವನಲಿನ' ನೋ.

**ನವನಾಗ** (ನಾ). ಅನಂತ, ವಾಸುಕಿ, ಶೇಷ, ಪದ್ಮನಾಭ, ಕಂಬಲ, ಶಂಖಪಾಲ, ಧೃತರಾಷ್ಟ್ರ, ತಕ್ಷಕ ಮತ್ತು ಕಾಲಿಯ ಎಂಬ ಒಂಬತ್ತು ಸರ್ಪಗಳು : ನವನಾಗ ಶೈಲಸಪ್ತಕ ಷಡುರುತು ಶರಬಾಣ ಶರಧಿ ವಾರುಧಿ ಮತ್ತಾ ಅನಲಾಗ್ನಿ ನಯನಲೋಚನಾ ಹಿಮಕರ ಶಶಿ ನವಪ್ರಕಾರದಿಂ (ಭಾಸ್ಕರ. ೪-೨). [ ನವ$_1$ + ನಾಗ ]

**ನವನಾಥಸಿದ್ಧ** (ನಾ). ವ್ಯಾಳಿ, ಚರ್ಪಟಿ, ಕೋರಂಟ, ರತ್ನಘೋಷ, ಭೂತನಾಥ, ನಾಗಾರ್ಜುನ, ಮಚ್ಛೇಂದ್ರ, ಗೋರಕ್ಷ, ಮಂಜುನಾಥ ಎಂಬ ಒಂಬತ್ತು ಜನ ಸಿದ್ಧರು: ನವನಾಥಸಿದ್ಧರನಪಹರಿಸಿತ್ತೀಮಾಯೆ (ಆದವ. ೬-೧೨). ℙ 'ವಿವೇಕಚಿಂತಾಮಣಿ'ಯ ಮೇರೆಗೆ : ಸತ್ಯ, ಸತೋಕ, ಆದಿ, ಅನಾದಿ, ಅಕಂಲಿತ, ಮಾತಂಗ, ಮಚ್ಛೇಂದ್ರ, ಘಟಿಯಂತ್ರ ಮತ್ತು ಗೋರಕ್ಷ ಎಂಬುವು ಇವರ ಹೆಸರುಗಳು. [ ನವ$_1$ + ನಾಥ + ಸಿದ್ಧ ]

**ನವನಾರಕ** (ನಾ). ಹೊಸದಾಗಿ ನರಕವನ್ನು ಪ್ರವೇಶ ಮಾಡಿದವನು : ಸೇದೆವಟ್ಟ ನವನಾರಕರಂ ಪುರಾಣನಾರಕರ್ಕಳಿಡು (ಸುಕುಮಾ. ೧೦-೪೦ ವ) ; ಇಱಿಇಱಿ ಕಡಿಕಡಿ ಸುಡುಸುಡು . . . ಸೀಳ್ಸೀಳೆನುತ್ತೆ ನಾರಕರ್ಕೈತಂದಿಱಿ ವರ್ಕಡಿವರ್ಸುಡುವರ್ಕೊಱೆವರ್ಸೀಳ್ವರ್ತಗುಳ್ದು ನವನಾರಕರಂ (ಸುಕುಮಾ. ೧೦-೪೨). [ ನವ$_1$ + ನಾರಕ ]

**ನವನಾರದ** (ನಾ). [ಜೈನ] ಒಂಬತ್ತು ಜನ ನಾರದರು : ಭೀಮನುಂ ಮಹಾಭೀಮನುಂ ರುದ್ರನುಂ ಮಹಾರುದ್ರನುಂ ಕಾಳನುಂ ಮಹಾಕಾಳನುಂ ದುರ್ಮುಖನುಂ ಅಧೋಮುಖನುಂ ನರಕಮುಖನುಂ ಎಂದು ವರ್ತಮಾನ ನವನಾರದರಕ್ಕುಂ (ಪಸಾರ. ೪೩೬) ; ನವನಾರದರು,–ಭೀಮ, ಮಹಾಭೀಮ, ರುದ್ರ, ಮಹಾರುದ್ರ, ಕಾಳ, ಮಹಾಕಾಳ, ದುರ್ಮುಖ, ನರಕರೋರು, ಅಧೋಮುಖ (ಜೈನಧ. ೧೨೯). [ ನವ$_1$ + ನಾರದ ]

**ನವನಾರಾಯಣ** (ನಾ). ೧. ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಅವಿರ್ಹೋತ್ರ, ದ್ರವಿಳ, ಚಮಸ ಮತ್ತು ಕರಭಾಜನ ಎಂಬ ಒಂಬತ್ತು ಜನ ಮಹಾಮುನಿಗಳು. ೨. [ಜೈನ] ತ್ರಿಪೃಷ್ಠ, ದ್ವಿಪೃಷ್ಠ, ಸ್ವಯಂಭು, ಪುರುಷೋತ್ತಮ, ನರಸಿಂಹ, ಪುಂಡರೀಕ, ದತ್ತದೇವ, ಲಕ್ಷ್ಮಣ ಮತ್ತು ಕೃಷ್ಣ ಎಂಬ ಒಂಬತ್ತು ಜನ ಅರ್ಧಚಕ್ರಿಗಳು,–ವಾಸುದೇವರು : ನವನಾರಾಯಣರು–ನಾರಾಯಣರ ಸಂಪತ್ತಿ ಮೊದಲಾದುವು ಚಕ್ರವರ್ತಿಗಳ ಅರ್ಧದಷ್ಟು. ಆದುದರಿಂದ ನಾರಾಯಣರನ್ನು ಅರ್ಧಚಕ್ರಿಗಳೆಂದೂ ಹೇಳುವರು. ಇವರು ಒಂಬಯ್ವರು (ಜೈನಧ. ೧೨೮). 'ವಾಸುದೇವ', 'ಪ್ರತಿವಾಸುದೇವ' ಪರಾ. [ ನವ$_2$ + ನಾರಾಯಣ ]

**ನವನಾಳ** (ನಾ). = ನವಚಕ್ರ : ಕಾಯದೊಳಗೆ ಕರಣವಿಲ್ಲ ಪ್ರಾಣದೊಳಗೆ ಭಾವವಿಲ್ಲ ಭಾವದೊಳಗೆ ಭ್ರಮೆಯಿಲ್ಲ ನವನಾಳದೊಳಗೆ ಸುಳಿಹು ಮುನ್ನಿಲ್ಲ (ಅವಚಂ. ೨೦೭-೯೮೪) ; ನವನಾಳದ ಸುಳುಹ ತೊಡೆದು ಸುನಾಳವ ಶುದ್ಧವ ಮಾಡುವೆ (ಸಿದ್ಧವ. ೫. ೩೨೭-೦೦೫೪) ; ನವನಾಳಗಳ ಮುಂಬಾಗಿಲಲ್ಲಿ ನವ ಲಿಂಗಂಗಳ ಸಿಂಗರಿಸಿ (ಘನವ. ೨೪-೨೦) : ಎನ್ನ ನವನಾಳಂಗಳಲ್ಲಿ ಹೊಳೆದು ಸುಳಿವ ಪರವಸ್ತುವು ನೀನೆ ಅಯ್ಯಾ (ಅಖಂಡೇ. ೨೨೯-೮೦) ; ತನುವಿನೊಳು ಕರಣವಿಲ್ಲ ಪ್ರಾಣದೊಳು ಭಾವವಿಲ್ಲ . . . ಸಿದ್ಧನಲಿ ಮುನ್ನಿಲ್ಲ ನವನಾಳ ದೊಳು ಸುಳುಹು (ಸಿದ್ಧಪು. ೨೪-೨೪). [ ನವ$_1$ + ನಾಳ ( = ನಾಲ$_1$) ]

**ನವನಿಧಿ** (ನಾ). ೧. ಪದ್ಮ, ಮಹಾಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ ಮತ್ತು ಖರ್ವ ಎಂಬ ಕುಬೇರನ ಒಂಬತ್ತು ನಿಧಿಗಳು : ಪರಸೇನೆಗೆ ವಿಳಯಕಾಳಜಳನಿಧಿಯುಂ ಬಂದರೆದಱಿಗೆ ನವನಿಧಿಯು ಕರೆದಂ ಕೆಲ್ಕೆಱೆಯ ನಾಭಿಸೆಟ್ಟಿಯನಾಗಳ್ (ಸೌಇಇ. XX, ೪೯-೫೫ ; 1076 ?) ; ಐರಾವತಂ ಕರಿ ವಜ್ರಾಯುಧಂ ನವನಿಧಿಯೆ ಭಂಡಾರ (ಹದಕಾ. ೨-೧) ; ನವನಿಧಿಯೊಳ್ ಸಮುದ್ಭವಿಸಿದಾ ಕರವಾಳಿಕೆ ಯೆಂಬುಗುರ್ಬಿನಿಂದವಿರಳಮಾಗೆ ಸನ್ನುತಸಮಸ್ತಸುವಸ್ತುಸಮೃದ್ಧಿಯಿಂದ ಮೊಪ್ಪುವ ವಿಪಣಿವ್ರಜಂ (ಕುಸುಮಾ. ೨-೦೦೧) ; ನವನಿಧಿ ದೊರಕಲ್ಕೊಡೆ ನೂಂಕುವರೊಳರೆ (ದಶಕು. ೮-೦೭೮). ೨. [ಜೈನ] ಚಕ್ರವರ್ತಿಯ ಬಳಿ ಇರುವ ಕಾಳ, ಮಹಾಕಾಳ, ನೈಸರ್ಪ, ಪಾಂಡುಕ, ಪದ್ಮ, ಪಿಂಗಳ, ಮಾಣವಕ, ಶಂಖ ಮತ್ತು ಸರ್ವರತ್ನ ಎಂಬ ಒಂಬತ್ತು ನಿಧಿಗಳು : ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಆದಿಪು. ೧೫-೩ ವ) ; ನವನಿಧಿಯಿನಷ್ಟಮಂಗಳನಿವಹಂಗಳಿನೆಸೆವ ನಾಲ್ಕು ಬಾಗಿಲ್ಗಳುಮಂ ದಿವಿಜರ್ ದೌವಾರಿಕವೃತ್ತಿವೆತ್ತು ಕಾವರ್ ಬೃಹದ್ಗದಾ ದಂಡಧರರ್ (ಮಲ್ಲಿಪು. ೧೪-೦೭೫) ; ನವನಿಧಿಯೊಂದೊಂದನೆ ಕುಡುವುವ ವಿರ್ಕೆಮ ಭವ್ಯಸಮಿತಿಗಿಪ್ಪಮನಿತ್ತೊಪ್ಪುವ ನವನವನಿಧಿ ನೋಡುಪೊಡಿ

ವೆನಿಪ್ಪುವು ಕೂಡೆ ನವನವಸ್ತೂಪಂಗಳ್ (ಚಂದ್ರಪ್ರ. ೧೫-೭೬); ಕಾಳ ಮಹಾ ಕಾಳ ಪಾಂಡುಕ ಮಾಣವಕ ಶಂಖ ನೈಸರ್ಪ ಪದ್ಮ ಪಿಂಗಳ ನಾನಾರತ್ನಮೆಂಬ ನವನಿಧಿಗಳುಮಂ . . . ದಶಾಂಗಭೋಗಮನನುಭವಿಸುವುದು (ಪಸಾರ. ೫೫೮); ನವನಿಧಿಗಳ್ ಮಂಗಳತತಿ ನ ವ ರ ತ್ನ ದ ತೋರಣಂಗಳಾ ದ್ವಾರಂಗಳ್ (ಪುಣ್ಯಾಸ್ರ. ೧೫-೪೯). ೩. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ: "ನವ, ಪದಾರ್ಥ . . . ನವನಿಧಿ . . . ನಾಟ್ಯಾಂಗ, ಇಂತಿನಿತುಂ ೯ಕ್ಕೆ ಪೆಸರು" (ವ್ಯವಹಾ. ೧೧). P "ನಿಧಿ–೯: ಕುಬೇರನ: ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ (ಅಥವಾ ನಂದಕ), ನೀಲ, ವರ (ಅಥವಾ ಖರ್ವ), (ಅಮರ. ೧-೧-೮೧; ಮಾರ್ಕಂಪು. ೬೫). (ಅ) ಚಕ್ರವರ್ತಿಯ: ಕಾಳ, ಮಹಾಕಾಳ, ನೈಸರ್ಪ, ಪಾಂಡುಕ, ಪದ್ಮ, ಪಿಂಗಳ; ಮಾಣವಕ, ಶಂಖ, ಸರ್ವರತ್ನ (ಆದಿಪು. ೧೫-೩೨). (ಇ) ಹಯಂ, ಗಜ, ರಥ, ದುರ್ಗ, ಭಾಂಡಾರ, ಅಗ್ನಿ, ರತ್ನ, ಧ್ಯಾನ, ಪ್ರಮದಾ (ಸಂ. ೧೬೫)" (ಶ್ರೀವತ್ಸ. ೨೪೯). [ ನವ$_1$ + ನಿಧಿ ]

**ನವನಿಧಿವಲ್ಲಭ** (ನಾ). [ಜೈನ] ನವನಿಧಿಗಳಿಗೆ ಒಡೆಯ; ಚಕ್ರವರ್ತಿ: ನವನಿಧಿವಲ್ಲಭನಾನತದಿವಿಜಗಣಂ ನೆಗಟ್ದ ನಾಭಿರಾಜನ ಮೊಮ್ಮಂ (ಆದಿಪು. ೦೩-೭೩). [ ನವನಿಧಿ + ವಲ್ಲಭ ]

**ನವನಿಧಿಸನಾಥ** (ನಾ). ನವನಿಧಿಗಳನ್ನುಳ್ಳವನು: ಅಷ್ಟದಿಗ್ವಯೋಪಾರ್ಜಿತ ಯಶನುಂ ನವನಿಧಿಸನಾಥ ಶ್ರೀನಿವಾಸನುಂ . . . ಆಗಿ (ಚಂದ್ರಪ್ರ. ೭-೩೫ ವ).

[ ನವನಿಧಿ + ಸನಾಥ ]

**ನವನಿರ್ಮಿತಿ** (ನಾ). ಹೊಸದಾಗಿ ನಿರ್ಮಾಣ ಮಾಡಿದುದು; ನವಕೃತಿ: ಏಕಸ್ವಗಳು; ನವನಿರ್ಮಿತಿಗಳು ಮತ್ತು ನಕ್ಷೆಗಳು, ಕೃತಿಸ್ವಾಮ್ಯ; ವ್ಯಾಪಾರಚಿಹ್ನೆಗಳು ಮತ್ತು ಪುಣ್ಯಚಿಹ್ನೆಗಳು (ಭಾಧಾನ. ೨೮೨).

[ ನವ$_2$ + ನಿರ್ಮಿತಿ ]

**ನವನೀತ** (ನಾ). ಕೆನೆ ಕಡೆದು ಹೊಸದಾಗಿ ತೆಗೆದ ಬೆಣ್ಣೆ: "ದಧಿಸಾರಂ, ನವನೀತಂ–ಈ ೨ ಬೆಣ್ಣೆ" (ಹಲಾಯು. ೪೬-೦೦೯); ನವನೀತಮುಮಂ ಶುಕತುಂಡವುಮಂ . . . ಸೇವಿಸುಗೆ ಪಿಂಗುಗುಂ ಕೆಯ್ಮಸಕಂ (ಲೋಕೋಪ. ೯-೩೭); ನವನೀತಮನಾಂಣಂಬೆಯನನಾರತಂ ಬೆಳ್ಗಿಂಬಳವಂ ಗಿಣ್ಣನುಣ್ಣ ದಿರ್ಪುದಮೋಘಂ (ಸುಕುಮಾ. ೬-೪೩); ಹಸುವಿಂಗೆ ಮೇವು ಶಿಶುವಿಂಗೆ ನವನೀತವಂ . . . ಬೆಸಗೊಂಬುದಕ್ಕಿದೇ ಕುಱುಹೆಂದು (ಹಡಕಾ. ೪-೪೦); ಆ ದಧಿಯ ಮಥನವ ಮಾಡಿ ಬೆಣ್ಣೆಯ ತೆಗೆದು ಆ ನವನೀತವ ತುಪ್ಪವ ಕಾಸಿ ಆ ಗೋವಿಗೆ ಕುಡಿಯಿಸಲಾಗಿ ದಿನದಿನಕ್ಕೆ ಪುಷ್ಟಿಯುಪ್ಪುದು ತಪ್ಪದಯ್ಯ (ಸಿದ್ಧೇವ. ೮೩-೨೪೯); ಕೆನೆವಾಲ ಕಡೆದು ನವನೀತಮಂ ತೆಗೆದು ಬಾಯ್ಗಿನಿದಾಗಿ ಸವಿಯದದಱೊಳಗೆ ಪುಳಿವಿಳಿದು ರಸವನೆ ಕಿಡಿಸಿದೊಡೆ ಕಱೆದ ಸುರಭಿಗಪ್ಪುದೆ ಕೊಱತೆ (ಜ್ಞಮಿಥಾ. ೦-೭); ಎನ್ನೆವರಮುಶ್ವಮಿಳೆ ಯೊಳ್ ಸಂಚರಿಕುಮನ್ನೆವರಂ ಯಜಮಾನಂ ಮೃಗಶೃಂಗಧರಂ ನವನೀತ ವಿಲಿಪ್ತಸುಗಾತ್ರಂ, ಬ್ರಹ್ಮಚರ್ಯವ್ರತಮನಪ್ಪುಕೆಯ್ದು . . . ಕಾಲಮಂ ಸಮೆಯುಲಕ್ಕುಂ (ರಾಮಾಶ್ವ. ೧೫-೧೮); ಮಾತು ಮಾತು ಮಥಿಸಿ ಬಂದ ನಾದದ ನವನೀತಾ (ನಾದಲೀ. ೮೫-೯). [ ಸಂ. ]

**ನವನೀತಕ** (ನಾ). ೧. ತುಪ್ಪ. ೨. ಬೆಣ್ಣೆ. 'ಅಬ್ಧಿನವನೀತಕ' ಪರಾ. [ಸಂ.]

**ನವನೀತಚೋರ** (ನಾ). ಬೆಣ್ಣೆ ಕದಿಯುವವನು; ಬೆಣ್ಣೆಗಳ್ಳ; ಕೃಷ್ಣ: ನವನೀತಚೋರನಕುಲೀನವಧೂಸ್ತನದುಗ್ಧಪೃಥುಶರೀರಂ . . . ಪೂಜ್ಯನಾಗೆ ನಿನಗೆ ನಿಕಾರಂ (ಜಗವಿ. ೦೭-೨೩); ಇವಗೇಕೆ ಪರಿಮಳ ಇವಗೇಕೆ ಶೃಂಗಾರ ನವನೀತಚೋರ ನಾಱುವ ಗೊಲ್ಲಗೆ (ಪುರಂದ. ೧-೧೦೦ ಪಲ್ಲವಿ); ನವಿಲು ಗರಿಯ ನವನೀತಚೋರನಾಬಾಲವೃದ್ಧಪ್ರೀತ (ನೆಲವಮು. ೩೯-೮).

[ ನವನೀತ + ಚೋರ ]

**ನವನೀತಚೋರಕ** (ನಾ). = ನವನೀತಚೋರ: ಕ್ಷೀರಲಂಪಟನಾಡಿದಂ ನವನೀತಚೋರಕನಾಡಿದಂ (ಜಗವಿ. ೩-೫೪). [ ಸಂ. ]

**ನವನೀತಹೃದಯ** (ನಾ). ೧. ಬೆಣ್ಣೆಯಂತೆ ಮೃದುವಾದ ಹೃದಯ. ೨. (ಬೆಣ್ಣೆಯಂತೆ) ಬೇಗನೆ ಕರಗುವ ಹೃದಯವುಳ್ಳ ವ್ಯಕ್ತಿ; ಮೃದುಹೃದಯಿ: ಸುಂದರಿ! ನೀನು ಭಯಸ್ವಭಾವದವಳು, ನವನೀತ ಹೃದಯಳು (ರಾವಿಜ. ೪೭). [ ನವನೀತ + ಹೃದಯ ]

**ನವನೀರದ** (ನಾ). ಹೊಸ ಮೋಡ; ಮಳೆ ಮೋಡ: ಬಿರುಗಾಳಿ ಬೀಸುತ್ತದೆ. ಅದು ನವನೀರದವನ್ನು ತರುವ ಗಾಳಿ (ಹಂಸದ. ೧೫೭ ಅವತರಣಿಕೆ)

[ ನವ$_2$ + ನೀರದ$_1$ ]

**ನವನೀಲೋತ್ಪಲ** (ನಾ). ಆಗ ತಾನೇ ಅರಳಿದ ಕನ್ನೈದಿಲೆ: ನವನೀಲೋತ್ಪಲಸನ್ನಿಭಾಂಗರುಚಿಯಿಂ ಸತ್ಕಿಂಕಿರಾತೋದ್ಗಮಚ್ಛವಿ ಪೀತಾಂಬರ ಕಾಂತಿಯಿಂ . . . ಚೆಲ್ವಾದನಬ್ಜೋದರಂ (ಜಗವಿ. ೧-೪೯).

[ ನವ$_2$ + ನೀಲೋತ್ಪಲ ]

**ನವನೂತನ** (ನಾ). ಹೊಚ್ಚಹೊಸದು; ಅತ್ಯಂತ ನೂತನವಾದುದು: ಮನೆಮನೆಯ ನಾರಿಯರು ನವನೂತನದ ರಜತ ಪೊಂದಳಿಗೆಯಾರತಿಗಳಿಂ . . . ಸೊಡರೆತ್ತಿತು (ತುರಂಗ. ೮೦-೪೭). [ ನವ$_2$ + ನೂತನ ]

**ನವನೋಕಷಾಯ** (ನಾ). [ಜೈನ] (ಸುಖದುಃಖಗಳನ್ನುಂಟುಮಾಡುವ) ಒಂಬತ್ತು ಕಿಂಚಿತ್ ಕಷಾಯಗಳು; "ಹಾಸ್ಯ, ರತಿ, ಅರತಿ, ಶೋಕ, ಭಯ, ಜಿಗುಪ್ಸಾ, ಸ್ತ್ರೀವೇದ, ಪುಂವೇದ ಮತ್ತು ನಪುಂಸಕವೇದ" (ಆದಿಪು. ಕೋಶ): ಲೋಭಂಗಳೆಂಬೆಂಟು ಕಷಾಯಂಗಳಂ ಕಿಡಿಸಿ ಮತ್ತಂ ಕಿಱಿಕಿಱಿದು ಬೇಗದಿಂ ತನ್ನ ಪರಿಣಾಮವಿಶೇಷದಿಂ ಚತುಸ್ಸಂಜ್ವಲನ ನವನೋಕಷಾಯಂಗಳೆಂಬ ಪದಿಮೂಱುಂ ಪ್ರಕೃತಿಗಳಮಂತರಾಯಕರಣಂ ಮಾಡಿ (ಆದಿಪು. ೧೦-೧೪ ವ); ಕ್ರೋಧಮಾನಮಾಯೆಲೋಭಮೆಂಬೆಂಟುಂ ಕಷಾಯಮುಮಂ ನವನೋಕಷಾಯಮುಮಂ ... ಎಡೆಯುಡುಗದೆ ಕಿಡಿಸಿ (ಸುಕುಮಾ. ೮-೬೨ ವ). 'ನೋಕಷಾಯ' ಪರಾ. [ನವ$_1$+ನೋಕಷಾಯ]

**ನವನ್ಯಾಸ** (ನಾ). ಹೊಸ ಕಾದಂಬರಿ; ನೂತನ ಕಾದಂಬರಿ: ದೇವೇಂದ್ರ ವಿಜಯನೆಂಬುವನು ಅದ್ಭುತವಾದುದೊಂದು ನವನ್ಯಾಸವನ್ನು ಓದುತ್ತಾ ಕುಳಿತಿದ್ದನು (ಪಿಶಾಪ. ೧); ಈ ನವನ್ಯಾಸವು "ದಿ ಕೌಂಟ್ ಆಫ್ ಮಾಂಟಿ ಕ್ರಿಸ್ಟೊ" . . . ಗ್ರಂಥದ ಕರ್ನಾಟಕ ಗದ್ಯಾನುವಾದವಾಗಿದೆ (ರಾಜಾಮು. ೨ ಪೀಠಿಕೆ). [ ನವ$_2$ + ನ್ಯಾಸ ]

**ನವಪಟವಾಸ** (ನಾ). ಹೊಸ ಸುಗಂಧದ ಹುಡಿ: ಸೂಸುವ ನವಪಟ ವಾಸದ ಚೂರ್ಣಂ ಮೂಸರವಾದುದು ದಿಕ್ಪರಿಪೂರ್ಣಂ (ಚಂದ್ರಪ್ರ. ೪-೬೨ ರಗಳೆ).

[ ನವ$_2$ + ಪಟವಾಸ ]

**ನವಪತ್** 'ನೌಬತ್ತು' ನೋ.

**ನವಪತ್ತು** 'ನೌಬತ್ತು' ನೋ.

**ನವಪತ್ತುಖಾನೆ** (ನಾ). ನೌಬತ್ತು ಎಂಬ ವಾದ್ಯವನ್ನು ಬಾರಿಸುವುದಕ್ಕಾಗಿ ಮೀಸಲಾದ (ಮಹಡಿಯ) ಸ್ಥಳ: ಹೊಗಳುವ ಭಟ್ಟರು, ನವಪತ್ತುಖಾನೆಯವರು, ಬೆಸ್ತರು, ದೀವಟಿಗೆಯವರು, ದೀಪದ ಕಂಭದವರು (ಮಹಾಪಂ. I, ೦೨೦). [ ←ಪಾರ. ಮರಾ. ನೌಬತ್‌ಖಾನಾ ]

**ನವಪದಾರ್ಥ** (ನಾ). [ಜೈನ] ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸಂವರ, ನಿರ್ಜರ, ಬಂಧ ಮತ್ತು ಮೋಕ್ಷ ಎಂಬ ಒಂಬತ್ತು ತತ್ತ್ವಗಳು: ಜೀವಾಜೀವ ಪುಣ್ಯಪಾಪಾಸ್ರವ ಸಂವರ ನಿರ್ಜರ ಬಂಧ ಮೋಕ್ಷಮೆಂದಿಂತು ನವಪದಾರ್ಥಂಗಳುಂ . . ಎಂಬಿವಱೊಳಾನಮಾನು ಮಱಿತಮುಂ ಕುಶಲಿಕೆಯುಂ ನಂಬುಗೆಯುಮಾಗಿ (ವಡ್ಡಾರಾ. ೬-೦೯); ಪಂಚಾಸ್ತಿಕಾಯ ಷಡ್ದ್ರವ್ಯ ಸಪ್ತತತ್ತ್ವ ನವಪದಾರ್ಥಸ್ವರೂಪಮಂ ನಿರೂಪಿಸುವುದುಂ (ಪುಷ್ಪಪು. ೯-೭ ವ). [ ನವ$_1$ + ಪದಾರ್ಥ ]

**ನವಪಯೋದ** (ನಾ). ಮಳೆಗಾಲದ ಪ್ರಾರಂಭದ ಮೋಡ: ಅಂಬುವೀಡಿ ನಳವಿಗಗ್ಗಳಮಪ್ಪುದಱಿನೆಡೆಯೊಳ್ ಧನುರ್ಧರನ ಶರವರ್ಷಂ ನವಪಯೋದ ಪ್ರವೋದಬಿಂದುವರ್ಷದಂತೆ ಕಳೆಯೆ (ಶಾಂತಿಪು. ೪-೮ ವ). [ನವ₂ + ಪಯೋದ]

**ನವಪರಿ** (ನಾ). ಒಂಬತ್ತು ಬಗೆ; ನವಪ್ರಕಾರ: ಆ ಸಭಾಮಧ್ಯದೊಳು ನವಪರಿಯ ಮಣಿಗಿರಣಭಾಸಾಯಮಾನದಿಂ ರಘುಗರಘುಗಿಸಿವೊಪ್ಪುತಿಹ ಕೇಸರಿಯ ಪೀಠದೊಳು...ಒಪ್ಪಿದನು (ನವಮೋ. ೨೭-೪೧). [ನವ₁ + ಪರಿ₃]

**ನವಪಲ್ಲವ** (ನಾ). ಎಳೆಯ ಚಿಗುರು: ಪಲ್ಲಕಿಯೊಳಲೆವ ಬಾಲದೊಳು ಕೇಶದೊಳು ನವಪಲ್ಲವದೊಳೆಳೆಯ ಪವಳದೊಳು ಪ್ರವಾಳವಕ್ಕು (ಮಂಗರಾ. ೧೪೮-೪೧). [ನವ₂ + ಪಲ್ಲವ]

**ನವಪಿಷ್ಟಚರ್ಚಿಕೆ** (ನಾ). ಹೊಸದಾಗಿ ಮಾಡಿದ ಹಿಟ್ಟಿನ ಲೇಪ: ಸ್ವಸ್ತಿಕಲಕ್ಷ್ಮಲಕ್ಷಮಣಿದರ್ಪಣಮಂಡಿತಮುಲ್ಲಸತ್ಪವಾಳಸ್ತಬಕಂ ಪವಿತ್ರ ಬಿಸಸೂತ್ರವೃತಂ ನವಪಿಷ್ಟಚರ್ಚಿಕಾಶಸ್ತಮುಪಾತ್ತದರ್ಭರಚನಂ . . . ಪೂರ್ಣಕಲಶಂ ತಳೆದತ್ತತುಳಂ ವಿಳಾಸಮಂ (ಚಂದ್ರಪ್ರ. ೬-೫೩). [ಸಂ. ನವಪಿಷ್ಟಚರ್ಚಿಕಾ]

**ನವಪುಷ್ಪಿತೆ** (ನಾ). ೧. ಹೊಸದಾಗಿ ಹೂವು ಬಿಟ್ಟುದು. ೨. ಆದೇ ತಾನೇ ಮೈನೆರೆದವಳು. ೧, ೨: ನವಪುಷ್ಪಿತೆಯಾಗಿರಲೊಪ್ಪುವ ಪಾದರಿ ಗೊಲ್ದೆಱಪ ಮಧುಪಾವಳಿಯುಂತ್ಸವಮಂ ನಿಟ್ಟಿಸುತುಂ ನಗುವವೊಲರವಿರಿ ವಣ್ಣಳವಂರ್ದ ದಡಿಮಮೆಸೆಗುಂ (ಉದ್ಭಟ. ೯-೭೭). [ನವ₂ + ಪುಷ್ಪಿತೆ]

**ನವಪೇಟಕ** (ನಾ). ಹೊಸ ಪರಿವಾರ: ನವವಯಸದಿವಿಜಖೇಟಕ ನವಪೇಟಕ ನಿಕರಮುಗಲದಿರಲಬ್ಧಿಯ ಮೇರುವ ಕೆಲದ ಗಿರಿಕದಂಬಕದವಜ್ಞೆಯಂ ಪೋಲ್ತುದಾ ಕುಮಾರನ ಕೆಲದೊಳ್ (ಶಾಂತಿಪು. ೧೧-೮೧). [ನವ₂ + ಪೇಟಕ]

**ನವಪ್ರಜೇಶ** (ನಾ). ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ಪ್ರಚೇತಸ, ವಸಿಷ್ಠ ಮತ್ತು ಭೃಗು ಎಂಬ ಒಂಬತ್ತು ಜನ ಪ್ರಜಾಪತಿಗಳು: ವಸುಗಳೆಂಟು ನವಪ್ರಜೇಶರು ಶ್ವಸನಗಣರೈವತ್ತು ಏಕಾದಶ ದಿವಾಕರರು (ಹಸಾರ. ೮-೨೭). 'ನವಬ್ರಹ್ಮ' ಪರಾ. [ನವ₁ + ಪ್ರಜೇಶ]

**ನವಪ್ರತಿನಾರಾಯಣ** (ನಾ). [ಜೈನ] ಆಯಾ ಕಾಲದಲ್ಲಿ ಆಯಾ ನಾರಾಯಣರಿಗೆ ವಿರೋಧಿಗಳಾದ ಒಂಬತ್ತು ಜನ ಪ್ರತಿವಾಸು ದೇವರು: ನವಪ್ರತಿನಾರಾಯಣರು . . . ಅವರ ಹೆಸರುಗಳು: – ೧. ಅಶ್ವಗ್ರೀವ. ೨. ತಾರಕ. ೩. ಮೇರಕ. ೪. ನಿಶುಂಭ. ೫. ಮಧುಕೈಟಭ. ೬. ಪ್ರಹ್ಲಾದ. ೭. ಬಲಿಸೇನ. ೮. ರಾವಣ. ೯. ಜರಾಸಂಧ (ಜೈನಧ. ೦೨೮). [ನವ₁ + ಪ್ರತಿನಾರಾಯಣ]

**ನವಪ್ರಸೂತೆ** (ನಾ). ೧. ಹೊಸತಾಗಿ ಹೆರಿಗೆಯಾದವಳು; ಹಸಿಬಾಣಂತಿ. ೨. ಹೊಸದಾಗಿ ಕರು ಹಾಕಿದ ಹಸು ಅಥವಾ ಎಮ್ಮೆ; ಎಳಗಂದಿ: "ಧೇನುಃ, ನವಪ್ರಸೂತಾ – ಈ ೨ ಎಳಗಂದಿ" (ಹಲಾಯು. ೪೫-೧೧೪). [ಸಂ. ನವಪ್ರಸೂತಾ]

**ನವಪ್ರಸೂನ** (ನಾ). ಆಗ ತಾನೇ ಅರಳಿದ ಹೂವು: ನಾರಾಯಣನೊಂದ ನವಪ್ರಸೂನಪರಿಮಳಕ್ಕೆಳಸುವೆಳದುಂಬಿಯ ಬಂಬಲಿಂ ಬಳಸ ವಡೆದು (ಮಹಾನೇ. ೧೪-೧೬ ವ); ಚಿತ್ರತಮಾಲಪತ್ರವಲ್ಲಿಗಳನಳಂಕೆವೆತ್ತವಯವಂಗ ಳೊಳಾಂತು ನವಪ್ರಸೂನವಮಂ ಮುಗವಾಗಿಪಂದದಿಂ ತುಱುಬಿ ಬಂದಳ್ (ನಳಚಂ. ೬೪೪). [ನವ₂ + ಪ್ರಸೂನ]

**ನವಬಂಧ** (ನಾ). = ನವನೋಕಷಾಯಂ: ನವನೋಕಷಾಯ ಷಟ್ಕವರ್ಗ ಮುಮಂ ಘಾತಿಸಿ ಪುಂವೇದಾದಿ ನವಬಂಧಮುಮಂ . . . ಕಿಡಿಸಿ (ಆದಿಪು. ೧೧-೧೪ ವ). [ನವ₁ + ಬಂಧ]

**ನವಬತ್ತು** 'ನೌಬತ್ತು' ನೋ.

**ನವಬ್ರಹ್ಮ** (ನಾ). ಭೃಗು, ಪುಲಸ್ತ್ಯ, ಪುಲಹ, ಕ್ರತು, ಅಂಗಿರಸ, ಮರೀಚಿ, ದಕ್ಷ, ಅತ್ರಿ ಮತ್ತು ವಸಿಷ್ಠರೆಂಬ ಒಂಬತ್ತು ಜನ ಬ್ರಹ್ಮನ ಮಾನಸಪುತ್ರರು; P ಬ್ರಹ್ಮನ ಮಕ್ಕಳಾದ ಇವರಿಗೂ ಬ್ರಹ್ಮನಂತೆ ಸೃಷ್ಟಿ ಶಕ್ತಿಯಿತ್ತು: ಈ ನವಬ್ರಹ್ಮರೊಳಗಭಿವ್ಯಕ್ತವಾದ ಪರಮೇಶ್ವರ ಸೃಷ್ಟಿಶಕ್ತಿಯೇ ಪ್ರಪಂಚಕಲ್ಪನೆಗೆ ಕಾರಣಮಾದುದೆಂದು ತಿಳಿಯಲ್ವೇಳ್ಕುಂ (ವಿವೇಕ. ೩೦೩): ನವಬ್ರಹ್ಮಾದಿಗಳಲ್ಲಿ ಮುಖ್ಯನೆನಿಪಾ ದಕ್ಷಂ . . . ಮಾಡುವುದೊಂದುತ್ಕಟ ಧರ್ಮಯಾಗದೊದವಂ ಕೊಂಡಾಡಲೇಂ ಸಾಧ್ಯಮೇ (ನನ್ನಚಾ. ೬-೯೪); ಆ ಬ್ರಹ್ಮನಿಂದ ಭೃಗು ಮೊದಲಾದ ನವಬ್ರಹ್ಮರೂ ಅಷ್ಟದಿಕ್ಪಾಲಕರೂ . . . ಒಗೆದರು (ಸಕವ್ಯ. ೬). [ನವ₁ + ಬ್ರಹ್ಮ]

**ನವಭಾಗ** (ನಾ). ಒಂಬತ್ತು ಭಾಗ,-ಚೂರು: ಕುವರರ ಮದುವೆ ಯೊಳ್ಪಾಗಿಲುದಡೆದಾಗ ಕುವರಿಯರ್ಗಿತ್ತ ಭೂತಳವ ಹವಣಿಸಿ ಮಧ್ಯಖಂಡದ ಹತ್ತುಭಾಗದೊಳ್ನವಭಾಗವುಳಿದೊಂದು ಪೋಯ್ತು (ಭರತೇ. ೪೪-೨೮). [ನವ₁ + ಭಾಗ]

**ನವಭಾರತ** (ನಾ). ಹೊಸ ಸ್ವರೂಪ ಪಡೆದ ಭಾರತದೇಶ; ಸ್ವತಂತ್ರ ಭಾರತ: ನಾನಳಿವೆ, ನೀನಳಿವೆ, ನಮ್ಮೆಲುಬುಗಳ ಮೇಲೆ ಮೂಡುವುದು, ಮೂಡುವುದು ನವಭಾರತದ ಲೀಲೆ! (ಪಾಂಚಜ. ೫-೦೩). P ಅನೇಕ ವರ್ಷಗಳು ದಾಸ್ಯವನ್ನು ಅನುಭವಿಸಿದ್ದು, ಸ್ವಾತಂತ್ರ್ಯವನ್ನು ಅಪೇಕ್ಷಿಸಿದ್ದಂಥ ಕವಿಯ ಕಲ್ಪನೆಯ ಭಾರತ. [ನವ₂ + ಭಾರತ]

**ನವಭೂತಭಾಷೆ** (ನಾ). ೧. ನವೀನವಾದ ಪೈಶಾಚಿಕಭಾಷೆ. ೨. (ಸಾಮಾನ್ಯರಿಗೆ ತಿಳಿಯದ) ಭೂತಗಳ ಭಾಷೆ. ೧, ೨: ನವಭೂತಭಾಷೆಯಿಂ ಕುಱುಪುವೇಟು ತಾಮುದ್ಧಗವಿತೆಯುಂ ಮಾಡಿ ಮಹಾವ್ಯವಸಾಯಂಗೆಯ್ದು ಮರುಳ್ಗವಿಗಳ್ತಾವೇಂ ಗುಣಾಢ್ಯರುಂ ಮಸುಳಿ ಸರೇ (ಗದಾಯು. ೪-೪೧). [ನವ₂ + ಭೂತ + ಭಾಷೆ]

**ನವಮ** (ಗು). ಒಂಬತ್ತನೆಯ: ಅಮರಾಧಿರಾಜ ಹುತವಹ ಯಮ ನೈಋತ ವರುಣ ವಾಯು ಯಕ್ಷೇಶಾನ ಕ್ರಮದಿನವರೆಣ್ಬರಂತುತ್ತಮನೈ ನೀಂ ನವಮಲೋಕಪಾಳನೆ ಅವರೊಳ್ (ಕವಿರಾ. ೩-೯೬); ನವಮ ಜನಾಧೀಶ್ವರನಂ . . . ಅಭಿವರ್ಣಿಸುವೆಂ (ಬಾಹುಪು. ೧೬-೩೯೦); ಸಪ್ತಕ, ಅಷ್ಟಕ, ನವಮ, ದಶಮ – ಎಂದು ಪ್ರತ್ಯಯಂ ಪತ್ತಲೊಡಂ – ಎಲ್ಲಕ್ಕಂ ವಿಭಕ್ತಿಯುಂ ಪತ್ತಿಸುವುದು (ಶಮದ. ೮೨ ಪ್ರಯೋ.). [ಸಂ.]

**ನವಮಂಡನ** (ನಾ). ಹೊಸ ಆಭರಣ; ಹೊಸ ಬಗೆಯ ಅಲಂಕಾರ: ಭವನತನು ಭಾಳಮಂಡದ ನವಮಂಡನದಿಂದವೊಪ್ಪೆ ನಯನದ್ವಯದಿಂ ತವೆ ನೋಡಲ್ ನೆಱೆಯದೆ ನಯನವಿಹ್ವಲಂ ಹರಿ ಸಹಸ್ರಲೋಚನನಾದಂ (ಶಾಂತಿಪು. ೧೧-೬೦). [ನವ₂ + ಮಂಡನ]

**ನವಮಣಿ** (ನಾ). = ನವರತ್ನ ೧: ನವಮಣಿಗಣರುಚಿಯಿಂ ಮಿಱುಗುವ ಕೂಟಾಟೋಪಮುಂ ವಿಮಾನಮನವರುತ್ಸವದಿಂದಂದೇಱಿಮೆನಲ್ ದಿವಿಜ ಕುಮಾರಾಭನೇಱಿ ನಭದಿಂ ಬಂದರ್ (ನೇಮಿಪು. ೩-೦೯೪); ನವಮಣಿ ಮರೀಚಿಮಂಜರಿ ಕವಿದು ಪೊನಲ್ವರಿದುದೆಂಬಿನಂ . . . ಜಲಜಲಿಸಿ ಪರಿವ ಬರಿಪೊನಲೆಸೆಗುಂ (ವರ್ಧಪು. ೧೧-೦೪); ನವಮಣಿಮೇಖಲಾನ್ವಿತ ಸುಮೇ ರುವೊ ತಾನೆನೆ ದೇವತಾಕೃತಿಪ್ರವಿದಿತನಂದಿಮುದ್ರೆಯುದು ಶೋಭಿಸೆ (ಹಾಲಾಸ್ಯ. ೪-೦೭-೫೩). [ನವ₁ + ಮಣಿ₃]

**ನವಮತಿ** (ನಾ). ಹೊಸದಾಗಿ ಆಲೋಚಿಸುವ ಬುದ್ಧಿ; ಪ್ರತಿಭೆ: ನವಮತಿಯಿಲ್ಲದ ಕುಕವಿಯ ಕವಿತೆಯವೋಲ್ ಮಾಂದ್ಯಮಾಯ್ತು ಪದ ವಿನ್ಯಾಸಂ ಯುವತಿಗೆ ಮಹಿಮೋನ್ನತಿ ಮೇರುವೆನಿಪ್ಪಾ ಗರ್ಭದರ್ಭಕನ ಗೌರವದಿಂ (ಕುಸುಮಾ. ೫-೦೬). [ನವ₂ + ಮತಿ]

**ನವಮರ್ಕ್ಷ** (ನಾ). ೧. [ಜ್ಯೋತಿ] ಒಂಬತ್ತನೆಯ ರಾಶಿ. ೨. ಒಂಬತ್ತನೆಯ ಸ್ಥಾನ : ರವಿ ಲಗ್ನಾವಸಥಕ್ಕೆ ಷಷ್ಠಗೃಹದೊಳ್ ನಿಂದಂದುಖಿಲ್ಕಂ . . . ನವಮರ್ಕ್ಷಸ್ಥಿತನಾಗೆ ಪುತ್ರ ಸುಖವಿತ್ತೋಪೇತನಪ್ಕುಂ ನರಂ (ಜಾತಕ. ೧೮-೩). [ ನವಮ + ಋಕ್ಷ ]

**ನವಮಲ್ಲಿಕೆ** (ನಾ). ಒಂದು ಬಗೆಯ ಮಲ್ಲಿಗೆ ಬಳ್ಳಿ ಮತ್ತು ಅದರ ಹೂವು : ನವಮಲ್ಲಿಕಾಚಯಕರಲ್ಗೊಂಪಂ ಲಸತ್ಪಾಟಲಾಪನಿಜಕ್ಕಾಗೆ ಪಿಕಾಳಿರಾವಮುದಿತಂ ಬಂದೊಪ್ಪುಗುಂ ಮಾಧವಂ (ಯಾಡಚಂ. ೪-೮೧). [ ಸಂ. ನವಮಲ್ಲಿಕಾ ]

**ನವಮಲ್ಲಿಗೆ** (ನಾ). = ನವಮಲ್ಲಿಕೆ : ನವಮಲ್ಲಿಗೆ, ಹಂಬುಮಲ್ಲಿಗೆ (ವ್ಯುಜಿಗಿ. ೪೭-೯೩೨). [ < ಸಂ. ನವಮಲ್ಲಿಕಾ ]

**ನವಮಾಂಕ** (ನಾ). ಒಂಬತ್ತರ ಅಂಕಿ: ಆಲೆನ್‌ರಾಸ್ ಹರಪ್ಪ ಮೂಲಭಾಷೆ ಪುರಾತನ ದ್ರಾವಿಡ ಅಥವಾ ಮುಂಡ ಅಥವಾ ಬುರುಷಸ್ಕಿ ಆಗಿರಲಾರ ದೆಂದು, ನವಮಾಂಕ ಪ್ರಧಾನವಾಗಿರುವದರಿಂದ ಬಹುಶಃ ಪುರಾತನ ಇಂಡೋನೇಷಿಯನ್ನೆಂದು ಊಹಿಸಿರುವರು (ಭಾರದ. ೧೭). [ ನವಮ + ಅಂಕ₂ ]

**ನವಮಾಲಿಕಾಲತೆ** (ನಾ). ಇರುವಂತಿಯ ಬಳ್ಳಿ ; ನವಮಲ್ಲಿಕೆಯ ಬಳ್ಳಿ : ರತಿಯ ಮದನನ ಮದುವೆಯೊಳ್ ಪೊಸಯಿಸಿದ ಪಸುರ್ವಂದರಂತೆ ಮಿಸುಪ ಮೃದ್ವೀಕಾಲತೆಯ ನಾಗಲತೆಯ ನವಮಾಲಿಕಾಲತೆಯ ... ವಿಚಕಿಳಲತೆಯ ಮಂಡವಂಗಳುಂ ಮನೋಹರಂಗಳೆನಿಸಿರ್ದುವು (ಚಂದ್ರಪು. ೦-೧೧೬). [ ಸಂ. ನವಮಾಲಿಕಾಲತಾ ]

**ನವಮಾಲಿಕೆ** (ನಾ). ಮಲ್ಲಿಗೆಯಲ್ಲಿ ಒಂದು ಬಗೆ; ಇರುವಂತಿಗೆ: "ಸಪ್ತಲಾ, ನವಮಾಲಿಕಾ – ಈ ೨ ಇರುವಂತಿ" (ಹಲಾಯು. ೩೮-೩೪) ; ನಾಗವಲ್ಲಿ ನವಮಾಲಿಕೆಯುಂ ರಂಜಿಪ ಕುಂದ ಕದಂಬಂ ಮಂಜುಳದುದ್ಯಾನ ವನದೊಳಿರ್ಪವು ಪೆಂಪಿಂ (ಹಮ್ಮೀರ. ೪-೦೫). [ ಸಂ. ನವಮಾಲಿಕಾ ]

**ನವಮಾಸ** (ನಾ). ಒಂಬತ್ತು ತಿಂಗಳು: ನವಮಾಸ ವಿರಾಮದೊಳಬ್ಜವದನೆ . . . ಪಡೆದಳ್ಸುರೂಪವತಿಯಂ ಸುತೆಯಂ (ಸುಕುಮಾ. ೫-೪೯); ನವಮಾಸಂ ಶೀವಿ ದೇವಕಿ ಬೆಸಲೆಯಪ್ಪುದನಱಿದುಂ (ಜಗವಿ. ೨-೩೩ ವ) ; ನವಮಾಸಂ ನೆಱೆ ತೀವೆ ದೇವಿ ಪಡೆದಳ್ ಪೂರ್ವಾಶೆ ಪಾದಿತ್ಯನಂ (ಪುಣ್ಯಾಸ್ರ. ೮-೮೧) ; ಹೊತ್ತು ನವಮಾಸ ಪರ್ಯಂತ ಗರ್ಭದಲಿ . . . ಸಲಹಿದಾ ತಾಯ್ನಿಂದೆ ಹೊತ್ತುಗಳೆವರಲ್ಲದೆ ಬೆನ್ನತ್ತಿ ಬಹರೆ (ಕನಕ. ೭೦-೧) ; ಬಸಿರು ತುಂಬಲು ಹಸುರುಡಿಗೆಯನುಟ್ಟೆಂದು ವನವಾಸ ನವಮಾಸ ತೀರಿಸುವೆ (ನಾದಲೀ. ೪೦-೨೨). [ ನವ₁ + ಮಾಸ₂ ]

**ನವಮಿ** (ನಾ). ೧. ಚಾಂದ್ರಮಾನ ಪಕ್ಷದ ಒಂಬತ್ತನೆಯ ದಿನ : ಬರೆ ಚೈತ್ರಕೃಷ್ಣಪಕ್ಷಂ ದೊರೆಕೊಳೆ ನವಮಿಯೊಳಮುತ್ತರಾಷಾಢಂ (ಆದಿಪು. ೯-೭೯); ಅಷ್ಟಮಿ ನವಮಿ ಎಂಬ ಕಲ್ಪಿತವೇಕೋ ಶರಣಂಗೆ (ಬಸವ. ೬೨೦); ಆ ಪಕ್ಷಂಗಳೊಳಗೆ ಅಗ್ನಿಯೇ ದೇವತೆಯಾಗುಳ್ಳ ಪಾಡ್ಯ . . . ದುರ್ಗಿಯಧಿ ದೇವತೆಯಾದ ನವಮಿ (ವಿವೇಕ. ೩೪೧). ೨. ಒಂದು ಸಂಖ್ಯೆ; ಒಂಬತ್ತು: ಒಬ್ಬನಿಂಗೆಂಟು ಮತ್ತೊಬ್ಬಗಂ ನವಮಿ ಮತ್ತೊಬ್ಬಗಂ ಪತ್ತರಿಂದ ಬಿಲ್ಲುಗಳ್ ರೆಘೋಂಕರಿಸಿ (ತುರಂಗ. ೫೧-೪೮). [ ಸಂ. ನವಮೀ ]

**ನವಮೀವಾಸರ** (ನಾ). ನವಮಿಯ ದಿನ,-ತಿಥಿ: ಬರೆ ಚೈತ್ರಂ ಕೃಷ್ಣ ಪಕ್ಷಂ ದೊರೆಕೊಳೆ ನವಮೀವಾಸರಂ ಪೊರ್ದೆ . . . ಪುತ್ರನಂ ಪೆತ್ತಳಾಗಳ್ (ಆದಿಪು. ೭-೩೭). [ ಸಂ. ]

**ನವಮೇಘ** (ನಾ). ಹೊಸ ಮೋಡ : ನವಮೇಘಧ್ವನಿ ಪುಷ್ಕರಧ್ವನಿ ತರತ್ತಾರಾಳಿ ಪುಷ್ಪೋಪಹಾರವಿಳಾಸಂ ರುಚಿರಾಂಬುದಂ ಯವನಿಕಾ ವಿನ್ಯಾಸಮಾದಲ್ಲಿ . . . ವಿಯದ್ರಂಗದೊಳಂದದೇಂ ನಲಿದುದೋ ವಿದ್ಯುನ್ನಟೀ ನರ್ತನಂ (ಆದಿಪು. ೬-೭೨) ; ನವಮೇಘಧ್ವನಿ ಧೀರತೂರ್ಯನಿನದಂ ಭೋರೆಂಬಿನಂ . . . ರಾಜಸೂಯಮುಖಮಂ ಬೇಳ್ದಂ ಮಹೀಪಾಲಕಂ (ಜಗವಿ. ೧೭-೧೨). [ ನವ₂ + ಮೇಘ ]

**ನವಮೇಘಮಾಲಿಕೆ** (ನಾ). ಮಳೆಗಾಲದ ಮೊದಲಲ್ಲಿ ಕಾಣಿಸಿಕೊಳ್ಳುವ ಮೋಡಗಳ ಸಾಲು : ಬಾನೊಳು ಕವಿದಿದೆ ನವಮೇಘಮಾಲಿಕೆ ದೂರ ದೊಳಿರುವಳು ಕಾಂತೆ (ಇಂಡಾಇ. ೧೬೦-೮೮). [ನವಮೇಘ + ಮಾಲಿಕೆ ]

**ನವಯುವ್ವನ** (ನಾ). = ನವಯೌವನ ೧: ಅಂತು ಸುದರ್ಶನಂ ನವಯುವ್ವನ ಪ್ರಾಪ್ತನಾಗಿ (ಪುಣ್ಯಾಸ್ರ. ೫-೧೬ ವ). [ ನವ₂ + ಯುವ್ವನ ]

**ನವಯುವ್ವನೆ** (ನಾ). ಹೊಸ ಪ್ರಾಯದವಳು; ತುಂಬುಹರೆಯದವಳು : "ಏಱುಂಜವ್ವನೆಯೆಂದು ನವಯು [ಪಾಠಾಂ. ಯೌ]ವ್ವನೆ" (ಕಶಸಾ. ೧೮-೩೭೩). [ ನವ₂ + ಯುವ್ವನೆ (<ಜವ್ವನೆ) ]

**ನವಯುವ** (ನಾ). ಹೊಸ ಹರೆಯದವನು ; ನವಯುವಕ : ನವಯುವ ನೀತನೊಳ್ ನೆರೆದುಬಂದುಪವಾಂತಲವಂಗಪುಷ್ಪವತ್ಪವನವಿದಾರ್ಯಘರ್ಮ ಲವೆಯಾಗಿ ವಿಹಾರಿಸು ವಾರ್ಧಿತೀರದೊಳ್ (ಶಾಂತಿಪು. ೫-೧೩೫) ; ನವಯುವನಾದನೀಸವುಯದೊಳ್ಗನಂ ಪಶವರ್ತಿಯಾಗಿ ಮಾಡುವೆಂ . . . ಎಂದು ಮನ್ಮಥನೃಪಂ ನಿಜಮೋಹನಮಂತ್ರದೇವತಾನಿವಹಮನಟ್ಟಿದಂದ ದೊಳಿ ಕಣ್ಗೆಸೆದರ್ ನರಪಾಳಪುತ್ರಿಯರ್ (ಪಾರ್ಶ್ವಪು. ೦೫-೩೯). [ ಸಂ. ನವಯುವನ್ ]

**ನವಯುವಕ** (ನಾ). = ನವಯೌವನ ೨ : ಚೀಣದ ನವಯುವಕರು ನಮ್ಮವರಂತೆಯೆ ಪಾಶ್ಚಾತ್ಯಶಿಕ್ಷಣವನ್ನು ಹೊಂದಿದ್ದರು (ಜಗಸಂ. II, ೧೧). [ ನವ₂ + ಯುವಕ ]

**ನವಯುವತಿ** (ನಾ). = ನವಯುವ್ವನೆ : ನವಯುವತೀಲೋಚನದ್ಯುತಿ ಧವಳಿಸೆ (ಪಾರ್ಶ್ವಪು. ೨-೭). [ ನವ₂ + ಯುವತಿ ]

**ನವಯೌವನ** (ನಾ). ೧. ಹೊಸ ಹರೆಯ ; ನವತಾರುಣ್ಯ : ಮಗಳ್ ಶ್ರೀಮತಿಯೆಂಬಳಾಗಿ ನವಯೌವನಲಕ್ಷ್ಮಿಯನೆಯ್ದೆ ತಾಳ್ದಿದಳ್ (ಆದಿಪು. ೩-೧೮); ನವಯೌವನದೊಳ್ ಗುಣದೋಷವಿಚಾರಮನಿಂತು ಮಾಡಲೀಯದ ಭಾವೋದ್ಭವನಿಂ ಪರವಶೆಯಾದೆಂ (ಕಾದಂಪೂ. ೭೪೫) ; ಶಿವಪೂಜೆಗೆ ನವ ಯೌವನಮಾದಂತುನ್ಮತ್ತಪಂಚವಿಂಶತಿಪ್ರಾಯಮಾಗಿ (ನಂಬಿರ. ೧೧-೫). ೨. ಪ್ರಾಯಕ್ಕೆ ಬಂದವನು ; ನವಯುವಕ : ನವಯೌವನನಾದಂದು ಮಗಂಗೆ ಮದುವೆಯಂ ಮಾಡುವಮೆಂದು . . . ಪಾರ್ವನ ಕೂಸಂ ಬೇಡಿ ಪಡೆದು (ಜೀವಸಂ. ೩೭-೨೨ ವ) ; ನವಯೌವನನಾದ ತನೂಭವನಂ ಕಂಡಶ್ವ ಸೇನನರಪತಿ ಪರಮೋತ್ಸವದಿಂ ವಿವಾಹಮಂ ಮಾಡುವೆನೆಂದು ನಿರೀಕ್ಷಿಸಲ್ಕೆ ನೃಪಕನ್ನೆಯರಂ (ಪಾರ್ಶ್ವಪು. ೦೫-೩೨). [ ನವ₂ + ಯೌವನ ]

**ನವಯೌವನಾಂಕ** (ನಾ). = ನವಯೌವನ ೨: ನವಯೌವನಾಂಕನತಿ ಸೌಂದರ್ಯಾನ್ವಿತಂ ರಾಜಸಂಕುಳದೊಳ್ಪೀಱಿದ ನೀಱಿನೈತರುತಮಿರ್ಪಂ ನೋಡಲೇಳ್ (ರಾಜಶೇ. ೭-೦೫) : ನವಯೌವನಾಂಕನಂ ಮಾನವನೂತನ ಕಾಮನಂ . . ಈಗಳ್ ತಂದೊಡಗೂಡಿಸದಿರ್ದೊಡೆ ಮುಂದೇವೆಮ್ಮಾದಸುಗಳ್ ಶರೀರದೊಳಿರದು (ಯಾದಚಂ. ೩-೩೧). [ ನವಯೌವನ + ಅಂಕ₂ ]

**ನವಯೌವನೆ** (ನಾ). = ನವಯುವ್ವನೆ : ನವಯೌವನೆಯರ್ ಲಾವಣ್ಯವತಿ ಯರಱಿದದ್ರಿಧರನ ಮನಮಂ (ಜಗವಿ. ೫-೧೨) ; ಯಕ್ಷದೇವತೆ ವರಾಂಗನ ಪುರುಷವೃತದಳವನಾರಯ್ವೆನೆಂದು ನವಯೌವನೆಯಪ್ಪ ಕುಮಾರಿಯಾಗಿ ಬಂದಿದಿರೊಳ್ ನಿಂತು (ಜೀವಸಂ. ೫೫-೩೩ ವ). [ ಸಂ. ನವಯೌವನಾ ]

**ನವರಂಗ** (ನಾ). [ಶಿಲ್ಪಶಾ] ದೇವಸ್ಥಾನದಲ್ಲಿ ಗರ್ಭಗುಡಿಯ ಎದುರಿನಲ್ಲಿ ಸುಕನಾಸಿಯ ಮುಂಭಾಗದಲ್ಲಿ ನೃತ್ಯಗೀತಾದಿ ರಂಗಭೋಗಕ್ಕಾಗಿ ಕಟ್ಟುವ ಒಂಬತ್ತು ಅಂಕಣದ ಮಂಟಪ : ಕೂಡಿದ ಸುರ ತರುಣೀಜನಮಾಡುವ ನವರಂಗನರ್ತನಂಗಳಿಂ (ಮಹಾನೇ. ೦೫-೩೨) ; ನಾನಾ ರತುನಕಾಂತಿ ನವರಂಗ ಬಲಿಯಾಗಿ (ವಾದಿಕೀ. ೪೪-೧) ; ನವರಂಗ;

ಇದು ಸುಕನಾಸಿಯ ಮುಂಭಾಗದಲ್ಲಿ ಸಾಧಾರಣವಾಗಿ ಒಂಭತ್ತು ಅಂಕಣದ ಮಂಟಪ (ಮೈವಾಸ್ತು. ೩೪) : ಚಂದ್ರಪ್ರಭಾ ಬಸದಿಯು ಒಂದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮಂಟಪ—ಇವುಗಳಿಂದ ಕೂಡಿ . . . ಚಂದ್ರಪ್ರಭನ ವಿಗ್ರಹವನ್ನು ಹೊಂದಿದೆ (ಭಾರದ. ೫೦೪).

[ ನವ$_1$ + ರಂಗ ]

**ನವರಂಗಮಂಡಪ** (ನಾ). = ನವರಂಗ : ಗರ್ಭಗುಡಿಯ ಮುಂದೆ ನವರಂಗ ಮಂಡಪಕ್ಕೆ ಬರುವಂತೆ ವಿಭಾಗಿಸದೆ ಇದ್ದ ಸುಕನಾಸಿಯು ಇದ್ದಿತು (ಹೊಯ್ಸವಾ. ೨೦). [ ನವರಂಗ + ಮಂಡಪ ]

**ನವರಂಧ್ರ** (ನಾ). = ನವದ್ವಾರ ೨ : ನವರಂಧ್ರಮೆಂಬ ಕನ್ನಂ ಸವೆದಿರಲ್ . . . ಜವನೆಂಬಾಖಿಡಿಗಳ್ಳಂ ತವಕದಿನಸುವೆಂಬ ವಸುವನೊಯ್ಯದೆ ಮಾಣಂ (ಧರ್ಮನಾ. ೫-೮೭) ; ಮಾಸವೈದಾಖಿಲಿ ನಖರೋಮ ನವರಂಧ್ರ (ಪುರಂದ. ೧-೧೫೨-೩). [ ನವ$_1$ + ರಂಧ್ರ ]

**ನವರಕ್ತ** (ನಾ). = ನವಲೋಹಿತ : ನವರಕ್ತರಕ್ತವಸ್ತ್ರಂ ನವಾಂತ್ರ ಯಜ್ಞೋಪವೀತಮೆಸೆಯೆ ಪಿಶಾಚಾನಿವಹಮನಡಗುಣಿಪೆಂದು ನವ ವೇದವಮಂ ಪೇಟ್ವರಲ್ಲಿ ರಕ್ಕಸಪಾರ್ವರ್ (ಗದಾಯು. ೪-೩೯).[ನವ$_2$ + ರಕ್ತ]

**ನವರಕ್ತೆ** (ನಾ). ಆಗ ತಾನೇ ಮೂಡಿದ ಕೆಂಬಣ್ಣ : ಹೊಸ ಕೆಂಪು : ಹಲಚಕ್ರಾಂಕುಶರೇಖಾವಿಲಸಿತಪದತಳಕೆ ಮಾಡೆ ನವರ[ಪಾಠಾಂ. ಪುನರು] ಕ್ತೆಯಂ ಹಲಚಕ್ರಾಂಕುಶ ಕುರುಕುಲತಿಲಕಂ ಕುಸಿಕುಸಿದು ಮೆಲ್ಲಮೆಲ್ಲನೆ ನಡೆದಂ (ಗದಾಯು. ೪-೧೭). [ ಸಂ. ನವರಕ್ತತಾ ]

**ನವರತುನ** (ನಾ). = ನವರತ್ನ ೧ : ಆಡರಿದನು ನವರತುನಮಾಯ ರಥವ (ಕುಮಾರ್ಯ್ರ. ೪-೫೦). [ <ನವರತ್ನ ]

**ನವರತ್ನ** (ನಾ). ೧. ವಜ್ರ, ವೈಡೂರ್ಯ, ಗೋಮೇಧಕ, ಪುಷ್ಯ ರಾಗ, ನೀಲ, ಮರಕತ, ಮಾಣಿಕ್ಯ, ಹವಳ ಮತ್ತು ಮುತ್ತು ಎಂಬ ಒಂಬತ್ತು ಬೆಲೆಬಾಳುವ ಮಣಿಗಳು : ನವರತ್ನಂ ಕರಿ ವಾಜಿ ಕಲ್ಪತರು ದೇವಸ್ತ್ರೀಜನಂ ಲಕ್ಷ್ಮಿಯೆಂಬಿವಱುತ್ಪತ್ತಿಗೆ ಮುಖ್ಯಮಾದುದು . . . ದೇವದಾನವರಿಂದಾದ ಮಹಾಸಮುದ್ರಮಥನಂ (ಮಲ್ಲಿಪು. ೧೨-೧೫೫) ; ನವರತ್ನದ ಪಂಜರದೊಳ್ ದಿವಿಜಶರಾಸನದ ಮಱಿಯನಿರಿಸಿದವೊಲ್ ಸುತ್ತುವ ಸೋಗೆಯ ಸುತ್ತಿನೊಳಾಡುವ ಕೇಕಿಯ ಭಂಗಿ ಲೋಕಮಂ ಸೋಲಿಸುಗುಂ (ಯಶೋಚ. ೩-೩೭) ; ನವರತ್ನದ ಮನೆಯಂ ಕನ್ನವಿಕ್ಕಿ ಮಾಣಿಕವನುಯ್ವ ಪದದೊಳ್ ಕಾದಿರ್ದವರಱಿದು ಪಿಡಿದು (ದಶಕು. ೫-೩೦) ; ಮುತ್ತು ಮಾಣಿಕ ನವರತ್ನದ ಕಿರಣಂಗಳ ಪ್ರಭೆಯ ಪ್ರಕಾಶ ವನುಳ್ಳುದು (ಸಿದ್ಧೇಮ. ೩೨-೮೨) ; ನವರತ್ನ ಕೆತ್ತಿಸಿದ ಸ್ವಾಮಿ ಎನ್ನ ಹೃದಯಮಂಟಪದಲ್ಲಿ ಸರ್ವಾಭರಣದಿಂದ ಪುರಂದರವಿಠಲನ ಕೂಡಿದೇನೆ (ಪುರಂದ. ೫-೩೨-೫) : ನವರತ್ನದ ಸೌಧಂಗಳ ಸವಿವೆಳಗಾ ಪುರಮನೆಲ್ಲಮಾ ವರಿಸೆ (ಹಾಲಾಸ್ಯ. ೧-೪-೬೨). ೨. ವಿಕ್ರಮಾದಿತ್ಯಚಕ್ರವರ್ತಿಯ ಆಸ್ಥಾನ ದಲ್ಲಿದ್ದ ಒಂಬತ್ತು ಜನ ಪಂಡಿತರು ; "ವಿಕ್ರಮಾದಿತ್ಯ ಚಕ್ರವರ್ತಿಯ ಆಸ್ಥಾನದಲ್ಲಿ ಇದ್ದರೆಂದು ಹೇಳಲಾಗುವ : ಧನ್ವಂತರಿ (ವೈದ್ಯ), ಕ್ಷಪಣಕ (ಫಲಜ್ಯೋತಿಷಿ), ಅಮರಸಿಂಹ (ಕೋಶಕಾರ), ಶಂಕು (ಭೂಮಾಪನಶಾಸ್ತ್ರಜ್ಞ), ವೇತಾಲಭಟ್ಟ (ಮಂತ್ರಶಾಸ್ತ್ರಜ್ಞ), ಘಟಕರ್ಪರ (ಶಿಲ್ಪಶಾಸ್ತ್ರಜ್ಞ), ಕಾಳಿದಾಸ (ಕವಿ), ವರಾಹಮಿಹಿರ (ಜ್ಯೋತಿಷಿ), ವರರುಚಿ (ವೈಯಾಕರಣ) (ಜ್ಯೋತಿರ್ವಿಧಾಭರಣ ; ಆಪ್ಟೆ ; ಜಾತಿ. XV)" (ಶ್ರೀವತ್ಸ ೩೭೭). [ ನವ$_1$ + ರತ್ನ ].

**ನವರತ್ನಕೂಟ** (ನಾ). ನವರತ್ನಗಳನ್ನು ಕುಂದಣಿಸಿದ ಶಿಖರ: ಮುನ್ನಮೆ ಬಿಡೌಜನೆ ನಿರ್ಮಿಸುವೋಜೆಗೆಯೋಜನಾದುದನಱಿಪುತ್ತುಮಿರ್ಪುದನಿಶಂ ಕರುಮಾಡಮುಮಾನುಷಕ್ರಿಯಾಸ್ಪದ ನವರತ್ನಕೂಟವಿಘಟದ್ರುಸಚಿತ್ರ ವಿಚಿತ್ರ ಲೇಖೆಯಿಂ (ಚಂದ್ರಪು. ೧೧-೭೫). [ ನವರತ್ನ + ಕೂಟ$_3$ ]

**ನವರತ್ನಗಾಸೆ** (ನಾ). ನವರತ್ನಗಳನ್ನು ಪೋಣಿಸಿದ ನಡುಕಟ್ಟು ; ನವರತ್ನಖಚಿತವಾದ ಒಡ್ಯಾಣ,-ಡಾಬು : ತೊಳಗುವ ನವರತ್ನ ಗಾಸೆಯ ಸರ್ವಾಂಗಕಳವಟ್ಟ ಮಣಿಭೂಷಣದ . . . ಮುದ್ದುಮೊಗದ ನರ್ತಕಿಯರು ಘಳಿಲನೆ ನಡೆತಂದರಾಗ (ಕಂಸವಿ. ೮-೫೬).

[ ನವರತ್ನ + ಕಾಸೆ$_1$ ]

**ನವರತ್ನಮಾಲಿಕೆ** (ನಾ). = ನವರತ್ನಮಾಲೆ ೨ : ಶ್ರದ್ಧೆಯಿಂದಿದನು ಈ ನವರತ್ನಮಾಲಿಕೆಯ ಶುದ್ಧಾತ್ಮರಾಗಿ ಪ್ರತಿದಿನದಲಿ ಕಂಧರದ ಮಧ್ಯದಲ್ಲಿರಿಸಿ (ಪುರಂದ. ಧಾ. ೩-೪೪-೯). [ ನವರತ್ನ + ಮಾಲಿಕೆ ]

**ನವರತ್ನಮಾಲೆ** (ನಾ). ೧. ನವರತ್ನಗಳಿಂದ ಕೂಡಿದ ಹಾರ : ಕೊರ ಲೊಳ್ ನವರತ್ನಮಾಲೆಯಂ ಬಾಲಕಿಯಿಕ್ಕಿದಳ್ ನೃಪನ ನಲ್ಮೆಗೆ ತಾಂ ಮುಡಿಯಿಕ್ಕುವಂದದಿಂ (ಮಹಾನೇ. ೫-೧೫) ; ನವರತ್ನಮಾಲಾಗುಣ-ಇವು ಸಕಲಪಾಪಸಮೂಹಗಳನ್ನೂ ಹೋಗಲಾಡಿಸುತ್ತ . . . ಖಾಸರೋಗ, ವಾತರೋಗ ಮುಂತಾದವುಗಳನ್ನೂ ಪರಿಹರಿಸುವ ಔಷಧವಾಗಿದೆ (ಸಕವೈ. ೩೮). ೨. ಒಂಬತ್ತು ಪದ್ಯಗಳ ಸಂಕಲನ,-ಗುಂಪು. ೧, ೨: ಪವಮಾನದೇವರ ಮಹಾತ್ಮೆಯಂ ವರ್ಣಿಸಿದ ನವರತ್ನಮಾಲೆ ಕಂಠದಲಿ ಸಂತತ ಧರಿಸಿದವರಿಗೆ ಸುಸೌಖ್ಯವನ್ನು ತವಕದಿಂದಿತ್ತು (ಪುರಂದ. ೧-೨೦೬-೯).

[ ಸಂ. ನವರತ್ನಮಾಲಾ ]

**ನವರತ್ನಮಡೆ** (ಕ್ರಿ). ನವರತ್ನಗಳಿಂದ ಕೂಡಿರು ; ನವರತ್ನಖಚಿತ ವಾಗಿರು : ಬಿಱುಗಾಳಿ ಬೀಸಲು ಮೃಡನಾಸ್ಥಾನದಿಂ ಸುರರು ಹೊಡೆ ಮಗ್ಗಿದರು ಗದ್ದುಗೆಯಿಂದೆ ನವರತ್ನಮಡೆದ ಕಿರೀಟಗಳ್ ಮುಱಿಯೆ (ಮೋಹತ. ೩೭-೫೮). [ ನವರತ್ನ + ಪಡೆ$_1$ ]

**ನವರತ್ನವರ್ಣಪೂರ** (ನಾ). ನವರತ್ನಗಳನ್ನು ಪೋಣಿಸಿದ ಕಂಬಳಿ : ನವರತ್ನ ವರ್ಣಪೂರಮನವಿರಳ ಕರ್ಪೂರಚೂರ್ಣಸಂಪಾದಿತರಂಗವಲಿ ವಿರಾ ಜಿತಮಂ . . . ಪಟಮಂಡಪಮಂ (ಚಂದ್ರಪು. ೧೩-೧೦೬). P "ಬಣ್ಣಪುರ <(ಸಂ) ವರ್ಣಪೂರ ಎನ್ನುತ್ತಾನೆ ಕೇಶಿರಾಜ ; ಅರ್ಥ ಅನಿರ್ದಿಷ್ಟ ; ಬಣ್ಣಬಣ್ಣದ ಜಮಖಾನೆ, ನೆಲಕ್ಕೆ ಹಾಸುವ ಬಟ್ಟೆ ಎಂಬರ್ಥವಿರ ಬಹುದು" (ಶಂಪದೀ. ೨೪೬). [ ನವರತ್ನ + ವರ್ಣಪೂರ ]

**ನವರತ್ನವಿಲಾಸ** (ನಾ). [ಸಂಗೀತ] ಒಂದು ರಾಗದ ಹೆಸರು : ನವರತ್ನ ವಿಲಾಸವು . . . ಸಾಯಂಕಾಲದಲ್ಲಿ ಹಾಡಲ್ಪಡುತ್ತದೆ (ಜಕುಪ್ರ. ೧೩೭).

[ ಸಂ. ]

**ನವರತ್ನವೃಷ್ಟಿ** (ನಾ). ನವರತ್ನಗಳ ಮಳೆ : ಮಾಣಿಕದ ಮಳೆ ಮುತ್ತಿನ ಮಳೆ ಮೊದಲಾದ ನವರತ್ನವೃಷ್ಟಿಯಂ [ಶಿವಂ] ಕಱಿದನೆಂಬಂತೆ (ಬಸರ. ೧೨-೬೨). [ ನವರತ್ನ + ವೃಷ್ಟಿ ]

**ನವರತ್ನಾಭರಣ** (ನಾ). ನವರತ್ನಗಳನ್ನು ಕುಂದಣಿಸಿದ ಒಡವೆ; ರತ್ನ ಖಚಿತವಾದ ಆಭರಣ : ನವರತ್ನಾಭರಣಪ್ರಭಾಪಟಳದೊಳ್ವೆರ್ಮಲ್ಕ ಬೀಜಂ ತನುಚ್ಛವಿ ಸಂಪೂರ್ಣಸುಧಾಂಶುವಂ ಸುರಧನುಶ್ರೀಯಪ್ಪುದಂತಾಗೆ (ಅನಂಪು. ೪-೪೨). [ ನವರತ್ನ + ಆಭರಣ ]

**ನವರತ್ನೋಜ್ಜ್ವಲ** (ಗು). ನವರತ್ನಗಳಿಂದ ಹೊಳೆಯುವ : ನವ ರತ್ನೋಜ್ಜ್ವಲ ನೂಪುರಕ್ವಣಿತ ವಾಮಾವಾಮವಾಮಾಂಘ್ರಿಪಲ್ಲವಸಂಘಟ್ಟ ನದಿಂ ತಳಿರ್ತಲರ್ದು . . . ಮೂವಡಿಗೆಂಪುವೀಱಿದುದಶೋಕಾನೋಕಹಂ ಚೈತ್ರದೊಳ್ (ಜಗವಿ. ೧೪-೨೮). [ ನವರತ್ನ + ಉಜ್ಜ್ವಲ ]

**ನವರಸ** (ನಾ). [ಕಾವ್ಯಮೀ] ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ ಮತ್ತು ಶಾಂತ ಎಂಬ ಒಂಬತ್ತು ರಸಗಳು : "ಶೃಂಗಾರಂ ಭಯಂ ಶಾಂತಮದ್ಭುತಂ ಬೀಭತ್ಸಮಾ ಹಾಸ್ಯರೌದ್ರಮೆನಲು ವೀರಮೆನೆ ಕರುಣಮೆನೆ ನವರಸಮೆನಿಕ್ಕು" (ಮಂಗರಾ. ೨೩-೨) ; ನಿರುಪಮನ ವರಸರಸಿಕತೆ ದೊರೆವೆತ್ತಿರೆ(ಸುಕುಮಾ. ೧-೩೮) ;

ನವರಸಂಗಳಿಂದಭಿನವರಸಂಗಳಾಗಿ ನೆಗಟುತ್ತುಮಿರೆ (ಜಗವಿ. ೨-೬೯ ವ); ನವರಸಮತಿಭಾವಾರ್ಥಂ ನವೀನಪದಭರಿತಮಿಂತಿದೆನೆ ಸತ್ಕೃತಿಯಂ ತವೆ ಪೇಳ್ವುದು (ಗಿರಿಕ. ೧-೨೦) ; ನವರಸರೀತಿಯಂ ತಿಳಿವ . . . ಮಹಾಕವಿಗಳ ಪಾದಕಾನೆಱಗಿ ಬೇಳ್ಪೆನನಾರತಮಿಷ್ಟಸಿದ್ಧಿಯಂ (ಯಾದಚಂ. ೧-೨೦). ☞ ಕೆಲವು ವೇಳೆ 'ರಸ' ಎಂಬ ಪದದ ಬೇರೆ ಬೇರೆ ಅರ್ಥಗಳನ್ನು ಬಳಸಿಕೊಂಡು ಶ್ಲೇಷಾರ್ಥದ ಪದ್ಯಗಳನ್ನು ಕವಿಗಳು ರಚಿಸಿರುವುದುಂಟು. ಉದಾ : ಮಧುರತರ ನವರಸೋದರಭರಿತದಿಂದೆ ವಿಲಸಿತಮಾಗಿ ಸುಮನೋನುರಾಗದಿಂ ಪ್ರಚುರಮಾಗಿ . . , ಚರಿಸುವ ಸುಲಲಿತ ಷಟ್ಪದಿಗಳೆಡೆವಿಡದೆ ಝೇಂಕರಿಸದಿರ್ಪುವೆ (ಜೈಮಿಭಾ. ೧-೩೩). [ ನವ$_1$ + ರಸ ]

**ನವರಸಕನ್ನಡ** (ನಾ). [ಸಂಗೀತ] ಒಂದು ರಾಗದ ಹೆಸರು ; ೨೮ನೆಯ ಮೇಳಕರ್ತ ಹರಿಕಾಂಬೋಧಿಯಲ್ಲಿ ಜನ್ಯ: ನವರಸಕನ್ನಡದ 'ನಿನ್ನುವಿನಾ' ಎಂಬ ಕೀರ್ತನೆಯನ್ನು ಅವಳು ವೀಣೆಯಲ್ಲಿ ಸೊಗಸಾಗಿ ನುಡಿಸಿದಳು (ರೂಢಿ). [ ಸಂ. ]

**ನವರಸಗಾನ** (ನಾ). ಶೃಂಗಾರಾದಿ ನವರಸಗಳಿಂದ ಕೂಡಿದ ಹಾಡು,- ಸಂಗೀತ : ನವರಸಗಾನನವನಾಲಿಸಿ ಶಿವಮಣಿ ಕಪಿಲರಾಜ್ಯಭಾಂಡಮಂ ತರದಿಂದಂದವನಿಪನೀಕ್ಷಿಸಿ (ಹವಿಶ್ಚ. ರ. ೨-೯೭). [ ನವರಸ + ಗಾನ$_2$ ]

**ನವರಸದಂಬುಲ** (ನಾ). ಹೊಸದಾದ ಹಾಗು ರಸಭರಿತವಾದ ತಾಂಬೂಲ : ಮನಮೊಲ್ದೀಗುವೆನೆಂಬರ ಬಾಯ್ದೆಱಗಿನಿಯುಳ್ಳಂಬಿದ ನವರಸದಂಬುಲವೇನೆ . . . ಸತ್ಕವಿತೆಯ ಸವಿಪಾತು (ಜಯುಕಾ. ೧-೩೫). [ ನವ$_2$ + ರಸದಂಬುಲ ]

**ನವರಾತ್ರಿ** (ನಾ). ಆಶ್ವೀಜಮಾಸ ಶುಕ್ಲಪಕ್ಷದ ಪಾಡ್ಯದಿಂದ ನವಮಿಯವರೆಗಿನ ಒಂಬತ್ತು ದಿನಗಳು ಮತ್ತು ಆ ದಿನಗಳಲ್ಲಿ ಆಚರಿಸುವ (ವಿಜಯದಶಮಿಯಂದು ಕೊನೆಗೊಳ್ಳುವ) ಉತ್ಸವ, - ಹಬ್ಬ : ನವರಾತ್ರಿ ಜಿನಮಹಿಮೆಯ ಮಾಡಿ ದಶಮಿಯ ದಿವಸದೊಳ್ ಪಯಣವಪ್ಪುದಕೆ ಹವಣಿಸಿ (ಭರತ. ೨೦-೧೭); ಈ ಪರಿಯಾಗಿ ನವರಾತ್ರಿಯ ಉತ್ಸವವು ಬೆಳೆಯಲು . . . ಪೃಥ್ವೀಸಾಮ್ರಾಜ್ಯವಂಗೈಯುತ್ತಿದ್ದರು (ಮಹಾವಂ. I, ೨೭೧); ಕನ್ನಡದ ರಾಜ್ಯಲಕ್ಷ್ಮಿಯನು ಪೂಜಿಸುವ ನವರಾತ್ರಿ ಹಬ್ಬದಲಿ (ನವರಾ. ೨೦-೧೯). ☞ "ಶರನ್ನವರಾತ್ರಿ : ಆಶ್ವಯುಜಶುಕ್ಲ ಪ್ರತಿಪದ್ದಿನದಿಂದ ನವಮೀ ತಿಥಿಯವರೆಗಿನ ಉತ್ಸವದ ಒಂಬತ್ತು ರಾತ್ರಿಗಳು. ಮೊದಲ ಮೂರುರಾತ್ರಿ ಮಹಾಕಾಳಿಗೂ ಮಧ್ಯದ ಮೂರುರಾತ್ರಿ ಮಹಾಲಕ್ಷ್ಮಿಗೂ ಕೊನೆಯ ಮೂರುರಾತ್ರಿ ಮಹಾ ಸರಸ್ವತಿಗೂ ವಿಶೇಷಪೂಜಾರಾಧನೆ ಸಲ್ಲುತ್ತದೆ (ಸಾಂಖ್ಯ. ೭೧)" (ಶ್ರೀವತ್ಸ. ೩೭೬). [ ನವ$_1$ + ರಾತ್ರಿ ]

**ನವರಾತ್ರೆ** (ನಾ). = ನವರಾತ್ರಿ : ತಿರುವೆಂಗಳನಾಥಸ್ವಾಮಿಯವರಿಗೆ ಮಹಾನವಮಿ ನವರಾತ್ರೆಸೇವೆಗೆ. . . ಕೊಟ್ಟ ಪುದಿವಟು (ಎಕ. IV (R), ಎಳಂದೂ. ೦೯೬-೧೧ ; 1667) ; ನವರಾತ್ರೆಯ ಮಧ್ಯ ಶಿವರಾತ್ರೆ ಬಂದೀತೆ? (ಗಾದೆ); ನವಮಾಸ ತುಂಬಿದ ಮೇಲೆ ನವರಾತ್ರೆ ಆಗಲಿ ಅದರೆ ನಿಂತೀತೆ ? (ಗಾದೆ). [ ಸಂ. ನವರಾತ್ರ ]

**ನವರಾಶಿಕ** (ನಾ). [ಗಣಿತ] ಒಂಬತ್ತು ರಾಶಿಗಳಿಂದ ಲೆಕ್ಕಮಾಡುವ ಒಂದು ವಿಧಾನ : ರಾಜಾದಿತ್ಯದ ಗಣಿತದಲ್ಲಿ ತ್ರಯರಾಶಿಕ. ಬೆಸ್ತ ತ್ರಯರಾಶಿಕ, ಪಂಚರಾಶಿಕ, ಬೆಸ್ತಪಂಚರಾಶಿಕ, [ಸಪ್ತರಾಶಿಕ, ಬೆಸ್ತಸಪ್ತರಾಶಿಕ, ನವರಾ]ಶಿಕ, ಬೆಸ್ತನವರಾಶಿಕ (ವ್ಯವಹಾ. ಅನುಬಂ. I, ೧೧). [ ಸಂ. ]

**ನವರುಂಜು** (ನಾ). (?) : ಮಿಸುಣಿಯ ಮುಂಡಾಸು ಪೊಸರವಿಯಂತಿರೆ ಶಶಿಯ ಪ್ರಭೆಯಂತೆ ಪಸರಿಸಲಂಗಿಯು ಹಸನಾದ ನವರುಂಜು ವಶದಲ್ಲಿ ತುಂಬಿರೆ ಕುಸುಮವನಂದದಿ ಧೋತ್ರದಿವ್ವಟ್ಟು (ವಾದಿಕೀ. ೦೫೦-೪). [ ? ]

**ನವರುಧಿರಜಲ** (ನಾ).=ನವಲೋಹಿತ : ಬಿಸುಗುದಿಯ ನವರುಧಿರಜಲ ಜಾಳಿಸೆ ನವದ್ವಾರದಲಿ ದೈತ್ಯನ ಕುಸುಕಿಱಿದು ತಿವಿತಿವಿದು ಕೊಂದನು ಕಲಿಜಟಾಸುರನ (ಕುವ್ಯಾಅ. ೧೧-೧೧). [ ನವ$_2$ + ರುಧಿರ + ಜಲ$_2$ ]

**ನವರೋಜು** (ನಾ). [ಸಂಗೀತ] ಒಂದು ರಾಗದ ಹೆಸರು: ನವರೋಜು (೧೪) ಪೂರ್ಣರಾಗ, ಷಡ್ಜಗ್ರಹವನ್ನು ಸೇರಿಕೊಂಡಿದೆ (ಚತುಪ್ರ. ೧೪೧); ಯಮುನಾಕಲ್ಯಾಣಿ, ಹುಸೇನಿ . . . ನವರೋಜು ಮುಂತಾದ ರಾಗಗಳು (ಗಾನಕ. ೫೫) ; ಕೆಲವು ಜೋಗುಳದ ಹಾಡುಗಳಲ್ಲಿ ನಾವು 'ನವರೋಜು' ರಾಗವನ್ನು ಗುರುತಿಸಬಹುದು (ಜಾನಗೀ. ೧೧೬). [ ಸಂ. ]

**ನವಲಗುಂದಿ** (ನಾ). ಒಂದು ನಾಣ್ಯದ ಹೆಸರು ; ಹದಿನೆಂಟು ಬಗೆಯ ವರಹಗಳಲ್ಲಿ ಒಂದು : ನವಲಗುಂದಿ : ಕಿಮ್ಮತ್ತು ರೂ. ೩. ಆ. ೮ (ಕಥಾಗ. ೨೮೦). [ <ನವಿಲ್ಗುಂದ ]

**ನವಲತೆ** (ನಾ). ಎಳೆಯ ಬಳ್ಳಿ : ಎಳಲತೆ, ನವಲತೆ, ಲತೆವನೆ, ಲತೆವಳ್ಳಿ (ಶಮದ. ೨೯೮ ಪ್ರಯೋ). [ ನವ$_2$ + ಲತೆ ]

**ನವಲಾಯಿ** (ನಾ). ಅಪೂರ್ವವಾದುದು ; ಆಶ್ಚರ್ಯಕರವಾದುದು :(೬). [ ←ಮರಾ. ನವಲಾವ, ನವಲಾವಾ ]

**ನವಲಿಂಗ** (ನಾ). [ವೀಶೈ] ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ, ನಿಷ್ಕಲಲಿಂಗ, ನಿಶ್ಶೂನ್ಯಲಿಂಗ ಮತ್ತು ನಿರಂಜನಲಿಂಗ ಎಂಬ ಒಂಬತ್ತು ಲಿಂಗಗಳು: ನವನಾಳಂಗಳ ಮುಂಬಾಗಿಲಲ್ಲಿ ನವಲಿಂಗಂಗಳ ಸಿಂಗರಿಸಿ ... ಆಯಾಯಾ ಲಿಂಗಂಗಳಿಗೆ ತೃಪ್ತಿಯಂ ಮಾಡಿ (ಘನವ. ೨೪-೨೦) ; ಪರಶಿವನಲ್ಲಿ ತಾದಾತ್ಮ್ಯ ಹೊಂದಲು ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಪ್ರಸಾದ ಪರಿಚಯ, ನವಲಿಂಗಸಕೀಲ, ಏಕೋತ್ತರ ಶತಸ್ಥಲಗಳು ಅನಿವಾರ್ಯ (ಚೀದಾನ. ೧೧೪). [ ನವ$_1$ + ಲಿಂಗ ]

**ನವಲೆನಾಡು** 'ನವಿಲೆನಾಡು' ನೋ.

**ನವಲೋಹಿತ** (ನಾ). ೧. ಹೊಸರಕ್ತ ; ಆಗ ತಾನೇ ಚಿಮ್ಮಿದ ರಕ್ತ : ಎಚ್ಚನಂತವೀರ್ಯನ ಶರವೃಷ್ಟಿಯೊಳ್ ಗಗನದಿಂ ನವಲೋಹಿತವೃಷ್ಟಿಗಳ್ ವಲಮ್ಮೆನೆ ಕೊಳೆ ನಾಂದು ಕೆಂಪೆಸೆದು ತೊಟ್ಟನೆ ಬೆಳ್ಳಿಯ ಬೆಟ್ಟಮಲ್ತು ಜಾದಿನ ನಗಮೆಂಬ ಶಂಕೆಯನೆ ಮಾಡಿದುದಾ ವಿಜಯಾರ್ಧಪರ್ವತಂ (ಶಾಂತಿಪು. ೪-೩೩) ; ಅನ್ಯಕರಪ್ರಹಾರ ಜರ್ಜರಿತಶರೀರನಾಗಿ ನವಲೋಹಿತವಾರ್ಧಿಯೊಳಟ್ಟು ಬಿಟ್ಟನಂ ಕುರುಪತಿ ನೋಡಿ (ಗದಾಯು. ೪-೫೩). [ ನವ$_2$ + ಲೋಹಿತ ]

**ನವವಧು** (ನಾ). ೧. ಅದೇ ತಾನೇ ಮದುವೆಯಾದ ಹೆಣ್ಣು; ಮದುಮಗಳು ; ಮದುವಣಗಿತ್ತಿ : ಗಂಡನೆಡೆ ನವವಧು ಬರುವಂತೆ ಆವಳು ಬಂದಿರಲಿಲ್ಲ (ಪ್ರೇಮಾಶ್ರ. ೨೩೮). ೨. ಸೊಸೆ : ಗೃಹಪ್ರವೇಶವಾದ ಮೇಲೆ ನವವಧು ತವರಿಗೆ ಹೋದಳು (ಸ್ವತಿಚಿ. ೨೩೦). ೩. ನವಯುವತಿ ; ನವಯೌವನೆ : ನವವಧುವ ಶಂಕೆಯಂ ಕಳೆವ ವಿದಗ್ಧವಿಟಬೊಲಲೆವ ತೆರೆಗಳ್ (ಆದಿಪು. ೧೧-೧೪೫); ಅವಯವಸಮುದಯ ಶೋಭಾನವದ್ಯನಪ್ಪುರ್ವರಾಸ್ಯತಿಲಕೇತರನಂ ನವವಧುವೊಲ್ಲಳೆ ಮಧುಕರಿ ನವಾಮ್ರದೊಳ್ ಪಾಯ್ಗುಮೆಲವದೊಳ್ ಪಾಯ್ದಪುದೇ (ಶಾಂತಿಪು. ೫-೧೫೬). [ ನವ$_2$ + ವಧು ]

**ನವವಯಸ** (ನಾ). ೧. ಹೊಸಹರೆಯ; ಹೊಸಪ್ರಾಯ; ನವಯೌವನ: ನವವಯಸಮಯಸಮಂ ನೋಡುವಂಗೆ ತರೆ ರೂಪು ನೆರೆಯೆ ಲಾವಣ್ಯರಸಂ ಭುವನತ್ರಿತಯಂ ತೃಣದಿಂದವಸ್ತುವೆನಿಸಿದುದು ಸುಮತಿ ಮೆಯ್ಯೊಱೆಯ ಲೊಡಂ (ಶಾಂತಿಪು. ೪-೮೮). ೨. ಹೊಸಹರೆಯದವನು ; ತರುಣ ; ಯುವಕ : "ನವವಯಸಂ ತರುಣಂ ಯುವ ನವಯುಷ್ಠ[ನೆನೆ]" (ವಸ್ತುಕೋ. ೫೬-೨೭) ; ನವವಯಸನಾಗಿಯುಂ ವ್ಯಸನವಿಹೀನಂ (ಶಾಂತಿಪು. ೨-೪೩). [ ಸಂ. ನವವಯಸ್ ]

**ನವವರ** (ನಾ). = ಮದುಮಗ; ಮದುಮಗ : ನಡೆಯ ಚಟುಳತೆಗೆ ಕಣೆಯಂ ಸಡಿಲ್ದೊಡವನೆಡದ ಕೆಯ್ಯೊಳೋಸರಿಸುತ್ತುಂ ನಡೆದು ಗವಾಕ್ಷಂಬರ ಮೋಗಡಿಸದೆ ನವವರನನಲೆ ನೋಡಿದಳೊರ್ವಳ್ (ಶಾಂತಿಪು. ೬-೯).

[ ನವ$_2$ + ವರ$_3$ ]

**ನವವರ್ಷ$_1$** (ನಾ) ನವಖಂಡ$_1$. ೩: P "ವರ್ಷ-೯: ನಾಭಿವರ್ಷ (ಅಜನಾಭವರ್ಷ), ಕಿಂಪುರುಷವರ್ಷ, ಹರಿವರ್ಷವರ್ಷ, ಇಲಾವೃತವರ್ಷ, ರಮ್ಯಕವರ್ಷ, ಹಿರಣ್ಮಯವರ್ಷ, ಕುರುವರ್ಷ, ಭದ್ರಾಶ್ವವರ್ಷ, ಕೇತುಮಾಲವರ್ಷ (ಭಾಗ. ೫-೨-೨೦ ; ಮಹಾಭಾ. ಸಭಾ. ೨೮). ಹಿಮವತ್ಪರ್ವತದ ದಕ್ಷಿಣದಿಕ್ಕಿನ ವರ್ಷ (ನಾಭಿ), ಹೇಮಕೂಟವರ್ಷ (ಕಿಂಪುರುಷ), ನೈಷಧವರ್ಷ (ಹರಿವರ್ಷ), ಇಳಾವೃತವರ್ಷ (ಇಳಾವೃತ), ರಮ್ಯವರ್ಷ (ರಮ್ಯ), ಶ್ವೇತವರ್ಷ (ಹಿರಣ್ವಂತ), ಕುರುವರ್ಷ (ಕುರು), ಭದ್ರಾಶ್ವವರ್ಷ (ಭದ್ರಾಶ್ವ), ಗಂಧಮಾದನವರ್ಷ (ಕೇತುಮಾಲ) (ವಿಷ್ಣುಪು. ೨-೧-೧೭-೨೩). ಭಾರತೀ, ಕಿಂಪುರುಷ, ಹರೀ, ಇಳಾವೃತ, ಕುರು, ಭದ್ರ (ಭದ್ರಾಶ್ವ), ಕೇತುಮಾಲಾ, ಹಿರಣ್ಯ, ಪಾಂಚಜನ್ಯ (ಯಾಪೂರ. ೪೮೬ : ಯಾಪ್ರಪಾ. ೧೦೪)." (ಶ್ರೀವತ್ಸ. ೩೯೭). [ ನವ$_1$ + ವರ್ಷ ]

**ನವವರ್ಷ$_2$** (ನಾ). ಹೊಸದಾಗಿ ಸುರಿಯುವ ಮಳೆ ; ಮುಂಗಾರು : ಹಿಮಗಿರಿಯ ದೂರದಿಂದೈತಂದು ಮಡೆಬಿಡದೆ ಕ್ರೌಂಚಸಾರಸಪಂಕ್ತಿ . . . ನವವರ್ಷಹರ್ಷದುನ್ಮಾದ ಕಲನಾದದಿಂ (ಶ್ರೀರಾಮಾ. ೧೫-೩೯೯). [ನವ$_2$+ವರ್ಷ]

**ನವವಾರಿದ** (ನಾ). ಹೊಸ ಮೋಡ : ಆ ರಾಜಪರಂಪರೆಯ ಶರೀರಂಗಳೊಳುರ್ವರಾಸ್ಯತಿಲಕನ ತೇಜಂ ರಾರಾಜಿಸಿ ಪೋಲ್ತುದು ನವವಾರಿದನಿಕುರುಂಬದೊಳಗೆ ಪೊಳೆವೆಳಮಿಂಚಂ (ಶಾಂತಿಪು. ೫-೯೫).

[ ನವ$_2$ + ವಾರಿದ ]

**ನವವಾಸರ** (ನಾ). ಒಂಬತ್ತು ದಿವಸ : ಆತ್ಮವರಂ ಮನ್ನಿಸಿ ಮಾಳ್ಪಲಂಪು ಮುದಮಂ ತಂದೀಯೆ ತನ್ನಂಗಿಯೊಳ್ ನವಮಾಸಂ ನವವಾಸರಕ್ಕೆ ದೊರೆಯಾಯ್ತುತ್ಕತ್ಸವೋತ್ಸಾಹದಿಂ (ಅನಂಪು. ೪-೧೩೪).

[ ನವ$_1$ + ವಾಸರ ]

**ನವವಾಸುದೇವ** (ನಾ). = ನವನಾರಾಯಣ ೨ : ತ್ರಿಪೃಷ್ಠ ದ್ವಿಪೃಷ್ಠ ಸ್ವಯಂಭು ಪುರುಷೋತ್ತಮ ಪುರುಷಸಿಂಹ ಪುರುಷವರ ಪುಂಡರೀಕ ದತ್ತ ನಾರಾಯಣ ಕೃಷ್ಣ ಎಂದು ವರ್ತಮಾನ ನವವಾಸುದೇವರಕ್ಕುಂ (ಪಸಾರ. ೪೩೭). [ ನವ$_1$ + ವಾಸುದೇವ ]

**ನವವಿದ್ರವಣ** (ನಾ). ಗದಾಯುದ್ಧದ ಒಂದು ವರಸೆ,-ಪಟ್ಟು : ಲವಣಲಹರಿಯುದುಂಚ ನವವಿದ್ರುವಣ ಲಘುವಿನ್ಯಸ್ತವೆಂಬೀ ವಿವರದಲಿ ಕಾದಿದರು ಕೌತುಕವೆನಲು ಸುರನಿಕರ (ಕುವ್ಯಾ.ಗ. ೬-೨೫). [ ನವ$_2$ + ವಿದ್ರವಣ ]

**ನವವಿಧ$_1$** (ನಾ). ಒಂಬತ್ತು ಬಗೆ: ನವವಿಧ ನವ್ಯಭಕ್ತಿ ವಿಗೆ ಶಂಭುಸಮರ್ಚನೆಗೈದು ದಿವ್ಯಶಾಂಭವಪರಮಂತ್ರಮಂ ಜಪಿಸಿ (ರಾಜಶೇ. ೧೨-೪೧).

[ ನವ$_1$ + ವಿಧ ]

**ನವವಿಧ$_2$** (ನಾ). ಹೊಸ ರೀತಿ,-ಬಗೆ : ನವವಿಧಮಪ್ಪ ಕಣ್ಪೊಳೆವು ರಂಜಿಸೆ ಸಂಚಳಿತಾಂಗಹಾರದಿಂ ವಿವಿಧಘನಸ್ವನಕ್ಕೆ ನವಿಲಾಡೆ ಘನಾಘನಲಕ್ಷ್ಮಿ . . . ಕೊಟ್ಟಳಚಿರಪ್ರಭೆಯೆಂಬ ಸುವರ್ಣಮಾಲೆಯಂ (ಶಂಖಪವಾ. ೭-೧೫೪).

[ ನವ$_2$ + ವಿಧ ]

**ನವವಿಧಗುಣ** (ನಾ). [ವೇದಾಂತ] (ವೈಶೇಷಿಕರು ಹೇಳುವಂತೆ) ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ ಮತ್ತು ಸಂಸ್ಕಾರ ಎಂಬ ಒಂಬತ್ತು ಬಗೆಯ ಆತ್ಮನ ಗುಣಗಳು : ಬುದ್ಧಿಸುಖದುಃಖೇಚ್ಛೆ ಮೊದಲಾಗಿರ್ದ ನವವಿಧಗುಣಗಳಲಿ ಮೆಚ್ಚಿದಿರ್ದು ಗುಣಿಯೆಂದೆನಿಸಿ (ಅಮೃತ. ೩-೪೯). [ ನವವಿಧ$_1$ + ಗುಣ ]

**ನವವಿಧದ್ವೇಷ** (ನಾ). [ದ್ವೈತ] ಪರಮಾತ್ಮನನ್ನು ಕುರಿತು ಒಂಬತ್ತು ಬಗೆಯ ತಪ್ಪು ಕಲ್ಪನೆಗಳನ್ನು ಹೊಂದಿರುವುದು ; P ಜೀವನಿಗೂ ಪರಮಾತ್ಮನಿಗೂ ಅಭೇದವನ್ನು ಹೇಳುವುದು, ಪರಮಾತ್ಮನನ್ನು ನಿರ್ಗುಣನೆಂದು ಚಿಂತನೆ ಮಾಡುವುದು, ಅಪೂರ್ಣನೆಂದು ತಿಳಿಯುವುದು, ಲಕ್ಷ್ಮೀದೇವಿ, ಬ್ರಹ್ಮದೇವರು, ದೇವತೆಗಳು ಮತ್ತು ಬ್ರಾಹ್ಮಣರು ಇವರುಗಳನ್ನು ಸಮಾನರನ್ನಾಗಿ ತಿಳಿಯುವುದು, ವಿಷ್ಣುವಿಗಿಂತಲೂ ಬ್ರಹ್ಮ ರುದ್ರಾದಿಗಳು ಉತ್ತಮರೆಂದು ಚಿಂತಿಸುವುದು, ಪರಮಾತ್ಮನ ಅವಯವಗಳಿಗೆ ಭೇದವನ್ನು ಚಿಂತಿಸುವುದು, ಪರಮಾತ್ಮನ ಅವತಾರಗಳಲ್ಲಿ ಪರಸ್ಪರ ಭೇದವನ್ನು ಹೇಳುವುದು, ಬಾಣಾದಿಗಳಿಂದ ಪರಮಾತ್ಮನ ಶರೀರ ಛಿನ್ನಭಿನ್ನವಾಯಿತೆಂದು ತಿಳಿಯುವುದು, ಪರಮಾತ್ಮನಿಗೆ ಜನನ, ಮರಣಗಳುಂಟೆಂದು ಚಿಂತಿಸುವುದು, ಪರಮಾತ್ಮನ ಭಕ್ತರನ್ನೂ ಆತನ ವಾಕ್ಯವನ್ನೂ ದ್ವೇಷಿಸುವುದು: ಇವನ ಪೋಲುವ ಪಾಪಿಜೀವರು ಭುವನ ಮೂಜಿನೊಳಗಿಲ್ಲ ನೋಡಲು ನವವಿಧದ್ವೇಷಗಳಿಗಾಕರನೆನಿಸಿಕೊಳುತಿಪ್ಪ (ಹ ಸಾ ರ. ೨೦-೨೦). [ ನವವಿಧ$_1$ + ದ್ವೇಷ ]

**ನವವಿಧಪುಣ್ಯ** (ನಾ). [ಜೈನ] ಮುನಿಗಳು ಚರಿಗೆಗೆ ಬಂದಾಗ ಅವರಿಗೆ ದಾನ ಮಾಡುವಲ್ಲಿ ಅನುಸರಿಸುವ ಮೂರು ಸಲ ಪ್ರದಕ್ಷಿಣೆ, ಉಚ್ಚಸ್ಥಾನ ನೀಡುವುದು, ಪಾದಗಳನ್ನು ತೊಳೆಯುವುದು, ಅರ್ಚನೆ, ಪ್ರಣಾಮ, ವಚನಶುದ್ಧಿ, ಕಾಯಶುದ್ಧಿ, ಮನಶ್ಶುದ್ಧಿ ಮತ್ತು ಏಷಣಾಶುದ್ಧಿಗಳೆಂಬ ಒಂಬತ್ತು ಬಗೆಯ ಕ್ರಮಗಳು: ಇದಿರ್ಗೊಳ್ವುದು ಕಾಲ್ಗರ್ಚುವುದುದಾತ್ತಮಪ್ಪೆಡೆಯೊಳಿರಿಪುದರ್ಚಿಪುದೆಱಗಿರ್ಪುದು ಕರಣಶುದ್ಧಿವಡೆವುದು ಪದೆದನ್ನಮನೀವುದೆಂಬ ನವವಿಧಪುಣ್ಯಂ (ಆದಿಪು. ೪-೯೭) ; ನವವಿಧಪುಣ್ಯದಿಂ ಕುಡುವುದುಂ ಮುನಿಗನ್ನಮನಂದು (ಧರ್ಮಾಮೃ. ೧೨-೨೦೩) ; ಇದಿರ್ಗೊಳ್ವುದುಂ ಉಚ್ಚಸ್ಥಾನದೊಳಿರಿಸುವುದುಂ . . . ಮನೋವಾಕ್ಕಾಯಶುದ್ಧಿಯುಮೆಂಬ ನವವಿಧಪುಣ್ಯದೊಳ್ಕೂಡಿ (ತತ್ತ್ವಪ್ರ. ೨-೭೮) ; ಅವನಿಪತಿ ನಿಲಿಸಿದಂ ಸುವಿಧಿಮುನೀಶ್ವರನನಂದು ಸಮಸಂದಿರೆ . . . ನವವಿಧಪುಣ್ಯಂ ಪ್ರತಿಗ್ರಹಾದ್ಯಂ ತನ್ನೊಳ್ (ಪುಷ್ಪಪು. ೧೩-೧೨೦). 'ನವಧಾಭಕ್ತಿ' ಪರಾ. [ ನವವಿಧ$_1$ + ಪುಣ್ಯ ]

**ನವವಿಧಬ್ರಹ್ಮಚರ್ಯ** (ನಾ). [ಜೈನ] ಒಂಬತ್ತುಬಗೆಯ ಬ್ರಹ್ಮಚರ್ಯವ್ರತ ; P ಮನವಚನಕಾಯಗಳಲ್ಲಿ ಪ್ರತಿಯೊಂದಕ್ಕೂ ಕೃತ ಕಾರಿತ ಅನುಮೋದನ ಎಂಬ ಭೇದದಿಂದ ಒಂಬತ್ತು ಬಗೆಯಾದ ಬ್ರಹ್ಮಚರ್ಯೆ: ನವವಿಧಬ್ರಹ್ಮಚರ್ಯಾರ್ಜಿತನುಂ ಪರಿಗೃಹೀತದಶವಿಧಶ್ರಮಣಧರ್ಮನುಂ . . . ಅಕ್ಕುಂ (ಚಾವುಂಪು. ೭) ; ಅಷ್ಟಮಲವ್ಯಪೇತನುಂ ನವವಿಧಬ್ರಹ್ಮಚರ್ಯೋಪೇತನುಂ ... ಆಗಿ(ಅಜಿಪು. ೩-೧ ವ); ನವವಿಧ ಬ್ರಹ್ಮಚರ್ಯನಿಷ್ಠಿತನುಂ (ವರ್ಧಮಾ. ೧೦-೫೭ ವ). [ ನವವಿಧ$_1$ + ಬ್ರಹ್ಮಚರ್ಯ ]

**ನವವಿಧಭಕುತಿ** (ನಾ). = ನವವಿಧಭಕ್ತಿ : ಹನುಮಂತನ ಬಲಗೊಂಡರೆ ನವವಿಧಭಕುತಿಯು ದೊರಕೊಂಬುದು (ಪುರಂದ. ಧಾ. ೧-೨೨-೧).

[ ನವವಿಧ$_1$ + ಭಕುತಿ ( < ಬಕುತಿ) ]

**ನವವಿಧಭಕ್ತಿ** (ನಾ). ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ ಸಖ್ಯ, ಮತ್ತು ಆತ್ಮನಿವೇದನ ಎಂಬ ಒಂಬತ್ತು ಬಗೆಯಾದ ಭಕ್ತಿ : ನೆಲೆಯ ಕಾಣಿಸು ನಿಗಮಶಾಸ್ತ್ರ ನವವಿಧಭಕ್ತಿಯೊಳಗೊಂದು ಬಗೆಯಾದರು (ಕನಕ. ೧೭೪-೫) ; ಸವೆಯದೆ ಮಾಡಿ ಮಾಡಿ ತಣಿವೈದದು ಪಾಣಿ ತದಂಘ್ರಿಸೇವೆಯಂ ನವವಿಧಭಕ್ತಿಯುಕ್ತ ಶರಣಾವಳಿಗೆಂದೆನೆ ಸ್ವೆಪದೆಂತುಟೊ (ರಾಜಶೇ. ೧೪-೧೩೮) ; ಶ್ರವಣಂ ಕೀರ್ತನಂ ಸ್ಮರಣಂ ಪಾದಸೇವನಂ ಅರ್ಚನಂ ವಂದನಂ ಧ್ಯಾನಂ ಸಖ್ಯಂ ಆತ್ಮನಿವೇದನಂಗಳೆಂಬುದು ನವವಿಧಭಕ್ತಿ (ನಿಗಮ. ೩). [ ನವವಿಧ$_1$ + ಭಕ್ತಿ ]

**ನವವಿಧಹರಿದ್ವೇಷ** (ನಾ). [ದ್ವೈತ] ವಿಷ್ಣುವನ್ನು ಕುರಿತು ಒಂಬತ್ತು ರೀತಿಯಲ್ಲಿ ದ್ವೇಷಭಾವವನ್ನು ತಳೆದಿರುವುದು; ₽ "ಜೀವಾಭೇದ, ನಿರ್ಗುಣತ್ವ, ಅಪೂರ್ಣಗುಣತ್ವ, ಇತರ ಸಾಮ್ಯ, ಇತರಾಧಿಕ್ಯ, ಬ್ರಹ್ಮನಾನಾತ್ವ, ಅವತಾರನಿಂದೆ, ಭಕ್ತನಿಂದೆ, ತತ್ಪ್ರಮಾಣನಿಂದೆ– ಈ ಒಂಬತ್ತೂ ಹರಿದ್ವೇಷಗಳು" (ಹಿಂದಸಾ. ೨೯೩) : ದ್ವೇಷ ಪರಿಪಾಕ ಸಾಧನಗಳು . . . ತ್ರಿವಿಧಗುರುದ್ವೇಷ, ನವವಿಧಹರಿದ್ವೇಷ ಮೊದಲಾದುವು (ಹಿಂದಸಾ. ೨೯೩). 'ನವವಿಧದ್ವೇಷ' ಪರಾ.

[ ನವವಿಧ$_1$ + ಹರಿ$_7$ + ದ್ವೇಷ ]

**ನವವಿಧಾನ$_1$** (ನಾ). (ಭಕ್ತಿಯ) ಒಂಬತ್ತು ತೆರ,–ರೀತಿ : ದಿವರಾತ್ರಿಯು ನೀನೆ ನವವಿಧಾನವು ನೀನೆ (ಪುರಂದ. ೨–೨೬–೧). [ ನವ$_1$ + ವಿಧಾನ ]

**ನವವಿಧಾನ$_2$** (ನಾ). ಹೊಸ ಬಗೆ ; ನವೀನ ಕ್ರಮ : ಕನ್ನಡವಿಮರ್ಶೆ ಎಂಬುದು ಒಂದು ನವವಿಧಾನವಾಗಿ, ಜಗತ್ತಿನ ಕಾವ್ಯವಿಮರ್ಶೆಗೆ ವಿಶಿಷ್ಟವಾದ ಒಂದು ಕಾಣಿಕೆಯನ್ನು ಸಲ್ಲಿಸುವಂತಾಗಬೇಕು (ಬಂಕಿಮ. ೧೦, ಮುನ್ನುಡಿ).

[ ನವ$_2$ + ವಿಧಾನ ]

**ನವವಿವರ** (ನಾ). = ನವದ್ವಾರ ೨ : ನವವಿವರಾವೃತ ಪೂ[ತಿ]ದ್ರವತ್ವಗಾವೃತ ವಿಮಿಶ್ರ ಮಾಂಸೋಪಚಿತಂ . . . ಮೆಯ್ ಬಗೆವೊಡಿಂತು ಕಿಸುಗುಳಮಾದಂ (ಕವಿರಾ. ೩–೧೯೫). [ ನವ$_1$ + ವಿವರ ]

**ನವವಿಷಾಣ** (ನಾ). ಹೊಸದಾಗಿ ಮೂಡಿದ ಕೊಂಬು (?) : ಸಿಂಗ ವೇಂಟೆಯನಾಡಿ ತಿರುಗಿ ರಿಪುಮಾತಂಗಸಿಂಗನೆಯ್ತಪ್ಪಾಗ ಸಿಂಗರದ ನವವಿಷಾಣಂಗಳುಗ್ರಂ ಕ್ರೋಡರೌದ್ರತರಮದಟಿ ಮದದನಿಯಿಂದಡರ್ದ ರುಚಿಯ ಅಂಗರುಚಿ ಶರಭಬಲಮಂ . . . ಲೋಹಿತಾಕ್ಷಿಗಳತುಳ ಭೂಧರಶೃಂಗಮಂ ಪೃಥುಳಕಂಧರ ಮೃಗಲುಲಾಯರಿತುಮಹಿಷೆಗಳ ನಡುವಿರ್ದುದು (ಹಜಕಾ. ೫–೩೮). [ ನವ$_2$ + ವಿಷಾಣ ]

**ನವವೈಜಯಂತಿ** (ನಾ). ಹೊಸ ಪತಾಕೆ,–ಧ್ವಜ: ಪ್ರಚುರನವವೈಜಯಂತೀವಿಚಿತ್ರಮಂ ಸು.ವಿಮಾನಮಂ . . . ರಜನೀಚರಮದೊಳ್ ಜಿನಾಂಬಿಕೆ ಕಂಡಳ್ (ಶಾಂತಿಪು. ೯–೨೦೭). [ ನವ$_2$ + ವೈಜಯಂತಿ ]

**ನವವೈಯಾಕರಣ** (ನಾ). ೧. ನವವ್ಯಾಕರಣವನ್ನು ಬಲ್ಲವನು. ೨. ಭಾಷೆಗೆ ಸಂಬಂಧಿಸಿದಂತೆ ಹೊಸ ಸೂತ್ರಗಳನ್ನು ಅಳವಡಿಸುವ ವ್ಯಾಕರಣಕಾರ : ನವವೈಯಾಕರಣಂ ತರ್ಕವಿನೋದಂ ಭರತಸುರತಶಾಸ್ತ್ರವಿಳಾಸಂ ಕವಿರಾಜಶೇಖರಂ ಯಾದವರಾಜಚ್ಛತ್ರನಖಿಳಬುಧಜನಮಿತ್ರಂ (ಯಕೋಜ. ೧–೦೯). [ ನವ$_2$ + ವೈಯಾಕರಣ ]

**ನವವೈಯಾಕರಣಿ** (ನಾ). ೧. ಹೊಸವ್ಯಾಕರಣಕಾರ. ೨. ಹತ್ತೊಂಬತ್ತನೆಯ ಶತಮಾನದಲ್ಲಿದ್ದ ಯೂರೋಪಿನ ಭಾಷಾವಿಜ್ಞಾನದ ಒಂದು ಪಂಥಕ್ಕೆ ಸೇರಿದವನು : ನವವೈಯಾಕರಣಿಗಳೆಂದು ಖ್ಯಾತನಾಮರಾದ ಬ್ರುಗ್‌ಮನ್ ಮತ್ತು ಓಸ್ತಾಫ್ (೧೮೭೬) ಧ್ವನಿಸಿದ್ಧಾಂತವನ್ನು ಪ್ರಕಟಿಸಿದಾಗ ಭಾಷಾಶಾಸ್ತ್ರಚರಿತ್ರೆಯಲ್ಲಿ ದ್ವಿತೀಯಯುಗ ಪ್ರಾರಂಭವಾಯಿತೆನ್ನಬಹುದು (ವ್ಯಾವಿ. iii, ಮುನ್ನುಡಿ). ೩. ಹೊಸ ವ್ಯಾಕರಣಕಾರ್ತಿ.

[ ನವ$_2$ + ವೈಯಾಕರಣಿ ]

**ನವಶಶಿ** (ನಾ). ಶುಕ್ಲಪಕ್ಷದ ಪ್ರಾರಂಭಕಾಲದ ಚಂದ್ರ ; ಬಾಲಚಂದ್ರ. 'ಧೃತನವಶಶಿ', 'ನವಶಶಿಕಳೆ' ಪರಾ. [ ನವ$_2$ + ಶಶಿ ]

**ನವಶಶಿಕಳೆ** (ನಾ). ಶುಕ್ಲಪಕ್ಷದ ಪ್ರಾರಂಭಕಾಲದ ಚಂದ್ರನ ಕಾಂತಿ : ನವಶಶಿಕಳೆಗಳನಮೃತದ್ರವಂಗಳೊಳ್ ತೀವಿತೀವಿ ನಿಱಿಸಿದರೆನೆ ತದ್ಧವಳೇಕ್ಷುಲಕ್ಷ್ಮಿನಡೆ ನೋಡುವ ಜನಪದಜನದ ಮನಮನುಱೆ ಸೆಱೆವಿಡಿಗುಂ (ಶಾಂತಿಪು. ೧–೬೨). [ ನವಶಶಿ + ಕಳೆ$_6$ (= ಕಲೆ$_3$) ]

**ನವಶಶಿಲೇಖೆ** (ನಾ). = ನವಶಶಿಕಳೆ: ನವಶಶಿಲೇಖೆಯುಂ ನವದಿನೇಶನುಮಿಲ್ಲಿಗೆ ರಾಹುಗಳ್ಕಿ ಬಂದುವೊ (ಪಂರಾಮಾ. ೧೦–೭೯). [ ನವಶಶಿ + ಲೇಖೆ ]

**ನವಶಿಶು** (ನಾ). ಆಗ ತಾನೇ ಹುಟ್ಟಿದ ಮಗು ; ಎಳೆಯ ಮಗು : ಮಲಗಿದೆ ನವಶಿಶು ತೊಟ್ಟಿಲಲಿ ! (ಕೋಗಿಲೆ. ೫೬–೪) ; ನಾಯಿಕೆಮ್ಮು . . . ನವಶಿಶುವಿಗೆ ಇದು ಕೂಡಲೇ ತಗಲುತ್ತದೆ (ಕಲರೋ. ೨೮).

[ ನವ$_2$ + ಶಿಶು ]

**ನವಸಂಗ** (ನಾ). ಹೊಸ ಕೂಟ : ನವಸಂಗಕ್ಕನೆ ಲಜ್ಜೆವೋಗಿ ನೃಪನಂ ತದ್ಗೇಹದೊಳ್ ಕೂಡುವಂದವಳುಂ ಪಿಂದೊಳವೊಕ್ಕಳೆಂದೆನೆ ಮನಂಬೊಕ್ಕಿರ್ದಳಂ . . . ಇಳೇಶಮನ್ಮಥನಣಂ ತಾನಲ್ಲಿ ಕೂಡಲ್ಕೆ ಸಾರ್ದಪೋಲ್ . . . ಜೋಲ್ದಿಯ್ದಿದಂ ಮೂರ್ಛೆಯಂ (ಕುಸುಮಾ. ೯–೭೧).

[ ನವ$_2$ + ಸಂಗ ]

**ನವಸಂಧ್ಯಾರಾಗ** (ನಾ). ಹೊಸ ಸಂಜೆಗೆಂಪು ; ಮುಚ್ಚಂಜೆಯ ಕೆಂಪು : ನವಸಂಧ್ಯಾರಾಗಂ ಪಿಂಗುವುದುಂ ಮದನಂಗೆ ವಜ್ರಖೇಟಕಮಂ ಕೆಂಗವಸಣಿಗೆಗಳೆದು ರತಿ ನೀಡುವಂತೆ ತಳತಳಿಸಿದತ್ತು ಹಿಮಕರಬಿಂಬಂ (ಮಲ್ಲಿಷ. ೭–೩೨).

[ ನವ$_2$ + ಸಂಧ್ಯಾರಾಗ ]

**ನವಸಂಧ್ಯೆ** (ನಾ). ಆಗ ತಾನೆ ಆರಂಭವಾದ ಸಂಜೆ ; ಮುಚ್ಚಂಜೆಯ ಆರಂಭ : ನವಸಂಧ್ಯಾವಧು ಕೂರ್ತಾಡುವ ಮಣಿಯಂ ಮಾಲೆಯೆರಡಱೊಳ್ ಜಗುಟ್ದುಱೆ ಬಿಟ್ಟವೊಲಂದಬ್ಧಿಯೊಳೞಿದುದು ರವಿಬಿಂಬಂ ಮೇಲಕಡರ್ದುದಿಂದುವಬಿಂಬಂ (ಉದ್ಭಟ. ೧೦–೨೧) ; ನವಸಂಧ್ಯಾ ಪ್ರಾಗನುಷ್ಠಾನದ ಪರಿ ಹೊಸತು (ಅನಂಪು. ೮–೫೯). [ ನವ$_2$ + ಸಂಧ್ಯೆ ]

**ನವಸಹಕಾರ** (ನಾ). ಹೊಸದಾಗಿ ಚಿಗುರಿದ ಮಾವಿನ ಮರ : ನವಸಹಕಾರದಲ್ಲಿ ನಡೆ ನೋಡಿದ ತತ್ಪಟಚಿತ್ರರೂಪದೊಪ್ಪುವ ಕುಸುಮಾವಳೀಸತಿಯ ಸಂಗಸುಖಾಮೃತಪೂರದಿಂದೆ ನಂದುವುದಿನಿತಲ್ಲದೀ ನೃಪಮನೋಭವನಂಗದ ಮನ್ಮಥಾಗ್ನಿ ನಂದುವುದೆ ಲತಾಂತವೀಜನದ ಮಾರುತನಿಂ (ಕುಸುಮಾ. ೧೦–೪೩) ; ನವಸಹಕಾರನೊಳ್ ಸರೆದ ಮಲ್ಲಿಗೆ ನಲ್ಲಳ ತಾರಹಾರದಂತೆವೊಲಿರೆ (ಅನಂಪು. ೭–೯). [ ನವ$_2$ + ಸಹಕಾರ ]

**ನವಸಾಂಧ್ಯಜಳದ** (ನಾ). ಹೊಸ ಸಂಜೆಗೆಂಪಿನಿಂದ ಕೂಡಿದ ಮೋಡ : ಚೆಂಬೊನ್ನ ಕಳಶಮಿಂದ್ರಧನುಃ ಶ್ರೀನಿಚಿತಂ ನವಸಾಂಧ್ಯಜಳದರುಚಿಯಂ ಕೆಯ್ಕೊಂಡುದಮರಕರಪಲ್ಲವದೊಳ್ (ಶಾಂತಿಪು. ೧೦–೪೯).

[ ಸಂ. ನವಸಾಂಧ್ಯಜಲದ ]

**ನವಸಾಂಧ್ಯರಾಗ** (ನಾ). ಹೊಸ ಸಂಜೆಗೆಂಪು : ರೂಪಿನ ಮನಂಗೊಂಡಿರ್ಪ ಲಾವಣ್ಯದೊಪ್ಪುವ ನೇಪಥ್ಯದಮರ್ಕೆ ನಿಲ್ಲವನಿಮೇಷೇಂದ್ರಾದಿಗಳ್ಗೆಂದೊಡಾಗಿವು ನಿಲ್ಕುಂ ನವಸಾಂಧ್ಯರಾಗ ಹಿಮರುಂದ್ರೇಂದ್ರಾಯುಧಾಭಾಸಿಗಳ್ (ಶಾಂತಿಪು. ೭–೮) ; ಕರತಲಕಾಂತಿಯಿಂ ವದನಚಂದ್ರಮನೊಳ್ ನವಸಾಂಧ್ಯರಾಗಮಂ ಸುರಿವ ನಿರಂಜನಾಶ್ರುಕಣದಿಂ ಕುಚದೊಳ್ ಪೊಸಮುತ್ತಿನಾರಮಂ . . . ನಿಯೋಜಿಪ ನೆಗಟ್ಕೆಗೆ ಕಾರಣಮೇನೊ ಕಾಮಿನೀ (ಚಂದ್ರಪು. ೩–೫೪). [ ನವ$_2$ + ಸಾಂಧ್ಯ + ರಾಗ ]

**ನವಸಾಗರ, ನವಾಸಾಗರ** (ನಾ). (ಕಲಾಯಿ ಮಾಡುವಾಗ ಬಳಸುವ) ಅಮೋನಿಯಾ ಮತ್ತು ಕ್ಲೋರಿನ್‌ಗಳ ಸಂಯೋಗದಿಂದಾದ ಒಂದು ಬಗೆಯ ಕ್ಷಾರ : ನೆಲದೊಳಗೆ . . . ನವಸಾಗರ, ಸೋರುಪ್ಪು, ಗಂಧಕ ಮುಂತಾದ ವಿಷರೂಪ ಕ್ಷಾರಾದಿಗಳಿರುತ್ತವೆ (ಮುಂಬಯಿ. ೫–೦೫೭) : ನವಸಾಗರವು ಆ ಅಮೋನಿಯದ ಮಿಶ್ರಣದಿಂದುಟಾದ ಕ್ಷಾರವಿರುತ್ತದೆ (ಮುಂಬಯಿ. ೬–೩೩). **ನವಾಸಾಗರ** : ಅಮೋನಿಯವೂ ಕ್ಲೋರೀನ್ ಎಂಬ ಪೀತಾನಿಲವೂ ಸಂಯೋಗ ಹೊಂದಿ ಆಗಿರುವ ಲವಣ : ನವಾಸಾಗರ (Sal ammoniac. ಇಂಕನಿ) ; ಗಾಜಿನ ಸೀಸೆಯಲ್ಲಿ ನವಾಸಾಗರದ (Ammon umichloride) ದ್ರಾವಣವನ್ನು ತುಂಬಿ ಅದರಲ್ಲಿ ಒಂದು ಸತುವಿನ (Zinc) ಫಲಕವನ್ನಿಡುತ್ತಾರೆ (ಶಿಲ್ಪನಾ. ೨೨೬).

[ ← ಮರಾ. ನವಸಾಗರ ; ಅರ. ಹಿಂ. ನವಸಾದರ ; ಗುಜ. ನವಸಾರ ]

**ನವಸಾರ** (ನಾ). [ವೀಶೈ] (?) : ನವಸಾರ ಅಷ್ಟಸಾರ ದಶಸಾರ ಪಂಚಸಾರ ಚತುಸ್ಸಾರಯೇಕಸಾರಯಿಂತಿವನತಿಗಳಿದ ಮಹಾಮಹಿಮನ ನಿಲವು ಲಿಂಗದಲ್ಲಿ ಸಂಪೂರ್ಣ (ಪದಗೋ. ೧೩-೧೭೩). [ ? ]

**ನವಸಿಗ** (ನಾ). ಪರರನ್ನು ಪೀಡಿಸುವವನು : "ನವಸಿಗನೆಂದು ಪರರಂ ಪೀಡಿಪಾತಂ" (ಕಶಸಾ. ೧೮-೩೩೨) ; ಗ ಪ್ರತ್ಯಯಕ್ಕೆ–ಮಾತುಗಂ, ಬೂತುಗಂ . . . ಸಟೆಗಂ, ನವಸಿಗಂ, ಎಡಗಂ (ಶಮದ. ೨೦೦ ಪ್ರಯೋ) ; ನಿನ್ನ ನಂಡಲೆವ ನವಸಿಗರದಾರಿದಂ ಅಗ್ಗಳಿಸುವೊಡಾರ್ಪನೇ ? (ಸಂಸಪ. ೩೪-೪).

[ ನವಸು ( < ನವೆಯಿಸು ) + –ಇಗ ]

**ನವಸು** 'ನವೆಯಿಸು' ನೋ.

**ನವಸುಂದರ** (ನಾ). ನೂತನಶೋಭೆಯುಳ್ಳದು : ದಿನದಿನದಂತಲ್ಲೀದಿನ – ನವಸುಂದರಮೆಲ್ಲಂ ; ಹೊಸಸೃಷ್ಟಿಯ ಕನಸೊಂದನು ಬಗೆಗೊಂಡನೊ ನಲ್ಲಂ (ಮೂಂದಿ. ೪೩-೬). [ನವ$_2$ + ಸುಂದರ ]

**ನವಸುಕುಮಾರತೆ** (ನಾ). ನವೀನವಾದ ಮಾರ್ದವ ; ಅಪೂರ್ವವಾದ ಕೋಮಲತೆ : ನವಸುಕುಮಾರತೆ ನಿನಗೆನ್ನವೋಲೆತ್ತಣದೆಂದು ನಖಮಯೂಖದೆ ನಗುತೊಪ್ಪುವ ನಳಿತೋಳ್ಗಳಿನಿರದೆತ್ತಿ ವಧೂಟಿ ಶಿರೀಷಕುಸುಮ ಕುಲಮಂ ಕೊಯ್ದಳ್ (ಶಾಂತೀಶ್ವ. ೧೧-೧೧೦). [ನವ$_2$ + ಸುಕುಮಾರತೆ ]

**ನವಸುಧೆ** (ನಾ). ಹೊಸದಾಗಿರುವ ಅಮೃತ : ನವಸುಧೆಯಿಂ ಕ್ಷಾಲಿಸು ವಿಂದುವಳಿಯೆಯಂತಿರ್ದ ತರುಣಿಯ ಂ ಕೈಗೊಟ್ಟಾ ಯುವತೀವ್ರಜಮೊಡ ಗೊಂಡುತ್ಸವದಿಂ ಪೊಕ್ಕುದು ವಿಚಿತ್ರಭೂಷಾಗೃಹಮಂ (ಶಾಂತೀಶ್ವ. ೪-೨೩೬). [ ನವ$_2$ + ಸುಧೆ ]

**ನವಸುರಭಿ** (ನಾ). ಹೊಸದಾದ ಸುಗಂಧ : ಮಾನನಿದಾನೆಯ ಮಂದ ಶ್ವಾಸಮನೇ ನವಸುರಭಿಸಮೀರಂಗೆತ್ತು ನಿದಾನಿಸಿಯಂಗಜನೆಂಬ ಮಹಾ ಕಾಳೋರಗನೆಯ್ದುರುತ (ಜಯಕಾ. ೩-೫೦). [ ನವ$_2$ + ಸುರಭಿ ]

**ನವಸೂತಿ** (ನಾ). ಹೊಸದಾಗಿ ಕರು ಹಾಕಿದ ಹಸು ; ಎಳಗಂದಿ : "ಧೇನು ನವಸೂತಿ" (ವಸ್ತುಕೋ. ೯೦-೭). [ ಸಂ. ]

**ನವಸೂತಿಕೆ** (ನಾ). ೧.=ನವಸೂತಿ. ೨. ಅದೇತಾನೇ ಹೆರಿಗೆಯಾದವಳು; ಬಾಣಂತಿ. [ ಸಂ. ನವಸೂತಿಕಾ ]

**ನವಸೌರಭ್ಯ** (ನಾ). ಹೊಸ ಪರಿಮಳ ; ನವೀನ ಸುಗಂಧ ; ಹೊಸ ಗಂಪು : ನವಸೌರಭ್ಯದ ಚಂದನಾರ್ದ್ರತಿಲಕೋದಂಚದ್ವನಶ್ರೀಗೆ . . . ಮುಕ್ತಾಹಾರಮಂ ಸಾರ್ದು ನೀಡುವ ಸೇವಾಂಗನೆ ತಾನೆದೆಂದೆನೆ ಕರಂ ಚೆಲ್ವಾಯ್ತು ತಿಂಗಾಳಿ (ಕುಸುಮಾ. ೯-೨೦). [ ನವ$_2$ + ಸೌರಭ್ಯ ]

**ನವಹಾಟಕ** (ನಾ). ಅಪ್ಪಟ ಚಿನ್ನ ; ಉತ್ತಮವಾದ ಬಂಗಾರ : ಚೆಲ್ವನಪ್ಪ ನವಹಾಟಕ ನಿರ್ಮಿತಮಪ್ಪ ಕೋಟೆ ಮುಟ್ಟಿರೆ ಮುಗಿಲಂ (ಚಂದ್ರಪ್ರ. ೦-೧೧೪). [ ನವ$_2$ + ಹಾಟಕ ]

**ನವಹಾರಿದ್ರಕ** (ನಾ). ಉತ್ತಮವಾದ ಅರಿಸಿನ : ಜೀರಕೋದ್ರವ ನವಹಾರಿದ್ರಕ ವಾಟೋತ್ಕರ ಮುನ್ನಿದ್ರಿತ ಕಮಲಾಕರಂಗಳಿಂ ಸೊಗಯಿಸುಗುಂ (ಮಲ್ಲಿಪು. ೨-೪೭). [ ನವ$_2$ + ಹಾರಿದ್ರಕ ]

**ನವಾಂಕುರ** (ನಾ). ಹೊಸ ಚಿಗುರು,–ಮೊಳಕೆ : ನವಾಂಕುರಕದಂಬಮಂ ಕುರವಕದೊಳ್ ಪೊಳೆವೆಳಮಿಂಚಂ ಪಾಲೊಳ್ ತೊಳೆದುತಿರ್ಪೊಲ್ (ಮಲ್ಲಿಪು. ೫-೫೨). [ ನವ$_2$ + ಅಂಕುರ ]

**ನವಾಂಗಿ** (ನಾ). ಹೊಸ ಹರೆಯದವಳು ; ಜವ್ವನೆ ; ಯುವತಿ : ಶಂಕೆಯಿಂ ದಿಟ್ಟಿಸಿದನಾಪಾದಮಸ್ತಕಂ, ಕುಡುದಿಂಗಳಂತೆರ್ಪೊ ನಿಂದಾ ನವಾಂಗಿಯಂ (ಶ್ರೀರಾಮಾ. ೨೦೮-೩೬೪). [ ಸಂ. ನವಾಂಗೀ ]

**ನವಾಂಬುಜ** (ನಾ). ಅದೇ ತಾನೇ ಅರಳಿದ ಕಮಲ : ತುಂಬಿ ನವಾಂಬುಜ ದಲರೊಳ್ ತುಂಬಿದ ಮಕರಂದಕಳಸುತಾಸ್ವಾದಿಪವೋಲ್ (ಶಾಕುಂತ. ೪೨-೭೫). [ ನವ$_2$ + ಅಂಬುಜ ]

**ನವಾಂಶ** (ನಾ). ೧. ಒಂಬತ್ತನೆಯ ಒಂದು ಭಾಗ. ೨. [ಜ್ಯೋತಿ] ಲಗ್ನದ ಒಂಬತ್ತನೆಯ ಒಂದು ಭಾಗ : ಸೂರ್ಯಾದಿ ಗ್ರಹಗಳು ತಮ್ಮ ಉಚ್ಚಸ್ಥಾನದಿಂದ ಹನ್ನೆರಡನೆಯ ರಾಶಿಯಲ್ಲಿ ಒಂಬತ್ತನೆಯ ನವಾಂಶದಲ್ಲಿ ಇರುವಾಗ ಉಚ್ಚಾಭಿಲಾಷಿ ಎಂದು ಕರೆಯಲ್ಪಡುತ್ತವೆ (ಜಾತತಿ. ೯-೪ ಟೀಕೆ). **P** ಇದರ ಗಣನೆಯಲ್ಲಿ ವಿಶೇಷ ಪ್ರಕಾರವಿದೆ. ಸಿಂಹ, ಮೇಷ, ಧನುಸ್ಸು ಈ ರಾಶಿಗಳಿಗೆ ಮೇಷದಿಂದಲೂ ಕನ್ಯಾ, ಮಕರ, ವೃಷಭ ಈ ರಾಶಿಗಳಿಗೆ ಮಕರದಿಂದಲೂ ಮಿಥುನ, ಕನ್ಯಾ, ತುಲಾರಾಶಿಗಳಿಗೆ ತುಲಾದಿಂದಲೂ ಕರ್ಕಾಟಕ, ಮೀನ, ವೃಶ್ಚಿಕರಾಶಿಗಳಿಗೆ ಕರ್ಕಾಟದಿಂದಲೂ ಕ್ರಮವಾಗಿ ನವಾಂಶವನ್ನು ಎಣಿಸಲು ಆರಂಭಿಸಬೇಕು. ನವಾಂಶರಾಶಿಯ ಅಧಿಪತಿಯೇ ನವಾಂಶಕ್ಕೆ ಅಧಿಪತಿ.

[ ನವ$_1$ + ಅಂಶ ]

**ನವಾಂಶಕ** (ನಾ). = ನವಾಂಶ ೨ : ದಿನಪಾದಿ ಗ್ರಹಮಾತ್ಮೋಚ್ಚನಿಳಯದಿಂ ದ್ವಾದಶಾಲಯಂಗಳ ನವಸಂಖ್ಯೆ ನವಾಂಶದೊಳು ತಾಂ ನೆಲಸಿ ನಿಂದು ದುಚ್ಚಾಭಿಲಾಷಿತದ್ದೆಸೆ ಶುಭದಂ (ಜಾತತಿ. ೯-೪). [ ನವ$_1$ + ಅಂಶಕ ]

**ನವಾಂಶದೃಷ್ಟಿಫಲ** (ನಾ). [ಜ್ಯೋತಿ] ನವಾಂಶದಲ್ಲಿರುವ, ಬೇರೆ ಗ್ರಹಗಳ ದೃಷ್ಟಿಯಿಂದಾಗುವ ಫಲ : ಚಂದ್ರನಿರುವ ನವಾಂಶರಾಶ್ಯಧಿಪತಿ ಬಲಿಷ್ಠನಾಗಿದ್ದರೆ ನವಾಂಶದೃಷ್ಟಿಫಲ ಅಧಿಕವಾಗಿಯೂ ರಾಶ್ಯಧಿಪತಿ ಬಲಿಷ್ಠನಾಗಿದ್ದರೆ ರಾಶಿದೃಷ್ಟಿಫಲ ಅಧಿಕವಾಗಿಯೂ ಉಂಟಾಗುತ್ತದೆ (ಜಾತತಿ. ೨೦-೨೪ ಟೀಕೆ). [ ನವಾಂಶ + ದೃಷ್ಟಿ + ಫಲ$_1$ ]

**ನವಾಗತ** (ಗು). ಹೊಸದಾಗಿ ಬಂದ : ಈ ನವಾಗತ ಪ್ರಾಣಿಯ ಆಚಾರ ವ್ಯವಹಾರಗಳ ವಿಷಯಕ್ಕೆ . . . ವರ್ಣನೆಗೆ ತೊಡಗುವಳು (ಇಪ್ಪಕ. ೫೭).

[ ನವ$_2$ + ಆಗತ ]

**ನವಾತು, ನಾಬತ್ತು** (ನಾ). ಒಂದು ಬಗೆಯ ಕಲ್ಲುಸಕ್ಕರೆ ; ಗಡಿಗೆಕಲ್ಲುಸಕ್ಕರೆ : ರೊಟ್ಟಿ ಸಕ್ಕರೆ ಬೆಲ್ಲ ಬಳಿವಂಟಿ ತವರಾಜ ಘಟ್ಟಿ ನವಾತು[ಪಾಠಾಂ. ಘಟ್ಟಿಗೆಯಾಂತು]ಗೋಧುವೆಯ ಹಿಟ್ಟು . . . ಸಾಲಿಟ್ಟವು ಕೊಟ್ಟಿಗೆಯೊಳಗೆ (ಕುರಾಸಾಂ. ೪೧-೫೫). **ನಾಬತ್ತು** : ಬಿಳಿಸಕ್ಕರೆ, ಹುರಿಸಕ್ಕರೆ . . . ನಾಬತ್ತು ಮೊದಲಾದ ಸಕ್ಕರೆಗಳನ್ನು ಮಾಡುವುದಕ್ಕೆ ಸ್ವಲ್ಪ ಶ್ರಮ (ಕೃಷಿಪ್ರ. ೦೮೬).

[ ←ಮರಾ. ನಾಬದ್ ]

**ನವಾನ್ನ** (ನಾ). "ಚಳಿಗಾಲದ ಬತ್ತದ ಕೊಯಿಲಾದ ಮೇಲೆ, ಹಿಂದೂಗಳಲ್ಲಿ ರೂಢಿಯಾಗಿ ಮಾರ್ಗಶಿರಮಾಸದಲ್ಲಿ ನಡಸುವ ಹೊಸ ಅಕ್ಕಿ ಊಟ ಮಾಡುವ ಉತ್ಸವ ವಿಶೇಷ" (ನಿಬಂಧ. II, ೩೦೨ ಅಡಿಟಿ).

**ನವಾನ್ನದ ಉತ್ಸವ** = "ನವಾನ್ನದ ಉತ್ಸವವೆಂದರೆ ಬಂಗಾಲದಲ್ಲಿ ಮಾರ್ಗಶೀರ್ಷದ ಕೊನೆಕೊನೆಗೆ ಹಾಲು, ಬೆಲ್ಲ, ತೆಂಗು ಇತ್ಯಾದಿ ಬೆರೆಯಿಸಿ ಹೊಸ ಅಕ್ಕಿಯನ್ನು ಬೇಯಿಸಿ ಪಾಯಸ ಮಾಡಿ ನೈವೇದ್ಯ ಮಾಡಿ ಉಣ್ಣುತ್ತಾರೆ. ಇದು ದಕ್ಷಿಣದ ಪೊಂಗಲ್ ಅಥವಾ ಉತ್ತರ ಕರ್ನಾಟಕದ ಹಿಂಗಾರಿಯ ಚರಗ ಚೆಲ್ಲುವ ಹಬ್ಬ ಇದ್ದ ಹಾಗೆ" (ಇಪ್ಪಕ. ೨೦೭ ಅಡಿಟಿ) : ಮಾರ್ಗಶೀರ್ಷಮಾಸದಲ್ಲಿ ಜರಗುವ ನವಾನ್ನದ ಉತ್ಸವವು ಚಳಿಯ ಇಬ್ಬನಿಗಳಿಂದ ಜಳಕ ಮಾಡಿದಂತಿದ್ದ ಮುಗಿಲಲ್ಲಿ ಮತ್ತೆ ಸಜೀವವಾಗಿ ಎದ್ದು ನಿಂತಿತು (ಇಪ್ಪಕ. ೨೦೭). [ ನವ$_2$ + ಅನ್ನ$_3$ ]

**ನವಾನ್ನೋತ್ಸವ** (ನಾ). = ನವಾನ್ನ : ವ್ಯವಸಾಯದ ಸುದಿನ ಬಂದಾಗ ಪುಷ್ಯಮಾಸದಲ್ಲಿ ನವಾನ್ನೋತ್ಸವ ನಡೆಯುತ್ತದೆ (ನಿಬಂಧ. II. ೩೦೨).

[ ನವಾನ್ನ + ಉತ್ಸವ ]

**ನವಾಬ, ನಬಾಬ, ನವಾಬು** (ನಾ). ೧. ಮೊಗಲ್‌ಸಾಮ್ರಾಟನ ಪರವಾಗಿ ಸಣ್ಣ ರಾಜ್ಯ ಅಥವಾ ಸಂಸ್ಥಾನಗಳ ಆಡಳಿತ ನಿರ್ವಹಿಸಲು ನಿಯುಕ್ತನಾದ ಮುಸಲ್ಮಾನಅಧಿಕಾರಿ : ನವಾಬ ಟೀಪೂಸುಲತಾನ್ ಬಾಹಾಯಿ ಅದಿಲ್ ಆನೆ ೨ ಹೆಂಣಾನೆ ೧೦ . . . ಮುಂದಿಟ್ಟು ವಪಿಸಿಯಿಥೆ

(ಎಕ. VI (R), ಪಾಂಡವ. ೧೯೭-೮ : 1785) ; ನವಾಬ ದಿಲದೇರುಖಾನರು ಕರಸಿದ್ದ'ರಿಂದ ಫತ್ತಾಹುಲ್ಲಸಾಬರು ಶೀರ್ಯಕೆ ಬಂದು (ಹೈದರ. ೩೯) : ದೊಡ್ಡ ನವಾಬರು ಅರಮನೇ ಕಟ್ಟಲು ಪಾಯ ಮೆಟ್ಟಿ ನೆಲಕ್ಕೆಲ್ಲಾ ಗಾರೇ ಗಚ್ಚು ಹಾಕಿಸಿರುವರು (ಹುಟ್ಟಿಹ. ೭೮) : ನನ್ನ ಅಜ್ಜಂದಿರಾದ ಏಕಾಂಬರ ಮುದಲಿಯಾರರು ಈ ಪ್ರಾಂತ್ಯವನ್ನು ಆಳುತಿದ್ದ ನವಾಬರಲ್ಲಿ, ದಿವಾನಗಿರಿ ನಡೆಸಿ ತುಂಬಾ ಆಸ್ತಿ ಮಾಡಿದರು (ಪ್ರತಾಪ. ೧). ೨. ದೊಡ್ಡ ಶ್ರೀಮಂತ ; ಆಢ್ಯ : ನೂರಾರು ಆಂಗ್ಲ 'ನವಾಬ' ರು ಅವನಿಗೆ ಆಶ್ರಯವೀಯಹತ್ತಿದರು (ಸವುಜೀ. ೮೭೮). **ನಬಾಬ :** ೧. ನೆಗಳ್ತೆವೆತ್ತ ಸವಣೂರ ನಬಾಬನ ವಂಶ ಸಂಜಾತರೊಳ್ . . . ಪರಮಪ್ರಖ್ಯಾತಿಯಂ ಪಡೆಗಂ (ಕೆಳನೃ. ೧೧-೩೭ ವ); ನಾನು ಈಗಲೇ ಹೋಗಿ ನಿಮ್ಮ ನಬಾಬರಿಗೆ ಸುದ್ದಿಯನ್ನು ಕೊಡುವೆನು (ಕೋಹಿನೂ. ೭೪). **ನವಾಬು :** ೧. ನವಾಬು ಹೈದರಲಿಬಹದರರವರು (ಎಕ. IX, ಚನ್ನಪ. ೦೧೪೬-೪ ; 1763); ನವಾಬು ಹೈದರಲಿಖಾನ್‌ಬಾದರರವರು (ಎಕ. IX, ಚನ್ನಪ. ೧೮-೫ ; 1767).

[ ←ಅರ. ನವ್ವಾಬ್ ; ಪಾರ. ಸಾವಾಬ್; ಹಿಂ. ನವಾಬ್ ; ಮರಾ. ನವಾಬ್, ನಬಾಬ್ ]

**ನವಾಬನಂದಿನಿ** (ನಾ). ನವಾಬನ ಮಗಳು : ಅವಳು . . . ರೂಪರಾಶಿ ನವಾಬನಂದಿನಿ ಆಯೇಷೆಯಂತೆ ತೋರಿದಳಿನ್ನಲೆ ? (ಪ್ರಹಸ. ೧).

[ ನವಾಬ + ನಂದಿನಿ ]

**ನವಾಬಿ** (ಗು). ೧. ನವಾಬನಿಗೆ ಸಂಬಂಧಿಸಿದ. ೨. ಶ್ರೀಮಂತಿಕೆಯ ; ಸುಖಲೋಲುಪತೆಯ : ಒಂದು ಬಾರಿ ಹೊರಬಿದ್ದುಬಿಟ್ಟರೆ ಒಂದಿಲ್ಲ ಒಂದು ಗಮ್ಯಪಥ ಇದ್ದೇ ಇರುತ್ತದೆ. ಆ ಪಥ ನವಾಬೀಪಥವಲ್ಲ (ಇಪ್ಪಕ. ೧೯೩). [ ←ಪಾರ. ನೌವಾಬೀ ; ಮರಾ. ನವಾಬೀ, ನಬಾಬೀ ]

**ನವಾಬು** 'ನವಾಬ' ನೋ.

**ನವಾಯತ್** 'ನವಾಯಂತ' ನೋ.

**ನವಾಯತ,** ನವಾಯಂತ್, ನವಾಯಿತ (ನಾ). (ಹೆಚ್ಚಾಗಿ ಭಟ್ಕಳಕ್ಕೆ ಸೇರಿದ ಕೊಂಕಣಿ ಮಾತನಾಡುವ) ಮುಸಲ್ಮಾನರ ಒಂದು ಪಂಗಡ : ನವಾಯತರು, ಅಂದರೆ ಹೊಸದಾಗಿ ಬಂದವರು.— ಇವರು ಕಾನಡಾಜಿಲ್ಲೆಯ ಹೊನ್ನಾವರ ತಾಲೂಕಿನಲ್ಲಿ ಇರುತ್ತಾರೆ (ಕಥಾಗೆ. ೩೩೭). **ನವಾಯತ್ :** ವ್ಯಾಪಾರಸ್ಥರು ಬಜಿಲ, ಬಣಜಿಗ, ಬನಿಯ . . . ಮಿಾಮಾನ್, ನವಾಯತ್, ನಿಮಿಸ್ಕಾರ, ವೈಶ್ಯ, ವಾಣಿ (ತುಳುನಾ. ೧೭೩). **ನವಾಯಿತ :** ಇವರಲ್ಲಿ ನವಾಯಿತರ (ಹೊಸದಾಗಿ ಬಂದವರ) ಸಂಖ್ಯೆಯು ವಿಶೇಷವಾಗಿರುವದ್ರು (ಕಾರವ. ೪೯) : ಮಳಿಗೆಯಲ್ಲಿ ಬಿದ್ದಿರುವ ಊಚುಸೀರೆಗಳನ್ನು . . ರೇಶ್ಮೆ ಚೌಕದಲ್ಲಿ ಕಟ್ಟಿ ನವಾಯಿತರು ಮಠಕ್ಕೆ ಬರುವವರಾದರು (ವಾಗ್ಮೀವಿ. ೪೮).

[ ←ತುಳು. ನವಾಯತೆ ]

**ನವಾಯಿ** (ನಾ). ೧. ಹೊಸತನ ; ನಾವೀನ್ಯ ; ಅಪೂರ್ವತೆ : ಜೀಯ್ಯ ಬಿನ್ನಹವಿಂದು ದೇಹಚ್ಛಾಯೆಗಂಟೀ ಬೇಟಿ ಬೇಷ್ಟೆ ನವಾಯಿಯೇ ನಮ್ಮನಿ ಬರಿಗೆ ರಾಜಾಭಿಮಾನದಲಿ (ಕುವ್ಯಾಸ. ೦೩-೯೪) ; ಗಾಯದಲಿ ಮೇಣ್ ಚೊಕ್ಕೆಯದಲಡುಪಾಯಿಗಳಲುಪಕಾಯದೊಳಗೆ ನವಾಯಿಗಳ ಬಿನ್ನಾಣದಲಿ ಬಳಿಸಂದು . . . ನಾನಾವಿನೋದದ ದಾಯವಱವವನವನೆ ಮಲ್ಲನು (ಕುವ್ಯಾಉ. ೩-೯೭) ; ಆ ನವಾಯಿಯನ್ನು ಕಾಂಬಾತನಿಗೆ ಕವಿತಾದೃಷ್ಟಿ ಬೇಕು (ಚಿತ್ರಸ್ಕ. ೧ ಮುನ್ನುಡಿ). ೨. ಅಪೂರ್ವವಾದ ಚೆಲುವು,—ಸೊಗಸು,— ವಿಲಾಸ : "ನವಾಯಿಯೆನಲ್ ಠೀವಿ" (ಭಾರನಿ. ೬) : ಮುಖಚಂದ್ರಗೆ ಚಕೋರಗಳು ಅಡಸಿದುವು ತಾ ಸೌರಭಕೆ ಬಂದಿಡಿದ ಮಧುಪಪುಜದ ಘನ ರಾಯತಿಗೆ ಕಾಂತೆಯರಳವಳಿದು ನಡೆದರು ನವಾಯಿಯ[ಪಾಠಾಂ. ಯದ]ಲಿ (ಜೀವಂಚ. ೮-೩೯) ; ಏನವಿಧದ ನವಾಯಿಯೇ[ಪಾಠಾಂ. ಯಲಿ] ಮೂಲೋಕ ದತಿಶಯುವಸ್ತುರಚನಾಸೌಕುಮಾರಿಯ ಸೇವೆಗಿದು ಸಾಕಾರವಾದುದಲ (ಕುವ್ಯಾಆ. ೦೩-೦೫) ; ನವಾಯಿ ಹೆಚ್ಚಿತು ಮತ್ತೆ ಬೇಟ ವರಾಯತಾಕ್ಷಿಯ ಕೂಟಕೆಳಸುವ ಚದುರಭೂಮಿಪರ (ಕುವ್ಯಾಆ. ೦೩-೪೫) ; ರಾಯನರಮನೆ ಮೌಕ್ತಿಕದ ಛಳಶಾಯಾತದ ಬೆಳಗಿನಲಿ ಪಾಂಡವರಾಯನೆಲೆವನೆಗಳನು ನಗು ತಿದ್ದುದು ನವಾಯಿಯಲಿ (ಕುವ್ಯಾಆ. ೧೮-೨) ; ವಾಯುತನುಜನ ಸುತನು ತನ್ನ ಪಸಾಯತರು ಸಹಿತೊಳಗೆ ಹೊಕ್ಕು ನವಾಯಿ[ಪಾಠಾಂ. ಯ]ಯಲಿ ನಡೆತಂದು ಕಾಣಿಕೆ ಕೊಟ್ಟು ಪೊಡವಂಟ (ಕುವ್ಯಾಸ. ೫-೨೮); ತಾಯ ಬರವನು ಹಾರಿ ಹರಿದಂಬೇಯೆನುತೆ ಹೆಟ್ಟಿಗಳ ಸುತ್ತ ನವಾಯಿಯಲಿ ಪರಿದಾಡಿ ಮಿಗೆ ಪುಟನೆಗೆದು ಮೇಳಿಸುತೆ (ಅಕ್ರೂಚ. ೨-೬೮). ೩. ದರ್ಪ ; ಗರ್ವ ; ಠೀವಿ ; ಹೆಮ್ಮೆ : ಕಾಯಿಯಲಳವೇ ಕರ್ಣ ಬಱಿಯ ನವಾಯಿಯಲಿ ಫಲವಿಲ್ಲ ದೇಹದ ಬೀಯಕಿದು ಹೊತ್ತಲ್ಲ ಸಾಧ್ಯವಿದಕೆ ಬೇಱುಂಟು (ಕುವ್ಯಾಕ. ೦೨-೦೭) ; ಒಳಗೆ ಧಗೆ ನಗೆ ಹೊಱಗೆ ಕಳವಳವೊಳಗೆ ಹೋಗೆ ನವಾಯಿ ಡಿಳ್ಳಸವೊಳಗೆ ಹೊಱಗೆ ಸಘಾಡವದ . . . ಮಹೀಶ ಹದನಿದು ನಿನ್ನ ನಂದನನ (ಕುವ್ಯಾಕ. ೨-೧). ೪. ಅಬ್ಬರ ; ಆರ್ಭಟ : ರಾಯಮೋಹರ ತೆಗೆದವೆರಡು ವಿಡಾಯಿಯಲಿ ಬಹುವಿಧದ ವಾದ್ಯ ನವಾಯಿ ಮಿಗೆ ನಲವಿನಲಿ ಬಂದರು ಪಾಳೆಯಂಗಳಿಗೆ (ಕುವ್ಯಾಕ. ೪-೩೯). ೫. ವೇಗ ; ಶೀಘ್ರತೆ : ಕಾಯಸೌಖ್ಯಕೆ ಕಾಮಸುಖದ ವಿಡಾಯತತುವಕೆ ವೇಡೆಗೊಂಡು ನವಾಯಿಯಲಿ ದುರ್ಗತಿಗೆ ದುವ್ವಾಳಿಸುವನಲ್ಲೇದ (ಕುವ್ಯಾಆ. ೮-೩೦). ೬. ಹೆಚ್ಚಳ ; ಆಧಿಕ್ಯ ; ಅತಿಶಯ : ಸುರವಂದಿಗಳು ಹೊಗಳಿದರುದಧಿಘೋಷದಲಿ . . . ಯಮ ವಜ್ರಾಯುಧಾದ್ಯರು ಮನದ ಮುದದ ನವಾಯಿಯಲಿ ಸೂಸಿದರು ಸುರನಂದನದ ಕುಸುಮಗಳ (ತೊರರಾ. ೩-೩-೨೩). ೭. ಆಕ್ರಮಣಶೀಲತೆ : ಕನ್ನಿಗಳ ಬಿಡಿ ಹರಿಯಲಿ ನವಾಯಿಯಲಿ (ಪ್ರಹ್ಲಾಚ. ೩-೩೯). ೮. ಉತ್ಸಾಹ ; ಹುರುಪು. 'ನವಾಯಿಗೆಡು' ಪರಾ.

[ ←ಪಾರ. ನೌಆಈನ್ ; ಮರಾ. ನವಾಈ, ನವಾಯಿ ]

**ನವಾಯಿಕಾಱ** (ನಾ). ೧. ಸೊಗಸುಗಾರ ; ವಿಲಾಸಿ : ದಾಯ ತಪ್ಪಿತು ಗರುವರಾಟ ವಿಡಾಯಗೆಟ್ಟಿತು ವಿಟರ ನೋಟ ನವಾಯಿಕಾಱರ ಕೂಟ ಕುಸಿದುದು ಮಾರಶರಹತಿಗೆ (ಕುವ್ಯಾಆ. ೦೩-೪೫). ೨. ಘನತೆಯುಳ್ಳವನು; ಠೀವಿಯಿಂದ ಕೂಡಿದವನು : (೬). [ ನವಾಯಿ + – ಕಾಱ ]

**ನವಾಯಿಗೆಡು** (ಕ್ರಿ). ಹುರುಪುಗೆಡು; ಉತ್ಸಾಹ ಕುಂದು; ಮಂಕಾಗು; ಮ್ಲಾನವಾಗು : ತಾಯೆ ನೀಂ ನಮ್ಮಿಂದ ಬಂಧನದಾಯಸವನನುಭವಿಸಿ . . . ಗಾಯವಡೆದ ಕುರಂಗಿಯಂತೆ ನವಾಯಿಗೆಡದುಳಿದಿರ್ದ ನಮ್ಮನು ಕಾಯಿದಿರಿಯೆಂದಸುರರಿಪು ದೇವಕಿಯೊಡನೆ ನುಡಿದ (ಅಕ್ರೂಚ. ೯-೧೧).

[ ನವಾಯಿ + ಕೆಡು$_1$ ]

**ನವಾಯಿತ** 'ನವಾಯಂತ' ನೋ.

**ನವಾಯಿಸು** (ಕ್ರಿ). ೧. ಹೊಸದಾಗಿಸು ; ನವೀಕರಿಸು : ಇಲ್ಲಿಗೂ ಹೊಂದುವಂಥದನ್ನು ಇಲ್ಲಿನದೇ ಆಗುವಂತೆ ನವಾಯಿಸುವ ಇವರ ಮನೋಗುಣ ಹವಣಾ ತಿಳಿದದ್ದು (ವೀರಯೋ. vii ಮುನ್ನುಡಿ). ೨. ಹೊಸದಾಗಿ ಸೃಷ್ಟಿಸು,–ರೂಪಿಸು : ನಿನ್ನ ಹಿಂಗಬ್ಬಿಗರಿಗೂಡಿದ ಕನ್ನಡದ ನುಡಿವಣ್ಣ ಮೊಲೆ ನಿನಗಿನ್ನು ಸಾಲದೆನುತ್ತ ವಿಧಿ ಮುಂಬಗೆದು ನಿನ್ನುದಯಂ ಚೆನ್ನೆಯುವಳಿಗೆ ಮೂರನೆಯ ಮೊಲೆಯನ್ನವಾಯಿಸಲು (ಗೀವಿಂ. ೯೭-೫).

[ ನವಾಯಿ + – ಇಸು$_3$ ]

**ನವಾರ,** ನವಾರು (ನಾ). ೧. (ಮಂಚಕ್ಕೆ ಹೆಣೆಯಲು ಉಪಯೋಗಿಸುವ) ಮೂರು ಅಥವಾ ನಾಲ್ಕು ಬೆರಳಿನಷ್ಟು ಅಗಲವಾದ, ದಪ್ಪನೆಯ ನೂಲಿನ ಪಟ್ಟಿ : ಆ ಕೋಣೆಯಲ್ಲಿ ಒಂದು ನವಾರದ ಹೊರಸು . . . ಒಡವೆಗಳು ಇದ್ದವು (ಕನ್ನಡಿ. ೧೩೦). ೨. (ನಂದೀಧ್ವಜವನ್ನು ಹಿಡಿದು ಕೊಳ್ಳುವವರು) ನಡುವಿಗೆ ಕಟ್ಟುವ ಪಟ್ಟಿ : ಕುಣಿಯುವಾತ ಸೊಂಟದ ಸಮಿಾಪಕ್ಕೆ ಬರುವಂತೆ ಒಂದು ಪಟ್ಟಿ ಚೀಲವನ್ನು ಹೆಗಲಿನಿಂದ ಇಳಿ ಬಿಟ್ಟು

ಕೊಳ್ಳುತ್ತಾನೆ. ಇದರ ಹೆಸರು 'ನವಾರ' (ಕಜಕ. ೧೧೧). **ನವಾರು :** ೩. ಲಾಡಿ : ಲಂಗಕ್ಕೆ ನವಾರು ಹಾಕಿಕೊಡು (ರೂಢಿ).

[ ←ಪಾರ. ಮರಾ. ನವಾರ್, ನುವಾರ್ ]

**ನವಾರಮಂಚ** (ನಾ). ಬಟ್ಟೆಯ ಪಟ್ಟೆಯಿಂದ ಹೆಣೆದ ಮಂಚ ; ಹೊರಸು. [ ನವಾರ + ಮಂಚ ]

**ನವಾರು** 'ನವಾರ' ನೋ.

**ನವಾಸಾಗರ** 'ನವಸಾಗರ' ನೋ.

**ನವಾಸಾರ** (ನಾ). = ನವವರ್ಷ$_2$ : ಮೇಘನಿಕಾಯಂಗಳನೇಂಬಟಲ್ದೆ ಬಗಿತೋ ರೂಪ್ಯಾದ್ರಿಯೊಳ್ಪುಷ್ಪನೀರನವಾಸಾರದಿನಿಂದು ಸಾನುತರುಗಳ್ಸೇಂಕಾಡು ತಿರ್ಪನ್ನೆಗಂ (ಅರ್ಧನೇ. ೩-೧೨). [ ನವ್ಯ + ಆಸಾರ ]

**ನವಿ** (ನಾ). "ಸಣ್ಣನಾವು" (ಮತಂಪ. ಕೋಶ : ಸಣ್ಣಸಣ್ಣ ನವಿಗಳು ಹುಟ್ಟಾಡಿ ಸುತ್ತ ಹಾಯಿಗಳೊಂದಿಗೆ ಪಶ್ಚಿಮಸಮುದ್ರವನ್ನು ದಾಟುತ್ತಿರುವುದನ್ನು ಮನಸ್ಸಿನಲ್ಲಿ ಯೋಚಿಸು (ಮತಂಪ. ೮೪). 'ನಾವೆ' ಪರಾ.

[ ? ]

**ನವಿಯ** (ಗು). ಹೊಸತಾದ ; ನವೀನವಾದ : ಭಾಪೆಂದೆನಿಪ ಹಯಾ ರೂಢತ್ವ ನವನವಿಯ ಚಾಪಾಗಮತ್ವ ಸೌಂದರತೆ . . . ಇನತೇಜದಿಂದೆಸೆ ದಿರ್ದನು (ಸೋಮಪಜ. ೦-೧೦೬). [ <ಪ್ರಾ. ಣವಿಅ./ಸಂ. ನವ್ಯ ]

**ನವಿರ್, ನವಿರು$_2$** (ನಾ). ೧. ಕೂದಲು; ಕೇಶ; ರೋಮ: "ತಲೆರೋಮಂ ಚಿಕುರಂ ಕಚಂ ಶಿರಸಿಜಂ ಕೇಶಂ ಶಿರೋಜಂ ನವಿರ್" (ವಸ್ತುಕೋ. ೭೦-೩೦); "ನವಿರೆನಲ್ ದೇಹೇರುಹಂ" (ಕರ್ಣಾನಿ. ೬) ; ಆಗಳಾ ಪರಾಕ್ರಮಧವಳನ ಶರಪರಿಣತಿಯಂ ಕಂಡು ದುರ್ಯೋಧನನ ಮೊಗಂ ತಲೆನವಿರ ಗಂಟಂ ಕಟಿದಾಗೆ (ಪಂಪಭಾ. ೨-೭೭ ವ) ; ಪೊಣ್ಮೆ ನವಿರಂಗೋಪಾಂಗದೊಳ್ ಕಣ್ಗಳಂ ಪರಿಕಾಲ್ವಾಯೆ ಸುಖಾಶ್ರು (ಚಿಕವಿ. ೦-೮) ; ಕಯ್ದುವನ್ ನೆಟೆ ತೊಟ್ಟು, ಕುದುರೆ ನವಿರ್ ಮುಡಿಯಿಟ್ಟು (ಅಂತಿಗೊ. ೭-೪೫). ೨. ರೋಮಾಂಚ ; ಪುಳಕ. 'ನವಿರೇಱು', 'ನವಿರ್ಗೆದಱು' ಪರಾ. ೩. ತಂಪ್ಪುಳಂ; ಗರಿ: ಸರಳತೆವೆತ್ತು ಬಿರ್ಚಿದ ನವಿರ್ ಪರಿರಂಜಿಸಲೆಂಟು ತಿರ್ದುದುಬ್ಬರಿಸಿದ ಚಂದ್ರಿಕಾರಸಮನಂಚಿತ ಚಾರುಚಕೋರಸಂಚಯಂ (ಕುಸುಮಾ. ೪-೫೪). ೪. ಉಣ್ಣೆ ; ತುಪ್ಪಟ. 'ನವಿರುಡೆ' ಪರಾ. **ನವಿರು:** ೧. ಕವಲ್ತುವು ಬಳಲ್ಕುಡಿಯ ನವಿರಾಗುಳಿಕೆ ನಿದ್ರೆಯಲಸಿಕೆಯಶನ ದೆಡೆಯೊಳಪ್ರಿಯಮೊದವಿದುವು ಗರ್ಭಚಿಹ್ನಮೆಸೆದುದು ಲತಾತನ್ವಿಗಂದು (ಪದ್ಮರಾ. ೪-೩೫) ; ನಡುಗುವ ತಲೆಯು ತೆರಳಿದ ಮೈಯ ಬೆಳುಪಿನ ತಲೆನವಿರ ತಗ್ಗಿದ ಶರೀರದ ನೆಗ್ಗಿದವಯವದ . . . ವೃದ್ಧರನು ತೋಱಿ ದನು (ಕುವ್ಯಾಅ.೧೫-೧೦); ನಡು ಬೆಳೆದು ತಲೆಯ ನವಿರೊಸೆದುದ್ದವಾದುದಾ ಸತಿಗೆ (ಶ್ರೀಪಾಲ. ೨-೭೦) ; ನಿಟ್ಟಸಲಕ್ಷಿಯು ಬೆಂಡೆದ್ದು ನವಿರ್ಗುಡಿ ಗಟ್ಟಿತು . . . ಝುಮ್ಮುಝುಮ್ಮೆಂದು ತಟ್ಟಿತು ಮನಮೂರ್ಛೆ ರತಿಗೆ (ಮೋಹತ. ೧೧-೪೨) ; ನವಿರು ಶೈವಲದಂತೆ ನಯನವು ಮಿನಂತೆ ಕಾಂತೆ ಸರೋವಳದಂತೆ (ಇಂಚಾಪ. ೧೬೭-೨೫); ಹಾಡುವವರ ಭಾವ–ಭಂಗಿಗಳನ್ನು ನೋಡಿಯೆ ನಮ್ಮ ಮೈಯ ನವಿರು ನಿಮಿರಿ ನಿಲ್ಲಬಹುದು (ಕರ್ನಾಜ. ೧೦೯). ೨. ಮಂಗಮುಗಿಸುತ್ತೆ ಪಾಯ್ದ ರಸದಿಂಚರಿಯಂ ಸವಿವನ್ನೆಗಂ ಕರಂ ಮೊಗಸಿರಿದೋಱೆ ಮಿಱೆ ನವಿರುಂ ಸೆರೆಗಳ್ಪಿಗುಪೇಱೆ ಗದ್ಗದಂ ಮಿಗೆ ... ಸೊಗಂಬಡೆಗುಂ ಚಿಕದೇವಭೂವರಂ (ಅಪ್ರತಿ. ೧೧-೮); ಮುದದೊಳು ಮುರಿದೇಳುವ ನವಿರಿಂದೊಡನಿದಿರುಗೊಳುವಳನಿಯನನು (ಹರಿಬ. ೭-೩೯): ಅದೇ ಗಳಿಗೆ ಮೈಯ ತುಂಬ ನನಗೆ ನವಿರುಬಟ್ಟೆ (ನಾದಲೀ. ೫೪-೧೨).

[ ದೇ.॥ ತಮಿ. ನವಿರ್ ]

**ನವಿರು$_1$** (ಕ್ರಿ). = ನವಿರೇಱು : ನಿರಿನಿರಿ ಚಿಮ್ಮಿಸಿ ನಡೆದು ಬರೆ ನೀ . . . ಮೆಯ್ ನವಿರಲು ನೆಲ ನಡುಗಿತು (ಹೂಹಾದಿ. ೧೨-೩). [ <ನವಿರ್ ]

**ನವಿರು$_2$** 'ನವಿರ್' ನೋ.

**ನವಿರು$_3$, ನವುರು, ನೌರು** (ನಾ). ೧. ಮೃದುವಾದುದು ; ಕೋಮಲವಾದುದು ; ನಾಜೂಕಾದುದು : ತರತರವಾದವೂ ನವಿರುನವಿರಾದವೂ ಆದ ಆ ಬಟ್ಟೆಗಳನ್ನು ನೋಡಿ ಉತ್ತರೆಗೆ ತುಂಬ ಹರ್ಷವಾಯಿತು (ಪಚಭಾ. ೨೨೨) ; ನವಿರಾದ ಪಟ್ಟೆಅರಿವೆಯನ್ನು ಕೂಸಿಗೆ ಹೊದೆಸಿದಳು (ಹಾಹುತ. ೪೧). ೨. ತೆಳುವಾದುದು. 'ನವಿರೆಳೆ' ಪರಾ. ೩. ಸೂಕ್ಷ್ಮವಾದುದು : ಇವುಗಳಿಗಿರುವ ವ್ಯತ್ಯಾಸದ ರೇಖೆ ತೀರ ನವಿರಾದುದು (ಭಾವಗೀ. ೦೪). ೪. ಸುಕುಮಾರತೆ ; ಮಾರ್ದವ ; ಮೃದುತ್ವ : ರಾಧಮ್ಮನ ಪ್ರೀತಿ ತುಂಬಿದ ಕರೆಯಿಂದ ಕ್ಷಣಕಾಲ ನಿರ್ಮಲೆಯ ಅಂತಃಕರಣ ನವಿರಿಗೊಳಗಾಯಿತು (ಮೂರುದಾ. ೨೨೨). **ನವುರು :** ೧. ಅಂಚೆಯ ತುಪ್ಪಳಕ್ಕಿಂತ ನವುರಾದ ಆಕಾಶವರ್ಣದ ಕಿಂಕಾಬುವಸ್ತ್ರ (ಸುಪಸಂ. ೪) ; "ಮಸ್ಲಿನ್‌ಗಳು" ಎಂಬ ನವುರಾದ ವಸ್ತ್ರಗಳೂ . . . ಹಿಂದೂದೇಶದಲ್ಲಿ ಬಹುಕಾಲದಿಂದ ತಯಾರಾಗುತ್ತಲಿವೆ (ಭೂಗೋಳ. ೩೯). ೨. ಯುವಕರ ವಿವಿಧ ಸಂವೇದನೆಗಳ ತರಂಗಗಳು ಆ ಕಾಲದಲ್ಲಿ ತುಂಬ ನವುರಾಗಿಯೂ ವೇಗವಾಗಿಯೂ ಮೊಳಗುತ್ತಿರುತ್ತವೆ (ಶಿಕ್ಷದ. ೧೧೪). (ಗು). ೫. ಮೃದುವಾದ: ರಾಜನ ಈ ನವುರು ಮನಸ್ಸನ್ನು ಅಲ್ಲಿದ್ದವರು ಬಲ್ಲರು (ಸವತಿ. ೧೪೬). **ನೌರು:** ೩. ಅದು ಬಲು ದೊಡ್ಡದಾಗಿಯೂ ಅತ್ಯಂತ ನೌರಾಗಿಯೂ ಇರುವ ಒಂದು ಬಗೆಯ ಅನಿಲಮಂಡಲ (ಜ್ಯೋತಿರ್ವಿ. ೯೬).

**ನವುರು ಮಾಡು** = ಮೃದುವಾದ ಮಾತುಗಳಿಂದ ಒಲಿಸಿಕೊಳ್ಳು : ಸಾಹೇಬರು ಕೇಳಲಿಲ್ಲ. ನಿಮ್ಮ ಮಾತು ಸರಿ, ಅಂದರು ; ನಕ್ಕರು, ನವುರು ಮಾಡಿದರು ; ತಮ್ಮ ಇಚ್ಛೆ ನಡಸಿಬಿಟ್ಟರು (ಚಿಕರಾ. ೫೦೦).

[ ದೇ.॥ ತೆಲು. ನವ್ವರು, ನೌರು ]

**ನವಿರುಗಣ್ಣು** (ನಾ). ಕೋಮಲವಾದ ದೃಷ್ಟಿ; ಮಾರ್ದವವಾದ ನೋಟ : ಹಿರಣ್ಯಗರ್ಭನ ತೇಜಃಪುಂಜವು ಹುಂಜವು ತಾನೆನೆ ಕೂಗಲಿ ನವಿರುಗಣ್ಣನಲಿ ನವಿಲುಬಣ್ಣದಲಿ ಹೆಣ್ಣಿನ ನಯ ತಲೆದೂಗಲಿ (ಅರಳು. ೩೦೦-೩). [ ನವಿರು$_3$ + ಕಣ್ಣು ( <ಕಣ್ ) ]

**ನವಿರುಗೂಡು** (ಕ್ರಿ). ಸೂಕ್ಷ್ಮತೆಯನ್ನು ಒಳಗೊಳ್ಳು : ತನ್ನ ಆಳದ ಒಳನೋವಿನ ನವಿರುಗೂಡಿದ ನುಡಿಯ ಬರೆಹಗಳನ್ನೆಲ್ಲ ಹೀಗೆ ನೆಲೆದಪ್ಪಿಸಿ ಬಿಟ್ಟದ್ದಕ್ಕೆ . . . ಸಿಡಿಮಿಡಿಗೊಂಡನು (ಇಪ್ಪಕ. ೨೪೧).

[ ನವಿರು$_3$ + ಕೂಡು$_1$ ]

**ನವಿರುಡೆ** (ನಾ). ಉಣ್ಣೆಯ ಬಟ್ಟೆ ; ಕಂಬಳಿ : ಪೆರ್ಚಿದುದು ಕುಳಿರಳವು ಅಳ್ ಗೈಮೆಯುಳಿದಿರಲ್ ಕಿಚ್ಚು ನವಿರುಡೆಗಳಂ ಕಾವಲ್ಗೆ ನಿಲಿಸಿ (ಕಾಲೂರ. ೭೬-೧೪೧) ; ತಂದನೊಬ್ಬಂ ಪೇಳ್ದ ಬೆಲೆಗೊಟ್ಟು ನವಿರುಡೆಯ (ಕಾಲೂರ. ೭೮-೧೪೪). [ ನವಿರು$_2$ ( < ನವಿರ್ ) + ಉಡೆ$_2$ ]

**ನವಿರುಮೆಯ್** (ನಾ). ತೆಳುವಾದ ಮೈ ; ಕೋಮಲಾಂಗ : ಅವನ ಕಣ್ಣು . . . ಸೂಕ್ಷ್ಮಪ್ರಕೃತಿಯ ನವಿರುಮೆಯ್ಯ ಮಹಿಳೆಯನ್ನೆ ಹಿಂಬಾಲಿಸುತ್ತಿದ್ದುವು (ಪುನರು. ೩೩೬). [ ನವಿರು$_3$ + ಮೆಯ್ ]

**ನವಿರುಹಾಸ್ಯ** (ನಾ). ಮೃದುವಾದ ಹಾಸ್ಯ ; ಸೂಕ್ಷ್ಮವಾದ ವಿನೋದ : ಇಂಗ್ಲಿಷ್ ಸಾಹಿತ್ಯದ. . .ನವಿರುಹಾಸ್ಯವನ್ನು ತನ್ನ ಕಾದಂಬರಿಗಳಲ್ಲಿಯೂ ಪ್ರಬಂಧಗಳಲ್ಲಿಯೂ ತರಲು ಪ್ರಯತ್ನಪಟ್ಟನು (ಬಂಕಿಮ. ೩೪೯).

[ ನವಿರು$_3$ + ಹಾಸ್ಯ ]

**ನವಿರೆಳೆ$_1$** (ನಾ). (ಕೂದಲೆಳೆಯಷ್ಟು) ಅತ್ಯಲ್ಪವಾದ ಅಂತರ : ಆಗ ಬಹುದಾಗಿದ್ದ ಅಪಘಾತ ಒಂದೇ ಒಂದು ನವಿರೆಳೆಯಲ್ಲಿ ತಪ್ಪಿತು (ರೂಢಿ).

[ ನವಿರು$_2$ (<ನವಿರ್) + ಎಳೆ$_2$ (<ಎೞೆ$_2$) ]

**ನವಿರೆಳೆ$_2$** (ನಾ). ತೆಳುವಾದ ಎಳೆ: ಕತ್ತಿಗೆ ನವಿರೆಳೆಯ ಚಿನ್ನದ ಸರವೊಂದು (ರಾಮಾನೆ. ೧೧೧). [ ನವಿರು$_3$ + ಎಳೆ$_2$ (<ಎೞೆ$_2$) ]

**ನವಿರೇರು** 'ನವಿರೇಱು' ನೋ.

**ನವಿರೇಱು, ನವಿರೇರು** (ಕ್ರಿ). ಕೂದಲು ಎದ್ದು ನಿಲ್ಲು ; ರೋಮಾಂಚನ ವಾಗು ; ಪುಳಕಗೊಳ್ಳು : ರತ್ನಶೇಖರನಾಗಳ್ ನವಿರೇಱಿದ ತನುವಂಕದ ಬವರಮನೊಳಕೊಳ್ವ ಮಾಸವಳನಂ ಪೋಲ್ತಂ (ಪುಶ್ಯಾಸ್ರ. ೧-೬೭) ; ಗಟ್ಟನೆ ನವಿರೇಱಿಯಾಲಿನೀರೊಱೆವಿನೆಗಂ ತಟ್ಟೈಸಿ ಜಿಗಿದು ಮುದ್ದಿಸಿ (ಚಕವಿ. ೬-೧೦೩). **ನವಿರೇರು :** ಹಿಗ್ಗು, ಉಬ್ಬು, ಗುಡಿಗಟ್ಟು, ನವಿರೇರು, ಜುಮ್ಮೆನ್ನು (ಕಂನುಹು. ೯೧). [ ನವಿರ್ + ಏಱು$_1$ (<ಏಱ್$_1$) ]

**ನವಿರೇಟ್** (ಕ್ರಿ). = ನವಿರೇಱು : ಏನದು! ನವಿರೆಟ್ಟು ನಡುಗಿದಪೆನೇ ನಿನ್ನ ಬಾಯ್ಗೆ ! (ಅಂತಿಗೊ. ೪೪-೯೩೧). [ ನವಿರ್ + ಏಟ್$_1$ ]

**ನವಿರೊಳ್ಪು** (ನಾ). ಕೇಶಸಂಪತ್ತು : ನವಿರೊಳ್ಪ ಹೊಗೆಯಲ್ಲಿ ತುಂಬಿ ತಲೆದೂಗಿ (ಕಾಲೂರ. ೧೮೪-೪೧೮). [ ನವಿರ್ + ಒಳ್ಪು ]

**ನವಿರೋಳಿ** (ನಾ). ಕೂದಲಿನ ಸಾಲು: ಮೇಂಗೊರಲ ನವಿರೋಳಿ ನೆಸೆಯೆ . . . ಭೀಕರಂಗಳಾಗಿರ್ಪ ಕಾಳ್ಕೋಣಂಗಳ ಗಡಣಂಗಳೊಳಂ (ಮರಾಜ. ೮-೩೪ ವ). [ ನವಿರ್ + ಓಳಿ ]

**ನವಿರ್ಗುಡಿಗಟ್ಟುಹ** (ನಾ). ನವಿರೇಳುವಿಕೆ ; ರೋಮಾಂಚನ ; ಪುಳಕ : ಎನಗಿದೆ ! ಉಂತೆ ಮೆಯ್ನಡುಕಮೋವೋ ! ನವಿರ್ಗುಡಿಗಟ್ಟುಹಂ ಚೆಳ್ಳನೆ ಬೆಮರಶ್ರುಮಾಲೆ (ಸಂಸಪ. ೩೦-೩) [ ನವಿರ್ + ಗುಡಿಗಟ್ಟು$_2$ + – ಹ$_2$ ]

**ನವಿರ್ಗೆದಱ್** (ಕ್ರಿ). ಮೈನವಿರೇಳಿಸು ; ರೋಮಾಂಚನಗೊಳಿಸು : ಪುದಿದ ಹಿಮಂ ನವಿರ್ಗೆದಱೆ ಮೆಯ್ ಮಿಗೆ ಕೋಡೆ ಕಪಿವ್ರಜಂ . . . ಕೆಂಬೆಳಗಂ ಕೆದಱುತ್ತುಮಿರ್ಪ ರತ್ನದ ಪಿರಿದೆ ಇಂದು ಪಾಸಱೆ ದವಾಗ್ನಿಯ ದಳ್ಳುರಿಯೆಂದು ಪತ್ತೆಸಾರ್ವುದು ತಳಮಂ ನಿಮಿರ್ಚು[ರ್ಚಿ]ತೆನೆ ಮಾಗಿಯ ಶೀತಮದೇಂ ಪ್ರಭೂತಮೋ (ಕುಸುಮಾ. ೭-೧೪).
[ ನವಿರ್ + ಕೆದಱ್$_1$ ]

**ನವಿರ್ಗೊಂಚಲ್** (ನಾ). ಕೂದಲಿನ ಗುಚ್ಛ ; ಕೇಶರಾಶಿ : ಆ ಗಡ್ಡವು ಅವನದೇ ಆಗಿದ್ದರೊ ? . . . ಆ ನವಿರ್ಗೊಂಚಲ ನರಕವು ನಿಜದಿಂದ ಗಲ್ಲಗ್ರಹಚಾರವಾಗಿರಬಾರದೆ ? (ಮಂತ್ರಶ. ೯೪-೩).
[ ನವಿರ್ + ಗೊಂಚಲ್ ]

**ನವಿರ್ತಟ್** (ಕ್ರಿ). ಅತಿಯಾಗಿ ರೋಮಾಂಚನವುಂಟಾಗು; ಅಧಿಕವಾಗಿ ಪುಳಕಗೊಳ್ಳು: ಬಗೆಯೊಳ್ಬಲ್ಪು ಕವಿಲ್ದೊಡಂ ನಡುಕದಿಂದಂಗಂ ನವಿರ್ತ ಳ್ತೊ[ಟ್ತೊ]ಡಂ (ಚಕವಿ. ೬-೩೫೧). [ ನವಿರ್ + ತಟ್$_1$ ]

**ನವಿರ್ಮುಡಿ** (ನಾ). ಕೂದಲಿನ ಮುಡಿ ; ತುರುಬು : ಗಿರಿಜಾತೆ ನವಿರ್ಮುಡಿಗೆ ತುರುಗಿರ್ದ ನರುಗಂಪಿನರಳ ಗಂಧಕ್ಕೆರಗಿ ಝೇಂಕರಿಪ ತರುಣ ಷಟ್ಚರಣಗಳ ಯುಮಳಗಾನಂಗೇಳ್ದು (ನವಮೋ. ೧೮-೨).
[ ನವಿರ್ + ಮುಡಿ$_3$ ]

**ನವಿರ್ಮೂಡು** (ಕ್ರಿ). = ನವಿರೇಱು : ಕೈವಿಡಿದ ನಲ್ಲಳ್ಗೆ ಸಂತಸವೆಕ್ಕಸಂಗಳ ನವಿರ್ಮೂಡುವಂತುಂ . . . ಎತ್ತಿವಂದ ಪಗೆಯಂ ಬಾರಿಸುವೆಂ (ರಾಮಾಶ್ವ. ೮೬-೩). [ ನವಿರ್ + ಮೂಡು$_1$ ]

**ನವಿಲ್, ನವಿಲು, ನವಿಲೆ$_1$** (ನಾ). ೧. ಉದ್ದವಾದ ತೋಕೆಯಲ್ಲಿ ಕಣ್ಣಿನಾಕಾರದ ಸಾಲು ಚಿತ್ರವಿರುವ, ತಲೆಯ ಮೇಲೆ ಕೊಟ್ಟುಳ್ಳ ನೀಲಿ ಬಣ್ಣದ ಒಂದು ಬಗೆಯ ಪಕ್ಷಿ ; ಮಯೂರ; P ಭಾರತದ ರಾಷ್ಟ್ರಪಕ್ಷಿ: "ಕೇಕೀ, ಶಿಖೀ, ಶಿಖಂಡೀ ... ಶಿಖಾವಳಃ, ಶ್ಯಾಮಕಂಠ(ಃ)– ಈ ೧೦ ನವಿಲ್" (ಹಲಾಯು. ೪೦-೮೮); ಧವಳೀಪಾಂಗು ಕೇಕಾರವಮುಖರಂ ಹರಿತಶಾಬಲಾಂಕಕಳಾಪಂ ನವಿಲಾದಂ[ಪಾಠಾಂ.ಟಂ] ಸೊಗಯಿಸುಗುಂ ಸುವಿ ನೀಲಾಯುತಗಳಂ ಪಯೋದಾಗಮದೊಳೆ (ಕವಿರಾ. ೩-೭); ದೇವತೆ ನವಿಲ ರೂಪಿನಿಂದೆತ್ತಿಕೊಂಡು ಬೆನ್ನೊಳಿಟ್ಟು ... ಪೋದೊಡೆ (ವಡ್ಡಾರಾ. ೧೧೮-೩); ಕಾಮುಕಾಂತೆ ಬಟೆಯಂ . . . ಬಣ್ಣವುರಂ ತೀವಿದ ಮಾಟ್ಕೆಯಾಯ್ತು ನವಿಲಿಂ ಕುಂದಂಗಳಿಂದಿಂದ್ರಗೋಪವಿಳಾಸಂಗಳಿನಾಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ (ಪಂಪಭಾ. ೭-೩೪) ; ನೃತ್ಯವಿಭ್ರಮಹೀವಂ ನವಿಲಾತ ಪತ್ರಸದೃಶ್ಯಂ ಮಾಡಿತ್ತು ಪಿಂಛಾಳಿಯಂ (ಶಾಂತಿಪು. ೮-೯) ; ಅದಂ ಕೇಳ್ದು ಕಾರ ಮೊಟಗಂ ಕೇಳ್ದ ನವಿಲಂತೆ ನಲಿದು(ಅರ್ಧನೇ. ೧-೭೯ ವ). ೨. ನವಿಲಿನ ಚಿತ್ರವಿರುವ ನಾಣ್ಯ : ಆಯದೊಳಗೆ ಲೊಕ್ಕಿಯು ನವಿಲುಹಾಗಿ ಪೊನ್ನವಣ (ಸಾಇಇ. IX-I, ೧೬೪-೩೮; 1098). **ನವಿಲು:** ೧. "ಮಯೂರಃ, ಬರ್ಹಿಣಃ, ಬರ್ಹಿನ್, ನೀಲಕಂಠಃ, ಭುಜಂಗಭುಕ್, ಶಿಖಾವಲಃ, ಶಿಖಿನ್, ಕೇಕಿನ್, ಮೇಘನಾದಲಾಸಿನ್ – ಈ ೯ ನವಿಲು" (ನಾಚಿರಾ. ೧೧೫) ; ಗಿರಿಯಲ್ಲಲ್ಲದೆ ಹುಲ್ಲುಮೊರಡಿಯಲ್ಲಾಡುವುದೆ ನವಿಲು (ಮಹಾದೇ. ಕ. ೧೩೦-೨೮೫) ; ಘನಮೇಘಮಂ ಕಂಡ ನವಿಲಂತೆ (ಸಿದ್ಧರಾ. ೨-೨೭) ; ನವಿಲಿಂಗೆ ಚಿತ್ರಪತ್ರವನಾರು ಬರೆದವರು (ಪುರಂದ. ೨-೪೭-೩) ; ಪಾಡುವ ಪೆಣ್ದುಂಬಿ ನರ್ತಿಪ ನವಿಲು (ಮೋಹತ. ೫-೩೪) ; ನವಿಲನ್ನು ನೋಡಿ ಕೆಂಬೂತ ಪುಕ್ಕ ತೆರೆದುಕೊಂಡಿತು (ಗಾದೆ). **ನವಿಲೆ$_1$:** ೧. ಮಾಘಮಾಸದ ನವಿಲೆಯಂತೆ[ಪಾಠಾಂ. ನವಿಲಿನಂತೆ] ಆದೆ ನೋಡವ್ವಾ (ವಚಶಾ. II, ೩೬೩).

**ನವಿಲ ಕೊಟ್ಟು** = ನವಿಲಿನ ಜುಟ್ಟು : "ಶಿಖಾ, ಚೂಡಾ – ಈ ೨ ನವಿಲ ಕೊಟ್ಟು" (ಹಲಾಯು. ೪೧-೮೯) ; ನವಿಲ ಕೊಟ್ಟು ಕರಿಂಜ(ದ) ಪುಷ್ಪ ಫಳಂ ಘೃತಂ ಮಧು ಬೇವು ಸಾಸಿವೆಗಳೆಂಬಿವಸಕ್ಕೆ . . . ತ್ರಿಶೂಲಿ ಯನಕ್ಕೆ ಸಂಭವಿಪ್ಪುದಂ ಕುಡಿ ಪಿಂಗುಗುಂ ಕೊಟೆವಾವು ತಿಂದ ಮಹಾವಿಷಂ (ಲೋಕೋಪ. ೧೦-೨೩); ನವಿಲ ಕೊ [ಪಾಠಾಂ. ಕ]ಟ್ಟು ಕರಂಜ ಪುಷ್ಪ ಫಲಂ ಘೃತಂ ಮಧು ಬೇವು ಸಾಸಿವೆಗಳೆಂಬಿವಸಕ್ಕೆ . . . ಕವಳಮಂ ಕುಡೆ ಪಿಂಗುಗುಂ ಕೊಟೆವಾವು ಕೊಂಡ ಮಹಾವಿಷಂ (ಖಮದ. ೧೦-೬೯). **ನವಿಲ ಗಱಿ, ನವಿಲ ಗರಿ** = ನವಿಲುಗರಿ : "ಮೇಚಕಃ – ಹಗ್ಗಳ್ಳಂಗಡಲೆ, ನವಿಲ ಗಱಿ" (ಓಷಧಿ. ೧೨೯) ; "ಪಿಂಛಂ–ನವಿಲ ಗರಿ" (ಶಾಶಕ್ಕ. ೨೫೮). **ನವಿಲ ನುಡಿ** = ನವಿಲಿನ ಕೂಗು : "ಕೇಕಾರವಂ ನವಿಲ ನುಡಿ" (ಮಂಗರಾ. ೫೧-೩). **ನವಿಲ ಸೋಗೆ**=ನವಿಲಂಗರಿ: "ಶಿಖಂಡಃ, ಪಿಂಛಂ, ಬರ್ಹಂ -ಈ ಮೂಱು ನವಿಲ ಸೋಗೆ" (ನಾಚಿರಾ. ೧೧೫); "ಕಲಾಪಃ-ನವಿಲ ಸೋಗೆ" (ಓಷಧಿ. ೩೦). **ನವಿಲುತುಪ್ಪ** = ನವಿಲಿನ ಕೊಬ್ಬು : ವಾಯು ನೋವಿಗೆ ನವಿಲುತುಪ್ಪ ಒಳ್ಳೆಯದು (ರೂಢಿ). [ **ದೇಶ. ತಮಿ.** ಇಮಲಿ ; **ತುಳು.** ನೆಯಿಲು ; **ತೆಲು.** ನಮಲಿ, ನೆಮಳಿ, ನೆಮಲಿ ; **ಕೊಲಾ.** ನಮ್ಲಿ, ನಮ್ಲಿ, ಲಮ್ನಿ; **ನಾಯ್ಕಿ.** ನಮ್ಲಿ, ಲಮ್ಲಿ ]

**ನವಿಲಗುಂದ** 'ನವಿಲ್ಗುಂದ' ನೋ.

**ನವಿಲಚ್ಚು** (ನಾ). ನವಿಲಿನ ಮುದ್ರೆ,–ಗುರುತು : ಚಿಕ್ಕ ಮಾದೋಜನುಂ ಶ್ರೀಸ್ವಾಮಿದೇವರ ನವಿಲಚ್ಚಿನ ಪೊನ್ನಂ ಲೊಕ್ಕಿಯ ಪೊನ್ನಾಣೆಯು(ಂ) ಮಾಪೊನ್ನ ತೂಕಮುವಾಗಿ ಪೊಯ್ದು ಸಲಿಸುವರು (ಸಾಇಇ. IX-I, ೧೬೪-೨೫ ; 1098). [ ನವಿಲ್ + ಅಚ್ಚು$_3$ ]

**ನವಿಲಡಿ, ನವಿಲಾಡಿ** (ನಾ). ಒಂದು ಬಗೆಯ ಮರ: "ನವಿಲಡಿ ಮಯೂರ ಪದಿಯಕ್ಕು" (ಮಂಗರಾ. ೩೫-೧೫) ; ನವಿಲಡಿ ಹೊನ್ನೆ (ರೇವಣ. ೩೬-೧೩). **ನವಿಲಾಡಿ :** ಮರಗಳು: ಹೆಸವ, ಹೆಬ್ಬಲಸು . . , ಆಳಲೆ, ಹುಲುವೆ, ಹುನ್ನಲು, ಮತ್ತಿ, ನವಿಲಾಡಿ. ಜಂಬೆ (ನಮ್ಮನು. ೨೩೬).

**ನವಿಲಡಿಯ ಮರ** = ನವಿಲಡಿ : "ಮಯೂರಜಂಘಃ – ನವಿಲಡಿಯ ಮರ ಹೆಮ್ಮರ," (ಓಷಧಿ. ೧೨೨). [ ನವಿಲ್ + ಅಡಿ$_1$ ]

**ನವಿಲಾಟ** (ನಾ). ನವಿಲಿನ ಕುಣಿತ ; ಕೇಕಿನರ್ತನ : ನವಿಲಾಟಂ ಸೊಗ ಯಿಸುವುದು ವಿವೇಕಿಯಪ್ಪಂಗೆ ನಾಯ್ಗೆ ಸೊಗಯಿಸುವುದೆ (ಧರ್ಮಾಮೃ. ೧-೪೭) ; ನವಿಲಾಟಂ ಹಂಸೆಯ ನಡೆ ತವೆ ಮಂದಾನಿಳನ ಸುಗತಿ . . . ತವತವಗಡಂಗುತಿರ್ದುವು ನವೀನಬಾಲಕಿಯ ಮಧುರಮೃದುಪದಗತಿಯೊಳ್ (ಗಿರಿಕ. ೩-೧೧೮). [ ನವಿಲ್ + ಆಟ ]

**ನವಿಲಾಡಿ** 'ನವಿಲಡಿ' ನೋ.

**ನವಿಲು** 'ನವಿಲ್' ನೋ.

**ನವಿಲುಕೋಸು** (ನಾ). ಅಡಿಗೆಗೆ ಉಪಯೋಗಿಸುವ ಒಂದು ಬಗೆಯ ಗಡ್ಡೆ ; ನವಿಲುಕೋಲು : ಇದು ಕೋಸುಗಡ್ಡೆಯ ಜಾತಿಗೆ ಸೇರಿದ ತರಕಾರಿ . . . ಅರ್ಧ, ಮುಕ್ಕಾಲು ಅಡಿಗೋಂದರಂತೆ ನವಿಲುಕೋಸನ್ನು ಬೆಳೆಯಲಾಗುವುದು (ತರಬೆ. ೪೮). 'ನವಿಲ್ಕೋಲ್' ಪರಾ. [←ಲ್ಯಾಟಿನ್. ಫ್ರೆಂಚ್. ಜರ್ಮನ್. Knol khol]

**ನವಿಲುಗರಿ** (ನಾ). ೧. ನವಿಲಿನ ಪುಕ್ಕ,-ಗರಿ ; ಬರ್ಹ. ೨. ಸೋಗೆ : ನವಿಲುಗರಿ ಬೀಸಣಿಗೆಯನ್ನು ಉಪಯೋಗಿಸುವುದರಿಂದ ವಾತಹರವಾಗಿ ಬಲವಾಗಿ ಮಂಡೆಯ ಕೂದಲಿಗೆ ಹಿತವಾಗಿ ಉಷ್ಣಕರವಾಗಿರುವುದು (ಸಕಳವೈ. ೩೭). [ನವಿಲು (<ನವಿಲ್) + ಗರಿ (<ಗಱಿ)]

**ನವಿಲುಗುಂದ** 'ನವಿಲ್ಗುಂದ' ನೋ.

**ನವಿಲುಜುಟ್ಟು** (ನಾ). ನವಿಲಿನ ತಲೆಯ ಮೇಲಿರುವ ಕೊಟ್ಟು,-ತುರಾಯಿ,—ಶಿಖೆ : (+). [ನವಿಲು (<ನವಿಲ್) + ಜುಟ್ಟು]

**ನವಿಲುದೊಂದಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ನವಿಲುದೊಂದಿ ಹುಲ್ಲು, ಸಣ್ಣಹಂಚೀಹುಲ್ಲು, ದೊಡ್ಡಕರೇಕಂದಕಹುಲ್ಲು (ಮೈಜಿಗಿ. ೭೩-೧೪೬೯). [ನವಿಲುದೊಂದಿ + ಹುಲ್ಲು (< ಪುಲ್)]

**ನವಿಲುಪುಕ್ಕ** (ನಾ). = ನವಿಲುಗರಿ ೧ : (+). [ನವಿಲು (<ನವಿಲ್) + ಪುಕ್ಕ$_2$ (<ಪುಚ್ಛ$_2$)]

**ನವಿಲುಬಣ್ಣದ ಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೈಜಿಗಿ. ೫೩-೧೧೭೭). [ನವಿಲು (<ನವಿಲ್) + ಬಣ್ಣ + ಹುಲ್ಲು (<ಪುಲ್)]

**ನವಿಲುಬಾಲದ ಗಿಡ** (ನಾ). ಒಂದು ಬಗೆಯ ಗಿಡ : ನವಿಲುಬಾಲದ ಗಿಡ, ಫೆರ್ನ್ಸ್ (ಮೈಜಿಗಿ. ೩-೪೪). [ನವಿಲು (<ನವಿಲ್) + ಬಾಲ$_1$ + ಗಿಡ (<ಗಿಡು)]

**ನವಿಲುಮೆಟ್ಟಿನ ಪಲ್ಯ** (ನಾ). ಅಡಿಗೆ ಮಾಡಲು ಬಳಸುವ ಒಂದು ಬಗೆಯ ಸೊಪ್ಪು :(+). [ನವಿಲು (<ನವಿಲ್) + ಮೆಟ್ಟು ? + ಪಲ್ಯ$_1$]

**ನವಿಲುಯಾಲೆ** 'ನವಿಲುಯ್ಯಾಲ್' ನೋ.

**ನವಿಲುಯ್ಯಾಲ್,** ನವಿಲುಯಾಲೆ, ನವಿಲುಯ್ಯಾಲು, ನವಿಲುಯ್ಯಲೆ, ನವಿಲುಯ್ಯಾಲೆ (ನಾ). ನವಿಲಿನಾಕಾರದ ತೂಗುಮಣೆ,-ಉಯ್ಯಾಲೆ, – ಜೋಕಾಲಿ : ಮದನ ಮಂಗಳಾಗಾರದ್ವಾರಮಕರ ತೋರಣದಂತಿರ್ದ ನವಿಲುಯ್ಯಾಲ ಕೆಲಕ್ಕೆ ವಂದು (ಚಂದ್ರಪ. ೮-೪೫ ವ) ; ಅನೇಕ ನವೀನರತ್ನಮಯದರ್ಪಣಕನಕಕಳಶವಿಚಿತ್ರಪತ್ರಪರಿಶೋಭಿತಮಾಗಿ ನವೀನಕ್ರೀಡೆ ತವಿಲ್ಲದ ನವಿಲುಯ್ಯಾಲ ಮುಂದೊರ್ವ ವಿದಗ್ಧವನಿತೆ . . . ಮಂದಯ್ಸಿದ ಸತಿಯರ ಸಂದಣಿಯೊಳಾಂದೋಳಮನೇಱಿದಾಗಳ್ (೧ರಿಕ. ೪-೧೫೭ ವ). **ನವಿಲುಯಾಲೆ :** ಸೇನಬೋವ[ರ ಮಗ] ತಿಂಮಂಣ ಗ್ರಾಮದ ಸಮಸ್ತರು ದೇವರಿಗೆ ನವಿಲುಯಾಲೆಯ ಕಂಭವ ನಿಲಿಸಿದರು (ಕಇ. IV, ೭-೭ ; 16ನೆಯ ಶತ). **ನವಿಲುಯ್ಯಾಲು :** ಖೇಡಾಕುಳಿಯ ಕೆಲದೆ ಮಾಡುಮೆಟ್ಟುಗಳಾಡುವ ನವಿಲುಯ್ಯಾಲುಗಳು . . . ಗಾನವ ಮಾಡುವ ಮಂದಿರವಿಹವು (ಅಂಜಚ. ೩-೩೭) ; ಮಾಡಿಸಿದ ದ್ವರ್ಮ್ಮ ದೇವಲ್ಯದ ಮುಂದಣ ಅದಿಷ್ಟಣ ಮುಱುನೆಲೆಯ ಉಪ್ಪರಿಗೆ ಕಲ್ಲ ನವಿಲುಯ್ಯಾಲು ಮೇಲಣ ಸಿಖರವು (ಮೈಆರಿ. ೧೯೩೯, ೪-೬ ; 1355) ; ಆ ನಲ್ಲರಾಟವಿದ್ದುದು ನವಿಲುಯ್ಯಾಲ ತಾನೇಱಿ ತೂಗಾಡಿದಂತೆ (ಭರಚ. ೧೧-೧೨೭) ; ಬಾನೆಡೆಯೊಳಗಿಹ ಚಂದ್ರನೆನ್ನಯ ಮೊಗಕಾನಲಾಪನೆಯೆಂದು ಜಱಿದು ತಾನೊದೆವವೊಲು ನವಿಲುಯ್ಯಾಲನಾಡುವ ಮಾನಿನಿಯೊರ್ವ ಳೊಪ್ಪಿದಳು (ಕಂಸವಿ. ೨-೯೩). **ನವಿಲುಯ್ಯಲೆ :** ಕಾಲಾಂತಕನ ದಂಷ್ಟ್ರಾಳಿಯಲಿ ನವಿಲುಯ್ಯಲೆಯ ನೀವಾಡಲಾಪಿರಲೆ (ಕುವ್ಯಾಸ. ೧೪-೩೦). **ನವಿಲುಯ್ಯಾಲೆ :** ಘನತರವಹ ನವಿಲುಯ್ಯಾಲೆಗಳಿಂದಲನಿಮಿಷಪುರವ ಪೋಲ್ತಿಹುದು (ಕಂಸವಿ. ೨-೭೧) ; ಬಿತ್ತರವಹ ಮಿಸುನಿಯ ನವಿಲುಯ್ಯಾಲೆ ಯಿತ್ತುವು ಕಣ್ಗೆ ಕೌತುಕವ (ಕಂಸವಿ. ೭-೮). [ನವಿಲ್ + ಉಯ್ಯಾಲ್]

**ನವಿಲುಯ್ಯಾಲು** 'ನವಿಲ್ಯುಯ್ಯಾಲ್' ನೋ.

**ನವಿಲುಯ್ಯಲೆ** 'ನವಿಲುಯ್ಯಾಲ್' ನೋ.

**ನವಿಲುಯ್ಯಾಲೆ** 'ನವಿಲುಯ್ಯಾಲ್' ನೋ.

**ನವಿಲೂರ್,** ನವಿಲೂರು (ನಾ) ಒಂದು ಊರಿನ ಹೆಸರು; ಈಗಿನ ಧಾರವಾಡಜಿಲ್ಲೆಯ ನವಲೂರು : ನವಿಲೂರ ನಾಲ್ಗಾಮುಣ್ಡರು ಬೆಳ್ಗೊಳದ ಗೋವಿಂದಪಾಡಿಯಲು (ಎಕ. II, ೩೫-೮ ; ಸು. 800) ; ನವಿಲೂರ ಸೀಮೆಯಿಂ ಬಡಗಲು (ಎಇ. XIII, ೩೦೯-೧೧೪ ; 1125). **ನವಿಲೂರು :** ಮೂಗುರು ಸೀಮೆಯ ತಾಯೂರ ಸ್ಥಳದ ತಾಯೂರ ಗ್ರಾ [ಮ] ೧ ಯಿಶ್ವರಗೋಡನ ಹಳ್ಳಿ ೧ . . . ನವಿಲೂರು ೧ ಬೆಳುಗುಂದ ೧ . . . ಯೆಲವನೂ ನಿನ್ನ ಮಗ ತಿರುಮಲರಾಜನಾಯಕಗೆ ಪಲಕಿಯ ಉಂಬಳಿಗೆ ಗೊಡಗೆಯಾಗಿ ಕೊಟೆವಾಗಿ (ಎಕ. III (R), ನಂಜನ. ೨೦೮-೧೩ ; 1586) ;ಯಲ್ಲಿಗೆ ತಾಗಿ ನವಿಲೂರೆಲ್ಲೆ ಯೆಡಕಿಕ್ಕೆ . . . ಈಶಾನ್ಯದಲ್ಲಿ ನೆಟ್ಟ ಕಲ್ಲ ಕೂಡಿತು (ಎಕ. III (R), ನಂಜನ. ೨೧೨-೧೪೨ ; 1639).

ನವಿಲೂರ ಗಣ = ಜೈನಯತಿಗಳ ಒಂದು ಶಾಖೆ : ನವಿಲೂರ ಗಣದ ಬಾಳಂಬಾ ಕನ್ತಿಯರ ಮಗಳ್ ವಿಜಕ್ಕಂ (ಎಕ. VI, ಕಡೂರು. ೧೫೯-೦೨ ; 961). [ನವಿಲ್$_0$ + ಊರ್]

**ನವಿಲೂರು** 'ನವಿಲೂರ್' ನೋ.

**ನವಿಲೂರ್ಸಂಘ** (ನಾ). ಜೈನಯತಿಗಳ ಒಂದು ಶಾಖೆ : ಸ್ವಸ್ತಿ ಶ್ರೀಮತ ನವಿಲೂರ್ಸಂಘದ ಪುಷ್ಪಸೇನಾಚಾರಿ × × × ಯ ನಿಸಿಧಿಗೆ (ಎಕ. II (R), ೧೦೮-೧ ; ?). [ನವಿಲೂರ್ + ಸಂಘ]

**ನವಿಲೆ$_1$** 'ನವಿಲ್' ನೋ.

**ನವಿಲೆ$_2$** (ನಾ). ೧. ಒಂದು ಊರಿನ ಹೆಸರು : ಆ ಕಂಪಣದ ಬಳಿಯ ನವಿಲೆಯಲೆ ಬೆಳ್ದಲೆ ಮತ್ತರ್ ೨ . . . ಇನಿತುಮಂ ಪ್ರತಿಪಾಳಿಸುವರ್ (ಎಕ. VII, ಶಿಕಾರಿ. ೨೦-೨೨ ; 1032). ೨. ರಾಯಚೂರುಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ ಈಗಿನ 'ನವಲಿ' ಎಂಬ ಊರು : ನವಿಲೆಯ (ಜಟೆ)ಯ ಸಂಕರದೇವಾಲಯಮುಮಂ . . . ಪೊಸತಾಗೆ ಪಡಿ (ಸಲಿಸಿ) (ಸಾಇಇ. XI-i, ೧೦೩-೨೭ ; 1068 ?). [ ? ]

**ನವಿಲೆನಾಡು,** ನವಲೆನಾಡು (ನಾ). ೧. ಒಂದು ಊರಿನ ಹೆಸರು : ನುಗುನಾಡಧಿಪತಿ ರವಿಗನ ಮಗಳಾಗಿಯುಮನ್ತೆ ನವಿಲೆನಾಡಧಿಪತಿಗಾಂ ನೆಗಳೆ ಸತಿಯಾಗಿ ಬಾಟ್ಟುದು ಎಗೆದಪ್ಪೆನೆ ಕೊಟ್ಟ ಕೊಣ್ಡು ಮನೆಯೆಸ ಮಱಿಯಲ್ ಎನ್ದು . . ಕಯ್ಯುಗಿದುರಿವುರಿಯಂ ಪೊಕ್ಕು ದೇಕಬ್ಬೆ ತನ್ನಂ ಧರೆಯಲ್ಲಂ ಮೆಚ್ಚೆ ನಿಚ್ಚಂ ಪೊಗಳೆ ನೆಗಟುತುಂ ದೇವಲೋಕಕ್ಕೆ ಪೋದಳ್ (ಎಕ. III (R), ಹೆಗ್ಗಡ. ೬೦-೨೩ ; 1057). **ನವಲೆನಾಡು :** ೨. ಹೆಗ್ಗಡ ದೇವನ ಕೋಟೆಯ ಬಳಿ ಇರುವ ಒಂದು ಪ್ರಾಂತದ ಹೆಸರು : ಶ್ರೀಮದೆಱೆಪ್ಪರಸರ್ ನುಗುನಾಡು ನವಲೆನಾಡುಮಾನಾಳುತ್ತಮಿರೆ (ಎಕ. IV, ಹೆಗ್ಗಡ. ೧೦೩-೬ ; ಸು. 910) ; ವೀರಂ ನವಲೆನಾಡಧಿಪತಿ ಕುಱುವನ್ದಗಲದ ಪೆರ್ಮ್ಮಯಲಾತಂ (ಎಇ. VI, ೨೧೭-೧೮ ; 1057). [ನವಿಲೆ$_2$ + ನಾಡು]

**ನವಿಲ್ಕೋಲ್** (ನಾ). = ನವಿಲುಕೋಸು: (ಮೈಜಿಗಿ. ೧೪-೨೫೨). [←ಲ್ಯಾಟಿನ್. ಫ್ರೆಂಚ್. ಜರ್ಮನ್. knol khol]

**ನವಿಲ್ಗುಂಚ** (ನಾ). ನವಿಲುಗರಿಯ ಕಂಚ್ಚು, -ಕುಂಚ : ನವಿಲ್ಗುಂಚ ಚೌರಿಯ ಉಭಯಪಕ್ಷದೊಳು ನಿಂದು ಸೋವುತ್ತಿರಲು (ನವಮೋ. ೨೫-೩೦). [ನವಿಲ್ + ಕುಂಚ]

**ನವಿಲ್ಗುಂದ,** ನವಿಲಗುಂದ, ನವಿಲುಗುಂದ (ನಾ). ಒಂದು ಊರಿನ ಹೆಸರು; P ಈಗಿನ ಧಾರವಾಡಜಿಲ್ಲೆಯ ನವಿಲ್ಗುಂದ : ಕಿಂಚನೆಂಬೋ ನಿಳಾ ಮಹಿತಂ ವೀರನರ್ಸಿಸುತನಿನುದಾರ[ಂ] ಪಿಡಿದಡಸಿ ನವಿಲಕೊಸ್ದಡಿಗ[ಡೆ] ತಳ್ತಿಕ್ಕಿ ಬೇಡವಡೆಯುಂ ಬಲ್ಲಾಳ್ಪಡೆದು ಬೆಳ್ವಲಮಂ ನೋಳ್ಪ[ಡೆ]ಮುನ್ನಂ ಬಳಿಕ್ಕೆ ನೆಲೆ ನವಿಲ್ಗುನ್ದಪುರಂ (ಸೌಇಇ. XI-1 ೪೩-೪ ; 980). **ನವಿಲಗುಂದ:** ಪುತ್ರೋ ನವಿಲಗುಂದ ಶ್ರೀತಿಮ್ಮಯೇಂದ್ರಸ್ಯ ನಂದನಃ (ಎಕ. XII, ತುಪುಕೊ. ೧-೨೦೭ : 1571). **ನವಿಲುಗುಂದ:** ದೊಡ್ಡವಾಡ ನವಿಲುಗುಂದ ನಾಲ್ವತ್ತು (ಇಇ. XII, ೯೭-೨೫ ; 1187). [ < ನವಿಲ್$_2$ + ಕುಂದ$_3$ ]

**ನವಿಲ್ಗುಂದಗೋಲು** (ನಾ). ನವಿಲುಗುಂದದ ಕಡೆಯ ಅಳತೆಯ ಕೋಲು : ನವಿಲ್ಗುಂದಗೋಲಿನಲಳೆದು ಸರ್ವ್ವನಮಸ್ಯವಾಗಿ ಕೊಟ್ಟ ಕೆಯಿ ಮತ್ತನ್ನಾಲ್ಕು (ಸೌಇಇ. XX, ೨೧೮-೭೭ : 1228).
[ ನವಿಲ್ಗುಂದ + ಕೋಲು$_1$ (<ಕೋಲ್$_1$) ]

**ನವಿಲ್ದೇರ** (ನಾ). ನವಿಲನ್ನು ವಾಹನವಾಗಿ ಉಳ್ಳವನು ; ಷಣ್ಮುಖ : "ನವಿಲ್ದೇರಂ, ಮುಯ್ಯೊರ್ಮೊಗಂ, (ಅಱುಮೊಗಂ), ಮರಗೂಟಿಮಗಂ– ಈ ೪ ಕಾರ್ತಿಕೇಯಂಗೆ ಪೆಸರ್" (ಕಶಸಾ. ೪೭-೫) ; "ಕುಮರಂ ಮರಗೂಟಿ ಮಗಂ ನವಿಲ್ದೇರಂ ಬಗೆಯಲಱುಮೊಗಂ ತಾನೆನ್ನಲ್ ... ಅಭಿಧಾನಂಗಳ್ ಕವಿವರರಿಂ ಷಣ್ಮುಖಂಗಮುರ್ವ್ವು" (ಕವಿಕಂ. ೨೦). [ ನವಿಲ್ದೇರು + – ಅ$_7$ ]

**ನವಿಲ್ದೇರು** (ನಾ). ನವಿಲಿನ ವಾಹನ. 'ನವಿಲ್ದೇರ' ಪರಾ.
[ ನವಿಲ್ +ತೇರು$_2$ (<ತೇರ್$_2$) ]

**ನವಿಲ್ಮುಡಿ** (ನಾ). ತುರುಬುಗಳಲ್ಲಿ ಒಂದು ವಿನ್ಯಾಸ ; ನವಿಲುಗರಿಯ ಆಕಾರದಂತೆ ಕೂದಲನ್ನು ಇಳಿಬಿಟ್ಟು ಕಟ್ಟಿದ ಮುಡಿ : ಜಟಾಗ್ರದೊಳು ವಿಧು ನವ್ಯಮೂರ್ತಿ ಮಂದಾಕಿನಿಯ ಪಟ್ಟದ ನವಿಲ್ಮುಡಿಯ ತೋಱಿಸಿದ (ಮೋಹತ. ೨೦-೭೧) ; ಬಳಲುಮುಡಿ ಬಲ್ಮುಡಿಯು ಸೋಲ್ಮುಡಿಯು ಜೋಲ್ಮುಡಿಯು ನಲಿವ ನವಿಲ್ಮುಡಿ ವಾರೆಮುಡಿ ಒಲು ಪಿನಮುಳಮುಡಿಗಳಲಿ ಬರುತಿರ್ದರು (ನವಮೋ. ೨೪-೧೮).
[ ನವಿಲ್ + ಮುಡಿ$_3$ ]

**ನವಿಲ್ವಾಣತಿ** (ನಾ). ಹೊಸ ಮರಿಗಳನ್ನುಳ್ಳ ನವಿಲು; ಬಾಣಂತಿಯಾದ ನವಿಲು: ನವಿಲ್ವಾಣತಿಯ ಬೆನ್ನನೇಱಿ ಮಂಡೆಯ ಚುಂಡಿಕೆಯುಂ ಕರ್ಚಿ ಸೆಳೆವ ಸೋಗೆಯ ಮಱಿಯ ಮುದ್ದುತನಮಂ (ಅರ್ಧನೇ. ೦-೯೩ ವ).
[ ನವಿಲ್ + ಬಾಣತಿ ]

**ನವೀಕರಣ** (ನಾ). (ಹಳೆಯದನ್ನು) ಹೊಸತು ಮಾಡುವುದು ; ಹೊಸ ಸತ್ತ್ವವನ್ನು ತುಂಬುವುದು: ಅತಿವೈದ್ಯದಿಂದ ಹೊಸರುಜಿನಕೆಡೆಯಾದೀತೊ ಮಿತಿಯಿಂ ನವೀಕರಣ (ಮಂಕುಕ. ೮೭೭); ಈ ಉತ್ಸವವು ಕನ್ನಡ ಭಾಷೆಯ ನವೀಕರಣ ಪ್ರಯತ್ನದ ಒಂದು ರೂಪ (ಸಾಹಿಶ. ೫೮). [ ಸಂ. ]

**ನವೀಕರಿಸು** (ಕ್ರಿ). ೧. "ಮೊದಲಿನ ಸ್ಥಿತಿಗೆ ತರು; ಹೊಸದು ಹೇಗೊ ಹಾಗೆ ಕಾಣುವಂತೆ ಮಾಡು ; ನವೀಕರಿಸು ; ಜೀರ್ಣೊದ್ಧಾರ ಮಾಡು . . . ಪುನರುಜ್ಜೀವನಗೊಳಿಸು" (Renew. ಇಂಕನಿ). ೨. ಹೊಸದಾಗಿ ಮಾಡಿಸು; ಹೊಸತುಗೊಳಿಸು : ಸಾಹಿತ್ಯಪರಿಷತ್ತಿನಲ್ಲಿ ನನ್ನ ಸದಸ್ಯತ್ವವನ್ನು ನವೀಕರಿಸಬೇಕು (ರೂಢಿ).
[ ನವೀಕರಣ + – ಇಸು$_3$ ]

**ನವೀಕೃತ** (ಗು). ಜೀರ್ಣೋದ್ಧಾರ ಮಾಡಿದ: ನವೀಕೃತಮಪ್ಪ ಬಂದಣಿಕೆಯ ತೀರ್ಥ (ಎಕ. VII, ಶಿಕಾರಿ. ೨೨೦-೨೮ ; 1075). [ ಸಂ. ]

**ನವೀನ** (ಗು). ೧. ಹೊಸತಾದ ; ನೂತನವಾದ : "ನವ್ಯಂ, ನವಂ, ನವೀನಂ, ನೂತನಂ, ಅಭಿನವಂ, ನೂತ್ನಂ–ಈ ೬ ಪೊ(ಹೊ)ಸತು" (ಹಲಾಯು. ೧೧೮-೨೬): ಅಬ್ಜಮಂ ಬಿಸುಟತತ್ಯುತ್ತಮವಿಂತುಟೆಂದು ಪಿರಿದುಂ ಸಂತೋಷದಿಂ ವಾಣಿ ಬಂದು ಸಮಂತಿರ್ಕೆ ನವೀನಸೌರಭದವೋಲ್ ಜಿಹ್ವಾಗ್ರದೊಳ್ ರುದ್ರನಾ (ಜಗವಿ. ೧-೭) ; ಕಂಡಂ ಕೃಷ್ಣಾಜಿನ ದರ್ಭ ನವೀನ ವಿಷ್ಟರಾಸೀನರಂ (ವಿಷ್ಣುಪು. ೩-೩೯) ; ಹಂತಿಯ ಹಾಡುಗಳಲ್ಲಿ ಬರುವ ವರ್ಣನೆಗಳು ನವೀನವಾಗಿಯೂ ಅತ್ಯಂತ ಹೃದಯಂಗಮವಾಗಿಯೂ ಇವೆ (ಕನ್ನಜಾ. ೨೦೦). ೨. ಇತ್ತೀಚಿನ ; ಆಧುನಿಕ : ನಾಡಿನ ಪುಣ್ಯದ ಪೂರ್ವ ದಿಗಂತದಿ ನವ ಅರುಣೋದಯ ಹೊಮ್ಮುತಿದೆ ! ಚಿರನೂತನ ಚೇತನ ದುತ್ಸಾಹದಿ ನವೀನ ಜೀವನ ಚಿಮ್ಮುತಿದೆ ! (ಕನ್ನಬಾ. ೦೬೧): ನವೀನ ನಾಗರಿಕತೆಯೊಂದರ ಇರವು ಪ್ರಕಾಶಕ್ಕೆ ಬಂದಿತು (ದ್ರಾವಿ. ೨೨). [ ಸಂ. ]

**ನವೀನಚೀನ** (ನಾ). ಹೊಸಬಗೆಯ ರೇಷ್ಮೆಯ ವಸ್ತ್ರ : ಪಡೆದನುಡಲ್ ನೃಪಂ ಸತಿಯ ಮೆಯ್ವೊಳಗೆಂಬ ನವೀನಚೀನಮಂ (ಚಂದ್ರಪು. ೭-೭೭).
[ ನವೀನ + ಚೀನ$_1$ ]

**ನವೀನತರ್ಕ** (ನಾ). ತಾರ್ಕಿಕ ದರ್ಶನದಲ್ಲಿ ಹೊಸಪಂಥ : ಈ ತರ್ಕಶಾಸ್ತ್ರದಲ್ಲಿ ಪ್ರಾಚೀನತರ್ಕ ನವೀನತರ್ಕ ಎಂಬ ಎರಡು ವಿಭಾಗವಿರುವುದು (ಹಿಂದಸಾ. ೦೦೩). [ ನವೀನ + ತರ್ಕ ]

**ನವೀನತೆ** (ನಾ). ಹೊಸತನ ; ಆಧುನಿಕತೆ : ಜೀವನದ ವಿವಿಧ ಕ್ಷೇತ್ರಗಳಲ್ಲಿ ನವೀನತೆ ತಲೆದೋರಿದೆ (ಶಿಕ್ಷದ. ೭). [ ಸಂ. ನವೀನತಾ ]

**ನವೀನಪ್ರಜ್ಞೆ** (ನಾ). ಹೊಸಪ್ರಜ್ಞೆ ; ಆಧುನಿಕ ಪ್ರಜ್ಞೆ ; ಇತ್ತೀಚಿನ ಆಗುಹೋಗುಗಳ ಅರಿವು ; ಸಮಕಾಲೀನತೆಯ ಅರಿವು : ಇದು ನವೀನಪ್ರಜ್ಞೆಯಲ್ಲಿ ಬರೆದ ಶ್ರೇಷ್ಠಕತೆಗಳ ಪ್ರಾತಿನಿಧಿಕ ಸಂಗ್ರಹವೇನಲ್ಲ (ಹೊಸಕ್ಕ. ೨೯೭). [ ನವೀನ + ಪ್ರಜ್ಞೆ ]

**ನವೀನವೇದಾಂತಿ** (ನಾ). ವೇದಾಂತದರ್ಶನದಲ್ಲಿ ಹೊಸಪಂಥಕ್ಕೆ ಸೇರಿದವನು : ಈ ಮಾರ್ಗವನ್ನೇ ಪ್ರಾಯಶಃ . . . ಭರ್ತೃಪ್ರಪಂಚ, ಮೊದಲಾದ ಪ್ರಾಚೀನವೇದಾಂತಿಗಳೂ ಭಾಸ್ಕರ, ಯಾದವಪ್ರಕಾಶ ಮೊದಲಾದ ನವೀನವೇದಾಂತಿಗಳೂ ಆಶ್ರಯಿಸಿರುವರು (ಹಿಂದಸಾ. ೦೮೯).
[ ನವೀನ + ವೇದಾಂತಿ ]

**ನವುಕರ** 'ನೌಕರ' ನೋ.

**ನವುಕರಿ** 'ನೌಕರಿ' ನೋ.

**ನವುಟು** (ನಾ). (ಕರಾ). ೧. ಬತ್ತದ ಸಸಿಗೆ ತಗಲುವ ಒಂದು ಬಗೆಯ ಹುಳು. ೨. ಬಹಳ ಹುಳಿ. [ ? ]

**ನವುಬತ್ತು** 'ನೌಬತ್ತು' ನೋ.

**ನವುರು** 'ನವಿರು$_3$' ನೋ.

**ನವುರುಕಟ್ಟೆ** (ನಾ). ಒಂದು ಬಗೆಯ ಗಿಡ : (ವೃಜಿಗಿ. ४०-೭೮४). [ ? ]

**ನವುಲಾದಿ** (ನಾ). ಒಂದು ಬಗೆಯ ಗಿಡ : ನವುಲಾದಿ, ಮೈರೊಳೆ, ಭರಣಗೆ (ವೃಜಿಗಿ. ೭೮-೧೫೭). [ ? ]

**ನವುಲೆ$_1$** (ನಾ). ಒಂದು ಬಗೆಯ ಗಿಡ ; ತಪಸೀಗಿಡ. 'ನವುಲೆಗಿಡ' ಪರಾ. [ ? ]

**ನವುಲೆ$_2$** (ನಾ). (?) : ಪಂಟೋನೀಲಗಂಗೆ ಅಂಬಟಗಂಗೆ ದೇವಕಿಪಯನ್ನೆಸೆ ಸತಿ ನವುಲೆಗಳೂ (ದೇವಾಂಪು. ೯ ೩೦). [ ? ]

**ನವುಲೆಗಿಡ** (ನಾ).=ನವುಲೆ$_1$ : "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಕಾರಕಃ – ೪ ತಪಸೀಗಿಡದ ಹೆಸರು, ನವು [ಶಾಕಾಂ. ನೌ]ಲೇ ಗಿಡವೆಂದು ಕೆಲವರನ್ನುವರು" (ಸಿದ್ಧಾಂತಿ. ೦೦೮). [ ನವುಲೆ$_1$ + ಗಿಡ (<ಗಿಡು) ]

**ನವೆ$_1$** 'ನಮೆ$_1$' ನೋ.

**ನವೆ$_2$** 'ನಮೆ$_2$' ನೋ.

**ನವೆತ** (ನಾ). ಸೊರಗುವಿಕೆ ; ಕ್ಷಯಿಸುವಿಕೆ ; ಕ್ಷಯ : ಕ್ಷೀ – ಕ್ಷಯೇ, ನವೆತದೊಳ್ (ಕಾಶಕ್ಕ. ೦೪) ; ಸಣ್ಣಾಗುತ್ತ ನವೆಯುತ್ತ ನಡೆದಿದ್ದರು . . . ಇವರ ಅಭಯದಿಂದ ಅವರ ಚಿಂತೆ, ನವೆತ ಅಟ್ಟಿಸುವಂತಿರಲಿಲ್ಲ (ದೀಪಹ. II, ४೭). [ ನವೆ$_1$ (<ನಮೆ$_1$) + – ತ$_2$ ]

**ನವೆಸು** 'ನವೆಯಿಸು' ನೋ.

**ನವೋಢೆ** (ನಾ). ನವವಧು : ಭಂದಾರೂಢಾ ನವೋಢಾ ಮುಗ್ಧಾ, ರಸಿಕಾ, ಅನೂನ ಧ್ವನಿತಪ್ರಾಣಾ (ಸೂರ್ಯಪಾ. ೬-೬); ನವಿಲುಗರಿಯ ಕರ್ಣಪೂರದಿಂದ ಶೋಭಿಸುವ ಮತ್ತು ನವೋಢೆಯಾದ ಬೇಡರ ಯುವತಿಯೊಬ್ಬಳ ಸೌಭಾಗ್ಯಾತಿಶಯವು ಧ್ವನಿತವಾಗುತ್ತದೆ (ಧ್ವನ್ಯಾಲೋ. ೧೩೪).
[ಸಂ. ನವೋಢಾ ]

**ನವೋತ್ಪಲ** (ನಾ). ಹೊಸದಾಗಿ ಅರಳಿದ ಕನ್ನೈದಿಲೆ : ಪರಿಮಳಕೊಯ್ಯ ನಾವರಿಪ ತುಂಬಿ ಮುಗಿಲ್ಗಣಿಕಾವಿಲಾಸಮಂದಿರ ಚಲದಗ್ರಘಂಟೆಯುಲಿ ಮೇಘರವಂ ಪಣಭಾಮಿನೀವಿಲೋಲರುಚಿರಕರ್ಣಪತ್ರರುಚಿ ಮಿಂಚು ನವೋತ್ಪಲ ನಿರ್ಗಮತ್ತಸೂನರಸ ರಸಕಣಾಳಿವೃಷ್ಟಿಯೆನೆ ಕಾರವೊಲೊಪ್ಪಿದು ದಲ್ಲಿ ತಣ್ಣೆಲರ್ (ಯಾದಚಂ. ೩-೭೮). [ ನವ$_2$ + ಉತ್ಪಲ ]

**ನವೋತ್ಪಲದಲ, ನವೋತ್ಪಳದಳ** (ನಾ). ಹೊಸದಾಗಿ ಅರಳಿದ ಕನ್ನೈದಿಲೆಯ ಎಸಳು : ನವೋತ್ಪಲದಲೇ[ಪಾಠಾಂ. ಳದಳೇ]ಕ್ಷಣೇ ಮನದೊಳಾದ ನಿರ್ವೇಗವೊಂದವಶ್ಯಮದು ಕೂರ್ಪರೊಳ್ ನುಡಿದೊಡ ಲ್ಲದೇಂ ಪೋಕುಮೋ ನಿವೇದಿಸು ನಿಜಾಂತರಂಗಗತಮಪ್ಪುದಂ (ಆದಿಪು. ೩-೩೩).
**ನವೋತ್ಪಳದಳ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ ನವೋತ್ಪಲ + ದಲ ]

**ನವೋತ್ಪಳದಳ** 'ನವೋತ್ಪಲದಲ' ನೋ.

**ನವೋದಬಿಂದು** (ನಾ). ನೀರಿನ ಹೊಸ ಹನಿ ; ಹೊಸ ಮಳೆಹನಿ : ಚಾದಗೆ ನವೋದಬಿಂದುಕಣ ಭಕ್ಷಣವ್ರತನುಜ್ಜಯಿಸಿಯುಂ (ಮಲ್ಲಿಪು. ೮-೧೦೩).
[ ನವ$_2$ + ಉದಬಿಂದು ]

**ನವೋದಯ** (ನಾ). ೧. ಉದಯಂದ ಹೊಸತು,–ಪ್ರಾರಂಭ : ಶಶಿ ಯೊಳ್ ಪ್ರಕಾಶ ಗುಣಮತಿವಿಶದಂ ಸೊಗಯಿಸುವವೊಲ್ ನವೋದಯದೊಳ ವಾಪ್ರಶಮಿತತಮನೊಳ್ ನೆಱೆದುದು ಶಿಶುತೆಯೊಳಂ ನಾಡೆ ರೂಢಿವೆತ್ತ ವಿವೇಕಂ (ಚಂದ್ರಪು. ೩-೧೯). ೨. ಭಾರತೀಯ ಬದುಂಕಿನಲ್ಲಾದ ಉತ್ಕ್ರಾಂತಿಯ ಪರಿಣಾಮವಾಗಿ ಸಾಹಿತ್ಯದಲ್ಲಿ ಉಂಟಾದ ಹೊಸ ತನದ ಆವಿರ್ಭಾವ,–ಹೊಸವಿಚಾರಗಳ ಕ್ರಾಂತಿ : ನಾನಾಮುಖವಾಗಿ ಹಿಂದೀ ಸಾಹಿತ್ಯದ 'ನವೋದಯ'ಕ್ಕೆ ಕಾರಣನಾದ ಸಾಹಿತಿ ಹರಿಶ್ಚಂದ್ರ (ಭಾರದ. ೪೬೫) ; ಶ್ರೀಯವರು . . . ಕನ್ನಡ ಕವನಗಳಿಗೆ ನವೋದಯದ ನಾಂದಿಯನ್ನು ಹಾಡಿದರು (ಭಾವಗೀ. ೨೩೬). [ ನವ$_2$ + ಉದಯ ]

**ನವೋದಯಕಾವ್ಯ** (ನಾ). ಕನ್ನಡ ಸಾಹಿತ್ಯದಲ್ಲಿ ಉಂಟಾದ ಕ್ರಾಂತಿಯ ಪರಿಣಾಮವಾಗಿ ಉಂಟಾದ ಕಾವ್ಯ ; ರಮ್ಯಕಾವ್ಯ ; ಇಂಗ್ಲೀಷಿನ ರೊಮ್ಯಾಂಟಿಕ್ ಪದ್ಧತಿಯನ್ನು ಅನುಸರಿಸಿದ ಕಾವ್ಯ : ಕನ್ನಡದಲ್ಲಿ ಈ ಶತಮಾನದ ಮೊದಲಿನಲ್ಲಾದ ಪರಿವರ್ತನೆಯಿಂದ ಇದನ್ನು ಬೇರ್ಪಡಿಸು ವುದಕ್ಕಾಗಿ, ಅದನ್ನು ನವೋದಯಕಾವ್ಯ ಎಂದು ಕರೆದಂತೆ ಇದನ್ನು ನವ್ಯ ಕಾವ್ಯ ಎಂದಿದ್ದಾರೆ (ಭಾವಗೀ. ೫೦೮). [ ನವೋದಯ + ಕಾವ್ಯ ]

**ನವೋದಯಸಾಹಿತ್ಯ**(ನಾ). ಕನ್ನಡ ಸಾಹಿತ್ಯದಲ್ಲಿ ಉಂಟಾದ ಕ್ರಾಂತಿಯ ಪರಿಣಾಮವಾಗಿ ಉಂಟಾದ ಸಾಹಿತ್ಯ; ಇಂಗ್ಲೀಷಿನ ರೊಮ್ಯಾಂಟಿಕ್ ಪದ್ಧತಿಯನ್ನು ಅನುಸರಿಸಿದ ಸಾಹಿತ್ಯ : ಭಾರತೀಯ ಬದುಕಿನಲ್ಲಾದ ಉತ್ಕ್ರಾಂತಿಯ ಪರಿಣಾಮವಾಗಿ ಸಾಹಿತ್ಯದಲ್ಲಿ ಉಂಟಾದ ಉತ್ಕ್ರಾಂತಿಯಿಂದ ಮೂಡಿದ (ಕನ್ನಡ) ಸಾಹಿತ್ಯವನ್ನು ನವೋದಯ ಸಾಹಿತ್ಯವೆಂದು ಕರೆದರು (ರೂಢಿ). [ ನವೋದಯ + ಸಾಹಿತ್ಯ ]

**ನವೋದಿತ** (ಗು). ಇತ್ತೀಚೆಗೆ ಪ್ರಸಿದ್ಧಿಗೆ ಬಂದ; ಉದಯೋನ್ಮುಖವಾದ: ನವೋದಿತಲೇಖಕರಾದ ದಿನೇಶರು, ತಮ್ಮ ಈ ಕಾದಂಬರಿಗೆ ನಾನೊಂದು ಮುನ್ನುಡಿ ಬರೆಯಬೇಕೆಂದು ಅಪೇಕ್ಷೆಪಟ್ಟಿದ್ದಾರೆ (ದೀಪದ. ೩).
[ ನವ$_2$ + ಉದಿತ$_1$ ]

**ನವೋದ್ಧೃತ** (ನಾ). ಆಗತಾನೇ ಕಡೆದು ತೆಗೆದ ಬೆಣ್ಣೆ ; ನವನೀತ : "ನವನೀತಂ, ನವೋದ್ಧೃತಂ–೨ ಬೆಣ್ಣೆಯ ಪೆಸರುಗಳು" (ಸಿದ್ಧಾಂತಿ. ೨೮೯).
[ ನವ$_2$ + ಉದ್ಧೃತ ]

**ನವೋನವ** (ಗು). ಹೊಚ್ಚಹೊಸದಾದ ; ನಿತ್ಯನೂತನವಾದ : ಎಲ್ಲವೂ ದಿವ್ಯದೃಷ್ಟಿಯಲ್ಲಿ ನವೋನವವಾಗಿ ಕಾಣುವುವು (ಸಮಾಜೀ. ೧೧೧) ; ನನ್ನ ನವೋದಿತ ತಾರುಣ್ಯದ ನವೋನವಪ್ರೇಮ, ನಿಸ್ಸೀಮಭಕ್ತಿ (ಇಪ್ಪಕ. ೨೧೧); ವಿಶ್ವವನ್ನು ನವೋನವವಾದ ರಸೈಕದೃಷ್ಟಿಯಿಂದೊಮ್ಮೆ . . . ಎಷ್ಟೆಷ್ಟು ವಿವೇಚಿಸಿದರೂ . . . ಸೌಖ್ಯ ದೊರೆಯಲಿಲ್ಲ ! (ಧ್ವನ್ಯಾಲೋ. XXVII, ೬೯೮). P ಸಂಸ್ಕೃತದಲ್ಲಿ 'ನವಃ ನವಃ' ಎಂಬಿವು ಭಿನ್ನ ಶಬ್ದಗಳು.
[ <ನವ$_2$ ]

**ನವೋನವತೆ** (ನಾ). ಹೊಚ್ಚಹೊಸತನ : ಹೊಸದೆನ್ನುವದು ಕೃತಿಯ ಗುಣಾವಗುಣವಲ್ಲಷ್ಟೇ ಸೀಮಿತವಾಗಿರುವದಿಲ್ಲ ; ಅಥವಾ ಅದು ಒಳ್ಳೆಯ ಕೃತಿಗಳ ನವೋನವತೆಯೂ ಅಲ್ಲ (ಹೊಸಕ್ಷಿ. ೨೭೮). [ನವೋನವ + – ತೆ$_3$]

**ನವ್ಯ** (ಗು). ೧. ಹೊಸತಾದ; ನವೀನವಾದ : "ನವ್ಯಂ, ನವಂ, ನವೀನಂ, ನೂತನಂ, ಅಭಿನವಂ, ನೂತ್ನಂ – ಈ ೬ ಪೊ(ಹೊ)ಸತು" (ಹಲಾಯು. ೧೧೮-೨೬) ; ನವ್ಯಮೇಘನಿನದಂ ಪೊಣ್ಮಿತ್ತು ರೋದೋಂತದೊಳ್ (ಜಗವಿ. ೪-೮); ತಣ್ಗದಿರ ತೊಂಗಲ ತೋರ್ಕೆಯಡಂಗಿ ತಟ್ಟಿ ತಣ್ಗದಿರ ಪೊದಟ್ಕೆಯುಂ ಕಱಿವ ನವ್ಯಕಳಾವಿಸರು ಮಸುಳ್ದು ಮಾಸಿದ ಮುಕುರಂದ[ ರಾಂಧ ] ದಂತೆ ಗಳಿತಪ್ರಭವಾಯ್ತು ಮೃಗಾಂಕಮಂಡಲಂ (ಶಾಂತೀಶ್ವ. ೧೧-೮೮) ; ಶಚೀಪ ತಿಯುಂ . . . ದೇವಲೋಕದನೇಕ ನವ್ಯದಿವ್ಯಾರ್ಚನೆಗಳಿಂದರ್ಚಿಸಿ (ಪುಷ್ಪಪು. ೧೪-೪೯ ವ). ೨. ಇತ್ತೀಚಿನ ; ಆಧುನಿಕ. (ನಾ). ೩. ಹೊಸತನ ; ನವೀನತೆ : ಕೃತಿಯೊಳು ಕಾವ್ಯವು ಹೆಚ್ಚಾಗಿ ತೋರಲಿ ನವ್ಯವು ಕಡಿಮೆ ಯಾಗಿರಲಿ (ಇಂಚಾಪ. ೧೧೯-೮೩). ೪. ಆಧುನಿಕವಾದುದು; P ಪಾಶ್ಚಾತ್ಯರ ಸಾಹಿತ್ಯದಲ್ಲಿ Modernist Movement ಎಂದು ಕರೆಯಲಾಗುವ ಸಾಹಿತ್ಯಕ್ರಾಂತಿಯ ಪರಿಣಾಮವಾಗಿ, ಕನ್ನಡದ ನವೋದಯಕ್ಕೆ ಪ್ರತಿಕ್ರಿಯೆಯಾಗಿ ಬಂದ ಸಾಹಿತ್ಯರಚನೆ : ಸಾಹಿತ್ಯವು ರಾಜಕೀಯ ಪ್ರಚಾರ ಇಲ್ಲವೆ ಮತದ ತೊತ್ತಾಗಿ ನವ್ಯವಾಗಲಾರದು (ನವ್ಯಕಾ. ೧೬). [ ಸಂ. ]

**ನವ್ಯಕ** (ನಾ). ಹೊಸವಿಚಾರಗಳುಳ್ಳವನು; ಆಧುನಿಕ: ದಾರಿಗಾಣದ ಕಣ್ಗೆ ಹೆದ್ದಾರಿಯಾಗಿದ್ದೆ ಓ ಕವೀಂದ್ರ ! ಆಧುನಿಕನಿಗೆ ಗುರುವು, ನವ್ಯಕಗೆ ದೀಪ ದಾನಿ. ಓ ಋಷೀಂದ್ರ ! (ಚಿಂತನ. ೭೦-೫). [ ಸಂ. ]

**ನವ್ಯಕತೆ** (ನಾ). ಹೊಸಶೈಲಿಯಲ್ಲಿ ಬರೆದ ಕಥೆ; ಆಧುನಿಕ ಕಥೆ: ಯು. ಆರ್. ಅನಂತಮೂರ್ತಿಯವರ 'ಎಂದೆಂದೂ ಮುಗಿಯದ ಕತೆ' ನವ್ಯಕತೆಗಳ ಇನ್ನೊಂದು ಪ್ರಾತಿನಿಧಿಕ ಸಂಗ್ರಹವಾಗಿದೆ (ನಡದಾ. II, ೮೩೩). 'ನವ್ಯ' ಪರಾ. [ ನವ್ಯ + ಕತೆ ]

**ನವ್ಯಕವಿ** (ನಾ). ಹೊಸಶೈಲಿಯಲ್ಲಿ ಕಾವ್ಯವನ್ನು ರಚಿಸುವ ಕವಿ : ನವ್ಯ ಕವಿಯು ಕಾವ್ಯವಸ್ತುವನ್ನು ಹೃದಯದಿಂದಲೂ ಬುದ್ಧಿಯಿಂದಲೂ ಕೂಡಿಯೆ ಭೇದಿಸುತ್ತಾನೆ (ನವ್ಯಕಾ. ೩೦). 'ನವ್ಯ' ಪರಾ. [ ನವ್ಯ + ಕವಿ$_5$ ]

**ನವ್ಯಕವಿತೆ** (ನಾ). ಹೊಸಬಗೆಯ ಕವಿತೆ : ಕನ್ನಡ ನವ್ಯಕವಿತೆಗೆ ಇಂಗ್ಲಿಷ್ ನವ್ಯಕವಿತೆ ಪ್ರೇರಣೆಯನ್ನೊದಗಿಸಿತು (ಛಂದೋವಿ. ೩೦೩). 'ನವ್ಯ' ಪರಾ.
[ ನವ್ಯ + ಕವಿತೆ]

**ನವ್ಯಕಾವ್ಯ** (ನಾ). ೧. ಹೊಸಕಾವ್ಯ: ಪೇಳ್ಪೆಸಿದಷ್ಟಾದಶಸ್ಥಳವಿವರ್ಣನಂ ಕೇಳಿಸಿನಿತುಳ್ಳ ಕೃತಿ ನವ್ಯಕಾವ್ಯಮೆನಿಕ್ಕುವಿಲ್ಲದಿರೆ ದುರ್ಲಕ್ಷಣಂ (ಮಂಗರಾ. ೧೧೬-೧೭) ; ತನಗೆ ಕವಿತ್ವದೊಳ್ನುಡಿಗಳೊಳ್ ನುಡಿಯಾದ ರಸಂಗಳಿಂಪು ವೆತ್ತನುವಶವಾದ ಭಾವಮತಿ ಬಂಧುರವಾದ ಪೊದಲ್ದ ರೀತಿ... ಮನಂಬುಗೆ ಪೇಟ್ವುದು ನವ್ಯಕಾವ್ಯಮಂ (ಧರ್ಮನಾ. ೧-೪೪). ೨. = ನವ್ಯಕವಿತೆ :

ನವ್ಯಕಾವ್ಯವೆಂದರೆ ಆಧುನಿಕಕಾವ್ಯಕ್ಕಿಂತ ಬೇರೆಯಾದ ಕಾವ್ಯ, ವಿಶೇಷ ತಂತ್ರ-ವಿಧಾನಗಳನ್ನು ಪಡೆದ ಕಾವ್ಯವೆಂಬರ್ಥದಲ್ಲಿ ಆ ಶಬ್ದವನ್ನು ಉಪಯೋಗಿಸುತ್ತೇನೆ (ನವ್ಯಕಾ. ೨೪) : ನವ್ಯಕಾವ್ಯದ ಸುರ್ಪಣ ಪಡುವಣದಿಂದ ಬೀಸಿದ ಗಾಳಿಯ ಒಂದು ತೆರೆಯೆಂಬುದು ನಿಜ (ನವ್ಯಕಾ. V ಮುನ್ನುಡಿ). 'ನವ್ಯ' ಪರಾ. [ ನವ್ಯ + ಕಾವ್ಯ ]

**ನವ್ಯಗುಣ** (ನಾ). ೧. ಹೊಸತನ. ೨. ಹೊಸ ಹೆದೆ. ೧, ೨: ಕೊರ್ವಿ ಪೊಣ್ಮೆ ತನಿರಸಮುರ್ವೆ ಕರಂ ಕೊಂಕು ಕವಿವರಂ ನವ್ಯಗುಣಂ ಪರ್ವೆ ದಿಸುವ ಕಾವನ ಕರ್ವಿನ ಬಿಲ್ಲಂತೆ ಕಾವ್ಯಮೇಂ ಮೋಹಿಸದೇ (ಧರ್ಮನಾ. ೧-೪೭). [ ನವ್ಯ + ಗುಣ ]

**ನವ್ಯತೆ** (ನಾ). ೧. ಹೊಸತನ; ನೂತನತೆ. ೨. (ಸಾಹಿತ್ಯದಲ್ಲಿ) ಹೊಸತನ,-ನೂತನತೆ : ಸಮುದ್ರಗೀತಗಳು, ಬಾಳದೇಗುಲದಲ್ಲಿ ಮತ್ತು ಉಗಮ ಎಂಬ ಕವನಸಂಗ್ರಹಗಳನ್ನು ಓದಿದವರಿಗೆ ನಾನು ನವ್ಯತೆಯ ಪ್ರತಿಪಾದನೆಗೆ ಏಕೆ ಉದ್ಯುಕ್ತನಾದೆನೆಂಬುದು ಸಹಜವಾಗಿ ಹೊಳೆಯಬಹುದು (ನವ್ಯಕಾ. V ಮುನ್ನುಡಿ). 'ನವ್ಯ' ಪರಾ. [ ಸಂ. ನವ್ಯತಾ ]

**ನವ್ಯದುಕೂಲ** (ನಾ). ಹೊಸ ರೇಷ್ಮೆವಸ್ತ್ರ: ನವ್ಯದುಕೂಲಮಂ ತೆಗೆದುಟ್ಟು (ಬಸರ. ೨-೪೪). [ ನವ್ಯ + ದುಕೂಲ ]

**ನವ್ಯಪಾಕ** (ನಾ). ಹೊಸ ಅಡುಗೆ; ಹೊಸರುಚಿಯುಳ್ಳ ತಿನಿಸು : ಒಲೆ ಹೊಡಿದ ಮೇಲೆ ಅದರ ಬಿಸಿ ತಗ್ಗುವುದು ಕುದ್ದು ಹಣ್ಣಾಗುವದ್ದು ನೂರು ಅನುಭವದ ನವ್ಯಪಾಕ (ನೆಲಮು. ೩೩-೦೦). [ ನವ್ಯ + ಪಾಕ$_1$ ]

**ನವ್ಯಪ್ರಜ್ಞೆ** (ನಾ). ೧. ಹೊಸತನದ ಅರಿವು; ಹೊಸಸ್ಥಿತಿಯ ತಿಳಿವಳಿಕೆ. ೨. ನವ್ಯಸಾಹಿತ್ಯಕ್ಕೆ ಸಂಬಂಧಿಸಿದಂತೆ ಇರುವ ಅರಿವು : ಆಧುನಿಕ ಇಲ್ಲವೆ ರೊಮ್ಯಾಂಟಿಕ್ ಕನ್ನಡಕಾವ್ಯದಲ್ಲಿ ನವ್ಯಪ್ರಜ್ಞೆ ಆನುಷಂಗಿಕವಾಗಿ ಹೇಗೆ ಮೂಡಿದೆಯೆಂಬುದನ್ನು . . . ತೋರಿಸಲಾಗಿದೆ (ನವ್ಯಕಾ. VI ಮುನ್ನುಡಿ). [ ನವ್ಯ + ಪ್ರಜ್ಞೆ ]

**ನವ್ಯಪ್ರಸೂನ** (ನಾ). ಆಗ ತಾನೇ ಅರಳಿದ ಹೂವು: ಶೀತಳಸಲಿಲನೂತನ ಮಳಯಜನವ್ಯಪ್ರಸೂನನಾನಾವಿಧ ಪೂಜಾಸಮರ್ಚಿತ . . . ಸರ್ವಾಂಗಶರೀರ ಪ್ರ(ಣ)ತನಾಗಿ (ಬಸರ. ೪-೬). [ ನವ್ಯ + ಪ್ರಸೂನ ]

**ನವ್ಯಫಳ** (ನಾ). ಹೊಸ ಹಣ್ಣು : ಬೆಳೆಸಿದವೇನೀ ಕಾವ್ಯವೃಕ್ಷವನು . . . ತುದಿಮೊದಲ್ವನಕ ಹೇಱಿದ ನವ್ಯಫಳರಸಂ [ಪಾಠಾಂ. ಕಾವ್ಯರಸಫಲಂ, ನವ್ಯರಸಫಳಂ]ಗಳನು ಸವಿಸುವುದು ಲೋಕದ . . . ರಸಿಕರುತ್ತಮರು ಸುಕಲಾಪ್ರೌಢರು (ಹಚಕಾ. ೧-೧೮). [ ನವ್ಯ + ಫಳ$_1$ (= ಫಲ$_1$) ]

**ನವ್ಯಯುಗ** (ನಾ). ಹೊಸತನದ ಕಾಲ : ಕನ್ನಡಕಾವ್ಯದಲ್ಲಿ 'ಆಧುನಿಕ' ಯುಗವು ಮುಗಿಯುವ ಸಮಯ ಬಂದಿದೆ; ನವ್ಯಯುಗ ಆರಂಭವಾಗಲಿದೆ (ನವ್ಯಕಾ. ೨೪). 'ನವ್ಯ' ಪರಾ. [ ನವ್ಯ + ಯುಗ ]

**ನವ್ಯವೈನೋದಿಕಯುಗ** (ನಾ). ಸುಖಾಂತನಾಟಕಗಳ ಹೊಸಯುಗ ; ಪ್ರಹಸನಗಳ ಹೊಸಯುಗ : ನವ್ಯವೈನೋದಿಕಯುಗದ ವೇಳೆಗೆ ಕವಿಗಳು ತಾವೇ ಕಲ್ಪಿಸಿದ ಕಥೆಗಳನ್ನು ನಾಟಕದ ವಸ್ತುಗಳನ್ನಾಗಿ ಮಾಡತೊಡಗಿದರು (ಆರಿಕಾ. ೧೮೧). 'ನವ್ಯ' ಪರಾ.

[ ನವ್ಯ + ವೈನೋದಿಕ + ಯುಗ ]

**ನವ್ಯಶೈಲಿ** (ನಾ). ೧. ಬರವಣಿಗೆಯ ಹೊಸರೀತಿ. ೨. ಇಂದಿನ ನವ್ಯಕಾವ್ಯಮಾರ್ಗದಲ್ಲಿ ಬರೆಯುವ ರೀತಿ : ನವ್ಯಶೈಲಿಯಲ್ಲಿಯ ಇನ್ನೊಂದು ಪ್ರಕಾರವೆಂದರೆ ಇಂದಿನ ಬಳಕೆಯ ಮಾತನ್ನು ನೇರವಾಗಿ ಕಾವ್ಯಭಾಷೆಯಾಗಿಸುವದು (ನವ್ಯಕಾ. ೩೫). 'ನವ್ಯ' ಪರಾ. [ ನವ್ಯ + ಶೈಲಿ ]

**ನವ್ಯಸಮಾಜ** (ನಾ). ಹೊಸತತ್ತ್ವಗಳ ಮೇಲೆ ನಿರ್ಮಾಣವಾದ ಸಮಾಜ: ನವ್ಯಸಾಹಿತ್ಯವೂ ಈ ನವ್ಯಸಮಾಜದ ಶ್ರುತಿಯಾಗುವುದು . . . ಭಾಷ್ಯವಾಗುವದು (ನವ್ಯಕಾ. ೨೨). [ ನವ್ಯ + ಸಮಾಜ ]

**ನವ್ಯಸಾಹಿತಿ** (ನಾ). ನವ್ಯಪ್ರಜ್ಞೆಯಿಂದ ಸಾಹಿತ್ಯ ನಿರ್ಮಾಣ ಮಾಡುವವನು : ನವ್ಯಸಾಹಿತಿಯು ಮಾನವತೆಯ ಉಚ್ಚಗುಣಗಳಲ್ಲಿ ದೃಢವಿಶ್ವಾಸವನ್ನು ತಾಳಬೇಕು (ನವ್ಯಕಾ. ೧೭). [ ನವ್ಯ + ಸಾಹಿತಿ ]

**ನವ್ಯಸೇಸೆ** (ನಾ). ಒಂದು ಬಗೆಯ ತೆರಿಗೆ: ಆ ನವ್ಯಸೇಸೆ ಗದ್ಯಾಣಂ ಹತ್ತು ಪಣವೊಂಭತ್ತು ಹಾಗವೊಂದು . . ಅಷ್ಟಭೋಗ ತೇಜಸ್ವಾಮ್ಯ ನಿಧಿನಿಕ್ಷೇಪ ಸಹಿತ ಧಾರಾಪೂರ್ವಕವಾಗಿ ಕೊಟ್ಟರು (ಎಕ. VI (R), ಕೃಷ್ಣರಾ. ೩೯-೪೭ : 1236). [ ನವ್ಯ + ಸೇಸೆ ]

**ನವ್ಯಾಮೋದ** (ನಾ). ೧. ಹೊಸ ಪರಿಮಳ,-ಸುವಾಸನೆ. ೨. (ಆಲಂ) ಹೊಸ ಮಕರಂದ : ಚಂದ್ರಕಾಂತವೊಸರ್ವಂತಿರೆ ಗೋರಿಕಲ್ಲೊಸರ್ಗಮೇ ಬೆಂಳ್ದಿಂಗಳೊಳ್ ತುಂಬಿ ಪೀರ್ವವೊಲೇಂ ಪೀರ್ದಪುದೇ ಕಡುಂದುಱು ತೆ ನವ್ಯಾಮೋದಂ ಪೂಗಳೊಳ್ (ಜಗವಿ. ೧-೦೩). [ ನವ್ಯ + ಆಮೋದ ]

**ನಶನ** (ನಾ). ೧. ಮರೆಯಾಗುವಿಕೆ; ೨. ಹಾಳಾಗುವಿಕೆ; ನಾಶವಾಗುವಿಕೆ. 'ನಶಿಸು' ಪರಾ. [ ಸಂ. ]

**ನಶನಶೆ** 'ನಸನಸೆ' ನೋ.

**ನಶಿಸು** (ಕ್ರಿ). ೧. ಮರೆಯಾಗು ; ಇಲ್ಲವಾಗು ; ಕ್ಷೀಣವಾಗು ; ಕ್ಷಯಿಸು : ನನ್ನ ಯುಕ್ತಾಯುಕ್ತಜ್ಞಾನವು ನಶಿಸಿಹೋಯಿತು (ರಾವಿಜ. ೧೦೯) ; ನಿಮ್ಮ ದಾರಿಯ ಕಂಟಕಗಳು ಕೆಲವೇ ದಿನಗಳಲ್ಲಿ ನಶಿಸುವುವು (ಮುರಳಿ. ೧೬೩) ; ದಿನೇ ದಿನೇ ನಶಿಸತೊಡಗಿರುವ ಈ ಜನಾಂಗಗಳ ಭಾಷೆಗಳನ್ನು ಕುರಿತು ಹೆಚ್ಚು ಸಂಶೋಧನೆ ಶೀಘ್ರ ನಡೆಯುವುದು ಅಗತ್ಯ (ದ್ರಾವಿವಿ. ೨೦೩). ೨. ಕೆಡು ; ಹಾಳಾಗು : ಪುಳಿವೆರೆಯೆ ಕೊಡವಾಲು ಸಹಜವನುಳಿವುದಲ್ಲದೆ ಕ್ಷೀರಸಾಗರ ಮಳಿವುದೇ ಸುಜ್ಞಾನಿ ನಶಿಪನೆ ಪರರ ದೂಷಣದಿ (ಗಗತಾ. ೧೬-೪೫).

[ ನಶನ + -ಇಸು$_3$ ]

**ನಶಿಹತ್ತು, ನಸೀಯತ್ತು** (ನಾ). ಶಿಕ್ಷೆ ; ದಂಡನೆ : ರಶೀದಿಗಳನ್ನು ಕೊಡದೆ ಇದ್ದರೆ ಆ ಶೇಕದಾರ ಶ್ಯಾನುಭಾಗರಿಗೆ ನಶಿಹತ್ತು ಮಾಡಿ ಅವರಿಗೆ ಬದಲಿಯಿತಬಾರಿ ಶೇಕದಾರ ಶ್ಯಾನಭಾಗರನ್ನ ಮೊಕರರ್ಮಾಡಿಟ್ಟು ಮುಂದೆ ಸದರಿ ಬರದ ಪ್ರಕಾರ ನಡೆದುಕೊಳ್ಳುವದು (ಮಹಾಮಂ. II, ೬೬). **ನಸೀಯತ್ತು :** (ಕ). [ ← ಅರ. ನಸೀಹತ್ ; ಹಿಂ. ನಸೀಹತ್, ನಸೀತ್ ; ಮರಾ. ನಸೀಹತ್, ನಸೀಯತ್ ]

**ನಶೀಬ** 'ನಸೀಬು' ನೋ.

**ನಶೀಬಗೇಡಿ** (ನಾ). ದೈವಗೇಡಿ ; ದುರ್ದೈವಿ ; ನತದೃಷ್ಟ : " ಇಷ್ಟು ಸಣ್ಣ ವಯಸ್ಸಿನಲ್ಲಿ ತಂದೆ ತಾಯಿ ಇಬ್ಬರನ್ನೂ ಕಳೆದುಕೊಂಡಿತು ನಶೀಬಗೇಡಿ" ಎಂದು ಜನರಾಡುವುದನ್ನು ಹೇಗೆ ಸಹಿಸುವುದು ? (ವ್ಯನಿ. ೮೯).

[ ನಶೀಬ (< ನಸೀಬು) + ಕೇಡಿ$_1$ ]

**ನಶೀಬು** 'ನಸೀಬು' ನೋ.

**ನಶೆ, ನಿಶಾ, ನಿಶೆ, ನಿಷಾ** (ನಾ). (ಮಾದಕದ್ರವ್ಯಗಳ ಸೇವನೆಯಿಂದಾಗುವ) ಸೊಕ್ಕು;-ಮತ್ತು; ಅಮಲು : ಬಾಟ್ಲ ಬರಿದಾಯಿತು. ನಶೆ ತಲೆಗೇರಿತು (ಮಾಲತಿ. ೪೮) ; ಬೆಳಿಗ್ಗೆ ಹೊತ್ತು ನಶೆ ಇರಾಕಿಲ್ಲ ಬಾಬುಗಳಿಗೆ (ಸಾಹೇಬ್. ೩೦೪). **ನಿಶಾ :** 'ನಿಶಾಖೋರ' ಪರಾ. **ನಿಶೆ :** ಜಹಾಂಗೀರನಿಗೆ ಹಗಲಲ್ಲಿಯೂ 'ನಿಶೆ' ಇರುತ್ತಿತ್ತು (ನೂರಜ. ೩೦) ; ಕುಡಿದು ನಿಶೇದಾಗ ನನ್ನ ಸೊಸಿಗೇನೋ ಅನ್ನಾಕ ಬಂದಿತ್ತಂತ (ಗ್ರಾಮಾಯ. ೨೭) ; ಕಾಳಪ್ಪನು ಸಂಜೆ ನಿಶೆಯಾಗಿ ಬಂದು ಬಿದ್ದುಕೊಂಡನು (ದಾಸಹು. ೬೨); **ನಿಷಾ :** ನನಗೆ ಕೊಲೆ ಮಾಡುವುದೆಂಬುದು ಒಂದು ಬಗೆಯ 'ನಿಷಾ'. ಆ 'ನಿಷಾ' ಈಗ ಬಿಟ್ಟು ಹೋಯಿತೇ ? (ಮಾಯಾವಿ. ೨೮೩) ; ಗಾಂಜಾ ಸೇದುವವರಿಗೆ ಗಾಂಜಾದಿಂದ ನಿಷಾ ಏರದಿದ್ದರೆ, ಅದರಲ್ಲಿ ಎರಡು ದತ್ತೂರಬೀಜಗಳನ್ನು ಸೇರಿಸಿದರಾಯಿತು (ಕಮಟ. ೧೭). 'ನಿಷಾಖೋರ' ಪರಾ.

[ ← ಅರ. ಹಿಂ. ನಶಾ ; ಮರಾ. ನಶಾ, ನಿಶಾ ]

**ನಶ್ಯ₁, ನಸಿ₃, ನೆಶ್ಯ** (ನಾ). ೧. ಮೂಗಿಗೆ ಏರಿಸುವ ಔಷಧದ ಪುಡಿ: ಸುಷೇಣನು ಆ ಮೂಲಿಕೆಗಳಂ ನಶ್ಯವಂ ಮಾಡಿ ಲಕ್ಷ್ಮಣನಿಗೆ ಕೊಡಲು ಅವನು ಯಚ್ಚತ್ತು ಸುಖದಿಂದಿರಲು (ಕೃಷ್ಣರಾ. ೭-೯೧). ೨. ಮೂಗಿಗೆ ಏರಿಸುವ ತಂಬಾಕಿನ ಪುಡಿ : ತನ್ನ ನಶ್ಯದ ಬುರುಡೆಯಿಂದ ಒಂದಿಷ್ಟು ನಶ್ಯವನ್ನು ಮೂಗಿಗೇರಿಸಿ (ವಿಧಿವ್ಯ. ೧೮) ; ನಶ್ಯ, ತಂಬಾಕು, ಬೀಡಿ ಮತ್ತು ಸಿಗರೇಟುಗಳ ಅಭ್ಯಾಸ (ನಾಡಿಗೇ. ೩೬೭) : ನಶ್ಯ ಹಾಕಿ ಹಾಕಿ ಮಂಜಾದ ಕಣ್ಣು (ಮುಹಾಲ. ೮). **ನಸಿ₃** : ೧. ನಸ್ಯ – ನಸಿ, ಮಾಣಿಕ್ಯ– ಮಾಣಿಕ (ಹೊಸುಗ. ೧೧೮). ೨. ನಸಿಭ್ರಮೆ ಇದ್ದವ ನುಸಿ ಆದರೂ ಹಾಕಿ ಕೊಂಡಾನು (ಗಾದೆ). **ನೆಶ್ಯ** : ೨. ನೆಶ್ಯವು ಮೂಗಿನೊಳಕ್ಕೆ ಹೋದುದೇ ತಡ ಬುಳುಬುಳುಗುಟ್ಟಿ ಅಸಾಧ್ಯ ಫಜೀತಿ ಮಾಡಿಬಿಟ್ಟಿತು (ಕಳಹು. ೬೭) ; ಇವರು ಬಾಗಿಲಿನಲ್ಲಿ ಕುಳಿತು ನೆಶ್ಯವನ್ನು ತೀಡುತ್ತಿರುವಾಗ (ನಮ್ಮೂರ. ೨).

**ನಶ್ಯ ಏರಿಸು** = ನಶ್ಯ ಹಾಕು : ಹಿರಿಯರಾದ ಆಚಾರ್ರು ನಶ್ಯ ಕೊಟ್ಟರೆ ಅವರಿಗೆ ಕೈಮುಗಿದು ಅನಂತರ ಉಳಿದವರು ನಶ್ಯ ಏರಿಸಬೇಕು (ನನ್ನೂರು. ೧೮೪). **ನಶ್ಯ ತೀಡು** = (ಬೆಣ್ಣೆಯಲ್ಲಿ ಮಿದ್ದ ಉಂಡೆ ನಶ್ಯವನ್ನು ಪುಡಿ ಮಾಡಲು) ಅಂಗೈಯಲ್ಲಿ ಹಾಕಿ ಉಜ್ಜು : ನಶ್ಯ ತೀಡುವಾಗ ಆಚಾರ್ರ ಅಂಗಾಂಗಗಳೆಲ್ಲ ಕೆಲಸ ಮಾಡುತ್ತಿದ್ದುವು (ನನ್ನೂರು. ೧೮೩). **ನಶ್ಯದ ಬಣ್ಣ, ನೆಶ್ಯದ ಬಣ್ಣ** = ಕಂದುಬಣ್ಣ : ನಶ್ಯದ ಬಣ್ಣ ಬೀಡಿಯ ಬಣ್ಣ ಮುಂತಾದ ಅನೇಕ ಬಣ್ಣಗಳ ವಿವಿಧ ಮಾದರಿಗಳ ಸೀರೆಗಳು (ನಾಡಿಗೇ. ೨೩೧) ; ಅವಳ ಹತ್ತಿರ ನೆಶ್ಯದ ಬಣ್ಣದ ಸೀರೆ ಇದೆ (ರೂಢಿ). **ನಶ್ಯ ಮಾಡು, ನೆಶ್ಯಮಾಡು** = ೧. ಮೂಗಿಗೇರಿಸುವ ಔಷಧವನ್ನು ತಯಾರಿಸು,– ಸಿದ್ಧಮಾಡು : ನಶ್ಯ ಮಾಡುವುದಕ್ಕೆ ತೈಲವನ್ನಾಗಲೀ ತುಪ್ಪವನ್ನಾಗಲೀ ಮೃದುವಾದ ಪಾಕದಲ್ಲಿ ಇಳಿಸಬೇಕು (ರೂಢಿ). ೨. ಹೊಗೆಸೊಪ್ಪಿನಿಂದ ನಶ್ಯದ ಪುಡಿಮಾಡು : ಅವನು ನೆಶ್ಯ ಮಾಡುತ್ತಿದ್ದಾನೆ (ರೂಢಿ). **ನಶ್ಯಹಾಕು** = ನಶ್ಯವನ್ನು ಮೂಗಿಗೆ ಏರಿಸು : ಹಿರಿಯರು ಹೇಳುವವರೆಗೆ ಯಾರೂ ನಶ್ಯ ಹಾಕುವಂತಿಲ್ಲ. ಇದು ನಶ್ಯ ಹಾಕುವವರ ಮರ್ಯಾದೆ (ನನ್ನೂರು. ೧೮೩). [ < ಸಂ. ನಸ್ಯ ]

**ನಶ್ಯ₂** (ನಾ). ನಾಶವಾಗತಕ್ಕುದು ; ಕ್ಷಣಿಕವಾದಂದು : ಕಾಣಿಸಿಕೊಳು ತ್ತಿಹುದು ನಶ್ಯ ಎಂಬುದು ನಿಜಂ (ವೀಶ್ವಪು. ೪-೬-೩೫) ; ದೃಶ್ಯವೆಲ್ಲವು ನಶ್ಯವಾದೊಡೇಂ? ದೃಷ್ಟಿಗದು ವಶ್ಯವಿರುವನಕದನು ದೃಷ್ಟಿಪುದೆ ಕಾರ್ಯಂ . . . ನಶ್ಯದಿಂದ ವಿನಶ್ಯ (ಮಂಕುಕ. ೪೦೦). [ < ಸಂ. ನಾಶ್ಯ ]

**ನಶ್ಯಂಗೆಯ್ಯು** (ಕ್ರಿ). = ನಸ್ಯಂಗೆಯ್ ೧ : ಇಪ್ಪೆಕೆಚ್ಚು . . . ಹಿಪ್ಪಲಿ ಸಹ ಸಮಾನವಾಗಿ ಸಣ್ಣನಾಗರದು ನೀರಿನಲ್ಲಿ ನಶ್ಯಂಗೆಯ್ಯೆ ಅಭಿನ್ಯಾಸ ಸನ್ನಿ ಯಿಂದಾದ ಮೂರ್ಛೆ ಆ ಕ್ಷಣವೆ ತಿಳಿಯುವುದು (ಸಕವೈ. ೧೬೮).

[ ನಶ್ಯ₁ + ಗೆಯ್ಯು ( < ಕೆಯ್₁ ) ]

**ನಶ್ಯತ್ಪ್ರಸೂತಿ** (ನಾ). ಮಕ್ಕಳು ಬಾಳದವಳು : “ನಶ್ಯತ್ಪ್ರಸೂತಿಃ, ಬಿಂದುಃ – ಈ ೨ ಮಕ್ಕಳ್ ಬಾಟದವಳು ” (ಹಲಾಯು. ೮೦-೩೩೪).

[ ಸಂ. ]

**ನಶ್ವರ** (ನಾ). ನಾಶವಾಗತಕ್ಕುದಂ ; ಕ್ಷಣಿಕವಾದುದಂ ; ಶಾಶ್ವತವಲ್ಲ ದುದಂ : ನಶ್ವರಾನಶ್ವರಗಳೆಲ್ಲಿವು ಸ್ವಸ್ವರೂಪಮಾದುದು (ಗಗತಾ. ೦೬-೨೦); ನಶ್ವರವನು ನೀನ್ ಅವಿನಶ್ವರ ಮಾಡ (ಅನಿಕೇ. ೩೩-೧೪) ; ಶಾಶ್ವತವನರಿ ಯಲ್ಕೆ ನಶ್ವರದ ಹೃದಯಮಂ ಭೇದಿಸುವ ಕವಿಯ ದರ್ಶನದಂತೆ (ಶ್ರೀರಾಮಾ. ೨೩೭-೨೬೧) ; ದೇಹ ನಶ್ವರ, ಬಯಕೆ ನಶ್ವರ, ಆತ್ಮವೊಂದೇ ಶಾಶ್ವತ (ಚಂದ್ರಮಾ. ೧೮-೯). [ ಸಂ. ]

**ನಶ್ವರತೆ** (ನಾ). ಕ್ಷಣಿಕತೆ ; ಅಶಾಶ್ವತತೆ : ಅಶ್ವತ್ಥವಿಲ್ಲಿ ಬಾಡಿದೊಡೇನು ? ಚಿಗುರಲ್ಲಿ ; ನಶ್ವರತೆ ವಿಟಪಪರ್ಣಂಗಳಲ್ಲಿ ಮಾತ್ರ (ಮಂಕುಕ. ೮೮೬).

[ ಸಂ. ನಶ್ವರತಾ ]

**ನಷ್ಟ** (ಗು). ೧. ಕೆಟ್ಟ ; ಹಾಳಾದ ; ನಾಶವಾದ. ೨. ಕಾಣದಂತಾದ ; ಇಲ್ಲವಾದ ; ಮರೆಯಾದ ; ಕಳೆದುಹೋದ. ೩. ಓಡಿಹೋದ. (ನಾ). ೪. ಹಾನಿ ; ಕೆಡಕು ; ನಾಶ : ಕೊಲುವಾ ಕೂಟವು ನಷ್ಟಮಪ್ಪ ಕೆಲಸಂ . . . ಫಲದ ಭ್ರಾಂತಿಯ ತೋರ್ಪುದೈ (ಸೋಮೇಶ. ೨೩); ಪರ ಹೆಣ್ಣಿಗಾಗಿ ರಾವಣ ತಲೆ ಕೊಟ್ಟ ಇನ್ನೆಷ್ಟು ಹೇಳಲಾ ನಷ್ಟ ಪರಹೆಣ್ಣ ಮೋಹಿಸಿದರೆ ಬರುವೋದು ಕಷ್ಟ (ಪುರಂದ. ೩-೧೦೨-೧) ; ಕಷ್ಟದಲಿ, ನಷ್ಟ ದಲಿ . . . ನಿನ್ನ ಮಂತ್ರಮಯಮಾತೃವಕ್ಷಸ್ತನ್ಯಧೈರ್ಯವನೀಂಟು ತಿರಲೆನ್ನ ಬಾಯಿ (ಅನಿಕೇ. ೪೮-೫) ; ಎಷ್ಟು ಮಾಡಿದರೂ ನಷ್ಟವಾಗದೇ ಬಿಡದು (ಗಾದೆ). ೫. ಹೋಗುವಿಕೆ; ಮರೆಯಾಗುವಿಕೆ: “ನಷ್ಟಂ, ನಷ್ಟಿಃ ... ಈ ೬. ಹೋಕು” (ಕಾಶಕ್ಕ. ೧೮೯). ೬. ದಿಕ್ಕುಗೆಟ್ಟವನು ; ಭಯದಿಂದ ಓಡಿಹೋಗುವವನು: “ನಷ್ಟಃ, ಗೃಹೀತದಿಕ್, ಕಾಂದೀಶಿಕಃ, ಭಯ ದ್ರುತಃ– ಈ ೪ ದೆಸೆಗೆಟ್ಟವಂ ” (ಹಲಾಯು. ೭೯-೩೨೫). ೭. ವ್ಯಾಪಾರ ದಲ್ಲಿ ಹಾಕಿದ ಹಣ ಬರದಿರುವುದು ; ಲುಕ್ಸಾನು : ಜವಳಿ ವ್ಯಾಪಾರ ದಲ್ಲಿ ತುಂಬಾ ನಷ್ಟವೇ ಆಯಿತು (ರೂಢಿ). ‘ಲಾಭ’ ಹೋ. ೮. [ಛಂದ] ಷಟ್ಪ್ರತ್ಯಯಗಳಲ್ಲಿ ಒಂದು ; ನಮಗೆ ಬೇಕಾದ ವೃತ್ತದ ಸ್ವರೂಪ ವನ್ನು ಕಂಡುಹಿಡಿಯುವ ವಿಧಾನ ; “ನಮಗೆ ಬೇಕಾದ ವೃತ್ತದ ಸಂಖ್ಯೆಯನ್ನು ಆ ವೃತ್ತದ ಛಂದಸ್ಸು ಎಷ್ಟನೆಯದೋ ಅಷ್ಟು ಸಾರಿ ಅರ್ಧಿಸುವುದು. ಅರ್ಧಿಸಲ್ಪಡುವ ಸಂಖ್ಯೆಯು ವಿಷಮವಾದರೆ ಅದಕ್ಕೆ ಒಂದನ್ನು ಸೇರಿಸಿ ಅರ್ಧಿಸಬೇಕು. ಹಾಗೆ ಅರ್ಧಿಸುವಲ್ಲಿ ಒಂದನ್ನು ಸೇರಿಸಿದರೆ ಗುರುವೆಂದೂ, ಒಂದನ್ನು ಸೇರಿಸದಿರಲು ಲಘುವೆಂದೂ ತಿಳಿಯಬೇಕು. ಈ ಉಪಾಯಕ್ಕೆ ನಷ್ಟವೆಂದು ಹೆಸರು” (ಕೈಪಿಡಿ. ೯೨) : ಮೊದಲೊಳೆ ಛಂದದೀಯೆಡೆಯಲಿಕ್ಕದೆ ಕೆಟ್ಟುದು ವೃತ್ತಮೆಂದು ಪೇಳ್ವುದು ಬಗೆವಂದೊಡಾಗಳವಱಂಕಮನರ್ಧಿಸಿ ಬೆಳ್ಪ ನಿಟ್ಟುಕೊಳ್ವುದು ಸಮಭಾಗವಿಾಯದೊಡೆ ರೂಪಯುತಾರ್ಧದೆ ಬಿಣ್ಪನಿಟ್ಟು ಕೊಳ್ವುದಂ ಗಡ ಸೂತ್ರಮಿಾ ತೆಱದೆ ಕಾಣ್ಬುದು ನಷ್ಟಮನಂಬುಜಾನನೇ (ಛಂದೋಂಬು. ೬-೨೬೨); ಅಸಮವಿರಲೊಂದು ಕೂಡರ್ಧಿಸಿಡು ಗುರುವ ಸಮ ವಿಸಿಸಲರ್ಧಿಸಿ ಲಘುವನಿಕ್ಕೆನಿತು ಛಂದದೊಳು ಪಸರಿಸಿದ ಸಂಖ್ಯೆಯಕ್ಕವಱ ವಱ ನಷ್ಟವೃತ್ತಕ್ಕುಳ್ಳ ಗಣದೆ ಬರ್ಕುಂ (ಮಂಗರಾ. ೧೦೮-೨೪).

**ನಷ್ಟ ಕಟ್ಟಿಕೊಡು** = ಆದ ನಷ್ಟಕ್ಕೆ ಪರಿಹಾರವನ್ನು ತುಂಬಿಕೊಡು. **ನಷ್ಟ ತುಂಬಿಕೊಡು** = ನಷ್ಟಕಟ್ಟಿಕೊಡು. **ನಷ್ಟ ಭರ್ತಿಮಾಡು** = ನಷ್ಟ ಕಟ್ಟಿ ಕೊಡು. **ನಷ್ಟವಾಗು** = ೧. ಹಾನಿಯಾಗು ; ಲುಕ್ಸಾನಾಗು ; ಕಳೆ ; ದಂಡವಾಗು : ಲಾಭ ಮಾಡಲು ಹೋಗಿ ನಷ್ಟವಾಗುವಂತಾಗಬಾರದು (ಅಡುಸಾ. ೦೨೩). ೨. ಇಲ್ಲವಾಗು; ಅಳಿ ; ಮರೆಯಾಗು : ಪ್ರಸಾದಿ ಯೆಂತಯ್ಯಾ ಆಧಿವ್ಯಾಧಿ ನಷ್ಟವಾಗದನ್ನಕ್ಕ (ಬಸವ. ೫೧೧); ಭಾವ ನಿರ್ಭಾ ವಂಗಳ ಸುಳುಹ ನಷ್ಟವಾದ ಸದ್ಭಾವದ ಧೂಪವನಿಕ್ಕಿ (ಆದವ. ೨೮-೮೪); ಕ್ಷರ ಎಂದರೆ ನಷ್ಟವಾಗುವುದು . . . ಅಕ್ಷರ ಎಂದರೆ ನಷ್ಟವಾಗದುದು (ದ್ರಾವಿವಿ. ೯೩) ; ಅಕ್ಕಿಯನ್ನು ಪಾಲಿಶ್ ಮಾಡಿದರೆ ಭ್ರೂಣ ಮತ್ತು ತವುಡು ನಷ್ಟವಾಗುತ್ತವೆ (ಅಡುಸಾ. ೬೨). [ ಸಂ. ]

**ನಷ್ಟಕಾಲ** (ನಾ). ಕಳೆದುಕೊಳ್ಳುವ ಕಾಲ ; ಹಾಳಾಗುವ ಕಾಲ : ನಷ್ಟ ಕಾಲದಲ್ಲಿ ಎಷ್ಟಿದ್ದರೇನು ? (ಗಾದೆ). [ ನಷ್ಟ + ಕಾಲ ]

**ನಷ್ಟಗ್ರಹ** (ನಾ). ದುಷ್ಪರಿಣಾಮವನ್ನುಂಟುಮಾಡುವ ಗ್ರಹ ; ಕೆಟ್ಟ ಗ್ರಹ ; ದುಷ್ಟಗ್ರಹ : ಇಷ್ಟೊಂದು ದೊಡ್ಡ ಕಲಂಕದ ಗುರುತನ್ನು . . . ಯಾವ ನಷ್ಟಗ್ರಹ ಯಾಕೆ ತೊಡೆದುಬಿಟ್ಟಿತೋ ಕಾಣೆ(ಇಷ್ಟಕ. ೪೫೫).

[ ನಷ್ಟ + ಗ್ರಹ ]

**ನಷ್ಟಚೇತನ** (ನಾ). ಚೈತನ್ಯವಿಲ್ಲದವನು; ಬಲಹೀನ : ವ್ಯಸನಾಭಿಭೂತರ ಉತ್ಸಾಹಹೀನರು ದೀನರು ನಷ್ಟಚೇತನರು . . . ತಳಮಳಗೊಳುವರು

ಬರಿದೆ (ಇಂಜಾಪ. ೧೩೭-೭೩) ; ಆಕೆಯ ಕಾಣದ ಕಂಡವರಿಬ್ಬರು ಭಾವಿಸೆ ಸರಿಸಮರಹರು ಒಬ್ಬರು ವಿಫಲ ವಿಲೋಚನರಾದರು ಒಬ್ಬರು ನಷ್ಟ ಚೇತನರು (ಇಂಜಾಪ. ೧೫೦-೩೮). [ ನಷ್ಟ + ಚೇತನ ]

**ನಷ್ಟಚೇಷ್ಟತೆ** (ನಾ). ಮೈಮರೆವು; ಮೂರ್ಛೆ; ಚೈತನ್ಯವಿಲ್ಲದಿರುವುದು. [ ಸಂ. ನಷ್ಟಚೇಷ್ಟತಾ ]

**ನಷ್ಟಜಾತಕ** (ನಾ). ೧. ಕಳೆದ ಜಾತಕ ; ಕಳೆದುಹೋದ ಜನ್ಮಪತ್ರಿಕೆ ; ಕಳೆದುಹೋದುದರಿಂದ ಮತ್ತೆ ಬರೆದ ಜಾತಕ : ಜನನಕಾಲವು ತಿಳಿಯದಿದ್ದಾಗ ಈ ಅಧ್ಯಾಯದಲ್ಲಿ ತಿಳಿಸಿರುವ ಕ್ರಮದಂತೆ ನಷ್ಟಜಾತಕ ವನ್ನು ಬರೆದು ಅದರಿಂದ ಆ ಜಾತಕನಿಗೆ ಫಲಗಳನ್ನು ಹೇಳಬೇಕು (ಜಾತತಿ. ೨೪-೧ ಟೀಕು). ೨. ಜಾತಕವನ್ನು ಕಳೆದುಕೊಂಡವನು : ನಷ್ಟಜಾತಕನು ಬಂದು ಪ್ರಶ್ನೆಮಾಡಿದ ಲಗ್ನದಿಂದ ಚಂದ್ರನಿರುವ ರಾಶಿಯಿಂದ ಮುಂದಕ್ಕೆ ಕ್ರಮವಾಗಿ ಎಣಿಸಿ ಬರುವ ರಾಶಿಯೇ ಪೃಚ್ಛಕನ ಜನ್ಮರಾಶಿಯಾಗುತ್ತದೆ (ಜಾತತಿ. ೨೪-೧೭ ಟೀಕು). [ ನಷ್ಟ + ಜಾತಕ ]

**ನಷ್ಟಜೀವಿ** (ನಾ). ೧. ಜೀವವನ್ನು ಕಳೆದುಕೊಂಡವನು ; ಸತ್ತವನು. ೨. ಮೇಲಿಂದ ಮೇಲೆ ನಷ್ಟವನ್ನು ಅನುಭವಿಸುವವನು. [ ನಷ್ಟ + ಜೀವಿ$_1$ ]

**ನಷ್ಟತೂಕ** (ನಾ). ಕಡಮೆಯಾದ ತೂಕ (?): ೫೮೫ ಈ ೨೦೦ ರೊಳಗೆ ೧೫೫ ಕಳೆಯಲು ೪೫ ಈ ದಿಗಹಾರ ೫೮೫ ನ್ನು ೪೫ ರಿಂದ ಭಾಗಿಸಲು ನಷ್ಟತೂಕ ಬರುವದು (ಭಾಸ್ಕರ. ೩೮-೯). [ ನಷ್ಟ + ತೂಕ ]

**ನಷ್ಟದಾಸ** (ನಾ). ಕೆಟ್ಟ ಆಳು ; ನೀಚನಾದ ಸೇವಕ : ಸೃಷ್ಟಿಯೊಳಗೆ ಬಹುಧನವಂತರ ಮನೆಯ ಮೆಟ್ಟು ಕಂಡರೆ ಬಿಡದಿಪ್ಪ ದಾಸ ನಾನು ನಷ್ಟ(ನಷ್ಟೆ)ದಾಸನು ಕಷ್ಟದಾಸನು ನಾನು (ಮೋಕ್ಷದೀ. ೭೫-೮). [ ನಷ್ಟ + ದಾಸ ]

**ನಷ್ಟದೃಷ್ಟಿ** (ನಾ). ದೃಷ್ಟಿಯನ್ನು ಕಳೆದುಕೊಂಡವನು ; ಕುರುಡ. [ ನಷ್ಟ + ದೃಷ್ಟಿ ]

**ನಷ್ಟದ್ರವ್ಯ** (ನಾ). ಕಳೆದುಹೋದ ವಸ್ತು. [ ನಷ್ಟ + ದ್ರವ್ಯ ]

**ನಷ್ಟಧನ** (ನಾ). ಕಳೆದುಹೋದ ಸಂಪತ್ತು. [ ನಷ್ಟ + ಧನ ]

**ನಷ್ಟಪರಿಹಾರ** (ನಾ). ಆದ ನಷ್ಟವನ್ನು ತುಂಬಿ ಕೊಡುವುದು : ನಷ್ಟ ಪರಿಹಾರ (ದ್ರವ್ಯ); ದಂಡ (Damage. ಇಂಕನಿ). [ ನಷ್ಟ + ಪರಿಹಾರ ]

**ನಷ್ಟಪ್ಪ** (ನಾ). ಒಬ್ಬಾತನ ಹೆಸರು : ಶನ್ತಪನ ಮಗ ದೇವೆಟಿಯಗೆ ನಷ್ಟಪ್ಪ ಗೊಣ್ಡು ಕೊಟ್ಟನ್ (ಎಕ. VIII, ಸೊರಬ. ೫೭೧-೨೯; 692). [ ? + ಅಪ್ಪ$_1$ ]

**ನಷ್ಟಬಲ** (ನಾ). ೧. ಶಕ್ತಿಹೀನ. ೨. ಸೈನ್ಯವನ್ನು ಕಳೆದುಕೊಂಡವನು: ಬಾಣ ವಿಧ್ವಂಸನವಾದ ಮೇಲೆ ನಷ್ಟಬಲನಾಗಿದ್ದ ನನ್ನಿಯ ಗಂಗನಿಂದ ರಾಚಮಲ್ಲನು ಕಳೆದು ಹೋಗಿದ್ದ ರಾಜಧಾನಿಯನ್ನು ಕಿತ್ತುಕೊಂಡನು (ಕರ್ನಾಆ. ೧೨೨). [ ನಷ್ಟ + ಬಲ$_2$ ]

**ನಷ್ಟಮೂಲ** (ನಾ). ಬೇರಿಲ್ಲದ್ದು ; ಬೇರು ಒಣಗಿದುದು : ಸಸಿಗೆ ನೀರೆಱೆದರೆ ಎಳಕುವುದಲ್ಲದೆ ನಷ್ಟಮೂಲಕ್ಕೆ ಹೊತ್ತು ನೀರ ಹೊಯ್ದರೆ ಎಳಕುವುದೆ ಮಾರಯ್ಯ (ವಚಸಂ. ೩೯೫-೧೮). [ ನಷ್ಟ + ಮೂಲ ]

**ನಷ್ಟರಾಜ** (ನಾ). ರಾಜನನ್ನು ಕಳೆದುಕೊಳ್ಳುವಿಕೆ; ರಾಜನೇ ಇಲ್ಲದಂತೆ ಆಗುವಿಕೆ : ಪರಲೋಕಪ್ರಾಪ್ತನಾದೊಡೆ . . . ಆತಂಗೆ ಪರಲೋಕಕ್ರಿಯೆ ಗಳಂ ಮಾಡಿ ರಾಜ್ಯಂ ನಷ್ಟರಾಜಮಾದುದರ್ಕೆ ಮಱುಗಿ ಯೋಜನಗಂಧಿ ಸಿಂಧುಪುತ್ರನನಿಂತೆಂದಳ್ (ಪಂಪಭಾ. ೧-೮೦ ವ). [ ನಷ್ಟ + ರಾಜ ]

**ನಷ್ಟವೀರ್ಯ** (ನಾ). ವೀರ್ಯವು ನಾಶವಾಗುವಿಕೆ ; ಧಾತುಕ್ಷಯ ; ಒಂದು ರೋಗ : ಬಲೇಯಾದಿ ಲೇಹ್ಯ . . . ಅಪಸ್ಮಾರ, ನಷ್ಟವೀರ್ಯ ಮೊದಲಾದ ಸಮಸ್ತ ಪಿತ್ತರೋಗಗಳೂ ಮಾಣುವುವು (ಸಕವೈ. ೪೧೩). [ ನಷ್ಟ + ವೀರ್ಯ ]

**ನಷ್ಟಶತ್ರು** (ನಾ). ಶತ್ರುಗಳನ್ನು ನಾಶಮಾಡಿದವನು, ಶತ್ರುಗಳಿಲ್ಲ ದವನು : ಜಯಶೀಲನಾಗಿ ನಷ್ಟಶತ್ರುವಾಗಿರುವ ನಿನಗೆ ಒಂದು ಯುಗ ಒಂದು ಕ್ಷಣದಂತೆ ಕಾಣುತ್ತಿರಬೇಕು (ಅಗ್ರಹ. ೮). [ ನಷ್ಟ + ಶತ್ರು ]

**ನಷ್ಟಸಂತಾನ** (ನಾ). ೧. ಪುನರ್ಜನ್ಮವಿಲ್ಲದವನು ; ಹುಟ್ಟಳಿದವನು : ಕಿಚ್ಚಿನ ದೇವನು ಕೆಂಡದ ದೇವನು ಮಾರಿಯ ದೇವನು ಮಸಣದ ದೇವನು ತಿರುಕಗೊರವನೆಂದು ಅಲ್ಲಲ್ಲಿ ಒಂದೊಂದನಾಡುತ್ತಿಪ್ಪರಯ್ಯ ನಾ ನಿಮ್ಮ ಪೂಜಿಸಿ ನಷ್ಟಸಂತಾನವಾ[ಪಾಠಾಂ. ನಾ]ಗಿ ಬಟ್ಟ ಬಯಲಲ್ಲಿ ಬಿದ್ದು ಕೆಟ್ಟೆನು (ಅಪಚಂ. ೧೨೦-೫೪೫). ೨. ಮಕ್ಕಳನ್ನು ಕಳೆದುಕೊಂಡವನು ; ಮಕ್ಕಳಿ ಲ್ಲದವನು : ಮುಪ್ಪಿನ ವಯಸ್ಸಿನಲ್ಲಿ ನಷ್ಟಸಂತಾನನಾದ ಅವನನ್ನು ನೋಡಿ ಕೊಳ್ಳಲು ಯಾರೂ ಮುಂದೆ ಬರಲಿಲ್ಲ (ರೂಢಿ). [ ನಷ್ಟ + ಸಂತಾನ ]

**ನಷ್ಟಸಮಾಸ** (ನಾ). [ ಕಾವ್ಯಮೀ ] ಹದಿನೆಂಟು ಕಾವ್ಯದೋಷಗಳಲ್ಲಿ ಒಂದು ; ಪದಸಮುಚ್ಚಯದಲ್ಲಿ ಸಮಾಸವಾಗಬೇಕಾದ ಕಡೆ ಸಮಾಸ ಮಾಡದೆ ಇರುವುದು : ಅಸದರ್ಥಂ ವಿಪರೀತಕಲ್ಪನೆಯಭವ್ಯಂ ದುಷ್ಕರಂ ಗ್ರಾಮ್ಯನೀರಸಮುಪ್ರೌಢತೆಯಪ್ರತೀತಿವಚನಂ ದುಸ್ಸಂಧಿವಿಶ್ಲೇಷ ನಷ್ಟ ಸಮಾಸಂ[ಪಾಠಾಂ. ನಂ] ನಯನಾಶನೀತಿವಿಫಲಂ ದುರ್ಲಕ್ಷಣಂ ಹಾಸ್ಯ ವಾಗ್ವಿಷಮಾಸೌಮ್ಯಮನೋಜೆಯೆಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೧-೪೭ ಅಡಿಟ). [ ನಷ್ಟ + ಸಮಾಸ ]

**ನಷ್ಟಾಂಬರ** (ನಾ). ಉಡುಪನ್ನು ಕಳೆದುಕೊಂಡವನು ; ಬಟ್ಟೆಯಿಲ್ಲ ದವನು ; ಬತ್ತಲೆಯಾಗಿರುವವನು ; ದಿಗಂಬರ : ಎಲವೋ ನೀ ದಿಟ ವೀರ ತಪ್ಪದು. . . ಕಾದಿ ಬಳಲಿದೆ ತೊಲಗು ನಷ್ಟಾಂಬರನ ಕೊಲ್ಲೆನಕೀರ್ತಿ ಬಹುದು (ಕೌಶಿರಾ. ೨೨-೫೨). [ ನಷ್ಟ + ಅಂಬರ ]

**ನಷ್ಟಾಗ್ನಿ** (ನಾ). ಹೋಮಾಗ್ನಿಯು ನಂದಿಹೋದವನು : "ವೀರಹಾ, ನಷ್ಟಾಗ್ನಿಃ–ಉತ್ಸರ್ಗೇಷ್ಟಿಯನ್ನು ಮಾಡಿ ಗಾರ್ಹಪತ್ಯಾಗ್ನಿಯನ್ನು ಬಿಟ್ಟವನ ಪೆಸರುಗಳು" (ಸಿದ್ಧಾಂತಿ. ೨೩೨). [ ನಷ್ಟ + ಅಗ್ನಿ ]

**ನಷ್ಟಾಯ** (ನಾ). ಆದಾಯ ಹಾಳಾಗುವುದು ; ಕಡಮೆ ಆದಾಯ : ದುಡಿಯುತ್ತ ಹೋದಂತೆ ಅನುಭವದಿಂದ ಹದ, ಹಿಡಿತ ಒದಗುತ್ತ ಹೋದಂತೆ ಶ್ರಮದ ಉತ್ಪಾದನೆಯು ನಷ್ಟಾಯವಿಲ್ಲದೇ ಹೆಚ್ಚುವ ಸಫಲ ತೆಯು ಬೆಳೆಯುತ್ತ ಹೋಗುವುದು (ಮಾವಾದ. ೧೩೭). [ ನಷ್ಟ + ಆಯ$_7$ ]

**ನಷ್ಟಿ** (ನಾ). ೧. ಕೇಡು ; ಹಾನಿ : "ನಷ್ಟಂ, ನಷ್ಟಿಃ, ನಾಶಃ, ನಶ್ಯಃ, ನಾಶ್ಯಃ, ನಷ್ಟವ್ಯಂ, ಈ ೬ ಹೋಕು" (ಕಾಶಕ್ಕ. ೧೮೯) ; ಅಲ್ಲಿಯ ನಷ್ಟಿ ತುಷ್ಟಿಗೆ ಆವುದಕ್ಕೆ ಅರಸು ನಾಡು ಆರು ಹಿಡಿಯ ಸಲ್ಲದೆಂದು (ಮೈಆರಿ. ೧೯೩೨, ೪೨-೩೦ ; 1418) ; ನಷ್ಟಿಯಲಿ ತುಷ್ಟಿಯಲಿ ಮನವನು ಬಿಟ್ಟು ಹಿಡಿಯದೆ ಕಾಲಕರ್ಮವ ಮೆಟ್ಟಿ ನಿಲೆ ಭಗವಂತನೆನಿಸುವೆ (ಕುವ್ಯಾಉ. ೪-೮); ನಷ್ಟಿಯಿದು ಸಂಸಾರದೊಳಗುತ್ಕೃಷ್ಟವಿದು . . . ಕಾಲಕರ್ಮದ ಕಟ್ಟಳೆಯಿ ದೆಂದಱಿದು ನಡೆವಂಗಿಟ್ಟಣಿಸುವುದದಾವುದೈ (ಕುವ್ಯಾಉ. ೪-೨೨) ; ಕಷ್ಟ ವಿಷಯದ ಧ್ಯಾನದಿಂ ಬಹ ನಷ್ಟಿಯನು ವರ್ಣಿಸುವೆ(ನಿಭಾಗ. ೧೦-೨೮-೧೭). ೨. ಕೆಡಿಸಿದುದು ; ಹಾಳುಮಾಡಿದುದು ; ಮಿಶ್ರಮಾಡಿದುದು. 'ನಷ್ಟಿಗೈ' ಪರಾ. [ ಸಂ. ]

**ನಷ್ಟಿಗೈ** (ಕ್ರಿ). ಕೀಳುಹೊನ್ನಿನ ಬೆರಕೆಯಿಂದ ಹೀನಗೊಳಿಸು,–ಮಿಶ್ರಣ ದಿಂದ ಬಣ್ಣಗೆಡಿಸು : ತುಷ್ಟಿಯನೈದಲ್ ಮಿಶ್ರವರ್ಣದಿನೊರ್ತರ್ ನಷ್ಟಿ ಗೈದಿರ್ದ ಪೊನ್ನಂ ನೆಟ್ಟನೆ ತೆಗೆಯಲ್ಕೆ ಬಕ್ಕು ನಷ್ಟದ ಬಣ್ಣಂ (ವ್ಯವಹಾ. ೪೭-೫೪). [ ನಷ್ಟ + ಗೈ ( < ಕೆಯ್$_1$ ) ]

**ನಷ್ಟೇಂದುಕಲೆ** (ನಾ). ಚಂದ್ರಕಲೆ ಕಾಣದಿರುವ ಅಮಾವಾಸ್ಯೆ : "ನಷ್ಟೇಂದುಕಲಾ – ಕಾಣಿಸಲ್ಪಡದೆ ಇರುವ ಚಂದ್ರಕಲೆಯುಳ್ಳ . . . ಅಮಾವಾಸ್ಯೆಗೆ ಕುಹೂ ಎಂದು ಹೆಸರು" (ಸಿದ್ಧಾಂತಿ. ೩೭). **P ಅಮಾವಾಸ್ಯೆ**

ಎರಡು ವಿಧವಾಗಿದೆ. (೧) ದೃಷ್ಟೇಂದುಕಲೆ. (೨) ನಷ್ಟೇಂದುಕಲೆ. ಚತುರ್ದಶಿಯಿಂದ ಕೂಡಿದ ಅಮಾವಾಸ್ಯೆಯಲ್ಲಿ ಚಂದ್ರಕಲೆಯಿರುವುದರಿಂದ ಅದು ದೃಷ್ಟೇಂದುಕಲೆ. ಇದನ್ನು ಸಿನೀವಾಲೀ ಎಂದು ಕರೆಯುತ್ತಾರೆ. ಚಂದ್ರಕಲೆಯಿಲ್ಲದಿರುವ ಅಮಾವಾಸ್ಯೆ ನಷ್ಟೇಂದುಕಲೆ. ಅದನ್ನು ಕುಹೂ ಎಂದು ಕರೆಯುತ್ತಾರೆ. ಎರಡು ದಿನಗಳಲ್ಲಿ ಅಮಾವಾಸ್ಯೆ ಇದ್ದರೆ ಮೊದಲನೆಯದು ಸಿನೀವಾಲಿ, ಎರಡನೆಯದು ಕುಹೂ ಆಗುತ್ತದೆ ಎಂದು ವೇದದಲ್ಲಿ ಹೇಳಿದೆ. ಈ ತಿಥಿಗಳ ಅಧಿದೇವತೆಗಳಿಗೂ ಇದೇ ಹೆಸರಿದೆ. ಇವರಿಬ್ಬರೂ ಅಂಗೀರಸಮುನಿಯ ಮಕ್ಕಳು, ದೇವಪತ್ನಿಯರು ಎಂದು ಋಕ್ಸೂಕ್ತದಲ್ಲಿದೆ. ಈ ಎರಡು ತಿಥಿಗಳಲ್ಲೂ ಜನನವಾದರೆ ಅನಿಷ್ಟವುಂಟಾಗುವುದರಿಂದ ಶಾಂತಿ ಮಾಡಿಕೊಳ್ಳಬೇಕೆಂದು ಶಾಸ್ತ್ರವಚನಗಳಿವೆ. [ ಸಂ. ನಷ್ಟೇಂದುಕಲಾ ]

**ನಷ್ಟೇಂದ್ರಿಯ** (ನಾ). ೧. ಪಂಚಜ್ಞಾನೇಂದ್ರಿಯಗಳ ಶಕ್ತಿಯನ್ನು ಕಳೆದುಕೊಂಡವನು. ೨. = ನಷ್ಟವೀರ್ಯ : ಅಂತರದಾವರೆ : – ಈ ಎಲೆಯ ರಸವಂ ಸಕ್ಕರೆ ಬೆರೆಸಿ ತೆಗೆದುಕೊಳ್ಳಲು ನಷ್ಟೇಂದ್ರಿಯ ಗುಣ (ವಿಶ್ವವಿ. ೧). [ ನಷ್ಟ + ಇಂದ್ರಿಯ ]

**ನಷ್ಟೋದ್ಧಾರ** (ನಾ). ಶಿಥಿಲವಾದುದನ್ನು ಕಟ್ಟಿಸಿ ಸರಿಪಡಿಸುವುದು ; ಜೀರ್ಣೋದ್ಧಾರ : ಶ್ರೀರಾಮೇಶ್ವರದೇವರ ಗೋಪುರದೊಳಗಣ ನಷ್ಟೋದ್ಧಾರಕ್ಕಂ ಕೊಟ್ಟರು (ಕಇಆ. ೧-೧-೧೦ ; 1092). [ ನಷ್ಟ + ಉದ್ಧಾರ ]

**ನಸಕು** 'ನಸುಕು$_3$' ನೋ.

**ನಸನಸೆ** 'ನಸೆನಸೆ' ನೋ.

**ನಸಗುನ್ನಿ** 'ನಸುಗುನ್ನಿ' ನೋ.

**ನಸರ್** 'ನಜರು' ನೋ.

**ನಸರಾಣಿ** 'ನಸ್ರಾಣಿ' ನೋ.

**ನಸರಿ** (ನಾ). ಒಂದು ಬಗೆಯ ಜೇನು ; ಮರದ ಪೊಟರೆಗಳಲ್ಲಿ ಕಟ್ಟುವ ಜೇನು : ದತ್ತನು ಮಂಗನಲ್ಲ ಧಾವಳಿ ಮಡಿಯಲ್ಲ . . . ಚಾವಡಿ ನೆಲೆಯಲ್ಲ ನಸರಿಯು ಜೇನಲ್ಲ ಬಾಣಂತಿ ಚೆಲುವೆಸೀನಲ್ಲ (ಇಂಜಾಪ. ೧೭೦-೪೨). 'ನಸರಿಹುಳ' ಪರಾ. [ ←ಹಿಂ. ನಸರೀ ]

**ನಸರಿತುಪ್ಪ** (ನಾ). = ನಸರಿ : ಪುತ್ತಿನೊಳಗಿರ್ದ ತುಡುವೆಜೇನಂ, ಮರದ ಬಿರುಕಿನೊಳಗಣ ನಸರಿತುಪ್ಪಮಂ ಬಂಡೆಯಿಂ ಜೋಲ್ವ ಹೆಜ್ಜೇನ್ಗಳಂ ಕಿಳ್ತರೊಪ್ಪಂಮಾಡಿ ಪಣ್ಬಲಂಗಳನೂಡಿ ಬನದೌತಣವನುಂಡರನಿಬರುಂ (ಶ್ರೀರಾಮಾ. ೩೭೭-೧೩೨). [ ನಸರಿ + ತುಪ್ಪ ]

**ನಸರಿಹುಳ** (ನಾ). ನಸರಿ ಎಂಬ ಜೇನನ್ನು ಕೂಡಿಡುವ ಜೇನ್ನೊಣ : (+). [ ನಸರಿ + ಹುಳ (<ಪುೞು) ]

**ನಸರು** 'ನಜರು' ನೋ.

**ನಸರುಬಂದಿ, ನಸರ್ಬಂದಿ** (ನಾ). ನಿರ್ದಿಷ್ಟಸ್ಥಳದಿಂದ ಹೋಗದಂತೆ ಹಿಡಿದು ಹಾಕುವ ಶಿಕ್ಷೆ,-ಬಂಧನ; ಸ್ಥಾನಬದ್ಧತೆ: ಕಂಪನಿ ಸರ್ಕಾರದವರು ವೆಂಕಟಪ್ಪಾಜಿ, ತಂಜಾವೂರ ನಾಯಕ ಮೊದಲಾದವರನ್ನು ಅಕಸ್ಮಾತ್ತಾಗಿ ಬೆಂಗಳೂರಿಗೆ ಸಾಗಿಸಿ ನಸರುಬಂದಿಯಲ್ಲಿಟ್ಟರು (ಕುಂರಾಜ. ೪೫). **ನಸರ್ಬಂದಿ:** ಅದಕ್ಕೆ ಸಂಬಂಧಪಟ್ಟ ಜನರನ್ನು . . . ಹಿಡಿದು ನಸರ್‌ಬಂದಿಯಲ್ಲಿಡುತಾ ಇದಾರೆಂದು ಅಲ್ಲಲ್ಲಿ ಜನರು ಹೇಳಿಕೊಳ್ಳುತಾ ಬಂದರು (ಮುಸುಂಗ. ೧೪೭). 'ನಜರಂಕೈದು' ಪರಾ. [ ನಸರು (<ನಜರು) + ಬಂದಿ$_1$/ಹಿಂ. ನಜರ್ಬಂದೀ ]

**ನಸರ್ಬಂದಿ** 'ನಸರುಬಂದಿ' ನೋ.

**ನಸವೆ** (ನಾ). (?) : ಕೊಟ್ಟ ನೆಲಂ ಮತ್ತಪ್ಪೇರೂರೊಳಯ್ದುಬುಮನೆಯಯ್ವತ್ತು ಪೂವಿನ ತೋಂಟ ಮತ್ತರೆರಡು ಚತುಸ್ಸೀಮೆ (ಎವಾ ಪರ್ಯ್ಯಂತಮೆರಡುಂ ನಸವೆ ರಾಜಾ(ಜ) ರಕ್ಷಿತಂ ಧರ್ಮ್ಮ (ಇಆ. XVIII, ೨೭೪-೩೭ ; 1022). [ ? ]

**ನಸಿ$_1$** (ಕ್ರಿ). ೧. ಹಾಳಾಗು ; ನಾಶವಾಗು ; ಅಳಿದುಹೋಗು : "ನಸಿ – ಜೀರ್ಣೇ, ನಷ್ಟಚೇಷ್ಟಾಯಾಂ ಚ (ನಿಶ್ಚೇಷ್ಟಿತನಾಗು)" (ಶಮುಧಾ) ; ಎಸೆವ ತ್ರಿಪುಂಡ್ರಾಂಕ ಭಸಿತ ರುದ್ರಾಕ್ಷೆ ಜಪ ಶಶಿಧರಾರ್ಚನೆ ಹೋಮ ತಪವನಿತುವುಂ ನಸಿದು ಹೋಹವು ದೀಕ್ಷೆಪೊಸಗೆಯಿಲ್ಲದೆ ನರಂಗುಸುರ್ದ ಭೀಮಾಖ್ಯ ತಂತ್ರಾಗಮವದಂ (ಸಾನಂಚ. ೩-೧೩) ; ದುಷ್ಟಪ್ರಸರದೇಳಿಗೆ ಪಾಪಿಯೋಲಗ ಹುಸಿಯ ಬಾಳುವೆ ಹುದುವಿನಾರಂಭದ ಫಲೋದಯವು ನಸಿದು ಹೋಗದೆ ಲೋಕದೊಳಗವು ಹೆಸರುವಡೆವವೆ (ಕುವ್ಯಾಆ. ೮-೪೮) ; ಝಳದ ಸುಯ್ಲಿನ ಮುಖದ ಮೋನದ ನೆನಹುಗಳ ಕಳದ ಕಡುಹಿನ . . . ನೃಪತಿಗಳನಗ್ಗಳಿಯ ರವಿಸುತ ಕಂಡು ಹೊಗಳಿದನಾ ಘಟೋತ್ಕಚನ (ಕುವ್ಯಾದ್ರೋ. ೧೬-೨೦) ; ನಸಿಯದಿರದಿನ್ನಸುರವಂಶದ ಸಸಿಯ ಬೆಳಸೆನುತ (ತೊರರಾ. ೩-೮-೫೦) ; ನೋಡಲು ನಸಿದು ಪೋಪುದು ಪಾಪವೆಂದು ಕೊಂಡಾಡಿದರ್ ಕುಶಲಜ್ಞರೊಲಿದು (ಮೋಹತ. ೪೨-೩೩) ; ವಿಷಮವಹ ಮನಸಿನ ವಿಕಲ್ಪದಲೆಸೆದು ತೋಱುವ ನಾಮರೂಪಿನ ವಿಸರವಹ ಭೇದ ಸಸಿನೆ ಗುರುಮುಖದಿಂದ ತಿಳಿಯಲು ನಸಿದು ಪೋಪುದು ಸ್ವಪ್ನದಂದದಿ (ಅಮೃತ. ೮-೨೭). ೨. ನವೆ ; ಸೊರಗು ; ಕೃಶವಾಗು ; ಬಡವಾಗು : ಒಡಲುಳ್ಳನಿತುಂ ನಸಿದೊಡೆ ಬಿಡಲಾಱಂ (ಸಮುಪ. ೫-೪) ; ನಸಿದು ಬೆಳೆಯದೆ ಕೊಬ್ಬಿ ಮೊಡ್ಡಿತಹ ತೆನೆಗಳೊಳು (ಸಿದ್ಧರಾ. ೨-೨೪) ; ನಸಿವ ಮುಷ್ಟಿನ ದೇಹ ತಾನದು (ಕುವಾಅ. ೦೦೪. ಪರಿ. ೩೩೩) ; 'ನಸಿಗುಂತ್ತ', 'ನಸಿಬೇನೆ' ಪರಾ. ೩. ಮೈಮರೆ ; ನಿಶ್ಚೇಷ್ಟಿತನಾಗು : "ನಸಿ – ಜೀರ್ಣೇ" ನಷ್ಟಚೇಷ್ಟಾಯಾಂ ಚ (ನಿಶ್ಚೇಷ್ಟಿತನಾಗು)" (ಶಮುಧಾ). ೪. (ಭಾರದಿಂದ) ಬಾಗು ; ಕಂಗೆಡು ; ಕುಸಿ : ಕೊರಲ್ ನಸೆ[ಸಿ]ಯೆ ನಟ್ಟು ನಿಲೆ ಕಿವಿ ಬಸಿಱಕ್ಕುಱಿಸೆ ದಡದಡಿಸಿ ಕಾಲ್ಗಳನೆಱೆಯೆ ತುರಂಗಮುದ ಕುತ್ತಮುದು ಮೃಗಜಂಭದ (ಅಕ್ಷಶಾ. ೧೩-೩೩) ; ಕುಸಿಯನೇ ಕೂರುಮನು ಭಾರಕ್ಕೆ ನಸಿಯನೇ ನಾಗೇಂದ್ರನಾನೆಗಳುಸುರು ಹದುಳವೆ ನೋಡೆನಲು ಬಂದುದು ನೃಪವ್ರಾತ (ಕುವ್ಯಾಉ. ೨-೧೯) ; ಫಣೀಶ್ವರನ ಪೆಡೆಗಳ್ ಮಣಿದುವಾದಿ ಕೂರ್ಮಂ ನಸಿದ ಸರಸಿಜಭವಾಂಡ ಖರ್ಪರಮನುಱೆ ಕರ್ಚಿದ (ಜಬಪು. ೨೭-೧೧) ; ಭೋಗಿಪನ ಭೋಗಂ ನಸಿಯೆ ದೆಸೆಗೊಡೆಯರ್ ಸರಿಯೆ . . . ಸಬ್ಬನಬ್ಬರಂ ಕಡಿದಾಯ್ತು (ರಾಮಾಕ್ಷ. ೧೩೧-೨೭). ೫. ಒಡೆ ; ಸೀಳು ; ಛಿದ್ರವಾಗು : ನಸಿದುದಾತನ ವರ್ಮ ಕರ್ಮವನುಸುರ್ವ ಬಲುಗೊಂಡೆಯ ತನವು ನಿಪ್ಪಸರದಲಿ ಜಡಿದಿಟ್ಟನೀತನಾತುಕೋಯೆನುತ (ತೊರರಾ. ೬-೪೭-೧೦). ೬. ಬಳಲು ; ಆಯಾಸಗೊಳ್ಳು ; ಉತ್ಸಾಹಗುಂದು : ಹಸಿದೆವೆಂಬರು ಕೆಲರು ತೃಷೆಯೆಂಬವರ್ಕೆಲರು ನಸಿದೆವೆಂಬರ್ಕೆಲರು ಛಳಿಯೆಂಬವರ್ಕೆಲರು (ಸಾನಂಚ. ೪-೧೯ ರಗಳೆ) ; ನಂದಿಯ ನೋಡಿ ನೀಂ ತಪಕೆ ನಿಶ್ಚಲಚಿತ್ತನಾದ ಕಾರಣಮಾದೇನುಸಿರೆನಲ್ ನಸಿದ ಮಾನಸನುಸಿರ್ದನು (ನಂದಿಮಾ. ೯-೫೬). ೭. ಕಂಗೆಡು ; ದಿಕ್ಕುತೋಚದಂತಾಗು : ಛಾಯವಾಯ್ತರ್ಜುನಗೆ . . . ಬಾಯ ಬಿಟ್ಟುದು ಭೀತಿಯಲಿ ಕೌಂತೇಯಸುತರಿನ್ನುಳಿದ ಸುಭಟರ ನಾಯಕರ ಪಾಡೇನು ನಸಿದುದು ಪಾಂಡುಸುತಸೇನೆ (ಕುವ್ಯಾದ್ರೋ. ೧೮-೪೯) ; ಕೂಡೆ ಹಱಿಹಂಚಾದ ಸುಭಟರು ಕೂಡಿಕೊಂಡುದು ನೊಂದು ನಸಿದವರೋಡಿದವ ರೊಗ್ಗಾಯ್ತು ಕುರುರಾಯನ ಪರೋಕ್ಷದಲಿ (ಕುವ್ಯಾಗ. ೧-೬೭) ; ಮಬ್ಬಿನೊಳಗಾಚರಿಸಿ ಕೆಡೆವರಿಂ ಮಡಿವರಿಂ . . . ಒಬ್ಬೊಬ್ಬರಿಂತಾಗಿ ಬೀಳ್ವರಿಂ ದೇಳ್ವರಿಂದೆಬ್ಬಿಸಲ್ ದಿಕ್ಕಿಲ್ಲದಳಿವರಿಂ ಕೊಳಿವರಿಂ ಸಬ್ಬಲೋಕದೊಳೆ ಜಾನಿಸುವರಿಂ ನಸಿವರಿಂ ಪೇಳಲದ್ಭುತಮಾದುದು (ಜಬಪು. ೪೭-೨೦). ೮. (ಅಂತರಂಗದಲ್ಲಿ) ಮಾತ್ಸರ್ಯ ಪಡು ; ಕರುಬು : ಗೋಕದಂಬವ ನೋಡುವುದು ನೆವ ಕುರುಪತಿಯ ಗಾಢದ ಸಗಾಢಿಕೆಯ ನೋಡಿ ನಸಿಯಲಿ

ಪಾಂಡುಸುತರು (ಕುವ್ಯಾಆ. ೧೭-೨೦). ೯. ತಗ್ಗು ; ಕಡಮೆಯಾಗು ; ಇಳಿ : ನಸಿದ ಗರ್ವದ ನೆಗ್ಗಿದಾಳ್ತನದೆಸಕದೊಣಗಿಲಬಾಯ ಭೂಪನ ಕಂಡನಾ ದ್ರೋಣ (ಕುವ್ಯಾದ್ರೋ. ೫-೨೧) ; ಮುರಿಮುರಿದು ಕಬ್ಬೊಗೆಯ ಹೊದಚಿನ ಹೊರಳಿ ಹರೆದುದು ಸೂಸುಗಿಡಿಗಳ ನೆರವಿ ನಸಿದುದು ನಿಮಿರ್ದ ಹೊಂಗಜಿ ಯಂಬು ಹೊಳೆಹೊಳೆದು ಮುರಹರನ ಪಾದಾರವಿಂದದ ಹೊರೆಯೊಳಡಗಿತು (ಕುವ್ಯಾದ್ರೋ. ೧೯-೫೦); ನಸಿದ ಕಾಮವ ಪೆರ್ಚಿಸುವ ದಿವ್ಯಘುಟಿಕೆಯ ಹಸುರ್ಗರಡಿಗೆಯೊಳು ತುಂಬಿ ರಸೆಯೊಳು ಮೆಚಿಸಲು ಕಟ್ಟದಂದದಲಿ ಕಣ್ಗೆಸೆದುವು ಪೂಗವೃಕ್ಷಗಳು (ಮೋಹತ. ೨೪-೪೩) ; ಹೇಮಂತ ಶೈಶಿರದ ಮಾಗಿ ಮಡಲಿಡೆ . . . ಬಿಸಿಲ್ ಬೆಳ್ದಿಂಗಳವೊಲಾಗೆ ತಾಮರಸರಾಜಿ ನಸಿದುವು ಕುಗ್ಗಿದುವು ಕೋಗಿಲೆಯ ಕಂಠಕಲರವಗಳು (ಜೈಮಿಭಾ. ೨೮-೧). ೧೦. ಕಳೆ ; ಮುಗಿ ; ವ್ಯತೀತವಾಗು : ನಸಿದ ಯುಗದವಸಾನದ ಲಳಿ ಮಸಗಿ ಲಯಶಿಖಿ ಶಿಖಿಯೊಳಗೆ ಲಂಬಿಸುವವೊಲು ಹಳಚಿದವು ಬಲವೆರಡಳುಕೆ ಭುವನಚಯ (ತೊರರಾ. ೬-೧೩-೩೨) ; ಹುಸಿಯದ್ಯೆ ನಾಲ್ವತ್ತು ವರುಷವು ನಸಿದುಪೋಪವುಯಷ್ಟಲಗ್ನದೊಳೆಸೆಯೆ ಮಂದಿಗಳಿಂದು ಸುತ ಸಂಬಂಧ ವಾಗಿರಲು (ಕೇರಪ್ರ. ೨-೩೧). ೧೧. ಹಾಳಾಗು ; ಕೊಳೆತುಹೋಗು ; ಕೆಡು : ಹಸಿಯ ಕಾಯ ಕೊಯ್ದು ತಂದು ಬಿಸಿಯ ತೋಚಿ ಮುಸುಕಿ ಇಡಲು ನಸಿದು ಕೆಡುವದಲ್ಲದದುವೆ ಪಕ್ವವಪ್ಪುದೆ (ಸುಸಾರ. ೭೩-೨) ; ನಸಿದ ಬೆಣ್ಣೆ ಗಸಿ ಹಾಗೆ (ಗಾದೆ).

**ನಸಿದಾಡು** = ಹಾಳಾಗು ; ಕೆಡು : ಹಸಿದುಂಬ ಅಣ್ಣಗಳೆಲ್ಲರು ಅಸುವಿನ ಘಾತಕ್ಕೊಳಗಾದರು ಹಸಿಯ ವಿಷಯಂಗಳಲ್ಲಿ ನಸಿದಾಡದೆ ಹುಸಿಯದೆ ಮರ್ತ್ಯರಂತೆ ಗಸಣಿಗೊಳ್ಳದೆ ದಯದೆಚಿಕದಲ್ಲಿರು ಬಂಕೇಶ್ವರಲಿಂಗವನಚಿ ವುದಕ್ಕೆ (ಸುಂಕಬಂ. ೬೫೮-೩೯).

[ ದೇ.॥ ತಮಿ. ನಚಿ; ಕುರುಖ್. ನಸ್ರನಾ./ಸಂ. ನಶ್ ]

ನಸಿ$_2$ 'ನಸೆ$_1$' ನೋ.

ನಸಿ$_3$ 'ನಶ್ಯ' ನೋ.

ನಸಿಕ (ನಾ). ಸೊರಗಿದವನು ; ಬಡವಾದವನು ; ಕೃಶಾಂಗ : ನಸಿಕಂ, ನಸೆ ಇತಿ ವಯಸಾ ವ್ಯಾಧಿನಾ ಕೃತ್ರಿಮವಿಷೇಣ ವಾ ಜೀರ್ಣಂ ಗಾತ್ರಂ ತದ್ವಾನ್ (ಶಬ್ದಾನು. ೪೪೦ ವ್ಯಾಖ್ಯಾ) ; ಬಾರಿಕಂ, ನಸಿಕಂ, ಕುಸಿಕಂ (ಶಬ್ದಾನು. ೪೪೦ ಪ್ರಯೋ). [ ನಸಿ$_1$ + –ಕ$_3$ ]

ನಸಿಗ (ನಾ). = ನಸೆಗಾಚಿ : ನಸಿಗನೊಳಗ್ಗದ ನಸಿಗಂ ಬಸನಿಗಳೊಳ್ಮಿಕ್ಕ ಬಸನಿಗಂ . . . ಸತ್ಪಳಮಂ ನಿಯಮಿಸಿ ಧರ್ಮಪಥಕ್ಕೆದಂದು ನಿಲಿಪರ ಲೋಗರ್ (ಸಮಪ. ೭-೩೦). [ ನಸಿ$_2$ (<ನಸೆ$_1$) + –ಗ$_2$ ]

ನಸಿಗುತ್ತ (ನಾ). ಶರೀರ ನವೆಯುತ್ತ ಹೋಗುವ ಒಂದು ರೋಗ : ಎಸೆವಾ ವ್ರತಮಂ ಪ್ರತಿಪಾಳಿಸುತ್ತುಮಿರ್ದಂಗದೊರ್ಮೆ ಕರ್ಮದ ಬಸದಿಂ ನಸಿಗುತ್ತಂ ಪತ್ತಿ ವಿವರ್ಧಿಸುತಿರ್ದುದು ಬಂಧುಜನದ ಮನದುಮ್ಮಳಮಂ (ವರ್ಧಪು. ೧೬-೫೭). [ ನಸಿ$_1$ + ಕುತ್ತ ]

ನಸಿನಸಿನಗೆ (?). (?) : ಬಸವಳಿದು ಮಚುಗದಿರ್ ನಿರ್ನೆರಂ ಭರತ ನೋಯಿಸುವರಾರ್ ನೋಪರಾರ್ . . . ಸುಖದುಃಖದಿಮಿರವೆ ಪಗಲಿರುಳಂತೆ ಸಹಜಮಿದು ಪುಟ್ಟಿದರ್ಗೆ ಬೆಸನವಿಂತೆಮಗೆ ನಾಣ್ನುಡಿಗೆ ನಿನ್ನಿಂದೊದಗೆ ನಸಿನಸಿನಗೆಮ್ಮತ್ತಣಿಂ ತೋಚಿ ಲೋಕದಾಯಸಕೊರ್ವನೊರ್ವನಂ ದೂಚಿ ಮರುಳಾಗದೇಂ ಬಲ್ಲವರ್ಗೆಂದೊರೆದಳು (ಶ್ರೀರಾಮ. ೪-೩೫). 'ನಸೆನಸೆ' ಪರಾ. P ಇಲ್ಲಿ ಪಾಠದೋಷವಿರಬಂತೆ ತೋರುತ್ತದೆ. [ ? ]

ನಸಿಬ 'ನಸೀಬು' ನೋ.

ನಸಿಬೇನೆ (ನಾ).=ನಸಿಗುತ್ತ : ಮೂರನೆಯ ಕಂಪೌಂಡಿನೊಳಗಿಂದ ನಸಿಬೇನೆ ಹತ್ತಿದ ಸಪ್ಪಗಿನ ಮುಖದ ಒಬ್ಬ ತರುಣನು . . . ಬರುತ್ತಿದ್ದನು (ಮುಳ್ಳುಬೇ. ೧೭). [ ನಸಿ$_1$ + ಬೇನೆ ]

ನಸಿಮೆಯ್ (ನಾ). ಸೊರಗಿದ ದೇಹ ; ಬಡವಾದ ಮೈ : ವಿಸುನಿಯ ಮೊದೆಗಳಿನಪ್ಪೆಯ ನಸಿಮೆಯ್ಯುಂ ಸೊಬಗನೊಡಲ ಸೋಂಕಿದೆನ್ನಂ ಪಸ ಗೆಯ್ಮೆಯ ಚಳಕದೆ ಸಂತಸವಪೆದನುವದಿಪ ಕೆಳೆಯುನನುವಿಂ ತಣಿಸಾ (ಚಿಕವಿ. ೬-೧೧೫). [ ನಸಿ$_1$ + ಮೆಯ್ ]

ನಸೀಬ 'ನಸೀಬು' ನೋ.

ನಸೀಬವಾನ (ನಾ). ಅದೃಷ್ಟಶಾಲಿ ; ಸುದೈವಿ : ನಿನ್ನ ನಸೀಬ ಚೆನ್ನಾಗಿದೆ ಹಾಂ! ನೀನು ನಿಜವಾಗಿಯೂ ನಸೀಬವಾನನು (ಚೀನಬಾ. ೧೩).

[ ← ಮರಾ. ನಸೀಬಾವಾನ, ನಶೀಬವಾನ ]

ನಸೀಬು, ನಶೀಬ, ನಶೀಬು, ನಸಿಬ, ನಸೀಬ (ನಾ). ೧. ಹಣೆಬರಹ ; ದೈವ; ಅದೃಷ್ಟ: ಎಲ್ಲಾ ಅವರವರ ನಸೀಬು ಕಣ್ರಪ್ಪಾ (ಮೂಮನೆ. ೯೭); ಇನ್ನು ಅವನ ನಸೀಬಿನಲ್ಲಿದ್ದಂತಾಗಲಿ ಎಂದು ಅವಳೂ ಸುಮ್ಮನಾದಳು (ಮಸಕೂ. ೯) ; ನಿಮ್ಮ ನಸೀಬು ಗಟ್ಟಿಯಾಗಿತ್ತು ಬದುಕಿಕೊಂಡಿರಿ (ವಿದ್ಯಾರಿ. ೮೩). **ನಶೀಬ:** ೧. ಏನು ಮಾಡೋದು, ಆಕೆಯ (ದೀಪಹ. II,೧೩); ನಶೀಬ ಖೊಟ್ಟಿ ಅದ (ಕಾಗೆಕ. ೭೨) ; ಅವರವರ ನಶೀಬಾ ಅವರವರ ಸುತ್ತ "ಮುಂದೀ ನಶೀಬ ಏನಾದನೋ ಏನೊ!" ಎಂದು ತಂದೆ-ತಾಯಿಗಳಿಬ್ಬರೂ ಚಿಂತೆಗೊಳಗಾದರು (ನಡದಾ.II,೧೨೭೭). ೨. ದುರದೃಷ್ಟ ; ದುರ್ದೈವ ; ದೌರ್ಭಾಗ್ಯ : ನನಗ ಒಬ್ಬಗ ಹಂಗ ಬರಿ ಕೈಲೆ ಕಳಿಸಬೇಕು ಅಂಥ ತಮ್ಮಂಥವರ ವಿಚಾರಮಾಡಿದರ, ಅದು ನನ್ನದ ನಶೀಬ ಅಂದು ಕೊಳ್ಳಲ್ಯಾ (ಗಂಮಾಯಿ. ೦೦೭) ; ನನ್ನ ನಶೀಬ ನೋಡು ನಾ ಹೋದಾಗಲೇ ಇಂತಹ ಪುರಾಣ ನಡೆಯಬೇಕೆ? (ಮೂರುದಾ. ೪೩) ; ಸಂಸಾರದಾಗಿಂದ ಹೀಂಗ ಏಕಾಏಕೀ ಎದ್ದು ಹೋಗಬೇಕೆಂದರ ದೈವ, ನಶೀಬ (ಕ್ಷಿತಿಜ. ೫೭). ೩. ಸುದೈವ ; ಸೌಭಾಗ್ಯ : ಏನೋ ಯಾರ ಜೀವಕ್ಕೂ ಧಕ್ಕೆ ಆಗಲಿಲ್ಲ ನಶೀಬ (ಕಮ್ಮಟ. ೪೩). **ನಶೀಬು :** ೧. ಇವತ್ತಿನ ನಶೀಬು ಖರಾಬಾಯಿತು (ಜಂಗೂಲಿ. ೮೩) ; ಅವಳ ನಶೀಬಿನಲ್ಲಿ ಮದುವೆ ಬರೆದಿಲ್ಲವಾದುದರಿಂದ ಹೀಗೆಲ್ಲ ವಿಪರೀತವಾಯಿತು (ಸ್ವಪ್ನಹೂ. ೩೦೭) ; ಯಾವುದಕ್ಕೂ ಬೂದ ಮರಕಾಲನ ನಶೀಬೇ ಕಾರಣ (ಹೊಸಕ್ಕ. ೫೩). **ನಸಿಬ :** ೧. ಮುಖ್ಯ ನನ್ನ ಶೇಷನ ನಸಿಬ ಬಹಳ ಖೊಟ್ಟಿ(ಮುತ್ತ್ಯದೆ. ೬); ನಸಿಬದಾಟದ ಮುಂದ ಯಾವ ಮಾಟವು ಏನ (ಕನ್ನಜಾ. ೩೪೭). ೩. ಕಾವೇರವ್ವನ ನಸಿಬ ದೊಡ್ಡದು (ರಂಗರೋ. ೬೭). **ನಸೀಬ :** ೧. ಯಾರ ನಸೀಬದಾಗ ಏನು ಬರೆದೈತ್ಯೋ ಯಾರಿಗ್ಗೊತ್ತು (ಜೀದಾನ. ೭೦) ; ನಸೀಬದಾಟವನ್ನು ಈ ಲಾವಣಿಯಲ್ಲಿ ಕಾಣಬಹುದಾಗಿದೆ (ಕನ್ನಜಾ. ೯೦) ; ನಿನ್ನ ನಸೀಬಾನೇ ಭಾಳ ಖೊಟ್ಟಿ (ಜಿವರಿ. ೦೭). ೨. ಒಂದು ಸಾಕುಮಗನನ್ನ ಮಾಡಿಕೊಂಡಿದ್ದರ ನಮ್ಮ ನಸೀಬಕ್ಕೆ ಅವನ್ನ ಮುಂಬಯಿ ಯಾಗ ತುಡುಗು ಮಾಡಿಕೊಂಡು ಹೋಗಬೇಕ (ಮೇದಿಮ. ೨೦೪) ; ನನ್ನ ನಸೀಬ (ಪಾರೂ ಅಳುಮುಖ ಮಾಡುವಳು) (ಕುಂಕುಮ. ೧೭); "ಮದುವೆ ಯಾಗುವುದಕ್ಕೆ ನಸೀಬ ಬೇಕು" ಎಂದು ತಿಳಿದ ಅನೇಕ ದುರ್ಭಾಗ್ಯ ಹುಡುಗಿ ಯರಲ್ಲಿ ಅವಳೂ ಒಬ್ಬಳಾಗಿದ್ದಳು (ವಕ್ಷಿನ. ೨೭).

**ನಶೀಬು ತೆಗೆ** = ಅದೃಷ್ಟ ಖುಲಾಯಿಸು ; ದೈವ ಕಣ್ಣುಬಿಡು : ಪೆರೀ ಸಾಹೇಬರಿದ್ದರೆ ಖಾತ್ರೀಯಾಗಿ ಮಗನ ನಶೀಬು ತೆಗೆಯುತ್ತಿತ್ತು (೧ೀಜುಗಿ. ೨೧). [ ← ಅರ. ಹಿಂ. ನಶೀಬ್; ಮರಾ. ನಸೀಬ್, ನಶೀಬ್]

ನಸೀಯತ್ತು 'ನಶಿಹತ್ತು' ನೋ.

ನಸು$_1$ (ಗು). ೧. ತುಸು ; ಕೊಂಚ ; ಸ್ವಲ್ಪವಾದ : ದೀರ್ಘಾಕಾರಂ ಸುಬುದ್ಧಿ ಮೇದಸ್ಸಾರಂ ನಸು ಕೆಂಚತಲೆಯನಕ್ಕುಂ ಜೀವಂ (ಜಾತತಿ. ೨-೨೩) ; ಬಲಿದ ತರುಡಿಕೆಗಳ ನಸು ಬಿದಚಿಲಹುಗಳ ಜವವೆದ್ದ ರ್ಝೊವ್ಮಿನ ಬಲೆಗೆ ಸಿಲುಕಿದ ಬಲವನರ್ಜುನದೇವನೀಕ್ಷಿಸಿದ (ಕುವ್ಯಾದ್ರೋ. ೦೭-೪) ; ಪರಿಮಳದ ಪಸಂಕೆಯ ಕುಸುಮೋತ್ಕರವ ನಸುವಿಡಿಗಾಯಿ ಕಸುಗಾಯ್ ದೋರೆಗಾಯಿಗಳ . . . ಪ್ರಮುಖ ಭೂಜದಿನೆಸೆದುದುದ್ಯಾನ

(ಶೂರರಾ.೦-೯-೧೩); ಭೂಗೋಲ ತಾರಾಂಬರಾದಿಗಳನಣಿಮಾಡಿ ಬಿಗಿದು ನಸು ಸಡಿಲವನು ಮಿರಿಸಿ ಕುಣಿಸುತಿರುವನು . . . ಪರಬೊಮ್ಮ (ಮಂಕುಕ. ೮೪) ; ಕಣ್ಣಿಗೆ ನಸುಜಂಪು ಬಂದಂತಾಗಿತ್ತು (ಅಶೋಕ. ೩೭). ೨. ಮಂದವಾದ ; ದಟ್ಟವಾದ. 'ನಸುಂಕಾಂತಿ' ಪರಾ. ೩. ಚಿಕ್ಕದಾದ; ಸಣ್ಣ. 'ನಸುಗಾಯ್', 'ನಸುದೞ್'ಪರಾ. ೪. ತಿಳಿಯಾದ ; ದಟ್ಟವಲ್ಲದ. 'ನಸುಂಗಾವಿ' ಪರಾ. [ ದೇ.॥ ತಮಿ. ನಚ್ಚು ; ಮಲ. ನನು ]

**ನಸು$_2$** (ಅ). ೧. ಸ್ವಲ್ಪವಾಗಿ ; ಕೊಂಚವೆ : ಹೋಮಧೂಮದ ಗಂಧಂ ನಸುಮುಟ್ಟೆ ದಿವ್ಯಮ[ಖ]ಮಂ ಕೆಯ್ಕೊಂಡು ಸಗ್ಗಕ್ಕೆ ಪಾಱಿದುಮಾ ಪಾರಿವ ಜಕ್ಕವಕ್ಕಿಗಳದೇಂ ಪೆಂಪೋ ಮಹಾಯಜ್ಞದಾ (ಪಂಪಭಾ. ೬-೩೮) ; ಸೊಗಯಿಸುವ ಪಾಲೆಯಿಂ ನಸುಜಗುಳುತ್ತಿರೆ ಕರ್ಣಪೂರಪಲ್ಲವಂ (ಕಾದಂಪೂ. ೫೨) ; ನಸುಪೊಂಗಿರ್ದಳ್ಳೆಗಳ್ ತೋೞ್ (ಲೋಕೋಪ. ೧೧-೬) ; ನಡೆನಡೆದು ನಸುಬಳುಂಕುತ್ತೆಡಬಲನಂ ನೋಡಿ (ಗಿರಿಕ. ೧-೮೫) ; ಆ ಪುರದಜನವೞಿಯುದಂತಿರೆ ಕಾಪುರುಷನಳವಡಿಸಿದನು ನಸುದೀಪ ತಾಗಿದೊಡೇಕರೂಪಹ ರಾಜಭವನವನು (ಕುವ್ಯಾಅ. ೮-೬೭) ; ನೀನು ನೆರಹಿದ ಸುಕೃತ ಫಲವದನೇನ ಹೇಳುವೆನಿತ್ತಲುಗ್ಗಡದಾನೆ ಬಿದ್ದುದು ಕಾದಿ ನಸುಸೊಪ್ಪಾದುದರಿಸೇನೆ (ಕುವ್ಯಾದ್ರೋ. ೪-೧) ; ನಸು ಕಣ್ತೆರೆದು ನಿಟ್ಟಿಸಿದರೆ ಮುಂದೆ ನಿಂತ ಗೌರಿ ಮೊರೆಯಿಡುತ್ತಿದ್ದಾಳೆ ! (ಬಾಳಬ. ೧). ೨. ಮಂದವಾಗಿ. 'ನಸುಬೆಳಗುಂ' ಪರಾ. ೩. ಮೆಲ್ಲನೆ. 'ನಸುತೇಂಕು' ಪರಾ.

**ನಸುನಸು** (ದ್ವಿರುಕ್ತಿ) : ನಸುನಸು ನಾಣ್ಚುತೊಂದಿನಿಸು ಬಾಗಿದ ನುಣ್ಮೊಗಂ (ಅಪ್ರತಿ. ೧೮-೨೦). [ < ನಸು$_1$ ]

**ನಸು$_3$** (ನಾ). ಕತ್ತಿಕಾಳಗದ ಒಂದು ವರಸೆ (?) : ಪುಸಿ ನಸು ವಂಚನೆ ನೋರ್ಪನುವಸಿದಗಲಿತು ತಕ್ಕುದಕ್ಕು ಪಗೆ ಕೆಯ್ಬಗೆ ಕೆಯ್ಕುಸುರಿ ನುಸುಳೆಂಬ ಕೇಣದ ಬಸುರಿಯನೞಿದಿಱಿದು ಮೆಱಿದು ನೆೞಿದುಱಿದರೆಬರ್ (ಪಂಪಭಾ. ೧೦-೮೧). P 'ನಸೆ' ಎಂಬುದು ಸರಿಯಾದ ರೂಪವಿರಬಹುದೇ ? ಉದಾ :-ಎಕ. VI, ಚಿಕ್ಕಮ. ೯೪-೧೮; 1068ರ ಪ್ರಯೋಗವನ್ನು ನೋಡಿ. [ ? ]

**ನಸುಕತ್ತಲು** 'ನಸುಂಗಟ್ಟಲೆ' ನೋ.

**ನಸುಕಲಂಕು** (ಕ್ರಿ). ಸ್ವಲ್ಪ ಕದಡು ; ತುಸು ಚೆಲ್ಲಾಪಿಲ್ಲಿಯಾಗು : ಅಂಕುರಿಪ ತಮಂಧಂ . . . ಚೀತರಿಸುವ ಮಾರುತಂ ನಸುಕಲಂಕುವ ಸಾಂಧ್ಯಮಯೂಖಲೇಖೆಗಳ್ (ಗಿರಿಕ. ೯-೬೬). [ ನಸು$_2$ + ಕಲಂಕು ]

**ನಸುಕಾಂತಿ** (ನಾ). ಅಲ್ಪವಾದ ಪ್ರಕಾಶ; ಮಂದವಾದ ಪ್ರಕಾಶ : ದಳಿತಪ್ರಕಾಶ ಕೃಷ್ಣನ ಮುಂದೆ ಸೊಡರ್ಗಳು ಕಳಿತುವು ನಸುಕಾಂತಿವೆರಸಿ (ಮೋಹತ. ೧೫-೧೨). [ ನಸು$_2$ + ಕಾಂತಿ ]

**ನಸುಕು$_1$** (ಕ್ರಿ). ಜಜ್ಜು ; ಹಿಸುಕು : ಮನಸ್ಸಿನಲ್ಲಿ ಸಂಗ್ರಾಮ ಬಿರುಸಾಗಿಯೇ ಸಾಗಿತ್ತು . . . ಕಲ್ಲುಗಳೆರಡರ ನಡುವೆ ಸಿಕ್ಕಿದ ಹಸುರೆಲೆಯಂತೆ ನಸುಕಿ ಹೋಗುತ್ತಿದ್ದ (ಮುರುಳು. ೧೪); ಕಾಂಡವನ್ನು ಹಿಡಿದು ಕೀಳಹೋದರೆ ಹಿಡಿತದಲ್ಲಿಯೇ ನಸುಕಿ ಹೋಗುತ್ತದೆ (ಹಸುಹೊ. ೦೮೯).

[ ದೇ.॥ ತಮಿ. ನಶುಕ್ಕು, ನಶುಜ್ಜು ]

**ನಸುಕು$_2$**, ನಸಕು (ನಾ). ಬೆಳಗಿನ ಜಾವ; ಮುಂಜಾವ ; ಉದಯಕಾಲ : ೧೨ನೆಯ ಶತಮಾನದ ಮಧ್ಯಕ್ಕೆ ಉದಯವಾಗಲಿರುವ ಬಸವಯುಗದ ನಸುಕಿನಂತೆ ವಚನಸಾಹಿತ್ಯ ಇದ್ದಿರಬೇಕೆಂದು ತೋರುತ್ತದೆ (ಕಸಾಚ. ೮೯) ; ಚುಮುಚುಮು ನಸುಕಿನಲಿ ಹೂವುಗಳರಳುವುವು (ಉಯ್ಯಾಲೆ. ೬೩-೧) : ತೀರ ನಸುಕಿನಲ್ಲಿ ಕೋಳಿ ಕೂಗುತ್ತಲೇ ಎದ್ದು ಹೊರಡಬಹುದು (ಶ್ಯಾಮಶಾ. ೧೨); ಅವನು ನಸುಕು ಇರುವಾಗಲೇ ಏಳುವವನು (ಮುಂಬಯಿ. ೫-೨೩೦) ; ಇನ್ನೂ ನಸುಕು ಇರುವಾಗಲೇ ಭೀಮಪ್ಪ . . . ಅಂಗಳ ಕಸಗುಡಿಸುವುದರಲ್ಲಿದ್ದ (ಪ್ರಣಸ ೭೯). ಇವರ ಕೃತಿಗಳಲ್ಲಿ ಪ್ರತಿಭೆಯ ನಸುಕು ಕಂಡುಬರುವುದಲ್ಲದೆ ಬಲವತ್ತರವಾದ ಕಲ್ಪನಾಶಕ್ತಿಯಿದೆ (ಗೊತ್ತುಗು. ೨೬). 'ನಸುಕುಹರಿ' ಪರಾ. ನಸಕು: ಮಾರನೇ ದಿನ ನಸಕಿನಲ್ಲಿ ವಿಜಯನಗರದಲ್ಲಿ ವಿಲಕ್ಷಣವಾದ ಕೋಲಾಹಲವೆದ್ದಿತು (ಸ್ಮೂಲಮಿ. ೨೨೧) ; ಹಬ್ಬವಸು ಹೊಡಿದನು ಉಬ್ಬ ಊಳಿಗಕೆಲ್ಲ ಜಿಬ್ಬ ಕವಡೊಂದು ಬಳಿಯಿಲ್ಲ ಚೆಲುವನಿಗೆ ನಬ್ಬು ನಸಕಿನಲ್ಲಿ ಮನೆಬಿಟ್ಟ (ಕನ್ನಜಾ. ೨೯೩) ; ಮಸಕು ಹರಿಹರಿಯುತಲಿ ನಸಕು ಬರುಬರುತ್ತಿರಲು ಯಶವು ಬಂದಂತೆ ಅಂಗಳಕೆ (ಕನ್ನಜಾ. ೨೯೩); ರೈತರು ನಸಕಿನಲ್ಲಿ ಎದ್ದು ಹೊಲಗದ್ದೆಗಳ ಕಡೆ ಹೋಗುವುದು ಪದ್ಧತಿ (ರೂಢಿ). [ ದೇ.॥ ತಳು. ನಸುಕು, ನಸ್ಕ್ ]

**ನಸುಕುನ್ನಿ** 'ನಸುಂಗುನ್ನಿ' ನೋ.

**ನಸುಕುನ್ನಿಬೀಜ** 'ನಸುಗುನ್ನಿಬೀಜ' ನೋ.

**ನಸುಕುಹರಿ** (ಕ್ರಿ). ಬೆಳಕು ಹರಿ ; ಬೆಳಗಾಗು ; ಸೂರ್ಯೋದಯವಾಗು: ನಸುಕುಹರಿಯುದ ಮುನ್ನ ... ಸತಿಪತಿ ಬಂದು ಕವಾಟದ ತಳುಪನಗಲಿಸಲು (ನಂದಿಲೀ. ೬-೩೫) ; ನರಹರಿಯು ನಿಲ್ಮನೆಯನ್ನು ಮುಟ್ಟಿದಾಗ ನಸುಕು ಹರಿಯಲು ಇನ್ನೂ ಒಂದೆರಡು ತಾಸಿತ್ತು (ಸಮುಜೀ. ೨೯೩) ; ದಿಗಂತದಲ್ಲಿ ನಸುಕುಹರಿದು ಹೊಂಬಣ್ಣದ ಹೊಸಹಗಲು ಮೂಡುತ್ತಿತ್ತು (ರೂಪಸ. ೮); ನಸುಕು ಹರಿಯಿತು (ನಾಕಥ. ೪೫). [ ನಸುಕು$_2$ + ಹರಿ$_2$ (<ಪರಿ$_2$) ]

**ನಸುಕೆಂಚತಲೆಯ** (ನಾ). ನಸುಗೆಂಪಾದ ಕೂದಲುಳ್ಳವನು : ಗೌರಚ್ಛಾಯಂ ಸ್ಥೂಲಶರೀರಂ ಮೃದುಲೋಚನಂ ಕಫಾತ್ಮಂ ದೀರ್ಘಾಕಾರಂ ಸುಬುದ್ಧಿ ಮೇದಸ್ಸಾರಂ ನಸುಕೆಂಚತಲೆಯನಕ್ಕುಂ ಜೀವಂ (ಜಾತತಿ. ೨-೨೩).

[ ನಸು$_1$ + ಕೆಂಚ$_1$ + ತಲೆ$_1$ + – ಅ$_7$ ]

**ನಸುಕೆರಳ್** (ಕ್ರಿ). ಸ್ವಲ್ಪ ರೇಗು ; ನಸುಗೋಪವನ್ನು ತಾಳು : ಎಳೆನೆತ್ತರಲ್ತೆ ನಸುಕೆರಳ್ದನೇಕೇಟೆನಗೆ ತಿಳಿಯೆನೇಂ ದೂಸರೆನೆ ನೀಂ ಮರೆವುದರಿದೆ (ಕಾಲೂರ. ೧೬೩-೩೬೦).

[ ನಸು$_2$ + ಕೆರಳ್ (<ಕೆಳರ್) ]

**ನಸುಗಂದು** (ಕ್ರಿ). ೧. ಸ್ವಲ್ಪವೆ ಕಪ್ಪಾಗು ; ನಸುಗಪ್ಪು ಬಣ್ಣವನ್ನು ತಾಳು : ನೆಗೆದೆತ್ತ ಧೂಪಧೂಮಂ ಪಸರಿಸೆ ನಸುಗಂದಿರ್ದ ಕೆಂಬಟ್ಟೆಯಿಂ ಗಂಟೆಗಳಿಂ ಮಯೂರಕಂಠಾವಳಿಯಿನೆಸೆದಿರಲ್ ತೋರಣಂ . . . ಚಂಡಿಕಾಗರ್ಭಗೃಹದ್ವಾರಪ್ರದೇಶಂ ಜನಪನ ಬಗೆಗಾಶ್ಚರ್ಯಮಂ ಮಾಡಿತಾಗಳ್ (ಕಾದಂಉ. ೨೭೦). ೨. ಸ್ವಲ್ಪವೆ ಮಾಸು,-ಬಾಡು : ಅತನುರಿಯಂಬಿನ ಪೊಗೆ ಮೊಗಸಿದಂತಧರಕಿಸಲಯಂ ನಸುಗಂದಿದುದು (ಕಾದಂಉ. ೭೭೦); ಕುಂದದ ಚಂದ್ರಲೇಖೆ ನಸುಗಂದದೆ ರಂಜಿಪ ಪುಷ್ಪಮಾಲೆ (ದಶಕು. ೧-೨೮). [ ನಸು$_2$ + ಕಂದು$_1$ ]

**ನಸುಗಡುಸು** (ನಾ). ಸ್ವಲ್ಪ ಬಿರುಸು : ನಸುಗಡುಸಿನ ಹೆಣ್ದನಿಯೊಂದು ಬಾಗಿಲಾಚೆಯಿಂದ ನುಡಿಯುತ್ತಿತ್ತು (ರೂಪಸಂ. ೮).

[ ನಸು$_1$ + ಗಡುಸು ]

**ನಸುಗತ್ತಲು** 'ನಸುಂಗಟ್ಟಲೆ' ನೋ.

**ನಸುಗತ್ತಲೆ** 'ನಸುಂಗಟ್ಟಲೆ' ನೋ.

**ನಸುಗರ್ಪು** (ನಾ). ತಿಳಿಗಪ್ಪು ; ಗಾಢವಲ್ಲದ ಕಪ್ಪು : ನಿಶಾಮುಖಂ ನಸುಗರ್ಪಿಂದೆಸೆದುದು ಪಡುವಣದೆಶೆ ಕೆಂಪೆಸೆದುದು (ಕಾದಂಉ. ೦೪೦).

[ ನಸು$_1$ + ಕರ್ಪು$_1$ ]

**ನಸುಗಳ್ತಲೆ** 'ನಸುಂಗಟ್ಟಲೆ' ನೋ.

**ನಸುಗಟ್ಟಲೆ**, ನಸುಂಕತ್ತಲು, ನಸುಂಗತ್ತಲು, ನಸುಗತ್ತಲೆ, ನಸುಂಗಳ್ತಲೆ (ನಾ). ದಟ್ಟವಲ್ಲದ ಕತ್ತಲೆ ; ಮಬ್ಬುಗತ್ತಲೆ : ಸಂಶಯುಲವವೆಂಬ ನಸುಗಟ್ಟಲೆಯುಮಂ ತಲೆದೋಱಲೀಯದೆ ತೊಳಗಿ ಬೆಳಗುತ್ತುಂ . . . ಸಮ್ಯಗ್ದರ್ಶನಂ ಸರ್ವಾಂಗಶಕ್ತಿಯಂ ಕೊರ್ವಿಸುತ್ತಿರೆ (ವರ್ಧಪು. ೧೨-೩೫ ವ). **ನಸುಕತ್ತಲು :** ನಸುಕತ್ತಲು ಹರಡಿತ್ತು (ದೇವಸಾ. ೧). **ನಸುಗತ್ತಲು :**

ನಸುಗತ್ತಲಿನಲ್ಲಿ ತೋಟವೆಲ್ಲಾ ಹಕ್ಕಿಗಳ ಹಾಡಿನಿಂದಲೂ ಕಾಗೆಗಳ ಕೂಗಿನಿಂದಲೂ ತುಂಬಿತ್ತು (ಯಶೋಧರ. ೧೯); ಅಲ್ಲಿ ನಸುಗತ್ತಲಲ್ಲಿ . . . ಇವನನ್ನೇ ನೋಡುತ್ತ ಕುಳಿತ ವ್ಯಕ್ತಿಯೊಂದು ಕಾಣಿಸಿತು (ಗಂಧಾಯಿ. ೮೭). **ನಸುಗತ್ತಲೆ:** "ನಸುಗತ್ತಲೆ-ಧೂಳ ಸಂಜೆ" (ಜಾನಕೋ. ೧೦); ನಸುಗತ್ತಲೆಯಾಯಿತು. ರತ್ನವ್ವ . . . ಉಳಿದ ಜನರನ್ನು ಕರೆದು ಕರೆದು ಉಣಿಸುವುದರಲ್ಲಿದ್ದಳು (ನಿಸರ್ಗ. ೭೦). **ನಸುಗಳ್ತಲೆ:** ನಸುಗಳ್ತಲೆಯರೆಗಳ್ತಲೆ ಮುಸುಂಕುಗಳ್ತಲೆ ಪೊಗಳ್ದ ಪೆರ್ಗಳ್ತಲೆ ನಾಲ್ದೆಸೆಗಳ್ತಲೆ ಪೊಸಗಳ್ತಲೆ ರಸೆಗಳ್ತಲೆಯೆನಿಸಿ ಕೂಡೆ ಕೀವಿತು ತಿಮಿರಂ (ಗಿರಿಕ. ೪-೭೩).

[ ನಸು$_1$ + ಕಟ್ತಲೆ ]

**ನಸುಗಾಯ್** (ನಾ). ಸಣ್ಣ ಕಾಯಿ; ಚಿಕ್ಕ ಕಾಯಿ; ಎಳೆಯ ಕಾಯಿ; ಮಿಡಿಗಾಯಿ: ನಸುಗಾಯ್ ಕನರುಗಾಯ್ ಕಸುಗಾಯಿ ಹುಳಿಗಾಯ್ ತನಿರಸದ ಮಧುರಾಮ್ರ ಪೂರಿತ ಮಾಧುರ್ಯಕದ . . . ಘನತರದ ಸಹಕಾರ ಸಹ ಸುರವನಕದಂಬಕವೆಸೆದುದಿದಿರಲಿ ಕಪಿಕುಲೇಶ್ವರನ (ತೊರವೆ. ೫-೩-೧೪). [ ನಸು$_1$ + ಕಾಯ್$_4$ ]

**ನಸುಗಾವಿ** (ನಾ). ತಿಳಿಯಾದ ಕಾವಿಬಣ್ಣದ ಬಟ್ಟೆ: ವಿಭೂತಿ ರುದ್ರಾಕ್ಷೋಜ್ವಲಾಂಗದಿಂ ನಸುಗಾವಿಯಿಂ ಮಿಙುಗುವುಷ್ಣೀಷ ಬೃಹತಿಕೆಗಳಿಂ ದೋತ್ರದಿಂ . . . ಶಾಂತಿರಸದೆರಕದಿಂ ಸಮೆದ ಪುತ್ಥಳಿಯೆನಲ್ (ಪದ್ಮರಾ. ೫-೩೦). [ ನಸು$_1$ + ಕಾವಿ ]

**ನಸುಗಾಳಿ** (ನಾ). ಮೆಲ್ಲನೆ ತೀಡುವ ಗಾಳಿ; ಮೆಲುಗಾಳಿ; ಸುಳಿಗಾಳಿ; ಮಂದಮಾರುತ: ನಸುಗಾಳಿಗೊಡೆದೊಸರ್ವ ಮಂಜುಳಫಲಂಗಳಿಂ (ಉದ್ಭಟ. ೩-೯೦); ನಸುಗಾಳಿ ಸಂಧಿಸೆ ಕೆದರ್ದ ಪೊಂಬಾಳೆಗಳ ಕುಸುರಿಗಳ್ತಳಿವಕ್ಷತೆಗಳ್ (ಜೈಮಿಭಾ. ೩-೨೭). [ ನಸು$_1$ + ಗಾಳಿ$_1$ ]

**ನಸುಗಿಱಿದು** (ನಾ). ಸ್ವಲ್ಪ ಸಣ್ಣದು,-ಕಡಮೆ: ನಸುಗಿಱಿದಯ್ದುಮನುತ್ತರೆಯ ಸುಖಂ ಮೋಕ್ಷದ ಸುಖಕ್ಕೆ (ಚಂದ್ರಪು. ೧೧-೩೨).

[ ನಸು$_1$ + ಕಿಱಿದು ]

**ನಸುಗುಂದು** (ಕ್ರಿ). ಸ್ವಲ್ಪ ಕಡಮೆಯಾಗು: ರಸವಿಶೇಷದೊಳತಿವಿಮಲ ಸಿತವಸನವನು ತೋಯಿಸಿ ಅಗ್ನಿಯೊಳಗಿಡೆ ಪಸರಿಸುವುದು ಪ್ರಕಾಶ ನಸುಗುಂದದಲೆ ಸರ್ವತ್ರ (ಹಸಾರ. ೧೪-೨೪); ಶಶಿಮಂಡಲಕೆ ಸ್ವರ್ಭಾನು ತಾಮ್ಮುಸುಗಿದೊಡೆ ನಸುಗುಂದುವದೆ ಕಳೆ ಸುಧಾರಸಂ ಕಹಿಯಹುದೆ (ನವಮೋ. ೯-೩೯). [ ನಸು$_2$ + ಕುಂದು$_1$ ]

**ನಸುಗುತ್ತು** (ಕ್ರಿ). ಸ್ವಲ್ಪ ಸಂಕೋಚಗೊಳಿಸು,-ಕುಗ್ಗಿಸು: ಕತ್ತರಿಸಿ ಕಿವಿಗಳಂ ನಸುಗುತ್ತುತ್ತುಂ ಮೆಯ್ಯ ಖಂಡಮಂ ಘುರುಘುರೆನುತ್ತೊತ್ತರಿಸೆ ಘೋಣಪವನನುದಾತ್ತಂ ಮಸಗಿತ್ತು ವಾಜಿ ಪೆರ್ಮಾರಿಯ ಮೇಲ್ (ಶಂ.ರಾಮಾ. ೪-೧೦೮). [ ನಸು$_2$ + ಕುತ್ತು$_1$ ]

**ನಸುಗುನ್ನಿ, ನಸಗುನ್ನಿ, ನಸುಕುನ್ನಿ, ನಸುಗುನ್ನೆ, ನೊಸಗೊನ್ನೆ** (ನಾ). ೧. ಮೈಗೆ ತಾಗಿದರೆ ನವೆಯನ್ನುಂಟುಮಾಡುವ ಒಂದು ಬಗೆಯ ಗಿಡ; ಕಪಿತುರುಚಿ: "ಆತ್ಮಗುಪ್ತಾ, ಜಹಾ, ಅವ್ಯಂಡ, ಕಂಡುರಾ, ಪ್ರಾವೃಷಾಯಿಣೀ, ಋಷ್ಯಪ್ರೋಕ್ತಾ, ಶೂಕಸಿಂಬಿ, ಕಪಿಕಚ್ಛುಃ, ಮರ್ಕಟೀ ಈ ೯ ನಸುಗುನ್ನಿ" (ನಾಚಿರಾ. ೧೧೯); ನಸುಗುನ್ನಿಯ ತಿ(ಮಿ)ನಿಸ(ರ)ಂ ಮಾಣಿಸುಗುಂ ಘೃತಮೊಂದೆ (ಲೋಕೋಪ. ೧೦-೪೦); ನಸುಗುನ್ನಿ ಮುಟ್ಟಿದಂತಿರೆ ಬಸವಲ್ಲದೆ ತಿಂಬ ಮೆಯ್ಯ ತಿನಿಸಿಂಗಂ ಸೈರಿಸಲಾಱದೆ (ಧರ್ಮಾಮೃ. ೦-೧೬೩); ಹಸಿದಡುಣಬಹುದೇ ನಸುಗು[ಪಾಠಾಂ. ಕು]ನ್ನಿ ತುಱುಚಿಯನು (ಅವಚಂ. ೭೧-೩೦೫): ಸುಂಕಿಗನು ಹುರಿಹ [ಹು]ಲ್ಲು ಬಿಂಕದ ಬೆಲೆವೆಣ್ಣು ಕಂಕಿಯು ಸುಂಕ ನಸುಗುನ್ನಿ ಇವು ಆಱು ಸೋಂಕಿದರೆ ಬಿಡವು (ಸರ್ವಜ್ಞ. ೦೫೦೦). ೨. (ಆಲಂ) ಕೀಟಲೆ ಸ್ವಭಾವದ ವ್ಯಕ್ತಿ: ಅವನೊಬ್ಬ ಮಹಾ ನಸುಗುನ್ನಿ (ರೂಢಿ). **ನಸಗುನ್ನಿ:** ೧. ನಸಗುನ್ನಿ, ನಾಯಿಸೊಂಕುಬಳ್ಳಿ, ತುರಚಿಅವರೆ (ವ್ಯಾಜಿಗಿ. ೫೫-೧೧೦೪). **ನಸುಕುನ್ನಿ:** ೧. "ಲೋಮಫಲಾ-ನಸುಕುನ್ನಿ" (ಓಷಧಿ. ೧೪೪); ಮನ್ನಿಸದ ನೃಪತಿಯಿಂ ನಸುಕುನ್ನಿಯ ತುರುಚೆಯನೆ ಸಾರಿ ಬಾಳ್ವುದು ಸೌಖ್ಯಂ (ನೀತಿಸಾ. ೧೪೫). **ನಸುಗುನ್ನೆ:** (೩). **ನೊಸಗೊನ್ನೆ:** ೧. ನೊಸಗೊನ್ನೆ, ರಾಸ್ನೆ . . . ಕಾಯಿಸಿ ಇದರಿಂ ಬಂದ ತೈಲವನ್ನು ಅಭ್ಯಂಜನಕ್ಕೆ ಉಪಯೋಗಿಸಲು ಶೀತಜ್ವರ . . . ಮೊದಲಾದವುಗಳು ನಾಶವಾಗುವುವು (ಸಕವೈ. ೭೨).

**ನಸುಗುನ್ನಿಕಾಯಿ**=ಕೀಟಲೆಸ್ವಭಾವದ ವ್ಯಕ್ತಿ: ಆ ನಸುಗುನ್ನಿಕಾಯಿಯನ್ನು ನಂಬಬೇಡ (ರೂಢಿ). **ನಸುಗುನ್ನಿಯ ಬೇರು** = ನಸುಗುನ್ನಿಗಿಡದ ಬೇರು: ನಸುಗುನ್ನಿಯ ಬೇರಂ ಗೋಮೂತ್ರದಿಂದ ಅರೆದು ಕಂಬಳಿಯ ಹುಳು ಮುಟ್ಟಿದ ಠಾವಿಗೆ ಪೂಸಲು ಅದಱ ವಿಷ ಶಮನವಹುದು (ವೈದ್ಯಸಾ. II, ೨೨೨). [ ? ]

**ನಸುಗುನ್ನಿಬೀಜ, ನಸುಕುನ್ನಿಬೀಜ** (ನಾ). ನಸುಗುನ್ನಿಯ ಗಿಡದ ಬೀಜ: ಉಮ್ಮತ್ತದ ಬೀಜ, ನಸುಗುನ್ನಿಬೀಜ ... ಚಿತ್ರಮೂಲ ಈ ೫೦ ಬಗೆಯನ್ನು ಸಮಾನಂಗೊಂಡು ಚೆನ್ನಾಗಿ ಕುಟ್ಟಿ ಚೂರ್ಣವಂ ಮಾಡಿ ಇರಿಸಿಕೊಂಡು ತೆಗೆದುಕೊಂಬುದು (ವಿವೈವಿ. ೪೨); ಕುಂಕುಮಕೇಸರಿ ಭೂಸಕ್ಕರೆಗೆಡ್ಡೆ ನಸುಗುನ್ನಿಬೀಜ ಬಜೆ (ಕಾಮಶಾ. ೧೦-೨೪೭). **ನಸುಕುನ್ನಿಬೀಜ:** "ವಾರಪ್ರಸ್ಥ ೩-೪(ಹಿ)ಪ್ಪೆ, ನಸುಕುನ್ನಿಬೀಜ" (ಓಷಧಿ. ೧೫೦).

[ ನಸುಗುನ್ನಿ + ಬೀಜ ]

**ನಸುಗುನ್ನೆ** 'ನಸುಗುನ್ನಿ' ನೋ.

**ನಸುಗೆಂಪು** (ನಾ). ತಿಳಿಗೆಂಪು ಬಣ್ಣ; ಪಿಂಗಳವರ್ಣ: "ಹರಿಃ, (ಕ್ರಮಂ) ಕದ್ರುಃ, ಕಡಾರಃ, ಪಿಂಗಳಃ-ಈ ೪ ನಸುಗೆಂಪು" (ಹಲಾಯು. ೦೨೧-೫೦); ನಸುಗೆಂಪುವಡೆದ ದಶನದ ಮಿಸುಪಧರದ ಕೆಂಪು (ಧರ್ಮಾಮೃ. ೭-೧೯೦); ನಸುಗೆಂಪಿನಿಂ ಬೀಗಿ ಬಾಗಿ ತೂಗುವ ಚೆಲುವ ಹೊಸಹಾಲ ಹನಿಗಳಡಸಿದ ತೆಱದ ತೆನೆಗಳಂ ತಿಱಿತಿಱಿದು (ಸಿದ್ಧರಾ. ೨-೨೯); ಅವಳ ಮೋರೆಯು ನಸುಗೆಂಪುಬಣ್ಣವನ್ನು ತಾಳಿತು (ನವನೀ. ೨೦). [ ನಸು$_1$ + ಕೆಂಪು$_1$ ]

**ನಸುಗೆತ್ತು** (ಕ್ರಿ). ತುಸು ಸ್ಪಂದಿಸು; ಸ್ವಲ್ಪ ಅದಿರು,-ಮಿಡಿ: ಉಸಿರ್ವುಜ್ಜುಗದಿಂದಧರಂ ನಸುಗೆತ್ತಲ್ (ಕಾದಂಬ. ೨೯೭); ಬಿಟ್ಟ ಉರುಳ್ ಪೊದಟ್ಟ ಕಿಸುಗಣ್ ನಸುಗೆತ್ತುವ ಮೀಸೆ (ಚಂದ್ರಪು. ೫-೭೦); ಪ್ರಿಯ ಸಂದು ಕಲ್ಪಿಸಿದರ್ಪ[ಳಿ]ಯನಂಗನೆ ಮಾನಯೋಗ್ಯೆಯಂ [ಮಾ]ಡಲ್ಕಂ ನಿಯತಂ ಭ್ರೂಕುದಿ[ಕುಟಿ]ಜಿಹ್ಮಾಕ್ಷಿಯಾಗಿ ನಸು[ಗೆ]ತ್ತಲ[ಧ]ರವಿಮಾಕ್ಷಿಸುತಿರ್ದಳ್ (ಮಾಧವಾ. ೨-೩೪೨); ನಸುಗೆತ್ತಲು ಮೀಸೆ ತೆಳುಗದವುಗಳೊಳು (ಚಂಪ್ರಸಾಂ. ೮-೯೦). [ ನಸು$_2$ + ಕೆತ್ತು$_1$ ]

**ನಸುಗೆರೆ** (ನಾ). ಸಣ್ಣ ರೇಖೆ: ದಿನಮಣಿಯ ನಸುಗೆರೆ ಕೆಳಗಿಳಿದು ಮಾಸಿ ಹೋದುದನ್ನು ಹೊರಗಣ್ಣಿನಿಂದ ಕಂಡ ಬಂಕಿಯನ ಹೊ ಗಣ್ಣು ದೊರೆಯುತ್ತ ತಿರುಗಿತು (ವೀರಬಂ. ೬). [ ನಸು$_1$ + ಗೆರೆ (<ಗೆಱೆ) ]

**ನಸುಗೇಳ್** (ಕ್ರಿ). ೧. ಸ್ವಲ್ಪ ಕೇಳಿಸು; ಅಸ್ಪಷ್ಟವಾಗಿ ಕೇಳಿಸು: ಅದೇ ದೂರಂ ನಸುಗೇಳಲಾಯ್ತು ಜಳದೇವೀನೂಪುರಾರಾವದಂದದೆ ಹಂಸಸ್ವನ (ಕಾದಂಪೂ. ೧೯೫). ೨. ಸ್ವಲ್ಪ ಕೇಳು; ಅಸ್ಪಷ್ಟವಾಗಿ ಕೇಳಿ ಬಂದುದನ್ನು ಆಲಿಸು: ಓರಂತೆ ಪಲುಂಬಿ ಪಂಬಲಿಪ ದಾಸೀವೃಂದದಾಕ್ರಂದದೊಳ್ ನಸುಗೇಳುತ್ತೆ ನಿಜಾನುಜನ್ಮನ ಗುಣಪ್ರಖ್ಯಾತನಾಮಂಗಳಂ ತೊದಳಿಸಿ ತಮ್ಮನೀಯೆನುತೆ ಬಾಯ್ನುಡಿ ಮಾಣ್ದರೆಮುಚ್ಚಿ ಕಿತ್ತುಸಿರ್ ಕಿಡೆಱುತು ಮಾಱ ಮೆಯ್ಗರೆಯೆ ಕಳ್ಳಲರ್ಗಳ್ ಪೊಸನೀರ ಮಿಾಂಗಳಂದದಿನಿದಿರೇಱಿ ... ಮೂರ್ಛೆಗೆ ಸಂದು (ವರ್ಧಪು. ೯-೫೭). [ ನಸು$_2$ + ಕೇಳ್ ]

**ನಸುಗೊರಕೆ** (ನಾ). ಸಣ್ಣದನಿಯ ಗೊರಕೆ: ನಿದ್ದೆಯ ಮುಸುಕನ್ನು ಕಣ್ಣ ಮೇಲೆ ಎಳೆದು ನಸುಗೊರಕೆಯನ್ನು ಹೊಡೆಯುತ್ತಿದ್ದನು (ಜಯಂತ. ೦).

[ ನಸು$_1$ + ಗೊರಕೆ$_2$ (<ಗುಱುಕು) ]

**ನಸುಗೋಪ** (ನಾ). ತುಸು ಕೋಪ: ಆರ ಸಂಭ್ರಮವಿದಾರ ಮರುಳ್ಗನವೆಂದು ನಂದಿಕೇಶ್ವರ ನಸುಗೋಪ [ಪಾಠಾಂ. ನತಿಕೋಪ]ದಿಂ ಮದನಸೇನೆಯ ನೀಕ್ಷಿಸಿದಾ ಕ್ಷಣಾರ್ಧದೊಳ್ (ಗಿರಿಕ. ೮-೯); ಕುಮುದಳ ಮೊಗದ ಮೇಲೆ ನಸುಗೋಪ ಮೂಡಿತು (ಹಾಡುಹು. ೧೦೧). [ ನಸು₁ + ಕೋಪ ]

**ನಸುಜೋಲ್** (ಕ್ರಿ). ಸ್ವಲ್ಪ ಜಾರು: ನಸುಜೋಲ್ದಳ್ಳುಡೆಯುಂ ತೆಱಂಬೊಳೆದು ಪಾಱುತ್ತಿರ್ಪ ಸಂವ್ಯಾನಮುಂ ... ಪೊಸತೊಂದೊಪ್ಪಮ ನೀಯೆ ವಿಹ್ವಳತೆಯಿಂ ಬಂದತ್ತು ಗೋಪೀಜನಂ (ಜಗವಿ. ೩-೮೯); ಪೂಗಳಿಂ ಸಮೆದ ಮಾಲೆಯಂ ಧರಿಸಿ ನಸುಜೋಲ್ವ ಮೇಲುದನಿನಿಸು ಮುಸುಕುತ (ಪದ್ಮರಾ. ೮-೩೦). [ ನಸು₂ + ಜೋಲ್₁ ]

**ನಸುತೂಕಡಿಕೆ** (ನಾ). ಸ್ವಲ್ಪ ತೂಕಡಿಕೆ,–ಜೋಂಪು: ಔಕುವುದು ಬಲುನಿದ್ರೆ ನಿದ್ರೆಯ ನೂಕುವನು ಕಣ್ಣೆವೆಗಳಲಿ ನಸುತೂಕಡಿಕೆ ತೋಱಿದೊಡೆ ವ್ಯಗೆದಱುವನು ಕೈಯೊಡನೆ (ಕುವ್ಯಾಅ. ೯-೮).
[ ನಸು₁ + ತೂಕಡಿಕೆ (<ತೂಂಕಡಿಕೆ) ]

**ನಸುತೇಂಕು** (ನಾ). ಮೆಲ್ಲನೆ ತೇಲುವಿಕೆ. 'ನಸುತೇಂಕುದೇಂಕು' ಪರಾ.
[ ನಸು₁ + ತೇಂಕು₁ ]

**ನಸುತೇಂಕುದೇಂಕು** (ಕ್ರಿ). ಮೆಲ್ಲನೆ ತೇಲಂ; ನಿಧಾನವಾಗಿ ತೇಲಂ: ಬೆಳಗುವ ತಾರಕಾನಿಕರಮಾ ಕಡಲೊಳ್ ನಸುತೇಂಕುದೇಂಕಿ ಬೊಬ್ಬುಳಿಕೆ ಗಳಂತೆ ತೋಱಿದುವು (ಆದಿಪು. ೭-೯೮). [ ನಸುತೇಂಕು + ತೇಂಕು₁ ]

**ನಸುದಗ್ಗು** (ಕ್ರಿ). ಸ್ವಲ್ಪ ಕೆಳಕ್ಕೆಬರಂ; ತುಸು ಕೆಳಗಿರಂ: ಅದಱಿಂ ಕೆಲದೊಳ್ ನಸುದಗ್ಗಿದಲಿರೆ ಭದ್ರಾಸನಂಗಳುಮ್ಮಿರುಬೆಗಳ್ ಮುದದಿಂ ನೆಲಸಿದರದಱೊಳ್ ಪದುಳಂ ಪ್ರಥಮ ದ್ವಿತೀಯ ಕಲ್ಪಾಧೀಶರ್ (ಪುಷ್ಪಪು. ೧೦-೭೯). [ ನಸು₂ + ತಗ್ಗು₁ (<ತಱ್ಗು) ]

**ನಸುದಱಿ** (ನಾ). ಸಣ್ಣ ತುಂಡುಂ; ಚಿಕ್ಕ ಚೂರಂ.
ನಸುದಱಿಮಾಡು = ಸಣ್ಣ ತುಂಡುಗಳಾಗಿ ಮಾಡಂ; ಚೂರಾಗಿಸಂ: ಮಸೆಗೆಟ್ಟ ಕೊಡಲಿಯ ಹೊಯಿಲಂತೆ ಕರ್ಮವ ನಸುದಱಿ ಮಾಳ್ಪುದು ಧರ್ಮ ಮಸೆಯುಳ್ಳ ಕೊಡಲಿಯ ಹೊಯಿಲಂತೆ ಕರ್ಮವ ಕುಸುರಿದಱಿವು ದೀಗ ಶುಕ್ಲ (ಭರತೇ. ೬೯-೪೪). [ ನಸು₁ + ತಱಿ₂ ]

**ನಸುದಿಟ್ಟಿ** (ನಾ). ಅರೆದೆರೆದ ಕಣ್ಣಿನ ನೋಟ; ಓರೆನೋಟ: ಬಟ್ಟ ಮೊಲೆಗಳ ತುದಿಯೊಳಿಱಿದುಱಿ ನಸುದಿಟ್ಟಿಯಿಂದೀಕ್ಷಿಸುತಾಗ ಕಟ್ಟೆಱಕ ದೊಳಾತನ ಚರಣಕೆ ಪೊಡಮಟ್ಟು ಕೂಡೆಂಬಳಂದೊಲಿದು (ಕುಂಸವಿ. ೯-೧೭೮). [ ನಸು₁ + ದಿಟ್ಟಿ ]

**ನಸುದೆಱಹು** (ನಾ). ಸ್ವಲ್ಪ ಅವಕಾಶ; ಕೊಂಚ ತೆರಪು,–ಎಡೆ: ಮಱಿವೆಗೆ ನಸುದೆಱಹುಗೊಡದಾತ್ಮನಲಿ ಚೇಷ್ಟಿಸುವ ಕರಣಂಗಳಿಗೆ ರವಿಯಂತಿದ್ದನವ ನೀಶ (ನಿಭಾಗ. ೪-೧೫-೩೩). [ ನಸು₁ + ತೆಱಹು (<ತೆಱಪು) ]

**ನಸುದೆಱಿ** (ಕ್ರಿ). ಸ್ವಲ್ಪ ತೆಗೆ; ಕೊಂಚ ಬಿರಿ: ನಸುದೆಱಿಯುತ್ತಮಿರ್ದ ಪೊಸಮುತ್ತಿನ ಸಿಂಪಿನ ಸಂಪುಟಂಗಳಿಂ ಸುಸುಳ್ದು ಸುಪಾಣಿಯಾಗಿ ಪೊಱ ಪೊಣ್ಮುವ ಮುತ್ತಿನ ಮಾಲೆಯಂದದಿಂ ವಿಸುಗಿ ... ಪಸರಿಸಿ ನೀಳ್ದು ಪೊಣ್ಮೆದುವು ಕಣ್ಬನಿಗಳ್ ತರಳಾಯತೇಕ್ಷಣೇ (ಕಾದಂಪೂ. ೩೩೦); ನಸುದೆಱಿದಿರ್ದ ಬಾಯ್ ನಿಮಿರ್ದ ಗೋಣೆಮೆಯಿಕ್ಕದ ದಿಟ್ಟಿ ... ಕಣ್ಗೆಸೆದಿರೆ ಸುಯ್ಯ ಪೆರ್ಪಱಿದು ಚಿತ್ರದ ಪೆಣ್ಣವೊಲಾಗಿ ಬಾಗಿಲೊಳ್ ಸಸಿಮುಖಿ ನಿಂದು ನೋಟ್ಪಳಿನಿಯಂ ತಡೆದೊಯ್ಯನೆ ಬರ್ಪ ಬಟ್ಟೆಯಂ (ರಸರ. ೪-೨೭೩); ನೊಸಲ ತಿಲಕದ ಕೆದಱಿದಳಕದ ನಸುದೆಱಿದ ಲೋಚನದ ... ಮುನಿಪತಿ (ನಿಭಾಗ. ೧-೩-೧೨). [ ನಸು₂ + ತೆಱಿ₁ ]

**ನಸುದೆಱಿಬಾಯ್** (ನಾ). ಅರೆದೆರೆದ ಬಾಯಿ: ನಟ್ಟ ಕಣ್ ನಿಮಿರ್ದ ಕೊರಲು ನಸುದೆಱಿಬಾಯ್ ಬಿಟ್ಟ ಮೇಲುದು ಬೀಳ್ದ ಕೇಶ (ಶ್ರೀಪಾಲ. ೧೩-೩೭). [ ನಸುದೆಱಿ + ಬಾಯ್ ]

**ನಸುದೇಲ್** (ಕ್ರಿ). ಸ್ವಲ್ಪ ತೇಲು; ನಸುವೆ ಮೇಲಕ್ಕೆ ಏಳು: ನಸುದೇಲ್ವಕ್ಷಿ ವಿಲುಪ್ತವರ್ಣವಚನಂ ರೋಮಾಂಚನಂ ... ಕರಂ ಶೋಭಿಸಲ್ ಕುಸುಮಾಸ್ತ್ರೋನ್ನತಕೇಳಿಯೊಳ್ಪಡದೆ ತಾಂ ಬೆಚ್ಚಿರ್ದರಾ ಕಾದಲರ್ (ಉದ್ಭಟ. ೮-೧೧೯). [ ನಸು₂ + ತೇಲ್ ]

**ನಸುದೋಯಲು** (ನಾ). (?): ಈ ಹೆಬ್ಬಟ್ಟೆಗಳಲ್ಲಿ ಹೋದರೆ ಎಂಬತ್ತು ನಾಲ್ಕುಲಕ್ಷ ಪ್ರಕಾರದ ಪರಮಂಡಲದಲ್ಲಿ ಸುಳಿವುದು ತಪ್ಪದೆಂದು ಅದಕ್ಕೆ ಹೇಹವಂ ಮಾಡಿ ತಮ್ಮವರು ಹೋದ ನಸುದೋಯ [ಪಾಠಾಂ. ತೋಯಿಲ] ಬೆಂಬಳಿವಿಡಿದು ಹೋಗಿ ಭಕ್ತಿಪುರವಂ ಕಂಡು (ಘನವ. ೪೯-೪೩); "ನಸುದೋಯಲು–ಅಸ್ಪಷ್ಟವಾದ ಜಾಡು?" (ಘನವ. ಕೋಶ).
[ ? ]

**ನಸುದೋರೆ** (ನಾ). ಸ್ವಲ್ಪ ಹಣ್ಣಿಗೆ ಬರುತ್ತಿರುವ ಕಾಯಿ; ಪಾಡು ಗಾಯಿ: ಅಲರ್ ಮಿಡಿಕಾಯ್ ನಸುದೋರೆ ದೋರೆವಣ್ ಬಳಸಿರಲಾಗ ಳಾವ ಪರಿಯಿಂ ನಡೆ ನೋಟಿಸ್ಕೊಡಮಂತೆ ತಾನೆ ಕಣ್ಗಳ ಸಿರಿ . . ಆದುದು ಬಂದ ಮಾಸುರಂ (ಜಗವಿ. ೧೪-೨೭); ತಳಿರಲರುಳ್ಳಲರ್ಮಿಡಿ ಪೊದಳ್ದಿಳಗಾಯ್ನಸುದೋರೆ ದೋರೆವಣ್ಕಳಿತಸೆವಚ್ಚಪಣ್ಣಿಡಿದು ಬೀಗಿದ ಬೆಳ್ಗೊನೆ (ಶಬಶಂ. ೧-೫೦). [ ನಸು₁ + ದೋರೆ₁ ]

**ನಸುದೋರೆವಣ್** (ನಾ). ಸ್ವಲ್ಪ ದೋರೆಯಾದ ಹಣ್ಣು: ಸಣ್ಣಗಾಯ ಬಲುಗಾಯ ಪೊಱಲ ನಸುದೋರೆವಣ್ಣ ತಾಯ್ವನೆ ಪೊಸವಣ್ಣ ಗೊತ್ತಿದೆನೆ ಕಣ್ಗೆಸೆದಿರ್ದುದದೊಂದು ಮಾಮರಂ (ಕಬ್ಬಿಕಾ. ೧೧೧).
[ ನಸುದೋರೆ + ಪಣ್₃ ]

**ನಸುದೋಱು** (ಕ್ರಿ). ೧. ಸ್ವಲ್ಪ ಕಾಣಿಸಂ,–ಕಾಣು; ತುಸುವೆ ವ್ಯಕ್ತ ವಾಗು: ನಸುದೋಱುತ್ತಿರ್ದ ನುಣ್ಮೀಸೆಗಳುಮತಿಮೃದುಸ್ನಿಗ್ಧಕೇಶಂ ಗಳುಂ ಕಣ್ಗೆಸೆಯಲ್ (ಕಾದಂಉ. ೩೪೭); ಎತ್ತಾನುಮೊರ್ಮೆ ನಸುದೋಱುತ್ತುಂ ಜನಭಕ್ತಿ ಮಾಣ್ದುದೊಡಮಾಭವ್ಯೋತ್ತಮನಘಮುರಿ ತಾಗಿದ ಬಿತ್ತಿಂಗೆಣೆಯಕ್ಕುಂ (ವರ್ಧಪು. ೧೩-೧೭); ಕುಚಂಗಳೊತ್ತರಿಸೆ ಕಕ್ಷಪುಟಂ ನಸುದೋಱೆ ... ಕರ್ಣಪೂರಿತೋತ್ಪಳಮೊಲೆದಾಡೆ ಗಟ್ಟಿಗಳ ನಂದು ಮಗುಳ್ಚಿದರಿಂದುವಕ್ತ್ರೆಯರ್ (ಗಿರಿಕ. ೩-೯೦); ನಸುದೋಱುವ ಕಿಱುನಗೆಯು ಕದಪುಗಳ ಕುಂಡಲದ ಚೆಲ್ವಿನಿಂ ಮೆಱೆವ ಸದ್ವದನನಂ ... ಕಂಡನವನೀಪಾಲನು (ಜೈಮಿಭಾ. ೨-೪೮). ೨. ತುಸುವೆ ತೋರಿಸಂ: ಕುಂಚಿತಕುಂತಳಾಳಿಗಳನೊಯ್ಯನೆ ನೇರ್ಪಡಿಪೊಂದು ಲಕ್ಷ್ಯದಿಂ ಕಾಂಚನ ಕುಂಭಮಂ ಪಱಿವ ಪೆರ್ಮೊಲೆಯಂ ನಸುದೋಱುತುಂ (ಉದ್ಭಟ. ೧೦-೬೮).
[ ನಸು₂ + ತೋಱು ]

**ನಸುನಗು₁** (ಕ್ರಿ). ೧. ಸ್ವಲ್ಪ ನಗು; ಮುಗುಳುನಗೆ ನಗು; ಮಂದಹಾಸ ವನ್ನು ಬೀರು: ಆವರ್ತನಾಭಿ ನಸುನಕ್ಕಾ ಪರನಿಂದತ್ತ ಪೋದಳ್ (ಶಾಂತಿಪು. ೫-೧೪೬); ಬಹ ಭೃಂಗಿಯಂ ಕಂಡು ನಸುನಕ್ಕರು (ಸಿದ್ಧರಾ. ೧-೨೪); ಸತಿ ನಸುನಗುತ್ತಕ್ಕಕ್ಕ ... ನಾನಱಿದೆನಱಿದೆನು ನಿನ್ನ ಮಾಯವನು (ಬಸಪು. ೨೪-೬೩); ಧುರದ ಜಯವಹುದೊಂದು ಪರಿಯಲಿ ನಿರುತವಲ್ಲದ ನುಡಿಯ ನುಡಿದರೆ ಪರಿಹರಿಸಬಹುದೆಂದನಸುರಾರಾತಿ ನಸು ನಗುತ (ಕುವ್ಯಾದ್ರೋ. ೧೮-೩೯); ಮುಖದಲ್ಲಿ ಕಿಱುಬೆವರಿಟ್ಟಿದೆ ಹೊಸ ಹೊಸ ಪರಿ ಸುದ್ದಿ ಹುಟ್ಟಿದೆ ನಸುನಗುವೆಲ್ಲ ನಿನ್ನ ಕೀರ್ತಿ ಹೆಚ್ಚಿದೆ (ಪುರಂದ. ೫-೧೭-೧); ಅಪ್ಪಾಜಿಯು ನಸುನಗುತ್ತ ಕೇಳಿದರು (ಚದೇವ. ೧೭೦); ಹುಸಿ ನಗುತ ಬಂದೇವ ನಸುನಗುತ ಬಾಳೋಣ ತುಸುನಗುತ ತೆರಳೋಣ (ಗರಿ. ೧೦೩-೯). ೨. ಹೀಯಾಳಿಸಂ; ಜರೆ; ತಿರಸ್ಕರಿಸು: ಅರಿಗಳ್ ಪೆಸರ್ಗೇಳ್ದೆರ್ದೆವೊಡೆವರೆಂಬ ಶೂದ್ರಕನ ವಿಕ್ರಮಾಡಂಬರಮಂದರವಾನಿಸಿಕೆ ಯೊಳೊಂದಿದ ನರಸಿಂಹಾಡಂಬರಕ್ಕೆ ನಸುನಗುತಿರ್ಕುಂ (ಕಾದಂಪೂ. ೧೧); ಪಗೆಗೊಂಡ ತುಂಬಿಯಂ ನಸುನಗುವವೊಲುಳ್ಳಲರ್ದು ಪೊಂಗಿ ಕಂಪಾದು

ದೆನಲ್ ಸೊಗಯಿಸಿ ಕಾವಿನ ಪಗೆಯಂ ಬಗೆಯಂ ತೀರ್ಚಿದುವು ಸುಗ್ಗಿಯೊಳ್ ಸಂಪಗೆಗಳ್ (ಮಲ್ಲಿಪು. ೫-೧೯) ; ತಾರೆಗಳತಿಶುಭ್ರವಿಡಿದಿರ್ದರೆಮ್ಮಂತೆ ಸೌರಭ್ಯವಿಲ್ಲೆಂದೂ ಜಱಿದು ಸೇರದೆ ನಸುನಗುವೊಲು ಬಿರಿಮುಗುಳ ಶೃಂಗಾರದ ಮಲ್ಲಿಗೆಯಿಹುವು (ಕಂನವಿ. ೭-೫೧). ೩. (ಅಲಂ). ಅರೆ ಬಿರಿ ; ತುಸು ಅರಳು : ಮಿಸುಪ ಕುವಲಯದಚಲತ್ಪತ್ರಂಗಳೊಳ್ಸಡಿದು ನಸು ನಗುವ ನವನೀರಜಾತಂಗಳಂ ತುಡಿದು (ಉದ್ಭಟ. ೧೦-೧೨೩).

[ ನಸು$_2$ + ನಗು$_1$ ]

**ನಸುನಗು$_2$** (ನಾ). ತಿಳಿಯಾದ ನಗು ; ಮುಗುಳುನಗೆ; ಮಂದಹಾಸ : ಸುಖಾರುವಿನ ಮುಖದಲ್ಲಿ ನಸುನಗು ತೋರಿತು (ಮಹಸ. ೫೭).

[ ನಸು$_1$ + ನಗು$_2$ ]

**ನಸುನಗೆ** (ನಾ).=ನಸುನಗು$_2$ : ನಸುನಗೆ ದಶನಪ್ರಭೆಯಿಂದ ಕೂಡಲಾ ದೆಸೆ ಧವಳಿಸಿದವೊಲಾಯ್ತು (ಕಾದಂಪೂ. ೪೮೨ ರಗಳೆ); ನಸುನಗೆ ಕಮಳದ ಸಿರಿಯಂ ನಸುನಗೆ ಜನನಿಯುರ ಲೋಚನಭ್ರಮರಂಗಳ್ ಮುಸುಱಿದುವು ಮೋಹ ವಲ್ಲರಿ ಪಸರಿಸಿ ಪರ್ವಿದುದು ಸುತರ ಲೀಲಾಜಲದಿಂ (ಪಂರಾಮಾ. ೩-೧೩೯) ; ಶ್ರೀಮುಖದೊಳ್ ನಸುನಗೆ ಬೆಳ್ದಾವರೆಯೊಳಲರ್ಕೆಯೆಂಬವೊಲ್ ಪಸರಿಸೆ (ಚಂದ್ರಪು. ೧೩-೧) ; ಒಸೆದರಳ್ದ ನಸುನಗೆಯು ಶಶಿಮೌಳಿಯೊಪ್ಪಿದಂ (ವಾಗೀರ. ದೇ. ೨೮೦-೧೫) ; ಎಸೆವ ನಸುನಗೆ ದಶನರುಚಿ ದೆಸೆದೆಸೆಗೆ ಪಸರಿಸೆ ವೀಣೆಯಂ ಬಾಜಿಸುತ (ಬಸಪು. ೧-೫೩) ; ನಸುನಗೆ ಮೊಳೆಯೆ ನುಡಿದನು ಧರ್ಮನಂದನನು (ಕುವ್ಯಾಅ. ೨೩-೪೮) ; ಮೆಲ್ನಗೆ, ಮುಗುಳ್ನಗೆ, ನಸುನಗೆ ಇತ್ಯಾದಿ ನೂರುಬಗೆಯ ನಗೆಯನ್ನು ಮೊಗದ ಮೇಲೆ ನಲಿಸುತ್ತಲೇ ಇರ ಬಹುದು (ಶರಜ. ೪೮೫). [ ನಸು$_1$ + ನಗೆ ]

**ನಸುನಗೆಮೊಗ** (ನಾ). ಮುಗುಳುನಗೆಯಿಂದ ಕೂಡಿದ ಮುಖ : ನಸು ನಗೆಮೊಗದ ಸೊಂಪಿನಲಾಹವಕ್ಕನುವಾದನಭಿಮನ್ಯು (ಕುವ್ಯಾದ್ರೋ. ೪-೪೯).

[ ನಸುನಗೆ + ಮೊಗ ]

**ನಸುನಡುಗು** (ಕ್ರಿ). ಸ್ವಲ್ಪ ಕಂಪಿಸು : ನಿಡುಸುಯ್ಯಿನ್ಮಾರೋಡುವ ವದನಂ ನಸುನಡುಗುವ ಮೆಯ್ (ಜಯುಕಾ ೩-೧೪). [ ನಸು$_2$ + ನಡುಗು$_1$ ]

**ನಸುನನೆ** (ನಾ). ಸಣ್ಣ ಮೊಗ್ಗು ; ಎಳೆಮೊಗ್ಗು ; ಕಸುಕಾದ ಮೊಗ್ಗು ; ಕರಲಂಮೊಗ್ಗು : ನಸುನನೆಯೊಳಡಗಿರ್ದ ನವಸುಗಂಧದ ತೆಱದಿ ಉಸಿರೊಳಡಗಿರ್ದ ಚೈತನ್ಯದಂತೆ (ಶಿವಗೀ. ೧-೩) ; ನಸುನನೆಯನಪ್ಪಿದಳಿ ಕುಳದಂತೆ ಕಡುಹಸಿದು ಕಸುಗಾಯನಗಿದ ಗಿಳಿಗಳ ಬಳಗದಂತೆ (ಹಡಕಾ. ೮-೭೧). [ ನಸು$_1$ + ನನೆ$_3$ ]

**ನಸುನಳಿ** (ಕ್ರಿ). ಸ್ವಲ್ಪ ಬಾಗು : ನಸುನಳಿದು ನಿಮಿರೆ ತೋಳ್ಗಳ್ ಲಸಿತ ತ್ರಿಪತಾಕದಿಂ ಲತಾಕರಮೆಸೆಯಲ್ ಪೊಸದಳಿರಂ ಪೊತ್ತೆಳಲತೆ ಮಿಸುಗುವ ಕುಡಿಯೆರಡನೆಬಿಲೆ ಬಿಟ್ಟವೊಲೆಸೆದಳ್ (ಲೀಲಾವ. ೪-೧೧೮).

[ ನಸು$_2$ + ನಳಿ$_1$ ]

**ನಸುನಾಚಿಕೆ** (ನಾ). ತುಸು ಲಜ್ಜೆ : ಮುಂಜೆಱಗ ಸಂವರಿಸುತ್ತ ನಸುನಾಚಿಕೆಯ ಭಾರದಲಿ . . . ಮುಱುಕ ಮಿಗೆ ಕಾಣಸುತ ಬಂದಳು ರಾಮನಿದ್ದೆಡೆಗೆ (ತೊರರಾ. ೩-೪-೮). [ ನಸು$_1$ + ನಾಚಿಕೆ (< ನಾಣ್ಚಿಕೆ) ]

**ನಸುನಾಚು** 'ನಸುನಾಣ್ಚು' ನೋ.

**ನಸುನಾಣ್ಚು**, ನಸುನಾಚು (ಕ್ರಿ). ಸ್ವಲ್ಪ ಲಜ್ಜೆಪಡು : ಎಂದೊಡಾ ಮಾತಿಂಗೆ ನಸುನಾಣ್ಚಿ ಹೃದಯಾರವಿಂದದುಲ್ಲಾಸ ಪೂರಯಿಸಿ ಚಂದನ ಸೌರಭ್ಯವಡೆದ ವಿಗ್ರಹಜಾತ ಸಂದೋಹದೆ ಗುಡಿಗಟ್ಟಿತವಳ (ಮೋಹತ. ೨೭-೩೮); ನಸುನಾಣ್ಚುತ ನಲವಿನೊಳು ಒಸೆದೊಲವಱಿತೊಯ್ಯನುಚಿತೋಪಚಾರ ವನೆಸಗುವುದೇಕಚಿತ್ತದೊಳು (ಹದಿಬ. ೩-೧೭). **ನಸುನಾಚು** : ಮಾಯಾ– (ನಸುನಾಚಿ) ನಾನು . . . ನಾನು . . . ನಾನೊಬ್ಬ ನರ್ತಕಿ (ತುಂಗಭ. ೮೪). [ ನಸು$_2$ + ನಾಣ್ಚು$_1$ ]

**ನಸುನಿದ್ದೆ** (ನಾ). ಗಾಢವಲ್ಲದ ನಿದ್ದೆ ; ಲಘುನಿದ್ರೆ ; ಜೊಂಪು : ಎಸಟ್ಟಡಿಗೆತ್ತ ತಾವರೆಗಳೋವರಿಯೊಳ್ ನಸುನಿದ್ದೆ[ಪಾಠಾಂ. ಸುಖನಿದ್ರೆ] ಯಿಂದೆ ಜೋಂಪಿಸುಪಳಿಯಂ . . . ಪ್ರಚಾರಿಸಿದುದು ಕಾಲಭೂಪನ ನಿಯೋಗದ ಸೂಳೆವಳಂಬೊಲೋದೆಲರ್ (ವರ್ಧಪು. ೮-೩೩).

[ ನಸು$_1$ + ನಿದ್ದೆ ]

**ನಸುನಿದ್ರೆ** (ನಾ).=ನಸುನಿದ್ದೆ : ಸಸಿಗಲ್ಲ ಬಟ್ಟಱಿಗಳ ಮೇಲೆರಳೆಗಳು ನಸು ನಿದ್ರೆಯಿಂದೊಱಗಿರಲು (ಕುರಾಸಾಂ. ೪-೧೭). [ ನಸು$_1$ + ನಿದ್ರೆ ]

**ನಸುನೀಡು** (ಕ್ರಿ). ತುಸುವೆ ಮುಂದಕ್ಕೆ ಚಾಚು : ಪಣ್ಗಳ ಸದ್ರಸಬಿಂದು ವೃಂದಮಂ ... ತಂದಿದಿರೊಳ್ ನಸುನೀಡಿ ಗೋಣನಾಗಳೆ ನೆಱೆ ಚಂಚುವಂ ತೆಱೆದು ಮೆಲ್ಲನೆ ಲಲ್ಲೆಯೊಳಿಂತು ತನ್ನ ಪೆಣ್ಗಿಳಿಗೆಱೆಯುತ್ತುಮಿರ್ದುದೆನಸುಂ ನಲವಿಂ ಸುರತೋತ್ಸುಕಂ ಶುಕಂ (ಕುಸುಮಾ. ೫-೮೭). [ನಸು$_2$ + ನೀಡು$_1$]

**ನಸುನೆನೆ** (ಕ್ರಿ). ಸ್ವಲ್ಪ ತೋಯು; ತುಸುವೆ ಒದ್ದೆಯಾಗು: ನಸುನೆನೆ ದೊಯ್ಯನುಳ್ಳಲರೆ ಪೋಟಿದ್ದಲೆ ಕಂದದೆ ಕೂಡೆ ಕೆಂಪಿನಿಂ ರಸಮೊಸರ್ವಂತಿ ರೊಕ್ಕ ನಱುದಂಬುಲಕಂ . . . ಮದಾಳಿ ಮೊರೆದೆರ್ದಱಗುತ್ತಿರೆ ಬೀದಿಗಳ್ ಜನಕ್ಕಸತಿಯರೆರ್ದು ಪೋದುದನೆ ಪೇೞ್ವವೊಲಿರ್ದುವು ಸುಪ್ರಭಾತದೊಳ್ (ಲೀಲಾವ. ೩-೧೭). [ ನಸು$_2$ + ನೆನೆ$_2$ (< ನನೆ$_1$) ]

**ನಸುನೆಮ್ಮು** (ಕ್ರಿ). ತುಸು ಒರಗು,-ಆಶ್ರಯಿಸು: ಸಡಗಿ ಬೆಮರ್ವ ಪೆಟ್ಟಳಿಸಿ ನೋಟಿಪ್ಪಿರ್ದ ಕಂಪಿಪ ತಲ್ಲಣಿಪ್ಪ ಕಾಲ್ ತಡತಡಮಾಗೆ ಕೆಯ್ಗುಡಿ ವಳಂ ನಸುನೆಮ್ಮು [ಪಾಠಾಂ. ಮರ್ಗ]ವ ಮೇಲುದಂ ಕುಚಕ್ಕಡಿಗಡಿಗೇಱೆ ಸಾರ್ಚುವ . . . ವಿಕಾರಮಾಕೆಗಿದಿರೊಳ್ ಕರೆಗಣ್ಮಿದುದಂಬುಜಾಕ್ಷಿಸಾ (ವರ್ಧಪು. ೬-೧೪). [ ನಸು$_2$ + ನೆಮ್ಮು$_1$ ]

**ನಸುನೋ** (ಕ್ರಿ). ಸ್ವಲ್ಪ ವ್ಯಥೆಪಡು,-ನೋಯು : ಉರಃಪ್ರದೇಶಮನಿಸೆ ನೆತ್ತರೊಕ್ಕು ಪತಿ ಮುಚ್ಚೆಯೊಳಿಚ್ಚೆಯಗೆಟ್ಟು ಜೋಲ್ದೊಡಾದಮೆ ನಸು ನೊಂದು ನಂದಿಸದೆ ತನ್ನನೆ ನಿಂದಿಸಿದಂ ದಿನೇಶಜಂ (ಪಂಪಭಾ. ೧೨-೧೦೭).

[ ನಸು$_2$ + ನೋ$_1$ ]

**ನಸುನೋಟ** (ನಾ). ಕಡೆಗಣ್ಣೋಟ ; ಕುಡಿನೋಟ ;ಓರೆನೋಟ : ನಸು ನೋಟಂ ಜನವಶ್ಯಮಾಕೃತಿ ಗತಿಸ್ತಂಭಂ ವಚಃಪ್ರೌಢಿ ಭಾವಿಸೆ ಸಮ್ಮೋಹನ ಮಂತ್ರಂ (ಸೂಕ್ತಿಸು. ೮-೪೭೦) ; ಅಜ್ಞಾನದ ತಿಮಿರಮಂ ಕೆಡಿಸುವುದು ಗುರುವರ್ಯ ನಿನ್ನ ನಸುನೋಟ (ಅನುಸಾ. ೫-೪-೧) ; ತಾಳಿ ನಸುವರೆಯ ನಸುನೋಟ ನಸುಲಜ್ಜೆಯಿಂ ಬಾಲಕಿಯರಿರ್ವರು ವಿರಾಜಿಸಲು (ನವಮೋ. ೨೨-೩೪). [ ನಸು$_1$ + ನೋಟ ]

**ನಸುಬಳಲ್ಕೆ** (ನಾ). ಸ್ವಲ್ಪ ಆಯಾಸ ; ತುಸು ದಣಿವು : ನೋಟಂ ತವೆ ತಳೆದುವು ನಸುಬಳಲ್ಕೆಯಂ ಮೇಣಕೆಯಾ (ಗಿರಿಕ. ೩-೩೭).

[ ನಸು$_1$ + ಬಳಲ್ಕೆ (<ಬಟಲ್ಕೆ) ]

**ನಸುಬಾಗು** 'ನಸುವಾಗು' ನೋ.

**ನಸುಬಾಡು** 'ನಸುವಾಡು' ನೋ.

**ನಸುಬಾನಲ್** (ನಾ). ತುಸು ಮುಸುಕಾದುದು; ಸ್ವಲ್ಪ ಬಣ್ಣವಳಿದುದು: ಚುಂಬಿಸಿ ಬೀಗಿ ಬೆಳ್ಪಡರ್ದ ಬಾಯ್ದೆಱೆ . . . ಉಣ್ಕೆ ಬೆಮರ್ ನಸುಬಾಲನಾ [ನಲು]ದ ಬೊಟ್ಟೆಂಬಿವು ಕೂಟದೊಂದು ಸವಿಯಂ ಪಿಸುಣಾಡುವುವೀ ಲತಾಂಗಿಯಾ (ಚಂದ್ರಪು. ೮-೭೨). [ ನಸು$_1$ + ಬಾನಲ್ ]

**ನಸುಬಿರಿ** 'ನಸುವಿರಿ' ನೋ.

**ನಸುಬಿಸಿ** (ಗು). ೧. ಸ್ವಲ್ಪ ಬಿಸಿಯಾದ ; ಬೆಚ್ಚನೆಯ : ನಸುಬಿಸಿಯಪ್ಪ ನಲ್ಲುಣಿಸಿನಿಂ ಘುಸೃಣಾರ್ದ್ರವಿಲೇಪದಿಂ ವಿರಾಜಿಸುವ ಕದಂಬದಂಬುಲದಿಂ . . . ಜನಮಾಗಳಿಂತು ಜೀವಿಸಿತಿನಿತಲ್ಲದಂದುಟಿವುದೇ ಹಿಮದಾಗರಮಾದ ಮಾಗೆಯೊಳ್ (ಕುಸುಮಾ. ೭-೨೩) ; ಬೆಳುನೊರೆ ಮಸಗಿ ನಸುಬಿಸಿರಕುತ ಹೊನಲಿಡಲು(ಕುವ್ಯಾದ್ರೋ. ೧೦-೬). (ನಾ). ೨. ಸ್ವಲ್ಪ ಬೆಚ್ಚಗಾದುದು

ಗಾಂಧಾರಿಸೊಪ್ಪಿನ ರಸವಂ ನಸುಬಿಸಿಯುಂ ಮಾಡಿ ನೆತ್ತಿಗೊತ್ತೆ ವಾತಜ್ವರ ಪರಿಹಾರವಾಗುವುದು (ಸಕವೈ. ೭೦). [ ನಸು$_1$ + ಬಿಸಿ ]

**ನಸುಬಿಸುಪೇಱು** (ಕ್ರಿ). ಸ್ವಲ್ಪ ಬೆಚ್ಚಗಾಗು: ನಸುಬಿಸುಪೇಱೆ ಮೆಯ್ಮಗುೞೆ ಕೆತ್ತುವ ತಾಣಮೆ ಕೆತ್ತೆ . . . ಜಾನಕೀಯೆನುತ್ತುಸಿರ್ದುಸಿರ್ದಟ್ಟಿನಾ ರಘು ಕುಲಾಂಬರಚಂಡಮರೀಚಿ ಮೂರ್ಛೆಯಿಂ (ಪಂರಾಮಾ. ೯-೧೧೭).

[ ನಸು$_2$ + ಬಿಸುಪು + ಏಱು$_1$ (< ಏಱ್$_1$) ]

**ನಸುಬಿಳಿದು** (ನಾ). ತಿಳಿಯಾದ ಬಿಳಿ ; ಮಾಸಲು ಬಿಳಿ ; ಬೂದುಬಣ್ಣ; ಧೂಸರ : "ಧೂಸರಂ=ದೂಸರಂ, ದೂಸರಮೆಂದು ನಸುಬಿಳಿದು" (ಶಮದ. ಕಿ. ೨೩೫ ಪ್ರಯೋ) : ಕೋರ = ನಸುಬಿಳಿದಾಗಿ ಮಿಂಚುಹ ಬಟ್ಟಹ ತೊನ್ನು (ನಾಚಿರಾ. ಕಿ). [ ನಸು$_1$ + ಬಿಳಿದು ]

**ನಸುಬಿಳುಪು** 'ನಸುಂವೆಳ್ಪು' ನೋ.

**ನಸುಬೆಡಗು** (ನಾ). ತುಸು ಒಯ್ಯಾರ : ನಡಿಗೆಯಲ್ಲಿ ಕಂಡೂ ಕಾಣದಂತಹ ನಸುಬೆಡಗು (ಅಲಹೂ. ೧೮). [ ನಸು$_1$ + ಬೆಡಗು (< ಬೆಡಂಗು) ]

**ನಸುಬೆಳಕು** 'ನಸುಂವೆಳಗು' ನೋ.

**ನಸುಬೆಳಗು** (ಕ್ರಿ). ಮಂದವಾಗಿ ಉರಿಸು: ನಸುಬೆಳಗುಗೆ ಸೊಡರಂ (ಮುದತಿ. ೮-೨೮). [ ನಸು$_2$ + ಬೆಳಗು$_1$ ]

**ನಸುಬೆಳರ್** (ಕ್ರಿ). ಸ್ವಲ್ಪ ಬಿಳಿದಾಗು ; ಮಾಸಲುಬಿಳಿ ಬಣ್ಣವನ್ನು ತಾಳು: ಮುಂದ್ಯಸಿದ ಸಿಂಧುವಾರ ವನರಾಜಿಯಿಂ ನಸುಬೆಳರ್ತ ತಡಿಗಳುಮಂ . . . ಪಥಿಕರೆಱಲ್ಗೊಂಡು ತೋಡಿದಱುಂಬುನೀರ ಬಗರಗೆಗಳುಮನೊಳಕೆಯ್ದು ಬತ್ತಿದ ಪಳ್ಳಂಗಳೊಳಮತಿರೌದ್ರಮಾದ ಪೇರಡವಿಯೊಳಗೆ ಬರ್ಪಾಗಳ್ (ಕಾವಂಉ. ೨೬೭). [ ನಸು$_2$ + ಬೆಳರ್$_1$ ]

**ನಸುಬೇನೆ** (ನಾ). ಅಲ್ಪವಾದ ಬೇನೆ ; ಘನವಲ್ಲದ ನೋವು : ಗರ್ಭಿಣಿಗೆ ನವಮಾಸ ಪೂರ್ಣಮಾದುದು ತದ್ವಿಲಾಸಿನಿಯು ಸಂತಸದ ಮುಂದೆ ನಸು ಬೇನೆಯುಂ ಪೇಳಲಹುದೇ (ಭಾವಚಿಂ. ೩-೫೬). [ ನಸು$_1$ + ಬೇನೆ ]

**ನಸುಬೇ** (ಕ್ರಿ). ಸ್ವಲ್ಪ ಬೇಯು ; ಅರ್ಧ ಬೇಯು : ಹುರಿದ ತೆಂಗಾಯ ನಸುಬೆಂದ ಬೇಳೆಯು ಹೆಸರು ಹುರಿದು ಬೇಯಿಸಿದ ಸೊಜ್ಜಿಗೆಯಿವನು ಕೂಡಿ ಸಕ್ಕರೆಯಿಕ್ಕಿ ಕರ್ಪೂರವನು ತಳಿದು (ಸೂಪಶಾ. ೦-೩೪). [ ನಸು$_2$ + ಬೇ$_1$ ]

**ನಸುಭಯ** (ನಾ). ತುಸು ಅಂಜಿಕೆ ; ಸ್ವಲ್ಪ ಹೆದರಿಕೆ : ಬಾಣಧಿಯೊಳನ್ನ ಬರಡಗಿರೆಂದಸುರಾರಿ ನೇಮಿಸೆ ನುಡಿದನತ್ತಲು ರಾವಣಾಸು ನಸುಭಯದ ಬೆಱಗಿನಲಿ (ತೊರರಾ. ೭-೯-೧೯). [ ನಸು$_1$ + ಭಯ ]

**ನಸುಮಬ್ಬು** (ನಾ).=ನಸುಗತ್ತಲೆ : ಉಳಿವೆಳಗು ಸಂಜೆ ವಸುಮಬ್ಬು ಳುರ್ದಂಬರದಂತೆ ತಿಳಿವು ರಾಗಂ ನೆಗಳ್ದುಮ್ಮಳಮನೊಳಕೊಂಡ ಬಗೆಯಿಂ ತಳವೆಳಗಾಗುತ್ತೆ ಪಾರ್ಥನಂದಿಂತೆಂದಂ (ಶಬಶಂ. ೪-೧೧೪).

[ ನಸು$_1$ + ಮಬ್ಬು (<ಮರ್ವು) ]

**ನಸುಮಸಿ** (ನಾ). ಸ್ವಲ್ಪ ಕಪ್ಪು ; ತುಸು ಕಪ್ಪು : ನಸುಮಸಿಯಾದ ಕರ್ಪಡವನುಟ್ಟು (ಕಱಿಕಂ. ೧೭). [ ನಸು$_1$ + ಮಸಿ ]

**ನಸುಮಸುಳ್** (ಕ್ರಿ). ಸ್ವಲ್ಪ ಕಳೆಗುಂದು ; ಮಂಕಾಗು ; ಮಸುಕಾಗು : ಪೊಸತಲರ್ದ ಬಿಳಿಯ ತಾವರೆಯೆಸಟ್ಗಳ ನಡುವಿರ್ಪ ಸಿರಿಯುಮಾಕೆಯ ಕೆಲದೊಳ್ ನಸುಮಸುಳ್ದು ತೋರ್ಪಳ್ (ಪಂಪಭಾ. ೧-೪೦) ; ಓರ್ಮೊ ದಲೆಱಗಿ ದೆಸೆಗಳೆಲ್ಲಮನೊಡನಾವರಿಸಿ ತರತರದೆ ನಸುಮಸುಳ್ದಿರೆ ಪುದಿದುವು ನಭವನಭವನಂಬುಗಳೆತ್ತಂ (ಕಾವ್ಯಾವ. ೧೯೪) ; ನಸುಮಸುಳ್ದಂಗಲೇಖೆ ಪೊಱಮಟ್ಟೆಡಗಾಲ್ . . . ಕಣ್ಗೆಸೆದಿರೆ ಪಾಱಿದಳ್ ಪೊಳೆದು ಖೇಚರಿ ಮಿಂಚಿನ ಬೊಂಬೆಯೆಂಬಿನಂ (ಅರ್ಧನೇ. ೩-೧೭).[ ನಸು$_2$+ಮಸುಳ್ ]

**ನಸುಮಾತು** (ನಾ). ಸಣ್ಣ ಮಾತು : ವಿಷಯಾತುರಗೆ ವಿವೇಕವಿಲ್ಲೆಂಬುದು ಪುಸಿಯಲ್ಲ ಮಾಯಾವಿ ನುಡಿದ ನಸುಮಾತಿಗೆ ನಿಶ್ಚಯಿಸಿದ ಪಯಣವನುಪೆಯ ತಾತ್ಪರ್ಯದುಬ್ಬಿನಲಿ (ಮೋಹತ. ೩೧-೨೫). [ ನಸು$_1$ + ಮಾತು$_1$ ]

**ನಸುಮಾಸು** (ಕ್ರಿ). = ನಸುಂಮಸುಳ್ : ನಸುಮಾಸಿ ಪಾಡಱಿದ ರೂಪಿ ನೊಳುಣ್ಮುವ ಗಾಡಿ ನಾಡೆ ಕಣ್ಗೆಡಱೆ (ಪಂಪಭಾ. ೧೩-೯೯) : ನಸುಮಾಸಿ ದೆಱಂಕೆಗಳಿಂ ಕಲಹಂಸೆಗಳೆಂಬುದು (ಹಲಾಯು. ೪೨-೯೯) ; ಎಸೆದುದು ಧರಿತ್ರಿ ಪೊಗೆ ಪುಗೆ ನಸುಮಾಸಿದ ಪೊಗೆಯ ಚಿತ್ರಭಿತ್ತಿಯ ತೆಱದಿಂ (ಪುಷ್ಪಪು. ೫-೪೦).

[ ನಸು$_2$ + ಮಾಸು$_1$ ]

**ನಸುಮುಗಿ** (ಕ್ರಿ). ಸ್ವಲ್ಪ ಮುಚ್ಚು ; ಅರೆಮುಚ್ಚು ; ಅರ್ಧ ನಿಮೀಲಿತ ವಾಗು : ನಸುಮುಗಿದಕ್ಷಿ ನಾಸಿಕದೊಳೊಂದಿರೆ (ದಶಕು. ೨-೬೩).

[ ನಸು$_2$ + ಮುಗಿ ]

**ನಸುಮುಚ್ಚು** (ಕ್ರಿ). ಅರ್ಧ ಮುಚ್ಚು ; ಅರೆಮುಗಿ : ನಸುಮುಚ್ಚುವ ಬಿಚ್ಚುವ ಪೊಳೆವ ಸುಱಿವ ಬಳಸುವ ಬಟಲ್ವ ತೆರೆಮಸಗಿ ಮರಲ್ದಿಸೆವ ರಸಭಾವದೃಷ್ಟಿಗಳಸದಳಮೆನಿಸಿದುವು ನೃತ್ಯದೊಳ್ ನರ್ತಕಿಯಾ (ಲೀಲಾವ. ೪-೧೨೭) ; ಬಿಗಿಯುಪ್ಪಿ ಮೊಗಮನಿಟ್ಟಾಲಿಗಳಂ ನಸುಮುಚ್ಚಿ (ಗಿರಿಕ. ೨-೩೯).

[ ನಸು$_2$ + ಮುಚ್ಚು$_1$ ]

**ನಸುಮುಚ್ಚಿಪೋಗು** (ಕ್ರಿ). ಸ್ವಲ್ಪ ಮೈಮರೆ,-ಎಚ್ಚರ ತಪ್ಪು ; ಮೂರ್ಛೆಹೋಗು : ತನ್ನ ಚಿತ್ತದೊಳ್ ನೆಲಸಿದ ರಾಮನಂ ಬಯಸಿ ನೋಡಲಪೇಕ್ಷಿಸಿ ಬಾಹ್ಯದರ್ಶನಕ್ಕಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ ನಸುಮುಚ್ಚಿಪೋಗಿ ತಣ್ಣೆಲರಲೆಪಿಂದೆ ಮೂರ್ಛೆದಿಳಿದಳ್ (ಪಂರಾಮಾ. ೯-೧೧೧). [ ನಸು$_2$ + ಮುಚ್ಚಿ$_2$ + ಪೋಗು$_1$ ]

**ನಸುಮುಟ್ಟು** (ಕ್ರಿ). ಸ್ವಲ್ಪ ತಾಗು ; ಮೃದುವಾಗಿ ಸ್ಪರ್ಶಿಸು : ಮೃಗಧರನಂಶುಮಾಲೆ ನಸುಮುಟ್ಟುವುದುಂ ಜಲಸೂಕ್ಷ್ಮಬಿಂದುಗಳ್ನಿಗೆದಪು ವಿಂದುಕಾಂತಮಣಿಪುತ್ರಿಕೆಯಿಂದೆನೆ (ಮಲ್ಲಿಪು. ೪-೨೯).

[ ನಸು$_2$ + ಮುಟ್ಟು$_1$ ]

**ನಸುಮುತ್ತು** (ನಾ). ಹಗುರವಾದ ಚುಂಬನ; ಲಘುವಾದ ಚುಂಬನ : ನಸುಮುತ್ತ ಕೊಡುವಾಗ ಮೂರ್ಛೆ ಸಂಧಿಸಿತು ಸಾಹಸದಿ ಬೀಳದೆ ನಿಂದೆ ನಾನು (ಭರಚ. ೯-೧೦೧). [ ನಸು$_1$ + ಮುತ್ತು$_4$ ]

**ನಸುಮುರಿ** (ಕ್ರಿ). ಸ್ವಲ್ಪ ತಿರುಗು ; ತುಸುವೆ ಹೊರಳು : ಪರಿದ ತಲೆ ಬಿಟ್ಟ ಬಾಯ ನಸುಮುರಿದ ಕೊರಲ್ಮಗುಟ್ದ ಕಣ್ಗಳ್ (ಗದಾಯು. ೪-೨೫).

[ ನಸು$_2$ + ಮುರಿ$_1$ ]

**ನಸುಮುರುಟು** (ಕ್ರಿ). ತುಸು ಮುದುಡು,-ಬಾಗು,-ತಿರಿಚಿಕೊಳ್ಳು. 'ನಸುಮುರುಟುಗಿವಿ' ಪರಾ.

[ ನಸು$_2$ + ಮುರುಟು$_1$ (<ಮುರುಂಟು$_1$) ]

**ನಸುಮುರುಟುಗಿವಿ** (ನಾ). ತುಸು ಮುದುಡಿದ ಕಿವಿ : ನೊರೆವಾಯ ಹಾವಸೆವರಿದ ಪಲ್ಗಳ ಜೋಲ್ದುಟಿಯ ನಸುಮುರುಟುಗಿವಿಗಳ ಹಱಿಕಗಡ್ಡದ ಕೆಂಪುಮೀಸೆಗಳ . . . ತೋರ ಕಾರೊಡಲ ಕುಱುಬನು (ಬಸಪು ೨೦-೧೧).

[ ನಸುಮುರುಟು + ಕಿವಿ$_3$ ]

**ನಸುಮುಸುಂಕು** (ನಾ). ತೆಳುವಾದ ಮುಸುಕು,-ತೆರೆ : ಎಸೆವ ಸಭೆ ಯೊಳ್ ನಸುಮುಸುಂಕು ನಾಡೆ ಮೆಱೆಯೆ ಮಱೆಗೊಂಡು ಕುಳ್ಳಿರ್ಪಲ್ಲಿ (ಗಿರಿಕ. ೨-೧೦೫ ವ). [ ನಸು$_1$ + ಮುಸುಂಕು$_2$ ]

**ನಸುಮೆಲ್** (ಕ್ರಿ). ಸ್ವಲ್ಪ ಜಗಿ; ತುಸು ಅಗಿ : ನಸುಮೆಲ್ದಬ್ಬಗಱುಂಕೆ ಸೂಸುತಿದೆ ಪೋದತ್ತಲ್ಲಿ ನಾನಾಮೃಗಂ (ಕಾದಂಪೂ. ೧೫೮).

[ ನಸು$_2$ + ಮೆಲ್$_1$ ]

**ನಸುಮೊಳೆ** (ಕ್ರಿ). ತುಸು ಅಂಕುರಿಸು ; ಸ್ವಲ್ಪವೆ ಕಾಣಿಸಿಕೊಳ್ಳು : ಮುಗುಳುನಗೆ ನಸುಮೊ[ಪಾಠಾಂ. ಹೊ]ಳೆಯೆ ಭೀಮಾದಿಗಳಿಗೆಂದನು ಕೃಷ್ಣನು (ಕುವ್ಯಾಭೀ. ೭-೧೨). [ ನಸು$_2$ + ಮೊಳೆ$_1$ ]

**ನಸುಲಜ್ಜೆ** (ನಾ).=ನಸುನಾಚಿಕೆ : ನಗೆ ನಸುಲಜ್ಜೆಯೊಳ್ ತೊಡರಲಿದ್ರ್ದುದೆ ಬಲ್ನಡೆ ಮಾಂದ್ಯಭಾವದೊಳ್ ಪುಗಲಿದೆ . . . ಯೌವನೋದಯಮೊ

ಬಾಲ್ಯವಿಮೋಚನವೋ . . . ಭವಾನಿಯಾ (ಗಿರಿಕ. ೪-೫) : ನಸುಲಜ್ಜೆ ನಗೆಮೊಗದೊಳಂಕುರಿಸೆ (ಜೈಮಿಭಾ. ೨೯-೨೮). [ ನಸು₁ + ಲಜ್ಜೆ ]

**ನಸುವಕ್ಕೆ** (ನಾ). ತುಸು ಒರಗುವಿಕೆ; ಸ್ವಲ್ಪ ಬಾಗುವಿಕೆ: ಹರವಸವೊಯ್ಯ ನಾಜಿ ಮುಗುಳ್ದಕ್ಷಿಗಳೆಟ್ಟಟಿ ಕೂಡೆ ಮೆಯ್ಯೊಳುಬ್ಬರಿಸಿದ ರೋಮರಾಜಿ ನಸುವಕ್ಕೆಗೆ ಸಾಜಿ ಬಜಲ್ದ ಮೆಯ್ಗೆ ಚೇತರಣೆಯಲರ್ಚೆ(ಚಂದ್ರಪು. ೮-೬೦). [ ನಸು₁ + ಪಕ್ಕೆ₁ (<ಪಜ್ಕೆ) ]

**ನಸುವರೆ** (ಕ್ರಿ). (ಸಂದಣಿ) ಸ್ವಲ್ಪ ಚೆದರು : ನೂಕುತಾಕಂ ನಿರವಿಸಿ ಕಿಜಿದುಂ ಪೊಟ್ಟು ನಿಂದು ಅಲ್ಲಿಯ ಸಂದಣಿ ನಸುವ[ಪಾಠಾಂ. ಪ]ರೆವುದುಂ . . . ಪೊಂಬಾಗಿಲನೊಳಪೊಕ್ಕು (ಚಿಕವಂ. ೧೨೧-೨೨): "ಸ್ವಲ್ಪ ಹರಿ, ತುಸು ಕಮ್ಮಿಯಾಗು" (ಪ್ರಭಣ.). [ ನಸು₂ + ಪರೆ₁ ]

**ನಸುವರೆಯ** (ನಾ). ಎಳೆಯ ಪ್ರಾಯ ; ಹರೆಯದ ಪ್ರಾರಂಭ ; ಏರುಂಜವ್ವನ : ತಾಳಿ ನಸುವರೆಯ ನಸುನೋಟ ನಸುಲಜ್ಜೆಯಿಂ ಬಾಲಕಿಯರೀರ್ವರು ವಿರಾಜಿಸಲು (ನವಮೋ. ೨೩-೩೪). 'ಎಳವರೆಯ' ಪರಾ. [ ನಸು₁+ ಪರೆಯ₂ (< ಪರಯ) ]

**ನಸುವಾಗು,** ನಸುಬಾಗು (ಕ್ರಿ). ೧. ತುಸು ಬಾಗು; ಕೊಂಚ ಬಳುಕು,- ಬಗ್ಗು : ಮೇಲುದಿನೊಳ್ಪೊದಳ್ದ ಕುಚಭಾರದಿಂ ನಸುವಾಗಿದಾಗಲತೆ (ಜೈಮಿಭಾ. ೬-೪೬). **ನಸುಬಾಗು :** ೧. ನಸುಬಾಗಿ ಕೊಂಬಿನೊಳ್ ಪೊಳೆವೆಳಗಾಯ ನುಣ್ಪೊಗರಿಯಿಂ ಸುಜಿತರ್ಪಲರಿಂದೆ ಬಿಟ್ಟ ಪೂಗಳ ಪುಡಿಯಿಂ ಕರಂ ಸೊಗಯಿಪೊಲಗಸಾಲೆಯೊಳಿರ್ದರೊಪ್ಪದಿಂ (ಕಬ್ಬಿಗಕಾ. ೧೨೬). ೨. ತುಸು ತಗ್ಗಿಸು,-ಬಾಗಿಸು : ಪರರು ಪತಿಕರಿಸಿದೊಡೆ ಲಜ್ಜೆಗೆ ಶಿರವ ನಸುಬಾಗುವರು ಗರುವರು (ಕುವ್ಯಾವಿ. ೭-೧೮). [ ನಸು₂ + ಬಾಗು₁ ]

**ನಸುವಾಡು,** ನಸುಬಾಡು (ಕ್ರಿ). ತುಸು ಬಾಡು : ನಸುಗುಂದು : ಮಿಸುಗುವ ಬಣ್ಣವಾಸಿಗದೆಸಜಿ ನಸುವಾ[ಪಾಠಾಂ. ಬಾ]ಡೆ ವಿಭೂಷಣಾಂಶುಗಳ್ ಮಸುಳೆ (ಸುಕುಮಾ. ೧೦-೫) ; ನೀರ್ಗುಡಿಯಲ್ ಗಡಣದಿಂ ಬಂದು ಬಜಲ್ದು ಕುಳ್ಳಿರ್ದ ಪಾಮರಿಯರ ಪೆರ್ಮುಡಿಯಿನಲ್ಲೊಕ್ಕು ನಸುವಾಡಿದ ನೆಲ್ಲ ನಿಡುವೂಡೆ ಯಿಂ (ಲೀಲಾವ. ೫-೬೭ ವ). **ನಸುಬಾಡು :** ಮೇಲಿನ 'ಸುಕುಮಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ನಸು₂ + ಬಾಡು₁ ]

**ನಸುವಿರಿ,** ನಸುಬಿರಿ (ಕ್ರಿ). ತುಸು ಅರಳು ; ಅರೆಬಿರಿ : ನಸುವಿರಿದ ಸೇವಂತಿಗೆಯ ಕೇವಣದುಂಗುರಂಗಳುಮಂ. . .ನೋಡಿ (ಜಗವಿ. ೬-೧೭ವ) ; ನಸುವಿರಿದಿರ್ದ ಪದ್ಮವನದೊಳ್ ನಲಿವಂಚೆಗಳಿಂ . . ರಸಾಲದೊಳ್ ಪೊಸತನಿವಣ್ಗಳಿಂ ಸವಿದು ರಾಗಿಪ ರಾಜಶುಕಂಗಳಿಂ ನಿರೀಕ್ಷಿಸೆ ಸೆಜೆಗೆಯ್ವುದೊರ್ವೊರ್ದಲೊಳಾ ವನಮಾ ವನಲೋಚನಂಗಳಂ (ಧರ್ಮನಾ. ೩-೫೪). **ನಸುಬಿರಿ :** ಕುಸುಮಕುಳಕ್ಕೆ ನಿನ್ನರಸೆ ನಿನ್ನ ವಿಳಾಸಮೆ ನಿನ್ನ ಚೆಲ್ವೆ . . . ಎಂದಭಿಷೇಕಪುರಸ್ಸರಂ ಸ್ಮರಂ ನಸುಬಿರಿದಿರ್ದ ಮಲ್ಲಿಗೆಗೆ ಕಟ್ಟಿದನಂಕದ ರಾಜ್ಯಪಟ್ಟಮಂ (ಶಾಂತಿಪು. ೭-೧೪೨): ನಸುಬಿರಿವ ಕಮಲಮುಕುಳದ ನಸುಬಿರಿವುತ್ಪಲದ ಮುಗ್ಧ ಪರಿಮಳಗಂಧಂ (ಅಜಿಪು. ೬-೬೫) ; ನಸ ಬಿರಿವ ಕುಸುಮಕೆ ಸುಗಂಧ ರನ್ನಕೆ ರಂಗು ದೊರೆಕೊಂಡ ಮಾಳ್ಕೆಯಿಂ (ಸೌಂದಪು ೭-೨). [ ನಸು₂ + ಬಿರಿ₁ ]

**ನಸುವಿರಿದು** (ನಾ). ಸ್ವಲ್ಪ ದೊಡ್ಡದು : ಎಳದು + ಪೆಜಿ = ಎಳವೆಜಿ ಏವಂ ಬೆಳವೊಲಂ, ಮೂವಣ್ಣಂ, ನಸುವಿರಿದು, ಮರವಣೆ (ಶಬ್ದಾನು. ೯೧ ಪ್ರಯೋ.). [ ನಸು₁ + ಪಿರಿದು ]

**ನಸುವೆಸೆ** (ಕ್ರಿ). ಸ್ವಲ್ಪ ಬಿಂಕವನ್ನು ತೋರು,-ಬೀಗು : ಪಸರಿಸಿದ ಕುಸುಮದೆಸಟ್ಗಳ ಮಸುಳಗೆಯುಂ ಪಳುಕುವೆಸದ ಸೆಗಸವಸದಿಂ ಸಸಿವಸಿಯಿಸಿದವೊಲೆಸೆದುದನಸಿಯಳ್ ನಸುವೆಸೆದು ಪಸುಗೆ ಕುಡೆ ಕುಳ್ಳಿರ್ದಂ (ಅನಂಪು. ೮-೩೫). [ ನಸು₂ + ಬೆಸೆ₁ ]

**ನಸುವೆಳಗು,** ನಸುಬೆಳಕು (ನಾ). ಮಂದವಾದ ಕಾಂತಿ; ಸ್ವಲ್ಪ ಬೆಳಕು ; ಮಬ್ಬು ಬೆಳಕು : ಕುಸುಮರಜದಿಂದೆ ಸೊಗಯಿಪ ವಸಂತವನರಾಜಿಯಂತೆ ಚಂದ್ರೋದಯಮಿನ್ನೆಸೆದಪುದೆನೆ ನಸುವೆಳಗಿಂ ಮಸಗಿದುದಿನಿಸಿಂದ್ರದಿಗ್ವಧೂಮುಖಬಿಂಬಂ (ಕಾದಂಪೂ. ೮೭೮). **ನಸುಬೆಳಕು :** ಇನ್ನೂ ನಸುಬೆಳಕು ಹರಿಯುತ್ತಿತ್ತಷ್ಟೆ (ರೂಪಸಂ. ೧೭). [ ನಸು₁ + ಬೆಳಗು₂ ]

**ನಸುವೆಳ್ದಿಂಗಳ್** (ನಾ). ತಿಳಿಯಾದ ಬೆಳದಿಂಗಳು : ನಸುವೆಳ್ದಿಂಗಳ ತಣ್ಣದಿರ್ಗೊನರ್ಗಳಂ ದಂತಾಂಶುಗಳ್ ಬೀಜಿ (ಮಹಾನೇ. ೮-೧೩). [ ನಸು₁ + ಬೆಳ್ದಿಂಗಳ್ ]

**ನಸುವೆಳ್ಪು,** ನಸುಬಿಳುಪು (ನಾ). ಸ್ವಲ್ಪ ಬಿಳುಪು ; ನಸುಕಾಂತಿ : ಒಸರ್ದಪುದು ನುಡಿಯೊಳೊಲವಿನ ರಸವೆನೆ ನಸುವೆಳ್ಪು ಮಂದಮಂದಸ್ಮಿತದಿಂ ಪಸರಿಸುತಿರೆ (ಕಾದಂಉ. ೧೯೭). **ನಸುಬಿಳುಪು :** "ಈಷತ್ಪಾಂಡು, ಧೂಸರ = ನಸುಬಿಳುಪು " (ನಾಚಿರಾ. ೬). [ ನಸು₁ + ಬೆಳ್ಪು ]

**ನಸುಸಂಜೆ** (ನಾ). ಸೂರ್ಯ ಮುಳುಗುವ ಸಮಯ ; (ರಾತ್ರಿಯಾಗಲು) ಸ್ವಲ್ಪ ಕಾಲವೆ ಉಳಿದಿರುವ ಸಂಜೆ ; ಗೋಧೂಳಿಕಾಲ : ನಸುಸಂಜೆಯಾಗಲುದ್ಭಟನೊಸೆದರ್ಘ್ಯಮನಿತ್ತು ಚಂದ್ರಭೂಷಣನಂ ಪೂಜಿಸಿ ಮೆಲ್ಲನೆ ಮಗುಟ್ದಾರೋಗಿಸಿದಂ ಶಿವಭದ್ರವೆರಸು ಮುದದಿಂದಾಗಳ್ (ಉದ್ಭಟ. ೮-೮೭). [ ನಸು₁ + ಸಂಜೆ ]

**ನಸುಸವಿ** (ಕ್ರಿ). ಸ್ವಲ್ಪ ರುಚಿ ನೋಡು ; ತುಸು ತಿನ್ನು : ನಸುಸವಿದಿತ್ತ ಪೊಚ್ಚಪೊಸಗಂಪಮರ್ದಿಂಪಿನ ತಂಬುಲಂ (ಉದ್ಭಟ. ೪-೩೮). [ ನಸು₂ + ಸವಿ₁ ]

**ನಸುಸುಯ್** (ಕ್ರಿ). ಸ್ವಲ್ಪ ಉಸಿರುಬಿಡು : ಸುರಭಿಪರಿಮಳಸುಗಂಧೋತ್ಕರಮಂ ಪನ್ನೊಂದು ತಿಂಗಳಿಗೊರ್ಮೆ ಮನೋಹರಮಾಗಿರೆ ನಸುಸುಯ್ವುಂ ನಿರುಪಮಮುಹಿಮಾಪ್ರಭಾವನಂತಾ ದೇವಂ (ಸುಕುಮಾ. ೯-೩೪). 'ಬಿಸುಸುಯ್' ಪರಾ. [ ನಸು₂ + ಸುಯ್₁ ]

**ನಸುಸುರ್ಕು** (ಕ್ರಿ). ಸ್ವಲ್ಪ ಕುಗ್ಗು : ಸುರ್ಕುಜಿದುರುಳಿಗುರುಳಿ ನಸುಸುರ್ಕಿದ ಕುಚಚೂಚುಕಂ (ಆದಿಪು. ೧೧-೧೪೫). [ ನಸು₂ + ಸುರ್ಕು₁ ]

**ನಸುಸುಳಿವು** (ನಾ). ಮಂದವಾದ ಚಲನೆ : ಲಲಿತಮೃದುತರ ಹಂಸತೂಲದ ತಳಿತ ಮಂಚದ ತಂಬೆಲರ ನಸುಸುಳಿವಿನಲಿ ಥಳಥಳಿಪ ಜಾಳಕಪಂಕ್ತಿ ರಂಜಿಸಲು (ಬಸಪು. ೧೧-೧೪). [ ನಸು₁ + ಸುಳಿವು ( < ಸುಜಿವು ) ]

**ನಸುಸೇಕ** (ನಾ). ಸ್ವಲ್ಪ ಶಾಖ ; ಸುಖೋಷ್ಣ : ದಿಟ್ಟ ಪಾರ್ವ ಕಾಸಿ ತೆಗೆವುತ ಪೊಟ್ಟಣವನಂಗೈಯ್ಯೊಳೊಯ್ಯನೆ ಮುಟ್ಟಮುಟ್ಟ ಶರೀರದೊಳು ನಸುಸೇಕವುಂ ಮಾಡಿ ಅಟ್ಟ ವಾತದ ತೈಲವ ತಾಂ ಬೊಟ್ಟಡಿಸಿ ಲೇಪಿಸುತ ಪಥ್ಯಂಗೊಟ್ಟದಕೆ ತಕ್ಕನಿತು ಜೋಪಾಸನವನಾಚರಿಸಿ (ಬಸಪು. ೧೭-೮). [ ನಸು₁ + ಸೇಕ₁ ]

**ನಸುಸ್ಥೈರಣೆ** (ನಾ). ಸ್ವಲ್ಪ ತಾಳ್ಮೆ,-ಸಹಿಷ್ಣುತೆ: ಪ್ರಣಯಕಲಹವನೊಡರ್ಚಿ ನಸುಸ್ಥೈರಣೆಯ ಗೆಲವಂ ಕೊಟ್ಟು ಮೆಲ್ಲನೆ ಸಣಿಸಿ ಮುನಿದಡೆ ಸೋಲ್ದು ಮನವಲುಸುತೊಡನೆ ಸಾರ್ದು . . . ಮೋಳ್ಕೈಸಿ (ಬಸಪು. ೪೨-೧೪). [ ನಸು₁ + ಸ್ಥೈರಣೆ ]

**ನಸುಸೋಂಕು₁** (ಕ್ರಿ). ಸ್ವಲ್ಪ ತಗುಲು,-ತಾಗು : ಪೊಸ ಪೂವಿನ ಕಂಪಿನೊಳಟ್ದು ಚಿತ್ತಜೋತ್ಪನ್ನವಿಳಾಸಮಂ ವಿರಹಿಗರ್ಮುಡಿಮಾಡಿ ಶರದೃವಂ ಸಮೀರ[ನ್ನ]ಸುಸೋಂಕಿ ಘರ್ಮಜಲಬಿಂದುವನಾಜಿಸಿದತ್ತು ನಲ್ಲರಾ (ಶಾಂತಿಪು. ೧೦-೧೩೨) ; ಅರಗಿಳಿವಿಂಡು ಪಾಜಿ ನಸುಸೋಂಕಿದೆಜಿಂಕೆಯ ಗಾಳಿಗೊಂದನೊಂದೊರಸೆ ನಿರಂತರಂ ಸುರಿವ ನುಣ್ಣಿನೆವಾಳ್ಗಳ ಧಾರೆಗೊಡ್ಡಿ ಚಂಚುರ ನಿಜಚಂಚುವಿಂ ಸವಿದು (ಕಾವ್ಯಸಾ. ೧೧೪) : ತಕ್ಕೆಯೊಳ್ಪಿರಿದು ನಸುಸೋಂಕಿ ವಿಟರಿಂ ಘಣಂದೆಗೆಯೆಂದು ಮುಂದಿಸೂಳೆ ಮಗುಳುಸುರ್ದಳು (ನಂದಿವಾ. ೨೩-೪೩). [ ನಸು₂ + ಸೋಂಕು₁ ]

**ನಸುಸೋಂಕು₂** (ನಾ). ಮೃದುವಾದ ಸ್ಪರ್ಶ : ಎನ್ನ ಕದಂಪಿನ ನಸುಸೋಂಕಿನೊಂದು ಸುಖದಿಂದಾದಂ ಕಂಪಿಸುತಿರೆ ಕರತಳದಿಂದಂ ಪೋದತ್ತಕ್ಷಮಾಲೆ ನಾಣ್ಚೆರಸಾಗಳ್ (ಕಾದಂಪೂ. ೭೭೦). [ ನಸು$_1$ + ಸೋಂಕು$_2$ ]

**ನಸುಹೊಳೆ** (ಕ್ರಿ). ಸ್ವಲ್ಪಕಾಣು, –ತೋರು : ನಗೆಯ ಮೊಳೆ ನಸುಹೊಳೆಯೆ ಬೊಮ್ಮನ ಮೊಗವ ನೋಡಿದನಭವ (ಕುಮ್ಯಾಕ. ೬-೩೩).

[ ನಸು₂ + ಹೊಳೆ$_1$ ( < ಪೊಳೆ$_1$) ]

**ನಸೆ$_1$, ನಸ್ಸಿ$_2$, ನೆಸೆ$_3$** (ನಾ). ೧. ಕಾಮಾತುರ ; ಕಾಮವಿಕಾರ ; ಬೆದೆ : "ನಸೆ ಕಾಮವಿಕಾರ ವೃದ್ಧಿಯೊಳ್" (ಕರ್ಣಾನಿ. ೯೦) ; ಪೊಸಮದದಾನೆಯಂ ನಸೆಯು ಪೆರ್ಬಿಡಿ ಜಂಗಮಕಲ್ಪವೃಕ್ಷಮಂ ಮಿಸುಗುವನಲ್ಪಕಲ್ಪಲತೆ ನೀರದಮಂ ಕುಡುಮಿಂಚು ಪೊರ್ದಿ ಶೋಭಿಸುವವೊಲಾ ಸುರಾಧಿಪನನಾ ಪರಮೇಶ್ವರಿ ಪೊರ್ದಿ ನಾಡೆ ಕಣ್ಗೆಸೆದಳ್ (ಶಾಂತಿಪು. ೭-೫೯) ; ನಸೆಗನುವಶಮಾಗಿರ್ದಾದಂದೊಂದಿಭೇಂದ್ರಂ (ಜಗವಿ. ೧೬-೧೦) ; ಹಸಿವಿಲ್ಲದೆ ಮುನ್ನ ಉಂಡೂಟವ ನಸೆಯಿಲ್ಲದೆ ಅಪ್ಯಾಯನವನಱಿಯರು (ಸರ್ವಜ್ಞ. ೩೨-೧೬೦) : ಮಣಿಕದ ನಸೆಗಸವಸದಿಂದಣಿಯರಮಾಡುವ ಗವೇಂದ್ರನಂ ಸತಿ ಕಂಡಳ್ (ಅನಂಪು. ೪-೧೧೧) ; ಹಿಂಡಗಗಲಿದ ಹುಲ್ಲೆಯು ನಸೆಯೊಳಗಿಪ್ಪ ಗಂಡೇಣ ತನ್ನ ವಲ್ಲಭನ ಕಂಡುದುಂಟಾದಡೆ ತೋಱು ತೋಱೆನುತಲಿ ಪುಂಡರೀಕಾಕ್ಷಿ ಕೇಳಿದಳು (ಮೋಹತ. ೯-೩೪) ; ಆಕಳು ನಸೆಗೆ (ಬೆದೆಗೆ) ಬಂದಾಗ ಇಂದ್ರಿಯದಿಂದ ಸಣ್ಣಗೆ ಸ್ರಾವ ಜಿನುಗುವುದು (ಗೋಗ್ರಾಸ. ೨೪). **ನಸ್ಸಿ$_2$** : ೧. ಅಳಿಗಳಪ್ಪುಗೆ ಸಿಂಗವಣಿಗಳ ಚೆಲ್ಲಾಟ ಕಳಹಂಸಗಳ ಬಾಯ್ಗೂಟ ತೊಳಗುವ ಹರಿಣಹುಲ್ಲೆಯ ನಸಿಯುರ್ವರ ನೆಲೆಗೊಂಡು ಮೆಱೆದುವೇನೆಂಬೆ (ಕಂನವಿ. ೧೦-೪೪) ; ಕಡುಹಸಿದ ತೋಳನು ಮಾಂಸದ ಪಿಂಡವನ್ನು ನೋಡುವಂತೆ ನಸಿಯನ್ನೆಲ್ಲ ಕಣ್ಣಿಗೆ ತಂದು, ಇಳಿದು ಬರುತ್ತಿರುವ ಗೃಹಿಣಿಯನ್ನು . . . ನೋಡುತ್ತ ನಿಂತಿದ್ದಾರೆ (ಬೆಳುವಾ. ೧೬೪). **ನೆಸೆ$_3$** : ೨. (ಕರಾ) ಸಲಿಗೆ ; ಸದರ : ಮಕ್ಕಳಿಗೆ ನೆಸೆ ಕೊಡಬಾರದು (ಮರವಾ. ೧೮೦) ; ನೆಸೆ ಕೊಟ್ಟವ ಹಸೆ ಕದ್ದುಕೊಂಡುಹೋದ (ಗಾದೆ).

**ನಸೆ ಮಾಡು** = ಕಾಮಚೇಷ್ಟೆಗಳನ್ನು ಮಾಡು ; ರತಿಕ್ರೀಡೆಯಾಡು : ತನ್ನ ಹರೆಯದ ನಲ್ಲರೊಡನೆ ನಕ್ಕು ನಸೆ ಮಾಡುತಂ ಸಿಂಗರಕ್ಕೆ ಮನಮೆಳಸಿ . . . ಲೋಲೆಯರ್ ಮೆಱೆದರು (ಚಿಬಪು. ೧೦-೭೫).

[ ದೇ. ॥ ತಮಿ. ನಚ್ಚೈ ; ತೆಲು. ನಸ ; ಕೊಲಾ. ನಸವ್ = ತುರಿಕೆಯಾಗು, ನವೆಯಾಗು ]

**ನಸೆ$_2$** (ನಾ). ಒಂದು ಬಗೆಯ ಸಸ್ಯ : ಕಬ್ಬು, ನಸೇ, ಲಾವಂಚಿ, ಕಾಶಿ . . . ಜಂಡು, ಬಿದಿರು (ನಮ್ಮನು. ೨೩೯). [ ? ]

**ನಸೆಗಾರ** 'ನಸೆಗಾಱ' ನೋ.

**ನಸೆಗಾರ್ತಿ** (ನಾ). ಕಾಮೋದ್ರೇಕವನ್ನುಂಟುಮಾಡುವವಳು ; ಬೆದೆಗಾತಿ : ನಸೆಗಾರ್ತಿ! ಇಂತು ದಮನಂ ಹಯಮಂ ಸೆಱೆವಿಡಿದು ನಿಜಪುರಕೆ ಕಳಿಪಲ್ (ರಾಮಾಶ್ವ. ೮೬-೧೦). [ ನಸೆಗಾಱ + –ತಿ$_1$ (<–ಇತ್ತಿ) ]

**ನಸೆಗಾಱ, ನಸೆಗಾರ** (ನಾ). ೧. ಕಾಮೋದ್ರೇಕವನ್ನುಂಟುಮಾಡುವವನು. ೨. ಕಾಮ ; ಮದನ ; ಮನ್ಮಥ : "ಕುಡುಬಿಲ್ಲ ಪೂಪುಣಂಬಂ . . . ಕಾವ ಕೊಂಕುವಿಲ್ಲಂ ಒಡಲಿಚಂ ನಸೆಗಾಱ ಕಮ್ಮಂಗಣೆಯ ಜೊನ್ನೊಡಲನಳಿಯಂ ದಪ್ಪಕಂ ಮಯಣನೆಂಬಿವಿಂತೊಡನೆ ಮನ್ಮಥ ನಾಮವು" (ಶಬ್ದಮಂ. ೮) ; ತನಗೆ ಬಿರಯಿಮಿಗಂಗಳ ಬೇಂಟೆಗೆ ಬೇಱೆವೇಱೆವಿಲ್ಗಳ್ ದೊರೆಕೊಳ್ವಂತು ನಸೆಗಾಱನೊಸೆದು ಬೆಳೆಯಿಸಿದನೆನಲ್ಕೆಸೆವ ಕರ್ಬಿನ ತೋಂಟ (ರಾಮಾಶ್ವ. ೧೦೧-೨೦). **ನಸೆಗಾರ**: ೧. "ನಸೆಗಾರ – ಬೆದೆಗಾರ, ಕಾಮ" (ಗಂಗಾಮ. ೦೭೯) ; ಸ್ವೈರಿಪೆನೆಂತು ಚೆನ್ನೆ ನಸೆಗಾರನ ರೂಪಮ ನೀನೆಯಲ್ತೆ ಪೇಳ್ಮಾರಸಮಾನರೂಪ ನಸೆಗಾರನೆ ಸುತ್ತಿಹಳೇಕೆ ಬಾರಳೊ (ನಳವಿ. ೩೮).

[ ನಸೆ$_1$ + –ಗಾಱ ( < –ಕಾಱ ) ]

**ನಸೆಗೆಡು** (ಕ್ರಿ). ಕಾಮೋದ್ರೇಕವಿಲ್ಲದಾಗು ; ಕಾಮಾತುರವನ್ನು ಕಳೆದುಕೊಳ್ಳು ; ನೀರಸವಾಗು : ಅಲ್ಲಿಯೋದುವ ಶುಕಾವಳಿ ಮೂಗುವಟ್ಟಿರ್ದುವಲ್ಲಿ ಸಲಹಿದ ಹಂಸಮಾಲೆ ನಸೆಗೆಟ್ಟಿರ್ದುವು (ವೀರಶ. ಹ. ೪೯೦-೭).

[ ನಸೆ$_1$ + ಕೆಡು$_1$ ]

**ನಸೆದಿಟ್ಟಿ** (ನಾ). ಕಾಮಾತುರತೆಯಿಂದ ಕೂಡಿದ ದೃಷ್ಟಿ ; ಕಾಮುಕನೋಟ : ಸಿಂಗಾರವ್ವು . . . ನಸೆದಿಟ್ಟಿಯ ಬಿತ್ತುಂದನಿಯಿಂದ (ಬಿಟ್ಟಿಅ. ೯೭-೨೦). [ ನಸೆ$_1$ + ದಿಟ್ಟಿ ]

**ನಸೆನಸೆ, ನಶನಶೆ, ನಸನಸೆ** (ನಾ). ಸಂಶಯ ; ಅನುಮಾನ ; ಅಪನಂಬಿಕೆ : ನಸೆನಸೆಯುಳ್ಳವನು ಹಸಿಯಿನೇ? (ಗಾದೆ). **ನಶನಶೆ** : ಆಡುವ ಮಾತನ್ನೆಲ್ಲಾ ಖಂಡಿತವಾಗಿ ಆಡುವುದು. ನಶನಶೆ ಇಲ್ಲ (ಮಾಸುಗ. ೩೩). **ನಸನಸೆ** : (ಈ).

ನಸೆನಸೆ ಪಡು = ಅನುಮಾನ ಪಡು ; ಸಂಶಯಹೊಂದು : ಜೋಕೆಯಿಂದ ಆಯಿ ; ಆಯ್ಕೆಯಲ್ಲಿ ( ಸುಲಭವಾಗಿ ಒಪ್ಪದೆ ) ನಸೆನಸೆ ಪಡು (Pick and Choose. ಇಂಕನಿ). **ನಸೆನಸೆ ಮಾಡು** = ನಸೆನಸೆ ಪಡು : ನಮ್ಮ ದೇಶದ ಕಥಕರು . . . ಕೊಟ್ಟದ್ದಕ್ಕೆ ತಕ್ಕಷ್ಟು ತಿಳಿವು ಬಂತೇ ಇಲ್ಲವೇ ಎಂದು ತುಂಬ ನಸೆನಸೆ ಮಾಡಿ ನೋಡುವರು (ನಿಬಂಧ. II, ೫೯).

[ ದೇ.॥ ತಮಿ. ನಚುನಚು = ( ಮಾತು ಅಥವಾ ಕೃತಿಗಳಲ್ಲಿ ) ನಿರ್ಧಾರಕ್ಕೆ ಬರದಿರು, ಹೊಯ್ದಾಡು ]

**ನಸೆನೋಟ** (ನಾ). ಕಾಮೋದ್ರೇಕವನ್ನುಂಟುಮಾಡುವ ನೋಟ ; ಕಾಮಾತುರದಿಂದ ಕೂಡಿದ ದೃಷ್ಟಿ : ಬೆಸುಗೆವಾತಿನ ವಿಟರಸುಗುಬ್ಬಸವಮಾಳ್ಪ ನಸೆನೋಟದೊಳು ಶಂಕಿನಿಯರು (ಭ್ಯರಸೂ. ೨೬೯).

[ನಸೆ$_1$ + ನೋಟ ]

**ನಸೆಮುಸಪು** (ನಾ). ವಿರಹದ ಹೆಚ್ಚಳ : ನಸೆಮುಸಪೊಂದೆ ನುಣ್ಪಸಲೆಯೊಳ್ ಸುಸಿಲಾಂತೆಸೆವೇಣನಂ ವಿಲಂಬಿಸದಿಸಲೆಂದು ಬಂದನ ಪುಳಿಂದನ ವಕ್ಷಮನುದ್ಗಮಾಸ್ತ್ರದಿಂದಿಸೆ ಕುಸುಮಾಸ್ತ್ರಂ (ರಾಜಶೇ. ೫-೧೦೫). [ ನಸೆ$_1$ + ಮುಸಪು ]

**ನಸೆಮುಸೆ$_1$** (ನಾ). ಕಾಮೋದ್ರೇಕವನ್ನುಂಟುಮಾಡುವಂಥದು ; ಬಯಕೆಯನ್ನು ಹೆಚ್ಚಿಸುವಂಥದು : ಬೆಸುಗೆವಾತಿನ ವಿಟರಸುಗುಬ್ಬಸವ ಮಾಳ್ಪ ನಸೆಮುಸೆಯ ನೋಟದ ಶಂಖಿನಿಯರು (ಭ್ಯರವೇ.೨-೧೭) ; ರಸಿಕದಂಪತಿಗಳು ಕೂಡಿದರೆನೆ ಸಾಕು ನಸೆಮುಸೆ ಲಲ್ಲೆ ಕೊಲ್ಲಿಯೊಳು ಬೆಸುಗೆವಡೆದರಂತುಟಂತುಟಾಡಿದರೆಂದು ಹಸರವಿಕ್ಕುವುದಾವ ಜಾಣ್ಮೆ (ಭರತ. ೧೦-೧೦೩).

[ ನಸೆ$_1$ + ಮುಸೆ$_2$ ]

**ನಸೆಮುಸೆ$_2$** (ನಾ). ಹರಿತವಾಗುವಂತೆ ಮಸೆಯುವಿಕೆ; ತೀಕ್ಷ್ಣವಾಗುವಂತೆ ತೀಡುವಿಕೆ (?) : ಕದಡಿದವು ಬಲವೆರಡು ಕಲ್ಪದೊಳುದಧಿಯುದಧಿಯನೊದೆವವೊಲು ತಾಗಿದರು ನೀಗಿದರಸುವ ನಸೆಮುಸೆಗಕ್ಕುಡಿಸಿದವರು (ಕುಮ್ಯಾದ್ರೋ. ೧೭-೨೦) ; ಕಾಲನೇಮಿಯಂ ಜಡಿದುಂ ಬಡಿದುಂ ಸಂದ ತನ್ನ ಪನ್ನತಿಕೆಯಿಂ ಪೊಣರ್ದ ರಾಮಭೃತ್ಯಂ ನಸೆಮುಸೆಯ ತಿಸುಳಂ ಬೆಳಬೆಳಗೆ ಉರಿಗಣ್ಣ ಜಾಲ ದಳ್ಳಿಸೆ ... ಮಾರುತಿಗ್ಮೆಮೊಗಂ ಮುಮ್ಮೊಗನಾಗಿ ಜಡಿದಂ (ರಾಮಾಶ್ವ. ೧೩೩-೭) [ ನಸೆ$_0$ + ಮುಸೆ$_2$ ]

**ನಸೆಯಳಿಪು** (ನಾ). = ನಸೆಯಿಚ್ಚೆ : ನಸೆಯ [ಪಾಠಾಂ. ಮುಸಪ, ಮುಸುಪ] ಳಿಪಿಂ ಪ್ರಿಯಾನನಮನೀಕ್ಷಿಸಲುದ್ಯತೆಯಾಗಿ ತಾನೆ ಲಜ್ಜಿಸಿ ತಲೆವಾಗಿ (ಸೂಕ್ತಿಸು. ೭-೮೨) ; (ಚಂದ್ರಪು. ೬-೭೭ ನೋ). [ ನಸೆ$_1$ + ಅಳಿಪು₂ ]

**ನಸೆಯಿಚ್ಚೆ** (ನಾ). ಕಾಮಾತುರ ; ಕಾಮೇಚ್ಛೆ ; ಸಂಭೋಗಾಪೇಕ್ಷೆ .

**ನಸೆಯಿಚ್ಚೆಯಾಗು** = ಕಾಮಾಪೇಕ್ಷೆಯುಂಟಾಗು ; ರತಿಯ ಬಯಕೆಯುಂಟಾಗು : ಪಸಿದೂಡೆ ಸಲ್ಲಕೀಕಿಸಲಯಂಗಳನೊಯ್ಯನೆ ನೀಡಿ . . . ನಸೆಯಿಚ್ಚೆಯಾದೊಡಗೂಡಿ ಬಟಿಲ್ದೊಡೆ ಕರ್ಣವಾತಮಂ ಪಸರಿಸಿ ತನ್ನ ಕೈಪಿಡಿಯುವೊಲ್ ಪಿಡಿಯಂ ಪಿಡಿದಿರ್ದುದೊಂದಿಭಂ (ಚಂದ್ರಪು. ೫-೭೪).

[ ನಸೆ$_1$ + ಇಚ್ಚೆ ]

**ನಸೆಯೇಱಿಸು** (ಕ್ರಿ). ಉದ್ರೇಕಿಸು : ತಗರ ತಲೆಗೆ ಜಂಬೀರದ ಪುಳಿಯಿಟ್ಟು ಮಿಗೆ ನಸೆಯೇಱಿಸಿ ನಗುತ ಜಗಳವ ಕಾದಿಸುತಿಹ ರಾಜಪುತ್ರರು ಸೊಗಸಿದರಾ ಬೀದಿಯೊಳಗೆ (ಕಂನವಿ. ೭-೧೧). [ ನಸೆ$_1$ + ಏಱಿಸು ]

**ನಸೆವಣಕ** 'ನಸೆವಣಿಕ' ನೋ.

**ನಸೆವಣಿಕ,** ನಸೆವಣಕ (ನಾ). ಕಾಮೋದ್ರೇಕಿಯಂಳ್ಳ ಪಶು ; ಬೆದೆಗೆ ಬಂದಿರುವ ಮಣಕ,–ಪಡ್ಡೆ : ನಸವಣಿ[ಪಾಠಾಂ. ಣ]ಕದೆ ಬೆನ್ನಂ ಸಂಧಿಸುವುದುಮುಸವಸದಿನೆಡೆಗೆ ಪುಗಲೊಡನಂತಾ ಬಸವಂ ಪಾಯ್ದೊಡೆ ಕೆಸಱೊಳ್ ಬಸವಟಿದಿರ್ದೊಂದು ಗೊಂದೆ ಪೊಂದಿತ್ತಾಗಳ್ (ಚಂದ್ರಪ್ರ. ೬-೨೯). **ನಸೆವಣಕ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ನಸೆ$_1$ + ವಣಿಕ ]

**ನಸೆಹಚ್ಚು** (ಕ್ರಿ). ಕಾಮುದ ಬಯಕೆಯನ್ನುಂಟುಮಾಡು, – ಆಸೆ ತೋರಿಸು : ನಸೆಹಚ್ಚಿ, ಪುಸಲಾಯಿಸಿ, ಹೊತ್ತುಗೊತ್ತುಗಳ ನೆವ ಹೇಳಿ, ತುಸುತುಸು ಎಳೆದುಕೊಳ್ಳಬೇಕು ... ಸ್ವಲ್ಪ ಸಹನೆಯಿಂದಿರು (ಕೃಹಿಕಾ. ೯೦). [ ನಸೆ$_1$ + ಹಚ್ಚು$_1$ (< ಪಚ್ಚು$_3$) ]

**ನಸ್ತ** (ನಾ). ಮೂಗು ; ನಾಸಿಕ. [ ಸಂ. ]

**ನಸ್ತಿತ** (ನಾ). ಮೂಗಿನಲ್ಲಿ ರಂಧ್ರವನ್ನು ಮಾಡಲ್ಪಟ್ಟುದು ; ಮೂಗುದಾರವನ್ನು ಹಾಕಿರುವ ಎತ್ತು, ಹಸು, ಮೊದಲಾದುವು "ನಸ್ತೋತಃ, ನಸ್ತಿತಃ–ಈ ೨ ಮೂಗಿಟ್ಟುದು" (ಹಲಾಯು. ೪೪-೧೨೩) ; "ಒತ್ತಿ ಮೂಗಂ ಚುರ್ಚಿ ನಸ್ತಿತಂ [ಪಾಠಾಂ. ಮೂಗುರ್ರಿ ಚುಚ್ಚಿ] ನಸ್ಸಿರಂ" (ಮಂಗರಾ. ೫೩-೨). [ ಸಂ. ]

**ನಸ್ಯ** (ನಾ). ೧. ಮೂಗಿಗೆ ಸಂಬಂಧಿಸಿದುದು. ೨. (ಔಷಧದ್ರವ್ಯ ಮೊದಲಾದುವನ್ನು)ಮೂಗಿಗೇರಿಸುವಿಕೆ; ಮೂಗಿನಿಂದ ಸೇವಿಸುವಿಕೆ; ☞ ಆಯುರ್ವೇದದಲ್ಲಿ ರೋಗಗಳನ್ನು ಗುಣಪಡಿಸಲು ೧. ನಸ್ಯ= ಪುಡಿಯನ್ನು ಮೂಗಿಗೇರಿಸುವುದು. ೨. ಪಾನ=ನೀರಾಗಿರುವ ಔಷಧಿಯನ್ನು ಕುಡಿಸುವುದು. ೩. ಅಂಜನ=ಲೇಪನ ದ್ರವ್ಯವನ್ನು ಬಳಿಯುವುದು ಎಂಬ ಮೂರು ವಿಧದಲ್ಲಿ ಚಿಕಿತ್ಸೆಯನ್ನು ನಡೆಸುತ್ತಾರೆ: ನರಮೂತ್ರದಿಂದೆ ನಸ್ಯಮನಿರದಾಗಿಸೆ ಕಣ್ಗೆ ತೇದೆಸಲ್ ತದ್ವಿಷಮುಂ ಪರಿಗುಂ (ಖಮುದ. ೭-೭) ; ಒಳ್ಳಿತ್ತಾಗಿ ಹಣ್ಣಾದ ಗದುಗಿನ ತಿರುಳಂ ಶುಂಠಿಯುಮನ ದಕದಲ್ಲರದು ನಸ್ಯಮಂ ಮಾಡಲ್ ಮುಂಕಿನಂತೆ ಇರ್ಪುದುಂ, ಬಾಹುಗಂಟುಗಳುಂ ಮಾಣ್ಬುವು (ಲೋಕೋಪ. ೯-೧೦೦ ಟೀಕೆ) ; ಮಹಾಷಟ್ಪಲ ಘೃತವನಾದರೂ ... ಹಾಕಿ ಕಾಸಿ ಪಾಕದಲ್ಲಿ ಇಳುಹಿ ಹಿಂಡಿಕೊಂಡು ಪಾನ, ಅಭ್ಯಂಗ, ನಸ್ಯ ಮೊದಲಾದ ಕ್ರಿಯೆಗಳನು ಮಾಡಿಸಲು ಸಕಲ ನಾಸಿಕರೋಗಂಗಳು ಶಮನವಹವು (ವೈದ್ಯಸಾ. II. ೧೦೪). ೩. ಮೂಗಿಗೇರಿಸುವ ಔಷಧದ್ರವ್ಯ : ನಸ್ಯಂಗಳಿಂದೆ ತನುಸಾರಸ್ಯಂ ಪಿರಿದಕ್ಕುಂ (ಖಮುದ. ೭-೨) ; ರಜನಿ ಬರಿವದಣೆ ಕಟುಕವ್ರಜಮಿನಿತುಮನರೆವುದಾಡವಾಲೊಳ್ ತುರಗವ್ರಜಕೆ ಕುಡೆ ನಸ್ಯಮು ವಾತಜ ಪಿತ್ತಜ ಕಫಜಮೆನಿಪ ಸಿಂ(ಘಾ)ಹಾಣಹರಂ (ಅಶ್ವಶಾ. ೧೧-೫೦); ಮದ್ದುಗಳನಿಡಿವ ಉರಿವ ಸೀಕದ ನಸ್ಯದೊಳು ಹದನಱಿವ ತುರಗದ ವೈಸ್ಯತಕಿಯೆಚ್ಚಱಿಕೆಯಲಿ ಸಂತೈಸಿದರು ವಾಜಿಗಳ ವೇದನೆಯ (ಕುಮಾವ್ಯಾ. ಭೀ. ೫-೬೯). ೪. ಹೊಗೆಸೊಪ್ಪಿನಿಂದ ತಯಾರಿಸಿದ, ಮೂಗಿಗೇರಿಸುವ ಪುಡಿ ; ನಾಸೀಪುಡಿ ; ತಂಬಾಕುಪುಡಿ ; ನಶ್ಯ : ಈ ಅರಸು ಬಾಲ್ಯದಿಂದಲೂ ನಸ್ಯವನ್ನು ಹಾಕಿಕೊಳ್ಳುತ್ತಾ ಇದ್ದನು (ನೀತಿಚಿಂ. II, ೨೦) ; ನೆರೆಮನೆ ಮಲ್ಲವ್ವ ಮುದುಕಿ ಕಲ್ಲವ್ವನ ಹತ್ತಿರ ನಸ್ಯ ಬೇಡಲು ಬಂದವಳು ...ಕೇಳಿದಳು (ಚನ್ನುಹಿಂ. ೭೦); ನಸ್ಯ ನೆತ್ತಿಗೆ ಮೂಲ ಗುಡಿಗುಡಿ ಗುಂಡಿಗೆಗೆ ಮೂಲ (ರೂಢಿ).

ನಸ್ಯಂಮಾಡು, ನಸ್ಯ ಮಾಡು=೧.ನಸ್ಯಂಗೆಯ್ ೧: ಶುಂಠಿಯುಂ,ಬೆಲ್ಲಮುಂ ಉದಕದಲ್ಲಿ ತೇದು ನಸ್ಯಂಮಾಡಲ್ ತಲೆತಿರುಗುಹ ... ಶ್ಲೇಷ್ಮವಾತಂ, ಈ ರೋಗಂಗಳ್ ಕಿಡುವುವು (ಲೋಕೋಪ. ೯-೦೫ ಟೀಕೆ) ; ಬಿಳಿಯ ಉಗನಿಯ ಬೇರಂ ಮೊಲೆಹಾಲಲ್ಲಿ ನಸ್ಯಂ ಮಾಡೆ ಮುಖರೋಗ ಮಾಣ್ಗುಂ (ವಿವೈವಿ. ೦೫೦) ; ತಾಳಕದ ಹಣ್ಣಂ ಮೊಲೆಹಾಲಲ್ಲಿ ತೇದು ನಸ್ಯ ಮಾಡೆ ಅರೆದಲೆಬೇನೆ ಮಾಣ್ಗುಂ (ವಿವೈವಿ. ೭೨). ೨. ಮೂಗಿಗೇರಿಸುವ ಔಷಧವನ್ನು ತಯಾರಿಸು,–ಸಿದ್ಧಮಾಡು. ೩. ಹೊಗೆಸೊಪ್ಪಿನಿಂದ ನಶ್ಯದ ಪುಡಿಯನ್ನು ಮಾಡು. ನಸ್ಯ ಮಾಡಿಸು = ಮೂಗಿಗೇರಿಸುವ ಔಷಧ ಮೊದಲಾದುವನ್ನು ತಯಾರುಮಾಡಿಸು,–ಸಿದ್ಧಗೊಳಿಸುವಂತೆ ಮಾಡು : ನಸ್ಯ ಮಾಡಿಸುವುದಕ್ಕೆ ತೈಲವನ್ನಾಗಲೀ ಘೃತವನ್ನಾಗಲೀ ಮೃದುಪಾಕದಲ್ಲಿ ಇಳಿಸಬೇಕು (ಸಕವ್ಯ. XIII ಪ್ರಸ್ತಾವನೆ). ನಸ್ಯ ಹಾಕು = ನಶ್ಯವನ್ನು ಮೂಗಿಗೇರಿಸು,–ಸೇದು : ವಿಲಾಯಿತಿಯಲ್ಲಿಯೂ ನಸ್ಯ ಹಾಕುವ ರೂಢಿಯಿತ್ತು (ಸಮಜೀ. ೬೧೭) : ಪುಷ್ಯಮಾಸವಾದರೆ ನಸ್ಯ ಹಾಕಿಕೊಳ್ಳಬಾರದೆ? (ಗಾದೆ). [ ಸಂ. ]

**ನಸ್ಯಂಗುಡು** (ಕ್ರಿ). (ಔಷಧವನ್ನು) ಮೂಗಿನ ಮೂಲಕ ಏರಿಸು,–ಸೇವಿಸುವಂತೆ ಮಾಡು : ನರಮೂತ್ರದೆ ನಸ್ಯಂಗುಡು ಗುರುಗುಂಜಿಯ ಬಕುಳಮರಿಚಯುಗ್ಮದ ಬಿತ್ತಂ ಪರಿಹರಿಕುಂ ಗರಳಭಯಂ ನಿರುತಂ (ಖಮುದ. ೭-೪೭). [ ನಸ್ಯ + ಕುಡು$_1$ (<ಕೊಡು$_1$) ]

**ನಸ್ಯಂಗೆಯ್** (ಕ್ರಿ). ೧. (ಔಷಧ ಮೊದಲಾದುವನ್ನು) ಮೂಗಿಗೇರಿಸು,–ಸೇದು : ಬವಣಿ ತಲೆಬೇನೆಗಳ್ . . . ಕಫ ವಾತವಿಕಾರಂ ಪಿಂಗುಗು ವಾದವೆ ನಸ್ಯಂಗೆಯ್ಯೆ ಶುಂಠಿಯುಂ ಬೆಲ್ಲಮುಮಂ (ಲೋಕೋಪ. ೯-೦೫) ; ಅರಿಸಿನಮುಂ ನೀಲಿಯುಮುಂ ಬೆರಸಲ್ಲವ ರಸದೊಳರೆದು ನಸ್ಯಂಗೆಯ್ಯಲ್ಕುರಗೋಗ್ರವಿಷಂ ಕಿಡುಗುಂ (ಖಮುದ. ೭-೧೪); ಅರದಗಸೆಯೆಲೆಗಳಂ ವಿಸ್ತರದಿಂ ಗಾಳಿಸಿ ಕಟುತ್ರಿಕಂ ತ್ರಿಫಲೆಗಳಂ ಬೆರಸಿ ತನಿರಸದೊಳಿಂಬಾಗಿರೆ ನಸ್ಯಂಗೆಯ್ದೊಡದುವೆ ಸಿಂಘಾ(ಹಾ)ಣಹರಂ (ಅಶ್ವಶಾ. ೧೧-೫೦) ; ಯಷ್ಟಿಮಧುಕ, ಇಂಗು, ಇಪ್ಪೆಮರದ ಕೆಚ್ಚು ಇವಂ ನೀರಿಂ ತೇದು ನಸ್ಯಂಗೆಯ್ಯೆ ಭಗ್ನನೇತ್ರ, ಸನ್ನಿ ಗುಣಮಕ್ಕುಂ (ಸಕವ್ಯ. ೧೬೩). ೨. (ಔಷಧ ಮೊದಲಾದುವನ್ನು) ಮೂಗಿನ ಮೂಲಕ ಏರಿಸುವಂತೆ ಮಾಡು.–ಸೇವಿಸುವಂತೆ ಮಾಡು : ಹಾಮೆಕ್ಕೆಯ ಹಣ್ಣೊಳತಿಕ್ಷೇಮದೊಳರಿಸಿಟ್ಟ ಸುಂಟಿಹಿಪ್ಪಲಿ ಮೆಟಸಂಬೀ ಮೂಱನಾತ್ಮಜಲದಿಂ ಪ್ರೇಮದಿನಾತಂಗೆ ನಲಿದು ನಸ್ಯಂಗೆಯ್ವಂ (ದಶಕು. ೯-೧೦೧). [ ನಸ್ಯ + ಕೆಯ್$_1$ ]

**ನಸ್ಯಕರ್ಮ** (ನಾ). (ಔಷಧ ಮೊದಲಾದುವನ್ನು) ಮೂಗಿನ ಮೂಲಕ ಸೇವಿಸುವ ಕ್ರಿಯೆ,–ಮೂಗಿಗೇರಿಸುವ ಕ್ರಿಯೆ : ಸಿರಿಸದ ಪೂವಂ ಹುಲಿಗಿಲ ವರಫಲ ಮಡುವಾಗಲೆಲೆ(ಳೆ)ಯ ಫಲಮಂ ಮೂತ್ರಂಬೆರಸರೆದು ನಸ್ಯಕರ್ಮಕ್ಕಿರದೊಡರಿಸಲಹಿಕುಳೋಗ್ರವಿಷಮಂ ಕಳೆಗುಂ (ಖಮುದ.೭-೫೭). [ ನಸ್ಯ + ಕರ್ಮ ]

**ನಸ್ಯಮೀ** (ಕ್ರಿ). =ನಸ್ಯಂಗೆಯ್ ೨ : ಏಱಿಸದಿಲುಮಿಚ್ಚೆಯ ಹುಳಿಬೇಱಿಯು ದಳ ಲಶುನ ಮರಿಚಮೆಂಬಿವನಿಂಬಿಂ ಮೇಳಯ್ಸಿ ನಸ್ಯಮೀಯಲ್ [ಪಾಠಾಂ. ನಸ್ಯನಾಳಿಸು] ಜಾಳಿಸುಗುಂ ಸರ್ಪವಿಷಮಂ (ಖಮುದ. ೭-೧೭).

[ ನಸ್ಯ + ಈ$_2$ ]

**ನಸ್ಯವಿಧಿ** (ನಾ). (ಔಷಧವನ್ನು)ಮೂಗಿನ ಮೂಲಕ ಸೇವಿಸುವ ಕ್ರಮ,–ರೀತಿ,–ಪದ್ಧತಿ : ಶ್ಲೇಷ್ಮ ರೋಗದಲ್ಲಿ ವಮನವಿಧಿಯನ್ನು ಪ್ರಯೋಗಿಸುವುದು. ಸನ್ನಿಪಾತರೋಗಗಳಲ್ಲಿ ನಸ್ಯವಿಧಿಯನ್ನು ಪ್ರಯೋಗಿಸುವುದು (ಸಕವ್ಯ. ೨೫). [ ನಸ್ಯ + ವಿಧಿ ]

**ನಸ್ಯವೆಱಿ** (ಕ್ರಿ). (ಔಷಧವನ್ನು) ಮೂಗಿನ ಮೂಲಕ ಏರಿಸು,–ಸೇವಿಸು : ಸಮಭಾಗೆಯಾಗಿ ಪೊಸ ಸಾಸಿವೆಯುಮನಂಕೋಲೆಯ ಬೀಜಮುಂ ಕೂಡಿ ಬಟಿಕ್ಕವಣೆಣ್ಣೆಗೊಂಡು ಸಲೆ ನಸ್ಯವೆಱಿದೊಡಾಯುಷ್ಯವರ್ಧನಂ (ಲೋಕೋಪ. ೯-೪೦). [ ನಸ್ಯ + ಎಱಿ$_1$ ]

**ನಸ್ಯಸೇದು** (ಕ್ರಿ). ನಶ್ಯಹಾಕು; ನಶ್ಯವನ್ನು ಮೂಗಿಗೇರಿಸು: ಅವನಿಗೆ ನಸ್ಯ ಸೇದುವ ಅಭ್ಯಾಸವಿದೆ (ರೂಢಿ). [ನಸ್ಯ + ಸೇದು$_1$ (<ಸೇಂದು)]

**ನಸ್ಯಾಂಗ** (ನಾ). = ನಸ್ಯ ೨: ಮಂಧ್ಯಾ ಕರ್ಕೋಟಕೀ ಕಂದದೊಳೆಟೆವುದಜಾ ಮೂತ್ರಧಿಂ . . . ಬೇಟೀಂ ಧ್ಯಾನಂ ತದ್ಭಿಷಕ್ಸೂರಿಗೆ ವಿಷಧರದಷ್ಟಂಗೆ ನಸ್ಯಾಂಗ [ಪಾಠಾಂ. ನಸ್ಯಗ]ವಾಗಲ್ ಸಂಧ್ಯಾಭ್ರಾರಕ್ತದಂತಾಗಳೆ ವಿಷ ಮಟಿಗುಂ (ಖಮದ. ೭-೯೦). [ಸಂ.]

**ನಸ್ಯೋತ** (ನಾ). = ನಸ್ಯಿತ: "ನಸ್ಯೋತಃ, ನಸ್ಯಿತಃ-ಈ ೨ ಮೂಗಿಟ್ಟುದು" (ಹಲಾಯು. ೪೪-೧೧೨). [ಸಂ.]

**ನಸ್ರಾಣಿ, ನಸರಾಣಿ** (ನಾ). ೧. ಕ್ಷುದ್ರವ್ಯಕ್ತಿ; ತುಚ್ಛನಾದ ಮನುಷ್ಯ; ಅಲ್ಪಜೀವಿ: ಅವನಿಗೆ ಈಗ ಸಾರಥಿಯಾದ ಆ ನಸ್ರಾಣಿ ಸುಬ್ಬಭಟ್ಟ. ಆ ಗಾಣಿಗ ಸಂಕ . . . ಇವರೆಲ್ಲರ ದೆಸೆಯಿಂದ ಏನು ಹೇಳಿದರೂ ಗೋರ್ಕಲ್ಲ ಮೇಲೆ ಮಳೆ ಕರೆದಂತೆ ಸರ್ವಜ್ಞ ಎಂಬ ಹಾಗೆ ಆಗಿದೆ (ಹಹಸ. ೫೭). **ನಸರಾಣಿ:** ೨. ನಯವಾಗಿ ಮಾತನಾಡಿ ಮೋಸ ಮಾಡುವವನು; ಚಾಣಾಕ್ಷ; ಚಾಲಾಕಿ; ಬೆರಕೆ: "ನಸರಾಣಿ=ಪಕ್ಕಾ, ಚಾಲಾಕು" (ಜಾನಕೋ. ೧೧). [←ಅರ. ನಸ್ರಾನೀ; ಮರಾ. ನಸರಾಣೀ./ತುಳು. ನಸ್ರಾಣಿ. ನಸರಾಣಿ]

**ನಹಿ** (ಅ). ನಿಷೇಧಾರ್ಥವನ್ನು ಸೂಚಿಸುವ ಸಂಸ್ಕೃತದ ಒಂದು ಅವ್ಯಯ; ಇಲ್ಲ; ನಾಸ್ತಿ: "ನಹಿ ನೋ ನ ಅ-ಈ ೪ ಅವ್ಯಯಗಳೂ . . . ಅಭಾವದಲ್ಲಿಯೂ ನಿಷೇಧದಲ್ಲಿಯೂ ಭೇದದಲ್ಲಿಯೂ ವರ್ತಿಸುವವು" (ಸಿದ್ಧಾಂತಿ. ೩೭೭); ವಿಶಾಲಮತಿಯ ನಿನ್ನ ಪೋಲುವ ಸತಿಯರು ಮೂಲೋಕದಿ ನಹಿ (ಯಾದವಾ. ೧೭).

**ನಹಿನಹಿ** (ದ್ವಿರುಕ್ತಿ): ನಹಿನಹೀ ಎಂಬವ ಮಹಿಗೆ ಹೊರೆ (ಗಾದೆ). [P ಇದು ಸಂಸ್ಕೃತದ ಎರಡು ಅವ್ಯಯಗಳು ಸೇರಿ ಆಗಿರುವ ಕೂಡುನುಡಿ]

**ನಳ$_1$** 'ನಲ$_2$' ನೋ.

**ನಳ$_2$** (ನಾ). (ಉಕ) ೧. ನಾಳ; ಕೊಳವೆ: ಮನೆಯ ಕೊಳಚೆನೀರು ಹೋಗಲು ನಳಗಳಿರುತ್ತವೆ (ರೂಢಿ). ೨. ನಲ್ಲಿ; ಕೊಳಾಯಿ: ಸಮಾಜಸುಧಾರಕರೆಂಬುವರೆಲ್ಲ ಮೊದಲು ಬೀದಿಯ ನಳಕ್ಕೆ ಬಂದು ಅಲ್ಲಿ ನಡೆಯುವ ಕಾರ್ಯಕಲಾಪಗಳನ್ನು ನೋಡುವುದು ಒಳ್ಳೇದು! (ಗಾಳಿಗು. ೭೦); ಚಾಳಿನ ಕೊನೆಗೆ ಇದ್ದ ನಳದಿಂದ ನೀರು ತರುವದೆಂದರೆ ಜೀವದ ಮೇಲೆ ಬರುತ್ತಿತ್ತು (ಕ್ಷಿತಿಜ. ೫೮); ಅತ್ತಿಕೊಳ್ಳದಲ್ಲಿ ದೊಡ್ಡದೊಂದು ಕೆರೆ ಕಟ್ಟ ಊರೊಳಗೆ ನಳ ತರುವ ಆಲೋಚನೆಯು ನಡೆದದೆ (ಕಥಾಗ. ೪೫೫). [←ಮರಾ. ನಳ./ಸಂ. ನಾಲ]

**ನಳಕ** 'ನಲಕ' ನೋ.

**ನಳಕೂಬರ** 'ನಲಕೂಬರ' ನೋ.

**ನಳದ್ವಯ** (ನಾ). ಒಂದು ಬಗೆಯ ಸಸ್ಯ,-ಜೊಂಡು (?): "ನಳಕಃ-ನಳದ್ವಯ, ಕಪ್ಪಲಿ" (ಓಷಧಿ. ೮೩). [ಸಂ. ನಲದ್ವಯ]

**ನಳನಳ** (ನಾ). ಕೋಮಲತೆ, ಮೃದುತ್ವ, ಸೌಂದರ್ಯ, ಕಾಂತಿಗಳನ್ನು ಸೂಚಿಸುವ ಒಂದು ಶಬ್ದ. 'ನಳನಳಿಕೆ', 'ನಳನಳಿಸು' ಪರಾ.

**ನಳನಳನೆ** (ಅ). ಮನೋಹರವಾಗಿ: ನೆಲ ಗಿರಿಯೆಲ್ಲವು ಕಂಪಾಗೆ ಗಗನ ಕುಚ್ಚಳಿಪ ಸುಗಂಧಕರ್ಷಿಸುತ ನಳನಳನೀತಂದು ಗಿರಿಯ ಸಾರ್ದಾನೆಯಿಂದಿ ಳಿದನಂಗನೆಗೂಡಿ ಪಜ್ರಿ (ಭರತ. ೭೩-೧೩೭). [ನಳನಳ + -ಅನೆ$_1$]

**ನಳನಳಿಕೆ** (ನಾ). ಕೋಮಲತೆ; ಮೃದುತ್ವ: "ನಳನಳಿಕೆಯೆಂದು ಕೋಮಲಂ" (ಶಶಸಾ. ೭೦-೭೦೩); "ನಳನಳಿಕೆಯೆನೆ ಕೋಮಲಂ" (ಕಶರ. ೫೩); ತುಂಬುರದಡನಾಥಂ ನಂಬಿಯುಣ್ಣನೇಟುಂಜವ್ವನದುರವಣೆಯುಮಂ ಸ್ವರೂಪಸೌಂದರ್ಯದ ನಳನಳಿಕೆಯುಮಂ . . . ದೃಷ್ಟಿಯ ದೈನ್ಯಮುಮನಟಿದು (ನಂಬಿರ. ೪-೧೦); ಸುಕುಮಾರಚೂಡಾಮಣಿಗೆ ಶೈಶವಂ ಕ್ರಮದೆ ಜಾಟಿ ಓತೆಸೆವ ಕೋಮಲಾಂಗದ ನಳನಳಿಕೆ . . . ಪೊಸಜವ್ವನಮನದೇಂ ಸೂಚಿಸಿದುವೊ (ಪದ್ಮರಾ. ೩-೨); ನಳನಳಿಕೆಯೊಳೊಡಗೂಡಿದರೆನೆ ಸಾಕು ಕೊಳರ್ವಕ್ಕಿಗಳ ಕೊರಳಂತೆ ಗಳರವ ತಾಡನ ಸೀತ್ಕಾರ ಭೂಷಣದುಲುಹು ಪೆರ್ಚಿಹುದೆನಲೇಕೆ (ಭರತ. ೧೦-೧೦೪). [ನಳನಳ + -ಇಕೆ]

**ನಳನಳಿಕೆವೆಱು** (ಕ್ರಿ). ಕೋಮಲತೆಯನ್ನು ಹೊಂದು; ಮೃದುತ್ವವನ್ನು ಪಡೆ: ಪರಿಕಾಲ್ಗಳಿಂ ಬಳಸಿದ ಪರಮಕ್ಕೆವಲ್ಪ ಕಲ್ಪತರುವೆಂಬಂತೆಸೆದು ನಳನಳಿಕೆವೆತ್ತ ವಿಸುಳಕೋಮಳದಳತ್ರಯವಿಳಸಿತ ಸರಳಶಾಖಾನಿಕಾಯಾ ಕಲಿತಬಿಲ್ವವೃಕ್ಷ (ಶಬಶಂ. ೨-೭೮ವ). [ನಳನಳಿಕೆ + ವೆಱು$_1$]

**ನಳನಳಿಸು** (ಕ್ರಿ). ೧. ಕೋಮಲವಾಗಿರು; ಮೃದುವಾಗಿರು; ನವುರಾಗಿರು: ವಿಳಸಿತಫಳಮಂಜರಿಯಿಂ ತಳಿದೊಪ್ಪುವ ಕಲ್ಪಲತೆಗೆ ಪಾಸಟಿಯಾದಳ್ ನಳನಳಿಸುವ ಜನಶಿಶುವಂ ತಳೆದು ತಳತ್ತಳಿಪ ಹರಿಯ ವರವಧುವಾಗಳ್ (ವರ್ಧಪು. ೧೩-೯೭); ನಳನಳಿಪಶೋಕೆಯ ತರುವಿನ ತಳಿರ ತೊಂಗಲು (ಹದಕಾ. ೩-೧೭). ೨. ಕಾಂತಿಯುಕ್ತವಾಗು; ಪ್ರಕಾಶಮಾನವಾಗು; ತೇಜೋಮಯವಾಗು: ನಳನಳಿಸಿ ಬಳೆದು ವಿರಹಾನಳನಳುರ್ಗುಮಾ ವಿಳಾಸರಸದ ತರಂಗಾವಳಿಗಳನಿಟಿಸುವ ಮಧ್ಯದ ವಳಿಗಳ ನೀಕ್ಷಿಸಿದ ನೀಱರಂ ರುಕ್ಮಿಣಿಯಾ (ಜಗವಿ. ೧೦-೨೭); ಓರಂತೆ ನಳನಳಿಸಿ ತೊಳಗುತ್ತಿರ್ಪನೋರ್ವನೇ ರುದ್ರಂ (ಪದ್ಮರಾ. ೧೦-೪೭). ೩. ಸುಂದರವಾಗು; ಚೆಲುವಾಗು; ಸೊಂಪಾಗು: ನೆಟೆ ಬಣ್ಣಸಲಬ್ಧಭವಂ ನೆಱೆಯಂ ಪೆಱರಳವೆ ಪೊಳೆವ ತರುಗಳಿಂ ಪಣ್ವೊಟೆಗಳ ನೆಱವಿಂದು ಬಗೆಗಱೆವೋಲ್ ನಳನಳಿಸುತೊಱಗಿ ತುಱುಗಿದ ಬನಮಂ (ಲೋಕೋಪ. ೭-೩೦); ತಿಳಿಗೊಳನ ಬಳಸಿ ನಳನಳಿಸಿ ಬೆಳೆದೆಳಮಾವುಗಳ ತಳದ ಮಲ್ಲಿಕಾ ಮಂಟಪದ . . . ಅಶೋಕೆಯ ತಳಿರ ತೊಂಗಲ ಗದ್ದುಗೆಯೊಳು . . . ಪಶುಪತಿಯಂತಿರಿರ್ದ ಮುನಿನಾಥ ಕಣ್ಗೆಸೆದಿರ್ದನು (ಹದಕಾ. ೫-೬೭); ಮತ್ತದಱ ವಲಯದೊಳೋಣದಿಂ ಕೀಲಿಸಿ ಪಜ್ಜಳಿಸುವ ಪಸುರ್ವಣೆಯೆಂಬ ತೆಱದಿ ನಳನಳಿಸುತೆ ತುಱುಗಿ ಬೆಳೆದ ಬಹಿರುದ್ಯಾನಂ ಕಣ್ಗೊಳಿಸಿದುದು (ಜಯುಕಾ. ೧-೪೫). ೪. ಸೊಗಸಾಗು; ರುಚಿಕರವಾಗು: ನಳನಳಿಪ ಬಹುವಿಧದ ಭಕ್ಷಾವಳಿಯ ಹೆಡೆಗೆಗಳೋರಣಿಸಿ ಮುಂಡಳಿಸಿ ಕೂಡಿದ . . . ಕೂಳ ರಾಶಿಯ ಬಂಡಿ ಜೋಡಿಸಿತು (ಕುವ್ಯಾಆ. ೧೦-೨೫). [ನಳನಳ + -ಇಸು$_3$]

**ನಳಪಾಕ** (ನಾ). (ಅಲಂ) ಅತ್ಯಂತ ರುಚಿಕರವಾದ ಅಡುಗೆ; P ನಳನು ರುಚಿಕರವಾದ ಅಡುಗೆ ಮಾಡುವುದರಲ್ಲಿ ತುಂಬಾ ಸಮರ್ಥನಾಗಿದ್ದನೆಂದು ಇತಿಹಾಸಪ್ರಸಿದ್ಧವಾಗಿದೆ: ಷಡ್ರಸಗಳನ್ನು ಸೇರಿಸಿ ನಳಪಾಕ-ಭೀಮಪಾಕಗಳನ್ನು ಇಳಿಸುವವರೇ ಪಾಕಕಲಾನಿಪುಣರು (ಜೀವಾತ್ಮ. ೦೭೨); ಚಂದ್ರಿಯ ಅಡಿಗೆ ಎಂದರೆ ನಳಪಾಕ (ನಿಶಲು. ೪೦); ಸೀತೆಯ ನಳಪಾಕದಿಂದ ಹೊಟ್ಟೆಯಲ್ಲಿನ ವೈಶ್ವಾನರವನ್ನು ತಣಿಸೋಣ (ಸೀತಾರ. ೨೯). 'ಭೀಮಪಾಕ' ಪರಾ. [ನಳ$_1$ (=ನಲ$_2$) + ಪಾಕ$_1$]

**ನಳಮಾನ** 'ನಲಮಾನ' ನೋ.

**ನಳಯೋಗ** (ನಾ). [ಜ್ಯೋತಿ] ಜಾತಕನ ಜನ್ಮಕಾಲದಲ್ಲಿ ಏಳುಗ್ರಹಗಳು ದ್ವಿಸ್ವಭಾವ ರಾಶಿಯಲ್ಲಿರುವುದು; P ಈ ನಳಯೋಗದಲ್ಲಿ ಹುಟ್ಟಿದ ವ್ಯಕ್ತಿ ಸಿರಿವಂತನಾಗಿ, ಸುಖಿಯಾಗಿ, ಚತುರನಾಗಿರುತ್ತಾನೆಯಾದರೂ ಅಂಗವಿಕಲನಾಗುತ್ತಾನೆಂದು ನಂಬಿಕೆಯಿದೆ: ಏಟುಗ್ರಹಂ . . . ದ್ವ್ಯಂಗರಾಶಿಯೊಳ್ ಕೂಡಿ ನಿಂದೊಡದು ನಳಯೋಗಂ (ಜಾತತಿ. ೧೩-೧); ದ್ವಿಸ್ವಭಾವರಾಶಿ (ಮಿಥುನ ಕನ್ಯಾ ಧನುಸ್ಸು ಮೀನ)ಗಳಲ್ಲಿ ಏಳುಗ್ರಹಗಳೂ ಇದ್ದರೆ ನಳಯೋಗ (ಜಾತತಿ. ೧೩-೧ ಟೀಕೆ). [ನಳ$_1$ (=ನಲ$_2$) + ಯೋಗ]

**ನಳಸಂಯುತ** (ನಾ). ಜೊಂಡುಹುಲ್ಲಿನಿಂದ ತುಂಬಿದುದು : "ನಡ್ವಳಂ. ನಳಸಂಯುತಂ – ಈ ೨ ನಾ(ಣ)ನಲುಳ್ಳ ಭೂವಿ." (ಹಲಾಯು. ೨೬-೪). [ ನಳ$_1$ (=ನಲ್$_2$) + ಸಂಯುತ ]

**ನಳಸಂವತ್ಸರ** (ನಾ). ಅರುವತ್ತು ಸಂವತ್ಸರಗಳಲ್ಲಿ ಐವತ್ತನೆಯದು : ನಳಸಂವತ್ಸರದೊಳ್ ಮ.ಂ ಘಟಿಲೆನೆ ಮನುಜರ್ಗಮಧಿಕತೃಷೆ ತಾನಕ್ಕುಂ (ಅಟ್ಟಮ. ೬-೨೩). [ ನಳ$_1$ (=ನಲ್$_2$) + ಸಂವತ್ಸರ ]

**ನಳಸಮುದ್ಭವ** (ನಾ). [ಜ್ಯೋತಿ] ನಳಯೋಗದಲ್ಲಿ ಹುಟ್ಟಿದವನು : ಧನಪತಿ ಪದುಳಿದನೂನಾಂಗಿ ನಿಪುಣಮತಿ ನಳಸಮುದ್ಭವಂ (ಜಾತಕ. ೦೩-೦೨). [ ನಳ$_1$ ( = ನಲ್$_2$ ) + ಸಮುದ್ಭವ ]

**ನಳಿ$_1$** (ಕ್ರಿ). ೧. ಬಾಗು ; ಬಗ್ಗು ; ಡೊಂಕಾಗು : "ನಳಿ–ನಮನೇ" (ಶಮಧಾ); ಪದುಳಂ ನಿಂದೆಡಗಯ್ಯೊಳೊತ್ತಿ ಭುಜಂ ಕೊಪ್ಪಂ ಪವಾಂಗುಷ್ಟ ಮೂಲದೊಳಿಟ್ಟೇಟಿಸಿ ಕಾಲದಂಡನಿಭಮಂ ಕೋದಂಡಮಂ . . . ಕೂರ್ಮೋನ್ನತ ಕರ್ಪರಂ ನಳಿದು ಬೆನ್ನಂ ಪತ್ತದೇಂ ಮಾಣ್ದುದೇ (ಪಂರಾಮಾ. ೫-೮೬) ; ಶಿರದ ನರೆ ಮೆಯ್ಯ ತೆರೆ ಕಯ್ಯ ಕೋಲಿಂದೆಸೆಯೆ ಸುರುಳ್ದ ತನು ನಳಿತ ಬೆನು ಜೋಲ್ವ ಪುರ್ವಿಂದೆಸೆಯೆ (ಇಳಿರ. ದೇ. ೫೦-೦೬) ; ಕಿಱುಗೊಂಬು ನಳಿದ ಬೆನ್ನಂ ಕಿಱುಕಿದ ತೊಡೆಗೆಚ್ಚಲೆವ ಬಾಲಂ ತಳುಮ್ಮ ಮೆಟಿಯೆ ಬಿಳಿದಾಗಿ ಮಾಣದೆ ಕಱಿವೆಮ್ಮೆಯ ಪಿಂಡು ಪಳ್ಳಿಪಳ್ಳಿಯೊಳೆಸೆಗುಂ (ಸೂಕ್ತಿಸು. ೪-೬೦) ; ಕವಿದು ಹಳಚಿದುದುಭಯಬಲ ಶಿವಶಿವ ಮಹಾ ದೇವಮಮ ಪದರಜ ರವಿಯ ತಿವಿದುದು ದಿವವನಳಿದುದು ನಳಿದನಹಿರಾಯ (ಕುವ್ಯಾಭೀ. ೪ ಸೂಚನೆ). ೨. ಮಣಿ ; ನಮಸ್ಕರಿಸು ; ಶರಣಾಗು : "ನಳಿಯೆಂಬ ನುಡಿ ನಮಸ್ಕಾರಾರ್ಥದಲ್ಲಿ ಕಾಡಿನ ಸರವಿನಲ್ಲಿ ಸಲ್ಗುಂ" (ಸಂಜೀವ. ೨೮) ; ಕದನದೊಳಂದು ನಿನ್ನ ತರವಾರಿಯ ಬಾರಿಗೆ ಮೆಯ್ಯ ನೊಡ್ಡಲಾಱದೆ ನಳಿದಿನ್ನುಮಂತದನೆ ಜಾನಿಸಿ ಜಾನಿಸಿ ಗಂಗ ತನ್ನ ನಂಬಿದ ಸುದತೀಕದಂಬದೆರ್ದೆ ಪೌವನವೋಗಿರೆ ಪುಲ್ಲೆಪೆಚ್ಚುವೆಚ್ಚ ದಪನಹನ್ನಿರ್ಶಂ ಕಿಗುಳ ದಾಮನರಣ್ಯಶರಣ್ಯವೃತ್ತಿಯಿಂ (ಎಕ. II, ೨೪೦-೨೩: 1175). ೩. ಬಳುಕು; ತೊನೆದಾಡು : ಕಾಲ್ ಬಲೆಯೆ ನಡು ನಳಿಯೆ ಕಳಲುತುಂ ಬಟಲುತುಂ . . . ಬಂದರತಿವೇಗದಿಂ (ಲೀಲಾವ. ೧೧-೯) ; ಮುಡಿ ಜಡಿಯೆ ಕುಂತಳಂ ಕುಣಿಯೆ ಕಡೆಗಣ್ ಪೊಳೆಯೆ ನಡು ನಳಿ[ಪಾಠಾಂ. ಮಣಿ]ಯೆ . . . ನೇವುರ ಝಣಾಂ ಝಣಮೆನಲು ವನಿತೆಯರ ನಡುವೆ ಚೆಂಡಂ ಹೊಯ್ಯುತಿರ್ದಳೊಬ್ಬಳು ಕಾಮನಂಕಮಾಲೆಯ ಪಾಡುತ (ಹಡಕಾ. ೪-೦೩).

ನಳಿನಳಿ (ದ್ವಿರುಕ್ತಿ) : ಮದಸಿಂಧುರಭಾರವುನಾನಲಾಜಿದಳಿಪಿಂ ಬೆನ್ನಂ ನಳಿನಳಿದು ನಡೆವ ಹಯದಟಿಯಳವಂ ಕಂಡು (ಆದಿಪು. ೦೫-೩೦).

[ ದೇ.॥ ತಮಿ. ನೆಳಿ; ಮಲ. ಞೆಳಿ; ತೊದ. ನೊಳ್ಗಿ ]

**ನಳಿ$_2$** (ನಾ). ೧. ಸೊಬಗು; ಚೆಲುವು : ತೊಳಗುತಿವೆ ತೋಟದಲಿ ತೆರ ತೆರ ಗುಲಾಬಿಹೂ . . . ಎಳೆಬಿಸಿಲು, ತಿಳಿಗಾಳಿ; ನೋಡಿಕೊಳ್ಳಲು ಮಾಲಿ; ಏಳೆ ಹೇಳುವುದು ಆ ನಳಿಯ ? (ಸುನೀತ. ೬-೮). (ಗು). ೨. ಕೋಮಲವಾದ ; ಮೃದುವಾದ. ೩. ಕಾಂತಿಯುಕ್ತವಾದ. 'ನಳಿದೋಳ್', 'ನಳಿಮೊಗ' ಪರಾ.

**ನಳಿ$_3$** 'ನಲ್ಲಿ$_1$' ನೋ.

**ನಳಿ$_4$** 'ನಲ್ಲಿ$_2$' ನೋ.

**ನಳಿಕೆ** (ನಾ). ೧. ಸಣ್ಣ ಕೊಳವೆಯಂಥ ಟೊಳ್ಳಾದ ಸಾಧನ ; ನಾಳ : ವಿವಿಧ ಬಗೆಯ ಉದ್ದೀಪನಕಾಲಕ್ಕೆ ಸಸ್ಯಗಳ ನಳಿಕೆಗಳು ವ್ಯಕ್ತಪಡಿಸುವ ಪ್ರತಿಕ್ರಿಯೆಯು ಪ್ರಾಣಿಗಳ ನರಗಳ ಪ್ರತಿಕ್ರಿಯೆಯಂತೆಯೇ ಇರುವುದೆಂಬುದನ್ನು ಅವರು ಯಶಸ್ವಿಯಾಗಿ ತೋರಿಸಿದರು (ಸಸ್ಯಕ. ೦೦೩). ೨. ಕೊಳವೆಗಳಿಂದ ತಯಾರಿಸಿದ ಪಂಜರ: ಬಲಪಂತರೆಲ್ಲ ನಳಿಕೆಯ ಕೀರನಂತೆ ಅವರು ದಿಕ್ಕಾಗಲಱಿಯರು (ಮೋಳಿಮಾ. ೬೬-೨೬೯). [ ಸಂ. ನಲಿಕಾ ]

**ನಳಿಗೆ, ಲಳಗಿ, ಲಳಿಗೆ** (ನಾ). ೧.=ನಳಿಕೆ ೧ : "ನಳಿಗೆ (ಲಳಿಗೆ)—ನಾಲಿಕಾ (ನಲಕ) = ಕೊಳವೆ" (ತದ್ಭಕೋ. ೨೧) ; ನಳಿಗೆಯೊಳ್ ನಾಯ ಬಾಲವನು ಕಟ್ಟಲ್ಕನ್ನ ನಳುಹ ಬಿಡದು (ಸಮ್ಯಕೌ. ೧೦-೦೨) ; ನಾಯ ಬಾಲ ನಳಿಗೆಯಲ್ಲಿ ಹಾಕಿದ ಹಾಗೆ ಅವನ ಬುದ್ಧಿ ಎಂದಿಗಾದರೂ ಸರಿದಾರಿಗೆ ಬರುವುದಿದೆಯೇ ? (ತ್ಯಾಗವು. ೧೨೦) ; ಪಿಸ್ತೂಲಿನ ನಳಿಗೆಯೊಂದು ಗಂಗಾರಾಮನ ಎದೆಯ ಕಡೆಗೆ ಗುರಿ ನೋಡುತ್ತಿತ್ತು (ವಿಧಿವ್ಯ. ೧೧೪) ; ಇಬ್ಬರೂ ಹುಕ್ಕೆಯ ನಳಿಗೆಗಳನ್ನು ಬಾಯಲ್ಲಿಟ್ಟುಕೊಂಡು ತುಸುಹೊತ್ತು ಸುಮ್ಮನೆ ಈಚಿಚೆಯರುಗಳಲ್ಲಿ ಒರಗಿದರು (ನಿಷ್ಠಾಮ. ೧) ; ನಾಯಿಯ ಬಾಲ ನಳಿಗೆಯಲ್ಲಿ ಹಾಕಿದರೆ ಡೊಂಕು ಬಿಟ್ಟೀತೆ ? (ಗಾದೆ). ೨. ನೆಯ್ಗೆಯಲ್ಲಿ ಉಪಯೋಗಿಸುವ ಸಾಧನ; ಲಾಳಿ: ಊಕೆಯ ಮಾಡುವಾತನ ಕೆಯ್ಯ ಕುಂಚಿಗೆಯ ತುಂತುಱು ನುಂಗಿತ್ತು ನೆಯ್ವ ಅಣ್ಣನ ಕಣ್ಣ ಕೆಯ್ಯ ನ[ಪಾಠಾಂ. ಲ]ಳಿಗೆ ನುಂಗಿತ್ತು (ಗುಪ್ತಮಂ. ೪). ೩. ಬಲಿತ ಬಿದಿರು ; ಬೊಂಬು. ೪. ಬೊಂಬಿನಿಂದ ತಯಾರಿಸಿದ ಪಾತ್ರೆಯಂಥ ಸಾಧನ ; ಅಂಡೆ : ಉಗ್ರಮಾತಂಗ ದಂತಗಳಂ ಚಮರಿವಿಣಿಲಂ ಜೇನ ನಳಿಗೆಯಂ ಪೂತಿಬೆಕ್ಕಂ ಹರಿಶ್ಚಂದ್ರರಾಯಂಗೆ ಕಾಣಿಕೆಯನಿತ್ತಡಿಗೆಱಗುತಿರ್ದರಗ್ಗದ ಬೇಡಪಡೆಯೊಡೆಯರು (ಹಡಕಾ. ೫-೩): ತೈಲವನೊಂದು ನಳಿಗೆಯೊಳು ತುಂಬಿ (ವೀಶೈಪು. ೮-೮-೪೦); ಪುಲಿದೊವಲೆರಲೆಯ ಮಱಿ ಪೀಲಿವೊಱೆ ಜೇನ ನಳಿಗೆ ಬಲ್ಪಂದಿದಾಡೆಗಳ ಒಲಿದಿತ್ತು ಕಾಣಿಕೆಯನು ಕೈಮುಗಿದರಾ ಬಲದ ನಾಯಕರು ಕಂಪಿಲಗೆ (ಕುರಾಸಾಂ. ೨೭-೩೮) ; ಪುಲಿದೊಗಲ ಪೊಱೆ ಜೇನುತುಪ್ಪದ ನಳಿಗೆ ಮೇಣದ ಮುದ್ದೆ (ಸಾಳ್ವಭಾ. ೦೬-೬). ೫. ಒಂದು ಬಗೆಯ ಸುಗಂಧದ್ರವ್ಯ : "ನಾಳಿಕಾ – ನಳಿಕೆ, ಬಳ್ಳಿ, ತೆಂಗು, ಸೂರ್ಯಭಕ್ತ" (ಓಷಧಿ. ೮೫). **ಲಳಗಿ:** ೧. ಶ್ವಾನನ ತಂದು ಬಾಲ ನೀವಿ ಲಳಗಿಯೊಳು ತಾನಿಡಲದರಿಂದ ಮೇಣ್ ಸರಳಾಗುವದೇ (ವಿಶಾಸು. ೪೧-೧) ; ನಾಯಿಯ ಬಾಲವನ್ನು ಲಳಗಿಯಲ್ಲಿ ಹಾಕಿದರೂ ಅದರ ಡೊಂಕು ಹ್ಯಾಗೆ ಹೋದೀತು ? (ಮೋಹಿನೀ. ೪೯). **ಲಳಿಗೆ :** ೧. "ನಾಳಃ = ಲಳಿಗೆ" (ಶಾಶಕ್ಕ. ೫೦) ; ಬಿಳಿಯಕ್ಕಿಯಿಟ್ಟ ಸೋದಿಸಿ ಮತ್ತೆ ಹರಿಯಣಕೆ ತಳಿದುಕೊಂಡು . . . ಲ[ಪಾಠಾಂ. ನ]ಳಿಗೆಯಂದದಿ ತಿರಿಹಿ ತಿರಿಹಿ ಮುಖಗೆಡದೆ ಹಪ್ಪಳವನೊತ್ತುವ ಹಾಗೆಯೊತ್ತಿ (ಸೂಪಶಾ. ೦-೪೮) ; ಹೊರಗೆ ಬಂದೂಕಿನ ಲಳಿಗೆಗಳು ಹಾಯ್ದಿವೆ (ಪ್ರಡಸ. ೧೮) ; ಶ್ವಾನದ ಬಾಲವ ಲಳಿಗೆಯೊಳಿಟ್ಟರೆ ಮಾಣದೆ ಸರಳವದಾಗೀತೆ ? (ಜನನಾ. ೦೦೨) ; ನಾನಿಯ ಮನಸ್ಸು ಲಳಿಗೆಯಲ್ಲಿ ಹಾಕಿದ ನಾಯಿಯ ಬಾಲದಂತೆ ಇದ್ದಿತು (ನಾಡಿಗೇ. ೦೦೭). ೩. ಕಳಿಲೆಯ ನಖದಲ್ಲಿ ಚಿವುಟಲಹುದು ಮುಂದೆ ಲಳಿಗೆ ಕೂರುಗುರಿಗಂಜುವುದೇ (ಮೋಹತ. ೦೦-೦೩) ; ಕಳಿಲೆಯನ್ನಖದಿ ಚಿವುಟಲು ಸುಲಭವದು ಬಲಿದು ಲಳಿಗೆಯಾದೊಡೆಯ [ಯ:]ಗುರ್ಗಳಿಗೆ ಸಾಧ್ಯಮೆ (ನವಮೋ. ೦೧-೦೭). ೪. ಧಾರುಣಿಯೊಳಗೆ ಹೇಱಿಸಿಕ್ಕಿ ಲಳಿಗೆಯ ಎಣ್ಣೆ ಹೂವು ಕಾಯಿ ಹಣ್ಣು ಮೊದಲಾದುದ ತಪ್ಪ ಸಾಧಿಸಿ ತರಿಸಿಕೊಂಡುಂಬ ಚಿಕ್ಕಮಕ್ಕಳಿಗೆಲ್ಲಿಯದೋ ನೆಟ್ಟನೆಯ ದೇವತ್ವ (ಮೋಳಿಮಾ. ೧೦೪-೪೦೭) ; ತುಡುವೆಯ ಜೇನು ಕೋಲುಜೇನು ಹುತ್ತಜೇನು ಹೆಜ್ಜೇನು ಸಕ್ಕರೆಜೇನು ಯಿಂತಿವು ಮೊದಲಾದ ಜೇನುತುಪ್ಪದ ಲಳಿಗೆಗಳ ಸಾಲುವೊಱೆಯಿಂ . . . ಕಾಣಿಕೆಯನಿಕ್ಕಿ (ನನ್ನಜಾ. ೪-೦೪ ವ). [<ಸಂ. ನಲಿಕಾ / ತುಳು. ನಳಿಗೆ]

**ನಳಿಗೊಂಬು** (ನಾ). ಕೋಮಲವಾದ ಕೊಂಬೆ ; ಎಳೆಯಂದಾದ ರೆಂಬೆ : ಕವಲ್ತ ಕೊಂಬಿನ ಮಡವಡ್ಡವಂದ ನಳಿಗೊಂಬಿನ ಪತ್ತುಗೆ ಜೋಲ್ವ ಬಳ್ಳಿಗೊಂಬಿನ ಬಳೆ ತೋರಗೊಂಬಿನ ನೊಗಂ ನಿಡುಗೊಂಬಿನ ಮಾಂಕು ಕಣ್ಗೆ ಚೆಲ್ವನೆ ನಡೆತಂದುಪಂದಸುಗೆಯೆಂಬ ನೆಗಟ್ತೆಯ ತೇರ್ಗಳೆತ್ತಲುಂ (ಕಬ್ಬಿಕಾ. ೨೦೩). [ ನಳಿ$_2$ + ಕೊಂಬು$_1$ ]

**ನಳಿತೋಳ್** 'ನಳಿದೋಳ್' ನೋ.

**ನಳಿತೋಳು** 'ನಳಿದೋಳ್' ನೋ.

**ನಳಿದು** (ನಾ). ಬಾಗಿದುದು; ಡೊಂಕಾದುದು; ವಕ್ರವಾದುದು. 'ಕಡುನಳಿದು' ಪರ್ಯಾ. [<ನಳಿ$_1$]

**ನಳಿದೋಳ್,** ನಳಿತೋಳ್, ನಳಿತೋಳು (ನಾ). ಕೋಮಲವಾದ ತೋಳು; ಮೃದುವಾದ ಬಾಹು: ನಳಿದೋಳ್ಗಳ್ ಶಾಖೆಯಂ ಕೆಂದಳಿರೆಳದಳಿರಂ . . . ಸುಯ್ಗಂಪು ಕಂಪಂ ಮಿಗೆ ಸೊಗಯಿಸಿತಂಗೋದ್ಭವ ಶ್ರೀ ಜಗನ್ಮಂಗಳಶೃಂಗಾರಾಬ್ಧಿವೇಳಾವನಲತೆಯೆನೆ ಶುದ್ಧಾಂತಕಾಂತಾಕದಂಬಂ (ಪುಷ್ಪಪು. ೭-೨೫). **ನಳಿತೋಳ್:** ಕುಂತಿ . . . ನಿಧಾನಮನೀಡಾಡುವಂತೆ ಕೂಸಂ ಗಂಗೆಯೊಳೀಡಾಡಿ ಬಂದಳಿತ್ತ ಗಂಗಾದೇವಿಯುಮಾ ಕೂಸಂ ಮುಳುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್ಗಳಿನೊಯ್ಯನೊಯ್ಯನೆ ತಟ್ಟೈಸಿ ತರೆ (ಪಂಪಭಾ. ೧-೯೫ ವ); ಮುಗುಳ್ಗಳಂ ಮಿಸುಗುವ ದಂತಪಂಕ್ತಿ ಲತೆಯಂ ನಳಿತೋಳ್ಗಳಿ ಪೋಲ್ತು ನಾಡೆ ರಂಜಿಸುವ ವಿಳಾಸಿನೀನಿಕರದಿಂ ಪೊಸಸುಗ್ಗಿ ಪೊಲಿರ್ದುದೋಲಗಂ (ಧರ್ಮಾಮೃ. ೪-೧೪೦); ತಾಮರಸಮುಖಿಯ ನಳಿತೋಳ್ ತಾಮರಸಬೆಡಂಗುವೆತ್ತು ಸಿರಿಸದ ಸುಮನೋದಾಮಕಮಂ ಗೆಲೆವಂದೆಸೆದಾ ಮಕರಧ್ವಜನ ಪಾಶಮೆನೆ ಸೊಗಯಿಸುಗುಂ (ಜಗವಿ. ೧೦-೩೨); ನಿಱುಗುರುಳ್ ಸೋರ್ಮುಡಿ . . . ನಳಿತೋಳ್ ಕೆಂದಳಂ . . . ಸೊರ್ಕುಗೋಗಿಲೆ – ಇವು ಉಪಸರ್ಗಂ ಬೆರಸಿದ ಶಬ್ದಂಗಳ್ (ಕಶಸಾ. ೭೩-೪೧೭); ಕಂದನಾಡುವ ಬಾಲಲೀಲೆಯಂ ನೋಡಿ ತೊದಲೊಂದಿದಿನಿವಾತನುಱ ಕೇಳ್ದು ಮುದ್ದಿನ ಮುದ್ದೆಯಂದದಂಗವನೆತ್ತಿಕೊಂಡು ನಳಿತೋಳ್ಗಳಿಂದಪ್ಪಿ . . ಪಂಚೇಂದ್ರಿಯ ಪ್ರೀತಿಯಂ ಪಡೆವರಿನ್ನಾವ ಕೃತರೊ (ಜೈಮಿಭಾ. ೧೮-೨೦); ಮಲ್ಲಸಾಧನೆಯಂತೆ ನಳಿತೋಳ್ಗಳಿಂದಪ್ಪಿಯುಲ್ಲಾಸವನು ತೋಱ ವಿಟಗೆ (ಕಂನವಿ. ೭-೦೨೨). **ನಳಿತೋಳು:** ವನಿತೆ ಹೊರಳಿದಳು ಶೋಕವ ತಾಳ್ದು . . . ನಳಿತೋಳನು ಕೆದಱಿದಳವನಿಯಲಿ ಹಲುಬಿದಳಭಿಮನ್ಯುವಿನಳಲಿನಲಿ (ಕುಮಾವ್ಯಾದ್ರೋ. ೭೦೫. ಪರಿ ೩೮೪); ಶೂರ್ಪಣಖಿ . . . ಹೊಳಹೊಳವ ನಿಡುಗಂಗಳಿನ ಕೋಮಲದ ಕದಪಿನ . . . ನಳಿತೋಳುಗಳ ಮಾನವವಿಲಸಿತಾಂಗದ ರೂಪ ಕೈಕೊಂಡೆಸೆದಳದಿರಿನಲಿ (ತೊರರಾ. ೩-೪-೫); ಮಿಸುಪ ನದೀನಾರಿಯ ನಳಿತೋಳಿನಲೆಸೆವಿರ್ತಡಿಗಾಲುವೆ (ಜಯಚಾ. ೧-೩೮); ಕಂದರ್ಪ ನಗುತ ಗಾಲಿಸುತ ಸಂತಸದೊಳಂ ಚಂದದೆ ಪಿಡಿದು ರಾಜಿಸುವ ಇಂದೀವರವಾಂತ ಲತೆಯೆನೆ ತತ್ಕರದಿಂದೊಪ್ಪಿದುವು ನಳಿತೋಳು (ಕಂನವಿ. ೯-೨೫); ನಳಿತೋಳ ತಲೆಗಿಂಬ ಮಾಡಿ ಪದಗಳ ನೀಡಿ ಸುಳಿಗುರುಳ ಚದರಿ ಕೆದರಿದ ಲಲಾಮಂಗಳಿಂ ಲಲನೆಯರಿರಲು (ಪಂಕಾರಾ. ೫-೪-೧೩). [ನಳಿ$_2$ + ತೋಳ್]

**ನಳಿನ** 'ನಲಿನ' ನೋ.

**ನಳಿನಕೋರಕ** (ನಾ). ತಾವರೆಯ ಮೊಗ್ಗು: ತಳಿರ ಕಕ್ಕಡದರುತ್ಪಳದ ತೋಮರದವರ್ ನಳಿನಕೋರಕದಿಟ್ಟಿಯವರು . . . ಬಳಸಿ ಕೈಮಾಡಿದರ್ ನೃಪನ (ಭರವೇ. ೨-೪೮). [ಸಂ. ನಲಿನಕೋರಕ]

**ನಳಿನಗರ್ಭ** 'ನಲಿನಗರ್ಭ' ನೋ.

**ನಳಿನಗರ್ಭಾಂಡ** 'ನಲಿನಗರ್ಭಾಂಡ' ನೋ.

**ನಳಿನಜ** 'ನಲಿನಜ' ನೋ.

**ನಳಿನಜಾಂಡ** (ನಾ). ಬ್ರಹ್ಮಾಂಡ; ಪ್ರಪಂಚ: ನಳಿನಜಾಂಡ ತಲೆಯ ತೂಗಿ ಮೋಹಿಸುತಿರಲು ಕೊಳಲನೂದಿ ಭ್ರಾಜಿಸುವ ಚೆಲುವ ಕೃಷ್ಣರಾಯನ ನೋಡಿ (ಪುರಂದ. ೫-೪೭ ಪಲ್ಲವಿ). [ಸಂ. ನಲಿನಜಾಂಡ]

**ನಳಿನದಳ** 'ನಲಿನದಲ' ನೋ.

**ನಳಿನದಳನಯನೆ** (ನಾ). ಕಮಲದ ಎಸಳಿನಂತೆ ಕಣ್ಣುಳ್ಳವಳು; ಕಮಲಾಕ್ಷಿ: ನಳಿನದಳನಯನೆ ತನಗಾಗುಱಿವರೆ ಕರತಳದೆ ವದನಮಂ ಮುಚ್ಚುತವಗ್ಗಲಿಸಿ ಪೊಱಮಡುವ ಗೋತ್ರಸ್ಖಲನೆಯ ಭಯದಿಂದೆ ಮುಚ್ಚಿದಂತೆಪೊಲಿರ್ದಳ್ (ಕಾದಂಉ. ೧೨೮). [ಸಂ. ನಲಿನದಲನಯನಾ]

**ನಳಿನದಳಪುಟ** (ನಾ). ಕಮಲದ ಎಲೆಯಿಂದ ಮಾಡಿದ ದೊನ್ನೆ: ನಳಿನದಳಪುಟದೆ ನೀರು ನಳಿನಿಗಳಿವು ರೂಪುಗೊಂಡು ಸುರಿದಪುವೆನೆ ಕಂಗೊಳಿಪ ಮರಕತದ ಕಳಶಂಗಳ ಜಲಮಂ ಸುರಿದರಮಳಕಮಳಾನನೆಯರ್ (ಕಾದಂಪೂ. ೭೩). [ನಳಿನದಳ (= ನಲಿನದಲ) + ಪುಟ$_3$]

**ನಳಿನದಳಲೋಚನ** 'ನಲಿನದಲಲೋಚನ' ನೋ.

**ನಳಿನದಳಾಕ್ಷ** (ನಾ). ೧. ಕಮಲದ ಎಸಳಿನಂತೆ ಕಣ್ಣುಳ್ಳವನು. **೨.** ಕೃಷ್ಣ: ನಳಿನದಳಾಕ್ಷಂ ರುಕ್ಮಿಣಿ ಸಲೆ ಭಾಗ್ಯಸುಖಾನುಭಾವದಿಂದಂ ದಿನಮಂ ಕಳೆಯುತ್ತಿರೆ (ದಶಾವ. ೯-೧೭೪). [ಸಂ. ನಲಿನದಲಾಕ್ಷ (ನಲಿನದಲ + ಅಕ್ಷಿ + –)]

**ನಳಿನದಳಾಯತಾಕ್ಷ** (ನಾ). ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಳ್ಳವನು: ನಳಿನದಳಾಯತಾಕ್ಷನುರುವಕ್ಷನಿಭಾಹಿತಮಧ್ಯನಕ್ಷರಾಢ್ಯಗ್ಳ ನಳಿಮಾಲಿಕಾಪ್ರಭನಹಿಪ್ರಭುಸನ್ನಿಭಬಾಹುಯುಗ್ಮಂ . . . ನಿಟ್ಟಿದಿರಾಗಿ ನಿಲ್ವುದುಂ (ಮಹಾನೇ. ೭-೩೮). [ಸಂ. ನಲಿನದಲಾಯತಾಕ್ಷ (ನಲಿನದಲ + ಆಯತ + ಅಕ್ಷಿ + –)]

**ನಳಿನದಳಾಯತಾಕ್ಷಿ** (ನಾ). ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಳ್ಳವಳು: ನಳಿನದಳಾಯತಾಕ್ಷಿ . . . ಪೊಳೆವವತಂಸಪುಷ ರಜದಿಂ ಪೊರೆದಿರ್ದ ಕಪೋಲಪಟ್ಟಮಂ ತೊಳೆದಳನಾರತಂ ಸುರಿವ ಚಂದನಶೀತಲ ಹರ್ಷವಾರಿಯಿಂ (ಕಾದಂಉ. ೨೩೭). [ನಳಿನದಳ (=ನಲಿನದಲ) + ಆಯತಾಕ್ಷಿ]

**ನಳಿನದೃಶ** (ನಾ). ೧ ಕಮಲದಂತೆ ಕಣ್ಣುಳ್ಳವನು. ೨ ಕೃಷ್ಣ: ಜಲಧಿಯಲಿ ನಿಜಯೋಗ ನಿದ್ರಾಲಲನೆಗಭಿಮುಖನಾಗಿ ಪವಡಿಸಿ ನಳಿನದೃಶನಿರೆ ನಾಭಿನಳಿನದಲುದಯಿಸಿದನಜನು (ನಿಭಾಗ. ೧-೨-೨). [ಸಂ. ನಲಿನದೃಶ್]

**ನಳಿನದೃಶೆ** (ನಾ). ಕಮಲದಂತೆ ಕಣ್ಣುಳ್ಳವಳು: ಎಳೆಯ ಮಿಂಚಿನ ಕುಡಿಯ ಸೂಸುವ ನಳಿನದೃಶೆಯರು [ಪಾಠಾಂ. ನಯನದ] ಶಶಿಯ ಬಿಂಬವ ಹಳಿವ ಹುರುಡಿಸುವಬುಜಮುಖಿಯರು . . . ಕುರುರಾಯ ನೆಡವಂಕದಲಿ ವೋಹಿದರು (ಕುಮಾವ್ಯಾಉ. ೮-೪೪). [ನಳಿನದೃಶ + – ಎ$_2$]

**ನಳಿನನಯನ** (ನಾ). ೧. ಕಮಲದಂತೆ ಇರುವ ಕಣ್ಣು: ಎಳೆಯ ಮಿಂಚಿನ ಕುಡಿಯ ಸೂಸುವ ನಳಿನನಯನದ [ಪಾಠಾಂ. ದೃಶೆಯರು] ಶಶಿಯ ಬಿಂಬವ ಹಳಿವ ಹುರುಡಿಸುವಬುಜಮುಖಿಯರು (ಕುಮಾವ್ಯಾಉ. ೮-೪೪). **೨.** ಕಮಲದಂತೆ ಕಣ್ಣುಳ್ಳವನು: ಶ್ಯಾಮಸುಂದರನೂ ಮಹಾಬಾಹುವೂ ನಳಿನನಯನನೂ ಆದ ಈತನು ನನಗೆ ತಕ್ಕ ಗಂಡ (ವಚಭಾ. ೩೭). **೩.** ವಿಷ್ಣು. [ನಳಿನ (= ನಲಿನ) + ನಯನ]

**ನಳಿನನಾಭ** 'ನಲಿನನಾಭ' ನೋ.

**ನಳಿನನಾಳ** (ನಾ). ತಾವರೆಯ ದಂಟು; ಕಮಲದ ಕಾಂಡ,–ದೇಟು: ನಳಿನನಾಳವು ಗಜದ ಕೈಯೊಡನಳವಿಗೊಡಲಂತರವೆ (ಕುಮಾವ್ಯಾದ್ರೋ. ೪-೪): ಬಳಿಕ ನೋಡುವೆ ದನುಜಗಿನುಜರ ಬಲುಹನೆನುತಾ ವೀರ ಲುಕೆಯ ನಳಿನನಾಳವ ಭದ್ರಗಜ ಕೀಳ್ವಂತೆ ಕೀಳ್ಬಗೆದ (ಕಾಶಿರಾ. ೧೦-೪೮); ಜಲವೆಲ್ಲ ಹರಿಮಯ ಶಿಲೆಯೆಲ್ಲ ಶಿವಮಯ ಮಳಲುಮಿಟ್ಟೆಗಳೆಲ್ಲ ಮಣಿಯ ಮಯವು ಬೆಳೆದಿಪ್ಪ ದರ್ಭೆಗಳು ಸಾಕ್ಷಾತ್ತು ಬ್ರಹ್ಮಮಯ ನಳಿನನಾಳವು ಸರ್ವ ವಿಷ್ಣುಮಯವು (ಪುರಂದ. ೪-೪೦-೨). [ನಳಿನ (= ನಲಿನ) + ನಾಳ$_1$ (= ನಾಲ$_1$)]

**ನಳಿನನಿಭ** (ನಾ). ತಾವರೆಯಂತಿರುವುದು; ಕಮಲಕ್ಕೆ ಸದೃಶವಾದುದು: ಕಾಂಚನಭಾಜನರತಮುಭಿಕಾಂಚನಭಾಜನಮೆನಿಪ್ಪ ಸುರುಚಿರಚರುವಿಂ ಸಂಚಿತಗುಣನಡಿಗಳನಿನಸಂಚಿತಗುಣ ನಳಿನನಿಭಮನೊಸೆದರ್ಚಿಸಿದಂ (ಪುಷ್ಪಪು.೧೪-೭). [ಸಂ. ನಲಿನನಿಭ]

**ನಳಿನಪತ್ರ** (ನಾ). ತಾವರೆಯ ಎಲೆ: ದಿವಿಜಕುಲವಿಳಯಕಾಲಾನಲಂ ಬಪ್ಪಂತೆ ಹಾಳಾಹಳ ಸುಡುತ ಬರಲು . . . ಶಂಕರನು ಕರತಳದೊಳದ

ತಳೆದು ನೋಡಲು ನಳಿನಪತ್ರದೊಳು ಜಲಬಿಂದುವಂತೆ ತಲ್ಲಣಗೊಳಲು (ಲಶಿಚಂ. ೧೨-೧೩). [ ನಳಿನ(= ನಲಿನ) + ಪತ್ರ ]

**ನಳಿನಭವ** 'ನಲಿನಭವ' ನೋ.

**ನಳಿನಭವಾಂಗ** (ನಾ). ಬ್ರಹ್ಮನ ದೇಹ,-ಶರೀರ: ಮತ್ತಮಾ ಘನ ಸಮಯಂ ಗದಾಧರಮೂರ್ತಿಯಂತೆ ಘನಶ್ರೀಮನೋಜ್ಞಮುಂ ನಳಿನ ಭವಾಂಗದಂತೆ ಕಾದಂಬವಿತತಾವೋದವಾಹಮುಂ . . . ಎನಿಸಿರ್ದುದು (ರಾಜಶೇ. ೮-೧೧೯ ವ). [ ನಳಿನಭವ ( = ನಲಿನಭವ) + ಅಂಗ₂ ]

**ನಳಿನಭವಾಂಡ** 'ನಲಿನಭವಾಂಡ' ನೋ.

**ನಳಿನಮುಖಿ** 'ನಲಿನಮುಖಿ' ನೋ.

**ನಳಿನರಿಪು** (ನಾ). ಕಮಲದ ವೈರಿ; ಚಂದ್ರ: ಬೆಳವುತಿರ್ದರು ಹರಿಣಪಕ್ಷದ ನಳಿನರಿಪುವಿನವೊಲ್ ಕುಮಾರರು (ಕುವ್ಯಾಅ. ೩-೧೧); ಎಲೆ ಭಗೀರಥವಂಶ ವಾರುಧಿ ನಳಿನರಿಪು[ಪಾಠಾಂ. ಸಖಿ]ಸುತ ಕೇಳು ಕರುಣಾಜಲಧಿಯಲ್ಲಾ ಕಾಯ್ದನನ್ವಯನಾಮಧಾರಕನ (ತೊರರಾ. ೭-೫-೧).

[ ನಳಿನ ( = ನಲಿನ) + ರಿಪು ]

**ನಳಿನಲೋಚನ** (ನಾ). ೧. ಕಮಲದಂಥ ಕಣ್ಣುಳ್ಳವನು. ೨. ವಿಷ್ಣು: ನಳಿನಲೋಚನನಾರ್ದು ಶಾರ್ಙ್ಗವ ಬಲಿದು ಜೇವೊಡೆಗೆಯ್ಯೆ ಲೋಕ ವನಳಿಸುವ ದನಿ ಮಾಯವಾದುದು (ಸಾಳ್ವಭಾ. ೩೦-೬೫).

[ ನಳಿನ (= ನಲಿನ) + ಲೋಚನ ]

**ನಳಿನಲೋಚನೆ** 'ನಲಿನಲೋಚನೆ' ನೋ.

**ನಳಿನವದನೆ** (ನಾ). ಕಮಲದಂತೆ ಮುಖವುಳ್ಳವಳು; ಸುಂದರಿ: ಕಳಸಕನ್ನಡಿ ಸಹಿತ ನಡೆಯಲಿ ನಳಿನವದನೆಯರೆಂದು ನೇಮಿಸಿದನುಮಹೀಪಾಲ (ಕುವ್ಯಾಉ. ೭-೧೭). [ ಸಂ. ನಲಿನವದನಾ ]

**ನಳಿನವನ** (ನಾ). ಕಮಲಗಳ ಸಮೂಹ; ತಾವರೆಗಳ ಗುಂಪು: ನಳಿನ ವನಶ್ರೀನಿವಹಂ ಕಳಹಂಸಂಬೆರಸು ಬಂದುದೆನೆ ಲತಿಕಾಕೋಮಳೆಯರ ನಡುವೊರ್ವಂ ನಿರ್ಮಳರೂಪಂ ದ್ವಿಜಕುಲೋತ್ತಮಂ ಬರುತಿರ್ದಂ (ಅನಂಪು. ೨-೩೯). [ ನಳಿನ (= ನಲಿನ) + ವನ ]

**ನಳಿನವೈರಿ** 'ನಲಿನವೈರಿ' ನೋ.

**ನಳಿನಶರ** (ನಾ). ಮನ್ಮಥ; ಅನಂಗ: ದೇವರಾಜೇಂದ್ರಭೂಪತಿಚಂದ್ರನು ನಳಿನಶರನಧಟ ಹರಪಾದಸರಸಿಜಭೃಂಗನೆಳಕೀರವಾಣಿ . . . ಶಚಿದೇವಿ ಯೆಂದೆಂಬ ಸತಿಸಹಿತ ರಾಜ್ಯವನಾಳುತ (ಪ್ರಾಢರಾ. ೯-೩೭).

[ ನಳಿನ (= ನಲಿನ)+ ಶರ ]

**ನಳಿನಸಂಭವ** 'ನಲಿನಸಂಭವ' ನೋ.

**ನಳಿನಸಖ** 'ನಲಿನಸಖ' ನೋ.

**ನಳಿನಸಖನೇತ್ರ** (ನಾ). ಸೂರ್ಯನನ್ನು ಕಣ್ಣಾಗಿ ಉಳ್ಳವನು; ಶಿವ: ನಳಿನಸಖನೇತ್ರನಿಹನುಮೆಯೊಳುಂ ಕ್ರೀಡಿಸುತ (ಲಶಿಚಂ. ೧೭-೧೩).

[ ನಳಿನಸಖ (= ನಲಿನಸಖ) + ನೇತ್ರ ]

**ನಳಿನಸಖಸುತ** (ನಾ). ಕಮಲದ ಗೆಳೆಯನ ಮಗ; ಸೂರ್ಯನ ಮಗ; ಯಮ: ನಳಿನಸಖಸುತ ಕೋಪದಿಂದೆ ಸೇನಾಧಿಪತಿಗಳನೆಲ್ಲ ಬೇಗದಿಂ ಬಲಗೂಡಿ ಕಳುಹಲ್ಕೆ ತಳುವದವತ್ತಂದು ಕಾದಿ ಮುರಿದೋಡಲಾ ಯಮ ರಾಜ ತಾನೆ ಬಂದು ಮಲಹರನ ದೂತರೊಳು ಪಲಕಾಲ ಕಾದುತಿರೆ (ಪ್ರಾಢರಾ. ೧೭-೫). [ ನಳಿನಸಖ(= ನಲಿನಸಖ) + ಸುತ ]

**ನಳಿನಸಮಾಜ** (ನಾ). = ನಳಿನವನ: ನಳಿನಸಮಾಜಮುಳ್ಳಲರೆ ತಣ್ಣೆಲರೊಯ್ಯನೆ ತೀಡೆ ಚಕ್ರಸಂಕುಳಮುರುಲೀಲೆಯಿಂ ನೆರೆಯೆ ಮೆಲ್ಲನೆ ಪಾಱೆ ವಿಹಂಗರಾಜಿ ಕಿಂಬೆಳಗಖಿಲೋರ್ವಿಯುಂ ಪರೆದು ತೆಕ್ಕನೆ ತೀವೆ ನಿಳಿಂಪರಾಟ್ ದಿಶಾಚಳಶಿಖರಾಗ್ರದೊಳ್ಬೆಳಗುತೊಪ್ಪಿದನಂದು ಕರಂ ದಿವಾಕರಂ (ಉದ್ಭಟ. ೧೦-೭). [ ನಳಿನ (= ನಲಿನ) + ಸಮಾಜ ]

**ನಳಿನಳಿನಬಾಣ** (ನಾ). ಕೋಮಲವಾದ ಕಮಲಪುಷ್ಪದ ಬಾಣವನ್ನುಳ್ಳವನು; ಪುಷ್ಪಬಾಣ; ಕಾಮ; ಮನ್ಮಥ: ನಳಿನಳಿನಬಾಣಂಗೆ ಕೂರ್ಸರಲಾಗಿ ತಾಗಿಯಾ ಲಲನೆಯರ ವಿರಹದಿಂ ನೋಯಿಸಲು ಮುನಿದವರು ಬಲುಗೋಪ್ಯದಿಂದೆ ಶಾಪಿಸಲು (ನವಮೋ. ೨೩-೧೫).

[ ನಳಿ₂ + ನಳಿನ (= ನಲಿನ) + ಬಾಣ ]

**ನಳಿನಾಂಬಕೆ** (ನಾ). ಕಮಲದಂತೆ ಕಣ್ಣುಳ್ಳವಳು; ಸುಂದರಿ: ಉಳಿದು ಸುಮಶಯನಮಂ ಮೇಣ್ ನಳಿನೀದಳದಿಂದೆ ರಚಿಸಿದೆದೆಗುಪ್ಪಸಮಂ ಬಳಲಿಕೆಯಂ ತಳೆದಂಗದೆ ನಳಿನಾಂಬಕೆ ನೀನದೆಂತು ಪೋದಪೆ ಬಿಸಿಲೊಳ್ (ಶಾಕುಂತ. ४೧-೭೩). [ ಸಂ. ನಲಿನಾಂಬಕಾ ]

**ನಳಿನಾಕರ** (ನಾ). ಕಮಲಗಳ ಆವಾಸಸ್ಥಾನ; ಕೊಳ; ಸರೋವರ: ನಳಿನಾಕರಮುಂ ರವಿಯುಂ ಜಳನಿಧಿಯುಂ ನಿರ್ಮಳೋರ್ಮಿಯುಂ ಚಂದ್ರಮನುಂ ಕಳೆಯುಂಮೆಸೆವಂತೆ ಸಮುಸಂದಿಳೇಶನುಂ ಕಾಂತೆಯುಂ ಕರಂ ಸೊಗಯಿಸುವರ್ (ಚಂದ್ರಪು. ೧೧-೧೧೪); ನಳಿನಾಕರಕ್ಕೆ ಬಂದು ಕೊಳದೊಳಲರ್ದಬ್ಜದಲರಂ ನಳಿನೇಕ್ಷಣೆ ಮುಱಿವೆನೆಂದು ಪುಗೆ. . . ಕಣ್ಗದೇಂ ರಂಜಿಸಿತೊ (ರಾಜಶೇ. ೧೦-೪೫ ವ). [ ನಳಿನ (= ನಲಿನ) + ಆಕರ₃ ]

**ನಳಿನಾಕ್ಷ** 'ನಲಿನಾಕ್ಷ' ನೋ.

**ನಳಿನಾಕ್ಷಿ** (ನಾ). ಕಮಲದಂತೆ ಕಣ್ಣುಳ್ಳವಳು; ಕಮಲಾಕ್ಷಿ: ಹಾ ತರುಣಿ ನಳಿನಾಕ್ಷಿ ನಯಸುಪ್ರೀತಿಪೂರ್ವಕದಿಂದ ಕನಸಲಿ ಮಾತುದೋಱದೆ ಬಂದು ನನ್ನಲಿ ಕರುಣದಿಂ ನೀನು (ನಳಚ. ೭-೯); ಕೆಳಗಣ ಮೇಗಣ ಪಲ್ಲಂ ಘಳಿಲನೆ ತಾಗಲ್ಕೆ ಕುಟ್ಟನಾಖ್ಯಂ ಮತ್ತಂ ನಳಿನಾಕ್ಷಿ ಪಲವು ಸೂಳಿಂದೆಳೆಯಳೆ ಸೋಂಕು ತ್ರಮುಗಲೆ ಖಾದನಮುಕ್ಕುಂ (ಲಾಸ್ಕರಂ. ೩-೮೯). [ ಸಂ. ನಲಿನಾಕ್ಷೀ ]

**ನಳಿನಾನನೆ** (ನಾ). ಕಮಲದಂತೆ ಮುಖವುಳ್ಳವಳು: ಗಳಯಿಸುತಿರೆ ನಯನ ವಾರಿ ನಿನ್ನಾನನದಿಂ ನಳಿನಾನನೆ ನೀನಿರೆ ಕುರುಕುಳಾಂತಕಂ ಗಳಿತಕೋಪನೇ [ ಕಲಿ ]ಭೀಮಂ (ಗದಾಯು. ೧-೬೩). [ ಸಂ. ನಲಿನಾನನಾ ]

**ನಳಿನಾಭಿನಳಿನ** (ನಾ). ಕೋಮಲವಾದ ನಾಭಿಯಲ್ಲಿರುವ ಕಮಲ; ವಿಷ್ಣುವಿನ ಹೊಕ್ಕಳಿನಲ್ಲಿರುವ ತಾವರೆ: ಹರಿಯ ನಳಿನಾಭಿನಳಿನಂ ವಿರಂಚಿಯುಂ ಪಡೆದುದರ್ಕೆ ಪುರುಡಿಸಿ ತಾನಾ ಪರಿಯನೆ ಪಡೆದವೊಲೆಸೆದುದು ಸರೋವರಾವರ್ತನಳಿನಮೊಂದಳಿಗರ್ಭಂ (ಅರ್ಧನೇ. ೫-೧೧೩).

[ ನಳಿ₂ + ನಾಭಿ + ನಳಿನ (= ನಲಿನ) ]

**ನಳಿನಾರಿ** (ನಾ). = ನಳಿನರಿಪು. 'ನಳಿನಾರಿಧರ' ಪರಾ.

[ ನಳಿನ (= ನಲಿನ) + ಅರಿ₆ ]

**ನಳಿನಾರಿಧರ** (ನಾ). ಚಂದ್ರನನ್ನು ಧರಿಸಿದವನು; ಶಿವ: ನಳಿನಾರಿಧರ ನಿಪ್ಪ ಕೈಲಾಸಗಿರಿಯಲ್ಲಿ . . . ಚಳಿವೆಟ್ಟಮಗಳರಸನಂ ಕೂರ್ತು ತಪದಿ ಮುನಿಗಳ ಶ್ರೇಷ್ಠ ಮಾರ್ಕಂಡ್ಯನಿರೆ (ಪ್ರಾಢರಾ. ೧೧-೧೮).

[ ಸಂ. ನಲಿನಾರಿಧರ ]

**ನಳಿನಿ** 'ನಲಿನಿ' ನೋ.

**ನಳಿನೀಗರ್ಭ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ. 'ನಳಿನೀ ಗರ್ಭಾಂಡ' ಪರಾ. [ ಸಂ. ನಲಿನೀಗರ್ಭ ]

**ನಳಿನೀಗರ್ಭಾಂಡ** (ನಾ). ಬ್ರಹ್ಮಾಂಡ; ವಿಶ್ವ: ನಳಿನೀಗರ್ಭಾಂಡವಮಾಲಾ ಫಲಿತಮೆನಿಪ ಪೃಥ್ವೀಮಹಾವಲ್ಲಿಯುಂ ತಾಂ ಬಳಸಿರ್ದಾವಾಲದಂತಿರ್ಪುದು ಜಲಚರಸಂಭೂತಸಂಪದ್ವಿಧಾನಂ . . . ಪ್ರಬಳಘುಳುಘುಳುಧ್ವಾನಮಂಭೋ ನಿಧಾನಂ (ಜಗವಿ. ೧-೨೩). [ ಸಂ. ನಲಿನೀಗರ್ಭಾಂಡ ]

**ನಳಿನೀತೀರ** (ನಾ). ಕಮಲಗಳಿಂದ ಕೂಡಿದ ಸರೋವರದ ತೀರ,-ದಡ: ನಳಿನೀತೀರಲತಾಗೃಹಂಗಳ ನೆಟಲ್ ನೇರ್ಪಟ್ಟಿರಲ್ . . . ಎಳನೀರಿಂಟ ಪಥಾರ್ತರಿರ್ಪರಳಿಕೇರಧ್ವಾನದುದ್ಯಾನದೊಳ್ (ಜಗವಿ. ೯-೮೮).

[ ಸಂ. ನಲಿನೀತೀರ ]

**ನಳಿನೀದಳ** (ನಾ). ೧. ಕಮಲದಳ; ತಾವರೆಯ ಎಸಳು: ಉಳಿದು ಸುಮಶಯನಮಂ ಮೇಣ್ ನಳಿನೀದಳದಿಂದೆ ರಚಿಸಿದೆದೆಗುಪ್ಪಸಮಂ ಬಳಲಿಕೆಯು ತಳೆದಂಗದೆ ನಳಿನಾಂಬಕಿ ನೀನದೆಂತು ಪೋದಪೆ ಬಿಸಿಲೊಳ್ (ಶಾಕುಂತ. ೪೧-೭೩). ೨. ಕಮಲಪತ್ರ; ತಾವರೆಯ ಎಲೆ. 'ನಳಿನೀದಳತಾಳವೃಂತ' ಪರಾ. [ಸಂ. ನಲಿನೀದಲ]

**ನಳಿನೀದಳತಾಳವೃಂತ** (ನಾ). ಕಮಲಪತ್ರಗಳಿಂದ ತಯಾರಿಸಿದ ಬೀಸಣಿಗೆ: ಬಳಲಿಕೆ ಪಿಂಗುವಂತೆ ನಿನಗಾಂ ನಳಿನೀದಳತಾಳವೃಂತದಿಂ ಸುಳಿಯಿಪೆನೇಂ ಕುಳಿರ್ವಾಸಪ ತಂಬೆಲರಂ (ಶಾಕುಂತ. ೪೧-೭೨).

[ನಳಿನೀದಳ + ತಾಳವೃಂತ (= ತಾಲವೃಂತ)]

**ನಳಿನೀಪತ್ರ** (ನಾ). = ನಳಿನೀದಳ ೨: ನಳಿನೀಪತ್ರಾಂಶುಕಾಚ್ಛಾದಿತಕುಚಯುಗಳಂ ಚಂದನಾಪಾಂಡುಗಂಡಸ್ಥಳಯುಗ್ಮಂ ... ಭೋಂಕನೆ ಪೊಱಮಡುತಿರ್ದತ್ತು ಕಾಂತಾಕದಂಬಂ (ಕಾದಂಉ. ೨೦೦): ನಳಿನೀಪತ್ರಗತಾಂಬುವೋಲ್ ನಡುಗಿತೀ ವಿಶ್ವಾವನೀಮಂಡಲಂ . . . ಭೂಭಾಗಮಂ ಬಳಸಿತ್ತಾ ವಿಜಯ ಪ್ರಯಾಣಜನಿತಂ ಪ್ರಸ್ಥಾನಭೇರೀರವಂ (ಸೂಕ್ತಿಸು. ೧೮-೧೩).

[ಸಂ. ನಲಿನೀಪತ್ರ]

**ನಳಿನೀಮಿತ್ರ** 'ನಲಿನೀಮಿತ್ರ' ನೋ.

**ನಳಿನೀರೇಣು** (ನಾ). ಕಮಲದ ಹೂವಿನ ಪರಾಗ,-ಧೂಳಿ: ನಳಿನೀರೇಣುಗಳಂ ಪಟಲ್ದಲರ್ಗಳಂ ಕೀರಾಳಿ ನಾದಂಗಳಂ ತಳೆದೆತ್ತಂ ಪಟವಾಸಮಂ ಕೆದಱುತುಂ . . . ಇದಿರ್ವಂದತ್ತೊಂದು ಮಂದಾನಿಳಂ (ಜಗವಿ. ೧೪-೫೩).

[ಸಂ. ನಲಿನೀರೇಣು]

**ನಳಿನೇಕ್ಷಣೆ** (ನಾ).=ನಳಿನದೃಶೆ: ರಜನಿಗಳ್ಕೆಂದವಬಿಂಬವ್ರಜದಿಂ ಜ್ಯೋತ್ಸ್ನಾಪ್ರವಾಹಮಂ ಪಸರಿಪವೋಲ್ ರಜತಕಳಶಂಗಳಿಂ ಮಳೆಯಜಜಳಮಂ ಸುರಿದರಸಿತನಳಿನೇಕ್ಷಣೆಯರ್ (ಕಾದಂಪೂ. ೭೪).

[ಸಂ. ನಲಿನೇಕ್ಷಣಾ]

**ನಳಿನೋದರ** (ನಾ). ಹೊಟ್ಟೆಯಲ್ಲಿ ತಾವರೆಯನ್ನು ಉಳ್ಳವನು; ವಿಷ್ಣು: ಜಲಧಿಶಯನ ರವಿಚಂದ್ರವಿಲೋಚನ ಜಲರುಹಭವನುತ ಚರಣಯುಗ ಬಲಿಬಂಧನ ಗೋವರ್ಧನೋದ್ಧಾರ ನಳಿನೋದರ ತೇ ನಮೋ ನಮೋ (ಪುರಂದ. ೩-೪೧-೨).

[ನಳಿನ (= ನಲಿನ) + ಉದರ]

**ನಳಿಮೊಗ** (ನಾ). ಕಾಂತಿಯುಕ್ತವಾದ ಮುಖ: ಎಳವಿದಿರ ಬಣ್ಣಮೊಳ್ನಡು ಕಳಶಮನವ್ವಳಿಪ ಮೊಲೆ ಪೊದಟೆಳಸುವ ಬಾಯ್ ಬಳಸುವ ಕಣ್ ವಿಳಿರ್ವ ಕುರುಳ್ ನಳಿಮೊಗಮೆನೆ ಸೊಬಗಿವಳ್ಗೆ ನಾಟ್ಟವರ್ತನಮೋ (ಆದಿಪು. ೪-೪೪).

[ನಳಿ$_{2}$ + ಮೊಗ]

**ನಳು** (ನಾ). ತಗ್ಗಾದ ಪ್ರದೇಶ; ಹಳ್ಳ: ಇಡುಕುಱಿಳೊಳು ಕುಸಿದು ಹೊದಱಿನೊಳು ನುಸುಳಿ ನಳುವಿ[ಪಾಠಾಂ. ಕಪ್ಪಿ]ನೊಳಡಗಿ ನಾಳಲೊಳು ಪೊಕ್ಕು . . . ಅದಟುಗೆಟ್ಟು ಬೆಂಡಾದಸುಖಿಗಳನುಗ್ರದಳಲ ಬೇಸಱ ಬೇಗೆಗಿಚ್ಚು ವಿಶ್ವಾಮಿತ್ರಮುನಿಯನೆಯ್ದುದೆ ಮಾಣದು (ಹಚಕಾ. ೯-೩೩).

[<ನಳಿ$_{1}$]

**ನಳುರವಾಡಿ** (ನಾ). ಒಂದು ಊರಿನ ಹೆಸರು: ನಳುರವಾಡಿಯ ಬಯಲೊಳ್ ಕೀರ್ತ್ತಿವಾತ್ತಾಂಡದೇವರಿಗೆ ಪಡುವಣಕಡೆಯಿಂ ತೆಂಕಣ ತೆಂಬಡಗಣ ತೆವರಿಂ ಮೂಡಲ್ಕೆವತ್ತೆರಡು ಗೇಣ ಗಳೆಯಲೊಂದು ಮತ್ತರುಮನ್ . . . ಸರ್ವ್ವನಮಸ್ಯಂ ಮಾಡಿ ಕೊಟ್ಟನ್ (ಎಕ. VIII, ಸಾಗರ. ೧೦೯-೬೨; 1042). [? + ವಾಡಿ$_{1}$ (<ಪಾಡಿ$_{2}$)]

**ನಳುಹು** (ನಾ). ಬಾಗಿರುವಿಕೆ; ಡೊಂಕು; ವಕ್ರತೆ: ನಳಿಗೆಯೊಳ್ ನಾಯಬಾಲವನು ಕಟ್ಟಲ್ಕನ್ನ ನಳುಹ ಬಿಡದಂತೆ (ಸಮ್ಯಕಾ. ೧೦-೧೨).

[<ನಳಿ$_{1}$ + -ಹು$_{2}$]

**ನಳೆಯಿಸು** (ಕ್ರಿ). ನಡೆಸು; ಮುಂದುವರಿಸು: ಈ ಶ್ರೀಧರ್ಮಂ ನಳೆಯಿಸಿದಾತಂ ತುಳಾಪುರುಷವಿಟ್ಟು ಅಸ್ವಮೇಧಂಗೆಯ್ದು ಫಲಮನೈದುವಂ (ಎಕ. XI, ಚಿತ್ರದು. ೭೪-೩೨; 968).

[P ಇದು 'ನಡೆಯಿಸು' ಎಂಬುದರ ಅಪಲಿಖಿತವಿರಬಹುದು]

**ನಳ್ಗಿಸು** 'ನೆಗ್ಗಿಸು' ನೋ.

**ನಳ್ಗು** 'ನಱುಂಕು' ನೋ.

**ನಳ್ಳಿ$_{1}$** (ನಾ). ಹತ್ತುಕಾಲಿನ, ಗಡಸುಚರ್ಮದ ಒಂದು ಬಗೆಯ ಸಣ್ಣ ಜಲಚರ ಪ್ರಾಣಿ; ಎಸಡು; ಏಡಿ: "ಊರ್ಧ್ವದೃಕ್-ನಳ್ಳಿ" (ಓಷಧಿ. ೧೭): ಲಿಂಗನಿಷ್ಠಾಂಗಿ ವಚನವ ಹಾಡಿದರೆ ಒಪ್ಪುವರಲ್ಲದೆ ಲಿಂಗನಿಷ್ಠಾಹೀನರು ಓದಿ ಹಾಡಿದರೆ ನಳ್ಳಿ ಗುಳ್ಳೆಯ ತಿಂದ ನರಿ ಹಳ್ಳದ ತಡಿಯಲ್ಲಿ ಬಳ್ಳಿಟ್ಟು ಬಗುಳಿದಂತೆ ಏನೆಂದೂ ಮಾಟಮಾಡರಯ್ಯಾ (ಸಿದ್ಧೇವ. ೭೫-೨೦೯): ಭೂನುತ ಭುಜಬಲರಿದ್ದು ಗೆಲಲು ಬಾರದೀ ನಳ್ಳಿ ಗುಳ್ಳೆ ಮೀನುಗಳ ಸೇನೆ ಪಿಡಿದು ಗೆಲ್ವೆನೆಂದು ಹೊಕ್ಕೆಯಲಾ ಈ ನೀರ ನಡುಮಡುವಿನೊಳು (ನೇಮಿಸಂ. ೩೦-೮೩); ತಾಯಿನಳ್ಳಿಯ ಒಡಲನ್ನು ಅದರ ಮರಿಗಳು ಸೀಳುವುದರ ಹಾಗೆ ಈ ಅಂಬುಗಳು ನನ್ನ ಪ್ರಾಣವನ್ನು ಸಂಕಟಪಡಿಸುತ್ತಿವೆ (ವ್ಯಾಸಜಿ. ೩೬೨); ಶೀಗಡಿ, ನಳ್ಳಿ, ಏಡಿ ಮತ್ತು ಅವುಗಳ ಸಂಬಂಧಿಗಳಿಗೆ ೫ ಜೊತೆ ಕಾಲುಗಳು (ಕೀಟಜಿ. ೧೫); ಸಮುದ್ರದ ನಳ್ಳಿಯ ಪಲ್ಯ . . . ಬೆಣ್ಣೆ - ರುಚಿರುಚಿಯಾದ ಈ ಭಕ್ಷ್ಯಗಳು ಮೇಜಿನ ಮೇಲಿದ್ದುವು (ಪುನರು. ೧೧೮); ದೂರದರ್ಶಕದಲ್ಲಿ ನೋಡಿದರೆ ಈ ಗುಚ್ಛಗಳು ಅನೇಕ ವೇಳೆ ಕಿರೀಟಗಳಂತೆಯೂ ಮೀನುಗಳಂತೆಯೂ ನಳ್ಳಿಗಳಂತೆಯೂ . . . ಮೆರೆಯುತ್ತಿರುವುವು (ಜ್ಯೋತಿರ್ವಿ. ೭೪); ನಳ್ಳೀ ರಾಗಕ್ಕೆ ನರಿ ತಲೆ ತೂಗಿದ ಹಾಗೆ (ಗಾದೆ).

[ದೇ.II ತಮಿ. ನಳ್ಳಿ, ನಳಿರ್, ಞಣ್ಣು, ಞೆಣ್ಣು, ನಣ್ಣು; ಮಲ. ಞಣ್ಣು, ನಣ್ಣು]

**ನಳ್ಳಿ$_{2}$** 'ನಲ್ಲಿ$_{1}$' ನೋ.

**ನಳ್ಳಿಕೈವಾರ** (ನಾ). ಬಾಗಿರುವ ಕೈವಾರ; ಬಗ್ಗಿರುವ ವೃತ್ತರೇಖಕ: "ಕೀಲು ಹಾಕಿ ಅಳವಡಿಸಿರುವ ತೋಳುಗಳುಳ್ಳ ಕೈವಾರ; ಬಿಲ್ಲು ಕೈವಾರ; ನಳ್ಳಿಕೈವಾರ" (Bows, Bow-Compass(es). ಇಂಕನಿ).

[<ನಳ್ಳಿ$_{1}$ + ಕೈವಾರ$_{2}$ (<ಕೆಯ್ವಾರ$_{2}$)]

**ನಳ್ಳಿಮೂಗು** (ನಾ). ಡೊಂಕಾದ ಮೂಗು; ವಕ್ರವಾದ ನಾಸಿಕ: ಬಾತಕೆಕ್ಕೆಯ ಬಲುಮುಕ್ಕರಿಹೊಟ್ಟೆಯ ಓತಿದಲೆಯ ಕೀನದನಿಯ ನಾತವಡೆದ ತನುವಿನ ನಳ್ಳಿಮೂಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ನೇಮಿಸಂ. ೭-೦೦೫). [<ನಳ್ಳಿ$_{1}$ + ಮೂಗು$_{1}$]

**ನಳ್ಳಿಸು** (ಕ್ರಿ). ತಗ್ಗು; ಬಗ್ಗು; ಬಾಗು: ಪಡೆಯ ಭಾರವ ತಾಳಲಾಱದೆ ಫಣಿಪತಿ ಪೆಡೆಯ ಪಲ್ಲಟಿಸಿ ಕಮಠನ ನಡುಬೆನ್ನು ನಳ್ಳಿಸೆ ನಲವಿಂದ ಕುವರನಂದೊಡನಿಕ್ಕಿದನು ಧಾಳಿಯನು (ಕುರಾಸಾಂ. ೦೦-೩೦).

[<ನಳ್ಳಿ$_{1}$ + -ಇಸು$_{3}$]

**ನಳ್ಳು** (ನಾ). ಒಂದು ಬಗೆಯ ಜೊಂಡು; ನಾಣಲು. 'ನಳ್ಳುನೆಲ', 'ನಾನಲ್' ಪರಾ.

**ನಳ್ಳುನೆಲ** (ನಾ). ಜೊಂಡು ಬೆಳೆದಿರುವ ಪ್ರದೇಶ; ನಡ್ವಲ: "ನಡ್ವಳಂ ನಳಯುತಂ ನಳ್ಳುನೆಲನಕ್ಕು" (ಮಂಗರಾ. ೨೮-೨). [ನಳ್ಳು + ನೆಲ]

**ನಳ್ಳುಶಿಲೆ** (ನಾ). (?): ಅಲ್ಲಿಂದಂ ದಕ್ಷಿಣವಾಗಿ ಹೊಕ್ಕ ಓಲೇಹಳ್ಳಿ ಬೇವಿನ ಹಳ್ಳಿ ಪೊಂನಾಪುರ ಮುಗ್ಗಡ್ಡೆಯಲ್ಲಿ ವಾಮನಮುದ್ರೆ ನಳ್ಳುಶಿಲೆ (ಎಜ. XIV, ೨೨೯-೨೯೭; 1551). [? + ಶಿಲೆ]

**ನಳಿಕು** 'ನಱುಂಕು' ನೋ.

**ನಳಿವಾಡಿ** (ನಾ). ಒಂದು ನಾಡಿನ ಹೆಸರು: ಶ್ರೀಮನ್ಮಹಾಮಂಡಳೇಸ್ವರ ಬಿದ್ದಣಚೋಳಮಹಾರಾಜರು ಕನ್ನೆಮೂನೂಱುಂ ಪೆಡಕಲ್ಲೆಂಟುನೂಱು

ನಱುವಾಡಿಯಯ್ಯನುಮಯುಜೆ ಮುನೂಱುಮಿನ್ತು ನಾಲ್ಕುಂ ನಾಡುಮಂ ದುಷ್ಟನಿಗ್ರಹಂ ವಿಶಿಷ್ಟಪ್ರತಿಪಾಳನಂ ಗೆಯ್ದು ಬಿಡವಿತ್ತಿಯಿನಾಳುತ್ತುಂ (ಕಇಅ. ೧೧೭-೩೩-೧೮ ; 1073). [ ? + ವಾಡಿ$_1$ (<ಪಾಡಿ$_2$) ]

**ನಱುಬ್ಬೆಗವುಂಡಿ** (ನಾ). ಒಬ್ಬಾಕೆಯ ಹೆಸರು : ತವುದಟ್ಟಗೆ ನಱುಬ್ಬೆಗವುಣ್ಡಿಯ ಮಂಗ ಅಮ್ಮನ್ನಗವುಣ್ಡ ತನ್ನೂರಱಿವ ಕಂಡು ಕೆಱೆವಳಿ ತಱಿಸಂನ್ದು ಸ್ವರ್ಗ್ಗಕ್ಕೆ ಸಂದನ್ (ಎಕ. VIII, ಸೊರಬ. ೩೬೮-೯ ; 999). [ ? + ಗವುಂಡಿ (<ಗಾವುಂಡಿ) ]

**ನಱುಲಕೆಱೆ** (ನಾ). ಒಂದು ಕೆರೆಯ ಹೆಸರು : ಅಪ್ಪಣಭಟ್ಟರು ಪಾದಪೂಜೆಗೊಟ್ಟ ದೇಸಿಗ ಪ್ರವಾಸಿಗರಾಹಾರಸತ್ರಕ್ಕೆ ದೆವಸಲುಂ ಬ್ರಾಹ್ಮಣರುಣ್ಬಂತಾಗಿ ನಱುಲಕೆಱೆಯ ಕೆಳಗೆ ಕಚ್ಚವಿಯ ಗಡಿಂಬದಲು ಬಿಟ್ಟ ಗಟ್ಟಿ ಕಮ್ಮ ಅಯ್ವತ್ತು ಶಿಂ (ಎಕ. VII, ಶಿಕಾರಿ. ೧೬-೩೩ ; 1085). [ ? + ಕೆಱೆ ]

**ನಱು**, ನರು (ನಾ). ೧. ಕಂಪು ; ಪರಿಮಳ ; ಸುವಾಸನೆ ; ಸೌರಭ : "ನಱು ಸೊವಡು ಕಂಪು ನಾತಂ . . . ಸೌರಭ್ಯಮುಕ್ಕು" (ಕವಿಕಂ. ೯೭) ; "ಸೌಸವಂ, ನಱು, ಕಮ್ಮಿತು, ಸೊವಡು, ಕಂಪು, ನಾತಂ, ಮುಗಮುಗಿಸು – ಈ ೭ ಪರಿಮಳಕ್ಕೆ ಪೆಸರ್" (ಕಶಸಾ. ೫೪-೧೭೭). 'ನಱುಮಂಡು', 'ನಱುಂಸುಯ್' ಪರಾ. (ಗು). ೨. ಕಂಪಿನಿಂದ ಕೂಡಿದ ; ಪರಿಮಳಯುಕ್ತವಾದ : ಸುರಗಿ ಸುರಹೊನ್ನೆ . . . ಸರಸಿರುಹ ಕುಮುದ ಪಾದರಿ ನಱುಸೇವಂತಿಗೆಯ ಹೂವಿನಂಗಡಿಯೆಸೆಗುಂ (ದಶಾವ. ೫-೫೩). ೩. ರಸವತ್ತಾದ ; ರಸಪೂರ್ಣವಾದ. 'ನಱುಂಗಬ್ಬು' ಪರಾ. **ನರು** : ೧. "ನರುಯೆನಲ್ಕೆ ಪರಿಮಳ" (ಕಶರ. ೫೩). ೨. 'ನರುಗಂಪು' ಪರಾ.

[ ದೇ.॥ ತಮಿ. ನಱ, ನಱವು, ನಱಾ, ನಱ್ಕೈ; ಮಲ. ನಱು ]

**ನಱುಂಕು**, ನಗ್ಗು$_1$, ನರಿಕು, ನರುಕು, ನಳ್ಗು, ನಱಿಕು, ನಱುಕು, ನೆಕ್ಕು$_2$, ನೆಗ್ಗು$_1$, ನೆರ್ಗು, ನೆಳ್ಗು, ನೆಟ್ಗು (ಕ್ರಿ). ೧. ಬೆಳವಣಿಗೆ ಕುಂಠಿತವಾಗು ; ನರಚಲಾಗು : ತುಱುಗಿ ತಳಿರ್ತು ಪೂತು ಫಲವಾದೆಲೆಯಿಕ್ಕಿ(ಕ್ಕ)ದ ಕೊಂಬುಗಳ್ ನೆಲಕ್ಕೊಱಗಿದ ನುಣ್ಬುವೆತ್ತ ಮರನುಳ್ಳೆಡೆಯೊಳ್ ಜಳಮುಕ್ಕುಮಲ್ಲಿಯೆಂದಱಿವುದು ತಾಱುದಂಕಿದ ನಱುಂಕಿದ ಕೊಂಬೊಣಗಿರ್ದ ಪೊಟ್ಟೆವೋದೊಱಗಿದ ವೃಕ್ಷದಿಂದಱಿವುದಾಯೆಡೆಯೊಳ್ ಜಳಮಾಗದೆಂಬುದಂ (ಲೋಕೋಪ. ೫-೪). **ನಗ್ಗು$_1$** : ೨. ಕುಗ್ಗು ; ಕುಂಸಿ : ಅಗ್ಗಿಸಿದೊಡೆ ದಿಟವೆಂದೆಗ್ಗಱಿಯದ ನಗ್ಗದ ಹೆಗ್ಗರು ನುಗ್ಗುಗಳಂ ಬಗ್ಗಿಸಿ (ವೀರೇಶ. ೩-೨೭) ; ನಗ್ಗಿದವು ದಿಗ್ಗಜಂ ಜರ್ಜಿದುದು ಕಚ್ಛಪಾಂಗಂ (ಜಬಪು. ೨೮-೧೧). ೩. (ಪಾತ್ರೆ ಮುಂತಾದಂವು) ಜಜ್ಜಿ ತಗ್ಗಾಗು,-ತಗ್ಗು ಬೀಳು : ನಗ್ಗಿಹೋಗಿರುವ ಪಾತ್ರೆಗಳನ್ನೆಲ್ಲಾ ಸರಿಮಾಡಿಸಬೇಕು (ರೂಢಿ). ೪. ಪೆಟ್ಟುಬೀಳು : "ನಗ್ಗು = ಪೆಟ್ಟು ಹತ್ತು ; ಹೊಡತ ಬೀಳು" (ಜಾನಶೋ. ೯). ೫. ಕೆಳಕ್ಕೆ ಹಾರು : "ಧುಮುಕು, ಬೀಳು, ನೆಗೆ, ನಗ್ಗು, ಹಾರು, ಜಿಗಿ, ಎಗರು, ಎರಗು" (ಕಂನುಹು. ೧೭). **ನರಿಕು** : ೬. ಅರೆ ; ಜಜ್ಜು ; ಕುಟ್ಟು ; ಚಚ್ಚು : ಯಾರೋ ತಿಪ್ಪಾರೆಡ್ಡಿಯೆಂಬುವನನ್ನು ಆ ಹಿಂದಿನ ದಿನ ಅಲ್ಲಿ ಹೇಗೆ 'ನರಿಕಿ' ಹಾಕಿದರೆಂಬ ಪ್ರಸಂಗಕ್ಕೆ ಮೊದಲಾಗುವುದರೊಳಗಾಗಿ ಮಳೆಯ ಜೋರು ಸ್ವಲ್ಪ ಕಡಿಮೆಯಾಯಿತು(ಪಂಯಾತ್ರೆ.೪೩). **ನರುಕು** : ೭. ಅಗಿ ; ಜಗಿ ; ನುಣ್ಣಗೆ ಮಾಡು ; ಮೆಲುಕಾಡಿಸು : ಕೆಲವರು ಸೂರ್ಯಕಾಂತಿಯ ಬೀಜಗಳನ್ನು ನರುಕಿ ತಿನ್ನುತ್ತಿದ್ದರು (ಪುನರು. ೪೬೯). ೮. ಕತ್ತರಿಸು ; ಚೂರುಮಾಡು : ಅಡಕೆಯನ್ನು ನರುಕು (ರೂಢಿ). **ನಳ್ಗು** : ೯. ಇಲ್ಲವಾಗು ; ಕಾಣದಂತಾಗು. 'ನಳ್ಗಿಸು' ಪರಾ. **ನಱಿಕು** : ೧೦. ಒತ್ತು ; ಅದುಮು : ತೊರೆದ ಮೊಲೆಯ ನಱಿಕುತೆ ಚೆಲ್ಲೆಕಣ್ಣೊಳು ಸುರಿವ ಸಂತಸಗಂಬನಿಗಳ ಒರಸುತೆ. . . ತರಳನ ಬಿಗಿಯಪ್ಪಿದಳು ಮಾತೆ (ತ್ರಿಘುತಿ. ೨೭-೩೦). **ನಱುಕು** : ೨. ತೊಗಲು ಸಡಲಿದ ಗಲ್ಲ ಬತ್ತಿದ ಹೆಗಲು ನಱುಕಿದ [ಪಾಠಾಂ. ನಲುಗಿದ] ನರೆತ ಮೀಸೆಯ ಜಗುಳ್ದ ಹಲುಗಳ . . . ಮುಪ್ಪಿನ ಮುಗುದನೀತನ ಕಾದ ಹೇಳಿದು ನಗೆಯ ಸುರಿದೈ ರಾಯ (ಕುವ್ಯಾಭೀ. ೧-೩೫). ೬. ಅಱುಚುವ ಮೇಕೆಗಳಂಬೆಗರವ ಗೋವು ನಱುಕುತೆಯ್ದುವ ಮಹಿಷಿಗಳು (ನಾಗಕು. ೧೫-೫೫). **ನೆಕ್ಕು$_2$** : ೧೧. ಒಳಸೇರು ; ಗುಳಿಬೀಳು ; ಹಳ್ಳವಾಗು ; ತಗ್ಗಾಗು : ಮಕರಂ ಬಾಯ್ದೆಱೆದುದದಿಂ ತೆಱೆದ ಬಾಯ್ ಪೇಟರ್ದ ಕೊರ್ದಾಡೆ ನೆಕ್ಕ ಕದಂಪೆತ್ತಿದ ಪುರ್ವು . . . ಭಯದಮಾಯ್ತಾ ರಾಕ್ಷಸೀರೂಪಕಂ (ಕಾವ್ಯಾವ. ೮೫೩) ; ಪೆಱ ನೊಸಲಾಗೆ ನೆ[ಪಾಠಾಂ. ನೊ]ಕ್ಕ ನೊಸಲೊಳ್ಳಿಲೆಯಪ್ಪೊಡಲ್ಗಾಗೆ ನಿಟ್ಟೊಡಲ್ನಿಱಿದಲೆಯಾಗೆಯೊಪ್ಪಿದಲೆ. . . ಪೂತನಿ ಗೋಪಿಪೊಲಾಗೆ ಬೇಗದಿಂ ಬಂದು (ಅರ್ಧನೇ. ೭-೭೦); ನೆಕ್ಕ ಕದಂಪು ಕಂಪಿಪಧರಂ ವಿಗೆ ಕೆಂಪಡರ್ದಕ್ಷಿ . . . ಮರುಳ್ವಕ್ಕದ ನಿಟ್ಟೊಡಲ್ ಮಸೆದ ಕತ್ತಿಗೆ ಕಣ್ಪೊಲನಾದುವೆತ್ತಲುಂ (ವರ್ಧಪು. ೧೫-೩೮). **ನೆಗ್ಗು$_1$** : ೨. ಬಲಭಾರಕ್ಕೆ ನೆಗ್ಗಿದುದಾ ರಣಭೂಮಿ (ತ್ರಿಪುಸಾಂ. ೩೦೫) ; ಕಚ್ಛಪಂ ನೆಗ್ಗಿದನುರಗಪತಿ ಕುಗ್ಗಿತು (ಬಸವು. ೨೮-೫೭) ; ಅಳುಕಿತೀ ನಮ್ಮವಾ ಭೀಮನ ಸುಳಿವಿನಲಿ ಸೊಪ್ಪಾದೆವರ್ಜುನನೆಳತಟಕೆ ನಿಲವೆಂತೆನುತ ನೆಗ್ಗಿದುದು ದುಗುಡದಲಿ (ಕುವ್ಯಾಕ. ೧೮-೩೫) ; ವೆಗ್ಗಳವಾಗಿ ಸೇನೆಯ ಕೊಂಡು ಹೋಹುದು ಮೊಗ್ಗಾಗಿ ನಡೆದು ಗೆಲ್ಲುವುದು ನೆಗ್ಗಿಹುದವರಿಗಾಗಳೆ ಕಿಚ್ಚ ಕಂಡೆದೆ ಭೊಗ್ಗನಿನ್ನೆಯ್ದಿ ನೀವೆಂದ (ಭರಜ. ೩೦-೫) ; ಕರಿಘಟೆಯ ಮೊಗ್ಗರಂ ವರ ಸರೋವರ ಸಲಿಲಪಾನಕೆಳೆ ನೆಗ್ಗಿದಲ್ಲದೆ ಮಾಣದೆಂಬಿನಂ ಪೊಳಲ ಪೊಱವಟ್ಟು ಬಂದಪುದು (ಜೈಮಿಭಾ. ೩-೩೮) ; ನೆವವಿಲ್ಲದೆ ನೆಗ್ಗಿ ನೆಲಕೆಳಿದೊಱಲದೆ ಸವನಿಸುವುದು ಸಂತಸವನು (ಹದಿಬ. ೩-೨೪) ; ನಾಗೇಂದ್ರ ಕೂರ್ಮರ ಹೆಗಲುಗಳು ನೆಗ್ಗಿದವು (ಉತ್ತಕ. ೬-೪೭). ೩. ಬಂಗಾರದ ಪಾತ್ರೆಯನ್ನು ಒಮ್ಮೆ ಸಿಟ್ಟಿನಿಂದ ಎತ್ತಿ ಹಾಕಿದರೂ ಅದು ಒಡೆದು ಹೋಗುವದಿಲ್ಲ ; ಸ್ವಲ್ಪ ನೆಗ್ಗುವದು(ನೀಗಟ್ಟು. ೧೦೭). ೬. ಪಿಡಿದೊತ್ತಿಯೊದೆದೆಲುವ ನೆಗ್ಗಲಾ ಕಾಲದೊಳು (ವೀಕ್ಷ್ಮಪು. ೩-೧೪-೩೦) ; ನೆಗ್ಗಲೋ ಬ್ರಹ್ಮಾಂಡವಂ ಬ್ರಹ್ಮನೆಲುಗಳಂ ನುಗ್ಗಮಾಡಲೋ (ಜಬಪು. ೩೦-೧೧) ; ಆ ಆನೆ ಭೀಮಸೇನನ ಮೇಲೆ ಹಾಯ್ದು ಅವನ ರಥವನ್ನು ಕುದುರೆಗಳನ್ನು ನೆಗ್ಗಿ ಪುಡಿಮಾಡಿಬಿಟ್ಟಿತು (ವ್ಯಾಸಜಿ. ೩೮೧) ; ಹಿಡಿಂಬಾಸುತನು ಅವರನ್ನು ಲೆಕ್ಕಕ್ಕೆ ತಾರದೆ ನುಚ್ಚುನುರಿಯಾಗಿ ನೆಗ್ಗಿ ನಾಶಮಾಡಿದನು (ಭಾಮುಚ. ೧೮). ೯. ಕೃತಾಂತನ ದಾಳಿಗೆತ್ತಣ ವೀರವೋ ನೆಗ್ಗಿದವನೆ ನಹುಗಳು (ಕುವ್ಯಾದ್ರೋ. ೨-೩೨) ; ಮಸದ ಮದದಕ್ಕಱಿನ ವಿಷಯದ ನೆನಹು ನೆಗ್ಗಿತು . . . ಉದಿಸಿತವಳಾನನದಲಧಿಕಕ್ರೋಧಶಿಖಿ ಸಿಡಿದೊಗುವ ಕಿಡಿಗಳಲಿ (ಕೂರರಾ. ೩-೪-೨೪) ; ಏಱಿದನೊಡನೆ ಮುಂದರತಿಶೋಕಾದಿಯಾದಾಱು ಕಷಾಯ ನೆಗ್ಗಿದುವು (ಭರಜ. ೭೭-೬೭). ೧೧. ಬಿಡೆ ಬಾದು ಗೆಯ್ದೊಡರಿಸುವ ತಮ್ಮ ಕಡುಪಿಂದೆ ಓರೋರ್ವರಂ ತಿವಿಯೆ ನೆಗ್ಗಿರ್ದ ಕದಪಿಂದೆ ಹಾಸ್ಯ ಬೀಭತ್ಸಾದಿ ನಾನಾರಸಂಗಳಿಂದೊಂದಿದ ಜರದ್ವಿಳಧಾರ್ಮಿಕ ಜನಂಗಳಿಂ (ಕಾದಂಬ. ೨೭೦) ; ದೌಡೆಗಳು ನೆಗ್ಗಿರೆ ದಂತಗಳುದುರಿಪೊಡದು ರಕ್ತವು ತೋರುತಿರೆ (ಕೊಲ್ಲಿಮಾ. ೭೭-೧) ; ಮುಗ್ಗಿ ಬೀಳುತ ಮತ್ತೆ ನೆಲ ತಾಂ ನೆಗ್ಗಲೋಡುತ (ದೇವಪು. ೧೪-೧೦೦) ; ೧೨. ಪುಡಿಯಾಗು ; ಚೂರಾಗು : ಮೊದಲ ಲಗ್ಗೆಗೆ ಮೂಱುಸಾವಿರ ತೇರು ನೆಗ್ಗಿದವೊಂದು ನಿಮಿಷದಲಿ (ಕುವ್ಯಾಭೀ. ೮-೪೮) ; ಸೀಸಕ ಸಿಡಿಯಲು ವಜ್ರಕವಚ ನೆಗ್ಗಲು ವಾಹಕರು ಬವರದೊಳಿಱಿದಾಡಿ ಮಡಿದರು (ಕುರಾಸಾಂ. ೧೩-೧೦೦) ; ಸಿಡಿದ ಹುಬ್ಬಿನ ಕಡಿದ ತೋಳ್ಗಳ ನೆಗ್ಗಿದೆಲುಗಳ . . . ಒಡೆವ ನೆತ್ತಿಗಳಿಂದ ರಕುತದ ಮಡು ಹರಿಯೆ (ನಳಚ. ೯-೨೭) ; ವಗ್ಗಿದುದು ಕುದುರೆ ಸಾರಥಿ ಮಡಿದನಾ ರಥಂ ನೆಗ್ಗಿದುದು (ಜೈಮಿಭಾ. ೭-೪೭). ೧೩. ಕುಂದು ; ಕಡಿಮೆಯಾಗು ; ಕ್ಷೀಣಿಸು : ನೆಗ್ಗಿದಾಳ್ವನ ದೆಸಕದೊಣಗಿಲ ಬಾಯ ಭೂಪನ ಕಂಡನಾ ದ್ರೋಣ (ಕುವ್ಯಾದ್ರೋ. ೫-೨೦);

ಕಾಮುಕತ್ವದ ನೆನಹು ನೆಗ್ಗದೆ ಪ್ರಾಣದೆಂದಸುರೇಂದ್ರನಳವಳಿದ (ತೊರರಾ. ೬-೨೬-೯) ; ಸೆರೆ ಬಿಗಿದು ಗಂಟಲು ಗದುಗದಿಸಿ ನುಡಿ ನೆಗ್ಗಿ ತನು ನಡುಗಿ . . . ಕಣ್ಣಲಿ ನುಂಗುವಂತಿರಲಗನಿಮಿಷಿಯನೀಕ್ಷಿಸುತ್ತಿಂತೆಂದನಾ ದಕ್ಷ (ನಿಘಾಗ. ೪-೪-೪) ; ಬಗ್ಗಿದ ತಲೆಯ . . . ನೆಗ್ಗಿದ ಧೈರ್ಯದ ನಿಜತನಯನ ಕಂಡು ಕುಗ್ಗಿದಳೆದೆಯೊಳು ಕುಂತಿ (ಕರ್ಣಪ್ರ. ೭-೩) ; ಅಂದವುಳ್ಳವನೆ ನಿನ್ನಧಟು ನೆಗ್ಗಿದವು (ಕಂಕ. ೮೩-೭). ೧೪. ಮುದುರಿಕೊಳ್ಳು ; ಸಂಕುಚಿಸು : ತಳಿತ ಚಿಂತೆಯ ಬಾಡಿದಾಸ್ಯದ . . . ನೆಗ್ಗಿದಂಗದ ನಟ್ಟ ದೃಷ್ಟಿಗಳ ಬಲಿದ ಭೀತಿಯ ಕುತ್ತುದಲೆಗಳಲಿಳೆಯ ಪತಿಗಳು ಸತಿಯ ಬಯ್ಯುತ ಮುಳಿಯುತಿರ್ದರು ತತ್ಕುಮಾರನಿಗಧಿಕ ರೋಷದಲಿ (ಜೀವಂಜ. ೯-೧೮) ; ನೆಗ್ಗಿದವಯವದ ಅಗಿಯುಲಲುಗುವ ತಲೆಯ ಮುಪ್ಪಿನ ಮುಗುದ ನೀತನ ಕಾದ ಹೇಳಿದು ನಗೆಯ ಸುರಿದೈ ರಾಯ ಕಟಕದೊಳೆಂದನಾ ದ್ರೋಣ (ಕುಮ್ವಾಭೀ. ೧-೩೫) ; ಶಿವನ ಮೆಲ್ಲಡಿ ಸೋಂಕಲೊಡನೆ ಕೌಂತೇಯ ನವಯುವವೆಲ್ಲ ನೆಗ್ಗಿ ಮೈಮಱೆದು ಚೇತರಿಸಿ ಕಣ್ದೆಱೆದು ನೋಡಿ (ಚಬಪು. ೫೩-೫೭). ೧೫. ಕಡಿಮೆಮಾಡು ; ತಗ್ಗಿಸು : ಬ್ರಿಟಿಷರ ಆಡಳಿತವು ಪ್ರಾರಂಭವಾದ ಮೇಲೆ ಗ್ರಾಮಪಂಚಾಯಿತಿಗಳ ಪ್ರಾಬಲ್ಯವನ್ನು ಆಗಲೇ ಸೂಚಿತವಾದಂತೆ – ನೆಗ್ಗಿದರು (ಕ್ರಿಯೂಶಿ. ೧೦೭) ; ಬನ್ನಿ ಕನ್ನಡ ನಾಡ ಗಡಿಮೂಲೆಯಿಂದ, ಹಳ್ಳಿಪಟ್ಟಣಗಳಿಂದ, ಸುಗ್ಗಿಗಾಳಿಗೆ ಹಿಗ್ಗಿ ಬೆಳ್ಗೊಡೆಗಳನ್ನು ನೆಗ್ಗಿ ನುಗ್ಗಿ ಬಹ ಬೂರಲದ ಮಾಲೆಯಂದ (ನಡಬಂ. ೬೩-೮). ೧೬. ಇಲ್ಲವಾಗಿಸು ; ಇಲ್ಲದಂತೆ ಮಾಡು : ಮೃದ್ವಧುವಿತ್ತ ದಾಸೆಗಳ ನೆಗ್ಗಿದುದೆ ವೈರಾಗ್ಯವೆಂಬರು (ಗಗತಾ. ೦೬-೩೮). ೧೭. ಹಳ್ಳವಾಗಿಸು; ತಗ್ಗುಮಾಡು : ತುಳಿದರೆ ಭೂಮಿ ನೆಗ್ಗುವ ದಂತಿ ಹೊಸ ವಜ್ರ ಹಳಿವೆತ್ತ ರಥವಾಜಿನಿಚಯ ತಳಿತ ಕೋರಿತದ ಪೊಂಬೆಳಗಿನ ಭಟರು ಸಂದಳಿಸಿತು ಖಳರಾಯನೊಡನೆ (ಮೋಹತ. ೪೦-೬) ೧೮. ಬಾಗು ; ಬಗ್ಗು : ಮೊರೆದೆರಗುವ ಭೃಂಗಾವಳಿಯಡಿಯಿಂ ನೆಗ್ಗಿದ ಮಾವಿನ ಕೊನರಿದನೆ ಋತುಗೆ ಮಂಗಳಮೆಂಬೆಂ (ಶಾಕುಂತ. ೭೯-೧೩೩). ೧೯. ನಾಶಮಾಡು ; ಧ್ವಂಸಮಾಡು ; ಹಾಳುಮಾಡು : ಇಪ್ಪತ್ತೈದು ಸಾವಿರ ಚಾರ್ವಾಕರಂ ನೆಗ್ಗಲೊತ್ತಿ ಅಪ್ರತಿಮ ಶಿವಗಣಂಗಳ ಮಹಾತ್ಮ್ಯೆಯಂ ಮೆಱೆದಾತ ನಮ್ಮ ಬಸವಯ್ಯನು (ನೀಲವ. ೭-೯) ; ಮುಗ್ಗದಿರು ಮಾಯೆಯಲಿ ಮದದಲಿ ನೆಗ್ಗದಿರು . . . ಹಿಗ್ಗದಿರು ಹೊಗಳಿಕೆಗೆ ಮನದಲಿ ಪಾರ್ಥ ಕೇಳೆಂದ (ಕುಮ್ವಾಅ. ೪-೩೩); ದಾನವರ ಥಟ್ಟಣೆಯ ಕೀಲಣದಾ ನಗರಿಯನು ನೆಗ್ಗಿ [ಪಾಠಾಂ. ನುಂಗಿ] ದಂತಿರಲೀ ನಿಘಾತದ ಸೇನೆ ಮುಱಿದುದು ಭಟನ ಭಾರಣೆಗೆ (ಕುಮ್ವಾಕ. ೧೩-೧೩) : ಪೊಯ್ದಾಡಿ ರಿಪುಸೈನ್ಯಕಾನನವನು ನೆಗ್ಗಿದ ರ್ನೆಲೆಗೆಡಿಸಿ (ಜೈಮಿಭಾ. ೮-೩೩) ; ಆದು ಸಕಲ ಸಚರಾಚರವನು ನೆಗ್ಗುತ್ತ ಬರಲ್ಬೆದರಿಯಾಲೋಕ ಶಿವಶಿವಯೆಂದು ಮೊರೆಯಿಡಲ್ (ಚತುಪು. ೩-೩-೧೯) ; ಅವನನ್ನು ನೆಗ್ಗಬೇಕೆಂದು ದೃಢಸಂಕಲ್ಪ ಮಾಡಿದರು (ಪ್ರಮ.ಹ. ೪೮). ೨೦. ಒಡೆ ; ಮುರಿ : ಬಳಿಕ ಬಳೆಗಳನ್ನು ನೆಗ್ಗಿ ಹೆಣ್ಣುಡೆಯನ್ನು ತೊರೆದು (ಕಸಾಚಿ. ೯೦). ೨೧. ಪುಡಿಯಾಗು ; ಚೂರಾಗು: ಪಳುಕಿನಱೆ ನೆಗ್ಗಿದವು ವಜ್ರದ ಹಳಿಯ ಹೊಯ್ಲಿಗೆ (ತೊರರಾ. ೫-೭-೧೭) ; ತುಳಿದೊಡೆದ ಮಣ್ಣ ಕಪ್ಪರದಂತೆ ನೆಗ್ಗಿದುದು ಕೂರ್ಪರ ಖರ್ಪರಂ (ಚಬಪು. ೪೮-೫). ೨೨. ಮುರಿದು ಬೀಳು ; ಕತ್ತರಿಸಿಹೋಗು: ಸವಡಿಮರ ನೆಗ್ಗಿದುವು ಗಡ (ಕುಮ್ವಾಸ. ೦೦-೧೩) ; ಭರದ ಬವರದಲಚ್ಚು ನೆಗ್ಗಲು ಕರವ ಸಲಿಸಿಯೆ ತೇರ ನಡೆಸಿದಳರಸಿ (ಕಾಶಿರಾ. ೧-೨೬) ; ನೆಲೆಮಾಡಗಳು ನೆಗ್ಗಿದವು ಮಾಳಿಗೆಗಳಂದೊಲೆದವು . . . ರಿಪುಭವನದೊಳಾ ವಾಜಿ ಪೊಲಿದು ರಾಮಗೆ ಕೈಸೇರೆ (ಕುರಾಸಾಂ. ೯-೦೦೮). ೨೩. ಹಾಳಾಗು ; ನಾಶವಾಗು: ದ್ಯೂತಮೃಗಯಾವ್ಯಸನ ಪಾರ್ಥಿವಜಾತಿಗಿವು ದುರ್ವಿಷಯ ವಿದಱಲಿ ನೆಗ್ಗಿದರು ನಳ ದಶರಥಾದಿಗಳು (ಕುಮ್ವಾಸ. ೦೧-೧೮). ೨೪. ಕೊಲ್ಲು ; ಸಾಯಿಸು : ನೆಗ್ಗಿದನೊಂದು ಹಲಗೆಯಲೇಱಿದವರನು (ಕುಮ್ವಾಕ. ೧೫-೩೪). ೨೫. (?) : ಅಗ್ಗಳಿಯನೆಮ್ಮರಸ ಸಂಪ್ರತಿ ನೆಗ್ಗಿಕೆಟ್ಟರಿ ನೀವು ನಿಮಗೀ ಹುಗ್ಗಿಗರು ಹುರಿಗೂಡಿ ಗೆಲಿದಿನ್ನಿಳೆಯ ಕೊಡಿಸುವರೆ (ಕುಮ್ವಾಭೀ. ೧-೫೪). ನೆಗ್ರ್ : ೨. ಭೂಮಿ ದಳಭಾರಣೆಯಿಂ ನಸುನೆಗ್ರ್ ವೈರಿ ಮುಂಗೆಟ್ಟರೆ ಚಂಡವರ್ಮನರಪಂ ನಡೆಗೊಂಡನತೀವಕೋಪದಿಂ (ದಶಕು. ೭-೬೭) ; ದುರ್ಗದಿಂ ಕಂಪಿಲನೃಪತಿ ನಿರ್ಗಮಿಸಿದನು ಭೂಮಿಗೆ ಬಲಭಾರದಿಂ ನೆರ್ಗೆ ಪೆಡೆಗಳು ಫಣಿಪನ (ಕುರಾಸಾಂ. ೨೭-೫೩). ೧೯. ಕೆತ್ತು ಪೊಡೆ ಸೀಳ್ಕಡಿ ಖಂಡಿಸು ನೆರ್ಗು ನುರ್ಗು ಕೊಯ್ ಕೊಱೆ ಮುಱಿಯೆಂದು ನಿನ್ನ ಭಟರಡ್ಡರಿಸಲ್ (ಅಪ್ರತಿ. ೨೬-೨೦) ; ಪುರದಿಂದಂ ಪೊಱಮಟ್ಟು ಪೊಕ್ಕುದಱಮಂ ನೆರ್ಗುತ್ತೆ ನುರ್ಗುತ್ತೆಯೊತ್ತರದೊಳ್ ಮತ್ತಿದಿರಾಗೆ ಮೂಗಱಿದು (ಚಿಕವಿ. ೫-೨೩) ; ೨೬. ಬಗ್ಗಿಸು ; ಜಗ್ಗು : ನೆಗಟ್ದುದ್ದಂಡದ ಪುಷ್ಪಕಾಂಡನಲರಂಬಂ ನೆರ್ಗಿ ಕೋದಂಡಮಂ ತೆಗೆದಾರ್ಪಿಂ ಮುಳಿದಿಕ್ಕಿ (ಧರ್ಮನಾ. ೧-೫). ನೆಳ್ಗು : ೧೧. ಸುಳ್ಗಿದ ಪಲ್ಗಳಿಂದೊಡೆದ ಮಂಡೆಗಳಿಂ ಮುಱಿದಿರ್ದ ಕಾಲ್ಗಳಿಂ ನೆಳ್ಗಿದ ಬಾಯ್ಗಳಿಂ . . . ಬಂದೆಱಗಿ ಕೀರ್ತಿಸುತಿರ್ದುದು ದೇವಸಂಕುಳಂ (ವೀರವಿ. ೧೩-೧೧೦). ೧೩. "ನವೆ, ಸವೆ, ತವಿ (ತವು), ಸೊರಗು, ಕೊರಗು, ನೆಳ್ಗು (ನೆಗ್ಗು)" (ಕಂನುಹು. ೮೬). △ ನೆಟ್ಗು : ೩. "ನೆಟ್ಗು [ಪಾಠಾಂ. ನೆರ್ಗು] ಅಂತರ್ಲೀನೇ (ಅಡಗಿ ಹೋಗು)" (ಶಮಧಾ) ; ಮೂಗು ನೆಟ್ಗಿ ಬಿಣ್ಸರೆಯೊಡೆದುರ್ಕಿ ಪಾಯ್ದು ಪೊನಲಿಟ್ಟುದು ಮಲ್ಲನ ನೆತ್ತರೆತ್ತಲುಂ (ಚಿಕವಿ.೪-೧೪೩).

ನೆಗ್ಗುನೆಗ್ಗು (ದ್ವಿರುಕ್ತಿ): ಅಗ್ಗಳೆಯೆಳೆತನದಿ ನಿಜದ ಹಗ್ಗದಿಂದ ಬಿಗಿದು ಕಟ್ಟಿ ನೆಗ್ಗಿನೆಗ್ಗಿ ಮಱವೆ ಜಡವ ನುಗ್ಗುಮಾಡಿ ಓಡಿಸುವೆನು (ಶಿವಗೀ.೭೯೪). 'ನುಱುಂಗು', 'ನೊರಕು' ಪರಾ.

[ ದೇ.॥ ತಮಿ. ನಱುಕ್ಕು, ನರುಕ್ಕು, ನೆರುಕ್ಕು ; ಮಲ. ನಱುಕ್ಕು, ಞೆರುಣ್ಣು ; ತುಳು. ನಗ್ರ್ ; ತೆಲ. ನಱುಕು, ನಱಕು, ನಕ್ರು; ಪರ್ಜಿ. ಗಡಬ. ನೆನ್ಸ್ ]

**ನಱುಂಬು** (ಕ್ರಿ). ಒತ್ತು ; ಇರುಕಿಸು : ರಸೆಯೊಳ್ ಕಾರೆಸೆಗೊಂಡವೊಲ್ ತಳಮಳಂ[ತಿ]ರ್ಪನ್ನೆಗಂ ತುಂಗಕೂಟಸಹಸ್ರಂ ದಿವಮಂ ನಱುಂಬಿದವೊಲಂತಿರ್ಪನ್ನೆಗಂ ಸುತ್ತಲುಂ ದೆಸೆಗಳ್ ಪೊಂಗಳಸಂಗಳಿಂ ತೊಳಗುಗುಂ ತೋರ್ಪನ್ನೆಗಂ ಮಾಡೆ ಮಾಡಿಸಿದಂ ಚೈತ್ಯನಿಕೇತನಾವಳಿಗಳಂ ತನ್ಮಾಳವಾಧೀಶ್ವರಂ (ವರ್ಧಮಾ. ೭-೫೮). 'ನಱುಂಕು' ಪರಾ. [ ? ]

**ನಱುಕು** 'ನಱುಂಕು' ನೋ.

**ನಱುಗಂಪು, ನರುಗಂಪು** (ನಾ). ಒಳ್ಳೆಯ ವಾಸನೆ; ಸುವಾಸನೆ; ಪರಿಮಳ: ನೆಱೆದಾತನ ಪುಣ್ಯಮೆ ಕಣ್ದೆಱೆದಂತಿರೆ ತೆಱೆದುವಾ ವಿಮಾನದ ಪಡಿಗಳ್ ನಱುಗಂಪು ಪೊಣ್ಮೆ ಸಗ್ಗದ ಮಿಱುಪಿನಿಯರ ಮನಮುಮೊಡನೆ ಪಡಿದೆಱೆವಿನೆಗಂ (ಚಂದ್ರಪು. ೪-೬೩) ; ಮುಗುಳ್ಗಳ ಮಾಲೆ ಸುಯ್ಯ ನಱುಗಂಪಿನೊಳಿರ್ಪಡಿ ಗಮ್ಮನಾಗೆ . . . ಕಾಮಿಗಳ ಮನಂಗಳೊಳ್ ಗಡಣದಿಂದಲಗಟ್ಟುವುದಂಗನಾಜನಂ (ವರ್ಧಪು. ೧-೬೪) ; ಅರ್ಕಮಂಡಲಮಂ ಕಂಡ ಮರಾಳನಂತೆ ನಱುಗಂಪಂ ಕಂಡ ಮಱಿದುಂಬಿಯಂತೆ (ಉದ್ಭಟ. ೧೧-೫೫ ವ); ಕಣ್ಮಲರ್ಗೆ ಕಡುರಯ್ಯಮಾಗಿ ನಱಗಂಪು ನೆಱಪೊಣ್ಮಲರೆವಿರಿದ ಪೊಂದಾವರೆಯ ಬಂಡನುಂಡುಣ್ಮುವಾನಂದದಿಂ ಮೈಮಱೆದು ಜಿನುಗುವಾಱಡಿವಱಿಯ ಲೀಲೆಯಂತೆ (ಪದ್ಮರಾ. ೧-೪೦) ; ನಱುಗಂಪನೆಣ್ಟಸೆಗೆ ಬೀಱುವಲರ್ವಂಡುಣ್ಬ ಪಱಿವೆಗಳು (ಭಾವಚಿಂ. ೭-೨೦); ಕಿಱುಜವ್ವನದ ಬಾಲೆಯರ್ . . . ಸುಯ್ಯೆಲರ ನಱುಗಂಪನೂಡಿ, ತಣ್ಣೀರಂ ಬಿದುಗಲ್ಗಂದಲೊಳೊಸರ್ವ ಪನಿನೀರೆನೆ ನೀರಡಿಸಿದರ್ಗೆಱೆದಪರ್ (ರಾಮಾಶ್ವ. ೯-೧೬). **ನರುಗಂಪು** : ಅರೆವಿರಿದ ಕುಸುಮ ನರುಗಂಪಿನಿಂ ಯಿಂಪಿನಿಂ ತಣ್ಣೆಳಲ ತಂಪಿನಿಂದೆ . . . ಇಂತೊಪ್ಪುವಾ ಬನ (ನವಮೋ. ೮-೨೮) ; ದಿನದಿನದ ಬೆಳಗು ಹೊಂಗಿರಣದ

ಕಿರೀಟ ನೂರುಬಣ್ಣದ ಹೂವ ನರುಗಂಪನೊಮ್ಮೆಲೇ ಚಿಮ್ಮಿಸುವ ತೋಟ (ನೆಲಮು. ೫-೯); ಹೂಗಳು ನರುಗಂಪು ಸೂಸುತ್ತಿವೆ (ಧರ್ಮಸಾ. ೭); ನರುಗಂಪು ಬೀರುತ್ತಿರುವ ನವಕುಸುಮ (ಸುವಸಂ. ೧೬).

[ ನಱು + ಕಂಪು ]

**ನಱುಗಂಪುವೊರೆ** (ಕ್ರಿ). ಸುವಾಸನೆಯಿಂದ ಕೂಡಿರು ; ಸುಗಂಧವನ್ನು ಹೊಂದಿರು : ತುಱುಗಿದ ತಾರಾಪುಂಜದ ಮಿಱುಗುತಿರ್ದಪ್ಪುದೊ ಪಕ್ಷಿವಾದ್ರೀಂದ್ರಮೆನಲ್ ನಱುಗಂಪುವೊರೆದ ಜಾದಿಯ ತುಱುಱು ಕಣ್ಗೊಳಿಸೆ ಶೂದ್ರಕಂ ಕರಮೆಸೆದಂ (ಕಾದಂಪೂ. ೩೨).

[ ನಱುಗಂಪು + ಪೊರೆ₂ ]

**ನಱುಗಬ್ಬು** (ನಾ). ರಸವತ್ತಾದ ಕಬ್ಬು,-ಇಕ್ಷು : ನಱುಗಬ್ಬಿನೊಳಗಣ ರಸವ ಕಾಣದೆ ಪಶು ಹೊಱಗಣೆಲೆಯ ಸವಿವಂತೆ ಅಱಿದೊಳಗಾತ್ಮಸುಖ ವನುಣಲಱಿಯದೆ ಹೊಱಗೆಳಸುವರಂಗಸುಖಕೆ (ಭರಜ. ೧-೧೦೫).

[ ನಱು + ಕಬ್ಬು₂ (<ಕರ್ವು₁) ]

**ನಱುಗೋಲ** (ನಾ). ೧. ಪುಷ್ಪಬಾಣವನ್ನು ಉಳ್ಳವನು ; ಕಾಮ ; ಮನ್ಮಥ : ನಱುಗೋಲನೊಲಿದು ತನ್ನಖಿಲರಾಣಿಯರೊಡವರಸಿ ಬಿನದವ ಮಾಳ್ಪವೊಲು ಸರಸಸಲ್ಲಾಪವಿನೋದದೀದರಸ ತನ್ನರಸಿಯರೊಡನಿರುತಿರಲು (ನಾಗಕು. ೩೨-೬೪). ೨. [ಜೈನ] ಬಾಹುಬಲಿ : ನಱುಗೋಲನೊತ್ತಿಂದ ದಕ್ಷಿಣಗಿದಿರಾಗಿ ಮಱಿಯರೆಳಗೆಳೋಡಿ ಬಂದು ದುಱುಮುಱನೀಕ್ಷಿಸಿ ಹೊಸ ಗವಲಿಗೆ ಬೆಚ್ಚಿ ಬಿರಿತೋಡಿದುವು ಕಂಡ ಕಡೆಗೆ (ಭರಜ. ೪೭-೬೨) ; ಒಱಗು ಮೂಡೆಯು ನೆಮ್ಮಿ ಕುಳಿತನು ಚಕ್ರೇಶ ನಱುಗೋಲ ನಿಲೆ ಬಿಸಿಲಲ್ಲಿ ಮಱಿಸನ್ನೆಗೈದು ಸತ್ತಿಗೆವಿಡಿಸಿದನೇನು ಮಱುಕವೊ ತಮ್ಮನ ಮೇಲೆ (ಭರಜ. ೫೦-೧೨೯). [ ನಱುಗೋಲು + - ಅ₇ ]

**ನಱುಗೋಲು** (ನಾ). ಪುಷ್ಪಬಾಣ : ನಱುಗೋಲ ತುಱುಗೆವೆದುಂಬಿದಿರುವ ಹೊಡಿಯುಱುವ ಕಬ್ಬಿನ ಬಿಲ್ಲುಗಳನು (ಚಂಪ್ರಸಾಂ. ೩೩-೬೨).

[ ನಱು + ಕೋಲು₁ (<ಕೋಲ್₁) ]

**ನಱುಜವ್ವನ, ನಱುಜೌವನ** (ನಾ). ಪೂರ್ಣಯೌವನ ; ತುಂಬಿದ ಹರಯ: ಈ ಸಿರಿಯಿಾ ನಱುಜವ್ವನಮಿಾ ಸುಭಗತೆಯಿಾ ವಿಳಾಸಮಿಾ ಸಕಳಕಳಾಭ್ಯಾಸಂ ಸುತನಂ ಪಡೆಯದ ದೂಸಱಿನಿನಿತುಂ ನಿರರ್ಥಮಲ್ತೆ ಮೃಗಾಕ್ಷಿ (ವೃಷವಿ. ೨-೩೪). **ನಱುಜೌವನ :** ಅಂತೃದಿದ ನಱುಜೌವನದ ಸಿರಿಯಂ ಮೃಸಿರಿ ಯೊಡನೆ ಕೇಳಿಯಿಂ ಕೆಳೆಗೊಳಿಸಿ . . . ನರೇಂದ್ರಸೂನು ತಳೆದಂ ತಾರುಣ್ಯ ಲಾವಣ್ಯಮಂ (ರಾಜಶೇ. ೪-೧೦೬ ವ). [ ನಱು + ಜವ್ವನ ]

**ನಱುಜೌವನ** 'ನಱುಜವ್ವನ' ನೋ.

**ನಱುದಂಬುಲ** (ನಾ). ಸುಗಂಧಭರಿತವಾದ ತಾಂಬೂಲ ; ಪರಿಮಳ ಯುಕ್ತವಾದ ತಾಂಬೂಲ : ಬಾಯೊಳೆ ಬಾಯನಿಟ್ಟು ನಱುದಂಬುಲ ಮಿಕ್ಕುವ ಮುಗ್ಧೆಯೊಂದುವೊಟ್ಟಾಯತದಿಂದಮಾನಱಿದೆನಾಕೆಯ ವಲ್ಲಭ ನಾತನೆಂಬುದಂ (ಲೀಲಾವ. ೨-೯೨) ; ವೊಱೆಯನುಳಿದ ಮೆಲ್ನುಡಿ ಮೊನೆ ಮಸೆವಕ್ಕಱು ಬಾಯ್ದೆಱೆಗೆಡೆವಿಡದೆಡೆಯಾಡುವ ನಱುದಂಬುಲ . . . ನೆಱೆ ಸೊಗಯಿಸಿದುವು ನವಸುರತಕ್ರೀಡೆಯೊಳಾ ದಂಪತಿಗೆ (ಜಯಕಾ. ೮-೫೫) ; ಸಸಿಯುದಯಂ ಮುಗಿಲ್ಮೊಟಗು . . . ನಱುದಂಬುಲಂ ಸುಗೀತಸರಸ ದೂತಿವಾಕ್ಪ್ರಭೃತಿ ಮುಂ ಪೆಸರ್ಗೊಂಡ ತಟಸ್ಥಮಲ್ಲದೇ (ರಸರ. ೧-೩೭) ; ಅತ್ತಮಿತ್ತ ಚೆಲ್ವಿಂಗೆಡೆಯಾಗಿ ಸೂಸಿದಲರುಂ ನಱುದಂಬುಲಮುಂ ಮೃಗೋದ್ಭವಂ ಸಂಗಳಿಸಿರ್ದ ಕುಂಕುಮಪರಾಗಮುಮಾರ್ದೆಱಪುಷ್ಪ ದಾಳಿಯಂ ಪಿಂಗದೆ ದೇವದಂಪತಿಯ ಕೂಟಮನೇಂ ಪಿಸುಣಾಡಲಾರ್ತವೋ (ಶಬಶಂ. ೦-೫೦) ; ಈವುಪಚಾರದಿನಾತನ ವಸಿವುಂ ಬಟಲ್ಕೆಯುಂ ಮುಡಿಯೆ ಕೆಳದಿ ನಱುದಂಬುಲಮುಂ ಸವಿಯಲ್ಕೆಂದು ಮಡಿದೀಯುತುಮಿರೆ (ರಾಮಾಶ್ವ. ೪-೧೨). [ ನಱು + ತಂಬುಲ ]

**ನಱುನಾಣು** (ನಾ). ಆಕರ್ಷಕವಾದ ಲಜ್ಜೆ ; ಮೋಹಕವಾದ ನಾಚಿಕೆ : ನಸುನಗೆ ನಱುನಾಣು ನೆಲೆವೊಲೆ ನಳಿತೋಳು ಮಿಸುಪ ಕಣ್ಣೆಗಹಿದ ಕಳಸ ಪೊಸದೇಸಿಪಡೆಯೆ ನೀರೆಱೆವ ನೀಱೆಯರು ಕಣ್ಗೆಸೆದಿಹರಲ್ಲಿ ಪಥಿಕರ (ಕುರಾಸಾಂ. ೨-೪೨). [ ನಱು + ನಾಣು₁ (<ನಾಣ್₁) ]

**ನಱುನೆಯ್**, ನರುನೆಯ್ಯಿ (ನಾ). ಸುವಾಸನೆಯಿಂದ ಕೂಡಿದ ತುಪ್ಪ ; ಪರಿಮಳಭರಿತವಾದ ಘೃತ : ಕುಱಿಯುಂ ಕಳ್ಳಂ ಕೂಟಂ ನಱುನೆಯ್ಯುಂ ಬೇಡಿ ತಿಂಬ ಪಿರುತಿನಿ ಬರವಂ ಪೆಱರ್ಗೆ ಕುಡಲಱಿಯಳೆಂಬುದನಱಿಯದ ಪಶು ಮನುಜನಲ್ಲ ಕುಱಿಗಳ ಭಾವಂ (ಸಮುಪ. ೯-೧೧೧) ; ನಾಯ್ಗೆ ನಱುನೆಯ್ಯಕ್ಕದೆಂಬಂತೆನ್ನ ಪೇಟ್ವ ಧರ್ಮಶ್ರವಣಮನೊಲ್ಲದೆ ಸುದಂತಿಯನೆ ಮನದೆಗೊಳ್ಳಿನೆಯುತಿರ್ಪ (ಧರ್ಮಾಮೃ. ೭-೨೨೭ ವ) ; ನಱುನೆಯ್ಯಾಱದ ಸಿರಿಯುಂ ಮೆಱೆಯಲೆ ಪೊಂಗಳನೆ ಗೋಪಿಯರ್ ಕಿದಱಿದವೋಲ್ ತಾಱಾವೆಯ ನೆಗ್ಗಿಲ ಪೂಗಳ್ ತುಱುಪಟ್ಟಿಯ ಪೊಱಗೆ ತುಱುಗಿ ಕರಮೆಸೆ ದಿರ್ಕುಂ (ಲೀಲಾವ. ೫-೯೯) ; ಪೊಸಸಕ್ಕರೆಯಂ ನವಮಧುರಸಮಂ ನಱು ನೆಯ್ಯನೆಸೆವ ಕದಳೀಫಲಮಂ ರಸನೆಯುಳಸಿದುದನೆನ್ನೋಳ್ಸಿಸೀಗಳೆ ನಿನಗೆ ತಂದಪೇಂ ಶಶಿಮೌಳಿ (ವೃಷವಿ. ೯-೭೭) ; ನಱುನೆಯ್ಯಂ ಪಾಲನುಣುತೆ ಬಾಟ್ಟರೊಳಧವರ್ ತುಱುಗಿದ ಕಱುಂಬಿನಿಂದಂ ಪೊಱಸಲ್ ಪಾರ್ದಿರ್ಪರ ಕ್ಕಟಲ್ಲದ ದೂಱಂ (ನೀತಿವಂ. II, ೩೭೯). **ನರುನೆಯ್ಯಿ :** ನರುನೆಯ್ಯಿ, ಬಾಳೆಹಣ್ಣು . . . ಇವೆಲ್ಲ ಇವೆ ನಮ್ಮ ಮನೆಯಲ್ಲಿ (ಕಸಾಚ. ೧೧೬).

[ ನಱು + ನೆಯ್₂ ]

**ನಱುಮುಡಿ** (ನಾ). ಸುವಾಸನೆಯಿಂದ ಕೂಡಿದ ಮುಡಿ ; ಪರಿಮಳ ಯುಕ್ತವಾದ ಕೇಶ : ನಱುಮುಡಿಗೆ ಮುಡಿವೆನು ಕುಸುಮಮಾಲೆಯನು (ಸಾಳ್ವಭಾ. ೧೧-೩೫). [ ನಱು + ಮುಡಿ₂ ]

**ನಱುವಂಜಿ**, ನರುವಂಜಿ (ನಾ). ಒಂದು ಬಗೆಯ ಹುಲ್ಲು : "ಶಂಖಿನೀ, ಚೋರಪುಷ್ಪೀ, ಕೇಶಿನೀ, ಹಗಱ = ನಱುವಂಜಿ" (ನಾಚಿರಾ. ೬) ; ನಱು ವಂಜಿ [ಪಾಠಾಂ. ನಱುವಲ್ಲಿ] ನೆಲಾ[ ವಲ್ಲಿಲಾ ]ವರೆಗಳ್ ತುಱುಱಿಯ ಕರಿಯುಂ ಜಲಾನ್ವಿತಂ ಪೂಸುಗೆ ಮೇಣ್ ಪಱಿಗುಂ ಪಂಕದ ಲೇಪದಿನಱಿ ನಸುಗುನ್ನಿಯ ವಿಷಂ ಭಿಷಗ್ವರಮತದಿಂ (ಖಮದ. ೨-೯೯) ; ಮೂತ್ರ ರೋಗಕ್ಕೆ . . . ನರು[ ಱು ]ವಂಜಿ, ಕಳ್ಳಂಗಡಲೆ ಇವಂ ಅರೆದು ಬಹಿಗೆ ಪೂಸಿಳಿಯ ತೊಡೆಯುವುದು (ವಿವೈವಿ. ೧೫೨) ; ನಱುವಂಜಿಯ ಬೇರು, ನೆಲಾವರೆಯ ಬೇರು, ಬಳ್ಳಿದುಱುಚಿಯ ಬೇರು ಇವಿಷ್ಟನು ಸುಟ್ಟು ಕರಿಯ ಮಾಡಿ ನೀರಲ್ಲಿ ಅರೆದು ಪೂಸಲು ನಸುಗುನ್ನಿಯ ವಿಷ ಶಮನವಹುದು (ವೈದ್ಯಸಾ. II, ೨೩೪). **ನರುವಂಜಿ :** "ಅಲಕ್ಷ್ಮಿ-ನರುವಂಜಿ" (ಅಕಾನಿ. ೨-೦೬). [ ? ]

**ನಱುವಂಡು** (ನಾ). ಸುವಾಸನೆಯಿಂದ ಕೂಡಿದ ಬಂಡು,-ಮಧು : ಸೊಪ್ಪುಸೊವಡಾಗದೆಸಱಿಸಟ್ಟಿಪ್ಪದೆ ಮೊಗಮಿಱಿದು ಕಾರ್ದು ಚಪ್ಪಲರ್ವಿನೆಗಂ ಸಿಪ್ಪಿಟ್ಟು ಕಱಿದು ಕೊಂಡುವು ಸಪ್ಪದಮುಪ್ಪಳದಿನೊಱೆವ ನಱುವಂಡುಗಳಂ (ಲೀಲಾವ. ೯-೮೭). [ ನಱು + ಬಂಡು₂ ]

**ನಱುವಲ್**, ನರವಲು, ನರುವಲ, ನರುವಲು, ನರ್ವಲ್, ನಱುವಲ, ನಱುವಲು (ನಾ). ೧. ಒಂದು ಬಗೆಯ ಮರ; ನೆಲ್ಲಿಗಿಡದಲ್ಲಿ ಒಂದು ಬಗೆ : "ಅಗ್ನಿಮಂಥನ ನಱುವಲ್" (ವಸ್ತುಕೋ. ೩೭-೨೭) ; "ಅಗ್ನಿ ಮಂಥವೆನೆ ನರು[ ಱು ]ವಲೆನಿಸಿಕ್ಕು" (ಮಂಗರಾ. ೩೬-೧೬); ಲವಣಂ ನಱುವಲಬೇರ್ ಗುಳ್ಳವದಣೆ ಬರಿವದಣೆ ಲೊಕ್ಕಿ ಕಿಱುಮೆಕ್ಕೆಗಳಂ ಬಿವನಱಿದು ತಕ್ರದೊಳ್ ಪೂಸುವುದು (ಲೋಕೋಪ. ೯-೦೯೭) ; ನಱುವಲ್ ಮಗ್ಗಾರೆಯ ಕಾಯ್ . . . ಇವನಱಿಯಲ್ ಜಲದಿಂದೆ ಘಣಿಯ ವಿಷ ನಿರ್ಹರಣಂ (ಖಮದ. ೫-೧೦೪) ; ಬರಿವದಣೆ ಸುಣ್ಣಗಂದಿಗೆ ನಱುವಲ್‌ಗುಳ್ಳಂ ಮಣಿಸಿಬೆ ಸೀವನ್ನಿ (ಅಶ್ವಶಾ. ೧೧-೭೦). ೨. ಸೀಗೆಮರ :

**ನರವಲು :** (೬). **ನರುವಲ :** ೧. ನೆಲಬೇವು, ಭದ್ರಮುಸ್ತೆ, ಅಮರದವಳ್ಳಿ, ನರುವಲದ ಬೇರು . . . ಶುಂಠಿ ಇವುಗಳ ಕಷಾಯವಿಕ್ಕಿ ಸೇವಿಸಿದರೆ ವಾತಜ್ವರಂ ಕೆಡುಗುಂ (ಸಕವೈ. ೬೫); ನರುವಲದ ಸೊಪ್ಪು, ಪುಳ್ಳಂಪುರಚಿ, ಒಂದೆಲಗ . . . ಈರುಳ್ಳಿ ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕವೈ. ೧೦೩). **ನರುವಲು :** "ಚಾನಲ-ನರುವಲು" (ಅಕಾನಿ. ೧೦-೨೩). **ನರ್ವಲ್ :** ೧. (ನಾಚಿರಾ. ೬). **ನಱುವಲ :** ೧. "ಅರಿಣಿಕೇತುಃ – ನಱುವಲ" (ಒಷಧಿ. ೯). **ನಱುವಲು :** ೧. "ಶ್ರೀಪರ್ಣಂ, ಅಗ್ನಿಮಂಥಃ ಕಣಿಕಾ, ಗಣಿಕಾರಿಕಾ, ಜಯಃ – ಈ ೫ ನಱುವಲು" (ನಾಚಿರಾ. ೧೦೪) ; ೩. ಒಂದು ಬಗೆಯ ಸೊಪ್ಪು : ಕೀರೆ ನಱುವಲು ಚಕ್ಕವತ್ತ ಸೊಲೆ ಸಬ್ಬಸಿಗೆ ಮೊದಲಾದ ಸೊಪ್ಪುಗಳ ಬೇಱಿಬೇಱುಕ್ಕರಿಸಿ (ಸೂಪಶಾ. ೪-೧೬) ; ಹಾಲೆಯ ಸೊಪ್ಪು, ಚಕ್ಕೋತ, ಕೀರೆಸೊಪ್ಪು, ಕೆಂಪಿನ ಚಕ್ಕೊತ್ತ, ನರು[ಱು]ವಲ ಸೊಪ್ಪು . . . ಸೂರಣದ ಗೆಡ್ಡೆ– ಇವು ಜ್ವರ ಬಂದವರಿಗೆ ಪಥ್ಯ (ವೈದ್ಯಸಾ. I, ೫೫) ; ಬಜೆ, ಓಮು, ಔಡಲದ ಬೇರು, ನರು[ಱು]ವಲಬೇರು, ಹಿಪ್ಪಲಿ, ಚಿತ್ರಮೂಲ ಇವಿಷ್ಟನು ಸಮಾಂಶವಾಗಿ ಕೂಡಿಸಿ ನೀರಿಂದ ಅರೆದು ಕುಡಿಯ ಕೊಡಿಸಲು ಒಂಟೆಯ ವಿಷಗಳೆಲ್ಲವೂ ಪರಿಹರವಹವು (ವೈದ್ಯಸಾ. II, ೨೦೪). ೪. (?) : ನಱುವಲ ಮೊನೆಯಲ್ಲಿ ನಟ್ಟ ಕಲ್ (ಎಕ XIII, ೩೦-೩೮ : 1204). [ ದೇ.॥ ತುಳು. ನರುವೊಲು, ನರ್ವೊಲು ]

**ನಱುವಲ** 'ನಱುವಲ್' ನೋ.

**ನಱುವಲರು** (ನಾ). ಸುಗಂಧಯುಕ್ತವಾದ ಪುಷ್ಪ ; ಸುವಾಸನೆಯ ಹೂವು : ತರುಣಿ . . . ಶಿವನಿರ್ಮಾಲ್ಯವೆನಿಪ ನಱುವಲರನೆಯ್ದೆ ಶಿರದೊಳ್ತುಱುಬಿ . . . ಶಿವವೇಷದಿಂ ತಣಿದು (ಪಾಸೋಪು. ೨-೩೦) : ನಱುವಲರುಗಳ ಪಿಡಿದು ಪುಷ್ಪಾಂಜಲಿಯನೆಸಗಿ . . . ಹರ್ಷದಿಂದಖಿಳ ಪುರಜನ ಪರಿಜನಂಗಳೆಲ್ಲಂ ತುಱುಗಿ ಬರುತಿರೆ (ಸಿದ್ಧೇಪು. ೧೯-೨೦).

[ ನಱು + ಅಲರು₂ (<ಅಲರ್₂) ]

**ನಱುವಲು** 'ನಱುವಲ್' ನೋ.

**ನಱುವೂವಲಿ** (ನಾ). ಸುವಾಸನೆಯ ಹೂವುಗಳನ್ನು ಹರಡುವಿಕೆ ; ಹೂವಿನ ಹಸೆ : ರಂಗವಲ್ಲಿಯಿಂದ್ಯೆದು ರನ್ನದ ರಂಗಿಸಿದ ಪುಡಿಗಳ ಚದುರಿನಿಂ ಪಿಂಗದಾ ನಱುವೂವಲಿಗಳಿಂ ಚಿನ್ನಬೆಳ್ಳಿಗಳಾ ತುಂಗಘಟದೊಳ್ಪೊಹಿಪ ಚೆಲ್ವದಶಾಂಗಮುಖ್ಯದ ನಱುವೊಗೆಗಳಿಂ ತೊಂಗಲಿಪ ಸುರಘಂಟೆಯಿಂ ಮೆಱೆವುದನರಸ ಕಂಡ (ಸಾಳ್ವಭಾ. ೪-೪೦). [ ನಱು + ಪೂವಲಿ ]

**ನಱುವೊಗೆ** (ನಾ). ಸುವಾಸನೆಯ ಹೊಗೆ ; ಧೂಪ : ಚಿನ್ನಬೆಳ್ಳಿಗಳಾ ತುಂಗಘಟದೊಳ್ಪೊಹಿಪ ಚೆಲ್ವದಶಾಂಗಮುಖ್ಯದ ನಱುವೊಗೆಗಳಿಂ ತೊಂಗಲಿಪ ಸುರಘಂಟೆಯಿಂ ಮೆಱೆವುದನರಸ ಕಂಡ (ಸಾಳ್ವಭಾ. ೪-೪೦).

[ ನಱು + ಪೊಗೆ₂ ]

**ನಱುಸುಯಿಲ್** (ನಾ). ಸುವಾಸನೆಯಿಂದ ಕೂಡಿದ ಉಸಿರು ; ಸುಗಂಧಪೂರಿತವಾದ ಶ್ವಾಸ : ಪೋಪ ಸಪ್ತಸಪ್ತಿಯ ವಿರಹಕ್ಕದಲ್ತು ಬಿಸುಸುಯಿಲ್ ಪುಸಿಸುಯ್ಯೆನೆ ಸುಯ್ದು ದಕ್ಷಿಣಾಶೆಯ ನಱುಸುಯ್ಯ ಗಾಳಿಯನೆ ಪೋಲ್ತುದು ಗಂಧವಹಂ ವಸಂತದೊಳ್ (ಶಾಂತಿಪು. ೭-೧೫೬) ; ನಱುಸುಯ್ಲಿಂ ಮಾಲೆಗಂ ಸೂಱೆವೆದೆಗುವಿನಂ ತುಂಬಿಗಳ್ ನೋಡಿದರ್ವರ್ಮೆಯ್ಮಱವನ್ನಂ (ಪಂರಾಮಾ. ೧-೧೨೦) ; ಭರದಿಂದಂ ನವಕುಸುಮಾಭರಣಂಗಳನಭವನಂಗದೊಳ್ ಸಿಂಗರಿಸುತ್ತರಳುತ್ತುರ್ಬುತೆ ಕೊರ್ಬುತೆ ಗಿರಿಸುತೆ ನಱುಸುಯ್ಯ ಧೂಪಮಂ ಪದೆದಿತ್ತಳ್ (ಗಿರಿಕ. ೫-೮೩) ; ಮಗಮಗಿಸುತ್ತುಮಿರ್ಪ ನಱುಸುಯಿಲ್ ಪೊಸಪೂಗಳ ಕಂಪನೆತ್ತೆ . . . ಸುತ್ತಲುಂ ಸೊಗಯಿಸುತಿರ್ಪ ಬಾಸಿಗಮನೆತ್ತು ವರಗ್ಗದ ಮಾಲೆಗಾರ್ತಿಯರ್ (ಕಬ್ಬಿಕಾ. ೪೦) ; ಮಾಲೆಗಟ್ಟುತೆ ನೋಟಕರ ಕಣ್ ಮಾಲೆಗಟ್ಟುವರೊರ್ಮೆ ತುಂಬಿಯ ಮಾಲೆಮಾಲೆಯ ಕಾಣಗುಡದಿರೆ ತಮ್ಮ ನಱುಸುಯ್ಯಾ ಮಾಲೆಮಾಲೆಯ ತೋಱಿ ಕಟ್ಟಿದ ಮಾಲೆಯನೆ ವಿಟನಾಲೆಗತಿಸಲ್ಲೀಲೆಯಿಂ ಮಾಱುವರದಲ್ಲಿಯ ಮಾಲೆಗಾರ್ತಿಯರು (ಸಾಳ್ವಭಾ. ೨-೧೩). [ ನಱು + ಸುಯಿಲ್₂ ]

**ನಱುಸುಯ್ಯೆಲರ್** (ನಾ). ಸುವಾಸನೆಯಿಂದ ಕೂಡಿದ ಉಸಿರಿನ ಗಾಳಿ; ಒಳ್ಳೆಯ ಕಂಪುಳ್ಳ ಶ್ವಾಸವಾಯು: ನಱುಸುಯ್ಯೆಲರ್ಗೆಱಗುವ ಮಱಿದುಂಬಿಗಳಂ ಸೆಱಂಗಿನಿಂ ಸೋವುತುಮಾ ತೆಱದೊಳೆ ಯುವರಾಜನನಟ್ಟುಂದಡಿಗಡಿಗೆ ಕಾಂತೆ ಕರೆವಂತಿರ್ದಳ್ (ಕಾದಂಉ. ೧೨೯) ; ಎಲೆ ತೀಡುವ ತೆಂಗಾಳಿಯೆ ನಲವಿಂ ಕಾಲ್ವಿಡಿದು ತಿಳಿಪಿ ತಳ್ವಿಲ್ಲದೆ ಕಾದಲನಂ ತಂದೊಡೆ ನಱುಸುಯ್ಯೆಲರಿಂದಂ ನಿನ್ನನಾಗಳುಂ ನೆಱಿ ಪೊರೆವೆಂ (ಕಬ್ಬಿಕಾ. ೭೦) ; ಕುರುಳೊಳ್ಪೀವಿದ ಕತ್ತುರಿಯ ರಜಂ ಮೊಗರಸದೊಳುದಿರ್ದು ನಱುಸುಯ್ಯೆಲರಿಂ ಪರೆದು ತೆರೆಮುಸಗಿ ನಿಂದುತಿರೆ ಕೊಂಕಿಂ ಭ್ರೂಯುಗಂ ವಿರಾಜಿಪುದವಳಾ (ರಾಜಶೇ. ೭-೫೬). [ ನಱುಸುಯ್ + ಎಲರ್ ]

**ನಱುಸುಯ್ಯು** (ನಾ). = ನಱುಸುಯಿಲ್ : ನಱುಸುಯ್ಯು[ಪಾಠಾಂ. ಯ್ಯ] ಗಾಳಿಗೆ ತೇಲ್ವ ದುಕೂಲದ ಸೆಱಗು ಸೇರುವೆ ದೊರೆ ಹೊದೆದು ತೆಱಪಿನೆದೆಯ ಹೊನ್ನ ಜನ್ನಿವಾರದ ರೆಪಿ ಮೆಱೆಯೆ ರಾಜೇಂದ್ರ ಮೆಱೆದನು (ಭರಜ. ೧-೩೩). [ ನಱು + ಸುಯ್ಯು ]

**ನಱುಹರೆಯ** (ನಾ). ತುಂಬಿದ ಪ್ರಾಯ ; ಪೂರ್ಣಯೌವನ : ಹಿಂದಣುಗರಿಲ್ಲದಾಯುಸವಟ್ಟು ಗುರುಕರುಣದಿಂದೆನ್ನ ಪೆತ್ತು ಬಾಲ್ಯದ ಮುದ್ದು ನಱು[ಪಾಠಾಂ. ಡು] ಹರೆಯದಿಂದೆಸೆವ ಸಿರಿಯ ನಡೆನೋಡಿ ದಣ್ಣನೆ ದಣಿವ ಕಾಲದೆಳು ನುಡಿದಪ್ಪಿಗೆ ತಂದೆ ತಾನೇ ಕೊರಲ್ಗೊಯಿಸಿದಪನು (ಭಾವಚಿಂ. ೯-೧೫) ; ಪುಟ್ಟ ಲಾವಣ್ಯಲತೆ ಬೆಳೆವಂತೆ ನಱುಹರೆಯವಿಟ್ಟಣಿಸಿ ದಿನದಿನಕೆ ಬಳೆದು ಮಿಗೆ ಸಂತಸಂಬಟ್ಟು (ಕೊಟ್ಟೂಬ. ೪-೧೧೩).

[ ನಱು + ಹರೆಯ (<ಪರಯ) ]

**ನಱಿ**[3] (ನಾ). ಒಗ್ಗರಣೆ. 'ನಱಿಗೊಡು' ಪರಾ.

**ನಱಿಯಂ ಕೊಡು, ನಱಿಯ ಕೊಡು** = ನಱಿಗೊಡು : ಪುಡಿಯಮಂ ಮಾಡಿ . . . ಹುರುಳಿಯ ಹಾಲಿನೊಳಗಿಳಿಯಬಿಡುತ ಪೊಗ್ಗರಿಸಿ ನರೆ[ಱಿ]ಯಂ ಕೊಟ್ಟು ನಸುಹುಳಿಯನಿಕ್ಕಿ ಪರಿಮಳವಿಡುವುದು (ಸೂಪಶಾ. ೫-೩೦); ಮೆತ್ತನುಕ್ಕರಿಸಿಕೊಂಡೆಳೆಯ ಕಳಿಲೆಯ ಕುಡಿಯನು ... ಪೊಡ್ಡಣಿಗೆಯಿತ್ತು ನರೆ[ಱಿ]ಯಂ ಕೊಟ್ಟು ಪರಿಮಳವನಿಕ್ಕಲದು ಚುಚ್ಚುಗಳಿಲೆ[ವೆಸರು] (ಸೂಪಶಾ. ೬-೨); ಹಸಿಯ ಕರಿಬೇವು ಕೊತ್ತುಂಬರಿಯನಿಕ್ಕಿ ತಾಳಿಸಿ ನರೆ[ಱಿ]ಯ [ಪಾಠಾಂ. ಯಂ] ಕೊಟ್ಟು . . . ಮುದ್ಗರಂಭಾ ಕುಸುಮಪಾಕಮೆಂದೆಂಬ ಹೆಸರಂ ಕರೆವುದು (ಸೂಪಶಾ. ೪-೫೬).

[← ತಮಿ. ನಱು = ಮಸಾಲೆಪದಾರ್ಥ, ಸಂಬಾರದ್ರವ್ಯ ]

**ನಱಿಗೊಡು** (ಕ್ರಿ). ಒಗ್ಗರಣೆಯನ್ನು ಕೊಡಂ,–ಹಾಕಂ ; ಒಗ್ಗರಿಸು : ಅಟ್ಟಿರಡು ಭಾಗೆಯಂ ಮಾಡುಳ್ಳಿ ಸಕ್ಕರೆಯನಿಟ್ಟು ಪಸರಿಸಿದ ಹೋಳೊಳು ತುಂಬಿ ತುಪ್ಪದೊಳಗಟ್ಟು ಕೆಂಪಂ ಮಾಡಿ ನರೆ[ಱಿ] [ಪಾಠಾಂ. ರೆಯಂ] ಗೊಡಲು ಗೌರಬದನೆಯಕಾಯಿವೆಸರಾದವು (ಸೂಪಶಾ. ೪-೨೪).

[ ನಱಿ + ಕೊಡು₁ ]

**ನಱಿಯಿಕ್ಕು** (ಕ್ರಿ). = ನಱಿಗೊಡು : ಶೋಧಿಸಿದ ಕೊಣಬಿನೊಳು [ಬಾಳೆಯ] ಹೂವನು ಇಟ್ಟು . . . ಒಗ್ಗರಣೆಗೊಟ್ಟು ನರೆ[ಱಿ]ಯಿಕ್ಕಿ ಪರಿಮಳಗೊಡಲು ತಕ್ರರಂಭಾಕುಸುಮಪಾಕಮಾಯ್ತು (ಸೂಪಶಾ. ೪-೩೬).

[ ನಱಿ + ಇಕ್ಕು ]

**ನಱಿಯಿಸು** (ಕ್ರಿ). = ನಱಿಗೊಡು : ಮತ್ತೊಂದು ಬೆಸಳಿಗೆಯ ತೊಳೆದು ಕೊಂಡದಕೆ ನ[ಪಾಠಾಂ. ನೆ]ರೆ[ಱಿ]ಯಿತ್ತದಂ ಪೊಯ್ದು ಕರಿಬೇವುಮೊದಲವಿಕ್ಕಿ(ಸೂಪಶಾ. ೫-೧೧); ಕೊತ್ತುಂಬರಿಯನಿಕ್ಕಿ ಚೆನ್ನಾಗಿ ನ[ಪಾಠಾಂ. ನೆ, ಲ]ರೆ[ಱಿ]ಯಿತ್ತು [ಜಡಿದುಕೊಂಡು] (ಸೂಪಶಾ. ೫-೧೪). [ ನಱಿ + ಈ₂ ]

**ನಟುಣ್ಣಗ** (?) (ನಾ). (?) : ಕಾಲ್ನಾಡಿಂ ನಟುಣ್ಣಗರಾರೆನ್ನೊಡೆ ತೊರೆ ಕಾವಗಾದನುಂ ಬೀವಗದನುಂ . . . ಇಲ್ಲಿಯ ಪುರದ ಒಕ್ಕಲಿವರು (ಎಕ. III, ನಂಜನ. ೧೪೯-೫ : 915 ?). [ ? ]

**ನಟುಳ್ಗುಂದ** (ನಾ). ಒಂದು ಸ್ಥಳದ ಹೆಸರು : ಸ್ವಸ್ತಿಶ್ರೀ ನಟುಳ್ಗುಂದ ಚಾತಮ್ಮನ್ ತೊಱುಗೊಳ ಇರ್ವ್ವ ವೇಡರಾ ಕೊನ್ದು ತೊಱುವ ಇಕ್ಕಿಸಿ ಸುರಲೋಕಮ್ ಪುಕ್ಕ (ಎಕ. X, ಚಿಂತಾಮ. ೧೩೨-೧ ; ಸು. 1000). [P ಇದು 'ನವಿಲ್ಗುಂದ' ಎಂಬುದರ ಅಪಲಿಖಿತವಿರಬಹುದು]

**ನಟ್ಗವುಂಡು** 'ನಾಟ್ಗಾವುಂಡು$_2$' ನೋ.

**ನಟ್ಗವುಂಡುಗೆಯ್** 'ನಾಟ್ಗಾವುಂಡುಗೆಯ್' ನೋ.

**ನಾ$_1$** 'ನಾನ್$_2$' ನೋ.

**ನಾ$_2$** 'ನಾಲ್' ನೋ.

**ನಾಊದ** (ನಾ) (?) : ಮುಡೆ ೧ ನಾಊದನ ಬಗುಳ ಗದೆ ಮೇಲೆ ಮುಡೆ ೨ (ಸೌಇಇ. ೧೯೩೨, ಉಡುಪಿ. ೩೦೬-೬ : ?). [ ? ]

**ನಾಂ** 'ನಾನ್$_2$' ನೋ.

**ನಾಂಗರು**, ನಂಗರಿ, ನಾಕರ (ನಾ). ನೇಗಿಲು ; ಹಲ ; ಲಾಂಗಲ : ದರ ನಾಂಗರು ೧ಕ್ಕೆ ಗು ೪ ನಾಲ್ಕು ವರಹಾದ ಪ್ರಕಾರ (ಮಹಾಪಂ. II, ೬೨). **ನಂಗರಿ :** ನಂಗರಿ ಹೊಡೆಯುವುದರಿಂದ ನೆಲ ಪೊಳ್ಳಾಗಿದೆ (ರೂಢಿ). **ನಾಕರ :** 'ನಾಕರಕಂಟೆ' ಪರಾ.

[ ←ಮರಾ. ನಾಂಗರ್, ನಾಗರ್. / ಪ್ರಾ. ಣಂಗಲ. / ಸಂ. ಲಾಂಗಲ ]

**ನಾಂಗಲಿಕ** 'ನಾಂಗುಲಿಕ$_1$' ನೋ.

**ನಾಂಗುರಿಕ** 'ನಾಂಗುಲಿಕ$_1$' ನೋ.

**ನಾಂಗುಲಿಕ$_1$**, ನಾಂಗಲಿಕ, ನಾಂಗುರಿಕ, ನಾಂಗುಲೀಕ, ನಾಗುಲಿಕ (ನಾ). ಒಂದು ಬಗೆಯ ಗಿಡ ; ಕೋಳಿಕುಟುಂಬನ ಗಿಡ : ಜಲರುಹ ಕಂದಾನ್ವಿತಮಿರುಳೆಲೆಯೊಳ್ ಸಲೆ ಕಟ್ಟಿಗಿರಿಯ ಬೂದಿಯ ತಳೆದೂಱ ಲೋಳಿಂಬಿನೆ ಕುದಿಯಿಸೆ ನಾಂಗುಲಿಕವುನಡುಗಾಜ್ಯದಿಂ ರಸಾಯನಮಕ್ಕುಂ (ಲೋಕೋಪ. ೮-೨೯) ; ದೃಷ್ಟಿ ದ್ರಾವಣಕ್ಕೆ – ಬಿದುರೆಲೆ . . . ನಾಂಗುಲಿಕ ಇವನ್ನು ಕೂಡಿ ಮರ್ದಿಸಿ ತಿಲಕವಿಡಲು ದೃಷ್ಟಿದ್ರಾವಣ ಮಾಣ್ಗುಂ (ವಿವೈವಿ. ೨೦೦) : ವಿಷಮುಷ್ಟಿ ನಾಂಗುಲಿಕ ಶಶನಯನ ಪಿತ್ಥವರರಸವು ತಾಂಬೂಲ ದೊಡಗೂಡೆ ಸ್ತ್ರೀವಶವು ಹುಸಿಯಲ್ಲ ನೋಡ (ಸರ್ವಜ್ಞ. ೧೯೭೯) **ನಾಂಗಲಿಕ :** ಮೂಲವ್ಯಾಧಿಗೆ–ನಾಂಗಲಿಕ, ಮೊಗನ ಹರುವೆ, ಚಿತ್ರಮೂಲ . . . ಕಲಸಿ ಗುದದಲ್ಲಿ ಪೂಸೆ ಎಲ್ಲಾ ಮೂಲವ್ಯಾಧಿ ಕೆಡುಗುಂ (ವಿವೈವಿ. ೦೭೭). **ನಾಂಗುರಿಕ :** ವಿಷಮುಂಗುರಿಯಂ ಗುರು ನಾಂಗುರಿಕಂ ಬಜೆಯುವನರೆದಿಂಬಿಂ ಪೂಸೆ ಕಂಟಕೋಗ್ರವಿಷಘ್ನಂ (ಖಪುದ. ೨-೨೦೩). **ನಾಂಗುಲೀಕ :** ಬಯಸಿ ಚುಂಬಿಸಿದರ್ ಸ್ಮರನಿರ್ದು ನಾಂಗುಲೀಕದ ಕುಸುಮಂಗಳಂ ಪಱಿದು ಪತ್ತಿಸಿದಂತೆವೊಲೊಪ್ಪಿ ತೋರ್ಪಿನಂ (ಕಾವ್ಯಸಾ. ೭೭೭ ಶೂದ್ರಕ). **ನಾಗುಲಿಕ :** "ಲಾಂಗಳೀ, ಅಗ್ನಿಶಿಖಾ ಈ ೨ ನಾಗುಲಿಕಂ" (ನಾಚಿರಾ. ೧೦೦).

[ <ಸಂ. ಲಾಂಗಲಿಕ ]

**ನಾಂಗುಲಿಕ$_2$** (ನಾ). ಒಂದು ಬಗೆಯ ಗಿಡ; ಸರ್ಪಾಕ್ಷಿ ಗಿಡ; ನಾಗದಾಳಿ; ಮುಂಗುಸಿಮೇವುಗಿಡ ; ನಾಗಸುಗಂಧ : "ವ್ಯಾಳಗಂಧಿಯೆನೆ ನಾಂಗು ಲಿಕವಕ್ಕು" (ಮುಂಗರಾ. ೪೦-೩೦). [< ಸಂ. ನಾಕುಲಿಕ ]

**ನಾಂಗುಲಿಕಬಳ್ಳಿ** (ನಾ). ನಾಂಗುಲಿಕದ ಬಳ್ಳಿ,-ಲತೆ; ಕೆಂಪು,ಹಳದಿ ಹೂವು ಬಿಡುವ ಸುಂದರವಾದ ಹಾಗೂ ಮೇಲಕ್ಕೆ ಹಬ್ಬಿಕೊಂಡು ಹೋಗುವ ಒಂದು ಬಗೆಯ ಬಳ್ಳಿ : (+). [ ನಾಂಗುಲಿಕ$_1$ + ಬಳ್ಳಿ ]

**ನಾಂಗುಲೀಕ** 'ನಾಂಗುಲಿಕ$_1$' ನೋ.

**ನಾಂಚಿಕೆ** 'ನಾಣ್ಚಿಕೆ' ನೋ.

**ನಾಂಚು** 'ನಾಣ್ಚು$_1$' ನೋ.

**ನಾಂಟಿಸು**, ನಾಟಿಸ (ಕ್ರಿ). ೧. ಚುಚ್ಚುವಂತೆ ಮಾಡು ; ನಾಟಿಕೊಳ್ಳು ವಂತೆ ಮಾಡು : ಚಿಗುರುದೋಱಿದ ತಳಿರ ತಱಿತಱಿದಗಲದಲಿ ಪಸರಿಸುತ ಪದಕಂಟಕವ ನಾಂಟಿಸದೆ [ಪಾಠಾಂ. ಪಂಟಿಸುತ]... ಜನಕನ ಮಗಳ ನಡೆಸುತ ತಂದರೊಂದು ಮಹಾಸರೋವರಕೆ (ತೊರರಾ. ೨-೪-೦೯); ಕುಂಟಣಿಯರೆಳೆವ ಕುಲಟೆಯರಂತೆ ಖುರಪುಟವ ನಾಂಟಿಸಂಗವನೆಳೆದು ಕಾಲಮಹಿಷಿಯು (ಜಿನಮು. ೫-೩೦). ೨. [ಗಣಿತ] ಗುಣಿಸು : ಒತ್ತಿಱಿ ನಾಂಟಿಸಪ್ಪು ? ಬಳಸೊತ್ತು . . . ಗುಣಿಸು ಪೆರ್ಚಿಸೆನಲಿವು ಗುಣಕಾರ ಭಾಷೆಗಳ್ ಪೇೞ್ ಗಣಕಾ (ವ್ಯವಹಾ. ೧೧-೧೨). **ನಾಟಿಸು :** ೩. ಊಂಟುಮಾಡು; ನೆಲೆ ಗೊಳಿಸು : ಮನದ ಬೆಚ್ಚ ಬಱಿಯಱಿವು ಬಱಿಯ ಬೆಡಗನೆ ನೋಟದೊಳ್ ನಾಟಿಸೆ [ಪಾಠಾಂ. ನಾಂಟಿಸಿ] (ಅರ್ಧನೇ. ೨-೬೦ ವ); ಬೇಟದ ಸೊಗಸಂ ಪ್ರಿಯ ರೊಳ್ ನಾಟಿಸುತುಂ . . . ಶಬರಿಯರ್ ನಡೆತಂದರ್ (ಉದ್ಭಟ.೨-೬೨) ; ನಾಟಿಸುವೆನವರಱಿವಿಗಱಿವನು ಮಾಟವೆಲ್ಲವ ಮಾಣಿಸುವೆನೆನುತಿರ್ದ ಪ್ರಭು ರಾಯ (ಪ್ರಭುಲೀ. ೨೦-೩೪) ; ಕೂಟದೊಳಗೆ ದಣಿವನು ಪೊರ್ದದಾ ಸತಿ ನಾಟಿಸಿದಳು ತನ್ನೊಳವನ (ನೇಮಿಸಂ. ೧೦-೯೨) ; ನಾಟ್ಯರಸದಲಸಿಕೆಯು ಪ್ರೇಕ್ಷಕರ ಕಣ್ಣು ಕಿವಿಗಳ ಮೂಲಕ ಹೃದಯದಲ್ಲಿ ನಾಟಸಲಾಗುವುದು (ಪ್ರಬಂಧ. ೨೫). ೪. ಊರು ; ಆಧಾರ ಕೊಡು : ಮಡದಿಯ ಪೀನ ಪಯೋಧರಭಾರಕೆ ನಡು ಮುಱಿದಪುದೆಂದಜನು ನಡುಗೆ ನಾಟಿಸಿ ಸಟ್ಟ ಕಂಭವೆನಲು ಬಾಸೆ ಕಡುಚೆಲುವಾಗೊಪ್ಪುತಿಹವು (ಅಂಜನ. ೫-೧೫೩) ; ಅವರುಗಳ ಪೊಡೆಯೊಳಗೊಂದಕೆಂಟೆಂಟ ನಾಟಿಸಿ ಬಂದ ಪಡೆಯನಿಕ್ಕಿದ ರಣಬಲಿಯ (ಮೋಹತ. ೩೫-೧೩). ೫. "ಸೃಷ್ಟಿಸು" (ತೊರರಾ. ಕೋಶ) : ನಾಟಿಸುವ ಜಗದವನನಱುವಿಗೆ ಪಾಟಮಾಡದ ಸುಪ್ರಸಿದ್ಧನ ಘಾಟ ರಣಸುಖ ವಲ್ಲೆನುತಲೊದಱಿದವು ಕಹಳೆಗಳು (ತೊರರಾ. ೬-೪೭-೩೫). ೬. (ಆಲಂ) ನಿರೂಪಿಸು ; ಹೇಳು : ಬೇಟೆಯ ನೆವದಿಂದರಸಿನ ಕೂಟದ ನಾಯಕರ್ ಬಂದುಮಿಾ ತಮನಂ ನಿರ್ನಾಟಿಸಿ ಕೊಂದರೆನುತ್ತಂ ನಾಟಿಸು ನೀನಿವನ ಪೆಂಡಿರೊಳ್ ಮಕ್ಕಳೊಳಂ (ನನ್ನಚಾ. ೨-೧೨೨) ; ರತಿಯ ಪ್ರಸಂಗವ ನಾಟಿಸಿದನು ಕಿವಿಯೊಳಗೆ (ಮೋಹತ. ೯-೪೭). ೭. ಚೆನ್ನಾಗಿ ಸೇರಿಕೊಳ್ಳು ; ಅಂಟಿಕೊಳ್ಳು ; ಗಂಟುಬೀಳು : ಕೂಟದಲಿ ಕೋಪ ಕೊನರಿಸುತ ಶಂಖಿನಿಯು ನಾಟಿಸದೆ ಬಿಡಳು (ಸರ್ವಜ್ಞ. ೦೬೪೩) ; ನೋಱಕ್ಕೆ ಬಲು ಚೆಂದ ಕೂಟಕ್ಕೆ ಕಡುನರಕ ನಾಟಿಸಿ[ಸ]ಲು ಪ್ರಾಣಧನ ಹಾನಿ ಸೂಳೆ ಯೇಱಾಟವೇ ಬೇಡ(ಸರ್ವಜ್ಞ. ೧೯೫೫). [ ನಾಂಟು + – ಇಸು$_3$ ]

**ನಾಂಟು**, ನಾಟು$_1$ (ಕ್ರಿ). ೧. (ಮುಳ್ಳು, ಬಾಣ ಮೊದಲಾದುವು) ಒಳ ಹೊಗು ; ಒಳಕ್ಕೆ ಚುಚ್ಚು : "ನಾಂಟು–ಅಂತರ್ಭೇದೇ (ನಾಟಿಕೊಳ್ಳು)" (ಶಮುಧಾ) ; ಕಪೋಲಕಂಟಕನಿಕಾಯಾಗ್ರಂಗಳಂ ಕೂಡೆ ನಾಂಟದುದೋ ಮೇಣ್ ಸುಭಗತ್ವವೆಂಬ ಗುಣದಿಂ ಪೊಲ್ದತ್ತೊ ಮೇಣೆಂಬಿನಂ ಪದಪಿಂ ನಟ್ಟರೆ ದಿಟ್ಟಿಯಂ ತೆಗೆದೆನೆಂತೆಂತಾಸುಮುದ್ವೇಗದಿಂ (ಕಾದಂಪೂ. ೭೭೩) ; ಜವನಾಳಂತಪ್ಪ ಕಣೆ ರೋಮರೋಮಂದಪ್ಪದೆ ನಾಂಟದುವು (ಪಂರಾಪಾ. ೧೩-೭೧) ; ನಾಂಟಿದುವರಿಭಟರಂಗವಂ . . . ಶರಂಗಳ್ (ಜಗವಿ. ೮-೫೩): ಕಂಟಕಂಗಳ್ ನಾಂಟ ಬಿದ್ದು ಕಾಲೊಡೆದು ಬಾಯ್ ಗಂಟಲ್ಗಳೊಣಗಿ ಗತಿಗೆಟ್ಟು (ಚಿಬಪು. ೨೦-೨೧) : ಸಲೆ ಪಜ್ಜೆಯನಿಡೆ ನಾಂಟುವ ಮೊ ಮುಳ್ಳಿನಿಂದೊಳುಗಾಡೆಸೆದುದೇನೆಂಬೆ (ಕಂನವಿ. ೦೪-೪೭). ೨. ತಗುಲು ; ಸಂಪರ್ಕ ಹೊಂದು; ಸೇರು ; ಕೂಡು ; ಅಂಟು : ಬೆಂಗೆ ನೀರ ಧಾರೆ ಗಳುಱಿ ನಾಂಟಲೀಂಟದುದು ನೇಹದೆ . . . ಚಾತಕಂ (ಗಿರಿಕ. ೯-೪೮) ; ಪಾಪಂಗಳಾಟಂ ನಾಂ[ಪಾಠಾಂ. ನಾ]ಟವನ್ನಾಯದ ಕಳೆಗೆ ತೆಕ್ಕವು . . . ಮುಕ್ತಿಯ ಮೂಲವೆನಿಸುವವು ಕಾಶಿ ಹಂಪೆಗಳು (ಹಚಕಾ. ೮-೫೯) ; ಗುರು ಕುಚಂಗಳಂ ನೋಳ್ಪ ಕಾಮುಕನಿಕರದ ದಿಟ್ಟಿ ನಾಂಟದ ತೆಱದಿ ಮಱಿಮಾಡಿ ದಂದದಿಂ (ಸೌಂದಪು. ೭-೨೪). ೩. (ಗಿಡ ಮೊದಲಾದುವನ್ನು) ಭೂಮಿ

ಯಲ್ಲಿ ನೆಡು, –ಊರು, –ಹಚ್ಚು : ಬಗೆ ಮುಟ್ಟಿರ್ದಡೆಯೊಳ್ ತಳಿರ್ತ ಮರನಂ ಹೇಮಂತದೊಳ್ ಕಿಬ್ತು ನಾಂಟುಗೆ (ಲೋಕೋಪ ೬-೧೭) ; ಪಾಂಥರೀಂಟೆ ವಿಕಸತ್ತೃಷ್ಣಾತುರರ್ ಚಿತ್ರಭೂತಲದೊಳ್ ನಾಂಟದ ಬೇಂಟವೇಂ[ ಮೆಂ ] ಬಗೆಗೆ ನೀರ್ವೊಯ್ವಂತೆ ಭೃಂಗಾರಶೀತಲತೋಯಂಗಳನಾಂತು ಪಾಣಿತಳದೊಳ್ ಪೊಯ್ವರ್ ಪ್ರಪಾಕಾಂತೆಯರ್ (ಲೀಲಾವ. ೬-೦೨೯). ೪. ಮೊಳೆ; ಮೊಳಕೆಯಾಗು : ಬಿತ್ತಿದಾಗಳಲ್ಲಿಗಪ್ಪನಿತೆ ಮಾಟಿ³ ಕೋಡು ಕೆಸಱಾಗಿ ನಾಂಟಿ ಬೆಳದೆಱಗಿರ್ದಡಾಗಳ್ (ಬಂಹರಿ. ೯-೩೩ ವ).

**ನಾಟು$_1$** : ೧. ನಾಟುವ ನರ್ಗಣೆ ಚಿತ್ತಮನಾಟವಿಟಂಬರಿಸಿ ನೆನಹದಿಂ ಪೊಸವೇಟಂ ಕೋಟಿ ತೆಱನಾಗೆ (ಲೀಲಾವ. ೯-೦೨೧) ; ಉದ್ಭಟೇಂದ್ರನಿಟ್ಟ ಶೂಲವೈದೆ ಮುಂ ಕೊಂಡು ನಾಟಿ ವಕ್ಷಮಂ (ಉದ್ಭಟ. ೪-೧೦೮) ; ನೋಟದಲಿ ಮದನಾಸ್ತ್ರವೆದೆಯಲಿ ನಾಟಿದವು (ತೊರರಾ. ೧-೧೪-೨೪) ; ಹೊಂಗಳಸ ಚಂಡವೃತ್ತರದಕ್ಷಿಣವೀಧಿಗೊಟ್ಟು ಬ್ರಹ್ಮಾಂಡವ ತುಡುಕಿ ನಾಟಿದುವು (ಮೋಹತ. ೨೦-೨೯) ; ಕೂರುಗುರು ನಾಟದೊಲ್ಪಿಡಿ ಕುಚಂಗಳ (ವಂಕಾರಾ. ೧-೨-೪೧) ; ರಣರಂಗದ ಮತ್ತೊಂದು ಕಡೆ ಭಾಮನು ಖಡ್ಗ ನಾಟಿ ಬಿದ್ದಿದ್ದಾನೆ (ಸಂಸಕ. ೧೦೧). ೩. ಪುಣ್ಯಾರ್ತ್ಥ ಕಲ್ನಾಟಿ ಬಿಟ್ಟ ದತ್ತಿ (ಎಕ. XIV, ಮೈಸೂರು. ೧೨೭-೧೦ ; 900) ; ನಾಟಿರ್ದ ಪಸುರ್ಗಿಡು ಪುಷ್ಪಲತೆಯ ವೃಕ್ಷವಾಟಿಯೊಳ್ ಕುಸುಮಸೌರಭಕೆ ಊಟೆವರಿವ ತುಂಬಿಗಳ ದೊಂಬಿ . . . ಒಪ್ಪಿದುವು (ಮೋಹತ. ೫-೨೫) ; ನೀರ ಕಡೆಗೆ ನಾಟಿದ ಮರ ಚಿಗುರದೆ ಬಿಟ್ಟೀತೆ ? (ಗಾದೆ). ೫. (ಮನಸ್ಸಿಗೆ) ಹತ್ತು ; ಹಿಡಿ ; ತಟ್ಟು : ಬಗೆಯೊಳ್ ನಾಟುವಿನಮಮರಿ ಸಂಸ್ಕೃತಿನಾಟಕಮುಮನೆನಗೆ ನೆಱೆ³ಯೆ ತೋಱಿಡಳೀಗಳ್ (ಆದಿಪು. ೯-೪೫) ; ಭಯಂ ನಾಟಿ ಚಿತ್ತದೊಳ್ ದೂತರೈತಂದಾ ಕೃತಾಂತನೊಡನಿಂತೆಂದರು (ಚಬಪು. ೫೧-೨೪) ; ಈ ವಿಚಾರಗಳು ಶಂಕರಭಟ್ಟರ ಮನಸ್ಸಿಗೆ ನಾಟಿದವು (ಗಂಗಾಸಾ. ೩೦) ; ಅವಕಾಶವುಂಟಾದಾಗ . . . ಅವುಗಳ ಗುಣದೋಷಗಳನ್ನೂ ನಾಟುವಂತೆ ಬೋಧಿಸಬೇಕು (ಸಾಹಿಜೀ. ೭೮). ೬. ತೋರು ; ಉಂಟಾಗು : ಬೇಟಕ್ಕೆ ತವದ ಕೂಟಂ ಕೂಟಕ್ಕೆ ತನೂಜನಾ ತನೂಜನೊಳು ಮುದ್ದಾಟಂ ಫಲಮದೆ ತಮ್ಮೊಳ್ ನಾಟದು ಗಡ ಪೆಱವು ಸುಖಂದಾಗಲೊಳೀನೋ (ಚಂದ್ರಪು. ೩-೪೨) ; ಕಿಡಿನಾ[ಪಾಠಾಂ. ದಾ]ಟಿದವು ಕಂಗಳಲಿ ಕಾಲಕರೋಟಿ ಮೂಲಾಧರನವೊಲು ಮುಳಿದೆದ್ದನಸುರೇಂದ್ರ (ತೊರರಾ. ೬-೧೭-೭). ೭. ಒಗ್ಗು ; ಹೊಂದಿಕೆಯಾಗು : ಈ ಔಷಧಿ ಅವರ ಮೈಗೆ ನಾಟುವುದಿಲ್ಲ (ರೂಢಿ). ೮. (ಆಲಂ) ಶಕ್ತವಾಗು ; ಸಮರ್ಥವಾಗು : ಫಣಿಪತಿಗೆ ನಾಲಗೆ ನಾಟದೆಣಿಸಲು ಗಣನೆಯಿಲ್ಲದ ರಾಮಸೈನಿಕವ (ತೊರರಾ. ೪-೭-೨೫).

[ ದೇ.॥ ತಮಿ. ಮಲ. ನಾಟ್ಟು ; ತುಳು. ತೆಲು. ನಾಟು ]

**ನಾಂಟುಗೊಳ್** (ಕ್ರಿ). ಬೇರೂರು ; ನಾಟಿಕೊಳ್ಳು ; ನೆಲಸು ; ಸ್ಥಿರವಾಗು : ಸಿರಿ [ಱೊಪ್ಪು]ಗೊಂಡುದು ನಯಂ ನೆಲೆಗೊಂಡು ನನ್ನಿ ನಾಂಟುಗೊಂಡುದು (ಸೌಇಇ XV, ೨೧೭-೧೪ ; 1205). [ ನಾಂಟು + ಕೊಳ್$_1$ ]

**ನಾಂಟ್ಯ** (ನಾ). ನಾಟ್ಯ ; ನರ್ತನ : ನಂದಿಕೇಶ್ವರ ಭೃಂಗಿ ನಾಂಟ್ಯ ನಮ್ಮ ಲಿಂಗದ ಮುಂದೆ (ಬಸವ. ೫೭೩) ; ಬಂದ ಬಹುರೂಪಿ ನಿಂದ ಕೈಯೊಳು ಸಂದ ಪುರಾತನರು ಕೇಳಿ ಕಂದರ್ಪನ ಕೊಂದು ನಿಂದು ನಾಂಟ್ಯವನಾಡಿ ದಂದಂದಿನ ಬಹುರೂಪನಾಹೋ (ಶಿವಗೀ. ೧೭೯-೮೮೩) : ನಾಂಟ್ಯ[ಪಾಠಾಂ. ನಾಟ್ಯ]ವಾಡುವ ಭೃಂಗಿಪನ ಕಂಡು ಪರಶಿವಂ ನಸುನಗುತಿರೆ (ಪ್ರಭುಪು. ೨-೬೯) ; ತಾಂಡವ ನಾಂಟ್ಯ ನೃತ್ಯ ಲಾಸ್ಯ ಗುಂಡಿಲ ಪಿಕ್ಕಣ ಲಚ್ಚಣ ಅಪರಿಪಾತ್ರ ಸುಪಾತ್ರ ಸರ್ವತೋಭದ್ರಯೆಂಬ ದಶಪಾತ್ರಂಗಳ ತೋಱಿ (ಭೈರವು. ೧-೭೦ ವ). [ <ಸಂ. ನಾಟ್ಯ ]

**ನಾಂಡರಸ** 'ನಾಡರಸು' ನೋ.

**ನಾಂಡು** 'ನಾಡು' ನೋ.

**ನಾಂಡೆಱೆ³ಯ** 'ನಾಡೆಱೆ³ಯು' ನೋ.

**ನಾಂತ** (ಗು). ೧. ನಕಾರವು ಕೊನೆಯಲ್ಲಿರುವ: ನಾಂತಾವ್ಯಯಪದಕ್ಕಮನು ಕೃತಿಪದಕಂ (ಶಮದ. ೧೯೩). (ನಾ). ೨. ನಕಾರವು ಕೊನೆಯಲ್ಲಿರುವ ಪದ : ನೆಗಟ್ದಿರ್ದ ರೇಫ ಱಟ ನಾಂತ ಗಾಂತ ಸಾಂತೋತ್ವದಿದಿರ ವತ್ವಂ ಪತ್ವಂ (ಶಮದ. ೨೩೨). [ ನ + ಅಂತ$_2$ ]

**ನಾಂದ** 'ನಾನ್$_1$' ಪರಾ.

**ನಾಂದಿ$_1$** 'ನಾಂದು$_1$' ಪರಾ.

**ನಾಂದಿ$_2$** (ನಾ). ೧. ವಿವಾಹ ಮೊದಲಾದ ಶುಭಕಾರ್ಯಗಳ ಅಂಗವಾಗಿ ಅವುಗಳ ಪ್ರಾರಂಭದಲ್ಲಿ ಪಿತೃದೇವತೆಗಳ ಪ್ರೀತ್ಯರ್ಥವಾಗಿ ಮಾಡುವ ಒಂದು ಸಾಂಪ್ರದಾಯಿಕ ವಿಧಿ : ನಾಂದಿಗೆ ಕೂಡಿದ ಮಂದಿ ಪ್ರಸ್ತಕ್ಕೆ ಕೂಡೀತೇ ? (ಗಾದೆ) : ಕಟ್ಟಿದ ಲಗ್ನದಲ್ಲಿ ಧಾರೆಯಾಗಬೇಕು. ನಾಂದಿ, ನವಗ್ರಹ ಎಲ್ಲ ಬೇಗ ಆಗಿಬಿಡಬೇಕು ಗುರುಗಳೇ (ರೂಢಿ). ೨. [ಕಾವ್ಯವಿ] ನಾಟಕ, ಕಾವ್ಯ ಮೊದಲಾದುವುಗಳ ಪ್ರಾರಂಭದಲ್ಲಿ ಬರುವ ಮಂಗಳ ಪದ್ಯ; "ನಾಂದಿ ದೇವತಾಸ್ತೋತ್ರರೂಪವಾಗಿಯೂ ರಾಜನ ಪ್ರಜೆಮುಂತಾದವರಿಗೆ ಆಶೀರ್ವಾದರೂಪವಾಗಿಯೂ ಇರತಕ್ಕ ವಚನ" (ಕೈಬಿಡಿ. ೨೧೨); P ಕಾವ್ಯಮೀಮಾಂಸೆಯಲ್ಲಿ ಈ ಬಗೆಗೆ ಅನೇಕ ಚರ್ಚೆಗಳು ನಡೆದಿವೆ. ನಾಂದೀಶ್ಲೋಕದ ಕಥಾಂಶ, ಪದನಿಯಮ ಇತ್ಯಾದಿಗಳಲ್ಲಿ ಭಿನ್ನಾಭಿಪ್ರಾಯವುಂಟು. ನಾಂದಿಯಲ್ಲಿ ಆಶೀರ್ವಚನ, ನಮಸ್ಕಾರ ಮತ್ತು ವಸ್ತುನಿರ್ದೇಶವೆಂಬ ಮೂರು ವಿಧಗಳಿವೆ : ನಾಂದಿಯಿನನಂತರಂ . . . ಬಲ್ಲಾಳದೇವನನ್ವಯಕಥನಂ (ಯಶೋಚ. ೧-೬); ತಾಳಮಾರ್ಗಗಳನ್ನನುಸರಿಸಿ ವಿಧಿಸಲ್ಪಟ್ಟ ನಾಂದಿಯನ್ನು ಕೂಡ ಸಂಸ್ಕೃತ ನಾಟಕಕರ್ತರು ಒಂದು ವೃತ್ತವಾಗಿ ಬದಲಾಯಿಸಿಕೊಂಡರು (ಸಾಹಿಜೀ. ೧೮). ೩. ಸಂತೋಷ; ಆನಂದ; ಸಂತೃಪ್ತಿ. ೪. (ಆಲಂ) (ಶುಭಕಾರ್ಯದ) ಆರಂಭ; ಮೊದಲು; ಪ್ರಾರಂಭ: ವಿಜಯಪ್ರಸ್ಥಾನನಾಂದೀನಿನದಾನಂದಿತ ದಿಕ್ಪಾಲಚಕ್ರನುಂ . . . ಮೇದಿನೀಚಕ್ರನುಂ (ಆದಿಪು. ೧೪-೯೧ ವ) ; ಭರತವಾಕ್ಯಮಾ ಐಹಿಕದ ನಾಟಕಕೆ ತಾನಾದೊಡಂ ಮೃತ್ಯು ತಾಂ ನಾಂದಿಯೈಸಲೆ ಪೇಳ್ ಅಲೌಕಿಕಕೆ ? (ಶ್ರೀರಾಮಾ. ೧೧೯-೨೦೬); ಜತೀಂದ್ರನ ಬಲಿದಾನವೇ ಭಾರತದ ಸ್ವಾತಂತ್ರ್ಯಘೋಷಣೆಗೆ ನಾಂದಿಯಾಯಿತು (ಆತ್ಮಾರ್ಪ. ೧೩೧) ; ಅನಾಗರಿಕ ದಾಸ್ಯಪದ್ಧತಿಯ ಅವನತಿಗೆ ಅದು ನಾಂದಿಯಾಗಿತ್ತು (ಪುನರು. ೨೬೨). [ ಸಂ. ನಾಂದೀ ]

**ನಾಂದಿಸು, ನಾದಿಸು$_1$** (ಕ್ರಿ). ನೆನೆಸು ; ಒದ್ದೆಮಾಡು ; ತೋಯಿಸು : ಪ್ರೇಮಪೀಯೂಷದಿಂ ಪಿರಿದುಂ ನಾಂದಿಸುವಂತೆ ಮಾಣ[ದೊಲವಿಂದಾದೇವಿ] ಪೊಯ್ದಳ್ ಮಹೀವರಶೋಭಾಂಗದ ಮೇಲೆ ಲೀಲೆಯೊದವಿಂ ಕರ್ಪೂರಪೂರಾಂಬುವಂ (ಕುಸುಮಾ. ೫-೦೪೬). **ನಾದಿಸು$_1$** : ಎಲೆ ಮರುಳೆ ನಿನ್ನೊಡಲ ಸೀಳಿಯೆ ತಿಳಿರಕಂತದಲಿ ಕಾಯ ತುಱುಬನು ನಾದಿಸುವೆನೆಂದ (ಕುಮಾದ್ರೋ. ೫-೪೪). [ ನಾಂದು$_1$ + – ಇಸು$_3$ ]

**ನಾಂದೀಕರ** (ನಾ). ಮಂಗಳಪದ್ಯಗಳನ್ನು ಹಾಡುವವನು ; ಮಂಗಳ ಪಾಠಕ : "ನಾಂದೀವಾದೀ, ನಾಂದೀಕರಃ – ೨ ಆಶೀರ್ವಾದದಿಂದ ಕೂಡಿದ ದೇವತಾದಿಗಳ ಸ್ತೋತ್ರವನ್ನು ಮಾಡುವ ಪಾಠಕರು" (ಸಿದ್ಧಾಂತಿ. ೨೮೮).

[ ಸಂ. ]

**ನಾಂದೀದೇವತೆ** (ನಾ). ನಾಂದಿ ಎಂಬ ಶುಭಕಾರ್ಯದ ಪ್ರಾರಂಭದಲ್ಲಿ ಉದ್ದಿಷ್ಟರಾದ ಪಿತೃದೇವತೆಗಳ ವರ್ಗ; P ಪ್ರಪಿತಾಮಹಿ, ಪಿತಾಮಹಿ, ಮಾತೃ-ಪ್ರಪಿತಾಮಹ, ಪಿತಾಮಹ, ಪಿತೃ-ಮತ್ತು ಸಪತ್ನೀಕರಾದ ಮಾತಾಮಹವರ್ಗ–ಇವರೆಲ್ಲ ಈ ವರ್ಗಕ್ಕೆ ಸೇರುತ್ತಾರೆ : ನಾಂದೀದೇವತೆಗಳು ಮೊದಲು ತೃಪ್ತರಾದರೆ ಮುಂದಿನ ಕರ್ಮಕ್ಕೆ ಮಾರ್ಗವಾಗುತ್ತದೆ (ರೂಢಿ). [ ಸಂ. ನಾಂದೀದೇವತಾ ]

**ನಾಂದೀಪದ** (ನಾ). ಮಂಗಳಗೀತ ; ಗ್ರಂಥಾರಂಭದಲ್ಲಿ ಬರುವ ಮಂಗಳ : ರಸಮುಂ ಭಾವಮುಮರ್ಥಮುಂ ರಚನೆಯುಂ ಕಾವ್ಯಜ್ಞರಾರಯ್ದು ಭಾವಿಸಿ ನಾಂದೀಪದ ನಾಯಕಾಭ್ಯುದಯಪರ್ಯಂತಂಬರಂ ಕೂಡೆ ಶೋಧಿಸಿ ನೋಟ್ಟಿಂ ರಘುವಂಶರಾಮಕೃತಿಯೊಳ್ ಪತ್ತೆಂಟು ಪದ್ಯಂಗಳಂ (ಪಂರಾಮಾ. ೧-೩೩) ; ನಾಂದೀಪದವ ಪಾಡಿದನು ನಂಬಿ ಶಂಭುವಿನಿದಿರೊಳು (ಸೌಂದಪು. ೩-೨೬). [ ಸಂ. ]

**ನಾಂದೀಪದ್ಯ** (ನಾ). = ನಾಂದೀಪದ : ನಾಟಕದ ಪ್ರಾರಂಭದಲ್ಲಿ ನಾಂದೀ ಪದ್ಯವನ್ನು ಹಾಡಿದರು (ರೂಢಿ). [ ಸಂ. ]

**ನಾಂದೀಮುಖ** (ನಾ). ೧. ವಿವಾಹವೇ ಮೊದಲಾದ ಶುಭಕಾರ್ಯಕ್ಕೆ ಮೊದಲು ಮಾಡುವ ನಾಂದೀಕರ್ಮದಲ್ಲಿ ಆವಾಹಿಸಲ್ಪಡುವ ಪಿತೃಗಳ ವರ್ಗ ; ನಾಂದೀಶ್ರಾದ್ಧದಲ್ಲಿ ಉದ್ದಿಷ್ಟರಾದ ಪಿತೃಗಳು. ೨. = ನಾಂದೀಶ್ರಾದ್ಧ : ನಾಂದೀಮುಖಮುಂ ನಿರ್ವರ್ತಿಸಿ ಶುಭಲಕ್ಷಣಲಕ್ಷಿತನುಂ ಸನ್ನಾಹಕರ್ಮನಿರ್ಮಿತನುಂ . . . ಭದ್ರಮನನುಮಪ್ಪ ವಿಜಯಗಜಮುಮಂ . . . ಅರ್ಚಿಸಿ (ಪಂಪಭಾ. ೧೦-೪೬ ವ) ಆಕೆಗೀ ಜನಕಥಾನಾಂದೀಮುಖಂ ಮುಖ್ಯಮಂಗಳಮರ್ಹತ್ಪತಿ ಮಂಗಳಂ . . . ಧರ್ಮಂ ಮಹಾಮಂಗಳಂ (ಅರ್ಥನೀ. ೧-೨೦) ; ಗೋವಿಂದ ನಾಂದೀಮುಖವನು ವಿರಚಿಸಿ ವಿಪ್ರರಿಂದ ತನುಜೆಯ ಶೃಂಗರಿಸುವುದೆಂದು ಕೆಳದಿ ಜನಕೆ ಪೇಳಲು (ಜೀವಸಾಂ. ೧೭-೩೦). [ ಸಂ. ]

**ನಾಂದೀವಾದಿ** (ನಾ). = ನಾಂದೀಕರ : "ನಾಂದೀವಾದೀ. ನಾಂದೀಕರಃ – ೨ ಆಶೀರ್ವಾದದಿಂದ ಕೂಡಿದ ದೇವತಾದಿಗಳ ಸ್ತೋತ್ರವನ್ನು ಮಾಡುವ ಪಾಠಕರು" (ಸಿದ್ಧಾಂತಿ. ೨೮೮). [ ಸಂ. ನಾಂದೀವಾದಿನ್ ]

**ನಾಂದೀವಿಧಿ** (ನಾ). ೧. = ನಾಂದಿ₂. ೨. [ಕಾವ್ಯಮೀ] ಅಭಿನಯಕ್ಕೆ ಪೂರ್ವಭಾವಿಯಾಗಿ ಮಾಡುವ ಮಂಗಳಾಚರಣೆಗೆ ಸಂಬಂಧಪಟ್ಟ ಕಾರ್ಯಕಲಾಪ : ಶುದ್ಧಚಿತ್ರಮೆಂಬ ಪೂರ್ವರಂಗಪ್ರಸಂಗದೊಳ್ ಜರ್ಜರ ಪೂಜಾಮಂಗಳ ಪದೋಚ್ಚಾರಣಪುಷ್ಪಾಂಜಲಿ ವಿಕ್ಷೇಪಣಾದಿ ನಾಂದೀವಿಧಿಯಂ ನಿರ್ವರ್ತಿಸಿ (ಆದಿಪು. ೭-೧೧೪ ವ). [ ಸಂ. ]

**ನಾಂದೀಶ್ರಾದ್ಧ** (ನಾ). ಮಂಗಳಕಾರ್ಯಗಳಿಗೆ ಪೂರ್ವಭಾವಿಯಾಗಿ ನೆರವೇರಿಸುವ ಪಿತೃಕ್ರಿಯೆ : ಆಮೇಲೆ ನಾಂದೀಶ್ರಾದ್ಧವನ್ನು ಮಾಡಿ ಯಾವತ್ತೂ ಜಾತಕರ್ಮವಿಧಿಯನ್ನು ಮುಗಿಸಿದರು (ತುಳಸೀ. ೫೭). [ಸಂ.]

**ನಾಂದೀಸ್ಥಾಪನೆ** (ನಾ). ನಾಂದೀಕರ್ಮದಲ್ಲಿ ಮಾಡುವ ಪಿತೃದೇವತೆಗಳ ಆವಾಹನೆ : ಮುಂಜಿವಿಯ ನಾಂದೀಸ್ಥಾಪನೆಯ ಕಾಲಕ್ಕೆ ಟಳಕರಿಂದ ಮಾರುದ್ದದ ನಾಲ್ಕು ಪತ್ರಗಳು ಬಂದು ಸೇರಿದವು (ಸ್ಮೃತಿಚಿ. ೨೨೫).
[ ಸಂ. ನಾಂದೀಸ್ಥಾಪನಾ ]

**ನಾಂದು₁, ನಾದು₂** (ಕ್ರಿ). ನಾಂದಿ₁ (ಭೂತಸ್ವ್ಯ). ೧. ಒದ್ದೆಮಾಡು ; ತೋಯಿಸು ; ನೆನೆಸು : ಅತಿವಿಶದವಿಶಾಲೋರುಕ್ಷತದಿಂದೊಱಿದನಿತು ಜಡೆಯುಮಂ ನಾಂದಿ ಮನಃಕ್ಷತದೊಡನೆಟ್ಟಿಱಿಸಿದುದು . . . ಗಂಧಂ (ಪಂಪಭಾ. ೧-೧೦೫) ; ಪೊರೆದ ಪುಡಿಯನೊಡನೊಡನೆ ಬೆಮರ ಬಿಂದುಗಳ್ ನಾಂದೆ(ವರ್ಧಪು.೯-೭೦ ವ) ; ವಹ್ನಿಸಖ ನಾನೆಂಬೊಂದಹಂಕಾರಮಂ ತಳೆದಾ ಮಾರುತನಂ ಕರಂ ಪಿಡಿದು ತನ್ನೈಕಿಲ್ಗಳಿಂ ನಾಂದಿ ಸಂಚಳನಂ ಮಾಡಿ ತದಾಪ್ತನರ್ಮ ಮುಟಿದೇಂ ಪರ್ಬಿತ್ತೊ ಹೈಮಾಗಮಂ (ರಾಜಶೇ. ೯-೭). ೨. ಒದ್ದೆಯಾಗಂ ; ತೋಯಂ ; ನೆನೆ : ಬಿಸಿಲಿಂ ಕಂದದ ಬೆಂಕಿಯಿಂ ಸುಡದ ನೀರಿಂ ನಾಂದದುಗ್ರಾಸಿ ಭೇದಿಸಲುಂ ಬಾರದ ಚಿನ್ಮಯಂ (ರತ್ನಾಶ. ೮). ೩. ಕರಗು ; ದ್ರವರೂಪ ತಾಳು ; ನೀರಾಗು: "ನಾಂದು–ದ್ರವೀಕರಣೇ" (ಶಮಧಾ) ; ನಿತ್ಯಬಿಂದುಗಳ್–ನಾಂದು. ಕಡುಂಬು (ಶಮದ. ೩೭ ಪ್ರಯೋ). ೪. (ಆಲಂ) ಆರ್ದ್ರಗೊಳಿಸು ; ಮೃದುಗೊಳಿಸು : ಅರಸನ ಕಣ್ಣುಗಳಿಂದ ಚಿಮ್ಮಿದ ಅಶ್ರುಗಳು ವೀರಣ್ಣನ ಎದೆಯನ್ನು ನಾಂದಿದುವು (ಹಾಹುತ್ರ. ೧೦೦). **ನಾದು₂** : ೧. ಇನನಂದನನು . . . ಸರಳಮಂಚವ ಹೊದ್ದಿ ಭೀಷ್ಮನ ಚರಣಕಮಲವ ಹಿಡಿದು ನೊಸಲಿನೊಳೊರಸಿಕೊಂಡನು ನಾದಿದನು ಕಂಬನಿಯೊಳಂಘ್ರಿಗಳ (ಕುಮಾವ್ಯದ್ರೋ. ೧-೨೦) ; ಕಡಲಿಡುವ ನಯನಾಮೃತಾನಂದಾಶ್ರುಪೂರದಲಿ ಅಡಿಗಳನು ನಾದಿದನು (ನಿಭಾಗ. ೬-೧೫-೬) ; ರುಧಿರದಿಂ ನಾದಿದಂ ಧರೆಯನುಸಿರ್ಗಾಳಿಯಿಂದಂ ಪಾಱಲೂದಿದಂ ರಣದೊಳ್ಪಿಣದ ರಾಶಿ ಮಾಡಿದಂ ಪರಬಲದೊಳಾ ಭೀಮನು (ಜೈಮಿಭಾ ೭-೪೭). **೩. ತೊಡೆ ; ಪೂಸು ; ಬಳಿ ; ಲೇಪಿಸು** : ಚಂದನಸೌರಭ ದೇಹಿಯ ವದನಾರವಿಂದಕೆ ಪನಿನೀರ ನಾದಿ (ವೋಹತ. ೯-೩೦).
[ < ನಾನ್₁ ]

**ನಾಂದು₂** 'ನಾನ್₁' ಪರಾ.

**ನಾಂದೂರ್** (ನಾ). ಒಂದು ಊರಿನ ಹೆಸರು : ಖಣ್ಡಸ್ಫುಟಿತ ನವಕರ್ಮ್ಮದೇವಾರ್ಚ್ಚನಾಸತ್ರ ವೃತ್ತಿಗೆ ಸೀರೆನಾಡ ನಾನ್ದೂರನಿತ್ತಂ (ಎಕ. XII, ಶಿರಾ. ೩೮-೩೦ ; 878). [ ? +ಊರ್ ]

**ನಾಂಬ₁** (ನಾ). ಆಲಸ್ಯಸ್ವಭಾವದವನು ; ಸೋಮಾರಿ ; ಅಲಸ : "ಸೋಂಬನೆಂದುಂ ನಾಂಬನೆಂದುಂ ಅಲಸುಗೆಕಾಱಂ" (ಕಶಸಾ. ೧೮-೩೬೦) ; "ನಾಂಬಂ ಸೋಂಬನುಮೆನಲ್ಕಮಲಸುಕೆಗಾಱಂ" (ಕವಿಕಂ. ೧೫೫) ; "ನಾಂಬನೆನೆ ಮೈಗಳ್ಳ" (ಕಶರ. ೫೩) ; ಕೆಲಸಮನೇನುಮನೊಡರಿಸದಲಸತೆಯುಂ ಬಯಸಿ ಬಾಟ್ವ ನಾಂಬರ್ . . . ವಿಗರ್ಹಣಮನಾಲಿಪರ್ ಪ್ರಿಯಸಖರಿಂ (ನೀತಿಮುಂ. II, ೩೨೭). [ ನಾಂಬು + – ಅ₈ ]

**ನಾಂಬ₂** 'ನಾನ್₁' ಪರಾ.

**ನಾಂಬು** (ಕ್ರಿ). ಸೋಮಾರಿಯಾಗು ; ಜಡನಾಗು ; ಅಲಸನಾಗು : "ನಾಂಬು– ಆಲಸ್ಯೇ" (ಶಮಧಾ) ; ಇರುಳ್ ತ್ರಿಯಾಮಾಮುದರ ಮೊದಲಂ ಕಳೆ ಯೋಗದೊಳ್ ಮತ್ತಂ ಮಯ್ದಣಾವಾರಲ್ಕೆ ಮಲಂಗಾದೊಡೆ ನಾಂಬದಿರ್ (ಸೌನಂದ. ೧೪-೩೨) ; "ನಿದ್ರಿಸು" (ಸೌನಂದ. ಕೋಶ) ; ಕುಡು ನೀಂ ನಾಂಬದೆ ಹೇ ವಿಧಾತ್ರ (ಸಂಸಪ. ೧೭-೯).
[ ದೇ.॥ ತಮಿ. ನಾಮ್ಪು = ತಳ್ಳಿಗಾಗು ]

**ನಾಕ** (ನಾ). ೧. ದೇವತೆಗಳು ವಾಸಿಸುವ ಲೋಕ; ಸ್ವರ್ಗ ; P ಪುಣ್ಯವಂತರು ಸತ್ತ ಮೇಲೆ ಪಡೆಯುವರೆಂದು ನಂಬಲಾದ ಊರ್ಧ್ವಲೋಕ : "ನಾಕಂ ತ್ರಿವಿಷ್ಟಪಂ ದಿವಮೆಂದಿಂತಿದು ತಾನಮರ್ತ್ಯಭವನಂ" (ವಸ್ತುಕೋ. ೭-೩೦) ; ನಾಕದಿನಿಳಿತಂದುದೊ ಫಣಿಲೋಕದಿನೊಗೆತಂದುದೊ ವಸುಂಧರೆಗಾಗೀ ಲೋಕ ಬಣ್ಣಿಸೆ ತಾರಕ ಶ್ರೀಕಣ್ಠ × × × ಮನ್ ಎಸೆವಿನಂ ಮಾಡಿಸಿದಂ (ಎಕ. VIII, ಸೊರಬ. ೨೮೭-೪೭ ; 1168) ; ನಾಕಮಂ ನಗುವ ನಗರಂಗಳಿಪ್ಪೋಜೆಯಿಂ ಎಮೆಯಿಕ್ಕಲಿಂಬಿಲ್ಲದಿರ್ಪ ಶಿವಭವನದಿಂ (ತಿರುಶ. ದೇ. ೨-೪) ; ಯಶೋಧರಂ ಸುಖದಿಂದಿರ್ಕಾ ನಾಕದೊಳೆಂದೊಳ್ದಪರ್ (ಯಶೋಚ. ೩-೫೨) ; ತಂದೆಯೆಂದುದೆ ವೇದಸಮ್ಮತವೆಂದು ರಣದಲಿ ಕಾದಿ ಮಡಿದನು ಇಂದ್ರಜಿತು ನಾಕವನು ಹೊಕ್ಕನು ಸಕಲದಳ ಸಹಿತ (ಕೌಶಿರಾ. ೩೬ ಸೂಚನೆ) ; ಕಮಲದಂದದಿ ಶ್ರೀನಿಳಯ ನಾಕದಪೊಲು ಸುಮನಸಮಾಲಾಭರಿತ ಕುಮುದವ ತಳೆದುದು ನಿರುತಿಯ ದೆಸೆಯೊಲು (ಜೀವಂಸಾಂ. ೯-೮೧) ; ನಾಕ ನರಕಂಗಳಂ ವಿಕವನಿವುವು ನಿನಗೆ (ಮಂಕುತಿ. ೩೪೦) ; ಲೋಕ ಹಾಳಾದರೆ ನಾಕ ಹಾಳಾದೀತೆ ? (ಗಾದೆ). ೨. ಬಾನು ; ಆಕಾಶ. ೩. ಭೂಮಿ : "ನಭದಲ್ಲಿ ಅನಿಮಿಷಾಲಯದಲ್ಲಿ ಧರೆಯಲ್ಲಿ ನಾಕವೆಂದೆನಿಸುವುದು" (ಮಂಗರಾ.೧೩೯-೭). ೪. ವಾಯುಮಂಡಲ ; ವಾತಾವರಣ: (ಕಿ). ೫. [ಛಂದ] ಮೂರು ಲಘುಗಳಿಂದ ಕೂಡಿರುವ ಒಂದು ಅಕ್ಷರಗಣ; ನಗಣ (U U U): ಮೂಱು ಲಘುವಿಂ ನಾಕಂ (ಛಂದೋಂಬು. ೧-೩೮).
[ ಸಂ. ]

**ನಾಕಚಾಪು** 'ನ್ಯಾಪ್‌ಚಾಕ್' ನೋ.

**ನಾಕಚಿಕುರ** (ನಾ). ಆಕಾಶವೇ ತಲೆಗೂದಲಾಗಿರುವವನು ; ವ್ಯೋಮಕೇಶ ; ಶಿವ : ಶ್ರೀಗುರು ಶಂಕರ ಶುಭಕರ ನಾಗಾಲಂಕಾರ ನಾಕಚಿಕುರ ಮಹೇಶಂ . . . ಇರ್ಕೆಮ್ಮ ಚಿತ್ತನಾಕದೊಳನಿಶಂ (ಹಮ್ಮೀರ. ೪-೧).
[ ನಾಕ + ಚಿಕುರ ]

**ನಾಕಚ್ಯುತ** (ನಾ). ಸ್ವರ್ಗಲೋಕದಿಂದ ಹೊರಕ್ಕೆ ಬಂದವನು ; ಸ್ವರ್ಗಲೋಕದ ವಾಸ ಮುಗಿದ ಮೇಲೆ ಭೂಮಿಯಲ್ಲಿ ಹುಟ್ಟಿದವನು : ನಾಕಚ್ಯುತಂ ಶ್ರೀಕಂಠನಾಗಿ ತದಚ್ಯುತೇಂದ್ರುದರ್ಶನಜನಿತಜಾತಿಸ್ಮರಂ (ಶಂರಾಮಾ. ೧೦-೧೧೬ ವ). [ ನಾಕ + ಚ್ಯುತ ]

**ನಾಕಜ** (ನಾ). ಸ್ವರ್ಗಲೋಕದಲ್ಲಿ ಹುಟ್ಟಿದವನು ; ದೇವತೆ : ಸಂದಯದ ಮನದ ನಾಕಜಸಂದೋಹದ ಬಗೆಯಸಘಹರಂ ಕಳೆಯಲ್ (ಶಾಂತಿಪು. ೧೦-೪೩) ; ನಾಕಜನಿರ್ಕೆಲಂ ಬಿಡಿದದೇಂ ನಡೆಗೊಂಡರೊ ಮೇಘಮಾರ್ಗದೊಳ್ (ಜಗವಿ. ೧-೪೦). [ ಸಂ. ]

**ನಾಕಜನಾಥ** (ನಾ). ದೇವತೆಗಳ ಒಡೆಯ ; ಇಂದ್ರ : ಸ್ಫಟಿಕಕಳಶಮುಂ ತೀವಿದಿವ್ಯಾಂಬುವಿಂ ನಾಕಜನಾಥಂ ಮಜ್ಜನಕ್ಕೆತ್ತಿದ ತೆಱದೆ ಸುಧಾಸೂತಿ ಕಣ್ಗೆಡ್ಡಮಾದಂ (ಆದಿಪು. ೧೨-೮). [ ನಾಕಜ + ನಾಥ ]

**ನಾಕಜಮಂತ್ರಿ** (ನಾ). ದೇವತೆಗಳ ಮಂತ್ರಿ ; ಬೃಹಸ್ಪತಿ ; ಗುರು : ನಾಕಜಮಂತ್ರಿ ಪ್ರಟೋದಯಂ ನೆಗೞ್ವಿನಂ ತನ್ನುಚ್ಚದೊಳ್ ಪುಟ್ಟಿದಳ್ (ಅಜಿಪು. ೧೨-೫೨). [ ನಾಕಜ + ಮಂತ್ರಿ ]

**ನಾಕಜಾಪಗೆ** (ನಾ). ದೇವಲೋಕದಲ್ಲಿ ಹುಟ್ಟಿದ ನದಿ ; ಗಂಗಾನದಿ : ಹಿಮವತ್ಕುತ್ಕೀಲದಿಂ ನಾಕಜಾಪಗೆಯುಂ ತಾಪಿನಮಾಳ್ಗಂ (ಅಟ್ಟಮು. ೮-೧).
[ ಸಂ. ನಾಕಜಾಪಗಾ ]

**ನಾಕಡಿ** 'ನಾಲ್ಕಡಿ' ನೋ.

**ನಾಕತರಂಗಿಣಿ** (ನಾ). = ನಾಕಜಾಪಗೆ : ನಾಕತರಂಗಿಣೀಪ್ರವಾಹದೊಳ್ . . . ಪೊಳೆಯುತಿರ್ಪುದು ಚಂಡಮರೀಚಿಮಂಡಲಂ (ಜಗವಿ. ೪-೬೧).
[ ನಾಕ + ತರಂಗಿಣಿ ]

**ನಾಕನಾಯಕ** (ನಾ). ಸ್ವರ್ಗಲೋಕದ ಅಧಿಪತಿ ; ಇಂದ್ರ : ಆ ಜಂಬೂದ್ವೀಪದ ನಟ್ಟನಡುವೆ . . . ಅನೇಕ ನಾಕನಾಯಕಲೋಕಪಾಲಲೀಲಾಭವನಾಧ್ಯಾಸಿತಮುಂ (ಆದಿಪು. ೧-೪೯ ವ) ; ನಾಕನಾಯಕಂ ತ್ರಿಲೋಕಗುರು ಸವಿತ್ರಿಗೆ ಸೀಯನಪ್ಪ ಗೇಯದಿಂ ಪೊಟ್ಟುಗಳೆಯಲ್ ನಿಯಮಿಸಿದಂ (ಶಾಂತಿಪು. ೯-೧೬೮ ವ). [ ನಾಕ + ನಾಯಕ ]

**ನಾಕನಾರಿ** (ನಾ). ಒಂದು ಬಗೆಯ ಗಿಡ ; ಸಹದೇವಿ : "ನಾಕನಾರಿ [ಪಾಠಾಂ. ನಾಕರಿ]ಯೆನೆ ಸಹದೇವಿಯಕ್ಕು" (ಮಂಗರಾ. ೩೮-೨೫). [ ? ]

**ನಾಕನಿತಂಬಿನಿ** (ನಾ). ಸ್ವರ್ಗಲೋಕದ ಮಹಿಳೆ; ದೇವತಾಸ್ತ್ರೀ; ಅಮರಿ: ಝೊಂಬಿಸಲಿ ಕೌರವರು ನಾಕನಿತಂಬಿನಿಯರೆಳಕವನು (ಕುವ್ಯಾಗ. ೧೧-೫೦).
[ ನಾಕ + ನಿತಂಬಿನಿ ]

**ನಾಕನಿವಾಸಿ** (ಗು). ಸ್ವರ್ಗಲೋಕದಲ್ಲಿ ವಾಸಿಸುವ : ಆ ಸುರಾರಿಪ್ರಮುಖ ಯಕ್ಷರಿಗಾಸೆ ಕರ್ಣನ ಮೇಲೆ ನಾಕನಿವಾಸಿನಿರ್ಜರನಿಕರವಾದುದು ನರನ ಕೈವಾರ (ಕುವ್ಯಾಕ. ೨೨-೪). [ ಸಂ. ನಾಕನಿವಾಸಿನ್ ]

**ನಾಕನಿಳಯ** (ನಾ). ಸ್ವರ್ಗವೇ ಮನೆಯಾಗಿರುವವನು ; ಸ್ವರ್ಗಲೋಕದಲ್ಲಿ ವಾಸಿಸುವವನು ; ದೇವತೆ : ನಾಕನಿಳಯರಿಗರಿದು ನಿನಗೆ ವಿವೇಕವೆಳ್ಳನಿತಿಲ್ಲ ತೆಗೆತೆಗೆ ಸಾಕು ವಾಘೆಯ ಮರಳಿ ಹಿಡಿ ತೇಜಿಗಳ ತಿರುಹೆಂದ (ಕುವ್ಯಾವಿ. ೬-೧೦) : ಏಕೆ ಸಹಜವ ಬಿಸುಟು ತಾಳಿದೆ ಸೂಕರಾಕಾರವನು ಕೊಲ್ಲೆನು ನಾಕನಿಳಯರ ಪಕ್ಷಪಾತವನುಳಿದು ಮಱಿಯೊಗಲು (ನಿಘಾಗ. ೩-೮-೪೦). [ ನಾಕ + ನಿಳಯ (= ನಿಲಯ) ]

**ನಾಕಪತಿ** (ನಾ). ಸ್ವರ್ಗಲೋಕದ ಒಡೆಯ ; ಸ್ವರ್ಗದ ಅಧಿಪತಿ ; ಇಂದ್ರ: ಅಪರಾಜಿತೆ . . . ವೈಜಯಂತೆಯೆಂಬಿವರಂ ನಾಕಪತಿ ನಿಯೋಜಿಸಿದಂ ವಿಷ್ಯಪತ್ರಯಾಧೀಶಜನನಿಗಿಸುವೆಸಗೆಯ್ಯಲ್ (ಶಾಂತಿಪು. ೯-೧೬೫) ; ಎಂತು ನಾಕಪತಿಗಂ ಪೌಲೋಮಿಗಂ ಪುಟ್ಟಿದೊಂ ವರಸೌಂದರ್ಯ್ಯಜಯಂತನಂತೆ . . . ಪುಟ್ಟಿದೊಂ ಸ್ಥಿರವೀ ಪಟ್ಟಣಸಾಮಿ ವಿಶ್ವವಿನುತಂ ಶ್ರೀಮಲ್ಲಿದೇವಾಹ್ವಂ (ಎಕ. II(R), ೪೫೬-೪೦ ; 1195) ; ಲೋಕಹಿತಮಪ್ಪ ಕಥೆಯೆನುತ ನಂದೀಶ್ವರ ಏಕಪಾದದ ಮೂರ್ತಿಯಾದ ಶಿವನಂದಮಂ ನಾಕನಿಳಯರ್ ಮೆಚ್ಚೆ ಪೇಳಿದಂ ಬ್ರಹ್ಮಜಗೆ ಹರನ ಕಥನಾಮೃತವನು (ಲಶಿಚಂ. ೨೫-೯). [ ನಾಕ + ಪತಿ[2] ]

**ನಾಕಪ್ರಭವ** (ಗು). ೧. ಸ್ವರ್ಗಲೋಕದಲ್ಲಿ ಹುಟ್ಟಿದ,-ಉತ್ಪನ್ನವಾದ : ನಾಕಪ್ರಭವೋದ್ಯನ್ಮಾಲೆಯಂ ಭೂಪತಿಯನೊಸೆದೊಱಲ್ದರ್ಚಿಸಿರ್ದಂ ಸುರೇಂದ್ರಂ (ಶಾಂತಿಪು. ೯-೯೩). (ನಾ). ೨. ಸ್ವರ್ಗಲೋಕದಲ್ಲಿ ಹುಟ್ಟಿದವನು. [ ನಾಕ + ಪ್ರಭವ ]

**ನಾಕಬಲಿ** (ನಾ). ವಿವಾಹದ ಅಂಗವಾಗಿ ಮಾಡುವ ಒಂದು ವಿಧಿ ; ನಾಗೋಲಿ. [ ನಾಕ + ಬಲಿ[2] ]

**ನಾಕಬೋವ** (ನಾ). ಒಬ್ಬಾತನ ಹೆಸರು : ಕಂಚಗಾಡ ನಾಕಬೋವಂಗೆ ಕೊಟ್ಟ ಉಂಬಳಿ ಕಂಬ ೪೦ ಕೆಯಿ (ಕಇ. IV, ೧೬-೧ ; ?). [ ? ]

**ನಾಕಭೂರುಹ** (ನಾ). ೧. ಸ್ವರ್ಗದಲ್ಲಿರುವ ಮರ ; ಕಲ್ಪವೃಕ್ಷ. ೨. (ಅಲಂ) ಉದಾರಿ ; ದಾನಿ : ಅಂಬುಜಪ್ರಿಯಕುಲಲಲಾಮನು ನಂಬಿದವರಿಗೆ ನಾಕಭೂರುಹ (ಕೌಶಿರಾ. ೨೫ ಸೂಚನೆ).
[ ನಾಕ + ಭೂರುಹ ]

**ನಾಕಯ್ಯ** (ನಾ). ಒಬ್ಬಾತನ ಹೆಸರು : ಸೇನಬೋವ ನಾಕಯ್ಯಂ ಬರೆದೊಂ (ಎಕ. VIII, ಸೊರಬ. ೪೬೪-೨೭ ; 954) ; ಪಡುವ ಬಸದಿಯ ಕೆಯ್ಯ[c] ನಾಕಯ್ಯನ ಕೆಯಿ (ಇಆ. XXVIII, ೩೯-೨೯ ; 1077).
[ <ನಾಕಿ + ಅಯ್ಯ[1] ]

**ನಾಕರ** 'ನಾಂಗರು' ನೋ.

**ನಾಕರಕುಂಟೆ** (ನಾ). (ಉಕ) ಒಂದು ಬಗೆಯ ವ್ಯವಸಾಯದ ಉಪಕರಣ : (+).
[ ನಾಕರ (<ನಾಂಗರು) + ಕುಂಟೆ[1]./ಮರಾ.ನಾಂಗರಖುಂಟಾ ]

**ನಾಕರಿಪು** (ನಾ). ದೈತ್ಯ ; ರಾಕ್ಷಸ : ಭೀಕರಾಂಗವನಾಂತು ನಭದಲಿ ನಾಕರಿಪು ಕೊಂಡೊಯ್ಯುತಿರೆ . . . ಕೃಪಾಕರನು ದೈತ್ಯಾಪಹರಣಕೆ ಮಾಡಿದನು ಮನವ (ನಿಘಾಗ. ೧೦-೭-೧೧). [ ನಾಕ + ರಿಪು ]

**ನಾಕಲೋಕ** (ನಾ). ಸ್ವರ್ಗಲೋಕ : ತನಗೆ ತಾನೆ ಪೊಣ್ಮುವ ಭಯಮುಮಂ ಭೋಂಕೆನೆ ಕಂಡು ನಾಕಲೋಕಚ್ಯುತಿಯನಾಗಳಱಿದು ಮನದೊಳಳ್ಕಿ (ಆದಿಪು. ೩-೩ ವ) ; ದಿಗಂತಪರ್ಯಂತಮಾ ನಾಕಲೋಕಮೆಲ್ಲಂ ಕಿಟ್ಟಿಟ್ಟು ಬರೆ (ಶಾಂತಿಪು. ೧೦-೨೧ ವ) ; ನಾಕಲೋಕಸುಖಮಂ ಕೈಕೊಂಡಳೊ . . . ಎನುತ್ತೆ ಪದಪಿಂದಾನಾಕೆಯುಂ ನೋಡಿದೆಂ (ಕಾದಂಪೂ. ೮೦೪) ; ಆ ಮಹಾರ್ಣವಂ . . . ನಾಕಲೋಕದಂತೆ ಅನಿಮಿಷಪ್ರಕೀರ್ಣಕಮುಂ (ಜಗವಿ. ೧-೪೪ ವ). [ ನಾಕ + ಲೋಕ ]

**ನಾಕಲೋಕೇಶ** (ನಾ). ಸ್ವರ್ಗಲೋಕದ ದೊರೆ,-ರಾಜ ; ಇಂದ್ರ : ನಾಕಲೋಕೇಶನೆನಿಸಿದ ಗಂಡು ಮನೋಭವನೆನಿಸಿದ ಸೊಬಗು ರೇಚ ಭೂಪಾಲಕನ (ಮುದತಿ. ೧-೨೯). [ ನಾಕಲೋಕ + ಈಶ ]

**ನಾಕವಿಭವ** (ನಾ). ಸ್ವರ್ಗಲೋಕದ ಸಂಪತ್ತು : ದೇವರ್ ಪೊಯ್ಯದೋರಂತೆ ಪೊಣ್ಮುವ ಭೇರೀನಿನಾದಕ್ಕೆ ನಾಕವಿಭವಶ್ರೀ ವಿಸ್ಮಯಂಬಟ್ಟು (ಮಲ್ಲಿಪು. ೧೨-೧೪). [ ನಾಕ + ವಿಭವ ]

**ನಾಕಸದನ** (ನಾ). ಸ್ವರ್ಗವಾಸಿ ; ದೇವತೆ : "ಸುಪರ್ವ ನಾಕಸದನರ್ ನಿಳಿಂಪ ವಿಬುಧರು ಸುಮನಸರು ಲೇಖರೆನಲು ವಿಬುಧರ್ಗೆ ನಾಮಂ" (ಮಂಗರಾ. ೩-೮). [ ನಾಕ + ಸದನ ]

**ನಾಕಸದ್ಮ** (ನಾ). = ನಾಕಸದನ : ತೆರಳಲುದ್ಯುಕ್ತರಾದರ್ ಸಭೂಭಾರ ವಿಷಾದರ್ ದೈತ್ಯಪೀಡಾಕುಪಿತನಿಜಮನಃಪದ್ಮರಾ ನಾಕಸದ್ಮರ್ (ಜಗವಿ ೧-೩೫). [ ನಾಕ + ಸದ್ಮ ]

**ನಾಕಸುಖ** (ನಾ). ಸ್ವರ್ಗಲೋಕದ ಸುಖ ; ಸ್ವರ್ಗಸೌಖ್ಯ : ನಾಕಸುಖ ಶೇಷಮಂ ನಾ ಕೌ ಕ ರ್ ಬಂದದಱೊಳನುಭವಿಪ್ಪುದಱಿಂದೇಕಾಕೃತಿ ಕುರುಜಾಂಗಲಮಂ ನಾಕವಮುವುದು ಕಿಱುಕುಳಂಗೆ ಬಣ್ಣಿಸಲರಿದೇ (ಶಾಂತಿಪು. ೯-೧೩೭). [ ನಾಕ + ಸುಖ ]

**ನಾಕಸ್ತ್ರೀ** (ನಾ). ಸ್ವರ್ಗಲೋಕದ ಮಹಿಳೆ ; ಅಪ್ಸರೆ ; ರಂಭೆ, ಊರ್ವಶಿ ಮೊದಲಾದವರು : ನುಡಿಯಿಸಿದತ್ತಾ ನಾಕಸ್ತ್ರೀಯ ಗೇಯಮಾಸ್ಥಾಯಿಕೆಯೊಳ್ (ಆದಿಪು. ೭-೧೭). [ ನಾಕ + ಸ್ತ್ರೀ ]

**ನಾಕಾಘದೂರ** (ನಾ). ಭೂಲೋಕದ ಪಾಪವನ್ನು ನಾಶಮಾಡುವವನು ; ಲೋಕಪಾಪನಾಶಕ : ನಾಕಾಘದೂರ ಷಡ್ಲಿಂಗಾವರಣ ಸಚ್ಚಿದಾಕಾರ ವೇದಾಗಮಾದಿಬಹುಶಾಸ್ತ್ರಜ್ಞ (ಏಕೋಪು. ೧-೧).
[ ನಾಕ + ಅಘ + ದೂರ ]

**ನಾಕಾಣೆ** 'ನಾಲ್ಕಾಣೆ' ನೋ.

**ನಾಕಾಧಿನಾಥ** (ನಾ). = ನಾಕಲೋಕೇಶ : ಶ್ರೀಮನ್ನಾಕಾಧಿನಾಥಾನತ ಮಕುಟಮಣಿದ್ಯೋತಿತಾಂಘ್ರಿದ್ವಯಂ ... ಕುಡುಗೆಮಗವ್ಯುತಾವಾಸಮಂ ವೀರನಾಥಂ (ಸುಕುಮಾ. ೧-೧). [ ನಾಕ + ಅಧಿನಾಥ ]

**ನಾಕಾಧಿಪ** (ನಾ). = ನಾಕಲೋಕೇಶ : ಆ ನಾಕಾಧಿಪನ ಸಿರಿಯ ಜಱಿದು ದಂದವರ ವಾಹಿನಿ ಸಕಲಜನಮೋಹಿನಿ (ಭಾವಚಿಂ. ೮-೧೫). [ನಾಕ+ಅಧಿಪ]

**ನಾಕಾನೀಕ** (ನಾ). ದೇವತೆಗಳ ಸೈನ್ಯ ; ಅಮರರ ಸೇನೆ : ನಿಜವಾಹನವಿಹೀನ ವಿಸ್ಮಯಸ್ಮೇರವದನಸರಸಿರುಹದ್ವಾತ್ರಿಂಶನ್ನಾಕಾನೀಕಮುಂ ಕರಮೊಪ್ಪೆ ... ಜಿನಚಂದ್ರನಘೌಘಶೇಷದೈನ್ಯದನಾದಂ (ಶಾಂತಿಪು. ೧೨-೧೯ ವ).
[ ನಾಕ + ಅನೀಕ ]

**ನಾಕಾನೋಕಹ** (ನಾ). ದೇ ವ ಲೋ ಕ ದ ಮರ ; ಕಲ್ಪವೃಕ್ಷ ಮೊ ದ ಲಾ ದ ವು : ನಾಕಾನೋಕಹಸುಮನಸ್ಸ್ರೀಕಂಠಾಭರಣಮಾಗೆ (ಪಂರಾಮಾ. ೧೦-೧೧೫) ; ಅದು ಮುಕ್ತಿಪುರಕ್ಕೆ ಗೋಪುರಮದು ನಾಕಾನೋಕಹಕ್ಕೆ ಫಳಮಂಜರಿ (ಚಂದ್ರಪು. ೧೦-೨೯). [ ನಾಕ + ಅನೋಕಹ ]

**ನಾಕಾಪಗಾಜೂಟ** (ನಾ). ಜಟೆಯಲ್ಲಿ ಗಂಗಾನದಿಯನ್ನುಳ್ಳವನು ; ಗಂಗಾಧರ ; ಶಿವ : ನಾಕಾಪಗಾಜೂಟನಾಜ್ಞೆಯಿಂ ಬಂದೆಸೆವ ಲೋಕೈಕಪೂಜ್ಯರಾ ಕೇಡು (ದುರುಪು. ೩-೨೮). [ ಸಂ. ]

**ನಾಕಾಪಗಾಧರ** (ನಾ). ಗಂಗಾನದಿಯನ್ನು ತಲೆಯಲ್ಲಿ ಧರಿಸಿರುವವನು ; ಗಂಗಾಧರ ; ಶಿವ : ಹೃದಯಾಬ್ಜದೊಳಗೆ ನೆಲಸಿರ್ಪನೆನೆ ನಾಕಾಪಗಾಧರನೆ ತೋರ್ಪುದು (ದುರುಪು. ೨-೨೪). [ ಸಂ. ]

**ನಾಕಾರಿಸು** (ಕ್ರಿ). ನಿರಾಕರಿಸು ; ಸಾಧ್ಯವಿಲ್ಲವೆಂದು ಹೇಳು : ಅವನಿಗೆ ಪರವಾನೇ ಕೊಡುವುದನ್ನು ನಾಕಾರಿಸಿದ್ದರೆ . . . ಅವನಿಗೆ ಅವಶ್ಯವಾಗದಂತೆ ಮಾಡಬಹುದು (ಕಭಾಗ. ೧೮ ಪರಿ).
[ ನಾಕಾರ್ (P ← ಮರಾ. ನಾಕಾರಣೇ) + – ಇಸು ]

**ನಾಕಾವಾಸ** (ನಾ). ಸ್ವರ್ಗದಲ್ಲಿ ವಾಸಿಸುವವನು ; ದೇವತೆ : ನಾಕಾವಾಸರಿಭಂ ಬಲಾಹಕಕುಜಂ ವೃಂದಾರಕಾಖ್ಯಂ (ನಾನಾರ. ೧೫೪).
[ ನಾಕ + ಆವಾಸ ]

**ನಾಕಿ** (ನಾ). ಸ್ವರ್ಗದಲ್ಲಿರುವವನು ; ದೇವತೆ ; ಅಮರ : ನಾಕಿಗಳಿಂದ್ರಾದ್ಯರ್ ಪರಮಾಕೃತಿದುರ್ಲಕ್ಷ್ಯವೆಂದೆನಲ್ ನಿನ್ನವತಾರಾಕೃತಿಯ ನರ್ಚಿಪರ್ (ಜಗವಿ. ೩-೧೦೭) ; ನಾಕಿಗಳನು ಕೂಡಿ ತ್ರಿಪುರಕೆ ನಡೆದೀ ಕಾಕುಮಾತ ಕೇಳಬಹುದೆ (ತ್ರಿಪುಸಾಂ. ೨೯) ; ನಾಕಿಗಳು ನಲಿದಾಡುತಿರಲಾ ಲೋಕಪಾಲರು ತುಷ್ಟಿವಡೆದರು (ಕಾಶಿರಾ. ೨-೩೦). [ ಸಂ. ನಾಕಿನ್ ]

**ನಾಕಿಗ** (ನಾ). = ನಾಕಿ : ಸಾಕುಸಾಕ್ಕೆ ಸುರಪ ಕೇಳ್ ಸುಧಾಕಲಶವಿಮಾ ನಾಕಿಗರ ಜೀವನಾಧಾರಂ (ಚಬಸು. ೨೦-೦೦). [ ನಾಕ + – ಇಗ ]

**ನಾಕಿಗಣ** (ನಾ). ದೇವತೆಗಳ ಗುಂಪು, –ಸಮೂಹ : ಮಗನೊರ್ವಂ ಪುಟ್ಟಿದೋಷಾಕರನೆನಿಸಿದಂ . . . ನಾಕಿಗಣಂ ಸರ್ವಸ್ವಮಂ ಮೇಣ್ಕವರ್ದುದಕಟ ಭಂಗಕ್ಕೆ ಪಕ್ಕಾದೆನೆಂದಾತ್ಮಗತೌರ್ವಾಗ್ನಿಚ್ಛಲಂಬೆತ್ತಳಲುರಿಯೊಳಕೊಂಡಂತೆ ತೋರ್ಕುಂ ಸಮುದ್ರಂ (ಶಬಶಂ. ೧-೩೩). [ ನಾಕಿ + ಗಣ ]

**ನಾಕಿತಿ** (ನಾ). ಹೆಣ್ಣುದೇವತೆ ; ದೇವಿ : ನಾಗರಿಗೆ ಮದ್ದ ಹೇಳಬಂದ ಅಯ್ಯಗಳು ನಾಕಿತಿಯ ನಟಣೆಯಲ್ಲಿ ಸಿಲುಕಿದರು (ಸಿದ್ಧೇವ. ೧೯೨-೫೪೪).
[ ನಾಕ + – ಇತಿ$_1$ (< – ಇತ್ತಿ) ]

**ನಾಕಿನಾಯಕ** (ನಾ). = ನಾಕಪತಿ : ಸಕಳೋರ್ವೀಶ್ವರ ನಾಕಿನಾಯಕ ಚಮೂ ಪರ್ಯಾಪ್ತಿಪಾತ್ರಂ (ಶಾಂತಿಪು. ೮-೧೨೩). [ ನಾಕಿ + ನಾಯಕ ]

**ನಾಕಿನಿಕರ** (ನಾ). ದೇವತೆಗಳ ಗುಂಪು, –ಸಮೂಹ: ಓಲಗಸಾಲೆಯೊಳನೇಕ ನಾಕಿನಿಕರಪರಿವೃತನಾಗಿರ್ಪಲ್ಲಿ (ಚಂದ್ರಪು. ೪-೭೪ ವ). [ ನಾಕಿ + ನಿಕರ$_1$ ]

**ನಾಕಿನಿಕಾಯ** (ನಾ). = ನಾಕಿನಿಕರ : ಅಂತು ಗಗನತಲದಿ ನವನೀತ ಲಕ್ಕವ ತರಿಸಿ ವಿವಿಧಮಣಿನಿಕೇತನಾಗ್ರಾವಲಗ್ನಕೇತುಮಾಲಾವಿಲಸಿತಸಾಕೇತಮಂ ಬಳಸಿ ನಾಕಿ[ಪಾಠಾಂ. ದೇವ]ನಿಕಾಯಮಿರೆ (ಆದಿಪು.೭-೪೩ ವ) ; ನುಡಿಯುದೆ ಮೋನಗೊಂಡಿನಿಸಿರ್ದಧಿಪತಿಗೆ ನಿಚ್ಚಂ [ಮೆಚ್ಚಂ] ಪಡೆದು ನಚ್ಚಿನ ನಾಕಿನಿಕಾಯ ಮಾಮಂಗಲದಹೋರಾತ್ರಮೋಲಗಿಕುಂ (ಶಾಂತಿಪು. ೧೦-೮೭).
[ ನಾಕಿ + ನಿಕಾಯ ]

**ನಾಕಿನಿಳಯ** (ನಾ). ದೇವತೆಗಳ ವಾಸಸ್ಥಾನ ; ಸ್ವರ್ಗ : ನಾಕಿನಿಳಯದಂತೆ ಅನೂನಾಪ್ಸರೋಗಣಪ್ರಣೂತಮುಮತರ್ಕ್ಯಗೋಚರಮುಂ (ಚಂದ್ರಪು. ೫-೫೨ ವ). [ ನಾಕಿ + ನಿಳಯ (= ನಿಲಯ) ]

**ನಾಕಿಯಚಟ್ಟಯ್ಯ** (ನಾ). ಒಬ್ಬಾತನ ಹೆಸರು : ಕ್ರಮವಾಗತ ಹೆಗ್ಗಡೆ ನಾಕಿಯಚಟ್ಟಯ್ಯಂ ಚಿತ್ರಟಹಳ್ಳಿ ಓಟುರ್ಗ್ಗ ಮೂಲಿಗನ್ (ಎಕ. VIII, ಸೊರಬ. ೭೦-೧೦ ; 938). [ ? ]

**ನಾಕಿವರ** (ನಾ). ದೇವತೆಗಳಲ್ಲಿ ಶ್ರೇಷ್ಠನಾದವನು ; ಇಂದ್ರ : ಪವನಂ ಸೌರಭ್ಯಮಂ . . . ಅಮಲಮುಂದಾರಮಾಲಾಳಿಯಿಂ ನಾ ಕಿ ವ ರ ಂ ಕೆಯ್ಗಾಣ್ಕೆಗೆಯ್ದಂಘ್ರಿಗೆ ಮ ಣಿ ದೊ ಲ ವಿ ಂ ಕೀರ್ತನಂಗೆಯ್ಯುತಿರ್ದರ್ (ಶಬಶಂ. ೦-೮೪). [ ನಾಕಿ + ವರ$_3$ ]

**ನಾಕು$_1$** 'ನಾಲ್ಕು' ನೋ.

**ನಾಕು$_2$** (ನಾ). ಹಾವಿನ ಹುತ್ತ, –ಬಿಲ : "ನಾಕು ವಾಮಲೂರಾಹ್ವಹಿ ಗೃಹಂ ವಲ್ಮೀಕಂ" (ವಸ್ತುಕೋ. ೧೯-೭) ; "ವಾಮಲೂರು ನಾಕು ವಲ್ಮೀಕ ಮೆನಲು ಹುತ್ತಿಂಗೆ ನಾಮಂ" (ಮಂಗರಾ ೧೧೯-೩). [ ಸಂ. ]

**ನಾಕುಮೈ** (ನಾ). ನಾಲ್ಕುದಿಕ್ಕು ; ಸುತ್ತಮುತ್ತು : ಆಕರಿಸಿ ಬೆಸಗೊಂಡು ಬಿಟ್ಟರನೇಕ ನೃಪರನು ಬೇಹು ಹರಿದುದು ನಾಕುಮೈಯಲಿ ತುಬ್ಬು ಕಾಱಂಗಿತ್ತು ಬಹುಧನವ (ತೊರರಾ. ೪-೯-೦೦).
[ ನಾಕು$_1$ (<ನಾಲ್ಕು) + ಮೈ (<ಮೆಯ್) ]

**ನಾಕುಲಿ** (ನಾ). ಒಂದು ಬಗೆಯ ಗಿಡ ; ಮುಂಗುಸಿಯ ಮೇವಿನ ಗಿಡ ; ಸರ್ಪಾಕ್ಷಿ : "ನಾಕುಲೀ . . . ಸುವಹಾ ಛ ಸರ್ಪಾಕ್ಷಿಗಿಡದ ಹೆಸರು . . . ಮುಂಗೀಮೇವು ಗಿಡ" (ಸಿದ್ಧಾಂತಿ. ೧೩೮). [ ಸಂ. ನಾಕುಲೀ ]

**ನಾಕೆ** (ನಾ). ಸುಂಕವನ್ನು ವಸೂಲು ಮಾಡುವ ಸ್ಥಳ ; ಪರವಾನಿಗೆ ಕೊಡುವ ಕಚೇರಿ ; ಸುಂಕದ ಕಟ್ಟೆ ; ಉಕ್ಕಡ ; ಜಕಾತಿಕಟ್ಟೆ (ಉಕ) : ಗೊತ್ತುಮಾಡಿದ ಸರಹದ್ದಿನ ನಾಕೆಯಲ್ಲಿ ಅದನ್ನು ಕೊಟ್ಟು ಅಂಥದೇ ಬಿಳೀ ಕಾಗದದ ಪಾಸನ್ನು ತಕ್ಕೊಳ್ಳಬೇಕು (ಕಭಾಗ. ೧೭ ಪರಿ); ನಾಕೇದ ಮೇಲಿನ ಕಾರಕೂನನದು ಕೆಲಸ ಅದ (ಎತ್ತಿಕ್ಕೈ. ೫).
[ ← ಹಿಂ. ನಾಕಾ ; ಮರಾ. ನಾಕೇ ]

**ನಾಕೆಬಂದಿ** (ನಾ). ಮಾರ್ಗವನ್ನು ಜನಸಂಚಾರಕ್ಕೆ ಅವಕಾಶವಿಲ್ಲದಂತೆ ಮಾಡುವುದು; ರಸ್ತೆಗಳಲ್ಲಿ ಸಂಚಾರವನ್ನು ನಿಷೇಧಿಸುವುದು: ಎರಡು ತಾಲೂಕುಗಳಲ್ಲಿ ನಾಕೆಬಂದಿ ಮಾಡಲಾಯಿತು (ಕರವೀ. ೧೩೨). [ ←ಮರಾ. ನಾಕೇಬಂದೀ ]

**ನಾಕೇಂದ್ರ** (ನಾ). ದೇವಲೋಕದ ದೊರೆ; ದೇವೇಂದ್ರ: ಪುಟ್ಟಿತ್ತಾ ನಾಕೇಂದ್ರಂಗೆ ನಿರ್ವ್ಯಾಕುಲಮುಮಳಭವಪ್ರತ್ಯಯಜ್ಞಾನವಾಗಳ್ (ಸುಕುಮಾ. ೯-೨೩). [ ನಾಕ + ಇಂದ್ರ ]

**ನಾಕೇಶ$_1$** (ನಾ).=ನಾಕೇಂದ್ರ: ಲೋಕಾಪವಾದಕ್ಕೆ ಅಂಜಿ ನಡೆವುದು ವಿವೇಕ ಕೇಳೆಚ್ಚರಿಕೆ ನಾಕೇಶನಾದರೂ ಬಿಡದಪವಾದ ಪರಾಕು ಕೇಳೆಚ್ಚರಿಕೆ (ನೀತಿಚಿಂ. XI, ೧೯). [ ನಾಕ + ಈಶ ]

**ನಾಕೇಶ$_2$** (ನಾ). ಕೂದಲು ಇಲ್ಲದವನು; ಲುಂಚನ ಮಾಡಿಕೊಂಡವನು; ಸವಣ: ನಾಕೇಶನಾಗಲೊಡನೊಡನಾ ಕೇಶಮನಾಂತ ಶೋಣ ಮಣಿಪಟಳಕಮಾಲೋಕನದ ತಣಿವನಿತ್ತುದು (ಪುಷ್ಪಪು. ೧೩-೧೦೦). [ ಸಂ. (ನಾ + ಕೇಶ) ]

**ನಾಕೌಕ** (ನಾ).=ನಾಕನಿಳಯ: ನಾಕಸುಖಶೇಷಮಂ ನಾಕೌಕರ್ ಬಂದದಱಿಗಾಳನುಭವಿಪ್ಪುದಱಿಂದ (ಶಾಂತಿಪು. ೯-೧೩೭). [ ನಾಕ + ಓಕ$_1$ ]

**ನಾಕ್ಚಾಪ್** 'ನ್ಯಾಪ್‌ಚಾಕ್' ನೋ.

**ನಾಕ್ಷತ್ರ** (ಗು). ೧. ನಕ್ಷತ್ರಕ್ಕೆ ಸಂಬಂಧಪಟ್ಟ: ನಾಕ್ಷತ್ರ (Sidereal) ಪಂಚಾಂಗವನ್ನು ನಿರ್ಮಿಸಿ ಹಳೆಯ ಪಂಚಾಂಗವನ್ನು ತಿದ್ದಿದರು (ಶಿಲ್ಪನಾ. ೩೫). ೨.=ನಾಕ್ಷತ್ರಮಾನ: ಆ ಸಂವತ್ಸರವೇ ಸೌರ ಚಾಂದ್ರ ಬಾರ್ಹಸ್ಪತ್ಯ ನಾಕ್ಷತ್ರ ಸಾವನ ಭೇದದಿಂದೈದುತೆಱನಾಗಿರ್ಪುದು (ವಿವೇಕ. ೩೪೨); ಶ್ರೀಪರಮಾತ್ಮನು ಮೇಲೆ ಹೇಳಿದ ಪ್ರಕಾರ, ಬಾರ್ಹಸ್ಪತ್ಯ, ಸೌರ, ಅನುಸೌರ, ನಾಕ್ಷತ್ರ, ಚಾಂದ್ರಮಾನಗಳೆಂಬ ಐದು ಬಗೆಯಾಗಿ ಗಣಿಸುವ ಪರಿವತ್ಸರಾದಿ ೫ ಹೆಸರುಗಳನ್ನು ಧರಿಸಿರುವವನು (ಹಸಾರ. ೫-೪೦ ಟೀಕು). [ ಸಂ. ]

**ನಾಕ್ಷತ್ರಮಾನ** (ನಾ). ನಕ್ಷತ್ರಗಳ ಗತಿಯನ್ನು ಅನುಸರಿಸಿ ಮಾಸ, ವರ್ಷಗಳನ್ನು ಗಣಿಸುವ ಕಾಲಮಾನ; ☞ ಈ ಕಾಲಮಾನದಂತೆ ನಕ್ಷತ್ರಗಳು ಒಂದು ಸುತ್ತು ತಿರುಗುವುದಕ್ಕೆ ೨೭ ದಿನಗಳಾಗುವುದರಿಂದ, ೨೭ ದಿನಗಳಿಗೆ ಒಂದು ತಿಂಗಳಾಗುತ್ತದೆ. [ ನಾಕ್ಷತ್ರ + ಮಾನ ]

**ನಾಖುಷಿ** (ನಾ). ಸಂತೋಷವಿಲ್ಲದಿರುವುದು; ಅಸಂತೋಷ; ಅತೃಪ್ತಿ: ಅರಸಿನವರು ತಮ್ಮ ಮಾತ ಕೇಳಲಿಲ್ಲವೆಂದು ನಾಖುಷಿಯಿಂದ ಬರಕ್ಕಿ ಶ್ರೀನಿವಾಸರಾಯರು ಹೊರಟುಹೋಗಿ ಪಟ್ಟಣಕ್ಕೆ ದಾಖಲಾದರು (ಹೈದರ. ೧೦೭); ತುಸು ನಾಖುಷಿ ತೋರಿದರೂ ಹೇಳಿ ಒಪ್ಪಿಸಬಹುದು ಬಿಡಿ ಅದರಾಗೇನು (ಭಾಗ್ಯಶ್ರೀ. ೨೨). [ ← ಪಾರ. ಹಿಂ. ನಾಖುಶೀ ]

**ನಾಗ** (ನಾ). ೧. ಹಾವು; ಸರ್ಪ: "ಅಹಿ ನಾಗಂ ವ್ಯಾಳನಾಶೀವಿಷಂ" (ವಸ್ತುಕೋ. ೧೯-೭); "ಉರಗಂ ಸರೀಸೃಪಂ . . . ನಾಗನಾಶೀವಿಷಂ . . . ವ್ಯಾಳನೆನಲು ಸರ್ಪಂಗೆ ನಾಮಂ" (ಮಂಗರಾ. ೧೧೮-೧). ೨. ನಾಗರಹಾವು: ನಾಗರ ನಾಗರಕನ್ನೆಯರ ರೂಪುಗಳಟ್ಟಳವಾಗೆ ಭೋಗಿಗಳ್ ಭೋಗಿಗಳೆಂಬ ಭೋಗಿಗಳೆ ಭೋಗಿಗಳಲ್ಲಿಯ ಭೋಗನಾಯಕರ್ (ಪಂಪಭಾ. ೪-೧೭); ನಾಗ ಬಂದರೆ ಕೋಲ ಕಳೆದುಕೊಂಬರು (ಬಸವ. ೧೯೫); ನವಿಲು ನಾಗಂಗಳಡಸಿ ನಿಜವೈರಮಂ ಮಱೆದಿಪ್ಪುವೆನೆ ಮುನಿಯ ಮಹಿಮೆಯಂ ಪೊಗಳ್ವರಾರು (ಹಚಕಾ. ೫-೫೭); ತಾನಲ್ಲಿ ಮೊಸಳೆಯಾದತ್ತಾ ನಾಗನುಮಾಗಿ ಬಳೆಯೆ (ಯಶೋಧ. ೩-೪೭); ಹಳದಿಯ ಹೆಡೆಯನು ಬಿಚ್ಚೋ ಬೇಗಾ ಹೊಳಹಿನ ಹೊಂದಲೆ ತೂಗೋ ನಾಗಾ! (ಕನ್ನಬಾ. ೧೨೨-೨೦). ೩. ಕಶ್ಯಪನ ಪತ್ನಿಯಾದ ಕದ್ರು ಎಂಬುವಳಲ್ಲಿ ಜನಿಸಿದ (ಪುರಾಣೋಕ್ತವಾದ) ಒಂದು ದೇವಸಂತತಿ; ಮನುಷ್ಯನ ಮುಖವೂ ಸರ್ಪದ ದೇಹವೂ ಇರುವ ಪಾತಾಳನಿವಾಸಿಯಾದ (ಅರ್ಧ ದೇವತಾಸ್ವರೂಪದ) ಜೀವ: ದೇವ ನಾಗ ನರ ಸುರ ಸೇವ್ಯ . . . ರಕ್ಷಿಪುದೆನ್ನ (ಪ್ರಾಭರಾ. ೨೦-೧). 'ಅಷ್ಟನಾಗ', 'ಅಷ್ಟಫಣಿ' ಪರಾ. ೪. ಆನೆ; ಗಜ: "ಆನೆಯಲ್ಲಿಯುಂ ನಾಗಮೆಂಬುದು" (ಹಲಾಯು. ೧೩೨-೧೧); ಮನಮುಱಿದು ನಗೆಯೊಳಾ ನೃಪತನಯೆಯ ರಥಮಂ ನೃಪಾಂತರಕ್ಕುಯ್ವುದೋ ಪೇಟ್ ಎನೆ ನೊಂದು ನಿಷಾದಿಗೆ ಮುಳಿದನಂಗ ನೃಪಯಾನನಾಗಮಂ ವಧು ಪೋಲ್ವಳ್ (ಶಾಂತಿಪು. ೫-೧೫೯); ನಾಗಮೆ ನಾಗದಂತಿರೆ ಪಡಲ್ವಡೆ . . . ನಡುಗಿತ್ತು ಚಂಚಲಾಂಭೋಗತಚಂದ್ರಮಂಡಲದವೋಲ್ ಜಿತಶತ್ರುಗೆ ಶತ್ರುಮಂಡಲಂ (ಅಜಿಪು. ೨-೪೮). 'ನಾಗಮುಖ' ಪರಾ. ೫. ಮೋಡ; ಮೇಘ: ನಾಗಮೆ ನಾಗದಂತಿರೆ ಪಡಲ್ವಡೆ . . . ನಡುಗಿತ್ತು ಚಂಚಲಾಂಭೋಗತಚಂದ್ರಮಂಡಲದವೋಲ್ ಜಿತಶತ್ರುಗೆ ಶತ್ರುಮಂಡಲಂ (ಅಜಿಪು. ೨-೪೮). 'ನಾಗಭೂಷಣ' ಪರಾ. ೬. ಮುಖಂಡ; ಮೊದಲಿಗ; ಪ್ರಧಾನ; ಸಚಿವ: "ನಾಗಂ ಪ್ರಧಾನಭೂತಂ" (ವಸ್ತುಕೋ. ೧೩೦-೮೩). ೭. ಶರೀರದಲ್ಲಿರುವ ಉಪವಾಯುಗಳಲ್ಲಿ ಒಂದು; ತೇಗು, ವಾಂತಿ, ಉದ್ಗಾರಗಳನ್ನು ಉಂಟುಮಾಡುವ ವಾಯು: "ದೇಹಮಂ ತಾಳ್ದಿಹುದು ನಾಗಮುಕ್ಕುಂ" (ಮಂಗರಾ. ೧೫-೧೨); ಉದ್ಗಾರವೆಂಬ ಕ್ರಿಯೆಯು ಮಾಡುವದ್ದರಿಂದ ಆ ಅಂತರವಾಯು ನಾಗಸಂಜ್ಞೆಯನ್ನೂ . . . ಪಡೆದುಕೊಂಡಿರುವುದು (ಮುಮುಕ್ಷು. ೩). ೮. ಒಂದು ಲೋಹ; ಸೀಸ: "ಅನುಗೊಳಿಸೆ ನಾಗವಾ ಸೀಸಪತ್ರಂ ಸೀಸಮೆನಿಕುಂ" (ಮಂಗರಾ. ೩೦-೫); "ಫಣಿಯೊಳು ಸೀಸದೊಳು ಸಚಿವನೊಳು ಗಜದೊಳು ಸಲೆ ನಾಗಮುಕ್ಕು" (ಮಂಗರಾ. ೦೪೮-೪೦). ೯. ಒಂದು ಬಗೆಯ ಸುವಾಸನೆಯ ಹೂಬಿಡುವ ಮರ; ಸುರಗಿ; ಸುರಹೊನ್ನೆ: "ನಾಗಂ ಪ್ರಧಾನಭೂತಂ ನಾಗಂ ಭೂರುಹವಿಶೇಷಮುಂ ಕುಂಜರಮುಂ" (ವಸ್ತುಕೋ. ೧೩೦-೭೩); "ನಾಗಮೆನೆ ಸುರಗಿಯೆನಿಸಿಕ್ಕು" (ಮಂಗರಾ. ೩೮-೨೪); "ನಾಗಃ – ವತ್ಸನಾಭಿ, ಆನೆ, ಸರ್ಪ, ನಾಗದಂತಿ, ಸುರಹೊನ್ನೆ, ಮುಗ್ಗಾರೆ" (ಓಷಧಿ. ೮೫). ೧೦. ಒಂದು ಬಗೆಯ ಹೂಬಿಡುವ ಮರ; ನಾಗಸಂಪಿಗೆ; ನಾಗಕೇಸರ: "ನಾಗಂ ಗಜಕೇಸರಂ" (ವಸ್ತುಕೋ. ೩೪-೭); ಷಷ್ಠೋಪವಾಸದಿಂ ಪುಷ್ಪಕೋದ್ಯಾನದೊಳ್ ನಾಗವೃಕ್ಷದಡಿಯೊಳ್ . . . ಕೇವಲಜ್ಞಾನ ಮಹಾಕಲ್ಯಾಣ ಮಹಾಪೂಜೆಯನೆಯ್ದಿ (ಚಾವುಂಪು. ೧೨೮); ಕೇದಗೆ ಸಂಪಗೆ ನಾಗಂ ಹಾದರಿಯದಿರ್ಗುಂತೆ ಸುರಯಿ ವಕುಳ ಲವಂಗಂ (ಎಕ. VIII, ಸಾಗರ. ೧೦೯-೫೦; 1042); ಕುರವಕ [ಚಂಪ]ಕಾರ್ಜು[ನ] ತಮಾಳ ಕುಚಂದನ ಚಂದ ನಾಗ ಜಂಬಿರ ಪನಸಾಮ್ರ ನಿಂಬ ಕುಟಜಾದಿ ಮಹಾಕುಜಸಂಕುಳಂಗಳಿಂ (ಬಂಹರಿ. ೭-೭). ೧೧. ಬೆಂಕಿ; ಅಗ್ನಿ. ೧೨. ಕತ್ತಲೆ; ತಮಸ್ಸು. ೧೩. ನೀರು; ಜಲ: "ಸಿಂಧೂರ ಕುಚಾಹಿ ಮುಖ್ಯ ತಮ ಸೀಸ ಜಲಾನಲ ನಾಗವಾಚಕಂ" (ನಾನಾರ. ೨೭). ೧೪. ಶಂಖ: "ಮತ್ತಗಜಂ ಮರ ಸರ್ಪಂ ಕತ್ತಲೆಯುದಕಾಗ್ನಿ ಸೀಸ ಮುಖ್ಯಂ ಶಂಖಂ ಬಿತ್ತರವಾಗಿಹ ಪೆಸರೊಂಭತ್ತುಂ ನಾಗಾಭಿಧಾನಮೆನಿಕುಂ ಜಗದೊಳ್" (ನಾನಾಕಂ. ೭). ೧೫. ಒಂದು ಜಾತಿಯ ಮೀನು; ಷಾರ್ಕ್‌ಮೀನು. ೧೬. ಕ್ರೂರಿ; ದುಷ್ಟ. ೧೭. ದೀಪ ಮೊದಲಾದುವನ್ನು ತೂಗುಹಾಕಲು ಬಡಿದಿರುವ ಕೊಕ್ಕೆ. ೧೮. ನಾಗರಹಾವಿನ ವಿಗ್ರಹ,-ಪ್ರತಿಮೆ: ಈ ರಾಜನ ಮಗಳು . . . ನಾಗವನ್ನೂ, ಕೆರೆಯನ್ನೂ ಒಂದು ವಿಹಾರವನ್ನೂ ದಾನಮಾಡಿದಳೆಂದು ತಿಳಿದು ಬಂದಿದೆ (ಕರ್ಣಾಅ. ೩). 'ನಾಗಪ್ರತಿಷ್ಠೆ' ಪರಾ. ೧೯. ಒಬ್ಬಾತನ ಹೆಸರು: ಶ್ರೀ ಅಪ್ಪಿಆಚಾರಿಯರ ಮಗನ್ನಾಗನ್ ಮಡಿದ (ಎಕ. IX, ಬೆಂಗಳೂ. ೩೭-೫; 750); ಮಾಧವಯ್ಯಂ ಬರೆದಂ

ನಾಗಂ ಬೆಸಗೆಯ್ದಂ (ಎಕ. VIII, ಸೊರಬ. ೫೩೦-೧೩ ; 979). **೨೦.** ಭಾರತದ ನಾಗಾಲ್ಯಾಂಡ್ ಮತ್ತು ಅಸ್ಸಾಂ ಪ್ರಾಂತಗಳಲ್ಲಿ ನೆಲೆಸಿರುವ ಒಂದು ಜನಾಂಗ : ಇಷ್ಟೆಲ್ಲ ನಾಗರಿಕತೆಯುಳ್ಳ ಜನರ ಎಡೆಯಲ್ಲಿರುವ ನೀಲಗಿರಿಯ ತೋಡರೂ, ಅಸ್ಸಾಮಿನ 'ನಾಗ'ರೂ . . . ಹೊಸಸಂಸ್ಕೃತಿಗಳಿಗೆ ಸಿಗದವರು (ಬಾಲಪ್ರ. I, ೯೯೯). **೨೧.** = ನಾಗವ : ಕರಣವೇಕಾದಶಗಳಲಿ ಚರಕರಣ ಶಕುನಿ ಚತುಷ್ಕ ವಣಿಜೆಯು ನಾಗ ಕಿಂಸ್ತುಘ್ನ (ಗಗತಾ. ೯-೭೦). 'ನಾಗವ' ಪರಾ. **೨೨.** [ಛಂದ] ಒಂದು ಅರ್ಧಸಮವೃತ್ತ : ನಾಗ – ಒಂದು ಮೂರನೆಯ ಪಾದಗಳಲ್ಲಿ ಒಂದು ತಗಣವೂ ಒಂದೊಂದು ಗುರು ಲಘುಗಳೂ, ಎರಡು ನಾಲ್ಕನೆಯ ಪಾದಗಳಲ್ಲಿ ಒಂದು ತಗಣವೂ ಒಂದು ಗುರುವೂ ಇರುವುವು (ಛಂಬುಧಿ. ೮೯). **೨೩.** [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : "ಕರಿ ನಾಗ ವಸುವೆಂಟು" (ಮಂಗರಾ. ೧೦೯-೮) ; ಯುಗ ಋತು ಗಜ ನಾಗಾಂಬರ ಮೃಗಧರವಗ ಷಟ್ಕವೆನಿಪ ವೃತ್ತದ ಲೆಕ್ಕಂ ಸೊಗಯಿಸಿ ತೋರ್ಕುಂ ಗಣಿಯಿಪುದಗಣಿತ ಗುಣನಿಲಯು ನಾಗವರ್ಮನ ಮತದಿಂ (ಛಂದೋಂಬು.೩-೨೦೦). **೨೪.** [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : "ನಾಗ ಶೈಲ ಸಪ್ತಂ" (ಭಾಸ್ಕರ.೮೪-೫).

**ನಾಗನ ಹುಲ್ಲು** = ಒಂದು ಬಗೆಯ ಹುಲ್ಲು ; ಶತ್ತೆಹುಲ್ಲು ; ದೇವನಾಳ : "ದೇವನಾಳಂ ಪಿರಿದಾಗಿರ್ಪ ಭೂಮಿ–ನಡ್ವತ್, ನಡ್ವಲ, ಒಪ್ಪಿಲೆ, ನಾಗನ ಹುಲ್ಲುಂ[ಪಾಠಾಂ. ಟ್ಟ್ರಂ]ದೂ ಎಂಬರು" (ನಾಚಿರಾ. ೬). **ನಾಗಪ್ಪ** = ನಾಗರಹಾವು : ನಾಗಪ್ಪಗ್ಹಾಲ ಎರಿಯೋಣ (ಜನಗೀ. ೩) ; ನಾಗಪ್ಪನಿಗೆ ತನಿ ಎರೀತೀನಿ ಅಂತ ಹರಕೆ ಕಟ್ಟಿಕೊ (ರೂಢಿ). [ಸಂ.]

**ನಾಗಂಡುಗ** 'ನಾಲ್ಗಂಡುಗ' ನೋ.

**ನಾಗಂದ** (ನಾ). ಒಬ್ಬಾತನ ಹೆಸರು : ಶ್ರೀಗೋವಿನ್ದರ ವಲ್ಲಹನ್ಪೃಥಿವೀರಾಜ್ಯಂಗೆಯೆ ಮೆಡ ನಾಗನ್ದನ್ × × × ನಾಡಾಳೆ (ಎಕ. VIII, ಸೊರಬ. ೫೪೩-೧ ; ಸು. 800). [ ? ]

**ನಾಗಂದಿ** 'ನಾಗಂದಿಗೆ' ನೋ.

**ನಾಗಂದಿಗೆ**, ನಾಗಂದಿ, ನಾಗವಂದಿ, ನಾಗವಂದಿಗೆ, ನಾಗೊಂದಿ, ನಾಗೊಂದಿಗೆ (ನಾ). **೧.** ಮನೆಗಳಲ್ಲಿ ಸಾಮಾನುಗಳನ್ನು ಇಡಲು ಅನುಕೂಲವಾಗುವಂತೆ ಗೋಡೆಗಳಿಗೆ ಎತ್ತರದಲ್ಲಿ ಜೋಡಿಸಿರುವ ಮರದ ಹಲಗೆ ; ಬಡು. **೨.** ಬಾಗಿಲುವಾಡದ ಮೇಲೆ ಅಥವಾ ಕಂಬದ ಸುತ್ತ ಇರುವ, ಸಾಮಾನಿಡುವ ಸ್ಥಳ : ಜಾನಕಿಯು ಪಸೂಲುವಾಡಿ ತಂದ ರೂಪಾಯಿಗಳನ್ನು ನಾಗಂದಿಗೆಯ ಮೇಲೆ ಇರಿಸಿ ಸ್ನಾನಕ್ಕೆ ಹೋಗಿದ್ದಳು (ಸರಸ. ೩) ; ನಾಗಂದಿಗೆ ಮೇಲಕೆ ಫೇಣಿಯನಿರಿಸಿ ಮರತೇ ಬಂದಿಹೆನು (ನಡದಾ. I, ೪೦೦) : ನಾಗಂದಿಗೆಯಿಂದ ನಾಗಂದಿಗೆಗೆ ಅಡ್ಡಲಾಗಿ ಹಾಕಿದ್ದ ಬಿದಿರ ಗಳುವಿಗೆ ತೂಗುಹಾಕಿದ್ದ (ಮಲೆಮ. ೨೩೪). **ನಾಗಂದಿ : ೨.** ಕುಡುಗೋಲುಗಳು ನಾಗಂದಿಯ ಮೇಲೆ; ಜಂಗು ತಿನ್ನುತ್ತ ಬಿದ್ದಿದ್ದವು (ಚಿನಬಾ. ೨೩೪). **ನಾಗವಂದಿ : ೧.** ಹುಳಿತ ನಾಗವಂದಿಗಳೂ ಗೂಟಗಳೂ ಬೇಕಾದಷ್ಟಿವೆ (ವೋಜೀವ. ೮). **ನಾಗವಂದಿಗೆ : ೧.** "ನಿರ್ವ್ಯೂಹ . . . ನಾಗವಂದಿಗೆ" (ಗಂಗಾಮ. ೧೮೫) ; ಈ ಪುಸ್ತಕಗಳನ್ನು ಕಟ್ಟಿ ನಾಗವಂದಿಗೆಯ ಮೇಲಿಟ್ಟುಬಿಡು (ರೂಢಿ). **ನಾಗೊಂದಿ: ೨.** ಗೋದಾವರಿ ಮಾತನಾಡಲಿಲ್ಲ. ಕೈಯನ್ನೆತ್ತಿ ಪಡಸಾಲೆಯ ನಾಗೊಂದಿಯಲ್ಲಿಯ ಒಂದು ಕಾಗದವನ್ನು ಎತ್ತಿ ಬಾಬೂನ ಕೈಯಲ್ಲಿರಿಸಿದಳು (ರಕ್ತಧ್ವ. ೨೭೩). **ನಾಗೊಂದಿಗೆ : ೧.** ಸಾಬೂನು, ಬ್ರಶ್ ಮತ್ತು ಇತರ ತೊಳೆಯುವ ಸಾಧನಗಳನ್ನಿರಿಸಲು ಸಿಂಕಿನ ಮೇಲುಗಡೆಯಲ್ಲಿ ಒಂದು ಕಪಾಟು ಅಥವಾ ನಾಗೊಂದಿಗೆ (Shelf) ಇರಬೇಕು (ಅಡುಸಾ. ೧೩). ಪಕ್ಕದ ನಾಗೊಂದಿಗೆಯ ಮೇಲಿದ್ದ ಹಲ್ಲುಪುಡಿಯ ಡಬ್ಬವನ್ನು ತೆಗೆದು ಆಕೆಯ ಕೈಗಿತ್ತ (ವಾತ್ಸಲ್ಯ. ೧೭). [ < ಸಂ. ನಾಗದಂತಕ ]

**ನಾಗಕಂಕಣ** (ನಾ). ಹಾವುಗಳೇ ಕೈಕಡಗವಾಗಿರುವವನು ; ಸರ್ಪಗಳನ್ನು ಕಡಗದಂತೆ ಕೈಗೆ ಸುತ್ತಿಕೊಂಡಿರುವವನು ; ಶಿವ : ನಾಗಕಂಕಣಗೆ ಯತಿವರ ಮರುಳಾರ್ಯಂಗೆ ರಾಗದಿಂದೊಪ್ಪಿ ಶರಣೆಂಬೆ (ಆತ್ಮತ್ರಿ. ೧) ; ನಾಗಾಂಕನ ಅಱಿದು ತಾನಾಗದೆ ನಾಗಕಂಕಣನಾದ ನಾಗಾಯಿ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ (ಸಿದ್ಧವ. ೪೨೨-೧೩೭೦) ; ಗಿರಿಜೆ ತಪವಟ್ಟು ಮೆಚ್ಚಿಸಿ ರಜತಾದ್ರಿಯಲಿ ನಾಗಕಂಕಣನಿಂ ಪಡೆದಳನುರಾಗದಿಂದೀ ಲಾಂಛನವನು (ಬಸವು. ೧೩-೨೫) : ದಕ್ಷನಂ ಕೊಲಲೆಂದು ನಾಗಕಂಕಣನೆನ್ನನಟ್ಟಿದಂ (ವೀಶೈಪು. ३-೪-೨೫) ; ನಾಗಕಂಕಣ ಕರಯುಗದಿಂದೆ ಪಿಡಿದೆತ್ತಿ ಪೂಗೋಲ ನರ್ಥಾಂಗಿಗಾಗ ರಾಗದಿ ವಸ್ತ್ರಭೂಷಣವಿತ್ತು (ವೋಹತ. ೮-೪೫). [ ನಾಗ + ಕಂಕಣ ]

**ನಾಗಕಟಕ** (ನಾ) = ನಾಗಕಂಕಣ : ನಾಗಕಟಕಂಗಿತ್ತು ವಿಷಮಂ ರಂಗದಿಂ ನೀವುಂಡು ಸಾಯದಡಾ ಪ್ರಸಾದವನು ನೀವು ಕೈಕೊಂಡನುಭವಿಸುತಿರೆ ನಾವು ಬೇಡೆವು (ಬಸವು. ೫೮-೪೭) ; ನಾಗಯಜ್ಞೋಪವೀತಂ ನಾಗಕುಂಡಲಂ ನಾಗಕಟಕಂ . . . ನಾಗವಿಷಧರನೊಪ್ಪುತಿರ್ದಂ (ಲಶಿಚಂ. ೨೭-೨೯). [ ನಾಗ + ಕಟಕ$_3$ ]

**ನಾಗಕನ್ನಿಕೆ** (ನಾ).= ನಾಗಕನ್ನೆ : ನಾಗಕನ್ನಿಕೆಯರು ನಾಥನ ಬೇಡಲು ನಾನಾ ವಿಧದಿ ಸ್ತುತಿಮಾಡಲು (ಪುರಂದ. ೨-೧೦೩-೩). [ ನಾಗ + ಕನ್ನಿಕೆ ]

**ನಾಗಕನ್ನೆ** (ನಾ). ನಾಗಲೋಕದ ಹೆಣ್ಣು : ಪಡೆಮೆಚ್ಚೆಗಂಡನ ಗಂಡಗಾಡಿಯಂ ಕಂಡು ಫಣೀಂದ್ರನ ಕನ್ನೆ ಮದನಲತೆಯೆಂಬ ನಾಗಕನ್ನೆ ಕಣ್ಬೇಟಂಗೊಂಡು ತನ್ನ ಲೋಕಕ್ಕೊಡಗೊಂಡು ಪೋಗಲ್ (ಪಂಪಭಾ. ೪-೧೫ ವ). [ ನಾಗ + ಕನ್ನೆ$_1$ ]

**ನಾಗಕನ್ಯೆ** (ನಾ). = ನಾಗಕನ್ನೆ : ಮಧ್ಯಮಪಾಂಡವ ಅರ್ಜುನ ಉಲೂಪಿ, ಚಿತ್ರಾಂಗದೆ ಎಂಬ ನಾಗಕನ್ಯೆಯರ ಕೈಹಿಡಿದ ಕಥೆ ಪ್ರಸಿದ್ಧವಾಗಿಯೇ ಇವೆ (ಭಾಹಬ್ಬ. ೧೦೦). [ ನಾಗ + ಕನ್ಯೆ ]

**ನಾಗಕರಣ** (ನಾ). **೧.** = ನಾಗ **೨೧. ೨.** [ಕಾಮಶಾ] ಸಂಭೋಗದಲ್ಲಿ ಒಂದು ಬಂಧ : ಆ ಕಾರಣಮಂ ಪುರುಷನ ಪುರುಷನ ಶಿರದಿಂ ಪೊರದೆ ಯೆರಡು ತೊಡೆಗಳನಿಕ್ಕಿದರೆ ನಾಗಕರಣ (ಕಾಮಶಾ. ೬-೧೩೬). [ ನಾಗ + ಕರಣ ]

**ನಾಗಕುಂಡಲ** (ನಾ). **೧.** ಸರ್ಪದ ಕರ್ಣಾಭರಣ ; ಹಾವಿನ ಕುಂಡಲ : ನಾಗಕುಂಡಲಂ ಪೊಸ್ನೋಲೆಯೆಸೆವ ಕಟಿ ರನ್ನದಾಳಿ (ಹಚಕಾ. ೦-೬) : ಬಲಗಿವಿಯಲ್ಲಿ ನಾಗಕುಂಡಲ ಎಡಗಿವಿಯಲ್ಲಿ ಮಕರಕುಂಡಲವೂ ಇವೆ (ಹೊಯ್ಸಳವಾ. ೯೭). **೨.** ಸರ್ಪವೇ ಕುಂಡಲವಾಗಿರುವವನು ; ಶಿವ : ನಾಗಕುಂಡಲನಱಿದೆವೆಂಬರು ನಾಗದೇವತೆಗಳಾದರು ನಾಗಾಯಿ (ಸಿದ್ಧವ. ೪. ೪೨೨-೧೩೭೦) ; ನಾಗಯಜ್ಞೋಪವೀತಂ ನಾಗಕುಂಡಲಂ ನಾಗಕಟಕಂ . . . ನಾಗವಿಷಧರನೊಪ್ಪುತಿರ್ದಂ (ಲಶಿಚಂ.೨೭-೨೯) ; ನಾಗಕುಂಡಲ ನಾಗದನುಜ ಚರ್ಮಾಂಬರನೆ ನಾಗನರಲೋಕಕಧಿಕನೆ ರಕ್ಷಿಸುವುದೆಂದು ನುತಿಸೆ (ಪ್ರಾರ್ಥರಾ. ೨-೪೧). [ ನಾಗ + ಕುಂಡಲ ]

**ನಾಗಕುಷ್ಠ** (ನಾ). ಒಂದು ಬಗೆಯ ಕುಷ್ಠರೋಗ ; ಹಾವಿನ ಮೈಮೇಲೆ ಚುಕ್ಕೆಗಳು ಇರುವಂತೆ ಮೈಮೇಲೆ ಚುಕ್ಕೆಗಳುಂಟಾಗುವ ಕುಷ್ಠರೋಗ : (೬). [ ನಾಗ + ಕುಷ್ಠ ]

**ನಾಗಕೆ** (ನಾ). = ನಾಗ **೭** : ಅವುಗಳ್ಗಿನ್ನು ಕರ್ಮಾದಿಗಳವೆಂತೆಂದನ್ನಲಿಕೆ ನಾಗಕೆಯು ಉದ್ಗಾರಾದಿ ಗುಣವಹುವು (ಗಗತಾ. ೯-೬೩). [ಸಂ. ನಾಗಕ]

**ನಾಗಕೇಶರ** (ನಾ). = ನಾಗಕೇಸರಿ **೧** : ಮುಂಬಯಿ ೨೧ ಮಣದ ಖಂಡಗದ ಮೇಲೆ ಕಿಮ್ಮತ್ತು ಆಗತಕ್ಕ ಜೀನಸಗಳು. ೧, ಬುಕ್ಕಿಟ್ಟು (ಅಬೀರ) ; ೨, ಅಂಬೆಹಳದಿ (ಗಂಟು ಅರಶಿಣ) . . . ೧೩ ನಾಗಕೇಶರ ಕೆಂದು; ೧೪ ಪತಂಗ, ಮಲಬಾರಿ (ಮುಂಬವ್ಯಾ. ೧೨೦). [ ಸಂ. ]

**ನಾಗಕೇಸರ** (ನಾ). ೧. ಒಂದು ಬಗೆಯ ಮರ ಮತ್ತು ಸುವಾಸನೆಯಿಂದ ಕೂಡಿದ ಅದರ ಹೂವು; ನಾಗಸಂಪಿಗೆ : "ಹೇಮಪುಷ್ಪಂ, ನಾಗಕೇಸರಂ –ಈ ೨ ನಾಗಕೇಸರಂ" (ಹಲಾಯು. ೩೪–೫೩) ; "ಚಾಂಪೇಯಃ, ಕೇಸರಃ, ನಾಗಕೇಸರಃ, ಕಾಂಚನಾಹ್ವಯಃ–೪ ನಾಗಸಂಪಿಗೇ ಮರದ ಹೆಸರುಗಳು. ಇದಕ್ಕೆ ನಾಗಕೇಸರವೆಂದು ಕೆಲವರು ಹೇಳುವರು" (ಸಿದ್ಧಾಂತಿ. ೧೨೭). ೨. ಒಂದು ಬಗೆಯ ಔಷಧಿ ಸಸ್ಯ : ತ್ರಿಕಟುಕ, ನಾಗಕೇಸರ, ಸೈಂಧವ ಇವಿಷ್ಟನು ಸಮಭಾಗದಲ್ಲಿ ಕೂಡಿ ಮೊಲೆವಾಲಿಂದರೆದು ಕೊಡಿಸಲು ಶ್ಲೇಷ್ಮ ಸನ್ನಿ ಶಮನವಹುದು (ವೈದ್ಯಸಾ. I, ೧೦೯) ; ಮುಟ್ಟಿನ ನಾಲ್ಕನೇ ದಿನ ನಾಗಕೇಸರದ ರಜಮಂ ಆಕಳ ತುಪ್ಪದಿಂವರಸಿ ಕುಡಿದು ವಡನೆ ಹಾಲಂ ಕುಡಿದು ಪುರುಷನ ಸೇರಿ ರಮಿಸಲು ಗರ್ಭವತಿಯಹಳು (ಕಾಮಶಾ. ೧೧–೨೭೭). ೩. ವಕುಳದ ಮರ ; ಕೇಸರವೃಕ್ಷ : "ಬಕುಳಮದು ನಾಗ ಕೇಸರಂ ಕಾಂಚನಪ್ರಸವಮಕ್ಕುಂ" (ಮಂಗರಾ. ೩೮–೨೩). [ ಸಂ. ]

**ನಾಗಕೇಸರಿ** (ನಾ). = ನಾಗಕೇಸರ ೧ : ಸಂಪಿಗೆ ಕದಳಿ ನಾಗಕೇಸರಿ ಪಾರಿಜಾತ . . . ಮೊಲ್ಲೆ ಮಲ್ಲಿಗೆ ಜಾಜಿ ಪೂಗೊಂಚಲೆಸೆವ ಪೊಸವನದೊಳಗೆ ಬಿಟ್ಟನಾ ಮಲುಹಣನು ಮಲುಹಣೆಯೊಳು (ಗುಭಜ. ೨–೫೩) ; ಏಲಕ್ಕಿ, ನಾಗಕೇಸರಿ, ಲವಂಗಚಕ್ಕೆ . . . ಚೂರ್ಣವನ್ನು ಮಾಡಿ (ಸಕವ್ಯ. ೮೪) ; ನಾಗಕೇಸರಿ, ನಾಗಸಂಪಿಗೆ (ಮೈಜಿಗಿ. ೫೩–೧೦೭೨). [ < ಸಂ. ನಾಗಕೇಸರ ]

**ನಾಗಗಾಂಧಾರಿ** (ನಾ). [ಸಂಗೀತ] ಒಂದು ರಾಗದ ಹೆಸರು : ನಾಗ ಗಾಂಧಾರಿ . . . ಹಿಂದೋಲವಸಂತ, ಆಭೇರೀ ಎಂಬಿವು ಉಪಾಂಗಗಳು (ಚತುಪ್ರ. ೦೨೯). [ ಸಂ. ನಾಗಗಾಂಧಾರೀ ]

**ನಾಗಗುಟ್ಟರಸ** (ನಾ). ಒಬ್ಬಾತನ ಹೆಸರು : ನಾಗಗುಟ್ಟರಸಮ್ ತಮ್ಮ ಏಱಿದ ಕುದುರೆಯನ್ ಮಗುಱೆ ಅಟ್ಟಿ ಬಾಳಂ ಕಿಱ್ತು ನಡದು ಪಲರನಿಱಿದು ಸತ್ತೊಡೆ (ಎಕ. X, ಕೋಲಾರ. ೨೦೦–೮ ; ಸು. 890). [ ? + ಅರಸ$_1$ ]

**ನಾಗಚಂಪಕ** (ನಾ). = ನಾಗಕೇಸರ ೧ : ನಾಗಚಂಪಕಕುಟ್ಮಲಾನುಕಾರಿ ನಾಸಾಪುಟವಿಕಸಿತಮುಕುಲಶೋಭಿತಚಂಪಕಂಗಳಂ . . . ನೋಡುತ್ತುಂ (ಸುಕುಮಾ. ೯–೧೦೭ ವ). [ ಸಂ. ]

**ನಾಗಚತುರ್ಥಿ** (ನಾ). ಒಂದು ಹಬ್ಬ ; ನಾಗಪೂಜೆಯನ್ನು ಮಾಡುವ ಚೌತಿ ; P ಶ್ರಾವಣಮಾಸದ ಶುಕ್ಲಪಕ್ಷದ ಚತುರ್ಥಿ : ಈವತ್ತು ನಾಗಚತುರ್ಥಿ, ನಾಳೆ ಗರುಡಪಂಚಮಿ (ರೂಢಿ). 'ನಾಗಪಂಚಮಿ' ಹೋ. [ ನಾಗ + ಚತುರ್ಥಿ ]

**ನಾಗಚೌತಿ** (ನಾ). = ನಾಗಚತುರ್ಥಿ : ನಾಗಚೌತಿ . . . ಅಂದು ಆಚಾರ ವಂತರಿಗೆ ಉಪವಾಸ ದಿವಸ (ಭಾಹಬ್ಬ. ೧೧೨). [ ನಾಗ + ಚೌತಿ ]

**ನಾಗಜಾಲ** (ನಾ). ನಾಗಲೋಕದ ವಿಭವಗಳಲ್ಲೊಂದು (?) : ನಾಗವಿಭೂಷಣಪ್ರತತಿ ನಾಗರಖಂಡಮಪೂರ್ವಮಪ್ಪ ಪುನ್ನಾಗದ ಬಾಸಿಗಂ ಬಗೆದ ಬಣ್ಣದ ಪುಟ್ಟಗೆ ನಾಗಜಾಲಮೆಂದಾಗಡೆ ನಾಗಲೋಕವಿಭವಂ ಗಳೊಳಾಱಿಸಿ ನಾಗಶಯ್ಯೆಯೊಳ್ ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣವನಂ ಮರುಳ್ಚಿದಳ್ (ಪಂಪಭಾ. ೪–೧೭). [ ಸಂ. ]

**ನಾಗಜಿಹ್ವಿಕೆ** (ನಾ). (ಬೆಟ್ಟ ಮೊದಲಾದ ಕಡೆಗಳಲ್ಲಿ ದೊರಕುವ) ಒಂದು ಬಗೆಯ ಕೆಂಪುಬಣ್ಣದ ಧಾತು ; ಮಣ್ಣುಶಿಲೆ : ಮನಶ್ಶಿಲಾ, ಮನೋಗುಪ್ತಾ, ಮನೋಹ್ವಾ, ನಾಗಜಿಹ್ವಿಕಾ–೪ ಮಣಿಶಿಲೆಯ ಹೆಸರುಗಳು" (ಸಿದ್ಧಾಂತಿ. ೩೦೭). [ ಸಂ. ನಾಗಜಿಹ್ವಿಕಾ ]

**ನಾಗಠಾಣ** (ನಾ). ನಾಗರಕಲ್ಲುಗಳನ್ನು ಪ್ರತಿಷ್ಠೆ ಮಾಡಿದ ಸ್ಥಳ ; ನಾಗಸ್ಥಾನ : ನಾಗಠಾಣಕ್ಕೆ ಪೋಗಿ ನಾಗರನರ್ಚಿಸಿ ಪೊಡೆವಟ್ಟು ಸೂರ್ಯ ಮಿತ್ರಾಚಾರ್ಯರುಮಗ್ನಿಭೂತಿರುಷಿಯರಂ ಕಂಡು ಜಾತಿಸ್ಮರೆಯಾಗಿ (ವಡ್ಡಾರಾ. ೧೨–೨೨). [ ನಾಗ + ಠಾಣ (<ತಾಣ) ]

**ನಾಗಣಂದ** (ನಾ). ಒಬ್ಬಾತನ ಹೆಸರು : ಸಂಬನೂರ ನಾಗಣನ್ದಪಿರಿಯ ಯ್ಯಂಗಳುಂ ದುರ್ಮ್ಮೆಯ ನಾಗದೇವಭಟಾರರುಂ (ಎಕ. XI, ಚಿತ್ರದು. ೭೪–೩೦ ; 968). [ < ಸಂ. ನಾಗಾನಂದ ? ]

**ನಾಗಣಂದಿ** (ನಾ). ಒಬ್ಬಾತನ ಹೆಸರು : ಶ್ರೀ ನಾಗಣನ್ದಿ ಕಿತ್ತಯ್ಯ ದೇವರ ಬನ್ದಿಸಿದರ್ (ಎಕ. II (R), ೬೦ ; 9ನೆಯ ಶತ). [ನಾಗ+ನಂದಿ]

**ನಾಗಣಿ** (ನಾ). ಸುರಹೊನ್ನೆ ಮರ ; ಪುನ್ನಾಗ : ಸುರಹೊನ್ನೆ (ನಾಗಣಿ):– ಬಹು ಭವ್ಯವಾದ ವೃಕ್ಷವು . . . ಬೊಡ್ಡೆಯು ಗಡುತರವಾಗಿಯೂ ಸರಳವಾಗಿಯೂ ಬೆಳೆಯುವುದು (ಕಭಾಗಿ. ೪೯). [ ? ]

**ನಾಗಣ್ಣೆಯ** (ನಾ). ಒಬ್ಬಾತನ ಹೆಸರು : ಸರ್ವಾಧಿಕಾರಿ ಶ್ರೀನಾಗಣ್ಣೆಯ ಸಂಧಿವಿಗ್ರಹಿಕ ಶ್ರೀ ಸೀಹಪ್ಪೆಯ (ಇಆ. V, ೨೭೮–೭ ; 1026). [ < ನಾಗಣ್ಣ + ಐಯ (<ಅಯ್ಯ$_1$) ]

**ನಾಗಣ್ಣ** (ನಾ). ೧. ನಾಗರಹಾವು : ಎಲೆ ನಾಗಣ್ಣ, ಹೇಳೆಲೋ ನಿನ್ನಾ ತಲೆಯಲಿ ರನ್ನವಿಹ ನಿಜವನ್ನಾ (ಕನ್ನಜಾ. ೧೨೩–೧). ೨. ಒಬ್ಬಾತನ ಹೆಸರಂ : ಶ್ರೀಕೊಡಲರಾ ನಾಗಂಣನಾ ಕೃತಮಿದಂ (ಮೈಆರಿ. ೧೯೩೦, ೩–೩೪ ; ಸು. 500). [ ನಾಗ + ಅಣ್ಣ$_1$ ]

**ನಾಗತಗರೆ** (ನಾ). ಒಂದು ಬಗೆಯ ಗಿಡ : ಕಾಡುಹುರುಳಿ, ನಾಗತಗರೆ, ಟೆಲಿಗ್ರಾಫ್ ಗಿಡ (ಮೈಜಿಗಿ. ೩೦–೫೭೨). [ನಾಗ + ತಗರೆ]

**ನಾಗತರ$_1$** (ನಾ). ಶ್ರೇಷ್ಠವಾದ ಆನೆ : ನಾಗತ ಂಗಳೊಂದೆ ಕಳಭಕ್ಕೆ ಮೊಗಂದಿರಿದತ್ತು (ಶಾಂತಿಪು. ೩–೧೦೪). 'ಅಶ್ವತರ' ಹೋ. [ ಸಂ. ]

**ನಾಗತರ$_2$** 'ನಾಗತ್ತರ' ನೋ.

**ನಾಗತಲ್ಪ** (ನಾ). ೧. ಹಾವಿನ ಹಾಸಿಗೆ; ಸರ್ಪಶಯನ. ೨. ಸರ್ಪವನ್ನೇ ಹಾಸಿಗೆಯನ್ನಾಗಿ ಮಾಡಿಕೊಂಡಿರುವವನು ; ನಾರಾಯಣ : ಬಲ್ಪಂಥಗಳ ಮಾಡಿ ಭೋಗಪಡದಿರು ನಾಗತಲ್ಪನ್ನ ಮೊರೆಹೋಗೆಲೋ ಪ್ರಾಣಿ (ವಿದಾಕ್ಕ. ೪೮–೯). [ ನಾಗ + ತಲ್ಪ ]

**ನಾಗತಿ$_1$** 'ನಾಯಕಿತ್ತಿ' ನೋ.

**ನಾಗತಿ$_2$** (ನಾ). ಜೀವನಂ ಚರಿಸುವ ನಾಲ್ಕು ಬಗೆಯ ಸ್ಥಿತಿಗಳು ; ಅನಿಮಿಷಗತಿ, ಮಾನವಗತಿ, ನಾರಕಗತಿ ಮತ್ತು ತಿರ್ಯಗ್ಗತಿ ಎಂಬ ಗತಿಗಳು : ಅತಿಕಾಂಕ್ಷೆಯೆಂಬಗಳತಿ ವಿಸ್ಮಯವಾಗಿ ಕ್ಷಿತಿಯನೊಡೆದು ನಾಗತಿಯ ಧೃತಿಗೆಡಿಸುತ ಬಳಸಿಹುದಾ ಪುರದೊಳು (ತ್ರಿಪುಸಾಂ. ೪–೪೦). [ನಾ$_2$ (< ನಾಲ್) + ಗತಿ]

**ನಾಗತಿ$_3$** (ನಾ). ಒಬ್ಬಾತನ ಹೆಸರು : ದುಗ್ಗತಿಗವುಣ್ಡಿಯ ಮಗಂ ನಾಗತಿ ಸಾಲತ್ತಿಯ [ತು]ಱುಗೊಳ ಸತ್ತಂ (ಸಾಇಇ. XX, ೧೪–೪; 878) ; ಶ್ರೀನಾಗತಿ ಆಳ್ದನ ದಣ್ಣೆ (ಎಕ. II, ೪೫೨–೧ ; ಸು. 1000). [ ? ]

**ನಾಗತಿಯಮ್ಮ** (ನಾ). ಒಬ್ಬಾತನ ಹೆಸರಂ : ಶ್ರೀ ನಾಗತಿಯಮ್ಮನ ಮಗಂ ಮಲಯ್ಯಂ (ಎಕ. XIV, ಎಳಂದೂ. ೯೭–೧; 1000). [ ನಾಗತಿ$_3$ + ಅಮ್ಮ$_1$ ]

**ನಾಗತ್ತರ, ನಾಗತರ$_2$** (ನಾ). ಒಬ್ಬಾತನ ಹೆಸರು : ಸಾಮನ್ತಸಹಿತಂ ನಾಗತ್ತರನಂ (ಎಇ. I, ೩೫೦–೪ ; 900) ; ನಾಗತ್ತ ನಳುಮಜ್ಜಲ ಬೀವಣ್ಣ ನೆಂಬೋನು ನಾಗದೇವನೇಂಬೋನು . . . ಕದಂಬೂರೆ ತುಱುಗಳ್ಕೊಳ ಕಾದಿ ಸತ್ತ (ಎಕ. IX, ಆನೇಕ. ೭೩–೫ ; 900). **ನಾಗತರ$_2$** : ಸತ್ಯವಾಕ್ಯ ಪೆರ್ಮಾಡಿಯ ಕಲಿಯುಗದಣುವ ನಾಗತರನೊಳ್ ಇವ್ವುಲಿಯೂರೊಡೆಯ ಇರುಗಮಯ್ಯನ ಮಗಂ ಸಿರಿಯಮಯ್ಯಂ . . . ಮೂಡಣ ಕೆಱೆಯಂ ಕಟ್ಟಿಸಿ ಮೂಱುಕೆಱೆಯ ಬಿತ್ತುವಟ್ಟವಂ ಪಡೆದಂ (ಎಕ. IX, ಬೆಂಗಳೂ. ೭೯–೩ ; 870); ಶ್ರೀಮತ್ ನಾಗತರನ ಮನೆವಗತಿ ಪೆರ್ವ್ವಣಶೆಟ್ಟಿ ಬೆಂಗಳೂರ ಕಾಳೆಗದೊಳ್ ನಾಗತರನ ಮಗಂ ಬುಟ್ಟಣಪತಿ ಸತ್ತಂ (ಮೈಆರಿ. ೧೯೧೫ ; ೨೦–೧ ; 900). [ ನಾಗತಿ$_2$ + ಅರ$_4$ ]

**ನಾಗದಂತಿ** (ನಾ). ೧. ಸೂರ್ಯಕಾಂತಿಯ ಜಾತಿಗೆ ಸೇರಿದ ಒಂದು ಬಗೆಯ ಗಿಡ ಮತ್ತು ಅದರ ಹೂವು: "ಶ್ವೇತಗಂಧಿ-ನಾಗದಂತಿ" (ಓಷಧಿ. ೧೭೧) ;ನಾಗದಂತಿ, ಕಾಡುಹರಳು (ವೃಜಿಗಿ. ೧೧-೧೪೧). ೨. ಮಂಳ್ಳುಗಳಿಂದ ಕೂಡಿರುವ ಒಂದು ಬಗೆಯ ಬಳ್ಳಿ, -ಲತೆ. [ಸಂ. ನಾಗದಂತೀ ]

**ನಾಗದನುಜ** (ನಾ). ಒಬ್ಬ ರಾಕ್ಷಸ ; ಗಜಾಸುರ : ನಾಗದನುಜಚರ್ಮಾಂಬರನೆ ನಾಗನರಲೋಕಕಧಿಕನೆ ರಕ್ಷಿಸುವುದೆಂದು ನುತಿಸೆ (ಪ್ರಾಥರಾ. ೨-೪೧). [ ನಾಗ + ದನುಜ ]

**ನಾಗದಮನಿ** (ನಾ). ಒಂದು ಬಗೆಯ ಗಿಡ; ವಿಷವನ್ನು ಪರಿಹರಿಸುವ ಕಾರಸೆ ಎಂಬ ವನಸ್ಪತಿ : "ಕಾರಸೆ ನಾಗದಮನಿಯಕ್ಕುಂ" (ಮಂಗರಾ. ೪೫-೪೭). [ ಸಂ. ನಾಗದಮನೀ ]

**ನಾಗದಾವರೆ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು: ಮಲ್ಲಿಗೆಯಿಂ ನಾಗದಾವರೆಯಿಂ ಚೂತಪಲ್ಲವದಿಂ ಪಚ್ಚೆಯಿಂದ . . . ಭೂವಲ್ಲಭ ಜಿನರನರ್ಚಿಸಿದ (ರಾಮವಿ. ೧೪-೧೭). [ ನಾಗ + ತಾವರೆ (<ತಾಮರೆ) ]

**ನಾಗದಾಸಯ್ಯ** (ನಾ). ಒಬ್ಬಾತನ ಹೆಸರು : ನಾಗದಾಸಯ್ಯಂ ಬರೆದ (ಎಕ. VII. ಶಿಕಾರಿ. ೭೪-೨೭ ; 1010). [ ನಾಗ + ದಾಸಯ್ಯ ]

**ನಾಗದಾಳಿ** (ನಾ). ಕಟುವಾದ ವಾಸನೆಯುಳ್ಳ, ಹಾವಿಗೆ ಅಪ್ರಿಯವಾದ ಒಂದು ಬಗೆಯ ಗಿಡ ; ಮೊಳೆಕಾಳಿಂಗನ ಗಿಡ ; ಸದಾಪು (ಉಕ) : ರಾಸ್ಮೆ, ಬೇಲದ ಹಣ್ಣು ... ಜಟಾಮಾಂಸಿ, ನಾಗದಾಳಿ, ಕೊನ್ನಾರಿಗೆಡ್ಡೆ ... ಇವಂ ಕಷಾಯಂ ಕಾಯಿಸಿ ಕೊಟ್ಟರೆ ವಾತಜ್ವರಂ ಕೆಡುಗುಂ (ಸಕವೈ. ೬೯) : ನಾಗದಾಳಿಸೊಪ್ಪು, ಸೀಮೆಸದಾಪು (ವೃಜಿಗಿ. ೭೭-೦೩೭೭) ; ಜಾತಿಪಂಗಡಗಳು ನಾಗದಾಳಿಯಂತೆ ಹೊಲಗದ್ದೆಗಳನ್ನು ಆಕ್ರಮಿಸಿಕೊಂಡಿವೆ (ಭಕ್ತಿಬ. ೪೮) : ಹಾವುಗಳಿಗೆ ಅಪ್ರಿಯವಾದ ನಾಗದಾಳಿ ಗಿಡಗಳನ್ನು ಇವು ಸೇರಬಹುದಾದ ಎಡೆಗಳಲ್ಲಿ ಬೆಳೆಸಬೇಕು (ಗೃಹವಿ. ೧೯೩). P ಈ ಸೊಪ್ಪಿನ ವಾಸನೆಗೆ ಹಾವುಗಳು ಬರುವುದಿಲ್ಲವೆಂಬ ನಂಬಿಕೆಯಿದೆ. [ ? ]

**ನಾಗದಿವ್ಯ** (ನಾ). [ಸಂಗೀತ] ಒಂದು ರಾಗದ ಹೆಸರು : ಮಧುಮಾಧವಿ . . . ನಾಗದಿವ್ಯ ಕರ್ಣಾಟ ಬಂಗಾಳವೆಂಬಿಪ್ಪತ್ತು ರಾಗಂಗಳೇ ರಾಗಾಂಗದಿಂದುದಿಸಿದವು (ವಿವೇಕ. ೨೫೦). P ಇತರ ಪಾಠಗಳಲ್ಲಿ 'ನಾಗದಿವಿ' ಎಂಬ ರೂಪ ಸಿಕ್ಕುತ್ತದೆ. ಆದರೆ ಶುದ್ಧ ಸಂಸ್ಕೃತ ರೂಪವಾದ 'ನಾಗದಿವ್ಯ' ಎಂಬುದೇ ಸರಿಯಾದ ರೂಪವಿರಬಹುದು. [ ಸಂ. ]

**ನಾಗದೇವ** (ನಾ). ಒಬ್ಬಾತನ ಹೆಸರು : ನಾಗತ್ತರನಳುಮಜ್ಜಲ ಬೀವಣ್ಣನೆಂಬೋನು ನಾಗದೇವನೆಂಬೋನು . . . ಕೆದಂಬೂರೆ ತುಱುಗಳ್ಗೊಳ ಕಾದಿ ಸತ್ತ (ಎಕ. IX, ಆನೇಕ. ೭೩-೫ ; 900). [ ನಾಗ + ದೇವ ]

**ನಾಗದೇವಭಟಾರ** (ನಾ). ಒಬ್ಬಾತನ ಹೆಸರು : ಸೆಂಬನೂರ ನಾಗಣ್ಣ ಪಿರಿಯಯ್ಯಂಗಳುಂ ದುರ್ಮ್ಮಿಯ ನಾಗದೇವಭಟಾರರುಂ (ಎಕ. XI, ಚಿತ್ರದು. ೭೪-೩೦ ; 968). [ ನಾಗದೇವ + ಭಟಾರ ]

**ನಾಗಧ್ವಜ** (ನಾ). ಬಾವುಟದಲ್ಲಿ ಹಾವಿನ ಗುರುತುಳ್ಳವನು ; ಉರಗಪತಾಕ ; ದುರ್ಯೋಧನ : ಏಗೆಯ್ದುಮೆನ್ನ ಧರೆಯೊರ್ವಾಗಮುಮಂ ನೀಮೆ ಬೆಸಸೆಯುಂ ಕುಡದಿನಿತಂ ಮೇಗಿಲ್ಲದೆ ನೆಗಟ್ದುದಿಂದಂ ನಾಗಧ್ವಜನಯ್ಯ ನೀಮದರ್ಕಟಲದಿರಿಂ (ಪಂಪಭಾ. ೧೪-೭). [ ನಾಗ + ಧ್ವಜ ]

**ನಾಗಧ್ವನಿ** (ನಾ). [ಸಂಗೀತ] ಒಂದು ರಾಗದ ಹೆಸರು : ಕೌಶಿಕಿ ವೇಳಾವಳಿ . . . ನಾಗಧ್ವನಿ . . . ಎಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದವು (ವಿವೇಕ. ೨೫೦) ; ನಾಟ, ಸೌರಾಷ್ಟ್ರ . . . ನಾಗಧ್ವನಿ, ಸಾಮರಾಗ, ಹಾಗೆಯೇ ಸಾಮವರಾಳೀ, – ಈ ಮೂವತ್ತೊಂದು ರಾಗಗಳು ಷಡ್ಜವನ್ನು ನ್ಯಾಸ, ಗ್ರಹ, ಅಂಶವನ್ನಾಗಿ ಉಳ್ಳವುಗಳು (ಚತುಪ್ರ. ೫೬). [ ಸಂ. ]

**ನಾಗನಗರಿ** (ನಾ). ಕುರುವಂಶದ ರಾಜರುಗಳಿಗೆ ರಾಜಧಾನಿಯಾಗಿದ್ದ ಯಮುನಾ ನದಿಯ ದಡದಲ್ಲಿದ್ದ ಪಟ್ಟಣ ; ಹಸ್ತಿನಾಪುರ : ತಾಯೆ ನೀ ದಿಟ ನಾಗನಗರಿಯ ರಾಯನರಸಿಯೆ ನಿನ್ನ ಮಕ್ಕಳು ರಾಯರೆದೆದಲ್ಲಣರೆ (ಕುವ್ಯಾಭ. ೯-೬) ; ನಾಗನಗರಿಯನಗಧರಂ ಪೊಕ್ಕು ಬರುತಿರ್ದನಾಗ (ಜೈಮಿಭಾ. ೭-೧೬). [ ನಾಗ + ನಗರಿ ]

**ನಾಗನಾಥ** (ನಾ). ೧. ಸರ್ಪಗಳ ಒಡೆಯ ; ಆದಿಶೇಷ : ಎಡೆಯ ಪಂಜುಗಳಿರ್ದುವು ನಾಗನಾಥನ ಹೆಡೆವಣಿಗಳ ದೀಪ್ತಿಯಂತೆ (ಪೋಹತ. ೧೫-೨೫). ೨. ಸರ್ಪಗಳ ಮೇಲೆ ಪ್ರಭುತ್ವವುಳ್ಳವನು ; ಸರ್ಪಗಳನ್ನು ಆಭರಣವನ್ನಾಗಿ ಮಾಡಿಕೊಂಡು, ಅವುಗಳ ಅಧಿಪತಿಯಾಗಿರುವವನು ; ಶಿವ : ಘಟಸರ್ಪನ ತುಡುಕಿ ನಾಗನಾಥನಾಗಿ ಇಪ್ಪತ್ತೇಳು ಬಸತಿಯನೊಡೆಯನೆ (ಬಸವ. ೬೨೫) ; ನಾಗನಾಥನು ಮುಂದೆಸೆಗೆ ನಸುಬಾಗಿರಲು ಕಂಡವನಿಪಂ ಬೆಱಗಾಗಿ (ಬಸವು. ೨೭-೧೧). 'ನಾಗೇಶ' ಪರ್ಯಾ. [ ನಾಗ + ನಾಥ ]

**ನಾಗನಾಯಕ** (ನಾ). ಒಬ್ಬಾತನ ಹೆಸರು: ನಾಗಸೇನವಮನಘಂ ಗುಣಾಧಿಕಂ ನಾಗನಾಯಕ ಜಿತಾರಿಮಣ್ಡಲಂ ರಾಜಪೂಜ್ಯಮವ.ಲಶ್ರೀಯಾವ್ಪದಂ ಕಾಮದಂ ಹತಮದಂ ನವಾಮ್ಯಹಂ (ಎಕ. II (R), ೩೭-೩ ; ಸು. 700). [ ನಾಗ + ನಾಯಕ ]

**ನಾಗನಿವಾಸ** (ನಾ). = ನಾಗಠಾಣ : ನಾಗನಿವಾಸದ ಕೆಲದೊಳ್ ಪೂಗವನಾಂತದೊಳು ಜೈನಯೋಗಿಗಳಿರ್ಪರ್ ಯೋಗನಿಯೋಗದೊಳಿರುತಿರೆ ನಾಗಶ್ರೀ ಕಂಡು ನಾಡೆ ಮುದವಂ ತಳೆದಳ್ (ಪುಣ್ಯಾಸ್ರ. ೬-೫). [ ನಾಗ + ನಿವಾಸ ]

**ನಾಗನೃತ್ಯ** (ನಾ). [ನಾಟ್ಯ] ಒಂದು ಬಗೆಯ ಜಾನಪದ ನೃತ್ಯ ; ನಾಗರ ಹಾವಿನ ಗಮನ, ಆಟ ಮುಂತಾದುವನ್ನು ಅನುಕರಿಸುವ ನೃತ್ಯ : ಎಳೆತನದಲ್ಲಿ ಕಂಡು ಮರವೆಯಾದ ವೈದ್ಯರ ಕುಣಿತ ಇಲ್ಲವೆ ನಾಗನೃತ್ಯ ಮತ್ತೊಮ್ಮೆ ಕಾಣಲು ಸಿಕ್ಕಿತು (ಯಕ್ಷಬ. iii ಮುನ್ನುಡಿ). [ ನಾಗ + ನೃತ್ಯ ]

**ನಾಗಪಂಚಮಿ** (ನಾ). ನಾಗಗಳನ್ನು ಪೂಜಿಸುವ ಒಂದು ವ್ರತದ ದಿನ ; ಶ್ರಾವಣಶುದ್ಧ ಪಂಚಮಿ; ಗರುಡಪಂಚಮಿ; P ಇದು ತುಂಬ ಪ್ರಸಿದ್ಧವಾದ ಹಬ್ಬ. ಅಂದು ನಾಗರಿಗೆ ತನಿ ಎರೆದು ಎಲ್ಲರ ಮನೆಯಲ್ಲೂ ಕಾಯಿಕಡುಬು, ಉದ್ದಿನ ಕಡುಬು ಮಾಡಿ ದೇವರಿಗೆ ನೈವೇದ್ಯ ಮಾಡುವ ರೂಢಿಯಿದೆ : ಶ್ರಾವಣದ ಹಬ್ಬಗಳಲ್ಲಿ ನಾಗಪಂಚಮಿಯೇ ಮುಖ್ಯ (ಭಾಹಬ್ಬ. ೯೯). 'ಗರುಡಪಂಚಮಿ' ಪರ್ಯಾ. [ ನಾಗ + ಪಂಚಮಿ ]

**ನಾಗಪತಿ** (ನಾ). ನಾಗರೆಂಬ ದೇವತಾಗಣದ ಒಡೆಯ, – ಅಧಿಪತಿ : ನಾಗರಲ್ಲಿ ಶ್ರೇಷ್ಠನಾದವನು; P ಇವರುಗಳ ಹೆಸರುಗಳಲ್ಲಿ ವೈವಿಧ್ಯವಿದೆ. "ನಾಗ—೮: (ಅ) ಅನಂತ, ವಾಸುಕಿ, ತಕ್ಷಕ, ಕಾರ್ಕೋಟಕ, ಪದ್ಮ, ಮಹಾಪದ್ಮ, ಶಂಖಪಾಲ, ಕುಳಿಕ (ಅಭಿನವಾಭಿಧಾನ–ಪಾತಾಳ ಖಂಡ ೧೯೯-೨-೪; ಖವುದ. ೧೩-೭೨). (ಆ) ಅನಂತ, ಶೇಷ, ವಾಸುಗಿ, ಕಾರ್ಕೋಟಕ, ತಕ್ಷಕ, ಶಂಖಪಾಲ, ಮಹಾಪದ್ಮ, ಪದ್ಮ (ಖವುದ. ೬೧-೧೪; ೧೫). (ಇ) ಅನಂತ, ತಕ್ಷಕ, ವಾಸುಕಿ, ಶಂಖಪಾಲ, ಪದ್ಮ, ಕರ್ಕೋಟಕ, ಕ್ರೋಢ, ಕಾಲ (ವಿಚಿಂ. ೧೭೭). (ಈ) ಅನಂತ, ಶೇಷ, ತಕ್ಷಕ, ಕರ್ಕೋಟಕ, ಶಂಖಪಾಲ, ಭೂಧರ, ಕುಳಿಕ, ಮಹಾಪದ್ಮ (ನಾಗಪ್ರತಿಷ್ಠಾಯೋಗ). (ಉ) ಸರ್ಪ, ಅನಂತ, ಶೇಷ, ಕಪಿಲ, ನಾಗ, ಕಾಲಿಕ, ಶಂಖಪಾಲ, ಭೂಧರ (ಧರ್ಮಸಿಂ, ೩ ಪೂ-೧೩೧) ; ನಾಗ—೯ : ಅನಂತ, ವಾಸುಕಿ, ಶೇಷ, ಪದ್ಮನಾಭ, ಕಂಬಲ, ಶಂಖಪಾಲ, ಧೃತರಾಷ್ಟ್ರ, ತಕ್ಷಕ, ಕಾಲಿಯ (ಪ್ರಾತಃಸ್ಮರಣಮ್. ೧೩-೨೫. ೨೬ ; ಸಂ. ೯೫)"

(ಶ್ರೀವತ್ಸ. ೩೬೨) : ನಾಗಭೂಷಣ ನಾಗಪತಿವಂದಿತಾಂಘ್ರಿಯುಗ . . . ನಾಗಸರಲೋಕಕಧಿಕನೆ ರಕ್ಷಿಸುವುದೆಂದು ನುತಿಸೆ (ಪ್ರೌಢರಾ. ೨-೪೧).
[ ನಾಗ + ಪತಿ₂ ]

**ನಾಗಪಾಶ** (ನಾ). ೧. ಒಂದು ಮಂತ್ರಾಸ್ತ್ರ; ಮಂತ್ರದಿಂದ ಪ್ರಯೋಗಿಸಿ ಶತ್ರುವನ್ನು ಸರ್ಪದಂತೆ ಬಂಧಿಸುವ ಒಂದು ಬಗೆಯ ಅಸ್ತ್ರ: ದಿತಿಸುತನಣ್ಮುಟ್ಟಾಗೆ ಬಂದು ಕಡನಂ ಕೊಟ್ಟರ್ ಕೊಳ್ವಂತೆ ನಾಗಪಾಶದಿ ನಾಗಳ್ ... ಕಟ್ಟಿ(ಶಾಂತಿಪು. ೮-೪೯); ಪೂರ್ವಭವವೈರದಿನೊಂದು ಶಿಳಾತಳಮಂ ತಂದಾ ಸರೋವರದ ಮೇಲಿಕ್ಕಿ ನಾಗಪಾಶದೊಳಾತನಂ ಕಟ್ಟಿದೊಡೆ (ಚಾವುಂಪು. ೨೧೯) ; ದ್ರೋಹಿಯೆಂದೆನು ನಾಗಪಾಶವ ಮೋಹಿ ಕೊಡು ಕೋದಂಡ ಕವಚವ ದ್ರೋಹಿ ಕಪಿಗಳ ಪಡೆಯ ಗೆಲಲಿನ್ನುಳಿದ ವರ ಬೇಡ (ಕೌಶಿರಾ. ೧೯-೩೮). ೨. [ಸಂಗೀತ] ವೀಣೆಯ ತಂತಿಯನ್ನು ಬಿಗಿಗೊಳಿಸುವ ಒಂದು ಬಗೆಯ ಬಂಧ,-ಜೀರುಂಗುಣಿಕೆ; ತಂತಿಗಳನ್ನು ಬಿಗಿಗೊಳಿಸುವ ಒಂದು ಬಗೆಯ ಬಂಧ,-ಜೀರುಂಗುಣಿಕೆ; ☞ ಇಂದಿನ ವೀಣೆಯ ಲಂಗರು ಎಂಬ ಪ್ರತ್ಯಂಗಕ್ಕೆ ಮಾತೃಪ್ರಾಯವಾಗಿದ್ದು ಪ್ರಾಚೀನ ವೀಣೆಗಳಲ್ಲಿ ಪರಸ್ಪರವಾಗಿದ್ದ ಭಾಗಕ್ಕೆ ದೋರಕವೆಂದು ಹೆಸರು. ಪ್ರಾಚೀನಕಾಲದ ವೀಣೆಗಳಿಗೆ ಆಧುನಿಕ ವೀಣೆಯಲ್ಲಿರುವಂತೆ ಗಡ್ಡವು ಇರುತ್ತಿರಲಿಲ್ಲ. ದಂಡದ ಅಗ್ರಭಾಗವನ್ನು ಬಲವೂ, ನಯವೂ ಆದ ಹುರಿ(ದೋರಕ)ಯಿಂದ ಸೋರೆಬುರುಡೆಯ ಮೇಲುಭಾಗವನ್ನು ಸೇರಿಸಿ ಇಪ್ಪುರಿಯ ನಾಗಪಾಶದಿಂದ ಬಿಗಿದು ಕಟ್ಟಲಾಗುತ್ತಿತ್ತು. ದೋರಕದ ತುದಿಗೆ ನಯವಾದ ನರದ ತಂತಿಗಳನ್ನು ಕಟ್ಟಿ, ಇವುಗಳನ್ನು ರೇಕಿನ ಮೇಲೆ ಬಿಗಿಯಾಗಿ ಎಳೆದು ಕಟ್ಟಿ, ಕುದುರೆಯನ್ನು ದಂಡಕ್ಕೆ ನಾಗಪಾಶದಿಂದಲೇ ಬಿಗಿಯುತ್ತಿದ್ದರು. ಪ್ರಾಚೀನ ಸಂಗೀತಶಾಸ್ತ್ರಗ್ರಂಥಸ್ಥವಾದ ನಾಗಪಾಶವನ್ನು ಸರಿಯಾಗಿ ತಿಳಿಯದ ಕೆಲವು ಆಧುನಿಕರು ಅದನ್ನು ವೀಣೆಯ ಒಂದು ಪರಿಕರವೆಂದೇ ತಿಳಿದು ಪ್ರಚಾರ ಮಾಡುತ್ತಿದ್ದಾರೆ. ಈ ಬಂಧವನ್ನು ವೀಣೆಯಲ್ಲಿ ಮಾತ್ರವಲ್ಲದೆ ಪಟಹ, ರುಂಜಾ ಮೊದಲಾದ ಚರ್ಮವಾದ್ಯಗಳಲ್ಲಿಯೂ ಬಳಸಲಾಗುತ್ತಿತ್ತು : ವೀಣೆಯ ಮುಖ್ಯಪರಿಕರಗಳು . . . ಕುದುರೆ, ಗಡ್ಡ ಅಥವಾ ನಾಗಪಾಶ, ೨೪ ಕಂಚಿನ ಮೆಟ್ಟಿಲುಗಳು (ಸಂಗೀಚಂ. ೧೧೨). ೩. = ನಾಗಪಾಶಕರಣ. [ ನಾಗ + ಪಾಶ ]

**ನಾಗಪಾಶಕರಣ** (ನಾ). [ಕಾಮಶಾ] ಸಂಭೋಗದ ಒಂದು ಭಂಗಿ : ನಳಿನಮುಖಿ ಮಲಗಿ ಕೈದಳಮನಿರ್ತೊಡೆಯ ಕೆಳಗಿಳುಪಿ ಗಳರವದಿನಧರಮನೆ ಕರ್ದುಕಿ ಪುಳಕಿಸಲ್ ಕೊರಲ್ವಿಡಿದು ಬಳಿಕಿನೆಯನಪ್ಪಿ ದಳವುಳಿಸಲಂತದೆ ನಾಗಪಾಶ[ಪಾಠಾಂ. ವಾಸ] ಕರಣಂ (ಜನವ. ೯-೩೪). [ ಸಂ. ]

**ನಾಗಪಾಶಬಂಧನ** (ನಾ). ೧. ನಾಗಪಾಶದಿಂದ ಕಟ್ಟುವಿಕೆ. ೨. (ಆಲಂ) ಬಿಡಿಸಿಕೊಳ್ಳಲು ಆಗದಂತೆ ಬಹಳ ಬಲವಾಗಿ ಕಟ್ಟುವಿಕೆ; ಗಾಢಬಂಧನ : ನಾಲ್ಕೂ ದಿಕ್ಕಿನಿಂದ ಸುತ್ತುವರಿದಿದ್ದ ಒಂದು ನಾಗಪಾಶಬಂಧನವು ಸಂಪೂರ್ಣವಾಗಿ ಬಿಚ್ಚಿಹೋದಂತಾಯ್ತು (ಇಪ್ಪಕ. ೩೪೫).
[ ನಾಗಪಾಶ + ಬಂಧನ ]

**ನಾಗಪಾಶವಿದ್ಯೆ** (ನಾ). ನಾಗಪಾಶವನ್ನು ಪ್ರಯೋಗಿಸುವ ಮಂತ್ರವಿದ್ಯೆ : ಮುಖ್ಯನಾಯಕರ್ಕಳುಂ ನಾಗಪಾಶವಿದ್ಯೆಯಿಂ ಕಟ್ಟುವಡೆದು ಪಟ್ಟಿರ್ಪುದುಂ (ಪಂರಾಮಾ. ೧೩-೧೪೭ ವ). [ ನಾಗಪಾಶ + ವಿದ್ಯೆ ]

**ನಾಗಪುರ** (ನಾ). ೧. ನಾಗಲೋಕ ; ಪಾತಾಳ : ಅಂತು ನಾಗಪುರಮನಿಟಿಸುವ ನಾಗಪುರಮನಾ ನಾಗಶಯನಂ ಪೊಕ್ಕು (ಪಂಪಭಾ. ೯-೨೭ ವ). ೨. ಕೌರವರ ರಾಜ್ಯ ; ಹಸ್ತಿನಾವತಿ : ಮೇಲಿನ ಪ್ರಯೋಗವನ್ನು ನೋಡಿ. [ ನಾಗ + ಪುರ₂ ]

**ನಾಗಪುರಿ** (ನಾ). ಒಂದು ಬಗೆಯ ವನಸ್ಪತಿ : (ವ್ಯಜಿಗಿ. ೨೨-೪೦೩).
[ ? ]

**ನಾಗಪುಲಿಗಾವುಂಡ** (ನಾ). ಒಬ್ಬಾತನ ಹೆಸರು : ಚನ್ದ್ರಪ್ರಭಭಟಾರಾರ್ಪ್ಪ ಸುಣ್ಣೆಯನಭ್ಯನ್ತರಸಿದ್ಧಿಯಾಳುತ್ತಿರೆ ನಾಗಪುಲಿಗಾವುಣ್ಡಂ ಗಾವುಣ್ಡುಗೆಯ್ಯೆ ಸೌಇಇ. XI-1, ೩೪-೯ ; 925).
[ ನಾಗಪುಲಿ₀ + ಗಾವುಂಡ (<ಗಾಮುಂಡ) ]

**ನಾಗಪುಷ್ಪ** (ನಾ). ೧. ಒಂದು ಬಗೆಯ ಹೂವು ; ನಾಗಸಂಪಿಗೆ : ಎರಡುಂ ಕ್ಷಾರಂ ಕೊತ್ತುಂಬರಿ ಸರಳಂ ನಾಗಪುಷ್ಪಮಿಂತಿವನೊಂದಾಗಿರೆ ಕೂಡಿ ಮಾಡಿ ಬೆರಸುಗೆ (ಅಶ್ವಶಾ. ೭-೪೫). ೨. ಸುರಗಿ ; ಸುರಹೊನ್ನೆ : "ನಾಗಪುಷ್ಪಃ-ಸುರ ಹೊನ್ನೆ" (ಒಷಧಿ. ೮೬). [ ನಾಗ + ಪುಷ್ಪ ]

**ನಾಗಪೂಜೆ** (ನಾ). ನಾಗರಿಗೆ ಮಾಡುವ ಪೂಜೆ,-ಆರಾಧನೆ : ವಸ್ತುತಃ ನಾಗಪೂಜೆ ದ್ರಾವಿಡಜನಾಂಗದ ಹಬ್ಬವಾಗಿರಬೇಕು (ಭಾಹಬ್ಬ. ೯೯).
[ ನಾಗ + ಪೂಜೆ₂ ]

**ನಾಗಪ್ರತಿಷ್ಠೆ** (ನಾ). ಸರ್ಪದೇವತೆಯ ಶಿಲಾಪ್ರತಿಮೆಯನ್ನು ಅರಳಿಕಟ್ಟೆ ಮೊದಲಾದ ಸ್ಥಾನಗಳಲ್ಲಿ ವಿಧ್ಯುಕ್ತವಾದ ಕ್ರಮದಿಂದ ಸ್ಥಾಪಿಸುವುದು ; ನಾಗರ ಕಲ್ಲಿನ ಸ್ಥಾಪನೆ ; ☞ ಇದು ಮಕ್ಕಳಿಲ್ಲದವರು, ಮಕ್ಕಳಾಗುವುದೆಂಬ ನಂಬಿಕೆಯಿಂದ ಅನುಸರಿಸುವ ಜನಸಾಧಾರಣವಾದ ಒಂದು ಪದ್ಧತಿ : ಅವರು ವಿದುರಾಶ್ವತ್ಥಕ್ಕೆ ಹೋಗಿ ನಾಗಪ್ರತಿಷ್ಠೆ ಮಾಡಿ ಬಂದರು (ರೂಢಿ). [ ನಾಗ + ಪ್ರತಿಷ್ಠೆ ]

**ನಾಗಫಣಿ** (ನಾ). ನಾಗರಹಾವು : ನಾದವ ಲಾಲಿಸುವ ನಾಗಫಣಿ [ಪಾಠಾಂ. ಪಣಿ]ಯಂತೆ ಆಡುತ್ತಿದ್ದು ಹೋದ ಹೊಲಬೇಕೆಂದ (ಮೋಳಿಮಾ. ೭೨-೨೮೩).
[ ಸಂ. ನಾಗಫಣಿನ್ ]

**ನಾಗಬಂಧ** (ನಾ). ೧. ಜಟ್ಟಿವರಸೆಗಳಲ್ಲಿ ಒಂದು : ಭೀಮ ಜರಾಸಂಧರು ಡೊಕ್ಕರಪಟ್ಟು, ಲಗಡಿ, ಕತ್ತರಿಪಟ್ಟು, ನಾಗಬಂಧ ಮುಂತಾದ ಹಲವು ಪಟ್ಟುಗಳನ್ನೊಡ್ಡಿ ಕಾಳಗ ನಡೆಸಿದರು (ರಾಜಸೂ. ೨೩). ೨. (ಆಲಂ) ಬಲವಾದ ಕಟ್ಟು; ಬಿಡಿಸಿಕೊಳ್ಳಲಾಗದ ತೊಡಕು: ಈ ನಾಗಬಂಧದಿಂದ ತನ್ನ ತಂದೆತಾಯಿಯನ್ನು ಮುಕ್ತಗೊಳಿಸಲೇಬೇಕೆಂಬ ಅವನ ಪ್ರತಿಜ್ಞೆ . . . ಮತ್ತಷ್ಟು ದೃಢಮೂಲವಾಗುತ್ತಿತ್ತು (ಇಪ್ಪಕ. ೩೭೯). ೩. [ಕಾಮಶಾ] (ಹಾವುಗಳಂತೆ ಹೆಣೆದುಕೊಳ್ಳುವ) ಒಂದು ಬಗೆಯ ಆಲಿಂಗನ; ಗಾಢಾಲಿಂಗನ : ನಾಗಶಯ್ಯೆಯೊಳ್ ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣವನಂ ಮರುಳ್ಚಿದಳ್ (ಪಂಪಭಾ. ೪-೧೭) ; ಕೋರಕರದಂ ತನ ಗೊಪ್ಪಿರೆ ನಾಗಬಂಧದಂತೊಂದಿರೆ ಸುತ್ತಿ ಮಲ್ಲಿಗೆ ಮದಂ ಮಕರಂದಮದಾಗೆ ಕರ್ಣಮಿಂದಿಂದಿರಬೃಂದಮೆಂದೆನಿಸಿ ದಂತಿಮುಖಂಗೆಣೆಯಾಯ್ತು ಮಾಮರಂ (ವೃಷವಿ. ೪-೪೧). ೪. [ಸಂಗೀತ] ಐದು ಬಗೆಯ ಹಸ್ತಪಾಟಗಳಲ್ಲಿ ಒಂದು ; ಗಾಢಬಂಧ ; ವರ್ಣಾಲಂಕಾರಗಳಲ್ಲಿ ಒಂದು ; ಹಾವಿನಂತೆ ಸುರುಳಿಯಾಗಿಯೂ ವಕ್ರಗತಿಯಲ್ಲಿಯೂ ಇರುವ ಸ್ವರಶ್ರೇಣಿ : ವೆಂಕಟರಮಣದಾಸರು ಈ ಕಿರುಹೊತ್ತಿಗೆಯಲ್ಲಿ . . . ಬಂಧ ತಾನಗಳ ವಿವಿಧ ರೂಪಗಳನ್ನು (ಗುಚ್ಛಬಂಧ ಮತ್ತು ನಾಗಬಂಧ) ವಿಸ್ತಾರವಾಗಿ ವರ್ಣಿಸಿದ್ದಾರೆ (ಸಂಗೀತ. ೭೦). ೫. [ನಾಟ್ಯ] ಇಪ್ಪತ್ತುಮೂರು ದೇಶೀಯ ಸ್ಥಾನಗಳಲ್ಲಿ ಒಂದು ; "ಕುಳಿತುಕೊಂಡು ಎಡತೊಡೆಯ ಮೇಲೆ ಬಲಕಣಕಾಲನ್ನಿರಿಸುವುದು" (ಲಾಸ್ಯರಂ. ೩೩೧ ಗದ್ಯಾನುವಾದ) : ಒದವಿರ್ದ ಸ್ವಸ್ತಿಕಂ . . . ನಾಗಬಂಧ ವೃಷಭಂ ಸುಲಲಿತಮಿಪ್ಪತ್ತಮೂಱು ದೇಶೀಸ್ಥಾನಂ (ಲಾಸ್ಯರಂ. ೭-೮) ; ಅಭಿನಯದರ್ಪಣದಲ್ಲಿ - ೧. ಅಂಜಲಿ . . . ೨೧. ನಾಗಬಂಧ, ೨೨. ಖಟ್ವಾ, ೨೩. ಬೇರುಂಡ, ೨೪. ಅವಹಿತ್ಥ. (ಆಭಾನ್ನ. ೪೮). [ ನಾಗ + ಬಂಧ ]

**ನಾಗಬಲಿ** 'ನಾಗವಲಿ' ನೋ.

**ನಾಗಬಲೆ** (ನಾ). ೧. ಒಂದು ಬಗೆಯ ಗಿಡ ; ಬೋಳಂಗಡಲೆ ಗಿಡ ; ಕಳ್ಳಂಗಡಲೆ: ನಾಗಬಲಾ ಘೃತ ಮಧುಗಳನಾಗಳುಮುಪಯೋಗಿಸುತ್ತು ಮಿರ್ದಂದು ಪಿಂಗುಗುಂ ಕ್ಷಯರೋಗಂ (ಲೋಕೋಪ. ೯-೩೭). **೨.** ಹೀರೆಬಳ್ಳಿ: "ಗಾಂಗೇರುಕೀ, ನಾಗಬಲಾ, ಝಷಾ, ಹ್ರಸ್ವಗವೇಧುಕಾ – ೪ ಹೀರೇಗಿಡದ ಹೆಸರು" (ಸಿದ್ಧಾಂತಿ ೧೩೪). [ ಸಂ. ನಾಗಬಲಾ ]

**ನಾಗಬೆತ್ತ** (ನಾ). ನಾಗರಹಾವಿನ ಆಕಾರದ ಬೆತ್ತ ; ₱ ಇದನ್ನು ಸಾಮಾನ್ಯವಾಗಿ ಸಂನ್ಯಾಸಿಗಳು ಉಪಯೋಗಿಸುತ್ತಾರೆ : ಕಯ್ಯಲ್ಲೊಂದು ನಾಗಬೆತ್ತವೂ ಇತ್ತು (ರಕ್ತರೂ. ೩೫) ; ಕವಿಗಳು ಒಂದು, ನಾಲ್ಕಡಿ ಉದ್ದದ ತೋರವಾದ ನಾಗಬೆತ್ತವನ್ನೂ ತಂದು ಮ್ಯಾದಿನಿಯ ಕೈಗೆ ಕೊಟ್ಟರು (ಒಡ್ಡಉ. ೨೩) ; ಕಾವೀ ಕಂತೇ ಕೊಡೆ ನಾಗಬೆತ್ತಾ ಕೊಡೆ ಹೋಗುತೀನಿ ನಾನು ವನದೇಶ (ನಾಪದ. ೧೦೪). [ ನಾಗ + ಬೆತ್ತ ]

**ನಾಗಭಸ್ಮ** (ನಾ). [ವೈದ್ಯ] ಒಂದು ಬಗೆಯ ಭಸ್ಮ : ಲೋಹಸಿಂಧೂರ, ನಾಗಭಸ್ಮ ಇವು ಪ್ರತ್ಯೇಕ ಗ ೧೦ ತೂಕ ಸಹ ಪುಡಿಮಾಡಿ ಹಾಕಿ (ಸಕವೈ. ೩೯೩). [ ಸಂ. ]

**ನಾಗಭುಗ್ಗಮನ** (ನಾ). ಗರುಡನ ಮೇಲೆ ಸಂಚರಿಸುವವನು ; ವಿಷ್ಣು: ನಾಗಭುಗ್ಗಮನ ಶ್ರೀಕೃಷ್ಣರಾಯನ ವಡನೆ ಪೋಗಿ ಪಿಡಿತರ್ಪಂ (ನವಮೋ. ೨೮-೬೯). [ ಸಂ. (ನಾಗಭುಜ್ + ಗಮನ) ]

**ನಾಗಭೂಷಣ** (ನಾ). ೧. ಸರ್ಪಗಳನ್ನು ಆಭರಣವಾಗಿ ಉಳ್ಳವನು ; ಸರ್ಪಭೂಷಣ ; ಶಿವ : ಜನಸಾಕ್ಷಿಯಾಗಿರೆ ನಾಗಭೂಷಣಭಕ್ತರ್ಸತ್ಕುಲಜರು (ಬಸಪು. ೫೭-೫೫) ; ನಾಗವಲ್ಲಿಯ ಹಿಂದುಮುಂದನು ನೀಗಿ ಕಳೆಯದೆ . . . ಸವಿದು ಭೋಗಿಸುವೊಡಮರೇಂದ್ರನಾಗಲಿ ನಾಗಭೂಷಣನಾದೊಡವನನು ನೀಗಿ ಕಳೆವಳು ಭಾಗ್ಯವಧು (ಕುವ್ಯಾಉ. ೩-೫೯); ನಾಗಭೂಷಣ ನಾಜ್ಞೆ ಯಿಾ ಪರಿಯಾಯ್ತು ಹಾಯೆಂದ (ತಿಮ್ಮಸ್ಕೀ. ೧-೭). **೨.** ಮೋಡಗಳಿಂದ ಅಲಂಕೃತವಾಗಿರುವುದು ; ಪರ್ವತ : ೧, ೨. ನಾಗಭೂಷಣನಾಗಿ ಶಿವನಲ್ಲ . . ಎನಿಸಿರ್ದುದಾಶ್ಚರ್ಯಸಾಂದ್ರಮಚಲೇಂದ್ರಮೆಸೆದು (ಜೈಮಿಭಾ. ೧೦-೭). [ ಸಂ. ]

**ನಾಗಮಂಗಲ** (ನಾ). ೧. ದುರ್ಗದ ಆಕಾರದಲ್ಲಿರುವ ಸೇನಾನಿವೇಶ : ವಾಸ್ತುಶಾಸ್ತ್ರದ ಪ್ರಕಾರ "ಮಂಗಲ" ಎಂದರೆ ದುರ್ಗರಕ್ಷಣಕ್ಕಾಗಿ ನಗರದ ಸೈನ್ಯವು ನೆಲೆಗೊಂಡಿರುವ ಸ್ಥಳವೆಂದರ್ಥ . . . ದುರ್ಗದ ಆಕಾರವನ್ನೋ ಸೈನ್ಯದ ಮಿತಿಯನ್ನೋ ಅನುಸರಿಸಿಕೊಂಡಿದ್ದರೆ ನಾಗಮಂಗಲವಾಗುತ್ತದೆ ಇಲ್ಲವೇ ಈಶ್ವರಮಂಗಲವಾಗುತ್ತದೆ (ತುಳುನಾ. ೨೦೪). **೨.** ಒಂದು ಊರಿನ ಹೆಸರು : ನಾಗಮಂಗಲದ ಭಟರು ಸೋಬತಿಯ ಕಟ್ಟಿ ಬೇಗದಿಬಂದು ತುರುಕರನು ಬೇಗದೆ ಮೂಱುಸಾಸಿರ ಮೂಗರಿದಾಗ ರಾಗದೆ ಜಸವ ಬೀಱಿದರು (ಕಂಠವಿ. ೧೩-೫೯). [ ನಾಗ + ಮಂಗಲ ]

**ನಾಗಮಂಡಲ** (ನಾ). ೧. (ಕರಾ) ನಾಗದೇವತೆಯ ಪ್ರೀತಿಗಾಗಿ ಮಾಡುವ ಒಂದು ಹಬ್ಬ : ನಾಗನ ಪ್ರೀತಿಗಾಗಿ ದಕ್ಷಿಣಕನ್ನಡ ಜಿಲ್ಲೆಯ . . . ತಾಲೂಕುಗಳಲ್ಲಿ 'ನಾಗಮಂಡಲ' ವೆಂಬ ಸೇವೆಯು ನಡೆಸಲ್ಪಡುತ್ತದೆ (ತುಳುನಾ. ೨೫೦) ; ಉಳ್ಳೂರು ಹೆಬ್ಬಾರರ ಮನೆಯಲ್ಲಿ ಸ್ವಲ್ಪ ದಿನದಲ್ಲೇ ನಾಗಮಂಡಲ ಉಂಟಂತೆ (ಸ್ವಪ್ನಹೊ. ೫೭) ; ಅದರಂತೆ ನಾಗಮಂಡಲ, ಢಕ್ಕೆಬಲಿಗಳನ್ನು ಹಿಂಬಾಲಿಸಿ . . . ಮರಳಿ ಬಂದ ಪ್ರಸಂಗಗಳೆಷ್ಟೋ (ಯಕ್ಷಬ. iv ಮುನ್ನುಡಿ). **೨.** ಈ ಹಬ್ಬದಲ್ಲಿ ಪೂಜೆಗಾಗಿ ಸಿದ್ಧಪಡಿಸುವ ನಾಗರಹಾವಿನಾಕಾರದ ರಂಗೋಲೆಯ ಅಥವಾ ಹೂವಿನ ಆಕೃತಿ,– ಚಿತ್ರ. [ ನಾಗ + ಮಂಡಲ ]

**ನಾಗಮತಿ** (ನಾ). ಒಬ್ಬಾಕೆಯ ಹೆಸರು: ಮೋನಿ ಗುರವಡಿಗಳ ಶಿಷಿತ್ತಿಯರ್ ನಾಗಮತಿಗನ್ತಿಯರ್ ಮೂಱು ತಿಙ್ಗಳ್ ನೋನ್ತು ಮುಡಿಪ್ಪಿದರ್ (ಎಕ. II, ೨೦-೨ ; ಸು. 700). [ ಸಂ. ]

**ನಾಗಮಯ್ಯ** 'ನಾಗಮ್ಮಯ್ಯ' ನೋ.

**ನಾಗಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ : ದೊಡ್ಡಪಟಕ, ನಾಗಮಲ್ಲಿಗೆ (ಮೈಜಿಗಿ. ೬೬-೧೩೪೫). 'ನಾಗಸಂಪಗೆ' ಪರಾ. [ ನಾಗ + ಮಲ್ಲಿಗೆ ]

**ನಾಗಮುಖ** (ನಾ). ಆನೆಯಂತೆ ಮುಖವುಳ್ಳವನು ; ಗಣಪತಿ : ಶ್ರೀಗುರು ಪರಂಜ್ಯೋತಿಲಿಂಗಂ ನಾಗಮುಖಮುಖನಳಿನಭೃಂಗಂ . . . ಒಲ್ದೆಮಗೀಗೆ ಬಸವನ ಕೃತಿಯನೊರೆವ ಸುಮತಿಯ ಸಮತೆಯನು (ಬಸಪು. ೧-೩).
[ ನಾಗ + ಮುಖ ]

**ನಾಗಮುಖಪಿತ** (ನಾ). ಗಣಪತಿಯ ತಂದೆ; ಶಿವ ; ಪರಮೇಶ್ವರ : ನಾಗಮುಖಪಿತನೆ ನಲುವಿಂದ ರಕ್ಷಿಪುದೆನ್ನ ಸಂಗಮೇಶ್ವರಪ್ರಸನ್ನ (ಪಾಥರಾ. ೨೧-೧). [ ನಾಗಮುಖ + ಪಿತ ]

**ನಾಗಮುತ್ತು** (ನಾ). = ನಾಗರ ಮುಸ್ತೆ : ದುಂಪರಾಸ್ಮೆ, ನೀಲಿಬೇರು ... ನಾಗಮುತ್ತು, ಪುಲ್ಲಂಗನ ಬೇರು . . . ಕಷಾಯಮಿಟ್ಟು ಕೊಡಲು ವಿಷಮ ಶೀತಜ್ವರ ಗುಣಮಕ್ಕುಂ (ಸಕವೈ. ೧೦೭). [ ? ]

**ನಾಗಮುರಿ** (ನಾ). ೧. ಹಾವಿನಂತೆ ಸುರುಳಿ ಸುತ್ತಿರುವ ತೋಳುಬಂದಿ; ಹಾವಿನ ಹೆಡೆಯ ಆಕೃತಿಯನ್ನು ಅಳವಡಿಸಿರುವ ತೋಳುಬಳೆ,– ಕೇಯೂರ,– ಅಂಗದ : ಅರಳೆಲೆಯು ಮಾಗಾಯಿ . . . ನಾಗಮುರಿಯು (ನವಮೋ. ೧೫-೫೦); ರತ್ನದ ವಂಕಿ ನಾಗಮುರಿಗಳು ಧರಿಸಿ (ಸೌಗಂಧಿ. ೮೫-೧೪); ಅರಳೆಲೆ ಮಾಗಾಯಿ ವರನಾಗಮುರಿ . . . ಅಂದಿಗೆಗೆಜ್ಜೆ ಶಿರಗಯ್ಯ ಭಕ್ತಗೊಪ್ಪಿದವು (ಅಬ್ಬಲೂ. ೨-೫೨) ; ಅದು ತೆರೆತೆರೆಯಾಗಿ ಬರುತ್ತದೆ ಇಲ್ಲವೆ ನಾಗಮುರಿಯಂತಿರುತ್ತದೆ (ಗೊತ್ತುಗು. ೧೧೪) ; ಗೀರುಬಿಲ್ಲೆಯ ಅಂಚಿನಿಂದ ಕೇಂದ್ರದವರೆಗೆ ನಾಗಮುರಿಯಂತೆ ಸುರುಳಿಯಾಗಿರುತ್ತದೆ (ವಿಜ್ಞಾವಿ. ೨) **೨.** ಒಂದು ಬಗೆಯ ಆಯುಧ : ಇವರು ಸೊನ್ನಲಾಪುರದ ಶ್ರೀಸಿದ್ಧರಾಮೇಶ್ವರರ ಅನುಗ್ರಹಕ್ಕೆ ಪಾತ್ರರಾಗಿ ನಾಗಮುರಿಯೆಂಬ ಆಯುಧವನ್ನು ಪಡೆದು ಆಶೀರ್ವಾದದೊಂದಿಗೆ ದಕ್ಷಿಣದೇಶಕ್ಕೆ ಬಂದರು (ನೊಳಂಬ. ೬೧).
[ ನಾಗ + ಮುರಿ$_3$ ]

**ನಾಗಮುರಿಗೆ** (ನಾ). = ನಾಗಮುರಿ ೧ : "ಕೇಯೂರಂ, ಅಂಗದಂ–೨ ಬಾಹುಪುರಿ ಹೆಸರು, ನಾಗಮುರಿಗೆ, ತೋಳುತೊಡಿಗೆ, ಬಾಜೂಬಂದು, ವಂಕಿ" (ಸಿದ್ಧಾಂತಿ. ೨೦೧) ; ನಾಗಮುರಿಗೆ ಮಡಿಕೆಗಳ ಮೋಡಿಯಿದು ಮುಗಿಲಲಿ ವಿದ್ಯುತ್ಕಂಬಿ (ನವ್ಯಧ್ಯ. ೯೦) ; ನಾಗಮುರಿಗೆ ವಂಕಿ . . . ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲೆಮಂ. ೩೮). [ನಾಗ + ಮುರಿಗೆ ]

**ನಾಗಮುಷ್ಟಿ** (ನಾ). ಒಂದು ಬಗೆಯ ವನಸ್ಪತಿ : (ಮೈಜಿಗಿ. ೭೨-೧೪೮೨).
[ ಸಂ. ]

**ನಾಗಮೋಡಿ** (ನಾ). ಹಾವಿನ ರೀತಿ,– ಭಂಗಿ ; ಸುತ್ತಿ ಸುತ್ತಿಕೊಂಡು ಹೋಗುವ ಕ್ರಮ ; ಬಳಸು ಬಳಸಾದ ರೀತಿ : ನಾಗಮೋಡಿಯ ಏರುತ್ತಿತ್ತು ಏನೋ ಪುರಾಣ ಶಕ್ತಿ (ಅರಳು. ೨೦೭-೩) ; ನಾಗಮೋಡಿಯಿಂದ ಸುತ್ತುಬಳಸಿ ಹೋಗುವ ಹಾದಿಗಳು (ಸಾಹಿಸಂ. ೧೯೭) ; ಗುಡ್ಡವನ್ನು ಮೇಲೆ ಮೇಲೆ ಸುತ್ತಿ ಸಾಗಿ ಶಿಖರಕ್ಕೆ ತಲ್ಪಿಸುವ ನಾಗಮೋಡಿಯ ದಾರಿ (ಮೂವಾದ. ೬೪). [ ನಾಗ + ಮೋಡಿ ]

**ನಾಗಮ್ಮ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಅಯ್ಯಪಯ್ಯನ ಪೆರ್ಗ್ಗಡೆ ನಾಗಮ್ಮನ ಮಾಡಿಸಿದ ಮದಿಲು ದಾರವನ್ದ ಮಾಡಿದ ಚನ್ದಯ್ಯ (ಎಕ. III (R), ಹೆಗ್ಗಡ. ೩೧-೧ ; ?). [ ನಾಗ + ಅಮ್ಮ$_1$ ]

**ನಾಗಮ್ಮಯ್ಯ**, ನಾಗಮಯ್ಯ (ನಾ). ೧. ಒಬ್ಬಾತನ ಹೆಸರು : ಗಾವುಣ್ಡ ಸ್ವಾಮಿಗಳ ಮಗನ್ನಾಗಮ್ಮಯ್ಯ ಕಲ್ಲ ದೇಗುಲಮಮ್ಮಾಡಿಸಿದಡೆ (ಎಕ. III, ಮಂಡ್ಯ. ೧೩-೮ ; 895). **ನಾಗಮಯ್ಯ :** ೧. ಮಣ್ಣಂ ಬಳಸಿದ ಪ್ರಭುಗಳ್ ಪೆರ್ಮಾಡಿಗಾವುಣ್ಡ ಮುಗುಳಿಯ ನಾಗಮಯ್ಯ ಬಸವನ ಹಳ್ಳಿಯ ಬಸವಯ್ಯ (ಎಕ. XV, ಬೇಲೂರು. ೩೦೮-೧೧ ; 971). **೨.** ಒಬ್ಬಾತನ ಹೆಸರು ;

೪ ದಾನಚಿಂತಾಮಣಿಯೆಂದುಂ ಪ್ರಸಿದ್ಧಳಾದ ಅತ್ತಿಮಬ್ಬೆಯ ತಾತ : ಅಗ್ಗಳಿಕೆಯ ಕಮ್ಮೆದೇಶಮನಲಂಕರಿಸಿರ್ದುದು ಪುಂಗನೂರ್ ಜಗತ್ತಿಲಕ ಮದರ್ಕೆ ಮುಖ್ಯವೆನೆ ಪೆಂಪೆಸೆದಿರ್ದುದು ನಾಗಮಯ್ಯನಾ (ಅಜಿಪು. ೧-೩೪).
[ ನಾಗವ್ಮ + ಅಯ್ಯ$_1$ ]

**ನಾಗಯಬ್ಬೆ** (ನಾ). ಒಬ್ಬಾಕೆಯ ಹೆಸರು : ನಾಗಯಬ್ಬೆಯ ಮಗ ಮಾರೆಯ್ಯ (ಎಕ. XI, ಜಳ್ಳಕೆ. ೪-೪ ; 974). [ ನಾಗ + ಅಬ್ಬೆ$_1$ ]

**ನಾಗಯ್ಯ** (ನಾ). ಒಬ್ಬಾತನ ಹೆಸರು : ತೊಪ್ಪುಪ್ಪೊವೋಯನ ಮಕ್ಕಳ್ ನಾಗಯ್ಯನು ಕೊಣ್ಡಯ್ಯನು (ಎಕ. X, ಕೋಲಾರ. ೯-೫ ; ಸು. 925); ಬಂಗಲಿ ಎಚಿಯಮ್ಮನ ಮಗ ನಾಗಯ್ಯಂ ತುಱುವನಿಕ್ಕಿಸಿ . . . ಕಾದಿ ಸ್ವರ್ಗ್ಗಸ್ಥನಾದಂ (ಎಕ. V (R), ಹಾಂಜವ. ೫೧-೮ ; 1011); ಶ್ರೀ ನಾಗಯ್ಯಂ (ಎಕ. II, ೪೭೦ ; 1050). 'ನಾಗೆಯ' ಪರಾ.
[ ನಾಗ + ಅಯ್ಯ$_1$ ]

**ನಾಗಯ್ಯನಾಯಕ** (ನಾ). ಒಬ್ಬಾತನ ಹೆಸರು : ಶ್ರೀಮತ್ನಾಗಯ್ಯನಾಯಕಂ ಬೆಳ್ವನೂರುಂ ಬೆಲ್ಲುಱುವದ ಪನ್ನಾಯ ಸುಂಕಮುಮನಾಳುತ್ತಮಿಟ್ದು (ಎಕ. XI, ದಾವಣ. ೩೦-೯ ; 1045). [ ನಾಗಯ್ಯ + ನಾಯಕ ]

**ನಾಗರ$_1$** 'ನಾಗರು' ನೋ.

**ನಾಗರ$_2$** (ಗು). ೧. ನಗರಕ್ಕೆ ಸಂಬಂಧಿಸಿದ ; ಪಟ್ಟಣಕ್ಕೆ ಸೇರಿದ. (ನಾ). ೨. ಪಟ್ಟಣಿಗ ; ಪೌರ ; ನಾಗರಿಕ. ೩. ಚತುರ ; ಜಾಣ ; ಕುಶಲ ; ಮೇಧಾವಿ; ನಿಪುಣ. ೪. ನಮ್ರ ; ವಿನೀತ. ೫. ಕೆಟ್ಟವನು ; ಧೂರ್ತ ; ಅಧಮ ; ವಂಚಕ. ೬. ರಾಜನ ಶೃಂಗಾರ ಸಹಾಯಕ ; ನಾಗರಕ : ವಿಟ ವಿದೂಷಕ ಪೀಠಮರ್ದ ನಾಗರರು ಸಂಘಟಿಸಿರ್ದರರಸನೊತ್ತಿನೊಳು (ಭರತ. ೧೩-೩೦). ೭. ಅಡ್ಡಿ ; ತಡೆ ; ಅಡಚಣೆ ; ಪ್ರತಿಭಟನೆ. ೮. ಆಯಾಸ; ಶ್ರಮ. ೯. ಪರಮಸುಖದ ಆಸೆ; ದಿವ್ಯಾನಂದದ ಇಚ್ಛೆ. ೧೦. ಶುಂಠಿ ; ಅಲ್ಲ : "ಶುಂಠೀ, ನಾಗರಂ, ಮಹೌಷಧಂ, ವಿಶ್ವಭೇಷಜಂ ವಿಶ್ವಾ–ಈ ೫ ಶುಂಠಿ" (ಹಲಾಯು. ೧೧೧-೪೭೦); "ಮಹೌಷಧಂ ನಾಗರಂ ವಿಶ್ವಮೆನಲು ಅರಯ್ಯೆ ಶುಂಠಿಯಕ್ಕು" (ಮಂಗರಾ. ೪೧-೩೫) ; ಕ್ಷೀರ ದಧಿ ಮಧು ಘೃತಂ ಸಿತನಾಗರಂ ... ಲವಣಪೆಲ್ಲಾ ದಶಾಮೃತಸಾರ ಪೂರ ಕಳಸಂ (ಸಿದ್ಧರಾ. ೫-೭); ಮರಿಚಂ ಸುಸೈಂಧವಂ ನಾಗರಮೊಂದ(ಲ)ಂ ಲೊಕ್ಕಿ . . . ಬೆರಸಿಕ್ಕುಗೆಯುಗ್ನಿದೀಪನೀಯಂ ಪಿಂಡಂ (ಅಶ್ವಶಾ. ೭-೪೧). ೧೧. ಒಂದು ಬಗೆಯ ಲಿಪಿ ; ದೇವನಾಗರಿ : ನಿಜಾಂಕವಾಲೆಯುಂ ಮಾನವಮನ್ಮಥಂ ಬರೆದನಾದರದಿಂ ವಿಟಚಕ್ರವರ್ತಿ ಧಾತ್ರೀನುತವಾಗಿ ತಿಲುತಿವುಳಕಂನಡ ನಾಗರದಕ್ಕರಂಗಳ (ಸೌಇಇ. IX-1, ೧೧೮-೪೩ ; 1057). ೧೨. ಒಂದು ಬಗೆಯ ಗಡ್ಡೆ ; ಭದ್ರಮುಸ್ತೆ : "ನಾಗರಂ–ಭದ್ರಮುಸ್ತೆ, ಶೊಂಠಿ, ನಗರಸಂಬಂಧಿ" (ಸಿದ್ಧಾಂತಿ. ೩೭೧) ; "ನಾಗ(ರು)ಹಾ–ನಾಗರ, ಮುಸ್ತೆ, ಲಕ್ಷಣಕಂದ" (ಓಷಧಿ. ೮೫). ೧೩. ಒಂದು ದೇಶದ ಹೆಸರು. 'ನಾಗರ ಖಂಡ$_1$' ಪರಾ. ೧೪. [ವಾಸ್ತು] ವಾಸ್ತುಶಿಲ್ಪದ ಒಂದು ವಿಧಾನ,– ರೀತಿ : ಭರತಖಂಡದ ವಾಸ್ತುಶಿಲ್ಪವು ಮೂರು ತೆರದ್ದೆಂದು ಹೇಳಲ್ಪಟ್ಟಿದೆ. ಮೂಲದಿಂದ ಶಿಖರದವರೆಗೂ ಚತುರಸ್ರಾಕಾರವಾಗಿರುವ ದೇವಾಲಯವು "ನಾಗರ"ವೆಂದೂ . . . ಶಾಸ್ತ್ರಗಳಲ್ಲಿ ಹೇಳಿದೆ (ಪ್ರವಾಸು. ೨೭).

ನಾಗರದ ಲಿಪಿ = ನಾಗರಲಿಪಿ : ತೆಲುಗ ಲಿಪಿ ನಾಗರದ ಲಿಪಿ . . . ಲಾಳಲಿಪಿ ಮೊದಲಾದ ಹಲವು ಲಿಪಿಗಳನೋದ ಬಲ್ಲಗ್ಗಳದ ಕರಣಿಕರಂ ಕರೆಸಿ (ಬಸಪು. ೫-೫೩). [ ಸಂ. ]

**ನಾಗರಂಗ** (ನಾ). ಒಂದು ಬಗೆಯ ಮರ ; ನಾರಂಗ ; ಕಿತ್ತಳೆ : ಕಿಸುವಣ್ ಮುಸುಕಿರ್ದ ನಾಗರಂಗಂ . . . ಕುಂದವು ನಂದನಂಗಳೊಳ್ (ಜಗವಿ. ೨-೧೫) ; ಕದಳಿ ಚೂತ ಲವಂಗ ಲುಂಗ ನಾಗರಂಗ . . . ಮೊದಲಾದ ಅನೇಕವೃಕ್ಷಗಳ ಸಮೂಹದಿಂದ (ಶೀಷಧ. ೫-೭). [ ಸಂ. ]

**ನಾಗರಕ** (ನಾ). ೧. ನಗರರಕ್ಷಕ ; ಪಟ್ಟಣದ ರಕ್ಷಣೆಯ ಹೊಣೆಯನ್ನು ಹೊತ್ತಿರುವ ಅಧಿಕಾರಿ ; ಕೊತವಾಲ ; ತಳವಾರ. ೨. ಶೃಂಗಾರ ವಿಷಯದಲ್ಲಿ ನಾಯಕನಿಗೆ ಸಹಾಯಕರಾಗಿ ಬರುವ ನಾಗರಕ, ವಿಟ, ವಿದೂಷಕ ಮತ್ತು ಪೀಠಮರ್ದರೆಂಬ ನಾಲ್ಕು ಮಂದಿ ಭೋಗಸಖರಲ್ಲಿ ಒಬ್ಬ : ತನ್ನೊಡನೆ ತೊಟಲ್ವ ನಾಗರ[ಪಾಠಾಂ. ರಿ]ಕ ವಿಟ ವಿದೂಷಕ ಪೀಠಮರ್ದಕರ್ಕಳನಿರಲ್ವೇಟ್ದು (ಪಂಪಭಾ. ೪-೧೧೧ ವ) ; ದೀನಜನತಾ ಕಲ್ಪಾಂಘ್ರಿಪಂ ನಾಗರಕ ವಿಟ ವಿದೂಷಕ ಪೀಠಮರ್ದಕರ್ಕಳ್ವೆರಸು . . . ಬರ್ಪೊಂ (ಶಾಂತಿಪು. ೬-೭೨ ವ) ; ಸೊಬಗಿಲ್ಲದ ಗಣಿಕಾನಿಕರಮಿಲ್ಲ ಚದುರಿಲ್ಲದ ನಾಗರಕರ್ಕಳಿಲ್ಲ (ವರ್ಧಮಾ. ೧-೪೮ರಗಳೆ). ೩. [ಕಾಮಶಾ] ಒಂದು ಬಗೆಯ ಬಂಧ : ಮಗುಳ್ದು ಮಲಗಿ ರಮಣಿ . . . ತಕ್ಕೆಗೆಯ್ದು ನೆರೆಯ ಪೂಗುವ ಭಾವಮದುವೆ ನಾಗರಕ[ಪಾಠಾಂ. ತ] ಮೆನಿಪ್ಪುದು (ಜನವ. ೯-೧೧). [ ಸಂ. ]

**ನಾಗರಖಂಡ$_1$** (ನಾ). ೧. (ಹಸಿ) ಶುಂಠಿ ಚೂರು : ನಾಗರಖಂಡಂಗಳನಾ ನಾಗರಖಂಡದೊಳೆ ತೊಡರೆ ನರನಿಸುವುದುಮಾ ನಾಗರಖಂಡಂಗಳುಮಂ ನಾಗರಖಂಡಮುಮನಳರ್ದುಕೊಂಡಂ ದಹನಂ (ಪಂಪಭಾ. ೫-೮೯). ೨. ಒಂದು ನಾಡಿನ ಹೆಸರು : ಶ್ರೀಮತ್ ಬ್ರಹ್ಮದೇವರಸರ್ ನಾಗರಖಂಡ ಪೆಟ್ಟತ್ತುಮನಾಳುತ್ತಮಿರೆ (ಎಕ. VII, ಶಿಕಾರಿ. ೮೧-೯ ; 1030).
[ ನಾಗರ$_2$ + ಖಂಡ ]

**ನಾಗರಖಂಡ$_2$** 'ನಾಗರು' ಪರಾ.

**ನಾಗರಜ್ಜು** (ನಾ). = ನಾಗಪಾಶ ೧ : ನೆಱಿದಿರೆ ಸಂಕಲೆವಂದದ ತೆಱದಿಂ ಪೆಣೆದಿರ್ದ ನಾಗರಜ್ಜುಗಳೆಲ್ಲಂ . . . ಪಱಿದು (ಶಾಂತಿಪು. ೮-೫೧).
[ ನಾಗ + ರಜ್ಜು ]

**ನಾಗರತೆ** (ನಾ). = ನಾಗರಿಕತೆ : ವಿಕ್ರಮಂ ಸೌಭಾಗ್ಯಂ ನಾಗರತೆ ಕಳೆಗಳೊಂದೊಂದಾಗಿ ಕರಂ ಮೂರ್ತಿವೆತ್ತವೋಲವನೆಸೆವಂ (ಉದ್ಭಟ. ೧೧-೩೧) ; ಕೆಲವರನು ನಾಗರತೆಗಾಗೊಲಿದೆನ್ (ಬಿಗಾಳಿ. ೫೭). [ ಸಂ. ನಾಗರತಾ ]

**ನಾಗರತ್ನ** (ನಾ). ನಾಗರ ಹಾವಿನ ಹೆಡೆಯಲ್ಲಿರುವುದೆಂದು ಹೇಳಲಾದ ರತ್ನ. [ ನಾಗ + ರತ್ನ ]

**ನಾಗರಬಾವಿ** (ನಾ). ಒಂದು ಊರಿನ ಹೆಸರು : ಆ ಕೇರಿಯಿಂ ಪಡುವಲು ಪೂದೋಂಟ ವಾಱುಮಮತ್ತ ಮೂಡಲು ನಾಗರಬಾವಿಯ ಕೆ × × × (ಎಕ. VII, ಶಿಕಾರಿ. ೨೩೨-೦೭ ; 1046). [ ನಾಗರ$_2$ + ಬಾವಿ ]

**ನಾಗರಮುಸ್ತೆ** (ನಾ). ಒಂದು ಬಗೆಯ ಗಡ್ಡೆ ; ಕೊನ್ನಾರಿಗಡ್ಡೆ : "ಚೂಡಾಲ–ನಾಗರಮುಸ್ತೆ, ಉಚ್ಚಟಗೆ" (ಓಷಧಿ. ೫೮); ನಾಗರಮುಸ್ತೆ, ಅಷಾಢೀಗೆಣಸು ಇವೆರಡನು ಸಮವಾನವಾಗಿ ತೆಗೆದುಕೊಂಡು ಚೂರ್ಣವ ಮಾಡಿ . . . ಸೇವಿಸಲು ವೀರ್ಯವೃದ್ಧಿಯಹುದು (ವೈದ್ಯಸಾ. II, ೨೪೮).
[ ನಾಗರ$_2$ + ಮುಸ್ತೆ ]

**ನಾಗರಮೋತ** 'ನಾಗರಮೋಥ' ನೋ.

**ನಾಗರಮೋತಿ** 'ನಾಗರಮೋಥ' ನೋ.

**ನಾಗರಮೋಥ**, ನಾಗರಮೋತ, ನಾಗರಮೋತಿ, ನಾಗರಮೋಥೆ (ನಾ). ಸುವಾಸನೆಯಿಂದ ಕೂಡಿರುವ ಒಂದು ಬಗೆಯ ವನಸ್ಪತಿ,–ಮೂಲಿಕೆ; ನಾಗರಮುಸ್ತೆ : ಅಮೃತಬಳ್ಳಿ, ಕಿರಾತಕಡ್ಡಿ, ಪಿತ್ತಪಾಪಟ, ನಾಗರಮೋಥ, ಶುಂಠಿ ಇವನ್ನು ಮುಕ್ಕಾಲು ತೊಲೆಯಂತೆ ಜಜ್ಜಿ ಹಾಕಿ . . . ಉಪಯೋಗಿಸುವುದು (ಮನೆವು. ೨೫). **ನಾಗರಮೋತ** : ಜೇಕಿನಗಡ್ಡೆ (ನಾಗರಮೋತ) (ಮುಂಬವ್ಯಾ. ೧೫೬). **ನಾಗರಮೋತಿ** : ಹಾಲವುಡ್ಡಿ ಕರ್ಪೂರ ಶಿಲಾರಸ ದೇವದಾರ ಲೋಲ ನಾಗರಮೋತಿ ಚಂದನ ಕರ್ಚೂರ ರಾಳ ಗುಗ್ಗುಳದ ದಶಾಂಗ (ಸಿದ್ಧಪು. ೧೯-೩). **ನಾಗರಮೋಥೆ** : ೧೨೦, ನಾಗರಮೋಥೆ (ಜೇಕಿನ ಗಡ್ಡೆ) ; ೧೨೨, ನೀಲಿ (ಮುಂಬವ್ಯಾ. ೧೩೭).
[ ←ಹಿಂ. ಮರಾ. ನಾಗರಮೋಥಾ./ಸಂ. ನಾಗರಮುಸ್ತಾ ]

**ನಾಗರಮೋಥೆ** 'ನಾಗರಮೋಥ' ನೋ.

**ನಾಗರಲಿಪಿ** (ನಾ). ಹಿಂದಿ, ಮರಾಟಿ, ಸಂಸ್ಕೃತಭಾಷೆಗಳನ್ನು ಬರೆಯಲು ಬಳಸುವ ಅಕ್ಷರಮಾಲೆ; ದೇವನಾಗರಿ. [ ನಾಗರ೩ + ಲಿಪಿ ]

**ನಾಗರಸ್ತ್ರೀ** (ನಾ). ಸೂಳೆ ; ವೇಶ್ಯೆ ; ಗಣಿಕೆ : ಬಿಂಬಸಾರನು ರಾಜಗೃಹದಲ್ಲಿ ಆಳುತ್ತಿದ್ದಾಗ, ವೈಶಾಲಿಯಲ್ಲಿ ಆಮ್ರಪಾಲಿ ಎಂಬುವಳು ಒಬ್ಬಳು ನಾಗರ ಸ್ತ್ರೀ, ಎಂದರೆ ಗಣಿಕೆ (ಹತ್ತುಮ. ೯೯) ; ನಾಗರಸ್ತ್ರೀ ಬಂದು ರಾಜರನು ಕರೆವುದೇ ಎಂದು ಶಂಕಿಸಬೇಡಿ (ಯಶೋಧ. ೩೯). [ ಸಂ. ]

**ನಾಗರಾಜ** (ನಾ). ನಾಗರ ಹಾವುಗಳ ಅಧಿಪತಿ; ಆದಿಶೇಷ: ವಜ್ರಾಯುಧಮಹೀಪಾಲನೊಳ್ ಸಹಸ್ರಜಿಹ್ವನಪ್ಪ ನಾಗರಾಜನನೆ ಪೋಲ್ತು ನುಡಿಯೆ (ಶಾಂತಿಪು. ೮-೧೩೬ ವ). [ ನಾಗ + ರಾಜ ]

**ನಾಗರಿ** (ನಾ). ೧. ಬುದ್ಧಿವಂತೆ; ಕುಶಲೆ. ೨. ಕುಟಿಲಸ್ವಭಾವದ ಹೆಂಗಸು. ೩. ಒಂದು ಬಗೆಯ ಲಿಪಿ; ದೇವನಾಗರಿ. [ಸಂ. ನಾಗರೀ]

**ನಾಗರಿಕ** (ಗು). ೧. ಪಟ್ಟಣಕ್ಕೆ ಸಂಬಂಧಿಸಿದ; ನಗರದ : ನಾಗರಿಕ ಆಡಳಿತದ ಉಚ್ಚ ಅಧಿಕಾರಿಗಳಾಗಿದ್ದುದರಿಂದ ರಾಜನೊಂದಿಗೆ ನೇರ ಮನವಿಗಳನ್ನರ್ಪಿಸಲೂ ಅವರು ಅರ್ಹರಾಗಿದ್ದರು (ತುಳುನಾ. ೧೧೩). ೨. ನಗರದಲ್ಲಿರುವ; ಪಟ್ಟಣದಲ್ಲಿ ವಾಸಿಸುವ : ನಿಜವಿಜಯಕಟಕದ ನಾಗರಿಕರವಣರಮಣೀಜನಂಗಳ್ ಕೌಮುದೀಮಹೋತ್ಸವೋತ್ಸುಕರಾಗಿ ನೆರೆದಲ್ಲಿ (ಆದಿಪು. ೧೩-೧೧ ವ). (ನಾ). ೩. ಪಟ್ಟಣದಲ್ಲಿರುವವನು; ಪಟ್ಟಣದಲ್ಲಿ ವಾಸಿಸುವವನು : ಒಮ್ಮೆ ದೇವಣ್ಣನೆಂಬ ನಾಗರಿಕನೊಬ್ಬ, ಭಂಡಾರಿ ಆದಿಯಣ್ಣನೆಂಬಾತನಿಗೆ ತನ್ನ ಭೂಮಿಯನ್ನು ಕ್ರಯ ಮಾಡಿದ್ದ (ಶಾಂತಲಾ. ೦೩೫) ; ನಾಗರಿಕರ ಮಾತು ನಗರದಲ್ಲಿ ಚಂದ (ಗಾದೆ). ೪. ಪಟ್ಟಣದ ಸಂಬಂಧವುಳ್ಳವನು; ಕುಶಲ; ಚತುರ : ನಾಗರಿಕರು- ವ್ಯವಸಾಯ ಮತ್ತು ವ್ಯಾಪಾರ ಮಾಡುವುದಲ್ಲದೆ ನಾನಾವಿಧ ಶಾಸ್ತ್ರ ಕುಶಲವಿದ್ಯೆಗಳಲ್ಲಿ ಪ್ರವೀಣರಾಗಿರುವರು (ಭೂಗೋಳ. ೦೯). ೫. ಒಂದು ಪ್ರಭುತ್ವಕ್ಕೆ ಒಳಪಟ್ಟವನು; ಪ್ರಜೆ : ನಿಜಮುಂದಿರಂಬೊಕ್ಕು ಸುಖದಿಂ ದಿರ್ಪಿನಂ ನಾಗರಿಕಾದಿ ನಾನಾ ಕಲಾಕೋವಿದ ಜಾತಿನಾಯಕರ್ ಬಂದು ವಂದಿಸಿ (ಹಮ್ಮಿರ. ೨-೫೫ ವ) ; ಭಾರತದ ಸಮಸ್ತ ನಾಗರಿಕರಿಗೆ: ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯವೂ . . . ದೊರೆಯುವಂತೆ ಮಾಡುವುದಕ್ಕಾಗಿಯೂ (ಭಾಧಾನ. ೧) ; ಕೆಲವರು ಸೆರೆಮನೆಯಿಂದ ಹೊರಬಂದ ಮೇಲೆ, ಅತ್ಯಂತಯೋಗ್ಯರಾದ ನಾಗರಿಕರಾಗಿ ಬಾಳುತ್ತಿದ್ದುದೂ ಉಂಟು (ಸಸ್ಯಕ. ೯೪). ೬. = ನಾಗರಕ ೨ : ಮೇಳದ ನಾಗರಿಕ ವಿಟ ವಿದೂಷಕ ಪೀಠಮರ್ದಕರ್ಕಳ್ವೆರಸು ಕಾಮದೇವನೋಲಗಕ್ಕೆ ಬರ್ಪಂತೆ ಸೂಳೆಗೇರಿ ಯೊಳಗನೆ ಬರ್ಪುದುಂ (ಪಂಪಭಾ. ೪-೭೯ ವ) ; ನಾಗರಿಕ ವಿಟ ವಿದೂಷಕಂ ಪೀಠಮರ್ದಕಪುರಸ್ಸರಂ ಪೌರವಿಹಾರಕ್ಕೆ ಪೊಱಮಡೆ (ಜಗವಿ. ೧೬-೧೧೯ ವ) ; ನಾಗರಿಕನಂದದಲಿ ಲಲಿತಸರಸೋಚಿತ ವಚನವುಂ ನಲಿಸುವಂ (ಬಸವು. ೩೬-೩೦) ; ನಾಯಕನಿಚ್ಚೆಗೆ ಪದೆದು ಚಾತುರ್ಯಮಪ್ಪುದನೆಸಗಿ ತೊಲಗುವಂ . . . ನಾಗರಿಕನೆಂದೆಂಬವಂ (ಜನವ. ೮-೩೯) ; ಬಳಿಕ ವಿಟ ವಿದೂಷಕ ಪೀಠಮರ್ದನ ನಾಗರಿಕರೆಂಬ ಚತುರ್ವಿಧ ಭೋಗಸಖರಿಂ (ವಿವೇಕ. ೩೩೮) ; ಮೂಡಲದು ವಿಟನಿಂಗೆ ಬಡಗಲದು ವಿದೂಷಕಗೆ ಪಡುವಲದು ನಾಗರಿಕಗಂ ತೆಂಕಲದು ಪೀಠಮರ್ದನಗೆ (ಸರ್ವಜ್ಞ. ೧೬೩೧). ೭. ಧೂರ್ತ; ವಂಚಕ. [ ಸಂ. ]

**ನಾಗರಿಕತೆ** (ನಾ). ನಗರವಾಸಿಗಳಲ್ಲಿ ಇರಬೇಕಾದ ಗುಣಧರ್ಮ,- ಸಭ್ಯತನ,-ಯೋಗ್ಯತೆ; ಗ್ರಾಮ್ಯನಲ್ಲದಿರುವಿಕೆ; ಸದಾಚಾರದಿಂದ ಕೂಡಿಕೊಂಡಿರುವಿಕೆ : ನಿಜವಾದ ಧರ್ಮ ಸಮಾಜದ ಅಡಿಗಲ್ಲು. ಅದರ ಮೇಲೆಯೇ ನಾಗರಿಕತೆಯ ಸರಕಾರ ನಿಂತಿದೆ (ಧರ್ಮಸಾ. ೩) ; ಸಂಸ್ಕೃತಿಗೂ ನಾಗರಿಕತೆಗೂ, ಆತ್ಮಕ್ಕೂ ಭೌತಿಕವಸ್ತುಗಳಿಗೂ ಇರುವ ಅಂತರವಿದೆ (ಭಾರದ. ೫) ; ಸ್ತ್ರೀ ಜಾತಿಯ ವಿಷಯದಲ್ಲಿ ಇಷ್ಟು ಅಧಿಕಾರವನ್ನು . . . ಚಲಾಯಿಸುವುದು ನಾಗರಿಕತೆಯ ಲಕ್ಷಣವಲ್ಲ (ಸಾಹಿಜೀ. ४೦). P ಕೆಲವು ವೇಳೆ ಇದು 'ಸಂಸ್ಕೃತಿ' ಎನ್ನುವ ಅರ್ಥದಲ್ಲಿಯೂ ಬಳಕೆಯಾಗುತ್ತದೆ. [ ಸಂ. ನಾಗರಿಕತಾ]

**ನಾಗರಿಕಹಕ್ಕು** (ನಾ). ಒಂದು ದೇಶದ ಪ್ರಜೆಗೆ ಆ ದೇಶದ ರಾಜ್ಯಾಂಗದಂತೆ ಸಲ್ಲಬೇಕಾದ ಅಧಿಕಾರ,-ಅವಕಾಶ : ನಾಗರಿಕ ಹಕ್ಕುಗಳು (Civil rights. ಪಶ್ರಿನಿ. ೧೭). [ ನಾಗರಿಕ + ಹಕ್ಕು೭ ]

**ನಾಗರಿಗ, ನಾಗರೀಕ, ನಾಗಲಿಕ, ನಾಗಲೀಕ** (ನಾ). ೧. = ನಾಗರಕ ೨ : ಸುರಭವನ ವಧುಗಳು ನಾಗರಿಗರಿವರೆತ್ತ ಭಾರತಭೂಗತರು ತಾವೆತ್ತ (ಕುಮ್ಮಾಆ. ೮-೪೪). **ನಾಗರೀಕ:** ೧. ವಿಟರ ಚೆಲ್ವಂ ವಿದೂಷಕರ ಘೋಷಣೆಯು ಮಹಾಪಟುವಾಕ್ಯ ನಾಗರೀಕರ ಪೀಠಮರ್ದನಂ ಸ್ಫುಟಗುರುತ್ವಗಳ ನಡೆನುಡಿ ನೋಟ ಮುಗುಳ್ನಗೆಗಳಿಂದೊಳಗು ಮಾಡಿಕೊಂಬ . . . ಚಂದನ ಗಂಧಿಯರು ಚಂದ್ರಶಾಲೆಯೊಳಗಿರೆ ಕಂಡರು (ಪ್ರಭುಪು. ४-೧೩೭); ಪರಿರಂಭಣ ಕೂಟದೊಳು ಮನವ ಕೊನರಿಪ ನಾಗರೀಕನು ಪೀಠಮರ್ದನ ವಿಟ ವಿದೂಷಕಾದಿಗಳು ಬಹುಚಾಟು ಚಪಳತೆಯಿಂದೆ ಬರುತಿರ್ದರು (ನವಮೋ. ೧೭-೫४). ೨. = ನಾಗರಿಕ ೪ : ಆ ಊರಿನ ಜನ ತುಂಬ ನಾಗರೀಕರಾಗಿದ್ದಾರೆ (ರೂಢಿ). **ನಾಗಲಿಕ:** ೧. ವಿಟ ವಿದೂಷಕ ಪೀಠವರ್ಧನರೆಂದೆಂಬ ನಟನೆಯು ನಾಗಲಿಕರಿಗೆ ಘಟಕ ಕಾಮನು ಕಾವಲಿರಿಸಿದನೆಂಬಂತೆ ಕುಟಿಲಾಕ್ಷಿಯರ ಮೊತ್ತವೆಸೆಯೆ (ಅಬ್ಬಲೂ. ೩-೮೪). ೩. ದರ್ಜಿ; ಚಿಪ್ಪಿಗ : ಕರುಣನಿಧಿ ನಾಗಲಿಕ ವಂಶೋದ್ಧರಣ ಮಿತ್ರಾವರುಣ ಸತ್ಕಾಭರಣ . . . ಸದ್ಗುಣಿ ಚೆನ್ನವೀರನ ತನುಜ ಸಂಗಯ್ಯ (ಶಂಕದಾ. ೧-೨೩) ; ಚಿಟ್ಟೇರು . . . ಇವರು ನಾಗಲಿಕರೆಂಬ ಕುಲದವರ ವಳಭೇದವೆಂದು ತೋರುತ್ತದೆ (ಕಭಾಗ. ೦೧೦). ೪. ಒಂದು ಬಗೆಯ ಪಕ್ಷಿ : ಹುಟ್ಟದ ಮರದಲ್ಲಿ ಹಾಱದ ಪಕ್ಷಿ ತಲೆದೋಱುತ್ತದೆ . . . ಅದು ನಾಗಲಿಕಪಕ್ಷಿ ಹಾಱಿಹೋಯಿತು (ಕೋಲಶಾ. ४೧-೩೧). **ನಾಗಲೀಕ:** ೧. ನಾಗಲೀಕನು ಈರ್ವರ್ಗುಂ ಚಾತುರ್ಯಂ ಪುಟ್ಟಿಸುವಂ ಇದು ನಾಗಲೀಕ ಕೃತ್ಯಂ (ಕಾಮಶಾ. ೬-೧೩४) ; ನಾಗಲೀಕ ಪುರುಷಗೆ ಭೋಗವಿಲ್ಲದೆ ಹೋದೀತೇ ? (ಗಾದೆ). [<ಸಂ. ನಾಗರಿಕ ]

**ನಾಗರಿಪು** (ನಾ). ಸರ್ಪಗಳ ಶತ್ರು; ಗರುಡ. 'ನಾಗರಿಪುಗಮನ' ಪರಾ. [ ನಾಗ + ರಿಪು ]

**ನಾಗರಿಪುಗಮನ** (ನಾ). ಗರುಡನ ಮೇಲೆ ಸಂಚರಿಸುವವನು; ವಿಷ್ಣು : ನಾಗರಿಪುಗಮನವಂದಿತ ಪಾದಪದ್ಮಯುಗ (ಪ್ರಾಭಂಗ. ೩೧-೧). [ ನಾಗರಿಪು + ಗಮನ ]

**ನಾಗರೀಕ** 'ನಾಗರಿಗ' ನೋ.

**ನಾಗರೀಕತೆ** (ನಾ). = ನಾಗರಿಕತೆ : ಭೂಶೋಧನೆಗಳ ಅನಂತರ ನವೀನ ನಾಗರೀಕತೆಯೊಂದರ ಇರವು ಪ್ರಕಾಶಕ್ಕೆ ಬಂದಿತು (ದ್ರಾವಿ. ೨೨). [ <ಸಂ. ನಾಗರಿಕತಾ ]

**ನಾಗರೀಗಿಡ** (ನಾ). ಒಂದು ಬಗೆಯ ಗಿಡ : ನಾಗರೀಗಿಡ, ನಕ್ಕರೀಗಿಡ, ಕಂದರಕ್ಕರೆ(ಮೃಜಿಗಿ. ೭೯-೧೭೦೭). [ ನಾಗರಿ೧ + ಗಿಡ (<ಗಿಡು) ]

**ನಾಗರೀಲಿಪಿ** (ನಾ). ಒಂದು ಬಗೆಯ ಲಿಪಿ ; ದೇವನಾಗರಿ. [ ಸಂ. ]

**ನಾಗರು, ನಾಗರ೧** (ನಾ). ೧. ನಾಗರಹಾವು ; P 'ದೇವರು' ಎಂಬಂತೆ ನಾಗರಂಗಳ ಬಹುತ್ವಭಾವನೆಯಿಂದ ಕನ್ನಡದಲ್ಲಿ ಬಹುವಚನಾಂತವಾದ ಈ ರೂಪವು ಏಕವಚನದಲ್ಲಿ ಬಳಕೆಯಲ್ಲಿದೆ : ಕಲ್ಲ ನಾಗರ ಕಂಡರೆ ಹಾಲನೆಱೆಯೆಂಬರು ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ (ಬಸವ. ೧೯೪) ; ಗರುಡನೂರವರೆಱೆವರೇ ನಾಗರಿಗೆ ತನಿಯನು (ಕುಮ್ಮಾದ್ರೋ. ೮-೫४) ; ನಾಗರಿಗೆ ಮುದ್ದ ಹೇಳ ಬಂದ ಅಯ್ಯಗಳು ನಾಕಿತಿಯ ನಟಣೆಯಲ್ಲಿ

ಸಿಲುಕಿದರು (ಸಿದ್ಧೇವ ೧೯೨-೫೮೪). ೨. ನಾಗರ ಕಲ್ಲು,-ಪ್ರತಿಮೆ: ನಾಗಠಾಣಕ್ಕೆ ಪೋಗಿ ನಾಗರನರ್ಚಿಸಿ ಪೊಡೆವಟ್ಟು (ಪದ್ಮಾರಾ. ೧೨-೨೨); ಒಂದು ದಿವಸಮಾ ಕನ್ನೆ ತನ್ನೊಡನಾಡಿಗಳಪ್ಪ ಕನ್ನೆಯರ್ವೆರಸು ಮಹಾ ವಿಭೂತಿಯಿನಾ ನಾಗಸ್ಥಾನಕ್ಕೆ ವಂದು ನಾಗರನರ್ಚಿಸುವಲ್ಲಿ (ಸುಕುಮಾ. ೫-೬೦ ವ); ಪುರದ ಪೊಱಗಣ ನಂದನವನದೊಳೊಂದು ನಾಗಾಲಯವಿರಲಲ್ಲಿ ನಾಗರುಂ ಪೂಜಿಸಲೆಲ್ಲರುಂ ಪೋಗಿ (ಪುಣ್ಯಾಸ್ರ. ೬-೪ ವ). ೩. ಹೆಂಗಸರು ತಲೆಯಲ್ಲಿ ಧರಿಸಿಕೊಳ್ಳುವ ನಾಗರವಮೂರ್ತಿ ಇರುವ ಒಂದು ಬಗೆಯ ಆಭರಣ: ಅವನು ಹೆಂಡತಿಯು ನಾಗರು, ಜಡೆಬಿಲ್ಲೆ ಎಲ್ಲಾನೂ ಅಡವು ಹಾಕಿದ್ದಾನೆ (ರೂಢಿ). ನಾಗರ$_1$: ೩. ಕತ್ರಿನಲ್ಲಿ ಮಂಗಳಸೂತ್ರವನ್ನೂ, ಅಡ್ಡಿಕೆಯನ್ನೂ . . . ತಲೆಯಲ್ಲಿ ಒಂಟಿನಕ್ಷತ್ರದಂತೆ ಶೋಭಿಸುವ ಒಂದು ನಾಗರವನ್ನೂ . . . ಹೊರತು ಇತರ ಭೂಷಣಗಳಾವುವನ್ನೂ ಆಕೆಯು ಹಾಕಿಕೊಂಡಿರಲಿಲ್ಲ (ಲಕ್ಷ್ಮೀಪ್ರ. ೧೧).

**ನಾಗರ ಅಮಾವಾಸ್ಯೆ, ನಾಗರ ಅಮಾಸಿ** = ನಾಗರಪಂಚಮಿ ಹಬ್ಬದ ಹಿಂದಿನ ಅಮಾವಾಸ್ಯೆ; ಆಷಾಢಬಹುಳ ಅಮಾವಾಸ್ಯೆ; ದೀವಸಿ ಅಮಾವಾಸ್ಯೆ . . . ಮುಂಬರುವ ನಾಗಪಂಚಮಿಗೆ ಸಮಿಪದ ದಿನವಾದುದ ರಿಂದ ಇದಕ್ಕೆ ನಾಗರ ಅಮಾವಾಸ್ಯೆ ಎಂದೂ ಉತ್ತರಕರ್ಣಾಟಕದ ಹೆಸರು (ಭಾಹಬ್ಬ. ೯೯); ನಾಗರ ಅಮಾಸಿಗೆ ತಾನೆ ನಾವು ತೆಗೆದಿಟ್ಟ ಸಮೆ ತೆಗೆದು ತಿಕ್ಕಿ ಸ್ವಚ್ಛಗೊಳಿಸುವದು ? (ಸ್ಮೃತಿಚಿ. ೪೯೩). **ನಾಗರ ಕಲ್ಲು** = ಕಲ್ಲಿನಿಂದ ಮಾಡಿದ ನಾಗರಹಾವಿನ ಪ್ರತಿಮೆ: ತುಳಸಿಕಟ್ಟೆಯ ಮೇಲೆ ವೃಂದಾವನಕ್ಕೆ ಹೊಂದಿಕೊಂಡು ಒಂದು ನಾಗರ ಕಲ್ಲು ಇನ್ನೊಂದು ಮಾಸ್ತಿ ಕಲ್ಲು ಯಾರ ಹಸ್ತಕ್ಷೇಪದಿಂದಲೋ ತಲೆಕೆಳಗಾಗಿ ನಿಂತಿವೆ (ಆಮನಿ. ೩೦). **ನಾಗರ ಕಾಟ** = ೧. (ನಾಗದೇವತೆಗಳಿಗೆ ಅಪಚಾರ ಮಾಡುವುದರಿಂದ ಒದಗುವುದೆಂದು ನಂಬಲಾದ) ಕಷ್ಟ,-ಪೀಡೆ; ಕಜ್ಜಿ, ಕುರು, ಹುಣ್ಣು ಮೊದಲಾದ ಚರ್ಮರೋಗ: ನಾಯ ಹಿಡಿದಿಪ್ಪ ಕರಿನಾಕಿತಿ ನಾಗರ ಕಾಟ ವಾಗಿ ಕಾಡುತಿಪ್ಪಳಯ್ಯ (ಸಿದ್ಧೇವ. ೧೯೨-೫೮೪); ಇದು ಔಷಧಕ್ಕೆ ಹೋಗು ವುದಿಲ್ಲ. ಇದು ನಾಗರ ಕಾಟ, ತನಿ ಎರೆಯಬೇಕು (ರೂಢಿ). ೨. (ನಾಗರಿಗೆ ಮಾಡಿದ ಅಪಚಾರದಿಂದ ಉಂಟಾಗುವುದೆಂದು ನಂಬಲಾದ) ಬಂಜೆ ತನ; ಮಕ್ಕಳಾಗದಿರುವಿಕೆ; ಅಪುತ್ರವಂತಿಕೆ: ವಿದುರಾಶ್ವತ್ಥಕ್ಕೆ ಹೋಗಿ ನಾಗಪ್ರತಿಷ್ಠೆ ಮಾಡಿದರೆ ನಾಗರ ಕಾಟ ಪರಿಹಾರವಾಗಿ ಮಕ್ಕಳಾಗುತ್ತೆ (ರೂಢಿ). **ನಾಗರ ಕಾಯಿ**=ಹುಣಿಸೆಕಾಯಿ: ನಾಗಪೂಜೆಗೆ ನೆನೆಗಡಲೆಯೊಂದಿಗೆ ನಾಗರ ಕಾಯಿಯೂ ಬೇಕು (ರೂಢಿ). **ನಾಗರ ಖಂಡ್ಯ**=೧. ಹಾವಿನ ತುಂಡು,- ಚೂರು: ನಾಗರ ಖಂಡಂಗಳನಾ ನಾಗರಖಂಡದೊಳೆ ತೊಡರೆ ನರನಿಸು ವುದುಮಾ ನಾಗರ ಖಂಡಂಗಳುಮಂ ನಾಗರಖಂಡಮುಮನಳರ್ದುಕೊಂಡು ದಹನಂ (ಪಂಪಭಾ. ೫-೮೯). ೨. ಒಂದು ಬಗೆಯ ಆಭರಣ (?): ನಾಗವಿಭೂಷಣಪ್ರತತಿ ನಾಗರಖಂಡಮಪೂರ್ವಮಪ್ಪ ಪುನ್ನಾಗದ ಬಾಸಿಗಂ ಬಗೆದ ಬಣ್ಣದ ಪುಟ್ಟಿಗೆ ನಾಗಜಾಲಮೆಂದಾಗಡೆ ನಾಗಲೋಕವಿಭವಂಗ ಳೊಳಾಱಿಸಿ ನಾಗಶಯ್ಯೆಯೊಳ್ ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣವನಂ ಮರುಳ್ಚಿದಳ್ (ಪಂಪಭಾ. ೪-೧೭). **ನಾಗರ ಚೌತಿ** = ನಾಗಚತುರ್ಥಿ: ನಾಗರ ಚೌತಿಯು, ಆಚಾರವಂತರಿಗೆ ಉಪವಾಸದ ದಿವಸ (ರೂಢಿ). **ನಾಗರ ಪಂಚಮಿ**=ನಾಗಪಂಚಮಿ: ನಾಗರ ಪಂಚಮಿ ಹೆಚ್ಚಾಗಿ ಹೆಣ್ಣುಮಕ್ಕಳ ಹಬ್ಬ (ಭಾಹಬ್ಬ. ೧೦೨); ನಾಗರ ಪಂಚಮಿ ನಾಡಿಗೆ ದೊಡ್ಡದು (ಕನ್ನಜಾ. ೧೪೬); ನಾಗರ ಪಂಚಮಿಯಾದರೆ ಹಾದರಗಿತ್ತಿಗೇನು ? (ಗಾದೆ). **ನಾಗರ ಪಣೆ**=ಹಾವಿನ ಹೆಡೆಯ ಆಕಾರದಲ್ಲಿರುವ,ಕಿವಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ: ಕಿವಿಯೊಳೊಪ್ಪುವ ನಾಗರ ಪಣೆ ಹೊಸ ಹೊನ್ನ ಸವಡಿದಾರದ ಕೊರಳುಗಳ... ಅಳ್ಳಳ ಮೇಳದೆ ಭುವನೇಶ್ವರನೈತಂದ(ಕಂಸವಿ. ೧೨-೫೫); ವರ ಕಿವಿಯಲ್ಲಿ 'ನಾಗರ ಪಣೆ'ಗಳಿದ್ದುವು (ಕರ್ನಾಜ. ೧೩೯).

**ನಾಗರ ಬಿಲ್ಲೆ** = ನಾಗರು ೩: ನಮ್ಮ ಮನೆಯಲ್ಲಿ ಹಳೆಯ ಕಾಲದ ಒಂದು ನಾಗರ ಬಿಲ್ಲೆ ಇದೆ (ರೂಢಿ). **ನಾಗರ ಬೆತ್ತ** = ನಾಗಬೆತ್ತ: ಒಂದು ಕಾಲದಲ್ಲಿ ಆ ನಾಗರ ಬೆತ್ತವನ್ನು ಒಗ್ಗಾಲಿ ತಂದಿದ್ದನು (ಕಂಬಹು. ೧೨); ಎಲೆವಸ್ತ್ರ ಹೊದೆದು . . . ಕೈಯಲ್ಲಿ ನಾಗರ ಬೆತ್ತ ಹಿಡಿದು ಅರಸುಮರ್ಜಿ ಯಿಂದಲೇ ಹೊರಟಿದ್ದರು (ದೇವಹಂ. ೧೧೧). **ನಾಗರ ಮರಿ**= ೧. ನಾಗರ ಹಾವಿನ ಮರಿ. ೨. ಕೆಳದಿರಾಜರಲ್ಲಿದ್ದ ಕತ್ತಿಯ ಹೆಸರು: ನಾಗರಮರಿಯೆಂಬಸಿಯಂ ಕೊಂಡಧಿಕಹರ್ಷದಿಂ ಪೊರಮಟ್ಟಂ (ಕೆಸ್ನ. ೩-೧೧). **ನಾಗರ ಮಿಡಿ** = ನಾಗರಹಾವಿನ ಮರಿ; ಮಿಡಿನಾಗರ: ಸಾಕಾಗುತನಕ ಕೂಡಿ ಜೋಕಾಲಿ ಜೀಕೂನ ನಾಗರ ಮಿಡಿಯಾಗಿ ಸುಳಿಯೋಣ (ಜನಗೀ. ೩). **ನಾಗರ ರಾಗಟೆ**=ನಾಗರು ೩: ಶಿರೋಭೂಷಣ ಗಳು–ಬೈತಲೆಸರ, ಬಾಸಿಂಗ, ಬೈತಲೆಪದಕ, ನಾಗರ ರಾಗಟೆ . . . ಗೊಂಡೆಹೂ ಇತ್ಯಾದಿ (ಕವಿಕೋ. I, ೮೨೧). **ನಾಗರವಕ್ಕೆಗ** = ಆದಿ ಶೇಷನನ್ನು ಹಾಸಿಗೆಯನ್ನಾಗಿ ಮಾಡಿಕೊಂಡಿರುವವನು; ವಿಷ್ಣು: "ರಕ್ಕಸವಗೆಯುಂ ನಾಗರವಕ್ಕೆಗಂ . . . ಪರಿಯಕ್ಕುಂ ಕಾರೊಡಲಂ" (ಚತುನಿ. ೭); ನಾಗರವಕ್ಕೆಗ ನೀಂ ಗತಿಯೆನ್ನದೆ [ಮೇಗನು] ಮಱಿತು ಜಱಿವರ ಪೋಗದಿರು (ಶತಸಾಂ. ೧೩-೭೨). **ನಾಗರವಾಲಿ (?)** = (?): ಸುತವಿನೋದದ ರಚನೆಯುಲಿ ಸಾರಥಿಗೆಯಾ ವಾಸುಗಿಯ ಕೊಟ್ಟನು ಕ್ಷಿತಿಗೆ ನಾಗರವಾಲಿಯಾದುದು ನೃಪತಿ ಕೇಳೆಂದ (ಸಂಭಪ. ೩೬-೧೮). **ನಾಗರ ಸುತ್ತು**= ನಾಗವುರಿ ೧: ಮುಂಗೈಯ ಮುರಾರಿ ಮೂರೇಣ ಕಡಗಾವ ಒಂಟಿ ನಾಗರ ಸುತ್ತ ಸಿರಪೇಟ (ಲೋಕಗೀ. ೨೦೧); ಕಿನ್ನುಡೀ ಕಿರುಗೆಜ್ಜೀ ಕಿರುಗೆ ನಾಗರ ಸುತ್ತು ಕಿನ್ನೂಡಿ ಮೇಲೆ ಕಿರುಗೆಜ್ಜೆ (ನಾಪದ. ೨೦). **ನಾಗರ ಹಾವು**= ಹೆಡೆಯಿರುವ ಒಂದು ಜಾತಿಯ ಹಾವು,-ಸರ್ಪ: ನಾಗರ ಹಾವೆ ಹಾವೊಳು ಹೂವೇ (ಕಪವು. ೨-೩೦); ಆ ಮರದ ಪೊಟ್ಟರೆಯಲ್ಲಿ ಒಂದು ಕರೀ ನಾಗರ ಹಾವು ವಾಸವಾಡುತ್ತಿತ್ತು (ನೀತಿಚಂ. VIII, ೧೦). **ನಾಗರ ಹೆಡೆ**=ನಾಗರ ಹಾವಿನ ಹೆಡೆ: ನಾಗಪ್ಪಗ್ಹಾಲ ಹೊಯ್ಯೋಣ ನಾಗರ ಹೆಡಿಯ್ಹಾಂಗ ಆಡೋಣ (ಕನ್ನಜಾ. ೧೪೫); ಹಾವಾಡಿಗನು ಹಾವಾಡಿಸುವಾಗ ನಾಗರ ಹೆಡೆ ನೋಡಲು ಚೆನ್ನ (ರೂಢಿ).

[ <ಸಂ. ನಾಗ ]

**ನಾಗಲತೆ** (ನಾ). ವೀಳೆಯದೆಲೆಯ ಬಳ್ಳಿ: "ತಾಂಬೂಲಿಯೆನೆ ನಾಗಲತೆ ಯಕ್ಕು" (ಮಂಗರಾ. ೩೭-೨೧); ಅಗಳುವೆಸೆದಿರ್ಪುದು . . . ನಾಗಲತಾ ವನದಿಂ ಸಲೆ ನಾಗರಖಂಡಂ ವಿಳಾಸ ರತುನಕರಂಡಂ (ಎಕ. XI, ದಾವಣ. ೩೫-೪೨; ಸು. 1160); ಮಿಸುಪ ಮೃದ್ವೀಕಾಲತೆಯ ನಾಗಲತೆಯ . . . ಪಂಡಪಂಗಳುಂ ಮನೋಹರಂಗಳೆನಿಸಿರ್ದುವು (ಚಂದ್ರಪು. ೧-೧೧೬ ವ); ಏಲಾವನ ಲವಲೀಬನ ಲವಂಗಬನಗಳಲಿ ನಾಗಲತಾಸಂಕುಲ ಬನವಾಸಿಯ ಜನಗಳಲಿ (ಗಂಗಾತ. ೧೧೬-೨). [ ನಾಗ + ಲತೆ ]

**ನಾಗಲಾವಿ** (ನಾ). ಒಂದು ಸ್ಥಳದ ಹೆಸರು: ಕಾ[ಶ್ಯ]ಪಗೋತ್ರದ ಕೊಟ್ಟ ಲಗೆಯ [ಮೂ]ಲಿಗ ನಾಗಲಾವಿಯಸೂ . . . ಸತ್ರಕ್ಕೆ ಬಿಟ್ಟ ಕೆಯಿ (ಕಇ II, ೬-೬; 1022). [ ? ]

**ನಾಗಲಿ** (ನಾ). ಒಂದು ಬಗೆಯ ಧಾನ್ಯ; ರಾಗಿ: ರಾಗಿಯು (ನಾಗಲಿ) ಕಾಳು ದೊಡ್ಡದಾಗಿದ್ದು ಕೆಂಪಾಗಿರಬೇಕು (ಮುಂಬವ್ಯಾ. ೪೩).

[ ←ಮರಾ. ನಾಗಲೀ ]

**ನಾಗಲಿಂಗ** (ನಾ). ಲಿಂಗಾಕಾರವಾದ ಕರ್ಣಿಕೆಯ ಮೇಲೆ ನಾಗರ ಹಾವಿನ ಹೆಡೆಯಾಕಾರದ ವಿತಾನವಿರುವಂತಿರುವ ಒಂದು ಬಗೆಯ ಹೂವು ಮತ್ತು ಅದರ ಮರ: ಲಿಂಗದ ಹೂವಿನ ಮರ, ನಾಗಲಿಂಗ (ವೃಜಿಗಿ. ೨೫-೪೬೪). [ ಸಂ. ]

**ನಾಗಲಿಕ** 'ನಾಗರಿಗ' ನೋ.

**ನಾಗಲೀಕ** 'ನಾಗರಿಗ' ನೋ.

**ನಾಗಲೀಲೆ** (ನಾ). ಹಾವುಗಳ ಆಟ ; ಸರ್ಪಗಳ ವಿಲಾಸ : ತನ್ನ ತಾನೆ ಅಲ್ಲೆ ಈಸಿ ಇರಲು ಸಾಕೋ ಗಾನಲೋಲೆ ನಾಗಲೀಲೆಯಾಗಿ ಒಲಿವೆಯೋ (ಗಂಗಾತ. ೬೪-೫). [ ನಾಗ + ಲೀಲೆ ]

**ನಾಗಲೋಕ** (ನಾ). ನಾಗರೆಂಬ ದೇವತಾವರ್ಗವು ವಾಸಿಸುವ ಸ್ಥಳ ; ಭೂಮಿಯ ಕೆಳಗಿರುವುದೆಂದು ಹೇಳಲಾದ ಜಗತ್ತು; ಪಾತಾಳಲೋಕ: "ಪಾತಾಳಮೆನಲು . . . ನಾಗಲೋಕಮೆನಲೊಪ್ಪುವ ರಸಾತಲಮೆನಲ್ . . . ಪಾತಾಳಲೋಕಕ್ಕೆ ನಾಮಂ" (ಮಂಗರಾ. ೧೧೬-೧) ; ನಾಗಕನ್ನೆ ನಾಗ ಲೋಕದ ವಿಳಾಸಂಗಳಂ ತೋಱುತ್ತುಂ ತನ್ನ ಕೆ[ ಲಗಣ ] ನಾಗವಿಮಾನಕ್ಕೆ ವಂದು (ಪಂಪಭಾ. ೪-೧೭) ; ಸಮವಸರಣಾಗತ ಗಣನಾತೀತ ದ್ವಾದಶಗಣ ವಿನೇಯಜನಂಗಳಂ ನರನಾಕನಾಗಲೋಕ ಗಮನಕ್ಕೆ ಪರಸಿ ವಿಸರ್ಜಿಸಿ (ಶಾಂತಿಪು. ೧೩-೩೯ ವ) ; ನಾಗಲೋಕದ ಮಲ್ಲಿಕಾಕಸುಮವಿವೆ ದೇವ (ನಂಬಿರ. ೯-೫೪); ನಾಗಲೋಕಕ್ಕೆ ಪುಗಲೊಂದಾಗಿಹುದಾ ದಾರಿ ಗಿರಿಯ ತಪ್ಪಲಿನೊಳ್ನೀಂ ಪೋಗುತ್ತಿರಾದಿಗಾ ಕಡೆ ಬೇಗಂ ಮಹದೇಶ ರಾಜವಾಹನ ಬಪ್ಪಂ (ನನ್ನಚಾ. ೬-೧೫೦). [ ನಾಗ + ಲೋಕ ]

**ನಾಗಲೋಕಮಂದಿರ** (ನಾ). ದೈತ್ಯ ; ರಾಕ್ಷಸ : "ಸುರವೈರಿಗಳು ದಾನವರು ನಾಗಲೋಕಮಂದಿರರು ದಿತಿಜರು ಶುಕ್ರಶಿಷ್ಯರಸುರರು ಪೂರ್ವಸುರರೆನಲು ದೈತ್ಯರು" (ಮಂಗರಾ. ೩-೯). [ ನಾಗಲೋಕ + ಮಂದಿರ ]

**ನಾಗವ** (ನಾ). [ಜ್ಯೋತಿ] ಹಿಂದೂಸಂಪ್ರದಾಯದಂತೆ ಕಾಲಗಣನೆ ಮಾಡುವಾಗ ಗಣಿಸುವ ತಿಥಿ, ವಾರ, ನಕ್ಷತ್ರ, ಯೋಗ ಮತ್ತು ಕರಣ ಎಂಬ ಐದು ಅಂಗಗಳಲ್ಲಿ ಒಂದಾದ ಕರಣದ ಹನ್ನೊಂದು ಬಗೆ ಗಳಲ್ಲಿ ಹತ್ತನೆಯದು ; ಒಂದು ಬಗೆಯ ಕಾಲಮಾನ ; ಈ ಹನ್ನೊಂದು ಕರಣಗಳಲ್ಲಿ ಮೊದಲಿನ ಏಳು ಚರಕರಣಗಳು ಮತ್ತು ಉಳಿದ ನಾಲ್ಕು ಸ್ಥಿರಕರಣಗಳು. ಒಂದೊಂದಕ್ಕೂ ಬೇರೆ ಬೇರೆ ಅಧಿದೇವತೆ ಗಳಿದ್ದಾರೆ. **ಕರಣಗಳ – ಅಧಿದೇವತೆಗಳು:** **೧.** ಬವ – ಇಂದ್ರ, **೨.** ಬಾಲವ–ಬ್ರಹ್ಮ. **೩.** ಕೌಲವ–ಮಿತ್ರ, **೪.** ತೈತಿಲ–ಅರ್ಯಮಾ, **೫.** ಗರ–ಭೂಮಿ, **೬.** ವಣಿಜ (ವಣಿಕ್)–ಲಕ್ಷ್ಮಿ, **೭.** ವಿಷ್ಟಿ(ಭದ್ರ)– ಯಮ, **೮.** ಶಕುನಿ–ಕಲಿ, **೯.** ಚತುಷ್ಪದ (ಚತುಷ್ಪಾತ್)–ವೃಷಭ, **೧೦.** ನಾಗ (ನಾಗವ, ನಾಗವಾನ್) – ಸರ್ಪ, **೧೧.** ಕಿಂಸ್ತುಘ್ನ– ವಾಯು. ಒಂದು ತಿಂಗಳ ಕಾಲಮಾನದಲ್ಲಿ ಶುಕ್ಲಪಕ್ಷದ ಪಾಡ್ಯದ ಉತ್ತರಭಾಗದಲ್ಲಿ ಬವವು ಆರಂಭವಾಗುತ್ತದೆ. ಮರುದಿನದಿಂದ ದಿನಕ್ಕೆ ಎರಡರಂತೆ ಏಳು ಚರಕರಣಗಳೂ ಎಂಟು ಸಲ ಆವರ್ತಿ ಯಾದಾಗ ಐವತ್ತಾರು ಕರಣಗಳಾಗುತ್ತವೆ. ಕೊನೆಯ ನಾಲ್ಕಕ್ಕೆ ಆವರ್ತಿಯಿಲ್ಲ. ಆಗ(೫೬+೪) ಒಟ್ಟು ಅರುವತ್ತು ಕರಣಗಳಾದುವು. (ಮುಂದಿನ ಪಾಡ್ಯದ ಮೊದಲನೆಯ ಅರ್ಧವನ್ನೂ ಸೇರಿಸಿ ಲೆಕ್ಕ ಮಾಡಬೇಕು). ಹೀಗೆಯೇ ಪ್ರತಿ ತಿಂಗಳೂ ನಡೆಯುವುದು. ಹೀಗೆ ನಾಗವಾನ್ (ನಾಗವ) ಎಂಬುದು ಆವೃತ್ತಿಯನ್ನು ಹೊಂದದ ಒಂದು ಸ್ಥಿರಕರಣ : ಶಕುನಿ ಚತುಷ್ಪಾತ್ ನಾಗವ [ಪಾಠಾಂ. ನಾಗ] ಕಿಂಸ್ತುಘ್ನವೆಂಬ ನಾಲ್ಕು ಸ್ಥಿರಕರಣಂಗಳುಂ (ವಿವೇಕ. ೩೩೦). 'ನಾಗ' ಪರಾ. [ <ಸಂ. ನಾಗವಾನ್ ]

**ನಾಗಮಂಗಲ** (ನಾ). ಒಂದು ಊರಿನ ಹೆಸರು: ಬುವಗಾವುಣ್ಡ ಭಸವ ಗಾವುಣ್ಡನು × ಸತ್ಪಡೆದಂ ಕಲ್ಲ ನಟ್ಟುನ್ನಾಗಮಂಗಲಂ (ಎಕ. IV, ಹೆಗ್ಗಡ. ೧೦೪-೧೧ ; 1037). [ <ನಾಗಮಂಗಲ ]

**ನಾಗಮಂದಿ** 'ನಾಗಂದಿಗೆ' ನೋ.

**ನಾಗಮಂದಿಗೆ** 'ನಾಗಂದಿಗೆ' ನೋ.

**ನಾಗವಟ್ಟಣಿಗೆ** 'ನಾಗವಟ್ಟಳಿಗೆ' ನೋ.

**ನಾಗವಟ್ಟಳಿಗೆ, ನಾಗವಟ್ಟಣಿಗೆ** (ನಾ). ನಾಗರ ಹಾವಿನ ಅಥವಾ ಆನೆಯ ಚಿತ್ರದ ಅಂಚುಳ್ಳ ಒಂದು ಬಗೆಯ ಸೀರೆ : ಪೊಳೆವೆಳವಾಳೆ ಚುಂಬಿಸಿ ಮುಬುಂಕಿರಲಂಜಿದಳೆಟ್ಟಿ ಮೆ [ ಳೆ ] ಯ್ದು ಮಯ್ಕೊಳಿಸಿದ ನಾಗವಟ್ಟಳಿಗೆ ನಾಣ್ದು ಪಗಲ್ತಿರೆ ನಾಣ್ಚಿದಳ್ (ಅನಂಪು. ೭-೩೭). **ನಾಗವಟ್ಟಣಿಗೆ:** ಸೊಗಯಿಪ ತೋರ ಮಲ್ಲಿಗೆಯ ಪೆರ್ಮುಡಿ ಶೋಭಿಸೆ ರಾಗದಿಂದಮುಟ್ಟಗಲದ ನಾಗ] ವಟ್ಟಣಿಗೆಯುಂ ಸುಲಿಪಲ್ ಕರಮೊಪ್ಪೆ (ಬಂಹರಿ. ೩-೩೭) ; ಎಡೆ ನಾಣ್ಪು ಚ್ಚಿಡ ನಾಗವಟ್ಟಣಿಗೆ ಹೊಕ್ಕೀಸಾಡೆ ಮೈ ನಾನದಿಂಗಡಲಾಸ್ವಾದಿಸೆ ಪೊಟ್ಟೆ ತೀವದಮೃತಂ ಮೈಸಾರ್ಚಲ್ (ಸೂಕ್ತಿಸು. ೮-೨೮೪) ; ಉಪವನ ಮಹೀಜ ರಾಜಿಗಳ ಬಹಲ ಬರ್ಹವ್ರಜಾಚ್ಛ ಗುಚ್ಛಂಗಳೆಡೆಯಿಂದಮಿಳಾತಳಕ್ಕಿೞಿದು ವನಲಕ್ಷ್ಮಿಯುಟ್ಟ ನಾಗವಟ್ಟಣಿಗೆಯ ನಿಱಿಯ ತುಱುಗಲಂತೆ ತೋಱಿಯುಂ (ಮಹಾನೇ. ೧೪-೫೭ ವ). [ ನಾಗ + ಪಟ್ಟಳಿಗೆ$_1$ ]

**ನಾಗವಟ್ಟಿಗೆ** (ನಾ). ಮನೆಯಲ್ಲಿ ಕಂಬಗಳಿಗೆ ಹೊಂದಿಸಿರುವ ನಾಗಂದಿಗೆ, –ಬಡು : ಪಚ್ಚೆಯ ಕಂಬಂಗಳಿಂ ಚಂದ್ರಕಾಂತದ ಬೋದಿಗೆಗಳಿಂ ಇಂದ್ರನೀಲದ ನಾಗವಟ್ಟಿಗೆಯಿಂ . . . ಒಪ್ಪುವ ಕೃತ್ರಿಮಚೈತ್ಯಾಲಯಂಗಳಂ ಕಣ್ಣಾಣೆವಿನಂ ನೋಡುತ್ತುಂ (ಧರ್ಮಾಮೃ. ೨-೧೪೪) : ಆ ಲಿಂಗವೆ ಭುಜಂಗನಾಗವಟ್ಟಿಗೆ ಯಾದ ಬಳಿಕ ಆ ಮಹಿಮನೆ ಪ್ರಾಣನಾಥನಾದ ಬಳಿಕ ಇದಿರಿಟ್ಟು ಕೇಳಲುಂಟೆ (ಚನ್ನವ. ಕ. ೪೬೯-೧೦೦೧). [ <ಸಂ. ನಾಗಪಟ್ಟಿಕಾ ? ]

**ನಾಗವಟ್ಟೆ** (ನಾ). ಒಂದು ಬಗೆಯ ವಸ್ತ್ರ : "ದೋರಿಯ ನಾಗವಟ್ಟೆ ಪುಲ್ಲಿ [ಪಾಠಾಂ. ನಾಗವಲ್ಲಿವಟ್ಟೆ] ಸುವರ್ಣಪಳಿ ಮದವಿ ಮಂಜಿಷ್ಠೆ ದೇವಾಂಗ ಮೆಂದು ಪಟಭೇದಮಕ್ಕುಂ" (ಮಂಗರಾ. ೧೦೧-೨೮). [ ನಾಗ + ಬಟ್ಟೆ$_2$ ]

**ನಾಗವತ್ತಿಗೆ** (ನಾ). [ವೀಶೈ] ವೀರಶೈವರು ಇಷ್ಟಲಿಂಗವನ್ನು ಧರಿಸುವ ಬೆಳ್ಳಿ ವಸ್ತ್ರ ಮೊದಲಾದುವುಗಳಿಂದ ಮಾಡಿದ ಕರಡಿಗೆ ; ಚೌಕ ; ಲಿಂಗದಕಾಯಿ : ಕಾಯವೇ ಪೀಠ ಮನವೇ ಲಿಂಗವಾದರೆ ಕೊರಳಲ್ಲಿ ನಾಗ ವತ್ತಿಗೆಯೇಕೋ ಶರಣಂಗೆ (ಅವಚಂ. ೫೪-೨೩೨) ; ಸತಿಯ ಕೈಯಲ್ಲಿ ಕೊಟ್ಟುದು ಪ್ರಾಣಲಿಂಗವಲ್ಲ ಸುತನ ಕೈಯಲ್ಲಿ ಕೊಟ್ಟುದು ಪ್ರಾಣಲಿಂಗವಲ್ಲ ಅಲಸಿ ನಾಗವತ್ತಿಗೆಯಲಿರಿಸಿದುದು ಪ್ರಾಣಲಿಂಗವಲ್ಲ ತನು ಸೋಂಕಿ ವಜ್ರಲೇಪ ದಂತಿರಬೇಕು (ಚನ್ನವ. ಕ. ೪೦೩-೮೫೪) ; ತನುವೆ ನಾಗವತ್ತಿಗೆಯಾದೊಡೆ ಅರ್ಪಿತವ ಮಾಡಬೇಕು (ಪದಗೋ. ೯-೧೮೭). [ ? ]

**ನಾಗವರಾಲಿ, ನಾಗವರಾಳಿ** (ನಾ). [ಸಂಗೀತ] ಒಂದು ಮೇಳರಾಗದ ಹೆಸರು : ನಾಗವರಾಲಿ(ಕಾ)ರಾಗವು (೧) ಆರೋಹ ಮತ್ತು ಅವರೋಹ ಗಳಲ್ಲಿ ಪ–ವನ್ನು ವಕ್ರವಾಗಿ ಉಳ್ಳದುದು ; ಸರ್ವಕಾಲದಲ್ಲಿಯೂ (ಹಾಡುವಂತಹುದು) (ಚತುಪ್ರ. ೧೩೩). **ನಾಗವರಾಳಿ :** ಶೋಕವರಾಳಿ ... ನಾಗವರಾಳಿಯೆಂಬ ವರಾಳೀಸಪ್ತಕವೇ ಶುದ್ಧವರಾಳಿಗೆ ಮಿಶ್ರಂಗಳು (ವಿವೇಕ. ೨೫೨) ; ನಗವರಾಳಿಯನೊರ್ವನಾಲಾಪಿಸಲಾಗಳೆ ನೆರೆದು ಸರ್ಪಗಳು ರಾಗಿಸಿ ಪೆಡೆಯೆತ್ತಿ ಕೇಳುತಿರ್ದುವು (ಭರಜ. ೬೪-೧೧). [ಸಂ. ನಾಗವರಾಲೀ]

**ನಾಗವರಾಳಿ** 'ನಾಗವರಾಲಿ' ನೋ.

**ನಾಗವರ್ಮ** (ನಾ). **೧.** ಒಬ್ಬಾತನ ಹೆಸರು : [ಪೊ] ಮ್ಬುಚ್ಚದ ಮೇಲೆಟು ಕೋಟೆಯ ಕೊಳ್ವನ್ದು ಬೆಸದೊಳ್ಮೆಚ್ಚಿ [ನಾ]ಗವ[ರ್ಮ್ಮ ಸಿ] ಡಿಯನೂರ ನಾಳುತ್ತಿರೆಯು (ಸೌಇಇ. XX, ೧೫-೭ ; 904) ; ನಾಗವರ್ಮ್ಮನ ಕಟ್ಟಿಸಿದ್ದ ದೇವಿಗೆಱೆಗಂ ಪಿರಿಯ ಕೆಱೆಗಂ ಬಿತ್ತುವಟ್ಟಮಂ ಕೊಟ್ಟದು (ಎಕ. III (R), ನಂಜನ. ೨೮೨-೭ ; 968) ; ಶ್ರೀನಾಗವರ್ಮ್ಮ (ಎಕ. II, ೪೫೬; 1000). **೨.** ಹತ್ತನೆಯ ಶತಮಾನದ ಕನ್ನಡನಾಡಿನ ಒಬ್ಬ ಉದ್ದಾಮ ಕವಿ ; ಛಂದೋಂಬುಧಿ ಮತ್ತು ಕರ್ಣಾಟಕ ಕಾದಂಬರಿ ಎಂಬ ಪ್ರೌಢಗ್ರಂಥ ಗಳ ಕರ್ತೃ : ಆ ಪೋಟಿಕಬ್ಬೆಗಂ ವಿದ್ಯಾಪರಿಣತನೆನಿಪ ವೆಣ್ಣಮಯ್ಯಂ ಗಂ ವಾಕ್‌ಶ್ರೀಪತಿ ಸತ್ಕವಿಮುಖ್ಯಗುಣೋಪೇತಂ ನಾಗವರ್ಮನಗ್ರ ತನೂಜಂ (ಛಂದೋಂಬು. ೧-೨೨) ; ಕಾ ದಂ ಬ ರಿ ಸೇವ್ಯಮಾದುದನಿತುಂ

ತಾನೆಯ್ದೆ ಭೂಭಾಗದೊಳ್ ವಿದಿತ ಶ್ರೀಕವಿ ನಾಗವರ್ಮನ ವಚಃಸಂದೋಹದಿಂ ದೋಷವೊಂದದಲಂಕಾರದ ವಸ್ತುಬಂಧವಿದು ತಾನೇಂ ಮಾಡದೇಂಗೆಯ್ಯದೋ (ಕಾದಂಉ. ೮೨೫). ೩. ಕಾವ್ಯಾವಲೋಕನ, ಕರ್ಣಾಟಕ ಭಾಷಾಭೂಷಣ, ವಸ್ತುಕೋಶ ಮೊದಲಾದ ಗ್ರಂಥಗಳನ್ನು ರಚಿಸಿದ ಹನ್ನೊಂದನೆಯ ಶತಮಾನದ ಒಬ್ಬ ಪ್ರಸಿದ್ಧನಾದ ಕನ್ನಡ ಕವಿ : ತತ್ಸಭೆಯೊಳಗ್ರಪೂಜೆವಡೆದೊಂದು ಮಹಾಮಹಿಮಾನುಭಾವದಿಂದ ಭಿನವಶರ್ವವರ್ಮನಿವನೆಂದವುದುರ್ವರೆ ನಾಗವರ್ಮನಂ (ಕಾವ್ಯಾವ. ೪೨೩) ; ಕರಮೆ ಜಡಮತಿಯುಮಱಿವಂತಿರೆ ಕನ್ನಡದಿಂ ಜಲಕ್ಕನಾಗಿರ್ಪನೆಗಂ ವಿರಚಿಸಿದಂ ಕವಿಕಂಠಾಭರಣನಿದಂ ನಾಗವರ್ಮನೆನೆ ಮೆಚ್ಚದರಾರ್ (ವಸ್ತುಕೋ. ೧-೪) ; ಎನಗನುಕೂಲಮಕ್ಕೆ ಗುಣವರ್ಮನ ಜಾಣ್ನುಡಿ ಪಂಪನಿಂಪು ಪೊನ್ನನ ಬಗೆ ನಾಗವರ್ಮನ ಬಹುಜ್ಞತೆ . . . ಈ ಕವಿಗಳಲ್ತೆ ಜಿನೇಂದ್ರಪುರಾಣಕರ್ತೃಗಳ್ (ಅನಂಪು. ೧-೩೫). **P** ಕನ್ನಡಸಾಹಿತ್ಯ ಚರಿತ್ರೆಯಲ್ಲಿ ಇನ್ನೂ ಕೆಲವು ನಾಗವರ್ಮರ ಉಲ್ಲೇಖಗಳಿವೆ.

[ ನಾಗ + ವರ್ಮ ]

**ನಾಗವಲಿ,** ನಾಗಬಲಿ, ನಾಗವಾಲಿ, ನಾಗೋಲಿ, ನಾಗೋಲೆ (ನಾ). ಮದುವೆಯಲ್ಲಿ ಮಾಡುವ ಕೊನೆಯ ಒಂದು ಸಾಂಪ್ರದಾಯಿಕ ವಿಧಿ ; ವಿವಾಹದ ಮುಕ್ತಾಯದ ಶಾಸ್ತ್ರ : ಅಂತು ಬೀಯಮಂ ಮೆಱೆದು ನಾಲ್ಕನೆಯ ದೆವಸದೊಳ್ ನಾಗವಲಿಯಂ ಮಾಡಿ ನಿರ್ವರ್ತಿತವಿವಾಹೋತ್ಸವಂ ಜ್ವಳನಜಟಿಮಹಾರಾಜನತ್ಯಂತಪ್ರಮೋದಾಧೀನಮಾನಸನಾಗಿ (ವರ್ಧಮಾ. ೩-೯೭ ವ) ; ಆದುವು ನಾಗವಲಿಯುಂ ಕಂಬವಲಿಯುಂ ಮತ್ತಾದುವಂತೊಸಗೆಯೌತಣವು (ನಾಗಕು. ೩-೮೦) ; ನಾಗವಲಿಯಾದ ಮಱುದಿವಸ ನಗರಾಜನನುರಾಗದಿಂ ಬಂದ ನಿಬ್ಬಣಕೆ ವ್ಯಾಷ್ಟಾನ್ನದಾರೋಗಣೆಯನ್ನೆದೆ ಮಾಡಿಸಿ ದಿವ್ಯಗಂಧ ತಾಂಬೂಲದಿಂ ತುಷ್ಟಿಪಡಿಸಿ (ಜಿಬಪು. ೩೭-೬೨) ; ಕಂಸನು ತಂಗಿಯಲ್ಲಿ ವಿಶ್ವಾಸವಂ ತೋರಿಸಲೋಸುಗ ನಾಗವಲಿಯ ದಿವಸ ಮದವಣಿಗರಾದ ವಧೂವರರಂ ದಿವ್ಯರಥದಲ್ಲಿ ಕುಳ್ಳಿರಿಸಿಕೊಂಡು (ಕೃಷ್ಣರಾ. ೧-೭೯). **ನಾಗಬಲಿ :** ವರವಿಭವದಿ ಚತುರ್ಥದಿನದಲಿ ಪರುಟವಿಸಿದರು ನಾಗಬಲಿಯನು ಕರಿಯನೇಱಿಸಿ ನೃಪಸುತನ ಮೆಱಸಿದರು ರಾತ್ರಿಯಲಿ (ಸನತ್ಕು. ೯-೭೯). **ನಾಗವಾಲಿ :** ವರ ನಾಗವಾಲಿಯುಂ . . . ಸುರರ ತಲೆ ತೂಗಿಸಿತು (ಪರಶು. ೮-೨೯). **ನಾಗೋಲಿ :** ನಾಗೋಲಿ ದಿನದೊಳೆ ಮದುವೆಯ ಸೊಗವನು ಬಣ್ಣಪುದೇತಕೆ ತಾಳು (ಇಂಚಾಪ. ೧೦೮-೨೭) ; ಏನಿಲ್ಲಾ ಎಂದರೂ ಧಾರೆಯ ದಿನ ತಾಂಬೂಲಕ್ಕೆ ನಾಗೋಲಿಯ ದಿನ ಊಟಕ್ಕೆ ಕರೆಯಬೇಕಾಗುತ್ತೆ (ಚಾಡಿಬ. ೭೯) ; ನೀನು ನಾಗೋಲಿ ದಿವಸ ಹೇಳಿದ ಆ ಹಾಡು ಹೇಳು (ಉಮಾಶ. ೫೫). **ನಾಗೋಲೆ :** ಇನ್ನೇನು ಹೇಳು ? ಸುಪುತ್ರ, ವಿದ್ಯೆ . . . ಲಗ್ನಪತ್ರಿಕೆ ಮದುವೆ ನಾಗೋಲೆ (ಅವತಂ. ೨). 'ಕಂಭವಲಿ' ಪರಾ.

**ನಾಗೋಲಿಜಡ** = ನಾಗೋಲಿಯಂ ಜಡ್ಡು : ನಾಗೋಲಿಜಡ ಬಹಳವಾಗಿದೆ (ರೂಢಿ). **ನಾಗೋಲಿಯ ಜಡ್ಡು** = ಮದುವೆ ಕಳೆಯುತ್ತಿರುವಂತೆ ಉಂಟಾಗುವ ಆಲಸ್ಯ, – ಸೋಮಾರಿತನ: ನಾಗೋಲಿಯ ಜಡ್ಡು, ಮನೆಯಲ್ಲಿ ಎಲ್ಲರಿಗೂ ಆಯಾಸ (ರೂಢಿ). [ < ನಾಕಬಲಿ ]

**ನಾಗವಲ್ಲಿ** (ನಾ). ವೀಳೆಯದೆಲೆ ಮತ್ತು ಅದರ ಬಳ್ಳಿ, –ಹಂಬು : ಕರ್ಪೂರಪರೀತಮುಖವಾಸಂಗಳುಮಂ ಕರ್ಪೂರನಾಗವಲ್ಲೀಧವಳಲಲಿತಂಗಳುಮಂ . . . ನೀಡೆ (ಸುಕುಮಾ. ೧೧-೩೨ ವ); ನರನಾರೀಯೆೋಗದೀಕ್ಷಾಭವನಮಿದೆನಿಕುಂ ನಾಗವಲ್ಲೀಪಿನದ್ಧೋದ್ಧುರಪೂಗಂ (ಪುಷ್ಪಪು. ೨-೩೭) ; ನೇರ್ಪಿಂಗಡಪ್ಪಾದ ನಾಗವಲ್ಲೀಪತ್ರಂಗಳಿಂದಂ ಕರ್ಪೂರಚೂರ್ಣಪರಿಮಿಶ್ರೀಕರಣದಿಂ ಶೆಜ್ಜಾನಿಶಾಂತಭ್ಯಂತರಮಂ ಸುಗಂಧೀಕರಿಸುತ್ತುಮಿರ್ದತಿ ಬಹಳ ಧವಳತೆಯನಾಂತು (ಬಾಧಪು. ೬-೧೧೮ ವ) ; ನಾಗವಲ್ಲಿಯ ಹಿಂದು ಮುಂದನು ನೀಗಿ ಕಳೆಯದೆ . . . ಸವಿದು ಭೋಗಿಸುವೊಡಮರೇಂದ್ರನಾಗಲಿ ನಾಗಭೂಷಣನಾದೊಡವನನು ನೀಗಿ ಕಳೆವಳು ಭಾಗ್ಯವಧು (ಕುಮಾ್ಯಉ. ೩-೫೯) ; ಮಂಜುಳಮುಂ ನಾಗವಲ್ಲಿನವಮಾಲಿಕೆಯುಂ ರಂಜಿಪ ಕುಂದ ಕದಂಬಂ ಮಂಜುಳದುದ್ಯಾನವನದೊಳಿರ್ಪುವು ಪೆಂಪಿಂ (ಹಮ್ಮಿರ. ೪-೧೫) ; ನಾಗವಲ್ಲೀ ಎಲೆಯಾವರೂ ಪೂಗೀಫಲವಿಲ್ಲದೆ ಸಲ್ಲದು (ಗಾದೆ).

[ಸಂ. ನಾಗವಲ್ಲೀ ]

**ನಾಗವಳ್ಳಿ** (ನಾ). = ನಾಗವಲ್ಲಿ : ಅಂಬಟೆ ಅರೆನೆಲ್ಲಿ ಜಂಬನೇಱಲಮರ ಕುಂಭನಿಗಧಿಕ ಶ್ರಿಗಂಧ ಬೆಂಬಿಡದಡಕುವ ನಾಗವಳ್ಳಿಗಳಿಂದ ಗಂಭೀರವನವೆಸದಿಹುದು (ಅಮುಸಾಂ. ೩-೩೫) ; ಪೂಗತರು ವಿಟನಪ್ಪಿದೆಳೆಸತಿ ನಾಗವಳ್ಳಿಗಳಿಂದ ಶೃಂಗರವಾಗಿ ಇಹ ನಂದನವನಾವೃತಗೊಂಡು ಮಧ್ಯದಲಿ (ಬಿಜ್ಜಪು. ೩೦-೧೯); ನೆಮ್ಮಿ ಗಗನವ ತುಡುಕಿ ಪುನ್ನಾಗ ನಾಗವಳ್ಳಿಯವೊಲು ಕಂಗೆಸೆದುವು (ನವಮೋ. ೪-೩೦). [ ನಾಗ + **ಬಳ್ಳಿ** ]

**ನಾಗವಾಡಿ** (ನಾ). ಒಂದು ಊರಿನ ಹೆಸರು : ನಾಗವಾಡಿಯ ದೇವರಾಸಿಜೀಯಂ ಬರೆದ (ಎಕ. VII, ಶಿಕಾರಿ. ೨೬-೮ ; 1050).

[ ನಾಗ + ವಾಡಿ$_2$ ]

**ನಾಗವಾಯು** (ನಾ). = ನಾಗ ೭ : ನಾಗವಾಯು ಶ್ರೋತ್ರನಾಳ ಕೂರ್ಮವಾಯು ಕಂಠನಾಳ (ಷನ್ನವ. ಕ. ೪೧೧-೮೭೦) ; ಮತ್ತಮಾವುವವಾಯುಗಳೊಳು ನಾಗವಾಯುವಿನಿಂ ಸೀನು ಕೆಮ್ಮು (ವಿವೇಕ. ೩೪).

[ ನಾಗ + ವಾಯು ]

**ನಾಗವಾರ** (ನಾ). ಒಂದು ಊರಿನ ಹೆಸರಂ. 'ನಾಗವಾರಯ್ಯ' ಪರಾ.

[ < ನಾಗಪುರ ]

**ನಾಗವಾರಯ್ಯ** (ನಾ). ಒಬ್ಬಾತನ ಹೆಸರಂ : ಸ್ವಸ್ತಿಶ್ರೀ ಕೊಟುವಣಿಯರ ನಾಗವಾರಯ್ಯಂ ಬೆಳ್ಳತ್ತರ್ದದ ಗಾವುಣ್ಡಂ ತುಱುಪರಿಯಲೆ ಸತ್ತಂ (ಎಕ. XII, ತಿಪಟೂ. ೧೧-೧ ; ಸು. 930). [ ನಾಗವಾರ + ಅಯ್ಯ$_1$ ]

**ನಾಗವಾಲಿ** 'ನಾಗವಲಿ' ನೋ.

**ನಾಗವಾವಿ** (ನಾ). ಒಂದು ಊರಿನ ಹೆಸರಂ; **P** ಈಗಿನ ಗುಲ್ಬರ್ಗ ಜಿಲ್ಲೆಯ ನಾಗಾಯಿ : ಶ್ರೀಮದಗ್ರಹಾರಂ ನಾಗವಾವಿಯ ಅಶೇಷ ಮಹಾಜನಂ (ಕಇಅ. ೧-೧-೬ ; 1092). [ ? ]

**ನಾಗವಾಸ$_1$** (ನಾ). ನಾಗರಂಗಳ ವಾಸಸ್ಥಳ ; ಪಾತಾಳ ; ಸರ್ಪಲೋಕ; ನಾಗಲೋಕ. [ ನಾಗ + ವಾಸ$_2$ ]

**ನಾಗವಾಸ$_2$** (ನಾ). ೧. "ಕೊಕ್ಕೆ, ಚಿಲಕ, ಮೊ.ನ್ನು ತಗುಲಿಸಲು ಅನುಕೂಲಿಸುವಂತೆ ಕಂಬ ಮೊ.ಕ್ಕೆ ಹೊಡೆಯುವುದಕ್ಕಾಗಿ ತುದಿಗಳನ್ನು ಮೊನಚುಮಾಡಿದ U ಅಥವಾ ⊔ ಆಕಾರದ ಸಲಾಕಿ ಅಥವಾ ಕಂಬಿ; ನಾಗವಾಸ; ಕೊಂಡಿ" (Staple, ಇಂಕನಿ). ೨. ಬಾಗಿಲ ಮೇಲುಗಡೆ ಹಾಕಿರುವ ಹಲಗೆಯ ಮೇಲಿನ ಖಾಲಿ ಜಾಗ ; ಉತ್ತರಾಸ : ಪಲಪು ಹಾಕಿದ ಹೊಸ ಹಗ್ಗ ನಾಗವಾಸದ ಮೇಲಿಟ್ಟಿದ್ದೀನಿ (ನನ್ನೂರು. ೨೪೬). [ ? ]

**ನಾಗವಾಸ$_3$** (ನಾ). ದೇವದಾಸಿಯರು ವಾಸಿಸುವ ಮಹಲು, –ಸ್ಥಳ : ಹೊಳೆಯ ತಳೆಯ ನಾರಸಿಂಗೇಶ್ವರದೇವರ ಅಂಘರಿಕರ ಆಳು ೩ಕ್ಕಂ ಗ ೧೨ ಆ ನಾಯಕಂಗೆ ಗ ೬ ರಂಗಭೋಗದ ನಾಗವಾಸದ ಮೊಖರಿಗೆ ಗ ೩೦ ಗೂಡಿ ಗ ೩೦೦ ದವಸಿಗರು ಆಳು ೧೨ ಕ್ಕಂ ಗ ೪೮ (ಎಕ. III, ತಿರುಮ. ೧೦೧-೮೬; 1270) ; ಅರಸನಱಿಕೆಯ ಮಾಡಿ ಮಿಗೆ ಬಳಿಕಿರಿಸಿಕೊಂಡಳು ನಾಗವಾಸದ ನೆರವಿ ಬಿಂದದ ಬೋವಗಾಱಿಕೆತನದಲಲ್ಲಮನ (ಪ್ರಭುಲೀ. ೫-೧೭) ; "ನರ್ತಕಿಯರ ಸ್ಥಾನ" (ಪ್ರಭುಲೀ. ಕೋಶ) ; ಸಾದರದ ನಾಗವಾಸದ ಮೇಳದೊಡತಿಯಹ ಮಾದೇವಿ ನಂಬಿಯಣ್ಣನ ರಗಳೆಯಂ ಕೇಳ್ದು (ರಾಘಹ. ೧೪-೯೫) : ಅಲ್ಲಿರ್ಪ ನಾಗವಾಸಕ್ಕೆಯಧಿಪತಿಯಪ್ಪ ಸಲ್ಲಲಿತ ನಾಯಕನ ಸತಿಯ (ಅಪ್ರಭು. ೫). [ ? ]

**ನಾಗವಾಸಾದಿಘೃತ** (ನಾ). [ವೈದ್ಯಶಾ] ವೀಳೆಯದೆಲೆಯ ಸಂವಾಸನೆಯಿಂದ ಪಾಗೊಳಿಸಿದ ಒಂದು ಬಗೆಯ ಔಷಧಿ : ನಾಗವಾಸಾದಿಘೃತ– ವೀಳೇದೆಲೆ ರಸ, ಅಡುಸೋಗೆ ಎಲೆರಸ . . . ಹದದಲ್ಲಿಳಿಸಿ ಸೇವಿಸಲು ಕಾಸ, ಶ್ವಾಸ, ಗುಲ್ಮ . . . ಇವೆಲ್ಲಾ ಮಾಣುವುವು (ಸಕವೈ. ಪರಿ೪೪೪). [ಸಂ.]

**ನಾಗವಾಸಿ** (ನಾ). ನರ್ತಕಿ ; ದೇವದಾಸಿ: ಗುರುಪಯೋಧರೆಯ ಸತ್ಕವಿವಿನುತೆಯುಸಿತ ಧಮ್ಮಿಲ್ಲೆಯಳೆ ನಾಗವಾಸೀ (ನವಮೋ. ೪-೪). [ನಾಗವಾಸ$_3$ + – ಇ$_2$]

**ನಾಗವಾಸಿಗ** (ನಾ). ದೇವದಾಸಿಯರು ವಾಸಿಸುವ ಸ್ಥಳದ ಮೇಲ್ವಿಚಾರಕ : ನಾಗವಾಸಿಗರ ಓರಿಯಂಗರ ಹಲೊಡನೊಲಿದು ಬೇಗದಿಂ ವಸುದಂಡಧಾರಿಯಂ ಕರೆದಟ್ಟಿ (ನವಮೋ. ೩೪-೪೫). [ನಾಗವಾಸ$_3$ + – ಇಗ]

**ನಾಗವಾಹನ** (ನಾ). (ಐರಾವತವೆಂಬ) ಆನೆಯನ್ನು ವಾಹನವನ್ನಾಗಿ ಮಾಡಿಕೊಂಡಿರುವವನು ; ಇಂದ್ರ : ನಾಗವಾಹನಮುಖ್ಯನಿರ್ಜರಾವಳಿ ರಕ್ಷ . . . ರಕ್ಷಿಪುದೆನ್ನ ಸಂಗಮೇಶ್ವರಪ್ರಸನ್ನ (ಪ್ರಾಥರಾ. ೨೧-೧). [ನಾಗ + ವಾಹನ]

**ನಾಗವಿಭೂಷಣ** (ನಾ). ನಾಗಲೋಕದವರು ಧರಿಸುವ ಆಭರಣ (?) : ನಾಗವಿಭೂಷಣಪ್ರತತಿ ನಾಗ ಖಂಡಮಪೂರ್ವಮಪ್ಪ ಪುನ್ನಾಗದ ಬಾಸಿಗಂ (ಪಂಪಭಾ. ೪-೧೭). [ನಾಗ + ವಿಭೂಷಣ]

**ನಾಗವಿಮಾನ** (ನಾ). ನಾಗಕನ್ನಿಕೆಯರು ವಾಸಿಸುವ ಉಪ್ಪರಿಗೆ: ನಾಗಕನ್ನೆ ನಾಗಲೋಕದ ವಿಳಾಸಂಗಳಂ ತೋರುತ್ತುಂ ತನ್ನ ಕೆ[ಬಗಣ] ನಾಗವಿಮಾನಕ್ಕೆ ವಂದು (ಪಂಪಭಾ. ೪-೦೬ ವ); "ನಾಗವಿಮಾನಕ್ಕೆ=ಅಂತಃಪುರಸ್ತ್ರೀಯರಿರುವ ಉಪ್ಪರಿಗೆಗೆ" (ಪಂಪದೀ. ೧೩೭). [ನಾಗ+ವಿಮಾನ]

**ನಾಗವೀಣ** (ನಾ).=ನಾಗವೀಣೆ : ನಾಗವೀಣ (ಗೋಟುವಾದ್ಯ) : ನೃತ್ಯಯುವತಿಯು ನೃತ್ಯಮಾಡುತ್ತ ಓಡಿದಿರುವ ವಾದ್ಯ; ಸುಮಾರು ಮೂರು ಅಡಿ ಉದ್ದವಿದ್ದು ಅದರ ಕೆಳಭಾಗದಲ್ಲಿ ಮೆಟ್ಟುಗಳಿವೆ (ಹೊಯ್ಸಳವಾ. ೩೩). [ಸಂ. ನಾಗವೀಣಾ]

**ನಾಗವೀಣೆ** (ನಾ). (ಹಾವಿನ ಆಕಾರದ) ಒಂದು ಬಗೆಯ ವೀಣೆ: ನಾಗವೀಣೆಯು ನಾಗರ್ಕಳಿಂದಂ ಕಚ್ಛಪವೀಣೆಯು ಕೋವಿದರಿಂ . . . ಒಪ್ಪಿದತ್ತಾ ಮಹಾಲಿಂಗದಾಸ್ಥಾನಂ (ಹಮ್ಮೀರ. ೮-೪೧ ವ). [ನಾಗ + ವೀಣೆ]

**ನಾಗವೇಣಿ** (ನಾ). ೧. ಸರ್ಪದಂತೆ ನೀಳವಾಗಿರುವ ಜಡೆ: ಸುಗಂಧತೈಲದಿಂದ ವಿಲೀನವಾದ ನಾಗವೇಣಿಬಂಧನವೇನು ! (ಜಯಂತ. ೨೪೩). ೨. ಸರ್ಪದಂತೆ ನೀಳವಾದ ಜಡೆಯುಳ್ಳವಳು : ನಾಗವೇಣಿ ನಗರಿಗೆ ನಾಂ ಪೋಗಿ ಬರುವೆನೆ (ಶಾಕುಂತ. ೪೪ ಅಡಿ). [ನಾಗ + ವೇಣಿ]

**ನಾಗವೇದಿಗೆ** (ನಾ). (?) : ಎನ್ನ ಪಾದವೇ ಪಾದಶಿಲೆಯಾಗಿ ಎನ್ನ ಕಾಲೇ ಕಡಹದ ಕಂಬಗಳಾಗಿ ಎನ್ನ ತೋಳೇ ನಾಗವೇದಿಗೆ [ಪಾಠಾಂ. ನಾಗವೇದಿ] ಯಾಗಿ (ಸರ್ವವ. ೧೮೧-೮೩೦). [?]

**ನಾಗವೈರಿ** (ನಾ). ಸರ್ಪಗಳ ಶತ್ರು ; ಗರುಡ. 'ನಾಗವೈರಿವಾಹನ' ಪರಾ. [ನಾಗ + ವೈರಿ]

**ನಾಗವೈರಿವಾಹನ** (ನಾ). ಗರುಡನನ್ನು ವಾಹನವನ್ನಾಗಿ ಮಾಡಿಕೊಂಡಿರುವವನು ; ನಾರಾಯಣ : ನಾಗವೈರಿವಾಹನ ವಿಜಯವಿಠಲ (ವಿದಾಕೃ. ೪೪-೫). [ನಾಗವೈರಿ + ವಾಹನ]

**ನಾಗವ್ರಜ** (ನಾ). ೧. ಆನೆಗಳ ಗುಂಪು. ೨. ಹಾವುಗಳ ಗುಂಪು. ೩. ಕಪಿಗಳ ಗುಂಪು. ೧, ೨, ೩ : ಅರಿಕಾಮಧ್ವಂಸಿ ನಾಗವ್ರಜಮಯ ಕಟಕಂ . . . ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ (ಜಗವಿ. ೧-೩). [ನಾಗ + ವ್ರಜ]

**ನಾಗಶಯನ** (ನಾ). ಸರ್ಪವನ್ನು ಹಾಸಿಗೆಯನ್ನಾಗಿ ಮಾಡಿಕೊಂಡಿರುವವನು ; ಆದಿಶೇಷನೇ ಹಾಸಿಗೆಯಾಗಿರುವವನು ; ನಾರಾಯಣ : ಅಂತು ನಾಗಪುರವನಿಳಿಸುವ ನಾಗಪುರಮನಾ ನಾಗಶಯನಂ ಪೊಕ್ಕು (ಪಂಪಭಾ. ೯-೨೭ ವ) ; ನಾಗಶಯನನ ತಂತ್ರದಲಿ ನೀ ನೀಗಿದೆಯಲಾ ತನುವ ಶಿವಶಿವ (ತಿಮ್ಮಕ್ಕೀ. ೦-೭) ; ನಾಗಶಯನಮೂರುತಿಯ ಕಂಡೆ ಭೋಗಿಭೂಷಣಸಖನ ಕಂಡೆ (ಕನಕ. ೪೮-೫) ; ನಾರಾಯಣ ನಾಗಶಯನ ನಂದಾತ್ಮಜ ಮಾರಜನಕ ಮಂಜುಳಾಂಗ . . . ಸಲಹೆನ್ನನೊಲಿದು (ಶತಸಾಂ. ೭೧-೩). [ನಾಗ + ಶಯನ]

**ನಾಗಶಯ್ಯೆ** (ನಾ). ಹಾವಿನ ಹಾಸಿಗೆ : ನಾಗಶಯ್ಯೆಯೊಳ್ ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣವನಂ ಮರುಳ್ಚಿದಳ್ (ಪಂಪಭಾ. ೪-೧೭) ; ಆವನಾನುಮೊರ್ವ ಮಹಾಭಾಗನೀ ನಾಗಶಯ್ಯೆಯನೇಱುವನೀ ಶಾರ್ಙ್ಗಧನುವನೇಱಿಸುವನೀ ಪಾಂಚಜನ್ಯಮಂ ಪೂರೈಸುವನಾತನರ್ಧಚಕ್ರವರ್ತಿಯಾಗಿ ಪೃಥ್ವೀರಾಜ್ಯಂಗೆಯ್ಗುಂ (ಅರ್ಧನೇ. ೮-೩೦ ವ). [ನಾಗ + ಶಯ್ಯೆ]

**ನಾಗಶಾಯಿ** (ನಾ). = ನಾಗಶಯನ. [ಸಂ. ನಾಗಶಾಯಿನ್]

**ನಾಗಶ್ರುತಿಪುರನಯನ** (ನಾ). ಎಂಟು, ನಾಲ್ಕು ಮತ್ತು ಮೂರು ಹೀಗೆ ಒಟ್ಟು ಹದಿನೈದು ಕಣ್ಣುಗಳುಳ್ಳವನು; ಒಂದೊಂದು ಮುಖಕ್ಕೆ ಮೂರು ಕಣ್ಣುಗಳಂತೆ ಐದು ಮುಖಗಳುಳ್ಳ ಶಿವ ; ಪಂಚವಕ್ತ್ರ : ನಾಗಶ್ರು[ಶ್ರು]ತಿಪುರನಯನ . . . ಪೊರೆವುದೀ ಕ್ಷಣವೆನ್ನ ಸಂಗಮೇಶ್ವರಪ್ರಸನ್ನ (ಪ್ರಾಥರಾ. ೧೩-೧). [ನಾಗ + ಶ್ರುತಿ + ಪುರ$_4$ + ನಯನ]

**ನಾಗಸಂಪಗೆ, ನಾಗಸಂಪಿಗೆ** (ನಾ). ಸುವಾಸನೆಯ ಹೂವುಗಳನ್ನು ಬಿಡುವ ಒಂದು ಬಗೆಯ ಮರ ಮತ್ತು ಅದರ ಹೂವು: "ಚಾಂಪೇಯಃ, ಕೇಸರಃ, ನಾಗಕೇಸರಃ, ಕಾಂಚನಾಹ್ವಯಃ—ಈ ೪ ನಾಗಸಂಪಗೆ" (ನಾಚಿರಾ. ೧೦೮) ; "ಕಾಂಚನಂ ನಾಗಸಂಪಗೆ" (ಮಂಗರಾ. ೩೮-೨೫) ; ಮೂಗು ಸುರಭಿಕರ ಪರಿಮಳದಂದಮೆ ನಾಗಸಂಪಗೆಯ ಬಿರಿಮುಗುಳಂದಮೆ (ಸುಕುಮಾ. ೫-೫೧) ; ನೆಟ್ಟೊಪ್ಪುವಶೋಕೆ ನಾಗಸಂಪಗೆ ಹರಿಚಂದನಂ ಬಗೆಗೆ ವೇದುವು (ಧರ್ಮಾಮೃ. ೨-೧೯೩) ; ನಾಗಸಂಪಗೆಯನ್ನು ನಾಗಕೇಸರವೆಂದೂ ಕರೆದಿರುವುದುಂಟು (ಹಸುಹೊ. ೦೮೧). **ನಾಗಸಂಪಿಗೆ:** ತೂಗುಮಂಚದಿ ಹಂಸತೂಲದ ಹಾಸಿಗೆ ನಾಗಸಂಪಿಗೆ ಹೂವಿನ ಒರಗು (ಪುರಂದ. ೩-೧೩೧-೨) ; ನಾಗಸಂಪಿಗೆ ಕೋಲಸಂಪಿಗೆ . . . ಇವುಗಳೆಲ್ಲ ಬೀಜಗಳಾಗಿವೆ (ಕೃಷಿಪ್ರ. ೨೦೦) ; ನಾಗಸಂಪಿಗೆ (ನಾಗಚಾಫಾ) . . . ಸುಂದರವಾದ ವೃಕ್ಷ ; ಹೂ ಬಹು ಸುಗಂಧ (ಕಥಾಗ. ೪೩) ; ನಾಗಕೇಸರಿ, ನಾಗಸಂಪಿಗೆ (ಮೃಜಿಗಿ. ೫೩-೧೧೭೨). [<ಸಂ. ನಾಗಚಂಪಕ]

**ನಾಗಸಂಪಿಗೆ** 'ನಾಗಸಂಪಗೆ' ನೋ.

**ನಾಗಸಂಪ್ರದಾಯ** (ನಾ). [ಚಿತ್ರಶಾ] ಭಾರತೀಯ ಚಿತ್ರಕಲೆಯ ಒಂದು ಪರಂಪರೆ ; ದೇವಸಂಪ್ರದಾಯ, ಯಕ್ಷಸಂಪ್ರದಾಯ, ನಾಗಸಂಪ್ರದಾಯವೆಂಬ ಮೂರು ಸಂಪ್ರದಾಯಗಳಲ್ಲಿ ಒಂದು : ನಾಗಸಂಪ್ರದಾಯವು ... ನಾಗಾರ್ಜುನನ ಕಾಲದಲ್ಲೂ ರೂಢಿಯಲ್ಲಿತ್ತೆಂದೂ ಆತ ಹೇಳಿದ್ದಾನೆ (ಭಾರದ. ೫೨೩). [ನಾಗ + ಸಂಪ್ರದಾಯ]

**ನಾಗಸತ್ತ್ವ** (ನಾ). [ಕಾಮಶಾ] ಸ್ತ್ರೀಯರಲ್ಲಿರುವ ಹನ್ನೆರಡು ಬಗೆಯ ಮನೋಧರ್ಮಗಳಲ್ಲಿ ಒಂದು : ಮೃದು ಶೈತ್ಯಮಪ್ಪ ದೇಹದ ನಿದ್ದೆಗೆಯ್ದಿರವಿನಧಿಕಮೆಂದೆನಿಪ ವಸ್ತುಗಳನೊಲ್ದು ಪುದುಗುವ ತೊಳಲ್ದು ಗೀತದೊಳಿಚ್ಛೆಯಿಡುವ ಸುಯ್ಯೊದವಿದವಳೇ ನಾಗಸ [ಪಾಠಾಂ. ತ್]ತ್ವದವಳು (ಜನವ. ೫-೩೦) ; ದೇವಸತ್ತ್ವ ಯಕ್ಷಸತ್ತ್ವ ಗಂಧರ್ವಸತ್ತ್ವ ನರಸತ್ತ್ವ ನಾಗಸತ್ತ್ವ ಕಾಕಸತ್ತ್ವ ವಾನರಸತ್ತ್ವ ಮುನಿಸತ್ತ್ವ ಪಿಶಾಚಸತ್ತ್ವ ರಾಕ್ಷಸಸತ್ತ್ವ ಕಿನ್ನರಸ ಖರಸತ್ತ್ವವೆಂಬ ದ್ವಾದಶಸತ್ತ್ವದ ಸತಿಯರಿಂ (ವಿವೇಕ. ೨೪೫). 'ದ್ವಾದಶಸತ್ತ್ವ' ಪರಾ.

ನಾಗಸತ್ತ್ವದ ಸ್ತ್ರೀ = "ಹಿಂದಾಗಿ ಉಂಬುವಳು ಆಕಳಿಸುವಳು ಕಳಂವಳು ಭ್ರುವೆಂಯುಂಳ್ಳವಳಂ ಆವಾಗಲೂ ನಿದ್ರೆಗೈವಳು ವ್ಯಾಕುಲೆಯಾಗಿರ್ಪಳಂ ಇವಳು ನಾಗಸತ್ತ್ವದ ಸ್ತ್ರೀ" (ಕಾಮಶಾ. ೪-೬೧). [ ನಾಗ + ಸತ್ತ್ವ₁ ]

**ನಾಗಸರ₁** (ನಾ). = ನಾಗಸ್ವರ ೨ : "ಸುನಾದವುಂ ತೋರ್ಪುದುದು ನಾಗಸರಂ" (ಮಂಗರಾ. ೧೧೫-೮) ; ಹೆಗ್ಗಾಳೆ ಬುರುಗು ಮದ್ದಳೆ ನಾಗಸರಗಳ ಮೊಗ್ಗ ವವು ಹತ್ತು ಹತ್ತು (ಕುರಾಸಾಂ. ೪೧-೬೮) ; ಜಾಗಟೆ ಕೈತಾಳ ನಾಗಸರವುಶಂಖು ಕೂಗುವ ಹೆಗ್ಗಾಳೆ ಬುರುಗು ಬೇಗದೊಳೊದಱೆತೊಂಬತ್ತು ಸಾವಿರ ಕಹಳೆಯಾಗಲೊದಗಿತೆಂಟು ದೆಸೆಗೆ (ಅಮುಸಾಂ. ೩-೮೩) ; ಈ ಹೊತ್ತಿನ ಪೋಲಗದ ಡೋಳು ನಾಗಸರದವರ ಜನ ೪ (ಎಕ. VIII, ತೀರ್ಥಹ. ೧೬೬-೫೩ ; 1610) ; ಕೊಂಬು ಕೊಳಲು ನಾಗಸರ ಭೇರಿ ... ಡಿಂಡಿಮದ ಮುಂಬರಿದೆಸೆವ ರವಗಳಾಕಾಶವ ತುಂಬಿದವು (ಕಂನವಿ. ೮-೧೯) : ನಾಗರಸ [ಸರ] ದಿಂಪಿಗೆವೊಳ್ಳಿಯು ತೂ ಗ ಬ ಲ್ಲು ದೆ ಶಿರವ (ನಾಗಹ. ೧೬-೧೫) ; ನಾಗಸರಾ ಊದಿದರೆ ನಾಯಿ ಆಡೀತೆ ? (ಗಾದೆ). [ ನಾಗ + ಸರ₃ ]

**ನಾಗಸರ₂** (ನಾ). ಕೊರಳಿನ ಒಂದು ಬಗೆಯ ಆಭರಣ ;–ಹಾರ : ಪಚ್ಚೆ ತೆನೆಯಂತ ನಾಗಸರ ತಕ್ಕೊಂಡು ಎತ್ತೀನ ಜ್ಞಾನ ಮರೆತಾನು (ಹಳ್ಳಿಯು. ೫೦). [ ನಾಗ + ಸರ₄ ]

**ನಾಗಸೇನ** (ನಾ). ಒಬ್ಬಾತನ ಹೆಸರು : ಶ್ರೀಋಷಭಸೇನಗುರುವಡಿಗಳ ಶಿಷ್ಯರ್ ನಾಗಸೇನ ಗುರುವಡಿಗಳ್ ಸನ್ನ್ಯಾಸನವಿಧಿ ಇನ್ತು ಮುಡಿಪ್ಪಿದಾರ್ (ಎಕ. III, ೩೪-೧ ; ಸು. 700). [ ಸಂ. ]

**ನಾಗಸ್ಥಾನ** (ನಾ). ೧. ನಾಗರು ವಾಸಿಸುವ ಸ್ಥಳ ; ಪಾತಾಳ. ೨.=ನಾಗಠಾಣ : ಮಗುಟ್ದು ಬಂದು ನಾಗಸ್ಥಾನಮಂ ಪೊಕ್ಕು (ಸುಕುಮಾ. ೪-೬೩ ವ). [ ನಾಗ + ಸ್ಥಾನ ]

**ನಾಗಸ್ವರ** (ನಾ). ೧. ಹಾವಾಡಿಗರು ಹಾವುಗಳನ್ನು ಆಕರ್ಷಿಸಲು ಬಳಸುವ ಒಂದು ಬಗೆಯ ವಾದ್ಯ ; ಪುಂಗಿ : ನಾಗಸ್ವರಮಂ ಕೇಳ್ದಾ ನಾಗಂ ಪೆಡೆಯೆತ್ತುವಂದದಮಂ ಮೆಚ್ಚಿಯಿಸುಪ್ಪೆ (ವಸ್ತುವಂ. ೧೯). ೨. ಓಲಗ : ಕಹಳೆ ಹೆಗ್ಗಹಳೆ ಶಂಖ ವಾಸ ನಾಗಸ್ವರ ಉಪಾಂಗ ಮೊದಲಾದ ವಾದ್ಯ ವಸವಱಿವುದು (ಆದವ. ೧೯೬-೩೫೦) ; ದೇವಲಾಪುರದ ವಸಂತ ಮಲ್ಲಿಕಾರ್ಜುನ ದೇವರಿಗೆ ಯೆರಡು ಡೋಳು ಯೆರಡು ನಾಗಸ್ವರವನು ನಡಸೂಯೆಂದು (ಸೌಇಇ. IX-ii, ೬೪೭-೦೪ ; 1552) ; ದಕ್ಷಿಣದ ಸಂಗೀತ ಕಚೇರಿ ವಾದ್ಯಗಳಲ್ಲಿ ನಾಗಸ್ವರವೂ ಮುಖ್ಯವಾದುದು (ಸಂಗೀತ. ೧೦೫).

ನಾಗಸ್ವರಕಛೇರಿ= ನಾಗಸ್ವರವನ್ನು ಬಾರಿಸುವ ಸಂಗೀತಗೋಷ್ಠಿ : ಬೆಳಗಿನಿಂದಲೂ ನಾಗಸ್ವರ ಕಛೇರಿ ಪ್ರಾರಂಭವಾಗಿತ್ತು (ಮೂಲಾನ. ೧೩೫). [ ನಾಗ + ಸ್ವರ ]

**ನಾಗಹ** (ನಾ). ಗೋದಾವರೀನದಿಯ ಒಂದು ಮಡುವಿನ ಹೆಸರು : "ನಾಗಹಂ–ಗೋದಾವರಿಯೊಳೊಂದು ಮಡು" (ಶಮದ. ಪರಿ. ೩) ; "ಬಿಡದೆ ನಾಗಹವೆಂದು ಗೋದಾವರಿಯೊಳೊಂದು ಮಡು" (ಕಬ್ಬಿಕೈ. ೯೦). 'ಕೊಳಹ' ಪರಾ. [ ? ]

**ನಾಗಹ್ರದ** (ನಾ). ಹಾವಿನ ಮಡುವು ; ಯಮುನಾನದಿ : ತೊದಳೇನೊ ಮೆಚ್ಚಿದಂ ನಿನ್ನದಟಂಗೆಲೆ ಗೋಪ ತಪ್ಪುದೀ ಬಸದಿಗೆ ನೀನುದಯಕ್ಕೆ ಮುಂಚೆ ನಾಗಹ್ರದದೊಳಗಣ ಸಾವಿರೆಸಟ ತಾವರೆಯಲರಂ ತಂದು (ಅರ್ಧನೇ. ೮-೩೯). [ ಸಂ. ]

**ನಾಗಳ** 'ನಾಲ್ಗೊಳ' ನೋ.

**ನಾಗಾಂಕ** (ನಾ). ನಾಗಾಭರಣ ; ಶಿವ : ನಾಗಾಂಕನ ಅಱಿದು ತಾನಾಗದೆ ನಾಗಕಂಕಣನಾದ ನಾಗಾಯಿ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ (ಸಿದ್ಧವಕ. ೪೨೫-೧೩೬೦). [ ಸಂ. ]

**ನಾಗಾಂಗನೆ** (ನಾ). ೧. ನಾಗಲೋಕದ ಸ್ತ್ರೀ ; ನಾಗಕನ್ಯೆ. ೨. ಹೆಣ್ಣಾನೆ : ರಮವತ್ಪ್ರೋತ್ರಃ ಪಥೋತ್ಪೋಯಮುಸಿಥಪತಿ ನಾಗಾಂಗನಾಂಗಂಗಳೊಳ್ ಸೂಸುವವೋಲ್ (ಶಾಂತಿಪು. ೮-೩೧). [ ನಾಗ + ಅಂಗನೆ ]

**ನಾಗಾಂತಕ** (ನಾ). ಸರ್ಪಗಳನ್ನು ನಾಶಮಾಡುವವನು ; ಗರುಡ : "ಗರುತ್ಮಾನ್, ಗರುಡಃ . . . ನಾಗಾಂತಕಃ, ವಿಷ್ಣುರಥಃ, ಸುಪರ್ಣಃ, ಪನ್ನಗಾಶನಃ– ಈ ವಿಷ್ಣುದೇವರ ವಾಹನವಾದ ಗರುಡನ ಹೆಸರುಗಳು" (ಸಿದ್ಧಾಂತಿ. ೧೮) ; ನಾಗಾಂತಕನೀ ಗರುಡಂ ನಾಗನದೈರಾವತಂ ಪರಾಜಿತ ವಂತಾ ನಾಗೇಂದ್ರನದಂ ಬಣ್ಣಿಸೆ ನಾಗಾರಿಯನಕಟ ಗೃಧ್ರನೆಂದೇಳಿಪ್ಪುದೇ (ಜಗವಿ. ೧೩-೮೬) ; ನಾಗಾಂತಕನಂತೆ ಪಾಱಿದುದು ತುಂಗತುರಂಗಮಿಳಾಧಿನಾಥನಾ (ರಾಜಶೇ. ೦೩-೬೮). [ ನಾಗ + ಅಂತಕ ]

**ನಾಗಾಜಿನ** (ನಾ). ೧. ಆನೆಯ ತೊಗಲು ; ಗಜಚರ್ಮ : ನಾಗಯಜ್ಞೋಪವೀತಂ ನಾಗಕುಂಡಲಂ . . . ನಾಗಾಜಿನಾಂಬರಧರಂ ನಾಗಾರಿಮುದಭಂಜನಂ . . . ನಾಗವಿಷಧರನೊಪ್ಪುತಿರ್ದಂ (ಲಶಿಚಂ. ೩೭-೩೯). ೨. ಗಜಚರ್ಮವನ್ನು ಧರಿಸಿದವನು ; ಶಿವ. [ ಸಂ. ]

**ನಾಗಾಣ** (?) (ನಾ). (?) : ಕುತ್ತುವ ಕೊಱವ ಹಾಕುವ ನಾಗಾಣ ಮುಂತಾಗಿ ದೃಷ್ಟದಲ್ಲಿ ಕೊಲುವ ಕೃದ[ತ] ಮಾಡುತ್ತ ಮತ್ತೆ ಅವನತಿಯೆಂದಡೆ ಮೆಚ್ಚುವರೆ ಪರಮಶಿವೈಕ್ಯರು (ಏಲೇಶ್ವ. ೩೮). [ ? ]

**ನಾಗಾದಿಪಂಚಕ** (ನಾ). ಶರೀರದ ಒಳಗಿರುವ ಐದು ವಾಯುಗಳು : ನಾಗಾದಿಪಂಚಕವೆಂದರೆ,ನಾಗ, ಕೃಕಳ, ಕೂರ್ಮ, ದೇವದತ್ತ, ಧನಂಜಯ ಹೀಗೆ ೫ (ಹಸಾರ. ೬-೯ ತಾತ್ಪರ್ಯ). 'ಪಂಚವಾಯು' ಪರಾ. [ ನಾಗ + ಆದಿ₂ + ಪಂಚಕ ]

**ನಾಗಾಧಿಪ** (ನಾ). ೧. ನಾಗರ ಒಡೆಯ ; ನಾಗರಾಜ ; ಆದಿಶೇಷ : ನಡೆ ನೋಡಲ್ ದಿವಿಜೇಂದ್ರನೆಯ್ದೆ ಪೊಗಟಲ್ ನಾಗಾಧಿಪಂ ಭಾವದೊಂದೆಡೆಯಂ ಭಾವಕನಾಗಿ ಪೋಲೆ ಬರೆಯಲ್ಕಾ ವಿಶ್ವಕರ್ಮಂ ದಲಾರ್ಪೊಡೆ . . . ಬಣ್ಣಿಸುವರಾರ್ಗೆರಾ ಮಹಾದೇವಿಯಂ (ಶಾಂತಿಪು. ೯-೧೫೬). ೨. ಆನೆಗಳ ನಾಯಕ ; ಸಲಗ. [ ನಾಗ + ಅಧಿಪ ]

**ನಾಗಾಧೀಶ** (ನಾ). = ನಾಗಾಧಿಪ ೧ : ಸುರವೃಂದಾರಕವೃಂದಮರ್ತ್ಯಪತಿ ನಾಗಾಧೀಶ ಚೇತೋಂಬುಜಾಂಬುರುಹಂಗಳ್ ಮುದಿತಂಗಳಾಗೆ (ಶಾಂತಿಪು. ೯-೨೦೬). [ ನಾಗ + ಅಧೀಶ ]

**ನಾಗಾಪಸರ್ಪಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; ℙ "ಕೈಗಳನ್ನು ರೇಚಿತ ಮಾಡುವ ಸಮಯದಲ್ಲೇ ಪರಿವಾಹಿತ ಶಿರಸ್ಸನ್ನು [ಶಿರಸ್ಸನ್ನು] ಮಾಡಿ ಪಾದಗಳನ್ನು ಸ್ವಸ್ತಿಕದಂತಿರಿಸಿ ಪುನಃ ಸ್ವಭಾವವಾಗಿ ನಿಂತುಕೊಳ್ಳುವುದು" (ಭಾಸ್ಕರಂ. ೩೦೬ ಗದ್ಯಾನುವಾದ) : ಕರಮೆರಡುಂ ರೇಚಿತವಾಗಿರೆ ಪರಿವಾಹಿತಮದಾಗೆ ಶಿರವಡಿಗಳ್ ಮೇಣ್ ಉರು ಸ್ವಸ್ತಿಕಮಾಗುತ್ತುಂ ಸರಿಯಲ್ ನಾಗಾಪಸರ್ಪಿತಾಖ್ಯಮನಾಳ್ಗುಂ (ಭಾಸ್ಕರಂ. ೪-೦೬೪). 'ದಿಕ್ಸ್ವಸ್ತಿಕ' ಪರಾ. [ ಸಂ. ]

**ನಾಗಾಭರಣ** (ನಾ). ಸರ್ಪಗಳನ್ನು ಒಡವೆಯನ್ನಾಗಿ ಮಾಡಿಕೊಂಡಿರುವವನು ; ಶಿವ : ನಾಗಾಭರಣಾಧರಪುಟಚುಂಬಿತೆ ಯೋಗಿನಿಚಯ ಹೃದ್ದರ್ಪಣಬಿಂಬಿತೆ (ಉದ್ಭಟ. ೭-೯೦). [ ನಾಗ + ಆಭರಣ ]

**ನಾಗಾಯುತ** (ನಾ). ಹತ್ತುಸಾವಿರ ಆನೆಗಳು : ಸತ್ವದಲಿ ನಾಗಾಯುತದ ಬಲವೆಂಬ ಡೊಂಬಿನ ವಾಯುವಿನ ಮಗನೆನ್ನೊಡನೆ ಮಾಱಾಂತಡಹುದೆಂದ (ಕುವ್ಯಾಗ. ೫-೪೭). [ ನಾಗ + ಅಯುತ ]

**ನಾಗಾಯುತತ್ರಾಣಕ** (ನಾ). ಹತ್ತುಸಾವಿರ ಆನೆಗಳ ಬಲವುಳ್ಳವನು ; ಭೀಮ : ವಿಕಟಮದ ನಾಗಾಯುತತ್ರಾಣಕನ ಸಾಹಸವಡಗಿತೇ (ಕುವ್ಯಾಅ. ೦೭-೪೦). [ ಸಂ. ]

**ನಾಗಾಯ್ತು** (ನಾ). ಮಾವಟಿಗ: ಇರದೊಗೆದುದಲ್ಲಿ ಸೂಟಾಯ್ತರ ಕಳಕಳ ವಚ್ಚೆಳಾಯ್ತರುಲಿಪುಂ ನಾಗಾಯ್ತರ ಗಳಗರ್ಜನೆ (ಜಗವಿ. ೧೦-೭೪).
[ ನಾಗ + – ಆಯ್ತು ]

**ನಾಗಾರತಿ** (ನಾ). ದೇವರ ಮಂಗಳಾರತಿಗೆ ಉಪಯೋಗಿಸುವ ಸರ್ಪಾಕಾರವನ್ನೊಳಗೊಂಡ ಆರತಿಯ ಉಪಕರಣ: ಬೆಳ್ಳಿಯ ನೀರಾಂಜನದ ಹಲಿಗೆ ೯ ಹಿರಿಯ ಆರತಿ ೮ ಪುರುಷಾಮೃಕದ ಆರತಿ ೩ ನಾಗಾರತಿ ೧ ಧೂಪಾರತಿ [೧] (ಸೌಇಇ. IV, ೨೭೩-೪೨ ; 1513).
[ ನಾಗ + ಆರತಿ$_1$ ]

**ನಾಗಾರಾಧನೆ** (ನಾ). = ನಾಗಪೂಜೆ: ವಸ್ತುತಃ ನಾಗಪೂಜೆ ದ್ರಾವಿಡ ಜನಾಂಗದ ಹಬ್ಬವಾಗಿರಬೇಕು . . . ಆದರೆ ಆರ್ಯರು ಬಂದ ಮೇಲೂ ನಾಗಾರಾಧನೆ ಮುಂದುವರಿದಿದೆ (ಭಾಹಬ್ಬ. ೯೭).
[ ಸಂ. ನಾಗಾರಾಧನಾ ]

**ನಾಗಾರಿ$_1$** (ನಾ). ೧. ಸರ್ಪಗಳ ವೈರಿ ; ಗರುಡ : ನಾಗಾಂತಕನೀ ಗರುಡಂ ನಾಗನದೈರಾವತಂ ಪರಾಜಿತವಂತಾ ನಾಗೇಂದ್ರನದಂ ಬಣ್ಣಿಸೆ ನಾಗಾರಿಯನಕಟ ಗೃಧ್ರನೆಂದೇಳಿಪುದೇ (ಜಗವಿ. ೧೩-೮೭). 'ನಾಗಾರಿಕೇತು' ಪರಾ. ೨. ಆನೆಗಳ ಶತ್ರು ; ಗಜವೈರಿ ; ಸಿಂಹ : ಸಾಮಂತ ಗಜೇಂದ್ರಯೂಥವಿದಳನ್ನಾಗಾರಿ ನಾಗಾರಿಭೀಕರ ಸಾಮಂತನಾಗಾರ್ಜುನಂ (ಎಕ. VI, ತರೀಕೆ. ೪೨-೩೯ ; 1206). [ ನಾಗ + ಅರಿ$_6$ ]

**ನಾಗಾರಿ$_2$** (ನಾ). ನಗಾರಿ ಬಾರಿಸುವವನು : ಹಡಪಿಗರು ಚಾಮರಿಗರೆಡೆಯಾಡುವವರು . . . ಕಾಳಂಜಿಯವರು ನಾಗಾರಿಗಳು ಕಥಿಕರು ಭಟಾಗ್ರಣಿಗಳು . . . ಸೊಗಯಿಸಿದರು (ಸೌಂದಪು. ೬-೫೯. [ <ನಗಾರಿ$_2$ ]

**ನಾಗಾರಿ$_3$** (ನಾ). ೧.=ನಾಗರಕ ೨ (?) : ಎಯ್ದೆವಂದು ಬಾಗಿಲೊಳ್ ನಿಂದಾಡುವ ವೈತಾಳಿಕರಂ ನಗಿಸುವ ಜಿಕೋಡಗರಂ ಪೊಗಟ್ಟ ನಾಗಾರಿಯ ರೊಗ್ಗಂ ನಿಲಿಸುತ್ತುಮೊಳಗಂ ಪೊಕ್ಕು (ಅನಂಪು. ೮-೩೩ ವ). ೨. (?) : "ನಾಗಾರಿಯೆಂದ[ಡ]ಂಡೆಯುವಂ" (ವಸ್ತುಕೋ. ೬೬-೮೭).
[ ?./ಮರಾ. ನಾಗಾರಿ = ಹೊಗಳುಭಟ್ಟ, ವಂದಿ ]

**ನಾಗಾರಿಕೇತು** (ನಾ). ಗರುಡಧ್ವಜ ; ಕೃಷ್ಣ : ಆ ಮರದಿಂ ನಾಗಾರಿಕೇತು ಕಾಳಿಯ ನಾಗಂಗೆಜಿಗಿದನಮರ್ತ್ಯರೀಕ್ಷಿಸೆ ನಭದೊಳ್ (ಜಗವಿ. ೩-೮೫).
[ ನಾಗಾರಿ$_1$ + ಕೇತು ]

**ನಾಗಾರೋಹಕ** (ನಾ). ಆನೆಯ ಸವಾರ : ಪ್ರಥಿತ ನಾಗಾ [ಪಾಠಾಂ. ನಾ] ರೋಹಕರ ಬಲವುಂಥನ ನಗರಿಗೆ ಕಳುಹಿ ಸುಮನೋರಥನು ಕಳುಹಿದನವರ ಬಳಿಯುಲಿ ಬಹಳ ಪದಚರರ (ತೊರರಾ. ೬-೩೯-೪). [ ಸಂ. ]

**ನಾಗಾರ್ಜುನಯ್ಯ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀ ನಾಗಾರ್ಜುನಯ್ಯನನ್ ವಿಜ್ಜೆಯಡೆಯ ಮಗಳ್ ಸಾವಿನಿಪ್ಪಡಿ ಸರ್ವ್ವಶಾಸ್ತ್ರ ಪ್ರಸಿದ್ಧಿ ಶ್ರೀ (ಎಕ. X, ಬೌರಿಂಗ್. ೬೫-೦ ; ಸು. 900).
[ ನಾಗಾರ್ಜುನ$_0$ + ಅಯ್ಯ$_1$ ]

**ನಾಗಾರ್ಜುನಿ** (ನಾ). ಒಂದು ಬಗೆಯ ವನಸ್ಪತಿ: "ಪಯಸ್ಯಾ–ನೆಲದಾವರೆ, ವೆಲ್ಲವಾಲೆ, ನಾಗಾರ್ಜುನಿ" (ಒಷಧಿ. ೯೧). [ ? ]

**ನಾಗಾಲಂಕಾರ** (ನಾ). ಸರ್ಪಗಳನ್ನು ಆಭರಣಗಳಾಗಿ ಉಳ್ಳವನು ; ಸರ್ಪಭೂಷಣ ; ಶಿವ : ಶ್ರೀಗುರು ಶಂಕರ ಶುಭಕರ ನಾಗಾಲಂಕಾರ ನಾಕಚಿಕುರ ಮಹೇಶಂ . . . ರಾಗದೊಳಿರ್ಕೆಮ್ಮ ಚಿತ್ತನಾಕದೊಳನಿಶಂ (ಹಮ್ಮಿರ. ೪-೦). [ ನಾಗ + ಅಲಂಕಾರ ]

**ನಾಗಾಲಯ** (ನಾ). ೧. ನಾಗರ ವಾಸಸ್ಥಳ ; ಪಾತಾಳ. ೨. ನಾಗರ ವಿಗ್ರಹಗಳನ್ನು ಪ್ರತಿಷ್ಠಿಸಿರುವ ಸ್ಥಳ ; ನಾಗಠಾಣ : ಬುದ್ಧವಿಹಾರ ಮಹಾಭವನಂ ನಾಗಾಲಯಂ ಬಾವಿ[ದಿ]ಗ್ಗಿಗೆ ಶತ್ರಂ ಕೆಱೆ ದೀಪಮಾಲೆಯೆನೆ ನಾನಾಧರ್ಮ್ಮಮಂ ಮಾಡಿಸಲ್ (ಸೌಇಇ. XX, ೪೯-೩೯ ; 1076) ; ಪುರದ ಪೊಱಗಣ ನಂದನವನದೊಳೊಂದು ನಾಗಾಲಯಮಿರಲಲ್ಲಿ ನಾಗರಂ ಪೂಜಿಸಲೆಲ್ಲರುಂ ಪೋಗಿ (ಪುಣ್ಯಾಸ್ರ. ೬-೪ ವ). ೩. ಹಾವಿನ ವಾಸಸ್ಥಾನ ; ಹುತ್ತ : ಸಮೀಪದೊಳಿರ್ದ ನಾಗಾಲಯದ ಮುಂದಣ ತಾವರೆಗೊಳಕ್ಕೆ ನೀರ್ಗುಡಿಯಲೆಂದು ಪೋಗಿ (ಧರ್ಮಾಮೃ. ૩-೧೯೧). [ ನಾಗ + ಆಲಯ ]

**ನಾಗಾಲಿ$_1$** (ನಾ). (ಮರ, ಲೋಹಗಳಿಂದ ಮಾಡಿದ) ನಾಲ್ಕು ಕಾಲುಗಳುಳ್ಳ ಪೀಠ ; ಸ್ಟೂಲು, ಕುರ್ಚಿ ಮೊದಲಾದ ಆಸನ : ಮೂರು ಅಥವಾ ನಾಲ್ಕು ಕಾಲುಗಳೂ ಮೇಲೆ ಮಣೆಯೂ ಇರುವ, ಒಬ್ಬನು ಕುಳಿತುಕೊಳ್ಳುವ, ಬೆನ್ನಿಲ್ಲದ ಪೀಠ ; ಮುಕ್ಕಾಲುಮಣೆ ; ನಾಗಾಲಿ ; ಕಾಲುಮಣೆ ; ಸ್ಟೂಲು (Stool. ಇಂಕನಿ) ; ಅಲ್ಲಿ ಹೋಗಿ ಅವರು ಮಾತಾಡುವುದಾದರೂ ಏನು ? ನಾಗಾಲಿಗಳ ಮೇಲೆ ಒರಗಿಕೊಂಡು ಕೈಕಾಲು ಆಡಿಸುತ್ತ ಕುಳಿತಿರುವುದು (ಪ್ರಕಾಪ. ೧೦೦).
[ ನಾಗಾಲು + – ಇ$_3$ ]

**ನಾಗಾಲಿ$_2$** (ನಾ). ನಾಲ್ಕು ಗಾಲಿಗಳನ್ನುಳ್ಳುದು ; ನಾಲ್ಕು ಚಕ್ರದ ಬಂಡಿ: "ಎರಡು ಅಥವಾ ಮೂರು ವರ್ತುಲ ನಾಳಿಗಳ ಎಂಜಿನ್ನುಳ್ಳ ಬಹಳ ಹಗುರವಾದ ಮೋಟಾರು ಮೂಗಾಲಿ (ಕೆಲವು ಸಂದರ್ಭಗಳಲ್ಲಿ ನಾಗಾಲಿ)" (Cycle-car. ಇಂಕನಿ). [ ನಾ$_2$ (<ನಾಲ್ಕು) + ಗಾಲಿ ]

**ನಾಗಾಲು** (ನಾ). ನಾಲ್ಕು ಕಾಲುಗಳು ; ಇಱುವ ಆನೆಯ ನುಂಗಿತ್ತು . . . ಮತ್ತೊಂದು ಗಜ ಒತ್ತಿ ಬರಲಾಗಿ ಕಚ್ಚಿತ್ತು ಕಚ್ಚಿದ ವಿಷ ತಾಗಿ ಮತ್ತನಾಗಿ ಬಿದ್ದಿತ್ತು ನಾಗಾಲಡಿಯಾಗಿ ಆನೆಯದೆ ತಾನುಳಿದ ಪರಿಯ ನೋಡಾ (ಮೋಳಿಮಾ. ೨೦೭-೭೩) ; ಯಕ್ಷರ ಪಕ್ಷವ ತಾಳಿ ಓಡುವೀ ಪಶು ನಾಗಾಲಾಗಿ ಹೊತ್ತಿದೆ ಮಾನಸ, ಹೊತ್ತಿದೆ ದೇಹ, ಎದೆ ಮೂರ್ಛಿತವಾಗಿ (ಅರಳು. ೨೦೭-೩) ; ನಾಗಾಲ ಹುರಿಗೆಜ್ಜೆ ನಾಗಾಲ ಕಿರುಗೆಜ್ಜೆ (ನಾಪದ. ೯೭).
[ ನಾ$_2$ < ನಾಲ್ಕು) + ಕಾಲು$_1$ (< ಕಾಲ್$_1$) ]

**ನಾಗಾಲುನೆಗೆತ** (ನಾ). (ಕುದುರೆ, ಜಿಂಕೆ ಮೊದಲಾದ ಪ್ರಾಣಿಗಳು) ನಾಲ್ಕು ಕಾಲುಗಳನ್ನು ಏಕಕಾಲದಲ್ಲಿ ಮೇಲಕ್ಕೆತ್ತಿ ಹಾರುವಿಕೆ : "ಕುದುರೆಯ ಒಂದು ತೆರದ ನೆಗೆತ (ಎರಡು ಮುಂಗಾಲುಗಳನ್ನೂ ಒಟ್ಟಿಗೆ ಎತ್ತಿ ಅವನ್ನು ಕೆಳಗಿಡುವುದಕ್ಕೆ ಮುಂಚೆಯೇ ಹಿಂಗಾಲುಗಳೆರಡನ್ನೂ ಎತ್ತಿ ಮುಂದಕ್ಕೆ ಕುಪ್ಪಳಿಸುವುದು): ನಾಗಾಲುನೆಗೆತ" (Curvet. ಇಂಕನಿ).
[ ನಾಗಾಲು + ನೆಗೆತ ]

**ನಾಗಾಲೋಟ** (ನಾ). ೧. (ಕುದುರೆ, ಜಿಂಕೆ ಮೊದಲಾದ ಪ್ರಾಣಿಗಳ) ಅತಿ ವೇಗವಾದ ಓಟ ; ನೆಲವನ್ನು ಮುಟ್ಟಿಯೂ ಮುಟ್ಟದಂತೆ ಬಹಳ ರಭಸದಿಂದ ಓಡುವುದು : ಕೂಡಲೆ ಗಂಗಾರಾಮನು . . . ಕುದುರೆಯ ಮೇಲೆ ಏರಿ ನಾಗಾಲೋಟದಲ್ಲಿ ಅದನ್ನು ಓಡಿಸಿಕೊಂಡು ಹೋಗಿಬಿಟ್ಟನು (ಬಂಕಿಮ. ೩೦೨) ; ಆಲೋಚನೆಯ ಕುದುರೆ ನಾಗಾಲೋಟದಿಂದ ಓಡುತ್ತಿತ್ತು (ಮುಂಗಾಮು. ೦೭) ; ದನಕರುಗಳು ... ನಾಗಾಲೋಟದಿಂದ ಓಡುತ್ತಿದ್ದಾವು (ರಾವಿಜ. ೨೪). ೨. ವೇಗ ; ರಭಸ ; ತೀವ್ರತೆ : ಪ್ರಪಂಚದಲ್ಲಿ ನಾಗಾಲೋಟದಲ್ಲಿ ಆಗುತ್ತಿರುವ ಪರಿವರ್ತನೆಗೆ ಹೊಂದಿಕೊಳ್ಳದ . . . ಗುಂಪಿಗೆ ಸೇರಿದವನು ಸೋಮು (ಅನಾಮಿ. ೫೩). ೩. (ಆಲಂ) ಬಹಳ ವೇಗವಾಗಿ ಓಡುವಿಕೆ; ರಭಸದಿಂದ ಸಾಗುವಿಕೆ: ರಭಸದಿಂದ ಗೋಡೆಯನ್ನೇರಿ, ನಾಗಾಲೋಟದಿಂದ ಮನೆಯನ್ನು ಸೇರಿ, ಶಿವನ್ ಮಲಗಿಕೊಂಡನು (ದೇವಸಾ. ೨೪).

**ನಾಗಾಲೋಟ ಓಡು** = ೧. ಬಹಳ ವೇಗದಿಂದ ಓಡು : ದಿಣ್ಣೆಯನ್ನು ಕಂಡ ಕೂಡಲೇ ಆನಂದದಿಂದ ನಾಗಾಲೋಟ ಓಡಿಬಿಡುತ್ತಿದ್ದ (ಮಲೆನಾ. ೨೦೩). ೨. ಶೀಘ್ರವಾಗಿ ಪ್ರಗತಿಯನ್ನು ಸಾಧಿಸು : ಅದುವರೆಗೂ ತೂಕಡಿಸುತ್ತಿದ್ದ ಬ್ರಿಟನ್ ಮೈಕೊಡವಿಕೊಂಡು ಎದ್ದು ನಾಗಾಲೋಟ ಓಡಿ ಒಂದೂವರೆ ಶತಮಾನಗಳಲ್ಲಿ ಮುಂದಾಳುತನವನ್ನು ಪಡೆಯಿತು

(ಶಿಲ್ಪನಾ. ೧೫೫). ನಾಗಾಲೋಟ ಬಿಡು = ನಾಗಲೋಟ ಓಡು೧ : ಅವ ಮೋಟರ ಹಾದೀ ನೋಡದೆ ನಾಗಾಲೋಟ ಬಿಟ್ಟ (ಪುನರ್ಮಿ. ೧೫೬).
[ ನಾಗಾಲು + ಓಟ ]

**ನಾಗಾಶನ** (ನಾ). ೧. ಹಾವುಗಳನ್ನು ತಿನ್ನುವ ಪಕ್ಷಿ; ಗರುಡ. ೨. ನವಿಲು. [ ನಾಗ + ಅಶನ ]

**ನಾಗಾಶ್ರಯ** (ನಾ). ೧. ಆನೆಗಳಿಗೆ ನೆಲೆಯಾಗಿರುವವನು, – ಆಶ್ರಯ ಸ್ಥಾನನಾಗಿರುವವನು : ತುಂಗಾಚಾರ ವಿಲೋಲಲುಬ್ಧಕ ಮಹಾದಾನಾಂಕ ನಾಗಾಶ್ರಯಾ (ಹಮ್ಮೀರ. ೧-೯೫). ೨. ಹಾವುಗಳಿಗೆ ಆಶ್ರಯವಾಗಿರುವುದು ; ಹುತ್ತ. ೩. ಪಾತಾಳಲೋಕ. [ ನಾಗ + ಆಶ್ರಯ ]

**ನಾಗಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ; ಸರ್ಪಾಸನ ; P "ಮುಖ್ಯವಾದ ಕೆಲವು ಆಸನಗಳು – ಅಷ್ಟವಿನ್ಯಾಸಗಳು ೧. ಉತ್ತಾನಾಸನ ೨. ಚತುರಂಗದಂಡಾಸನ ೩. ಊರ್ಧ್ವಮುಖಶ್ವಾನಾಸನ ೪. ಅಧೋಮುಖಶ್ವಾನಾಸನ ೫. ಸರ್ಪಾಸನ ೬. ಜಾನುಶೀರ್ಷಾಸನ(ಎಡ–ಬಲ = ೨) ೭. ಪಶ್ಚಿಮೋತ್ತಾನಾಸನ ೮. ಮರೀಚಾಸನ ೯. ಉಪವಿಷ್ಟಕೋಣಾಸನ ೧೦. ಲೋಲಾಸನಂ ೧೧. ಭುಜಪೀಡಾಸನಂ ೧೨. ಬಕಾಸನ ೧೩. ಪದ್ಮಾಸನ ೧೪. ಬದ್ಧಪದ್ಮಾಸನ ೧೫. ಯೋಗಮುದ್ರಾಸನ ೧೬. ಮಯೂರಾಸನ ೧೭. ಪಿಂಛಮಯೂರಾಸನ ೧೮. ಪದ್ಮಪಿಂಛಮಯೂರಾಸನ ೧೯. ಶಲಭಾಸನ ೨೦. ಭೇಕಾಸನ ೨೧. ಧನುರಾಸನ ೨೨. ನಾವಾಸನ ೨೩. ಸರ್ವಾಂಗಾಸನ ೨೪. ನಿರಾಲಂಬಾಸನ ೨೫. ಹಲಾಸನ ೨೬. ಉಭಯಪಾದಾಂಗುಷ್ಠಾಸನ ೨೭. ಸುಪ್ತಪಾದಾಂಗುಷ್ಠಾಸನ ೨೮. ಕೂರ್ಮಾಸನ ೨೯. ಏಕಪಾದ ಶೀರ್ಷಾಸನಂ (ಎಡ–ಬಲ = ೨) ೩೦. ದ್ವಿಪಾದ ಶೀರ್ಷಾಸನ ೩೧. ಚಕೋರಾಸನ ೩೨. ಟಿಟ್ಟಿಭಾಸನ ೩೩. ಬದ್ಧಕೋಣಾಸನಂ ೩೪. ಅರ್ಧಬದ್ಧ ಪದ್ಮಪಶ್ಚಿಮತಾನಾಸನ ೩೫. ಊರ್ಧ್ವಪದ್ಮಾಸನಂ ೩೬. ಅರ್ಧಮತ್ಸ್ಯೇಂದ್ರಾಸನ ೩೭. ಮತ್ಸ್ಯೇಂದ್ರಾಸನ ೩೮. ಸುಪ್ತವಜ್ರಾಸನ ೩೯. ಕಂದಪಿಂಡಾಸನ ೪೦. ಪಿಂಡಾಸನ ೪೧. ಗರ್ಭಪಿಂಡಾಸನ ೪೨. ಗೋರಕ್ಷಾಸನ ೪೩. ಉಷ್ಟ್ರಾಸನ ೪೪. ಕುಕ್ಕುಟಾಸನ ೪೫. ಊರ್ಧ್ವ ಕುಕ್ಕುಟಾಸನ ೪೬. ಕೋಕಿಲಾಸನ ೪೭. ಆಕರ್ಣಧನುರಾಸನ ೪೮. ಸೇತುಬಂಧಾಸನ ೪೯. ಹನುಮಾನಾಸನ ೫೦. ಗರುಡಾಸನ ೫೧. ಅಷ್ಟಾವಕ್ರಾಸನ ೫೨. ಬುದ್ಧಾಸನ ೫೩. ದೂರ್ವಾಸಾಸನ. ೫೪. ವೃಕ್ಷಾಸನ ೫೫. ಸಿದ್ಧಾಸನ ೫೬. ಸಿಂಹಾಸನ ೫೭. ಗೋಮುಖಾಸನ ೫೮. ಉತ್ತಾನ ಕೂರ್ಮಾಸನ ೫೯. ವೃಶ್ಚಿಕಾಸನ ೬೦. ಸ್ವಸ್ತಿಕಾಸನ ೬೧. ವೀರಾಸನ ೬೨. ಉತ್ಕಟಾಸನ ೬೩. ಪಾರ್ಶ್ವಪಾದಾಸನ ೬೪. ವಿಪರೀತದಂಡಾಸನ ೬೫. ಅಂಗುಷ್ಠಾಸನ ೬೬. ಪಾರ್ಶ್ವಕೋಣಾಸನ ೬೭. ಪಾರ್ಶ್ವೋತ್ತಾನಾಸನ ೬೮. ಸುಪ್ತವಜ್ರಾಸನಂ ೬೯. ಕಪೋತಾಸನಂ ೭೦. ಗಂಡಭೇರುಂಡಾಸನ ೭೧. ತ್ರಿವಿಕ್ರಮಾಸನ ೭೨. ಅರ್ಧವೃಕ್ಷಾಸನ ೭೩. ತಾಡಾಸನ ೭೪. ಸುಪ್ತಕೋಣಾಸನ ೭೫. ಸುಪ್ತಪಾರ್ಶ್ವಪಾದಾಂಗುಷ್ಠಾಸನ ೭೬. ಸ್ಕಂದಾಸನ ೭೭. ಉತ್ಥಿತ ತ್ರಿಕೋಣಾಸನ ೭೮. ಅರ್ಧಬದ್ಧ ಪದ್ಮೋತ್ತಾನಾಸನ ೭೯. ಭೈರವಾಸನ ಇತ್ಯಾದಿಗಳನೇಕವಿವೆ" (ಭಾರದ.೧೬೭) ; ಆಸನಗಳ ಹೆಸರುಗಳಂ ಮತ್ತು ಸಂಖ್ಯೆಗಳಲ್ಲಿ ವ್ಯತ್ಯಾಸವುಂಟು ; ಶುದ್ಧಾಸನ ಸಿಂಹಾಸನ . . . ನಾಗಾಸನ . . . ಅರ್ಧಾಸನಾದಿಯೆಂಭತ್ತನಾಲ್ಕಾಸನ ಭೇದಂಗಳಂ (ವಿವೇಕ. ೧೫೯). [ ನಾಗ + ಆಸನ ]

**ನಾಗಾಸ್ತ್ರ** (ನಾ). ಸರ್ಪವೇ ಅಧಿದೇವತೆಯಾದ ಒಂದು ಮಂತ್ರಾಸ್ತ್ರ ; ಸರ್ಪಾಸ್ತ್ರ : ಹಿಂದೆ ನಾಗಾಸ್ತ್ರದಲಿ ಕಪಿಗಳ ಕೊಂದೆನದು ಹುಸಿಯಾಯ್ತು (ಕೌಶಿರಾ. ३೮-೫) ; ಕನಸ ಕಂಡನು ಸಮರತಾಮಸಜನಿತಜಾಡ್ಯದಲಿಂದ್ರಜಿತು ರಾಮನನು ನಾಗಾಸ್ತ್ರದಲಿ ಕೆಡಹಿದೆನೆಂದು (ತೊರರಾ. ೬-೧೭-೩) ; ಬ್ರಹ್ಮಾಸ್ತ್ರ ನಾಗಾಸ್ತ್ರ . . . ವಾರುಣಾಸ್ತ್ರಗಳೆಂಬ ಪಂಚೋಪಾಸ್ತ್ರಮಂತ್ರಂಗಳಂ . . . ವಿವೇಕಿಸಿ ತಿಳಿದಿರಲಕ್ಕುಂ (ವಿವೇಕ. ೮೭). 'ನಾಗಪಾಶ' ಪರಾ.
[ ನಾಗ + ಅಸ್ತ್ರ ]

**ನಾಗಿ** (ನಾ). = ನಾಗಿಣಿ. [ ಸಂ. ನಾಗೀ ]

**ನಾಗಿಣಿ, ನಾಗಿನಿ** (ನಾ). ೧. ನಾಗಲೋಕದ ಸ್ತ್ರೀ ; ನಾಗಕನ್ನಿಕೆ : ನಾಗಶಯ್ಯೆಯೊಳ್ ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣವನಂ ಮರುಳ್ಚಿದಳ್ (ಪಂಪಭಾ. ४-೧೭) ; ನಾಗವಲಿ ಮುಂತಾದ ವಿಭವಗಳಾಗಲಾ ಪೆಣ್ಮಣಿಯೊಳಹಿಸುತ ರಾಗರಸಲೀಲಾವಿನೋದದ ಸರಸಕಲೆಗಳಲಿ ನಾಗಿಣಿಯೊಳೊಡವೆರೆದನೆಂಬೊಲು ನಾಗನಂದನ ಸುರತಸುಖಮಯರಾಗರಸದೊಳೋಲಾಡಿದನು ಕರುಣಾಂಬುನಿಧಿಚಂದ್ರ (ನಾಗಷ. ೧೩-೮೭) ; ಶೀನೂ ಸುಶೀಲೆಯನ್ನು ಮುದ್ದಿಸಿ ನಿಂತಾಗ ಒಬ್ಬ ನಾಗಿಣಿಯೋ ಜಕ್ಕಿಣಿಯೋ ಬಾಗಿಲಲ್ಲಿ ಕಾಣಿಸಿಕೊಂಡಳು (ಸಮುಜೀ. ೮೭೩). ೨. ಹೆಣ್ಣು ಹಾವು. ೩. (ಆಲಂ) ಕ್ರೂರ ಹೆಂಗಸು ; ಹಾವಿನಂಥ ಹೆಣ್ಣು ; ವಿಷಕನ್ನಿಕೆ : ಆಕೆ, ಆ ನಾಗಿಣಿ ಮಾನವಳಲ್ಲ . . . ರಾಕ್ಷಸಿ (ಬರಹಾ. ೧೪). ೨, ೩ : ನಾಗಿಣಿವೊಲೀ ಭುಜಂಗನ ಭೋಗಕ್ಕೆ ತನುವಿತ್ತೆ (ರಾಜಶೇ. ೧೧-೧೬೮). **ನಾಗಿನಿ** : ೧. ಬಂಗಾಳದ 'ಮಣಿಪುರ' ಭಾಗದಲ್ಲಿ ನಾಗನ ತಂಗಿಯಾದ 'ಮನಸಾ' ಎಂಬ ನಾಗಿನಿಯನ್ನು ಪೂಜಿಸುತ್ತಾರೆ (ಭಾಹಬ್ಬ. ೯೭). ೪. ಸುಂದರಳಾದ ಸ್ತ್ರೀ : (ಶ). [ <ಪ್ರಾ. ಣಾಇಣೀ./ಸಂ. ನಾಗೀ ]

**ನಾಗಿನಿ** 'ನಾಗಿಣಿ' ನೋ.

**ನಾಗಿಯಣ್ಣ, ನಾಗೆಣ್ಣ** (ನಾ). ಒಬ್ಬಾತನ ಹೆಸರು : ಸಾಕ್ಷಿ ಪಡಡಿಯ ಗಾವುಣ್ಡಂ ನಾಗಿಯಣ್ಣನುಂ (ಎಕ. XI, ದಾವಣ. ೧३४-४೦ ; ಸು. 1042 ?). **ನಾಗೆಣ್ಣ** : ಸ್ವಸ್ತಿ ಶ್ರೀಮತ್ ಚಿತ್ರವಾಹನ ಪೊನ್ನಬ್ಬಾಳೆ ಕಿಳ್ಳಂ ನಾಗೆಣ್ಣನಧಿಕಾರಿಗಳಾಗೆ (ಎಕ. VI, ಕೊಪ್ಪ. ೩೭-೨ ; ಸು. 675 ?).
[ ನಾಗಿ$_0$ + ಅಣ್ಣ$_1$ ]

**ನಾಗಿಯಬ್ಬೆ** (ನಾ). ಒಬ್ಬಾಕೆಯ ಹೆಸರು : ಶ್ರೀಮದಯ್ಯಪದೇವಂ . . . ತನ್ನ ಮನೋನಯನ ವಲ್ಲಭೆಯರಪ್ಪ ನಾಗಿಯಬ್ಬೆಗಂ ಹೆಲೆಯಬ್ಬೆಗ ಬರಗೂರು ಮೂಲಸ್ಥಾನದ ಎರಡು ದೇಗುಲಕ್ಕೆಂದು . . . ಕೊಟ್ಟುದು (ಎಕ. XII, ಶಿರಾ. ೩९-३೯ ; 920). 'ನಾಗಯಬ್ಬೆ' ಪರಾ.
[ ನಾಗಿ + ಅಬ್ಬೆ$_1$ ]

**ನಾಗುರಿಕನಗೆಡ್ಡೆ** (ನಾ). ಒಂದು ಬಗೆಯ ಗೆಡ್ಡೆ : ಸಹದೇವಿ, ಬಜೆ, ದೇವದಾರು, ನಾಗುರಿಕನಗೆಡ್ಡೆ ಇವಂ ಪುಡಿಮಾಡಿ ಧೂಪವಿಕ್ಕಲು ವಿಷಮಜ್ವರ ಪರಿಹಾರವಾಗುವುದು (ಸಕಪ್ಪ. ೧೧೭). [ ? + ಗೆಡ್ಡೆ (< ಗಡ್ಡೆ) ]

**ನಾಗುಲಿಕ** 'ನಾಂಗುಲಿಕ' ನೋ.

**ನಾಗುಳ** 'ನಾಲ್ಗುಳ' ನೋ.

**ನಾಗೆ** (ನಾ). ಒಂದು ಬಗೆಯ ವನಸ್ಪತಿ : (ಮೃಶಿಗಿ. ೭೩-೧೯೮೩) [ ? ]

**ನಾಗೆಣ್ಣ** 'ನಾಗಿಯಣ್ಣ' ನೋ.

**ನಾಗೆಯ** (ನಾ). ಒಬ್ಬಾತನ ಹೆಸರು : ಇರ್ವ್ವರುಮನ್ನೊಡಿತ್ತ ನಾಗೆಯ ಎಟ್ಟಿದಿ × × × ದಲಾಗೆ ಪಡೆದದು (ಎಕ. III(R), ನಂಜನ. ೦४೭-४ ; ३ನೆಯ ಶತ). [ < ನಾಗಯ್ಯ ]

**ನಾಗೇಂದ್ರ** (ನಾ). ೧. ನಾಗಲೋಕದ ಹಾವುಗಳ ಒಡೆಯ ; ಆದಿಶೇಷ. ಫಣಿರಾಜ : ಯಕ್ಷೇಂದ್ರನಿಂದ್ರನ ನಾಗೇಂದ್ರನ ನಚ್ಚಿನೋಲಗದವೋಲೊಪ್ಪಿರ್ದುದೊಡ್ಡೋಲಗಂ (ಶಾಂತಿಪು. ३-३೮) ; ಶ್ರೀಮನ್ನಾಗೇಂದ್ರ ಭೋಗ ಸ್ಫುರದರುಣಮಣಿದ್ಯೋತಿ ಸಂಧ್ಯಾನಿಬದ್ಧಪ್ರೇಮಂ . . . ತ್ರಿಭುವನಜನಕಾನಂದಮಂ ಮಾಡುಗೆಂದುಂ (ಕಾದಂಪೂ. ೧) ; ಧರೆ ಫಣವೆಂಬೆನೆ ನಾಗೇಂದ್ರನ

ಫಣಾಮಣಿಯು ಮೇಲಡಗಿತ್ತು (ಬಸವ. ೮೭೬); ಅನ್ನೆಗಮತ್ತಲ್ ಪನ್ನಗಶಯನನವತರಣೋದ್ಯೋಗದಿಂ ನಾಗೇಂದ್ರನಂ ನೋಡಿ (ಜಗವಿ. ೨-೫೩ ವ); ನಾಗೇಂದ್ರಂಗಾದೊಡೆ ಮೇಣೀ ಗುರುಪಂಪಾಮಹಾಪುರದ ಮಹಿಮೆಯನಿಂಬಾಗಿ ವಚಿಸಲ್ಕೆ ಗೋಚರಮಾಗದು (ಉದ್ಭಟ. ೩-೭೪); ನಾಗೇಂದ್ರನಂ ಬಿಡದೆ ತಲೆವಾಗಿಸಿತ್ತಮರನಾಗೇಂದ್ರನಂ ಬುದ್ಧಿದೊಚಿಸಿತ್ತು . . ಅಮಲಧರ್ಮಜನ ಕೀರ್ತಿ (ಜೈಮಿಭಾ. ೨-೧೨). ೨. ನಾಗರಹಾವುಗಳಲ್ಲಿ ಶ್ರೇಷ್ಠವಾದುದು : ದೇಹ ರುಂಡಮಾಲೆಯ ಸ್ಥಾನ ಕರ್ಣ ನಾಗೇಂದ್ರನ ಸ್ಥಾನ ಇಂತೀ ಸ್ಥಾನಂಗಳ ನಾನೊಲ್ಲೆನಯ್ಯಾ (ಬಸವ. ೪೪೪). ೩. ಶ್ರೇಷ್ಠವಾದ ಆನೆ ; ಸಲಗ ; ಗಜರಾಜ : ಬಲಭಿನ್ನಾಗೇಂದ್ರನೊಳ್ ಮಾರ್ಮಲೆದು ಹರ ವೃಷಾಧೀಶನೊಳ್ ಪೋರ್ದ ಕೀನಾಶಲುಲಾಯ ಶ್ರೇಷ್ಠನೊಳ್ ತಾಗಿದ ರಣಾಗಣನಾರೇಖೆಯೆಂಬಂತು ರೇಖಾವಲಿ ಪೀನಸ್ಕಂಧದೊಳ್ ತಳ್ತಿರೆಯಿರೆ ಪೊಜಮಟ್ಟತ್ತು ಕಾಂತಾರದಿಂ ಶಾತಶೃಂಗಂ . . . ಗವೇಂದ್ರಂ (ಜಗವಿ. ೫-೩೫).
[ ನಾಗ + ಇಂದ್ರ ]

**ನಾಗೇಂದ್ರಶಯನ** (ನಾ). ಆದಿಶೇಷನು ಹಾಸಿಗೆಯಾಗಿರುವವನು ; ಶೇಷಶಾಯಿ ; ಮಹಾವಿಷ್ಣು. 'ನಾಗೇಂದ್ರಶಯನಾಲಯ' ಪರಾ.
[ ನಾಗೇಂದ್ರ + ಶಯನ ]

**ನಾಗೇಂದ್ರಶಯನಾಲಯ** (ನಾ). ವಿಷ್ಣುವಿನ ವಾಸಸ್ಥಾನ ; ಕ್ಷೀರಸಮುದ್ರ : ಅಮಲಧರ್ಮಜನ ಕೀರ್ತಿ ಬಳಿಕ ನಾಗೇಂದ್ರಶಯನಾಲಯವ ಜಡಧಿಯೆನಿಸಿ . . . ನೆಱೆ ರಾಜಿಸಿತು ಮೂಜಗದೊಳು (ಜೈಮಿಭಾ. ೨-೧೨).
[ ನಾಗೇಂದ್ರಶಯನ + ಆಲಯ ]

**ನಾಗೇಶ** (ನಾ). ೧. ನಾಗರುಗಳ ಒಡೆಯ ; ಆದಿಶೇಷ. ೨. ನಾಗರುಗಳನ್ನು ಧರಿಸಿರುವವನು ; ಶಿವ : ನಾಗೇಶನ[ ತಿಳಿದ ]ವೆಂಬರು ಆನಾಗದ ಹೋದರು ನಾಗಾಯಿ ನಾಗಕುಂಡಲನಱಿದೆವೆಂಬರು ನಾಗದೇವತೆಗಳಾದರು ನಾಗಾಯಿ (ಸಿದ್ಧವ.ಕ. ೪೨೨-೧೩೬೧). ೩. ದ್ವಾದಶಜ್ಯೋತಿರ್ಲಿಂಗಗಳಲ್ಲಿ ಒಂದು. 'ಜ್ಯೋತಿರ್ಲಿಂಗ' ಪರಾ. [ ನಾಗ + ಈಶ ]

**ನಾಗೇಶಿ,** ನಾಗೇಸಿ (ನಾ). ಪ್ರಪಂಚ ವ್ಯವಹಾರದಲ್ಲಿ ಪುರುಷನಿಗಿಂತ ಪ್ರಕೃತಿಯೇ ಪ್ರಧಾನಭೂತವಾದುದೆಂದು ವಾದಿಸುವ ಪಕ್ಷ; ಪ್ರಕೃತಿಯನ್ನು ಮೇಲುಂಗಟ್ಟಿ ಹಾಡುವ ಪಂಗಡ ; ಗಂಡಸಿಗಿಂತ ಹೆಂಗಸೇ ಹೆಚ್ಚೆಂದು ಲಾವಣಿ ಕಟ್ಟಿ ಹಾಡುವವರ ತಂಡ: ಹರದೇಶಿ ಪಂಗಡದವರ ಹಾಡಿಗೆ ಉತ್ತರವಾಗಿ ನಾಗೇಶಿಪಂಗಡದವರು ಲಾವಣಿಗಳನ್ನು ಹಾಡಿದರು (ಕಪವು. ೬-೧೮). ನಾಗೇಸಿ : ಹರದೇಸಿಗಳು ಪುರುಷನನ್ನು ಮೇಲುಗಟ್ಟಿ, ನಾಗೇಸಿಯು ಪ್ರಕೃತಿಯನ್ನು ಮೇಲುಗಟ್ಟಿ ಹಾಡುವರೆನ್ನಬೇಕು (ಸುವರ್ಣ. ೪೧). 'ಕಲ್ಗಿ', 'ಹರದೇಶಿ' ಪರಾ. [ ?./ಮರಾ. ನಾಗೇಶವಳ ]

**ನಾಗೇಶ್ವರ** (ನಾ). =ನಾಗೇಂದ್ರ ೧ : ತಾರಕಜಿನ್ನಾಗೇಶ್ವರ ನೀರಜಭವ ದಶಕರಜಿದು ನುತಿಸಲಶಕ್ಯಂ (ಹಮ್ಮಿರ. ೧-೨೮). [ ನಾಗ + ಈಶ್ವರ ]

**ನಾಗೇಸಿ** 'ನಾಗೇಶಿ' ನೋ.

**ನಾಗೊಂದಿ** 'ನಾಗಂದಿಗೆ' ನೋ.

**ನಾಗೊಂದಿಗೆ** 'ನಾಗಂದಿಗೆ' ನೋ.

**ನಾಗೊಮ್ಮೆ** (ನಾ). ಬೀಜಗಳನ್ನು ತುಂಬುವ ನಾಲ್ಕು ಬುಟ್ಟಿ : ಇಂತು ತಾಗೇ ಮೂಜಿಡಿ ತೂಂಬುಂ ದೇವಭೋಗಂ ಈ ಕಟನಿ ಫಲಮಾ ಕೊಣ್ಡು ಬೆಳೆಸಿ ನಾಗೊಮ್ಮೆಯುಂ ಸಾಲೆ ಊಳುವದು (ಎಕ. X, ಕೋಲಾರ. ೧೧-೯ ; ಸು. 753). [ ನಾ$_2$ (<ನಾಲ್ಕು) + ಕೊಮ್ಮೆ$_1$ ]

**ನಾಗೊರಲ** (ನಾ). ನಾಲ್ಕು ಕೊರಳುಳ್ಳವನು ; ನಾಲ್ಮೊಗ ; ಬ್ರಹ್ಮ : ನಾಗೊರಲನರಸಿ ನಾರದರು ವೀಣೆಯ ನುಡಿಸಿ ಭಾಗೀರಥೀಧರನ ನುಡಿಸಿದರು (ಗುರುಜಾ. ೭-೬೭). [ ನಾ$_2$ (<ನಾಲ್ಕು) + ಕೊರಲ್ + - ಅ$_7$ ]

**ನಾಗೊಳ** 'ನಾಲ್ಗೊಳ' ನೋ.

**ನಾಗೊಳಗ** (ನಾ). ಒಂದು ಅಳತೆ ; ನಾಲ್ಕು ಕೊಳಗ : ದೋಣ = ನಾಗೊಳಗ, ದ್ರೋಣಾಚಾರ್ಯ (ಶಮದ. ೨೬೧ ಪ್ರಯೋ. ಅಡಿಟಿ).
[ ನಾ$_2$ (<ನಾಲ್ಕು) + ಕೊಳಗ ]

**ನಾಗೋಜ** (ನಾ). ಒಬ್ಬಾತನ ಹೆಸರು : ಈ ಕಲ್ಲ ಮಾಡಿಸಿ ಭಡಿಸಿದೊ ದಿವಾಕರಯ್ಯನು ನಾಗೋಜನಯ್ಯನುಂ (ಎಕ. X, ಬೌರಿಂಗ್. ೬೮-೭ ; ಸು. 900) ; ರೂವಾರಿ ಬುಪೋಜನ ಮಗ ರೂವಾರಿ ನಾಗೋಜ ಮಾಡಿದ (ಮೈಆರಿ. ೧೯೨೫, ೧೦೯-೫ ; ?). [ ನಾಗ + ಓಜ$_1$ (<ಒವಜ್ಝ) ]

**ನಾಗೋಲಿ** 'ನಾಗವಲಿ' ನೋ.

**ನಾಗೋಲೆ** 'ನಾಗವಲಿ' ನೋ.

**ನಾಗೋಷ್ಠ** (ನಾ). [ಅಶ್ವಶಾ] ಕುದುರೆಯ ಒಂದು ಬಗೆಯ ಗಮನ,- ಗತಿ : ಹಾವು ನಡೆದಂತೆ ಡೊಂಕುಡೊಂಕಾಗಿ ಓಡಿಸುವುದು ನಾಗೋಷ್ಠವೆನಿಸಿಕೊಂಬುದು (ಅಶ್ವಟೀ. ೨೫-೮). [ ? ]

**ನಾಗ್ನ್ಯ** (ನಾ). ಬತ್ತಲೆ; ನಗ್ನತೆ; ದಿಗಂಬರತ್ವ: ಮೆಱೆವ ಗುಂಡಿಗೆಯುಂ ವಿಕೃತಕ್ಕೆ ಸಂದ ನಾಗ್ನ್ಯಮುಮುಪಹಂಸೆಯೆಂಬ ಜನವಾದಮುಂ (ಶಾಂತಿಪು. ೮-೦೩೨) ; ನಾಗ್ನ್ಯ = ನಿರ್ಗ್ರಂಥಮುಂ (ತತ್ತ್ವಪ್ರ. ೩೩೩). [ ಸಂ. ]

**ನಾಘಂಡುಗ** 'ನಾಲ್ಗಂಡುಗ' ನೋ.

**ನಾಚ್** 'ನಾಚ್ಚು' ನೋ.

**ನಾಚಗಾವುಂಡ** (ನಾ). ಒಬ್ಬಾತನ ಹೆಸರು : ಮಲೆವಿಱಿನ ಭೀಚಗಾವುಣ್ಡ ವೈರಗೆಯ ನಾಚಗಾವುಣ್ಡ (ಎಕ. IV, ಹಗ್ಗಡ. ೦೦೯-೦೫ ; 1037).
[ ನಾಚ$_0$ (<ನರಸಿಂಗ) + ಗಾವುಂಡ (<ಗಾಮುಂಡ) ]

**ನಾಚಾರ್ಲು** 'ಲಾಚಾರು' ನೋ.

**ನಾಚಿಕೆ** 'ನಾಣ್ಚಿಕೆ' ನೋ.

**ನಾಚಿಕೆಗಿಡ** (ನಾ). ಮುಟ್ಟಿದ ಕೂಡಲೆ(ನಾಚಿಕೆಯಿಂದಲೋ ಎಂಬಂತೆ) ಮುದುರಿಕೊಳ್ಳುವ ಎಲೆಗಳುಳ್ಳ ಗಿಡ ; ಮುಟ್ಟಿದರೆ ಮುನಿ : ಮುಟ್ಟಿದರೆ ಮುನಿ, ಮುಡುಗುದಾವರೆ, ನಾಚಿಕೆಗಿಡ, ಲಜ್ಜಾವತಿ (ಮೈಜಗಿ. ೫೪-೦೦೭೪). [ ನಾಚಿಕೆ (<ನಾಣ್ಚಿಕೆ) + ಗಿಡ (<ಗಿಡು) ]

**ನಾಚಿಕೆಗೆಡಿಸು** (ಕ್ರಿ). ಅವಮಾನಪಡಿಸು : ತಡೆದು ಗೆದ್ದವರಿಲ್ಲ ನಾಚಿಕೆಗೆಡಿಸಿದವರಿಲ್ಲೀ ನೆಲೆಗೆ ಕೈವಿಡಿದುದಿಲ್ಲಪಜಯ ನಿತಂಬಿನಿ ನಮ್ಮನಾಜಿಯಲಿ (ಕೊರರಾ. ೬-೨೮-೩). [ ನಾಚಿಕೆಗೆಡು + - ಇಸು$_3$ ]

**ನಾಚಿಕೆಗೆಡು,** ನಾಚಿಗೆಗೆಡು (ಕ್ರಿ). ೧. ಅವಮಾನವನ್ನು ಹೊಂದು ; ಸಂಕೋಚಪಡು : ಆ ದ್ವಿಜನಂದ ಮಾತಿನ ಬಿನ್ನಣಕೆ ಮರುಳಾಗಿ ನಾಚಿಕೆ ಗೆಟ್ಟಪ್ಪ ಬಂದೆನಲಾ (ನಳಚ. ೮-೪೦). ೨. ಲಜ್ಜೆಗೆಡು; ಲಜ್ಜಾಹೀನನಾಗು: ಬಿಟ್ಟೆನೆಲವೋ ನಿನ್ನ ನಾಚಿಕೆಗೆಟ್ಟವನೆ ಹೋಗಸುರವಂಶಧರಪ್ಪನಲಿ (ಕೊರರಾ. ೬-೨೨-೨೮) ; ಒಮ್ಮೆ ತಾನೆನ್ನನು ವಂಚಿಸಿ ಹೋದರೆ ನಾಚಿಕೆ ಗೆಟ್ಟವನವನೆ (ಇಂಜಾಪ. ೨೨೬-೧೮). ನಾಚಿಗೆಗೆಡು : ೨. ಚಿ ಚಿ ಚಿಯೆಂದು ಕಾಳೆಯನೂದಬೇಡಿಂದು ಛಿ ಛಿ ಛಿಯೆಂದೂದ ಹೇಳೊ ನಾಚಿಗೆಗೆಟ್ಟರ ನೋಡೆಂದು ಜಡಿಯೆ ಸೇನಾಚಕ್ರ ಸುಮ್ಮನಾಯ್ತಾಜಿ (ಭರಜ. ೪೯-೧೮).
[ ನಾಚಿಕೆ (<ನಾಣ್ಚಿಕೆ) + ಕೆಡು$_1$ ]

**ನಾಚಿಕೆಗೇಡಿ** (ನಾ). ನಾಚಿಕೆಯಿಲ್ಲದವನು ; ಭಂಡ ; "ಮಾನಗೇಡಿ" (ಜಾನಕೋ. ೧೧) ; ಇಂದು ನಾಚಿಕೆಗೇಡಿಯಂತೆ ಹೋಗುವುದು ಹೇಗೆ ? (ನಿರಾಭ. ೪೪). [ ನಾಚಿಕೆ (<ನಾಣ್ಚಿಕೆ) + ಕೇಡಿ$_1$ ]

**ನಾಚಿಕೆಗೇಡಿತನ** (ನಾ). ನಾಚಿಕೆಯಿಲ್ಲದಿರುವಿಕೆ ; ಲಜ್ಜಾಹೀನತೆ : ನಾಚಿಕೆಗೇಡಿತನದ ಹಾಗು ನಿರ್ದಯ ಅವಿವೇಕತನದ ಪತನಕ್ಕೆ ಚಪ್ಪಾಳೆಯಿಕ್ಕುವವನು (ಪ್ರಬಂಧ. ೩೦) ; ಅವಳನ್ನು ಭೆಟ್ಟಿಯಾಗಿ ಮುಖ ತಗ್ಗಿಸುವ ನಾಚಿಕೆಗೇಡಿತನಕ್ಕಿಂತಲೂ ಅವಳ ಕಣ್ಮರೆಯಾಗಿರುವುದು ಹೆಚ್ಚು ಲೇಸಾಗಿ ತೋರಿತ್ತು (ಹೇಮಂತ. ೨೭೪). [ ನಾಚಿಕೆಗೇಡಿ + - ತನ ]

**ನಾಚಿಕೆಗೇಡು,** ನಾಚಿಗೆಗೇಡು (ನಾ). ನಾಚಿಕೆ ಇಲ್ಲದಂತಿರುವುದು ; ಲಜ್ಜಾಸ್ಪದವಾಗಿರುವುದು : ಇದೆಂಥಹದು ವೆಬ್‌ಸ್ಟರ! ಛೀ ನಾಚಿಕೆಗೇಡು (ಮಹಾತ್ಮ. ೬೬) ; ಅದು ಇನ್ನೂ ನಾಚಿಕೆಗೇಡು ಎಂದರು ಹುಡುಗರು (ಶಾಲಿವು. ೧೯೬) ; ಎಂಥ ನಾಚಿಕೆಗೇಡಿನ ಕೆಲಸ ಮಾಡಿದ್ದೇವೆ (ಪುನರು. ೧೦೯). **ನಾಚಿಗೆಗೇಡು :** ಈಚಲುಮರದ ಕೆಳಗೆ ಮಜ್ಜಿಗೆ ಕುಡಿದರೆ ನಾಚಿಗೆಗೇಡಾಗದೆ ? (ಗಾದೆ). [ ನಾಚಿಕೆ (<ನಾಣ್ಚಿಕೆ) + ಕೇಡು$_1$ ]

**ನಾಚಿಕೆಗೊಳು,** ನಾಚಿಕೆಗೊಳ್ಳು (ಕ್ರಿ). ೧. ಲಜ್ಜೆಯನ್ನು ಹೊಂದು : ನಾಚಿಕೆಗೊಳಬೇಡ ಮನದಲಿ ಯೋಚಿಸಿ ಕೆಡಬೇಡ (ಪುರಂದ. ३-೭೭ ಪಲ್ಲವಿ). **ನಾಚಿಕೆಗೊಳ್ಳು :** ೧. ಹೊಸಬರನ್ನು ನೋಡಿ ಅವಳು ನಾಚಿಕೆಗೊಂಡಳು (ರೂಢಿ). ೨. ಅವಮಾನಹೊಂದು ; ಸಂಕೋಚಪಡು : ಅವಿವೇಕದ ಕೆಲಸ ಮಾಡಿ ನಾಚಿಕೆಗೊಂಡರೆ ಏನಾಯ್ತು ? (ರೂಢಿ).

[ ನಾಚಿಕೆ (<ನಾಣ್ಚಿಕೆ) + ಕೊಳು (<ಕೊಳ್$_1$) ]

**ನಾಚಿಕೆಗೊಳ್ಳು** 'ನಾಚಿಕೆಗೊಳು' ನೋ.

**ನಾಚಿಕೆಪಡು** 'ನಾಚಿಕೆವಡು' ನೋ.

**ನಾಚಿಕೆಮುಳ್ಳು** (ನಾ).=ನಾಚಿಕೆಗಿಡ.

[ ನಾಚಿಕೆ (<ನಾಣ್ಚಿಕೆ) + ಮುಳ್ಳು (<ಮುಳ್) ]

**ನಾಚಿಕೆವಡು,** ನಾಚಿಕೆಪಡು (ಕ್ರಿ). ಸಂಕೋಚಪಡು : ಹರಹರಾಯೆನುತಾ ಸೀರೆಯ ಸೆಱಗ ಹಱಿದಿತ್ತಳು ನೃಪಾಲಗೆ ಶಿರವ ನಸುಬಾಗಿದನು ನಾಚಿಕೆವಡುತ[ಪಾಠಾಂ. ಯಾಗ]ಲಿಂತೆಂದ (ನಳಚ. ೫-೬). **ನಾಚಿಕೆಪಡು :** ಆತನು ನಾಚಿಕೆಪಟ್ಟು ತಲೆಬಾಗಿಸಿಕೊಳ್ಳುವಷ್ಟು ಹೊಗಳಿದೆವು (ಸಾಹಿಜೀ. ೮೬).

[ ನಾಚಿಕೆ (<ನಾಣ್ಚಿಕೆ) + ಪಡು$_1$ ]

**ನಾಚಿಗೆ** 'ನಾಣ್ಚಿಕೆ' ನೋ.

**ನಾಚಿಗೆಗೆಡು** 'ನಾಚಿಕೆಗೆಡು' ನೋ.

**ನಾಚಿಗೆಗೇಡು** 'ನಾಚಿಕೆಗೇಡು' ನೋ.

**ನಾಚಿಯು** (ನಾ). ಒಂದು ಮನೆತನದ ಹೆಸರು : ನಾಚಿಯುರ ಬೆಂಬಿಸೆಟ್ಟಿಯ ಬೀಡಿನೊಳ್ ನಾಡು ನೆರಪಿ (ಕಇ. IV, ೫೫-೧೭ ; 1000 ?). [ ? ]

**ನಾಚಿಸು** 'ನಾಣ್ಚಿಸು' ನೋ.

**ನಾಚು$_1$** 'ನಾಣ್ಚು$_1$' ನೋ.

**ನಾಚು$_2$,** ನಾಚ್ (ನಾ). ೧. ಯಾವುದಾದರೂ ಒಂದು ಭಾವವನ್ನು ಅಭಿನಯಿಸುವುದು ; ಆಂಗಿಕಾಭಿನಯ ; ನೃತ್ಯ : ಸಿನಿಮಾ, ಟಾಕಿ, ನಾಚು ಮುಂತಾದವುಗಳಿಗೇ ಹೆಚ್ಚು ಪ್ರೋತ್ಸಾಹನವೇ ವಿನಹ, ಹಳೇ ಕಾಲದ ನಾಟಕಗಳನ್ನು . . . ನೋಡುವವರು ಯಾರು ? (ರಾಯಕ. ೬೫); "ಚಾಂದನೀಚೌಕ"ದಲ್ಲಿ ಸೂಳೆಯರ ನಾಚು ಇತ್ತು (ಕೊತಳಾ. ೧೧) ; ಇಲ್ಲಿ ಯಾವಾಗಲೂ ವೇಶ್ಯಾಸ್ತ್ರೀಯರ ನಾಚು – ಗಾನಗಳು ನಡೆದಿರುವವು (ಮಂದಾಕಿ. ೦೩೩). ೨. ತಾಳಲಯಬದ್ಧವಾದ ಕುಣಿತ ; ನೃತ್ಯ. ೩. ಉತ್ತರ ಭಾರತದ ಕಥಕನೃತ್ಯದ ಗತ್ತುಗಳಲ್ಲಿ ಒಂದು. **ನಾಚ್ :** ೩. ಆತ ಹೇಳಿರುವ ಗತ್‌ಗಳಲ್ಲಿ ಇವು ಕೆಲವು : ಸಲಾಮಿ ಫರಿಯಾದ್ ಹುಸ್ನ ಮಹಬೂಬ ನಾಚ್ (ಭಾರದ. ೫೫೯) ; ಭಾರತೀಯ, ಪರ್ಶಿಯಾ ನೃತ್ಯಕಲೆಗಳ ಮಿಶ್ರಣದಿಂದ ನಾಚ್ ಸಂಪ್ರದಾಯ ಹುಟ್ಟಿಕೊಂಡಿತು (ಭಾರದ. ೫೭೯).

ನಾಚು ಮಾಡು=೧. ನೃತ್ಯವನ್ನು ಮಾಡು: ಕೋಣೆಯ ಒಳಗೊಳಗೇ ಕುಳಿತು ಗೊಣಗುಟ್ಟುತ್ತಿರುವಳಲ್ಲ, ಏಕಂತೆ? ಒಂದು ಇಷ್ಟು ನಾಚುಮಾಡಲಿ (ಕನ್ಯಾಬ. ೬೬). ೨. (ಸಂತೋಷ, ಉಲ್ಲಾಸಗಳಿಂದ) ಕುಣಿದಾಡು ; ನಲಿದಾಡು : ಅವಳು ಸಮರನನ್ನು ನೋಡಿ ಸಂತೋಷಭರಿತಳಾಗಿ ನಾಚು ಮಾಡಿದಳು (ಆಗರ. ೦೩೩). **ನಾಚುರಂಗು =** ೧. ಕೇಲಿ ; ವಿಲಾಸ ; ಆನಂದೋತ್ಸವ ; ಆಮೋದಪ್ರಮೋದ. ೨. ನೃತ್ಯಗೀತೆ; ಮೇಳ: ದಿನಂಪ್ರತಿ ನಾಚು ರಂಗು, ಬ್ರಾಹ್ಮಣ ಸಂತರ್ಪಣೆ ಮೊದಲಾದ ಅನೇಕ ಸಮಾರಂಭಗಳು ನಡದೇ ಇದ್ದವು (ಮಂಜುಕ. ೧೯೦) ; ನಾಚು – ರಂಗುಗಳಲ್ಲಿ ಕುಶಲೆಯರಾದ ಕಲಾವಂತಿನಿಯರ ನಾಮಾವಲಿಗಳನ್ನು ಇವರು ಮುಖೋದ್ಗತವಾಗಿ ಹೇಳಬಲ್ಲರು (ಜಿರಂಗ. ೦೬೩) ; ಈ ರಾಜರು ಸಂಗೀತ, ಸಾಹಿತ್ಯ, ನಾಚುರಂಗು ಮುಂತಾದುವುಗಳಲ್ಲಿಯೇ ಆಸಕ್ತರಾಗಿದ್ದರು (ಒಡಕ. ೫೫).

[ ←ಹಿಂ. ನಾಚ್./ಪ್ರಾ. ಣಚ್ಚ./ಸಂ. ನೃತ್ಯ ]

**ನಾಚುಗೆ** (ನಾ). ನಾಚಿಕೆ ; ಲಜ್ಜೆ : ಕಣ್ಣಲ್ಲಿ ಮಿಂಚು, ಮುಖದಲ್ಲಿ ನಾಚುಗೆ, ನಡಗೆಯಲ್ಲಿ ನಯ, ಮೈಯಲ್ಲಿ ಬೆಳವಣಿಗೆ ಹೀಗೆ ಗೌರಿ ಅಪೂರ್ವಳಾಗಿ ತೋರುತ್ತಿದ್ದಳು (ಬನ್ನಿಹಿಂ. ೩೯) ; ನಾಚುಗೆಯೆಂದರೇನು ತೇಜನಿ (ಸುಗುಗಂ. ೧-೧೬). 'ನಾಣ್ಚಿಕೆ' ಪರಾ.

[ ನಾಚು$_1$ (<ನಾಣ್ಚು$_1$) + – ಗೆ ]

**ನಾಚುಬುರುಕ** (ನಾ). ನಾಚಿಕೆ ಸ್ವಭಾವದ ವ್ಯಕ್ತಿ ; ಲಜ್ಜಾಶೀಲ ವ್ಯಕ್ತಿ : ಸಾರಮ್ಮನ ಲಕ್ಷ್ಯವೆಲ್ಲ ಜಾರ್ಜಿಯ ಈ ನಾಚುಬುರುಕ ಸ್ನೇಹಿತನ ಮರ್ಯಾದೆಯುತ್ತ (ಗಂಮಾಯಿ. ೮೩).

[ ನಾಚು$_1$ (<ನಾಣ್ಚು$_1$) + – ಪುರುಕ ]

**ನಾಚ್ಚಾರಮ್ಮ** (ನಾ). ವಿಷ್ಣುವಿನ ಹೆಂಡತಿ ; ಲಕ್ಷ್ಮಿ ; ಆಂಡಾಳ್ : ಆರಯ್ಯ ನಿನ್ನ ಮಗ ಬೊಮ್ಮ ಅಲ್ಲಾ ಚಂದ್ರಶೇಖರ ಮೊಮ್ಮ ನಿನ್ನ ಸೇರಿರೆ ಹರಿ ಪರಬೊಮ್ಮ ಅಮ್ಮ ಶ್ರೀರಂಗ ನಾಚ್ಚಾರಮ್ಮ (ಗೀತಗೋ. ೪೪-೪).

[ ನಾಚ್ಚಾರ್$_0$ (P ← ತಮಿ. ನಾಚ್ಚಿಯಾರ್) + ಅಮ್ಮ$_2$ ]

**ನಾಜರ್** 'ನಾಜಿರು' ನೋ.

**ನಾಜರು** 'ನಾಜಿರು' ನೋ.

**ನಾಜಲು** (ನಾ). ಒಂದು ಬಗೆಯ ತೆರಿಗೆ. 'ನಾಜಲುಹಣ' ಪರಾ.

[ ← ಅರ. ನಜಲ್ ]

**ನಾಜಲುಹಣ** (ನಾ). 'ನಾಜಲು' ಎಂಬ ತೆರಿಗೆಯಿಂದ ಬರುವ ಹಣ : ಆವಾಗ್ಯೆ ದೊಡ್ಡಬಳ್ಳಾಪುರದ ಅಬ್ಬಾಸಕುಲ್ಲೀಖಾನರಿಗೆ ಯಾ ಅಲ್ಲಿಸಾಬರಿಂದ ೧೦೦೦ ವರಹಾ ನಾಜಲುಹಣಾ ಬರಬೇಕಾಗಿಯಿದ್ದದಕೆ (ಹೈದರ. ೬೦).

[ ನಾಜಲು + ಹಣ ]

**ನಾಜಿ** (ನಾ). ಎರಡನೆಯ ವಿಶ್ವಯುದ್ಧಕ್ಕೆ ಮೊದಲು ಜರ್ಮನಿಯಲ್ಲಿ ಸ್ಥಾಪಿತವಾಗಿದ್ದ ಒಂದು ರಾಜಕೀಯ ಪಕ್ಷ : ಭಯಂಕರವಾದವರು ಅಂದರೆ ಜರ್ಮನರು . . . ನಾಜಿಗಳು (ಯೋಧಪು. ೧೪).

[ ← ಇಂ. Nazi ]

**ನಾಜಿರ** 'ನಾಜಿರು' ನೋ.

**ನಾಜಿರು,** ನಾಜರ್. ನಾಜರು, ನಾಜಿರ, ನಾಝರ (ನಾ). ನ್ಯಾಯಾಲಯಗಳಲ್ಲಿ ವ್ಯವಹಾರಗಳನ್ನು ನೋಡಿಕೊಳ್ಳುವ ಅಧಿಕಾರಿ ; ಕೋರ್ಟಿನ ಆಜ್ಞೆಯನ್ನು ಜಾರಿಮಾಡುವ ಅಧಿಕಾರಿ ; ಶರೀಫ : ನಾಜರುಗಳು, ಪ್ರೋಸೆಸ್ ಸರ್ವರುಗಳು ಅವಿಾನರು (ಇಚನೋ. ೧). **ನಾಜರ್ :** (ರೈಸ್‌ಗೆ. II, ೫೫೭). **ನಾಜರು :** (ಕಿ). **ನಾಜಿರ :** ನಾನೋ ನಾಜಿರ, ಸಿರಸ್ತೆದಾರ ಆಗ ಬಂದಿದ್ದೆ (ಇಪ್ಪಕ. ೯). **ನಾಝರ :** (ಕಿ).

[ ← ಅರ. ನಾಝರ್; ಹಿಂ. ನಾಜಿರ್; ಮರಾ. ನಾಜರ್, ನಾಜೀರ್, ನಾಝರ್ ]

**ನಾಜೂಕದಾರ** (ನಾ). ಒರಟುತನವಿಲ್ಲದೆ ನಯವಾಗಿ ವರ್ತಿಸುವವನು; ಒಪ್ಪ ಓರಣದಿಂದ ಇರುವವನು : ಮಲ್ಲಿಗೆಹಳ್ಳಿಯ ಬಯಲುನಾಟಕದ ಪಾತ್ರದಾರರನ್ನೆಲ್ಲಾ ನಾಜೂಕದಾರರನ್ನಾಗಿ ಮಾಡಿ ಅವರ ಸಹಾಯದಿಂದ ಒಂದು ನಾಟಕ ಕಂಪನಿಯನ್ನು ಸ್ಥಾಪಿಸಬೇಕೆಂಬುದೇ ಅವನ ಆಸೆಯಾಗಿತ್ತು (ಗರುದಾ. ೦೩೬). [ <ನಾಜೂಕು + – ದಾರ$_4$ ]

**ನಾಜೂಕು, ನಾಜೋಕು** (ನಾ). ೧. ಕೋಮಲವಾದುದು; ಮೃದುವಾದುದು; ನಯವಾದುದು: ಗಂಗೆಗೆ ಕ್ರಮೇಣ ... ನಾಜೂಕಾದ ಮಾತು ಸಹ ಮರೆತು ಹೋದವು (ಪುಟ್ಟರ. ೩೯); ವಸ್ತುಗಳಷ್ಟೇ ಅಮೂಲ್ಯವಾದವುಗಳೂ ಆಗಲಿ ವಯಸ್ಸು ಬಂದ ಮೇಲೆ ಮಕ್ಕಳು ತಮ್ಮ ಬಟ್ಟೆಗಳನ್ನು ತಾವೇ ಉಡಬೇಕು (ಗಳಿಪ್ರ. ೬೯); ಇನ್ನುಳಿದ ಪಕ್ಕಿಗಳಿಗೂ ನಾಜೂಕು ನಯ ಮಧುರತನ ಇದ್ದರೂ ಇರಬಹುದು (ಗಾಳಿಗು. ೮೦). ೨. ಚೆನ್ನಾಗಿರುವುದು; ರಮ್ಯವಾಗಿರುವುದು; ಆಕರ್ಷಕ: ತಾವು ನಾಜೂಕಾಗಿ ಅಲಂಕಾರ ಮಾಡಿಕೊಂಡದ್ದೆಲ್ಲಾ ಹೊಳೆಯಲ್ಲಿ ಬೆಲ್ಲ ಕದಡಿದಂತಾಯಿತು (ಸುವಸಂ. ೧೩); ನನ್ನ ಕವನಗಳು ಹೊಸ ಹೂವಿನಂತೆ ... ಅದುವೆ ನಾಜೂಕು (ನಡಬಂ. ೭೫-೬). ೩. ಓರಣ; ಒಪ್ಪ; ಅಚ್ಚುಕಟ್ಟು: ಕರಾರುಪತ್ರವನ್ನು ಬರೆದುಕೊಂಡು ರಂಗಮ್ಮ ನಾಜೂಕಾಗಿ ಮಡಚಿ ಕೈಯಲ್ಲೇ ಇರಿಸಿಕೊಂಡರು (ರಂಗವ. ೬೬). ೪. ಥಳುಕು; ಬೆಡಗು; ಚಾಲೋಕು; ಜಾಣತನದಿಂದ ಕೂಡಿದುದು: ಎಷ್ಟು ನಾಜೂಕಾಗಿ ಮಾತನಾಡುತ್ತಿ. ಕೈಗೆ ಹಣ ಬಂದಿದೆ ಎಂದರೆ ನಿನಗೆ ಗಂಡನೆಂದರೆ ಪ್ರಾಣ (ಕಾವೇರಿ. ೪೩); ತೆಳ್ಳಗೆ, ಬೆಳ್ಳಗೆ, ನಾಜೂಕಾದ ಪಟ್ಟಣಿಗರಂತೆ ಕಂಡರು (ಮುನಿಮೂ. ೭). ೫. ತೊಡಕುಳ್ಳುದು; ಸರಳವಲ್ಲದುದು; ಗಹನವಾದುದು; ಜಟಿಲವಾದುದು: ನಾನು ತಂದಿರುವ ಕಾಗದ ಪತ್ರಗಳು ಬಹು ನಾಜೂಕಾದುವು (ಬಹ್ಮರು. ೨); ನಮ್ಮ ಸಮಾಜದಲ್ಲಿ ಸ್ತ್ರೀಯ ಸ್ಥಿತಿ ಎಷ್ಟು ನಾಜೂಕಾದುದೆಂಬುದು ನಿನಗೆ ಗೊತ್ತು (ಬರಬಾ. ೧೭). ೬. ಒಳ್ಳೆಯ ಜಾಣತನದಿಂದ ತಿಳಿದುಕೊಳ್ಳತಕ್ಕುದು; ಸೂಕ್ಷ್ಮವಾದುದು: ಅದರ ನಾಜೂಕಾದ ಸಂಸ್ಕೃತಿಯ ಕ್ಷೇತ್ರವನ್ನು ... ಅಂತರಾತ್ಮನ ದೃಷ್ಟಿ ಅನುಭವಗಳಿಂದ ಹುಡುಕಿಕೊಳ್ಳಬೇಕಾಗಿದ್ದಿತು (ಪ್ರಬಂಧ. ೧೩೬); ಆದರೆ ಇಂತಹ 'ನಾಜೂಕು' ವಿಷಯವನ್ನು ಅರ್ಥ ಮಾಡಿಕೊಳ್ಳದ ಅನುಯಾಯಿಗಳೂ ಇದ್ದರು (ಸಾಸಮೂ. ೦೬೪); ತನ್ನ ಮಗನ ಭವಿತವ್ಯಕ್ಕೆ ಪ್ರತ್ಯರ್ಪಿತವಾದ ಅವಳ ಬದುಕಿನಲ್ಲಿ ಸ್ವಂತದ ಪಾಪ-ಪುಣ್ಯಗಳ ನಾಜೂಕಿನ ವಿಚಾರಕ್ಕೆ ಆಸ್ಪದವಿಲ್ಲ (ಹೊಸಕ್ಷಿ. ೨೮೩). ೭. ದುರ್ಬಲವಾದುದು; ಸುಲಭವಾಗಿ ಬಾಧೆಗೀಡಾಗುವಷ್ಟು ಕೋಮಲವಾದುದು,-ಸೂಕ್ಷ್ಮವಾದುದು: ಪೇಟೆಯಲ್ಲಿ ಕೆಲಸ ಮಾಡುವ ನಾಜೂಕಿನ ಜನಕ್ಕಾದರೆ ಮಳೆಗಾಲ ಆರಂಭವಾಯಿತೆಂದರೆ ಎದೆಯಲ್ಲಿ ಡವಡವಗುಟ್ಟಲು ಪ್ರಾರಂಭ (ವಿದ್ಯಾರಿ. ೧); ಅವನ ದೇಹಸ್ಥಿತಿಯು ಬಹಳ ನಾಜೂಕಾದುದರಿಂದ ಇದುವರೆಗೂ ಸಾವಕಾಶ ಮಾಡಿದೆನು (ಗುಣಸಾ. ೧೬); ಈ ಬೊಂಬೆ ತುಂಬ ನಾಜೂಕಾಗಿರುವುದರಿಂದ ಕೆಳಗೆ ಬಿದ್ದರೆ ಒಡೆದು ಹೋಗುತ್ತದೆ (ರೂಢಿ). ೮. (ಆಲಂ) ಕಷ್ಟಸಾಧ್ಯವಾದುದು; ಕಠಿಣವಾದುದು: ಈಗಿನ ಕಾಲ ಬಹಳ ನಾಜೂಕಾಗಿದೆ. ಬ್ರಾಹ್ಮಣಭೋಜನದ ಆಮಂತ್ರಣ ಸಿಕ್ಕುವುದು ಅಷ್ಟು ಸುಲಭವಾಗಿಲ್ಲ (ಕಮಕ. ೧೭೭). **ನಾಜೋಕು:** ೧. ಉದ್ದವಾದ ನಾರುಗಳಿಂದ ... ನಾಜೋಕಾದ ಹೆಚ್ಚು ಬೆಲೆಬಾಳುವ ಬಟ್ಟೆಗಳನ್ನು ತಯಾರಿಸುವರು (ಗೃಹವಿ. ೬೯); ಮಾತಿನಲ್ಲೂ ಕೆಲಸದಲ್ಲೂ ನಾಜೋಕು. ರಸಿಕತೆ ... ಗೋಚರಿಸುತ್ತವೆ (ಶಿಕ್ಷದ. ೧೧೪). ೨. ಅದ್ಭುತ ಶಿಲ್ಪಕಲೆಯನ್ನು ತೋರಿಸುವ ನಯ, ನಾಜೋಕುಗಳಿಗೆ ಪ್ರಸಿದ್ಧವಾಗಿದೆ ನಮ್ಮ ತಾಯ್ನಾಡು (ಪ್ರತಾಪ. ೯೭); ಫುಲ್ಲಮಣಿಯು ... ಸ್ವಲ್ಪ ಚೆನ್ನಾಗಿ ನಾಜೋಕಾಗಿದ್ದಳೆಂತಲೇ ಹೇಳಬೇಕು (ದೇವೀಚಾ. ೩೯); ನಾಜೋಕಾದ ಉಡುಗೆ ತೊಡಿಗೆಗಳನ್ನುಟ್ಟು ... ಮಕ್ಕಳು ಸುತ್ತ ಮುತ್ತು ಓಡಾಡುತ್ತಿದ್ದರು (ಪುನರು. ೬೯). ೩. ಹೈಸ್ಕೂಲಿಗೆ ಕಾಲಿಟ್ಟು ಎರಡು ವರ್ಷವಾದರೂ ನಾಜೂಕಾಗಿರೋದನ್ನ ಕಲಿಯಬಾರದೆ? (ನಿಶಉ. ೩). ೯. ನಣುಪಾದುದು; ಹೊಳಪುಳ್ಳುದು: ಕೊಳದ ಗೋಡೆಗಳನ್ನು ಜಿಪ್ಪಂಗಾರೆಯನ್ನು ಉಪಯೋಗಿಸಿ ನಾಜೋಕಾದ ಇಟ್ಟಿಗೆಗಳಿಂದ ಕಟ್ಟಿದ್ದಾರೆ (ಶಿಲ್ಪನಾ. ೪೪).

ನಾಜೋಕು ಮಾಡು = ಒರಟಾದ, ಬಟ್ಟೆ ಚರ್ಮ ಮೊದಲಾದ ವಸ್ತುಗಳನ್ನು ಮೃದುವನ್ನಾಗಿ ಮಾಡು,-ನಯವಾಗುವಂತೆ ಮಾಡು: ಅಡಿಕೆ, ದಾರದ ಬಟ್ಟೆಗಳೂ ನಾಜೋಕುಮಾಡದ ರೇಷ್ಮೆ, ಇತರ ದೇಶಗಳಿಂದ ಬರುತ್ತವೆ (ಭೂಗೋಳ. ೧೧೩).

[ ←ಮರಾ. ನಾಜೂಕ್, ನಾಜುಕ್, ಪಾರಾ. ಹಿಂ. ನಾಜುಕ್ ]

**ನಾಜೂಕುಗಾರ** (ನಾ). ಆಕರ್ಷಕವಾಗಿರುವವನು. 'ನಾಜೂಕುಗಾರಿಕೆ' ಪರಾ. [ ನಾಜೂಕು + – ಗಾರ(< – ಕಾಱ) ]

**ನಾಜೂಕುಗಾರಿಕೆ** (ನಾ). ಆಕರ್ಷಣೆ: ಇವತ್ತು ನಾಟ್ಯವೊಂದು ನಾಜೂಕುಗಾರಿಕೆಯಾಗಿದೆ (ಭಾರದ. ೫೫೩). [ ನಾಜೂಕುಗಾರ + – ಇಕೆ ]

**ನಾಜೂಕುತನ** (ನಾ). ೧. ಆಕರ್ಷಕವಾಗಿರುವಿಕೆ: ಅಳಿಯನ ಪ್ರಪಂಚದ ನಾಜೂಕುತನ ಅವನಿಗೂ ಗೊತ್ತಾಗಿತ್ತು (ಅಶೋಕ. ೭೦). ೨. ಅಚ್ಚುಕಟ್ಟಾಗಿರುವಿಕೆ: ಓರಣ ನಾಜೂಕುತನ ಯಾವವೂ ಅವಳಿಗೆ ಗೊತ್ತಿರಲಿಲ್ಲ (ಫಲಸಂ. ೨೭). [ ನಾಜೂಕು + – ತನ ]

**ನಾಜೋಕು** 'ನಾಜೂಕು' ನೋ.

**ನಾಝುರ** 'ನಾಜಿರು' ನೋ.

**ನಾಟ$_1$, ನಾಟು$_3$**(ನಾ). ಮರದ ದಿಮ್ಮಿ,-ತೊಲೆ,-ಮುಂಡಿಗೆ,-ಲಾಂಬಿ: ಘಾಟಿಯ ದಾರಿಯ ನಾಟದ ಲಾರಿಯ ನಡಸುವಂದಿರುಳಿನೊಳಿನಿಯ ಬೇಟದ ನಾರಿಯ ಮಾಟದ ಮಾರಿಯ ಮರೆವಂತೆ ನೀ ಬೇಡು ಉಮೆಯ (ಚಂದ್ರವೀ. ೧೦೮-೩೯); ರಾಯರು ತಮ್ಮ ಉಳಿದ ಆಳುಗಳಿಗೆ ... ನಾಟ ಕಡಿಯುವ ಕೆಲಸ ಒಪ್ಪಿಸಿ, ಊರಿಗೆ ಹೊರಟು ಹೋದರು (ಕುಡಿಕೂ. ೧೦೭); ಅವು ನಾಟಗಳನ್ನೆಳೆದು ಕಂಗಾಲಾದರೆ, ಕೆಚ್ಚೆದೆಯ ಕೆಲಸಗಾರರು ಪಶುಬಲಕ್ಕೆ ಮನುಷ್ಯಬಲ ಸೇರಿಸುತ್ತಾರೆ (ಜಾರುದಾ. ೧೮೭). **ನಾಟು$_3$:** ಲಾರಿಯಲ್ಲಿ ನಾಟುಗಳು ತುಂಬಿದ್ದುವು (ರೂಢಿ).

ನಾಟಾ ಕಡಿಸು = ದೊಡ್ಡಮರವನ್ನು ದಿಮ್ಮಿಗಳನ್ನಾಗಿ ತುಂಡರಿಸು; ಹಲಗೆ ಮೊದಲಾದ ಉಪಕರಣಗಳಿಗೆ ಅನುಕೂಲವಾಗುವಂತೆ ದೊಡ್ಡಮರವನ್ನು ತುಂಡುಗಳನ್ನಾಗಿ ಮಾಡಿಸು: ಕಾಡಿನಲ್ಲಿ ಒಂದು ಹೆಮ್ಮರವನ್ನು ನಾಟಾ ಕಡಿಸುತ್ತಿದ್ದಾಗ ... ಅಪಘಾತವಾಗಿ ತೀರಿಕೊಂಡಿದ್ದರು (ಮಲೆಮ. ೩೪೮); ಯಾರೋ ಲೈಸೆನ್ಸ್ ಇಲ್ಲದೆ ನಾಟಾ ಕಡಿಸಿದ್ದಾರೆ (ಕಾನೂರು. ೪೭). **ನಾಟಾ ವ್ಯಾಪಾರ** = ಮರದ ದಿಮ್ಮಿಗಳ ಮಾರಾಟ: ಆಹಾರಪದಾರ್ಥಗಳ ಮಾರಾಟವ್ಯವಸ್ಥೆ, ನಾಟಾ ವ್ಯಾಪಾರ (Timber trade), ಅಕ್ಕಿ ಇತ್ಯಾದಿ ವಿವಿಧ ವಿಷಯಗಳ ಮೇಲೆ ವಿಶೇಷ ವ್ಯಾಸಂಗ ಏರ್ಪಡಿಸಿ (ಅಂತಸಂ. ೪೧). [ ←ತುಳು. ನಾಟ ]

**ನಾಟ$_2$** (ನಾ). [ಸಂಗೀತ] ಒಂದು ರಾಗದ ಹೆಸರು: ನಾಟ ಆಹರಿ ಸಾಳಗನಾಟಿ ಹಮ್ಮೀರನಾಟಿ ಘೂರ್ಜರನಾಟಿಯೆಂಬವೇ ಪಂಚವಿಧ ನಾಟಿಗಳು (ವಿವೇಕ. ೨೫೩); ನಾಟ, ಗೌಲ, ವರಾಲೀ ... ರೀತಿಗೌಲ-ಎಂಬೀ ಎಂಟು ರಾಗಗಳು ಘನರಾಗಗಳೆಂದು ಹೇಳಲ್ಪಟ್ಟಿವೆ (ಚತುಪ್ರ. ೧೩೦); ಅವರ ವರ್ಣಗಳು ನಾಟ, ಗೌಳ, ಆರಭಿ ... ಬೇಹಾಗ್ ಮತ್ತು ಬಿಲಹರಿ ರಾಗಗಳಲ್ಲಿವೆ (ಸಂಗೀತ. ೪೪). 'ನಾಟಿ$_2$' ಪರಾ. [ ಸಂ. ]

**ನಾಟಕ** (ನಾ). ೧. ಅಭಿನಯ ಪ್ರಧಾನವಾದ ದೃಶ್ಯಪ್ರಬಂಧ; ರೂಪಕ: "ನಾಟಕ" ವೆಂಬುದು ಈ ಕೃತಿಜಾತಿಯಲ್ಲಿ ಒಂದು ಒಳಭೇದ . . ಆದರೂ ಅದಕ್ಕೆ ಇರುವ ಪ್ರಾಶಸ್ತ್ಯದಿಂದ "ನಾಟಕ" ವೆಂಬ ಹೆಸರನ್ನು ಸಾಮಾನ್ಯವಾಗಿ ಆ ಗುಂಪಿನ ಎಲ್ಲಾ ಜಾತಿಗೂ ಉಪಯೋಗಿಸುವುದು ರೂಢಿಯಾಗಿದೆ (ಸಂನಾಟ. ೩); ಭಾಸನ ನಾಟಕಗಳಲ್ಲಿ ಬರುವ ಹಾಸ್ಯ ವಿಧವಿಧವಾಗಿದೆ (ಸಂನಾಟ. ೧೦೦); ರೋಮನ್ ನಾಟಕಕ್ಕೂ ... ಆ ಮೂಲಕ ಆಧುನಿಕ ಪಾಶ್ಚಾತ್ಯನಾಟಕಕ್ಕೂ ತವರಾದ ಗ್ರೀಕ್‌ನಾಟಕದ ಹುಟ್ಟು ಬೆಳವಣಿಗೆಗಳನ್ನು ಬಹು ಸ್ಥೂಲವಾಗಿ ಇಲ್ಲಿ ಗುರುತಿಸುತ್ತದೆ (ಅಂತಿಗೋ xiii, ಪೀಠಿಕೆ);

ನಮಗೆ ಗೊತ್ತಿದ್ದ ರೂಪದಲ್ಲಿ ನಮ್ಮ ಜನರ ನಾಟಕವು ಇಂತಹದೆ ಕಾಲದಲ್ಲಿ ಪ್ರಾರಂಭವಾಯಿತು ಎಂದು ಹೇಳಲು ಶಕ್ಯವಿಲ್ಲದಿದ್ದರೂ ಜನರ ಮನೋರಂಜನೆಯ ವಾಹಕವಾಗಿ ರಂಗಭೂಮಿ ಎಂಬುದು ವೈದಿಕಕಾಲ ದಿಂದಲೆ (ಎಂದರೆ ವೇದಗಳ ಕಾಲದಿಂದ) ಅಸ್ತಿತ್ವದಲ್ಲಿ ಬಂದಿರಬಹುದಾಗಿದೆ ಎಂದು ತಿಳಿಯಲು ಅಡ್ಡಿ ಇಲ್ಲ (ಭಾರದ. ೫೬೭). ೨. [ಕಾವ್ಯವಿಮ] ಅಭಿನಯಿಸಲ್ಪಡುವ ರೂಪಕಗಳಲ್ಲಿ ಒಂದು; ನಟಿಸಿ ತೋರಿಸುವ ದೃಶ್ಯ ಕಾವ್ಯ; ದಶರೂಪಕಗಳಲ್ಲಿ ಮೊದಲನೆಯದು; P ನಾಟಕದ ಕಥೆಯು ಕಲ್ಪಿತವಾಗಿರದೆ, ಇತಿಹಾಸ ಪ್ರಸಿದ್ಧವಾಗಿರಬೇಕು. ಶೃಂಗಾರ ಅಥವಾ ವೀರರಸಪ್ರಧಾನವಾಗಿದ್ದು, ಇತರ ರಸಗಳು ಅಂಗವಾಗಿರಬೇಕು. ನಾಯಕನು ಧೀರೋದಾತ್ತನಾಗಿರಬೇಕು. ನಾಟಕಲಕ್ಷಣದಲ್ಲಿ ಹೇಳಿರುವ ಅಂಗಗಳಿಂದ ಕೂಡಿಕೊಂಡಿರುವ ಪಂಚಸಂಧಿಗಳಿರಬೇಕು. ಐದರ ಮೇಲೆ ಹತ್ತರವರೆಗೂ ಅಂಕಗಳಿರಬಹುದು. ಉದಾ: ಅಭಿಜ್ಞಾನಶಾಕುಂತಲ, ವೇಣೀಸಂಹಾರ ಮೊದಲಾದುವು: ವ್ಯಾಕರಣ ಕಾವ್ಯನಾಟಕ ಲೋಕಕಳಾಸಮಯಮಾದಳುಕೃತಿಗಳೊಳಂ ವ್ಯಾಕುಳ ನಲ್ಲದನೇಕ ವಿವೇಕಬೃಹಸ್ಪತಿಯ ನಗರಮಂ ಪುಗುತರ್ಪಂ (ಕವಿರಾ. ೧-೬); ಸೌಧರ್ಮೇಂದ್ರಂ ತನ್ನ ದೇವಸಭೆಯ ನಡುವೆ ಸಿಂಹಾಸನ ಮಸ್ತಕಸ್ಥಿತಂದೇವರ್ಕಳಿಂ ಪರಿವೇಷ್ಟಿತನಾಗಿಸೌದಾ[ಮಿ]ನಿಯೆಂಬ ನಾಟಕಮಂ ನೋಡುತಿರ್ಪನ್ನೆಗಂ (ವಡ್ಡಾರಾ. ೬೫-೩೯); ಮೊದಲೇ ಅಭಿಜ್ಞಾನ ಶಾಕುಂತಲವೆಂಬ ಅಪೂರ್ವ ನಾಟಕವನ್ನು ಕರ್ಣಾಟಕಭಾಷೆಯಿಂದಾಡುವಂತೆ ತಾವು ಅಪ್ಪಣೆಯಂ ಕೊಡಲಿಲ್ಲವೇ ? (ಶಾಕುಂತ. ೩-೩); ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ – ಎಂದು ರೂಪಕಗಳು ಹತ್ತು ವಿಧ (ಸಂನಾಟ. ೨೯). ೩. ಪದಾರ್ಥಾಭಿನಯ; ಅವಸ್ಥಾನುಕರಣ; ನೃತ್ತ; ನಾಟ್ಯ; ಭಾವಾಭಿನಯ: "ನೃತ್ತದೊಳು ಹಸ್ತಾಂಗ ದೃಷ್ಟಿಗತಿ ಪದ್ಧತಿಯೊಳಾಡೆ ನಾಟಕಮೆನಿಕ್ಕುಂ" (ಮಂಗರಾ. ೨೫-೧೦); ತಾನುಮಾನಂದನಾಟಕಮನಾಡಲ್ಬಗೆದು ಕೃತಾನುಕರಣಮೆ ನಾಟಕಮಪ್ಪುದಱಿಂ . . . ಮುಖಮಂ . . . ತಾಂಡವಮನಾಡಲುದ್ಯೋಗಂಗೆಯ್ದು (ಆದಿಪು. ೨-೧೦೫ ವ); ಸರ್ವಾಂಗ ಸುಂದರಿ ವಿದ್ಯಾನಟಿ ನಾಟಕಂನಲಿಗೆ ಮತ್ತಾವ್ಯಸ್ಥಲೀರಂಗದೊಳ್ (ಪಂಪರಾಮಾ. ೧-೬); ಕಂಗಳಾಲಿಯ ಕರಿಯ ನಾಳದಲ್ಲಿ ಈರೇಳುಭುವನಂಗಳಡಗಿದವು ನಾಟಕ ನಾಟಕವ ನಟಿಸುತ್ತ ಆಡಿಸುವ ಸೂತ್ರದ ಪರಿ (ಅವಚ. ೩೪-೧೪೪);ಬೆಡಂಗಡರೆ ನೆಱೆ ದಿಟ್ಟೆ ನೀನೀ ನಾಟಕಕ್ಕಳವಟ್ಟು ರೀತಿಯೊಳೊಪ್ಪಿ ಸೋವಲದೇವಿ ನಡೆತಾರೌ (ಬಸವು. ೦೨-೪೩). ೪. ಅಭಿನಯಿಸುವವನು; ನಟ; ಪಾತ್ರಧಾರಿ. ೫. ನರ್ತಿಸುವವನು; ನರ್ತಕ: "ನಟಃ, ನಟಕಃ, ನಾಟಕಃ, ನಟನ್, ಈ ೪ ಕುಣಿವಂ" (ಕಾಶಕ್ಕ. ೧೩೯). ೬. (ಆಲಂ) ವಾಸ್ತವಿಕವಲ್ಲದ ನಡವಳಿಕೆ; ನಟನೆ; ಲೀಲೆ; ವಿನೋದ; ವಿಲಾಸ: ಬರಲು ಕಂಡಸುರಾರಿ ಮುಂಚದೊಳಿರದೆ ಧಿಮ್ಮನೆ ನಿಂದು ನರರಾಚರಣೆಗಳ ನಾಟಕವ ತಾನೇ ನಟಿಸಿ ತೋಱಿದನು ಹಿರಿಯರಿಗೆ ತಾ ಹಿರಿಯನೆಂಬೀ ಗರುವತನವನು ಬಿಸುಟು ಕುಂತಿಗೆ ಕರವ ಮುಗಿದೆಱಗಿದನು (ಕುಮಾವ್ಯಾಉ. ೬-೧೭); ನಾವು ಮಾಡುವುದೇನು ಸಲಹುವ ದೈವವೇ ಕೆಡಹುವೊಡೆ ಭುವನದಲಾವ ತಡೆವನು ನೋಡೆ ವಿಶ್ವಂಭರನ ನಾಟಕವು (ಕಾಶಿರಾ.೩೩-೧೫); ಬೇಗಯೊಳಿಗೆ ತೆರಳು ನಾಟಕ ಸಾಕು ಸಖಿಯನು ಕೂಡಿಕೊಳ್ಳೆಂದ (ಕಾಶಿರಾ. ೪೩-೪೯); ತೋಱಿಸಿದ ದೀವಿಗೆಗೆ ಕರುಣವ ತೋಱುತಿತ್ತನು ಬಾಲವನು ನಗೆಗಾಱರಿಗೆ ನಾಟಕವ ನಟಿಸುತ ವೀರಹನುಮಂತ (ತೊರರಾ. ೫-೭-೪೫); ನಾಟಕವ ನೋಡು ಬ್ರಹ್ಮಾಂಡರಂಗಸ್ಥಲದಿ ಕೋಟಿ ನಟರಾಂತಿಹರು ಚಿತ್ರಪಾತ್ರಗಳ (ಮಂಕುಕ. ೨೫೪). ೭. (ಆಲಂ) ಕೃತ್ರಿಮವಾದ ವ್ಯವಹಾರ; ತೋರಿಕೆಯ ವರ್ತನೆ; ಬೂಟಾಟಿಕೆ: ಅವನದೆಲ್ಲಾ ಬರಿಯ ನಾಟಕ, ಅವನನ್ನು ನಂಬಬೇಡ (ರೂಢಿ). 'ನಾಟಕವಾಡು' ಪರಾ. ೮. ತೋರಿಕೆಯ ವರ್ತನೆಯುಳ್ಳವನು; ಕೃತ್ರಿಮವಾದ ನಡವಳಿಕೆಯುಳ್ಳವನು; ಡಂಭಕ: ದಂಡಕ್ಕಂಜಿ ಜಂಗಮಕ್ಕಿಕ್ಕುವ ದೋಷಕ್ಕಂಜಿ ಧರ್ಮವ ಮಾಡುವ ಬೇಡುವ ಕಾಟಕ್ಕಂಜಿ ತ್ರಿವಿಧವ ಕೊಡುವ ನಾಟಕರಿಗೇಕೋ ಸದ್ಭಕ್ತಿ (ಪೋಳಿಮಾ. ೩೪-೧೪೩).

**ನಾಟಕದ ಕಂಪನಿ** = ನಾಟಕಗಳನ್ನು ಪ್ರದರ್ಶಿಸುವ ಸಂಘ,-ಸಂಸ್ಥೆ: ಗುಬ್ಬಿವೀರಣ್ಣನವರ ನಾಟಕದ ಕಂಪನಿ ಒಂದು ಕಾಲಕ್ಕೆ ತುಂಬ ಪ್ರಸಿದ್ಧವಾಗಿದ್ದಿತು (ರೂಢಿ). **ನಾಟಕ ಹೂಡು** = ತೋರಿಕೆಯ ವರ್ತನೆಯನ್ನು ಮಾಡು; ಕೃತ್ರಿಮವಾದ ವ್ಯವಹಾರವನ್ನು ನಡೆಸು: ಸರ್ಕಾರ ಮತ್ತು ಕೋರ್ಟುಗಳು ತೋರಿಕೆಯ ನಾಟಕ ಹೂಡಿ, ಸ್ವತಂತ್ರವಾಗಿ ಬದುಕು ಸಾಗಿಸುತ್ತಿದ್ದ ಜನಸಮೂಹದಿಂದ ಕೆಲವರನ್ನು ಬೇರ್ಪಡಿಸುತ್ತಿದ್ದರು (ಪುನರು. ೫೫೦). **ನಾಟಕಾಂತ ಸಾಹಿತ್ಯ** = ನಾಟಕದ ಅಭ್ಯಾಸದಿಂದ ಮುಕ್ತಾಯ ಹೊಂದುವ ಸಾಹಿತ್ಯವ್ಯಾಸಂಗ; P ಹಿಂದೆ ಸಾಹಿತ್ಯವನ್ನು ಅಭ್ಯಾಸ ಮಾಡುವವರು ನಾಟಕವನ್ನು ಸಾಹಿತ್ಯದ ಕಡೆಯ ಹಂತವಾಗಿ ಅಭ್ಯಾಸಮಾಡುತ್ತಿದ್ದರು. ಹಾಗೆ ಅಭ್ಯಾಸಮಾಡುವವರನ್ನು 'ನಾಟಕಾಂತಸಾಹಿತ್ಯವಿದ್ವಾಂಸ' ಎಂದು ಕರೆಯುತ್ತಿದ್ದರು: ಚತುರ್ವೇದ–ಷಟ್‌ಶಾಸ್ತ್ರ–ನಾಟಕಾಂತಸಾಹಿತ್ಯ . . . ಜ್ಯೋತಿಷ್ಯ ಹೀಗೆ ಎಲ್ಲವುದರಲ್ಲಿಯೂ . . . ಗಣಪತಿಯಾಗ ಪರಿಣತನಾಗಿದ್ದ (ಹೊಸಕ್ಕಿ. ೩೭).

[ಸಂ.]

**ನಾಟಕಕವಿ** (ನಾ). ಪ್ರಧಾನವಾಗಿ ನಾಟಕಗಳನ್ನೇ ರಚಿಸುವ ಕವಿ; ನಾಟಕಕರ್ತೃ: ಸ್ವಾತಂತ್ರ್ಯದ ತೇಜಸ್ಸುಳ್ಳವರಾದ ಕಾಳಿದಾಸಾದಿ ನಾಟಕ ಕವಿಗಳ ನಾಟಕವೇ ಸಂಸ್ಕೃತದ ಉತ್ತಮನಾಟಕ (ಸಂನಾಟ. VII ಮುನ್ನುಡಿ).

[ನಾಟಕ + ಕವಿ$_6$]

**ನಾಟಕಕಾರ** (ನಾ). ನಾಟಕವನ್ನು ರಚಿಸುವವನು: ಅಶ್ವಘೋಷ, ಭಾಸ, ಕಾಳಿದಾಸ, ಭವಭೂತಿ ಮೊದಲಾದ ನಾಟಕಕಾರರ ನಾಟಕಗಳನ್ನು ನೋಡಿ ಪಾಶ್ಚಾತ್ಯರು . . . ಎಂದು ಅಭಿಪ್ರಾಯಪಟ್ಟಿದ್ದಾರೆ (ಭಾರದ. ೫೭೦); ಕಾಲ್ರೈಕ್ಕ . . . ತನ್ನ ಕಾಲದ ಕೆಲವು ನಾಟಕಕಾರರ ಸಂಪ್ರದಾಯವೆಂದು ಮಾತ್ರ ಹೇಳಿದ್ದಾನೆ(ಅರಿಕಾ. ೫೦ ಟೀಕೆ). [ನಾಟಕ + -ಕಾರ$_1$(<-ಕಾಱ)]

**ನಾಟಕಚಕ್ರ** (ನಾ). ೧. ನಾಟಕಗಳ ಗುಂಪು. ೨. ಭಾಸನೆಂಬ ಕವಿ ಸಂಸ್ಕೃತಭಾಷೆಯಲ್ಲಿ ಬರೆದಿರುವ ನಾಟಕಗಳ ಸಮೂಹ: ನಾಟಕಚಕ್ರ ಎಂಬ ಮಾತು ಕನ್ನಡಕ್ಕೆ ಬಳಕೆಯಿಲ್ಲ. ಆದರೆ . . . ನಾಟಕಚಕ್ರ ಎಂದೊಡನೆಯೆ ಭಾಸಕವಿಯ ನೆನಪಾಗುವುದು ಖಂಡಿತ (ಕನ್ನನು. ೨೩-೭; 1938). ೩. ಪರಸ್ಪರ ಸಂಬಂಧವುಳ್ಳ, ಏಕಕರ್ತೃಕವಾದ ನಾಟಕಗಳ ಸಮೂಹ; P ಈಚೆಗೆ ಕೆಲವು ನಾಟಕಕಾರರು ತಮ್ಮ ನಾಟಕಗಳನ್ನೆಲ್ಲ 'ನಾಟಕಚಕ್ರ'ವೆಂಬ ಹೆಸರಿನಲ್ಲಿ ಸಂಕಲಿಸುತ್ತಿದ್ದಾರೆ: 'ಸಂಸ'ರ 'ನಾಟಕ ಚಕ್ರ' ಮೈಸೂರಿನ ರಾಜಒಡೆಯರ ಇತಿಹಾಸವನ್ನು ನಿರೂಪಿಸುತ್ತದೆ (ನಡದಾ. I, ೨೪೨). [ನಾಟಕ + ಚಕ್ರ$_1$]

**ನಾಟಕತಂತ್ರ** (ನಾ). ನಾಟಕರಚನೆಯ ಉಪಾಯ,-ತಾಂತ್ರಿಕ ಉಪಯೋಗ: ಮುಖ್ಯವಾಗಿ ಶ್ರೀರಂಗರ ನಾಟಕತಂತ್ರ ತನ್ನ ಉದ್ದೇಶ ಮುಗಿದ ಮೇಲೆ, ಮುಂದಿನ ಬೆಳವಣಿಗೆಯನ್ನು ಕಾಣಲಿಲ್ಲ (ನಡದಾ. I, ೨೨೮).

[ನಾಟಕ + ತಂತ್ರ]

**ನಾಟಕಧರ** (ನಾ). ನಾಟಕವಾಡುವವನು; ಲೀಲೆಯಾಡುವವನು; ಆಟಕಟ್ಟುವವನು: ಆಟಪಾಟಗಳೆಲ್ಲ ಅಂತರ್ಯಾಮಿಗೆ ಎನ್ನಿ . . . ಕೋಟಲೆ ಸಂಸಾರ ನಾಟಕಧರಗೆಯೆನ್ನಿ (ಪುರಂದ. ೦-೭೦-೩). [ಸಂ.]

**ನಾಟಕಧಾರಿ** (ನಾ). ೧. ಪಾತ್ರಧಾರಿ; ನಟ. ೨. ಸೂತ್ರಧಾರ.

[ಸಂ. ನಾಟಕಧಾರಿನ್]

**ನಾಟಕಪ್ರಕರ** (ನಾ). ದೃಶ್ಯಪ್ರಬಂಧಗಳ ಸಮೂಹ; ರೂಪಕಗಳ ಗುಂಪು: ಮತ್ತಮಾ ಮಹಾವನಂ . . . ನಾಟಕಪ್ರಕರದಂತೀಹಾ ಗೋಪಗೂಹಿತಮುಂ . . . ನಿರಂತರಚ್ಛಾಯಾಶ್ರಯವಾಗಿಯುಂ ಕೃತಾಂತರೂಪಮಲ್ತು (ಚಂದ್ರಪು. ೫-೩೩ ವ); ನಾಟಕಪ್ರಕರದಂತೆ ವಿಪುಳ ವೀಥೀವಿಭಾಸಿಯುಂ . . . ಎಂಬ ಮಹನೀಯಮಹಿಮೆಯುಂ ತಳೆದು (ಪುಷ್ಪಪು. ೯-೩೦ ವ). [ ನಾಟಕ + ಪ್ರಕರ$_2$ ]

**ನಾಟಕಪ್ರದರ್ಶನ** (ನಾ). ನಾಟಕವನ್ನು ಅಭಿನಯಿಸುವಿಕೆ; ನಾಟಕ ಮಾಡುವಿಕೆ: ನಮ್ಮಲ್ಲಿ ನಾಟಕಪ್ರದರ್ಶನಕ್ಕೆ ಏನೂ ಅನುಕೂಲತೆಗಳಿಲ್ಲದಿರುವದರ ಬಗ್ಗೆ ಟೀಕೆ-ಟಿಪ್ಪಣಿಗಳನ್ನು ನಾವು ಕೇಳುತ್ತಲೇ ಇದ್ದೇವೆ (ನಡದಾ. I, ೨೫೦). [ ನಾಟಕ + ಪ್ರದರ್ಶನ ]

**ನಾಟಕಪ್ರಬಂಧ** (ನಾ). ಅಭಿನಯಕ್ಕೆ ಅಳವಡಿಸುವ ಕೃತಿ; ದೃಶ್ಯಕಾವ್ಯ; ರೂಪಕ: ಪೂಜ್ಯನಾದ ವಾಲ್ಮೀಕಿಮುನಿಯು . . . ತನ್ನಿಂದ ರಚಿಸಲ್ಪಟ್ಟ ಈ ನಾಟಕಪ್ರಬಂಧವಂ ನೋಡುವುದಕ್ಕೋಸ್ಕರ ನಮ್ಮಂ ಸನ್ನಿಧಿಗೆ ಬರುವಂತೆ ಅಜ್ಞಾಪಿಸಿ ಇದ್ದಾನೆ (ಕಗವಿ. ೧೧೭ ಉತ್ತರರಾಮಚರಿತ್ರ ಕಥೆ). [ ನಾಟಕ + ಪ್ರಬಂಧ ]

**ನಾಟಕಪ್ರೇಮಿ** (ನಾ). ನಾಟಕದ ಬಗ್ಗೆ ಅಭಿರುಚಿಯುಳ್ಳ ವ್ಯಕ್ತಿ,-ಆಸಕ್ತಿಯುಳ್ಳ ವ್ಯಕ್ತಿ: ನಾಟಕಪ್ರೇಮಿಗಳು ಸಾಧಾರಣವಾಗಿ ಪ್ರಪಂಚದ ಮೂರು ಮುಖ್ಯ ನಾಟಕಸಾಹಿತ್ಯಗಳನ್ನು ನೋಡಬೇಕು (ಸಂನಾಟ. iii ಮುನ್ನುಡಿ). [ ನಾಟಕ + ಪ್ರೇಮಿ ]

**ನಾಟಕಮಂದಿರ** (ನಾ). = ನಾಟಕಶಾಲೆ ೧: ನಾಟಕಮಂದಿರದಿಂದ ಹೊರಬೀಳುವಾಗ, ಕಾವ್ಯಗ್ರಂಥವನ್ನು ಕೆಳಗಿಟ್ಟಾಗ, ರಸದ ಧಾರೆಯೂ ಕತ್ತರಿಸಿ ಹೋಗುವುದನ್ನು ಅನುಭವಶಾಲಿಗಳು ಬಲ್ಲರು (ಭಾರಮಿಾ. ೩೭೮). [ ನಾಟಕ + ಮಂದಿರ ]

**ನಾಟಕರಂಗ** (ನಾ). ನಾಟಕವನ್ನು ಪ್ರದರ್ಶಿಸುವ ವೇದಿಕೆ; ರಂಗಸ್ಥಳ; ರಂಗಭೂಮಿ. [ ನಾಟಕ + ರಂಗ$_2$ ]

**ನಾಟಕಮಾಡು** (ಕ್ರಿ). ೧. ನಾಟಕವನ್ನು ಅಭಿನಯಿಸು; ದೃಶ್ಯಪ್ರಬಂಧವನ್ನು ಪ್ರದರ್ಶಿಸು: ದೊರೆತ ರಂಗಭೂಮಿಯ ಮೇಲೆ, ದೊರೆತ ಪ್ರೇಕ್ಷಕರೆದುರು ನಾಟಕಮಾಡುವ ಧೈರ್ಯ ನಮ್ಮ ನಾಟಕಕಾರರಿಗಿರಬೇಕು (ನಡದಾ. I, ೨೫೩); ನಮ್ಮೂರಲ್ಲಿ ಪ್ರತಿವರ್ಷ ಶಿವರಾತ್ರಿಗೆ ನಾಟಕಮಾಡುತ್ತಾರೆ (ರೂಢಿ). ೨. ಬೂಟಾಟಿಕೆ ಮಾಡು; ಸೋಗುಹಾಕು: ಆತನು ಏನೂ ತಿಳುವಳಿಕೆಯಿಲ್ಲದಿದ್ದರೂ ಪಂಡಿತನಂತೆ ನಾಟಕಮಾಡುತ್ತಾನೆ (ರೂಢಿ). [ ನಾಟಕ + ಆಡು$_1$ ]

**ನಾಟಕಶಾಲೆ** (ನಾ). ೧. ನಾಟಕವನ್ನು ಪ್ರದರ್ಶಿಸುವ ಮಂಟಪ,-ಕಟ್ಟಡ; ಥಿಯೇಟರು: ನಾಟಕಶಾಲೆಯೊಳಭಿನವಹಾಟಕಮಣಿಘಟಿತ ಧೂಪಘಟಧೂಮಚಯೋದ್ಭಾಟಿತಘನಕೆ ನಲಿವ ನವಿಲಾಟಮನನುಕರಿಸೆ ವರ್ತಿಪರ್ ಸುರಸತಿಯರ್ (ಪಾರ್ಶ್ವಪು. ೧೬-೨೧). ೨. ನರ್ತನಶಾಲೆ: ಶ್ರೀಮನ್ಮಹಾಸಾಮಂತಂ ಮಾರ್ತಣ್ಡಯ್ಯಂ ತಮ್ಮ ಮುತ್ತಯ್ಯಂ ಮಾಡಿಸಿದ ಬಸದಿಯಂ ಪಡಿಸಲಿಸಿ ನಾಟಕಶಾಲೆಯಂ ಮಾಡಿಸಿ ತನ್ನ ಕೀರ್ತಿ ಶಿಲಾಸ್ತಂಭಮನಾಚನ್ದ್ರಾರ್ಕ್ಕತಾರಂಬರಂ ನಿಲಿಸಿದ (ಸೌಇಇ. XI-i, ೭೮-೮೬; 1045); ಚಕಚಕಿಸುತ ರನ್ನಗನ್ನಡಿಯಲ್ಲಲ್ಲಿ ಮಕರಿಸೆ ಸಾಲುಸಾಲಾಗಿ ಅಕಳಂಕಚಂದ್ರಲೋಕವೊಯೆನೆ ನೃಪನ ನಾಟಕಶಾಲೆ ಮೆಚಿಪುದೇನೆಂಬೆ (ಭರಚ. ೧೨-೧೮); ಯಿಂಮಡಿ ಹಿರುಕೆಂಪಯಗೌಡರವರ ಪಟ್ಟದ ನಾಟಕಶಾಲೆಯ ಶೃಂಗಾರವನ್ನು ನವರು ಮಾಡಿಸಿದ ಬಸವಳೆ ಮಂಡಪ (ಮೈಆರಿ. ೧೯೩೪, ೧೦೦-೫; ಸು. 1630). [ ನಾಟಕ + ಶಾಲೆ$_2$ ]

**ನಾಟಕಶಿಲ್ಪ** (ನಾ). ನಾಟಕ ರಚನೆ,-ಸಂವಿಧಾನ: ನಾಟಕಶಿಲ್ಪದಲ್ಲಿ ಸಂಸರು ತಮ್ಮ ಕಲ್ಪನಾಸ್ವಾತಂತ್ರ್ಯವನ್ನು ನಿರ್ಬಾಧಿತವಾಗಿ ನಡಸಿಕೊಂಡಿದ್ದರೂ ಅವರ ಊಹೆಯು ನಾವೆ . . . ಸ್ವಚ್ಛಂದವಾಗಿ ನಡೆದದ್ದಲ್ಲ (ಬೆಟ್ಟಆ. ೩ ಅರಿಕೆ). [ ನಾಟಕ + ಶಿಲ್ಪ ]

**ನಾಟಕಾಭಿನಯ** (ನಾ). = ನಾಟಕಪ್ರದರ್ಶನ: ನಾಟಕಾಭಿನಯವನ್ನು ನೋಡುತ್ತಾ ಕುಳಿತಿರುವ ಸಾಮಾಜಿಕರು, ಪ್ರೇಕ್ಷಕರು (ಭಾರಮಿಾ. ೩೩೮); ಇಂದಿನ ಅವರ ನಾಟಕಾಭಿನಯ ಪ್ರೇಕ್ಷಣೀಯವಾಗಿದ್ದಿತು (ರೂಢಿ). [ ನಾಟಕ + ಅಭಿನಯ ]

**ನಾಟಕೀಕರಣ** (ನಾ). ಕಥೆ, ನಿರೂಪಣೆಗಳನ್ನು ನಾಟಕವಾಗಿ ಪರಿವರ್ತಿಸುವುದು. 'ನಾಟಕೀಕರಿಸು' ಪರಾ. [ ಸಂ. ]

**ನಾಟಕೀಕರಿಸು** (ಕ್ರಿ). ಕಥೆ, ನಿರೂಪಣೆಗಳನ್ನು ನಾಟಕರೂಪಕ್ಕೆ ಪರಿವರ್ತಿಸಿ ಶಿಕ್ಷಣದಲ್ಲಿ ಉಪಯೋಗಿಸು: ಈಚಿಗೆ ಪಾಠಗಳನ್ನು ನಾಟಕೀಕರಿಸಿ ಬೋಧಿಸುವುದನ್ನು ನೋಡಿದರೆ ಅದರ ಪ್ರಭಾವ ಗೊತ್ತಾಗುತ್ತದೆ (ಶಿಕ್ಷದ. ೫೪). [ ನಾಟಕೀಕರಣ + -ಇಸು$_3$ ]

**ನಾಟಕೀಗಾಯಕಿ** (ನಾ). ನಾಟಕದ ಸಂಗೀತ; ಶಾಸ್ತ್ರೀಯವಲ್ಲದ ಹಾಗೂ ಕೇವಲ ಪಾಮರರರಂಜನೆಗಾಗಿ ಮಾತ್ರ ಬಳಸಲ್ಪಡುವ ಸಂಗೀತ: ನಾನು ಸಂಗೀತ ಹೆಚ್ಚು ಕಲಿತವನೇ ಅಲ್ಲ-ನನ್ನದೆಲ್ಲಾ ನಾಟಕೀಗಾಯಕಿ (ನಟಸಾ. ೬೩೩). [ ನಾಟಕಿ$_0$ (P ← ಮರಾ. ನಾಟಕೀ) + ಗಾಯಕಿ$_2$ ]

**ನಾಟಕೀಜನ** (ನಾ). ನಾಟಕಕಲೆಯಿಂದ ಜೀವಿಸುವ ಜನ; ನಾಟಕವನ್ನು ಉಪವೃತ್ತಿಯಾಗಿಟ್ಟುಕೊಂಡಿರುವ ಜನ: ಆಗಲೇ ಮೊದಲ ಬಾರಿಗೆ ನಾಟಕಿ ಜನರ ಜೀವನ ಕಾಣಲು ಸಿಕ್ಕಿತು (ಹುಮುಜ. ೧೫೬). [ ನಾಟಕಿ$_0$ (P ← ಮರಾ. ನಾಟಕೀ) + ಜನ ]

**ನಾಟಕೀಯ** (ಗು). ೧. ನಾಟಕಕ್ಕೆ ಯೋಗ್ಯವಾದ; ಅಭಿನಯಕ್ಕೆ ಅನುಕೂಲವಾದ; ನಾಟಕಮಾಡಲು ಹೊಂದುವ: ನಾಟಕಗಳಿಗೂ ನಾಟಕೀಯಗುಣವುಳ್ಳ ಶೂನ್ಯಸಂಪಾದನೆಗೂ ವ್ಯತ್ಯಾಸವೇನೆಂದರೆ (ಶೂನ್ಯಕು. ೨೬). ೨. ವಾಸ್ತವಿಕವಲ್ಲದ; ಕೃತ್ರಿಮವಾದ; ಸೋಗಿನ; ತೋರಿಕೆಯ: ಈ ನಾಟಕೀಯವ್ಯವಹಾರ ಬೇಡ, ನಿಜಸ್ಥಿತಿ ತಿಳಿಸಿಬಿಡು (ರೂಢಿ). (ನಾ). ೩. ಅಭಿನಯಪೂರ್ವಕವಾದುದು; ನಟನೆಯಿಂದ ಕೂಡಿದುದು. ೪. ನಾಟಕದ ಸ್ವರೂಪವುಳ್ಳದು: ಈ ಸಂದರ್ಭಕ್ಕೆ ಹೊಂದಿಕೊಳ್ಳುವ ವಚನಗಳು ಎರಡನೆಯ ಶೂನ್ಯಸಂಪಾದನೆಕಾರನಿಗೆ ಸಿಕ್ಕು ಆತ ಈ ಸನ್ನಿವೇಶವನ್ನು ನಾಟಕೀಯವಾಗಿ ಚಿತ್ರಿಸಿರಬೇಕು (ಶೂನ್ಯಕು. ೯೭). [ ಸಂ. ]

**ನಾಟಕೀಯತೆ** (ನಾ). ೧. ನಾಟಕದ ಗುಣ; ಸಂಭಾಷಣೆಗಳು ಹೆಚ್ಚಾಗಿರುವ ಗುಣ: ಶೂನ್ಯಸಂಪಾದನೆಯ ವೈಶಿಷ್ಟ್ಯವೆಂದರೆ, ಅದರ ನಾಟಕೀಯತೆ (ಶೂನ್ಯಕು. ೨೬); ಪು. ತಿ. ನ. ಅವರ 'ಗೋಕುಲನಿರ್ಗಮನ' ಭಾವಗೀತದಂತೆ ಚೆಲುವಾಗಿದೆ ಆದರೆ ಅದರಲ್ಲಿ ನಾಟಕೀಯತೆ ಅಷ್ಟೊಂದು ಕಂಡುಬರುವದಿಲ್ಲ (ನಡದಾ. I, ೨೪೭). ೨. ಕೃತ್ರಿಮವ್ಯವಹಾರ; ಬೂಟಾಟಿಕೆ; ಅವಾಸ್ತವಿಕ ನಡವಳಿಕೆ: ಸ್ಟೂಅರ್ಟ್ ಲಿಟರ್‌ಬಾಕ್ಸ್ ಹತ್ತಿರ ಹೋಗಿ ತನ್ನ ಪೈಪನ್ನು ಎಸೆದು ಬಂದು - "ನನ್ನ ನಾಟಕೀಯತೆಯನ್ನು ಕ್ಷಮಿಸು" ಎಂದ (ಹೊಸಕ್ಕ. ೨೦೫). [ ಸಂ. ನಾಟಕೀಯತಾ ]

**ನಾಟಕೀಯವ್ಯಂಗ್ಯ** (ನಾ). ನಾಟಕದಲ್ಲಿ ತೋರುವ ವಾಚ್ಯಾರ್ಥಕ್ಕಿಂತ ಭಿನ್ನವಾದ ಅರ್ಥವಿಶೇಷ,-ಕವಿವಿವಕ್ಷಿತವಾದ ಅಂತರಾರ್ಥ; P ನಾಟಕದ ಸಂದರ್ಭಗಳಲ್ಲಿ ಕಂಡುಬರುವ ವಿಧಿಯ ಅಣಕ. ವ್ಯಕ್ತಿಯ ಅಥವಾ ಘಟನೆಯ ಪರಿಣಾಮವು ನಿರೀಕ್ಷಣೆಗೆ ವಿರುದ್ಧವಾಗಿರುವುದು: ಇನ್ನೊಂದು ಬಗೆಯ ವೈಷಮ್ಯವನ್ನು ಹೆಸರಿಸಬೇಕು - ಅದನ್ನು 'ನಾಟಕೀಯವ್ಯಂಗ್ಯ' (Dramatic-Irony) ಎಂದು ಸಾಮಾನ್ಯವಾಗಿ ಕರೆಯುತ್ತಾರೆ (ಸಾಹಿಪ್ರ. ೨೦೯). [ ನಾಟಕೀಯ + ವ್ಯಂಗ್ಯ$_2$ ]

**ನಾಟಕೀಹೃದಯ** (ನಾ). ನಾಟಕವನ್ನು ಮೆಚ್ಚುವ ಹೃದಯ : ನಾಟ್ಯ ಸಾಕ್ಷೀನಾಟಕೀಹೃದಯವು ಸತ್ವವನ್ನು ಜೀವಂತಗೊಳಿಸುವುದು (ಪ್ರಬಂಧ. ೩೦).
[ ನಾಟಕಿ$_{0}$ (ⓟ ←ಮರಾ. ನಾಟಕೀ) + ಹೃದಯ ]

**ನಾಟಕುರಂಜಿ** (ನಾ). [ಸಂಗೀತ] ಒಂದು ರಾಗದ ಹೆಸರು : ಮಾಧವ ಮನೋಹರೀ, ಮಧ್ಯಮಾವತೀ, ದೇವಮನೋಹರೀ, ನಾಟಕುರಂಜೀ ಎಂಬಿವು ಭಾಷಾಂಗಲಕ್ಷಣಗಳನ್ನುಳ್ಳವುಗಳು (ಚತುಪ್ರ. ೧೩೦).
[ ಸಂ. ನಾಟಕುರಂಜೀ ]

**ನಾಟಕೋತ್ಸವ** (ನಾ).=ನಾಟ್ಯೋತ್ಸವ: ಈಚೆಗೆ ಅನೇಕ ಕಡೆ ನಾಟಕೋತ್ಸವಗಳು ನಡೆಯುತ್ತಿವೆ (ರೂಢಿ). [ ನಾಟಕ + ಉತ್ಸವ ]

**ನಾಟಿ$_{1}$**, **ನಟ್ಟಿ$_{1}$**, **ನಟ್ಟು$_{3}$**, **ನಟ್ಟೆ$_{1}$**, **ನೆಟ್ಟೆ$_{4}$** (ನಾ). ೧. ಬತ್ತ, ರಾಗಿ ಮೊದಲಾದ ಪೈರುಗಳ ಸಣ್ಣ ಸಸಿ,-ಎಳೆಗಿಡ : ಅನುಭಾವವೆಂಬುದೊಂದೆತ್ತು . . . ನಿನ್ನೆ ಮೆಟ್ಟದ ನಾಟಿಯ ಮೊನ್ನೆ ಮೇವುದ ಕಂಡೆ (ಅಪಚಂ. ೧೫೨-೬೯೬) ; ಭೂಗರ್ಭದೊಳಗಿರುವ ಬೀಜಗಳ ತೆರವಲ್ಲಿ ಚಡಪಡಿಸುತ್ತಿದೆ ನಾಟಿ ಮೇಲೆ ಸಿಡಿಯೆ! (ಕರುಶ್ರಾ. ೧೯-೪); ದೋಣಿ ನಡೆಸುವಾಗ, ನಾಟಿ ನಡುವಾಗ ತೆರತೆರನ ಹಾಡುಗಳನ್ನು ಹಾಡುತ್ತಾರೆ (ಜಾನಗೀ. ೩೦). ೨. ಅಗೆ ಹಾಕಿ ಮೇಲಕ್ಕೆದ್ದ ಸಸಿಗಳನ್ನು ಬೇರೆ ಕಡೆಯಲ್ಲಿ ನೆಡುವುದು; ಒಗ್ಗುಹಾಕಿದ ಬತ್ತ, ರಾಗಿ ಮುಂತಾದ ಗಿಡಗಳನ್ನು ಕಿತ್ತು ಬೇರೆ ನೆಲದಲ್ಲಿ ಸಾಲುಸಾಲಾಗಿ ನೆಡುವುದು : ನಾಟಿಯ ದಿನದೊಳು ಸಸಿಗಳ ನೂರುವೆ (ಚಂದ್ರವೀ. ೩೧-೨೩) ; ಬಿತ್ತನೆ, ನಾಟಿ, ಕುಯಿಲು ಮುಂತಾದವಕ್ಕೂ ಈ ತೆರನಾಗಿ ಮಾರ್ಗನಿರ್ದೇಶನ ಮಾಡಿದ್ದಾರೆ (ತತ್ವಪ್ರಾ. ೫೦೮) ; ಶ್ರಾವಣಮಾಸ ಬರುವ ಹೊತ್ತಿಗೆ ಹೊಲಗಳಲ್ಲಿ ಗಿಡ್ಡರಾಗಿಯು ಬಂದು ದೊಡ್ಡರಾಗಿಯ ನಾಟಿಯನ್ನು ಹಾಕಿದ್ದರು (ಹುಟ್ಟಹ. ೭೧). ೩. [ವೈದ್ಯಶಾ] ಒಂದು ಅಂಗಾಂಶವನ್ನು ತೆಗೆದು ಅಗತ್ಯವಿರುವ ಇನ್ನೊಂದು ಅಂಗಕ್ಕೆ ಹಚ್ಚುವುದು,-ಕಸಿಮಾಡುವುದು : ಕೈ ಚರ್ಮ ಇಲ್ಲವೇ ಕಾಲಿನ ಮೇಲೆ ಮಂಜುಗಡ್ಡೆ ಇರಿಸಿ ಸುಮಾರು ೫$^{0}$ ಸೆಂ. ಗ್ರೇ. ಗೆ ತಂಪುಗೊಳಿಸಿ ಆ ಭಾಗವನ್ನು ಕತ್ತರಿಸಿ ಹಾಕಿದರೂ ತಿಳಿಯದಂತೆ ಮಾಡಬಹುದು. ಹೀಗೆ ಚರ್ಮದ ನಾಟಿಗಳನ್ನು (ಗ್ರಾಫ್ಟ್ಸ್) ನೋವಿಲ್ಲದೆ ತೆಗೆದಿದ್ದಾರೆ (ಕವಿಕೋ. I, ೪೭೩). **ನಟ್ಟಿ$_{1}$** : ೨. ಮಳೆಗಾಲದ ನಟ್ಟಿ ಮುಗಿದರೆ ಮುಡೂರನ ಮುಂದಿನ ಮೊಕ್ಕಾಂ ಬಾಳೆಹೊನ್ನೂರು (ಪಹಸ. ೭೪) ; ನಟ್ಟಿ ಎಷ್ಟಾಯಿತು ? ಎಂದು ಶೀನಪ್ಪ ಕೇಳಿದ (ಅನಾಥ. ೧೧೭). **ನಟ್ಟು$_{3}$** : ೪. ವ್ಯವಸಾಯದ ಭೂಮಿಯಲ್ಲಿ ಬೆಳೆಯುವ ಅನಗತ್ಯವಾದ ಹುಲ್ಲು,-ಗಿಡ ; ಕಳೆ : ಭೂಮಿಯು ಹಸನಾಗಿರಬೇಕು. ಆದರಲ್ಲಿ ಕರಿಕೆ ಕಣಿಗೆ ನಟ್ಟುಗಳು ಇರಲಾಗದು (ಕೃಷಿಪ್ರ. ೨೫) ; ಆ ಕೆರೆಯ ಹೊಲದಲ್ಲಿ ನಟ್ಟು ಬಹಳ ಬೆಳೆದಿದೆಯೆಂದು ಕೇಳಿದ್ದೇನೆ (ಮಣ್ಣಮ. ೪೦) : ಅಲ್ಲಲ್ಲಿ ಕರಿಕೆ, ನಟ್ಟು ಬೆಳೆದು ಹೊಲ ಕಾಡಿನಂತಾಗಿತ್ತು (ಬಿವರಿ. ೫೮) ; ಈ ಭೂಮಿಯಲ್ಲಿ ನಟ್ಟು ಬೆಳೆಯುವುದು ಬಹಳ (ವಿಜಾಭೂ. ೧೮). **ನಟ್ಟೆ$_{1}$** : ೧. ಬೀಟಿದ ಬಿಟುಗೋಲುಗಳೆಂಬ ನಟ್ಟೆಯನೂಟಿದನೀಗ್ರೈಗಡೆಗೆ (ಮೋಹತ. ೩೮-೪೭). **ನೆಟ್ಟೆ$_{4}$** : ೨. ಇವತ್ತು ನೆಟ್ಟೆ ಎಂದು ಗೊತ್ತಿಲ್ಲವೇ ? (ಗಂಗಾಳ. ೧೩೨).

ನಟ್ಟು ಕಡಿ = ಕಳೆಗಳನ್ನು ನಾಶಪಡಿಸು : ನಟ್ಟು ಕಡೀತೀನಿ . . . ನೇಗಲಾ ಹೊಡೀತೀನಿ (ಬಾಬಲ. ೫). ನಟ್ಟು ಹೊಡೆ=ನಟ್ಟು ಕಡಿ : ಹೊಟಿ$^{3}$ಯ ಹೊಟುವೆನು ನಟ್ಟು ಹೊಡ [ ಡೆ ] ವೆನು ಹುರಿಯ ಬಿಡುವೆನು (ರೀವಕಾ. ೧-೧೯). ನಟ್ಟಿನ ಭತ್ತ = ನಾಟಿಹಾಕಲು ಉಪಯೋಗಿಸುವ ಭತ್ತ; ಬೀಜದ ಭತ್ತ : ನಟ್ಟಿನ ಭತ್ತ ಮೂಡೆ ೪೫ (ಮ್ಯಆರಿ. ೧೯೪೩, ೪೭-೨೫ ; 1406). ನಾಟಿಯ ಓಟ = "ನಾಟಿ ಹಾಕಿದ ಗದ್ದೆಯಲ್ಲಿ ಓಡುವ ಒಂದು ಓಟ ಸ್ಪರ್ಧೆ" (ಹುಲಿಹಾ. ಕೋಶ). ಈ ಮೂವರು ನಾಟಿಯ ಓಟವನ್ನು ನೋಡಲೆಂದು ಮುಂಜಾನೆಯೇ ಕುಟ್ಟಂಚಟ್ಟೀರ ಮನೆಗೆ ಹೋದರು (ಹುಲಿಹಾ. ೨೪). ನಾಟಿ ಹಾಕು = ೧. ಒಗ್ಗುಹಾಕಿದ ಸಸಿಗಳನ್ನು ಕಿತ್ತು ಬೇರೆ ಸ್ಥಳದಲ್ಲಿ ನೆಡು : ಇವತ್ತು ನಾವು ಒಬ್ಬನ ಗದ್ದೆಗೆ ಪೈರು ನಾಟಿ ಹಾಕುವುದಕ್ಕೆ ಹೋದರೆ ಅವನು ನಮಗೆ ದುಡ್ಡು ಕೊಡುವಂತಿಲ್ಲ (ಹುಟ್ಟಹ. ೭೧) ; ಒಂದು ಗೇಣು ಪೈರಾದ ನಂತರ ಅದನ್ನು ಕಿತ್ತು ಗದ್ದೆಯಲ್ಲಿ ನಾಟುವುದು ಹೆಚ್ಚು ಅನುಕೂಲವಾದದ್ದು. ಈ ಪದ್ಧತಿಗೆ ನಾಟಿಹಾಕುವುದು ಎಂದು ಹೆಸರು (ವ್ಯವಮ. ೪೬) ; ಓಟ ನೋಡಲು ಬಂದವರೆಲ್ಲ ಗದ್ದೆಗಿಳಿದು ನಾಟಿ ಹಾಕುವುದರಲ್ಲಿ ನೆರವಾಗುವುದು ರೂಢಿ (ಹುಲಿಹಾ. ೨೪). ೨. ಬೇರೂರಿಸು ; ಆರಂಭಿಸು ; ಮೊದಲುಮಾಡು : ಭಾರತದಲ್ಲಿ ಇಂಗ್ಲೆಂಡು ತನ್ನ ಶಿಕ್ಷಣ ಪದ್ಧತಿಯನ್ನು ನಾಟಿ ಹಾಕಿದಾಗ ವೃತ್ತಿಶಿಕ್ಷಣಶಾಲೆಗಳು . . . ಆರಂಭವಾದುವು (ಶಿಕ್ಷದ. ೮೯೪).
[< ನಾಂಟು. / ಕೊಡ. ನಾಟಿ; ತುಳು. ನಾಟಿ, ನಟ್ಟಿ, ನೆಟ್ಟಿ ]

**ನಾಟಿ$_{2}$** (ನಾ). [ಸಂಗೀತ] ಒಂದು ರಾಗದ ಹೆಸರು : ಬಳಿಕ ಸಮಸ್ತ ರಾಗಂಗಳೊಳಗೆ . . . ನಾಟಿ ಸಾರಂಗ . . . ಮಧ್ಯಮಾವತಿಯೆಂಬ ಮೂವತ್ತಾಱು ರಾಗಂಗಳೇ ಮುಖ್ಯವಾಗಿ . . . ಪ್ರಸಿದ್ಧಗೊಂಡಿರ್ಪವು (ವಿವೇಕ. ೨೫೦) ; ಸಾಳಂಗ ನಾಟಿ ಭೈರವಿ ದೇಶಿ . . . ವಸಂತಭೈರವಿ [ ಯಱ ] ದೊಳವನವನೊಲ್ದು ಪಾಡಿದ (ತ್ರಿಭಾತಿ. ೬-೩೦) ; ಸಾಳಂಗಂ ನಾಟಿ ದೇಶಿ ಗುರ್ಜರಿಯಾ . . . ವೀಣೆಯಲ್ಲಿ ಮುನಿ ಬಾಜಿಸಿದಂ (ವೀರವಿ. ೬-೮೯). [ ಸಂ. ನಾಟೀ ]

**ನಾಟಿ$_{3}$** (ಗು). ನಾಡಿಗೆ ಸಂಬಂಧಪಟ್ಟ : ಒಂದು ದೇಶದಲ್ಲಿ ಹಿಂದಿನಿಂದ ಬಂದಿರುವ ; ವಿದೇಶೀಯವಲ್ಲದ ; ಸ್ವದೇಶಿ ; ದೇಶೀಯ. 'ನಾಟಿ ಔಷಧ' ಪರಾ. [← ಇಂ. Native ]

**ನಾಟಿಅಂಜೂರ** (ನಾ). ಒಂದು ಬಗೆಯ ಅಂಜೂರದ ಗಿಡ : (ವ್ಯಜಗಿ. ೩೬-೭೨೨). [ ನಾಟಿ$_{3}$ + ಅಂಜೂರ ]

**ನಾಟಿಔಷಧ** (ನಾ). ಸ್ವದೇಶದ ಗಿಡಮೂಲಿಕೆಗಳಿಂದ ತಯಾರು ಮಾಡಿದ ಮದ್ದು ; ಸ್ವದೇಶೀಔಷಧ : ನಾಟಿಔಷಧಗಳಿಂದ ಕೇವಲ ತಾತ್ಕಾಲಿಕಗುಣ ಸಿಕ್ಕುತ್ತಿತ್ತು (ವಿದ್ಯಾರಿ. ೨೮). [ ನಾಟಿ$_{3}$ + ಔಷಧ ]

**ನಾಟಿಕುರಂಜಿ** (ನಾ). [ ಸಂಗೀತ ] ಒಂದು ರಾಗದ ಹೆಸರು ; ನಾಟಕುರಂಜಿ : ನಾಟಕುರಂಜಿ - ೨೮ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ. ಉಪಾಂಗ ರಕ್ತಿರಾಗ. ಘನರಾಗಗಳಲ್ಲೊಂದು (ಸಂಗೀಚಂ. ೦೪೮).
[< ಸಂ. ನಾಟಕುರಂಜೀ ]

**ನಾಟಿಕೆ$_{1}$**, **ನಾಟಿಗೆ** (ನಾ). ೧. ನೆಡುವಿಕೆ : "ನಾಟಿಕೆ, ಮೊಳೆ, ಮೊಳಕೆ, ಕೊಂಬು, ಕುಡಿ" (ಕಂನುಹು. ೮೭) ; ಬೆಳೆಯಾದ ಮೇಲೆ ಹೊಲದಲ್ಲಿ ಒಂದಾದರೂ ಕಸದ ನಾಟಿಕೆ ಇಲ್ಲದ ಹಾಗೆ . . . ತೆಗೆದುಹಾಕುತ್ತೇವೆ (ಕೃಷಿಪ್ರ. ೨೧). ೨. ನೆಟ್ಟ ಸಸಿ : ಬಿತ್ತಿದ ಬಳಿಕ ನಾಟಿಕೆಯು ಸುಮಾರು ಮೊಂದು ಪೂಟುಯೆತ್ತರಾಗುವಾಬರೊಳಗೆಯೆರಡು ಸಾರಿಯೆಡೆ ಹೊಡಿದರೆಂದರೆ ಗಳೆಯ ಕೆಲಸ ತೀರಿತು (ಕಭಾಗ. ೨೬೮). **ನಾಟಿಗೆ** : ೧. ಅದು ನಾಟಿಗೆಯ ಕಾಲವಾಗಿತ್ತು (ಚೀನಬಾ. ೦೨೭).
[ ನಾಟು$_{1}$ (<ನಾಂಟು) + – ಇಕೆ ]

**ನಾಟಿಕೆ$_{2}$** (ನಾ). ನಾಟಕದಲ್ಲಿ ಒಂದು ಬಗೆ; ಒಂದು ಬಗೆಯ ದೃಶ್ಯ ಪ್ರಬಂಧ ; ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು ; ⓟ ಶ್ರೀಹರ್ಷನ 'ರತ್ನಾವಳಿ'ಯು ನಾಟಿಕೆಗೆ ಒಂದು ಉದಾಹರಣೆಯಾಗಿದೆ : ನಾಟಿಕೆಯಲ್ಲಿ ವಸ್ತುವು ಕಲ್ಪಿತ. ನಾಯಕನು ಪ್ರಖ್ಯಾತನಾದ ಧೀರಲಲಿತ . . . ಶೃಂಗಾರರಸ ; ಕೈಶಿಕೀವೃತ್ತಿ; ಸಾಧಾರಣವಾಗಿ ನಾಲ್ಕು ಅಂಕಗಳು (ಕೈಬಿಡಿ. ೨೨೦) ; ೧. ನಾಟಿಕಾ. ೨. ತ್ರೋಟಕ. ೩. ಗೋಷ್ಠೀ. ೪. ಸಟ್ಟಕ. ೫. ನಾಟ್ಯರಾಸಕ. ೬. ಪ್ರಸ್ಥಾನ. ೭. ಉಲ್ಲಾಪ್ಯ. ೮. ಕಾವ್ಯ. ೯. ಪ್ರೇಂಖಣ. ೧೦. ರಾಸಕ. ೧೧. ಸಂಲಾಪಕ. ೧೨. ಶ್ರೀಗದಿತ.

೧೩. ಶಿಲ್ಪಕ. ೧೪. ವಿಲಾಸಿಕಾ. ೧೫. ದುರ್ಮಲ್ಲಿಕಾ. ೧೬. ಪ್ರಕರಣೀ. ೧೭. ಹಲ್ಲೀಶ. ೧೮. ಭಾಣಿಕ ಎಂದು ಉಪರೂಪಕಗಳು ಹದಿನೆಂಟು ವಿಧ (ಸಂನಾಟ. ೩೨). [ ಸಂ. ನಾಟಿಕಾ ]

**ನಾಟಿಗದ್ದೆ** (ನಾ). ಅಗೆ ಹಾಕಿದ ಪೈರನ್ನು ಕಿತ್ತು ಸಾಲುಸಾಲಾಗಿ ನೆಡಲು ಸಿದ್ಧಪಡಿಸಿದ ಭೂಮಿ; ಕೆಸರುಗದ್ದೆ: ಚೆಂಗುಮಣಿ ಇಷ್ಟರ ತನಕ ಅಷ್ಟು ದೊಡ್ಡ ನಾಟಿಗದ್ದೆಯನ್ನು ನೋಡಿಯೇ ಇರಲಿಲ್ಲ (ಹುಲಿಹಾ. ೨೪). [ ನಾಟಿ$_1$ + ಗದ್ದೆ (<ಗಟ್ಟಿ) ]

**ನಾಟಿಗೆ** 'ನಾಟಿಕೆ$_1$' ನೋ.

**ನಾಟಿರಾಗ** (ನಾ). = ನಾಟಿ$_2$: ನಾಟಿರಾಗವು ಲೇಸು ತೋಟವಲ್ಲಿಗೆ ಲೇಸು (ಸರ್ವಜ್ಞ. ೩೨೨). [ ನಾಟಿ$_2$ + ರಾಗ ]

**ನಾಟಿಸಮಯ, ನಟ್ಟಿಸಮಯ** (ನಾ). ನಾಟಿ ಹಾಕುವ ಕಾಲ; ಒಗ್ಗು ಹಾಕಿದ ಪೈರುಗಳನ್ನು ಕಿತ್ತು ಹಸನು ಮಾಡಿರುವ ಕ್ಷೇತ್ರದಲ್ಲಿ ನೆಡುವ ಕಾಲ: ನಾಟಿಸಮಯದಲ್ಲಿ ಹೆಂಗುಸರು ಅಗೆ ತೆಗೆದು ಕಂತೆ ಕಟ್ಟುವರು (ಗಾರಕ. ೪೩). **ನಟ್ಟಿಸಮಯ**: ನಟ್ಟಿಸಮಯಕ್ಕೇನೆ ಮದುವೆ ಇರಿಸಿದರು (ಮರಮ. ೨). [ ನಾಟಿ$_1$ + ಸಮಯ ]

**ನಾಟಿಸಿಪಾಯಿ** (ನಾ). ಸ್ವದೇಶದ ದಂಡಾಳು; ವಿದೇಶಿಯನಲ್ಲದ ಯೋಧ; ದೇಸಿ ಸಿಪಾಯಿ: ಒಂದೊಂದು ಆನೆಯ ಮೇಲೆ ಸೊಂಟಕ್ಕೆ ಒಂದು ತುಂಡು ಬಟ್ಟೆ ಸುತ್ತಿಕೊಂಡ ನಾಲ್ಕು ಜನ ನಾಟೀಸಿಪಾಯಿ ಗಳಿರುತ್ತಾರೆ (ಪ್ರವಾಇ. II, ೧೮೭). [ ನಾಟಿ$_3$ + ಸಿಪಾಯಿ ]

**ನಾಟಿಸು** 'ನಾಂಟಿಸು' ನೋ.

**ನಾಟು$_1$** 'ನಾಂಟು' ನೋ.

**ನಾಟು$_2$** (ನಾ). ೧. ನಾಟುವಿಕೆ; ನೆಡುವಿಕೆ: (ಕ). ೨. ನಾಟಿಕೊಂಡಿರುವುದು; ಆಳಕ್ಕೆ ಊರಿರುವುದು: ಆ ಮೇರು ೧೬ ಸಾವಿರ ಯೋಜನ ಪ್ರಮಾಣವು ಭೂಮಿಯೊಳಗೆ ನಾಟಾಗಿಹುದು (ದಶಟೀ. ೫೭-೬). ೩. ಆಳ; ನಾಟಾಗಿ ತೋಡು (ರೂಢಿ). [ < ನಾಟು$_1$ ]

**ನಾಟು$_3$** 'ನಾಟಿ$_1$' ನೋ.

**ನಾಟು$_4$** (ನಾ). [ ನಾಟ್ಯ ] ನಾಟ್ಯದಲ್ಲಿ ಬರುವ ಹತ್ತು ಬಗೆಯ ಅಡವುಗಳಲ್ಲಿ ಒಂದು: ಪ್ರಸಿದ್ಧ ನಾಟ್ಯಾಚಾರ್ಯರು ಈ ಅಡವುಗಳನ್ನು ಹತ್ತು ವಿಧವಾಗಿ ವಿಂಗಡಿಸಿದ್ದಾರೆ. (೧) ತಟ್ಟು, (೨) ಮೆಟ್ಟು, (೩) ನಾಟ್ಟು, (೪) ತಟ್ಟುಮೆಟ್ಟು, (೫) ಕುದಿತಮೆಟ್ಟು, (೬) ಮೈ, (೭) ಮುಡಿ, (೮) ಜಾತಿ, (೯) ಅರುಧಿ, (೧೦) ನಡೈ (ಅಭಾನ್ಯ. ೩೨).

[ ←ತಮಿ. ನಾಟ್ಟು ]

**ನಾಟುಕೋಲು** (ನಾ). ನಾಟಿಕಾಲದಲ್ಲಿ ಗುಳಿಗಳನ್ನು ಮಾಡುವುದಕ್ಕಾಗಿ ಉಪಯೋಗಿಸುವ ಚೂಪಾದ ತುದಿಯುಳ್ಳ ಕೋಲು,-ದಂಡ: ನಾಟಿ ಹಾಕಬೇಕೆಂತ ಹೊರಟವನು ನಾಟುಕೋಲನ್ನೇ ಬಿಟ್ಟುಹೋಗಿದ್ದಾನೆ (ರೂಢಿ). [ ನಾಟು$_1$ (<ನಾಂಟು) + ಕೋಲು$_1$ (<ಕೋಲ್$_1$ ]

**ನಾಟುನುಡಿ** (ನಾ). ಮನಸ್ಸಿಗೆ ತಟ್ಟುವಂತೆ ಹೇಳುವ ಮಾತು; ಹೃದಯಸ್ಪರ್ಶಿಯಾದ ನುಡಿ; ಮನಸ್ಸಿಗೆ ತಾಕುವಂತೆ ಹೇಳುವ ಮಾತು: "ಹುರುಳುನುಡಿ; ಚಟುಕಿನುಡಿ; ಚುಚ್ಚುನುಡಿ; ನಾಟುನುಡಿ" (Epigram. ಇಂಕನಿ); ಜೊತೆಗೆ ನನ್ನ ಮನಸ್ಸನ್ನೇ ಕನ್ನಡಿಸುವ ನನ್ನವೇ ಆದ . . . ಚಾಟೂಕ್ತಿಗಳೂ ನಾಟುನುಡಿಗಳೂ ಗಾದೆಗಳೂ ಸಾಮತಿಗಳೂ ಇಲ್ಲಿವೆ (ಇಂಚಾಪ. vi, ಅರಿಕೆ). [ ನಾಟು$_1$ (<ನಾಂಟು) + ನುಡಿ$_2$ ]

**ನಾಟುಮುದಿಮೆ** (ನಾ). ನಾಡಿನ ಮುಖಂಡತನ; ದೇಶದ ನಾಯಕತ್ವ: ಬೇಯ್ಗುವರ್ಮರ ನಾಟುಮುದಿಮೆಯುಳ್ (ಎಇ. IX, ೨೦-೫; 800).

[ ←ತಮಿ. ನಾಟ್ಟುಮುತುಮೈ ]

**ನಾಟೇರ** (ನಾ). ನಟಿಯ ಮಗ; ನರ್ತಕಿಯ ಪುತ್ರ. [ ಸಂ. ]

**ನಾಟ್ಟು** 'ನಡು$_1$' ಪರಾ.

**ನಾಟ್ಯ** (ನಾ). ೧. [ ಕಾವ್ಯಮೀ ] ಸಾತ್ವಿಕ, ವಾಚಿಕ, ಆಂಗಿಕ ಮತ್ತು ಆಹಾರ್ಯವೆಂಬ ನಾಲ್ಕುಬಗೆಯ ಅಭಿನಯದಿಂದ ಧೀರೋದಾತ್ತನೇ ಮೊದಲಾದ ನಾಯಕರ ಅವಸ್ಥೆಯನ್ನು ರಸೋಚಿತವಾಗಿ ಅನುಕರಣ ಮಾಡುವುದು; ಅಭಿನಯ; ರೂಪಕ; ನಾಟಕವೇ ಮೊದಲಾದ ದೃಶ್ಯ: "ಅತ್ಯಲಂಕಾರದೊಳು ನಾಟ್ಯದೊಳು . . . ರೂಪಕಮೆಂಬ ನಾಮಮಕ್ಕುಂ" (ಮಂಗರಾ. ೧೫೩-೬೨); ಭಾವಾನುಭಾವಮೆಸೆವ ವಿಭಾವಂ ಸಾತ್ವಿಕಮನೇಕ ಸಂಚಾರಿಗಳಂ ಅವರಿಸಿ ತೋರ್ಪುದಿಂತಿವು ಕೋವಿದೆ ಕೇಳ್ ನಾಟ್ಯಮೆಂಬ ಪೆಸರಂ ಪಡೆಗುಂ (ಲಾಸ್ಯರಂ. ೧-೫೬); ಅಭಿನಯಪೂರ್ಣವಾದುದೇ ನಾಟ್ಯ (ಭಾರದ. ೫೫೩); ಯಾವುದಾದರೂ ಒಂದು ವಿಷಯವನ್ನು . . . ಅಭಿನಯದಿಂದ ವ್ಯಕ್ತಪಡಿಸಿದರೆ ನಾಟ್ಯವಾಗುವುದು (ಕೈಟಿಡಿ. ೦೬೮). ೨. (ಶಾಸ್ತ್ರೀಯವಾದ) ನರ್ತನ; ನೃತ್ಯ: ಅಯ್ಯಾ ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯನೆಂಬ ವಾಹನವಾಗಿರ್ದೆ ಕಾಣಾ (ಬಸವ. ೩); ಕಗ್ಗತ್ತಲೆಯ ಹುಬ್ಬುಗೆಯೊಳಗೆ ನಾಟ್ಯದ ನಿಳಯಮಧ್ಯದ ಮಣಿಯ ಮಂಚದ ಮೇಲೆ ಪವಡಿಸಿದ (ಕುವ್ಯಾವಿ. ೩-೮೦); ಘಣದ ಮೆಟ್ಟಿ ಬಾಲವ ಕೈಯಲಿ ಪಿಡಿದು ಥಳಥಳಿಸುತ್ತ ನಾಟ್ಯವನಾಡೆ (ಪುರಂದ. ೨-೧೦೩-೨) ೩. ಗೀತ, ನೃತ್ಯ ಮತ್ತು ವಾದ್ಯಗಳ ಮೇಳ. ೪. ಅಭಿನಯಕಾರ; ನಟ; ಪಾತ್ರಧಾರಿ.

**ನಾಟ್ಯದ ಗರುಡಿ** = ನೃತ್ಯವನ್ನು ಅಭ್ಯಾಸಮಾಡುವ ಸ್ಥಳ; ನಾಟ್ಯಶಾಲೆ: ಕೆಲಬಲನಟಿಯದಂದದಿ ಬಂದು ನಾಟ್ಯದ ಗರುಡಿಯೊಳಗಿಹುದು (ಕುವ್ಯಾವಿ. ೩-೭೭). [ ಸಂ. ]

**ನಾಟ್ಯಕಲೆ** (ನಾ). ೧. ನಾಟಕಕಲೆ: ನಾಟ್ಯಕಲೆಯಲ್ಲಿ ಸಾಮಾನ್ಯವಾಗಿ ಲಿಖಿತ(ಬರೆದ) ನಾಟಕ ಅರ್ಥಾತ್ ಶ್ರಾವ್ಯಕಾವ್ಯಕ್ಕೂ . . . ದೃಶ್ಯಕಾವ್ಯಕ್ಕೂ ಇರುವಷ್ಟು ಮಹತ್ವವು ಬೇರೆ ಯಾವ ಅಂಗಗಳಿಗೂ ಇರುವುದಿಲ್ಲವೆಂಬುದೊಂದು ನಂಬುಗೆಯು ರೂಢವಾಗಿದೆ (ಪ್ರಬಂಧ. ೩೬). ೨. ನರ್ತನಕಲೆ: ಬಲದೇವನು ತನ್ನ ಜೀವನದಲ್ಲಿ . . . "ನಾಟ್ಯಕಲೆಯು ಒಂದು ಉತ್ತಮ ಕಲೆ" ಎಂದು ಪ್ರಪಂಚಕ್ಕೇ ತೋರಿಸಿದ (ಕಲಾಸಾ. ೧೦೭).

[ ನಾಟ್ಯ + ಕಲೆ$_3$ ]

**ನಾಟ್ಯಕೂಟ** (ನಾ). ನಾಟ್ಯಪ್ರದರ್ಶನಕ್ಕಾಗಿ ಏರ್ಪಡಿಸಿರುವ ಮೇಳ: ನಾವು ನಾಟ್ಯಕೂಟಕ್ಕೆ ಸಿದ್ಧಮಾಡಬೇಕು ಬಾ (ಮಲನಾ. ೧೯೯).

[ ನಾಟ್ಯ + ಕೂಟ$_1$ ]

**ನಾಟ್ಯಗಾತಿ** (ನಾ). ನಾಟ್ಯಮಾಡುವ ಸ್ತ್ರೀ; ನಟಿ; ನರ್ತಕಿ: "ನರ್ತಕೀ, ಲಾಸಕೀ—೨ ಕುಣಿಯುವ ನಾಟ್ಯಗಾತಿಯ ಹೆಸರುಗಳು" (ಸಿದ್ಧಾಂತಿ. ೫೫).

[ ನಾಟ್ಯ + – ಕಾತಿ$_5$ ]

**ನಾಟ್ಯಗೃಹ** (ನಾ). ೧. ನಾಟ್ಯವನ್ನು ಕಲಿಸುವ ಮನೆ. ೨. ನಾಟ್ಯವನ್ನು ಪ್ರದರ್ಶಿಸುವ ಕಟ್ಟಡ; ನಾಟ್ಯಶಾಲೆ: ನಟ–ಪ್ರೇಕ್ಷಕರ ಸಂಚಯವು ನಾಟ್ಯಗೃಹಕ್ಕೆಯೇ ಬೃಹದ್ದೇಹವೆನ್ನುವಂತೆ ಮನ್ನಣೆ ಪಡೆದು ವರ್ತಿಸುತ್ತಿರುತ್ತದೆ (ಪ್ರಬಂಧ. ೩೯). [ ನಾಟ್ಯ + ಗೃಹ ]

**ನಾಟ್ಯಭಟ** (ನಾ). ೧. ಅಭಿನಯದ ಸಮೂಹ,-ಪರಂಪರೆ. ೨. ಒಬ್ಬನೇ ನಟ ಅನೇಕ ಪಾತ್ರಗಳನ್ನು ಬೇರೆ ಬೇರೆ ಭಂಗಿಗಳಿಂದ ಅಭಿನಯಿಸುವುದು; ಏಕಪಾತ್ರಾಭಿನಯ: ಹೊಸದಾದ "ನಾಟ್ಯಭಟಾ" (ಏಕ–ಪಾತ್ರಾಭಿನಯ), ಬಾನುಲಿಯ "ಶ್ರವಣಿಕಾ" ಇತ್ಯಾದ್ಯನೇಕ ಹೊಸ ಪ್ರಕಾರಗಳೇ ಆಗಿರಲಿ, ಅವೆಲ್ಲವೂ "ನಾಟ್ಯ"ಗಳಾಗಿರುವುವು (ಪ್ರಬಂಧ. ೧೫); ನಾಟ್ಯಭಟದಂತೆ ಏಕಪಾತ್ರಾಭಿನಯದ ನಾಟಕಗಳೂ ಇರಬಹುದು; ಆದರೂ ಆ ಏಕಪಾತ್ರವೂ ಕೂಡ ಇತರ ಪಾತ್ರಗಳನ್ನು ಗೃಹೀತವೆಂದು ಹಿಡಿಯುತ್ತದೆ (ಪ್ರಬಂಧ. ೪೦). [ <ಸಂ. ನಾಟ್ಯಚ್ಛಟಾ ]

**ನಾಟ್ಯದಿಗ್ದರ್ಶಕ** (ನಾ). ನಾಟ್ಯವನ್ನು ನಿರ್ದೇಶಿಸುವವನು ; ನಾಟ್ಯ ಪ್ರಯೋಗದ ನಿರ್ವಾಹಕ : ಈ ನಟ ಪ್ರೇಕ್ಷಕರಂತೆಯೇ ನಾಟ್ಯದಿಗ್ದರ್ಶಕ ಹಾಗು ಅವನ ಕಲಾವಂತ ಜೊತೆಗಾರರೂ ಈ ಜ್ಞಾನಕರ್ಮಸಮುಚ್ಚಯ ವನ್ನು ಸಾಧಿಸುವರು (ಪ್ರಬಂಧ. ೩೯). [ ನಾಟ್ಯ + ದಿಗ್ದರ್ಶಕ ]

**ನಾಟ್ಯಧರ್ಮ** (ನಾ). ನಾಟ್ಯದ ಸಂಪ್ರದಾಯ ; ನರ್ತನದಲ್ಲಿ ಹಿಂದಿನಿಂದ ಬಂದಿರುವ ಕ್ರಮ,-ರೀತಿ,-ನಡವಳಿಕೆ : ತನ್ನ ಅಭಿಪ್ರಾಯವನ್ನು ಗಾನಮಾಡಿ ತಿಳಿಸುವುದು, ನರ್ತನ ಮಾಡಿಕೊಂಡು ತಿರುಗಾಡುವುದು . . . ಇವೆಲ್ಲಾ 'ನಾಟ್ಯಧರ್ಮ' (ಕೃಪಿಡಿ. ३೦೭ ಅಡಿಟಿ). [ ನಾಟ್ಯ + ಧರ್ಮ ]

**ನಾಟ್ಯನಿಬಂಧನ** (ನಾ). ನಾಟ್ಯಶಾಸ್ತ್ರ; ನಾಟಕ ಮೊದಲಾದ ದೃಶ್ಯ ಕಾವ್ಯ ; ಅಭಿನಯಿಸುವುದಕ್ಕಾಗಿ ರಚಿಸಿರುವ ಕೃತಿ : ಅಂತು ನಾಟ್ಯ ನಿಬಂಧನಮೆ ಸುರೇಶ್ವರರೂಪದಿಂದಮಾಡುವಂತಾದೆ (ಶಾಂತಿಪು. ೧೧-೬೩ ವ)
[ ನಾಟ್ಯ + ನಿಬಂಧನೆ ]

**ನಾಟ್ಯನಿಲಯ** (ನಾ). = ನಾಟ್ಯಗೃಹ ೧ : ಭೀಮ ನಿಂದಿರು ನಾಟ್ಯ ನಿಲಯವನಾ ಮದಾಂಧಗೆ ನುಡಿದು ಬಂದೆನು (ಕುವ್ಯಾವಿ. ೩-೭೯)
[ ನಾಟ್ಯ + ನಿಲಯ ]

**ನಾಟ್ಯಪದ್ಧತಿ** (ನಾ). ನಾಟ್ಯದ ಸಂಪ್ರದಾಯ : ನಾಟ್ಯವ್ಯಕ್ತಿಗಳ ಹಾವ ಭಾವಗಳನ್ನೂ, ನಾಟ್ಯಪದ್ಧತಿಗಳನ್ನೂ, ಭಾರತೀಯ ನೃತ್ಯತತ್ತ್ವವನ್ನರಿಯು ವುದರಲ್ಲಿ ನಿರತನಾದನು (ಕಲಾಸಾ. ೯೦). [ ನಾಟ್ಯ + ಪದ್ಧತಿ ]

**ನಾಟ್ಯಪೂರ್ಣ** (ಗು). ನಾಟ್ಯದಿಂದ ತುಂಬಿರುವ ; ಸಂಭಾಷಣ ರೂಪವಾಗಿಯೂ ಚಮತ್ಕಾರವಾಗಿಯೂ ಇರುವ : ಅವರ ಕಥೆಗಳಲ್ಲಿ ಒಮ್ಮೊಮ್ಮೆ ತೀವ್ರಪರಿಣಾಮ, ನಾಟ್ಯಪೂರ್ಣಸನ್ನಿವೇಶ, ಅನಿರೀಕ್ಷಿತ ಘಟನೆ ಗಳು ಅಪರೂಪವೆನಿಸಿದರೂ . . . ಯಾರೂ ಅನುಮಾನ ಪಡಲಾರರು (ಬಾಗಿನ. iv ಮುನ್ನುಡಿ). [ ನಾಟ್ಯ + ಪೂರ್ಣ ]

**ನಾಟ್ಯಮಂಟಪ** (ನಾ). = ನಾಟ್ಯಗೃಹ ೧: ಭರತನ ಮತದಲ್ಲಿ ನಾಟ್ಯಮಂಟಪ ಅಥವಾ ಪ್ರೇಕ್ಷಾಗೃಹವು ಜ್ಯೇಷ್ಠ, ಮಧ್ಯಮ, ಕನಿಷ್ಠ ಎಂದು ಮೂರುವಿಧ (ಸಂನಾಟ. ३೩). [ ನಾಟ್ಯ + ಮಂಟಪ ]

**ನಾಟ್ಯಮಂದಿರ** (ನಾ). = ನಾಟ್ಯಗೃಹ ೧: ನಾಯಿಜಾರನ ಕರೆದು ಸಂಕೇತದಲಿ ಸೂಚಿಸು ನಾಟ್ಯಮಂದಿರವ (ಕುವ್ಯಾವಿ. ೩-೭೧) ; ಪಸರಿಪ ಹೇಮರತ್ನ ರುಚಿಯಿಂ . . . ಧೂಪಧೂಮದಿಂದೆಸೆದಿರವೇಳ್ಕುಮಿಂತು . . . ನಾಟ್ಯ ಮಂದಿರಂ(ಲಾಸ್ಯರಂ. ೧-೩೦) ; ಮುಖ್ಯನಗರಗಳಲ್ಲಿನ ನಾಟ್ಯಮಂದಿರಗಳನ್ನೂ . . . ಭಾರತೀಯ ನೃತ್ಯತತ್ತ್ವವನ್ನರಿಯುವುದರಲ್ಲಿ ನಿರತನಾದನು (ಕಲಾಸಾ. ೯೦). [ ನಾಟ್ಯ + ಮಂದಿರ ]

**ನಾಟ್ಯಮೀಮಾಂಸೆ** (ನಾ). ನಾಟ್ಯದ ವಿಚಾರದಲ್ಲಿ ಮಾಡುವ ಪೇಳ್ಮಟ್ಟದ ಚರ್ಚೆ; ನಾಟ್ಯವಿಷಯದಲ್ಲಿ ತೋರುವ ಪರಿಶೀಲನೆ, – ಕೂಲಂಕಷ ವಾದ ವಿಚಾರ : ಸಮಾಕ್ಷಕನು . . . ಮನಸ್ಸಿನಲ್ಲಿ ಅಗತ್ಯವಾಗಿ ಬಿಂಬಿಸ ಬೇಕಾದ ನಾಟ್ಯಮೀಮಾಂಸೆಯನ್ನು ಮಾಡುವನು (ಪ್ರಬಂಧ. ೪೨).
[ ನಾಟ್ಯ + ಮೀಮಾಂಸೆ ]

**ನಾಟ್ಯರಂಗ** (ನಾ). ನಾಟ್ಯವನ್ನು ಪ್ರಯೋಗಿಸುವ ಸ್ಥಳ,-ವೇದಿಕೆ : ಅಲ್ಲಿಂದ ಮುಂದಕ್ಕೆ ೧೬×೩೨ ಹಸ್ತ, "ನಾಟ್ಯರಂಗ" (ಸಂನಾಟ. ३೩) ; ನಾಟ್ಯರಂಗವು ಹಿಮವತ್ಪರ್ವತದಂತೆ ಕಾಣುತ್ತಿತ್ತು (ಕಲಾಸಾ. ೯೭).
[ ನಾಟ್ಯ + ರಂಗ ]

**ನಾಟ್ಯರಸ** (ನಾ). ೧. ನಾಟಕಗಳಲ್ಲಿ ತೋರುವ ಶೃಂಗಾರ, ವೀರ ಮೊದಲಾದ ರಸಗಳು : ವಿದ್ವಾಂಸರು 'ಭಾವ', 'ಅಭಿನಯ' ಇವುಗಳಿಂದ ಕೂಡಿದ ಸ್ಥಾಯಿಭಾವಗಳನ್ನು ಮನಸ್ಸಿನಲ್ಲಿ ಅನುಭವಿಸಿ ಸುಖಪಡುವುದ ರಿಂದ ಅವುಗಳಿಗೆ 'ನಾಟ್ಯರಸ'ಗಳೆಂಬ ಹೆಸರು ಬಂದಿದೆ (ಕೃಪಿಡಿ. ೧೯೦) ; ಭಾವಾಭಿನಯಗಳಿಂದ ಕೂಡಿದ ಸ್ಥಾಯಿಭಾವಗಳನ್ನು ವಿದ್ವಾಂಸರು ಮನಸ್ಸಿನಲ್ಲಿ ಆಸ್ವಾದಿಸುತ್ತಾರೆ ; ಆದ ಕಾರಣ ಇವನ್ನು ನಾಟ್ಯರಸಗಳೆಂದು ಅರಿಯುತ್ತಾರೆ (ಭಾರಮೀ. ೩೩೪). ೨. ನೃತ್ಯಗಳನ್ನು ನೋಡುತ್ತಿರುವಾಗ ಸಹೃದಯರಾದ ಸಾಮಾಜಿಕರಿಗೆ ಉಂಟಾಗುವ ಮಾನಸಿಕ ಅನುಭವ : ಈ ನಾಟ್ಯರಸಂ ಸಮಸ್ತಸಂರಪ್ಯಂದಾಧೀಶನಿಂದಂ ಪೊಸಲ್ವರಿದತ್ತು (ಆದಿಪು. ೭-೧३೦) ; ಮೃದುನೃತ್ಯದೊಳ್ ಪುದಿದು ನಾಟ್ಯರಸಂ ದ್ರುತತಾರದೊಳ್ ಪಳಂಚಲೆಯೆ (ಶಾಂತಿಪು. ೯-೬೮). [ ನಾಟ್ಯ + ರಸ ]

**ನಾಟ್ಯರಾಸಕ** (ನಾ). [ಕಾವ್ಯಮೀ] ಹದಿನೆಂಟು ಬಗೆಯ ಉಪರೂಪಕ ಗಳಲ್ಲಿ ಒಂದು : ನಾಟ್ಯರಾಸಕ – ಇದರಲ್ಲಿ ಒಂದೇ ಅಂಕ ; ಉದಾತ್ತ ನಾಯಕ ; ಪೀಠಮರ್ದನು ಉಪನಾಯಕ ; ಹಾಸ್ಯಪ್ರಧಾನ ; ಶೃಂಗಾರವೂ ಉಂಟು ; ನಾಯಿಕೆ ವಾಸಕಸಜ್ಜಿಕೆ ; ಮುಖನಿರ್ವಹಣಸಂಧಿಗಳು (ಕೆಲವರ ಮತದಲ್ಲಿ ಪ್ರತಿಮುಖಸಂಧಿ ಮಾತ್ರ ಇಲ್ಲ) ; ಹತ್ತು ಲಾಸ್ಯಾಂಗಗಳು. ಬಹುತಾಲಲಯಗಳನ್ನುಳ್ಳದ್ದು (ಸಂನಾಟ. ೩೩). [ ಸಂ. ]

**ನಾಟ್ಯಲೋಲ** (ಗು). ನಾಟ್ಯದಲ್ಲಿ ಆಸಕ್ತನಾದ : ನಾಟ್ಯಲೋಲ ಶಿವನೂ ಬೆಕ್ಕಸ ಬೆರಗಾಗಿರಬೇಕು ಆ ನಾಟ್ಯಮಯೂರಿಯರ ಮನಮೋಹಕನೃತ್ಯ ವಿಲಾಸಕ್ಕೆ ! (ಹೇಮುಕೂ. ೧). [ ನಾಟ್ಯ + ಲೋಲ ]

**ನಾಟ್ಯವಾಡು** (ಕ್ರಿ). ನೃತ್ಯವಾಡು ; ನರ್ತನಮಾಡು: ಬಿಂಕದಿಂದೇಟಿರ್ದ ಪೆರ್ಬುಲಿ ಮಡಿದುದಿಲ್ಲಿ ಕರುಣದಿಂ ಶಶಿಧರಂ ನಾಟ್ಯವಾಡಿದನಿಲ್ಲಿ (ತಿರುರ. ದೇ. ೩-೧೮) ; ಮಲ್ಲಿಗೆಯರಳುವಾಸಿನ ಮಂಚಕೆ ಕರಪಲ್ಲವವನು ಪಿಡಿದೆಳೆದು ನಿಲ್ಲದೆ ಕೆಡಹಿಕೊಂಡೊಡನೆ ಮೋಹಿಸುತೆನ್ನ ಮೆಲ್ಲೆದೆಯೊಳು ನಾಟ್ಯವಾಡೊ (ಕಂನವಿ. ೯-೧೮೬). [ ನಾಟ್ಯ + ಆಡು$_1$ ]

**ನಾಟ್ಯವಿದ** (ನಾ). ನಾಟ್ಯಕಲೆಯನ್ನು ಬಲ್ಲವನು; ನಾಟ್ಯಶಾಸ್ತ್ರಪ್ರವೀಣ ; ನಾ ಟ್ಯ ವಿ ದ್ವಾಂ ಸ : ವಿವಿಧಾತೋದ್ಯಲಯಾನುಬಂಧವಿಳಸಲ್ಲಾಸ್ಯಂ ತಗುಳ್ದಲ್ಲಿ ನಾಟ್ಯವಿದರ್ ತಾಂಗೆಯುಮೇಟು ನೃತ್ಯಗೃಹಮಂ (ಆದಿಪು. ೧೧-೯೪) ; ನುಡಿದ ಪರನಾಟ್ಯವಿದವೇಷವನು ಫಲುಗುಣನು(ಕುವ್ಯಾವಿ.೦-೭).
[ ಸಂ. ನಾಟ್ಯವಿದ್ ]

**ನಾಟ್ಯವಿದ್ಯೆ** (ನಾ). ನಾಟ್ಯಶಾಸ್ತ್ರ ; ನೃತ್ಯಕಲೆ : ತತಾರ್ಯವೃತ್ತಕಮಪ್ಪ ನಾಟ್ಯವಿದ್ಯೆಯುಮಂ ಯೋಗಕ್ಷೇಮಾಧೀನಮಪ್ಪ ನೀತಿಶಾಸ್ತ್ರಮುಮಂ . . . ತ್ರಿದಶವರ್ಗಕ್ಕುಪದೇಶಂಗೆಯ್ಯುತ್ತುಂ (ಶಾಂತಿಪು. ೧೧-೯೦ ವ) ; ನಾಟ್ಯ ವಿದ್ಯೆಯಲ್ಲಿ ಒಬ್ಬರನ್ನೊಬ್ಬರು ಮೀರಿಸುತ್ತಾರೆ (ಕಲಾಸಾ. ೬೪).
[ ನಾಟ್ಯ + ವಿದ್ಯೆ ]

**ನಾಟ್ಯವಿಲಾಸಿ** (ನಾ). ನಾಟ್ಯಕಲೆಯನ್ನು ಆತ್ಮವಿನೋದಕ್ಕಾಗಿ ಅಭ್ಯಾಸ ಮಾಡುವವನು ; ನಾಟ್ಯಹವ್ಯಾಸಿ ; ಹವ್ಯಾಸಿನಟ : ಕ್ರಮೇಣ ಒಂದು ಸುಶಿಕ್ಷಿತರ ರಂಗಭೂಮಿ, ಒಂದು ಅಶಿಕ್ಷಿತರ ರಂಗಭೂಮಿ ಹೀಗೆ ಪ್ರತ್ಯೇಕ ವಾಗಿ ಬೆಳವಣಿಗೆ ನಡೆದಿದ್ದರೆ ಆಶ್ಚರ್ಯವಲ್ಲ (ನಾಟ್ಯವಿಲಾಸಿಗಳು, ನಾಟು ವ್ಯವಸಾಯಿಗಳು ಎಂಬ ಇಂದಿನ ಪರಿಸ್ಥಿತಿಯಂತೆ) (ಭಾರದ. ೫೭೦).
[ ಸಂ. ನಾಟ್ಯವಿಲಾಸಿನ್ ]

**ನಾಟ್ಯವೇದ** (ನಾ). = ನಾಟ್ಯವಿದ್ಯೆ: ತಾಂಡವಮನಾಡಲುದ್ಯೋಗಂಗೆಯ್ಯು ಮಂಗಲಾಲಂಕಾರಾಲಂಕೃತನಾಗಿ ನಾಟ್ಯವೇದಾವತಾರಮನೆ [ಪಾಠಾಂ. ವಿದಾಚಾರ್ಯನಂ, ವೇದಾಚಾರ್ಯನಂ] ಪೊಲ್ತು ರಂಗಂಬೊಕ್ಕು (ಆದಿಪು. ೭-೧೦೫ ವ) ; ಒಲವಿಂದೆ ಕೂಡಿ ಮಿಗೆ ಪುಟ್ಟಿಸಿದಂ ಬಿದಿ ನಾಟ್ಯವೇದಮಂ (ಲಾಸ್ಯರಂ. ೧-೮) ; ದ್ವೈಪೇಚ್ಛೆಯ ಪ್ರಕಾರ . . . ಬ್ರಹ್ಮನು ನಾಟ್ಯವೇದ ವನ್ನು ನಿರ್ಮಿಸುತ್ತಾನೆ (ಭಾರದ. ೫೫೦). [ ನಾಟ್ಯ + ವೇದ ]

**ನಾಟ್ಯವೇದಮೂರ್ತಿ** (ನಾ). ಆಕಾರವನ್ನು ತಳೆದಿರುವ ನಾಟ್ಯವೇದದಂತೆ ಇರುವವನು ; ನಾಟ್ಯವಿದ್ಯಾಪಾರಂಗತ ; ನಟರಾಜನಾದ ಶಿವ : ಭುಜಚಳನದ ಪರಿಣತಿಯಿಂ ನಾಟ್ಯವೇದಮೂರ್ತಿವೊಲೆಸೆದಂ (ಪುಷ್ಪಪು. ೧೨-೩೪). [ ನಾಟ್ಯವೇದ + ಮೂರ್ತಿ ]

**ನಾಟ್ಯವ್ಯವಸಾಯಿ** (ನಾ). ನಾಟ್ಯಕಲೆಯನ್ನು ಗಳಿಕೆಯ ಮಾರ್ಗವೆಂದು ಅದರಲ್ಲಿ ತೊಡಗಿದವನು; ನಾಟ್ಯಕಲೆಯನ್ನು ವೃತ್ತಿಯಾಗಿಟ್ಟುಕೊಂಡಿರುವವನು : ನಾಟ್ಯವಿಲಾಸಿಗಳು ನಾಟ್ಯವ್ಯವಸಾಯಿಗಳು ಎಂಬ ಇಂದಿನ ಪರಿಸ್ಥಿತಿಯಂತೆ (ಭಾರಹ. ೫೭೦). [ ಸಂ. ನಾಟ್ಯವ್ಯವಸಾಯಿನ್ ]

**ನಾಟ್ಯಶಾಲೆ** (ನಾ). = ನಾಟ್ಯಗೃಹ : ಸೊಗಯಿಪ ನಾಟ್ಯಶಾಲೆಗೆ . . . ಮಾಟ್ಟುದಕೃತ್ಯವಿಚಿತ್ರಶೋಭೆಯಂ (ಪುಷ್ಪಪು. ೩-೯೫); ಲೀಲೆಗೆಡೆಯೆನಿಪ್ಪ ಚಂದ್ರಶಾಲೆ ಸುರಭಿಶಾಲೆ ನಾಟ್ಯಶಾಲೆ ಭೋಗಶಾಲೆಯೆನಿಸುವಿವಱ ನಡುವಣ . . . ಗೃಹಾಧಿರಾಜಮೆಂಬ ಗೃಹದೊಳು . . . ಪಂಚವಣಿಗಳಳಿದ ಗುಜ್ಜುಮಂಚಮೆಂಬಿವಲ್ಲಿಗಲ್ಲಿಗೊಪ್ಪಿ ತೋರ್ಪವು (ಜನವ. ೮-೦೩).

[ ನಾಟ್ಯ + ಶಾಲೆ$_3$ ]

**ನಾಟ್ಯಶಾಸ್ತ್ರ** (ನಾ). ೧. = ನಾಟ್ಯವಿದ್ಯೆ : ಪತಂಜಲಿಯ ಕಾಲಕ್ಕಾದರೆ (ಕ್ರಿ. ಪೂ. ಸು. ೧೫೦) ಸಂಸ್ಕೃತನಾಟಕವು ಸರ್ವಾಂಗಪರಿಪೂರ್ಣವಾಗಿದ್ದಿತೆಂದು ನಂಬಬಹುದು. ನಾಟ್ಯಶಾಸ್ತ್ರಕ್ಕೂ ಹೆಚ್ಚು ಕಡಮೆ ಆ ಸಮಯದಲ್ಲೇ ಅಂಕುರಾರ್ಪಣವಾಗಿರಬೇಕು (ಭಾರಮಿ. ೧೧); ಮರಳಿ ಇಂಥದೇ ಅದ್ಭುತ ಕಾರ್ಯಕ್ಕಾಗಿ ಟೊಂಕಕಟ್ಟುವುದೇ ನಾಟ್ಯಶಾಸ್ತ್ರದ ಕರ್ಮಯೋಗವಾಗಿದ್ದರೆ ... ಉಪೇಕ್ಷೆಯಿಂದ ನೋಡುವುದೇ ಹೆಚ್ಚು ವಿಹಿತವಾದುದು (ಪ್ರಬಂಧ.೨೭). ೨. ಭರತಮುನಿಯು ರಚಿಸಿದನೆನ್ನಲಾದ, ಪ್ರಸಿದ್ಧವಾದ ಪ್ರಾಚೀನ ನಾಟ್ಯಶಾಸ್ತ್ರಗ್ರಂಥ : ಬ್ರಹ್ಮನು ದೇವತೆಗಳ ಕೋರಿಕೆಯಂತೆ ನಾಟ್ಯವನ್ನು ನಿರ್ಮಿಸಿ ಅದರ ಪ್ರಯೋಗವನ್ನು ಭರತನಿಗೂ ಆತನ ನೂರು ಮಂದಿ ಮಕ್ಕಳಿಗೂ ವಹಿಸಿದನೆಂದು 'ನಾಟ್ಯಶಾಸ್ತ್ರ'ದ ಮೊದಲನೆಯ ಅಧ್ಯಾಯವು ತಿಳಿಸುತ್ತದೆ (ಭಾರಮಿ. ೦೩). [ ನಾಟ್ಯ + ಶಾಸ್ತ್ರ ]

**ನಾಟ್ಯಶ್ರುತಿ** (ನಾ). = ನಾಟ್ಯವಿದ್ಯೆ : ಭರತನೊಲವಿಂ . . . ಗಂಧರ್ವಾಮರತತಿಗಿತ್ತನೊಲ್ದು ನಾಟ್ಯಶ್ರುತಿಯಂ (ಲಾಸ್ಯರಂ. ೧-೧೦).

[ ನಾಟ್ಯ + ಶ್ರುತಿ ]

**ನಾಟ್ಯಾಂಗ** (ನಾ). ೧. ನಾಟ್ಯದ ಅಂಗ, – ಭಾಗ ; ರಸ. ೨. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : "ವಸುಧಾಭಾವಂ . . . ರಸ ನಾಟ್ಯಾಂಗಂ ಗ್ರಹಣಂ ಪೊಸತುಂ ನಿಧಿ ರತ್ನ ನವಮುಪೊಂಭತ್ತೆನಿಕುಂ" (ವ್ಯವಹಾ. ೯-೯). [ ನಾಟ್ಯ + ಅಂಗ$_2$ ]

**ನಾಟ್ಯಾಗಮ** (ನಾ). = ನಾಟ್ಯವಿದ್ಯೆ : ನಯಂ ಪೊಸವೆ ಕರಣಂಗಳಂ ನಿಪ್ಪುಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಆದಿಪು. ೯-೨೫); ಭರತಂ . . . ಉಮೇಗೀಶರ್ಗಂ ಸುಗಮದೆ ತೋಱಿಸಿದನೊಲ್ದು ನಾಟ್ಯಾಗಮಮಂ (ಲಾಸ್ಯರಂ. ೧-೧೧). [ ನಾಟ್ಯ + ಆಗಮ ]

**ನಾಟ್ಯಾಚಾರ್ಯ** (ನಾ). ನಾಟ್ಯವನ್ನು ಕಲಿಸುವ ಗುರು ; ನಾಟ್ಯಶಿಕ್ಷಕ : ನಾಟ್ಯಾಚಾರ್ಯನ ಲಕ್ಷಣವಂ ಪೇಳ್ವೆನಲು (ಲಾಸ್ಯರಂ. ೧-೩೬).

[ ನಾಟ್ಯ + ಆಚಾರ್ಯ ]

**ನಾಟ್ಯಾನಕ** (ನಾ). ನಾಟ್ಯಕ್ಕೆ ಹಿನ್ನೆಲೆಯಾಗಿ ಬಳಸುವ ಒಂದು ಬಗೆಯ ವಾದ್ಯ : ಢಕ್ಕೆ ನಾಟ್ಯಾನಕ ಚಂಪೆ ಕಿಂಕಿಣಿ ಡೌಡೆ ಕುಕ್ಕುರು ತುಡುಮಲು ರಿಂಚಿಯುವಾ ತಕ್ಕಿಟ ತೋಕಿಟ ತೋಂಗಿ ತೋಹಂಗಿ ತೋ ಧಿಕ್ಕಿಟಯೆನೆ ಕೇಳಿಸಿದರು (ಭರಹ. ೦೨-೪೦). [ ನಾಟ್ಯ + ಆನಕ ]

**ನಾಟ್ಯಾಲಯ** (ನಾ). = ನಾಟ್ಯಗೃಹ : ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ (ಆದಿಪು. ೭-೧೨೭).

[ ನಾಟ್ಯ + ಆಲಯ ]

**ನಾಟ್ಯೋತ್ಸವ** (ನಾ). ನಾಟಕಗಳ ಹಬ್ಬ, – ಉತ್ಸವ ; ನಾಟಕಮಾಲೆಗಳ ಪ್ರದರ್ಶನ : ನಾಡಿನಲ್ಲೀಗ ನಾಟ್ಯೋತ್ಸವಗಳು ವರ್ಷಕ್ಕೊಂದರಂತೆ ನಡೆಯುತ್ತಿವೆ ; ಒಳ್ಳೆಯ ನಾಟಕಗಳಿಗೆ ಬಹುಮಾನಗಳಿವೆ (ನಡಿದಾ. I, ೨೩೮).

[ ನಾಟ್ಯ + ಉತ್ಸವ ]

**ನಾಡಕರಣ** 'ನಾಡು' ಪರಾ.

**ನಾಡಕರಣೆ** 'ನಾಡು' ಪರಾ.

**ನಾಡಕರ್ಣ** 'ನಾಡು' ಪರಾ.

**ನಾಡಕರ್ಣೆ** 'ನಾಡು' ಪರಾ.

**ನಾಡಗ** 'ನಾಡುಗ' ನೋ.

**ನಾಡಚೇಲ್ಲೈತ** (ನಾ). ಒಂದು ಬಗೆಯ ಮರ ; "ಪಡಶ್ರ – ನಾಡಚೇಲ್ಲೈತ, ನೆಲ್ಲಿ" (ಒಷಧಿ. ೦೭೩). [ <ನಾಡು + ಚೇಲ್ಲೈತ ]

**ನಾಡಣ್ಣ** (ನಾ). ಒಬ್ಬಾತನ ಹೆಸರು : ನಾಡಣ್ಣನ ಮಗಳು ಬಿದಿಯಕನಿಱಿಸಿದಳು (ಮ್ಯಆರಿ. ೧೯೨೬, ೫೭-೪ ; ?). [ ನಾಡು + ಅಣ್ಣ$_1$ ]

**ನಾಡದು** 'ನಾಳಿದು' ನೋ.

**ನಾಡದೇವದಾರು** (ನಾ). ದೇವದಾರು ಮರದಲ್ಲಿ ಒಂದು ಬಗೆ : "ಕಿರಾತಗಂಧಃ – ನಾಡದೇವದಾರು" (ಒಷಧಿ. ೩೩).

[ < ನಾಡು + ದೇವದಾರು ]

**ನಾಡನೂರ್** (ನಾ). ಒಂದು ಊರಿನ ಹೆಸರು : ನಾಡನೂರಾ ಮಹಾಜನ ಮಾನ್ಯರೆದು ನೀಮು ನಿಮಗಪ್ಪಂದಿ ಹರಿಯಾಮೆನ್ದು ಬೇಡಿದೊಡೆ (ಸೌಇಇ. IX-1, ೪೬-೭ ; ಸು. ೩ನೆಯ ಶತ). [ ? + ಊರ್$_3$ (< ಊರ್) ]

**ನಾಡಬಾಳೆ** (ನಾ). ಒಂದು ಬಗೆಯ ಬಾಳೆಗಿಡ ಮತ್ತು ಅದರ ಹಣ್ಣು : ರಸಬಾಳೆ . . . ನಾಡಬಾಳೆ, ಮಧುರಂಗಬಾಳೆ ಮೊದಲಾದ ನಾನಾ ಜಾತಿಯ ಬಾಳೆಯ ಬನಗಳೂ ಅಲ್ಲಿ ಇದ್ದುವು (ಕರ್ಣಾಜ. ೦೫೫).

[ < ನಾಡು + ಬಾಳೆ$_1$ (< ಬಾೞೆ) ]

**ನಾಡಯಿಸು** (?). (?) : ಪುರಿಗೆಱೆ ನಾಡ ಸರಟವುರದಾಯ್ದುದಿಂ[ಬ]ರುಮಿಟ್ಟು ನಾಡಯಿಸೆ ಮಾಸಿಗರ ಚಿದಾಣ್ಣಗೋಸಾಸ(ಂ)ಮಿಟ್ಟೋಂ (ಸೌಇಇ. XI-1, ೨೦-೫ ; 883). [ ? ]

**ನಾಡರಸು, ನಾಂಡರಸ** (ನಾ). ೧. ನಾಡಿನ ಅರಸ; ದೇಶದ ರಾಜ ; ನಾಡೊಡೆಯ : ಶಬರನಾಯಕಂ . . . ನಾಡರಸಂ ತಗುಳ್ದು ಕಡೆಗಾಲದ ಮಾರಿಯ ಮಂೞರಿಯಂತೆ ಕಣ್ಗೊಡದೆ ಬಾಲವೃದ್ಧವನಿತಾವಧೆಗೆಯ್ದು (ಪಂಪಾಮಾ. ೪-೩೮). **ನಾಂಡರಸ** : ೨. ಒಬ್ಬಾತನ ಹೆಸರು : ಶ್ರೀ ರಾಮರಾಜಾ ಮಡಿನಾಡು ಮೂನೂಱಱ ನಾಣ್ಡರಸಾ ಆಳೆ (ಎಕ. X, ಗೋರೀಬಿ. ೭೬-೨ ; 750). [ನಾಡು + ಅರಸು$_1$ (< ಅರಸ) ]

**ನಾಡಱಿಕೆ** (ನಾ). ದೇಶಕ್ಕೆಲ್ಲ ತಿಳಿಯುವಿಕೆ; ಜನರಿಲ್ಲಗೆಲ್ಲ ಗೊತ್ತಿರುವಿಕೆ; ಲೋಕಪ್ರಸಿದ್ಧಿ ; ಸರ್ವವೇದ್ಯ : ಮಾಡಿದನೇಕೆಯೊ ಮೇಲಂ ನೋಡದೆ ಬಿದಿ ... ನಾಡಱಿಕೆಯ ದುರ್ಜನಂಗೆ ನಿಡುನಾಲಗೆಯಂ (ಧರ್ಮನಾ. ೦-೬೩); ನವಮ್ಮದುತರಗಮನದ ಗಾಡಿಯ ಗರಂವಿಕೆಯಂ . . . ಕುಡು ಕಾರುಣ್ಯ ದೊಳಿನುತರವಿದೋದ್ಭವನಂ ಮಿಗೆ ತುತಿಯಿಸಿಯುರವಣೆಯಿಂ ಪೊತ್ತುಪುದಿನ್ನುಂ ನಾಡಱಿಕೆಯೊಳರಸಂಚಿ (ಜಯುಕಾ. ೩-೫೫). [ನಾಡು+ಅಱಿಕೆ]

**ನಾಡಾಡಿ** (ನಾ). ೧. ಸಾಮಾನ್ಯವಾದುದು ; ಸಾಧಾರಣವಾದುದಂ ; ಅಪ್ರಸಿದ್ಧವಾದದಂ; ವಿಶೇಷವಲ್ಲದುದಂ: ಮೋಕ್ಷದ ದೀಕ್ಷೆಗೆ ನೋಂತ ಪೆಂಪು ನಾಡಾಡಿಯೆ ಶಾಂತಿನಾಥ ಜಿನಚಂದ್ರಮುನೀಂದ್ರನದೇಂ ಕೃತಾರ್ಥನೋ (ಶಾಂತಿಪು. ೦೨-೫೮); ನಾಡಾಡಿಯಲ್ಲು ರೂಪಿನ ಗಾಡಿಯಿದೆಲ್ಲಿರ್ದು ಬಂದುದು (ಕಾದಂಪೂ. ೯೫೭); ನಾಡಾಡಿಯಲ್ಲದಂತಿರೆ ಮಾಡಿಸಿದಂ ದೇವನಿಲಯದೆರಡುಂ ಕೆಲದೊಳ್ ಕೂಡೆ ಧವಳಾರವಂ (ಶಾಪಮಂ. ೦೫-೭೪ ; 1060) ; ನಾಡಾಡಿಯುನಾಡುವರೊಳ್ ಕೂಡುವೊಡದು ದೋಷಮಲ್ಲಂ (ಧರ್ಮಾಮೃ. ೬-೯೫) ; ಇಂತು ಪಿರಿದಪ್ಪ ಸಿರಿಗಿಡುಂಬೊಲನಾಗಿ ಮಾಡಿದ ನೂರ್ಮಡಿಗಡಿಯೊಳ್ ಕೂಡಿದ ನಾಡಾಡಿಯಾಗಿರ್ದಾ ನಾಡಿನ ನಟ್ಟನಡುವೆ (ಬಾಧಪು. ೪-೨೩ ವ) ; ಸುದ್ದಿ ಪಿಸುಮಾತಿನ ಕುದುರೆಯ ಮೇಲೆ ಊರೂರು ಅಲೆಯುವ ನಾಡಾಡಿಯಾಗಿತ್ತು (ಮಲಮ. ೧೧). ೨. ಸಾಮಾನ್ಯ ವ್ಯಕ್ತಿ ;

ಸಾಧಾರಣ ವ್ಯಕ್ತಿ; ಅರಿಕೇಸರಿ ತೆಂಕನಾಡಂ ನಾಡಾಡಿಯಲ್ಲದೆ ಮೆಚ್ಚುತ್ತಿಂ (ಪಂಪಭಾ. ೪-೩೦ ವ); ಪುರುಹೂತನಜಿದಯೋಧ್ಯಾಪುರಮಂ ನಾಡಾಡಿಯಲ್ಲ ದಂತಿರೆ ಪಡೆದಂ (ಪಂರಾಮಾ. ೧-೯೯); ನಾಡಾಡಿಗಳಿಗೆ ನಾಡಾಡಿಗಳನು ಸರಿಮಾಡಬಹುದು ಕೂಡಬಹುದು (ಭರಚ. ೯-೯೦); ಆಕೆ ನಾಡಾಡಿಯಲ್ಲ (ನವಮೋ. ೯-೧೭). ೩. ಸ್ವಲ್ಪವೂ ಗಣನೆಗೆ ಬಾರದ ವ್ಯಕ್ತಿ; ಅಲ್ಪ; ಕ್ಷುದ್ರ: ನಾಡಾಡಿಗಳ ಒಡಿದು ಫಲವೇನೆಂದು ಕೂಡಿದ ತನ್ನೊಡೆಯ ನೊಳು (ಅಂಜಚ. ೪-೯೦); ಪುಣ್ಯವುಳ್ಳ ಮಗನಂ ಪೋಗಾಡಿವ ಪ್ರಹೃದಯರಾಗಿ ಬದುಕಿರ್ದಪರ್ ನೋಡಿರೆಯೆಂಬ ನಾಡಾಡಿಯ ಮಾತ ಕೇಳುತಂ (ಪುಣ್ಯಾಸ್ರ. ೧೨-೨೭ ವ); ನಾಡಾಡಿಗಳ ನಾಟಕದ ಫಣಿಯಲ್ಲಾರು ನೀನೆಂದ (ಕುಮ್ಯಾಅ. ೧೭-೯೧); ಎನ್ನ ನಾಡಾಡಿಯಂತೆ ನೋಡಿದನು (ಖಾಂಡಚ. ೬೩-೨೦). ೪. ದೇಶದಿಂದ ದೇಶಕ್ಕೆ ಹೋಗಿ ಬರುವವನು; ದೇಶಸಂಚಾರಿ; ಯಾತ್ರಿಕ. ೫. ಹಳ್ಳಿಗಾಡಿನಲ್ಲಿ ವಾಸಿಸುವವನು; ಹಳ್ಳಿಗ; ಗ್ರಾಮೀಣ: (ಕ). (ಗು). ೬. ಸಾಮಾನ್ಯ ಗುಣವುಳ್ಳ; ಸಾಧಾರಣವಾದ: ಅಳುತ್ತಳುತಲಂಜಿದವೊಲಾನನಕೊರಸಿ ಕೈವೆರಳ ಮಱಿಯಲಿ ಜನನಿಯನು ನೋಡುತ್ತಲಾ ನಾಡಾಡಿ ಶಿಶುವಂತೆ ತನು ನಡುಗೆ ಕಾಡಿಗೆ ಸಹಿತ ಕಂಬನಿ ಮುಖೇಂದು ಕಳಂಕವಾಗಲು ಮುನಿಗಳನು ನಗಿಸಿದನು ನರಶಿಶುತನದ ನಟನೆಯಲಿ (ನಿಭಾಗ. ೧೦-೯-೩೭); ನಾಡಾಡಿ ದ್ವಿಜರಿಂಗೆ ವಿತ್ತವ ಮಿತ್ತವಂ ಬೇಡಿದಂತಿತ್ತು ಬೀಳ್ಕೊಟ್ಟು (ಮೋಹತ. ೨೨-೫೨); ಇರ್ವರುಂ ಬೇದಬಿಜ್ಜೆಗಂಗೆ ಸರಿಮಿಗಿಲೆನಿಪರ್ . . . ನಾಡಾಡಿ ಕಿತ್ತಡಿಗಳಲ್ಲು (ಅದ್ಭುತ. ೧೧-೧೭); ಆ ನಾಡಾಡಿ ಬೀದಿ ಬಾಲಕ ನೆಮ್ಮ ನಾಡಿಂಗೆ ದೊರೆಯಪ್ಪನೆಂದು? (ಚಂದ್ರಸ. ೧೩-೧೭). ೭. ದೇಶದಿಂದ ದೇಶಕ್ಕೆ ಹೋಗಿ ಬರುವ; ದೇಶಸಂಚಾರಿಯಾದ: ಚೀಣಾವು ಬೌದ್ಧಮತವನ್ನು ಅದೇ ನಾಡಾಡಿ ಜನಗಳ ಮೂಲಕ ಕ್ರಿ.ಪೂ. ಒಂದನೆಯ ಶತಮಾನದ ಅಂತ್ಯದಲ್ಲಿ ಪಡೆಯಿತು (ತತ್ತ್ವಪ್ರಾ. ೬೨೭).

**ನಾಡಾಡಿ ದೈವ** = ಸಾಮಾನ್ಯ ದೇವತೆ; ಕ್ಷುದ್ರದೇವತೆ: ನಾಡಾಡಿ ದೈವವನೋತಡೆ ಕೇಡಲ್ಲದೆ ಸುಖವಿಲ್ಲವಮ್ಮ (ಶಿವಗೀ. ೧೬೧-೮೦೦); ನಾಡಾಡಿ ದೈವವೇ ನೀನು ದೇವರ್ಗೆಲ್ಲ ಚೂಡಾಮಣಿ (ಸೌಂದಪು. ೧೪-೩೦); ನಾಡಾಡಿ ದೈವಗಳ ಚಿನ್ನಬೆಳ್ಳಿಗಳಿಂದ ಮಾಡಿಕೊಂಡದಱ ಪೂಜೆಯನು ಮಾಡಿ ಕಾಡ ಕಳ್ಳರು ಬಂದು ಅವುಗಳನು ಕೊಂಡೊಯ್ಯೆ ಮಾಡಿಕೊಂಡಿರ್ದುದಕೆ ಬಾಯ ಬಡಕೊಳ್ಳುವೆಯೊ (ಪುರಂದ. ೧-೪೪-೩). **ನಾಡಾಡಿ ನರ**=ಸಾಮಾನ್ಯ ಮನುಷ್ಯ; ಅನಾಮಧೇಯ: ಇವ ನಾಡಾಡಿ ನರನಲ್ಲ ನಾರಿ ಚಿತ್ತೈಸು (ಕಂನವಿ. ೯-೧೩೦). **ನಾಡಾಡಿಯವ** = ಸಾಮಾನ್ಯಮನುಷ್ಯ: ಓಡು ಮಾಡಿದಳೆನ್ನ ನೀ ನಾಡಾಡಿಯವನೆಂದೇ ವಿಭಾಡಿಸಿ (ನಿಭಾಗ. ೭-೯-೨೪).

[ನಾಡು + -ಆಡಿ$_1$]

**ನಾಡಾಡಿಕೆ** (ನಾ). ೧. ಸಾಮಾನ್ಯವಾಗಿರುವಿಕೆ; ಸಾಧಾರಣವಾಗಿರುವಿಕೆ: ಹನುಮನ ಮೊಗದ ಮೋಡಿಯ ಧೂರ್ತವಚನದ ಬಗೆಯ ಭಂಗಿಯನಾ ಪ್ರಹಸ್ತ ವಿವೇಕದಿಂದಱಿದು ವಿಗಡಭಟನಿವ ಕುಟಿಲಶಾಖಾಮೃಗವಿವನು ನಾಡಾಡಿಕೆಯ ವನಮೃಗದ ಪರಿಯಲ್ಲಿವನ ನುಡಿಸಿದು ನೋಡಬೇಕೆಂದ (ತೊರರಾ. ೫-೭-೨೩). ೨. ಒಂದು ದೇಶದಲ್ಲಿ ಹಿಂದಿನಿಂದ ಬಂದ ವ್ಯವಹಾರ,-ರೂಢಿ,-ಸಂಪ್ರದಾಯ: ಅವರು ಚಿಕ್ಕಂದಿನಲ್ಲಿ ಬಹಳ ಕ್ಷೀಣವಾಗಿದ್ದು . . . ಹಿರಿಯರು ಕೈಕೊಂಡ ಒಂದು ನಾಡಾಡಿಕೆಯ ವಿಧಿಯಿಂದಾಗಿ ಹೀಗೆ ಹೆಸರಿಡುವುದಕ್ಕೆ ಕಾರಣವಾಯಿತೆಂದು ತಿಳಿಯಿತು (ಕನ್ನಸು. ೧-೩೪೨). [ನಾಡು + ಆಡು$_1$ + -ಇಕೆ]

**ನಾಡಾಡಿಗ** (ನಾ). ೧. = ನಾಡಾಡಿ ೧: ಈ ಶ್ರೀರತ್ನಸಿಂಹಾಸನವನ್ನು ನಾಡಾಡಿಗ ಹಂಗುಳಿಯೆಂದೆಣ್ಣಿ, ಉದಾಸೀನಭಾವಕ್ಕೆಡೆಗೊಟ್ಟು, ಕಯ್ಸೋಂಕುವಷ್ಟು ಅನಾಚಾರಕ್ಕೆ ಎರ್ದೆಮಾಡಿ ಉರವಣಿಸಿದರೆ . . . ದಣ್ಣಿಸದಿರವು (ಬಿಟ್ಟಿಅ. ೧೦೭-೧೮). ೨. = ನಾಡಾಡಿ ೩: ಚಿತ್ರಮಂ ಚೆನ್ನಾಗಿ ಬಂಧಿಸಿ ಬಳಿಕ್ಕ ದೇವೋತ್ತಂಸನಂಗಮಂ ನೆಱೆ ಕಡಿಸಿತಿಲ್ಲವೇ ಚಿತ್ರಭವನಂಳಿದ ನಾಡಾಡಿಗರನೇನ ಮಾಡುವನೆಂದು ಕಂಡರಾರು (ಸಮ್ಯಕೌ. ೫-೨೪); ವಿಗಡನಹನೆರ್ಜುನನು ನಾಡಾಡಿಗರ ಬಗೆಯಂತು ಸಾಕು ನಗಿಸದಿರು (ಕೋಗಯ. ೧೭-೮೦). [ನಾಡಾಡಿ + -ಗ$_2$]

**ನಾಡಾಡಿಗಟೆ** (ಕ್ರಿ). ನಾಡಾಡಿತನವನ್ನು ಬಿಡು; ಸಾಮಾನ್ಯತೆಯನ್ನು ಬಿಡು; ಲೋಕೋತ್ತರವಾಗು: ನಾಡಾಡಿಗಟಿದ ರೂಪುಂ ಗಾಡಿಯು ಮೆಸೆದೊಪ್ಪೆ (ಅಜಪು. ೫-೨೨). [ನಾಡಾಡಿ + ಕಟೆ$_1$]

**ನಾಡಾಡು** (ಗು). ಅಲ್ಪವಾದ; ಕ್ಷುದ್ರವಾದ: ಈ ಗಜವು ಸಾಮಾನ್ಯವಾದ ನಾಡಾಡು ಗಜವಲ್ಲ (ಸೌಗಂಧಿ. ೫೮೦-೧೮). [<ನಾಡಾಡಿ]

**ನಾಡಿ$_1$** (ನಾ). ೧. ಸಸ್ಯಗಳ ಟೊಳ್ಳಾದ ಕಾಂಡ. ೨. ತಾವರೆಯ ದಂಟು,-ನಾಳ. ೩. ಶರೀರದಲ್ಲಿ ರಕ್ತಚಲನೆಗಾಗಿ ಇರುವ ಕೊಳವೆಯಾಕಾರದ ರಚನೆ; ರಕ್ತವಾಹಿನಿ; ಧಮನಿ: "ನಾಡೀ, ಧಮನೀ, ಸಿರಾ ಸಾಮಾನ್ಯವಾಗಿ ನರಗಳ ಹೆಸರು" (ಸಿದ್ಧಾಂತಿ. ೧೬೩); ನಾಡಿಯೊಳಂ ಕೆಟಿಗೊತ್ತಿ ಸೋಂಕಿ ಮಧ್ಯದೊಳೆಸಗುತ್ತುಮಿರ್ಪೊಡೆ ಶುಭಾವಹಂ (ಲೋಕೋಪ. ೧೦-೭); ಎನಿತು ನಾಡಿಗಳವಕೆ ಸ್ಥಾನಗಳೆನಿತು (ಗಗತಾ. ೯-೫). ೪. ಕೈಯ ಮಣಿಕಟ್ಟು, ಎದೆ, ಕಪೋಲ ಮೊದಲಾದೆಡೆಗಳಲ್ಲಿ ಕಂಡುಬರುವ, ಬೆರಳಿಗೆ ತೋರುವ ಲಯಬದ್ಧವಾದ ರಕ್ತಚಲನೆಯ ಮಿಡಿತ,-ಸ್ಪಂದನ: ನಾ ಮೂಱು ನಾಡಿಯ ಬಲ್ಲೆ (ಸರ್ವವ. ೨೦-೮); ಬಿಸಿಯಂ ಸಂಹನನದಿ ಮೇಗುಸುರಂ ನಾಸಿಕದಿ ನಾಡಿಗಳನಾಗಳ್ಮಾಣಿಸುತಂ ಗಳೊಳಂ ನಖದೊಳ್ ನಸುಗೆಂಪಂ ನೋಡಿ ಕಾಣದಳವಳಿದಳೆಲಿಂ (ನನ್ನಚಾ. ೬-೧೫೪); ಪುರುಷರ ಬಲದ ಕೈಯ ಹೆಬ್ಬೆರಳ ಮೂಲದಲ್ಲಿ . . . ಪಿಡಿದು ನಾಡಿಯನ್ನು ನಿದಾನಿಸಬೇಕು (ಸಕವೈ. ೧೦); ರಕ್ತದ ಪ್ರಮಾಣ ಕಡಿಮೆಯಾಗಿ, ನಾಡಿಯಲ್ಲಿ (pulse) ರಕ್ತದ ಒತ್ತಡ ಕಡಿಮೆಯಾಗುತ್ತದೆ (ಕಲರೋ. ೧೭). ೫. (ಯಾವುದಾದರೂ) ನೀಳವಾದ ಕೊಳವೆ; ನಾಳ. ೬. ಒಂದು ಬಗೆಯ ಕೊಳವೆಯಂತೆ ಉದ್ದವಾದ ವ್ರಣ; ನಾಳಿವ್ರಣ; ಭಗಂದರ. ೭. ಒಂದು ದಿನದ ಅರುವತ್ತನೆಯ ಒಂದು ಭಾಗ; ಒಂದು ಗಳಿಗೆ; ಅರ್ಧ ಮುಹೂರ್ತ; ಇಪ್ಪತ್ತನಾಲ್ಕು ನಿಮಿಷ: ನಾಡಿಯುಱುವತ್ತಕ್ಕೆ ಒಂದು ತಿಥಿಯಕ್ಕು (ಮಂಗರಾ. ೨೦-೯); "ನಾಳಿಯೆನೆ ನಾಡಿಯೆನೆ ಗಳಿಗೆಯೆಂದಕ್ಕು" (ಕಶರ. ೫೪); ಅನುರಾಧ ನಕ್ಷತ್ರದೊಡನೆ ಚಂದ್ರನ ಸಂಬಂಧ ೧೧ ನಾಡಿ ೪೧ ವಿನಾಡಿಗಳಲ್ಲಿ . . . ಬೆಳೆಯುತ್ತದೆ (ಆಕಾಶ. ೯೦). ೮. ಒಂದು ಬಗೆಯ ಬಾಗಿದ ಹುಲ್ಲು. ೯. ಸಂಚು; ಮೋಸ. ೧೦. [ಯೋಗ] ಶರೀರದಲ್ಲಿ ವಾಯುವು ಸಂಚಾರವಾಗುವ ನಾಳ; ೯ ನಾಡಿಗಳ ಸಂಖ್ಯೆಗಳನ್ನು ಒಂದೊಂದು ಗ್ರಂಥದಲ್ಲಿ ಒಂದೊಂದು ಬಗೆಯಾಗಿ ಹೇಳಿದ್ದಾರೆ. ಕಾಠಕೋಪನಿಷತ್ತಿನಲ್ಲಿ ನೂರೊಂದು ನಾಡಿಗಳಿವೆಯೆಂದೂ ಅವಕ್ಕೆಲ್ಲ ಹೃದಯವು ಮೂಲಸ್ಥಾನವೆಂದೂ ಹೇಳಿದೆ. 'ನಾಡೀಪ್ರಕಾಶ'ವೆಂಬ ಗ್ರಂಥದಲ್ಲಿ ನಾಡಿಗಳು ಮೂರೂವರೆಕೋಟಿಗಳಿವೆಯೆಂದು ಹೇಳಿದ್ದು, ಅವುಗಳಲ್ಲಿ ಹದಿನಾರು ನಾಡಿಗಳನ್ನು ಪ್ರಧಾನವಾಗಿ ಗಣನೆಮಾಡಿದೆ. ಅವುಗಳು ಯಾವುವೆಂದರೆ-೧. ಇಡಾ. ೨. ಪಿಂಗಲಾ. ೩. ಸುಷುಮ್ನಾ. ೪. ಗಾಂಧಾರೀ. ೫. ಹಸ್ತಿಜಿಹ್ವಾ. ೬. ಪೂಷಾ. ೭. ಯಶಸ್ವಿನೀ? ೮. ಅಲಂಬುಸಾ. ೯. ಕುಹೂ. ೧೦. ಶಂಖಿನೀ. ೧೧. ತಾಲಜಿಹ್ವಾ. ೧೨. ಇಭಜಿಹ್ವಾ. ೧೩. ವಿಜಯಾ. ೧೪. ಕಾಮದಾ. ೧೫. ಅಮೃತಾ. ೧೬. ಬಹುಲಾ ಎಂಬುವು. ೧೧. (ಅಲಂ) ಪರಿಸ್ಥಿತಿ; ಆಗುಹೋಗು: ನೋಡಿ ಬಂದೊರೆ ರಣಸ್ಥಿತಿಯ ನಾಡಿಯಂ (ಶ್ರೀರಾಮಾ. ೬೫೦-೨೨೯).

ನಾಡಿ ಆಡು = ನಾಡಿ ಸ್ಪಂದಿಸು, -ಮಿಡಿ : ನಾಡಿ ಆಡದವ ಓಡಿ ಬಂದಾನೇ ? (ಗಾದೆ). ನಾಡಿ ನಿಲ್ಲು = ನಾಡಿ ಮಿಡಿಯುವುದು ನಿಂತು ಹೋಗು : ನಾಡಿ ನಿಂತ ಮೇಲೆ ಕಾಡ ಪಾಲು (ಗಾದೆ). ನಾಡಿ ನೋಡು = ನಾಡಿಯ ಮಿಡಿತವನ್ನು ಪರೀಕ್ಷಿಸು: ನಾಡಿ ನೋಡದೆ ಮದ್ದು ಕೊಟ್ಟರೆ ಕಾಡುರೋಗ ಬರುವುದು (ಗಾದೆ). ನಾಡಿ ಮಿಡಿ = ನಾಡಿಯು ಸ್ಪಂದಿಸು : ಆಯಾಸದಿಂದ ಅವನಿಗೆ ಜೋರಾಗಿ ನಾಡಿ ಮಿಡಿಯುತ್ತಿದೆ (ರೂಢಿ). ನಾಡಿ ಮಿಡಿತ = ನಾಡಿಯ ಸ್ಪಂದನ: ಅವರಿಗೆ ಉದ್ವೇಗದಿಂದ ನಾಡಿ ಮಿಡಿತ ಏರಿದೆ (ರೂಢಿ). ನಾಡೀ ಹುಣ್ಣು = ನಾಡೀವ್ರಣ : ನಾಡೀಷು ಚ = ನಾಡೀ ಹುಣ್ಣುಗಳೊಳು (ವಿವೈವಿ. ೧೬೩). [ ಸಂ. ]

**ನಾಡಿ₂** (ನಾ). ಒಂದು ಬಗೆಯ ವಾದ್ಯ : ವೇದಗಳ ಕಾಲದಲ್ಲಿ ಉಪಯೋಗದಲ್ಲಿದ್ದ ಬಕುರ, ನಾಡಿ, ತುರುವ . . ಮೊದಲಾದ ವಾದ್ಯಗಳ ರೂಪ ರಚನೆಗಳನ್ನೂ . . . ಶಿಲ್ಪಕಲಾಭಿತ್ತಿಗಳಿಂದ ನಾವು ಗ್ರಹಿಸಬಹುದು (ಸಂಗೀಜಂ. ೧೯೫). [ ? ]

**ನಾಡಿಂಧಮ** (ನಾ). ಊದುಗೊಳವೆಯ ಮೂಲಕ ಊದುವವನು ; ಅಕ್ಕಸಾಲೆ : "ನಾಡಿಂಧಮಃ, ಸ್ವರ್ಣಕಾರಃ, ಕಲಾದಃ, ರುಕ್ಮಕಾರಕಃ–೪ ಅಗಸಾಲಿಗನ ಪೆಸರು" (ಸಿದ್ಧಾಂತಿ. ೩೦೦). [ ಸಂ. ]

**ನಾಡಿಕೆ** (ನಾ). ೧. ಒಂದು ಘಳಿಗೆ ; ಇಪ್ಪತ್ತುನಾಲ್ಕು ನಿಮಿಷಗಳ ಕಾಲ : "ನಾಡಿಕೆಗೆ ನಾಟಿಗೆಯೆನಿಪ್ಪುದು" (ಸಂಜೀವ. ೩೩) ; ಸಮಯಾವಳಿ ಕೋಚ್ಛ್ವಾಸಸ್ತೋಕನಿಮೇಷನಾಡಿಕಾಮುಹೂರ್ತ . . .ಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ (ಆದಿಪು. ೬-೪೮ ವ). ೨. ಜಾಗಟೆ, ಗಂಟೆ ಮೊದಲಾದುವು. ೩. [ಕಾಮಶಾ] ಒಂದು ನಾಡಿಯ ಹೆಸರು : ಒಂದು ನಾಡಿ ಅದು . . . ಕಾಮಾಂದೋಳಿಕೆಯೆಂಬುವದು ಮತ್ತೊಂದು ಚಿರಕಾಲಂ ಮುಟ್ಟಿಸಿದೊಡಂ ನಾಡಿಕೆಯಂ ಮುಖಂ ಬಿರಿದು ಕಾಮಜಲಂ ಸ್ರವಿಸುವದು (ಕಾಮಶಾ. ೬-೧೧೯). [ ಸಂ. ನಾಡಿಕಾ ]

**ನಾಡಿಗ** (ನಾ). ೧. ಒಂದು ದೇಶದಲ್ಲಿ ಹುಟ್ಟಿ ಬೆಳೆದು ವಾಸಮಾಡಿಕೊಂಡಿರುವವನು; ಒಂದು ದೇಶದ ಪ್ರಜೆ: ಮೃಗರಿಪುವಂ ಮೃಗಾವತಿಯ ನಂದನನೊರ್ವನೆ ನಿಂದು ಕೊಂದು ನಾಡಿಗರ ಮನಕ್ಕೆ ಮಿಕ್ಕ ಪರಿತೋಷಮನಿತ್ತು (ವರ್ಧಪು. ೩-೪೬) ; ನಾಡಿಗರೊಳೆಲ್ಲರುಂ ಭೋಗಿಗಳ್ ಕುಟಿಲಗಾಮಿಗಳಲ್ತು (ರಾಮಾಶ್ವ. ೭-೨೩) ; ನಮ್ಮ ನಾಡಿಗರು ತಮ್ಮ ತಮ್ಮ ಜಾತಿ, ಧರ್ಮ, ಮತಗಳ ಅನುಷ್ಠಾನದಿಂದ ಮೋಕ್ಷಸಂಪಾದನಕಾರ್ಯದಲ್ಲಿ ಆಸಕ್ತರಾಗಿದ್ದಾಗ (ಯುಕ್ಷಪ್ರ. ೨೦). ೨. ಗ್ರಾಮಾಧಿಕಾರಿ : ನಾಡಿಗ ಯಂಕಪನು ಆಡಬಿದ್ದು ವೇಡಿಕೊಂಡಾಗ (ಎಕ. VII, ಶಿವಮೊ. ೧೧೭-೨೬; 1576?); ಶಾನುಬೋಗರು ನಾಡಿಗರು ಹನ್ನರಡು ಮಂದಿ ಆಯಗಾರು (ಎಕ. XI, ಮೊಳಕಾ. ೨೫-೬೩ ; 1665) ; ಪಟೇಲನ ಕೆಲಸಕ್ಕಾಗಲಿ ಶ್ಯಾನುಭೋಗ ನಾಡಿಗ ಕರಣೀಕನ ಕೆಲಸಕ್ಕಾಗಲಿ . . . ವಹಿಸುವುದು ಅವಶ್ಯಕವಾಗಿ ಕಂಡುಬರುವದಿಲ್ಲವು (ಗ್ರಾಮಾಕ. ೫). [ ನಾಡು + –ಇಗ ]

**ನಾಡಿಗತನ** (ನಾ). ನಾಡಿಗನ ಅಧಿಕಾರ ; ಗ್ರಾಮಾಧಿಕಾರ : ವಂಶಪಾರಂಪರ್ಯವಾಗಿ ನಮ್ಮ ಪರಗಣೆಯಲ್ಲಿ ಪ್ರತಿಗ್ರಾಮದಲ್ಲಿ ಭೂಮಿ, ಮನೆ, ಕಣ, ನಾಡಿಗತನ . . . ಇಷ್ಟನ್ನೂ ಮಾಡಿಕೊಡಬೇಕೆಂದು ಕೇಳಿದನು (ಕಭವಿ. II, ೩೦೫). [ ನಾಡಿಗ + –ತನ ]

**ನಾಡಿಗವರ್ಯ** (ನಾ). ಗ್ರಾಮಾಧಿಕಾರಿಗಳಲ್ಲಿ ಶ್ರೇಷ್ಠನಾದವನು : ನೀವು ಕುಳಿತುಕೊಳ್ಳಬೇಕು ನಾಡಿಗವರ್ಯ . . . ನಿಮ್ಮನ್ನು ಅವಜ್ಞೆ ಮಾಡುವುದು ಆಊರ ಎಲ್ಲ ನಾಡಿಗರನ್ನೂ ಅವಜ್ಞೆಗೈದಂತೆ (ಸವತಿ. ೧೬೨). [ ನಾಡಿಗ + ವರ್ಯ ]

**ನಾಡಿಗಿತ್ತಿ** (ನಾ). ೧. ಒಂದು ದೇಶದ ಸಾಮಾನ್ಯ ಸ್ತ್ರೀ. ೨. ಗ್ರಾಮಾಧಿಕಾರಿಯ ಹೆಂಡತಿ : (?). [ ನಾಡಿಗ + –ಇತ್ತಿ ]

**ನಾಡಿದು** 'ನಾಳಿದು' ನೋ.

**ನಾಡಿದ್ದು** 'ನಾಳಿದು' ನೋ.

**ನಾಡಿಪರೀಕ್ಷೆ** (ನಾ). ರೋಗವನ್ನು ಕಂಡುಹಿಡಿಯುವುದಕ್ಕಾಗಿ ನಾಡಿಯನ್ನು ಹಿಡಿದು ಮಿಡಿತವನ್ನು ತಿಳಿದುಕೊಳ್ಳುವಿಕೆ : ನಾಡಿಪರೀಕ್ಷೆ . . . ಆ ನಾಡಿಯನ್ನು ಪರೀಕ್ಷಿಸುವ ಪ್ರಕಾರವೆಂತೆಂದೊಡೆ (ಸಕವೈ. ೧೦). [ ನಾಡಿ₁ + ಪರೀಕ್ಷೆ ]

**ನಾಡಿಮೂಲ** (ನಾ). ರಕ್ತಧಮನಿಯು ಪ್ರಾರಂಭವಾಗುವ ಸ್ಥಳ; ನಾಡಿಯ ನೆಲೆ : ಮೊಲೆ ಬದಿ ತಿಗ ಬೆನ್ನು ತಲೆಯೊಳುದಿಸಿ ತೋರ್ಪ ಸಲೆ ನಾಡಿಮೂಲವ ತಿಳಿದು ಗೆಲವಿತ್ತು ಸುಸಿಲಿಂಪುಗಲಿಸಿ ಕಾಣಿಪರು ಪೂವಿಲುಗಾಜಿ ನಾಗವಾರ್ಥವನು (ಭೈರಸೂ. ೨೯೭). [ ನಾಡಿ₁ + ಮೂಲ ]

**ನಾಡೀಕೂಟ** (ನಾ). [ಜ್ಯೋತಿ] ವಿವಾಹಕ್ಕೆ ಮೊದಲು ವಧೂವರರ ಜಾತಕದ ಆಧಾರದ ಮೇಲೆ ನೋಡುವ ಹನ್ನೆರಡು ಕೂಟಗಳಲ್ಲಿ ಒಂದು : ನಾಡೀಕೂಟವೇ ಕೂಡದಿದ್ದರೆ ಮದುವೆಯ ಮಾತು ಮುಂದುವರಿಸುವುದು ಬೇಡ (ರೂಢಿ). ☞ ನಕ್ಷತ್ರಗಳನ್ನು ಮೂರುವರ್ಗಗಳಾಗಿ ವಿಂಗಡಿಸಿದೆ. ವಧೂವರರ ನಕ್ಷತ್ರಗಳು ಒಂದೇ ವರ್ಗಕ್ಕೆ ಸೇರದೆ ಹೋದರೆ ನಾಡೀಕೂಟವಿದೆ ಎಂದು ತಿಳಿಯಬೇಕು. 'ದ್ವಾದಶಕೂಟ' ಪರಾ. [ ಸಂ. ]

**ನಾಡೀಚಕ್ರ** (ನಾ). ದೇಹದಲ್ಲಿರುವ ಎಲ್ಲ ನಾಡಿಗಳ ಸಮೂಹ : ಗಗನತುರ್ಯಾರೂಢ ಮಗನಿಗೆ ಮಿಗಿಲು ಪೇಳಿಯೆ ಬೋಧಿಸಿದನಾ ನಿಗಮ ಸಮ್ಮತಿಯಿಂದೆ ನಾಡೀಚಕ್ರ ವಿವರಣೆಯ (ಗಗತಾ. ೯ ಸೂಚನೆ). [ ಸಂ. ]

**ನಾಡೀಪರೀಕ್ಷೆ** (ನಾ). ನಾಡಿಯ ಮಿಡಿತವನ್ನು ಕಂಡುಹಿಡಿಯುವಿಕೆ : ನಾಡೀಪರೀಕ್ಷೆ ಆಡು ಬಲ್ಲುದೇ ? (ಗಾದೆ). [ ಸಂ. ನಾಡೀಪರೀಕ್ಷಾ ]

**ನಾಡೀಯಂತ್ರ** (ನಾ). ಗಳಿಗೆಯನ್ನು ಕಂಡುಹಿಡಿಯುವ ಸಾಧನ; ಸಮಯವನ್ನು ಕಂಡುಹಿಡಿಯುವ ಉಪಕರಣ : ಅವರು ಉಪಯೋಗಿಸುತ್ತಿದ್ದ ಉಪಕರಣಗಳು ಇವು. (೧) ನಾಡೀಯಂತ್ರ (Sun-dial). (೨) ಗೋಳಯಂತ್ರ (Sphere) (ಶಿಲ್ಪಸಾ. ೧೦೩). [ ಸಂ. ]

**ನಾಡೀವ್ರಣ** (ನಾ). ಗುದದ್ವಾರದಲ್ಲುಂಟಾಗುವ ಒಂದು ಬಗೆಯ ಹುಣ್ಣು ; ಭಗಂದರ ; ನಾರುಹುಣ್ಣು : ಹಾವುಮೆಕ್ಕೆಬೇರಂ ನೀರಲ್ಲಿ ಅರೆದು ಪೂಸೆ ನಾಡೀವ್ರಣ ಮೊದಲಾದುವು ಮಾಣ್ಗುಂ (ವಿವೈವಿ. ೧೦೫). 'ನಾಳಿವುಣ್' ಪರಾ. [ ಸಂ. ]

**ನಾಡೀಶೋಧನ** (ನಾ). [ಯೋಗ] ನಾಡಿಯ ಪರಿಶುದ್ಧಿ, –ಸ್ವಚ್ಛತೆ : ಸಾಧಕನು ಈ ಕ್ರಮವನ್ನು ಅನುಸರಿಸಿದರೆ ಉತ್ತಮಾಧಿಕಾರಿಯಾಗಿದ್ದ ಪಕ್ಷದಲ್ಲಿ ಮೂರುತಿಂಗಳಿಗೆ ಪ್ರಾಣಾಯಾಮಸಿದ್ಧಿಯಾಗಿ ನಾಡೀಶೋಧನವಾಗುತ್ತದೆ (ಭಾರದ. ೧೬೨). [ ಸಂ. ]

**ನಾಡು, ನಾಂಡು** (ನಾ). ೧. (ಕಾಡಲ್ಲದ) ಜನವಸತಿಯುಳ್ಳ ಪ್ರದೇಶ, –ಭೂಭಾಗ: "ನೀವೃತ್, ಜನಪದಃ, ದೇಶಃ, ಉಪವರ್ತನಂ–ಈ ೪ ನಾಡು" (ಹಲಾಯು. ೪೭–೧೨೯); "ಎಸೆವ ನೀವೃಜ್ಜನಪದಂ ದೇಶಮೆನೆ ನಾಡಪೆಸರಕ್ಕು" (ಮಂಗರಾ. ೫೬–೨) ; ನಾಡ ಕಾಡ ಬೆಳಸಿಂಬೆಳಸಾ ವಿಷಯಾಂತರಾಳದೊಳ್ (ಪಂಪಭಾ. ೧–೫೪) ; ನಾಡುಗಳರಸನಿದೆಂಬೊಂದಾಡಂಬರದಿಂದೆ ಸತ್ತಿಗೆತ್ತಿದುವೆನೆ ಕಣ್ಗಾಡುಂಬೊಲನಾದುವು ಬೆಳ್ಗಾಡಿನೊಳೆಲರ್ದೆಸೆವ ಬಯಲ ಬೆಳ್ದಾವರೆಗಳ್ (ಚಂದ್ರಪ. ೧–೪೮) ; ಮುನ್ನಿರ್ದ ಕಾಡೆಲ್ಲಮೆಸೆವ ನಾಡಾಗಿರಲ್ಕೆ ಮನದೊಳ್ಕುಜುಬನಾಂತಂ (ಜೈಮಿಭಾ. ೨೯–೩೨). ೨. ದೇಶ; ರಾಜ್ಯ ; ರಾಷ್ಟ್ರ : ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ (ಕವಿರಾ. ೧–೩೬) ; ಪನ್ನೆರಡು ವರ್ಷಂಬರೆಗಮಿಾ ನಾಡೆಲ್ಲಅನಾವೃಷ್ಟಿಯಾಗಿ ಮಹಾರೌದ್ರುಪಸವಮಕ್ಕುಂ

(ವಡ್ಡಾರಾ. ೮೮-೯) ; ಆ ನಾಡೊಳಗ್ರಹಾರಂ ಭೂನಾರೀಕುಚತಟಾಗ್ರಹಾರಂ ವಿಪುಳಶ್ರೀನಿಲಯವೆನಿಸಿ (ಪಂಚತಂ. ೮-೧೫) ; ನಾಡುಂ ನಂಟರ್ಕಳುಂ ನಮ್ಮಯ ಪರಿಜನಮುಂ ನಾಮುವಿಬಾ ಬುದ್ಧಿ ನಿಮ್ಮೊಳ್ ಕೂಡಲ್ ಸೈತಿರ್ಪ ಸೈಪಿನ್ನೊಡರಿಸದು (ಮಹಾನೇ. ೧೧-೮೩) ; ನಾಡಾಡಿಯಂತೆಯೇ ಮಾಡಿಬಿಟ್ಟರು ಇವಗೆ ನಾಡೆಲ್ಲ ಹುಡುಕಿದರು ಈಡಾರ ಕಾಣೆ (ಪುರಂದ. ೧-೨೦೫-೬) : ಚೆನ್ನಾಗಿ ಒಣಗಿದ ಮೇಲೆ . . . ದೂರದೂರದ ನಾಡುಗಳಿಗೆ ಮಾರಾಟದ ಸಲುವಾಗಿ ಕಳುಹುತ್ತಾರೆ (ಮುಂಬಯಿ. ೪-೫೫); ಬಡವಗೆ ನಾಡ ಮಾತ್ಯಾಕೆ ? (ಗಾದೆ). ೩. ಗ್ರಾಮಾಂತರ ಪ್ರದೇಶ; ಹಳ್ಳಿಗಾಡು. ೪. ಭೂಮಿ ; ನೆಲ : ನಗಿಸಿದರು ನಾಡನು, ಕಡಿದು ಕಗ್ಗಾಡನು (ಕನ್ನಬಾ. viii ಪ್ರಸ್ತಾವನೆ). ೫. ಆಡಳಿತ ಸೌಕರ್ಯಕ್ಕಾಗಿ ಮಾಡಿರುವ ದೇಶದ ವಿಭಾಗ : ನಂದಿಬಾವಿ[ಳ]ನಾಡುಳ್ ವ್ಯಗೇಶನಾಗೇನ್ದ್ರಾಭೀಳಭ್ಭಟಹರಪ್ಪೂರ್ (ಮೈಆರಿ. ೧೯೩೬, ೦೬-೩ ; ಸು. 450) ; ಇನ್ದ್ರಾಪಾಯ್ಯಂ ನಾಡಾ ನಾಳುತ್ತಿರೆ ಪುರಿಗೆಱೆನಾಡ ಸರಟಪುರದಾಯ್ದಾದಿಪ್ಪುರುಮಿಟ್ಟು ನಾಡಯಿಸೆ (ಎಇ. XXI, ೩೫-೪ ; 883) ; ಛೇರ, ಮತ್ತು ಪಾಂಡಿಯ ರಾಜ್ಯಗಳು ನಾಡು ಎಂದರೆ ಪ್ರಾಂತ್ಯವಾಗಿ. . .ವಿಭಾಗಿಸಲ್ಪಟ್ಟದ್ದುವು(ದಭಾಇ. ೧೦೬) ; ನಾಡಿನೊಡೆಯು ಭರಮಹೆಗ್ಗಡೆ ರಾಜ್ಯದ ಮಹಾದಣಾಯಕನಿಗಾಗಿ ಸರ್ವ ಸಿದ್ಧತೆಗಳನ್ನೂ ಮಾಡಿದ್ದನು (ಸವತಿ. ೬೫). ೬. ಒಂದು ದೇಶದ ಆಡಳಿತ; ಸರ್ಕಾರ : ಆಹಾರ ವ್ಯವಸ್ಥೆ ಮುಂತಾದವುಗಳಿಗೆ ನಾಡು ಎಷ್ಟು ವ್ಯಯ ಮಾಡಿದರೂ ವ್ಯರ್ಥವಲ್ಲ(ಶಿಕ್ಷದ. ೩೯೨). ೭. ಸಾಮಾನ್ಯಜನ: ನಾಡ ಹಿಡಿದಾಡುವ ಕೇಡಿಗದೈವವ ಬಗೆಯದಿರಮ್ಮ (ಶಿವಗೀ. ೧೬೦-೮೦೦) ; ನಾಡ ಹಂತಿಯಲಳುಕುವರ್ಜುನನೆ (ಕುವ್ಯಾಕ. ೪-೨೨); ನಾಲಿಗೆ ಒಳ್ಳೇದಾದರೆ ನಾಡೆಲ್ಲ ಒಳ್ಳೇದು (ಗಾದೆ). **ನಾಂಡು :** ೫. ವೆಂಗೀನಾಣ್ಡುವಿಷಯ ನಿವಾಸಿನೋ ರಾಷ್ಟ್ರ(ಷ್ಟ) ಕು(ಕೂ)ಟಪ್ರಮುಖಾನ್ (ಇಆ. XIII, ೨೪೯-೨೦ ; ?). ೭. ನಾಂಡು ಬರದು ನಟ್ಟ ಸಿಲಾಸಾಸನ (ಶಾಇಇ. IX_ii, ೪೦೮-೪೦ ; 1364).

**ನಾಡುನಾಡು**(ದ್ವಿರುಕ್ತಿ) : ತಿಳಿವಡೆದು ಸುಕುಮಾರವೈವಾಹಮಂ ಬೀಱೆ ನಾಡುನಾಡೊಳಗೆಲ್ಲಮಾಯುತ್ಸವಂ ನೋಡೆ (ನಂಬಿರ. ೫-೯). **ನಾಡ ಕಥೆ** = ಒಂದು ದೇಶದಲ್ಲಿ ಪ್ರಚಲಿತವಾದ ಕಥೆ ; ಇತಿಹಾಸದ ಆಧಾರವಿಲ್ಲದಿದ್ದರೂ ಜನರು ಹಿಂದಿನಿಂದಲೂ ಹೇಳುತ್ತಾ ಬಂದಿರುವ ಕಥೆ ; ಜಾನಪದ ಕಥೆ : ಇಂಥ ಅಲ್ಪ ಸ್ವಲ್ಪ ಸಾಮಗ್ರಿಯಿಂದ ಅಷ್ಟೇನೂ ಪರಿಣಾಮಕಾರಿಯಲ್ಲದ ನಾಡ ಕಥೆಯಿಂದ ಈಸ್ಕಿಲಸ್ ಏನು ಮಾಡಲು ಸಾಧ್ಯ ? (ಬದ್ಧಪ್ರ. vi ಪೀಠಿಕೆ). **ನಾಡ ಕಬು** = ಒಂದು ಬಗೆಯ ತೆರಿಗೆ (?) : ಎಲಗೂಡಿ ನಾಡ ಕಬು ಕಲವೆ ಕುಮಂರಿ ಕೋಹು ಮಕ್ಕಿ ಹಕ್ಕಲು ಬಾಲದೆರೆ (ಮೈಆರಿ. ೧೬೪೪, ೫೮-೨೦ ; 1434). **ನಾಡಕರಣ, ನಾಡಕರಣಿ, ನಾಡಕರ್ಣ, ನಾಡಕರ್ಣಿ, ನಾಡ್ಕರ್ಣಿ** = ೧. ಮುಖಂಡ ; ಮುಂದಾಳು : ದೇಶವಿಚಾರಿಗಳುಂ ನಾಡಕರಣಂಗಳುಂ (ಬೊಂಕಶಾ. ೧೯೨೯, ನವಿಲುಗುಂದ ೨೦೧-೫೫ ; 1157) ; (ಲೋಕಸ. ೪೪); ದೇಶಕುಲಕರ್ಣಿ ನಾಡಕರ್ಣಿ ಬಾಳಪ್ಪನ ಭಕ್ತಿ (ಇಎ. ೦೯೫೦, ಹಾನಗಲ್, ೧೨೭-೭ ; 1735). ೨. ಒಂದು ಮನೆತನದ ಹೆಸರು ; ಕುಲನಾಮ : ಕರಣಿ (ನಾಡ ಕರಣಿ), ಶ್ಯಾನುಭಾಗ . . . ಮೇಲಿತ್ತ ಹೆಸರುಗಳನ್ನು ಜಾತಿಗೆ . . . ಗೌರವಕ್ಕೆ ಸಂಬಂಧಿಸಿದವುಗಳೆಂದು ಮೂರು ವಿಭಾಗಗಳಾಗಿ ವಿಂಗಡಿಸಬಹುದು (ತುಳುನಾ. ೧೮೪) ; ನಾಡ್ಕರ್ಣಿ ರಾಮರಾಯರ ಹಿರಿಯ ಮಗಳು ಸುಮಿತ್ರೆಗೆ ನಾಳೆ ಮದುವೆ (ಮೂರುದಾ. ೨೦೫). **ನಾಡ ಕಾಲುವೆ** = ಜನರಿಗೆ ಉಪಯೋಗವಾಗದ ಕಾಲುವೆ,–ನಾಲೆ: ಮೂಢರಂದದೊಳೂರ ಗುದ್ದಲಿಯನ್ನು ಕೊಂಡು ನಾಡ ಕಾಲುವೆಯ ತಿದ್ದುವರೆ (ಮೋಹತ. ೭-೮). **ನಾಡ ಕುದುರೆ, ನಾಡ ಗುದುರೆ** = ನಾಡಿನಲ್ಲಿ ಹುಟ್ಟಿದ ಕುದುರೆ ; ದೇಶೀಯಾಶ್ವ ; ನಾಟಿ ಕುದುರೆ : ಹೊಲೆಯ ಕುದುರೆ ಬಿಡಿಲೆಯ ಕುದುರೆ ನಾಡ ಕುದುರೆಗೆ ಪ್ರತಿ ಗದ್ಯಾಣಂ ಒಂದಕ್ಕಂ ಬೇಳೆ (ಎಕ. V, ಬೇಲೂರು, ೭೫-೧೧೧ ; 1382) ; ಜಾತಿತುರಂಗಮಾವಳಿವ ಹೊಳಿಗಳೆಮ್ಮ ನೀತಿನಿಪುಣ ನರಪತಿಯ ಮಾತಿನೊಳಿಹವೆನೆ ನಾಡಗುದುರೆಯಾಳ್ವ ಭೂತಳಾಧಿಪರವರ್ಗೆಣೆಯೆ (ಕುರಾಸಾಂ. ೧೧-೧೯). **ನಾಡ ಕೋಡಿ** = ನಾಡಿಗೇ ತಿಳಿದ ಕೆಡುಕ ; ಮಹಾದುರುಳ ; ಎಲ್ಲರಿಗೂ ತಿಳಿದಂಥ ದುಷ್ಟ : ನಾಡ ಕೋಡಿಗಳು ವ್ಯಾಸನ ವಚನ ನಂಬದೆ ಮೂಢಗರ್ವರು ಗುರುವೆನಿಪ (ವೃಕುಂವ. ೧-೬೦). **ನಾಡ ಗಾದೆ** = ದೇಶದಲ್ಲಿ ಪ್ರಚಲಿತವಾದ ಗಾದೆ; ನಾಣ್ಣುಡಿ : ವಸುಧೆಯೊಳು ಪೊಡಮಡಲು ದೇಗುಲಂ ಬಿರ್ದ ನುಡಿ ಪಸರಿಸುವ ನಾಡ ಗಾದೆಯ ತೆಱದಿ ನಿಮ್ಮ ಸೇವಿಸ ಬಂದ ನಮಗಾಯ್ತು ನರಕವು (ಸಿದ್ಧರಾ. ೧-೨೭). **ನಾಡಗಾರ** = ದೇಶದ ಪ್ರಜೆ : ಬಳ್ಳಿ ನೀ ನಾಡಗಾರರಿಗೆ ನೆರವಾಗಿ (ಹಳ್ಳಿಯ. ೬೧). **ನಾಡ ಗಾವುಂಡ** = ನಾಡಿನ ಒಡೆಯ,–ಪ್ರಭು : ಇದಾಗವಟೆ ಗಲ್ಪಸೆಗುತ್ತನಾಡ ಗಾವುಣ್ಡನು ಎತ್ತಿಕೊಳ್ಳ (ಮೈಆರಿ. ೧೯೪೬, ೩೦ ; 1067). **ನಾಡ ಗಾವುಂಡಿ** = ಒಬ್ಬಾತನ ಹೆಸರು : ಚಿನ್ದಗಾವುಣ್ಡರ ಮಗ ನಾಡಗಾವುಣ್ಡಿ ಗಾವುಣ್ಡಗೆಯ್ವನ್ದು (ಎಕ. X, ಮಾಲೂರು. ೯೪-೮ ; ಸು. 950). **ನಾಡ ಗೀತೆ** = ೧. ನಾಡಿನ ಹಿರಿಮೆಯನ್ನು ಸಾರುವ ಹಾಡು, – ಪದ : ಅಂದಿನ ಕಾರ್ಯಕ್ರಮವು 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ನಾಡ ಗೀತೆಯೊಂದಿಗೆ ಆರಂಭವಾಯಿತು (ರೂಢಿ). ೨. ದೇಶಭಕ್ತಿಗೀತೆ : 'ಜನಗಣಮನ' ಎಂಬ ನಾಡಗೀತೆಯ ನಂತರ ಅಂದಿನ ಸಭೆ ಮುಕ್ತಾಯವಾಯಿತು (ರೂಢಿ). **ನಾಡ ಗುಡಿ** = ರಾಷ್ಟ್ರಧ್ವಜ : ನಮ್ಮ ನಾಡ ಗುಡಿಯ ನೋಡ ನೋಡಿರಣ್ಣ ಹೇಗಿದೆ ! (ಕಪವು. ೨-೩೬). **ನಾಡ ಚಲ್ಲವತ್ತ** = ಸುಳ್ಳುಗಾರನಾದ ವಂಚಕ; ನಂಬಿಸಿ ಮೋಸಮಾಡುವವನು : ಕೆಮ್ಮಗೆ ನಾಡ ಚಲ್ಲವತ್ತರ ನುಡಿಗೊಳ್ಳದಿರ್ (ಪಂಪಭಾ. ೯-೪೨). **ನಾಡ ಜಂಬುಕ** = ತುಚ್ಛ ವ್ಯಕ್ತಿ ; ದಡ್ಡ ; ಕೀಳು ಮನುಷ್ಯ : ಕಣ್ಣೀರವನನ್ನರಿಯಲಾರದ ನಾಡ ಜಂಬುಕ (ಜಟ್ಟಆ. ೧೯೫-೨೨). **ನಾಡ ಜನ** = ಸಾಮಾನ್ಯ ಜನ : ಹರಿಭಕ್ತರನ್ನು ಕುರಿತು ಕನಕದಾಸರು ನಾಡ ಜನರುಗಳಂತೆ ನಡೆಯರು, ನುಡಿಯರು . . ಎಂದಿದ್ದಾರೆ (ಭಾರಿದ. ೪೦೨). **ನಾಡ ಜೂದು** = ೧. ತುಚ್ಛವಾದ ಜೂಜು, – ಪಗಡೆಯಾಟ. ೨. ಮೋಸದ ಜೂಜು : ಇದು ಲಾಕ್ಷಾಗೇಹದಾಹಕ್ಕಿದು ವಿಷಮವಿಷಾನ್ನಕ್ಕಿದಾ ನಾಡ ಜೂದಿಂಗೆ . . . ಎಂದೋವದೆ ಪೊಯ್ದಂ (ಗದಾಯು. ೮-೧೯). **ನಾಡಡವಿಗೋಡಗ** = ಸಾಮಾನ್ಯವಾದ ಕಾಡುಕಪಿ : ಕಡಲ ಮಧ್ಯದ ಖಳನೊಡನೆ ಕೈಹೊಡೆದುದಲ್ಲಿಗೆ ತೆತ್ತಿಗರು ನಾಡಡವಿಗೋಡಗವಾಳು ಕುದುರೆಗಳಸುರವಿಗ್ರಹಕೆ (ಕುವ್ಯಾಆ. ೨೨-೫೧). **ನಾಡ ತಂದೆ** = ದೇಶಕ್ಕೆ ತಂದೆಯಂತೆ ಇರುವವನು ; ರಾಷ್ಟ್ರಪಿತ : ಹರಿಜನರ ಬಳಗ ಉಳಿದವರ ಒಳಗೆ ಬಳಸಿದೆಯೊ ನಾಡ ತಂದೆ (ಸೂರ್ಯಪಾ. ೧೪-೩). **ನಾಡ ತಕ್ಕ** = ದೇಶಭಾಗದ ಮುಖಂಡ ; ಸುತ್ತುಮುತ್ತಿನ ಪ್ರದೇಶದ ಜನಕ್ಕೆ ಮುಖಂಡ : ನಾಡ ತಕ್ಕ ಸುಬ್ಬಯ್ಯವೋಲಿಗೆ ಕುಲದ ಅಭಿಮಾನ ಹೆಚ್ಚು (ಹುಲಿಹಾ. ೭೮). **ನಾಡ ತಕ್ಕಾಮೆ** = ನಾಡಿನ ಮುಖಂಡ ಪದವಿ,–ಅಧಿಕಾರ : ಹಾಲೇರಿವಂಶದ ಅರಸರ ಆಡಳಿತ ಪ್ರಾರಂಭವಾಗುವ ಮುನ್ನ ರೂಢಿಯಲ್ಲಿದ್ದ ನಾಡ ತಕ್ಕಾಮೆ ಮತ್ತು ಗ್ರಾಮ ತಕ್ಕಾಮೆಗಳನ್ನು ಊರ್ಜಿತಕ್ಕೆ ತಂದರು (ಹುಲಿಹಾ. ೮೪). **ನಾಡ ತೊತ್ತು** = ದೇಶದ ಸೇವಕ ಸರ್ವರ ಕರುಣದ ಶಿಶು ನಾನು, ನಾಡ ತೊತ್ತು (ಕಜಸಾ. ೧೪೬). **ನಾಡ ದೇವಿ** = ೧. ನಾಡಿನ ಅಧಿದೇವತೆ. ೨. ಕನ್ನಡ ಭಾಷೆಯ ಅಭಿಮಾನಿ ದೇವತೆ ; ಭುವನೇಶ್ವರಿ : ಮುಂಜಾನೆ ನಾಡ ದೇವಿಯ ಮೆರವಣಿಗೆಯು ವೈಭವದಿಂದ ನಡೆಯುವುದು (ಕಪವು. ೫-೧೨). **ನಾಡ ದೈವ** = ಕ್ಷುದ್ರದೇವತೆ: ದೆಸೆಗೆಟ್ಟು ನಾಡ ದೈವಂಗಳಿಗೆ ಹಲುಬಿದಡೆ ನೊಸಲ ಬರಹವ ತೊಡೆದು ತಿದ್ದಲಳವೆ (ಕನಕ. ೫೪-೩). **ನಾಡ ಧಡ್ಡಿ** = ಏನೂ ತಿಳಿಯಂದ ಮೂಢೆ ;

ಮಹಾಮೂರ್ಖಹೆಂಗಸಂ : ಕಣ್ಣೀರು ಸುರಿಸಲಿಕ್ಕೆ ಈಗೇನು ಆಗೇದೆ ಧಡ್ಡಿ – ನಾಡ ಧಡ್ಡಿ (ದಾಸಕೃ. ೦೦೩). **ನಾಡ ನರಿ** = ಬಡನರಿ ; ಹೇಡಿ ನರಿ : ರಿಪುವಾಹಿನಿಯನಿಱಿಯದೆ ನಾಡ ನರಿಯವೊಲೆನಗೆ ನೀ ಹಲುಗಿರಿಯೆ ಬಿಡುವೆನೆ (ಕುವ್ಯಾವಿ. ೬-೧೯). **ನಾಡ ನಾಲಗೆ** = (?) : ಪಟ್ಟಣಸಾಮಿ ಮಹದೇವಸೆಟ್ಟಿ ನಾಡ ನಾಲಗೆ ಬಮ್ಮಿಸೆಟ್ಟಿಯೊಳಗಾದ ಸಮಸ್ತ ನಖರಂಗಳುಂ ಸಂತೆಯ ಆಯುವಂ ಸಲಿಸುವರು (ಎಕ. XII, ತಿಪಟೂ. ೪೮-೩೦ ; 1214). **ನಾಡ ನಾಲಗೆಗೆಳೆಯ** = ಸಾಮಾನ್ಯವಾಗಿ ಮಾತಿನಲ್ಲಿ ಮಾತ್ರ ಸ್ನೇಹಿತನಾಗಿರುವವನು ; ಕೆಲಸಕ್ಕೆ ಹಿಂದೆಗೆಯುವವನು : ಸವಿವಾತುಗಳ ನಿನಗಾಡುವವರಿಗೆ ಚಿತ್ತಗೊಡದಿರು ಹಿಸುಣ ಹೊಗಿಸಱರು ನಾಡ ನಾಲಗೆಗೆಳೆಯರೆಂಬುದ ಮಾಡದಿರು (ಕುವ್ಯಾಉ. ೯-೧೮). **ನಾಡ ನುಡಿ** = ೧. ಗಾದೆ ; ಲೋಕೋಕ್ತಿ ; ನಾಣ್ಣುಡಿ : ಹಾಡಿ ಹಡೆದಾಡಿ ಹೋಗಾಡಿದಂ ಕಡೆಗೆಂಬ ನಾಡ ನುಡಿಯಂತೆ (ಸೋಮಚ. ೧-೬೭). ೨. ಕೀಳುಮಾತಂ : ಪೊಂದುವ ಸಂಧಿಯ ನುಡಿಗಳನಾಡದೆ ಸಲ್ಲದ ನಿಲ್ಲದ ನಾಡ ನಂಡಿಗಳನೆಮ್ಮವರ್ ನೋವಂತಿರೆ ಸುಡುವಾತುಗಳಂ ಗಟಿಪುವಯ್! (ರಾಮಾಶ್ವ. ೧೪೨-೨೯). **ನಾಡ ಪದ** = ನಾಡಿನಲ್ಲಿ ಪ್ರಚಲಿತವಾಗಿರುವ ಹಾಡು,–ಗೀತೆ ; ಜನಪದಗೀತೆ : ವಾಲ್ಮೀಕಿಯ ಕಾಲಕ್ಕೆ ರಾಮಾಯಣದ ಕಥೆಯು ದೇಶದಲ್ಲೆಲ್ಲ ನಾಡ ಪದಗಳ ರೂಪದಲ್ಲಿ ಹಬ್ಬಿ ಹರಡಿರಬೇಕೆಂದು ಪಾಶ್ಚಾತ್ಯವಿದ್ವಾಂಸರು ಊಹಿಸುತ್ತಾರೆ (ಭಾರದ. ೫೭). **ನಾಡ ಪಾಲ** = ನಾಡಿನ ಪ್ರಭು,–ಮುಖಂಡ: ಬೆಳ್ಳರೆಶೀಮೆ ಹೊಸೂರ ನಾಡ ಪಾಲ ಮೂಡಲ ಬೈಲ ಗ್ರಾಮದಲ್ಲೂ . . . ಭೂಮಿಯಂನ್ನು ಮೂಲಕ್ಕೆ ಮಾಡಿಕೊಂಡು (ಮೈಆರಿ. ೧೯೩೪, ೯-೩ ; 1690). **ನಾಡ ಪೆರ್ಗಡೆ, ನಾಡ ಹೆಗ್ಗಡೆ** = ನಾಡ ಪಾಲ : ತೊಳಕಲೆಯ ಸಿರಿಯಮ ಸೆಟ್ಟಿಯುಂ ನಾಡ ಪೆರ್ಗಡೆ ಹಮ್ಮೆಸೆಟ್ಟಿ [ ಯುಂ ] (ಎಇ. XIX, ೩೭-೧೫ ; 1144) ; ನಾಡ ಹೆಗ್ಗಡೆ ತಡವಾಡದೆ ಕುದುರೆಯನ್ನೇರಿ ಹೋದನು (ಸವತಿ. ೫೭). **ನಾಡ ಪ್ರಭು** = ನಾಡ ಪಾಲ : ನಾಡ ಪ್ರಭುಗಳ ಸನ್ನಿಧಾನದಲು . . . ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಎಕ. VII, ಶಿವಮೊ. ೯೭-೪೮ ; 1113) ; ನಾಡ ಪ್ರಭುಗಳು ಸ್ಥಾನಮಾನ್ಯವೊಳಗಾದ ಸಮಸ್ತಪ್ರಜೆಗಳ ಪುರಸ್ಸರದಿಂದವೂ . . . ಸಾಕಲ್ಯೇನ ಹಸ್ತಸ್ಥವಾಗಿ ಕೊಟ್ಟು (ಎಕ. XI, ಚಿತ್ರದು. ೧೨-೧೭ ; 1286). **ನಾಡ ಬಾವುಟ** = ನಾಡ ಗುಡಿ : ಸ್ವಾತಂತ್ರ್ಯದಿನದಂದು ಸರ್ಕಾರಿ ಕಟ್ಟಡಗಳ ಮೇಲೆ ನಾಡ ಬಾವುಟವನ್ನು ಏರಿಸುತ್ತಾರೆ (ರೂಢಿ). **ನಾಡ ಬೇಂಟೆ** = ಸುತ್ತಮುತ್ತಿನ ಗ್ರಾಮಸ್ಥರು ಒಟ್ಟುಗೂಡಿ ಆಡುವ ಬೇಟೆ : ಕಾಡ ಕಟ್ಟಳೆ ನಾಡ ಬೇಂಟೆಯಂ ಕೊರಲೊಂಕೆ (ಕಾಲೂರ. ೪೯-೭೨). **ನಾಡ ಮದ್ದು** = ಸ್ವದೇಶೀ ಔಷಧಿ ; ಜನರು ತಮ್ಮ ಅನುಭವದಿಂದ ಪ್ರಯೋಗಿಸುವ ಔಷಧ ; ನಾಟಿ ಮದ್ದು : ನಾಡ ಮದ್ದಂ ತಿಂದು ಕುತ್ತ ಕೆಡದಿರಬಹುದೆ (ಹಚಕಾ. ೦೦-೨೪). **ನಾಡ ಮಾತು** = ೧. ದೇಶದ ವೃತ್ತಾಂತ ; ರಾಜಕೀಯಕ್ಕೆ ಸಂಬಂಧಪಟ್ಟ ಮಾತಂ : ನಾಡ ಮಾತುಗಳೇತಕೋ ಸಂಗೀತವು ಪಾಡುವ ಸಮಯವೇನೊ ಗಾಡಿಗಾಱ ಶ್ರೀಪುರಂದರವಿಠಲನ ಪಾಡಿ ಪಂಥಗಳೊಡಗೂಡುವ ಸಮಯಕ್ಕೆ (ಪುರಂದ. ೩-೫೨-೩) ; ಅಡಿಗಟ್ಟಣವೇಕೆ ಬೋಡಂಗೆ ಕಬ್ಬೇಕೆ ಕೋಡಗನ ಕೈಗೆ ಬಳಿಯೇಕೆ ಬಡವಂಗೆ ನಾಡ ಮಾತೇಕೆ (ಸರ್ವಜ್ಞ. ೧೩೭೪). ೨. ಗಾದೆ ; ನಾಣ್ಣುಡಿ : (+). ೩. ಜನಸಾಮಾನ್ಯರ ಮಾತಂ ; ಯೋಚನೆ ಮಾಡದೆ ಆಡುವ ಮಾತಂ ; ಅಪಲಾಪ : ನಾಡ ಮಾತು ಬೇಡ ಸಟಿಗೊಡ್ಡಿ ಬೇಡ ಕೂಡಲ ಸಂಗನ ಶರಣರ (ಬಸವ. ೨೭೮) ; ನಾಡ ಮಾತೇನೊಲಿದೊಡಂ ಕೊಂಡಾಡು ಮೇಣಲ್ಲದಡೆ ಲಘುವಂ ಮಾಡಿ ನುಡಿಯದಿರು (ಬಸಪು. ೪೪-೫೭); ಮತ್ತೆ ಮಾಣದೆ ನಾಡ ಮಾತನು ಕಲಿತು ನಮ್ಮೊಡನಾಡುತಿಹರೆ (ಪ್ರಭುಲೀ. ೧೩-೧೨) ; ನಾಡ ಮಾತು ಬೇಡ ನಾಲಿಗೆ ನಿನ್ನ ಬೇಡಿಕೊಂಬೆನು ಕಂಡ್ಯ ನಾಲಿಗೆ (ಪುರಂದ. ೫-೪೮ ಪಲ್ಲವಿ) ; ಕೇಡು ಬರಲದಕಂಜೆನಂಜೆನು ನಾಡ ಮಾತುಗಳೇಕೆ (ನಿಭಾಗ. ೬-೭-೨೮) ; ಬಹುಜನದ ಮುಂದೆ ಸುಳಿವಳ್ನಾಡ ಮಾತಂಗಳಹುವವಳ್ . . . ನಿಲ್ವಳೇ ಶಿಕ್ಷಿಸಿದೊಡೆ (ಜೈಮಿಭಾ. ೫-೫೭) ; ನಾಡ ಮಾತೇಕೆ ! ಎನಗೆಂತೋ ಮೇಣುಂ ಮೇಣ್ ಕೇಳ್ವೆನೆಂಬೊಂದಾಸೆ ಪುಟ್ಟುಗುಂ (ರಾಮಾಶ್ವ. ೦೬೪-೧೭). **ನಾಡ ಮಾನಸ** = ಸಾಮಾನ್ಯಮನುಷ್ಯ ; ಅಲ್ಪ : ಪರಿಕಿಸೆ ನಾಡಮಾನಸರದೇಂ ನೆರೆ ಪೋಲ್ವರೆ ಜಕ್ಕಿಸೆಟ್ಟಿಯ (ಕಇ. IV, ೦೦-೩೯ ; 1121). **ನಾಡ ಮುಖ** = ದೇಶದ ಮುಖಂಡ, – ಮುಖ್ಯಸ್ಥ : ತಳಗೆಯ ನಾಡಾಳುವ ನಾಡ ಮುಖಗಳು ರಣಪಟುವಗವುಡನ ಮಗ ದಾಳಿಗವುಡ (ಎಕ. XIV, ತಿರುಮ. ೭೮-೩೦ ; 1277). **ನಾಡವರ್, ನಾಡವರು** = ೧. ದೇಶದ ಜನರು ; ಪ್ರಜೆಗಳು : ಪದನಱಿದು ನುಡಿಯಲುಂ ನುಡಿದುದನಱಿದಾರಯಲುಮಾರ್ಪರ್ಆ ನಾಡವರ್ಗಳ್ (ಕವಿರಾ. ೧-೩೮) ; ಮುನ್ನಿನ ದಿವಸಂ ನಾಡವರೆಲ್ಲಂ ಪೂಜಿಸಿ ಪೋದ ಕಿಟ್ಟನೆತ್ತುಮಂ ಬಂಡಿಯುಮಂ ತಂದು ತೋಱಿ (ಧರ್ಮಾಮೃ. ೨-೧೯೧). ೨. ಸಾಮಾನ್ಯಜನ ; ಜನಸಾಮಾನ್ಯ : ಮೇರೆಯುಂ ತಪ್ಪುಹ ಮಾನಿಸರಂ ಕಂಡೊಡೆ ಪಂಚಮಹಾಪಾತಕರೆಂದು ಬೈವ ನಾಡವರ ಬೈಗುಳ್ಗಳಿಂದವಂ (ಧರ್ಮಾಮೃ. ೯-೬೮) ; ನಾಡವರು ಅವರಿಗೆ ನರಿಬೇಟೆಗಾರವಾದಪ್ಪ ಎಂದು ಗೌರವಸಂಬೋಧನೆಯನ್ನು ಬಳಸುತ್ತಿದ್ದರು (ಹುಲಿಹಾ. ೦೭). ೩. ನಾಡಿನ ಮುಖಂಡರು : ಮುಂದೆ ನಾಡವರು ಆ ಹೆಂಡೆ ಮುಂದಕೆ ಸಾಗಿ ಹೋಗುವಾಗ (ಎಕ. VII, ಶಿವಮೊ. ೦೦೭-೩೫ ; 1576 ?). ೪. (ಕರಾ) ಒಂದು ಜನಾಂಗದ ಹೆಸರು : ಕರಾವಳಿ ಪ್ರದೇಶದಲ್ಲಿ ವಾಸಿಸುವ ಜನರಲ್ಲಿ ನಾಡವರು, ಹಾಲಕ್ಕಿ ಒಕ್ಕಲರು . . . ಒಕ್ಕಲತನದಿಂದ ಜೀವಿಸುವವರು (ಕರವೀ. ೬) ; ನಾಡವರು ಯಾನಾಡ ಬಂಟರು – ಜಿಲ್ಲೆಯ ಉತ್ತರ ಭಾಗದಲ್ಲಿದ್ದು ಕನ್ನಡ ಮಾತನಾಡುವವರು (ತುಳುನಾ. ೫೦). **ನಾಡ ವಾರ್ತೆ** = ನಾಡಿನ ಮಾತು ; ಲೋಕಾಭಿರಾಮವಾದ ಮಾತು ; ಲೌಕಿಕವಾದ ಮಾತಂ : ರೂಢಿಯೊಳಗೆ ನಮ್ಮ ಪುರಂದರವಿಠಲನ್ನ ಪಾಡಿ ಪೊಗಳದೆ ನಾಡ ವಾರ್ತೆಯಾಡುವರು (ಜಗದಾ. ೦೦೦). **ನಾಡವೊಪ್ಪ** = ನಾಡಿನ ಪರವಾಗಿ ಹಾಕುವ, ಒಬ್ಬ ಅಧಿಕೃತ ವ್ಯಕ್ತಿಯ ಸಹಿ,–ಹಸ್ತಾಂಕನ : ಸ್ವರುಚಿಯಿಂದ ಧಾರಾಪೂರ್ವ್ವಕವಾಗಿ ಬಿಟ್ಟ ಧರ್ಮ್ಮ ನಾಡವೊಪ್ಪ ಶ್ರೀಭೀಮನಾಥ ಮಲಪರೊಳು ಗಂಡ (ಎಕ. VII, ಶಿವಮೊ. ೦೯-೧೮ ; 1369). **ನಾಡ ಸೇನಬೋವ** = ನಾಡಿನ ಶಾನುಭೋಗ ; ನಾಡಕರಣಿ : ನಾಡ ಸೇನಬೋವ ಬಾಚಣ್ಣ (ಎಕ. XI, ಚಿತ್ರದು. ೧೨-೩೪ ; 1286). **ನಾಡ ಸ್ವಾಮಿ** = ನಾಡ ಪಾಲ : ನಾಡ ಸ್ವಾಮಿ ಶಂಕರೈಯ್ಯನು ಸೇನಬೋವ ಶಂಕರೈಯ್ಯನು (ಎಕ. VII, ಶಿಕಾರಿ. ೯೪-೧೫ ; 1094) ; **ನಾಡ ಹಬ್ಬ** = ಏಕೀಕರಣದ ದೃಷ್ಟಿಯಿಂದ ಪ್ರಾರಂಭಿಸಿದ ದಸರಾ ಮೊದಲಾದ ಹಬ್ಬ : ತಾವು ಮಾಡಿಕೊಂಡ ನಾಡ ಹಬ್ಬದ ಯೋಜನೆಯನ್ನು ಅವರಿಗೆ ತಿಳಿಸಲು ಆತುರಗೊಂಡಿದ್ದರು (ಕಪು. ೫-೦೨) ; ಅವರ ಭೆಟ್ಟಿಯ ಎರಡನೆಯ ಪ್ರಸಂಗವು ಕೂಡಿ ಬಂದುದು ಎಂದರೆ . . . ನಾಡ ಹಬ್ಬದ ಕಾಲಕ್ಕೆ (ಪ್ರಬಂಧ. ೯೪) ; ಅಂದು ಅಲ್ಲಿ ನಾಡ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸಲಾಯಿತು (ಆಜೋಲೀ. ೦೬೧). **ನಾಡ ಹಲವರು, ನಾಡಿನ ಹಲವರು** = ದೇಶದ ಮುಖಂಡರು ; ದೇಶದ ಪಂಚಾಯಿತಿಯವರು: ಶ್ರೀಮತು × × × ನಾಡ ಹಲವರು ಸ್ವಾಮಿತನವನು ಸೋಮೋಜರ ಸೆಟ್ಟಿಯ ಮಕ್ಕಳು ವೆಂಗಟಸೆಟ್ಟಿಗೆ . . . ಕೊಟ್ಟ ಸರ್ವಮಾನ್ಯ ಹೊಲ ಖ ೧ ಗದ್ದೆ (ಮೈಆರಿ. ೧೯೨೫, ೦೦೦-೨ ; ?) ; (ಲೋಕಸ. ೭೧). **ನಾಡ ಹಾಡು** = ನಾಡಗೀತೆ ೧ : ಕಾರ್ಯಕ್ರಮದ ಮೊದಲಿನಲ್ಲಿ ನಾಡ ಹಾಡು ಹಾಡುವುದು ವಾಡಿಕೆ (ರೂಢಿ). ೨.= ನಾಡಗೀತೆ ೨ : ನಾಡ ಹಾಡು ಹೇಳುವಾಗ ಎದ್ದು ನಿಲ್ಲಬೇಕು ಎಂದು ಮಕ್ಕಳಿಗೆ ಹೇಳಿಕೊಡಬೇಕು (ರೂಢಿ). **ನಾಡ ಹಾದಿ** = ಹಳ್ಳಿಯಿಂದ ಹಳ್ಳಿಗೆ ತಿರುಗಾಡಲು ಮಾಡಿಕೊಂಡಿರುವ ಕಾಲುದಾರಿ ; ಹಳ್ಳಿಗಾಡಿನ ದಾರಿ : ನರ್ತನ ಮಾಡುವ ಕಾಲು ನಾಡ ಹಾದಿಯನ್ನು

ಮೆಟ್ಟೀತೆ! (ಶಾಂತಲಾ. ೧೨೨). **ನಾಡ ಹಾನೆ** = ಒಂದು ಅಳತೆ : ಶಾಸನಗಳಲ್ಲಿ ಬರುವ ನಾಣ್ಯಗಳೂ ಅಳತೆಗಳೂ:- ಗಡ್ಯಾಣ (ಗದ್ಯಾಣ) . . . ಹಾನೆ, ನಾಡ ಹಾನೆ, ಕಂಚಿನ ಹಾನೆ (ತುಳುನಾ. ೩೭೧). **ನಾಡ ಹುಚ್ಚ** = ಏನೇನೂ ತಿಳಿಯದವನು ; ಬಹಳ ದಡ್ಡ : ಹಾಗೆ ಕೇಳೋ ಹುಚ್ಚಾ, ನಾಡ ಹುಚ್ಚಾ (ಹನ್ನೊಂದ. ೧೭). **ನಾಡ ಹೆಣ್ಣು** = ಹಳ್ಳಿಯ ಹೆಂಗಸು : ಕಾವ ತಿಳಿಬಗೆಯಿರ್ಪ ನಾಡ ಹೆಣ್ಣಲ್ಲಿ (ಕಾಲೂರ. ೨೭-೧೫). **ನಾಡಾಳ್ವೋನ್**= ದೇಶವನ್ನು ಆಳುವವನು ; ನಾಡ ಪ್ರಭು : ಇದಾ ನಾಡಾಳ್ವೋನಾನುಂ ಊರಾಳ್ವೋನಾನುಂ ಊರಾ ಒಕ್ಕಲನುಂ ಅಟಿದೋರ್ ಪಂಚಮಹಾಪಾತಕ ... ಅಕ್ಕುಂ (ಎಕ. VI, ಚಿಕ್ಕಮ. ೯೨-೬; ಸು. 750 ?). **ನಾಡುಗಳ್**=ನಾಡಿನ ಅಧಿಕಾರ ನಡೆಸುವ ಮಹಾಜನರು: ಶ್ರೀಮಾಣಿಕೇಶ್ವರದೇವರ ಶ್ರೀಕಾರ್ಯ ನಡೆವಂತಾಗಿ ನಾಡುಗಳ್ ಕೊಟ್ಟ ಆಯದಾಯವಾವುದೆಂದಡೆ (ಮುಂಬಯಿ. X, ೨೪೯-೭೩ ; 1219). **ನಾಡು ಬೀಡು** = ದೇಶ ಮತ್ತು ವಾಸಸ್ಥಳ ; ಅಖಂಡ ದೇಶ : ಸಂಪ್ರೀತಿಯನು ಸುಜನರಲಿ ನಿರ್ಮಳನೀತಿಯನು ಪರಿವಾರಪುರಜನ ನಾಡುಬೀಡಿನಲಿ . . . ಅಖಿಳಜ್ಞಾತಿಗಳಲೆಚ್ಚ ಟಿಕೆಯೊಳಗಿಹುದು (ಕುವ್ಯಾಸ. ೧೦-೧೯) ; ನಾಡುಬೀಡೆನಗಾಯ್ತು ವಶ ಖಯಖೋಡಿಯಿಲ್ಲದೆ ಶಕ್ರಪದದಲಿ ಜಾಡಿಸುವೆನದನೇನ ಹೇಳುವೆನೆನುತ ಬಿಸುಸುಯ್ದ (ಕುವ್ಯಾಅ. ೧೩-೬೪) ; ಎಲ್ಲೆಗಳಿದಬ್ಧಿಯೆನಲ್ ಪಡೆಯೇಂ ಕಡಂಗಿತೋ ನಡೆದುದು ನಾಡುಬೀಡು ಗುಡಿಗೋಹುರಗಳ್ ಪುಡಿಯೇಟ್ ಭೋರೆನಲ್ (ಚಿಕವಿ. ೨-೧೦೫). **ನಾಡುಬೀಡುಗ** = ದೇಶದಲ್ಲಿ ವಾಸಮಾಡುವವನು; ದೇಶದ ಸಾಮಾನ್ಯ ಪ್ರಜೆ ; ನಾಡುಗ : ಕಾಣ್ಕೆ ಕೊಂಡು ಭಕ್ತಿಭರದಿಂ ಪುಗುವ ನಾಡುಬೀಡುಗರುಂ (ಚಿಕವಂ. ೧೨೧-೧೭).

[ ದೇ.॥ ತಮಿ. ಮಲ. ನಾಟು; ತುಳು. ನಾಡ್, ನಾಡು; ತೆಲು. ನಾಡು; ಗೊಂಡಿ. ನಾರ್; ಕುಇ. ನಾಟೊ ]

**ನಾಡುಅಕ್ರೋಟು** (ನಾ). ಒಂದು ಬಗೆಯ ಮರ : ನಾಡುಅಕ್ರೋಟು, ಅಲ್ಯೂರೈಟಸ್ ಗಿಡ (ಮ್ಯಜಿಗಿ. ೪-೬೮).

[ ನಾಡು + ಅಕ್ರೋಟು (< ಅಕ್ರೋಡ) ]

**ನಾಡುಗ, ನಾಡಗ** (ನಾ). ೧. ಸಾಮಾನ್ಯ ಮನುಷ್ಯ ; ಸಾಧಾರಣ ವ್ಯಕ್ತಿ : ಆಡಿಸ ಹಿಂಡಾನೆಯ ಹಿಡಿವಂತಾ ರೂಢಿವಡೆದ ಬಲಯುತನಂ ನಾಡುಗರೆಯ್ದಿ ಹಿಡಿಯೆ (ಪ್ರಭಂಜ. ೨-೧೫೦) ; ಎಂದನಾ ಫಣಿಭೂಷಣನು ಶೂಲವೇಱನೇ ಲೋಕರಕ್ಷಣದಕ್ಷ ಲಕ್ಷ್ಮಿಯಧಿಪತಿಯುಳಿದ ನಾಡುಗರ ಪಾಡೇನು ಕೇಳ್ನಂದನ (ಸಮ್ಮಕಾ. ೪-೩೧). ೨. ನಾಡನ್ನಾಳುವವನು ; ದೊರೆ : ನಾಡುಗರಿಗೆ ಸೇನೆದೋಱಿ ಗೆಲ್ದನು ಯುಂದ್ಧ ಮಾಡುವರಿವಗಿದಿರುಂಟೆ (ಭರತ. ೪೯-೧೩೭). ೩. ದಡ್ಡ ; ಮೂಢ; ಅಜ್ಞ: ನಾಡುಗರೊಳು ವರ್ತಿಸದಿರು (ಯೋಗಾಂವಿ. ೫-೫). **ನಾಡಗ** : ೩. ಕೇಳು ನಾಡಗರೊಲಿದು ಗಾಜಿನ ಮಾಲೆಯನು ಕೊಳ್ವಂತೆ (ಸ್ವರೂಪಾ. ೨-೧೭). [ ನಾಡು + -ಗ₂ ]

**ನಾಡುಗವುಡ, ನಾಡುಗೌಡ** (ನಾ). ಗ್ರಾಮದ ವ್ಯವಹಾರಗಳಲ್ಲಿ ತೀರ್ಪು ನೀಡುವ ಮುಖಂಡ; ಹಳ್ಳಿಯ ಮುಖ್ಯಸ್ಥ ; ಪಟೇಲ : (ಪ). **ನಾಡುಗೌಡ** : ನಾಡುಗೌಡನ ಪಂಚಾಯ್ತಿಯಲ್ಲಿ ಫಿರ್ಯಾದಿ ಅಪರಾಧಿಗಳಿಬ್ಬರೂ ತಮ್ಮ ತಮ್ಮ ಪರವಾಗಿ ವಾದಿಸುವವರನ್ನು ನೇಮಿಸಿಕೊಳ್ಳುವ ಅಧಿಕಾರವಿತ್ತು (ಹುಟ್ಟಿಹ. ೧೭) ; ಪಟೇಲನಿಗೆ—ಪಟೇಲ, ಗೌಡ, ನಾಡುಗೌಡ ಎಜಮಾನ, ರಡ್ಡಿ, ಪೆದ್ದಕಾಪು, ಮಾನ್ಯಕರಣಂ, ಮಣಿಗಾರ ಅಥವಾ ಅಡಿಗಾರ, ನಾಯಿಡು ವಗ್ಯೆರೆ ಹೆಸರುಗಳುಂಟು (ಗ್ರಾಮಾಕ. ೧).

[ ನಾಡು +ಗವುಡ₁ (< ಗಾಮುಂಡ) ]

**ನಾಡುಗಾಣಿ** (ನಾ). ಒಂದು ಊರಿನ ಹೆಸರು : ಸೂಜಿಕೋರುಮ್ ನಾಡುಗಾಣಿಮ್ ಪ್ರಥುತರ ಮಿಡಿಗೇ ಸೂಳಿಶ್ಶೈಲೇಂದ್ರ ದುಗ್ಗೇನನ್ಮಾಮ್ (ಮೈಅರಿ. ೧೯೨೦, ೧೦-೭೭ ; 967). [ ? ]

**ನಾಡುಗಾದೆ** (ನಾ). ಒಂದು ದೇಶದಲ್ಲಿ ಪ್ರಚಲಿತವಾಗಿರುವ ಮಾತು ; ಲೋಕೋಕ್ತಿ ; ನಾಣ್ನುಡಿ : (ಚತುನಿ. ಪ. I, ೭೫).

[ ನಾಡು + ಗಾದೆ ]

**ನಾಡುಗೌಡ** ‘ನಾಡುಗವುಡ’ ನೋ.

**ನಾಡುತಟ್ಟು** (ನಾ). ಸಾಮಾನ್ಯವಾದ ಕುದುರೆ ; ಗಿಡ್ಡಕುದುರೆ : ಅವನು ತನ್ನ ಹೊಲದ ಹತ್ತಿರ ಮೇದುಕೊಂಡಿದ್ದ ನಾಡುತಟ್ಟಾದ ಒಂದು ಕುದುರೆಯನ್ನು ಹಿಡಿದುಕೊಂಡು ಬಂದು . . . ಕಾಣಿಕೆಯಾಗಿ ಒಪ್ಪಿಸಿದನು (ನಗಗ. ೫೦). [ ನಾಡು + ತಟ್ಟು₂ ]

**ನಾಡುನುಡಿ** (ನಾ). ಜನಸಾಮಾನ್ಯರಲ್ಲಿ ಬಳಕೆಯಲ್ಲಿರುವ ಮಾತು : ಆಳ್ವಾರರ ಹಾಡುಗಳು ನಾಡುನುಡಿಯಲ್ಲಿದ್ದುದರಿಂದ ಇವು ಜನಸಾಮಾನ್ಯರಲ್ಲಿ ಹರಡುವುದಕ್ಕೆ ಅವಕಾಶವಾಯಿತು (ಭಾರದ. ౩೪೯).

[ ನಾಡು + ನುಡಿ₂ ]

**ನಾಡುನೇಗಿಲು** (ನಾ). ಹಳ್ಳಿಗರು ಉಪಯೋಗಿಸುತ್ತಿದ್ದ ನೇಗಿಲು : ಈಗ ಸಾಮಾನ್ಯವಾಗಿ ಉಪಯೋಗದಲ್ಲಿರುವ ನಾಡುನೇಗಿಲು ಎಷ್ಟೋ ಶತಮಾನಗಳಿಂದ ಬಳಕೆಯಲ್ಲಿದೆ (ವ್ಯವಮ. ೮).

[ ನಾಡು + ನೇಗಿಲು (<ನೇಗಿಲ್) ]

**ನಾಡುಪ್ಪು** (ನಾ). ಸಾಮಾನ್ಯವಾದ ಉಪ್ಪು,-ಲವಣ : ಸಾವಿರಪಾಲಿಗೆ ಸಾಧಾರಣವಾಗಿ ಇರುವ ೩೪-೩೫ ಪಾಲು ಉಪ್ಪಿನಲ್ಲಿ ಕಲ್ಲುಪ್ಪು ಅಥವಾ ನಾಡುಪ್ಪು (ಸೋಡಿಯಂ ಕ್ಲೋರೈಡ್) ೨೭ ಭಾಗದಷ್ಟಿದೆ (ಭೂವಿವ. ೮೬).

[ ನಾಡು + ಉಪ್ಪು₁ ]

**ನಾಡುಬಾದಾಮಿ** (ನಾ). ಒಂದು ಬಗೆಯ ಮರ : (ಮ್ಯಜಿಗಿ. ೭೪-೧೫೦೩).

[ ನಾಡು + ಬಾದಾಮಿ ]

**ನಾಡುಮಿಂಡ** (ನಾ). ದುರಾಚಾರಿಯಾದ ವಿಟ ; ದುಷ್ಟವಿಟ ; ಅನೀತಿವಂತ : ತೊಂಡಿಲ ಮುಡಿದುಕೊಂಡು ತಮ್ಮ ತಮ್ಮ ಗಂಡರ ಹಿಂದುಗೊಂಡು ನಾಡುಮಿಂಡರ ನೋಡುತ್ತಲಿ ಇಂದು ನಮ್ಮ ಹುಲಿ ಹೋಯಿತು (ಬಸಹೆ. ೭೦-೧೬೭). [ ನಾಡು + ಮಿಂಡ₁ ]

**ನಾಡುವಟ್ಟ** (ನಾ). ಒಂದು ಬಗೆಯ ತೆರಿಗೆ : ನಾಡೊಳಗಳ ಹಲವ × × × ಇಂತಹ × × ನಾಡುವಟ್ಟವಾಗಿ ನಾಳು (ಎಕ. XIV, ಮುಂಡ್ಯ. ೧೩೭-೨೦ ; 1278). [ ನಾಡು + ವಟ್ಟ₂ ]

**ನಾಡುವಡೆ** (ಕ್ರಿ). ನಾಡನ್ನು ಹೊಂದು ; ನಾಡಿನ ಒಡೆತನವನ್ನು ಪಡೆ : ಸಿರಿವಂತನ ಕಯ್ಯಂ ಪಿಡಿದ ಬಡವೆಯಂತೆ ನಾಡುವಡೆದ ಪಸಾಯಿತನಂತೆ (ಧರ್ಮಾಮ್ಮ. ೫-೧೨೫). [ ನಾಡು + ಪಡೆ₁ ]

**ನಾಡುವಿಡಿ** (ಕ್ರಿ). (ಆಕ್ರಮಣದಿಂದ) ದೇಶವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳು,-ವಶದಲ್ಲಿಟ್ಟುಕೊಳ್ಳು : ನಾಡುವಿಡಿಯದರಸುಗೆಯ್ವೆನೆಂಬಂತೆ ಭೃತಮಿಲ್ಲದೂರನೊಡುವೆನೆಂಬಂತೆ ಮದವಣಿಗನಿಲ್ಲದೆ ದಿಬ್ಬಣಂಬೋಪೆನೆಂಬಂತೆ (ಧರ್ಮಾಮ್ಮ. ೪-೫೦). [ ನಾಡು + ಪಿಡಿ₁ ]

**ನಾಡುಶಾನಭೋಗ** (ನಾ). ಹಲವಾರು ಹಳ್ಳಿಗಳ ಶಾನುಭೋಗ,- ಕರಣಿಕ : (ಪ). [ ನಾಡು + ಶಾನಭೋಗ (<ಸೇನಬೋವ) ]

**ನಾಡೂರ್** (ನಾ). ನಾಡಿನಲ್ಲಿರುವ ಊರು,-ಗ್ರಾಮ : ಮುಂಚದೆ ಪಿಂಚದೆ ಬಳೆದು ವಿರಿಂಚಿಯು ಕೆಯ್ಪಿಡಿಪೊಲಾದುವಾ ನಾಡೂರ್ಗಳ್ (ಪಂಪಭಾ. ೮-೫೦) ; ಚೆಲ್ವಿಂಗಾವಾಸಮೆನಿಪ್ಪವೊಪ್ಪುವಾ ನಾಡೂರ್ಗಳ್ (ಮಲ್ಲಿಪು. ೨-೨೭) ; ಕಾಣಿಕೆಯಂ ತಂನಾಳ್ವ ನಾಡೂರ್ಗ್ಗಳೊಳು . . . ಕೊಟ್ಟರ್ (ಎಕ. VII, ಶಿವಮೊ. ೪-೯೨ ; 1122). [ ನಾಡು + ಊರ್ ]

**ನಾಡೆ** (ಅ). ಹೆಚ್ಚಾಗಿ ; ಚೆನ್ನಾಗಿ ; ಬಹಳವಾಗಿ ; ವಿಶೇಷವಾಗಿ ; ಅತಿಶಯವಾಗಿ : “ನಾಡೆಯೆಡೆಯಾವಗಂ ನೆಱಿ ನೀಡುಂ . . . ಇವವ್ಯಯದೊಳಧಿಕಾರ್ಥಂ” (ಶಮುದ. ೩೦೪) ; ಸದಭಿಸ್ತುತಮುಪ್ಪೊಂಕುಂದದ

ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೧-೩೭); ವಿಶ್ವಸೇನ ಮಹಾರಾಜನ ಮಹಾಸಾಮಂತರ್ಕಳುಂ ಪರಿವಾರಮುಮೆಲ್ಲಂ ಕುದುರೆ ವಡಿವಜ್ಜೆಯಂ ನೋಡಿ ನಾಡೆಗೆಟ್ಟುಪೋಗಿ (ವಡ್ಡಾರಾ. ೩೩-೨೫); ಮಾಡುವ ಕಿಡಿಸುವ ಗಸಣಿಗೆ ನಾಡೆಯುಮುದು ಪೊಱಗು (ಆದಿಪು. ೧-೯೫); ಚಿಂತಿಪ ಪಾರ್ವನ ಶೋಕದೊಂದು ಪೊಂಪುಳಿಯನೆ ನೋಡಿ ನಾಡೆ ಕರುಣಂ ತನಗಾಗಿರೆ (ಪಂಪಭಾ. ೩-೨೫); ಕರುಮಾಡಂ ನಾಡೆ ಚೆಲ್ವಂ ತಳೆದುದು ಪಲವುಂ ಬಳ್ಳಿಮಾಡಂಗಳಿಂದೆ (ಕಾದಂಪೂ. ೪೮೭); ನಾಡೆ ಸೊಗಯಿಪ್ಪ ಕೆಯ್ಯಿಂ . . . ಸುರದಂತಿಯಂತೆ ನಿಂದತ್ತಾಗಳ್ (ನೇಮಿಪು. ೧೦-೫೩); ಬೇಡಾ ವರವನು ಪಾಗನೆ ನುಡಿನುಡಿ ನಾಡೆ ಮೆಚ್ಚಿದೆನೆಂಬ ಹರಿಯನು ನೋಡಿ ನಕ್ಕನು (ನಿಭಾಗ. ೭-೮-೪೭); ಇಂತು ಭೂಜಾತೆ ಗರ್ಭಿಣಿಯಾದ ಳಾಗೆ, ನಾಡೆ ನಾಡೆ ಸಂತಸಗಡಲೊಳೋಲಾಡುತಿರ್ದುದು (ರಾಮಾಶ್ವ. ೨೧-೧೭).

**ನಾಡೆಯುಂ** = ನಾಡೆ : ಕೌರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳ ಸಯ್ಯು ಪೋಕುಮೇ (ಪಂಪಭಾ. ೨-೮೭); ಇರುಳೆಲ್ಲಂ ಜಾಗರಮಿರ್ದು ನೇಸಱ್ ಮೂಡೆ ನಾಡೆಯುಂ ಪೊಱಿರ್ದು ಎಂತುಂ ಬರವಂ ಕಾಣದೆ (ಪಂಚತಂ. ೨೩೦-೧೯); ಬಾನೆಡೆ ನಾಡೆಯುಂ ಪೊಡವಿಯಂತಿರೆ (ಕಬ್ಬಿಕಾ. ೨೫೧). 'ನಡ್ಕೆ' ಪರಾ. [ ತಮಿಳಿನಲ್ಲಿ 'ನಾಡಂ' ಎಂಬುದಕ್ಕೆ 'ಪರೀಕ್ಷಿಸು, ಆಲೋಚಿಸು, ಹುಡುಕು' ಎಂಬರ್ಥವಿದೆ ]

**ನಾಡೆಯ** (ನಾ). (?) : ಆವಿನಹಳಿಯ ಬಲೆನಾಡವೆರಡುನಾಡನೂ ಕೂಡೆ ಕೊಂಡು ಅಂಕೆಯನಾಯಕನ ನಾಡೆಯನ ತೊಳಲೊಳಗೆ ಕೊಂಡುದುನಾ ದೇವಿ ತಂಮರಸ (ಎಕ. VIII, ಸಾಗರ. ೭೦-೨೨ ; 1276 ?). [ ? ]

**ನಾಡೆಱೆಯು, ನಾಂಡೆಱೆಯ** (ನಾ). ನಾಡಿನ ಒಡೆಯ : ನಾಡೆಱೆಯಂ ಭರತಂ ಬೆಸಸಿದ ತೆಱನಂ ಕೇಳ್ (ಪಂರಾಮಾ. ೭-೪೯); ಎಱಗಿಸಿ ತನ್ನ ಚಾರು ಚರಣಾಂಬುರುಹದ್ವಿತಯಕ್ಕೆ ಮಿಕ್ಕ ನಾಡೆಱೆಯರನೆಲ್ಲರಂ (ವರ್ಧಪು. ೧-೧೦೪); ನಾಡೆಱೆಯನ ಕೆಲದೊಳ್ ತೀಡಿದತ್ತು ತಂಬೆಲರಾಗಳ್ (ಕಬ್ಬಿಕಾ. ೮೭); ಬೇಡುವರನು ಮನ್ನಿಪ ಬಿಡುಗಣ್ಣರ ನಾಡೆಱೆಯನ ಮಗನಂತೆ ಗಾಡಿವಡೆದ ರೂಪಿನ ಗರುವನ ನೀ ನೋಡು ಕಳಿಂಗನನಬಲೆ (ಜೀವಂಸಾಂ. ೧೦-೬೪); ಭುವನೇಶನೆಂಬೊರ್ವಂ ನಾಡೆಱೆಯರ . . . ಅರಸುಗೆಯ್ಯುತಿರ್ದಂ (ಅದ್ಭುತ. ೨೨-೧೭). **ನಾಂಡೆಱೆಯ** : ಸ್ವಸ್ತಿಶ್ರೀ ನಾಣ್ಡೆಱೆಯರಾ ಏರ್ವೆಕೊಳ್ವಲ್ಲಿ ಸತ್ತೊನ್ ಕಾಸೂರನ್ (ಎಕ. X (S), ಚಿಂತಾಮ. ೩೪-೦ ; 8ನೆಯ ಶತ).
[ ನಾಡು + ಎಱೆಯ ]

**ನಾಡೊಡೆಯು** (ನಾ). ೧. = ನಾಡೆಱೆಯ : ಜನಪತಿಗೆ ನೀಡಲೆರಡುಮಂನೀಸಿ ಕೊಂಡಾ ನಾಡೊಡೆಯನುಂವುರಿಯೊಳಗೆ ಪತ್ರಂಗಳಂ ಹಾಯ್ಕಿ (ಬಸವು. ೫೦-೩೬); ಮಾಡಿತಿಲ್ಲಪರಾಧವನು ಹರಿ ಕ್ರೋಡ ಖಡ್ಗಿ ಕುರಂಗಿಗಳರೆಲೆ ನಾಡೊಡೆಯ ರಾಮಂಗೆ ಹೇಳುವುದೆಂದಳಾ ಸೀತೆ (ತೊರರಾ. ೩-೧೦-೭); ಬಿಡುವರಲ್ಲ ಕುಮಾರಿಯನು ನಾಡೊಡೆಯರೆಂಬಾ ದೂತನಾ ಬಿಱುನುಡಿಗೆ ಕದಡದೆ (ಸಾಳ್ವಭಾ. ೧೮-೬೩); ನಾಡೊಡೆಯನಂಗನೆಯು ಕಾಣದೆ ಬಳಲುತ (ಅನಂರಾ. ೩-೬-೮); ಧರಣಿಸುತೆಯಂ ಕಂಡು ನಾಡೊಡೆಯನೆಡೆಗೆ ಪೋದಪೆಂ (ವಂಕಾರಾ. ೫-೫-೬); ನಿನ್ನ ನಾಡೊಡೆಯು ನೀನ್ ; ವೈರಿಯನು ತೊರೆಯ್ಯ (ಕೋಗಿಲೆ. ೪೮-೩). ೨. ದೇಶವಿಭಾಗದ ಅಧಿಕಾರಿ ; ಪ್ರಾಂತಾಧಿಕಾರಿ : ಕನ್ನರದೇವನ ನಾಡೊಡೆಯುಪ್ಪರಿಣತ[ರಾ]ರ್ಕ್ಕನ್ನುಕ[ಕ್ಕೆ] (ಸಾಇಇ. XI-i, ೪೩೮-೦೪ ; 980). [ ನಾಡು + ಒಡೆಯ₁ ]

**ನಾಡೊವಜ, ನಾಡೋಜ** (ನಾ). ದೇಶದ ಗುರು ; ನಾಡಿನ ಜನರ ಮನ್ನಣೆಗೆ ಪಾತ್ರನಾದವನು ; ಲೋಕಮಾನ್ಯ : ಪುರಾಣಕವಿಯುಂ ಧರೆಗಾಗಿರೆಯುಣ್ಮೆ ಪೊಣ್ಮುವೀ ದೇಸಿಗಳುಂತೆ ನಾಡೊವಜನಾದನೊ ಪೇಱ್ ಕವಿತಾಗುಣಾರ್ಣವಂ (ಪಂಪಭಾ. ೧೪-೬೨). **ನಾಡೋಜ** : ರಾಜ್ಯಚಿಹ್ನಂ ಗಳ್ವೆರಸಿಂತು ನಡೆತಂದು ರಾಜ್ಯಲಕ್ಷ್ಮಿ ಬಳೆದ ಸಂತೋಷದಂತಮನೆಯ್ದೆ ಪತ್ತಿದಳ್ ಸಹಜಮನೋಜನಂ ನಾಡೋಜನಂ (ಪಂಪಭಾ. ೧೩-೧೦೫); 'ಸಕಳಾವನೀತಳಜನ'ವನ್ನು ಮೆಚ್ಚಿಸುವ 'ನಾಡೋಜ' ನವನು (ನಾಡೋಜ. ೩೩೭); ನಾಡೋಜನ ಮುಂದೆ ನಾನು ತಪ್ಪಾಡೇನೆ ? (ದಾನಚಿಂ. ೬೩).
[ ನಾಡು + ಒವಜ (<ಒವರ್ಝು) ]

**ನಾಡೊಳ್ಪು** (ನಾ). ದೇಶದ ಹಿತ-ದೇಳ್ಮೆ ; ಪ್ರಜೆಗಳ ಕ್ಷೇಮ : (ಪೂರ್ವಕಾಲದಲ್ಲಿ) ಪ್ರಜಾಕ್ಷೇಮ; ಲೋಕಹಿತ; ನಾಡೊಳ್ಪು (Common-Wealth. ಇಂಕನಿ). [ ನಾಡು + ಒಳ್ಪು ]

**ನಾಡೋಜ** 'ನಾಡೊವಜ' ನೋ.

**ನಾಡೋರ** (ನಾ). (ಉಕ)ಉಪ್ಪುಮಾಡುವ ಕಸಬನ್ನು ಅವಲಂಬಿಸಿರುವ ಒಂದು ಜನಾಂಗ : ಉಪ್ಪುಮಾಡುವ ನಾಡೋರರು ಮುಂತಾದ ಜಾತಿ ಯವರು . . . ಎಕರೆಗೆ ಸುಮಾರು ೩ ರೂಪಾಯಿಯಂತೆ ತೆರಿಗೆಯನ್ನು ಕೊಡುತ್ತಾರೆ (ಕಭಾಗೆ. ೫೮೨). [ ? ]

**ನಾಡ್ಕರ್ಣಿ** 'ನಾಡಂ' ಪರಾ.

**ನಾಣ್₁, ನಾಣು** (ನಾ). ೧. (ಹೆಂಗಸಿಗೆ ಗಂಡಸಿನ ಎದುರಿನಲ್ಲಿ ಒದಗುವ) ನಾಚಿಕೆ; ಸಿಗ್ಗು; ಲಜ್ಜೆ : "ಲಜ್ಜೆ ನಾಣ್" (ಕರ್ಣಾನಿ. ೬೨); ಲಲಿತಾಂಗಿಯ ಶಂಕೆಯಂ ಭಯಂ ಬೆರಸಿದ ನಾಣುಮಂ ಕ್ರಮದೆ ಪಿಂಗಿಸು ಬೇಸಱದಿರ್ ಗುಣಾರ್ಣವಾ (ಪಂಪಭಾ. ೩-೭೭); ಚುಂಬಿಸುವಾಗಳ್ ಶಬ್ದಮಿಲ್ಲ ವ್ರಣ ನಖ ಮುಖದಂತಕ್ಷತಂ ನಾಣ್ಗೆ ಪಕ್ಕಾಗಿಸದು . . . ಸಂಕಲ್ಪಸಮಾಯೋಗಂ ವಿಯೋಗಾಕುಲ ಕುಲಲಲನಾಜೀವನಾಧಾರಮಲ್ತೇ (ಕಾದಂಬ. ೩೦೯); ಜಡ ಜಾಂಬಕಿ ಮುಂಡಿಸಿದಳ್ ನಡೆತಂದೆಡೆದಲ್ಲಿ ನವ್ರಮುಖಿ ನಾಣಿಂದಂ (ಉದ್ಭಟ. ೮-೧೦೦); ನಾಣಂ ಪಿಂಗಿಸಿ ಮುಗ್ಧೆಗೆ ಜಾಣಂ ಕೈಗೊಳಿಸುವಂತೆ (ಶಮುದ. ೬೯ ಪ್ರಯೋ); ನುಣ್ಮಡಿ ಬಿಣ್ಪಾದುದು ಮೆಲ್ಲೆರ್ದೆಯೊಳ್ ನಾಣ್ಮೊಳೆತುದು (ಜಯಂಕಾ.೩-೨೫). ೨. ಅವಮಾನ ; ಸಂಕೋಚ. 'ನಾಣ್ಗೆಯ್' ಪರಾ. ೩. ಸ್ತ್ರೀಪುರುಷರ ಗುಹ್ಯೇಂದ್ರಿಯ : "ಗುಹ್ಯಂ=ಸ್ತ್ರೀ ಪುರುಷರ ನಾಣ್" (ಕಾಶಕ್ಕ. ೬೭); ಎಡೆವಿಡದ ದೆಯ್ವಧರ್ಮದೊಳಿಡದಘಮಂ ತಮ್ಮ ಮತ ದೊಳಂ ಕಂಡುಮದಂ ಕಡೆಗಣಿಸುವರಂತದೆ ದಲ್ಮಡೆಗಣಿಸರೆ ತಮ್ಮ ತಾಯ ನಾಣಂ ಕಂಡರ್ (ಸಮುಪ. ೮-೨೨೭); ನಾಣ ಮಱೆಯ ನೂಲು ಸಡಿಲೆ ನಾಚುವರು ನೋಡಾ ಗಂಡು ಹೆಣ್ಣೆಂಬ ಜಾತಿ (ಮಹಾದೇ. ಬ. ೭೪-೧೮೪); ಜುಗುಪ್ಸೆಯಾಂತ ನಾಣಡಿಗಡಿಗೆಲ್ಲರುಂ ಪೊರಳ್ವ ಮುಯ್ಯಿಗೆವಾಸುಗುಟ್ಟಿಪ್ಪೆ ಯಾದ ಮೆಯ್ ಬಿಡದಿರದೆಂತು ಸೂಳೆಯರ ಸಂಗಮನೊಲ್ವರೊ ಖೂಳ ಮಾನವರ್ (ಕಾವ್ಯಸಾ. ೧೦೦೪). **ನಾಣು** : ೧. "ನಾಣು, ನಾಚಿಕೆ, ಸಿಗ್ಗು, ಏವ(ಹೇವ), ಎಗ್ಗು" (ಕಂಸುಹು. ೮೭); ನಾಣೆಂಬುದು ನಾರಿಯರಿಗಾಭರಣವು (ಕುರಾಸಾಂ. ೩೭-೧೭); ಜಾಣೆ ಮಗುವನೆತ್ತಿಕೊಂಡು ನಾಣ ಮರೆತು ಓಡಿಬಂದು (ಚಲುವು. ೧೪-೧೨); ಹೊಸನಾಣು ಹೊಸಮುನಿಸು ಹೊಸದಾಗೆ ಸತಿಯು . . . ಹೊಸದೊಂದು ರತಿಯು (ಗಿರಿ. ೩೮-೭). 'ನಾಣುಗೇಡು' ಪರಾ. ೩. ಗಲ್ಲ ಪಲ್ಲು ಬಂಧುರದಧರ ನಾಣು ನಖ ವಸುರುತೆಳು ಪಾರು ಕಂಗಳು . . . ಮೆರೆದವು (ನವಮೋ. ೨೨-೩೩).

**ನಾಣ ದಾಣ** = ಯೋನಿ; ಭಗ : "ಪಚ್ಚೀ – ನಾಣ ದಾಣಂ" (ಕಾಶಕ್ಕ. ೨೫೮). **ನಾಣ ನುಡಿ** = ಅವಮಾನಕರವಾದ ಮಾತು: ಈಗಳೋ ಇಂತಪ್ಪ ನಿಲ್ಲಮೆಂದೇ ಆದೆನ್ ! ಪುಡಿಯೊಳಗೆ ಪುಡಿಯ ಪುಡಿಯಾದೆನ್ – ನಾಣ ನುಡಿಯಾದೆನ್ (ಅಶ್ವತ್ಥಾ. ೧೭-೩೭೮). **ನಾಣನೊಗು** = ನಾಚಿಕೆಯನ್ನು ಬಿಡು : ನಾಣನೊಕ್ಕು ಗತಭೀತಿಯನಪ್ಪುವ . . . ಅಸಿಯಳದೇಂ ಮನಂ ಬಿಡಿದಳೋ ಚದುರಿಂ ಸುದತೀಮನೋಜನ (ರಸರ. ೧-೩೫). **ನಾಣ ಪುತ್ತು** = ಲಜ್ಜಾಸ್ಪದವಾಗಿರುವಿಕೆ : ಪೇಸುಗೆಗೆಟ್ಟ ನಾಣ ಪುತ್ತುಪ್ಪುಟಿಜಗಳದೊಳೇ ನಮ್ಮ ತರ್ಕ್ಕೋರ್ವೆಯುಂಟೇ (ಶಾಂತಿಪು. ೬-೮೭) : **ಅಱತಮುಳ್ಳರ್**

ಕಲ್ಲೊಲ್ ಕಡೆದರ್ಣವರೇಣುಚಿತಮೆ ಮೃಡಾನಿಯಂ ಕರವೆ ನಾಣ ಪುತ್ರಿನ ರೂಪಂ (ಸಮುಪ. ೧೦-೭೪); ದುರ್ಗಂಧಕ್ಕಿರಲಾಱದೆ ಲೆಂಕರ್ ದಂಡಂ ಗೊಂಡರಂತೆ ತಂತಿಸುತ್ತುಂ ಪೆಱಪಿಂಗೆ . . . ಬಾಣಸಿಗರಿದೇನ್ನಾಣ ಪುತ್ತೆಂದು ಪೋಗೆ (ಧರ್ಮಾಮೃ. ೪-೦೩೯); ಕೇಣಕಾಱನವದೇಕೆಗ ಕಾಪ್ಪೆ ನಾಣ ಪುತ್ತ ನಗೆಯುಂ ನೀಂ ಬಗೆಯ್ಯ (ಕಾವ್ಯಾವ. ೪೪೪). ನಾಣಿಕ ವಲಯ = ನಾಚಿಕೆಯ ಭಾಗ; ಯೋನಿ: ತುಸು ಕೆಲಕ್ಕೆ ಓಸರಿಸಿದ್ದ ಕಂಬಳಿಯನ್ನು ಆವಳಿಗೆ ಸರಿಯಾಗಿ ಹೊದಿಸಿ, ಇಣುಕುವಂತಿದ್ದ ನಾಣಿನ ವಲಯವನ್ನು ಮುಚ್ಚಿದನು (ಮಲವು. ೭೮೩). ನಾಣೊಕ್ಕ = ನಾಚಿಕೆಗೇಡಿ; ಲಜ್ಜಾಹೀನ; ನಾಚಿಕೆ ಬಿಟ್ಟವನಂ: ಏಕಳರಂ ನಾಣೊಕ್ಕರಂ ಮಿಕ್ಕರಂ ಪಡೆದಾ ದೋಷನಿವಾರಣಕ್ಕೆ (ಎಕ. VI, ತರೀಕೆ. ೪೫-೬೨ ; 1196).

[ ದೇ.॥ ತಮಿ. ನಾಣ್, ನಾಣ; ಮಲ. ನಾಣ; ತುಳು. ನಾಣ್, ನಾಣ, ನಾಣು = ಬೆತ್ತಲೆ; ಕೊಡ. ನಾಣ; ತೆಲು. ನಾನ ]

ನಾಣ್₂ 'ನಾಟ್' ನೋ.

ನಾಣ₁ (ನಾ). ಸ್ನಾನ. 'ನಾಣೆಗೆ' ಪರಾ.

[ <ಪ್ರಾ. ಣ್ಹಾಣ. / ಸಂ. ಸ್ನಾನ ]

ನಾಣ₂ (ನಾ). ತಿಳಿವಳಿಕೆ; ಜ್ಞಾನ; ಬುದ್ಧಿ: ಏನು ಬರುವದೊ ದೇವ, ನಾಣ ನಮಗೇಟಲ್ಲ ಹಾನಿ ತಪ್ಪುವದು ಹೇಳೆನಗೆ ನಾಡೊಳಗೆ ಏನು ಶಾಂತಿ ಯನು ಮಾಡಿಸಲಿ (ಕನ್ನಜಾ. ೨); ಬಾಣ ಬಿಡು ಅಣ್ಣನ ನಾಣ ನಾಸ್ಥೇಳಾಲೆ ರಾಗಿಯ ಕಾಳಟು ಕಸರಿಲ್ಲ ನಮ್ಮವರು ಈಪ್ಯಾಡಿ ಬಾಣ ಬಿಡತಾರ (ಲೋಕಗೀ. ೭೭). [<ಪ್ರಾ. ಣಾಣ. / ಸಂ. ಜ್ಞಾನ ]

ನಾಣಕ (ನಾ). ೧. ಮುದ್ರೆ; ಅಚ್ಚು: "ನಾಣಕ = ಪಲವು ಬಣ್ಣದಚ್ಚುಗಳುಂ . . . ವ್ಯಾವಹಾರಿಕ ನಾಣಕವಂಗಳೋಹವಾನ್ . . . ಕೋಶಗುಣಾಃ" (ನೀತಿವಾ. ೨೬-೨). ೨. ನಾಣ್ಯ. 'ನಾಣಕಪ್ರಚಾರ' ಪರಾ. [ ಸಂ. ]

ನಾಣಕಪ್ರಚಾರ (ನಾ). ನಾಣ್ಯವನ್ನು ಚಲಾವಣೆಗೆ ಕೊಡುವುದು: ಇಂದಿತ ಶ್ರೀನೃಸಿಂಹಜಯಂತಿಯು ಶ್ರೀಮನ್ಮಹಾರಾಜರ ವರ್ಷವರ್ಧಂತ್ಯುತ್ಸವದ ಶ್ರೀನಾಣಕಪ್ರಚಾರದ ಸಮಾರಂಭದ ಈ ಮುಮ್ಮಡಿ ಹಬ್ಬದ ದಿವಸ (ಸಂಸಕ. ೦೨೨). [ ನಾಣಕ + ಪ್ರಚಾರ ]

ನಾಣಯ, ನಾಣೆಯ, ನಾಣೆಯ, ನಾಣ್ಯ (ನಾ). ೧. ಚಲಾವಣೆಗಾಗಿ ಆಡಳಿತದ ಮುದ್ರೆಯೊತ್ತಿ ತಯಾರಿಸಿದ ಚಿನ್ನ, ಬೆಳ್ಳಿ ಮೊದಲಾದ ಲೋಹದ ಬಿಲ್ಲೆ; ಕಾಸು, ರೂಪಾಯಿ ಮೊದಲಾದುವು; ಹಣ: ಅಱುವತ್ತು ಬಂದಿಗೆಯೊಳು ನಾಣಯ[ಪಾಠಾಂ. ನಾಣ್ಯ]ವನು ಕುಱುಹಿನ ಭಂಗಾರಗಳನು . . . ಮಗಗೆ ಕಳುಹಿದನು (ಕುಲಾಸಾಂ. ೪೩-೩೪); ಬೊಕ್ಕಸ ಭಂಡಾರದಿಕ್ಕೆಲದಲ್ಲಿ ಚೊಕ್ಕನಾಣಯ ವಸ್ತುಗಳನು ಚೆಕ್ಕನೆ ಪಿಡಿದಿರ್ದರರಸು ಮುಟ್ಟಿದೊಡಾಗ ದೊಕ್ಕನೆ ಕೊಡಲೆಂದಾಗ (ಅಹಂಜ. ೨-೩೪). ೨. ಅರ್ಥವತ್ತಾದ ನುಡಿ: ವೈದಿಕಬೌದ್ಧರಿಂದಾಗಿ ಸಂಸ್ಕೃತ ಪಾಲಿಗಳ ನಾಣಯಗಳು ಕನ್ನಡದಲ್ಲಿ ಬಳಕೆಗೆ ಬರತೊಡಗಿಡಬೇಕು (ಕನ್ನಇ. ೦೩೮). ನಾಣೆಯ: ೧. "ಉಳಿಯಭಿಮಾನ ನಾಣೆಯಗಳೆಂಬವು ಟಂಕಮೆನಿಕ್ಕು" (ವಾಸಾಠ. ೧೩೦); ಪರಿಪುರಜನಗಳುತ್ತಮನಾಣ[ಪಾಠಾಂ. ಣೆ]ಯುವ ನೀಡಿದರು ದರುಶನ ಕವನಿಜೇಶ್ವರನ (ತೊರರಾ. ೬-೫೫-೧೯). ೩. ಶ್ರೇಷ್ಠವಾದುದು; ಬೆಲೆಯುಳ್ಳುದು; ಸೊಗಸಾದುದು: ನಾಣೆಯದ ಪಟ್ಟೆ ಹಚಡ ೧೦ ಪಟ್ಟೆ ಸೀರೆ ೧೧ (ಸೌಇಇ. IX-ii, ೫೪೭-೩ ; 1532). ನಾಣೆಯ: ೧. ಬಳಿಯ ನಾಣೆಯಪಱ ಬಳಿಯಾಪ್ತವರ್ಗಮಂ . . . ಪದಪಿಂದವಲೋಕಿಸುತ್ತೆ . . . ನಡೆತಂದನೀಶ್ವರಂ (ಗಿರಿಕ. ೧೦-೯೯); ತೆಗೆಸಿದನು ಬಳಿಕಿನಕುಲದ ಪೀಳಿಗೆಯ ನೃಪರಾರ್ಜಿಸಿದ ನಾನಾಯುಗಯುಗಂಗಳ ನಾಣೆಯಂಗಳನಖಿಳವಸ್ತುಗಳ (ತೊರರಾ. ೦-೬-೪); ತನ್ನಯದು ನಾಣೆಯವೆಂದು ಜಗವಱಿಯೆ (ನಿಭಾಗ. ೧೦-೫೬-೫೬); ಚಪ್ಪನ್ನದೇಶದ ನಾಣೆಯಂಗಳ ನೋಟ ತಪ್ಪದ ಚಪಲಸೆಟ್ಟಿಗಳು ಒಪ್ಪವಡೆದು ಕುಳಿತಿರ್ದರು (ಮೋಹತ. ೩-೨೭); ಬಿಡಲುಪಟ್ಟ ಬೇಂಟೆಯನುಳ್ಳ ಪುರುಷನು ಪಂಚರಂಗದ ವಸ್ತ್ರ ನಾಣೆಯ ಶಿಲೆ ಲೆಪ್ಪ ಕಾಷ್ಠ ಮೊದಲಾದವರಲ್ಲಿ ಸ್ಥಾಪಿಸಲ್ಪಟ್ಟ ಜೀವಂಗಳ ಭೇದ ಮೊದಲಾದವನು ಮಾಡಲಾಗದು (ಸಾಗಾಧ. ೩೪). ೩. ಬಂಧುಗಳಾನಂದದಿಯೊಂದೀತ ಮಾಯಣಸೆಟ್ಟಿ ಎಂದು ಕರೆಯಲಾ ಪೆಸರೀ ಧರೆಯೊಳು ಸಂದುದು ನಾಣೆಯವಾಗಿ (ತ್ರಿಪುಸಾಂ. ೨೪-೨೭೮). ನಾಣ್ಯ: ೧. ಬಾಹಿರವ ಕಳೆದು ಎಡೆನಾಣ್ಯವನುಳಿದು ಹಲವು ನಾಣ್ಯವ ಕಳೆದು ಸಲುವ ನಾಣ್ಯವ ಹಿಡಿದು ನೋಡುವೆನಯ್ಯ (ಆದವ. ೨೭-೭೭); ಹೀಗೆ ವಿಶಾಲ ವ್ಯಾಪಾರ ನಡೆಯುತ್ತಿದ್ದರೂ ನಾಣ್ಯಗಳೇ ಕಂಡುಬಂದಿಲ್ಲ (ಭಾರದ. ೦೫); ಸಹನಿಯು ೧೯೪೫ರಲ್ಲಿ ಪ್ರಾಚೀನ ಭಾರತದಲ್ಲಿ ನಾಣ್ಯಗಳನ್ನು ಎಸಗುವ ಒಂದು ಪದ್ಧತಿಯನ್ನು ಬೆಳಕಿಗೆ ತಂದು ಅದಕ್ಕೆ ಒಂದು ಪದಕವನ್ನು ಪಡೆದಿದ್ದನು (ಸಸ್ಯಕ. ೦೨೮). ೪. ಘನತೆ; ಗೌರವ: ಇಂಥ ಅಂಗಡಿಯ ನಾಣ್ಯವನ್ನು ಕೆಡಿಸಿ ನಾನು ಬದುಕಿರಲೆ? (ಅದೂಟ. ೮). ೫. ಸತ್ಯ; ಪ್ರಾಮಾಣಿಕತೆ: (೬). ೬. ನಯ; ಮೃದುತ್ವ: ಮಾನಿತಮಾದ ವಸ್ತ್ರದ ನಾಣ್ಯವಣೆಬದನೇವೆಂದು ಬಣ್ಣಿಸಬಹುದು (ಅಸಂಜ. ೧-೧೫೪); ಪೂರ್ಣಗುಣಸಂಪನ್ನೆ ಬಾರೆಂದು ನಾಣ್ಯದಿಂ ಗೊಲ್ಲ ಕರೆದನು (ಗೋಪಾಡು. ೮-೩೭). ೭. ನವಿರಾದ ಬಟ್ಟೆ; ಬೆಲೆ ಬಾಳುವ ವಸ್ತ್ರ; ತೊತ್ತು ಲಕ್ಷಣವಿರಲು ನಾಣ್ಯವನುಡಿಸಿ ನವರತ್ನಾಭರಣಂಗಳ ತೊಡಿಸಿ (ಚನ್ನವ. ಕ. ೧೬೮-೩೬೭).

[ ದೇ.॥ ತಮಿ. ನಾಣಯ, ನಾಣೆಯ; ಮಲ. ನಾಣೆಯ; ತುಳು. ನಾಣ್ಯೊ; ತೆಲು. ನಾಣೆ, ನಾಣ್ಯ. / ಪ್ರಾ. ಣಾಣಕ. / ಸಂ. ನಾಣಕ./ ಮರಾ. ನಾಣೇ; ಗುಜ. ನಾಣುಂ; ಸಿಂಧಿ. ನಾಣು ]

ನಾಣಲ್ 'ನಾನಲ್' ನೋ.

ನಾಣಲು 'ನಾನಲ್' ನೋ.

ನಾಣಳ್ಕು (ನಾ). ನಾಚಿಕೆಯಿಂದ ಉಂಟಾದ ಭಯ; ಲಜ್ಜೆಯಿಂದುಂಟಾದ ಹೆದರಿಕೆ: ಮಜ್ಜನಂಬುಗದಾರೋಗಿಸಲೊಲ್ಲದಿರ್ಪರವಿವೇಂ ನಾಣಳ್ಕಿದೇಂ (ಹಂಪಭಾ. ೪-೬೩). [ ನಾಣ್₁ + ಅಳ್ಕು₂ ]

ನಾಣಟು (ಕ್ರಿ). ನಾಚಿಕೆಯಿಲ್ಲದಂತಾಗು; ಲಜ್ಜೆಯನ್ನು ಕಳೆದುಕೊಳ್ಳು: ಬಱಲದೆ ಪುಷ್ಪಬಾಣಹತಿಯಿಂ ಪುಳಕಂಗಳನಾನದುಣ್ಮೆ ನಾಣಟುಯದೆ ಜಾಣನಿಕ್ಕದೆ ಬೆಮರ್ತಱುತಾಱದೆ ತೀರ್ದು ತಾನೆ ಮೆಯ್ಯಟಲೆ ಕಡಂಗಿ ಮುಕ್ತಿಯೊಡಗೂಡಿದ ಪೆಂಪಿನ ಸೌಖ್ಯದಿಂಪು ಪೊಂಪುಳಿಯೆನಿಸಿರ್ದ ಸಿದ್ಧರೆಮಗೀಗೆ ವಿಶುದ್ಧರಭೀಷ್ಟಸಿದ್ಧಿಯಂ (ಲೀಲಾವ. ೧-೪); ಕಾಣದ ಜನಂ ಬೈದು ನಾಣಟುದು ಬಿಸುಸುಯ್ದು (ಜಗವಿ. ೦೭-೦೦೮ ಡಗೆ); ಬಂದ ಳೊರ್ವಳ್ ನಡೆ ನೋಡಿದಳಾಗಳಂತೆ ನಾಣಟುವಿನೆಗಂ (ಕಬ್ಬಿಕಾ. ೩೩೫); ನಾಣಟುಯಲ್ ಮನಂ ಬೆಱಗಿನಿಂ ಮರವಟ್ಟಿರೆ (ದಶಕು. ೬-೧೯೯).

[ ನಾಣ್₁ + ಅಟು₁ ]

ನಾಣಿ (ನಾ). ತಿಳಿವಳಿಕೆಯುಳ್ಳವನು; ಜ್ಞಾನಿ: ದುಡುಕು ಮಾಡುವರೆ ಬಸವೇಶ ನಾಣಿಗಳು ಹುಡುಕುವರೆ ಕದನ ಜಗದೊಳಗೆ (ಕನ್ನಜಾ. ೨೫೯).

[ <ಪ್ರಾ. ಣಾಣಿ. / ಸಂ. ಜ್ಞಾನಿನ್ ]

ನಾಣಿಗೆ (ನಾ). (ಕರಾ) ಸ್ನಾನ ಮಾಡುವ ಮನೆ; ಬಚ್ಚಲುಮನೆ; ಸ್ನಾನಗೃಹ: ಶಾಂತಾ ಹಾಗೂ ಅವಳ ನೆರೆಮನೆಯ ಆನಂದಿ ನಾಣಿಗೆಯ ಹಂಡೆಗೆ ನೀರು ತುಂಬಲೆಂದು ಹಿತ್ತಿಲದ ಬಾವಿಗೆ ಬಂದಿದ್ದರು (ಮೂರುದಾ. ೧೬೭); ನಾಣಿಗೆಯಲ್ಲಿ ನೀರು ಕಾದಿದೆ. ಮಿಂದು ಊಟಮಾಡಿ ಹೋಗಿರಿ (ರೂಢಿ).

ನಾಣಿಗೆ ಮನೆ = ಬಚ್ಚಲುಮನೆ: ಯಾರೇ ಅವನು–ನಾಣಿಗೆಮನೆಯಲ್ಲಿ ಹಾಗೆ ಕಾರಿಕೊಳ್ಳುವವನು? (ಮೂರುದಾ. ೧೮೩). [ ನಾಣ₁ + –ಇಗೆ₀ ]

ನಾಣೆಯ 'ನಾಣಯ' ನೋ.

**ನಾಣಿಲ್** (ನಾ). ಒಂದು ಬಗೆಯ ಮರ ; ಆಲಿವ್ ಜಾತಿಗೆ ಸೇರಿದ ವೃಕ್ಷ : ಪಂಚಾದುಂಬರ ಜಂಬ್ವಾಮ್ರ ಗುಡಪುಷ್ಪಸಮನ್ವಿತಕಷಾಯದ್ರವ್ಯ ಕುಂಭಾಸ್ಯ ಜಂಬೂನೇರಿಲ ಆಮ್ರಮಾವು ಗುಡಪುಷ್ಪ ನಾಣಿಲ ಹೂವು (ಪ್ರಕಟೀ. ೪೦-೧) ; ನಾಣಿರಾಯನೆಂಬವನು 'ನಾಣಿಲ್' ಮರದಡಿಯಲ್ಲಿ ವಾಸಿಸುತ್ತಿದ್ದಿರಬಹುದು (ತುಳುನಾ. ೧೫೪). [←ತುಳು. ನಾಣಿಲ್]

**ನಾಣಿಲಿ** (ನಾ). ೧. ನಾಚಿಕೆಯಿಲ್ಲದ ವ್ಯಕ್ತಿ ; ಲಜ್ಜೆಗೇಡಿ : "ನಾಣಿಲಿಯೆಂದು ಲಜ್ಜಾಹೀನಂ" (ಕಕಸಾ. ೧೮-೩೬೨) ; ನಾಣಿಲಿ ಪೆಣ್ಬಂ ಪಂದೆ . . . ನಿತ್ಯರೋಗಾಕುಳನೆಂಬೀ ನಾಮ ನಾಮಾವಳಿಗೆ ನಿಳಯನಕ್ಕುಂ ವ್ರತಪ್ರಾಕಹೀನಂ (ವಡ್ಡಾರಾ. ೦೦-೩೦) ; ಮಿಗೆ ನಾಣಿಲಿಯೆನಿಸುವ ವಧು ನಗೆಗೆಡೆಯಕ್ಕುಂ ಸಮಸ್ತಜಗತೀತಳದೊಳ್ (ಕಾವ್ಯಾವ. ೨೫೭) ; ನಾಣಿಲಿ ಪಿಟ್ಟುರಂ ಸಿತಗನಾಟವಿಟಂ ತುದಿಗೋಡ ಪಾಟು ನಿಸ್ವಾಣ ಗಡಾಗಡುಂ ನಿಪಗೆ ಕೂರದರೊಳ್ ಬೆರಸಿರ್ಪನಾತಂ (ಲೀಲಾವ. ೨-೧೨೨) ; ತಲೆಗೆ ಪದರಕ್ಷೆಯುಂ ನಾಣಿಲಿ ಕಟ್ಟಿಸಿಕೊಂಡ ತೆಱದೆ ಲೋಕವಿರುದ್ಧಂ ದಲದೆನಿಸಿ ನಡೆದ ಕೀರ್ತಿಗೆ ನೆಲೆಯಾದಂ ಪಾಪಕರ್ಮಕರ್ಮಂ ಕಮಠಂ (ಪಾರ್ಶ್ವಪು. ೩-೬೪) ; ನಾಣಿಲಿಯೊಳ್ ನಿಷ್ಠುರನೊಳ್ . . . ಸದ್ಗುಣಹೀನನೊಳ್ ನೆರೆವ ಕೂಟಂ ನಂಜಿನೂಟಂ (ರಾಜಶೇ. ೧೧-೦೫೧) ; ನಾಣಿಲಿಗಳ ತಲೆವಣಿ ಮಾಣ್ಕ್ಯಾಳಲವೋ (ಚಕವಿ. ೬-೨೭೭). (ಗು). ೨. ನಾಚಿಕೆಯಿಲ್ಲದ ; ಲಜ್ಜೆಯಿಲ್ಲದ : ಈ ನಾಣಿಲಿ ಪಾರ್ವನನೆಱೆದು ಕಳೆಯಿಂ (ಪಂಪಭಾ. ೨-೪೮ ವ); ಮುಳಿದು ಪಿಡಿದೆಱೆದು ನಿನ್ನಾಣ್ಮನಪ್ಪ ನಾಣಿಲಿ ಸವಣನನೊಡಗೊಂಡು ಬಾ ಪೋಗು (ಸುಕುಮಾ. ೫-೭ ವ). 'ನಾಣಿಲಿಮಾನಸ', 'ನಾಣಿಲಿವೆಣ್' ಪರಾ. [ನಾಣ್$_1$ + – ಇಲಿ$_3$]

**ನಾಣಿಲಿಗ** (ನಾ). =ನಾಣಿಲಿ ೧ : ಮಹೀಪತಿಗಂ ದ್ವಿಜವಂಶಜಂಗಮೇತಱ ಕೆಳೆಯಿಂತು ನಾಣಿಲಿಗರಪ್ಪರೆ ಮಾನಸರ್ (ಪಂಪಭಾ. ೨-೪೮).

[ನಾಣಿಲಿ + – ಗ$_2$]

**ನಾಣಿಲಿಗತನ** (ನಾ). ನಾಚಿಗೆಗೇಡಿತನ ; ಲಜ್ಜಾಹೀನತೆ : ಒಳ್ಮನದಿ ನೀ ಪಿಡಿದ ಪಂಜು ನಿನ್ನ ನಾಣಿಲಿಗತನವನೆ ಸಾರುತಿಹುದೋ ಮರುಳೆ ! (ಕಗದ್ಯ. ೭೫). [ನಾಣಿಲಿಗ + – ತನ]

**ನಾಣಿಲಿತನ** (ನಾ). =ನಾಣಿಲಿಗತನ: ತಾಂಗಿಗಟಲ್ವ ನಾಣಿಲಿತನಂ ಬೆಂಡೇಟ್ವ ಕಣ್ (ಚಂದ್ರಪು. ೮-೬೮) ; ಪಡೆವೊಡಿಂತಪ್ಪನಂ ಕೂಸನುಱೆ ಪಡೆಯದೊಡೆ ಪೊಡವಿಯೊಳ್ನಾಣಿಲಿತನಕ್ಕೆ ಪಕ್ಕಾಗರೇ (ಆರಾಜ. ೨-೫೭) ; ಸುಡು ನಾಣಿಲಿತನುವಿದೆನುತೆ ಮಾನನಿಧಾನಂ ಮನದನ್ನೆಯೊಳು ಮಾಣದೆ ಮಾಱುತ್ತರವಿತ್ತಂ (ಉದ್ಭದೇ. ೩-೭೨) ; ಆಗಳಿಂತು ವಿಚಾರಿಸಿ ನಂಬುಗೆವೆತ್ತು ನಾಣಿಲಿತನಂ ಮಿಕ್ಕು (ವೃಷವಿ. ೦೨-೭೦ ವ). [ನಾಣಿಲಿ + – ತನ]

**ನಾಣಿಲಿಮಾನಸ** (ನಾ). ನಾಚಿಕೆಯಿಲ್ಲದ ಮನುಷ್ಯ : ನಾಣಿಲಿಮಾ[ಪಾಠಾಂ. ಮಾ]ನಸಂ, ಪಲ್ಲಲಿಮಾಯಂ (ಭಾಷಾಭೂ. ೬-೧೫೧ ಉದಾ).

[ನಾಣಿಲಿ + ಮಾನಸ$_1$]

**ನಾಣಿಲಿವೆಣ್** (ನಾ). ನಾಚಿಕೆಯಿಲ್ಲದ ಹೆಂಗಸು: ಕೂರಿಲಿ, ಕುಡುಗೋಲ್, ಬೆಳಗಿಲಿಗಣ್, ನಾಣಿಲಿವೆಣ್ (ಶಮದ. ೧೮೬ ಪ್ರಯೋ).

[ನಾಣಿಲಿ + ಪೆಣ್]

**ನಾಣಿಸು** (ಕ್ರಿ). ನಾಚುವಂತೆ ಮಾಡಂ ; ನಾಚಿಸು : ಆತನ ದಾದಿ ವಿನಯಮತಿಯೆಂಬೊಳ್ . . . ನೋಡಿದ ಜನಕ್ಕೆ ಭಯಮಂ ಪಡೆವೊಳ್ ನಾಣಿಸೆ [ಪಾಠಾಂ. ನಾಣ್ಚೆ, ನಾಣ್ಸೆ] ಪಡುಪೊಳ್ (ವಡ್ಡಾರಾ. ೧೦೬-೨೩) ; ತಮವಱೆಯದರ ನಾಣಿಸಿಯೆನ್ನ ಮೊಮ್ಮಗೆ ತಕ್ಕ ಸತಿ ಕಟ್ಟಾಣಿರತ್ನವ ತಂದೆ ಜೀಯ (ಮೋಹತ. ೪೨-೫೫). [ನಾಣ್$_1$ + – ಇಸು$_3$]

**ನಾಣು** 'ನಾಣ್$_1$' ನೋ.

**ನಾಣುಗೆಡಿಸು** 'ನಾಣ್ಗೆಡಿಸು' ನೋ.

**ನಾಣುಗೆಡು** 'ನಾಣ್ಗೆಡು' ನೋ.

**ನಾಣುಗೇಡಿಗ** (ನಾ). ಲಜ್ಜೆಗೇಡಿ ; ನಾಚಿಕೆಗೆಟ್ಟವನು : ನಾಣುಗೇಡಿಗರಸುರರುಱೆ ಕಟ್ಟಾಣಿ ನೀನವರೊಳಗೆ (ತೊರವೆ. ೬-೨೨-೨೩).

[ನಾಣು (<ನಾಣ್$_1$) + ಕೇಡಿಗ]

**ನಾಣುದಾಣ** 'ನಾಣ್ದಾಣ' ನೋ.

**ನಾಣುಸಟಿಕ** (ನಾ). ಅವಮಾನಕ್ಕೆ ಅಂಜುವವನು : ಭಂಡನಿವನೀ ಖಳನು ಲೋಕದ ಭಂಡರಿಗೆ ಗುರು ನಾಣುಸಟಿಕರ ಚಂಡಿಯಿವನಲೆ ಬಾಲವೇ ಸಾಕಿನ್ನು ಬೆಳೆಯದಿರು (ತೊರವೆ. ೫-೮-೨೩).

[ನಾಣು (<ನಾಣ್$_1$) + ಸಟಿಕ]

**ನಾಣುನುಡಿ$_1$** (ಕ್ರಿ). ನಾಚಿಕೆಯನ್ನುಂಟು ಮಾಡುವಂತೆ ಮಾತನಾಡು ; ಲಜ್ಜಾಹೀನವಾದ ಮಾತನಾಡು: ನಾಣುನುಡಿದು ಪಗೆಗೆಡೆಯಾದೆನೆಂಬುದ ಕಾಣದೆ (ಅಂಜಕ. ೭-೮೦). [ನಾಣು (<ನಾಣ್$_1$) + ನುಡಿ$_1$]

**ನಾಣುನುಡಿ$_2$** (ನಾ). ನಾಚಿಕೆಯನ್ನುಂಟುಮಾಡುವ ಮಾತು ; ಲಜ್ಜಾರಹಿತವಾದ ಮಾತು : ರಚ್ಚೆಯ ನೆರವಿಗೆ ನಾಣುನುಡಿಯಿಲ್ಲದಿಹುದೆ (ಬಸವ. ೮೨೫). [ನಾಣು (<ನಾಣ್$_1$) + ನುಡಿ$_2$]

**ನಾಣೆಡೆ** (ನಾ). ನಾಚಿಕೆಯನ್ನುಂಟುಮಾಡುವ ಸ್ಥಳ ; ಗುಹ್ಯಾಂಗ : ತಲೆ ರೋಮದಂಚು ನಾಣೆಡೆ ಕುಚಮಧ್ಯಮುಂ . . . ಮಹಾಹಿ ಕೊಂಡೊಡೆ ಗರುಡಂಗಮೆತ್ತ(ಳ್ತ)ಲಿಂದೆಂದೊಡೆ ಪೇೞಲೆಱೆದರ್ಗೆ ಸಾಧ್ಯಮೋ (ಖಮದ. ೩-೪೨) ; ಸರಸದಿಂ ನಾಣೆಡೆಗೆಯೆರಡೊಂದೆನಿಸಲಪ್ಪ (ಜಸವ. ೦೦-೬೦) ; ನಾಣೆಡೆ ದ್ರವಿಸುತಿದ್ದುದು ಪಱೆ ಕೆಗೆಯೆ ತಾನೊಱಗಿ ದಳವಳು (ಭರಚ. ೪೧-೬೦) ; ಸವಿಲಲ್ಲೆನುಡಿಗೆ ಲವಲವಿಪ ಕಾಲಗೆ ಕೂಟಕೆ ಕಾತರಿಸಿ ಮಿಡುಮಿಡುಕಲೊಸರ್ವ ನಾಣೆಡೆ . . . ಎಸೆಯಲೆಸೆದರ್ ಶಿವನ ಬೆಂಕೊಂಡು ಸುರಸತಿಯರು (ಚಬಪು. ೧೯-೩೨) ; ಉಟ್ಟುದು ಸಡಿದು ಮದನಜಲ ನೆಱೆ ಪೊಱಮಟ್ಟುದು ನಾಣೆಡೆಯಿಂದ (ಕಂಷವಿ. ೯-೧೯೬).

[ನಾಣ್$_1$ + ಎಡೆ$_3$]

**ನಾಣೆಯ** 'ನಾಣಯಂ' ನೋ.

**ನಾಣೆಱಕ** (ನಾ). ಲಜ್ಜಾಭಾರ ; ನಾಚಿಕೆಯ ಆಧಿಕ್ಯ : ಅಂತಃೇಂದ್ರಿಯ ಸೌಖ್ಯಪರಮಕೋಟಿಯನೆಯ್ದಿ ನಾಣೆಱಕದಿಂದನಿತುಬೇಗಂ ತಲೆಯಂ ಬಾಗಿರಲ್ (ಕಾದಂಪೂ. ೫೬೫). [ನಾಣ್$_1$ + ಎಱಕ$_1$]

**ನಾಣೊಡೆಯ** (ನಾ). ಮಿಂಡ ; ಜಾರ ; ವಿಟ ; ರಸಿಕ : ಪದನಱೆದೀವ ನಿತ್ಯ ಮಱೆವಂ ಕಡುಬಿಚ್ಚಳಮೆಂಬುದಿ[ಲ್ಲದಿ]ಲ್ಲದನಭಿಮಾನಿ ನಾಣೊಡೆಯನೆಂಬಱೆವಂ ಸುಭಗಂ ಪ್ರಿಯಂವದಂ (ವರ್ಧಮಾ. ೮-೯೫) ; ಕೇಣದಿಂ ನಾಣೊಡೆಯನವೆಡೆಯೊಳ್ ನಿರ್ಧನಂ ಮಾಣ್ಬಳ್ (ಲೀಲಾವ. ೨-೯೭). [ನಾಣ್$_1$ + ಒಡೆಯ$_1$]

**ನಾಣ್ಗರೆ**(ಕ್ರಿ). ನಾಚಿಕೆಯನ್ನು ಪಡೆ ; ಲಜ್ಜೆಹೊಂದು ; ನಾಚಿಕೆಯನ್ನು ತೋರಿಸು : ಕಾಯ್ವ ಬಯ್ವ ನಾಣ್ಗರೆವೆರೆವಿಂಬುಕೆಯ್ಯುವೊಳಪೊಯ್ಯು ವನೇಕವಿಚಿತ್ರಚೇಷ್ಟೆಗಳ್ (ಪುಷ್ಪಪು. ೨-೨೭). [ನಾಣ್$_1$ + ಕರೆ$_1$]

**ನಾಣ್ಗಾದೆ** 'ನಾಚ್ಗಾದೆ' ನೋ.

**ನಾಣ್ಗಾಪು** (ನಾ). ಅವಮಾನವಾಗದಂತೆ ನೋಡಿಕೊಳ್ಳುವುದು ; ಮಾನರಕ್ಷಣೆ : ತನ್ನ ಪಾಣ್ಗಾಪನೆ ಬಗೆದಕನುಪೂಶಾಪಿತಶರೀರನುಮಾಗಿ ಶಂತನು ಕರಂಗರ್ದಿಗಿಡೆ (ಪಂಪಭಾ. ೦-೭೦ ವ). [ನಾಣ್$_1$ + ಕಾಪು]

**ನಾಣ್ಗೆಡಿಸು** 'ನಾಣ್ಗೆಡಿಸು' ನೋ.

**ನಾಣ್ಗೆಡು** 'ನಾಣ್ಗೆಡು' ನೋ.

**ನಾಣ್ಗುಂದು** (ಕ್ರಿ). ನಾಚಿಕೆಯಿಂದ ಕಂಗು : ನುಡಿದುಂ ಮೆಯ್ಸಿಂಗೆಟ್ಟು ಮಿಂತು ನೆಲದೊಳ್ ನಾಣ್ಗುಂದಿ ನಿಂದಿರ್ಪರ್ (ಕಬ್ಬಿಕಾ. ೦೬೨).

[ನಾಣ್$_1$ + ಕುಂದು$_1$]

**ನಾಣ್ಗೆಡಿಕ** (ನಾ). ಅವಮಾನ ಮಾಡುವವನು; ನಿಂದಕ: ದುರ್ನೀತರಂ ನಾಣ್ಗೆಡಿಕರಂ ಸುಜನಾಹಿತರನಾಚಾರದೂರರನು . . . ವ್ಯಾಕುಳರನತಿ ಕೃಪೆವೆತ್ತು ಕಾಯ್ವಾಯ್ (ಬಸವು. ೩೮–೭೦). [ ನಾಣ್$_1$ + ಕೆಡಿಕ ]

**ನಾಣ್ಗೆಡಿಸು**, ನಾಣುಗೆಡಿಸಂ, ನಾಣ್ಗೆಡಿಸಂ (ಕ್ರಿ). ೧. ನಾಚಿಕೆಯನ್ನುಂಟು ಮಾಡಂ; ಲಜ್ಜಿತರು: ಏ ಸೊಬಗನೋ ರೂಪವಮಾತ್ರದಿಂ ರಂಭಾದಿ ಭಾಸುರಸ್ತ್ರೀಯರಂ ನಾಣ್ಗೆಡಿಪನಿವನೆಂದು ಪುರಜನಂ ಬೆಱಗಾದುದು (ಜಬಪು. ೧೯–೪೫). ೨. ಅವಮಾನಗೊಳಿಸಂ; ಅಪಮಾನವನ್ನುಂಟು ಮಾಡು: ಆನನಾಂಬುಜಂ ತಣ್ಗದಿರಂಗೆ ಸೋಲಮನೊಡರ್ಚೆ ವಿಭೂಷಣ ಕಾಂತಿ ಭಾನುವಂ ನಾಣ್ಗೆಡಿಪಂತೆ ಪರ್ಬಿರೆ . . . ಬಂದನಮಾತ್ಯನಂದನಂ (ರಾಜಶೇ. ೧೩–೬೧). **ನಾಣುಗೆಡಿಸು:** ೨. ಬಲ್ಲಿದನೆಂಬವನ ಕೆಡಿಸಿತ್ತು ವಿಧಿ . . . ದೇವೇಂದ್ರನ ಮೆಯ್ಯ ನಾಣುಗೆಡಿಸಿತ್ತು (ಬಸಹ. ೩೭–೯೫); ತೃಣಿಗಳು ನಾನಾವಿಧದಲತಿ ನಾಣುಗೆಡಿಸಲು ಹರಿಯ ನರರೊಳು ಕಾಣುತಲೆ ಲಕ್ಷ್ಮೀರಮಣನಾಜ್ಞೆಯಂಲ್ಲಿ ವರ್ತಿಸುತ (ನಿಘಾಗ. ೧೧–೧೩–೨೨). **ನಾಣ್ಗೆಡಿಸು:** ೧. ಕುಡಿದೊಡೆ ಸೋರ್ಕಿಸದವು ನಾಣ್ಗೆಡಿಸದವು ಮನಕ್ಕಲಂಪನೀವುವು . . . ಮಧುಗಳನೆಡೆಯುಡುಗದೆ ಕುಡುಗುವುಚಿತಮದ್ಯಾಂಗಕುಜಂ (ಆದಿಪು. ೫–೩೨); ಕುವರನ ರೂಪೊಳ್ವಣ್ಗಳನೀಕ್ಷಣಮಾತ್ರದೆ ನಾಣ್ಗೆಡಿಸಿದುದಾದವೆಂಸೆವ ಪೊಸಜವ್ವನದೊಳ್ (ಚಂದ್ರಪು. ೪–೮); ನೃಪನ ಮನಮಾರ್ದಿಸುಂತುಂ ನಾಣ್ಗೆಡಿಸಿ ಪಿಡಿದನಂಗಜಚೋರಂ (ವರ್ಧಪು. ೬–೮).

[ ನಾಣ್$_1$ + ಕೆಡಿಸು$_1$ ]

**ನಾಣ್ಗೆಡು**, ನಾಣುಗೆಡಂ, ನಾಣ್ಗೆಡು (ಕ್ರಿ). ೧. ನಾಚಿಕೆಯನ್ನು ಬಿಡಂ; ಲಜ್ಜೆಯಿಲ್ಲದಿರಂ: ಕೀಚಕಂ ಕಾಮದೇವಂ ಮಾಡಿದ ಯಾಚಕನಂತೆ ಕರಮೆ ನಾಣ್ಗೆಟ್ಟು ಮನಂಗಾಪಟ್‌ದಳಿಪಿ ನೋಡಿ ತನ್ನ ಮನದೊಳಿಂತೆಂದು ಬಗೆದಂ (ಪಂಪಭಾ. ೮–೫೯ ವ); ತಾನಿತರ ಕನ್ಯಕೆಯಂತೆ ನಾಣ್ಗೆಟ್ಟು (ಕಾದಂಪೂ. ೮೭೪); ಮನ್ಮಥನ ಪಟ್ಟದಾನೆಯೊಳೆಸೆವ ನಳಿನವದನೆಯ ಕಂಡು ನಾಣ್ಗೆಟ್ಟನಾ ಪ್ರಮುಖ ನನೆಯಂಬನುಪಟಳದಲಿ (ಸನತ್ಕು. ೧೦–೨೩); ಕಣ್ಗೆಟ್ಟ ದಿಗ್ಪಾಲಪಾಲರಂ ಭೀತಿಯಿಂ ನಾಣ್ಗೆಟ್ಟ ಸರ್ವ ಗಂಧರ್ವರಂ ಪರಿದೆಯ್ದಿ (ಜಬಪು. ೩೦–೨೯). ೨. ಅಭಿಮಾನ ಕಳೆದಂ ಕೊಳ್ಳು; ಅವಮಾನಕ್ಕೊಳಗಾಗು: ಇಲ್ಲದಿರೆ, ಎಂತಕ್ಕುಮಪ್ ಈ ಪೊಲ್ಲಗೆಯ್ಮೆ? ಎಲ್ಲರುಂ ಕೂಗುವೀ ನಾಣ್ಗೆಟ್ಟ ಗೆಯ್ಮೆ? (ಅಶ್ವತ್ಥಾ. ೮–೧೫೫). **ನಾಣುಗೆಡು:** ೨. ಕಾಯುದ ಕರದಲ್ಲಿ ಲಿಂಗವ ಪಿಡಿದು ಬಾಯೊಜ಼ ಭವಗೆಟ್ಟು ನಾ ಣು ಗೆ ಟ್ಟು ನಾನಾರೆಂಬುದನಱಿಯದೆ (ಮೋಳಿಪೂ. ೩೪–೯೫); ಲಜ್ಜೆಗೆಟ್ಟಾದರೂ ಲಿಂಗವನೊಲಿಸುವೆ ನಾಣು ಗೆಟ್ಟಾದರೂ ಲಿಂಗವನೊಲಿಸುವೆ (ಬಸವ. ೪೯೮); ಈರ್ವರು ಮುನಿಗಳು . . . ನಾಣುಗೆಡುತ ಬಂದರೇಣಾಕ್ಷಿಯೆಡೆಗವಸರದಿ (ಅಮುಸಾಂ. ೭–೯೫). **ನಾಣ್ಗಡು:** ೧. ನಾಣ್ಗಡುವಿನಮಾ ತೆಱದಿಂದೆನ್ನಂ ವಿಡಂಬಿಸಲ್ಕೊಡರಿಕುಮೆ (ಕಾದಂಬ. ೮೦). ೨. ಆವಂ ಗಡ ವಾರುಣಿಯಂ ಸೇವಿಸಿ ನಾಣ್ಗಡದಂ (ಪಂರಾಮಾ. ೧೧–೭೭೯). [ ನಾಣ್$_1$ + ಕೆಡು$_1$ ]

**ನಾಣ್ಗೆಯ್** (ಕ್ರಿ). ಅವಮಾನಪಡಿಸು; ಅಗೌರವವನ್ನುಂಟುಮಾಡು: ಪೂಡದೆಯೆ ದೇಹಮನ್ ನಾಯ್ಗಳ್ಗೆ ಪರ್ದುಗಳ್ಗೆರೆಯಾಗಿ, ನೋಟಕ್ಕೆ ಬಲ್ ಘೋರವಮಾಗಿ, ನಾಣ್ಗೆಯ್ದು ತಾಮ್ ಬಿಸುಡುಗೆ (ಅಂತಿಗೊ. ೧೦–೧೮೯); ಅಪರಾಧದಿನ್ ಸ್ಕ್ಯಾಸ್ ನಿನ್ನನೀ ಬಗೆಯಲ್ಲಿ ನಾಣ್ಗೆಯ್ದು . . . ಗೋಟಿಡಿಸುತಿರ್ಪನ್? (ಬದ್ಧಪ್ರ. ೧೨–೩೩೭). [ ನಾಣ್$_1$ + ಕೆಯ್$_1$ ]

**ನಾಣ್ಗೇಡಿ** (ಗು). ನಾಚಿಕೆಯಿಲ್ಲದ; ಲಜ್ಜೆಯಿಲ್ಲದ: ನೀನು ಬಹಳ ನಾಣ್ಗೇಡಿ ಹೆಣ್ಣಾದೆ ಎಂದಳು (ಕೋಹಿನೂ. ೧೦೮); ಸೂರಣ, ನೀನೆ ಬಹಳ ನಾಣ್ಗೇಡಿ ಬ್ರಾಹ್ಮಣನಾದೆ (ಸುಗುಗಂ. ೬೩–೭).

[ ನಾಣ್$_1$ + ಕೇಡಿ$_1$ ]

**ನಾಣ್ಗೇಡು** (ನಾ). ಅವಮಾನ: ಸ್ಕ್ಯಾಸ್ಗೆ ಕೇಟ್ಟಟ್ಟ ನಾಣ್ಗೇಡು ನೋಟ ಮಾಡೆನ್ (ಬದ್ಧಪ್ರ. ೦೯–೨೮೫). [ ನಾಣ್$_1$ + ಕೇಡು ]

**ನಾಣ್ಗೊಳ್** (ಕ್ರಿ). ನಾಚಿಕೊಳ್ಳು; ಸಿಗ್ಗಾಗು: ನೀವಿ ಜಾಱದೆ ಸುಸಿಲ್ ಗೈವಲ್ಲಿ ನಾಣ್ಗೊಂಡೊಡುತ್ತುಳಿಕಂ ಮೂಡದೆ (ರಾಜಶೇ. ೧೧–೧೫೪).

[ ನಾಣ್$_1$ + ಕೊಳ್$_1$ ]

**ನಾಣ್ಚಿಕೆ**, ನಾಂಚಿಕೆ, ನಾಚಿಕೆ, ನಾಚಿಗೆ (ನಾ). ೧. ಲಜ್ಜೆ; ಸಿಗ್ಗು: ರಾಗದಿನಗಸುತೆಯೊಳ್ಸಂಭೋಗಿಸುತಿಪ್ಪಲ್ಲಿಗಗ್ನಿ ಬರೆ ನಾಣ್ಚಿಕೆಯಿಂದಾ ಗಿರಿಜೆ ಪೋಗಿ (ಸಮುಪ. ೮–೫೪); ತಲೆವಾಗಿ ನಾಣ್ಚುತಿಷ್ಪಳುಕುತಿದ್ದವರ ನಾಣ್ಚಿಕೆ ಭಯವನೊಯ್ಯನೆ ಕಳೆದನು ಮುಟ್ಟಿ ನುಣ್ಚರದೋಜ಼ ಮಾತಾಡಿ (ಭರಚ. ೩೦–೧೦೩). ೨. ಅವಮಾನ: ಪೊಯ್ವಳ್ಳಿಗಳ ಪೊತ್ತ ನಾಣ್ಚಿಕೆಯ ಸರ್ವ ದಿಕ್ಪಾಲರೋಟಂಗಾಣುತಜನಾಗ್ರಹಂದಾಳ್ದನಾ ಕ್ಷಣದೊಳು (ಜಬಪು. ೪೯–೨೪). **ನಾಂಚಿಕೆ:** ೨. ಪರಿಕಿಸುವೊಡೆವಂಗವಮರವೆಸರಿನ ಕರಕರೆಯ ನಾಂಚಿಕೆಯುವೊಳಗಿದು ಶರಣ ನೀವಱಿಯದುದೆಯೆಮ್ಮಯ ನಿತ್ಯತೆಯ ಹದನಂ (ಸಾನಂಚ. ೭–೨೫). **ನಾಚಿಕೆ:** ೧. ನುಡಿವೊಡೆ ನಾಚಿಕೆ ಗಡ ನಿನ ಗುಡಿನೂಲ್ ಬಿಗಿವಿನೆಗವಿಮಾ ವಳಿತ್ರಯಮಿಗಳ್ ಕಿಡುತಿರ್ಪುದು (ಕಾದಂಪೂ. ೪೦೫); ಮೊಲೆದುದಿ ಮೈದಿಲ ಮಱೆಯೊಳಿರುವುದೆಂದು ಸಲೆ ನಾಚಿಕೆಯನು ತೊಱೆದು (ಕಂನವಿ. ೬–೧೮೪). ೨. ಬೈತು ಬಿತ್ತನೊಲವಿಂ ಬೆಳೆಗೆಯ್ವಾ ವುದುಮಂ ಸತ್ಪಾತ್ರಕ್ಕೀವುದುಮಂ ದಾನವೆಂಬ ನಾಚಿ[ಪಾಠಾಂ. ಣ್ಚಿ] ಕೆಯಿಂಟೇ (ಅರ್ಧನೇ. ೪–೪೮); ನುಸುಳಿದರು ನಾಚಿಕೆಯಲಾತನ ವಿಶಿಖ ಜಲದಲಿ ತೊಳಿದರತಿರಥರಸಮಸಂಗರವಾಯ್ತು (ಕುವ್ಯಾದ್ರೋ. ೬–೪). **ನಾಚಿಗೆ:** ೧. ಮಾತೀಗಂ ಆಚಿಗೆ ವಿಪಾರಿದ್ದ ನಾಚಿಗೆ ಮುಸುಕ್ಯಾವ ಹೂವಿಗೆ (ಗಂಗಾತ. ೩೨–೧೭); ಅಪೂರ್ವನಿಗೆ ತುಂಬ ನಾಚಿಗೆಯಾಯಿತು (ಭಾರತಿ. ೧೦).

ನಾಚಿಕೆಯ ಗೊತ್ತು = ನಾಣ್ಡಾಣ: ಬ ಡ ವ ಲ್ಲ ದು ಬ್ಬ ಲ್ಲ ದೊ ಡ ಲು ಕಿಱುದೊಡೆಯಯೆಡೆವಿಡದ ರೋಮದ ನಾಚಿಕೆಯ ಗೊತ್ತಿನ . . . ಅತಿ ಚದುರಿನವಳೆ ಶಂಖಿಣಿಯೆನಿಪಳು (ಜನವ. ೨–೧೪).

[ ನಾಣ್ಚು$_1$ + – ಇಕೆ. / ತುಳು. ನಾಚಿಕೆ, ನಾಚಿಗೆ ]

**ನಾಣ್ಚಿಸು**, ನಾಚಿಸು (ಕ್ರಿ). ೧. ನಾಚುವಂತೆ ಮಾಡು; ಲಜ್ಜೆಯನ್ನುಂಟು ಮಾಡು: ನಿಜಾಕಾರಮಂ ತೋಱೆ ನಾಣ್ಚಿಸಿ ಶಾಂತಿದಾಂತಿಯನುಮಂ ಬೋಧಿಸಿ (ಪದ್ಮರಾ. ೨–೨೩); ಎಂದವಳಂ ನಾಣ್ಚಿಸಿದಂ (ರಾಜಶೇ. ೧೧–೧೬೦ವ); ಕಾಂಚನಸುಕಾಶ್ಮೀರಕರ್ನಿಕಾರಪ್ರಭೆಯ ನಾ ಣ್ಚಿ ಸು ವ ತತ್ಪುರವಮುಖದೊತ್ತಿನೊಳ್ದೀರಕಾಂಚನಾದ್ರಿಯ ಪೋಲ್ವ ತನುಕಾಂತಿ (ಜತುಪು. ೧–೨–೪೧). ೨. ಅವಮಾನಮಾಡಂ. **ನಾಚಿಸು:** ೧. ಮಲ್ಲಯಂ ಸರವಿದೆ ಕೊಳ್ಳೆಂದು ಬೆಲೆಗೊಂಡು ನಿಲ್ಲದವನ ನಾಚಿಸಿದಳು (ಕಂನವಿ. ೬–೮೪). ೨. ಓಡಿ ನಾಚಿಸುವವರು ನಿಲಿ ರಣಖೇಡರಿಗಳೆ ಮರಳಿ (ಕುವ್ಯಾಕ. ೮–೩೦); ನಿಮ್ಮ ಶಿಕ್ಷಣ ಶಿಕ್ಷಕರನ್ನೂ ನಾಚಿಸುತ್ತದೆ (ರಂಗರೋ. ೮೭).

[ ನಾಣ್ಚು$_1$ + – ಇಸು$_3$ ]

**ನಾಣ್ಚು$_1$**, ನಾಂಚು, ನಾಚು$_1$ (ಕ್ರಿ). ೧. ನಾಚಿಕೆಪಡು; ಲಜ್ಜೆಯನ್ನು ಹೊಂದಂ; ಸಿಗ್ಗಾಗು: "ನಾಣ್ಚು–ಲಜ್ಜಾಯಾಂ" (ಶಮದಾ); ನೀಂ ಬಾ ಪೋಪಮೆಂದಂಗೆ ಮೆಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ ಎಂಬುದುಂ (ಪಂಪಭಾ. ೧–೭೦); ಅನಕ್ಕ ನಾಣ್ಚುವೆಂ ಪಿಡಿ ನೀನೆ ನೃಪಂಗಿಕ್ಕು ತಂಬುಲಮಂ (ಕಾದಂಬ. ೫೫); ಗಾಡಿಯಿಂದವಳು ನಾಣ್ಚಿರಲು ಬಿನ್ನಹವನು ಮಾಡಿದಳಾ ಚಿತ್ರಲೇಖೆ (ಮೋಹತ. ೨೫–೩); ಒಡೆಯ ನಿನ್ನೊತ್ತಿನೊಳಿರಲು ನಾಣ್ಚುವಳು (ಭರಚ. ೬–೨೩); ಅಲಸದೆ ನಾಣ್ಚದಂಜದೆ ಯಳುಕದೆ ಪೇಳು (ಹದಿಬ. ೧–೨೯). ೨. ಅವಮಾನ ಹೊಂದು; ಅವಮರ್ಯಾದೆಗೊಳಗಾಗಂ: ಪಾದರಿಗನಂತೆ ಪಲರ ಮುಂದೆ ನಾಣ್ಚದೆ ಲೋಭಿಯಪ್ಪರಸಿನಂತವಿಚಾರಿಯಾಗದೆ (ಧರ್ಮಾಮೃ. ೪–೪೭). **ನಾಂಚು:**

೧. ಮಹಾದೇವಿಸೆಟ್ಟಿಯವರು ನಾಂಚಿ ತಲೆವಾಗಿರ್ದುದನಱಿದು (ಬಸರ. ೧೨-೫೬) ; ಕರ ನಾಂಚಿ ಶರನಿಧಿಯ ಮುಳುಗಿದನೊಯುಂಬ ತತ್ಪರಿಯೊಳಂ ಚಂದ್ರ ಪಶ್ಚಿಮಗಿರಿಯ ಮರೆಗೊಳಲು (ನವಮೋ. ೧೯-೨೫). ನಾಚು$_1$ : ೧. ಆಂ ಮಾಡುವ ರುದ್ದದೊಳ್ ಕಿಱಿದು ನಾಚುಗುಮೋ ವಧು (ಕಾದಂಉ. ೬೮೩). ೨. ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ (ಮಹಾದೇ.ಬ.೪೫-೧೦೬); ನಚ್ಚಿದಾಳಿನ ಬಿನ್ನಹಕೆ ಹರಿ ಮೆಚ್ಚಿ ಮನದಲಿ ನಾಚಿ ಚಕ್ರವ ಮುಚ್ಚಿದನು (ಕುವ್ಯಾಭೀ. ೬-೪೬) ; ನುಡಿಗೆ ನಾಚಿದನರಸ ಹಂಸದ ನಡವಳಿಗೆ ಮೆಚ್ಚಿದನು (ನಳಚ.೨-೨೦); ನನಗೆ ಬೇಕಾದದ್ದು ಬಿಡುಗಡೆ; ಅದನ್ನು ಕೋರುವುದಕ್ಕೆ ನಾಚುತ್ತೇನೆ (ಧರ್ಮಸಾ. ೮೩). [ ನಾಣ್$_1$ + –ಚು$_1$ ]

**ನಾಣ್ಚು₂** (ನಾ). = ನಾಣ್ಚಿಕೆ ೧ : ಅರಳಿಯಲಿ ರಸವಿಲ್ಲ ಕರುಳಿಗೆ ನಾಣ್ಚಿಲ್ಲ ಮರುಳನಿಗಾರು ಇದಿರಿಲ್ಲ ಸೂಳೆಯಲಿ ಸರಲವೆ ಇಲ್ಲ (ಸರ್ವಜ್ಞ. ೧೮೭೬).

[ <ನಾಣ್ಚು$_1$ ]

**ನಾಣ್ಣುಡಿ** 'ನಾಟ್ನುಡಿ' ನೋ.

**ನಾಣ್ದಂಡ** (ನಾ). ಪುರುಷನ ಗುಹ್ಯಾಂಗ ; ಶಿಶ್ನ : ಬಾಳಿಯೊಳು ಬಾಳಿ ನಾಣ್ದಾಣದೊಳು ನಾಣ್ದಂಡ . . . ಮತ್ತೆ ನಾಳಿಕಾವ್ಯೆರಿಶಕಲದೊಳು ಶಕಲಗಳಮರ್ದು ಸ್ತ್ರೀಪುರುಷರಿರೆ ಕಂಡರು (ಪ್ರಭುಪು. ೪-೧೨೯).

[ ನಾಣ್$_1$ + ದಂಡ ]

**ನಾಣ್ದಳೆ** (ಕ್ರಿ). ನಾಚಿಕೆಯನ್ನು ಹೊಂದು ; ನಾಚು : ಸಂಕ್ರಂದನಂ ಸದ್ಗುಣೋಜ್ವಳಸತ್ಯೇಂದ್ರನರೇಂದ್ರರುಂದ್ರಯಶಮಂ ಗಂಧರ್ವರಿಂ ಕೇಳ್ದು ನಾಣ್ದಳೆದು (ರಾಜಶೇ. ೩-೪). [ ನಾಣ್$_1$ + ತಳೆ$_1$ ]

**ನಾಣ್ದಾಣ, ನಾಣುದಾಣ** (ನಾ). = ನಾಣ್$_1$ ೩: "ಭಗದೊಳ್ ನಾಣ್ದಾಣ ಮೆಂದುಂಟು" (ಕರ್ಣಾನಿ. ೮೮) ; ಮೊಱೆಯಂ ಮಾಱುವ ಮಾತು ಕೆಂದೆಸಪ ನಾಣ್ದಾಣಂ (ಚಂದ್ರಪು. ೮-೬೮); ಪಳ್ಕೆಯೊಳಿಕ್ಕಸರು ಪೊಂಗುತ್ತಿರೆ ನಾಣ್ದಾಣಂ ಸೂಳ್ವಡದಿಂಗೂಟಂ ಗಡಿಗೆಟ್ಟರಲ್ (ಉದ್ಯದೇ. ೪-೨೮); ಲಜ್ಜಿಸುವ ತಿಣ್ಣಮಂ ಬಿಡಿಸಿ ನಾಣ್ದಾಣಮಂ ತಡವಿ (ಚಿಬಪು. ೧೧-೫೯). ನಾಣುದಾಣ : ಹದನಾದ ನಾಣುದಾಣಕೆ ಲಿಂಗಯೋಗವ ಪದುಳಿಸುವಾಗ ಸ್ವರ್ಗವನು ಮಿದಿಯದೆ ಗೇಣು ಚೋಟನೆ ತೋಱುತಿದ್ದುದು (ಭರಚ. ೪೧-೬೨).

[ ನಾಣ್$_1$ + ತಾಣ ]

**ನಾಣ್ದುಡುಕು** (ಕ್ರಿ). ಗುಹ್ಯೇಂದ್ರಿಯವನ್ನು ಹಿಡಿದುಕೊಳ್ಳು; ಶಿಶ್ನವನ್ನು ಹಿಡಿ: ಚೆಲ್ಲದೊಳಾಕೆ ನಾಣ್ದುಡುಕಿ ನುಣ್ಗೊರಲಿಂದನಿ ಪೊಣ್ಮೆ ಚುಂಬಿಸುತ್ತಲ್ಲ ಸುಖಕ್ಕೆ ಸೀಮೆಯೆನಲಂಗಜಕೇಳಿಯನುಂಟುಮಾಡಿದಳ್ (ದಶಕು. ೮-೫೨).

[ ನಾಣ್$_1$ + ತುಡುಕು$_1$(<ತೊಡಂಕು$_1$) ]

**ನಾಣ್ನುಡಿ** 'ನಾಟ್ನುಡಿ' ನೋ.

**ನಾಣ್ಪು** (ನಾ). = ನಾಣ್ಚಿಕೆ ೧ : ಈಕೆಯ ಸಲ್ವ ಜಾಣ್ನುಡಿಗಳಿಂಪಿನಿವಿಲ್ಲನ ಪೆಂಪಲಂಪು ಮೇಣೀಕೆಯ ನೋಟದೊಳ್ಪು ಮುನಿಜಾಲಮನಕ್ಕೆ ಬೆಗಟ್ಟು ನಾಣ್ಪು ತಾನೀಕೆಯ ಸುಯ್ಯ ಗಾಳಿ ಮಲಯಾನಿಲನೊಳ್ ಸಲೆ ಜೋಳಿಪಾಳಿ (ಉದ್ಭಟ. ೮-೪೪). [ ನಾಣ್$_1$ + –ಪು$_2$ ]

**ನಾಣ್ಪೋಗು** (ನಾ). (ಪ್ರಾಣಿಗಳ) ಸಂಭೋಗ : ಮೂಱು ಕೊಂಬುಮು ನಾಱು ನಾಣ್ಪೋಗುಮನೆರಟ್ಟಜ್ಜೆಯುಮಂ . . . ಬಲ್ಲನಾಗಿ (ಪಂಪಭಾ. ೫-೪೩ ವ). [ ನಾಣ್$_1$ + ಪೋಗು$_2$ ]

**ನಾಣ್ಬಟ್ಟೆ** 'ನಾಟ್ಬಟ್ಟೆ' ನೋ.

**ನಾಣ್ಬಟ್ಟೆವೆಣ್** (ನಾ). ನಾಡಿನ ರಸ್ತೆಯಲ್ಲಿ ತಿರುಗಾಡುವ ಹೆಂಗಸು ; ನಾಡ ದಾರಿಯಲ್ಲಿ ಓಡಾಡುವ ಹೆಣ್ಣು : ಪತ್ತನ ದ್ರೋಣಾಮುಖಂಗಳ್ಗೆ ಮಾಣದೆ ನಡೆವ ನಾಣ್ಬಟ್ಟೆವೆಣ್ಣ ಕಣ್ಣಪೂರವನಲಂಕರಿಸಿದ ಪಾನೀಯ ಶಾಯಮಾನನಿಕಾಯಾಭ್ಯಂತರಾಳದಲ್ಲಿ ಪಱಿಪಡೆ ಸೇದೆ (ಅನಂಪು. ೧-೮೨ ವ).

[ ನಾಣ್ಬಟ್ಟೆ (<ನಾಟ್ಬಟ್ಟೆ) + ಪೆಣ್ ]

**ನಾಣ್ಬದ** (ನಾ). ಕಾಮಜಲ; ಯೋನಿದ್ರವ : ಊರುಯುಗಂಗಳಿಂದಿೞಿವ ನಾಣ್ಬದನಂ ನಿಱಿಯಿಂದಮೊತ್ತುತುಂ ಜಾರೆಯರೆಯ್ದುತಿರ್ದರ್ (ಕುಸುಮಾ. ೪-೩೫) ; ನೀವಿ ನಸುಬೀೞ್ವಿರೆ ನಾಣ್ಬದನಂಗಜೌಕದಿಂದಿೞಿತರೆ ಘರ್ಮವಾಃಕಣಗಣಂ ನೆಗೆಯುತ್ತಿರೆ ನೋಡುತಿರ್ದಳಾಕುಳತೆಯಿನೊರ್ವೆ ಚಂದ್ರಮುಖಿ ಮೆಯ್ಯನುಱಿದಾ ನರನಾಥಪುತ್ರನಂ (ಶಾಂತೀಶ್ವ. ೩-೩೦).

[ ನಾಣ್$_1$ + ಪದ$_1$ ]

**ನಾಣ್ಬಿಡು** (ಕ್ರಿ). ನಾಚಿಕೆಯನ್ನು ಬಿಡು, –ತ್ಯಜಿಸು: ಮೊಗಂಗುಡೆ ಪದವೆತ್ತು ಚುಂಬಿಸಿ ಭಯಂಗೆಯೆ ಬಲ್ವಿಣಸಂ ಪೊದಟ್ಟೆ ನಾಣ್ಬಿಡೆ ನೆರೆದೂಢೆಯಂ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ (ಚಂದ್ರಪು. ೬-೮೨) ; ತೋಳ್ಗಳಿಂ ಬಿಗಿದು ತಳ್ಕಿಸಿ ನಾಣ್ಬಿಡೆ ಜಾಣ್ಮೆದೋಱಿ . . . ತನ್ನಳ ಮನಮಂ ಮರಳ್ಚಿದನದೇಂ ರತಿಕೋವಿದನೋ ಕುಮಾರಕಂ (ರಾಜಶೇ. ೮-೮೫). [ ನಾಣ್$_1$ + ಬಿಡು$_1$ ]

**ನಾಣ್ಬೆದರು** (ಕ್ರಿ). ಲಜ್ಜೆಯಿಂದ ಬೆದರು: ಭರದಿ ಮುಲೆತುದು, ಮಹೇಂದ್ರ ಶಿಖರಂಗಳುಂ ನಾಣ್ಬೆದರಿ ಗೋಣ್ಗಳ್ಗವೋಲ್ (ಶ್ರೀರಾಮಾ. ೫೮೬-೬೬).

[ ನಾಣ್$_1$ + ಬೆದರು$_1$ (<ಬೆದಱು$_1$) ]

**ನಾಣ್ಬೆರಸು** 'ನಾಣ್ವೆರಸು' ನೋ.

**ನಾಣ್ಬೆಳ್ಪೇರು** (ಕ್ರಿ). ನಾಚಿಕೆಯಿಂದ ಬಿಳಿಚಿಕೊಳ್ಳು: ಮೇಘಸಂಧಿಗಳಿಂದೆ, ಮುಸುಕಿತ್ತು, ನಸುನಾಣ್ಚಿ, ಮೊಗಕೆ ನಾಣ್ಬೆಳ್ಪೇರಿದಪರಿಚಿತಳಂತೆವೋಲ್ ಇಣಿಕಿತು ಗತೋಷ್ಣಾತಪಂ (ಶ್ರೀರಾಮಾ. ೩೪೫-೧೫೦).

[ ನಾಣ್$_1$ + ಬೆಳ್ಪು + ಏರು$_1$ (<ಏಱು$_1$) ]

**ನಾಣ್ಮಸಗು** (ಕ್ರಿ). ಅವಮಾನ ಹೆಚ್ಚಾಗು: (ನಾಣ್ಮಸಗಿ, ಅವನತವಕ್ತ್ರನಾಗಿ) (ಮಂತ್ರಶ. ೩೯-೨). [ ನಾಣ್$_1$ + ಮಸಗು$_1$ ]

**ನಾಣ್ಮಾತು** 'ನಾಲ್ಮಾತು' ನೋ.

**ನಾಣ್ಮೇಸಲು** (ನಾ). ನಾಚಿಕೆಯಲ್ಲಿ ತೋರುವ ಪವಿತ್ರತೆ; ಪರಿಶುದ್ಧತೆಯುಳ್ಳ ನಾಚಿಕೆ : ನಾಣ್ಮೇಸಲಳಿಯದವಯವದ ಭೇದಮಂ ಮಱಿದು ಜಾಣ್ಮೆಗಳ ಬಂಧಂಗಳೊಳ್ಪಳಿಸಿ . . . ಲಲ್ಲೆಗೈದೊಲವನಾಣ್ಮಂಗೆ ಕಾಣಿಸಿದಳವಳ್ (ಜೈಮಿಭಾ. ೧೧-೨೨). [ ನಾಣ್$_1$ + ಮಿಸಲು (<ಮಿಸಲ್) ]

**ನಾಣ್ಮುಚ್ಚು** (ಕ್ರಿ). ಮಾನವನ್ನು ರಕ್ಷಿಸು: ಉಡೆ ನಾಣ್ಮುಚ್ಚದ ನಾಗವಟ್ಟಣಿಗೆ (ಮಲ್ಲಕಾ. ೮-೩೦೯). [ ನಾಣ್$_1$ + ಮುಚ್ಚು$_1$ ]

**ನಾಣ್ಮೆ** (ನಾ). ನಾಚಿಕೆ ; ಲಜ್ಜೆ : ಆದೊಡದನಾಡುತಿರ್ಪಾಗಳೇ ನಾಣ್ಮೆಯೊತ್ತಿ ಬರ್ಪುದು ಎನಗೆ (ಬದ್ಧಪ್ರ. ೩೪-೭೨೬) ; ಅಳಿವನ್ ಜ್ಞಾನಿಯಾಗಿ ದೊರ್ಡಂ, ತಾನ್ ಕಲ್ಪುದದು ನಾಣ್ಮೆಯಲ್ಲಂ (ಅಂತಿಗೊ. ೩೨-೬೫೮).

[ ನಾಣ್$_1$ + –ಮೆ$_1$./ತಮಿ. ನಾಣ್ಮೈ ]

**ನಾಣ್ಮೊಗ** (ನಾ). ನಾಚಿಕೆಯನ್ನು ತೋರ್ಪಡಿಸುವ ಮುಖ : ಬಲವಂತರೆಲ್ಲ ನಳಿಕೆಯ ಕೀರನಂತೆ ಅವರು ದಿಕ್ಕಾಗಲಱಿಯರು ನಾಣ್ಮೊಗದಪ್ಪವರ ಒಪ್ಪವಿಟ್ಟುಕೊಳ್ಳ (ಮೋಳಿಮಾ. ೬೭-೨೬೯). [ ನಾಣ್$_1$ + ಮೊಗ ]

**ನಾಣ್ಯ** 'ನಾಣಯಂ' ನೋ.

**ನಾಣ್ಯಗಾರ** (ನಾ). ಗಣ್ಯ ; ಗೌರವಸ್ಥ ; ಮಾನ್ಯ : (ಶಿ).

[ ನಾಣ್ಯ (<ನಾಣಯ) + –ಕಾರ$_1$ (<–ಕಾಱ) ]

**ನಾಣ್ಯಪದ್ಧತಿ** (ನಾ). ನಾಣ್ಯಗಳನ್ನು ಚಲಾವಣೆ ಮಾಡುವ ವ್ಯವಸ್ಥೆ,–ನಿಯಮ : ಈ ಹದ ಬಹುಕಾಲದವರೆಗೆ ನಿಲ್ಲುವಂತೆಯೂ ಸಮಧಾತುವಾಗಿರುವಂತೆಯೂ ಏರ್ಪಡಿಸಬೇಕು–ಎಂಬುದೇ ಎಲ್ಲ ನಾಣ್ಯಪದ್ಧತಿಗಳ ಗುರಿ (ಹಣಪ್ರ. ೨೯). [ ನಾಣ್ಯ (<ನಾಣಯ) + ಪದ್ಧತಿ ]

**ನಾಣ್ಯಪರೀಕ್ಷೆ** (ನಾ). ನಾಣ್ಯಗಳ ಗುಣಾವಗುಣಗಳ ಪರಿಶೀಲನೆ: ಅವನು ನಾಣ್ಯಪರೀಕ್ಷೆಯಲ್ಲಿ ಖದೀಮ (ರೂಢಿ).

[ ನಾಣ್ಯ (<ನಾಣಯ) + ಪರೀಕ್ಷೆ ]

**ನಾಣ್ಯವಂತ** (ನಾ). = ನಾಣ್ಯಗಾರ : ಇಡೀ ಹಳ್ಳಿಯಲ್ಲೇ ಅವನು ನಾಣ್ಯವಂತನೆಂದು ಹೆಸರು ಗಳಿಸಿದ್ದಾನೆ (ರೂಢಿ).

[ ನಾಣ್ಯ (<ನಾಣಯ)+-ವಂತ ]

**ನಾಣ್ಯವಟ್ಟ** (ನಾ). ನಾಣ್ಯವಿನಿಮಯದ ಸಂದರ್ಭದಲ್ಲಿ ತೆರಬೇಕಾದ ಶುಲ್ಕ ; ಒಂದು ನಾಣ್ಯವನ್ನು ಮತ್ತೊಂದು ನಾಣ್ಯಕ್ಕೆ ಬದಲಾಯಿಸಿಕೊಳ್ಳುವಾಗ ಕೊಡಬೇಕಾದ ಹಣ,-ಶುಲ್ಕ : (ಕ).

[ ನಾಣ್ಯ (<ನಾಣಯ) + ವಟ್ಟ₂ ]

**ನಾಣ್ಯವಾರು** (ನಾ). ಬೇರೆ ಬೇರೆಯಾದ ನಾಣ್ಯಗಳ ವಿವರವಾದ ಲೆಕ್ಕ ; ಬೇರೆ ಬೇರೆ ಬೆಲೆಯ, ಆಕಾರದ ನಾಣ್ಯಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ವಿಂಗಡಿಸುವುದು : ತಿರುಪತಿಬೆಟ್ಟದಲ್ಲಿ ಪ್ರತಿನಿತ್ಯ ಹುಂಡಿಯ ಹಣವನ್ನು ನಾಣ್ಯವಾರಾಗಿ ವಿಂಗಡಿಸುತ್ತಾರೆ (ರೂಢಿ).

[ ನಾಣ್ಯ (<ನಾಣಯ) + ವಾರು₂ (<ವಾರ್₃) ]

**ನಾಣ್ಯವಿದ್ಯೆ** (ನಾ). ನಾಣ್ಯದ ವಿಷಯವನ್ನು ತಿಳಿಸುವ ವಿದ್ಯೆ; ನಾಣ್ಯಕ್ಕೆ ಸಂಬಂಧಪಟ್ಟ ವಿಷಯಗಳನ್ನು ವಿವರಿಸುವ ಶಾಸ್ತ್ರ: "ನಾಣ್ಯ(ಪರಿಚಯ) ವಿದ್ಯೆ" (Numismatics. ಇಂಕನಿ). [ ನಾಣ್ಯ(<ನಾಣಯ)+ವಿದ್ಯೆ ]

**ನಾಣ್ಚೆರಸು**, ನಾಣ್ಚೆರಸು (ಕ್ರಿ). ನಾಚಿಕೆಯಿಂದ ಕೂಡಿರು; ಲಜ್ಜೆಯನ್ನು ಹೊಂದು : ಆಕೆಯ . . . ಗಾಡಿವೆರಸಿದ ಹಾವಕ್ಕಂ ನಾಣ್ಚೆರಸಿದ ಭಾವಕ್ಕ ಮೊಲ್ದು ಮೊಱಿಲ್ದು ಮಿಱಿಯಾರೆ (ಪಂಪಭಾ. ೪-೦೭ ವ). **ನಾಣ್ಚೆರಸು :** ಕಂಪಿಸುತಿರೆ ಕರತಳದಿಂದಂ ಪೋದತ್ತಕ್ಷಮಾಲೆ ನಾಣ್ಚೆರಸಾಗಳ್ (ಕಾದಂಪೂ. ೭೭೦). [ ನಾಣ್₁ + ಬೆರಸು₁ ]

**ನಾತ,** ನಾತಂ (ನಾ). ೧. ಮೂಗಿನಿಂದ ಕಂಡುಹಿಡಿಯಲಾಗುವ ಒಂದು ದ್ರವ್ಯಗುಣ ; ವಾಸನೆ ; ಗಂಧ ; ಪರಿಮಳ : ಸವಿ ಬೆಳಗು ಕಂಪು ಬನಿ ನಾತಮೆಂಬೈದಱ ಬಗೆ ತಿಳಿವನೆಡೆಯಬೇ ಲೋಕಂ (ಕಾಜಿಳ್. ೦-೩-೭) ಅವನ ಸುತ್ತ ಕ್ಯಾದಿಗೀ ಹೊಡಿವಾಸ, ಪಲ್ಲೇದ ಕಂಪಾ, ಎಲಿಬಳ್ಳೀ ನಾತ (ಬಾಬಲ. ೫೩). **೨.** ಸುವಾಸನೆ ; ಸುಗಂಧ : "ಸೌಸವಂ . . . ನಾತಂ, ವಂಗಮುಗಿಸು- ಈ ೭ ಪರಿಮಳಕ್ಕೆ ಪೆಸರ್" (ಕಕಸಾ. ೯-೧೬೭); "ನಾತಂ ನೆಱಿ ಸೌಸವ ಕಮ್ಮಿತೆಂದು ಮಗಮಗಿಸಿದುದೆಂದಿರದೆ . . . ಸೌರಭ್ಯಮಕ್ಕುಂ" (ಕವಿಕಂ. ೯೭) ; ಕಸವು ಹೊಡೆದ ಕೈಯು ಕಸ್ತೂರಿ ನಾತಾವ ಬಸವಣ್ಣ ನಿನ್ನ ಸೆಗಣೀಯ ಬಳಿದ ಕೈ ಎಸಳ ಯಾಲಕ್ಕಿ ಗೊನಿ ನಾತ (ಗಳಿ. ೪೨). **೩.** ದುರ್ವಾಸನೆ ; ದುರ್ಗಂಧ : "ನಾತವೆನೆ ದುರ್ಗಂಧಮದೋಳ್" (ಕಕಿರ. ೫೪) ; ಪೊಂಗಳಂ ಸುರಿಪೊಡಮಾರೊ ಸ್ಥಿರಿಸುವರಾಱಿನ ಪಲ್ಲಿಲಿವಾಯ ನಾತಮಂ (ಪಂಪಭಾ. ೪-೦೦೦) ; ಶೂಲಿ ಹೊಲಸಿನ ನಾತದೊಳಗೆ ನಿಂದ್ಯ ತಂದೆ (ಇಹರ. ದೇ. ೪೪-೨೨) ; ನಾತವಧಿಕ ಭಯಂಕರವು (ಬಸವು. ೪೭-೫೯); ಇಡಿದ ಹೊಲಸಿನ ನಾತದುಬ್ಬರದೆಡಬಲದ ತಿನಿಸುಗಳ . . . ಕಂಡು ಹೇಸುತ ಹನುಮ ಹೋದಿವಂಟ (ತೊರರಾ. ೫-೨-೩೭) ; ನಷ್ಟ ಬೀಳುವುದಲ್ಲ ನಾತ ಹುಟ್ಟುವುದಲ್ಲ (ಪುರಂದ. ೧-೨೦೭-೨) ; ನಡುಮನೇಲಿ ಹೇತು ನಾತ ಬರುತ್ತೆ ಎಂದ (ಗಾದೆ). **೪.** ಕಟುವಾಸನೆ ; ಉಗ್ರಗಂಧ; ಸಹಿಸಲಾಗದ ವಾಸನೆ : "ಹೆಸಲುನಾತಂ ಸೊವಡು ಸೊಗಡುದುಂದುಲಿಗ ಕೊರಿತ್ತಾದ ಗಂಧಕ್ಕೆ" (ಶಬ್ದಮಂ. ೨೪) ; ಇಂಗಿನೊಳು ನಾತವನು ತೆಂಗಿನೊಳಗೆಳನೀರ ಭೃಂಗಕೋಕಿಲೆಯ ಕಂಠದೊಳು ಗಾಯನವ ತುಂಬಿದವರಾರು (ಸರ್ವಜ್ಞ. ೧೯೩). **೫.** (ಆಲಂ) ಸುಳಿವು ; ಮುನ್ಸೂಚನೆ : ನೀಲವ್ವ ಮೊದಲ ಸಲ ಗರ್ಭಿಣಿಯಾದಳು. ಆ 'ನಾತ'ವನ್ನು ಮೊದಲು ಕಂಡುಹಿಡಿದವಳೂ ಬಸವ್ವನೇ (ಬರಹಾ. ೧೭) ; ನಯನ ನಿಗಿನಿಗಿ ಎದೆಯ ದೃಢಪಡೆ ಏನೊ ನಾತವ ಹಿಡಿದಿದೆ (ಕೃತ್ಯಾಅ. ೨೮-೩). **ನಾತು : ೧.** ನಾತು ಖಿವಟ ಇರದೆ ಬಣ್ಣ ಕೆಂಪದಿದ್ದು ತೇಜವುಳ್ಳದ್ದಿರಬೇಕು (ಮುಂಬವ್ಯಾ. ೩೭).

[ ದೇ.॥ ತಮಿ. ಮಲ. ನಾಱ್ಱ; ತುಳು. ಕೊಡ. ನಾತ ]

**ನಾತಂಬಿಡಿ**, ನಾತಹಿಡಿ (ಕ್ರಿ). ೧. ವಾಸನೆ ಹಿಡಿ ; ವಾಸನೆಯಿಂದ ಪತ್ತೆಹಚ್ಚು : ನೆತ್ತರ ಧಾರೆಯೊಳ್ ನಾದು ನನೆದಡಿವಜ್ಜೆಯನು ನಾತಂಬಿಡಿದು ಬಂದು (ಸುಕುಮಾ. ೧೨-೨೪ ವ). **ನಾತಹಿಡಿ : ೨.** ಕೆಟ್ಟ ವಾಸನೆ ಇಡಂಗು ; ದುರ್ಗಂಧವಾಗು : ತಲೆ ನಾತಹಿಡಿದಿದೆ, ಸ್ನಾನ ಮಾಡಬೇಕು (ರೂಢಿ). [ ನಾತ + ಪಿಡಿ₁ ]

**ನಾತವಡೆ** (ಕ್ರಿ). = ನಾತಂಬಿಡಿ ೨: ನಾತವಡೆದ ತನಂವಿನ ನಳ್ಳಿಮೂಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ನೇಮಿಸಂ. ೭-೧೦೫).

[ ನಾತ + ಪಡೆ₁ ]

**ನಾತಹಿಡಿ** 'ನಾತಂಬಿಡಿ' ನೋ.

**ನಾತಹೂ,** ನಾತಹೂವು (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು : (ಕ). **ನಾತಹೂವು :** ಈ ಮಕರಗ್ರಂಥಿಗಳನ್ನು ನಾವು ತುಂಬೆ, ನಾತಹೂವು (Lantana) ಈ ಹೂವುಗಳಲ್ಲಿ ನೋಡಬಹುದು (ಸಸ್ಯಶಾ. ೫೩).

[ ನಾತ + ಹೂ₂ (<ಪೂ₂) ]

**ನಾತಹೂವು** 'ನಾತಹೂ' ನೋ.

**ನಾತಾಳಿ** (ನಾ). ಕ್ರಿಸ್‌ಮಸ್ ಹಬ್ಬ ; ಏಸುಕ್ರಿಸ್ತನ ಜನ್ಮದಿವಸ : ದತ್ತಾನ ಮದುವೆಯಾದ ಮೇಲೆ ಬಂದುದು ಅದೇ ಮೊದಲ ನಾತಾಳಿ (ಸ್ಮೃತಿಚಿ. ೪೩೪).

**ನಾತಾಳಿ ದಿನ** = ಕ್ರಿಸ್‌ಮಸ್ ಹಬ್ಬವನ್ನು ಆಚರಿಸುವ ದಿವಸ : ನಾತಾಳಿ ದಿನಗಳು, ಹತ್ತು ಗಂಟೆಯ ಹೊತ್ತು. ನಾನು ಮಲಗಿದ್ದೆ (ಸ್ಮೃತಿಚಿ. ೩೭೨). **ನಾತಾಳಿಯ ರಜೆ** = ಕ್ರಿಸ್‌ಮಸ್ ಹಬ್ಬದ ಬಿಡುವು,-ರಜೆ : ಇನ್ನೆರಡು ದಿನಗಳಲ್ಲಿ ಹೇಗಾದರೂ ನಿನ್ನ ನಾತಾಳಿಯ ರಜೆ ಸುರು (ಮೂರುದಾ. ೧೨೩). **ನಾತಾಳಿ ಸೂಟಿ**=ನಾತಾಳಿಯ ರಜೆ : ಉಮೇಶನಿಗೆ ನಾತಾಳಿ ಸೂಟಿ (ದಾಕೂಟ. ೧೦) ; ಈ ದುಡಿತದಲ್ಲಿ ನುಗ್ಗಾದ ಹುಡುಗರಿಗೆ ಹತ್ತುದಿನದ ನಾತಾಳಿ ಸೂಟಿಯೂ ಹಿಗ್ಗಿನ ಹುತ್ತವಾಯಿತು (ಅನ್ನ. ೧೦).

[ ←ಮರಾ. ನಾತಾಳ್, ನಾಥಾಳ್./ಇಂ. Natal./ಪೋರ್ಚ್. ನಾತಾಲ್ ]

**ನಾತಿದೂರ** (ನಾ). ಬಹಳ ದೂರವಲ್ಲದುದು ; ಹತ್ತಿರ ; ಸಮೀಪ : ನಾತಿದೂರಂ ಶ್ಲಾಘನೀಯಮಾ ಪಂಚವಟಿ (ಶ್ರೀರಾಮಾ. ೧೯೩-೪೫) ; ನಾತಿದೂರದೊಳೊಂದು ಪೊಣ್ಮಿದುದು ಸೀಳ್ವೊಲ್ ವನ್ಯನಿಶ್ಶಬ್ದಮಂ ದೀರ್ಘಶ್ರುತಿಯ ಸೀಳ್ ! (ಶ್ರೀರಾಮಾ. ೨೯೦-೧೭೮). [ ಸಂ. ]

**ನಾತಿನಿಕಟ** (ನಾ). ಬಹಳ ಹತ್ತಿರವಲ್ಲದುದು ; ಸ್ವಲ್ಪದೂರ : ನಾತಿದೂರಂ ನಾತಿನಿಕಟಮುದೊ ಕಾಳ್ಗಿಗಂ ಸುಳಿಯುತಿಪೆ ಮನಮೋಹಕಂ (ಶ್ರೀರಾಮಾ. ೧೯೭-೫೪). [ ಸಂ. ]

**ನಾತಿಮಾನಿತೆ** (ನಾ). ಹೆಚ್ಚು ಅಹಂಕಾರವಿಲ್ಲದಿರುವಿಕೆ : ನಾತಿಮಾನಿತಾ ಎಂದರೆ ಅಹಂಕಾರರಾಹಿತ್ಯ (ಭಾತತ್ತ್ವ. ೧೪೦). [ ಸಂ. ನಾತಿಮಾನಿತಾ ]

**ನಾತು** 'ನಾತ' ನೋ.

**ನಾತೆ** (ನಾ). ೧. ನಂಟುತನ, ಅಧಿಕಾರ ಮೊದಲಾದುವುಗಳಿಂದ ಉಂಟಾದ ಸಂಬಂಧ,-ಬಾಂಧವ್ಯ : ನಮ್ಮ ಉಪೇಂದ್ರನ ಮಗನೆಂಬ ನಾತೆಯಿಂದಾದರೂ ನಿಜವಾದ ಸಂಗತಿಯನ್ನು ಇವರಿಗೆ ತಿಳಿಸಬೇಡವೆ ? (ಮೂರುದಾ. ೧೪೮). **೨.** ಕಾರಣ ; ನಿಮಿತ್ತ : ಗಜೇಂದ್ರಸಿಂಹನಿಗೆ, ಕಿಶೋರಿಗೆ ಗೊತ್ತುಮಾಡಿದ ಸಂಬಂಧವನ್ನು ಚಿಕ್ಕಪ್ಪ ಈ ನಾತೆಯಿಂದ ಒಪ್ಪಲಿ (ಜಮಿನ್ಯಾ. ೧೪೭) ; ಅದು ತಮಗೆ ಹಿರಿಯರಿಂದ ಬಂದ ವಿಶ್ವಸ್ಥರೆಂಬ ನಾತೆಯಿಂದ ತಾವು ಶಿರೋಧಾರಣ ಮಾಡಿದ ಶ್ರೀಮಂತರ ಘನ ಪೇಶ್ವೆಯರ ಅಮೂಲ್ಯ ದತ್ತಿ (ದೀಪಹ. I, ೧೭) ; ತಾವು ದೇವಸ್ಥಾನದ 'ಅರ್ಚಕ' ಎಂಬ 'ನಾತೆ'ಯಿಂದ ಮೇಲಿನವರಿಗೆ ಅರ್ಜಿ ಮಾಡುವ ಪ್ರಸಂಗ ಬರಬಹುದೆಂದೂ ಅವರಿಗೆ ತಿಳಿಸಿದರು (ಗಂಗಾಸಾ. ೧೧೪).

[ ←ಮರಾ. ನಾತೇ ; ಹಿಂ. ನಾತಾ ]

**ನಾಥ** (ನಾ). ೧. ಒಡೆಯಂ ; ರಕ್ಷಕ ; ಪಾಲಕ ; ರಾಜ ; ಪ್ರಭು : "ಪ್ರಭು ಪರಿವೃಢನೀಶಂ ಸ್ವಾಮಿ ಭರ್ತೃ ಪತಿ ನಾಥನಧಿಪನೀಶ್ವರನಿಂದ್ರಂ" (ಪಸು.ಕೋ. ೯೯-೯) ; "ನಾಯಕಂ ನಾಥನಿಂದ್ರಂ . . . ವಲ್ಲಭನೆನಲು ನೇತೃವೆನಲೊಡೆಯಂಗೆ ನಾಮವಕ್ಕುಂ" (ಮಂಗರಾ. ೬೭-೬) ; ನಾಥರಿಲ್ಲದ ಶಿಶುಗಳಿಗೆ ನೀ ನಾಥನೈ ಗೋವಿಂದ (ಕುವ್ಯಾಸ. ೦೪-೦೩೦) ; ಯಾರಿ ಬಂದವರು ಮನೆಗೆ . . . ನಾರಾಯಣ ಕೃಷ್ಣ ನಾಥನಲ್ಲದೆ ಬೇರೆ (ಪುರಂದ. ೩-೫೭ ಅನುಪಲ್ಲವಿ) ; ನಾಥನಾದರೂ ಭೂತ ಬಿಡದು (ಗಾದೆ). ೨. ಗಂಡ ; ಪತಿ : ಇರದೆ ಹೋಹರೆ ನನ್ನ ಬಿಟ್ಟಲೆ ನಾಥ ನೀನೀಗಾ (ತಿಮ್ಮಕಾಂ. ೫-೭೨) ; ನಾಥ ! ತಿಳಿದವನಾಗಿ, ಸಾಮಾನ್ಯಮನುಷ್ಯನಂತೆ, ಹೀಗೆ ಸಂತಪಿಸಬಹುದೆ (ವಚಭಾ. ೪೨) ; ನಾಥನಿಲ್ಲದ ತರುಣಿಯಾಂ . . . ಮಡಿದನೆನ್ನಾಣ್ಮನೆನ್ನಣ್ಣನಿಂ ತನ್ನ ಕಿರುವರೆಯದೊಳ್ (ಶ್ರೀರಾಮಾ. ೨೦೭-೩). ೩. ಅಂಕಿತನಾಮಗಳ ಕೊನೆಯಲ್ಲಿ ಸೇರುವ ಪದ. [ಸಂ.]

**ನಾಥತ್ವ** (ನಾ). ೧. ಒಡೆತನ ; ಪ್ರಭುತ್ವ ; ಯಜಮಾನಿಕೆ. ೨. [ಜೈನ] ಪಾರಿವ್ರಾಜಕ ಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು ; P ಪಾರಿವ್ರಾಜ್ಯ ಲಕ್ಷಣಗಳು ಇಪ್ಪತ್ತೇಳು. ಅವು ಯಾವು ವೆಂದರೆ ಜಾತಿ, ಮೂರ್ತಿ, ಲಕ್ಷಣ, ಸೌಂದರ್ಯ, ಪ್ರಭೆ, ಮಂಡಲ, ಚಕ್ರ, ಅಭಿಷೇಕ, ನಾಥತ್ವ, ಸಿಂಹಾಸನ, ಉಪಾದಾನ, ಛತ್ರ, ಚಾಮರ, ಘೋಷಣೆ, ಅಶೋಕವೃಕ್ಷ, ನಿಧಿ, ಗೃಹಶೋಭೆ, ಅವಗಾಹನ, ಕ್ಷೇತ್ರ, ಆಜ್ಞೆ, ಸಭೆ, ಕೀರ್ತಿ, ವಂದ್ಯತೆ, ವಾಹನ, ಭಾಷೆ, ಆಹಾರ ಮತ್ತು ಸುಖ. ಇಹಲೋಕದಲ್ಲಿ ಇವುಗಳನ್ನು ಸಂನ್ಯಾಸ ದಿಂದ ತ್ಯಾಗಮಾಡಿ, ಜಿನೋಪಾಸನೆ ಮಾಡಿದರೆ ಇವುಗಳೆಲ್ಲ ಪರ ಲೋಕದಲ್ಲಿ ಜೀವನಿಗೆ ದೊರಕುವುವು ಎಂಬ ನಂಬಿಕೆಯಿದೆ : ನಾಥತ್ವ ಮೆಂಬುದು ಜಗತ್ತ್ರಿತಯನಾಥನನುಪಾಸ್ತಿಗೈದ್ಯೈಹಿಕ(ಗೆಯಿದೈಕ ಸ್ವಾ) ಸಾಮ್ಯಮಂ ಪತ್ತುವಿಟ್ಟು ತಪದೊಳೆಸಗಿದೊಡೆ ದಿವ್ಯವಿಜಯಪರಮಸ್ವಾಮಿ ತ್ವಮಂ ಪಡೆಗುಂ (ಚಾವುಂಪು. ೨೨೪). [ಸಂ.]

**ನಾಥದೀಕ್ಷೆ** (ನಾ). ಮಹಾರಾಷ್ಟ್ರದಲ್ಲಿ ಪ್ರಚಾರದಲ್ಲಿರುವ ನಾಥಸಂಪ್ರದಾಯದ ಅನುಯಾಯಿಗಳು ತಾಳುವ ದೀಕ್ಷೆ : ಜ್ಞಾನದೇವನ ಮನೆ ತನದಲ್ಲಿ ವಿಠ್ಠಲಭಕ್ತಿಯೂ ನಾಥದೀಕ್ಷೆಯೂ ಮೊದಲೇ ಹುರಿಗೊಂಡು ಬಂದಿದ್ದವು (ಮಸಾಹಿ. ೦೩). [ನಾಥ + ದೀಕ್ಷೆ]

**ನಾಥವತಿ** (ನಾ). ಒಡೆಯನನ್ನುಳ್ಳವಳು : ನೀನಾದೊಡಂ ಕಾಯಮ್ಮ ನಾಥವತಿಯಾದೀ ಅನಾಥೆಯಂ (ಶ್ರೀರಾಮಾ. ೫೦೨-೫೮).

[ಸಂ. ನಾಥವತೀ]

**ನಾಥಸಂಪ್ರದಾಯ** (ನಾ). ಮಹಾರಾಷ್ಟ್ರದಲ್ಲಿ ಪ್ರಚಾರದಲ್ಲಿರುವ ಒಂದು ಧಾರ್ಮಿಕ ಸಂಪ್ರದಾಯ ; P ಆದಿನಾಥರೆಂಬುವರಿಂದ ಪ್ರಾರಂಭವಾದ ಗೋಸಾಯಿಗಳ ಈ ಸಂಪ್ರದಾಯವನ್ನು ಮತ್ಸ್ಯೇಂದ್ರ ಮೊದಲಾದ ಒಂಬತ್ತು ಜನ ಬೆಳೆಸಿದ್ದಾರೆ. ಪ್ರಸಿದ್ಧ ಮರಾಠಿಗ್ರಂಥ ಕಾರನಾದ ಜ್ಞಾನದೇವನು ಈ ಪಂಥಕ್ಕೆ ಸೇರಿದವನು : ನಾಥ ಸಂಪ್ರದಾಯವು ಮಹಾರಾಷ್ಟ್ರದ ಮಥನವನ್ನು ನಡೆಸಿಯೇ ಇತ್ತು (ಮಸಾಹಿ. ೦೧). [ನಾಥ + ಸಂಪ್ರದಾಯ]

**ನಾದ$_1$** (ನಾ). ೧. ಧ್ವನಿ ; ಶಬ್ದ ; ಸಪ್ಪಳ ; ಕೂಗು : "ಹ್ರಾದಃ, ನಾದಃ . . . ಘೋಷಃ – ಈ ೮ ಧ್ವನಿ" (ಹಲಾಯು. ೨೩-೧೩೭) ; "ನಾದಂ ಸ್ವರಂ ಘೋಷಂ. . .ಆ ಧ್ವನಿಯೆನಿಕ್ಕುಂ" (ಮಂಗರಾ. ೯-೩೧) ; ಪ್ರಳಯ ಪಯೋಧಿ ನಾದಮನೆ ಪೋಲ್ತು ರಣಾನಕರಾವಮಾಗಳಗ್ಗಲಮೆಸೆದಪ್ಪುದು (ಪಂಪಭಾ. ೧೧-೧೧) ; ಕಹಳೆ ಮರ್ದಳೆ ಶಂಖ ಪಟಹ ನಾದಂಗಳೊಳು. . . ನಡೆತಂದು (ನಂಬಿರ. ೯-೭೭) ; ಕರ್ಬುರನಾದಂ ವೃತ್ತಕಾರಂ ಕುಸುಮ ಧವಳವಂ ತೋಱೆ ಫೇನಂ ಕರಂ ಭೀಕರಮಾಗಲೊಪ್ಪುಗುಂ ಕಾನನ ದೊಳಿಭಸಮಾಷಂ ಉಲೂಯಪ್ರತಾನಂ (ಸುಲ್ಲಕಾ. ೩-೧೭೯) ; ತಾಮ್ರದ ಬಣ್ಣವು ನಸುಗೆಂಪು ಇರುತ್ತದೆ. ಆದಕ್ಕೆ ನಾದ ಬಹಳ(ಮುಂಚಾಯು. ೪-೧೩೭). ೨. ಒಂದು ನರಕದ ಹೆಸರು : ನಾದ ಪ್ರವಾಹ ಸುಪ್ರವಾಹ ರೂಕ್ಷ ಮೇಷವೆಂಬೈದು ಮಂತ್ರಿನರಕಂಗಳ ಮಧ್ಯದಲ್ಲಿ ಚಂಡವೆಂಬರಸುನರಕ ವಿಹುದು (ವಿವೇಕ. ೧೮೦). ೩. (ಆಲಂ) ಚಟ ; ಹವ್ಯಾಸ ; ಆಸಕ್ತಿ : ರಾಯರಿಗೆ ನಾಟಕದ ನಾದ ಬಹಳ (ದಾಸಹು. ೦೦) ; ಡೋಂಬರಿಗೆ ಕವಿತೆ ಹರಿದುಹಾಕುವುದೊಂದು ನಾದವೇ ಇತ್ತು (ಸ್ಮೃತಿಜಿ. ೩೭೭); ನಿನ್ನ ಗೆಳೆಯನ ತಂಗಿಯು ನಾದ ಬಿಟ್ಟಿರುವೆಯೋ ಇಲ್ಲವೋ (ಮುಕ್ತಿ. ೧೯೧) ; ನಾದವಿಲ್ಲ ದವನು ಓದಿದರೂ ಬಾರದು (ಗಾದೆ). ೪. [ಸಂಗೀತ] ನಿಯಮಿತ ತರಂಗಗಳನ್ನುಳ್ಳ ಧ್ವನಿ : ಮಹಾವೈದ್ಯನಾಥಅಯ್ಯರ್ ಅವರ ಶಾರೀರವು ಧ್ವನಿಸಂಪತ್ತಿನಿಂದ ಕೂಡಿತ್ತು. ಅದರ ನಾದದಲ್ಲಿಯೇ ಒಂದು ಮೋಹಕತೆ ಇತ್ತು (ಸಂಗೀತ. ೩) ; ಸಾಂಗತ್ಯವು ಹಾಡುವ ಮಟ್ಟು, ಅದರಲ್ಲಿ ಬರುವ ಅಂಶಗಣಗಳು ಅದಕ್ಕೆ ನಾದವನ್ನು ತುಂಬಿ, ಅದರ ಗೇಯಗುಣವನ್ನು ಹೆಚ್ಚಿಸುತ್ತವೆ (ಇಂಚಾಪ. iii ಅರಿಕೆ) ; ಸಂಗೀತದ ಆಧಾರಸ್ತಂಭಗಳು ನಾದ ಮತ್ತು ಲಯ (ಭಾರದ. ೫೩೫). ೫. [ತತ್ತ್ವಶಾ] ಬ್ರಹ್ಮಸ್ವರೂಪ ವೆನಿಸಿರುವ ಧ್ವನಿವಿಶೇಷ : ಮೂಱು ತೆಱನಾಗಿ ಕಳೆ ನಾದ ಪರಬಿಂದು ವೆಂದು ಭೇದಿಸಿದಾದಿದೇಶಿಕನ ಚರಣಾಂಬುಜಕ್ಕೆ ಶರಣು (ಲಶಿಚಂ. ೫೦-೧೯); ತನು ನಾದಂ ಗುರು ಲಿಂಗಂ ಮನಮುಂ ಪರಬಿಂದು . . . ಜಂಗಮ ಲಿಂಗಂ ಘನಕಳ ಸುಜ್ಞಾನಮಾಗಿ ಮೆಱೆದಂ ನಿಜದಿಂ (ಹಮ್ಮೀರ. ೫-೩೪) ; ನಾದ ಬಿಂದು ಕಳಾದಿಯಾಗಿಯೆ ವೇದಸಮ್ಮತವಾ ಚಿದ್ರೂಪಾದ ನಿಜಪರ ಮಾತ್ಮ ತತ್ವಹಕಾರವೆನಿಸುವುದು (ಗಗತಾ. ೭-೧೧). 'ಬಿಂದು' ಪರಾ. ೬. [ವೀಶೈ] ನಾದ, ಬಿಂದು ಮತ್ತು ಕಳೆಗಳೆಂಬ ಮೂರು ಅವಸ್ಥೆ ಗಳಲ್ಲಿ ಒಂದು : ಮೊದಲನಿರ್ವಾಚ್ಯಮೆಂಬುದೆ ಕಣಾ ಚಿದ್ಬ್ರಹ್ಮವು . . . ಇದಱಿಂದಾದುದದಿರದಿರನೊಳ್‌ನಾದ ಹುದುಂಕದುಮೆಶಿವಶಕ್ತಿಮಯುಮೆಂದಱಿ (ಮನೋವಿ. ೨-೧೮) ; ಇದರಿಂದ . . . ನಾದಪದದಿಂದ ಹೇಳಲ್ಪಡುವ ಪರಿಣಾಮವು, ಶಕ್ತಿತತ್ತ್ವವು ಉದಯಿಸುವುದು (ಹಿಂದಸಾ. ೨೯೮). [ಸಂ.]

**ನಾದ$_2$** (ನಾ). ಒಂದು ಬಗೆಯ ವನಸ್ಪತಿ ; ಉಲಿಗ : "ಉಲಿಗನುಂ ನಾದ ವಕ್ಕುಂ" (ಮಂಗರಾ. ೩೬-೧೮) ; "ಅಂತರ್ಮುಹಾ – ನಾದ" (ಓಷಧಿ. ೯).

[ ? ]

**ನಾದ$_3$** 'ನಾನ್$_1$' ಪರಾ.

**ನಾದಕಟ್ಟು** (ನಾ). ಸರಿಯಾದ ಧ್ವನಿಯನ್ನುಂಟುಮಾಡುವಿಕೆ: ಪ್ರಸೇವಕ– ನಾದಕಟ್ಟಿನ ಸಲುವಾಗಿ ವೀಣೆಯ ಕೆಳಗೆ ಇರುವ ಕುಂಬಳಕಾಯಿ (ಗಂಗಾಮ. ೨೨೩). [ನಾದ$_1$ + ಕಟ್ಟು$_2$]

**ನಾದಗೈ** (ಕ್ರಿ). ಶಬ್ದಮಾಡು ; ಧ್ವನಿಮಾಡು : ಕಿವಿ ಚಿಟ್ಟಾಗುವಂತೆ ನಾದ ಗೈಯುತ್ತಿದ್ದ ಹಕ್ಕಿಯ ಸಿಳ್ಳೆಯನ್ನೂ ಕೇಳಿಸಿಕೊಳ್ಳುತ್ತ ಅವನಲ್ಲಿಯೆ ಬಹಳ ಹೊತ್ತಿನ ತನಕ ಕುಳಿತಿದ್ದನು (ಪುನರು. ೨೯೭).

[ನಾದ$_1$ + ಕೈ$_1$ (<ಕೆಯ್$_1$)]

**ನಾದಚಕ್ರ** (ನಾ). [ವೀಶೈ] ಚಕ್ರವು ರಥವನ್ನು ನಡೆಸುವಂತೆ ಪ್ರಾಪಂಚಿಕ ವ್ಯವಹಾರಕ್ಕೆ ಕಾರಣವಾದ ಶಿವಶಕ್ತಿ : ಕಾಲಚಕ್ರ ಕರ್ಮಚಕ್ರ ನಾದಚಕ್ರ ಬಿಂದುಚಕ್ರದೊಳಗೆ ಹುಟ್ಟದ ಯೋನಿಯಿಲ್ಲ ಮುಟ್ಟದ ನೆಲನಿಲ್ಲ ಉಣ್ಣದ ಆಹಾರವಿಲ್ಲ (ಚನ್ನವ. ಕ. ೫೩೪-೧೧೫೨). [ನಾದ$_1$ + ಚಕ್ರ$_1$]

**ನಾದತ್ರಯ** (ನಾ). [ವೇದಾಂತ] ಓಂಕಾರದಲ್ಲಿರುವ ಮೂರು ಧ್ವನಿಗಳು ; ಅ,ಉ,ಮ್ ಎಂಬ ಧ್ವನಿವಿಶೇಷ : ಮೂರು ಗುಣಗಳೆ ಹುಟ್ಟಿದವು ಆ ಚಾರು ಓಂಕಾರ ನಾದತ್ರಯದಲಿ ಮೂರು ಮೂರೊಳಗಾಗ ಬೆರೆಸುತ ನವವಿಧಗಳಾಗಿ . . . ಜಗವಾ ತೋರ್ಪುದು (ಜ್ಞಾನಸಿಂ. ೩೦-೩).

[ನಾದ$_1$ + ತ್ರಯ]

**ನಾದದಂಡ** (ನಾ). ನಾದವನ್ನುಂಟುಮಾಡಲು ಭೇರಿ, ತಮಟೆ ಮೊದಲಾದ ವಾದ್ಯಗಳನ್ನು ಬಾರಿಸುವ ಕೋಲು, – ದಂಡ : ದೊಡ್ಡಿತ್ತಾದೊಂದು ನಿಸ್ಸಾಳಕ್ಕೆ ಬೆರಳಿನಲ್ಲಿ ಅಡಗಿದ ಕಟ್ಟಿಗೆ ಎಂಬ ನಾದದಂಡದಿಂದ ಅಬ್ಬರ ಹುಟ್ಟುವ ಹಾಗೆ (ಮೋಳಿಮಾ. ೧೦೯-೪೩೨ ಅರ್ಥ). [ ನಾದ$_1$ + ದಂಡ ]

**ನಾದಧ್ವನಿ** (ನಾ). ಕಾವ್ಯದಲ್ಲಿ ಪ್ರಯೋಗಗೊಂಡ ಶಬ್ದಗಳಿಂದ ಹೊರ ಹೊಮ್ಮುವ ವಿಶೇಷಾರ್ಥ : ಲಕ್ಷ್ಮೀಶನ ನಾದಧ್ವನಿಯು ಅಲ್ಲಿಗೆ ಮುಟ್ಟಿಸುವುದು (ಸಾಹಿವಿ. ೩೪). [ ನಾದ$_1$ + ಧ್ವನಿ ]

**ನಾದನಾಮಕ್ರಿಯೆ** (ನಾ). [ಸಂಗೀತ] ಒಂದು ರಾಗದ ಹೆಸರು : ಪಲ್ಲವಿ ಶೇಷಯ್ಯರ್ ಅವರು ನಾದನಾಮಕ್ರಿಯಾ, ಭೈರವಿ . . . ಷಣ್ಮುಖಪ್ರಿಯ ರಾಗಗಳಲ್ಲಿ ರಚಿಸಿರುವ ಕೃತಿಗಳು . . . ಧ್ವನಿಪೂರ್ಣವಾಗಿವೆ (ಸಂಗೀತ. ೪೮). [ ಸಂ. ನಾದನಾಮಕ್ರಿಯಾ ]

**ನಾದಪುಂಜ** (ನಾ). [ಸಂಗೀತ] ಇಂಪಾದ ಧ್ವನಿ ಸಮುದಾಯ : ಅವರ ಒಂದು ಸಲದ ಬೈಗಗಳ ಸ್ವರಗಳನ್ನು ಇನ್ನೂ ಅರ್ಥಮಾಡಿಕೊಳ್ಳುವುದರಲ್ಲಿಯೇ ಇನ್ನೂ ಹಲವಾರು ನಾದಪುಂಜಗಳನ್ನು ಸೃಜಿಸಿಕೊಂಡು ಹಾಡಿಬಿಡುತ್ತಿದ್ದರು (ಸಂಗೀತ. ೪). [ ನಾದ$_1$ + ಪುಂಜ$_4$ ]

**ನಾದಪೂರ್ಣ** (ಗು). ಇಂಪಾದ ಧ್ವನಿಯಿಂದ ತುಂಬಿರುವ; ವಿಶೇಷ ರೀತಿಯ ಸ್ವರದಿಂದ ಯುಕ್ತವಾದ : ಅವರ ಶಾರೀರದ ನಾದಪೂರ್ಣ ಮೋಹಕತೆ ಮತ್ತು ಓ ಕಾಲಗಳಲ್ಲಿಯೂ ಅವರಿಗೆ ಹಾಡಲಿದ್ದ ಸಾಮರ್ಥ್ಯ ಇವುಗಳಿಂದ ಎಲ್ಲರೂ ಅವರ ಈ ಸಂಗೀತಕ್ಕೆ ಮಾರುಹೋಗಿದ್ದರು (ಸಂಗೀತ. ೩). [ ನಾದ$_1$ + ಪೂರ್ಣ ]

**ನಾದಪ್ರಪಂಚ** (ನಾ). ಶಬ್ದರೂಪವಾದ ಜಗತ್ತು : ಜಗತ್ತು ರೂಪ ಪ್ರಪಂಚವಾಗಿದ್ದಂತೆ ನಾದಪ್ರಪಂಚವೂ ಆಗಿದೆ (ಛಂದೋವಿ. ೧). [ ನಾದ$_1$ + ಪ್ರಪಂಚ ]

**ನಾದಪ್ರಿಯ** (ನಾ). ಸಂಗೀತದಲ್ಲಿ ಪ್ರೀತಿಯುಳ್ಳವನು : ನಾದಪ್ರಿಯ ಶಿವನೆಂಬರು ನಾದಪ್ರಿಯ ಶಿವನಲ್ಲಯ್ಯ (ಬಸವ. ೧೮೦) ; ವೇದಪ್ರಿಯನಲ್ಲ ಎನ್ನದೇವ ಶಾಸ್ತ್ರಪ್ರಿಯ ನಾದಪ್ರಿಯ ಸ್ತೋತ್ರಪ್ರಿಯನಲ್ಲ (ಸಿದ್ಧ ವ. ೨೩-೬೨). [ ನಾದ$_1$ + ಪ್ರಿಯ ]

**ನಾದಬ್ರಹ್ಮ** (ನಾ). ಸಂಗೀತಸ್ವರೂಪನಾದ ಪರಬ್ರಹ್ಮ : ಆಗ ಅಲ್ಲಿದ್ದ ಸಮಸ್ತಭಕ್ತರ ಹೃದಯಗಳೂ ಆ ಮಧುರಲಯದಲ್ಲಿ ಮಧುರ ನಾದಬ್ರಹ್ಮದಲ್ಲಿ ಐಕ್ಯವಾದವು (ಶಾಂತಲಾ. ೧೩೧) ; ನಾದಬ್ರಹ್ಮನಲ್ಲಿ ಅಪರೂಪಭಕ್ತಿಯುಳ್ಳ ಇವರು ಕಲೆಯಲ್ಲಿ ಆತ್ಮತೃಪ್ತಿಮವಾದುದನ್ನು . . . ಅಭ್ಯಾಸಮಾಡುತ್ತಿದ್ದರು (ಸಂಗೀತ. ೯೯). [ ನಾದ$_1$ + ಬ್ರಹ್ಮ ]

**ನಾದಭರಿತ** (ಗು). ರಾಗದಿಂದ ತುಂಬಿದ,–ಪೂರ್ಣವಾದ : ಸಂಗೀತದ ಕಚೇರಿಯ ಸಭಾಂಗಣಕ್ಕೆ ಹೋಗುವ ಮೊದಲು ಹೊರಗೆ ನಾದಭರಿತವಾದ ದನಿಯಲ್ಲಿ 'ರಾಮಸ್ವಾಮಿ' ಎಂದು ಸಣ್ಣದಾಗಿ ಅಣ್ಣನನ್ನು ಕರೆಯುತ್ತಿದ್ದರು (ಸಂಗೀತ. ೨೩). [ ನಾದ$_1$ + ಭರಿತ ]

**ನಾದಮಯಿ** (ನಾ). ಶಬ್ದಸ್ವರೂಪಳು; ಸರಸ್ವತಿ : ನಾದಮಯೆ ಗಜಲಕ್ಷ್ಮಿ ಸತ್ವಗುಣಾಧಿದೇವತೆ . . . ಶಾರದೆಯೆ (ಕುವ್ಯಾಅ. ೧-೬). [ <ಸಂ. ನಾದಮಯಿ ]

**ನಾದಮಾಧುರ್ಯ** (ನಾ). ದನಿಯ ಸವಿ,–ಇಂಪು: ಭಾವಸೌಂದರ್ಯವನ್ನು ಕವಿಗಳು ನಾದಲಯ ಹಾಗೂ ನಾದಮಾಧುರ್ಯಗಳಿಂದ ಹೇಗೆ ಪ್ರದರ್ಶಿಸುವರೆಂಬುದರ ಕಡೆಗೆ . . . ವಿವೇಚನೆ ಮಾಡಿದ್ದೇನೆ (ಛಂದೋವಿ. ೧೪ ಪೀಠಿಕೆ). [ ನಾದ$_1$ + ಮಾಧುರ್ಯ ]

**ನಾದಮೂರ್ತಿ** (ನಾ). ಪ್ರಣವಸ್ವರೂಪ ; ಓಂಕಾರರೂಪ ; ಪರಮಾತ್ಮ ; ಪರಮೇಶ್ವರ : ನಾದಮೂರ್ತಿಗೆ . . . ಶಂಕರಂಗೆ ನಂದೀಶಾದಿಗಣ ನಾಯಕರ್ ಸಿಂಗರಮಂ ಮಾಡಿ (ಗಿರಿಕ. ೧೦-೬೧ ವ) ; ನಾದಮೂರ್ತಿಯೆ ಚಿತ್ರವಿಸು (ಬಸವು. ೨-೪). [ ನಾದ$_1$ + ಮೂರ್ತಿ ]

**ನಾದರಾಮಕ್ರಿಯೆ** (ನಾ). [ಸಂಗೀತ] ಒಂದು ರಾಗದ ಹೆಸರು : ಬಳಿಕಿವುಗಳಲ್ಲಿ ವಸಂತಭೈರವಿ ಶಾಂತಬಿಲಹರಿ ನಾದರಾಮಕ್ರಿಯೆಯೆಂಬ ಮೂಱುಂ ರಾಮಕ್ರಿಯೆಯ ಮಿಶ್ರರಾಗಂಗಳು (ವಿವೇಕ. ೨೫೦) ; ನಾದರಾಮಕ್ರಿಯಾ . . . ಸಾಯಂಕಾಲದಲ್ಲಿ ಹಾಡುವಂತಹದು (ಚತುಪ್ರ. ೧೩೪). [ ಸಂ. ನಾದರಾಮಕ್ರಿಯಾ ]

**ನಾದಲಯ** (ನಾ). ತಾಳದ ಅಂತರದಲ್ಲಿ ಹೊಮ್ಮುವ ನಾದವಿಶೇಷದ ಪರಿಣಾಮ : ಹಾಡೊಂದನ್ನು ಹಾಡುವಾಗ . . . ನಿಯತವಾಗುವ ಕಾಲದ ಅಂತರವಿರುವುದಷ್ಟೆ. ಆ ಅಂತರದಲ್ಲಿ ಹೊರಹೊಮ್ಮುವ ನಾದವಿಶೇಷದ ಪರಿಣಾಮವನ್ನು 'ನಾದಲಯ'ವೆನ್ನಬಹುದು (ಸಂಶೋಧ. ೧೨೩) ; ಭಾವ ಸೌಂದರ್ಯವನ್ನು ಕವಿಗಳು ನಾದಲಯ ಹಾಗೂ ನಾದಮಾಧುರ್ಯಗಳಿಂದ ಹೇಗೆ ಪ್ರದರ್ಶಿಸುವರೆಂಬುದರ ಕಡೆಗೆ . . . ವಿವೇಚನೆ ಮಾಡಿದ್ದೇನೆ (ಛಂದೋವಿ. ೧೪, ಪೀಠಿಕೆ). [ ನಾದ$_1$ + ಲಯ ]

**ನಾದವತಿ** (ನಾ). [ಸಂಗೀತ] ನಿಷಾದದ ಮೊದಲನೆಯ ಶ್ರುತಿ : ನಾದವತಿ ಭದ್ರವತಿ . . . ಭೋಗವತಿಯೆಂಬೈದು ತೆಱದಿಂದಿಂಪುಗೊಳಿಸುವ ಪದಪದ್ಯ ಕ್ರಮದ . . . ಗಾಯಕರಿಂ (ವಿವೇಕ. ೨೩೬) ; ಘಂಟಾರಾಗಂ ನಾದವತಿಯಾಗಿರ್ದಪುದು (ಹಮ್ಮಿರ. ೨-೯೦ ವ). [ ಸಂ. ನಾದವತೀ ]

**ನಾದವಟಿ**[3] (ನಾ). ಅಧಿಕವಾದ ಧ್ವನಿಯನ್ನು ಹೊರಡಿಸುವ ತಮಟೆ,–ಹರೆ : ಸೆಟ್ಟಿಯ ಪೋಗಿನೋಳಿಂಬಾದುದೆಂದು ತನ್ನ ಪುಣ್ಯಕ್ಕೆ ತಾನೇ ನಾದವಟಿಯಂತೆ ಪೊಂಗಿ (ಧರ್ಮಾಮೃ. ೬-೩೮). [ ನಾದ$_1$ + ಪಟಿ$^1$ ]

**ನಾದವೇತೃ** (ನಾ). ನಾದವನ್ನು ತಿಳಿದುಕೊಂಡಿರುವವನು ; ಶಬ್ದಗಳಿಂದ ಹೊರಡುವ ಧ್ವನಿವಿಶೇಷವನ್ನು ಅರಿತವನು : ವರ್ಣಗಳಲ್ಲಿ ಸ್ವರ ಸಮೂಹವು ಭಾವಸೂಚಕವಾಗುವಂತೆ ನಾದವೇತೃನಾದ ಕವಿ ಗಮಕಿಯ ಕೈಯಲ್ಲಿ ವ್ಯಂಜನಗಳು ಅರ್ಥಸೂಚಕವಾಗುವವು (ಸಾಹಿಸಂ. ೭೮). [ ಸಂ. ನಾದವೇತೃ ]

**ನಾದವೇದಿ** (ನಾ). = ನಾದವೇತೃ : ಅಂತಹರಿಂದಲೇ ನಾದವೇದಿ ಲಕ್ಷ್ಮೀಶನ ನಾದಭಾಷ್ಯವು ಉಸಿರಲಾಗಬೇಕು (ಸಾಹಿಸಂ. ೭೩). [ ಸಂ. ನಾದವೇದಿನ್ ]

**ನಾದಶುದ್ಧಿ** (ನಾ). ಸ್ವರದ ಪರಿಶುದ್ಧತೆ; ಸ್ವರವು ದೋಷರಹಿತವಾಗಿರುವಿಕೆ : ಅದರ ಅಂಚಿನಲ್ಲಿ ಒಂದೆಡೆಗೆ ಹೋದರೂ . . . ನಾದಶುದ್ಧಿಯು ಹೋಗಿಬಿಡುವುದು (ಸಂಗೀತ. ೧೧೨). [ ನಾದ$_1$+ಶುದ್ಧಿ ]

**ನಾದಸಂಪುಟ** (ನಾ). ಗ್ರಾಮಫೋನ್ ಎಂಬ ಧ್ವನಿಸಂಗ್ರಾಹಕ ಯಂತ್ರದ ಒಂದು ಭಾಗ ; ದನಿಪೆಟ್ಟಿಗೆ : ಈ ಸೂಜಿಯನ್ನು ನಾದಸಂಪುಟವೆಂಬ ಭಾಗದಲ್ಲಿರುವ ಸನ್ನೆಯ ಕೆಳತುದಿಗೆ ಒಂದು ತಿರುಗಣಿಯಿಂದ ಜೋಡಿಸಿರುತ್ತಾರೆ (ವಿಜ್ಞಾವಿ. ೪). [ ನಾದ$_1$ + ಸಂಪುಟ ]

**ನಾದಸ್ತಂಭ** (ನಾ). ಕೆಲವು ವಾದ್ಯಗಳ ಮುಂಭಾಗಕ್ಕೂ ಹಿಂಭಾಗಕ್ಕೂ ಮಧ್ಯೆ ಇರುವ ಆನಿಕೆ: "(ಕೆಲವು ವಾದ್ಯಗಳಲ್ಲಿ) ಹೊಟ್ಟೆಯಲ್ಲಿಯ ರಂಧ್ರ, ಹೊಟ್ಟೆಗೂ ಬೆನ್ನಿಗೂ ಮಧ್ಯೆ ಇರುವ ಆನಿಕೆ : ನಾದರಂಧ್ರ, ನಾದಸ್ತಂಭ" (Sound-post. ಇಂಕನಿ) ; ಕುದುರೆಯ ಬಲಗಾಲಿನ ಹಿಂಭಾಗದ ಅಂಚಿಗೆ ಸಮನಾಗಿ, ಪೆಟ್ಟಿಗೆಯೊಳಗೆ, ಎದೆಹಲಗೆ ಮತ್ತು ಬೆನ್ನುಹಲಗೆಗಳಿಗೆ ಹಗುರವಾಗಿ ತಗಲುವಂತೆ ಮರದ ದುಂಡುತುಂಡು ನಿಲ್ಲಿಸಲ್ಪಟ್ಟಿದೆ. ಈ ತುಂಡು, ನಾದವನ್ನು ಬೆನ್ನುಹಲಗೆಗೆ ಒಯ್ದು, ನಾದಸ್ತಂಭ(Sound-post) ವೆಂದು ಕರೆಯಲ್ಪಟ್ಟಿದೆ (ಸಂಗೀಚಂ. ೧೧೫). [ ನಾದ$_1$ + ಸ್ತಂಭ ]

**ನಾದಸ್ವರ** (ನಾ). ಒಂದು ಬಗೆಯ ವಾದ್ಯ; ಓಲಗ : ಶೇಷನು ನಾದಸ್ವರ ಕೈಯಲ್ಲಿ ಹಿಡಿದು ಅದರ ವಾದನಾಯೋಗಕ್ಕೆ ನಿಲ್ಲುತ್ತಿದ್ದ (ಕಂಬಹು. ೧೦೨). [ ನಾದ$_1$ + ಸ್ವರ ]

**ನಾದಾತ್ಮಕ** (ನಾ). ಶಬ್ದದಿಂದ ಕೂಡಿದುದು; ಶಬ್ದಮಯವಾದುದು: ಸಂಗೀತವು ಯಾವುದರಲ್ಲುಂಟು, ಯಾವುದರಲ್ಲಿಲ್ಲ? ಸರ್ವವೂ ನಾದಾತ್ಮಕವೆಂದು ಹೇಳುತ್ತಾರೆ (ಭಾರಪ. ೫೩೫). [ಸಂ.]

**ನಾದಾನ** (ನಾ). ತಿಳಿವಳಿಕೆ ಇಲ್ಲದವನು; ಅಜ್ಞಾನಿ; ದಡ್ಡ; ಪೆದ್ದ: ನಾದಾನನ ಆದ ಮ್ಯಾಲೆ ಬ್ಯಾರೆ ಯಾಕ ವಾದ ಬೇಕು (ಅರಳು. ೨೭೪-೪).
[←ಪಾರ. ಹಿಂ. ಮರಾ. ನಾದಾನ್]

**ನಾದಾನುಸಂಧಾನ** (ನಾ). [ಯೋಗ] ಓಂಕಾರದ ಘೋಷದ ಮನನ; ಆನಂದಾನುಭವ: ನಮ್ಮ ಭರತಖಂಡದ ಅನುಭವಿಗಳು ಮಾತ್ರವಲ್ಲದೆ ಪಶ್ಚಿಮದೇಶದ ಅನುಭವಿಗಳೂ ಕೂಡ ಈ ನಾದಾನುಸಂಧಾನದ ವಿಷಯದಲ್ಲಿ ಸಿದ್ಧಿಗಳನ್ನು ಪಡೆದಿರುವರು (ಭಾರಪ. ೧೫೫). [ನಾದ$_1$+ಅನುಸಂಧಾನ]

**ನಾದಾರ್**, ನಾದಾರ, ನಾದಾರಿ, ನಾದಾರು (ನಾ). ೧. ಬಡವ; ಗರೀಬ; ನಿರಾಧಾರಿ; ನಿರ್ಧನ: ಪ್ರಾಚೀನ ಬಾಕೀದಾರೆ ನಾದಾರ್ ಬೇಯಿತಬಾರಿ ಜನಕ್ಕೆ ಸಹ ಯಿಜಾರೆ ಕೊಡ ಕೆಲಸವಿಲ್ಲ (ಮಹಾವಂ. II,೬೦); ಈ ಸಾರೆ ನನ್ನ ಹಂತ್ಯಾಕ ಅವಾ ಬರುವ ಮೊದಲೇ ನಾದಾರ್ ಆಗಿದಾವ್ (ಮೋಹಿನೀ. ೪೦). **ನಾದಾರ:** ೧. 'ನಾದಾರಚೀಟಿ' ಪರ್ಯಾ. **ನಾದಾರಿ:** ೧. ನಾನು ಬರಿಗೈಯ ನಾದಾರಿ ಎಂದು ತಿಳಿಯಬೇಡ (ಕುಡಿಕೂ. ೧೯೧). ೨. ಬಡತನ: ಈಗಿನ ಈ ಭಾರತದಲ್ಲಿ ಸಿರಿವಂತರ ಮಕ್ಕಳು ಶಾಲೆಗಳಲ್ಲಿ ಪುಕ್ಕಟೆ ಶಿಕ್ಷಣಕ್ಕಾಗಿ ನಾದಾರಿ (ದಾರಿದ್ರ್ಯ) ಅರ್ಜಿ ಮಾಡುತ್ತಾರೆ (ಭಾರಸಂ. ೨೫೪). **ನಾದಾರು:** (ಗು). ೩. ದಾರಿದ್ರ್ಯವುಳ್ಳ; ಬಡತನದಿಂದ ಕೂಡಿದ: ನಾದಾರು ಕುಳಕ್ಕೆ ತಕಾವಿ ಕೊಡುವುದು (ಮಹಾವಂ. II, ೫೮).
[←ಪಾರ. ನಾದಾರ್, ನಾದಾರೀ; ಹಿಂ. ಮರಾ. ನಾದಾರ್. / ಸಂ. ಅನಾಧಾರ]

**ನಾದಾರ** 'ನಾದಾರ್' ನೋ.

**ನಾದಾರಚೀಟಿ** (ನಾ). ದಿವಾಳಿ ಎಂದು ಉಲ್ಲೇಖಿಸಿ ಅಧಿಕೃತ ನ್ಯಾಯಸ್ಥಾನದಿಂದ ಕೊಡುವ ದಾಖಲೆಪತ್ರ: ಭುವನಮೋಹನದಾಸರು . . . ಸಾಲ ತೀರಿಸಲಶಕ್ತರಾಗಿ ನಾದಾರಚೀಟಿಯನ್ನು ಪರಿಗ್ರಹಿಸಿದರು (ಹೊಸಹು. ೮೧). [ನಾದಾರ(<ನಾದಾರ್) + ಚೀಟಿ$_2$ (<ಚೀಟು$_2$)]

**ನಾದಾರಿ** 'ನಾದಾರ್' ನೋ.

**ನಾದಾರು** 'ನಾದಾರ್' ನೋ.

**ನಾದಾರ್ಥ** (ನಾ). ಶಬ್ದವನ್ನು ಗ್ರಹಣಮಾಡುವುದು: ಕಂಪಿತ್ತು, ಅಲ್ಲಿ ಮಂಗಾಯ್ತು, ಇಲ್ಲಿ, ನಾದಾರ್ಥವಾಯ್ತು, ಕಿವಿಯಂ (ಮಸಾಹಿ. ೧೮).
[ನಾದ$_1$ + ಅರ್ಥ]

**ನಾದಿಕೆ** (ನಾ). ಹಸಿ; ಆರ್ದ್ರತೆ; ತೇವ: ಸೀದವಾ ಮಗ್ಗುಲಿನ ಮೈಯಲಿ ನೈದಿಲಿನ ತಾವರೆಯ ಕದಳಿಯ ನಾದಿಕೆಯ ನಾಳಂಗಳುರಿನೊರೆಗುದಿಯ ಸಬುದದಲಿ (ತೊರೆರಾ. ೩-೧೧-೪೬).
[ನಾದು$_2$ (< ನಾಂದು$_1$) + – ಇಕೆ]

**ನಾದಿಗ** 'ನಾವಿದ' ನೋ.

**ನಾದಿನಿ** 'ನಾದುನಿ' ನೋ.

**ನಾದಿತಿ** (ನಾ). (?): ಗೊರಡಿಯಂ ಕಂತಿಯ ಕುಂಟಣಿಯರ ಮಂಡೆಯ ಮಾಲೆಗಾರ್ತಿಯಸಗಿತಿ ಯೋಗೀಶ್ವರಿಯರ ಕಿಡಿಕಿಯ ನಾದಿತಿಯರ ಮಂದಂ ನುಡಿಯಲೀಯಲಾಗದು ಪಥ್ಯಂ (ಮದಕಿ. ೮-೨೬).
[P ಇದು 'ನಾಪಿತಿ' ಎಂಬುದರ ಅಪಲಿಖಿತವಿರಬಹುದೆ?]

**ನಾದಿಷ್ಟ** (ನಾ). ಚಟಗಳಲ್ಲಿ ಆಸಕ್ತಿಯುಳ್ಳವನು; ಸಂಖಾಭಿಲಾಷಿ: ಅವನು ಸಭ್ಯಸ್ವಭಾವದವನಾದಾಗ್ಯೂ ನಾದಿಷ್ಟನೂ ಸುಖಪುರುಷನೂ ಆಗಿದ್ದನು (ಉತ್ತಗ್ರ. ೩೨). [< ಸಂ. ನಾದಿಷ್ಟ]

**ನಾದಿಸು$_1$** 'ನಾಂದಿಸು' ನೋ.

**ನಾದಿಸು$_2$** (ಕ್ರಿ). ೧. ಧ್ವನಿಯನ್ನುಂಟುಮಾಡು; ಶಬ್ದಮಾಡು: ನಾದಿಪಂಚೆಗೆ ಸರೋರುಹಮಂ . . . ಕಾದಿ ಕೇಗುವ ನವಿಲ್ಗಳಿಂ ಪೋಲಿಂಬಾಮದುದಂ ಕುಡುಗೆ ನಯ್ದಿಲ ಕಾವಂ (ಲೀಲಾವ. ೧೧-೨೦); ಊದಿದವು ಕಹಳೆಗಳು ಶಂಖವು ನಾದಿಸಿತು (ನಳಚ. ೯-೧೨); ನಾದಿಪ ವಾದ್ಯವ ನಿಲಿಸಿ ತನ್ನಯ ಬಿರುದೋದುವ ಭಟ್ಟರ ಜಡಿದು . . . ಖಾನ ಮೌನದೀಕ್ಷೆಯ ಕೊಂಡಂ ಹಾದಿದೆಗೆದ (ಕಂಸವಿ. ೦೫-೧೨೫): ನಾದಿಸುವ ಜಯಘಂಟೆ (ಹಮಚ. ೨೪೮). ೨. (ವಾದ್ಯವನ್ನು) ನುಡಿಸಂ,-ಬಾರಿಸಂ: ಸೊಗಸುವ ಸಪ್ತಸ್ವರಗಳನಜಿದಾ ಸುಗಂಣ ವೀಣೆಯ ನಾದಿಸಿದ (ಜೀವಂಸಾಂ. ೧೦-೨೫). ೩. ಹೇಳು; ನುಡಿ; ಹೊರಹೊಮ್ಮಿಸು: ಕಲಿತನಾನಾವಿದ್ಯಾನಿಚಯವ ನಾದಿಸಿದರು ನಾರಿಯರು (ಮೋಹತ. ೨೪-೬). ೪. ಧ್ವನಿಯಿಂದ ವ್ಯಾಪಿಸುವಂತೆ ಮಾಡು; ಶಬ್ದಮಯವನ್ನಾಗಿ ಮಾಡು: ವಿರಮಿಸುವ ಕಾಳಿವದು, ಶ್ಯಾಮನೆನೆ ಹೆಸರದಕೆ ಅದರ ಕೈಯೊಳು ಜಗವ ನಾದಿಸುವ ಮುರಳಿ (ಮಲದೇ. ೧೫-೮). ೫. ಬೆನ್ನುತಟ್ಟು; ಚಪ್ಪರಿಸು: ಜೋದರಾನೆಗಳನಂಕುಶವಿಕ್ಕಿ ನೂಂಕಿದರ್ ನಾದಿಸುತೆ ಕೈಮಾಡಿದರ್ ಹಯಾರೋಹಕರ್ (ಜಬಪು. ೧೬-೧೪). [ನಾದ$_1$ + – ಇಸು$_3$]

**ನಾದು$_1$** (ಕ್ರಿ). ೧. ಹಿಟ್ಟನ್ನು ನೀರಲ್ಲಿ ಕಲಸಿ ಚೆನ್ನಾಗಿ ಮಿದ್ದು,-ಕಲಸು,-ಕುಟ್ಟು: ಕಂಬಳಿಯಲ್ಲಿ ಕಣಕವ ನಾದಿದಂತೆ ಕಾಣಿರೇ ಎನ್ನ ಮನ (ಬಸವ. ೨೬೦): ಬ್ರಾಹ್ಮಣರು ಹಿಟ್ಟು ಕಲಸಿ ನಾದಿದರು (ಗ್ರಾಮಾಡಿ. ೩೮೮); ಆ ನಾದಿದ ಹಿಟ್ಟನ್ನು ಎಲೆಯ ಮೇಲೆ ಇಡಲಾಗಿತ್ತು (ನಾಕಥ. ೪): ಹದವಾಗುವವರೆಗೆ ನಾದಿಯೇ ನಾದಿದಳು (ಮೊಪಾಸ. ೫). ೨. ಸದೆಬಡಿ; ಚೆನ್ನಾಗಿ ಥಳಿಸು: "ನಾದು–ತಿಕ್ಕು; ತಿಕ್ಕಿ ಹೊಡಿ" (ಜಾನಕೋ. ೦೦): ಕಲ್ಗುಂಡುಗಳ ಮಳೆಯಿಂಲಿ ಹರನ ನಾದಿದನೇನನೆಂಬೆನಂ ಪಾರ್ಥನುರವಣೆಯ (ಕುಮ್ಯಾಭ. ೬-೨೨); ನಾದಿದಳು ಜಗದಂಬೆ ಶರಗಳೊಳಾ ದುರಾಗ್ರನ (ಅಂಬಿಕಾ. ೪೨-೧೦೨).

**ನಾದು$_2$** 'ನಾಂದು$_1$' ನೋ.

**ನಾದು$_3$** (ನಾ). ಒಲವು; ಗುಂಗು: ಅವಳು ಮೊದಲು ತನ್ನ ಅಂಗಡಿಯ ಆಳುಹುಡುಗನೊಬ್ಬನ ನಾದಿಗೆ ಬಿದ್ದಳು (ಸ್ವಶಾವ್ಯ. ೮); ಸುರೇಂದ್ರ ಒಂದು ನಾದಿನವ, ಮರೆಗುಳಿ ಎಂಬುದು ಮಾಧವಿಗೆ ಮೊದಲು ತಿಳಿದು ಬರಲಿಲ್ಲ (ಅಕ್ಕಾಜಿ. ೨೧). [<ಸಂ. ನಾದ]

**ನಾದು$_4$** 'ನಾನ್$_1$' ಪರ್ಯಾ.

**ನಾದುನಿ**, ನಾದಿನಿ (ನಾ). ೧. ಗಂಡನ ಅಕ್ಕ ಅಥವಾ ತಂಗಿ; ಪತಿಯ ಸಹೋದರಿ: ಸೀರ್ಕರಡಿಯನ್ನಳಿ ನಾದುನಿಯೊಲ್ದುಮೊಲ್ಲದನ್ನಳಿ ಗಡ ಸೂಳೆಯೆಂದೊಡನಿತಂ ತಲೆವೇಸಱನೆಂತು ನೀಗುವೆಂ (ಪಂಪಭಾ. ೪-೯೮); ಚೊಕ್ಕ ನೀನತ್ತಿಗೆ ನಾದುನಿಯೆಂದೆಂಬ ಲೆಕ್ಕವಿರಲಿ ನಿನಗೆನಗೆ (ಭರಪ. ೬-೩೯): ಮಗಳಕ್ಕ ತಂಗಿಯು ಮಿಗೆ ಸೊಸೆಯು ನಾದುನಿಯು ಇವರೊಳಗೆ ಜಗಕ್ಕೊಬ್ಬಳೈಸೆ (ಸರ್ವಜ್ಞ. ೧೬೪೬); ಅಲ್ಲದಂತತ್ತೀಗೆ ಬೆಲ್ಲದಂತ ನಾದೂನಿ . . . ಕೂಡಾಡಿ ಕಲ್ಯಾಣ ತವರ ಮರತೇನ (ಜನಗೀ. ೫೮). ೨. ಅಣ್ಣ ಅಥವಾ ತಮ್ಮನ ಹೆಂಡತಿ: "ಪ್ರಜಾವತೀ, ಭ್ರಾತೃವಧೂಃ – ಈ ೨ ನಾ(ದಿ)ದುನಿ" (ಹಲಾಯು. ೮೩-೩೫೦); ಜನನಿಗೆ ಬೆಸಕೆಯ್ವುದು ನಾ ದು ನಿ ಯಿಂ ಂ ಬೆಸಕೆಯ್ಸಿಕೊಳ್ವುದನವರತಂ (ಪಾರ್ಶ್ವಪು. ೩-೧೨). ೩. ಸೋದರಮಾವನ ಮಗಳು: ಸೋದರಮಾವನ ಮಗಳೆನೆ ನಾದುನಿಯೆಂದಂದು ನಿನ್ನನಾಂ ಕಾಡಿದೆನಿಂತು (ಸುಕುಮಾ. ೬-೨೩); ಸೋದರವೆನಿಸಿದ ತನ್ನಯ ನಾದುನಿಯೊಳ್ ಮದುವೆ ಸಲ್ಲ (ಸಮಪ. ೩೬೬ ಅನುಬಂಧ ೧). **ನಾದಿನಿ:** ೧. ಮಗಳಕ್ಕಂ ತಂಗೆ ತಾಯ್ನಾದಿನಿ ಸೊಸೆ ಮದವಳ್ಗಜ್ಜಿ ಮುಂತ್ತಬ್ಬೆ ಮಂತ್ರತ್ತಿಗೆ . . . ತಾಮೆ ಗಡಂ ಬೇಱಾಗಿ ಪುಟ್ಟಿರ್ದುರ್

(ಶಾಂತಿಪು. ೬-೮೭) ; ತಮ್ಮಯ ಗುರುವಿನತ್ತಿಗೆಯ ನಾದಿ[ಪಾಠಾಂ. ದ]ನಿಯ ವಂಚಿಸದೆ (ಬಸಪು. ೪೫-೨೪) ; ವೀರಸೈಂಧವನರಸಿ ರಾಜಕುಮಾರಿ ನೀ ನಾದಿನಿಯಲಾ ಖಳ ಕೌರವದೊಳದ್ದುವನು ಬಿಡಿಸೆಂದೊಱಲಿದಳು ತರಳೆ (ಕುವ್ಯಾಸ. ೧೪-೧೦೫) ; ಅತ್ತೆ ನಾದಿನಿಯರೊಳಳುಕದೆ ಕಾದುವುನ್ಮತ್ತೆಯರೀ ಕೃತಿಗೇಳೆ ಉತ್ತಮಗುಣಗಳಿಂದೊಳಗುಗ್ಗೆದವರೊಳು ಪತ್ತುಗೆವೆರಸಿ ಬಾಳುವರು (ಹದಿಬ. ೧-೫೮) ; ಚಂದವಲ್ಲೆಂಬತ್ತೆನಾದಿನಿಯರನು ತಾಂ ಮಾರಿ (ರಾಮಾಸಂ. ೩-೪-೪) ; ನಾದಿನಿಯಾದರೆ ಹಾದೀಲಿ ಬಿದ್ದೋಳೆ ? (ಗಾದೆ). ೨. "ನಾದಿನಿ ಪ್ರಜಾವತಿಯಕ್ಕು" (ಮಂಗರಾ. ೯೨-೧೨) ; ಎಲೆ ಕಪೀಶ್ವರ ಕೇಳು ಪರಸತಿಗಳುಪಿ ಹಾಯಿಕಿಕೊಂಡೆ ತಮ್ಮನ ಕೊಲೆಗೆಳಸಿ ಹೊಱವಡಿಸಿ ಹಾಯಿಕಿಕೊಂಡೆ ನಾದಿನಿಯ (ತೊರರಾ. ೪-೪-೫೧) ; ನಾದಿನಿ ತಮ್ಮಂದಿರ ಈ ಕಣ್ಣುಮುಚ್ಚಾಲೆಯಾಟ ಬಾಳಾಬಾಯಿಗೆ ತಿಳಿಯದೆ ಹೋಗುತ್ತಿರಲಿಲ್ಲ (ಅಶೋಕ. ೧೯) ; ತಮ್ಮ ನಮ್ಮವನಾದರೂ ನಾದಿನಿ ನಮ್ಮವಳಲ್ಲ (ಗಾದೆ). ೪. ಹೆಂಡತಿಯ ಅಕ್ಕ ಅಥವಾ ತಂಗಿ.– ಸಹೋದರಿ.

[ ದೇ.॥ ತಮಿ. ನಾತ್ತಿ, ನಾತ್ತೂಣ್ ; ಮಲ. ನಾತ್ತೂನ್./ ಸಂ. ನನಾಂದೃ ]

**ನಾದುರಸ್ತ** 'ನಾದುರಸ್ತು' ನೋ.

**ನಾದುರಸ್ತಿ** 'ನಾದುರಸ್ತು' ನೋ.

**ನಾದುರಸ್ತು**, ನಾದುರಸ್ತ, ನಾದುರಸ್ತಿ, ನಾದುರುಸ್ತ, ನಾದುರುಸ್ತಿ (ನಾ). ೧. ಕೆಟ್ಟು ಹೋಗಿರುವುದು ; ಸರಿಯಲ್ಲದುದು ; ದೋಷಗ್ರಸ್ತವಾದುದು : ಬೆಳಗ್ಗೆ ರೆಕ್ಕ ಅಲ್ಲಿಗೆ ಬರಬೇಕಾಗಿದ್ದ ಮೋಟಾರು ಬಂಡಿಯು ನಡುವೆ ನಾದುರಸ್ತಾದುದರಿಂದ ಮಧ್ಯಾಹ್ನ ೧೨ಕ್ಕೆ ಬಂದಿತು (ದೇವಅ. ೩೭). (ಗು). ೨. ಕೆಟ್ಟುಹೋಗಿರುವ ; ಸರಿಯಲ್ಲದ : ತನ್ನ ಮನೆಗೆ ಹೋಗಿ ನೋಡಿದಾಗ ಅದು ನಾದುರಸ್ತುಸ್ಥಿತಿಯಲ್ಲಿದ್ದುದು ಕಂಡುಬಂತು (ಮಹಾಗ. ೧೯೩). **ನಾದುರಸ್ತ** : ೧. ನಿಮ್ಮ ಕೈಗಡಿಯಾರ ನಾದುರಸ್ತ ಆಗಿದ್ದರೆ ಅಂಗಡಿಕಾರನಿಗೆ . . . ಅದನ್ನಿಷ್ಟೆ ತಿದ್ದಿರಿ ಎಂದು ಹೇಳಿರಿ (ಮುಂಗಾಪು. ೧೧೨). **ನಾದುರಸ್ತಿ** : ೧. ದೇವ್ವದ ಗುಡಿಗಳು ನಾದುರಸ್ತಿಯಲ್ಲಿದ್ದರೂ ವಿಗ್ರಹಗಳು ಇನ್ನೂ ತಲೆ ಎತ್ತಿ ನಿಂತಿವೆ (ಪದ್ಮಸ.೨೭). **ನಾದುರುಸ್ತ** : ೧. ನನ್ನ ಕೈಗಡಿಯಾರವು ನಾದುರುಸ್ತ ಆಯಿತು. ಅಂದರೆ ನಿಂತುಬಿಟ್ಟಿತು (ಸುಳವು. ೩೬) ; ಅದು ನಾದುರುಸ್ತ ಏನೂ ಇಲ್ಲ (ಗಂಪೂಯಿ. ೧೭೯). **ನಾದುರುಸ್ತಿ** : ೧. ಒಡೆದು ಅಥವಾ ನಾದುರುಸ್ತಿಯಾಗಿ ನಿರುಪಯೋಗಿಯಾಗಿ ಹೋಗುವಂಥ ಜಿನಸುಗಳನ್ನು ಹೊರಊರಿಗೆ ಕಳುಹಿಸುವದು (ಮುಂಬವ್ಯಾ. ೧೫).

[ ← ಪಾರ. ನಾದುರುಸ್ತ್, ನಾದುರುಸ್ತ ; ಹಿಂ. ನಾದುರುಸ್ತ್ ]

**ನಾದುರುಸ್ತ** 'ನಾದುರಸ್ತು' ನೋ.

**ನಾದುರುಸ್ತಿ** 'ನಾದುರಸ್ತು' ನೋ.

**ನಾದೆ** (ನಾ). = ನಾದಮಯೆ : ದ್ವಾದಶಾತ್ಮಜ್ಯೋತಿರೂಪಿಯೆ ನಾದೆ ಶಾರದೆಯೆ (ಕುವ್ಯಾಅ. ೧-೬). [ಸಂ. ನಾದಾ ]

**ನಾದೇಯ** (ಗು). ೧. ನದಿಯ ; ನದಿಗೆ ಸಂಬಂಧಪಟ್ಟ : ನಾದೇಯಾಂಬುವೊಳರ್ದಿಕೊಂಡು . . . ಪೋದತ್ತು . . . ಗಂಧದ್ವಿಪಂ (ಲೀಲಾವ. ೮-೧೧). (ನಾ). ೨. ನದಿಯಲ್ಲಿ ಹುಟ್ಟಿದುದು ; ನದಿಗೆ ಸಂಬಂಧಪಟ್ಟುದಂ : ನಾದೇಯಮಾಗಿ ದಿವ್ಯಾಮೋದಂ ತಳ್ವೊಯ್ದು ಪೊಂಗೆ ಕಂಪಾಯ್ತೆಂಬಂತಾದುದು ಸುವರ್ಣಗಿರಿ ಗಂಧೋದಕದಿಂ (ಅನಂಪು. ೫-೭೯). ೩. = ನಾದೇಯಿ : ಜಂಬೂ ಜಂಭ . . . ನಾದೇಯ ಪ್ರಿಯಾಳ . . . ತಿಳಕಭೂರ್ಜಾದಿ ಭೂಜಾವಕೀರ್ಣಂ (ಅರ್ಧನೇ. ೩-೩೫). ೪. ಒಂದು ಬಗೆಯ ಉಪ್ಪು ; ಸೈಂಧವಲವಣ. [ ಸಂ. ]

**ನಾದೇಯಿ** (ನಾ). ೧. ನದೀತೀರದಲ್ಲಿ ವಿಶೇಷವಾಗಿ ಬೆಳೆಯುವ ಒಂದು ಬಗೆಯ ಗಿಡ ; ನೀರುಹಬ್ಬೆ : "ಪರಿವ್ಯಾಧಃ, ವಿದುಲಃ, ನಾದೇಯೀ, ಅಂಬುವೇತಸಃ – ೪ ನೀರುಹಬ್ಬೇಗಿಡ"(ಸಿದ್ಧಾಂತಿ. ೧೦೪). ೨. ಕಾಗೆನೇರಳೆ ಗಿಡ ; ನಾಯಿನೇರಳೆಗಿಡ : "ನಾದೇಯೀ, ಭೂಮಿಜಂಬುಕಾ – ೨ ಹೆಲನೇರಳೆ ಹೆಸರುಗಳು. ನಾಯಿನೇರಳೆ ಹೆಸರುಗಳು" (ಸಿದ್ಧಾಂತಿ. ೦೦೫). ೩. ತಕ್ಕಿಲೆಗಿಡ ; ತಗ್ಗಿಸೊಪ್ಪಿನಗಿಡ: "ಜಯಾ, ಜಯಂತೀ, ತರ್ಕಾರೀ, ನಾದೇಯೀ, ವೈಜಯಂತಿಕಾ – ೫ ತಕ್ಕಿಲೆಗಿಡ ; ತಗ್ಗಿಸೊಪ್ಪಿನ ಗಿಡ" (ಸಿದ್ಧಾಂತಿ. ೦೧೧). ೪. ಕೆಂಪುದಾಸವಾಳ ; "ಜಪಾ" (ಪಂಡಿತ. ೨೫೬).

[ ಸಂ. ನಾದೇಯೀ ]

**ನಾದೋತ್ತರಿ** (ನಾ).[ಸಂಗೀತ]ಒಂದು ರಾಗದ ಹೆಸರು: ನೀಲೋತ್ಪಲಿನಿ . . . ನಾದೋತ್ತರಿ . . . ವಸಂತಬಂಗಾಳವೆಂಬಿಪ್ಪತ್ತೆರಡು ರಾಗಂಗಳಂ ಕ್ರಿಯಾಂಗದಿಂದ ಪುಟ್ಟಿದವು (ವಿವೇಕ. ೨೩೪). [ ಸಂ. ನಾದೋತ್ತರೀ ]

**ನಾದೋಪಾಸಕ** (ನಾ).ಸಂಗೀತವನ್ನು ಸಾಧನೆ ಮಾಡಿದವನು ; ಸಂಗೀತ ಕಲೆಯಲ್ಲಿ ತೊಡಗಿದವನು : ಈ ನಾದೋಪಾಸಕರು ಎಲ್ಲರ ಮೇಲೂ ಪ್ರಭಾವಿಯಾಗಿದ್ದರು (ಸಂಗೀತ. ೯). [ ನಾದ₁ + ಉಪಾಸಕ ]

**ನಾದೋಪಾಸನೆ** (ನಾ). ಸಂಗೀತದಲ್ಲಿ ಸಾಧಿಸುವ ಸಾಧನೆ ; ಶ್ರದ್ಧೆಯಿಂದಮಾಡುವ ಸಂಗೀತಾಭ್ಯಾಸ: ನಾದೋಪಾಸನೆಯಿಂದ ಜೀವನ್ಮುಕ್ತಿ ಪಡೆಯಲು . . . ಗಾನಕಲೆಯನ್ನು ಅಗಾಧವಾಗಿ ಪಲ್ಲವಿಸಿ, ದೊಡ್ಡ ಶಾಸ್ತ್ರವನ್ನಾಗಿ ನಮ್ಮ ಹಿರಿಯರು ಪರಿವರ್ತಿಸಿದ್ದಾರೆ (ಸಂಗೀಜಂ. ೪).

[ ನಾದ₁ + ಉಪಾಸನೆ ]

**ನಾನ್₁**, ನಾನು₁ (ಕ್ರಿ). ನಾಂಬ₂, ನಾನ್ಪ (ವರ್ತಕೃ), ನಾಂದ, ನಾದ₃ (ಭೂತಕೃ), ನಾಂದು₂, ನಾದು₄ (ಭೂತನ್ಯೂ). ೧. ತೋಯು ; ನೆನೆ ; ಒದ್ದೆಯಾಗು : "ನಾನ್ – ಆರ್ದ್ರಭಾವೇ" (ಶಮಧಾ) ; ಸಮ ಸಂದಟ್ಟಿಱಲಂಪನೀಯೆ ಶಯನಂ ಘರ್ಮಾಂಬುವಿಂ ನಾನೆ (ಪಂಪಭಾ. ೪-೧೧೯) ; ಆಕೆಯ ಕಣ್ಮಲರಿಂದಮುಣ್ಮಿ ಮಾಣದೆ ಸುರಿಯುತ್ತಮಿರ್ಪ ಜಲಧಾರೆಗಳಿಂದಮೆ ನಾಂದದೊಂದು ಮೇಲುದೆಱ ಸೆಱಂಗಿನಿಂ ನಯದೆ ಬೀಸಿದನಾ ಮನುಜೇಂದ್ರಚಂದ್ರಮಂ (ಕಾದಂಪೂ. ೯೨೯) ; ಆ ಮಹಾಯೋಗೀಶ್ವರನ . . . ಸೂಸಿದ ನೆತ್ತರ ಧಾರೆಯೊಳ್ ನಾದು ನವೆದಡಿವಜ್ಜೆಯನು ನಾತಂಬಿಡಿದು ಬಂದು (ಸುಕುಮಾ. ೧೨-೨೪ ವ) ; ತಳಿರ್ಗಳ್ ನಾಂಬನ್ನೆಗಂ ದುಃಖದಿಂ ಗಡ ಕೀರಪ್ರಿಯಕಾಂತೆ ಸುಯ್ದು ಸುರಿದಳ್ ಭೋರೆಂದು ಬಾಷ್ಪಾಂಬುವಂ (ಲೀಲಾವ. ೬-೧೧೩) ; ತನುವಂ ನಾದು ಪತ್ತಿರ್ದ ಚೀನಾಂಬರವಿಂಬಾಗಿರ್ಪಿನಂ ಬಾದುದು . . . ಪೆಂಡವಾಸಂ (ಜಗವಿ. ೧೪-೧೧೩) ; ಬೀಯದಟ್ಟುಱೊಳಂ ಪಾಸಿಗೆ ನಾಂಬ ಮುಂಬದ ಮಳುಂಬಂ ಕೂಟದೊಳ್ ನಲ್ಲರಾ (ಚಂದ್ರಪು. ೮-೬೮) ; ಪೊಕ್ಕೀಸಾಱೆ ಮೈನಾನೆದಿಂಗಡಲ್ (ಪುಲ್ಲಕಾ. ೮-೩೧೯) ; ನೀರಲಿ ನಾದ ಕೆಂಡವನುಱುಹಿ ಮುಡಿದವರುಂಟೆ ಮಂಡೆಯಲಿ (ಕುವ್ಯಾಕ. ೨೦-೩೨) ; ನಾನ್ಪಂ, ನಾನ್ಪಿನಂ ನಾನ್ಪನ್ನಂ (ಶಬ್ದಾಸು. ೫೧೭ ಪ್ರಯೋ) ; ಸಳಿಳದೊಳೆ ನಾಂದ ವಲ್ಕಂದಳೆ ದಾಶ್ರಮತರುಗಳಲ್ಲಿ ಹಯಖುರಹತಿಯಿಂದಳುರ್ದೆಳ್ದ ಧೂಳಿ . . . ಪತಂಗತತಿವೊಲ್ ಬೀಳ್ಗುಂ (ಶಾಕುಂತ. ೧೭-೩೨). ೨. (ಅಲಂ) ಕರಗು; ದ್ರವೀಭೂತವಾಗು : ಚಂದ್ರಿಕೆಯಿಂದಂ ದ್ರವಿಯಿಪ ಚಂದ್ರೋಪಲದಂತೆ ನಿನ್ನ ಗುಣಗಣದಿಂದಂ ಚಂದ್ರಮಂಖಿ ನಾಂದನಾಗಿ ನರೇಂದ್ರಂ ನುಡಿಯಲ್ಕಮಱಿಯದಿರ್ದಪನೀಗಳ್ (ಕಾದಂಉ. ೧೭೩). **ನಾನು₁** : ೩. ತೋಯಿಸು; ನೆನೆಸು : ಹಾಲುಮಡ್ಡಿಯಂ ಘೃತದಿ ನಾನುತ್ತ ಕೆಂಡದ ಮೇಲೆ ಹಾಯ್ಕೆ (ಗುರುಜಾ. ೬-೩೮).

[ ದೇ.॥ ತಮಿ. ನಾನ್ನು ; ಮಲ. ನಾನ್ದು ; ತೆಲು. ನಾನು ; ಗೊಂಡಿ. ನಾಂದಾನಾ ]

**ನಾನ್₂**, ನಾ₁, ನಾಂ, ನಾನು₃ (ಸ). ೧. ಉತ್ತಮಪುರುಷ ಏಕವಚನ ಸರ್ವನಾಮ ; ಮಾತನಾಡುವವನು ತನ್ನನ್ನು ನಿರ್ದೇಶಿಸುವುದಕ್ಕಾಗಿ ಬಳಸುವ ಮಾತು ; ಆತ್ಮಾರ್ಥಕ ಸರ್ವನಾಮ ; ℙ ಕ್ರಮವಾಗಿ ಏಳು ವಿಭಕ್ತಿಗಳು : (ಏಕ) ನಾನ್, ನನ್ನಂ, ನನ್ನಿಂ, ನನಗೆ, ನನ್ನತ್ತಣಿಂ, ನನ್ನ, ನನ್ನೊಳ್ ; (ಬಹುವ) ನಾಮ್, ನಮ್ಮಂ, ನಮ್ಮಿಂ, ನಮಗೆ, ನಮ್ಮತ್ತಣಿಂ, ನಮ್ಮ, ನಮ್ಮೊಳ್ : ಎನ್ನ ಕನ್ನಿಕೆಯಾ ಕಾಲದೊಳ್ ನಾನೆನ್ನ ಮಾವಂ ಕುಂತಿಭೋಜನ ಮನೆಯೊಳ್ ಬಳೆವಂದು (ಪಂಪಭಾ. ೧-೧೦೮ ವ); ಆದಱಿನಿನ್ನಾವುದುಮಂ ನಾನೆ ಬಲ್ಲೆಂ (ಪಂಚತಂ. ೧೬೦-೧). **ನಾ₁** : ೧. ನಾ ನಿನ್ನ ಧ್ಯಾನದೊಳಿರಲು ಮಿಕ್ಕ ಹೀನಮಾನವರೇನು ಮಾಡಬಲ್ಲರೊ ರಂಗ (ಪುರಂದ. ೧-೧೧೯ ಪಲ್ಲವಿ) ; ರೊಕ್ಕದಾಸೆಗಳಿಲ್ಲ ಮೋಹಕ್ಕೆ ನಾ ಸಿಕ್ಕಿ ದಕ್ಕಿದೆ ನಿನಗೆಂದಳು (ಕಂನವಿ. ೨-೧೦೫) ; ಕೆಲವು ವೇಳೆ ನಾನ್ ಎಂಬುದರ ಅಂತ್ಯ ನಕಾರವು ಲೋಪವಾಗಿ ನಾ ಎಂಬುದು ಪ್ರಯೋಗವಾಗುತ್ತಿತ್ತು (ಶ್ಮಚಿಡಿ. ೩೪೩). **ನಾಂ** : ೧. ಅವರಾರುವಂ ನಾಂ ಮೆಚ್ಚದೆ ಕುಡದಿನ್ನೆಗವಿಂತಿವರ್ಗಳು ತಾಂಗಿರ್ದನೀ ಕನ್ಯಾರತ್ನಂಗಳ್ಗೆ ನೀನೆ ಯೋಗ್ಯನಯ್ (ವಡ್ಡಾರಾ. ೧೩೧-೯) ; ಈಯುವಸರದೊಳ್ ನಾಂ ಸ್ವಾಮಿಹಿತಮಹತ್ವಮಂ ಕೈಕೊಂಡು ನುಡಿವುದು ನಯಮಲ್ಲಂ (ಪಂಚತಂ. ೨೭-೧) ; ನಾಂ ಕುಡಗೂಸಪ್ಪೆನದು ಕಾರಣದಿನೆಮ್ಮ ತಾಯಲ್ಲಿಗೆ ಪೋಗಿ ಬೇಡಿಂ (ಪಂರಾಮಾ. ೮-೬೧ ವ) ; ನಿರ್ಲಜ್ಜರಪ್ಪ ಸವಣರ ಸೊಲ್ಲಿಂಗೊಳಗಾದುದಕ್ಕೆ ನಾಂ ಬೆಱಗಾದೆಂ (ಧರ್ಮಾಮೃ. ೧-೧೧೧). **ನಾನು₂** : ೧. ಇಂತಪ್ಪ ಚೈತನ್ಯಜಂಗಮಕ್ಕೆ ನಾನು ನಮೋನಮೋ ಎನುತಿರ್ದೆನಯ್ಯಾ (ಆದಪ. ೨-೩) ; ಅಂದಿಂಗೆಳೆಯ ನೀನು ಹಳೆಯ ನಾನು (ಬಸವ. ೨) ; ದೇವಾ ನಾನೇವೆನೆಂದಂದುಬಲೆಯಳುತ ತಾಂ ಪೋಗೆ (ರಕ್ಷಾಶ. ೪೧) ; ಈ ನಪುಂಸಕರೊಡನೆ ಹುಟ್ಟಿದ ನಾನು ಮೂಗುಳ್ಳವನೆ (ಕುಮ್ಮಾವಿ. ೩-೪೮) ; ನಾನೇಕೆ ಬಡವನು ನಾನೇಕೆ ಪರದೇಶಿ ಶ್ರೀನಿಧೇ ಹರಿ ಎನಗೆ ನೀನಿರುವತನಕ (ಪುರಂದ. ೧-೧೪೭ ಪಲ್ಲವಿ) ; ದೀನ ನಾನು ಸಮಸ್ತಲೋಕಕೆ ದಾನಿ ನೀನು (ಹರಿಸಾ. ೪೯) ; ಸಿದ್ಧರ ಸತತವಿಶುದ್ಧರ ಬೋಧಸಮೃದ್ಧರ ನೆನೆದಂ ನಾನೀಗ . . . ಆತ್ಮಸಿದ್ಧಿಯಂ ಪಡೆವೆನು (ಭರಜ. ೧-೨) ; ನಾನು ಹುಲಿಯಾದರೆ ನನ್ನ ಅಣ್ಣ ಹೆಬ್ಬುಲಿ (ಗಾದೆ). ೨. (ಆಲಂ) ಅಹಂಕಾರ ; ತನ್ನ ಮೇಲಿರುವ ಮಮತೆ : ಎಳೆತನದಿನಿಂದುವರೆಗೀ ಜಗದ ಬೆರಗ ನಾನಳಿಯದಂತಿರಿಸಿಹವು ವಸ್ತು ವ್ಯಕ್ತಿ ಅಲ್ಪವಿವು (ಮಲೆದೇ. ೪೯-೧) ; ನಾನು ಹೋದರೆ ಎಲ್ಲಾ ಹೋದಂತೆ (ಗಾದೆ). ೩. ಜೀವ ; ಆತ್ಮ : 'ನಾನು' ಎಂದು ಹೇಳಲ್ಪಡುವವನೇ ಜೀವನು (ಭಾರದ. ೨೩೫).

**ನಾಮ್, ನಾವ್, ನಾವು** (ಬಹುವ) : ಅಲ್ಲದೆಯುಂ ಮತ್ತೊಂದಂ ಬಗೆ ನಾಮಂದೊಡವಂದಂಬರತಿಳಕಮೆಂಬ ವಿಶ್ರುತವನದೊಳ್ ... ಪಿಹಿತಾಸ್ರವ ಭಟ್ಟಾರಕರ ಕೇವಲಜ್ಞಾನೋತ್ಪತ್ತಿಯೊಸಗೆಯಂ ಮಾಡಿ ಬಂದೆವು (ಆದಿಪು. ೩-೮೨) ; ನಾವೊಂದು ಪಾಪನಿವಾರಣಾರ್ಥವಾಗಿ ಗೋವಿನ ಜಠರಮಂ ಪೊಕ್ಕಿರ್ದೆವು (ಪಂಚತಂ. ೯-೭೫) ; ಮೃಷ್ಟಭೋಜನದಿಂದ ನಾವ್ ಸಂತುಷ್ಟರು (ಕುಮ್ಮಾಅ. ೧೬-೪೯) ; ನಾವು ಹಸಿದ್ಯೆತಂದರೀ ಪರಿ ದೇವಿ ನಾನಾದೂಱ ದೂಱುವುದಾವುದುಚಿತವು (ಕುಮ್ಮಾಅ. ೧೬-೫೮) ; ನೀವು ನಾಗಲೋಕದವರಾದರೆ ನಾವು ನಾಕಲೋಕದವರು (ಗಾದೆ). **ನನ್ನತನ** = ಸ್ವಕೀಯತ್ವ ; ನನ್ನದು ಎಂಬ ಭಾವನೆ : ಆಗಾಗ ನನ್ನತನದ ಅರಿವು ಮರೆವನ್ನು ಭೇದಿಸಿ ಇಣುಕುತ್ತಿತ್ತು (ಮುಂಗಾಪು. ೬೯). **ನನ್ನವಳ್, ನನ್ನವಳು** = ೧. ನನಗೆ ಸಂಬಂಧಪಟ್ಟವಳು : ಅಕ್ಕ ನನ್ನವಳಾದರೆ ಭಾವ ನನ್ನವನೆ ? (ಗಾದೆ). ೨. ನನ್ನ ಹೆಂಡತಿ : ನನ್ನವಳ ತಂಗಿಯೊರ್ವಳ್ ಚಲುವೆ ಕಪ್ಪಿನಿಸು (ಕಾಲೂರ. ೫೬-೮೯). **ನನ್ನಾಕೆ** = ಹೆಂಡತಿ : ನನ್ನಾಕೆ ತಮ್ಮನು ಕೇಳಿ ಸಂಬಳವನ್ನು ಹೆಚ್ಚಿಸಿಕೊಳಿರೆಂದಳೊಡೆಯ (ಇಂಚಾಪ. ೧೬೯-೩೫). **ನಮ್ಮಾಕೆ**=೧. ನಮ್ಮ ಕಡೆಯವಳಂ ; ನಮಂಗೆ ಬೇಕಾದವಳಂ : ಆಕೆಯಿರಲು ಚಿಂತೆಯೇಕೆ ನಿನಗೆ ನಮ್ಮಾಕೆಯಲ್ಲವೆ ಪಂಪೆಯರಸಿ (ಕುರಾಸಾಂ. ೨೫-೫೭). ೨. = ನನ್ನಾಕೆ : ನಮ್ಮಾಕೆ ಊರಿಗೆ ಹೋಗಿರುವುದರಿಂದ ಎಲ್ಲ ಕೆಲಸವೂ ನನ್ನ ಮೇಲೆ ಬಿದ್ದಿದೆ (ರೂಢಿ). **ನಮ್ಮವರು** = ೧. ಬಂಧುಗಳಂ ; ನೆಂಟರು : ಚಿರಕಾಲವಿರ್ದುದೀವೂರು ನಮ್ಮವರ್ಗಳೆಲ್ಲರ ಜನನವಿಲ್ಲಿ (ಸೌಂದಪು. ೫-೭) ; ಇವರು ನಮ್ಮವರು, ಇವರು ನಮ್ಮ ಶತ್ರುಗಳು ಎಂಬುದಿಷ್ಟೇ ಅವಳಿಗೆ ಗೊತ್ತು (ಕವೀರ. ೧೨೫) ; ನಾನು ಪರದೇಶಕ್ಕೆ ಹೋಗಿದ್ದಾಗ ಅಲ್ಲಿ ನಮ್ಮವರು ಯಾರೂ ಇಲ್ಲದೆ ಬಹಳ ಕಷ್ಟಪಟ್ಟೆ (ರೂಢಿ). ೨. ಗಂಡ ; ಪತಿ : ನಮ್ಮವರು ಊರಿಗೆ ಹೋಗಿರುವುದರಿಂದ ಇಂದು ನಮ್ಮ ಮನೆಯಲ್ಲಿ ಅವರಿಲ್ಲದೂಟ (ರೂಢಿ). **ನಮ್ಮುವನು** = ನಮ್ಮನ್ನು : ಇಂದುಮುಖಿ ನಿಮ್ಮಂಗಸಂಗವ ಮಾಡಿ ನಮ್ಮುವನು (ಸಂಭಪ. ೩೩-೧೦) ; ನಾಚಿಸಬೇಡ ನಮ್ಮುವನೆಂದು ಮೌಳಿಯ ಚಾಚಿದ ಕೃಷ್ಣನಂಘ್ರಿಯೊಳು (ಮೋಹತ. ೪೧-೧೨). **ನಮ್ಮೊಂದಿಗರು** = "ನಮ್ಮವರು, ನಮ್ಮ ಜನರು" (ಜಾನಕೋ. ೯). 'ಆನ್₂' ಪರಾ.

[ ದೇ.॥ ತಮಿ. ನಾನ್ ; ಮಲ. ಞಾನ್ ; ತುಳು. ಯಾನು ;
ಕೊಡ. ನಾ, ನಾನೀ ; ತೆಲು. ನೇನು , ಏನು ; ಕೊಲಾ. ನಾಯ್ನಿ.
ಪರ್ಜಿ. ಗಡಬ. ಆನ್ ; ಗೊಂಡಿ. ಅನಾ ; ಕುಇ. ಆನು ;
ಕುವಿ. ನಾನು, ನಾನೂ ]

**ನಾನಡ್ಡಿಕೆ** (ನಾ). ಒಂದು ಬಗೆಯ ಅಡ್ಡಿಕೆ ; ಚಿನ್ನದ ಪಟ್ಟಿಗಳನ್ನು ಅರ್ಧಚಂದ್ರಾಕಾರವಾಗಿ ಪೋಣಿಸಿ ಮಾಡಿದ ಕಂಠಾಭರಣ. 'ಅಡ್ಡಿಕೆ' ಪರಾ. [ <ನಾಣ್ಯ + ಅಡ್ಡಿಕೆ ]

**ನಾನಲ್**, ನಾಣಲ್, ನಾಣಲು, ನಾರಳಂ, ನಾಳಲು, ನಾಟಿಲ್ (ನಾ). ೧. ಉದ್ದವಾಗಿಯೂ ಒರಟಾಗಿಯೂ ಇರುವ ಒಂದು ಬಗೆಯ ಹುಲ್ಲುಗಿಡ ; ಜೊಂಡು : ಕೆಸಱಿಂ ಕುಟಿಯಿಂ ನಾನಲಿನಸಿದಾಗಿರೆ ಕೊಂಕಿ ಪೋದ ಬಟ್ಟೆಗಳೆಲ್ಲಂ ಪಸಲೆಗವಿದಂದು ಸ್ಯೆತಿರೆ ವಸುಧೇಶನುಮಾರ್ಯಸುತನುಮೊಯ್ಯನೆ ನಡೆದರ್ (ಲೀಲಾವ. ೫-೪೧ ವ). ೨. ಲಾಳದ ಕಡ್ಡಿ ; ಗಲಗು : "ನಡ್ವಳಂ, ನಳಸಂಯುತಂ – ಈ ೨ ನಾ(ಣ)ನಲುಳ್ಳಭೂಮಿ" (ಹಲಾಯು. ೨೭-೪). ೩. ಜೊಂಡು ಬೆಳೆದಿರುವ ನೀರಿನ ಸ್ಥಳ : ನಾನಲ ಬಾನಲ ನೀರಂ ಮೀನೊಲ್ಲುಗಂ ರಾಜಹಂಸನೊಲ್ಲುಗುಮೆ (ಮಲ್ಲಿಪು. ೧೩-೧೬೩) ; ಪಾಯ್ದು ಪೋಪ ಪೊಳ್ಳೆವಂದಿಯಂ ಕಂಡು . . . ಮಳೆಯುಮಂ ನಾನಲುಮಂ ಬಾನಲುಮಂ . . . ಕಳ್ಳಿಯುಮಂ ಕಳೆದು ಪೋಗಿ (ಲೀಲಾವ. ೬-೧೬ ವ) ; ಮೃಗಪ್ರಕರಮಿರ್ದುದು ಕಾನನದೊಂದು ನಾನಲೊಳ್ (ಕುಸುಮಾ. ೬-೩೮) ; ಕುತ್ತುಱು ನಾನಲ್ಗಳೊಳೆಡೆವಿಡಿದೋಡಿದತ್ತು ಪಂದಿ ಜವದಿಂದಾಗಳ್ (ಶಬಶಂ. ೪-೨೩). **ನಾಣಲ್** : ೧. ದರ್ಭೆ, ನೊದೆ, ನಾಣ [ಣ]ಲ್ ಮುಂತಾದ ತೃಣವಿಶೇಷಂಗಳಂ (ಭಾರಶಾಂ. ೭೦-೪೪೪) ; ಆ ವೀರ ರಮಣಿ ಮರವಳ್ಳಿ ಪುಲ್ಪೊದರು ನಾಣಲ್ ಕುತ್ತುರೊಳ್ಪಾಯ್ದು ಪಾಯ್ದು (ಚಂದ್ರಭು. ೫-೧೧೪). **ನಾಣಲು** : ೧. " ಕಾಶಃ – ನಾಣಲು" (ಓಷಧಿ. ೨೮) ; ಒಂದು ಕೊಳಗ ಶುದ್ಧಾಂಬು ಕಷಾಯದಲ್ಲಿ . . . ನಾಣಲ ಬೇರು . . . ಶ್ರೀಗಂಧ, ಇವಿಷ್ಟನೂ ಪ್ರತ್ಯೇಕ ನಾಲ್ಕು ವರಹ ತೂಕವ ಸೇವಿಸಲು (ವೈದ್ಯಸಾ. II, ೫೩). **ನಾರಳು** : ೧. "ಪುಷ್ಕರಪರ್ಣೀ–ನಾರಳಂ (ನಾಣಲು ?)" (ಓಷಧಿ. ೧೦೧) ; ಬೆರಳುದ್ದವಾದ ನಾರಳ ದಂಟ ಕತ್ತರಿಸಿ . . . ಹೊಸ ಸಕ್ಕರೆಯ ಹಾಕಿ ಪರಿಮಳಗಳಂ ಪೂರೆಯಿಕ್ಕಿದದುವೆ ತುಪ್ಪದ ಪಾಯಸಂ (ಸೂಪಶಾ. ೩-೧೨). **ನಾಳಲು** : ೧. "ಇಂದ್ರಾ–ನಾಳ(ಣ)ಲು" (ಓಷಧಿ ೧೩) ; "ನಳ – ನಾಳಲು, ಹುಲಿಯುಗುರು" (ಓಷಧಿ. ೮೩) ; ನಳವಿನೊಳಡಗಿ ನಾಳಲೊಳು ಪೊಕ್ಕು . . . ಬೇಗೆಗಿಚ್ಚು ವಿಶ್ವಾಮಿತ್ರ ಮುನಿಯನೆಯ್ದದೆ ಮಾಣದು (ಹಚಕಾ. ೯-೩೩). △**ನಾಟಿಲ್** : ೧.

ನೆಟಲ್, ನಾಟಿಲ್, ಪೋಟಲ್ (ಶಬ್ದಾನು. ೧೪೦ ವ್ಯಾಖ್ಯಾ). 'ನಳ್ಳು' ಪರಾ. [ ದೇ.॥ ತಮಿ. ನಾಣಲ್ ; ಮಲ. ಞಾಣಲ್ ]

**ನಾನಲ್ವಳ್ಳ** (ನಾ). = ನಾನಲ್ ೩ : ತಲೆವೊಲದ ನಾನಲ್ವಳ್ಳದ ದರಿಯ ಕುತ್ತುಱಂಗೆ ಕೊಣಕಿಡುವ ಪುಲ್ಲೆಯೆರಲೆಯ ಜವಕ್ಕೆ ಪಕ್ಕುಗೊಟ್ಟುಂ . . . ಅಪರಸಾಂಧ್ಯ ಗಂಧವಹನೆಳಸೆ (ಮಲ್ಲಿಪು. ೬-೪ ವ). [ ನಾನಲ್ + ವಳ್ಳ ]

**ನಾನಲ್ವಿಡಿ** (ಕ್ರಿ). ಜೊಂಡು ಬೆಳೆದಿರುವ ಸ್ಥಳವನ್ನು ಆಶ್ರಯಿಸು : ನೆರೆದಿರ್ದತ್ತೊಂದು ನಾನಲ್ವಿಡಿದೀ ಮಹಿಷವ್ರಂದಂ ಯಥಾಸ್ವೇಚ್ಛೆಯಿಂದಂ (ಚಂದ್ರಪು. ೫-೬೦). [ ನಾನಲ್ + ಪಿಡಿ₁ ]

**ನಾನಾ** (ಅ). ಬಗೆಬಗೆಯಾಗಿ ; ಅನೇಕ ರೀತಿಯಾಗಿ ; ನಾನಾವಿಧವಾಗಿ; ಪರಿಪರಿಯಾಗಿ : ದೂತನ ಚೇಷ್ಟೆಗಳಂ ನಾನಾತೆಱದಿಂದಱಿದು ಬಟಿಕೆ ವರ್ಮಟ್ಟುದು ವಿದ್ಯಾಪೂತವಿಶೇಷಜಮಂತ್ರವ್ರಾತಮುಮಂ (ಜಿಮದ. ೩-೫೨); ನೆರವುತಿದೆ ನಾನಾ ದಿಗಂತದ ಧರಣಿಪರು ಕನ್ಯಾರ್ಥಿಗಳು (ಕುಮ್ಮಾಭ. ೧೧-೧೪); ಪಾದರಸವ ಕೂಡಿಸಿಕೊಂಡು ಬೆಣ್ಣೆಯಲ್ಲಿ ತಳಿಗೆಯ ಮೇಲೆ ಜಾಱಿಸಿ ಫಿರಂಗಿ ಮೊದಲಾದ ನಾನಾಹುಣ್ಣುಗಳು ಮಾಣುವುವು (ವಿಶ್ವವಿ. ೬೪) : ನಾನಾ ಜಾತಿ ನೀತಿಯ ರೀತಿಗಳ ವಿಸ್ತರಿಸಿ (ಗಗತಾ. ೧೮-೧). P ' ನಾನಾ ' ಎಂಬುದು ಇತರ ಅನೇಕ ನಾಮಪದಗಳೊಡನೆ ಕೂಡಿ ಸಮಾಸಪದಗಳಾಗಿ ಭಾಷೆಯಲ್ಲಿ ಪ್ರಯೋಗವಾಗುತ್ತಿದೆ. [ ಸಂ. ]

**ನಾನಾಕ** (ನಾ). (?) : ಎಲ್ಲಿ ಓದನರಾಸಿ ಎಲ್ಲಿ ನಾನಾಕರಾಸಿ ಎಲ್ಲಿ ಘೃತದ ಮಡುವು ಎಲ್ಲೆಲ್ಲ ಇದ್ದವೆಲ್ಲಾ ಅಲ್ಲಿಗಲ್ಲಿಗೆ ಬಯಲು ನಿಲ್ಲದಡಗಿದವು (ತೀರ್ಥಮ. ೬೫-೯). [ ? ]

**ನಾನಾಜೀವ** (ನಾ). ಅನೇಕ ಪ್ರಾಣಿಗಳು : ಬಹುಭೇದವಿಭಿನ್ನದಿನೇಕ ಜೀವಾಪೇಕ್ಷೆ ನಾನಾಜೀವಾಪೇಕ್ಷೆಯಿಂ ಯೋಜಿಸಿ (ಸುಕುಮಾ. ೩-೩೯ ವ). [ ನಾನಾ + ಜೀವ ]

**ನಾನಾತ್ವ** (ನಾ). ಅನೇಕವಾಗಿರುವಿಕೆ ; ಬಗೆಬಗೆಯಾಗಿರುವಿಕೆ ; ವಿಧವಿಧವಾಗಿರುವಿಕೆ : "ನಾನಾತ್ವ, ವಿವಿಧತೆ, ವೈವಿಧ್ಯ, ವೈಚಿತ್ರ್ಯ, ಭಿನ್ನತೆ, ಬೇರೆ ರೀತಿ, ಅನೇಕತೆ, ಬಗೆಬಗೆಯಾಗಿರುವುದು" (Diversity. ಇಂಕನಿ) ; ಮೋಕ್ಷದಲ್ಲಿ ಜೀವಾತ್ಮನು ತನ್ನ ಸ್ವಾಭಾವಿಕಸ್ಥಿತಿಯಲ್ಲಿರುವನು. ಅದೆಂತೆಂದರೆ . . . ನಿರವಯವತ್ವ, ನಾನಾತ್ವ ಮೊದಲಾದ ಧರ್ಮಗಳೊಡನೆ ಯಾವತ್ಕಾಲ ನಿರ್ದುಃಖಿಯಾಗಿರುತ್ತಾನೆ (ಹಿಂದಸಾ. ೧೨೪). [ ಸಂ. ]

**ನಾನಾದೇಶಿ** (ನಾ).=ನಾನಾದೇಸಿ: ನಾಡ ಸಮಸ್ತ ನಾನಾದೇಶಿಗಳು (ಸೌಇಇ. IX-ii, ४೧೧-೧೧ ; 1366) ; ಅನೇಕ ಉಪಯುಕ್ತ ಸಂಗತಿಗಳನ್ನು ಒಮ್ಮೆಲೆ ಸಂಗ್ರಹಿಸಿದ 'ನಾನಾದೇಶಿ' ಎಂಬ ವಾಣಿಜ್ಯಸಂಘವು ಆಗ ಪ್ರಚಾರದಲ್ಲಿದ್ದಿತು (ದಭಾಇ. ೧೧೧). [ ನಾನಾ + ದೇಶಿ₂ ]

**ನಾನಾದೇಸಿ** (ನಾ). ವರ್ತಕರ ಗುಂಪು, – ಪಂಗಡ ; ಕೊತ್ತಳಿ : ಕೂಳಿಯಾಗಿಱಿಯದೆ ನಾನಾದೇಸಿಬ್ರಮ್ಮಸೆಟ್ಟಿವುಡ್ಡೆ ಬನ್ದಡೆ ಇಱಿದರ್ (ಎಕ. IV, ಹೆಗ್ಗಡ. ೬೩-೩೦; 1007 ?) ; ಶ್ರೀಸಾಲೇಶ್ವರದೇವರ ಅಂಗಭೋಗರಂಗಭೋಗ ನಿವೇದ್ಯಕ್ಕಂ ಸಮಸ್ತಸೆಟ್ಟಿಕಾರರುಂ . . . ಉಭಯ ನಾನಾದೇಸಿಯುಂ ಕೂಡಿ ನೆರೆದು ಬಿಟ್ಟ ಧರ್ಮ್ಮವೆನ್ತೆಂದಡೆ (ಕಇಇ. ೩೦-೪೨-೧೭; 1116) ; ಸಮಸ್ತ ನಾನಾದೇಸಿಗಳುಂ ಸೆಟ್ಟಿಯರುಂ ಸೆಟ್ಟಿಗುರುತ್ತರು(೦) ವಿರ್ದು ರತ್ನಭೂಷಣವಿನಾಯಕದೇವರ ಪೂಜೆಗೆ ಅಱವಂಟಿಗೆಗಂ ಬಿಟ್ಟ ಧರ್ಮ್ಮವೆಂತೆಂದಡೆ (ಸೌಇಇ. IX-i, ೨೨೩-೪೩ ; 1127) ; ಬಣಜಮುಂ ನಾನಾದೇಸಿಯುಂ ಬಿಟ್ಟಾಯ × × × ಮಳವೆಗೆ ಹಾಗ ಹಂಜ ಹಾತ್ತಿಯ (ಮೈಆರಿ. ೧೯೩೩, ೩-೧೫ ; 1160). [ ನಾನಾ + ದೇಸಿ ]

**ನಾನಾಪಾಯ** (ನಾ). ಪರಿಪರಿಯ ಕೇಡು ; ಅನೇಕ ರೀತಿಯ ಹಾನಿ : ಹಿಂದೆ ನಾನಾಪಾಯದಿಱುಬಿನ ಬಂಧನವ ಬಿಡಿಸಿದೆಯಲೈ ಗೋವಿಂದ (ಕುಮ್ಮಾಭ. ೦೩-೨೫). [ ನಾನಾ + ಅಪಾಯ ]

**ನಾನಾಭವ** (ನಾ). ಅನೇಕ ಜನ್ಮ : ಎನಗಾ ಮೂವರುಂ ಮಗಳ್ದಿರಾದಂದ ಮುಮಂ ನಾನಾಭವದಿಂದಮುತ್ತಣ ಭವದೊಳ್ಗೆಲ್ಲಿ ಪುಟ್ಟಿ ಬಂದೆನೆಂಬುದುಮಂ ಬೆಸಸುವುದೆ[ ನೆ ] (ಶಾಂತಿಪು. ೬-೮೫ ವ). [ ನಾನಾ + ಭವ ]

**ನಾನಾಭಾಷಾತ್ಮಕ** (ನಾ). ಅನೇಕ ಭಾಷಾರೂಪವಾದುದು : ನಾನಾಭಾಷಾತ್ಮಕಂ ಮಾನವ ದಿವಿಜ ಸದಃಕರ್ಣಪಾತ್ರಕ್ಕೆ ತದ್ವಿಜ್ಞಾನಂ ತಂತಮ್ಮ ಭಾಷಾರವದಿನೆಸೆಯೆ ಪೂಣ್ಮತ್ತು ದಿವ್ಯಧ್ವನಿ (ಶಾಂತಿಪು. ೬-೫೯). [ಸಂ.]

**ನಾನಾಮುಖ** (ನಾ). ೧. ಬೇರೆಬೇರೆ ರೀತಿ, – ವಿಧಾನ ; ಅನೇಕ ಬಗೆ : ವೇದ ಬಲ್ಲಿತ್ತೆಂಬೆನೆ ನಾನಾಮುಖದಲ್ಲಿ ಸ್ತುತಿಯಿಸುತ್ತಲ್ಲದೆ ಲಿಂಗದ ನಿಲುಕಡೆಯ ಕಾಣದು (ಬಸವ. ೫೫೨) ; ಆಮೇಲೆ ಈ ಶಾಸ್ತ್ರವು ಪರ್ಕಿನ್, ಕೆಕ್ಯೂಲ್, ಬೇಯರ್ ಇವರ ಕೈಯಲ್ಲಿ ನಾನಾಮುಖವಾಗಿ ಬೆಳೆಯಿತು (ಶಿಲ್ಪನಾ. ೧೨೭).
೨. ಅನೇಕ ದಿಕ್ಕು, –ಪಕ್ಕ, –ಮಾರ್ಗ : ಚೆಲ್ಲಿತದು ನಾನಾಮುಖಕೆ ನಿಂದಲ್ಲಿ ನಿಲ್ಲದೆ (ಕುಮ್ಮಾಶ. ೩-೨೯). [ ನಾನಾ + ಮುಖ ]

**ನಾನಾಯುಧ** (ನಾ). ಬಗೆಬಗೆಯಾದ ಆಯುಧ, –ಶಸ್ತ್ರ: ಅರಿಕಟಕಭೇದಕನ ನಾನಾಯುಧವಿಶಾರದನ . . . ಸೇನಾಪತಿಯ ಮಾಡುವುದರಸ ಕೇಳೆಂದ (ಕುಮ್ಮಾಉ. ೩-೮೮). [ ನಾನಾ + ಆಯುಧ ]

**ನಾನಾಯೋನಿ** (ನಾ).ಅನೇಕ ಜನ್ಮ:ನಾನಾಯೋನಿಗಳೊಳ್ ಸುಟಿದೇನಾನುಂ ದುಷ್ಕೃತಂ ಸಡಿಲ್ದೊಡೆ ಪಡೆದುಂ ಮಾನುಷ್ಯಮನತಿದಾರುಣಮಾನಸಶಾರೀರ ದುಃಖಪೀಡಿತವಕ್ಕುಂ (ಆದಿಪು. ೯-೪೪); ವಿಷ್ಣು ನಾನಾಯೋನಿಯಲ್ಲಿ ಬಾರದ ಭವಂಗಳಲ್ಲಿ ಬರುತಿಪ್ಪ (ಬಸವ. ೫೪೫). [ ನಾನಾ + ಯೋನಿ ]

**ನಾನಾರಶ್ಮಿ** (ನಾ). ಅನೇಕ ವಿಧವಾದ ಕಾಂತಿ, –ಪ್ರಕಾಶ: ಕೋಟೀರಾದ್ಯಾಭರಣಚಕ್ರಮುಖ್ಯಾಯುಧ ನಾನಾರಶ್ಮಿಯನು ವಿಜೃಂಭಿಸೆ ರಾರಾಜಿಸಿದತ್ತು ಕೌಸ್ತುಭಂ ಪೇರುರದೊಳ್ (ಜಗವಿ. ೩-೧). [ ನಾನಾ + ರಶ್ಮಿ ]

**ನಾನಾರಿ** (ನಾ). ಅನೇಕ ಜನ ಶತ್ರುಗಳನ್ನು ಹೊಂದಿರುವವನು ; ಬಹುಜನರೊಡನೆ ವಿರೋಧ ಮಾಡಿಕೊಂಡಿರುವವನು : ಹಿಮಕರಂ . . . ಅರಾತಿಸ್ಥಾನದೊಳ್ ಕೂಡೆ ನಿಷ್ಠುರನಾಲಸ್ಯಸಮನ್ವಿತಂ ಮೃದುವಪುಃ ಕಾಮಾಗ್ನಿ ನಾನಾರಿ (ಜಾತತಿ. ೧೮-೭). [ ನಾನಾ + ಅರಿ₆ ]

**ನಾನಾರೂಪ** (ನಾ). ಅನೇಕ ಆಕಾರ, –ಸ್ವರೂಪ : ದೇವರು ನಾನಾರೂಪಗಳನ್ನು ತಾಳುತ್ತಾನೆ (ರೂಢಿ). [ ನಾನಾ + ರೂಪ ]

**ನಾನಾರೂಪು** (ನಾ). = ನಾನಾರೂಪ: (∗) [ ನಾನಾ + ರೂಪು ]

**ನಾನಾರ್ಥ** (ನಾ). ೧ ಒಂದು ಪದದಿಂದ ಹೊರಡುವ ಬೇರೆ ಬೇರೆ ಅರ್ಥ; ಒಂದು ಪದಕ್ಕೆ ಇರುವ ಬೇರೆಬೇರೆ ಅರ್ಥ, –ಭಿನ್ನಭಿನ್ನಾರ್ಥ: "ಒಂದು ಶಬ್ದಕ್ಕೆ ಪಲವರ್ಥಮುಂ ಪಲವರ್ಥಕೊಂದು ಶಬ್ದಂ ನುಡಿವ ಬೆಡಗುಮಿಂ ನಾನಾರ್ಥಮೆಂದು ಪೇೞ್ವಿಂ" (ಮಂಗರಾ. ೦೩೪೮-೦) ; ನಾನಾರ್ಥಮೇಕರೂಪಾಧೀನವಚೋಚಿತಮಪ್ಪೊಡಕ್ಕುಂ ಶ್ಲೇಷಂ (ಕವಿರಾ. ೩-೧೦೪).
೨. ಬಗೆಬಗೆಯಾದ ವಸ್ತು, –ದ್ರವ್ಯ : ಪುರಮುಂ ಕೈಯ್ಕೊಂಡು ನಾನಾರ್ಥಮುಂ ಸೆಱೆಗೊಂಡಾಯ್ಕುಳಿಗೊಂಡನುದ್ಧ್ಯಯಶಮಂ ವಿಕ್ರಾಂತ ಕಾಳಾನಳಂ (ಪುಷ್ಪಪು. ೫-೫೧). [ ನಾನಾ + ಅರ್ಥ ]

**ನಾನಾಲಿಂಗ** (ನಾ). [ಕಾವ್ಯಮೀ] ಒಂದು ಬಗೆಯ ಉಪಮಾದೋಷ ; ಉಪಮೇಯವು ಯಾವ ಲಿಂಗದಲ್ಲಿರುವುದೋ ಆ ಲಿಂಗವನ್ನು ಬಿಟ್ಟು ಉಪಮಾನವು ಬೇರೆ ಲಿಂಗದಲ್ಲಿರುವುದು ; ಉಪಮಾನೋಪಮೇಯಂಗಳು ಭಿನ್ನಭಿನ್ನ ಲಿಂಗವಾಗಿರುವುದು : ಪುರುಷಂಬೋಲೀಕೆ ಕರಂ ಪುರುಷಾಕೃತಿಯೆಂಬುದಿಂತು ನಾನಾಲಿಂಗಂ (ಕವಿರಾ. ೩-೮೯). [ ನಾನಾ + ಲಿಂಗ ]

**ನಾನಾವಚನ** (ನಾ). [ಕಾವ್ಯಮೀ] ಒಂದು ಬಗೆಯ ಉಪಮಾದೋಷ ; ಉಪಮೇಯವು ಒಂದು ವಚನದಲ್ಲಿಯೂ ಉಪಮಾನವು ಬೇರೆ ವಚನದಲ್ಲಿಯೂ ಇರುವುದು ; ಉಪಮಾನೋಪಮೇಯಂಗಳು ಬೇರೆ

ಬೇರೆ ವಚನದಲ್ಲಿರುವುದು: ನಿರುತಂ ಪ್ರಾಣಂಗಳವೋಲ್ [ನ]ರಪಂ ಪ್ರಿಯನೆಂಬುದಿಂತು ನಾನಾವಚನಂ (ಕವಿರಾ. ೩-೪೯). [ನಾನಾ + ವಚನ]

**ನಾನಾವಿಧ** (ನಾ). ಅನೇಕ ಬಗೆ: ಇವಂದಿರ್ನೆರೆದಿವನನಿಂತು ನಾನಾವಿಧದಿಂ ಕೊಂದಪರಿದಾವ ಕಾರಣದಿಂದವೊ (ಸುಕುಮಾ. ೭-೭). [ನಾನಾ + ವಿಧ]

**ನಾನಾವಿಧಿ** (ನಾ). ೧. ಅನೇಕ ನಿಯಮ; ಬೇರೆ ಬೇರೆ ಕ್ರಮ: ದೇವರನ್ನು ಪೂಜೆ ಮಾಡಲು ನಾನಾವಿಧಿಗಳಿವೆ (ರೂಢಿ). ೨. ಬೇರೆ ಬೇರೆ ದುರದೃಷ್ಟವುಳ್ಳವನು; ಬಗೆಬಗೆಯ ಕಷ್ಟಗಳನ್ನು ಅನುಭವಿಸುವವನು: ಬ್ರಹ್ಮ ಬಲ್ಲಿದನೆಂಬೆನೆ ಶಿರ ಹೋಗಿ ನಾನಾವಿಧಿಯಾದ (ಬಸವ. ೫೫೨). [ನಾನಾ + ವಿಧಿ]

**ನಾನು₁** 'ನಾನ್₁' ನೋ.

**ನಾನು₂** 'ನಾನ್₂' ನೋ.

**ನಾನೂರು** 'ನಾಲ್ನೂಱು' ನೋ.

**ನಾನೂಱು** 'ನಾಲ್ನೂಱು' ನೋ.

**ನಾನೆತ** (ನಾ). ಮೈಮೇಲೆ ಪಟ್ಟೆಗಳುಳ್ಳ, ಕಪ್ಪುಬಣ್ಣದ ಒಂದು ಬಗೆಯ ಹಾವು: ಬೇರೆ ವಿಷಯುಕ್ತಸರ್ಪಗಳು . . . ನಾನೆತ (ಮಣಿಯಾರ), ಸುಂಕಪಾಳ, ಜೋಗಿ, ಸುರ್ಗಂಡ, ಅಜಗರ ಮುಂತಾದವುಗಳು ಪ್ರಸಿದ್ಧ ಉಂಟು (ಕಥಾಗಿ. ೬೭). [←ಮರಾ. ನಾನೇಟಾ]

**ನಾನೋಪಾಯ** (ನಾ). ಬಗೆಬಗೆಯಾದ ಉಪಾಯ,-ಯುಕ್ತಿ: ಸ್ವಾರ್ಥಪರಾಯಣನಾದ ವಾಗೀಶನೂ ಕಾರ್ಯೋದ್ಧಾರಕ್ಕಾಗಿ ನಾನೋಪಾಯಗಳನ್ನು ಹುಡುಕುವುದಕ್ಕೆ ಪ್ರಾರಂಭಿಸಿದನು (ಬಿನ್ನಬೀ. ೪೦); ನಾನೋಪಾಯಗಳಿಂದ, ಕೊನೆಗೆ ಹಿಂಸೆಯಿಂದಾದರೂ ಸರಿಯೆ, ಅಂಥ ಚರ್ಚಿನ ಪ್ರತಿಷ್ಠೆಯನ್ನು ಕಾಪಾಡುವುದೇ ಅವನ ಪ್ರಮುಖಕರ್ತವ್ಯವಾಗಿತ್ತು (ಪುನರು. ೩೯೩). [ನಾನಾ + ಉಪಾಯ]

**ನಾನ್ಕಾರ್** (ನಾ). ಹಿಂದೆ ಕಂದಾಯವನ್ನು ವಸೂಲು ಮಾಡುತ್ತಿದ್ದ ಅಧಿಕಾರಿಯ ಭತ್ಯ: ದೇಶಾಯಿಗೂ ದೇಶಮುಖಿನಿಗೂ ಹಣ ವಸೂಲ್ಮಾಡುವುದಕ್ಕಾಗಿ ನಾನ್‌ಕಾರ್ ಎಂಬ ಭತ್ಯವೂ . . . ಸಲ್ಲುತ್ತಿತ್ತು (ಪಾಳೆಗಾ. ೧೨). [←ಪಾರ. ಹಿಂ. ಮರಾ. ನಾನ್ಕಾರ್]

**ನಾನ್ನುಡಿ** 'ನಾಣ್ನುಡಿ' ನೋ.

**ನಾನ್ಪರ್ವರಿಶ್** (ನಾ). ೧. ಸರ್ಕಾರದವರು ಯೋಗ್ಯತೆಯುಳ್ಳ ಮಕ್ಕಳ ರಕ್ಷಣೆಗಾಗಿ ಕೊಡುವ ಭತ್ಯ: (ಮ್ಯಾಗೆಜಿ. IV, ೭೮೦). ೨. ಯುದ್ಧದಲ್ಲಿ ಮಡಿದ ಯೋಧನ ಹೆಂಡತಿಗೆ ಜೀವನ ನಿರ್ವಹಣೆಗಾಗಿ ಕೊಡುವ ಹಣ. [←ಪಾರ. ನಾನ್‌ಪರ್ವರಿಶ್; ಮರಾ. ನಾನ್‌ಪರ್ವೇಶೀ, ನಾನ್‌ಪರ್‌ವರ್ಷೀ]

**ನಾನ್ನ** 'ನಾನ್₁' ಪರಾ.

**ನಾನ್ಯಥಾ** (ಅ). ಬದಲಾವಣೆಯಾಗುವುದಿಲ್ಲ, ವ್ಯತ್ಯಾಸವಾಗದು ಎಂಬ ಅರ್ಥದ ಸಂಸ್ಕೃತ ಪದಸಮುಚ್ಚಯ: ನಾನ್ಯಥಾ ಮುನಿಭಾಷಿತಮೆಂಬೀ ವಾಕ್ಯಮದೇಂ ಪುಸಿಯಕ್ಕುಮೇ (ಪಂಚತಂ. ೨೫೬-೯೯). [ಸಂ.]

**ನಾಪತ್ತೆ** (ನಾ). ಕಾಣೆಯಾಗುವುದು; ಕಳೆದುಹೋಗಿ ಕಂಡುಹಿಡಿಯಲು ಆಗದಿರುವುದು: ಒಬ್ಬೊಬ್ಬರೂ ನುಡಿದು ಹೋದರಯ್ಯ ಇವರು ಪ್ರಳಯದ ಭವಿಷ್ಯ! ಹೋದರೋ? ಇವರು ನಾಪತ್ತೆ (ನಲಮು. ೧೪-೨೪); ರಾಜಕುಮಾರನನ್ನು ಗುಪ್ತವಾಗಿ ಕೊಲ್ಲಿಸಿ, ಅವನು ಎಲ್ಲಿಯೋ ನಾಪತ್ತೆಯಾಗಿರುವ ಸುದ್ದಿ ಹುಟ್ಟಿಸಿದನು (ಪ್ರಪಾಇ. II, ೩೯೨). [←ಹಿಂ. ಮರಾ. ನಾಪತಾ]

**ನಾಪಾಸು, ನಪಾಸು** (ನಾ). ತೇರ್ಗಡೆಯಾಗದಿರುವುದು; ಅನುತ್ತೀರ್ಣತೆ: ಏ ಕೃಷ್ಣಾ . . . ಪರೀಕ್ಷಾ ನಾಪಾಸಾದಿ, ಮನ್ಯಾಗ ಕುಂತು ರಿಣಗೂಳು ತಿಂತೀದಿ (ಅಸ್ತಿಷಂ. ೧೪೮). **ನಪಾಸು:** ಮಗನು ಸಾಲೆಯಲ್ಲಿ ನಪಾಸಾದರೆ . . . ಗಂಡನೆಂಬ ಸಾಧುಪ್ರಾಣಿಯು ತನ್ನ ಹೆಂಡತಿಯನ್ನಲ್ಲದೆ ಬೇರಾರನ್ನು ಹೊಡೆಯಲು ಸಾಧ್ಯ? (ಹುಚ್ಚುಹು. ೧೪). [←ಹಿಂ. ಮರಾ. ನಾಪಾಸ್]

**ನಾಪಿಕ** (ನಾ). ಬೆಳೆ ಹಾಳಾಗುವುದು; ಫಲವಿಲ್ಲದಾಗುವುದು. [←ಮರಾ. ನಾಪೀಕ]

**ನಾಪಿತ** (ನಾ). ಕ್ಷೌರ ಮಾಡುವವನು; ನಾಯಿಂದ; ಹಜಾಮ: "ಕ್ಷುರಿ ಮುಂಡಿ ನಾಪಿತಂ" (ವಸ್ತುಕೋ. ೬೬-೪೪); "ಕ್ಷುರೀ, ಮುಂಡೀ, ದಿವಾಕೀರ್ತಿಃ, ನಾಪಿತಃ, ಅಂತಾವಸಾಯೀ–ಇ ನಾಯಿಂದರವನ ಹೆಸರು" (ಸಿದ್ಧಾಂತಿ. ೩೦೦); ಬಿಸುಟು ಕಳೆವುದು ನೀತಿಶಾಸ್ತ್ರವನುಸುರದಾಚಾರಿಯನ . . . ನಾಪಿತನಿಂತಱುವರನು (ಕುಮಾಲು. ೩-೪೬); ನಾಪಿತನನ್ನು ಕರೆಸಿ ದೀಕ್ಷಾವಿಸರ್ಜನೆ ಮಾಡಿಕೊಂಡನು (ಕಥವಿ. II, ೨೧೪); ನಾಪಿತ ನಾಗಪ್ಪನ ಮನೆಯ ಮಿಣುಕುದೀವಿಗೆಯ ಬೆಳಕು ಕಾಲಿಗೆ ಬಿದ್ದಿತು (ಕನಕ. ೭೩); ಪುಣ್ಯಕ್ಷೇತ್ರಗಳಲ್ಲಿ ಪಿತೃಗಳು ಕೂಡ ನಾಪಿತನ ಸಂಸ್ಕಾರವಿಲ್ಲದವರ ಕೈಯಿಂದ ಪಿಂಡ ಮುಟ್ಟುವುದಿಲ್ಲ (ದೇಕನ್ನ. ೭೦). [ಸಂ.]

**ನಾಪಿತಾನಿ** (ನಾ). ಹಜಾಮನ ಮಗ ಅಥವಾ ಮಗಳು: ಸುಂದರಿಯು ತನ್ನ ದೋಣಿಯನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿ ಕಾಲಿಗೆ ಅಲತಿಗೆಬಣ್ಣ ಬಳಿಯುವ ನಾಪಿತಾನಿಯ ವೇಷ ಧರಿಸಿ ಶೈವಲಿನಿಯಿದ್ದ ದೋಣಿಗೆ ಬಂದಳು (ಬಂಕಿಮ. ೧೯೩). [<ಸಂ. ನಾಪಿತಾಯನಿ, ನಾಪಿತಾಯನೀ]

**ನಾಪಿತಿ** (ನಾ). ೧. ಹಜಾಮನ ಹೆಂಡತಿ. ೨. ಹಜಾಮಜಾತಿಯಲ್ಲಿ ಹುಟ್ಟಿರುವ ಹೆಂಗಸು: (೬). [ಸಂ. ನಾಪಿತೀ]

**ನಾಪಿತೆ** (ನಾ). =ನಾಪಿತಿ ೨: ಕುಲಟೆಯರೊಳ್ ಕೋಟಲೆಯರೊಳಸದೃಶ ಕುಲದವರೊಳ್ ನಾಪಿತೆಯರೊಳ್ . . . ಸಲೆ ನುಡಿಯದಲುತ್ತಮಚರಿತೆ (ಜನವ. ೧೧-೭೦); ನರ್ತಕಿಯ ನಾಪಿತೆಯ ಪರ್ಣವಿಕ್ರಯಿಯ ಪ್ರವರ್ತಕಿಯ ದಾಸಿಯ . . . ಇನಿಬರೊಡನಾಡಿದೊಡೆ ಬಾಲೆಯರ್ತವೆ ದುರಾಚಾರಮಂ ಕಲಿವರು (ಜೈಮಿಭಾ. ೫-೫೮). [ಸಂ. ನಾಪಿತಾ]

**ನಾಬತ್ತು** 'ನವಾತು' ನೋ.

**ನಾಬಾಯ್** (ನಾ). ನಾಲೆಯ ಬಾಯಿ (?): ಬ್ರಾಹ್ಮಣವೃತ್ತಿಯ ಸೂದ್ರು ನಾಳಲು ವರ್ಷಂಪ್ರತಿ ವೀಸಕೆ ಮೂರು ಪಣವಿನ ತೆಱೆಯ ನಾಬಾಯಾಗೆ ೫೨ ಗದ್ಯಾಣ (ಸೌಇಇ. IX-1, ೧೩೨-೨೩; 1068). [<ನಾಲೆ₁ ? + ಬಾಯ್]

**ನಾಭಸ** (ಗು). ಆಕಾಶಕ್ಕೆ ಸಂಬಂಧಪಟ್ಟ; ಆಕಾಶಕ್ಕೆ ಸೇರಿದ: ತೀಡಿತ್ತಿರದೆ ಮುದಿತವಿಶ್ವಂ ನಾಭಸಂ ಮಾತರಿಶ್ವಂ (ಚಂದ್ರಪ್ರ. ೪-೩೦). [ಸಂ.]

**ನಾಭಸಯೋಗ** (ನಾ). [ಜ್ಯೋತಿ] ಜಾತಕದಿಂದ ತಿಳಿಯಲ್ಪಡುವ ಒಂದು ವಿಶಿಷ್ಟರೀತಿಯ ಗ್ರಹಗಳ ಇರುವಿಕೆ,-ಸ್ಥಿತಿ: ಆಕೃತಿಯೋಗಗಳು ೨೦ ಸಂಖ್ಯಾಯೋಗಗಳು ೭ ಆಶ್ರಯಯೋಗಗಳು ೩ ದಲಯೋಗಗಳು ೨; ಒಟ್ಟು ಈ ನಾಲ್ಕುಯೋಗಗಳ ಮೊತ್ತ ೩೨. ಈ ಸಮುದಾಯಕ್ಕೆ ನಾಭಸಯೋಗವೆಂದು ಹೆಸರು . . . ನಾಭಸಯೋಗದ ಫಲಗಳು ಇತರ ಯೋಗಗಳಂತೆ ಯೋಗಪ್ರದಗ್ರಹಗಳ ದಶಾಕಾಲದಲ್ಲಿ ಮಾತ್ರ ಫಲಿಸದೆ ಸಾಮಾನ್ಯವಾಗಿ ಎಲ್ಲ ಕಾಲಗಳಲ್ಲೂ ಫಲಿಸುತ್ತವೆ (ಜಾತತ. ೧೩-೧ ಟೀಕೆ). P ಯವನರು ಹೇಳಿರುವ ಸಾವಿರದ ಎಂಟುನೂರು ನಾಭಸಯೋಗಗಳನ್ನು ವರಾಹಮಿಹಿರರು ಮೂವತ್ತೆರಡು ಯೋಗಗಳಲ್ಲಿ ಸಂಗ್ರಹಿಸಿದ್ದಾರೆ:–ರಜ್ಜುಯೋಗ–ಚರರಾಶಿಯಲ್ಲಿ ಎಳು ಗ್ರಹಗಳಿರುವುದು. ಇದರಿಂದ ಜಾತಕನು ಪರರಲ್ಲಿ ಅಸಹನೆ, ದಾರಿ ನಡೆಯುವುದರಲ್ಲಿ ಇಷ್ಟವುಳ್ಳವನು, ದೇಶಾಂತರವಾಸದಲ್ಲಿ ಅಪೇಕ್ಷೆಯುಳ್ಳವನಾಗುತ್ತಾನೆ. ಮುಸಲಯೋಗ–ಸ್ಥಿರರಾಶಿಯಲ್ಲಿ ಏಳು ಗ್ರಹಗಳೂ ಇದ್ದು ಜಾತಕನು ಧನಿಕ ಹಾಗೂ ಮಾನಿಷ್ಠನಾಗುತ್ತಾನೆ. ನಳಯೋಗ–ದ್ವಿಸ್ವಭಾವರಾಶಿಯಲ್ಲಿ ಏಳುಗ್ರಹಗಳೂ ಇದ್ದು ಜಾತಕನು ಶ್ರೀಮಂತ, ಸುಖಿ ಹಾಗೂ ಅಂಗಹೀನನಾಗಿರುತ್ತಾನೆ. ಗದಾ

ಯೋಗ-ಆಸನ್ನ, ಕೇಂದ್ರಗಳೆರಡರಲ್ಲಿ ಏಳುಗ್ರಹಗಳೂ ಇದ್ದು ಜಾತಕನು ಧನವಂತ ಮತ್ತು ಯಾಗಶೀಲನಾಗಿರುತ್ತಾನೆ. ಶಕಟಯೋಗ-ಇದರಲ್ಲಿ ಲಗ್ನ ಮತ್ತು ಸಪ್ತಮಕೇಂದ್ರದಲ್ಲಿ ಏಳುಗ್ರಹಗಳಿದ್ದು ಜಾತಕನು ಸಂಸಾರಿ ಹಾಗೂ ರೋಗಿಷ್ಠನಾಗಿರುತ್ತಾನೆ. ಶೃಂಗಾಟಕಯೋಗ-ಲಗ್ನ, ಪಂಚಮ, ನವಮರಾಶಿಗಳಲ್ಲಿ ಏಳು ಗ್ರಹಗಳಿದ್ದು ಜಾತಕನು ಸುಖಿಯಾಗಿರುತ್ತಾನೆ. ವಿಹಗಯೋಗ-ಏಳುಗ್ರಹಗಳೂ ದಶಮ ಚತುರ್ಥ ಕೇಂದ್ರಗಳಲ್ಲಿದ್ದು ಜಾತಕನು ಸೇವಕ, ಸ್ವೇಚ್ಛಾಚಾರಿ ಹಾಗು ಜಗಳಗಂಟಿಯಾಗಿರುತ್ತಾನೆ. ಹಲಯೋಗ-ಲಗ್ನವನ್ನು ಬಿಟ್ಟು ಉಳಿದ ಸ್ಥಾನಗಳಲ್ಲಿ ಏಳುಗ್ರಹಗಳಿದ್ದು ಜಾತಕನು ವ್ಯವಸಾಯವೃತ್ತಿಯುವನಾಗಿರುತ್ತಾನೆ. ಚಕ್ರಯೋಗ-೧,೩,೫,೭,೯ ಮತ್ತು ೧೧-ಈ ೬ ಸ್ಥಾನಗಳಲ್ಲಿ ಏಳುಗ್ರಹಗಳಿದ್ದು ಜಾತಕನು ರಾಜಪೂಜ್ಯನಾಗುತ್ತಾನೆ. ಸಮುದ್ರಯೋಗ-೨,೪,೬,೮, ೧೦ ಮತ್ತು ೧೨ ನೆಯ ಸ್ಥಾನಗಳಲ್ಲಿ ಏಳುಗ್ರಹಗಳಿದ್ದು ಜಾತಕನು ರಾಜಸಮಾನನೂ ಭೋಗಿಯೂ ಆಗಿರುತ್ತಾನೆ. ಗೋಳ-ಏಳು ಗ್ರಹಗಳೂ ಒಂದೇ ರಾಶಿಯಲ್ಲಿರುವುದರಿಂದ ಜಾತಕನು ಬಡವ ಹಾಗು ಮೂರ್ಖನಾಗಿರುತ್ತಾನೆ. ಯುಗ-ಏಳುಗ್ರಹಗಳೂ ಎರಡು ರಾಶಿಗಳಲ್ಲಿರುವುದರಿಂದ ಜಾತಕನು ಅವಿದ್ಯಾವಂತ ಮತ್ತು ಬಡವನಾಗಿರುತ್ತಾನೆ. ಶೂಲ-ಏಳುಗ್ರಹಗಳೂ ಮೂರು ರಾಶಿಗಳಲ್ಲಿದ್ದು ಜಾತಕನು ದರಿದ್ರ, ಗುಣವಂತ ಮತ್ತು ಶೂರನಾಗಿರುತ್ತಾನೆ. ಕೇದಾರ-ಏಳು ಗ್ರಹಗಳು ನಾಲ್ಕು ರಾಶಿಗಳಲ್ಲಿದ್ದು ಜಾತಕನು ಜನೋಪಕಾರಿಯಾಗಿರುತ್ತಾನೆ. ಪಾಶ-ಏಳುಗ್ರಹಗಳೂ ಐದು ರಾಶಿಗಳಲ್ಲಿದ್ದು ಜಾತಕನು ಬೇಸಾಯಗಾರನಾಗಿರುತ್ತಾನೆ. ದಾಮ-ಏಳುಗ್ರಹಗಳೂ ಆರು ರಾಶಿಗಳಲ್ಲಿದ್ದು ಜಾತಕನು ಧನಿಕನೂ ಸ್ನೇಹಪರನೂ ಆಗಿರುತ್ತಾನೆ. ವಲ್ಲಕಿ-ಏಳುಗ್ರಹಗಳೂ ಏಳುರಾಶಿಗಳಲ್ಲಿದ್ದು ಜಾತಕನು ಸಂಗೀತಗಾರನೂ ನರ್ತಕನೂ ಆಗಿರುತ್ತಾನೆ. ವಜ್ರ-ಲಗ್ನ ಮತ್ತು ಸಪ್ತಮಸ್ಥಾನಗಳಲ್ಲಿ ಶುಭಗ್ರಹಗಳೂ ಚತುರ್ಥ ಮತ್ತು ದಶಮಸ್ಥಾನಗಳಲ್ಲಿ ಪಾಪಗ್ರಹಗಳೂ ಇದ್ದು ಜಾತಕನು ತನ್ನ ಶೈಶವ ಮತ್ತು ಮುದಿತನದಲ್ಲಿ ಸುಖಿಯಾಗಿರುತ್ತಾನೆ. ಯವ-ಲಗ್ನ ಮತ್ತು ಸಪ್ತಮಸ್ಥಾನಗಳಲ್ಲಿ ಪಾಪಗ್ರಹಗಳೂ ಚತುರ್ಥ ಮತ್ತು ದಶಮಸ್ಥಾನಗಳಲ್ಲಿ ಶುಭಗ್ರಹಗಳೂ ಇದ್ದು ಜಾತಕನು ಯೌವನದಲ್ಲಿ ಮಾತ್ರ ಸುಖಿಯಾಗಿರುತ್ತಾನೆ. ಕಮಲ-ಏಳುಗ್ರಹಗಳೂ ನಾಲ್ಕು ಕೇಂದ್ರಗಳಲ್ಲಿದ್ದು ಜಾತಕನು ಧನಿಕನಾಗಿರುತ್ತಾನೆ. ವಾಪೀ-ನಾಲ್ಕು ಕೇಂದ್ರಗಳಲ್ಲಿ ಯಾವ ಗ್ರಹವೂ ಇಲ್ಲದೆ ನಾಲ್ಕು ಫಣಪರಗಳಲ್ಲಿ ಅಥವಾ ನಾಲ್ಕು ಆಪೋಕ್ಲಿಮ ರಾಶಿಗಳಲ್ಲಿ ಎಲ್ಲ ಗ್ರಹಗಳೂ ಇದ್ದು ಜಾತಕನು ಅಲ್ಪಸುಖಿ ಮತ್ತು ಲೋಭಿಯಾಗಿರುತ್ತಾನೆ. ಯೂಪ-ಎಲ್ಲ ಗ್ರಹಗಳೂ ಲಗ್ನದಿಂದ ನಾಲ್ಕುಸ್ಥಾನಗಳೊಳಗೆ ಇದ್ದು ಜಾತಕನು ದಾನಿಯೂ ಉದಾರಿಯೂ ಆಗಿರುತ್ತಾನೆ. ಇಷು-ಎಲ್ಲ ಗ್ರಹಗಳೂ ೪,೫,೬,೭ ನೆಯ ಸ್ಥಾನಗಳಲ್ಲಿದ್ದು ಜಾತಕನು ಕೊಲೆಗಾರನಾಗಿರುತ್ತಾನೆ. ಶಕ್ತಿ-ಎಲ್ಲ ಗ್ರಹಗಳೂ ೭,೮,೯, ಮತ್ತು ೧೦ ನೆಯ ಸ್ಥಾನಗಳಲ್ಲಿದ್ದು ಜಾತಕನು ಧನಹೀನನಾಗಿರುತ್ತಾನೆ. ದಂಡ-ಎಲ್ಲ ಗ್ರಹಗಳೂ ೧೦, ೧೧, ೧೨ ಮತ್ತು ೧೩ ನೆಯ ಸ್ಥಾನಗಳಲ್ಲಿದ್ದು ಜಾತಕನು ಬಂಧುಮಿತ್ರರಿಂದ ಬಿಡಲ್ಪಟ್ಟವನಾಗಿರುತ್ತಾನೆ. ನೌ-ಲಗ್ನದಿಂದ ಮೊದಲುಮಾಡಿ ಏಳುರಾಶಿಗಳಲ್ಲೂ ಗ್ರಹಗಳಿದ್ದು ಜಾತಕನು ಕೀರ್ತಿವಂತನಾಗುತ್ತಾನೆ. ಕೂಟ-ನಾಲ್ಕರಿಂದ ಹತ್ತರವರೆಗೂ ಎಂದರೆ ಏಳು ರಾಶಿಗಳಲ್ಲೂ ಗ್ರಹಗಳಿದ್ದು ಜಾತಕನು ಅನೃತವಾದಿಯಾಗಿರುತ್ತಾನೆ. ಛತ್ರ - ಏಳನೆಯ ರಾಶಿಯಿಂದ ಲಗ್ನದವರೆಗಿರುವ ಏಳುರಾಶಿಗಳಲ್ಲೂ ಗ್ರಹಗಳಿದ್ದು ಜಾತಕನು ಸ್ವಜನಪ್ರಿಯನಾಗಿರುತ್ತಾನೆ. ಚಾಪ-ಹತ್ತನೆಯ ರಾಶಿಯಿಂದ ನಾಲ್ಕನೆಯ ರಾಶಿಯವರೆಗಿರುವ ಏಳುರಾಶಿಗಳಲ್ಲೂ ಗ್ರಹಗಳಿದ್ದು ಜಾತಕನು ಪರಾಕ್ರಮಶಾಲಿಯಾಗಿರುತ್ತಾನೆ. ಸರ್ಪ-ಮೂರು ಪಾಪ ಗ್ರಹಗಳು ಮೂರು ಕೇಂದ್ರಸ್ಥಾನಗಳಲ್ಲಿದ್ದು ಜಾತಕನು ಅಸುಖಿಯಾಗಿರುತ್ತಾನೆ. ಮಾಲಾ-ಮೂರು ಶುಭಗ್ರಹಗಳು ಮೂರು ಕೇಂದ್ರಸ್ಥಾನಗಳಲ್ಲಿದ್ದು ಜಾತಕನು ಸುಖಿಯಾಗಿರುತ್ತಾನೆ. ಅರ್ಧಚಂದ್ರ-ಲಗ್ನಕ್ಕೆ ಎರಡನೆಯ ಸ್ಥಾನದಿಂದ ಏಳುಸ್ಥಾನಗಳಲ್ಲಾಗಲಿ ಮೂರರಿಂದ ಹಿಡಿದು ಏಳು ಸ್ಥಾನಗಳಲ್ಲಾಗಲಿ ಏಳುಗ್ರಹಗಳಿದ್ದು ಜಾತಕನು ಸರ್ವಪ್ರಿಯ, ಸುಂದರ ಹಾಗೂ ಪ್ರಧಾನನಾಗಿರುತ್ತಾನೆ. [ ನಭಸ + ಯೋಗ ]

**ನಾಭಿ** (ನಾ). ೧. ಹೊಟ್ಟೆಯ ಮಧ್ಯಭಾಗದಲ್ಲಿರುವ ಸಣ್ಣ ಕುಳಿ,-ಹಳ್ಳ; ಹೊಕ್ಕುಳು : "ನಾಭಿ ಪೊಕ್ಕುಳಿಂದಱಿವುದು" (ವಸ್ತುಕೋ. ೬೮-೬) ; "ಪೊಕ್ಕುೞು ನಾಭಿಯಕ್ಕು" (ಮಂಗರಾ. ೯೭-೧೩) ; ಆಗಳಾ ಮದಗಜಾಂಕುಶದಿಂದೆ ಪೆರ್ಚಿಸಿ ನಾಭಿಯುಂ (ಪಂಪಭಾ. ೧-೪೩); ಪ್ರಾಣದಲ್ಲಿ ವಾಯು ನಾಭಿಯಲ್ಲಿ ಅಂತರಿಕ್ಷವು (ಬಸವ. ೫೩೬) ; ನಯನಾಂಬುರುಹದಲಿ ರವಿ ನಾಭಿಯುಲಭವ ವರಭುಜಾಗ್ರದೊಳಖಿಳ ದಿಗುಪಾಲಕರು ರಂಜಿಸಿತು (ಕುಮಾ.ಉ. ೯-೫೮) ; ಪೂರ್ಣಚಂದ್ರವದನೆಯು ನಾಭಿಸರಸಿಯೊಂದಮಲತ್ವ ಕೆಱೆಯಲ್ಲಿವೆಂದೆಸೆದಳಾ ಚೆಲ್ವ ಪೆಣ್ಣು (ಭಾವಚಿಂ. ೩-೪೫) ; ಕಲಕೀರವಾಣಿ ... ಪೊಸಜವ್ವನದ ಸುಳಿನಾಭಿಯಿಂದೆಸೆವ ಬಡಬಾಸೆ (ಪ್ರೌಢರಾ. ೩-೨೬). ೨. ಮಧ್ಯಭಾಗ ; ಕೇಂದ್ರ : ಜಳನಿಧಿಯನೆ ಪೋಲ್ವ ಶರಣಾಗತಜಳನಿಧಿಯ ನಿಮ್ನನಾಭಿ ಚೆಲ್ವಿಂಗೆ ತಾನೆ ನಾಭಿಯಾದುದು (ಪಂಪಭಾ. ೨-೩೯ ವ) ; ಖಚರಲೋಕಕ್ಕೆ ನಾಭಿಯಾಗಿರ್ದುದು ಚಕ್ರವರ್ತಿಯ ರಾಜಧಾನಿ ಶಿವಮಂದಿರಪುರಂ (ಶಾಂತಿಪು. ೩-೨ ವ) ; ಓರ್ವ ತೇಜಸ್ವಿ ಋಷಿ ಧ್ಯಾನಸ್ಥನಾಗಿರ್ದನಾ ಗಿರಿತರಂಗಿಣಿಯು ನಾಭಿಯಿಂದುದ್ಭವಿಸಿದಂತಿರ್ದರೆಯ ಶಿರದಿ (ಶ್ರೀರಾಮಾ. ೧೩೩-೨೦೫). ೩. ಚಕ್ರದ ಮಧ್ಯಭಾಗ ; ಗುಂಬ ; ತುಂಬು : "ನಾಭಿಃ, ಪಿಂಡಿಕಾ – ಈ ೨ ತುಂಬು" (ಹಲಾಯು. ೭೩-೨೯೩); ಅನಂತ್ಯವೀ ಜಗಚ್ಚಕ್ರನಾಭಿಕ್ರಮತೆ ತಾನೊಂದೆ ಸತ್ತ್ವವದು (ಮಂಕುತಿ. ೧೩೭). ೪. ಮಧ್ಯಬಿಂದು: "ಒಂದು ನಿರ್ದಿಷ್ಟ ವಕ್ರರೇಖೆಯಲ್ಲಿ ನೆಲಸಿರುವ ಬಿಂದುಗಳಿಗೆ ಯಾವ ಬಿಂದುವಿನಿಂದ ಇರುವ ದೂರಗಳು ಒಂದು ಗೊತ್ತಾದ ರೇಖಾಂಕಸಂಬಂಧವುಳ್ಳವಾಗಿರುವುವೋ ಆ ಬಿಂದು ; ನಾಭಿ" (Focus. ಇಂಕನಿ); ಸೂರ್ಯನು ಈ ಪಥದ ಒಂದು ನಾಭಿಯಲ್ಲಿ (Focus) ಇರುತ್ತಾನೆ (ಶಿಲ್ಪನಾ. ೧೧೦). ೫. ಒಂದು ಬಗೆಯ ವಿಷವೃಕ್ಷ: "ವತ್ಸನಾಭಃ-ನಾಭಿ, ಜಾತಿಹಗಿನು" (ಓಷಧಿ. ೧೪೮) ; ನಾಭಿಯನ್ನು ಕಿಱುಕುಸಾಲೆಯ ರಸದಲ್ಲಿ ಮರ್ದಿಸಿ ... ನಸ್ಯವು ಮಾಡಲು ಸರ್ವಾಂಗಜ್ವರ ಹರ (ವಿವ್ಯವಿ. ೦೯೩) ; ಅಂಕೋಲೆರಸದಲ್ಲಿ ಚಂಗಲ್ವಕೋಷ್ಟ, ನಾಭಿ ಸಹ ತೇದು ಮೈಗೆ ಲೇಪಿಸೆ ಸಕಲ ಸನ್ನಿಪಾತ ಹರ (ಖಳವ್ಯ. ೦೮೧). ೬. ಬಹಳ ಸಮೀಪದ ಸಂಬಂಧ; ಹತ್ತಿರದ ದಾಯಾದಿತನ; ಏಳು ತಲೆಯ ಒಳಗೇ ಇರುವ ದಾಯಾದತ್ವ. ೭. ಸಾರ್ವಭೌಮ. ೮. ಕ್ಷತ್ರಿಯ. ೯. ಕಸ್ತೂರಿ ; ಮೃಗನಾಭಿ. ೧೦. [ಜೈನ] ಆದಿತೀರ್ಥಂಕರನ ತಂದೆ : "ನಾಭಿಃ-ಪೊಕ್ಕುೞುಂ, ವತ್ಸನಾಭಿಯುಂ, ಮೊದಲನೆಯ ಅರ್ಹಂತನ ತಂದೆಯುಂ" (ಕಾಶಕ್ಕ. ೧೩೨) ; ಸುಕದ ಕಣಿಯೆನಿಸಿ ಮಾಪುಬ್ಬಕೋಟಿ ಪರಮಾಯು ನಾಭಿನಾಮಮುಮಾಯ್ತು (ಆದಿಪು. ೬-೬೭). ೧೧. [ನಾಟ್ಯ] ಹಸ್ತಕ್ಷೇತ್ರಗಳಲ್ಲಿ ಒಂದು : ಪಾರ್ಶ್ವದ್ವಯ ... ನಾಭಿ,ಕಟಿಶಿರ, ಊರುದ್ವಂದ್ವ – ಈ ಹದಿಮೂಱು ಹಸ್ತಕ್ಷೇತ್ರಂಗಳ್ (ಲಾಸ್ಯರಂ. ೪-೧೫ ವ). [ ಸಂ. ]

ಕರ್ನಾಟಕ ಸರ್ಕಾರದ ಉದಾರ ಧನಸಹಾಯದಿಂದ ಕನ್ನಡಿಗರ ಬಹುದಿನಗಳ ಬೇಡಿಕೆಯಾಗಿದ್ದ ಕನ್ನಡ ನಿಘಂಟಿನ ಎಂಟು ಸಂಪುಟಗಳು ಈಗ ಪುನರ್ಮುದ್ರಣಗೊಂಡು ನಿಮ್ಮ ಕೈಸೇರುತ್ತಿವೆ.

ಸಮಸ್ತ ಕನ್ನಡಿಗರಿಗೆ ಈ ಸಂಪುಟಗಳನ್ನು ಒಪ್ಪಿಸಲು ನೆರವು ನೀಡಿದ ಕರ್ನಾಟಕ ಸರ್ಕಾರವನ್ನು ನಾನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಡಾ. ನಲ್ಲೂರು ಪ್ರಸಾದ್ ಆರ್. ಕೆ.
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು

ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ಐದನೆಯ ಸಂಪುಟ

ನಾಭಿಕಮಲ - ಪಟ್ಟಿಬಿನೆ

"ಶಬ್ದಪಾರಮಾರ್ಗಮಶಕ್ಯಂ"
-ಕೇಶಿರಾಜ

ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : ಬೆಂಗಳೂರು - ೧೮
೧೯೮೮

ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ಐದನೆಯ ಸಂಪುಟ

"ಶಬ್ದಪಾರಮಾರ್ಗಮಶಕ್ಯಂ"

–ಕೇಶಿರಾಜ


ಪ್ರೊ. ಜಿ. ವೆಂಕಟಸುಬ್ಬಯ್ಯ

ಪ್ರಧಾನ ಸಂಪಾದಕ



ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : ಬೆಂಗಳೂರು-೧೮

೧೯೮೮

KANNADA NIGHANTU - VOL-V
Second Edition : 2010
Published by : Kannada Sahitya Parishat
Pampa Mahakavi Road, Chamarajapet, Bangalore - 560 018
Pages : VIII+4491 to 5471, Price : Rs. 350=00

ಮೊದಲನೆಯ ಮುದ್ರಣ – ೧೯೮೮
ಎರಡನೆಯ ಮುದ್ರಣ – ೨೦೧೦
ಪ್ರತಿಗಳು : ೨೦೦೦
ಬೆಲೆ : ಮುನ್ನೂರು ಐವತ್ತು ರೂಪಾಯಿಗಳು




ಮುದ್ರಣ: **ರಾಜಾ ಪ್ರಿಂಟರ್ಸ್**
ನಂ.೫೯, ೪ನೆ ಕ್ರಾಸ್, ಲಾಲ್‌ಬಾಗ್ ರಸ್ತೆ
ಕೆ.ಎಸ್. ಗಾರ್ಡನ್, ಗಂಗಾಧರಪ್ಪ ಬ್ಲಾಕ್
ಬೆಂಗಳೂರು– ೫೬೦ ೦೨೭.

## ಕನ್ನಡ ನಿಘಂಟು ಸಂಪಾದಕ ಸಮಿತಿ

(೧೯೮೭ ರ ಡಿಸೆಂಬರ್ ತಿಂಗಳಿನಲ್ಲಿ ಇದ್ದಂತೆ)

**ಅಧ್ಯಕ್ಷರು ಮತ್ತು ಪ್ರಧಾನ ಸಂಪಾದಕರು**

ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.

ಸದಸ್ಯರು

ಡಾ. ಆರ್. ಸಿ. ಹಿರೇಮಠ, ಎಂ.ಎ., ಪಿಹೆಚ್.ಡಿ.

ಡಾ. ಸಿದ್ಧಯ್ಯ ಪುರಾಣಿಕ., ಬಿ.ಎ., ಎಲ್‌ಎಲ್.ಬಿ.

ಡಾ. ಜಿ. ಎಸ್. ಗಾಯಿ, ಎಂ.ಎ., ಪಿಹೆಚ್.ಡಿ.

ಡಾ. ಹಾ. ಮಾ. ನಾಯಕ, ಎಂ.ಎ. ಪಿಹೆಚ್.ಡಿ

ಡಾ. ಜಿ.ಎಸ್. ಶಿವರುದ್ರಪ್ಪ, ಎಂ.ಎ., ಪಿಹೆಚ್.ಡಿ.

ಡಾ. ಎಂ. ಚಿದಾನಂದಮೂರ್ತಿ, ಎಂ.ಎ., ಪಿಹೆಚ್.ಡಿ.

ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ, ಎಂ.ಎ., ಪಿಹೆಚ್.ಡಿ.

ಡಾ. ಕೆ. ವಿ. ರಮೇಶ್, ಎಂ.ಎ., ಪಿಹೆಚ್.ಡಿ.

ಡಾ. ಕೆ. ಕೃಷ್ಣಮೂರ್ತಿ, ಎಂ.ಎ., ಪಿಹೆಚ್.ಡಿ.

ಶ್ರೀ ಎನ್. ಬಸವಾರಾಧ್ಯ, ಎಂ.ಎ.

**ಪರಿಷತ್ತಿನ ಆಡಳಿತಗಾರರು**

ಶ್ರೀ ಅ. ರಾ. ಚಂದ್ರಹಾಸಗುಪ್ತ

**ಸಹಾಯಕ ನಿರ್ದೇಶಕರು**

ಶ್ರೀ ಕಾ. ತ. ಚಿಕ್ಕಣ್ಣ

# ಸಂಪಾದಕ ವರ್ಗ

**ಪ್ರಧಾನ ಸಂಪಾದಕರು**

ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.

**ಉಪಸಂಪಾದಕರು**

ಶ್ರೀ ಹೀ. ಚಿ. ಶಾಂತವೀರಯ್ಯ ಎಂ.ಎ., ಬಿ.ಇಡಿ.
ಶ್ರೀ ಟಿ. ಆರ್. ಮಹದೇವಯ್ಯ, ಎಂ.ಎ.

**ಸಹಾಯಕ ಸಂಪಾದಕರು**

ಶ್ರೀಮತಿ ಮಂಜುಳಾರಾವ್, ಎಂ.ಎ.
ಶ್ರೀಮತಿ ಎಂ. ಎನ್. ಜಾನಕಮ್ಮ, ಎಂ.ಎ.
ಶ್ರೀಮತಿ ಉಮಾದೇವಿ, ಎಂ.ಎ.
ಶ್ರೀಮತಿ ವಿಜಯಲಕ್ಷ್ಮಿ, ಎಂ.ಎ.
ಶ್ರೀಮತಿ ಎಂ.ಎಸ್. ಸುಜಯ, ಎಂ.ಎ.
ಶ್ರೀ ಬಿ. ಆರ್. ಬಸವರಾಜ, ಎಂ.ಎ.

ಬೆರಳಚ್ಚುಗಾರ್ತಿಯರು : ಶ್ರೀಮತಿ ಎ. ನೇತ್ರಾವತಿ ಬಾಯಿ, ಶ್ರೀಮತಿ ಸಿ. ಎನ್. ವಿಜಯಲಕ್ಷ್ಮಿ,

ಸೇವಕರು : ರಾಘವೇಂದ್ರ, ಮಾದಪ್ಪ, ಶಂಕರಪ್ಪ, ರೇವಯ್ಯ,

# ಅಧ್ಯಕ್ಷರ ನುಡಿ

'ನಿಘಂಟು ಎಂದರೆ ಕನ್ನಡ ಸಾಹಿತ್ಯ ಪರಿಷತ್ತಿನ ಬೃಹನ್ನಿಘಂಟು' ಎಂದೇ ಖ್ಯಾತವಾಗಿರುವ ಈ ಮಹಾನಿಘಂಟಿನ ಎಂಟು ಸಂಪುಟಗಳನ್ನು ಅದು ಪ್ರಕಟವಾದ ೧೫ ವರ್ಷಗಳ ನಂತರ ಮತ್ತಷ್ಟು ಸುಂದರವಾಗಿ ಮರುಮುದ್ರಣಗೊಳಿಸಿ ಕನ್ನಡ ಕುಲಕೋಟಿಗೆ ಅರ್ಪಿಸಲು ನನಗೆ ಸಂತೋಷವೆನಿಸುತ್ತದೆ. ಕನ್ನಡ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ಪಡೆದುಕೊಂಡಿರುವುದು ಅದರ ಸಂಪನ್ನತೆ ಮತ್ತು ಅರ್ಹತೆಗಳಿಂದಾಗಿಯೇ ಎಂಬುದನ್ನು ಲೋಕದೆದುರು ಬಿಚ್ಚಿತೋರಿಸುವ ಸಾಧನಗಳಲ್ಲಿ ಮುಖ್ಯವಾದದ್ದು ಈ ಬೃಹತ್ ನಿಘಂಟು. ಕನ್ನಡದ ಸಮಸ್ತ ಜ್ಞಾನವನ್ನೂ ತನ್ನೊಳಗೆ ಐಕ್ಯಗೊಳಿಸಿಕೊಂಡಿರುವ ಈ ನಿಘಂಟಿನ ವಿವಿಧ ಸಂಪುಟಗಳಲ್ಲಿ ಶಬ್ದವೊಂದರ ಅರ್ಥ, ವಿವರಣೆ, ಉದಾಹರಣೆ ಒಮ್ಮೊಮ್ಮೆ ಅರ್ಧಪುಟವನ್ನು ದಾಟಿ ಒಂದು ಪುಟವನ್ನು ಆವರಿಸಿಕೊಂಡಿರುವುದುಂಟು.

ಕ್ರಿ.ಶ.೪೫೦ರ ಹಲ್ಮಿಡಿಶಾಸನದಿಂದ ಪ್ರಾರಂಭವಾಗಿ ಈ ಸಂಪುಟ ಯೋಜನೆ ಅನುಷ್ಠಾನಗೊಂಡ ೧೯೯೫ರವರೆಗೆ ಕನ್ನಡದಲ್ಲಿ ಪ್ರಕಟವಾದ ಎಲ್ಲ ಬಗೆಯ ಸಾಹಿತ್ಯ ಪ್ರಕಾರಗಳಿಂದಲೂ ಉಲ್ಲೇಖಗಳನ್ನು ನೀಡಲಾಗಿರುವುದು, ಕೆಲವೊಮ್ಮೆ ಒಂದೇ ಶಬ್ದಕ್ಕೆ ಬೇರೆ ಬೇರೆ ಅರ್ಥಗಳು ಪ್ರಾಪ್ತವಾಗುವ ಸಂದರ್ಭಗಳನ್ನು ಜೊತೆಗಿರಿಸಿ ಕೊಟ್ಟಿರುವುದು, ಪ್ರತಿಯೊಂದು ಶಬ್ದವನ್ನೂ ನಾಮಪದ ಅಥವಾ ಕ್ರಿಯಾಪದವೆಂದು ಖಚಿತವಾಗಿ ವಿಂಗಡಿಸಿಕೊಂಡಿರುವುದು, ಅರ್ಥ ಸ್ಪಷ್ಟೀಕರಣಕ್ಕೆಂದು ಉದಾಹರಣೆಯಾಗಿ ಕೊಟ್ಟಿರುವ ವಾಕ್ಯ ಅಥವಾ ವಾಕ್ಯತುಂಡುಗಳೇ ಮೂಲಕಾವ್ಯವನ್ನು ಓದಬೇಕೆನ್ನುವ ಆಸಕ್ತಿಯನ್ನು ಹುಟ್ಟಿಸುವುದು – ಈ ಎಲ್ಲ ಅಂಶಗಳು ಇದರ ಅಪೂರ್ವತೆಯನ್ನು ಎತ್ತಿ ಹಿಡಿಯುವ ಸಾಕ್ಷಿಕಲ್ಲುಗಳಾಗಿವೆ. ನಿಘಂಟು ಎನ್ನುವುದೇ ತುಂಬ ವೈಜ್ಞಾನಿಕವಾದ, ಒಂದು ಭಾಷೆಯ ಸೃಜನ ಸಾಹಿತ್ಯದಷ್ಟೇ ಪ್ರಮುಖವಾದ, ಭಾಷೆಯಲ್ಲಿರುವ ಶಬ್ದಗಳನ್ನು ಶುದ್ಧವಾಗಿ ಉಚ್ಚರಿಸಬೇಕೆಂದು ತಿಳಿಸಿಕೊಡುವ ರಚನೆಯಾಗಿರುವುದರಿಂದ ಜ್ಞಾನೇಂದ್ರಿಯಗಳೆಲ್ಲದರ ಎಚ್ಚರದ ದುಡಿಮೆಯನ್ನು ಬಯಸುತ್ತದೆ. ಕನ್ನಡದ ಅಭಿಮಾನವನ್ನು ಮೈತುಂಬಿಕೊಂಡ ಘನ ವಿದ್ವಾಂಸರ ಸತತ ಪರಿಶ್ರಮದಿಂದ ಈ ಯೋಜನೆ ಶಿಸ್ತುಬದ್ಧವಾಗಿ ಯಶಕಂಡಿದೆ. ಮೊದಲ ಮುದ್ರಣದ ೧೦,೦೦೦ ಪ್ರತಿಗಳು ಕೆಲವೇ ವರ್ಷಗಳಲ್ಲಿ ಕನ್ನಡಿಗರ ಮನೆಯ ಕಪಾಟುಗಳನ್ನು, ಗ್ರಂಥಭಂಡಾರಗಳನ್ನು, ಶಾಲೆಕಾಲೇಜುಗಳನ್ನು ಅಲಂಕರಿಸಿದ್ದರಿಂದ ಕನ್ನಡ ಸಾಹಿತ್ಯ ಪರಿಷತ್ತು ಧನ್ಯತಾಭಾವವನ್ನು ತಳೆಯುವಂತಾಯಿತು. ಆದರೆ ನಿಘಂಟುವಿನ ಉಪಯುಕ್ತತೆಯನ್ನು ತಡವಾಗಿ ಅರ್ಥಮಾಡಿಕೊಂಡವರು ಅಂದಿನಿಂದ ಇಂದಿನವರೆಗೆ ಸಾಹಿತ್ಯ ಪರಿಷತ್ತಿಗೆ ದೂರವಾಣಿ ಕರೆ ಮಾಡಿ, ಮಾರಾಟ ವಿಭಾಗದಲ್ಲಿ ವಿಚಾರಿಸಿ, ಪುಸ್ತಕ ಮಳಿಗೆಗಳಲ್ಲಿ ಹುಡುಕಾಡಿ ಸಿಗದೆ ನಿರಾಶರಾಗಿದ್ದಾರೆ. ಮರುಪ್ರಕಟಿಸುವಂತೆ ಒತ್ತಾಯ ಮಾಡಿದ್ದಾರೆ.

ಎಂಟು ಸಂಪುಟಗಳಲ್ಲಿ, ಒಂಬತ್ತು ಸಾವಿರಕ್ಕಿಂತಲೂ ಅಧಿಕ ಪುಟಗಳ ವಿಸ್ತಾರದಲ್ಲಿ ಹರಡಿಕೊಂಡಿರುವ, ಎಲ್ಲರ ಮನೆಯನ್ನೂ ಬೆಳಗಬೇಕಾಗಿರುವ ಈ ನಿಘಂಟನ್ನು ಮುದ್ರಿಸುವುದಾಗಲೀ, ಮುದ್ರಿತ ಪ್ರತಿಗಳನ್ನು ಒಂದೆಡೆ ಜೋಡಿಸಿಡುವುದಾಗಲೀ, ಮಾರಾಟದ ವ್ಯವಸ್ಥೆ ಮಾಡುವುದಾಗಲೀ, ಹೆಚ್ಚಿನ ಪ್ರಮಾಣದಲ್ಲಿ ಒಂದು

ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವುದಾಗಲೀ ಅಷ್ಟೊಂದು ಸುಲಭವಾದ ಕೆಲಸವಲ್ಲ. ಈ ಅಸಾಧ್ಯವನ್ನು ಸಾಧ್ಯವಾಗಿಸುವ ಧೈರ್ಯೋತ್ಸಾಹಗಳು ಪರಿಷತ್ತಿನೊಡಲಲ್ಲಿ ಚಿಮ್ಮುವುದಕ್ಕೆ ಕರ್ನಾಟಕ ರಾಜ್ಯ ಸರ್ಕಾರ ಕಾರಣವಾಯಿತೆಂದರೆ ಅದನ್ನು ಯಾರೂ ಅತಿಶಯೋಕ್ತಿಯೆಂದು ಭಾವಿಸಬೇಕಾಗಿಲ್ಲ. ಕರ್ನಾಟಕ ರಾಜ್ಯ ಸರ್ಕಾರ ಕನ್ನಡ ಸಾಹಿತ್ಯ ಪರಿಷತ್ತಿನ ಮಾತುಗಳನ್ನು ಪ್ರೀತಿಯಿಂದ ಆಲಿಸುತ್ತಿರುವುದು, ಕನ್ನಡ ಸಾಹಿತ್ಯ ಪರಿಷತ್ತನ್ನು ಕನ್ನಡದ ಸಾರ್ವಭೌಮ ಪ್ರತಿನಿಧಿಯೆಂದೇ ಭಾವಿಸುತ್ತಿರುವುದು ಕನ್ನಡದ ಭಾಗ್ಯವೆಂದೇ ಹೇಳಬೇಕು. ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಹಲವು ಒತ್ತಡಗಳ ನಡುವೆಯೂ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳಲ್ಲಿ ಅತ್ಯಂತ ಪ್ರೀತಿಯಿಂದ ಭಾಗವಹಿಸುತ್ತಿರುವುದು, ಸಮಾರಂಭಗಳಲ್ಲಿ ಕೊಟ್ಟ ಆಶ್ವಾಸನೆಗಳನ್ನು ಅತಿಶೀಘ್ರವಾಗಿ ಅನುಷ್ಠಾನಗೊಳಿಸುತ್ತಿರುವುದು, ಪರಿಷತ್ತಿನ ಎಲ್ಲಾ ಯೋಜನೆಗಳಿಗೂ ಹಸಿರು ನಿಶಾನೆ ತೋರುತ್ತಿರುವುದು, ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳು ಮುಖ್ಯಮಂತ್ರಿ – ಕನ್ನಡ ಸಂಸ್ಕೃತಿ ಮಂತ್ರಿಗಳ ಕಚೇರಿಯ ಹೊರಗೆ ಕಡತಗಳೊಂದಿಗೆ ಗಂಟೆಗಟ್ಟಲೆ ಕಾಯುತ್ತಿದ್ದುದನ್ನು ತಪ್ಪಿಸಿರುವುದು, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಿಂದ ತಾಲ್ಲೂಕು ಸಮ್ಮೇಳನಗಳವರೆಗೆ ಎಲ್ಲವೂ ಅದ್ದೂರಿಯಾಗಿ ನಡೆಯಲು ಬೇಕಾದಷ್ಟು ಪ್ರಮಾಣದಲ್ಲಿ ಹಣ ಬಿಡುಗಡೆ ಮಾಡುತ್ತಿರುವುದು – ಇಂಥವನ್ನೆಲ್ಲಾ ಕಂಡಾಗ ಪರಿಷತ್ತಿನ ಅಧ್ಯಕ್ಷನಾಗಿ ನನಗೆ ಮನಸ್ಸು ತುಂಬಿ ಬರುತ್ತದೆ. ಆರುಕೋಟಿ ಕನ್ನಡಿಗರ ಪರವಾಗಿ ಅವರಿಗೆ ಕೃತಜ್ಞತಾ ಕುಸುಮಗಳನ್ನು ಅರ್ಪಿಸಬೇಕೆನ್ನಿಸುತ್ತದೆ. 'ಕನ್ನಡದ ಮುಖ್ಯಮಂತ್ರಿ' 'ಕನ್ನಡಿಗರ ಮುಖ್ಯಮಂತ್ರಿ' ಎಂದು ಅಭಿಮಾನದಿಂದ ನುಡಿಯಬೇಕೆನ್ನಿಸುತ್ತದೆ. ಸನ್ಮಾನ್ಯ ಮುಖ್ಯಮಂತ್ರಿಗಳ ಕನ್ನಡದ ಮೇಲಿನ, ಕನ್ನಡ ಸಾಹಿತ್ಯ ಪರಿಷತ್ತಿನ ಬಗೆಗಿನ ಈ ಅಖಂಡ ಪ್ರೀತಿ ಹೀಗೇ ಮುಂದುವರಿಯಲೆಂದು ಆಶಿಸುತ್ತೇನೆ.

ಕರ್ನಾಟಕ ಸರ್ಕಾರ ನಿಘಂಟು ಯೋಜನೆಯ ಮಹತ್ವವನ್ನು ಮನಗಂಡು ಒಂದು ಕೋಟಿ ರೂಪಾಯಿಗಳನ್ನು ಸಾಹಿತ್ಯ ಪರಿಷತ್ತಿಗೆ ಉದಾರವಾಗಿ ನೀಡಿದೆ. ಸರ್ಕಾರ ಹಣ ನೀಡಿರುವುದು ಪರಿಷತ್ತಿಗಾದರೂ ಇದು ಜನತೆಯ ಹಣ ಮತ್ತು ಇದರ ಅಂತಿಮ ಫಲಾನುಭವಿಗಳೂ ಜನತೆಯೇ. ಈ ಎಚ್ಚರವನ್ನಿರಿಸಿಕೊಂಡೇ ಸಾಹಿತ್ಯ ಪರಿಷತ್ತು ಬಹುಬೇಡಿಕೆಯ ಬೃಹನ್ನಿಘಂಟಿನ ಎಂಟು ಸಂಪುಟಗಳನ್ನು ಪುನರ್ಮುದ್ರಣಗೊಳಿಸುತ್ತಿದೆ. ಸರ್ಕಾರದ ಉದಾರ ಆರ್ಥಿಕ ನೆರವಿನ ಪರಿಣಾಮವಾಗಿ ನಿಘಂಟಿನ ಬೆಲೆಯನ್ನು ಸಾಮಾನ್ಯರೂ ಕೊಳ್ಳಲು ಮನಸ್ಸು ಮಾಡುವಂತೆ ಕಡಿಮೆಗೊಳಿಸಲಾಗಿದೆ. ಭಾಷೆ ಮತ್ತು ಸಾಹಿತ್ಯಾಭಿಮಾನದ ಸಂಕೇತವೆಂಬಂತೆ ಈ ಯೋಜನೆಯ ಯಶಸ್ಸಿನಲ್ಲಿ ಪ್ರಮುಖ ಪಾತ್ರ ನಿರ್ವಹಿಸಿರುವ ರಾಜ್ಯ ಸರ್ಕಾರವನ್ನು ಹಾಗೂ ಕನ್ನಡ ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಜಯರಾಮರಾಜೇ ಅರಸ್ ಮತ್ತು ನಿರ್ದೇಶಕರಾದ ಶ್ರೀ ಮನು ಬಳಿಗಾರ್ ಅವರುಗಳನ್ನು ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ. ನಿಘಂಟು ಯೋಜನೆ ಪ್ರಾರಂಭವಾದಾಗ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣರಿಂದ ಮೊದಲಗೊಂಡು ಮುಕ್ತಾಯವಾದಾಗ ಅಧ್ಯಕ್ಷರಾಗಿದ್ದ ಡಾ. ಸಾ.ಶಿ. ಮರುಳಯ್ಯನವರವರೆಗೆ ಇದನ್ನು ಆಸಕ್ತಿಯಿಂದ ಮುನ್ನಡೆಸಿಕೊಂಡು ಬಂದ ಎಲ್ಲ ಅಧ್ಯಕ್ಷರುಗಳಿಗೂ ನಿಘಂಟು ಸಮಿತಿಯ ಅಧ್ಯಕ್ಷರು, ಸದಸ್ಯರುಗಳು, ಸಂಪಾದಕರು, ಸಿಬ್ಬಂದಿ ವರ್ಗದವರಿಗೂ ಅಂದವಾಗಿ ಮುದ್ರಿಸಿಕೊಟ್ಟ ರಾಜಾ ಪ್ರಿಂಟರ್ಸ್‌ನವರಿಗೂ ಮತ್ತು ಅವರ ಸಿಬ್ಬಂದಿ ವರ್ಗದವರಿಗೂ ಕನ್ನಡ ಸಾಹಿತ್ಯ ಪರಿಷತ್ತು ತುಂಬಾ ಆಭಾರಿಯಾಗಿದೆ. ಮರುಮುದ್ರಣದ ಈ ನಿಘಂಟಿನ ಸಂಪುಟಗಳನ್ನು ಕನ್ನಡ ಜನತೆ ಪ್ರೀತಿ ವಿಶ್ವಾಸಗಳಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಬೆಂಗಳೂರು
೫-೬-೨೦೧೦

**ಡಾ. ನಲ್ಲೂರು ಪ್ರಸಾದ್ ಆರ್.ಕೆ.**
ಅಧ್ಯಕ್ಷರು

# ಅರಿಕೆ

ಕನ್ನಡ – ಕನ್ನಡ ನಿಘಂಟಿನ ನಾಲ್ಕನೆಯ ಸಂಪುಟವು ೧೯೭೯ರಲ್ಲಿ ಬಿಡುಗಡೆಯಾಯಿತು. ಐದನೆಯ ಸಂಪುಟದ ಮುದ್ರಣವು ಕೆಲವು ತಿಂಗಳ ಹಿಂದೆಯೇ ಪೂರೈಸುವ ಹಂತವನ್ನು ತಲಪಿದ್ದರೂ ಅದರ ಬಿಡುಗಡೆ ಅನಿವಾರ್ಯವಾಗಿ ತಡವಾಯಿತು. ಈಗ ಆರನೆಯ ಸಂಪುಟವೂ ಮುದ್ರಣಕ್ಕೆ ಸಿದ್ಧವಾಗಿದೆ. ಇಷ್ಟರಲ್ಲಿಯೇ ಅದರ ಮುದ್ರಣವೂ ಪ್ರಾರಂಭವಾಗಿ ಐದಾರು ತಿಂಗಳುಗಳಲ್ಲಿ ಅದೂ ಬಿಡುಗಡೆಯಾಗುವ ನಿರೀಕ್ಷೆಯಿದೆ. ಏಳನೆಯ ಸಂಪುಟದ ಉಳಿದಿರುವ ಸ್ವಲ್ಪ ಭಾಗವೂ ಸಿದ್ಧವಾಗುತ್ತಿದೆ. ಸರಕಾರದ ಧನ ಸಹಾಯದಿಂದ ಏರ್ಪಾಟಾದ ನಿಘಂಟಿನ ಯೋಜನೆ ಪೂರೈಸಿ ಸಂಪೂರ್ಣ ನಿಘಂಟಿನ ಪ್ರಕಟನೆಯ ಮಹಾಕಾರ್ಯಕ್ಕೆ ಮಂಗಳವನ್ನು ಮಾಡುವ ಸಂತೋಷ ಕನ್ನಡ ಜನರಿಗೆ ಬೇಗ ಲಭಿಸಲಿ. ನಿಘಂಟಿನ ಕಾರ್ಯಕ್ಕೆ ತೊಂದರೆ ಬಾರದಂತೆ ಸಕಲ ಪ್ರಯತ್ನಗಳನ್ನು ಮಾಡಲಾಗುತ್ತಿದೆ.

ಈ ಕನ್ನಡದ ಕೆಲಸಕ್ಕೆ ಈ ವಯಸ್ಸಿನಲ್ಲಿಯೂ ದುಡಿದು ಈ ಕೆಲಸವನ್ನು ಆಗಮಾಡಿರುವ ಕೋಶಸಮಿತಿಯ ಅಧ್ಯಕ್ಷರೂ ಪ್ರಧಾನ ಸಂಪಾದಕರೂ ಆದ ಪ್ರೊ. ಜಿ. ವೆಂಕಟಸುಬ್ಬಯ್ಯನವರಿಗೂ ಅವರಿಗೆ ಬೆಂಬಲವಾಗಿ ನಿಂತ ಸಂಪಾದಕ ಸಮಿತಿಯ ಸದಸ್ಯರಿಗೂ ನಿಘಂಟು ಕಛೇರಿಯ ಸಿಬ್ಬಂದಿಯವರಿಗೂ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಕನ್ನಡದ ಜನ ಈ ಸಂಪುಟದ ಪ್ರಯೋಜನವನ್ನು ಬೇಗ ಪಡೆಯುವಂತಾಗಲಿ.

ಬೆಂಗಳೂರು
೧೫–೧೨–೧೯೮೭

**ಅ.ರಾ. ಚಂದ್ರಹಾಸಗುಪ್ತ**
ಆಡಳಿತಾಧಿಕಾರಿ
ಕನ್ನಡ ಸಾಹಿತ್ಯ ಪರಿಷತ್ತು

# ಸಂಪಾದಕರ ಮಾತು

ಐದನೆಯ ಸಂಪುಟವು ಸಿದ್ಧವಾಗಿ ಕೊನೆಯ ಪಕ್ಷ ಐದು ವರ್ಷಗಳಾದುವು. ಆರನೆಯ ಸಂಪುಟವು ಸಿದ್ಧವಾಗಿ ನಾಲ್ಕು ವರ್ಷಗಳಾದುವು. ಆದರೆ ಅನಿರೀಕ್ಷಿತ ಕಾರಣಗಳಿಂದ ಅವುಗಳ ಮುದ್ರಣಕ್ಕೆ ತಡೆಯುಂಟಾಗಿ ಕನ್ನಡದ ಈ ಕೆಲಸಕ್ಕೆ ಅಡ್ಡಿ ಬಂದಿತು. ಈಗಲಾದರೂ ಐದನೆಯ ಸಂಪುಟದ ಬಿಡುಗಡೆಯಾಗಿ ಆರನೆಯ ಸಂಪುಟದ ಮುದ್ರಣ ಪ್ರಾರಂಭವಾಗಿರುವುದು ಸಮಾಧಾನ ತರುವ ವಿಷಯವಾಗಿದೆ. ಇಷ್ಟು ಬೇಗ ಈ ಕಾರ್ಯ ಸಾಧ್ಯವಾದುದು ಇಂದು ಪರಿಷತ್ತಿನ ಆಡಳಿತಾಧಿಕಾರಿಗಳಾಗಿರುವ ಶ್ರೀ ಅ. ರಾ. ಚಂದ್ರಹಾಸ ಗುಪ್ತ ಅವರ ದಕ್ಷ ನಿರ್ವಹಣೆಯಿಂದ. ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಕೋಶ ಸಮಿತಿಯ ಉಪಾಧ್ಯಕ್ಷರಾಗಿದ್ದ ಪ್ರೊ. ಎಸ್. ಎಸ್. ಮಾಳವಾಡರು ಈಚೆಗೆ ನಿಧನ ಹೊಂದಿದುದರಿಂದ ನಾವೆಲ್ಲ ಅವರ ಅಪಾರ ವಿದ್ವತ್ತಿನ ಸಹಾಯವನ್ನು ಕಳೆದುಕೊಂಡಂತಾಗಿದೆ. ನಿಘಂಟಿನ ಕಾರ್ಯದ ಬಗ್ಗೆಯೂ ಕೆಲವು ಶಬ್ದಗಳ ಸ್ವರೂಪದ ವಿವರಣೆಯ ಬಗ್ಗೆಯೂ ನಾನು ಸಲಹೆ ಕೇಳಿದಾಗ ಅವರು ನೀಡುತ್ತಿದ್ದ ಮಾರ್ಗದರ್ಶನವನ್ನು ನಾನು ಎಂದೂ ಮರೆಯಲಾರೆ, ನನ್ನ ಕೃತಜ್ಞತೆಯನ್ನು ನಾನಿಲ್ಲಿ ದಾಖಲಿಸುತ್ತಿದ್ದೇನೆ.

ಕರ್ನಾಟಕ ಸರಕಾರವು ನೀಡುತ್ತಿರುವ ಧನಸಹಾಯವಿಲ್ಲದಿದ್ದರೆ ಈ ಕಾರ್ಯ ಎಂದೋ ನಿಂತು ಹೋಗುತ್ತಿತ್ತು. ಸರಕಾರದ ಅಪಾರ ಧನ ಸಹಾಯಕ್ಕಾಗಿ ನಾವೆಲ್ಲ ಅವರಿಗೆ ಕೃತಜ್ಞರಾಗಿರಬೇಕು. ಕೋಶ ಸಮಿತಿಯ ಸದಸ್ಯರು ನೀಡಿದ ಸಹಕಾರ ಸಹಾಯಗಳಿಗೆ ನಾನು ನನ್ನ ವಂದನೆಗಳನ್ನು ಅರ್ಪಿಸುತ್ತೇನೆ.

ಶ್ರೀ ಭಗವಾನ್ ಇಂಡಸ್ಟ್ರೀಸ್‌ನವರು ಈ ಸಂಪುಟದ ಮುದ್ರಣವನ್ನು ಆಸಕ್ತಿಯಿಂದ ಪೂರೈಸಿಕೊಟ್ಟಿದ್ದಾರೆ. ಅದರ ಮಾಲೀಕರಾದ ಶ್ರೀ ಎಂ. ಜಿ. ಸತ್ಯನಾರಾಯಣ ಶೆಟ್ಟಿಯವರಿಗೆ ನಮ್ಮ ವಂದನೆಗಳು.

ಏಳನೆಯ ಸಂಪುಟದಲ್ಲಿ ಮ, ವ, ಸ, ಹ – ಇಷ್ಟು ಅಕ್ಷರಗಳಿಗೆ ಸಂಬಂಧಪಟ್ಟುದನ್ನು ಬಿಟ್ಟರೆ ಮಿಕ್ಕ ಅಕ್ಷರಗಳಿಗೆ ಸೇರಿದ ನಿಘಂಟಿನ ಮುದ್ರಣಪ್ರತಿ ಸಿದ್ಧವಾಗಿದೆ. ಈ ನಾಲ್ಕು ಅಕ್ಷರಗಳ ಸಭಾಪ್ರತಿಯೂ ಸಿದ್ಧವಾಗಿದೆ. ಮಿಕ್ಕಿರುವ ಪರಿಶೀಲನೆಯ ಕೆಲಸ ಪೂರೈಸಿ ಈ ಯೋಜನೆ ಯಶಸ್ವಿಯಾಗಿ ಮುಗಿಯಲಿ ಎಂದು ನಾನು ಹಾರೈಸುತ್ತೇನೆ.

ಐದನೆಯ ಸಂಪುಟದ ಕರಡನ್ನು ತಿದ್ದುವ ಕಾರ್ಯವನ್ನು ನಿಘಂಟಿನ ಸಂಪಾದಕ ವರ್ಗದವರು ನಿರ್ವಹಿಸಿದ್ದಾರೆ. ಅವರಿಗೂ ಕಚೇರಿಯ ಮಿಕ್ಕೆಲ್ಲ ಸಿಬ್ಬಂದಿವರ್ಗದವರಿಗೂ ಅವರ ಸೇವೆಗೆ ನಾವು ಕೃತಜ್ಞರಾಗಿರಬೇಕು.

**ಜಿ. ವೆಂಕಟಸುಬ್ಬಯ್ಯ**
ಪ್ರಧಾನ ಸಂಪಾದಕ

ಬೆಂಗಳೂರು
ತಾ॥ ೧೫–೧೨–೧೯೮೭

**ನಾಭಿಕಮಲ** (ನಾ). (ಪುರಾಣಗಳಲ್ಲಿ ಹೇಳಿರುವಂತೆ) ವಿಷ್ಣುವಿನ ಹೊಕ್ಕುಳಿನಲ್ಲಿರುವ ತಾವರೆ: ಶ್ರೀಪತಿಯ ನಾಭಿಕಮಲದಿ ಅಜ ಜನಿಸಿದನು (ಪುರಂದ. ೧-೩-೧). [ನಾಭಿ + ಕಮಲ]

**ನಾಭಿಕೂಪ** (ನಾ). ಹೊಕ್ಕಳುಗುಂಡಿ : ಆಹವಮುಹಾಹುಂಕಾರ ಕಾಲಕೂಟವಿಟಪಿಪ್ರರೋಹಶಂಕಾವಹ ನಾಭಿಕೂಪಾವಲಂಬಿ ಕೂರ್ಚ ಕಲಾಪಂ . . . ಲಾಟಬಲಂ (ಆದಿಪು. ೧೩-೪೫). [ನಾಭಿ + ಕೂಪ$_2$]

**ನಾಭಿಖಂಡನ** (ನಾ). = ನಾಭಿನಿಕರ್ತನ : ಮೊದಲಿಗನವನೀಶ್ವರರೊಳ್ ಮಹಿಮಾಸ್ಪದನಾದಂ ನಾಭಿ ನಾಭಿಖಂಡನಕುಶಲಂ (ಪಂರಾಮಾ. ೧-೯೨). [ನಾಭಿ + ಖಂಡನ]

**ನಾಭಿಗೋಲ್** (ನಾ). ಒಂದು ಅಳತೆಯ ಕೋಲು ; ಎರಡು ಮೊಳದ ಅಳತೆಯ ಕಡ್ಡಿ : "ಎರಡು ಮೊಜಿನಾಗಲಾ ನಾಭಿಗೋಲೆಂದೆನಿಕ್ಕುಂ" (ಮಂಗರಾ. ೯೬-೧೧). [ನಾಭಿ + ಕೋಲ್$_1$]

**ನಾಭಿಜ** (ನಾ). (ವಿಷ್ಣುವಿನ) ನಾಭಿಕಮಲದಿಂದ ಹುಟ್ಟಿದವನು ; ಬ್ರಹ್ಮ. [ಸಂ.]

**ನಾಭಿತಾನ** (ನಾ). [ಸಂಗೀತ] ಏಳಕ್ಕಿಂತ ಕಡಿಮೆಯಿರುವ ಒಂದು ಸ್ವರಶ್ರೇಣಿ ; ℙ ನಾಭಿಯಿಂದ ಹುಟ್ಟುವ ಅತಿಮಂದ್ರವೂ ಗಂಭೀರವೂ ಗಭೀರವೂ ಗುಂಭವೂ ಆಗಿರುವ ಸ್ವರಗಳಿಂದ ಆದ ತಾನ : ಒಂದು ದಿನ ಅವರು ತಮ್ಮ ನಾಭಿತಾನಸಾಧಕವನ್ನು ಮಾಡಲಾರಂಭಿಸಿದರು (ಸಂಗೀತ. ೩೫). [ನಾಭಿ + ತಾನ$_2$]

**ನಾಭಿದಘ್ನ** (ಗು). ೧. ಪಾದದಿಂದ ಹಿಡಿದು ಹೊಕ್ಕುಳು ಮುಳುಗುವಷ್ಟು ಆಳನಾದ (ನೀರಿನ) ಮಟ್ಟವುಳ್ಳ : ಪೆಣ್ಬಡೆ ನಿಂದುದು ಪೊಕ್ಕು ಜಾನುದಘ್ನೋರುದಘ್ನ ಕಟಿದಘ್ನ ನಾಭಿದಘ್ನ ಸ್ಥಳದೊಳ್ (ಜಗವಿ. ೧೪-೯೫). (ನಾ). ೨. ಹೊಕ್ಕುಳು ಮುಳುಗುವಷ್ಟು (ನೀರಿನ) ಆಳ, —ಮಟ್ಟ : ಮನಃಪ್ರಿಯಂ ಸವತಿಯ ಮೆಯ್ಯೊಳೊತ್ತೆ ಚಂದನಾಂಬುವಂ ಕುಪಿತೆಗೆ ನಾಭಿದಘ್ನಮಾಯ್ತು ನಿತ್ತೆ ಮತ್ತವಳ ವಿಲೋಚನಾಂಬುವಿಂ ಸ್ತನದ್ವಯಂ ಸಮಸಮಮಾಯ್ತು ಪೂಗೊಳಂ (ಲೀಲಾವ. ೧೩-೧೫೨); ಸಂತಾಪಮುಂ ಮೆಯ್ವೆಚ್ಚಲ್ ತಟ್ಟಾಜುತಿರ್ದತ್ತೆನೆ ಪ್ರಥುಳಸರಸ್ಸಂಕುಳಂ ಕಂಠದಘ್ನಂ ಬಿಚ್ಚಿತ್ತಾ ನಾಭಿದಘ್ನಂ ತಡೆಯದೆ ಕಟಿದಘ್ನಂ ಕರಂ ಜಾನುದಘ್ನಂ (ಬಾಧವು. ೧೪-೨೯); ಊಹಿಸದೆ ನಾ ಸ್ಫಟಿಕವೆಂದುತ್ಸಾಹಿಸಲು ನೀರಾಯ್ತು ನನೆದೆನು ನಾಭಿದಘ್ನದಲಿ (ಕುವ್ಯಾಸ. ೧೨-೩೮). [ಸಂ.]

**ನಾಭಿನಗ** (ನಾ). ೧. [ಜೈನ] ಜಂಬೂದ್ವೀಪದ ಮಧ್ಯದಲ್ಲಿರುವ ಪರ್ವತ; ಮೇರು. ೨. ಜಂಬೂದ್ವೀಪದ ನಾಲ್ಕು ಕ್ಷೇತ್ರಗಳ ಮಧ್ಯದಲ್ಲಿರುವ ನಾಲ್ಕು ಪರ್ವತಗಳು : ನಾಲ್ಕು ನಾಭಿನಗಂಗಳಿಂದಂ . . . ಚತುರ್ದಶ ಮಹಾವಾಹಿನಿಗಳಿಂದಮೆಸೆದು (ಆದಿಪು. ೧-೪೮ ವ). [ನಾಭಿ + ನಗ$_4$]

**ನಾಭಿನಾಲ**, ನಾಭಿನಾಳ (ನಾ). ಹೊಕ್ಕುಳಿನ ಬಳ್ಳಿ. **ನಾಭಿನಾಳ :** ನಾಭಿನಾಮುಮುಮಾಯ್ತು ಭೂರ್ಕನಿಕರನಾಭಿನಾಳಪ್ರಕರನಿಕರ್ತನಮುನಜಿಯೆ ಪೇಟ್ದುದಜಿಂದಂ (ಆದಿಪು. ೬-೬೭) ; ಮಗುವು ಬಲವಾಗಿದ್ದರೆ . . . ನಾಭಿನಾಳಕ್ಕೆ ನೀರು ಸೋಂಕದ ಹಾಗೆ ಸ್ನಾನಮಾಡಿಸಿ . . . ಮಲಗಿಸಿದರೆ ೫-೬ ಗಂಟೆ ಅದು ಸುಖವಾಗಿ ನಿದ್ದೆಮಾಡುತ್ತದೆ (ಗೃಹವಿ. ೧೦೪). [ನಾಭಿ + ನಾಲ$_1$]

**ನಾಭಿನಾಳ** 'ನಾಭಿನಾಲ' ನೋ.

**ನಾಭಿನಿಕರ್ತನ** (ನಾ). ತಾಯಿಗೂ ಮಗುವಿಗೂ ಸಂಪರ್ಕವನ್ನುಂಟುಮಾಡಿದ್ದ ಹೊಕ್ಕುಳುಕುಡಿಯನ್ನು ಜನನಕಾಲದಲ್ಲಿ ಕತ್ತರಿಸುವುದು : ಆತನ ಕಾಲದೊಳು ಶಿಶುಗಳ್ಗೆ ನಾಭಿನಿಕರ್ತನ ಮಾದೊಡೆ (ಚಾವುಂಪು. ೧೧). ℙ ಹದಿನಾಲ್ಕನೆಯ ಮನುವಾದ ನಾಭಿರಾಜನು ಮಕ್ಕಳ ಜನನಕಾಲದಲ್ಲಿ ನಾಭಿನಿಕರ್ತನ ವಿಧಾನವನ್ನು ತಿಳಿಯಪಡಿಸಿದುದರಿಂದ ಅವನಿಗೆ 'ನಾಭಿ' ಎಂಬ ಹೆಸರಾಯಿತೆಂದು ಪೂರ್ವಪುರಾಣದಲ್ಲಿ ಹೇಳಿದೆ. [ನಾಭಿ + ನಿಕರ್ತನ]

*1

**ನಾಭಿಮಂಡಲ** (ನಾ). ವರ್ತುಲಾಕಾರವಾದ ಹೊಕ್ಕುಳು : ಮುನಿಕುಮಾರನ ಸುರುಚಿರಗಂಭೀರನಾಭಿಮಂಡಲಮೆಸೆಗುಂ (ಕಾದಂಪೂ. ೭೩೭). [ನಾಭಿ + ಮಂಡಲ]

**ನಾಭಿಮೂಲ**, ನಾಭಿಮೂಳ (ನಾ). ೧. ಹೊಕ್ಕುಳಿನ ಕೆಳಭಾಗ, —ಬುಡ : ಅನುಕೂಲಪವನನಿಂ ಜೀವನಿಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂಗಿನವೋಲ್ ಶಬ್ದದ್ರವ್ಯಂ ಜನಿಯಿಸುಗುಂ (ಶಮದ. ೨). **ನಾಭಿಮೂಳ :** ೨. ಹೊಕ್ಕುಳಿನ ಕುಳಿ, —ಹಳ್ಳ : ಎವೆಯಿಕ್ಕದೆ ನೋಡುವ ನರರಮರರ ಕಣ್ಗಳೊಳನಂಗರಾಜನ ಬಯ್ತಿಟ್ಟಮುದ್ರಂ ಕೊಳೆತಳಿದುದು ನಾಭಿಮೂಳ [ಪಾಠಾಂ.ಲ]ಮುಂ ಬಾಹುಮೂಳಮುಂ ಸುರವಧುವಾ (ಆದಿಪು. ೯-೩೫). [ನಾಭಿ + ಮೂಲ]

**ನಾಭಿಮೂಳ** 'ನಾಭಿಮೂಲ' ನೋ.

**ನಾಭಿರಾಜ** (ನಾ). ಆದಿತೀರ್ಥಂಕರನ ತಂದೆ : ಆತನ ಮಗಂ ನಾಭಿರಾಜನೆಂಬೊಂ ಪದಿನಾಲ್ಕನೆಯ ಕುಳಧರಂ ಪಂಚವಿಂಶತ್ಯುತ್ತರ ಪಂಚಶತಚಾಪೋತ್ಸೇಧನುಂ (ಚಾವುಂಪು. ೧೧) ; ನಾಭಿರಾಜಂ ಧರಣೀಯುವತಿಗೆ ಮರುದೇವಿಯೆ ದಲ್ ಸವತಿಯೆನಲ್ ಸುಖದಿನರಸುಗೆಯ್ಯುತ್ತಿರ್ದಂ (ಪಂರಾಮಾ. ೧-೯೮) ; ನಾಭಿರಾಜ ಮರುತಾದೇವಿಗೆ ಹುಟ್ಟಿದಾತನರುಹ (ಬಸಪು. ೫೪೬) ; ಮನುವಂಶಾಗ್ರಣಿ ನಾಭಿರಾಜನೊಗೆದಂ ಸಂತಪ್ತಸೌಂದರ್ಯಕಾಂಚನವರ್ಣಂ (ಪುಣ್ಯಾಸ್ರ. ೧೦-೧೪). [ಸಂ.]

**ನಾಭಿಶೂಲೆ** (ನಾ). ಹೊಕ್ಕುಳು ನೋವು : ಹಿಂಗು, ಶುಂಠಿ, ಸೈಂಧವಲವಣ ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಬಿಸಿನೀರಿನಲ್ಲಿ ಕುಡಿಯೆ, ನಾಭಿಶೂಲೆ, ಹೊಟ್ಟೆಬೇನೆ, ಅತಿಸಾರ ಮಾಣ್ಗುಂ (ವಿವೈವಿ. ೧೨೩) ; ಜೀರಕಾದಿ ಚೂರ್ಣ . . . ತೆಗೆದುಕೊಳ್ಳಲು ಸಕಲಾಜೀರ್ಣ . . . ನಾಭಿಶೂಲೆ . . . ಸರ್ವರೋಗವೂ ಹರ (ಸಕವೈ. ೩೬೮). [ನಾಭಿ + ಶೂಲೆ$_1$]

**ನಾಭಿಸರೋಜ** (ನಾ). = ನಾಭಿಕಮಲ : ಅವನ ನಾಭಿಸರೋಜದೊಳ್ ವಚಶ್ರೀವರನುತ್ಸವಂಬೆರಸು ಪುಟ್ಟಿದಂ (ಪಂಚತಂ. ೧-೨). [ನಾಭಿ + ಸರೋಜ]

**ನಾಭಿಸೂತ್ರ** (ನಾ). = ನಾಭಿನಾಲ : ತಾಯಿವುಂಡನ್ನರಸ ನಾಭಿಸೂತ್ರದಿಗೊಂಬುತಿಹುದು (ನವಮೋ. ೧೪-೫೧). [ನಾಭಿ + ಸೂತ್ರ]

**ನಾಭಿಸ್ಥಾನ** (ನಾ). ಮಧ್ಯಪ್ರದೇಶ : ಶ್ರೀನಿಳಯಮಿದುವೆ ನಾಭಿಸ್ಥಾನಮೆನಲ್ ನೆಜೆದಯೋಧ್ಯೆಗವತರಿಸಲ್ ತ್ರಿಜ್ಞಾನಧರಂ ಬಗೆದಂ (ಆದಿಪು. ೭-೧). [ನಾಭಿ + ಸ್ಥಾನ]

**ನಾಭೀಕೂಪ** (ನಾ). = ನಾಭಿಕೂಪ : ಲಾವಣ್ಯಾಂಬುರಸದ್ರವರೂಪಂ ಭಾವಿಪೊಡಾಕೆಯ ನಾಭೀಕೂಪಂ (ಸುಕುಮಾ. ೫-೫೧ ರಗಳೆ). [ಸಂ.]

**ನಾಭೀನಳಿನ** (ನಾ). = ನಾಭಿಕಮಲ : ಬಳಿಕ ಕಾರುಣ್ಯದಲಿ ನಾಭೀನಳಿನದಲಿ ತೆಗೆದನು ವಿರಿಂಚಿಗೆ ನಳಿನಸಂಭವನೆಂಬ ಹೆಸರಾಯ್ತೆಂದು ಮೊದಲಾಗಿ (ಕುವ್ಯಾಅ. ೧೪-೩೦). [ಸಂ. ನಾಭೀನಲಿನ]

**ನಾಭೀಯ** (ನಾ). ೧. ಬ್ರಹ್ಮ : ನಾಭೀಯಂ ಸುರಾಮಾತ್ಯನಿಂದ್ರ ನದೀನಂದನನುದ್ಧವಂ . . . ನೀತಿಜ್ಯೋತಿನಿರ್ಣೀತಿಯಂ ಮನದೊಳ್ ಮಾಟ್ಕೆ (ಪಂಚತಂ. ೩-೧). ೨. ಆದಿತೀರ್ಥಂಕರ. [ಸಂ.]

**ನಾಮ** (ನಾ). ೧. ಒಂದು ಪದಾರ್ಥವನ್ನು ಬೇರೆ ಪದಾರ್ಥಗಳಿಂದ, ಒಬ್ಬ ವ್ಯಕ್ತಿಯನ್ನು ಬೇರೆ ವ್ಯಕ್ತಿಗಳಿಂದ ಪ್ರತ್ಯೇಕವಾಗಿ ಗೊತ್ತುಪಡಿಸಿಕೊಳ್ಳಲು ಇಟ್ಟಿರುವ ಸಂಕೇತಪದ ; ಹೆಸರು ; ಅಭಿಧಾನ :"ಆಖ್ಯಾಹ್ವ ನಾಮ ಗೋತ್ರಾಭಿಖ್ಯಾಹ್ವಯ ಸಂಜ್ಞೆಗಳ್ ಸಮಾನಾರ್ಥಂಗಳ್" (ವಸ್ತುಕೋ. ೮೧-೩೬) ; ನಿಮ್ಮ ನಾಮವೆನಗೆ ಮಂತ್ರ . . . ನಿಮ್ಮ ನಾಮ ಕಾಮಧೇನುವೆನಗೆ (ಬಸವ.೭೬) ; ತೊಡೆವೆಂ ಶಕ್ರನ ನಾಮಮಂ ತುಡುಕಿ ನೀರೊಳ್ ಮೆಟ್ಟುವೆಂ ವಹ್ನಿಯಂ (ಜಗವಿ. ೩-೨೧) ; ಎಲೆಯುಪ್ಪರೇ ನಿಮ್ಮ ನಾಮಮಂ ಪೇಳಿಯೆನೆ (ನಂಬಿರ. ೭-೪೫); ನಾರಾಯಣ ನಿನ್ನ ನಾಮದ ಸ್ಮರಣೆಯ ಸಾರಾಮೃತವೆನ್ನ ಬಾಯಿಗೆ ಬರಲಿ (ಪುರಂದ.೨-೧೪೮ ಪಲ್ಲವಿ); ಭರತಂಗೆ ಛಾಯಾಶರೀರವೆನೆ ಶತ್ರುಘ್ನನಿರ್ದನು ತನ್ನ ನಾಮಲಕ್ಷ್ಮಕೆ ಲಕ್ಷಣಂ ತಾನೆನಲ್ (ಶ್ರೀರಾಮಾ. ೨೬-೬೯) ; ಲೋಕದಲ್ಲಿ ಸಕಲ ವಸ್ತುಗಳಲ್ಲೂ ಅಸ್ತಿತ್ವ, ಪ್ರಕಾಶ, ಇಷ್ಟತ್ವ, ನಾಮ, ರೂಪ—ಈ ಐದು ಅಂಶಗಳು ವ್ಯವಹರಿಸಲ್ಪಡುವುವು (ಹಿಂದಸಾ. ೨೨೫). ೨. ಗಂಧ, ಗೋಪೀಚಂದನ ಮೊದಲಾದುವುಗಳಿಂದ ಹಣೆ ಮೊದಲಾದ ಕಡೆಗಳಲ್ಲಿ ಧರಿಸುವ ಲಾಂಛನ,—ಗುರುತು : ಮುಖವ ತೊಳೆದು ನಾಮವನಿಟ್ಟುದಲ್ಲದೆ ಪ್ರಕಟಶಾಸ್ತ್ರವ ನಾನು ನೋಡಿದೆನೆ (ಪುರಂದ. ೧-೨೩೧-೧) ; ನೇಮವಿದ್ದವನಿಗೆ ಕಾಮವು ಕಡಿಮೆಯೆ ನಾಮವಿದ್ದವರೆಲ್ಲ ಮಡಿಯೆ (ಇಂಚಾಪ. ೯೫-೬೧) ; ತಲೆಯ ಮೇಲೆ ಜುಟ್ಟು ಹಣೆಯ ಮೇಲೆ ನಾಮ, ಇವನ್ನಿಟ್ಟುಕೊಂಡೇ ಅಪೂರ್ವ . . . ಎಂ. ಎಸ್ಸಿ. ಪಾಸು ಮಾಡಿದ (ಭಾರತಿ. ೧) ; ಈ ಗುಣಗಳನ್ನು ಅಳವಡಿಸಿಕೊಳ್ಳುವುದೇ ನಿಜವಾದ ಧರ್ಮ, ಇದಿಲ್ಲದೆ ನಾಮ, ಮುದ್ರೆ, ಲಿಂಗ, ಜನಿವಾರ, ಗಡ್ಡಗಳೆಲ್ಲವೂ ಡಂಭಾಚಾರ (ಯಕ್ಷಪ್ರ. ೧೭೨). ೩. ಪುಂಡ್ರಧಾರಣೆಗೆ ಉಪಯೋಗಿಸುವ ಗೋಪೀಚಂದನ ; ತಿರುಮಣ್ಣು : ಇಪ್ಪತ್ತೈದು ಪೈಸೆಗೆ ನಾಮ ಕೊಡಿ (ರೂಢಿ). ೪. =ನಾಮಕಲ್ಪನೆ : ವಿಕಲ್ಪಗಳು ಐದು—ಜಾತಿ, ಗುಣ, ಕ್ರಿಯೆ, ನಾಮ ಮತ್ತು ದ್ರವ್ಯ ಎಂದು (ಭಾತತ್ತ್ವ. ೨೨೫). ೫. [ವ್ಯಾಕ] ಒಂದು ಪದಾರ್ಥವನ್ನು ತಿಳಿಸುವ ಪದ; ಕ್ರಿಯಾಪದ ಮತ್ತು ಅವ್ಯಯಗಳನ್ನು ಬಿಟ್ಟು ಉಳಿದ ಪದ : ತರದಿಂದಂ ಸಂಧಿನಾಮಸ್ಥಿತಿವಿತತಸಮಾಸಕ್ರಮಂ (ಕಾವ್ಯಾವ. ೫) ; ಕ್ರಮದಿಂದೆ ಸಂಧಿನಾಮಂ ಸಮಾಸಮಾ ತದ್ಧಿತಂ . . . ಸಂಧಿ ಶಬ್ದಮಣಿದರ್ಪಣದೊಳ್ (ಶಮದ. ೧). ೬. ನಾಲ್ಕು ಬಗೆಯ ಲಿಂಗಗಳಲ್ಲಿ ಒಂದು; ಅಸಾಧಿತವಾದ ನಾಮಪದ; ಮೂಲನಾಮಪದ : ಕ್ರಿಯೆಯಂ ನುಡಿಯದದು ವಿಭಕ್ತಿಯನಿಲ್ಲದುದರ್ಥಮುಳ್ಳುವಂತದು ಲಿಂಗಂ ನಿಯತ ಚತುರ್ಭೇದಮುದಾರಯೆ ಕೃತ್ತದ್ಧಿತಸಮಾಸನಾಮಸ್ಥಿತಿಯಿಂ (ಶಮದ.೭೨). ೭.(ಆಲಂ) ಮೋಸ; ವಂಚನೆ: 'ಪಂಗನಾಮ' ಪರಾ.

**ನಾಮದ ಉಂಡೆ**=ನಾಮದ ಗೆಡ್ಡೆ : ನಾಮದ ಉಂಡೆ ತೀರಿದೆ, ತರಿಸು (ರೂಢಿ). **ನಾಮದ ಕೋಳಿ** = ಹಣೆಯ ಮೇಲೆ ನಾಮದಂತೆ ಪಟ್ಟಿಗಳುಳ್ಳ, ಕೋಳಿಯ ಜಾತಿಗೆ ಸೇರಿದ, ಒಂದು ಬಗೆಯ ಪಕ್ಷಿ : ಕೊಕ್ಕರೆ, ನಾಮದ ಕೋಳಿ . . . ಬೇರೆ ಬೇರೆ ಗಾತ್ರದ ೧೧ ಕುಟುಂಬಗಳುಳ್ಳ ಉಪವರ್ಗವಿದು (ಪಕ್ಷಿ. ೧೩೫). **ನಾಮದ ಗೆಡ್ಡೆ**=ನಾಮ ಹಾಕಿಕೊಳ್ಳಲು ಬಳಸುವ ಬಿಳಿಯ ಮಣ್ಣಿನ ಉಂಡೆ : ಜೋಡಿದಾರರು, ಓಲೆಗರಿ ಪುಸ್ತಕಗಳೂ ತಿರುಪಕೂಡೆಗಳೂ ನಾಮದ ಗೆಡ್ಡೆಗಳೂ ತುಂಬಿದ್ದ ಒಂದು ಕೊಠಡಿಯನ್ನು ಧೂಳು ಹೊಡೆಸಿ ಅವರಿಗಾಗಿ ಸಿದ್ಧಮಾಡಿದ್ದರು (ಬೈಸರ್ವೆ. ೨೦). **ನಾಮ ಹಾಕು**=೧. ಹಣೆ ಮೊದಲಾದ ಸ್ಥಾನಗಳಲ್ಲಿ ನಾಮವನ್ನು ಧರಿಸು. ೨. ಮೋಸ ಮಾಡು : ಎರಡು ವರ್ಷಗಳಿಂದ ನನ್ನ ಅಂಗಡಿಯಲ್ಲಿ ಉದ್ದರಿ ತೆಗೆದುಕೊಂಡು ಕೊನೆಗೆ ಆತ ನನಗೆ ನಾಮ ಹಾಕಿ ಓಡಿಹೋದ (ರೂಢಿ). [ಸಂ. ನಾಮನ್]

**ನಾಮಂಜೂರ್** (ನಾ). ಅಸ್ವೀಕೃತವಾದುದು ; ನಿರಾಕರಿಸಿದುದು: ರಜೆ ನಾಮಂಜೂರ್ ಆಯಿತು (ಜೀದಾನ. ೯೧) ; ಆ ಸಾಹೇಬನು . . . ರಜೆ ನಾಮಂಜೂರ್ ಮಾಡಿದನು (ಇಪ್ಪಕ. ೬೩).

[←ಪಾರ. ನಾಮಂಜೂರ್]

**ನಾಮಂಜೂರಿ** (ನಾ). ಅಸ್ವೀಕಾರ ; ನಿರಾಕರಣೆ : ರಜೆಯು ನಾಮಂಜೂರಿಯಾಗುವ ಬಗ್ಗೆ ನನಗೆ ಅಂಜಿಕೆಯೂ ಇರಲಿಲ್ಲ (ಹೇಮಂತ. ೨೭೬). [←ಹಿಂ. ನಾಮಂಜೂರೀ]

**ನಾಮಕರಣ** (ನಾ) ೧. ಹೆಸರಿಡುವುದು: ದೇಶಿಯರು ತಮ್ಮ ನಾಡಿಗೆ 'ಕರುನಾಡು' ಎಂಬ ನಾಮಕರಣವನ್ನು ಮಾಡಿ (ದ್ರಾವಿ.೮೯). ೨. ಹುಟ್ಟಿದ ಮಗುವಿಗೆ ಹೆಸರಿಡುವ ಒಂದು ಸಾಂಪ್ರದಾಯಿಕ ವಿಧಿ: ಪ್ರಕಟಮುಮಪ್ಪಂತಿರೆ ಜಾತಕರ್ಮದೊಸಗೆಯುಮನೊಸೆದು ಮಾಡಿಸೆ ಬಳಿಕರ್ಭಕಜಿನಶೀತಾಂಶುಗೆ ನಾಮಕರಣದುತ್ಸವದೊಳುತ್ಸವಂಬೆರಸಾಗಳ್ (ಶಾಂತಿಪು. ೧೦-೭೭) ; ದ್ವಾದಶದಿನಕ್ಕೆ ನಾಮಕರಣೋತ್ಸವಮಂ ಮಾಡಲೆಂದು ಗಾರ್ಗ್ಯನೆಂಬ ಪುರೋಹಿತಂ ತಿರೋಹಿತವೇಷನಾಗಿ ಬಂದು . . . ತನಯರ್ಗೆ ರಾಮಕೃಷ್ಣರೆಂಬ ನಾಮಕರಣಂ ಮೊದಲಾಗೆ ಪಲವುಮನ್ವರ್ಥನಾಮಮನಿಟ್ಟು (ಜಗವಿ. ೩-೨೬ ವ) ; ಗರ್ಭಾಧಾನ ಪುಂಸವನ ಸೀಮಂತ ಉನ್ನಯನ ಜಾತಕರ್ಮ ನಾಮಕರಣ ಉಪನಿಷ್ಕ್ರಮಣ ಅನ್ನಪ್ರಾಶನ ಚೌಲ ಉಪನಯನ ಮಹಾನಾಮ್ನ ಮಹಾವ್ರತ ಉಪನಿಷತ್ತು ಶೋಭನ ಉದ್ವಾಹನ ಮೃತಿಗಳೆಂಬ ಷೋಡಶಕರ್ಮಂಗಳೊಡನೆಯುಂ (ವಿವೇಕ. ೬) ; ನಾಮಕರಣವನೆಂತು ಮಾಳ್ಪೆನನಾಮರೂಪಕ್ರಿಯಗೆ (ನಿಭಾಗ. ೧೦-೭-೩೮) ; ಜನನವಾದ ಹನ್ನೊಂದನೆಯ ದಿವಸ ನಾಮಕರಣವನ್ನು ಮಾಡುವುದು (ಆರ್ಯಧ. ೧೨೩). 'ಷೋಡಶಸಂಸ್ಕಾರ' ಪರಾ. ೩. ವಿಧಾನಸಭೆ ಮೊದಲಾದ ಸಂಸ್ಥೆಗಳಿಗೆ ಸದಸ್ಯರನ್ನು ನೇಮಕ ಮಾಡುವುದು,—ಚುನಾವಣೆ ನಡೆಸದೆ ನೇರವಾಗಿ ನೇಮಿಸುವುದು. ೪. ಚುನಾವಣೆಗಾಗಿ ಒಬ್ಬನ ಹೆಸರನ್ನು ಸೂಚಿಸುವುದು.

**ನಾಮಕರಣ ಮಾಡು**=೧. (ಹುಟ್ಟಿದ ಮಗುವಿಗೆ) ನಾಮಕರಣವೆಂಬ ಸಂಸ್ಕಾರವನ್ನು ನೆರವೇರಿಸು ; ಹೆಸರಿಡು : ನನ್ನ ಕಿರಿಹುಡುಗನ ನಾಮಕರಣ ಮಾಡುವಾಗ ಸ್ವಾಮಿಗಳನ್ನು ಕರೆಸಿದ್ದೆ (ರೂಢಿ). ೨. ಸಂಘ ಸಂಸ್ಥೆಗಳಿಗೆ ಸದಸ್ಯರನ್ನು ನೇಮಕಮಾಡು. ೩. "ಒಂದು ಅಧಿಕಾರಕ್ಕೆ ಚುನಾವಣೆಗೆ ಹೆಸರು ಸೂಚಿಸು ; ನಾಮಕರಣ ಮಾಡು" (Nominate. ಪತ್ರಿನಿ. ೫೭).

[ನಾಮ + ಕರಣ]

**ನಾಮಕರಣಂಗೆಯ್**, ನಾಮಕರಣಂಗೈ (ಕ್ರಿ). (ಹುಟ್ಟಿದ ಮಗುವಿಗೆ) ನಾಮಕರಣವನ್ನು ಮಾಡು; ಹೆಸರಿಡು : ಇಂತೊಪ್ಪುವ ಕುಮಾರನುದಯೋತ್ಸವದಿಂ ದೇವಮಾನ್ಯಾದಿಗಳಂ ಕೊಟ್ಟು ನಾಮಕರಣಂಗೆಯ್ದು (ಹವಿಶ್ಮರ. ೨-೨೫ ವ). **ನಾಮಕರಣಂಗೈ** : ಚಂದ್ರಹಾಸನೆಂದಿಳೆಯೊಳೀತಂಗೆ ಪೆಸರಾಗಲೆಂದುಚ್ಚರಿಸಿ ನಾಮಕರಣಂಗೈದರು (ಜೈಮಿಭಾ. ೨೮-೬೦).

[ನಾಮಕರಣ + ಕೆಯ್$_1$]

**ನಾಮಕರಣಂಗೈ** 'ನಾಮಕರಣಂಗೆಯ್' ನೋ.

**ನಾಮಕರಣಪತ್ರ** (ನಾ). ಸಂಘ, ಸಂಸ್ಥೆಗಳ ಸದಸ್ಯತ್ವಕ್ಕೆ ಉಮೇದುವಾರರ ಹೆಸರುಗಳನ್ನು ಸೂಚಿಸುವ ಪತ್ರ : "ಹೆಸರು ಸೂಚನೆಯ ಪತ್ರ ; ನಾಮಕರಣಪತ್ರ ; ಉಮೇದುವಾರಿಕೆಯ ಅರ್ಜಿ" (Nomination Paper. ಪತ್ರಿಸಿ. ೫೭). [ನಾಮಕರಣ + ಪತ್ರ]

**ನಾಮಕರ್ಮ** (ನಾ). **೧.** = ನಾಮಕರಣ **೨ :** ನಾಮಕರ್ಮ ಬಹಿರ್ಯಾನ ನಿಷದ್ಯಾನ್ನಪ್ರಾಶನ ವ್ಯುಷ್ಟಿ ಕೇಶಾವಾಪ . . . ಎಂಬ ಯ್ಯುತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳುಂ (ಆದಿಪು. ೧೫-೧೫ ಪ) ; ಜಿನಂಗೆಸೆದುದಂತಾ ನಾಮ ಕರ್ಮೋತ್ಸವಂ (ಶಾಂತಿಪು. ೧೦-೭೮) ; ನಾಮಕರ್ಮಮುಂ ಬಹಿರ್ಯಾ ನಮುಂ...ನಿರ್ವಾಣಪರ್ಯಂತಮುಪ್ಪಯ್ಯುತ್ತುಮೂಱು ಗರ್ಭಾನ್ವಯ ಕ್ರಿಯೆಯೊಳ್ (ಚಾವುಂಪು. ೨೧೨). 'ದೀಕ್ಷೆ' ಪರಾ. **೨.** [ಜೈನ] ನಾಲ್ಕುವಿಧವಾದ ಅಘಾತಿಕರ್ಮಗಳಲ್ಲಿ ಒಂದು; ಆತ್ಮನಿಗೆ ಅನೇಕ ಪ್ರಕಾರವಾದ ಶರೀರ, ಅವಯವ, ರೂಪುಗಳನ್ನು ಉಂಟುಮಾಡುವ ಹಾಗೂ ತೊಂಬತ್ತುಮೂರು ಪ್ರಕೃತಿಗಳನ್ನು ಹೊಂದಿರುವ ಕರ್ಮ : ನಾಮಕರ್ಮಮುಂ ಪಿಂಡಾಪಿಂಡನಾಮದಿಂ ತೊಂಬತ್ತುಮೂಱು ತೆಱನಕ್ಕುಂ (ಶಾಂತಿಪು. ೧೨-೧೧ ಪ) ; ಜೀವ ವಿಪಾಕಿಯುಂ ಪುದ್ಗಲವಿಪಾಕಿಯುಂ ಕ್ಷೇತ್ರವಿಪಾಕಿಯುಮೆಂದಿಂತು ನಾಮಕರ್ಮಂ ತ್ರಿವಿಧಮಕ್ಕುಂ (ಗೊಮ್ಮಸಾ. ೨-೭). [ನಾಮ + ಕರ್ಮ]

**ನಾಮಕರ್ಮಪ್ರಕೃತಿ** (ನಾ). = ನಾಮಕರ್ಮ **೨ :** ಸತ್ವ ಕಥನಮಲ್ಲದುಳಿದ ಬಂಧದೊಳಂ ಚತ್ವಾರಿ ನಾಲ್ಕು ನಾಮಕರ್ಮ ಪ್ರಕೃತಿಗಳಪ್ಪುವು (ಗೊಮ್ಮಸಾ. ೬-೧೦). 'ದೀಕ್ಷೆ' ಪರಾ. ☞ ಇದು ಜೀವನಿಗೆ ಅನೇಕ ಪ್ರಕಾರವಾದ ಶರೀರ, ಅವಯವ, ರೂಪಗಳನ್ನುಂಟುಮಾಡುತ್ತದೆ. ಆತ್ಮನಿಗೆ ನಾರಕ ಮೊದಲಾದ ರೂಪವನ್ನು ನಾಮಕರಣ ಮಾಡುವುದರಿಂದ ಈ ಹೆಸರು ಅನ್ವರ್ಥವಾಗಿದೆ. ಇದು ಜೀವನ ಶುದ್ಧಸ್ವಭಾವವನ್ನು ಆಚ್ಛಾ ದಿಸಿ ಅವನಿಗೆ ಮನುಷ್ಯ, ತಿರ್ಯಕ್, ನಾರಕ, ದೇವ ಮೊದ ಲಾದ ರೂಪಗಳನ್ನುಂಟುಮಾಡುತ್ತದೆ. ನಾನಾ ಬಗೆಯಾದ ರಚನೆಯನ್ನುಂಟುಮಾಡುತ್ತದೆ. ಇದು ಮೂಲತಃ ೪೨ ಭೇದ ಗಳನ್ನು ಹೊಂದಿದೆ. ಉಪಾಂಗಗಳು (ಉತ್ತರ ಭೇದಗಳು) ಸೇರಿ ಒಟ್ಟು ೯೩ ಆಗುತ್ತವೆ. ಅವು ಯಾವುದೆಂದರೆ : ೧. ನರಕಗತಿ, ೨. ತಿರ್ಯಗ್ಗತಿ, ೩. ಮನುಷ್ಯಗತಿ, ೪. ದೇವಗತಿ, ೫. ಏಕೇಂದ್ರಿಯಜಾತಿ, ೬. ದ್ವೀಂದ್ರಿಯಜಾತಿ, ೭. ತ್ರೀಂದ್ರಿಯ ಜಾತಿ, ೮. ಚತುರಿಂದ್ರಿಯಜಾತಿ, ೯. ಪಂಚೇಂದ್ರಿಯಜಾತಿ, ೧೦. ಔದಾರಿಕಶರೀರ, ೧೧. ವೈಕ್ರಿಯಿಕಶರೀರ, ೧೨. ಆಹಾರಕಶರೀರ, ೧೩. ತೈಜಸಶರೀರ, ೧೪. ಕಾರ್ಮಣಶರೀರ, ೧೫. ಔದಾರಿಕಶರೀರ ಬಂಧನ, ೧೬. ವೈಕ್ರಿಯಿಕಶರೀರ ಬಂಧನ, ೧೭. ಆಹಾರಕಶರೀರಬಂಧನ, ೧೮. ತೈಜಸ ಶರೀರಬಂಧನ, ೧೯. ಕಾರ್ಮಣಶರೀರಬಂಧನ, ೨೦. ಔದಾರಿಕ ಶರೀರಸಂಘಾತ, ೨೧. ವೈಕ್ರಿಯಿಕಶರೀರಸಂಘಾತ, ೨೨. ಆಹಾರಕಶರೀರಸಂಘಾತ, ೨೩. ತೈಜಸಶರೀರಸಂಘಾತ, ೨೪. ಕಾರ್ಮಣಶರೀರಸಂಘಾತ, ೨೫. ಸಮಚತುರಸ್ರ ಸಂಸ್ಥಾನ, ೨೬. ನ್ಯಗ್ರೋಧಪರಿಮಂಡಲಸಂಸ್ಥಾನ, ೨೭. ಸ್ವಾತಿಸಂಸ್ಥಾನ, ೨೮. ಕುಬ್ಜಕಸಂಸ್ಥಾನ, ೨೯. ವಾಮನಸಂಸ್ಥಾನ, ೩೦. ಹುಂಡಕ ಸಂಸ್ಥಾನ, ೩೧. ಔದಾರಿಕಾಂಗೋಪಾಂಗ, ೩೨. ವೈಕ್ರಿಯಿಕಾಂಗೋಪಾಂಗ, ೩೩. ಆಹಾರಕಾಂಗೋಪಾಂಗ, ೩೪. ವಜ್ರರ್ಷಭನಾರಾಚ ಶರೀರಸಂಹನನ, ೩೫. ವಜ್ರನಾರಾಚ ಶರೀರಸಂಹನನ, ೩೬. ನಾರಾಚಶರೀರಸಂಹನನ, ೩೭. ಅರ್ಧ ನಾರಾಚಶರೀರಸಂಹನನ, ೩೮. ಕೀಲಕಶರೀರಸಂಹನನ, ೩೯. ಅಸಂಪ್ರಾಪ್ತಾಸೃಪಾಟಿಕಾಶರೀರಸಂಹನನ, ೪೦. ಶುಕ್ಲವರ್ಣ, ೪೧. ಪೀತವರ್ಣ, ೪೨. ನೀಲವರ್ಣ, ೪೩. ರಕ್ತವರ್ಣ, ೪೪. ಕೃಷ್ಣವರ್ಣ, ೪೫. ಸುಗಂಧ, ೪೬. ದುರ್ಗಂಧ, ೪೭. ಮಧುರ ರಸ, ೪೮. ಆಮ್ಲರಸ, ೪೯. ತಿಕ್ತರಸ, ೫೦. ಕಟುರಸ, ೫೧. ಲವಣರಸ, ೫೨. ಕರ್ಕಶಸ್ಪರ್ಶ, ೫೩. ಕೋಮಲಸ್ಪರ್ಶ, ೫೪. ಶೀತಸ್ಪರ್ಶ, ೫೫. ಉಷ್ಣಸ್ಪರ್ಶ, ೫೬. ಸ್ನಿಗ್ಧಸ್ಪರ್ಶ, ೫೭. ರೂಕ್ಷಸ್ಪರ್ಶ, ೫೮. ಲಘುಸ್ಪರ್ಶ, ೫೯. ಗುರುಸ್ಪರ್ಶ, ೬೦. ನರಕಗತ್ಯಾನುಪೂರ್ವೀ, ೬೧. ತಿರ್ಯಗ್ಗತ್ಯಾನುಪೂರ್ವೀ, ೬೨. ಮನುಷ್ಯಗತ್ಯಾನುಪೂರ್ವೀ, ೬೩. ದೇವಗತ್ಯಾನುಪೂರ್ವೀ, ೬೪. ಪ್ರಶಸ್ತವಿಹಾಯೋಗತಿ, ೬೫. ಅಪ್ರಶಸ್ತವಿಹಾಯೋಗತಿ, ೬೬. ಅಗುರುಲಘು, ೬೭. ಉಪಘಾತ, ೬೮. ಪರಘಾತ, ೬೯. ಉಚ್ಛ್ವಾಸ, ೭೦. ಆತಪ, ೭೧. ಉದ್ಯೋತ, ೭೨. ತ್ರಸ, ೭೩. ಸ್ಥಾವರ, ೭೪. ಬಾದರ, ೭೫. ಸೂಕ್ಷ್ಮ, ೭೬. ಪರ್ಯಾಪ್ತಿ, ೭೭. ಅಪರ್ಯಾಪ್ತಿ, ೭೮. ಪ್ರತ್ಯೇಕಶರೀರ, ೭೯. ಸಾಧಾರಣ ಶರೀರ, ೮೦. ಸ್ಥಿರ, ೮೧. ಅಸ್ಥಿರ, ೮೨. ಶುಭ, ೮೩. ಅಶುಭ, ೮೪. ಸುಭಗ, ೮೫. ದುರ್ಭಗ, ೮೬. ಸುಸ್ವರ, ೮೭. ದುಃಸ್ವರ, ೮೮. ಆದೇಯ, ೮೯. ಅನಾದೇಯ, ೯೦. ಯಶಃಕೀರ್ತಿ, ೯೧. ಅಯಶಃಕೀರ್ತಿ, ೯೨. ನಿರ್ಮಾಣ, ೯೩. ತೀರ್ಥಕರ. [ನಾಮಕರ್ಮ + ಪ್ರಕೃತಿ]

**ನಾಮಕಲ್ಪನೆ** (ನಾ.) [ಬೌದ್ಧ] ಪ್ರತ್ಯಕ್ಷಕ್ಕೆ ವಿರೋಧಿಯಾದ ಜಾತಿ, ಗುಣ, ಕ್ರಿಯೆ, ನಾಮ ಮತ್ತು ದ್ರವ್ಯ ಎಂಬ ಐದು ಬಗೆಯ ಕಲ್ಪನೆ ಅಥವಾ ವಿಕಲ್ಪಗಳಲ್ಲಿ ಒಂದು : ವಿಕಲ್ಪಗಳು ಅಥವಾ ಕಲ್ಪನೆಗಳು ಐದು ವಿಧ—ಜಾತಿಕಲ್ಪನೆ, ಗುಣಕಲ್ಪನೆ, ಕ್ರಿಯಾಕಲ್ಪನೆ, ನಾಮಕಲ್ಪನೆ ಮತ್ತು ದ್ರವ್ಯಕಲ್ಪನೆ ಎಂದು . . . ಶಬ್ದಾರ್ಥಗಳು ವಸ್ತುಸ್ಥಿತಿಯಲ್ಲಿ ಭಿನ್ನವಾದುವುಗಳು ; ನಾಮ ಕಲ್ಪನೆಯು ಇವುಗಳಿಗೆ ಅಭೇದವನ್ನು ಕಲ್ಪನೆ ಮಾಡುವುದು (ಭಾತತ್ತ್ವ. ೨೬೬). 'ದ್ರವ್ಯಕಲ್ಪನೆ' ಪರಾ. [ನಾಮ + ಕಲ್ಪನೆ]

**ನಾಮಕಾಣಿಕೆ** (ನಾ). ಶ್ರೀ ವೈಷ್ಣವ ಸಂಪ್ರದಾಯದ ಗುರು ಗಳು ತಮ್ಮ ಶಿಷ್ಯರಿಗೆ ಪುಂಡ್ರಧಾರಣೆ ಮಾಡಿಸುವಾಗ ಶಿಷ್ಯರು ಅವರಿಗೆ ಸಲ್ಲಿಸುವ ಕಾಣಿಕೆ : ಈ ವೃತ್ತಿಗೆ ಸಲ್ಲುವ ಗದ್ದೆ ಬೆದ್ದಲು ಕೋಟೆತುಡಿಕೆ . . . ಐರುಕಾಣಿಕೆ ನಾಮಕಾಣಿಕೆ ಗುರುಕಾಣಿಕೆ (ಹುಟ್ಟೂಶ. ೩). [ನಾಮ + ಕಾಣಿಕೆ(<ಕಾಣ್ಕೆ)]

**ನಾಮಕಾವಾಸ್ತೆ** 'ನಾಮಕೇವಾಸ್ತೆ' ನೋ.

**ನಾಮಕೀರ್ತನ** (ನಾ). ದೇವರ ಹೆಸರನ್ನು ಭಕ್ತಿಯಿಂದ ಉಚ್ಚರಿ ಸುವುದು,—ಭಜಿಸುವುದು ; ಭಜನೆ : ಕುಲಜನಾಗಲಕುಲಜನಾಗಲಿ ಜಲರುಹಾಕ್ಷನ ನಾಮಕೀರ್ತನದೊಳಗೆ ಬದುಕುವನಾವನಾತನೆ ಸುಕೃತಿ ಯೆಂಬವನು (ಕುವ್ಯಾಉ. ೩-೧೨೩). [ನಾಮ + ಕೀರ್ತನ]

**ನಾಮಕೀರ್ತನೆ** (ನಾ). = ನಾಮಕೀರ್ತನ: ನಾಮಕೀರ್ತನೆ ಅನುದಿನ ಮಾಳ್ಪಗೆ ನರಕಭಯಗಳುಂಟೆ (ಪುರಂದ. ೨-೧೦೬ ಪಲ್ಲವಿ); ಪ್ರಯಾಣಿಕರು ಪೀರರ ನಾಮಕೀರ್ತನೆಯನ್ನು ಕೇಳಿ . . . ಏನಾಯಿತು ಎಂದು ಎಲ್ಲರೂ ಒಟ್ಟಾಗಿ ಕೇಳಲಾರಂಭಿಸಿದರು (ಕಪಾಕುಂ. ೪). [ನಾಮ + ಕೀರ್ತನೆ]

**ನಾಮಕೇವಾಸ್ತೆ,** ನಾಮಕಾವಾಸ್ತೆ (ಅ). ಹೆಸರಿಗೆ ಮಾತ್ರ : ಶ್ಯಾಮರಾಯನ ಕೈಯಾಗ ಏನ ಭಗರಿ ಆದ ಅಂತ ಮಾಡೀರಿ? ಅಂವಾ ನಾಮಕೇವಾಸ್ತೇ ತಂದಿ ಏನ್ರೆ ಌವಾ ? (ದಿಃಪಹ. II, ೩೬೭). **ನಾಮಕಾವಾಸ್ತೆ :** ಮನೆಯಲ್ಲಿ ಆತ ನಾಮಕಾವಾಸ್ತೆ ಯಜಮಾನ. ಆದರೆ ಆಡಳಿತವೆಲ್ಲಾ ಆತನ ಹೆಂಡತಿಯದೇ (ರೂಢಿ).

[ℙ ಹಿಂದಿಯಲ್ಲಿ ಇದು ಒಂದು ಪದವಲ್ಲ ]

**ನಾಮಗ್ರಹ** (ನಾ). ಹೆಸರನ್ನು ಕರೆಯುವುದು ; ಹೆಸರನ್ನು ಹೇಳುವುದು : ಬಂದು ನಿಂದನಿತಱಿೞಾಳ್ ನಾಮಗ್ರಹಂ ಮಾಡಿ. . . ಕಾರ್ಯಮಂ ನುಡಿದೆ ನಿನ್ನಿಂ ಬಿಟ್ಟು ದೈವಜ್ಞನಾವನುಮಿಲ್ಲಾಂ ಕೃತಕೃತ್ಯನಾದೆಂ (ಸುಕುಮಾ. ೩-೧೩). [ನಾಮ + ಗ್ರಹ]

**ನಾಮಗ್ರಹಣ** (ನಾ). = ನಾಮಗ್ರಹ : ಪಲಂಬರು ಶಿವಬ್ರಾಹ್ಮ[ಣ]ರ ಪೆಸರ್ಗೊಂಡೊಡೆ ಕೇಳದಂತಿರ್ಪ ಪರವೆಯರು ನಿಮ್ಮಡಿಗಳ ನಾಮಗ್ರಹಣಂಗೊಳಲೊಡನಂತಂತೆ ಪುಳಕಿಸುತೆ ತಲೆವಾಗಿ ಲಜ್ಜೆತೆಯಾಗಿರಲ್ (ನಂಬಿರ. ೧೧೦-೧೯). [ನಾಮ + ಗ್ರಹಣ]

**ನಾಮದ ಬೇರು** (ನಾ). ಸುರುಳಿಸುರುಳಿಯಾಗಿ ಸುತ್ತಿಕೊಂಡು ಬೆಳೆಯುವ ಒಂದು ಬಗೆಯ ಪೊದರುಗಿಡ; "ಶಾರಿವ, ಶ್ಯಾಮ" (ಪಂಡಿತ. ೨೫೫). [<ನಾಮ + ಬೇರು(<ಬೇರ್)]

**ನಾಮದ ಸೊಪ್ಪು** (ನಾ). ಒಂದು ಬಗೆಯ ಸೊಪ್ಪಿನ ಗಿಡ : (ಮೈಔಗಿ. ೫-೯೦). [<ನಾಮ + ಸೊಪ್ಪು$_2$]

**ನಾಮದಾರ**(ಗು). ೧. ಹೆಸರಾಂತ; ಕೀರ್ತಿ ಪಡೆದ; ಪ್ರಸಿದ್ಧವಾದ; ಸನ್ಮಾನ್ಯ : ನನ್ನ ೧೮೫೮ನೇ ಇಸವಿವರೆಗೆ ಹಿಂದುಸ್ತಾನದ ರಾಜ್ಯಕಾರಭಾರವನ್ನು ನಾಮದಾರ ಈಸ್ಟ ಇಂಡಿಯ ಕಂಪನಿಯವರು ಇಂಗ್ಲೆಂಡದ ಸರಕಾರದವರ ಅಪ್ಪಣೆಯಿಂದ ಸಾಗಿಸಿದರು (ಮುಂಬಯಿ. ೪-೧೧೨). (ನಾ). ೨. ಹೆಸರಿನ ಹಿಂದೆ ಸೇರಿಸುವ ಗೌರವಸೂಚಕವಾದ ಒಂದು ಉಪಪದ : ಇಂಥ ದಾರ್ಶನಿಕ ಮಹಾಕಾವ್ಯಕ್ಕೆ "ಮುರಿದ ರೆಕ್ಕೆ" (Broken wing) ಎಂಬ ಹೆಸರೇಕೆ . . . ಎಂಬ ಪ್ರಶ್ನೆಯನ್ನು ನಾಮದಾರ ಗೋಖಲೆಯವರೇ ಎತ್ತಿದ್ದರು (ಪ್ರಬಂಧ. ೪೯).

[←ಪಾರ.ಹಿಂ.ಮರಾ. ನಾಮದಾರ್]

**ನಾಮದೇಶಿ** (ನಾ). [ಸಂಗೀತ] ಒಂದು ರಾಗದ ಹೆಸರು : ನಾಮದೇಶಿ - ಸಂಪೂರ್ಣ ರಾಗ, ಷಡ್ಜಗ್ರಹವನ್ನು ಕೂಡಿಕೊಂಡಿದೆ (ಚತುಪ್ರ. ೧೮೩). [ಸಂ. ನಾಮದೇಶೀ]

**ನಾಮಧಾರಕ** (ಗು). ೧. ಹೆಸರನ್ನು ಮಾತ್ರ ಹೊಂದಿರುವ ; ನಿಜವಾದ ಯೋಗ್ಯತೆಯಿಲ್ಲದಿದ್ದರೂ ಶೂರ, ಪಂಡಿತ ಮೊದಲಾದ ಬಿರುದುಗಳನ್ನು ಹೊಂದಿರುವ : ಕವಿಗಳ ನಾಮಧಾರಕ ನರಾಧಿಪರೋಳಿಯೊಳೀತನೊಳ್ಪಿದಂ (ಪಂಪಭಾ. ೧-೧೦). (ನಾ). ೨. ಅರ್ಹತೆಯಿಲ್ಲದಿದ್ದರೂ ಅದನ್ನು ತಿಳಿಸುವ ಹೆಸರನ್ನು ಇಟ್ಟುಕೊಂಡಿರುವವನು : ವ್ರತಸಂಸ್ಕಾರದಿನಾದರ್ ವಿತತಗುಣರ್ ಬ್ರಾಹ್ಮಣರ್ ಕ್ರಿಯಾಸಂತತಿಸಂಯುತರುಚಿತಸತ್ಕ್ರಿಯಾ ವಿರಹಿತನಾತಂ ನಾಮಧಾರಕಂ ದ್ವಿಜನಲ್ಲಂ (ಆಪಿಪು. ೧೫-೧೫) ; ಇಱಿಯದೆ ಬೇಡಿದೊಡೀಯದೆ ಬಱಿದೆ ಕುಲೀನತೆಗೆ ಬೆಸೆದು ಪಾರ್ಥಿವ ಶಬ್ದಕ್ಕೆಱಿ ವಟ್ಟನಿಸಿ ಧರಿತ್ರಿಗೆ ಪೊಱೆಯೆನಿಪಂ ರಾಜನಾಮಧಾರಕನಲ್ತೆ (ಪಂರಾಮಾ. ೪-೪೧) ; ಏನಱಿಯಲ್ಕೆ ಯೋಗ್ಯನೇ ಚತುರಕವಿಪ್ರತಾನರಚಿತಾಧ್ವಕೃತಿಪ್ರತಿರೈಕಪಾತ್ರಸಂಸ್ಥಿತಗುಣದೋಷದುಗ್ಧ ಜಳಭೇದನಮಂ ಕವಿನಾಮಧಾರಕಂ (ಚಂದ್ರಪ್ರ. ೧-೩೮). [ನಾಮ + ಧಾರಕ]

**ನಾಮಧಾರಿ** (ನಾ). ೧. ಹೆಸರು ಪಡೆದವನು ; ಹೆಸರುವಾಸಿಯಾದವನು ; ಪ್ರಸಿದ್ಧನಾದವನು. ೨. ನಟನೆ ಮಾಡುವವನು; ಸೋಗುಗಾರ : ಅತ್ಮಾಕಿಗೆ ಬಕವೃತಿಗೆ ಗ್ರಾಮಣಿಗೆ ಪಾಷಂಡಗಾತ್ಮವಿರಾಮಕಾರಿಗೆ ಕೂಟಸಾಕ್ಷಿಗೆ ನಾಮಧಾರಿಗೆ ಪಾರ್ಥ ಕೇಳ್ ಪರಲೋಕವಿಲ್ಲೆಂದ (ಕುವ್ಯಾಅ. ೪-೨೬). ೩. ಭಗವಂತನ ನಾಮವನ್ನು ಯಾವಾಗಲೂ ಮನಸ್ಸಿನಲ್ಲಿ ಧರಿಸಿರುವವನು,—ಅನುಸಂಧಾನ ಮಾಡುವವನು ; ಭಕ್ತ : ದೇವನಾಮದ ಜೋಡು ನಮ್ಮನು ಕಾವುದೈ ನೀ ಮುನಿದಡೆಯು ನಿಮಗಾವು ಹೆದಱೆವು ನಾಮಧಾರಿಗಳತುಳಬಲರೆಂದ (ಕುವ್ಯಾಅ. ೬-೪೩) ; ಸ್ವಾಮಿ ಶ್ರೀಪುರಂದರವಿಟ್ಠಲರಾಯನ ನಾಮಧಾರಿಗಳಿಗೆ ನರಕವುಂಟೆ (ಪುರಂದ. ೩-೧೯೯-೩). ೪. ಶ್ರೀವೈಷ್ಣವ ಪಂಗಡಕ್ಕೆ ಹೆಗ್ಗುರುತಾದ ಮೂರು ನಾಮಗಳನ್ನು ಧರಿಸಿರುವವನು ; ತ್ರಿಪುಂಡ್ರಧಾರಿ. ೫. ಶ್ರೀರಾಮಾನುಜಾಚಾರ್ಯರ ಮತಾನುಯಾಯಿ; ಶ್ರೀವೈಷ್ಣವ. [ಸಂ. ನಾಮಧಾರಿನ್]

**ನಾಮಧೇಯ** (ನಾ). ೧. ನಾಮ ; ಹೆಸರು : ಭವಪರಿಣಾಮ ಪರಾವರ್ತನದಿಂ ಬಂದು ವಿಂಧ್ಯಾಟವೀಮಧ್ಯದೊಳ್ ಸೋಮನಾಮಧೇಯ ತಾಪಸಂಗಂ ಶ್ರೀದತ್ತೆಗಂ ಸೋಮಿಲನೆಂಬೊಂ ಮಗನಾಗಿ (ಶಾಂತಿಪು. ೯-೯೧ ವ) ; ಪರವಾದೀ[ಶರಭ]ಭೇರುಣ್ಡಾ ಪರನಾಮಧೇಯರಪ್ಪ ಶ್ರೀಮತ್ ಶ್ರೀನನ್ದಿ ಪಣ್ಡಿತದೇವರ್ಗೆ (ಸೌಇಇ. XX, ೪೬-೨೭ ; 1072) ; ಶೃಂಗಿಬೇರಪುರ ನಾಮಧೇಯದ ಬೇಡರೂರಿಂ ಗರಸು ಗುಹಂ (ಶ್ರೀರಾಮಾ. ೯೭-೫೩೨). ೨. ಯಜ್ಞಯಾಗಗಳ ಹೆಸರನ್ನು ಹೇಳುವ ವೇದದ ಭಾಗ : ಮತ್ತಮಾ ವೇದಂಗಳಾದೊಡೆ ವಿಧಿವಾದ ಅರ್ಥವಾದ ಮಂತ್ರವಾದ ನಾಮಧೇಯಂಗಳೆಂಬ ನಾಲ್ಕುಭೇದದಿಂ ಸಮಸ್ತಧರ್ಮಂಗಳಂ ಬೋಧಿಪವು . . . ಜನನೀಜನಕರಂತೆ ಯಾಗಾದಿಗಳ್ಗೆ ಪೆಸರಂ ಪೇಳ್ವುದೇ ನಾಮಧೇಯಮುಕ್ಕುಂ (ವಿವೇಕ. ೪) ; ವೈದಿಕಜ್ಞಾನವು ವಿಧಿ, ನಿಷೇಧ, ಮಂತ್ರ, ನಾಮಧೇಯ, ಅರ್ಥವಾದವೆಂದು ವಿಭಜಿತವಾಗಿದೆ (ಭಾರದ. ೧೨೯).

[ಸಂ.]

**ನಾಮನಕ್ಷತ್ರ** (ನಾ). [ಜ್ಯೋತಿ] ವ್ಯಕ್ತಿಯ ಹೆಸರಿನ ಮೊದಲನೆಯ ಅಕ್ಷರದಿಂದ ಗೊತ್ತುಮಾಡುವ ನಕ್ಷತ್ರ ; ℙ ಜನ್ಮನಕ್ಷತ್ರವು (ಅಂದರೆ ಒಬ್ಬನು ಹುಟ್ಟಿದ ನಕ್ಷತ್ರವು) ಗೊತ್ತಿಲ್ಲದಿದ್ದರೆ ಅವನ ಹೆಸರಿನ ಮೊದಲನೆಯ ಅಕ್ಷರದಿಂದ ನಕ್ಷತ್ರವನ್ನೂ ನಕ್ಷತ್ರಪಾದವನ್ನೂ ಗೊತ್ತುಪಡಿಸುತ್ತಾರೆ. ಚು, ಚೆ, ಚೊ, ಲ, ಈ ಅಕ್ಷರಗಳು ಕ್ರಮವಾಗಿ ಅಶ್ವಿನಿ ೧, ೨, ೩, ೪ನೆಯ ಪಾದ. ಹೀಗೆಯೇ ಎಲ್ಲಾ ಅಕ್ಷರಗಳಿಗೂ ನಕ್ಷತ್ರಗಳನ್ನು ಪಾದದೊಂದಿಗೆ ಹೇಳಿದ್ದಾರೆ : ಜಾತಕ ಇಲ್ಲದಿದ್ದರೆ ಹೆಸರು ಹೇಳಿ. ನಾಮನಕ್ಷತ್ರದಿಂದ ನೋಡಿ ಹೇಳುತ್ತೇನೆ (ರೂಢಿ).

[ನಾಮ + ನಕ್ಷತ್ರ$_1$]

**ನಾಮನಿರ್ದೇಶ** (ನಾ). ೧. ಹೆಸರನ್ನು ತಿಳಿಸುವುದು. ೨. = ನಾಮಕರಣ ೩ : ರಾಷ್ಟ್ರಪತಿಯವರು ನಾಮನಿರ್ದೇಶ ಮಾಡಿದ ಹನ್ನೆರಡು ಜನಗಳೂ . . . ಸದಸ್ಯರಾಗಿರತಕ್ಕುದು (ಭಾಧಾಸ. ೩೯).

[ನಾಮ + ನಿರ್ದೇಶ]

**ನಾಮನಿರ್ವಚನ** (ನಾ). ಹೆಸರನ್ನು ಹೇಳುವುದು,—ಹೊಗಳುವುದು,—ಪ್ರಶಂಸಿಸುವುದು : ಬಸವನವತಾರ ಬಸವನ ನಾಮನಿರ್ವಚನವೆಸೆವ ಬಾಲ್ಯದ ಲೀಲೆ (ಲಚಿಂ. ೧-೧೩).

[ನಾಮ + ನಿರ್ವಚನ]

**ನಾಮಪತ್ರ** (ನಾ). ಚುನಾವಣೆಗೆ ನಿಲ್ಲಲು ಅಭ್ಯರ್ಥಿ ಸಲ್ಲಿಸುವ ಪತ್ರ : ಮುಕುಂದನ ನಾಮಪತ್ರ ಕೊಡಿಸಿದರು . . .ಚಂಚಲೆ ಹಿಂದು

ಮುಂದು ನೋಡಲಿಲ್ಲ. ತಾನೂ ನಾಮಪತ್ರ ಸಲ್ಲಿಸಿದಳು (ಭೂಮಿತಾ. ೭೪) ; ಚುನಾವಣೆಗೆ ನಾಮಪತ್ರವನ್ನು ಸಲ್ಲಿಸಲು ಇಂದೇ ಕೊನೆಯ ದಿನ (ರೂಢಿ). [ನಾಮ + ಪತ್ರ]

**ನಾಮಪದ** (ನಾ). [ವ್ಯಾಕ] ವಸ್ತು, ವ್ಯಕ್ತಿ, ಸ್ಥಳ ಮತ್ತು ಭಾವಗಳನ್ನು ಹೆಸರಿಸುವ ಪದ : ಸಂಗತಿಯಿಂದಂ ನಾಮಪದಂಗಳ ವೇಕಾರ್ಥಗತಿಯೊಳಾಗೆ ಸಮಾಸಂ ಸಂಗಳಿಸುಗುಂ (ಕಾವ್ಯಾವ. ೧೯೯) ; ಮರ, ದೇವ, ಎಂದು (ನಾಮ)ಲಿಂಗಮನಿಱಿಸಿವರ್ ಎಂಬ ನಾಮ ವಿಭಕ್ತಿಯಂ ಕೂಡೆ, ಮರಂ, ದೇವಂ ಎಂದು (ನಾಮ)ಪದಮಕ್ಕುಂ (ಶಮಂದ. ೩೫ ವೃತ್ತಿ) ; ಹೆಸರನ್ನು ಹೇಳುವ ಪದಗಳೆಲ್ಲ ನಾಮಪದಗಳು (ಮಧ್ಯಮ. ೭) ; ಒಂದು ವಾಕ್ಯದಲ್ಲಿ ಬರುವ ಪದಗಳನ್ನು ನಾಮಪದ, ಕ್ರಿಯಾಪದ, ಅವ್ಯಯ ಎಂದು ಮೂರು ಭಾಗಗಳಾಗಿ ವಿಂಗಡಿಸುತ್ತಾರೆ (ಕೈಪಿಡಿ. ೩೩). [ನಾಮ + ಪದ$_2$]

**ನಾಮಪ್ರಕೃತಿ** (ನಾ). [ವ್ಯಾಕ] ನಾಮಪದದ ಮೂಲರೂಪ; ಪ್ರಾತಿಪದಿಕ : ಸುಲಲಿತಾಕ್ಷರಂಗಳಪ್ಪ ನಾಮಪ್ರಕೃತಿಗಳಂ ಕನ್ನಡಕ್ಕೆ ಸರಿಮಾಡಿ, ಸಮಸಂಸ್ಕೃತಮೆಂಬ ಪೆಸರನಿಟ್ಟು, ಶಬ್ದಜ್ಞರ್ ಲಿಂಗಮಂ ಮಾಳ್ಪರ್ (ಶಮದ. ೮೦ ವೃತ್ತಿ) ; ನಾಮಪದದ ಮೂಲದಲ್ಲಿರುವ ಪ್ರಕೃತಿಯನ್ನು ನಾಮಪ್ರಕೃತಿ ಎಂದು ಕರೆಯುತ್ತಾರೆ (ಮಧ್ಯಮ. ೭); ಧಾತುಗಳಿಗೆ ಕೃತ್ಪ್ರತ್ಯಯಗಳು ಸೇರಿ ನಾಮಪ್ರಕೃತಿಗಳಾಗುವುವು (ಕೈಪಿಡಿ. ೧೬). [ನಾಮ + ಪ್ರಕೃತಿ]

**ನಾಮಫಲಕ** (ನಾ). ಯಾವುದಾದರೂ ಒಂದು ಕಟ್ಟಡ, ಬೀದಿ ಮೊದಲಾದ ಕಡೆಗಳಲ್ಲಿ, ಇದು ಇಂಥದೆಂದು ಸೂಚಿಸಲು ಬರೆದು ತಗುಲುಹಾಕಿರುವ ಹೆಸರಿರುವ ಹಲಗೆ : ಪರಿಷನ್ಮಂದಿರದ ಮೇಲೆ ಎಲ್ಲರಿಗೂ ಕಾಣುವಂತೆ ಹಾಕುವ ನಾಮಫಲಕದ ಮೇಲೆ ಇವುಗಳಲ್ಲಿ ಯಾವುದನ್ನು ಬರೆಸಬೇಕು ?—ಎಂಬ ಬಗೆಬಗೆಯ ಪ್ರಶ್ನಾವಳಿ (ಪ್ರಶ್ನೆಯ ಹಾವಳಿ)ಯನ್ನು ವಿದ್ವಾಂಸರು ಎಸೆದರು (ದ್ರಾವಿಮಿ.೮೧); ಅವರು ಹೊಸ ಅಂಗಡಿಯೊಂದನ್ನು ತೆರೆದು ನಾಮಫಲಕವನ್ನು ತಗುಲು ಹಾಕಿದರು (ರೂಢಿ). [ನಾಮ + ಫಲಕ]

**ನಾಮಮೋಹ** (ನಾ). ಹೆಸರಿನ ಮೇಲಿರುವ ಪ್ರೀತಿ : ಜಯದ ಮದ್ದಿನಲಿ ನಾಮಮೋಹದಲಿ ಭರತನಾದ ಮೂಢ(ಮುಕ್ತಕಂ.೨೫೦–೭). [ನಾಮ + ಮೋಹ]

**ನಾಮಯ್ಯ** (ನಾ). ಒಬ್ಬಾತನ ಹೆಸರು : ಬರೆದನ್ನಾಮಯ್ಯಂ (ಎಕ. X, ಮುಳಬಾ. ೩೪–೮೦ ; ಸು. 890). [ನಾಮ + ಅಯ್ಯ$_1$]

**ನಾಮರೂಢಿ** (ನಾ). ಪದದ ಪ್ರಸಿದ್ಧಾರ್ಥ,—ಮೂಲಾರ್ಥ ; ಶಬ್ದದ ನಿಜಸ್ವರೂಪ : ಸ್ವರಮಿದಿರೊಳಿರೆ ವಿಭಕ್ತಿಸ್ವರಕಂ ಪ್ರಕೃತಿಸ್ವರಕ್ಕಮಕ್ಕುಂ ಲೋಪಂ ವರಸಂಸ್ಕೃತ ಕರ್ಣಾಟಕಮೆರಡಱೊಳಂ ನಾಮರೂಢಿಯಬಾಯದ ಪಕ್ಷಂ (ಶಮದ. ೫೨) ; "ನಾಮರೂಢಿಯಬಾವುದು" ಎಂದರೆ ಅರ್ಥಕ್ಕೆ ಹಾನಿ ಬರುವುದು ಎಂದು ಅರ್ಥ (ಕೈಪಿಡಿ.೭). [ನಾಮ + ರೂಢಿ]

**ನಾಮರ್ದ** (ನಾ). ೧. ಹೇಡಿ; ಪುಕ್ಕ. ೨. ನಪುಂಸಕ : ಆ ನಾಮರ್ದ ನಿನ್ನ ಭಾವ ಯಾವ ಮುಖ ತೆಗೆದುಕೊಂಡು ಇರುತ್ತಾನೆ (ದುಂಬಿಕ. ೧೭೧). ೩. ಸಾರವಿಲ್ಲದುದು : ನಿಸ್ಸತ್ತ್ವ : ಚಿತ್ರದುರ್ಗದ ಜಾಗ ನಾಮರ್ದ ಎಂತ ಕೇಳುತೇವೆ (ಚಿತ್ರಪಾ. ೭೩). [←ಪಾರ. ಹಿಂ. ಮರಾ. ನಾಮರ್ದ್]

**ನಾಮಲಿಂಗ** (ನಾ). = ನಾಮಪ್ರಕೃತಿ : ನಾಮಲಿಂಗಕ್ಕೆ—ಅರಸ . . . ಹರಿಣ, ಮೂಷಕ—ಎಂದಿರಿಸಿ ಸಪ್ತವಿಭಕ್ತಿಯಂ ಪತ್ತಿಸುವುದು (ಶಮದ. ೭೨ ಪ್ರಯೋ). [ನಾಮ + ಲಿಂಗ]

**ನಾಮವಾಚಕ** (ನಾ). = ನಾಮಪ್ರಕೃತಿ : ಬಗೆಬಗೆಯ ಪದಾರ್ಥಗಳ ಅಥವಾ ವಿಷಯಗಳ ಹೆಸರನ್ನು ತಿಳಿಸುವ ನಾಮಪದಕ್ಕೆ ನಾಮವಾಚಕವೆಂದು ಹೆಸರು (ಮಧ್ಯಮ. ೨೫). [ನಾಮ + ವಾಚಕ]

**ನಾಮವಿಭಕ್ತಿ** (ನಾ). [ವ್ಯಾಕ] ನಾಮಪ್ರಕೃತಿಗೆ ಕರ್ತೃ, ಕರ್ಮ ಮೊದಲಾದ ಅರ್ಥದಲ್ಲಿ ಸೇರುವ ಪ್ರತ್ಯಯ ; ವಿಭಕ್ತಿಪ್ರತ್ಯಯ : ಪಿಂತೆ ಪೇಟ್ದ ನಾನಾ ತೆಱದ ಲಿಂಗಂಗಳ್ಗೆ ಪರವಾಗಿ ನಾಮವಿಭಕ್ತಿಗಳ್ . . . ಪ್ರಥಮೆಗಂ . . . ಸಪ್ತಮಿಗಂ—ಏೞಾಗಿ ಕಾರಕವಶದಿಂ ಪತ್ತುಗುಂ (ಶಮದ. ೯೩ ವೃತ್ತಿ). [ನಾಮ + ವಿಭಕ್ತಿ]

**ನಾಮವಿಶೇಷಣ** (ನಾ). [ವ್ಯಾಕ] ನಾಮಪದಗಳಿಗೆ ವಿಶೇಷಣವಾಗಿರುವ ಪದ ; ವಿಶೇಷ್ಯದಲ್ಲಿರುವ ಗುಣ ಮೊದಲಾದ ಧರ್ಮಗಳನ್ನು ತಿಳಿಸುವ ಪದ ; ಗುಣವಾಚಕ : ನಾಮಪದಗಳಿಗೆ ವಿಶೇಷಣವಾಗಿ ಬರತಕ್ಕವುಗಳಿಗೆಲ್ಲಾ ನಾಮವಿಶೇಷಣಗಳೆಂದು ಹೆಸರು (ಮಧ್ಯಮ. ೧೪೧). [ನಾಮ + ವಿಶೇಷಣ]

**ನಾಮವ್ಯತ್ಯಯ** (ನಾ). ಹೆಸರಿನ ಬದಲಾವಣೆ ; ನಾಮಾಂತರ : ಅವನ ನಾಮವ್ಯತ್ಯಯದಿಂದ ಭೂಪತಿಗೆ ಯಾವ ಸಮಾಧಾನವೂ ಇರಲಿಲ್ಲ (ಇಪ್ಪಕ. ೨೬೨). [ನಾಮ + ವ್ಯತ್ಯಯ]

**ನಾಮಶೂನ್ಯ** (ನಾ). ಹೆಸರು ಕೂಡ ಇಲ್ಲದುದು ; ನಿರ್ನಾಮವಾದುದು ; ಸಂಪೂರ್ಣವಾಗಿ ನಾಶವಾದುದು : ನಾಮಶೂನ್ಯರ[ವ] ಮಾಡಿಬಿಡುವೆನು ರಾಮಸೇನೆಯನು (ಕೌಶಿಂ. ೨೦–೭). [ನಾಮ + ಶೂನ್ಯ]

**ನಾಮಶೇಷ** (ನಾ). ಹೆಸರು ಮಾತ್ರ ಉಳಿದಿರುವುದು : ಅಳಿದು ಹೋದುದು ; ನಾಶವಾದುದು : ತೊಗಲುಗೊಂಬೆಯ ಬದಲು ಮರದ ಗೊಂಬೆಗಳನ್ನು ಕುಣಿಸುವುದೂ, ಯಕ್ಷಗಾನ ಹಾಡುತ್ತ, ಹಿನ್ನೆಲೆಯಲ್ಲಿ ನಿಂತು ಅರ್ಥ ಹೇಳುವುದೂ ವಾಡಿಕೆಯಾಗಿತ್ತು. ಈ ಕಲಾವಿಧಾನವೂ ಇಂದು ನಾಮಶೇಷವಾಗಿದೆ (ಯಕ್ಷಬ. ೧೫) ; ಬಡಗಣ ಸಿಂದರ ಆಳಿಕೆ ನಾಮಶೇಷವಾಗಿ ಅವರ ಸಿಂದವಾಡಿಯನ್ನು ಸಿಂಘಣನು ತನ್ನ ಸಾಮ್ರಾಜ್ಯಕ್ಕೆ ಕೂಡಿಸಿಕೊಂಡಿರಬೇಕು (ಮೂರುಉ. ೭೭). [ನಾಮ + ಶೇಷ]

**ನಾಮಸಂಕೀರ್ತನ** (ನಾ). = ನಾಮಕೀರ್ತನ : ಪೂಜೆ ಮಾಡುವುದಕ್ಕೆ ಕಷ್ಟವಾದರೆ ದೇವರ ನಾಮಸಂಕೀರ್ತನವನ್ನಾದರೂ ಮಾಡಲಿ (ರೂಢಿ). [ನಾಮ + ಸಂಕೀರ್ತನ]

**ನಾಮಸಾದೃಶ್ಯ** (ನಾ). ಹೆಸರಿನ ಸಾಮ್ಯ ; ಹೆಸರಿನ ಹೋಲಿಕೆ ; ಒಂದೇ ರೀತಿಯ ಹೆಸರಿರುವುದು : ಈ ಬಾಲಕನು 'ಶಕುಂತಲಾವಣ್ಯ' ಎಂದು ನಾನು ಆಡಿದುದನ್ನು ಕೇಳಿ ನಾಮಸಾದೃಶ್ಯದಿಂದ ಭ್ರಮಿಸಿದನು (ಶಾಕುಂತ. ೧೦೭–೧೨). [ನಾಮ + ಸಾದೃಶ್ಯ]

**ನಾಮಸೂಚಿ** (ನಾ). ಹೆಸರನ್ನು ತಿಳಿಸುವ ಪಟ್ಟಿ : ಹುಲುಸಾಗಿ ಬೆಳೆದು ಬಂದ ಸಾಹಿತ್ಯವನ್ನೆಲ್ಲಾ ಆ ವ್ಯಕ್ತಿಯ ಹೆಸರಿನಲ್ಲಿ ಒಂದೆಡೆಗೆ ತರುವುದೇ ನಾಮಸೂಚಿಯ ಧ್ಯೇಯ (ಗ್ರಂಥಾಲ. ೫೧). [ನಾಮ + ಸೂಚಿ]

**ನಾಮಸ್ಮರಣ** (ನಾ). (ಇಷ್ಟದೇವತೆ, ಗುರು ಮೊದಲಾದವರ) ಹೆಸರನ್ನು ನೆನೆಯುವುದು : ಬಲಿಯು . . . ದಿವಿಜಗಣಗಿಣವ ಹರಿಯ ನಾಮಸ್ಮರಣಬಲದಲಿ ಹಲಿಗೆಯ ತಿರುಹಿ ಸುರರ ರಾಜನ ವರರಥವ ನೆಱೆ ಗೆಲಿದು ಗಂಧರ್ವಾದಿ ನಾಯಕರ (ಸಂಭಪ. ೯–೩೦) ; ಈ ಉಪಕಾರವನ್ನು ತಾವು ಮಾಡಿದರೆ ತಮ್ಮ ನಾಮಸ್ಮರಣವನ್ನು ಯಾವಾಗಲೂ ಮಾಡುತ್ತ ಇರುತ್ತೇನೆ (ರೂಢಿ). [ನಾಮ + ಸ್ಮರಣ]

**ನಾಮಸ್ಮರಣೆ** (ನಾ). = ನಾಮಸ್ಮರಣ : ಏನ ಓದಿದರೇನು ಏನ **ಕೇಳಿದರೇನು ಈ ನಾಮಸ್ಮರಣೆಗೆ ಸರಿ ಬಾರದು** (ಪುರಂದ. ಧಾ. ೧-೯೦-೩); ಉಪಾಧ್ಯಾಯನ ನಾಮಸ್ಮರಣೆ ವಿದ್ಯಾರ್ಥಿಯ ಕರ್ತವ್ಯ (ಕಜಸಾ. IV, ಪೀಠಿಕೆ). [ನಾಮ + ಸ್ಮರಣೆ]

**ನಾಮಾಂಕ** (ನಾ). ಹೆಸರಿನಿಂದ ಗುರುತು ಮಾಡಿರುವುದು; ಹೆಸರು ಹಾಕಿರುವುದು. [ನಾಮ + ಅಂಕ2]

**ನಾಮಾಂಕಿತ** (ಗು). ೧. ಹೆಸರಿನಿಂದ ಗುರುತು ಮಾಡಿದ; ಹೆಸರನ್ನು ಕೆತ್ತಿರುವ. ೨. ಹೆಸರು ವಾಸಿಯಾದ; ಸುಪ್ರಸಿದ್ಧವಾದ : ನಾಮಾಂಕಿತ ವಕ್ತೃಗಳಲ್ಲಿ ಒಬ್ಬರಾದ ಗೋಖಲೆಯವರು . . . 'ರಂಗಸಜ್ಜಿಕೆ' ಮಾಡುತ್ತಿದ್ದರಂತೆ (ಕಥಕ. ೬೩). (ನಾ). ೩. ಹೆಸರಿನಿಂದ ಗೊತ್ತುಮಾಡುವುದು; ಹೆಸರುಳ್ಳುದು : ಕಮಳವಿದು ನಿನ್ನ ಮುಖದಂತೆ ಮುಖಮುಮಿಾ ಕಮಳದಂತೆ ನಿಕ್ಕುವಮೆಂದಿಂತಮರ್ದಿರೆ ಪೇಟ್ವುದನಱಿಗುತ್ತ ಮರನ್ಯೋನ್ಯೋಪಮಾನ ನಾಮಾಂಕಿತಮಂ (ಕವಿರಾ. ೩-೬೩). ೪. ಹೆಸರನ್ನು ಕೆತ್ತಿರುವುದು : ಆ ರಾಜರ್ಷಿಯು . . . ತನ್ನ ನಾಮಾಂಕಿತವಾದ ಮುದ್ರಿಕೆಯನ್ನು . . . ಶಕುಂತಲೆಯ ಬೆರಳಿಗಿಟ್ಟು ಹೋದನು (ಶಾಕುಂತ. ೪೭-೮). ೫. ಹೆಸರು : ಅನೇಕ ಶಿಲ್ಪಿಗಳು ತಾವು ಮಾಡಿದ ಕಲಾಕೃತಿಗಳ ಕೆಳಗೆ ತಮ್ಮ ನಾಮಾಂಕಿತದ ಮೊದಲನೆ ಅಕ್ಷರವನ್ನು ಮಾತ್ರ ಕೊರೆದಿರುವ ಪದ್ಧತಿಯನ್ನು ಇಟ್ಟುಕೊಂಡಿದ್ದರೆಂದು ಕಾಣುತ್ತದೆ (ಭಾರದ. ೫೦೬); ತಮ್ಮ ಗುರುಗಳಾಗಿದ್ದ ಶ್ರೀತೋಂಟದ ಸಿದ್ಧಲಿಂಗೇಶ್ವರರ ನಾಮಾಂಕಿತದಲ್ಲಿ 'ಸಿದ್ಧಾಪುರ'ವೆಂಬ ನಗರವನ್ನು ನಿರ್ಮಿಸಿ (ನೊಳಂಬ. ೬೩).

**ನಾಮಾಂಕಿತ ಮಾಡು** = ಹೆಸರನ್ನು ಇಡು; ನಾಮಕರಣ ಮಾಡು : ಅವರ ಹೆಸರು ಅಜರಾಮರ ಉಳಿಯಲೆಂದು ಜನಪದವು ಆ ಊರನ್ನೇ ಅವರಿಗೆ ನಾಮಾಂಕಿತ ಮಾಡಿದ್ದುಂಟು (ಕನ್ನಜಾ. ೮೫).

[ನಾಮ + ಅಂಕಿತ]

**ನಾಮಾಂತರ** (ನಾ). ಬೇರೆಯ ಹೆಸರು : ರೌಚ್ಯನೇ ದೇವಸಾವರ್ಣಿಕನೆಂದು ಪುರಾಣಭೇದಗಳಿಂ ನಾಮಾಂತರವುಂಟಾಗಿ (ವಿವೇಕ. ೨೧೪); ಊರು ಬಿಟ್ಟು ಹೋದ ಈ ವ್ಯಕ್ತಿ ನಾಮಾಂತರವನ್ನು ಹೊಂದಿ ಬೇರೆ ಊರಿನಲ್ಲಿ ವಾಸಿಸುತ್ತಿದ್ದನು (ರೂಢಿ). [ಸಂ.]

**ನಾಮಾಂತರಿತ** (ನಾ). [ಕಾವ್ಯಮಿಾ] ಒಂದು ಬಗೆಯ ಪ್ರಬಂಧ ಚಮತ್ಕಾರ; ಹೇಳಬೇಕಾದ ಹೆಸರನ್ನು ಬೇರೆ ಬೇರೆ ಪದಗಳಲ್ಲಿ ಅಡಗಿಸಿ ಹೇಳುವ ಚಿತ್ರಕಾವ್ಯ; ಪ್ರಹೇಳಿಕೆ : ನಾಮಾಂತರಿತಕ್ಕೆ— ಮೊದಲೊಳ್ ವಿಕಾರಿ ನಾಕಾರದರ್ಶನೀಯಂ ವಿರಾಮದೊಳ್ಯಾಯಕಮಂತದು ತಾಂ ವಿನಿಂದ್ಯಮಲ್ತಾದಿದೇವಪುತ್ರಂ ಸದಾನವಾರಿಪ್ರಮುಖಂ (ಕಾವ್ಯಾವ. ೬೦೦). ☞ ಇಲ್ಲಿ 'ವಿನಾಯಕ' ಎಂಬ ಹೆಸರಿನ ಅಕ್ಷರಗಳು ಬೇರೆ ಬೇರೆ ಪದಗಳಲ್ಲಿ ಸೇರಿ ಹೋಗಿವೆ.

[ನಾಮ + ಅಂತರಿತ]

**ನಾಮಾಕ್ಷರ** (ನಾ). ಹೆಸರಿನಲ್ಲಿ ಸೇರಿರುವ ವರ್ಣ : ಅನುಜಂ ನಾಮಾಕ್ಷರದಿಂದನಂತವೀರ್ಯಂ ಪರಾಕ್ರಮಕ್ರಮದಿಂ ತನ್ನನೆ ತಾನೆ ಪೋಲ್ವಂ (ಶಾಂತಿಪು. ೨-೧೧); ಅನುದಿನಮೊಂದೊಂದಾಗಲೆ ವನಿತಾಮಣಿಯೆಣಿಪುದೆನ್ನ ನಾಮಾಕ್ಷರಮಂ (ಶಾಕುಂತ. ೪೪ ಅಡಿಟ).

[ನಾಮ + ಅಕ್ಷರ]

**ನಾಮಾನುಕ್ರಮ** (ನಾ). ಹೆಸರುಗಳ ಅಕಾರಾದಿಯಾದ ಪಟ್ಟಿ; ಪರಿವಿಡಿ; ಆನುಪೂರ್ವಿ : ಅಂಗರಚನಾಶಾಸ್ತ್ರದ ಪಾರಿಭಾಷಿಕ ನಾಮಾನುಕ್ರಮದಲ್ಲಿ (ನಾಮೆಂಕ್ಲೇಚರ್) ಹೊಂದಾಣಿಕೆ ತಗ್ಗುತ್ತಿದೆ (ಕವಿಕೋ. I, ೨೨). [ನಾಮ + ಅನುಕ್ರಮ]

**ನಾಮಾನುಕ್ರಮಣಿಕೆ** (ನಾ). = ನಾಮಾನುಕ್ರಮ : ಗ್ರಂಥದ ಕೊನೆಯಲ್ಲಿ ನಾಮಾನುಕ್ರಮಣಿಕೆಯನ್ನು ಸೂಚಿಸಿದರೆ ಓದುಗರಿಗೆ ಅನುಕೂಲವಾಗುತ್ತದೆ (ರೂಢಿ). [ನಾಮ + ಅನುಕ್ರಮಣಿಕೆ]

**ನಾಮಾವಶೇಷ** (ನಾ). = ನಾಮಶೇಷ : ಜರಾಸಂಧನನ್ನು ನಾಮಾವಶೇಷ ಮಾಡಿದುದು ಒಂದು ವಿಚಿತ್ರವಾದ ತಂತ್ರಗಾರಿಕೆಯ ನಿದರ್ಶನವಾಗುವಂತಿದೆ (ಪಾಠಾಳ್ಯ. ೬೨). [ನಾಮ + ಅವಶೇಷ]

**ನಾಮಿ**$_1$, **ನೌಮಿ** (ನಾ). ಪಕ್ಷದ ಒಂಬತ್ತನೆಯ ದಿನ,—ತಿಥಿ; ನವಮಿ : ಪದಮಧ್ಯಲೋಪಕ್ಕೆ...ನವಮಿ-ನಾಮಿ, ನಿಯಮ-ನೇಮ (ಶಮದ. ೨೭೫ ಪ್ರಯೋ). **ನೌಮಿ** : ನವಮಿ, ನೌಮಿ; ದಶವಿ, ದಸವೆ (ಶಬ್ದಾನು. ೧೬೦ ಪ್ರಯೋ). 'ನಾನಾಮಿ' ಪರಾ.

[<ಸಂ. ನವಮೀ]

**ನಾಮಿ**$_2$ (ಗು). ೧. ಬಗ್ಗಿಸುವ. ೨. [ವ್ಯಾಕ] ದಂತ್ಯಾಕ್ಷರವನ್ನು ತಾಲವ್ಯವನ್ನಾಗಿ ಅಥವಾ ಮೂರ್ಧನ್ಯವನ್ನಾಗಿ ತಿರುಗಿಸುವ. (ನಾ). ೩. ಅ, ಆಕಾರಗಳನ್ನು ಬಿಟ್ಟು ಉಳಿದ ಸ್ವರಾಕ್ಷರಗಳು : ಪರಿಹರಿಸೆಯವರ್ಣಮನಾ ಸ್ವರಂಗಳವು ನಾಮಿಯೆಂಬುವಕ್ಕುಂ (ಕಾವ್ಯಾವ. ೧೨); ಅವರ್ಣಂ ಪಿಂಗಿದಾ ಸ್ವರಂ ನಾಮಿಯೆಂದು ಪೇಟಲ್ಪಡುಗುಂ (ಶಮದ. ೯); ಅವರ್ಣವನ್ನುಳಿದ ಸ್ವರಗಳನ್ನು "ನಾಮಿಗಳು" ಎಂದು ಕರೆದಿದ್ದಾರೆ (ಸಂಶೋಧ. ೧೭).

[ಸಂ. ನಾಮಿನ್]

**ನಾಮಿ**$_3$ (ನಾ). ಒಂದು ಬಗೆಯ ತೆರಿಗೆ : ನಾಮಿಯುಡ್ಡವಂತಿಕೆ ನಾನಾ ಸುಲಿಗೆ ಲಾವಣಿಗೆಯೆಂಬೀ ಗಳಬಳಮಂ ನಿಲ್ಲಿಸಿ ಸುಂಕಮಂ ಬಾಳಿಸಿದಂ (ಕಳಸ್ನ. ೭-೩೦). [ ? ]

**ನಾಮಿತ** (ನಾ). [ಸಂಗೀತ] ಒಂದು ಬಗೆಯ ಹಾಡುವ ಧಾಟಿ; ಶಾರ್ಙ್ಗದೇವನು ಹೇಳಿರುವ ಹದಿನೈದು ಬಗೆಯ ಗಮಕಗಳಲ್ಲಿ ಒಂದು; ☞ ಹಿಂದಿನ ಸಂಗೀತಶಾಸ್ತ್ರಕಾರರು ಗಮಕದ ಸಂಖ್ಯೆಯಲ್ಲಿ ಮತಭೇದವನ್ನು ಹೊಂದಿರುತ್ತಾರೆ. "ಶಾರ್ಙ್ಗದೇವನ ಪಂಚದಶವಿಧ ಗಮಕಗಳು ಹೀಗಿವೆ:— ೧. ತಿರಿಪ—ಸ್ವರ ಸಮೂಹದಲ್ಲಿ ಒಂದು ಸ್ವರ ಒತ್ತಲ್ಪಟ್ಟು ನುಡಿಯುವುದು. ೨. ಸ್ಫುರಿತ—ಜಂಟಿಸ್ವರಗಳಲ್ಲಿ ಎರಡನೇ ಸ್ವರ ಒತ್ತಲ್ಪಟ್ಟು ನುಡಿಯುವುದು. ೩. ಕಂಪಿತ—ಮುಂದಿನ ಸ್ವರ ತಾಗುವಂತೆ ಅಲುಗಿದರೂ ಆ ಮುಂದಿನ ಸ್ವರಕ್ಕೆ ಪ್ರಾಧಾನ್ಯ ಇಲ್ಲದಂತೆ ಒಂದು ಸ್ವರ ಅಲುಗುವುದು ಅಥವಾ ಕಂಪಿಸುವುದು. ೪. ಲೀನ— ಹಿಂದಿನ ಸ್ವರವೊಂದು ಮುಂದಿನ ಸ್ವರದಲ್ಲಿ ಮೃದುವಾಗಿಯೂ ನಿಧಾನವಾಗಿಯೂ ಐಕ್ಯವಾಗುವುದು. ೫. ಆಂದೋಳಿಕ— ದೀರ್ಘಕಾಲ ಒಂದು ಸ್ವರ ನುಡಿದ ನಂತರ ಮುಂದಿನ ಸ್ವರಕ್ಕೆ ಲೀನವಾಗುವಂತೆ ತಂತಿ ಎಳೆಯುವುದು (ವೀಣೆಗೆ ಮಿಾಸಲಾದ ಗಮಕ). ೬. ವಳಿ—ವೀಣೆಯ ಒಂದು ಸ್ವರಸ್ಥಾನದಲ್ಲೇ ಎರಡು ಅಥವಾ ಮೂರು ಮುಂದಿನ ಸ್ವರಗಳು ನುಡಿಯುವಂತೆ ತಂತಿಯನ್ನು ನಿರ್ಣಯದಿಂದ ಜಗ್ಗಿಸುವುದು (ವೀಣೆಗೆ ಮಿಾಸಲಾದ ಗಮಕ). ೭. ತ್ರಿಭಿನ್ನ—ವೀಣೆಯ ಒಂದು ಸ್ವರಸ್ಥಾನದಲ್ಲಿ ಸಾರಣೆ, ಪಂಚಮ ಮತ್ತು ಮಂದ್ರ, ಅನುಮಂದ್ರ ತಂತಿಗಳ ಮೇಲೂ ಒಂದೇ ಬೆರಳು ಅಥವಾ ಬಿಡಿಬಿಡಿಯಾಗಿ ಬೆರಳುಗಳನ್ನೂರಿ, ನಾಲ್ಕು ತಂತಿಗಳನ್ನೂ ಏಕಕಾಲದಲ್ಲಿ ಧ್ವನಿಮಾಡುವಂತೆ ಒಂದೇ ಬೆರಳಿನಿಂದ ಅಥವಾ ಬಿಡಿಬಿಡಿಯಾಗಿ ಮಿಾಟುವುದು (ವೀಣೆಗೆ ಮಿಾಸಲಾದ ಗಮಕ). ೮. ಕುರುಳ— ಸ್ವರಸ್ಥಾನದಲ್ಲಿ ತಂತಿ ಜಗ್ಗಿಸಿ ಮತ್ತೊಂದು ಸ್ವರ ನುಡಿಸುವುದು

(ವೀಣೆಗೆ ಮೀಸಲಾದ ಗಮಕ). ೯. ಆಹತ—ಒಂದು ಸ್ವರಕ್ಕೆ ಮೀಟು ಹಾಕಿ, ಮೀಟಲ್ಲದೆ ಇನ್ನೊಂದು ಸ್ವರ ನುಡಿಯುವುದು (ವೀಣೆಗೆ ಮೀಸಲಾದ ಗಮಕ). ೧೦. ಉಲ್ಲಸಿತ—ಮಧ್ಯೆ ಇರುವ ಸ್ವರಗಳು ಗೋಚರವಾಗದಂತೆ ಒಂದು ಸ್ವರದಿಂದ ಮತ್ತೊಂದು ಸ್ವರಕ್ಕೆ ಜಾರುವುದು. ೧೧. ಪ್ಲಾವಿತ—ಮತ್ತೊಂದು ರೀತಿಯ ಕಂಪನ. ೧೨. ಹುಂಪಿತ—ಶಾರೀರವನ್ನು ಸಂಚಾಗಿ ಪ್ರಾರಂಭಿಸಿ ನಂತರ ಅದೇ ಸ್ವರವನ್ನು ಘಾತವಾಗಿ ಪ್ರಕಟಿಸುವುದು ಮತ್ತು ಘಾತವಾಗಿ ಸ್ವರ ಪ್ರಾರಂಭಿಸಿ ಸಂಚಾಗಿ ಅದೇ ಸ್ವರ ನುಡಿಯುವುದು. ೧೩. ಮುದ್ರಿತ—ತುಟಿಗಳನ್ನು ಮುಚ್ಚಿ ಶ್ರುತಿಲೀನವಾಗಿ ಹಾಡುವುದು. ೧೪. ನಾಮಿತ—ಸಣ್ಣ ಸಂಚುಶಾರೀರದಲ್ಲಿ ಹಾಡುವುದು. ೧೫. ಮಿಶ್ರಿತ—ಎರಡು ಮೂರು ವಿಧ ಗಮಕಗಳನ್ನು ಸೇರಿಸಿ ಹಾಡುವುದು" (ಸಂಗೀತಂ. ೨೬): ಸ್ವರಕಂಪವು ಅವರೋಹಕ್ರಮದಲ್ಲಿ ಮಂದ್ರ (ಸ್ಥಾಯಿಯ)ದ್ದಾದರೆ ಅದು ನಾಮಿತ(ವೆಂಬ ಗಮಕ) (ಚತುಪ್ರ.೩೨). [ಸಂ.]

**ನಾಮು** (ನಾ). ಎಳೆಜೋಳವನ್ನು ತಿನ್ನುವುದರಿಂದ ದನಕರುಗಳಿಗೆ ಬರುವ ಒಂದು ಬಗೆಯ ರೋಗ ; ಒಂದು ಸಲ ಜೋಳವನ್ನು ಕತ್ತರಿಸಿಕೊಂಡ ಮೇಲೆ ಕೂಳೆಯಲ್ಲಿ ಬೆಳೆಯುವ ಚಿಗುರು ಜೋಳವನ್ನು ತಿನ್ನುವುದರಿಂದ ಉಂಟಾಗುವ ರೋಗ : (ಎಸಮ್ಮೆ. XV, ೪೨). ☞ ಇದು ನಾಮುಹುಳ ಎಂಬ ಕ್ರಿಮಿಗಳಿಂದ ಉಂಟಾಗುವುದೆಂದು ಹೇಳಲಾಗಿದೆ. ಈ ರೋಗ ಬಂದರೆ ದನಕರುಗಳು ನಡುಗುತ್ತವೆ. ಆಹಾರವನ್ನು ತೆಗೆದುಕೊಳ್ಳುವುದಿಲ್ಲ; ಮೆಲುಕು ಹಾಕುವುದಿಲ್ಲ; ಕಾಲುಗಳನ್ನು ಚಿಮ್ಮುತ್ತ ನೆಲಕ್ಕೆ ಬೀಳುತ್ತವೆ.
[ದೇ.‖ ತೆಲು. ನಾಮು = ಜೋಳದ ಕೂಳೆಯಲ್ಲಿ ಬೆಳೆಯುವ ಚಿಗುರು]

**ನಾಮುಹುಳ** (ನಾ). ನಾಮು ರೋಗವನ್ನು ತರುವ ಕ್ರಿಮಿ : (ಎಸಮ್ಮೆ. XV, ೪೨). [ನಾಮು + ಹುಳ(<ಪುಟು)]

**ನಾಮೂಷಿ** (ನಾ). ಅಗೌರವ ; ಅಪಮಾನ : ಅಣ್ಣಗೆ ನಾಮೂಷಿ ಮಾಡಿದ ವಿಧವೆಯ ಮೇಲೆ ರೋಷವನ್ನು ತಾಳಿದ ರಾಘವೇಂದ್ರ ಉಪಾಧ್ಯನು . . . ಅರ್ಭಟೆ ಮಾಡಿದನು (ವಾಗ್ದೇವಿ. ೧೨೧).
[←ಹಿಂ. ನಾಮೂಷೀ ; ಮರಾ. ನಾಮೋಶೀ, ನಾಮೋಸೀ, ನಾಮುಷ್ಕೀ]

**ನಾಮೆ**$_1$ (ನಾ). ಹೆಸರು ; ಕೀರ್ತಿ ; ಪ್ರಸಿದ್ಧಿ : ನಮ್ಮ ಹಿರೀರ ಕಾಲಕ್ಕೆ ಇದ್ದ ನಾಮೆ ನಮ್ಮ ಕಾಲಕ್ಕೆ ಇಲ್ಲ (ಗಂಪೂಯಿ. ೫೦) ; ಈಗಾಗಲೇ ಶ್ಯಾಮರಾಯ ಪ್ರಥಿತಯಶ ಕಂಟ್ರಾಕ್ಟದಾರನೆಂಬ ನಾಮೆಯನ್ನು ಪಡೆದಿದ್ದ (ದೀಪಹ. II, ೨೮). [<ಸಂ. ನಾಮನ್]

**ನಾಮೆ**$_2$ (ನಾ). ಕಾಗದ ; ಪತ್ರ ; ದಾಖಲೆ : 'ತಂಡನಾಮೆ', 'ಪಂಚನಾಮೆ' ಪರಾ. [←ಪಾರ. ಹಿಂ. ಮರಾ. ನಾಮಾ]

**ನಾಮೋದ್ದಿಷ್ಟ** (ಗು). ಹೆಸರಿಸಿದ ; ನಮೂದಿಸಿದ : ಸಂಸತ್ತಿನ ಯಾವುದಾದರೊಂದು ಸದನದಿಂದ ನೇಮಕವಾದ ಅಥವಾ ನಾಮೋದ್ದಿಷ್ಟವಾದ ಯಾವುದೊಂದು ನ್ಯಾಯಾಲಯವು . . . ರಾಷ್ಟ್ರಪತಿಯವರ ಆಚರಣೆಯನ್ನು ಪುನರ್ವಿಲೋಕನಕ್ಕೆ ಒಳಪಡಿಸಬಹುದು (ಭಾಧಾನ. ೨೧೪). [ಸಂ.]

**ನಾಯ್**, ನಾಯಿ (ನಾ). ೧. ಶುನಕ ; ಶ್ವಾನ : "ಕೌಲೇಯಕಃ, ಸಾರಮೇಯಃ, ಶುನಕಃ, ಶ್ವಾ, ಕುರ್ಕುರಃ, ಭಷಕಃ, ಮೃಗದಂಶಃ, ಶಾಲಾವೃಕಃ — ಈ ೮ ನಾಯ್[ಪಾಠಾಂ.ಯಿ]" (ಹಲಾಯು. ೪೭–೧೨೬) ; ಈತಂ ಸ್ವಾಮಿಭಕ್ತನೆಂದುಂ ನಾಯ್ಗೋಲಿಳೆ [ಯೊಳ್] ಕರಮೆಂಬುದಿದಗ್ಗಳವಮಾ ಹೀನಾಧಿಕಪ್ರಶಂಸಾದೋಷಂ (ಕವಿರಾ. ೩–೮೮) ; ದುರಾತ್ಮಾ ಎನ್ನನೊದೆದ ನಿನ್ನ ಕಾಲ್ಗಳಂ ಜನ್ಮಾಂತರದೊಳಂ ನಾಯುಂ ನರಿಯುಮಾಗಿಯಪ್ಪೊಡಂ ಕೊಂದು ಮುಕ್ಕಳ್ವೆರಸು ತಿಂಬೆಂ (ಪದ್ಮಾರಾ. ೮–೧೯) ; ಪಂದಿವೇಂಟೆಯ ನಾಯೆಂತಪ್ಪುವೆಂದೊಡೆ (ಸಂಪಭಾ. ೫–೪೬ ವ) ; ಮೀನಂ ಮೀನಂ ತಿಂಬಂತಿರೆ ನಾಯ್ನಾಯಂ ತಿಂಬಂತಿರೆ ತಿಂದರಸಿಬರಂ ರಕ್ಕಸಿಯರ್ (ಗದಾಯು. ೪–೪೦); x x x ಪೋಗಲ್ ತ್ತಪ್ಪಿ ಹರಿದ ನಾಯಂ . . . ಸೂರಸೇವಿ ನಾಯಕಂ x x x ಕಟ್ಟಿಕೊಣ್ಡ ಬಿಡಲೊಲದಿಱುದೊಡೆ (ಎಕ. IV, ಹುಣಸೂ. ೧೧–೧೭ ; 1020 ?) ; ಪಲವು ನಾಯ್ಗಳ ನಡುವಣ ಪುಲ್ಲೆಯಂತೆ ನಡುನಡುಗಿ (ಧರ್ಮಾಮೃ. ೬–೯೨) ; ಪೊರೆದೇಂ ಬಾಳವೆ ಪಂದಿ ನಾಯ್ಗಳೊಡಲಂ (ಸೋಮೇಶ. ೧೪) ; ಹಾಸಗಳ ಪಿಡಿದೆಳೆವ ನಾಯ್ಗಳ . . . ಹೆಬ್ಬುಲೆ ಬೀಸಿದರು ಬೇಂಟೆಗರು ಬಹಳ ಮೃಗಂಗಳನು ಕೆಡಹಿ (ಕುಮ್ಯಾಅ. ೩–೯). ೨. (ಆಲಂ) ಹೀನಜಾತಿಯದು ; ಕೀಳುಮಟ್ಟಕ್ಕೆ ಸೇರಿದುದು : 'ನಾಯಿತುಳಸಿ', 'ನಾಯಿನೇಱಿಲ್' ಪರಾ. ೩. ನೀಚ ; ತುಚ್ಛ ; ಅಯೋಗ್ಯ : ಕಡಿಗಳ ಹದಿನೆಂಟನೊಡಗೂಡಿ ಸಂದಿಸಿ ತೊಡಚಿ ಕಟ್ಟಿದೆ ನರರ ಬಂಧನದಲ್ಲಿ ಈ ತೊಡಹದ ನಾಯ ನಿಚ್ಚ ನೀನಿಕ್ಕಿ ಕೆಡಿಸಿದೆಯಯ್ಯ (ದೇದಾವ. ೩೭–೭೨) ; ಆಳ ಹೆದಱಿಸಿ ನುಡಿವ ನಾಯ್ಗಳ ಬೀಳ ಬಡಿಬಡಬಾಗ್ನಿ ನೊರಜಿನ ದಾಳಿಗಳಕುವುದುಂಟೆ(ಕುಮ್ಯಾದ್ರೋ. ೨–೭೯).

**ನಾಯಿ: ೧.** ಕಳ್ಳನೊಕ್ಕಲಾದುದಿಲ್ಲ ನಾಯಿ ಜಂಗುಳಿಯಾದುದಿಲ್ಲೆಂಬ ನಾಣ್ನುಡಿಯನಱಿದೆಯಿಲ್ಲಕ್ಕುಂ(ಧರ್ಮಾಮೃ. ೬–೧೩೩); ನಾಯ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯಾ (ಬಸವ. ೨೨೩); ಚನ್ನಮಲ್ಲಿಕಾರ್ಜುನನ ಅಱಿದ ಬಳಿಕ ಆ ಕಾಯವ ನಾಯಿ ತಿಂದರೇನು (ಮಹಾದೇ. ಬ. ೩೯–೩) ; ಬಿಡಿಸುತ್ತುಂ ಬೆಳ್ವಾರಮನಡಿಯಿಡು ಕಾಣದ ಪೊಲೊಯ್ಯನಿಸು ನಾಯಿಗಳಂ ಸಡಲಿಸು ಹಾಸಮನೆನುತುಗ್ಗಡದಿಂ ಮುತ್ತಿದುದು ಪುಲ್ಲೆಯಂ ಭಿಲ್ಲೌಘಂ (ಉದ್ಭಟ. ೨–೭೦) ; ನಾಯಿ ಸಿಂಹಕ್ಕಿದಿರೆ ಫಡ ಹೋಗೆಂದಳಬುಜಾಕ್ಷಿ (ಕುಮ್ಯಾವಿ. ೨–೩೯) ; ನಾಕದ ಸುಖ ನಾಯಿಗೆ ತಿಳಿದೀತೆ ? (ಗಾದೆ). ೩. ಆ ರತ್ನಪುರಿಯೊಳಗೆ ಅತಿ ಮದದ ನಾಯಿಗಳು ಹೊಕ್ಕಿರೆ ಕ್ಷಿತಿತಳಕೆ ಸುರಮುನಿಪ ನಾರದ ಯತಿವರನು ಬರೆ (ಸಂಭಪ. ೭–೨೫); ವಾಯುಸುತನಂಜಿಸುವನೆಂದೀ ನಾಯಿ ಬೆದಱಿದನಕಟ (ಕುಮ್ಯಾಸ. ೧೪–೫೯) ; ನಾಯೆ ಬಗುಳದೆ ಕೆಲಕೆ ಸಾರ್ . . . ಎಂದಸಹಾಯಶೂರರ ದೇವ ಜಱೆದೀಡಾಡಿದನು ಚರನ (ತೊರಂರಾ. ೫–೫–೬) ; ಕೊಟ್ಟ ಸಾಲವ ಕೊಡದ ನಾಯಿ ಇಟ್ಟ ಭಾಷೆಯ ತಪ್ಪುವ ನಾಯಿ (ಪುರಂದ.೫–೪೯–೧) ; ನ್ಯಾಯವ ಬಿಟ್ಟು ನ್ಯಾಯವ ಪೇಳುವ ನಾಯಿಗೆ ನರಕವು ತಪ್ಪೀತೆ (ಕನಕ. ೨೫–೪) ; ನಿಶ್ರೇಯಸಾಭ್ಯಾಸಿಗಳ ನಿಂದಿಪ ನಾಯಿಗೇತಕೆ ನವರಸಾನ್ನವು (ಅಮೃತ. ೧–೩೨).

ನಾಯ ಡಿಂಗರ = ಬಹಳ ಹೀನನಾದವನು ; ಕಡು ನೀಚ : ಕುಲಮುಳ್ಳ ನರಂ ಪೆಱರೆಂಜಲನುಂಡಂದೆಲ್ಲಮವನ ಡಿಂಗರನೆಂಬರು ಸಲೆಯಡಗಂ ನಾಯೆಂಜಲ ನಲಿದಲಸದೆ ತಿಂದಂದು ನಾಯ ಡಿಂಗರನಲ್ತೆ (ಪಸಾರ. ೫೪೮). ನಾಯ ಡೋಣಿ = ನಾಯಿಗೆ ಆಹಾರಕ್ಕಾಗಿ ಇಡುವ ಪಾತ್ರೆ : ಬಲ್ಲಿದನೆಂಬವನ ಕೆಡಿಸಿತ್ತು ವಿಧಿ . . . ದಶಮುಖನ ನಾಯ ಡೋಣಿಯಲ್ಲುಣಿಸಿತ್ತು (ಬಸಹೆ. ೩೭–೯೫). ನಾಯ ತೇಜ = "ಹೇಯವಾದ ದರ್ಪ ಅಥವಾ ಕೀರ್ತಿ" (ಬಸವ. ಕೋಶ) : ಹರಗಣಪಂಕ್ತಿಯ ನಡುವೆ ಕುಳ್ಳಿರ್ದು ನಾನು ಒಡೆಯತನದ

ನಾಯ ತೇಜವ ಹೊತ್ತುಕೊಂಡು . . . ಒಡೆಯರಿಂದಲೂ ಮಿಗಿಲಾಗಿಕ್ಕಲು ತೆಗೆದಿರಿಸಿದನು (ಜಸಪ. ೪೩೯). **ನಾಯ ತೋಟ**=ನಾಯಿಗಳ ಜಗಳ : ಬೇಟೆಯ ಬೆಂಬಳಿಗೆ ಸಿಕ್ಕವು ನಾಯ ತೋಟಗೆ ತೊಡಕಲು ಹಿಂಡಿನ ಗೊಂದಣದಲ್ಲಿ ಹೊಕ್ಕು ಅಡ ತಿಂದಹವು (ಕಲ್ಯಾಶಾಂ. ೧೧೧-೧೯). **ನಾಯ ನಡುಬೋನ**=ನಾಯಿಗಳ ಮಧ್ಯೆ ಇರುವ ಆಹಾರ : ನಾಯ ನಡುಬೋನವನು [ಪಾಠಾಂ. ನಾಯಿಗಳ ನುಡಿಗೇಳಿ, ನ್ಯಾಯಮಾರ್ಗವ ಬಿಟ್ಟು] ನೆಚ್ಚಿ ವೃಥಾಯ ಕೆಡಬೇಡಾ (ಕುವ್ಯಾಉ. ೩-೧೨೯). **ನಾಯನೂಡು**=ನಾಯಿಗೆ ತಿನ್ನಿಸು,—ಎರೆ : ಕವಿಲೆಯಂ ಕಱಿದು ನಾಯನೂಡುವ . . . ಕಟ್ಟಿಗ್ಗರಂತೆ (ಧರ್ಮಾಮೃ. ೯-೧೬೨). **ನಾಯ ಪಾಡು**=ನಾಯಿಯ ಗತಿ,—ಸ್ಥಿತಿ ; ಬಹಳ ಹೀನಾವಸ್ಥೆ : ಆತನು ಹೇಳಿದ ಹಾಗೆ ಕುಣಿಯುತ್ತಾ ಬಂದರೆ ನಮ್ಮ ಪಾಡು ನಾಯ ಪಾಡಾಗುವದರಲ್ಲಿ ಆವ ಸಂಶಯವೂ ಇರುವುದಿಲ್ಲ (ಜಿನ್ನಜೇ. ೫೯). **ನಾಯ ಮಱಿ**=ಮರಿನಾಯಿ ; ಕುನ್ನಿ : ಸಿಂಹವೆತ್ತಲು ನರಿಗಳೆತ್ತಲು ನಾಯ ಮಱಿಯೆತ್ತ (ಕುವ್ಯಾಕ. ೯-೭). **ನಾಯಿ ತಲೆಯ ಮೇಲಿನ ಬುತ್ತಿ**=ಹೆಚ್ಚು ಕಾಲ ಸ್ವಾಧೀನದಲ್ಲಿರುತ್ತದೆಂಬುದನ್ನು ನಂಬಲಾಗದ ವಸ್ತು ಅಥವಾ ಅಧಿಕಾರ ; ಅನಿಶ್ಚಿತವಾದುದು : ಈ ಕೆಲಸವೋ ನಾಯಿ ತಲೆಯ ಮೇಲಿನ ಬುತ್ತಿ ಇದ್ದ ಹಾಗೆ ಇದೆ. ಇದನ್ನು ನಂಬುವ ಹಾಗಿಲ್ಲ (ರೂಢಿ). **ನಾಯಿ ಮುಟ್ಟಿದ ಗಡಿಗೆ**=ಅಪವಿತ್ರವಾದುದು : ನಾಯಿ ಮುಟ್ಟಿದ ಗಡಿಗೆ ಮುಸುರೆಯಾದರೇನು ? ಮಡಿಯಾದರೇನು ? (ಗಾದೆ).

[ದೇ. ॥ ತಮಿ. ಮಲ. ನಾಯ್ ; ತುಳು. ನಾಯಿ ;
ಕೊಡ. ನಾಯ್ ; ಗೊಂಡಿ. ನಯ್, ನಾಯ್, ನಾಯಿೊ]

**ನಾಯ,** ನೇಯ$_1$ (ನಾ). ನ್ಯಾಯ ; ನೀತಿ : ಯತ್ವಲೋಪಕ್ಕೆ—ಅಮಾವಾಸ್ಯಾ—ಅಮಾಸೆ, ಅವಸೆ . . . ನ್ಯಾಯ—ನೇಯ, ನಾಯ (ಶಮದ. ೨೮೧ ಪ್ರಯೋ) ; ನ್ಯಾಯ—ನಾಯ (ಶಬ್ದಾನು. ೧೬೦ ಪ್ರಯೋ); ಬಾಲನೊರ್ವನಂ ಬಳ್ಳು ಪಿಳ್ಳೆಯನೆಂತಂತು ಕೊಂಡುಯ್ದುದಿದಾವ ನಾಯಂ (ರಾಮಾಶ್ವ. ೧೫೬-೧೧) ; ಇಬ್ಬರ ನಾಯ ಒಬ್ಬನಿಗಾಯ (ಗಾದೆ). **ನೇಯ$_1$** : ಮೇಲಿನ 'ಶಮದ.' ಪ್ರಯೋಗವನ್ನು ನೋಡಿ. [<ಸಂ. ನ್ಯಾಯ]

**ನಾಯಂಕ** (ನಾ). = ನಾಯಕ ೨ : ಬಸವೆಯನಾಯಂಕನ ಚೆಉಂಡಪ್ಪನ ಮಗ ಧೂಳೆಯ ನಾಯಂಕನು . . . ಭಕ್ತರಿಗೆ ಧಾರಾಪೂರ್ವಕವಾಗಿ ಆಲೋಚ್ಸಿ ಕೊಟ್ಟ ಧರ್ಮದ ವ್ರಿತ್ತಿಗೆ (ಸೌಇಇ. IX-ii, ೪೨೨-೪ ; 1397). [ℙ ಇದು 'ನಾಯಕ' ಎಂಬುದರ ಅಪಲಿಖಿತ]

**ನಾಯಂದ** 'ನಾವಿದ' ನೋ.

**ನಾಯಕ** (ನಾ). ೧. ಮುಂದಾಳು ; ಮುಖಂಡ; ಅಗ್ರೇಸರ ; ಗಣ್ಯ: "ಆರ್ಯಃ . . .ನಾಯಕಃ, ಅಧಿಭೂಃ, ಅಧಿಪಃ, ಅಧೀಶಃ, ಅಧಿಪತಿಃ— ಈ ೧೦ ಒಡೆಯಂ" (ಹಲಾಯು. ೫೭-೧೨೮) ; ರಾಯರ್ಘುಳಪ್ಪನ ಭುಜಕೌಕ್ಷೇಯಕವೆನಿಪಳವೆನಾಂತ ಗೋವಿನ್ದಚಮೂನಾಯಕನೊಳ್ ಸೆಣಸುವವಂ (ಎಕ. VII, ಶಿಕಾರಿ. ೧೩೭-೩೬; 1114). ೨. ದೊರೆ ; ರಾಜ : "ನಾಯಕಃ=ದೊರೆ" (ಕಾಶಕ್ಯ. ೧೫೮) ; ನಾಯಕನಿಲ್ಲದ ಊರಲ್ಲಿ ಕಾಯಕ ಸಿಕ್ಕೀತೆ ? (ಗಾದೆ). ೩. ದಳಪತಿ; ಸೇನಾಪತಿ : ಎರಡುಮೊಡ್ಡಣದ ಮೊನೆಯ ನಾಯಕನಿಕಾಯದನೇಕ ವಿಧದ ಬಿಂಕದ ಪದಿರ ಪಱಿಗಳುಂ . . . ಒದವುವುದುಂ (ನೇಮಿಪು. ೧೨-೧೫೦ ಪ); ಶತಬಲಿ ಗಂಧಮಾದನ ಶರಭ ಮೈಂದಾದಿಗಳು ಕಾದಿತು ಮುಖ್ಯನಾಯಕರ (ಕಾಶಿರಾ. ೩೫-೧೫). ೪. ಗಂಡ ; ಪತಿ ; ಒಡೆಯ; ಯಜಮಾನ : ಪ್ರಿಯಕಾಂತೆಯಂ ಬಿಟ್ಟು ಅಗಲುವ ನಾಯಕನಂತೆ (ಸೌಗಂಧಿ. ೫೬-೭). ೫. = ನಾಯಕಮಣಿ ೨ : "ಮುತ್ತಿನ ಸರದ ನಡುವಣ ಮಾಣಿಕಮಂ ತರಳಮೆಂಬುದು ಅದನೆ ನಾಯಕಮೆಂಬುದು" (ಹಲಾಯು. ೯೨-೪೧೦) ; "ಆ ಹಾರಮಧ್ಯದ ರತ್ನ ನಾಯಕಂ" (ಮಂಗರಾ. ೧೦೦-೨೪) ; ಕರಮೊಪ್ಪಿದುದಂದು ಪುರಂದರನೀಯೆ ಪುಳೋಮಸುತೆಯ ಕಟ್ಟಿದ ಕಂಠಾಭರಣಕ್ಕೆ ತಗುಳ್ಚಿದ ಪದ್ಮರಾಗ ನಾಯಕಮಿದೆಂಬಿನಂ ರವಿಬಿಂಬಂ (ಶಾಂತಿಪು. ೮-೧೧೪); ನಾಯಕಮಿಲ್ಲದ ತೊಡವಿನ ನಾಯಕನಿಲ್ಲದ ದಿನಾವಸಾನಂ . . . ಮದಶ್ರೀಯಿಲ್ಲದ ಗಜಮದೇಂ ಮನಂಗೊಳಿಸುಗುಮೇ (ಅಜಿಪು. ೬-೯೪) ; ರಾಯರತುನದ ನಡುವೆ ನೀನನುಗಾಯಕವೊ ನಾಯಕವೊ ಮೇಱುಪನಾಯಕವೊ ನೀನಾವನೆಂದನು ಜಱಿದು ಮುರಹರನ (ಕುವ್ಯಾಸ. ೮-೩೨). ೬. ಮಾರ್ಗದರ್ಶಿಯಾದುದು ; ಪ್ರೇರಕವಾದುದು : ಈ ಪ್ರೇರಣೆಯು ಬುದ್ಧಿಗೆ ನಾಯಕವೇ ಇರುವುದರಿಂದ ಅದರ ಸಂಪೂರ್ಣ ಸ್ವರೂಪದ ಆಕಲನವನ್ನು ಒಮ್ಮೆಲೇ ಮಾಡಲು ಬರುವುದಿಲ್ಲ (ಪ್ರಬಂಧ. ೧೧೩). ೭. ಅಂಕಿತನಾಮಗಳ ಕೊನೆಯಲ್ಲಿ ಸೇರುವ ಪದ. ೮. [ಕಾವ್ಯಮಿ] ಕಾವ್ಯ, ನಾಟಕ ಮುಂತಾದುವುಗಳಲ್ಲಿರುವ ಕಥೆಯ ಮುಖ್ಯಪಾತ್ರ ; ಕಥಾನಾಯಕ : ನಾಯಕನನ್ಯನಾಗೆ ಕೃತಿ ವಿಶ್ರುತಮಾಗದುದಾತ್ತ ರಾಘವಂ ನಾಯಕನಾಗೆ ವಿಶ್ರುತಮೆನಿಪ್ಪುದು ವಿಸ್ಮಯಕಾರಿಯಲ್ತು (ಪಂರಾಪಾ. ೧-೩೭) ; ನಾಯಕನಲ್ಲಿ ಧೀರೋದಾತ್ತ, ಧೀರಲಲಿತ, ಧೀರೋದ್ಧತ, ಧೀರ(ಪ್ರ)ಶಾಂತ ಎಂದು ನಾಲ್ಕು ವಿಧ (ಕೈಪಿಡಿ. ೨೦೯) ; ಇಲ್ಲಿಯೂ ಸಹ ಕವಿಯಾಗಲಿ ಕವಿನಿರ್ಮಿತನಾದ ನಾಯಕನಾಗಲಿ ರಸಭಾವರಹಿತನಾಗಿ '**ಹೇಳುವವ**'ನಾದರೆ ಸಂಘಟನೆಗೆ ನಿಯಮವಿಲ್ಲ (ಧ್ವನ್ಯಾಲೋ. ೧೪೩) ; ಅದೇ ಕಾತರವನ್ನು ತನ್ನ ಪಠ್ಯಪುಸ್ತಕಗಳಲ್ಲಿ ಬರುವ ನಾಯಕ ನಾಯಕಿಯರನ್ನೋ, ಕಾವ್ಯಸಂಪತ್ತನ್ನೋ, ಶೈಲಿಯನ್ನೋ ಅಭಿನಂದಿಸಲು ತಿರುಗಿಸಿದರೆ ಆಗ ಅದರಿಂದ ನಿಜವಾದ ಲಾಭವುಂಟಾದೀತು (ಶಿಕ್ಷದ. ೮೪). [ಸಂ.]

**ನಾಯಕಗ್ಗಲಿ** (ನಾ). ಒಂದು ಬಗೆಯ ಕಗ್ಗಲಿಮರ ; ದುರ್ವಾಸನೆಯುಳ್ಳ ಕಗ್ಗಲಿಮರ ; ಹುಚ್ಚು ಕಗ್ಗಲಿಮರ : "ವಿಟ್ಖದಿರಃ—ನಾಯಕಗ್ಗಲಿ" (ಓಷಧಿ. ೧೫೩). [<ನಾಯ್+ಕಗ್ಗಲಿ$_1$]

**ನಾಯಕತಃಖ್ತೆ** (ನಾ). ಒಂದು ಕಾರ್ಯಾಲಯದ ಎಲ್ಲಾ ಕಾರ್ಯಗಳ ವಿವರವನ್ನು ನಮೂದಿಸಲು ಉಪಯುಕ್ತವಾದ ಕಲಮುಗಳನ್ನು ಒಳಗೊಂಡಿರುವ ಪಟ್ಟಿ ; ಸಮಗ್ರವಾದ ವಿವರಗಳನ್ನು ಬರೆಯಲು ಸಾಧಕವಾದ ಪಟ್ಟಿ : ಎಲ್ಲಾ ಕೆಲಸಗಳಿಗೂ ಅನ್ವಯಿಸುವ ಒಂದು ಕ್ರಮಬದ್ಧವಾದ ನಾಯಕತಃಖ್ತೆ (Master-Form) ಯಿರಬೇಕು (ಮುದ್ರಕ. ೧೦೪).

[ನಾಯಕ+ತಃಖ್ತೆ (<ತಖ್ತೆ)]

**ನಾಯಕತನ** (ನಾ). ಒಡೆತನ ; ಪ್ರಭುತ್ವ ; ಅಧಿಕಾರ : ತಿಂಮರಾಜಗಳು ತಮ್ಮ ನಾಯಕತನಕ್ಕೆ ಸಲುವ ಮುಳವಾಗಿಲ ರಾಜ್ಯದ ನಾನಾ ಗೋತ್ರದ . . . ಅಶೇಷವಿದ್ವನ್ಮಹಾಜನೇಭ್ಯಃ ಕೊಟ್ಟ ಧರ್ಮಶಾಸನ (ಎಕ. X (S), ಮುಳಬಾ. ೨೮೩-೧೧ ; 1157) ; ಮುಳವಗಿಲ ನಾಡಲು ನಮ್ಮ ನಾಯಕತನದ ತ್ಯನನಹಳ್ಳಿಯ ಅತ್ತಿಕುಣ್ಟೆ ಪೂರ್ವ (ಮೈಆರ್.೧೯೨೩, ೧೪-೬ ; ?). [ನಾಯಕ+—ತನ]

**ನಾಯಕತನಂಗೆಯ್** (ಕ್ರಿ). ಒಡೆತನವನ್ನು ವಹಿಸು ; ಅಧಿಕಾರ ಮಾಡು : ನಾಯಕತನಂಗೆಯ್ದಂಗೆ ಚಕ್ರವರ್ತಿತ್ವಮಾದಂತೆ ಮುನ್ನವೆ

ಬ್ರತಮಂ ಕೊಳಲೆಂದಿರ್ದವರ್ . . . ಜಿನದೀಕ್ಷೆಯಂ ಕೈಕೊಂಡರ್ (ಧರ್ಮಾಮೃ. ೧೦-೨೮೩). [ನಾಯಕತನ + ಕೆಯ್$_1$]

**ನಾಯಕತ್ವ** (ನಾ). ಮುಂದಾಳುತನ; ಮುಖಂಡತ್ವ : ಬಂಗಾಳದಲ್ಲೂ ಉತ್ತಮವಾದ ನಾಯಕತ್ವವಿರಲಿಲ್ಲ (ಖುಶ್ಕ್ಸಾರ. ೧೧೩ ಪೀಠಿಕೆ) ; ಅನೇಕ ಮುಖವಾದ ಜೀವನವೇ ಈ ಕಾದಂಬರಿಯಲ್ಲಿ ನಾಯಕತ್ವವನ್ನು ವಹಿಸಿದೆ (ಸಸುಜೀ. ೨ ಪೀಠಿಕೆ). [ಸಂ.]

**ನಾಯಕನರಕ** (ನಾ). ನರಕಗಳಲ್ಲಿ ಮುಖ್ಯವಾದ ನರಕ; ಭಯಂಕರವಾದ ನರಕ ; ಘೋರ ನರಕ : ನಮ್ಮ ಕೂಡಲಸಂಗನ ಶರಣರನವರಿವರೆಂದರೆ ಕುಂಭಿಯ ಪಾತಕ ನಾಯಕನರಕ ತಪ್ಪದು ಕಾಣಾ (ಬಸವ. ೫೬೯) ; ಲಿಂಗದ ಕೂಡ ಸಮಾಧಿಯ ಕೊಂಡೆನೆಂತೆಂಬ ಭಕ್ತರಿಗೆ ನಾಯಕನರಕ ತಪ್ಪದು (ಮೋಳಿಪ್ರೂ. ೫೦-೨೦೯) ; ಮನ್ನಿಸಳೆ ಮಗನ ಮಾತನಿದೇಂ ನಾಯಕನರಕವಿಪಾಕೆಗೊಚ್ಚತಮಾಯ್ತೋ (ಯಶೋಚ. ೩-೭೪); ವೈವಸ್ವತನು ನಾಯಕನರಕದೊಳಗದ್ದುತ ಬಹನು (ಕುವ್ಯಾಉ. ೪-೮೬). [ನಾಯಕ + ನರಕ]

**ನಾಯಕಮಂಡಳೀಕ** (ನಾ). ಮುಖ್ಯ ಪ್ರಾಂತ್ಯಾಧಿಕಾರಿ ; ಒಂದು ದೇಶಭಾಗದ ಒಡೆಯ,—ಪ್ರಭು : ಬಂಡಿಬೋವರ್ಗೆಱೆದು ನಾಯಕಮಂಡಳೀಕರ್ಗೆಱೆದು ನಾಟಕಪಂಡಿತರಿಗೆಱೆದಾಲವಟ್ಟವನಿಕ್ಕುವರಿಗೆಱೆದು (ಬಸಪು. ೫೯-೨೭).
[ನಾಯಕ + ಮಂಡಳೀಕ ( = ಮಂಡಲೀಕ)]

**ನಾಯಕಮಣಿ** (ನಾ). ೧. ಶ್ರೇಷ್ಠನಾದ ಮುಖಂಡ ; ಮುಂದಾಳುಗಳಲ್ಲಿ ಉತ್ತಮನಾದವನು : ಭಾರತದ ನಾಯಕಮಣಿಗಳ ಜೀವನವನ್ನು ತಿಳಿಸುವ ಗ್ರಂಥಗಳೂ ಇವೆ (ಸಂಗೀತ. III, ಆಮುಖ). ೨. ಹಾರದ ಮಧ್ಯದಲ್ಲಿರುವ ರತ್ನ : ವಜ್ರಬಾಹುಮಹೀನಾಥಂ ನಿಜತನೂಜಗುಣಮಣಿಮಾಲೆಗೆ ತತ್ಕನ್ಯಾರತ್ನಮಂ ನಾಯಕಮಣಿ ಮಾಡಲೆಂದಾತ್ಮೀಯವಿಳಾಸಂಬೆರಸು ಬಂದು ಪುಂಡರೀಕಿಣಿಗೆ ಮುಂದಟ್ಟಿದ ದೂತಂಗೆ ಪ್ರೀತನಾಗಿ ಮೆಚ್ಚಿ ಮೆಚ್ಚಿತ್ತು (ಆದಿಪು. ೪-೨೩ ಪ) ; ಮೊಗಕ್ಕೆ ಮೂಗುಂ ಆಭರಣಕ್ಕೆ ನಾಯಕಮಣಿಯುಮೆಂಬಂತೆ . . . ಇರ್ದುದು ಚಕ್ರವರ್ತಿಯ ರಾಜಧಾನಿ (ಶಾಂತಿಪು. ೩-೨ ಪ). [ನಾಯಕ + ಮಣಿ$_3$]

**ನಾಯಕರತುನ** (ನಾ). =ನಾಯಕಮಣಿ ೨ : ಪತಿಯಳಿದ ಸತಿಯಿರವು ನಾಯಕರತುನವಿಲ್ಲದ ಪದಕ ದೈವಸ್ತುತಿಗಳಿಲ್ಲದ ಕಾವ್ಯರಚನಾಭಾವದಂದದಲಿ (ಕುವ್ಯಾದ್ರೋ. ೮-೧೮). [ನಾಯಕ + ರತುನ]

**ನಾಯಕರತ್ನ** (ನಾ). = ನಾಯಕಮಣಿ ೨ : ವ್ರತವೆಂಬುದು ನಾಯಕರತ್ನ ವ್ರತವೆಂಬುದು ಸುಪ್ಪಾಣಿಯ ಮುತ್ತು (ಉರಿಪ. ಕ. ೨೫-೫೩) ; ಕಂಠಮಾಲೆಯೊಳ್ ಜಾತಿನಾಯಕರತ್ನಮಂ ತೆಗೆದು ಬಿಸುಟಂತೆ ಧಾತುಗೆಟ್ಟದೆ ತಮ್ಮ ಬಲಮೆಂದು ಹಲುಬಿದಂ ಧರೆಯೊಳ್ ಪೊರಳ್ದು ಮಱುಗಿ (ಜೈಮಿಭಾ. ೧೩-೫೮). [ನಾಯಕ + ರತ್ನ]

**ನಾಯಕವಾಡಿ** (ನಾ). ೧. (ಊರಿನ ಅಥವಾ ನಾಡಿನ) ಮುಖಂಡ; ಮುಖ್ಯಾಧಿಕಾರಿ ; ಒಡೆಯ ; ಅಧಿಪತಿ : ಪಸಾಯಿತರು ನಾಯಕವಾಡಿಗಳು ಮಕ್ಕಳುಗಳೊಳಗಾದ ಕಂದಹಕ್ಕ ಬರದಿಹ ಸ್ಥಳಂಗಳು ಸಿರಿಪುರಮಹಮನೆ ಮಂನೆಎ (ಎಕ. IX, ಕಾನಕಾ. ೧೧೦-೧೭ ; 1306 ?); ಹೊಂನಿಗೆ ಆರಗದ ನಾಡ ನಾಯಕವಾಡಿಗಳು ಪೂವ X X X ಅನುಭವಿಸಿ ಬಹ ಹುಟ್ಟುವಳಿ (ಎಕ. VII, ತಿಸನೊ. ೭೧-೨೬ ; 1431). ೨. ಸೇನಾಪತಿ ; ದಳಪತಿ : ದುರುಳನ ಮದವನಳಿವೆನು ಬಾಯ ಹೊಯ್ ಹೊಯ್ ಕದನದಲಿ ನಡುಗಿಸುವ ನಾಯಕವಾಡಿಗಳನೆನುತ ಬದಗನಿದಿರಾದನು . . . ಕೌರವರ ರಾಯ (ಕುವ್ಯಾಭೀ. ೫-೧೧) ; ಬೀಡು ಬಿಟ್ಟುದು ಸಕಲ ನಾಯಕವಾಡಿಗಳ ಗುಡಿಹೊಯ್ದವಸುರ ವಿಭಾಡಗೆ (ತೊರರಾ. ೬-೧-೧೯) ; ಅಮರನಿಕರವನೀಡಿಱುವ ತೋಳುಗಳ ನಾಯಕವಾಡಿಗಳ ಕೈದುಗಳ ಹೊಗರಂಬರವನಳ್ಳಿಱಿಯೆ (ನಿಭಾಗ. ೮-೧೭-೨೩) ; ಸರಳು ಬಿಲುಗಳ ಬಿಱುಬಿನಿಱುತವ ಕರದ ನಾಯಕವಾಡಿಗಳ ನಿಷ್ಠುರದ ಹೀಹಾಳಿಗಳು ಮೆಱೆದುದು (ಮೂಲರಾ. ೧-೨೯). ೩. ಸೇನಾನಾಯಕರ ಗುಂಪು,—ಬೀಡು : ಅಭಿಮನ್ಯುವಿನ ಹೊಯ್ಲಲಿ ಹುರುಳುಗೆಟ್ಟುದು ಹೆಸರ ನಾಯಕವಾಡಿ ದುಗುಡದಲಿ (ಕುವ್ಯಾದ್ರೋ. ೫-೨೫).
[←ಮರಾ. ನಾಯಕವಡೀ./ತೆಲು. ನಾಯಕವಾಡಿ, ನಾಯಕವಾಳ್]

**ನಾಯಕಸಾನಿ,** ನಾಯಿಕಸಾನಿ (ನಾ). ೧. ನೃತ್ಯಮಾಡುವವಳು ; ನರ್ತಕಿ : (ಕಿ). ೨. ಸೂಳೆ ; ಗಣಿಕೆ : "ವಾರಸ್ತ್ರೀ ; ಪಾತರದವಳು; ನಾಯಕಸಾನಿ" (ಗಂಗಾಪು. ೨೮೬). **ನಾಯಿಕಸಾನಿ :** ೨. ಒಂದು ದಿನ . . . ಆ ನಾಯಿಕಸಾನಿಯ ಮನೇ ಮುಂದೆ ಸುಳಿದಾಡುವುದೂ . . . ಕಾರಣವಿಲ್ಲದಿದ್ದಾಗ್ಯೂ ತಾನೇ ನಗುತಾ ಹೀಗೆಲ್ಲಾ ಒಲಪು ನೂಡುತಾ ಬಂದನು (ಮುಸುಗ. ೩).
[ನಾಯಕ + ಸಾನಿ$_1$]

**ನಾಯಕಸಾರ** (ನಾ). ಶ್ರೇಷ್ಠವಾದ ಪೇಯ : ನಾಯಕಸಾರವೊಲಿದು ಕಡುಸೀಯೆನೆ ಕುಡಿಯೆಂದು ತಂದು ಕುಡಿಯಿಸುವರ್ ತಪ್ರಾಯಸರಸಮಂ (ಶಾಂತಿಪು. ೭-೯೭). [ನಾಯಕ + ಸಾರ$_2$]

**ನಾಯಕಸ್ಥಾನ** (ನಾ). ಮುಖಂಡನ ಸ್ಥಾನ : ತಾನು ನಾಯಕಸ್ಥಾನಕ್ಕೆ ಚುನಾವಣೆಗೊಂಡ ವಿಷಯವನ್ನು ಆ ಪ್ರತಿಷ್ಠಾವಂತ ವ್ಯಕ್ತಿ ಅಧ್ಯಕ್ಷನಿಗೆ ತಿಳಿಸಿದನು (ಪುನರು. ೩೬). [ನಾಯಕ + ಸ್ಥಾನ]

**ನಾಯಕಿ$_1$** (ನಾ). ೧. ಒಡತಿ ; ಯಜಮಾನಿತಿ : ನಾಯಕಿಯರ್ಕಳ್ ತಮ್ಮಯ ನಾಯಕಿಯರನಟ್ಟೆ ನೀಲನೀರೇರುಹಪತ್ರಾಯತನಯನೆಯರ ತನುವ ಜಾಯಾ ಸಮಜಾತೆಯರ್ಕಳೆನೆ ನಂದನದೊಳ್ (ಮಹಾನೇ. ೧೪-೧೭). ೨. ಹೆಂಡತಿ ; ಪತ್ನಿ : ಮಡಯಂಗುತ್ತಮಜಾತಿನಾಯಕಿಯ ಪಾಪಾತ್ಮಂಗೆ ದೀರ್ಘಾಯುಮಂ . . . ನೀಡುವಂ ಸುಡು ಪಾಪಿಷ್ಠನ ಬೊಮ್ಮನಂ (ಸೋಮೇಶ. ೩೩). ೩. ರಾಣಿ : "ನಾಯಕಿ = ಅರಸಿ" (ಕಾಶಕ್ಕ. ೧೫೮). ೪. ನರ್ತಕಿ ; ನಾಯಕಸಾನಿ : ಬರೆ ಪುರದ ಬೀದಿಯೊಂದು ಪ್ಪರಿಗೆಯೊಳ್ನಂದು ಹರನೋಲಗದ ನಾಯಕಿಯ ವಿಳಾಸಿನಿಯೊಂದು ಪರಿಯಾಣದೊಳಿದುದಕಮುಮನಲ್ಲಿ ಚೆಲ್ಲುತಿರೆ (ತಿರುರ. ದೇ. ೬-೧೦). ೫. ವೇಶ್ಯೆ ; ಸೂಳೆ : ಮದನ ಕಲೆಗಳಂ ಪಾಟಿಸುವ ಬಗೆಯುನೆಳೆಯರ್ಗೆ ಕಲಿಸುವ ನಾಯಕಿಗೆ (ಜೈಮಿಭಾ. ೬-೩೭). ೬. ಕಾವ್ಯ, ನಾಟಕಗಳಲ್ಲಿ ಪ್ರಧಾನವಾದ ಸ್ತ್ರೀಪಾತ್ರ; ನಾಯಕನ ಹೆಂಡತಿ : ಶಾಕುಂತಲ, ಸೀತ . . . ರಾಧ ಮುಂತಾಗಿ ನಾಯಕಿಯರ ಪಾತ್ರವೆಲ್ಲ ಇವಳ ಪಾಲಾಗಿದ್ದುವು (ರಂಗನಾ. ೧೮). ೭. ಹೆಂಗಸರ ಹೆಸರಿನ ಮುಂದೆ ಸೇರುವ ಪದ. ಉದಾ : ರಂಗನಾಯಕಿ. [ನಾಯಕ + -ಇ$_2$]

**ನಾಯಕಿ$_2$** (ನಾ). [ಸಂಗೀತ] ಒಂದು ರಾಗದ ಹೆಸರು : ನಾಯಕೀ ರಾಗವು . . . ಸದಾ ಕಾಲದಲ್ಲಿಯೂ ಲಕ್ಷ್ಯಮಾರ್ಗವನ್ನು (ರೂಢಿಯನ್ನು) ಅನುಸರಿಸಿಯೂ ಹಾಡಲಾಗುತ್ತದೆ (ಚತುಪ್ರ. ೧೩೮) ; ನಾಯಕಿ—೨೨ನೇ ಮೇಳಕರ್ತ ಖರಹರಪ್ರಿಯದಲ್ಲಿ ಜನ್ಯ (ಸಂಗೀಚಂ. ೧೩೨). [ಸಂ. ನಾಯಕೀ]

**ನಾಯಕಿಣಿ** (ನಾ). = ನಾಯಕಸಾನಿ ೨ : ಮತ್ತೆಲ್ಲಿಯಾದರೂ ದೂರದೇಶದಿಂದ ನಾಯಕಿಣಿಯರನ್ನು ತರಿಸಿದ್ದರೆ ನೆಟ್ಟಗಾಗುತ್ತಿತ್ತು (ದೇಯಾನಿ. ೧೫೪). [<ನಾಯಕಿ$_1$]

**ನಾಯಕಿತಿ** 'ನಾಯಕಿತ್ತಿ' ನೋ.

**ನಾಯಕಿತ್ತಿ,** ನಾಗತಿ₁, ನಾಯಕಿತಿ, ನಾಯ್ಕಿತಿ (ನಾ). ೧. ನಾಯಕನ ಹೆಂಡತಿ ; ಒಡತಿ : ನಾಯಕಿತ್ತಿಯ ಹಳ್ಳಿ ಕಾಲ ಬಯಲು ತಾವರೆಯಕೆಱೆ (ಎಕ. V, ಬೇಲೂರು. ೭೪-೧೨೨ ; 1261) . ೨. = ನಾಯಕಿ ೨ : ಆ ಬೊಮೆನಾಯ್ಕನ ಹೆಂಡತಿ x x x ಬನೆನಾಯಕಿತ್ತಿ (ಎಕ. VII, ಶಿಮೊ. ೬೧-೧೩; 1287). **ನಾಗತಿ₁ :** ೧. ದೊರೆಯ ಹೆಂಡತಿಯರಿಗೆ ನಾಯಕಿತಿ ಅಥವಾ ನಾಗತಿ ಎಂದು ಹೆಸರು (ಚಿತ್ರಪಾ. ೧೦ ಉಪೋದ್ಘಾತ). **ನಾಯಕಿತಿ :** ೧. ಮನ್ಮಥ ಸಂವಛರದ ಪುಸ್ಯ ಸುಧ ಪಂಚಮಿಯಲು ಕೊಡಕುಣಿಯ ತಿಂಮನಾಯಕನ x x ಯೆ ನಾಯಕಿತಿ ಸ್ವರ್ಲೋಕಪ್ರಾಪ್ತಳಾದ (ಎಕ. VIII(s), ಸೊರಬ. ೫೭೬-೫ ; ಸು. 1400) ; ದೊರೆಯ ಹೆಂಡತಿಯರಿಗೆ ನಾಯಕಿತಿ ಅಥವಾ ನಾಗತಿ ಎಂದು ಹೆಸರು (ಚಿತ್ರಪಾ. ೧೦ ಉಪೋದ್ಘಾತ). ೨. ಭೀಮವೆನಾಯಕಿತಿಯರ್ಗೆ ಪರೋಕ್ಷವಿನಯವಾಗಿ ಶ್ರೀಮನ್ಮಹಾಸಾಮಂತ ಬಾಚಿದೇವಂ ಭೀಮ ಜಿನಾಲಯಮೆನ್ದು ಬಸದಿಯಂ ಮಾಡಿಸಿಯುಂ (ಎಕ. XII, ತುಮಕೂ. ೯-೧೦೨ ; 1151) ; ಆ ಕೊಂತಿದೇವಿಗಧಿಕಂ ಚೋಕವೆನಾಯಕಿತಿ (ಎಕ. XIV, ನಾಗಮಂ. ೧೪೦-೫೫ ; ಸು. 1225). **ನಾಯ್ಕಿತಿ :** ೧. ಶ್ರೀಬಳರ ನಾಯ್ಕಿತಿಗೆ x x x ನಿಲಿಸಿ ನಿಸಿದಿ ಚಯಿತ್ರ ಬಹುಳ ೧೦ (ಎಕ. VII, ಶಿಮೊ. ೧೧೦-೭ ; ?). [ನಾಯಕ + -ಇತ್ತಿ]

**ನಾಯಗ,** ನಾಯಿಕ, ನಾಯಿಗ, ನಾಯ್ಗ (ನಾ). ಅಧಿಕಾರ ಮಾಡುವವನು ತನ್ನ ಹೆಸರಿನ ಮುಂದೆ ಸೇರಿಸಿಕೊಳ್ಳುವ ಒಂದು ಬಿರುದು : ವಿಜಣನಾಯಗರಾ ಮಗನ್ (ಎಇ. IX, ೧೭-೬ ; ಸು. 800). **ನಾಯಿಕ :** ನಾಯಿಕರು ಗುಣಿಕರರು ಮುಂತಾಗಿ ಯಿದಕ್ಕೆ ಸಾಕ್ಷಿ (ಎಕ. VII, ಶಿಮೊ. ೧೦೭-೪೨ ; 1576 ?). **ನಾಯಿಗ :** ಗಂಗ ಪೆರ್ಮನೆಡಿದೇಬರುಂ ಸಿಂಗವುರನಾಯಿಗರುಂ ಮಾವಾಣಿಗರುಂ . . . ಅಸ್ಯ ದಾನಸ್ಯ ಸಾಕ್ಷಿಣಃ (ಎಕ. XVI, ಗುಬ್ಬಿ. ೭೫-೫೫ ; 733). **ನಾಯ್ಗ :** ಉದಯಪುರ ನಾಯ್ಗರ ಮಗನ್ [ಸಿ]ಂಗದತ್ತನು[ಂ] (ಎಇ. IX, ೨೧-೯ ; ಸು. 800).

**ನಾಯಿಗನ ಚಕ್ರ** = ಒಂದು ಬಿರುದು : ವಿಮಳಕೀರ್ತಿಧ್ವಜಂ ನಾಯಿಗನ ಚಕ್ರ ಪರಚಕ್ರವಕ್ರಂ ನಾಮಾದಿ ಸಮಸ್ತ ಪ್ರಶಸ್ತಿಸಹಿತಂ ಶ್ರೀಮನ್ಮಹಾಸಾಮಂತಂ ಸಿಂಗರಸರುಂ (ಸೌಇಇ. XX, ೫೬-೧೨ ; 1082). [<ಪ್ರಾ. ಣಾಯಗ./ಸಂ. ನಾಯಕ]

**ನಾಯಚಿಲಕೆ** 'ನಾಯ್ಚಿಲಿಕೆ' ನೋ.

**ನಾಯಚುಂಚಲು** 'ನಾಯಿಚುಂಚ' ನೋ.

**ನಾಯತುಳಸಿ** 'ನಾಯಿತುಳಸಿ' ನೋ.

**ನಾಯತೊಳಸಿ** 'ನಾಯಿತೊಳಸಿ' ನೋ.

**ನಾಯತ್ತಿ** (ನಾ). ಒಂದು ಬಗೆಯ ಮರ ; ಕಲ್ಲತ್ತಿಮರ : "ಕಾಕೋದುಂಬರಿಕಾ, ಫಲ್ಗು:, ಮಲಪೂ:, ಜಘನೇಫಲಾ — ಈ ೪ ನಾಯತ್ತಿ" (ನಾಚಿರಾ. ೧೦೮) ; ಎಸೆದಿರೆ ನಾಯತ್ತಿಯ ಸಂಧಿಸಿ ಸರ್ಪನ ಗೃಹಮುಮಾಗೆ ಪಡುವಣ ದೆಸೆಯೊಳ್ ನಿಸದಂ ಪುರುಷತ್ರಯದೊಳೊಸರ್ಗುಂ ಜಲಮಲ್ಲಿ ಕೂಡೆ ಬೆಳ್ಸಿಲೆ ನೆಗೆಗುಂ (ಲೋಕೋಪ. ೫-೨೧) ; ಎಸೆವ ನಾಯತ್ತಿಯಿಂ ಮೂಡ(ಲ್)ಲು ಪುತ್ತಿರೆ . . . ಮೂಱುಾಳ ಮಟ್ಟದಿಂ ಪಡುವ ಧಾರೆ ಭೋರ್ಗರೆದು ದಿಸಿಬರ್ಕುಂ (ಬಿಟ್ಟಮ. ೧೧-೧೧). [ನಾಯ್ + ಅತ್ತಿ₁]

**ನಾಯನ** (ನಾ). ತಂದೆ ; ಅಪ್ಪ : ಬೇಗ ಅನ್ನುತ್ತಿರಿ, ನಾಯನ. ನಮಗೆ ತಿಳಿದಾಗ ಬೇಗ ಅಷ್ಟೆ (ಸಣ್ಣಕ. VII, ೪೪). [←ತೆಲು. ನಾಯನ]

**ನಾಯನಾರ್,** ನಾಯಿನಾರ್ (ನಾ). ತಮಿಳುನಾಡಿನಲ್ಲಿ ಶಿವಭಕ್ತಿಯನ್ನು ಪ್ರಚಾರ ಮಾಡಿದ ಅರುವತ್ತು ಮೂರು ಜನ ಸಂತರು : "ನಾಯನಾರ್ = ತಮಿಳುನಾಡಿನ ಶರಣರು ; ಅರುವತ್ತು ಮೂವರು" (ವೀಶೈಪಾ. ೨೪-೮) ; ತಮಿಳುನಾಡಿನ ಶೈವಪಂಥದ ಸಂತರು, ನಾಯನಾರರು (ಭಾರದ. ४೦೦) ; ಈತನು ಮೊದಲು ಜೈನನಾಗಿದ್ದು ನಾಯನಾರರೆಂದು ಹೆಸರಾದ . . . ಅಪ್ಪರ್ ಎಂಬ ಯತಿಯ ಶಿಷ್ಯನಾಗಿ ಶೈವಮತವನ್ನವಲಂಬಿಸಿದನಂತೆ (ಭಾಇಪ್ರ. ೨೪೩). **ನಾಯಿನಾರ್ :** ಪಿಳ್ಳೆಯರ ನಾಯಿನಾರರಂದೊಸೆದು ಮುಂದಿರ್ದ ವಾಗೀಶನಂ ತಕ್ಕಯಿಸಿ ನಲಿದು (ವಾಗೀರ. ದೇ. ೩೭೫-೧೩). [←ತಮಿ. ಮಲ. ನಾಯನಾರ್]

**ನಾಯನೇಱಲ್** 'ನಾಯಿನೇಱಲ್' ನೋ.

**ನಾಯನ್ಮಾರ** (ನಾ). = ನಾಯನಾರ್ : ೬೩ ನಾಯನ್ಮಾರರ (ಶೈವಸಂತರ) ಬಗ್ಗೆ ಕಾಲಕ್ಷೇಪಗಳಿಗಾಗಿ ಶರಭಶಾಸ್ತ್ರಿಗಳು ಮರಾಠಿಯಲ್ಲಿಯೂ ತಮಿಳಿನಲ್ಲಿಯೂ ಸುಮಾರು ಸಾಂಕಕ್ಕೂ ಹೆಚ್ಚು ಹಾಡುಗಳನ್ನು ರಚಿಸಿದ್ದಾರೆ (ಸಂಗೀತ. ೮೯). [←ತಮಿ. ನಾಯನ್ಮಾರ್]

**ನಾಯಬ,** ನಾಯಿಬ್, ನಾಯೇಬ (ನಾ). ೧. ಒಬ್ಬ ಅಧಿಕಾರಿಯ ಪ್ರತಿನಿಧಿಯಾಗಿ ಕೆಲಸ ಮಾಡುವವನು ; ಬದಲಿ ಸಹಾಯಕ : (ಶ). ೨. ಕೆಳದರ್ಜೆಯ ನೌಕರ : ನರಿಗಳಲ್ಲಿ ಕೆಲವು ದಿವಾನ, ಕೆಲವು ಅಡಳಿತಗಾರ . . . ಕೆಲವು ನಾಯಬ (ಕಮಕ. ೧೦); ಅಲ್ಲಿಂದ ಹರಿ ನಾಯಬನ ನೆರವಿನಿಂದ ಗೌಹರಳ ಮನೆಗೆ ಹೋದ (ಕೊತಕಾ. ೭೦). **ನಾಯಿಬ್ :** ೩. ಪ್ರಾಂತಾಧಿಕಾರಿ : ಒಂದು ಪ್ರಾಂತದ ಮುಲ್ಕಿ ಮುಖ್ಯಾಧಿಕಾರಿಯೇ ಸೈನ್ಯಾಧಿಕಾರಿಯೂ ಆಗಿದ್ದನು. ಇವನಿಗೆ ನಾಯಿಬ್ ಎಂದು ಹೆಸರು (ಇಸ್ಲಾಂಸಂ. ೬೩). **ನಾಯೇಬ :** ೧. ಹರಕುಮಾರ . . . ತಮ್ಮ ಜಮೀನದಾರರ ಬಳಿಗೆ ನಾಯೇಬರೆಂದು ಅವರ ಆಸ್ತಿಯ ಭಾರ ಹೊತ್ತ ಕರ್ಮಚಾರಿಯಾಗಿದ್ದಾರೆ (ಇಪ್ಪಕ. ೮೪). [←ಅರ. ನಾಇಬ್ ; ಮರಾ. ನಾಯಬ್ ; ಹಿಂ. ನಾಯಬ್, ನಾಇಬ್]

**ನಾಯಬಶಿರಸ್ತೆದಾರ** (ನಾ). ತಾಲ್ಲೂಕು ಕಚೇರಿ ಮೊದಲಾದ ಕಂದಾಯವಿಭಾಗದ ಕಚೇರಿಗಳಲ್ಲಿ ಒಬ್ಬ ಅಧಿಕಾರಿ ; ಗುಮಾಸ್ತರ ಮೇಲ್ವಿಚಾರಕ ; ಮುಖ್ಯ ಗುಮಾಸ್ತ : (ಶ). [ನಾಯಬ + ಶಿರಸ್ತೆದಾರ]

**ನಾಯಬೇಳ** 'ನಾಯ್ಬೇಲ' ನೋ.

**ನಾಯಮಾರ** 'ನಾಯಿಮಾರ' ನೋ.

**ನಾಯಮ್ಮಾರ** 'ನಾಯಿಮಾರ' ನೋ.

**ನಾಯರ್** (ನಾ). ಒಂದು ಮರದ ಹೆಸರು : ಶಂಕರನಾಡನು ಅವನ ಕಿರಿಯ ತಂದೆ ಗೋವಿಂದನಾವಡನು ಕೊಟ ನಾಯರ ಮುಲ ಬಿಳುಮರ ಮಾಡನೆಂಬ ಗದೆ ಮುಡಿ ೪ (ಸೌಇಇ. IX-ii, ೬೨೦-೫೪; 1546). [ ? ]

**ನಾಯರ್ಖಂಡ** (ನಾ). ಒಂದು ನಾಡಿನ ಹೆಸರು : ಶ್ರೀಪೋಗಿಲ್ಲಿ ಸೇಂದ್ರಕಮಹಾರಾಜರ್ ನಾಯರ್ಖಣ್ಡಮುಂ ಜೆದುಗೂರಾಳ್ಗೆಯಾ ನಾಳುತ್ತು (ಇಆ. XIX, ೧೪೪-೪ ; 680). [<ನಾಗರಖಂಡ₁]

**ನಾಯಹತ್ತಿ** (ನಾ). ಒಂದು ಬಗೆಯ ಸಸ್ಯ ; ಕಾಡುಹತ್ತಿ : "ಪೈಚುಕಾ — ಕುರುಟಿಗೆ, ನಾಯಹತ್ತಿ" (ಒಷಧಿ. ೧೦೩). [<ನಾಯ್ + ಹತ್ತಿ₁ (<ಪಟ್ಟಿ)]

**ನಾಯಾಟ** (ನಾ). ೧. ನಾಯಿಯ ಆಟ ; ನಾಯಿತನ ; ನಾಯಿಯ ವರ್ತನೆ. ೨. (ಆಲಂ) ಅತಿ ಕಾಮುಕತೆ :

ಆವಜಾಯವೆ ಪೊಸತೇ ನಿನ್ನ ನಾಯಾಟವಿಂ ಸಾಲ್ವುದು ಸಾಲ್ಗಂತಿ ದರ್ಪದಕ್ಕುಂ (ಲೀಲಾವ. ೬-೧೨೦). [ನಾಯ್ + ಆಟ]

**ನಾಯಿ** 'ನಾಯ್' ನೋ.

**ನಾಯಿಉಗನಿಹಂಬು** (ನಾ). ಒಂದು ಬಗೆಯ ಬಳ್ಳಿ : (ಮೈಔಗಿ. ೫೦-೯೯೭). [ನಾಯಿ (< ನಾಯ್) + ಉಗನಿ$_0$ + ಹಂಬು$_2$]

**ನಾಯಿಂದ** 'ನಾವಿದ' ನೋ.

**ನಾಯಿಂದಗತ್ತಿ** 'ನಾವಿದಗತ್ತಿ' ನೋ.

**ನಾಯಿಂದಗಿತ್ತಿ** (ನಾ). ೧. ನಾಯಿಂದ ಜಾತಿಯ ಹೆಂಗಸು. ೨. ನಾಯಿಂದನ ಹೆಂಡತಿ : (ಕ). [ನಾಯಿಂದ(< ನಾವಿದ) + -ಗಿತ್ತಿ]

**ನಾಯಿಕ** 'ನಾಯಗ' ನೋ.

**ನಾಯಿಕಲವೆಗಿಡ** (ನಾ). ಒಂದು ಬಗೆಯ ಗಿಡ : ಚಿಕ್ಕಕಾವಲಿ, ನಾಯಿಕಲಮೆಗಿಡ (ಮೈಔಗಿ. ೧೮-೩೨೩). [ನಾಯಿ(< ನಾಯ್) + ಕಲಮೆ ? + ಗಿಡ(< ಗಿಡು)]

**ನಾಯಿಕಸಾನಿ** 'ನಾಯಕಸಾನಿ' ನೋ.

**ನಾಯಿಕುನ್ನಿ** (ನಾ). ನಾಯಿಮರಿ : ಕಾಯಲಾಜಿನು ರಂಗ ಕಂಡವರ ಬಾಗಿಲನು ನಾಯಿಕುನ್ನಿಯಂತೆ ನರರ ಪೀಡಿಸುತ (ಪುರಂದ. ೨-೧೬೩ ಪಲ್ಲವಿ). [ನಾಯಿ(< ನಾಯ್) + ಕುನ್ನಿ$_1$]

**ನಾಯಿಕೂಟಿ** (ನಾ). ಒಂದು ಬಗೆಯ ಸಸ್ಯ : ನಾಯಿಕೂಟಿ, ಕರಿಕೊಮ್ಮೆ (ಮೈಔಗಿ. ೭-೧೨೬). [ನಾಯಿ(< ನಾಯ್) + ಕೂಟಿ$_2$]

**ನಾಯಿಕೆ** (ನಾ). ೧. ಒಡತಿ ; ಸ್ವಾಮಿನಿ ; ಯಜಮಾನಿ : 'ನಾಯಿಕೆತನ' ಪರಾ. ೨. ಹೆಂಡತಿ ; ಪತ್ನಿ : ಅನುಕೂಲಮಿತ್ರನನುರಕ್ತ ನಾಯಿಕಾನೀಕನನುಗತಪ್ರಕೃತಿ ಚಿರಂತನರೆನಿಪ ಚಕ್ರವರ್ತಿಗಳ ನೆಗಟ್ದ ನೆಗಟಿಕ್ತೆ ತನ್ನಭಿಚಕ್ಷರಪತಿಯಾ (ಶಾಂತಿಪು. ೨-೫೦). ೩. [ಕಾವ್ಯಮೀ]ನಾಟಕ, ಕಾವ್ಯ ಮುಂತಾದುವುಗಳಲ್ಲಿ ಪ್ರಧಾನವಾದ ಸ್ತ್ರೀಪಾತ್ರ; ℙ ಇದರಲ್ಲಿ ಅನೇಕ ವಿಧಗಳಿವೆ: "ನಾಯಿಕಾ—೩ : (ಅ) ಸ್ವ(ಸ್ವೀಯಾ), ಅನ್ಯಾ, ಸಾಧಾರಣಸ್ತ್ರೀ. ಅಂತರ್ಭೇದ : ಸ್ವ(ಸ್ವೀಯಾ) (i) ಮುಗ್ಧಾ, ಮಧ್ಯಾ, ಪ್ರಗಲ್ಭಾ (ಭಾವ-, ರತ-). (ii) ಧೀರ. ಅಧೀರೆ, ಧೀರಾಧೀರೆ, ಜ್ಯೇಷ್ಠಾ, ಕನಿಷ್ಠಾ ; ಅನ್ಯಸ್ತ್ರೀ—ಕನ್ಯೆ (ಅವಿವಾಹಿತೆ), ಊಢೆ (ವಿವಾಹಿತೆ), (ದಶರೂ. ೯೯). (ಆ) ಕುಲಜಾ, ವೇಶ್ಯಾ, ಉಭಯಾ (ದಶರೂ. ೧೭೮). (ಇ) ಉತ್ತಮ, ಮಧ್ಯಮ, ಜಘನ್ಯ (ರಸರ. ೫೯). (ಈ) ಕನ್ಯೆ, ಪುನರ್ಭೂ (ಉಪಭುಕ್ತ. ಅನುಪಭುಕ್ತ), ವೇಶ್ಯೆ (ಕಾಮ. ೨೦). (ಉ) ಬಾಲಾ. ತರುಣೀ, ಪ್ರೌಢಾ (ಕಾಮ. ೧೬೧). ನಾಯಿಕಾ-೪ : (ಅ) ಅಂತಃಪುರ ನಾಯಿಕೆಯರು : ಏಕಚಾರಿಣಿ, ಜ್ಯೇಷ್ಠಾ, ಕನಿಷ್ಠಾ, ಪುನರ್ಭೂ (ಕಾಮ. ೧೯೪). (ಆ) ಧೀರಾ, ಲಲಿತಾ. ಉದಾತ್ತಾ, ನಿಭೃತಾ(ಸಂ. ೪೨). (ಇ)ಅನುಕೂಲಾ, ದಕ್ಷಿಣಾ, ಶಠಾ, ದುಷ್ಟಾ (ಅನಂಗರಂಗ - ಸಂ. ೪೨). ನಾಯಿಕಾ-೮: (ಅ) ಸ್ವಾಧೀನಪತಿಕಾ. ವಾಸಕಸಜ್ಜಾ, ವಿರಹೋತ್ಕಂಠಿತಾ, ಖಂಡಿತಾ, ಕಲಹಾಂತರಿತಾ, ವಿಪ್ರಲಬ್ಧಾ, ಪ್ರೋಷಿತಪ್ರಿಯಾ. ಅಭಿಸಾರಿಕಾ (ದಶರೂ. ೧೧೨ ; ನಾಟ್ಯಶಾ. ೨೪-೨೧೦)" (ತ್ರೀವಕ್ಸ. ೨೩೭) : ಪ್ರಕಟತರ ನಾಯಿಕೆಯರಾ ಸ್ವಕೀಯೆ ಪರಕೀಯೆ ಪಣ್ಯೆಯೆನೆ ಮೂಱು ತೆಱಂ(ರಸರ. ೮೬ ಸೂತ್ರ) ; ನಾಯಿಕೆಯರಲ್ಲಿ 'ಸ್ವೀಯೆ' (ತನ್ನವಳು), 'ಅನ್ಯೆ' (ಇತರಳು), 'ಸಾಧಾರಣೆ' (ವೇಶ್ಯೆ) ಎಂದು ಮೂರು ವಿಧ (ಕೃಪಿಡಿ.೬೧೦). [ಸಂ. ನಾಯಿಕಾ]

**ನಾಯಿಕೆತನ** (ನಾ). ನಾಯಿಕೆಯ ಅಧಿಕಾರ, —ಗುಣ : ಆ ಮನೆಗಳಲ್ಲಿ ನೋಡಬೇಕು ಇವಳ ನಾಯಿಕೆತನ (ಕ್ಷಿತಿಜ. ೩೩). [ನಾಯಿಕೆ + -ತನ]

**ನಾಯಿಕೆಮ್ಮಲು** 'ನಾಯಿಗೆಮ್ಮಲು' ನೋ.

**ನಾಯಿಕೆಮ್ಮು** 'ನಾಯ್ಗೆಮ್ಮು' ನೋ.

**ನಾಯಿಕೊಡೆ** (ನಾ). ಗೊಬ್ಬರದ ಗುಂಡಿ, ಹುತ್ತ, ತಿಪ್ಪೆ ಮುಂತಾದ ಕಡೆಗಳಲ್ಲಿ ಮಳೆಗಾಲದಲ್ಲಿ ವಿಶೇಷವಾಗಿ ಬೆಳೆಯುವ ಕೊಡೆಯಾಕಾರದ ಒಂದು ಬಗೆಯ ಸಸ್ಯ : ಅಣಬೆ ; ನಾಯಿಚತ್ರಿ : ಮೂಲೆಮೂಲೆಯಲ್ಲೂ ಮಾತಿನ ಮಲ್ಲರು ಹುಟ್ಟಿದರು ನಾಯಿಕೊಡೆಗಳಂತೆ (ಕಗದ್ಯ. ೧೧೭) ; ಯಾರ ಪ್ರತಾಪಾಗ್ನಿಯು ಉದ್ದಂಡ ಬಾಹ್ಲೀಕರನ್ನು ಆಡುವ ಮಕ್ಕಳು ನಾಯಿಕೊಡೆಯನ್ನು ಕಿತ್ತೆಸೆಯುವಂತೆ ಕಿತ್ತೆಸಯಿತೋ . . . ಆ ದೇವಪುತ್ರ ತುವರಮಿಲಿಂದನ ಕನ್ಯೆ ಈಕೆ (ಬಾಣಾ. ೮೮) ; ಯಾವ ನೂತನ ಶಿಕ್ಷಣ ಪದ್ಧತಿಯೇ ಆಗಲಿ . . . ಅದು ಆರಂಭವಾದೊಡನೆ ಎಲ್ಲಾ ಕಡೆಯಿಂದಲೂ ಪ್ರಶಂಸಾಪೂರ್ಣ ಬೆಂಬಲ ದೊರೆತು, ನಾಯಿಕೊಡೆಯಂತೆ ಅದನ್ನನುಕರಿಸುವ ಸಂಸ್ಥೆಗಳು ಆರಂಭವಾಗುತ್ತವೆ (ಶಿಕ್ಷದ. ೭೨೩). [ನಾಯಿ(< ನಾಯ್) + ಕೊಡೆ$_2$]

**ನಾಯಿಗ** 'ನಾಯಗ' ನೋ.

**ನಾಯಿಗಣ್ಣು** (ನಾ). ೧. ನಾಯಿಯ ದೃಷ್ಟಿ. ೨. (ಆಲಂ) ಕಾಮದಿಂದ ನೋಡುವ ನೋಟ ; ಕಾಮುಕ ದೃಷ್ಟಿ : ಅವನು . . . ಪ್ರಾಯಕ್ಕೆ ಬರುತ್ತಿದ್ದ ಆ ಮುಗ್ಧಹುಡುಗಿಯನ್ನು ನಾಯಿಗಣ್ಣಿನಿಂದಲೇ ನೋಡಿದ್ದನು (ಮಲೆಮ. ೭೯೧). [ನಾಯಿ(< ನಾಯ್) + ಕಣ್ಣು(< ಕಣ್)]

**ನಾಯಿಗಳ್ಳಿ** (ನಾ). ಒಂದು ಬಗೆಯ ಕಳ್ಳಿಗಿಡ : ಪಾಲನೊಲ್ಲದೆ ನಾಯಿಗಳ್ಳಿಯ ಪಾಲನುಣ್ಬನುಂ . . . ಮರುಳಲ್ಲನೇ (ಧರ್ಮಾಮೃ. ೩-೧೮೩). [ನಾಯಿ (< ನಾಯ್) + ಕಳ್ಳಿ$_2$]

**ನಾಯಿಗೆಮ್ಮಲು,** ನಾಯಿಕೆಮ್ಮಲು (ನಾ). = ನಾಯ್ಗೆಮ್ಮು : ಆ ಮನೆಯಲ್ಲಿ ಹುಡುಗರಿಗೆಲ್ಲ ನಾಯಿಗೆಮ್ಮಲು ಬಂದುಬಿಟ್ಟದೆ (ರೂಢಿ). **ನಾಯಿಕೆಮ್ಮಲು :** ನಾಯಿಕೆಮ್ಮಲು ಬಂದರೆ ಮಕ್ಕಳಿಗೆ ಬಹಳ ಹಿಂಸೆ (ರೂಢಿ). [ನಾಯಿ (< ನಾಯ್) + ಕೆಮ್ಮಲು]

**ನಾಯಿಗೆಮ್ಮು** 'ನಾಯ್ಗೆಮ್ಮು' ನೋ.

**ನಾಯಿಚತ್ರಿ** (ನಾ). = ನಾಯಿಕೊಡೆ : ಮಳೆ ಬಿದ್ದು, ತಿಪ್ಪೆಗುಂಡಿಗಳಲ್ಲೆಲ್ಲಾ ನಾಯಿಚತ್ರಿಗಳು ಹುಟ್ಟಿಕೊಂಡಿವೆ (ರೂಢಿ). [ನಾಯಿ (< ನಾಯ್) + ಚತ್ರಿ (< ಛತ್ರಿ$_2$)]

**ನಾಯಿಚುಂಚ,** ನಾಯಚುಂಚಲು (ನಾ). ಒಂದು ಬಗೆಯ ವನಸ್ಪತಿ : "ಕಟುಕಾ—ಕಟುಕರೋಹಿಣಿ, ಹಾಗಲ, ಕಹಿಸೋರೆ, ನಾಯಿಚುಂಚ, ಕೊಡಸಿಗ" (ಓಷಧಿ. ೨೩). **ನಾಯಚುಂಚಲು :** "ವೇದಿನೀ—ನಾಯಚುಂಚಲು, ಮೆಂಥೆಯ" (ಓಷಧಿ. ೧೫೬). [ನಾಯಿ(< ನಾಯ್) + 'ಚುಂಚ?']

**ನಾಯಿಛತ್ತರಿಗೆ** (ನಾ). = ನಾಯಿಕೊಡೆ : ಯುದ್ಧದ ಕಾಲದಲ್ಲಿ ಇಂತಹ ಬಣ್ಣದ ಬುರುಗಿನವರು ನಾಯಿಛತ್ತರಿಗೆಗಳಂತೆ ಹುಟ್ಟಿಕೊಂಡು . . . ಮೆರೆಯತೊಡಗಿದರು (ಭಾರಥಿ. ೪೬) ; ನಾಯಿಛತ್ತರಿಗ್ಯಾಗ ಕುಳಿತು 'ರುದ್ರಗಂಟೆ ಮೂಸಿ' ಮೋಜು ಮಾಡುವ ಮಾಯಗಾರ್ತಿ ಪಾತರಗಿತ್ತಿ (ದತ್ತವಾ. ೩೧) ; ಕಲ್ಲಹೂ, ನಾಯಿಛತ್ತರಿಗೆ ಇವೆಲ್ಲ ಈ ವರ್ಗದೊಳಗೆ ಬರುತ್ತವೆ (ಮುಂಬಯಿ. ೬-೨೭೫). [ನಾಯಿ(< ನಾಯ್) + ಛತ್ತರಿಗೆ(< ಚತ್ತರಿಗೆ)]

**ನಾಯಿಜನ್ಮ** (ನಾ). ೧. ನಾಯಿಯ ಹುಟ್ಟು; ನಾಯಿಯಾಗಿರುವಿಕೆ: ನರಿ ನಾಯಿ ಜನ್ಮದಿ ಬಾರದೆ ಈ ನರಜನ್ಮದಲಿ ಬಂದು ಸೇರಿದೆ (ಪುರಂದ. ೨-೮೧-೧). **೨.** (ಅಲಂ) ನೀಚಜಾತಿ: ಅಲ್ಪವಾದುದು: ಸ್ವತಃ ಮಾಡೂ ಧೈರ್ಯವಿಲ್ಲ, ಬೇರೆಯವರು ಮಾಡಿದ್ದನ್ನು ಮೂಸಿ ನೋಡ್ತಾವೆ ನಾಯಿಜನ್ಮದವು (ಮೂರುದಾ. ೧೮೧).
[ನಾಯಿ(<ನಾಯ್) + ಜನ್ಮ]

**ನಾಯಿಡು** (ನಾ). ೧. ಗ್ರಾಮದ ಮುಖಂಡ; ಪಟೇಲ; ಊರಗೌಡ: ಪಟೇಲನಿಗೆ—ಪಟೀಲ . . . ಮಣೆಗಾರ ಅಥವಾ ಅಡಿಗಾರ, ನಾಯಿಡು ವಗೈರೆ ಹೆಸರುಗಳುಂಟು (ಗ್ರಾಮಾಕ. ೧). ೨. ಹಿಂದೂಗಳಲ್ಲಿ ಒಂದು ಒಳಪಂಗಡ ಮತ್ತು ಆ ಪಂಗಡಕ್ಕೆ ಸೇರಿದ ಗಂಡಸರು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳುವ ಪದ: ಕೃಷ್ಣಯ್ಯನಾಯಿಡು ಕಟ್ಟಿಸಿದ ದೇವಸ್ಥಾನ ಇದು (ರೂಢಿ).
**[ದೇ.॥ ತಮಿ.** ನಾಯುಡು; **ತೆಲು.** ನಾಯುಂಡು, ನಾಯಿಂಡು]

**ನಾಯಿತಕ್ಕಿಲೆ** (ನಾ). ಒಂದು ಬಗೆಯ ಮರ: ವಿಷಮುಧಾರಿ, ಕುಂಡಲಿ, ನಾಯಿತೇ[ತ]ಕ್ಕಿಲೆ (ಮೈಔಗಿ. ೨೨-೪೧೭).
[ನಾಯಿ(<ನಾಯ್) + ತಕ್ಕಿಲೆ$_1$(<ತಕ್ಕಿಲ್)]

**ನಾಯಿತನ** 'ನಾಯ್ತನ' ನೋ.

**ನಾಯಿತುಳಸಿ,** ನಾಯತುಳಸಿ (ನಾ). ತುಳಸಿ ಗಿಡದಲ್ಲಿ ಒಂದು ಬಗೆ; ಕಾಡುತುಳಸಿ: (ಮೈಔಗಿ. ೫೭-೧೧೪೭). **ನಾಯತುಳಸಿ:** "ಗಂಧಪರ್ಣಜಃ —ನಾಯತುಳಸಿ" (ಒಷಧಿ. ೪೬); ನೆತ್ತಿಯಶೂಲೆಗೆ—ನಾಯತುಳಸಿಯ ರಸಮಂ ನಿಂಬೇಹುಳಿಯಲ್ಲಿ ಕಾಸಿ ನೆತ್ತಿಗೊತ್ತಲು ನೆತ್ತಿಶೂಲೆ ಮಾಣ್ಗುಂ (ವೈದ್ಯವಿ. ೧೯೦).
[ನಾಯಿ(<ನಾಯ್) + ತುಳಸಿ(= ತುಲಸಿ)]

**ನಾಯಿತೇಗ** (ನಾ). ಒಂದು ಬಗೆಯ ಮರ; ಭಾರಂಗಿ; ಕಿರುದೇಗು: "ಹಂಚಿಕಾ, ಬ್ರಾಹ್ಮಣೀ, ಪದ್ಮಾ . . . ವಂದಕಃ—೯ ಭಾರಂಗೀ ಹೆಸರುಗಳು, ಗಂಟುಭಾರಂಗೀ ಎಂಬುವ ಗ್ರಂಧಿಕದ್ರವ್ಯವು ಪ್ರಸಿದ್ಧವಾದದ್ದು, ಕಿರುದೇಗುಗಿಡವೆಂದು ಕೆಲವರನ್ನುವರು, ನಾಯಿತೇಗದ ಮರ" (ಸಿದ್ಧಾಂತಿ. ೧೩೨).
[ನಾಯಿ(<ನಾಯ್) + ತೇಗ$_1$(<ತೇಗು$_4$)]

**ನಾಯಿತೊಣಚಿ** (ನಾ). ನಾಯಿಯ ಮೈಮೇಲಿನ ಕೂದಲಿನಲ್ಲಿ ಸೇರಿಕೊಳ್ಳುವ ಒಂದು ಬಗೆಯ ಕೀಟ; ತೊನಸೆ: (ಕಿ).
[ನಾಯಿ(<ನಾಯ್) + ತೊಣಚಿ(<ತೊನಸೆ)]

**ನಾಯಿತೊಳಸಿ,** ನಾಯತೊಳಸಿ (ನಾ). = ನಾಯಿತುಳಸಿ: "ಅಜಕಃ—ನಾಯಿತೊಳಸಿ" (ಅಕಾನಿ. ೨-೩೨); "ತೀಕ್ಷ್ಣ ಮಾಣಿ — ನಾಯಿತೊಳಸಿ" (ಒಷಧಿ. ೭೦). **ನಾಯತೊಳಸಿ:** "ಪರ್ಣಶತಾ—ನಾಯತೊಳಸಿ" (ಒಷಧಿ. ೯೨). [ನಾಯಿ(<ನಾಯ್) + ತೊಳಸಿ]

**ನಾಯಿದ** 'ನಾವಿದ' ನೋ.

**ನಾಯಿದೊಣ್ಣೆ** (ನಾ). ಗಾಡಿಯ ಅಚ್ಚುಮರ ಹೊರಳದಂತೆ ಕಾಪಾಡುವ ದಂಡ: ಗಾಡಿಗೆ ನಾಯಿದೊಣ್ಣೆಯೇ ಆಧಾರ (ರೂಢಿ).
[ನಾಯಿ(<ನಾಯ್) + ದೊಣ್ಣೆ$_1$]

**ನಾಯಿನಾರ್** 'ನಾಯನಾರ್' ನೋ.

**ನಾಯಿನಾರೆ** (ನಾ). ಒಂದು ಬಗೆಯ ಮರ: ಮತ್ತಂ ಒಳಮಾಡಿನ ಒಳಗೆ ನಾಯಿನಾರೆಯ ಧರ್ಮದ ಬಳಿನ ಕಂಟ್ಟಿದ ಮೇಲಣ ತೆಂಗಿನ ಮರ ರುದ್ರಾಕ್ಷಿ ಒಡೆಯರ ಮಟ್ಟಿಕೆ ಒಬನ ಧರ್ಮ್ಮ ನಡವದು (ಸೌಇಇ. IX—ii, ೪೭೩-೨೫; 1487); ಸೊಗದೆ, ಸಿಲದೆ, ನಾಯಿನಾರೆ, ಇವಂ ಆಡಿನ ಹಾಲಲ್ಲಿ ಕೊಡಿಸುವುದು (ವೈದ್ಯವಿ. ೧೪೭). [ ? ]

**ನಾಯಿನಾಲಗೆ ಗಿಡ** (ನಾ) ಒಂದು ಬಗೆಯ ಗಿಡ: ನೆಲಮುಚ್ಚಿಲು, ಹಸ್ತಿಪಾದ, ಹಕ್ಕರಿಕೆ, ಅನೆಕಾಲುಗಿಡ, ನಾಯಿನಾಲಗೆಗಿಡ (ಮೈಔಗಿ. ೩೩-೬೪೧).
[ನಾಯಿ(<ನಾಯ್) + ನಾಲಗೆ + ಗಿಡ (<ಗಿಡು)]

**ನಾಯಿನಿದ್ದೆ** (ನಾ). ನಾಯಿಯ ನಿದ್ದೆಯಂತೆ ಆಳವಿಲ್ಲದ ನಿದ್ದೆ; ತಿಳಿನಿದ್ದೆ: "ನಾಯಿನಿದ್ದೆ; ಲಘುವಾದ, ಆಗಾಗ ಎಚ್ಚರಗೊಳ್ಳುವ, ನಿದ್ದೆ" (Dog sleep. ಇಂಕಣ). [ನಾಯಿ(<ನಾಯ್) + ನಿದ್ದೆ]

**ನಾಯಿನಿಸೊಪ್ಪು** (ನಾ). ಒಂದು ಬಗೆಯ ಸೊಪ್ಪಿನ ಗಿಡ: (ಮೈಔಗಿ. ೨೭-೫೦೭). [? + ಸೊಪ್ಪು$_2$]

**ನಾಯಿನೇರಳೆ** 'ನಾಯಿನೇಱಿಲ್' ನೋ.

**ನಾಯಿನೇಱಿಲ್,** ನಾಯನೇಱಿಲ್, ನಾಯಿನೇರಳೆ(ನಾ). ಒಂದು ಬಗೆಯ ನೇರಳೆ; ಕಡಿಮೆ (ಯೋಗ್ಯತೆಯುಳ್ಳ) ರುಚಿಯನ್ನು ಹೊಂದಿರುವ ನೇರಳೆ; ಕೀಳುನೇರಳೆ; "ನಾದೇಯಿ, ಭೂಮಿಜಂಬುಕೆ" (ನಾಚಿರಾ. ೬). **ನಾಯನೇಱಿಲ್:** "ಜಂಬೂಪ್ರಿಯಾ-ನಾಯನೇಱಿಲ್" (ಒಷಧಿ. ೬೧). **ನಾಯಿನೇರಳೆ:** "ನಾದೇಯಿಾ, ಭೂಮಿಜಂಬುಕಾ—೨ ಕಾಗಿನೇರಳೇಗಿಡ; ನಾಯಿನೇರಳೇ ಗಿಡ, ನೆಲನೇರಳೇ ಗಿಡ" (ಸಿದ್ಧಾಂತಿ. ೧೨). 'ಕುನ್ನೇರಿಳೆ' ಪರಾ.
[ನಾಯಿ(<ನಾಯ್) + ನೇಱಿಲ್]

**ನಾಯಿನೊಳಲೆ** 'ನಾಯ್ನೊಳಲೆ' ನೋ.

**ನಾಯಿಪಾಡು** (ನಾ). ೧. ನಾಯಿಯ ಸ್ಥಿತಿ. ೨. (ಅಲಂ) ಬಹಳ ಹೀನವಾದ ಸ್ಥಿತಿ; ಶೋಚನೀಯ ಸ್ಥಿತಿ: ಹೋರೆಯಿಲ್ಲದವನು ನಾರೀನೂ ಕಟ್ಟಿಕೊಂಡರೆ ಅವನ ಪಾಡು ನಾಯಿಪಾಡು (ತುಂಗಭ. ೧೫); ನಮ್ಮ ಹಿಂದಿನ ಜನ್ಮದ ವಿಷಯಗಳೆಲ್ಲ ಜ್ಞಾಪಕವಿರುವುದಾದರೆ ನಮ್ಮ ಪಾಡು ನಾಯಿಪಾಡು (ಜೀವಾತ್ಮ. ೧೮೪); ಅತ್ತ ಗುಬ್ಬಕ್ಕಿಯ ಪಾಡೋ ನಾಯಿಪಾಡು (ಒತ್ತಾಉ. ೯೫).
[ನಾಯಿ(<ನಾಯ್) + ಪಾಡು$_3$]

**ನಾಯಿಪಾಲು** 'ನಾಯ್ಪಾಲ್' ನೋ.

**ನಾಯಿಬ್** 'ನಾಯಬ' ನೋ.

**ನಾಯಿಬದುಕು** 'ನಾಯ್ಬದುಕು' ನೋ.

**ನಾಯಿಬಾಲ** 'ನಾಯ್ಬಾಲ' ನೋ.

**ನಾಯಿಬಾಳು** 'ನಾಯ್ಬಾಳು' ನೋ.

**ನಾಯಿಬೀಟೆ** (ನಾ). ಬೀಟೆ ಮರದಲ್ಲಿ ಒಂದು ಬಗೆ: (ಮೈಔಗಿ. ೨೮-೫೫೦). [ನಾಯಿ(<ನಾಯ್) + ಬೀಟೆ$_1$]

**ನಾಯಿಬೆಂಡೆ** (ನಾ). ಒಂದು ಬಗೆಯ ಸಸ್ಯ: ಬೆಂಡೆಮರ, ಬೆಲ್ಲಕ, ಬೆಳಗು, ಕೋಳಿಬೆಂಡೆ, ನಾಯಿಬೆಂಡೆ (ಮೈಔಗಿ. ೪೮-೯೬೮).
[ನಾಯಿ(<ನಾಯ್) + ಬೆಂಡೆ]

**ನಾಯಿಬೆತ್ತ** (ನಾ). ಒಂದು ಬಗೆಯ ಬೆತ್ತ: ಬಲಿಬೆತ್ತ, ನಾಯಿಬೆತ್ತ (ಮೈಔಗಿ. ೧೫-೨೮೧). [ನಾಯಿ(<ನಾಯ್) + ಬೆತ್ತ]

**ನಾಯಿಬೆಳೆಗಿಡ** (ನಾ). ಒಂದು ಬಗೆಯ ಸಸ್ಯ; "ಪೀತಜಗಂಧ, ಸೂರ್ಯಭಕ್ತ" (ಪಂಡಿತ. ೨೪೨).
[ನಾಯಿ(<ನಾಯ್) + ಬೆಳ್$_2$ + ಗಿಡ(<ಗಿಡು)]

**ನಾಯಿಬೇಲ** 'ನಾಯ್ಬೇಲ' ನೋ.

**ನಾಯಿಬೇಳ** 'ನಾಯ್ಬೇಲ' ನೋ.

**ನಾಯಿಮರಸ** 'ನಾಯಿಮ್ಮರಸ' ನೋ.

**ನಾಯಿಮರಿ** (ನಾ). ಮರಿನಾಯಿ; ಎಳೆಯ ವಯಸ್ಸಿನ ನಾಯಿ; ಕುನ್ನಿ: ನೀನು ಸಾಕಿದ ನಾಯಿಮರಿ ಕೊಟ್ಟ ಹಾಲನ್ನು ಕುಡಿ

ಯದೆ, ನಿನಗಾಗಿ ಹಟಮಾಡುತ್ತಿದೆ (ನಡೆದಾ. II, ೯೭೦) ; **ಕೇಡು ಗಾಲಕ್ಕೆ ನಾಯಿಮರಿ ಮೊಟ್ಟೆ ಇಕ್ಕಿತು** (ಗಾದೆ).

[ನಾಯಿ(<ನಾಯ್) + ಮರಿ(<ಮಱು)]

**ನಾಯಿಮಾರ,** ನಾಯಮಾರ, ನಾಯಮ್ಮಾರ (ನಾ). ೧.ಕೇರಳ ದೇಶದ ನಾಯರು ಜನಾಂಗ. ೨. ಮಲೆಯಾಳಿ ಜನ : **ಸುಕಾಲಿಯರು, ಕೊರಚರು, ನಾಯಿಮಾರರು ಮೊದಲಾದ ಬಿಡಿ ವರ್ತಕರು** (ಸೌಗಂಧಿ. ೧೩೫–೧೪) ; **ಇಂತು ನೀಲೇಶ್ವರದ ಗಡಿಮುಖ ದೊಳ್ ತೊಲಗದ ಕಂಬಮಂ ನಿಲಿಸಿ ನಾಯಿಮಾರರಂ ವಶಗೈದು** (ಕೆಳನೃ. ೭–೧೧). **ನಾಯಮಾರ:** ೨. **ನೀವು ಯಾವತ್ತು ನಾಯಮಾರ ರನ್ನು ಕರೆದುಕೊಂಡು ಕೊಡಗಿನ ಸೀಮೆಯನ್ನು ಸಾಧಿಸುವ ಬಗ್ಗೆ ಘಟ್ಟ ಹತ್ತಿ ಬಂದರೆ ನಾನು ಕೆಲವು ಕೊಡಗರನ್ನು ನಿಮ್ಮ ಕುಮ್ಮಕ್ಕಿಗೆ ಸಾಕಾರ ಮಾಡಿಕೊಡುತ್ತೇನೆ** (ರಾಜೇಂದ್ರ.೬). **ನಾಯಮ್ಮಾರ:** ೨. **ನಮ್ಮ ನಾಯಮ್ಮಾರರು ಕಳೆದ ಎರಡು ಗಳಿಗೆಗಳಿಂದ ಎಡೆಬಿಡದೆ ಹೋರುತ್ತಿದ್ದಾರೆ** (ಹುಲಿಹಾ. ೩೮೭).

[←ತುಳು. ನಾಯಿಮಾರೆ]

**ನಾಯಿಮ್ಮ,** ನಾಯಿರ್ಮ (ನಾ). ಒಬ್ಬಾತನ ಹೆಸರು : **ರೂಪಿನ ಮಣಿ ವಿನಯದ ಗೌರವದ ಧರ್ಮ್ಮದಾಗರಮೆನೆ ಸಜ್ಜನನುತ ಗೋತ್ರ ಕಳತ್ರಕ ರೋಚಿರುಚಿ ನಾಯಿಮ್ಮ** (ಕಇ. I, ೨೦–೨೩ ; ?). **ನಾಯಿರ್ಮ:** **ಮಿಳ್ಳಸೆಟ್ಟಗೆ ತಾಂ ತರ್ಮ್ಮಂನಾಪ್ಪೆನಾರ್ಮ್ಮನಾ ನಾಯಿರ್ಮ್ಮ** (ಕಇ. I, ೨೦–೨೧; ?). [ ? ]

**ನಾಯಿಮ್ಮರಸ,** ನಾಯಿಮರಸ (ನಾ). ಒಬ್ಬಾತನ ಹೆಸರು : **ಕಾಲದಿಯ ನಾಯಿಮ್ಮರಸಂಗೆ ಶಾಸನಮಂ ತೋಱು** (ಇಆ. XVIII, ೩೯–೨೨ ; 999). **ನಾಯಿಮರಸ :** **ಶ್ರೀಮನ್ಮನ್ನೆಯ ನಾಯಿಮರಸ [ನುಂ] ಮೂಱಕರಸನುಮಿಬ್ಬದ್ದು** (ಸೌಇಇ. XX, ೨೬–೧೨ ; 1040).

[ನಾಯಿಮ್ಮ + ಅರಸ$_1$]

**ನಾಯಿಯುಳ್ಳಿ** (ನಾ). ಒಂದು ಬಗೆಯ ಸಸ್ಯ : (ಶಿ).

[ನಾಯಿ(<ನಾಯ್) + ಉಳ್ಳಿ$_1$]

**ನಾಯಿಯೆಲವ** 'ನಾಯೆಲವ' ನೋ.

**ನಾಯಿರಾಗಿ** (ನಾ.) ರಾಗಿಯಲ್ಲಿ ಒಂದು ಬಗೆ : (ಶಿ).

[ನಾಯಿ(<ನಾಯ್) + ರಾಗಿ$_1$]

**ನಾಯಿರ್ಮ** 'ನಾಯಿಮ್ಮ' ನೋ.

**ನಾಯಿವೇಳ** 'ನಾಯ್ಬೇಲ' ನೋ.

**ನಾಯಿಸಂತೆ** (ನಾ). ೧. ಬಹಳ ಅಗ್ಗಕ್ಕೆ ಪದಾರ್ಥಗಳು ಸಿಗುವ ಪೇಟೆ ; ತುಂಬ ಕಡಿಮೆ ಬೆಲೆಗೆ ಮಾಲುಗಳು ಸಿಗುವ ಸ್ಥಳ. ೨. ಬಹಳ ಅಗ್ಗ ; "ಹೊಲೆ ಅಗ್ಗ" (ಜಾನಕೋ. ೧೧).

[ನಾಯಿ(<ನಾಯ್) + ಸಂತೆ$_1$]

**ನಾಯಿಸಾಸಿವೆ** (ನಾ). ಸಾಸಿವೆಯಲ್ಲಿ ಒಂದು ಬಗೆ : **ಕಾಡು ಸಾಸಿವೆ, ನಾಯಿಸಾಸಿವೆ** (ಮೈಔಗಿ. ೨೨–೪೧೫).

[ನಾಯಿ(<ನಾಯ್) + ಸಾಸಿವೆ(<ಸಾಸವೆ)]

**ನಾಯಿಸೊಂಕುಬಳ್ಳಿ** (ನಾ). ಒಂದು ಬಗೆಯ ಬಳ್ಳಿ : **ನಸಗುನ್ನಿ, ನಾಯಿಸೊಂಕುಬಳ್ಳಿ , ತುರಚಿ ಅವರೆ** (ಮೈಔಗಿ. ೫೫–೧೧೦೪).

[ನಾಯಿ(<ನಾಯ್) + ಸೊಂಕು$_2$(<ಸೋಂಕು$_2$) + ಬಳ್ಳಿ]

**ನಾಯಿಸೊಣಗು** (ನಾ). ಒಂದು ಬಗೆಯ ಸಸ್ಯ : **ಈಗ ಸತ್ತು ಹೋದ ಆ ವಾರ್ತೆಯು ಪುನಃ ಮೊಳೆತು ನಾಯಿಸೊಣಗಿನ ಬಳ್ಳಿ ಯಂತೆ ಹಬ್ಬಿ ಯಾರ ಮೈಗೆ ಅಂಟಿಕೊಂಡೀತು** (ವಿಧಿವೈ. ೧೨೬).

[←ತುಳು. ನಾಯಿಸೊಣಂಗ್]

**ನಾಯಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : (ಮೈಔಗಿ. ೭೫–೧೫೪೦). [ನಾಯಿ (<ನಾಯ್) + ಸೊಪ್ಪು$_2$]

**ನಾಯಿಹಂಚೀಕಡ್ಡಿ** (ನಾ). ಹಂಚಿಕಡ್ಡಿ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ : **ದೊಡ್ಡಹಂಚೀಹುಲ್ಲು, ಹಲ್ಲು ಚುಚ್ಚೊ ಹಂಚಿ, ನಾಯಿಹಂಚೀಕಡ್ಡಿ** (ಮೈಔಗಿ. ೯–೧೫೧).

[ನಾಯಿ (<ನಾಯ್) + ಹಂಚೀಕಡ್ಡಿ (<ಹಂಚಿಕಡ್ಡಿ)]

**ನಾಯಿಹಕ್ಕರಿಕೆಗಿಡ** (ನಾ). ಹಕ್ಕರಿಕೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ : (ಶಿ).

[ನಾಯಿ (<ನಾಯ್) + ಹಕ್ಕರಿಕೆ$_1$(<ಹಕ್ಕಱುಕೆ) + ಗಿಡ(<ಗಿಡು)]

**ನಾಯಿಹಾಲೆ** (ನಾ). ಒಂದು ಬಗೆಯ ಹಾಲೆಮರ : **ಆಡು ಮುಟ್ಟದ ಗಿಡ, ಅಂತಮೂಲ, ನಾಯಿಹಾಲೆ, ನೇಪಾಳದ ಬೇರು** (ಮೈಔಗಿ. ೭೬–೧೫೫೬).

[ನಾಯಿ (<ನಾಯ್) + ಹಾಲೆ$_2$(<ಪಾಲೆ$_2$)]

**ನಾಯೆಲವ,** ನಾಯಿಯೆಲವ (ನಾ). ಬೂರುಗದ ಜಾತಿಗೆ ಸೇರಿದ ಒಂದು ಬಗೆಯ ಮರ : **"ಶಾಲ್ಮಲಿಕಃ–ನಾಯೆಲವ"** (ಓಷಧಿ.೧೬೩). **ನಾಯಿಯೆಲವ:** **"ಕೂಟಶಾಲ್ಮಲಿ—ನಾಯಿಯೆಲವ"** (ಓಷಧಿ.೨೨).

[ನಾಯ್ + ಎಲವ]

**ನಾಯೇಬ** 'ನಾಯಬ' ನೋ.

**ನಾಯೊಡಲ್** (ನಾ). (ಆಲಂ) ತುಚ್ಛವಾದ ಶರೀರ ; ಹೇಯ ವಾದ ದೇಹ : **ಈ ಪುರುಳಿಲ್ಲದ ನಾಯೊಡಲಂ ಮರುಳೇ ಕರಮೊಲ್ದು ಕೂರ್ಪ ಮಾನಿಸರೊಳರೇ** (ಧರ್ಮಾಮೃ. ೭–೧೪೨).

[ನಾಯ್ + ಒಡಲ್]

**ನಾಯೊಳಲೆ** (ನಾ). = ನಾಯ್ಗೊಳಲೆ ೧ : **"ಗಂಡೂಪದಃ, ಕಿಂಚುಳಕಃ — ಈ ೨ ನಾಯೊಳಲೆ"** (ಹಲಾಯು. ೧೮೯–೩೯) ; **"ಕಿಂಚುಳಕ ಮೆನಲು ಗಂಡೂಪದಾಖ್ಯಮೆನೆ ನಾಯೊಳಲೆಗಕ್ಕು ನಾಮಂ"** (ಮಂಗರಾ. ೧೨೨–೮). 'ಎರುಬುಹುಳು' ಪರಾ.

[☞ ಇದು 'ನಾಯ್ಗೊಳಲೆ' ಎಂಬುದರ ಅಪಲಿಖಿತ]

**ನಾಯ್ಕಿತಿ** 'ನಾಯಕಿತ್ತಿ' ನೋ.

**ನಾಯ್ಗ** 'ನಾಯಗ' ನೋ.

**ನಾಯ್ಗೆಮ್ಮು,** ನಾಯಿಕೆಮ್ಮು, ನಾಯಿಗೆಮ್ಮು (ನಾ). ಮಕ್ಕಳಿಗೆ ಬರುವ ಒಂದು ಬಗೆಯ ಕೆಮ್ಮು ; ಒಂದೇ ಸಮನೆ ಕೆಮ್ಮು ವಂತೆ ಮಾಡುವ ಒಂದು ಬಗೆಯ ರೋಗ ; ಕೋಡಗ ಕೆಮ್ಮು : **ಕಿವಿನೋವು, ತಲೆನೋವು, ನಾಯ್ಗೆಮ್ಮು, ಬದಿಶೂಲೆ** (ಬಿಗಾಳ. ೪೭–೬). **ನಾಯಿಕೆಮ್ಮು:** **ಸಿಡುಬು, ಕ್ಷಯ, ಡಿಫ್ತೀರಿಯಾ, ನಾಯಿ ಕೆಮ್ಮು, ಸೆಟೆರೋಗ ಮತ್ತು ಟೈಫಾಯ್ಡ್ ರೋಗಗಳು ಬರದಂತೆ ತಡೆಗಟ್ಟುವ ವಿಧಾನಗಳು ಇಂದು ನಮಗೆ ತಿಳಿದಿವೆ** (ಕೆಲರೋ. ೬); **ನಾಯಿಕೆಮ್ಮು . . . ಬರದಂತೆ ತಡೆಯಲು ಮಕ್ಕಳಿಗೆ ನಾಯಿಕೆಮ್ಮು ಇನಾಕ್ಯುಲೇಷನ್ (Inoculation) ಗಳನ್ನು ಮಾಡುವುದು ಉತ್ತಮ** (ಗೃಹವಿ. ೧೫೧). **ನಾಯಿಗೆಮ್ಮು:** **"ನಾಯಿಕೆಮ್ಮು(ನಾಯಿಗೆಮ್ಮು) = ಕೋಡಗ್ಗೆಮ್ಮು"** (ಜಾನಕೋ. ೧೦). [ನಾಯ್ + ಕೆಮ್ಮು$_2$]

**ನಾಯ್ಚಿಲಿಕೆ,** ನಾಯಚಿಲಕೆ (ನಾ). ಒಂದು ಬಗೆಯ ಚಿಲಿಕೆ ಸೊಪ್ಪು : **"ಶುನಕಚಿಲ್ಲೀ—ನಾಯ್ಚಿಲಿಕೆ"** (ಓಷಧಿ. ೧೬೯). **ನಾಯಚಿಲಕೆ :** **"ಶ್ವಚಿಲ್ಲೀ—ನಾಯಚಿಲಕೆ"** (ಓಷಧಿ. ೧೬೨).

[ನಾಯ್ + ಚಿಲಿಕೆ$_1$]

**ನಾಯ್ತನ,** ನಾಯಿತನ(ನಾ). ೧. ನಾಯಿಯ ಗುಣ,—ಸ್ವಭಾವ. ೨. (ಆಲಂ) ಕೀಳುತನ ; ತುಚ್ಛಬುದ್ಧಿ ; ಹೀನಬುದ್ಧಿ :

ಇದೊಮ್ಮೆಗೆ ಕೂಗಿಡಲಾರ್ತಳಿಲ್ಲ ನಾಯ್ತನದೊಳೆ ವಿಹಾಸಲೆಂಬುದಱನೊಕ್ಕೈದನುಂಡಳೆ ದೇವಿ ಸಾವಳೆ (ಸಮುಪ. ೯-೧೦೭); ವಂಚಿಸಲ್ಕಿನಿಸಂ ನೀಂ ಪುಸಿವೇಟ್ದು ಮುಚ್ಚಿದೆಯದರ್ಕಾಂ ಬಲ್ಲೆನೇ ನಿನ್ನ ನಾಯ್ತನಮಂ ನಂಬದಿರೆಂದು ದೂಱುವವೊಲ್ (ರಸರ. ೩-೧೩೫). **ನಾಯಿತನ:** ೨. ಈ ನಾಯಿತನವ ಮಾಣಿಸು ಕೂಡಲಸಂಗಮದೇವಾ (ಬಸವ. ೩೫); ಬಾಯಿ ಹುಳುವುದು ಬಯಲ ನುಡಿದೊಡೆ ನಾಯಿತನ ಬೇಡೆಲವೊ ಕೆಡದಿರು (ಕುವ್ಯಾವಿ. ೩-೧೩). [ನಾಯ್ + -ತನ]

**ನಾಯ್ದುಱಿಯ** (ನಾ). ಕಗ್ಗಲಿ ಜಾತಿಗೆ ಸೇರಿದ ಒಂದು ಮರ; ದುರ್ಗಂಧವುಳ್ಳ ಕಗ್ಗಲಿ ಮರ; ಹುಚ್ಚುಕಗ್ಗಲಿಮರ : "ಅರಿಮೇದ, ವಿಟ್ಖದಿರ" (ನಾಚಿರಾ. ೬).

[ನಾಯ್ + ತುಱಿಯ(<ತುಱಿ₃)]

**ನಾಯ್ನೊಳಲೆ,** ನಾಯಿನೊಳಲೆ (ನಾ). ೧. (ಕೆಸರಿನಲ್ಲಿಯೂ ತೇವದ ನೆಲದಲ್ಲಿಯೂ ಇರುವ ಹಂಚೀಕಡ್ಡಿಯನ್ನು ಹೋಲುವ) ಒಂದು ಬಗೆಯ ಕೆಂಪುಹುಳು; ಎರುಬುಹುಳು : ಬಟಲದೆ ಪೊತ್ತು ಕಲ್ಲನುಲುವಂಗೆಱೆಯಾದ ಮಹಾಪ್ರತಾಪಿ ನೀಂ ಪಟಕ ನಡುರ್ತು ಕೊಂದ ಕಡುವಲ್ಲಣಿ ಮಾಣ್ದಿರದಣ್ಕಿ ಬಂದು ನಾಯ್ನೊಳಲೆಯ ಮೇಲೆ ಪಟ್ಟ ಕಡುವೀರ ಕುಟುಂಬದಿನಗ್ಗಳಿಕ್ಕೆ ಕೈಗಟಿದಿರೆ ಶಂಖಮೋ [ಗಡ] ಮಹಾತ್ಮ್ಯರಣಾಗ್ರದೊಳೇಡಗುಳ್ಳಿಯೋ (ಬಂಹರಿ. ೭-೬೭). **ನಾಯಿನೊಳಲೆ :** ೧. "ನಾಯಿನೊಳಲೆ— ಮಹೀಲತೆ, ಗಂಡೂಪದ, ಕಿಂಚುಲಕ" (ನಾಚಿರಾ. ೬); ಕ್ರಿಮಿ ಜಂತು ನಾಯಿನೊಳಲೆ ಶಂಖದ ಪುಟು ಗುಳ್ಳೆ ಮೊದಲಾದುವಕ್ಕೆ ಸ್ಪರ್ಶನಮುಂ (ಶಾಸ್ತ್ರಟೀ. ೧೧೭-೫); ನಾಯಿನೊಳಲೆ ಜಿಗುಟೆ ದೊಪ್ಪುಟು ಮೊದಲಾಗಿ ಪುಟ್ಟಿ . . . ದುಃಖಮನೆಯ್ದುಗುಂ (ಪಸಾರ. ೨೩೯).

೨. ನಾಯಿಕೊಡೆ; ಅಣಬೆ : (೬). [ನಾಯ್ + ನೊಳಲೆ]

**ನಾಯ್ಪಾಲ್,** ನಾಯಿಪಾಲು (ನಾ). ನಾಯಿಯ ವಶಕ್ಕೆ ಸಿಕ್ಕಿದುದು; ನಾಯಿಗೆ ದೊರಕಿದುದು : ನಮ್ಮ ದೇವರ್ ಬಂದು ಕಾಯ್ದಿರೆ . . . ಅದುವೆ ನಾವ್ ನಾಯ್ಪಾಲ್ ಶವಂಗಳ್ (ಅಶ್ವತ್ಥಾ. ೪೨-೮೨೩). **ನಾಯಿಪಾಲು :** ಈ ಅನಾಥಶವ ನಾಯಿಪಾಲು ನರಿಪಾಲು ಆಗುವ ಮುಂಚೆ ಮಣ್ಣು ಮಾಡಬೇಕು (ರೂಢಿ).

**ನಾಯಿಪಾಲಾಗು** = ಹಾಳಾಗು; ನಾಶವಾಗು : ಮಕ್ಕಳ ಬೇಜವಾಬ್ದಾರಿಯಿಂದ ಅವರ ಆಸ್ತಿ ನಾಯಿಪಾಲಾಯಿತು (ರೂಢಿ).

[ನಾಯ್ + ಪಾಲ್₂]

**ನಾಯ್ಬದುಕು,** ನಾಯಿಬದುಕು (ನಾ). (ಅಲಂ) ನಾಯಿಯಂಥ ಜೀವನ; ತುಚ್ಛವಾದ ಬಾಳು; ಹೇಯವಾದ ಜೀವನ : ನಿಂದಿರಾ ಛೀ ಕುನ್ನಿ ಕೈಕೈಯಿಂದೆ ಶಿವಲಿಂಗಪ್ರಸಾದವನಿಂದು ನಾಚಿಕೆಯಿಲ್ಲದಡೆ ನಾಯ್ಬದುಕು ಬಂದು (ಬಸವು. ೬೧-೧೯). **ನಾಯಿಬದುಕು :** "ನಾಯಿಬದುಕು (ನಾಯಿಬಾಳು) = ದುಃಖಪ್ರಪಂಚ, ಕೆಟ್ಟ ಬಾಳು" (ಜಾನಕೋ. ೧೧); ಈ ನಾಯಿಬದುಕಿಗಿಂತ ಸಾಯುವುದೇ ಮೇಲು (ರೂಢಿ).

[ನಾಯ್ + ಬದುಕು₂(<ಬರ್ದುಕು₂)]

**ನಾಯ್ಬಸನಿಗತನ** (ನಾ). (ಕಾಮವ್ಯಾಪಾರದಲ್ಲಿ) ನಾಯಿಯಂತೆ ನಡೆವಳಿಯನ್ನು ಹೊಂದಿರುವಿಕೆ; ಅತಿಯಾದ ಕಾಮಲೋಲುಪತೆ : ಬಸಿದಪುದು ಮೆಯ್ಯ ಕೀವುಂ ರಸಿಗೆಯುಮೊಡಲಱಿದುದಾದೊಡಂ ಮಾಣದೆ ನಾಯ್ಬಸನಿಗತನಮಂ ಕಂಡೀ ಕಿಸುಗುಳಿಯಂ ಜವನುಮುಯ್ಯಲೇಂ ಪೇಸಿದನೋ (ಯಶೋಚ. ೩-೭೨).

[ನಾಯ್ + ಬಸನಿಗತನ]

**ನಾಯ್ಬಾಳು,** ನಾಯಿಬಾಳು (ನಾ). = ನಾಯ್ಬದುಕು : (೬). **ನಾಯಿಬಾಳು :** ನಿಮ್ಮ ಬಾಳು ನಾಯಿಬಾಳು (ಮುಂಗಾಮು. ೧೦೪); ನಮ್ಮ ಬಾಳು ನಾಯಿಬಾಳಲ್ಲದೆ ಮತ್ತೇನು (ಪುಸದು. ೨೭೭).

[ನಾಯ್ + ಬಾಳು₂(<ಬಾೞ್₂)]

**ನಾಯ್ಬೇಲ,** ನಾಯಬೇಳ, ನಾಯಿಬೇಲ, ನಾಯಿಬೇಳ, ನಾಯಿವೇಳ, ನಾಯ್ವೇಳ (ನಾ). ಒಂದು ಬಗೆಯ ಸಸ್ಯ : (೬). **ನಾಯಿಬೇಲ :** "ವರಣ—ನಾಯಬೇಳ" (ಓಷಧಿ. ೧೪೫). **ನಾಯಿಬೇಲ :** "ಚಿತ್ರವಲ್ಲಕಿ—ನಾಯಿಬೇಲ" (ಓಷಧಿ. ೫೭) : ನಾಯಿಬೇಲದ ಸೊಪ್ಪು ಒಂದು ಒಳಹಿಡಿಯನ್ನು . . . ಮೆಲ್ಲಲು ಕೆಮ್ಮು ಉಬ್ಬಸ ಸಹ ಗುಣವಹುದು (ಸಕವ್ಯೆ. ೨೦೮). **ನಾಯಿಬೇಳ :** ನಾಯಿಬೇಳದ ಸೊಪ್ಪನ್ನು ಎಣ್ಣೆಯಲ್ಲಿ ಅರೆದು ಕುಡಿಯಲು ಕೆಂಪಿನ ಹೆನ್ನೆ ಮಾಣುವುದು (ವಿವೈವಿ. ೧೭೬). **ನಾಯಿವೇಳ :** ವಿಮಳ ಮೆಣಸಿಂದ್ರವಾರುಣಿಯ ಮೂಲಮಂ ಘೃತದೊಳ(ಳ)ಟ್ಟು ಪೂಸುಗೆ ಬೞಿಯಂ ಕ್ರಮದಿಂ ನಾಯಿವೇಳ[ಪಾಠಾಂ. ನಾಯ್ವೇಲ] ಕರಿಯ ಮರ್ದನೆಗಂ ತಳಿ(ಳಿ)ಯೆ ವಿಷದ ಪುಣ್ಗಳ್ ಕಿಡುಗುಂ (ಖಮದ. ೧೦-೫೯). **ನಾಯ್ವೇಳ :** ಕಯ್ಪುಸೋರೆಯ ಮಿಡಿಯುಂ ಕುಡಿಯುಂ ನಾಯ್ವೇಳದ ಕಾಯುಂ ಪಣ್ಣುಂ . . . ಪೊಲ್ಲೆಂತಂತೆ ಮಿಥ್ಯಾದೃಷ್ಟಿಯ ನೆಗೞ್ತೆಯುಮೊಂದು ಪೊಲ್ಲೆಂದು ಮುನಿದು ಬಲಿಯ ನಿಂತೆಂದಂ (ಧರ್ಮಾಮೃ. ೯-೧೩೨). [ನಾಯ್ + ಬೇಲ₂?]

**ನಾಯ್ಮಣಿಗೆಱೆ** (ನಾ). ಒಂದು ಕೆರೆಯ ಹೆಸರು : ನಾಯ್ಮಣಿಗೆಱೆಯ ತಾಯ್ಗಣ್ಣಿ ಮುಕೂಡಲ್ ತಟಃ (ಇಆ. XII, ೧೬-೪b; 735). [ನಾಯ್ಮಣಿ₀ + ಕೆಱೆ]

**ನಾಯ್ವಾಲ್** (ನಾ). ನಾಯಿಯ ಹಾಲು : ಕುಮತಿಗಳು ನಾಯ್ವಾಲನುಂಡರೊ ತವುವಿಡಿದು ಮರುಳ್ಗೊಂಡರೋ (ಬಸವು. ೫೪-೩೦). [ನಾಯ್ + ಪಾಲ್₁]

**ನಾಯ್ವಾಲ,** ನಾಯಿಬಾಲ (ನಾ). ೧. ನಾಯಿಯ ಬಾಲ,—ಪುಚ್ಛ : ಉದಾಸೀನಂ ಮಾಡಿದೆನಪ್ಪೊಡೆ ನಾಯ್ವಾಲಮಂ ಪಿಡಿದು ತೊಱೆಯಂ ಪಾಯ್ವ ಜಡನ ಪೋಲ್ವೆಂ (ಧರ್ಮಾಮೃ. ೭-೧೨೨). **ನಾಯಿಬಾಲ :** ೧. ನಾಯಿಬಾಲ ಎಂದಿದ್ದರೂ ಡೊಂಕೇ (ಗಾದೆ). ೨. (ಅಲಂ) ತಿದ್ದಲಾಗದುದು; ಸರಿಪಡಿಸಲಾಗದುದು : ಅವನ ಬುದ್ಧಿ ನಾಯಿಬಾಲ (ರೂಢಿ). [ನಾಯ್ + ಬಾಲ₁]

**ನಾಯ್ವೇಳ** 'ನಾಯ್ಬೇಲ' ನೋ.

**ನಾರ್,** ನಾರು₃ (ನಾ). ೧. (ಬಾಳೆ, ಕತ್ತಾಳೆ, ತೆಂಗು, ಸೆಣಬು ಮೊದಲಾದವುಗಳ ಸಿಪ್ಪೆಯಲ್ಲಿರುವ) ಎಳೆ,—ನೂಲು,—ಕತ್ತ : ನಾರಿಲ್ಲದೆ ಪೂಗಟ್ಟುವೆನೆಂಬ ಪೆರ್ಗಾವಿಲನಂ ಪೋಲ್ಕುಂ (ಧರ್ಮಾಮೃ. ೫-೧೦೬); ತೋರಮುಡಿವಿಡಿದು ಕುಡಿಯಂ ನಾರಂ ಸದೆವಂತೆ ತದೆದು . . . ಒದೆದೊಡೆ ಕೇರು ಪೊರಳ್ವಂತೆ ಕಾಲ ಮೇಲೆ ಪೊರಳ್ದಳ್ (ಯಶೋಚ. ೨-೫೦). ೨. ಗಿಡ, ಮರಗಳ ಸಿಪ್ಪೆ; ತೊಗಟೆ; ವಲ್ಕ : "ವಲ್ಕಂ ನಾರಂತದು" (ವಸ್ತುಕೋ. ೩೧-೬); ಅದಟಂ ಬಡಪಟ್ಟು ಬೆಟ್ಟದೊಳ್ ಪೋಗಿ ತೊಟಲ್ದು ನಾರ್ಗಳನುಡಲ್ ತರುತಿರ್ದಲೆ ಮಾಡಲಾರ್ತನಿಲ್ಲಾಗಳೆ ಕೋಪಮಂ ನಿನಗೆ ಸಂಚಿತ ಶೌರ್ಯಧನಂ ಧನಂಜಯಂ (ಪಂಪಭಾ. ೭-೪೭); ಈಯುಡವಿಯೊಳೆಮುದ್ದು ಮರನುಂ ಕಾಯಿ ನಾರುಂ ಬೇರುಮುಭವನ ಕಾಯರುಚಿಯಂ ಕಡೆಗೆ ಮಾಣಿಸಲಾಪವೇ ಇನ್ನು (ಬಸವು. ೧೭-೧೦). ೩. ನಾರಿನಿಂದ ಮಾಡಿರುವ ಬಟ್ಟೆ; ನಾರುಮಡಿ; ವಲ್ಕಲ : ಪುಗಲಿಲ್ಲೀ ಬನಮಾರ್ಗಮಿಂಬು ನೆಲಸಲ್ ನಾರುಂಟುಡಲ್ ಮೆಲ್ಲೆ ಕೊಂಬುಗಳೊಳ್

ಪಣ್ಪಲಮುಂಟು (ಪಂಪಭಾ. ೭-೩೦) ; ಸೀರೆಯುಂ ಬಿಟ್ಟು ನಾರನುಡುವಂತೆ ಸದ್ಧರ್ಮಮಂ ಬಿಟ್ಟು ಮಿಥ್ಯಾತ್ವಪ್ರೀತನಾಗಿರ್ಪುದುಂ (ಧರ್ಮಾಮೃ. ೧೧-೧೬೨). **ನಾರು**₃ : ೧. ನಾರು, ನೂಲು, ಕ್ರಿಮಿಜ ರೋಮ(ಜಂ)ಗಳಿಂದು ಪುಟ್ಟುವುವು ನಾಲ್ಕು ತೆಱನಕ್ಕುಂ (ಹಲಾಯು. ೯೦-೩೯೫) ; ಎಲೆ ನಾರು ಸುಱುಗು ಗೆಣಸುಂ . . . ದಿಂಡುಮುಂಬಿನಿತಱಿಕೊಳಂ ಸಲೆ ಕಾರ್ಯಕೊದಗುತೊಪ್ಪುವ ಚೆಲುವೆಸೆದಿಹ ಬಾಟಿ ಮರಗಳೊಪ್ಪುಗು ವನದೊಳ್ (ಮಲ್ಲಕಾ. ೪-೨೭೧) ; ಕಲ್ಲಲಿ ನಾರುವಂ ಕೊಳಲು . . . ಸತ್ತು ಹುಟ್ಟಲು ಬಲ್ಲನೆಱಿ ಜಾಣೆ (ಬಸವು. ೫೦-೫) ; ನಾರು ನೂಲು ಕ್ರಿಮಿಜ ರೋಮಂಗಳಿಂದೆ ನೆಯ್ದಾ ಆ ಸೀರೆ ನಾಲ್ಕು ತೆಱನಕ್ಕು (ಮಂಗರಾ. ೧೦೨-೨೭) ; ಹನಿಗೂಡಿ ಹಳ್ಳ ನಾರೊಡಗೂಡಿ ಹಗ್ಗವೆಂಬನುವಿನೊಳ್ಪಡೆಗೂಡಿ ಚಕ್ರಿ ಘನತೆವೆತ್ತನು (ಭರಚ. ೪೯-೮೨) ; ನಾರು ನಾರಿಕೇಳದ ಹೊರಗಿನ ಅಂಶ (ಕಮಕ. ೧೫) ; ಹೂವಿನಿಂದ ನಾರು ಸ್ವರ್ಗಕ್ಕೆ ಹೋಯಿತು (ಗಾದೆ). ೨. "ತ್ವಚ್, ವಲ್ಕಲಂ, ವಲ್ಕ—೩ ನಾರಿನ ಹೆಸರು, ನಾರು" (ಸಿದ್ಧಾಂತಿ. ೧೦೦) ; ನಾರು ಬೇರಂಜನಂ ಘುಟಿಕೆ . . . ಮಂತ್ರಯಂತ್ರಂ ತಂತ್ರಸಾರ ಪರಕಾಯಪ್ರವೇಶಮಂ ಬಯಸುವ ವಿಕಾರಿಸಿದ್ಧರು ಸರಿಯೆ ಸಿದ್ಧರಾಮಂಗೆ (ಸಿದ್ಧರಾ. ೧-೯). ೩. ನಾರನು ಉಟ್ಟರೆ ನಾರದನಾದಾನೆ ಬೂದಿಯ ಬಳಿದರೆ ಶಿವನೆ (ಇಂಚಾಪ. ೯೫-೬೧). ೪. ಬೇಲ, ಮಾವು ಇತ್ಯಾದಿ ಹಣ್ಣುಗಳು ಹಾಗೂ ಕೆಲವು ಕಾಯಿ, ಎಲೆ ಮುಂತಾದುವುಗಳಲ್ಲಿ ಇರುವ ಜುಂಗು: ಬೇಲದ ಹಣ್ಣಿನ ನಾರ ಬಿಸುಟು ತಿರುಳಂ ಮೊಸರಿನೊಳಗಿಕ್ಕಿ (ಸೂಪಶಾ. ೨-೧೨) ; ತನ್ನಯ ರೂಪಿಂಗೆ ಸೆಣಸುವ ಸತಿಯರ ಬೆನ್ನ ಪಟ್ಟೆಯನೆತ್ತುವಂತೆ ರನ್ನದುಂಗುರವನಿಟ್ಟಳವೆರಲುಗುರಿಂದೆ ಪರ್ಣದ ನಾರನೆತ್ತಿದಳು (ಮೋಹತ. ೧೬-೩೨).

**ನಾರ ಸೀರೆ**=ನಾರುಸೀರೆ : ಬಗೆವೊಡೆ ಕಟ್ಟದೀ ಜಡೆಗೆ ತಕ್ಕುದೊ ಮೇಣ್ಪೊದೆದಿರ್ದ ನಾರ ಸೀರೆಗೆ ದೊರೆಯೋ ತಪಕ್ಕದನುರೂಪಮೊ (ಕಾದಂಪೂ. ೮೧೯) ; ನಿನ್ನನುಜರ್ ಬನ್ನದ ಕೂಟನುಂಡರ್ ಪನ್ನೆರಡು ವರ್ಷಂ ಬೇಡರಂತಡವಿಯೊಳ್ ನಾರ ಸೀರೆಯನುಟ್ಟು . . . ಪಂದೆಯ ಮನದಂತಳ್ಳಾಡುತಿರ್ದಪರ್ (ಪಂಚತಂ. ೨೧೮-೧೪) ; ಆಕಳಿಗೆಮ್ಮೆಯುಂ ಜವೆಗೆ ಗೋದುವೆಯುಂ . . . ಬಱುಸೀರೆಗೆ ನಾರ ಸೀರೆಯುಂ ಶಾಕಟಕಕ್ಕೆ ಮತ್ತೆ ರಥಮಂ ಪ್ರತಿಮಾಡಿದನೋರ್ವ ಜೀಯಂ (ಸಮಪ. ೧೦-೧೨೦) ; ಭಸಿತದ ಭಾಳಲೋಚನೆ ರುದ್ರಾಕ್ಷಿಯ ಭದ್ರಾಂಗಿ ನಾರ ಸೀರೆಯ ಧೀರೆ (ಗಿ೦ಕ. ೯-೧೬ ಪ); ಉಜ್ಜ್ವಳಮಣಿಕಾಂಚಿಯಿಂದೆಸೆವ ಮಧ್ಯದೊಳೆಂತುಗೆ ನಾರ ಸೀರೆಯಂ ತಳೆವೆ (ದಶಕು. ೮-೨೯) ; ನಾರ ಸೀರೆಯನುಡುವೆನೆಮಗಾಹಾರವೇ ಫಲಮೂಲತತಿ (ಕುವ್ಯಾಅ. ೨೭-೧೨) ; ಸಂತವಿಸುತತ್ತೆಯನು ಸತಿ ನಿಜಕಾಂತನಿತ್ತಾ ನಾರ ಸೀರೆಯ ನಾಂತುಕೊಂಡಳು (ತೊರರಾ. ೨-೩-೪೧). **ನಾರಾಗು**=ಬಡಕಲಾಗು; ಕೃಶವಾಗು ; ನರಗಳು ಕಾಣುವಂತಾಗು : ಕುರಿಗಳು ಸವೆದು ನಾರಾದವು (ಮಾರ್ಗದ. ೯೯). [ದೇ.॥ ತಮಿ. ಮಲ. ನಾರ್ ; ತುಳು. ನಾರ್, ನಾರು ; ತೆಲು. ನಾರ]

**ನಾರ** (ಗು). ೧. ಮನುಷ್ಯನಿಗೆ ಸಂಬಂಧಿಸಿದ ; ಮಾನವೀಯ: 'ನಾರಲೋಕ' ಪರಾ. (ನಾ). ೨. ನೀರು ; ಜಲ: 'ನಾರದ' ಪರಾ. ೩. ಆಗತಾನೆ ಹುಟ್ಟಿದ ಹಸುವಿನ ಕರು. ೪. ಮನುಷ್ಯರ ಗುಂಪು ; ಜನಸಮೂಹ. [ಸಂ.]

**ನಾರಂಗ** (ಗು). ೧. ಕಿತ್ತಳೆಬಣ್ಣವುಳ್ಳ ; ನಸುಗೆಂಪಾದ ; ಕೇಸರಿ ಬಣ್ಣದ : ನಾರಂಗ ಸಕಳವಟ್ಟೆಯ ಪಟಿಯಿಗೆಗಳಂತೆ ನಭಕ್ಕೆ ಮಿಳಿರ್ದು ಮಿಳ್ಳಿಸಿ ಪಾಱುವ ನೆತ್ತರ **ಸುಟ್ಟುರೆಗಳುಮತಿಭಯಂಕರಾಕಾರಮಾಗೆ** (ಪಂಪಭಾ. ೧೧-೧೪೦ ಪ). (ನಾ). ೨. ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಕಿತ್ತಳೆ : ಕಟ್ಟಿಲಿಸುತ್ತಿರ್ಪಲೆವಳ್ಳಿ ಪಣ್ತೊಲೆವ ನಾರಂಗಂ ಫಲವ್ರಾತದಿಂ ನೆಲನಂ ಮೋದುವ ಮಾತುಳುಂಗ ಮೆಸೆಗುಂ (ಆದಿಪು. ೧-೬೭) ; ನಾಯಿಂಗೆ ನಾರಂಗಬ[ವ]ಕ್ಕೂದೆ (ಸರ್ಪಪ. ೧೮೬-೮೫೬) ; ನಾರಂಗಂ . . . ಸೊಗಯಿಸುತಂ ನೇರಿದವೆನಿಸಿರ್ಪುವಲ್ಲಿ ಕಂಪಿಂ ಪೆಂಪಿಂ (ಪಾರ್ಶ್ವಪು. ೧೩-೯೭) ; ಒಂದು ಫಲವದು ಪಲಸು ಮೇಣ್ನಾರಂಗಫಲವೊಂದು (ಬಸವು. ೧೯-೬೬) ; ಅವ ಕಾಲದೊಲಾದೊಡೆಯು: ಫಲವೀವುತಿಹ ಪಲತೆಱದ ನೇಱಿಲು . . . ನಾರಂಗಾದಿ ತರುಲತೆಯ . . . ತೀವಿ ಚಲಿಸುವ ಶುಕಪಿಕಭ್ರಮರಾವಳಿಯ (ಪ್ರಭುಲೀ. ೩-೩). ೩. ಒಂದು ಬಗೆಯ ಈಳೆ : ''ಮೇದಿನಿಯೊಳಗೀಳೆಯೆನ್ನಲದು ನಾರಂಗಂ'' (ಕವಿಕಂ. ೭೫); ಈ ರೀತಿಯಿಂ ನಿಂಬೆ ಕಿತ್ತೀಳೆ ನಾರಂಗ ಹೇರೀಳೆ ಕಂಚಿ ನಿಂಬೆಯ ಕಾಯ ಕುಸುರೆಗಳನಾರಸವೊಡೆಯದಂತೆ ಹುಳಿದೆಗೆದು (ಸೂಪಶಾ. ೩-೧೦). ೪. ಈಳೆಯ ಜಾತಿಗೆ ಸೇರಿದ (ಉಪ್ಪಿನಕಾಯಿ ಮೊದಲಾದ ವ್ಯಂಜನಗಳನ್ನು ಮಾಡಲು ಉಪಯೋಗಿಸುವ ಹಣ್ಣನ್ನು ಬಿಡುವ) ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಹೇರಳೆ : ''ಐರಾವತಾಭಿಧಾನಂ ನಾರಂಗಂ'' (ವಸ್ತುಕೋ. ೩೪-೬) ; ''ಐರಾವತಃ, ನಾರಂಗಃ . . . ನಾದೇಯಿಃ, ಭೂಮಿಜಂಬುಕಾ — ಈ ೪ ನಾರಂಗ" (ನಾಚಿರಾ. ೧೦೭) ; ನೂಲಕಾಯಿ ಬಿಲ್ವಕಾಯಿ ಗಂಧದ ಮನೆ ನಾರಂಗದ ಕಾಯಿ (ಚನ್ನಪ. ಕ. ೬೬-೧೫೧) ; ನಿಂಬೆಯ ಕುಲದಲ್ಲಿ ನಾರಂಗವೆಂಬುದುಂಟು. ಅದಕ್ಕೆ ಸಕ್ಕರೆಗಂಚಿ, ಕಂಚೀಕಾಯಿ ಎಂಬ ಹೆಸರುಗಳಿವೆ (ಕೃಷಿಪ್ರ. ೧೭೮) ; ನಾಯಿಂಗೆ ನಾರಂಗದ ಉಪ್ಪಿನಕಾಯೆ ? (ಗಾದೆ). ೫. =ನಾರಂಗವಟ್ಟೆ : ನೇಱಲ ರಕ್ತಚಾಮರಂಗಳೊಳಂ ಬಿಗಿದ ನಾರಂಗದ ಮೇಲ್ಕಟ್ಟನೊಳಂ . . . ಎಸೆವ ಮಂಟಪಂಗಳ ನಡುವಣ ಪದ್ಮರಾಗದ ಪಟ್ಟವಣೆಯೊಳ್ ನಿಲಿಸಿದ ಕಾಮದೇವನನತಿಪ್ರೀತಿಯಿಂದರ್ಚಿಸಿ (ಕಾದಂಬ. ೭೮೩). [ಸಂ.]

**ನಾರಂಗವಟ್ಟೆ** (ನಾ). ಕಿತ್ತಳೆಬಣ್ಣದ ಬಟ್ಟೆ ; ನಸುಗೆಂಪುಬಣ್ಣದ ವಸ್ತ್ರ : ನಾಂದ ನಾರಂಗವಟ್ಟೆಯ ಮೇಲ್ಕಟ್ಟನಂಬರದೊಳ್ಕಟ್ಟಿದಳೆಂಬಂತೆ ಸಂಜೆಸಂಜಾತಸ್ವರಾಗಪಟಲಮಂ ಪಸರಿಸೆ (ಕಾದಂಬ. ೩೭೫); ಭೃಂಗಕುಂತಳೆಯು ನಾರಂಗವಟ್ಟೆ ಶೃಂಗಾರವಾಗಿ ನಿಂದಿಹಳು (ಸೌಂದಕಾ. ೩-೪೭). [ನಾರಂಗ+ಬಟ್ಟೆ$_2$]

**ನಾರಂಗಸಂಘ** (ನಾ). ಕಿತ್ತಳೆಮರಗಳ ತೋಪು,—ಗುಂಪು : ಸಕಳೋದ್ಯಾನಂಗಳೊಳ್ ಸಂತತ ರಸಫಳವ್ರಾತದಿಂ ಸೇವ್ಯಮಲ್ಲಿ ಕರಂ ಖರ್ಜೂರವೃಂದಂ . . . ಬೀಜಪೂರಪ್ರಕರಂ ನಾರಂಗಸಂಘಂ (ಪುಷ್ಪಪು. ೯-೧೫). [ನಾರಂಗ+ಸಂಘ]

**ನಾರಂಗಿ** (ಗು). ೧. =**ನಾರಂಗ ೧** : ಆ ನೀಲಸಲಿಲದಲಿ ಕೊರೆದು ನಾರಂಗಿಪಥ ದಿನಕರನು ನಡೆಯಿಸುವ ದಿನದಿನದ ಅವನ ರಥ (ವ್ಯಾವಾಪ್ಯ. ೪೭-೧೧). (ನಾ). ೨. =ನಾರಂಗ ೨ : ನಾರಂಗಿಯ ಸಸಿಗೆ ನೀರು ತಂದೆಱೆದಿಹರೆ ಮಿಱುದಮೃತವನೀವಂತೆ ಹಿರಿಯರ ಕಾರುಣ್ಯವೆಂದ (ಸರ್ವಜ್ಞ. ೭೯೮). [←ಪಾರ. ಹಿಂ. ಮರಾ. ನಾರಂಗೀ]

**ನಾರಂದ** (ನಾ). =ನಾರದ ೧ : ನಾರಂದ ಥಟ್ಟಸುತೆದ್ದು ಕೊಡು ವಸಿಷ್ಠಂಗೆ ಭಾಷೆಯನು ಕೌಶಿಕ ಎಂದನು (ಹಚಕಾ. ೨-೨೪) ; ಪಳುಕಿನ ಕಱುವೆಂದೆನೆ ಧರೆಗಿಳಿತಂದಂ ಪವನಮಾರ್ಗದಿಂ ನಾರಂದಂ (ಪುಣ್ಯಾಸ್ರ. ೫-೬೧) ; ಸಂದಣಿಸಿದ ಸಭೆ ಸುಮ್ಮನಾಗಲು ನಾರಂದ ನುಡಿದನು ಕೌಶಿಕಗೆ (ಹರಿಸಾಂ. ೧-೨೬). [P ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ.] [<ನಾರದ]

**ನಾರಂಬೇಳೆ** 'ನಾಬುಂಬೇಳೆ' ನೋ.

**ನಾರಕ** (ಗು). ೧. ನರಕಕ್ಕೆ ಸಂಬಂಧಿಸಿದ; ನರಕದ: 'ನಾರಕ ದುಃಖ' ಪರಾ. (ನಾ). ೨. ಭೂಮಿಯಲ್ಲಿ ಪಾಪ ಮಾಡಿದವರು ಸತ್ತ ಮೇಲೆ ಪಡೆಯುವರೆಂದು ಹೇಳಲಾದ ಒಂದು ಲೋಕ; ನರಕಲೋಕ: "ನಾರಕಃ, ನರಕಃ, ನಿರಯಃ, ದುರ್ಗತಿಃ—ಸಾಮಾನ್ಯವಾಗಿ ನರಕದ ಹೆಸರುಗಳು" (ಸಿದ್ಧಾಂತಿ. ೭೪); ವಿಚಾರಿಸದೆ ನುಡಿದವರಿಗಿಮ್ಮಡಿ ನಾರಕದ ಫಲ ತಪ್ಪದು (ಕುವ್ಯಾಖ್ಯು. ೪-೯೧). ೩. ನರಕಲೋಕದಲ್ಲಿರುವವನು; ನರಕಲೋಕವಾಸಿ: "ನಾರಕಾಃ, ಪ್ರೇತಾಃ, ಯಾತ್ಯಾಃ, ಅತಿವಾಹಿಕಾಃ—ಈ ೪ ನಾರಕರ್" (ಹಲಾಯು. ೧೦೩-೩); ಎರಡನೆಯ ನರಕದೊಳ್ ಮೂಱುಸಾಗರೋಪಮಾಯುಷ್ಯಮನೊಡೆಯ ನಾರಕನಾಗಿ ಪುಟ್ಟಿ ಸತ್ತು (ಪದ್ಮಾರಾ. ೧೭೪-೨೭); ಸೀಳ್ಸೀಳೆನುತ್ತೆ ನಾರಕರ್ಯೆತಂದು . . . ಸೀಳ್ವರ್ತಗುಳ್ದು ನವನಾರಕರಂ (ಸುಕುಮಾ. ೧೧-೪೨); ವಿಶೇಷದಿಂ ನರಕಗತಿಯೊಳ್ ಪ್ರಥಮಪೃಥ್ವಿಯ ನಾರಕರ್ ಮಿಥ್ಯಾದೃಷ್ಟಿಗಳ್ (ತತ್ತ್ವಪ್ರ. ೨೧); ನಾರಕನಪ್ಪುದೊಂದೆಡೆಯೊಳೊಂದೆಡೆಯೊಳ್ ಕೃತಪುಣ್ಯಬಂಧದಿಂ ಚಾರುಗುಣಾಮರಾಧಿಪತಿಯಪ್ಪುದು (ಜೀವಸಂ. ೮೬-೨೪); ನಾರಕರೊಳಧಿಕನಾರಕರಾರೆನೆ ಮನ್ಮನಮೆ ವಿಷಯವೈತರಣಿಯೊಳಿಂತೋರಂತೆ ಬೆಂದೊಡಂ ಮತ್ತಾರಯದಲ್ಲಿಯೆ ವಿಮೋಹಿಸಿರ್ಪುದಱಿಂದಂ (ಉಸಾರ. ೧೬೧). ೪. ಪಾತಕ; ಪಾಪ; ದುಷ್ಕೃತ್ಯ: "ದುರಿತಂ ಪಾಪಮಧರ್ಮಸ್ವರೂಪಂ . . . ನಾರಕಂ ಮಳಂ ದುಷ್ಕರ್ಮಂ" (ವಸ್ತುಕೋ. ೨೦-೧೨). ೫. [ಜೈನ] ದೇವ, ಮನುಷ್ಯ, ತಿರ್ಯಕ್ ಮತ್ತು ನಾರಕ ಎಂಬ ನಾಲ್ಕು ವಿಧವಾದ ಜನ್ಮಗಳಲ್ಲಿ ಒಂದು; ನರಕಗತಿ: ನಾರಕ ತಿರ್ಯಗ್ಗತಿ ಸಂಸಾರಿಗೆ ಪಾಪೋಪಚಯದೆ (ಅಜಿಪು. ೧೧-೩೪); ನಾರಕ ತಿರ್ಯಙ್ನರಬೃಂದಾರಕಮೆನೆ ಗತಿಚತುಷ್ಕಯಂಗಳೆ ಸಲೆ ಸಂಸಾರದ್ರವ್ಯ ಕ್ಷೇತ್ರಾದ್ಯಾರೋಪಿತಭೇದದಿಂದಮದು ಪಂಚಾತ್ಮಂ (ಪುಷ್ಪಪು. ೧೩-೫೬). 'ಚತುರ್ಗತಿ' ಪರಾ.

[ಸಂ.]

**ನಾರಕದುಃಖ** (ನಾ). ನರಕವಾಸದಲ್ಲಿ ಅನುಭವಿಸುವ ದುಃಖ; ನರಕದುಃಖ: ನಾರಕದುಃಖಮಂ ನೆಱೆಯೊಳೂಡುವೆನೋ ಪಲಕಾಲಮಿಾತನಂ ಎಂದು ನಿಶಾಚರಂ ರೋಷಾವೇಶಮಾನಸಂ ಮಾನಸದೊಳೆ ಬಗೆಯುತ್ತುಂ (ಚಂದ್ರಪು. ೫-೩೭). [ನಾರಕ+ದುಃಖ]

**ನಾರಕಪಟಲ** (ನಾ). [ಜೈನ] ನರಕಗಳಲ್ಲಿಯ ನಲವತ್ತೊಂಬತ್ತು ಭಾಗ,—ಸ್ತರ; ℙ ರತ್ನಪ್ರಭೆಯಲ್ಲಿ ಹದಿಮೂರು, ಶರ್ಕರಾಪ್ರಭೆಯಲ್ಲಿ ಹನ್ನೊಂದು, ವಾಲುಕಾಪ್ರಭೆಯಲ್ಲಿ ಒಂಬತ್ತು, ಪಂಕಪ್ರಭೆಯಲ್ಲಿ ಏಳು, ಧೂಮಪ್ರಭೆಯಲ್ಲಿ ಐದು, ತಮಃಪ್ರಭೆಯಲ್ಲಿ ಮೂರು, ಮಹಾತಮಃಪ್ರಭೆಯಲ್ಲಿ ಒಂದು—ಹೀಗೆ ಒಟ್ಟು ನಲವತ್ತೊಂಬತ್ತು ಪಟಲಗಳಿವೆ: ನಿನ್ನುಮಂ ಸ್ತ್ರಿಮಿತಸಾಗರಚರಧರಣೀಂದ್ರಂ ತೀವ್ರದುಃಖಮನನುಭವಿಸುವುದನಱಿದು ಮೋಹದಿಂ ಸಮ್ಯಗ್ದರ್ಶನಮಂ ಕೆಯ್ಕೊಳಿಸಿದನಾ ನಾರಕಪಟಲಂಗಳೊಳ್ (ಶಾಂತಿಪು. ೬-೭೪ ಪ). [ನಾರಕ+ಪಟಲ$_2$]

**ನಾರಕಶರೀರ** (ನಾ). ನರಕಲೋಕವಾಸಿಯ ಶರೀರ: ಅವು ತಾಮನುಕ್ರಮದೊಳ್ . . . ಪುಟ್ಟುವ ನಾರಕಶರೀರಾಯುಷ್ಯಪ್ರಮಾಣಂಗಳ್ (ಶಾಂತಿಪು. ೬-೮೬ ಪ). [ನಾರಕ+ಶರೀರ]

**ನಾರಕಸ್ಥಳ** (ನಾ). = ನಾರಕಾವಾಸ: ರಾಜನಾದಾತನಿಗವಶ್ಯವು ನಾರಕಸ್ಥಳವನು ನಿರೀಕ್ಷಿಸಬೇಕು ಪರದಲಿ ವೇದಸಿದ್ಧವಿದು (ತಿಮ್ಮಸ್ವ. ೧-೩೦). [ನಾರಕ+ಸ್ಥಳ(=ಸ್ಥಲ)]

**ನಾರಕಾವಾಸ** (ನಾ). ನರಕಲೋಕ: ಬೇಸಱಿ ಲೋಕಮಂ ತಗುಳ್ದು ಸುಟ್ಟಿಬಲಿಂದೆ ಖರಾಂಶು ನಾರಕಾವಾಸದೊಳಾಟ್ಟಿಪೋಲಪರವಾರ್ಧಿಯೊಳಾಟ್ಟುದುಂ (ಪಂಪಭಾ. ೩-೮೧). [ನಾರಕ+ಆವಾಸ]

**ನಾರಕಿ** (ನಾ). ನರಕದಲ್ಲಿರುವವನು; ನರಕಲೋಕವಾಸಿ: ಅಂತಕಂ ತಾನಾದೊಡೆ ನಾರಕಿಗಳಂ ಬಾಧಿಸುವುದಲ್ಲದಸುರಸಂಹಾರಕನ ಸೇವೆಯಂ ಮಾಡುತಿಹ ನಮ್ಮ ಪರಿವಾರಮಂ ಕೊಲ್ಪಡಧಿಕಾರಮೆತ್ತಣದು (ಜೈಮಿಭಾ. ೨೭-೩೩); ರಾಯನತ್ತಣಿಂ ಬಳಸಿ ವರ್ಷ ಗಾಳಿಯ ಸೋಂಕಿಂ ನಾರಕಿಗಳೆನಿಸುಂ ಚೇತರಿಸಿ ತಣ್ಣಗೊಂಡು ಕಟ್ಟುಬ್ಬರದ ಬೇನೆಯಂ ಸೈರಿಸಿಪಂತಿರಾಗೆ (ರಾಮಾಶ್ವ. ೧೦೨-೨೯); ಮುಂದಿನ ಸಾಂಕರ್ಯಸ್ಥಿತಿಗೂ ಧರ್ಮಗ್ಲಾನಿಗೂ ಕಾರಣನಾಗುವುದಲ್ಲದೆ ಹಿಂದಿನ ಪಿತೃಗಳೂ ನಾರಕಿಗಳಾಗುತ್ತಾರೆ (ಭಾರದ. ೧೧೨). [ಸಂ. ನಾರಕಿನ್]

**ನಾರಗಸೆ** (ನಾ). (ಕಾಗದ ಮೊದಲಾದುವನ್ನು ತಯಾರಿಸಲು ಉಪಯುಕ್ತವಾದ ಕಚ್ಚಾವಸ್ತುವನ್ನು ಕೊಡುವ) ಅಗಸೆ ಜಾತಿಗೆ ಸೇರಿದ ಒಂದು ಬಗೆಯ ಮರ: ಕಾಗದವನ್ನು ತಯಾರಿಸಲು ಉಪಯೋಗಿಸುವ ಕಚ್ಚಾವಸ್ತುಗಳಲ್ಲಿ ಮುಖ್ಯವಾದುವುಗಳಾವುವೆಂದರೆ, ನಾರಗಸೆ (Linen), ಸಣಬು . . . ಜೊಹುಲ್ಲು ಮುಂತಾದುವು (ಮುದ್ರಕ. ೭೭). ಇವರ ಉಡುಪು ನಾರಗಸೆ ಮತ್ತು ರೇಷ್ಮೆಯ ಬಟ್ಟೆಯಿಂದ ಮಾಡಿದ್ದು (ಪ್ರಪಾಇ. II, ೧೨೭).

[ನಾರು$_3$(<ನಾರ್)+ಅಗಸೆ$_2$]

**ನಾರಚ, ನಾರಸ**(ನಾ). ೧. ಬಾಣ; ಶರ: ನಡುತಂ ಮೊಗಮಂ ಪೇಚಕದೆಡೆಯಿಂದೊಂದೊಂದೇ ನಾರಂ ನುಸುಳೆ ಪಡಲ್ಗೆಡೆದುದಿಭಮಾಲೆ (ಜಗವಿ. ೧೨-೨೦); ವಿವರಂಗಳಿಂದಮೊಗೆವ ಗುರುವ ಪೊಗೆ ನಾರಜ[ಚ]ಕೆ ಮೇಲೆ ಮುಸುಱುವ ಭೃಂಗೀನಿವಹದ ಗಱಿಗಱಿಗೆಣೆಯೆನೆ ಗವಾಕ್ಷಮಂಗಜನ ದೊಣೆಗೆ ತೊಣೆಯೆನಿಸಿರ್ಕುಂ (ವರ್ಧಪು. ೧-೬೨); ಅರು ನಿನ್ನವೋಲೆಯ ಹರಿಣನ ನಾರಚದಲೆಚ್ಚವರು (ತೊರರಾ. ೬-೫೧-೭). **ನಾರಸ:** ೧. "ಪ್ರಕ್ಷ್ವೇಡನಃ, ನಾರಾಚಃ—೨ ನಾರಸದ ಹೆಸರುಗಳು, ನಿಡುಗೋಲು, ನಿಡುಸರಳು" (ಸಿದ್ಧಾಂತಿ. ೨೬೪). ೨. ಒಂದು ಬಗೆಯ ಚೂಪಾದ ಆಯುಧ: ನೀಲಗಪ್ಪಡದುಡಿಗೆ ಫಾಳೆಯ ಸೀಲೆ ಕೊಂಕಿಯ ನಾರಸಂ ಸೆಳೆಗೋಲು ಒಂದಟ್ಟೆಯ ಕರಹು ನಾಯಿಂಗಳ ಬಾಯ್ಕಟ್ಟು ಓಳಿಯಿಂದಿವು ಮೆಱೆಯೆ (ಬಸವ. ೩೧-೪); ಮೋದುವ ಬಡಿಕೋಲುಮಿಱುವ ನಾರಸಮುವ ಸಂಪಾದಿಸಿ ಬೇಂಟೆಯ ಭರದಿಂ ವ್ಯಾಧಂ ಕಾನನಮನೆಯ್ದಿ ಪೊಕ್ಕಂ ಭರದಿಂ (ನನ್ನಚಾ. ೬-೨೧೦). [<ಸಂ. ನಾರಾಚ]

**ನಾರಜ** (ನಾ). ಮನುಷ್ಯ(ಪದಾತಿ)ಸಮೂಹದಿಂದ ಉಂಟಾದುದು: ಅವಿಧೇಯಧ್ವಜಿನೀನಿಶಾಟನಿವಹಂ ನಾಗಾಳಿಯಂ ಗಾಳಿಯಂ ಜವದಿಂ ಗೆಲ್ವಿನಮಾದುರ್ದು ನೂಂಕೆ ನೆಗೆಯಲ್ ಸೇನಾರಜಂ ನಾರಜಂ . . . ಸಂಹರಿಸಿದಂ ಕಂಜೋದರಂ ಜೋದರಂ (ಜಗವಿ. ೧೨-೧೯). [ಸಂ.]

**ನಾರಡೆ** (ನಾ). ಒಂದು ಬಗೆಯ ಸುಂಕ: ಈ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ ವಾನ್‌ಪಯಿರು . . . ನಾರಡೆ ಬಳುಕುನೀರು ಊರ ಸಂತೆ ಮೊದಲಾದ ಹಲ ಉಪಾಧಿಗಳು ಸಹ (ಸೌಇಇ. IX—ii, ೭೪-೭೬; 1472). [ ? ]

**ನಾರಣ** 'ನಾರಯಣ' ನೋ.

**ನಾರಣಬ್ಬೆ** (ನಾ). ಒಬ್ಬಾಕೆಯ ಹೆಸರು: ನಾಗಿಯಬ್ಬೆಗಳಬ್ಬೆ ನಾರಣಬ್ಬೆಯ ಕಟ್ಟಸಿದ ನೈರುತಿಭಾಗದ ಮುಟ್ಟಿದ ಕೆರೆಯ ಎರಡು ಕಡೆಗೋಡಿನ ನಿಪ್ಪರಿಯೆ ಮೇರೆಯಾಗಿ (ಎಕ. XII, ತಿರಾ. ೩೯-೩೩; 920)

[ನಾರಣ(<ನಾರಯಣ)+ಅಬ್ಬೆ$_1$]

**ನಾರಣಾಗಾಲ** (ನಾ). ಒಂದು ಊರಿನ ಹೆಸರು : ಎಱೆಯಂಗ ಗಾವುಣ್ಡನುಂ ಪೆರ್ಗ್ಗಡೆಯದ ಕುಱುವತ್ತಿ ಬೇಡಗಾವುಣ್ಡನುಂ . . . ಮಾರಯ್ಯಂಗೆ ದಾನಸುಗೊಟ್ಟರುತ್ತರಾಯಣದ ಸಂಕ್ರಾನ್ತಿ ಆದಿತ್ಯವಾರ ಮಾಗೆ ನಾರಣಾಗಾಲ ಬಿಟಂ (ಮೈಆರಿ. ೧೯೩೫, ೧೭–೧೫; 1010); ℙ ಇದನ್ನು 'ನಾರಾಯಣಮಂಗಲ' ಎನ್ನುವ ಶಬ್ದದಿಂದ ನಿಷ್ಪನ್ನ ಮಾಡುವ ಸಾಧ್ಯತೆಯಿದೆ. 'ಗಾಲ' ಎಂದು ಕೊನೆಗಾಣುವ ಊರಿನ ಹೆಸರಿನ ಭಾಗ 'ಮಂಗಲ' ಎನ್ನುವ ಶಬ್ದದಿಂದ ವ್ಯುತ್ಪತ್ತಿಯಾಗಿರಬಹುದು. [ ? ]

**ನಾರದ** (ನಾ). **೧.** ಒಬ್ಬ ದೇವರ್ಷಿಯ ಹೆಸರು ; ℙ ಬ್ರಹ್ಮನ ಮಾನಸಪುತ್ರರಲೊಬ್ಬನಾದ ಈತ ಕಲಹಪ್ರಿಯನೆಂದು ಪ್ರಸಿದ್ಧ; ವೀಣಾವಾದನದಲ್ಲಿ ಪಾರಂಗತ : ಕಮಳಸಂಭವನಂದನನೆಂದು ನೋೞ್ಕರ್ ತಳವೆಳಗಾಗೆ ಸಾರೆವರೆ ನೀರದಮಾರ್ಗದಿನಂದು ನಾರದಂ (ಪಂಪಭಾ. ೬–೬) ; ಆವ ಕಾಳಗದೊಳಂ ಕಣ್ಣಾರದಂ ನಾರದಂ (ಪಂರಾಮಾ. ೩–೧೮) ; ಇಳಿವ ಜಡೆ ಬಳೆವ ವೀಣಾಕಳಸ್ವನಂ . . . ಮುಖಮಂಡಳಚಂದ್ರಿಕೆಯೊಪ್ಪೆ ನಾರದಂ ನಡೆತಂದಂ(ಗಿರಿಕ. ೪–೩೮); ನಾರದನಂತೆ ಕಂಡವರ ಕೊಂಡೆಯ ಮಾತನಾಡಲಿಲ್ಲ (ಪುರಂದ. ೧–೪೧–೧೨) ; ನಿಜರಮಣನಂ ನಾರದಮುನಿಗೆ ಕೊಟ್ಟ ಬಳಿಕೊಡೆಯರುಂಟೆ ನಿನಗೆ (ಜೈಮಿಭಾ. ೭–೨೬). **೨.** ಮೋಡ ; ಮೇಘ. **೩.** ಹದಿನೆಂಟು ಮಹಾಪುರಾಣಗಳಲ್ಲಿ ಒಂದು : ಪರಮಶೈವ ಸ್ಕಂದ ಲೈಂಗ್ಯವಿರಳ ನಾರದ ಮತ್ಸ್ಯ ಕೂರ್ಮ ಸ್ಫುರಿತ ವಾಮನ ಗಾರುಡ ಬ್ರಹ್ಮಾಂಡ ವಾರಾಹನಿರತ ಮಾರ್ಕಂಡೇಯ ವೈಷ್ಣವ ವರಭವಿಷ್ಯದ್ಭಾಗವತ ವಿಸ್ತರಣ ಪದ್ಮಾಗ್ನೇಯ ಬ್ರಾಹ್ಮ್ಯ ಬ್ರಹ್ಮಕೈ[ವೈ]ವರ್ತ ಸಾಂಗದಿಂದ ಷ್ಟಾದಶಪುರಾಣಂಗಳೊಳೆಸೆವ ಭಸಿತಸೇವಾಸಂಗವಾಯಿತ್ತು (ಬಸಪು. ೪೩–೭೬). **೪.** ಶಿವಗಣಗಳಲ್ಲಿ ಒಬ್ಬ ; ಪ್ರಮಥರಲ್ಲಿ ಒಬ್ಬ : ನಾರದನೆಂಬ ಗಣೇಶ್ವರನಿಂತೆಂದ (ಎಇ. V, ೨೪೬–೨೨ ; ಸು. 1200). **೫.** [ಜೈನ] ಒಂಬತ್ತು ಜನ ನಾರದರ ಗುಂಪು : 'ನವನಾರದ' ಪರಾ. [ಸಂ.]

**ನಾರದಪುರಾಣ** (ನಾ). ಹದಿನೆಂಟು ಮಹಾಪುರಾಣಗಳಲ್ಲಿ ಒಂದು; ℙ ನಾರದನಿಗೆ ಸನಕ ಸನಂದನಾದಿಗಳು ಮಾಡಿದ ಉಪದೇಶ ರೂಪವಾದ ಒಂದು ಪುರಾಣ. ಇದರಲ್ಲಿ ೨೫೦೦೦ ಗ್ರಂಥಗಳಿವೆ. ಇಲ್ಲಿ ಸೃಷ್ಟಿಯ ವರ್ಣನೆ, ನಾನಾಧರ್ಮಗಳ ವಿವರಣೆ, ಮೋಕ್ಷಸಾಧನೆ, ವೇದಾಂಗ, ಶುಕೋತ್ಪತ್ತಿ, ಪ್ರತಿತಿಂಗಳೂ ಮಾಡಬೇಕಾದ ವ್ರತಗಳು ಮೊದಲಾದ ವಿಷಯಗಳಿವೆ : ಬೃಹತ್‌ಕಲ್ಪ—ನಾರದಪುರಾಣ, ವಾರಾಹಕಲ್ಪ — ಮಾರ್ಕಂಡೇಯ ಪುರಾಣ (ಭಾರದ. ೧೪೭). 'ಅಷ್ಟಾದಶಪುರಾಣ' ಪರಾ. [ನಾರದ+ಪುರಾಣ]

**ನಾರದವೀಣೆ** (ನಾ). ಒಂದು ಬಗೆಯ ವೀಣೆ : ಬಳಿಕ ವಿಪಂಚಿಕೆ . ... ನಾರದವೀಣೆ . . . ಕಾಲಕೀಯೆಂಬ ಮೂವತ್ತು ಮೂಱು ತಂತ್ರೀವಾದ್ಯಂಗಳಲ್ಲಿ (ವಿವೇಕ. ೨೫೩). [ನಾರದ+ವೀಣೆ]

**ನಾರದಸಂಹಿತೆ** (ನಾ). = ನಾರದಸ್ಮೃತಿ : ರಾಜನು ದೇಶವನ್ನು ರಕ್ಷಿಸುವುದಕ್ಕೆ ಪ್ರಜೆಗಳು ಹಿಂದಿರುಗಿ ಕೊಡುವ ಪ್ರತಿಫಲವೇ ತೆರಿಗೆಗಳೆಂದು (ಸಂ. ಕರ) ಗೌತಮಸಂಹಿತೆ, ನಾರದಸಂಹಿತೆ ಮುಂತಾದ ಸ್ಮೃತಿಗಳು ಭಾವಿಸುತ್ತವೆ (ಕಶಾಅ. ೩೯೬). [ನಾರದ+ಸಂಹಿತೆ]

**ನಾರದಸ್ಮೃತಿ** (ನಾ). ಹದಿನೆಂಟು ಸ್ಮೃತಿಗಳಲ್ಲಿ ಒಂದು; ನಾರದನಿಂದ ರಚಿತವಾದ ಧರ್ಮಶಾಸ್ತ್ರ : ನಾರದಸ್ಮೃತಿಯು ಕ್ರಿ. ಶ. ೪—೫ ಶತಮಾನಗಳಿಗೆ ಹಿಂದಿನದೆಂದೂ . . . ಯಾಜ್ಞ್ಯವಲ್ಕ್ಯ ಸ್ಮೃತಿಯು, ವಿಷ್ಣುಸ್ಮೃತಿಗಿಂತ ಹಿಂದಿನದಲ್ಲ ಎಂದು ಮುಂತಾಗಿ ಪಂಡಿತರು ಅಭಿಪ್ರಾಯಪಡುತ್ತಾರೆ (ಭಾರದ. ೫೦); ನಾರದಸ್ಮೃತಿಯ ಪ್ರಕಾರ ಬ್ರಹ್ಮನೇ ಲಿಪಿಯ ಸೃಷ್ಟಿಕರ್ತ (ಕಶಾಅ. ೧೬ ಅಡಿಟಿ). [ನಾರದ+ಸ್ಮೃತಿ]

**ನಾರದೀಯಪುರಾಣ** (ನಾ). = ನಾರದಪುರಾಣ: ಬ್ರಹ್ಮಪುರಾಣ ಪದ್ಮಪುರಾಣ ವೈಷ್ಣವಪುರಾಣ ಶೈವಪುರಾಣ ಭಾಗವತಪುರಾಣ ನಾರದೀಯಪುರಾಣ ಮಾರ್ಕಂಡೇಯಪುರಾಣ ಆಗ್ನೇಯಪುರಾಣ ಭವಿಷ್ಯತ್ಪುರಾಣ ಬ್ರಹ್ಮವೈವರ್ತಪುರಾಣ ಲೈಂಗಪುರಾಣ ವಾರಾಹ ಪುರಾಣ ಸ್ಕಂದಪುರಾಣ ವಾಮನಪುರಾಣ ಕೂರ್ಮಪುರಾಣ ಮತ್ಸ್ಯ ಪುರಾಣ ಗಾರುಡಪುರಾಣ ಬ್ರಹ್ಮಾಂಡಪುರಾಣವೆಂಬವೇ . . . ಹದಿನೆಂಟು ಮೂಲಪುರಾಣಂಗಳು (ವಿವೇಕ. ೮). [ಸಂ.]

**ನಾರಯಣ,** ನರಯಣ, ನರೇಯಣ, ನಾರಣ, ನಾರ್ಣ (ನಾ). **೧.** ನಾರಾಯಣ ; ವಿಷ್ಣು : ದ್ವಿಜಗುರು ದೇವತಾಋಪೂಜನ ಪರೋ ನಾರಯಣಚರಣನೂದ್ಧತ ಶ್ರೀಮದ್ವಿಷ್ಣುಗೋಪ ಮಹಾಧಿರಾಜ (ಎಕ. I, ೧–೯; ಸು. 466) ; ಕಾವುದಾನತ ಜನವ ಗದುಗಿನ ವೀರ ನಾರಯಣ (ಕುವ್ಯಾಆ. ೧–೧); ನಿಜಪುರವ ಹೊಕ್ಕನು ವೀರನಾರಯಣ (ಕುವ್ಯಾಗ. ೧೩–೧೫). **ನರಯಣ : ೧.** ಮಿಗೆ ಕಳವಳಿಸಿ ಪದುಳಿಸಿಕೊಳುತ ಭೂಪತಿತಿಲಕ ಚಿಂತಿಸಿ ನೆನೆವುತಿದ್ದನು ವೀರನರಯಣನ (ಕುವ್ಯಾಸ. ೧–೯೪) ; ಭಯದಿ ಕುಂತೀಸೂನುಗಳು ಮಱೆಗೊಳುತಲಿರ್ದುದು ವೀರನರಯಣನ (ಕುವ್ಯಾಗ. ೫–೫೭). **೨.** ವಿಷ್ಣುವಿನ ಪ್ರತಿಮೆ,—ವಿಗ್ರಹ : ಎವಂಜ್ಙಲ್ಲಳೊಸ್ದು ದೇಗುಲಕ್ಕೆ ನೆಲನ ಕಟ್ಟಿಸಿಕೊಟ್ಟ ಪದ[ಜ್ಗ]ಲಿಗಂ ಒಸ್ದು ನರಯಣನ ದಾನಗೊಟ್ಟ (ಸೌಇಇ. XI–i, ೩೫–೧೦; 933). **ನರೇಯಣ : ೧.** ಸೃಷ್ಟಿಸಿ ನರೇಯಣ ಬೊಮ್ಮಾದಿಗಳಲುತ್ಕೃಷ್ಟ ಸತ್ಯಾದಿ ಲೋಕದಲಿ (ವೈಕುಂಪ. ೨–೩). **ನಾರಣ : ೧.** "ನಾರಣ (ನಾಣ)—ನಾರಾಯಣ (ನಾಣೆ—ನಾರಾಯಣೀ)" (ತದ್ಭಕೋ. ೨೧). **೩.** ಒಬ್ಬಾತನ ಹೆಸರು : ವೇದ ವೇದಾಂಗ[ಮನೋದ]ದೆ ಸಾಸ್ತ್ರಮನಾದಿಮಧ್ಯಾಂತಮೆಱಿಯದೆ ನಾರಣಂಗಾದುದು ಕವಿತೆ ಸಹಜಮೇ (ಸೌಇಇ. XI–i, ೪೨–೩೫; ಸು. 971). **ನಾರ್ಣ : ೩.** 'ನಾರ್ಣಯ' ಪರಾ. [<ಸಂ. ನಾರಾಯಣ]

**ನಾರಲೆ** (ನಾ). ಒಂದು ಬಗೆಯ ವನಸ್ಪತಿ : ನರುವಲು, ನಾರಲೆ, ನರವೆ, ಮುಸ್ನು, ಮಡಿಕೆ (ಮೈಔಗಿ. ೬೪–೧೩೦೧). [ ? ]

**ನಾರವಳ್ಳಿ** (ನಾ). ಒಂದು ಬಗೆಯ ಮರ : ಮರಗಳು : ಹೆಸವ . . . ಅರಿಸಿನಬೂರುಗ, ಚಡಲೆ, ನಾರವಳ್ಳಿ, ನೀರವಳ (ನಪ್ಮನು. ೨೩೬). [ ? ]

**ನಾರವೆ** (ನಾ). ಒಂದು ಬಗೆಯ ಮರ : ಸಂಕೀರ್ಣ . . . ಕರೀ ಹಿಪ್ಪಲಿ, ಶಿರಂಟು, ನಾರವೆ, ಕೂಲಿ, ನೆಕ್ಕಿಲು, ತುಳಸಿ (ನಪ್ಮನು. ೨೩೮). 'ನರವೆ' ಪಠಾ. [←ತೆಲು. ನಾರುವ]

**ನಾರಸ** 'ನಾರಚ' ನೋ.

**ನಾರಸಿಂಗ** (ನಾ). ವಿಷ್ಣುವಿನ ಹತ್ತು ಅವತಾರಗಳಲ್ಲಿ ನಾಲ್ಕನೆಯದು; ನರಸಿಂಹ : ವೃಕೋದರಂ . . . ದೃಢಕಠಿನಹೃದಯನಪ್ಪ ಹಿರಣ್ಯಾಕ್ಷನುಮಂ ಪೋಲ್ವ ನಾರಸಿಂಗನಂತೆ (ಪಂಪಭಾ. ೧೨–೧೫೨ ವ). 'ನರಸಿಂಗ' ಪರಾ. [<ಸಂ. ನಾರಸಿಂಹ]

**ನಾರಸಿಂಹ** (ಗು.) **೧.** ನರಸಿಂಹನಿಗೆ ಸಂಬಂಧಿಸಿದ : ಸುಧನ್ವಂ ಕಟಾಹದುರಿಯಂ ನಾರಸಿಂಹಜಪದಿಂ ಜಯಿಸೆ (ಜೈಮಿಭಾ. ೧೨–೧). (ನಾ). **೨.** = ನಾರಸಿಂಗ : ನಾರಸಿಂಹನೆಂಬೊ ದೇವನು ನಂಬಿದಂಥ

ನರರಿಗೆಲ್ಲ ವರವ ಕೊಡುವನು (ಪುರಂದ. ೪-೭ಪಲ್ಲವಿ). **೩.** ಕಾಮಿಕಾಗಮದ ಮೂರು ಭೇದಗಳಲ್ಲಿ ಒಂದು : ಬಳಿಕ ಉತ್ತರ ಭೈರವೋತ್ತರ ನಾರಸಿಂಹವೆಂಬವೇ ಕಾಮಿಕಾಗಮದ ತ್ರಿಭೇದಂಗಳು (ವಿವೇಕ. ೭೪); ಕಾಮಿಕಾಗಮಕ್ಕೆ ಮೂರು ಉಪಾಗಮಗಳಿವೆ—ಉತ್ತರ, ಭೈರವೋತ್ತರ ಮತ್ತು ನಾರಸಿಂಹ (ಕಶಾಅ. ೧೨೬). [ಸಂ.]

**ನಾರಸಿಂಹಪುರಾಣ**(ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು; ☞ ಇದರಲ್ಲಿ ವಿಷ್ಣುವಿನ ನರಸಿಂಹಾವತಾರದ ಕಥೆ ವರ್ಣಿತವಾಗಿದೆ : ಸನತ್ಕುಮಾರಪುರಾಣ ನಾರಸಿಂಹಪುರಾಣ ನಂದಿಪುರಾಣ ಶಿವಧರ್ಮಪುರಾಣ ದೂರ್ವಾಸಪುರಾಣ ನಾರದೀಯಪುರಾಣ ಮಾನವಪುರಾಣ ಉಶನಃಪುರಾಣ ಬ್ರಹ್ಮಾಂಡಪುರಾಣ ವಾರುಣಪುರಾಣ ಕಾಳೀಪುರಾಣ ವಾಸಿಷ್ಠಪುರಾಣ ಲೈಂಗಪುರಾಣ ಸಾಂಬಪುರಾಣ ಸೌರಪುರಾಣ ಪಾರಾಶರಪುರಾಣ ಮಾರೀಚಪುರಾಣ ಭಾರ್ಗವಪುರಾಣವೆಂಬವೇ ಆಯಾ ನಾಮಧೇಯಮುಳ್ಳವಱಿಂ ನಿರೂಪಿತಂಗಳಾದ ಹದಿನೆಂಟು ಉಪಪುರಾಣಂಗಳು (ವಿವೇಕ. ೯).

[ನಾರಸಿಂಹ + ಪುರಾಣ]

**ನಾರಸಿಂಹಾವತಾರ** (ನಾ). ವಿಷ್ಣುವಿನ ದಶಾವತಾರಗಳಲ್ಲಿ ನಾಲ್ಕನೆಯದು ; ☞ ಹಿರಣ್ಯಕಶಿಪುವೆಂಬ ರಾಕ್ಷಸನನ್ನು ಕೊಲ್ಲುವುದಕ್ಕಾಗಿ ಕಂಬದಿಂದ ಹೊರಗೆ ಬಂದನೆಂದು ನಂಬಲಾದ, ಅರ್ಧಮನುಷ್ಯ ಮತ್ತು ಅರ್ಧಸಿಂಹದ ರೂಪವುಳ್ಳ ಅವತಾರ : ಇಲ್ಲಿ ನಾರಸಿಂಹಾವತಾರವು ಪ್ರತ್ಯಕ್ಷವಾಗಿಯೇ ವರ್ಣಿತವಾಗಿದೆ (ಭಾರದ. ೧೪೫). 'ನರಸಿಂಹಾವತಾರ' ಪರಾ.

[ನಾರಸಿಂಹ + ಅವತಾರ]

**ನಾರಳು** 'ನಾನಲ್' ನೋ.

**ನಾರಾಚ** (ನಾ). ೧. ಕಬ್ಬಿಣದಿಂದ ತಯಾರಿಸಿದ (ಉದ್ದವಾದ ಐದು ಗರಿಗಳಿಂದ ಕೂಡಿಕೊಂಡಿರುವ) ಒಂದು ಬಗೆಯ ಬಾಣ: ನೆಱೆಗೊಂಡುದು ನಾರಾಚಂ ನೆಱೆಗಾಣಲ್ಕಾರ್ತುದಿಲ್ಲ ಬೀರಕೆ ಬೀಯಕ್ಕೆಱುವಬೆಡಂಗನೊಳಾರ್ ದೊರೆ ನೆಱೆ ತೋರ್ಕುಮೆ. ಶತ್ರುಜನಕಮರ್ಥಿಜನಕ್ಕಂ (ಗದಾಯು. ೧-೧೮) ; "೧. ಬಾಣ. ೨. ತೂಕ ಮಾಡುವ ತ್ರಾಸು" (ಗದಾಸಂ. ೯೪ ಟಿಪ್ಪಣಿ); ☞ 'ನಾರಾಚ' ಮತ್ತು 'ನಾರಾಚಿ' ಎಂಬ ಎರಡು ಶಬ್ದಗಳ ಉಚ್ಚಾರ ಸಾಮೀಪ್ಯದಿಂದ ಶ್ಲೇಷೆಯ ಚಮತ್ಕಾರವು ಹೊರಹೊಮ್ಮುವಂತೆ ಕವಿ ಈ ಶಬ್ದವನ್ನು ಉಪಯೋಗಿಸಿರುವಂತೆ ಕಂಡುಬರುತ್ತದೆ. ೨. ಬಾಣ ; ಸರಳು : "ಸಮಾರ್ಯಸಃ, ಪ್ರಕ್ಷ್ವೇಳನಃ, ಏಷಣಃ, ನಾರಾಚಃ—ಈ ೪ ನಾರಾಚಂ" (ಹಲಾಯು. ೭೭-೩೧೩) ; ಅಂತು ಗುರುನಂದನಂ . . . ತೊಳಗುವ ನಾರಾಚದಿನೆಚ್ಚು ನೂಱು ಭೀಮನ ನೊಸಲಂ (ಪಂಪಭಾ. ೧೨-೬೯) ; ನಗಧರನ ನಿಶಿತನಾರಾಚಗಣಂ ನಡೆ ಪಾಯ್ವು ರಿಪುಭಟಾರುಣಜಲಧಾರೆಗಳಂ . . . ಪೂತನೆಯ ರಾಂತು ಕುಡಿದರ್ ಧುರದೊಳ್(ಜಗವಿ. ೭-೮೨) ; ಒಳಗುಡಿದ ನಾರಾಚದೇಱು ನಂದದಿ ಹೊಱಬಳಸದೊಳಗೊಳಗೇಗುವಾವಗೆಯ ಶಿಖಿಯಂತೆ... ಸತಿಯುಳಲು ಸೀಗೆಯೊಳಗಣ ಬಾಳೆಗೆಱೆಯಾದುದು (ಹಚಶಾ. ೧೨-೧೩); ಕಡುಮನದ ಹಾಯ ನಾಲ್ಕರಂಗದಿ ಹೊಕ್ಕು ಹಾಯಿದವು ಝುಡಿತೆಯೊಳ್ನಾರಾಚ (ಕೋಗಯು. ೨೪-೧೧) ; ಕತ್ತಲೆಯನಟ್ಟೆ ಬರ್ಪನನ ನಾರಾಚದಿಂ ಗಾಯಗೊಂಡಿರ್ಪರೊಳ್ ಕಾರ್ದ ನೆತ್ತರ್ ಸೋರ್ವ ಸೋನೆ ತುಂತುರ್ ಮಳೆಯೊ (ಶ್ರೀರಾಮಾ. ೩೧-೯೯) ; ಈ ನಾಲ್ವರ ಪ್ರಾಣಗಳನ್ನೂ ಆಹುತಿಗೊಂಡ ನಾಲ್ಕು ನಾರಾಚಗಳೂ ಒಂದೇ ಮಾದರಿಯವು (ಶಾಂತಲಾ. ೨೨೧). **೩.** ಒಂದು ಬಗೆಯ ಬಾಣ : ನಾರಾಚಂ ತಗರ್ತಲೆಯುಂ . . . ಕವಲ[ಂಬು ಮೆಂ]ಬಂಕದಂಬೆತ್ತ[ಲುಂ] ತುಱುಗಿ ನಡುವಿನಂ ಸಾರ್ದು ಸಾರ್ದೆಚ್ಚೆಚ್ಚು ಕಾದಿದರತಿರಥರೊಂದು ಜಾವಂ (ಪಂಪಭಾ. ೧೩-೩೯) ; "ತಕ್ಕಡಿಯ ಮುಳ್ಳಿನಂತಿರುವ ಬಾಣ" (ಪಂಪದೀ. ೫೨೪). **೪.** ಒಂದು ಬಗೆಯ ಆಯುಧ; ಈಟಿ : ಹೊಕ್ಕು ತಿವಿದನು ಸಬಳದಲಿ ಜಡಿವೆಕ್ಕಲನನಳವಿಯಲಿ ಹರಿಣವನಿಕ್ಕಿದರು ನಾರಾಚದಲಿ ಸೈವರಿದು (ಕುವ್ಯಾಅ. ೧೩-೨೬) ; ಬಿಲುತೀರು . . . ಭಲ್ಲ ನಾರಾಚ . . . ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿ ಸಾಧನವಿಶೇಷಂಗಳಿಂದಲುಂ (ವಿವೇಕ. ೨೮೧); ನಾರಾಚವೆಂದೂ ಚೂರಿಯೆಂದೂ ಅಂಕುಶವೆಂದೂ ಪ್ರಾಸವೆಂದೂ . . . ಈ ಮೂವತ್ತೆರಡು ಆಯುಧಂಗಳ ಹೆಸರು (ಖಡ್ಗಟೀ. ೨-೩೭). **೫.** ಓಲೆಗರಿಯ ಮೇಲೆ ಬರೆಯಲು ಉಪಯೋಗಿಸುವ ಉಕ್ಕಿನ ಲೇಖನಿ; ಕಂಟ : "ಪತ್ರಿ ನಾರಾಚಮೆನೆ ಕಂಠಂ" (ಪಂಗಾಂ. ೧೦೬-೧೫). **೬.** [ಜೈನ]ಆರು ಬಗೆಯ ಸಂಹನನ ನಾಮಕರ್ಮಗಳಲ್ಲಿ ಒಂದು. 'ನಾರಾಚಸಂಹನನ' ಪರಾ. [ಸಂ.]

**ನಾರಾಚಚೂರ್ಣ** (ನಾ). ಒಂದು ಬಗೆಯ ಔಷಧದ್ರವ್ಯ : ನಾರಾಚು[ಚ]ಚೂರ್ಣ:- ತಿಗಡೆ ಗ ೧ ತೂಕ, ಹಿಪ್ಪಲಿ ಗ ೪ತೂಕ . . . ಸಕ್ಕರೆವೆರಸಿ ಜೇನುತುಪ್ಪದಿಂ ಸೇವಿಸೆ ವಿರೇಕವಹುದು (ಸಕವೈ. ೩೦೨).

[ಸಂ.]

**ನಾರಾಚಜಾಲ** (ನಾ). ಬಾಣಗಳ ಸಮೂಹ,—ಪರಂಪರೆ : ನಾರಾಚಜಾಲದಲರಿಭಟನ ಬಿಗಿದು ಕಡಿದು ಬಿಸುಟನು ದ್ರುಪದತನಯನು (ಕುವ್ಯಾದ್ರೋ. ೧-೫೬). [ನಾರಾಚ + ಜಾಲ$_1$]

**ನಾರಾಚವಿಕ್ರಮ** (ನಾ). ಬಾಣಪ್ರಯೋಗದ ಸಾಮರ್ಥ್ಯ,—ಪರಾಕ್ರಮ : ಚೂರಿಸುವ ನಾರಾಚವಿಕ್ರಮದೋರಣೆಗೆ ನಾರಾಚಿಸಿತು ವಿಸ್ತಾರದಲಿ ವಿಸ್ತರಿಸಿದನು ಜಯಸಮರಸಾಹಸವ (ಕುವ್ಯಾಶ. ೩-೬೨).

[ನಾರಾಚ + ವಿಕ್ರಮ]

**ನಾರಾಚವೃಷ್ಟಿ** (ನಾ). = ನಾರಾಚಸೋನೆ : ನಾರಾಚವೃಷ್ಟಿ ಮಂಗಳಧಾರಾಸ್ನಪನಮನೆ ಪೋಲೆ (ಶಾಂತಿಪು. ೧೦-೧೬೪).

[ನಾರಾಚ + ವೃಷ್ಟಿ]

**ನಾರಾಚಸಂಹನನ** (ನಾ). [ಜೈನ] ತೊಂಬತ್ತುಮೂರು ನಾಮಕರ್ಮಪ್ರಕೃತಿಗಳಲ್ಲಿ ಒಂದು ; ಆರು ಸಂಹನನ ನಾಮಕರ್ಮಗಳಲ್ಲಿ ಒಂದು ; ☞ ಕೀಲು ಮತ್ತು ಅಸ್ಥಿಗಳು ಉತ್ಪತ್ತಿಯಾಗುವುದಕ್ಕೆ ಕಾರಣವಾದ ನಾಮಪ್ರಕೃತಿ : ನಾರಾಚವಿದ್ಧಮುಮಪ್ಪೆಲ್ಲಟ್ಟುಳ್ಳ ತೃತೀಯನಾರಾಚಸಂಹನನಮುಮಂ . . . ಮಾಳ್ಕುಂ (ತತ್ತ್ವಪ್ರ. ೨೯೬) ; ನಾರಾಚಸಂಹನನ : ಸಾಧಾರಣ ಕೀಲುಸಹಿತ ಅಸ್ಥಿಪಂಜರದ ನಿರ್ಮಾಣಕ ಕರ್ಮ (ಜೈನಪ. ೩೭೪).

[ನಾರಾಚ + ಸಂಹನನ]

**ನಾರಾಚಸೋನೆ** (ನಾ). ಬಾಣದ ಮಳೆ; ಸರಳ ವೃಷ್ಟಿ : ಹೂಳಿಹೋಯಿತು ನಳನ ಪಡೆ ನಾರಾಚಸೋನೆಯಲಿ (ಕಾಂರಾ.೧೯-೧೬).

[ನಾರಾಚ + ಸೋನೆ]

**ನಾರಾಚಿ** (ನಾ). ಅಕ್ಕಸಾಲಿಗನ ತಕ್ಕಡಿ,—ತ್ರಾಸು; ಚಿಂತಾಲು : "ನಾರಾಚಿ, ಏಷಣಿಕಾ—೨ ತ್ರಾಸಿನ ಪೆಸರುಗಳು" (ಸಿದ್ಧಾಂತಿ. ೨೭೦).

[ಸಂ. ನಾರಾಚೀ]

**ನಾರಾಟಿ** (ನಾ). [ಸಂಗೀತ] ಒಂದು ಧ್ವನಿವಿಶೇಷ; ☞ ಮಾಧುರ್ಯವಿಲ್ಲದ ಹಾಗು ಬಹುಮಟ್ಟಿಗೆ ತಾಲಸಂಸ್ಪರ್ಶಯುಕ್ತವಾದ ಧ್ವನಿ : ಸೊಗಯಿಸುವ ಸಪ್ತಸ್ವರಂಗಳೊಗೆದವಿಪ್ಪತ್ತೆರಡು ಶ್ರುತಿಗಳು ನೆಗಳುತಿರೆ ನಾರಾಟ ಕಾವುಳವೆಂಬ ಧ್ವನಿಗೂಡಿ (ಬಸಪು. ೧೯-೧೦) ;

ಮತ್ತಮಾ ರಾಗಂಗಳಂ ಪಾಡುವಲ್ಲಿ . . . ಕಾವುಳ ಬಬ್ಬೋಳ ನಾರಾಟ ಮಿಶ್ರವೆಂಬ ಚತುರ್ವಿಧ ಸುಸ್ವರಗಳಿಂದುರುಳಿಸಿ . . . ಕರ್ಣರಸಾಯನ ಮಾಗಿ ಪಾಡಿ (ವಿವೇಕ. ೨೫೨). [ಸಂ.]

**ನಾರಾಯಣ** (ನಾ). ೧. ಜಗತ್ತಿನ ಮೂಲಪುರುಷ ; ಪರಬ್ರಹ್ಮ. ೨. ಹಿಂದೂಗಳ ಧರ್ಮಗ್ರಂಥಗಳಲ್ಲಿ ವಿವರಣೆಯಾಗಿರುವ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರೆಂಬ ತ್ರಿಮೂರ್ತಿಗಳಲ್ಲಿ ಎರಡನೆಯವನು ; ಜಗತ್ತಿನ ಸ್ಥಿತಿಯ ಅಧಿಪತಿ; ವಿಷ್ಣು : ಕ್ಷಾರ ಕ್ಷೀರಾಂಬುಧಿಗಂ . . . ಮುರಜಿನ್ನಾರಾಯಣರ್ಗಂ ಸಿರಿಗಂ ಶ್ರೀರಾಮೆ ಗಮತನುಗಂ ಭವಾಂಗಮೈಕ್ಯಂ (ಕಾವ್ಯಾಪ. ೯೦೬); ನಾರಾಯಣ ವೃದ್ಧಬ್ರಾಹ್ಮಣನಾಗಿ ಬಂದು ಬಲಿಯ ಭೂಮಿಯ ಬೇಡಿದ (ಬಸವ. ೬೨೩) ; ನಾರಾಯಣ ಎಂದರೆ . . . ಮಾನವ ಸಮಾಜರೂಪೀ ಭಗವಂತ ನೆಂದು ಅರ್ಥ (ಭಾರದ. ೩೬೪). ೩. ವಿಷ್ಣುವಿನ ಪೂರ್ಣಾವತಾರವೆನಿಸಿ ರುವ ಕೃಷ್ಣ ; ವಾಸುದೇವ: "ವಿಷ್ಣುಃ, ಕೃಷ್ಣಃ. . .ನಾರಾಯಣಃ, ಜಗನ್ನಾಥಃ, ವನಮಾಲೀ, ಗದಾಧರಃ— ಈ ೪೫ ನಾರಾಯಣನ ಪೆಸರ್'' (ಹಲಾಯು. ೫–೨೫) ; ಅಂತು ದಕ್ಷಿಣಾಕ್ಷಿಸ್ಪಂದನ ದೊಳಂ ಸೂಚಿಸುವ ಶುಭಸೂಚನೆಯೊಳಂ ನಾರಾಯಣನುದಾತ್ತ ನಾರಾಯಣನ ಬರವನಱಿದು (ಪಂಪಭಾ. ೪–೩೩ ವ) ; ನಾರಾಯಣಂ ಚಾಳುಕ್ಯನಾರಾಯಣನ ಶೂರಕೃತ್ಯಂಗಳಂ ಪೊಗಟುತ್ತಿರ್ಪನಂ (ಗದಾಯು. ೧೦–೧೧ ವ) ; ಕಪಟನಾಟಕಸೂತ್ರಧಾರ ನಾರಾಯಣಪ್ರೇರಿತ ಮನಸ್ಕನಾಗಿ ವಸುದೇವನಿಂತೆಂದಂ (ಜಗವಿ. ೩–೨೨ ವ); ನಾರಾಯಣನ ನುಡಿಯಿಂದ ಮುನ್ನ ಜಲಾಯತಾಸ್ತ್ರವನರ್ಜುನನು ಗಾಂಡಿವದ ಲುಗುಳಿಸಿದ (ಕುಮಾರವ್ಯಾ/ದ್ರೋ. ೧೯–೪೬) ; ನಾರಾಯಣ ನಿನ್ನ ನಾಮದ ಸ್ಮರಣೆಯ ಸಾರಾಮೃತವೆನ್ನ ಬಾಯಿಗೆ ಬರಲಿ (ಪುರಂದ. ೨–೧೪೮ ಪಲ್ಲವಿ). ೪. ಒಬ್ಬ ಋಷಿಯ ಹೆಸರು : ಆಯತಿಯಿಂದಂ ನರ ನಾರಾಯಣರೆನೆ ನೆಗೞ್ದವರಿಗ ನಾವಿರ್ವರುಂ (ಪಂಪಭಾ. ೪–೪೫). 'ನರನಾರಾಯಣಾಶ್ರಮ' ಪರಾ. ೫. ಒಬ್ಬಾತನ ಹೆಸರು : ವಸದಿ ಯೂನ್ಮೆಯ್ದೊನ್ನಾರಾಯಣ ಪೆರುನ್ತಚ್ಚನ್ (ಮೈಆರಿ. ೧೯೩೨, ೫೮–೭ ; ಸು. 825). ೬. =ನಾರಾಯಣೋಪನಿಷತ್ತು : ಬಳಿಕ ಶ್ರೀ ರುದ್ರ ಬೃಹದಾರಣ್ಯಕ . . . ನಾರಾಯಣ ಹಂಸ . . . ಮುಂಡಕ ವೆಂಬ ಮೊದಲಾದುವೆ ಶತೋಪನಿಷತ್ತುಗಳು (ವಿವೇಕ. ೪). ೭. =ನಾರಾಯಣಾಸ್ತ್ರ : ಕೈನೀಡಿದನು . . . ಹೊಂಗಱಿಯ ನಾರಾಯಣಮಹಾಶರಕೆ (ಕುವ್ಯಾದ್ರೋ. ೧೯–೧೪). ೮. [ಜೈನ] ಒಂಬತ್ತುಜನ ವಾಸುದೇವರಲ್ಲಿ ಒಬ್ಬ: ನಾರಾಯಣನಂ ಮಣಿಮಯ ನೀರಾಜನ ದೀಪಮಾಲೆ ಬಳಸಿದುವಾಗಳ್ (ಪಂರಾಪೂ. ೧೪–೭೩); ನಾರಾ ಯಣರ ಸಂಪತ್ತಿ ಮೊದಲಾದುವು ಚಕ್ರವರ್ತಿಗಳ ಅರ್ಧದಷ್ಟು. ಆದು ದರಿಂದ ನಾರಾಯಣರನ್ನು ಅರ್ಧಚಕ್ರಿಗಳೆಂದೂ ಹೇಳುವರು. ಇವರು ಒಂಬಯ್ವರು (ಜೈನಧ. ೧೨೮). 'ನವನಾರಾಯಣ' ಪರಾ. [ಸಂ.]

**ನಾರಾಯಣಕವಚ** (ನಾ). ಒಂದು ರಕ್ಷಾಮಂತ್ರ : ಪ್ರಣವ ರೂಪನೆ ಹೇಳು ನಾರಾಯಣಕವಚವೆಂದೇನು (ಶಿಭಾಗ. ೬–೮–೧) ; ಅವನು ಇವನಿಗೆ ನಾರಾಯಣಕವಚವನ್ನು ಅನುಗ್ರಹಿಸಿ ಕೊಟ್ಟು ಗುರು ವಾದನಲ್ಲ ! (ನಡೆದಾ. II, ೧೪೦೪). [ಸಂ.]

**ನಾರಾಯಣಗೌಲ** 'ನಾರಾಯಣಗೌಳ' ನೋ.

**ನಾರಾಯಣಗೌಳ**, ನಾರಾಯಣಗೌಲ (ನಾ). [ಸಂಗೀತ] ಒಂದು ರಾಗದ ಹೆಸರು: ನಾರಾಯಣಗೌಳ ೨೮ನೇ ಹರಿಕಾಂಭೋಜಿಯಲ್ಲಿ ಜನ್ಯ (ಸಂಗೀಚಂ. ೧೫೯) ; ವೆಂಕೋಬರಾಯರು . . . ನಾರಾಯಣಗೌಳ ರಾಗವನ್ನು ಹಾಡುವಂತೆ ಸನ್ನೆ ಮಾಡಿದರು (ಸಂಗೀತ. ೧೩).

**ನಾರಾಯಣಗೌಲ :** ನಾರಾಯಣಗೌಲವು (೫೨) ಸಂಪೂರ್ಣವೆಂದು ಪ್ರಸಿದ್ಧವಾಗಿದೆ ; (ಇದು) ಕೇದಾರಗೌಲ ಮೇಳದಲ್ಲಿ ಹುಟ್ಟಿದೆ ; ಸಾಯಂಕಾಲದಲ್ಲಿ ಹಾಡುವಂತಹದು (ಚತುಪ್ರ. ೬೩).
[ನಾರಾಯಣ+ಗೌಳ₁]

**ನಾರಾಯಣತೈಲ** (ನಾ). ಸಂಧಿವಾತ ಮೊದಲಾದ ರೋಗ ಗಳನ್ನು ಪರಿಹರಿಸುವ ಮೂಲಿಕೆಗಳಿಂದಾದ ತೈಲ : ನಾರಾಯಣ ತೈಲ—ಎಳ್ಳೆಣ್ಣೆ ಸೇರು ೧೦, ಎಕ್ಕದ ಹಾಲು ಸೇರು ೧ . . . ಎಣ್ಣೆ ಯುಳಿವ ತನಕ ಆಟ್ಟು . . . ಸರ್ವಾಂಗ ಲೇಪಂಗೈಯೆ ಸಕಲಸನ್ನಿಪಾತಂ ಗಳು . . . ಮಾಣುವುವು (ಸಕವೈ. ೧೭೯). [ನಾರಾಯಣ+ತೈಲ₁]

**ನಾರಾಯಣದೇಶಾಕ್ಷಿ** (ನಾ). [ಸಂಗೀತ] ಒಂದು ರಾಗದ ಹೆಸರು : ನಾರಾಯಣದೇಶಾಕ್ಷಿಯು (೩೪) ಸಂಪೂರ್ಣ(ರಾಗ) ; ಪ್ರಾತಃಕಾಲದಲ್ಲಿ ಹಾಡಲ್ಪಡುತ್ತದೆ, ಶಂಕರಾಭರಣವೆಂಬ ರಾಗದ ಮೇಳದಲ್ಲಿ ಹುಟ್ಟಿದೆ (ಚತುಪ್ರ. ೬೧). [ನಾರಾಯಣ+ ದೇಶಾಕ್ಷಿ]

**ನಾರಾಯಣಬಲಿ** (ನಾ). ಆತ್ಮಹತ್ಯೆ. ಅಪಘಾತ ಮೊದಲಾದ ನಿಮಿತ್ತದಿಂದ ದುರ್ಮರಣಕ್ಕೊಳಗಾದವರು, ಬ್ರಹ್ಮಚಾರಿ ಗಳಾಗಿ ಸತ್ತವರು ಮೊದಲಾದವರ ಉತ್ತರಕ್ರಿಯೆಯ ಕಾಲದಲ್ಲಿ ನಾರಾಯಣ ಮೊದಲಾದ ದೇವತೆಗಳಿಗೆ ಕೊಡುವ ಬಲಿ: ವ[ಜ್ಞೇ] ಶ್ವರನ್ನಾಮಗ್ರಾಮನ್ನಾರಾಯಣಬಲ್ಯುಪಹಾರಾರ್ಥಂ ಷೋಡಶ ಸಂಖ್ಯೇಭ್ಯೋ ಬ್ರಾಹ್ಮಣೇಭ್ಯಶ್ಚ ಸತ್ರನಿಬನ್ಧ ಪ್ರತಿದಿನಮನುವಿಧಾನ ಜ್ಯೃತ್ವಾ (ಕಇ. V, ೧–೧೩ ; 578) ; ಈಗಳುಂ ಕೈದುವಿಂ ಹೊಂದಿದ ರ್ಗವನಿ ನಾರಾಯಣಬಲಿಯನೆಸವುದು (ಪದ್ಮರಾ. ೧೦–೧೫೪). [ಸಂ.]

**ನಾರಾಯಣಾಸ್ತ್ರ** (ನಾ). ನಾರಾಯಣನು ಅಧಿದೇವತೆ ಯಾಗಿರುವ ಬಾಣ ; ನಾರಾಯಣಮಂತ್ರದಿಂದ ಅಭಿಮಂತ್ರಿಸಿ ಪ್ರಯೋಗಿಸುವ ಬಾಣ : ರಾಯಕಟಕವ ಬೆದಱಿಸಿದ ನಾರಾಯ ಣಾಸ್ತ್ರದ ಬಾಧೆಯನು ಕಮಲಾಯತಾಂಬಕ ನಿಲಿಸಿ ಸಂತೈಸಿದನು ಪಾಂಡವರ (ಕುವ್ಯಾದ್ರೋ. ೧೯ ಸೂಚನೆ) ; ಭಂಗಿಸಿದನೆಚ್ಚು ನಾರಾಯಣಾಸ್ತ್ರದೊಳು (ಜೈಮಿಭಾ. ೮–೪೫) ; ಅವನಿಗೆ ಬ್ರಹ್ಮೇತಿ ಸಿಟ್ಟುಬಂದು . . . ಪಾಂಡವಸೇನೆಯ ಮೇಲೆ ನಾರಾಯಣಾಸ್ತ್ರವನ್ನು ಅಭಿಮಂತ್ರಿಸಿ ಬಿಟ್ಟನು (ಪಚಭಾ. ೨೯೧). [ನಾರಾಯಣ+ಅಸ್ತ್ರ]

**ನಾರಾಯಣಿ** (ನಾ). ೧. ಸ್ತ್ರೀರೂಪವನ್ನು ತಾಳಿದ ವಿಷ್ಣು ; ಮೋಹಿನಿ : ದಾರುವನದಲ್ಲಿ ಮೋಹಿನಿ ನಾರಾಯಣಿ ಸುಳಿಯಲೊಡಂ ಮೋಹಿತರಾದರ್ ಧೀರ ಯತಿರಾಜರ್ (ಪಮ್ಮಾರ. ೬–೨೬). ೨. ವಿಷ್ಣು ವಿನ ಪತ್ನಿ ; ಲಕ್ಷ್ಮಿ : 'ಆದಿನಾರಾಯಣಿ' ಪರಾ. ೩. ಆದಿಶಕ್ತಿ; ದುರ್ಗೆ. ೪. ಒಂದು ಬಗೆಯ ಗಡ್ಡೆ ; ಮಜ್ಜಿಗೆ ಗಡ್ಡೆ ; ಆಸಡಿ ; ಶತಾವರಿ : ''ಶತಮೂಲೀ, ಬಹುಸುತಾ, ಅಭೀರುಃ, ಇಂದೀವರೀ, ವರೀ, ಋಷ್ಯಪ್ರೋಕ್ತಾ, ಅಭೀರುಪತ್ರೀ, ನಾರಾಯಣೀ, ಶತಾವರೀ, ಅಹೇರುಃ—೧೦ ಪಿಲ್ಲಪಿಚ್ಚರದ ಹೆಸರುಗಳು. ಅಂದರೆ ಆಸಡಿಯೆನ್ನು ವರು, ಆಷಾಢೀಬೇರು ಪ್ರಸಿದ್ಧ, ಮಜ್ಜಿಗೇಗೆಡ್ಡೆ, ಅಜ್ಜಿಗೆಡ್ಡೆ'' (ಸಿವಾನಿ. ೧೩೫). ೫. [ಸಂಗೀತ] ಒಂದು ರಾಗದ ಹೆಸರು : ಬಳಿಕ ಸಮಸ್ತರಾಗಂಗಳೊಳಗೆ ರಾಮಕ್ರಿಯೆ . . . ನಾರಾಯಣಿ . . . ಮಧ್ಯಮಾವತಿಯೆಂಬ ಮೂವತ್ತಾಱು ರಾಗಂಗಳೇ ಮುಖ್ಯಮಾಗಿ (ವಿವೇಕ. ೨೫೧); ತಾಳದಂಡಿಗೆವಿಡಿದು ಸುವಾಸಿನಿಯರು ಬಂದು ನಿಂದು ದೇಶಾಕ್ಷಿ ನಾರಾಯಣಿ ಘೂರ್ಜರಿಯಿಂ ರತೀಶನ ಪಿತನ ಪಾಡಿದರು (ಮೋಹತ. ೧೬–೬೩) ; ನಾರಾಯಣೀರಾಗವು (೩೬) ಶಂಕರಾಭರಣವೆಂಬ ಮೇಳದಲ್ಲಿ ಹುಟ್ಟಿದೆ (ಚತುಪ್ರ. ೬೧).
[ಸಂ. ನಾರಾಯಣೀ]

**ನಾರಾಯಣೋಪನಿಷತ್ತು** (ನಾ). ವೇದಾಂತಗಳೆಂದು ಪ್ರಸಿದ್ಧವಾದ ಉಪನಿಷತ್ತುಗಳಲ್ಲಿ ಒಂದು : ಹರಿಯೆ ಜಗಮೆಂದೆನೆ ಪ್ರಮಾಣವು ಪುರುಷವೀ ವೇದಮ್ಮೆನಲು [ಪುರುಷಮೇ ವೇದಮೆನ್ನಲು] ಸಂಭರಿತನೆನೆ ನಾರಾಯಣೋಪನಿಷತ್ತು ಘೋಷಿಸಲು (ಗಗತಾ. ೧೭-೨೧). [ನಾರಾಯಣ + ಉಪನಿಷತ್ತು]

**ನಾರಾಶಂಸಿ** (ನಾ). ವೀರಪುರುಷರ ಪ್ರಶಂಸೆ ; ವೀರಗಾಥೆ : ಇತಿಹಾಸ, ಪುರಾಣ, ಗಾಥಾ, ನಾರಾಶಂಸಿಗಳು ಅವುಗಳನ್ನು ಅನುಸರಿಸಿ ಹೊರಟವು. ಇದು ಇತಿಹಾಸ, ಪುರಾಣ, ಗಾಥಾ ಮತ್ತು ನಾರಾಶಂಸಿಗಳ ಪ್ರಿಯಸ್ಥಾನ (ಭಾರದ. ೧೩೨). [ಸಂ. ನಾರಾಶಂಸೀ]

**ನಾರಿ₁** (ನಾ). ೧. ಬಿಲ್ಲಿಗೆ ಕಟ್ಟುವ ಹುರಿ; ಸಿಂಜಿನಿ ; ಹೆದೆ : "ತಿರು ತಿರ್ಪೆಂದೊಡಂ ಬಿಲ್ಲ ನಾರಿ" (ಕಬ್ಬಿಕೈ. ೩೮); "ತಿರು ತಿರ್ಪು ಹೆದೆಯೆನೆ ಬಿಲ್ಲ ನಾರಿ" (ಶಬ್ದಮಂ. ೪೪) ; ನಾರಿ ಹಱಿಯಿತ್ತು, ಬಿಲ್ಲು ಮುಱಿಯಿತ್ತು, ಅಂಬೇನ ಮಾಡುವುದು (ಅಪಚಂ. ೬೩-೨೭೬); ಅ ತವಸಿಯಂ ಮುಳಿದೆಚ್ಚೊಡೆ ಕರ್ಪುವಿಲ್ಲು ತಾಂ ಮುಱಿಯದೆ . . . ತುಂಬಿಯ ನಾರಿ ಬೇಗದಿಂ ಪಱಿಯದೆ (ಕಬ್ಬಿಕಾ. ೨೩೩); ಪೂವಿನ ಬಿಲ್ಲ ಕೊಪ್ಪನೊದೆದೇಱಿಸಿ ತಾವರೆ ನೂಲ ನಾರಿಯಂ ಜೇವೊಡೆಗೆಯ್ದು (ಶಮದ. ಸ.೬೫ ಪ್ರಯೋ); ನಾರಿಯ ತೀಡಿ ಜೇವಡೆಗೈದು ಸಿಡಿಲಂತೆಱಗೆ ರಾಘವನು (ಕೌಶರಾ. ೩೫-೧೯) ; ನಾರಿಯಂ ಕೀಸಿ ನರಮಂ ಸೀಳಿ ಹೆದೆಗಟ್ಟು (ಸಮ್ಯಕೌ. ೧೦-೩೨) ; ಮದನಂ ಮಾಲೆಗಾರ್ತಿಯರ ಹುಬ್ಬೆಂಬ ಚಾಪಮಂ ಕುರುಳೆಂಬ ನಾರಿಯಂ . . . ಅಳವಡಿಸಿಕೊಂಡು (ಜೈಮಿಭಾ. ೬-೧೭); ಲವಂ ಪಲವಂ ರಾವುತವಡೆಯಂ . . . ಕಂಡು ಮಾಣ್ದು ನಾರಿಯಂ ಬಿಲ್ಗೆ ಬಿಗಿದು (ರಾಮಾಶ್ವ. ೧೫೪-೧೦). ೨. ತೆಂಗು, ತಾಳೆ ಮೊದಲಾದ ಮರಗಳ ಗರಿಗಳ ಬುಡದಲ್ಲಿರುವ ನಾರಿನ ಪೊರೆ : (ಕ). [ದೇ.॥ ತಮಿ. ತುಳು. ತೆಲು. ನಾರ ; ಕೋಲಾ. ನಾರಾ = ಹಗ್ಗ]

**ನಾರಿ₂** (ನಾ). ಹೆಂಗಸು; ಮಹಿಳೆ ; ಸ್ತ್ರೀ : "ವನಿತೆ ವಧು ನಾರಿ ಸೀಮಂತಿನಿಯೋಷಿದ್ವಾಮೆ ಕೇವಳಂ ಸ್ತ್ರೀನಾಮಂ" (ವಸ್ತುಕೋ. ೫೨-೧) ; "ನಾರಿಯೋಷಿತ್ಕಾಂತೆ ಮಹಿಳೆಯಬಳೆ ರಾಮೆ ವರವರ್ಣಿನಿಯೆನಲ್ಕೆ ಹೆಂಗೂಸೆನಿಕ್ಕುಂ" (ಮಂಗರಾ. ೮೧-೧); ಅಲದ ಬಿಟಲಂತೆ ನೆಲಕ್ಕೆಱಗದೆ . . . ಬಿಲ್ಲಾಳಿನಂತೆ ನಾರಿಗಾಸೆ ಮಾಡದೆ ಹಂಸೆಯಂತೆ ಸಾರಗ್ರಾಹಿಯುಂ (ಧರ್ಮಾಮೃ. ೫-೯೯); ನಾರಿಗೆ ಗುಣವೇ ಶೃಂಗಾರ (ಬಸವ. ೬೪); ನಾರಿಯ ರೂಪಂ ಮನದೊಳ್ ಬೇರೂಱಲು (ಪುಣ್ಯಾಸ್ರ. ४-೩೯); ಹೊತ್ತುಗಳೆಯದೆ ಹೆಱಸಿರೇ ನಾರಿಯನು ನಿಮ್ಮಯ ಬಾಣಗರ್ಭಿಣಿಯ (ಕುವ್ಯಾಭೀ. ೯-೩೪); ಚಾಪದ ನಾರಿ ಬೆಸಲಾಗಲಿ ಮಹಾಸ್ತ್ರವನು (ಕುವ್ಯಾದ್ರೋ. ೩-೭೩); ℙ ಮೇಲಿನ 'ಧರ್ಮಾಮೃ', 'ಕುವ್ಯಾಭೀ' ಮತ್ತು 'ಕುವ್ಯಾದ್ರೋ' ಪ್ರಯೋಗಗಳಲ್ಲಿ 'ದ್ವಿಭಾಷಾಶ್ಲೇಷೆ' ಎಂಬ ಚಮತ್ಕಾರವನ್ನು ಕವಿಗಳು ಉಪಯೋಗಿಸಿದ್ದಾರೆ; ಅರು ಹಿತವರು ನಿನಗೆ ಮೂಱುಮಂದಿಗಳೊಳಗೆ ನಾರಿಯೋ ಧಾರಿಣಿಯೋ ಬಲುಧನದ ಸಿರಿಯೋ (ಪುರಂದ. ೧-೧೩೨ ಪಲ್ಲವಿ); ಒಲಿದರೆ ನಾರಿ ಮುನಿದರೆ ಮಾರಿ (ಗಾದೆ). [ಸಂ. ನಾರೀ]

**ನಾರಿ₃** (ನಾ). ಶತ್ರುಗಳಿಲ್ಲದವನು ; ಅಜಾತಶತ್ರು : "ವನಿತೆಯು ಜಾತಶತ್ರು ತಿರುವೆಂಬಿವು ನಾರಿ ಸಮಾಖ್ಯಂ" (ನಾನಾರ. ೭೫). [ಸಂ. (ನ + ಅರಿ)]

**ನಾರಿಕೇರ** (ನಾ). = ನಾರಿಕೇಲ. [ಸಂ.]

**ನಾರಿಕೇಲ,** ನಾರಿಕೇಳ (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ ; ತೆಂಗು. **ನಾರಿಕೇಳ :** ನಾರಿಕೇಳಂ ಕ್ರಮುಕಂ ತಾಳದ್ರುಮಮೆಂದಿವು ಭೂಜಾಳಿಗಳೊಳ್ ತೃಣಮಹೀರುಹಂಗಳೆನಿಕ್ಕುಂ (ವಸ್ತುಕೋ. ೩೬-೧೯) ; ಮತ್ತಮನೇಕ ಪನಸ ಜಂಬೀರ ನಾರಿಕೇಳ ಸಹಕಾರ ಕದಳೀ ಪ್ರಮುಖ ಫಲಿತಭೂಜರಾಜಿಗಳ್ (ಪುಷ್ಪಪು.೫-೮೭ವ); ಜೀಮೂತವಾಹಂಗೆ ನಿಜಸುಧಾರಸಮಂ ಮರಕತಕಳಶದೊಳ್ ತೀವಿ ನಿಡುದೋಳಂ ನೆಗಪಿ ಮೇಗಣ್ಗೆ ನೀಡುಂ ನೀಡಿದಪಳೆಂಬಂತೆ ರಂಜಿಪ ನಾರಿಕೇಳಮುಂ (ಶಬಶಂ. ೨-೪೨ ವ); ಮಾಚಿಕಬ್ಬೆ ಮಾರಸಿಂಗಮಯ್ಯನವರುಗಳು . . . ಶಾಂತಲೆಯ ಕೈಗೆ ನಾರಿಕೇಳಫಲವನ್ನಿತ್ತು . . . ಧಾರೆಯೆರೆದು (ಶಾಂತಲಾ. ೧೧೨). [ಸಂ.]

**ನಾರಿಕೇಲಿ** (ನಾ). = ನಾರಿಕೇಲ. [ಸಂ.]

**ನಾರಿಕೇಳ** 'ನಾರಿಕೇಲ' ನೋ.

**ನಾರಿಕೇಳಪಾಕ** (ನಾ). [ಕಾವ್ಯಮೀ] ಓದಿದ ಕೂಡಲೇ ಸ್ವಾರಸ್ಯ ತಿಳಿಯುವಂತಿರದೆ ನಿಧಾನವಾಗಿ ಪರ್ಯಾಲೋಚನೆಯಿಂದ ತಿಳಿಯಬೇಕಾದ ಕಾವ್ಯರಚನಾ ರೀತಿ ; ℙ ತೆಂಗಿನಕಾಯಿಯ ತಿರುಳನ್ನು ಉಪಯೋಗಿಸಬೇಕಾದರೆ ಮೊಟ್ಟೆ ಸುಲಿದು ಚಿಪ್ಪನ್ನು ಒಡೆಯಬೇಕಾಗಿರುವಂತೆ, ಕ್ಲೇಶದಿಂದ ಅಭಿಪ್ರಾಯವನ್ನು ಗ್ರಹಿಸಬೇಕಾದ ಕಾವ್ಯರಚನೆಯ ಹದ : ಕೆಲವು ಕಾವ್ಯಗಳಲ್ಲಿ . . . ಅರ್ಥವು ಗೂಢವಾಗಿದ್ದು ಅದು ತಿಳಿಯಬೇಕಾದರೆ ಬುದ್ಧಿಕ್ಲೇಶವಾಗುವುದು ; ಈ ಗಭೀರತೆಯ ತಾರತಮ್ಯವನ್ನು ಇಟ್ಟುಕೊಂಡು ಪಾಕವನ್ನು 'ದ್ರಾಕ್ಷಾಪಾಕ', 'ನಾರಿಕೇಳಪಾಕ' ಎಂದು ಎರಡು ಭಾಗ ಮಾಡಿದ್ದಾರೆ (ಕೈಪಿಡಿ. ೨೨೫) ; ವರ್ಣನೆ ಕಲ್ಪನೆ ಎರಡೂ ಪ್ರೌಢವಾಗಿವೆ. ಆದರೂ ನಾರಿಕೇಳಪಾಕದಂತೆ ವಿದ್ವಾಂಸರ ಮನಸ್ಸನ್ನು ಆಕರ್ಷಿಸಿದೆ (ಭಾರದ. ೪೫೩). 'ದ್ರಾಕ್ಷಾಪಾಕ' ಪರಾ. [ನಾರಿಕೇಳ(= ನಾರಿಕೇಲ) + ಪಾಕ₁]

**ನಾರಿಕೇಳಲೇಹ್ಯ** (ನಾ). ಎಳನೀರು ಮೊದಲಾದುವುಗಳ ಮಿಶ್ರಣದಿಂದ ತಯಾರಿಸಿದ ಒಂದು ಬಗೆಯ ಔಷಧಿ : ನಾರಿಕೇಳಲೇಹ್ಯ . . . ಸೇವಿಸಿದರೆ ಕ್ಷಯರೋಗ, ಅಮ್ಲಪಿತ್ತ, ಅಶ್ಮರಿ, ಪಾಂಡು, ಕಾಮಿಲಾ, ಮೇಹ ಈ ರೋಗಗಳು ಗುಣವಾಗುವುವು (ಸಕವೈ. ೪೫೨). [ನಾರಿಕೇಳ (= ನಾರಿಕೇಲ) + ಲೇಹ್ಯ]

**ನಾರಿಗಳ್ಳ** (ನಾ). ಹೆಂಗಸರನ್ನು ಕದಿಯುವವನು ; ಸ್ತ್ರೀಚೋರ : ವೀರರಂಗವ ಬಿಟ್ಟು ನೀನೀ ಚೋರರಂಗವ ಕಲಿತೆ ಹೊಸತೇ ನಾರಿಗಳ್ಳನು ತಂದೆ ನೀ ಧುರಗಳ್ಳ ಹಸನಾಯ್ತು (ಕೌಶರಾ. ೧೯-೨೮). [ನಾರಿ₂ + ಕಳ್ಳ₁]

**ನಾರಿಚೋರ** (ನಾ). = ನಾರಿಗಳ್ಳ : ನಾರಿಯೊಬ್ಬಳ ಪೆತ್ತೆಯಂತೆ . . . ನಾರಿಚೋರನ ಕೊಂದೆಯಂತೆ (ಪುರಂದ. ೧-೧೧-೨). [ನಾರಿ₂ + ಚೋರ]

**ನಾರಿಯಳಿ** 'ನಾರಿವಾಳ' ನೋ.

**ನಾರಿರನ್ನ** (ನಾ). = ನಾರಿರನ್ನೆ : ನಾರಿರನ್ನಳ ಕಂಡೆಯ ವಾರಿಜನಾಭ . . . ಚೆನ್ನಿಗರಾಯನ (ಪುರಂದ. ೩-೧೬೫ ಪಲ್ಲವಿ). [ನಾರಿ₂ + ರನ್ನ]

**ನಾರಿರನ್ನೆ** (ನಾ). ಸ್ತ್ರೀಯರಲ್ಲಿ ರತ್ನಪ್ರಾಯಳಾದವಳು ; ಶ್ರೇಷ್ಠಳಾದ ಹೆಣ್ಣು ; ಸ್ತ್ರೀರತ್ನ : ನಾರಿರನ್ನೆ ಸುಭದ್ರೆಸಹಿತ ಕುಮಾರನನು ಕಳುಹೆಂದನರ್ಜುನನೊಡನೆ (ಜಿನಭಾ. ೩೨-೪೭). [ನಾರಿ₂ + ರನ್ನೆ]

**ನಾರಿವಣ** 'ನಾರಿವಾಳ' ನೋ.

**ನಾರಿವಾಣ** 'ನಾರಿವಾಳ' ನೋ.

**ನಾರಿವಾಳ,** ನಾರಿಯಳಿ, ನಾರಿವಣ, ನಾರಿವಾಣ (ನಾ). ತೆಂಗು ; ನಾರಿಕೇಳ : ಪಾಪಿಗೆ ಕೋಪಿಗೆ ಭಕ್ತಿಯಾಗೆಂದರವ್ವದೆ

ನಾರಿವಾಳ[ಪಾಠಾಂ.ಣ]ವಕ್ಕುವುದೆ ನಾಯಿಗೆ (ಬಸವ. ೬೫೦); ಕಬ್ಬು ಬಾಳೆ ನಾರಿವಾಳಕ್ಕೆ ಸಿಹಿನೀರನೆಱೆದವರಾರಯ್ಯ (ಮಹಾದೇ.ಬ. ೧೦–೨); ನಾರಿವಾಳ[ಪಾಠಾಂ. ಣ]ದ ಕಾಯೊಳಗಣ ತಿರುಳನೊಡೆಯದೆ ಮೆಲ ಬಲ್ಲಡೆ ಬೆಡಗು (ಅವಚಂ. ೧೨೬–೫೭೨). **ನಾರಿಯಲಿ :** "ನಾರಿಯಲಿ ನಾಳಿಕೇರಂ ತೆಂಗೆನಿಕ್ಕು" (ಮಂಗರಾ. ೩೪–೧೦). **ನಾರಿವಣ :** ಅಲ್ಲದ ಹೇಱಿಱೊಂದಕ್ಕಂ ಹಾಗ ನಾರಿವಣದ ಕಾಯ ಹೇಱಿಱೊಂದಕ್ಕಂ ಹಾಗ ಕಾಯಿ ಮೇಲೋಗರದ ಭಂಡಿ ಒಂದಕ್ಕಂ ಹಾಗ (ಎಕ. V, ಬೇಲೂರು. ೭೫–೧೦೪ ; 1382). **ನಾರಿವಾಣ :** ನಾಯಿಗೆ ನಾರಿವಾಣವಕ್ಕುವುದೆ (ಬಸವ. ೩೧) ; ನಾರಿವಾಣ ತಂದು ನಾಯ ಮುಂದೆ ಹಾಕಿದರೆ ಒಡೆಯಲಱಿಯದು ತಿನಲಱಿಯದು (ವಚಸಂ. ೧೮೮–೨೫) ; ಕಾಷ್ಠಾಂಗಾರಮುಖ್ಯನೃಪಾಲಕರು ಕಪಿ ನಾರಿವಾಣಫಲಕ್ಕೆ ಮುತ್ತಿದ ತೆಱದೆ ವೀಣೆಗಳ . . . ನುಡಿಸುತಿರೆ (ಜೀವಂಚ. ೯–೪).

[<ಪ್ರಾ. ಣಾರಿಏಲ. / ಹಿಂ. ನಾರಿಯಲ್ ; ಮರಾ. ನಾರಳ್]

**ನಾರೀಕೇಲ,** ನಾರೀಕೇಳ (ನಾ). =ನಾರಿಕೇಲ. **ನಾರೀಕೇಳ :** ಭೂಸುರನು . . . ಮೊದಲು ದೇವಾಲಯವ ಹೊಗುತಲಿ ಕದಳಿ ನಾರೀಕೇಳವಿಡುತಲಿ ಪದುಮನಾಭ ನಮೋಯೆನುತ್ತಲಿ ಕರವ ಮುಗಿವುತಲಿ (ಸುದಾಮ. ೬–೧೧). [ಸಂ.]

**ನಾರೀಕೇಳ** 'ನಾರೀಕೇಲ' ನೋ.

**ನಾರೀಚೋರ** (ನಾ). =ನಾರಿಗಳ್ಳ : ನಾರೀಚೋರ ನಡೆನಡೆ ಎನುತ ತಿವಿದನು ಬಿಲ್ಲ ಕೊಪ್ಪಿನಲಿ (ಕುವ್ಯಾಅ. ೨೨–೩೬). [ಸಂ.]

**ನಾರೀರೂಪ** (ನಾ). ಹೆಂಗಸಿನ ಆಕೃತಿ; ಸ್ತ್ರೀರೂಪ : ನಾರೀರೂಪದ ಯಂತ್ರಂ ಚಾರುತರಂ ನೋಡೆ ನೋಡೆ ಕರಗಿದುದು (ಆಪಿಪು. ೯–೪೪). [ಸಂ.]

**ನಾರು$_1$** 'ನಾಱು$_1$' ನೋ.

**ನಾರು$_2$** (ನಾ). ವಾಸನೆ; ಕಂಪು; ಬಿಂಸನೆ ನಾರು ಬೀರದೇಂ ? ತಟಕದೀ ಎಲೆವನಿ ಇದೇನು ? (೧೪ವಿಂ. ೨೮–೩೯). [<ನಾಱು$_1$]

**ನಾರು$_3$** 'ನಾರ್' ನೋ.

**ನಾರು$_4$** (ನಾ). (ಕೆಲವು ಬಗೆಯ ಗುಳ್ಳೆ ಅಥವಾ ಕುರುವಿನಲ್ಲಿ ಉತ್ಪತ್ತಿಯಾಗುವ) ಎಳೆಯಂಥ ಒಂದು ಬಗೆಯ ಹುಳುವಿನಿಂದ ಉಂಟಾಗುವ ಹುಣ್ಣು ; ನಾಡೀವ್ರಣ : ಆದೇ ಕಾಲಕ್ಕೆ ನಾರಿನ ಉಪದ್ರವವಾದರೂ ಹೆಚ್ಚಾಗಲಿ ಕಡಿಮೆಯಾಗಲಿ ಆಗುತ್ತಿರುತ್ತದೆ (ಕಭಾಗ. ೪೧೫) ; ಆದರಿಂದ ನಾರು, ಹುರುಕು, ಕಜ್ಜಿ . . . ಮುಂತಾದ ತ್ವಗ್ರೋಗಗಳು . . . ಮೈಯೊಳಗೆ ಸೇರುತ್ತವೆ (ಮುಂಬಯಿ. ೫–೧೫೮).

ನಾರ ಹುಣ್ಣು = ನಾಡೀವ್ರಣ : ನೀಲಿಯ ಎಲೆಯ ಆವಿನ ಹಾಲಲ್ಲಿ ಅರೆದು ಪೂಸೆ ನಾರ ಹುಣ್ಣು ಮಾಣುವುದು (ವಿವೈವಿ. ೮೦).

[←ಹಿಂ. ಮರಾ. ನಾರೂ]

**ನಾರುಂಬೇಳೆ** 'ನಾಱುಂಬೇಳೆ' ನೋ.

**ನಾರುಕಚೂರ** (ನಾ). ಒಂದು ಬಗೆಯ ಗಂದಿಗೆಪದಾರ್ಥ : ಕಂಠೀಅರಿಸಿನ, ನಾರುಕಚೂರ (ಮೈಡಿಗ. ೨೬–೪೯೯)

[ನಾರು$_1$(<ನಾಱು$_1$)+ಕಚೂರ]

**ನಾರುಗ** (ನಾ). ನಾರಿನ ವ್ಯವಹಾರದಲ್ಲಿ ತೊಡಗಿರುವವನು ; ನಾರಿನ ವ್ಯವಹಾರವನ್ನು ಮಾಡುವವನು : ಉಗ ಪ್ರತ್ಯಯಕ್ಕೆ— ನಾರುಗಂ, ಬೇರುಗಂ (ಶಮದ. ೨೦೪ ಪ್ರಯೋ) ; ನಾರುಗಂ, ಪಾರುಗಂ, ಪರಲುಗಂ (ಶಬ್ದಾನು. ೪೨೪ ಪ್ರಯೋ).

[ನಾರ್+-ಉಗ]

**ನಾರುಗಿ$_1$** (ಕ್ರಿ). ೧. ನಾರನ್ನು ತೆಗೆ; ಎಳೆಯನ್ನು ಬಿಡಿಸು ; ಹಿಂಜು : ಸೌರಭಮಂ ದಳಂಗೊಳಿಸಿ ಬಣ್ಣದೆ ನುಣ್ಣಿಸೆ ರಾತ್ರಿಮಾಳಿಕಾಕಾರೆ ತೊಡರ್ಚೆ ನಾರುಗಿದ ತಿಂಗಳ ತಣ್ಣದಿರಂ . . . ತನಗೆ ನೀಡಿದಳ್ (ಅನಂಪು. ೪–೧೧೪) ; ತರತರದಿಂದ ನಾರುಗಿದು ತೋಳ್ವೆಳೆ ಮಾಡುವ ಕೊಯ್ದು ತಂದು ಪಾದರಿಯೊಡಗಟ್ಟಿ ಸೂಡುವ . . . ಅಲಂಪಿನಿಂ ಬಯಸಿದರ್ ಘನಚಂದ್ರಿಕೆಯಂ ಲತಾಂಗಿಯರ್ (ಸೂಕ್ತಿಸು. ೮–೨೭೭). ೨. ದೇಹದ ನರಗಳು ಕಾಣುವಂತೆ ಕೃಶವಾಗು ; ನವೆ ; ಬಡವಾಗು ; ಸೊರಗು : ನಾನಾವಿಧದಿಂದಮೇಂ ನಮೆದು ನಾರುಗಿದಿರ್ಪರೊ ಜೈನದೀಕ್ಷಿತರ್ (ಶಾಂತಿಪು. ೮–೧೨೯) ; ಅನಿವಿರಿದು ದುಃಖದೊಳ್ ನಮೆದು ನಾರುಗಿದು ಪೊಗೆದು ಸತ್ತು (ಸುಕುಮಾ. ೫–೧೯).

[ನಾರ್+ಉಗಿ$_1$]

**ನಾರುಗಿ$_2$** (ನಾ). ನಾರಿನ ವ್ಯವಹಾರದಲ್ಲಿ ತೊಡಗಿರುವವಳು ; ನಾರಿನ ವ್ಯವಹಾರವನ್ನು ಮಾಡುವವಳು : ನಾರುಗಿ, ನಾರುಗಿತಿ ; ಬೇರುಗಿ, ಬೇರುಗಿತಿ (ಶಬ್ದಾನು. ೧೯೩ ಪ್ರಯೋ). [ನಾರುಗ+-ಇ$_2$]

**ನಾರುಡು** (ಕ್ರಿ). ನಾರುಮಡಿಯನ್ನು ಉಟ್ಟುಕೊಳ್ಳು ; ವಲ್ಕಲವನ್ನು ಧರಿಸು: ಕ್ರಮವಱಿಯದಿತರ ಕುಮತಕ್ರಮದೆ ತಪಂಗೆಯ್ದು ನವೆದು ನಾರುಟ್ಟಿಡಮುಕ್ಕುಮೆ ಸುಗತಿ (ಸಪುಸ. ೩–೮೬).

[illegible]ಉಡು$_1$]

**ನಾರುಡೆ** (ನಾ). ನಾರುಬಟ್ಟೆ : ವಲ್ಕಲ : ಅರಯೆ ಸೂಚಿಕುಂ . . . ನಾರುಡೆಯಂಚಿನಿಂದಿಳಿದ ನೀರ್ಗೆರೆಯಾಂತ ತಟಾಕಮಾರ್ಗಮುಂ (ಶಾಕುಂತ. ೬–೧೪) ; ತುಡಿಸುತಿರೆ ರಘುಕುಲೇಶಂ ಸತಿಗೆ ನಾರುಡೆಗಳಂ, ಕಂಡ ಕೌಸಲೆಗುಕ್ಕಿ ದುಕ್ಕಮೆಳ್ತಳ್, ಮೊಗಂ ಪುದುಗಲಂಜಲಿಗೆ (ಶ್ರೀರಾಮಾ. ೯೨–೩೯೨). [ನಾರು$_3$(<ನಾರ್)+ಉಡೆ$_2$]

**ನಾರುತೆಗೆ$_1$** (ಕ್ರಿ). (ಕೆಲವು ಹಣ್ಣು, ಕಾಯಿಗಳಲ್ಲಿರುವ ಅಥವಾ ಎಲೆಯ ಬೆನ್ನ ಮೇಲಿನ) ನಾರನ್ನು ತೆಗೆ,—ಸುಲಿ: ಮೀಳಿಯದೆ ಲೆಯ ನಾರುತೆಗೆದು ಸುಣ್ಣ ಹಚ್ಚು (ರೂಢಿ). [ನಾರು$_3$ (<ನಾರ್)+ತೆಗೆ$_1$]

**ನಾರುತೆಗೆ$_2$** (ಕ್ರಿ). ನಾರುಹುಣ್ಣಿನಲ್ಲಿರುವ ಎಳೆಯನ್ನು ಹೊರಕ್ಕೆ ತೆಗೆ : ಅಡವೀಗೊಲ್ಲರು . . . ಈ ಗೊಲ್ಲರಲ್ಲಿ ಕೆಲವರು ಮೈಯೊಳಗಿನ ನಾರು ತೆಗೆಯುವುದರಲ್ಲಿಯೂ ತುಮ್ಮಡೀ ಹಚ್ಚಿ ರಕ್ತ ತೆಗಿಯುವುದರಲ್ಲಿಯೂ ಕುಶಲರಿರುತ್ತಾರೆ (ಕಭಾಗ. ೧೭೩). [ನಾರು$_4$+ತೆಗೆ$_1$]

**ನಾರುಬಟ್ಟೆ** (ನಾ). =ನಾರುಡೆ : ರಾಮನಿಗೆ ನಾರುಬಟ್ಟೆ ಉಡಿಸಿ ಅವನನ್ನು ೧೪ ವರ್ಷ ಕಾಡಿಗೆ ಕಳುಹಿಸತಕ್ಕದ್ದು (ಸೀತಿಚಂ. I, ೧೪).

[ನಾರು$_3$(<ನಾರ್)+ಬಟ್ಟೆ$_2$]

**ನಾರುಬೇರು** (ನಾ). ಒಂದು ಬಗೆಯ ವನಸ್ಪತಿ : ನಾರುಬೇರು, ಹಾವುಲಿಗೆ, ಹಂಟಗೆ, ಹೌಳಿಗೆ, ಬೆಳಂಗಿ (ಮೈಡಿಗ. ೨–೩೨). [ ? ]

**ನಾರುಬೇಳೆ** 'ನಾಱುಂಬೇಳೆ' ನೋ.

**ನಾರುಮಡಿ** (ನಾ). =ನಾರುಡೆ : ಶುಭ್ರವಾದ ನಾರುಮಡಿಯನುಟ್ಟು (ಸೌಗಂಧಿ. ೮೯–೧೦) ; ವಿಶೇಷ ಕೆಲಸಗಳಿಗೆ ಹೊರಕ್ಕೆ ಹೋಗುವಾಗ ತೊಡುವ ನಾರುಮಡಿಯನ್ನು ತೆಗೆದು ಉಟ್ಟುಕೊಂಡು (ಮರಮ. ೭೪). [ನಾರು$_3$(<ನಾರ್)+ಮಡಿ$_5$]

**ನಾರುಮೋಡ** (ನಾ). ನಾರು ನಾರಾಗಿರುವ ಮೋಡ ; ಜಾಳಾಗಿರುವ ಮೇಘ : ಮುಗಿಲೆಲ್ಲ ನಾರುಮೋಡದಿಂದ ಬಿಗಿದುಹೋಗಿತ್ತು (ಯದುರಾ. ೨೬). [ನಾರು(<ನಾರ್$_3$)+ಮೋಡ$_1$]

**ನಾರುವಗೋರಟಿ** (ನಾ). ಒಂದು ಬಗೆಯ ಸಸ್ಯ : "ಶೀತಪುಷ್ಪಃ— ಕೋಟಿಕುಟುಮ, ನಾರುವಗೋರಟಿ" (ಒಷಧಿ. ೧೬೬).

[ನಾರು$_1$(<ನಾಱು)+ಗೋರಟಿ(<ಗೋರಂಟಿ)]

**ನಾರುವದ** (ನಾ). ಪಾಕವು ನಾರಿನಂತೆ ಎಳೆಯಾಗುವ ಹದ; ಪಾಕವನ್ನು ಮೇಲಕ್ಕೆ ಎತ್ತಿದರೆ ನಾರಿನಂತೆ ಇಳಿಬೀಳುವ ಸ್ಥಿತಿ : ಹಿರಿದಾಗಿಯುದ ಹಿಸಿದು ನಾರುವದನಂ ಮಾಡಿ ಅರಗಿನಂದದೊಳು ಸರಿಗೆಯು ಮಾಡಿಕೊಂಡು (ಸೂಪಶಾ. ೧-೪೧). [ನಾರು$_3$(<ನಾರ್)+ಪದ$_1$]

**ನಾರುಸಿರು** (ನಾ). ದುರ್ವಾಸನೆಯಿಂದ ಕೂಡಿರುವ ಉಸಿರು ; ಕೆಟ್ಟ ಉಸಿರು : "ಅತಿಕೆಟ್ಟ ನಾತದ ಉಸಿರು ; ದುರ್ಗಂಧಶ್ವಾಸ ; ನಾರುಸಿರು'' (Halitosis. ಇಂಕಿಸಿ). [ನಾರು$_1$(<ನಾಱು$_1$)+ಉಸಿರು$_2$(<ಉಸಿರ್$_2$)]

**ನಾರುಸೀರೆ** (ನಾ). ನಾರಿನಿಂದ ತಯಾರಿಸಿರುವ ವಸ್ತ್ರ,—ಬಟ್ಟೆ ; ವಲ್ಕಲ : ''ವಾಲ್ಕಂ, ಕ್ಷೌಮಂ—೨ ನಾರುಸೀರೆ'' (ಸಿದ್ಧಾಂತಿ. ೨೦೨) ; ಅಗ್ನಿಹೋತ್ರವನ್ನು . . . ಬಿಟ್ಟು ನಾರುಸೀರೆಗಳನ್ನು ಉಟ್ಟು . . . ಗ್ರಾಮದಲ್ಲಿರುವವನು ಅರಣ್ಯವಿಮುಖನೆನ್ನಿಸಿಕೊಳ್ಳುವನು (ಶ್ರವಾಅ. ೧೪೧) ; ನಾರುಸೀರೆ ಮಡಿಗೆ ಶ್ರೇಷ್ಠ (ರೂಢಿ). [ನಾರು$_3$(<ನಾರ್)+ಸೀರೆ$_2$]

**ನಾರುಸೂತ್ರ** (ನಾ). ನಾರಿನಿಂದ ಮಾಡಿದ ದಾರ : ಬಿಡಿಮಾತು ಪವಣಿಸಿರೆ ಮೆರೆಯುವುವು ಒಲವುಗಂಪಿನ ನಾರುಸೂತ್ರದಲ್ಲಿ (ಮುಕ್ತಕಂ. ೫೩-೩). [ನಾರು$_3$(<ನಾರ್)+ಸೂತ್ರ]

**ನಾರುಹಂಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ನಾಲಿಹುಲ್ಲು, ನಾರುಹಂಚಿಹುಲ್ಲು (ಮೈಔಗಿ. ೬೮-೧೩೯೩). [ನಾರು$_1$(<ನಾಱು$_1$)+ಹಂಚಿಹುಲ್ಲು]

**ನಾರುಹುಣ್ಣು** (ನಾ). = ನಾರು$_4$ : ಇದೇ ಹೊತ್ತಿಗೆ ಇಬ್ಬರ ಕಾಲಿಗೂ ನಾರುಹುಣ್ಣಾಯಿತು (ಸ್ಮೃತಿಚಿ. ೩೬) ; ಈ ವರ್ಗಕ್ಕೆ ಜಂತುಹುಳು, ನಾರುಹುಣ್ಣಿನ ಹುಳು . . . ಮುಂತಾದವು ಸೇರುತ್ತವೆ (ಪರಜೀ. ೪೯). [ನಾರು$_4$+ಹುಣ್ಣು(<ಪುಣ್)]

**ನಾರೂಪ** (ನಾ). [ಬೌದ್ಧ] ಶೂನ್ಯತತ್ತ್ವವನ್ನು ನಿರೂಪಿಸುವ ಒಂದು ಶಬ್ದ ; ರೂಪದ ಅಭಾವವಿಲ್ಲದುದು ; ಆಕಾರದಿಂದ ಕೂಡಿರುವುದು : ಈ ಪರಮಾರ್ಥವಾದ ಶೂನ್ಯತತ್ತ್ವವನ್ನು . . . ಅರೂಪ, ನಾರೂಪ, ಅವಿಧಿ, ಅಪ್ರತಿಷೇಧ ಇತ್ಯಾದಿ ಶಬ್ದಗಳಿಂದ ಉಪದೇಶಿಸುವರು (ಹಿಂದಸಾ. ೪೨). [ಸಂ.]

**ನಾರೆತ್ತು** (ಕ್ರಿ). ೧. ನೂಲನ್ನು ತೆಗೆ ; ಎಳೆಯಾಗಿ ಬಿಡಿಸು : ಕಲ್ಲಲ್ಲಿ ನಾರೆತ್ತುವರ್ ತ್ವರಿತಂ ಬಿನ್ನಣದಿಂ ಬಿಸಿಲ್ಗೆ ದುರೆಯಂ ತಂದೇಱುವರ್ ಮೇರುವಂ ಭರದಿಂದಂ ಪಿಡಿದೆತ್ತುವರ್ ಮಳಲೊಳಂ ನೀರ್ಮಾಡುವರ್ ಜೋಡೆಯರ್ (ಧರ್ಮಾಮೃ. ೩-೧೩೪); ಕಾಷ್ಠಮಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್ . . . ಕಿವಿಗಳೊಳ್ ಪೀಯೂಷಮಂ ಪಿಂಡಲುರ್ವರೆಯೊಳ್ ಸಂದ ಕವಿಪ್ರವೇಕರೆ ವಲಂ ಬಲ್ಲರ್ ಪೆಱರ್ ಬಲ್ಲರೇ (ಲೀಲಾವ. ೧-೧೩). ೨. ಮರ, ಗಿಡಗಳ ತೊಗಟೆಯನ್ನು ಸುಲಿ : ನಾರೆತ್ತುವ ತೆಱದಿಂ ಕೈಯಾರೆ ಕುಕಿಲ್ದಾದುರ್ದ ಪೊಯ್ದು ಮೆಯ್ಗಳ ತೊವಲಂ ಕ್ರೂರತನದಿಂದಮೆತ್ತುವರ್ (ಧರ್ಮಾಮೃ. ೩-೭೨) ಗಿಡುಮರ ಬಳ್ಳಿ ಹೊದಱು ಪುಲ್ಲು ಮೊದಲಾದುವಾಗಿ ಪುಟ್ಟಿ ಬೇಗೆಯಿ ಮುರಿಯೆಯುಂ . . . ಸೀಳೆಯುಂ ನಾರೆತ್ತೆಯುಂ . . . ದುಃಖ ಮನೆಯ್ದುಸುಗುಂ (ಪಸಾರ. ೨೩೯). [ನಾರ್+ಎತ್ತು$_1$]

**ನಾರೋಲಿ** (ನಾ). ಒಂದು ಬಗೆಯ ಮರ : ನಾರೋಲಿ, ಮೂಥ ಮರ, ಮೂಥ, ಮೂಡಲಿ, ಕನಕಚಂಪಕ (ಮೈಔಗಿ. ೫೭-೧೧೪೦). [?]

**ನಾರ್ಗವುಂಡು** 'ನಾಟ್ಗಾವುಂಡು$_2$' ನೋ.

**ನಾರ್ಗವುಂಡುಗೆಯ್** 'ನಾಟ್ಗಾವುಂಡುಗೆಯ್' ನೋ.

**ನಾರ್ಗಾದೆ** 'ನಾಟ್ಗಾದೆ' ನೋ.

**ನಾರ್ಗಾವುಂಡ** 'ನಾಟ್ಗಾವುಂಡ' ನೋ.

**ನಾರ್ಗಾವುಂಡು** 'ನಾಟ್ಗಾವುಂಡು$_2$' ನೋ.

**ನಾರ್ಗಾವುಂಡುಗೆಯ್** 'ನಾಟ್ಗಾವುಂಡುಗೆಯ್' ನೋ.

**ನಾರ್ಗಾವುಂಡ** 'ನಾಟ್ಗಾವುಂಡ' ನೋ.

**ನಾರ್ಗಾವುಂಡು** 'ನಾಟ್ಗಾವುಂಡು$_2$' ನೋ.

**ನಾರ್ಗಾವುಂಡುಗೆಯ್** 'ನಾಟ್ಗಾವುಂಡುಗೆಯ್' ನೋ.

**ನಾರ್ಗೌಡು** 'ನಾಟ್ಗಾವುಂಡು$_2$' ನೋ.

**ನಾರ್ಣ** 'ನಾರಯಣ' ನೋ.

**ನಾರ್ಣಯ** (ನಾ). ಒಬ್ಬಾತನ ಹೆಸರು : ಆತನ ತಮ್ಮಂ ನಾರ್ಣ್ಣಯಂ ಗೋಸಾಸವಿಟ್ಟು ತಾಣಗುನ್ದೂರ ಮಹಾಜನಂ ಪರಸಿದರ್ (ಎಕ. VIII, ಸೊರಬ. ೫೩೨-೫; 964). [ನಾರ್ಣ(<ನಾರಯಣ)+ಆಯ$_1$(<ಆಯ್ಕ$_1$)]

**ನಾರ್ಥಕ** (ನಾ). ಉಪಯೋಗವಿಲ್ಲದುದು ; ನಿರರ್ಥಕ : ಮುಕ್ತಿ ನಾರ್ಥಕವಲ್ಲ, ಸದರ್ಥಕವಾದ್ದು . . . ಅಂಥ ಮುಕ್ತಿಯ ವಿವರವನ್ನು ಹೇಳಿದವನಿಗೆ ಶರಣುಹೋಗುತ್ತೇನೆ (ನಿಬಂಧ. I, ೯). [ಸಂ.]

**ನಾರ್ನಪರ್ವರ್ಶಿ** (ನಾ). ಉದ್ಯೋಗದಿಂದ ನಿವೃತ್ತಿ : ನಿನಗೆ ನಾರ್ನಪರ್ವರ್ಶಿ ಆದ ಮೇಲೆ ನಿನ್ನ ಕೆಲಸ ಅವನಿಗೆ ಕೊಡುವ (ವಾಗ್ದೇವಿ. ೧೪೩). [ ? ]

**ನಾಲ್**, ನಾ$_2$, ನಾಲು$_1$ (ನಾ). ಸಮಾಸಗಳಲ್ಲಿ 'ನಾಲ್ಕು' ಎಂಬುದಕ್ಕೆ ಬರುವ ಆದೇಶರೂಪ: 'ನಾಲ್ಗಂಡುಗ', 'ನಾಲ್ಸಾಸಿರ' ಪರಾ. **ನಾ$_2$** : 'ನಾಗಂಡುಗ', 'ನಾಗಳ' ಪರಾ. **ನಾಲು$_1$** : 'ನಾಲುತೆಱ' ಪರಾ. [<ನಾಲ್ಕು]

**ನಾಲ$_1$**, ನಾಳ$_1$ (ಗು). ೧. ಲಾಳದ ಕಡ್ಡಿಯಿಂದ ಮಾಡಿದ,—ಕೂಡಿಕೊಂಡಿರುವ. (ನಾ). ೨. (ತಾವರೆ, ಕೆಸವು ಮುಂತಾದುವುಗಳ) ಒಳಗೆ ಟೊಳ್ಳಾಗಿರುವ ದಂಟು. ೩. ಟೊಳ್ಳಾದ ಕೊಳವೆ ; ನಳಿಕೆ. ೪. ದೇಹದ ಒಳಗಿರುವ ರಕ್ತನಾಳ, ಶ್ವಾಸನಾಳ, ಉಸಿರುಗೊಳವೆ, ಮೂತ್ರನಾಳ ಮುಂತಾದುವು. ೫. ಹಿಡಿಕೆ ; ಹಿಡಿ. ೬. ನೀರು ಹರಿಯುವ ಕಾಲುವೆ ; ನಾಲೆ. ೭. ಹರಿದಳ ; ಅರಿದಾಳ. **ನಾಳ$_1$** : ೨. ''ನಾಳಂ, ಕಾಂಡಂ—ಈ ೨ ಕಂಡಿಕೆ'' (ಹಲಾಯು. ೯೫-೪೨೫); ''ದಂಟು ನಾಳಮಕ್ಕುಂ'' (ಮಂಗರಾ. ೧೯-೩); ಶಶಿಕಳೆಗಳಂ ಮೆಲ್ವ ಸೈಂಹಿಕೇಯನಂತೆ ಮೃಣಾಳನಾಳಂಗಳಂ ಮೆಲ್ದು (ಕಾದಂಪೂ. ೧೭೪) ; ಭಾವಿಸೆ ಪೋಲ್ತುದು ನಾಳಂ ಕಾವನೆ ಕರ್ಣಿಕೆಯೆ ಕಳಸಮನೆ . . . ಜಲದೇವಿಯ ಪಿಂಛಾತಪತ್ರಮನೆ ಶತಪತ್ರಂ (ಗದಾಯು. ೬-೪೧); ನಾಳಂ ಸೊಗಯಿಪ ನಾಭೀನಾಳಂ ಮೃದುಚರಣಕರತಳಂ ಕೋಮಳಪತ್ರಾಳಿಯಿದೆನೆ ನೆನೆಯಿಸಿದಂ ಬಾಳಕನಿಂದಿರೆಯ ಕೈಯ ಕೆಂದಾವರೆಯಂ (ಚಂದ್ರಪು. ೩-೧೦೦); ಸೀದವಾ ಮಗ್ಗುಲಿನ ಮೈಯುಲಿ ನೈದಿಲಿನ ತಾವರೆಯ ಕದಳಿಯ ನಾದಿಕೆಯ ನಾಳಂಗಳುರಿನೊರೆಗುದಿಯ ಸಬುದದಲಿ (ತೊರರಾ., ೩-೧೧-೪೭). ೩. ಅವನ ಮುಖವನ್ನು ತಂಬಾಕಿನ ನಾಳ ಸರ್ವದಾ ಅಲಂಕರಿಸಿರುವುದು (ಯೋಧಪು. ೭೭). ೪. ನಾರಿಯೆಂಬ ರೂಪಿಂಗೆ ನೀವು ಒಲಿದು ಬಂದಿರಣ್ಣ ಮೂತ್ರವು ಬಿಂದು ಒಸರುವ ನಾಳವೆಂದು ಕಂಗಾಣದೆ ಮುಂದುಗೆಟ್ಟು ಬಂದಿರಣ್ಣ (ಮಹಾದೇ. ಬ. ೬೭-೧೬೬); ಜೇಡಂ . . . ಕಾಲನೂಱುತ್ತದಱ ಶುಂಡಿಲ ನಾಳಮಂ ಹೊಕ್ಕೊಱದಿಱಿದು ಶುಂಡಾಲಮಂ ತಲೆಗೇಱಿಕೊಂಡಿತು (ಬಸವು. ೧೮-೪೪); ನಿಡಿದಪ್ಪ ಕೊರಲ ನಾಳಂಬಡೆದತಿಗಂಭೀರದೀರ್ಘಸ್ವರ

ದೊಳ್ ತಾಂ ಪೊಡರಿಪ ಮಹೋದರಾಶ್ವಂ ಪಡೆಗುಂ ಪದಿನೇಱುವರ್ಷವಾಯುವ ಪವಣಂ (ಅಶ್ವಶಾ. ೬-೧೮); ಕಡಿದು ಚಿಮ್ಮಿದ ಬೆರಳುಗಳ ಹಿಮ್ಮಡಿಯ ಘಾಯದ ನಾಳ ಹಱಿದರೆ ಮಡಿದ ಗೋಣಿನ ಬೆಸುಗೆ ಬಿರಿದ ಕಪಾಲದೋಡುಗಳ . . . ರಣಮಹಿ ಭಯಾನಕರಸಕೆ ಗುಱಿಯಾಯ್ತು (ಕುವ್ಯಾಭೀ. ೮-೧೮) ; ಎಱಗಿದಶನೀಘಾತಮುಷ್ಟಿಯ ಬಿಱುಬಿನಲಿ ಬುಡುಬುಡಿಸಿ ನೆತ್ತರಿನೊಱತೆ ಹಾಯ್ದುದು ವದನದಲಿ ನಾಸಿಕದ ನಾಳದಲಿ (ತೊರರಾ. ೫-೫-೩೪) ; ಉದ್ದವಾದ ದಿಂಡುಗಳು ನಾಳಗಳು ; ನಾಳಗಳ ಮಧ್ಯೆ ಇರುವ ಸ್ಥಳಗಳು, ಗೂಡುಗಳು (cells) . . . ನಾಳಗಳ ಸಂಖ್ಯೆ, ಅವುಗಳ ಶಾಖೆ, ಕ್ರಮ, ವರ್ಗೀಕರಣದಲ್ಲಿ ಉಪಯೋಗಿಸಲ್ಪಟ್ಟಿವೆ (ಕೀಟವಿ. ೧೯). ೮. ದೋಣಿಯ ಹುಟ್ಟು : ಅರಿತ್ರಕಚ್ಛ = ಹಡಗದ ನಾಳ (ಗಂಗಾಮ. ೧೪). [ಸಂ.]

**ನಾಲ$_2$**, ನಾಲು$_2$, ನಾಳ$_2$, ಲಾಡ$_2$, ಲಾಳ$_3$ (ನಾ). ೧. ಕುದುರೆ, ಎತ್ತುಗಳಿಗೆ ಕಾಲುಗೊರಸಿನ ರಕ್ಷಣೆಗಾಗಿ ಮೊಳೆ ಹೊಡೆದು ಅಳವಡಿಸುವ ಕಬ್ಬಿಣದ ಹಲ್ಲೆ : ''ನಾಲ (ನಾಲು) = ಕಬ್ಬಿಣದ ಪಟ್ಟಿ, ಮೊಳೆ'' (ಜಾನಕೋ. ೧೧). ೨. ಜೂಜಾಟದ ಅಡ್ಡೆ ಇಟ್ಟವನಿಗೆ ಕೊಡುವ ಹಣ : ಅದರ ಹತ್ತಿರ ಒಂದು ಪೆಟ್ಟಿಗೆ ಇದ್ದಿತು, ಅದಕ್ಕೆ ಕೀಲಿ ಹಾಕಿದ್ದರು. 'ನಾಲ' ಹಾಕಲು ಒಂದು ಕಿಂಡಿ ಮೇಲೆ ಇದ್ದಿತು (ಕೊತಕಾ. ೨೫); "ನಾಲ ಎಂದರೆ ಹೆಡ್ಡದ ಹಣ" (ಕೊತಕಾ. ೨೫ ಅಡಿಟ). **ನಾಲು$_2$** : ೧. ಒಂದು ಕಬ್ಬಿಣದ ಕಂಬಿಯನ್ನು ಮಣಿಸಿ ಕುದುರೆಯ ನಾಲಿನ ಹಾಗೆ ಮಾಡಬೇಕು (ಮುಂಬಯಿ. ೬-೧೨೦); ನಾಲನು ಬಡಿಸದ, ಜೂಲವ ಹೊದಿಸದ (ಕಸಪು. ೧-೫೦). **ನಾಳ$_2$** : (೬). **ಲಾಡ$_2$** : (೬). **ಲಾಳ$_3$** : ೧. ಅಶ್ವರತ್ನದ ಆಭರಣದ ಲೆಖ್ಖಾ . . . ೨೪ ಲಾಳದ ಮೊಳೆ (ಎಕ. XIV, ನಂಜನ. ೨೯೩-ಪುಟ ೧೪೩ ; 1847) ; ಎತ್ತೊಂದು ಲಾಳವ ಕಟ್ಟಿಸಿ ಕೊಳುವಾಗ ಕಪ್ಪೆ ಕಾಲೆತ್ತಿದ ಹಾಗೆ (ಇಂಚಾಪ. ೨೦೫-೧೪).

[←ಅರ.ಪಾರ.ಹಿಂ.ಮರಾ. ನಾಲ್]

**ನಾಲಕಟ್ಟು**, ನಾಲುಕಟ್ಟು, ಲಾಳಕಟ್ಟು (ಕ್ರಿ). ೧. ಕುದುರೆ, ಎತ್ತು ಮೊದಲಾದುವುಗಳ ಗೊರಸಿಗೆ ಹಲ್ಲೆಯನ್ನು ಹೊಡೆ : ನಾಲಗಾರ = ನಾಲಬಂದಿ, ನಾಲಕಟ್ಟುವವ (ಜಾನಕೋ. ೧೧). **ನಾಲುಕಟ್ಟು**: ೧. ನಾಲಬಂದರು . . . ಕುದುರೆಗಳಿಗೂ ಯೆತ್ತುಗಳಿಗೂ ನಾಲುಕಟ್ಟುವದೇ ಇವರ ಕುಲದ ಹೋರೆ (ಕಭಾಗೆ. ೨೩೫). ೨. ಪಾದರಕ್ಷೆಗಳು ಸವೆಯದೆ ಇರುವಂತೆ ನಾಲು ಅಳವಡಿಸು : ಅದೇನು ಬೂಟಿಗೆ ನಾಲುಕಟ್ಟುವದಿದೆಯೆ ? (ಪ್ರತಿಸ. ೧). **ಲಾಳಕಟ್ಟು** : ೧. ಈ ಎತ್ತುಗಳ ಕಾಲಿಗೆ ಲಾಳಕಟ್ಟಿರುತ್ತಾರೆ (ಪ್ರವಾಇ. I, ೧೮೧) ; ಲಾಳಕಟ್ಟುವವನು ; ಲಾಳಗಾರ ; ಹಲ್ಲೆಗಾರ (Farrier. ಇಂಕನಿ). [ನಾಲ$_2$ + ಕಟ್ಟು$_1$]

**ನಾಲಕಿ** (ನಾ). ಒಂದು ಬಗೆಯ ಪಲ್ಲಕ್ಕಿ : ಆ ಸೋಮಶೇಖರ ನಾಯಕಂ . . . ನಾಲಕಿಯೆಂಬ ಮನೋಹರವಾದ ಮಹಾಯಾನಮನಾರೂಢನಾಗಿ ಸಮಸ್ತಸೈನ್ಯಸಹಿತಂ ಸರ್ವಸಂಭ್ರಮದಿಂ ಮಹಾನವಮಿಯ ಬಯಲ್ಗೆ ತೆರಳ್ದು (ಕೆಳನೃ. ೧೦-೭೭).

[←ಹಿಂ. ನಾಲಕೀ ; ಮರಾ. ನಾಲಕೀ, ನಾಲಖೀ ; ಪಾರ. ನಾಲ್ಕೀ]

**ನಾಲಗಾರ**, ಲಾಳಗಾರ (ನಾ). ಕುದುರೆ, ಎತ್ತು ಮೊದಲಾದುವುಗಳ ಗೊರಸಿಗೆ ಲಾಳ ಕಟ್ಟುವವನು ; ನಾಲಕಟ್ಟುವವನು : ''ನಾಲಗಾರ = ನಾಲಬಂದಿ, ನಾಲಕಟ್ಟುವವ'' (ಜಾನಕೋ. ೧೧). **ಲಾಳಗಾರ** : ಲಾಳಕಟ್ಟುವವನು ; ಲಾಳಗಾರ ; ಹಲ್ಲೆಗಾರ (Farrier. ಇಂಕನಿ). [ನಾಲ$_2$ + -ಕಾರ$_1$(< -ಕಾಱ)]

**ನಾಲಗೆ**, ನಾಲಿಗೆ (ನಾ). ೧. ಮಾತನಾಡಲು ಮತ್ತು ರುಚಿ ನೋಡಲು ಸಾಧಕವಾದ ಅವಯವ ; ರಸನೆ ; ಜಿಹ್ವೆ : ''ನಾಲಗೆ ರಸನೆ ರಸಜ್ಞೆ ಜಿಹ್ವೆ'' (ವಸ್ತುಕೋ. ೬೯-೧೫); ನಮ್ಪಿರಾನ್ಗೋವದೊರಾ ನಾಲಗೆಯನ್ ಕಿಱಿಪ್ಪನ್ (ಎಇ. IX, ೧೯-೮ ; ಪು. 800) ; ಎರಟ್ಯಾಳಿಂಗನಾಗಂಗಳ್ ಪಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತಂ ಬಂದೊಡೆ (ಪಡ್ಡಾರಾ. ೧೦೦-೭) ; ಜೀವನಿಲ್ಲ ಮೊಱೆಯಿಲ್ಲಱಿಲ್ಲ ಪರತ್ರೆಯಿಲ್ಲೆನಲ್ಕಸಕಳಿಯಂತೆ ನಾಲಗೆ ಪೊರಳ್ವುದು ರಾಜಸಭಾಂತರಾಳದೊಳ್ (ಆದಿಪು. ೨-೧೧) ; ನಾಲಗೆಯಿಲ್ಲದೆ ನುಡಿವೆನೆಂಬ ಪಱುಗೋಲಿಲ್ಲದೆ ತೊಱೆಯಂ ಪಾಯ್ವೆನೆಂಬ ಪಚ್ಚಪಸಿಯೆಗ್ಗನಂ ಪೋಲ್ಕುಂ (ಧರ್ಮಾಮೃ. ೧-೬೭) ; ಹಾಡಿ ನಾಲಗೆ ದಣಿಯದು (ಬಸವ. ೪೮೭) ; ತನು ವಾದ್ಯಂ ನಾಲಗೆ ವಾದನದಂಡಂ ಕರ್ತೃವಾತ್ಮನವನ ಮನೋವೃತ್ತಿ ನಿಮಿತ್ತಮಾಗಿ ಶಬ್ದಂ ಜನಿಯಿಸುಗುಂ (ಶಮುದ. ೩೪) ; ಕಡುಗಾದಾರಿಗಳ ಮಣಿಮಕುಟದೊಲಹಿನ ನಾಲಗೆಯ ನಿದ್ರ್ರವದ ಮಾದ್ರಾಧೀಶ ನಿಂತೆಂದ (ಕುವ್ಯಾಕ. ೫-೨೦) ; ನಾಲಗೆಗೆ ದ್ರವವಿಲ್ಲ . . . ಹೇಳಲಿನ್ನೇ ನರಸ (ನಳಚ. ೩-೧) ; ಶಿವಕವಿ ವಿರೂಪಾಕ್ಷ ನಿನ್ನಂತೆ ವರಕವಿಯ ನಾಲಗೆ ಕಿವಿ ಮನಂಗಳಂ ಸೆಳೆವವಂ ಕವಿಯಲ್ತೆ ಭೂತಳದೊಳು (ಚೆಬಪು. ೧-೨೭). ೨. (ಆಲಂ) (ಬೆಂಕಿಯ) ಜ್ವಾಲೆ : ''ಜ್ವಾಲಾ ಶಿಖಾರ್ಚಿ ಕಿಚ್ಚಿನ ನಾಲಗೆಯು'' (ವಸ್ತುಕೋ. ೭-೯೦) ; ''ಅರ್ಚಿಃ, ಕೀಲಾ, ಜ್ವಾಲಾ—ಈ ೩ ಉರಿಯ ನಾಲಗೆ'' (ಹಲಾಯು. ೧೨-೬೫); ಮರನೆಂದು ಪೋಗಿ ಸಾರ್ದುದುಮುರಿಗಳ ನಾಲಗೆಗಳಂತೆ ಮರದೆಲೆಯೆಲ್ಲಂ ಪಿರಿದಪ್ಪ ಕೇಟ ರೂಪಿಂ . . . ಕಡಿವುವು ಮುಳಿಸಿಂ (ಧರ್ಮಾಮೃ. ೩-೮೫) ; ಹರಿವ ಹಾವಿಂಗಂಜೆ ಉರಿಯ ನಾಲಗೆಗಂಜೆ (ಬಸವ. ೪೪೬) ; ಕೊಂಡದೊಳಿನ್ನೆಬರಮೊಡೆವಿಡದೆ ಚಟಚಟಪ ಬೇಳುಂ ನಾಲಗೆಗಳು ನೀಡಿಕೊಂಡಿರ್ದುದು (ರಾಮಾಶ್ವ. ೧೬೬-೮). ೩. ವಚನ ; ಮಾತು : ನಾಲಗೆ ಕುಲಮಂ ತುಬ್ಬುವವೊಲುಱಿದೆ ನೀಂ ಕೆಡೆನುಡಿವೈ (ಪಂಪಭಾ. ೧೦-೨೦) ; ಕುಲವ ನಾಲಗೆಯಱುಹಿತೆಂಬ ನಾಣ್ನುಡಿಗಿಂದು ನೆಲೆಯಾಯ್ತು ಲಾ (ಹಚಕಾ. ೨-೩೨) ; ಎರಡು ನಾಲಗೆಯವರನ್ನು ನಂಬಬಾರದು (ರೂಢಿ). **ನಾಲಿಗೆ** : ೧. ಆಚಾರವಿಲ್ಲದ ನಾಲಿಗೆ ನಿನ್ನ ನೀಚಬುದ್ಧಿಯ ಬಿಡು ನಾಲಿಗೆ (ಪುರಂದ. ೧-೧೮೩ ಪಲ್ಲವಿ) ; ಮುಖಪದ್ಮದಲಿ ಸಿರಿದೇವಿ . . . ಅಕಳಂಕನ ನಾಲಿಗೆಯೊಳು ವಾಗ್ದೇವಿ ಸುಖದಿಂದ ನೆಲಸಿಹರೊಲಿದು (ಕಂಸವಿ. ೪-೯೫) ; ಕಣ್ಣು ನಾಲಿಗೆ ಮನವು ತನ್ನದೆಂದೆನಬೇಡ (ಸರ್ವಜ್ಞ. ೧೨೮೨). ೩. ಕುಲವನ್ನು ನಾಲಿಗೆ ಹೇಳುವುದು (ಗಾದೆ) ; ನಾಲಿಗೆ ಒಳ್ಳೆಯದಾದರೆ ನಾಡೆಲ್ಲಾ ಒಳ್ಳೆಯದು (ಗಾದೆ). ೪. (ನಡುವೆ ಅಲುಗಾಡಿ ಬಾರಿಸುವಂತೆ) ಗಂಟೆಗೆ ಅಳವಡಿಸಿರುವ ಲೋಹದ ಅಥವಾ ಮರದ ತುಂಡು,— ಬಾರಿಸುವ ಸಾಧನ : ನಾಲಿಗಿಲ್ಲದ ಗಂಟೆಯಂತಾಯಿತೀ ಬಾಯಿ, ಜಾಲದೊಳು ಸಿಕ್ಕ ಹಕ್ಕಿಯವೊಲಾಯಿತು ಮನವು (ಸಖೀಗೀ. ೯೪-೧).

ನಾಲಗೆ ಉದ್ದ ಬಿಡು = ಹತೋಟಿ ಮೀರಿ ಮಾತನಾಡು ; ಬಹಳ ಮಾತನಾಡು : ಸುಮ್ಮನೆ ಇರಬಾರದೆ ? ಎಂದು ಚೌಡಪ್ಪ ತುಸು ನಾಲಗೆ ಉದ್ದ ಬಿಟ್ಟೇ ಸುಂದರಿಗೆ ಬುದ್ಧಿ ಹೇಳಿದರು (ಹಳ್ಳಹಾ. ೧೮೬). **ನಾಲಗೆ ಉದ್ದ ಮಾಡು** = ನಾಲಗೆ ಉದ್ದ ಬಿಡು : ನಾಲಗೆ ಉದ್ದ ಮಾಡಬೇಡ (ರೂಢಿ). **ನಾಲಗೆಗೆ ವರ್** = ಬಾಯಿಯವರೆಗೆ ಬರು ; ಮಾತನಾಡುವಷ್ಟಾಗು : ಎರ್ದೆಯ ಮುಳಿಸು ನಾಲಗೆಗೆ ವರೆ ಸೈರಿಸಲಾಱದೆ ವಿದ್ವಿಷ್ಟವಿದ್ರಾವಣನನಿಂತೆಂದಂ (ಪಂಪಭಾ. ೨-೭೯). **ನಾಲಗೆ ತಪ್ಪು, ನಾಲಿಗೆ ತಪ್ಪು** = ಆಡಿದ ಮಾತನ್ನು ನಡೆಸದಿರು ; ಮಾತಿಗೆ ತಪ್ಪು : ಕಂಗಳು ತಪ್ಪಿ ನೋಡಿದರೆ ಮಾರಿ ನಾಲಗೆ ತಪ್ಪಿ

ನುಡಿದರೆ ಮಾರಿ (ಬಸವ. ೬೩೧) ; ನಾಲಿಗೆ ತಪ್ಪಿದವನು ನಾಯಿಗಿಂತ ಕಡೆ (ಗಾದೆ). **ನಾಲಗೆ ನಿಡಿದಾಗು**=ಬಹಳ ಮಾತನಾಡು : ನಾಲಗೆ ನಿಡಿದಾದರ್ಗೆ ಕೂರ್ಪಾರ್ಕಳುಂ ಕೊ[ಕೋ]ಲುವಿಾಗಳೆ ಸಾಧ್ಯಂ (ರಾಮಾಶ್ವ. ೯೧-೮). **ನಾಲಗೆಯ ತಿಂಡಿ**=ಮಾತನಾಡಬೇಕೆಂಬ ಚಪಲ ; ನಾಲಗೆಯ ತೀಟೆ : ಜನರು ತಮ್ಮ ನಾಲಗೆಯ ತಿಂಡಿಯನ್ನು ಹೀಗೇಕೆ ತೀರಿಸಿಕೊಳ್ಳಬೇಕೋ (ಮೂರುದಾ.೧೩೧). **ನಾಲಗೆಯ ತೀಟೆ**= ನಾಲಗೆಯ ತಿಂಡಿ : ಅವರಿಗೆ ನಾಲಗೆಯ ತೀಟೆ ಬಹಳ (ರೂಢಿ). **ನಾಲಗೆಯ ವೀರ**=ಮಾತನಾಡುವುದರಲ್ಲಿ ಮಾತ್ರ ಗಟ್ಟಿಗ; ಬಾಯಿ ಶೂರ : ನಾಲಗೆಯ ವೀರರು ನೀವು ಮೂಢರು ನಾವು ನುಡಿಗಳಲಿ (ಕುಮ್ಮಾಕ. ೧೦-೪೫). **ನಾಲಗೆಯಾಡಿಸು**=೧. ನಾಲಿಗೆಯನ್ನು ಅಲುಗಾಡಿಸು : ನಾಲಗೆಯಾಡಿಸುತುಂ . . . ಕುಣಿದಂ ಶೂಲದ ತಲೆ ಕುಣಿವ ತೆಜಿದೆ ಕುಣಪಾಲಯದೊಳ್ (ಅರ್ಧನೇ. ೫-೨೬). ೨. ಮಾತನಾಡು: ಬಾಯಿ ತೆರೆದೆ. ನಾಲಗೆಯಾಡಿಸಿದೆ. ಆದರೆ ಧ್ವನಿ ಹೊರಡಲೇ ಇಲ್ಲ (ನಂಟರು. ೫೯) ; 'ನಾನೆಂದೂ ಹಾಗೆ ಯೋಚಿಸಿರಲಿಲ್ಲ' ಎಂದು ನೆಕ್ಲುದೋವ್ ನಾಲಗೆಯಾಡಿಸಿದನು (ಪುನರು. ೧೮೯). **ನಾಲಗೆಯಾಡು**= (ಅನಗತ್ಯವಾಗಿ) ನಾಲಿಗೆಯಿಂದ ತುಟಿಯನ್ನು ಸವರಿಕೊಳ್ಳು : ಕೆಮ್ಮನೆ ಕೆಮ್ಮಿ ಕೆನ್ನೆಯಂ ತುಜಿುಸುತ ಸನ್ನೆಯಿಂ ಕರೆದು ನಾಲಗೆಯಾಡುತಂ. . .ಐದಿತು ಜಾರೆಯರೊಂದು ಭಾವದಿಂ (ಮಲ್ಲಕಾ.೮-೧೪೦). **ನಾಲಗೆ ಹರಿಬಿಡು** = ನಾಲಿಗೆಯ ಮೇಲಿನ ಹತೋಟಿಯನ್ನು ಕೈಬಿಡು ; ಮನಸ್ಸಿಗೆ ಬಂದಂತೆ ಮಾತನಾಡು : ದಳಪತಿ ತನ್ನ ಮಾತಿನ ಅರ್ಥ ಎಷ್ಟು ಘೋರವಾಗಿತ್ತೆಂಬುದನ್ನು ಅನುಮಾನಿಸದೆಯೆ ನಾಲಗೆ ಹರಿಬಿಟ್ಟನು, (ಪುನರು. ೩೫೬) ; ನಿನ್ನನ್ನು ನೋಡಿ "ನಿಮ್ಮ ಯಜಮಾನತಿ ಏನು" ಅಂತ ನಾಲಗೆ ಹರಿಬಿಡತಾನಲ್ಲ ? (ಅಶ್ವಮೇ. ೧೫). **ನಾಲಿಗೆ ಉದ್ದ ಆಗು**=ಮಾತು ಹೆಚ್ಚಾಗು ; ಮಿತಿಮಿಾರಿ ಮಾತು ಬರು : ಪಾಪ ಅಂತ ಸುಮ್ಮನಿದ್ದರೆ ನಾಲಿಗೆ ಉದ್ದ ಆಗ್ತಾ ಇದೆ (ರೂಢಿ). **ನಾಲಿಗೆಗೂಟ**=(ನೆಯ್ಗೆಯವನ) ನೆಯ್ಗೆಮರದ ಬಲಗಡೆ ಕಾಲು : (ಕ). **ನಾಲಿಗೆ ತಿರುಗು**=ಸ್ಫುಟವಾಗಿ ಮಾತನಾಡಲು ಅನುಕೂಲವಾಗುವಂತೆ ನಾಲಿಗೆ ಹೊರಳು : ಅವನಿಗೆ ನಾಲಿಗೆ ತಿರುಗುವುದಿಲ್ಲ (ರೂಢಿ). **ನಾಲಿಗೆ ಬಿಗಿಹಿಡಿ**=ಮನಸ್ಸಿಗೆ ಬಂದಂತೆ ಮಾತನಾಡದಿರು ; ಎಚ್ಚರಿಕೆಯಿಂದ ಮಾತನಾಡು ; ತಾಳ್ಮೆಯಿಂದಿರು : ಸ್ವಲ್ಪ ನಾಲಿಗೆ ಬಿಗಿಹಿಡಿದುಕೊ, ಎಲ್ಲ ಸರಿಯಾಗುತ್ತೆ (ರೂಢಿ). **ನಾಲಿಗೆಯುಳಿಸಿಕೊಳ್ಳು**=ಮಾತನ್ನು ಉಳಿಸಿಕೊಳ್ಳು,— ನಡೆಸು ; ಭಾಷೆ ತಪ್ಪದಂತೆ ನೋಡಿಕೊಳ್ಳು : ನಾಲಿಗೆಯುಳಿಸಿಕೊಂಡು ಕೊಡುವ ಗುತ್ತಿಗೆ ಕೊಟ್ಟುಬಿಡು (ರೂಢಿ). **ನಾಲಿಗೆ ಸೇದಿಹೋಗು**=ಮಾತು ನಿಂತುಹೋಗು: ಅವರಿಗೆ ಪಾರ್ಶ್ವವಾಯುವಿನಿಂದ ನಾಲಿಗೆ ಸೇದಿಹೋಗಿದೆ (ರೂಢಿ).

[**ದೇ.॥ ತಮಿ. ಮಲ.** ನಾ, ನಾಕ್ಕು, ನಾವು ; **ತುಳು.** ನಾಲಗೆ, ನಾಲಯಿ, ನಾಲಾಯಿ ; **ಕೊಡ.** ನವು ; **ತೆಲು.** ನಾಲಿಕ, ನಾಲುಕ, ನಾಲ್ಕ ; **ಕೋಲಾ.** ನಾಯ್ಕಿ. ನಾಲ್ಕ ]

**ನಾಲಗೆಗಲಿ** (ನಾ). ಬಾಯಿಬಡಾಯಿಯವನು ; ಮಾತಿನ ಶೂರ : ತಾಳುಗೆ ಪತ್ತಿ ಬತ್ತಿ ಬಾಯ್ಮಾಡಿ ನಾಲಗೆಗಿತ್ತುಕೊಳ್ವ ನಾಲಗೆಗಲಿಗಳುಮಂ (ಲೀಲಾವ. ೫-೧೧೪ ವ). [ನಾಲಗೆ+ಕಲಿ$_2$]

**ನಾಲಗೆಗಿಡುಕತನ** (ನಾ). ಕೆಟ್ಟಮಾತುಗಳನ್ನಾಡುವಿಕೆ ; ನಿಂದಿಸುವಿಕೆ; ಹೀಯಾಳಿಸುವಿಕೆ : ಅಸುರಾರಿ ನುಡಿಯದಿರು ಜಡಖೂಳ ನಾಲಗೆಗಿಡುಕತನ ನಮ್ಮೊಡನೆಯೇ ಎನುತಡರಿ ಮುಂದಲೆವಿಡಿದು (ಅಕ್ರೂಚ. ೬-೨೫). [ನಾಲಗೆ+ಕಿಡುಕ(<ಕೆಡುಕ)+-ತನ]

**ನಾಲಗೆಗೀಟು್, ನಾಲಿಗೆಕೀಳು, ನಾಲಿಗೆಗೀಳ್** (ಕ್ರಿ). ೧. ನಾಲಿಗೆಯನ್ನು ಕಿತ್ತು ಹಾಕು : ತಾಳುಗೆ ಪತ್ತಿ ಬತ್ತಿ ಬಾಯ್ಮಾಡಿ ನಾಲಗೆಗಿತ್ತುಕೊಳ್ವ ನಾಲಗೆಗಲಿಗಳುಮಂ (ಲೀಲಾವ. ೫-೧೧೪ ವ). ೨. ನಾಲಿಗೆಯನ್ನು ಚಾಚು,— ನೀಡು : ತೆಗಳಿಗೆವಿದ್ರೋಹಲುಂ ನಾಲಗೆಗಿತ್ತರೆಬಜಿತ ಬಾಯುಮಟ್ಟರೆಗಣ್ಣೇಡುಗಳುಂ ತಾಜುವ ತಾಳ್ಗಳುಮಗುರ್ವಿಸಲ್ ಕಾಡ ಕೋಣನೆಯ್ದುದುದಜಿುಲಂ (ಜಗವಿ. ೧೭-೬೬). **ನಾಲಿಗೆಕೀಳು :** ೧. ಚಾಡಿಗಳ್ಗೆ ಳುವುದಿಲ್ಲ ನುಡಿದಾಡುವ ನಾಲಿಗೆಕೀಳುವರಲ್ಲಿ (ಪುರಂದ. ೨-೩೯-೩). **ನಾಲಿಗೆಗೀಳ್ :** ೧. ಹರನಿಂದೆಗೆಯ್ವವನ ಶಿರವರಿವುದಲ್ಲದೊಡೆ ಭರದೆ ನಾಲಿಗೆಗೀಳ್ವುದಲ್ಲದೊಡೆ ತಾಂ ಹರಣವಂ ಬಿಡೆ (ಸಾನಂಚ. ૩-೯೯). [ನಾಲಗೆ+ಕೀಟು್$_1$]

**ನಾಲಗೆಗೆಳೆಯ** (ನಾ). ಕೇವಲ ಮಾತಿನ ಸ್ನೇಹಿತ : ಕೆಲಸಕ್ಕೆ ಬಾರದ ಮಿತ್ರ : ನಾಡ ನಾಲಗೆಗೆಳೆಯರೆಂಬುದ ಮಾಡದಿರು (ಕುಮ್ಮಾಉ. ೯-೧೮). [ನಾಲಗೆ+ಕೆಳೆಯ]

**ನಾಲಗೆಗೊನೆ** (ನಾ). ನಾಲಿಗೆಯ ತುದಿ; ತುದಿನಾಲಿಗೆ : ಮಜಿದು ನಾಲಗೆಗೊನೆಗೆ ನಾಮದ ನಿಜುಗೆ ನೆಲೆಗೊಳೆ (ಕುಮ್ಮಾಭೀ. ೩-೮೩) ; ಅಚ್ಯುತನಾಮ ನಾಲಗೆಗೊನೆಗೆ ಬರುತಿರಲು (ಸಿಭಾಗ. ೬-೨-೧೬) ; ಆತ್ಮನೊಳುದಿಸಿದ ಮಾತ ನಾಲಗೆಗೊನೆಯಲ್ಲಿ ವಿಸ್ತರಗೆಯ್ದು ಇನಿಯಳೆ ಕೇಳ್ ನಿನ್ನ ಕರ್ಣರಸಾಯನವೆನಲುಸಿರುವೆನೀ ಕೃತಿಯಂ (ನೋಹತ. ೧೨-೨). [ನಾಲಗೆ+ಕೊನೆ$_2$]

**ನಾಲಗೆತೀಂಟೆ** 'ನಾಲಗೆದೀಂಟೆ' ನೋ.

**ನಾಲಗೆತೀಂತೆ** 'ನಾಲಗೆದೀಂಟೆ' ನೋ.

**ನಾಲಗೆತುದಿ** 'ನಾಲಗೆದುದಿ' ನೋ.

**ನಾಲಗೆದಳೆ** (ಕ್ರಿ). ನಾಲಿಗೆಯನ್ನು ಪಡೆ,—ಹೊಂದು : ಕೆಲಬಲದ ವೇಲಾಯತರ ವೆಗ್ಗಳದ ರಾವ್ತರ ಗಡಣ ನಾಲಗೆದಳೆದುದೆನೆ ಹೊಳೆಹೊಳೆವಡಾಯುಧಭಟರು ನೂಕಿದರು (ಕುಮ್ಮಾದ್ರೋ. ೫-೭೧). [ನಾಲಗೆ+ತಳೆ$_1$]

**ನಾಲಗೆದೀಂಟೆ, ನಾಲಗೆತೀಂಟೆ, ನಾಲಗೆತೀಂತೆ** (ನಾ). ೧. ನಾಲಿಗೆಯ ಚಾಪಲ್ಯ ; ಹೆಚ್ಚು ಮಾತನಾಡುವ ಆತುರ : ನಾಲಗೆದೀಣ್ಟೆಯೇನು ?—ನೆರೆದ ಒಡ್ಡೋಲಗದಲ್ಲಿ ! (ಬಿಟ್ಟಉ. ૩೬-೯). **ನಾಲಗೆತೀಂಟೆ :** ೧. ಕೊಂಡೆಗಳ್ಗೆ ನಾಲಗೆತೀಂಟೆ [ಪಾಠಾಂ.ತಿಂತೆ] ಮಸಗೆ ನರೇಂದ್ರನೆಡೆಗೈದಿ ನಿಂದೆಬಗಿ ಕರಗಳಂ ಮುಗಿದು (ವೃಷವಿ. ೮-೩ ವ). **ನಾಲಗೆತೀಂತೆ :** ೨. ತಿನ್ನುವುದರಲ್ಲಿ ಅತಿ ಆಸಕ್ತಿ : ಅಂತಂತೆ ನಲಿವು ನಾಲಗೆತೀಂತೆ ಮಿಗಲ್ ಕಳಿಕೆಗೆಳಸಿ ಚಂಚುವನಿಟ್ಟೋರಂತೆ ಸವಿಸವಿದು ಸೊರ್ಕಿ ನಿರಂತಂ ಕರೆದತ್ತು ಮಾಮಿನೊಳ್ ಪರಪುಟ್ಟಂ (ಗಿರಿಕ. ೨-೪೨). [ನಾಲಗೆ+ತೀಂಟೆ$_1$]

**ನಾಲಗೆದುದಿ,** ನಾಲಗೆತುದಿ (ನಾ).=ನಾಲಗೆಗೊನೆ : ಹೃದಯ ರಾಮಧ್ಯಾನ ನಾಲ[ಪಾಠಾಂ. ಲಿ]ಗೆದುದಿ ನಿಜೇಶಸ್ಮರಣೆ . . . ಇದಿರ ಬಗೆವಳೆ ಸೀತೆ ಮಾಯಾವಿದರ ಮಾಯೆಗೆ ಸಿಲುಕುವಳೆ (ತೊರರಾ. ೫-೩-೩೯). **ನಾಲಗೆತುದಿ :** ಅಗಲಿ ಎಂದರು ನಾಲಗೆತುದಿಯಿಂದೆ ಮನದೊಳು ನೊಂದರು ತಂದೆ (ಇಂಚಾಪ. ೧೯-೮೪). [ನಾಲಗೆ+ತುದಿ]

**ನಾಲಗೆದ್ರವ** (ನಾ). ನಾಲಿಗೆಯಲ್ಲಿ ತೇವವುಂಟಾಗುವಿಕೆ : ನಾಲಗೆ ದ್ರವಕ್ಕೆ :—ಕೋಷ್ಠ , ಮಧುಕ, ಆಕಲಕರೆ . . . ಕುಂಕುಮ, ಇವಂ ನೀರಿಂದ ತೇದು, ನಾಲಿಗೆ ತೊಡೆಯಲು ಬಿದ್ದ ನಾಲಿಗೆ ಬಕ್ಕು. ದ್ರವವಕ್ಕು (ವಿವೈವಿ. ೬೫). [ನಾಲಗೆ+ದ್ರವ]

**ನಾಲಗೆಯೇಱು**(ನಾ). ನಾಲಗೆಯ ಹುಣ್ಣು,—ಗಾಯ,—ವ್ರಣ : ಸವಿವ ಷಯಂ ತವರಾಜಂ ತನಿವಣ್ಣಳು ಶಿವಾರ್ಪಿತವಲ್ಲದುದಂ ಸವಿದ ಶರಣನಂತೆ ನಾಲಗೆಯೇಱು (ನಂಜರ. ೧೬-೧೭).

[ನಾಲಗೆ + ಏಱು$_4$ (< ಏಱ್$_4$)]

**ನಾಲಗೆವೆಟವ** (ನಾ). ನಾಲಿಗೆಯ ಶಕ್ತಿಯನ್ನು ಕಳೆದುಕೊಂಡವನು ; ಮಾತನಾಡುವ ಶಕ್ತಿಯಿಲ್ಲದವನು : ಮಿಗೆ ಪದವಿಡಲಱಿಯದ ನಾಲಗೆವೆಟವರ್ . . . ಬಗೆವೊಡೆ ಕಬ್ಬಿಗರಕ್ಕುಮೆ (ಲೀಲಾವ. ೧-೨೩). [ನಾಲಗೆ + ಪೆಟವ]

**ನಾಲಗೆಸಿಕ್ಕು** (ಕ್ರಿ). ನಾಲಿಗೆಗೆ ಅಡ್ಡಿಯುಂಟಾಗು,—ತಡೆಯುಂಟಾಗು ; ನಾಲಿಗೆ ತಡವರಿಸು : ಕಕ್ಕಸದ ಮಾತು ಬಂದಾಗ ನಾಲಗೆಸಿ[ಪಾಠಾಂ. ಸು]ಕ್ಕುವಂತಿದನೆಸಗಿದನು (ಭರಚ. ೩೮-೧೩೩).

[ನಾಲಗೆ + ಸಿಕ್ಕು$_1$(< ಸಿಲ್ಕು$_1$)]

**ನಾಲತವಾಡ** 'ನಾಲ್ವತುಂಬಾಡ' ನೋ.

**ನಾಲತ್ತಾಣಿ** (ನಾ). ನಲವತ್ತು ಜನರ ಸಭೆ (?) : ಅದಕ್ಕೆ ಸಾಕ್ಷಿ ಕೆಲ್ಲಿಪುಸೂರ್ ಪನ್ನಿರ್ವರುಂ ಅಯ್ನೂಮಂತರುವರ್ ನಾಲತ್ತಾಣಿಉಂ ಇದಾನಱಿದೊಪ್ಪಱ್ಪಮಹಾಪಾತಗನಪ್ಪೊನ್ (ಮೈಆರಿ. ೧೯೨೫, ೧೦೬-೨೧ ; ?). [ ? ]

**ನಾಲಬಂದ** (ನಾ). ಕುದುರೆ ಮತ್ತು ಎತ್ತುಗಳಿಗೆ ಲಾಳ ಕಟ್ಟುವವನು ಮತ್ತು ಆ ಕಸುಬನ್ನು ಮಾಡುವ ಜಾತಿಗೆ ಸೇರಿದವನು: ನಾಲಬಂದರು . . . ಕುದುರೆಗಳಿಗೂ ಯೆತ್ತುಗಳಿಗೂ ನಾಲುಕಟ್ಟುವದೇ ಇವರ ಕುಲದ ಹೋರೆ (ಕಭಾಗ. ೨೩೫).

[←ಪಾರ. ಹಿಂ. ಮರಾ. ನಾಲ್‌ಬಂದ್]

**ನಾಲಬಂದಿ,** ನಾಲುಬಂದಿ, ನಾಲುಬಂದು, ನಾಳಬಂದಿ, ಲಾಲಬಂದಿ, ಲಾಳಬಂದಿ (ನಾ). ೧. ಎತ್ತು, ಕುದುರೆಗಳಿಗೆ ಲಾಳ ಕಟ್ಟುವಿಕೆ : (*). ೨. = ನಾಲಬಂದ : (*). **ನಾಲುಬಂದಿ :** (*). **ನಾಲುಬಂದು :** (*). **ನಾಳಬಂದಿ :** (*). **ಲಾಲಬಂದಿ :** ೨. ಅಲೆಮನೆ ಕದರುಮಾಡಿದ ಬಡಗಿಯಿಂದ ೧/೪ ಲಾಲಬಂದಿಯಿಂದ ೧/೨ ಹಳೇ ಪೈಕದವರ ಗ್ರಾಮಾಂತ್ರಗಳಿಂದ ವರುಷ ೧ಕೆ ವರ್ತನೆ (ಎಕ. XII, ಮದ್ದಗಿ. ೩೧-೧೨ ; ಸು. 1656 ? ). **ಲಾಳಬಂದಿ :** (*).

[←ಪಾರ. ಹಿಂ. ಮರಾ. ನಾಲ್‌ಬಂದೀ]

**ನಾಲಸ್ತಿ** (ನಾ). ೧. ಫಿರ್ಯಾದು ; ತಕರಾರು. ೨. ನಿಂದೆ ; ಅಪವಾದ ; ದೋಷಾರೋಪಣೆ : ಶ್ಯಾಮರಾಯ ಅವರ ನಾಲಸ್ತಿಯನ್ನು ಮಾಡುವ ಭೀತಿ ಇತ್ತು (ದೀಸಹ. II, ೧೦೯).

[←ಮರಾ. ನಾಲಸ್ತೀ, ನಾಲಿಸ್ತೀ]

**ನಾಲಾ** 'ನಾಲೆ$_1$' ನೋ.

**ನಾಲಾಭ** (ನಾ). [ಬೌದ್ಧ] ಶೂನ್ಯತತ್ತ್ವವನ್ನು ನಿರೂಪಿಸುವ ಒಂದು ಶಬ್ದ ; ಅಲಾಭವಲ್ಲದುದು ; ಲಾಭ : ಈ ಪರಮಾರ್ಥವಾದ ಶೂನ್ಯತತ್ತ್ವವನ್ನು ಅನಭಿಲಪ್ಯ . . . ಅಲಾಭ, ನಾಲಾಭ . . . ಅಪ್ರತಿಷೇಧ ಇತ್ಯಾದಿ ಶಬ್ದಗಳಿಂದ ಉಪದೇಶಿಸುವರು (ಹಿಂದಸಾ. ೪೧). [ಸಂ. (ನ + ಅಲಾಭ)]

**ನಾಲಾಯಕ್** 'ನಾಲಾಯಕ್ಕು' ನೋ.

**ನಾಲಾಯಕು** 'ನಾಲಾಯಕ್ಕು' ನೋ.

**ನಾಲಾಯಕ್ಕು,** ನಾಲಾಯಕ್, ನಾಲಾಯಕು, ನಾಲಾಯಖ್, ನಾಲಾಯಖ, ನಾಲಾಯಖು, ನಾಲಾಹಿಕ್(ನಾ). ೧. ಕೆಲಸಕ್ಕೆ ಬಾರದ ವ್ಯಕ್ತಿ ; ಅನರ್ಹ ; ಅಯೋಗ್ಯ : ನೀನು ಶುದ್ಧ ನಾಲಾಯಕ್ಕು, ಅಯೋಗ್ಯ (ಗರುಡಾ. ೯೨) ; ಮೊದಲಿನವಳು ಮುದುಕಿಯಾದಳು ; ಚಂದವಿಲ್ಲ. ಇಂಥ ಪ್ರವಾಸಕ್ಕೆ ನಾಲಾಯಕ್ಕು (ಅಳಸ. ೨೭೨). **ನಾಲಾಯಕ್ :** ೧. ಆ ದೂರುಗಳ ಆಧಾರದ ಮೇಲೆ ನನ್ನ ಸ್ನೇಹಿತರು ನಾಲಾಯಕ್ ಎಂದು ಅವರ ಎರಡು ಇಂಕ್ರಿಮೆಂಟನ್ನು ಸರ್ಕಾರದವರು ನಿಲ್ಲಿಸಿದರು (ಪಂಜಪಂ. ೧೬೩). **ನಾಲಾಯಕು:** ೧. "ನಾಲಾಯಕು = ನಿರುಪಯೋಗಿ, ಅಯೋಗ್ಯ" (ಜಾನಕೋ. ೧೧). **ನಾಲಾಯಖ್ :** ೧. ನಮ್ಮ ದೇವರ ಮುಂದೆ ಪ್ರಪಂಚದ ಇತರ ಎಲ್ಲ ದೇವರೂ ನಾಲಾಯಖ್ (ಧರ್ಮಶ್ರೀ. ೭೩). **ನಾಲಾಯಖ :** ೧. ಅವರು ಈ ಪ್ರಪಂಚಕ್ಕೆ ನಾಲಾಯಖ (ಕಾಮಿಕಾಂ. ೯೮) ; ಕೇರಿಯ ಗೃಹಸ್ಥರು ಮಾತ್ರ ಲಗ್ನವಾಗಲು ನಾಲಾಯಖನಾದವನಿಗೆ ಸುಳ್ಳೇ ತಂಗಿಯನ್ನು ಕೊಟ್ಟರಿ ಎಂಬ ಧಾಟಿಯಲ್ಲೇ ಅದನ್ನು ಹೇಳಿರಬೇಕು (ಮೂರುದಾ.೬೯). **ನಾಲಾಯಖು :** ೨. ಅನರ್ಹವಾದುದು : ಸಾಗುವಳಿಲಾಯಖುಭೂಮಿಯಲ್ಲಿ . . . ಇದ್ದರೆ ಸಾಗುವಳಿ ನಾಲಾಯಖೆಂದು ವುತ್ತರ ಮಾಡಲಾಗುತ್ತೆ (ಭೂಮಿಅ. ೩೪). **ನಾಲಾಹಿಕ್ :** ೧. ನೀನು ದನ ಕಾಯುವುದಕ್ಕೂ ನಾಲಾಹಿಕ್ (ಬೆಳುಮ. ೧). [←ಪಾರ. ಹಿಂ. ಮರಾ. ನಾಲಾಯಕ್]

**ನಾಲಾಯಖ್** 'ನಾಲಾಯಕ್ಕು' ನೋ.

**ನಾಲಾಯಖ** 'ನಾಲಾಯಕ್ಕು' ನೋ.

**ನಾಲಾಯಖತನ** (ನಾ). ಅಯೋಗ್ಯತನ ; ಅನರ್ಹತೆ : ದೇವರ ನಾಲಾಯಖತನವನ್ನು ಹಳಿಯುತ್ತ . . . ಥಾಲಿಹಸ್ತರಾಗಿ ಪೂಜಾ ಪರೇಡಿಗೆ ಹೊರಟಿವು (ದೀಪಹ. II, ೭).

[ನಾಲ್ಲಾಯಖ(< ನಾಲಾಯಕ್ಕು) + -ತನ]

**ನಾಲಾಯಖು** 'ನಾಲಾಯಕ್ಕು' ನೋ.

**ನಾಲಾಹಿಕ್** 'ನಾಲಾಯಕ್ಕು' ನೋ.

**ನಾಲಿ,** ನಾಳಿ$_1$ (ನಾ). ೧. (ತಾವರೆ ಮುಂತಾದುವುಗಳ) ಟೊಳ್ಳಾಗಿರುವ ದಂಟು,—ಕಾಂಡ. ೨. ದೇಹದ ಒಳಗಿರುವ ನಾಡಿ. ೩. ಕೊಳವೆ ; ನಳಿಕೆ. ೪. ತಾವರೆ; ಕಮಲ. ೫. ಆನೆಯ ಕಿವಿಯನ್ನು ತೂತುಮಾಡಲು ಉಪಯೋಗಿಸುವ ಒಂದು ಬಗೆಯ ಸಾಧನ. ೬. ಇಪ್ಪತ್ತುನಾಲ್ಕು ನಿಮಿಷಗಳ ಕಾಲ; ಒಂದು ಗಳಿಗೆ. ೭. ಒಂದು ಬಗೆಯ ಜಾಗಟೆ. ೮. ಪಟ್ಟ ; ಸೀಳು : ತನ್ನ ಬಟ್ಟೆಯ ಕೊನೆಯನ್ನು ಒಂದು ನಾಲಿಯಾಗಿ ಹರಿದು ಗಾಯದ ಮೇಲೆ ಬಿಗಿದು ತಲೆಯ ಹಿಂದಕ್ಕೆ ಕಟ್ಟಿದನು (ಚಕರಾ. ೩೧೧). **ನಾಳಿ$_1$ :** ೨. "ನಾಳಿಯೆ ನಾಡಿಯೊಳ್" (ಕಣಾ೯ಶ. ೩೫). ೩. ಬಿದಿರ ಪೊಸನಾಳಿಯೊಳ್ ಕಾಸಿದ ಪಾಲಂ ಪೊಯ್ದು ಮತ್ತೆ ಕೊಗ್ಗ ಸಱಿೞೊಳ್ ಮೂಱುದಿನಂಬರಮಿರಿಸಿ ಬಱಿಕ್ಕದನೊಡೆದೊಡೆ ನಾಳಿಯಂದದಿಂ ಮೊಸರಕ್ಕುಂ (ಲೋಕೋಪ. ೮-೫೦) ; ಸಿಂಬುಳ ನಾಳಿ ಮೂಗುಗುಟ ಪೆರ್ದೊಱಟಿ ಬಾಯ್ತ್ ಮಲೆದಾಗರಂ ಬಸಿಱ್ (ಧರ್ಮಾಪ್ಪು. ೫-೨೮) ; ಪಳಿಕಿನ ಪುಡಿಕೆಗಳೊಳಂ ಹರಿನೀಲದ ನಾಳಿಗಳೊಳಂ . . . ತೀವಿದೆನಿತಾನುಂ ತೆಱದ ಬಂಧುರ ಸುಗಂಧವಸ್ತುಸಂದೋಹಮಂ ಪಿಡಿದು (ಜಗವಿ. ೬-೧೮ ಪ) ; ಬಾವಿಯ ತಡಿಗೆ ಪೋಗಿ . . . ನೀರ್ಮೊಗೆವುಪಾಯಮನಾಂ ಮಿಗೆ ಕಂಡದೊಂದು ಬಳ್ಳಿಯ ಕಡೆಯಲ್ಲಿ ಪೆರ್ಚಿದರ ನಾಳಿಯನಾರ್ಪಿನೆ ಕಟ್ಟಿ ಮೆಲ್ಲನಲ್ಲಿಯ ಲಲಿತಾಂಬುವಂ ಪಡೆದು ಸೇಂದಿದೆನಾಗಳ್ (ದಶಕು. ೧೪-೧೫). ೬. "ನಾಳಿಯೆ ತಾಂ ಘಟಿಗೆ ಯೆನಿಕುಮವನೀತಳದೊಳ್" (ಕವಿಕಂ. ೧೧೫) ; "ನಾಳಿಯೆನೆ ನಾಡಿಯೆನೆ ಗಳಿಗೆಯೆಂದಕ್ಕು" (ಕಶರ. ೫೪). ೯. ಒಂದು ಅಳತೆಯ ಪ್ರಮಾಣ : ಬೆಲ್ಲ ನಾಳಿ ೪ . . . ತುಪ್ಪ ನಾಳಿ ಮೆಣಸು ನಾಳಿ ×

ಉಪು ನಾಳಿ ೧ (ಸೌಇಇ. IX—ii, ೫೪೭–೫ ; 1532) ; ಆ ಆಭರಣ ವನ್ನು ಮಾಡುವುದಕ್ಕೆ ನಾಲ್ಕು ನಾಳಿ ವಜ್ರಗಳನ್ನೂ ಹನ್ನೊಂದು ನಾಳಿ ಮುತ್ತುಗಳನ್ನೂ . . . ಇದಲ್ಲದೆ ಇನ್ನೂ ಇತರವಾದ ಸಪ್ತರತ್ನ ಗಳನ್ನೂ ಉಪಯೋಗಿಸಿದರು (ಹತ್ತುಮ. ೩೦). **೧೦.** ಕಾಲುವೆ; ನಾಲೆ. **೧೧.** ನೆಯ್ಗೆಯವನು ಬಟ್ಟೆಯನ್ನು ನೇಯುವಾಗ ಉಪಯೋಗಿಸುವ ಒಂದು ಉಪಕರಣ ; ಹೊಕ್ಕುನೂಲನ್ನು ಹಾಸುನೂಲಿನಲ್ಲಿ ಸೇರಿಸುವ ಉಪಕರಣ ; ಲಾಳಿ : "ವೇಮ, ವಾಯುದಂಡ—ನೆಯ್ಗೆಕಾಱನ ನಾಳಿ" (ನಾಚಿರಾ. ೬). **೧೨.** (?) : ''ನಾಳಿ = ನಾಡೆ ; ಪಾಡಿ [ಪಾಠಾಂ. ನಾಟಿಯೆಂದು ನಾಡಿಯೆಂ ಬರ್ಥಂ]'' (ಶಸುದ.ಪರಿ. ೨). ℙ ಇಲ್ಲಿಯ 'ನಾಡೆ' ಶಬ್ದವು 'ನಾಡಿ' ಎಂಬುದರ ಅಪಲಿಖಿತವಿರಬಹುದೆ ?

**ನಾಳಿಯ ಕೋಲ್** = (ಬಿದಿರಿನಂಥ) ಟೊಳ್ಳಾದ ಸಸ್ಯಕಾಂಡ ದಿಂದ ತಯಾರಿಸಿದ ಬಾಣ (?) : ನಾಳಿಯ ಕೋಲ್ ಜವನಾಳಿ ವೆಂದಿನಂ ಕವಿದುವು (ಪಂರಾಮಾ. ೧೩–೬೧). 'ನಾಳಿಯಂಬು' ಪರಾ. **ನಾಳಿಯ ಬಿಲ್ಲು** = ಒಂದು ಬಗೆಯ ಬಿಲ್ಲು : ಗಗನತಳವನು ಬಿಗಿದ ಬಲುಜಿಂಚಿಗಳ ತುಂಬಿದ ಹೊದೆಯು ಕಣೆಗಳ ಬಿಗಿದ ನಾಳಿಯ ಬಿಲ್ಲು ಗಳ . . . ಜೋದರಡರಿದರಂದು ಬೊಬ್ಬಿಱಿದು (ಕುಪ್ರಾಕ್ಷದ್ರೋ. ೩–೫). 'ನಾಳಿವಿಲ್' ಪರಾ. [ಸಂ.]

**ನಾಲಿಕ,** ನಾಳಿಕ (ನಾ). **೧.** ತಾವರೆ; ಕಮಲ. **೨.** ಬಾಯಿಂದ ಊದುವ ಒಂದು ಬಗೆಯ ವಾದ್ಯ; ಕೊಳಲು. **೩.** ಬಂದೂಕು; ಕೋವಿ : ಪ್ರಾಚೀನ ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಅಗ್ನಿಚೂರ್ಣ (ಇದನ್ನು 'Gun powder' ಎಂದು ಒಪ್ಪೆರ್ಟ್ ಅವರು ಅನುವಾದಿಸುತ್ತಾರೆ)ವೆಂಬ ಪದವಾಗಲಿ, ನಾಲಿಕ . . . ಎಂಬ ಪದವಾಗಲಿ ಸಾಹಿತ್ಯದಲ್ಲಿ ಶಾಸನಗಳಲ್ಲಿ ಇಲ್ಲ (ಕಶಾಅ.೨೭೯). **ನಾಳಿಕ:** **೧.** ಲೋಲಕುಂತಳೆಯೆಯವಧರಿಸುಯಿಂತೆಂದು ಸಿರಿಪತೌಳಿಯಂ ಮಣಿದು ಬಾ ಣಾ ಖ್ಯ ಶಿವನಂಘ್ರಿಯುಗನಾಳಿಕಂಗಳಿಗೆ ವಂದಿಸಲು (ನಪಮೋ. ೩೩–೪೯). [ಸಂ.]

**ನಾಲಿಕೆ,** ನಾಳಿಕೆ (ನಾ). **೧.** (ತಾವರೆಯ) ನಾಳ; ದಂಟು. **೨.** ಕೊಳವೆ; ನಳಿಕೆ : (೬). **ನಾಳಿಕೆ : ೩.** ಇಪ್ಪತ್ತುನಾಲ್ಕು ನಿಮಿಷಗಳ ಕಾಲ ; ಒಂದು ಗಳಿಗೆ : ಅದು ಸಮಯಾವಳಿಕೋಚ್ಛ್ವಾಸಸ್ತೋಕ ನಿಮೇಷನಾಳಿ [ಪಾಠಾಂ. ಡಿ]ಕಾ ಮುಹೂರ್ತದಿವಸಪಕ್ಷಮಾಸರ್ತ್ವಯನ ಸಂವತ್ಸರಾದಿ ಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು (ಆದಿಪು.೬–೪೮ ವ) ; ಸ್ತೋಕಂ ನೆಱೆದೇಱಾಗೆ ಲವಾಕಾಲಂ ಮೂವತೆಂಟುವರೆಯೆನಿಪ ಲವಾನೀಕಂ ನಾಳಿಕೆ ತನ್ನಾಳೀಕಾಲಯುಗಂ ಮುಹೂರ್ತಮೆನೆ ವರ್ತಿಸುಗುಂ (ಪಂರಾಮಾ. ೧–೫೦). [ಸಂ. ನಾಲಿಕಾ]

**ನಾಲಿಕೇರ,** ನಾಳಿಕೇರ (ನಾ). = ನಾರಿಕೇಲ: ನಾಲಿಕೇರಸಹಕಾರೇಕ್ಷು ರಸಪ್ರವಾಹದಿಂ ಬೆಳೆದು ಮುಗಮುಗಿಪ . . . ತಂಡುಲಂಗಳಂ ಕಳೆದುಕೊಂಡು ಬಾಗಿದೋಗರಮನಾರೋಗಿಸುವಂ (ಸುಕುಮಾ. ೧೧–೩೫ ವ) ; ಚೆಲ್ವುವೆತ್ತುವಮರೀಕರಪಲ್ಲವದೊಳ್ ನವೀನಕದಲೀ ನವಾಮ್ರ ನಾರಂಗ ನಾಲಿಕೇರಫಲಂಗಳ್ (ಪಂರಾಮಾ.೧೬–೯೪). **ನಾಳಿಕೇರ :** "ನಾಳಿಕೇರಃ, ನಾರಿಕೇಳಃ, ಲಾಂಗಲೀ—ತೆಂಗಿನ ಮರದ ಹೆಸರುಗಳು'' (ಸಿದ್ಧಾಂತಿ. ೧೫೨) ; ಆಜ್ಯ ಕ್ಷೀರ ದಧಿ ನಾಳಿಕೇರ ಸಹಕಾರ ಪೂಗೀಫಲ ಪುಂಡ್ರೇಕ್ಷುರಸಂಗಳಿಂದಂ . . . ಅಭಿಷೇಕಂಗೆಯ್ದು (ಆದಿಪು. ೧೬–೧ ವ) ; ಪೂಗದ್ರುಮ ನಾಳಿಕೇರ ಬಹುಳಂ . . . ಪ್ರೋತ್ಫುಲ್ಲ ನಾನಾ ಲತಾಲಲಿತಂ ಕಾನನಮೆಯ್ದೆ ಕಣ್ಗೊಳಿಸುಗುಂ ಮಹಾಕ್ಷೇತ್ರಮೋಪಾಂತದೊಳ್ (ಕಾದಂಪೂ. ೨೧೬) ; ನಾಳಿಕೇರಮನ ವಳಂಬಿಸಿರ್ದುವು ಫಲಂ ರಸಪೂರಿತಮಾಗಿ ಮಾಗಿಯೊಳ್ (ಜಗವಿ. ೧೪–೫) ; ನಳನಳಿಸಿ ಬೆಳೆದ ನವನಾಳಿಕೇರಂಗಳಂ . . . ತೋಱುತುಂ (ನಂಬಿರ. ೯–೧೦೦). [ಸಂ.]

**ನಾಲಿಗೆ** 'ನಾಲಗೆ' ನೋ.

**ನಾಲಿಗೆಕಚ್ಚು** (ಕ್ರಿ). ನಾಲಿಗೆಯನ್ನು ಕಡಿ.

**ನಾಲಿಗೆ ಕಚ್ಚಿ ನುಡಿ** = ಹಿಡಿದು ಹಿಡಿದು ಮಾತನಾಡು; ತಡೆದು ತಡೆದು ಮಾತನಾಡು : ಅವಳು ನಾಲಿಗೆಕಚ್ಚಿ ನುಡಿಯುತ್ತಿದ್ದಳು (ಇಪ್ಪಕ. ೧೮೭). [ನಾಲಿಗೆ (<ನಾಲಗೆ) + ಕಚ್ಚು$_1$ (<ಕರ್ಚು$_1$)]

**ನಾಲಿಗೆಕಲ್ಲು** (ನಾ). (ಕಟ್ಟಡದಲ್ಲಿ ಅಥವಾ ಬಾವಿಯ ಒಳಗೆ) ಮುಂದಕ್ಕೆ ಚಾಚಿಕೊಂಡಿರುವ ಚಪ್ಪಡಿಕಲ್ಲು : (೬). [ನಾಲಿಗೆ (<ನಾಲಗೆ) + ಕಲ್ಲು (<ಕಲ್$_3$)]

**ನಾಲಿಗೆಕೀಳು** 'ನಾಲಗೆಗೀೞ್' ನೋ.

**ನಾಲಿಗೆಕೆಡು** (ಕ್ರಿ). ರೋಗ ಮೊದಲಾದ ಕಾರಣಗಳಿಂದ ರುಚಿ ತಿಳಿಯದಂತಾಗು ; ನಾಲಿಗೆಯಿಂದ ರಸವು ತಿಳಿಯದೆ ಹೋಗು; ಅರುಚಿಯುಂಟಾಗು : ಎರಡು ದಿನ ಜ್ವರ ಬಂದಿದ್ದಕ್ಕೆ ನಾಲಿಗೆ ಕೆಟ್ಟುಹೋಗಿದೆ (ರೂಢಿ). [ನಾಲಿಗೆ (<ನಾಲಗೆ) + ಕೆಡು$_1$]

**ನಾಲಿಗೆಗೀಳ್** 'ನಾಲಗೆಗೀೞ್' ನೋ.

**ನಾಲಿಗೆದೋಷ** (ನಾ). ಸನ್ನಿ ಮೊದಲಾದ ರೋಗಗಳಲ್ಲಿ, ನಾಲಿಗೆ ಯಲ್ಲಿ ತೋರುವ ಜಾಡ್ಯದ ಸೂಚನೆ,—ರೋಗ ಉಲ್ಬಣವಾಗು ವುದರ ಗುರುತು : ಆಕಲಕರೆಯನ್ನು ತೇದು ಕೊಂಬುದು ನಾಲಿಗೆ ದೋಷ ಗುಣ (ವಿವೈವಿ. ೧೦೨). [ನಾಲಿಗೆ (<ನಾಲಗೆ) + ದೋಷ]

**ನಾಲಿಗೆಪ್ರಮಾಣ** (ನಾ). ಮತ್ತೊಬ್ಬರ ಮಾತಿನಲ್ಲಿ ನಂಬಿಕೆ ಬರುವಿಕೆ ; ಒಬ್ಬರು ಮಾಡಿದ ವಾಗ್ದಾನದಲ್ಲಿ ನಂಬಿಕೆ ಇರುವಿಕೆ : (೬). [ನಾಲಿಗೆ (<ನಾಲಗೆ) + ಪ್ರಮಾಣ]

**ನಾಲಿಗೆಬೀಳು** (ಕ್ರಿ). = ನಾಲಿಗೆ ಹೋಗು : ಪಾರ್ಶ್ವವಾಯುವಿನಿಂದ ಆ ರೋಗಿಗೆ ನಾಲಿಗೆ ಬಿದ್ದಿದೆ (ರೂಢಿ). [ನಾಲಿಗೆ (<ನಾಲಗೆ) + ಬೀಳು$_1$ (<ಬೀೞ್$_1$)]

**ನಾಲಿಗೆವಾಸಿ** (ನಾ). ಆಡಿದ ಮಾತಿಗೆ ತಪ್ಪದಿರುವಿಕೆ ; ಸತ್ಯಸಂಧತೆ ; ಪ್ರಾಮಾಣಿಕತನ : ನಾಲಿಗೆವಾಸಿಯಿದ್ದವನ ಮಾತು ಹಾಲಿಗಿಂತ ಹೆಚ್ಚು (ಗಾದೆ). [ನಾಲಿಗೆ (<ನಾಲಗೆ) + ವಾಸಿ$_2$]

**ನಾಲಿಗೆಹೋಗು** (ಕ್ರಿ). ಮಾತನಾಡುವ ಶಕ್ತಿ ಹೋಗು ; ಮಾತನಾಡದಂತಾಗು: ಕಳೆದ ವರ್ಷ ಪಾರ್ಶ್ವವಾಯುವಿನಿಂದ ಅವರಿಗೆ ನಾಲಿಗೆ ಹೋಯಿತು (ರೂಢಿ). [ನಾಲಿಗೆ (<ನಾಲಗೆ) + ಹೋಗು$_1$ (<ಪೋ$_1$)]

**ನಾಲೀಕ,** ನಾಳೀಕ (ನಾ). **೧.** ಬಾಣ ; ಶರ. **೨.** ಈಟಿ ; ಭಲ್ಲೆ. **೩.** ತಾವರೆ ; ಕಮಲ. **೪.** ತಾವರೆಯ ನಾಳ,— ದಂಟು. **ನಾಳೀಕ : ೩.** ನಾಳೀಕನಯನೆ ಎನಗಿದು ಪ್ರಥಮ ಜನ್ಮವೌ ಮುಂದೆ ಸದ್ಗುಣವಪ್ಪುದು (ಗುರುಚಾ. ೭–೮೫). 'ನಾಳೀಕ ಭವ' ಪರಾ. [ಸಂ.]

**ನಾಲೀಜಂಘ,** ನಾಳೀಜಂಘ (ನಾ). ೧. (ನಾಳದಂತಿರುವ ಕಾಲು ಗಳನ್ನುಳ್ಳ) ಒಂದು ಬಗೆಯ ಪಕ್ಷಿ ; ಕೊಕ್ಕರೆ ; ಬಕ. **೨.** ಒಂದು ಬಗೆಯ ಕಾಗೆ ; ಡೊಂಬಕಾಗೆ. **೩.** ಕೋತಿ ; ಕಪಿ: ''ಪ್ಲವಂಗಮ ಶಬ್ದಂ ನಾಲೀಜಂಘಾಖ್ಯೆಯೊಳಂ ಶಾಲೂರದೊಳಂ ಯಥಾರ್ಥಕಂ ವರ್ತಿಸುಗುಂ'' (ವಸ್ತುಕೋ. ೧೩೦–೭೬). **ನಾಳೀಜಂಘ: ೩.** ಪಳುತ್ತಂ ಮೆಲ್ಲನಲ್ಲಿಂ ಮಱಿಯುಮರ್ದಿರೆ ಕಿಳ್ಗೊಬ್ಬೆಯೊಳ್ . . . ಶಾಖಾಗ್ರದೊಳಡರ್ದಲುಗಲ್ಪೂಸೆ ಮೇಲ್ಕೆಕಿಲೆತ್ತಂ ನಾಳೀಜಂಘಂ

ಕರಂ ಪಲ್ದೆಱೆದು ನಡುಗಿ ಹಱಿಂದು ಪುರ್ಬಿಕ್ಕಿತಾಗಳ್ (ರಾಜಶೇ. ೯–೨೯). [ಸಂ.]

**ನಾಲೀಸು** (ನಾ). ಹೇಯವಾದುದು ; ತಿರಸ್ಕಾರಕ್ಕೆ ಯೋಗ್ಯವಾದುದು : ಒಂದು ಸಂಗತಿಯಲ್ಲಿ ಮಾತ್ರ ಅವರ ವ್ಯಾಪಾರ ನಾಲೀಸು (ಮುಗಿಯಬು. ೧೩). [←**ತುಳು.** ನಾಲೀಸ್, ನಾಲಿಸ್]

**ನಾಲು**$_1$ 'ನಾಲ್' ನೋ.

**ನಾಲು**$_2$ 'ನಾಲ್$_2$' ನೋ.

**ನಾಲುಕಟ್ಟು** 'ನಾಲಕಟ್ಟು' ನೋ.

**ನಾಲುಕು** 'ನಾಲ್ಕು' ನೋ.

**ನಾಲುತೆಱ** 'ನಾಲ್ದೆಱ' ನೋ.

**ನಾಲುಬಂದಿ** 'ನಾಲಬಂದಿ' ನೋ.

**ನಾಲುಬಂದು** 'ನಾಲಬಂದಿ' ನೋ.

**ನಾಲುಬಡಿಸು** (ಕ್ರಿ). ಕುದುರೆ, ಎತ್ತು ಮೊದಲಾದುವುಗಳ ಗೊರಸಿಗೆ ಹಲ್ಲೆಯನ್ನು ಹೊಡೆಸು; ನಾಲುಕಟ್ಟಿಸು: ಕುದುರೆಯು ನೆಟ್ಟಗೆ ಅದೆ; ಅವರ ಕಾಲು ಮಾತ್ರ ಕುಂಟುತ್ತದೆ! ಆದ್ದರಿಂದ ಅದಕ್ಕೆ ನಾಲುಬಡಿಸಿ ನಮ್ಮ ಸರ್ಕಸ್‌ದೊಳಗೆ ಕೂಡಿಸಿಕೊಳ್ಳೋಣ! (ಮೋಹಿನೀ. ೫೬). [ನಾಲು$_2$(<ನಾಲ್$_2$)+ಬಡಿಸು$_1$]

**ನಾಲುಮಡಿ** 'ನಾಲ್ಮಡಿ' ನೋ.

**ನಾಲುವಿ** (ನಾ). (?) : ಹೊಸವಳಲ ಪ್ರಭುಮುಖದಾಮೋದರಭಟ್ಟೋಪಾಧ್ಯಾಯರು ಅನಂತಭಟ್ಟೋಪಾಧ್ಯಾಯರೊಳಗಾಗಿ ನಾಲುವಿರುದ್ರಮ ಮುಖ್ಯಧಿದಾವ ತೊದಲುಂ ತೊಂದಿರರು ವೈನೂರ್ವ್ವರುಮಿದ್ದುವಿಟ್ಟ ಧರ್ಮ್ಮಮೆಂತೆಂದಡೆ (ಇಆ. XI, ೨೭೪–೨೬; 1080). [ ? ]

**ನಾಲುಸಾಸಿರ** 'ನಾಲ್ಸಾಸಿರ' ನೋ.

**ನಾಲೆ**$_1$, ನಾಲಾ (ನಾ). **೧.** ನೀರು ಹರಿಯುವುದಕ್ಕಾಗಿ ಮಾಡುವ ತಗ್ಗು,—ತೋಡು ; ಕಾಲುವೆ : ನಾವು ಸ್ಕೂಲಿಗೆ ಹೋಗುತ್ತಿದ್ದ ಮಾರ್ಗದ ನಾಲೆಯಲ್ಲಿ ಕರಿಯ ಬಲೆ ಎಸೆದು ಮೀನು ಹಿಡಿಯುತ್ತಾ ನಿಂತಿರುತ್ತಿದ್ದ (ಬೆಸ್ತ. ೮) ; ವ್ಯವಸಾಯದ ಸಲುವಾಗಿ ಯಾವುದೇ ನಾಲೆಯ ಅಥವಾ ಜಲಮಾರ್ಗದ ಉಪಯೋಗ (ಭಾಧಾನ. ೨೬೩) ; ಗೌಡರು ಹಳ್ಳಿಗೆ ಐದು ಮೈಲಿ ದೂರದಲ್ಲಿದ್ದ ನಾಲೆಯನ್ನು ಪರೀಕ್ಷಿಸಲು ಹೊರಟಿದ್ದರು (ಗೋಪುರ. ೧೪೯) ; ನಾಲೆ ಇಲ್ಲದ ಊರೂ ಮಾಲೆ ಇಲ್ಲದ ಪ್ರಸ್ತವೂ ಒಂದೇ (ಗಾದೆ). **ನಾಲಾ :** **೧.** ನೀರುಗಂಟಿ—ಕೆರೆ ಮತ್ತು ನಾಲಾಗಳಿಂದ ನೀರನ್ನು ಬಿಡುವವನು (ಗ್ರಾಪಾಕ. ೧) ; ಅರವತ್ತು ವರ್ಷದಿಂದ ಮುಂದಗೆರೆ ಉತ್ತರನಾಲಾ ಬರಬೇಕೆಂತ ಸರಕಾರದವರನ್ನು ಕೇಳಿಕೊಳ್ಳುತ್ತಾ ಇವ್ನಿ (ಹುಟ್ಟುಹ. ೧೭೦). **೨.** ಬಂದೂಕಿನ ನಾಳ,—ನಳಿಕೆ : ಕೋವಿಗಳು ಒಂದೂವರೆ ಮಾರು ಉದ್ದ. ಅವುಗಳನ್ನು ಬಾರುಮಾಡಬೇಕಾದರೆ . . . ನಾಲಾದಲ್ಲಿ ಮದ್ದನ್ನು ಸುರಿಯಬೇಕು (ಸಕತೆ.೮೧). [←**ಹಿಂ. ಮರಾ.** ನಾಲಾ]

**ನಾಲೆ**$_2$ (ನಾ). ಒಂದು ಬಗೆಯ ಹುಲ್ಲು : "ಕುರರೀ—ನಾಲೆ, ನಾರುಂಬೇಳೆ" (ಓಷಧಿ. ೩೪) ; ನೊಸೆ ನೈಹಂಚಿ ಕಣಿಗಿಲೆ ನಾಲೆ ಗರುಗ . . . ಎಸೆದಿಹವಾ ವಿಪಿನದೊಳು (ಶ್ರೀಪಾಲ. ೭–೧೪) ; ನಾಲೆಹುಲ್ಲು, ನಾರುಹಂಚಿಹುಲ್ಲು (ಮೈಡಿಗಿ. ೬೮–೧೩೯೩). [<ಸಂ. ನಲ ?]

**ನಾಲ್ಕಡಿ,** ನಾಕಡಿ(ನಾ). **೧.** ನಾಲ್ಕು ಹೆಜ್ಜೆ,—ಕಾಲು,—ಪಾದ: ಕಂದ ಕೇಳ್ಪಲುಗುಣಂ ಪಾಲಿಪಂ ನಾಲ್ಕಡಿಯದೊಂದು ಹರಿಯಂ ನಿನಗದಱ ಚಿಂತೆ ಬೇಡ (ಜೈಮಿಭಾ. ೧–೧೨). **ನಾಕಡಿ : ೨.** ನಾಲ್ಕು ಅಡಿಗಳ ಉದ್ದ : ಹಲಬರ ನುಂಗಿದ ಹಾವಿಂಗೆ ತಲೆ ಬಾಲವಿಲ್ಲ . . . ನಾಕಡಿಯನೈದುವುದು ಲೋಕದ ಕಡೆಯೆನೆ ಕಾಣ್ಬುದು (ಬಸವ. ೮೫೬).

**ನಾಲ್ಕಡಿಯವು**=ನಾಲ್ಕು ಕಾಲುಗಳನ್ನುಳ್ಳುವು ; ನಾಲ್ಕು ಕಾಲಿನ ಪ್ರಾಣಿಗಳು ; ಚತುಷ್ಪಾದಿ : "ನಾಲ್ಕಡಿಯುವೆಲ್ಲಂ ಪಶುಗಳಕ್ಕು" (ಪಂಗಂರಾ. ೫೫–೯). [ನಾಲ್ಕು+ಅಡಿ$_1$]

**ನಾಲ್ಕರೆ** 'ನಾಲ್ಕುವರೆ' ನೋ.

**ನಾಲ್ಕಳವೆ** (ನಾ). ನಾಲ್ಕುಕೊಳಗ ಬತ್ತದ ಬೀಜವರಿ ಭೂಮಿ (?) : ಮಱುಗರೆಯರ್ ಚಿತ್ತಪ್ಪಕೆಱೆಯಂ ಕಟ್ಟಿಸಿ ನಾಲ್ಕಳವೆಯ ಭಾಗಂ ಬಿತ್ತುವಾಟಂ ಕೆಱೆಗೆ ಕುಡುವುದು (ಎಕ. XI, ಹಿರಿಯೂ. ೩೩–೫; ಸು. 890). [ನಾಲ್(<ನಾಲ್ಕು)+ಕಳವೆ$_2$(<ಕಱವೆ)]

**ನಾಲ್ಕಾಣೆ,** ನಾಕಾಣೆ (ನಾ). ನಾಲ್ಕು ಆಣೆ ; ರೂಪಾಯಿಯ ನಾಲ್ಕನೆಯ ಒಂದು ಭಾಗ ; (ಇಂದಿನ) ಇಪ್ಪತ್ತೈದು ಪೈಸೆ : ಸುಳ್ಳು ಹೇಳಿದ್ದಕ್ಕಾಗಿ ನಾಲ್ಕು ನಾಲ್ಕಾಣೆ ಜುಲ್ಮಾನೆ ವಿಧಿಸಿ ನಾಲ್ಕಾಣೆಯನ್ನೂ ಕೋಳಿಗಳನ್ನೂ ವಾದಿಗೆ ಕೊಡಿಸಿ, ಉಳಿವ ನಾಲ್ಕಾಣೆಯನ್ನು ಊರೊಟ್ಟಿನ ಹಣಕ್ಕೆ ಸೇರಿಸಿದರು (ಹುಟ್ಟುಹ. ೧೬೭). **ನಾಕಾಣೆ :** ಅರತಿತಟ್ಟೆಗೆ ನಾಕಾಣೆ ಬಿದ್ದ ಜ್ಞಾಪಕ (ಹುಟ್ಟುಹ. ೭೦). [ನಾಲ್ಕು+ಆಣೆ$_5$]

**ನಾಲ್ಕಾಳು** (ನಾ). **೧.** ನಾಲ್ಕುಜನ. **೨.** ನಾಲ್ಕು ಆಳು ಉದ್ದದ ಅಳತೆ; ನಾಲ್ಕು ಪುರುಷಪ್ರಮಾಣ : ನಾಲ್ಕಾಳುದ್ದಕ್ಕೆ ನೀರುಂಟು (ಲೋಕೋಸ. ೫–೨೬ ಅಡಿಟಿ) ; ಆಳ ನಾಲ್ಕಾಳಾದ ಕಮ್ಮರಿಯೊಳುರುಳಿ ಮೇಣ್ ಬಾಳ್ವುದೇಂ ಕೀಳೊಡೆಯ ಕಾಯ್ದನೆಂದರಿದಂ (ಕಾಲೂರ. ೧೩೮–೨೯೮). [ನಾಲ್ಕು+ಆಳು$_3$(<ಆಳ್$_3$)]

**ನಾಲ್ಕು,** ನಾಕು$_1$, ನಾಲುಕು (ನಾ). ಒಂದು ಸಂಖ್ಯೆ ; ಮೂರು ಮತ್ತು ಐದರ ನಡುವಿನ ಸಂಖ್ಯೆ : ಶ್ರುತದುಷ್ಟಮರ್ಥದುಷ್ಟಂ ಶ್ರುತಿಕಷ್ಟಂ ಕಲ್ಪನೋಕ್ತಿಕಷ್ಟಮುಮೆಂದೀ ಕೃತಕೃತ್ಯಮಲ್ಲ ವಲ್ಲಭ ಮತದಿಂ ನಾಲ್ಕಕ್ಕುಮಿಲ್ಲಿ ಕೃತಿದೋಷಂಗಳ್ (ಕವಿರಾ. ೧–೬೨) ; ನಾಲ್ವರು ನಾಲ್ಕುಂ ಸಮುದ್ರಂಗಳ್ ಮೇರೆದಪ್ಪಿದಂತೆ ವಿರಾಟನೊಳ್ ಕೂಡಿ ಪೋಗಿ ತಾಗಿದಾಗಳ್ (ಪಂಪಭಾ. ೮–೯೦ ವ) ; ಕ್ಷಿತಿಯೊಳ್ ವರ್ತಿಸುಗುಂ ಕ್ರಮಗತಿಯಿಂದಂ ಬ್ರಾಹ್ಮಣಾದಿ ವರ್ಣಂ ನಾಲ್ಕುಂ (ಪಸುತ್ತಕೋ. ೫೭–೩೦) ; ಮಾನಭಂಗವದೊಂದು ಕಾಣದೆ ದೀನನಾಗಿಹುದೆರಡು ನಾಚಿಕೆ ತಾನಱಿಯದದು ಮೂಱು ನಗೆಗೆಡೆಯಾಗಿಹುದು ನಾಲ್ಕು (ಬಸವು. ೪೦–೭೨) ; ನಿಮ್ಮರಿಭಟಗೆ ನಾಲ್ಕಿಲ್ಲ ಕೈ ಕಣ್ಣಿಲ್ಲ ನೊಸಲಿನಲಿ . . . ವೃಥಾ ಭಯವೇಕೆನುತ ಕುರುರಾಯನನುವಾದ (ಕುವ್ಯಾಕ. ೪–೨೬). **ನಾಕು**$_1$ **:** ಶ್ರೀವೀರಕೇಶವದೇವರ ನಿವೇದ್ಯಕ್ಕೆ ಕೊಟ್ಟ ವ್ರಿತ್ತಿ ಎರಡಕ್ಕಂ ಎರೆಯ ಮತ್ತರು ನಾಕು ಕೆಂಗಾಡು ಮತ್ತರು ಅಯಿದು (ಸೌಇಇ. IX–i, ೨೫೪–೬೩ ; 1169) ; ನಾಕು ಷಂಡನ ಕೂಡೆ ಕಾದುವುದೇಕೆ ತಿದ್ದುವೆನೆನುತ ರಥವನು ನಾಕು ಶರದಲಿ ಮುಱಿದು . . . ಐದಿದನು ದ್ರೋಣ (ಕುವ್ಯಾದ್ರೋ. ೨–೪೨) ; ಜೋಕೆ ಮಾಡದೆ ಮೇಲ್ವಾಯಿದು ಕುದುರೆಗಳ ನಾಕು ಕಾಲನು ಪಱಿದಿಡಲು ಆಕಾಶದಿಂದ ಬಿರ್ದಂತು ತುರಗಗಳು ಭೂಕಾಂತೆಯೊಳುರುಳಿದವು (ಅಂಜಚ. ೬–೧೧೮) ; ನಾಕೂ ಮೂಲೀಗೇ ನಾಕೂ ಬೆಳ್ಳಿಯ ಗಂಟೆ . . . ಭೈರುವನ್ನೇರು ಲೋಕಾ ತಲ್ಲಣಿಸೇ ಹರಿದಾವೂ (ಹುಟ್ಟುಹ. ೧೧೦). **ನಾಲುಕು :** ಮೇಲಾದ ನಾಲುಕು ಮತ್ತರು ಕೆಯ್ಗಂ . . . ಧಾರಾಪೂರ್ವ್ವಕಮ್ಮಾಡಿ ಪ್ರತಿಶಾಸನಮಂ ಕೊಟ್ಟರು (ಸೌಇಇ. XI–i, ೫೦–೩೧ ; 1138) ; ವ್ಯಸನಗಳೇೞುಮಂ . . . ಕರಣ ನಾಲುಕುಮಂ ತನು ಮೂಱುಮೆಂಬಿವಂ ನುಸುಳಿಸುತ್ತ ಚಿತ್ತದೊಳ

ಗೀಶನ ನಿರ್ಮಳ ಧರ್ಮಮೂರ್ತಿಯಂ ಪಸರಿಸಿ ಭಿನ್ನವಿಲ್ಲದಿರುತಿರ್ಪ ಮಹಾಮುನಿಮುಖ್ಯನೊಪ್ಪಿದಂ (ಪಲ್ಲಕಾ. ೩-೭೬) ; ಬೆಳಗಿದವು ಬೊಂಬಾಳದೀವಿಗೆ ಬಲದೊಳಾನೆಗೆ ಹತ್ತು ರಥಿಕಾವಳಿಗೆ ನಾಲುಕು ಹಯಕೆರಡು ಕಾಲಾಳಿಗೊಂದೊಂದು (ಕುಮಾರವ್ಯಾಸ. ೧೫-೩೩) ; ಅವನಿಜಾಸುತ ಕೇಳು ಸಂದವು ದಿವಸ ನಾಲುಕು (ತೊರರಾ. ೬-೪-೨೯); ಶಿವನೊಳು ಸೆಣಸುವ ಮೀನಕೇತನಪರಿವಾರದಂತೆ ನೂತನಾಪಯವ ಷದ್ಗುಣರೂಪು ನಾಲುಕು ಜಾತಿಯಂಗನೆಯರೊಪ್ಪಿದರು (ಮೋಹತ. ೧೮-೨೪).

**ನಾಕಿಪ್ಪತ್ತು** = ನಾಲ್ಕರಿಂದ ಗುಣಿಸಲ್ಪಟ್ಟ ಇಪ್ಪತ್ತು; ಎಂಭತ್ತು: ನಾಕಿಪ್ಪತ್ತು ಆಗಿ ಹೋತು ವಯಸ್ಸು (ಮುಣ್ಣುಹ. ೧೧). **ನಾಲ್ಕನೆಯ, ನಾಲ್ಕನೆ, ನಾಲ್ಕನೇ** = ನಾಲ್ಕರ ಸ್ಥಾನವನ್ನು ಪಡೆದಿರುವ,— ಅಂತಸ್ತಿನಲ್ಲಿರುವ; ಚತುರ್ಥ : ಶ್ರುತಕೇವಳಿಗಳ್ ನಾಲ್ಕನೆಯವರ್ ಗೋವರ್ಧನರೆಂಬ ಭಟಾರರುಜ್ಜಯಂತಮಂ ವಂದಿಸಲೆಂದು ವಿಹಾರಿಸುತ್ತಂ ಬರ್ಪೊರಾ ಕೌಂಡಿನೀನಗರಕ್ಕೆ ವಂದು (ವಡ್ಡಾರಾ. ೭೩-೨೬) ; ಶ್ರೀರಾಜ್ಯವಿಜಯಸಮ್ವತ್ಸರ ಸತ್ಯವಾಕ್ಯ ಪೆರ್ಮ್ಮಾನಡಿಗಳಾಳುತ್ತ ನಾಲ್ಕನೆಯ ವರ್ಷದ ಮಾರ್ಗ್ಗಸಿರಮಾಸದ ಪೆಜಿತಲೆದಿವಸವಾಗೆ (ಎಕ. III, ಶ್ರೀರಂಗ. ೧೪೮-೩ ; 904 ?) ; ಕ್ಷೇಮಂಧರನೆಂಬೊಂ ನಾಲ್ಕನೆಯ ಕುಲಧರಂ . . . ಅಷ್ಟಪ್ರಮಾಣ ಸಂವತ್ಸರಾಯುಷ್ಯನುಮಾಗಿ (ಚಾವುಂಪು. ೧೦) ; ಕರುಳ ಮಾಲೆಯ ಯಡದ ಕೈಯಲ್ಲಿ ಹಿಡಿದು ಕಂಠಕೆ ತೊಡಹು ಮಾಡ್ದ ನೃಸಿಂಹ ನಾಲ್ಕನೆ ಅವತರಣ (ಗಗತಾ. ೧೯-೨೮) ; ನಾಲ್ಕನೇ ವೇಗಾ ಛರ್ದಿ ದೇಹದಲ್ಲಿ ನಡುಕ (ವಿಷಚಿ. ೯-೫). **ನಾಲ್ಕಯ್ದು** = ಕೆಲವು; ಹಲವು : ಅರಸಂ . . . ತನ್ನೇಱಿದ ವಾರುವ ದೊಡವರ್ಷ ನಾಲ್ಕಯ್ದು ಕುದುರೆಗಳ್ವೆರಸು . . . ವೈಶಂಪಾಯನನ ಬೀಡಾವುದೆಂದಲ್ಲಿಗಲ್ಲಿಗೆ ಬೆಸಗೊಳ್ವುದುಂ (ಕಾದಂಬ. ೪೩೪). **ನಾಲ್ಕರ ಚಳಿ** = ನಾಲ್ಕು ದಿನಗಳಿಗೊಮ್ಮೆ ತಪ್ಪದೆ ಬರುವ ಚಳಿಜ್ವರ : ದೇಹಾದ್ಯಂತವೂ ಬೆವರಿಟ್ಟು ನಾಲ್ಕರ ಚಳಿ ಬಂದವರ ಹಾಗೆ ಅವನು ಗದಗುಟ್ಟಿ ನಡುಗಲಾರಂಭಿಸಿದ (ಬನಸಿ. ೪೭). **ನಾಲ್ಕಾರು** = ಕೆಲವು ; ಹಲವು : ಉಳ್ಳಿ, ಸೈಂಧವ, ಹಿಪ್ಪಲಿ . . . ಬಿಸಿನೀರಿಂದರೆದು ನಸ್ಯಂಗೆಯ್ಯೆ ನಾಲ್ಕಾರು ಹನಿ ಸೋಕಿದ ಮಾತ್ರದಲ್ಲಿಯೆ ಮೈಮರಹು ಎಚ್ಚರಹುದು (ಸಕವೈ. ೧೮೧). ; ತೀರ್ಥಹಳ್ಳಿಯ ಪರಿಸರದ ನಾಲ್ಕಾರೂರು ಬಾಲ್ಯದೊಳಾಡಿದ ಊರು (ಇಂಚಾಪ. ೯-೩೧) ; ಹೀಗೆಯೇ ನಾಲ್ಕಾರು ವರ್ಷಗಳು ಕಳೆದವು (ಹುಟ್ಟುಹ. ೧೬೨). **ನಾಲ್ಕುಕಾಲ** = ಕೆಲವು ವರ್ಷ ; ಕೆಲವು ಕಾಲ, — ಸಮಯ : ಪ್ರಪಂಚದಲ್ಲಿ ನಾಲ್ಕುಕಾಲ ಬದುಕಿರಬೇಕಾದರೆ ನನಗೆ ತೋರುವುದು ಒಂದೇ ಮಾರ್ಗ (ಪಚಭಾ. ೧೧೨). **ನಾಲ್ಕುಗೆಯ್** = ೧. ನಾಲ್ಕು ಭಾಗವನ್ನಾಗಿ ಮಾಡು : ರಪ್ಪರ ನಾಗಯ್ಯಂ ತನ್ನ ಮಾಡಿಸಿದ ದೇಗುಲಕ್ಕನ್ದು . . . ಆ ಪನ್ನಿರ್ಮ್ಮತ್ತರ್ಕೆಯ್ಗಂ ನಾಲ್ಕುಗೆಯ್ದು[ದೇವ]ಮನ್ಯ[ಗ್ಗಾ]ಗಿ ಬಾಟ್ಟುದು (ಸೌಇಇ. XI-i, ೩೪-೧೩ ; 925). ೨. ನಾಲ್ಕರಷ್ಟು ಮಾಡು : ಒಂದೊಂದು ಮಾನಸ್ತಂಭಕ್ಕೆ ನಾಲ್ಕುಗೆಯ್ದು ಸಮಚತುರಸ್ರಂಗಳಪ್ಪ ಪದಿನಾಱುಬಾವಿಗಳವಱವಱ ಬಾಹ್ಯಕೋಣದ್ವಯಸ್ಥಿತ ಪಾದಪ್ರಕ್ಷಾಳನಾರ್ಥಂ ಕಾಂಚನಕುಂಡದ್ವಯಂಗಳಿಂ ನೆಱೆದು (ಚಾವುಂಪು. ೪೪). **ನಾಲ್ಕುಜನ** = ಹಲವು ಜನ ; ಅನೇಕ ಮಂದಿ ; ಜನತೆ : ಮಾಡುವ ಕೆಲಸ ನಾಲ್ಕುಜನ ಒಪ್ಪುವ ಹಾಗೆ ಇರಬೇಕು (ರೂಢಿ). **ನಾಲ್ಕುಜಾತಿ** = ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣ:(ಕ). **ನಾಲ್ಕು ತೆಱ** = ನಾಲ್ಕುಬಗೆ,— ವಿಧ : ಶಿಕ್ಷಾವ್ರತಮಿದು ನಾಲ್ಕುತೆಱನನೂನಾಗಮದೊಳ್ (ಶಾಂತಿಪು. ೧-೯೦). **ನಾಲ್ಕು ದಿನ** = ನಾಲ್ಕು ದಿವಸ : ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದರೇನು (ಬಸವ. ೧೫೪). **ನಾಲ್ಕು ದಿವಸ** = ಕೆಲವು ದಿನ : ನಾನು ಬಡತನದಿಂದ ಸಂಪತ್ತನ್ನು ಕಂಡೆ. ಅದನ್ನು ನಾಲ್ಕು ದಿವಸ ಅನುಭವಿಸಿದೆ (ನಟಸಾ. ೭೩೨) ; ನಮ್ಮ ಮನೆಯಲ್ಲೂ ನಾಲ್ಕು ದಿವಸ ಇದ್ದು ಹೋಗು (ರೂಢಿ). **ನಾಲ್ಕು ದೆಸೆ** = ನಾಲ್ಕು ದಿಕ್ಕು ; ಎಲ್ಲಾ ಕಡೆ : ವಸುಧೇಶ್ವರನ ವಲ್ಲಭೆ ನಾಲ್ಕು ದೆಸೆಗಳನೀಕ್ಷಿಸುತ . . . ಎನಲು (ಬಸಪು. ೪೩-೧೦) ; ಹೋಗಹೋಗಲು ಮತ್ತೆ ಕುರುಬಲ ಸಾಗರದ ಭಟಲಹರಿ ಲಳಿಯಲಿ ತಾಗಿದರು ತುಡುಕಿದರು ತಡೆದರು ನಾಲ್ಕು ದೆಸೆಗಳಲಿ (ಕುವ್ಯಾಕ. ೧೪-೨೫). **ನಾಲ್ಕು ನಾಲಿಗೆಯಾಗು** = ಹೆಚ್ಚಾಗಿ ಮಾತನಾಡುವ ಅವಕಾಶವುಂಟಾಗು,— ಶಕ್ತಿಬರು : ನಗುವವರಿಗೆ ನಾಲ್ಕುನಾಲಿಗೆಯಾದ ಮೇಲಿನ್ನೇನಿನ್ನೇನು (ಪುರಂದ. ೨-೩೭-೨). **ನಾಲ್ಕುನೀರ್, ನಾಲ್ಕುನೀರು** = (ಮುಟ್ಟಾದ)ನಾಲ್ಕನೆಯ ದಿನ ಶುದ್ಧಿಗಾಗಿ ಎರೆದುಕೊಳ್ಳುವ ನೀರು ; ಶುದ್ಧಿಜಲ : ಬೆಡಗಿನ ತುಂಬುಜವ್ವನೆ ನಾಲ್ಕು ನೀರನು ಮಿಂದಳೊಲವಿಂದ (ಸಾಳ್ವಭಾ. ೩-೩೪); ಪುಷ್ಪವತಿಯಾಗಿ ನಾಲ್ಕುನೀರ ಮಿಂದು ಒಪ್ಪದಿಂದಾಭರಣವಿಟ್ಟು (ಜಿಜ್ಞರಾ. ೫-೨). **ನಾಲ್ಕುನೀಮಿರ್ಾ** = (ಮುಟ್ಟಾದ) ನಾಲ್ಕನೆಯ ದಿನ ಶುದ್ಧಿಗಾಗಿ ಸ್ನಾನಮಾಡು : ಜನಕಸುತೆ ನಾಲ್ಕುನೀಮಿರ್ದು ನಾಡೆ ಬೆಳ್ವಸದನಂ ವಿರಾಜಿಸೆ . . . ಸಜ್ಜವನೆಗೆ ಬಿಜಯಂಗೆಯ್ದಳ್ (ಪಂರಾಮಾ. ೧೫-೬೨) ; **ಚತುರ್ಥದಿವಸಸ್ನಾತಾ** = ನಾಲ್ಕುನೀಮಿರ್ದ ಸ್ತ್ರೀ (ನೀತಿಪಾ. ೨೩-೧೯) ; ಕೆಲವಾನುಂ ದಿವಸಕ್ಕೆ ರುಗ್ಮಿಣಿಮಹಾದೇವಿ ನಾಲ್ಕುನೀಮಿರ್ದು ಮಂಗಳವಸದನಂಗೊಂಡು (ಬಂಹರಿ. ೮-೩ ವ). **ನಾಲ್ಕು ಮಡಿ, ನಾಕು ಮಡಿ** = ನಾಲ್ಕುಪಟ್ಟು; ನಾಲ್ಮಡಿ: ಚಲುವಿಕೆಗೆ ಹಿಮವಂತಸುತೆಗಗ್ಗಳೆ ರಮಾದೇವಿಯ ಮಹಾಮಂಗಳತೆಗಿಮ್ಮಡಿ ನಾಲ್ಕು ಮಡಿ ಸೊಬಗಿಗೆ ಸರಸ್ವತಿಯ (ತೊರರಾ. ೩-೭-೧೮) ; ನಳ ಭೂಪನೀ ನರಲೋಕದೊಳಗುತ್ತಮನಲಾ ತತ್ಪತ್ನಿ ಪಾರ್ವತಿಗೆ ನಾಕು ಮಡಿ ಮಿಗಿಲೆಂಬ ನಾಣ್ಣುಡಿ ಕಾಕು ಬಳಸಿತೆ (ತೊರರಾ. ೩-೨-೧೮). **ನಾಲ್ಕು ಮಾಡು** = ನಾಲ್ಕು ಹೋಳುಗಳನ್ನಾಗಿ ಮಾಡು ; ನಾಲ್ಕು ಭಾಗ ಮಾಡು : ಈ ಕಬ್ಬಿನ ಜಲ್ಲೆಯನ್ನು ನಾಲ್ಕು ಮಾಡಿ ನಾಲ್ಕು ಜನಕ್ಕೂ ಕೊಡು (ರೂಢಿ). **ನಾಲ್ಕು ಮಾತು** = ಕೆಲವು ಮಾತು : ಸಮಾಧಾನಪರವಾದ ನಾಲ್ಕುಮಾತಿನ ವಿನಾ ಬೇರೆ ಏನು ಮಾಡಬಲ್ಲಳು ? (ಗೀಚಂಗ. ೬೫). **ನಾಲ್ಕು ಯೋಗ** = ಆತ್ಮಧ್ಯಾನ, ರೌದ್ರ ಧ್ಯಾನ, ಧರ್ಮಧ್ಯಾನ ಮತ್ತು ಶುಕ್ಲಧ್ಯಾನವೆಂಬ ನಾಲ್ಕು ಧ್ಯಾನಗಳು : ನಾಲ್ಕು ಯೋಗವ ಧರಿಸಿ . . . ಬೋಧಿಪ ನಾಲ್ಕು ಗಣದಾಚಾರ್ಯರಡಿಗಳ ಏಕಚಿತ್ತದಿ ನುತಿಸಿ ವಂದಿಪೆ (ನಾಗಷ. ೧-೨೮). **ನಾಲ್ಕು ವರ್ಣ** = ನಾಲ್ಕುಜಾತಿ: ನಾಲ್ಕು ವರ್ಣಂಗಳೊಳು ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯನೆಂಬೀ ಮೂಱು ವರ್ಣಂ ದ್ವಿಜಾಖ್ಯಮಕ್ಕುಂ (ಮಂಗರಾ. ೭೪-೧). **ನಾಲ್ಕುವೇದ** = ಋಕ್ಕು, ಯಜುಸ್ಸು, ಸಾಮ ಮತ್ತು ಅಥರ್ವಣ ಎಂಬ ನಾಲ್ಕು ವೇದಗಳು; ಚತುರ್ವೇದ : ಶ್ರುತಿಗಳೂ ನಾಲ್ಕುವೇದವೂ ಹುಸಿಯದೆ . . . ಕೂಡಲ ಸಂಗಮನಲ್ಲದಿಲ್ಲೆಂದುದು ವೇದ (ಬಸವ. ೫೩೦); ಮತ್ಸ್ಯಾವತಾರದಿ ನಾಲ್ಕು ವೇದವ ತಂದ್ಯೊ ವೆಂಕಟೇಶ (ಪುರಂದ. ೨-೬೮-೧). **ನಾಲ್ಕು ಸಾಸಿರ, ನಾಕು ಸಾವಿರ** = ಒಂದು ಸಂಖ್ಯೆ ; ನಾಲ್ಕು ಸಾವಿರ : ಪೊಟಿಲೊಳಾದ ಜನದುಲಿಪುಮಂ . . . ರೇವತೀಮಹಾದೇವಿವೆರಸು ನಾಲ್ಕು ಸಾಸಿರ ಮಕುಟಬದ್ಧರಿಂ ಪರಿವೃತನಾಗಿಯೊಡ್ಡೋಲಗಂಗೊಟ್ಟಿರ್ದ ವರುಣಮಹಾರಾಜಂ ಕೇಳ್ದು (ಧರ್ಮಾಮೃ. ೫-೨೦೭) ; ಆಱುಸಾಸಿರ ಕಾಲಾಳು ಗಜಗಳೆಂಟು ವಾರುವ ನಾಲ್ಕು ಸಾಸಿರದ

ಮೇರೆಯ ಬಲವ ಖಾನನಿಗೆ ತೋಱಿಸಿದನು ಕೈರಿತಿಖಾನನೆಂಬವನು (ಕಂಸವಿ. ೧೧-೮೪) ; ನಾಕುಸಾವಿರ ತೇಜಿ . . . ನೂಱಾನೆ ನೂಕಿತು ಕಾಟಣ್ಣನ ಮೇಲೆ (ಕುರಾಸಾಂ. ೧೩-೧೦). **ನಾಲ್ಕೆಂಟು**=ಕೆಲವು; ಹಲವಾರು : ನಾಲ್ಕೆಂಟು ದಿನಮಂ ಮನ್ನಿಸಿ ಗಜಪುರಮಂ ಪೊಕ್ಕು ವಿಳಾಸದಿನಿರ್ದು (ಧರ್ಮಾಮೃ. ೨-೨೦೬) ; ನಾಲ್ಕೆಂಟು ದಿನದೊಳು ಕಂತುಸನ್ನಿಭನ ನಾ ತಹೆನು (ಕಂಸವಿ. ೯-೧೪೫). **ನಾಲ್ಕೆರಡು**=ಕೆಲವು; ಹಲವಾರು : ಬಸವರಾಜಂ . . . ಮಂತ್ರಬ್ಬೆಯ ಪಕ್ಕದೊಳು ಶಿವ ಪ್ರಸಾದಸಂತುಷ್ಟಹೃದಯನಾಗಿ ನಾಲ್ಕೆರಡು ವರುಷಂ ಸುಖದೊಳಿರೆ (ಬಸರ.೨-೧೦); ನೀಂ ನಾಲ್ಕೆರಡು ಪಗಲೊಳಿವ್ಮೊಡೆಯನ ಕೈಯ ನನೆಯ ಕೋಲ ಕಾಲಾಟಮಂ ಕಾಣ್ಬರ್ (ಕಬ್ಬಿಕಾ. ೧೮೮). **ನಾಲ್ಕೊಂದು**=ಐದು : ಆ ಪ್ರಸಿದ್ಧಪ್ರಸಾದವೆಂಬ ಮಹಾವೃಕ್ಷ ತನ್ನ ಚಿಚ್ಛಕ್ತಿಯ ಲೀಲಾವಿನೋದದಿಂದ ಪಂಚಶಕ್ತಿಗಳೆಂಬ ನಾಲ್ಕೊಂದು [ಪಾಠಾಂ. ನಾಲ್ವತೊಂದು] ಹೂವಾಯಿತು (ಘಸಪ. ೫೪-೪೬) ; ನಾಲ್ಕೊಂದು ಕೋಶದಲ್ಲಿ ವಾಸವಾಗಿ ಇದ್ದು . . . ನಾಲ್ಕೊಂದು ಯಜ್ಞವ ತಿಳಿದು ಮಾಡಿ ನಿತ್ಯ ನಾಲ್ಕೊಂದು ಇಂದ್ರಿಯಂಗಳ ಬಂಧನವ ಮಾಡು (ವಿಸಾಸು. ೬-೩). **ನಾಲ್ಕೊಡ್ಡಿ**=ಹದಿನಾರು : ನಾನು ಇಲ್ಲಿ ಕೆಲಸ ಮಾಡುತ್ತಾ ಇರುವುದು ನೀವು ಕೊಡೋ ನಾಲ್ಕೊಡ್ಡಿ ಒಕ್ಕಾಳಿಗೆ ಎಂದು ತಿಳಿದಿರೇನು?( ಬೆಳುಮ.೯೭). **ನಾಲ್ಕೊಪ್ಪತ್ತು**=ಕೆಲವು ಕಾಲ: ಈ ಅಂಜಿಕೆಗೆ ಸ್ವಲ್ಪವೂ ಅಳುಕದ ಒಂದೇ ಒಂದು ಜೀವ ನಾಲ್ಕೊಪ್ಪತ್ತು ಬದುಕಿ ಹೋಯಿತು (ಹೊಸಕ್ಷಿ. ೧೯೭) ; ಇನ್ನೂ ನಾಲ್ಕೊಪ್ಪತ್ತು ಬದುಕಿದ್ರ ನಮಗ ತಿನ್ನಲಿಕ್ಕೆ ಅದೇ ಅನ್ರಿ (ತಿಡುಗು. ೩). **ನಾಲಗ್, ನಾಲುವರು, ನಾಲ್ಬರ್, ನಾಲ್ವರು**=ನಾಲ್ಕುಮಂದಿ,—ಜನ : ಇಂದ ಕಾವನ್ನಾಲ್ವರ್ಮ್ಮಲೆಪರುಂ (ಇಆ. VI, ೧೦೨-೧೪ ; 777 ? ) ; ಪರದರ್ಗ್ಗಾ ಪಾರ್ವರ್ಗ್ಗಾಯ್ತರಸರ್ಗ್ಗಾ ಕುಡಿಯರಪ್ಪ ನಾಲ್ವರ್ಗ್ಗಗಳ್ ಸ್ಥಿರಗೋಪಾಧ್ಯಾಯಕ್ಕ್ಷಾಪರಿಪಾಲ್ಯಕ್ಷೇತ್ರಕ ೧ಗಳ್ ಕ್ರಿಯೆಗಳ್ (ಕವಿರಾ. ೧-೬೫) ; ಆ ಸಭಾಮಂಟಪದ ಧರ್ಮ್ಮರ ೧ ತನ್ನ ನಾಲ್ವರ್ ತಮ್ಮಂದಿರೊಡನೆ ದೇವೇಂದ್ರಲೀಲೆಯಿಂದೋಲಗಂಗೊಟ್ಟಿರೆಯಿರೆ (ಪಂಪಭಾ. ೬-೫ ವ) ; ಆ ಬಲದೇವಾಶ್ವತ್ಥಾಮರುಮಿರ್ದ್ದರವರಿರ್ವ್ವರುಮಲ್ಲದೆ ಕೃಪ ಕೃತವರ್ಮ್ಮರುಮಿರ್ದ್ದರಂತು ನಾಲ್ವರೊಳೊರ್ಬ್ಬಂಗೆ ವೀರಪಟ್ಟಮಂ ಕಟ್ಟಿ (ಗದಾಯು. ೩-೫೯ ವ) ; ಸರಿದರೀ ನಾಲುವರು ರಾಯನ ಮರಳಲೀಯದೆ ಮುತ್ತಿ ಮೂರುತಿ ಹರಿಸಿದನು ನಿಜರಥವನು (ಕುಮ್ಯಾದ್ರೋ. ೨-೭೭) ; ನಾಲುವರು ನಂದನರಿಗವನೀಪಾಲ ತೇಜೋರಾಜಿ ಮಿಗೆ ಸಮ್ಮೇಳವಿಸಿದುದು ಮೊಱೆದುದವರಭ್ಯುದಯ ದಿನದಿನಕೆ (ತೊರರಾ. ೧-೮-೮೨) ; ಎನ್ನೊಲ್ದು ಬೇಱ್ಪುದಂ ನೆಟ್ಟನೀಗುಂ ನಾಲ್ವರೆಣ್ಬರುಂ ನಾಗರೊಳ್ (ಕಾವ್ಯಾವ. ೩೧) ; ಮಿಕ್ಕ ನಾಲ್ವರನ್ನು ಸಾಯ ಬಡಿದನು ಮುಂದೆ ಕೌರವರಾಯನನು ತಾಗಿದನು ಭೀಮನ ದಾಯ ಬಂದುದು ಸಕಲ ಕುರುತಳತಂತ್ರ ತಲ್ಲಣಿಸೆ (ಕುಮ್ಯಾದ್ರೋ. ೨-೮೨); ಚಳಗತಿಯ ವಾಜಿಗಳು ಕೊಂಡೊಯ್ದುಳುಹಿದವು ತಮಸೆಯಲಿ ನಾಲ್ವರು ಕಳಿದರಾ ತೀರದಲಿ ಜಲದಾಹಾರದಲಿ ತಮಿಯ (ತೊರರಾ. ೨-೪-೮) ; ಲಲನೆಯೊಲಿವುದಕಿದೆ ಉಪಾಯವು ಹಲವು ಮಾತೇನೆಂದು ನಾಲ್ವರು ನಳನ ರೂಪನು ತಾಳ್ದರಿತ್ತಲು ಧರಣಿವಲ್ಲಭರು ನಲಿದು ಬರುತಿರೆ (ನಳಚ. ೩-೪೯).

[**ದೇ.॥ ತಮಿ.** ನಾಲ್ಕು, ನಾನ್ಕು, ನಾಲ್, ನಾಲು ; **ಮಲ.** ನಾಙ್ಕು, ನಾಲ್, ನಾಲು, ನಾನ್ ; **ತುಳು.** ನಾಲು ; **ಕೊಡ.** ನಾಲೀ ; **ತೆಲು.** ನಾಲುಗು, ನಾಲ್ಗು, ನಾಲುವು ; **ಗೊಂಡಿ.** ನಾಲುಂಗ್ ; **ಕುಇ.** ನಾಲ್ಗಿ, ನಾಲ್]

**ನಾಲ್ಕುವರೆ,** ನಾಲ್ಕರೆ (ನಾ). ನಾಲ್ಕು ಮತ್ತು ಅರ್ಧ ಸೇರಿ ಆದ ಮೊತ್ತ : ರತ್ನಪ್ರಭೆಯಿಂ ತೊಟ್ಟು ನಾಲ್ಕುವರೆ ನರಕಭೂಮಿವರಂ ಉತ್ಕೃಷ್ಟಮುಷ್ಣಮುಂ (ಅಜಿಪು. ೧೧-೬೭) ; ನಾಲ್ಕುವರೆ ನರಕದೊಳ್ ಬಗೆಯಲ್ಕರಮುದ್ಭೃತತರಂ ಮಹೋಷ್ಣಂ (ಪಾರ್ಶ್ವಪು. ೫-೨೫). **ನಾಲ್ಕರೆ :** ಕರಗುಂಗುಮಾಗಳೆ ವಜ್ರಮುಮಿರದನಿಪುಷ್ಣಮಯಮಾಗಿ ನಾಲ್ಕರೆನೆಲನತ್ತೆರಡರೆಯಗ್ನಿಗಮ್ಯೆಕಿಲ್ದೊರೆಕೊಳ್ಗುಮೆನಿಪ್ಪ ಶೀತಮಯಮಾಗಿರ್ಕುಂ (ಚಂದ್ರಪು. ೧೬-೯). [ನಾಲ್ಕು + ಅರೆ$_3$]

**ನಾಲ್ಕುವೆಟ್ಟು** (ನಾ). ಖಡ್ಗಯುದ್ಧದಲ್ಲಿ ಒಂದು ಪ್ರಕಾರ : ಪೂರ್ವಪ್ರಕಾರದಿಂದ ಮೇಲುಗಡೆಯಲ್ಲಿ ಬಂದಿಗೋಲ್ಗಳ ಘಾತವು ಪುರುಷರಿಂದ ನಾಲ್ಕುಬಾರಿ ಆವದಾನೊಂದು ಮಾಡಲು ತಕ್ಕಂಥಾದು ಅದು ನಾಲ್ಕುವೆಟ್ಟಿನ ಬದಿತಳವೆಂದು ನುಡಿಯಲ್ಪಡುವುದು (ಖಡ್ಗಟೀ. ೫-೪೦). [ ? ]

**ನಾಲ್ಕೂಟ** (ನಾ). (ಪರಸ್ಪರ ಸಂಬಂಧವಿರುವ) ನಾಲ್ಕರ ಗುಂಪು,— ಸಮೂಹ : ಈ ಮುಕ್ಕೂಟನಾಟಕದೊಂದಿಗೇ ಸಂಬಂಧಿಸಿದ . . . ಅಣಕನಾಟಕವೂ (ಸ್ಯಾಟಿರ್ ನಾಟಕ) ಸೇರಿ ನಾಲ್ಕೂಟ ನಾಟಕವೂ ಆಗಿದೆ (ಬದ್ಧಪ್ರ. X, ಪೀಠಿಕೆ).

[ನಾಲ್(<ನಾಲ್ಕು) + ಕೂಟ$_1$]

**ನಾಲ್ಕೌಷಧಿ** (ನಾ). (ರೋಗ ತೀವ್ರವಾಗಿದ್ದಾಗ ನೀಡುವ) ನಾಲ್ಕು ಬಗೆಯ ಔಷಧಿದ್ರವ್ಯ; ॥ ಸಂಧ್ಯಾಕರಣಿ, ಶಲ್ಯಾಕರಣಿ, ಮೃತಸಂಜೀವಿ ಮತ್ತು ಸಂಜೀವಿ : ಗಿರಿಯ ಮೇಲಿರುತಿರ್ಪ ಅತ್ಯಾಶ್ಚರಿಯದೌಷಧಿ ನಾಲ್ಕು ಸಂಧ್ಯಾಕರಣಿ ಶಲ್ಯಾಕರಣಿ ಮೃತಸಂಜೀವಿ ಸಂಜೀವಿ . . . ಅದನಱಿದು ತಹುದೆನೆ ಮರುತಸುತ ನಾಲ್ಕೌಷಧಿಯಲಿನ್ನೇನು ಗುಣವೆಂದ (ತೊರರಾ. ಸರಿ. ೭೧೦-೪).

[ನಾಲ್ಕು + ಔಷಧಿ]

**ನಾಲ್ಗಂಡಗ** 'ನಾಲ್ಗಂಡುಗ' ನೋ.

**ನಾಲ್ಗಂಡುಗ,** ನಾಗಂಡುಗ, ನಾಘಂಡುಗ, ನಾಲ್ಗಂಡಗ (ನಾ). ಒಂದು ಅಳತೆ ; ನಾಲ್ಕು ಕಂಡುಗ : ಸ್ವಸ್ತಿಶ್ರೀದಾಟಿಸಿನ್ದರ್ ಜಯಮೆಪ್ಪ ಸಂವತ್ಸರದ ಉತ್ತರಾಯಣಸಂಕ್ರಾನ್ತಿ ಅನ್ದು ನಾಲ್ಗಣ್ಡುಗದ ಬೆದೆ ಮಣ್ಣನ್ ಕೌಣ್ಡಿನ್ಯಗೋತ್ರದ ದೇವದತ್ತಗ್ಗೆ ಇತ್ತಾರ್ (ಎಕ. XVI, ಪಾವುಗ. ೧೧-೨; 754) ; ನಾಲ್ಗಣ್ಡುಗ ಕೊಡಗಿ ಆಚನ್ದ್ರತಾರಂಬರಂ ಸಲ್ಗುಂ (ಎಕ. III, ನಂಜನ. ೧೯೨-೧೨ ; 968); ಇಪಗೊಣ್ಡನ ಒರೆಯ್ಗೆ ಮೆಚ್ಚಿ ಕಟ್ಟಿದ ಕೊಡಗೆ ಪಳ್ಳ ಗಟ್ಟಿದ್ದ ನಾಲ್ಗಣ್ಡುಗ (ಎಕ.IV, ಹುಣಸೂ. ೧೧-೧೦; 1020 ? ). **ನಾಗಂಡುಗ:** ಚಕ್ಕಗವುಡನ ಕೆಱೆಯ X X X ಗದ್ದೆ ಅದಕ್ಕೆ ಬೆದ್ದಲು ನಾಗಣ್ಡುಗ ಶಿವಾಲ್ಯಕ್ಕೆ ಗದ್ದೆ ಬೆದ್ದಲುಮಂ . . . ಚಾವುಡಗವುಡ ಬಿಟ್ಟ ದಾನ (ಎಕ. XVI, ತಿಪಟೂ. ೧೫೭-೨೬ ; ?) ; ಇಬ್ಬರಿಗೂ ಎರಡು ಖಂಡುಗ ಎಳ್ಳು ನಾಗಂಡುಗ ಜೋಳ ಆಗೇ ಆಯ್ತು (ಹುಟ್ಟಿಹ. ೧೬೮). **ನಾಘಂಡುಗ:** ಬಡಮೂಡಲ ತಾಕಿನಡು ನಾಘಣ್ಡುಗ (ಎಕ. XIV, ಗುಂಡ್ಲುಪೇ. ೧೨೮-೮೨ ; 1510). **ನಾಲ್ಗಂಡಗ :** ಮಹೀದೇವಭಟಾರರ ಗುಡ್ಡಂ ನಿರವದ್ಯಯ್ಯಂ . . . ಉಜ್ಜೆನಿಯೊಳ ನಾಲ್ಗಂಡಗ ಭತ್ತಮನಿತ್ತರ್ (ಎಕ. VI, ಚಿಕ್ಕಮ. ೭೫-೧೦ ; 1060 ? ).

[ನಾಲ್(<ನಾಲ್ಕು) + ಕಂಡುಗ(<ಖಂಡುಗ)]

**ನಾಲ್ಗರ$_1$** (ನಾ). ಪಗಡೆಹಾಸಿನ ಚತುರ್ಬಾಹುಗಳಲ್ಲಿರುವ ಮನೆಗಳ ಸಾಲು: ತತ್ಪುರ ದಿನ ಶಶಿವೀಥಿಗಳುನ್ನತಿಕೆಯೊಳೊಪ್ಪುವಡೆದ ಪಗಡೆಯ ನಾಲ್ಗರದಂತೊಪ್ಪಿದುವು (ಜಯಕಾ. ೧-೫೫).

**[ನಾಲ್(<ನಾಲ್ಕು) + ಗರ$_3$]**

**ನಾಲ್ಗರ$_2$** (ನಾ). ನಾಲ್ಕು ಕೈ : ಪಾಲ್ಗಡಲ ತೆರೆಯ ಬೊಂಬಲ್ಗಳಂ ಜೇಂಗೊಡನ ಸಾಲ್ಗಳಂ ಮಿಱುಗುವಿಂಗೋಲ್ಗಳಗ್ಗಳವಾದ ಮೇಲ್ಗಳಂ ಪರಕಲಿಪ ಕೀಲ್ಗಳಂ ತಿಳಿದವರ ನಾಲ್ಗರದರಸುವೆನಿಸುವ ಓಲ್ಗಾಡಿವೆತ್ತ . . . ನೀವೆಮ್ಮ ಪಾಲ್ಗಳ್ಕೞಿಂ ಬಹುದು ಕಾಲ್ಗಣ್ಣ ಶಾಂತಮಲ್ಲ (ವೀಶೈಪು. ೩-೧-೧). [ನಾಲ್(<ನಾಲ್ಕು)+ಕರ$_3$]

**ನಾಲ್ಗುಳ, ನಾಗುಳ** (ನಾ). = ನಾಲ್ಗೊಳ : ತರುಗುಲ್ಮಾಂಘ್ರಿಪ ವಲ್ಲಿಗಳ್ಗೆ ಜಪೆಯೋರೊಂದೊಬ್ಬಳಂ ನಾಲ್ಗುಳಂ ಕರಿಯೆಳ್ಳಿಬ್ಬಳ ಮೇಷವಾದಮುಲಮೋರೊಂದೊಕ್ಕುೞಂ . . . ಬಿತ್ತರದಿಂದಿಕ್ಕುಗೆ ಸಾರ್ವಕಾಲಫಲಮುಕ್ಕುಂ (ಲೋಕೋಪ. ೬-೬೨). **ನಾಗುಳ :** ಇನಿತಱ ಬೇರಂ ನಾಗುಳಮೆನೆ ನೀರುಮನೆಱೆದುಕೊಂಡು ಮತ್ತೊತ್ತಕ್ಕುಳ ಮಪ್ಪನಿತಾಗೆ ತೆಗಪಿ (ಅಶ್ವಶಾ. ೧೧-೬೧) ; ದೇವರಿಂದ ನಾಗುಳ ಬ್ರಾಹ್ಮರಿಂದ ನಾಗುಳ ಉಭಯಂ ಯೆಂಟುಕೊಳಗ ಗದ್ದೆಯನೂ . . . ಬಾಯಣಾಚಾರ್ಯ್ಯರಿಗೆ ಧಾರಾಪೂರ್ವ್ವಕವಾಗಿ ಕೊಟ್ಟ ಮಣುವಿನ ಎಣ್ಬುಕೊಳಗದ ಗದ್ದೆ (ಎಕ. XI, ದಾವಣ. ೨೩-೭೯ ; 1410) ; ಕೊಡಸಿಗನ ತೊಕ್ಕು ನೂಱು ಹಲವ ನಾಗುಳ ನೀರಲ್ಲಿ ಕಷಾಯವೆತ್ತಿ (ವೈದ್ಯಸಾ. I, ೨೧೫). [ನಾಲ್(<ನಾಲ್ಕು)+ಕುಳ$_3$]

**ನಾಲ್ಗೆಲ** (ನಾ). ನಾಲ್ಕು ಕಡೆ,— ಪಕ್ಕ ; ಸುತ್ತುಮುತ್ತು : ಸುಂಡಿಲಿನೆತ್ತಿ ಸುತ್ತ ನಾಲ್ಗೆಲದೊಳಡರ್ತು ಪಾಯ್ವು . . . ಆದೊಂದು ಪಲ್ಲಮುೞು ಲಲ್ಲೆಯ ಚಲ್ಲಮನೇನೊಡರ್ಚಿತೋ (ಧರ್ಮನಾ. ೩-೧೧೪). [ನಾಲ್(<ನಾಲ್ಕು)+ಕೆಲ$_1$]

**ನಾಲ್ಗೊಂಟು** (ನಾ). ನಾಲ್ಕು ದಿಕ್ಕು : ನಾಲ್ಗೊಂಟುಗಳ ಪೆಣ್ಗಳಾಣ್ಗಳಿಂ ಪೂಸೋಟಮಿನ್ನುಲಿಯ ತುಂಬಿಯಿರೆ ಚಪ್ಪರವೆ ತೋಟಂ (ಕಾಲೂರ. ೩೮-೪೪). [ನಾಲ್(<ನಾಲ್ಕು)+ಗೊಂಟು]

**ನಾಲ್ಗೊಳ, ನಾಗಳ, ನಾಗೊಳ** (ನಾ). ಒಂದು ಅಳತೆ ; ನಾಲ್ಕು ಕೊಳಗ : ಎಳನೊಮ್ಮದಿಮ್ಮಯ ಮಗನಯ್ಯಪಣಮ್ಮಯನ ಕೊಟ್ಟ ಮಣ್ಣು ಬಸದಿಗೆ ಪಡುವಣ ತೆಙ್ಗತೋಣ್ಟಮುಂ ತೆಮ್ಬೊಲದೊಳ್ನಾಲ್ಗೊಳವೆಡೆ ಪಳ್ಳ ಕೞನಿ (ಎಕ. X, ಕೋಲಾರ. ೯೦-೯೩ ; 903). **ನಾಗಳ :** ಬೆಣಗೆರಿಯಸ್ತವರದ ಸೋವುಣೊಡೆಯರಿಗೆ ನಾಗಳದ ಗದ್ದೆ ಬದುಹತಿಯ ಹಕಲು (ಎಕ. VIII, ಸೊರಬ. ೩೪೯-೭ ; ?) ; ಹಿರಿಮದ್ದು, ಕಳ್ಳಂಗಡಲೇಬೇರು, ಅರಗು ಇವು ಪ್ರತ್ಯೇಕ ೧೬ ಹಲವನ್ನು ನಾಗಳ ನೀರಿನಲ್ಲಿ ಕಷಾಯವ ಕಾಯಿಸಿ . . . ಪಾಕವ ಮಾಡುವಾಗ ಹಾಕುವ ಕಲ್ಕದ್ರವ್ಯ (ಸಕವೈ. ೧೨೭) ; ಗಂಡಿನವರೇ ಹೆಣ್ಣಿನವರಿಗೆ ಅವರು ಬಡವರಾಗಿದ್ದಲ್ಲಿ ಐಗಳ ಭತ್ತ, ನಾಗಳ ರಾಗಿ, ಒಕ್ಕಳ ಕಾಳು ಕೊಡುತ್ತಿದ್ದುದುಂಟು (ಸನ್ನಾರು. ೭೨) ; ಉಪ್ಪಿಲ್ಲದೆ ಮೂಗಳ ಗಂಜಿ ಕುಡಿಯುವವನಿಗೆ, ಉಪ್ಪಿದ್ದರೆ ನಾಗಳವೂ ಸಾಲದು (ಗಾದೆ). **ನಾಗೊಳ :** ನಾಲು ಪ್ರಿಯವಾಗಿ ನಮ್ಮ ಕೊಡಿಗೆ ಹೊಲದಲು ವೊಳಗೆ ನಾಗೊಳ ಕೊಟ್ಟೆಉ (ಎಕ. X, ಕೋಲಾರ. ೧೫೦-೧೬ ; 1393). [ನಾಲ್(<ನಾಲ್ಕು)+ಕೊಳ$_1$]

**ನಾಲ್ಸಾಸಿರ, ನಾಲುಸಾಸಿರ, ನಾಲ್ಸಾವಿರ, ನಾಲ್ಸಾಸಿರ, ನಾಸಾವಿರ** (ನಾ). ಒಂದು ಸಂಖ್ಯೆ ; ನಾಲ್ಕುಸಾವಿರ : ಸುಶರ್ಮನುಮಂ ನಾಲ್ಸಾಸಿರ ರಥಂಬೆರಸು ದಕ್ಷಿಣದಿಶಾಭಾಗಕ್ಕೆ ವೇೞ್ದು ತುಱುವಂ ಕೊಳಿಸಿದಾಗಳ್ (ಪಂಪಭಾ. ೮-೪೯ ವ) ; ಪರಮಪ್ರಮಾಣಮುಱುಸಾಸಿರಂಬರಂ ಮತ್ತೆ ಮಧ್ಯಮಸ್ಥಿತಿ ನಾಲ್ಸಾಸಿರಮುಧಮಮಾತ್ರಮಿರ್ಛಾಸಿರಂ ಶರಾಸನಮದು ಕ್ರಮಕ್ರಮದಿಂದಂ (ಶಾಂತಿಪು. ೬-೧೦೩) ; ಪಾರ್ಶ್ವದೇವರ ಬಸದಿಗೆ ಕರಹಡ ನಾಲ್ಸಾಸಿರದೊಳಗಣ ಕೞಂಬಡಿ ೩೦೦ ರ ಬೞಿಯ ಕನ್ನಡಿಗೆಯ ಸಂಖರಸನ ಮಗಂ (ಇಆ. XIX, ೨೬೩-೪೪ ; 1054). **ನಾಲುಸಾಸಿರ:** ಕೌಂಗಿನ ಮರಂ ನಾಲುಸಾಸಿರಂ (ಎಕ. VI, ಕಡೂರು. ೫೧-೫೯ ; 1169). **ನಾಲ್ಸಾವಿರ :** ಆಳ ಕೊಂದನು ಕಲ್ಪವನು ತುರಗಾಳಿಯನು ನಾಲ್ಸಾವಿರವ ಪುಂಡಾಲಘಟಿಗಳ ತುಂಡಿಸಿದ ನೊಂದೆರಡುಸಾವಿರವ (ಕುಮ್ಯಾಕ.೧೧-೧೬). **ನಾಲ್ಸಾಸಿರ:** ನಾಲ್ಸಾಸಿರದ ಮೂನೂಱಱುವತ್ತು ಮಹಾಧ್ವಜಂಗಳಿಂದಂ . . . ಎಸೆವ ಪತಾಕಾವನಿತಳಮೊಂದುಯೋಜನಮಗಲಂ (ಆದಿಪು. ೧೦-೩೩ ವ) ; ನಾಲ್ಸಾಸಿರದ ಮೂನೂಱಱುವತ್ತು ಮಹಾಧ್ವಜಂಗಳಿಂ (ಅಜಿಪು. ೭-೨೦ ವ) ; ಸುಮಿತ್ರನಂತೆಗೆಯ್ವೆನೆಂದು ನಾಲ್ವರ್ ಸಾಹಸಭಟರಪ್ಪ ಸುಭಟರ್ಗೆ ನಾಲ್ಸಾಸಿರ ಪೊನ್ನಂ ನುಡಿದು . . . ಮನೆಗೆ ಪೋಪುದುಂ (ಸುಕುಮಾ. ೭-೮ ವ) ; ತನು ನಾಲ್ಸಾಸಿರವಿಲ್ಲಿಡಿದೆನಿಕ್ಕುಂ (ಪಂರಾಪೂ. ೧-೬೭). **ನಾಸಾವಿರ :** ಗುರುಗಳಿದಿರಲಿ ವೀರವೇ ಸಾಕಿರಲಿ ಮೂದಲೆಯೆನುತಲಾ ಬಿಲುದಿರುವ ಮಿಡಿದೈದಿದರು ನಾಸಾವಿರ ಮಹಾರಥರು (ಕುಮ್ಯಾದ್ರೋ. ೧-೬೬).

**ನಾಲ್ಸಾಸಿರ್ವರ್, ನಾಲ್ಸಾಸಿರ್ವರ್** = ನಾಲ್ಕು ಸಾವಿರ ಜನ : ನಾಲ್ಸಾಸಿರ್ವರ್ ಮನೋನಯನವಲ್ಲಭೆಯರೊಳಂ . . . ಭೋಗಿಸಿದಂ ಲಲಿತಾಂಗವಲ್ಲಭಂ (ಆದಿಪು. ೨-೭೯ ವ) ; ಆ ಸಾಹಸಭೂಷಣೆ ನಾಲ್ಸಾಸಿರ್ವರ್ ಕುಡದ ಕೂಸುಗಳ್ವೆರಸು . . . ಅಮಳದೀಕ್ಷೆಯಂ ಕೆಯ್ಕೊಂಡಳ್ (ಶಾಂತಿಪು. ೪-೮೪).

[ನಾಲ್(<ನಾಲ್ಕು)+ಸಾಸಿರ]

**ನಾಲ್ದಿಂಗಳ್** (ನಾ). ನಾಲ್ಕು ತಿಂಗಳು : ನಾಲ್ದಿಂಗಳೊಳ್ ಜೀರ್ಣಪರ್ಣದ ಸಂಸೇವನೆ ಮಾಸಪಂಚಕದೊಳಾಯ್ತಾತಂಗೆ ವಾತಾಶನಂ (ತಬಶಂ. ೨-೯೯). [ನಾಲ್(<ನಾಲ್ಕು)+ತಿಂಗಳ್]

**ನಾಲ್ದಿನ** (ನಾ). ನಾಲ್ಕುದಿವಸ : ಮಾವಂ . . . ನಾಲ್ದಿನದ ಕೆಲಸಮೊಂದೇ ದಿನದೊಳಾಗುವಂತೆಸಗುತಿರ್ದಂ (ಪುಲ್ಲಚ. ೧೭-೧೮). 'ನಾಲ್ದಿನಗಾಣ್' ಪರಾ. [ನಾಲ್(<ನಾಲ್ಕು)+ದಿನ]

**ನಾಲ್ದಿನಗಾಣ್** (ಕ್ರಿ). ೧. ನಾಲ್ಕು ದಿನಗಳನ್ನು ನೋಡು. ೨. (ಮುಟ್ಟಾದ ಹೆಂಗಸು) ಮೈಲಿಗೆಯ ಮೂರು ರಾತ್ರಿಗಳನ್ನು ಕಳೆದು ನಾಲ್ಕನೆಯ ದಿನವನ್ನು ನೋಡು,—ಮುಟ್ಟು : ಅತ್ತ ಭೀಷ್ಮಕರಾಯನಾತ್ಮಸಂಜಾತೆ ನಖಬಣ್ಣವ ಕಂಡು ನಾಲ್ದಿನಗಂಡು ವೈದಿಕದಲ್ಲಿ ಮಿಂದಳುತ್ಸವದಿ (ಮೋಹತ. ೪-೨೭).

[ನಾಲ್ದಿನ+ಕಾಣ್]

**ನಾಲ್ದೆಸೆ** (ನಾ). ನಾಲ್ಕು ದಿಕ್ಕು ; ಸುತ್ತಮುತ್ತ ; ಎಲ್ಲ ಕಡೆ : ನೀರ್ದಾಣಮುಂ ನೋಡಿ ಮೆಲ್ಲನೆ ಸಾರ್ದಲ್ಲಿ ಬೞಲ್ಕೆಯುಂ ಕಳೆದು ಪೋಪಂ ಬೞಿಕ್ಕೆಂದು ವಾರಿನಿವಾಸಂಗಳನಲ್ಲಿ ನಾಲ್ದೆಸೆಗಳೊಳ್ ನೋೞ್ಪುಂ ಮಹೀವಲ್ಲಭಂ (ಕಾದಂಪೂ. ೬೨೯) ; ಕರ್ಕಟಕನುಪಾಯನಿಪುಣಂ ನಾಲ್ದೆಸೆಯುಮುಂ ನೋಡಿ ನದನದೀತಟಾಕಸರೋವರಂಗಳನೊಂದುಮಂ ಕಾಣದೆ (ಪಂಚತಂ. ೮೫-೪) ; ಮಾರ್ಬಲಂ . . . ತವತವಗೆ ನಾಲ್ದೆಸೆಯೊಳಾರ್ದು ಮಸಗುತ್ತಿರಲು (ಇಹರ. ದೇ. ೪೧-೧೦) ; ತೆರಳಿದುದು ಕಪಿಸೇನೆ ಸಾಗರ ಹೊರಳಿದೆಗೆವಂದದಲಿ ನಾಲ್ದೆಸೆಗೆ (ತೊರರಾ. ೪-೮-೨೦) ; ನಾಲ್ದೆಸೆಯಲಿ ಬಲುಪೌಜ ದಾಯ ವಱುತು ಮಾಡಿದರು (ಕಂನವಿ. ೧೩-೨೦) ; ಬಳಸಿ ನಾಲ್ದೆಸೆಯಲ್ಲು ಜಲರಾಶಿ ಹಬ್ಬಿಹುದು (ವಿಸೀಗೀ. ೧೯-೭).

[ನಾಲ್(<ನಾಲ್ಕು)+ದೆಸೆ$_2$]

**ನಾಲ್ದೆಱ, ನಾಲುತೆಱ** (ನಾ). ೧. ನಾಲ್ಕು ರೀತಿ,— ಬಗೆ : ಅಂಗಜನಿಲಯವಿದಂಗನೆ ನಾಲ್ದೆಱನು (ಜನಪ. ೮-೨೫). **ನಾಲುತೆಱ :** ೨. ನಾಲ್ಕು ದಿಕ್ಕು : ಕಾಯ್ವುರಿಯೊಳು ಕರ್ಬುನದ ಮೇಲ್ಗಂಬದಿ

ಸಾಧನೆಗೆಯ್ದು ಪುಲ್ಸರಡು ಐದಿದ ದಾರಿ ತಾ ನಾಲುತೆಱದೆ ತಾನಾದುದು ಬಂದ ದೈತ್ಯರಿಗೆ (ಮೋಹತ. ೧೨-೩೯).

[ನಾಲ್(<ನಾಲ್ಕು)+ತೆಱ$_1$]

**ನಾಲ್ದೋಳ್** (ನಾ). ನಾಲ್ಕು ತೋಳು : ನಾಲ್ದೋಳ್ಗಳಿನಾಱು ಕೋಟಿ ಭಟರಿಂದೊಪ್ಪಿರ್ದು . . . . ಕಣ್ಣಿಂಬಾದನುನ್ಮತ್ತಭೈರವ ನುದ್ಯದ್ವರುಣಾಶೆಯೊಳ್ ಪುರದ ಬಾಗಿಲ್ವಾಡದೊಳ್ ಶೂಲಿಯಾ (ಶಬಶಂ. ೧-೬೧) ; ನಾರಾಯಣನ ನಾಲ್ಕುಂ ತೋಳ್ಗೆ ಪಡಿವರ್ಪ ನಾಲ್ದೋಳಿಂ (ರಾಮಾಶ್ವ. ೭೫-೨೪).

[ನಾಲ್(<ನಾಲ್ಕು)+ತೋಳ್]

**ನಾಲ್ದೋಳ** (ನಾ). ನಾಲ್ಕು ತೋಳುಗಳನ್ನುಳ್ಳವನು ; ವಿಷ್ಣು ; ನಾರಾಯಣ : "ರಕ್ಕಸವಗೆಯನೆಯ್ದಿ ನಾಲ್ದೋಳನನೆಯಲ ರ್ವೊಕ್ಕುಬಂ ನಾಡೆ ತಾವರೆಗಣ್ಣನೆಲರುಣಿಯಪಕ್ಕೆಗನೆನಲ್ಕುಪೇಂದ್ರಾಖ್ಯ" (ಶಬ್ದಮಂ. ೭) ; "ನಾಲ್ದೋಳನೆನೆ ಹರಿಯಕ್ಕು" (ಕಶರ. ೫೪) ; ನಿನ್ನ ಪದಕೆಳಸಿ ಕಣ್ಣಿಟ್ಟ ಗಡ ನಾಲ್ದೋಳಂ (ಉದ್ಭದೇ. ೨-೨) ; ನಾಲ್ಕು ತೋಳ್ಗಳ್ ಅವಂಗೆ ಅತಂ, ನಾಲ್ದೋಳಂ (ಶಬ್ದಾನು. ೩೧೦ ಪ್ರಯೋ).

[ನಾಲ್ದೋಳ್+-ಅ$_7$]

**ನಾಲ್ನೀರ್** (ನಾ). (ಮುಟ್ಟಾದ) ನಾಲ್ಕನೆಯ ದಿನ ಶುದ್ಧಿಗಾಗಿ ಹಾಕಿಕೊಳ್ಳುವ ನೀರು: ಮರುದೇವಿವುಹಾದೇವಿ ಋತುಮತಿಯಾಗಿ ನಾಲ್ನೀರಂ ಮಿಂದು ಪತಿಯ ಸೂಳ್ಗೆಯ್ದು ಸುಖನಿದ್ರಾಮುದ್ರಿತಾಂಕಿತ ದೊಳ್ ಬೆಳಗಪ್ಪ ಜಾವದೊಳ್ . . . ಶುಭಸ್ವಪ್ನಂಗಳಂ ಕಂಡೆಚ್ಚತ್ತು (ಪೂರ್ವಪು. ೪೧-೧೫). [ನಾಲ್(<ನಾಲ್ಕು)+ನೀರ್]

**ನಾಲ್ನೀರ್ತಳೆ** (ಕ್ರಿ). (ಮುಟ್ಟಾದ) ನಾಲ್ಕನೆಯ ದಿನ ಶುದ್ಧಿಗಾಗಿ ಎರೆದುಕೊಳ್ಳು : ಅಲ್ಲಿ ರೇಣುಕೆ . . . ಪುಷ್ಪಿಣಿಯಾಗಲ್ಲಿ ನಾಲ್ನೀರ್ತಳೆದ ದಿನದಿರುಳಲ್ಲಿ ರವಿಶಶಿಗಂಡ ಸ್ವಪ್ನವ ನಲ್ಲಗುಲಿದಳು (ಪರಶು. ೪-೪೮). [ನಾಲ್ನೀರ್+ತಳೆ$_1$]

**ನಾಲ್ನೀವಿರ್ಆ** (ಕ್ರಿ). =ನಾಲ್ನೀರ್ತಳೆ : ಬಳಿಕ ನಾಲ್ನೀರ್ವಿಂದಾ ಸಮಯದೊಳಾ ಲಲಿತಾಂಗಿಯೊಪ್ಪಿದಳು (ಚಂಪ್ರಸಾಂ. ೪-೩೦).

[ನಾಲ್ನೀರ್+ವಿಆ$_1$]

**ನಾಲ್ನೂಱು, ನನೂರು, ನನ್ನೂಱು, ನಾನೂರು, ನಾನೂಱು** (ನಾ). ನೂರರ ನಾಲ್ಕರಷ್ಟು ; ನಾಲ್ಕುನೂರು : ಕರ್ಬೊನ್ನ ರಥಮುಮವಾ ರಥದೊಳೊಡಂಬಡೆ ಪೂಡಿದ ನಾಲ್ನೂಱು ಗೊಂಕಱು ಗಟ್ಟಿಯುಂ (ಪಂಪಭಾ. ೧೨-೬ ಪ). **ನನೂರು :** ಇಡೆಯ ಗಟದೊಳಗೆ ಜಡಿಬಾಚಯ ಪಡುವಲು ನನೂರು ಕಂಬ ತೋಟ (ಸೌಇಇ. IX-i, ೨೯೧-೩೧ ; 11ನೆಯ ಶತ ?). **ನನ್ನೂಱು :** ಈ ಭೂಮಿ ಪದಿನಱು ಗೇಣ್ಕೋಲೊಳ್ಸಾಯಿರದ ನನ್ನೂಱು ನಾಲ್ವತ್ತು ಕಮ್ಮಂ (ಎಕ. IX, ನೆಲಮಂ. ೧-೧೪ ; 1029). **ನಾನೂರು :** ಈಗಿನ ಕಾಲದಲ್ಲಿ ನಾನೂರು ರೂಪಾಯಿ ಸಂಬಳ ಬಂದರೂ ಸಂಸಾರಕ್ಕೆ ಎಲ್ಲಿ ಸಾಕಾಗುತ್ತದೆ ? (ರೂಢಿ). **ನಾನೂಱು :** ಧಾರುಣೀಶರು ಮಡಿದರೊಂದೇ ಸಾರಿಗೆಯುಲ್ಲೆನೂಱು ಮತ್ತೆ ಮಹಾರಥರು ಮೂನೂಱು ಪುನರಪಿ ನೂಱು ನಾನೂಱು (ಕುವ್ಯಾದ್ರೋ. ೧೮-೫೧) ; ಮಹೌಮಣಿಯಲಿ ಹೊಳೆಹೊಳೆವ ನರಪಾಲರನು ನಾನೂಱರೋಲೆಯ ಸೀಳಿದನಲ್ಲೈ ಚೈದ್ಯ ಪಾಂಚಾಲರಲಿ ಕಲಿಕರ್ಣ (ಕುವ್ಯಾಕ. ೧೧-೧೬).

**ನಾಲ್ನೂರ್ವರ್, ನಾನೂರ್ವರ್**=ನಾಲ್ಕು ನೂರು ಮಂದಿ : ಪನ್ನಿಚ್ಛಾಸಿರದ ನಾಲ್ನೂರ್ವರ್ ವಾದಿಗಳುಂ ಪ್ರಾಕ್ಕುಬ್ಜಾರ್ಯಿಕೆಯರ್ . . . ಮೂಱುಲಕ್ಕೆಯುಮಿರ್ಪತ್ತುಸಾಸಿರ್ವರಜ್ಜಿಕೆಯರುಂ (ಅಜಿಪು. ೮-೨೫ ಪ) ; ಪೇರೂರ ಮಹಾಜನಂ ಒಱಲ್ದು ನಾಲ್ನೂರ್ವರು ಮುವ್ವಿರ್ಛರಮುಣರಖಿಳಗುಣಗಣಸಾರಪ್ಪಾಲಿಸುಗೆ (ಇಇ. XVIII, ೨೭೪-೩೪; ಸು.1022); ಇರ್ಪತ್ತುಸಾಸಿರದ ನಾನೂರ್ವರ್ ವಿಕ್ರಿಯರ್ಧಿ ಸಂಪನ್ನರುಂ (ಅಜಿಪು. ೮-೨೫ ಪ).

[ನಾಲ್(<ನಾಲ್ಕು)+ನೂಱು$_2$]

**ನಾಲ್ಪಗಲು** 'ನಾಲ್ವಗಲ್' ನೋ.

**ನಾಲ್ಪಗೆ** 'ನಾಲ್ವಗೆ' ನೋ.

**ನಾಲ್ಪಟ್ಟೆ** 'ನಾಲ್ವಟ್ಟೆ' ನೋ.

**ನಾಲ್ಭುಜ** (ನಾ). ೧. ನಾಲ್ಕು ಭುಜ,—ತೋಳು. ೨. ನಾಲ್ಕು ಭುಜಗಳನ್ನುಳ್ಳವನು ; ವಿಷ್ಣು : ನಾಲ್ಭುಜನೀತಂ (ಶಬ್ದಾನು. ೨೯೪ ಪ್ರಯೋ). [ನಾಲ್(<ನಾಲ್ಕು)+ಭುಜ]

**ನಾಲ್ಮಡಿ** 'ನಾಲ್ವಡಿ' ನೋ.

**ನಾಲ್ಮಡಿಸು** 'ನಾಲ್ವಡಿಸು' ನೋ.

**ನಾಲ್ಮೆ** (ನಾ). ನಾಲ್ಕುಸಲ ; ನಾಲ್ಕುಬಾರಿ ; ನಾಲ್ಕಾವರ್ತಿ : ಒರ್ಮೆ, ಇರ್ಮೆ, ಮೂಮೆ, ನಾಲ್ಮೆ, ನೂರ್ಮೆ, ಸಾಸಿರ್ಮೆ (ಭಾಷಾಭೂ. ೧೭೭ ಉದಾ) ; ನಾಲ್ಮೆ, ನಾಲ್ವರ್, ಅಯ್ಮೆ, ಅಯ್ವರ್ (ಶಬ್ದಾನು. ೩೫೧ ಪ್ರಯೋ) ; ದಶರಥಂ ತಾನೆಯ್ದಿದನು ಮಿಥಿಲೆಯಂ ನಾಲ್ಮೆ ದಿನಮಣಿ ಮುಳುಗುವನಿತರಲಿ (ಶ್ರೀರಾಮಾ. ೫೦-೬೨೧).

[ನಾಲ್(<ನಾಲ್ಕು)+-ಮೆ$_2$]

**ನಾಲ್ಮೊಗ** (ನಾ). ೧. ನಾಲ್ಕು ಮುಖ : ನಾಲ್ಮೊಗವಿಂದದಚ್ಚ ದಾವರೆಯ ಚೆಂದಮನಂದೊಳಕೆಯ್ಕೆ . . . ಕಣ್ಗೆಸೆದಂ ಬಿದಿ ನಿಂದು ನೋಟ್ಟರಾ (ಕಬ್ಬಿಕಾ. ೧೬೪) ; ತಳೆವುದೆಂಟಾನನದ ರುದ್ರಾಕ್ಷೆಯಂ ಕಂಠದೊಳಗೆ ಮೂವತ್ತೆರಡ ನಾಲ್ಮೊಗದವೈವತ್ತ ತಳೆವುದು (ಸೌಂದಪು. ೬-೩೩). ೨. ನಾಲ್ಕುಕಡೆ,—ದಿಕ್ಕು : ಉರವಣಿಸಿತು ದಳಪತಿಯ ನೇದುದೆ ಬಲ ಪುರದ ನಾಲ್ಮೊಗದೊಳುಬ್ಬಿಱದು (ಕಂಸವಿ. ೧೮-೧೫೨). ೩. ನಾಲ್ಕು ಕಡೆಯ ಲಕ್ಷ್ಯ : ಪರಸತಿಯರ ಕೂಡೆ ನುಡಿದಾಡ ಬೇಕೊಮ್ಮೆ ಸರಸತಿಯೊಳು ನುಡಿಬೇಕು ಪರಸತಿಯೊಳು ಮೌನ ಮುಕ್ತಿಸತಿಧ್ಯಾನವಿರಬೇಕು ನಾಲ್ಮೊಗ [ಪಾಠಾಂ. ಮೌನವು] ಬೇಕು (ಭರಚ. ೫-೭೯). ೪. ನಾಲ್ಕು ಮುಖಗಳನ್ನುಳ್ಳವನು ; ಬ್ರಹ್ಮ : "ಅಂಚೆದೇರಂ, ನುಡಿವೆಣ್ಣಿನಿಯಂ . . . ನಾಲ್ಮೊಗಂ, ತಾವರೆ ವಸೆಯಂ—ಈ ೮ ಬ್ರಹ್ಮಂಗೆ ಪೆಸರ್" (ಕಶಸಾ. ೨-೧೫) ; "ಅರಲಿಱ ನಾಲ್ಮೊಗ ನುಡಿವೆಣ್ಣಿಱಿಯಂ . . . ಬೇದಬಿಜ್ಜೆಗನುಮೆನೆ ಧಾತ್ರಂ" (ಕವಿಕಂ. ೨೯) ; ಜನ್ನಕ್ಕೆ ಕರ್ತನವುರೇಂದ್ರ ವೇದಕ್ಕೆ ಕರ್ತಂ ನಾಲ್ಮೊಗಂ (ಸೌಂದಪು. ೬-೫) ; ಈಗಳೇತಕೆ ತಪವೆಂದು ನಾಲ್ಮೊಗ ಮನೋರಾಗದೆ ಪೇಳ್ದನಚ್ಯುತಗೆ (ಮೋಹತ. ೫-೧೭) ; ಸಲೆ ನಾಲ್ಮೊಗನಾಗಳ್ ಮತ್ತಮಿಂತು ನುತಿಸಿದನೊಲ್ಪಿಂ (ವಿಷ್ಣುಪು. ೨-೧೪೪) ; ನಾಲ್ಮೊಗ ನಗ್ಗಿಟ್ಟಕೆಯೊಳೊಗೆದ ಒಳ್ನೆಗೆಯ ಮುದ್ದುಗುವರಿ ! ಸುವ್ವಿ ! ಸುವ್ವಿ ! (ರಾಮಾಶ್ವ. ೮೮-೫).

**ನಾಲ್ಮೊಗದ** = ನಾಲ್ಕುಮುಖಗಳನ್ನುಳ್ಳವನು : ನಾಲ್ಕು ಮುಖದ ವ್ಯಕ್ತಿ : ಕೊಲಗತ್ತ ಸಾರ್ಪಿನ್ನತೆಱದ ನಾಲ್ಮೊಗದರಂ ಪಲ ಬರಂ ಕಂಡಱವೆಂ (ಜೈಮಿಭಾ. ೩೨-೩೪). **ನಾಲ್ಮೊಗದವ**=ನಾಲ್ಕು ಮುಖಗಳನ್ನುಳ್ಳವನು ; ಬ್ರಹ್ಮ : ನೀ ನಾಲ್ಮೊಗದವನ ನೇವುದಲಿ ಪಾಲಿಸುದಾ ಮಹಾಪುರವಾ (ಅನಂರಾ. ೧-೬-೫೦). **ನಾಲ್ಮೊಗನಣುಗ**= ಬ್ರಹ್ಮನ ಮಗ ; ನಾರದ : ನಾಲ್ಮೊಗನಣುಗಂ ಮುಂತೆ ನುಗ್ಗಿದಂ (ಅದ್ಭುತ. ೧೯-೨೦). **ನಾಲ್ಮೊಗನಯ್ಯ**=ಬ್ರಹ್ಮನ ತಂದೆ ; ವಿಷ್ಣು : ನಾಲ್ಮೊಗನಯ್ಯನ ಗುಣ ಪೊಗಳೆ ಹಿಗ್ಗುವುದೇ (ಜಗದಾ. ೩೬೩).

[ನಾಲ್ (<ನಾಲ್ಕು)+ಮೊಗ]

ನಾಲ್ಲಾವು 'ನಲ್ಲಾವು' ನೋ.

**ನಾಲ್ವಂಡೆ** (ನಾ). ( ? ) : ನಖರೇಶ್ವರದ ಶ್ರೀಮಹಾದೇವರ ಶಾಂತಿ ದೇವ ಪೂಜೆಯ ಮಾಡು[ವ] ಅಡಿಗಳಿಗೆ ನಡಸಿ ಕೊಡುವ ಭಕ್ತ ನಾಲ್ವಂಡೆಯಲು ಮುಡಿ ೨೬ ಕಾಟಿಗ ೨ (ಸೌಇಇ. IX-ii, ೪೪೯-೨೬; 1444); ಆ ದುಗ್ಗಣಸೆಟ್ಟಿಯರೂ ಅವರ ಅಳಿಯಂದಿರೂ ದಾನಧಾರಾ ಪೂರ್ವ್ವಕವಾಗಿ ಧಾರೆಯನೂ ಎಱದು ಕೊಟ್ಟ ಧರ್ಮದ ಬಾಳಿನ ವಿವರ ಗುಡ್ಡಂಪಾಡಿಯ [ಕೆ]ಱಕೆಯ ಕಳಿಯಲ್ಲಿ ನಾಲ್ವಂಡೆಯಲಿ ಮುವತ್ತ ನಾಲ್ಕು ಮುಡಿ ಅಕ್ಕಿ ಗೇಣಿಯಿಕ್ಕುವ ಬಾಳು (ಸೌಇಇ. IX-ii, ೪೬೪-೧೧; 1472). [ ? ]

**ನಾಲ್ವಗಲ್**, ನಾಲ್ವಗಲು (ನಾ). ೧. ನಾಲ್ಕುದಿನ. ೨. ಮುಟ್ಟಾದ ನಾಲ್ಕನೆಯ ದಿನ : ಲಲನೆಗೆ ನಾಲ್ವ [ಪಾಠಾಂ. ನಾಲ್ಪ] ಗಲಾಗೆ ಕುಂದಣದ ಪುತ್ಥಳಿಯ ದೂಸಱ ಕೆಡಲೆಂದು ಪುಳಿದೊಳೆ ವಂದದಿಂದವೆ ಕೋಮಲೆಯರು ಝುಳಕವ ಮಾಡಿಸಲೆಸಗಿದರು (ಶ್ರೀಪಾಲ. ೨-೪೯). **ನಾಲ್ಪಗಲು** : ೨. ಎಳೆಲತೆಯೆಳಸಿ ಮಳೆಗೆ ಮೊಯ್ಯೊಡ್ಡುವವೋಲ್ನಾಲ್ಪಗಲಿನ ನೀರ್ಮಿಂದು . . . ಎಳಮಿಂಚಂ ಕಂಡರಿಸಿದ ಕಾಂತೆಯನಲ್ಕಡು ಸೊಗಸಿದಳು (ಜಯಕಾ. ೨-೪೯).

[ನಾಲ್(<ನಾಲ್ಕು)+ಪಗಲು (<ಪಗಲ್)]

**ನಾಲ್ವಗೆ**, ನಾಲ್ಬಗೆ (ನಾ). ೧. ನಾಲ್ಕು ವಿಧ; ನಾಲ್ಕು ರೀತಿ. 'ನಾಲ್ವಗೆ ಫಲ' ಪರಾ. **ನಾಲ್ಪಗೆ** : ೨. ನಾಲ್ಕು ಮನಸ್ಸು : ಒಗ್ಗದಿರೆ ನಾಲ್ಪಗೆಗೆ ಱುಡುಕಿ ಹದುಳದ ಪೊಳ್ತು ಸುಗ್ಗಿಯೊಳ್ ಮದುವೆನಾಳ್ ಮುಗಿಸಿದರ್ ಮಾತಂ (ಕಾಲೂರ. ೭೩-೧೩೩).

[ನಾಲ್(<ನಾಲ್ಕು)+ಬಗೆ$_3$]

**ನಾಲ್ವಗೆ ಫಲ** (ನಾ). ನಾಲ್ಕು ವಿಧವಾದ ಪ್ರಯೋಜನ ; ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಬಗೆಯಾದ ಪುರುಷಾರ್ಥ : ಶಿಷ್ಯಜನರ ಪ್ರೇರಿಸಿ ನಾಲ್ವಗೆ ಫಲವೀವ ತಾತಾಚಾರಯರಡಿಗೆಱಗುವೆನು (ಮೋಹತ. ೧-೪). [ನಾಲ್ವಗೆ+ಫಲ$_1$]

**ನಾಲ್ವಗೆಮುಕ್ತಿ** (ನಾ). ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯವೆಂಬ ನಾಲ್ಕುಬಗೆಯ ಮೋಕ್ಷಗಳು : ಭಕ್ತಿಯೊಳೆನ್ನನಾರಾಧಿಸಿ ನಾಲ್ವಗೆ ಮುಕ್ತಿಯ ಪಡೆದವನಲ್ಲ ಶಕ್ತಿಯೊಳ್ ಕಾಳಗ ಬೇಕೆಂಬ ಸಮರಸದುಕ್ತಿಯ ನೀ ಬಲ್ಲೆ ಮಗನೆ. (ಮೋಹತ. ೩೫-೬೧). [ನಾಲ್ವಗೆ+ಮುಕ್ತಿ]

**ನಾಲ್ವಟ್ಟೆ**, ನಾಲ್ಬಟ್ಟೆ (ನಾ). ೧. ನಾಲ್ಕು ದಾರಿ,—ಬೀದಿ. ೨. ನಾಲ್ಕು ಬೀದಿ ಸೇರುವ ಸ್ಥಳ; ಚೌಕ; ಚೌಪಥ : "ಚೌವಟಮೆಱುವುದು ನಾಲ್ವಟ್ಟೆ" (ಚತುನಿ. ೯೦) ; ಮತ್ತಮಾ ನಾಡ ನಾಲ್ವಟ್ಟೆಯೊಳಲ್ಲಲ್ಲಿ . . . ತೆವರೊಳವಿರಳಮಾದಱವಂಟಿಗೆದಾಣಂಗಳೊಳ್ (ಧರ್ಮನಾ. ೨-೩೨ ಪ) ; ನಾಲ್ಬುಜನೀತಂ, ನಾಲ್ವಟ್ಟೆ (ಶಬ್ದಾನು. ೨೯೪ ಪ್ರಯೋ). **ನಾಲ್ಪಟ್ಟೆ** : ೧. ನಾಲ್ಪಟ್ಟೆಯ ಪಿಟ್ಟೆ ವೋಲ್ ಕುಲನಗೌಘಂ ನುರ್ಗಿದತ್ತು (ಜಗವಿ. ೧-೩೦).

[ನಾಲ್(<ನಾಲ್ಕು)+ಬಟ್ಟೆ$_1$]

**ನಾಲ್ವಡಿ**, ನಾಲುಮಡಿ, ನಾಲ್ಮಡಿ (ನಾ). ೧. ನಾಲ್ಕರಷ್ಟು ; ನಾಲ್ಕುಪಟ್ಟು : ಸಕ್ಕದದೊಳ್ ಮುನ್ನುಳ್ಳ ಕಾಳಿದಾಸಂಗನ್ನಾಲ್ವಡಿ ರಚನೆಯೊಳ್ ಕುರುಳ್ಗಳ ಸವಣಂ (ಶಾಂತಿಪು. ೧-೧೧) ; ಧರೆಯೊಳ್ ಬೀರದ ಪೆಂಪಿಂ ನರನಿಂದಿರ್ಮಡಿ ಬಕಾರಿಯಿಂ ಮೂವಡಿ ಭಾಸ್ಕರ ಸುತನಿಂ ನಾಲ್ವಡಿ ಶಂಕರನಿಂದಯ್ವಡಿ ನೆಗೞ್ತಿಯುದಟರ ಭೀಮಂ (ಕಾವ್ಯಾಪ. ೭೦) ; ಮೋನದಿಂದಿರ್ದಗೆ ನಾಲ್ವಡಿಯನೀವುತಂ (ಅನೀರ. ದೇ. ೮೫-೬) ; ಪಾವಿಂದಿರ್ಮಡಿ ವಿಷದಿಂ ಮೂವಡಿ ಶಾರ್ದೂಲದಿಂದ ನಾಲ್ವಡಿ ಭಲ್ಲೂಕಾವಳಿಯಿಂದೈವಡಿ ಹೋಹೋವೆಂಬುದು ಖಳ ಚರಿತ್ರಮಂ ಭುವನಜನಂ (ಸೂಕ್ತಿಸು. ೧-೫೧). (ಗು). ೨. ನಾಲ್ಕನೆಯ : ಬೀರಂಗೊಂಡೆಸೆವಾನೆ ಪೆರ್ಬುಲಿಯನೇ ಕೈಗೋವಿಯಿಂ ಖಿಟ್ಗದಿಂ ಬೀರಂ ನಾಲ್ವಡಿ ಕೃಷ್ಣರಾಯನಳವಿಂ ಕೊಂದಿಕ್ಕೆ (ಮೈಸೂಮ. ೧-೩೬) ; ನಾಲ್ವಡಿಕೃಷ್ಣರ ಮದುವೆಯ ಕರೆಯೋಲೆ ಸೀಕೆಯಗೌಡರ ಮನೆಗೆ ಬಂದಿತ್ತು (ಇಂಚಾಪ. ೭-೨೩). **ನಾಲುಮಡಿ** : ೨. ಕನ್ನಡದ ಕಣ್ಣು, ಮೈಸೂರು, ನಾಲುಮಡಿ ಕೃಷ್ಣನ ಮೈಸೂರು (ಹೊಂಗಳು. ೫-೭). **ನಾಲ್ಮಡಿ** : ೧. ಒದ್ದಾಯನಮಹಾರಾಜಂಗೆ ಪಟ್ಟದರಸಿ ಪ್ರಭಾವತಿಯೆಂಬಳ್ . . . ರೂಪಿನೊಳಬ್ಜವಾಸೆಗಂ ಪರಿಣತರಪ್ಪವರ್ಬಗೆದು ನೋಟ್ಪೊಡೆ ನಾಲ್ಮಡಿ (ಧರ್ಮಾಮೃ. ೪-೧೪) ; ಪಿಡಿಯವಲಕ್ಕಿಗೋಸುಗ ಕುಚೇಲನಿಗೆ ನಾಲ್ಮಡಿ ಭಾಗ್ಯವಿತ್ತ ಮಾಧವನ ಅಡಿದಾವರೆಯ ಪ್ರಾರ್ಥಿಸಿ (ಮೋಹತ. ೩೦-೧) ; ವೀಣಾವಾದನ ಅರಮನೆಯಲ್ಲಿ ನಡೆದ ದಿನ ಪ್ರಭುಗಳು ಈ ಕನ್ಯೆಯರಲ್ಲಿ ನೋಡಿದ ಸೌಂದರ್ಯಕ್ಕಿಂತ ನಾಲ್ಮಡಿ ಹೆಚ್ಚಿದ್ದಿತು ಇಂದು (ಶಾಂತಲಾ. ೧೦೯) ; ವಲ್ಲಭಭಾಯಿಪಟೇಲರ ಸಂಘಟನಾಶಕ್ತಿ, ಕಾರ್ಯನಿರ್ವಾಹಕ ಶಕ್ತಿ ಹಾಗೂ ಕರ್ತವ್ಯನಿಷ್ಠೆಗಳು ನಾಲ್ಮಡಿಯಾಗಿ ಬೆಳಗಿ (ರಾಜಪ. ೩೫). ೨. ಸಿಂಗರವಾಯಿತು ಮೈಸೂರು . . . ನಾಲ್ಮಡಿಕೃಷ್ಣನ ಮೈಸೂರು (ಕನ್ನಬಾ. ೧೪೬-೨೯). [ನಾಲ್(<ನಾಲ್ಕು)+ಮಡಿ$_3$]

**ನಾಲ್ವಡಿಸು**, ನಾಲ್ಮಡಿಸು (ಕ್ರಿ). ನಾಲ್ಕರಷ್ಟಾಗು ; ನಾಲ್ಕು ಪಟ್ಟಾಗು : ಪೆಣ್ಗೆ . . . ವಿರಹವಿಮ್ಮಡಿಸೆ ಸುಯ್ ಮೂವಡಿಸೆ ಮೈಬಿಸುರ್ಪಿರದೆ ನಾಲ್ವಡಿಸೆ ಕಿಡಿಕಿಡಿಯಾಗಿ (ಚೆಬಪು. ೪೬-೧೦). **ನಾಲ್ಮಡಿಸು** : ನಲ್ಮೆ ನಾಲ್ಮಡಿಸೆ ಕಂದರ್ಪಾಸ್ತ್ರವೈದೆಯ್ದೆ ನಟ್ಟುವು (ಶೃಂಗಾರ. ೧-೫೪). [ನಾಲ್ವಡಿ+-ಇಸು$_3$]

**ನಾಲ್ವಣಿಗೆ** (ನಾ). (?) : ಬಾಳೆಯಹಳಿ ನಗುಲವೆಗ್ಗಡೆಯರು x x x ಗೆಯ ನಾಡವರು ನಾಲ್ವಣಿಗೆಯತಿಯ ನಾಡು ಭೂಮಿಯ ನಾಡು ವೀರೇಸ್ವರದೇವರಿಗೆ . . . ಬಿಟ್ಟ ದವರ್ಮ (ಮೈಆರಿ.೧೯೩೪,೧೧-೧೮; ?).

[ ? ]

ನಾಲ್ವತು 'ನಾಲ್ವತ್ತು' ನೋ.

**ನಾಲ್ವತುಂಬಾಡ**, ನಾಲತವಾಡ (ನಾ). ಒಂದು ಸ್ಥಳದ ಹೆಸರು; ☞ ಈಗಿನ ಬಿಜಾಪುರಜಿಲ್ಲೆಯ ನಾಲತ್ತವಾಡ : ಶ್ರೀನಾಲ್ವತುಂಬಾಡದ ಕೊಂಡಿಱುವ ಗೋಮರಸ ಅವರ ಹೆಗ್ಗಡೆ ಪಶಾಇತ ದುಗ್ಗಿಮಯನ ಅ[ರ್ಥ][ಂ] [ಗ] ಲಕ್ಷ್ಮಿ ಬಲಿಕಬೆ [ಗೌಡ]ಶ್ರೀಮತು ತಂಬೆಧಡೆ ಬಲೇಶ್ವರದೇವರ್ಗೆ ಬಿಟ್ಟ . . . ಮತರು ೩೦ (ಸೌಇಇ. XI-i, ೭೮-೯ ; 1033). **ನಾಲತವಾಡ** : ನಾಲತವಾಡದ ಶರಣರನ್ನು ಕುರಿತು (ಅರಳು. ೩೨೮-೧).

[ನಾಲ್ವತು(<ನಾಲ್ವತ್ತು)+ಬಾಡ$_1$]

**ನಾಲ್ವತ್ತರ್** (ನಾ). ನಾಲ್ಕು ಮತ್ತರು : ಮೂವತ್ತರ x x x ಯ ಕೆಱಗೆ ಏಱು ಮತ್ತರ x x x ಙ ಙ್ಗ ಱೆಯ ಕೋಡಿ ನಾಲ್ವತ್ತರ್ ಊರ ಧರ್ಮದೇಗುಲದ ಪೂಜೆಗೆ ಮೂಮತ್ತರ್ (ಎಕ. VII, ಶಿಮೊ. ೧೧೫-೮ ; ?). [ನಾಲ್(<ನಾಲ್ಕು)+ಮತ್ತರ್]

**ನಾಲ್ವತ್ತು**, ನಲವತ್ತು, ನಾಲ್ವತು (ನಾ). ಒಂದು ಸಂಖ್ಯೆ ; ನಾಲ್ಕರ ಹತ್ತರಷ್ಟು : ನಾಲ್ವತ್ತು ಸಾವಿರ್ಪನೊಳೊನ್ದು (ಎಇ. VI, ೧೬೬-೬ ; 793) ; ಈ ಭೂಮಿ ಪದಿನೞು ಗೇಣ್ಕೋಲೊಳ್ಸಾಯಿರದ ನನ್ನೂಱು ನಾಲ್ವತ್ತು ಕಮ್ಮಂ (ಎಕ. IX, ನೆಲಮಂ. ೧-೧೪ ; 1029); ನಾಲ್ಮರ್—ನಾಲ್ವಡಿ, ನಾಲ್ವತ್ತು, ನಾಲ್ವೆರಲ್ (ಶಮದ. ೧೮೯ ಪ್ರಯೋ) ; ನಾಲ್ವತ್ತರ ಮೇಲೆ ನಡಿಕೆ ಎಂಭತ್ತರ ಮೇಲೆ ಬಡಿಕೆ (ಗಾದೆ).

**ನಲವತ್ತು :** ಈ ಪುಸ್ತಕದ ಬೆಲೆ ನಲವತ್ತು ರೂಪಾಯಿಗಳು (ರೂಢಿ).
**ನಾಲ್ವತು :** 'ನಾಲ್ವತುಂಬಾಡ' ಪರಾ.

ನಾಲ್ವತ್ತನೆಯ = ನಲವತ್ತರ ಸ್ಥಾನದಲ್ಲಿರುವ ; ಎಣಿಕೆಯಲ್ಲಿ ನಲವತ್ತಕ್ಕೆ ಬರುವ : ನಾಲ್ವತ್ತನೆಯ ಪಾರುಷಿಕನಾಗಿಹ ಚತುರ್ವದನ ನಿಲ್ಲಿಗೆ ಮರಾಳವಾಹನದೊಳಕ್ಕರ್ವೆರಸಿ ಬಂದೆನ್ನ ಮುಂದೆ ನಿಂದಾಗಳ್ (ಜೈಮಿಭಾ. ೩೨-೩೭). **ನಾಲ್ವತ್ತಿರ್ವರ್, ನಾಲ್ವತಿಬ್ಬರು, ನಾಲ್ವತ್ತೀರ್ವರ್** = ನಲವತ್ತೆರಡು ಜನರು : ಸಯೋಗಿಕೇವಲಿಗಳೊಳ್ ಔದಾರಿಕ ಮಿಶ್ರಕಾಯ ಯೋಗಿಗಳೊಳ್ ನಾಲ್ವತ್ತಿರ್ವರ್ (ತತ್ತ್ವಪ್ರ. ೨೩) ; ಶ್ರೀಮದಗ್ರಹಾರಂ ಹೊಂನೆಯನೂರ ಊರೊಡೆಯ ಪ್ರಮುಖ ಮಹಾಜನಂಗಳು ನಾಲ್ವತಿಬ್ಬರು . . . ಶ್ರೀಮತ್ಸೋಮೇಶ್ವರಪಣ್ಡಿತರ ಕಾಲಂ ಕರ್ಚ್ಚಿ ಧಾರಾಪೂರ್ವಕಂ ಮಾಡಿ (ಸೌಇಇ. XV, ೧೩-೩; 1128) ; ಬಾದಾಳ—ನಾಲ್ವತ್ತೀರ್ವರ್ ಚಂದ್ರರ್ (ತಸೂಪ್ರ. ೧೪೧). **ನಾಲ್ವತ್ತೆಣ್ಗಾವುದ** = ನಲವತ್ತೆಂಟು ಗಾವುದ : ನಾಲ್ವತ್ತೆಣ್ಗಾವುದ ನೀಳದ ಮೂವತ್ತಾಱು ಗಾವುದಗಲದ ಬೀಡಿಂಗೆ ವಾಸ್ತುವಿಭಾಗಕ್ಕೆಡೆಯಿಲ್ಲದೆ ಕುಱುಂಬಗಳೊಳ್ ಬೀಡಂ ಬಿಡಿಸಿದಾಗಳ್ (ಆದಿಪು. ೧೨-೬೮ ವ). **ನಾಲ್ವದಿಂಬರ್, ನಾಲ್ವದಿಂಬರು, ನಾಲ್ವದಿಂಬಾರು, ನಾಲ್ವದಿನ್ಬರ್** = ನಲವತ್ತು ಜನರು : ವೈಶಾಖಮಾಸದ ಪೌರ್ಣ್ಣಮಾಸೆಯನ್ದೆಟ್ಟುಣುಸೆಯ ನಾಲ್ವದಿಮ್ಬರ್ಮ್ಮಹಾಜನಮುಂ ಮೋನಿಗೊರವರುಂ . . . ಗೋಕರ್ಣ್ಣಪಣ್ಡಿತ ಭಟರರ್ಗ್ಗೆ ಸರ್ವಬಾಧಾಪರಿಹಾರಂ ಕಾಲಂ ಕಚ್ಚಿ ಕೊಟ್ಟರ್ (ಕಇ. I, ೧೩-೭ ; 865) ; ಎಳಅರಸರ್ಮ್ಮಗನ್ದಿಮ್ಮರ್ಲ್ಲಡಿಯುಂ ಕದಂಬೂರಾ ನಾಲ್ವದಿನ್ಬರು ವಿದತ್ತೂರುನಾವಿದ (ಎಕ. X, ಕೋಲಾರ. ೭-೫ ; ಸು. 760) ; ಸ್ವಸ್ತಿಶ್ರೀತೊನ್ಡೆಗೊಲೆಉಕ X X ತೊಱುಕೊಳ X ಸತ್ತೋನ್ X X ಕೊಳತ್ತೂರಾ X X ನಾಲ್ವದಿಮ್ಬಾರು ಇಟ್ಟು ಮೆಚ್ಚಿ ಕೊಟಿೞದು (ಎಕ. X, ಚಿಂತಾಮ. ೧೦೫-೬; ?); ಇದರ್ಕ್ಕೆ ಸಾಕ್ಷಿ ಬೆಳತೂರಾ ಮಹಾಜನಮುಂ ಕಡತೂರಾ ಮಹಾಜನಮುಂ ಕದಂಬೂರಾ ನಾಲ್ವದಿನ್ಬರುಂ (ಎಕ. X, ಕೋಲಾರ. ೧೧-೧೨; ಸು. 753) ; ಸ್ವಸ್ತಿಶ್ರೀಮನ್ ವಿಷ್ಣುಗೋವರಸರ್ X ದುಗ್ಗಮಾರರ್ ಸೇನೆ ಮಗ X X ನಾವ್ದೆದಿನ್ಬರ್ಕ್ಕಸಪ್ರ X X X ಪೊನ್ಸೊಱಿ ಬಿಟ್ಟದು (ಎಕ. X, ಚಿಂತಾಮ. ೧೨೬-೩b ; ಸು. 800).

[ನಾಲ್(<ನಾಲ್ಕು) + ಪತ್ತು$_3$]

**ನಾಲ್ಬೆರಲ್** (ನಾ). ನಾಲ್ಕು ಬೆರಳು : ಗಿಂಗೆ ಮೆಳಸಿನ್ದಂ ಕಿಱಿದಕ್ಕ ಕಾಲೊಳ್ಪು ನಾಲ್ವರಲಳವಿಗ ಕಿಱಿದುಮಕ್ಕ ತುರಗಂ ಬಿಟ್ಟದಿಂ ಪಿರಿದಕ್ಕ (ಎಕ. II, ೧೩೩-೧೦೦ ; 982).

[℗ ಇದು 'ನಾಲ್ವೆರಲ್' ಎಂಬುದರ ಅಪಲಿಖಿತ]

**ನಾಲ್ವರ್ತನ** (ನಾ). ನಾಡಾಡಿಯ ನಡವಳಿಕೆ : ನೆಲನಂ ಪೊತ್ತಿತ್ತಿ ನಾಲ್ವರ್ತ್ತನದ ಮಹಿಮೆಯಿಂ ಪೋಗುವಂ ಕೂರ್ಮ್ಮರಾಜಂ (ಎಕ.IV, ನಾಗಮಂ. ೯೮-೨೫ ; 1229).

[℗ ಇದು 'ನಾಟ್ವರ್ತನ' ಎಂಬುದರ ಅಪಲಿಖಿತ]

**ನಾಲ್ವಲ** (ನಾ). ಒಂದು ತೂಕ ; ನಾಲ್ಕು ಪಲ : ಸುಲಿದ ಉದ್ದಿನ ಬೇಳೆಯು ನಾಲ್ವಲ (ಸಾಳ್ವಸಾಂ. ೧೧). 'ಮೂವಲ' ಪರಾ.

[ನಾಲ್(<ನಾಲ್ಕು) + ಪಲ್$_3$]

**ನಾಲ್ವಾಗಿಲ್** (ನಾ). ನಾಲ್ಕು ಬಾಗಿಲು,—ದ್ವಾರ : ರತಿ ಪಾರ್ವತಿ ರಮೆ ರಾಜೀವೋದ್ಭವ ಸತಿಯರ್ ಕುಳ್ಳಿರ್ಪರುಪೀಠಗಳೆನಲತಿರಂಜಿಸೆ ನಾಲ್ವಾಗಿಲ ಗೋಪುರಂ (ಜಯನೃ. ೧-೫೫).

[ನಾಲ್(<ನಾಲ್ಕು) + ಬಾಗಿಲ್]

**ನಾಲ್ವಾಡ** (ನಾ). ನಾಲ್ಕು ಗ್ರಾಮ.

ನಾಲ್ವಾಡರು, ನಾಲ್ಪಡರು = ನಾಲ್ಕು ಗ್ರಾಮದವರು : ದೇವರ ಬಸವಂತ ಕಲ್ಲ ಮುಂದೆ ನಾಲ್ವರು ನಾಲ್ವಾಡರು . . . ಕೋಟೀಸರಾ ಚಾಯಿಂತ್ರಿನಿಬರು ನಡಸುವಂಥಾ ಸೀಮೆ ಸ್ವಾಮ್ಯಉ . . . ನಡಸಿ ಬಹರು (ಸೌಇಇ. IX-ii, ೪೫೭-೧೪; 1455); ಕೋಟಿಕ್ಕೆ X X X ತೆಕಲ ಮಂಡೆ ೪ ನಾಲ್ಪಡರ ಒಪ್ಪ ಮುದ್ದಣದೇವರು ಯಿಾ ಧರ್ಮವನೂ ಪಡುವಕೇರ್ಯ ಹಲರು ಸೆಟ್ಟಕಾರರೂ ಪಾಲಿಸುವವರು (ಸೌಇಇ. IX-ii, ೪೪೪-೩೮; 1433). [ನಾಲ್(<ನಾಲ್ಕು) + ಬಾಡ$_1$]

**ನಾಲ್ವೆರಲ್**, ನಾಬೆರಳು, ನಾಲ್ವೆರಳು (ನಾ). ೧. ನಾಲ್ಕು ಬೆರಳು. ೨. ನಾಲ್ಕು ಬೆರಳುಗಳ ಅಳತೆ : ಅದಱ ಮೇಗಲರ್ದಪೊಂದಾಮರೆಯುಕ್ಕುಮದಂ ನಾಲ್ವೆರಲಂ ಮುಟ್ಟದೆ ಅದಱ ಮೇಗೆ ಪಲ್ಯಂಕದೊಳಿರ್ದೊಂದು ಬೆಳ್ಗೊಡೆಯನೊಡೆಯೊನಾಗಿ ಮೂವತ್ತೆರಡುಂ ಚಾಮರಂಗಳಿಂ ದೇವರ್ಕಳ್ ಬೀಸುತ್ತಮಿಂತಿರ್ಪನ್ನೆಗಂ (ಪಡ್ಡಾರಾ. ೧೫೫-೩); ಜಸಕ್ಕಾಗರಮಾದ ಬದ್ದೆಗನಿನಾ ನರಸಿಂಹನಿನತ್ತ ನಾಲ್ವೆರಲ್ ಮೇಗು ಪೊದಟ್ಟು ಚಾಗದೊಳಮೊಂದಿದ ಬೀರದೊಳಂ ಗುಣಾರ್ಣವಂ (ಪಂಪಭಾ. ೧-೫೦) ; ಜನಕಂಗತ್ತಗ್ಗಳಂ ನಾಲ್ವೆರಲ್ಬಲದೊಳ್ ಶೌರ್ಯದೊಳೆಂಬಿನಂ ಧರೆಗೆ ಸಂದಂ ಸಿಂಹಭೂಪಾಳಕಂ (ಎಕ. VIII, ಸೊರಬ. ೧೮೪-೨೧ ; 1033 ?) ; ಆತನ ಸಿರಿಯಂ ಪೇಟಿಪ್ಪೊಡೆ ಭೂತಳದೊಳ್ . . . ದೇವೇಂದ್ರಂಗಂ ಮಾತೇಂ ಬಗೆವಂದು ನಾಲ್ವೆರಲ್ ತಾಂ ಪಿರಿಯಂ (ಧರ್ಮಾಮೃ. ೬-೧೧) ; ಉರಗಂ ಕೊಂಡಲ್ಲಿಂ ನಾಲ್ವೆರಲನಿತಂ ಕಳೆದು ಕಟ್ಟಿ ಮೇಗಂ ಬೇಗಂ ಸೆರೆವಿಡುಗೆ ಸುಡುಗೆ ಕಡಿದಿರದಂದಿಕ್ಕುಗೆ ನೀವಿಕಳೆಗೆ ನಿರ್ವಿಷಮಕ್ಕುಂ (ಕಾವ್ಯಾವ. ೨೬೮). **ನಾಬೆರಳು :** ೧. ನಾಬೆರಳು ಅಗಲದ ನಿಗಿನಿಗಿ ಉರಿಯುವ ಕೆಂಪಿನ ಬಣ್ಣದ ಬುಗುಡಿ ಅಂಚಿನ ಜೋಡುಪಂಚೆ (ಸುಪಸಂ. ೫೨). **ನಾಲ್ವೆರಳು :** ೨. ಹಗಲ ಮೇಲಣ ಕಂಬಿ ನಾಲ್ವೆರಳುಗಳ ಹವಣಿಗೆ ನೆಗೆದು ಬರುತಿರೆ (ಬಸಪು. ೪೪-೭) ; ನಾಲ್ವೆರಳು ಹಸ್ತಿನಿಗೆ ಮೂವೆರಳು ಚಿತ್ತಿನಿಗೆ ಇರ್ವೆರಳು ಕುಚಮಧ್ಯ ಶಂಖಿನಿಗೆ ಪದ್ಮಿನಿಗೆ ಒರ್ವೆರಳು ನೋಡ (ಸರ್ವಜ್ಞ. ೧೬೩೫).

[ನಾಲ್(<ನಾಲ್ಕು) + ಬೆರಲ್]

**ನಾಲ್ವೆರಳು** 'ನಾಲ್ವೆರಲ್' ನೋ.

**ನಾಲ್ಸರ** (ನಾ). ನಾಲ್ಕು ಬಾಣ,—ಶರ : ಅಸಮಾಸ್ತ್ರನೈಸರಂಗಳಲಿಸದೀಗಳೀ ನೆಗಟ್ಟ ನಾಲ್ಸರದಿಂದಿಸುವಂ ವಿಯೋಗಿಯಂ (ಮಲ್ಲಿಪು. ೫-೨೬).

[ನಾಲ್(<ನಾಲ್ಕು) + ಸರ$_4$]

**ನಾಲ್ಸಾದರ** 'ನಾಲ್ಸಾಸಿರ' ನೋ.

**ನಾಲ್ಸಾಸಿರ** 'ನಾಲ್ಸಾಸಿರ' ನೋ.

**ನಾವ** 'ನಾವೆ' ನೋ.

**ನಾವಧಾನ್ಯ** (ನಾ). ಒಂಬತ್ತು ಬಗೆಯ ಧಾನ್ಯ ; ನವಧಾನ್ಯ : ನಾವಧಾನ್ಯವ ಕುಡಿಸಿ ಕುಳಿತು ಭಸಿ ಹೆಂಡೆ ಮಾಡಿ (ಎಕ. VII, ಶಿಮೊ. ೧೦೭-೧೬ ; 1576 ? ). [ಸಂ.]

**ನಾವನಿವಾಸಗಾರ್ತಿ** (ನಾ). ಅಂಬಿಗಿತ್ತಿ : ಆ ಸಮಯದಿ ಸದ್ಗುಣುರಾಯ ನೆನೆದ ಪರಾಶರಮುನಿಗಾದ ಹದನ ಭೂಸಭೆಯೊಳು ತನಗಹುದೆಂದು ನಾವನಿವಾಸಗಾರ್ತಿಯರ ಬೀಳ್ಕೊಂಡ (ಮೋಹತ. ೫-೨೭).

[ನಾವ(<ನಾವೆ) + ನಿವಾಸ + -ಕಾಱ + -ತಿ$_1$ (<-ಇತ್ತಿ)]

**ನಾವಲಗೆಡ್ಡೆ** (ನಾ). ಒಂದು ಬಗೆಯ ಗೆಡ್ಡೆ : ತುಲಸಿ, ನಾವಲಗೆಡ್ಡೆ ಇವಿಷ್ಟು ಪ್ರತ್ಯೇಕವಾಗಿ . . . ಕಷಾಯವಂ ಕಾಯಿಸಿ, ಶೋಧಿಸಿ ಕೊಂಡು (ಸಕವೈ. ೭೨). [ನಾವಲ್$_0$ + ಗೆಡ್ಡೆ(<ಗಡ್ಡೆ)]

**ನಾವಲಿಗ**, ನಾವಳಿಗ (ನಾ). (ಉಕ) ನಾವಿದ; ನಾಪಿತ : ನಾವಲಿಗ ನಾದರೂ 'ಸ್ವಲ್ಪ ತಡೆಯಿರಿ ರಾಯರೇ' ಎಂದು ನಮ್ರಮಾತಿನಿಂದ

ಸಂತೈಸುತ್ತಿದ್ದ (ಮುಂಗಾಫು. ೮೭) ; ಈ "ಗರುಡೆಯರ" ಮುಂಡನಕ್ಕೆ ಬರುವ ನಾವಲಿಗರ ಯಮುನಾ್ಕ ಕೂಡ ಹೊರಗಿನ ಕಟ್ಟೆಯ ಮೇಲೆಯೇ . . . ತನ್ನ ಕರ್ತವ್ಯಕರ್ಮವನ್ನು ಯಥಾಸಾಂಗವಾಗಿ ಪೂರೈಸುತ್ತಾನೆ (ಗೀಡುಗ. ೬). **ನಾವಳಿಗ :** (ಕ). [<ನಾವಿಲ$_1$ + -ಇಗ]

**ನಾವಳಿಗ** 'ನಾವಲಿಗ' ನೋ.

**ನಾವಳ್ಳಿ** (ನಾ). ಒಂದು ಊರಿನ ಹೆಸರು : ಮೊಳೆಊರಾ ಮಣಿಯ ಗಾಮುಣ್ಡರುಂ ನಾವಳ್ಳಿಯರುಂ ಅಣ್ಣಿಗಿಯಾಗಾಮಿಗರುಂ . . . ಮುಖಮಾಗೆ ಎರಡುಂ ನಾಜ್ಕ್ಕೆ ರಾಜಶ್ರಾವಿತಮಾಗೆ ಪ್ರಸಾದಂ ಕೆಯ್ದಾರ್ (ಎಕ. VII, ಶಿಕಾರಿ. ೧೫೪-೧೦ ; ಸು. 685). [ ? ]

**ನಾವಾಟ** (ನಾ). ದೋಣಿ, ಹಡಗುಗಳಲ್ಲಿ ಕುಳಿತು ನೀರಿನ ಮೇಲೆ ಸಂಚಾರ ಮಾಡುವ ಆಟ,—ಕ್ರೀಡೆ ; ನೌಕಾವಿಹಾರ : ಗೆಳೆಯ ಮುದ್ದಿಯಾರನು 'ನಾ ವಾ ಟ' ದ ಕಾರ್ಯದರ್ಶಿಯಿದ್ದುದರಿಂದ ಬೇಕಾದಾಗ ವಿಹರಿಸುವ ಅಸ್ಪದವಿತ್ತು (ಶ್ರೀರಂಗ. ೫೮).
[ನಾವ (<ನಾವೆ) + ಆಟ]

**ನಾವಾಡಿ** (ನಾ). ದೋಣಿ, ಹಡಗು ಮೊದಲಾದ ಜಲಯಾನಗಳನ್ನು ನಡೆಸುವವನು ; ಅಂಬಿಗ : ನಾವಾಡಿಯು ಹುಟ್ಟು ಹೊಡೆಯುತ್ತ ನಾವು ಸಾಗಿಸತೊಡಗಿದ್ದನು (ಸಕುಮಂ. ೩೦).
[ನಾವ(<ನಾವೆ) + -ಆಡಿ$_1$]

**ನಾವಾಡಿಗ** (ನಾ). ೧. ನಾವೆಯನ್ನು ಅಥವಾ ಹಡಗನ್ನು ನಡೆಸುವವನು ; ನಾವಿಕ ; ಅಂಬಿಗ : ನಾವು ಬುಡಮೇಲಾದುದರಿಂದ, ಎಲ್ಲರೂ ಮುಳುಗಿದರು . . . ನಾವಾಡಿಗ ಮತ್ತು ಸಂತೋಷಕೂಟದ ಜೊತೆಗಿದ್ದ ಒಂದು ನಾಯಿ ಇಷ್ಟು ಬಿಟ್ಟು ಉಳಿದವರೆಲ್ಲರೂ ಗಂಗಾಜಲದಲ್ಲಿ ಮುಳುಗಿದರೆಂದು ತಿಳಿದುಬಂದಿದೆ (ರಕ್ತಧ್ವ. ೩೨೩); ನಾವಾಡಿಗನಿಗೆ ನಾವನ್ನು ಬೇಗನೆ ದಂಡೆಗೊಯ್ಯಲು ಹೇಳವ್ವ (ಅಕ್ಕಾಜಿ. ೭೯) ; ಗಂಗೆಯ ದಡದಲ್ಲಿ ನಿಂತು ಅಲ್ಲಿರುವ ನಾವಾಡಿಗರನ್ನುದ್ದೇಶಿಸಿ ಜ್ವಾಲೆಯೆಂದಳು (ಬದುಕಿ. ೪೦). ೨. ಸಮುದ್ರಯಾನದಲ್ಲಿ ಆಸಕ್ತಿಯುಳ್ಳವನು ; ನೌಕಾಪ್ರಯಾಣದಲ್ಲಿ ವಿಶೇಷವಾಗಿ ತೊಡಗಿರುವವನು : ಆ ಕಾಲಕ್ಕೆ ನಾವಾಡಿಗನೆಂದು ಹೆಸರಾದ ಈ ಹೆನ್ರಿಯು ಪೋರ್ತುಗಲ್ಲದ ದುರ್ದೈವದಿಂದ ೧೪೬೦ರಲ್ಲಿ ಸತ್ತನು (ಚರಿಸಂ. ೨೧೮) ; ಖಾಂದೆ ಕಾರ್ವಿಯೆಂದರೆ ಹೆಗಲ ಮೇಲೆ ಶಸ್ತ್ರವಿಟ್ಟುಕೊಂಡು ಸಮುದ್ರದಲ್ಲಿ ಸಂಚರಿಸುವ ನಾವಾಡಿಗರೆಂಬ ಅರ್ಥವಿರುತ್ತದೆಂದು ಹೇಳುತ್ತಾರೆ (ಕಭಾಗ. ೧೮೪).
[ನಾವಾಡಿ + -ಗ$_2$]

**ನಾವಾರೋಹ** (ನಾ). ೧. ಹಡಗಿನಲ್ಲಿ ಪ್ರಯಾಣ ಮಾಡುವವನು; ಸಮುದ್ರಪ್ರಯಾಣಿಕ : "ನಾವಾರೋಹಃ, ನಾವಿಕಃ—ಈ ೨ ಹಡುಗಲೇಱುವಾತಂ" (ಹಲಾಯು. ೬೫-೨೩೬). ೨. ಅಂಬಿಗ ; ನಾವಿಕ. [ಸಂ. (ನೌ + ಆರೋಹ)]

**ನಾವಾಸನ** (ನಾ) [ಯೋಗ] ಆಸನಗಳಲ್ಲಿ ಒಂದು ; ☞ ಈ ಆಸನದ ಭಂಗಿಯು ಹುಟ್ಟುಗಳಿಂದ ಕೂಡಿದ ನಾವೆಯನ್ನು ಹೋಲುವುದು : ಮುಖ್ಯವಾದ ಕೆಲವು ಆಸನಗಳು—ಅಷ್ಟವಿನ್ಯಾಸಗಳು ೧. ಉತ್ತಾನಾಸನ ೨. ಚತುರಂಗದಂಡಾಸನ . . . ೨೨. ನಾವಾಸನ (ಭಾರದ. ೧೬೭). [ಸಂ. (ನೌ + ಆಸನ)]

**ನಾವಿಂದ** 'ನಾವಿದ' ನೋ.

**ನಾವಿಕ** (ನಾ). ೧. ಹಡಗು, ದೋಣಿ ಮೊದಲಾದುವನ್ನು ನಡೆಸುವವನು ; ಅಂಬಿಗ : "ತತ್ಪೋತವಾಹಿ ನಾವಿಕನಕ್ಕುಂ" (ವಸ್ತುಕೋ. ೨೩-೧೦) ; "ಕರ್ಣಧಾರಃ, ನಾವಿಕಃ—೨ ಹಡಗು ನಡೆಸುವವನ ಹೆಸರು" (ಸಿದ್ಧಾಂತಿ. ೭೧) ; ಇಳಿದು ರಥದಿಂದ ಮಂಜಾಳಿನಿಗೆ ಪೊಡಮಟ್ಟು ಬಳಿಕ ನಾವಿಕರೊಡನೆ ನಾವದೊಳ್ಗಂಗೆಯಂ ಕಳಿದು ನಿರ್ಮಲತೀರ್ಥದೊಳ್ ಮಿಂದು (ಜೈಮಿಭಾ. ೧೯-೭) ; ಕುರಿಯ ಬಾಲವ ಪಿಡಿದ ಗರ್ವದಿ ಶರಧಿಯನ್ನುತ್ತರಿಸಲೆಳಸಲು ಸರಿಸಮುಪ್ಪುದೆ ನಾವೆ ನಾವಿಕರೊಲುಮೆಯಿಲ್ಲದೊಡೆ (ಗಗತಾ. ೧೬-೫೬) ; ಅಲ್ಲಿ ತಾನು ಕಂಡ ಪ್ರವಾಸಿಗಳನ್ನೂ ನಾವಿಕರನ್ನೂ ವಿಚಾರಿಸಿ ತಾನೆ ರಚಿಸಿದ ಆತನ ಗ್ರಂಥವು ಪ್ರತ್ಯಕ್ಷತಃ ತೀರ ನಿರ್ದುಷ್ಟವೂ ಅಲ್ಲ ; ಆದರಲ್ಲಿಯ ಹೇಳಿಕೆಗಳು ತೀರ ನಿಸ್ಸ್ಪೃಷ್ಟವೂ ಅಲ್ಲ (ದ್ರಾವಿ. ೭೦). ೨. ಹಡಗು, ದೋಣಿ ಮೊದಲಾದ ಜಲಯಾನಗಳಲ್ಲಿ ಪ್ರಯಾಣ ಮಾಡುವವನು ; ಸಾಗರದಲ್ಲಿನ ಪ್ರಯಾಣಿಕ : "ನಾವಾರೋಹಃ, ನಾವಿಕಃ—ಈ ೨ ಹಡುಗಲೇಱುವಾತಂ" (ಹಲಾಯು. ೬೫-೨೩೬); "ದೋಣಿಯೇಱುವಂ ನಾವಿಕಂ" (ಮಂಗರಾ. ೭೨-೨೬) ; ಪೊಸದೇಶಗಳ ಕಂಡು ಹಿಡಿವೆನೆಂಬುಲ್ಲಸದಿ ಸಾಹಸದ ನಾವಿಕಂ ತನ್ನ ಹಡಗಿನ ಪಡೆಯೆ ಕೂಡಿ ತೊಡಗುವನು ವಾರಾವಾರಯಾತ್ರೆಯಂ (ಚಿತ್ರಾಂಗ. ೨೧-೫೭೨). [ಸಂ.]

**ನಾವಿಕಕಳ್ಳ** (ನಾ). ಸಮುದ್ರದ ಮೇಲೆ ಪ್ರಯಾಣ ಮಾಡುವ ಹಡಗುಗಳನ್ನು ಲೂಟಿಮಾಡುವ ಕಳ್ಳ ; ಕಡಲುಗಳ್ಳ ; ಹಡಗುಗಳ್ಳ : ಆ ಕಾಲದಲ್ಲಿ ಪೋರ್ತುಗೀಸು ಮತ್ತು ಇತರ ನಾವಿಕಕಳ್ಳರ ಭಯದಿಂದ ಸಮುದ್ರಯಾನದ ಪ್ರಯಾಣಿಕರು ನಾಲ್ಕೈದು ಹಡಗುಗಳನ್ನು ಜತೆಮಾಡಿಕೊಂಡು ಪ್ರಯಾಣಮಾಡುವುದು ಪದ್ಧತಿಯಾಗಿದ್ದಿತು (ಕಪಾಕುಂ. ೧). [ನಾವಿಕ + ಕಳ್ಳ$_1$]

**ನಾವಿದ**, ನಯಿಂದ, ನಾದಿಗ, ನಾಯಂದ, ನಾಯಿಂದ, ನಾಯಿದ, ನಾವಿಂದ, ನಾವಿಲ$_1$ (ನಾ). ಕ್ಷೌರ ಮಾಡುವುದು ವೃತ್ತಿಯಾಗುಳ್ಳವನು ; ಕ್ಷೌರಿಕ ; ಕೆಲಸಿಗ ; ಹಜಾಮ : "ಕ್ಷುರಮರ್ದೀ, ದಿವಾಕೀರ್ತಿಃ, ಚಂಡಿಳಃ, ನಾಪಿತಃ - ಈ ೪ ನಾವಿದಂ" (ಹಲಾಯು. ೯೬-೪೩೫) ; ಕದಂಬೂರಾ ನಾಲ್ವದಿನ್ವರು ವಿದತ್ತೂರು ನಾವಿದ ಪಂದೆಮು ಅಜಾಯ ಈರೆದೆತ್ತರಾ ಪೊರುಳ್ತ X X X ಐ ಮುನಿಗಿತ್ತು (ಎಕ. X, ಕೋಲಾರ. ೭-೬ ; ಸು. 760) ; ನಾವಿದರ ಗೋಸಾಸಿ ಗುಲುಗಂ ಕಟ್ಟಿ ಸತ್ತು ಸುರಲೋಕಕ್ಕೋದ (ಎಕ. VII, ಶಿಕಾರಿ. ೧೯೫-೫; 1007); ಅನ್ನೆಗಂ ನೆರೆಮನೆಯ ನಾವಿದನ ಪೆಂಡತಿಯಪ್ಪ ದೂದವಿ ಪಾದರಿಗನಂ ಸಂಕೇತಸ್ಥಾನದೊಳಿರಿಸಿ ಪರಿತಂದು (ಪಂಚತಂ. ೭೫-೨) ; ಕೌಂಡಿನ್ಯನೆಂಬ ಋಷಿ ಮೂಱು ಭುವನವಱಿಯೆ ನಾವಿದ ಕಾಣಂ ಭೋ (ಬಸವ. ೫೯೦) ; ನಾವಿದಂ ಕನ್ನೆಯ ಪುರ್ವಂ ನೊಸಲುಮಂ ಸಮಱಿದಾಗಳ್ (ಬಂಹರಿ. ೯-೭ ಪ) ; ನಾವಿದ ಚಟ್ಟೋಜನ ಮಗ ಸೋವೋಜ ಅಕ್ಷಯಭಂಡಾರವಾಗಿ ನಿತ್ಯಾಭಿಸೇಕಕ್ಕೆ ಕೊಟ್ಟ ಗ ೧ (ಸೌಇಇ. IX-i, ೩೪೭-೧೮ ; 1276). **ನಯಿಂದ :** ನಯಿಂದರ ಜುಂಜಾಯನ ಮಗ ತಂಮಯಗೆ ಉಂಬಳಿ ಕೊಟ ತೋಟ (ಮೈಆರಿ. ೧೯೩೯, ೨೦-೯ ; 1657). **ನಾದಿಗ :** ನಾದಿಗರು, ಗೌಳಿಗರು, ಅಗಸರು, ಬೇಡರು ಮುಂತಾದ ಕುಲಗಳಿಗೆ ಈ ಮೇಲಿನ ಕಟ್ಟಳೆಗಳು ಹತ್ತುವದಿಲ್ಲ (ಕಭಾಗ. ೯೬) ; ನಾದಿಗರ ಬಳಿಯಲ್ಲಿ ರಕ್ತ ತೆಗೆಯುವ ತುಮ್ಮಡಿ ಇರುತ್ತದೆ (ಮುಂಬಯಿ. ೫-೭೭) ; ಇಲ್ಲಿ ಸ್ಲೇಟಿನ ಕಲ್ಲುಗಳೂ, ನಾದಿಗರ ಕತ್ತಿಯನ್ನು ಮಸೆಯುವ ಕಲ್ಲುಗಳೂ ದೊರೆಯುತ್ತವೆ (ವಿಜಾಪ. ೪೧). **ನಾಯಂದ :** ಇವರು ನಾಯಂದರು ಅಸಗರು ಕುಂಬಾರರಿಗೆ ಕಾಲುಗರು ಮೇಲುಕಟ್ಟುಯಿಲ್ಲಯೆನಲಾಗಿ ಕುಂಬಾರ ಸೆಟ್ಟಿಗಳು ಉಂಟುಯೆಂದು . . . ಗೆದ್ದಾಗ ಬರದ ಶಾಸನದ ಕ್ರಮ (ಎಕ. IV, ಎಳಂದೂ. ೨-೫ ; ಸು. 1580 ? ). **ನಾಯಿಂದ :** ಶಿವಬ್ರಾಹ್ಮಣ . . . ನಕು ನಾಯಿಂದ ಒಡಲು ಡೊಂಬ ಬೆನ್ನು ಅಗಸ . . . ಇಂತೀ ಹದಿನೆಂಟು ಜಾತಿ ತನ್ನಲ್ಲಿ ಉಂಟು (ಸರ್ವವ. ೧೩೧-೬೬೭);

ರಾಮನಾಥಪುರದ ಗ್ರಾ ೧ ಆ ದೇವರಿಗೆ ಸಲುವ ಹಳಿಗಳ ಅಡೆದೆರೆ ಮಗ್ಗದೆರೆ ಕುಂಮರ ಗಾಣಿಗರ ನಾಯಿಂದರದೆರೆ ಎರಡು ಗಡಿಯ ಸುಂಕವಳಗಾಗಿ (ಎಕ. XV, ಅರಕ. ೧೧೨–೧೮ ; 1383) ; ನಾಯಿಂದರ ತೆಱಗೆ ಕುಂಭಾರತೆಱಗೆ . . . ಮುಂತಾದ . . . ಸರ್ವತೆಱಗೆಯನು ಶ್ರೀವೀರಪ್ರತಾಪಕೃಷ್ಣರಾಯರಿಗೆ ಪುಣ್ಯವಾಗಬೇಕೆಂದು (ಎಕ. IV, ಗುಂಡ್ಲುಪೇ. ೩–೧೯ ; 1573) ; ಶ್ರೀಮನ್ಮಹಾಮಣ್ಡಲೇಸ್ವರ ರಾಮರಾಜಯ್ಯವಿಠಲೇಸ್ವರದೇವಮಹಾಅರಸುಗಳು ನಾಯಿಂದರಿಗೆ ಕೊಟ ಶಾಶನ (ಎಕ. XI, ಹಿರಿಯೂ. ೨೯–೧೩ ; 1544) ; ಗಂದಿಗ ಬೋಗಾರ ತಿಲಗಾತಕ ನಾಯಿಂದರ . . . ಜಾಲಗಾಱರ ಗೃಹ ಚೆಂದದಿಂ ದೊಪ್ಪಿದುವಾಗ (ಕಂನವಿ. ೬–೫೪) ; ಬಾಯಿಂದ ಕೆಟ್ಟ ನಾಯಿಂದ ಮುರುವ (ಗಾದೆ). **ನಾಯಿದ :** ರಾಮರಾಜಯ X ವ ಮಹಾ ಅರಸುಗಳು ಶ್ರೀರಂಗಪಟಣದ ಸೀಮೆಯ ನಾಯಿದರಿಗೆ ಕೊಟರು (ಎಕ. XIV, ಶ್ರೀರಂಗ. ೧೭೯–೮ ; ಸು. 1576) ; ಕೆದಱದಡೆ ನಾಯಿದರ ತಿಪ್ಪೆಯೊಳು ಮುಡಿವಳದ ಬೇರು ಕಾಣಿವುದೆಯೆನಗೆ (ರಾಘಚ. ೪–೩೭). **ನಾವಿಂದ :** "ದಿವಾಕೀರ್ತಿ ಚಂಡಿಲನು ನಾವಿಂದನಕ್ಕುಂ" (ಮಂಗರಾ. ೧೧೧–೧) ; ಗ್ರಾಮ ೧ ಱ ಮಗ್ಗದೆಱೆ ಮದು ಭಡಗಿ ಕಂಮಾಱ ಅಸಗ ನಾವಿಂದ ಕುಂಭಾರ ಮಾದೆಗ ಕಯ್ಯಿ ಗಾಣ ಎತ್ತು ಗಾಣ (ಎಕ. IX(s), ಬೆಂಗಳೂ. ೧೬೨–೪ ; 1408) ; ರಾಮರಾಜವೊಡೆಯರು ನಾವಿಂದರ ಕೊಂಡೋಜಿಗೆ ಮೆಚ್ಚಿ ಬಿಟ್ಟದು (ಎಕ. VI, ತರೀಕೆ. ೧೩–೬ ; 1545). **ನಾವಿಲ₁ :** ಯಿಾ ರಾಯರಾಷ್ಟ್ರದ ವೊಳಗೆ ತಂಮ ನಾವಿಲಕುಲದ X X X ಯಿಾ ಬಿರಾಡವ ಕೊಳುತಿದ್ದರು (ಸೌಇಇ. XX, ೨೩೯–೮ ; 1547) ; ನಾವಿಲರಿಗೆ ಕೊಟ್ಟ ಬಿರಾಡ ಕಾಣಿಕೆ (ಸೌಇಇ. XX, ೨೩೯–೨೧ ; 1547) ; [ರಾ]ಮರಾಜ X X X ತಿಂಮರಾಜ ಮಹಾ ಅರಸುಗಳು ನಾವಿಲರು ತಿಂಮೋಜ ಕೊಂಡೋಜ ಭದ್ರೋಜಗಳಿಗೆ ಕೊಟ್ಟ ಶಾಶನದ ಕ್ರಮವೆಂತೆಂದರೆ (ಸೌಇಇ. XV, ೨೫೯–೧೦ ; 1547); ಭತ್ತ ಖಂ ೧೨೦ ನಾವಿಲರಿಗೆ ಖಂ ೬೦ (ಎಕ. VIII, ತೀರ್ಥಹ. ೧೯–೧೦೮; 1573).

ನಾಯಿಂದನ ವರಿ = ನಾವಿದವಾರಿ : ನಾಯಿಂದನ ವರಿ ಕುಂಭಾರರು ಕಾಣಿಯಾಲರ ಬೇಡಿಗೆ . . . ಅಂತು ಯಿಾ ತೆಱಗೆ ಸಹವಾಗಿ ಆದಿಯೂರು ಯಿಪತ್ತ ಐದು ಹೊಂನು (ಎಕ. XIV, ಗುಂಡ್ಲುಪೇ. ೧೨೯–೧೦೦; 1521). [<ಪ್ರಾ. ಣಾವಿಅ./ಸಂ. ನಾಪಿತ]

**ನಾವಿದಗತ್ತಿ,** ನಾಯಿಂದಗತ್ತಿ (ನಾ). ಕ್ಷೌರಿಕನ ಕತ್ತಿ ; ಕ್ಷೌರ ಮಾಡುವ ಕತ್ತಿ ; "ಕ್ಷುರ" (ನಾಚಿಂರಾ. ೬) : "ಕ್ಷುರಂ, ಕ್ಷುರಿಕಾ, ಈ ೨ ನಾವಿದಗತ್ತಿ" (ಕಾಶಕ್ಕ. ೨೨೪). **ನಾಯಿಂದಗತ್ತಿ :** (೬). [ನಾವಿದ + ಕತ್ತಿ]

**ನಾವಿದಗೆಯ್,** ನಾವಿದಗೆಯಿ (ನಾ). ಕ್ಷೌರಿಕನಿಗೆ ಬಿಟ್ಟ ಉಂಬಳಿ ಜಮಿೀನು : ನಾವಿದಗೆಯ್ಮತ್ತರೆಂಟು ಮನೆಯೊನ್ದು ಪಱಿಕಾಱಗ್ಗೆ ಮತ್ತರ್ಪನ್ನೆರಡು ಮನೆಯೊನ್ದು ಗುಣಶಾಸನದಿನಾಳ್ವರ ಸತ್ರಕ್ಕೆ ಮತ್ತನ್ಸೂಱು ಮನೆಯೆರಡು (ಎಇ. XX, ೬೮–೨೯; 1012). **ನಾವಿದಗೆಯಿ :** ನಾವಿದಗೆಯಿ ೨೦೦ ಮನೆ ಕೈ ೬ (ಕೊಲ್ಹಾಶಾ. ೨೩–೫೪ ; ? ). [ನಾವಿದ + ಕೆಯ್₄]

**ನಾವಿದಗೆಯಿ** 'ನಾವಿದಗೆಯ್' ನೋ.

**ನಾವಿದದೆಱೆ** (ನಾ). = ನಾವಿದವಾರಿ : ಪನ್ನಾಯದೆಱೆ ನಾವಿದದೆಱೆ ಇನ್ತಿನಿಸಱ ತೆಱೆಯನು ಧಾರಾಪೂರ್ವ್ವಕಂ ಮಾಡಿಬಿಟ್ಟರು (ಎಕ. IV, ಹುಣಸೂ. ೧೩೭–೪೦ ; 1162). [ನಾವಿದ + ತೆಱೆ₃]

**ನಾವಿದಬಾಳು** 'ನಾವಿದವಾಳ್' ನೋ.

**ನಾವಿದವಾರಿ** (ನಾ). ಕ್ಷೌರಿಕನು ಕೊಡಬೇಕಾದ ಉದ್ಯೋಗ ತೆರಿಗೆ : ಮಹಾಜನಂ ಮಹಾದೇವಯ್ಯಂಗೆ ನಾವಿದವಾರಿಯುಂ ತಳಂಬಿಗೂಲಿಯುಮನಾವಕಾಲಮುಂ ಪರಿಹಾರಂ ಮಾಡಿದರ್ (ಸೌಇಇ. IX–i, ೧೩೨–೨೭ ; 1068). [ನಾವಿದ + ವಾರಿ₀ (P←ತಮಿ. ವಾರಿ = ತೆರಿಗೆ)]

**ನಾವಿದವಾಳ್,** ನಾವಿದಬಾಳು (ನಾ). = ನಾವಿದಗತ್ತಿ : ಬಾೞ್ = ಜೀವನಾರ್ಥಂ ; (ನಾವಿದವಾಳ್, ಕೂರ್ವಾಳ್, ಹರಗುವಾಳ್— ಎಂಬಲ್ಲಿ ಕುಳಂ) (ಶಮದ. ಪರಿ. ೧). **ನಾವಿದಬಾಳು :** ವೀರನ ತೋಳ ಬಾಳುಮಂ ನಾವಿದಬಾಳುಮಂ ಸಮನೆ ಪತ್ತಿಪ ಸಾಹಿಯೋ ಮದ್ಭುಜಸ್ರಜಂ (ಆನಂಪು. ೧೧–೯೩). [ನಾವಿದ + ಬಾಳ್₃]

**ನಾವಿದಿತಿ** (ನಾ). ೧. ಕ್ಷೌರಿಕನ ಹೆಂಡತಿ. ೨. ನಾಯಿಂದಜಾತಿಯ ಹೆಂಗಸು : ಮೂಲೆಗಾರ್ತಿಯಸಗಿತಿ ಯೋಗೀಶ್ವರಿಯರ ಕಿಡಿಕಿಡಿಯ ನಾವಿದಿತಿಯರೊಳಂ[ಪಾಠಾಂ. ಕಿಡಿಕಿಯ ನಾದಿತಿಯರ ಮುಂದಂ, ಕುಕಗೇಡಿಯನಾವರೀತಿಯೊಳ್]ನುಡಿಯಲೀಯಲಾಗದು ವಧುವಂ (ಪದಶ. ೮–೨೬) ; (ಸೂಕ್ತಿಸು. ೮–೧೦೪ ನೋ) ; ಸ್ವರಲೋಪಕ್ಕೆ—ಘಟ್ಟವಳ್ತಿ . . . ನಾವಿದಿತಿ, ಹಾದರಿಗಿತಿ (ಶಮದ. ೨೦೯ ಪ್ರಯೋ). [ನಾವಿದ + -ಇತಿ₁ (<-ಇತ್ತಿ)]

**ನಾವಿಲ₁** 'ನಾವಿದ' ನೋ.

**ನಾವಿಲ₂** (ನಾ). ೧. ಹಡಗನ್ನು ನಡೆಸುವವನು ; ನಾವಿಕ : ನಾವಿಲಂ . . . ನಾವಾ ದಿವ್ಯನ್ ನಾವಿಲ ಇತಿ ನಾವಿಕ ಇತ್ಯರ್ಥಃ (ಶಬ್ದಾನು. ೪೪೧ ಪ್ರಯೋ). ೨. ಹಡಗಿನಲ್ಲಿ ಪ್ರಯಾಣ ಮಾಡುವವನು. [ನಾವ (<ನಾವೆ) + -ಇಲ]

**ನಾವೀನ್ಯ** (ನಾ). ಹೊಸತನ ; ನವೀನತೆ : ಇವುಗಳಲ್ಲಿ ಕೇವಲ ಕಲ್ಪನೆಗಳ ಹುಚ್ಚಾಟವಿರದೆ ನೈಜಭಾವದ ನಾವೀನ್ಯವು ತುಂಬಿ ಹರಿಯುವುದು (ಕನ್ನಜಾ. ೮೪) ; ಊರಲ್ಲಿ ಹಳತು ಹೊಸತು ಕೂಡಿ ಬೆರೆತಿರುವಂತೆ ಅವರ ಮನಸ್ಸಿನಲ್ಲಿ ಪ್ರಾಚೀನ್ಯವೂ, ನಾವೀನ್ಯವೂ ಸಂಗಮಿಸಿರುವವು (ಸಮಜೀ. ೬) ; ಆ ಬಾಳಿನ ನಾವೀನ್ಯ ನೈರ್ಮಲ್ಯಗಳನ್ನವನು ಮತ್ತೆ ಅನುಭವಿಸಿದಂತಾಯಿತು (ಪುನರು. ೨೭೪). [ಸಂ.]

**ನಾವು** 'ನಾವೆ' ನೋ.

**ನಾವೆ,** ನಾವ, ನಾವು (ನಾ). ನೀರಿನ ಮೇಲೆ ಪ್ರಯಾಣ ಮಾಡಲು ಉಪಯೋಗಿಸುವ ಒಂದು ಬಗೆಯ ಯಾನ ; ಹರಿಗೋಲು ; ದೋಣಿ : "ಜೋಗಂ, ಪರೀತಂ . . . ದೋಣಿಯೆಂದೆನಲ್ ನಾವೆಯಕ್ಕುಂ" (ಮಂಗರಾ. ೧೨೦–೪) ; ಈ ಸಂಸಾರಾಂಭೋಧಿಯನೀಸುವ ನಿನಗಿದುವೆ ನಾವೆ ತಡಿಗಾಣ್ಬೆಯನಾಯಾಸದೊಳ್ (ಆದಿಪು. ೫–೬೦) ; ಅರಿತ್ರಂ, ಕೋಟಿಪತ್ರಂ—ಈ ೨ ನಾವೆಯ ಸೋಗೆ (ಹಲಾಯು. ೧೧೧–೫೦); ಪ್ರಸಾದಪರಿಮಳಮಂ ಘ್ರಾಣಕ್ಕೆ ನಡೆಯಿಸುವ ಸಂಪಗೆಯ ಮುಗುಳ ನಾವೆಯಂತೊಪ್ಪುವ ನಾಸಿಕದ . . . ಬಸವರಾಜಂ ಕಾರಣಿಕಪುರುಷಂ (ಬಸರ. ೨–೨೭) ; ನಾವೆಗಳಿಂದ ನದಿಯನು ದಾಟ ಬಳಿಕಲ್ಲಿಂದ ತೆರಳಿದರಿವರು ಮೂವರು ಕಾಲುನಡೆಗಳಲಿ (ತೊರರಾ. ೨–೪–೧೪) ; ಆದೊಡೆ ದ್ವೀಪಾಟನಂಗೆಯ್ಯೆ ನಾವೆಯೊಳ್ ಬಂದರಕ್ಕುಂ (ಅದ್ಭುತ. ೪೩–೯). **ನಾವ :** "ನೌಃ, ನಾವಂ, ನಾವಾ, ಈ ೩ ಹಡಗು" (ಕಾಶಕ್ಕ. ೬೮). 'ನಾವನಿವಾಸಗಾರ್ತಿ' ಪರಾ. **ನಾವು :** ಒಬ್ಬ ಕವಿಯು ಒಂಟೆಯನ್ನು ಅಡವೀನಾವು ಎಂದು ವರ್ಣಿಸಿದ್ದಾನೆ (ಮುಂಬಯಿ. ೩–೬೭) ; ಆ ನಾಯಕನು ಆ ಆನೆಯನ್ನು ನಾವಿನೊಳಗೇರಿಸಿ . . . ಆಚೆ ದಂಡೆಗೆ ಇಳಿಸಿದನು (ಮುಂಬಯಿ. ೪–೩೧) ; ಇವರ ನಾವು ಇನ್ನೂ ಆ ಸಂಗನ ದೋಣಿಯಿಂದ ತುಸು ದೂರದಲ್ಲೇ ಹೋಗುತ್ತಿತ್ತು (ಇಂದುಮು. ೬೬).

[<ಸಂ. ನೌ./ಪ್ರಾ. ಣಾವಾ./ಪಾರ.ಹಿಂ. ಮರಾ. ನಾವ್./ತಮಿ. ನಾವಾಯ್ ; ತುಳು. ನಾವೆ ; ತೆಲು. ನಾವ]

**ನಾವ್ಯ** (ಗು). ೧. ದೋಣಿಯ ಮುಖಾಂತರ ದಾಟಬೇಕಾದ ; ದೋಣಿ ಹಾಯಿಸಬಹುದಾದ. ೨. ಹೊಗಳುವುದಕ್ಕೆ ತಕ್ಕ. (ನಾ). ೩. ಹಡಗು, ದೋಣಿ ಮೊದಲಾದ ಸಾಧನಗಳಿಂದ ದಾಟಬೇಕಾದ ಹೊಳೆ ಮೊದಲಾದ ಜಲಾಶ್ರಯ ; ಹಾಯ್ದು ಕೊಂಡು ಹೋಗಲಾರದಷ್ಟು ನೀರಿರುವ ಹೊಳೆ; ಹೆಚ್ಚು ನೀರುಳ್ಳ ನದಿ : "ನೌತಾರ್ಯಂ ನಾವ್ಯಂ" (ವಸ್ತುಕೋ. ೧೧೦-೭೨) ; "ನಾವ್ಯ ಯೆಂಬುದು ಹಱುಗಲಿಕ್ಕುವ ನೀರ್" (ಹಲಾಯು. ೧೦೭-೨೭); "ನಾವ್ಯಂ . . . ಹಡಗು ಅಥವಾ ತೆಪ್ಪ ಅಥವಾ ದೋಣಿ ಮುಂತಾದವುಗಳಿಂದ ಹಾಯ್ದು, ಆಚೇ ದಡಕ್ಕೆ ಸೇರತಕ್ಕ ದುಸ್ತರಜಲವುಳ್ಳ ಹೊಳೆ ಮುಂತಾದುವುಗಳ ಹೆಸರು" (ಸಿದ್ಧಾಂತಿ. ೭೨). ೪. ನವೀನತೆ ; ನಾವೀನ್ಯ.
[ಸಂ.]

**ನಾಶ** (ನಾ). ೧. ಕಣ್ಣಿಗೆ ಕಾಣದೆ ಹೋಗುವುದು ; ಅದೃಶ್ಯವಾಗುವುದು. ೨. ಕೆಟ್ಟುಹೋಗುವುದು ; ಹಾಳು ; ಅಳಿವು : "ವಿಲಯಂ ನಾಶ ಯುಗಾಂತದೊಳ್" (ವಸ್ತುಕೋ. ೧೨೩-೩೪) ; ದುಃಖಮಿಶ್ರವಾದ ಸುಖ ಇಹಲೋಕದಲ್ಲಿಪ್ಪುದು ನಾಶವುಂಟು ದಿನ ಕೊಂದು ಬಗೆಬಗೆಯಾದಂಥ ಸುಖವಾಗಿ ನಾಶವಿಲ್ಲದ ಪ್ರಾಕೃತವಾದ ಸುಖವನನುಭವಿಸುತ್ತ ಕ್ರಮದಿ ತಿರುಗುವರು (ಪುರಂದ. ೫-೧೬೧-೧೨೩). ೩. ಸಾವು ; ಮರಣ : "ನಿಧನಂ, ನಾಶಃ, ಮೃತ್ಯುಃ . . . ದೀರ್ಘನಿದ್ರಾ - ಈ ೧೨ ಸಾವು" (ಹಲಾಯು. ೧೦೩-೬) ; "ಮೃತ್ಯು ಮರಣಂ ದೀರ್ಘನಿದ್ರೆ ನಿಧನಂ ನಾಶಂ . . . ವಿನಿವೃತ್ತಿಯೆನೆ ಸಾವಕ್ಕು" (ಮಂಗರಾ. ೧೧೬-೩) ; "ಪಂಚತಾ, ಕಾಲಧರ್ಮಃ . . . ನಾಶಃ, ಮೃತ್ಯುಃ, ಮರಣಂ, ನಿಧನಂ - ೧೦ ಸಾಯುವುದಕ್ಕೆ ಹೆಸರುಗಳು, ಮರಣ" (ಸಿದ್ಧಾಂತಿ. ೨೭೨).

**ನಾಶ ಮಾಡು** = ಹಾಳು ಮಾಡು ; ನಾಶಪಡಿಸು : ದೋಷರಾಶಿ ನಾಶಮಾಡು ಶ್ರೀಶ ಕೇಶವ (ಕನಕ. ೯೮ ಅನುಪಲ್ಲವಿ) ; ಈ ಮಿಶ್ರಣಗಳನ್ನು ಸರಿಯಾದ ಪ್ರಮಾಣದಲ್ಲಿ ಉಪಯೋಗಿಸಿ ಕ್ರಿಮಿಗಳನ್ನು ನಾಶ ಮಾಡಬೇಕು (ತರಬೆ. ೧೪) ; ಯಾವುದಾದರೂ ವಿಷಾಪಹಾರಿ (Disinfectant) ದ್ರವ್ಯವನ್ನು ನೀರಿಗೆ ಬೆರೆಸಿ, ನೆಲವನ್ನು ತೊಳೆಯುವುದರಿಂದ ನೆಲದ ಮೇಲೆ ತಂಗುವ ಜೀವಿಗಳನ್ನು ನಾಶ ಮಾಡಲು ಸಾಧ್ಯವಾಗುತ್ತದೆ (ಗೃಹವಿ. ೧೩೮) ; ನಾಶ ಮಾಡುವವನು ದಾಸನಾದರೆ ಲೇಸು ಮಾಡಿಯಾನೆ ? (ಗಾದೆ). **ನಾಶವಾಗು** = ೧. ಹಾಳಾಗು ; ನಷ್ಟವಾಗು : ಶರಣನೆಂತೆಂಬೆನಯ್ಯಾ ಪಂಚೇಂದ್ರಿಯ ನಾಶವಾಗ [ಪಾಠಾಂ. ನಷ್ಟವಾಗ, ನಾಸ್ತಿಯಾಗ] ದನ್ನಕ್ಕ (ಬಸವ. ೫೧೧) ; ಕ್ಷರ ಎಂದರೆ ನಷ್ಟವಾಗುವುದು. ಕ್ಷೀಣ ಅಥವಾ ನಾಶವಾಗುವುದು (ದ್ರಾವಿ. ೯೩). ೨. ಸಾಯು ; ಮರಣ ಹೊಂದು : ಕುದಿಯುವ ನೀರಿಗೆ ಸೀಮೆಯೆಣ್ಣೆಯನ್ನು ಹಾಕಿ ತಿಗಣೆಗಳಿರಬಹುದಾದ ಸ್ಥಳಗಳಿಗೆ ಪಿಚಕಾರಿ ಹೊಡೆದರೆ ಇವುಗಳ ಮೊಟ್ಟೆಗಳು ಮತ್ತು ಮರಿಗಳು ನಾಶವಾಗುವುವು (ಗೃಹವಿ. ೧೮೭) ; ನಾಶವಾಗುವವರೆಗೆ ಆಶೆ ಬಿಡದು (ಗಾದೆ). [ಸಂ.]

**ನಾಶಕ** (ಗು). ೧. ಹಾಳು ಮಾಡುವ ; ನಾಶ ಮಾಡುವ : ಕ್ಷಯಕಾರಿ, ಖಾದಕ, ನಾಶಕ (corrosive. ಪಾರಿಶಿ. ೨೪). (ನಾ). ೨. ಹಾಳು ಮಾಡುವವನು ; ಕೆಡಿಸುವವನು ; ನಿರ್ನಾಮ ಮಾಡುವವನು : 'ಕುಲನಾಶಕ' ಪರಾ.
[ಸಂ.]

**ನಾಶಗುಂದು** (ಕ್ರಿ). ಕ್ಷಯಿಸು ; ಹಾಳಾಗು : ವೇದವೆಂಬುದನಧಿಕ ತರವಾಗಿ ನಾಶಗುಂದಿತು ಕಾಲವಶದಿಂದ (ಶಿಭಾಗ. ೧೧-೨೧-೨).
[ನಾಶ + ಕುಂದು$_1$]

**ನಾಶಗೊಳಿಸು** (ಕ್ರಿ). ಕೊಲ್ಲು ; ನಿರ್ಮೂಲಗೊಳಿಸು : ಸಂಹಾರ ಮಾಡುವಿಕೆ, ಖೂನೀಮಾಡುವಿಕೆ . . . ನಾಶಗೊಳಿಸುವುದು, ಸಾಯಗೊಳಿಸುವಿಕೆ (ಸಿದ್ಧಾಂತಿ. ೨೭೨) ; ಇದರಿಂದ ಜಿರಲೆಗಳಿಗೆ ಮಂಕು ಹಿಡಿದಂತಾಗುತ್ತದೆ. ಆಗ ಅವುಗಳನ್ನೆಲ್ಲ ಹಿಡಿದು ನಾಶಗೊಳಿಸಬಹುದು (ಅಡುಸೌ. ೪೯) ; ಅವುಗಳ ಧೂಮವು ಅಣುಜೀವಿಗಳನ್ನು ನಾಶಗೊಳಿಸುತ್ತದೆ (ಗೃಹವಿ. ೧೮೩). [ನಾಶ + ಕೊಳ್$_1$ + -ಇಸು$_3$]

**ನಾಶನ** (ನಾ). ೧. ಹಾಳು ; ನಾಶ ; ನಿರ್ಮೂಲ ; ಧ್ವಂಸ : ನಿನ್ನ ಕುಲ ನಾಶನಾಗ ! (ಕಾನೂರು. ೧೬೦) ; ನನ್ನ ಹೊಟ್ಟೆ ಉರಿಸುತ್ತೀಯಲ್ಲ, ನಿನ್ನ ಮನೆ ನಾಶನವಾಗಿ ಹೋಗದೆ ಇರುವುದಿಲ್ಲ (ರೂಢಿ). ೨. ಒಂದು ಬಗೆಯ ನರಕಶಿಕ್ಷೆ : ಮತ್ತಂ ನಾಶನ . . . ದುರ್ಭೋಗ್ಯ ನಾನಾವಿಧಾಸಂಖ್ಯಾತ ತೀವ್ರವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷಾಲೇಶಮೆಂದೆನಿಸಿ (ವಿವೇಕ. ೧೮೧). [ಸಂ.]

**ನಾಶಪಡಿಸು** (ಕ್ರಿ). ಹಾಳುಮಾಡು; ಧ್ವಂಸಮಾಡು; ನಿವಾರಿಸು ; ಇಲ್ಲದಂತೆ ಮಾಡು : ಅದಿತಿಪುತ್ರರಾದ ಮಿತ್ರ, ಅರ್ಯಮ ಮತ್ತು ವರುಣ ಈ ಮೂರು ದೇವತೆಗಳೂ . . . ಉತ್ತಮವಾದ ಕರ್ಮಜ್ಞಾನವುಳ್ಳವನೂ, ಕರ್ಮವನ್ನು ಆಚರಿಸುವವನೂ ಆದ ಪುರುಷನನ್ನು ಸಮೀಪಿಸಿ ಅವನ ಪಾಪವನ್ನು ನಾಶಪಡಿಸುತ್ತ ಅವನನ್ನು ಉತ್ತಮ ಮಾರ್ಗಕ್ಕೆ ಒಯ್ಯುತ್ತಾರೆ (ಋಕ್ಸಾರ. ೧೩೦) ; ಕೋಣೆಯೊಳಗೆ ನೊಣ ಮತ್ತು ಸೊಳ್ಳೆಗಳಿಗೆ ಅವಕಾಶವೇ ಇರಕೂಡದು. ಕೋಣೆಯೊಳಗಿರತಕ್ಕಂತಹವುಗಳನ್ನು ನಾಶಪಡಿಸಬೇಕು (ಕೆಲರೋ. ೬).
[ನಾಶ + ಪಡಿಸು]

**ನಾಶಹೇತು** (ನಾ). ನಾಶಕ್ಕೆ ಕಾರಣವಾದುದು : ನಾಶಹೇತುಗಳೊಗೆದುವು ಸುತ್ತಿಱಿದು ಧೂಮಕೇತುಗಳಾಗಳ್ (ಚಂದ್ರಪು. ೬-೧೫).
[ನಾಶ + ಹೇತು$_2$]

**ನಾಶಹೊಂದು** (ಕ್ರಿ). ಹಾಳಾಗು ; ಧ್ವಂಸವಾಗು ; ನಿವಾರಣೆಯಾಗು : ಹುಳುಗಳನ್ನು . . . ಹಳ್ಳಗಳಲ್ಲಿ ಸುರಿದು ಸುಡಬೇಕು ಹೀಗೆ ಮಾಡುವುದರಿಂದ ಮೊಟ್ಟೆ—ಮರಿಗಳೆಲ್ಲವೂ ನಾಶಹೊಂದುತ್ತವೆ (ತರಜಿ. ೧೩). [ನಾಶ + ಹೊಂದು$_1$ (<ಪೊರ್ದು)]

**ನಾಶಿ** 'ನಾಸಿ' ನೋ.

**ನಾಶೀಪುಡಿ** 'ನಾಸೀಪುಡಿ' ನೋ.

**ನಾಶ್ತಾ**, ನಾಷ್ಟಾ, ನಾಷ್ಟಾ (ನಾ). ಬೆಳಗಿನ ತಿಂಡಿ ; ಅಲ್ಪಾಹಾರ ; ಉಪಾಹಾರ : ನಿಮ್ಮ ನಾಶ್ತಾ ಸಿದ್ಧವಾಗುತ್ತಿದೆ. ಇನ್ನು ಎರಡು ನಿಮಿಷಗಳಲ್ಲಿ ತರುತ್ತೇನೆ (ಸಮಜೀ. ೮೩೫). **ನಾಷ್ಟಾ** : ಇನ್ನು ನಾಷ್ಟಾನೆ ಮಾಡಿಲ್ಲ ಕಣಯ್ಯ (ರುದ್ರಿಪು. ೧೧). **ನಾಷ್ಟಾ** : ನಾಯಕನು ಶಿವಪೂಜೆ ಮುಗಿಸಿಕೊಂಡು, ನಾಷ್ಟಾ ಮಾಡಿಕೊಂಡು . . . ದಿವಾನ್‌ಖಾನೆಯಲ್ಲಿ ಕುಳಿತಿದ್ದನು (ಪಲ್ಲಿ. ೨೯) ; ಹೋಟಲಿಗೆ ನಾಷ್ಟಾಕ್ಕೆ ಕರೆದೊಯ್ದ (ಭೀಮುಕಾ. ೬೩).
[←ಪಾರ. ನಾಶ್ತಾ, ನಾಸ್ತಹ್ ; ಹಿಂ. ನಾಶ್ತಾ, ನಾಸ್ತಾ ; ಮರಾ. ನಾಷ್ಟಾ, ನಾಸ್ತಾ]

**ನಾಶ್ಯ** (ಗು). ಹಾಳಾಗಬಲ್ಲ ; ನಾಶವಾಗುವ. [ಸಂ.]

**ನಾಷ್ಟಾ** 'ನಾಶ್ತಾ' ನೋ.

**ನಾಷ್ಟಾ** 'ನಾಶ್ತಾ' ನೋ.

**ನಾಸ** (ನಾ). ಮೂಗು ; ನಾಸಿಕ : ತರಳನೋಟದ ವರಸುನಾಸದ . . . ಕರದರಾಂಬುಜ ವಜ್ರಚಿಹ್ನೆಯಲೊಪ್ಪಿದಳು ದೇವಿ (ಶಾಂತಿರಾ. ೨-೩) ; ಕರ್ಣ ಗೀತಂಗಳ ಕೇಳಲಿ ನಿನ್ನ ನಿರ್ಮಾಲ್ಯ ನಾಸವಾಘ್ರಾಣಿಸಲಿ ಹರಿಯೆ (ಪುರಂದ. ೧-೨೧-೧) ; ಕುಮುದಪಕ್ಷಿಗಳೊಳಾ ಚಂಪಕಂ ನಾಸದೊಳ್ . . . ಕೇತಕಿಯುಗುರ್ಗಳೊಳಗೆ ಕ್ರಮದಿಂದೆ ಮಚ್ಚರಿಸಲು (ಚೆಬಪು. ೧೦-೪). 'ನಾಸೆ' ಪರಾ. [ಸಂ. ನಾಸಾ]

**ನಾಸತ್ಯ** (ನಾ). ಅಶ್ವಿನಿದೇವತೆಗಳಲ್ಲಿ ಒಬ್ಬ ; ದೇವತೆಗಳ ವೈದ್ಯ : "ನಾಸತ್ಯೌ, ಅಶ್ವಿನೌ, ದಸ್ರೌ, ದೇವಚಿಕಿತ್ಸಕೌ— ಈ ೪ ದೇವರ ವೈದ್ಯರ್" (ಹಲಾಯು. ೧೫-೪೪) ; "ದೇವಚಿಕಿತ್ಸಕರಶ್ವಿನಿದೇವರ್ ನಾಸತ್ಯರಶ್ವಿಗಳ್ ದಸ್ರಾಖ್ಯರ್" (ವಸ್ತುಕೋ. ೧೦-೫೩) ; ನರರಾಕೃತಿಯನಾಂತು ನಾಸತ್ಯರೇಂ ನೆಲಕೆ ಬರವಾಯ್ತೊ (ವೆಂಕರಾರಾ. ೩-೯-೧೧) ; ಸೂರ್ಯಂ ಸರಣ್ಯೆಯಂ ಕೂರ್ತು . . . ತಾಂ ಕುದುರೆಯಾಗಿ ಪೆಣ್ಗುದುರೆಯಾದಳನೊಂದಿ ನಾಸತ್ಯರಂ ಪುಟ್ಟಿಸಿದನೆಂದಪರ್ (ಸೌನಂದ. ೭-೨೬). [ಸಂ.]

**ನಾಸವಾತ** (ನಾ). ಮೂಗಿಗೆ ಉಂಟಾಗುವ ಒಂದು ಬಗೆಯ ರೋಗ : ಹಿಂಗ್ವಾದಿಚೂರ್ಣ . . . ಅಲ್ಲದ ರಸದಿ ಕೊಳ್ಳೆ . . . ಕ್ರಿಮಿ, ಶ್ವಾಸ, ನಾಸವಾತ, ಶೂಲೆ ಎಲ್ಲಾ ಮಾಣ್ಗುಂ (ವಿವೈವಿ. ೫೪). [<ಸಂ. ನಾಸಾವಾತ]

**ನಾಸಾಂತರ** (ನಾ). ಮೂಗಿನ ರಂಧ್ರ ; ಹೊಳ್ಳೆ : ಗಳಸುಂಟ(ಟ)ಗೆ ಕಿಡುಗುಂ ಪಿಪ್ಪಲಿ ಕಾಮನ ನಸ್ಯದಿಂದೆ ನಾಸಾಂತರದೊಳ್ ಕಳೆಯಿಸೆ ರಕ್ತಮನಂತದು ಕಳೆಗುಂ ಕರವೊದವಿ ತೋಱುವುಪಜಿಹ್ವಿಕೆಯುಂ (ಲೋಕೋಪ. ೯-೯೪). [ಸಂ.]

**ನಾಸಾಗ್ರ** (ನಾ). ೧. ಮೂಗಿನ ತುದಿ ; ತುದಿಮೂಗು : ನಾಸಾಗ್ರದೆ ದಿಟ್ಟಿ ಮಟ್ಟವಿರೆ . . . ಏಂ ಕರವೊಪ್ಪಿದರ್ನೊ ಪುಷ್ಪದಂತಮುನಿಪಂ ಯೋಗೋಪಯೋಗಸ್ಥಿತಂ (ಪುಷ್ಪಪು. ೧೪-೩೧) ; ಅರೆಮುಗುಳಾದ ಕಣ್ಗಳ ನಾಸಾಗ್ರದೊಳಿರಿಸಿ . . . ಜಾನಿಸಿದನಾ ಮಂತ್ರಿ ನಿರ್ಜರರಾಜನ ಬೇಗದೊಳು (ಕುರಾಸಾಂ. ೩೬-೪) ; ನಾಸಾಗ್ರನ್ಯಸ್ತಾಂಬಕನಾ ಸುಭಗಂ . . . ಭಾಸುರಹರಿಯಂ ಜಾಣಿಸುತ (ಯಾದಚಂ.೧೪-೭೬). ೨. ಮೂಗಿನ ಆದಿಭಾಗ ; ಹುಬ್ಬಿನ ಮಧ್ಯ ; ಭ್ರೂಮಧ್ಯ : ನಾಸಾಗ್ರವೆಂದರೆ ಭ್ರೂಮಧ್ಯವೆಂದರ್ಥ (ಉತ್ತಟೀ. ೮-೪). [ಸಂ.]

**ನಾಸಾಚ್ಛೇದ** (ನಾ). ಮೂಗನ್ನು ಕೊಯ್ಯುವುದು : ಅರಸ ಕರ್ಣಚ್ಛೇದವೇ ಜಯಸಿರಿಯ ನಾಸಾಚ್ಛೇದವಿನ್ನರವರಿಸದಿರು ಹೊಯ್ದಾಡಿ ಹೊಗಳಿಸು ಬಾಹುವಿಕ್ರಮವ (ಕುವ್ಯಾಶ. ೧-೧೬). [ಸಂ.]

**ನಾಸಾಭೇದ** (ನಾ). = ನಾಸಾಚ್ಛೇದ : ನಾಸಾಭೇದವಾದವಳಿಂದ ನೀ ಮರುಳಾದ ಕಾಮುಕತನದಿ ಕಂಗಾಣದೆ ವಿಭೀಷಣನ ವೇದನಸ್ಮಾರ್ಗದ ಮಧುರವಚನವನಾದರಿಸದುಱಿ ಕೆಟ್ಟೆ (ತೊರರಾ. ೬-೧೦-೫೩). [ಸಂ.]

**ನಾಸಾನಿಲ** (ನಾ). ಮೂಗಿನಿಂದ ಹೊರಕ್ಕೆ ಬರುವ ಗಾಳಿ; ನಿಶ್ವಾಸ: ನಾಸಾನಿಲನ ಕಂಪು ಸುಳಿಯೆ . . . ನಿತ್ಯನಾಗೆಸೆವ ಪಂಪಾವಿರೂಪಾಕ್ಷ ಸೂರ್ಯನಾನಂದಮಂ ನಮಗೀಯಲಿ (ಚೆಬಪು. ೧-೨). [ಸಂ.]

**ನಾಸಾಪುಟ** (ನಾ). ೧. ಮೂಗಿನ ಹೊಳ್ಳೆ, — ರಂಧ್ರ : ಕೋಪದ ಪೆರ್ಚಿನೊಳ್ ನಡುಗುವುರುಯುಗಂ ಕಡುಪಿಂಪರಲ್ವ ನಾಸಾಪುಟಂ . . . ಭುಜಾರ್ಗಳಂ ರಿಪುಗಳಗ್ರಹಮಾದುದು ಭೀಮಸೇನನಾ (ಪಂಪಭಾ. ೭-೬) ; ಅರಳ್ದ ನಾಸಾಪುಟಂ . . . ಹುರಿಯೊಡೆದ ರೋಮಂ ತೂಗಿ ತೊನೆದು ಮೆಯ್ಮುಱಿವ ಹಂದಿಯನು ಕೌಶಿಕ ಕಂಡನು (ಹಚಕಾ. ೬-೬೦) ; ನಾಸಾಪುಟದೊಳ್ ವಿತ್ತವಿನಾಶನಮಂ . . . ಪತಿಗೆ ಮಾಟ್ಪ ಮಾವರ್ತಂಗಳ್ (ಅಶ್ವಶಾ. ೪-೧೬) ; ಘೂತ್ಕೃತಿ ಬಲಿದ ನಾಸಾಪುಟದ . . . ದಂತಿಗೆಳೆಸೆದವೊಗ್ಗಿನ್ನಳಿ (ಕುವ್ಯಾದ್ರೋ. ೧೬-೧೪) ; ಹೊದಱಿದ್ದ ಕಂಗಳ ಕಿಡಿಯ ನಾಸಾಪುಟದ ಕಬ್ಬೊಗೆಯ ಎದ್ದ ರೋಷದಿ ಮೂಱು ಲೋಕವನದ್ದಿ ನುಂಗುವ ಹರನ ಖತಿಯನು ಕದ್ದನೆನೆ ಕಾಲಿಕ್ಕಿದನು ನಿಜರಥದೊಳಿಂದ್ರಜಿತು (ತೊರರಾ. ೬-೪೨-೩೨) ; ಹುಂಕಾರದೊಡನೆ ನಿಶ್ವಾಸಮಂ ಬಿಡುವ ನಾಸಾಪುಟಂ ಜ್ವಾಲೆಯಂದದೊಳೊಪ್ಪಿರೆ ಕಿಡಿಯುಡುವ ಕೋಪಮಂ ತಾಳ್ದಂ ಧನಂಜಯಂ (ಜೈಮಿಭಾ. ೧೩-೩೬). ೨. ಮೂಗು ; ನಾಸಿಕ : ನಾಗಚಂಪಕಕುಟ್ಮಲಾನುಕಾರಿ ನಾಸಾಪುಟವಿಕಸಿತಮುಕುಲಶೋಭಿತ ಚಂಪಕಂಗಳಂ . . . ನಿಂದು ಮೆಲ್ಲಮೆಲ್ಲನೆ ನೋಡುತ್ತಂ (ಸುಕುಮಾ. ೯-೧೦೭ ವ) ; ತನ್ನಚ್ಚಿಯ ಮುರಿನೋಟದ ವಿಶ್ರಾಂತಿಯೆಡೆಯಿದೆನೆ ನೀಳ್ದ ನಾಸಾಪುಟಂ ರಂಜಿಸೆ . . . ವಾಲ್ಮೀಕಿ ತಾನಾ ಬಟ್ಟೆಯೊಳೆ ಬರುತುಮಿರ್ದಂ (ರಾಮಾಶ್ವ. ೪೦-೨೨) ; ದೇಶಚರಿತೆಗಮವರ ಜಸಕಮಂಕುಶವಾಯ್ತು ನಾಸಾಪುಟದ ರೇಖೆ (ಮಂಕುಕ. ೩೦೬). [ಸಂ.]

**ನಾಸಾಭರಣ** (ನಾ). ಮೂಗಿಗೆ ಹಾಕಿಕೊಳ್ಳುವ ಒಂದು ಬಗೆಯ ಒಡವೆ; ಮೂಗುತಿ ; ಮೂಗುಬೊಟ್ಟು : ನಸುನಗುವಮುಖವು ನಾಸಾಭರಣ ಎಸೆವ ಕಪೋಲ . . . ಶಶಿಸೂರ್ಯರ ಆಭರಣ ಸುಶೋಭಿತೆ (ಪುರಂದ. ೧-೯೧೧-೪). [ಸಂ.]

**ನಾಸಾಮಣಿ** (ನಾ). ೧. = ನಾಸಾಭರಣ. ೨. [ಸಂಗೀತ] ಒಂದು ರಾಗದ ಹೆಸರು : ಜ್ಯೋತಿರಾಗ ಮತ್ತು ಧೌತಪಂಚಮರಾಗ, ಆಮೇಲೆ ನಾಸಾಮಣಿ (ಚತುಸ್ರ. ೧೨೯). [ಸಂ.]

**ನಾಸಾರೋಗ** (ನಾ). ಮೂಗಿಗೆ ಬರುವ ರೋಗ, — ಖಾಯಿಲೆ : ವಾತಜಪ್ರತಿಶ್ಯಾಯ . . . ನಾಸಿಕಾರ್ಬುದ, ಎಂದು ಹೀಗೆ ನಾಸಾರೋಗ ಹದಿನೆಂಟು ತೆಱನೆಂದು ವೈದ್ಯರು ನಿರೂಪಿಸಿದರು (ವೈದ್ಯಸಾ. II, ೧೦೦). [ಸಂ.]

**ನಾಸಾವಂಶ** (ನಾ). ಮೂಗಿನ ನಡುಮೂಳೆ, — ಕಂಬಿ, — ಸಿಂಬೆ : ನಾಸಾವಂಶದೊಳಂತಕವಾಸಮನಾ ಪತಿಗೆ ಮಾಟ್ಪುಮಾವರ್ತಂಗಳ್ (ಅಶ್ವಶಾ. ೪-೧೬) ; ಪ್ರೋಥದ ಕಣ್ಣೆಡೆ ಘೋಣಮದಾ ತೆಱ ಮೂಗೆಸೆವ ಕಂಬಿ ನಾಸಾವಂಶಂ . . . ಪೆಸರೋತಿರ್ಕುಂ ಮೂಗಿನೊಳಗು ಮಶ್ವಾಗಮದೊಳ್ (ಅಶ್ವಶಾ. ೯-೧೩). [ಸಂ.]

**ನಾಸಾವಳಯ** (ನಾ). ಮೂಗು ; ನಾಸಿಕ : ಸುಳಿದುದಾ ಕಾಂತಾರ ಮಧ್ಯಸ್ಥಳದೊಳಗೆ ನರಗಂಧ ನಾಸಾವಳಯದಲಿ ನೈಶಾಟಕುಲದಾಟವಿಕಿ ತಾಟಕಿಯು (ತೊರರಾ. ೧-೧೦-೫). [ಸಂ. ನಾಸಾವಲಯ]

**ನಾಸಾವಿರ** 'ನಾಲ್ಕಾಸಿರ' ನೋ.

**ನಾಸಾವಿವರ** (ನಾ). = ನಾಸಾಪುಟ ೧ : ಹರಿಪದಪರಾಙ್ಮುಖಜೀವಿಗಳು . . . ತತ್ಪಾದತುಳಸೀಪಾವನಾಮೋದವನು ನಿಜನಾಸಾವಿವರವೆಡೆಗೊಳ್ಳದುಸುರುವೆಣಂಗಳವರೆಂದ (ನಿಭಾಗ. ೨-೨-೭). [ಸಂ.]

**ನಾಸಿ, ನಾಶಿ** (ನಾ). ನಾಸೀಪುಡಿ ; ನಸ್ಯ. 'ನಾಸೀಪುಡಿ' ಪರಾ. **ನಾಶಿ :** ನಾಶಿ ಬೇಕಾಗಿತ್ತೇನ ? (ಬೆನ್ನುಹಿಂ. ೭೧). [<ನಾಸ./ತುಳು. ನಾಸ್]

**ನಾಸಿಕ** (ನಾ). ಶರೀರದ ಪಂಚೇಂದ್ರಿಯಗಳಲ್ಲಿ ಒಂದು ; ಘ್ರಾಣೇಂದ್ರಿಯ ; ಮೂಗು : "ನಾಸಿಕಂ ಸಿಂಘಿಣಿ . . . ನಾಸೆಯೆನೆ ಮೂಗಕ್ಕು" (ಮಂಗರಾ. ೯೪-೫) ; ನಾಸಿಕ ವಾಯುವಿನ ಸ್ಥಾನ (ಬಸವ. ೮೪೪) ; ನಾಸಿಪೆಯ ಹಾಲು ಸಾಥಕಾಂಗಂ ನಾಸಿಕದ ನೀರ ಬರಿಸಿತ್ತು (ಕಲ್ಯಾಶಾಂ. ೯-೧೦೪) ; ಸುಳಿವ ತಂಗಾಳಿಯಿಂ ತೀಡುವ ಸುಗಂಧಮಂ ವಾಸಿಸಿದ ನಾಸಿಕಕೆ ನಾಡೆ ಹೊಲೆಯಿಲ್ಲ ಸೋಂಕಿಂಗೆ ಹೊಲೆಯುಂಟಾಯ್ತೆ (ಹಚಕಾ. ೭-೧೯) ; ಕರದ ಚಳಕದ ಕಾದ ನಾಸಿಕದೆರಲ

[ಪಾಠಾಂ. ವೆರಳ]ಕೆತ್ತುವ ವಿೂಸೆಗಳ ಭಟರೆಚ್ಚರುರವಣೆಸಿ (ಕುವ್ಯಾಕ. ೨೩-೫) ; ನಾಸಿಕದಲುಸುರಿರಲು ಸೀತೆಯ ಬಿಡುವುದಿಲ್ಲೆಂದ (ಕೌತಿರಾ. ೨೩-೩೧). 'ನಾಸಿಕೆ' ಪರಾ. [ಸಂ. ನಾಸಿಕಾ]

**ನಾಸಿಕಾಗ್ರ** (ನಾ). ೧. ಮೂಗಿನ ತುದಿ; ತುದಿಮೂಗು : ಭ್ರೂಮಧ್ಯದೆಡೆಯೊಳು ನಾಸಿಕಾಗ್ರದೊಳು ನೇಮದಿಂದ ದೃಷ್ಟಿಯ ನಿಲ್ಲಿಸಿ ಪ್ರೇಮದಿ ಪುರಂದರವಿಠಲನ ಭಜಿಸುತ (ಪುರಂದ. ೪-೧೪೪-೩) ; ಕೈದಳಧೊಳಿಸೆವ ತಲೆಯಂ ನಾಸಿಕಾಗ್ರದೆಡೆಗೊಯ್ದು ಮುರಮಥನನಾ ಘ್ರಾಣಿಸಿದನು (ಜೈಮಿಭಾ. ೧೩-೫೨). ೨. ಮೂಗಿನ ಆದಿಭಾಗ; ಭ್ರೂಮಧ್ಯ : ನಾಸಿಕಾಗ್ರ ಭ್ರೂನಿಟಲ ಮಧ್ಯದೊಳ್ಜ್ವಲಿಸಿ ಬೆಳಗುವ ಸ್ವಯಂಪ್ರಕಾಶಲಿಂಗಕ್ಕೆ ಆಕಾಶದಿಂದೊಸರ್ದ ಅಗ್ಗವಣಿಯಿಂ ಮಜ್ಜನವಂ ಮಾಡಿ (ಆದಪ. ೨೮-೮೪). [ಸಂ.]

**ನಾಸಿಕಾಚೂರ್ಣ** (ನಾ). ನಶ್ಯ; ನಸ್ಯ. [ಸಂ.]

**ನಾಸಿಕಾಪುಟ** (ನಾ). = ನಾಸಾಪುಟ ೧ : ತನ್ನ ಕದಪುಗಳೊದಗೆ ಪುರ್ಬುಗಳುಂ ನಯಂಬಡೆ ನಾಸಿಕಾಪುಟದಿಂ ನಡೆಯಲು ಶ್ವಾಸವಧರಂ ಬಿಡುಕೆ ಮುಖವೆತ್ತಿ (ಬಸಪು. ೪೭-೫೮). [ಸಂ.]

**ನಾಸಿಕಾಭರಣ** (ನಾ). ಮೂಗಿಗೆ ಹಾಕಿಕೊಳ್ಳುವ ಮೂಗು ಬೊಟ್ಟು, ನತ್ತು, ಬುಲಾಕು ಮುಂತಾದ ಒಡವೆ : ಸ್ತ್ರೀಯರುಗಳಿಗೆ ಶುಭವನ್ನೂ, ಶ್ರೀಪ್ರತ್ವವನ್ನೂ ಉಂಟುಮಾಡಿ . . . ಪ್ರಕಾಶಿಸುವುದೇ ನಾಸಿಕಾಭರಣದ ಗುಣ (ಸಕವ್ಯೆ. ೩೭). [ಸಂ.]

**ನಾಸಿಕಾವಿಜ್ಞಾನ** (ನಾ). ೧. ಘ್ರಾಣೇಂದ್ರಿಯದಿಂದ ಉಂಟಾಗುವ ತಿಳಿವಳಿಕೆ. ೨. [ಬೌದ್ಧ] ಪ್ರವೃತ್ತಿ ವಿಜ್ಞಾನದ ಆರುಬಗೆಗಳಲ್ಲಿ ಒಂದು : ಪ್ರವೃತ್ತಿವಿಜ್ಞಾನವು ಚಕ್ಷುರ್ವಿಜ್ಞಾನ, ಶ್ರೋತ್ರವಿಜ್ಞಾನ, ನಾಸಿಕಾವಿಜ್ಞಾನ, ರಸನಾವಿಜ್ಞಾನ, ಕಾಯವಿಜ್ಞಾನ, ಮನೋವಿಜ್ಞಾನ ಎಂದು ಆರು ಪ್ರಕಾರವಾಗಿದೆ (ಹಿಂದಸಾ. ೨೯). [ಸಂ.]

**ನಾಸಿಕೆ** (ನಾ). ೧. ಮೂಗು; ನಾಸಿಕ : "ಮೂಗು ನಾಸಿಕಾ ಘ್ರಾಣ ಸಿಂಘಿನೀ ಘೋಣಾಖ್ಯಂ" (ವಸ್ತುಕೋ. ೭೦-೧೭) ; ಕೊರಲುಂ ಜಿಹ್ವಾಮೂಲಮುಮುರಮುಂ ತಾಲುಗೆಯುಮೋಷ್ಠಮುಂ ನಾಸಿಕೆಯುಂ ಶಿರಮುಂ ದಂತಮುಮೆಂದಕ್ಕರಮುದಯಿಪ ತಾಣ ಮಾದುವೀ ಪೇಟ್ಟಿಂಟುಂ (ಶಮದ. ೩೦) ; ಅವರಿಸುವ ಮಧುಕರದ ಝುಂಕಾರದಿ ತೀವಿ ಕರ್ಣಕೆ ಸುಖಗೊಡುವ ಪಾವನ ಪರಿಮಳದೊಳು ನಾಸಿಕೆಯನುಬಿಜ ಕಾವಲಿಕ್ಕಿತು ಗಂಧವಸರ (ವರ್ಧಚ. ೧-೧೦೪). ೨. ಆನೆಯ ಸೊಂಡಿಲು. [ಸಂ. ನಾಸಿಕಾ]

**ನಾಸಿರ** (ನಾ). ೧. ಸೇನೆಯ ಮುಂಭಾಗ; ಮುಂದುಗಡೆಯ ಸೈನ್ಯ; ಮುಂಚೂಣಿ : ನಾಸಿರದೊಳ್ ಸುನಾಸೀರನಂತೆಸೆವ ನಿನಗೆ ಸಕಲ ಸುಭಟ ಸಾಧಾರಣ ಕಪಿಧ್ವಜಂ (ಕಕುಮಾ. ೮-೧೦). ೨. ಮುಂಚೂಣಿಯ ಭಟ. [ಸಂ.]

**ನಾಸೀಪುಡಿ**, ನಾಶೀಪುಡಿ (ನಾ). ಮೂಗಿಗೆ ಹಾಕಿಕೊಳ್ಳುವ, ಹೊಗೆಸೊಪ್ಪಿನಿಂದ ತಯಾರಾದ ಪುಡಿ,—ಚೂರ್ಣ; ನಸ್ಯದ ಹುಡಿ : ಅವುಗಳ (ಮೊಸಳೆ) ಮೈಬಣ್ಣವು ನಾಸೀಪುಡೀ ಬಣ್ಣದಂತೆ ಇರುತ್ತದೆ (ಮುಂಬಯಿ. ೪-೧೨೮) ; ಕಿಸೆಯೊಳಗಿಂದ ನಾಸೀಪುಡಿಯ ಡಬ್ಬಿಯನ್ನು ಹೊರತೆಗೆದು ಮನಸ್ಸಿನ ಬೇಸರ ಮರೆಯಲು ನಾಸೀ ಪುಡಿಯ ಮರೆಹೊಕ್ಕರು (ಮೂರುದಾ. ೮೨). **ನಾಶೀಪುಡಿ** : ಟೊಂಕದಲ್ಲಿಯ ನಾಶೀಪುಡಿಯ ಡಬ್ಬಿಯನ್ನು ತೆಗೆದು ನಾಶಿ ಏರಿಸುತ್ತಾ ಬಾದ-ಆಚಾರ್ಯರು ನುಡಿದರು (ಜೀವಪ್ರ. ೧೦) ; ಮಂಗಳೂರಿನ ಖಾರದ ಹಳದೀ ನಾಶೀಪುಡಿ . . . ವಾಸನೆ ನನ್ನ ಮೂಗಿನಲ್ಲಿ ಸೇರಿದಂತಾಯಿತು (ಚೆಂಡುಟ. ೧೦೭) ; ಶಿವರಾಮನು . . . ನಾಶೀಪುಡಿ ಬಣ್ಣದ ತನ್ನ ಕೋಟು ಹಾಗೂ ಗೆರೆಗೆರೆಯ ಷರ್ಟು ತೆಗೆದಿಡುವನು (ಪ್ರತಿಬಿಂ. ೨೯). [ನಾಸಿ + ಪುಡಿ]

**ನಾಸೀರ** (ನಾ). ೧. = ನಾಸಿರ ೧. ೨. = ನಾಸಿರ ೨ : ಮೋಹದಿ ಮುಳುಗಿ ಶೋಕಿಸುತ ನಾಸೀರಮುಳಿದ ಹಿ[ಬ]ಲಂದತಳ್ಕಿ ಬಳ್ಕುತ ಸುರೇಶನೇಹಿತ ಕರಂಗಳಂ ಮುಗಿದು ಕೌಸಲ್ಯೆಯನ್ನು ಪ್ರಾರ್ಥನೆಗೈದನು (ವೆಂಕಾರಾ. ೨-೨೩-೯). [ಸಂ.]

**ನಾಸೆ** (ನಾ). ೧. = ನಾಸಿಕ : "ನಾಸಿಕಂ ಸಿಂಘಿನಿ ಘ್ರಾಣಮಾ ಘೋಣಮೆನೆ ನಾಸೆ [ಪಾಠಾಂ. ನಾಸಿಯೆನೆ] ಮೂಗಕ್ಕು" (ಮಂಗರಾ. ೯೪-೫) ; "ನಾಸೆ (ನಾಸ)- ನಾಸಾ" (ತದ್ಭಕೋ. ೨೧). ೨. ಆನೆಯ ಸೊಂಡಿಲು. ೩. ಚಾಚಿಕೊಂಡಿರುವ ಬಾಗಿಲ ಮೇಲುಭಾಗದ ತೊಲೆ,—ಬಡು ; "ಬಾಗಿಲ ಮೇಲೆ ಹಾಕಿದ ಮರ" (ಅಮರ. ಟೀಕೆ). [ಸಂ. ನಾಸಾ]

**ನಾಸ್ತಿ** (ನಾ). ಇಲ್ಲದಿರುವಿಕೆ; ಅಭಾವ : ನಿಮ್ಮ ಅನುಭಾವದಿಂದ ಎನ್ನ ಭವಂ ನಾಸ್ತಿಯಾಯಿತ್ತು (ಬಸವ. ೮೪೨) ; ತನುಗುಣ ನಾಸ್ತಿ ಮನಗುಣ ನಾಸ್ತಿ ಧನಗುಣ ನಾಸ್ತಿಯಾದಡೇನು ಭಾವ ನಾಸ್ತಿಯಾಗ ಬೇಕು (ಅನಚಂ. ೨೩೭-೧೦೭೭) ; ಕರಿಕುಂಭೋದ್ಭವವೌಕ್ತಿಕಪ್ರತತಿಯುಂಟೇ ನಿಮ್ಮೊಳೆಂದೆನ್ನಲ್ . . . ಸೊಸೆಯಂ ಕಣ್ಸನ್ನೆಯೊಳ್ ತೋಱುದಳ್ ಕರಿಕುಂಭಪ್ರತಿಮಾನಕುಂಭಕುಚೆಯಾದಂದಿಂದ ಮದ್ಗೇಹದೊಳ್ ಕರಿಕುಂಭೋದ್ಭವ ನಾಸ್ತಿಯೆಂದಳಿದು ತಾನೇನೆಂಬ ತಾತ್ಪರ್ಯವೋ (ಮಲ್ಲಕಾ. ೩-೨೨೩) ; ಲಿಂಗವೆ ಪತಿಯಾಗಿ ಪಂಚೇಂದ್ರಿಯಂಗಳು ನಾಸ್ತಿಯಾಯಿತ್ತು (ಸಿದ್ಧೇವ. ೧೦೪-೩೨೩) ; ತನ್ನ ಶ್ರಮದ ಹೊರತು ಅವನ ಬಳಿಗೆ ಮತ್ತೆ ಯಾವ ಧನವೂ ಧನೋತ್ಪಾದನೆಯ ಸಾಧನವೂ ಇರಕೂಡದು. ನಾಸ್ತಿಯೇ ಅವನ ಅಸ್ತಿಯಾಗಿರಬೇಕು (ಮಾವಾದ. ೧೨೪). [ಸಂ. ? ಸಂಸ್ಕೃತದಲ್ಲಿ ಇದು ನಾಮಪದದ ಅರ್ಥವನ್ನು ಕೊಡುವ ಅವ್ಯಯ]

**ನಾಸ್ತಿಕ** (ಗು). ೧. ದೇವರು, ಪರಲೋಕ, ಆಗಮ ಇವುಗಳಲ್ಲಿ ನಂಬಿಕೆಯಿಲ್ಲದಿರುವ : 'ನಾಸ್ತಿಕವಾದ' ಪರಾ. (ನಾ). ೨. ದೇವರು, ಪರಲೋಕ, ಆಗಮ ಇವುಗಳಲ್ಲಿ ನಂಬಿಕೆಯಿಲ್ಲದವನು; ನಿರೀಶ್ವರವಾದಿ : ಧರಣೀಪುತ್ರನಿವಾಸದೊಳ್ ನಿಲೆ ಬುಧಂ . . . ನಾನಾನ್ನಪಾನರತಂ ನಾಸ್ತಿಕಂ (ಜಾತತಿ. ೧೭-೨೨) ; ಹಿಡಿದ ಶರಣಾಗತರ ಕಾಯದೆ ಬಿಡುವವನ ನಾಸ್ತಿಕನ ವಿಪ್ರರ ಜಡಿದು ನುಡಿದನ ಗತಿಗಳಾಗಲಿ ರಣದೊಳೋಡಿದರೆ (ಕುವ್ಯಾದ್ರೋ. ೨-೮) ; ಎಲಾ ನಾಸ್ತಿಕನೇ, ಕಂಡ ಮಾತ್ರವೇ ಕತ್ತನ್ನು ಕತ್ತರಿಸುವ ಕಡಿನಾಯಿಯೇ (ಕವಿಕ. I, ೪). ೩. ವೇದಕ್ಕೆ ಪುರಸ್ಕಾರವನ್ನು ಕೊಡದಿರುವ ಬೌದ್ಧ ಮೊದಲಾದ ಮತಕ್ಕೆ ಸೇರಿರುವವನು : "ಶೂನ್ಯವಾದಿನ್, ಸುಗತಃ, ಬಾರ್ಹಸ್ಪತ್ಯಃ, ನಾಸ್ತಿಕಃ—ಈ ೪ ನಾಸ್ತಿಕನು" (ನಾಚಿರಾ. ೧೨೩). ೪. ವೇದವನ್ನು ಖಂಡಿಸುವ ಮತ : ನಾಸ್ತಿಕವೆಂದರೆ ವೇದವನ್ನು ಖಂಡಿಸುವ ಮತ (ಭಾತತ್ತ್ವ. ೮). 'ಆಸ್ತಿಕ$_1$' ಪರಾ. [ಸಂ.]

**ನಾಸ್ತಿಕತನ** (ನಾ). = ನಾಸ್ತಿಕತೆ : ಈಗಂತೂ ಎಲ್ಲೆಲ್ಲೂ ನಾಸ್ತಿಕತನ ಹೆಚ್ಚಿದೆ (ರೂಢಿ). [ನಾಸ್ತಿಕ + -ತನ]

**ನಾಸ್ತಿಕತೆ** (ನಾ). ದೇವರು ಮತ್ತು ಪರಲೋಕಗಳನ್ನು ನಂಬದಿರುವಿಕೆ; ನಾಸ್ತಿಕತನ; ನಾಸ್ತಿಕತ್ವ : "ಮಿಥ್ಯಾದೃಷ್ಟಿಃ, ನಾಸ್ತಿಕತಾ — ೨ ಪರಲೋಕವಿಲ್ಲವೆಂಬ ಅಪ್ರಾಮಾಣಿಕ ಬುದ್ಧಿಯ ಹೆಸರುಗಳು" (ಸಿದ್ಧಾಂತಿ. ೪೫).

[ಸಂ. ನಾಸ್ತಿಕತಾ]

**ನಾಸ್ತಿಕತ್ವ** (ನಾ). = ನಾಸ್ತಿಕತೆ. 'ಆಸ್ತಿಕತ್ವ' ಪರಾ. [ಸಂ.]

**ನಾಸ್ತಿಕದರ್ಶನ** (ನಾ). ವೇದಪ್ರಾಮಾಣ್ಯವನ್ನು ಅಂಗೀಕರಿಸದ ತತ್ತ್ವ,—ಶಾಸ್ತ್ರ : ಈ ಮೂಲ ತತ್ತ್ವಾನ್ವೇಷಣರೂಪದಲ್ಲಿ ಚಾರ್ವಾಕ, ವೈಭಾಷಿಕ, ಸೌತ್ರಾಂತಿಕ, ಯೋಗಾಚಾರ, ಮಾಧ್ಯಮಿಕ, ಜೈನದರ್ಶನಗಳೆಂಬ ಆರು ನಾಸ್ತಿಕದರ್ಶನಗಳೂ ವೈಶೇಷಿಕ, ನೈಯಾಯಿಕ, ಸಾಂಖ್ಯ, ಯೋಗ, ಜೈಮಿನೀಯ, ಔಪನಿಷದಗಳೆಂಬುವ ಆರು ಆಸ್ತಿಕ ದರ್ಶನಗಳೂ ಆವಿರ್ಭವಿಸಿರುತ್ತವೆ (ಭಾರದ. ೨೨೯). [ನಾಸ್ತಿಕ + ದರ್ಶನ]

**ನಾಸ್ತಿಕಧರ್ಮ** (ನಾ). ದೇವರು ಮತ್ತು ಪರಲೋಕವಿಲ್ಲವೆಂಬ ಮತ : ಮೂಢಜನರು ಸಾಕ್ರೇತೀಸನು ನಾಸ್ತಿಕಧರ್ಮವನ್ನು ಜನರಿಗೆ ಬೋಧಿಸುತ್ತಾನೆಂದು ಅವನ ಮೇಲೆ ಆರೋಪ ತಂದು, ಅವನನ್ನು ನ್ಯಾಯಸಭೆಯ ಮುಂದೆ . . . ನಿಲ್ಲಿಸಿದರು (ಮುಂಬಯಿ. ೪–೧೮೨). [ನಾಸ್ತಿಕ + ಧರ್ಮ]

**ನಾಸ್ತಿಕಮತ** (ನಾ). = ನಾಸ್ತಿಕಧರ್ಮ : ಆಸ್ತಿಕಮತದಲ್ಲಿ ನಾಸ್ತಿಕ ಖಂಡನೆಯೂ ನಾಸ್ತಿಕ ಮತದಲ್ಲಿ ಆಸ್ತಿಕಖಂಡನೆಯೂ ಇರುವುದರಿಂದ . . . ಈ ಅಭಿಪ್ರಾಯಗಳು ಇದ್ದುವೆಂದು ತಿಳಿಯಬೇಕು (ಹಿಂದಸಾ. ೧೬). [ನಾಸ್ತಿಕ + ಮತ]

**ನಾಸ್ತಿಕವಾದ** (ನಾ). ದೇವರು ಮತ್ತು ಪರಲೋಕವಿಲ್ಲವೆಂಬ ಅಭಿಪ್ರಾಯವನ್ನು ಸಮರ್ಥಿಸುವ ವಾದ ; ನಿರೀಶ್ವರವಾದ : ಇಂತಹ ಸಂದರ್ಭಗಳನ್ನು ನೋಡಿದರೆ ನಾಸ್ತಿಕವಾದ ಮಾಡುವವರಿಗೆ ಆಸ್ತಿಕ್ಯ ದೃಢವಾಗುವುದೆಂಬ ಅಭಿಪ್ರಾಯ ವ್ಯಕ್ತವಾಗುವುದು (ಹಿಂದಸಾ.೧೪೬) ; ಈ ಪ್ರಶ್ನೆಗೆ ಉತ್ತರವಾಗಿ ಎರಡು ಪ್ರಮುಖ ಪಂಥಗಳು ಜಗತ್ತಿನಲ್ಲಿ ಹುಟ್ಟಿಕೊಂಡುವು. ಅವೇ ಆಸ್ತಿಕ ನಾಸ್ತಿಕವಾದಗಳು (ಶಿಕ್ಷಉ. V, ಮುನ್ನುಡಿ) ; ಸಾಂಖ್ಯದರ್ಶನವನ್ನು ನಿರೀಶ್ವರವಾದವೆಂದೂ ನಾಸ್ತಿಕವಾದವೆಂದೂ ವೇದಾಂತದಾರ್ಶನಿಕರು ದೂರ ತಳ್ಳಿದ್ದಾರೆ (ಭಾರದ. ೧೧೩). [ನಾಸ್ತಿಕ + ವಾದ$_2$]

**ನಾಸ್ತಿಕವಾದಿ** (ನಾ). ದೇವರ ಮತ್ತು ಪರಲೋಕವಿಲ್ಲವೆಂದು ವಾದಿಸುವವನು : ಅವರಲ್ಲಿ ನಾಸ್ತಿಕವಾದಿಗಳೇ ಹೆಚ್ಚು ಮಂದಿ (ರೂಢಿ). [ಸಂ. ನಾಸ್ತಿಕವಾದಿನ್]

**ನಾಸ್ತಿಕ್ಯ** (ನಾ). = ನಾಸ್ತಿಕತೆ : "ಮತಧರ್ಮವಿರೋಧ ; ಮತಧರ್ಮನಿರಾಕರಣೆ ; ನಾಸ್ತಿಕ್ಯ" (Irreligion. ಇಂಕನಿ); ಆಸ್ತಿಕ್ಯದಾಧಿಕ್ಯ ನಿನ್ನ ನಾಸ್ತಿಕ್ಯ ದೈವವುಳ್ಳಗೆ ದೇವರುಂಟೆನೆ ಅಶಕ್ಯ (ಗಣೇಶ. ೬೧–೧೫). 'ಆಸ್ತಿಕ್ಯ' ಪರಾ. [ಸಂ.]

**ನಾಸ್ತಿತ್ವ** (ನಾ). ಇಲ್ಲದಿರುವಿಕೆ ; ಅಭಾವ : ಹೀಗೆಯೇ ಜ್ಞಾನಾದಿ ಚೈತನ್ಯಧರ್ಮ ವ್ಯತಿರಿಕ್ತವಾದ ಅಸ್ತಿತ್ವ, ನಾಸ್ತಿತ್ವ, ವಸ್ತುತ್ವ—ಮೊದಲಾದ ಧರ್ಮಗಳು ಅಜೀವದ್ರವ್ಯದಲ್ಲಿಯೂ ಇವೆ (ಭಾರದ. ೧೮೦). 'ಅಸ್ತಿತ್ವ' ಪರಾ. [ಸಂ.]

**ನಾಸ್ಯ** (ನಾ). ದನಗಳ ಮೂಗಿಗೆ ಹಾಕುವ ದಾರ; ಮೂಗುದಾರ : "ನಾಸ್ಯ = ಎತ್ತುಗಳ ಮೂಗ ನೇಣು" (ನಾಚಿರಾ. ೩). [ಸಂ. ನಾಸ್ಯ]

**ನಾಹ** (ನಾ). ೧. ಕಟ್ಟುವಿಕೆ; ಬಂಧನ. ೨. ಸೆರೆ; ತಡೆ; ಅಡ್ಡಿ : ದೇಹಕರಣಾದಿ ಪ್ರಪಂಚವು ನಾಹವೆನಲಳಿದುಳಿದ ನಿತ್ಯನಿರೀಹವಿಮಳ ಜ್ಞಾನರೂಪನು ನಿನ್ನ ನೋಡೆಂದ (ಕುಸ್ಯಾದ್ರೋ. ೧೪–೫೯). ೩. ಬಲೆ; ಬೋನು. [ಸಂ.]

**ನಾಹಂ** (ನಾ). ನಾನು ಎಂಬ ಭಾವನೆಯಿಲ್ಲದಿರುವಿಕೆ : ನಾಹಂ ಕೋಹಂ ಸೋಹಂ ಎಂಬ ಭಾವರಹಿತನಾಗಿ ಇಪ್ಪನು (ಸಿದ್ಧೇವ. ೧೪೯–೫೬೭). [ಸಂ.]

**ನಾಹಲ**, ನಾಹಳ (ನಾ). ಕೀಳುಜಾತಿಯವನು ; ಬೇಡ ; ದಸ್ಯು ; ಮ್ಲೇಚ್ಛ ; ಕಿರಾತ. **ನಾಹಳ** : "ಕಿರಾತಃ . . . ನಾಹಳಃ, ಭಟಃ, ಮಾಳಾಃ, ಮ್ಲೇಚ್ಛಃ — ಈ ಲ ಬೇಡರ್ಮೊದಲಾಗುಳ್ಳಂತ್ಯ ಜಾತಿಗಳ್" (ಹಲಾಯು. ೯೦–೪೪೫). [ಸಂ.]

**ನಾಹಳ** 'ನಾಹಲ' ನೋ.

**ನಾಹ್ಯ** (ನಾ). ಕಟ್ಟಲ್ಪಡುವುದು ; ಬಂಧಿಸಲ್ಪಡುವುದು. [ಸಂ.]

**ನಾಳ್**$_1$ (ನಾ). ದಿನ : 'ತಿರುನಾಳ್', 'ಮದುವೆನಾಳ್' ಪರಾ. [ದೇ.॥ ತಮಿ. ಮಲ. ಕೊತ. ತೊದ. ನಾಳ್]

**ನಾಳ್**$_2$ 'ನಾಟ್' ನೋ.

**ನಾಳ**$_1$ 'ನಾಲ$_1$' ನೋ.

**ನಾಳ**$_2$ 'ನಾಲ$_2$' ನೋ.

**ನಾಳಕಿವಿ** (ನಾ). ಕಿವಿಯಲ್ಲಿ ಕೀವು ಸುರಿಯುವ ಒಂದು ರೋಗ ; ಕಿವಿಯಲ್ಲಿ ತೂತು ಬೀಳುವ ಒಂದು ರೋಗ : ಉತ್ತರಾಣಿ ಸೊಪ್ಪಿನ ರಸ ಇಳುಹಿ ಕಿವಿಗೆ ಬಿಡಲು ನಾಳಕಿವಿ ಮಾಣ್ಗುಂ (ವಿವೈವಿ. ೬೧). [ನಾಳ$_1$(= ನಾಲ$_1$) + ಕಿವಿ$_2$]

**ನಾಳಬಂದಿ** 'ನಾಲಬಂದಿ' ನೋ.

**ನಾಳಲು** 'ನಾನಲ್' ನೋ.

**ನಾಳಲುವಾಸೆ** (ನಾ). ಒಂದು ಬಗೆಯ ಗಿಡ : "ಪುಷ್ಯ—ಕುಂಬಳ, ಉತ್ತರಣೆ, ನಾಳಲುವಾಸೆ" (ಓಷಧಿ. ೧೦೦). [ ? ]

**ನಾಳವಾಸಿಗೆ** 'ನಾಟಿವಾಸಗೆ' ನೋ.

**ನಾಳವ್ಯಾಸ** (ನಾ). ಬಂದೂಕಿನ ಕೊಳವೆಯ ರಂಧ್ರ,—ಟೊಳ್ಳು : "ಬಂದೂಕಿನ ಕೋವಿಯ ನಾಳ ; ನಾಳವ್ಯಾಸ" ( Bore. ಇಂಕನಿ). [ನಾಳ$_1$(= ನಾಲ$_1$) + ವ್ಯಾಸ]

**ನಾಳಸಂಕೋಲೆ** (ನಾ). ಒಂದು ಬಗೆಯ ಕಂಠರೋಗ ; ಲೋಳಸಂಕೋಲೆ : ನಾಳಸಂಕೋಲೆ, ಛಳಿಜ್ವರ, ರೇಷ್ಮೆಜ್ವರ, ಗಂಟಲುಬೇನೆಗಳಿಗೆ ಸಿದ್ದಣ್ಣನ ಮೂಲಿಕೆಗಳು ಸಿದ್ಧೌಷಧವಾಗಿದ್ದುವು (ಪಂಚಪಂ. ೫೪). [ನಾಳ$_1$(= ನಾಲ$_1$) + ಸಂಕೋಲೆ(<ಸಂಕಲೆ)]

**ನಾಳಿ**$_1$ 'ನಾಲಿ' ನೋ.

**ನಾಳಿ**$_2$ (ನಾ). ಒಂದು ಬಗೆಯ ಸಸ್ಯ : "ಕಹಿದೊಂಡೆ ನಾಳಿಯುಕ್ತ್ಯ" (ಮಂಗರಾ. ೩೩–೮) ; "ಶೃಂಗೀ—ಅತಿಬಜೆ, ಕರ್ಕಟಕಶೃಂಗಿ, ನಾಳಿ, ಗೋಣಿ, ಅರಳಿ, ವೃಷಭಕ, ಖಡ್ಗಮೃಗ" (ಓಷಧಿ. ೧೭೦). [ ? ]

**ನಾಳಿಂಧಮ** (ನಾ) = ನಾಡಿಂಧಮ : "ನಾಳಿಂಧಮಂ ಕಳಾದಂ ಮುಷ್ಟಿಕದನಕ್ಕಸಾಲೆಯೆನಿಸಿಕ್ಕು" (ಮಂಗರಾ. ೧೧೧–೧) ; ಕೀಳುಚಿನ್ನದ ಕುಂದನವನೆಂದಿನಂತಾಲೋಚಿಸದೆ ತೆಗೆದು ಕೊಡುವುದೆನಲು ಪೋಲಾಗದಂತಿತ್ತ ನಾಳಿಂಧಮನ ಕಂಡೆವು (ಭಕ್ತಿಸ. III, ೨೬–೨). [<ಸಂ. ನಾಡಿಂಧಮ]

**ನಾಳಿಕ** 'ನಾಲಿಕ' ನೋ.

**ನಾಳಿಕಾದಳನೇತ್ರ** (ನಾ). ೧. ತಾವರೆಯ ಎಸಳುಗಳಂತೆ ಕಣ್ಣುಳ್ಳವನು. ೨. ಶ್ರೀಕೃಷ್ಣ : ಅವನ ಪಿಡಿತರಲು ನಾಳಿಕಾದಳನೇತ್ರ ಬಂದಪನುಮುವನೊಡನೆ ಸೆಣಸಿ (ನನವೋ. ೨೯–೬). [ಸಂ. ನಾಲಿಕಾದಲನೇತ್ರ]

**ನಾಳಿಕಾಪಾತ್ರ** (ನಾ). ಕೊಳವೆಯಾಕಾರದ ಪಾತ್ರೆ ; ಬಿದಿರಿನ ಅಂಡೆ : ಶ್ರುತಿನಾದಂ ಚರಣಾಯುಧಧ್ವನಿ ಶಿವಾಗಾರಾಳಿ ತೂರ್ಯಸ್ವನಂ ತತಸೂರ್ಯಸ್ವನಮೆಂದು ಸಿಂಧುಜಲಮಗ್ನಂ ನಾಳಿಕಾಪಾತ್ರ ಮುದ್ಗತ ಭೃಂಗೀರುತಿ ಶೋಭನಂ ನೆಱೆಯೆ (ನೃಷವಿ. ೯–೨೬). [ಸಂ. ನಾಲಿಕಾಪಾತ್ರ]

**ನಾಳಿಕಾಯಂತ್ರ** (ನಾ). ದೂರದರ್ಶಕಯಂತ್ರ; ದುರ್ಬೀನು: ಈ ಸ್ಥಳೀಯವಾದ ಒಂದು ಐತಿಹ್ಯವನ್ನು ಈ ನಮ್ಮ ಭರತಖಂಡವೆಂಬ ಮಹಾರಾಜ್ಯಕ್ಕೆ ಹೋಲಿಸಿ ಚರಿತ್ರೆ ಎಂಬ ದುರ್ಬೀನು ಅಥವಾ ನಾಳಿಕಾಯಂತ್ರದಿಂದ ಶೋಧಿಸಿ ನೋಡಿದರೆ . . . ಅನೇಕವಾಗಬಹುದು (ಪಾಳಗಾ. ೨). [ಸಂ. ನಾಲಿಕಾಯಂತ್ರ]

**ನಾಳಿಕಾವಾದ್ಯ** (ನಾ). ಒಂದು ಬಗೆಯ ಊದುವ ವಾದ್ಯ; ನಾಳ ಮೊದಲಾದ ಟೊಳ್ಳುವಸ್ತುಗಳಿಂದ ಮಾಡಿದ ವಾದ್ಯ: (ಸಾಮಾನ್ಯವಾಗಿ ಬಹುವಚನದಲ್ಲಿ) ನಾಳಿಕಾವಾದ್ಯ(ಗಳು) (Reed. ೫೦೪೩). [ಸಂ. ನಾಲಿಕಾವಾದ್ಯ]

**ನಾಳಿಕೆ** 'ನಾಲಿಕೆ' ನೋ.

**ನಾಳಿಕೇರ** 'ನಾಲಿಕೇರ' ನೋ.

**ನಾಳಿಕೇರಗುಳಿಗೆ** (ನಾ). ಒಂದು ಬಗೆಯ ಔಷಧ: ಬಹುಮೂತ್ರಕ್ಕೆ ನಾಳಿಕೇರಗುಳಿಗೆಯಂ ಕೊಡುವುದು (ವಿಸ್ತೈವಿ. ೧೫೫). [ನಾಳಿಕೇರ (=ನಾಲಿಕೇರ)+ಗುಳಿಗೆ$_1$]

**ನಾಳಿಕೇರತೋಯ** (ನಾ). ತೆಂಗಿನ ಕಾಯಿಯ ಒಳಗಿರುವ ನೀರು; ಎಳನೀರು: ಘೃತಕ್ಷೀರದಧಿನಾಳಿಕೇರತೋಯಾಮ್ರರಸೇಕ್ಷುರಸಗಂಧೋದಕಾದಿಗಳಿಂ ಮಾಡುವ ಸವನಮುಂ (ಆದಿಪು. ೧೫-೧೩ ಪ). [ನಾಳಿಕೇರ (=ನಾಲಿಕೇರ)+ತೋಯ$_2$]

**ನಾಳಿಕೇರಪರ್ಣ** (ನಾ). ತೆಂಗಿನ ಮರ: ಅಂತು ಪೊಕ್ಕು ಶತಪತ್ರಸೂತ್ರಂಗಳೊಳಂ . . . ಶೀರ್ಣನಾಳಿಕೇರಪರ್ಣಂಗಳೊಳಂ ಅಮರ್ಕೆಯುಂ ಪೋಲ್ಕೆಯುಂ ಒಲ್ವುಂ ಚೆಲ್ವುಮಾಗೆ (ಚಂದ್ರಪು. ೭-೧೧೪ ಪ). [ನಾಳಿಕೇರ (=ನಾಲಿಕೇರ)+ಪರ್ಣ]

**ನಾಳಿಕೇರಫಲ** (ನಾ). ತೆಂಗಿನಕಾಯಿ: ನಿರವದ್ಯಾಮಳನಾಳಿಕೇರಫಲತೋಯಸ್ನಾನಮುಂ . . . ಆಯುತ್ತ ಪಾತ್ರ ಸುರಸೇನಾಚಕ್ರನಿಂ ಶಕ್ರನಿಂ (ಪುಷ್ಪಪು. ೧೧-೭). [ನಾಳಿಕೇರ (=ನಾಲಿಕೇರ)+ಫಲ$_1$]

**ನಾಳಿಕೇರರಸ** (ನಾ). =ನಾಳಿಕೇರತೋಯ: ನಾಳಿಕೇರರಸಧಾರಾವೃಷ್ಟಿ ಜೇನೆಯ್ಯ ಸೋನೆ ಸುಧಾಸಾರವಿದೆತ್ತಣಿಂ ಪಸರಿಸಿತ್ತೆಂಬಂತು ದೈತ್ಯಾರಿ ಬಾಜಿಸಿದಂ . . . ವಾಸವಂ (ಜಗವಿ. ೫-೪). [ನಾಳಿಕೇರ (=ನಾಲಿಕೇರ)+ರಸ]

**ನಾಳಿಕೇರವಟಕ** (ನಾ). =ನಾಳಿಕೇರಗುಳಿಗೆ: ನಾಳಿಕೇರವಟಕ:— ಇದನ್ನು ಮಾಡುವ ಕ್ರಮ ಬಹುಮೂತ್ರಕ್ಕೆ ಗುಳಿಗೆಯಂ ಮಾಡುವ ಪ್ರಕಾರವು—ತೆಂಗಿನ ಹೊಂಬಾಳೆ, ಬಾಳೇಹೂವು, ಇವು . . . ಪ್ರತ್ಯೇಕ ಹತ್ತು ಪಲದ ಮರ್ಯಾದೆಯಲ್ಲಿ ತೂಗಿಕೊಂಡು ಸಣ್ಣನಾಗಿ ಅರೆದು ೭೪ಲ ಪಲ ಉದಕವನ್ನು ದೊಡ್ಡ ಕಳಸಿಗೆಯಲ್ಲಿ ಹೊಯಿದು . . . ಕಾಸಿ ಇರಿಸುವುದು (ವಿಸ್ತೈವಿ. ೩೫). [ನಾಳಿಕೇರ (=ನಾಲಿಕೇರ)+ವಟಕ]

**ನಾಳಿಕೋದ್ಭವ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಕಾಲಗತಿ ಯಾರನುಳುಹಿದುದಿಲ್ಲ . . . ನಾಳಿಕೋದ್ಭವನ ಶಿರಗಳೆಸಿತ್ತು . . . ಮುನಿಜನರ ಮೈಗೆ ಬೂದಿಯ ಪೂಸಿತು (ನವಮೋ. ೮-೫೯). [ನಾಳಿಕ (=ನಾಲಿಕ)+ಉದ್ಭವ]

**ನಾಳಿಗಡಿತ** (ನಾ). ನಾಳಗಳನ್ನು ಕತ್ತರಿಸುವಿಕೆ; ನರಗಳನ್ನು ಛೇದಿಸುವುದು: ವೈರಿಸೇನೆಯ ನಾಳಿ[ಪಾಠಾಂ. ಳಿ]ಗಡಿತದ ನೊರೆಯ ರಕುತದ ನೂಕುಧಾರೆಗಳ ಏಳಿಗೆಯಲಾ ಛತ್ರಚಮರೀಜಾಳ ನನೆದವು (ಕುಮ್ಮಾಕ. ೧೦-೨೩). [ನಾಳಿ$_1$ (=ನಾಲಿ)+ಕಡಿತ$_2$]

**ನಾಳಿಗೆ** 'ನಾಟಿಕೆ' ನೋ.

**ನಾಳಿಗೊಂಡ** (ನಾ). "ನಿರ್ಮಾಲ್ಯವಿರುವ ಗುಂಡಿ" (ಶಿವಸಂ. ಕೋಶ): ಚೋಳನೃಪ ಲಿಂಗಾರ್ಚನೆಯ ಮಾಡಿ ಪುಷ್ಪವನು ನಾಳಿಗೊಂಡದೊಳಂದು ಹಾಯ್ಕೆ ನಿರ್ಮಾಲ್ಯವನು (ಶಿವಸಂ. ೨೫೭-೧೮೦); ಚೋಳನೃಪ ಬರುತೆ ಕೊಂಡದೊಳಾರು ಕೇಳಿರೇ ನಾಳಿಗೊಂಡಕೆ ಬಂದ ನೀವಾರು ಹೇಳಿರೇ ಎನುತೆ ನಮ್ಮೊಡೆಯರಲ್ಲಿಗೆ ನಡೆಯಿ ನಡಯೆನುತೆ (ಶಿವಸಂ. ೨೫೭-೨೦೪). [ನಾಳಿ ? +ಕೊಂಡ$_2$]

**ನಾಳಿದು**, ನಾಡದು, ನಾಡಿದು, ನಾಡಿದ್ದು, ನಾಳಿದ್ದು, ನಾಳಿದರ್ು (ನಾ). ನಾಳೆ ಕಳೆದ ಮರುದಿನ; ಇಂದಿಗೆ ಮೂರನೆಯ ದಿನ: ನೀನಿನ್ನುಬ್ಬೆಗಂಬಡಿದಿರ್ ನಾಳೆಯೊ ನಾಳಿದೊ ನಿಜಪ್ರಿಯಸಮಾಗಮಮಕ್ಕುಂ (ಜಾವುಂಪು. ೧೯); ತರುಣಿಯೆ ಕೇಳಾದೊಡೆ ನಾಳಿದು ಹಿಮಕರವಾರಂ ಪೋಪೆಂ ಪೋಪೆಂ (ಉದ್ಭದೇ. ೩-೭೩). **ನಾಡದು:** ಕೂಡುವಾ ಬಗೆಗೊಳೆ ನಾಳೆ ನಾಡದು ಮಹೋತ್ಸವದಿಂ ನಿಜಜೀವಿತೇಶನೊಳ್ (ಆದಿಪು. ೩-೫೦); ಇಂದು ಮಾಡತಕ್ಕ ಕಾರ್ಯವನ್ನು ನಾಳೆ ಮಾಡಿದರೇನು ನಾಡದು ಮಾಡಿದರೇನು ಮಾಡದೆ ಇದ್ದರೇನು? (ಮುಂಗಾಪು. ೭೯). **ನಾಡಿದು:** ಸವಸಂದ ಕಾಲವಾಚಕವಿವು ನಾಡಿದು ನಾಳೆ ನಿನ್ನೆ ಮೊನ್ನೆಗಳಾದಂ (ಶಸುದ. ೩೨೨); ನಾಳೆ ನಾಡಿದಿನೊಳು ಮುಗಿವುದಾ ಗ್ರಂಥ ಭೂಪಾಲವಂಶಾಂಬರಭಾನು (ಭರಚ. ೨೦-೯೨). **ನಾಡಿದ್ದು:** ನಾಳೆ ಬೇಡ, ನಾಡಿದ್ದು ಬಾ (ರೂಢಿ). **ನಾಳಿದ್ದು:** "ನಾಳಿದ್ದು—ನಾಡದು" (ಜಾನಕೋ. ೧೧); ಇಂದೆನ್ನ ವಧುವ ನಾಳೆನ್ನ ಧನವ ನಾಳಿ[ಪಾಠಾಂ. ಡಿ]ದ್ದೆನ್ನ ತನುವ ಬೇಡರೇಕಯ್ಯಾ (ಬಸವ. ೭೨೨). **ನಾಳಿದರ್ು:** ಗುರುಮಠದೊಳೆಮ್ಮಯ್ಯಗಳ ಪರ್ಬಕ್ಕೆ ನಾಳಿದರ್ು ಕರೆಯ ಬಹೆ ನಾ ನಿನ್ನನು (ಬಸಪು. ೧೪-೧೨). [ದೇ.॥ ತಮಿ. ನಾಳೈನಿನ್ಱು]

**ನಾಳಿದ್ದು** 'ನಾಳಿದು' ನೋ.

**ನಾಳಿಪತ್ರ** (ನಾ). ರಕ್ತನಾಳ; ಧಮನಿ; ಸೆರೆ: "ಸಿರೆ ನಾಳಿಪತ್ರ ಮನೆ ಸೆರೆಯುಕ್ಕು" (ಮಂಗರಾ. ೧೩೪-೩೪). [ಸಂ. ನಾಲಿಪತ್ರ]

**ನಾಳಿಪುಣ್** 'ನಾಳವುಣ್' ನೋ.

**ನಾಳಿಬೀೞ್** (ಕ್ರಿ). ನಾಡಿಹುಣ್ಣಾಗು; ಗುಳಿಬಿದ್ದು ಹುಣ್ಣುಂಟಾಗು: ಮನೆಯೊಳ್ ಪೆಣ್ಗತ್ತೆಯಾಗಿ ಪುಟ್ಟಿ ಪಿರಿಯವಪ್ಪ ಪೊಱೆಗಳಂ ಪೊತ್ತು ಪೋಗಿ ಬೆನ್ನೊಳ್ ನಾಳಿಬಿದರ್ು ಕಟಿಮೆಯಾಗಿ ಪುೞುತು ನಮೆದು ಸತ್ತು (ವಡ್ಡಾರಾ. ೯-೨). [ನಾಳಿ$_1$ (=ನಾಲಿ)+ಬೀೞ್$_1$]

**ನಾಳಿಯಂಬು** (ನಾ). ಒಂದು ಬಗೆಯ ಬಾಣ: ಬೋಳೆಯಂಬೀರೈದುಸಾವಿರ ನಾಳಿಯಂಬುಗಳಾಱು ಬಂಡಿಯ ಲೆಕ್ಕವಿದೆಯೆಂದ (ಕುಮ್ಮಾಕ. ೧೮-೨೨); ಆತನ ಆಯುಧಗಳ ಗಣನೆ ಎಷ್ಟೆಂತೆಂದಡೆ . . . ನಾಳಿಯಂಬುಗಳು ಹತ್ತುಸಾವಿರ (ಭೈರಷಾ. ೮೫). 'ನಾಳಿವಿಲ್' ಪರಾ. [ನಾಳಿ$_1$ (=ನಾಲಿ)+ಅಂಬು$_2$]

**ನಾಳಿಯ ಸೊಪ್ಪು** (ನಾ). ಒಂದು ಬಗೆಯ ಗಿಡ: "ನಾಸಾವತೀ—ನಾಳಿಯ ಸೊಪ್ಪು" (ಒಷಧಿ. ೮೫). [ನಾಳಿ$_2$+ಸೊಪ್ಪು$_3$]

**ನಾಳಿದರ್ು** 'ನಾಳಿದು' ನೋ.

**ನಾಳಿವಳುಗು** (?). (?): ನಾಳಿವಳುಗು ಕೊ ೯ ದೇವಾಲಯದಿಂ ಬಡಗಲು ಮಣಲಿಹಂತ ಗದ್ದೆ ಸ ೨ (ಎಕ. XVI, ಚಿಕ್ಕನಾ. ೬೯-೩೦; 1177). [ ? ]

**ನಾಳಿವಿಲ್**, ನಾಳಿವಿಲು, ನಾಳಿವಿಲ್ಲು(ನಾ). ಒಂದು ಬಗೆಯ ಬಿಲ್ಲು: ಬಾಂಬರಮೆಸೆವ ಕಕ್ಕೆಯುದ ನಾಳಿವಿಲ್ ಝುಗುಝುಗಿಪ ಪೊಸಪೊನ್ನ ಪಕ್ಕರಕ್ಕೆಗಳ . . . ಮದಾಂಧಸಿಂಧುರವರ್ಗಮುಸ್ತಕಮನಗಿದು ಪೊನ್ನಂಕುಶದೆ ಮೈವಳಿಗೆ ತರ್ಪ ಜೋದರ ಹಿಂಡು ನಡೆಗೊಂಡುದು (ಚಿಬವು. ೪೧-೫೦). **ನಾಳಿವಿಲು:** ಲಾಡಿಯ ವಜ್ರಮುಷ್ಟಿಗಳ ನಾಳಿವಿಲುಗಳ

ರಾಯಜೋದರ ಮೇಳವಣಿಗಳ ಚಿತ್ರಗತಿಕುಂಡಾಲವನು ನೋಡಿದರು ಗಜಸೇನಾಸಮುದ್ರದಲಿ (ಕುವ್ಯಾಉ. ೧೧-೧೯) ; ಅಲ್ಲಿಯಾತನ ಕೂಡೆ ತಟ್ಟಿಯ ಬಿಲ್ಲುಗಳನಾ ಪೊಂಗುವಿಲುಗಳ ಬಲ್ಲಿತೆನಿಪಾ ನಾೞವಿಲುಗಳನಂತೆ ಸಿಂಗಾಡಿಬಿಲ್ಲುಗಳ . . . ಪಿಡಿದಾ ನಿಶಾಟರು ನೆರೆದು ದವನೊಡನೆ (ಸಾಳ್ವಭಾ. ೫-೧೩). **ನಾೞವಿಲ್ಲು :** ವರಾಳಕಳಿಂಗಬರ್ಬರರಾನೆಗಳ ಥಟ್ಟಿಂಗೆ ಕೈವೀಸಿದರು ಕೊಂಡರು ನಾೞವಿಲ್ಲುಗಳ (ಕುವ್ಯಾದ್ರೋ. ೨-೬೮) ; ಇಡುಗುಂಡು ನಾೞವಿಲ್ಲಂಬು ಡೊಂಕಣಿ ಇಟ್ಟಿ ಬಿಡದೆ ಬೀಱುವ ಪಾಶ ಲೌಡಿ . . . ಕೈಪಾರೆಯು ಕಡುಗಲಿ ಜೋದರೆಯ್ದಿದರು (ಕುರಾಸಾಂ. ೧೯-೨೧). [ನಾೞ₁ (=ನಾಲಿ) + ಬಿಲ್₂]

**ನಾೞವಿಲು** 'ನಾೞವಿಲ್' ನೋ.

**ನಾೞವಿಲ್ಲು** 'ನಾೞವಿಲ್' ನೋ.

**ನಾೞವುಣ್,** ನಾೞಪುಣ್ (ನಾ). ನಾಡಿಹುಣ್ಣು ; ಗುಳಿ ಬಿದ್ದ ಹುಣ್ಣು ; ಚರ್ಮ ಬಿರುಕು ಬಿಟ್ಟು ಆಳವಾಗುವ ಹುಣ್ಣು : ಚಂಚಪತ್ರರಸಮಂ ಘೃತಮಿಶ್ರಿತಮಟ್ಟು ಪೊಯ್ದೊಡಂ ಪರಿಹರಿಸಲ್ಕೆ ಸಾಲ್ಗುಮಿದು ಬೆನ್ನೊಡೆದೆಱ್ತನ ನಾೞವುಣ್ಗಳಂ (ಲೋಕೋಪ. ೯-೨೧೪); ಎಣ್ಣೆವಿಡುಗೆ ಮೇಣ್ ಘೃತಪರಿಸೇಕಂಗೆಯ್ಗೆ ನಾೞವುಣ್ಗಳ್ ಕಿಡುಗುಂ (ಅಶ್ವಶಾ. ೧೨-೨೫). **ನಾೞಪುಣ್ :** ಎತ್ತುಗಳ ಬೆನ್ನೊಡೆದು ಅಡ್ಡ ನಾ(ಲಾ)ೞಪುಣ್ಗಳ್ ಮಾಣ್ಬುವು (ಲೋಕೋಪ. ೯-೨೧೪ ಟೀಕು) ; ನಡುವೆನ್ನೊಡೆದಿರ್ಬಗಿಯಾಗಿ ಪೋೞ್ದು ನೀರೇಱಿದ ನಾೞಪುಣ್ಣೊಡೆದು ಸೌಳನೆ ಸೀಳ್ದುದು ದೋಣಿವೋಪಿನಂ (ಸುಕುಮಾ. ೫-೧೬).

[ನಾೞ₁ (=ನಾಲಿ) + ಪುಣ್]

**ನಾೞವೋಗು** (ಕ್ರಿ). ಗುಳಿಬೀಳು ; ಪೋಟುಬೀಳು : ಭಿನ್ನಪದಕ್ಕೆ . . . ಪುಣ್ ನಾೞವೋದಪುದು, ಪುಣ್ಣಾೞವೋದಪುದು (ಶಮದ. ೧೫೮ ಪ್ರಯೋ). [ನಾೞ₁ (=ನಾಲಿ) + ಪೋಗು₁]

**ನಾೞೀಕ** 'ನಾಲೀಕ' ನೋ.

**ನಾೞೀಕಭವ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ : ನಾೞೀಕಭವನ ನುಡಿಯಿಂದ ವೈಕುಂಠಪತಿ ಮನುಜಾವತಾರವನ್ನು ತಾೞ ದಶರಥ ಕುವರನೆನಿಸಿರ್ದ ಪರಿಯನಾಂ ಕೇೞ ಕ್ರತುರಕ್ಷಣೆಗೆ ಯಾಚಿಸಲ್ ನೃಪತಿ ಸಮ್ಮೇಳದಿಂ ಸುತರಿರ್ವರನ್ನು ಕಳುಪಿದ (ವೆಂಕರಾ. ೧-೧೬-೧).

[ಸಂ. ನಾಲೀಕಭವ]

**ನಾೞೀಜಂಘ** 'ನಾಲೀಜಂಘ' ನೋ.

**ನಾೞೀಪತ್ರ** (ನಾ). ಒಂದು ಬಗೆಯ ಗಿಡ : "ಧಾತ್ರೀಪತ್ರಂ—ನಾೞೀಪತ್ರಂ" (ಓಷಧಿ. ೮೧). [ಸಂ. ನಾಲೀಪತ್ರ]

**ನಾೞೀವ್ರಣ**(ನಾ). = ನಾೞವುಣ್: ಆ ವ್ರತಶಿತಾಸಿಸಂಸಾರವ್ರತತಿಚ್ಛೇದ ಮಕ್ಕುಮಾ ಸಂಸಾರಂ ತೀವ್ರತರದುಃಖದಂ ನಾೞೀವ್ರಣಸದೃಶಂ ಶರೀರಿಗದ ಕಿಡೆ ನೆಗೞ್ಗಿಂ (ಶಾಂತಿಪು. ೭-೭) ; ಕೊಳಗುೞಕೆಯ ಪುಣಿಸೆಯ ಕೋಮುೞಕೆಯನೆ(ದ)ೞದೞಸುವೆತ್ತು ನಾಲಿಗೆಯೆಲೆಯಂ ತಿಲತೈಲದೊಳರೆದೊಂದನೆ ವಿಲೇಪನಂಗೆಯ್ವುದಡಸಿ ನಾೞೀವ್ರಣಮಂ (ಅಶ್ವಶಾ. ೧೨-೧೬). [ಸಂ. ನಾಲೀವ್ರಣ]

**ನಾೞು** 'ನಾಟಿರ್' ನೋ.

**ನಾೞುಪ್ರಭು** 'ನಾಟ್ಪ್ರಭು' ನೋ.

**ನಾೞೆ** (ನಾ). ಈವೊತ್ತಿನ ಮರುದಿನ; ಇಂದಿನ ರಾತ್ರಿ ಕಳೆದ ಕೂಡಲೆ ಬರುವ ದಿನ : ಅನ್ನೆಗಮುರಸನುಮುರಸಿಯುಂ ಭಟ್ಟಾರರೊಡವಂದ ಬ್ರಹ್ಮಚಾರಿ ತಪಂಬಟ್ಟನೆಂಬುದಂ ಕೇಳ್ದು . . . ನಾೞೆ ನಮ್ಮ ಮನೆಯೊಳ್ ಪಾರಣೆಗಟ್ಟುವಮೆಂದು ಬಗೆದಿರ್ದು (ವಡ್ಡಾರಾ. ೭೯-೧೧); ಗುಣಾರ್ಣವನಿಂ ನಾೞೆಯೆ ಕೇಳದಿರ್ಪರೆ ಮಹಾಗಾಂಡೀವನಿರ್ಘೋಷಮಂ (ಪಂಪಭಾ. ೯-೫೬) ; ನಾೞೆ ಬಂದು ಜಾಲಮಂ ಬೀಸಿ ಮತ್ಸ್ಯಂಗಳಂ ಪಿಡಿವಂ (ಪಂಚತಂ. ೧೫೮-೨೦) ; ನಾೞೆ ಬಪ್ಪುದು ನಮಗಿಂದೆ ಬರಲಿ (ಬಸವ. ೬೯೬) ; ಇಂದಿಗೆಂತು ನಾೞೆಗೆಂತೆಂದು ಚಿಂತಿಸಲೇಕೆ (ದೇವಾವ. ೪೬-೯೧); ನಾೞೆ ಪಡುವಣ ತರಣಿ ತೊಲಗದ ಮುನ್ನ ಕೊಲುವೆನು ವೈರಿ ಸೈಂಧವನ (ಕುವ್ಯಾದ್ರೋ. ೮-೩೫) ; ತುರಗವಿವು ನಾೞೆನಲಿ ಕುಂಡಿನಿಪುರಿಗೆ ಪರಗತವಾಗವು (ತೊರರಾ. ೩-೨-೧೯) ; ನಾೞೆಯು ತನಕ ನಾನು ನಿರೀಕ್ಷಿಸಿಕೊಂಡಿರಲಾರೆ (ಬಂಕಿಮ. ೧೬೬). [ದೇ.॥ ತಮಿ. ನಾೞೈ ; ಮಲ. ನಾಳ ; ಕೊಡ. ನಾೞೆ ; ಗೊಂಡಿ. ನಾಱು]

**ನಾೞ್ಕಡಿವೋಗು** 'ನಾಟ್ಕಡೆವೋಗು' ನೋ.

**ನಾೞ್ಕೇೞೋ** (ನಾ). ಒಂದು ದುರ್ಗದ ಹೆಸರು : ತಞ್ಜಾಪುರಿ ನಾೞ್ಕೇೞೋಪ್ರಮುಖಾದಿ ದುರ್ಗನಿವಹಾನ್ ದಗ್ಧ x x x (ಮೈಅರಿ. ೧೯೨೧, ೧೦-೮೯ ; 967). [ ? ]

**ನಾೞ್ಗತೆ** (ನಾ). ನಾಡ ಕತೆ ; ಸಾಮಾನ್ಯವಾದ ಕಥೆ : ನಾೞ್ಗತೆಯ ನಡೆಸುವ ಪುಣ್ಯಬಾಹಿರರು . . . ಹರಿಭಕ್ತಿಶೂನ್ಯರು ನಿಂದಕರು ಹೊಱವಡಲಿ ಬಣ್ಣಿಪೆ ಹರಿಕಥಾಮೃತವ (ಕಾರಾ. ೪-೨).

[ನಾೞ್₂ (<ನಾಡು) + ಕತೆ]

**ನಾೞ್ಗಾದೆ** 'ನಾಟ್ಗಾದೆ' ನೋ.

**ನಾೞ್ಗಾವಿಂಗ** 'ನಾಟ್ಗಾವಿಂಗ' ನೋ.

**ನಾೞ್ಗಾವುಂಡ** 'ನಾಟ್ಗಾವುಂಡ' ನೋ.

**ನಾೞ್ಗಾವುಂಡ** 'ನಾಟ್ಗಾವುಂಡ' ನೋ.

**ನಾೞ್ಗಾವುಂಡು** 'ನಾಟ್ಗಾವುಂಡು₂' ನೋ.

**ನಾೞ್ಗಾವುಂಡುಗೆಯ್** 'ನಾಟ್ಗಾವುಂಡುಗೆಯ್' ನೋ.

**ನಾೞ್ನುಡಿ** 'ನಾಟ್ನುಡಿ' ನೋ.

**ನಾೞ್ಮಾತು,** ನಾಣ್ಮಾತು (ನಾ). = ನಾಟ್ನುಡಿ : ಎಲೆಲೇ ಉಳ್ಳುದ ನಾಡೆ ಕೊೞ್ಗೊಳುವರ್ ನೋಡೆಂಬ ನಾೞ್ಮಾತಿದೇಂ (ರತ್ನಾಶ. ೩೩). **ನಾಣ್ಮಾತು:** ಎನ್ನಯ ನುಡಿಯಂ ಕೊಂಡೀ ಕನ್ನೆಯನೊಲ್ದಿತ್ತೆಯೆಂಬುದದು ವಿಕ್ರಯದೋಷನ್ನಿನಗೆ ಬರ್ಕುಮೆಂತೆನೆ ರನ್ನಮನಳಿಗಿತ್ತರೆಂಬ ನಾಣ್ಮಾತಿನವೋಲ್ (ದಶಕು. ೮-೧೨೫).

[ನಾೞ್₂ (<ನಾಡು) + ಮಾತು₁]

**ನಾೞ್ಪ್ರಭು** 'ನಾಟ್ಪ್ರಭು' ನೋ.

**ನಾಱು₁,** ನಾರು₁ (ಕ್ರಿ). ನಾಱ್ದ, ನಾರ್ದ (ಭವಿಕೃ). ೧. ಗಮಗಮಿಸು ; ಸುವಾಸನೆಯನ್ನು ಬೀರು : ರಾಜಾನ್ನದ ಕೂೞುಂ ಪೆಸಱ ತೊವೆಯುಂ ಬೆಣ್ಣೆಗಾಸಿದಾಮೋದಸುಗಂಧಪರಿಮಳಂ ನಾಱ್ದ ತುಪ್ಪಮುಂ . . . ಭಟ್ಟಾರರ್ಗೆ ಬಡ್ಡಿಸಿ (ವಡ್ಡಾರಾ. ೭೮-೧೫) ; ಸೊಡರ್ಗುಡಿಯೊಯ್ಯನಾಗೆ ಪೊಸಮಲ್ಲಿಗೆ ಮೆಲ್ಲಗೆ ಕಂಪು ನಾಱೆ . . . ಗುಣಾರ್ಣವಂ ನೆಱೆಯೆ ನಿಟ್ಟಿಸಿದಂ ಬೆಳಗಪ್ಪ ಜಾವಮಂ (ಪಂಪಭಾ. ೪-೧೧೦) ; ಪೀತವರ್ಣದ ಮಣ್ ಆ ಮಣ್ಣಿನಿಂದತ್ತ ಪಡುವ ಮೊಗೆವಂತಪ್ಪ ಧಾರೆ ಲೋಹಗಂಧಂ ನಾಱುಗುಮುಪ್ಪಕ್ಕುಂ (ಱಟ್ಟಮ. ೧೧-೨೯) ; ಯಾತಱಿದು ಹೂವೇನು ನಾತರದು ಸಾಲದೆ ಜಾತಿ ವಿಜಾತಿಯೆನಬೇಡ ದೇವನೊಲಿದಾತನೇ ಜಾತ (ಸರ್ವಜ್ಞ. ೯೬೮). ೨. ದುರ್ವಾಸನೆಯನ್ನು ಬೀರು; ದುರ್ಗಂಧವನ್ನುಂಟುಮಾಡು : "ನಾಱು—ದುರ್ಗಂಧೇ, ಆರ್ದ್ರೀಕರಣೇ ಚ (ನನೆಯಿಸು)" (ಶಸುಧಾ) ; ಸಿಡಿಲ್ದ ನೆತ್ತರೊಳ್ ಪೊರೆದು ನಿರಂತರಂ ಪೊಲಸು ನಾಱುವ ಮೆಯ್ಯನೆ ಕರ್ಚಲೆಂದು ಚಚ್ಚರಮಪರಾಂಬುರಾಶಿಗಿೞಿವಂತಿೞಿದಂ ಕಮಳೈಕಬಾಂಧವಂ (ಪಂಪಭಾ. ೧೧-೫೧); ಕಾಡಪಂದಿಗಳ ಬಲ್ನೆಣದಿಂ ಪೊಲಸಟ್ಟು ನಾಱ್ದ ಜೇವಡೆಗಳ ಪುಣ್ಗಳಿಂ ತೊರೆವ ನೆತ್ತರ ಕಯ್ನುಡುಗಲ್ಕೆ

(ಶಾಂತಿಪು. ೧೮೩) ; ಕಾಗೆಯ ಗೂಡಿನ ಗಂಧಂ ನಾಜುವೊಡಂ ಮನ ವಿಕ್ಕುವೊಡಂ ಹಯಕ್ಕೆ ತಪ್ಪದು ಮರಣಂ (ಅಶ್ವಶಾ. ೬-೫೨) ; ಬುಡುಬುಡಿಸುವೀಜಾನಲಿ ದುರ್ವ್ರಣದೊಡನೆ ಸೂಸುವ ಬಸೆಯ ನಾಜುವ ಮೊಡೆವೆಣನ . . . ಹೆಣಸಾಲುಗಳ ಸಂದಣಿಯೊಡವಿಯ ಕಂಡಿ ವರು ನಿನ್ನವರಹರೆ ನೋಡೆಂದ (ತೊರವೆ. ೩-೮-೪) ; ನೀಜಿಗೆ ರೋಗ ಬಂದಾಗೊಮ್ಮೆ ಮೈಯೆಲ್ಲ ನಾಜು ತಿಹುದು(ಭರತ.೩-೬೫-೩೨). **ನಾರು**₁: ೨. ಆವಾಗ ನಾರುವ ಮೈಯ ಬಿಟ್ಟ ತೋರಿ ನಲಿಯುವ ಕಾಲು ಕೈಯ್ಯ ಕೋರೆಯ ಮಸಿಯುತ ಕೊಸರಿಕೊಂಡಸುರನ್ನ ಉದರದ ಬಗೆ ದಂಥ ಅದ್ಭುತಮಹಿಮ ತಾ (ಕನಾ೯ಕ. ೨೮೨) ; ದುರ್ವಾಸನೆ ನಾರದಲ್ಲಿ ಅಹಂಕಾರ ಸೇರದಲ್ಲಿ (ಅರಳು. ೩೪೭-೧೨) ; ನೀರುಳ್ಳಿಯನು ಕಚ್ಚಿ ಬಾಯಿ ನಾರುವುದೆಂದು ದೂರಿದರದಕಾವ ಕುಂದು(ಇಂಚಾಪ. ೯೬-೬೯); ಸಮುದ್ರವು ಉಪ್ಪಾಗಿಯಿರುವುದರಿಂದ ಅನೇಕ ಗುಣಗಳು ಉಂಟು. ಅದರಲ್ಲಿ ಸತ್ತ ಜಂತುಗಳ ಕಳೇಬರಗಳಿಂದ ದುರ್ಗಂಧ ನಾರುವದಿಲ್ಲ (ಅಸಂಕ. ೫೪ ೮೯೩) ; ನೀರಾದರೂ ನಾರಬಾರದು (ಗಾದೆ) ; ಕಾಡುವ ಬ್ರಾಹ್ಮಣನಿಗೆ ನಾರುವ ಉಪ್ಪಿನ ಕಾಯಿ (ಗಾದೆ). ೩. (ಆಲಂ) ಮುಗಿಯದಿರು ; ಉಳಿದಿರು : ಎಷ್ಟು ಕೆಲಸ ಹಾಗೇ ನಾರ್ತಾ ಬಿದ್ದಿದೆ (ಮುಣಿಪೂ. ೧೮). [ದೇ.॥ ತಮಿ. ಮಲ. ನಾಱು ; ತುಳು. ಕೊಡ. ನಾರ್]

**ನಾಜು**₂ (ಕ್ರಿ). ಒದ್ದೆಮಾಡು : "ನಾಜು—ದುರ್ಗಂಧೇ, ಆರ್ದ್ರೀ ಕರಣೇ ಚ (ನನೆಯಿಸು)" (ಶಮಧಾ). [ ? ]

**ನಾಜುಂಬೇಳೆ**, ನಾರಂಬೇಳೆ, ನಾರುಂಬೇಳೆ, ನಾರುಬೇಳೆ, ನಾಜು ಬೇಳೆ (ನಾ). ಅಡಿನ ವಾಸನೆಯುಳ್ಳ ಒಂದು ಬಗೆಯ ಔಷಧಿ ಸಸ್ಯ ; ಅಜಗಂಧಿಕೆ : ನಾಜುಂಬೇಳೆ, ಹೊಂಗೆಬೇರು, ಹಿಪ್ಪಲಿ . . . ಇಷ್ಟನು ಪ್ರತ್ಯೇಕ ಎರಡು ವರಹ ತೂಕವ ಒಂದು ಬಳ್ಳ ನೀರಲ್ಲಿ ಹಾಕಿ ಕಷಾಯವೆತ್ತಿ ಅಷ್ಟಾವಶೇಷವಾಗಿ ಕಾಸಿ ಕೊಡಲು ಉದರಶೂಲೆ . . . ಪರಿಹರ (ವೈದ್ಯಸಾ. I, ೨೯೫) ; ಹಿರೀಮದ್ದಿನ ಗೆಣಸು, ನಾಜುಂಬೇಳೆಬೇರು, ಬಜೆ . . . ಇವಿಷ್ಟನೂ ಪ್ರತ್ಯೇಕ ನಾಲ್ಕು ವರಹ ತೂಕವನು ಸಣ್ಣನಾಗಿ ಚೂರ್ಣಿಸಿ (ವೈದ್ಯಸಾ. II, ೫೧). **ನಾರಂಬೇಳೆ** : ಹಿಪ್ಪಲಿ, ಪಿಪ್ಪಲಿಮೂಲ, ನಾರಂಬೇಳೆ ಇವು ಪ್ರತ್ಯೇಕ ಹತ್ತು ಹಲವಂ . . . ಪ್ರಾತಃಕಾಲದಲ್ಲಿ ಗ ೪ ತೂಕವಂ ಸೇವಿಸುವುದು (ಸಕವೈ. ೨೧೭) ; ತಿಲಪರ್ಣಿಕಾ (ನಾರಂಬೇಳೆ) (ಅಷ್ಟಾಂಗ. ೧೩೪-೭೬) ; ನಾರಂಬೇಳೆ ತಿಲಾಕ್ಷೀರಬೇರಂ ತಂದು ಹಾಲೊಳರೆದು ಹಾಲೊಳ್ಗೆರಸಿ ಕುಡಿದಡೆ ಮುಟ್ಟಾಗದೆ ಇದ್ದ ಸ್ತ್ರೀ ಶೀಘ್ರದಲ್ಲಿ ಮುಟ್ಟಾಗುವಳು (ಕಾಮಶಾ. ೧೧-೨೭೮). **ನಾರುಂಬೇಳೆ** : "ಬರ್ಬರಾ —ಬರ್ಬರಿ, ನಾರುಂಬೇಳೆ" (ಒಷಧಿ. ೧೦೫). **ನಾರುಬೇಳೆ** : "ನಾರು ಬೇಳೆ, ಅಜನಿ" (ಅಕಾರಾ. ೧-೭) ; "ಅಜಗಂಧ - ಅಜಗಂಧಿ ; ನಾರು ಬೇಳೆ" (ಒಷಧಿ. ೬). **ನಾಜುಬೇಳೆ** : ಹೊಟ್ಟೆಶೂಲೆಗೆ : —ನಾಜು ಬೇಳೆ, ಅಗುಳಶುಂಠಿ, ಗಂಟುಭಾರಂಗಿ ಈ ಮೂಜನ್ನೂ ಕಷಾಯವಂ ಕಾಸಿ . . . ಕೊಳ್ಳೆ ಹೊಟ್ಟೆಶೂಲೆ ಮಾಣ್ಗುಂ (ವಿವೈವಿ. ೭೧).

[ನಾಜು₁ + ಬೇಳೆ₂]

**ನಾಜುಬೇಳೆ** 'ನಾಜುಂಬೇಳೆ' ನೋ.

**ನಾಟ್**, ನಾಣ್₂, ನಾಳ್₂, ನಾಳು (ನಾ). ಸಮಾಸದಲ್ಲಿ 'ನಾಡು' ಎಂಬುದಕ್ಕೆ ಬರುವ ಆದೇಶರೂಪ : ಕೊಂಡು ಪೋದ ಭಂಡಮಂ ಮಾಜು ಪಿಡಿದಂ ತಮ್ಮ ನಾಟ್ಕಪೂರ್ವಮಪ್ಪ ಭಂಡಮಂ ತೀವಿ ಕೊಂಡು . . . ಬಂದಿರ್ದರ್ (ವಡ್ಡಾರಾ. ೭೧-೨೫). 'ನಾಟ್ಗಾದೆ', 'ನಾಟ್ಗಮುಂಡ' ಪರಾ. **ನಾಣ್**₂: 'ನಾಣ್ಣುಡಿ', 'ನಾಣ್ಬಟ್ಟೆ' ಪರಾ. **ನಾಳ್**₂ : 'ನಾಳ್ಗತೆ', 'ನಾಳ್ನುಡಿ' ಪರಾ. **ನಾಳು** : 'ನಾಳುಪ್ರಭು' ಪರಾ.

**ನಾಟ್ಕಳ್**, **ನಾರ್ಕಳ್**, **ನಾಟ್ಗಳ್** (ಬಹುವ) : ಆರುವಿಲ್ಲದಲ್ಲಿ ಕಳ್-ಮಕ್ಕಳ್, ನಾಟ್ಕಳ್, ಕೋಟ್ಕಳ್ (ಶಮದ. ೧೦೧ ಪ್ರಯೋ) ; ಎನಿತುಂ ನಾರ್ಕಳನೂರ್ಗ್ಗಳಂ ಪ್ರಜೆಗಳಂ ಸಂತೋಷದಿಂ ಮಾಡಿದಂ ವಿನಯಾದಿತ್ಯ ನೃಪಾಳ (ಎಕ. II, ೧೮೩-೮ ; 1143) ; ಕೆಲದೂರ್ಗಳುಮಂ ನಾಟ್ಗಳುಮಂ ತೊಟಲ್ದು (ವಡ್ಡಾರಾ. ೭೬-೨೦). [<ನಾಡು]

**ನಾಟ** (ನಾ). ಮೋಸವಾದುದು ; ಕೃತಕವಾದುದು : ಆಡೆ ವಿರೋಧಮಾಗದಿರದಾಗಲೊಡಂ ಬಟಾಕೇನನಾದೊಡಂ ಮಾಡುವಮೆ ನ್ನೊಳಿರ್ದಪುವು ಪಾಸಗೆ ನಾಟಮನುಳ್ಳವಿತ್ತಪೆಂ ಬೇಡಿದ ದಾಯಮಂ ಕುಡುವವೆಂಬುದುಂ (ಪಂಪಾಭಾ. ೧೦-೮) ; ಜಟಕೆ ನಾಟ ನುಡಿ ತುಂಬು ಕಳ್ಳನೊಳುಂಟು ನಾಟವಾಸಗೆ ಕುಳಂ ಲತೆಯೊಳ್ ಕ್ಷಳಂ (ಸಂಜೀವ. ೨೩). 'ನಾಟವಾಸಗೆ' ಪರಾ. [←ತಮಿ. ನಾಟ್]

Δ **ನಾಟಲ್** 'ನಾನಲ್' ನೋ.

**ನಾಟವಾಸಗೆ**, ನಾಳವಾಸಿಗೆ (ನಾ). ಕಳ್ಳ ದಾಳ; ಕೃತ್ರಿಮವಾದ ದಾಳ : "ನಾಟವಾಸಗೆ=ಕಳ್ಳವಾಸಗೆ ; (ಸಂಸ್ಕೃತದೊಳ್ 'ನಾಳಂ' ಕ್ಷಳಂ)" (ಶಮದ. ಪರಿ. ೧) ; ನಾಟವಾಸಗೆಗಳಂ ಮುನ್ನಮೆ ಸಮಕಟ್ಟಿ ತಾಮುಮಾಮುಂ ಕೆಲವು ದಿವಸಂ ಗೋಷ್ಠಿಯೊಳಿರ್ಪಂ ಬರ್ಕೆಂದು ಬಟಾಯನಟ್ಟಿದೊಡೆ (ಪಂಪಭಾ. ೬-೭೮ ವ) ; ಶಕುನಿಯೆಂಬ ಮಂತ್ರಿ ಯೆಂದಂ ಧರ್ಮನಂದನಂ ದ್ಯೂತದೊಳತಿಪ್ರೀತನಪ್ಪುದಱಂ ನಾಟವಾಸಗೆ ಗಳಂ ಸಮೆದುಪಾಯಾಂತರದಿಂ . . . ಧನಮಂ ಗೆಲ್ವಂ (ನೇಮಿಪು. ೧೦-೨೧ ವ) ; ದುರ್ಯೋಧನನಲ್ಲಿಂದಮೆರ್ದು ಪೋಗಿ ಗೂಢದೊಳ್ನಾಟ ವಾಸಗೆಗಳಂ ಸಮೆಯಿಸಿ . . . ಪಾಂಡವರಂ ಬರಿಸಿ(ಬಂಪುರಿ.೧೧-೨೩ ವ); ಮಾಡಿದ ನಾಟವಾಸಗೆಯ ದೂಸಱನಾಯ್ತು ಧರಿತ್ರಿ (ಪಂಪಾಭಾ. ೧೦-೫೩). **ನಾಳವಾಸಿಗೆ** : ನಾಳವಾಸಿಗೆಯಿಂದ ಕುರುಪತಿ ಕೌಳಿಕಾಜನ ತೆಱದಿ ಪಾಂಡವರಾಳುವಿಗೆಯನು ಸೆಳೆದು ಕೊಂಡು (ನಾಲ್ವಭಾ. ೩೯-೪೦). 'ಕಳ್ಳವಾಸಗೆ'₂ ಪರಾ. [ನಾಟ + ಪಾಸಗೆ₂ (<ಪಾಸಂಗೆ)]

**ನಾಟಿ**₁ (ನಾ). ಗಳಿಗೆ ; ಇಪ್ಪತ್ತನಾಲ್ಕು ನಿಮಿಷದಷ್ಟು ಕಾಲ : "ನಾಟಿಯೆಂದು ಗಟಿಗೆ" (ಕಕಸಾ. ೧೩-೨೫೦) ; "ನಾಟಿ ನಾಡಿ ಗಾಯ್ತಿವು ಘಟಿಗೆ" (ಸಂಜೀವ. ೨೨) ; ಮೂಟಿ, ಬೋಟಿ, ನಾಟಿ, (ಶಬ್ದಾನು. ೧೪೦ ವ್ಯಾಖ್ಯಾ). [<ಸಂ. ನಾಡೀ]

**ನಾಟಿ**₂ (ನಾ). ಒಂದು ಊರಿನ ಹೆಸರು (?) : ನಾಟಿಯುಳ್ ಮೂವತ್ತುಗಣ್ಡುಗ ಭತ್ತ ಪಡೆಯ ತೆಱವೊದು (ಇಕ. XIV, ೨೩೩-೬೫; ಸು. ೯ನೆಯ ಶತ). [ ? ]

**ನಾಟಿಕೆ**, ನಾಳಿಗೆ, ನಾಟಿಗೆ (ನಾ). ಗಳಿಗೆ ; ಘಟಿಕೆ : ಉದಯಂಬರೆ ಬಂದ ವಿಲಗ್ನದಲ್ಲಿ ತಾನೆನಿತನೆ ಸಲ್ಲು ಮುನ್ನನಿತೆ ನಾಟಿಕೆ ಜನ್ಮಘಟೀ ಪ್ರಮಾಣಮಾ ದಿನ ರಜನೀಪ್ರಮಾಣದನುಪಾತನದಿಂ ನಿಜಲಗ್ನಸಂಜ್ಞೆ ಯೊಳ್ (ಜಾತಕ. ೩-೧೯). **ನಾಳಿಗೆ** : "ನಾಳಿಗೆ - ನಾಡಿಕಾ=ಗಳಿಗೆ" (ತದ್ಭಕೋ. ೨೧). **ನಾಟಿಗೆ** : "ನಾಡಿಕೆಗೆ ನಾಟಿಗೆಯೆನಿಪ್ಪುದು" (ಸಂಜೀವ. ೨೨) ; ನಾಡಿಕಾ - ನಾಟಿಗೆ (ನಾಟಿಗೆಯೆಂದು ಘಟಿಗೆ) (ಶಮದ. ೧೯ ಪ್ರಯೋ). [<ಸಂ. ನಾಡಿಕಾ]

**ನಾಟಿಗೆ** 'ನಾಟಿಕೆ' ನೋ.

**ನಾಟ್ಕಡಿಗಟಿ** 'ನಾಟ್ಕಡೆಗಟಿ' ನೋ.

**ನಾಟ್ಕಡಿಗಟಿ** 'ನಾಟ್ಕಡೆಗಟಿ' ನೋ.

**ನಾಟ್ಕಡಿಪೋಗು** 'ನಾಟ್ಕಡೆವೋಗು' ನೋ.

**ನಾಟ್ಕಡಿವೋಗು** 'ನಾಟ್ಕಡೆವೋಗು' ನೋ.

**ನಾಟ್ಕಡೆ** (ನಾ). ನಾಡಿನ ಕಡೆ,—ಗಡಿ : "ನಾಡ ಕಡೆ ನಾಟ್ಕಡೆ . . . ಆಯ್ತು" (ಸಂಜೀಪ. ೨೧); ನಾಟ್ಪಗರಣಂ, ನಾಟ್ಕಡೆ, ಕೋಟ್ಟುಟ್ಟು (ಭಾಷಾಭೂ. ೧೯೯ ಉದಾ) ; ಡಕಾರಕ್ಕಾದೇಶಮಾದ ಟಟಕ್ಕೆ ಪ್ರಯೋಗಂ . . . ನಾಡಕಡೆ=ನಾಟ್ಕಡೆ (ಶಮದ. ೧೯ ಪ್ರಯೋ).

[ನಾಟ್(<ನಾಡು)+ಕಡೆ₃]

**ನಾಟ್ಕಡೆಗಟಿ,** ನಾಟ್ಕಡಿಗಟು, ನಾಟ್ಕಡಿಗಟಿ, ನಾಟ್ಗಡಿಗಟಿ (ಕ್ರಿ). ೧. ದೇಶವನ್ನು ಬಿಟ್ಟುಹೋಗು ; ನಾಡಿನಿಂದ ಹೊರಗೆ ಹೋಗು; ಗಡೀಪಾರಾಗು : ನಾಟ್ಕಡೆಗಟಿದುಜಿ [ಪಾಠಾಂ. ನಾಟ್ಕಡಿ ಗಡಿದೆ] ಬೇರಂ ಬಿಟ್ಕೆಯುಮಂ ತಿಂದು (ಗದಾಯು. ೬-೩೫). **ನಾಟ್ಕಡಿಗಟು** : ೨. ದೇಶದಿಂದ ಹೊರಗೆ ಹಾಕು ; ದೇಶ ಬಿಡುವಂತೆ ಮಾಡು; ಗಡೀಪಾರು ಮಾಡು : ಏಟ್ಟಟ್ಟನೆಟಿದು ನಿಮ್ಮಂ ನಾಟ್ಕಡಿಗಟಿದೊಡೆ ಮದೀಯ ನಾಥಂ ಬೇರಂ ಬಿಟ್ಕೆಯನೆ ತಿಂದ ದೆವಸದೊಳಟ್ಕಾಡಿದ ಬೀರವಿಗಾಗಳೀಂ ಪೊಸತಾಯ್ತೇ (ಪಂಪಭಾ. ೧೨-೧೭೮). **ನಾಟ್ಕಡಿಗಟಿ** : ೨. ಆಕ್ರೋಶಂಗೆಯ್ದು ಕಪಿಳಂಗರಸಂ ಮುಳಿದು ನಾಟ್ಕ[ಟ್ಕ]ಡಿಗಟಿದಂ (ಚಾವುಂಪು.೧೯೩). **ನಾಟ್ಗಡಿಗಟಿ** : ೨. ಪಡೆವಳ್ಳರ್ ನೃಪಗುಣಮಂ ಬಿಡದೆ ನಾಟ್ಗಡಿಗಟಿವ ತೆಱದೆ ನಡೆ ನಡೆಯೆಂಬರ್ (ಅಾದಂಪೂ. ೫೫೬). ℙ ಇದು 'ನಾಟ್ಕಿಡಿಗಟಿ' ಎಂಬುದರ ಅಪಲಿಖಿತವಿರಬಹುದು.

[ನಾಟ್ಕಡೆ+ಕಟಿ₁(<ಕಟು₁)]

**ನಾಟ್ಕಡೆವೋಗು,** ನಾಳ್ಕಡಿವೋಗು, ನಾಟ್ಕಿಡಿವೋಗು, ನಾಟ್ಕಿಡಿವೋಗು(ಕ್ರಿ). ೧. ನಾಡನ್ನು ಬಿಟ್ಟು ತೊಲಗು; ಗಡೀಪಾರಾಗು: ಕಾಟ್ಕಿಚ್ಚು ತಗುಳೆ ತಮ್ಮೊಳ್ ಕೋಟ್ಟುಟ್ಟೆ ವನದ್ವಿಪೇಂದ್ರಚಯಮತಿಭಯದಿಂ ನೀಟ್ಕುರಿಸಿ ನಿಲ್ಲದೆನಸುಂ ನಾಟ್ಕಡೆವೋಪಂತೆ ಪೋಪುದೀ ನಗತಟದಿಂ (ಕಾವ್ಯಾಪ. ೨೯೮). ೨. ಹಾಳಾಗು ; ನಷ್ಟವಾಗು : ಮಸುಳೆ ನಿಜಾನ್ವವಾಯ ಮಹಿಮೋನ್ನತಿ ನಾಟ್ಕಡೆವೋಗೆ ಪಾಟಿಯುಂ ಪಸುಗೆಯುಂ . . . ಭೂಚರರ್ಗೆ ಖೇಚರ ನೀಂ ಚರನಾಗಿ ಬರ್ಪುದೇ (ಪಂಪರಾಮಾ. ೧೧-೧೩೬). **ನಾಳ್ಕಡಿವೋಗು** : ೧. ಪಡೆಮಾತೇಂ ಗಳಗಂಗೆಗೊಣ್ಡು ಪುರದಾ ಚೋಳಂ ಜಯಗೊಣ್ಡ ನಾಳ್ಕಡಿವೋದಂ (ಮೈಆರಿ. ೧೯೩೦, ೬೬-೨೩ ; 1080). **ನಾಟ್ಕಿಡಿವೋಗು** : ೧. ಅರಸಂ ನಾಟ್ಕ[ಟ್ಕ]ಡಿವೋಗವೇಟಿಡ್ಡೊಡೆ ಭಯಂಗೊಂಡೆನ್ನನಾ ಸಾಧು ತಂದರಸಂಗೊಪ್ಪಿಸಿ ಪೋದಂ (ಧರ್ಮಾಮೃ. ೧೨-೧೩೫). **ನಾಟ್ಕಿಡಿವೋಗು** : ೨. ಅಳವಾಳದೊಳಮರತರುಣಿಯರದಕೆ ಪೊಯ್ವಮರ್ದುನುಂಡು ನಂಜು ನಾಟ್ಕಿಡಿವೋಗೆ (ಲೀಲಾವ. ೮-೫೨ ಪ).

[ನಾಟ್ಕಡೆ+ಪೋಗು₁]

**ನಾಟ್ಗಡಿಗಟಿ** 'ನಾಟ್ಕಿಡಿಗಟಿ' ನೋ.

**ನಾಟ್ಗವುಂಡು** 'ನಾಟ್ಗಾವುಂಡು₂' ನೋ.

**ನಾಟ್ಗವುಂಡುಗೆಯ್** 'ನಾಟ್ಗಾವುಂಡುಗೆಯ್' ನೋ.

**ನಾಟ್ಗಾದೆ,** ನಾಣ್ಣಾದೆ,ನಾರ್ಗಾದೆ, ನಾಳ್ಗಾದೆ (ನಾ). ೧. ಜನಜನಿತವಾದ ಗಾದೆ ; ನಾಣ್ನುಡಿ ; ಲೋಕೋಕ್ತಿ : ಕೊರಲ ಸತ್ವಮಿಲ್ಲದೊರಲಂ ನುಂಗಿದರೆಂಬ ನಾಟ್ಗಾದೆಯಂತೆ (ಧರ್ಮಾಮೃ. ೬-೧೬೩) ; ಆವಿಷ್ಕೃತಂ ಮಾಡಿದಂ ದೇವಂಗಾಜಿದೆ ಧರ್ಮಿಯಂ ಬಡಿದರೆಂಬೀ ಸಂದ ನಾಟ್ಗಾದೆಯಂ (ಪುಷ್ಪಪು. ೧೨-೮೬). **ನಾಣ್ಣಾದೆ** : ೨. ಸಾಮಾನ್ಯವಾದ ಮಾತು ; ಅಲ್ಪವಿಚಾರ : ಕಾದಿ ಕೊಂಬುದು ಪಾಳುನಾಡೆಂಬುದೆಂದು ನಾಣ್ಣಾದೆಯಂ ನೀವೆಸಗಬೇಡ (ಸೌಂದಪು. ೧೨-೯೧) ; ನಾಣ್ಣಾದೆಯಲ್ತು . . . ಹರಿಗಳಂ ಕುವರರೆಯ್ದೆ ಮೇಗಣ್ಗೆ ಭೋಂಕೆನಲಡರಿ ಬಿದಿಯನಲರ್ಪೊಡೆಯ ಮೆಯ್ಯಣ್ಗಿರುವರಂ ಜಟಿದರು (ಭಾಸಚಿಂ. ೮-೪) ; ಚೆಲ್ವಪೆಣ್ಗಳೆಯ್ತರುತಿರ್ದರೀಶನೆಡೆಗೇನವರು ನಾಣ್ಣಾದೆಯನಿತರವರೆ (ವೀಶ್ವಪು. ೨-೩-೨೭). **ನಾರ್ಗಾದೆ** : ೧. ಅದರ ದಿಂದಂ ಬೋಧರ್ ಬೋಧರನಪ್ಪಿದೊಡೆ ಬೂದಿ ಬೂದಿಯೆ ನಾಜಾತ್ತಾದಮೆನಲ್ಕೆಗಳ್ದ ನಾರ್ಗಾದೆಗೆ ದೊರೆ ಸಮಯಧರ್ಮದೆಡೆಗುಟಾದವರ್ಗಳ್ (ಸಮಪ. ೪-೮೯). **ನಾಳ್ಗಾದೆ** : ೧. ಕಾಮಿಗಳ್ ಕಣ್ಣಾಣರೆಂಬ ನಾಳ್ಗಾದೆ ಪುಸಿಯೆ (ಪದ್ಮರಾ. ೮-೯೦). [ನಾಟ್(<ನಾಡು)+ಗಾದೆ]

**ನಾಟ್ಗಾವಿಗ,** ನಾಳ್ಗಾವಿಗ (ನಾ). ನಾಡಿನ ಗ್ರಾಮಸ್ಥ : ಬಿಟ್ಟಿಗೆಟಿಗಳ ಎಡೆನಾಡ ಗಾಮುಂ . . . ಕಲಿಮ್ಮಾರಾನೆಟಿದು ಕೊಣ್ಡಾಉತ್ತರೆ ಕಣ್ಡು ನಾಟ್ಗಾವಿಗರ್ಕ್ಕಳುಂ ನಿನ್ದು ವಸವೂರ ಎಱಿದು ಕೊಟ್ಟಿಯಂ ಕೊಳ್ವಲ್ಲಿ (ಎಕ. VIII, ಸೊರಬ. ೧-೩ ; 797 ?). **ನಾಳ್ಗಾವಿಗ** : ಬಿಟ್ಟಿಗ ಎಱಿಗೆ ಗೊಳ್ಳಿನಾಡ ನಾಳ್ಗಾವಿಗರ್ (ಎಕ. VIII, ಸೊರಬ. ೫೪೨-೨ ; ಸು. 800). [ನಾಟ್ (<ನಾಡು)+ಗಾವಿಗ]

**ನಾಟ್ಗಾವುಂಡ,** ನಾರ್ಗಾವುಂಡ, ನಾರ್ಗಾವುಂಡ, ನಾಳ್ಗಾವುಂಡ, ನಾಳ್ಗಾವುಂಡ, ನಾಟ್ಗಾವುಂಡು₁, ನಾಟ್ಗಾವುಂಡ (ನಾ). ದೇಶ ಭಾಗದ ಒಡೆಯ ; ಪ್ರಾಂತಾಧಿಕಾರಿ ; ನಾಡಿನ ಮುಖಂಡ : ನಾಟ್ಗಾವುಣ್ಡನುಮಿಬ್ಬು ಕೊಟ್ಟೋರ್ (ಎಇ. XIV, ೧೯೧-೪೯ ; 725) ; ರಣಪಾರಗಾಮುಣ್ಡರುಂ ಅನ್ದಮಾಸಲ ಉತ್ತಮ ಗಾಮುಣ್ಡರುಂ ನವಿಲೂರ ನಾಟ್ಗಾಮುಣ್ಡರುಂ (ಎಕ. II, ೩೫-೮ ; ಸು. 800) ; ಇ ಕೊಡಚ್ಗಿಯ ಬಳಸಿದೋರ್ ನಾಟ್ಗಾಮುಣ್ಡ ಬಿಯಳನುಂ ಪಿರಿಯಮುಗುಳಿಯ ಕೊಮರಯ್ಯನುಂ (ಎಕ. VI, ಚಿಕ್ಕಮ. ೩-೧೨; 899 ?). **ನಾರ್ಗಾವುಂಡ** : ಬೆಳ್ವೊಲ ಮೂನೂಱು ನಾರ್ಗ್ಗಾಮುಣ್ಡ೦ ತೊಣ್ಡಯ್ಯನುಂ (ಎಇ. XIV, ೩೬೫-೧೪ ; 945). **ನಾರ್ಗಾವುಂಡ** : ಭಾವಿಸೆ ಮುಗುನ್ದ ಮೂ[ವ]ತ್ತರ್ಕ್ಕೀ ವಸುಧೆಗೆ ತಿಳಕಮದ[ಱ]ನಾರ್ಗ್ಗಾವುಣ್ಡಂ ಚಾವುಣ್ಡಂ (ಸೌಇಇ. XI-i, ೭೮-೪೨ ; 1045) ; ನಾರ್ಗಾವುಣ್ಡ ಭೂಮಿ ೨೦೦೦ ಗೃಹೇಹಸ್ತ ೪೦ (ಇಆ. XIV, ೧೪೧-೨೬; ಸು. 12ನೆಯ ಶತ). **ನಾಳ್ಗಾವುಂಡ** : (ಲೋಕಸ. ೩೭). **ನಾಳ್ಗಾವುಂಡ** : ಸೂರ್ಯ್ಯಗ್ರಹಣದನ್ದು ಮುಳುಗುನ್ದಪನ್ನೆರಡ ಱೊಳಗೆ ವೆಲೆಯ ಪೊಸವೂರೊಳ್ನಾಳ್ಗಾವುಣ್ಡಂ ಕೊಱಲಗುನ್ದಂ . . . ಪೊಸವೂರ ಮೂಲಸ್ಥಾನದೇವರ್ಗ್ಗೆ ಬಿಟ್ಟಪಟ್ಟವರ್ದ್ಧನದ ತೋಣ್ಟವೊನ್ದು (ಸೌಇಇ. XI-i, ೪೭-೧೩ ; 995). **ನಾಟ್ಗಾವುಂಡು₁** : ಬೆಳ್ಳಂವಾಡಿಯ ಗೊಟ್ಟವಾಡಿಯ ಇನ್ತಿನಿತು ಮೂರಱ ಕಲ್ಗಾ ನಾಟ್ಗಾಮುಣ್ಡುಗಳ್ಗಂ ತಂಭುಲಶ್ರಾವಣಗೆಯ್ದು ಒಡಂಬಡಿಸಿ ಕೊಣ್ಡುದು (ಎಕ.XII, ನಂಜನ. ೨೯೯-೯೭ ; 904) ; ಇದಕ್ಕೆ ಸಕಿಳೆ ಬೆಳ್ನುನ್ದೂರುಂ ಕಿಱುವೆಳ್ನುನ್ದೂರುಂ . . . ಎಡೆನಾಡ ಮುವನ್ನಾಟ್ಗಾಮುಣ್ಡುಗಳುಂ ಸಕ್ಷಿ (ಎಕ. III, ನಂಜನ. ೧೫೫-೯ ; 970 ?). **ನಾಟ್ಗಾವುಂಡ** : ನಾಡ ಅಱುಗೇಱುಯ ನಾಟ್ಗಾವುಣ್ಡ x x x ಗೆಲ್ಲೂರ ಮಾರಗಾವುಣ್ಡ . . . ತುಱುಗಳೊಳ್ಸತ್ತು (ಎಕ. VII, ಶಿಮೊ. ೨೨-೩ ; 963) ; ಶ್ರೀಧರಯ್ಯನುಂ ನಾಡುಂ ನಾಟ್ಗಾವುಣ್ಡಂ ಸಿನ್ದಗಾವುಣ್ಡನುಮಿಬ್ಬು ಸತ್ತಿವಂಗಲದ ಭೂಮಿಯ ಸಮ್ಮನ್ದಂ ಮಾರಯ್ಯನುಂ (ಎಕ. IX, ಹೊಸಕೋ.೧೧೧-೫ ; 997). [ನಾಟ್ (<ನಾಡು)+ಗಾಮುಂಡ]

**ನಾಟ್ಗಾವುಂಡು₁** 'ನಾಟ್ಗಾವುಂಡ' ನೋ.

**ನಾಟ್ಗಾವುಂಡು₂,** ನಟ್ಗವುಂಡು, ನಾರ್ಗವುಂಡು, ನಾರ್ಗಾವುಂಡು, ನಾರ್ಗಾವುಂಡು, ನಾರ್ಗೌಡು, ನಾಳ್ಗಾವುಂಡು, ನಾಟ್ಗವುಂಡು, ನಾಟ್ಗಾವುಂಡು (ನಾ). ನಾಡಿನ ಅಧಿಕಾರ ; ಪ್ರಾಂತಾಧಿಕಾರ : ಪೆರ್ಮಾನಡಿ ಗಾಮುಣ್ಡಜ್ಗಂ ಕೊಣ್ಡುಣಗನ್ನಾಡ ನಾಟ್ಗಾಮುಣ್ಡ ಕಿಱುವುಸುವೂರುಮಂ ಕಲ್ನಾಡುಗೊಟ್ಟರ್

(ಎಕ.IV,ಹೆಗ್ಗಡ. ೧೦೩-೧೧; ಸು. 910). **ನಟ್ಗಿವುಂಡು:** 'ನಟ್ಗಿವುಂಡುಗೆಯ್' ಪರಾ. **ನಾರ್ಗವುಂಡು:** 'ನಾರ್ಗವುಂಡುಗೆಯ್' ಪರಾ. **ನಾರ್ಗಾಮುಂಡು :** 'ನಾರ್ಗಾಮುಂಡುಗೆಯ್' ಪರಾ. **ನಾರ್ಗಾವುಂಡು :** 'ನಾರ್ಗಾವುಂಡುಗೆಯ್' ಪರಾ. **ನಾಗೌಡು :** ಮಡಲೂರ ಸಾತಗೌಉಡನ ಮಗನು ಚೌಡಗೌವುಡಂ ನಾಗ್ಗೌಡುಗ್ಗವುಡುಗೆಯ್ಯುತ್ತಮಿರೆ (ಕಇ. IV, ೪೮-೨೦ ; 1247). **ನಾಳ್ಗಾವುಂಡು :** 'ನಾಳ್ಗಾವುಂಡುಗೆಯ್' ಪರಾ. **ನಾಟ್ಗಿಮುಂಡು:** 'ನಾಟ್ಗಿಮುಂಡುಗೆಯ್' ಪರಾ. **ನಾಟ್ಗಾವುಂಡು:** 'ನಾಟ್ಗಾವುಂಡುಗೆಯ್' ಪರಾ.

[ನಾಟ್ (<ನಾಡು) + ಗಾಮುಂಡು$_2$]

**ನಾಟ್ಗಾಮುಂಡುಗೆಯ್,** ನಟ್ಗಿವುಂಡುಗೆಯ್, ನಾರ್ಗವುಂಡುಗೆಯ್, ನಾರ್ಗಾಮುಂಡುಗೆಯ್, ನಾರ್ಗಾವುಂಡುಗೆಯ್, ನಾಳ್ಗಾವುಂಡುಗೆಯ್, ನಾಟ್ಗಿಮುಂಡುಗೆಯ್, ನಾಟ್ಗಾವುಂಡುಗೆಯ್ (ಕ್ರಿ). ನಾಡಿನ ಅಧಿಕಾರವನ್ನು ಮಾಡು ; ದೇಶಭಾಗದ ಒಡೆತನವನ್ನು ಮಾಡು : ಶಂಕರಂ ನಾಟ್ಗಾಮುಂಡುಗೆಯೆ (ಎಇ. VII, ೨೧೩-೧೫ ; 874) ; ಶ್ರೀಮತ್ ಬೊ (?) ಟಗದಿ ತಲೆಯುಂ ರಾಜಯ್ಯನುಂ ನಾಟ್ಗಾಮುಂಡುಗೆಯ್ಯೆ (ಇಆ. XII, ೨೭೧-೧೨ ; 973) ; ಬಾಸವುರ ನೂಱ ನಾಲ್ವತ್ತರ್ಕ್ಕ ಮಲ್ಲರಸಂ ನಾಟ್ಗಾಮುಣ್ದುಗೆಯ್ಯೆ (ಸೌಇಇ. XX, ೩೫-೭ ; 1055). **ನಟ್ಗಿವುಂಡುಗೆಯ್ :** ಜವನ್ನೆಶಮಿ ಬ[ನ]ವಸಿನಾಡನಾಳೆ ಬಿಟ್ಟಿಗ ನಟ್ಗಿವುಣ್ದುಗೆಯ್ಯೆ . . . ಕೊದಲಿಯಱಿಱದು . . . ಮಸೆಯರ ಗಡಿ ತುಱುವನಿಳಿಸಿದೋರಣದೊಳ್ಪಟ್ಟು ಸುಗತಿಗೆ ಸನ್ದೊನ್ (ಎಕ. VIII, ಸೊರಬ. ೨೦೨-೨ ; 955). ☞ ಇದು 'ನಾಟ್ಗಾವುಂಡುಗೆಯ್' ಎಂಬುದರ ಅಪಲಿಖಿತ ವಿರಬಹುದು. **ನಾರ್ಗವುಂಡುಗೆಯ್ :** ಬನ್ದಣಿಕೆಯ ಸತ್ತರಱ ನಾಗಾರ್ಜ್ಜುನನ ನಾರ್ಗ್ಗವುಣ್ದುಗೆಯೆ (ಎಕ. VIII, ಸೊರಬ. ೨೩೪-೭ ; 999). **ನಾರ್ಗಾಮುಂಡುಗೆಯ್ :** ಸಾಮನ್ತ ಬನ್ದಣಿಕೆಯ ಬೊಪ್ಪರಸಂ ನಾರ್ಗಾಮುಂಡುಗೆಯ್ಯುತ್ತಮಿರೆ (ಕಇ. IV, ೩-೧೫ ; 1114). **ನಾರ್ಗಾವುಂಡುಗೆಯ್ :** ಬನ್ದಣಿಕೆಯ ಬೊಪ್ಪ ನಾರ್ಗ್ಗಾವುಣ್ದುಗೆಯ್ಯೆ (ಎಕ. VIII, ಸೊರಬ. ೨೩೫-೮ ; 1084). **ನಾಳ್ಗಾವುಂಡುಗೆಯ್ :** ಬಿನ್ನವುರಂ ೧೨ ಮುಚ್ಚ್ಯನೂರು ೧೨ ಅಂತು ೫೪ ಬಾಡವುಮಂ ಚಳಿಕಿ ಅಯ್ಯ ಹರಸಂ ನಾಳ್ಗಾವುಂಡುಗೆಯ್ಯೆ (ಎಕ. XI, ದಾವಣ. ೧೯-೭ ; 1043). **ನಾಟ್ಗಿಮುಂಡುಗೆಯ್ :** ಪುಂಗೆಱ ಮುನೂಱುಮ ಕುಪ್ಪೆಯರಸರಾಳೆ ಮಣಲೆರಗಾಡಿಗ ನಾಟ್ಗಿಮುಣ್ದುಗೆಯ್ಯೆ (ಕಇ. I, ೧೪-೫ ; ಸು. 866). **ನಾಟ್ಗಾವುಂಡುಗೆಯ್ :** ಬಿಜ್ಜಂ ನಾಟ್ಗಾ[ವು]ಣ್ದುಗೆಯೆ (ಸೌಇಇ. XX, ೧೫-೧೦ ; 904) ; ಚಿಡ್ಡಾರಾಳ್ಗೆಯೆಪ್ಪತ್ತರ್ಕಂ ಬಳ್ಳಿಗಾಮೆಯ ಬಾಡಱಗೆ ಸಹಿತ ನಾಟ್ಗಾವುಂಡುಗೆಯ್ಯೆ ಗಿಂಗಿಟಿಯೂರ್ಗ್ಗಾಮುಣ್ದುಗೆಯ್ಯೆ (ಮೈಆ೨. ೧೯೨೯, ೭೮-೮ ; 1179 ? ). [ನಾಟ್ಗಾಮುಂಡು$_2$ + ಕೆಯ್$_1$]

**ನಾಟ್ಗಾವುಂಡ** 'ನಾಟ್ಗಾಮುಂಡ' ನೋ.

**ನಾಟ್ಗಾವುಂಡಪಂತ** (ನಾ). ನಾಡಿನ ಗೌಡಿಕೆಯ ಅಧಿಕಾರ,— ಪದವಿ : ಶ್ರೀಕಲಿವಿಟ್ಟರಸರ ಬೆಸದೊಳತೀತನಾಡೊಡಾತನ ಗಾವುಣ್ದಗರಸನ್ನಾರ್ಟ್ಗಾವುಣ್ದಪಂತಮನಿತ್ತೊಡೆ ಜಕ್ಕಿಯಬ್ಬೆ ನಾಟ್ಗಾವುಣ್ದುಗೆಯ್ಯುತ್ತಿರೆ (ಎಕ. VII, ಶಿಕಾ೨. ೨೧೯-೧೧ ; 918). 'ಗಾವುಂಡಪಂತ' ಪರಾ. [ನಾಟ್ಗಾವುಂಡ (<ನಾಟ್ಗಾಮುಂಡ) + ಪಂತ$_2$]

**ನಾಟ್ಗಾವುಂಡು** 'ನಾಟ್ಗಾಮುಂಡು$_2$' ನೋ.

**ನಾಟ್ಗಾವುಂಡುಗೆಯ್** 'ನಾಟ್ಗಾಮುಂಡುಗೆಯ್' ನೋ.

**ನಾಟಜ್ಜೋಡೆ** (ನಾ.) ಊರ ಹಾದರಗಿತ್ತಿ ; ನಾಡಾಡಿಯಾದ ವ್ಯಭಿಚಾರಿಣಿ : ಧರಣೀನಂದನ ಗೇಹದೊಳ್ ಧರಣಿಜತ್ರಿಂಶಾಂಶಕಂ ಲಗ್ನವಾಗಿರೆ ದೋಷಾಕರನಲ್ಲಿ ಕೂಡೆ ಕೊಡಗೂಸಾಗಿರ್ದು ನಾಟಜ್ಜೋಡೆ (ಜಾತಕ. ೨೨-೩); ಪಾತಕಿ ನಾಣಿಲಿ ಕೆಟ್ಟ ಬೂತು ನಾಟಜ್ಜೋಡೆಯುವಳ್ಗದಕ್ಕುಂ (ಬಂಹರಿ. ೧೧-೧೦೪); ಕೌಮುದಿಯೆಂಬ ಪೊಚ್ಚಪೊಸವೆಣ್ಣೆನೆಂಬ ನಾಟಜ್ಜೋಡೆಯೋ (ರಸರ. ೪-೨೪೩).

[ನಾಟ್ (<ನಾಡು) + ಜೋಡೆ]

**ನಾಟ್ತುಡುಗುಣಿ** (ನಾ.) ನಾಡಾಡಿಯಾದ ಕಳ್ಳ : ಡಕಾರಕ್ಕಾದೇಶಮಾದ ಜಟಕ್ಕೆ . . . ನಾಟ್ಪಿಗರಣಂ ; ನಾಟ್ತುಡುಗುಣಿ (ಶಮದ. ೬೬ ಪ್ರಯೋ). [ನಾಟ್ (<ನಾಡು) + ತುಡುಗುಣಿ]

**ನಾಟತ್ತೊಲೆ** (ನಾ). ಸಾಮಾನ್ಯದರ್ಜೆಯ ತೊಲೆ : ನಾಟತ್ತೊಲೆ, ನಾಟ್ಪಿಗರಣಂ (ಶಬ್ದಾನು. ೯೦ ಪ್ರಯೋ).

[ನಾಟ್ (<ನಾಡು) + ತೊಲೆ$_3$]

**ನಾಟ್ನುಡಿ** (ಕ್ರಿ). (?) : ಕಡುಮುಳಿಸಿಂದೆ ಬಯ್ದೊಡೆ ದಿಟಂಬಿಡಿ ತಾನೆ ಕನಲ್ದು ಬಯ್ದು ನಾಟ್ನುಡಿದಡೆ ವೋಲೆಯಂ ಜವನುಮಾತನ ಬಾಳ್ಕೆಯ ಲೆಕ್ಕದೋಲೆಯಂ ತೊಡದು ಬಿಸುಟ್ಟನ್ (ಸೌಇಇ. IX-i, ೨೯೭-೩೦ ; 1177). [?]

**ನಾಟ್ನುಡಿ,** ನಾಣ್ಣುಡಿ, ನಾಣ್ನುಡಿ, ನಾನ್ನುಡಿ, ನಾಳ್ನುಡಿ (ನಾ). ನಾಡಿನಲ್ಲಿ ಬಹು ಪ್ರಚಲಿತವಾಗಿರುವ ಮಾತು ; ಜನಸಾಮಾನ್ಯರಲ್ಲಿ ಬಳಕೆಯಲ್ಲಿರುವ ದೃಷ್ಟಾಂತವಾಕ್ಯ; ಗಾದೆ; ಲೋಕೋಕ್ತಿ: ನುಡಿಗಳೊಡಂಬಡಲ್ ಬಗೆದವೋಲ್ ಬಗೆಯಂ ಮಿಗಲೀಯದೊಂದೆ ನಾಟ್ನು[ಪಾಠಾಂ. ಣ್ನು]ಡಿಯ ಬೆಡಂಗೆ ಕನ್ನಡದ ಮಾತಿನೊಳ್ (ಕವಿಮಾ. ೧-೧೪೯) ; ನನ್ನಿಯಾದುದು ಸುತಂಗೆ ಕಥೆವೇಟ್ದರೆಂಬ ನಾಟ್ನುಡಿ ಜಗದೊಳ್ (ಆದಿಪು. ೮-೧೪) ; ಪೊಕ್ಕೞಯಲ್ ಪೋಗಿ ಮೂಗರಿವಡೆದರ್ ಎಂಬ ನಾಟ್ನುಡಿ ತನ್ನೊಳ್ ಸನ್ನಿದಮಾದುದು (ಪಂಚತಂ. ೬೬-೧೭) ; ದೇವ ನೀಂ ಕೊಟ್ಟ ಕುನ್ನಿ ಬೆಳೆವೆಳೆಯೆ ನಾಯಾಯ್ತೆಂಬ ನಾಟ್ನುಡಿಯಂ ನನ್ನಿ ಮಾಡದೆ (ಧರ್ಮಾಪ್ಯ. ೫-೪೨); ಊರ ಸೀರೆಗಗಸಂ ಬಡಿವೆತ್ತನೆನಿಪ್ಪ ಜನದ ನಾಟ್ನುಡಿ ನಿನಗಾಗಲ್ಕೆ (ಜಗವಿ. ೬-೭) ; ಜಗದೊಳ್ಸನ್ನಿದಮಾದ ನಾಟ್ನುಡಿಗಳಂ ಛಂದಕ್ಕೆ ಬರ್ಪಂತೆ ನೆಟ್ಟಗೆ ಮಾತಾಡುವ ಬಲ್ಮೆ . . . ಇನ್ನಾವಂಗೆ ಪುಣ್ಯೈಕಭಾಗಿಗೆ ಸೈಪಿಂದೊರೆಕೊಳ್ಳುಮಾತನೆ ವಲಂ ಶೃಂಗಾರರತ್ನಾಕರಂ (ಶೃಂಗಾರ. ೧-೯). **ನಾಣ್ಣುಡಿ:** ಪೆಣನನಿಱದು ಪಗೆಗೊಂಡರೆಂಬ ನಾಣ್ಣುಡಿಯಂ ನನ್ನಿಮಾಡಿ (ಪಂಪಭಾ. ೧೨-೨೯ ಪ) ; ಪರದರೊಳ್ಮರುಳಿಲ್ಲ ಸೂಳೆ ಸಾಧುವಲ್ಲ ಎಂಬ ನಾಣ್ಣುಡಿಯುಂಟು (ಧರ್ಮಾಪ್ಯ. ೧-೧೭೮) ; ಕೂಳ ಭಣಗಿಗೆ ನೆರವು ತಪ್ಪಿದುದೆಂಬ ನಾಣ್ಣುಡಿಯಾಯಿತು (ಬಸವು. ೫೭-೧೨) ; ಬೆಂದ ವಸ್ತುಗೆ ದಹನವುಂಟೇ ಎಂಬ ನಾಣ್ಣುಡಿ ನಮ್ಮೊಳಾದುದಲಾ (ಕುವ್ಯಾಕ. ೧-೬). **ನಾಣ್ನುಡಿ :** ತಾನುಳ್ಳೊಡೆ ಮೂಱುಲೋಕಮುಂಟು ಎಂಬ ನಾಣ್ನುಡಿಯುಂಟು (ಪಂಚತಂ. ೩೯-೧೦) ; ಕುಲವ ನಾಲಗೆಯಱುಹಿತೆಂಬ ನಾಣ್ನುಡಿಗಿಂದು ನೆಲೆಯಾಯ್ತಲಾ (ಹಚಕಾ. ೨-೨೨) ; ತತ್ಪತಿ ಪಾರ್ವತಿಗೆ ನಾಕುಮಡಿ ಮಿಗಿಲೆಂಬ ನಾಣ್ನುಡಿ ಕಾಕ ಬಳಸಿತೆ (ತೊರರಾ. ೩-೨-೧೮). **ನಾನ್ನುಡಿ :** [ನುಡಿ]ದುದೆ ನಂನ್ನಿ ಮಾಡಿದುದೆ ಶಾಸನಮೆಂಬ ನೆಗರ್ತ್ತೆವೆತ್ತ ನಾನ್ನುಡಿ ತನಗೊಪ್ಪೆ (ಸೌಇಇ.XX, ೬೬-೩೭; 1118). **ನಾಳ್ನುಡಿ :** ಪರಮಾರ್ತಂ ಕೊಂಡಳಿನ್ತು ಮುಂಗುರೆಯ ತಾನೆರಡಿಲ್ಲದೆಂಬ ನಾಳ್ನುಡಿ ಪೊರೆದುದಿದರ್ಕಮೆನ್ದು (ಮೈಆ೨. ೧೯೨೭, ೩೪-೫ ; 1100) ; ಪ್ರಾರಬ್ಧಸ್ಯಾಂತ ಗಮನಂ ಮಹಾಪುರುಷಸ್ಯ ಲಕ್ಷಣವೆಂಬ ನಾಳ್ನುಡಿಯಂ ನನ್ನಿ ಮಾಡಿ (ಸೌಇಇ. IX-i, ೨೭೩-೮೭; 1179);

ಸಂಧಿಯಾಗುವಾಗ ಮೊದಲಿನ ಪದದ ಕೊನೆಯ ಡುಕಾರವು ಳ ಕಾರವಾಗಿ ನಾಳ್ನುಡಿ ಎಂದಾಯಿತು (ನಾಣ್ನು ಡಿ. ೩).

[ನಾಟ್(<ನಾಡು)+ನುಡಿ₂]

**ನಾಟ್ಪಗರಣ** (ನಾ). ೧. ಗ್ರಾಮೀಣವಾದ ನಾಟಕ; ಜನಪದ ನಾಟಕದ ಒಂದು ಬಗೆ : ನಾಟ್ಪಗರಣಂ, ನಾಟ್ಕಡೆ, ಕೋಟ್ಪುಟ್ಟು (ಭಾಷಾಭೂ. ೧೧೯ ಉದಾ) ; ಡಕಾರಕ್ಕಾದೇಶವಾದ ಜಟಕ್ಕೆ . . . ನಾಟ್ಪಗರಣಂ ; ನಾಟ್ಪುಡುಗುಣಿ (ಶಮದ. ೬೬ ಪ್ರಯೋ) ; 'ನಾಡಿನ ಪಗರಣ' ಅಲ್ಲವೆ 'ನಾಟ್ಪಗರಣ' ಎಂಬುದರಿಂದ ದೇಶದೊಳಗೆ ಅಡಿ ತೋರಿಸಲು ಅರ್ಹವಾದ 'ಯಕ್ಷಗಾನ' ಪ್ರಬಂಧವೇ ಸೂಚಿತವಾಗುತ್ತಿದೆ ಎನ್ನಬಹುದು (ಪಾರ್ತಿಸು. ೨೯). ೨. ನಾಟಕದ ಲಕ್ಷಣಗಳನ್ನು ಗರ್ಭೀಕರಿಸಿಕೊಂಡ ಒಂದು ವಿನೋದ ಪ್ರದರ್ಶನ.

[ನಾಟ್(<ನಾಡು)+ಪಗರಣ]

**ನಾಟ್ಪಾಡು** (ನಾ). ನಾಡ ಹಾಡು : ಚಟುಲತರಘಟಿಚೇಟೀವಿಚೇಷ್ಟಿತಂಗಳಂ ಪೆಚಿತಪ್ಪ ಸೂಳೆವಾಡದ ನಾಟ್ಪಾಡುಗಳೊಳ್ ಕೇಳ್ದು ಕಿವಿಗಳ್ ನಿಬ್ಬರಮುಬ್ಬೆಗಂಗೊಂಡಿರ್ಕುಂ (ಚಿಕವಿ. ೬-೧೫೭ ಪ).

[ನಾಟ್(<ನಾಡು)+ಪಾಡು₂]

**ನಾಟ್ಪ್ರಭು,** ನಾಳುಪ್ರಭು, ನಾಳ್ಪ್ರಭು (ನಾ). ನಾಡಿನ ಪ್ರಭು,— ದೊರೆ; ಒಂದು ಪ್ರದೇಶದ ಒಡೆಯ : ಸಂತತಂ ಪರಿಮಳದಂತೆ ವಾಣಿ ನೆಲಸಿರ್ಕೆ ವಿಕಾಸವಿಲಾಸದಂತೆವೋಲ್ ಸಿರಿ ನೆರೆದಿರ್ಕೆ ನಾಟ್ಪ್ರಭು ಜನಾರ್ದನದೇವನ ವಕ್ತ್ರಪದ್ಮದೊಳ್ (ಯಶೋಚ. ೪-೮೭) ; ಜಗದೊಳ್ ನಾಟ್ಪ್ರಭು ಶಾಂತಿವರ್ಮನೆಸೆವಂ ಪ್ರೋದ್ದಾಮಲಕ್ಷ್ಮೀಗೃಹಂ (ಪುಷ್ಪವು. ೧-೭೬). **ನಾಳುಪ್ರಭು :** ಕುಲಮಂ ಪೇಳ್ವಡೆ ನಂದಿಯ ಕುಲವಾ ನಾಳುಪ್ರಭುಗಳುಂನತಿಕ್ಕೆಯನಾರಯ್ಯಲನೂನಂ (ಎಕ. IV(R), ಹುಣಸೂ. ೨೪-೪೫ ; 1162) ; ಎಡೆದೊಱೆಯೆಪ್ಪತ್ತು ಮಂಡಲಿ ಸಾಯಿರದ ನಾಳುಪ್ರಭು ನೇಮವೆಗ್ಗಡೆಯಾತನ ಮಗಂ ಚಿಣ್ಣಗವುಡ ಮಹಾಪ್ರಭು (ಎಕ. VII, ಶಿಮೊ. ೪೩-೩೦; 1172 ?). **ನಾಳ್ಪ್ರಭು:** ನಾಳ್ಪ್ರಭು ಚಾಳುಕ್ಯವಿಕ್ರಮಕಾಲದ ೩೫ನೆಯ ವಿಕೃತಸಂವತ್ಸರದ . . . ವಾರದಂದು. . . ಚಂದ್ರಶೇಖರವೆಗ್ಗಡೆ ಕಟ್ಟಿಸಿದ ಕೆಱೆಯ ಕೆಳಗೆ ಗಟ್ಟಿದ್ದ ಕಮ್ಮ ಮೂವತ್ತು (ಎಕ. VII, ಶಿಮೊ. ೮೯-೨೫ ; 1111) ; ಹಿಱಿಯುಪ್ಪನು ಮಂಡಲಿ ಸಾಯಿರದ ನಾಳ್ಪ್ರಭು ವಡ್ಡವ್ಯವಹಾರಿಯುಡವಿಗೊಡೆಯ ಹೊಯ್ಸಳ ಗೋಯಿಸೆಟ್ಟಿಯರ ಸುಪುತ್ರ ಕಲ್ಲಿಸೆಟ್ಟಿ (ಎಕ. VII, ಶಿಮೊ. ೩೬-೩ ; 1180) ; ಆ ವೃತ್ತಿಯ ಶ್ರೀಮಂನಾಳ್ಪ್ರಭುಗಳು ಹುಲ್ಲೂರ ಏಚವೆನಾಯಕಿತಿಯಜ್ಜುಗಾವುಂಡ (ಎಕ. XI, ಚಿತ್ರದು. ೨೩-೨೯ ; 1205) ; ಆತನ ತನೂಜಂ ನಾಗರಖಂಡಕೆ ನಾಳ್ಪ್ರಭು ಬೊಮ್ಮಿಸೆಟ್ಟಿ (ಕಇ. IV, ೨-೧೨ ; 1241).

[ನಾಟ್(<ನಾಡು)+ಪ್ರಭು]

**ನಾಟ್ಪ್ರಭುತ್ವ** (ನಾ). ನಾಡಿನ ಒಡೆತನ,—ಅಧಿಕಾರ : ಶ್ರೀಮಚ್ಚಾಳುಕ್ಯಗಂಗವೆರ್ಮಾಡಿ ಕೇಸ(ಶ)ವಗಾವುಣ್ಡಂ ನಾಟ್ಪ್ರಭುತ್ವದಿಂ ಪೊಟ್ಟಿಯೂ[ಗ್ಗೆ] ಗಾವುಣ್ಡುಗೆಯ್ಯುತ್ತವಿಟ್ದು (ಎಇ. XVI, ೮೪-೨೨ ; 1067). [ನಾಟ್ (<ನಾಡು)+ಪ್ರಭುತ್ವ]

**ನಾಟ್ಪಟ್ಟೆ₁,** ನಾಣ್ಬಟ್ಟೆ (ನಾ). ಹಳ್ಳಿಗಾಡಿನ ಹಾದಿ; ಊರ ಹಾದಿ : ತೊಟ್ಟನೆ ರಾಗಂ ಮನದೊಳ್ ಪುಟ್ಟೆ ಕಿರಾತೇಶನೊಸೆದು ಪಲವುಂ ಪೊನ್ನಂ ಕೊಟ್ಟೊಡವಂ ಕೊಳ್ಳದೆ ನಾಟ್ಪಟ್ಟೆ [ಪಾಠಾಂ. ನಾಡ್ಪಟ್ಟೆ]ಯ ದೆಸೆದೋಱಲಟ್ಟೆಮೆಸಗದೆ ಸಾಲ್ಗುಂ (ಜೀವಸಂ. ೫೭-೩೮). **ನಾಣ್ಬಟ್ಟೆ :** ಎಂಟಿಡೆಗೆಯ್ದುಪ್ಪುವು ಕಾರ್ಯಹಾನಿ ಪಥಿಕ ಗೋರೂರ ನಾಣ್ಬಟ್ಟೆಯೊಳ್ (ಅನಂಪು. ೧-೮೪) ; ಪುಟ್ಟಿದುದಂಜದಲ್ಲದೊಡೆ ಮುಟ್ಟದುದಂಜದೆನಿಪ್ಪುದೊಂದು ನಾಣ್ಬಟ್ಟೆಯ ಗಾದೆಗೊಂದೊರೆ ವಿಶೇಷಮದೆಂತೆನೆ (ಶತಕ. ೧೬೫-೨೨).

[ನಾಟ್ (<ನಾಡು)+ಬಟ್ಟೆ₁]

**ನಾಟ್ವರ್ತನ** (ನಾ). ೧. ದೇಶದ ಧರ್ಮ,— ಸಂಪ್ರದಾಯ ; ದೇಶಾಚಾರ. ೨. ಸಾಧಾರಣವಾದ ನಡೆವಳಿಕೆ; **ನಾಡಾಡಿ**ಯಾದ ಪದ್ಧತಿ : ಎಳವಿದಿರ ಬಣ್ಣಮೊಳ್ನುಡು . . . ಸೊಬಗಿವಳ್ಗೆ ನಾಟ್ವರ್ತನಮೇ (ಆದಿಪು. ೪-೪೪). ೩. ಮುಚ್ಚು ಮರೆ; ಕಪಟ : ಅಂತಾ ನಾಲ್ವರುಂ ನಾಟ್ವರ್ತನಮಿಲ್ಲದುಳ್ಳುದನುಳ್ಳಂದದೊಳಱಪುವುದುಂ (ಸುಕುಮಾ. ೭-೧೫ ವ).

[ನಾಟ್(<ನಾಡು)+ವರ್ತನ]

**ನಾಟ್ವಿಳಾಸ** (ನಾ). ದೇಶೀಯವಾದ ಬೆಡಗು,—ಸೊಗಸು : ನಾಟ್ವಿಳಾಸದೊಳ್ ಪೊರೆದಿರೆ ಬಂದುದಂದೊಡನೆ ಸಜ್ಜನವೆಂಡಿರ ತಂಡಮೋಳಿಯೊಳ್ (ಆದಿಪು. ೧೧-೪೬ ಅಡಿಟಿ).

[ನಾಟ್ (<ನಾಡು)+ವಿಳಾಸ (=ವಿಲಾಸ)]

**ನಿಂಗ** (ನಾ). ಶಿವನ ಒಂದು ಆಕಾರ; ಲಿಂಗ : ಗಂಡ ಹೆಂಡಿರ ಜಗಳ ಗಂಧ ತೀಡಿದ್ಹಾಂಗ ನಿಂಗಕ ನೀರು ಎರೆದ್ಹಾಂಗ ಹಿರಿಹೊಳೆಯು ಗಂಗವ್ವಸಾಗಿ ಹರಿದ್ಹಾಂಗ (ಗರತಿ. ೩೧). [<ಸಂ. ಲಿಂಗ]

**ನಿಂಗಪ** (ನಾ). ಒಬ್ಬಾತನ ಹೆಸರು : ನಿಂಗಪಗೆ ಕೊಟ್ಟೆ ಕೆಱೆಗೊಡಗೆ ಮಾನ್ಯ ಧರ್ಮ (ಮೈಆರಿ. ೧೯೨೯, ೧೦೬-೨ ; ?).

[ನಿಂಗ+ಅಪ (<ಅಪ್ಪ₁)]

**ನಿಂಗಮುದ್ರೆ** (ನಾ). ಲಿಂಗದ ಗುರುತು ಇರುವ ಮುದ್ರೆ; ಲಿಂಗಮುದ್ರೆ : ನಿಂಗಮುದ್ರೆ ಸ್ಥಾಪ್ಯ ಮಾಡಿಸಿ ನಿಮೂಪ್ಪದಾಕ್ಕೆ ನಾಮೂಸ್ಕಾರಾ ಮಾಡಿದನೂ (ಮೈಆರಿ. ೧೯೪೪, ೪೦-೫ ; 17ನೆಯ ಶತ).

[ನಿಂಗ+ಮುದ್ರೆ]

**ನಿಂಗರಾಯ** (ನಾ). ಒಬ್ಬಾತನ ಹೆಸರು : ನಿಂಗರಾಯನಟ್ಟು ಸತ್ತ (ಎಕ. X, ಮುಳಬಾ. ೨೬-೧೦ ; ಸು. 890 ?). [ನಿಂಗ+ರಾಯ]

**ನಿಂಗವಂತ** (ನಾ). ಲಿಂಗವನ್ನು ಧರಿಸಿದವನು ; ಲಿಂಗಾಯತ ; ಲಿಂಗವಂತ : ಜಾತಿ ನಿಂಗವಂತರದು (ಬಿಟ್ಟಹೊ. ೪೨).

[ನಿಂಗ+-ವಂತ]

**ನಿಂಗಾಯತ** (ನಾ). =ನಿಂಗವಂತ : ಅವನು ನಿಂಗಾಯತ (ರೂಢಿ).

[<ಲಿಂಗಾಯತ]

**ನಿಂದಕ** (ನಾ). ೧. ತೆಗಳುವಿಕೆ ; ದೂಷಣೆ ; ನಿಂದೆ : ಕೊಂಡೆಯದ ಕೋಂಟೆ ನಿಂದಕದಗಳನಡಿಗಡಿಗೆ ತೊಂಡಿನಟ್ಟಳೆ . . . ಅಟಮಟದ ಡೆಂಕಣಿಗಳೆಂದೊಪ್ಪುವ ತಂಡ ದುರ್ಮಾರ್ಗದುರ್ಗವ ಬಸವರಾಜೇಂದ್ರ ಕೊಂಡು (ಸಿಂಗಿರಾ. ೪೫-೮). ೨. ದೂಷಣೆ ಮಾಡುವವನು ; ಜರೆಯುವವನು ; ನಿಂದಿಸುವವನು : "ಗರ್ಹಕಃ, ಗರ್ಹಮಾಣಃ ಈ ೨ ನಿಂದಕಂ" (ಕಾಶಕ್ಯ. ೧೨೩) ; ವಿರಸನಜ್ಞನು ನಿಂದಕಂ ನಿಃಕರುಣಿ ಮರ್ದಿಂಗಾದೊಡೊಬ್ಬನು ಪುರದೊಳಱಿಸಿದೊಡಿಲ್ಲ (ಬಸಪು. ೪-೫೫) ; ನಿಂದಕರ ಸುಡುವ ಎದೆಗಿಚ್ಚು ನೋಡಾ (ಸಿದ್ಧೇವ. ೧೦೫-೩೨೬) ; ನಿಂದಕರಿರಬೇಕಿರಬೇಕು (ಪುರಂದ. ೪-೧೦೩ ಪಲ್ಲವಿ) ; ಒಂದೆಲಗ ಮೆಲ ಹೊಲ್ಲ ನಿಂದಕರ ನೆರೆ ಹೊಲ್ಲ (ಸರ್ವಜ್ಞ. ೧೯೦೦). [ಸಂ.]

**ನಿಂದಣ,** ನಿಂದಣೆ (ನಾ). =ನಿಂದನೆ : ತಮಗೆಂದುಂ ಮಾಡಿದ ವೈಯಾಪೃತ್ಯಮನಱಿದು ನಿಂದಣಗರುಹಣಂಗೆಯ್ದು (ಪದ್ಮಾರಾ.೧೭೨-೧೧) **ನಿಂದಣೆ :** ರಿಸಿಯರಂ ಕೊಂದೆನೆಂದು ನಿಂದಣೆಗರುಹಣೆಗೆಯ್ದು ತಾನು ಮಲ್ಲಿಯೆ ಕಿಚ್ಚಂ ಪೊಕ್ಕು ಸತ್ತು (ಪದ್ಮಾರಾ. ೧೫೬-೧೫).

[<ಸಂ. ನಿಂದನ]

**ನಿಂದಣೆ** 'ನಿಂದಣ' ನೋ.

**ನಿಂದನೆ** (ನಾ). ದೂಷಣೆ ; ಬಯ್ಗುಳು ; ನಿಂದೆ : ವಂದನೆ ನಿಂದನೆ ಎಂಬುದು . . . ಉಪಮಾತೀತನಾದ ಪ್ರಾಣಲಿಂಗೈಕ್ಯನಿಗುಂಟೆ (ಸಿದ್ಧೇಶ. ೨೧೫-೬೭೧) ; ಹೆರರು ಆಡುವ ನಿಂದನೆಯ ನುಡಿಗಳನ್ನು ಯಾವನು ತಾಳಿಕೊಳ್ಳುವನೋ ಅವನು ಲೋಕವನ್ನೆಲ್ಲ ಜಯಿಸುವನು (ವ್ಯಾಸಬಿ. ೨೯) ; ನಿಂದನೆ ಮಾಡುವವನಿಗೆ ವಂದನೆ ಇಲ್ಲ (ಗಾದೆ).
[ಸಂ. ನಿಂದನ]

**ನಿಂದಾವಾಣಿ** (ನಾ). ದೂಷಣೆ ; ಬಯ್ಗುಳು ; ನಿಂದೆಯ ಮಾತು : ಯುದ್ಧಕಾಲದಲ್ಲಿ ನಿರಸ್ತ್ರರಾದ ಪಟ್ಟಣಿಗರ ಮೇಲೆ ಆಕಾಶದಿಂದ ಅಗ್ನಿಬಾಣದ ಮಳೆಗರೆದಾಗ, ಮೊದಲ ಬಾರಿಗೆ ಧರ್ಮಬುದ್ಧಿಯ ನಿಂದಾವಾಣಿ ಕೇಳಿಸಿತು (ನಿಬಂಧ. II, ೨೧೧). [ಸಂ. ನಿಂದಾವಾಣೀ]

**ನಿಂದಾಸ್ತುತಿ** (ನಾ). ೧. ಕಾವ್ಯದ ಪ್ರಾರಂಭದಲ್ಲಿ ದೇವತೆಗಳನ್ನೂ ಹಿರಿಯರನ್ನೂ ಹೊಗಳುವಾಗ, ಅವರನ್ನು ತೆಗಳಿದಂತೆ ಪದ್ಯವನ್ನು ರಚಿಸಿದರೂ ಅದರ ಹಿಂದೆ ಹೊಗಳಿಕೆ ತೋರುವಂತೆ ಮಾಡುವ ಒಂದು ರಚನಾಚಮತ್ಕಾರ. ೨. ಅಂಥ ಚಮತ್ಕಾರವುಳ್ಳ ಪದ್ಯ : ಇನ್ನು ನಿಂದಾಸ್ತುತಿರೂಪವಾದ ವ್ಯಾಜಸ್ತುತಿಯು : ಶರ: ನಿಂದ್ಯ ಮಾಡುತ್ತವರೊಳು ಸ್ತುತಿಯು ತೋರೆ ಚಂದದಿಂದದು ವ್ಯಾಜಸ್ತುತಿಯು ಇಂದು ಈ ಗಂಗೆ ಪಾಪಿಗಳ್ಗೀವೆ ಸ್ವರ್ಗ ಛಂದದಿಂದಿದಾವ ವಿವೇಕ (ಕುವಲ. ೬೬). [ಸಂ.]

**ನಿಂದಿ** (ನಾ). ಒಂದು ಊರಿನ ಹೆಸರು ; P ಈಗಿನ ಹೆಗ್ಗಡದೇವನ ಕೋಟೆಯ 'ಹಿರಿನಂದಿ' ಎಂಬ ಊರು : ನಿನ್ದಿಯ ಕೊರನ್ತಿಯರಸರ ಮಕ್ಕಳ್ನಾಲ್ವರು ನೆಲದಡಿಬಿನೊಳ್ಕಾದಿ ಸತ್ತ x x (ಎಕ. IV, ಹೆಗ್ಗಡ. ೧೧೬-೯ ; ಸು. 930). [ ? ]

**ನಿಂದಿತ** (ಗು). ೧. ನಿಂದೆಗೊಳಗಾದ ; ದೂಷಣೆಗೊಳಗಾದ. ೨. ತಿರಸ್ಕಾರಯೋಗ್ಯವಾದ ; ಕೀಳಾದ. ೩. ನಿಷೇಧಿಸಿದ ; ನಿರೋಧ ಮಾಡಿದ. (ನಾ). ೪. ತಿರಸ್ಕಾರಯೋಗ್ಯವಾದುದು ; ಕೀಳಾದುದು : ಸತ್ಕಾರವಿಲ್ಲದೆ ಅಥವಾ ತಿರಸ್ಕಾರದಿಂದ ಇಟ್ಟ ಅನ್ನವು ನಿಂದಿತವು (ಆರ್ಯಧ. ೨೧೪). ೫. ದೂಷಿತನಾದವನು ; ನಿಂದೆಗೊಳಗಾದವನು : ಆಚಾರವಿಲ್ಲದ ಮಾನವನು ಲೋಕದಲ್ಲಿ ನಿಂದಿತನಾಗುವನು (ಶಕ್ತಿವಿ. ೬೩). ೬. (ಅಲಂ)ಕೆಟ್ಟಫಲವನ್ನುಂಟುಮಾಡುವವನು : ತ್ರಿತಯಾಯಾಪ್ಯಮದೊಳ್ ತುಷಾರಕರನಿಂದೇಕಾದಶದ್ರವ್ಯಧರ್ಮತನೂಜಾಸ್ತದೊಳಿಂಪ್ರಮಂತ್ರಿ ಶುಭದಂ ಶೇಷಂಗಳೊಳ್ ನಿಂದಿತಂ (ಜಾತತಿ. ೧೦-೧೧). [ಸಂ.]

**ನಿಂದಿತಾನ್ನ** (ನಾ). ತಿರಸ್ಕಾರದಿಂದ ನೀಡುವ ಆಹಾರ : ನಿಂದಿತಾನ್ನ—ಶುದ್ಧವೇ ಆದರೂ ಕಾರಣಾಂತರದಿಂದ ಕೆಡುವುದು. ಸತ್ಕಾರವಿಲ್ಲದೆ ಅಥವಾ ಪುರಸ್ಕಾರವಿಲ್ಲದೆ, ತಿರಸ್ಕಾರದಿಂದ ಇಟ್ಟ ಅನ್ನವು ನಿಂದಿತವು (ಆರ್ಯಧ. ೨೧೪). [ನಿಂದಿತ + ಅನ್ನ$_3$]

**ನಿಂದಿರಿಕೆ** 'ನಿಲ್' ಪರಾ.

**ನಿಂದಿರಿಸು** 'ನಿಲ್' ಪರಾ.

**ನಿಂದಿಸು** (ಕ್ರಿ). ಬಯ್ಯು ; ದೂಷಿಸು; ತೆಗಳು ; ಜರೆ: ತನ್ನ ಭೋಗತೃಷ್ಣೆಯಂ ತಾನೆ ತನ್ನ ಮನದೊಳ್ ನಿಂದಿಸುತುಂ (ಆದಿಪು. ೧೬-೭೦ ವ); ಎತ್ತಿಕೊಳಲೇಕೆ ಮತ್ತಿಳುಹಲೇಕಯ್ಯಾ . . . ನಿಂದಿಸಲೇಕೆ ಸ್ತುತಿಸಲೇಕೆ (ಬಸವ. ೪೧೯) ; ನಿಮ್ಮ ನಿಂದಿಸುವವರುಗಳು ದುಷ್ಕರ್ಮಿಗಳು (ಕುವ್ಯಾಳ. ೬-೧೦೯) ; ಹಿಂದೆ ನಿಂದಿಪರನ್ನು ವಂದಿಸುತಲಿರಬೇಕು (ಪುರಂದ. ೨-೭೫-೨) ; ನಿಂದಿಸುವ ದುರ್ಜನರೆಂಬೊಂದು ಭಯಂಬೆತ್ತು ಸುಕವಿ ರಚಿಸನೆ ಕೃತಿಯಂ (ರಾಜಶೇ. ೧-೩೧) ; ಇನ್ನೊಬ್ಬರ ಪುಸ್ತಕವನ್ನು ಹೀಗೆ ತೆಗೆದುಕೊಂಡು ನಿಂದಿಸ ಹಚ್ಚುವುದು ಒಳ್ಳೆಯದಲ್ಲ (ಜಯಂತ. ೨೬).

**ನಿಂದಿಸಿಕೊಳ್** = ಜರೆದುಕೊಳ್ಳು ; ಹೀಯಾಳಿಸಿಕೊಳ್ಳು : ತಮ್ಮಂ ತಾಮೆ ಕೃಪಾಶೂನ್ಯರೆಂದು ನಿಂದಿಸಿಕೊಂಡರ್ (ಪಂಪಾಮಾ. ೧೫-೧೬); ತನ್ನಂ ತಾನೆ ನಿಂದಿಸಿಕೊಂಡು ತಡವರಿಸಿ ಬೀಟ್ವ ಮುನಿನಾಥನಂ ಬೀಟಲೀಯದೆ ತರ್ಕೈಸಿಕೊಂಡು (ಧರ್ಮಾಮೃ. ೮-೧೬೯).
[ನಿಂದೆ + -ಇಸು$_3$]

**ನಿಂದೆ** (ನಾ). ೧. ತೆಗಳಿಕೆ ; ಬಯ್ಯುವಿಕೆ; ದೂಷಣೆ : "ತೆಗಟೆನ್ನಲದು ತಾಂ . . . ನಿಂದಾಖ್ಯಂ" (ಕವಿಕಂ. ೧೨೨) ; ಸ್ತುತಿ ನಿಂದೆಗಳು ಬಂದರೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು (ಮಹಾದೇ. ಬ. ೪೫-೧೦೬); ಸ್ತುತಿ ಇಲ್ಲ ನಿಂದೆ ಇಲ್ಲ ನೆಂಟರಿಲ್ಲ . . . ತಾನೆಂಬ ನೆನಹಿಲ್ಲಾಗಿ (ಅದವ. ೪೭-೧೩೨); ಮೆಚ್ಚಿವನಭವನ ನಿಂದೆಯಂ ಕೇಳದತಿರಾಗಿ (ಇಚಿರ. ದೇ. ೧೦೬-೧೨); ಅಂತು ನಿಂದೆಯನಾಂತು ಸ್ತುತಿವೆತ್ತ ಮಣಿಗಾಜರ ಪಸರದಿಂ ಮುಂದೆ . . . ಎಸೆವುವಂಬುಧಂಗಳ ಪಸರಂ (ದಶಕು. ೧-೩೬ ವ) ; ನಿಂದೆ ಹೊದ್ದುದು ನಡೆವಳಿಗಳೆಲಿ (ತೊರರಾ. ೧-೩-೨೪) ; ಒಂದೊಂದು ವೇಳೆ ಮಾತಿನ ಭರದಲ್ಲಿ ಬೇರೊಬ್ಬರ ನಿಂದೆಯ ಮಾತುಗಳಾಗಲಿ ಚಾಡಿಯಾಗಲಿ ಬಾಯಿಂದ ಹೊರಬೀಳಬಹುದು (ಮುಂಬಯಿ. ೪-೪೯). ೨. ಅನ್ಯಾಯವಾದ ಆರೋಪ, — ಅಪವಾದ ; ಆಕ್ಷೇಪ : "ಅಪವಾದಃ . . . ನಿಂದಾ, ಜುಗುಪ್ಸಾ - ಈ ೮ ಅಪವಾದದ ನಾಮಂ" (ಹಲಾಯು. ೨೪೬-೧೪೭) ; "ಅವಾರ್ತೆಯಪವಾದಂ ಜುಗುಪ್ಸೆ ನಿರ್ವಾದಮಪಕೀರ್ತಿ . . . ಉಪಕ್ರೋಶಮೆನೆ ನಿಂದೆಯಕ್ಕುಂ" (ಮಂಗರಾ. ೨೬-೪).

**ನಿಂದೆಯತನ** = ದೂಷಣೆ : ಹಾವ ಹಿಡಿವುದಕ್ಕೆ ಗಾರುಡವ ಹೇಳಿದುದಿಲ್ಲ ಕುತ್ತುವ ಹಸುವಿನ ಕೊಂಬ ಹಿಡಿಯ ಕಲಿಸಿದುದಿಲ್ಲ ತಿಂಬ ಹುಲಿಗೆ ಅಂಗವ ತಪ್ಪಿಸುವುದ ಕಲಿಸಿದುದಿಲ್ಲ ನಿನಗಿದು ನಿಂದೆಯತನವೆ (ಮೋಳಿಮಾ. ೨೦೨-೭೫೪). [ಸಂ. ನಿಂದಾ]

**ನಿಂದೆಗಾಜ** (ನಾ). ತೆಗಳುವವನು; ನಿಂದಕ : ನಿಂದೆಗಾಜನೊ ಮೇಣು ಲೋಕದ ಬಂದಿಗಾಜನೊ (ಶಿಭಾಗ. ೪-೧೧-೧೫). [ನಿಂದೆ + -ಕಾಜ]

**ನಿಂದೋಪಮೆ** (ನಾ). [ಕಾವ್ಯಮಿ] ಉಪಮಾನವಸ್ತುಗಳನ್ನು ದೋಷಪೂರ್ಣವೆಂದು ಹೇಳಿ ಅವುಗಳನ್ನು ನಿಂದಿಸುವ ಮತ್ತು ಉಪಮೇಯವನ್ನು ಹೊಗಳುವ ಒಂದು ಬಗೆಯ ಉಪಮಾಲಂಕಾರ : ಸರಸಿಜಂ ಸರಜಂ ಶಶಧರಬಿಂಬಮದತಿಕಳಂಕಿತಂ ನಿನ್ನ ಮೊಗಂ ನಿರುಪಮಮಾಗಿಯುಮವಟಿಸೊಳ್ ದೊರೆಯೆಂಬುದನಜುದು ಕೊಳ್ಗೆ ನಿಂದೋಪಮೆಯಂ (ಕವಿರಾ. ೩-೭೩). 'ಪ್ರಶಂಸೋಪಮೆ' ಪರಾ. [ಸಂ. ನಿಂದೋಪಮಾ]

**ನಿಂದ್ಯ** (ಗು). ೧. ನಿಂದಿಸಲು ತಕ್ಕುದಾದ ; ದೂಷಣೆಗೆ ಯೋಗ್ಯವಾದ : ಪಾಪಪರಿಶೋಧನೆಗಾಗಿ ಪ್ರತಿನಿತ್ಯವೂ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಇಲ್ಲದಿದ್ದ ಪಕ್ಷದಲ್ಲಿ ಅವರು ನಿಂದ್ಯಲಕ್ಷಣಯುಕ್ತರಾಗಿ ಹುಟ್ಟಬೇಕಾಗುತ್ತದೆ (ಭಾರದ. ೫೫). (ನಾ). ೨. ನಿಂದಿಸುವಂತಹ ಕೆಲಸ ; ದೂಷಣೆಗೊಳಗಾಗುವ ಕಾರ್ಯ : ವಂದಿಗಳ್ ನಿಂದ್ಯಮೆನೆ ಮಾಗಧರಾಗದೆನೆ ಸೂತರನೀತಿಯೆನೆ . . . ಸಮುದ್ರಕ್ಷೋಭದಂತೆ ಘೂರ್ಣಿಸುವ ಜನಕ್ಷೋಭಮಂ ಕೈಕೊಳ್ಳದೆ (ಜಗವಿ. ೨-೫೩ ವ). ೩. ತೆಗಳಿಕೆಗೆ ಯೋಗ್ಯವಾದುದು : ಆತನಿಗೆ ಈ ಅಸಹಿಷ್ಣುತೆಯು ನಿಂದ್ಯವಾಗಿದೆಯೆಂದು ಬೋಧಿಸಿದ ವೃತ್ತವು ಲೀಲಾಚರಿತ್ರೆಯಲ್ಲಿದೆ (ಕರ್ನಾಟ. ೧೬೭). ೪. ದೂಷಣೆಗೆ ಯೋಗ್ಯನಾದವನು, — ಅರ್ಹನಾದವನು : ನಿಂದ್ಯನಾವನು ಲೋಕದೊಳಗಧಿವಂದ್ಯನಾವನು (ಕುವ್ಯಾಳ. ೨೩-೪೨). [ಸಂ.]

**ನಿಂಬ** (ನಾ). ೧. ಒಂದು ಬಗೆಯ ಮರ ; ಬೇವು : "ನಿಂಬಮರಿಷ್ಟಂ ಪಿಚುಮಂದಂ ಬೇವು" (ವಸ್ತುಕೋ. ೩೪-೧೦) ; "ನಿಂಬಮದರಿಷ್ಟಮೆನೆ ಪಿಚುಮಂದಮೆನೆ ಬೇವು" (ಮಂಗರಾ. ೩೫-೧೩) ; ಕಕ್ಕೆ ಮುಸ್ತೆ ನಿಂಬಂ ಕೊತ್ತಂಬರಿಯೆಂಬಿವಂ . . . ಮಱುಗಿಸಿ ಕುಡಿಯೆ ಪೈತ್ತಿಕಜ್ವರ ಹರಣಂ (ಲೋಕೋಪ. ೯-೧೭); ನಿಂಬದ ಕುಸುಮಂಗಳನೌದುಂಬರಪಂಚಕಮನಂತೆ . . . ಗಿಣ್ಣನುಣ್ಣದಿರ್ಪುದವೋಘಂ (ಸುಕುಮಾ. ೬-೪೩). ೨. ಮಂದಾರ ; ಪಾರಿಭದ್ರ : 'ನಿಂಬತರು' ಪರಾ. [ಸಂ.]

**ನಿಂಬಕೈಪೆ** (ನಾ). ಬೇವಿನ ಕಹಿ,—ತಿಕ್ತರುಚಿ : ನಿಂಬಕೈಪೆಯುಂ ಸರ್ಪನ ಪಲ್ಲೊಳು ವಿಷಮೆಂತು ಸ್ವಭಾವಮಂತೆ ಸ್ತ್ರೀಯಿನಿತು . . . ಧರ್ಮಮುಂ ದರ್ಪಮುಮೆಂದಿವಂ ಬಿಡುವರಲ್ಲದಱಿಂ ಸ್ತ್ರೀಗೆ ನಿರ್ವಾಣಮಿಲ್ಲ (ಶ್ರಾವಕಾ. ೧೧೫-೮). [ನಿಂಬ+ಕೈಪೆ (<ಕಯ್ಪು)]

**ನಿಂಬಜೆ** (ನಾ). ನಿಂಬವನದಲ್ಲಿ ವಾಸಿಸುವ ದೇವತೆ ; ಮಲ್ಲರ ದೇವತೆ ; ರಣದೇವತೆ ; ಚಂಡಿ ; ☞ ಈಕೆಯು ನಿಂಬವೃಕ್ಷದಲ್ಲಿ ವಾಸಿಸುವುದರಿಂದ ಈ ಹೆಸರು ಬಂದಿದೆಯೆಂದು 'ಬ್ರಹ್ಮಾಂಡ ಪುರಾಣದ ನಿಂಬಜಾಶಕ್ತಿವಿಜ್ಞಾನ' ಎಂಬ ಭಾಗದಲ್ಲಿ ಹೇಳಿದೆ: ಭುಜದಲಿ ಶಿರದಲಂದಕ್ಕಡದ ಮಣ್ಣನು ಬೆರಳಲುದುರಿಚಿ ಬಾಳುಗೆಂದರು ನೆನೆದು ನಿಂಬಜೆಯು (ಕುವ್ಯಾಕ. ೧೯-೪೧) ; ಬಹಳ ರವದಬ್ಬರದಲೆದ್ದನು ನೆನೆದು ನಿಂಬಜೆಯ (ಪ್ರಹ್ಲಾಚ. ೩-೫೪) ; "ಗರುಡಿಯವರ ಕುಲದೇವತೆ" (ಪ್ರಭಣ್ಣ). [ಸಂ. ನಿಂಬಜಾ]

**ನಿಂಬತರು** (ನಾ). ೧. ಮಂದಾರ ವೃಕ್ಷ : "ಪಾರಿಭದ್ರಃ, ನಿಂಬತರುಃ, ಮಂದಾರಃ, ಪಾರಿಜಾತಕಃ — ೪ ಹಾಲಿವಾಣದ ಮರದ ಹೆಸರುಗಳು. ಇದಕ್ಕೆ ಗಂಧಬೇವೆಂತಲೂ ಪಾರಿಜಾತವೆಂದೂ ಕೆಲವರು ಅರ್ಥ ಹೇಳುವರು" (ಸಿದ್ಧಾಂತಿ. ೧೧೭). ೨. ಬೇವಿನ ಮರ. [ನಿಂಬ+ತರು₂]

**ನಿಂಬದಳ** (ನಾ). ಬೇವಿನ ಎಲೆ,—ಸೊಪ್ಪು : ನಿಂಬದಳಂ ಧಾತ್ರೀಫಳಮೆಂಬಿವನೊಡನರೆದು ಕುಡಿವುದು . . . ಕುಷ್ಠರೋಗಮಿವಱಿಂ ಕಿಡುಗುಂ (ಲೋಕೋಪ. ೯-೧೧೦) ; ಮನಂಗೊಳಿಪ ನಿಂಬದಳದಂದದಿಂ ಪೊಂಗಡರ್ದ ಬಂಧುರಭ್ರೂಲತೆಯ ಕೋಮಲಲತಾಂಗಿಯರು ಬಂದರು (ಸೌಂದಪು. ೭-೫೩). [ನಿಂಬ+ದಳ₂(=ದಲ)]

**ನಿಂಬಪತ್ರ** (ನಾ). =ನಿಂಬದಳ : ನಿಂಬಪತ್ರವನು ತಲೆ ಉಡಿಯಲ್ಲಿ ಚಿಂತೆಯಿಲ್ಲದೆ ಕಟ್ಟಿ ಮಾರಿಯಂ ಕುಣಿಸುತ್ತ (ಪ್ರೌಢರಾ. ೬-೪೧) ; ಪಾಪಿಗಳಾರವರ್ಗೆ ಹರಿಕೀರ್ತನೆಯಲ್ಲಿಯುಪೇಕ್ಷೆ ಯೋಗ್ಯವೆ ಜ್ಞಾಪಿಸೆ ಚೂತಪಕ್ವಫಲಮಂ ವಿಗೆ ಬಿಟ್ಟುಱೆ ನಿಂಬಪತ್ರಮಂ ವ್ಯಾಪಿಸಿ ಭಕ್ಷಿಪುಷ್ಪದವೊಲ್ (ಯಾದಚಂ. ೧೨-೩೨). [ನಿಂಬ+ಪತ್ರ]

**ನಿಂಬಫಲ** (ನಾ). ಬೇವಿನ ಹಣ್ಣು : ಕಾವನ ಕೈಯೆರಲೆಯ ಕೋಡಿಗೆಱೆಯಾದ ಭಾವೆಯ ಕುಡಿವುರ್ಪುಗಳಿಗೆ ತಾವೆಣೆಯೆಂದು ಗರ್ವಿಸಿ ಕೈಪೆ ಮಾಡಿದನಾ ವಿಧಿ ನಿಂಬಫಲಕೆ (ಶ್ರೀಪಾಲ. ೩-೬೪). [ನಿಂಬ+ಫಲ₁]

**ನಿಂಬಮಾಲೆ** (ನಾ). ಬೇವಿನ ಸೊಪ್ಪಿನಿಂದ ಮಾಡಿದ ಮಾಲೆ,—ಹಾರ : ನಿಂಬಮಾಲೆಯ ಕಿಱುವೀಲಿಯ ಪೆಂಜೆಯದ ಕೇಶಬಂಧದೊಳಂ . . . ಪಟ್ಟಪಟ್ಟಾವಳಿಯ ಗಂಡುಡಿಗೆಯೊಳಮೆಸೆದು ಪಸದನಂಗೆಯ್ದು (ಜಗವಿ. ೪-೮೦ ವ). [ನಿಂಬ+ಮಾಲೆ]

**ನಿಂಬಳ** (ನಾ). ಒಂದು ಬಗೆಯ ಆಭರಣ : ಸಾರುತಿರೆ ಕೆಂಬರಲನಿಂಬಳದ ಕಡುರಂಗು ಹಾರದೆಳಮುತ್ತು ತಾರಗೆಗಳ ತಿರಸ್ಕರಿಸೆ ಚೇರಮಕ್ಷಿತಿಪಾಲ . . . ಪುರವಿಹಾರಕ್ಕೆ ಬರೆ (ಸೌಂದಪು. ೧೭-೨೧) ; ನುಡ್ಯಾಣಕದ ನಿಂಬಳವನಿಟ್ಟು (ರೇವಣ. ೬೩-೧೪). [ ? ]

**ನಿಂಬಾಲ್ಯ** (ನಾ). ನಿರ್ಮಾಲ್ಯ : ಮಜ್ಜನದ ಮಾರಿಯೋ ಪತ್ರೆಯ ತಾಪತ್ರಯ ನಿಂಬಾಲ್ಯವ ಲಿಂಗಾರ್ಪಿತವ ಮಾಡುವವನೇನೆಂಬೆ (ಸರ್ವವ. ೩೨-೧೫೮) ; ಲಿಂಗಭೋಗೋಪಭೋಗಂಗಳೆಂದು ಬಿಟ್ಟ ನಿಂಬಾಲ್ಯವನರ್ಪಿಸಬಹುದೆ (ಪ್ರಭೋಗ. ೮೩). [<ನಿರ್ಮಾಲ್ಯ]

**ನಿಂಬಾವಳಿ** (ನಾ). ನಿಂಬೆಯ ಹಣ್ಣಿನ ಬಣ್ಣದ ಬಟ್ಟೆ ; ಪೀತಾಂಬರ ( ? ) : ಜರತಾರಿಯ ಅಂಚಿನ ನಿಂಬಾವಳಿ ಮಗುಟದ ಮಡಿಯ ಉತ್ತರೀಯ (ನಡೆದಾ. I, ೫೫೮).

[<ನಿಂಬೆ+ಪಳಿ₄(<ಪಟ್ಟ₆)]

**ನಿಂಬಿ₁** 'ನಿಂಬೆ' ನೋ.

**ನಿಂಬಿ₂** (ನಾ). ( ? ) : ಕೆಲರು ಕರ್ಮಾದಿನೆಂಬರಕ್ಕಟ ಕೆಲರು ಬೊಮ್ಮದಿನೆಂಬರಯ್ಯೋ . . . ಗೆಲಲು ನಿರಯಮಹಾಸಮರವಂ ಸಲಲು ಮುಕ್ತಿಯೊಳಣ್ಣ ಮೊಗ್ಗೇ ತೊಲಗು ನಿಂಬಿಯ ಸೂಚಿಯೆ ಗಣಿಸದಿರುಮವನಿಲ್ಲಿ (ಸಾನಂಚ. ೮-೬೨). [ ? ]

**ನಿಂಬೆ,** ಇಂಬಿ, ನಿಂಬಿ₁, ಲಿಂಬಿ, ಲಿಂಬೆ (ನಾ). ಈಳೆ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಜಂಬೀರ: "ಕರಣಃ, ಜಂಬೀರಃ—ಈ ೨ ನಿಂಬೆ" (ಹಲಾಯು. ೩೨-೪೧) ; "ಜಂಬೀರಮೆನೆ ನಿಂಬೆ" (ಮಂಗರಾ. ೩೪-೧೦); ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿನೀರನೆಱೆದವರಾರಯ್ಯ (ಮಹಾದೇ.ಬ. ೧೦-೧೩) ; ನಿಂಬೆಯ ಕೌಂಗು ತೆಂಗು ಪೊಸ ನೆಲ್ಲಿ . . . ಸುಚಂಪಕಾದಿ ತರುಸಂತತಿ ಶೋಭಿಸಿತ್ತು (ಉದ್ಭಟ. ೯-೧೩);ನಿಂಬೆಯುಂಬಟೆ ಮಾತುಳಂಗ ವಿಳಂಗ ನಾರಂಗ ಎಂಬ . . . ತರುನಿಕುರುಂಬವನು ನಿರ್ಮೈಸಿದನು ನಿಶ್ಶೇಷವೆನೆ ಹನುಮ(ತೊರರಾ. ೫-೪-೬); ನಿಂಬೆ, ಕಿತ್ತಲೆ . . . ಇವೇ ಮುಂತಾದ ಹಣ್ಣಿನ ಗಿಡಗಳನ್ನು ತೋಟಗಳಲ್ಲಿ ಬೆಳೆಯಬಹುದು (ವ್ಯವಮು. ೫೮). 'ಗಜನಿಂಬೆ' ಪರಾ. **ಇಂಬಿ** : ರಂಬೆ ವರನಂದಿ ಬರುವಾಗ - ಚಳುವೈಯ್ಯ ಇಂಬೀಹಣ್ಣಿನ್ಹಂಗೆ ಹೊಳೆದಾನೂ (ಹುಟ್ಟಹ. ೯೦) ; ಇಂಬೀವನದಲ್ಲಿ ಸೆರೆಯಿರುವ ಸೀತಮ್ಮಗೆ ಉಂಗುರವ ತಂದ ಹನುಮಯ್ಯ (ಹಳ್ಳಿಬಾ. ೮). **ನಿಂಬಿ₁** : "ರೋಚನಕಃ—ನಿಂಬಿ" (ಓಷಧಿ. ೧೪೦) ; ನಿಂಬಿ ಗಜನಿಂಬಿ . . . ಮಾದಳನಿಂಬಿ ಎಂದು ಇವೆ (ಕೃಷಿಪ್ರ. ೧೭೮). **ಲಿಂಬಿ** : ಲಿಂಬಿಯ ವನಂ ಮಳಮಾನೆ (ಲೋಕಗೀ. ೨೪). **ಲಿಂಬೆ** : ಅಲ್ಲ ಹೇರಳೆ ಲಿಂಬೆ ಮೆಣಸು ಯಾಲಕ್ಕಿಕಾಯ್ ನೆಲ್ಲಿಯಂಬಟೆಕಾಯಿ ಚೆಲುವ ಮಾಗಾಯಿ ಬಿಲ್ವ ಮುಂಗ್ರಿ ಸೊಂಡೆ ಚೆಲುವ ಪಾಪಟೆಕಾಯಿ ಎಲ್ಲಾ ಧರಾದೇವಿ ತಾ ಬಡಿಸಿದಳಯ್ಯ (ಪುರಂದ. ೨-೧೬೯-೨) ; ಲಿಂಬೆ - ಸಹ್ಯಾದ್ರಿಯ ಹಳ್ಳಿಗಳಲ್ಲಿ ಬಹಳ ಬೆಳೆಯುತ್ತವೆ. ವ್ಯವಹಾರದಲ್ಲಿ ಇದು ಬಹಳ ಪ್ರಸಿದ್ಧ ಉಂಟು (ಕಭಾಗ. ೪೭) ; ಸಿರ್ಕದ ಬದಲಿಗೆ ಲಿಂಬೇರಸ ಸೇರಿಸಬಹುದು (ಅಡುಸೌ. ೧೦೯).

**ನಿಂಬೆಯ ಕಾಯ್, ಲಿಂಬೀಕಾಯಿ** = ಹಣ್ಣಾಗದೆ ಇರುವ ನಿಂಬೆ: ನಾರುವದನಾದ ಕಣಕವನು ನಿಂಬೆಯಕಾಯ [ಪಾಠಾಂ. ಹಣ್ಣ] ತೋರ ದುಂಡೆಯ ಮಾಡಿ (ಸೂಪಶಾ. ೧-೨೬) ; ಅವಳು ತನ್ನ ಪೆಟ್ಟಿಗೆಯಲ್ಲಿ ಲಿಂಬೀಕಾಯಿಯಷ್ಟು ಅಫೀಮನ್ನು ಸಹ ಸಂಗ್ರಹಿಸಿಟ್ಟಳು (ಅಂಬಿಕೆ. ೭೬). **ನಿಂಬೆಯ ಪುಳಿ, ನಿಂಬೆಯ ಹುಳಿ, ಲಿಂಬಿಹುಳಿ** = ನಿಂಬೆಯ ಹಣ್ಣಿನ ಹುಳಿಯಾದ ರಸ: ನಿಂಬೆಯ ಪುಳಿಯಿಂ ತೇದೆಚ್ಚು (ಖಮದ. ೬-೪೩) ; ಉತ್ತಮದ ಸೇವಗೆಯ ತೆಱದಿ ಬಾಳೆಯ ದಿಂಡನುತ್ತರಿಸಿ ನೀರೊಳೊಂದಿನಿಸು ನಿಂಬೆಯಹುಳಿಯನಿತ್ತರದೊಳಿಕ್ಕಿ ಪೊಂದಿನಿಸು ಹೊತ್ತಿನ ಮೇಲೆ ತೆಗೆದು (ಸೂಪಶಾ. ೪-೬೯) ; ಅಣ್ವಸ್ತ್ರಗಳ ಹಿಡಿದು ಹೊರಟವರ ತಲೆಯ ನುಣ್ಣಗೆ ಮಾಡಿ, ಲಿಂಬಿಹುಳಿಯನು ಹಿಂಡಿ . . . ವಿಶ್ವಸಂಸ್ಥೆಯ ಮುಂದೆ ಮೆರೆಸೋಣ (ನೆಲಮು. ೧೭-೭). **ನಿಂಬೆಯ ಹಣ್ಣು, ನಿಂಬಿಯ ಹಣ್ಣು, ನಿಂಬೇಹಣ್ಣು** = ನಿಂಬೆವಣ್ : ನಿಂಬೆಯ [ಪಾಠಾಂ. ನಿಂಬಿ, ನೇಬಿಯ] ಹಣ್ಣು ಅತ್ತಿಯ ಹಣ್ಣು

ಹುಣಸೆಯ ಹಣ್ಣು (ಬಸಪು. ೧೮–೧೬) ; ಕಾಣಿಕೆಗೆ ಹೊಸ ನಿಂಬೆಯ ಹಣ್ಣ ತಂದಿತ್ತು (ಭರಚ. ೫–೨೯) ; ಪದಿನೆಂಟು ಪರಿಯ ಪಕ್ವಾನ್ನಂಗಳಂ ಮಾಡಿ ಭೋಜನಮಂ ಮಾಡಿಸಿ ಒಪ್ಪಿಡಿ ಒಗರಡಿಕೆಯ ಭಾಗವನು ಎರಡೆಲೆಯೊಳ್ ನಿಂಬಿಯ ಹಣ್ಣಿನ ಪ್ರಮಾಣದ ಸುಣ್ಣಮನಿಕ್ಕಿ ವೀಳೆಯಮಂ ನೀಡಲ್ (ಪುಣ್ಯಾಸ್ರ. ೩–೧೮ ಪ); ನಿಂಬೇ ಹಣ್ಣಾದರೆ ಹಂಬಲಿಸಿದರೆ ಬಂದೀತೇ ? (ಗಾದೆ); ನಿಂಬೇಹಣ್ಣಿನ ಪಾನಕ ತಂಪು (ರೂಢಿ).
[<ಸಂ. ನಿಂಬೂ, ನಿಂಬೂಕ./ಪ್ರಾ. ಲಿಂಬ./ಮರಾ. ಲಿಂಬೂ./ತುಳು. ನಿಂಬಿ, ಲಿಂಬಿ, ಲಿಂಬೆ]

**ನಿಂಬೆಗಿಡ** (ನಾ). ನಿಂಬೆಯ ಹಣ್ಣಿನ ಗಿಡ : ನಮ್ಮ ಮನೆಯ ಹಿತ್ತಲಲ್ಲಿ ಒಂದು ನಿಂಬೆಗಿಡ ಇದೆ (ರೂಢಿ). [ನಿಂಬೆ+ಗಿಡ(<ಗಿಡು)]

**ನಿಂಬೆಚೊಟ್ಟೆ** (ನಾ). ರಸ ಹಿಂಡಿದ ಮೇಲೆ ಉಳಿಯುವ ನಿಂಬೆ ಹಣ್ಣಿನ ಸಿಪ್ಪೆ. [ನಿಂಬೆ+ಚೊಟ್ಟೆ$_3$]

**ನಿಂಬೆತುಳಸಿ** (ನಾ). ಒಂದು ಬಗೆಯ ಸಸ್ಯ ; ತುಳಸಿಯಲ್ಲಿ ಒಂದು ವಿಧ ; "ಮರತುಳಸಿ" (ಸಸ್ಯನಿ. ೯೬). [ನಿಂಬೆ+ತುಳಸಿ (=ತುಲಸಿ)]

**ನಿಂಬೆವಣ್**, ನಿಂಬೆಹಣ್ಣು (ನಾ). ಹಣ್ಣಾದ ನಿಂಬೆ ; ಜಂಬೀರ ಫಲ : ಬೆಣ್ಣೆ ಕಾಸಿದ ತುಪ್ಪ ಹಪ್ಪಳಂ ನಸುನಿಂಬೆವಣ್ಣನಿಕ್ಕಿದ ಹಲವು ಪರಿಯ ಹೋರಕಂ (ಸಮ್ಯಕೌ. ೬–೨೪). **ನಿಂಬೆಹಣ್ಣು** : ನವಿಲುಗರಿಯ ಕಣ್ಣುಗಳು . . . ನಿಂಬೆಹಣ್ಣು ಮೊದಲಾದ ಫಲಗಳಲ್ಲಿ ರಸ ವೈಚಿತ್ರ್ಯವು—ಇವು ಮೊದಲಾದುವು ಹೇಗೆ ಸ್ವಭಾವಸಿದ್ಧವೋ ಹಾಗೆ ಮನುಷ್ಯರ ಸುಖದುಃಖಗಳೂ ಆಯಾ ದೇಹಾದಿ ವಸ್ತುಸ್ವಭಾವಮೂಲಕವು (ಹಿಂದಸಾ. ೧೧); ನಿಂಬೆಹಣ್ಣಿನ ಪರಿಮಳ ನಶ್ಯಕ್ಕೆ ಸೇರಿ . . . ಮೂಗಿಗೆ ಸ್ವರ್ಗಸುಖವನ್ನೇ ನೀಡುತ್ತದೆ (ನನ್ನೂರು. ೧೮೩).
[ನಿಂಬೆ+ಪಣ್$_3$]

**ನಿಂಬೆಹಣ್ಣು** 'ನಿಂಬೆವಣ್' ನೋ.

**ನಿಂಬೆಹುಲ್ಲು** (ನಾ). ಒಂದು ಬಗೆಯ ಹುಲ್ಲು : ಮಜ್ಜಿಗೇಹುಲ್ಲು, ನಿಂಬೇಹುಲ್ಲು (ಮೈಗೆ. ೨೬–೫೧೩). [ನಿಂಬೆ+ಹುಲ್ಲು(<ಪುಲ್)]

**ನಿಃಕಂಟಕ** (ನಾ). ≡ ನಿಷ್ಕಂಟಕ : ನೆಲನಂ ನಿಃಕಂಟಕಂ ಮಾಡಿ ವಿಕ್ರಮ[ದಿಂ] ವಿಸ್ವನರೇಸ್ವರ ಪ್ರಭುತೆಯಂ ತಾಳ್ದಿದರ್ಪ ಚಾಳುಕ್ಯಚಕ್ರ ಮಹೋತ್ಸಾಹದಿನಾಳ್ದನೆಯ್ದೆ ಧರೆಯಂ ಪೆರ್ಮ್ಮಾಡಿ ಭೂವಲ್ಲಭ (ಸೌಇಇ. XX, ೮೫–೮ ; 1124). [ಸಂ.]

**ನಿಃಕರಿಸು** (ಕ್ರಿ). ತಾತ್ಸಾರಮಾಡು ; ತಿರಸ್ಕರಿಸು (?) : ಆಕೃತಿ ನಿರಾಕೃತಿಗಳೆಂಬ ಕೃತಿಯಳಿದು ವ್ಯಾಕುಳ ನಿರಾಕುಳವಡಗಿ ನಿಃಕರಿಸುವುದು ಸ್ವೀಕರಿಸುವುದಲ್ಲದೆ ಚರಾಚರನಲ್ಲದಖಿಳಾತೀತನಾಗಿ ನಿಂದ ನಿಜವು (ಆದಪ. ೪೩–೧೧೩) ; ಭಕ್ತಿಯ ಕುಳಸ್ಥಲವನರಿಯದೆ ಎಲ್ಲರೂ ಎಂದಂತೆ ಎಂದರು ಬಲದಲ್ಲಿ ಬಂದರು ಇದ ನಿಃಕರಿಸಿ ಜಂಗಮವೇ ಲಿಂಗವೆಂದು ಸಂಗಸಾಹಿತ್ಯವಾದ ಬಸವಣ್ಣ (ಮುಡಿಮಾ. ೬೨–೯೧). 'ನೀಕರಿಸು', 'ನೀಬ್ಕರಿಸು$_2$' ಪರಾ. [ನಿಃಕರಣ$_0$+–ಇಸು$_3$]

**ನಿಃಕರುಣ** (ಗು). ೧≡ನಿಷ್ಕರುಣ ೧. (ನಾ). ೨.≡ನಿಷ್ಕರುಣ ೨ : ತಳ್ತ ಕಲ್ಪಭೂಮಿರುಹನಿಕುಂಜಮಂಜರಿಗಳೊಳ್ ತೊಡರ್ದಿರ್ಪನೊ ತೊಟ್ಟನೆಯ್ದೆ ನಿಃಕರುಣ[ಪಾಠಾಂ.ನಿಕ್ಕರುಣ]ದೆ ಕಾಯ್ದು ನುಂಗಿದಪನಂತಕಂ (ವರ್ಧಪು. ೧೦–೫೬). 'ನಿಕ್ಕರುಣ' ಪರಾ. [ಸಂ.]

**ನಿಃಕರುಣಿ** (ನಾ).≡ನಿಷ್ಕರುಣಿ : ದುರುಳನಧಮನು ದುರ್ಜನಂ . . . ನಿಂದಕಂ ನಿಃಕರುಣಿ ಮರ್ದಿಂಗಾದಡೊಬ್ಬನು ಪುರದೊಳಜಿಸಿದೊಡಿಲ್ಲ (ಬಸಪು. ೪–೫೫). [ಸಂ. ನಿಃಕರುಣಿನ್]

**ನಿಃಕರ್ಮ** (ನಾ). ≡ ನಿಷ್ಕರ್ಮ$_2$ : ವಿನಿರ್ಮಳನಿತ್ಯನಿಃಕರ್ಮ ಏಕ ಪರಮಾನಂದಮೂರ್ತಿ ಗುಹ್ಯೈಕ ದುರ್ಮಲದಪ್ಪದುಃಕರ್ಮಾಕೃತಿಗಳವರುಂ ಸಮಾನವೆ ಆಗಮೋಕ್ತಿಯಲಿ (ಬಸಪು. ೫೪–೨೦).
[ಸಂ. ನಿಃಕರ್ಮನ್]

**ನಿಃಕರ್ಮಿ** (ನಾ).≡ನಿಷ್ಕರ್ಮಿ ೧ : ಬಸವನ ಮೂರ್ತಿಯ ಕರ್ಮವ ಹರಿದು ಆನು ನಿಃಕರ್ಮಿಯಾದೆನಯ್ಯಾ (ಶೀಲವ. ೩೨–೧೦೫); ದುಃಕರ್ಮಿ ಜೀವನಹ ದೇವನತಿ ನಿಃಕರ್ಮಿಯಪ್ಪನು (ಬಸಪು. ೫೧–೨೬).
[ಸಂ. ನಿಃಕರ್ಮಿನ್]

**ನಿಃಕಲ**, ನಿಃಕಳ (ನಾ). ೧.≡ನಿಷ್ಕಲ ೧ : ಜಡ ಅಜಡವೆಂಬುಭಯವನರಿದು ಸಕಲವೋ ನಿಃಕಲವೋ ಬೇಜಿಕೊಂದು ಹೊಲಬೋ ನಿನ್ನೊಲವರವ ನೀನೇ ಬಲ್ಲೆ (ಸರ್ವಪ. ೧೦೬–೫೬೨). ೨.≡ನಿಷ್ಕಲ ೨ : ಸಕಲ ನಿಃಕಲನಯ್ಯ ನಿಃಕಲ ಸಕಲನಯ್ಯಾ ಸಕಲನಾಗಿ ಸಂಸಾರಿಯಲ್ಲ ನಿಃಕಲನಾಗಿ ವೈರಾಗಿಯಲ್ಲ (ಚನ್ನಪ. ಕ. ೬೧೨–೧೩೬೨); ನಿಃಕಲ ನಿರಂಜನ ಶೂನ್ಯ ಮಹಾಲಿಂಗ ಸದಾಶಿವ . . . ಎಂಬ ಪ್ರಭುಮೂರ್ತಿಗಳಂ ತಾಳ್ದಂಥ ಆ ಪರಶಿವನುಂ (ಭೈರಸೂ. ೧). **ನಿಃಕಳ** : ೩. [ಸಂಗೀತ] ವೀಣೆ ನುಡಿಸುವುದರಲ್ಲಿ ಒಂದು ರೀತಿ; ಅತಿಸೂಕ್ಷ್ಮವಾದ ನಾದವನ್ನುಹೊರಡಿಸುವುದು : ಸಾರಸೆಯ ಸಕಳ ನಿಃಕಳ ಚಾರಣೆಯ ಬೆಡಂಗುಸರದ ರಾಗದ ಸವಿಯಂ ಪೂರಿಸೆ ಕಿವಿಯೊಳ್ ದಿವಿಜಸ್ತ್ರೀರಮಣಿಯ ಮುಂದೆ ವೀಣೆಯಂ ಬಾಜಿಸಿದಳ್ (ಚಂದ್ರಪು. ೧೧–೧೩೯). [ಸಂ.]

**ನಿಃಕಲಾತೀತ** (ಗು). ನಿಷ್ಕಲಸ್ಥಿತಿಯನ್ನೂ ಮೀರಿದ : ಸಕಲ ನಿಃಕಲಾತ್ಮಕ ಸಕಲ ನಿಃಕಲಾತೀತ [ಪಾಠಾಂ. ನಿಷ್ಕಲಾತೀತನು] ಲಿಂಗ ಬಾಹ್ಯಾತ್ಪರಂ ನಾಸ್ತಿ ಲಿಂಗಪೂಜ್ಯಮೇವ ಚ (ಉರಿಪ. ಕ. ೧೯೫–೨೬೫). [ಸಂ.]

**ನಿಃಕಲಾತ್ಮಕ** (ಗು). ಭಾಗಗಳಿಲ್ಲದ ; ಅಖಂಡವಾದ : ಸಕಲ ನಿಃಕಲಾತ್ಮಕ [ಪಾಠಾಂ. ನಿಷ್ಕಲಾತ್ಮನು] ಸಕಲ ನಿಃಕಲಾತೀತ ಲಿಂಗ ಬಾಹ್ಯಾತ್ಪರಂ ನಾಸ್ತಿ ಲಿಂಗಪೂಜ್ಯಮೇವ ಚ (ಉರಿಪ. ಕ. ೧೯೫–೨೬೫).
[ಸಂ.]

**ನಿಃಕಳ** 'ನಿಃಕಲ' ನೋ.

**ನಿಃಕಳಂಕ** (ಗು).≡ನಿಷ್ಕಲಂಕ ೨ : ಲಿಂಗದಾದಿಯ ಅಂತವನರಿದಡೆ ಗುಣಸಂಗಿಯಲ್ಲದೆ ಯೋಗಿಯಲ್ಲ ನಿಃಕಳಂಕ ಮಲ್ಲಿಕಾರ್ಜುನಾ (ಮೋಳಿಮಾ. ೪–೧೧) ; ಭಾಪುರೇ ಮನ ಶುಭಾಂಕಾ ಭಾಪುರೇ ಮನ ನಿಃಕಳಂಕಾ (ಬಸಪು. ೪೬–೬೬). [ಸಂ. ನಿಃಕಲಂಕ]

**ನಿಃಕಾಂಕ್ಷತೆ** (ನಾ). ಬಯಕೆಯಿಲ್ಲದಿರುವಿಕೆ ; ಆಸೆಯಿಲ್ಲದಿರುವುದು : ಕುದೃಷ್ಟ್ಯಂತರ ಕಾಂಕ್ಷಾನಿರಸನಮುಂ ಮೇಣ್ ನಿಃಕಾಂಕ್ಷತೆ ಶರೀರಾದ್ಯ ಶುಚಿಸ್ವಭಾವಮನರಿದು (ತತ್ತ್ವಪ್ರ. ೨೬೫).
[ಸಂ. ನಿಃಕಾಂಕ್ಷತಾ]

**ನಿಃಕಾಂಕ್ಷಿತ** (ನಾ). [ಜೈನ] ಲೌಕಿಕವಾದ ಬಯಕೆಗಳನ್ನು ಇಟ್ಟುಕೊಳ್ಳದಿರುವುದು; ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಒಂದು: ನಿಃಕಾಂಕ್ಷಿತಃ - ಯಾವ ಪ್ರಕಾರದ ಲೌಕಿಕಸುಖದ ಇಚ್ಛೆಯನ್ನೂ ಮಾಡದಿರುವುದು (ಜೈನಪ. ೪೬೦). [ಸಂ.]

**ನಿಃಕಾಂಕ್ಷೆ** (ನಾ). ೧. ಆಸೆಯಿಲ್ಲದಿರುವುದು ; ನಿಷ್ಕಾಮಬುದ್ಧಿ : ಚಿಂತೆ ಸಂತೋಷವೆಂಬ ಕಾಂಕ್ಷೆ ನಿಃಕಾಂಕ್ಷೆಯೆಂಬ ಜೀವ ಪರಮರೆಂಬ ಇಂತೀ ದ್ವಂದ್ವಂಗಳಿಲ್ಲವು ದ್ವಾರಸಂಚಾರಕ್ಕೆ ಅವಧಿಯಾದವು (ಮೋಳಿಮಾ. ೨೩೨–೬೮೫). ೨. = ನಿಃಕಾಂಕ್ಷಿತ : ಇಹಲೋಕ ವಿಷಯೋಪಭೋಗಕಾಂಕ್ಷೆಯುಮಂ ಪತ್ತುವಿಡುವುದು ನಿಃಕಾಂಕ್ಷೆ (ಚಾವುಂಪು. ೨೬೧). [ಸಂ. ನಿಃಕಾಂಕ್ಷಾ]

**ನಿಃಕಾಮಿ** (ನಾ).≡ನಿಷ್ಕಾಮಿ : ಕಾಮಿಯಾಗಿ ನಿಃಕಾಮಿಯಾದಳು ಸೀಮೆಯಲ್ಲಿರ್ದು ನಿಃಸೀಮೆಯಾದಳು (ಮುಡಿಮಾ. ೧೫–೮) ; ಕಾಮಿಗಳು

ನಿಃಕಾಮಿಗಳು ಆಶ್ರಿತರು ಅದೆಂತು ಕಲ್ಯಾಣವ ಹೊಗಬಹುದಯ್ಯ (ಮಹಾದೇ. ಬ. ೧–೧) ; ಚಂದ್ರಧರನಂ ನಿಃಕಾಮಿಯಂ ಸ್ವಾಮಿಯಂ . . . ಹೃದ್ರಾಜೀವದೊಳಿಟ್ಟು ನಾಡೆ ನೆನೆದಂ ಮುದ್ರಾಜ ಮುರ್ವೀಶ್ವರಂ (ಹರಿಶ್ಚ್ಂ. ೨–೭). [ಸಂ.]

**ನಿಃಕಾಶ** (ನಾ). ≡ ನಿಷ್ಕಾಶ : ನಿಃಕಾಶಮನೆಯ್ದುದನಘಜಿನೇಶನ ಘನಸಕಳವಿಮಳಕೇವಳಬೋಧಂ (ಪರ್ಪು. ೧೫–೭). [ಸಂ.]

**ನಿಃಕೃತಿ** (ನಾ).≡ನಿಷ್ಕೃತಿ ೧ : ಪಂಚವಿಂಶತಿಕ್ರಿಯಾಚಯದಲ್ಲಿ . . . ಪರಿಗ್ರಹಾವಿನಾಶಾರ್ಥಮಪ್ಪುದು ಪಾರಿಗ್ರಾಹಿಕೀಕ್ರಿಯೆ ೨೨, ಜ್ಞಾನ ದರ್ಶನಾದಿಗಳೊಳ್ ನಿಃಕೃತಿಯುಂ ವಂಚನೆಯುಂ ಮಾಯಾಕ್ರಿಯೆ ೨೩ (ತತ್ತ್ವಪ್ರ. ೨೫೭). [ಸಂ.]

**ನಿಃಕ್ರಿ** (ನಾ). [ವೀಶೈ] ಯಾವುದೇ ವಿಧವಾದ ಕರ್ಮವನ್ನು ಮಾಡದಿರುವಿಕೆ ; ಕರ್ಮರಾಹಿತ್ಯ : ಅಪ್ಪು ಷಡುವರ್ಣವ ಕೂಡಿ ಭಿನ್ನವಿಚ್ಛಿನ್ನವಿಲ್ಲದೆ ವರ್ಣಭೇದವ ಕೊಟ್ಟು . . . ಸತ್ಕ್ರಿಯಲ್ಲಿ ಭಾವಿತ ನಾಗಿ ನಿಃಕ್ರಿಯಲ್ಲಿ ನಿರಂಗನಾಗಿ ಕರ್ಪುರದ ಬುಡದಲ್ಲಿ ಕಿಚ್ಚು ಹುಟ್ಟಿದಂತೆ ಅದು ಹುಟ್ಟುವಲ್ಲಿ ಆ ಬುಡಕ್ಕೆ ನಿಶ್ಚಯವಾಯಿತ್ತು (ಮೋಳಿಮಾ. ೧೫–೫೪); ಪಂಚಭೌತಿಕದ ಸಂಚವನಳಿದನು ಪಂಚೇಂದ್ರಿಯ ಲಿಂಗಸಮ್ಮತ ವಾದನು ಕ್ರೀಯುಳಿದು ನಿಃಕ್ರಿಯಲ್ಲಿ ನಿಂದನು (ಶಿವಗೀ. ೧೧೧–೫೪೬). 'ಸತ್ಕ್ರಿ' ಪರಾ. [<ಸಂ. ನಿಃಕ್ರಿಯಾ]

**ನಿಃಕ್ರೀವಂತ** (ನಾ). ಕರ್ಮರಹಿತನಾದವನು ; ನಿಷ್ಕರ್ಮಿ : ಕ್ರೀವಂತಂಗೆ ಅಂಗ ಭವಿ ನಿಃಕ್ರೀವಂತಂಗೆ ಮನ ಭವಿ ವೇಷವ ಹೊತ್ತು ತಿರುಗುವ ಜಂಗಮಕ್ಕೆ ಆಶೆ ಭವಿ (ಮೋಳಿಮಾ. ೧೫೬–೫೮೭).
[<ಸಂ. ನಿಃಕ್ರಿಯಾವತ್]

**ನಿಃಕ್ರೋಧಿ** (ನಾ). ≡ ನಿಷ್ಕ್ರೋಧಿ : ಜಂಗಮವೇನು . . . ಕ್ರೋಧಿಯೆ . . . ನಿಃಕಾಮಿ ನಿಃಕ್ರೋಧಿ ನಿರ್ಲೋಭಿ ನಿರ್ಮೋಹಿ ನಿರ್ಮದ ನಿರ್ಮತ್ಸರನಯ್ಯ (ಸಿದ್ಧೇವ. ೧೫೫–೪೬೧).
[ಸಂ. ನಿಃಕ್ರೋಧಿನ್]

**ನಿಃಪಕ್ಷಪಾತ** (ನಾ).≡ನಿಷ್ಪಕ್ಷಪಾತ. [ಸಂ.]

**ನಿಃಪತಿ** (ನಾ). ಒಡೆಯನಿಲ್ಲದಿರುವವನು ; ತಾನೇ ಒಡೆಯನಾದ ವನು ; ಪರಮೇಶ್ವರ : ನಿರ್ಲೇಪ ನಿಃಪತಿ ನಿರಂಜನನಾಗಿ ವೇದಂ ಗಳಱಿಯವು ಶಾಸ್ತ್ರ ಶ್ರುತಿ ಸ್ಮೃತಿಗಳು ನಿಮ್ಮನಱಿಯವು (ಅವಚಂ. ೧೫೪–೭೦೬) ; ಮಾರುಗ ಕ್ರೀಗಳೊಳಗೆ ನಿಃಪತಿಯಾಗಿ ದೇವ ಕ್ರೀವಿಡಿದ ಕಾರಣ ಭಿನ್ನಭಾವವಳಿದು ಶಿವಾಚಾರ ಜೀವವಾಗಿ ಲಿಂಗದೊಳು ಬೆರಸ ಬಲ್ಲಡೆ ಯೋಗಿ (ಶಿವಗೀ. ೮೩–೪೦೭) ; ಪ್ರತಿ ಇಲ್ಲದ ಅಪ್ರತಿಮ ಪ್ರಸಾದ ದಲ್ಲಿ ನಿಷ್ಪತಿ(ನಿಃಪತಿ)ಯಾಗಿ ಮಹಾಪ್ರಸಾದಿಯಾದೆನು ನೋಡಾ(ಸಿದ್ಧೇವ. ೧೭೭–೫೩೮). [ಸಂ.]

**ನಿಃಪತ್ತಿ** (ನಾ). ≡ ನಿಷ್ಪತ್ತಿ ೨ : ಅಂಗಕ್ಕೆ ಆಚಾರ ಮನಕ್ಕೆ ಅಱಿವು ಅಱಿವಿಂಗೆ ಒಂದು ಕುಱುಹು ಆ ಕುಱುಹು ನಿಃಪತ್ತಿಯಹನ್ನಕ್ಕ ಶೂಲದ ಮೇಲಣ ಘಟ ಚೇತನ ಹೋಹನ್ನಕ್ಕ . . . ಬೋಧಿಸಬೇಡ (ಮೋಳಿಮಾ. ೧೫೧–೫೭೦). [ಸಂ.]

**ನಿಃಪಸಿವು** (ನಾ). ಹಸಿವಾಗದಿರುವುದು : ಭೋಗಮಭೋಗವೆರಡು ಪಸಿವು ನಿಃಪಸಿವೆರಡು ರುಚಿಯರುಚಿಯೆಂಬೆರಡು ಭಾವಿಸಿ ನೋಡೆ ವರವೀತರಾಗರ್ಗೆ ಸಮವಾಗಿ ತೋಱದಿಹುದೇ (ಸಮ್ಯಕೌ. ೧೧–೪೯).
[ನಿರ್ + ಪಸಿವು]

**ನಿಃಪಾತ** (ನಾ). ನಾಶ; ಧ್ವಂಸ.

ನಿಃಪಾತ ಮಾಡು = ನಾಶಮಾಡು : ದೇವತೆಗಳು ಯುದ್ಧದಲ್ಲಿ ಅವರೆಲ್ಲರ ನಿಃಪಾತ ಮಾಡಿದರು (ತುಳಸೀ. ೪೯). [ಸಂ.]

**ನಿಃಪಿಚ್ಛಸಂಘ** (ನಾ).[ಜೈನ]ನವಿಲುಗರಿಯನ್ನು ಉಪಯೋಗಿಸದೆ ಇದ್ದ ಸಾಧುಗಳ ಒಂದು ಪಂಗಡ ; ☞ ಈ ಸಂಘವು ಮಧುರಾ ಪಟ್ಟಣದಲ್ಲಿ ಶ್ರೀರಾಮಸೇನಮುನಿಯಿಂದ ಕ್ರಿ. ಶ. ೮೯೭ರಲ್ಲಿ ಸ್ಥಾಪಿತವಾಯಿತು. ಈ ಸಂಘದವರ ಗ್ರಂಥಗಳನ್ನು ಪ್ರಾಮಾಣಿಕ ವೆಂದು ಅನೇಕರು ಅನುಮೋದಿಸಿರುತ್ತಾರೆ : ಈ ಸಂಘದ ಸಾಧು ಗಳು ಪಿಚ್ಛವನ್ನು ಉಪಯೋಗಿಸುತ್ತಿರಲಿಲ್ಲ. ಆದಕ್ಕಾಗಿ ಇವರಿಗೆ ನಿಃಪಿಚ್ಛಸಂಘದವರೆಂದೂ ಹೆಸರಾಯಿತು (ಜೈನಪ. ೭೩). [ಸಂ.]

**ನಿಃಪ್ರತ್ಯೂಹ** (ಗು). ≡ ನಿಷ್ಪ್ರತ್ಯೂಹ ೧ : ನಿಃಪ್ರತ್ಯೂಹವಿಕ್ರಾಂತ (ದಿಂ)ದುದ್ಭವದಿಂದುತ್ತಮನಾದಂ . . . ಶ್ರೀ ವಿಷ್ಣುಭೂಪಾಳಕಂ (ಎಕ. V, ಬೇಲೂರು. ೧೪೦–೧೧ ; 1200 ? ). [ಸಂ.]

**ನಿಃಪ್ರಪಂಚ** (ನಾ).≡ನಿಷ್ಪ್ರಪಂಚ ೧ : ನಿರ್ಭೇದ್ಯ ನಿಃಪ್ರಪಂಚ . . . ಮಹಿಮಾನಂದಾರ್ಣವ ಕೃಪಾಮೃತೇಕ್ಷಣ ಪರಶಿವನುಂ (ಭೈರಸೂ. ೧).
[ಸಂ.]

**ನಿಃಪ್ರಪಂಚಿ** 'ನಿಃಪ್ರಪಂಚು' ನೋ.

**ನಿಃಪ್ರಪಂಚು,** ನಿಃಪ್ರಪಂಚಿ (ನಾ). ಲೌಕಿಕಸಂಬಂಧವನ್ನು ಬಿಟ್ಟವನು ; ನಿಷ್ಕಾಮಿ: ಕರಣಂಗಳ ಮೋಹಕ್ಕೆ ಈಡಾಗದೆ ಪ್ರಾಣನ ಪ್ರಪಂಚಿನಲ್ಲಿ ಬೆರಸದೆ ಜೀವನ ಬುದ್ಧಿಯಲ್ಲಿ ಮೋಹಿಸದೆ ಹಂಸನ ಆಶೆ ಗೊಳಗಾಗದೆ ನಿಃಪ್ರಪಂಚುಗಳಾಗಿ (ಮಡಿಮಾ. ೩೬–೫೧). **ನಿಃಪ್ರಪಂಚಿ:** ನಿರಹಂಕಾರಿ ನಿರ್ಮಮಕಾರಿ ನಿಃಪ್ರಪಂಚಿ ನಿರ್ಲೇಪಕನಯ್ಯ (ಸಿದ್ಧೇವ. ಕ. ೧೫೫–೪೬೧). [<ಸಂ. ನಿಃಪ್ರಪಂಚ]

**ನಿಃಪ್ರಾದೇಶಿಕ** (ನಾ). ದೇಶಾತೀತನಾದವನು ; ಪರಮಾತ್ಮ : ಏದೊರೆಯನಾತ್ಮನೆಂದೊಡನಾದಿಯನಂತಂ ನಿರತ್ಯಯಂ ಚಿನ್ಮಯ ನಿಃಪ್ರಾದೇಶಿಕ[ಪಾಠಾಂ. ದೇಶಕ]ನೆಂದಾತನುಪಾದೇಯಂ ಮುಕ್ತಿಮುಕ್ತ ನುಂ ಪರಮಾತ್ಮಂ (ಯಶೋಚ. ೪–೨೬). [ಸಂ.]

**ನಿಃಫಲ** (ನಾ).≡ನಿಷ್ಫಲ ೨ : ಬಡಭಕ್ತರುಗಳಡಿ ಮೇಲೆ ಬಿದ್ದಡೆ ನಿಃಫಲಂ (ಬಸವು. ೨೩–೩೮); ಹಲವು ಕಾಲಂ ತೊಡಗಿಯಾಲದ ನೆಲೆ ಯೊಳಿದ್ದೆನ್ನಿರವಳಿದು ನಿಃಫಲವೆನಿಸಿತಲ್ಲಾ (ಬಸವು. ೫೭–೧೫). [ಸಂ.]

**ನಿಃಶಂಕ** (ನಾ).≡ನಿಶ್ಶಂಕ ೧ : ನಿಃಶಂಕ :–ನಾವು ಯಾವ ಸತ್ಯಮಾರ್ಗ ವನ್ನು ಅವಲಂಬಿಸಿರುವೆವೋ ಅದರ ವಿಷಯದಲ್ಲಿ ಸಂಶಯವಿಲ್ಲದಿರುವುದು (ಜೈನಪ. ೪೬೦). [ಸಂ.]

**ನಿಃಶಂಕತೆ** (ನಾ).≡ನಿಶ್ಶಂಕತೆ : ನೀಂ ನಿಃಶಂಕತೆಯಿನಿನಿತು ದೇಹಿಗಳಂ ಕೊಂದಪೆ ನರಕದೊಳ್ ನಿವಾರಣೆವಡೆದಯ್ (ಯಶೋಚ. ೪–೭೦).
[ಸಂ. ನಿಃಶಂಕತಾ]

**ನಿಃಶಂಕೆ** (ನಾ).≡ನಿಶ್ಶಂಕೆ ೧ : ನೀಂ ನಿಃಶಂಕೆಯನೀ ದೇವಾ ನಿಃಶರಣ ಜನರಿಂಗೆ ಶರಣಾಗೀಗಳ್ (ಭರದೋಂಬು. ೬. ೧–೪೮).
[ಸಂ. ನಿಃಶಂಕ]

**ನಿಃಶಬ್ದ** (ನಾ).≡ನಿಶ್ಶಬ್ದ : ಭಕ್ತನಿಧಿ ನಿರ್ದೇಹ ದೇಹಿ ವಿರಕ್ತಗತಿ ನಿರ್ನಾಮಿ ನಾಮಿ ಚಿದುಕ್ತಮತಿ ನಿಃಶಬ್ದಶಬ್ದಿ ವಿಭಾವಭಾವಿತನು (ಬಸವು. ೭–೫) ; ಪಗಲಿನ ಜಗದ ಸದ್ದಳಿದು ಶಿವವಾಯ್ತು ನಿಃಶಬ್ದಂ (ಶ್ರೀರಾಮಾ. ೧೨೯–೧೨೩). [ಸಂ.]

**ನಿಃಶಮ** (ನಾ). ನೆಮ್ಮದಿಯಿಲ್ಲದಿರುವಿಕೆ ; ಆತಂಕ ; ಕಳವಳ : ನಿಃಶಮಮಂ ಪರಿಹರಿಸೀ ನಿಃಶಾಪ ಪ್ರಸಾದಮಂ ಕರುಣಾತ್ಮ (ಭಂದೋಂಬು. ೬. ೧–೪೮). [ಸಂ.]

**ನಿಃಶರಣ** (ಗು). ರಕ್ಷಕರಿಲ್ಲದ ; ಅನಾಥ : ನೀಂ ನಿಃಶಂಕೆಯನೀ ದೇವಾ ನಿಃಶರಣ ಜನರಿಂಗೆ ಶರಣಾಗೀಗಳ್ (ಭಂದೋಬು. ೬. ೧–೪೮).
[ಸಂ.]

**ನಿಃಶರೀರತ್ವ** (ನಾ). ಶರೀರವಿಲ್ಲದಿರುವಿಕೆ : ನಿಃಶರೀರತ್ವದಿಂ ಪಂಚೇಂದ್ರಿಯ ವಿಷಯಾನುಭವರಹಿತರಪ್ಪ ಸಿದ್ಧರ್ಗೆ ಮುಕ್ತಿಯೊಳ್ ಸುಖವೆಂತಕ್ಕುಮೆನವೇಡ (ತತ್ತ್ವಪ್ರ. ೩೭೪). [ಸಂ.]

**ನಿಃಶಸ್ತ್ರ** (ಗು). ೧. ಆಯುಧವಿಲ್ಲದ. (ನಾ). ೨. ಆಯುಧವಿಲ್ಲದವನು.

ನಿಃಶಸ್ತ್ರಗೊಳಿಸು=ಆಯುಧರಹಿತನನ್ನಾಗಿ ಮಾಡು; ನಿರಾಯುಧನನ್ನಾಗಿ ಮಾಡು : ಅವರನ್ನು ನಿಃಶಸ್ತ್ರಗೊಳಿಸಿ ಕೈಕಾಲುಗಳಿಗೆ ಸರಪಳಿಗಳನ್ನು ಹಾಕುವುದರಲ್ಲಿ ತೊಡಗಿದ್ದರು (ಮೇವಿಮ. ೮೮). [ಸಂ.]

**ನಿಃಶಾಕ್ಯ** (ನಾ).≡ನಿಶ್ಶಾಕ್ಯ : "ನಿಃಶಾಕ್ಯಂ[ಪಾಠಾಂ. ನಿಶ್ಶಾಕ್ಯಂ, ನಿಶ್ಶೋಧ್ಯಂ] ಅನವಸ್ಕರಂ—ಈ ೨ ದಿರದುದು?" (ಹಲಾಯು.೧೨೭-೮೫). [ಸಂ.]

**ನಿಃಶೀಲವ್ರತ** (ನಾ).[ಜೈನ] ಸಪ್ತಶೀಲವ್ರತಗಳನ್ನು ಆಚರಿಸದಿರುವಿಕೆ: ಅಲ್ಲಿ ನಿಃಶೀಲವ್ರತಮನುಷ್ಯತಿರ್ಯಗ್ಜೀವಂಗಳ್ ದಾನಾನುಮೋದನದಿಂ ಪರಸ್ಪರವಿರೋಧವಿರಹಿತಪಂಚೇಂದ್ರಿಯತಿರ್ಯಗ್ಜಾತಿಗಳಾಗಿ ಪುಟ್ಟಿ (ಸುಕುಮಾ. ೧೧-೫೪ ವ). 'ಶೀಲವ್ರತ' ಪರಾ. [ಸಂ. ?]

**ನಿಃಶೂನ್ಯ**(ನಾ).≡ನಿಶ್ಶೂನ್ಯ : ಅಷ್ಟದಳಕಮಲದ ಮೇಲಿಪ್ಪ ನಿಃಶೂನ್ಯನ ಮರ್ಮವನಱಿಯದೆ ಪ್ರಾಣಲಿಂಗವೆಂದೆಂಬರು (ಅವಚಂ. ೩೩-೧೪೨). [ಸಂ.]

**ನಿಃಶೇಷ** (ನಾ).≡ನಿಶ್ಶೇಷ ೨ : ನಿಃಶೇಷಂ[ಪಾಠಾಂ. ನಿಶ್ಶೇಷಂ]ನ್ಯಕ್ಷಮೆನಲುಬಯದಿಹುದಕ್ಕೆ ನಾಮಂ" (ಮಂಗರಾ. ೧೩೪-೩೧). [ಸಂ.]

**ನಿಃಶೋಧ್ಯ** (ನಾ). ತೊಳೆದು ಶುಚಿ ಮಾಡಿದುದು ; ಶುಚಿಯಾದುದು. [ಸಂ.]

**ನಿಃಶ್ರೇಣಿ** (ನಾ).≡ನಿಶ್ರೇಣಿ : "ಅಧಿರೋಹಿಣೀ ನಿಃಶ್ರೇಣಿ[ಪಾಠಾಂ. ನಿಶ್ರೇಣಿ]ಯೆನಲೇಣಿಯಕ್ಕುಂ" (ಮಂಗರಾ. ೫೫-೧೨). [ಸಂ.]

**ನಿಃಶ್ರೇಯಸ**(ನಾ).≡ನಿಶ್ಶ್ರೇಯಸ : "ನಿಃಶ್ರೇಯಸ[ಪಾಠಾಂ. ನಿಶ್ರೇಯಸಂ] ಮಹಾನಂದವೆನೆ ಮೋಕ್ಷಕ್ಕೆ ಪೆಸರೆನಿಕ್ಕುಂ" (ಮಂಗರಾ. ೮-೨೩) ; ಅಭ್ಯುದಯನಿಃಶ್ರೇಯಸಾರ್ಥಕ್ರಿಯಾವಿನಾಶಕಪ್ರಯೋಗಮಪಾಯಂ (ತತ್ತ್ವಪ್ರ. ೨೭೧) ; ಬ್ರಹ್ಮಜ್ಞಾನಕ್ಕೆ ಅಂದರೆ ಫಲವು ನಿಃಶ್ರೇಯಸವು (ಬ್ರಹ್ಮಭಾ. ೧೧). [ಸಂ.]

**ನಿಃಶ್ವಾಸ** (ನಾ).≡ನಿಶ್ವಾಸ ೧ : ಉಚ್ಛ್ವಾಸಮುಮುಱೆ ನಿಃಶ್ವಾಸಸೂತ್ಕೃತಂ ಸೀತ್ಕೃತಮುಂ (ಲಾಸ್ಕರಂ. ೩-೭೭). [ಸಂ.]

**ನಿಃಷಮ** (ನಾ). ೧. ಅಕಾಲ ; ಅವೇಳೆ. ೨. ಸಮವಲ್ಲದುದು. [ಸಂ.]

**ನಿಃಸಂಜ್ಞ** (ನಾ).≡ನಿಸ್ಸಂಜ್ಞ ೨ : ಪ್ರಜ್ಞೆ ನಿದ್ರಿಸಿದರೆ ನಿಃಸಂಜ್ಞಳಾದೆನಗೆ ಕಣಸಾದುದು (ಶ್ರೀರಾಮಾ. ೪೪-೪೫೦). [ಸಂ.]

**ನಿಃಸಂಪರ್ಕ** (ಗು). ಸಂಪರ್ಕವಿಲ್ಲದ : ಭೂಪತಿಯು ಚಾರುನನ್ನು ಅತ್ಯಂತ ಅನಾಸಕ್ತಭಾವದಿಂದ ನಿಃಸಂಪರ್ಕ ಮನುಷ್ಯನ ಹಾಗೆ ದೂರದೂರದಿಂದಲೇ ನೋಡಹತ್ತಿದನು (ಇಪ್ಪಳ. ೨೯೩). [ಸಂ.]

**ನಿಃಸತ್ವ** (ನಾ).≡ನಿಸ್ಸತ್ವ ೩ : ಮೆಣಸು . . . ಚಪಟಾಗಿದ್ದು ಹಾಂಗೂ ಪೊಳ್ಳ ಮತ್ತು ನಿಃಸತ್ವ ಇಂಥಾದಿರಬಾರದು (ಮುಂಬಪ್ರಾ. ೫೦). [ಸಂ.]

**ನಿಃಸರಣ** (ನಾ).≡ನಿಸ್ಸರಣ ೨ : "ಮುಖಂ, ನಿಃಸರಣಂ—ಈ ೨ ಹೆಬ್ಬಾಗಿಲ ಮುಂತು" (ಹಲಾಯು. ೪೮-೧೩೪). [ಸಂ.]

**ನಿಃಸಹ** (ನಾ).≡ನಿಸ್ಸಹ ೨ : ಈ ವಕ್ರ ಚಕ್ರದ ಜೊತೆಗೆ ನಿಃಸಹನಂತೆ ಏತಕೊ ತಿರುಗುವೇ ಯಾ ಕಲ್ಪ ತವ ಸಂಕಲ್ಪವೋ ಈ ಹೃದಯ ದುಡಿಸಿದೆ ಸ್ವಲ್ಪವೇ (ಅರಳು. ೧೯೬-೫). [ಸಂ.]

**ನಿಃಸಾರ** (ನಾ).≡ನಿಸ್ಸಾರ ೨ : ತತ್ತಿಯನ್ನು ಹೆಚ್ಚು ದಿವಸ ಇಟ್ಟ ಹಾಗೆ ಅದರೊಳಗಿನ ರಸವು ಒಣಗುತ್ತ ಹೋಗಿ ನಿಃಸಾರವಾಗುತ್ತದೆ (ಮುಂಬಯಿ. ೫-೧೬೫). [ಸಂ.]

**ನಿಃಸೀಮೆ** (ನಾ). ೧≡ನಿಸ್ಸೀಮೆ. ೨. ನಿಸ್ಸೀಮಳಾದವಳು ; ಮೇರೆ ಇಲ್ಲದವಳು ; ಸೀಮಾತೀತಳು : ಕಾಮಿಯಾಗಿ ನಿಃಕಾಮಿಯಾದಳು ಸೀಮೆಯಲ್ಲಿರ್ದು ನಿಃಸೀಮೆಯಾದಳು (ಮಡಿಮಾ. ೧೫-೧೮). [ಸಂ. ನಿಃಸ್ಸೀಮಾ]

**ನಿಃಸ್ಥಲ** (ನಾ).≡ನಿಸ್ಥಲ : ಲಿಂಗಸುಖ . . . ಪರಮಸುಖ ಇವುಗಳಿಗೆ ಸುಸ್ಪಷ್ಟವಾದ ಸ್ವರೂಪವನ್ನು ಕ್ರಮವಾಗಿ ಅಂಗಸ್ಥಲದ ವಚನಗಳಲ್ಲಿ, ಲಿಂಗಸ್ಥಲದ ವಚನಗಳಲ್ಲಿ 'ನಿಶ್ಶಬ್ದವೇ ಅನುಭಾವ' ಎಂಬ ಸ್ಥಲಕುಲವನ್ನು ವಿವಾರಿದ ನಿಃಸ್ಥಲದ ವಚನಗಳಲ್ಲಿ ಕಾಣಬಹುದು (ವೋಃವಮಾ. ೧೮ ಪ್ರಸ್ತಾವನೆ). [ಸಂ.]

**ನಿಃಸ್ವಾರ್ಥ** (ನಾ). ≡ನಿಸ್ವಾರ್ಥ ೨ : ನಿಃಸ್ವಾರ್ಥದಾ ಬಯಕೆಗಿಂ ಪೆರತು ಕಣ್ಣೀನೊಳದೆ ಧರ್ಮಕ್ಕೆ ? (ಶ್ರೀರಾಮಾ. ೧೦೮-೨೩೭). [ಸಂ.]

**ನಿಕಟ** (ಗು). ೧. ಹತ್ತಿರದಲ್ಲಿರುವ ; ಸಮೀಪದ : ನಿಜನಿಕಟಭೂಮಿಯನಲಂಕರಿಸಿ ಜಳಜಕುಸುಮದೆಸಟ ಪಸೆಯೊಳ್ಕುಳ್ಳಿರ್ದು (ಪುಲ್ಲಿಪು. ೩-೧೦೧) ; ರಾಮಲಕ್ಷ್ಮಣರಿರ್ವರುಂ ಬಲ್ದುಗುಡದಿಂ ಮುಂತೆ ಮುಂತೆ ಋಷ್ಯಮೂಕಪರ್ವತ ನಿಕಟಪ್ರಾಂತದೊಳ್ ಬರೆವರೆ (ಅದ್ಭುತ. ೩೫-೧೨). (ನಾ). ೨. ಹತ್ತಿರ ; ಸಮೀಪ : "ಸವಿಧಂ ಸಮೀಪಮಭ್ಯಾಶವಂತಿಕಂ ನಿಕಟಂ" (ವಸ್ತುಕೋ. ೧೦೯-೬೪) ; ತದಾಶ್ರಮಮನೆಯ್ದುದನಂತರಂ ನಿಕಟಮಂ ಸಾರ್ದನ್ನಂ ನಿನ್ನಂತೆ ಮಾಡೆಂಬುದುಂ (ನೇಮಿಪು. ೩-೯೬ ವ) ; ಮಗುವಿನ ಬಾಳಿಗೂ ತಾಯಿಯ ಬಾಳಿಗೂ ಯಾವುದೋ ಒಂದು ಅತಿ ನಿಕಟವಾದ ಸಂಬಂಧವಿದೆ (ರಾಮಾನಿ. ೮೮) ; ತುಳು ಮತ್ತು ಕನ್ನಡದ ಸಂಬಂಧ ಅತ್ಯಂತ ನಿಕಟವಾದುದೆಂಬುದರಲ್ಲಿ ಸಂಶಯವಿಲ್ಲ (ದ್ರಾವಿ. ೧೪೨). ೩. ಹತ್ತಿರದ ಸ್ಥಳ,—ಪ್ರದೇಶ : ಅನ್ನೆಗಂ ಪಿಂತೆ ಕಂಡರಿಯ ಬೆಡೆಗಳನಂತೆ ದೂರಮುಂ ನಿಕಟಮುಂ, ಮೇಣಂತೆ ಪೂವೆಡೆಗಳಂ ಮತ್ತೆ ಪಣ್ಣೆಡೆಗಳಂ ಪುಡುಕಿದರ್ (ಶ್ರೀರಾಮಾ. ೨೫೬-೭೫೧). [ಸಂ.]

**ನಿಕಟಗೊಳ್ಳು** (ಕ್ರಿ). ಹತ್ತಿರವಾಗು ; ಕೂಡಿಕೊಳ್ಳು : ಅವರ ಪರಸ್ಪರ ಸ್ನೇಹ ನಿಕಟಗೊಂಡ ಬಗೆಯನ್ನವನು ನೆನೆದು ಸುಖಿಸಿದನು (ಪುಸರು. ೨೨೧). [ನಿಕಟ+ಕೊಳ್ಳು$_1$ (<ಕೊಳ್$_1$)]

**ನಿಕಟಪರಿಚಯ** (ನಾ). ಹತ್ತಿರದ ಪರಿಚಯ ; ಆಪ್ತತೆ : ಜೀವನದ ದುರಂತ, ಸಾಂಕೇತಿಕತೆ, ವಿನೋದಪೂರ್ಣತೆ - ಹೀಗೆ ಮೂರು ಮುಖಗಳ ನಿಕಟಪರಿಚಯವನ್ನು ಲೇಖಕರು ಮಾಡಲೆತ್ನಿಸಿದ್ದಾರೆ (ಅಬೋಲೀ. I, ಸಂಪಾದಕರ ಮಾತು). [ನಿಕಟ+ಪರಿಚಯ]

**ನಿಕಟವರ್ತಿ** (ನಾ).೧. ಹತ್ತಿರವಾದುದು ; ಸಮೀಪದಲ್ಲಿರುವುದು: ನಿಮ್ಮಗಾತಟನಿಕಟವರ್ತಿಗಳಪ್ಪ ಮಹಾದ್ರೋಣಾಮುಖಂಗಳುಮಂ . . . ಘೋಷಾಕರಸಂಗ್ರಹಾಕರ ಗೋವ್ರಜಂಗಳುಮನವನಾಳ್ದ ತೆಱಗೊಳ್ಳ ಬಿಟ್ಟ ಬೆಸಕೆಯ್ಸಿಕೊಳ್ವ ಭೋಗಿಪನಿಯೋಗಂಗಳುಮಿಂತು ಮಾಡಿ (ಆದಿಪು. ೮-೬೩ ವ). ೨. ಹತ್ತಿರದಲ್ಲಿರುವವನು ; ಸಮೀಪದಲ್ಲಿರುವವನು : ಒಂದು ದಿವಸ[ಮ]ಶಿಶಿರಕಿರಣನಪರಜಲನಿಧಿತಟ ನಿಕಟವರ್ತಿಯಾದಂ (ಪಂಪಭಾ. ೩-೩೧ ವ). ೩. ಹತ್ತಿರವಾದ ವ್ಯಕ್ತಿ ; ಆಪ್ತವ್ಯಕ್ತಿ : ಮಹಾತ್ಮರ ನಿಕಟವರ್ತಿಯಾದ ಅನುಯಾಯಿಗಳಲ್ಲಿ ಅವಲೊಬ್ಬಳಾಗಿದ್ದಳು (ಪ್ರಬಂಧ. ೯೧). [ಸಂ. ನಿಕಟವರ್ತಿನ್]

**ನಿಕಟವರ್ತಿತ** (ಗು). ಹತ್ತಿರದಲ್ಲಿರುವ : ಸೌಮಿತ್ರಿ ವಿಲಯಕಾಲಮಹಾಮೇಘಸ್ಕಂಧನಿಕಟವರ್ತಿತವಿದ್ಯುದ್ದಾಮಮಿಮಿಬೆನೆ ದಂತಾಂಶು

ಸ್ತ್ರೀಮುಂ ಪೊಳೆದುಳ್ಳೆ ಬೆಟ್ಟವೆಟ್ಟನೆ ನುಡಿದಂ (ಪಂಪಭಾ. ೬-೧೪೦).
[ಸಂ.]

**ನಿಕಟಸಂಪರ್ಕ** (ನಾ). ಹತ್ತಿರದ ಸಂಪರ್ಕ ; ಹೆಚ್ಚು ಗಾಢವಾದ ಸ್ನೇಹ : ಅಲೆಕ್ಸಾಂಡರನ ಮರಣಾನಂತರ ಸೆಲ್ಯೂಕಸ್‌ನಿಕೆಟಾರ್ ಚಂದ್ರಗುಪ್ತಮೌರ್ಯನೊಡನೆ ನಿಕಟಸಂಪರ್ಕ ಬೆಳೆಸಿದ (ತತ್ವಪ್ರಾ. ೧೩ ಪ್ರವೇಶ). [ನಿಕಟ + ಸಂಪರ್ಕ]

**ನಿಕಟಸಂಬಂಧ** (ನಾ). ಹತ್ತಿರದ ಸಂಬಂಧ,—ನಂಟು : ಜನಜೀವನಕ್ಕೂ ಈ ಸಾಹಿತ್ಯಕ್ಕೂ ನಿಕಟಸಂಬಂಧವಿದೆ (ಕನ್ನಜಾ. ೨೦೬) ; ಅವರಿಂದ ನಾನೆಷ್ಟೋ ದೂರದೂರವಾಗಿ ಹೋದಂತೆ ಹತ್ತಿರ ಹತ್ತಿರವಾಗಿ ಅವುಗಳ ನಿಕಟಸಂಬಂಧವು ನನ್ನ ಕಣ್ಮುಂದೆ ಕಟ್ಟತೊಡಗಿದ್ದಿತು (ಹೇಮಂತ. ೨೯೯). [ನಿಕಟ + ಸಂಬಂಧ]

**ನಿಕಟಸ್ಥ** (ನಾ). ಹತ್ತಿರದಲ್ಲಿರುವವನು ; ಸಮೀಪದಲ್ಲಿರುವವನು; ನಿಕಟವರ್ತಿ : ಅನಿಬರ್ಗೆ ಹರಿ ವಿಶ್ವತೋಮುಖನೆನಿಸಿ ಭೋಜನಮಂಡಲದ ನಡುವನಿಬರಭಿಮುಖನೆನಿಸಿ ತನ್ನಿಕಟಸ್ಥನೆಂದೆನಿಸಿ . . . ಉಣುತಿರ್ದನನಿಬರ ಮಧ್ಯದಲಿ ನಲಿದು (ಸಭಾಗ. ೧೦-೧೩-೯). [ಸಂ.]

**ನಿಕಟಾರ್ಥಕ** (ನಾ). ಸಮೀಪದ ಅರ್ಥವನ್ನು ಉಳ್ಳುದು : ನಾಮರೂಪಗಳ ಮಾತಂತಿರಲಿ ; ಸಮಾನಾರ್ಥಕವಾದ ಅಥವಾ ನಿಕಟಾರ್ಥಕವಾದ ಪದಗಳೂ ಅನೇಕ ವೇಳೆ ಸಿಗುವುದಿಲ್ಲ (ಸಾಹಿಪ್ರ. X, ಪ್ರಸ್ತಾವನೆ). [ಸಂ.]

**ನಿಕಟೋದ್ದೇಶ** (ನಾ). ಹತ್ತಿರದ ಪ್ರದೇಶ ; ಸಮೀಪದ ಸ್ಥಳ : ಈ ಚಂಪಾನಗರ ನಿಕಟೋದ್ದೇಶದೊಳ್ ಶ್ವೇತಪುರಮೆಂಬ ಪುರಮುಂಟು (ಸುಕುಮಾ. ೭-೨೯ ಪ). [ನಿಕಟ + ಉದ್ದೇಶ]

**ನಿಕಟ್ಟೆ** (ನಾ). = ನಿಕಟ ೨ : ನಿಕಟ್ಟೆಯುಲಿಯಿದ್ದು ಪರಿಪರಿಯಿಂದಲಿ ಒಲಿಸಿ ಮಾಧವನಿಂದ ಪುರುಷಾರ್ಥ ಪಡೆದು ಸುಖಿಸಿದರು (ವಿಠಕೀ. ೧೮).
[<ಸಂ. ನಿಕಟ]

**ನಿಕರ$_1$** (ನಾ). ೧. ಗುಂಪು ; ಸಮೂಹ : "ನಿಕುರುಂಬಂ ನಿವಹಂ . . . ನಿಕರಂ ಸಂಹತಿ ಸಂಚಯಂ . . . ವ್ರಾತಮೇಕಾರ್ಥಕಂ" (ವಸ್ತುಕೋ. ೧೦೨-೨೭) ; "ನಿಕರಂ ನಿಕಾಯಂ . . . ಸ್ತೋಮಮಕ್ಕೆ ನಾಮಮಕ್ಕುಂ" (ಮಂಗರಾ. ೧೨೬-೧) ; ಅಂತವನಿಪನಿಕರಂ ಕಯ್ಯಾಂತವನಿಪನಿಕರಮೊಂದು ಕೋಟಿಗೆ ಮಿಗಿಲೆಂಬಂತೆ (ಗದಾಯು. ೧-೧೫) ; ಶಿಶಿರಕರನಿಕರದಂತೆ ಕುಮುದಪ್ರಕಾಶಕರರುಂ . . . ಸಾರ್ವಭೌಮೋಪಜೀವಿಗಳಂತೆ ವಿಷಯಾಸಕ್ತರುಮೆನಿಸಿ (ಸುಕುಮಾ. ೨-೫ ಪ) ; ನಾನಾವಿಲಾಸಿನೀನಿಕರದಿಂದಿದಿರ್ಗೊಳಲು ಪುರಮಂ ಪೊಕ್ಕು (ನಂಬಿರ. ೮-೭೨). ೨. ರಾಶಿ; ಗುಪ್ಪೆ ; ಒಟ್ಟಿಲು. ೩. ಕಟ್ಟು ; ಪಿಂಡಿ. ೪. ತಿರುಳು ; ಸಾರ. ೫. ಯೋಗ್ಯವಾದ ಪಾರಿತೋಷಕ; ಗೌರವದ ಕಾಣಿಕೆ. ೬. ನಿಧಿ. ೭. (?) : ನಿಕರಂ ತೆಂಕಣಗಾಳಿ ನಾಗರಿಕನಾಗಲ್ ದರ್ಪಕಂ ಪೀಠಮರ್ದಕನಾಗಲ್ ಮಧುಮಾಸಮೊಲ್ದು ವಿಟನಾಗಲ್ . . . ಸೌಭಾಗ್ಯನಾಯಕನಾದಂ ಶಠದೃಷ್ಟದಕ್ಷಿಣಗುಣಂ ಶೃಂಗಾರಶಾರಾಗ್ರಹಂ (ಅರ್ಧನೇ. ೪-೧೫೪).

ನಿಕರಕೆ ಗಂಡ = ಗುಂಪಿನಲ್ಲೆಲ್ಲಾ ಪರಾಕ್ರಮಿಯಾದವನು ; ಒಂದು ಬಿರುದು : ನಿಕರಕೆ ಗಣ್ಡ ವೈರಿಬಳಮಲ್ಲಂ ಗಡಿಯಜ್ಯಮಲ್ಲಂ ಮಾರಸಿಙ್ಗನ ನನ್ದನಂ ದಾಯಾದ್ಯಬನ್ಧನಂ (ಎಕ. III(R), ಹೆಗ್ಗಡ. ೧೧೪-೪ ; 1087). [ಸಂ.]

**ನಿಕರ$_2$**, ನಿಖರ, ನಿಗರ$_3$, ನಿರಕು, ನಿರಕ್ಕು, ನಿರುಕು (ಗು). ೧. ಸ್ಪಷ್ಟವಾದ ; ನಿಶ್ಚಿತವಾದ ; ಕರಾರುವಾಕ್ಕಾದ; ಖಚಿತವಾದ. (ನಾ). ೨. ನಿಶ್ಚಿತವಾದ ಘಟ್ಟ,—ಸ್ಥಿತಿ ; ನಿರ್ದಿಷ್ಟತೆ ; ಸ್ಪಷ್ಟತೆ ; ನಿರ್ಣಯ : ಅವನಿಗೂ ಅರಸನಿಗೂ ನಿಕರದ ವಾಗ್ವಾದಗಳಾದವು (ಇಂಗ್ಲಂಡ. ೩೬) ; ಅವರಿಗೆ ಅದೆಲ್ಲ ನಿಕರವಾಗಿ ಗೊತ್ತು (ನನ್ನಜೊ. ೬೯) ; ಕೊನೆಗೊಮ್ಮೆ ಮಹಾಬಳೇಶ್ವರದಲ್ಲಿ ಮಾತು ನಿಕರಕ್ಕೇ ಬಂತು (ಸ್ಮೃತಿಚಿ. ೮) ; ನಮ್ಮ ಸಂಗ್ರಾಮವು ಇಷ್ಟೊಂದು ನಿಕರಕ್ಕೆ ಬಂದು ಮುಟ್ಟಿರುವಾಗ . . . ಉಗ್ರವಾದ ಅಸ್ತ್ರವನ್ನು ಪ್ರಯೋಗಿಸಲೇಬೇಕು (ಕರವೀ. ೪೮). **ನಿಖರ** : ೨. ನಿಖರವಾದ ಉತ್ತರ ನೀಡುವ ಅಸಕ್ತಿಯಿಂದ ವಕೀಲ ಕ್ಷಣಕಾಲ ಮೌನವಾಗಿದ್ದನು (ಪುನರು. ೨೪೫) ; ಭೂಮಿಯ ವಯಸ್ಸನ್ನು ನಿಖರವಾಗಿ ಗೊತ್ತುಪಡಿಸಲು ಮಾರ್ಗವೊಂದನ್ನು ಭೂಗರ್ಭಶಾಸ್ತ್ರಜ್ಞರು ಕಂಡುಹಿಡಿದುದು ೧೯ನೆಯ ಶತಮಾನದಲ್ಲಿ (ಭೂಹುಟ್ಟು. ೯೭) ; ನ್ಯಾಯವಾದ ವ್ಯಾಪಾರ ನಡೆಯಲಿ, ನಿಖರವಾದ ಬೆಲೆ ಇರಲಿ (ಕೂನಭೇ. ೫೪). **ನಿಗರ$_3$** : ೨. ಬಗೆಯದಾವುದು ವೇದ ಲೋಕಕೆ ನಿಗರದಲಿ ಪ್ರಾಮಾಣ್ಯವಲ್ಲವೆ ಬೆಡಗುಗೊಳಿಸಿದೆ ಬೇಗ ಹೇಳೆನೆ (ಉತ್ತರಾ. ೩೮-೯೫). **ನಿರಕು** : ೨. ಕುಕ್ಕರಿನ ಅಡಿಗೆ ಇಬ್ಬರಿಗೆ ಇಷ್ಟು ಅಂತ ನಿರಕು ಆಯ್ತು (ಬಾಳಹೊ. ೪೬). ೩. "ಸತ್ಯ ; ನ್ಯಾಯ" (ಜಾನಕೋ. ೧೧). **ನಿರಕ್ಕು** : ೨. ಅತ್ಯಂತ ಪ್ರಾಚೀನ ಕಾಲದಲ್ಲಿ ನಮ್ಮ ದೇಶದಲ್ಲಿ ಯಾವ ಯಾವ ಗಣಿತಶಾಸ್ತ್ರಜ್ಞರಿದ್ದರು, ಅವರ ಕೃತಿಗಳಾವುವು ಎಂಬ ವಿಚಾರದಲ್ಲಿ ನಮಗೆ ನಿರಕ್ಕಾದ ತಿಳಿವಳಿಕೆಯಿಲ್ಲ (ಗಣಿಚ. ೧೭). **ನಿರುಕು** : ೨. ಕೆಲವು ನಿರುಕಾದ, ಆಡುವ ಮಾತಿನ ಮಟ್ಟವನ್ನು ಅಷ್ಟೇನೂ ಮೀರಿ ಏರದ, ವಾಕ್ಯರಚನೆ (ಕಬಸಾ. ೩೯) ; ಸುಮ್ಮನೆ 'ಕರು' ಎನ್ನುವುದಕ್ಕಿಂತಲೂ 'ಎಳೆಯ ಕರು' ಎಂದರೆ ಕರುವಿನ ವಿಷಯ ಇನ್ನೂ ನಿರುಕಾಗಿ ತಿಳಿಯುತ್ತದೆ (ಮಧ್ಯಸು. ೧೦).
[←ಮರಾ. ನಿಕರ್, ನಿಕರೂ]

**ನಿಕರಿಸು** (ಕ್ರಿ). ತಿರಸ್ಕರಿಸು : ಮನ ಬೆದಱಿ ಭ್ರಾಂತಿಯ ಸದಮದದೊಳು ಸಿಲುಕಿ ನಿಜವ ನಿಕರಿಸುವಾ ಉನ್ಮದಗತಿಯ ಬಿಸುಟು (ಷಡಕಂ. ೬೯). [<ನಿಃಕರಿಸು]

**ನಿಕರ್ತನ** (ನಾ). ೧. ಕತ್ತರಿಸುವಿಕೆ ; ತುಂಡರಿಸುವಿಕೆ : "ಛೇದನಂ ನಿಕರ್ತನ ನಾಮಂ" (ವಸ್ತುಕೋ. ೧೧೪-೨೧) ; ಸುಕದ ಕಣಿಯೆನಿಸಿ ಮಾಪುಬ್ಬಕೋಟಿ ಪರಮಾಯುನಾಭಿ ನಾಮಮುಮಾಯ್ತು ಭರ್ಕನಿಕರ ನಾಭಿನಾಳಪ್ರಕರನಿಕರ್ತನಮನಱಿಯೆ ಪೇೞ್ದುದಱಿಂದಂ (ಆದಿಪು. ೬-೬೭) ; ಆತನ ಕಾಲದೊಳು ಶಿಶುಗಳ್ಗೆ ನಾಭಿನಿಕರ್ತನಮಾದೊಡೆ (ಚಾವುಂಪು. ೧೧). ೨. ಸಂಪೂರ್ಣವಾಗಿ ತೊಡೆದುಹಾಕುವಿಕೆ ; ನಿರ್ನಾಮಗೊಳಿಸುವಿಕೆ. [ಸಂ.]

**ನಿಕರ್ಷ** (ನಾ). ೧. ಅತಿರೇಕ ; ಪರಾಕಾಷ್ಠೆ : (ಕ). ೨. "ನೀಚತನ" (ಗಂಗಾಮ. ೧೮೨). [?./ಮರಾ. ನಿಕರ್ಷ್, ನಿಕರ್ಶ್]

**ನಿಕರ್ಷಣ** (ನಾ). ೧. ಪಟ್ಟಣದ ಒಳಗಿನ ಅಥವಾ ಸಮೀಪದ ಬಯಲುಪ್ರದೇಶ,—ಕ್ರೀಡಾಂಗಣ : "ಸನ್ನಿವೇಶಃ, ನಿಕರ್ಷಣಂ-ಎ ಪಟ್ಟಣದ ಸುತ್ತಲೂ ಪುರಜನ ಸಂಚಾರಾದಿಗಳಿಗಾಗಿ ಬಿಡಲ್ಪಟ್ಟಿರುವ ಬೈಲು, ಊರು ಹೊರಗಣ ಮುಂಗಳ, ಪೌಳಿಬೈಲು" (ಸಿದ್ಧಾಂತಿ. ೧೦೫). ೨. ಮನೆಯ ಅಂಗಳ. ೩. ನೆರೆಹೊರೆ ; ಅಕ್ಕಪಕ್ಕದ ಮನೆಯವರು. ೪. ಎಳೆಯುವುದು ; ಜಗ್ಗುವುದು. [ಸಂ.]

**ನಿಕಶೋಪಳ** (ನಾ). ಒರೆಗೆ ಹಚ್ಚುವ ಕಲ್ಲು ; ಒರೆಗಲ್ಲು : ನಿಶ್ಶಂಕರಾಮಂ ಸುಭಟಕನಕ ನಿಕಶೋಪಳಂ ಶರಣಾಗತವಜ್ರಪ್ರಾಕಾರಂ (ಸೌಇಇ. XV, ೯-೧೧ ; 1125). [<ಸಂ. ನಿಕಷೋಪಲ]

**ನಿಕಷ** (ನಾ). ೧. ಚಿನ್ನ, ಬೆಳ್ಳಿಗಳನ್ನು ಒರೆಗೆ ಹಚ್ಚುವ ಕಲ್ಲು ; ಒರೆಗಲ್ಲು : "ಶಾಣಃ, ನಿಕಷಃ, ಕಷಃ - ೩ ಒರೆಗಲ್ಲಿನ ಪೆಸರು, ಸಾಣೆಯು" (ಸಿದ್ಧಾಂತಿ. ೩೧೬) ; ಸಂಗರನಿಕಷದೊಳಿನ್ನುಂದಮುಂ ನೀಚ

ಕಾಷ್ಟ್ಯ (ಆದಿಪು. ೧೪-೮೨) ; ಈ ಸಂಸಾರದಲ್ಲಿ ಸಾಹಿತ್ಯವು ಕಪ್ಪಾನೆ ನಿಕಷದಲ್ಲಿ ತೊಳಗುತ್ತಿರುವ ಚಿನ್ನದ ಒರೆಯಂತಿರಬೇಕು (ಕಂನಾಸಾ.೧೪). ೨. ಒರೆ ; ಪರೀಕ್ಷೆ : ಅವಂದಿರ ಕಬ್ಬವಿನ್ನುವಿರ್ಪುವು ಗುಣದೋಷಮಂ ನಿಕಷವಿಟ್ಟು ಪರೀಕ್ಷಿಸಿ ನೋಡೆ (ಗದಾಯು. ೧-೪೭) ; ಕಂ - ನಾಡು ಇಂಥ ಪ್ರಾದೇಶಿಕ ಹೆಸರುಗಳ ಯುಕ್ತಾಯುಕ್ತ ನಿರ್ಣಯಕ್ಕೆ ಕೆಲವೊಂದು ತಾತ್ವಿಕ ನಿಕಷವು ಅವಶ್ಯವಿರುತ್ತದೆ (ಕರ್ನಾಟ. ೫೨೪) ; ಮೂಕಶೋಕರಸದ ನಿಕಷ ನಮ್ಮ ಪ್ರಣಯಸಿದ್ಧಿಗೆ (ಭಾರಂಗ. ೩೧-೧೫). ೩. ಒರೆಗಲ್ಲಿನ ಮೇಲಿನ ಬಂಗಾರದ ಗೆರೆ. [ಸಂ.]

**ನಿಕಷಜ್ಞ** (ನಾ). ೧. ಒರೆಯಿಟ್ಟು ಪರೀಕ್ಷಿಸುವವನು. ೨. (ಅಲಂ) ಗುಣದೋಷಗಳನ್ನು ಅರಿಯುವವನು : ಭಾಷಾಸಂಸ್ಕರಣಪ್ರಮಾಣನಯನಿಕ್ಷೇಪರ್ ಜಿನೇಂದ್ರಾಗಮಾಶೇಷಜ್ಞರ್ ನಿಕಷಜ್ಞರಪ್ಪುದುಚಿತಂ ವಿದ್ವತ್ಸಭಾಮಧ್ಯದೊಳ್ (ಸುಕುಮಾ. ೧-೪೭). [ಸಂ.]

**ನಿಕಷಣ** (ನಾ). ಉಜ್ಜುವುದು ; ತಿಕ್ಕುವುದು ; ಘರ್ಷಣೆ : ಶ್ರೀವಿಜಯಾರ್ಧಾಚಳಖಚರಾವಳಿ ಮಣಿಮುಕುಟಮುಕರಂಕಾನಿಕಷಣಲೇಖಾವಿಳಸಿತಪದಕಮಳನಿಳಾವಂದ್ಯಯಶಂ ಸರಸ್ವತೀಮಣಿಹಾರಂ (ಆದಿಪು. ೨-೧). [ಸಂ.]

**ನಿಕಷದೃಷದ** (ನಾ). = ನಿಕಷ ೧ : ಪಾಷಾಣಹೃದಯರಪ್ಪೊಡೆ ದೂಷಿಸಿ ಮತ್ಕಾವ್ಯಮಂ ಪರೀಕ್ಷಿಸುಗೆ ಗುಣಾನ್ವೇಷಿಗಳಪ್ಪೊಡೆ ಕನಕನಿಕಾಶದೊಳೇಂ ನಿಕಷದೃಷದಮಜಿಸದರೊಳರೇ (ಲೀಲಾವ. ೧-೬೯).

[ಸಂ. ನಿಕಷದೃಷದ್]

**ನಿಕಷೆ** (ಗು). ೧. ಹತ್ತಿರದ ; ಸಮೀಪದ. (ನಾ). ೨. ರಕ್ಕಸರ ತಾಯಿ : "ರಾಕ್ಷಸರ ತಾಯಿ ನಿಕಷಾ" (ಹಲಾಯು. ೨೦-೧೧೯) ; "ರಕ್ಕಸರ ವೃಂದಮಂ ಪಡೆದಾಕೆ ನಿಕಷೆ[ಪಾಠಾಂ. ಸೆ]ಯಕ್ಕು" (ಮಂಗರಾ. ೭-೨೪). [ಸಂ. ನಿಕಷಾ]

**ನಿಕಷೋಪಲ** (ನಾ). = ನಿಕಷ ೧ : ಆಕಾಶಂ ನಿಕಷೋಪಲಂ ತನಗೆನಲ್ . . . ನಾನಾಪತಾಕಾಧ್ವಜವ್ಯಾಕೀರ್ಣಂ ಸುರಶೈಲಮಂ ನೆನೆಯಿಸಲ್ ಪೋಲ್ದತ್ತಯೋಧ್ಯಾಪುರಂ (ನಳಚಂ. ೬೨೯). [ನಿಕಷ + ಉಪಲ]

**ನಿಕಸ** (ನಾ). ಒರೆಗಲ್ಲು : ಸಕಲೇಶಮಾದರಸು ಭಕುತ ಮಾದಯ್ಯನಿಗೆ ನಿಕಟ ಗುರು ಲಿಂಗ ಜಂಗಮನು ಕಾಯಕದ ನಿಕಸಮಂಟಪಕೆ ಮೂಗುತಿಯು (ಕನ್ನಜಾ. ೨೮೦). [ಸಂ.]

**ನಿಕಸೆ**$_1$ (ನಾ). = ನಿಕಷೆ ೨ : "ರಕ್ಕಸರ ವೃಂದಮಂ ಪಡೆದಾಕೆ ನಿಕಸೆ [ಪಾಠಾಂ. ಷೆ]ಯಕ್ಕು" (ಮಂಗರಾ. ೭-೨೪). [<ಸಂ. ನಿಕಷಾ]

**ನಿಕಸೆ**$_2$ (ನಾ). ಒರೆಗಲ್ಲು : "ನಿಕಸೆ—೧. ನಿಕಷಾ. ೨. ನಿಕಷ= ಒರೆಗಲ್ಲು" (ತದ್ಭಕೋ. ೨೧). [ಸಂ. ನಿಕಸ]

**ನಿಕಾ, ನಿಕಾವು, ನಿಖಾ** (ನಾ). (ಮುಸ್ಲಿಮರ ಪದ್ಧತಿಯ ಮೇರೆಗೆ ನಡೆಯುವ) ಮದುವೆ,—ವಿವಾಹ : ನನ್ನನ್ನು ಅದೇ ಅವಸ್ಥೆಯಲ್ಲಿ ಮುಸ್ಲಿಮನೊಬ್ಬನಿಗೆ ನಿಕಾ ಮಾಡಿಕೊಟ್ಟಿದ್ದು (ಜೋಳಬ್ಬಿ. ೨೭) ; ಗುಲಾಮನಿಗೆ ಕೊಟ್ಟು ನಿಕಾ ಮಾಡಿಸತಕ್ಕದ್ದು (ದೌಲತ್. ೧೭೩) ; ಹಾಗಾದರೆ ನನ್ನನ್ನು ಯಾವಾಗ ನಿಕಾ (ಮದುವೆ) ಮಾಡಿಕೊಳ್ಳುವಿರಿ (ಕೋಹಿನೂ. ೬೫). **ನಿಕಾವು:** (೬). **ನಿಖಾ :** ಆಕಿ ನಮ್ಮ ಜಾತಿಯವನ್ನ ನಿಖಾ ಮಾಡಿಕೊಂಡ್ರೆ ಆಕಿ ಹೊಟ್ಯಾಗೆ ಹುಟ್ಟೊ ಮಕ್ಕಳ್ನ ನೀವು ಮುಟ್ತೀರಿ (ಎಳಕ. ೧೯) ; ಏನೇನೋ ಹೇಳಿ ನಿಖಾ ಮಾಡಿಕೊಂಡು ಬಿಟ್ನಂತೆ (ಉಡುಗೊ. ೮೮).

[←ಮರಾ. ನಿಕಾ ; ಅರ. ಹಿಂ. ನಿಕಾಹ್]

**ನಿಕಾಚನ** (ನಾ). [ಜೈನ] ಕರ್ಮಪ್ರಕೃತಿಯ ಒಂದು ಅವಸ್ಥೆ ; ಉದೀರಣಾ, ಸಂಕ್ರಮಣ, ಉತ್ಕರ್ಷಣ, ಅಪಕರ್ಷಣಗಳೆಂಬ ಅವಸ್ಥೆಗಳಿಗೆ ಒಳಪಡದಿರುವಿಕೆ : ಈ ಕರ್ಮಪ್ರಕೃತಿಗಳೆಲ್ಲ ವಿಶ್ವದಲ್ಲಿ ಬಂಧ (ಆತ್ಮನಿಗೆ ಕಟ್ಟಿದ್ದು) . . . ನಿಕಾಚನ (ಉದೀರಣಾ ಸಂಕ್ರಮಣ, ಉತ್ಕರ್ಷಣ, ಅಪಕರ್ಷಣ ಆಗದಿರುವುದು) ಈ ಹತ್ತು ಅವಸ್ಥೆಗಳಲ್ಲಿ ಇರುತ್ತವೆಂದು ನೇಮಿಚಂದ್ರಸಿದ್ಧಾಂತಚಕ್ರವರ್ತಿಗಳು 'ಗೊಮ್ಮಟಸಾರ'ದಲ್ಲಿ ಹೇಳುವರು (ಜೈನಪ. ೩೬೯). [ಸಂ.]

**ನಿಕಾಮ** (ಗು). ೧. ಹೆಚ್ಚಾದ ; ಬಹಳವಾದ ; ವಿಪುಲವಾದ ; ಅತಿಶಯವಾದ : "ನಿಕಾಮವೆನೆ ಪರ್ಯಾಪ್ತಂ" (ವಸ್ತುಕೋ. ೧೦೫-೪೨) ; ಅತಿಮೃದುಕೋರಕದಿಂ ಬಟಿಯಂ ಮಂಜರಿ ನಿಕಾಮಕೋಮಳವಿಲಾಸದಿಂ ಪುಟ್ಟುವವೋಲ್ (ಶಾಂತಿಪು. ೫-೧೭) ; ನಿಸ್ಸೀಮನಿಕಾಮಬಾಹುಸಾಹಸಾಡಂಬರಪ್ರಳಂಬನೆಂಬ ಪ್ರಳಂಬನುಮಂ (ಜಗವಿ. ೩-೨೨ ವ). ೨. ಇಚ್ಛಿಸುವ ; ಬಯಸುವ. (ನಾ). ೩. ಯಥೇಷ್ಟವಾದುದು ; ಬಹಳವಾದುದು : "ಕಾಮಂ, ಪ್ರಕಾಮಂ, ಪರ್ಯಾಪ್ತಂ, ನಿಕಾಮಂ, ಇಷ್ಟಂ, ಯಥೇಪ್ಸಿತಂ—ಈ ೬ ಯಥೇಷ್ಟವಾದುದರ ಹೆಸರುಗಳು. ಬೇಕಾದಷ್ಟು, ಬಹಳವಾದ್ದು" (ಸಿದ್ಧಾಂತಿ. ೨೯೧). ೪. ಇಚ್ಛೆ ; ಬಯಕೆ. [ಸಂ.]

**ನಿಕಾಮಂ** (ಅ). ೧. ಯಥೇಚ್ಛವಾಗಿ ; ವಿಪುಲವಾಗಿ ; ಅತಿಶಯವಾಗಿ : ಕುಚಂ ಬೆಳ್ಪುವೆತ್ತುದು ರೋಮಾವಳಿ ರಾಜಿತಂ ನಡು ನಿಕಾಮಂ ಪೀವರಶ್ರೋಣಿ ಸಂಪ[ದೆ]ಗಂ ತೀವಿದುದೀ ಕುಮಾರಿಗೆ ವಿಳಾಸಾಳಂಬನಂ ಯವ್ವನಂ (ಪರ್ಶಪು. ೩-೪೭) ; ಮುಕುರದೊಳಾ ಪ್ರತಿಬಿಂಬಂ ನಿಕಾಮಮೆಸೆವಂತೆ ತದ್ವಚೋವಿಸ್ತರದೊಳ್ ಸಕಲಜಗಂ ಸೊಗಯಿಸುಗುಂ (ಚಂದ್ರಪು. ೨-೮೫). ೨. ಸಾಕಷ್ಟು ; ತೃಪ್ತಿಯಾಗುವಷ್ಟು. [ಸಂ.]

**ನಿಕಾಮಕೋಮಳೆ** (ನಾ). ತುಂಬ ಕೋಮಲಳಾದವಳು ; ಸುಕುಮಾರಿ : ಬಟಲ್ಮುಡಿ ಜೋಲ್ದು ನೀಲ ಸಂಚಳದಳಕಾಳಿಗಳ್ ಮಿಳಿರ್ದು ನರ್ತಿಸೆ ನರ್ತಕಿವೋಲ್ ನಿಕಾಮಕೋಮಳೆ ಪರಿತಂದು . . . ಕುಮಾರನನಂದು ನೋಡಿದಳ್ (ಸುಕುಮಾ. ೧೧-೧೧).

[ನಿಕಾಮ + ಕೋಮಳೆ ( = ಕೋಮಲೆ)]

**ನಿಕಾಮಿ** (ನಾ). ಕೆಲಸಕ್ಕೆ ಬಾರದವನು ; ನಿಷ್ಪ್ರಯೋಜಕ : ಸುರೇಶ—ಶಕೂರ ಸಮಸ್ಯೆ ಬಗೆಹರಿದರೆ, ಅವನು ತೀರಾ ನಿಃಸತ್ವನಾಗಿ ನಿಕಾಮಿಯಾಗಿ ಬಿಡುತ್ತಿದ್ದ (ದೀಪಹ. II, ೩೭೧).

[←ಮರಾ. ನಿಕಾಮಿ ; ಹಿಂ. ನಿಕಾಮ್, ನಿಕಮ್ಮಾ]

**ನಿಕಾಮಿನಿ** (ನಾ). ಬಹಳವಾಗಿ ಆಸೆ ಪಡುವವಳು ; ಅತ್ಯಾಪೇಕ್ಷೆಯುಳ್ಳವಳು : ಭಾಮಿನಿಯೆಸೆದಳ್ ಸೌಂದರಜಿತಸುರಕಾಮಿನಿ ಐಸಿರಿಯೆಸಕದೊಳಭಿನವಗೋಮಿನಿ ಸತತಂ ಭೋಗಾನುಭವನಿಕಾಮಿನಿ (ಉದ್ಭದೇ. ೨-೫೮). [ಸಂ. ನಿಕಾಮಿನೀ]

**ನಿಕಾಯ** (ನಾ). ೧. ಗುಂಪು ; ಸಮೂಹ; ಸಮುದಾಯ : "ನಿಕುರುಂಬಂ ನಿವಹಂ . . . ನಿಕಾಯಂ ಚಯಂ ನಿಕರಂ ಸಂಹತಿ . . . ಸಮೂಹಂ ವ್ರಾತಮೇಕಾರ್ಥಕಂ" (ವಸ್ತುಕೋ. ೧೦೨-೨೭) ; "ನಿಕರಂ ನಿಕಾಯಂ . . . ಸ್ತೋಮಕ್ಕೆ ನಾಮಮಕ್ಕುಂ" (ಮಂಗರಾ. ೧೨೬-೧); ಆದರದಿಂ ದೇವನಿಕಾಯದೊಳ್ ನೆರೆವುದೊಂದುತ್ಸಾಹಮುಂ (ಪಂಪಭಾ. ೧೦-೪೩); ಪರಿಚಾರಿಕಾನಿಕಾಯಂಬೆರಸು . . . ಕುಬ್ಜೆಯೆಂಬ ಸೈರಂಧ್ರಿ ನಡೆತರೆ (ಜಗವಿ. ೬-೧೮ ವ) ; ನೆರೆದು ಸಿಂಗರಿಸಿದ ಮಹಾರಥ ನಿಕಾಯದಿಂ (ನಂಬಿರ. ೧೧-೧೪೫) ; ಪುತ್ರನಳಿವು ಜನ್ಮನಿಕಾಯದಳಿವಂಗನಾಹನನ ಮಾಯಾಹನನವಂಜಬೇಡ (ಹಚಕಾ. ೧೪-೭). ೨. ವಾಸಸ್ಥಳ ; ಮನೆ ; ಗೃಹ. ೩. ದೇಹ ; ಶರೀರ : ಅಂದು ನೀಲಾಚಲ ನಿಕಾಯದ ಸೌಂದರಾಂಗದ ಕೌಸ್ತುಭಪ್ರಭೆಯಿಂದ ಕಾಂಚನರಥವನಿಳಿದನು ದಾನವಾ

ರಾಶಿ (ಕುಪ್ಯಾಉ. ೮-೫೭). ೪. ಲಕ್ಷ್ಯ ; ಗುರಿ. ೫. ಗಾಳಿ ; ವಾಯು. ೬. ಭಾಗ ; ವರ್ಗ. ೭. ಪರಮಾತ್ಮ ; ಪರಮೇಶ್ವರ. ೮. [ಬೌದ್ಧ] "ಸುತ್ತಪಿಟಕದ ಐದು ಭಾಗಗಳು" (ಬುದ್ಧ ಪ. ಮಿಲಿಂದ. ೧೩೧ ಕೋಶ) : ಮೂರು ಪಿಟಕಗಳನ್ನು ಬಲ್ಲ ಭಿಕ್ಷುಗಳೂ ಐದು ನಿಕಾಯಗಳನ್ನು ತಿಳಿದವರೂ ನಾಲ್ಕು ನಿಕಾಯಗಳನ್ನು ಬಲ್ಲವರೂ ಆ ನಾಗಸೇನನನ್ನು ಪುರಸ್ಕರಿಸುವರು (ಬುದ್ಧ ಪ. ೨೯ ಮಿಲಿಂದ). [ಸಂ.]

**ನಿಕಾಯ್ಯ** (ನಾ). ವಾಸಸ್ಥಾನ ; ಮನೆ ; ಗೃಹ : ಆವಾಸಃ . . . ನಿಲಯಃ, ನಿಕಾಯ್ಯಃ, ಉಟಜಂ . . . ನಿವಸನಂ, ಆಲಯಃ — ಈ ೩೧ ಮನೆ" (ಹಲಾಯು. ೪೯-೧೩೬). [ಸಂ.]

**ನಿಕಾರ$_1$** (ನಾ). ೧. ಧಾನ್ಯಗಳನ್ನು ತೂರುವುದು : "ಉತ್ಕಾರಃ, ನಿಕಾರಃ . . . ಅಂದರೆ ಧಾನ್ಯವನ್ನು ತೂರಿ ರಾಶಿಮಾಡುವಿಕೆ" (ಸಿದ್ಧಾಂತಿ. ೩೬೮). ೨. ಮೇಲಕ್ಕೆ ಎತ್ತುವುದು. ೩. ಕೊಲೆ ; ಸಂಹಾರ. ೪. ಅನಾದರ ; ತೇಜೋವಧೆ ; ತಿರಸ್ಕಾರ ; ಅಪಮಾನ : "ಪರಿಭೂತಿ ನಿಕಾರಮನಾದರಂ ತಿರಸ್ಕಾರಮಭಿಭವಂ ಭಂಗಂ" (ಪಸ್ತುಕೋ. ೧೧೧-೨) ; ಗೋಪೀಯುವತಿಜನ ಜಾರನಾಚಾರವಿಹೀನನೆ ಪೂಜ್ಯನಾಗೆ ನಿನಗೆ ನಿಕಾರಂ (ಜಗವಿ.೧೭-೨೩). ೫. ಕೇಡು ; ದ್ವೇಷ ; ಮತ್ಸರ. ೬. ವಿರೋಧ. [ಸಂ.]

**ನಿಕಾರ$_2$** 'ನಿಖಾರಿ' ನೋ.

**ನಿಕಾರಣ** (ನಾ). ಕೊಲೆ ; ಸಂಹಾರ : "ಪ್ರಮಾಪಣಂ, ನಿಬರ್ಹಣಂ, ನಿಕಾರಣಂ . . . ವಧಃ - ಈ ೩೦ ಕೊಲ್ಲುವುದಕ್ಕೆ ಹೆಸರುಗಳು" (ಸಿದ್ಧಾಂತಿ. ೨೭೨). [ಸಂ.]

**ನಿಕಾರವಟ್ಟೆ** (ನಾ). ಒಂದು ಬಗೆಯ ಬಟ್ಟೆ ; ಶುಭ್ರವಾದ ಬಟ್ಟೆ : ನೋಡುವ ನೆವದಿಂ ಮಣಿಮಂಟಪಕ್ಕೆ ನಿಕಾರವಟ್ಟೆಯ ಚಂದ್ರೋದಯಮುಂ ಸಂದಿಸುವಂತೆಯುಂ (ಅನಂಪು. ೮-೭ ಪ) ; ವಿಲಿರ್ದು ಪಸಗಿಸುವ ನಿಕಾರವಟ್ಟೆಯ ಗುಡಿಯ ತುಱುಗಲೊಳಂ (ಅನಂಪು. ೧೪-೨೩ ಪ). [ನಿಕಾರ$_2$(<ನಿಖಾರಿ)+ಬಟ್ಟೆ$_2$]

**ನಿಕಾರಿ** 'ನಿಖಾರಿ' ನೋ.

**ನಿಕಾರಿಸು** (ಕ್ರಿ). ೧. ಸ್ವಚ್ಛಮಾಡು ; ಮಡಿಮಾಡು : ಮೃಡನ ಭಕ್ತರಿತ್ತ ವಸ್ತ್ರಮಂ ನಿಕಾ[ಪಾಠಾಂ. ಖಾ]ರಿಸಲ್ಕೆ ನೆನೆದು (ತಿರುತೊಂ. ದೇ. ೨೩೨-೨೨). ೨. ಮುಚ್ಚು ; ಕಾಣದಂತೆ ಮಾಡು : ನಾರಿ ಹರಿ ತಂದಕಟ ನೊಂದನು ಕಾರುಣಿಕನನ್ಯಾಸಿಯೆನುತ ನಿಕಾರಿಸುತೆ[ಪಾಠಾಂ. ನಿಕಾರಿಸಿದ, ವಿಕಾರಿಸದೆ]ಸೆಜಿಗಿನಲಿ ತೋದಳು ಬಹಳ ಶೋಣಿತವ(ಕುಪ್ಯಾವಿ. ೯-೨೦) ; ಕಾರುಣ್ಯವಾರ್ಧಿಯು ಕಾರುಣ್ಯಜಲಧಿಯು ನೀರನು ಮೊಗೆದೆತ್ತಿದಂತೆ ಕಾರು ತೋಱುದುದೆದ್ದ ಜಲಧರಪಟಲ ನಿಕಾರಿಸೆ ಗಗನಮಾರ್ಗವನು (ಪರ್ಧಚ. ೯-೬೪).

[ನಿಕಾರ$_2$(<ನಿಖಾರಿ)+-ಇಸು./ಹಿಂ. ನಿಖಾರನಾ]

**ನಿಕಾಲ** 'ನಿಕಾಲೆ' ನೋ.

**ನಿಕಾಲಸು** (ಗು). ೧. ಮುಚ್ಚುಮರೆಯಿಲ್ಲದ ; ನೇರವಾದ ; ಸ್ಪಷ್ಟವಾದ : (ಕ). (ನಾ). ೨. ಮುಚ್ಚುಮರೆ ಇಲ್ಲದಿರುವಿಕೆ ; ನೇರವಾದುದು : (ಕ)

[←ಮರಾ. ನಿಕಾಲಸ್, ನಿಖಾಲಸ್ ; ಹಿಂ. ನಿಖಾಲಿಸ್]

**ನಿಕಾಲಿ** 'ನಿಕಾಲೆ' ನೋ.

**ನಿಕಾಲೆ,** ನಿಕಾಲ, ನಿಕಾಲಿ, ನಿಖಾಲೆ (ನಾ). ೧. ಇತ್ಯರ್ಥ ; ಅಂತಿಮನಿರ್ಣಯ ; ಫೈಸಲು ; ಬಗೆಹರಿಯುವಿಕೆ : ಎಲ್ಲ ಪ್ರಕರಣಗಳ ನಿಕಾಲೆಯು ಒಮ್ಮೆಲೇ ಆಗುವದು! (ಕಳ್ಳಕಾ.೨೪) ; ಇದರ ನಿಕಾಲೇ ಆಗಲಿ (ನಡೆದಾ. I, ೨೬೭) ; ಅದರ ನಿಕಾಲೇ ಆಗೂದು ಎಷ್ಟು ಮಹತ್ವದ್ದು ಅದ (ದೀಪಹ. II, ೭೯). ೨. ತೀರುವಳಿ ; ಸಂದಾಯವಾಗುವಿಕೆ : ದಿನದಿನದ ಚೆಕ್ ಸಾಲದ ನಿಕಾಲೆ ಸುಲಭವಾಗುವಂತೆ ಮಾರ್ಪಾಡುಗಳನ್ನು ತೋರಿಸಿ ಸುಲಭ ಮಾಡುವುದು (ಹಣಪ್ರ.೩೦೬). **ನಿಕಾಲ:** ೧. ಎಲ್ಲ ಮೂಲವು ಒಂದೇ ಖಾತೆಯಲ್ಲಿ ಇದ್ದದರಿಂದ ಎಲ್ಲ ಕಲಮಿಗಳ ನಿಕಾಲ ಆಗದ ಹೊರ್ತು ಲೆಖ್ಖದ ಪಟ್ಟಿಯು ನಿಕ್ಕಿ ತಯಾರ ಆಗುವುದಿಲ್ಲ (ಮುಂಬವ್ಯಾ. ೭೮) ; ಇಂದ ಗಪ್ಪನ ನಿಕಾಲದಾಗ ತಗದ ಬಿಡೂಣ ಅಂತೀನಿ (ದೀಪಹ. I, ೯೪). **ನಿಕಾಲಿ :** ೧. ಹಿಂದಕ ಒಮ್ಮೆ ಹೋಗಿದ್ದೆ, ಅವರ ಕೇಸು ನಿಕಾಲಿ ಆಗಿದ್ದಿಲ್ಲ. ವಿಚಾರ ಮಾಡಿಕೋತ ಕೂತಿದ್ದರು (ಸಮಜೀ. ೧೫೧). ೩. ಇಲ್ಲವಾಗುವುದು ; ಖಾಲಿಯಾಗುವುದು : ಅಲ್ಲಿ ಕಾಣುವ ಮೋಡ ಒಂದೇ ಮಳೆ ಸುರಿಸಿ ನಿಕಾಲಿ ಆಗ್ಬೇಕು ಇಲ್ಲಾ ನಮ್ಮ ಕಣ್ಣಿಗೆ ಕಾಣಿಸದ ಹಾಗೆ ದೂರ ಹೋಗ್ಬೇಕು (ತಳರು. ೯೧). **ನಿಖಾಲೆ :** ೧. ಇದರ ನಿಖಾಲೆ ಇಂದು ಆಗಿಯೇ ಬಿಡಲಿ (ಮೂರುದಾ. ೩೯).

**ನಿಕಾಲೆ ಮಾಡು, ನಿಕಾಲ ಮಾಡು, ನಿಕಾಲಿ ಮಾಡು** = ೧. ಇತ್ಯರ್ಥಮಾಡು ; ನಿರ್ಣಯಿಸು ; ಬಗೆಹರಿಸು : ಲಗೂನ ಏನರ ನಿಕಾಲೇ ಮಾಡರೀ (ದೀಪಹ. II, ೨೧೬) ; ನಾ ಕುಂಡ್ರೋದಿಲ್ಲ . . . ಇದರ ನಿಕಾಲೆ ಮಾಡಿ (ಕಮ್ಮಟ. ೨) ; ಈ ಪ್ರಕರಣದ ಪತ್ತೆ ಹಚ್ಚಿ ನಿಕಾಲ ಮಾಡದಿದ್ದರ ಗೌಡಿಕೀ ಬಿಡತೇನಿ (ಗ್ರಾಮಾಯ. ೩೧). ೨. ತೀರುವಳಿ ಮಾಡು ; ಸಂದಾಯ ಮಾಡು : ಅದನ್ನೇನ ನಿಕಾಲಿ ಮಾಡೂ ಅವನೋ, ಏನ ಹಂಗ ಬಡ್ಡೀ ಬೆಳೆಸಿಗೋತ ಇರಾವ್ನೋ (ದೀಪಹ. I, ೧೮೧). ೩. ಕೊಲ್ಲು ; ಸಾಯಿಸು : ಇವನ ನಿಕಾಲಿ ಮಾಡೂ ವ್ಯಾಳೇದಾಗ ಅಡ್ಡ ಬರಬ್ಯಾಡ (ಮಸೆಬಿ. ೬೩).

[<ಪ್ರಾ. ಣಿಕ್ಕಾಲ್./ಹಿಂ. ಮರಾ. ನಿಕಾಲ್]

**ನಿಕಾವು** 'ನಿಕಾ' ನೋ.

**ನಿಕಾಶ** (ಗು). ೧. ಹೋಲುವ ; ಹೋಲಿಕೆಯುಳ್ಳ : ದಳಿತ ಧವಳಾಬ್ಜ ಮುಕ್ತಾಫಳಶಂಖ ಶಶಾಂಕ ಕಾಶ ನಿಕಾಶ[ಸು] ವಿನಿರ್ಮಳ ರುಚಿರವರ್ಣನುಂ ಸಲೆ ತಳೆದಂ ಹಳಿ ತನ್ನ ಮೆಯ್ಯೊಳಂ ಲೋಕದೊಳಂ (ಪರ್ಧಮಾ. ೩-೮) ; ಫಲಪುಷ್ಪಭಾರಾವನತ ತರುಲತಾಶ್ರೇಣಿ ತಾಂ ಮಣಿನಿಕಾಶೋದಕ ನದೀವಕ್ಷದರ್ಪಣದಿ ಮಾರ್ಪೊಳೆವವೊಲ್ ಬಾಗಿ (ಶ್ರೀರಾಮಾ. ೧೫೦-೨೨೨). (ನಾ). ೨. ತೋರಿಕೆ. ೩. ದಿಗಂತ ; ಬಾನಂಚು ; ದಿಕ್ಕಿನ ಕೊನೆ. ೪. ಹತ್ತಿರ ; ಸಾಮೀಪ್ಯ. ೫. ಹೋಲಿಕೆ ; ಎಣೆ ; ಸಾದೃಶ್ಯ : ಅಶಾವಳಯಿತ ಲೋಕಾಕಾಶಮಿದೇನತಿವಿಶಾಲಮೋ ನಿನ್ನ ಯಶೋರಾಶಿಯನಿಂದುದ್ಯುತಿಯ ನಿಕಾಶಮನೊಳಕೊಳ್ಳುಮಳವಿಗಱಿದಿರ್ದುದುಮಂ (ಕವಿಾ. ೩-೯೪) ; ಪಾಷಾಣಹೃದಯರಪ್ಪೊಡೆ ದೂಷಿಸಿ ಮತ್ಕಾವ್ಯಮಂ ಪರೀಕ್ಷಿಸುಗೆ ಗುಣದ್ವೇಷಿಗಳಪ್ಪೊಡೆ ಕನಕನಿಕಾಶದೊಳೇಕೆ ನಿಕಷದೃಷದಮಱಿಸದರೊಳರೇ (ಲೀಲಾವ. ೧-೬೯) ; ಅಮರತರು ನಿಕಾಶೋದಾರ ಗುಣನಿಧಿ (ಸಿಭಾಗ. ೩-೧-೪೫). ೬. ಬೆಳಕು ; ಕಾಂತಿ. ೭. ಗುಟ್ಟು ; ರಹಸ್ಯ. [ಸಂ.]

**ನಿಕಾಸ** (ನಾ). ಹೋಲಿಕೆ ; ಎಣೆ ; ಸಾದೃಶ್ಯ : ಊರುದ್ವಯಂ ಕದಳೀಸ್ತಂಭನಿಕಾಸಮಾದುಹು ಕುಮಾರಂಗೊಪ್ಪಿ ತಾರುಣ್ಯದೊಳ್ (ಪರ್ಧಮಾ. ೭-೬೩). [ಸಂ.]

**ನಿಕೀರ್ಣ** (ಗು). ತುಂಬಿದ ; ದಟ್ಟವಾದ : ಕರಾಳನಕ್ರಚಕ್ರಚರ್ವಿತ ನಿಕೀರ್ಣ[ಪಾಠಾಂ. ಉದ್ಗೀರ್ಣ, ವಿಕೀರ್ಣ, ವಿಶೀರ್ಣ]ನಿರಯುಜನಿಕುರುಂಬಶಲ್ಕಶಕಲಪರಿಪೂರಿತ ಧವಳಪ್ಲವದುರ್ನಿರೀಕ್ಷಣವಿಷಮಮುಂ (ಆದಿಪು. ೫-೮೭ ಪ) ; ಅಶೋಕವೃಕ್ಷಮೆಸೆದಪುದು ನಮಜ್ಜನಮನಶೋಕಂ ಮಾಳ್ಪವೊಲನೇಕ ಶಾಖಾನಿಕೀರ್ಣ ಕಿಸಲಯಚಯದಿಂ (ಅಜಿಪು.೮-೧೫). [ಸಂ.]

**ನಿಕುಂಚ** (ನಾ). [ನಾಟ್ಯ] ಹಸ್ತವಿನ್ಯಾಸದ ಒಂದು ಬಗೆ ; ℙ "ಹೊರಕೈಯನ್ನು ತಗ್ಗಿಸುವುದು ವಿ-ದಾನ, ಅಭಯಪ್ರಧಾನ ಇವುಗಳನ್ನು ತೋರಿಸುವಾಗ" (ಲಾಸ್ಯರಂ. ೨೬೪ ಗದ್ಯಾನುವಾದ) : ಕಳಿದಿರೆ ನಿಕುಂಚ ಮೇಗಯ್ಯುಳವಟ್ಟೊಳಕಯ್ಯು ಕಳೆಯಲಾಕುಂಚಂ (ಲಾಸ್ಯರಂ. ೨-೧೫೧). 'ಆಕುಂಚ' ಪಠಾ. [ಸಂ.]

**ನಿಕುಂಚಕ** (ನಾ). ಒಂದು ಅಳತೆ; ಸೇರಿನ ಹದಿನಾರನೆಯ ಒಂದು ಭಾಗ ; ಚಟಾಕು ; ಚಿಟ್ಟಿ : "ನಿಕುಂಚಕಃ - ೧ ಸೊಲಿಗೆಯ ಹೆಸರು" (ಸಿದ್ಧಾಂತಿ. ೨೫೯). [ಸಂ.]

**ನಿಕುಂಚಹಸ್ತ** (ನಾ). = ನಿಕುಂಚ : ಪತಾಕದ ಕರ[ದೊ]ಳ್ ವಿರಚಿಪ ಮಧ್ಯಮೆಯ ಮೂಲಮಂ ಪೆರ್ವೆರಲ್ ಪತ್ತಿರೆ ಕೇಳ್ ನಿಕುಂಚಹಸ್ತಂ (ಲಾಸ್ಯರಂ. ೨-೭೯). [ನಿಕುಂಚ + ಹಸ್ತ]

**ನಿಕುಂಚಿತ** (ಗು). ೧. ಸಂಕುಚಿತಗೊಂಡ ; ಕುಗ್ಗಿದ : ಸತಿಗೆಸೆಗುಂ ಚತುರೋತ್ಕ್ಷಿಪ್ತ ನಿಕುಂಚಿತ ಪತಿತಸಮಭ್ರುಕುಟಿರೇಚಿತಭ್ರೂಲತೆಗಳ್ (ಲೀಲಾವ. ೪-೧೧೪) ; ವಿವಿಧ ಗುಲ್ಮನಿಕುಂಜದಲಿ ಭೂವಿವರವಳಯಂಗಳಲಿ ಭೂರುಹನಿವಹದಲಿ ನಿರ್ಜರನಿಕುಂಚಿತಪಲ್ವಲಂಗಳಲಿ . . . ಅಟಿಸಿ ನೋಡಿದರಿವರು ಜಾನಕಿಯ (ತೊರರಾ. ೩-೧೧-೩೨). (ನಾ). ೨. [ನಾಟ್ಯ] ನರ್ತನದ ಒಂದು ಭಂಗಿ; ನೂರೆಂಟು ಕರಣಗಳಲ್ಲಿ ಒಂದು ; ℙ "ಕಾಲನ್ನು ಚೇಳಿನ ಬಾಲದಂತೆ [ಕೊಂಡಿಯಂತೆ] ಹಿಂದಕ್ಕೆತ್ತಿ ಇನ್ನೊಂದು ಪಾರ್ಶ್ವದ ಕೈಯಿಂದ ಅರಾಲಹಸ್ತವನ್ನು . . . ಮಾಡಿ ತಲೆಯ ಪಕ್ಕದಲ್ಲಿ ಹಿಡಿದು ಇನ್ನೊಂದು ಕೈಯನ್ನು ಅರಾಲಹಸ್ತದಲ್ಲಿ . . . ಮೂಗಿನ ನೇರಕ್ಕೆ ಎದೆಗೆ ಎದುರಾಗಿ ಹಿಡಿಯುವುದು. ವಿ - ಹಾರುವುದು, ಔತ್ಸುಕ್ಯ ಇವುಗಳನ್ನು ತೋರಿಸುವಾಗ" (ಲಾಸ್ಯರಂ. ೨೯೨ ಗದ್ಯಾನುವಾದ) : ತಲಪುಷ್ಪಪುಟ, ಲೀನ . . . [ವಿ]ಕ್ಷಿಪ್ತಾಕ್ಷಿಪ್ತ, [ನಿ]ಕುಂಚಿತ, ಘೂರ್ಣಿತ . . . ಗಂಗಾವತರಣ - ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). [ಸಂ.]

**ನಿಕುಂಚಿತಕೇಶ** (ನಾ). ೧. ಗುಂಗುರು ಕೂದಲು. ೨. ಗುಂಗುರು ಗೂದಲನ್ನುಳ್ಳವನು ; ಸುರುಳಿಗೂದಲನ್ನುಳ್ಳವನು : ರತಿವೇದಿ ಶಾಸ್ತ್ರಕುಶಲಂ ಜೂದಾಳಿ ಚೆಲ್ವಂ ನಿಕುಂಚಿತಕೇಶಂ ಪ್ರಿಯವಾದಿ (ಜಾತಿತ. ೧೬-೩). [ನಿಕುಂಚಿತ + ಕೇಶ]

**ನಿಕುಂಜ** (ನಾ). ೧. ಪೊದೆ ; ಮೆಳೆ ; ಹೊದರು : ಎಕ್ಕಲವಂದಿಯುಂ ಶಿವಿ ತರಕ್ಷುವದಿರ್ದಪುದೀ ನಿಕುಂಜದೊಳ್ ಪೊಕ್ಕಿಱು (ನಳಚಂ. ೬೪) ; ವಿವಿಧ ಗುಲ್ಮನಿಕುಂಜದಲಿ ಭೂವಿವರವಳಯಂಗಳಲಿ ಭೂರುಹನಿವಹದಲಿ ನಿರ್ಝರನಿಕುಂಚಿತಪಲ್ವಲಂಗಳಲಿ . . . ಅಟಿಸಿ ನೋಡಿದರಿವರು ಜಾನಕಿಯ (ತೊರರಾ. ೩-೧೧-೩೨) ; ನಡೆ ಸಾರ್ ಮುಂದ್ಸೆದು ಬೆಳ್ಳಾರಮನೆ ಬಿಗಿ ನಿಕುಂಜಂಗಳಂ ನೋಡಿಸು (ಶಬಶಂ. ೩-೪೯). ೨. ಬಳ್ಳಿಮಾಡ ; ಲತಾಗೃಹ : "ನಿಕುಂಜಃ, ಕುಂಜಃ - ೨ ಲತಾದಿಪಿ ಹಿತೋದರೇ - ಬಳ್ಳಿಗಳು ರೆಂಬೆ ಮುಂತಾದವುಗಳು ಗುಂಪಾಗಿ ಸುತ್ತಿಕೊಂಡು . . . ಮುಸೆಯ ಹಾಗಿರುವ ಬೀಲಿ, ಲತಾಗೃಹ" (ಸಿದ್ಧಾಂತಿ. ೧೮೯) ; ನನೆಯ ಕೊನೆಯ ತಳಿರಮುಗುಳ ವನಲತಾ ನಿಕುಂಜದಿಂ ಪ್ರಸೂನರಜದ ಪುಂಜದಿಂ (ಪಂಪಭಾ. ೧-೫೬ ರಗಳೆ) ; ಕನಕಾದ್ರೀಂದ್ರನಿಕುಂಜರಂಜಿತವನಕ್ರೋಣೀರ್ಮಿ . . . ಪೋಗಿ ಪೊಱ್ತುಗಳೆವಂ ನಿಚ್ಚಂ ನಿಳಿಂಪೋತ್ತಮಂ (ಸುಕುಮಾ. ೯-೪೦) ; ಮತ್ತಮಾ ಮದಗಜಗಮನೆ ವನ್ಯಗಜಬೃಂಹಿತಕ್ಕೆ ತಲ್ಲಣಿಸಿ ತನ್ನಂ ತಬ್ಬಿಕ್ಕಿಸಿದ ಸಲ್ಲಕೀನಿಕುಂಜಮುಮಂ . . . ವಿಯೋಗಶೋಕಾಕುಲಚಿತ್ತನವಲೋಕಿಸುತ್ತುಂ (ಪಂರಾಮಾ. ೯-೧೨೦ ವ) ; ತನ್ಮಹಾದ್ರಿನಿತಂಬವನದ ನಿಕುಂಜದಲಿ ನಿರ್ಭಯವಿಹಾರದಲಿ . . . ಅಲಿಸಿದನಾ ಧ್ವನಿಯ (ಕುವ್ಯಾಭಿ.೫-೩೯). ೩. ಗುಹೆ ; ಗವಿ : "ಗಹ್ವರಮಾ ನಿಕುಂಜಮೆನೆ" (ಮಂಗರಾ. ೩೦-೨) ; ಮಾಳವಂ ವಿಂಧ್ಯನಿಕುಂಜಪ್ರಾಪ್ತನಾದಂ ಜಳಧಿ ನಿಕಟಮುಂ ಚೋಳಿಕಂ ವೇಳೆಗೊಂಡಂ (ಎಕ. V, ಅರಸೀ. ೬೨-೨೯೪ 1177). [ಸಂ.]

**ನಿಕುಂಜವನ** (ನಾ). ಬಳ್ಳಿಮಾಡಗಳಿಂದ ಕೂಡಿದ ವನ : ಸೌಂದರ್ಯದ ಒಂದು ನಿಭೃತ ನಿಕುಂಜವನವನ್ನು ರಚಿಸಿಕೊಳ್ಳಬಲ್ಲು ದಾದರೆ, ಆಗ ಮಾತ್ರ ಅದರ ಈ ದುಡಿಮೆ, ತನಗೆ ತಕ್ಕ ಗೌರವವನ್ನು ಸಂಪಾದಿಸಿಕೊಳ್ಳಬಲ್ಲದು (ನಿಬಂಧ. I, ೨೬). [ನಿಕುಂಜ + ವನ]

**ನಿಕುಂಭ** (ನಾ). ೧. ಒಂದು ಬಗೆಯ ಸಸ್ಯ ; ಜಾಪಾಳ : "ಮುಕೂಲಕಃ, ನಿಕುಂಭಃ, ದಂತಿಕಾ, ಪ್ರತ್ಯಕ್ಶ್ರೇಣೀ, ಉದುಂಬರಪರ್ಣೀ ೫ ದಂತಿಗಿಡದ ಹೆಸರುಗಳು" (ಸಿದ್ಧಾಂತಿ. ೧೪೫). ೨. ಒಬ್ಬ ರಕ್ಕಸನ ಹೆಸರು ; ಸುಂದೋಪಸುಂದರೆಂಬ ರಾಕ್ಷಸರ ತಂದೆ : ದೈತ್ಯಹರಂ ಶರಭಿನ್ನಪಾಕಶಾಸನಗಜಕುಂಭನಂ . . . ಅಸಮಾನ ರೌದ್ರರಸಕುಂಭನನೆಯ್ದಿದನಾ ನಿಕುಂಭನಂ (ಜಗವಿ. ೧೫-೫) ; ಬರಹೇಳ್ ನಿಕುಂಭನಂ ಶುಂಭನಂ . . . ಎನುತ್ತುರಿದೆದ್ದನು (ಚಿಬಪು. ೪೬-೨೧). [ಸಂ.]

**ನಿಕುಟ್ಟಕ** (ನಾ). [ನಾಟ್ಯ] ನರ್ತನದ ಒಂದು ಭಂಗಿ ; ನೂರೆಂಟು ಕರಣಗಳಲ್ಲಿ ಒಂದು ; ℙ "ಮೊದಲು ಮಂಡಲಸ್ಥಾನಕದಿಂದಲೂ . . . ಅನಂತರ ಚತುರಸ್ರಸ್ಥಾನಕದಿಂದಲೂ . . . ನಿಂತುಕೊಂಡು ಬಲಗೈಯನ್ನು ಉದ್ವೇಷ್ಟಿತ ಮಾಡಿ ಹೆಗಲಿನೆಲುಬಿನ [ಸ್ಕಂಧಶಿರಸ್ಸಿನ]ಹತ್ತಿರಕ್ಕೆ ತಂದು ಅಲಪದ್ಮ ಹಸ್ತ . . . ಮಾಡಿ ಎದೆಗೆ ತಂದು, ಬಲಗಾಲಿನಿಂದ ನೆಲವನ್ನು ಗಟ್ಟಿಸಿ, ಆವಿದ್ಧ ಮುಖಹಸ್ತವನ್ನು . . . ಮಾಡಿ ಚತುರಸ್ರದಂತೆ . . . ಹಿಡಿಯುವುದು. ಹೀಗೆಯೇ ಎಡಗಡೆಯೂ ಮಾಡುವುದು. ವಿ—ಆತ್ಮಸಂಭಾವನಾಪ್ರಧಾನವಾದ ವಾಕ್ಯಾರ್ಥವನ್ನು ಅಭಿನಯಿಸುವಾಗ" (ಲಾಸ್ಯರಂ. ೨೯೦ ಗದ್ಯಾನುವಾದ) : ನಿಕುಟ್ಟಕ, [ಅರ್ಧ ನಿಕುಟ್ಟಕ], ಕಟೀಛಿನ್ನ . . . ಗಂಗಾವತರಣ—ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ) ; ಒದವಿದ ಕುಂಚಿತಪದಮಂ ಪುದಿದುಂ ನಿಲೆ ಧಾತ್ರಿಯೊಳ್ ನಿಕುಟ್ಟಕಮೆನಿಕುಂ (ಲಾಸ್ಯರಂ. ೩-೮೬). [ಸಂ.]

**ನಿಕುಟ್ಟಕಕರಣ** (ನಾ). = ನಿಕುಟ್ಟಕ : ನಿಕುಟ್ಟಕಕರಣಮನೊಂದೇ ಭಾಗದಿಂದ ಮಾಡಿ ತೋಱೆ ಅರ್ಧನಿಕುಟ್ಟಕಕರಣಮಕ್ಕುಂ (ಲಾಸ್ಯರಂ. ೪-೬೦ ವ). [ನಿಕುಟ್ಟಕ + ಕರಣ]

**ನಿಕುಟ್ಟನ** (ನಾ). (ಪುಡಿಯಾಗುವಂತೆ) ತುಳಿಯುವಿಕೆ ; ತುಳಿತ: ವನರುಹಲೋಚನ ಚಂಡಾಂಘ್ರಿನಿಕುಟ್ಟನಭುಗ್ನಮಸ್ತಕಗ್ರೀವನಹೀಂದ್ರನದಭ್ರರುಧಿರಮಂ ನೆಟ್ಟನೆ ಕಾಱಿ ಬಿಗುತುರ್ಗ ಮೂರ್ಛೆವೋದಂ (ವಿಷ್ಣುಪು. ೫-೨-೧೧೭). [ಸಂ.]

**ನಿಕುರುಂಬ** (ನಾ). ಗುಂಪು ; ಸಮೂಹ : "ನಿಕುರುಂಬಂ ನಿವಹಂ . . . ಸಮೂಹಂ ವ್ರಾತಮೇಕಾರ್ಥಕಂ" (ವಸ್ತುಕೋ. ೧೦೭-೨೭) ; "ನಿಕರಂ . . . ನಿಕುರುಂಬಮುತ್ಕರಂ . . . ರಾಶಿ ಚಯಂ ಕುಳಮೆನಲ್ ಮತ್ತೆ ಸ್ತೋಮಕ್ಕೆ ನಾಮಮಕ್ಕುಂ" (ಮಂಗರಾ. ೧೨೬-೧) ; ಅನವರತ ನಿಹತ ನರಕರಿತುರಗನಿಕುರುಂಬ ಕೀಲಾಲ ಕಲ್ಲೋಲ ಪ್ರವರ್ತನಾನೇಕ ನದನದೀಪ್ರವಾಹಬಾಹುಳ್ಯದುಸ್ತರಾವತರಣಮಾರ್ಗಮುಮಂ (ಪಂಪಭಾ. ೧೩-೫೧ವ) ; ನಗೆಗೆಡೆಯಾದನುತ್ಪಲಿನಿಗೆಂದು ತಲೆವಾಗಿತಬ್ಜಿನೀನಿಕುರುಂಬಂ (ನಳಚಂ. ೧೪೨) ; ಕುಮಾರರನು ಪಾಂಚಾಲರನು ನೋಡುವೆವೆನುತ ಭೂಪಾಲ ನಡೆತರಲಿದಿರುವಂದುದು ಯುವತಿನಿಕುರುಂಬ (ಕುವ್ಯಾಗ. ೧೦-೧೪). [ಸಂ.]

**ನಿಕುರುಂಬಕ** (ನಾ). = ನಿಕುರುಂಬ : ರಮ್ಯಹರ್ಮ್ಯನಿಕುರುಂಬಕದಿಂ . . . ಸೊಗಯಿಕುಂ . . . ಅಲ್ಲಿಯ ಸೂಳೆಗೇರಿಗಳ್ (ಜಗವಿ. ೯-೯೯) ; ತಮ್ಮ ಕೇಕರನಿಕರಂ ಗವಾಕ್ಷನಿಕುರುಂಬಕದಿಂ ಪೊಱಪೊಣ್ಮೆ ನೋಡಿದರ್ (ಜಗವಿ. ೧೬-೮೭). [ಸಂ.]

**ನಿಕುರುಂಬೆ** (ನಾ). ಪರಿವಾರದಿಂದ ಕೂಡಿದವಳು ; ಪರಿವಾರ ಸಹಿತೆ (?) : ಸಕಲ ವಿದ್ಯಾರಂಭೆ ಕನಕಪುತ್ಥಳಿಬೊಂಬೆ ವಿಕಸಿತ ಸುಲಲಿತಾಂಬೆ ಸುನಿತಂಬೆ ನಿಕುರುಂಬೆ ಸುರರಂಭೆ ದಂತ ದಾಳಿಂಬೆ (ವಿದಾಕ್ಯ. ೩೪-೧). [ನಿಕುರುಂಬ + -ಎ$_2$]

**ನಿಕೃತ** (ಗು). ೧. ತಿರಸ್ಕೃತವಾದ ; ಅಪಮಾನ ಹೊಂದಿದ. ೨. ವಂಚಿತವಾದ ; ಮೋಸಗೊಂಡ. ೩. ತೆಗೆದುಹಾಕಿದ ; ಕಳೆದ. ೪. ಘಾಸಿ ಹೊಂದಿದ ; ಕೇಡಿಗೊಳಗಾದ. ೫. ತುಚ್ಛವಾದ ; ನೀಚವಾದ. (ನಾ). ೬. ಅಪಮಾನ ; ತೇಜೋಭಂಗ. ೭. ದೀನ ; ದೈನ್ಯಸ್ಥಿತಿಯಲ್ಲಿರುವವನು : "ನಿ[ಪಾಠಾಂ. ವಿ]ಕೃತಃ, ವಿಪ್ರಲಬ್ಧಃ —ಈ ೨ ದೈನ್ಯಂಬಟ್ಟವಂ" (ಹಲಾಯು. ೬೩-೨೨೮). [ಸಂ.]

**ನಿಕೃತಿ** (ನಾ). ೧. ತುಚ್ಛತನ ; ನೀಚತನ. ೨. ಮೋಸ ; ವಂಚನೆ. ೩. ಅಪಮಾನ : ನೃಪಕುಲ ನಿಕೃತಿಗಿದು ಮೊದಲಾಯ್ತಲಾ (ಸಿಭಾಗ. ೧೦-೮೧-೭). ೪. ತೆಗೆದುಹಾಕುವಿಕೆ. ೫. ಬಡತನ ; ದಾರಿದ್ರ್ಯ. ೬. ಭೂಮಿ. ೭. ಅಷ್ಟವಸುಗಳಲ್ಲಿ ಒಬ್ಬ. ೮. ಮಾಯೆ : "ಈರ್ಷ್ಯೆ . . . ನಿಕೃತಿಃ, ಮಾಯಾ, ಶಾಂಬರೀ, ಶಠಕಲ್ಪನಾ —ಈ ೧೦ ಮಾಯೆ" (ಹಲಾಯು. ೧೨೨-೫೬). ೯. [ಜೈನ]ನಿಕೃತಿ, ಉಪಾಧಿ, ಸಾತಿಪ್ರಯೋಗ, ಪ್ರಣಿಧಿ, ಪ್ರತಿಕುಂಚನಗಳೆಂಬ ಐದು ಬಗೆಯ ಮಾಯೆಗಳಲ್ಲಿ ಒಂದು ; ಹಣದ ವಿಷಯದಲ್ಲಿ, ಒಂದು ಕಾರ್ಯದಲ್ಲಿ ಆಸೆಯಿರುವವನನ್ನು ಮೋಸಗೊಳಿಸುವುದು. 'ನಿಕೃತಿವಿಚ್ಛೇದಿನಿ' ಪರಾ. [ಸಂ.]

**ನಿಕೃತಿವಿಚ್ಛೇದಿನಿ** (ನಾ). [ಜೈನ]ಒಂದು ಬಗೆಯ ವಿದ್ಯೆ ; ಮಾಯೆಯನ್ನು ನಿವಾರಿಸುವುದು,—ಕತ್ತರಿಸುವುದು : ಅವಲೋಕಿನಿಗೀ ರೋಹಿಣಿ ಗರುಡವಾಹಿನಿ ವಿದ್ಯೆ ನಿಕೃತಿವಿಚ್ಛೇದಿನಿಯೆಂ (?) ದಿವು ಮೊದಲಾಗಿರೆ . . . ಕೇಶವಂಗಂದಿತ್ತಂ (ವರ್ಧಮಾ. ೪-೩೦). [ಸಂ. ನಿಕೃತಿವಿಚ್ಛೇದಿನೀ]

**ನಿಕೃತ್ತ** (ಗು). ಕತ್ತರಿಸಿದ ; ತುಂಡುಮಾಡಿದ : ಜಯ ಜಯ ನಿಕೃತ್ತಸುರಪಕ್ಷದಕ್ಷಮಹೋಗ್ರ ಜಯಜಯ ನೃಸಿಂಹಸಂಹರಣಪಟು ಶರಭಾಂಗ (ರಾಜಶೇ. ೧೪-೧೬೯ ರಗಳೆ). [ಸಂ.]

**ನಿಕೃಷ್ಟ** (ಗು). ೧. ತುಚ್ಛವಾದ ; ನೀಚವಾದ ; ಕೀಳಾದ : ಪಾಪದಿಂದಿನಿತು ನಿಕೃಷ್ಟ ದುರ್ಗತಿಗಳೊಳ್ ಬಲವಂದುದನೀಗಳಾಗಿಯುಂ ನೆನೆದು (ಸುಕುಮಾ. ೫-೨೯). ೨. ಬಹಿಷ್ಕರಿಸಿದ ; ಬಹಿಷ್ಕೃತವಾದ. ೩. ಅಸಂಸ್ಕೃತವಾದ ; ಅಸಭ್ಯವಾದ. ೪. ಹತ್ತಿರದ ; ಸಮೀಪದ. (ನಾ). ೫. ತುಚ್ಛವಾದುದು ; ಕೀಳಾದುದು : "ಅರ್ವಾಣಂ, ಅಣಕಂ . . . ನಿಕೃಷ್ಟಂ, ಅವಕೃಷ್ಟಂ . . . ರೇಫಸಂ —ಈ ೧೩ ಹೊಲ್ಲಹ ವಸ್ತು" (ಹಲಾಯು. ೫೬-೧೮೨) ; ಉತ್ತಮ ಮಧ್ಯಮ ಕನಿಷ್ಠ ನಿಕೃಷ್ಟವೆಂಬ ಜಾತಿವಿಕಾರಂಗಳ ಮೀರೆದಪ್ಪಿದ ದಾಸಿ ವೇಶಿ . . . ಕನ್ನಿಕೆಯರಲ್ಲಿ ಕಂಗೆಟ್ಟು ವರ್ತಿಸುವ ಪಾಪದೃಷ್ಟಿಯ ಕ್ರೂರಾತ್ಮಂಗೆ (ಉರಿತ. ೧೦೧-೮೯). ೬. ಹತ್ತಿರ ; ಸಮೀಪ. ೭. ಕೆಟ್ಟವನು ; ನೀಚ ; ತುಚ್ಛ : "ನಿಕೃಷ್ಟನೆನೆ ಕಷ್ಟವೆಂದೆಂಬವಗೆ ನಾಮಮಕ್ಕುಂ" (ಮಂಗರಾ. ೬೭-೪) ; ಕುಲಜಂ ಕುಲಹೀನನೆಂದು ಬಗೆಯದೆ ನೆಲಸುವೆ ನಿನ್ನಿಂ ನಿಕೃಷ್ಟರೆಂಬರುಮೊಳರೇ (ಗದಾಯು. ೯-೬) ; ದುಃಖದೊಳ್ ಪಿರಿದುಮುವರಿಂ ಕಣ್ಗೆಟ್ಟಂ ಭಟ್ಟಂ ನಿಕೃಷ್ಟರ ದೂಷಣಂ (ಸುಕುಮಾ. ೨-೯) ; ಮಾನವನನನುಸರಿಸಿ ಯಾಚನೆಯಂ ನೀ ಗೈಯೆ ಕಾಣುವನು ನಿಕೃಷ್ಟನೆಂದು ನಿನ್ನ (ಕುಮಾಕ್ಯ. ೩೮-೬). [ಸಂ.]

**ನಿಕೃಷ್ಟಚೇಷ್ಟೆ** (ನಾ). ತುಚ್ಛವಾದ ನಡತೆ ; ನೀಚತನ : ನಗೆಗೆಡೆಯಾಗೆ ದೈವವೆನಗೇನನೊಡರ್ಚಿಸಿತೀಗಳಕ್ಕ ರಾಗಿಗಳ ನಿಕೃಷ್ಟಚೇಷ್ಟೆಗನುಗೆಯ್ದಪೆಂ (ಕಾದಂಪೂ. ೮೧೯). [ನಿಕೃಷ್ಟ + ಚೇಷ್ಟೆ]

**ನಿಕೃಷ್ಟಜೀವಿ** (ನಾ). ಹೀನ ವ್ಯಕ್ತಿ ; ನೀಚ ವ್ಯಕ್ತಿ : ಮನೆಯ ಎಲ್ಲರ ದೃಷ್ಟಿಯಲ್ಲೂ ವಿನುತ ಮರ್ಯಾದೆ ಇಲ್ಲದ . . . ನಿಕೃಷ್ಟಜೀವಿ (ದೂರಸ. ೨೨೦). [ನಿಕೃಷ್ಟ + ಜೀವಿ$_2$]

**ನಿಕೃಷ್ಟತೆ** (ನಾ). ಕೆಳಮಟ್ಟ ; ಕೀಳುತನ : ದಡ್ಡರೆಂದು ಅವರನ್ನು ಪ್ರತ್ಯೇಕಿಸಿದರೆ ನಿಕೃಷ್ಟತೆಯ ಮನೋಭಾವ ಹುಟ್ಟಿಕೊಳ್ಳುತ್ತದೆ (ಶಿಕ್ಷದ. ೯೪). [ಸಂ. ನಿಕೃಷ್ಟತಾ]

**ನಿಕೃಷ್ಟಾಚಾರ** (ನಾ). ೧. ಕೆಟ್ಟ ನಡತೆ ; ಹೀನವಾದ ಆಚಾರ. ೨. ಕೆಟ್ಟ ನಡತೆಯುಳ್ಳವನು ; ಹೀನವಾದ ಆಚಾರವನ್ನುಳ್ಳವನು : ಜಾರರಿಗೆ ಜಡರಿಗೆ ನಿಕೃಷ್ಟಾಚಾರರಿಗೆ ಪಿಸುಣರಿಗೆ ಧರ್ಮವಿದೂರರಿಗೆ ಕಲಿಪಾರ್ಥ ಕೇಳ್ ಪರಲೋಕವಿಲ್ಲೆಂದ (ಕುಪಾ್ಯಆ. ೪-೨೪). [ನಿಕೃಷ್ಟ + ಆಚಾರ]

**ನಿಕೇತ** (ನಾ). ಗೃಹ ; ನಿಕೇತನ : 'ಜನನಿಕೇತ' ಪರಾ. [ಸಂ.]

**ನಿಕೇತನ** (ನಾ). ೧. ಮನೆ ; ವಾಸಸ್ಥಳ ; ಗೃಹ : "ಭವನಂ ಸದನಂ . . . ಗೇಹಮಾಲಯಂ ಕುಟಿ ನಿಕೇತನಂ ಗೃಹಮುಟಜಂ" (ವಸ್ತುಕೋ. ೪೬-೮) ; "ಸದ್ಮಮೋಕಸಮಾಲಯಂ ಗೃಹಂ ಭವನಂ ನಿಕೇತನಂ . . . ಗೇಹಮೆನೆ ಧಿಷ್ಣ್ಯಮೆನಲಿವು ಮನೆಗೆ ಪೆಸರಕ್ಕು" (ಮಂಗರಾ. ೫೮-೭) ; ಪುರಜನಮಂತಃಪುರಜನಮುಂ ಪರಿಜನಮುಮಳ್ಕಿ ತದ್ರಾಜನಿಕೇತನದಲ್ಲಿ ಬಿರ್ದು ಪಡೆದುದು ಮನಕ್ಕೆ ಕಡುಮುಳಿಸಿನೆ ಸಕಮಂ ಮಾಗಧನಾ (ಆದಿಪು. ೧೨-೯೨) ; ಸೌಧರ್ಮಕಲ್ಪದ ಶ್ರೀಪ್ರಭವಿಮಾನದುಪಪಾತನಿಕೇತನದೊಳ್ (ಚಂದ್ರಪು. ೪-೬೦ ವ) ; ಅವಳೆರಡು ಕೈಗಳ ಮುಗಿದು ಹೊಱವಂಟಳು ನಿಕೇತನವ (ತೊರರಾ. ೨-೧-೩೦) ; ಸ್ಫಟಿಕ ನಿರ್ಮಲ ಸರೋವರ ಸುಭಗತೀರದಲಿ ಶೋಭಿಸಿದುದಾ ಮುನಿನಿಕೇತನಂ (ಶ್ರೀರಾಮಾ. ೩೪-೧೮೪). ೨. ನೆಲೆ ; ಆಶ್ರಯಸ್ಥಾನ : ನೋಟಕ್ಕೊಪ್ಪಿದೆ ನಾಲ್ವತ್ತೆಣ್ಟಾವುದಗಲಮೆಂಬ ಪವಣ್ಗೆ ನಿಕೇತನಮುದಾಯ್ತು ಸಾಕೇತಪುರಂ (ಅಜಿಪು. ೨-೨೨) ; ಎಸೆದಂ ಫಣಿಚಿತ್ಕೇತನನುತ್ಪಲಕಾಂತಿನಿಕೇತನಂ (ಜಗವಿ. ೧೨-೨). ೩. ದೇವಾಲಯ ; ದೇವಸ್ಥಾನ. ೪. ಈರುಳ್ಳಿ. [ಸಂ.]

**ನಿಕೋಚ** (ನಾ). ಸಂಕುಚಿತಗೊಳ್ಳುವುದು ; ಮುಚ್ಚಿಕೊಳ್ಳುವಿಕೆ : ಹಯಕಂಠಸುರಃಕಮಳಾಲಯದಿಂ ಸಿರಿ ಸಂಜೆಪೊಟ್ಟು ಬರೆ . . . ತದ್ಭೀತಿಯಿಂದೆ ಮುಚ್ಚುವವೊಲಾಯ್ತು ನಳಿನನಿಕೋಚಂ (ವರ್ಧಪು. ೮-೨೪). [ಸಂ.]

**ನಿಕೋಚಕ** (ನಾ). ಒಂದು ಬಗೆಯ ವೃಕ್ಷ ; ಅಂಕೋಲೆ : "ಅಂಕೋಲಃ, ನಿಕೋಚಕಃ— ೨. ಅಂಕೋಲೆಗಿಡ' (ಸಿದ್ಧಾಂತಿ.೧೧೮). [ಸಂ.]

**ನಿಕ್ಕ** (ನಾ). ಒಂದು ತೂಕ ; ನಿಷ್ಕ : "ಸಿಕ್ಕಸಲ್ಪೇಳೆಯೆರಡುಮನೊಂದು ಪಾಗಮವು ನಾಲ್ಕಾಗೆ ಪಣಮೆನಿಕ್ಕವು ದಶಂ ತೂಕಕ್ಕೆ ನಿಕ್ಕ [ಪಾಠಾಂ. ನಿಲ್ಕ]ವೀರೆಂಟಾಗೆ ಪಲಮಕ್ಕು" (ಮಂಗರಾ. ೧೦೪-೧೧). [< ಪ್ರಾ. ಣಿಕ್ಕ./ಸಂ. ನಿಷ್ಕ]

**ನಿಕ್ಕಣೆ** (ನಾ). (ಉಕ) ಕಾಳನ್ನು ತೆಗೆದ ಮೇಲೆ ಉಳಿಯುವ ಭಾಗ,—ಹೊಟ್ಟು : ಇದು ನಿಕ್ಕಣೆರಾಶಿ (ರೂಢಿ). [ ? ]

**ನಿಕ್ಕರು** (ನಾ). ಚಡ್ಡಿ ; ಚಲ್ಲಣ : ಪೋಲೀಸಿನವರಂತೆ ಕಾಖಿಬಣ್ಣದ ನಿಕ್ಕರನ್ನು ಹಾಕಿ, ಜಾತ್ರೆಯಲ್ಲಿ ತಂದ ಬಟ್ಟೆಯ ಬೆಲ್ಟನ್ನು ಪರಟಿನ ಮೇಲೆ ಬಿಗಿದು (ಧರ್ಮಶ್ರೀ. ೪). [←ಇಂ. Knicker ]

**ನಿಕ್ಕರುಣ** (ನಾ). ಕರುಣೆಯಿಲ್ಲದಿರುವುದು ; ನಿರ್ದಯೆ ; ನಿಷ್ಕರುಣೆ : ತಳ್ತ ಕಲ್ಪಭೂಮಿರುಹನಿಕುಂಜಮಂಜರಿಗಳೊಳ್ ಕೊಡಕಿರ್ಪನೊ ಕೊಟ್ಟನೆಯ್ದಿ ನಿಕ್ಕರುಣ [ಪಾಠಾಂ. ನಿಃಕರುಣ]ದೆ ಕಾಯ್ದುನುಂಗಿದಪ ನಂತಕಂ (ವರ್ಧಪು. ೧೦-೫೭). [<ಪ್ರಾ. ನಿಕ್ಕರುಣ./ಸಂ. ನಿಷ್ಕರುಣ]

**ನಿಕ್ಕರುಣಿ** (ನಾ). ಕರುಣೆಯಿಲ್ಲದ ವ್ಯಕ್ತಿ ; ನಿರ್ದಯಿ ; ನಿಷ್ಕರುಣಿ : ರೊಕ್ಕ ಬಡ್ಡಿಗೆ ಕೊಟ್ಟು ವ್ಯವಹಾರ ಮಾಡುವ ನಿಕ್ಕರುಣಿಯಾಗಿ ತಿರುಗುವವಳು ಹೊಲತಿ (ವಿಸಾಸು. ೫೮-೨). [<ಸಂ. ನಿಷ್ಕರುಣಿನ್]

**ನಿಕ್ಕಳ** (ನಾ). ಸಂಪೂರ್ಣವಾದುದು ; ಅಖಂಡವಾದುದು : ತಲೆಯಲಲೆದರು ಬುಡದೊಳಿದೆ ನೆಲೆಗೊಂಡ ನಿಲವಿನ ನಿಕ್ಕಳ ಮರದ ನೆಲೆ ನೋಡುವದು ನಡುಗಿಸಿ ಸ್ಥಿರದ—ಚಂಚಲದಿಕ್ಕಳ (ಹೃದಸ. ೫೮-೧೧) ; ಅನಂತರದಲ್ಲಿ, ಅವನು ಪ್ರಕಟಿಸಿದ 'ಅಮೃತಾನುಭವ'ಕ್ಕೆ ತನ್ನ ನಿಕ್ಕಳ ಅನುಭವವನ್ನೇ ನೆಲೆ ಮಾಡಿಕೊಂಡಿದ್ದಾನೆ (ಮಸಾಹಿ.೧೫).

ನಿಕ್ಕಳಾಗು = ದೃಢವಾಗು ; ನಿಶ್ಚಿತವಾಗು ; ಖಾತರಿಯಾಗು : ಸತ್ಯ—ಸಂಶೋಧನೆಯಲ್ಲಿ ಅರೆದು—ಒರೆದು ಕೊನೆಗೆ ನಿಕ್ಕಳಾಗಿ ನಿಂತು ದನ್ನು ಒಪ್ಪಿಕೊಳ್ಳಲೇಬೇಕಲ್ಲವೇ ? (ಕರ್ನಾಪೂ. ೧೯).

[←ಮರಾ. ನಿಕ್ಕಳ, ನಿಖಳ, ನಿಖ್ಖಳ./ಸಂ. ನಿಖಿಲ]

**ನಿಕ್ಕಳಿಕೆ** (ನಾ). (ಉಕ) ದಣಿವು ; ಆಯಾಸ : 'ನಿಕ್ಕಳಿಕೆ ಬೀಳು' ಪರಾ. [?]

**ನಿಕ್ಕಳಿಕೆಬೀಳು** (ಕ್ರಿ). (ಉಕ) ದಣಿ ; ನಿತ್ರಾಣವಾಗು ; ಸುಸ್ತಾಗು : ಪ್ರತಿಭಾನ ಪಾಲಿಗೆ ಆ ಸುಖವಿಲ್ಲ. ಅತ್ತು ಅತ್ತು ಆಕೆ ನಿಕ್ಕಳಿಕೆ ಬಿದ್ದಳು (ಮೂಲಕಿ. ೧೩). [ನಿಕ್ಕಳಿಕೆ + ಬೀಳು$_1$ (<ಬೀೞ್$_1$)]

**ನಿಕ್ಕಾರಣ** (ಗು). ಕಾರಣವಿಲ್ಲದ ; ನಿಷ್ಕಾರಣ : "ನಿಕ್ಕಾರಣ—ನಿಷ್ಕಾರಣಃ" (ತದ್ಭಕೋ. ೨೨). [<ಸಂ. ನಿಷ್ಕಾರಣ]

**ನಿಕ್ಕಿ$_1$, ನಿಕ್ಕೆ$_1$** (ನಾ). ನಿಶ್ಚಯ ; ಖಚಿತ : ಕಡೀ ಮನೆ ಗೋವಿಂದ ನಿಗೆ ಕೊಡಕ್ಕು ಅಂತ ನಿಕ್ಕಿ ಆತು (ತುಂಬಿಕೊ. ೭೬). ನಿಕ್ಕೆ$_1$ : ನಿಕ್ಕೆ ಭಾವವನ್ನು ಬರಿಯಲಿಕ್ಕೆ ಅಡಚಣೆ ಬರುವದು (ಮುಂಬವ್ಯಾ. ೭೩). 'ನಿಕ್ಕುವ' ಪರಾ.

[←ಮರಾ. ನಿಕಾ, ನಿಕೀ, ನಕೀ; ನಕ್ಕೀ ; ಹಿಂ. ನಕ್ಕೀ]

**ನಿಕ್ಕಿ$_2$, ನಿಕ್ಕೆ$_2$** (ಅ) ನಿಶ್ಚಯವಾಗಿ ; ಖಚಿತವಾಗಿ : ನಿಕ್ಕಿ ಅಂಸಿ ಬರೂ ಗಿರಾಕಿರಿ ಅವು (ಅಪನಾ. ೧೭೬). ನಿಕ್ಕೆ$_2$: ೨. ಪೂರ್ಣವಾಗಿ : ಅವು ತಿರಿಗಿ ಬಂದು ತೂಕ ಆಗದ ಹೊರ್ತು ಲೆಖ್ಖವು ನಿಕ್ಕೆ ತಯಾರ ಆಗುವುದಿಲ್ಲ (ಮುಂಬವ್ಯಾ. ೭೮). [<ನಿಕ್ಕಿ$_1$]

**ನಿಕ್ಕುವ** (ನಾ). ೧. ನಿಶ್ಚಯ ; ದಿಟ ; ಸತ್ಯ : "ನನ್ನಿ, ನಿಕ್ಕುವಂ . . . ದಿಟಂ—ಈ ೬ ಸತ್ಯಂ" (ಕಶಸಾ. ೧೩-೨೫೮) ; "ನಿಸದಂ ನಿಕ್ಕುವ ಮೆಂದುಂ ಪೆಸರಿಸುತುಂ ನನ್ನಿ ಸಾಚನೆನಸುಂ ದಿಟಮೆಂದುಸಿರಲ್ಕೆ ಸತ್ಯ ಮಕ್ಕುಂ" (ಕವಿಕಂ. ೧೨೧) ; ಬಂಧುರಗುಣಬಂಧುಸಂತತಿಗೆ ನಿಕ್ಕುವ ಮೆಂಬುದಘುಪ್ಪಕಾರ[ಕಂ] (ಕವಿರಾ. ೧-೧೧೭) ; ಸಲೆ ಮೆಲ್ಪು ಬಲ್ಪುನಟಾಗುಂ ಕೈವಾರಮಂ ಕೂಡೆ ಕೂರಿಸುಗುಂ ನಿಕ್ಕುವಮುಪ್ಪ ಕಾರಣದಿಂ (ಪಂಪಭಾ. ೯-೧೯) ; ತಂಗಿ ನೀನೆನಗೆ ಕೂರ್ಪುದು ನಿಕ್ಕುವ ಮಪ್ಪೊಡೆ . . . ಮದೀಯ ಶೋಕದಿಂ ಜೀವಮುನಪ್ಪೆ ಪತ್ತುವಿಡದಂತಿರೆ ಮಾಡುವುದಾವುಪಾಯದಿಂ (ಕಾದಂಉ. ೫೧೧) ; ಮೊಕ್ಕಳಮೆ ತಿಳಿ ಯಿಸುವ ತತ್ವದ ನಿಕ್ಕುವಮನಾ ಮುನಿಪರೆಂಬ ಠವಕ್ಕೆ ಕಿವಿಗೊಡುತೆಯಿದೆ ಮೆಚ್ಚುತಲ್ಪಿದಿದನು ಭೂಪ (ಸಾಳ್ವಭಾ. ೪-೩೩).

ನಿಕ್ಕುವಂ ಮಾಡು = ಸತ್ಯವನ್ನಾಗಿ ಮಾಡು; ನಿಶ್ಚಯಗೊಳಿಸು: ಸೆಟ್ಟಿಯ ಬಳ್ಯಂ ಕಿಡುದೆಂಬುದೊಂದು ನುಡಿಯಂ ನೀಂ ನಿಕ್ಕುವಂ ಮಾಡಿದ್ಪೆ (ಪಂಪಭಾ. ೧೨-೧೭೫).

[?./ತೆಲು. ನಿಕ್ಕುವ, ನಿಕ್ಕ./ಮರಾ. ನಕೀ, ನಕ್ಕೀ]

**ನಿಕ್ಕುವಂ** (ಅ). ಸತ್ಯವಾಗಿಯೂ; ದಿಟವಾಗಿಯೂ : ಬಾಚಿಂಬುದು ನಿಕ್ಕುವಂ ಗುಣಗ್ರಾಮಣಿಗಳ್ ಪಾಟೀಗೆ ತೆಗಟಿ ಬಾಟ್ವಾ ಬಾಚೀನಾ ಚಂದ್ರತಾರವೋ ಮಾನಸರಾ (ಕವಿರಾ. ೩-೧೭೭) ; ಪೆಂಡಿರೆಂಬರೊಳ್ ಕೂಡುವನಲ್ಲೆನಿಂದು ಮೊದಲಾಗಿರೆ ನಿಕ್ಕುವವೆಂದು ರಾಗದಿಂ ಕೂಡಿದನುಯ್ದಂ ಸತ್ಯವತಿಯಂ ಸತಿಯಂ ಪತಿಯೊಳ್ ನದೀಸುತಂ (ಪಂಪಭಾ. ೧-೭೩) ; ನೆಗಟ್ದೀ ಮನೋಹರವಧೂಸಂದೋಹವಿಾ ರಾಜಕಪ್ರಸರಂ ನಿಕ್ಕುವಮೆನ್ನದೆಂದು ವಿಹಗೇಂದ್ರಂಗಾಂದೆ ತೋಱುತ್ತು (ಪಂಚತಂ. ೧೨೬-೮) ; ಇಲ್ಲಿರ್ಪಾಕೆಯೆ ನಿಕ್ಕುವಮನಂತ ಮತಿಯಕ್ಕುಂ (ಧರ್ಮಾಮೃ. ೩-೨೩೭) ; ನಿಕ್ಕುವಮೊರ್ವಂ ಜನನುತನು ದಯಿಪಂ (ಜಯಚಾ. ೨-೪೫) ; ಮರುಗದಿರು, ನಿಕ್ಕುವಂ ಮುನ್ನೆ ನಿನ್ನ ಪಗೆಯುಳಿವೋದಂ (ಗಿರಿವಿಂ. ೨೮-೪೫). [<ನಿಕ್ಕುವ]

**ನಿಕ್ಕುಳಿಸು** (ಕ್ರಿ). ಒಯ್ಯಾರದಿಂದ ಒಲೆದಾಡು ; ಬೆಡಗಿನಿಂದ ಬಾಗು : "ನಿಕ್ಕುಳಿಸು—ವಿಲಾಸಾವಿನಮ್ರೀ (ವಿನೋದದಿಂದ ಬಗ್ಗು)" (ಶಮಧಾ) ; ನಾಡೆ ನಿಕ್ಕುಳಿಸಿದ ಕೈಯ ಮೆಯ್ಯ ನಡುಗಂಪಿನ ಸೊಂಪಿನ ಚೆಲ್ಲಗಾತಿ (ರಾಮಾಶ್ವ. ೧೨೦-೧೯) ; (ಅತನಿಗೆ ಮೇಲುಂದನ್ನೋಸರಿಸಿ ನಿಕ್ಕುಳಿಸಿ . . ಆಹ್ವಾನದಾಲಿಂಗನದ ನಳಿತೋಳ್ಗಳನ್ನು ಮುನ್ನೀಡಿ, ಪ್ರತೀಕ್ಷಿಸುತ್ತಿರುವಳು) (ಚಿಟ್ಟಅ. ೮೭-೬) ; ಒಂದು ಮಟ್ಟಿನ ಹಿಂದೆ ಮರೆಯಾಗಿ ನಿಂತು, ಕಾಲ ತುದಿಯ ಹೆಬ್ಬೆಟ್ಟಿನ ಮೇಲೆ ನಿಮಿರಿ ನಿಕ್ಕುಳಿಸಿ ನೋಡಿದನು (ಮಲೆಮ. ೪೪೬). [ ? +-ಇಸು$_3$]

**ನಿಕ್ಕೆ$_1$** 'ನಿಕ್ಕಿ$_1$' ನೋ.

**ನಿಕ್ಕೆ$_2$** 'ನಿಕ್ಕಿ$_2$' ನೋ.

**ನಿಕ್ತ** (ಗು). ೧. ತೊಳೆದ ; ಶುದ್ಧಿಪಡಿಸಿದ. ೨. ಕಾಪಾಡಿದ. (ನಾ). ೩. ಶುಚಿಗೊಳಿಸುವಿಕೆ ; ಶುದ್ಧಮಾಡುವಿಕೆ. [ಸಂ.]

**ನಿಕ್ವಣ** (ನಾ). ೧. ಶಬ್ದ; ಧ್ವನಿ. ೨. ಆಭರಣಗಳ ಧ್ವನಿ,—ಸಪ್ಪಳು : "ನಿಕ್ವಾಣಃ, ಕ್ವಾಣಃ, ಕ್ವಣಃ, ಕ್ವಣನಂ—೫ ವೀಣಾದಿ ಸಕಲವಾದ್ಯಧ್ವನಿಗಳಿಗೆ ಹೆಸರುಗಳು" (ಸಿದ್ಧಾಂತಿ.೫೬) ; ನವ್ಯಪುಷ್ಪಮಂ ಮುಡಿಸಿನಗೆಂಬವೋಲ್ಕಲಿತಕಂಕಣನಿಕ್ವಣಮುಣ್ಮೆ (ರಾಜಶೇ. ೧೦-೪೭) ; ಒಂದು ಕಡೆಯಿಂದ ಸ್ವರ್ಣಭೂಷಣಗಳ ಗುಂಜನ, ಮತ್ತೊಂದು ಕಡೆ ಯಿಂದ ನೂಪುರಗಳ ನಿಕ್ವಣ (ಇಪ್ಪಕ. ೧೪೭). [ಸಂ.]

**ನಿಕ್ವಣಧ್ವನಿ** (ನಾ). = ನಿಕ್ವಣ ೨ : ನೃತ್ಯಲೀನಪ್ರಕೃತಿಯ ನೂಪುರ ನಿಕ್ವಣಧ್ವನಿಯ ಹಾಗೆ. . . ತರಂಗಿತವಾಗತೊಡಗಿತು (ಇಪ್ಪಕ. ೬೧).

[ನಿಕ್ವಣ + ಧ್ವನಿ]

**ನಿಕ್ವಣಿತ** (ನಾ). = ನಿಕ್ವಣ ೨ : ಮೃದುಪದನ್ಯಾಸ ಕಿಂಚಿಚ್ಚಲತ್ಕಂಕಣ ಕಾಂಚೀಕಿಂಕಿಣೀ ನಿಕ್ವಣಿತಯುತೆ ಪರಾಭ್ಯರ್ಣಮಂ ಸಾರ್ದಳಾಗಳ್ (ರಾಜಶೇ. ೮-೫೭). [ಸಂ.]

**ನಿಕ್ವಣಿಸು** (ಕ್ರಿ). ಧ್ವನಿಯನ್ನುಂಟುಮಾಡು ; ನಾದವನ್ನು ಹೊರಡಿಸು : ದರ್ಶನಂದೋರೆಮಗೆ ಓ ವಾಙ್ಮಯಿಯೆ, ನಿತ್ಯಸತ್ಯಂ ನಿಕ್ವಣಿಸುವೋಲ್ ವಚಸ್‌ತಂತ್ರಿ ಕವಿಯ ಚಿದ್ಯಂತ್ರ ಸಮುದ್ಧದ್ವೀಣೆಯಿಂ (ಶ್ರೀರಾಮಾ. ೪೪೫-೧೧). [ನಿಕ್ವಣ + -ಇಸು$_3$]

**ನಿಕ್ವಾಣ** (ನಾ). = ನಿಕ್ವಣ ೨ : "ನಿಕ್ವಾಣಃ, ನಿಕ್ವಣಃ, ಕ್ವಾಣಃ, ಕ್ವಣಃ, ಕ್ವಣನಂ—೫ ವೀಣಾದಿ ಸಕಲವಾದ್ಯಧ್ವನಿಗಳಿಗೆ ಹೆಸರುಗಳು" (ಸಿದ್ಧಾಂತಿ. ೫೬) ; ಕಾಣಿಸಿದುದಸಮಬಾಣನ ಬೀಣೆಯು ಚೆಲ್ವಂ ಪ್ರಗಲ್ಭ

ಕೋಕಿಲಕಲನಿಕ್ವಾಣಂ (ಲೀಲಾವ. ೧೩-೪೫) ; ಮಧುರನಿಕ್ವಾಣದೊಳೆದೆ ಗೆಡಿಸುವೆನು (ವರ್ಧಚ. ೧೧-೧೦೭). [ಸಂ.]

**ನಿಕ್ಷತ್ರಂ** (ಅ). ನಿರ್ವೀರ್ಯವಾಗಿ ; ನಿಸ್ತೇಜವಾಗಿ : ಹಗೆಗಳನ್ನೆಲ್ಲ ನಿಕ್ಷತ್ರಂ ಮಾಡಿ ಏಕಚ್ಛತ್ರಚ್ಛಾಯೆಯಲ್ಲಿ ಆಳುತ್ತಿರಲು ವೀರ ಮಹೇಂದ್ರನು ಗಂಗರಾಜ್ಯದ ಮೇಲೆ ದಂಡೆತ್ತಿ ಬಂದನು (ಕರ್ಣಾಅ. ೧೫೩). [ಸಂ.]

**ನಿಕ್ಷಿಪಿತ** (ನಾ). ಇರಿಸಿದುದು ; ಇಟ್ಟುದು : ಬಹುನೃಪರ ಗಂಟಲ ಗಾಳವೆನೆ ನಿಕ್ಷಿ [ಪಾಠಾಂ. ಕ್ಷು] ಪಿತವಾದುದು ಯಂತ್ರ (ನಿಭಾಗ. ೧೦-೭೪-೩೫). [<ಸಂ. ನಿಕ್ಷಿಪ್ತ]

**ನಿಕ್ಷಿಪ್ತ** (ಗು). ೧. ಇಟ್ಟ ; ಇರಿಸಿದ : ಏನುಂ ತೊಡವಿಲ್ಲದುವೆ ಶಿಲಾನಿಕ್ಷಿಪ್ತಾಕ್ಷರಂ ವಿಭೀಷಣರಣದೊಳ್ ಜಾನಕಿಯ ದೂಷಣಂ ಲಂಕಾನಾಥಂ ದಾಶರಥಿಯ ಕೈಯೊಳ್ ಮಡಿಗುಂ (ಪಂರಾಮಾ. ೩-೨೩) ; ವಿದೇಹಗ್ರಹಣದಿಂ ದೇವ ಕುರೂತ್ತರ ಕುರುಗ್ರಹಣಮಾದೊಡೆ ತನ್ನಿಷೇಧಾರ್ಥಂ ಅನ್ಯತ್ರಗ್ರಹಣಶಬ್ದಂ ನಿಕ್ಷಿಪ್ತಮಾಯ್ತು (ತತ್ತ್ವಪ್ರ. ೧೭೪) ; ನಿಜವಕ್ಷೋಜನಿಕ್ಷಿಪ್ತಕ್ಷ್ವೇಡಪೀಡಿತ ಲೋಕಘಾತನಿಯಪ್ಪ ಪೂತನಿಯುಮಂ . . . ಕರೆದು (ಜಗವಿ. ೩-೨೨ ವ). ೨. ಕೆಳಗೆ ಬೀಳಿಸಿದ ; ಎಸೆದ ; ಒಗೆದ. ೩. ಅಡಗಿರುವ ; ಹುದುಗಿರುವ : ಲಗ್ಗೆ ನುಗ್ಗಿ ಮೇಲ್ವಾಯುವನಿತರೊಳೆ ನೀಮೆಬ್ಬಿಸಲ್ವೇಳ್ಕುಮುರ್ಯ್ ಲಂಕಾಂತರಂಗನಿಕ್ಷಿಪ್ತಲಯಶಕ್ತಿಯಂ (ಶ್ರೀರಾಮಾ. ೬೩೭-೧೬೭). ೪. ಹೂಳಿಟ್ಟ. ೫. ಕಳುಹಿಸಿದ ; ಸಾಗುಹಾಕಿದ. ೬. ಬಿಟ್ಟ ; ತೆಗೆದುಹಾಕಿದ. ೭. ನಿಯೋಜಿಸಿದ ; ನಿಯಮಿಸಿದ ; ನೇಮಿಸಿದ. [ಸಂ.]

**ನಿಕ್ಷಿಪ್ತಚಿತ್ತ** (ನಾ). ಮನಸ್ಸನ್ನು ಇರಿಸಿದವನು,— ಇಟ್ಟವನು : ಸಕಳವಿಳಾಸಿನೀನರ್ತಕನರ್ತನಗೀತವಾದ್ಯನೂತನವಿದ್ಯಾನಿರೀಕ್ಷಣ ನಿಕ್ಷಿಪ್ತಚಿತ್ತನುಂ . . . ಆಗಿ (ನಂಬಿರ. ೧೬-೧೨೪). [ನಿಕ್ಷಿಪ್ತ + ಚಿತ್ತ]

**ನಿಕ್ಷಿಸು** (ಕ್ರಿ). ನೋಡು ; ಈಕ್ಷಿಸು ; ದಿಟ್ಟಿಸು : ಚಂದ್ರಮಂಡಲ ಪೋಲುವ ಇಂದಿರಾಮೊಗವನು ಚಂದದಿಂದಲಿ ಬಿಡದೆ ನಿಕ್ಷಿಸುವ ಲೋಚನ (ತೀರ್ಥಮ. ೧೬೨). [<ಈಕ್ಷಿಸು ?]

**ನಿಕ್ಷುಣ್ಣ** (ಗು). ಸ್ಪಷ್ಟವಾದ; ನೇರವಾದ: ಮುಸಲ್ಮಾನರ ಮಗಳನ್ನು ಮದುವೆಯಾಗುವಂತಹ ಅಧರ್ಮದ ಕೃತ್ಯವನ್ನು ಮಾಡಲಾರೆನೆಂದೂ ರಾಮನಾಥನು ನಿಕ್ಷುಣ್ಣವಾಗಿ ಉತ್ತರ ಕೊಟ್ಟನು (ಕವೀರ. ೮೬). [<ನಿಕ್ಷೂಣ]

**ನಿಕ್ಷೂಣ** (ಅ). ಸರಳವಾಗಿ ; ಸ್ಪಷ್ಟವಾಗಿ ; ನೇರವಾಗಿ : (ಕ). [←ಮರಾ. ನಿಕ್ಷೂಣ, ನಿಕ್ಷೂನ]

**ನಿಕ್ಷೇತ್ರ** (ನಾ). ನೆಲೆಯಿಲ್ಲದಂತಾಗುವಿಕೆ; ಕ್ಷೇತ್ರವಿಲ್ಲದಂತಾಗುವಿಕೆ: ದಕ್ಷಯಾಗವ ಮಾಡಿ ನಿಕ್ಷೇತ್ರ ನೆರೆ( ? )ದುದಕಟಕಟಾ ಕೇಳಿಯೂ ಏಕೆ ಮಾಣರೊ (ಬಸವ. ೫೪೩) ; "ಕ್ಷೇತ್ರವಿಲ್ಲದಂತಾಗುವುದು ; ನಾಶ ( ? )" (ಬಸವ. ಕೋಶ). [ಸಂ.]

**ನಿಕ್ಷೇಪ** (ನಾ). ೧. ಒಗೆಯುವುದು ; ಎಸೆಯುವುದು. ೨. ಅಳಿಸುವುದು ; ತೆಗೆದು ಹಾಕುವುದು. ೩. ಇಡುಗೆ ; ಠೇವಣಿ ; ಠೇವಣಾತಿ : (Deposit. ಪಾರಿನಿ. ೨೮). ೪. ಹುಗಿದಿಟ್ಟ ಹಣ ; ಗುಪ್ತಧನ ; ನಿಧಿ : "ಕಡಾರಂ ನಿಕ್ಷೇಪ" (ಕವಿಕಂ. ೩೩೫) ; ನಿಧಿ ನಿಧಾನ ನಿಕ್ಷೇಪ ಸಹಸ್ರದಣ್ಡಂ ಮೊದಲಾಗಿ ದುಷ್ಟನಿಗ್ರಹ ವಿಸಿಷ್ಟಪ್ರತಿಪಾಳನಂಗೆಯ್ದು ಸುಖದಿನಾಳುತ್ತಿರೆ (ಎಕ. XI, ಚಿತ್ರದು. ೪೯-೨೧ ; 947) ; ಸಾಯಲಡಸಿದ ಬಡತನಕ್ಕೆ ಪಲಾಯನವೆ ನಿಕ್ಷೇಪವಿದೆ ಬಯಲಾಯಸವು ನಮಗೇತಕೆಂದನು ಮಾದ್ರಪತಿ (ಕುಮ್ಯಾಕ. ೧೨-೧೬) ; ಸಕಲರಶ್ಮಿಗಳೂ ಸೂರ್ಯನಲ್ಲಿ ಶಾಶ್ವತವಾಗಿ ಸ್ಥಾಪಿತವಾಗಿರುವಂತೆ ಸಕಲ ಸಂಪತ್ತುಗಳೂ ವೈಶ್ವಾನರಾಗ್ನಿಯಲ್ಲಿ ನಿಕ್ಷೇಪಗಳಂತೆ ಸ್ಥಾಪಿತವಾಗಿವೆ (ಪುಕ್ಸ್ವಾರ. ೩). ೫. ಇರಿಸುವುದು ; ಇಡುವುದು : ಹಗೆಯು ತಲೆ ಹೋಗದಡೆ ವಹ್ನಿಯು ಹೋಗುವ ನುಡಿ ತಮ್ಮನದು ಬಳಿಕಾ ನೆಗಳಿಕೆಯೊಳುಳಿದೆಮ್ಮ ನಾಲ್ವರ ದೇಹ ನಿಕ್ಷೇಪ (ಕುಮ್ಯಾದ್ರೋ. ೯-೩೨). ೬. ಒಪ್ಪಿಗೆಯ ಪ್ರಕಾರ ಬಿಡುಗಡೆ ಮಾಡುವುದಕ್ಕಾಗಿ ಯಾವುದಾದರೊಂದು ಸ್ವತ್ತನ್ನು ವಶಕ್ಕೆ ಒಪ್ಪಿಸುವುದು ; ಜಾಮೀನು ಆಗುವುದು ; ಒತ್ತೆ ಇಡುವುದು; ಗಿರವಿ; ಅಡವು : ವ್ಯವಹಾರವು (೧) ಋಣಾದಾನ (Debt ) (೨) ನಿಕ್ಷೇಪ (Bailment) . . . ದ್ಯೂತ ಸ ಮಾ ಹ್ವ ಯ (Gambling) ಎಂದು ಹದಿನೆಂಟು ವಿಧವಾಗಿ ವಿಭಜಿಸಲ್ಪಟ್ಟಿತ್ತು (ಭಾರದ. ೫೬). ೭. ವಸ್ತುಗಳನ್ನು ಶೇಖರಿಸಿ ಇಡುವುದು : ವಾಯುವ್ಯದಲ್ಲಿ ನಿಕ್ಷೇಪದ ಮನೆ (ಮನೆಲ. ೧೪-೫). ೮. [ಜೈನ] ನಾಮ, ಸ್ಥಾಪನ, ದ್ರವ್ಯ ಮತ್ತು ಭಾವಗಳೆಂಬ ನಾಲ್ಕು ಸಾಧನೆಗಳ ಮೂಲಕ ವಸ್ತುವಿನಲ್ಲಿ ಪರಸ್ಪರ ಭೇದವನ್ನು ಅರಿಯುವ ಉಪಾಯವನ್ನು ಅಳವಡಿಸುವುದು; ಅಪ್ರಕೃತವನ್ನು ನಿರಾಕರಿಸುವುದರ ಮೂಲಕ ಪ್ರಕೃತವನ್ನು ನಿರೂಪಿಸುವುದು : ಸಮ್ಯಗ್ದರ್ಶನಾದಿಗಳ ಜೀವಾದಿಗಳ ಸಂವ್ಯವಹಾರದ ವಿಪ್ರತಿಪತ್ತಿಯಂ ಮಾಣಿಸಲುವೇಡಿ ಸಂಕ್ಷೇಪದಿಂ ನಿಕ್ಷೇಪಮಂ ಪೇಟ್ದಪರು (ತಸೂವ್ಯ. ೪೧) ; ಪ್ರಮಾಣ ನಯ ನಯ ನಿಕ್ಷೇಪಂಗಳಿಂ ಯಥಾವಸ್ಥಿತ ಸಮಸ್ತವಸ್ತುಸ್ವರೂಪಮಂ ನಿಶ್ಚಯಿಮಾಗಿರಲಱಿವುದು ಸಮ್ಯಜ್ಞಾನಮೆಂಬುದಕ್ಕುಂ (ಸುಕುಮಾ. ೬-೮ ವ) ; ನಯವಾದಂ ನಯಮಾಗಿ ಕೂಡೆ ಪೊಳೆಯಲ್ ನಿಕ್ಷೇಪಮಾಕ್ಷೇಪಮಾರಯಮಿಲ್ಲೆಂದೆನಿಸಲ್ ಪ್ರಮಾಣಗದಿತಾರ್ಥಂ ಸಂಶಯಂಗೊಳ್ವ ವಾದಿಯೊಳುಂಟಾಗೆ (ಪುಷ್ಪಪು. ೧-೪).

**ನಿಕ್ಷೇಪವಾಗಿರು** = ಅಡಕವಾಗಿರು ; ಸೇರಿರು ; ಅಡಗಿರು : ಮನವು ಮಹಾಲಿಂಗದಲ್ಲಿ ನಿಕ್ಷೇಪವಾಗಿರಬೇಕು (ಅಖಂಡೇ. ೧೩೯-೧೨೧). [ಸಂ.]

**ನಿಕ್ಷೇಪಣ** (ನಾ). ೧. ಇರಿಸುವಿಕೆ ; ಇಡುವಿಕೆ : ಆದಾನನಿಕ್ಷೇಪಣ ಸಮಿತಿ - ಕೊಳುವ ಇಡುವ ಎಡೆಯೊಳಪ್ಪ ಯತ್ನಮುಂ(ತತ್ತ್ವಪ್ರ.೨೬೯). ೨. ಇಟ್ಟ ವಸ್ತು ; ಇಟ್ಟುದು. [ಸಂ.]

**ನಿಕ್ಷೇಪನಿಧಿ** (ನಾ). (ರಾಜ್ಯ ಅಥವಾ ಸಂಸ್ಥೆ ತನ್ನ ಸಾಲವನ್ನು ಕ್ರಮ ಕ್ರಮವಾಗಿ ತೀರಿಸುತ್ತ ಬರಲು) ಕೂಡಿಹಾಕುವ ಹಣ; ಇಳಿಕೆನಿಧಿ : ಬಡ್ಡಿಗೆ ಮತ್ತು ನಿಕ್ಷೇಪನಿಧಿಗೆ ಸಂಬಂಧಪಟ್ಟ ವೆಚ್ಚಗಳೂ ಹೂಣಿಯ ಮೋಚನೆಗೆ ಸಂಬಂಧಪಟ್ಟ ವೆಚ್ಚಗಳೂ ಸೇರಿ ಭಾರತಸರ್ಕಾರವು ಬದ್ಧತೆಯನ್ನು ಹೊತ್ತಿರತಕ್ಕ ಋಣಭಾರದ ವೆಚ್ಚಗಳು (ಭಾಧಾನ. ೫೪). [ನಿಕ್ಷೇಪ + ನಿಧಿ]

**ನಿಕ್ಷೇಪಾಧಿಕರಣ** (ನಾ). [ಜೈನ] ಅಜೀವಾಸ್ರವದ ಭೇದಗಳಲ್ಲಿ ಒಂದು ; ಯಾವುದಾದರೂ ವಸ್ತುವನ್ನು ಭೂಮಿಯ ಮೇಲೆ ಅಜಾಗರೂಕತೆಯಿಂದ ಇಡುವಾಗ ಸಂಭವಿಸುವ ಪಾಪಕರ್ಮಕ್ಕೆ ಆಧಾರವಾದುದು; ☞ "ಅಜೀವಾಧಿಕರಣಾಸ್ರವ ಭೇದಗಳು ೧೧: (೧). ನಿರ್ವರ್ತನಾಧಿಕರಣ, ಇದರಲ್ಲಿ ದೇಹ ದುಃಪ್ರಯುಕ್ತ ನಿರ್ವರ್ತನಾಧಿಕರಣ (ಶರೀರದಿಂದ ಕುಕೃತಿ ಮಾಡುವುದು), ಉಪಕರಣ ನಿರ್ವರ್ತನಾಧಿಕರಣ (ಶಸ್ತ್ರಾದಿ ಹಿಂಸೋಪಕರಣಗಳನ್ನು ಮಾಡುವುದು) ಎಂಬ ಎರಡು ಪ್ರಕಾರಗಳು. (೨). ನಿಕ್ಷೇಪಾಧಿಕರಣ. ನಿಕ್ಷೇಪ=ಎತ್ತುವುದು. ಇದರಲ್ಲಿ ಸಹಸಾನಿಕ್ಷೇಪ, (ಭೀತಿ, ಆತುರತೆ ಮುಂ. ಗಳಿಂದ ಪುಸ್ತಕ, ಕಮಂಡಲು ಮೊದಲಾದುವನ್ನು ಒಮ್ಮೆಲೆ ಚೆಲ್ಲುವುದು), ಅನಾಭೋಗನಿಕ್ಷೇಪ (ಆತುರತೆಯಿಲ್ಲದೆಯೂ ಚೆಲ್ಲುವುದು),

ದುಃಪ್ರಮೃಷ್ಟನಿಕ್ಷೇಪ (ದುಷ್ಟತನದಿಂದ ಇಲ್ಲವೆ ಎಚ್ಚರಗೇಡಿತನದಿಂದ ಉಪಕರಣಗಳನ್ನು ಇಡುವುದು), ಅಪ್ರತ್ಯವೇಕ್ಷಿತನಿಕ್ಷೇಪ (ಸ್ವಲ್ಪವೂ ನೋಡದೆ ಉಪಕರಣಗಳನ್ನಿಡುವುದು) ಎಂಬ ನಾಲ್ಕು ಪ್ರಕಾರಗಳು. (೩). ಸಂಯೋಗಾಧಿಕರಣ - ಇದರಲ್ಲಿ ಉಪಕರಣಸಂಯೋಗ (ಪುಸ್ತಕಾದಿ ಉಪಕರಣಗಳನ್ನು ಬಿಸಿಲಲ್ಲಿ ಕಾಯ್ದ ಪಿಂಛದಿಂದ ಒರೆಸುವುದು ಮುಂ.), ಭಕ್ತಪಾನ ಸಂಯೋಗ (ಅನ್ನಪಾನಗಳಲ್ಲಿ ಬೇರೆ ವಿಧದ ಅನ್ನಪಾನಗಳ ಬೆರಕೆ ಮಾಡುವುದು) ಎಂಬ ಎರಡು ಪ್ರಕಾರಗಳು. (೪). ನಿಸರ್ಗಾಧಿಕರಣ - ಇದರಲ್ಲಿ ಮನೋನಿಸರ್ಗ (ದುಷ್ಕೃತ್ಯಗಳಲ್ಲಿ ಮನಸ್ಸನ್ನು ತೊಡಗಿಸುವುದು), ವಾಗ್ನಿಸರ್ಗ (ಅಭದ್ರವಚನ), ಕಾಯನಿಸರ್ಗ (ಅಯೋಗ್ಯವಾಗಿ ಶರೀರ ಚಲನವಲನ) ಎಂಬ ಮೂರು ಪ್ರಕಾರಗಳು. ಈ ಮೇರೆಗೆ ಅಜೀವಾಸ್ರವಾಧಿಕರಣಗಳು ಒಟ್ಟಿಗೆ ೧೧" (ಜೈನಧ. ೬೪) : ಅಜೀವಾಧಿಕರಣಾಸ್ರವ ಭೇದಗಳು ೧೧ : (೧) ನಿರ್ವರ್ತನಾಧಿಕರಣ . . . (೨) ನಿಕ್ಷೇಪಾಧಿಕರಣ (ಜೈನಧ. ೬೪). [ನಿಕ್ಷೇಪ + ಅಧಿಕರಣ]

**ನಿಕ್ಷೇಪಿಸು** (ಕ್ರಿ). ೧. ನಿಧಿಯಾಗಿರಿಸು; ಹುಗಿದಿರಿಸು ; ಅಡಗಿಸು: ರುದ್ರ ಮುಖದಲ್ಲಿ ವಿಷ್ಣು ಭುಜದಲ್ಲಿ . . . ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ ಅಕ್ಷಯನಗಣಿತನು (ಬಸವ. ೫೩೬) ; ಸರ್ವಪ್ರಸೂನಗಳನಳಿ ಪೀರ್ವುದು ಬಿಡದೆನುತಲಿದನೆ ನಿಕ್ಷೇಪಿಸಿದನೊ ಕರ್ವಿಲ್ಲನೆಂಬ ಬಗೆಯಿಂ ಬೇರ್ವರಿದೆಸೆದಿರ್ಪುವಲ್ಲಿ ಮುಡಿವಾಳಂಗಳ್ (ಮಲ್ಲಕಾ. ೪-೫೧೦); ಗಾಳಿ ಮರೆಯಾಗಿದ್ದ ಭೂಮಿಯಲ್ಲಿ ಧಾನ್ಯರಾಶಿಯಲ್ಲಿ ಮಾಸವಾಗಲಿ ಪಕ್ಷವಾಗಲಿ ನಿಕ್ಷೇಪಿಸಿರಿಸಿ . . . ಸೇವಿಸಲು ಬಹುದಿವಸದ ಕ್ಷಯರೋಗ, ಶ್ವಾಸ . . . ಗುಣಮಕ್ಕು (ಸಕವೈ. ೨೫೫). ೨. ಸ್ಥಾಪಿಸು ; ಸ್ಥಿರವಾಗಿರಿಸು : ಮನ ಭಾವ ಜ್ಞಾನ ನೋಟವ ತಂದು ಕರಸ್ಥಲದಲ್ಲಿ ನಿಕ್ಷೇಪಿಸಿ ಅಂತರಂಗ ಬಹಿರಂಗವೆಂದಱಿಯದೆ ಅನಿಮಿಷನಾಗಿಪ್ಪನು (ಅಪಚಂ. ೧೬೭-೭೫೪) ; ತನ್ನ ನಂಬಿದ ಸಜ್ಜನ ಸದ್ಭಕ್ತರಲ್ಲಿಗೆ ಲಿಂಗವಾಗಿ ಗಮಿಸಿ ತಾ ಕಂಡ ಲಿಂಗಾಂಗವನು ಅಲ್ಲಿಯೇ ನಿಕ್ಷೇಪಿಸಿ ತಾ ನಿರ್ಗಮನಿಯಾಗಿ ಸುಳಿಯಬಲ್ಲರೆ ಜಂಗಮಲಿಂಗವದು (ವಚಸಂ. ೧೮೬-೧೭). ೩. ಮೀಸಲಾಗಿರಿಸು ; ಇಡುಗಂಟಾಗಿರಿಸು : ಈತಂ ತಟಾಕಮಂ ಕಟ್ಟಿದಂ ಸದ್ಧನವ್ರಾತಮಂ ನಿಕ್ಷೇಪಿಸಿದಂ (ಚಬಪು. ೫೬-೧೭). [ನಿಕ್ಷೇಪ + -ಇಸು$_3$]

**ನಿಖಂಡಿತ** (ಗು). ಕತ್ತರಿಸಿದ ; ತುಂಡರಿಸಿದ : ಅಶಿಶಿರಕರರಥತುರಗ ಖುರಶಿಖರ ನಿಖಂಡಿತ ಲವಂಗಪಲ್ಲವಮುಮೈರಾವತಕರಲೂನಸಲ್ಲಕೀ ಶಬಳಮುಮಪ್ಪುದಯಗಿರಿಯಿಂ ಸೊಗಯಿಸುವ ಮೂಡಣದೆಸೆಗೆ ವಂದು (ಪಂಪಭಾ. ೪-೧೮ ವ). [ಸಂ.]

**ನಿಖರ** 'ನಿಕರ$_2$' ನೋ.

**ನಿಖರತೆ** (ನಾ). ಹೆಚ್ಚು ಕಡಮೆಯಿಲ್ಲದಿರುವಿಕೆ; ನಿಶ್ಚಿತತೆ : ಒಂದೇ ಮಟ್ಟದ ಉತ್ತರ ಬರೆದಿದ್ದರೆ ಅಂಕಿಗಳನ್ನು ಕೊಡುವಾಗ ನಿಖರತೆ ಕಲ್ಪಿಸುವುದು ಬಹು ಕಷ್ಟ (ಶಿಕ್ಷದ. ೩೪೪).
[ನಿಖರ (<ನಿಕರ$_2$) + -ತೆ$_2$]

**ನಿಖರ್ವ** (ಗು). ೧. ಕುಳ್ಳಾದ ; ಗಿಡ್ಡಾದ. (ನಾ). ೨. ಗಿಡ್ಡ ; ಕುಳ್ಳ. ೩. [ಗಣಿತ] ಒಂದು ದೊಡ್ಡ ಸಂಖ್ಯೆ : ಅಂಕೆಗಳ ಶ್ರೇಣಿ ಹದಿನೆಂಟರ ವರೆಗೂ ಹೋಗುತ್ತದೆ. ಈ ಹದಿನೆಂಟು ಶ್ರೇಣಿಗಳು ಯಾವುವೆಂದರೆ: ಏಕಂ . . . ಖರ್ವ, ನಿಖರ್ವ, ಮಹಾಪದ್ಮ, ಶಂಖ, ಸಮುದ್ರ, ಮಧ್ಯ, ಅಂತ್ಯ ಮತ್ತು ಪರಾರ್ಧ (ಪ್ರವಾಇ. I, ೩೫೭). 'ಮಹಾಖರ್ವ' ಪರಾ. [ಸಂ.]

**ನಿಖಾ** 'ನಿಕಾ' ನೋ.

**ನಿಖಾತ** (ಗು). ಹೂಳಿದ ; ಹುಗಿದಿಟ್ಟ : 'ನಿಖಾತನಿಧಿ' ಪರಾ. [ಸಂ.]

**ನಿಖಾತನಿಧಿ** (ನಾ). ಹೂಳಿಟ್ಟ ದ್ರವ್ಯ ; ಗುಪ್ತನಿಧಿ ; ನಿಕ್ಷೇಪ : ೪೩. ರಾಜ್ಯದ ಸಾರ್ವಜನಿಕ ಋಣ. ೪೪. ನಿಖಾತನಿಧಿ (ಭಾಧಾನ.೨೯೧). [ನಿಖಾತ + ನಿಧಿ]

**ನಿಖಾರಿ,** ನಿಕಾರ$_2$, ನಿಕಾರಿ (ನಾ). ೧. = ನಿಕಾರವಟ್ಟಿ : ಬಿಡುಮುಡಿಯನೆಡಗೈಯೊಳೊಂದಿಸುತ ವರ ನಿಖಾರಿಯ ನಿಱಿಯ ರಭಸದ . . . ಗಮನದ ಭರದಿ ಕಿಱುಬೆಮರಿಡುತ ನಡೆತರುತಿರ್ದಳು (ಕುವ್ಯಾವಿ. ೫-೩೬). **ನಿಕಾರ$_2$** : ೧. ತರಿಸಿದನು ನವಹೇಮಮಣಿಭಾಸುರದ ಮಂಚದ ಮೇಲೆ ಲಲಿತಾಸ್ತರಣದಡಿಕಿಲುವಾಸಗಳ ನಿರ್ಮಳ ನಿಕಾರಗಳ (ಕುವ್ಯಾಸ. ೮-೫). ೨. ಸ್ವಚ್ಛತೆ ; ಶುಭ್ರತೆ : 'ನಿಕಾರಿಸು' ಪರಾ. **ನಿಕಾರಿ** : ೧. ನವನಿಕಾರಿಯ ವಲ್ಲಿ ಸೀರೆಗಳವಯವದ ರಕುತದಲಿ ತೋದವು ಜವವಳಿದು ಸಾರಥಿಗೆ ಸೂಚಿಸೆ ರಥವ ಮರಳಿಚಿದ (ಕುವ್ಯಾವಿ. ೮-೭೫). [←ಹಿಂ. ಮರಾ. ನಿಖಾರ್]

**ನಿಖಾಲೆ** 'ನಿಕಾಲೆ' ನೋ.

**ನಿಖಿಲ,** ನಿಖಿಳ (ಗು). ಎಲ್ಲ ; ಸಕಲ ; ಸಮಸ್ತ : ನಿಜಭುಜಪ್ರತಾಪನಿರ್ಜಿತನಿಖಿಲಭೀಮಸೇನಂ ಭೀಮಸೇನಂ ಕೌರವನಿದಿರ್ಗೆ ವಂದು (ಗದಾಯು. ೭-೩೦ ವ) ; ಮಂತ್ರಿಯುಂ ನೃಪತಿಯುಂ ಬಗೆಗೊಂಡನುಕೂಲವೃತ್ತಿಯೊಳಂ ನೆಱೆದಿರೆ ಕೂಡುಗುಂ ನಿಖಿಲರಾಜ್ಯವಿಭೂತಿಗಳ್ (ಪಂಚತಂ. ೯೩-೨೨) ; ದಿನಕರಹಿಮಕರನಕ್ಷತ್ರನಿಖಿಲತಾರಾಗ್ರಹಂಗಳ ತ್ಯಾಗ್ರಹದಿಂ ಕನಕಮಹೀಧರಮಂ ನಿಚ್ಚನಿಚ್ಚ ಮೋರಂತೆ ಸಂತತಂ ಬಲವರ್ಕುಂ (ಸುಕುಮಾ. ೧೧-೬೦); ಚಂದ್ರಮೌಳಿಪ್ರಮುಖನಿಖಿಲವಿದ್ವಜ್ಜನಂ ಮೆಚ್ಚೆ ರುದ್ರಾಂಕನೆ ಪೇೞ್ದಂ (ಜಗವಿ. ೧-೨೨) ; ಪ್ರೇಮವೆ ನಿಖಿಲ ಪೂಜೆಯಾಯ್ತು (ಶ್ರೀರಾಪೂ. ೧೭-೪೩೩). **ನಿಖಿಳ** : "ಸಮಮಖಿಳಂ ನಿಖಿಳಂ . . . ಸಮಗ್ರಮೆಂದಿವು ಸಮಸ್ತವಾಚಿಗಳಕ್ಕುಂ" (ವಸ್ತುಕೋ. ೧೦೭-೫೭) ; ನಿಖಿಳಜಗಂಗಳೊಳಧಿಕನು ಮಖಂಡಶೌರ್ಯನುಂ (ವರ್ಧಪು. ೧೫-೩೫) ; ನಿಖಿಳಸರೋರುಹಕುಟ್ಮಳಮುಖಲಗ್ನಮಯೂಖಲೇಖೆಯಿಂ (ಪುಷ್ಪಪು.೯-೧೦೪) ; ಕಮಳಾಸನನ ಹತ್ತಿರೆ ಕರೆದು ಮನ್ನಿಸಿ ನಿಖಿಳ ನಿರ್ಜರಜನವ ಸಂತೈಸಿ (ಕುವ್ಯಾಕ. ೬-೨೧). [ಸಂ.]

**ನಿಖಿಲಜನ** (ನಾ). ಸಮಸ್ತ ಜನ : ಎಲ್ಲಾ ಜನ : ಹರುಷದ ಶರಧಿಯೊಳಗೋಲಾಡುತಿದ್ದುದು ನಿಖಿಲಜನ ನಲಿದು (ಕಾಶಿರಾ. ೪೪-೫೫).
[ನಿಖಿಲ + ಜನ]

**ನಿಖಿಲಸಮತೆ** (ನಾ). [ಜೈನ] ತೀವ್ರೋಪವಾಸ, ದಾನವ್ರತ, ನಿಖಿಲಸಮತೆ ಮತ್ತು ಸಂನ್ಯಾಸವ್ರಜನಗಳೆಂಬ ನಾಲ್ಕು ಬಗೆಯ ಶಿಕ್ಷಾವ್ರತಗಳಲ್ಲಿ ಒಂದು; ℙ ಸರ್ವಜೀವಗಳಲ್ಲಿ ಭೇದವನ್ನು ಎಣಿಸದೆ ಸಮಾನಭಾವವನ್ನು ಹೊಂದಿರುವಿಕೆ : ತೀವ್ರೋಪವಾಸಮುಂ ದಾನವ್ರತಮುಂ ನಿಖಿಲಸಮತೆಯುಂ ಸನ್ಯಾಸವ್ರಜನಮುಮೆಂಬಿವು ಶಿಕ್ಷಾವ್ರತಮಿದು ನಾಲ್ಕುತೆಱನನೂನಾಗಮದೊಳ್ (ಶಾಂತಿಪು. ೧-೯೦). [ಸಂ. ನಿಖಿಲಸಮತಾ]

**ನಿಖಿಳ** 'ನಿಖಿಲ' ನೋ.

**ನಿಖಿಳಪರಿವಾರ** (ನಾ). ಸಕಲ ಪರಿವಾರ,—ಪರಿಜನ : ಕರ್ಣ ನೀನೇ ಮರಳಿ ಸೇನೆಯ ರಕ್ಷಿಸೆಂದುದು ನಿಖಿಳಪರಿವಾರ (ಕುವ್ಯಾದ್ರೋ. ೧೬-೨೦). [ನಿಖಿಳ ( = ನಿಖಿಲ) + ಪರಿವಾರ]

**ನಿಖಿಳಭುವನ** (ನಾ). ಸಮಸ್ತ ಲೋಕ : ಈತ ನರಮುನಿ ನಿಖಿಳ ಭುವನಖ್ಯಾತ ನಾರಾಯಣನಲ್ಲೆ (ಕುವ್ಯಾಅ. ೪-೬೪).
[ನಿಖಿಳ ( = ನಿಖಿಲ) + ಭುವನ]

**ನಿಖಿಳೆ** (ನಾ). "ಪರಿಪೂರ್ಣೆ" (ಪ್ರಭುಲೀ. ಕೋಶ) : ಅಖಿಲ ಶರಣರು ನೋಡಲಚಳಿತಸುಖದೊಳೋಲಾಡುತ್ತಲಿರ್ದಳು ನಿಖಿಳೆ ಸದ್ಯೋನ್ಮುಕ್ತೆ ಮುಕ್ತಾಯಿಗಳು ಜಗವಜಾಯೆ (ಪ್ರಭುಲೀ. ೧೨-೨೬). [ಸಂ. ನಿಖಿಲಾ]

**ನಿಖಿಳೇಂದ್ರಿಯ** (ನಾ). ಸಮಸ್ತ ಇಂದ್ರಿಯಗಳು ; ಇಂದ್ರಿಯ ಸಮೂಹ : ನಿಖಿಳೇಂದ್ರಿಯ ರೋಚಕ ಬಿಗಿಯೆ ಬೇಗೆಯ ಬೇಸಟಾನ ಬಿಸುಗುಡಿಯ ಸುಯ್ಲಿನಲಿ (ಕುಪ್ಯಾಅ. ೨೧-೧೫).

[ನಿಖಿಳ (= ನಿಖಿಲ) + ಇಂದ್ರಿಯ]

**ನಿಗ**$_1$ (ನಾ). ಪ್ರಜ್ವಲಿಸುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ.

**ನಿಗನಿಗ** (ದ್ವಿರುಕ್ತಿ) : ಕೆಂಡ ನಿಗನಿಗ ಎನ್ನುತ್ತಿದೆ (ರೂಢಿ). **ನಿಗನಿಗ ಉರಿ** = ಚೆನ್ನಾಗಿ ಉರಿ : ಒಲೆಗೆ ತರಗು ತುಂಬು, ನಿಗನಿಗ ಉರಿಯಲಿ (ರೂಢಿ).

**ನಿಗ**$_2$ 'ನಿಗಾ' ನೋ.

**ನಿಗಂಟು** (ನಾ). = ನಿಘಂಟು ೧ : "ನಿಗಂಟು - ನಿಘಂಟು = ಅರ್ಥ ಕೋಶ" (ತದ್ಭಕೋ. ೨೨) ; ನಿಘಂಟು - ನಿಗಂಟು ; ಸಂಘ - ಸಂಗ (ಶಸುದ. ೨೫೫ ಪ್ರಯೋ). [< ಸಂ. ನಿಘಂಟು]

**ನಿಗಂಠ** 'ನಿಗ್ಗಂಥ' ನೋ.

**ನಿಗಂಠಿ** (ನಾ). [ಜೈನ] ಸಂನ್ಯಾಸಿನಿ : ಈ ಶ್ರವಣ ಶ್ರವಣೆಯರನ್ನು ಜೈನಗ್ರಂಥಗಳು 'ನಿಗಂಠ', 'ನಿಗಂಠೀ' ಎಂದು ಕರೆಯುತ್ತವೆ (ತೀರ್ಥಕ. ೧೦೮). [< ಪ್ರಾ. ಣಿಗ್ಗಂಥೀ./ಸಂ. ನಿರ್ಗ್ರಂಥೀ]

**ನಿಗಚು** 'ನಿಮಿರ್ಚು' ನೋ.

**ನಿಗಠಣೆ** (ನಾ). ಬಿಗಿಯಾಗಿರುವುದು ; ಬೀಗಿರುವುದು : ನಿಗಠಣೆ ಬೇಡೆಲೆ ಮಕರಂದೆ ನೃಪನೊಳು ಪಗಠಣೆ ಸಲ್ಲದು ತಂಗಿ ನಿಗಠಣೆ ಪಗಠಣೆ ನಟನೆಗಳನ್ಯರೊಳಗೆ ಸಲ್ಲುವಿಲ್ಲಿ ಮೆಚಿಕೆಯವು (ಭರಚ. ೯-೯೬).

[← ಮರಾ. ನಿಗಟಣೇ = ಬಂಧಿಸು]

**ನಿಗಡ** (ಗು). ೧. ಸಂಕೋಲೆ ಹಾಕಿದ ; ಸರಪಳಿಯಿಂದ ಬಂಧಿಸಿದ. ೨. ಇಕ್ಕಟ್ಟಾದ ; ಬಿಗಿಯಾದ : 'ನಿಗಡಬದ್ಧ' ಪರಾ. (ನಾ). ೩. (ಆನೆಯ ಕಾಲಿಗೆ ತೊಡಿಸುವ) ಸಂಕೋಲೆ ; ಸರಪಳಿ : ನಿಗಡಂ[ಪಾಠಾಂ. ನಿಗಳಂ, ವಿಗಡಂ] ಸೋರ್ಕಾನೆಯೊಳ್ ವಿಗ್ರಹಮೊದವಿದ ವಾದಂಗಳೊಳ್ . . . ತಳ್ತಿಜುವುದೆಮೆಯೊಳುಂಟಲ್ಲಿ ಬೇಜಾಲ್ಲ ನಾಡೊಳ್ (ಅನಂಪು. ೧-೮೫) ; (ಸೂಕ್ತಿಸು. ೪-೨೩ ನೋ). ೪. ಬಂಧನ ; ಸೆರೆ.

[ಸಂ.]

**ನಿಗಡನಿರುದ್ಧ** (ಗು). ೧. = ನಿಗಡಬದ್ಧ ೧. (ನಾ). ೨. ಬಂಧಿತನಾದವನು : ನಿಗಡನಿರುದ್ಧನಂ ತನಯಶೋಕವಿಲಾಪಿಯನುಗ್ರಸೇನನಂ ನಗಧರನೊಲ್ದು ಸಂತವಿಸೆ (ಜಗವಿ. ೬-೧೦೫). [ಸಂ.]

**ನಿಗಡನಿರೋಧ** (ನಾ). ಸರಪಳಿಯ ಬಂಧನ,—ಸೆರೆ : ಅನ್ನೆಗ ಮಾತನನುಜಿ ಬಲ್ಪಿನ್ನಿಗಡನಿರೋಧದಲ್ಲಿ ಕುಳ್ಳಿರಿಸಿ (ದಶಕು. ೮-೧೮೮) ; ಬೀದಿಬೀದಿಗಳಲ್ಲಿ ನಿಗಡನಿರೋಧಮದಗಜತತಿಯ ಬೃಂಹಿತನಾದದಲಿ ಕಳಕಳತೆವೆತ್ತಿಹುದಾಗಳಾ ಪುರವು (ಪ್ರಭುಲೀ. ೩-೫). 'ನಿಗಳನಿರೋಧ' ಪರಾ. [ನಿಗಡ + ನಿರೋಧ]

**ನಿಗಡಬಂಧನ** (ನಾ). ಒಂದು ಬಗೆಯ ದಂಡನೆ ; ಸರಪಳಿ ಹಾಕಿ ಬಂಧಿಸುವಿಕೆ : ಸ್ವಲ್ಪ ಹೆಚ್ಚು ಕಡಮೆಯಾದರೂ ನಿಗಡಬಂಧನವೇ ದಂಡನೆಯಾಗುತ್ತಿತ್ತು (ಕಭವಿ. II, ೩೦೨) ; ಆ ಬಾಲಕರ ಮೇಲೆ ರಾಜಾನುಗ್ರಹವಾದರೆ ಭಾಗಣ್ಣನ ಬಲುಮೆಯಿಂದ ಅವರು ದೊಡ್ಡ ಪದವಿಗೇರುವರೆಂದು ಅಸೂಯೆಯಿಂದ ಮೂವರಿಗೂ ನಿಗಡಬಂಧನ ಮಾಡಿಸಿದರು (ಕಭವಿ. II, ೪೩೨). [ನಿಗಡ + ಬಂಧನ]

**ನಿಗಡಬದ್ಧ** (ಗು). ೧. ಸರಪಳಿಯಿಂದ ಬಿಗಿದ,—ಬಂಧಿಸಿದ. ೨. ಇಕ್ಕಟ್ಟಾದ ; ತೊಡಕಿನ : ಆ ನಿಗಡಬದ್ಧ ಪರಿಸ್ಥಿತಿಯಲ್ಲಿಯೂ ಆಕೆ ಸಾಷ್ಟಾಂಗಪ್ರಣಿಪಾತ ಮಾಡಿ . . . ತನ್ನ ಅಪರಾಧವನ್ನು ತೊಳೆದುಕೊಂಡಳು (ಬಾಣಅ. ೨೯೪). [ಸಂ.]

**ನಿಗಡಿತ** (ಗು). ೧. ಸಂಕೋಲೆ ಹಾಕಿದ ; ಸರಪಳಿ ಹಾಕಿದ. ೨. ಬಂಧಿತವಾದ; ಬಂಧಿಸಿದ : ಕರ್ನಾಟಕಪಂತೆಯೇ ಮಹಾರಾಷ್ಟ್ರವೂ . . . ಜನ್ಮಾಂತರಸ್ನೇಹದಿಂದ ನಿಗಡಿತವಾದ ನರನಾರೀಗಣದಿಂದ . . . ಸಮೃದ್ಧವಾಗಿ ಬೆಳೆದು ಬಂದಿದೆ (ಮಸಾಹಿ. ೩) ; ತೆರಳುವ್ವೊಡಿಬ್ಬ ಸನಿದನರಿತಿನಿಯನು ಶೋಕನಿಗಡಿತ ಪಥಿಕನು (ಗಾಥಾಸ. ೧೨೫-೧೦೦).

[ಸಂ.]

**ನಿಗತಂದಿವಿ** (ಕ್ರಿ). (?) : ಭೃಗುಮತದೊಳಾದ ಪರಿಣತಿ ಪೊಗಳ ಲ್ವೇವಂಗಮರಿದು ನೆಟ್ಟನೆ ಚಟ್ಟಂ ತ್ರಿಗುಣಿಸುವ ತಿರಿಗಿ ಪಾಯಿಪ ನಿಗತಂದಿವಿವೆಡೆಯೊಳಾದಿಬ್ರಿಗುವಂ ಮಿಗುವಂ (ಎಕ. V, ಬೇಲೂರು. ೧೯೩-೬೩ ; 1160). [? + ತಿವಿ$_1$]

**ನಿಗದ** (ನಾ). ೧. ಕಂಠಪಾಠ ಮಾಡಿ ಹೇಳುವುದು ; ಉರು ಹೊಡೆದು ಹೇಳುವುದು. ೨. ಗಟ್ಟಿಯಾಗಿ ಹೇಳುವ (ಹೋಮದ) ಮಂತ್ರ,—ಪ್ರಾರ್ಥನೆಯ ಘೋಷಣೆ. ೩. ಸ್ಪಷ್ಟವಾಗಿ ಹೇಳುವಿಕೆ,— ಹೇಳುವುದು : "ನಿಗಾದಃ, ನಿಗದಃ — ೨ ಸ್ಪಷ್ಟವಾಗಿ ನುಡಿಯುವಿಕೆ, ವ್ಯಕ್ತವಾಗಿ ಪೇಳುವಿಕೆ" (ಸಿದ್ಧಾಂತಿ. ೩೪೯). ೪. ಭಾಷಣ : 'ನಿಗದಿತ', 'ನಿಗದಿಸು' ಪರಾ. [ಸಂ.]

**ನಿಗದಿ** (ನಾ). ನಿಶ್ಚಯ ; ನಿರ್ಣಯ ; ಗೊತ್ತುಪಾಡು : ನಾವು ನಿಗದೀ ಮೇಲೆ ಹಣಾ ಕೊಟ್ಟು ಇದ್ದೇವೆ (ರಾಜೇಂದ್ರ. ೧೧) ; ಎಲ್ಲಾ ಪ್ರಾಂತಗಳೂ ನಿಗದಿಯಾದ ಕಾಲದಲ್ಲಿ ಚಿನ್ನವನ್ನು ಟಂಕಸಾಲೆಗೆ ತರಬೇಕು (ಪ್ರವಾಇ. II, ೧೫೬); ನಿಗದಿಯಾದ ಶುಲ್ಕವನ್ನು (ಫೀ) ಕೊಡಬೇಕಷ್ಟೆ (ಗಲಿಪ್ರ. ೬೦) ; ನಿಗದಿಯಾದ ಹಣವನ್ನು ಮಠಕ್ಕೆ ತಂದು ಕೊಡುತ್ತಿದ್ದರು (ಕಭವಿ. ೧೨೯) ; ನಿಗದಿ ಇದ್ದವನಿಗೆ ಪೊಗದಿ ಇದ್ದೀತೇ ? (ಗಾದೆ).

**ನಿಗದಿ ಮಾಡು** = ನಿಶ್ಚಯಿಸು ; ಗೊತ್ತುಮಾಡು : ಸಕಲರೂ ನಿಗದೀ ಮಾಡಿದ ವಿವರ (ಎಕ. IX, ಬೆಂಗಳೂ. ೯೬-೮೧; 1402 ?); ಸಂಬಳವನ್ನು ನಿಗದಿ ಮಾಡಿದ (ಪ್ರವಾಇ. II, ೨೩೬) ; ಜನರಿಂದ ಎಷ್ಟು ತೆಂಗೆ ವಸೂಲು ಮಾಡಬೇಕೋ ಅಷ್ಟನ್ನು ಮೊದಲೇ ನಿಗದಿ ಮಾಡಲಾಗಿದೆ (ಪ್ರತಾಪ. ೯೧). [ ? ]

**ನಿಗದಿತ** (ಗು). ೧. ಹೇಳಿದ ; ಹೇಳಲ್ಪಟ್ಟ : ನಿಗದಿತ ಕಾವ್ಯೋಕ್ತಿಗಳೊಳ್ ನೆಗಟ್ದುವು ಮಾರ್ಗಂಗಳಿಂತುಮೆರಡುಕ್ತಿಗಳುಂ (ಕವಿರಾ. ೨-೫). (ನಾ). ೨. ಮಾತು ; ಭಾಷಣ. [ಸಂ.]

**ನಿಗದಿಸು** (ಕ್ರಿ). ಹೇಳು ; ನುಡಿ : ಮಿಗೆ ಕನ್ನಡಗಬ್ಬಂಗಳೊಳಗಣಿತ ಗುಣಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸುವರ್ ಗದ್ಯಕಥಾಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್ (ಕವಿರಾ. ೧-೨೬) ; ಅಂಕಮದಾದಿ ಪುರೋಂಶ ವಿಟಂಕಂಗಳೊಳಗ್ರಶಬ್ದಮಂ ನಿಗದಿಸುವರ್ (ಪಸ್ತುಕೋ. ೧೩೦-೬೬) ; ಮಿಗೆ ಕಳ್ಳರನಪ್ಪ ಬಾಧೆಯಂ ನಿಗದಿಪುದಾಜಿವೀಥಿಯ ಫಲಾಫಲಮಂ ಬುಧರೊಲ್ದು ಬಣ್ಣಿಸಲ್ (ಜಟ್ಟಪು. ೬-೧೩೯) ; ನಿಗಮಾಗಮ ಧರ್ಮಶಾಸ್ತ್ರನಯಶಾಸ್ತ್ರಂಗಳ್ ನಿಗದಿಸುಗುಂ ನಿಕ್ಕುವಮಂ (ನೀತಿಮಂ. II, ೨೫೦). [ನಿಗದ + -ಇಸು$_3$]

**ನಿಗನಿಗನೆ** (ಅ). ನಿಗನಿಗ ಎಂದು ಹೊಳೆಯುತ್ತ : ಮೃಗಲಕ್ಷ್ಮಸಾಮ್ಯಮೊಗದಿಂ ಮೃಗಸನ್ನಿಭನಯನದಿಂದೆ ಪೊಸವೆಳ್ದಿಂಗಳ್ ನಿಗನಿಗನೆ ಮಿಂಚಿ ಮುಂಚುತಲೊಗೆತರೆ ನಿಜಪತಿಗೆ ಕಂಡ ಕನಸಂ ಪೇಟ್ದಳ್ (ಮಲ್ಲಿಕಾ. ೬-೧೧೫). [< ನಿಗ$_1$ + -ಅನೆ$_1$]

**ನಿಗನಿಗಿಸು** (ಕ್ರಿ). ಹೊಳೆ ; ಪ್ರಜ್ವಲಿಸು ; ಪ್ರಕಾಶಿಸು : ನಿಗನಿಗಿಪ ಪೊಂಬಾಳೆದೊಡೆ ಜಾನುಗಳ ಜಂಘಾವಿಭ್ರಮವನಾರ್ಗಣಿಸಬಲ್ಲವರು (ಅನಂರಾ. ೧-೩-೩೫) ; ನಿಗನಿಗಿಪ ಗೋಪುರಪುರದ್ವಾರಗಳ ದರ್ಪಣಮಕರ ತೋರಣವಂಗಣಿತಪ್ರಭೆಯಂ ವಿಡಾಯಿಸುತಿರ್ದವೆಲ್ಲೆಡೆಯು (ಅನಂರಾ. ೬-೨೫-೩). [<ನಿಗ$_1$ + -ಇಸು$_3$]

**ನಿಗಮ** (ನಾ). ೧. ವೇದ; ಶ್ರುತಿಗಳ ಸಮೂಹ : "ಶ್ರುತಿಯಲ್ಲಿಯುಂ ನಿಗಮಮೆಂಬುದು" (ಹಲಾಯು. ೧೩೨-೧೦) ; ನಿಗಮಂಗಳ್ ವಿಷ್ಣು ವಿರಿಂಚಿಗಳಱಿಯದ ಶಿವನನಱಿವೊಡೆನ್ನಳವೆ (೧೦ಕ. ೫-೪೯) ; ಹೊಲಬು ಗೆಡಿಸಿದನಖಿಳನಿಗಮಂಗಳನು ತನ್ನಱಿಕೆಯಲಿ (ಕುವ್ಯಾಉ. ೮-೧೪) ; ನಿಗಮಂಗಳ್ಗೆ ಕಾಣಲಾರ್ತವೆ ಭವತ್ಪಾದಾಬ್ಜಮಂ (ರಾಜಶೇ. ೩-೪೧) ; ಮುಗುದೆಯರೀ ಕೃತಿಗೇಳೆ ನಿಗಮದೊಳೊಗೆದ ನೇಮಂಗಳ ತಿಳಿದೀ ಜಗದೆ ಪಾವನೆಯರೆನಿಪರು (ಹದಿಬ.೧-೫೬) ; ನಿಗಮ ಸತ್ಕಲಿಕಾವ್ಯಗಳ ಗವಾಕ್ಷಗಳಿಂ ಗಗನದೊಳನಂತದರ್ಶನದೆ ಮುಕ್ತಿಯನೊಂದು (ಮಂಕುಕ. ೪೬೦); ನಿಗಮಗಳು ಉತ್ತರಭಾರತದ ಮಡಿಲಲ್ಲಿ ಜನಿಸಿದವುಗಳಾದರೆ ಆಗಮಗಳು ಬಹುಮಟ್ಟಿಗೆ ದಕ್ಷಿಣಭಾರತದಲ್ಲಿ ಜನಿಸಿದವು (ಭಾರದ. ೩೯೬). ೨. ವೇದಗಳಿಂದ ಉದ್ಧರಿಸಿದುದು; ವೇದವಾಕ್ಯ. ೩. ವೇದಗಳನ್ನು ಅರ್ಥ ಮಾಡಿಕೊಳ್ಳಲು, ವಿವರಣಾತ್ಮಕ ಹಾಗೂ ಸಹಾಯಕವಾದ ನಿರುಕ್ತ, ಮೀಮಾಂಸೆ ಮೊದಲಾದ ಗ್ರಂಥ. ೪. ನಿಶ್ಚಯ ; ನೆಚ್ಚಿಕೆ ; ಭರವಸೆ. ೫. ತರ್ಕಶಾಸ್ತ್ರ ಅಥವಾ ನೀತಿಶಾಸ್ತ್ರ. ೬. ವ್ಯಾಪಾರ ; ಮಾರಾಟ. ೭. ಅಂಗಡಿಬೀದಿ; ಮಾರುಕಟ್ಟೆ; ಸಂತೆ. ೮. ವ್ಯಾಪಾರಿ ; ವರ್ತಕ. ೯. ವ್ಯಾಪಾರಿಗಳ ಗುಂಪು ; ವರ್ತಕರ ತಂಡ. ೧೦. ದಾರಿ ; ಮಾರ್ಗ : "ಅಧ್ವಾ . . . ಪದ್ಯಾ, ನಿಗಮಃ—ಈ ೧೨ ಬಟ್ಟೆ" (ಹಲಾಯು. ೪೩-೧೦೫). ೧೧. ನಗರ; ಪಟ್ಟಣ : "ನಗರಿ ಪುಟಭೇದನಂ ಪೂಃ ಪುರಂ ಪತ್ತನಂ ನಿಗಮಂ ಪುರೀಂ ಪ್ರಜಾಸ್ಥಾನಮಾ ದುರ್ಗಮೆನೆ ನಗರಮೆನೆ ಪಟ್ಟಣಂ" (ಮಂಗರಾ. ೫೬-೩) ; ಅನೇಕ ನಗರನಿಗಮ . . . ಸಂವಾಹನಿಚಯನಿಚಿತಮುಂ . . . ಎನಿಸಿದ ಭರತಕ್ಷೇತ್ರದ ಮಧ್ಯದೊಳ್ ಮಧ್ಯದೇಶಮುಂಟು (ಜಗವಿ. ೨-೧ ವ); ತನತು ಪದಪಾಂಸುವಿಂ ಗ್ರಾಮನಗರ . . . ನಿಗಮಪತ್ತನತತಿ ಪಾವನಮಾಗೆ ವಿಹಾರಿಸುತ್ತೆ ಮೌನವ್ರತದಿಂ (ಪುಷ್ಪಪು.೧೪-೧೪) ; ಅವನು ಬಂದುದು ಯಾವ ಗ್ರಾಮ ನಿಗಮ ನಗರಗಳಿಂದ ? (ಬುದ್ಧ ಪ. ೮೦) ; ನಿಗಮಗಳೆಂದು ಹೆಸರು ಪಡೆದ ವ್ಯಾಪಾರಪ್ರಧಾನವಾದ ಪಟ್ಟಣಗಳಲ್ಲಿ (ಭಾಇಪ್ರ. ೧೯೫). ೧೨. ಪ್ರಾರ್ಥನೆಗಳಲ್ಲಿ ದೇವತೆಯ ಹೆಸರನ್ನು ಸೇರಿಸಿಕೊಂಡು ಹೇಳುವುದು; ಸ್ತೋತ್ರ. ೧೩. ದೃಢಸಂಕಲ್ಪ; ಪ್ರತಿಜ್ಞೆ. ೧೪. ಹೊಂದುವುದು ; ಪ್ರಾಪ್ತಿ. ೧೫. ಛಂದಸ್ಸು; ಛಂದಶ್ಶಾಸ್ತ್ರ. ೧೬. (ಒಂದು ವ್ಯಕ್ತಿಯಂತೆ ಕಾರ್ಯ ನಡೆಸಲು ಅಧಿಕಾರ ಪಡೆದ) ಸಂಸ್ಥೆ : "ನಿಗಮ - ಕಾರ್ಪೊರೇಷನ್" (Corporation. ಪತ್ರಿನಿ. ೨೫). ೧೭. [ವ್ಯಾಕ] ಶಬ್ದದ ಪ್ರಕೃತಿ. ೧೮. [ತತ್ತ್ವಶಾ] ಅನುಮಾನ ; ಊಹೆ : "ನಿಗಮ (ಅನುಮಾನ)" (Deduction. ಪಾರಿಸಿ. ೨೭).

**ನಿಗಮಾಗಮ** = ವೇದ ಮತ್ತು ಶಾಸ್ತ್ರ : ಆ ಮಾಧವಂ . . . ಬಿಜಯಂಗೈದನಾ ಮಧ್ಯಮಾರ್ಗದೊಳ್ಕಂಡುದು ಮಹಾಜನಂ ತಾಮರಸನೇತ್ರನಂ ತಮತಮಗೆ ನುತಿಸಿದರ್ನಿಗಮಾಗಮೋಕ್ತಿಯಿಂದೆ (ಜೈಮಿಭಾ. ೧-೧೩).. [ಸಂ.]

**ನಿಗಮಕರ** (ನಾ). ಪೌರಸಂಸ್ಥೆಯು ವಿಧಿಸುವ ತೆರಿಗೆ,— ಸುಂಕ : "ವರಮಾನದ ಮೇಲಿನ ಕರಗಳು" ಎಂಬುದರಲ್ಲಿ ನಿಗಮಕರವು ಸೇರಿರತಕ್ಕುದಲ್ಲ (ಭಾಧಾನ. ೧೫೪). [ನಿಗಮ + ಕರ$_3$]

**ನಿಗಮಗೋಚರ** (ನಾ). ವೇದಗಳಿಗೆ ಗೋಚರಿಸುವವನು ; ದೇವರು ; ಪರಮಾತ್ಮ : ನೀನೇ ದಯಾಳೋ ನಿರ್ಮಲಚಿತ್ತ ಗೋವಿಂದ ನಿಗಮಗೋಚರ ಮುಕುಂದ (ಪುರಂದ. ೧-೫೮ ಪಲ್ಲವಿ). [ನಿಗಮ + ಗೋಚರ]

**ನಿಗಮಚೋರ** (ನಾ). ವೇದಗಳನ್ನು ಕದ್ದವನು ; ಹಯಗ್ರೀವನೆಂಬ ರಕ್ಕಸ : ನಿಗಮಚೋರನ ಕೊಂದು ನೀರೊಳು ಮುಳುಗ್ಯಾಡಿ ನಗವ ಬೆನ್ನಿಲಿ ಪೊತ್ತು ಸುರರಿಗಮೃತವನಿತ್ತು . . . ಜಗದೊಳುದ್ದಂಡ ಬಾಹುಕನಾದ ದೇವನಾ (ಕರ್ನಾಕ. ೨೮೧). [ನಿಗಮ + ಚೋರ]

**ನಿಗಮತತಿ** (ನಾ). ವೇದಗಳ ಗುಂಪು,—ಸಮೂಹ : ನಿಗಮತತಿನುತಿಪಾತ್ರ ನಿಖಿಲಮುನಿವನಚೈತ್ರ . . . ಪಾಲಿಪುದು (ಪ್ರೌಢರಾ. ೪-೧); ಕಟಾಕ್ಷವಿತ್ತನು ನಿಗಮತತಿವುಲಿಯೆ (ಗಗತಾ. ೨-೧). [ನಿಗಮ + ತತಿ$_2$]

**ನಿಗಮತುರಗ** (ನಾ). ನಾಲ್ಕು ವೇದಗಳನ್ನು ತನ್ನ ರಥಕ್ಕೆ ಕುದುರೆಗಳನ್ನಾಗಿ ಮಾಡಿಕೊಂಡವನು; ತ್ರಿಪುರಸಂಹಾರಿಯಾದ ಶಿವ : ನಿಗಮತುರಗಪಾಪವನಮೂಲದಾವಾ ಮೃಗಪಾಣಿ ಮೃತ್ಯುಂಜಯ ಜಯ ಸುಪ್ರಭಾವ (ವಿವಾಕ್ಯ. ೬-೧). [ನಿಗಮ + ತುರಗ]

**ನಿಗಮನ** (ನಾ). ೧. ವೇದಗಳಿಂದ ಉದ್ಧರಿಸಿದ ವಾಕ್ಯ ; ವೇದವಾಕ್ಯ. ೨. ಒಳಹೊಗುವಿಕೆ ; ಪ್ರವೇಶ. ೩. ಸಿದ್ಧಾಂತ ; ನಿರ್ಣಯ : ತತ್ವಗಳ ನಿಗಮನವು ತರ್ಕಬದ್ಧವಾದದ್ದು (ತತ್ವಪ್ರಾ. ೨೬೩). ೪. [ನ್ಯಾಯ] ಅನುಮಾನಪ್ರಮಾಣದಲ್ಲಿ ಬಳಸುವ ಪ್ರತಿಜ್ಞಾ, ಹೇತು, ಉದಾಹರಣ, ಉಪನಯ ಮತ್ತು ನಿಗಮನಗಳೆಂಬ ಐದು ನ್ಯಾಯವಾಕ್ಯಗಳಲ್ಲಿ ಒಂದು : "ಕಾರಣಪೂರ್ವಕ ಊಹನ; ನಿಗಮನ" (Deduction. ಇಂಕನಿ) ; ಪರಾರ್ಥಾನುಮಾನವು ಪ್ರತಿಜ್ಞಾ, ಹೇತು, ಉದಾಹರಣ, ಉಪನಯ, ನಿಗಮನ ಎಂಬ ಐದು ಅಂಗವುಳ್ಳದ್ದು (ಭಾತತ್ತ್ವ. ೨೬೩) ; ನ್ಯಾಯವಾಕ್ಯಗಳಾದ ಪ್ರತಿಜ್ಞಾಹೇತೂದಾಹರಣೋಪನಯನಿಗಮನಗಳಲ್ಲಿ ಐದೂ ಆವಶ್ಯಕವಿಲ್ಲ (ಹಿಂದಸಾ. ೨೦೨). [ಸಂ.]

**ನಿಗಮನಿಧಾನ** (ನಾ). ವೇದಗಳನ್ನು ತನ್ನಲ್ಲಿ ಒಳಗೊಂಡವನು : ಈತನಾರ್ಕೈ ಬಂದವನು . . . ಎಂದರಸ ಬೆಸಗೊಳಲು ಈತನೀಗೆಲೆ ಜೀಯ ನವಿಭ್ಯಾ ಯಾತುಧಾನಶಿರಃಪ್ರಧಾನಸುನೀತಿನಿಗಮನಿಧಾನ ಸತ್ವನಿಧಾನ ನಿವನೆಂದ (ತೊರರಾ. ೬-೧೯-೨೧). [ನಿಗಮ + ನಿಧಾನ]

**ನಿಗಮನುತ** (ನಾ). ವೇದಗಳಿಂದ ಸ್ತುತಿಸಿಕೊಂಡವನು,— ಹೊಗಳಿಸಿಕೊಂಡವನು : ಶರಣು ನಿಸ್ಸಂಕಲ್ಪ ನಿತ್ಯಾನಂದ ನಿಗಮನುತ (ಗಗತಾ. ೧-೪೩). [ನಿಗಮ + ನುತ]

**ನಿಗಮಪೂತ** (ಗು). ವೇದಮಂತ್ರೋಚ್ಚಾರಣೆಗಳಿಂದ ಶುದ್ಧಿಗೊಂಡ : ಕಮಲಜನ ಹೋಲುವೆಯು ಧಾರುಣಿಯಮರಕರದಲಿ ನಿಗಮಪೂತೋತ್ತಮ ಸುವಾರಿಗಳಿಳಿದವಜಸನ್ನಿಭನ ಮಸ್ತಕಕೆ (ಕುವ್ಯಾಭೀ. ೧-೩೧). [ನಿಗಮ + ಪೂತ$_2$]

**ನಿಗಮಮಂತ್ರೋಚ್ಚರಣೆ** (ನಾ). ವೇದಮಂತ್ರಗಳ ಉಚ್ಚಾರಣೆ; ವೇದಘೋಷ : ನಿಗಮಮಂತ್ರೋಚ್ಚರಣೆಯಲಿ ಪೂರ್ಣಾಹುತಿಗೆ ತನ್ನೊಡಲನೊಪ್ಪಿಸಿದ (ಕುವ್ಯಾಗ. ೯-೨೨). [ನಿಗಮ + ಮಂತ್ರ + ಉಚ್ಚರಣೆ]

**ನಿಗಮಮಸ್ತಕ** (ನಾ). ವೇದಗಳ ತುದಿ,—ಕೊನೆಯ ಭಾಗ ; ಉಪನಿಷತ್ತು ; ವೇದಾಂತ : ನಿಗಮಮಸ್ತಕದರ್ಥವೇದಿಗಳುಜ್ವಳಾತ್ಮವಿಚಾರಿಗಳ್ ಸೊಗಯಿಪಪ್ಪವಿಧೋರುಯೋಗಪರಾಯಣರ್ . . .

ಸೊಗದೆ ಸುಂದರರಾಜನಂ ಸಲೆ ಪಾಡುತೊಪ್ಪಿದರಾಗಳುಂ (ಹಾಲಾಸ್ಯ. ೧-೧೦-೬). [ನಿಗಮ + ಮಸ್ತಕ]

**ನಿಗಮರಾಜಿ** (ನಾ). = ನಿಗಮತತಿ : ನಿಗಮರಾಜಿವಿರಾಜಿತವಾಜಿ . . . ಭಗಣಭಾಸುರಭಾಸ್ವರ ಸಜ್ಜಟಾಪ್ರಗುಣಪಾವನ ಪಾಲಯ ಮಾಂ ಹರಾ (ಹಾಲಾಸ್ಯ. ೨-೧೪-೫೭). [ನಿಗಮ + ರಾಜಿ$_1$]

**ನಿಗಮಲಿಪಿ** (ನಾ). ಒಂದು ಬಗೆಯ ಲಿಪಿ : ಗಗನಲಿಪಿ ಧೂಮಲಿಪಿ ಜಲಲಿಪಿ ಪಿಶಾಚಲಿಪಿ ಖಗಲಿಪಿ ಕದಂಬಲಿಪಿ ಕಾಕಲಿಪಿ ಕವುಷಲಿಪಿ ನಿಗಮಲಿಪಿ ವೀಲಲಿಪಿ ಬಿಂದುಲಿಪಿ ಚಕ್ರಲಿಪಿ ಲೇಖಲಿಪಿ ದರ್ಪಣಲಿಪಿ ಮೃಗಲಿಪಿ ಪ್ರಬಂಧಲಿಪಿ ರಗಣಲಿಪಿ ಶೈಲಲಿಪಿ ದೇವಲಿಪಿ ನಂದಿಲಿಪಿ ಈ ಅಗಣಿತ ಲಿಪಿಗಳ ನೋಡಲಜಾಯದೆ ಬಿಜ್ಜಳರಾಯನ ಸಭೆಯೊಳು ಕಳವಳಗೊಳುತಿದ್ದರು ವಿದ್ವಾಂಸರುಗಳೆಲ್ಲಾ (ಭಾಸ್ಕರ. ೭೭-೫); ℙ ಈ ಲಿಪಿಗಳೆಲ್ಲವು ನಿಶ್ಚಯವಾಗಿ ಇವೆಯೆಂಬುದಕ್ಕೆ ಆಧಾರ ದೊರೆತಿಲ್ಲ.

[ನಿಗಮ? + ಲಿಪಿ]

**ನಿಗಮವಂದ್ಯ** (ನಾ). ವೇದಗಳಿಂದ ವಂದಿತನಾದವನು,— ನಮಸ್ಕರಿಸಿಕೊಂಡವನು : ನಿಗಮವಂದ್ಯನೆ ನಿತ್ಯಸಂತುಷ್ಟ . . . ಶರಣು (ಕೌಶಿರಾ. ೨೭-೫೭) ; ನಿಗಮವಂದ್ಯನು ಕಂಡನುರಿಯೊಳಗಿರ್ದ ಮೈಥಿಲಿಯ (ಕೌಶಿರಾ. ೪೩-೩೪). [ನಿಗಮ + ವಂದ್ಯ]

**ನಿಗಮವಿದೂರ** (ನಾ). ವೇದಗಳಿಗೂ ನಿಲುಕದವನು ; ವೇದಗಳಿಗೂ ವರ್ಣಿಸಲಸಾಧ್ಯನಾದವನು,— ಅನಿರ್ವಚನೀಯನಾದವನು ; ವೇದಾತೀತನಾದವನು : ಲಲಿತವಿಹಾರ ನಿಗಮವಿದೂರ ಸುಖಸಾಕಾರ ಗತಪಾರ . . . ಸಲಹಬೇಕೆಂದ (ಕುಮಾರ್ಯಾಭೀ. ೩-೮೭).

[ನಿಗಮ + ವಿದೂರ]

**ನಿಗಮವೇದ್ಯ** (ನಾ). ವೇದಗಳಿಂದ ತಿಳಿಯಲ್ಪಡುವವನು ; ವೇದವೇದ್ಯ ; ವೇದಗಳು ಸ್ಥಾಪಿಸುವ ಪರವಸ್ತು,—ಪರಮಾತ್ಮ : ನಿಗಮವೇದ್ಯನ ಭಜನೆಯಜಾಡು ಪುರದಾ ಜೈನರುಗಳೆಲ್ಲ ಬಂದು . . . ನಿನ್ನಂಗನೆಯಿಂದೆಮ್ಮ ಜೈನಕುಲಕಳಿವೆಂದೆನೆ (ಪ್ರಾಥರಾ. ೧೨-೧೬).

[ನಿಗಮ + ವೇದ್ಯ]

**ನಿಗಮಶಿರ** (ನಾ). = ನಿಗಮಮಸ್ತಕ: ಸ್ವಾನುಭವ ಸಂಸಿದ್ಧ ನಿಜವಿಜ್ಞಾನದೀಪವೆನಿಪ್ಪ ನಿಗಮಶಿರೋನಿತಾಂತರಹಸ್ಯ ವೇದಪುರಾಣಸಂಹಿತೆಯ . . . ಕರುಣಿಸಿದಾ ನಿಖಿಳಮುನಿವಂದ್ಯ ಶುಕಮುನಿಚರಣ ಶರಣೆಂದ (ನಿಭಾಗ. ೧-೨-೩೦) ; ನಿಗಮಶಿರಗಳಿಗಂಪದಾವಗ ಧಗಧಗಾಯತ ರೂಪನಾಗಿಯೆ ಬಗೆಗಗೋಚರನಾಗಿ (ಗಗತಾ. ೧೪-೧). [ನಿಗಮ + ಶಿರ$_2$]

**ನಿಗಮಸ್ತೋಮ** (ನಾ). = ನಿಗಮತತಿ : ನಿಗಮಸ್ತೋಮದ ನಿಲಯಂ ನಿಗಮಸ್ತೋಮಕ್ಕೆ ಬೀಡು ನಿಗಮಂ ನಿತ್ಯಂ ನಿಗಮಸ್ತೋಮದ ಸೌಖ್ಯಂ ನಿಗಮಸ್ತೋಮಕ್ಕೆ ಲೋಕನಾಥಂ ಮುಖ್ಯಂ (ಹವಿಪ್ರಾಂ. ೧-೬೩).

[ನಿಗಮ + ಸ್ತೋಮ]

**ನಿಗಮಾಂತ** (ನಾ). ವೇದಾಂತ ; ಉಪನಿಷತ್ತು : ನಿಗಮಾಂತಾಭೇದ್ಯ ಸದ್ರೂಪ ಚಿದ್ವ್ಯೋಮಾಕಾರ . . . ನಿಷ್ಕಾಮಪ್ರೇಮ ಮಹೇಶ ರಕ್ಷಿಸೊಲವಿಂ (ರಾಜಶೇ. ೩-೩೯). [ನಿಗಮ + ಅಂತ$_2$]

**ನಿಗಮಾತೀತ** (ನಾ). ೧. ವೇದಗಳಿಗೆ ಸಿಕ್ಕದುದು ; ವೇದಗಳನ್ನು ಮೀರಿದುದು : ಇಂತೀ ಶರಣನ ಮಹಿಮೆಯನಂತಿಂತೆಂದುಸಿರಲಳವೆ ನಿಗಮಾತೀತಂ (ಹವಿಪ್ರಾಂ. ೫-೫೦). ೨. ವೇದಗಳಿಂದ ತಿಳಿಯಲಾಗದವನು ; ವೇದಾತೀತ : ಅಲಿಸು ಪುನೀತ ನಿಗಮಾತೀತ ಮನ್ನಾಥ ಭೂಲೋಕದೊಳು ಭಕ್ತಿ ಮಸುಳಿಸಿತು ದೇವ ಕರುಣಾಲೋಕನಂಗೆಯ್ದು ಶಿವಮತವ ಪೆರ್ಚಿಸುವದೆಂದು ಮುನಿ ಬಿನ್ನೈಸಲು (ಪ್ರಾಥರಾ. ೨-೩). [ನಿಗಮ + **ಅತೀತ**]

**ನಿಗಮಾನೀಕ** (ನಾ). = ನಿಗಮತತಿ : ನಿಗಮಾನೀಕಮುನಾ ಸ್ಮೃತಿಪ್ರಚಯಮಂ ಬಲ್ಲರ್ ತದರ್ಥಂಗಳಂ ಸೊಗಸಿಂ ದೋಷದುತಮೊಂದೆಯೂದೊಡದನಂಗೀಕಾರಮಂ ಮಾಡುತಂ (ಹಾಲಾಸ್ಯ. ೨-೧೫-೨೫).

[ನಿಗಮ + ಅನೀಕ]

**ನಿಗಮಾರ್ಥ** (ನಾ). ವೇದಗಳ ಅರ್ಥ,—ತಾತ್ಪರ್ಯ : ನಿರುತವಿದು ನಿಜವೆಂದು ಬಗೆ ನಿರ್ಧರಿಸಿದೆವು ನಿಗಮಾರ್ಥದಲಿ ನಿನಗುರುತರಾನುಗ್ರಹದ ಬೀಜಾಕ್ಷರವಿದೀಗೆಂದ (ತೊರರಾ. ೧-೨-೯). [ಸಂ.]

**ನಿಗಮಾಳಿ** (ನಾ). = ನಿಗಮತತಿ : ಕಾದಿ ಕೈವಲ್ಯವನು ಪಡೆದರು ಸೋದರರು ನಿಗಮಾಳಿ ಕಾಣದ ಪರಮಪಾವನನ (ಕೌಶಿರಾ. ೨೭-೧).

[ನಿಗಮ + ಅಳಿ$_4$(= ಆಲಿ$_4$)]

**ನಿಗಮಿತ** (ಗು). ಸಂಘಟಿತವಾದ ; ಸೇರಿದ : ‘ನಿಗಮಿತ ಸಮವಾಯ’ ಪರಾ. [ಸಂ.]

**ನಿಗಮಿತಸಮವಾಯ** (ನಾ). ಅನೇಕ ವ್ಯಕ್ತಿಗಳಿಂದ ಅಥವಾ ಸಂಸ್ಥೆಗಳಿಂದ ಸಂಘಟಿತವಾದ ಒಂದು ಸಂಸ್ಥೆ : ಒಂದು ರಾಜ್ಯದ ಸರ್ಕಾರದ ಪರವಾಗಿ ನಡೆದ ಯಾವುದಾದರೂ ಸಂವಿದೆಯಲ್ಲಿ . . . ಒಂದು ನಿಗಮಿತಸಮವಾಯದ ಸದಸ್ಯರಾಗಿ . . . ಯಾವ ಪ್ರಕಾರದಲ್ಲಾದರೂ ಭಾಗಿಯಾಗಿದ್ದಲ್ಲಿ (ಭಾಧಾನ. ೧೮೪). [ನಿಗಮಿತ + ಸಮವಾಯ]

**ನಿಗಮೋತ್ತಮಾಂಗ** (ನಾ). = ನಿಗಮಮಸ್ತಕ: ಉಡುವೊಡೆ ಸಂತತಂ ಪುಲಿದೊವಲ್ ನಿಮಗಲ್ಲದೊಡಾ ದಿಗಂಬರಂ . . . ನಿಗಮೋತ್ತಮಾಂಗ ಮುಚ್ಚೊಡೆ ವಿಷಮಲ್ಲದಿರ್ದೊಡೆ ಸಮಸ್ತಜಗಂ ನಿಮಗೇನನೆಂದಪರ್ (ಸಂಪಾಶ. ೨೦). [ನಿಗಮ + ಉತ್ತಮಾಂಗ]

**ನಿಗಮೌಘ** (ನಾ). = ನಿಗಮತತಿ : ನಿಗಮೌಘವಜಿಸಿದಡತ್ತಲಿತ್ತಲುಸರಿವ . . . ನೆನೆವರಿಗೆ ತನ್ನನು ತೆತ್ತು ಬದುಕುವೆನೆಂಬ ಬೋಳೆಯರರಸ ನಡೆತಂದ (ಕುಮಾರ್ಯಾವಿ. ೧೦-೫೨). [ನಿಗಮ + ಓಘ]

**ನಿಗರ$_1$** (ನಾ). ೧. ಮನೋಹರತೆ ; ಚೆಲುವು : “ನಿಗರ . . . ಕಣ್ಗೆ ವಂದುದು, ಪರಿವಡೆದುದು —ಈ ೧೪ ಮನೋಹರಂ” (ಕಶಸಾ. ೧೧-೨೧೧); “ನಿಗರಂ ನೆಟ್ಟು ಚೊಕ್ಕ ಚೊಕ್ಕಳಿಕೆಯು . . . ಎನೆ ಮನೋಹರ ಮಕ್ಕುಂ” (ಕವಿಕಂ. ೯೯) ; ಜಗದ್ವ್ಯಾಪಕನ ನಿಲವಿನ ನಿಗರದವೊಲೆಂದ (ತೊರರಾ. ೩-೬-೩೩) ; ಕೆಲಕೆ ಸಾರುತ್ತುರ್ಬುತಂ ನಿಗರದಿಂ ನಲಿಗರ್ಚುತಂ ಪುಲ್ಲಂ (ಕೊಟ್ಟೂಬ. ೧೦-೨೧). ೨. ಯೋಗ್ಯವಾದುದು ; ಒಪ್ಪತಕ್ಕುದು ; ಉತ್ತಮವಾದುದು ; ಸರಿಯಾದುದು : ಮಗುವು ರಾಘವನೆಂದು ತಪ್ಪಿಸಿ ನುಡಿದ ನುಡಿ ನಿನಗೆ ನಿಗರವೇ (ತೊರರಾ. ೧-೯-೩೦) ; ಧಗಧಗಿಸಿತುರಿ ಮತ್ತೆ ಝಳಿಪಿಸೆ ನಿಗರವಲ್ಲದೆನುತ್ತ ರಕ್ಕಸವಿಗಡಕೈದುವನಿರಿಸಿ ಕೆಲಸಾರಿದನು ಕಲಿಹನುಮ (ತೊರರಾ. ೫-೨-೮೫) ; ಬಜಿವದೆ ಸೇನೆಯುನಿವನ ಕೈಯಿಂದ ಗಗನಪಥಿಕರ ಮಾಡಿಸುವದಿದು ನಿಗರವಲ್ಲೆಮಗೆ (ತೊರರಾ. ೬-೪೦-೧೭).

[←ತಮಿ. ನಿಕರ್ = ಹೋಲಿಕೆ, ಎಣೆ, ಸಾದೃಶ್ಯ ; ಸಮಾನಾಂತರವಾದುದು, ಸಮವಾದುದು ; ಕಾಂತಿ, ಪ್ರಕಾಶ, ಹೊಳಪು ; ಕಾಳಗ, ಯುದ್ಧ]

**ನಿಗರ$_2$** (ನಾ). ಗುಂಪು ; ಸಮೂಹ : “ನಿಗರ—ನಿಕರ= ಸಮೂಹ” (ತದ್ಭಕೋ. ೭೭) ; ವಿಟನಿಗರ ಬಳಿಕೆಸೆದುದಂದು ವಸಂತಮುತುವಿನಲಿ (ಅಂಜಿಕಾ. ೧೧-೪) ; ತೋಳಿನಿಂ ಪಿಡಿದೆತ್ತಿ ತನ್ನ ಪೀತಾಂಬರದ ಮೇಲ್ಸೆರಗಿನಿಂದೆ ಮೈರಜವನೆಲ್ಲಂ ಪೊಡದು ಜಾಳಿಸುವ ಕಣ್ಣೀರನೊರಸಿ ಮುಂಡೆಯ ನಿಗರ ವಾಸನಿಸಿ ನುಡಿದಂ (ತುರಂಗ. ೨೬-೧೮) ; ನೀಲಗಿರಿಯ ಮುಗಿಲ ನಿಗರದ ಶಿಖರಮನೇಜು ಮೈಮೆವೆತ್ತ ಶ್ರೀಪುರುಷೋತ್ತಮನಂ ಕಂಡು (ರಾಮಾಶ್ವ. ೭೭-೧೯).

**ನಿಗರಕೋಳ್ಗಂಡ, ನಿಗರಕೊಳುಗಂಡ, ನಿಗರಕ್ಕೊಳ್ಗಂಡ** = ಗುಂಪಿಗೇ ಸಾಹಸಿಯಾದವನು ; ಒಂದು ಬಿರುದು : ನಿಗರಕೋಳ್ಗಣ್ಡಂ ಸತ್ಯಯುಧಿಷ್ಠಿರಂ ಶ್ರೀಮನ್ಮಹಾಸಾಮನ್ತಂ ಭಾವಂ ಬಿಜ್ಜರಸರ್ . . . ತ್ರಿಭೋಗಾಭ್ಯನ್ತರಸಿದ್ಧಿಯಿನ್ದಮಾಳುತ್ತಮಿರೆ (ಕಇ. IV, ೪೧-೧೦ ; 11ನೆಯ ಶತ) ; ಮನ್ನೆಯರ ಗಂಡ ನಿಗರಕೊಳುಗಂಡ ಬಾಚಗಭೂಷನಂಕಕಾ[ಱ] (ಕಇಳ. ೧೩-೪-೮೮ ; 1093) ; ಪಾಣ್ಡ್ಯಗಜಕೇಸರಿ ನಿಗರಕ್ಕೊಳ್ಗಂಡ (ಸೌಇಇ. IX-i, ೨೬೫-೧೪ ; 1155). [<ಸಂ. ನಿಕರ]

**ನಿಗರ$_3$** 'ನಿಕರ$_2$' ನೋ.

**ನಿಗರಗತ್ತುರಿ** (ನಾ). ಶ್ರೇಷ್ಠವಾದ ಕಸ್ತೂರಿ ; ಉತ್ತಮವಾದ ಅಥವಾ ಶುದ್ಧವಾದ ಕಸ್ತೂರಿ : ಪದಸಱಂದರೆವ ಸಿರಿಗಂಪಿನ ಕುರುಳ್ಗೆ ಪುಡಿಗತ್ತುರಿಗೆಯ್ವ ನಿಗರಗತ್ತುರಿಯ ಕಾಲ್ಗಳೆವ ಕಪ್ಪುರದ ತೊಳೆವ ಜವಾದಿಯ ಮೇದಿಸುವ ಪೊಗೆಗೊಳಿಸುವಗರುವಿನ ಪೊರೆವರಲ ಪೊಟ್ಟಳದ ಪೆಂಪಿಟ್ಟಳಮಾದ ತಂತಮ್ಮ ಮನೆಗಳೊಳ್ . . . ಬಾಲೆಯರ್ ಲೀಲೆಯಿಂದಿರೆ (ಧರ್ಮನಾ. ೨-೧೦೪ ಪ) ; ನಿಗುರು[ಗರ]ಗತ್ತುರಿಗಂಪನತಿಗಳೆವ ತನುವಿನೋರಗೆವರೆಯುದಂಗನೆಯರೇಳ್ತಂದು ಬಳಸಿದರು ಸುಗುಣರಧಿನಾಥನಂ ವರಸುಂದರೇಂದ್ರನಂ (ಸೌಂದಪು.೧೦-೨೪); ನಿಗರಗತ್ತುರಿಯಡ್ಡಬೊಟ್ಟು (ಶೀವಣ. ೩-೩೭). [ನಿಗರ$_1$ + ಕತ್ತುರಿ]

**ನಿಗರಣ** (ನಾ). ೧. ನುಂಗುವುದು ; ಕಬಳಿಸುವುದು. ೨. ಪೂರ್ಣವಾಗಿ ಗ್ರಹಿಸುವುದು. ೩. ಗಂಟಲು. ೪. ಹೋಮದ ಹೊಗೆ. ೫. ಕುತ್ತಿಗೆ ; ಕೊರಳು : ಸುಹೃಜ್ಜನದಯಿತಂ ಬೃಹನ್ನಿಗರಣಂ ಕ್ಷಯವೃದ್ಧಿಧನಾನ್ವಿತಂ . . . ಕುಬ್ಜಶರೀರಿ ಕುಳೀರಸಂಭವಂ (ಜಾತತಿ. ೧೭-೪). [ಸಂ.]

**ನಿಗರಳ** (ನಾ). ಕುತ್ತಿಗೆ ; ಕೊರಳು : "ಕೊರಲ್ ಕಂಠ ಗ್ರೀವಾ ಗಳ ನಿಗರಳಂ ಕಂಧರವೆನಲ್" (ಪಸ್ತುಕೋ. ೬೮-೭). [<ಸಂ. ನಿಗರಣ]

**ನಿಗರಾಣಿ** (ನಾ). (ಉಕ) ಮೇಲ್ವಿಚಾರಣೆ ; ಉಸ್ತುವಾರಿ : ಪರೀಕ್ಷಾಮಂದಿರದಲ್ಲಿ ನಿಗರಾಣಿ ಮಾಡಲು ನಾಲ್ವರು ಅಧ್ಯಾಪಕರಿದ್ದಾರೆ (ರೂಢಿ). [←ಮರಾ. ನಿಗರಾಣೀ ; ಪಾರ. ಹಿಂ. ನಿಗರಾನೀ]

**ನಿಗರ್ಭ** (ನಾ). ಹೊಟ್ಟೆ ; ಬಸಿರು : ನಿಗರ್ಭಪೂರಿತಮಾಗಿರಲ್ ಪ್ರಾಣಾಯಾಮವಂತಮರ್ಮುಖ ಸವಿಷಯಸ್ತೋಮ ಚಾರಿತ್ರಪ್ರವರ್ತನ ಸೀಮೆಯಲಿ ಪೊಸತೆನಿಸೆ ಪ್ರತ್ಯಾಹಾರವೊದಗಿರಲು (ಬಸಪು. ೩೫-೧೮). [ಸಂ.]

**ನಿಗರ್ವ** (ನಾ) = ನಿಗರ್ವತೆ. [ಸಂ.]

**ನಿಗರ್ವತೆ** (ನಾ). ಗರ್ವವಿಲ್ಲದಿರುವಿಕೆ ; ವಿನಯ : ಸರ್ವೋಪಾಯದಿಂದೊಡಬಡಿಸಿದೆನು ನಿಗರ್ವತೆಯಿಂದ ರಾವಣನು ಸರ್ವಥಾ ಸೀತೆಯ ಬಿಡೆನೆಂದವನತಿಗರ್ವದ ಮಾತನಾಡಿದನು (ರಾಮವಿ. ೧೫-೫೭). [ಸಂ. ನಿಗರ್ವತಾ]

**ನಿಗರ್ವಿ** (ನಾ). ಜಂಭವಿಲ್ಲದಿರುವವನು ; ಗರ್ವವಿಲ್ಲದಿರುವವನು : ಆಳದ ಮಡುವಿನೊಳಾಡುತಲಿದ್ದರು ತಾನು ನಿಗರ್ವಿ ರೋಹಿತನು (ಇಂಚಾಪ. ೭೨-೪೯) ; ಅವರು . . . ನಿಗರ್ವಿಗಳು (ಸುಪಸಂ. ೧). [ಸಂ. ನಿಗರ್ವಿನ್]

**ನಿಗರ್ವಿತೆ** (ನಾ). = ನಿಗರ್ವತೆ : ದರ್ಪವುಳ್ಳಂಗೀಸು ಮಂಗಳವೊಪ್ಪದೇನ್ನೈ ಜಗದೊಳಾವಂಗಪ್ಪುದೀ ಬಲವೀ ನಿಗರ್ವಿತೆಯೆಂದನಾ ಮತ್ಸ್ಯ (ಕುಮ್ಯಾವ್ಯ. ೯-೨೮). [ಸಂ. ನಿಗರ್ವಿತಾ]

**ನಿಗಲ,** ನಿಗಳ (ನಾ). ೧. ನುಂಗುವುದು ; ಕಬಳಿಸುವುದು. ೨. ಕುದುರೆಯ ಕೊರಳು,—ಕುತ್ತಿಗೆ. ೩. ಬೇಡಿ; ಸಂಕೋಲೆ; ಸರಪಳಿ. **ನಿಗಳ :** ೨. ಹಯದ ಕೊರಲೊಳುತ್ತಮ ನಡುವಣ ಪ್ರದೇಶ ನಿಗಳಮದಕ್ಕುಂ (ಅಶ್ವಶಾ. ೯-೨೫). ೩. ವೇದಕ್ಕೆ ಒಱೆಯ ಕಟ್ಟುವೆ ಶಾಸ್ತ್ರಕ್ಕೆ ನಿಗಳವನಿಕ್ಕುವೆ ತರ್ಕದ ಬೆನ್ನ ಬಾರನೆತ್ತುವೆ (ಬಸವ. ೭೧೬) ; ಹರನಾಜ್ಞೆಯೆಂಬ ನಿಗಳವ ಹಱಿದು ಕೈಲಾಸಗಿರಿಯೆಂಬ ಸಜ್ಜಾರದಿಂದ ಪೊಱಮಟ್ಟು (ನಂದಿಮಾ.೧೩-೬). ೪. ಆನೆಯ ಕಾಲಿಗೆ ತೊಡಿಸುವ ಸರಪಳಿ ; ಸಂಕೋಲೆ : "ನಿಗಳಃ . . . ಶೃಂಖಲಾ, ಅಂದುಕಃ - ಈ ೫ ಆನೆಯ ಕಾಲ್ಗಟ್ಟು" (ಹಲಾಯು. ೩೭-೭೦) ; "ಹಿಂಜೀರಮಂದುಕಂ ಶೃಂಖಳಂ ಪಾದಬಂಧಂ ನಿಗಳಮೆನಲು ಸಂಕಲೆಯೆನಿಕ್ಕುಂ" (ಮಂಗರಾ. ೪೬-೨) ; ನಿಗಳಂಬೋಲ್ ತೊಡರ್ದಿರ್ದ ಮೋಹನಿಗಳಂ ನಿವಾರ್ಯಕುಳಂ ಪಿಂಗೆ ಮತ್ತಗಜೇಂದ್ರಂಬೊಲಲರ್ಗಳಂ ವನಮನಂದಾನಂದದಿಂ ಪೊಕ್ಕಂ (ಕಾಮ್ಯಾಪ. ೩೪೨) ; ಪೆರ್ಮಾಡಿರಾಯನ ಪಟ್ಟದಾನೆ ಸಪ್ತಮದಾವಸ್ಥೆಯಿಂ ಮುಂದುಗಾಣದೆ . . . ಕಾಲೊಳ್ಬಂಧಿಸಿದ ಮಾಲೆಯ ನಿಗಳಂಗಳುಂ ಘುಲಘುಲಿಸೆ ಜಾಣಂ ಸೆಳೆದುಣ್ಕೆ ಪೊಣ್ಕೆ ಘಳಿಲನೆ ಕಂಪಿಸಿ ನಿಟ್ಟೋಡಿಯಾಡಿಗೊಂಡು ಪರಿದು (ಬಾಹೂರ. ಪ. ೩೧೯-೬) ; ಕಾವನ ಮದದಂತಿಯ ಕಾಲ್ಗೆ ನಿಗಳಮನೋವದೆ ತಂದಿಕ್ಕುವಂತೆ ಕೋವಿದೆಯೊರ್ವಳವಳ ಪದಯುಗಳಕೆ ನೇವುರವನು ರಚಿಸಿದಳು (ಕುಂರಾಸಾಂ. ೭೯-೯೪). ೫. ಕಾಲಿಗೆ ಧರಿಸುವ ಒಂದು ಬಗೆಯ ಆಭರಣ ; ನೂಪುರ ; ಕಾಲಂದುಗೆ : ನಿಗಳದ ಸುಣ್ಬರಂ ನೆಗೆವಿನಂ ನುಡಿಗಳ್ ಕಿವಿಗಿಂಪನೀವಿನಂ . . . ನೀಱೆಯರೊಲ್ದು . . . ಮುತ್ತಿನ ಸೇಸೆಯನಾಗಳಿಕ್ಕಿದರ್ (ಕಬ್ಬಿಕಾ. ೩೪೨) ; ನಿಗಳ ಉಂಗುರ ಗೆಜ್ಜೆ ಪೊನ್ನಂದುಗೆ ಪವಳಮಂ ಮುತ್ತು ಪೊಸ ಚವಕಿಗೆ ಕಿಱುಗೆಯುಂ . . . ತಂದುಕೊಡುವರು ನಾಳೆಯೆಮ್ಮಯ ತಂದೆತಾಯಿಗಳೆನಗೆ (ಬಸಪು. ೧೪-೧೫). ೬. ಕೈಗೆ ತೊಡುವ ಒಂದು ಬಗೆಯ ಆಭರಣ ; ತೋಡ : ಮುಂಗೈ ನಿಗಳವನು ತಿರುಹುತ್ತ ನಸುನಗುತೆದ್ದನಭಿಮನ್ಯು (ಕುಮ್ಯಾದ್ರೋ. ೪-೩೪). ೭. (ಆಲಂ) ಬಂಧನ; ಕಟ್ಟು ; ಪಾಶ : ಮೋಹಮಯಂ ನಿಗಳಂ ಕಳತ್ರಂ (ಪಂಪಭಾ. ೪-೧೨) ; ಕರಮೆಸೆದಿರ್ದುದು ಚಪಳೆಗೆ ಸಿಲುಕಿಕ್ಕಿದ ನಿಯಮನಿಗಳಮೆನೆ ಭುಜಗಯುಗಂ (ಕಾದಂಪೂ. ೩೧) ; ಪೋಪೊಡಂ ತನಯವಿಮೋಹಮೆಂಬ ನಿಗಳಂ ತೊಡರ್ದಿರ್ದಪುದು (ಸುಕುಮಾ. ೧೦-೩೨) ; ಪಿತೃವಾಕ್ಯಪರಿಪಾಲನಾ ನಿಗಳದಿಂ ಧರ್ಮದಾಲಾನಕ್ಕೆ ಕಟ್ಟುಗೊಂಡಿನಕುಲನ ಧೈರ್ಯದೈರಾವತಂ ಹೋರಾಡುತಿರ್ಪುದಂ ಕಾಣುತೆ ಗುರುವಸಿಷ್ಠನಾಡಿದನ್ (ಶ್ರೀರಾಮಾ. ೧೬೯-೪೮೨) ; ಈ ಭೋಗದ ನಿಗಳದಿಂದ ಪಾರಾಗಲು ಎಚ್ಚೆತ್ತುಕೊಳ್ಳುವುದಕ್ಕೂ ಕಾಲಲಬ್ಧಿ ಬೇಕು (ಪರಿಶೀ. ೧೩೫). ೮. ಕಾಲುಪೆಂಡೆಯವನ್ನು ಧರಿಸಿದ ಪರಾಕ್ರಮಿ,—ಶೂರ (?) : ಆ ಕಳದ ಕೆಲದೊಳ್ ಸಾರಿಯಂ ಕೋಲೊಡ್ಡಿ ಗೆಲ್ವ ನಿಗಳನ ನೆಗಟ್ಟೆಗಿಡಿಪ ಭೃಗುವಂ ನಗುವ ಬೇತಾಳನಂ ಬೇಡೆನಿಪ ತಕ್ಕು ಮಿಕ್ಕುವರೆ ಕಲ್ತ ಬಿನ್ನಣಗಳಿರ್ಪ (ಪುಷ್ಪಪು. ೨-೬೦ ಪ). ೯. (?) : ಅಲ್ಲಿ ಮಹಾಜನಮೂನ್ನರೆದು ನಿಗಳ ಬಾಟ್ವಸ್ತು ಜೀವಿತಂ ಬೇಡಿಕೊಳ್ಳಿಮೆನ್ದೊಡೆ (ಸೌಇಇ. IX-i, ೪೬-೪ ; ಸು. 8ನೆಯ ಶತ) ; ಏವೂರ ನಿಗಳದೊಂದು ಬಣ್ಣಗುದುರೆ! ಎಮ್ಮಾಜಾಯಿಲಂಗೆ ದೊರೆವರ್ಕುಂ. ಕೊಂಕದ ಬಾಲಂ, ನಿಮಿರ್ದ ಕೊಡಂಕೆ, ಡಗೆವೊಯ್ವಳ್ಳೆ, ಗುಜ್ಜುಗಾಲ್, ನಿಟ್ಟೊಡಲ್, ಕಟ್ಟಾಯದ ಮೆಯ್ಸಿರಿ (ರಾಮಾಶ್ವ. ೮೪-೨೪). 'ನಿಗಡ' ಪರಾ.

**ನಿಗಳಂಕಮಲ್ಲ** = ಕಾಲುಪೆಂಡೆಯವನ್ನು ಧರಿಸಿದ ಪರಾಕ್ರಮಿ,—ಶೂರ ; ಒಂದು ಬಿರುದು : ವೈರಿಭೇರುಣ್ಡಂ ನಿಗಳಂಕಮಲ್ಲಂ ಕಟಕದ ಗೋವಂ ಅಣ್ಣನ ಸಿಂಗಂ (ನಾಂದೇಡ್. ೬-೧೫ ; 1066) ; ನೃಪರೊಳು ನಿಗಳಂಕಮಲ್ಲನಾದಗಲದ ವೀರವಾರಳವೊ (ಕೊಲ್ಹಾಶಾ. ೧೫-೫೪ ; 1186). [ಸಂ.]

**ನಿಗಳ** 'ನಿಗಲ' ನೋ.

**ನಿಗಳನಿರೋಧ** (ನಾ). ಸಂಕೋಲೆಯಿಂದ ಬಂಧಿಸುವುದು; ಸರಪಳಿಯ ಬಂಧನ: ನಿಗಳನಿರೋಧಂ ಮದಗಜಂಗಳೊಳ್. . . ಅಕ್ಕು ಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ಪ). 'ನಿಗಡನಿರೋಧ' ಪರಾ. [ನಿಗಳ (=ನಿಗಲ) + ನಿರೋಧ]

**ನಿಗಳಬಂಧ** (ನಾ). = ನಿಗಳನಿರೋಧ: ಸಗರಮುನಿಕುಂಜರಂ ಸಂಸಾರ ಬಂಧಕಾರಣ ನಿಗಳಬಂಧಂಗಳಂ ಪಱಿಯೆ ಪೊಯ್ದು . . . ಸನ್ಮಾರ್ಗ ವೀಥಿಯೊಳ್ ಪರಿದು ಪರಮಗತಿಯನೆಯ್ದುವುದುಂ (ಅಜಿಪು. ೧೨-೧ ಪ). [ನಿಗಳ (=ನಿಗಲ) + ಬಂಧ]

**ನಿಗಳಮೋಕ್ಷ** (ನಾ). ಸಂಕೋಲೆಯಿಂದ ಬಿಡುಗಡೆ: ಅವುದಚ್ಚರಿ ಹೊಱವಡುವ ವಸುದೇವನಂಘ್ರಿಯ ನಿಗಳಮೋಕ್ಷವದಾವುದ್ಯ ನೃಪ ಚಿತ್ರಬಂಧಕವಾಟನಿರ್ಭೇದ (ಸಿಭಾಗ. ೧೦-೪-೧೧). [ನಿಗಳ(=ನಿಗಲ) + ಮೋಕ್ಷ]

**ನಿಗಳವಿಕ್ಕು** (ಕ್ರಿ). ಸೆರೆಹಾಕು; ಬಂಧಿಸು: ಕೇಳ್ವನ ಕಿವಿಯೊಳು ಗೂಂಟಮನಾಳ್ವಿನೆಗಂ ಬಿಟ್ಟಿತೆಗಿಸುಯೊಟ್ಟಜಿವಿರುದಿಂದೇಳ್ವಲೆಕ್ಕೆಯೊಳ ದಟುರ್ಮ್ಮೇಟ್ವಿನೆಗಂ ನಿಗಳವಿಕ್ಕಿದಂ ಭೂತನ್ರಿ(ನೃ)ಪ (ಇಆ. XII, ೯೬-೧೧; 1187). [ನಿಗಳ(=ನಿಗಲ) + ಇಕ್ಕು]

**ನಿಗಾ**, ನಿಗ$_2$ (ನಾ.) ೧. ಲಕ್ಷ್ಯ; ಗಮನ: ಅವಳ ಗಂಡ ಬಹು ಕಾಲದಿಂದ ಮನೆಯ ಕಡೆ ನಿಗಾ ಕಡಿಮೆ ಮಾಡಿದ್ದ (ಪ್ರಹಾರ. ೭); ಈ ಕಲಿಗಾಲದ ಮಹರ್ಷಿಗಳ ಮೇಲೆ ಸ್ವಲ್ಪ ನಿಗಾ ಇರಲಿ (ಕಲಸಿ. ೩೭೮); ಇವರ ಮೇಲೂ ನಿನ್ನ ನಿಗಾ ಇರಲಿ (ಮುಸಿಸಾ. ೩೦). ೨. ಹೊಣೆ; ಜವಾಬ್ದಾರಿ: ಮನೆಗೆ ಬೀಗ ಹಾಕಿ . . . ಮನೆಯ ಮೇಲೆ 'ನಿಗಾ' ಒಪ್ಪಿಸಿ . . . ಹೊರಟರು (ಸುಜವಿ. ೧೮); ಮಗುವಿನ ತಂದೆಯಾದ ನಿಮಗೆ ಸ್ವಲ್ಪವೂ ನಿಗಾ ಇರಬೇಡವೇ? (ವಂಶವೃ. ೬೯). **ನಿಗ$_2$**: ೧. ಅವರ ನಿಗಕ್ಕೆ ಸುಬ್ಬುವೂ ಬಿದ್ದನು (ಅವತಂ. ೫೧); ಆಮೇಲೀನೇ ನನಗೆ ನನ್ನ ತಾಯಿಯ ಜ್ಞಾಪಕ, ಅವಳ ಸೊಸೆ ಮೇಲೆ ನಿಗ ಬಂದದ್ದು (ಚಿಂಗೂಲಿ. ೩೮).

ನಿಗಾ ಇಡು = ಗಮನಿಸು; ಲಕ್ಷ್ಯವಿಡು: ಮೇಸ್ತ್ರಿಗಳು ಕೂಲಿಗಳ ಮೇಲೆ ನಿಗಾ ಇಟ್ಟೇ ಇರುತ್ತಾರೆ (ಸಾಹೇಬ್.೧೮); ಅವನ ಮೇಲೆ ನಿಗಾ ಇಡಬೇಕೆಂದು ಆರ್ಡರ್ ಇದೆ (ಭಾರತಿ. ೨೭); ನಿಗಾ ಇಡದ ಹೊಲ ಹೊಗೆಯಾಗಿ ಹೋದೀತು (ಗಾದೆ). **ನಿಗಾ ತಕೊಳ್ಳು, ನಿಗಾ ತೆಗೆದುಕೊಳ್ಳು** = ಗಮನಕ್ಕೆ ತೆಗೆದುಕೊಳ್ಳು; ಲಕ್ಷ್ಯಕೊಡು: ಹಾಗಿದ್ದರೆ ಅಧಿಕಾರಿಗಳಾರೂ ಈ ವಿಷಯದಲ್ಲಿ ನಿಗಾ ತಕೊಳ್ಳಲಿಲ್ಲವೇ? (ದೇಶಭು. ೮೨); ನಾನು ಸ್ವಲ್ಪ ನಿಗಾ ತೆಗೆದುಕೊಳ್ಳದಿದ್ದರೆ ಈ ಮನೆಯಲ್ಲಿ, ಅವರ ಪಾಡು ಏನಾಗಬೇಕು? (ಕೂಸಿಭೀ. ೧೧೫). **ನಿಗಾ ತಪ್ಪು, ನಿಗ ತಪ್ಪು** = ಗಮನವಿಡದಿರು; ನಿರ್ಲಕ್ಷ್ಯದಿಂದಿರು: ಸ್ವಲ್ಪ ನಿಗಾ ತಪ್ಪಿದರೂ ಈ ಕೆಲಸ ಹಾಳಾಗುತ್ತದೆ(ರೂಢಿ); ನಿಗ ತಪ್ಪಿ ಸ್ವಲ್ಪ ತೇವವಾಗಿರುವ ಸ್ಥಳದಲ್ಲಿ ಇಡಲ್ಪಡುವ ತೆಂಗಿನ ಕಾಯಿ ಹೋಳುಗಳು, ಬ್ರೆಡ್, ಉಪ್ಪಿನಕಾಯಿ, ಕಳಿತ ಹಣ್ಣುಗಳು ಇವನ್ನು ಬೂಜು ಒಳ ಹೊಕ್ಕು . . . ಕೆಡಿಸಿ ಹಾಳು ಮಾಡುವುವು (ಗೃಹವಿ. ೫೬). **ನಿಗಾ ನೋಡು** = ನೋಡಿಕೊಳ್ಳು; ಕಾಯ್ದುಕೊಳ್ಳು; ಲಕ್ಷ್ಯವಹಿಸು: ಇವರೇ ಆ ಹುಡುಗನ್ನ ತಮ್ಮ ಮನೇಲಿ ಇಟ್ಟುಕೊಂಡು ನಿಗಾ ನೋಡಬೇಕಾಗಿತ್ತು (ಧರ್ಮಶ್ರೀ. ೨೬). **ನಿಗಾ ಮಡಗು** = ಲಕ್ಷ್ಯವಿಡು; ಗಮನವಿಡು: ನೀವು ಅವರನ್ನ ನಿಗಾ ಮಡಗಿ ನೋಡಿಲ್ಲ (ನಮ್ಮಳ್ಳಿ. ೧೮). **ನಿಗಾ ವಹಿಸು** = ಲಕ್ಷ್ಯ ತೆಗೆದುಕೊಳ್ಳು; ಮುತುವರ್ಜಿ ವಹಿಸು: ಜ್ಞಾನಾಂಬೆ ಪಟ್ಟಕ್ಕೆ ಬಂದ ನಂತರ, ಅಜ್ಜಿಯ, ಮೊಮ್ಮಗಳ ವಿಷಯದಲ್ಲಿ ಮೊದಲಿಗಿಂತ ಹೆಚ್ಚು ನಿಗಾ ವಹಿಸಿ ನೋಡಿಕೊಂಡಳು (ಪ್ರತಾಪ. ೧೦೧). [←ಮರಾ. ನಿಗಾ; ಪಾರ. ಹಿಂ. ನಿಗಾಹ್]

**ನಿಗಾದ** (ನಾ). ೧. ಕಂಠಪಾಠ ಮಾಡಿ ಹೇಳುವಿಕೆ; ಉರು ಹೊಡೆದು ಹೇಳುವುದು. ೨. ಗಟ್ಟಿಯಾಗಿ ಹೇಳುವ (ಹೋಮದ) ಮಂತ್ರ; ಪ್ರಾರ್ಥನೆಯ ಘೋಷಣೆ. ೩. ಸ್ಪಷ್ಟವಾಗಿ ನುಡಿಯುವಿಕೆ: "ನಿಗಾದಃ, ನಿಗದಃ—೨ ಸ್ಪಷ್ಟವಾಗಿ ನುಡಿಯುವಿಕೆ, ವ್ಯಕ್ತವಾಗಿ ಹೇಳುವಿಕೆ" (ಸಿದ್ಧಾಂತಿ. ೩೫೯). 'ನಿಗದ' ಪರಾ. [ಸಂ.]

**ನಿಗಾಬಾನಿ**, ನಿಗಾವಣೆ, ನಿಗಾವಾನಿ, ನಿಗೆವಾನಿ (ನಾ). ೧. ಮೇಲ್ವಿಚಾರಣೆ; ಉಸ್ತುವಾರಿ: ತಮ್ಮ ಸೀಮೆ ಅಕ್ಕೆಕೆ ಬಗ್ಗೂ, ನಿಗಾಬಾನಿಯಿಂದ ಮಡಗುವುದಕ್ಕೂ, ಲಡಾಯ ಪ್ರಯತ್ನಗಳು ಜರೂರು ಇದೆ (ರಾಜೇಂದ್ರ. ೧೨೩). **ನಿಗಾವಣೆ**: ೧. ಹೆಂಗಸರ ಗುಂಪಿನಿಂದ ಬಿಡುವು ಮಾಡಿಕೊಂಡು, ಮನೋರಮೆ ಮೇಲೆ ನಿಗಾವಣೆಗೆ ಬಂದಳು (ಲೀಪಪ್ರ. ೨೦); ಪೋಲೀಸಿನವರ ನಿಗಾವಣೆ ಪ್ರಾರಂಭವಾದ ಮೇಲೆ ಅಲ್ಲಲ್ಲಿಂದ ಬಂದ ಬಾತ್ಮಿಗಳಲ್ಲಿ ಯೋಗೀಶ್ವರರು . . . ಹಣ ಪಡೆದರು (ಕಲಸಿ. ೩೭೮). **ನಿಗಾವಾನಿ**: ೧. ಅದೇ ಮೇರೆ ನಿಗಾವಾನಿ ಸಾಮಾನು ತಯಾರು ಮಾಡಿಸುವುದಕ್ಕೆ ಆ ಸಾಹೇಬರು ತಮಗೆ ಬರಸಿ ಕಳುಹಿಸಿ ಇದ್ದಾರೆ (ರಾಜೇಂದ್ರ. ೧೬೧); ವೀರರಾಜೇಂದ್ರಪೇಟೆ ಮೋದಿ ಖಾನೆ ನಿಗಾವಾನಿ ಬಗ್ಗೆ ಮುನ್ನೂರು ಮಂದಿ ಮಡಗಿದರು (ರಾಜೇಂದ್ರ. ೧೯೭). **ನಿಗೆವಾನಿ**: ೨. ಎಚ್ಚರಿಕೆ; ಜಾಗರೂಕತೆ: ರಸ್ತಿನ ಸಾಮಾನವನ್ನು ನಿಗೆವಾನಿಯಿಂದ ಮಡಕೇರಿಗೆ ತಲಪಿಸಿ (ರಾಜೇಂದ್ರ.೬೨). [←ಮರಾ. ನಿಗಾಬಾನೀ; ಪಾರ. ಹಿಂ. ನಿಗಹ್‌ಬಾನೀ]

**ನಿಗಾರ**(ನಾ). ನುಂಗುವುದು; ಕಬಳಿಸುವುದು: "ನಿಗಾರಃ-ನುಂಗುವಿಕೆ" (ಸಿದ್ಧಾಂತಿ. ೩೭೮). [ಸಂ.]

**ನಿಗಾಲ**, ನಿಗಾಳ (ನಾ). "ಕುದುರೆಯ ಕತ್ತಿನ ಸಮೀಪ ಭಾಗ" (ಅಮರ. ಟೀಕೆ). **ನಿಗಾಳ**: "ನಿಗಾಳಃ . . . ಕುದುರೆಯ ಕೊರಳು ಮೇಲ್ಗಡೆಗೆ ಹೆಸರು" (ಸಿದ್ಧಾಂತಿ. ೨೫೦). [ಸಂ.]

**ನಿಗಾವಣೆ** 'ನಿಗಾಬಾನಿ' ನೋ.

**ನಿಗಾವಾನಿ** 'ನಿಗಾಬಾನಿ' ನೋ.

**ನಿಗಿ** (ನಾ). ಒಂದು ಅನುಕರಣ ಶಬ್ದ.

**ನಿಗಿನಿಗಿ** (ದ್ವಿರುಕ್ತಿ): ಆದರಿಂದ ಕುಲಿಮೆಯಲ್ಲಿ ನಿಗಿನಿಗಿ ಕಿಚ್ಚಾಗಿ (ಮುಂಬಯಿ. ೬-೧೯); ನಿಗಿನಿಗಿ ಮುಗಿಲು ನಿಗಿನಿಗಿ ಹಗಲು ಕೆಂಡವ ಕಾರುವುದು (ನಾದಲೀ. ೨೧-೧); ಸೌದೆ ಇಜ್ಜಲುಗಳನ್ನು ಹಾಕಿ ಹಚ್ಚಿ ನಿಗಿನಿಗಿ ಬೆಂಕಿಯಾಗುವಂತೆ ಮಾಡುತ್ತಾರೆ (ಮನೋನಂ. ೧೯೫). **ನಿಗಿನಿಗಿ ಉರಿ** = ಪ್ರಜ್ವಲಿಸು: ಇರುಳ ಕತ್ತಲೆಯಲ್ಲಿ ಈ ನಿಗಿನಿಗಿ ಉರಿಯುವ ಕೆಂಡದ ರಾಶಿ . . . ಕಾಣಿಸುತ್ತದೆ (ನಂಟರು. ೧೩೫). **ನಿಗಿನಿಗಿ ಕೆಂಡ** = ಪ್ರಜ್ವಲಿಸುತ್ತಾ ಉರಿಯುವ ಕೆಂಡ; ಕೆಂಪಾಗಿ ಹೊಳೆಯುವ ಕೆಂಡ: ಎದೆಯು ನಿಗಿನಿಗಿ ಕೆಂಡ ಮನವೆಲ್ಲ ಹಳವಂಡವೆಂದುಸುರುತಿತ್ತು ಒಗುವಿಗುವ ಹೊಗೆಯು (ಪಯಣ. ೮೭-೧೦).

**ನಿಗಿಚು** 'ನಿಮಿಚು' ನೋ.

**ನಿಗಿನಿಗಿಯೆನ್ನು** (ಕ್ರಿ). = ನಿಗಿನಿಗಿಸು: ಅದೊಂದು ವಜ್ರದ ಪದಕ,ನಿಜವಾಗಿಯೂ ನಿಗಿನಿಗಿಯೆನ್ನುತ್ತಿತ್ತು (ರಂಗನಾ. ೧೯೪). [<ನಿಗಿ+ಎನ್ನು(<ಎನ್$_1$)]

**ನಿಗಿನಿಗಿಸು** (ಕ್ರಿ). ಪ್ರಜ್ವಲಿಸು; ಹೊಳೆ; ಪ್ರಕಾಶಿಸು: ಬಗೆಬಗೆಯ ಚಾತುರ್ಯಕದ ವಾರನಾರಿಯರ್ ನಿಗಿನಿಗಿಪ ತನುಕಾಂತಿಯಿಂದ ಲೈತಂದರಸನೊಗುವಿಗೆಯ ಚರಣಕಾನತರಾಗಿ (ವೆಂಕಾರಾ. ೧-೬-೩೧); ನಿಗಿನಿಗಿಸುವ ಉಗುರುಗಳೊಡನೆ ಸಲಿಗೆಯಂಗೈದು (ಸೌಗಂಧಿ.೧೮೫-೨೦);

ಅಶ್ವಿನುಬ್ಬೆ ಮತ್ತು ಗುಂಡುಮುಬ್ಬೆಯರು ಚಿಗುರೊಡೆದ ಜ್ಯೋತಿರ್ಲತೆಗಳಂತೆ ನಿಗಿನಿಗಿಸಿದರು (ದಾನಚಿಂ. ೬೫); ಬೆಳಗಿನಿಂದ ಸಂಜೆಯ ತನಕ ನಿಗಿನಿಗಿಸುವ ಬಿಸಿಲು (ಮಾರ್ಗದ. ೯೭). [<ನಿಗಿ + -ಇಸು$_3$]

**ನಿಗಿರಿಸು** 'ನಿಮಿರಿಸು' ನೋ.

**ನಿಗುಂಬಿಸು** (ಕ್ರಿ). ೧. ಒಟ್ಟಾಗು ; ಒಟ್ಟುಗೂಡು ; ಗುಂಪಾಗು ; ಸಂದಣಿಸು : ಇದಿರೊಳ್ ಕಂಡಂ ನೆರೆದು ನಿಗುಂಬಿಸಿ [ಪಾಠಾಂ. ವಿಗುರ್ವಿಸಿ] ತಂಡಂಗೊಂಡಿರ್ದ ನರರ ಖಚರರ ಗುಂಡಂ (ಆದಿಪು. ೪-೩); ನಭೋಯಾನದಿಂದಮಮರವಾಹಿನಿ ಬರ್ಪ ಪರಿಕಲಿಸಿಯುಂ ತುಱುಂಬಿಯುಂ ನಿಗುಂಬಿಸಿಯುಂ ಕೇಳಿಸಿಯುಂ ನಡೆದು (ಶಾಂತಿಪು. ೧೦-೨೧ ಪ) ; ಪಣದೆರ್ದೆಯಲ್ಲಿ ತಣ್ಮಲೆವ ಸಂತಸವೆತ್ತಣದೀ ವಿಮಾನವೆತ್ತಣದಿದಿರೊಳ್ ನಿಗುಂಬಿಪಮರಾಳಿಯೆತ್ತಣದು (ಚಂದ್ರಪು. ೪-೬೪) ; ಪವಳದ ಕಂಬದ ಇಂಬಿನೊಳ್ ನಿಗುಂಬಿಸಿ ನಿಂದು ಪಾಡುವ ಕೂಡುವ ನೋಡುವ ಭಾವಸಮುಚ್ಚಯದ ಸಜೀವಮಾದ ವಿಚಿತ್ರಪುತ್ರಿಕೆಗಳ ಬಿತ್ತರಂಗಳಿಂ (ಅನಂಪು. ೧-೧೦೫ ಪ) ; ಅಮರಕೋಟಿ ತಳರ್ದುದೊಡನೆಯೆ ನೆರೆದು ನಿಗುಂಬಿಸೆ ನಿಯುಕ್ತನಿಜನಿಜವಿಭವಂ (ಪುಷ್ಪಪು. ೧೪-೪೩) ; ಕಾನನದುಚ್ಚಳಿಸಿ ಬೆಳೆದು ಲಂಬಿಸುವ ಪೆರ್ಬಿದಿರ ರವಕೆ ನಿಗುಂಬಿಸುವ ರವಿರಥತುರಗದ ವಿಡಂಬಿಸುವ ಮರ್ಕಟವನೀಕ್ಷಿಸುತಸುರರಿಪು ನಡೆದ (ಅಕ್ರೂಚ. ೫-೧೩) ; ಮುಮ್ಮೊಯ್ಯ ದುಷ್ಕೃತಿಗಳ್ ನಿಗುಂಬಿಸೆ ಬಾಟಿಕ್ಕಿಯೊಂದು ತಗದೆ ವಿಬ್ಬು ಪೊಟ್ಟಂ ಪಾರೆ (ರಾಮಾಶ್ವ. ೨೪-೩). ೨. ಒಟ್ಟಿಗೆ ಸೇರಿಸು ; ಒಂದುಗೂಡಿಸು; ರಾಶಿಮಾಡು : "ನಿಗುಂಬಿಸು—ಸಂಕೀರ್ಣ ರಾಶೌ (ನಾನಾ ಪದಾರ್ಥಗಳನ್ನು ರಾಶಿ ಮಾಡು)" (ಶಮಧಾ) ; ಕರಪುಟದಲ್ಲಿ ನೆಲ್ಲನ್ನೆತ್ತಿ ನಿಗುಂಬಿಸಿ ಕೊಂಡು (ಬಿಟ್ಟಅ. ೧೧೯-೧೧). ೩. ಹೆಚ್ಚಾಗು ; ವೃದ್ಧಿಯಾಗು : ಜಗತ್ತ್ರಿತಯ ಚಿತ್ತವಲ್ಲಭನ ವರ್ಧನೋತ್ಸಾಹದೊಳ್ ನಿಗುಂಬಿಸೆ ಮನೋಮುದಂ (ಅನಂಪು. ೫-೧೪) ; ಕುಳಿತು ತನ್ನಳವಿಯ ತತ್ತ್ವ ಸತ್ತ್ವಶ್ರೆಯ ತಿಳಿದವರೊಳು ಪಲ ಪೊತ್ತ ಕಳುಪಿ ಬೀಳ್ಕೊಂಡುದೀ ಮಾನ ನಿಗುಂಭಿ[ಬಿ]ಸಲೊಳಪೊಕ್ಕ ಸಗ್ಗದ ನೆಲೆಯಂ (ವರ್ಧಚ. ೯-೩೭).

[ನಿಗುಂಬು + -ಇಸು$_3$]

**ನಿಗುಂಬು** (ಕ್ರಿ). ೧. ಒಟ್ಟುಗೂಡು; ಸಂದಣಿಸು : 'ನಿಗುಂಬಿಸು' ಪರಾ. ೨. ರಾಶಿಹಾಕು ; ಒಟ್ಟುಗೂಡಿಸು : "ನಿಗುಂಬು—ಪುಂಜೀಕರಣೇ(ಒಟ್ಟುಗೂಡಿಸು)" (ಶಮಧಾ.) ೩. ಕುಪ್ಪಳಿಸು:"ನಿಗುಂಬಿತು = ಕುಪ್ಪಳಿಸಿತ್ತು" (ಶಮದ. ಪರಿ. ೨). [ ? ]

**ನಿಗುಂಬೂರ್** (ನಾ). ಒಂದು ಸ್ಥಳದ ಹೆಸರು : ಸಪ್ತತ್ಯಧಿಕಸ್ತ್ರೇ ನಿಗುಂಬೂರುನಾಮಗ್ರಾಮಃ (ಮೈಆರಿ. ೧೯೩೫, ೪೦-೬೭ ; 951 ? ).

[ನಿಗುಂಬ ? + ಊರ್]

**ನಿಗುಚು** 'ನಿಮಿರ್ಚು' ನೋ.

**ನಿಗುಣ** (ನಾ). ಶ್ರೇಷ್ಠವಾದ ಗುಣವುಳ್ಳವನು : ಬಿಗಿಪುಗಿಡದ ಮರ್ದು ಬಗೆಗೆಸೆವ ಗದ್ಯವಿರಚನೆಗೆ ಬಾಣಾಣಿ[೦]ದಂ ಬಣ್ಣಂ ನಿಗುಣಂಗಂ ನಿಗುಣಂ ವೃತ್ತಗುಣಂ ಪದೆ[ದೆ]ಡೆಗೆ ನಾಗವರ್ಮ ಕವೀಂದ್ರಂ (ವರ್ಧಮಾ. ೧-೨೭); "ನಿಕೃಷ್ಟ ಮತ್ತು ಉತ್ಕೃಷ್ಟ ಗುಣ" (ವರ್ಧಮಾ. ಕೋಶ).

[ಸಂ.]

**ನಿಗುತು** 'ನಿಮಿರ್' ಪರಾ.

**ನಿಗುರ್** 'ನಿಮಿರ್$_1$' ನೋ.

**ನಿಗುರಿ** (ನಾ). ನಿರಿಗೆ : ಮುಕುರವನೀಕ್ಷಿಸಿ ಜಗುಳಿದ ಚಿಕುರವ ಸೈತಿಕ್ಕಿ ನಿಗುರಿಗಳ ನೀವುತ್ತಂ ಶುಕಪಿಕನಿಕರದ ಗಾನದ[ವ] ಚಕಿತೇಣಾಂಬಕಿಯುಂ ಮುದದಿ ಲಾಲಿಸುತಿರ್ದಳ್ (ಬೀಳವಂ. ೨-೧೪೭). [ಇದು 'ನಿರಿಗೆ' ಎಂಬುದರ ಅಪಲಿಖಿತವಿರಬಹುದು]

**ನಿಗುರಿಕೆ** 'ನಿಮಿರ್ಕೆ' ನೋ.

**ನಿಗುರಿಸು** 'ನಿಮಿರಿಸು' ನೋ.

**ನಿಗುರು$_1$** 'ನಿಮಿರ್$_1$' ನೋ.

**ನಿಗುರು$_2$** 'ನಿಮಿರು$_2$' ನೋ.

**ನಿಗುರುತೆಗೆ** 'ನಿಗುರುದೆಗೆ' ನೋ.

**ನಿಗುರುದೆಗೆ,** ನಿಗುರುತೆಗೆ (ಕ್ರಿ). ಬಿಗಿಯಾಗಿ ಎಳೆ ; ನೆಟ್ಟಗೆ ಮಾಡು : ಬೆಳೆಯಬೇಕೆಂದೆನುತ ಕೈಕಾಲ್ಗಳನೊಡನೊಡನೆ ನಿಗುರು[ಪಾಠಾಂ. ರ]ದೆಗೆವಳು . . . ಕೋಮಲತನುವನೊರೆಸುವಳು (ಬಸವು. ೧೫-೯). **ನಿಗುರುತೆಗೆ :** ಬಿಗಿದ ಹಾವಿನ ಸುತ್ತಳಿದು ವಿಕ್ರಮಶಾಲಿ ನಿಗರ[ಗುರು]ತೆಗೆದು ನೋಯಿಸಲು (ತ್ರಿಪಾಲ. ೧೧-೭೪).

[ನಿಗುರು$_1$(<ನಿಮಿರ್$_1$)+ ತೆಗೆ$_1$]

**ನಿಗುರುಬಾಲ** (ನಾ). ಮೇಲೆಕ್ಕೆತ್ತಿರುವ ಬಾಲ ; ನಿಗುರಿಕೊಂಡಿರುವ ಬಾಲ : ಕನಸಿನಲಿ ಖಂಡಿತಾ ಕಂಡಿದ್ದೆ, ಕಂಡಿದ್ದ ನಿಗುರುಬಾಲದ ಕಂತ್ರಿನಾಯಿ (ಚಂಡಸು. ೩೧-೧೨).

[ನಿಗುರು$_1$(<ನಿಮಿರ್$_1$)+ ಬಾಲ$_1$]

**ನಿಗುರೊಡಲು** (ನಾ). ನೀಳವಾಗಿಸಿಕೊಂಡ ದೇಹ; ದೀರ್ಘಶರೀರ : ನಿಗುರೊಡಲ ಮುಂಬರಿವ ಚಿಮ್ಮುವ . . . ಮೃಗಮೈಗೀ ನಿಕುರುಂಬದೊಳಗಡಹಾಯ್ದುದು (ತೊರರಾ. ೩-೮-೪೫).

[ನಿಗುರು$_1$(<ನಿಮಿರ್$_1$)+ ಒಡಲು(<ಒಡಲ್)]

**ನಿಗುರ್ಗಣೆ** (ನಾ). ನೆಟ್ಟಗೆ ಹಾರುವ ಬಾಣ : ರಣವನದನೇನೆಂಬೆನೈ ಧಾರುಣಿಪತಿಯೆ ವಿಗ್ರಹದ ವಿಸ್ತಾರಣ ನಿಗುರ್ಗಣೆ ವಿಗಡಿಸಿತು ವಿಬುಧರ ವಿಡಾಯಿಗಳ (ಕುಮ್ಯಾಅ. ೧೨-೨೩). [ನಿಗುರ್(<ನಿಮಿರ್$_1$)+ ಕಣೆ$_1$]

**ನಿಗುರ್ಗುಡಿ** (ನಾ). ಮೇಲಕ್ಕೆ ಎತ್ತಿದ ಧ್ವಜ,—ಬಾವುಟ : ನಿಗುರ್ಗುಡಿಗಳೇರಿಕೆಯ ರಾಹುದಿಂ (ಪರಶು. ೩೧-೯).

[ನಿಗುರ್(<ನಿಮಿರ್) + ಗುಡಿ$_2$]

**ನಿಗುರ್ಚು** 'ನಿಮಿರ್ಚು' ನೋ.

**ನಿಗುದುರ್** 'ನಿಮಿರ್$_1$' ಪರಾ.

△ **ನಿಗುಳ್** 'ನಿಮಿರ್$_2$' ನೋ.

**ನಿಗೂಢ** (ಗು). ೧. ಮುಚ್ಚಿಟ್ಟ ; ಅವಿಚಿಟ್ಟ ; ಬಚ್ಚಿಟ್ಟ : ಸಿಂಹಾಸನಾರೂಢನಾರೂಢಯೌವನೆಯುಮಂತರ್ನಿಗೂಢ ಶೋಕೋದ್ರೇಕವಮೂಕೆಯುಮಾಗಿರ್ದ ನಿಜತನೂಜೆಗೆ ಬೞಿಯನಟ್ಟಿದಾಗಳ್ (ಆದಿಪು. ೩-೪೬ ಪ) ; ಜಡರು ನಿಜವೆಂದಕ್ಷಿಗೋಚರದೊಡಲನೇ ಬಗೆವಂತೆ ದುರ್ಮತಿ ನುಡಿಸಿದನು ನಿದ್ರಾನಿಗೂಢಶ್ರಮನೆನಿಪ ನೃಪನ (ಸಿಭಾಗ. ೧೦-೫೧-೫೦). ೨. ರಹಸ್ಯವಾದ ; ಗುಟ್ಟಾದ : ಒಂದೊಂದು ಕಥೆಯೂ ಒಂದೊಂದು ನಿಗೂಢ ತತ್ತ್ವವನ್ನು ಉದ್ದೇಶಿಸಿ ಹೊರಟದೆ (ಭಾರದ. ೧೦೨) ; ಆವರ ಮನಸ್ಸಿನ ಅಂತರಾಳದಲ್ಲಿ ಮೂಡಿದ ನಿಗೂಢ ಭಾವನೆಗಳು ಬಾನಿನಲ್ಲಿ ಮೂಡಿದ ತಾರೆಗಳಂತೆ ಮಿನುಗುತ್ತಿದ್ದುವು (ಧೂಪಸು. ೧೫). ೩. ಭೇದಿಸಲಾಗದ ; ಮರ್ಮವರಿಯಲಾಗದ. (ನಾ). ೪. ಗುಟ್ಟು ; ರಹಸ್ಯ : ನೂತನವೂ ನಿಗೂಢವೂ ಆದ ಸತ್ಯವನ್ನು ಶೀಘ್ರವಾಗಿ ಅರಿಯಬಲ್ಲ ಶಕ್ತಿಗೆ ಪ್ರತಿಭೆಯೆಂದು ಹೇಳುವರು (ಶಕ್ಷದ. ೫೬೨). [ಸಂ.]

**ನಿಗೂಢಚತುರ್ಥ** (ನಾ). [ಛಂದ] ಒಂದು ಬಗೆಯ ಪದ್ಯಬಂಧ; ಚಿತ್ರಕವಿತ್ವ: ಚ್ಯುತದತ್ತಾಕ್ಷರಮುಂ ಗೋಪಿತಕ್ರಿಯಾಕಾರಕಂ ನಿಗೂಢ ಚತುರ್ಥಂ ಪ್ರತಿನಿಯತ ಗತಪ್ರತ್ಯಾಗತಂ ದಲೆಂದಿಂತು ಪೆಱವುಮಕ್ಕುಂ ಚಿತ್ರಂ (ಕಾವ್ಯಾವ. ೫೮೭). 'ಗೂಢಚತುರ್ಥ' ಪರಾ.

[ನಿಗೂಢ + ಚತುರ್ಥ]

**ನಿಗೂಢತ್ವ** (ನಾ). ಅಡಗಿರುವಿಕೆ ; ಗುಪ್ತವಾಗಿರುವಿಕೆ : ಧ್ವನಿಯಿರುವಲ್ಲಿ ಮಾತ್ರ ಲಕ್ಷಣಾಪ್ರಯೋಜನವು ನಿಗೂಢತ್ವವನ್ನೇ ಆಶ್ರಯಿಸಿರುತ್ತದೆ (ಧ್ವನ್ಯಾಲೋ. ೪೩). [ಸಂ.]

**ನಿಗೂಢಾಂಸ** (ನಾ). ಸಣ್ಣ ಹೆಗಲನ್ನು ಉಳ್ಳವನು ; ಕುಗ್ಗಿದ ಅಥವಾ ಗುಜ್ಜಾದ ಹೆಗಲುಳ್ಳವನು : ಪಿತೃವಿತ್ತಭೋಗಿ ಕುನಖಂ ಮೆಲ್ಪಿಂದೆ ಬಲ್ಪಿಂದೆ ಸಾಧಿಸೆ ಸಾಧ್ಯಂ ನಿಪುಣಂ ಮಹೋದ್ಯಮಿ ನಿಗೂ [ಪಾಠಾಂ. ಸುಗಾ, ಸುಗೂ] ಢಾಂಸಂ ಧನುರ್ಗೇಹಜಂ (ಜಾತತಿ. ೧೭–೯). [ನಿಗೂಢ+ಅಂಸ]

**ನಿಗೂಹನ** (ನಾ). ೧. ಅಡಗಿಸುವಿಕೆ ; ಬಚ್ಚಿಡುವಿಕೆ. ೨. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ; ಗುಟ್ಟಾಗಿಡಬೇಕೆಂದಿರುವ ಸಂಗತಿಯು ಬಹಿರಂಗವಾಗುವ ಸಂದರ್ಭವೊದಗಿದಾಗ ಉಪಾಯವಾಗಿ ಅದನ್ನು ಮರೆಮಾಚುವುದು : ಉದಾ : ಪರಿವಿಡಿಗೆಯ್ಯೆ ಸೊಂದಿಗಿಳಿ ತಂದೆಯು ತಾಯು ಸವಿಸಾಪದೊಳ್ ತನೂದರಿಯು ರತೋಪಯುಕ್ತರುತಮಂ ವಿನತಾನನೆ ನಾಣ್ಚಿ ತಾಳತತ್ಪರಶಿಖಿನರ್ತನ ಪ್ರಹತಕಂಕಣಝಂಕೃತಹಸ್ತತೂರ್ಯಸುಂದರರವದಿಂದದಂ ಮುಚ್ಚಿಸಿದಳ್ ಗಡ ಮುಗ್ಧೆ ಕರಂ ವಿದಗ್ಧೆವೊಲ್ (ಶಾಂತಿಪು. ೮–೬೫) ; (ಕಾವ್ಯಾವ. ೭೪೧ ನೋ). ☞ ಈ ಪದ್ಯದಲ್ಲಿ ತರುಣಿಯು ರತಿಕೂಜಿತವನ್ನು ಮರೆಮಾಚುವುದು ಚಮತ್ಕಾರವಾಗಿ ವಿವರಿಸಲ್ಪಟ್ಟಿದೆ : ಗುಣಮನೆ ತರ್ಪುದು ದೋಷದ ಗಣನೆಗೆ ದೋಷಮುಮನಿನಿಸು ಗುಣಗಣನೆಗೆ ತಂದೊಣರ್ಪುದು ಲೇಶಂ ವಿಬುಧಾಗ್ರಣಿಗಳ್ ಕೆಲಬರ್ ನಿಗೂಹನಂ[ಪಾಠಾಂ. ಮಂ] ಲವಮೆಂಬರ್ (ಕಾವ್ಯಾವ. ೭೪೯); ನೆಗಳ್ದಿಪ್ಪ ವಸ್ತು ರೂಪದ ನಿಗೂಹನಂ ಲೇಶದಿಂದ ಭಿನ್ನಮದಾಗಲ್ (ಮಾಧವಾ. ೨–೨೫೩). [ಸಂ.]

**ನಿಗೃಹೀತ** (ಗು). ೧. ಸೆರೆ ಹಿಡಿದ ; ಸ್ವಾಧೀನಪಡಿಸಿಕೊಂಡ ; ಬಂಧಿಸಿದ. ೨. ನಿಗ್ರಹಿಸಿದ ; ದಂಡನೆಗೊಳಪಡಿಸಿದ ; ತಡೆದ. ೩. ಆಕ್ರಮಣಗೊಂಡ ; ದಮನಗೊಂಡ. (ನಾ). ೪. [ನಾಟ್ಯ] ವಿವರ್ತಿತ, ಕಂಪಿತಗಳೇ ಮೊದಲಾದ ಹತ್ತು ವಿಧವಾದ ತುಟಿಯ ವಿನ್ಯಾಸಗಳಲ್ಲಿ ಒಂದು ;☞"ತುಟಿಗಳನ್ನು ಒಳಕ್ಕೆಮಾಡಿಬಾಯನ್ನು ಮುಚ್ಚುವುದು. ಹೆಂಗಸರ ರೋಷ ಮತ್ತು ಈರ್ಷ್ಯೆ, ಬಲಾತ್ಕಾರ, ಚುಂಬನ ಇವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೨೯೯ ಗದ್ಯಾನುವಾದ) : ವಿವರ್ತಿತ, ಕಂಪಿತ, ವಿಸೃಷ್ಟ, ನಿಗೃಹೀತ, ಸಂದಷ್ಟ, ಸಮುದ್ಗ, ಉದ್ವೃತ್ತ, ವಿಕಾಶ್ಯ, ಆಯತ, ರೇಚಿತ—ಈ ಹತ್ತು ಅಧರಭೇದಂಗಳ್ (ಲಾಸ್ಯರಂ. ೩–೮೧ ವ) ; ಸಲೆಯಧರದ ಮೊಗಮೆರಡುಂ ನಲವಿಂದೊಳಗಾಗಿ ಪೊಂದೆ ನಿಗೃಹೀತಾಖ್ಯಂ (ಲಾಸ್ಯರಂ. ೩–೮೩). [ಸಂ.]

**ನಿಗೃಹ್ಯ** (ಗು). ೧. ಅಡ್ಡಿಪಡಿಸಬೇಕಾದ ; ನಿರೋಧಿಸಬೇಕಾದ. ೨. ದಂಡಿಸಲು ಯೋಗ್ಯವಾದ ; ಶಿಕ್ಷೆಗೆ ಅರ್ಹವಾದ. [ಸಂ.]

**ನಿಗೆವಾನಿ** 'ನಿಗಾಬಾನಿ' ನೋ.

**ನಿಗೋದ** (ನಾ). [ಜೈನ] ಸಾಧಾರಣವಾದ ನಾಮಕರ್ಮದ ಉದಯದಿಂದ ಉಂಟಾಗುವ ಅನಂತಜೀವಗಳಿಗೆ ಆಶ್ರಯವಾದ ಒಂದು ಶರೀರವಿಶೇಷ ; ☞ ಒಂದೇ ವಿಧವಾದ ಕರ್ಮವನ್ನು ಮಾಡಿರುವ ಅನೇಕ ಜೀವಗಳಿಗೆಲ್ಲಾ ಒಂದೇ ಶರೀರವಿರುತ್ತದೆ. ಈ ಶರೀರದೊಳಗಿನ ಜೀವಗಳಿಗೆಲ್ಲ ಜನ್ಮ , ಮರಣ, ಉಸಿರಾಡುವುದು ಇತ್ಯಾದಿ ಕಾರ್ಯಗಳೆಲ್ಲಾ ಸಮಾನರೂಪವಾಗಿ ನಡೆಯುತ್ತದೆ. ಒಬ್ಬರು ಯಾತನೆಯನ್ನು ಅನುಭವಿಸಿದರೆ ಎಲ್ಲರೂ ಅದನ್ನು ಅನುಭವಿಸಬೇಕು. ಒಂದು ಜೀವವು ಸತ್ತರೆ ಎಲ್ಲ ಜೀವಗಳೂ ಸಾಯುತ್ತವೆ. ಏಕೆಂದರೆ ಅವರೆಲ್ಲರೂ ಒಂದೇ ಪಾಪವನ್ನು ಮಾಡಿರುತ್ತಾರೆ. ಸಾಧಾರಣನಾಮಕರ್ಮದ ಉದಯದಿಂದ ಜೀವನಿಗೆ ಉಂಟಾಗುವ ಈ ನಿಗೋದಶರೀರವು ಏಳು ನರಕಭೂಮಿಗಳ ಕೆಳಗೆ ಒಂದು ರಜ್ಜು ಪ್ರಮಾಣಕ್ಷೇತ್ರದಲ್ಲಿ ತಮೋಮಯವಾದ ಶೂನ್ಯಸ್ಥಳದಲ್ಲಿರುತ್ತದೆ. ಈ ಸ್ಥಳವನ್ನು ನರಕಕ್ಕಿಂತ ಕೀಳೆಂದು ಭಾವಿಸುತ್ತಾರೆ. ಔಪಚಾರಿಕವಾಗಿ ಕೆಲವು ಕವಿಗಳು ಇದನ್ನೂ 'ನರಕ' ಎಂದರೆ ಮಹಾಹಿಂಸೆಯ ಸ್ಥಳವೆಂದು ತಿಳಿದು ಆ ಅರ್ಥದಲ್ಲಿ ಉಪಯೋಗಿಸಿದ್ದಾರೆ: ಸಂಭಿನ್ನ ಮಹಾಮತಿಗಳ್ ಗಂಭೀರ ನಿಗೋದದೊಳ್ ತಮೋಮಯದೊಳ್ ದುಃಖಾಂಭೋಧಿಯ ಕಡೆಗಾಣದೆ ಜೃಂಭಿತ ದುಷ್ಕರ್ಮದಿಂದೆ ನಮೆದಪರಿನ್ನುಂ (ಆದಿಪು. ೫–೭೬);ಸಂಭಿನ್ನನುಂ ಮಹಾಮತಿಯುಂ ನಿಗೋದಮಂಪೊಕ್ಕರ್ (ಚಾವುಂಪು. ೨೯) ; ಅವಂ ಬೀಳ್ಗುಂ ನಿಗೋದಂಗಳೊಳ್ (ಎಇ. XVIII, ೧೪೦–೧೭ ; 1082) ; ಶಿವತತ್ವವೆಮ್ಮೊಳೆ ವಿಮುಕ್ತಿಯುವೆಮ್ಮೊಳೆ ನಿಂದುದೆಂಬ ಗಾವಿಲರ ನೆಗಟಿತ್ತು ದುರ್ಯಶದೊಳೊಂದಿ ನಿಗೋದದೊಳೊತ್ತದಿಕ್ಕುಮೆ (ಸಮಪ. ೧೪–೭೨); ಮಿಥ್ಯಾಜ್ಞಾನದಿಂ ದೃಷ್ಟಿಗಾಣದೆ ನಿಗೋದದೊಳಿನ್ನುಂ ದುಃಖಮನುಣುತ್ತಿರ್ದಪರ್ (ಪೂರ್ವಪು.೩೮). 'ನಿತ್ಯನಿಗೋದ' ಪರಾ. [ಸಂ.]

**ನಿಗೋದಜೀವ**(ನಾ). [ಜೈನ] (ಯಾತನೆಯನ್ನು ಅನುಭವಿಸುವ) ಅನಂತಜೀವರ ಶರೀರಗಳಿಗೆ ಆಶ್ರಯವಾದ ಒಂದು ಶರೀರವಿಶೇಷ : ಏಕ ನಿಗೋದಶರೀರದೊಳ್ ಅತೀತಕಾಲ ನಿಖಿಲ ಸಿದ್ಧರಾಶ್ಯನಂತಗುಣಂ ಭಾವಿಕಾಲಸಿದ್ಧರಾಶ್ಯನಂತೈಕಭಾಗಮಾತ್ರಮುಪ್ಪ ನಿಗೋದಜೀವಂಗಳಿಪ್ಪುದಱಂ (ತತ್ತ್ವಪ್ರ. ೨೩೭) ; ನಿಗೋಧ[ದ]ದೊಳಂ ಪೊಕ್ಕು ನಮೆವ ಜೀವಂಗಳು ಚತುರ್ಗತಿ ನಿಗೋಧ[ದ]ಜೀವಂಗಳಕ್ಕುಂ (ಶ್ರಾವಕಾ. ೭೫–೮). [ನಿಗೋದ+ಜೀವ]

**ನಿಗೋದಶರೀರ** (ನಾ).=ನಿಗೋದಜೀವ : ಒಂದೊಂದು ನಿಗೋದಶರೀರದೊಳ್ ಅತೀತಕಾಲ ನಿಖಿಲಸಿದ್ಧರಾಶ್ಯನಂತಗುಣೈಕೇಂದ್ರಿಯಜೀವಂಗಳಿರ್ಪುವು (ತತ್ತ್ವಪ್ರ. ೩೩೧). [ನಿಗೋದ+ಶರೀರ]

**ನಿಗೋಧ** (ನಾ).=ನಿಗೋದ : ಕ್ರೋಧಿಯುಮಿರದ ಸುಗತಿಯಂ ಸಾಧಿಸಿ ರೌರವ ನಿಗೋಧಕಿಳಿಗುಂ (ಕಇ. V, ೧೧–೩೯ ; 1078). [☞ ಇದು 'ನಿಗೋದ' ಎಂಬುದರ ಅಪಲಿಖಿತ]

**ನಿಗ್ಗ** 'ನಿಗ್ಗವ' ನೋ.

**ನಿಗ್ಗಂಠ** 'ನಿಗ್ಗಂಥ' ನೋ.

**ನಿಗ್ಗಂಠಧಮ್ಮ** (ನಾ). [ಜೈನ] ಜೈನಧರ್ಮ ; ದಿಗಂಬರ ಮತ : ಈಗ ಜೈನಧರ್ಮವೆಂದು ಯಾವ ಆಚಾರವಿಚಾರಗಳಿಗೆ ತಿಳಿಯಲಾಗುತ್ತಿದೆಯೋ ಅದಕ್ಕೆ ಭಗವಾನ್ ಪಾರ್ಶ್ವನಾಥ ಹಾಗೂ ಮಹಾವೀರರ ಕಾಲಗಳಲ್ಲಿ 'ನಿಗ್ಗಂಠಧಮ್ಮ' -ಅಂದರೆ 'ನಿರ್ಗ್ರಂಥಧರ್ಮ' ಎಂದು ಕರೆಯಲಾಗುತ್ತಿದ್ದಿತು (ಜೈನಪ. ೩). [<ಪ್ರಾ. ಣಿಗ್ಗಂಥಧಮ್ಮ]

**ನಿಗ್ಗಂಥ,** ನಿಗಂಠ, ನಿಗ್ಗಂಠ (ನಾ). [ಜೈನ] ದಿಗಂಬರ ಜೈನಯತಿ; ಸವಣ : (ನಿಗ್ಗಂಥ) ಶಬ್ದವನ್ನು ಜೈನರು ಮೊದಲಿನಿಂದಲೂ ತಮ್ಮ ಗುರುವರ್ಗಕ್ಕೆ ಉಪಯೋಗಿಸುತ್ತ ಬಂದಿದ್ದಾರೆ (ಜೈನಪ. ೫೨೧). **ನಿಗಂಠ** : ಕ್ರಿ. ಪೂ. ೩ನೆ ಶತಮಾನದ ಅಶೋಕನ ಶಾಸನಗಳಲ್ಲಿ ಕೂಡ 'ನಿಗಂಠ' ಶಬ್ದವನ್ನು ಜೈನಸಂನ್ಯಾಸಿಗೆ ಪ್ರಯೋಗಿಸಲಾಗಿದೆ (ತೀರ್ಥಕ. ೧೦೯). **ನಿಗ್ಗಂಠ** : 'ನಿಗ್ಗಂಠಧಮ್ಮ' ಪರಾ. [<ಪ್ರಾ. ಣಿಗ್ಗಂಥ. /ಸಂ. ನಿರ್ಗ್ರಂಥ]

**ನಿಗ್ಗಂಥಪಾವಯಣ** (ನಾ).[ಜೈನ] ಜೈನ ಶಾಸ್ತ್ರ,—ಪ್ರವಚನ : ಇದೇ ಕಾರಣದಿಂದ ಜೈನಶಾಸ್ತ್ರಗಳಿಗೆ "ನಿಗ್ಗಂಥಪಾವಯಣ"(ನಿರ್ಗ್ರಂಥಪ್ರವಚನ) ಎಂದು ಹೇಳಲಾಗುವುದು (ಜೈನಪ.೫೨೧). [<ಪ್ರಾ. ಣಿಗ್ಗಂಥಪಾವಯಣ]

**ನಿಗ್ಗಡಿ** 'ನಿರ್ಗೇಡಿ' ನೋ.

**ನಿಗ್ಗಮ** (ನಾ). ಮುಂದೆ ಚಲಿಸುವುದು,—ನುಗ್ಗುವುದು : ಹರಿಣನಂ ಹಳಿವ ಮಾರುತನನೇಳಿಸುವ ಹರಿಸರಳನಿಳಿಕೆಯ್ವ ದೃಷ್ಟಿಗಳ ನಣಕಿಸುವ ಮನದುರವಣೆಯನಲ್ಲೆಂಬ ನಿಗ್ಗ[ಪಾಠಾಂ. ಗ]ಮದ ಲಾಗು ಬೇಗಂಗಳ . . . ಚಾರುತುರಗಕುಲವನುವಾಗಿ ನಿಂದವು (ಸೋಮಚ. ೫-೨೮) ; ಗಮನ ನಟ್ಟಿಯವಾಯ್ತು ವೇಗಭ್ರಮಣ ಜಡವಾಯ್ತು ಡಿಗಡಿಗೆ ನಿಗ್ಗಮದೊಳಗೆ ರಥವದ್ದುದು (ಕುಮಾರವ್ಯಾ. ೧೦-೨೫).
[<ಸಂ. ನಿರ್ಗಮ]

**ನಿಗ್ಗರ, ನಿಗ್ರ, ನಿಘ್ರ, ನಿರ್ಗ** (ನಾ). ೧. ಅಂಕೆ ; ಹಿಡಿತ; ಹತೋಟಿ : "ನಿಗ್ಗರ — ನಿಗ್ರಹ = ಹಿಡಿತ" (ತದ್ಭಕೋ. ೭೭). ೨. ತೊಂದರೆ ; ಕಷ್ಟ ; ಉಪದ್ರವ : ಅಸುರನ ನಿಗ್ಗರಕೆ ತನು ದಿಕ್ಕು ಢಿಗಿಲೆನುತಿರ್ದುದಿನಸುತನ (ತೊರರಾ. ೬-೩೪-೩೯) ; ಈಗಲೇ ಆ ಸಂಸಾರದ ನಿಗ್ಗರ ಬ್ಯಾಡ ಮಾರಾಯರೆ (ಬೀದಿಬ. ೩೬) ; ತನಗೆ ಮಗುವಿನ ನಿಗ್ಗರ ತಪ್ಪಿದರೆ ಸಾಕು ಎಂದಿಷ್ಟೆ ಅವಳ ಎಣಿಕೆ (ನಡೆದಾ.II, ೮೪೪); ಹಡೆದೌವನ ಬರಹೇಳ ಅತ್ತಿಮನಿ ನಿಗ್ಗರ ಬಾಳ ಇರಲಾರೆ (ಕನ್ನಜಾ. ೧೧೧). ೩. ಒತ್ತಾಯ ; ಬಲಾತ್ಕಾರ ; ನಿರ್ಬಂಧ : ಎಂದಾದರೂ ತಾಯಿ ನಿಗ್ಗರದಿಂದ ಎಣ್ಣೆ ಹಚ್ಚಿ ಎರೆಯಹತ್ತಿದರೆ, ಈಕೆ ದೊಡ್ಡ ದನಿ ತೆಗೆದು ಅಳುತ್ತಾಳೆ (ಮುಂಬಯಿ. ೧-೧೪) ; ನುಗ್ಗಿಯ ಕಾಯ ಬಗ್ಗಡವೇ ನೀನುಣದಿದ್ದರೆ ಬಲು ನಿಗ್ಗರವೇ ? (ಗಾದೆ). **ನಿಗ್ರ : ೨.** ಆ ಕಾಯಕದಿಂದ ಪದಾರ್ಥ ದೊರೆಯದೆ ನಿಗ್ರವಾಗಿರಲಾ ವೇಳೆಯಲ್ಲಿ ಶಿವನು ರಸವಾದಸಿದ್ಧನೆಂಬ ಜಂಗಮವಾಗಿ ಬಂದು ವೇಮಯ್ಯನೊಡನೆ ಇಂತೆಂದನು (ಭೈರಸೂ. ೩೪೪). **ನಿಘ್ರ : ೨.** ಆ ನಿಘ್ರಮಂ [ಪಾಠಾಂ. ನಿಗ್ರಹವ, ನಿಗ್ರಮಂ] ನೋಡಲಾಱದೀಶ್ವರನೊಬ್ಬ ಮಾನವನ ರೂಪಿನಿಂ ಬಂದಿರ್ದಾಗಳು (ಸಿದ್ಧರಾ. ೨-೫೧). **ನಿರ್ಗ : ೧.** ನಿರ್ಗವನು ತಾನಿರಿಸಿದಪೆ ನಪವರ್ಗಪದವಿಗೆ ಮನವನುಣ್ಮೆ ಸ್ವರ್ಗವನು ಜಿತಶತ್ರುವಾಗಿ ವಿಕಾರರೂಪವನು ನಿರ್ಗಮಾಗಮವಿಲ್ಲ (ನಿಭಾಗ. ೬-೧೦-೪೧).

ನಿಗ್ಗರದ ವೇಳೆ = ತೊಂದರೆಯ ಸಮಯ; ಇಕ್ಕಟ್ಟಿನ ಪರಿಸ್ಥಿತಿ: ಅಂದ ಬಳಿಕ ವೆಂಕಟದೊರೆಯು ಆ ಸ್ವಾಮಿನಿಷ್ಠ ವಂಶದ ಪ್ರತಾಪಿಯಾದ ತರುಣನನ್ನು ಇಂಥ ನಿಗ್ಗರದ ವೇಳೆಯಲ್ಲಿ ಬಹುಮಾನದಿಂದ ನೋಡಿದ್ದು ಆಶ್ಚರ್ಯವೇನು ? (ಕುಮುದಿ. ೪೬). 'ಇಗ್ಗರ' ಪರಾ.
[<ಸಂ. ನಿಗ್ರಹ]

**ನಿಗ್ಗರಿಸು** (ಕ್ರಿ). ೧. ತೊಂದರೆ ಕೊಡು ; ಹಿಂಸಿಸು ; ಕಾಡು : ನುಗ್ಗುನುರಿ ಮಾಡು ಕುಲಭೂಧರವನಲ್ಲಕಲ್ಲೋಲಮಾಳಂಬುಧಿಯನು ಒಗ್ಗರಿಸು ಸಚರಾಚರೋರ್ವಿಯ ಪದಾರ್ಥಮಂ ನಿಗ್ಗರಿಸು ನಿಟಿಲಲೋಚನನನು (ಸಮ್ಮಕಾ. ೫-೩೬) ; "ನಿಗ್ರಹಿಸು ; ಕೆಡಹು ; ಜಯಿಸು" (ಪ್ರಭಣ್ಣ); ಕರುಣವಿಲ್ಲದೆ ಮೋಹಕೆ ಕಂಟಕಿಯಾಗಿ ಪಿರಿದು ನಿಗ್ಗರಿಸಲು ನೀನು ಹರಣವ ಬಿಟ್ಟೆ ಬಳಿಕ ನಾನು ಬಿಡುವೆನು ಸರಸಕಲಾಕೋವಿದನ (ನೇಮಿಸಂ. ೧೦-೧೪೬). ೨. ತೊಂದರೆಗೊಳಗಾಗು; ಹಿಂಸೆಪಡು : ಹಳ್ಳಿಗಳಲ್ಲಿ ಸಣ್ಣ ಮಕ್ಕಳನ್ನು 'ಭರಮಪ್ಪ'ನು ಹಿಡಿದುಕೊಳ್ಳುವದುಂಟು. ಆಗ ಕೂಸುಗಳು ನಿಗ್ಗರಿಸಿ ಅಳಹತ್ತುವುವು (ಕನ್ನಜಾ. ೨೨).
[ನಿಗ್ಗರ + – ಇಸು₃]

**ನಿಗ್ಗವ, ನಿಗ್ಗ** (ನಾ). ಆನೆಯ ಕೋರೆ ; ಹಸ್ತಿದಂತ : "ನಿಗ್ಗವಂ ಗಜದಂತಂ" (ಶಮದ.ಪರಿ. ೨); ದಿಗ್ಗಜದ ನಿಗ್ಗವಮನುಡಿವಂತೆ ವಿಯಚ್ಚರಪತಿಯು ನಚ್ಚಿನ ಖರದೂಷಣರಂ ಕೊಂದು (ಪಂಪರಾಮಾ. ೯-೧೯೪ ಪ) ; ಚಂದದ ನಿಗ್ಗವಂಗಳ ಲಸನ್ಮುಸಲಗಳನಾಂತು ಪಾಡುತಂ ಕುಂದದೆ ವೈಣವಂಗಳನೆ ಕುಟ್ಟುತೆ ಕಣ್ಗೆಸೆದರ್ ಪುಳಿಂದಿಯರ್ (ಉದ್ಭಟ. ೨-೯೦); ಉಗುರೊಳೌಂಕುವ ನಿಗ್ಗವದೊಳೆಬ್ಬಿಗಿಯ ಮಾಡುವ ಕಾಲುಗೋಲೆಯಲಿ ವಿಗಡಕರಿ ತುಳಿದಾಡಿತಿದಿರಿದಿರಾದ ಪಟುಭಟರ (ಕುಮಾರವ್ಯಾ. ೩-೧೬) ; ನಿಗ್ಗವದೊಳೇಡಿಱಿಯೆ ಕುಲಪರ್ವತಂಗಳುಂ ನುಗ್ಗುನುಸಿಯಪ್ಪುವು (ಚಿಚಪು. ೨೮-೧೧) ; ಬವರಂಗೆಯ್ದು ಗಜಂಗಳ ನಿವಹದ ನಿಗ್ಗವಮ ದುಡಿದು ಸೂಸಿರೆ ನೆಲದೊಳ್ (ರಾಜಶೇ. ೫-೭೧). **ನಿಗ್ಗ :** ಸಿಂಗದೆಳೆವಣಿಯ್ಯಂಗುರಂಗಳಂ . . . ಪೆರ್ವಂದಿಗೊರೆಗಳ ಬಡಿಗೋಲ್ಗಳಿಂ ಸುಂಗೈದ ನಿಗ್ಗಗಳ ಗದೆಗಳಿಂ . . . ಎಸೆದ ವನಚರರೆಱೆಯರಂ ಕಂಡಳು (ಮದೇಪು. ೩೧-೨೩). [ ? ]

**ನಿಗ್ಗವಂಗೀಳು** (ಕ್ರಿ). ಆನೆಯ ದಂತವನ್ನು ತೆಗೆ,—ಕೋರೆ ಹಲ್ಲನ್ನು ಕೀಳು : ಕಡಲೇಳನೊಡಗಲಿಸಲೋ ಚಂದ್ರಸೂರ್ಯರನು ಪೊಡವಿಗಿಳುಪಲೊ . . . ದಿಗ್ಗಜಂಗಳ ನಿಗ್ಗವಂಗಿತ್ತು ತಂದಿರಿಸಲೋ (ಸಾಳ್ವಭಾ. ೨೫-೩). [ನಿಗ್ಗವ + ಕೀಳು₁(<ಕೀೞ್₁)]

**ನಿಗ್ಗವಣೆ** (ನಾ). ( ? ) : ನಿನದತ್ಸಂಧ್ಯಾನಕಂ ನಿಗ್ಗವಣೆಯ ಪಱೆ ಪೂರ್ವಾಚಲಂ ತುಂಗರಂಗಂ ತನಗಾದತ್ತೆಂಬಿನಂ ನೀಲಿಯ ಜವನಿಕೆ ವೋಲ್ ಪಿಂಗೆ ಸಂಧ್ಯಾತಮಂ ಮೆಲ್ಲನೆ ತಾರಾನೀಕಪುಷ್ಪಾಂಜಲಿಯ ನೆಸೆವಿನಂ ಸೂಸಿ ತತ್ಪೂರ್ವರಂಗಕ್ಕನುಗೈವುದ್ಯನ್ನಿಶಾನರ್ತಕಿಯು ವದನ ದಂತಿಂದು ಕಣ್ಗೆಡ್ಡವಾದಂ (ಚಂದ್ರಪು. ೮-೩೦). [ ? ]

**ನಿಗ್ಗಳ** (ನಾ). ಕೀಳಾದವನು ( ? ) : ದಶಮುಖನಿಂದ ಬಲಿಮುಖರಗ್ಗಳರೊ ನಿಗ್ಗ[ಪಾಠಾಂ. ರ್ಗ]ಳರೊ ಚಿತ್ತಯಿಸು ಸಂಧಿಸದೆ ಭೀತಿಯನು (ತೊರರಾ. ೫-೮-೫೮). [ ? ]

**ನಿಗ್ಗಾವು** (ನಾ). ಹೆಚ್ಚಾದ ಕಾವು; ಅಧಿಕವಾದ ತಾಪ: ಚಿತ್ತವಿದು ಚೆಂಬೊನ್ನು ವಿಷಯದ ಮೊತ್ತವೇ ಕರುವದರ ನೆನವೇ ಬಿತ್ತಿಗೆಯು ನಿಗ್ಗಾವು ಮೋಹದೊಳೆರೆಯಲದರೊಳಗೆ ಮತ್ತೆ ಬೇರೊಂದಾಕೃತಿಯ ತಾಂ ಪತ್ತುವದೆ (ವಿವೇಭ. ೧೩-೪೨). [<ನಿಡಿದು₁ + ಕಾವು₂(<ಕಾಯ್ಪು₁)]

**ನಿಗ್ಗು** (ನಾ). (ಕರಾ) ದಟ್ಟಣೆ ; ಸಂದಣಿ ; ನೂಕುನುಗ್ಗಲು : ಆ ಬಂಡಿಯನ್ನು ಭಕ್ತಕೋಟಿ ಒಳಗೂ ಹೊರಗೂ ಆವರಿಸಿ, ಉಳಿದ ಪ್ರಯಾಣಿಕರಿಗೆ ಎಡೆಯಿಲ್ಲದಷ್ಟು ನಿಗ್ಗನ್ನುಂಟುಮಾಡಿತ್ತು (ಅಳಿಸಿ. ೭) ; ಎಲ್ಲ ನಿಬ್ಬಣಿಗರೂ ಒಂದೇ ಕಡೆ ಇರುವುದೆಂದರೆ, ಒಟ್ಟು ನಿಗ್ಗಾಗುತ್ತದೆ (ಮರಮ. ೧೭೩). [←ತುಳು. ನಿಗ್, ನಿರ್ಗ್]

**ನಿಗ್ಗೆಡಿ** 'ನಿರ್ಗೇಡಿ' ನೋ.

**ನಿಗ್ಗೆಡಿತನ** (ನಾ). ಅವಿವೇಕ ; ದಡ್ಡತನ : ಎಲೆ ಗಾಂಪ ಸಮಸ್ತ ನಂಟರಂ ಮಡದಿಯನಿಪ್ಪರಂ ಕಿಡಿಸಿ ದುರ್ಗತಿವೋಗದೆ ಬರ್ಪುದೆಂದು ನಿಗ್ಗೆಡಿತನದಿಂ ಸಬಾಂಧವಜನಂ ತೆಗೆದಪ್ಪಿದರಾ ಮುನೀಂದ್ರನಂ (ಧರ್ಮಾಮೃ. ೮-೮೪). [ನಿಗ್ಗೆಡಿ (<ನಿರ್ಗೇಡಿ) + –ತನ]

**ನಿಗ್ಗೊಳ** (ನಾ). ಒಂದು ಬಿರುದು ( ? ) : ಕೊಙ್ಗಣಿ ಅರಸರ ಆಳು ಎಱದು ಸತ್ರೊನ್ ಭಾನುದಾಸನ್ ಜಯಮಿತ್ರನ್ ಊನರ ವೈಶಿಕನ್ ಒಡಿವೆಚ್ಚಿ ರಾಯಿಂಳನ್ನಿಗ್ಗೊಳನ್ಮನುಜಾಗರನ್ (ಮೈಆರಿ.೧೯೩೯, ೨೨-೧೪; ಸಂ. 790). [ ? ]

**ನಿಗ್ರ** 'ನಿಗ್ಗರ' ನೋ.

**ನಿಗ್ರಂಥನ** (ನಾ). ಸಂಹಾರ ; ಕೊಲೆ. [ಸಂ.]

**ನಿಗ್ರಹ** (ನಾ). ೧. ಅಂಕೆ ; ಹಿಡಿತ ; ಹತೋಟಿ ; ದಮನ : ಈ ವ್ಯಕ್ತಿತ್ವದಲ್ಲಿ ಸಮಗ್ರತೆಯಿದೆ, ಸಮತೂಕವಿಲ್ಲ ; ಉತ್ಸಾಹವಿದೆ, ನಿಗ್ರಹವಿಲ್ಲ (ಕಸಾಚ.೧೭೧). 'ಮನೋನಿಗ್ರಹ' ಪರಾ. ೨. ಹಿಂಸೆ; ಪೀಡೆ: "ನಿಗ್ರಹಂ ಪೀಡನಂ ಸ್ಪರ್ಶನಂ ಗ್ರಹಣಮೆನಲು ಹಿಡಿಹಂ" (ಮಂಗರಾ. ೧೩೦-೧೭) ; ಪೊದೆದಾತನನಱಯದಂತೆ ಪೊದೆದ ಮಡಿ ಬಟಱಯಂ ಧೂಳಿಯೊಳ್ ಮಾಸಿಯುಸಗನ ಬಾರಿಯೊಳ್ಪಿ ದುರ್

ನಿಗ್ರಹಕ್ಕೊಳಗಪ್ಪಂತೆ ಚಪಳರ್ . . . ದುಃಖಂಬಡುವರ್ (ಧರ್ಮಾಮೃ. ೪-೩೮) ; ಕುಡಿದೌಷಧಂ ಬಾಯ್ಗೆ ನಿಗ್ರಹಂ ಮಾಡಿ ತಾಳ್ದೊಡಲಿಂಗೆ ಸುಖವನೀವಂತೆ (ಹಚಕಾ. ೧೪-೩) ; ಪಲವಂದದ ನಿಗ್ರಹದಿಂ ಕೊಲಿಸಿ ದೊಡಾ ಮೊಸಳೆ ತನುವನುಱದು . . . ಬಱಕೆಯ್ಯನೊಗೆದುದಾಡಿನ ರೂಪಿಂ (ಯಶೋಚ. ೩-೪೯). **೩.** ಶಿಕ್ಷೆ ; ದಂಡನೆ : ತಳಾಱನಂ ಕರೆದು ಬೇಗಂ ಕಳ್ಳನನಾರಯ್ಯಲ್ಲದಾಗಳ್ ಕಳ್ಳಂಗೆ ತಕ್ಕ ನಿಗ್ರಹಮಂ ನಿನಗೆ ಮಾಡಿಪ್ಪೆನೆಂದರಸನಾತನಂ ಬಗ್ಗಿಸಿ ನುಡಿದೊಡೆ (ವಡ್ಡಾರಾ.೧೫-೧೦); ಪೊನ್ನನಾವ ಪ್ರಕಾರದೊಳಮಾಗಿಯುಮಾರಯ್ದು ತಂದು ಕುಡುವದಂತಲ್ಲದೊಡೆ ಕಳ್ಳಂಗೆ ಮಾಳ್ಪ ನಿಗ್ರಹಮಂ ನಿನಗೆ ಮಾಳ್ಪೆಂ (ಸುಕುಮಾ. ೭-೮ ಪ) ; ಹಿಂದಿನ ನಿಗ್ರಹ ರೀತಿಯ ಕಾರ್ಯಕ್ರಮಗಳು ಮಾರ್ಪಟ್ಟು ಮಕ್ಕಳ ಮನೋವಿಜ್ಞಾನವನ್ನನುಸರಿಸಿ ಹೊಸರೂಪವನ್ನು ತಾಳುತ್ತಿವೆ (ಶಿಕ್ಷದ. ೬೮೮). **೪.** ಸೋಲಿಸುವುದು ; ಪರಾಭವಗೊಳಿಸುವುದು : ತಪೋಬಲಂ ಕುಶಿಕಾತ್ಮಜಂಗೆ ನಿಗ್ರಹಕಿರ್ಪೊಡಂ; ನಿನ್ನ ತನುಜಾತರಭ್ಯುದಯಕಾಗಿ ಬಂದಿಹನಿಂದು ಕೇಳ್ ಸಾಕೇತಪುರಿಗೆ (ಶ್ರೀರಾಪಾ. ೩೦-೭೭). **೫.** ಯಾತನೆ ; ನೋವು: 'ನಿಗ್ರಹಂಬಡು' ಪರಾ. **೬.** ಎಲ್ಲೆ ; ಮಿತಿ. **೭.** ಸಾಲ. **೮.** ನಿಂದೆ ; ಬಯ್ಗುಳು. **೯.** ಬಂಧಿಸುವುದು ; ಸೆರೆ ಹಿಡಿಯುವುದು. **೧೦.** ದೇವತೆ. **೧೧.** ಹಿಡಿಕೆ ; ಹಿಡಿ. **೧೨.** (ರೋಗವನ್ನು) ಅಧೀನಕ್ಕೆ ತರುವುದು,—ಗುಣಪಡಿಸುವುದು ; ಚಿಕಿತ್ಸೆ. **೧೩.** ಜುಗುಪ್ಸೆ ; ಅಸಹ್ಯ. **೧೪.** [ನ್ಯಾಯ]ನ್ಯಾಯವಾದದ ಒಂದು ದೋಷ; ▷ ನೈಯಾಯಿಕನು ವಾದದಲ್ಲಿ ದೋಷಯುಕ್ತವಾಗಿ ವಾದಿಸಿ ಸೋಲನ್ನು ಅನುಭವಿಸುವುದು. **೧೫.** [ನಾಟ್ಯ] ನೃತ್ಯದ ಇಪ್ಪತ್ತು ಹಸ್ತವಿನ್ಯಾಸಗಳಲ್ಲಿ ಒಂದು ವಿಧ : ಧೂನನ . . . ನಿಗ್ರಹ, ಉತ್ಕೃಷ್ಟ . . . ಈ ಇಪ್ಪತ್ತು ಕರಕರ್ಮ ಭೇದಂಗಳ್ (ಲಾಸ್ಯರಂ. ೪-೧೩ ಪ). [ಸಂ.]

**ನಿಗ್ರಹಂಗೆಯ್** (ಕ್ರಿ). **೧.** ಹಿಂಸಿಸು ; ಪೀಡಿಸು : ಚಿತ್ರಸೇನೆಯುಂ ಸೋಮಿಲೆಯೊಳಪ್ಪ ವೈರಸಂಬಂಧದಿಂ . . . ವೃಷಭಸೇನಂಗೆ ಭಾರ್ಯೆಯಾಗೆ ತನ್ನ ನಿದಾನವೈರಸಂಬಂಧದಿಂ ಚಂದನೆಗೆ ನಿಗ್ರಹಂಗೆಯ್ದಳ್ (ಚಾವುಂಪು. ೪೦೧) ; ಕುಡು ಕೊಂಡೊಡಮೆಯುನೀಗಳೆ ಕುಡದಿರ್ದಡೆ . . . ಪಿಡಿದೊಯ್ದು ಮೆಟ್ಟುವೆಂ ಪೆರ್ಗಿಱಯೊಳ್ ಎಂದು ರೌದ್ರಾಟೋಪಮಂ ಪಣ್ಣಿ ನಿಗ್ರಹಂಗೆಯ್ಯಲೆಂದಿರ್ಪುದುಂ (ಧರ್ಮಾಮೃ. ೧೨-೨೩೦). **೨.** ಶಿಕ್ಷಿಸು ; ದಂಡಿಸು ; ದಂಡನೆಗೆ ಗುರಿಮಾಡು. [ನಿಗ್ರಹ + ಕೆಯ್$_1$]

**ನಿಗ್ರಹಂಬಡು** (ಕ್ರಿ). ಯಾತನೆಯನ್ನು ಅನುಭವಿಸು ; ಹಿಂಸೆಪಡು : ನಿಗ್ರಹಂಬಡುವೆಮಗಭಯವನನುಗ್ರಹಿಸಿ ಕಾಯಿರೆ ಸದಾಚಾರಾಗ್ರಗಣ್ಯರು ನೀವು (ಬಸವು. ೫೬-೪೫). [ನಿಗ್ರಹ + ಪಡು$_1$]

**ನಿಗ್ರಹಪಡಿಸು** (ಕ್ರಿ). ತೊಂದರೆ ಕೊಡು ; ಕಾಡು ; ಹಿಂಸಿಸು : ನಿಗ್ರಹಪಡಿಸದೆ ಪ್ರಜೆ ಪರಿವಾರವ ಪೆಗ್ಗಳದಿಂ ತುಷ್ಟಿಬಡಿಸು (ಮೋಹತ. ೧೩-೧೧). [ನಿಗ್ರಹ + ಪಡಿಸು]

**ನಿಗ್ರಹಶಂಕೆ** (ನಾ). ಪೀಡೆಯ ಹೆದರಿಕೆ ; ಹಿಂಸೆಯ ಭಯ : ತಂತಮ್ಮ ಸರ್ವಸ್ವಮಂ ಕೊಟ್ಟನುಗ್ರಹಂಬಡೆಯದೆ ನಿಗ್ರಹಶಂಕಾಭರಾತಂಕಿತಹೃದಯರಾದ ಅಂಗ ವಂಗ . . . ಮರುಪ್ರಭೃತಿಭೂಪಾಲಕರಿಂ (ಜಗನ್ನಿ. ೨-೩೯ ಪ). [ನಿಗ್ರಹ + ಶಂಕೆ]

**ನಿಗ್ರಹಸ್ಥಾನ** (ನಾ). [ನ್ಯಾಯ] ನ್ಯಾಯದರ್ಶನಗಳಲ್ಲಿ ಹೇಳಿರುವ ಹದಿನಾರು ಪದಾರ್ಥಗಳಲ್ಲಿ ಒಂದು; ವಿದ್ವತ್ಸಭೆಗಳಲ್ಲಿ ನಡೆಯುವ ವಾಕ್ಯಾರ್ಥಗಳಲ್ಲಿ ಪರಾಜಯಕ್ಕೆ ಕಾರಣವಾದುದು ; ▷ ವಿದ್ವತ್ಸಭೆಗಳಲ್ಲಿ 'ವಾಕ್ಯಾರ್ಥ'ವೆಂಬ ಹೆಸರಿನಿಂದ ಕರೆಯಲಾಗುತ್ತಿದ್ದ ಚರ್ಚೆಯಲ್ಲಿ ಭಾಗವಹಿಸಿದ್ದ ವಿದ್ವಾಂಸನು ಪರಾಜಿತನಾದನೆಂದು ನಿರ್ಣಯಿಸಲು ಕೆಲವು ಲಕ್ಷಣಗಳಿದ್ದುವು. ಅವಕ್ಕೆ 'ನಿಗ್ರಹಸ್ಥಾನ'ವೆಂಬ ಹೆಸರು ಪ್ರಸಿದ್ಧವಾಗಿದ್ದಿತು. ಈ ತಪ್ಪುಗಳನ್ನು ಮಾಡದೆ ಎಚ್ಚರಿಕೆಯಿಂದ ಚರ್ಚೆಯಲ್ಲಿ ಭಾಗವಹಿಸುವುದು ವಿದ್ವಾಂಸನ ಕರ್ತವ್ಯ. ನ್ಯಾಯಶಾಸ್ತ್ರದಲ್ಲಿ ೨೨ ನಿಗ್ರಹಸ್ಥಾನಗಳನ್ನು ಹೇಳಿದ್ದಾರೆ. ಅವುಗಳು ಹೀಗಿವೆ :— **೧.** ಪ್ರತಿಜ್ಞಾಹಾನಿ : ಒಂದು ನಿರ್ದಿಷ್ಟ ವಿಷಯವನ್ನು ಪ್ರತಿಪಾದಿಸುವುದಾಗಿ ಆರಂಭಿಸಿ ಆ ವಿಷಯವನ್ನೇ ಬಿಟ್ಟು ಭಾಷಣ ಮಾಡುವುದು. **೨.** ಪ್ರತಿಜ್ಞಾಂತರ : ತಾನು ಒಂದು ಗೊತ್ತುವಳಿಯನ್ನು ಪ್ರತಿಪಾದಿಸಲು ಪ್ರಾರಂಭಿಸಿ ವಿರೋಧಿಗಳಿಂದ ಬಂದ ಆಕ್ಷೇಪಣೆಗಳನ್ನು ಸರಿಪಡಿಸಲು ಮೊದಲು ಸೂಚಿಸದಿದ್ದ ತಿದ್ದುಪಡಿಗಳನ್ನು ಸೇರಿಸಿಕೊಳ್ಳುವುದು. **೩.** ಪ್ರತಿಜ್ಞಾವಿರೋಧ : ಸಾಧಿಸಬೇಕಾದ ವಿಷಯಕ್ಕೆ ವಿರೋಧವಾದ ದೃಷ್ಟಾಂತಗಳನ್ನು ಕೊಡುವುದು. **೪.** ಪ್ರತಿಜ್ಞಾಸಂನ್ಯಾಸ : ತಾನು ಸಾಧಿಸಲು ಹೊರಟ ವಿಷಯದ ಬಗೆಗೆ ಎದುರಾಳಿಗಳು ಆಕ್ಷೇಪಣೆಯೆತ್ತಲು ಅದನ್ನು ಪರಿಹರಿಸಲಾರದೆ ತಾನು ಸಾಧಿಸಬೇಕಾದ ವಿಷಯವನ್ನು ಕೈಬಿಡುವುದು. **೫.** ಹೇತ್ವಂತರ : ಪ್ರತಿಪಕ್ಷಕ್ಕೆ ಸೇರಿದ ವ್ಯಕ್ತಿಯು ಮಾಡಿದ ದೋಷಾರೋಪಣೆಯನ್ನು ಒಪ್ಪಿಕೊಂಡು ತಾನು ಹಿಂದೆ ಹೇಳದಿದ್ದ ಕಾರಣಗಳನ್ನು ಹೇಳಲು ಪ್ರಾರಂಭಿಸುವುದು. **೬.** ಅರ್ಥಾಂತರ : ತನ್ನ ಪಕ್ಷದ ಸಾಧನೆಗೆ ಅನಾವಶ್ಯಕವಾದ ವಿಷಯವನ್ನು ಹೇಳಲು ಹೊರಡುವುದು. **೭.** ನಿರರ್ಥಕ : ಅರ್ಥವೇ ಇಲ್ಲದ ಅಂದರೆ ಅವಾಚಕವಾದ ಪದಗಳನ್ನು ಸೇರಿಸಿ ಮಾತನಾಡುವುದು. **೮.** ಅವಿಜ್ಞಾತಾರ್ಥ : ಅರ್ಥವಿಲ್ಲದ ಮಾತುಗಳನ್ನು ಉಪಯೋಗಿಸುವುದು. **೯.** ಅಪಾರ್ಥಕ : ತನ್ನ ವಾದಕ್ಕೆ ಬಾಧಕವಾಗುವಂತೆ ಅಸಂಗತವಾದ ಮಾತುಗಳನ್ನಾಡುವುದು. **೧೦.** ಅಪ್ರಾಪ್ತಕಾಲ : ಇಷ್ಟೇ ವಿಷಯವು ಚರ್ಚನೀಯವೆಂಬ ನಿಯಮವಿದ್ದರೂ ಅದನ್ನು ಬದಿಗೊತ್ತಿ ಸಂಬಂಧಪಡದ ಯಾವುದೋ ವಿಷಯವನ್ನು ಎತ್ತಿ ಮಾತನಾಡುವುದು. **೧೧.** ನ್ಯೂನ : ಪ್ರತಿಪಾದಿಸಬೇಕಾದ ವಿಷಯಕ್ಕೆ ಸ್ವಲ್ಪವೂ ಸಾಧಕವಾಗದ ಉಪವಿಷಯಗಳನ್ನು ಎತ್ತಿ ಮಾತನಾಡುವುದು. **೧೨.** ಅಧಿಕ : ಸಾಧಿಸಬೇಕಾದ ವಿಷಯಕ್ಕೆ ಸಾಧಕವಾದ ಹಿತಮಿತವಾದ ಕಾರಣಗಳನ್ನು ಕೊಡದೆ ಅಪ್ರಾಸಂಗಿಕವಾದ ಅನೇಕಾನೇಕ ಕಾರಣಗಳನ್ನು ಹೇಳುತ್ತಾ ಹೋಗುವುದು. **೧೩.** ಪುನರುಕ್ತ : ಹೇಳಿದುದನ್ನೆ ಮತ್ತೆ ಮತ್ತೆ ಹೇಳುತ್ತಿರುವುದು. **೧೪.** ಅನನುಭಾಷಣ : ನಿರ್ಣಾಯಕರು ಒಂದು ವಿಷಯವನ್ನು ಮೂರಾವರ್ತಿ ತಿಳಿಸಿದರೂ ಅದನ್ನು ಅನುಸರಿಸದಿರುವಿಕೆ. **೧೫.** ಅಜ್ಞಾನ : ವಾದಿಯು ಮೂರುಸಲ ಹೇಳಿದ ವಿಷಯವನ್ನು ಸಭೆಯು ತಿಳಿದುಕೊಂಡರೂ ಪ್ರತಿವಾದಿಯು ತಿಳಿದುಕೊಳ್ಳದಿರುವುದು. **೧೬.** ಅಪ್ರತಿಭೆ : ಎದುರಾಳಿಯು ಕೇಳಿದ ಪ್ರಶ್ನೆಯು ಉತ್ತರಿಸಲು ಅರ್ಹವಾಗಿದ್ದರೂ ಉತ್ತರ ಕೊಡಲು ಹೊಳೆಯದಿರುವುದು. **೧೭.** ವಿಕ್ಷೇಪ : ಇಲ್ಲದ ನೆಪವನ್ನು ಹೇಳಿ ವಾದವನ್ನು ನಿಲ್ಲಿಸಿ ಹೊರಟುಹೋಗುವುದು. **೧೮.** ಮತಾನುಜ್ಞೆ : ಪ್ರತಿಪಕ್ಷಕ್ಕೆ ಸೇರಿದ ವ್ಯಕ್ತಿಯು ಮಾಡಿದ ದೋಷಗಳನ್ನು ನಿವಾರಿಸದೆ ಆ ವ್ಯಕ್ತಿಯ ಮೇಲೆ ದೋಷಗಳನ್ನು ಹೇಳುವುದು. **೧೯.** ಪರ್ಯನುಯೋಜ್ಯೋಪೇಕ್ಷಣ : ನಿಗ್ರಹಸ್ಥಾನವನ್ನು ಪಡೆ

ದಿರುವವನಿಗೆ ಕೂಡಲೆ ಆ ದೋಷವನ್ನು ತಿಳಿಸದೆ ಉಪೇಕ್ಷೆ ಮಾಡುವುದು. ೨೦. ನಿರನುಯೋಜ್ಯಾನುಯೋಗ : ನಿಗ್ರಹ ಸ್ಥಾನಕ್ಕೆ ಅವಕಾಶವಿಲ್ಲದಿದ್ದರೂ ಇದೆಯೆಂದು ಆಕ್ಷೇಪಿಸುವುದು. ೨೧. ಅಪಸಿದ್ಧಾಂತ : ಚರ್ಚೆಯಲ್ಲಿ ಅಂಗೀಕರಿಸಿರುವ ನಿರ್ಣಯ ವನ್ನು ತಿರಸ್ಕರಿಸುವುದು. ೨೨. ಹೇತ್ವಾಭಾಸ : (೧. ಬೆಂಕಿ ಯೊಂದು ವಸ್ತುವಾದುದರಿಂದ ಅದು ಬೆಟ್ಟದಲ್ಲಿದೆ. ೨. ಕೃತಕ ವಾದುದರಿಂದ ಶಬ್ದವು ನಿತ್ಯವಾದುದು. ೩. ಕಣ್ಣಿಗೆ ಕಾಣುವುದ ರಿಂದ ಶಬ್ದವು ನಿತ್ಯವಾದುದು ಎಂಬಂತೆ) ಸಾಧಿಸಬೇಕಾದ ವಿಷಯ ; ಸಾಧ್ಯಕ್ಕೆ ವಿರೋಧಕಾರಿಯಾದ ದುಷ್ಟಕಾರಣ ಗಳನ್ನು ಕೊಡುವುದು : ಪ್ರತಿವಾದಿ ನಿರುತ್ತರನಾಗಿ ಪಕ್ಷಪರಿತ್ಯಾಗಂ ನಿಗ್ರಹಸ್ಥಾನಮೆಂಬುದಱಿಂ ನಿಗ್ರಹಸ್ಥಾನಮನೆಯ್ದಿಯುಮಿರದೆ . . . ಸುಗತಮತಮಂ ಪಿಡಿದಂ (ಶಾಂತಿಪು. ೮–೧೪೧ ಪ) ; ಗೌತಮೋಕ್ತ ನ್ಯಾಯವು ಪ್ರಮಾಣ . . . ನಿಗ್ರಹಸ್ಥಾನಗಳೆಂಬ ಷೋಡಶಪದಾರ್ಥಂ ಗಳಂ ನಿರೂಪಿಸುತ್ತ (ವಿವೇಕ. ೧೦) ; ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ ಸಿದ್ಧಾಂತ ಅವಯವ ತರ್ಕ ನಿರ್ಣಯವಾದ ಜಲ್ಪ ವಿತಂಡಾ ಹೇತ್ವಾಭಾಸ ಛಲ ಜಾತಿ ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದಸಾ.೧೧೨). 'ಷೋಡಶ ಪದಾರ್ಥ' ಪರಾ. [ನಿಗ್ರಹ+ಸ್ಥಾನ]

**ನಿಗ್ರಹಿಸು** (ಕ್ರಿ). ೧. ಅಂಕೆಗೊಳಪಡಿಸು ; ಹತೋಟಿಗೆ ತರು : ಮನಮಂ ನಿಗ್ರಹಿಸುತ್ತ ಸದ್ವಿಷಯದತ್ತಲ್ ಪೊರ್ದದಂತಾಗೆ ಮಾಡಿ . . . ಲೋಕೈಕನಾಥನ ನಾನಾಗಳನಾಥೆಯೆಂ ಶರಣೆನುತ್ತಾಶ್ರೈಸಿದೆಂ ಸ್ಥಾಣುವಂ (ಕಾದಂಪೂ. ೯೫೩) ; ಬಹುವಿಧದೊಳಂತಾರುಹತರಾಗ್ರಹಿಸಿ ಕೊಲಲಾಱದೆ ಬಳಿಕ ನಿಗ್ರಹಿಸಿ ತಮ್ಮಂ ಕೊಲುವನೋ ಎಂದೆಯ್ದೆ ಮೊಱೆಯೊಕ್ಕು (ಬಸಪು. ೪೯–೪೦) ; ಎಲೆ ಗಿರಿಜಾತೆ ನೋಡಿವನ ಸಾಹಸಮಂ . . . ನಿಗ್ರಹಿಸಿರ್ದ ಶರೀರದಿಂದದೇಂ ಕಲಿಯೊ ಕಡಂಗಿ ಕಾದಿದನಿವಂ ಸಮದಂಡಿ ಯೊಳೆನ್ನೊಳರ್ಜುನಂ (ಶಬಶಂ. ೪–೬೬). ೨. ಪೀಡಿಸು ; ಹಿಂಸಿಸು : ಬೆಟ್ಟಿತ್ತಾಗಿ ಬಯ್ದು ಕಿನಿಸುವುದುಂ ಗಜಱುವುದುಂ ಬಡಿವುದುಂ ನಿಗ್ರಹಿ ಸುವುದುಂ ಇಱಿವುದುಂ ಕೊಲ್ವುದುಂ ಎಂದಿಂತನೇಕ ಲಕ್ಷಣಮಾಗುಳ್ಳುದು ಹಿಂಸಾನಂದಮೆಂಬ ರೌದ್ರಧ್ಯಾನಮಕ್ಕುಂ (ಪಸಾರ. ೩೮೧).

[ನಿಗ್ರಹ+–ಇಸು$_3$]

**ನಿಗ್ರಾಹ** (ನಾ). ೧. ಶಿಕ್ಷೆ ; ದಂಡನೆ. ೨. ಕೆಡುಕು ಬಗೆಯುವುದು. ೩. ನಿಂದೆ. [ಸಂ.]

**ನಿಘ** (ಗು). ೧. ಅಗಲ ಮತ್ತು ಎತ್ತರಗಳು ಸಮವಾಗಿರುವ. (ನಾ). ೨. ಸಮವಾದ ಪ್ರದೇಶ ; ಜಗಲಿ : "ನಿಘ ಶಬ್ದವು ಉದ್ದವು, ಅಗಲವು, ಹಳ್ಳವು, ಎತ್ತರವುಯಿಲ್ಲದೆ ಸರಿಯಾಗಿರುವ ಜಗುಲಿ ಮೊದಲಾದವುಗಳ ಹೆಸರು" (ಗುರುಬಾ. ೫೨ ಮೂರನೆಯ ಕಾಂಡ). ೩. ಗುಂಡಾದುದು ; ಚೆಂಡು. ೪. ಪಾಪ. [ಸಂ.]

**ನಿಘಂಟು** (ನಾ). ೧. ಶಬ್ದಾರ್ಥಗಳ ಕೋಶ ; ಶಬ್ದಕೋಶ ; ಅರ್ಥಕೋಶ : ಛಂದಮಲಂಕಾರಂ ನಿಘಂಟು ಕಾವ್ಯ ನಾಟಕಂಗಳುಂ . . . ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮಂ ನೆಱೆಯೆ ಕಲ್ಪಿಸಿ (ಪಡ್ಡಾರಾ. ೩–೨೮) ; ಸಮುದಿತ ಸಂಖ್ಯಾವ್ಯಯರಹಿತಮೆನಿಸಿ ವರ್ತಿಪ ನಿಘಂಟುವಿನ ನಾಮಪದೋತ್ತಮವರ್ಣಪ್ರಕೃತಿಗಳಂ ಸಮ ಸಂಸ್ಕೃತವೆಸರನಿಟ್ಟು ಲಿಂಗಂ ಮಾಣ್ಬರ್ (ಶಪದ. ೮೦) ; ನಿಘಂಟುಗಳಲ್ಲಿ ಜನಸಾಮಾನ್ಯರಿಗೆ ಗೌರವ ಹುಟ್ಟುವುದು ಅಪೂರ್ವ ; ನಿಘಂಟು ಒಂದು ಗ್ರಂಥವೆಂದು ಒಪ್ಪದವರೇ ಹಲವರಿದ್ದಾರು (ಸಮಾಲೋ. ೨೬೬) ; ಮಗ ನಿಂದ ಕಾಗದ ಬಂದರೆ ಒಡನೆನಗರ್ಥಕೆ ಬೇಕು ನಿಘಂಟು (ಇಂಚಾಪ. ೧೬೯–೩೪). ೨. ನಿಶ್ಚಿತವಾದುದು ; ಖಚಿತವಾದುದು ; ಖಾತ್ರಿ ಯಾದುದು : ಒಂದು ಮೊಳದ ಅಳತೆಯನ್ನು ತಾಮ್ರದ ಪಟ್ಟಿಯಲ್ಲಿ ನಿಘಂಟು ಮಾಡಿ . . . ವಿಭಾಗ ಮಾಡಿದರು (ಶಿಲ್ಪನಾ. ೩೯). ೩. ಯಾಸ್ಕಾಚಾರ್ಯರಿಂದ ವಿರಚಿತವಾದ ನಿರುಕ್ತವೆಂಬ ವೇದದ ಶಬ್ದಗಳ ಕೋಶ.

**ನಿಘಂಟಾಗಿ ಹೇಳು** = ಖಾತ್ರಿಯಾಗಿ ಹೇಳು ; ಖಚಿತವಾಗಿ ಹೇಳು : ಕೆಲವು ವಿಚಾರಗಳಲ್ಲಿ ಹೀಗೇ ಸರಿ ಎಂದು ನಿಘಂಟಾಗಿ ಹೇಳು ವುದು ಕಷ್ಟ (ರೂಢಿ). **ನಿಘಂಟಾಗು** = ಖಾತ್ರಿಯಾಗು ; ಖಚಿತವಾಗು ; ನಿಖರವಾಗು : ನಿಘಂಟನ ಹೇಳಿಕೆ ನಮ್ಮ ಜನತೆ ಅನ್ನುವಂತೆ "ನಿಘಂಟಾ"ಗ ಬೇಕಾದರೆ ಎಷ್ಟು ಕಾಲ ಎಷ್ಟು—ದುಡಿದರೂ ಸಾಲದು (ಸಮಾಲೋ. ೨೭೦). [ಸಂ.]

**ನಿಘಂಟುಪ್ರಮಾಣ** (ನಾ). ನಿರ್ಧಾರವಾದ ಆಧಾರ ; ಖಚಿತ ವಾದ ಪುರಾವೆ : ಹರಿಯ ಕಾಲೊಳು ಗಂಗೆ ಜನಿಸಿತೆಂದು ಧಾರುಣಿಯ ಮೂಢ ಪರಸಮಯಿಗಳು ಬಗುಳುವರು . . . ಅದಱಾ ವಿಚಾರವೆಂತೆನೆ ನಿಘಂಟುಪ್ರಮಾಣದೊಳೊರೆವೆನು (ವೀಶೈಪು. ೩–೧೪–೨೩).

[ನಿಘಂಟು + ಪ್ರಮಾಣ]

**ನಿಘಂಟುಸಮಯ** (ನಾ). ಶಬ್ದಕೋಶ ರಚನೆಯ ತತ್ವ ಅಥವಾ ನಿಯಮ ; ನಿಘಂಟು ಶಾಸ್ತ್ರ,—ಸಿದ್ಧಾಂತ : ಅಭಿಧಾನಲಿಂಗಾಂಗೀ ಕೃತಮಪ್ಪ ನಿಘಂಟುಸಮಯಮುಮಂ ತತಾರ್ಯವೃತ್ತಕಮಪ್ಪ ನಾಟ್ಯ ವಿದ್ಯೆಯುಮಂ . . . ತ್ರಿದಶವರ್ಗಕ್ಕುಪದೇಶಂಗೆಯ್ಯುತ್ತುಂ (ಶಾಂತಿಪು. ೧೦–೯೦ ಪ). [ನಿಘಂಟು + ಸಮಯ$_1$]

**ನಿಘರ್ಷಣ** (ನಾ). ತೀಡುವಿಕೆ ; ಉಜ್ಜುವಿಕೆ ; ಘರ್ಷಣೆ : ಸಿದ್ಧಾರ್ಥದ ಸೇಸೆಗಳನಿಕ್ಕಿದೊಡೆತ್ತಾನುಮುದಿರ್ದು ಬಿರ್ದ ಸಿತಸರ್ಷಪ ಸ್ಪರ್ಶನಿಘರ್ಷಣದಿಂ ಪದುಳಮಿರಲಱಿಯದೆ (ಸುಕುಮಾ. ೧೧–೩೫ ಪ) ; ಕರಟನಿಘರ್ಷಣದೆ ಮದಂಬೊರೆದಾನೆಯ ಕೈಯನಳಿಗಳಾವರಿಸಿದವೋಲ್ ಮರಕತಕಂಕಣಮೆಸೆದುವು ತಿರುವೊಯ್ಲಿಂ ಕರ್ಪುವೆತ್ತ ತತ್ಕರಯುಗ ದೊಳ್ (ಚಂದ್ರಪು. ೬–೬೦) ; ನಿಘರ್ಷಣಚ್ಛೇದನ ತಾಪನತಾಡನಾದಿ ಕ್ರಿಯೆಗೆಲ್ಲಂ ಬಂದೊಡೆ ಪೊನ್ನೊಳ್ಪಿತ್ತು (ಜೀಪಸಂ. ೫೧–೨೬ ಪ). [ಸಂ.]

**ನಿಘರ್ಷಿಸು** (ಕ್ರಿ). ೧. ಉಜ್ಜು ; ತೀಡು ; ತಿಕ್ಕು. ೨. ಪುನಃ ಪುನಃ ಚರ್ಚಿಸು,—ಆಲೋಚಿಸು : ಪ್ರತ್ಯಕ್ಷಾನುಮಾನಂಗಳಿಂ ಕಾರ್ಯಾಕಾರ್ಯಂಗಳನುಪಧಾವಿಶುದ್ಧ ಮಂತ್ರಿಮಂಡಳದೊಳವಿರತಂ ನಿಘರ್ಷಿಸಿಯುಂ (ಚಂದ್ರಪು. ೨–೬೦ ಪ). [ನಿಘರ್ಷಣ + –ಇಸು$_3$]

**ನಿಘಸ** (ನಾ). ೧. ತಿನ್ನುವುದು ; ಆಹಾರಸೇವನೆ ಮಾಡುವುದು : "ಜಗ್ಧಿಃ, ಭೋಜನಂ, ಜೇಮನಂ, ಲೇಪಃ, ಆಹಾರಃ, ನಿಘಸಃ, ನ್ಯಾದಃ—೭ ಭೋಜನದ ಹೆಸರುಗಳು, ಊಟ, ಆರೋಗಣೆ" (ಸಿದ್ಧಾಂತಿ. ೨೯೧). ೨. ಆಹಾರಪದಾರ್ಥ ; ತಿಂಡಿ. [ಸಂ.]

**ನಿಘಾತ** (ನಾ). ೧. ಏಟು ; ಹೊಡೆತ : ಚಕ್ರನಿಘಾತದಿನಿಕ್ಕಿ ಬೀರ ಮುರ್ವಿಗೆ ಪಡಿಚಂದಮಾಗಿ ತಱಿದೊಟ್ಟಿ ಜಯಾಂಗನೆಗಾಣ್ಮನಾದಪೆಂ (ಪಂಪಭಾ. ೧೨–೨೦೮) ; ಅಡಿ ಕಾಲಿಟ್ಟೆಡೆಗಿಡೆ ನಿಘಾತದಿಂ ಪೊಯ್ದೊ ಡಾಂಕೆಗೊಂಡಣ್ಕೆ ಕಾದಿದರ್ ಕಡುಗಲಿಗಳ್ (ಗದಾಯು. ೮–೯) ; ಶಿರದ ಸೀಸಕವನು ನಿಘಾತದಲೆರಡು ಶರದಲಿ ಮತ್ತೆ ಭೂಪತಿಯುರವನೆಗುಳಿದ ನೆಂಟಱಲಿ ಮಗುಳೆಚ್ಚು ಬೊಬ್ಬಿಱಿದ (ಕುಮ್ಯಾಶ. ೩–೪೪). ೨. ನಾಶ ; ಧ್ವಂಸ : ಪಾತಕವ್ರಾತಪ್ರಜಾತನಿಕೇತನಂಗಳು ತುಡುಗುಣಿಗಳು ನಿಘಾತಕರ್ಮಕ್ರಿಯೆಗಳವಿಚಾರಿಗಳು (ಬಸಪು. ೪೦–೬೫) ; ದಾನವರ ಘಟ್ಟಣೆಯ ಕೀಲಣದಾ ನಗರಿಯನು ನೆಗ್ಗಿದಂತಿರಲೀ ನಿಘಾತದ ಸೇನೆ ಮುಱಿದುದು ಭಟನ ಭಾರಣೆಗೆ (ಕುಮ್ಯಾಕ. ೧೩–೧೩). [ಸಂ.]

**ನಿಘೃಷ್ಟ** (ಗು). ೧. ಉಜ್ಜಿದ; ತಿಕ್ಕಿದ: ಪರಿಣಯುನಾರ್ಥಂ ಭಾಸುರಸುರಮಕುಟನಿಘೃಷ್ಟ ಚರಣಕಮಲನನುದ್ಯದ್ವರದನನಾದಿತ್ಯನನಾದರದಿಂದಂ ನೆನೆದು (ಪಂಚತಂ. ೨೫೭-೧೭). ೨. ಏಟು ತಿಂದ; ಸೋಲಿಗೊಳಗಾದ; ಪರಾಧೀನವಾದ. [ಸಂ.]

**ನಿಘ್ನ** (ಗು). ೧. ಅಧೀನವಾದ; ವಶವಾದ. (ನಾ). ೨. ಅಧೀನನಾದವನು; ವಶವಾದವನು: ಅಧಿಕಚಿಂತಾನಿಘ್ನನಾಗಿ ವಿಹಿತಧ್ಯಾನದಿಂದೆ ಲಕ್ಷ್ಮೀನಾಥನಂ . . . ಕಾಣಲ್ಕೆ (ಪದ್ಮರಾ. ೧೦-೧೨). ೩. ಪರರ ವಶದಲ್ಲಿರುವವನು; ಪರಾಧೀನನಾದವನು: "ನಿಘ್ನಂ ಪರವಶವರ್ತಿ" (ಪಸ್ತುಕೋ. ೧೧೧-೨೧); "ಪರವಶಂ ನಿಘ್ನಂ ಪರಾಧೀನನೆಂದೆನಲು . . . ಪರರ ವಶದವನಕ್ಕು" (ಮಂಗರಾ. ೬೪-೭). [ಸಂ.]

**ನಿಘ್ರು** 'ನಿಗ್ಗರ' ನೋ.

**ನಿಚಯ** (ನಾ). ೧. ಗುಂಪು; ಸಮೂಹ: "ಪಟಳವೆಂಬು(ದದು) ನಿಚಯದೊಳಂ" (ವಸ್ತುಕೋ. ೧೩೪-೧೨೩); ದೇವಾಪ್ಸರೋನಿಚಯ ನಿಚಿತಮಪ್ಪ ದೇವವಿಮಾನಮಂ ಪೊಕ್ಕಾಗಳ್ (ಪಂಪಭಾ. ೮-೨೭ ಪ); ಉಜ್ವಲದಶನನಿಚಯತಾಂಬೂಲಚರ್ವಣಭರಿತಕಪೋಲರುಂ . . . ಆಗಿ (ಜಗವಿ. ೪-೮೦ ಪ); ಮದನಂಗೀಶ್ವರ ಶತ್ರು ಬಂಧು ನಿ ಚ ಯ ಕ್ಕಂ ಜಾರೆಯೇ ಶತ್ರು (ಸೋಮೇಶ. ೫೭); ಬಿರುಗಾಳಿ ಬೆದರಿಕೆ ಭೂರುಹ ನಿಚಯಕೆ ಮಂಜಿನ ಭಯವಬ್ಜವನಕೆ (ಇಂಚಾಪ. ೧೫೪-೮೦). ೨. ನಿಸ್ಸಂದೇಹವಾದ ನಂಬಿಕೆ; ಖಂಡಿತವಾದ ಭಾವನೆ; ನಿಶ್ಚಯ. [ಸಂ.]

**ನಿಚಿತ** (ಗು). ೧. ಸೇರಿದ; ಕೂಡಿದ: ಪ್ರಚಾರತೆಯಿಂ ಪ್ರಥಮಾಬಹುವಚನಂಗಳವೇಕವಚನಕ್ಕೆ ತಲಿಂಗಂಗಳ್ ನಿಚಿತವಿಸರ್ಗಮನುಬಿಡದಂದು (ಶಮದ. ೮೭). ೨. ತುಂಬಿದ; ವ್ಯಾಪ್ತವಾದ: ಆತ್ಮೀಯಚೇತೋನಿಚಿತಮೋಹಾಂಧತಮಸ್ತೋಮಮಂ ಕಳೆದು (ಆದಿಪು. ೨-೧೭ ಪ); ಸಕಲವಿನೇಯಜನ ವಿಲೋಚನ ಚಂಚರೀಕ ನಿಚಯ ನಿಚಿತಾಶೋಕಾನೋಕಹನುಂ (ಅಜಿಪು. ೭-೨೦ ಪ). ೩. ಅತಿಶಯವಾದ; ವಿಶೇಷವಾದ: ಪ್ರಚುರದಿ ಪದಿನೆಂಟುರಚನೆಯ ಕಾವ್ಯಕೆ ರಚಿಸುವರಾನಂತು ಪೇಳೆ ಉಚಿತಕೆ ತಕ್ಕಪ್ಪು ಪೇಳ್ವೆನಧ್ಯಾತ್ಮವೆ ನಿಚಿತಪ್ರಯೋಜನವೆನಗೆ (ಭರತೇ. ೧-೧೫); ಅಧ್ಯಾತ್ಮವೇ ನಿಚಿತಪ್ರಯೋಜನವಾಗಿ ಉಳ್ಳ ಭಾರತೀಯರ ಸಾಹಿತ್ಯದಲ್ಲಿ ಸರ್ವವ್ಯಾಪಿಯಾಗಿರುವ ಒಂದುಭಾವವನ್ನೇ-ಭಗವತ್ಪ್ರೇಮವನ್ನೇ—ಇಲ್ಲಿಯೂ ನಾವು ಎದುರುಗೊಳ್ಳುತ್ತೇವೆ (ಭಾವಗೀ. ೧೮೬). (ನಾ). ೪. ತುಂಬಿದುದು; ವ್ಯಾಪ್ತವಾದುದು: ಉದಯಗಿರಿಕಟಕಕುಹರಪರಿಕರ [ನಿಶಾಕರ]ಹರಿ[ದ]ಳಿತ ನಿಜಹರಿಣರು[ಧಿ]ರನಿಚಯನಿಚಿತಮಾದಂತೆ ಲೋಹಿತಾಂಗನಾಗೆ (ಪಂಪಭಾ. ೪-೯೫ ಪ); ಆ ಮೇರುಗಿರಿಯ ದಕ್ಷಿಣದಿಶಾಭಾಗದೊಳನೇಕನಗರನಿಗಮಾಗ್ರಹಾರಗ್ರಾಮನಿಕರಖೇಟಖರ್ವಟಮಟಂಬಪತ್ತನದ್ರೋಣಾಮುಖಸಂವಾಹನಿಚಯನಿಚಿತಮುಂ (ಜಗವಿ. ೨-೧ ಪ); ಯಮನ ನಾಲಗೆಯ ತೆಱದಿಂದಮತಿಭಯಂಕರ ಸುತೀಕ್ಷ್ಣ ಶಸ್ತ್ರಂಗಳಿನಾದಮೆ ನಿಚಿತಮಾದ ಶಾಲಾಸಮುದಯಮನಿಶಂ ಬೆಡಂಗನವಗಯಿಸಿರ್ಕುಂ (ಚಾಪು.೧-೧೫೨). ೫. ಗುಂಪು; ಸಂದಣಿ: "ಆಚಿತಂ, ನಿಚಿತಂ . . . ಭರಿತಂ, ಪೂರ್ಣಂ—ಈ ೯ ಸಂದಣಿ" (ಹಲಾಯು. ೧೧೬-೧೭); "ಭರಿತಂ ಪ್ರಪೂರ್ಣಮಾಚಿತಂ ನಿಚಿತಮಾಕುಳಂ ಪರಿಕೀರ್ಣಮಾಚ್ಛದನಮೆನಲು ಸಂದಣಿಯಕ್ಕು" (ಮಂಗರಾ. ೧೨೪-೯). [ಸಂ.]

**ನಿಚಿತಂ** (ಅ). ನಿಶ್ಚಯವಾಗಿ: ಪರಕೃತಿಯುಕ್ತಿಯನೊಲ್ದುಪಹರಿಸುವ ಕಳ್ಳಂಗೆ ಕಾವ್ಯಕೃತಕೃತ್ಯಮದೇಂ ಪರಕೃತಿಯುಕ್ತಿಯನಱಿಯದ ದುರುಳಂಗಂ ಜಱಿದು ಮೆಱೆವುದುಚಿತಂ ನಿಚಿತಂ (ಕವಿಮಾ.ರ. ೧-೧೭). [<ನಿಚಿತ]

**ನಿಚಿತವಚನ** (ನಾ). ಅತಿಶಯವಾದ ನುಡಿ,—ಮಾತು: ಇನಿತೇಟಿಕೆ ವಿವಾದಾಡಂಬರದೊಳಳುಂಬಮೊದವಿ ನಿಲೆ ಪಾಸುಂಪೊಕ್ಕುಂಬರಿದು ನಿಚಿತವಚನಕದಂಬಕಮೆರ್ದೆಗೊಳಿಸೆ ಸಭೆಯ ವಿಬುಧಾವಳಿಯಂ (ಶಾಂತಿಪು. ೮-೧೨೪). [ನಿಚಿತ+ವಚನ]

**ನಿಚಿತಹರುಷ** (ನಾ). ೧. ಹೆಚ್ಚಾದ ಹರ್ಷ,—ಸಂತಸ. ೨. ಅತಿಶಯವಾದ ಸಂತಸವನ್ನು ಹೊಂದಿದವನು: ನಿಚಿತಹರುಷರು ವಿಶ್ವಕರ್ಮಂಗಱುಹಿದರು ಹದನ (ಕುವ್ಯಾಕ. ೭-೧). [ನಿಚಿತ+ಹರುಷ]

**ನಿಚುಲ, ನಿಚುಳ** (ನಾ). ೧. ಒಂದು ಬಗೆಯ ಸಸ್ಯ; ಹಬಸೆ ಗಿಡ: "ವಂಜುಲಃ, ನಿಚುಲಃ—ಈ ೨ ಹಬಸೇಗಿಡದ ಪೆಸರ್" (ಹಲಾಯು. ೩೨-೪೨). ೨. ಒಂದು ಬಗೆಯ ಮರ; ನೀರುಹಲಸು. ೩. ಒಂದು ಬಗೆಯ ಕಣಿಗಿಲೆ ಮರ; ತೊರೆಗಣಿಗಿಲೆ: "ನಿಚುಲ, ಅಂಬುಜ, ಹಿಜ್ಜಲ—ತೊಱೆಗಣಗಿಲೆ" (ನಾಚಿರಾ. ೬.). ೪. (ಒಳಅಂಗಿಯ ಮೇಲೆ ತೊಡುವ)ಮೇಲಿನ ಅಂಗಿ; ಕವಚ. **ನಿಚುಳ**: ೧. "ನಿರ್ಜುಳ ನಿಚುಳ[ಪಾಠಾಂ. ಲ]ಮಾರಂ" (ಮಂಗರಾ. ೩೪-೧೦). ೨. "ನಿಚುಳಃ, ಅಂಬುಜಃ, ಇಜ್ಜಲಃ—೩ ಗನ್ನೇರಳೇಗಿಡದ ಹೆಸರುಗಳು. ಇದನ್ನು ನೀರುಹಲಸಿನ ಗಿಡವೆನ್ನುವರು" (ಸಿದ್ಧಾಂತಿ. ೧೨೫); ಅದಱೊಂದೊಂದೆಡೆ ಸಾಳತಾಟಲವಳೀಹಿಂತಾಳನಾಳೀತಮಾಳದಿಂ . . . ಒಂದೊಂದೆಡೆ ಭೂರ್ಜ ಕೋಳನಿಚುಳಾಕ್ಷೋಣಿಂಗಳಿಂದೊಪ್ಪುಗುಂ (ವರ್ಧಮಾ. ೫-೪೮). [ಸಂ.]

**ನಿಚುಳ** 'ನಿಚುಲ' ನೋ.

**ನಿಚೋಲ, ನಿಚೋಳ** (ನಾ). ೧. ಮೇಲಂಗಿ; ಕವಚ. **ನಿಚೋಳ**: ೨. ಹಾಸಿಗೆಯ ಮೇಲೆ ಹಾಸುವ ವಸ್ತ್ರ: "ನಿಚೋಳಃ, ಪ್ರಚ್ಛದಪಟಃ—೨ ಮೇಲುಹಾಸಿಗೆ, ಹಾಸಿಗೆ ಮೇಲೆ ಹಾಸುವ ನೌರುಬಟ್ಟೆ" (ಸಿದ್ಧಾಂತಿ. ೨೦೪). [ಸಂ.]

**ನಿಚೋಲಕ, ನಿಚೋಳಕ** (ನಾ). = ನಿಚೋಲ ೧. **ನಿಚೋಳಕ**: ಪದನಖದೀಪ್ತಿಮಂಜರಿ ನಿಚೋಳಕದಂತಿರೆ ತನ್ನ ನಾವಗಂ ಪುದಿಯಲೊಡಂ ಬಿಗುರ್ವಣೆ ರಘೂದ್ವಹಸನ್ನಿಧಿಯಿಂದದೃಶ್ಯಮಪ್ಪುದುಂ (ಪಂರಾಮಾ. ೫-೮೭). [ಸಂ.]

**ನಿಚೋಳ** 'ನಿಚೋಲ' ನೋ.

**ನಿಚೋಳಕ** 'ನಿಚೋಲಕ' ನೋ.

**ನಿಚ್ಚ೧** (ನಾ). ಪ್ರತಿದಿನ; ಪ್ರತಿನಿತ್ಯ.

**ನಿಚ್ಚಕ್ಕಂ** = ನಿತ್ಯದ ಭಿಕ್ಷೆಗೆ,— ಆಹಾರಕ್ಕೆ: ದುರ್ವಾಸಮಹಾಮುನಿಯರೆಮ್ಮ ಮನೆಗೆ ನಿಚ್ಚಕ್ಕಂ ಬರ್ಪರ್ (ಪಂಪಭಾ. ೧-೧೧೫ ಪ); **ನಿಚ್ಚಕ್ಕೆ** = ಪ್ರತಿನಿತ್ಯವೂ; ಪ್ರತಿದಿನವೂ: ಮನವೇ ಸರ್ಪ ತನುವೇ ಹೇಳಿಗೆ . . . ಇನ್ನಾವಾಗ ತಿಂದಹುದೆಂದಱಿಯೆ ನಿಚ್ಚಕ್ಕೆ[ಪಾಠಾಂ. ನಿಚ್ಚನಿಚ್ಚಕ್ಕೆ]ನಿಮ್ಮ ಪೂಜಿಸಬಲ್ಲೊಡೆ ಅದೇ ಗಾರುಡ (ಬಸವ. ೧೬೦). **ನಿಚ್ಚಕ್ಕೆ ನಿಚ್ಚ** = ನಿರಂತರವಾಗಿ; ಒಂದೇ ಸಮನೆ: ನಿಚ್ಚಕ್ಕೆ ನಿಚ್ಚ ಒತ್ತೆಯ ಬೇಡಿದಡೆ ಅಚ್ಚಿಗವಾಯಿತವ್ವಾ ನಮ್ಮ ನಲ್ಲಂಗೆ (ಅವಚಂ. ೨೫-೨೦೬); ನಿಚ್ಚಕ್ಕೆ ನಿಚ್ಚ[ಪಾಠಾಂ. ನಿಚ್ಚಕ್ಕೆ, ನಿಚ್ಚನಿಚ್ಚ]ನೆನೆವ ಮನವ ಅಂದಂದಿಂಗೆ ಅತ್ತಲಿತ್ತ ಹರಿವ ಮನವ ಚಿತ್ತದಲ್ಲಿ ನಿಲಿಸಬಲ್ಲಡೆ ಬಚ್ಚಬಱಿಯ ಬೆಳಗು ಗುಹೇಶ್ವರಲಿಂಗವು (ಅವಚಂ. ೭೮-೩೫೧). **ನಿಚ್ಚಕ್ಕೆ ಬರು** = ನಿತ್ಯದ ಕೂಟಕ್ಕೆ ಬರು,— ಆಗಮಿಸು: ನೆಲ ಹುಟ್ಟಿದಂದಿನ ಧವಳಾರ ಧವಳಾರದೊಳಗೊಬ್ಬ ಸೂಳೆ ನೋಡಯ್ಯ ತಲೆಯಿಲ್ಲದಾತ ನಿಚ್ಚಕ್ಕೆ ಬಪ್ಪ ಕರುಳಿಲ್ಲದಾತ ಕುಂಟಣಿಯಾದ ನೋಡಯ್ಯ

(ಅಪಚಂ. ೯೯-೪೪೫). ನಿಚ್ಚದ ಕಾಹು=ಎಡೆಬಿಡದೆ ಕಾಯುವ ಕಾವಲು ; ನಿತ್ಯದ ಕಾವಲು : ಮಹಾರಥರುಮತಿರಥರುಂ ಜೋದರುಂ ನಿಚ್ಚದ ಕಾಹಿನ ಬಂಟರನಟಿದು ಪಡಿಬಲಮಂ ಕೂಡಿ ಕೆರಳ್ದರ್ (ರಾಪೂತ್ಕ. ೯೪-೧). ನಿಚ್ಚನಿಚ್ಚಕ್ಕೆ=ನಿಚ್ಚಕ್ಕೆ ನಿಚ್ಚ : ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದರೆ ನಿಚ್ಚನಿಚ್ಚಕ್ಕೆ [ಸಾಠಾಂ. ನಿಚ್ಚನಿಚ್ಚ]ಕೆಸಱಹುದಲ್ಲದೆ ಅದಱಚ್ಚುಗ ಬಿಡದಣ್ಣಾ (ಬಸವ. ೯೩). ನಿಚ್ಚಲ್, ನಿಚ್ಚಲು=೧. ನಿತ್ಯವೂ ; ಪ್ರತಿದಿನವೂ : ಮಕ್ಕಳಂ ಬೇಡಿ ಪನ್ನೆರಡುವರುಷಂಬರೆಗಂ ನಿಚ್ಚಲುಂ ಶ್ರೀವಿಹಾರಕ್ಕೆ ಪೋಗಿ ಶ್ರೀಯರಾದೇವತೆಯನರ್ಚಿಸುತ್ತಂ . . . ಇರೆ (ಪಡ್ಡಾರಾ. ೧೦೮-೨); ಇಪ್ಪತ್ತುಗದ್ಯಾಣ ಪೊನ್ನೊಟ್ಟು ಪಡದರ್ ನಿಚ್ಚಲೊನ್ದು ಪರಿವಡಿಯಂ (ಎಕ. X, ಕೋಲಾರ. ೫೭-೧೨ ; 925); ನಿಚ್ಚಲುಮೋರಂತಿರೆ ಕಾವರ್ (ಪಂಪಭಾ. ೫-೮೧) ; ನಿಮಗೆ ಕರಿಗಳ್ ದೊರೆಕೊಳ್ವನ್ನಂ ನಿಚ್ಚಲೊಂದೊಂದು ಮೃಗವನಟ್ಟುವೆವು (ಪಂಚತಂ. ೮೮-೯) ; ನಿಚ್ಚಲುಂ ತಱಂಟುದಲೆಯುಂ ಕಂಡಲ್ಲದುಣವೇಡೆಂಬುದುಂ (ಧರ್ಮಾಮೃ. ೨-೧೭೬) ; ವನಾಂತದಲಾದ ಚಿತ್ರವ್ಯಥೆಯ ಕೇಳಿದು ಬೆಂದುದೆನ್ನೊಡಲು ಆ ದಿವಾಕರನಂತೆ ನಿಚ್ಚಲು ಕಾದುದುದಯಾಸ್ತಮಯದಲಿ ದನುಜಾದಿ ಖಳರೊಡನಟವಿಗೋಟಲೆಯೆಂದು ಬಿಸುಸುಯ್ದ (ಕುವ್ಯಾಅ. ೧೭-೯) ; ಕಂತುರಾಯನ ಸತ್ಕುಮಾರಕನು . . . ನಿಚ್ಚಲೊಂದೊಂದು ವಿನೋದ ವಿಶೇಷವನಚ್ಚರಿಯೆನೆ ತೋಱುತಿರ್ದ (ನೋಹತ.೧೭-೬೪). ೨. ಯಾವಾಗಲೂ; ಸದಾ : ಪರಿಣತ ಜೈನತತ್ತ್ವರುಪದೇಶಕರೆನ್ನಯ ಚಿತ್ತಗೇಹದೊಳ್ ಭರವಸದಿಂ ಪ್ರಕಾಶಿಸುಗೆ ನಿಚ್ಚಲುಮುತ್ತಮಬೋಧರತ್ನಮಂ (ಬಾಧಪು. ೧-೪) ; ನಿಚ್ಚಲರ್ಜಿಸಿ ತಂದ ಬತ್ತವು ವೆಚ್ಚಕಿಬ್ಬಳವಾಗಿ ಕುಂದವು ಹೆಚ್ಚವದಱಿಂ ಜಂಗಮಾವಳಿಗೊಲಿದು ಮಾಡುತ್ತ . . . ಅಸಮಭಕ್ತಿಸಮುನ್ನತಿಯೊಳಿರಲು (ಬಸವು. ೨೯-೯). [<ಪ್ರಾ. ಣಿಚ್ಚ./ಸಂ. ನಿತ್ಯಂ]

**ನಿಚ್ಚ₂** 'ನಿಚ್ಚಂ' ನೋ.

**ನಿಚ್ಚ₃** (ಗು). ೧. ಯಾವಾಗಲೂ ಇರುವ; ನಿರಂತರವಾದ; ಶಾಶ್ವತವಾದ: 'ನಿಚ್ಚೈದೆ' ಪರಾ. (ನಾ). ೨. ಯಾವಾಗಲೂ ಇರುವಂಥದು; ನಿತ್ಯವಾದುದು; ಶಾಶ್ವತವಾದುದು : ನಿಚ್ಚಮೆಂದರಿತು ವಿಷಯಾನುಭೋಗಂಗಳನು ಮಚ್ಚಿ ಗುರುತರಪಾತಕಗಳನೆಸಗಿ (ವೆಂಕಾರಾ. ೨-೧೯-೩೬). [<ಸಂ. ನಿತ್ಯ]

**ನಿಚ್ಚಂ, ನಿಚ್ಚ₂** (ಅ). ೧. ಪ್ರತಿದಿನವೂ; ನಿತ್ಯವೂ : ನಿಚ್ಚಂ ಧರಾಧೀಶರಂ ಪಡಲಿಟ್ಟಂತಿರೆ ಮಾಟ್ಟಿಂ (ಪಂಪಭಾ. ೧೦-೨೫) ; ನಿಚ್ಚಂ ಬಂದಾದರದಿಂದೆ ನೋಡಿ ಪೋಪಂ ಗುರುಜನಪರಿವೃತನೆನಿಪ್ಪ ನಿಜನಂದನನಂ (ಕಾದಂಪೂ. ೪೩೬) ; ಕಲ್ಪಭೂರುಹವನಕ್ಕೋರೋರ್ಮೆ . . . ಪೋಗಿ ಪೊಟ್ಟುಗಳೆವಂ ನಿಚ್ಚಂ ನಿಳಿಂಪೋತ್ತಮಂ (ಸುಕುಮಾ. ೯-೪೦) ; ಇಂತು ಪೊಟ್ಟುಗಳೆವರ್ ನಿಚ್ಚಂ ಪುರೋದ್ಯಾನದೊಳ್ (ಮಲ್ಲಿಪು. ೨-೩೮) ; ಅಣುಗುಣ ಶಿಕ್ಷಾವ್ರತಸನ್ಮಣಿಭೂಷಣಭೂಷಿತಾಂಗನರ್ಹದ್ವಚನಪ್ರಣುತರುಚಿರುಚಿರನಾದಂ ಪ್ರಣಯಮನೊಡವಿಸನೆ ಮೋಕ್ಷಲಕ್ಷ್ಮಿಗೆ ನಿಚ್ಚಂ (ಉಸಾರ. ೧೮-೧೦೬) ; ಮೇಲೆ ನಿಚ್ಚಂ ಪರಿವ ದಿನಮಣಿ (ಜೈಮಿಭಾ. ೩-೨೧). ೨. ಯಾವಾಗಲೂ ; ಸದಾ : ಇದು ನಿಚ್ಚಂ ಪೊಸತರ್ಣವಂ ಬೋಲತಿಗಂಭೀರಂ ಕವಿತ್ವಂ (ಆದಿಪು. ೧-೨೭) ; ಸಿರಿವೆಣ್ಣವನೊಳ್ ನಿಚ್ಚಂ ಬೆರಸಿರ್ದಪಳ್ (ಕಬ್ಬಿಕಾ. ೧೩). ನಿಚ್ಚ₂ : ೧. ನೊಟಂಬಸೆಟ್ಟಿ ಉತ್ತನೂರ ಮಹಾಜನಂ ಪನ್ನಿಬ್ಬರ್ಗ್ಗಂ ನೂಱುಗದ್ಯಾಣಂ ಪೊನ್ನ ಕೊಟ್ಟು ನಿಚ್ಚವಯ್ವರತಿತಿಗಳ್ ಪರಿವಡಿಯಂಬ್ಬರ್ (ಎಕ. X, ಮುಳಬಾ. ೧೨೨-೯ ; 969) ; ಈ ವಾಲ್ಮಿಕೇಶ್ವರನು ನಿಚ್ಚ ಸಾವಿರ ಹೊನ್ನ ಪಡಿಯಂ ವೆಚ್ಚಕುಡುಗದೆ ಕೊಡುವನಾತನೊಳೊಚ್ಚತಂಗೊಂಡೇನನಾದಡೆ ಬೇಡಿದುದನೀವ (ಬಸವು.೨೬-೧೮) ; ವೆಂಚ್ಚದಿರು ಪರಸತಿಯರಚ್ಚೆಯೊಳು ಬೆರೆಯದಿರು ನಿಚ್ಚ ನೆರೆಯೊಳಗೆ ಕಾದದಿರು ಒಬ್ಬರ ಇಚ್ಛೆಯಲಿರದಿರು (ಸರ್ವಜ್ಞ. ೧೫೪೬).

ನಿಚ್ಚಂನಿಚ್ಚಂ, ನಿಚ್ಚಂನಿಚ್ಚ, ನಿಚ್ಚನಿಚ್ಚ, ನಿಚ್ಚನಿಚ್ಚಂ (ದ್ವಿರುಕ್ತಿ): ಪರಮಜಿನಪತಿಚಾರುಚಾರಿತ್ರಮಂ ನಿಚ್ಚಂನಿಚ್ಚಂ ನಿಚ್ಚಳಂ ಮಾಡೆನಗೆ (ಸುಕುಮಾ. ೧೨-೪) ; ನಿಚ್ಚಂನಿಚ್ಚವಾನಂದಸಂಗತಿಯಿಂದಂ ನೆಲೆವೆರ್ಚುತಿರ್ದರೆನಸುಂ ಹರ್ಷಾಂಬುವಿಶ್ರಾಂಬಕದ್ವಿತಯಶ್ರೀವಿಜಯಾವತೀಯುವತಿಯುಂ ವಿಶ್ವಂಭರೋರ್ವೀಶನುಂ (ಕುಸುಮಾ. ೬-೧೫೮) ; ಅಚ್ಚಶರಣರು ನಿಮ್ಮ ನಿಚ್ಚನಿಚ್ಚ ನೆನೆವರು (ಬಸವ. ೩೦೧) ; ನಿಚ್ಚನಿಚ್ಚಂ ಪೊಸತೆಂಬಂತಾಗೆ ಪಾರ್ಥಂಗೊಸೆದು . . . ಸಾಧಿಸಿತುದ್ಯದ್ಭಕ್ತಿ (ಪಂಪಭಾ. ೭-೭೮) ; ಸೂನುಗೊಲವಿಂ ಸೊಡರ್ವಕ್ಕಿನ ಬೊಟ್ಟನಿಟ್ಟು ತೂಪಿಱಿದು ಪಲರ್ಮೆಯುಂ ಪರಸಿ ಸೋಗಿಲೊಳಿಟ್ಟುಱಿ ನಿಚ್ಚನಿಚ್ಚ ಮಟ್ಟಿಱನೊಳೆ ಮೆಚ್ಚನಿತ್ತು ತನಿವೆರ್ಚುವ ಸೈಪೆನಗೆಂದು ಸಾರ್ಗುಮೋ (ಚಂದ್ರಪು. ೩-೪೫). ನಿಚ್ಚನಿರಂತರ=ಯಾವಾಗಲೂ : ಅಚ್ಚವಳ ಹಲ್ಲೀಗೆ ಸರಿ ಮುಚ್ಚು ಮಲ್ಲೀಗೆ ನಿಚ್ಚ ನಿರಂತರ ಇದು ಸುಗ್ಗಿ (ಮೂರ್ತಿಕಾ. ೪೭-೫). ನಿಚ್ಚ ಮದವಣಿಗ=ಒಂದು ಬಿರುದು (?): ನಿಚ್ಚಮದವಣಿಗ ಹನುಮಪ್ಪನಾಯಕರಾ ಪೌತ್ರರಾದ ಶರಜಾಹನುಮಪ್ಪನಾಯಕರ ಪುತ್ರರಾದ ಸೀತಾರಾಮಪ್ಪನಾಯಕರು (ಎಕ. VI, ತರೀಕೆ. ೨೨-೯ ; 1681). [<ನಿಚ್ಚ₁]

**ನಿಚ್ಚಂಗ** (ನಾ). ನಿರ್ಲಿಪ್ತ ಸ್ಥಿತಿ; ನಿಸ್ಸಂಗತ್ವ : ನಾದದ ತಂಬುರಿ ಮೋದ ಮಂದಾರವು ನಿಚ್ಚಂಗದ ಟೊಪ್ಪಿಗೆನಿಟ್ಟೆ ಬೋಧದ ಭಂಗಿ ಅಮೃತದ ಲುಂಗಿ ಸಮಾನಗುಳಿಗೆಯನಿಟ್ಟೆ (ಪುರಂದ. ೫-೬೬-೨).
[<ಸಂ. ನಿಸ್ಸಂಗ]

**ನಿಚ್ಚಗಟ್ಟಳೆ** (ನಾ).=ನಿತ್ಯಗಟ್ಟಳೆ ೧ : ನೀವು ಕಿರಿಯ ಉಗ್ರಾಣಕ್ಕೆ- ನಿಚ್ಚಗಟ್ಟಳೆಯ ಉಗ್ರಾಣಕ್ಕೆ ಹೋಗಿ ಒಂದು ಬಗಸೆಯಷ್ಟು ಭತ್ತವ ದನ್ನೀಗಳೇ ತರಬೇಕು (ಚಿಟ್ಟಅ. ೧೧೪-೨೦). [ನಿಚ್ಚ₁+ಕಟ್ಟಳೆ₁]

**ನಿಚ್ಚಗಲಿ** (ನಾ).=ನಿಚ್ಚಟಗಲಿ : ಕವಿಯಂತೆ ಯತಿಪ್ರಿಯನುಂ ಸಾಗರದಂತೆ ನಿಸ್ಸಾರದೂರನುಂ ನಿಚ್ಚಗಲಿಯಂತೆ[ಧರ್ಮದೊಳ್]ನಿಶ್ಶಂಕನುಮಪ್ಪುದು (ಧರ್ಮಾಮೃ. ೪-೪೬). [<ನಿಚ್ಚಟ₂+ಕಲಿ₂]

**ನಿಚ್ಚಗಾಳೆಗ** (ನಾ). ನಿತ್ಯದ ಕಾಳಗ,—ಹೋರಾಟ : ಚಳಾತಾವರ್ತನರೆಂಬಿರ್ವರ್ ಮ್ಲೇಂಛರಾಜರ್ ತುಛಪರಿಛದರುಚ್ಚವಿಗ್ರಹಮನೆತ್ತಿಕೊಂಡು ನಿಚ್ಚಗಾಳೆಗದೊಳಚ್ಚಿಗಂಗೊಳಿಸಿ (ಅಜಿಪು. ೯-೩೪ ವ).
[ನಿಚ್ಚ₁+ಕಾಳೆಗ]

**ನಿಚ್ಚಟ₁** (ನಾ). ೧. ಕಪಟವಿಲ್ಲದುದು; ನಿಷ್ಕಪಟವಾದುದು : "ನಿಚ್ಚಟ—ನಿಶ್ಶಠ=ನಿಷ್ಕಪಟ" (ತದ್ಭಕೋ. ೨೨) ; ಬಿಚ್ಚಿ ಗವಸಣಿಗೆಯಲಿ ತನ್ನಯ ನಚ್ಚಿನಾಯುಧವನು ಕರ್ಣನ ನಿಚ್ಚಟದ ಮನವ್ಯೆದೆ ಹರುಷದಿ ಕೊಟ್ಟನಮರೇಂದ್ರ (ಸಂಭಪ.೨೩-೧೬). ೨. ಯಥಾರ್ಥತೆ; ನಿಜ ; ಸತ್ಯ : ಗ್ರಾಮದ ಪದಗತಿಯನಱಿಯರು ಗ್ರಾಮಕ್ಕೆ ಗುರುವಾವುದೆಂದಱಿಯರು ಗ್ರಾಮದ ಕರಣವಿಡಿದಲ್ಲಿ ನಿಚ್ಚಟವಾವುದೆಂದಱಿಯರು (ಚನ್ನಪ. ಕ. ೫೯೨-೧೩೨೬); ಕಿಚ್ಚಿನಲಿ ತಣುವಿಲ್ಲ ನಿಚ್ಚಟಕೆ ಸಟೆಯಿಲ್ಲ ಮುಚ್ಚಳವು ಇಲ್ಲ ಆಗಸಕೆ (ಸರ್ವಜ್ಞ. ೫೫೨). ೩. ಸಹಜವಾದ ರೀತಿ; ನೈಸರ್ಗಿಕ ಸ್ಥಿತಿ; ಬೆತ್ತಲೆ : ಅಚ್ಚ ಬೆಳ್ದಿಂಗಳೊಳ್ಕತ್ತೊರ್ವನಿಸಿಯಳಂ ನಿಚ್ಚಟದೊಳುಳಿವಂತೆ ನೀವಿಯಂ ಬರಸೆಳೆದು (ಜೈಮಿಭಾ. ೨೬-೧೯). [<ಸಂ. ನಿಃಶಠ]

**ನಿಚ್ಚಟ₂, ನಿಶ್ಚಟ** (ಗು). ೧. ಸ್ಥಿರವಾದ; ದೃಢವಾದ; ನಿಶ್ಚಲವಾದ: 'ನಿಚ್ಚಟಗತಿ', 'ನಿಚ್ಚಟಭಕ್ತಿ' ಪರಾ. (ನಾ). ೨.

ನಿಶ್ಚಲವಾದುದು ; ದೃಢವಾದುದು ; ಸ್ಥಿರವಾದುದು : ಅಚ್ಚ ಪ್ರಸಾದಿಗಳು ನಿಚ್ಚಪ್ರಸಾದಿಗಳು ನಿಚ್ಚಟದಸಮಸುಖದ ಸರ್ವಪ್ರಸಾದಿಗಳು (ಬಸರ. ೭-೧೬೬) ; ವೀರಭೀಷ್ಮನ ನಿಚ್ಚಟದ ಭಕ್ತಿಯನು ನೆನೆನೆನೆದೊಲೆದ ಹರಿ ಶಿರವ (ಕುಮ್ಯಾಭೀ. ೬-೪೬); ಎನ್ನ ತನುಮನಧನಂಗಳ ಪರಬ್ರಹ್ಮಕ್ಕೆ ಮಾಱುಕೊಟ್ಟೆನೆಂಬ ನಿಚ್ಚಟದ ನುಡಿಯೇ ಕಾಲನ ಗಂಟಲ ಗಾಣ (ಘನವ. ೧೫-೧೩) ; ಸಚ್ಚಿದಾನಂದೈಕರಸವಹ ನಿಚ್ಚಟದ ನಿಜಸುಖವ ನಱಿಯದೆ ಮೆಚ್ಚಿ ಮಾಯಾಮಯವಿಷಯಸುಖಲೇಶದನುಭವಕೆ ಕಿಚ್ಚ ತಿಂಬರು (ಸಿಭಾಗ. ೧೦-೩೬-೫) ; ಅಚ್ಚಳಿದು ಐಕ್ಯಸ್ಥಲವಾದ ಶರಣಂಗೆ ನಿಚ್ಚಟದ ನಿಲವು (ಸರ್ವಜ್ಞ. ೧೫೨). ೩. ನಿರ್ಧರಿತವಾದುದು ; ಸ್ಪಷ್ಟವಾದುದು : ಗೆಲ್ಲಂ ನಿಚ್ಚಟಮಾಗಿರೆ ಬಲ್ಲಿತ್ತೆನೆ ಪೊಣರ್ದು ಪೊಯ್ಯುವುದು (ಚಕವಿ. ೫-೫೨). ೪. ದೃಢತೆ; ಸ್ಥಿರತೆ ; ಸ್ಥೈರ್ಯ: ನಿಚ್ಚಟದ ರಾವುತರಂ ಚಲ್ಲಣಂದೆಗದುಂ ಮುಂಗುಡಿಯ ರಾವುತರಂ ಭಂಗಿಸಿ ತಿವಿದು (ಮಳಿರ. ಹ. ೨೨೭-೧೪) ; ಉಭಯರಾಯರ ನಿಚ್ಚಟಕೆ ಮಝು ಪೂತುರೆಂದುದು ಮೇಲೆ ಸುರಕಟಕ (ಕುಮ್ಯಾಕ. ೪-೩೩); ದಿಟಮಲ್ಲ ಪುಸಿಪೊಯ್ಲ್ಲದಂ ತೆಗೆಯೆನುತ್ತೆ ನಿಚ್ಚಟದ ಕಲಿಗಳ್ ಕಾದುತಿರ್ದರ್ (ಚಿಬಪು. ೪೮-೨೭). ೫. ದೃಢಮನಸ್ಸಿನವನು ; ಸ್ಥಿರಮನಸ್ಸನ್ನುಳ್ಳವನು ; ನಿಶ್ಚಲ : ಅನಿತ್ಯವ ಹಱದ ನಿಚ್ಚಟಂಗೆ ಮಿಥ್ಯವನಾರಾಡಿದಡೇನು (ಮೋಳಿಪೂ. ೪೨-೧೭೬) ; ಬಳಭದ್ರಕೇಶವಾದಿಗಳ್ ನೇಮಿಕುಮಾರಂ ನಿಚ್ಚಟನಾಗಿ ದೀಕ್ಷೆಗೊಂಡುದಕ್ಕೆ ಚೋದ್ಯಂಬಟ್ಟು ಪೂಜಿಸಿ ಪೊಡೆವಟ್ಟು ಮಗುಟ್ದು ಪೋದರ್ (ಬಂಹರಿ. ೧೩-೨೮ ಪ) ; ಸುರಗಿಯ ಚಾವುಂಡರಾಯಂ ನಿಚ್ಚಟಂ ನಿರ್ಮಳಂ ನಿರುಪಮಂ ಕಡುಮಾನಿ ಅಚ್ಚ ಶಿವಭಕ್ತನುತ್ಕೃಷ್ಟನೀಶಧ್ಯಾನಿ (ಸುರರ. ೮೭-೨) ; ಪದೆದು ಗೋವಿಂದ ಪ್ರತಿಷ್ಠೆಯಂ ನೃಪತಿ ರಾಗದೊಳೆಸಗಿಯುದಱ ಗೃಹದೊಳಗಣ್ಗೆ ಕರೆಯೆ ಪೋಗದೆಯುವಂ ಕಿನಿಸುತೀ ಪೆರ್ಮಳೆಯೊಳಗೆ ನನೆಯುದೆಯ್ದನೆ ನಗುತೆ ನನೆಯದೆ ಸದನಕೆಯ್ದಿದ ನಿಚ್ಚಟಂ (ಪದ್ಮರಾ. ೫-೧೦); ಮೆಚ್ಚಿದರ ನೀ ವರಿಸಿ ಕಾದುವುದಚ್ಚರಿಯ ಮಾತೇನು ಗೆಲವಿನ ನಿಚ್ಚಟನೆ ನೆಲಕೊಡೆಯನಹುದಿದು ಸಮಯಕೃತವೆಂದ (ಕುಮ್ಯಾಗ. ೫-೪೫) ; ಭಕ್ತಿಯ ಮಾಡಿ ಮುಕ್ತಿಯ ಹಡೆವೆವೆಂದನುಗೂಡಿ ನಿಚ್ಚಟರಾಗಿ ಧೀರೋದಾರವೃತ್ತಿಯಲಿ ಖೋಡಿವೋಗದೆ ನಿರ್ವಹಿಸಿ ಹೇಡಾಡದವರನು ಕಾಂಬೆವು (ಪ್ರಭುಲೀ. ೧೮-೩೫); ಮಾಯಾವಿರೋಧಿಗಳ್ಕರ್ಮದ್ವಯಂಗಳಂ ಬಾಯೆ ನೆಱೆ ಪೊಯ್ದವಂ ಭಂಗಿಸುವ ನಿಚ್ಚಟರ್ (ಏಕೋಪು. ೭-೩೯). ೬. = ನಿಚ್ಚಟಗಲಿ : ಇಳಾತಳಕ್ಕೆ ಪಾಯ್ದಸಿಯೊಳೆ ತಾಗಿ ತಳ್ತಿಱುವ ನಿಚ್ಚಟರೊಪ್ಪಿದರಾಜಿರಂಗದೊಳ್ (ಪಂಪಭಾ. ೧೧-೬೫) ; ಶಸ್ತ್ರವ ಹಿಡಿವಲ್ಲಿ ರಣಕ್ಕೆ ನಿಚ್ಚಟನಾಗಿರಬೇಕು (ಮೋಳಿಪೂ. ೫೫-೨೨೬) ; ಚಕ್ರವ್ಯೂಹದೊಳಭಿಮನ್ಯು ನಿಚ್ಚಟನಾಗಿ ಪೊಕ್ಕು ಪಲರಂ ಗೆಲೆ (ಬಂಹರಿ. ೧೨-೨೫ ಪ) ; ಕೋಲಳವಿಗೊಡ್ಡಿದ ನಿಚ್ಚಟರ ನೀಗಿದನು (ಕುಮ್ಯಾಕ. ೧೫-೨೨) ; ಅವನ ಪುಣ್ಯವೆ ಮೂರ್ತಿಯಾದಂತೆ ನಿಚ್ಚಟನೆ ನೀನವನ ಬಂಧನ ಬಿಚ್ಚುವೀ ಗಳಿಗೆಗಳ ಕಂಡುದೆ ಅಚ್ಚರಿ ಕಣಾಯೆಂದು ಕೊಂಡಾಡಿದರು ನಿಜಸಖರು (ಸಾಳ್ವಭಾ. ೧೭-೨೧). **ನಿಶ್ಚಟೆ :** ೨. ಭಕ್ತಿಯುಳ್ಳವರು ಬಲ್ಲರು ನಿಶ್ಚಟದ ನಿಜಾಂಗಿಗಳ (ಮೋಳಿಪೂ. ೧೯-೭೫). ೪. ನೀಟುಗಾಱಕೆಯು ನಿಶ್ಚಟದ ಕಮಠದ ಕಠಿಣದೋಟಿಯುಡ್ಡಣದ ಕನಕಮಣಿಖಚಿತಖೇಟಕದುಬ್ಬಟೆಯುಬ್ಬರದ ಹರಿಗೆಕಾಜರ ಮೊತ್ತದೊತ್ತಿನುಭಯಪಾರ್ಶ್ವದೊಳಿಂಬುಗೊಂಡು (ಹವಿಮ್ಮ ರ. ೩-೩೩ ಪ). ೫. ಅಗ್ನಿಗೆ ತಂಪುಂಟೆ ವಿಷಕೆ ರುಚಿಯುಂಟೆ ಹೇಳಾ . . . ನಿಮ್ಮ ಶರಣರು ಮೂಱುಲೋಕವಱಿಯೆ ನಿಶ್ಚಟರಯ್ಯ (ಅಪಚಂ. ೩೨-೧೩೪); ಇಂತು ತನು ಮನ ಪ್ರಾಣ ನಿಮಗೆ ಸಂದಿಪ್ಪ ನಿಸ್ಸಂಗಿಯಾದ ನಿಶ್ಚಟ ನಿಜಲಿಂಗೈಕ್ಯ ಕಾಣಾ (ಅಪಚಂ. ೩೬-೧೫೪) ; ಭಕ್ತರೆಂದರೆ ಶಿವನೊಪ್ಪುಗೊಂಬನೆ ನಿಶ್ಚಟರನಲ್ಲದೆ ನಿಃಕಳಂಕ ಮಲ್ಲಿಕಾರ್ಜುನನವರ ಬಲ್ಲನಾಗಿ ಒಲ್ಲನು (ಪದಗೋ. ೧೧೫-೯೩) ; ನಿರಾಳದಲ್ಲಿ ನಿಶ್ಚಟನಾಗಿ ನಿಃಶೂನ್ಯವೆಂಬ ಸಿಂಹಾಸನದ ಮೇಲೆ ಸೋಂಕಿಲ್ಲದೆ ಸೊಬಗಿನಲ್ಲಿ ಮೂರ್ತಿಗೊಂಡಿಪ್ಪ ಆ ಮಹಾಪ್ರಭುವಿನ ಪಾದಕ್ಕೆ ನಾನು ನಮೋನಮೋಯೆಂದು ಬದುಕಿದೆನು (ಸರ್ವವ. ೨೦೫-೯೨೮). 'ನಿಚ್ಚಲ' ಪರಾ.

[ ?./ಸಂ. ನಿಶ್ಚಲ]

**ನಿಚ್ಚಟಂ$_1$** (ಅ). ನಿಜವಾಗಿಯೂ ; ದಿಟವಾಗಿಯೂ : ತನು ಕಡುಗೋಡುಗೋಡಿದಪುದೆಳ್ಳನಿತುಂ ಮಿಡುಕಂತದಿಲ್ಲ ಮೂಗಿನೊಳುಸುರೆಂಬ ಮಾತು ಪಱಪಟ್ಟುದು ನಿಚ್ಚಟಮೆಂದು ಸಂಕೆಯಿಂ ವನಜದಳಾಕ್ಷಿ ನೋಡಿ (ವರ್ಧಮಾ. ೫-೫). [<ನಿಚ್ಚಟ$_1$]

**ನಿಚ್ಚಟಂ$_2$** (ಅ). ಸ್ಥಿರವಾಗಿ ; ಶಾಶ್ವತವಾಗಿ : ಕುರುಪ್ರಧಾನನೊಳ್ ಕಱುಪನೆ ನಿಚ್ಚಟಂ ಬಿಸುಟು ನಿನ್ನಯ ಪೇಟ್ದುದುಗೆಯ್ದು (ಪಂಪಭಾ. ೧೪-೧೦); ದೇಹಮನಿದನೆಂತು ನಿಚ್ಚಟಂ ನಂಬಿದಪೋ (ಶಬ್ದಾನು. ೪೬೧ ಪ್ರಯೋ). [<ನಿಚ್ಚಟ$_2$]

**ನಿಚ್ಚಟಗತಿ** (ನಾ). ಶಾಶ್ವತವಾದ ಪದವಿ ; ಮೋಕ್ಷ ; ಮುಕ್ತಿ : ಮನದೊಳಾದ ಹೇವದಿಂ ನಿಚ್ಚಟಗತಿಯುಪ್ಪುದುಂ ಪರಿಚ್ಛೇದಿಸಿ ತಂದರ್ಥಮೆಲ್ಲಮುಮಂ ತಾಯ್ಗಂ ಪೆಂಡತಿಗಂ ತಕ್ಕನಿತಂ ಕೊಟ್ಟು . . . ವರಧರ್ಮಭಟ್ಟಾರಕರಲ್ಲಿಗೆ ಬಂದು (ಧರ್ಮಾಮೃ. ೨-೨೧೧).

[ನಿಚ್ಚಟ$_2$ + ಗತಿ]

**ನಿಚ್ಚಟಗಲಿ** (ನಾ). ನಿಶ್ಚಲನಾದ ವೀರ ; ಕೆಚ್ಚೆದೆಯ ವೀರ ; ಕಡುಗಲಿ : ಸಾರ್ಚಿದ ಮದರದನಿಗೆ ಹರಿ ನಿಲ್ಲದೆ ನಿಚ್ಚಟಗಲಿಗೆ ಪೆಸರ ಕಲಿ ನಿಂದಪನೇ (ಶಾಂತಿಪು. ೨-೧೦೮) ; ಸೆರಗಂ ಬೆರಗಂ ಬಗೆಯದ ನಿಚ್ಚಟಗಲಿಗಳುಮಂ . . . ನೋಡಿ (ಗದಾಯು. ೯-೩೪ ವ) ; ಅಂತಪ್ಪ ನಿಚ್ಚಟಗಲಿ ಕಲಹವನೇ ಬಯಸಿ ತನಗೆ ಅಧಿಕನನಱಸುವಂ (ಪಂಚತಂ. ೩೭-೮); ಬಂಟರೊಳ್ ನಿಚ್ಚಟಗಲಿ (ಧರ್ಮಾಮೃ. ೯-೧೦೮); ನಿಚ್ಚಟಗಲಿ ನೀಲವರ್ಣನೆಡೆಗೆ ಬಂದು ಕಚ್ಚುವೆನೆಂದು ಕೋಪದೊಳು ಒತ್ತಿ ಬಿಟ್ಟಾಬಾಯನು ಕಂಡು (ನೇಮಿಸಂ. ೧೫-೧೧೩). [ನಿಚ್ಚಟ$_2$ + ಕಲಿ$_2$]

**ನಿಚ್ಚಟಗಲಿತನ**(ನಾ). ಸ್ಥಿರವಾದ ಶೌರ್ಯ ; ಸಹಜ ಪರಾಕ್ರಮ; ಕಡುಗಲಿತನ : ಸ್ವಭಾವಶೂರತ್ವಂ—ನಿಚ್ಚಟಗಲಿತನಮುಂ (ನೀತಿವಾ. ೨೧-೧೫). [ನಿಚ್ಚಟಗಲಿ + -ತನ]

**ನಿಚ್ಚಟತ್ವ** (ನಾ). ದೃಢತೆ ; ನಿಶ್ಚಲತೆ ; ಸ್ಥಿರತೆ : ಎನ್ನ ಭಕ್ತನ ನಿಚ್ಚಟತ್ವವನೇನನೆಂಬೆನು (ಸಿಭಾಗ. ೧೧-೨೧-೨೬).

[ನಿಚ್ಚಟ$_2$ + -ತ್ವ]

**ನಿಚ್ಚಟಭಕ್ತಿ** (ನಾ). ದೃಢವಾದ ಭಕ್ತಿ : ನಿಚ್ಚಟಭಕ್ತಿಯಿಂ ತಪವನಾಗಿಸಿ ಸದಾಶಿವನನೊಲಿಸಿ (ನಂದಿಮಾ. ೧೦-೬). [ನಿಚ್ಚಟ$_2$ + ಭಕ್ತಿ]

**ನಿಚ್ಚಟವಕುತಿ** (ನಾ). = ನಿಚ್ಚಟಭಕ್ತಿ : ನಿಚ್ಚಂ ಶ್ರೀರಾಮನಂ ಮೂವಗೆಯ ನಿಚ್ಚಟವಕುತಿಯಿಂ ತುತಿಸಿ (ರಾಮಾಶ್ವ. ೧೦೩-೪).

[ನಿಚ್ಚಟ$_2$ + ಬಕುತಿ]

**ನಿಚ್ಚಟಿಕೆ, ನಿಚ್ಚಟಿಕ್ಕೆ** (ನಾ). = ನಿಚ್ಚಟತ್ವ : ಜೀಮೂತವಾಹನನೆಂಬಂಕದ ಚಾಗಿ ನಿಚ್ಚಟಿಕೆಯಿಂದೀ ಶೈಳದೊಳ್ ಶಂಖಚೂಡನಾನಂದದೆ ಕಾದ ಪೆಂಪೆಸೆಯೆ ನಾಗಾನಂದಮಂ ಮಾಡಿದಂ (ಪಂಪಭಾ. ೪-೨೬). **ನಿಚ್ಚಟಿಕ್ಕೆ :** ಪಾಂಡ್ಯನನ್ನಿನಿಸ್ನೀ ಮಹಿಯೊಳ್ ಪೆಱಂ ಕಲಿಯೆ ನೆಟ್ಟನಿದಿರ್ಚುವ ನಿಚ್ಚಟಿಕ್ಕೆಯೊಳ್ ಭೀಮನುಮಿನ್ನನಲ್ಲನೆನೆ ಪೋಲ್ವೆ[೧]ವಂಗೆಣೆ ಗಂಡರೆಂಬರಾರ್ (ಪಂಪಭಾ. ೧೨-೮೪).

[ನಿಚ್ಚಟ$_2$ + -ಇಕೆ]

**ನಿಚ್ಚಟಿಕ್ಕೆ** 'ನಿಚ್ಚಟಿಕೆ' ನೋ.

**ನಿಚ್ಚಣಿ** (ನಾ). ಏಣಿ ; ನಿಚ್ಚಣಿಗೆ : ನಿಚ್ಚಣಿಯ ಹಲ್ಲಿಗೆ ಅಂತರವಲ್ಲದೆ ಕೀಳು ಮೇಲುಂಟೆ (ಮೋಳಿಮಾ. ೧೭೧-೬೩೯) ; ದುರ್ಗಕ್ಕೆ ನಿಚ್ಚಣಿ ಸಾರ್ಚುಂದೊಲೆ ವೀರಸೇತು ನಡೆಸಾರಂ ಬದ್ಧರಂ . . . ಎಂಬ ಬಹು ಕೋಟಾಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ ಲಗ್ಗೆಗಾರ್ದು ಮಸು ಷೇಣಂ ಸಾರ್ದು ಸೂಚಿಸಿದಂ (ಅನಂಪು. ೧೧-೪೩) ; ಪರಮಾತ್ಮಂಗೆಣೆ ಯಿಲ್ಲಂಬರಕೆ ನಿಚ್ಚಣಿಯಿಲ್ಲ (ಸರ್ವಜ್ಞ. ೧೫೨೦).
[<ಸಂ. ನಿಶ್ರೇಣಿ]

**ನಿಚ್ಚಣಿಕೆ, ನಿಚ್ಚಣಿಗೆ** (ನಾ). ೧. = ನಿಚ್ಚಣಿ : "ನಿಶ್ರೇಣಿ, ಅಧಿರೋಹಿಣಿ— ಈ ೨ ನಿಚ್ಚಣಿಕೆಯ ಹೆಸರು" (ನಾಚಿರಾ.೧೦೪) ; ಮೋಕ್ಷದ ನಿಚ್ಚಣಿಕೆಯೆನಿಪ ಜಿನೇಂದ್ರಧರ್ಮಮಂ ಕೇಳ್ದು (ಧರ್ಮಾಮೃ. ೯-೪೬) ; ನಿಚ್ಚಣಿಕೆಯನೇಱಿ ತೆಗೆವುದಕ್ಕೆ ಮುಂದೊಂದು ಅಟ್ಟಳೆಯಲ್ಲಿ ಬಯಕೆ ಲಕ್ಷಿಸಿದ್ದಿತ್ತು (ಮೋಳಿಮಾ. ೨೭೮-೩೫) ; ಕೊತ್ತಳದ ಹುಲಿಮುಖದ ದಿಡ್ಡಿಗಳ ಸಂಸದೊಳ್ ಪತ್ತಿದರ್ ಸಾಲ ನಿಚ್ಚಣಿಕೆಗಳ ಮೇಲೆ (ಚಿಬಪು. ೪೨-೩೫) ; ಮುಗಿಲಿಗೆ ನಿಚ್ಚಣಿಕೆ ಬೇಕು . . . ಚಂದ್ರಸೂರ್ಯ ಸಾಲವ್ರೋ (ನಾದಲೀ. ೨೮-೧೩) ; ನಿನ್ನ ಹಗ್ಗ—ಕೋಲುಗಳು ಕೈಗೆ ನಿಲುಕಲಿಕ್ಕಿಲ್ಲ—ನಿಚ್ಚಣಿಕೆ ಒಂದಿರಲಿ (ವೈದ್ಯರಾ. ೯೪). ೨. ಒಂದಾದ ಮೇಲೆ ಮತ್ತೊಂದು ಬರುವ ಕ್ರಮ ; ಆರೋಹಣಕ್ರಮ : ಮನೋರೋಗಗಳ ಸಂಖ್ಯೆಯನ್ನು ನಿಚ್ಚಣಿಕೆಯ ಕ್ರಮದಲ್ಲಿ ಸೇರಿಸಿ ನೋಡಬಹುದು (ಮನೋರೋ. ೫). **ನಿಚ್ಚಣಿಗೆ :** ೧. "ನಿಶ್ರೇಣಿಃ, ಅಧಿರೋಹಿಣೀ — ಈ ೨ ನಿಚ್ಚಣಿಗೆ" (ಹಲಾಯು. ೫೦-೧೪೬) ; ಇದು ಋತುವಿಮಾನಮಂ ತನ್ನದಗ್ರಚೂಳಿಕೆಯೊಳಾಂತುಕೊಂಡಿರೆ ಸಗ್ಗಕ್ಕಿದು ನಿಚ್ಚಣಿಗಿಪ್ಪವೊಲಿರ್ದುದಲ್ತೆ ಜಿನಸವನಜಲಪವಿತ್ರಿತಕಟಕಂ (ಆಪು. ೨-೩೧) ; ನಸು ಜೋಲ್ದು ಕೋದ ಗಱಿಯೆ ನಿಚ್ಚಣಿಗೆಯಾಗೆ (ಮಲ್ಲಿಪು. ೩-೧೦೫ ವ) ; ಗಗನಕ್ಕೆ ನಿಚ್ಚಣಿಗೆಯನಿಕ್ಕಿದವರುಂಟೆ (ಅವಚಂ. ೧೯೬-೮೮೭) ; ಸುದುರ್ಗದ ಹಿರಿಯಗಳೊ ಬಲುಗೋಂಟೆಯೋ ನಿಚ್ಚಣಿಗೆ[ಪಾಠಾಂ. ಕೆ]ಯೋ ದಿವದ ಮುರಿಮುರಿದ ಹುಲಿಮುಖದ ಹೇಮದ ತರದ ತೆನೆಗಳ ವಜ್ರಮಯಬಂಧುರಕವಾಟಸ್ಫುಟದಲೆಸೆದುದು ಹಸ್ತಿನಾನಗರ (ಕುವ್ಯಾಉ. ೭-೨೮) ; ಅಟ್ಟವನೇಱುವುದಕ್ಕೆ ನಿಚ್ಚಣಿಗೆಯೇ ಸೋಪಾನವಯ್ಯ ಹರಪದವನು ಎಯ್ದುವರೆ ಶ್ರೀಗುರು ಹೇಳಿದ ಸದಾಚಾರವೇ ಸೋಪಾನವಯ್ಯ (ಸಿದ್ಧೇವ. ೯೦-೨೭೧); ಮುಗಿಲ ಮುಟ್ಟುವ ನಿಚ್ಚಣಿಗೆಗಳನು ತಂದು ನಿಗುರಿಸಿದರು (ಕಂನವಿ. ೧೮-೧೫೩) ; ಮತ್ತಮು ದಾಳ್ದಂಗಂ ಬಹುವಿತ್ತಸುಧಾನ್ಯಾತ್ಮಸಂಭವರ್ಕಳನೀಗುಂ ಸತ್ತಮನೊಸಲೊಳ್ ಮೂಸುಳಿಯೊತ್ತಿರೆ ನಿಚ್ಚಣಿಗೆಯಂತೆ ಕುದುರೆಗೆ ಧರೆಯೊಳ್ (ಹಾಲಾಸ್ಯ. ೪-೧೧-೮೩) ; ಇಹವು ಪರದ ನಿಚ್ಚಣಿಗೆ ಎಂದು ಭಾವಿಸಿದರು (ಭಾರದ. ೪೦೧). [<ಸಂ. ನಿಶ್ರೇಣಿಕಾ]

**ನಿಚ್ಚಣಿಗೆ** 'ನಿಚ್ಚಣಿಕೆ' ನೋ.

**ನಿಚ್ಚಣಿಗೆಗೆಯ್** (ಕ್ರಿ). ಏಣಿಯನ್ನಾಗಿ ಮಾಡು : ಭಕ್ತಿರಸಪರಿಪಾಕ ಭೇದಮಂ ನಿಚ್ಚಣಿಗೆಗೆಯ್ದು ಪರಮಪದಮನೇಱಿದಂ (ಚಿಕಪಂ.೫೬-೧೬).
[ನಿಚ್ಚಣಿಗೆ(<ನಿಚ್ಚಣಿಕೆ) + ಕೆಯ್$_1$]

**ನಿಚ್ಚತ** (ನಾ). ಸ್ಥಿರತೆ ; ಸ್ಪಷ್ಟತೆ : ಬೆನ್ನಲಾಕೆಯ ಕೊಂದು ನಿಚ್ಚತನನ್ನಿಯಿಲ್ಲದೆಯಾಯುವಾರದಿ ಮನ್ನಿಸುತದೊಬ್ಬತಿಥಿಗಿಕ್ಕುತಲೇಕಭುಕ್ತದಲಿ . . . ವಿಜಿತೇಂದ್ರಿಯಂಗಿದು ಬದುಕು ಲೋಕದಲಿ (ಸಂಭಪ. ಪರಿ. ೩೪೧).
[<ನಿಚ್ಚಟ$_2$]

**ನಿಚ್ಚತಗೊಳ್**(ಕ್ರಿ). ಸ್ಪಷ್ಟಪಡಿಸಿಕೊಳ್ಳು ; ಸ್ಥಿರವಾಗಿಸಿಕೊಳ್ಳು : ಪುರುಳಂ ಕೇಳ್ದದಱಿೊಳ್ಪನೂಹಿಸಿಯಪೋಹಂಗೆಯ್ದು ತಾತ್ಪರ್ಯದೊಂದಿರವಂ ನಿಚ್ಚತಗೊಂಡದಂ ಮಱೆಯದಿರ್ಪ, ಧಾರಣಾಶಕ್ತಿಯುಂ ಪರರಂ ಬೋಧಿಸುವಾರ್ಪಿನೊಳ್ ತಿಳಿವಿನಂ ಸಂಕ್ಷೇಪವಿಸ್ತಾರವಿಾಯೆರಡುಂ ಮಾರ್ಗಮುಮಾರ್ಗಮುಂಟೆ ಚಿಕದೇವೇಂದ್ರಂಗೆ ಕೈವಂದವೋಲ್ (ಚಿಕವಿ. ೪-೯೭). [ನಿಚ್ಚತ + ಕೊಳ್$_1$]

**ನಿಚ್ಚದಂದುಗ** (ನಾ). ನಿತ್ಯದ ವ್ಯವಹಾರದ ಚಿಂತೆ ; ಪ್ರತಿದಿನದ ಕೆಲಸದ ಚಿಂತೆ : ತನ್ನ ಕೂಡುವಳಗದ ನಿಚ್ಚದಂದುಗದೊಂದು ವಿಡುಗಿಂ ನಂಜುಂಡ ಬಾನ್ನವಿರಂ, ಗಜಮುಖನ ಬಿರಿವೊಡೆಯ ಪಾವಂ . . . ತನ್ನ ಬಸವನಂ ಇನ್ನಾನುಂ ಪಗೆಯುಂ ಮಱೆದು ಸಂತಂ ಪುದುವಾಳ್ವುದೆಂದು ಬುದ್ಧಿವೇಳಿಲ್ (ರಾಮಾಶ್ವ. ೪೨-೧೧).
[ನಿಚ್ಚ$_2$(<ನಿಚ್ಚಂ) + ದಂದುಗ]

**ನಿಚ್ಚನರಕ** (ನಾ). ಶಾಶ್ವತವಾದ ನರಕ : ಅಚ್ಚಭವಿತನದಿಂದ ನಿಚ್ಚನರಕಕ್ಕಿಳಿವ ಕರ್ಮಚಾಂಡಾಲವಿಪ್ರರು ನೀವು ಕೇಳಿರೆ (ಉಂಪ. ಕ. ೧೬೧-೨೧೬). [ನಿಚ್ಚ$_1$ + ನರಕ]

**ನಿಚ್ಚಪಯಣ** 'ನಿಚ್ಚವಯಣ' ನೋ.

**ನಿಚ್ಚಪೊಸತು** (ನಾ). ಯಾವಾಗಲೂ ಹೊಸದಾಗಿರುವುದು ; ನಿತ್ಯನೂತನವಾದುದು : ಪೂಣ್ದಿರದರ್ಥಕ್ಕೃತಿಪ್ರಬಂಧಮುಂ ಕಿವಿಗಿನಿದಾಗೆ ನಿ[ಪಾಠಾಂ. ಪೊ]ಚ್ಚಪೊಸತಾಗೆ . . . ಪೇಟಲೊಡರ್ಚಿದೆನೀ ಪ್ರಬಂಧಮುಂ (ಛಂದೋಂಬು. ೧-೧೧).
[ನಿಚ್ಚ$_2$(<ನಿಚ್ಚಂ) + ಪೊಸತು]

**ನಿಚ್ಚಪ್ರಸಾದಿ** (ನಾ). [ವೀಶೈ] ನಿತ್ಯವೂ ಶಿವಪ್ರಸಾದವನ್ನು ಸ್ವೀಕರಿಸುವವನು ; ℙ ಮನಸ್ಸು ನಿರ್ಮಲವಾಗಿರುವುದಕ್ಕೆ ಪ್ರಸಾದವೆಂದು ಹೆಸರು. ಅದು ಲಿಂಗರೂಪಿಯಾದ ಶಿವನ ಅನುಗ್ರಹದಿಂದಲೇ ಸಿದ್ಧಿಸುತ್ತದೆ. ಯಾವ ಪದಾರ್ಥವನ್ನು ಶಿವನಿಗೆ ನಿವೇದನೆ ಮಾಡುತ್ತೇವೆಯೋ ಅದಕ್ಕೂ ಪ್ರಸಾದವೆಂದೇ ಹೆಸರು. ಅದು ಮನಸ್ಸಿನ ನೈರ್ಮಲ್ಯವನ್ನುಂಟುಮಾಡುತ್ತದೆ. ಹೀಗೆ ಶಿವನಿಗೆ ಸಮರ್ಪಣೆ ಮಾಡಿದ ಅನ್ನಾಹಾರಗಳನ್ನೇ ಸ್ವೀಕರಿಸುವುದರಿಂದ ಮನಃಪ್ರಸಾದವುಂಟಾಗಿ ಅದರಿಂದ ನಿರ್ಮಲ ಜ್ಞಾನವುಂಟಾಗುತ್ತದೆ : ಅಚ್ಚಪ್ರಸಾದಿ ನಿಚ್ಚಪ್ರಸಾದಿ ಸಮಯ ಪ್ರಸಾದಿಗಳೆಂದು. ಜಲಕ್ಕೆ ಕನ್ನವನಿಕ್ಕಿ ಉದಕವ ತಂದು ಲಿಂಗಮಜ್ಜನ ಕ್ಕೆಱೆವ ಹಗಲುಗಳ್ಳರಿಗೆ ಮೆಚ್ಚುವನೆ ಚೆನ್ನಮಲ್ಲಿಕಾರ್ಜುನ (ಮಹಾದೇ. ಬ. ೪೭-೧೧೦) ; ಅಚ್ಚಪ್ರಸಾದಿ ನಿಚ್ಚಪ್ರಸಾದಿ ಎಂದು ತಮ್ಮಿಚ್ಚೆಗೆ ಬಗುಳುವ ಕುನ್ನಿಗಳ ನೋಡಾ (ಚನ್ನಪ. ಕ. ೩೫೯-೭೪೯). 'ಅಚ್ಚಪ್ರಸಾದಿ' ಪರಾ. [<ನಿತ್ಯಪ್ರಸಾದಿ]

**ನಿಚ್ಚಯ, ನಿಚ್ಚೆಯ** (ನಾ). ದಿಟ; ಸತ್ಯ ; ನಿಶ್ಚಯ : "ನಿಚ್ಚಯ (ನಿಚಯ)—ನಿಶ್ಚಯ" (ತದ್ಭಕೋ. ೨೨) ; ನಿಚ್ಚಳದ ಸುರನರರುಗಳವೆ ನೋಡುತ ಬರಲ್ ಪೊಚ್ಚ ಪೊಸತೆನಿಸಿ ತೋರುತ್ತಮಿದೆ ಸಂತಸದಿ ನಿಚ್ಚಯ ಮಿದೆಂತೆಂದು ಪೇಳಲಕ್ಕುಮೆ (ವೆಂಕಾರಾ. ೫-೪-೫). **ನಿಚ್ಚೆಯ :** ಭಕ್ತ ಮಾಡುವುದೇ ಕ್ರಿಯೆ ಮತ್ತೆ ಮಾಹೇಶ್ವರಗೆ ಪುತ್ರ ಕೇಳ್ ನಿಚ್ಚೆ[ಪಾಠಾಂ. ಶ್ಚ]ಯ ಆದಱ ಮುಂದಿಹ ನಿಷ್ಠೆ ತಥ್ಯಪ್ರಸಾದಿಗಿವು ಮೂಱು (ಗುರುಬೋ. ೩-೧೪೭). [<ಸಂ. ನಿಶ್ಚಯ]

**ನಿಚ್ಚಯಗೆಯ್** (ಕ್ರಿ). ನಿರ್ಣಯಮಾಡು ; ನಿಶ್ಚಯಿಸು ; ಗೊತ್ತುಮಾಡು: ನಿಚ್ಚಯಗೆಯ್ದ ಪರದನನೊಂದೆ ಕೊರಳೊಳು ಜಗವು ಪೊಗಳಲು (ಸಾಳ್ವಭಾ. ೧೭-೫೨). [ನಿಚ್ಚಯ + ಕೆಯ್$_1$]

**ನಿಚ್ಚಯವಿಡಿ** (ಕ್ರಿ). = ನಿಚ್ಚಯಗೆಯ್ : ಬೆಚ್ಚದೆ ಒಚ್ಚಯವಿಲ್ಲದ ಮನದಿಂ ನಿಚ್ಚ[ಪಾಠಾಂ. ಶ್ಚ]ಯವಿಡಿದೆಚ್ಚಱಿಕೆಯ ಬಲದಿಂ ಎಂದು ಬುದ್ಧಿಗಲಿಸಿದ ಗುರುನಾಥಂ (ದೀಕ್ಷಾಬೋ. ೧೦೬-೨೪).
[ನಿಚ್ಚಯ + ಪಿಡಿ$_1$]

**ನಿಚ್ಚಯಿಸು,** ನಿಚ್ಚಯಿಸು (ಕ್ರಿ) =**ನಿಚ್ಚಯಗೆಯ್** : ನಿಚ್ಚಯಿಸಿದರು ರಾಮಲಕ್ಷ್ಮಣಸೀತೆಯರ್ ಮರಳಲ್ಕಯೋಧ್ಯೆಯಂ (ಶ್ರೀರಾಮಾ. ೨೨೯-೨೫). **ನಿಚ್ಚಯಿಸು :** ನಿಚ್ಚಯ್ಸಲಾಱದುವಮ್ಮಚ್ಚದೊಳಚ್ಚಿಗಂ ಗೊಂಡು ಮೂರ್ಛೆಯಿಂದೆರ್ಚತ್ತಂತೆ ಬೆಚ್ಚನೆ ಸುಯ್ದು (ಸುಕುಮಾ. ೩-೬ ವ) ; ಚಿತ್ತದೊಳ್ ನಿಚ್ಚಯಿಸ್ಸಿ ನೆರೆಯಲೆಳಸುವಳೊಮ್ಮೆ (ಚಂದ್ರಸ. ೭೮-೨೫). [ನಿಚ್ಚಯ + -ಇಸು$_3$]

**ನಿಚ್ಚಯಿಸು** 'ನಿಚ್ಚಯಿಸು' ನೋ.

**ನಿಚ್ಚಲ,** ನಿಚ್ಚಳ$_1$ (ಗು). ೧. ಅಲುಗಾಡದ; ಸ್ಥಿರವಾದ; ದೃಢವಾದ. (ನಾ). ೨. ಅಲುಗಾಡದಂಥ ಸ್ಥಿತಿ; ಸ್ಥಿರತೆ; ದೃಢತೆ : ಶತ್ವಕ್ಕೆ ಚತ್ವಂ—ನಿಶ್ಚಲ–ನಿಚ್ಚಲ; ನಿಶ್ಚಿಂತ–ನಿಚ್ಚಿಂತ (ಶಮದ. ೨೬೩ ಪ್ರಯೋ) ; ಜ್ವಲಿಪ ಪಂಚಾಗ್ನಿಯ ನಡುವೆ ನಿಚ್ಚ[ಪಾಠಾಂ. ಶ್ಚ]ಲದಿ ಬಯಲೊಳು ಮುಸುಕಿ ಪೆರ್ದೊಱೆಗಳು ಪರಿಯೆ ಪಟುತಪವನಾಚರಿಸುವ ತಪಸ್ವಿಗಳು (ಬಸವು.೧೯-೮೧). **ನಿಚ್ಚಳ$_1$ :** ೨. "ನಿಚ್ಚಳಮೆಂದು ನಿಶ್ಚಲದ ನಾಮದೊಳಂ" (ಕರ್ಣಾನಿ. ೫೩) ; ಮೆಚ್ಚಿದೆನೆಲೆ ಗಿಳಿ ನಿನ್ನಯ ನಿಚ್ಚಳ [ಪಾಠಾಂ. ಲ]ಮಾದಮಳಭಕ್ತಿಗೀವೆಂ ಪೇೞ್ನಿಚ್ಚೈಯದಾವುದು (ಉದ್ಭಟ. ೭-೧೦೭) ; ಕರಮೆಸೆವ ಕರ್ಣಚಾಮರಂಗಳೆಯೆಂಟಲಿಕ್ಕಿದ ದೂವೆಯದ ನೇವಳಂಗಳ ನಿಚ್ಚಳಂಗಳ ಪೊನ್ನ ಕಿವರಕಂಗಳ ಜಾಯಿಲ ಮೆನಿಪ ಜಾತ್ಯಶ್ವಂಗಳನೇಱಿ (ಮಹಾನೇ. ೧೨-೩೨ ವ); ನಿಚ್ಚಳದೊಳೆಸೆವ ತಿಳಿಗೊಳನ ಕಲಕಾಡಿ ಬಿರಿದಚ್ಚಲರ ಧೂಳಿಗಳ ಚೆಲ್ಲಾಡಿ ಸಲೆ ಮದಂ ಪೆಚ್ಚಿ . . . ನಿಚ್ಚಮೆಳವೆಲರೆಂಬ ಸೊಕ್ಕಾನೆ ತಾನೆ ತನ್ನಿಚ್ಚೆಯಿಂ ತಿರುಗುತಿದೆ (ಜೈಮಿಭಾ. ೩-೨೪) ; ಮೇರುಗಿರಿ ನಿಚ್ಚಳದಲಿಳೆ ಹದಿನಾಲ್ಕ ಧರಿಸಿಹುದು (ಕೋಗಯು. ೪-೫೦) ; ಕಕ್ಕಡವು ನಿಚ್ಚಳವಾಗಿ ಉರಿಯುತ್ತಿತ್ತು (ಮುಂಬಯಿ. ೪-೬೯) ; ಗಾಳಿ ಬೀಸದ ಕಡೆಯಲ್ಲಿಟ್ಟ ಸೊಡರಿನಂತೆ ಅವನ ಬಗೆಯಾಳವು ನಿಚ್ಚಳವಾಗಿತ್ತು (ನಾಗಕಾ. ೨). ೩. ಸ್ಪಷ್ಟವಾಗಿರುವುದು ; ಸಂದೇಹರಹಿತವಾದುದು : ನಿಚ್ಚಳದ ಸುರನರರಿಗಳವೆ ನೋಡುತ ಬರಲ್ ಪೊಚ್ಚಪೊಸತೆನಿಸಿ ತೋರುತ್ತಮಿದೆ ಸಂತಸದಿ ನಿಚ್ಚಯ ಮಿದೆಂತೆಂದು ಪೇಳಲಶ್ಯಮೆ (ಪಂಕಾರಾ. ೫-೪-೫) ; ದಾರಿ ನನಗೀಗ ನಿಚ್ಚಳವಾಗಿ ಕಾಣುತ್ತಿದೆ (ಮುಚ್ಚಬಾ. ೪೨) ; ಇನ್ನೊಂದು ಪ್ರಶ್ನೆಯು ನಿಚ್ಚಳವಾಗಬೇಕಾಗಿದೆಯೆಂದು ತೋರುತ್ತದೆ (ಬಿಟ್ಟಹೊ. ೧೦೫) ; ಗುರಿಯು ನಿಚ್ಚಳವಾಗಿದ್ದರೆ . . . ಸರಿಯಾದ ಸಾಧನಗಳನ್ನು ಉಪಯೋಗಿಸುವುದು ಕಷ್ಟವಲ್ಲ (ಕಥಕ. ೧೨).

ನಿಚ್ಚಳಾಗು$_1$ =ಸ್ಪಷ್ಟವಾಗು : ಪೂಜ್ಯ ಮಹಾತ್ಮಾಜಿಯವರ ಬಲಿದಾನದ ತರುವಾಯ ಈ ಮಾತು ಇನ್ನಿಷ್ಟು ನಿಚ್ಚಳಾಗಿ ಎಲ್ಲರ ಅನುಭವಕ್ಕೆ ಬಂದಿತು (ಯಕ್ಷಪ್ರ. ೧೭) ; ನನಗೇನೂ ಆ ಮಾತು ಅಷ್ಟೊಂದು ನಿಚ್ಚಳಾಗಿ ಗೊತ್ತಿಲ್ಲ (ಪಾತನಾ. ೨೧).

[<ಪ್ರಾ. ಣಿಚ್ಚಲ./ ಸಂ. ನಿಶ್ಚಲ]

**ನಿಚ್ಚಲವಕ್ಕಿ** (ನಾ). ಕಣ್ಣು ಮಿಟುಕಿಸದೆ ಇರುವ ಒಂದು ಬಗೆಯ ಹಕ್ಕಿ ; "ಆಂದೆಗೀರ ; ಶಕುನದ ಹಕ್ಕಿ" (ಪ್ರಭಣ್ಣ) : ಧನುರ್ವೇದಿಯುಂ ಶಬ್ದವೇದಿಯುಮಪ್ಪ ಬಿಲ್ಲ ಬಿನ್ನಣಿಯನೊರ್ವನಂ ಕರೆದು ನಿಚ್ಚಂ ವಕ್ರಿಸುತಿರ್ಪ ನಿಚ್ಚಲವಕ್ಕಿಯನೆಚ್ಚು ಬಾಯೆಂದು ಪೇೞ್ದುದುಂ(ಪಂಚತಂ. ೧೨೭-೨೦). [ನಿಚ್ಚಲ + ಪಕ್ಕಿ]

**ನಿಚ್ಚವಚ್ಚ** (ನಾ). ಯಾವಾಗಲೂ ತೊಡುವ ಆಭರಣ : ಎನ್ನ ಬಲ್ಲಾಲದ ನಚ್ಚಿನ ನಲ್ಲೆಳದಿ ಚಂದ್ರಮತಿಗಾ ಎನ್ನ ಚಂದಿರಗಾವಿಸೀರೆಯುಂ ಬಣ್ಣಗುಪ್ಪಸಮುಂ ಹಬ್ಬದ ನಿಚ್ಚವಚ್ಚಮನೆಲ್ಲಮುಂ ಮೆಚ್ಚನಿತ್ತು . . . ಮಱುಗದಂತಿರೆ ಪೇೞ್ಕೆ (ರಾಮಾಶ್ವ. ೩೮-೨೧).

[ನಿಚ್ಚ$_2$(<ನಿಚ್ಚಂ) + ಪಚ್ಚ$_2$]

**ನಿಚ್ಚವಯಣ,** ನಿಚ್ಚಪಯಣ (ನಾ). ನಿತ್ಯವೂ ಸ್ವಲ್ಪಸ್ವಲ್ಪ ದೂರ ಮಾಡುವ ಪ್ರಯಾಣ : ನಿಚ್ಚವಯಣದಿಂ ಬಂದು ಕುರುಕ್ಷೇತ್ರದ ಪೂರ್ವದಿಗ್ಭಾಗದೊಳ್ ಪ್ರಳಯಂ ಮೂರಿವಿಟ್ಟಂತೆ ಬೀಡಂ ಬಿಟ್ಟು (ಪಂಪಭಾ. ೧೦-೩೧ ವ) ; ನಡೆಯೆ ನಿಚ್ಚವಯಣಂಗಳೊಳ್ ಅಱಕೆಯ ಕೆಱೆಯ ನದೀನದಂಗಳ ಬೀಡುದಾಣಂಗಳೊಳ್ (ಶಾಂತಿಪು. ೧೧-೭೪ ವ); ಸಾಲದೆ ಸೋಲದೆ ಪೊಡೆಮಟ್ಟೋಲೈಸದೆ ನಿಚ್ಚವಯಣಮಿಲ್ಲದೆ ತನ್ನಿದಿರ್ಗಾಲಯದೊಳಿರ್ದು (ಪಂಚತಂ. ೫೩-೬); ಬಲಾಚ್ಯುತರ್ ನಿಚ್ಚವಯಣದಿಂದೆಯ್ತಂದರ್ (ಪಂರಾಮಾ. ೪-೫೨) ; ನಿಚ್ಚವಯಣಂ ಬಂದಂ ಮುರಧ್ವಂಸಕಂ (ಜಗವಿ. ೧೬-೩೮) ; ಅಂದಿನ ದಿನಮಲ್ಲಿರ್ದು ಮಱುದಿವಸಂ ಪುಂಡರೀಕಿಣಿಗೆ ನಿಚ್ಚವಯಣಂ ಬಂದು (ಪುಷ್ಪಪು. ೮-೯೪ ವ). **ನಿಚ್ಚಪಯಣ :** ನಿಚ್ಚಪಯಣಂಗಳಿಂ ಯುವರಾಜನನೇಕ ಯೋಜನಂಗಳಂ ಪೆಱಗಿಕ್ಕಿ ಪೋಗುತ್ತಮಿರೆಯಿರೆ (ಕಾದಂಉ. ೫೨೮) ; ನಿಚ್ಚಪಯಣದಿಂ ಬಂದು (ಎಕ. VII, ಶಿಮೊ. ೪-೨೫ ; 1122) ; ನೇಸರಿಂದುಗಳು ನಿಚ್ಚಪಯಣದಲಿ ವಿಶ್ರಮಿಸುವ ನಿಲ್ದಾಣವಾದ ಸಹ್ಯಾದ್ರಿ ಶೃಂಗದ ಇಲ್ಲವೆ ಪವನಮಾರ್ಗದ ಪುಣ್ಯಯಾತ್ರಿಕನಾದ ಮೇಘ (ಸಾಸಮಾ. ೯೨). [ನಿಚ್ಚ$_2$(<ನಿಚ್ಚಂ) + ಪಯಣ]

**ನಿಚ್ಚವಲಿ** (ನಾ). ಪ್ರತಿದಿನವೂ ದೇವತೆಗಳಿಗೆ ಸಮರ್ಪಿಸುವ ನಿವೇದನವಸ್ತು,—ಬಲಿ : ನಾಡಿಗರ್ ದಿನದಿನಂ ಬೇಳ್ಪೊಂದು ಹವ್ಯಮನುಂಡುಂಡು ಸವಿಗೊಂಡ ಬೋೞೆಯರೆತ್ತಾನುಮೊರ್ವನೀ ನಿಚ್ಚವಲಿಯೆಡೆಯಿಂ ಪುರುಳ್ಗಾಣದೆ ಪೆಚ್ಚಿವಿಟ್ಟು ತಿರುಳಂ ಸಮಂತು ಪುರುಳಂ ತೋಱುವ ಜೋಗವೆಣ್ಣ ಸಂಚುಗೈಯಲೊಡಂ ಕಱುಂಬಿ ನಿರ್ನೆರವಿಾವುಜ್ಜುಗಕ್ಕೆ ತಡೆವರ್ಪರ್ (ರಾಮಾಶ್ವ. ೫೫-೩೦).

[ನಿಚ್ಚ$_2$(<ನಿಚ್ಚಂ) + ಬಲಿ$_2$]

**ನಿಚ್ಚವಸದನ** (ನಾ). ನಿತ್ಯವೂ ತೊಡುವ ಉಡಿಗೆ,—ವಸ್ತ್ರ : ತಮ್ಮ ನಿಚ್ಚವಸದನದ ಸಿಂಗರಕ್ಕೆಂದು ಸಿಂಗನೆಱಿಗಿ ಮಿಾದುಡುಂಡು ಕೆಲಕೊಕ್ಕ ಮುತ್ತಾಸೆಯ ಅಣಿಮುತ್ತುಗಳಂ . . . ತಿಱಿದೊಟ್ಟಿ (ರಾಮಾಶ್ವ. ೭೩-೧೩). [ನಿಚ್ಚ$_2$(<ನಿಚ್ಚಂ) + ಪಸದನ]

**ನಿಚ್ಚವಳ** (ನಾ). ಪ್ರತಿನಿತ್ಯವೂ ನಿಯಮಿತವಾಗಿ ಬರುವವನು : ಆ ಕೆಱೆಯ ಮೂಡಣ ಪದಿನಯ್ದು ಮತ್ತರು ಬೆದ್ದಲೆಯುಮುಂ ನಿಚ್ಚವಳ ವೋರ್ವ್ವ ಬ್ರಾಹ್ಮಣಂಗೆ ಅಕ್ಕಿ ಮಾಣ . . . ಎಲೆ ೪ ಱ ಪಡಿಯಲು ನಡಸುವನ್ತಾಗಿ (ಸೌಇಇ. IX-i, ೨೪೫–೩೩ ; 1146).

[ನಿಚ್ಚ$_2$(<ನಿಚ್ಚಂ) + -ವಳ]

**ನಿಚ್ಚಶಿವರಾತ್ರಿ** (ನಾ). ನಿತ್ಯವೂ ಮಾಡುವ ಜಾಗರಣೆ ಮತ್ತ ಶಿವಪೂಜೆ: ದೇವದೇವ ಶಿವರಾತ್ರಿಯ ಸುಖಮುಂ ಸವಿಗಂಡೆಂ ಬಿಡಲಾಱೆ ನಾಱೆಂ ಇಂದಿನ ತೆಱದೊಳ್ ಬಂದೆಂದಿಂಗಂ ಕುಂದದೆ ನಿಚ್ಚಶಿವರಾತ್ರಿಯುಂ ಮಾಳ್ಪೆನೆಂಬ ನೇಮುವಂ ಕೈಕೊಂಡೆಂ (ಬಸರ. ೬-೫೩).

[ನಿಚ್ಚ$_2$(<ನಿಚ್ಚಂ) + ಶಿವರಾತ್ರಿ]

**ನಿಚ್ಚಳ$_1$** 'ನಿಚ್ಚಲ' ನೋ.

**ನಿಚ್ಚಳ$_2$**(ನಾ). ೧. ನಿರ್ಮಲವಾದುದು; ಶುದ್ಧವಾದುದು; ಶುಭ್ರವಾದುದು : ಬಚ್ಚಲೊಳಗಣ ಬಾಲಹುಳು ಬಲ್ಲುದೇ ನಿಚ್ಚಳದ ನೀರಿನನುಭವವ (ಪುಡಿಪೂ. ೧೩-೧೬) ; ಪಚ್ಚೆಯ ತೊಲೆ ಪವಳದ ಕಂಬ ಬೋದಿಗೆ ನಿಚ್ಚಳವಹ ನೀಲದಿಂಡ . . . ಮಣಿಮಂಟಪವಚ್ಚರಿಯಾಗಿರುತಿಹುದು (ತ್ರಿಪುಸಾಂ. ೭-೮೦) ; ನಿಚ್ಚಲುಂ ತುಂಗಭದ್ರಾನದಿಯೊಳುಂ ಮಿಂದಾ ನಿಚ್ಚಳದ ಧೌತಾಂಬರವನುಟ್ಟು (ಚೆಬಪು. ೩೪-೩೧) ; ಇಕ್ಕೆಲದೊಳಿಹ ನಿಚ್ಚಳ[ಪಾಠಾಂ. ಲ]ದ ಕರುಮಾಡದೋರಣದ ನೆಲೆನೆಲೆಯೊಳೊಚ್ಚೇರಿಗಂಗಳೆಳವೆಂಗಳ ಕಟಾಕ್ಷದ ಮರೀಚಿಗಳ್ಸೊಗಯಿಸಿದುವು

(ಜೈಮಿಭಾ. ೬-೧೦). ೨. ಕಾಂತಿ ; ಹೊಳಪು : ಇಚ್ಚಾರಿ ಮಕರ ತೋರಣ ರತ್ನಕೀಲಿತ ನಿಚ್ಚಳ ಹೊನ್ನ ತೋರಣದಿ ಸ್ವಚ್ಛದಿ ಪೊಱ ಮಟ್ಟಿಳು (ಮೋಹತ. ೨೪-೨೮) ; ಲಲಿತಾಂಗಿಯರ ಕರತಳದ ವಿಮಲ ಕಲಶೋದಕವನೊಲಿದೀಂಟುತಿರ್ದೊಡಂ ಮನತಣಿಯದಧ್ವಗರ್ಗಾ ಹೆಂಗಳ ಮಾದಳಿರ ಪಳಿವ ಚೆಂದುಟಿಯ ಸವಿಗೆಳಸಗೆಯೊಳಾದರಿಪ ಕಂಗಡೆಯು ನಿಚ್ಚಳಕೆ . . . ಬಯಸಿ ಬಯಸಿ (ಜೈಮಿಭಾ. ೩-೧೦) ; ಮನೆಯೊಳ ಅಂಗಳದೊತ್ತಿನ ನಿಚ್ಚಳದ ಪಚ್ಚೆಯ ಜಗಲಿಯೊಳ್ ಕುಳ್ಳಿರ್ದು (ಚಕವಿ. ೬-೧೫೪ ಪ). ೩. "ಎಚ್ಚರ, ಅರಿವು" (ಜಾನಕೋ. ೧೧) : ಇನ್ನೂ ನಿಚ್ಚಳವಾಗಿಲ್ಲ. ನಿದ್ದೆಗಣ್ಣಲ್ಲಿಯೆ ಇದ್ದ ಹಾಗಿದೆ (ರೂಢಿ).

ನಿಚ್ಚಳಾಗು$_2$ = ಎಚ್ಚರವಾಗು : ನೀರನ್ನು ತೆಗೆದು ಕೊಂಡು ಮುಖಕ್ಕೆ ಉಗ್ಗಿಕೊಂಡೆ. ನಿಚ್ಚಳಾಗಿ ಎಚ್ಚೆತ್ತೆ (ಮೇದಿಮ. ೧೦೫).

[ ? ]

**ನಿಚ್ಚಳಗೊಳಿಸು** (ಕ್ರಿ). ಸ್ಪಷ್ಟಗೊಳಿಸು : ಒಂದೆರಡು ಉದಾಹರಣೆಗಳಿಂದ ನಾನು ಭಿನ್ನಾಭಿಪ್ರಾಯಗಳನ್ನು ಬಗೆಹರಿಸಿಕೊಂಡ ರೀತಿನೀತಿಗಳನ್ನು ನಿಚ್ಚಳಗೊಳಿಸಬಹುದು (ಶರಚ. ೧೩ ಮುನ್ನುಡಿ).

[ನಿಚ್ಚಳ$_1$(<ನಿಚ್ಚಲ) + ಕೊಳ್$_1$ + -ಇಸು$_3$]

**ನಿಚ್ಚಳಗೊಳ್ಳು** (ಕ್ರಿ). ನಿರ್ಮಲವಾಗು ; ಶುದ್ಧವಾಗು : ಕೆಲದಿನ ಮಡದಿಯಿಂದ ದೂರವಿದ್ದ ಪ್ರಭಾಕರನ ಕಿವಿ ಚುರುಕಾಗಿ ಕಣ್ಣು ನಿಚ್ಚಳಗೊಂಡು ಮನಸ್ಸು ಜಾಗ್ರತವಾಯಿತು (ತೀಮೋಹ. ೧೦೭).

[ನಿಚ್ಚಳ$_2$ + ಕೊಳ್ಳು$_1$(<ಕೊಳ್$_1$)]

**ನಿಚ್ಚಳತೆ** (ನಾ). ಕದಲದಿರುವಿಕೆ ; ದೃಢತೆ ; ಸ್ಥಿರತ್ವ : ಮಲವ ಪೊದ್ದದೆ ಜಗದೊಳೆಲ್ಲಿಯುಂ ಸುಳಿವ ಮಾರುತನಂತೆ ಕಡುನಿಚ್ಚಳತೆಗುಂದದೆ ತೊಳಲುತಿಹೆನೆಲೆ ಭೂಪ (ನಿಭಾಗ. ೧೧-೧೩-೩೧). [<ಸಂ. ನಿಶ್ಚಲತಾ]

**ನಿಚ್ಚಳಮನ** (ನಾ). ೧. ದೃಢವಾದ ಮನಸ್ಸು. ೨. ದೃಢವಾದ ಮನಸ್ಸುಳ್ಳವನು ; ದೃಢಚಿತ್ತ ; ಸ್ಥಿರಮನಸ್ಕ : ಒರಲ್ಗಳೊಳಂ ಬಿದಿರಕ್ಕಿಯಿಕ್ಕಿ ನಿಚ್ಚ[ಪಾಠಾಂ. ಶ್ಚ]ಳಮನ ಸುವ್ವಿ ಕಾಡೊಡೆಯ ಸುವ್ವಿ ಮನೋಹರ ಸುವ್ವಿ ಸುವ್ವಿಯೆಂದಳವಡೆ ರಾಗದಿಂ ತಳಿಸಿದರ್ ವನದಲ್ಲಿ ಪುಳಿಂದಕಾಂತೆಯರ್ (ಗಿರಿಕ. ೧-೧೨೩).

[ನಿಚ್ಚಳ$_1$(<ನಿಚ್ಚಲ) + ಮನ$_1$]

**ನಿಚ್ಚಳಾಗು$_1$** 'ನಿಚ್ಚಲ' ಪರಾ.

**ನಿಚ್ಚಳಾಗು$_2$** 'ನಿಚ್ಚಳ$_2$' ಪರಾ.

**ನಿಚ್ಚಳಿತ** (ನಾ). ಸ್ಥಿಮಿತವಾದ ಮನಸ್ಸುಳ್ಳವನು ; ದೃಢಚಿತ್ತ : ಧ್ಯಾನದೊಳಭವಂ ನೆಱೆದಿರ್ದನಿಸಾನುಮನರೆಮುಚ್ಚಿ ಕಣ್ಗಳಂ ನಿಚ್ಚ[ಪಾಠಾಂ. ಶ್ಚ]ಳಿತಂ ತಾನಿರ್ದು (ಪಂಪಭಾ. ೮-೧೩). [<ಸಂ. ನಿಶ್ಚಲಿತ]

**ನಿಚ್ಚಳಿಸು**(ಕ್ರಿ). ೧. ಶುದ್ಧಪಡಿಸು; ಚೊಕ್ಕಟಮಾಡು: ವಿಶ್ವಭೂತಿ ಪಾರ್ವನಂ ಪೋಗಿ ಮುಷ್ಟಿಯಂ ಬೇಡಿ ತಂದಾ ತಂಡುಲವನು ನಿಚ್ಚಳಿಸಲ್ವಡೆಯದೆ ಜಲಮಿಶ್ರದಿಂ ಪಿಟ್ಟುಗುಟ್ಟಿ (ಸಮ್ಯಕೌ. ೭-೩೧); ಕುದುಪಲಕ್ಕಿಯ ನಿಚ್ಚಳಿಸಿ ನೆನೆಯಿಕ್ಕಿ ಕುಟ್ಟಿ (ಭೀಮಸೂ.೧೯). ೨. ( ? ) : ರತ್ಯುತ್ಸವವಂ ರತ್ಯಂತದೊಳ್ ನಿಚ್ಚಳಿಪಿನಿಯರ ಮೆಚ್ಚಿಂದಂ (ಅನಂಪು. ೮-೫೮).

[ನಿಚ್ಚಳ$_2$ + -ಇಸು$_3$]

**ನಿಚ್ಚಳೆ** (ನಾ). ಸ್ಥಿರವಾದ ಮನಸ್ಸುಳ್ಳವಳು ; ದೃಢಚಿತ್ತೆ : ಬಿಚ್ಚಿಬಿಚ್ಚಿಲ್ಲವನು ಕೇಳ್ವುತಿಯಿಚ್ಚೆಯಿಂ ಶ್ರೀರಾಮಚಂದ್ರಗೆ ನಿಚ್ಚಳೆಗೆ ಸರಿತರಲುಬೇಕೆನಲಾಗ ಕೌಸಲ್ಯೆ (ಜಿರಾಮಾ. ೧೩೪-೭೧) ; ನಿಚ್ಚಳೆಯ ಕೊಂಡೊಯ್ದು ದೈತ್ಯನ ಮೆಚ್ಚದಿರೆ ಕಾವಲನುಗೈದಿಹನಚ್ಚುತಾಗ್ರಜ ನರವುದೆನೆ ನೆಲೆಗೇಳಿ ಜಾನಕಿಯಾ (ಜಿರಾಮಾ. ೩೩೧-೫೦).

[<ಸಂ. ನಿಶ್ಚಲಾ]

**ನಿಚ್ಚಿಂತ** (ಗು). ೧. ಚಿಂತೆಯಿಲ್ಲದ; ಯೋಚನೆಯಿಲ್ಲದ; ನಿಶ್ಚಿಂತವಾದ. (ನಾ). ೨. ಚಿಂತೆಯಿಲ್ಲದ ವ್ಯಕ್ತಿ ; ಯೋಚನೆಯಿಲ್ಲದವನು: ಶತ್ವಕ್ಕೆ ಚತ್ವಂ—ನಿಶ್ಚಲ-ನಿಚ್ಚಲ; ನಿಶ್ಚಿಂತ-ನಿಚ್ಚಿಂತ (ಶಮದ. ೨೬೩ ಪ್ರಯೋ). [<ಪ್ರಾ. ಣಿಚ್ಚಿಂತ./ ಸಂ. ನಿಶ್ಚಿಂತ]

**ನಿಚ್ಚಿತ** (ಗು). ೧. ನಿಶ್ಚಯವಾದ; ಗೊತ್ತುಪಡಿಸಿದ. (ನಾ). ೨. ನಿಶ್ಚಯ ; ನಿರ್ಣಯ : "ನಿಚ್ಚಿತಮೆಂದು ನಿಶ್ಚಿತದೊಳಂ" (ಕರ್ಣಾನಿ. ೫೩) ; ಬೆಚ್ಚು ಭಯ ಸಂಗವನುಳಿದು ನೆಱೆ ನಿಚ್ಚಿತದಿ ರುದ್ಧಿಗಳನಾಂತರನಿಚ್ಚಸುತ ಜಿನಮುನಿಗಳನು ಮೆಚ್ಚಿದನು (ಸಾಳ್ವಭಾ. ೪-೩೨).

[<ಸಂ. ನಿಶ್ಚಿತ]

**ನಿಚ್ಚಿನಿಸು** (ಕ್ರಿ). ನಿಶ್ಚಯಿಸು ; ನಿರ್ಧರಿಸು : ತನುರುಜೆಯಂ ಪುದುಙ್ಗುಳಿಸೆ ಸಂಸ್ಕೃತಿಭೋಗಮುಸಾರಮೆಂದು ನಿಚ್ಚಿನಿಸಿ ನಿಜಪ್ರಿಯಾತ್ಮಜೆಗೆ ಸನ್ನತಿಯಂ ಕರೆದಿತ್ತು (ಎಕ. VII, ಶಿಕಾರಿ. ೨೧೯-೨೩ ; 918).
[☞ ಇದು 'ನಿಶ್ಚಯಿಸು' ಎಂಬುದರ ಅಪಲಿಪಿತವಿರಬಹುದು]

**ನಿಚ್ಚಿಲಿ** (ನಾ). ನೈಜತೆ ಇಲ್ಲದವನು; ಕಪಟಿ; ಮೋಸಗಾರ (?) : ನಿಚ್ಚಿಲಿ ಕಾರಿರುಳೊಳ್ ಪೊಱಪಚ್ಚಮನುಟ್ಟಿರ್ದಿಱುಂಕಿ ಕಕ್ಷದೊಳಾ ಪಾಟಚ್ಚರಭಯದಿಂದುಟ್ಟು ಪಟಚ್ಚರಮಂ ಮನೆಗೆವಂದು ನಿಂದಂಗಣದೊಳ್ (ಶಾಂತಿಪು. ೬-೬೫). [ನಿಚ್ಚ? + -ಇಲಿ$_3$]

**ನಿಚ್ಚೆಯ** 'ನಿಚ್ಚಯ' ನೋ.

**ನಿಚ್ಚೈದೆ** (ನಾ). ಬಹಳ ಕಾಲ ಮುತ್ತೈದೆಯಾಗಿರುವವಳು ; ದೀರ್ಘಸುಮಂಗಲಿ : ಆ ಸತಿಯಂ ಪರಸಿದರಾಯುಷ್ಮತಿ ನೀಂ ನಿಚ್ಚೈದೆಯಾಗೆನುತ್ತೆ (ಕಾದಂಬು. ೭೮೩). 'ನಿಟ್ಟೈದೆ' ಪರಾ.

[ನಿಚ್ಚ$_3$ + ಐದೆ$_2$(<ಅಯ್ದೆ$_2$)]

**ನಿಜ** (ಗು). ೧. ಸ್ವಕೀಯ ; ತನ್ನ : ಅರೆಮುಚ್ಚಿ ಕಣ್ಗಳಂ ವನಕರಿಮೆಲ್ಲದೆ ಲಲಿತಸಲ್ಲಕೀಪಲ್ಲವಮಂ ಸ್ಮರವಶದಿಂದಿರ್ದುದು ನಿಜಕರೇಣುಪೇಚಕನಿರೂಪಿತಾಯತಕತ್ರಂ (ಕವಿರಾ. ೩-೮) ; ಮಿಕ್ಕೆಸೆವ ಪ್ರಚಂಡಮಾರ್ತಾಂಡನಲರ್ಚುಗೆನ್ನ ಹೃದಯಾಂಬುಜಮಂ ನಿಜವಾಙ್ಮರೀಚಿಯಿಂ (ಪಂಪಭಾ. ೧-೩) ; ಏದೊರೆ ಪೆಂಪೊ ಲಕ್ಷ್ಮಿ ನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕಮಿಂದ್ರಮುಖ್ಯದಿವಿಜರ್ ಸ್ವಪರಿಗ್ರಹಂ . . . ಎನಿಪ್ಪದುಗೆಧ್ಧಿ ದಧಿತಲ್ಪನಂ ನರನಭಿಷ್ಟುತಿಗೆಯ್ವುದು ಧಾರ್ಷ್ಟ್ಯಮಲ್ಲವೇ (ಜಗವಿ. ೧-೨೦). ೨. ಸ್ವಭಾವಸಿದ್ಧವಾದ; ಸಹಜವಾದ ; ಕೃತ್ರಿಮವಲ್ಲದ. (ನಾ). ೩. ಸ್ವಕೀಯತೆ ; ತನ್ನತನ ; ಆತ್ಮಸ್ವಭಾವ : ಎನಗೊಂದು ನಿಜವಿಲ್ಲ ಎನಗೊಂದು ನಿಷ್ಪತ್ತಿಯಿಲ್ಲ ಲಿಂಗವ ತೋಱಿ ಉದರವ ಹೊರೆವ ಭಂಗಗಾಱ ನಾನು (ಬಸವ. ೩೦೭); ಹೊರಳಿದನು ಹುಡಿಯೊಳಗೆ ಸಲೆ ಕಾತರಿಸಿದನು ಮೋಹಾಂಧಕಾರಕೆ ಕರಣವನು ಕೈಸೂಱಿಗೊಟ್ಟನು ನಿಜದೊಳೆಚ್ಚಱದೆ (ಕುಮ್ಯಾದ್ರೋ. ೭-೯). ೪. ಸ್ವಭಾವ ; ಸಹಜತೆ ; ಹುಟ್ಟುಗುಣ : ಆ ನಾಡವರ್ಗಳ್ ಚದುರರ್ ನಿಜದಿಂ ಕುಱಿತೋದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್ (ಕವಿರಾ. ೧-೩೮) ; ನಿಜದೊಳೆ ಭೂಪರೆಂಬರವಿವೇಕಿಗಳಪ್ಪರ್ (ಪಂಪಭಾ.೧೨-೪೦); ನಿಜದಿಂದ ಕ್ಷತ್ರಿಯನೆಂದು ತನ್ನ ನಿಜವನಱದ ಕರ್ಣನ ವ್ಯಾಥಭಾವ ಬಿಡದಂತೆ ತಾನು ತನ್ನ ನಿಜವನಱದರೂ . . . ಮುನ್ನಿನ ಭ್ರಮೆಗಳ ಬಿಡಲಱಯದ ಬಡಮನದ ಮನುಜರೆಲ್ಲರೂ ನಿಜಗುಣನ ನಿಜ ಭಾವದಲೂ ನಿಲ್ಲದವಂಗೆ ನಿಜಸುಖವು ಸಾಧ್ಯವಪ್ಪುದೆ ಹೇಳಾ (ವಚಸಂ. ೯೧-೫೮) ; ಕ್ರಮದೆ ಗುರು ದೀರ್ಘಮೇಕಾರಮುಖ್ಯಸಂಧ್ಯಕ್ಷರಂಗಳವು ನಿಜದಿಂ (ಶಮದ. ೧೦). ೫. ಯಥಾರ್ಥವಾದುದು ; ದಿಟ; ಸತ್ಯ : ಚಿತ್ರದ ರೂಹು ಕಾಣಿರಣ್ಣಾ . . . ಅಪ್ಪಿದರೆ ಸುಖವಿಲ್ಲ ಮೆಲಿದರೆ ರುಚಿಯಿಲ್ಲ ಕೂಡಲಸಂಗಮದೇವಾ ನಿಜವಿಲ್ಲದವನ ಭಕ್ತಿ (ಬಸವ. ೧೨೬) ;

ಆ ಮಾತು ಕಪಟವೊ ನಿಜವೊ ಬಳಿಕೀ ರೀತಿಗಳನಾರೈದು ನೋಡುವೆನು (ಬಸಪು. ೨೮-೪೪) ; ಮಗುವುತನದೊಳು ಕೂಡಿ ಮೆಚ್ಚಿವುದು ಜಗವದಲ್ಲದೆ ನಿಜವ ಬೆರೆಸುವ ವಿಗಡರಿಗೆ ಪರತತ್ತ್ವಚಿನುಮಯರೂಪ ತಾನೆಂದ(ಕುವ್ಯಾಭೀ. ೩-೫೬); ಅವನು ನನ್ನ ಮಾತು ನಿಜವೆಂದು ನಂಬಿದನು(ಮುಂಬಯಿ. ೪-೪೪). ೬. ಸಹಜವಾದ ಸ್ವರೂಪ : ಇವರೆತ್ತ ಬಲ್ಲರು ಲಿಂಗದ ನಿಜವ (ಆದಪ. ೨-೪) ; ಮಾರ್ಕಂಡೇಯಮಹಾಮುನಿ ಸ್ವೇಚ್ಛಾಮರಣಿಯೆನಿಸಿಕೊಂಡ ನಲ್ಲದೆ ಲಿಂಗದ ನಿಜವನಱಿಯನು (ಬಸಪ. ೮೫೬) ; ಈತನ ನೆನಹನೀತನ ನಿಜವನಱಿವ ಮಹಾತ್ಮರಾರೆಂದ (ಕುಸ್ವಾಸ. ೯-೩) ; ಭಜಿಸಿ ನೆರೆಯರು ನಾರದಾದ್ಯರು ನಿಜವನೀತನನೀತ ನಿನಗಾತ್ಮಜನೆ ಹೋಗೆಲೆ ಮರುಳೆ (ತೊರರಾ. ೧-೯-೩೬). ೭. ದಿಟವಾದುದು ; ಸತ್ಯವಾದುದು ; ಆತ್ಮ : ಪ್ರಣವದಲ್ಲಿ ನಿಜವ ಕಂಡು ತೋಱಿದ ಬಸವ (ಶೀಲಪ. ೨೬-೮೪); ನಿಜವನಱಿಯದ ಭಕ್ತ ಬಳಲುವನಲ್ಲದೆ ಲಿಂಗ ಬಳಲುವುದೆ (ಬಸಪ. ೧೧೩); ಮತಿಗಗೋಚರವಾದಖಂಡಪರಿಪೂರ್ಣಾದ್ವಿತೀಯ ಚಿನ್ಮಯ ನಿಜವಿದೇ . . . ಎನುತಡಿಯ ಮೇಲೆ ಬೀಳ್ದು (ಪದ್ಮರಾ. ೬-೩೮) ; ನೀತಿಜ್ಞಂ ನಿಜನಿತ್ಯತತ್ತ್ವನಿಪುಣಂ . . . ರಾಜೇಂದ್ರಚಕ್ರೇಶ್ವರಂ (ಹವಿಸ್ಮರ. ೧-೨೬). ೮. ಮೋಕ್ಷ ; ಕೈವಲ್ಯ ; ಪರಮಾರ್ಥ : ಅದುದವಿವೇಕದಲಿ ಸತ್ಪಥವ್ಯೆದಿಕಾತಿಕ್ರಮಣವಿಸ್ನು . . . ಈ ದುರಾಗ್ರಹ ನಿಲಲಿ ಹಾಯಿಕು ಕೈದುವನು ಸುಸಮಾಧಿಯೋಗದಲ್ಲೈದು ನಿಜವನು (ಕುವ್ಯಾದ್ರೋ. ೧೮-೫೮). ℙ ಈ ಶಬ್ದದೊಂದಿಗೆ ಬೇರೆಬೇರೆ ನಾಮಪದಗಳು ಸೇರಿ ಅನೇಕ ಸಮಾಸಪದಗಳು ಕಾವ್ಯಗಳಲ್ಲಿ ಪ್ರಯೋಗವಾಗಿವೆ.

ನಿಜ ಆಯಗಾರ = ವಂಶಪಾರಂಪರ್ಯವಾಗಿ ಸೇವೆ ಸಲ್ಲಿಸುವ ಗ್ರಾಮದ ಅಧಿಕಾರಿ : ಈ ಪಾಳಯಗಾರರ ಆಳಿಕೆಗಳಲ್ಲಿ ಗ್ರಾಮಗಳ ಬಾರಾಬಲೂತಿ ಕೆಲಸದವರಿಗೆ ಮಾನ್ಯ ಮಿರಾಸಿ ಮೊದಲಾದ ಆಗತೆಗಳನ್ನುಂಟುಮಾಡಿಕೊಟ್ಟು, ಖಂಡಿತವಾಗಿ ಸರ್ಕಾರದಿಂದ ನೇಮಕ ಮಾಡಿದ ವಿವರ ಹೇಗೆಂದರೆ:—ನಿಜ ಆಯಗಾರರು ೧. ಗೌಡ. ೧. ಶಾನುಭೋಗ. ೧. ಬಡಗಿ . . . ಅರೆ ಆಯಗಾರರು ೧. ಜೋಯಿಸ. ೧. ಕುಲಾಲ (ಕುಂಬಾರ). ೧. ನಾಪಿತ(ಕ್ಷೌರದವನು)(ಚಿತ್ರಪಾ. ೮೪ ಉಪೋದ್ಘಾತ).[ಸಂ.]

**ನಿಜಕರ್ತೃ** (ನಾ).[ವ್ಯಾಕ](ಅನ್ಯಪ್ರೇರಣೆಯಿಲ್ಲದೆ) ತಾನೇ ಕರ್ತೃವಾಗಿರುವುದು ; ಸ್ವಯಂಕರ್ತೃ : ಸಂಸ್ಕೃತದಾ ಧಾತುಗನೇಕಾಕ್ಷರಕಿಸುಜಾತಂ ನಿಜಕರ್ತೃವೊಳ್ ಪ್ರಯೋಜನದೆಡೆಯೊಳ್ (ಶಮದ. ೨೩೧). 'ಅನ್ಯಕರ್ತೃ' ಪರಾ. [ನಿಜ + ಕರ್ತೃ]

**ನಿಜಕಾಯ** (ನಾ). ತನ್ನ ದೇಹ; ಸ್ವಂತ ಶರೀರ : ನಿಜಜೀವಂ ಪರಲೋಕದೊಳ್ . . . ನಿಜಕಾಯಂ ಕುರುಭೂಮಿಯೊಳ್ ನೆಲಸೆ ಗಾಂಧಾರೀಜ ದುರ್ಯೋಧನಾನುಜ ದುಶ್ಶಾಸನ ಭೀಮಭೀಮಗದೆಯಿಂ ಪಂಚತ್ವಮಂ ಪೊರ್ದಿದೈ (ಗದಾಯು. ೫-೫). [ನಿಜ + ಕಾಯ]

**ನಿಜಕೃತ್ಯ** (ನಾ). ತನ್ನ ಕರ್ತವ್ಯ; ತಾನು ಮಾಡಬೇಕಾದ ಕೆಲಸ: ನಿತ್ಯವಲ್ಲದ ದೇಹವಿದು ವಶವರ್ತಿಯಾಗಿಹುದರಿದೆನುತೆ ನಿಜಕೃತ್ಯ ಲೋಪಿಸದಂತೆ ಸನ್ಮಾರ್ಗದಲಿ ಸಂಚರಿಸಿ (ಅಕ್ರೂಚ. ೩-೪೧). [ನಿಜ + ಕೃತ್ಯ$_2$]

**ನಿಜಗಲಿ** (ನಾ). ಸಹಜಪರಾಕ್ರಮಿ ; ಆಜನ್ಮಶೂರ : ನಿಜಗಲಿ ನೀತಿನೈಪುಣಪಾರರಥಾಶ್ವಪದಾತಿಕುಂಜರವ್ರಜನಖಿಳಾಯುಧಾತಿಕುಶಲಂ (ವರ್ಧಪು. ೨-೩೧) ; ಸಕಳಮಂ ತನ್ನೊಳಗಿರಿಸಿ ಮೇಣ್ ಸಕಳಮಂ ತೊಡೆದೆಸೆವ ನಿಜಗಲಿ (ಬಸಪು. ೫೧-೪೫) ; ತ್ರಿಜಗದೊಳದಟುಳ್ಳ ದೈತ್ಯನ ಮಡುಹಿದ ಭುಜಬಲನಾರು ಪೇಳೆನಲು ನಿಜಗಲಿಯಿವನೀಗ ನೋಡೆಂದು ಮಕರಧ್ವಜನ ವಿಗ್ರಹವ ತೋಱಿಸಿದ (ಮೋಹತ. ೧೩-೩೫).

[ನಿಜ + ಕಲಿ$_2$]

**ನಿಜಗಾಣ್** (ಕ್ರಿ). ದಿಟವಾದುದನ್ನು ಕಾಣು,—ತಿಳಿ ; ಆತ್ಮಸ್ವರೂಪವನ್ನು ಕಾಣು : ಇಂದು ನಿಜಗಂಡು ಪರಮಾನಂದದ ಕಡಲೊಳಗೆ ಮುಳುಗಿ ಸವಿಯುತಿರ್ಕುಂ (ಭಸ್ಮಾಮ್ನು. ೧೮).

[ನಿಜ + ಕಾಣ್]

**ನಿಜಗಾರ** (ನಾ). ಸತ್ಯವನ್ನು ಹೇಳುವವನು ; ಸತ್ಯವಂತ : ಕೃಷ್ಣ ನೀನು ನಿಜಗಾರನೆಂದು ಲೋಕದಲ್ಲೆಲ್ಲಾ ಪ್ರಸಿದ್ಧನಾಗಿದ್ದೀಯೆ ; ಹಾಗಿದ್ದರೂ ನನ್ನ ಮೊಮ್ಮಗನ ಸಾವನ್ನೇ ಮರೆಸುವುದೇ ? (ವಚಭಾ. ೩೬೨). [ನಿಜ + -ಗಾರ (< -ಕಾಱ)]

**ನಿಜಗುಣ** (ನಾ). ೧. ಹುಟ್ಟುಗುಣ ; ಸಹಜಗುಣ ; ಸ್ವಭಾವ : ಬೇಡಲು ಹುಟ್ಟಿದ ಪ್ರಾಣಿಗೆ ಬೇಡಲು ವಿಧಿಯೇ ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣ ಸಜ್ಜನವಪ್ಪುದೆ (ಬಸಪ. ೧೨೮) ; ನಿತ್ಯಗುಣಾರ್ಣವ ನಿಜಗುಣಪರಿಪೂರ್ಣ ಸಚ್ಚಿದಾನಂದ ಸನಕಾದಿವಂದ್ಯ (ಪುರಂದ. ೨-೬೬-೫). ೨. (ಸೃಷ್ಟಿಕರ್ತೃತ್ವಾದಿ) ಮೂಲಗುಣಗಳಿಂದ ಕೂಡಿದವನು ; ಪರತತ್ತ್ವ ; ಭಗವಂತ ; ಪರಮಾತ್ಮ : ತಾನು ತನ್ನ ನಿಜವನಱಿದರೂ ಜಾತಿಯಾಶ್ರಮಗುಣಧರ್ಮಜೀವಾದಿ ಭೇದಂಗಳೊಳಗಾದ ಮಾಯಾಮಯಂಗಳೆಂಬ ಮುನ್ನಿನ ಭ್ರಮೆಗಳ ಬಿಡಲಱಿಯದ ಬಡಮನದ ಮನುಜರೆಲ್ಲರೂ ನಿಜಗುಣನ ನಿಜಭಾವದಲೂ ನಿಲ್ಲದವಂಗೆ ನಿಜಸುಖವು ಸಾಧ್ಯವಪ್ಪುದೆ ಹೇಳಾ (ವಚಸಂ. ೯೧-೫೮). [ನಿಜ + ಗುಣ]

**ನಿಜಗುರು** (ನಾ). ತನ್ನ ಗುರು,—ಆಚಾರ್ಯ : ನಿಜಗುರು ಪರೋಕ್ಷವಿನಯಮನಜಾತರಿಪು ತನ್ನ ತಮ್ಮನುಂ ತಾನುಂ ಭೂಭುಜರಱಿವಿನಂ . . . ನೆಗಟ್ದು (ಶಾಂತಿಪು. ೧-೫೦) ; ಅರಸಂ ಪ್ರಿಯರತಿಗೆ ಮೆಚ್ಚುಗೊಟ್ಟು ಸುರಗಿರಿಗೆ ನಿಜಗುರುವಂದನಾರ್ಥದಿಂ ಬರುತ್ತುಂ (ಚಾವುಂಪು. ೬೩) ; ನಿಜಗುರು ದೀಕ್ಷೆಯಂ ತಳೆಯೆ (ನೇಮಿಪು. ೫-೮) ; ಶ್ರೀವಿಜಯಜಿನಾಲಯ[ಂ] ಕಾಲದಿಂ ಜೀರ್ಣ್ಣಮಾ[ದೊಳು] ನಿಜಗುರೂಪದೇಶದಿಂ ಪೊಸತಾಗೆ ಮಾಡಿಸಿ (ಸೌಇಇ. XX, ೨೦೫-೩೩ ; 1247). [ನಿಜ + ಗುರು$_2$]

**ನಿಜಗೃಹ** (ನಾ). ತನ್ನ ಮನೆ ; ಸ್ವಂತ ಮನೆ ; ಸ್ವಗೃಹ : ಮಡಿವಾಳಯ್ಯಗಳಿಗೆ ನಮಸ್ಕರಿಸಿ ಹೊಣೆಯ ಕೊಂಡು ತನ್ನ ಲಿಂಗಸಹಿತ ಬೀಳ್ಕೊಂಡು ನಿಜಗೃಹಕ್ಕೆ ಬಂದು ಆ ಲಿಂಗದ ಕಯ್ಯಲ್ಲಿ ಕಾಯಕವ ಮಾಡಿಸಿ (ಶೂನ್ಯಸಂ. ೨೯೩-೧೪). [ನಿಜ + ಗೃಹ]

**ನಿಜಗೆಂಪು** (ನಾ). ೧. ಸ್ವಾಭಾವಿಕವಾಗಿ ಇರುವ ಕೆಂಪುಬಣ್ಣ ; ಸಹಜವಾದ ಕೆಂಪು : ವರಪಶ್ಚಿಮಾಂಗನೆ ರಮಣನೈತರುತಿರೆ ಮಜ್ಜನ ಮಾಡಿ ಅರುಣ[ವರ್ಣದ] ಪೊಂಬಟ್ಟೆಯನುಟ್ಟಂತೆ ಪರಿಶೋಭಿಸಿತು ನಿಜಗೆಂಪು (ಕಂಸವಿ. ೨೩-೬೦). ೨. ಸಹಜವಾದ ಕೆಂಪುಬಣ್ಣವುಳ್ಳುದು : ತಂಗಿ ನಿನ ಮೈಯು ನಿಜಗೆಂಪು (ನಾಪದ. ೬೫).

[ನಿಜ + ಕೆಂಪು$_1$]

**ನಿಜಗೋತ್ರ** (ನಾ). ತಾನು ಹುಟ್ಟಿದ ಗೋತ್ರ,—ಕುಲ,—ವಂಶ.

**ನಿಜಗೋತ್ರದೀಪಕ** = ತನ್ನ ಮನೆತನವನ್ನು ಬೆಳಗುವವನು ; ಕುಲದೀಪಕ : ಕಳಂಬಲದ ಸಲೆ ಕಟ್ಟರೆಂಬುದಾಗದು[ಮೆ]ಸಿಡಿವ ಮನ್ನಣೆಯ ಬೆಳ್ಳಿಯ ಬಟ್ಟಲ ತಂಬುಲಂ ಜಯಂಗೊಂ × ಪಡೆದಂ ಕದಂಬಕುಳಭೂಷಣನೊಳ್ ನಿಜಗೋತ್ರದೀಪಕಂ (ಸೌಇಇ. XX, ೩೧-೧೦ ; 1044). [ನಿಜ + ಗೋತ್ರ$_2$]

**ನಿಜಚರ್ಮ** (ನಾ). ಮೇಲಿನ ಚರ್ಮದ ಅಡಿಭಾಗದಲ್ಲಿರುವ ಚರ್ಮ ; ಒಳಚರ್ಮ : (ಹೊರಚರ್ಮದ ಅಡಿಯಲ್ಲಿರುವ) ನಿಜಚರ್ಮ ( Cutis. ಇಂಕಸಿ). [ನಿಜ + ಚರ್ಮ]

**ನಿಜಜನನಿ** (ನಾ). ತನ್ನ ತಾಯಿ, — ಮಾತೆ : ಕುಳವಣಿಜ ನೆಂಬೊಂ . . . ನಿಜಜನನಿ ತನಗಬುಪೆ ತಮ್ಮಯ್ಯನಲ್ಲಿಗೆ ಪೋಗಿ ಪೊಡೆವಡುವಂದುಂ (ಚಾವುಂಪು. ೩೯೮) ; ಧರೆಯೊಳಗಡವಿಪಾಲಾಗೆಂದು ಪಡೆದಳೊ ತನ್ನ ನಿಜಜನನಿ (ನಳಚ. ೫-೨೫). [ನಿಜ + ಜನನಿ$_1$]

**ನಿಜಜೀವ** (ನಾ). ತನ್ನ ಜೀವ, — ಪ್ರಾಣ : ನಿಜಜೀವಂ ಪರಲೋಕದೊಳ್ನಿಜಮಹಾವಾಂಸಂ ಪಿಶಾಚಾಸ್ಯದೊಳ್ . . . ನಿಜಶಿರಂ ನಕ್ತಂಚರೀಹಸ್ತದೊಳ್ (ಗದಾಯು. ೫-೫). [ನಿಜ + ಜೀವ]

**ನಿಜಜ್ಞಾನ** (ನಾ). ಸ್ವಸ್ವರೂಪಜ್ಞಾನ : 'ನಿಜಜ್ಞಾನಮೂರ್ತಿ' ಪರಾ. [ನಿಜ + ಜ್ಞಾನ]

**ನಿಜಜ್ಞಾನಮೂರ್ತಿ** (ನಾ). ಜ್ಞಾನಸ್ವರೂಪನಾದವನು ; ಸತ್ಯಸ್ವರೂಪಿ ; ಪರಮಾತ್ಮ : ಜ್ಞಾನ ಸುಜ್ಞಾನ ಮಹಾಜ್ಞಾನ ಎಂಬ ವೃತ್ತಿಜ್ಞಾನಂಗಳು ಇಲ್ಲದಂದು ಅಖಂಡ ಪರಿಪೂರ್ಣ ಅದ್ವಯ ನಿಷ್ಕಲ ನಿಜಜ್ಞಾನಮೂರ್ತಿ ನೀನೆಯಯ್ಯಾ (ಸಿದ್ಧೇಪ. ೮-೨೬). [ನಿಜಜ್ಞಾನ + ಮೂರ್ತಿ]

**ನಿಜತನಯ** (ನಾ). = ನಿಜಸುತ : ನಿಜತನಯರಾಲಿಂಗಿಸಿದರಂಗನೆಯ (ನಳಚ. ೬-೪೨). [ನಿಜ + ತನಯ]

**ನಿಜತನು** (ನಾ). ತನ್ನ ದೇಹ, — ಶರೀರ : ತಾರಾಪತಿವಕ್ತ್ರೀ ಕೀರ್ತಿವಿಹಾರಾ[ಹಾರ]ಪ್ರಭಯಾ ನಿಜತನುಪೂರಾ ಪೂರಾಶ್ರಿತ ಹೃತ್ಕ್ಲೇಶವಿದೂರಾ (ಕವಿರಾ. ೨-೩೩೫). [ನಿಜ + ತನು]

**ನಿಜತನೂಭವ** (ನಾ). ತನ್ನ ಮಗ ; ಸ್ವಂತ ಮಗ : ನಿಜತನೂಭವರೈಸಾಸಿರ್ವರ್ ಪದಿನಾಱುಸಾಸಿರ್ವರ್ ಮಕುಟಬದ್ಧರ್ . . . ಬೆರಸಾಗಳ್ ವಜ್ರನಾಭಿ ನಿಜದ ರೂಪುಮಂ ನಿರ್ಗ್ರಂಥರೂಪುಮಂ ಕೈಕೊಂಡು ನೆಗಟ್ದನಿಂತೀ ಮಾಱ್ಕೆಯಿಂ (ಆದಿಪು. ೬-೨೭). [ನಿಜ + ತನೂಭವ]

**ನಿಜತರುಣಿ** (ನಾ). ತನ್ನ ಯುವತಿ, — ಪತ್ನಿ : ನಿಷಧಪತಿ ನಿಜತರುಣಿಸುತರೊಡಗೂಡಿ ಮಂಗಳಕರದೊಳೊಪ್ಪಿದ ಸಕಲದೇವಾಮರರು ನಲಿದಾಡೆ (ನಳಚ. ೯-೬೩). [ನಿಜ + ತರುಣಿ]

**ನಿಜತೇಜ** (ನಾ). ತನ್ನ ಪ್ರಕಾಶ, — ಕಾಂತಿ : ನಿಜತೇಜಂ ಪೊಜಗಾಗೆ ಸ್ವೈರಿಪನೆ ರಾಮಸ್ವಾಮಿಯೆಂಬಂತೆ ನೀರಜಮಿತ್ರಪ್ರಭೆಯಂ ಪಳಂಚಲೆದು (ಪಂಪರಾಮಾ. ೧೨-೩೪). [ನಿಜ + ತೇಜ$_1$]

**ನಿಜತ್ವ** (ನಾ). ಯಥಾರ್ಥತೆ ; ಸ್ವಂತತನ ; ವಸ್ತುಸ್ಥಿತಿ : ಬಹಳ ಕಾಲ ಜನರ ಸ್ಮೃತಿಯಿಂದ ಮಾಯವಾಗಿದ್ದ ಈ ಅಮೂಲ್ಯಗ್ರಂಥಗಳಲ್ಲಿ ಸಿಕ್ಕಿ ಅದರ ಕಾಲ ಮತ್ತು ನಿಜತ್ವ ಕರ್ತೃತ್ವಗಳ ಬಗ್ಗೆ ದೀರ್ಘವಾದ ಮತ್ತು ಬಹುಮುಖವಾದ ವಾದವಿವಾದಗಳಿಗೆ ಗುರಿಯಾಯಿತು (ತತ್ತ್ವಪ್ರಾ. ೧೦೪). [ಸಂ.]

**ನಿಜದಾತಾರ** (ನಾ). ತನಗೆ ಕೊಡುವವನು ; ತನ್ನ ಪೋಷಕ : ಜಜ್ಝಾರ ಮಾಸಾಳುಗಳು ನಿಜದಾತಾರನವಸರಕೊದಗಿ ಹಣವಿನ ಋಣನೀಡಿದರು (ಕುಮಾರರಾಮ. ೧-೫೦). [ನಿಜ + ದಾತಾರ$_1$]

**ನಿಜದೋರು** (ಕ್ರಿ). ಸ್ವರೂಪವನ್ನು ಕಾಣಿಸು ; ಪ್ರತ್ಯಕ್ಷವಾಗು : ಲಿಂಗಾರ್ಚನಂಗೆಯ್ಯೆ ಕರದಿಷ್ಟಲಿಂಗದೊಳಗೀಶ ನಿಜದೋರಿಯುವ ಕುರಿತ ಇಷ್ಟಾರ್ಥಮಂ ಸಲಿಸಿ (ನವಮೋ. ೨೦-೧೯). [ನಿಜ + ತೋರು (<ತೋಱು)]

**ನಿಜಧಾರುಣಿ** (ನಾ). ತನ್ನ ಭೂಮಿ, — ರಾಜ್ಯ ; ಸ್ವಂತ ರಾಜ್ಯ : ಸ್ವೈರಿಸುವನೆಲೆ ಅಣ್ಣ ಧರ್ಮಕುಮಾರಕನು . . . ಕೊಡು ನಿಜಧಾರುಣಿಯೊಳರ್ಧವನು ಪಾಂಡುಕುಮಾರರಿಂಗೆಂದ (ಸಿಭಾಗ. ೩-೧-೮). [ನಿಜ + ಧಾರುಣಿ]

**ನಿಜನಾಥ** (ನಾ). ತನ್ನ ಅಧಿಪತಿ, — ಅರಸು : ಆತನುಂ ಗಗನಗಮನನಾಗಿ ವಿವಿಧ ನದನದೀನಗನಗರಜನಪದಾಸ್ಪದಂ ನಿಜನಾಥಪುರವರಮನೆಯ್ದಿ (ಶಾಂತಿಪು. ೫-೩೬ ವ). [ನಿಜ + ನಾಥ]

**ನಿಜನಾಮ** (ನಾ). ತನ್ನ ಹೆಸರು ; ಸ್ವಂತ ನಾಮ : ಬರೆಯಿಸಿದಂ . . . ವೃಷಭಾಚಲದೊಳ್ ಭರತಂ ನಿಜನಾಮಮುಮನೆನೆ ಪಂಡಿತಂ ಬುಧಜನಕ್ಕಲ್ಲದೆ ಪೆಱತೇಂ (ಆದಿಪು. ೧೪-೬೩). [ನಿಜ + ನಾಮ]

**ನಿಜನಿವಾಸ** (ನಾ). ತನ್ನ ವಾಸಸ್ಥಳ, — ಮನೆ ; ಸ್ವಂತಸ್ಥಳ : ಮೂರ್ಛೆ ಪೋ ದ ದುರ್ಯೋಧನನನಶ್ವತ್ಥಾಮಕೃಪಕೃತವರ್ಮಕರುನಿಯರ್ ನಿಜನಿವಾಸಕ್ಕೊಡಗೊಂಡು ಪೋದರ್ (ಪಂಪಭಾ. ೧೨-೨೨೦ ವ) ; ಧರಣೀಂದ್ರಂ ವಿದ್ಯುದ್ದಂಷ್ಟ್ರನಂ ಸಂತೋಷಂಬಡಿಸಿ ನಿಜನಿವಾಸಕ್ಕೆ ಪೋದಂ (ಚಾವುಂಪು. ೧೬೨) ; ತನ್ನ ಮುನ್ನಿನ ಸಿಂಹಸಂಹನನಮುನಾ ಸಿಂಹಸನ್ನನಂ ದಿವ್ಯದ್ರವ್ಯಂಗಳಿಂ ಸಂಸ್ಕಾರಿಸಿ ಧರ್ಮಪ್ರಭಾವಮಂ ದಿವಿಜಲೋಕಕ್ಕೆ ಮೆಱೆಯುತ್ತಂ ನಿಜನಿವಾಸಕ್ಕೆ ವಂದು (ವರ್ಧಮಾ. ೬-೪೬ ವ). [ನಿಜ + ನಿವಾಸ]

**ನಿಜನಿವಾಸಿ** (ನಾ). [ವೀಶೈ] ಸ್ವಸ್ವರೂಪದಲ್ಲಿ ನೆಲೆಯಾದವನು ; ಶಿವೈಕ್ಯನಾದವನು : ಬಸವಪ್ರಿಯ ಕೂಡಲಚೆನ್ನಸಂಗಮದೇವರಲ್ಲಿ ನಿಜನಿವಾಸಿಯಾಗಿರ್ದನು (ಶೂನ್ಯಸಂ. ೪೪೧-೬೯). [ಸಂ. ನಿಜನಿವಾಸಿನ್]

**ನಿಜಪ** (ನಾ). ಒಬ್ಬಾತನ ಹೆಸರು : ಮಹಾಬಲಿ ವಂಶ ನಿಜಪನ ಮಗ ಅಣ್ಣಿಗ ಇರ್ಬ್ಬರರಸುಗಳಲ್ಲಿ ಪಡೆದು (ಎಕ. IX, ಬೆಂಗಳೂ. ೪೦-೫ ; ಸು. 820). [ನಿಜ + ಅಪ (<ಅಪ್ಪ$_1$)]

**ನಿಜಪತಿ** (ನಾ). ೧. ತನ್ನ ಒಡೆಯ, — ಅಧಿಪತಿ : ನೇಸರ್ಪಡುವಿನ ಮಿರ್ದು ನಿಜಪತಿಯಂ ಬೀೞ್ಕೊಂಡು ಪಯಣಂಬೋಗಿ ಹಸ್ತಿನಾಪುರಮಂ ಪೊಕ್ಕು . . . ಬೀಡಂ ಮಂಜಿಱುವಂತಿರು ಕೊಳಿಱುದನಶ್ವತ್ಥಾಮಂ (ಗದಾಯು. ೯-೩೨). ೨. ತನ್ನ ಪತಿ, — ಗಂಡ : ಪರಪುರುಷಸೇವನಾಕೃತಸುರತವಿಕಾರಂಗಳೆಲ್ಲಮಂ ನಿಜಪತಿಯೊಳ್ ನೆರೆದಾಗಳೆ ಮಱೆಯಲ್ಬಗೆದಿರವದು ನಗಿಸಿತ್ತು (ಕವಿರಾ. ೩-೧೯೬) ; ವಸುಪೂಜ್ಯನೃಪತಿಯ (ವಿ)ಜಯಾವತೀದೇವಿ . . . ಷೋಡಶಸ್ವಪ್ನಂಗಳಂ ಕಂಡು ತತ್ಫಲಗಳಂ ನಿಜಪತಿಯಿಂದಱಿದು . . . ಸಂತೋಷಂಬಟ್ಟಿರ್ಪಿನಂ(ಚಾವುಂಪು. ೧೧೫) ; ತಮದ ರಾಹುಗ್ರಹವು ಸೋಂಕಿದ ದ್ಯುಮಣಿಯಂತಿರೆ ಕಂಡು ಧೈರ್ಯದಿ ಕಮಲಮುಖಿ ಕೈಮುಗಿದು ಬಿನ್ನೈಸಿದಳು ನಿಜಪತಿಗೆ (ನಳಚ. ೪-೩೫). [ನಿಜ + ಪತಿ$_2$]

**ನಿಜಪಥ** (ನಾ). ೧. ಸತ್ಯವಾದ ದಾರಿ ; ನಿಜವಾದ ಮಾರ್ಗ ; ಮೋಕ್ಷಮಾರ್ಗ. ೨. ಮೋಕ್ಷ ; ಕೈವಲ್ಯ : ಕರಣಮಥನಕರ್ಕಶದಿಂದೆ ಹೋರುವವರು ಸಲ್ಲರೆಂಬೆನಯ್ಯಾ ನಿಜಪಥಕ್ಕೆ (ಅಖಂಡೇ. ೧೩೧-೧೦೨). [ನಿಜ + ಪಥ]

**ನಿಜಪದ** (ನಾ). ಶಾಶ್ವತವಾದ ಪದವಿ ; ಮೋಕ್ಷ : ಎನ್ನ ಮನ ಸಂಗನ ಬಸವಣ್ಣನ ನಿಜಪದವ ಬೆರಸಿತ್ತು (ಶೂನ್ಯಸಂ. ೪೪೧-೬೪) ; ಎಲ್ಲಾ ಕ್ರೀಗಳನು ಜಂಗಮದಾಸೋಹದಲ್ಲಿಯೇ ತಿಳಿದು ಅಲ್ಲಿಯೇ ಮನ ಮಗ್ನವಾಗಿ ಅದೇ ತನ್ನ ನಿಜಪದವಾಗಿರುತ್ತಂ (ವಚಸಂ. ೨೫೭-೪೩) ; ನಾರಾಯಣನೆಂಬ ನಿಜಪದವಱಿಯದೆ ಹೋರಾಡುವೆ ಹಗಲಿರುಳೆಂದೆನ್ನದೆ (ಪುರಂದ. ೩-೧೯೦ ಪಲ್ಲವಿ) ; ಸದ್ಧರ್ಮಂಗಳಂ ಮಾಡಿ ನಿಜಪದವ ಪಡೆದರೊಲವಿಂ (ಪ್ರೌಢರಾ. ೮ ಸೂಚನೆ). [ನಿಜ + ಪದ$_2$]

**ನಿಜಪಾಯದಳ** (ನಾ). ತನ್ನ ಸೈನ್ಯ, — ದಳ : ಎಲೆಲೆ ಕಟಕಾಚಾರ್ಯನಕಟಾ ಕೊಳುಗುಳದೊಳಪದೆಸೆಯ ಕಂಡನೊ ಗೆಲಿದನೋ ರಿಪುವೆಂದುಲಿಯೆ ನಿಜಪಾಯದಳವಂದು (ಕುಮಾರರಾಮ. ೧೩-೧೬). [ನಿಜ + ಪಾಯದಳ]

**ನಿಜಪಾಳಯ** (ನಾ). ತನ್ನ ಪಾಳೆಯ ; ಸ್ವಂತ ಶಿಬಿರ : ತೆಗೆದವು ಬಲವೆರಡು ನಿಜಪಾಳಯಂಗಳಿಗೆ (ಕುಪ್ಪ್ಯಾದ್ರೋ. ೨-೧) ; ಸಮಸಪ್ತಕರ ಬಲ ನಿಜಪಾಳಯಕೆ ತಿರುಗಿದುದು ತೀರಿತು ಕರ್ಣನಾಟೋಪ (ಕುಪ್ಪ್ಯಾದ್ರೋ. ೮-೧). [ನಿಜ + ಪಾಳಯ(<ಪಾಳೆಯ)]

**ನಿಜಪುತ್ರ** (ನಾ). ತನ್ನ ಮಗ ; ಸ್ವಂತ ಮಗ : ನಿಜಪುತ್ರಂ ಜಿತಶತ್ರುಗಪ್ರತಿಮಮಂ ಸಾಮ್ರಾಜ್ಯಮಂ ಕೊಟ್ಟು . . . ಮುಕ್ತ್ಯಂಗನಾ ಭುಜಪಾಶಕ್ಕೊಳಗಾಗಿ ಪೀರ್ದನೊಲವಿಂ ತದ್ವಕ್ತ್ರಪೀಯೂಷಮಂ (ಪಂರಾಪು. ೧೦-೭೨). [ನಿಜ + ಪುತ್ರ]

**ನಿಜಪುರ** (ನಾ). ತನ್ನ ಊರು,—ಸ್ಥಳ : ಕಾಳಿದಾಸಂಗೆ ಕಣ್ಣನಿತ್ತೆ ಓಹಿಲಯ್ಯನ ನಿಜಪುರಕ್ಕೊಯ್ದೆ . . . ಎನ್ನನೇಕೆ ಒಲ್ಲೆಯಯ್ಯಾ (ಬಸವ. ೫೧೬). [ನಿಜ + ಪುರ$_2$]

**ನಿಜಪುರುಳ್** (ನಾ). ಸತ್ಯಾರ್ಥ ; ಒಳತತ್ತ್ವ : ಅಱಿಯದವನ್ ನಿಜ ಪುರುಳ್ಗಂಡವೋಲಾರಯ್ವೊಡರುಳದವನ್ ಗೆಯ್ವ ಅಱಂ (ಕುಬೀ. ೧-೨೫-೯). [ನಿಜ + ಪುರುಳ್$_2$]

**ನಿಜಪ್ರಿಯ** (ನಾ). ತನ್ನ ಸ್ನೇಹಿತ,—ಆಪ್ತ : ತನ್ನ ಮೆಯ್ಯೊಳ್ ಬಲನೆನಿಪ್ಪರಸು ವಿಶ್ವಾಸದಿನ್ನಿಜಮೆನಿಪ್ಪ ಪೆರ್ಗಡೆ ನೆಗಟ್ತೆಯ ಸಂಭ್ರಮೋನ್ನತದ ಜನಪದಂ ಜಲಶಿಲಾಧಾರವಹ ಸರ್ವಸಂಗ್ರಹದ ದುರ್ಗಂ ರನ್ನಹೇಮಾದಿ ಭಂಡಾರಂ ಮಹಾವೀರಸೈನ್ಯಂ ನಿಜಪ್ರಿಯಂ ಕೂಡಿ ಸಪ್ತಾಂಗ ಸಂಪನ್ನನೆನಿಸುವ ರಾಜನಕ್ಕುಂ (ಮಂಗರಾ. ೮೦-೧೦). [ನಿಜ + ಪ್ರಿಯ]

**ನಿಜಬಲ** (ನಾ). ತನ್ನ ಸೈನ್ಯ,—ದಳ : ಪುಷ್ಕರ ಭರದಿ ಕೋಪದೊಳಂದು ಕರೆಸಿದನಾಗ ನಿಜಬಲವ (ನಳಚ. ೯-೩೫). [ನಿಜ + ಬಲ$_2$]

**ನಿಜಬಿಂದು** (ನಾ). [ವ್ಯಾಕ] ಸ್ವಾಭಾವಿಕವಾಗಿ ಅನುಸ್ವಾರದಿಂದೊಡಗೂಡಿರುವ ಶಬ್ದ ; ನಿತ್ಯಬಿಂದುವಾದ ಶಬ್ದ : ಕೆಲವು ನಿಜಬಿಂದುಗಳ್ ಕೆಲಕೆಲವು ವಿಕಲ್ಪಾರ್ಥಬಿಂದುಗಳ್ ದ್ವಿತ್ವಂಗಳ್ (ಶಮದ. ೩೬). ‘ನಿತ್ಯಬಿಂದು’ ಪರಾ. [ನಿಜ + ಬಿಂದು]

**ನಿಜಬೋಧೆ** (ನಾ). ಆತ್ಮವಿಚಾರವಾದ ಉಪದೇಶ,—ಬೋಧನೆ : ಮೃದುತರಭಾವರೋಳ್ ಕಲಹಮಂ ಸಲೆ ವರ್ಧಿಸಿ ರೋಷವಾಂತು ನಾಂ ಮದಿಸಿದೆನಯ್ಯಾ ಕಾಯೊ ನಿಜಬೋಧೆಯನಿತ್ತು (ಅಮಶ. ३೯). [ನಿಜ + ಬೋಧೆ]

**ನಿಜಬ್ಬೆ** (ನಾ). ಒಬ್ಬಾಕೆಯ ಹೆಸರು : ಎಳೆಯ ಬಸವಂಗೆ ಒನ್ದು ಮತ್ತಲ್ ಕೆಯ್ಯುಂ ನಾಗಾರ್ಜುನಯ್ಯನುಂ ನಿಜಬ್ಬೆಯುಂ ಪೆಜಗೆ ನಡೆಯಿಸುವರ್ (ಎಕ. VII, ಶಿಕಾರಿ. ೨೨೦-೨೦ ; 1015). [ನಿಜ + ಅಬ್ಬೆ$_1$]

**ನಿಜಭಕ್ತಿ** (ನಾ). ಸಟೆಯಿಲ್ಲದ ಭಕ್ತಿ ; ದಿಟಭಕ್ತಿ : ಸಹಜಗುಣವೆನ್ನಲ್ಲಿಲ್ಲಯ್ಯಾ ನಿಜಭಕ್ತಿಯೆನಗಿಲ್ಲ ತಂದೇ (ಬಸವ. ೨೮೬). [ನಿಜ + ಭಕ್ತಿ]

**ನಿಜಭಗಿನಿ** (ನಾ). ತನ್ನ ಒಡಹುಟ್ಟಿದವಳು ; ಸ್ವಂತ ಸಹೋದರಿ : ನಿಜಭಗಿನಿಯನುಂದರಿಯಂ ಗಜಗಮನೆಯನಂದು ಕಾಮುರ್ಕಾಚಾರ್ಯಂಗಾ ವಿಜಿತರಿಪುವೀಯೆ (ನೇಮಿಪು. ೯-೧೪). [ನಿಜ + ಭಗಿನಿ]

**ನಿಜಭಾವ** (ನಾ). ಸಹಜವಾದ ಭಾವನೆ ; ಸ್ವಾಭಾವಿಕವಾದ ಭಾವ : ಮಾಯಾಮಯಂಗಳೆಂಬ ಮುನ್ನಿನ ಭ್ರಮೆಗಳ ಬಿಡಲಱಿಯದ ಬಡಮನದ ಮನುಜರೆಲ್ಲರೂ ನಿಜಗುಣನ ನಿಜಭಾವದಲೂ ನಿಲ್ಲದವಂಗೆ ನಿಜಸುಖವು ಸಾಧ್ಯವಪ್ಪುದೆ ಹೇಳಾ (ಪಚಸಂ. ೯೧-೫೮) ; ನಿಜಭಾವ ಲಕ್ಷ್ಮಿ ಸರಸ್ವತಿ ಒಲಿದಡೆ ಕುಲವನಜಸಲದೇಕೆ (ಬಸವ. ೬೦೨). [ನಿಜ + ಭಾವ$_2$]

**ನಿಜಭುಜಗರ್ವ** (ನಾ). ತನ್ನ ತೋಳ್ಬಲದ ಬಗೆಗಿರುವ ಹೆಮ್ಮೆ,—ಜಂಭ : ನಿಜಭುಜಗರ್ವದಿಂ ಮಕುಟಬದ್ಧರನಷ್ಟಸಹಸ್ರಮಂ ಕ್ರಮಾಂಬುಜನತರಾಗೆ ಮಾಡಿ (ನೇಮಿಪು. ೨-೧೫). [ನಿಜ + ಭುಜ + ಗರ್ವ]

**ನಿಜಭುಜಚಕ್ರವರ್ತಿ** (ನಾ). ಸ್ವಂತ ಶೌರ್ಯದಿಂದ ಚಕ್ರವರ್ತಿಯಾಗಿರುವವನು ; ಒಂದು ಬಿರುದು : ಆತನ ಮಗಂ ನಿಜಭುಜಚಕ್ರವರ್ತ್ತಿ ನೂಮ್ಮಡಿತ್ತೈಲನ್ (ಸೌಇಇ. XX, ೧೯-೨೦ ; 1015). [ನಿಜ + ಭುಜ + ಚಕ್ರವರ್ತಿ]

**ನಿಜಮಂಡಲ** (ನಾ). ಸ್ವಂತ ಪ್ರದೇಶ ; ಸ್ವದೇಶ : ಚರಗೃಹಮಷ್ಟಮಮಾಗಿರೆ [ಪರ]ಮಂಡಲದೊಳ್ ಸ್ಥಿರಾಲಯಂ ತದ್ಗೃಹಮಾಗಿರೆ ನಿಜಮಂಡಲದೊಳ್ . . . ಮಡಿಗುಂ (ಜಾತತಿ. ೨೩-೩). ‘ಪರಮಂಡಲ’ ಪರಾ. [ನಿಜ + ಮಂಡಲ]

**ನಿಜಮಂದಿರ** (ನಾ). = ನಿಜಾಲಯ : ಹರೆದುದೋಲಗವಲ್ಲಿ ನಿಜಮಂದಿರಕೆ ಬಂದಾಲೋಚಿಸುತ ಮಿಗೆ ತರುಣಿಯರ ಕಳುಹಿಸಲು ಬಂದರು ಬಾಣಸಿನ ಮನೆಗೆ (ನಳಚ. ೮-೪೫). [ನಿಜ + ಮಂದಿರ$_2$]

**ನಿಜಮತ** (ನಾ). ತನ್ನ ಅಭಿಪ್ರಾಯ ; ಸ್ವಂತ ಅಭಿಪ್ರಾಯ : ನಿಜಮತಮನೆನಗೆ ಮಿಾಬಲ್ಮಜಾತ ದೊರೆಯಲ್ಲವಲ್ಲದಿರ್ದೊಡಮೆನ್ನಿಂ[ದ] ಜನಿಸಿ ನುಡಿಯಿಸಿದುವಹಿಧ್ವಜನೋವದೆ ಮುನ್ನೆ ನೆಗಟ್ದ ದುಶ್ಚರಿತಂಗಳ್ (ಪಂಪಭಾ. ೯-೨೧) ; ದನುಜರದ್ಭುತತಪವ ಮಾಡಿದರನಿಮಿಷಾವಳಿ ಬೇಂಟೆಯಾಡಲು ನೆನೆದು ಬಿನ್ನೈಸಿದರು ಕಮಲಭವಂಗೆ ನಿಜಮತವ (ಕುವ್ಯಾಕ. ೬-೪). [ನಿಜ + ಮತ]

**ನಿಜಮಹಿಮ** (ನಾ). ನಿಜವಾದ ಮಹಿಮೆಯುಳ್ಳವನು ; ಸತ್ಯವಾದ ಪ್ರಭಾವವುಳ್ಳ ವ್ಯಕ್ತಿ : ಪರಧನಕಾತವರೆ ನಿಜಮಹಿಮರಾದೊಡೆ ಯಾತರದು ಊಚತ್ವ ನೀಚವು ಬಗೆದು ನೋಳ್ಪರಿಗೆ (ಬಜ್ಜಪು.೧೦೮-೭೬). ‘ಘನಮಹಿಮ’ ಪರಾ. [ನಿಜ + ಮಹಿಮ]

**ನಿಜಮಾರ್ಗ** (ನಾ). ೧. ಸತ್ಯವಾದುದನ್ನು ಅರಿಯುವ ದಾರಿ,—ಮಾರ್ಗ ; ಮೋಕ್ಷಮಾರ್ಗ : ನಿಜಮಾರ್ಗಂ ನಿಜಮಾರ್ಗಬೋಧಿತಲಸಜ್ಜೀವಸ್ವರೂಪಂ ದಲಾ ನಿಜಮಂ ಮಾನಿಜನಂಗಳಲ್ಲದವರೋವಂತಿರ್ದುದಿಂ ತೀರ್ದುದೆಂದು ಜಡವ್ಯಾಕೃತಿಯಿಂ ಗಡಂ ಗಟಿಪುವರ್ (ವರ್ಧಪು. ೧೬-೮೧). ೨. ಸರಿಯಾದ ರೀತಿ,—ಕ್ರಮ ; ಯೋಗ್ಯ ಮಾರ್ಗ. [ನಿಜ + ಮಾರ್ಗ]

**ನಿಜಮುಕ್ತ** (ನಾ). ಶಾಶ್ವತವಾದ ಮುಕ್ತಿಯನ್ನು ಪಡೆದವನು ; ನಿತ್ಯಮುಕ್ತ : ಶಿವಶರಣನಾಗಿ ಭವಮರಣಗಳ ನೆರೆ ನೀಗಿ ಶಿವಲಿಂಗವನು ಧರಿಸಿಕೊಂಡು ನಿಜಜಂಗಮಕೆ ಶಿವಭಕ್ತನಾಗಿ ನಿಜಮುಕ್ತನೆನಿಸಿದ ಪರಿಯ ಜಡಮರ್ತ್ಯರೆತ್ತರಿವರು (ಮೈಲಾರ. ३೧-೨೭). [ನಿಜ + ಮುಕ್ತ]

**ನಿಜಮೋಹರ** (ನಾ). ತನ್ನ ಸೈನ್ಯ,—ದಳ : ಕರಸಿ ಧೃಷ್ಟದ್ಯುಮ್ನ ನಿಜಮೋಹರವ ರಚಿಸಿದನು (ಕುಪ್ಪ್ಯಾದ್ರೋ. ೨-೨೪). [ನಿಜ + ಮೋಹರ$_1$]

**ನಿಜಮ್ಮ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀ ನಿಜಮ್ಮನೆ ಪದೆದರಿಯ ಪಳ್ಳಕ್ಕೆ ವೆಳೆಯೆಳ್ದು ಸತ್ತಂ (ಎಕ. V, ಮಂಜರಾ. ೨೮-೫; 1000 ?). [ನಿಜ + ಅಮ್ಮ$_1$]

**ನಿಜರಕ್ತ** (ನಾ). ತನ್ನ (ದೇಹದ) ರಕ್ತ : ನಿಜರಕ್ತಂ ರಿಪುಕುಕ್ಷಿಯೊಳ್ ನಿಜಶಿರಂ ನಕ್ತಂಚರೀಹಸ್ತದೊಳ್ . . . ನೆಲಸೆ ಗಾಂಧಾರೀಜ ದುರ್ಯೋಧನಾನುಜ ದುಶ್ಶಾಸನ ಭೀಮಭೀಮಗದೆಯಿಂ ಪಂಚತ್ವಮಂ ಪೊರ್ದಿದಯ್ (ಗದಾಯು. ೫-೫). [ನಿಜ + ರಕ್ತ]

**ನಿಜರವ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ನಿಜರವನ ಮಗ ಮ್ಮಜ್ಞಪರಸರಬಾಯ ತುಱುಗೋಳೂರಬಾವಿನೊಳೆಱಪದೆ ಪರಿಯಾಟ್ಟು × × ಸತ್ತ (ಎಕ. XII, ತುಮಕೂ. ೬೯-೧ ; ಸು. 900 ?). [ ? ]

**ನಿಜರಿಪು** (ನಾ). ತನ್ನ ಶತ್ರು,—ಹಗೆ : ಮರುದಾತ್ಮಜ ನಿಜರಿಪು ತಲೆಗರೆದಿರ್ದಪನಿಲ್ಲಿ ನೋಡು ಕೊಳದೊಳಗೆಂಬಂತಿರೆ ಪೊಳೆದು ತೋರ್ಪ

ಜಲಚರಪರಿಕರಮಱಿಪಿದುವು ತಾಮೆ ದುರ್ಯೋಧನನಂ (ಗದಾಯು. ೬–೪೬). [ನಿಜ + ರಿಪು]

**ನಿಜರೂಪ** (ನಾ). ತನ್ನ ಸ್ವರೂಪ,—ಸೌಂದರ್ಯ : ನಿಜರೂಪವಿಜಿತ ಮಕರಧ್ವಜನಖಿಳದಿಶಾಂತರಪ್ರತಿಷ್ಠಿತಕೀರ್ತಿ (ಚಂದ್ರಪ್ರ. ೬–೬) ; ತರುಣೇಂದು ಸುರನದಿ ಜಟಾಮಕುಟ[ವ]ಸಮಾಕ್ಷವುರಗಕುಂಡಲವೈದುವದನ ವೀರೈದು ತೋಳ್ ಗರಳಗಳವಿಭಚರ್ಮವೆಡದ ಗಿರಿಸುತೆವೆರಸಿ ತೋಱುದಂ ನಿಜರೂಪನು (ಸಿದ್ಧರಾ. ೨–೬೯). [ನಿಜ + ರೂಪ]

**ನಿಜಲಕ್ಷ್ಮಿ** (ನಾ). ತನ್ನ ಸಂಪತ್ತು,—ಐಶ್ವರ್ಯ : ರಾಜನವಿತತೇಜಂ ವಲಮೆಂಬಿನೆಗಂ ಶ್ರೀವಿಜಯಂ ಮೈದುನಂಗೆ ನಿಜಲಕ್ಷ್ಮಿಯುಂ ನಿವೇದಿಸಿ ನೆಗಟ್ದಂ (ಶಾಂತಿಪು. ೫–೮೦). [ನಿಜ + ಲಕ್ಷ್ಮಿ]

**ನಿಜಲಿಂಗ** (ನಾ). [ವೀಶೈ] ಇಷ್ಟಲಿಂಗ ; ಪರವಸ್ತು ; ಪರಮಾತ್ಮ : ಪೃಥ್ವಿ ಅಪ್ಪು ತೇಜ ವಾಯು ಆಕಾಶದಿಂದ ಹೊಂದುವ ಹುಟ್ಟುವ ದೇಹದ ಅಂದಗಾಱಕೆಯಲ್ಲಿ ಬಂದುದನಱಿಯಾ . . . ಮುಂದಣ ನಿಜಲಿಂಗವನಱಿಯಾ (ಮೋಳಿಮಾ. ೧೧–೬೯). [ನಿಜ + ಲಿಂಗ]

**ನಿಜಲಿಂಗೈಕ್ಯ** (ನಾ). [ವೀಶೈ] ಪರಮಾತ್ಮನಲ್ಲಿ ಐಕ್ಯನಾದವನು; ಕೈವಲ್ಯವನ್ನು ಹೊಂದಿದವನು ; ಮುಕ್ತಿ ಪಡೆದವನು : ಕುಱುಹಿಲ್ಲದ ಬ್ರಹ್ಮದಲ್ಲಿ ತೆಱಹಿಲ್ಲದಿರ್ಪನು ನೋಡಾ ಅಖಂಡೇಶ್ವರಾ ನಿಮ್ಮ ನಿಜಲಿಂಗೈಕ್ಯನು (ಅಖಂಡೇ. ೩೧೫–೨೨). [ನಿಜಲಿಂಗ + ಐಕ್ಯ]

**ನಿಜಲೋಕ** (ನಾ). ತನ್ನ ಲೋಕ,—ಸ್ಥಳ : ಆ ಸಮಯದೊಳ್ ದೇವತೆಗಳೆಲ್ಲಂ ನಿಜಲೋಕಕ್ಕೆ ಪೋದರ್ (ಹಾಲಾಸ್ಯ. ೧–೫–೧೬ ವ). [ನಿಜ + ಲೋಕ]

**ನಿಜವಾಸ** (ನಾ). ಸತ್ಯದ ನೆಲೆ : ನಿಜನಿರ್ವಯಲ ಸಮಾಧಿಯ ನಿಜವಾಸದ ಬಾಗಿಲ ತೋಱುದ ಬಸವಣ್ಣ (ಶೂನ್ಯಸಂ. ೪೪೨–೬೫). [ನಿಜ + ವಾಸ$_2$]

**ನಿಜವಾಸಿ** (ನಾ). = ನಿಜನಿವಾಸಿ : 'ಕೇಡಿಲ್ಲದ ಪದವಿ'ಯಲ್ಲಿ ಮನವನಿರಿಸಿ ತಮ್ಮ ನಿಜವನರಿದು ನಿಜವಾಸಿಯಾಗಿರಬೇಕೆಂದರೆ ಮನದ ಚಾಂಚಲ್ಯವೊಂದು (ಮೋಳಿಮಾ. ೧೧೧ ಪ್ರಸ್ತಾವನೆ). [ಸಂ. ನಿಜವಾಸಿನ್]

**ನಿಜವಾಹ** (ನಾ). ತನ್ನ ವಾಹನ : ನಿಜನೇತ್ರಂ ಲೋಕನೇತ್ರಂ ನಿಜಭರಣವಿಳಾಚಕ್ರಭಾರಾವಹಂ ಮೇಣ್ನಿಜವಾಹಂ ಧರ್ಮಗೇಹಂ (ರಾಜಶೇ. ೧–೨). [ನಿಜ + ವಾಹ]

**ನಿಜವಿಷ್ಟರ** (ನಾ). ತನ್ನ ಆಸನ,—ಪೀಠ : ತಮ್ಮೊಡೆಯನ ಪದಯುಗಕೆಱಗಿ ಕಡೆಗೆ ಸಂದು ನಿಜವಿಷ್ಟರದೊಳೊಗ್ಗೊಡೆಯದೆಸೆವ ಸಮಯದೊಳು (ತ್ರಿಪುಸಾಂ. ೧೪–೧೫೧). [ನಿಜ + ವಿಷ್ಟರ]

**ನಿಜವೃತ್ತಿ** (ನಾ). ತನ್ನ ಸ್ವಭಾವ ; ಸ್ವಂತ ಮನೋಭಾವ : ನಿಜವೃತ್ತಿಗೆ ಸದೃಶಮಾದ ಮಗಳ ಮನೋವೃತ್ತಿಗೆ ಆತ್ಮಂತಸಂತುಷ್ಟಹೃದಯನಾಗಿ (ಚಂದ್ರಪ್ರ. ೫–೧೩೬ ವ). [ನಿಜ + ವೃತ್ತಿ]

**ನಿಜವೆಱು** (ಕ್ರಿ). ಸತ್ಯವಾಗು ; ಯಥಾರ್ಥವಾಗು ; ದಿಟವಾಗು : ಪಶುಗಳ ಮೊತ್ತವೊಮ್ಮೆಯುಂ ಹುಲ್ಲನುದಕವನೊಲ್ಲದಿರ್ದುದಕೆ ಉತ್ತಮದ ಶಿವಲಿಂಗವೇ ನಿಜವೆತ್ತ ಸಾಕ್ಷಿಯೆನಲ್ಕೆ ಹರುಷಂಬೊತ್ತು ಲಿಂಗಸ್ಪರುಶನದ ನಿಯಮಂಗಳಂ ತೀರ್ಚೆ (ಬಸಪು. ೬೦–೩೩). [ನಿಜ + ಪೆಱು$_1$]

**ನಿಜವ್ರತ** (ನಾ). ಸತ್ಯವಾದ ವ್ರತ ; ಸಹಜವಾದ ನಿಯಮ : ಶರಣಸಜ್ಜನಿಕೆ ಸಮಯಾಚಾರ ನಿಜವ್ರತವು ದುರಾಚಾರಿಗಳಿಗಳವಡದು (ಬಸವ. ೮೫೫). [ನಿಜ + ವ್ರತ]

**ನಿಜಶರಣ** (ನಾ). ಸ್ವಭಾವದಿಂದಲೇ ಭಕ್ತನಾದವನು : ಸ್ವಾದು ಉದಕದಲ್ಲಿ ಉಂಟೆ ಅಪ್ಪತ್ತ ಪಾರಿ ಸಮಯದಲುಂಟೆ ನಿಜಶರಣರ ನೆಲೆ (ಶೂನ್ಯಸಂ. ೩೧೧–೨೯). [ನಿಜ + ಶರಣ]

**ನಿಜಸಂಗ** (ನಾ). ನಿಜವಾದ ಕೂಟ ; ಶಾಶ್ವತವಾದ ಜೊತೆ : ವಿವೇಕದ ಸಂಗವೇ ನಿಜಸಂಗವಾಗಿ ನಿಂದನೆಮ್ಮ ಬಸವಯ್ಯನು (ಶೀಲವ. ೪–೪). [ನಿಜ + ಸಂಗ$_2$]

**ನಿಜಸಂಯುಕ್ತ** (ನಾ). ಪರಮಾತ್ಮನ ಸತ್ಯಸ್ವರೂಪದಲ್ಲಿ ಐಕ್ಯನಾದ ವ್ಯಕ್ತಿ; ನಿಜೈಕ್ಯ : ಪರಮತತ್ವದ ನಿಜಸಂಯುಕ್ತರ ಅನುಕೀನೆಂಬ ಶಬ್ದಸುಖಿಗಳ ತೋಱಲಾ ಎನಗೆ (ಬಸವ. ೮೮೦). [ನಿಜ + ಸಂಯುಕ್ತ]

**ನಿಜಸಖಿ** (ನಾ). ತನ್ನ ಗೆಳತಿ : ನಿಜಸಖಿಯರೊಡವೆರಲ್ ಸಾಮಜಗತಿ ವನದೊಳಗೆ ಪೊಕ್ಕು ಕಂಡಳ್ ವಿಮಾನಧ್ವಜನಿಭನಂ ಪಾಂಡುವಂ (ನೇಮಿಪು. ೩–೩೯). [ನಿಜ + ಸಖಿ]

**ನಿಜಸತಿ** (ನಾ). ತನ್ನ ಹೆಂಡತಿ,—ಪತ್ನಿ : ದುರುಳ ದುಶ್ಶಾಸನನ ತೊಡೆಯ ಮೇಲಡಗೆಡಹಿ ಎರಡುಬಲದತಿರಥರ ಜಱಿದಳಲಿಸಿ ನರಹರಿಯ ಲೀಲೆಯಿಂದವನುರವ ಬಗಿದು ನಿಡಿಗರುಳ ನಿಜಸತಿಗೆ ಮುಡಿಸಿದೆಲೆ ಭಾಪುರೆ (ಪುರಂದ. ೩–೭೫–೪) ; ಬಾಹುಕನು . . . ಮನದಲಿ ಕಾತರಿಸಿ ನಿಜಸತಿಗೆ ಹಲುಬಿದ ಮದನನೆಸುಗೆಯಲಿ (ನಳಚ. ೭–೯). [ನಿಜ + ಸತಿ$_1$]

**ನಿಜಸಮಾಧಿ** (ನಾ). ನಿಜವಾದ ಸಮಾಧಿ; ಸರಿಯಾದ ತನ್ಮಯತೆ: ಗೊಹೇಶ್ವರಲಿಂಗದಲ್ಲಿ ಬಯಲ ಭ್ರಮೆಯಳಿದು ಜ್ಞಾನಸಮಾಧಿಯನೆಯ್ದ ಬಲ್ಲಡೆ ಅದೇ ನಿಜಸಮಾಧಿ ಕೇಳಾ (ಅನುಚಂ. ೧೯೨–೮೬೬). [ನಿಜ + ಸಮಾಧಿ]

**ನಿಜಸಾಕ್ಷಿ** (ನಾ). ದಿಟವಾದ ಸಾಕ್ಷಿ,—ಆಧಾರ : (೬). [ನಿಜ + ಸಾಕ್ಷಿ]

**ನಿಜಸಾರ** (ನಾ). ತನ್ನ ಸತ್ಯ,—ಚೈತನ್ಯ : ಅನುಭಾವದ ಸಾರವೇ ನಿಜಸಾರವಾಗಿ ನಿಂದನೆಮ್ಮ ಬಸವಯ್ಯನು (ಶೀಲವ. ೪–೪). [ನಿಜ + ಸಾರ$_3$]

**ನಿಜಸಿರಿ** (ನಾ). ತನ್ನ ಐಶ್ವರ್ಯ,—ಸಂಪತ್ತು : ಕುಲಾಂಗನೆಯ ವ್ರತಫಲದ ಪುಣ್ಯೋದಯದಿ ನಿಜಸಿರಿ ಫಲಿಸಿತಿನ್ನೀ ಲೋಕದಲಿ ನಿನಗಾರು ಸರಿಯೆಂದ (ನಳಚ. ೯–೮). [ನಿಜ + ಸಿರಿ]

**ನಿಜಸುಖ** (ನಾ). ಶಾಶ್ವತವಾದ ಆನಂದ ; ಮೋಕ್ಷಸುಖ : ಮಾಯಾಮಯಂಗಳೆಂಬ ಮುನ್ನಿನ ಭ್ರಮೆಗಳ ಬಿಡಲಱಿಯದ ಬಡಮನದ ಮನುಜರೆಲ್ಲರೂ ನಿಜಗುಣನ ನಿಜಭಾವದಲೂ ನಿಲ್ಲದವಂಗೆ ನಿಜಸುಖವು ಸಾಧ್ಯವಪ್ಪುದೆ ಹೇಳಾ (ವಚಸಂ. ೯೧–೫೮) ; ನಿಶ್ಚಿಂತ ನಿರಾಳದಲ್ಲಿ ಆಡುವ ಮಹಾದೇವನ ಕರ್ತೃವೆಂದಱಿದ ಕಾರಣದಿಂದ . . . ನಿಜಸುಖದಲ್ಲಿ ನಿಂದು ಕತ್ತಲೆಯ ಹರಿಯಿಸಿ ತಮವ ಹಿಂಗಿಸಿ . . . ಮುಂದೆ ನೋಡಿದಡೆ ಜ್ಯೋತಿಯ ಬೆಳಗ ಕಾಣಬಹುದೆಂದರು (ಲಿಂಗವ. ೬೫–೫೬) ; ಭವಭಯದಾಹವನು ನೆಱೆ ಜಱಿದು ನಿಜಸುಖತುಷ್ಟನಹುದೆಂದ (ನಿಭಾಗ. ೨–೧–೩೮). [ನಿಜ + ಸುಖ]

**ನಿಜಸುಖಿ** (ನಾ). ಶಾಶ್ವತವಾದ ಆನಂದವನ್ನು ಅನುಭವಿಸುವ ವ್ಯಕ್ತಿ : ನಾವಲ್ಲಿದ್ದಡೇನು ನಾವಿಲ್ಲಿದ್ದಡೇನು ನಮ್ಮ ನಮ್ಮ ಸಂಸರ್ಗದಲ್ಲಿ ನಿರುಪಮಾಕಾರಮೂರ್ತಿಗಳಾಗಿ ನಿರವಯವನೈದಿ ನಿಜಸುಖಿಗಳಾದೆವು (ಶೀಲವ. ೧೫–೩೯); ದ್ವೈತಾದ್ವೈತವ ವಿಮಾಱ ನಿಂದ ನಿಜಸುಖಿಗಳಯ್ಯಾ ನಿಮ್ಮ ಶರಣರು (ವಚಸಂ. ೫೪೧–೨೪). [ನಿಜ + ಸುಖಿ]

**ನಿಜಸುತ** (ನಾ). ತನ್ನ ಮಗ ; ಸ್ವಂತ ಮಗ : ನಿಜಸುತನಪ್ಪ ಸುಬಾಹುಗೆ ನಿಜರಾಜ್ಯಮನಿತ್ತು ದೀಕ್ಷೆಯಂ ಕೈಕೊಂಡಂ (ಪಂಪಾಪು. ೧೦–೧೮೨); ನಿಜಸುತ ಸಮಾಜವರ್ಯನನಜೇಯಭುಜವೀರ್ಯನಂ ನೃಪಂ ಬರಿಸಲ್ (ನೇಮಿಪು. ೩–೧೨೧); ಮುನ್ನ ವಿತಳಕೆ ಗರುಡಭಯವಾಯ್ತೆಂದು ತಕ್ಷಕನಿರಿಸಿದನು ನಿಜಸುತನನಮರೇಶ್ವರನನುಜ್ಞೆಯಲಿ (ಕುಮಾವ್ಯಾ ಆ. ೨೦–೫೮). [ನಿಜ + ಸುತ]

**ನಿಜಸುತೆ** (ನಾ). ತನ್ನ ಮಗಳು ; ಸ್ವಂತ ಮಗಳು : ನಿಜಸುತೆ ಸುತಾರೆಯುಂ ಶ್ರೀವಿಜಯಂಗೆ ಪರಸ್ಪರಾನುರಾಗಂ ಮಿಗೆ ಕೊಟ್ಟು (ವರ್ಧಪು. ೯–೪೮) ; ಭೀಮನೃಪಾಲ ಕರಸಿದನು ಬಾಲೆಯರ ತನ್ನಾಪ್ತ ಸಚಿವರ ಮೇಳದಲಿ ನಿಜಸುತೆಯ ಕರೆತರಹೇಳಿ ರತ್ನಾಭರಣಗಳನಿತ್ತವರ ಕಳುಹಿದನು (ನಳಚ. ೭–೩೭). [ನಿಜ + ಸುತೆ]

**ನಿಜಸ್ಥಿತಿ** (ನಾ). ದಿಟವಾದ ಸ್ಥಿತಿ,—ಇರವು : ಮದ್ದಿನ ನಿಜಸ್ಥಿತಿಯನ್ನು ಮುದುಕನಿಗೆ ಹೇಳದೆ ಅವನಿಗೆ ನೆಮ್ಮದಿಯಿರಲಿಲ್ಲ(ಕಂಬಹು. ೨೧).
[ನಿಜ + ಸ್ಥಿತಿ]

**ನಿಜಸ್ವರೂಪ** (ನಾ). **೧.** ಮೂಲಸ್ವರೂಪ ; ಸತ್ಯಸ್ವರೂಪ : ಹರಿಪೀಠದ ಮೇಗೆ ನಿಜಸ್ವರೂಪಮಿರೆ ನೆಗೆದ ನಾಲ್ಕುಬೆರಲಳವಿಯೊಳಾ ಪರಮೇಶ್ವರನಘವಿಘಟನಕರನಾಪ್ತಾಗಮಪದಾರ್ಥವಾಗಮೃತಮು ಖಂ (ಶಾಂತಿಪು. ೧೨–೨) ; ಮಾಧವ ನಿನ್ನ . . . ನಿಜಸ್ವರೂಪದ ಪವಣುಮ ನಾರ್ ಬಲ್ಲರ್ (ಜಗವಿ. ೩–೧೦೭); ಗ್ರಂಥದ ನಿಜಸ್ವರೂಪವೇನೆಂಬುದನ್ನು ತಿಳಿಯಲು ನಾವು ಆಧುನಿಕ ಸಂಶೋಧಕರ ಅಭಿಪ್ರಾಯಗಳನ್ನು ನೋಡಬೇಕಾಗುತ್ತದೆ (ಭಾರದ. ೮೩). **೨.** ನಿಜಸ್ವರೂಪವುಳ್ಳವನು ; ಸತ್ಯಸ್ವರೂಪಿಯಾದವನು ; ಪರಮಾತ್ಮ : ನಿರವಯ ನಿರಾಮಯ ನಿರಾಕುಳ ನಿರ್ದ್ವಂದ್ವ ನಿರ್ಮಲ ನಿಜಸ್ವರೂಪ ನಿರ್ಭಾವ . . . ನಿರ್ಮಾಯ ನಿರಾಳಕಂ (ಸಿದ್ಧೇಪ. ೧–೧). [ನಿಜ + ಸ್ವರೂಪ]

**ನಿಜಾಂಕ** (ನಾ). ತನ್ನ ತೊಡೆ : ಐರಾವತದ ಬೆಂಗೆವಂದ ನಿಜಪರಮ ಸ್ವಾಮಿಯಂ . . . ನಿಬಿಡನಿಬದ್ಧ ಪವಿತ್ರಕ್ಷೌಮೋಪಚ್ಛಮೋಪಚಿತ ಸುಖಾಸನಾಂಕಿತಮಂ ನಿಜಾಂಕಮನೇಱಿಸಿಕೊಂಡು . . . ನೋಡುತ್ತುಂ (ಶಾಂತಿಪು. ೧೦–೬೫ ಪ). [ನಿಜ + ಅಂಕ$_2$]

**ನಿಜಾಂಗನೆ** (ನಾ). ತನ್ನ ಹೆಂಡತಿ,—ಪತ್ನಿ : ತನ್ನ ಮನೆಗೆ ವಂದು ನಿಜಾಂಗನಾಮುಖವಿಲೋಕನಂಗೆಯ್ದು (ಸುಕುಮಾ. ೩–೧೫ ಪ).
[ನಿಜ + ಅಂಗನೆ]

**ನಿಜಾಂಗರುಚಿ** (ನಾ). ತನ್ನ ದೇಹದ ಕಾಂತಿ,—ಪ್ರಕಾಶ : ಕನಕಾಂಭೋಜರಜಂ ನಿಜಾಂಗರುಚಿಯಿಂ ಕನ್ನೆಯ್ದಿಲಿಂದಂ ಕಟಿಲ್ದಿನಿಸಂ ತೂಳ್ದಿ ತೆರಳ್ದು (ಆದಿಪು. ೧–೭೨). [ನಿಜ + ಅಂಗರುಚಿ]

**ನಿಜಾಂಗಿ** (ನಾ). ಪರಮಾತ್ಮಸ್ವರೂಪನಾದವನು ; ಸತ್ಯಸ್ವರೂಪಿ : ಹೊತ್ತು ತುಂಬಿದವಳು ತನ್ನ ನಿತ್ತರಿಸುವ ಬೇನೆಯುನಱಿವಳು ಭಕ್ತಿಯುಳ್ಳವರು ಬಲ್ಲರು ನಿಶ್ಚಟದ ನಿಜಾಂ[ಪಾಠಾಂ. ಲಿಂಗಾಂ]ಗಿಗಳ (ಮೋಳಿಮಾ. ೧೯–೬೫). [ಸಂ. ನಿಜಾಂಗಿನ್]

**ನಿಜಾಂತರಂಗ** (ನಾ). ತನ್ನ ಅಂತರಂಗ,—ಮನಸ್ಸು : ಆ ಮಹಾಪ್ರಕಾಶಮಂ . . . ನೋಡಲಳ್ಕಿ ಬಳ್ಕುತ್ತುಂ ನಿಮೀಲಿತನೇತ್ರನಾಗಿ ನಿಜಾಂತರಂಗದೊಳ್ ಅತಿದುರ್ನಿರೀಕ್ಷ್ಯಮಾದೀ ದ್ಯುತಿಯಂ ತೊಲಗಿಪುದು ತೋರ್ಪುದಾಕಾರಮನಚ್ಯುತ ನೀನೆಂದಾ ಬ್ರಹ್ಮಂ ಸ್ತುತಿಯಿಸೆ (ಜಗವಿ. ೧–೪೮). [ನಿಜ + ಅಂತರಂಗ]

**ನಿಜಾಂಬಿಕೆ** (ನಾ). ತನ್ನ ತಾಯಿ ; ಸ್ವಂತ ತಾಯಿ : ಪೊಕ್ಕು ನಿಜಾಂಬಿಕಾಜನಕರಂ ಸುತೆ ಬೀೞ್ಕೊಳೆ (ಶಾಂತಿಪು. ೪–೧೦೪).
[ನಿಜ + ಅಂಬಿಕೆ]

**ನಿಜಾಂಶ** (ನಾ). ಸತ್ಯವಾದ ಅಂಶ,—ಭಾಗ : ಲಿಪಿಯ ಚರ್ಚೆಯಲ್ಲಿ ನಿಜಾಂಶಕ್ಕೂ ಮೀರಿದ ಗಾಳಿಸವಾರಿಯ ಚಕಮಕಿಯಿದೆ (ದ್ರಾವಿವಿ. ೫೭); ಈ ವಾಕ್ಯದಲ್ಲಿ ಎಷ್ಟರ ಮಟ್ಟಿಗೆ ನಿಜಾಂಶವಿದೆ ಎಂಬುದರ ಬಗ್ಗೆ ನಿಖರವಾಗಿ ಹೇಳುವುದು ಕಷ್ಟ (ಸೊಳಂಬ. ೪೦). [ನಿಜ + ಅಂಶ]

**ನಿಜಾಂಸ** (ನಾ). ತನ್ನ ಹೆಗಲು : ಉತ್ತುಂಗಪೀನನಿಜಾಂಸಾರ್ಪಿತ ಲಂಬಹಾರಂ (ಪಂಪಭಾ. ೩–೫೪). [ನಿಜ + ಅಂಸ]

**ನಿಜಾಕೃತಿ** (ನಾ). ಸಹಜವಾದ ಸ್ವರೂಪ ; ಸ್ವಸ್ವರೂಪ : ಓಲಗದ ಸಭಾಸದರೀ ದಿವ್ಯನೇನೆಂಬನೇಕೆ ನಿಜಾಕೃತಿಸಂವೃತಿಯಿಂ ಬಂದು ನಿಮ್ಮೊಳ್ ನುಡಿದು ಸೋಲ್ತು ಪೋದನೆಂದು ತನ್ನಂ ಬೆಸಕೊಳೆ (ಶಾಂತಿಪು. ೮–೧೫೧ ಪ). [ನಿಜ + ಆಕೃತಿ]

**ನಿಜಾಗಾರ** (ನಾ). ತನ್ನ ನೆಲೆ ; ಸ್ವಂತ ಬೀಡು : "ನಿಜಾಗಾರಗಳೊಳಂ ನಿದಾನದೊಳು ನೆಲೆ" (ಶಬ್ದಮಂ. ೧೦೭). [ನಿಜ + ಆಗಾರ]

**ನಿಜಾಗ್ರಜ** (ನಾ). ತನ್ನ ಅಣ್ಣ ; ಸ್ವಂತ ಸಹೋದರ : ಅನಿಲಸುತಂ ನಿಜಾಗ್ರಜಂಗೆ ಮುಳಿದು (ಗದಾಯು. ೧–೬೦ಪ) ; ನಿಜಾಗ್ರಜನ ಸಾವು ಬೇವಸಮನಗ್ಗಳಂ ಮಾಟ್ಟುದುಂ (ಪಂರಾಮಾ. ೧೩–೧೨೫).
[ನಿಜ + ಅಗ್ರಜ]

**ನಿಜಾತ್ಮಜ** (ನಾ). = ನಿಜಸುತ : ಆತ್ಮೀಯಾನ್ವಯೋದ್ಧರಣ ಸಮರ್ಥನಪ್ಪ ನಿಜಾತ್ಮಜಂಗೆ ಸಮಸ್ತಗೃಹಪರಿಚ್ಛೇದಮನೊಪ್ಪಿಸುವ ಸಕಲದತ್ತಿಯುಮನುಳ್ಳುದು ದತ್ತಿಯೆಂಬ ಮೂಱನೆಯಾರ್ಯಕರ್ಮಂ (ಸುಕುಮಾ. ೬–೨೫ ಪ). [ನಿಜ + ಆತ್ಮಜ]

**ನಿಜಾಧಿಪತಿ** (ನಾ). **೧.** ತನ್ನ ಅಧಿಪತಿ,—ಒಡೆಯ. **೨.** ತನ್ನ ಗಂಡ,—ಪತಿ : ದೀನಜನದುರ್ಲಭಬುದ್ಧಿಯಪ್ಪ ಪ್ರಿಯಮಿತ್ರೆ ತನ್ನಂತರಂಗದೊಳ್ ಬಗೆದದುವೆ ಪೊಟ್ಟಾಗೆ ಪೋಗಿ ನಿಜಾಧಿಪತಿಗದೆಲ್ಲಮನಱಿಪುವುದುಂ (ಶಾಂತಿಪು. ೯–೧೦೨ ಪ). [ನಿಜ + ಅಧಿಪತಿ]

**ನಿಜಾನಂದ** (ನಾ). ದಿಟವಾದ ಆನಂದ ; ಆತ್ಮಾನಂದ : ಯೋಗಾಭ್ಯಾಸಬಲದಿಂ ಮನೋಲಯವಾದಲ್ಲಿ ತೋರ್ಪುದೇ ನಿಜಾನಂದಮೆನಿಸುವುದು (ವಿವೇಕ. ೨೩). [ನಿಜ + ಆನಂದ]

**ನಿಜಾನುಭಾವ** (ನಾ). [ವೀಶೈ] ತಾನು ಪಡೆದ ಆನಂದಾನುಭವ : ಆತನು ಒಳ್ಳೆಯ ಶಿವಾನುಭಾವಿ . . . ಆತನ ಷಟ್ಸ್ಥಲದ ನಿಜಾನುಭಾವದ ವೈಶಿಷ್ಟ್ಯವೇನೆಂಬುದನ್ನು ಅರಿಯಬಹುದು (ಶಂಕಳಂ. XI, ಪೀಠಿಕೆ). [ನಿಜ + ಅನುಭಾವ]

**ನಿಜಾಪತ್ಯ** (ನಾ). ತನ್ನ ಸಂತಾನ ; ಸ್ವಂತ ಮಕ್ಕಳು : ಗಳಿತ ಬಾಷ್ಪಾಂಭಃಕಣಂ ಬೇಗಮುಣ್ಮುವಿನಂ ಪೊಣ್ಮುವಿನಂ ವಿಷಾದದೊದವಿಂದೆಂದಳ್ ನಿಜಾಪತ್ಯರಂ (ಸುಕುಮಾ. ೨–೩೭).
[ನಿಜ + ಅಪತ್ಯ]

**ನಿಜಾಪ್ತವರ್ಗ** (ನಾ). ತನ್ನ ಬಂಧುಗಳು,— ನಂಟರು,— ಆತ್ಮೀಯರ ಗುಂಪು : ಬಂಧು ಸನಾಭಿಸಗೋತ್ರಂ . . . ಬಂಧುಸಮೂಹಂ ಕೃತಸಂಬಂಧಂ ಬಂಧುತೆ ನಿಜಾಪ್ತವರ್ಗಂ ನಂಟರ್ (ವಸ್ತುಕೋ. ೫೬–೨೮). [ನಿಜ + ಆಪ್ತ + ವರ್ಗ]

**ನಿಜಾಭಿಮಾನ** (ನಾ). ತನ್ನ ಹಿರಿಮೆಯ ಬಗೆಗೆ ಇರುವ ತಿಳಿವಳಿಕೆ ; ಸ್ವಂತ ಅಭಿಮಾನ ; ಸ್ವಾಭಿಮಾನ : ಸುಟ್ಟುರಿಯ ಪೊಲಪ್ಪುದರ್ಥಮನುಪಾರ್ಜಿಸುವಲ್ಲಿ ನಿಜಾಭಿಮಾನಮಂ ಧರಿಯಿಸುವಲ್ಲಿ ಚಾದಗೆವೊಲಪ್ಪುದು ತಪ್ಪದಮಾತ್ಮಲಕ್ಷಣಂ (ಕಾವ್ಯಸಾ. ೪೨೨).
[ನಿಜ + ಅಭಿಮಾನ]

**ನಿಜಾಭಿರೂಪ** (ನಾ). (ತನ್ನ) ನಿಜವಾದ ರೂಪ ; ಸಹಜ ಸೌಂದರ್ಯ : ನಳಿನಮುಖಿ ನಳನಳಿಪ ಮುಕ್ತಾವಳಿಯಲಂಕಾರವನುಗಿದು ಸಭೆಯೊಳಗೆ ಬಿಸುಟಳು ನಿಂದಳಬಲೆ ನಿಜಾಭಿರೂಪದಲಿ (ಕುಮ್ಯಾಸ. ೧೬–೫೯). [ನಿಜ + ಅಭಿರೂಪ]

**ನಿಜಾಭ್ಯುದಯ** (ನಾ). ತನ್ನ ಏಳಿಗೆ ; ಸ್ವಂತ ಅಭಿವೃದ್ಧಿ : ನಿಜಾಭ್ಯುದಯ ನಿವೇದದೀರ್ಘಕರಮೊಪ್ಪೆ ಜಗತ್ತ್ರಯನಾದ ದೇವನಂಕದ ಗಣನಾಯಕಂ ವರದನಕ್ಕೆಮಗಮ್ಮನ ಗಂಧವಾರಣಂ (ಗದಾಯು. ೧–೧೦).
[ನಿಜ + ಅಭ್ಯುದಯ]

**ನಿಜಾಮು** (ನಾ). ೧. ದೊರೆ ; ರಾಜ : ರಾಮ ಬಲ್ಲನು ರಾಜಕಾರ್ಯ ಶುಭವು ನಿಜಾಮ ಬಂದರೆ ಬರಲೇಳು (ಸೌಂದಕಾ. ೪–೭). **೨.** ಹೈದರಾಬಾದಿನ ಮಹಮದೀಯ ದೊರೆಗಳಿಗೆ ಇದ್ದ ಒಂದು ಬಿರುದು : ವರಪಿಳ್ಳೇಶ್ವರನಾಜ್ಞೆಯಿಂದುರೆ ನಿಜಾಮುಂ ಲೇಖನಂಗೆಯ್ಸಿ (ಕಳನ್ಯ. ೧೦–೭೦) ; ಅಲ್ಲಿಂದ ಹಾಗೇ ಸ್ವಲ್ಪ ಮುಂದಕ್ಕೆ ಬಂದರೆ ನಿಜಾಮನ ರಾಜ್ಯವು ಇದರ ಉತ್ತರ ಮೇರೆಯಾಗುತ್ತದೆ (ವಿಜಾಭೂ. ೪).
[←ಅರ. ಹಿಂ. ಮರಾ. ನಿಜಾಮ್]

**ನಿಜಾಮುಶಾಹಿ** (ನಾ). ಹೈದರಾಬಾದಿನ ಮಹಮದೀಯ ದೊರೆಗಳಾದ ನೈಜಾಮರ ಆಡಳಿತ, —ರಾಜ್ಯಭಾರ : ಅದರ ಗೋಡೆ ತದ್ರೂಪಪ್ರತ್ಯಕ್ಷ ಚಾಂದಬೀಬಿಯ ಗುರುತು ಹೇಳುವಂಥದು. ಅದರಿಂದ ನಿಜಾಮುಶಾಹಿಯ ಇತಿಹಾಸವನ್ನು ಕಂಡ ಸರ್ಪ ಹೊರಬೀಳುತ್ತಿತ್ತು (ಸ್ಮೃತಿಚಿ. ೩೯೭). [ನಿಜಾಮು + ಶಾಹಿ]

**ನಿಜಾಯತಿ** (ನಾ). ತನ್ನ ಹಿರಿಮೆ, — ಮಹಿಮೆ : ಸತತಂ ಪೆರ್ಚುತ್ತು ನಿಜಾಯತಿಯೊಡನೆ ಮಹಾವಿಭೂತಿ ಪರಮೋದಯನಾ (ಕವಿರಾ. ೩–೧೫೫). [ನಿಜ + ಆಯತಿ]

**ನಿಜಾಯತ್ತ** (ನಾ). ತನಗೆ ಸೇರಿರುವುದು,—ಅಧೀನವಾದುದು : ಇಂತು ಸಾಮ್ರಾಜ್ಯಮುಂ ನಿಷ್ಕಂಟಕಮುಂ ನಿರಾತಂಕಮುಂ ನಿಜಾಯತ್ತಮುಮೆನಿಸಿ (ಚಂದ್ರಪು. ೨–೩೧). [ನಿಜ + ಆಯತ್ತ$_2$]

**ನಿಜಾಯುಷ್ಯಾಂತ** (ನಾ). ತನ್ನ ಜೀವಿತಕಾಲದ ಕೊನೆ,—ಅಂತ್ಯ : ವಿತತಾಷ್ಟಾದಶಸಾಗರೋಪಮ ನಿಜಾಯುಷ್ಯಾಂತದಿಂದಂ ಪ್ರಜಾಪತಿ ಭೂಚಕ್ರಿಗೆ ಬಂದು ಪುಟ್ಟಿ (ಶಾಂತಿಪು. ೭–೬೨).
[ನಿಜ + ಆಯುಷ್ಯಾಂತ]

**ನಿಜಾರಿ** (ನಾ). ತನ್ನ ವೈರಿ, — ಶತ್ರು : ತತುಪುತ್ರಂ ನೆಗಳ್ದಂ ನಿಜಾರಿಬಳವೊನ್ನಲು ಬನ್ನಮಂ ಕಂನಮಂ (ಕಇಅ. ೭೪–೧೨–೭ ; 1170).
[ನಿಜ + ಅರಿ$_6$]

**ನಿಜಾಲಯ** (ನಾ). ತನ್ನ ಮನೆ ; ಸ್ವಂತ ಸ್ಥಳ : ಮಾತ ಕೇಳಿದನವನು ಬಲಸಂಗಾತಲ್ಯೆತಂದವರ ಕಂಡತಿಪ್ರೀತಿಯಿಂ ತಕ್ಕೈಸಿ ಕರೆತಂದನು ನಿಜಾಲಯಕೆ (ನಳಚ. ೭–೪೧). [ನಿಜ + ಆಲಯ]

**ನಿಜಾವಷ್ಟಂಭ** (ನಾ). ತನ್ನ ಬಗೆಗಿರುವ ವಿಶ್ವಾಸ ; ಆತ್ಮಪ್ರತ್ಯಯ ; ದರ್ಪ : ಅರಿಕುಳಗಹ[ನೋ] [ವ್ರ್ವೀರುಹೋದ್ಘಾಟ]ಣಂ ಮಾಳ್ಪ ನಿಜಾವಷ್ಟಂಭ[ದಿಂ] ಕಾಳಿಗನ ಮದಗಜ ಬಾಪ್ಪುರಯೆನ್ದು ವನ್ದಿಜನಮೆಲ್ಲಂ ಕಿತ್ತಿ × × ಧಾತ್ರಿಗೆ ನೆಗಟ್ದ ಯಶೋದ್ದಾಮನಾದಿತ್ಯವರ್ಮಂ (ಸೌಇಇ. XX, ೩೧–೨೭ ; 1044). [ನಿಜ + ಅವಷ್ಟಂಭ]

**ನಿಜಾವಳಿ** (ನಾ). ತನ್ನ ಬಿರುದುಗಳ ಮಾಲೆ, — ಪ್ರಶಂಸೆಗಳ ಸಮೂಹ : ಈ ಮೂವರುಂ ಬಂದ ವಂಶಾವಳಿಯುಮಂ ನಿಜಾವಳಿಯುಮನೊಳ್ಪಿತ್ತಾಗಿ ಪೇಟ್ದೀ ನಿನ್ನ ಚೆನ್ನಭಾಷಿತಮುದೊಳ್ಪಿತ್ತಾದುದು (ಗದಾಯು. ೨–೮ ಪ) ; 'ಶರಣಾಗತ ಪರಿಪಾಲಕ' ಎಂಬ ನಿಜಾವಳಿಯ ಬಿರುದು ಒಳಗಳಿದ — ಟಕ್ಕಿನ ಜಳ್ಳುಮೆರೆತವಾಗಿ . . . ಪತಿತವಾಗಬೇಕೆಂಬ ಉತ್ಕಟಾಭಿಲಾಷೆಯೇನು (ಬಿಟ್ಟಅ. ೭೪–೧೦).
[ನಿಜ + ಆವಳಿ$_1$(= ಆವಲಿ)]

**ನಿಜಾವಾಸ** (ನಾ). ತನ್ನ ವಾಸಸ್ಥಾನ ; ಸ್ವಂತ ಸ್ಥಳ : ತದನಂತರಂ ನಿಜಾವಾಸಕ್ಕೆ ಪೋಗಿರ್ದು (ಶಾಂತಿಪು. ೭–೧೦ ಪ) ; ಏಟನೆಯ ಗೇಹಂ ಕನ್ನೆಯಾದಂದು . . . ಕೂಡೆ ತೀಕ್ಷ್ಣಗು ಲಗ್ನಸ್ಥಿತನಾಗೆ ಪೆಣ್ಣಕತದಿಂ ಸಾಯ್ಲುಂ ನಿಜಾವಾಸದೊಳ್ (ಜಾತತಿ. ೨೩–೮) ; ಸೌಧರ್ಮಕಲ್ಪೇಶ್ವರಂ . . . ನಿಜಾವಾಸದತ್ತಣ್ಗೆ ಪೋದಂ (ಸುಕುಮಾ. ೯–೩).
[ನಿಜ + ಆವಾಸ]

**ನಿಜಾಶ್ರಮ** (ನಾ). ತನ್ನ ಆಶ್ರಮ ; ಸ್ವಂತ ಆಶ್ರಮ : ಮುನಿಯಮನಂದನನ ಬೀಳ್ಕೊಂಡು ತಾಪಸವೃಂದಸಹಿತಲ್ಲಿಂದ ಹೊಐವಂಟನು ನಿಜಾಶ್ರಮಕೆ (ನಳಚ. ೯–೭೦). [ನಿಜ + ಆಶ್ರಮ]

**ನಿಜಾಸಿ** (ನಾ). ಸ್ವಂತ ಕತ್ತಿ, — ಖಡ್ಗ : ದಿಗ್ವಧೂಪ್ರಸರಮೆ ಸಾಕ್ಷಿ ಕೀರ್ತಿಗೆ ರಿಪುಬ್ರಜೆ ಮಂಡಳಮೆಯ್ದೆ ಸಾಕ್ಷಿ ಸಾಹಸಕೆ ನಿಜಾಸಿ ಸಾಕ್ಷಿ ಗಳ ವೀರಗುಣಕ್ಕೆನೆ (ಸೌಇಇ. XX, ೪೬–೩೨ ; 1072).
[ನಿಜ + ಅಸಿ$_8$]

**ನಿಜೇಂದ್ರಿಯ** (ನಾ). ತನ್ನ ಇಂದ್ರಿಯ : ಒಡಲ ಪೊಡರ್ಪು ತುಟ್ಟಿಸದ ಮುನ್ನ ನಿಜೇಂದ್ರಿಯವರ್ಗದೇಳ್ಗೆಯೊರ್ಗುಡಿಸದ ಮುನ್ನ . . . ನಿಮ್ಮ ಪದಮಂ ನೆಱೆ ಪೂಜಿಸವೇಳ್ಕುಂ (ಶಂಕಶ. ೧೪). [ನಿಜ + ಇಂದ್ರಿಯ]

**ನಿಜೇಶ್ವರ** (ನಾ). ತನ್ನ ಒಡೆಯ,—ಪತಿ : ಗೋಪಿ ಬಂದು . . . ನಿಜೇಶ್ವರಂಗಱಪಿ ಮಾಡಿಸಿದಳ್ ಬಹುಶಾಂತಿಕರ್ಮಮಂ (ಜಗವಿ. ೩–೩೧).
[ನಿಜ + ಈಶ್ವರ]

**ನಿಜೇಷ್ಟವಸ್ತು** (ನಾ). ತನಗೆ ಇಷ್ಟವಾದ ಪದಾರ್ಥ ; ತಾನು ಬಯಸುವ ವಸ್ತು : ಬೇಡಲ್ ನಿಜೇಷ್ಟವಸ್ತುವ-ನೀಡಿದ ಕೈ ತೆರಪಸುಳಿದ ಬೆರಳ್ಗಳಿನೆಸೆಗುಂ (ಶಾಕುಂತ. ೧೦೫–೧೭೯).
[ನಿಜ + ಇಷ್ಟ$_1$ + ವಸ್ತು]

**ನಿಜೇಷ್ಟಸಿದ್ಧಿ** (ನಾ). ತನ್ನ ಅಭೀಷ್ಟವು ಸಿದ್ಧಿಸುವಿಕೆ,—ನೆರವೇರುವಿಕೆ : ಜನಮುಂಗೀಕರಿಪುದು ನೆಟ್ಟನೆ ಸಂಬಂಧಾಭಿಧೇಯ ಶಕ್ಯಾನುಷ್ಠಾನ ನಿಜೇಷ್ಟಸಿದ್ಧಿಗಳ್ ನೆಲಸಿ ನಿಂದ ಕಾರಣದೆ ಶಬ್ದಮಣಿದರ್ಪಣಮಂ (ಶಮದ. ೭ ಪೀಠಿಕೆ). [ನಿಜ + ಇಷ್ಟಸಿದ್ಧಿ]

**ನಿಜೈಕ್ಯ** (ನಾ). ೧. [ವೀಶೈ] ಪರಮಾತ್ಮನಲ್ಲಿ ಐಕ್ಯವಾಗುವಿಕೆ ; ಶಿವನಲ್ಲಿ ಲೀನ ಹೊಂದುವಿಕೆ ; ಮೋಕ್ಷ : ನಿಷ್ಕಳ ನಿಜೈಕ್ಯ ತ್ರಿವಿಧನಿರ್ಣಯ ಕೂಡಲಸಂಗಮದೇವಾ ನಿಮ್ಮ ಶರಣರಿಗಲ್ಲದಿಲ್ಲಾ (ಬಸವ. ೭೬೯). **೨.** ಪರಮಾತ್ಮನಲ್ಲಿ ಲೀನನಾದವನು ; ಶಿವನಲ್ಲಿ ಐಕ್ಯನಾದವನು : ತನುಮನಧನವ ಮಿಱೆ ಮಾತಾಡಬಲ್ಲರೆ ಆತ ನಿಸ್ಸೀಮನು ಆತ ನಿಜೈಕ್ಯನು (ಬಸವ. ೨೧೬) ; ನಿಶ್ಚಿಂತ ನಿರಾಳನಾದ ನಿಜೈಕ್ಯನ ತಥ್ಯಮಿಥ್ಯದಿಂದ ನುಡಿವ ತುಚ್ಛರ ನುಡಿ ತಟ್ಟಬಲ್ಲುದೇ (ಸಿದ್ಧೇವ. ೨೧೫–೬೭೦). [ನಿಜ + ಐಕ್ಯ]

**ನಿಜೈಕ್ಯಪದ** (ನಾ). = ನಿಜೈಕ್ಯ ೧ : ನಿಮ್ಮ ಶರಣರು ಲಿಂಗನೆನಹೆಂಬ ಕಿಚ್ಚ ಹಿಡಿಯಲು ಅಂಗಜನ ಅರಮನೆ ಬೆಂದು ಭವ ಹೆಱಹಿಂಗಿತ್ತು ನೋಡಾ ಇದೇ ಲಿಂಗದೊಲವು ನಿಜೈಕ್ಯಪದ ಉಳಿದವೆಲ್ಲಾ ಹುಸಿಭ್ರಮೆ ಕಾಣಾ (ಸಿದ್ಧೇವ. ೪೨–೧೧೫). [ನಿಜೈಕ್ಯ + ಪದ$_2$]

**ನಿಜೈಕ್ಯಾನುಭಾವ** (ನಾ). [ವೀಶೈ] ಶಿವನೇ ನಾನು ಎಂಬ ವಸ್ತುಸ್ಥಿತಿಯನ್ನು ತನ್ನ ಮನಸ್ಸಿನಲ್ಲಿ ದೃಢವಾಗಿ ಅಳವಡಿಸಿಕೊಳ್ಳುವುದು ಮತ್ತು ಈ ಐಕ್ಯಾನುಸಂಧಾನದಿಂದ ಉಂಟಾಗುವ ಆನಂದಾನುಭವ : ಇಷ್ಟಲಿಂಗಸಂಬಂಧ . . . ಪ್ರಾಣದ ಮಱಿಜ್ಞಾನ ಇಂತೀ ಗುಣಂಗಳ ಏಕವ ಮಾಡಿ ಉಭಯದ ದೃಷ್ಟಕ್ಕೆ ಒಡಲಿಲ್ಲದೆ ನಿಂದುದೆ ನಿಜೈಕ್ಯಾನುಭಾವ (ಮೋಳಿಪು. ೧೧೨–೪೪೩).
[ನಿಜೈಕ್ಯ + ಅನುಭಾವ]

**ನಿಜೋಜ್ವಲ,** ನಿಜೋಜ್ವಳ (ನಾ). ಸಹಜವಾಗಿ ಪ್ರಕಾಶಿಸುವಂಥದು ; ಸಹಜವಾಗಿ ಇರುವಂಥದು : ಕೇಶಿರಾಜನು . . . ಕನ್ನಡದಲ್ಲಿ ನಿಜೋಜ್ವಲವಾಗಿ ಹಲವು ಮಹಾಪ್ರಾಣಗಳಿವೆಯೆಂದು ಹೇಳಿದನು (ಭಾಷಾಶಾ. ೧೦೮). **ನಿಜೋಜ್ವಳ :** ಒಳವು ಮಹಾಪ್ರಾಣಂಗಳ್ವಿಳಸತ್ಕರ್ಣಾಟಭಾಷೆಯೊಳ್ ಕೆಲವು ನಿಜೋಜ್ವಳಮಾಗಿ (ಶಮದ. ೧೫).
[ಸಂ.]

**ನಿಜೋಜ್ಜ್ವಳ** 'ನಿಜೋಜ್ಜ್ವಲ' ನೋ.

**ನಿಜೋತ್ತಂಸ** (ನಾ). ತನ್ನ ಶಿರೋಭೂಷಣ,—ತಲೆಯ ಒಡವೆ : ದಶಕುಲಧರ್ಮನಿರ್ಮಳರೆನಿಸಿದ ಸುಧರ್ಮಾಚಾರ್ಯರ ಪಾದಪದ್ಮಮಂ ನಿಜೋತ್ತಂಸಂಗಳಂ ಮಾಡಿ ತದೀಯ ಪಾದಪದ್ಮಂಗಳಂ ಕರಪಲ್ಲವಂಗಳಿ ನೊತ್ತುತ್ತುಂ (ಸುಕುಮಾ. ೩-೪೪ ವ). [ನಿಜ + ಉತ್ತಂಸ]

**ನಿಜೋದಾರತೆ** (ನಾ). ತನ್ನ (ವಿಶೇಷವಾದ) ಉದಾರಗುಣ,—ಔದಾರ್ಯ : ಜನಿತ ಪ್ರಗಲ್ಭದೊಳ್ ಮಾಂತನದೊಳ್ ಮಾಹಾತ್ಮ್ಯ ದೊಳ್ ನಿಜೋದಾರತೆಯೊಳ್ ಅನುಪಮಗುಣದೊಳ್ ಶ್ರೀಶಂ ಘನಮೆನೆ ಮಾಲೋಪಮಾನಭೇದಮಿದಕ್ಕುಂ (ಕವಿರಾ. ೩-೮೧).
[ನಿಜ + ಉದಾರತೆ]

**ನಿಜೋನ್ನತಿ** (ನಾ). ಸ್ವಂತ ಹಿರಿಮೆ,—ಅಗ್ಗಳಿಕೆ : ಈಸು ಮಹಿಮೆಯು ಮಱಿಸಿ ಲೋಕವಿಳಾಸಚೇಷ್ಟೆಯನನುಸರಿಸಿ ನರವೇಷವನು ನಟಿಸಿದನು ಹರಿ ಹೂಳಿದ ನಿಜೋನ್ನತಿಯ (ಕುಮ್ಯಾ.ಸ. ೧೧-೨೩).
[ನಿಜ + ಉನ್ನತಿ]

**ನಿಜೌನ್ನತ್ಯ** (ನಾ). = ನಿಜೋನ್ನತಿ : ಬಿಡದೆ ಬಿಡಲೊಂದೊಂದ ನುಂಗಿ ನುಂಗಿದವು ಬಳಿಕೆಡವಿಡದೆ ಠೈಂಕೃತಂ ಭೀಂಕೃತಂ ಭೂತ್ಕೃತಂ ಹೊಡ ಳರಿಸೆ ಕಾದಿದರು ಪರಿಯಜರು ಖಂಡಿತನಿಜೌನ್ನತ್ಯ ಕಲ್ಪಕುಜರೂ (ವೀಶೈಪು. ೩-೧೨-೯). [ನಿಜ + ಔನ್ನತ್ಯ]

**ನಿಜ್ಜರ** (ನಾ). ಮುಪ್ಪಿಲ್ಲದವನು ; ಜರೆಯಿಲ್ಲದವನು ; ದೇವತೆ: 'ನಿಜ್ಜರವನಿತೆ' ಪರಾ. [<ಸಂ. ನಿರ್ಜರ]

**ನಿಜ್ಜರವನಿತೆ** (ನಾ). ದೇವತೆ ; ದೇವತಾಸ್ತ್ರೀ : ಮಜ್ಜನವಡಿಸಿ ಸುವರ್ಣ ಶೂರ್ಪದೊಳಾಂತು ಸೆಜ್ಜೆಗೆ ತಂದರಾ ಶಿಶುವ ನಿಜ್ಜರವನಿ[ತೆ]ಯ ಪಕ್ಕ ದೊಳಿಟ್ಟರು ಸಜ್ಜಾತ ಶ್ರೀಕೃಷ್ಣನಂತೆ (ಮೋಹತ. ೧೭-೨೩).
[ನಿಜ್ಜರ + ವನಿತೆ]

**ನಿಜ್ಜವಣೆ** (ನಾ). [ನಾಟ್ಯ] ನೃತ್ಯದ ಒಂದು ಭಂಗಿ ; ದೇಶೀ ಲಾಸ್ಯದ ನಂದ್ಯಾವರ್ತವೆಂಬ ಸ್ಥಾನವಿಶೇಷದಲ್ಲಿ ಮೊಳಕಾಲು ಗಳನ್ನು ಎರಡು ಕಡೆಗಳಲ್ಲೂ ಬಗ್ಗಿಸಿಕೊಂಡಿರುವುದು : ಭಂಗಿ ಯನಾಳೆ ನಿಜ್ಜವಣೆ ರೇಖೆ[ಪಾಠಾಂ.ಣ ರಾಜಿ] ಮನೋಹರವಾಗೆ ರೂಪು ಚೆಲ್ವಿಂಗೆಡೆಯಾಗೆ ತಾಳದನುಕೂಳತೆಯಿಂ ವಳನೋರುವರ್ತನಂ ಸಂಗತ ಮಾಗೆ ಗೀತದೊಳವೊಂದಿದ ವಾದ್ಯದೊಳಂ ಲತಾಂಗಿ ಸರ್ವಾಂಗದೆ ಪಾಡು ವಂತೊಸೆದು ಬಾಜಿಸುವಂತೆವೊಲಾಯ್ತು ನರ್ತನಂ (ಪಾರ್ಶ್ವಪು.೧೨-೨೮); ಪಯಪಾಡು ನಿಜ್ಜವಣೆ ಚಾಳೆಯುಮುಲ್ಲಾಸಂ ತಿರಿಂಪು ತಡವಿತ್ತಡ ಮುನ್ನಯನವಿಶೇಷಂ ಡಿಳ್ಳಾಯಿಯು ಉಳಿ ಪುದಿದು ಸುರಮೆಸೆವಿನಂ ನರ್ತಿಸಿದಳ್ (ಧರ್ಮಪ. ೨-೨೬). [<ಸಂ. ನಿಜವಣಾ]

**ನಿಜ್ಝಾಡಿಸು** 'ನಿರ್ಘಾಟಿಸು' ನೋ.

**ನಿಜ್ಝೋಡು** (ನಾ). ಸರಿಯಾದ ಹೊಂದಿಕೆ ; ವಿಶೇಷವಾದ ಹೊಂದಾಣಿಕೆ : ಧರ್ಮಜನ ಸತ್ಯಾಭ್ಯುದಯಕೋಸುಗ ಊರ್ವಶಿಯ ಶಾಪದಲಿ ಬಂದುದು ಹೊತ್ತು ನೂಕಿದೆನೊಂದುವತ್ಸರವ. ಇದಕೆ ನಿಜ್ಝೋ[ಪಾಠಾಂ.ನಲ್ಜೋ]ಡಾಯ್ತು, ನಿರ್ವಿಘ್ನದಲಿ ನೂಕಿದೆವವಧಿಯನು ತನ್ನದಟುತನವನು ಭೀತಿಗೊಳ್ಳದೆ ನೋಡು (ಕುಮ್ಯಾವಿ. ೬-೪೮).
[<ನಿಡಿದು₁ + ಜೋಡು]

**ನಿಟ್**, ನಿಡಿ₁, ನಿಡು (ಸಪೂರೂ) 'ನಿಡಿದು' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ. 'ನಿಟ್ಟಾಲಿ' ಪರಾ. **ನಿಡಿ₁** : 'ನಿಡಿಗರುಳು' ಪರಾ. **ನಿಡು** : ಬಿಸು, ಕಿಱು, ನಿಡು ಇತಿ ಇನಾದಿರಾ ಕೃತಿಗಣಃ (ಶಬ್ದಾನು. ೩೩೪ ಪ್ರಯೋ). 'ನಿಡುಗರುಳ್' ಪರಾ.
[<ನಿಡಿದು₁]

**ನಿಟಂಬ** (ಅ). ಉದ್ದಕ್ಕೆ ; ಸಾಷ್ಟಾಂಗವಾಗಿ : "ಮಗು ತಾಯಿಯ ಬಳಿಯಿಂದ ಎಷ್ಟುದಿನ ದೂರ ಉಳಿದೀತು" ಎಂದು ಅತ ಹೇಳಿದಾಗ ಕೋಣಮ್ಮನಿಗೆ ದುಃಖ ತಡೆಯುವುದಕ್ಕಾಗಲಿಲ್ಲ. ಕ್ಷಣಾರ್ಧದಲ್ಲಿಯೇ ಅವರ ಕಾಲಿಗೆ 'ನಿಟಂಬ' ಅಡ್ಡಬಿದ್ದಳು (ಕೈಮಾಂಸ. ೯೭). [?]

**ನಿಟಲ, ನಿಟಳ₁** (ನಾ). = ನಿಟಲ. **ನಿಟಳ₁** : ವೀರಲಕ್ಷ್ಮೀನಿಟಳಾಗ್ರಲಲಾಮ ನಾಶ್ರಿತೋತ್ಸವಕರಂ (ಸೌಇಇ. XX, ೭೬-೩೦ ; 1118). [ಸಂ.]

**ನಿಟಳ₁** 'ನಿಟಲ' ನೋ.

**ನಿಟಳ₂** (ನಾ). ಒಂದು ಬಗೆಯ ಮರ ; ತಡಸು : "ತಡಸು ನಿಟ್ಳಂ" (ಮಂಗರಾ. ೩೬-೧೮). [?]

**ನಿಟಾಲ** (ನಾ). = ನಿಟಲ : ಅಂಗುಲಿಗಳುಂ ಕಟ ನಿಟಾಲ ಚುಬುಕ . . . ಕಕುದ ಗಂಡಂಗಳುಂ ಸಂಘಟಿಪವ್ವೆದನೆಯ ತಿಂಗಳೊಳ್ಳಭ್ರಸ್ತ ಮಾದ ಪಿಂಡಕ್ಕಮ್ಮೆದೆ (ವೆಂಕರಾ. ೨-೩೫-೭). [ಸಂ.]

**ನಿಟಾಲಾಕ್ಷ** (ನಾ). ಹಣೆಯ ಕಣ್ಣು ; ನಿಟಿಲಾಕ್ಷ : ಪ್ರಳಯ ರುದ್ರನ ನಿಟಾಲಾಕ್ಷ ಸಂಭವಜ್ವಲೋಜ್ಜ್ವಳವೀತಿಹೋತ್ರಸ್ಫುಲಿಂಗಪಾತನ ದಿಂದ ಚಳಚಳಲೆನುತ ಬ್ರಹ್ಮಾಂಡಂಗಳೊಡೆವಂತೆ . . . ಸಿಡಿದು (ವೆಂಕರಾ. ೩-೬-೧೯). [ನಿಟಾಲ + ಅಕ್ಷಿ]

**ನಿಟಿಲ್**, ನಿಟಿಲು₁ (ನಾ). ಒಂದು ಅನುಕರಣ ಶಬ್ದ : ಕಟವಾಯ್ಗೊ ಕ್ಯೆಯನಿಟ್ಟರದೆರಳ್ ಸೀಳಾಗಿ ನಿಟಿನೆರಿಲ್ ನಿಟಿಲೆನಲ್ ನಿಟ್ಟಿಲು ವನುಜಿ ಮುಱಿದು (ಚಬಪು. ೨೧-೬) ; ಅನುಕರಣಾವ್ಯಯಗಳು — ಗಚಗಟ, ಕವಕವ . . . ನಿಟಿಲ್, ಪರಿಲ್ . . . ದುಘುಮ್ಮನೆ ಇತ್ಯಾದಿ (ಕೈಪಿಡಿ. ೫೨). **ನಿಟಿಲು₁** : ಧಂಧಗಂ ಘುಳುಘುಳು ಛಟಲ್‌ಛಟಲೆಂಬ ಕಟ ಪಟ ನಿಟಿಲು ನಿಱಿಲೆಂಬ . . . ಧ್ವನಿಗಳವನಿಗೆ ಭಯವನೀವುತಿರೆ (ಸಾನಂಚ. ೮-೧೩).

**ನಿಟಿಲ**, ನಿಟಿಳ (ನಾ). ಹಣೆ ; ನೊಸಲು : ಕೋಮಲಶ್ಯಾಮಲ ಚ್ಛಾಯಾಕಾಯಮುಪನಿಟಲಕುಟಿಲಘಟಿತಜೂಟಬಂಧಮುಂ (ಆದಿಪು. ೧೩-೪೫ ವ) ; ನಿಟಿಲನ್ಯಸ್ತಕರಾಬ್ಜಸಂಪುಟ ವಿನಮ್ರಾತ್ಮಾಂಗರಂ ಭಕ್ತಿ ಲಂಪಟರಂ ತನ್ನುನಿ ಧರ್ಮವೃದ್ಧಿ ನಿಮಗೆಂದಾ ನಾಲ್ವರಂತಸ್ತಮಃ ಪಟಮಂ ಪಿಂಗಿಸಿ (ಶಾಂತಿಪು. ೭-೯) ; ನಿಟಿಲಂ ರುಂದ್ರಾರ್ಧಚಂದ್ರಾಭಂ (ಸುಕುಮಾ. ೫-೫೩) ; ಬೆದಱಿ ಮನಂ ವನಸ್ಥಲದೊಳೊಂದಿಭಮಿರ್ದುದು ಮೂರ್ಧಪಿಂಡಮಲ್ಲಿದು ಶಿಖರಸ್ಥಲಂ ನಿಟಿಲವಲ್ಲಿದು ಪಾಸಱಿ . . . ಮದಗಜವಲ್ಲಿದಿಂದ್ರನೊಳಿದಿರ್ಚಿದ ನೀಲನಗೇಂದ್ರಮೆಂಬಿನಂ (ಪಂಪಾಮಾ. ೧೦-೧೫೯) ; ಬಾಲಪ್ರವಾಳೋಷ್ಠ ನುತ್ಪಳಪತ್ರಾಂಬಕನಪ್ಪವಿಱಿದು ನಿಟಿಲಂ [ಪಾಠಾಂ. ಳಂ] . . . ಉಜ್ವಳಕೇಶಂ ಧರಣೀಶಸೂನು ತಳೆದಂ ಸಾಶ್ಚರ್ಯಸೌಂದರ್ಯಮಂ (ಚಂದ್ರಪು. ೪-೭). **ನಿಟಿಳ** : "ನಿಟಿಳಂ ಭಾಳಂ ಅಳಿಕಮುಬಿಗೆ ಲಲಾಟಂ" (ವಸ್ತುಕೋ. ೭೦-೧೮) ; ಸಂತೋಷದಿಂ ಬೀಗಿದಂತುಚ್ಚಮಾದ ನಿಟಿಳಮುಮಂ ವಕ್ಷಸ್ಥಳಮುಂ . . . ಸೊಗಯಿಸುವ ರೂಪುಂ ಗಾಡಿಯುಮುಖಿಳಲೋಕಾಶ್ಚರ್ಯ ಮಾಗೆ (ವರ್ಧಮಾ. ೬-೭೩ ವ).

**ನಿಟಿಳನಿಹಿತಾಂಜಳಿ** = ಕೈಗಳನ್ನು ಬೊಗಸೆಯಾಗಿ ಜೋಡಿಸಿ ಹಣೆಯ ಬಳಿ ಇಟ್ಟುಕೊಂಡವನು ; ಕೈಮುಗಿದವನು : ಅಂತು ನಿಂದು ಪುಷ್ಪಾಂಜಲಿವಿಕ್ಷೇಪಮಂ ಮಾಡಿ ನಿಟಿಳನಿಹಿತಾಂಜಳಿಯಾಗಿ (ಚಂದ್ರಪು. ೧೨-೧೭೫ ವ). [ಸಂ.]

**ನಿಟಿಲಂದೆಱಿ³** (ಕ್ರಿ). (ಅಲಂ) ಹಣೆಗಣ್ಣನ್ನು ತೆರೆ,—ತೆಗೆ : ಹಂಪೆಯುರಸಂ ನಿಟಿಲಂದೆಱಿಯಲ್ ಬಳಿಕ್ಕ . . . ಎತ್ತಣ ತ್ರಿದಶ ಸಂಕುಳವೆತ್ತಣ ಭಾಸ್ಕರೇಂದುಗಳ್ (ಪಂಪಾಶ. ೩೮).
[ನಿಟಿಲ + ತೆಱಿ³₁]

**ನಿಟಿಲತಟ,** ನಿಟಿಳತಟ (ನಾ). ಹಣೆಯ ಪ್ರದೇಶ; ನೊಸಲು : ಉಪನಯನಾನಂತರವೊಂದುಪನಯನಂ ನಿಟಿಲತಟದೊಳುಂಟೆನೆ (ಮಲ್ಲಿಪು. ೪-೧೩೮) ; ನಿಟಿಲತಟದೊಳುಯ್ಯಲಾಡುವ ಮುಂಗುರುಳನುಗುರ್ಗೊನೆಯಿಂ ತಿರ್ದಿಯುಂ (ರಾಮಾಶ್ವ. ೨೦-೧೫). **ನಿಟಿಳತಟ :** ಏಕಾಗ್ರಚಿತ್ತದೊಳ್ ಏಕಪಾರ್ಶ್ವದೊಳ್ ಮೆಯ್ಯನಿಕ್ಕಿ ನಿಟಿಳತಟಘಟಿತಕರಪುಟಯುಗಲನುಂ ಧರ್ಮಧ್ಯಾನೋಪಯೋಗನುಮಾಗೆ (ಸುಕುಮಾ. ೧೨-೧೫ ವ); ಪಂಡಿತತತಿವಿನತಂ ಮಾಘನಂದ್ಯಾಖ್ಯವಾಚಂಯಮಿರಾಜಂ ವಾಗ್ವಧೂಟೀನಿಟಿಳತಟಹಟನ್ಪೂತ್ನಸದ್ರತ್ನ ಪ × × × (ಎಕ. II, ೬೪-೭೭ ; 1163) ; ನಿರ್ಭರಭಕ್ತಿಯಿಂ ನಿಟಿಳತಟಘಟಿತಕರಸರೋಜನಾಗಿ (ಪುಷ್ಪಪು. ೯-೨ ವ). [ನಿಟಲ + ತಟ$_3$]

**ನಿಟಿಲತಟನಯನ** (ನಾ). ೧. ಹಣೆಯಲ್ಲಿ ಇರುವ ಕಣ್ಣು ; ಹಣೆಗಣ್ಣು : ನಿಟಿಲತಟನಯನನ ನಿಟಿಲತಟನಯನಶಿಖಿಯಿಂದ ಪಟುಪುರಂಗಳು ಬೇವವೋಲುತ್ಕಟವೆನಿಸಿ (ಬಸವು. ೫೬-೩೨). ೨. ಹಣೆಯಲ್ಲಿ ಕಣ್ಣುಳ್ಳವನು ; ಹಣೆಗಣ್ಣ ; ಶಿವ : ನಿಟಿಲತಟನಯನನೆ ನಿಟಿಲತಟನಯನಶಿಖಿಯಿಂದ ಪಟುಪುರಂಗಳು ಬೇವವೋಲು (ಬಸವು. ೫೬-೩೨). [ನಿಟಿಲತಟ + ನಯನ]

**ನಿಟಿಲದೃಕ್ಕು** (ನಾ). = ನಿಟಿಲತಟನಯನ ೧ : ನಿಟಿಲದೃಗ್ವಿಸ್ಫುಲಿಂಗಾಕೀರ್ಣಶಮನ ತಜ್ಜಟೆಯ ಗಂಗಾದಿಂದು ನಾಟ್ಯಲೀಲಾಮಹೋತ್ಕಟ ಶಾಂತಮಲ್ಲೇಶ ಜಯಸುಪ್ರಕಾಶ (ವೀಶೈಪು. ೫-೧೮-೧). [ನಿಟಿಲ + ದೃಕ್ಕು]

**ನಿಟಿಲನಯನ** (ನಾ). ೧. = ನಿಟಿಲತಟನಯನ ೧ : ನಿಟಿಲನಯನವನುಳಿದ ಬಲುಧೂರ್ಜಟಿಗಳಂದದಲೆಸೆವ ತನ್ನಯ ತಟದ ತಾಪಸನಿಕರದಾ ನದಿಯಿತ್ತಡಿಯಲೆಸೆವ ಉಟಜವನು ನೋಡುತ್ತ . . . ದೂರದಲಿ ಕಂಡನು ಕರ್ದಮಪ್ರತಿಯ (ಸಿಭಾಗ. ೩-೧೦-೨೧). ೨. = ನಿಟಿಲತಟನಯನ ೨ : ತಾನೆಯೆಲ್ಲಾ ಇನ್ನು ಗುಗ್ಗುಳವೀ ನಿಟಿಲನಯನಂಗೆ ಈ ಕಾಲಾನುಕೂಲಕ್ಕೆನುತ (ಬಸವು. ೪೪-೨೦) ; ನಿಟಿಲನಯನಪ್ರತಿಮುತನುವಾಘಟದೊಳಗೆ ಕೈದುಡುಕಿ ಪಟುದುರ್ಘಟಿಗರಳಧರನಂ ಪಿಡಿಪಿಡಿದು ತೆಗೆವ ಸಮಯದಲಿ (ಬಸವು. ೫೧-೬೧). [ನಿಟಿಲ + ನಯನ]

**ನಿಟಿಲನೇತ್ರ** (ನಾ). = ನಿಟಿಲತಟನಯನ ೨ : ನಿಟಿಲನೇತ್ರನ ಭುಜಬಲಕೆ ಸಮಜೋಳಿ ಗಡ ನೀವು (ಕುಮ್ಯಾಭೀ. ೯-೩೨) ; ನಿಟಿಲನೇತ್ರನ ದೇವಿಸುತನೇ ನಾಗಭೂಷಣಪ್ರಿಯನೇ ತಟಿಲ್ಲತಾಂಕಿತ ಕೋಮಲಾಂಗನೆ ಕರ್ಣಕುಂಡಲಧಾರನೆ . . . ಪಕ್ಷಿವಾಹನ ಸಿರಿಪುರಂದರವಿಟ್ಠಲನ ನಿಜದಾಸನೆ (ಪುರಂದ. ೧-೫-೧). [ನಿಟಿಲ + ನೇತ್ರ]

**ನಿಟಿಲಲೋಚನ** (ನಾ). = ನಿಟಿಲತಟನಯನ ೨ : ಆ ಶಿವಜ್ಞಾನಪ್ರಭೆಯೊಳಗೆ ನಿಟಿಲಲೋಚನನೆಂಬ ನಿತ್ಯನನು ಕಂಡು ಆದೇ ಎನ್ನ ನಿಜವೆಂದು ಬೆರಸಿ ಅಭಿನ್ನಸುಖಿಯಾಗಿದ್ದೆ ನಯ್ಯಾ (ಸಿದ್ಧೇವ.೩೩-೮೪) ; ಕುಟಿಲತನದಲಿ ಗೆಲುವೆನೇ ಹುಲುಕುಟಿಗರಂವದಿರ ಹೊಯ್ದು ತನ್ನನು ನಿಟಿಲಲೋಚನನಡ್ಡ ಹಾಯ್ದರೆ ಹಿಡಿವೆನೆನುತೆಚ್ಚ (ಕುಮ್ಯಾದ್ರೋ. ೨-೩೬) ; ನೀನಲಾ ಪೂರ್ವದಲಿ ಕಾಮನು ತಾನಲಾ ರತಿ ನಿನ್ನ ಸತಿ ಮುನಿದಾ ನಿಟಿಲಲೋಚನನು ಸುಟ್ಟಡೆ ಬೆಂದು ಮತ್ತಿಂದು ಮಾನನಿಧಿ ಜನಿಸಿದೆ ಮುಕುಂದನ ಮಾನಿನಿಗೆ ಮಗನಾಗಿ (ಸಿಭಾಗ. ೧೦-೬೩-೧೨). [ನಿಟಿಲ + ಲೋಚನ]

**ನಿಟಿಲಲೋಚನೆ** (ನಾ). ಹಣೆಯಲ್ಲಿ ಕಣ್ಣುಳ್ಳವಳು ; ದುರ್ಗಾದೇವಿ ; ಆದಿಶಕ್ತಿ ; ಪಾರ್ವತಿ : ಪಟುತರಚಿತ್ತೆ ನಿಟಿಲಲೋಚನೆ ವಟವೃಕ್ಷದ ಕೆಳಗೆ . . . ಘೋರತಪದೊಳ್ ನಿಂದಳ್ (ಗಿರಿಕ. ೯-೩೫ ವ) ; ನಿಟ್ಟಿಸುತಯಿಡಬಲನ ನಿಟಿಲಲೋಚನೆಯು (ಕರಿಕ. ೨೫-೫). [ಸಂ. ನಿಟಿಲಲೋಚನಾ (ನಿಟಿಲ + ಲೋಚನ + –)]

**ನಿಟಿಲಾಂಬಕ** (ನಾ). = ನಿಟಿಲತಟನಯನ ೨ : ನಿಂಬಿಯಕ್ಕನೆನಲ್ಕೆ ಶರಣಪದಾಂಬುರುಹಸೇವಾನಿರತೆ ನಿಟಿಲಾಂಬಕಧ್ಯಾನಪ್ರಮತ್ತೆ (ಬಸವು. ೨೪-೧). [ನಿಟಿಲ + ಅಂಬಕ]

**ನಿಟಿಲಾಕ್ಷ** (ನಾ). ಹಣೆಗಣ್ಣ ; ಶಿವ : ಅಕ್ಷಯಂ ನಿಟಿಲಾಕ್ಷನಭವಂ ದಕ್ಷ ದಕ್ಷಮುಖಕ್ಷಯಕ್ಷಮನುಕ್ಷಗಂ ಪ್ರತ್ಯಕ್ಷವಾಗಿ ಸಮಕ್ಷದಲಿ ನಿಂದು (ಬಸವು. ೨೭-೩೨) ; ಕುಟಿಲಕುಹಕವ ಮಾಡದಾತ ಭಕ್ತ ನಿಟಿಲಾಕ್ಷನ ಧ್ಯಾನದಲ್ಲಿ ಇದ್ದಾತ ಭಕ್ತ (ಅಖಂಡೇ. ೭೬-೫೩). [ಸಂ. (ನಿಟಿಲ + ಅಕ್ಷಿ + –)]

**ನಿಟಿಲಾಕ್ಷಿ,** ನಿಟಿಳಾಕ್ಷಿ (ನಾ). ಹಣೆಯಲ್ಲಿರುವ ಕಣ್ಣು ; ಫಾಳನೇತ್ರ : ನಯನಯುಗದಿಂ ಜಗವ ಪೊರೆದು, ನಿಟಿಲಾಕ್ಷಿಯಿಂ ಲಯವಡಿಸುವುದದೇನು ಶಿವಯೋಗಲೀಲೆ ? (ಮಂಕುಕ. ೬೧೩). **ನಿಟಿಳಾಕ್ಷಿ :** ಹರನ ನಿಟಿಳಾಕ್ಷಿವಹ್ನಿ × × ಣಂ ಮುರಹರನ ಚಕ್ರಮುಬ್ಬ ಜಪಾಶಂ . . . ಎನಿಪುದು ಧುರದೊಳ್ಪುನ್ನ ಪರ್ಗೆ ಗೋನಭೂಪನ ಕರವಾಳ್ (ಎಕ. VIII, ಸಾಗರ. ೧೦೯-೧೭ ; 1042). [ನಿಟಿಲ + ಅಕ್ಷಿ]

**ನಿಟಿಲಾಗ್ರ** (ನಾ). ಹಣೆಯ ಮೇಲುಭಾಗ : ನಿಟಿಲಾಗ್ರದೊಳ್ ಪೊದಟ್ಟಂಜನರೇಖೆ ಕಣ್ಗೆಸೆಯೆ (ಸುಕುಮಾ. ೧೦-೩೮). [ನಿಟಿಲ + ಅಗ್ರ$_1$]

**ನಿಟಿಲು$_1$** ‘ನಿಟಿಲ್’ ನೋ.

**ನಿಟಿಲು$_2$** ‘ನಿಡಿಲು’ ನೋ.

**ನಿಟಿಲೇಕ್ಷಣ** (ನಾ). = ನಿಟಿಲಾಕ್ಷಿ : ಕೋಪಂ ನಾಡೆಯುಮೊತ್ತರಿಸಿ ನೀಳ್ದು ನಿಟಿಲೇಕ್ಷಣದೊಳ್ ಕೂಡೆ ಬಳೆಬಳೆದು ಸುಳಿಸುಳಿದೀಡಿಱಿದೊಳಗೊಳಗೆ ಘುಳುಘುಳಿಸಿ ಕುದಿದಾಗಳ್ (ಗಿರಿಕ. ೮-೪೬). [ನಿಟಿಲ + ಈಕ್ಷಣ]

**ನಿಟಿಳ** ‘ನಿಟಿಲ’ ನೋ.

**ನಿಟಿಳತಟ** ‘ನಿಟಿಲತಟ’ ನೋ.

**ನಿಟಿಳಾಕ್ಷಿ** ‘ನಿಟಿಲಾಕ್ಷಿ’ ನೋ.

**ನಿಟ್ಟಡಕಿಲ್,** ನಿಟ್ಟಡಕಿಲು (ನಾ). ಎತ್ತರವಾದ ರಾಶಿ; ಎತ್ತರವಾಗಿ ಒಂದರ ಮೇಲೊಂದರಂತೆ ಇಟ್ಟಿರುವುದು : ಕಟ್ಟಾಳ್, ನಿಟ್ಟಡಕಿಲ್ (ಭಾಷಾಭೂ. ೧೪೦ ಉದಾ) ; ಟಕಾರಕ್ಕೆ—ನಿಟ್ಟಡಕಿಲ್, ನಿಟ್ಟಕೆರ್ (ಶಮದ. ೧೮೧ ಪ್ರಯೋ). **ನಿಟ್ಟಡಕಿಲು :** ಪಕ್ಕದ ನಿಟ್ಟಡಕಿಲ ಮೇಲಡ್ಡಣದ ಮೇಗೆ ದಾಡಿಯನ್ನಿರಿಸಿ (ಮಂತ್ರಶ. ೧೫೪-೪). [ನಿಟ್ (<ನಿಡಿದು$_1$) + ಅಡಕಿಲ್]

**ನಿಟ್ಟಡಕಿಲು** ‘ನಿಟ್ಟಡಕಿಲ್’ ನೋ.

**ನಿಟ್ಟಡಕಿಲ್ವಲೆ** (ನಾ). ಒಂದು ಬಗೆಯ ಬಲೆ : ತಡಿಕೆವಲೆ ಕಣ್ಣವಲೆ ನಿಟ್ಟಡ[ಪಾಠಾಂ. ಡಿ,ಡು]ಕಿಲ್ವಲೆ ಗೂಂಟವಲೆ . . . ನಿಡುವಲೆಗಳೊಪ್ಪಿದವು (ಗಿರಿಕ. ೧-೮೦). [ನಿಟ್ಟಡಕಿಲ್ + ಬಲೆ$_1$]

**ನಿಟ್ಟಡಿ** (ನಾ). ದೂರದೂರಕ್ಕೆ ಹೆಜ್ಜೆ ಯಿಡುವುದು ; ದಾಪುಗಾಲು: ನಿಟ್ಟಡಿಯಿಂದ ಹೋಗಿ, ಚೆನ್ನನಿಗೆ ನಿಂತು, ಆತನಿಗೆ ನಡುಗಣ್ಣಾಗಿದ್ದು, ಮಿಕ್ಕಿನವರ್ಗಳನ್ನೆಲ್ಲ ಪರಿಕಿಸಿ (ಮಂತ್ರಶ. ೮೨-೪). [ನಿಟ್ (<ನಿಡಿದು$_1$) + ಅಡಿ$_1$]

**ನಿಟ್ಟೆಯಿಸು** ‘ನಿಟ್ಟಿಸು’ ನೋ.

**ನಿಟ್ಟೆಯ್ದೆ,** ನಿಟ್ಟೆಯ್ದೆ, ನಿಟ್ಟೈದೆ (ನಾ). ಬಹುಕಾಲ ಸುಮಂಗಲಿಯಾಗಿರುವವಳು,— ಮುತ್ತೈದೆಯಾಗಿರುವವಳು ; ದೀರ್ಘಸುಮಂಗಲಿ : ಅಯ್ದುಂವದನನ ಕಾಂತೆಯನೆಯ್ದು . . . ಮುತ್ತಯ್ದೆಯೆ ನಿಟ್ಟೆಯ್ದೆ [ಪಾಠಾಂ. ಟ್ಟೈದೆ]ಯೆ ನೆಱೆಯಯ್ದೆಯೆ ಸಲೆಯಯ್ದೆಯೆಂದು ಪರಸುತ್ತಿರ್ದರ್ (ಗಿರಿಕ. ೧೦-೯೭) ; ದ್ವಿತ್ವಕ್ಕೆ— ನಿಟ್ಟೆಯ್ದೆ, ನಿಟ್ಟೆಸಟ್ (ಶಮದ. ೧೮೦ ಪ್ರಯೋ). **ನಿಟ್ಟೆಯ್ದೆ :** ‘ನಿಟ್ಟೆಯ್ದೆತನ’ ಪರಾ. **ನಿಟ್ಟೈದೆ :** ಜಗವೆಲ್ಲ ಅಱಿಯಲು

ಎನಗೊಬ್ಬ ಗಂಡನುಂಟು ಆನು ಮುತ್ತೈದೆ ಆನು ನಿಟ್ಟೈದೆ (ಬಸವ. ೫೦೩) ; ಒಪ್ಪುವ ನಿಟ್ಟೈದೆಯರೊಗ್ಗು ರಂಜಿಸಿದುದು (ಉದ್ಭಟ. ೪-೫೪) ; ನಿಟ್ಟೈದೆ ನುಡಿದಳೆಲೆ ರಾಯ ಜಾತಿಸ್ಮರಣೆ ಹುಟ್ಟಿದೇ ನಿನಗೆ ಕೇಳೆಂದು ಪೂರ್ವದ ಕಥೆಯ ಬಿತ್ತರಿಸಿದಳು ಮಾನಿನಿ (ವೀಶೈಪು. ೨-೬-೧೬); ಕಟ್ಟೆ ವಿಷಯಾಪಾಶದಿಂ ನಿಟ್ಟೈದೆಯರ ಪಟ್ಟಗಟ್ಟಿ ಜಾರರ ದೇಶ ಕಟ್ಟೆ ವೀರರ . . . ಹುಟ್ಟುಗಡಲೊಳ್ ತಿರುಗಿಸುವ ಕಾಮನಖಿಳಜನರ (ಷಶಿಲ. ೨-೨೭).

**ನಿಟ್ಟೈಯ್ದೆಯಾಗು, ನಿಟ್ಟೈದೆಯಾಗು** = ದೀರ್ಘಸುಮಂಗಲಿಯಾಗಿ ಬಾಳು ; ಬಹುಕಾಲ ಮುತ್ತೈದೆಯಾಗಿರು : ನಿಟ್ಟೈಯ್ದೆಯಾಗು ಪತಿಯೊಳ್ ತೊಟ್ಟನನುವಶೆಯಾಗು ಶೀಲವತಿಯಾಗು . . . ನೀನೆಂದಿಟ್ಟರ್ ಸೇಸೆಯಂ (ಕಾವ್ಯಾವ. ೨೨೩); ಕಣೆದಿರುವ ಸೆಳೆವಂಗುಲಿಯ ಪರ್ವದಾ ನಿಮ್ನವಣೆಯರ ಘನೋನ್ನತ ಸುರೇಖೆಯುಳ್ಳವಳು ಧಾರುಣಿಯಲ್ಲಿ ನಿಟ್ಟೈದೆಯಾಗಿ ಬಾಳ್ವಳು ಕಣಾ (ವೀಶೈಪು. ೪-೨೩-೪೦).

[ನಿಟ್(<ನಿಡಿದು$_1$) + ಅಯ್ದೆ$_2$]

**ನಿಟ್ಟೈಯ್ದೆತನ,** ನಿಟ್ಟೈಯ್ದೆತನ (ನಾ). ಬಹುಕಾಲ ಸುಮಂಗಲಿಯಾಗಿ ಬಾಳುವುದು ; ಮುತ್ತೈದೆಯಾಗಿರುವುದು : ಭೂವನಿತೆಗೇಱುಂಜವ್ವನಂ ರಾಜ್ಯಲಕ್ಷ್ಮಿಗೆ ನಿಟ್ಟೈಯ್ದೆತನಂ ಜನಕ್ಕೆ ಪಸರಂ ತೇಜಕ್ಕೆ ಕಾಯ್ಪಾತನೆಂಥೆ ಗುಣಂಗೊಳ್ವುದು (ಎಇ. XIII, ೪೪-೩೨ ; 1112). **ನಿಟ್ಟೈಯ್ದೆತನ** : ನಿಟ್ಟೈಯ್ದೆತನಂ ತನಗಳವಟ್ಟೇಚಲದೇವಿ ನೃಪಂ ನರಸಿಂಹಂಗಾದಳು ಪಟ್ಟಮಹಾದೇವಿಯೆನಲು ನೆಟ್ಟನೆ ತತುಕಾಂತೆಯಂತೆ ನೋಂತರುಮೊಳರೇ (ಮೈಆರಿ. ೧೯೩೦, ೧-೩೧ ; ಸು. 1180).

[ನಿಟ್ಟೈಯ್ದೆ + -ತನ]

ನಿಟ್ಟೆಯ್ಸು (ಕ್ರಿ). ನೆಟ್ಟಗಾಗು ; ನೇರವಾಗು ; (ಮರವಟ್ಟು) ಸೆಡೆತುಕೊಳ್ಳು : ಕಾಪಿನಾಳ್ಗಳ್ ಬಳಿಗೆ ಬಪ್ಪನಿತರೊಳ್ ಕೆಂಜೊಡರ್ ವೆಳಗಿನೊಳ್ ಕಂಡುದಾಳ್ ಕಂಡುದಾಕೃತಿ, ಪೆಣನ ಮಾಳ್ಕೆಯಿಂ, ನಿಮಿರಿ ನಿಟ್ಟೆಯ್ಸಿ (ಶ್ರೀರಾಮಾ. ೬೦೩-೭೬). [<ನಿಡಿದು$_1$]

**ನಿಟ್ಟೆರಿಸು** (ಕ್ರಿ). = ನಿಟ್ಟೆಯ್ಸು : ಬಾಹುಗಳು ನಿಟ್ಟೆರಿಸಿದುವು (ದೌಲತ್. ೭೧). [ ? ]

**ನಿಟ್ಟೆರುಳಿ** (ನಾ). ದೊಡ್ಡ ಅರಳಿಮರ,—ಅಶ್ವತ್ಥವೃಕ್ಷ : ಬಲಗೈ ನಡದು ಕಲ್ಮಲರುಳಿ ಕೊಲಿಗನ್ಮೇಲ ಕಾರಜಿ ಎ ಇಟ್ಟಗೆ ಸೊಣೆ ಎ ಬಡಗೈ ನಿಟ್ಟರುಳಿ ಎ ಕರಡಿಗುಱುಕಿ ಮೇಲ ಕೋಡುಙ್ಗಲ್ (ಎಕ. X(s), ಚಿಕ್ಕಬ. ೬೬-೨೦ ; 850).

[℗ ಇದು 'ನಿಟ್ಟೆರಳಿ' ಎಂಬುದರ ಅಪಲಿಖಿತವಿರಬಹುದು]

**ನಿಟ್ಟೆವಧಿ** (ನಾ). ಬಹುಕಾಲ ; ದೀರ್ಘಾವಧಿ: ನೆಟ್ಟನಾ ಧರ್ಮಾರ್ಥಕಾಮಮೋಕ್ಷಂಗಳಂ ಮೆಟ್ಟಿ ಹರ್ಯಜರಿಂದ್ರಪದವನೊದೆದಾವಗಂ ನಿಟ್ಟವಧಿ ವಿಧಿಗಳ ಶಿರೋಮಧ್ಯದೊಳ್ ನಿಂದು ಬಿನದಿಸುತ್ತ (ಭಾವಚಿಂ. ೧-೪). [ನಿಟ್(<ನಿಡಿದು$_1$) + ಅವಧಿ]

**ನಿಟ್ಟೆಱೆ** (ನಾ). ೧. ಎತ್ತರವಾದ ಬಂಡೆ ; ಹೆಬ್ಬಂಡೆ : ಕಗ್ಗಲ್ಲ ಸೆರೆಯ ನಿಟ್ಟೆಱೆ ಅದಱ ತದನಾಂತರ ಕುಂಟೆಯ ತಡಗೋಡ ಮೇಕೆಱೆಯಾಲ ಅದಱ ತದನಾನ್ತರ ಮುಕುಟ ಆಲದ ಹಾಳ ಅದರ ತದನನ್ತರ ಚೈಕೋಲ ತಾಟಮರ (ಸೌಇಇ. IX-i, ೪೧-೨೪ ; ಸು. 11ನೆಯ ಶತ).

[ನಿಟ್(<ನಿಡಿದು$_1$) + ಅಱೆ$_4$]

**ನಿಟ್ಟಾಣೆ** (ನಾ). ಉದ್ದವಾದ ಮೊಳೆ ; ದೊಡ್ಡ ಮೊಳೆ : ವಿಜಯನಾರಸಿಂಹನ ಕಟಿಬಂಧದೊರೆಯನ್ನು ಕಳಲ್ಚಿ, ಪುದಿಯ ಗೋಡೆಯ ನಿಟ್ಟಾಣೆಗೆ ನೇಲ್ದುಗುಳ್ಚಿ (ಮಂತ್ರಶ. ೧೪೦-೧೧).

[ನಿಟ್(<ನಿಡಿದು$_1$) + ಆಣೆ$_3$]

**ನಿಟ್ಟಾಯ** (ನಾ). ಅಧಿಕವಾದ ಪರಾಕ್ರಮ : ಶ್ರೀಯಂ ಕೂಂಸಲಾಜ್ಞೆಯಂ ಪಸರಿಸಲ್ . . . ದುರಿತಮಂ ನಿರ್ಮೂಲಿಸಲ್ ನಿಂದ ನಿಟ್ಟಾಯಮಂ ನಿಟ್ಟಿಸಲೊಳ್ಪನಪ್ಪ ತಣಿಸಲ್ಪೇಟ್ಪಂಗೆ ಬೇಟ್ಪೀ ಸುಖೋಪಾಯಂ ತ್ವಚ್ಚರಣಪ್ರಣಾಮಮಱಿದೆಂ ಶ್ರೀಮಜ್ಜಿನಾಧೀಶ್ವರಾ (ಲೀಲಾವ. ೩-೭೯) ; ನಿಡಿದು ಆಯಂ, ನಿಟ್ಟಾಯಂ (ಶಬ್ದಾನು. ೩೩೯ ಪ್ರಯೋ). [ನಿಟ್(<ನಿಡಿದು$_1$) + ಆಯ$_3$]

**ನಿಟ್ಟಾಯು** (ನಾ). ೧. ದೀರ್ಘವಾದ ಬಾಳು ; ದೀರ್ಘಾಯುಸ್ಸು. ೨. ದೀರ್ಘಾಯುಸ್ಸನ್ನು ಉಳ್ಳುದು : ಮಾಱುದರಂತವೆ ಕೊಂದ ಪೆಂಪು ಕಟ್ಟಾಯದ ಪೆಂಪು ಶಕ್ರನೊಡನೇಱುದ ಪೆಂಪಿವು ಪೆಂಪುವೆತ್ತು ನಿಟ್ಟಾಯುಗಳಾಗಿ ನಿನ್ನೊಳಮರ್ದಿರ್ದುವು (ಪಂಪಭಾ. ೧೪-೧೭). ೩. ದೀರ್ಘವಾದ ಆಯುಸ್ಸನ್ನು ಉಳ್ಳ ವ್ಯಕ್ತಿ : ನಿಟ್ಟಾಯುವಾಗು ನೀನೆಂದಿಟ್ಟರ್ ಸೇಸೆಯನಗಣ್ಯಪುಣ್ಯಾಂಗನೆಯರ್ (ಕಾವ್ಯಾವ. ೨೨೩). [ನಿಟ್ (<ನಿಡಿದು$_1$) + ಆಯು$_2$]

**ನಿಟ್ಟಾರವೆ** (ನಾ). ವಿಶಾಲವಾದ ತೋಟ,—ತೋಪು : ಇಂದರಗಾವುಣ್ಡನ ಮಗಂ ಬಮ್ಮಿಸೆಟ್ಟಿಗೆ ಬಿನ್ನಪುರಂ ೧೨ಱೊಳಗಣ ಕುಳುವ ನೂರುಂ ನಿಟ್ಟಾರವೆಯುಂ ಅಂತೆರಡೂ ವನಂ ಖಚಾಯ ಎಲೆ ಕುಡುವ ನೂಮ್ಮಡಿಅಯ್ಯಹರಸಂ ಬಮ್ಮಿಸೆಟ್ಟಿಗೆಗೊಟ್ಟ ಶಾಸನದ ಪೊಲದ ಸೀಮೆ (ಎಕ. XI, ದಾವಣ. ೧೯-೧೧ ; 1043).

[ನಿಟ್(<ನಿಡಿದು$_1$) + ಆರವೆ]

**ನಿಟ್ಟಾಲಿ** (ನಾ). ವಿಶಾಲವಾದ ಕಣ್ಣು,—ನೇತ್ರ : ಎನಿತಾನುಂ ಮಱಿದೊಂದನೊಂದಿ ನೆನೆಯುತ್ತಿರ್ದಪಳೆಂಬಂತೆ ಕೊಟ್ಟನೆ ನಿಟ್ಟಾಲಿಗಳಾಟವಚ್ಚಱುದು ವಕ್ಷಸ್ಪಂದನಂ ನಿಂದು . . . ಮರವಟ್ಟೀರಂದ ದಿಂದಿರ್ದಳ್ (ಕುಸುಮಾ. ೧೨-೧೩೧) ; ಮಾರಾಂತ ಸೇನೆಗಳನ್ನೆಲ್ಲ ಅಲ್ಲಕಲ್ಲೋಲ ಮಾಡಿ . . . ಕೊಂದಿಕ್ಕಿದನು. ನಿಟ್ಟಾಲಿಯಿಂದ ನೋಡಿ ಯುಧಿಷ್ಠಿರನನ್ನು ಮುಟ್ಟಬಂದನು (ಭಾಮಣಿ. ೨೭).

**ನಿಟ್ಟಾಲಿಯಾಗು** = **ನಿಟ್ಟಾಲಿಗೊಳ್** : ಅಶ್ವತ್ಥಾಮಂ . . . ಹಸ್ತಿನಪುರದೊಳ್ ಪಾಂಡವರಿರ್ದರೆಗೆತ್ತುಮಲ್ಲಿಗೆ ನಿಟ್ಟಾಲಿಯಾಗಿ ದಾಱಯನಿಟ್ಟು ಮುಟ್ಟೆವಂದು (ಪಂಪಭಾ. ೧೩-೧೦೬ವ) ; ವಿಶ್ವನಂದಿಯುಂ . . . ವಿಹಾರಿಸುತ್ತುಮುತ್ತರಮಧುರೆಗೆ ವಂದು ಮಾಸೋಪವಾಸದ ಪಾರಣೆಯೊಳ್ ಚರಿಗೆವುಗೆ ಕಟ್ಟದಿರೊಳ್ ನಿಟ್ಟಾಲಿಯಾಗಿ ಕೆಂಗಣ್ಮಸಗಿ ಬಂದೊಂದೀಂದ ಪಸು ತನ್ಮುನಿಪತಿಯನಿಱುವುದುಂ (ಶಾಂತಿಪು. ೭-೫೯ ವ).

[ನಿಟ್ (<ನಿಡಿದು$_1$) + ಆಲಿ$_2$]

**ನಿಟ್ಟಾಲಿಗೊಳ್** (ಕ್ರಿ). ಕಣ್ಣನ್ನು ಅರಳಿಸು ; ದಿಟ್ಟಿಸು : ಅಱುಕೆಯ ನಾಯಕರನಱುವತ್ತುಸಾಸಿರ್ವರನೊರ್ವನಂ ಕೊಲ್ವಂತೆ ಕೊಂದು ನಿಟ್ಟಾಲಿಗೊಂಡು ಯುಧಿಷ್ಠಿರನಂ ಮುಟ್ಟೆವಂದಾಗಳ್ (ಪಂಪಭಾ. ೧೨-೧೧೬ ವ). [ನಿಟ್ಟಾಲಿ + ಕೊಳ್$_1$]

**ನಿಟ್ಟಾಸುರ** (ನಾ). ಅತಿ ಭಯಂಕರವಾದುದು : ಸೂಸಿತಬಲಾವ್ಯಂದ ಕೆದಱುದ ಕೇಶಪಾಶದ ತೆಳುವಸುಱ ನಿಟ್ಟಾಸುರದ ಹೊಯ್ಲುಗಳ (ಕುಮ್ಯಾಗ. ೧೨-೫). [ನಿಟ್ (<ನಿಡಿದು$_1$) + ಅಸುರ]

**ನಿಟ್ಟಾಳ್** (ನಾ). ಎತ್ತರವಾದ ಮನುಷ್ಯ : ಪುಣ್ಯದ ಪುರ ಮೆಂಫಿಗೊಡೆಯ ಆರಸಮಿಾಸ್, ಬಲ್ನಿಟ್ಟಾಳ್ (ಪಾರಸಿ. ೩-೬೬).

[ನಿಟ್ (<ನಿಡಿದು$_1$) + ಆಳ್$_3$]

**ನಿಟ್ಟಾಳ** (ನಾ). ಹೆಚ್ಚಾದ ಆಳ ; ತುಂಬ ಆಳ : ಒಂದೆಸತದ ನೆಸೆಗೆನ್ನನ್ ಕಡುಗಟ್ಟಲೆ ಟಾರ್ಟರಸ್ಗೆ ; ಜಗವಿದಱಾ ಕೆಟನೆಲೆಯಾ ಅಡಿನೆಲನಾ ನಿಟ್ಟಾಳಕೆ (ಬದ್ಧಪ್ರ. ೫೭-೧೨೨೧).

[ನಿಟ್ (<ನಿಡಿದು$_1$) + ಆಳ$_1$ (<ಆೞ)]

**ನಿಟ್ಟಿತ** (ಗು). ನೆಲೆ ನಿಂತ; ಸ್ಥಿರಗೊಂಡ; ಸುಪ್ರತಿಷ್ಠಿತವಾದ: ಅಘಹರನು . . . ಜೈಮಿನಿಮುನಿಯ ಕೊಂಡಾಡಿ ನಗುತ ನುಡಿಸಿದನೇನಿವೇನೈ ಸುಗಮಮುಖ ನಿನಗೇಕೆ ನಿಟ್ಟಿತ ನಿಗಮಮತಸುಗಂಧಾಬ್ಧಿಯೆನುತಾ ಮುನಿಯನೀಕ್ಷಿಸಿದ (ಕುವ್ಯಾಅ. ಒರಿಇ. ೩-೪೩).

[<ಸಂ. ನಿಶ್ಚಿತ]

**ನಿಟ್ಟಿದಿರ್** (ನಾ). ನೇರವಾದ ಇದಿರುಭಾಗ; ಕಟ್ಟಿದಿರು: ಕನಲ್ದಾಖುಗಳಗಿದ ವಿಷಂ ದಿನಪನ ನಿಟ್ಟಿದಿರ ತಿಮಿರದಂತಿರೆ ಕಿಡುಗುಂ (ಖಮದ. ೧೨-೩೧). [ನಿಟ್ (<ನಿಡಿದು$_1$) + ಇದಿರ್]

**ನಿಟ್ಟಿರ್** (ಕ್ರಿ). ದೂರದಲ್ಲಿರು: ಮಕ್ಕಳ ತೊಟ್ಟಿಲ ಮೇಲೆ ಕಟ್ಟಿದ ಕೆಂಪಿನ ಹಣ್ಣು ನಿ(ಪ)ಟ್ಟಿರ್ದು ನಿಲುಕಲು ಬಾರದು (ಸರ್ವಪ. ೮೭-೪೮೩).

[<ನಿಡಿದು$_2$ + ಇರ್$_1$]

**ನಿಟ್ಟಿರುಳು** (ನಾ). ದೀರ್ಘವಾದ ರಾತ್ರಿ: ಅರೆವೀದಿಯಲ್ಲಿಯೇ ಮುಂಗಾಳು, ಮುಸುಕಿಸಿತ್ತೆ ದೊರೆಯ ಹೆಜ್ಜೆಯ ಸುಳುವು ತೋರದಲ್ಲಿ! ನಿಟ್ಟಿಸುತ ಕತ್ತಲೆಯ ನಿಟ್ಟಿರುಳಿನಲ್ಲಿಯೂ ಗಟ್ಟಿಸುತೆ ನಿನ್ನನ್ನೆ ಅತ್ತು ಕರೆವೆ (ನಾದಲೀ. ೧೨-೧೭).

[ನಿಟ್ (<ನಿಡಿದು$_1$) + ಇರುಳು (<ಇರುಳ್)]

**ನಿಟ್ಟಿರ್ಕೆ** (ನಾ). ಬಹುಕಾಲದಿಂದಿರುವ ವಾಸಸ್ಥಾನ: ಬಿಣ್ಪೊಟ್, ನಿಟ್ಟಿರ್ದೆ, ನಿಟ್ಟಿರ್ಕೆ (ಭಾಷಾಭೂ. ೧೩೭ ಉದಾ); ಟಕಾರಕ್ಕೆ . . . ನಿಟ್ಟಿಡಕಿಲ್, ನಿಟ್ಟಿರ್ಕೆ (ಶಮದ. ೧೮೧ ಪ್ರಯೋ).

[ನಿಟ್ (<ನಿಡಿದು$_1$) + ಇರ್ಕೆ]

**ನಿಟ್ಟಿಸು, ನಿಟ್ಟಯಿಸು, ನಿಟ್ಟೈಸು** (ಕ್ರಿ). ೧. ನೋಡು; ಕಾಣು: ಬೇಗಂ ತುಡುವ ಬಿಡುವ ಸೂಟ್ಗೆಯ್ಮೆ ವೇಗಂಗಳಂ ನಿಟ್ಟಿಸಲಾರ್ಗಂ ಬಾರದಂತಾಗಸದಳಮಿಸೆ (ಪಂಪಭಾ. ೧೨-೨೦); ಗೃಹಮಿದು ಗೃಹವನಮೆಂಬುದನಾರ್ಗಂ ನಿಟ್ಟಿಸಲ್ಕೆ ಬಾರದು ಪುರದೊಳ್ (ಮಲ್ಲಿಪು. ೨-೬೨); ಸಂಕ್ರಾಂತಿಯಂತೆ ನಿಟ್ಟಿಸಲರಿದಪ್ಪ ಮರುಳಂತೆ ಕೊಂಡಾಡಲರಿದಪ್ಪ ಪರಿವ ತೊಱೆಯಂತೆ ಮಾಣಿಸಲರಿದಪ್ಪ . . . ವ್ರತಪರಿರಕ್ಷಣೋಪಾಯಮಂ ಚಿಂತಿಸುತ್ತಿರ್ದಾಳ್ (ಧರ್ಮಾಮೃ. ೩-೧೮೬); ಕೆಟ್ಟ ಸಂಸ್ಕೃತಿಯೆಂಬ ನಿಟ್ಟೊಡಲ ದಂತಿ ಕಟ್ಟೊಟ್ಟೈಸಲಾರ್ಗಮರಿದೆನಿಪುದಿದನು ನಿಟ್ಟಿಸುವುದಟ್ಟುವುದು ಕಟ್ಟುವುದು ಸಟಸಜನೆ ಮೆಟ್ಟಿ ಸೀಳುವುದು ಪಂಚಾಸ್ಯಮಂತ್ರ (ಸಾನಂಚ. ೧-೪೧); ಸರಲ ಸರಿಯಂ ಸುರಿವಂತಿಸುವವರ್ಗಳ ಕೈಯೊಳ್ ನಿಟ್ಟಿಸಬಾರದು ತುಡುವ ಬಿಡುವ ಪವಣ್ (ಕಬ್ಬಿಕಾ. ೨೬೮); ಬೆಟ್ಟದ ಮೇಗಣಿಂ ಕೆಟಗೆ ಬೀಟ್ಟು ಸುನಿರ್ಝರವಾರಿವೇಗದೋಲೊಟ್ಟಜೆಯಿಂ ಬಪ್ಪ ಬರವೇ ನೆಱೆ ಪೋಪುದು ಪೋಪುದೇ ಕರಂ ನೆಟ್ಟನೆ ಬಪ್ಪುದೆಂದೊಡದಱಸ್ಥಿರಭಾವಮನಾವನೋ ನರಂ ನಿಟ್ಟಿಸಲಾರ್ಪನಂತೆ ಸಿರಿಯಾಗತಿಯುಂ ಗತಿಯುಂ ಸ್ಥಿರತ್ವಮುಂ (ಬಾಧಪು. ೫-೨೩); ಇರುಳು ನಿಟ್ಟಿಸಿದ ಹೆಬ್ಬಾವಿಗೆ ಹಗಲೆ ಬಿದ್ದಂತಾದುದೆಮಗೆ (ಮೋಹತ. ೩೯-೨೦). ೨. ದೃಷ್ಟಿಸಿ ನೋಡು; ನೇರವಾಗಿ ನೋಡು; ಗಮನವಿಡು; ದಿಟ್ಟಿಸು: "ನಿಟ್ಟಿಸು— ನಿರ್ಭರಾಲೋಕೇ" (ಶಮಧಾ); ಅಂಜಲಿಕಾಸ್ತ್ರಮನಮೋಘಾಸ್ತ್ರಧನಂಜಯನಾಕರ್ಣಾಂತಂಬರಂ ತೆಗೆದು . . . ಕಂಧರಸಂಧಿಯಂ ನಿಟ್ಟಿಸಿ (ಪಂಪಭಾ. ೧೨-೨೧೨ ವ); ತುರಗರತ್ನದವಯವಮುಖದೊಳ್ ಮಿಱುಗುವ ಚೆಲ್ವಂ ನಿಟ್ಟಿಸಲಱಿಯದೆ ಬೆಱಗಾಗಿ ನೃಪತಿ ನೋಡುತ್ತಿರ್ದಂ (ಕುಸುಮಾ. ೮-೪೪); ನೆಲನನುಂಗುಟದ ತುಡಿಯೊಳು ಬರೆದು ನಿಟ್ಟಿಸುತ ತನ್ನಡಿಗಳ (ಅಂಜಚ. ೭-೮೩); ಹೊನ್ನ ಪುತ್ತಳಿಯಂತೆ ನಿಂದಿರ್ದ ಕುವರಿಯು ಚೆನ್ನಾಗಿ ಮೊಗವ ನಿಟ್ಟಿಸಿದ (ಮೋಹತ. ೨೫-೩೬); ನಿಟ್ಟಿಸಿದರೆ ಮುತ್ತಮುದುಕಿಗಾದರು ಜುಮ್ಮ್ಮೆದಟ್ಟಿಸುತಿಹುದು ರೂಪವನ (ಭರಚ. ೧-೫೧); ಈ ಪದ್ಯಕರ್ಥವದಾವುದೆನಲ್ . . . ಮೇಲೆ ನಿಟ್ಟಿಸಿ ಕಾಣದೆ ತವೆ ತಲೆಯ ಬಾಗಿ ನುಡಿಯಂಡುಗುವಳಿಗಬ್ಬಿಗಂ ಕವಿಯೆ (ಚಿಬಪು. ೧-೨೭); ನೆಱೆ ಗುಹೆಯಿಂದೆದ್ದ ಸಿಂಹಗರ್ಜನೆಗಳ್ಕಿ ಪರಿದೋಡಿ ಮದಗಜವಿಂಡು ನೆರೆದು ದೂರದಲಿ ನಿಟ್ಟಿಸುವಂತೆ (ಕಂಸವಿ. ೧೪-೯೭). ೩. ನಿರೀಕ್ಷೆ ಮಾಡು; ನಿರೀಕ್ಷಿಸು: ತೆಱಪಂ ನಿಟ್ಟಿಸಿ ಕುರುಪತಿ . . . ಪೊಯ್ಮಲ್ (ಗದಾಯು. ೮-೨೬); ನಾಳೆಯಂ ನಿಲುಕಿ ನಿಟ್ಟಿಪರಿಗೆಲ್ಲ ಕೂಗುತಿದೆ ಕತ್ತಲೆಯ ಕಾವಲಿನ ಕೋಳಿ (೧೪ವಿಂ. ೧೧೯-೧೬). ೪. ಅರಸು; ಹುಡುಕು: ದಿಟ್ಟಿದೆಱೆದು ವಸಂತತಿಲಕೆಯ ನಿಟ್ಟಿಸಿಯೆ ಕಾಣದೆ ವಿಕಲನಾದನು ವಣಿಗ್ವರನು (ಸಾಳ್ವಭಾ. ೧೭-೩೩). ೫. (ಅಲಂ) ಪರಿಶೀಲಿಸು: ಶುಭದಿನ ನಕ್ಷತ್ರ ಯೋಗಕರಣಂಗಳಂ ನಿಟ್ಟಿಸಿ (ಪಂಪಭಾ. ೫-೨೪ ವ); ಪುಟ್ಟಿದನಂ ಪೊಂದದನಂ ನೆಟ್ಟನೆ ಲೋಕೈಕದರ್ಶಿ ತಾನೆನಿಸಿದನಂ ನಿಟ್ಟಿಸಿ ಮನದೊಳು ದುರಿತಘರಟ್ಟನನೆನಗಾಪ್ತನೆಂದು ಭಾವಿಪುದು (ಸಮುಪ. ೧-೭೭); ನೆಟ್ಟನೆ ಕಾಱದ ಕೂಟಂ ಮುಟ್ಟದು ನಾಯುಂ ಧರಾತಳಾಗ್ರದೊಳೆನೆ ಮುಂ ಬಿಟ್ಟು ಬಱಿಕ್ಕೆಳಪವನುಂ ನಿಟ್ಟಿಸುವೊಡೆ ಪಂದೆ ಕಪ್ಪನಾ ನಾಯಿಂದಂ (ಧರ್ಮಾಮೃ. ೭-೨೩೨); ನಿಟ್ಟಿಸಲು ರವಿ ಕಾಣದುದ ಕವಿ ಕಂಡನೆಂಬ ನುಡಿ ಹುಸಿಯಲ್ಲ (ಹಚಕಾ. ೩-೪೦). ೬. ಕಂಡುಕೊಳ್ಳು; ಗುರುತಿಸು: ನಿಟ್ಟಿಸುವುದು ಮೋಕ್ಷಮಾರ್ಗಮಂ ಜಿನಮತದೊಳ್ (ಸಮುಪ. ೩-೬೭); ಸಂಭಿನ್ನನೆಂಬ ವಿನೂತೋತ್ತಮನಂ ನಿಮಿತ್ತವಿದನಂ ಪೇೞೆಂಬುದುಂ ನೋಡಿ ಪಾರ್ಥಿವ ಕೇಳೀ ಭರತತ್ರಿಖಂಡಪತಿ ತಾನಕ್ಕುಂ ವರಂ ನಿಕ್ಕುವಂ ಎಂಬುದುಮದನೆಂತು ನಿಟ್ಟಿಸಲಕ್ಕುಮೆನೆ (ನೇಮಿಪು. ೬-೧೧೧). ೭. ದಯೆಯಿಂದ ನೋಡಿಕೊಳ್ಳು; ಕರುಣೆ ತೋರು; ಕರುಣಿಸು: ಶಶಿಯೇ ನಿಟ್ಟಿಸು ಪುಷ್ಪಬಾಣದರಸೇ ಕೈಗಾಯಿ ತಂಗಾಳಿಯೇ ಪೊಸತಣ್ಪೇ ಕಮನೀಯ ಮಾಧವನೆ ಕೂರ್ಪಿಂದೋವು . . . ಎಂದು ಚಿಂತಿಸುತುಂ ತದ್ವನಿತಾಕದಂಬವಟಲುತ್ತಿರ್ದತ್ತು ತಾಂ ಖೇದದಿಂ (ಉದ್ಭಟ. ೬-೬೩). **ನಿಟ್ಟಯಿಸು**: ೫. ಒಟ್ಟಿದ ನಿರ್ಜರಬಲದೊಳ್ ಕಟ್ಟಿದಿರಾಗಿರ್ದು ನಿಂದರಾರಾರವರಂ ನೆಟ್ಟನೆನಗಱಪವೇಳ್ಕೆನೆ ನಿಟ್ಟಯಿಸಿಯೆ ನುಡಿದನಸುರಕುಲಗುರು ಭರದಿಂ (೧೦ಳ. ೬-೫೬); ನಿಟ್ಟಯಿಪೊಡೆ ಮೆಲ್ಲಡಿಗಿವು ಬೆಟ್ಟದುವಂಬುರುಹಮೆನುತುಮಿಱಿ ಕೆಯ್ದುವನಿಂ ಮುಟ್ಟೆವಣಮೆಂಬ ತೆಱದಿಂ ಮೆಟ್ಟದೆ ಸುರಸತಿಯರಾಡಿದರ್ ಸರಸಿಜದೊಳ್ (ಪಾರ್ಶ್ವಪು. ೧೪-೪೧). **ನಿಟ್ಟೈಸು**: ೩. ವಸಂತನಿದಿರ್ವಂದ ಕೋಕಿಲಂಗಳಂತೆ ಪರಮಾನುರಾಗಂಬಡೆದು ಕೊಟ್ಟೆವೆಂದು ನೆಟ್ಟನೆ ನುಡಿವುದುಂ ನಿಟ್ಟೈಸಿ [ಪಾಠಾಂ. ನಿಶ್ಚಯಿಸಿ, ನಿಶ್ಚೈಸಿ] ಕೇಳ್ದುತ್ಸವಂದಾಳ್ದು (ನಂಬಿರ. ೪-೬೫). ೮. (?): ತುಟ್ಟಿಯ ದಿನಮಂ ಪಣದಿಂದೊಟ್ಟಜೆಯಿಂದಿಂದು(ದ್ವಿ) ಗುಣಿಸಿ ಕೇಳು ಅಂತದುಮಂ ನಿಟ್ಟೈಸಿ ಮಾಸ ತ್ರಿಗುಣಿಸುವೊಟ್ಟಜೆಯಿಂ ತೆಗೆಯೆ ವೀಸಮತ್ತದು ಬರ್ಕುಂ (ವ್ಯವಹಾ. ಉಪಮಾನ ?).

[<ದಿಟ್ಟಿಸು ?]

**ನಿಟ್ಟು$_1$** 'ನೀಡು$_1$' ನೋ.

**ನಿಟ್ಟು$_2$** (ನಾ). ೧. ಚೀಲ ಮೊದಲಾದುವುಗಳನ್ನು ಒಂದರ ಮೇಲೊಂದರಂತೆ ಪೇರಿಸಿ ಇಟ್ಟಿರುವುದು; ಅಡಕಿಲು: ಶಿವಪುತ್ರ ಜೋಳದ ಚೀಲಗಳ 'ನಿಟ್ಟಿ'ನ ಮೇಲೆ ಬೋರಲಾಗಿ ಬಿದ್ದುಕೊಂಡಿದ್ದ (ಬರಹಾ. ೧೭); ನನ್ನ ಧಣೀ ನನ್ನ ಮನ್ಯಾಗ ಚೀಲದ ನಿಟ್ಟು ಹಚ್ಯಾನ (ಬೆಂದಯ. ೬೧); ಜೋಳದ ಚೀಲಗಳ ನಿಟ್ಟು ನಿಮ್ಮ ಮನೆಯೊಳಗೆ ಇರುವದಿಲ್ಲ (ಅಶೋಕ. ೨೩೬). ೨. ದಿಕ್ಕು; ದೆಸೆ; ಕಡೆ: ಅವ ನಿಟ್ಟನೊಳಂ ಐವತ್ತು ಕೋಟಿ ಯೋಜನಮಾಗಿರ್ಕುಂ (ಚಕಟಿ. ೨೯); ಚಾಮರಾಜೇಶ್ವರಸ್ವಾಮಿದೇವಸ್ಥಾನದಲ್ಲಿ ಪಶ್ಚಿಮನಿಟ್ಟಿನ ಕೈಸಾಲೆ

ಲಿಂಗಸಾಲಿನ ಮಧ್ಯದಲ್ಲಿ (ಎಕ. XIV, ಚಾಮುರಾ. ೨೨೭–೪ ; 1853) ; ಭಾರತದ ನಾಲ್ಕು ನಿಟ್ಟಿನಿಂದಲೂ ಕೇಳಿ ಬರುತ್ತಿತ್ತು ಭಾರತದ ರಾಷ್ಟ್ರಗೀತೆ (ಅಕ್ಷಾರ್ಜ. ೧೯೨) ; ನಮ್ಮೂರಿನಿಂದ ನಾಲ್ಕೂ ನಿಟ್ಟಿನಲ್ಲಿ ದಾರಿಗಳು ಹೋಗಿವೆ ಇದರಿಂದ . . . ಹಳ್ಳಿಗೆ ಬೇಕಾಗುವ ವಸ್ತುಗಳು ಬರುವುವು (ಕಪಪು. ೬–೧೩) ; ಈ ಹತ್ತು ವರ್ಷಗಳಿಂದ ನಮ್ಮ ಸಾಹಿತ್ಯದ ಮೋರೆ ಬೇರೆ ನಿಟ್ಟಿಗೆ ತಿರುಗಿದೆಯೆನ್ನಬೇಕು (ತಿರುಗು. ೮) ; ಈ ಎರಡೂ ಧರ್ಮಗಳ ಆಧ್ಯಾತ್ಮಿಕ ಹಿನ್ನೆಲೆಯಿಂದ ಮಹಾತ್ಮರು ಹುಟ್ಟುತ್ತ ಹೋಗುವರೆಂದೂ, ಮಾನವಕುಲಕ್ಕೆ ಒಂದೇ ಪರಮಸತ್ಯವನ್ನು ಬೇರೆ ಬೇರೆ ನಿಟ್ಟುಗಳಿಂದ ನಿಲುಕಿಸಬಹುದೆಂಬುದನ್ನು ಸಾರಿ ಹೇಳುವರೆಂದೂ ಭವಿಷ್ಯ ನುಡಿಯಬಹುದಾಗಿದೆ (ತತ್ವಪ್ರಾ. ೫೯೭) ; ಪ್ಲಾಟಿಯದ ನಿಟ್ಟುಗಳ ಮೆತ್ತುವುದು ನೆತ್ತರಿನ್ ಡೋರಿಕರ ಕಯ್ಯಾಟ (ಪಾರಸಿ.೩೦–೭೦೩) ; ಹುಟ್ಟು ನಿಟ್ಟು ಗೊತ್ತಾಗಿದ್ದವನಾಗಿದ್ದರೆ, ಅಂತಹವನನ್ನು ನಮ್ಮ ಮನಸ್ಸಿನಲ್ಲಿ ಹೊಗಿಸಿ ಧ್ಯಾನಿಸಬಹುದು (ದೇವೀಚಾ. ೫೪) ; ಹೊಸತೇನು ಇಲ್ಲ ಇದರಲ್ಲಿ ಅಹುದು ಅಗಿಲ್ಲ ಗುಟ್ಟುರಟ್ಟು ತಮ್ಮೊಳಿವೆ ಗುರುವು ತಂತಮಗೆ ಎಂಬೆ, ಪರಮಾತ್ಮ ಎಲ್ಲ ನಿಟ್ಟು (ಮುಕ್ತಕಂ. ೧೫–೨). ೩. ಗುರಿ ; ಉದ್ದೇಶ : ಇದರಲ್ಲಿ ಅದಾವ ಕಟ್ಟೊ ಇಲ್ಲ, ನಿಟ್ಟೊ ಇಲ್ಲ (ಗೊಲ್ಲೊ ಥಾ. IX, ಮುನ್ನುಡಿ) ; ಗಿಡ ಗುಲ್ಮ ಕೆವರು ತಿಟ್ಟು ಎನ್ನದಿದ ಕೊಂದು ನಿಟ್ಟು (ಗಣೇಶ. ೩೯–೮). ೪. ಕಟ್ಟಳೆ ; ನಿರ್ಬಂಧ : ಹೀಗೆ ನಿಯಮದ ನಿಟ್ಟು ಕಡಮೆಯಾಗಿ . . . ಈ ಸಮಾಸನಿಯಮದ ಕಡಿವಾಣ ಕಡಿದು ಹೋಗಿರುವುದು ಸ್ಪಷ್ಟವಾಗಿರುವ ವಿಷಯ (ಸಂಶೋಧ. ೮೨). 'ಕಟ್ಟುನಿಟ್ಟು' ಪರಾ. ೫. ಒಂದೇ ಘಟಕವಾದುದು ; ಒಂದೇ ರೀತಿಯಾದುದು : ಬಡಗಲ ನಿಟ್ಟು ೧೩೬ ೪೧೧ ನೀಳ ಮಾರೂ ೫೦೯ ಕೆನೆಗಳೂ ಈ ಮೇರೆಗೆ ಅಳತೆಮಾಡಿ (ಚಾಮುವಂ. ೮೮) ; ಕಛೇರಿಯ ಕಟ್ಟಡಕ್ಕೆ ಹೋದೆವು. ಅದು ಒಂದೇ ಒಂದು ದೊಡ್ಡ ನಿಟ್ಟು (ಚೆಂಗಾಳ್ಳ. ೩೧೭). ೬. ಗುತ್ತನಾಗಿರುವುದು ; ಅಳತೆಗೆ ಸರಿಯಾಗಿರುವುದು (?) : ಹರಡೇಕಂಕಣ ಕಮಲಾದೇವೀ ಒಂಕೀ ಚಾಪೂರೀ ನಿಟ್ಟೀನೊಳಗೇ ಕುಪುಸಾವೂ (ಹುಟ್ಟಹ. ೧೫೩).

ನಿಟ್ಟಿನ ಸೂಡು, ನಿಟ್ಟುಸೂಡು = (?) : ದೇವಸ್ಥಾನದ ದ್ವಾರಪಾಲಕರ ಮುಂಭಾಗದಲ್ಲಿ ಭದ್ರಬಾಗಿಲ ಕೈಸಾಲೆಗೆ ಪೂರ್ವದಲ್ಲಿ ಇರತಕ್ಕ ೯ ಅಂಕಣದ ನಿಟ್ಟಿನ ಸೂಡು ೩ಕ್ಕೆ ೨೭ ಅಂಕಣಗಳ ಕಲ್ಲುಮಂಟಪವನ್ನು ಕಟ್ಟಿಸಿ (ಮಹಾಪಂ. I, ೧೦೦) ; ತ್ರಿನಯನೇಶ್ವರಸ್ವಾಮಿ ದೇವಸ್ಥಾನದ ದ್ವಾರಪಾಲಕರ ಮುಂಭಾಗ ಭದ್ರ ಬಾಗಿಲ ಕೈಸಾಲೆಗೆ ಪೂರ್ವ ಅಂಕಣ ನಿಟ್ಟುಸೂಡು ೩ಕ್ಕೆ ೨೭ ಅಂಕಣ ಕಲ್ಲುಮಂಟಪವನ್ನು ಕಟ್ಟಿಸಿ . . . ನಿಲ್ಲಿಸಿದರು (ಚಾಮುವಂ. ೯೫). **ನಿಟ್ಟು ಹಾಕು** = ಒಂದರ ಮೇಲೊಂದರಂತೆ ಸಾಲಾಗಿರಿಸು ; ಪೇರಿಸಿಡು : ಮೆಣಸನ್ನು ಚೀಲಗಳಲ್ಲಿ ತುಂಬಿ ಮಳಿಗೆಗಳಲ್ಲಿ ನಿಟ್ಟು ಹಾಕಿದ್ದರು (ಪ್ರವಾಇ. II, ೧೯೭).

**ನಿಟ್ಟುಡುಗೊಱೆ** (ನಾ). ಅಧಿಕವಾದ ಉಡುಗೊರೆ,–ಬಹುಮಾನ : ನಿಟ್ಟುಡುಗೊಱೆಯಿತ್ತು ನಾಟ್ಯಮಾಲನ ಕೂಡಿ ಕೊಟ್ಟು ಮುಂದವನ ಕಳುಹಿದ (ಭರಚ. ೩೭–೧೫). [ನಿಟ್(<ನಿಡಿದು$_1$)+ಉಡುಗೊಱೆ]

**ನಿಟ್ಟುಪವಾಸ** (ನಾ). ನಿಷ್ಠೆಯಿಂದ ಕೂಡಿದ ಉಪವಾಸ ; ಕಟ್ಟುನಿಟ್ಟಾಗಿ ಆಚರಿಸುವ ಉಪವಾಸ : ಗಂಗೋದಕ ಸಹ ನಾನು ಬಾಯಿಗೆ ಹಾಕುವುದಿಲ್ಲ, ನಿಟ್ಟುಪವಾಸ ! ಈಗ ಹತ್ತು ವರುಷಗಳಿಂದ ನಡೆಸಿಕೊಂಡು ಬರುತ್ತಿದೇನೆ (ಮಹಾಗ. ೧೪೪). [<ನಿಟ್ಟಿ+ಉಪವಾಸ]

**ನಿಟ್ಟುಪಾಸ** (ನಾ). ದೀರ್ಘಕಾಲದ ಉಪವಾಸ : ಅನಿತಱಿ ಕೂಱಿ ಹುಟ್ಟದೆ ನಿಟ್ಟುಪಾಸದೊಳೇಳುದಿನವಿರಲು (ಬಸವು. ೨೭–೧೬). 'ಕಟ್ಟುಪಾಸ' ಪರಾ. [ನಿಟ್(<ನಿಡಿದು$_1$)+ಉಪಾಸ]

**ನಿಟ್ಟುರ, ನಿಟ್ಟೂರ, ನಿಷ್ಟುರ, ನಿಷ್ಟೂರ, ನಿಷ್ಠೂರ** (ನಾ). ೧. ಕಠಿನತೆ ; ಕಠೋರತೆ ; ನಿಷ್ಠುರತೆ : "ಹೆಲ್ಲಣೆಯಿಂದುಂ ನಿಟ್ಟುರಮೆಂದುಂ ನಿಷ್ಠುರಂ" (ಕಶಸಾ.೬೭–೪೯೯) ; "ಹೆಲ್ಲೆ ಜೆ ನಿಟ್ಟುರ ನಿಷ್ಠುರಂ" (ಕವಿಕಂ. ೨೦೩) ; ಸುರಿವ ಮದಂ ಮಳೆ . . . ದಂತಂ ನಿಟ್ಟು[ಪಾಠಾಂ. ಪ್ಪು]ರದಿಂದೆಱಗುವ ಸಿಡಿಲಾಗಿರೆ ಕಾರ್ಗಾಲದವೊಲಿರ್ದುವಲ್ಲಿಯ ಕರಿಗಳ್ (೧೦ಕ. ೨–೭೬) ; ಪುಟ್ಟಿಸಿದನೇಕೆಯೊ ವಿಧಿ ನಿಟ್ಟುರದಿಂ ಲೋಕದೊಳ್ (ಪುಷ್ಪವು. ೧–೫೧) ; ನಿಷ್ಠುರ–ನಿಟ್ಟುರ ; ಪಿಷ್ಟ—ಪಿಟ್ಟು, ಹಿಟ್ಟು. (ಶಮದ. ೨೪೩ ಪ್ರಯೋ) ; ಉರವಣಿಸಿ ಬಿಗಿದ ಬಿಲ್ಲಂಬುಗಳ ಪಿಡಿದು ನಿಟ್ಟುರದೀಟಗಳನಾಂತು ಲೌಡಿಗಳನಕ್ಕಱಿಂ ತಿರುವುತಿಹ ವೀರ ಶಿವದೂತರ್ಕೈತಂದರಾಹಾಹಾ ಬೊಬ್ಬಿಱಿದು ಕೂಡೆ (ವೀಶೈಪು. ೨–೭–೩೦) ; ಕಟ್ಟಳದಿಂ ನಿಟ್ಟುರವೊಂದಿ ಪಟ್ಟಣಕೆ ಕೈಯಿಟ್ಟಂ ಕರಂ ಬಿಟ್ಟದಂ (ಚಕವಿ. ೨–೧೦೨). ೨. ಕಠೋರವಾದ ಮಾತು ; ಕ್ರೂರನುಡಿ : ಕಟ್ಟುಱದೊಳ್ ಬಿಟ್ಟತ್ತಿನೆ ನಿಟ್ಟುರಮಂ ನುಡಿದು (ಚಿಕವಂ. ೬೭–೨೧). ೩. ನಿರ್ದಯನಾದ ವ್ಯಕ್ತಿ ; ಕಠಿಣಮನಸ್ಕ : ನಾಣಿಲಿ ನಿಟ್ಟುರಂ ಸಿತಗ ನಾಟವಿಟಂ . . . ನಿನಗೆ ಕೂರದರೊಳ್ ಬೆರಸಿರ್ಪಂ (ಲೀಲಾವ. ೨–೧೨೩).

**ನಿಟ್ಟೂರ** : (೪). **ನಿಷ್ಟುರ** : ೪. ನಿಂದೆ ; ಅಪವಾದ : ಕಷ್ಟ ಪಡಲಾರೆ, ನಾ ಕಾನನದೊಳಿರಲಾರೆ ; ನಿಷ್ಟುರವು ಇದ್ದ ಕಡೆ ನಿಲಲಾರೆನು (ಕಪವು. ೫೧). **ನಿಷ್ಠೂರ** : ೧. ಎದುರಾಳಿನ ಸ್ವಭಾವವನ್ನಾಗಲಿ, ಯೋಗ್ಯತೆಯನ್ನಾಗಲಿ ಲಕ್ಷಿಸದೆ ನಿಷ್ಠೂರವೆಂದು ಹಿಂತೆಗೆಯದೆ ತನ್ನ ಅಭಿಪ್ರಾಯವನ್ನು ಖಂಡಿತವಾಗಿ ಹೇಳುವುದು (ಕಾಂಪೂಜ. ೨೬). **ನಿಷ್ಠೂರ** : ೨. ಅಂದು ನಿಮ್ಮ ಸಮಕ್ಷದಲ್ಲಿ ಅವನನು ಆ ಬಗೆ ನಿಷ್ಠೂರಗಳನು ನುಡಿದು . . . ಹೋದೆನಲ್ಲ (ವಚಕಾ. ೨೬). ೪. ನನಗೂ ಈ ನಿಷ್ಠೂರ, ಕೆಟ್ಟ ಹೆಸರು ತಪ್ಪುತ್ತಿತ್ತು (ಮಹಾಗ. ೧೫೩).

[<ಪ್ರಾ. ಣಿಟ್ಠುರ./ಸಂ. ನಿಷ್ಠುರ]

**ನಿಟ್ಟುರಗೈ** (ಕ್ರಿ). ಖಂಡಿತವಾಗಿ ಮಾತನಾಡು ; ನಿಷ್ಠುರವಾಗಿ ನುಡಿ : ಮುನಿಯದಿರು ಮಂಗುಳಾಸರಿಂದ ನಿಟ್ಟುರಗೈದು ಮನವ ಕದಡೆನಿಸದಿರು . . . ಇನನೇಳ್ವ ಸಮಯಕೈತಹುದೆ ಎಂದು ಸಖಿಯುಳಂ ಬಿನದದಿಂ ಕಳುಹಿದಳ್ (ವೆಂಕಾರಾ. ೫–೨–೪೦).

[ನಿಟ್ಟುರ+ಗೈ(<ಕೆಯ್$_1$)]

**ನಿಟ್ಟುರದನಿ** (ನಾ). ಕಠೋರವಾದ ಧ್ವನಿ ; ಕರ್ಕಶವಾದ ಶಬ್ದ : ಪಟ್ಟಿಗೆ ಪಟ್ಟ ಕೋ ಎನುತ ಮಸ್ತಕದಲ್ಲಿ ಕುಟ್ಟಿದ ಗದೆಯ ಗಾಯದಲಿ ಕುಟ್ಟಿದ ನಿಟ್ಟುರದನಿಗೆ ಖಾತಿಯಲಿ ಕಂಗೆಟ್ಟುದು ಸುರ ನಿಶಾಚರರು (ಮೋಹತ. ೧೨–೬೩). [ನಿಟ್ಟುರ+ದನಿ$_1$]

**ನಿಟ್ಟುರಿಗೊಳ್** (ಕ್ರಿ). (?) : ನಾಲ್ವತ್ತೆಣ್ಟಾವುದಪರಿಪ್ರಮಾಣ ಕುರುಕ್ಷೇತ್ರದೊಳೆಲ್ಲಿಯುಂ ದುರ್ಯೋಧನನಂ ಅಱಸಿ ಕಾಣದೆ ವಿಸ್ಮಯಂಬಟ್ಟವನ ಬಿಟ್ಟ ಬೀಡಿಂಗೆ ನಿಟ್ಟುರಿಗೊಂಡು . . . ಕುರುರಾಜದ್ವಾರೋಪಾಂತಮನೆಯ್ದಿವಂದಾಗಳ್ (ಗದಾಯು. ೬–೨೮ ವ).

[Pಇದು 'ನಿಟ್ಟುವರಿಗೊಳ್' ಎಂಬುದರ ಅಪಲಿಖಿತವಿರಬಹುದು]

**ನಿಟ್ಟುರಿಸು** (ಕ್ರಿ). ನಿಷ್ಠುರ ಮಾಡು ; ನಿಂದಿಸು ; ಆಕ್ಷೇಪಿಸು : ಯಾತರಿಂದೊಂದು ದಿನದಲ್ಲಾದಲುಭಯರುಂ ಮಾತಿನಿಂ ನಿಟ್ಟುರಿಸಲದ ಮನದೊಳಿಡದೆ ನಿಜಪ್ರೀತಿಯಿಂ ಕಾಪಿಡಲ್ವೇಳ್ಕುಂ (ವೆಂಕಾರಾ.೨–೨೩–೩೨).

[ನಿಟ್ಟುರ+–ಇಸು$_3$]

**ನಿಟ್ಟುರುಹು** (ಕ್ರಿ). ಪೂರ್ಣವಾಗಿ ಸುಡು,—ದಹಿಸು ; ನಾಶಮಾಡು : ಫಲಪದವ ನೆಲಕೊತ್ತಿ ಮಲ ಮೂರು ನಿಟ್ಟುರುಹಿ ಮೂಲರಿತ ನಿಜದ ನಿರ್ಮಯಲ ಚಿದ್ರೂಪ (ಸಿದ್ಧಪು. ೩೭–೭).

[<ನಿಡಿದು$_2$+ಉರುಹು(<ಉರಿವು$_1$)]

**ನಿಟ್ಟುವಡು** (ಕ್ರಿ). ಸಾಲಾಗಿರು : ವ್ಯೂಹದೊಳ್ ನಿಟ್ಟುವಟ್ಟು [ಪಾಠಾಂ. ನಿಟ್ಟಿಪಟ್ಟಿ] ಮಣಿಮಯಮಂಡನಾಯೋಗದೊಳೊಡಂಬಟ್ಟ ಪಿಡಿಗಳುಮಂ (ಆದಿಪು. ೪-೫೪ ವ). [ನಿಟ್ಟು$_2$ + ಪಡು$_1$]

**ನಿಟ್ಟುವರಿ** (ಕ್ರಿ). ದೂರಕ್ಕೆ ಓಡು, —ಧಾವಿಸು : ನಿಟ್ಟುವರಿಯಲು ಕೂಡೆ ರಥ ಸಾಲಿಟ್ಟು ಹರಿದವು ಬಿಡದೆ ಸುಭಟರು ಮುಟ್ಟಿ ಮೂದಲಿಸುತ್ತ ಹೊಯ್ದರು ಹೊಕ್ಕು ಪರಬಲವ (ಕುಪ್ವಾ ದ್ರೋ. ೧-೫೧). [ನಿಟ್ಟು$_2$ + ಪರಿ$_2$]

**ನಿಟ್ಟುವೊಟ್ಟು** (ಕ್ರಿ). ಸಾಲಾಗಿ ಪೇರಿಸು, —ಅಡಕುಹಾಕು : ಖಾದರ್‌ಖಾನನು . . . ದಂಡಿನ ಸುತ್ತಾ ರಸ್ತು ತುಂಬಿದಂಥ ಗೋಣಿಗಳನ್ನು ಕೋಟೆ ಕಟ್ಟಿದ ಹಾಗೆ ನಿಟ್ಟುವೊಟ್ಟಿ, ಅದರ ಆಶ್ರಯದೊಳಗೆ ಹೊಕ್ಕೊಂಡು, ಸಾಯಂಕಾಲದ ಪರಿಯಂತರ ಜಗಳಮಾಡುತ್ತಿದ್ದನು (ರಾಜೇಂದ್ರ. ೬೦). [ನಿಟ್ಟು$_2$ + ಒಟ್ಟು$_1$]

**ನಿಟ್ಟುಸಿರ್, ನಿಟ್ಟುಸಿರು, ನಿಟ್ಟುಸುರ್, ನಿಟ್ಟುಸುರು** (ನಾ). (ದುಃಖ, ನಿರಾಸೆಗಳಿಂದ) ದೀರ್ಘವಾಗಿ ಬಿಡುವ ಉಸಿರು ; ನಿಡಿದಾದ ನಿಶ್ವಾಸ : ನಿಟ್ಟುಸಿರಿಂ ಕೊಲ್ವಹಿಯುಮುಳುರ್ವ ದಿಟ್ಟಿಯ ನೋಟಂ . . . ಪೆಸಗೊರ್ಳೆ ಕೊಲಲಾರ್ಪ ಖಳನೊಳೆಪೆವಂದವುವೇ (ಪುಸ್ಪಪು. ೧-೫೩) ; ನಿಡಿದು ಉಸಿರ್, ನಿಟ್ಟುಸಿರ್ (ಶಬ್ದಾನು. ೩೩೯ ಪ್ರಯೋ) ; ಪದಪದಂಗಳ ತೊಡರಿ ನಿಟ್ಟುಸಿರ್ಗಳಿಕ್ಕುತ್ತೆ ಮನ್ಮಥನ ಸಾಣೆ ವಿಡಿಪಲಗಿನಂತಲ್ಲಲ್ಲಿ ಮರೆದೊರಗಿದ ಸೊಕ್ಕುಜವ್ವನೆಯರೋ (ವೆಂಕಾರಾ. ೫-೪-೧೯) ; ತಡೆಯದಿಹ ನಿಟ್ಟುಸಿರ್ ಗುರುಗುರಿಸುತಿಹುದು (ಕಾಲೂರ. ೧೭೨-೩೪೯). **ನಿಟ್ಟುಸಿರು** : ಬಾಗಿಹುದು ಬಲುಬಿಲ್ಲು ಕಿವಿವರೆಗಾಗಿ ರಿಪುಬಲ ನಿಮಿಷನಿಮಿಷಕೆ ನೀಗಿಹುದು ನಿಟ್ಟುಸಿರನೆಲೆಭೂಪಾಲ(ಕುವ್ಯಾ ಭೀ. ೯-೧೪); ತಡೆದುದಾ ಬಹಳಾಗ್ನಿ ಕಣದುಗ್ಗಡದ ಧೂಮಾಳಲಿತಶಿಖಿಯನು ಕಡುಹಿನನಿಲಕುಮಾರಕನ ನಿಟ್ಟುಸಿರಿನಾಟೋಪ (ತೊರರಾ. ೬-೧೭-೧೯); ಮಗುವು ನಿರಾಧಾರಾ ಜೆಸರು ವಸುಂಧರಾ ಇಟ್ವಾರಯಾರು ನಿಟ್ಟುಸಿರಿನ ಲೆಕ್ಕಾ ? ಉಸುರಿನ ಲೆಕ್ಕಾ ? (ನಾದಲೀ. ೩೪-೬) ; ಅವಳು ನಿಟ್ಟುಸಿರು ಬಿಟ್ಟು ಇಳಿದನಿಯಲ್ಲಿ ಹೇಳಿದಳು (ಬಾಣಅ. ೨೪೮). **ನಿಟ್ಟುಸುರ್** : 'ನಿಟ್ಟುಸುರ್ವಿಡು' ಪರಾ. **ನಿಟ್ಟುಸುರು** : ವಿರಾಜಿತಸು ಕಂಠವನು ನಾಸಿಕಕೇಱುದುದು ನಿಟ್ಟುಸುರು ನಿಮಿಷಕೆ ಚೀಱುದುದು ಕುರುರಾಯದಳ ಶಲ್ಯಾವಸಾನದಲಿ (ಕುಪ್ವಾ ಶ. ೩-೬೮); ಘರ್ಜಿಸುವ ಸಿಂಹವೋ ಹೆರೆಗಳೆದ ನಿಟ್ಟುಸುರಿನುರಗನೊ ಮೇಱೆನಲು ಸೌಮಿತ್ರಿ ಹಲುಮೊರೆದ (ತೊರರಾ. ೨-೩-೭) ; ರಾಯರು ನಿಟ್ಟುಸುರನ್ನು ದೀರ್ಘವಾಗಿ ಬಿಟ್ಟು ಮೇಜಿನ ಮೇಲೆ ಬಿದ್ದಿದ್ದ ಆಂದಿನ ಪತ್ರಿಕೆಯನ್ನು ನೋಡುತ್ತಾ . . . ಹೇಳಿದರು (ರಾಯಕ. ೮೩); ಹುಟ್ಟಿದಾಗ ಬಾರದ ಇಷ್ಟೊಂದು ಜನವೆಲ್ಲ ನಿಟ್ಟುಸುರ ನೀಡುತ ಬರುವರು ತಾಯಿತಂದೆ ಸುಟ್ಟ ಹೊಟ್ಟೆಯ ತಣಿಸಲು (ಸಿದ್ಧಪು. ೪-೭೯). [ನಿಟ್(<ನಿಡಿದು$_1$) + ಉಸಿರ್$_2$]

**ನಿಟ್ಟುಸಿರಿ** (ನಾ). ನಿಡುಸುಯ್ಯುವವಳು: ನಡುಗುತವಳಪ್ಪಿದಳ್ ನಲ್ಲನಂ ಗಾಳಿಯಿಂ ಬಡಿಗೊಂಡ ಬಳ್ಳಿ ಸಾಲಮನಪ್ಪುವಂತೆವೊಲ್ ಪೊಡರದದಿರೊಸಗರ್ಣ್ಣೆ ನಿಟ್ಟುಸಿರಿ ನೋಡಿದಳ್ (ಸೌನಂದ. ೪-೧೯). [ನಿಟ್ಟುಸಿರು(<ನಿಟ್ಟುಸಿರ್) + -ಇ$_2$]

**ನಿಟ್ಟುಸಿರು** 'ನಿಟ್ಟುಸಿರ್' ನೋ.

**ನಿಟ್ಟುಸಿರುಗರೆ** (ಕ್ರಿ). ನಿಟ್ಟುಸಿರು ಬಿಡು ; ನಿಡುಸುಯ್ಯು : ಕಟ್ಟಕಡೆಗೆ ಒಂದು ನಿಟ್ಟುಸಿರುಗರೆದು, ಕ್ಷಣಕಾಲ ಅವನು ಚೇತನಾವಿಹೀನವಾದ ಕಲ್ಲ ಬೊಂಬೆಯಂತೆ ಸುಮ್ಮನೆ ನಿಂತುಬಿಟ್ಟನು (ಅಂಬಿಕ. ೨೦) ; "ಅದಂತು ಭಯಂಕರವಾಗಿದೆ" ಎಂದವಳು ನಿಟ್ಟುಸಿರುಗರೆದಳು (ಪುನರು. ೨೦೯). [ನಿಟ್ಟುಸಿರು(<ನಿಟ್ಟುಸಿರ್) + ಕರೆ$_2$(<ಕಱೆ$_1$)]

**ನಿಟ್ಟುಸಿರ್ವಿಡು, ನಿಟ್ಟುಸುರ್ವಿಡು** (ಕ್ರಿ). = ನಿಟ್ಟುಸಿರುಗರೆ : ಬಡಬಾನಲಂ ತನ್ನೊಳು ದಿನದಿನದೊಳವಗಡಿಸುತಿರ್ಪುದಂ ಬಹಳ ಜಡತನಂ ತನಗೆ ಬಂದುದಂ . . . ನೆನೆನೆನೆದು ನಿಟ್ಟುಸಿ[ಪಾಠಾಂ. ಸು]ರ್ವಿಟ್ಟು ಸುಯ್ವುತುದಧಿ ತೆರೆಪೆರ್ಚುಗೆಯೊಳಿರ್ದಪುದು (ಜೈಮಿಭಾ. ೬-೨). **ನಿಟ್ಟುಸುರ್ವಿಡು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ನಿಟ್ಟುಸಿರ್ + ಬಿಡು$_1$]

**ನಿಟ್ಟುಸುರ್** 'ನಿಟ್ಟುಸಿರ್' ನೋ.

**ನಿಟ್ಟುಸುರು** 'ನಿಟ್ಟುಸಿರ್' ನೋ.

**ನಿಟ್ಟುಸುರ್ವಿಡು** 'ನಿಟ್ಟುಸಿರ್ವಿಡು' ನೋ.

**ನಿಟ್ಟೂರ** 'ನಿಟ್ಟುರ' ನೋ.

**ನಿಟ್ಟೂರಿ** (ನಾ). ದಯೆಯಿಲ್ಲದವನು ; ಕ್ರೂರಿ : (ಕ). [ನಿಟ್ಟೂರ(<ನಿಟ್ಟುರ) + -ಇ$_3$]

**ನಿಟ್ಟೆ** (ನಾ). ೧. ನಿಯಮ ; ಕಟ್ಟಳೆ : "ನಿಟ್ಟೆಯೆಂದು ನಿಷ್ಠೆ" (ಕಶಸಾ. ೬೯-೫೬೨) ; "ನಿಟ್ಟೆಯೆನೆ ನಿಷ್ಠೆಯಕ್ಕುಂ" (ಕವಿಕಂ. ೨೨೮) ; ಜಸಮಂ ಧರ್ಮಮುಮನುಪಾರ್ಜಿಸುವೊಡೆ ಚದುರದುವೆ ನಿಟ್ಟೆ ನಿಮಗಕ್ಕಟ ಮಾನಸವಾಟಿಗ್ಗೆ ಮಱುಗಿ ಸೋಲ್ತು ಪಿರಿಸಗುವುದರ್ತಿಯೊಳ್ ಜಸಮುಮಂ ಧರ್ಮಮುಮಂ (ಅಜಿಪು. ೨-೭೮) ; ದೇವಿಯರಿನ್ನೆಗಂ ನೆಗಳ್ದ ನಿತ್ಯನಿಯಾಮದ ನಿಟ್ಟೆ ದೇವಪೂಜಾವಿಧಿ . . . ಫಳದಾಯಕಮಾದುದು (ಮಲ್ಲಿಪು. ೪-೬೬) ; ಪಕಾರಕ್ಕೆ ಟತ್ವಂ—ನಿಷ್ಠಾ-ನಿಟ್ಟೆ (ಶಮದ. ೨೮೩ ಪ್ರಯೋ); ಹುಟ್ಟಿದಳು ಹರಿಪಾದಸೇವೆಯ ನಿಟ್ಟೆಯಲಿ (ಸಂಭಪ. ೬-೪೯); ನಡೆಸುವರಖಿಳವೇದಸ್ತುತ್ಯಪಾರಾಯಣವ ಶಾಸ್ತ್ರವನತ್ಯಧಿಕನಿಟ್ಟೆಯಲಿ (ಕೌಶರಾ. ೩೯-೭). ೨. ಶ್ರದ್ಧೆ ; ಆಸಕ್ತಿ : ಜಿನನಂ ನಿಟ್ಟೆಯಿನೋಲಗಿಪುದು (ಸಮಪ. ೮-೨೨೧) ; ನಾಲ್ಕುಂ ನಿಯಮವಿಧಾನದ ಬಟಸಂದು ನಿಟ್ಟೆಯಿಂ ಚರಿಯಿಸಿ(ಮಲ್ಲಿಪು. ೪-೪೬); ಪೆಱರಿಂದಪ್ಪ ಕಾರ್ಯಂ ನಿಟ್ಟೆಯುಲ್ಲೆಂಬುದು ತಾತ್ಪರ್ಯಂ (ಶೀತಿವಾ. ೨೫-೧೦) ; ನಿಟ್ಟೆಯ . . . ಕಟ್ಟಾಳುಗಳಿಲ್ಲರ್ ಪೊಱಮಟ್ಟರು (ಕುಮುರಾ. ೮-೩೧) ; ರಥದುರವಣೆಯಿಂ ರಿಪುಸಾರಥಿಯಿಂ . . . ಪತ್ತಿಸಿದಪೆವವಿತಥಮೆನ್ನದೆ ನೋಟ್ಟುದೆಮ್ಮ ಕಾಳೆಗದನುವಂ ಎಂದು ರಥಿಕರ್ ನುಡಿದು ನಿಟ್ಟೆಯಿಂ ನಿಲ್ವುದುಂ (ಪಶಕು. ೭-೫೩ ವ). ೩. ಮಾಡಬೇಕಾದುದು ; ಕರ್ತವ್ಯ : ಬಿಮ್ಮನೆಯೆ ನಿಂದು ತುಸುವೊಳ್ತು, ಮುಂಬಟ್ಟೆಯಂ ತನಗೆ ನಿಟ್ಟೆಯಂ ನಿಶ್ಚಯಿಸ್ಸಿ ನರಲೋಕನಿಷ್ಠ ಕರ್ತವ್ಯಮಂ (ಶ್ರೀರಾಮಾ. ೮೩೮-೩೧೫). ೪. ದೀರ್ಘಕಾಲ ಇರುವಂಥದು ; ಶಾಶ್ವತವಾದುದು : ತೃಣಶಿಖರಾಧ್ಯುಷಿತಾಂಭಃಕಣಸಂಚಳಮುಮರಚಾಪಚಪಳಂ ವಿದ್ಯುತ್ ಕ್ಷಣಿಕಂ ನಿಟ್ಟೆ[ಪಾಠಾಂ. ಟ್ಟ]ಯೆ ತನುಭೃದ್ಗಣ ಯೌವನರೂಪವಿಭವಭೋಗಾಭೋಗಂ (ಆದಿಪು. ೪-೭೫) ; ಸೊಗಯಿಪ ಜವ್ವನಂ ನೆರೆದ ರೂಪು . . . ಇವು ನಿಟ್ಟೆಯೆಂಬ ದಂದುಗಮೆರ್ದೆಯರ್ಚೆ (ಶಾಂತಿಪು. ೯-೩೬) ; ನೆಟ್ಟನೆ ಬಂದಪನೆನ್ನಯ ನಿಟ್ಟೆ[ಪಾಠಾಂ. ಟ್ಟ]ಯ ನಿಧಿ ಚಂದ್ರನೆಂದು ರಾತ್ರೀವಧು ತಾಂ ಕಟ್ಟಿದ ಬಹುರತ್ನದ ಮೇಲ್ಕಟ್ಟೆನಿಸಿದುದಂಬರಂ ಸುತಾರಾಗಣದಿಂ (ಗಿರಿಕ. ೪-೯೨) ; ಜರೆ ರುಜೆ ಕಂಟಕಂ ತುಡುಕಲಣ್ಮದ ದಿವ್ಯಶರೀರಮಂ ನರಂ ಕರಗಿ ಕಟಲ್ಚಿಪಂ ದಿವದಿನೆಂದೊಡೆ ಮರ್ತ್ಯರ ಬಾಟ್ಕೆ ನಿಟ್ಟೆ[ಪಾಠಾಂ. ಟ್ಟ]ಯೇ (ಅನಂಪು. ೩-೭೨) ; ಸಂಸಾರಿಗೆ ನಿಟ್ಟೆಯುಲ್ಲದು ಸುಖಂ (ಪುಷ್ಪಪು. ೧೩-೨೭) ; ನಿನ್ನ ಜವ್ವನಂ ನಿಟ್ಟೆಯೆ (ಶಾಂತೀಶ್ವ. ೫-೧೦೩). ೫. ಶಾಶ್ವತವಾದ ಪದವಿ ; ಮೋಕ್ಷ ; ಕೈವಲ್ಯ : ಒಟ್ಟಿದ ಕಿಚ್ಚು ಚಕ್ರಾಕೃತಿಮಧ್ಯದಿ ನೆಟ್ಟಂತೆ ಏಕಪಾದದಲಿ ನೆಟ್ಟನೆ ನಿಂದುಗ್ರತಪಸಿಗಳಿರ್ದರು ನಿಟ್ಟೆಯ[ಪಾಠಾಂ. ಕಟ್ಟನ] ವರವ ಬೇಡುತಲಿ (ಅಬ್ಬಲೂ. ೩-೪೫). ೬. (?) : ಕಟ್ಟೆಯೋ ಹರಿಸೇನೆ

ನಡೆವಾ ಬಟ್ಟೆಯೋ . . . ಕುಲಗಿರಿಯ ವಂಶದ ಕಟ್ಟೆದೆಯು ಪಕ್ಷವನು ಹೋಲಿತು ಸೇತು ಖಳಕೇತು (ಕೌಶಿರಾ. ೧೬-೨೭).

**ನಿಟ್ಟಿಗೆ ವರ್** = ನಿಯಮಕ್ಕೆ ಒಳಪಡು ; ಲಕ್ಷಣಕ್ಕೆ ಹೊಂದು : ನಿಟ್ಟಿಗೆ ವಂದು ಕೋಮಲಗುಣಂ ಗೆಡೆಗೊಂಡಿರೆ ಪೂವಿನಂತಿರಾಯ್ತು ಟ್ಟಿ ಪದಂ ಬೆಡಂಗೆನಿಸೆ ಬಣ್ಣಸರಂ ಪೊಸತಾಗೆ ನುಣ್ಪೊಡಂಬಟ್ಟಿರೆ ಬಂದಪೊಂದೆ ಚತುರಾಳಿ ಕರಂ ಬಸದಾಗೆ ಬಾಸಿಗಂಗಟ್ಟುವನಂತು ಕಟ್ಟುವುದು ಕಬ್ಬಮಂ (ಲೀಲಾವ. ೧-೬೨). [< ಸಂ. ನಿಷ್ಠಾ]

**ನಿಟ್ಟಿ ಕಾಜ** (ನಾ). ನಿಷ್ಠೆಯುಳ್ಳ ವ್ಯಕ್ತಿ : ಡಾಳ ಹಾಕುವ ಚಾಮರದ ಪೊಡೆವ ದಾಡೆಯು ಜೇಗಟೆಯು ಹಿಂದೆ ಮುಂದೆ ಸಂದಣಿಸಿ ಹರಿದಾಡುವ ನಿಟ್ಟ[ಟ್ಟಿ]ಕಾಜರ ಮುಖದೊಳಮರ್ಚಿ ಮಾರ್ಪೊಳೆವ ಲೋಹದರ್ಪಣದ ಕಾಲ್ಗೆಳೊಗೆದಪರಿಮಿತ ರೂಪಂದಳೆದು (ಹವ್ಮಾರ. ೩-೩೩ ಪ). [ನಿಟ್ಟಿ + -ಕಾಜ]

**ನಿಟ್ಟಿಗೊಳ್, ನಿಟ್ಟಿಗೊಳ್ಳು** (ಕ್ರಿ). ೧. ಸ್ಥಿರಗೊಳ್ಳು ; ದೃಢವಾಗು: 'ನಿಟ್ಟಿಗೊಳಿಸು' ಪರಾ. ೨. ಶ್ರದ್ಧೆಯನ್ನು ಹೊಂದು ; ಆಸಕ್ತನಾಗು : ಲೋಗರು ಮಾಡಿದ ಪಲತೆಜಿದಾಗಮಮಂ ಕೇಳ್ದು ನಿಟ್ಟಿಗೊಳ್ಪದವಂ ಕೇಳ್ವಾಗಳೆ ಸನ್ನತಿಯಂಕ್ಕುಂ (ಸಮಪ. ೩-೫೩). **ನಿಟ್ಟಿಗೊಳ್ಳು :** ೩. ( ? ) : ನಟ್ಟಿಡವಿಯಲಿ ನೀನು ವೈರಿಭರಟ್ಟಿ ಕೇಳ್ ನಿಷ್ಕರುಣದಿಂ ನೆಜಿಕಿ ಬಿಟ್ಟುಹೋಗಲು ನಿನ್ನ ಪದವೆಂತಿರ್ದು ವಕಟಿನ್ನ ನಿಟ್ಟಿಗೊಂಡಗಲಿಸಿತು ರಾಜಶ್ರೇಷ್ಠ ನೀ ಮೈದೋಜು ಕರುಣಾದೃಷ್ಟಿಯಲಿ ನೋಡು (ಜೀವಂಚ. ೫-೨೦). [ನಿಟ್ಟಿ + ಕೊಳ್$_1$]

**ನಿಟ್ಟಿಗೊಳಿಸು** (ಕ್ರಿ). ೧. ಸ್ಥಿರಗೊಳಿಸು ; ಸ್ಥಾಪಿಸು : ಇಟ್ಟ ಮಕುಟದ ಕಟ್ಟಿದ ಬಾಸಿಗದ ದೆಸೆಗಧಿಷ್ಠಾನಮಂ ಕಟ್ಟುವಂತೆ ಭಾಳಪಟ್ಟದೊಳ್ ಸಾಮ್ರಾಜ್ಯಪಟ್ಟಮಂ ನಿಟ್ಟಿಗೊಳಿಸಿದಿಂ ಬಜಿಕ್ಕೆ (ಆನಂಪು. ೬-೫೮ ಪ). ೨. ಶ್ರದ್ಧೆಯನ್ನುಂಟುಮಾಡು ; ಆಸಕ್ತಿ ಹೊಂದುವಂತೆ ಮಾಡು : ಜೈನಯತೀಂದ್ರರಂತು ನಿಟ್ಟಿಗೊಳಿಸಲ್ಕೆಂತುಂ ಪಜಿರ್ ಬಲ್ಲರೆ (ಸಮಪ. ೪-೯೫). [ನಿಟ್ಟಿಗೊಳ್ + -ಇಸು$_3$]

**ನಿಟ್ಟಿಗೊಳ್ಳು** 'ನಿಟ್ಟಿಗೊಳ್' ನೋ.

**ನಿಟ್ಟಿದುರು** (ನಾ). = ನಿಟ್ಟೆದಿರ್: ಜೀವವನ್ನು ನಮ್ಮ ಭಾವದ ನಿಟ್ಟಿದುರಿನಲ್ಲಿ ಬೊಂಬೆ ಮಾಡಿ ನಿಲ್ಲಿಸುವುದೊಂದು ಕಾರ್ಯ (ವಿಚಾಪುಂ: ೫೭). [ನಿಟ್(< ನಿಡಿದು$_1$) + ಎದುರು(< ಎದಿರ್)]

**ನಿಟ್ಟಿಪಡು** 'ನಿಟ್ಟಿವಡು' ನೋ.

**ನಿಟ್ಟಿಯ್ದೆ** 'ನಿಟ್ಟಯ್ದೆ' ನೋ.

**ನಿಟ್ಟಿಯ್ದೆತನ** 'ನಿಟ್ಟಯ್ದೆತನ' ನೋ.

**ನಿಟ್ಟಿರ್ದೆ** (ನಾ). ವಿಶಾಲವಾದ ವಕ್ಷಸ್ಥಳ : ಬಿಣ್ಪೊಜಿ, ನಿಟ್ಟಿರ್ದೆ, ನಿಟ್ಟಿರ್ಕೆ (ಭಾಷಾಭೂ. ೧೩೭ ಉದಾ). [ನಿಟ್ (< ನಿಡಿದು$_1$) + ಎರ್ದೆ]

**ನಿಟ್ಟಿಲು** 'ನಿಟ್ಟಿಲ್ವು' ನೋ.

**ನಿಟ್ಟಿಲುವು** 'ನಿಟ್ಟಿಲ್ವು' ನೋ.

**ನಿಟ್ಟಿಲೆಹೊನ್ನೆ** (ನಾ). ಒಂದು ಬಗೆಯ ಸಸ್ಯ : ನಿಟ್ಟಿಲೆಹೊನ್ನೆ, ಬೆಟ್ಟಿಲೆಹೊನ್ನೆ . . . ತೈಲವನಟ್ಟು ನಿರೂಹಣಂಗೆಯ್ಯೆ ಅಜೀರ್ಣ ಮುಂತಾದ ಸಕಲಜ್ವರಂಗಳುಂ ನಾಶಮಹುದು (ಸಕವೈ. ೧೨೯). [ನಿಟ್ (< ನಿಡಿದು$_1$) + ಎಲೆಹೊನ್ನೆ]

**ನಿಟ್ಟಿಲ್ವು, ನಿಟ್ಟಿಲು, ನಿಟ್ಟಿಲುವು** (ನಾ). ಉದ್ದವಾದ ಮೂಳೆ ; ಬೆನ್ನುಮೂಳೆ : ಮುಱಿದ × × ನಿಟ್ಟಿಲ್ವು (ಎಕ. IV, ಹೆಗ್ಗಡ. ೧೧೬-೧೫; ಸು.930); ಪಗೆವರ ನಿಟ್ಟಿಲ್ವಂ ಮುಱಿವೊಡೆನಗೆ ಪಟ್ಟಂಗಟ್ಟಾ (ಪಂಪಭಾ. ೧೦-೧೭) ; ಕಿಟಿಪ್ಪೊಡೆ ಮೇಗಾಲ್‌ವೆರಲುಂಗುಟಿಂ ಬರಿನೊಸಲ್ ನಿಟ್ಟಿಲ್ವು ಗೋಣಾಳಿ ಬೆನ್ (ಶಾಂತಿಪು. ೪-೧೭) ; ಧೂರ್ತಜನಹೃತ್ಸೆಲ್ಲಂ ನಿಟ್ಟಿಲ್ವುಳ್ಳ ಬಿರುದ ಪೆಣ್ಡತಿಗಣ್ಡಂ (ಎಕ. VII, ಶಿಕಾರಿ. ೩೦-೧೫ ; 1031) ; ನಿಟ್ಟಿಲ್ವುಗಳ್ ತೋಱುವಿನಂ ಕಾಯ್ದುಕ್ಕುಱುಂದಿ ಕರ್ಗುಱುಸೆ (ಸುಕುಸೂ. ೭-೩೫) ; ನಿಱುಲು ನಿಟಲೆನೆ ನಿಟ್ಟಿಲ್ವಂ [ಮೆಟ್ಟುತ] ಮುಱುವುತಿರೆ (ಕುಮುರಾ. ೮-೪೮). **ನಿಟ್ಟಿಲು :** ದುಷ್ಟ ಚತುಷ್ಟಯರಲಟಿ ಹೊಟಿ ನಿಟ್ಟಿಲು ಗೋಣಾಳಿಯುಂ ಮುಱಿದು (ಎಕ. VIII, ಸೊರಬ. ೨೬೮-೩೩ ; ಸು. 1245) ; ಕರುಳುಗಿಯೆ ತಲೆ ಸಿಡಿಯೆ ನಿಟ್ಟಿಲು ಮುಱಿಯೆ ಮೂಳೆಗಳುದಿರೆ (ಕುವ್ಯಾಭೀ. ೪-೨೮) ; ಕೊಂಡು ಗದೆಯ ನಿಕುಂಭನಿಕುಲನ ಮನ್ನಣೆಯ ಮನಮುಚ್ಚುಗಾಜನ ಬೆನ್ನನಪ್ಪಳಿಸಿದನು ನಿಟ್ಟಿಲು ಭಿನ್ನವಾಗದೆ ಮಾಣದಿರದೆಂದಮರ್ಗಗಣ ನುಡಿಯೆ (ತೊರಂರಾ. ೬-೩೯-೮) ; ನಿಟ್ಟಿಲುಗಳನು ನಿಱಿನಿಟಲೆಲೆಂಬಂತೆ ಕಿತ್ತು ಮಸ್ತಕವನು ತಿಱುಕಲ್ಲನಾಡಿ ಬೊಬ್ಬಿಱಿದ (ನೋಹತ. ೧೨-೩೭) ; ನಿಟ್ಟಿಲು ಮುರಿ ಮುರಿದೊಟ್ಟಿದರೂ (ದೇವೀಮ. ೧-೨೪). **ನಿಟ್ಟಿಲುವು :** ಸ್ವಸ್ಥ ಪದ್ಮಾಸನದಲ್ಲಿ ಕುಳ್ಳಿರ್ದು ನಿಟ್ಟಿಲುವ ಮುಱಿದು . . . ಅಮೃತವನುಂಡಿಹೆನೆಂಬವರ ಕೇಡಿಂಗೆ ಕಡೆಯಿಲ್ಲ (ಅನುಚಂ. ೯೯೯-೨೨೦) ; ನಿನ್ನ ನಿಟ್ಟಿಲುವ ಮುಱಿವೆನೆಂದುರವಣಿಸಿ ಜಜಿಕಿಯುತ್ತ . . . ಸುತನ ಹಿಂಗಾಲ್ವಿಡಿದು ಸೆಳೆದು ಬಿಸುಟಿಂ (ಹಚಕಾ. ೧೨-೩೭) ; ಮುರಹರನ ನಿ[ಪಾಠಾಂ. ನೆ]ಟ್ಟಿಲುವೆ ಕಟ್ಟಿಗೆ ಉರಗರಾಜನೆ ನೇಣು ನರಕೇಸರಿಯ ನಖವೇ ಕೊಂಕಿ . . . ಪಿರಿಯ ಗಾಳವನಿಕ್ಕುವಾ ಬಲೆಗಾಜನುಂ ತಾನೆ (ಬಸಪು. ೨೧-೨೪) ; ಕೌರವನಾಯಿಗಳ ನಿಟ್ಟಿಲುವ ಮುಱಿದು ನವಾಯಿಯಲಿ ಘಟ್ಟಿಸದೆ ಕೊಬ್ಬಿದ ತನ್ನ ತೋಳುಗಳ ವಾಯುಸಖನಲಿ ಸುಡುವೆನು . . . ಎಂದೊಡನೊಡನೆ ಮಿಡುಕಿದನು ಕಲಿಭೀಮ (ಕುವ್ಯಾಸ. ೧೪-೯೧) ; ಕಟವಾಯ್ಗೆ ಕೈಯನಿಟ್ಟಿರದೆರಳ್ ಸೀಳಾಗಿ ನಿಟನೆರಿಲ್ ನಿಟಿಲೆನಲ್ ನಿಟ್ಟಿಲುವನುಜಿ ಮುಱಿದು (ಚೆಬಪು. ೨೧-೬). [ನಿಟ್(< ನಿಡಿದು$_1$) + ಎಲ್ವು]

**ನಿಟ್ಟಿವಡಿಸು** (ಕ್ರಿ). ೧. ನಿಯಮಕ್ಕೆ ಅಳವಡಿಸು. ೨. ಶ್ರದ್ಧೆಗೆ ಒಳಪಡಿಸು : ಮತ್ತಮೊಳಗಣಾಱುಂ ತಪದೊಳಗಂ ಪ್ರಾಯಶ್ಚಿತ್ತ ವಿನಯ ವೈಯಾಪೃತ್ಯ ಸ್ವಾಧ್ಯಾಯ ಧ್ಯಾನ ಕಾಯೋತ್ಸರ್ಗಂಗಳಂ ನಿಟ್ಟಿವಡಿಸಿ (ಶಾಂತಿಪು. ೯-೧೦೫ ಪ) ; ಎರಡುಂ ತೆಱದ ಧರ್ಮಮಂ ಮನದೊಳ್ ತಾಳ್ದಿ ಪಾಯ್ದು ಪತ್ತಿದಂಕಮನೊತ್ತಿ ಪಿಡಿದು ಗೆಲ್ವ ಗಾಯ ಮಱುವಂಕದಂತೆ ಬೋಧೆಯಂ ನಿಟ್ಟಿವಡಿಸಿ (ಬಂಹಪು. ೧೦-೩೧ ಪ). [ನಿಟ್ಟಿವಡು + -ಇಸು$_3$]

**ನಿಟ್ಟಿವಡು, ನಿಟ್ಟಿಪಡು** (ಕ್ರಿ). ೧. ಶ್ರದ್ಧೆಯನ್ನು ಹೊಂದು ; ಆಸಕ್ತಿಯನ್ನು ತಾಳು : ನಿನ್ನತುಳನಾಮಜಪಕ್ರಿಯೆಯಲ್ಲಿ ನಿಟ್ಟಿವಟ್ಟನತಿಶಯಂಗಿ ಸಾಧಿಸಿದಪಳ್ ನಿಜದೇಹವಿದಾಹಮುಕ್ತಿಯಂ (ಚಂದ್ರಪ್ರ. ೮-೮೩) ; ಅಯ್ದುಂ ಸಮತೆಯೊಳ್ ಪೊಕ್ಕು ಆಱುಂ ಕ್ರಿಯೆಗಳೊಳ್ ನಿಟ್ಟಿವಟ್ಟು (ಅನಂಪು. ೧೨-೩೨). **ನಿಟ್ಟಿಪಡು :** ೨. ಶ್ರದ್ಧೆಯನ್ನುಂಟುಮಾಡು ; ನಿಷ್ಠೆಯನ್ನು ಹೊಂದುವಂತೆ ಮಾಡು : ಕರೆದೊಡೆ ಜೂದಿಂಗಂ ಧುರಭರ[ಕಾಳೆ ಟ]ಕ್ಕೆ ಭೂಭುಜಂಗಾಗದು ಮೆಯ್ಗುರೆದಿರಲೆಂಬ ಪುರಾತನಗುರುವಚನಂ ತನಗೆ ನಿಟ್ಟಿಪಟ್ಟುದಱಿಂದಂ (ಪಂಪಭಾ. ೬-೭೧). [ನಿಟ್ಟಿ + ಪಡು$_1$]

**ನಿಟ್ಟಿಸರಿದು** (ಕ್ರಿ). ಹೆಚ್ಚು ಹೊತ್ತು ಚೆನ್ನಾಗಿ ಕುದಿಯಲು ಒಲೆಯ ಮೇಲೆ ನೀರಿಡು : ನೆಟ್ಟನೆ ಪುಷ್ಪವಾಸನೆಯು ಕಪ್ಪುರಶಾಲಿಯ ತಂಡುಲಂಗಳಂ ನಿಟ್ಟಿಸರಿಟ್ಟು ಬಾಗಿ ಮೃದುವಾದ . . . ಅನ್ನಮನಲ್ಲದೆ ಮತ್ತನ್ನಮಂ ಮುಟ್ಟುವನಲ್ಲಂ . . . . ಸುಕುಮಾರವಲ್ಲಭಂ (ಸುಕುಮಾ. ೧೦-೧೦೮). [< ನಿಡಿದು$_2$ + ಎಸರಿಡು]

**ನಿಟ್ಟಿಸಳ್** 'ನಿಟ್ಟಿಸಟು' ನೋ.

**ನಿಟ್ಟೆಸಳು** 'ನಿಟ್ಟೆಸೞ್' ನೋ.

**ನಿಟ್ಟೆಸಳುಗಣ್** 'ನಿಟ್ಟೆಸಳ್ಗಣ್' ನೋ.

**ನಿಟ್ಟೆಸಳ್ಗಣ್, ನಿಟ್ಟೆಸಳುಗಣ್, ನಿಟ್ಟೆಸಳ್ಗಣ್ಣು** (ನಾ). ಉದ್ದವಾದ ರೇಕು ಅಥವಾ ಪಕಳೆಯನ್ನು ಹೋಲುವ ನೀಳವಾದ ಕಣ್ಣು : ನಿಟ್ಟೆಸಳ್ಗಣ್ಗಳ ನಿಱುಗುರುಳಬಲೆಯ . . . ಎವೆಯಲುಗದೆ ನೀಡುಂ ನಿಟ್ಟಿಪ ನೀಟಿನ ಬಗೆ (ಜಯಕಾ. ೪-೧೦). **ನಿಟ್ಟೆಸಳುಗಣ್ :** ಎಳನಗೆಯ ಸಿರಿಮೊಗದ ಚೆಲುವಿನ ಹೊಳೆಹೊಳೆವ ನಿಟ್ಟೆಸಳುಗಂಗಳ (ಕುವ್ಯಾಭೀ. ೩-೭೬) ; ನಿಟ್ಟೆಸಳುಗಂಗಳ . . . ಪಡೆದ ನಿಜರೂಪನಂ ಕಂಡನವನೀಪಾಲನು (ಜೈಮಿಭಾ.೨-೪೮). **ನಿಟ್ಟೆಸಳ್ಗಣ್ಣು :** ಬಾಲೆಯ ಕೊರಲು ಹೊನ್ನೊರಲು . . . ನಿಟ್ಟೆಸಳ್ಗಣ್ಣಾಲೆಯ ಮನೆಗಳೊಪ್ಪಿದುವು (ಮೋಹತ. ೨-೫೦) ; ಅಂದವಡೆದಿರ್ದ ನಾಸಿಕದ ನಿಟ್ಟೆಸಳ್ಗಣ್ಣ ಕಾಂತಿಗಳ ತುಱುಗೆವೆಗಳ . . . ಮದನನಂ ಕಾಣದೆಂತಿರ್ಪನೋ (ಚೆಬಪು. ೩೫-೨೭).

[ನಿಟ್ಟೆಸಳ್(<ನಿಟ್ಟೆಸೞ್)+ಕಣ್]

**ನಿಟ್ಟೆಸಳ್ಗಣ್ಣು** 'ನಿಟ್ಟೆಸಳ್ಗಣ್' ನೋ.

**ನಿಟ್ಟೆಸೞ್, ನಿಟ್ಟೆಸಳ್, ನಿಟ್ಟೆಸಳು** (ನಾ). ಉದ್ದವಾದ ದಳ; ನೀಳವಾದ ಎಸಳು,—ರೇಕು,—ಪಕಳೆ : ನೀಳ್ದ ಕಣ್ಮಲರ್ಗಳೊಳೊತ್ತಲುತ್ಪಳದ ನಿಟ್ಟೆಸೞಿಂ (ಲೀಲಾವ. ೯-೧೩೧) ; ನೀರೇಜದ ನಿಟ್ಟೆಸೞ ಹಸೆಗಳಿಂದೆಸೆಯೆ ವಿರಚಿಸಿದ ಲತಾಮಂಟಪಮಂ ಕಂಡು (ಕುಸುಮಾ. ೫-೯೭ ವ) ; ಪೂತೆಸೆವ ಜಾದಿಯಲರ್ವಂಡನುಱೆಯುಂಡು ತಣಿದು ಕೇತಕಿಯ ನಿಟ್ಟೆಸೞ ಬಂಬಲ್ಗಳೊಳ್ಮಣಿದು (ಉದ್ಭಟ. ೧೦-೧೨೨) ; ಮಿನುಗುವ ನಿಟ್ಟೆಸೞೊಳ್ ನೀರ್ವನಿಗಳನೊಳಕೊಂಡು ತೋರ್ಪ ಕೆಂದಾವರೆಯಂ (ಕಬ್ಬಿಕಾ. ೭೪) ; ದ್ವಿತ್ವಕ್ಕೆ . . . ನಿಟ್ಟೆಯ್ದೆ, ನಿಟ್ಟೆಸೞ್ (ಶಮುದ. ೧೮೦ ಪ್ರಯೋ). **ನಿಟ್ಟೆಸಳ್ :** 'ನಿಟ್ಟೆಸಳ್ಗಣ್' ಪರಾ. **ನಿಟ್ಟೆಸಳು :** 'ನಿಟ್ಟೆಸಳುಗಣ್' ಪರಾ.

[ನಿಟ್(<ನಿಡಿದು$_1$)+ಎಸೞ್]

**ನಿಟ್ಟೆಸೞ್ಗವಳಿಗೆ** (ನಾ). ಉದ್ದವಾದ ಓಲೆಯ ಗರಿಗಳ ಕಟ್ಟು : ಓದುವುದಲರಾದ ಕೇದಗೆಯ ಕುತ್ತೆಸೞೋಲೆಯನೆತ್ತಿ ನಿಟ್ಟೆಸೞ್ಗವಳಿಗೆಯಾಗೆ ಭೃಂಗವಿಟರಾಜಿ ಮನೋಜನ ವೀರವೃತ್ತಿಯಂ (ಅನಂಪು. ೧-೯೧).

[ನಿಟ್ಟೆಸೞ್+ಕವಳಿಗೆ$_1$]

**ನಿಟ್ಟೇರಿಸು** (ಕ್ರಿ). ಒಂದರ ಮೇಲೊಂದರಂತೆ ಪೇರಿಸು ; ನಿಟ್ಟು ಹಾಕು : ಆ ಎರಡು ನಿಟ್ಟೇರಿಸಿದ ಚೀಲಗಳ ಮೇಲೆ ಹತ್ತಿ (ಗಂಗಾಗಾ.೮೨).

[ನಿಟ್ಟು$_2$+ಏರಿಸು(<ಏಱಿಸು)]

**ನಿಟ್ಟೈದೆ** 'ನಿಟ್ಟಯ್ದೆ' ನೋ.

**ನಿಟ್ಟೈಸು** 'ನಿಟ್ಟಸು' ನೋ.

**ನಿಟ್ಟೊಡಲ್, ನಿಟ್ಟೊಡಲು** (ನಾ). ೧. ನೀಳವಾದ ಒಡಲು,—ಶರೀರ ; ದೀರ್ಘದೇಹ : ವೀರ ಜಿನಕುಮಾರನಂ ದೂರದೊಳೆ ಭೋಂಕೆನೆ ಕಂಡು . . . ಪೊಣ್ಮುವ ಪೂತ್ಕೃತ್ಯಯಾರಭಸಮಾದಂ ಭೀತಿಯಂ ಮಾಡೆ ನಿಟ್ಟೊಡಲಂ ನೆಟ್ಟನೆ ನಾಗರಾಜನಿಳೆಯಿಂದೆಟ್ಟಿದಂ ತಾಳ್ದಿದಂ (ಪರ್ಧಪು. ೧೪-೭೮) ; ಏವೂರ ನಿಗಳದೊಂದು ಬಣ್ಣಗುದುರೆ ! . . . ನಿವಿರ್ದ ಕೊಡಂಕೆ, ಡಗೆವೊಯ್ವಳ್ಳೆ, ಗುಜ್ಜುಗಾಲ್, ನಿಟ್ಟೊಡಲ್ (ರಾಮಾಶ್ವ.೮೪-೨೬). **ನಿಟ್ಟೊಡಲು:೧.** ಸಂಸದಲಿ ನಿಂದರೆ ನಾದುವೆನು ನಿಟ್ಟೊಡಲ ರಕುತದಲಖಿಳ ದಿಗುತಟವ (ಕುವ್ಯಾದ್ರೋ. ೧೬-೩೦) ; ಬಿಟ್ಟ ಮಂಡೆಯ ಕೆಂಚುಗೂದಲ ನಿಟ್ಟೊಡಲ . . . ಕಡುಮರುಳು ವೇಷವ ತೊಟ್ಟು (ಪ್ರಭುಲೀ. ೨೨-೩೩). ೨. ದೊಡ್ಡ ಶರೀರ : ಕೆಟ್ಟ ಸಂಸ್ಕೃತಿಯೆಂಬ ನಿಟ್ಟೊಡಲ ದಂತಿ ಕೊಟ್ಟೊಟ್ಟೈಸಲಾರ್ಗಮರಿದೆನಿಪುದು (ಸಾನಂಚ. ೧-೪೧). [ನಿಟ್(<ನಿಡಿದು$_1$)+ಒಡಲ್]

**ನಿಟ್ಟೊಡಲ** (ನಾ). ನೀಳವಾದ ಶರೀರವುಳ್ಳವನು ; ಎತ್ತರದ ವ್ಯಕ್ತಿ : ತಪದಿಂದಂ ಬಡಪಟ್ಟ ನಿಟ್ಟೊಡಲನಂ ನಿರ್ವ್ಯಗ್ರನಂ ತತ್ಪುರೋರು ಪದಪ್ರಾಪ್ತನನೆಟ್ಟಿ ಪಾಯ್ದು ಪಸು ಕೂರ್ಗೋಡಿಂದೆ ಕೋದೆತ್ತಿ . . . ಈಡಾಡಿದತ್ತು (ಪರ್ಧಪು. ೩-೭). [ನಿಟ್ಟೊಡಲ್+–ಅ$_7$]

**ನಿಟ್ಟೊಡಲು** 'ನಿಟ್ಟೊಡಲ್' ನೋ.

**ನಿಟ್ಟೊರಸು** (ಕ್ರಿ). ಸಂಪೂರ್ಣವಾಗಿ ನಾಶಮಾಡು; ಇಲ್ಲವಾಗಿಸು; ಧ್ವಂಸಮಾಡು : ಗುರುಲಿಂಗ ಜಂಗಮದ ಕಾಲ ಕಟ್ಟುವೆ ವ್ರತಭ್ರಷ್ಟರ ನಿಟ್ಟೊರಸುವೆ (ಸರ್ವ. ೧೮೬-೮೬೦) ; ಆ ರವಿಯ ತೇಜಮಂ ಕೊರಗಿಸನೆ ಮೇಘಮಾ ಮೇಘಮಂ ವಾಯು ನಿಟ್ಟೊರಸನೆ (ಲಾಚಂ. ೩೯-೮೦) ; ಧರಧುರದ ದುರ್ವ್ಯಸನಿಗಳ ನಿಟ್ಟೊರಸಿ ತೆಗೆ ನಿನ್ನವರನೆನುತುಬ್ಬರವ ಮಾಣಿಸಿ ಹೂಣಿಗರ ಹೊಯ್ಸಿದನು ಕಲಿ ಭೀಷ್ಮ (ಕುವ್ಯಾಸ. ೧೦-೨೭);ಗಜರಾಜಿಯಂ ದಿಂಡುರುಳ್ಚಿಸಿ ತೇರ್ಗಳಂ ಛತ್ರಚಮರಾಳಿಗಳ್ವೆರಸಿ ನಿಟ್ಟೊರಸಿ . . . ಸವಱುದುದು ಸುಭಟರಂ ಮತ್ತಗಜವೇನೆಂಬೆನು (ಚೆಬಪು. ೨೮-೨೪) ; ತುದಿವಾಲದಲಿ ಫಣಿಗಳ ನಿಟ್ಟೊರಸುತ ಲಲಾಟಗಳಿಗೊರಸುವನು ಗೋಮಯವ (ಉತ್ತಕ. ೩೨-೩೬) ; ಚಾಪಾಯುಧನು . . . ಕರಿಘಟೆ ತುರಂಗಮಂ ಬರಿಗೈವುತ ನಿಟ್ಟೊರಸಿ ತೇರ್ಗಳಂ ಪುಡಿಮಾಡಿ . . . ಯುಧಿಷ್ಠಿರನ ನಿಲ್ಲುನಿಲ್ಲೆಂದೆನುತ ಬಿಲ್ದುಡುಕು ಸಾಕೋಡಬೇಡೆಂದನು (ತುರಂಗ. ೪೯-೧೦). [<ನಿಡಿದು$_2$+ಒರಸು$_1$]

**ನಿಟ್ಟೋಟ** (ನಾ). (ದಾಪುಗಾಲಿನ) ರಭಸವಾದ ಓಟ ; ಅತಿ ವೇಗದ ಓಟ : ಎಡನಂ ಬಲನಂ ದಿಟ್ಟಿಸುತೆ ನಿಂದು ನಿಲ್ಲದೆ ನಿಟ್ಟೋಟದೊಳೋಡಿತೆಸೆವ ಮಸಕದ ಶಶಕಂ (ಗಿರಿಕ. ೧-೮೬) ; ಬದುಕಿದೆನೆಂದು ನಿಟ್ಟೋಟದಲಿ ಹಾಯ್ದನು ಬಿಟ್ಟ ಮಂಡೆಯಲಿ (ಕುವ್ಯಾವಿ. ೬-೧೨) ; ಸಪ್ತಮದಾವಸ್ಥೆಯಿಂ ಮುಂದುಗಾಣದೆ ಬಲ್ಗಂಬಮಂ ಮುಱಿದು ನಿಗಳಮಂ ಪಱಿದು ನಿಟ್ಟೋಟದಿಂ ಬೀದಿವರಿದು (ರಾಜಶೇ. ೬-೧೧ ವ) ; ಹಸು ಬೆಚ್ಚಿ ಬೆದರಿ . . . ಗುರುಗಳನ್ನು ಮುಳ್ಳಿನಲ್ಲಿಯೂ ಕಲ್ಲಿನಲ್ಲಿಯೂ ಎಳೆದುಕೊಂಡು ನಿಟ್ಟೋಟವಾಗಿ ಓಡಿ ಹೋಗಿ ಬಳಲಿ ಒಂದು ಕಡೆ ನಿಂತುಕೊಂಡಿತು (ನಗೆಗ. ೨೫) ; ನೆಟ್ಟಾನೆ ಕಲ್ಲು ನಿಟ್ಟೋಟ ಓಡೀತೆ ? (ಗಾದೆ). [ನಿಟ್(<ನಿಡಿದು$_1$)+ಓಟ]

**ನಿಡವು** (ನಾ). ( ? ) : ಶ್ರವಣ ಧನಿಷ್ಠೆಯುಂ ಶತಭಿಷಂ ನೆಗಟ್ದಶ್ವಿನಿ (ಪುನರ್ವಸು)ವೈದು ಮಘ್ಯಮಂ ಭರಣಿ ಕೃತ್ತಿಗೆ ಚಿತ್ತೆ ವಿಶಾಖೆ ಮೂಱು ವಿವರಣಮಪ್ಪ ಪೂರ್ವೆವೆರಸಾದ್ರ್ರಮಹಾವಹನಾರ್ಕ್ಷಮೆಂಬ ಪತ್ತು ನಿಡವಿಂ ಕನಿಷ್ಠಮಿವ ಬಿತ್ತಿಪುದು (ಬಿಟ್ಟಿಪು. ೯-೨೩). [ ? ]

**ನಿಡಿ$_1$** 'ನಿಟ್' ನೋ.

**ನಿಡಿ$_2$** (ನಾ). ಕಟುವಾದ ವಾಸನೆ ; ತೀಕ್ಷ್ಣವಾದ ವಾಸನೆ ; ಘಾಟು : (ಕ). [←ತಮಿ. ನೆಟ]

**ನಿಡಿ$_3$** (ನಾ). ೧. ಅನ್ನವನ್ನು ಬೇಯಿಸಿ ಬಸಿದ ನೀರಾದ ಗಂಜಿ ; ಅನ್ನದ ನೀರುನೀರಾದ ಗಂಜಿ : ಓಗರದ ಮೇಲಣ ನಿಡಿ=ಮಾಸರೆ, ಆಚಾಮ, ನಿಃಸ್ರಾವ, ಓಗರದ ಗಂಜಿ ಎಂದೂ ಎಂಬರು (ನಾಚಿರಾ. ಕ); ಪಿಚ್ಛ–ಕೂಟ ಮೇಲಣ ನಿಡಿ (ನಾಚಿರಾ. ಕ). ೨. ಮದ್ಯ ಅಥವಾ ಹೆಂಡದ ಮೇಲಿನ ತಿಳಿ : ಕಾರೋತ್ತರ, ಸುರಾಮಂಡ–ಮದ್ಯದ ಮೇಲಣ ನಿಡಿ (ನಾಚಿರಾ. ಕ) ; ಸುರಮಂಡೇನ=ಕೀಳುಜಾತಿಯಾದರೆ ಹೆಂಡದ ಮೇಲಣ ನಿಡಿಯಿಂದ . . . ಪಾಯಯೇತ್=ಕುಡಿಸಬೇಕು (ಬಾಹಟೀ. ೨-೧-೮೭ ವ). ೩. ಮೊಸರ ಮೇಲಿನ ಒಡಕು ಒಡಕಾದ ನೀರಿನಂತಹ ಭಾಗ,—ತಿಳಿ : ಮಸ್ತು–ಮೊಸರ ಮೇಲಣ ನಿಡಿ (ನಾಚಿರಾ. ಕ) ; ಮಂತ=ಕಡೆಗೋಲು, ಮೊಸರ ಮೇಲಣ ನಿಡಿ (ಶಮುದ. ೨೫೫ ಅಡಿಟ). ೪. ತಂಪು ; ತಣ್ಣಗಾದುದು : ಗಡಿಯಾಗಲಬುಧಿ

ನೀರಸವೆತ್ತು ಚಂದ್ರ ಕೆಂಗಿಡಿಯಾಗಲಗ್ನಿ ಮೆಯ್ಯಿಟುತು ನಿಡಿಯವಾದರಾಗ ಬೇಕಲ್ಲದೆ ನೀ ಪೇಳ್ವ ನುಡಿಯೊಳು ಪುಸಿಯಿಲ್ಲ ತಾಯೆ (ಮೋಹತ. ೨೫-೨೯).

**ನಿಡಿ$_4$** (ನಾ). **(?)** : ಗಡಿ ನಿಡಿ ಹುಟ್ಟು ಕಟ್ಟಳೆಯ ವಿವರ . . . ಮೂಡಕೇರಿ ಪಡುವಕೇರಿಯ ಗಡಿ ನಿಡಿಯನು ತಿದ್ದಿ ಮುಗಿದು ಬರಸಿದ ವಿವರ (ಸೌಇಇ. IX–ii, ೪೫೭–೧೦ ; 1455) ; **ಲೊಕ್ಕಿ** ನಿಡಿ ಅನುಭ ಸನುಭ ಅಕ್ಷೀಣಿ ಆಗಾಮಿ × × × ಲ ಪಾಷಾಣ ಸಿದ್ಧ ಸಾಧ್ಯ ಯೇನು ಳಂಥಾದನು ಸರ್ವಮಾನ್ಯವ × × × ರ(ಂ)ಣ್ಯೋದಕದಾನ ಧಾರ ಪೂರ್ವಕವಾಗಿಯೆಬಿದು ಕೊಟ್ಟೆಉ (ಸೌಇಇ. IX–ii, ೪೭೦–೩೭; 1482); ಅಂತು ಗ ೭೩ ಎಪತಮೂರು ವರಹನ ಭೂಮಿಯನು . . . ಮಠ ಧರ್ಮಕ್ಕೆ ನಡಸಿ ಅಷ್ಟಭೋಗ ತೇಜಸ್ವಾಮ್ಯಮ ಪ್ರಾಕು ಮರಿಯಾದೆ ಯಲ್ಲಿ ಆಗುಮಾಡಿಕೊಂಡು ಅಷ್ಟಾದಶಜಾತಿಗು ನಿಡಿ ಮಾಡಿಕೊಂಡು . . . ಸುಖದಿಂ ಅನುಭವಿಸಿ ಬಹಿರಿ (ಎಕ. VIII, ತೀರ್ಥಹ. ೬೨–೨೮; 1635) ; ಆರೈದು ನೂತ ಕುಕ್ಕಡಿಯ ತಂದು ಮೂರೇಳು ಸಾಸಿರದರು ನೂರು ನಿಡಿಯ ಸೇರಿಸಿ ಹೊಯ್ದು ಸಣ್ಣಡಿಯ ಹುಂಜ ಈರೈದು ಹಣಗೆಯಿಂ ನೇಯ್ದು ಚಿತ್ಕೊಡೆಯ (ಮೈಲಾರ. ೯೦–೧). [ ? ]

**ನಿಡಿಗಣ್** ‘ನಿಡುಗಣ್’ ನೋ.

**ನಿಡಿಗಣ್ಣ** ‘ನಿಡುಗಣ್ಣ’ ನೋ.

**ನಿಡಿಗಣ್ಣು** ‘ನಿಡುಗಣ್’ ನೋ.

**ನಿಡಿಗರುಳು** ‘ನಿಡುಗರುಳ್’ ನೋ.

**ನಿಡಿಗಲ್ಲು** ‘ನಿಡುಗಲ್’ ನೋ.

**ನಿಡಿಗುರುಳ್** ‘ನಿಡುಗುರುಳ್’ ನೋ.

**ನಿಡಿಗುರುಳು** ‘ನಿಡುಗುರುಳ್’ ನೋ.

**ನಿಡಿಗೊಂಡೆಯ** (ನಾ). ಉದ್ದವಾದ ಗೊಂಡೆ : ಎನಗೆ ನಿನ್ನನೊಲಿಸ ಬೇಕೆಂಬ ಸಂಭ್ರಮದ ಕಾಂಚೀದಾಮ ಕಟಿಸೂತ್ರ ಕೇಯೂರ ನಿಡಿ ಗೊಂಡೆಯ[ಪಾಠಾಂ. ನಿಡುಗೊಂಡೆಹ]ವೆಂಬಾಭರಣ ಅನುಲೇಪನ ವಸ್ತ್ರಂ ಗಳೆನಗೆ ಅಲಂಕಾರವಾಯಿತ್ತು (ಘನಪ. ೨–೧).

[ನಿಡಿ$_1$ (<ನಿಡಿದು$_1$) + ಗೊಂಡೆಯ]

**ನಿಡಿಗೊರಲು** ‘ನಿಡುಗೊರಲ್’ ನೋ.

**ನಿಡಿದು$_1$** (ನಾ). ೧. ಉದ್ದವಾದುದು ; ನೀಳವಾದುದು : “ನಿಡಿದೆಂದೆನಲ್ ಪಿರಿದುದ್ದವಾದುದು” (ಕಶರ. ೫೫) ; ನಕುಲನಂ ತೊಟ್ಟಿಲ ಸಮಾಪದೊಳ್ ನಿಡಿದಪ್ಪ ನೇಣಂ ಕಟ್ಟಿ ಪೋದಂ (ಪಂಚತಂ. ೧೮೮–೨೦) ; ನಿಡಿದೊಂದು ಕೋಲನು ಕಡಿದು ಎರಡು ಮಾಡಿ . . . ಹೊಸೆದೊಡೆ ಹುಟ್ಟಿದ ಕಿಚ್ಚು ಹೆಣ್ಣೋ ಗಂಡೋ (ದೇದಾವ. ೬೯–೧೪೪); ನಿಡಿದಾದ ಕಪ್ಪುಗಣ್ಗಳ ವಾರನಾರಿಯರಡಿಯಿಟ್ಟರು (ಮೋಹತ. ೧೫–೨೭). ೨. ವಿಸ್ತಾರವಾದುದು ; ವಿಶಾಲವಾದುದು : ಕನ್ನಡನುಡಿಯ ನಿಡಿದಾದ ಬೆಳವಣಿಗೆಯಲ್ಲಿ ಜನಭಾಷೆಯ ಸ್ವರೂಪ ವಿವಿಧ ಶತಮಾನಗಳಲ್ಲಿ ಹೀಗೇ ಇತ್ತೆಂದು ಹೇಳುವುದು ಸದ್ಯದ ಪರಿಸ್ಥಿತಿಯಲ್ಲಿ ಕಷ್ಟಸಾಧ್ಯವಾಗಿದೆ (ದ್ರಾವಿವಿ. ೭೩). ೩. ದಪ್ಪವಾದುದು ; ಸ್ಥೂಲ ವಾದುದು : ನಡು ನಿಡಿದಲ್ಲದೆಯುಂ ಮೇಣ್ ಕಡುಕಿಱಿದಲ್ಲದೆಯು ಮೊದಮಿ ಸಿಂಹದ ಕಟಿವೋಲ್ ಕಡು ಚೆಲ್ವೆನೆ ಕಟಿ ಕಪ್ಪೆಯ ಪೊಡೆವೊಡೆ ವೋಲ್ ತೋರ್ಪೊಡೆವೊಡಾತಂ ಧನ್ಯಂ (ಲೋಕೋಪ. ೧೧–೪). ೪. ವಿಸ್ತಾರ; ಹರಹು: ನುಡಿಗೆ ಗಿಣಿ ನಿಲದೆ ಮರನೇಱಿದವು ಕಣ್ಣುಗಳ ನಿಡಿದು[ದಿ]ಗೆ ಮಿಗಂ ಪುಲ್ಲ ಕಚ್ಚಿದುವು(ನಂದಿಮಾ. ೯–೩೭). ೫. ನೀಳ ; ದೀರ್ಘತೆ : “ಚೆಲ್ಲಿಯೆನೆ ನಿಡಿದು” (ಕಬ್ಬಿಕೈ. ೫೦) ; ಎಡಹಿದೊಡಿಲ್ಲ ನಿದ್ರೆ ನಿಡಿದಾದೊಡಮಿಲ್ಲುಸಿರಿಕ್ಕುತಿರ್ಪುಸಿರ್ ತಡೆದೊಡಮಿಲ್ಲ . . . ಕೆಮ್ಮಿದೊಡಮಿಲ್ಲದದಸ್ಥಿರಮಿಂತು ಕೆಟ್ಟುಪೋಪೊಡಲಿದಕೇಕೆ ಕಾಮ (ಪಂಪಾಶ. ೮೩) ; ದೊಡ್ಡ ಸಿಂಹಗಳು ಮೂಗಿನ ತುದಿಯಿಂದ ಬಾಲದ ತನಕ ಐದು ಐದೂವರೆ ಮೊಳ ನಿಡಿದು ಇರುತ್ತವೆ (ಮುಂಬಯಿ. ೪–೨೦೮).

**ನಿಡಿದಾಗು** = ಉದ್ದವಾಗು : ಸ್ಥೂಣತೀತಿ ನಿಡಿದಾದಪುದೆಂಬುದು (ಕಾಶಕ್ಯ. ೩೭). **ನಿಡಿದು ಮಾಡು** = ಉದ್ದಮಾಡು : ಕೂಸುವೆರಸಿದ ಕುಬ್ಜಾಕಾರಮಂ ಕೈಕೊಂಡು ಬರೆ ತಜ್ಜನಂಗಳ್ ನೋಡಿ ನಗೆ ವಿಗುರ್ವಣೆಯಿಂ ಕೆಲಂಬರ ಘ್ರಾಣಮಂ ಸೂಕರಘ್ರಾಣದಗ್ರದಂತೆ ನಿಡಿದು ಮಾಡಿಯುಂ . . . ಬಂದು (ಮಹಾನೇ. ೭–೧೩೨ ವ). **ನಿಡಿಯ** = ಉದ್ದವಾಗಿರುವವನು ; ಎತ್ತರವಾಗಿರುವವನು : ತತ್ಕ್ಷೇತ್ರ ಪ್ರಮಾಣಬಲಪ್ರಕಾಶವಿಕ್ರಿಯಾಶರೀರನುಂ ಇರ್ಮೊಟಿ ನಿಡಿಯನುಂ ಶುಕ್ಲ ಲೇಶ್ಯಾಪರಿಣಾಮನುಮಪ್ಪಹಮಿಂದ್ರನಾಗಿರ್ಪನಂ (ಚಾವುಂಪು. ೧೧–೧೧); ನಿಡಿಯುಂ ಚಳತ್ಕೃತಶರೀರಂ ತುಂಗನಾಸಂ . . . ತೌಲಿಗೇಹೋದ್ಭವಂ (ಜಾತಕಿ.೧೭–೭) ; ಕಡುಗುಜ್ಜಂ ಕಪಟಿಮನಂ ನಿಡಿಯಂ ಚಪಳಂ ಸಮಂತು ಸಮಸಂಸ್ಥಾನಂಬಡೆದೊಡೆ ನಿಧಿಪುರುಷಂ (ಲೋಕೋಪ. ೧೧–೨೮). **ನಿಡಿಯಟ್ಟಳೆ** = ಅಗಲವಾದ ಅಟ್ಟಣೆ ; ವಿಸ್ತಾರವಾದ ಅಟ್ಟಳೆ : ಮುಲ್ಲಿಗೆಯ ಬೆಳರ್ವಂದರೋಳಿಯಂತೆಸೆದವದಱೊಳು ತೆಳ್ಪಳುಕಿನ ನಿಡಿ ಯಟ್ಟಳೆಗಳು (ಕುರಾಸಾಂ. ೪–೯೧). **ನಿಡಿಯ ನಾಲಗೆ** = ಉದ್ದವಾದ ನಾಲಗೆ : ನಿಡಿಯ ನಾಲಗೆಯಂ ಪಿಡಿದು ಪೆರ್ಮಡುಗಳೊಳಿದಿರುಂ ಬಟಿಯಮಿಸಿಸುತ್ತುಂ (ಅಜಿಪು.೧೦–೧೧ ವ) ; ಗುಣವಚನದತ್ವಮಿತ್ವಕ್ಕೆ . . . ನಿಡಿಯ ನಾಲಗೆ, ಪಿರಿಯ ಮಗಂ, ಕಿಱಿಯ ಮಗಂ (ಶಮದ. ೧೬೮ ಪ್ರಯೋ). **ನಿಡಿಯ ಭೂತ** = ದೊಡ್ಡದಾದ ಭೂತ : ಕಡಿಖಂಡ ಮಾಡಿ ಕಾನನದೊಳು ಚರಿಸುವ ನಿಡಿಯ ಭೂತಗಳನು ಬರಿಸಿ ಕುಡದೆ ಮಾಣೆನು ತಾನೆಂದಾಗ್ರಹವನು ಪಿಡಿದು ನುಡಿದನಿಂತೆಂದು (ಅಂಜಚ. ೧೩–೭೧). **ನಿಡಿಯ ಮರ** = ಎತ್ತರವಾದ ವೃಕ್ಷ : ಗುಂಡಿಗೆಯು ಮೊಂದು ನಿಡಿಯ ಮರದ ತುತ್ತತುದಿಯೊಳಿರ್ದುದು (ವಡ್ಡಾರಾ.೯೧–೧೬). **ನಿಡಿಯ ಮಾತು** = ಹೆಚ್ಚಾದ ಮಾತು : ನೃಪನ ಮೋಹದ ಭಕ್ತ ನಿಡುಮಾರದೇವಯ್ಯನೊಡನೆ ವಾದಿಸಿ ಸೋಲ್ತ ಶ್ರಮಣಪಡೆಯನೆಲ್ಲವ ತಡೆಗಡಿದನೆಂಬುದ ಕೇಳಿ ನಿಡಿಯ ಮಾತೇನೆಲೊ ನಿನಗೆ (ಭೈರವೇ. ೫–೬೧). **ನಿಡಿಯರ್** (ಬಹುವ) : ಕಡುಗಲಿತನಮುಂ ಚಾಗದ ಪಡೆಮಾತುಂ ವಿದ್ಯೆಯುಂ ಕರ್ಮೊರ್ವನೊಳೆಂತುಂ ನಡೆಯವು ಭುವನಾಂತರದೊಳ್ ನಿಡಿಯರ್ಗಂ ನಿಡಿಯರೊಳರದೇಂ ವಿಸ್ಮಯಮೇ[ಪಾಠಾಂ. ನಿಡಿಯಂಗಂ ನಿಡಿಯನೊಳವಿದೊಂದಚ್ಚರಿಯೇ] (ಆದಿಪು. ೧೨–೧೦೪) ; ಲೋಕದೊಳ್ ಕವಿಗಳುಂ ಚಾಗಿಗಳುಂ ಒರ್ವರೊರ್ವರ್ಗೆ ನಿಡಿಯರ್ಗೆ ನಿಡಿಯರೊಳರ ದೇನಪೂರ್ವಂ (ಧರ್ಮಾಮೃ. ೪–೨೧೯) ; ಧರೆಯೊಳು ನಿಡಿಯರ್ಗಂ ನಿಡಿಯರುಂಟು ಚೂಡಾರತ್ನ (ನೀತಿಸಾ. ೨೩೦). **ನಿಡಿಯ ರಸ** = ಹೆಚ್ಚಾದ ರಸ ; ಅಧಿಕವಾದ ರಸ : ತುಡುಕಿ ತರಣಿಯನಗಿವ ರಾಹುವಿ ನೆಡಬಲದ ಕಟವಾಯಲೊಸರುವ ನಿಡಿಯ ರಸವೆನಲೆಸೆವ ದಾಡೆಯ ಹುರಿಯ ಹುಬ್ಬುಗಳ . . . ರಕ್ಕಸರಾಯನೆಸೆದಿರ್ದ (ತೊರರಾ. ೩–೭–೩). **ನಿಡಿಯಲರ್ಗಣ್** = ನೀಳವಾದ ಹೂವಿನಂತಿರುವ ಕಣ್ಣು : ನಿಡಿಯಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯಪ್ಪುವು (ಕಾವ್ಯಸಾ. ೧೭೮ ಶೂದ್ರಕ) ; ಉಂಕೆ ಪೊಳೆವ ನಿಡಿಯಲರ್ಗಣ್ಗಳ್ಗೆ ಮಳಮಳಿಪ ನೋಟಮುಮನುಂಕೆ ತೊದಳಿ ಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕೆಯಿಂ ತಳೆಯೆ ನೆಱೆಯೆ ಕೆಯ್ಗೆಯ್ದು (ಪಂಪಭಾ. ೭–೮೧ ವ) ; ಆ ಸುಕುಮಾರನನೀಕ್ಷಿಪ ನೀಱೆಯ ನಿಡಿಯಲರ್ಗಣ್ಪೊಗರು (ಜಯಕಾ. ೪–೧೪). **ನಿಡಿಯಲರ್ಗಣೆ** = ಉದ್ದವಾದ ಹೂವಿನ ಬಾಣ : ವಿಟರಂ ಬಿಡದಿಸಲ್ ತೆಗೆದ ಮದನನ

ನಿಡಿಯಲರ್ಗಣೆಗಳನೆ ಪೋಲ್ತು ವಾಕೆಯ ಕಣ್ಗಳ್ (ಕಾವ್ಯಾವ. ೧೫೦). **ನಿಡಿಯವು (ಬಹುವ)** = **೧.** ಉದ್ದವಾದುವು : ಕಾಯ್ದ ಕರ್ಬೊನ್ನ ನಿಡಿಯವುಂ ತೋರವುಮಪ್ಪ ಕೀಲ್ಗಳಿಂದಂ ಮೆಯ್ಯೆಲ್ಲವುಂ ನಿರಂತರ ಮುರ್ಚೆ ಪೋಗಿ (ಪಡ್ಮಾರಾ. ೫೦-೬); ಕಡುನಿಡಿಯವಹ ಜಾಜುವೆಟ್ಟ ದಲಡಿವಡೆದು ನಡೆತಂದವೋಯೆನೆ . . . ಚಾಣೂರಮುಖ್ಯರು ನಡೆದುಬಹ ಹವಣಿಯೆ ತದಾಸ್ಥಾನವನು ಮೆಚ್ಚಿಸಿತು (ಸಾಳ್ವಭಾ.೨೨-೫೪); ಇನಿಯವು, ಪಿರಿಯವು, ಕಡಿಯವು, ನಿಡಿಯವು, ಕಿಱಿಯವು (ಶಬ್ದಾನು. ೨೩೬ ಪ್ರಯೋ). **೨.** ಎತ್ತರವಾದುವು : ನಾಲ್ವತ್ತೊಂಬತ್ತು ದಿವಸದೊಳ್ ಸಮಚತುರಸ್ರಸಂಸ್ಥಾನ ಸಂವಾಹನಂಗಳಱುಸಾಸಿರಬಿಲ್ ನಿಡಿಯವಾಗಿ ದಿನತ್ರಯದೊಳ್ ಬದರೀಫಳ ಮಾತ್ರಾಹಾರಿಗಳುಂ . . . ಆಗಿ (ಆಪಿಪು. ೫-೪೧). **ನಿಡಿಯಸಿಯೊಱೆ** = ಉದ್ದವಾದ ಕತ್ತಿಯ ಒರೆ,—ಕೋಶ: ಪಿಡಿಕೆಯಗ್ ತೀವಿದ ಕೂರ್ಗಣೆ ಮಡಕಾಲ್ವರಮುಲೆವ ಕಚ್ಚೆ ನಿಡಿಯಸಿಯೊಱೆ . . . ಬೆಡಂಗನೊಳಕೊಳ್ಳೆ (ಪಂಪಭಾ. ೧೦-೭೧). **ನಿಡಿಯ ಸೊಬಗು** = ಅತಿಶಯವಾದ ಸೊಬಗು,—ಚೆಲುವು : ಅಡಗಿದವಾ ಕೋಕಿಲಗಳ ನುಡಿಗಳು ಒಡೆದವು ತರುನಿಕರಗಳು ಬಡವಾದಳು ಭಾಗೀರಥಿ ಲೋಕದ ನಿಡಿಯ ಸೊಬಗು ಮಸುಳಿಸಿತು (ಅಂಜಚ. ೪-೧೪೦). **ನಿಡಿಯಳ್** = ಎತ್ತರವಾಗಿರುವವಳು : ಕಡು ನಿಡಿಯಳ್ ಕರಮೆ ಗುಜ್ಜೆ ಮೇಣ್ ಕರಮುಸಿಯಳ್ ಕಡುದೊಡ್ಡೆಯೆನಿಪ್ಪೊಡಂ ನೋಟಿಪ್ಪೊಡೆ ಪುರುಷಾಕಾರೆಯಪ್ಪೊಡಂ ಕಪ್ಪೆಯವಳ್ (ಲೋಕೋಪ. ೧೧-೬೦) ; ನಿಡಿಯಂ, ನಿಡಿಯಳ್ (ಶಬ್ದಾನು. ೧೬೭ ಪ್ರಯೋ). **ನಿಡಿಯೆಸಟ್ಟಿಗ್** = ನಿಡಿಯಲರ್ಗಣ್ : ನಾಸಿಕಮುದ್ದಂ ಬಂದಂದಮನೀಕ್ಷಿಸಿ ಪೆಱನಿಂ[ದಂ]ದೀಕ್ಷಿಸು[ವು]ವವಳ ನಿಡಿಯೆಸಟ್ಟಿಗ್ಗಳ್ (ಕವಿಾ. ೩-೨೩೩). **ನಿಡಿಯೊಡಲು** = ದೊಡ್ಡದಾದ ಶರೀರ ; ದೀರ್ಘಕಾಯ : ನಿಡಿಯೊಡಲ ಮುರಿವಿಾಸೆಗಳ ಕೆಂಪಡರ್ದ ಕಂಗಳ ಹೊಳೆವ ದಾಡೆಯ ದಡಿಗದಾನವ (ಕುಮಾರವ್ಯಾಸ. ೧೫-೪೪); ಅಂಬುಧಿಯ ನಿಡಿಯೊಡಲನುಱೆ ಬಗಿದಂಬರವ ಚುಂಬಿಸುವ ರಚನಾಡಂಬರದ ವಡಬಾಗ್ನಿಯವೊಲುಪ್ಪರಿಸಿದನು ಹನುಮ (ತೊರರಾ. ೫-೫-೨೫). **ನಿಡು ಬೊಂಬೆ ಪಟ್ಟೆಪಚ್ಚಡ** = ದೊಡ್ಡದೊಡ್ಡ ಗೊಂಬೆಗಳ ಚಿತ್ರವಿರುವ ರೇಷ್ಮೆ ವಸ್ತ್ರ : ನಿಡುಬೊಂಬೆಪಟ್ಟೆಪಚ್ಚಡವಿತ್ತು ವೀಳೆಯಗೊಡುತ ಜಾಳಿಗೆ ನೂಱಗೊಟ್ಟ (ಭರಚ.೨-೯೯).

[**ದೇ.**‖ **ತಮಿ.** ನೆಟ್ಟೆವಗ್, ನೆಟ್ಟು, ನೆಟ್ಟೃ ; **ಮಲ.** ನೆಡು, ನಿಡು ; **ತುಳು.** ನಿಡಿ, ನಿಡು, ನೆಡಿ ; **ತೆಲು.** ನಿಡಿವಿ, ನಿಡು, ನಿಡುದ, ನಿಡುಪು]

**ನಿಡಿದು$_2$** (ಅ). **೧.** ಎತ್ತರವಾಗಿ ; **ಉತ್ತುಂಗವಾಗಿ** : ನಿಡಿದಡರೆ ಮಿಗೆ ಬಳೆದ ಮೊಲೆಗೊಡನುಂ ಪೊಱವಾಱುಮೊಲೆಗೆ ಮಾಮಿಡಿಯಂಚೆಲ್ವೊಡರಿಸಿರೆ ನಿಳ್ಕೆ ನೀಂ ತಿಱುವೆಡೆಯೊಳ್ ತೆಱವಾದುದಲ್ತೆ ಲಲಿತಲತಾಂಗಿ (ಪಾರ್ಶ್ವಪು. ೯-೪೭). **೨.** ದೃಢವಾಗಿ ; ಗಾಢವಾಗಿ.

**ನಿಡಿಯಪ್ಪು** = ದೃಢವಾಗಿ ಅಪ್ಪು ; ಗಾಢವಾಗಿ ಆಲಿಂಗಿಸು : ನಂಬುಗೆ ತತ್ತ್ವಾರ್ಥಮನವಳಂಬಿಸಿ ನಿಡಿಯಪ್ಪೆ ಸಮಿತಿಗಕ್ಕುಂ ಪರ್ಯಾಯಂ ಬಿಡಿದು ಕ[ಡೆ]ಯ ನಿರ್ವಾಣಂಬರಮಂತೆಯ್ದೆ ಸಪ್ತಪರಮಸ್ಥಾನಂ (ವರ್ಧಮಾ. ೬-೩೦). [<ನಿಡಿದು$_1$]

**ನಿಡಿದೇಹ** (ನಾ). ನೀಳವಾದ ಶರೀರ ; ದೀರ್ಘಕಾಯ : ನಿಡಿದೇಹ ಸ್ವರ್ಣಚ್ಛಾಯೆ ಮಂಜಿಷ್ಠೆ ಬಾಯ್ಬಿಡುವ ಪೆಣ್ಮೀನ ತಂದವಳು ಪಿಡಿನಡುವಿನ ಮಾಯಾಂಗನೆಗಿತ್ತು (ಮೋಪತ. ೧೧-೩೭).

[ನಿಡಿ$_1$(<ನಿಡಿದು$_1$)+ದೇಹ]

**ನಿಡಿದೋಳ್** 'ನಿಡುದೋಳ್' ನೋ.

**ನಿಡಿದೋಳು** 'ನಿಡುದೋಳ್' ನೋ.

**ನಿಡಿನಾಲಗೆ** 'ನಿಡುನಾಲಗೆ' ನೋ.

**ನಿಡಿನಿಲ್** (ಕ್ರಿ). ನೆಟ್ಟಗೆ ನಿಲ್ಲು ; ಎತ್ತರವಾಗಿ ನಿಲ್ಲು : ಮಡಿವಸನವನುಟ್ಟು ಪೂರ್ವದಿಗ್ವನಿತೆಯ ಮುಡಿಯೊಳು ಹೊತ್ತ ಹೊಂಗಳಸ ನಿಡಿನಿಂದ ರಥದ ಮೇಲಡರ್ಚಿದ ರನ್ನಗನ್ನಡಿಯಂತೆ ಸೂರ್ಯ ಮೂಡಿದನು (ಮೋಹತ. ೧೮-೧೦೯). [<ನಿಡಿದು$_2$+ನಿಲ್]

**ನಿಡಿಯಮಾರ** (ನಾ). ಒಬ್ಬಾತನ ಹೆಸರು : ನಿಡಿಯಮಾರ[ಂ] ಪಡೆದೊನ್ (ಕಇ. I, ೪-೬ ; ಸು. 8ನೆಯ ಶತ). [ ? ]

**ನಿಡಿಲು, ನಿಟಿಲು$_2$** (ನಾ). [ ? ] : ಮರ ನೆಕ್ಕಿ ನಿಡಿಲು ಹಾಡಿ ಹಕ್ಕಲು (ಸೌಇಎ. ೧೯೩೨, ೩೧೯-೮ ; 1336) ; ಮಾದವ ಕಲ್ಲಂಬಿಯ ಕಯ್ಯಲು ಅರಸು ಭಂಡಾರಿ ತಾ ಕೊಂಡು ಬಾಳು ನೀರು ತೋಟ ಮನೆ ಮಕ್ಕಿ ಮ[ರ]ನೆಕ್ಕಿ ನಿಡಿಲು ಯಿಂತಿನಿ × × × ತಂನ ಹೆಸರಲು . . . ನೀರ ನೆಱದು ಬಿಟ್ಟನು (ಸೌಇಇ. IX-ii, ೪೦೭-೩೦ ; 1364) ; ಮನೆಯ ಹಿಂದಣ ಬೆಟ್ಟು ತಿಪ್ಪೆ ಮಕ್ಕಿ ಮೆಕ್ಕೆ ಬಯಲು ಕಳೆ ಕೆಱೆ ಮಕ್ಕಿ ಮರ ನೆಕ್ಕಿ ನಿಡಿಲು ನಿಧಿ ನಿಕ್ಷೇಪ . . . ಸಹಿತವಾಗಿ(ಸೌಇಇ.IX-ii, ೪೨೩-೧೮; 1400). **ನಿಟಿಲು$_2$** : ಒಳಗಣ ಚತುಸೀಮೆಯಿಂದೊಳಗುಳ ಮಕಿ × × × ರ ನಿಕಿ ನಿಟಲು ನಿಧಿ ನಿಕ್ಷೇಪ ಜಲ ಪಾಶಾಣ ಸಿಧ ಸಾಧ್ಯ ಅಕ್ಷಿಣಿ ಅಗಾಮಿಯಿಂಡಿಕವಾದಯಿಂತೀ ಅಷ್ಟಭೋಗಕ್ಕೆ ಬಹ ಸಾ(ಂ)ಮ್ಯ ಸಹಿತವಾಗಿಯೆಱದು ಕೊಟು (ಸೌಇಇ. IX-ii, ೪೧೯-೧೮ ; 1380). [ ? ]

**ನಿಡಿವಲೆ** 'ನಿಡುವಲೆ' ನೋ.

**ನಿಡಿವಾಸೆ** 'ನಿಡುವಾಸೆ' ನೋ.

**ನಿಡಿವುರ್ವು** 'ನಿಡುವುರ್ವು' ನೋ.

**ನಿಡಿಹುಲ್ಲು** (ನಾ). ಎತ್ತರವಾಗಿ ಬೆಳೆಯುವ ಒಂದು ಬಗೆಯ ಹುಲ್ಲು : ನಡೆದಂತೆಲ್ಲ ಕುರುಚಲುಹುಲ್ಲುನೆಲ ನಿಡಿಹುಲ್ಲು ತುಂಬಿ ಪೊದರುನೆಲವಾಯಿತು (ಹಸುಹೊ. ೧೬೮).

[ನಿಡಿ$_1$(<ನಿಡಿದು$_1$)+ಹುಲ್ಲು(<ಪುಲ್)]

**ನಿಡು** 'ನಿಟ್' ನೋ.

**ನಿಡುಂಗೊಂಡೆ** (ನಾ). ಒಂದು ಊರಿನ ಹೆಸರು ; ☞ ಈಚೆಗೆ ಸಿಕ್ಕಿರುವ ೧೦ನೆಯ ಶತಮಾನದ ಜಿನವಲ್ಲಭನ ಶಾಸನದಲ್ಲಿ ಈ ಶಬ್ದ ಬಂದಿದೆ: ಸ್ವಸ್ತಿ ಸಮಸ್ತ ಸಕಳಕಳಾಳಾಪಪ್ರವೀಣಂ . . . ಶ್ರೀವತ್ಸಗೋತ್ರಂ ಗುಣ್ಪೆಕಜ್ಜ ನಿಡುಂಗೊಣ್ಡೆಯಭಿಮಾನಚಂದ್ರನ ಮರ್ಮಂ ಭೀಮಪಯ್ಯನ ಬೆಳ್ವೊಲದಣ್ಣಿಗೆಱೆಯ ಜೋಯಿಸ ಸಿಂಘನ ಮರ್ಮ[ಂ] (ಪ್ರಕರ್ಣಾ: ೫೦-೩-೬೯). 'ನಿಡುಗುಂದ' ಪರಾ. [ ? ]

**ನಿಡುಂಬರೆ** (ನಾ). ಸಿಪಾಯಿಗಳಿಗಾಗಿ ಕಟ್ಟಿದ ಪಾಳೆಯ ; ದಂಡಿನ ಪಾಳೆಯ : ತಮ್ಮ ರಾಜ್ಯದಲ್ಲಿ ನಿಡುಂಬರೆ ಕಟ್ಟುವ ಕೆಲಸದಲ್ಲಿ ಮುನ್ನೂರು ಚೆಲುವಾನು ಆಳು ಉಂಟಷ್ಟೆ (ರಾಜೇಂದ್ರ. ೭೫).

[←**ತುಳು.** ಸಿಡುಂಬರೆ, ನಿಡುಂಬರ]

**ನಿಡುಕ** (ನಾ). **೧.** ಉದ್ದವಾಗಿರುವವನು ; ಎತ್ತರವಾದ ಶರೀರವುಳ್ಳವನು : ಕ ಪ್ರತ್ಯಯಕ್ಕೆ—ಬಡಕಂ, ನಿಡುಕಂ, ಒಣಕಂ (ಶಮದ. ೨೦೫ ಪ್ರಯೋ); ನಾತಿದೀರ್ಘಃ—ಅತಿ ನಿಡುಕನಲ್ಲದಾತಂ (ಪ್ರಕಟೀ.೫-೪). **೨.** ಗೊಮ್ಮಟಮೂರ್ತಿ : ಬಿಳಿಯ ಕೊಳದ ಕಾರಕಳದ ನಿಡುಕರೆನಿತೊ ಬಂಧುರಂ ! (೧೪ಮಿಂ. ೮೧-೩೭); "ನಿಡುಕರು = ನಿಡುನಿಂದಿರುವ ಗೊಮ್ಮಟಮೂರ್ತಿಗಳು" (೧೪ಮಿಂ. ಟಿಪ್ಪಣಿ).

[ನಿಡು(<ನಿಡಿದು$_1$)+-ಕ$_3$]

**ನಿಡುಕರ** (ನಾ). ಉದ್ದವಾದ ಕೈ ; ನೀಳವಾದ ಹಸ್ತ : ನಡೆದು ಬಂಡಿಗಳನೆರಡುಮಂ ಕಡಿದು ತರ್ಕೈಸಲು ಬಯಸಿದಾ ನಿಡುಕರಂಗಳ ನರಿದು (ಬಸಪು. ೮೫-೨೯). [ನಿಡು(<ನಿಡಿದು$_1$)+ಕರ$_3$]

**ನಿಡುಕುಂಗೋೞ್**(ನಾ). ( ? ) : ಕೆಕ್ಕಳಗಣ್ ಕೆದಱಿದ ಕೆಂಗೂದಲ್ ಮೊಕ್ಕ ನೊಸಲ್ ನಿಡುಕುಂ[ಪಾಠಾಂ. ನೆನುಕುಂ]ಗೋೞ್ ಬಿಡುಬಾಯ್ಗಳ್ . . . ಎಸೆವ ಪಲ ರಕ್ಕಸಿಯರ ತಂಡಂ ನಡೆತಂದುದು ತದ್ಧರಧರಣಿಯೊಳು (ಜಯಕಾ. ೭-೨೭). [ ? ]

**ನಿಡುಕೊರಳು** 'ನಿಡುಗೊರಲ್' ನೋ.

**ನಿಡುಕೋಲ್** 'ನಿಡುಗೋಲ್' ನೋ.

**ನಿಡುಗಂಪು** (ನಾ). ಹೆಚ್ಚಾದ ಸುವಾಸನೆ ; ಅತಿಶಯವಾದ ಕಂಪು : ಎಡೆಯಾಡುವಂಗನೆಯರ ಪದದಳಿರ್ಗೆಂಪು ಕೊಡಹಿದ ನಿಡುಮುಡಿಯಲರ ನಿಡುಗಂಪು (ಕಂನವಿ. ೬-೯೬).

[ನಿಡು(<ನಿಡಿದು$_1$)+ಕಂಪು]

**ನಿಡುಗಂಬ** (ನಾ). ಉದ್ದವಾದ ಕಂಬ ; ದೊಡ್ಡ ಸ್ತಂಭ : ಪಿರಿದಪ್ಪ ಕಲ್ಲ ನಿಡು[ಪಾಠಾಂ. ಕಡು]ಗಂಬಮನೊಂದೆ ಕರಾಗ್ರದಿಂದಮೆತ್ತಿದ . . . ಅದಟೆದು ಪೋದುದೇ (ಪರ್ಶಪು. ೩-೧೫); ಮೃಗಾಕ್ಷಿ ನಿಂದೀಕ್ಷಿಸು ತಿರ್ಪೆಡೆಯೊಳ್ ಪೋಲ್ತಳ್ ನೀಲದ ನಿಡುಗಂಬದೊಳವುರ್ದ ಪೊನ್ನ ಪೊಸ ಪುತ್ಥಳಿಯಂ (ಪುಷ್ಪಪು. ೫-೩೧) ; ಗಿರಿಯೆಂಬ ನಿಡುಗಂಬದ ಕೊನೆಯೊಳು ಹೊತ್ತಿಸಿದ ಹೆಜ್ಜೊಡರೆಂದೆಂಬ ಮಾಳ್ಕೆಯೊಳು . . . ನಡುಬೊತ್ತಿನೊಳೆಸೆದುದು ಬಿಂಬಮಂಭೋರುಹಸಖನ (ಶ್ರೀಪಾಲ. ೪-೪೮) ; ಘನಕೇಶಪಾಶ ಸಡಿಲಿ ಮುಡಕಿಳಿದೊರ್ವ ವನಿತೆ ನಿಂದೀಕ್ಷಿಸುತೆಸೆದಳು ಜನಪ ಕೇಳ್ನೀಲದ ನಿಡುಗಂಬದೊಳೊಂದಿ ಮಿನುಗುವ ಪೊನ್ನ ಪುತ್ಥಳಿಯಂತೆ (ತ್ರಿಭುತಿ. ೧೧-೨೦). [ನಿಡು(<ನಿಡಿದು$_1$)+ಕಂಬ$_1$(<ಕಂಭ)]

**ನಿಡುಗಡಿ**(ಕ್ರಿ). ನೇರವಾಗಿ ಕಡಿ ; ನೆಟ್ಟಗೆ ಕತ್ತರಿಸು : ದಮಿತಾರಿಯ ರಥಚಕ್ರರಕ್ಷಕರಪ್ಪ ಖಟ್ವಿವೃಂದಂ ಬಳಿಯೊಳ್ ತೊಡರ್ದ ಖಟ್ವಿವೃಂದಮುಂ ಕೂಡುವಿನಂ ನಿಡುಗಡಿದಂತಿರೆ (ಶಾಂತಿಪು. ೪-೪೪ ವ).

[<ನಿಡಿದು$_2$+ಕಡಿ$_2$]

**ನಿಡುಗಡ್ಡ**(ನಾ). ನೀಳವಾದ ಗಡ್ಡ; ದೊಡ್ಡ ದಾಡಿ : ನಿಡುಗಡ್ಡವನು ತೋಱುತ ನಕ್ಕವನು ಭೃಗು ನೀನಲಾಯೆನುತ ಬವರಿಗಡ್ಡವ ಪಱಿದು ಅಗ್ನಿಗೆ ಹವಿಯ ಮಾಡಿದನಿವನಲಾ ನಕ್ಕವನು ಪೂಷನೆನುತ್ತ ಹೊಡೆದನು ಬಾಯ ಹಲು ಕಳೆಯೆ (ಸಿಭಾಗ. ೪-೨-೨೬).

[ನಿಡು(<ನಿಡಿದು$_1$)+ಗಡ್ಡ$_1$]

**ನಿಡುಗಣ್**, ನಿಡಿಗಣ್, ನಿಡಿಗಣ್ಣು, ನಿಡುಗಣ್ಣು (ನಾ). ವಿಶಾಲವಾದ ಕಣ್ಣು ; ನೀಳವಾದ ನೇತ್ರ : ತುಱುಗೆಮೆ ನೀಳ್ದ ಪುರ್ವು ನಿಡುಗಣ್ ಪೊಱೆಯಲ್ಲದೆ ಬಟ್ಟತಪ್ಪ ಬಾಯ್ದೆಱೆ (ಪಂಪಭಾ. ೧-೧೦೮) ; ನಿಱಿದಲೆ ನೀಳ್ದ ಪುರ್ವು ನಳಿತೋಳ್ನಿಡುಗಣ್ ಸುಲಿಪಲ್ (ಧರ್ಮಾಮೃ. ೪-೧೪೨) ; ಚೆಲ್ಲೆಗಣ್ಗಳಲರ್ಗಣ್ಗಳ ನಿಡುಗಣ್ಗಳ ಬೆಡಂಗಿಯರ್ (ಜಗವಿ. ೪-೧೨೪) ; ಅರಳ್ವ ನಿಡುಗಂಗಳ ನಿಹಾರದ ಕರದ ಚಳಕದ ಕಾದ ನಾಸಿಕದೆರಲಿ ಕೆತ್ತುವ ಮಿಸೆಗಳ ಭಟರೆಚ್ಚರುರವಣಿಸಿ (ಕುಸ್ವಾಕ. ೨೩-೫) ; ಮೊಳೆತುದು ಕೋಪಾಗ್ನಿ ಪೊಗೆದುದುಸಿರೊಳ್ ನಿಡುಗಣ್ಗಳ ಕಡೆಯೊಳ್ ಕಿಡಿಗೆದರ್ದುದು ಬಳಿಕಲರ್ದುದು ಮುಖದೊಳ್ (ಶಬಶಂ. ೪-೩೭). **ನಿಡಿಗಣ್** : 'ನಿಡಿಗಣ್ಣ' ಪಠಾ. **ನಿಡಿಗಣ್ಣು** : ನಿಱಿಗುರುಳಳಿ ನಿಡಿಗಣ್ಣಳಿ ಕೆಂಬಾಯಿದೆಱೆಯಳಿ ಕುಡಿಯುರ್ವಿನವಳಿ (ಪರ್ಶಚ. ೩-೧೮) ; ನಿಡಿಗಣ್ಣ ಹುಲ್ಲೆಗಣ್ಣವರ್ . . . ನಗೆನೋಟದ ತೋರಥವಿಮ್ಮಲ್ಲೆಯರೆಯಿದ್ದತೊಗ್ಗಿನಲಿ (ಮೋಹತ. ೨೪-೧೨). **ನಿಡುಗಣ್ಣು** : ನಿಡುಗಣ್ಣನೋಟ ನವರಸಿಕರ ಗೆಲವಿನೋಟ . . . ದ್ವಿಜತನೂಜೆಯ ವಿಲಾಸವು ನಡೇನೆಂಬೆನು (ಸಮ್ಯಕ್ತ್ವಾ. ೬-೧೧) ; ತಾವರೆಯೆಸಳನೇಳಿಪ ನಿಡುಗಣ್ಣು (ಮೋಹತ. ೧೮-೬೨) ; ತವದ ಕಾಮೋದ್ರೇಕದಲಿ ಕೂಡುವ ಸಮಪ್ರಣಯಿಗಳ ನಿಡುಗಣ್ಣೆವೆಗಳರೆಮುಗಿವುತಿರೆ (ಸಾಳ್ವಭಾ. ೮-೩೭) ; ನಿಡುಗಣ್ಣ ಕುಣಿಕೆಯುಮನೊತ್ತಿದೊಡಪಾಂಗದತ್ತಣಿನಿಳಿಗುಮಾ ಜಳಂ (ಕುಮಾಪು. ೪-೨೪೧). [ನಿಡು(<ನಿಡಿದು$_1$)+ಕಣ್]

**ನಿಡುಗಣೆ**(ನಾ). ಉದ್ದವಾದ ಬಾಣ, —ಸರಳು : ಬಿಲ್ವಿಡಿದು ಜೇಗೈದು ನಿಂದು ನಿಡುಗಣೆಗಳಂ ತೆಗೆದೆಚ್ಚು (ಜೈಮಿಭಾ. ೧೨-೨೩).

[ನಿಡು(<ನಿಡಿದು$_1$)+ಕಣೆ$_1$]

**ನಿಡುಗಣ್ಗಱಿವಕ್ಕಿ** (ನಾ). ಗರಿಯಲ್ಲಿ ನೀಳವಾದ ಕಣ್ಣುಗಳನ್ನು ಉಳ್ಳ ಹಕ್ಕಿ ; ನವಿಲು ; ಸೋಗೆ : ನುಡಿವಕ್ಕಿಯ ಬೆಳುದಿಂಗಳ ಹಕ್ಕಿಯ ನಿಡುಗಣ್ಗಱಿವಕ್ಕಿಯ ಬಳಗಂ ಬಳಸಿದುದಾ ನೃಪಸತಿಯ (ಜಯಕಾ. ೨-೧೮). [ನಿಡುಗಣ್+ಗಱಿ+ಪಕ್ಕಿ]

**ನಿಡುಗಣ್ಣ**, ನಿಡಿಗಣ್ಣ (ನಾ). ನೀಳವಾದ ಕಣ್ಣುಗಳನ್ನು ಉಳ್ಳವನು : ನಿಡಿದು ಕಣ್ ಆವಂಗೆ ಆತಂ, ನಿಡುಗಣ್ಣಂ (ಶಬ್ದಾನು. ೩೧೦ ಪ್ರಯೋ). **ನಿಡಿಗಣ್ಣ** : ಹಿಡಿದ ಪೂಸರಳುಗಳಿವೆ . . . ನುಡಿವ ಪಿಕಾಳಿಗಳಿವೆ ತಳತಳಿಸುವ ನಿಡಿಗಣ್ಣ ನಿಲ್ಲೆಂದಳಳುತ (ಮೋಹತ. ೯-೩೩).

[ನಿಡುಗಣ್+-ಅ$_7$]

**ನಿಡುಗಣ್ಣೆ** (ನಾ). ನೀಳವಾದ ಕಣ್ಣುಗಳನ್ನು ಉಳ್ಳವಳು : ನಿಡುಗಣ್ಣೆ, ನಿಡುವೆರಲಿ . . . ಬಿಳಿಕಿ, ಮುದುಕಿ (ಶಬ್ದಾನು. ೧೯೪ ಪ್ರಯೋ).

[ನಿಡುಗಣ್ಣ+-ಇ$_2$]

**ನಿಡುಗಣ್ಣು** 'ನಿಡುಗಣ್' ನೋ.

**ನಿಡುಗಯ್** 'ನಿಡುಗೈ' ನೋ.

**ನಿಡುಗರುಳ್**, ನಿಡಿಗರುಳು (ನಾ). ಉದ್ದವಾದ ಕರುಳು ; ದೊಡ್ಡ ಕರುಳು : ನಿಡುಗರುಳ್ಪಂಡ ಮಿದುಳಡಗು ಸುಂಟಗೆ ಮಜ್ಜೆ ಮಾಂಸಂಗಳ ನೆಣಮುಯಂ . . . ರಣರಂಗಂ (ಜೈಮಿಭಾ. ೨೨-೨೩). **ನಿಡಿಗರುಳು** : ಡುರುಳ ದುಶ್ಶಾಸನನ ತೊಡೆಯ ಮೇಲಡಗೆಡಹಿ ಎರಡು ಬಲದತಿರಥರ ಜಱಿದಳಲಿಸಿ ನರಹರಿಯ ಲೀಲೆಯಿಂದವನುರವ ಬಗಿದು ನಿಡಿಗರುಳ ನಿಜಸತಿಗೆ ಮುಡಿಸಿದೆಲ ಭಾಪುರೆ (ಪುರಂದ. ೩-೭೫-೪) ; ತರಳನ ಕೂರ್ಗಣೆಯಿಂದೆ ದೈತ್ಯರ ನಿಡಿಗರುಳೊಡೆಹಾಯ್ದು ಕುಪ್ಪಳಿಸಿ . . . ಭೀಕರವಾಯ್ತು (ಮೋಹತ. ೩೫-೧೪). [ನಿಡು(<ನಿಡಿದು$_1$)+ಕರುಳ್]

**ನಿಡುಗರ್ಪು** (ನಾ). ಅತಿಶಯವಾದ ಕಪ್ಪುಬಣ್ಣ : ಭವದಧರಪುಟಾಂಚಚ್ಛೋಣದಿಂ ರಾಜಸಂ ತ್ವತ್ತ್ವಿಮಲಹಸನಾಂಶುಶ್ವೇತದಿಂ ಸಾತ್ವಿಕಂ ನಿನ್ನೆವೆಗಳ ನಿಡುಗರ್ಪಿಂ ತಾಮಸಂ ಪುಟ್ಟತೆಂದಾಡುವರಖಿಳಮುನೀಂದ್ರರ್ಕೋರ್ತರ್ ಪಂಪಾಭವಾನೀ (ಉದ್ಭಟ. ೩-೧೦೫).

[ನಿಡು(<ನಿಡಿದು$_1$)+ಕರ್ಪು$_1$]

**ನಿಡುಗಲ್**, ನಿಡಿಗಲ್ಲು, ನಿಡುಗಲ್ಲು (ನಾ). **೧.** ನಿಡಿದಾದ ಕಲ್ಲು; ದೊಡ್ಡದಾದ ಶಿಲೆ ; ಹೆಬ್ಬಂಡೆ : ಮರಳಿ ಗಿರಿಗಿರಿಶಿಖರದಲಿ ನಿಬ್ಬರದ ನಿಡುಗಲ್ಗಳಲಿ ಬಲು ಹಾಸಱೆಗಳಲಿ . . . ಬವರದ ಬಿನ್ನಣಗರಚ್ಚರಿಯ ಸಮರೋಚಿತವ ಮೆಱೆದರು (ತೊರಂರಾ. ೪-೪-೨೨). **ನಿಡಿಗಲ್ಲು** : ನಿಡಿಗಲ್ಲು ನಿಶಿತ ಹಾಸಱೆಗಲ್ಲು ಚೌಕದ ಬಡಿಗಲ್ಲು ಬಟುಗಲ್ಲು ಬೀಳೆ . . . ಶ್ರೀಕೃಷ್ಣ ಹುಡಿಯೇಳಲೆಚ್ಚು ಹಾಱಿಸಿದ (ಮೋಹತ. ೪೦-೭೩) ; ಜಡದೊಳಗೆ ಮುಣುಗಿ ದಟ್ಟಡಿಯಾಗಿ ಮುಗನು ಪಿಡಿದು ನಿಡಿಗಲ್ಲಿನಲಿ ವಾಸವಾಗಿ ಗಿಡ ಲತೆ ಎಲೆ ಮೆದ್ದು (ವಿಸಾಸು. ೮೯-೧). **ನಿಡುಗಲ್ಲು** : **೧.** ಅದ್ರಿಯ ನಿಡುಗಲ್ಲುಗಳನದಱೊಳಗೆ ಎಡೆಯಾಡುತಿಹ ದೋಣಿ ದುಗ್ಗಿ ಕಪ್ಪಲು ದೊಡ್ಡ ಹಡಗುಗಳಿರವ ನೋಡಿದರು (ಭರಚ. ೨೩-೯೬) ; ಕರೆಸಿದರು ಹುಡಿಗಲ್ಲು ನಿಡುಗಲ್ಲು ಬಡಿಗಲ್ಲು . . . ಬಿರಿಗಲ್ಲುಗಳನು (ನವಮೋ. ೩೩-೩೩). **೨.** ಒಂದು ಊರಿನ ಹೆಸರು (?) : ಈ ನಿಡುಗಲ್ಲಂ ಕಾವಡೆ ನೀನಲ್ಲ ನಾಮನೆಂದಿರುಂಗೋಳಧರಿತ್ರೀನಾಥನಿತ್ತನೀಯಲ್ಕಿಳ್ದಂ ತಂತ್ರಪಾಳನಾಮಂ ಸುಖದಿ (ಸೌಇಇ. IX—I, ೨೭೦-೫೨ ; 1169) ;

ನಿಡುಗಲ್ಲ ರಾಜ್ಯಕೆ ಮುಖ್ಯವಹ ಸಿವರದ ಪಟ್ಟಣದಲು (ಸೌಇಇ. IX—II, ೪೧೦-೧೮ ; 1365). [ನಿಡು(<ನಿಡಿದು$_1$)+ಕಲ್$_3$]

**ನಿಡುಗಲ್ಲು** 'ನಿಡುಗಲ್' ನೋ.

**ನಿಡುಗವಣೆ** (ನಾ). ಉದ್ದವಾದ ಕವಣೆ; ದೊಡ್ಡ ಕವಣೆ ಮತ್ತು ಅಂತಹ ಕವಣೆಯಿಂದ ಆಡುವ ಆಟ : ಗುಡುಗು ಗುತ್ತಿನ ಚೆಂಡು . . . ಹರಿಹಲಗೆ ನಿಡುಗವಣೆ ಕೆಡಹು ಕುಟ್ಟಿಗನಾದಿಯಾದವ ಗಡ ವಿನೋದದಲಾಡಿದರು (ಕುವ್ಯಾಅ. ೬-೨).

[ನಿಡು(<ನಿಡಿದು$_1$)+ಕವಣೆ$_1$]

**ನಿಡುಗೞಲೆ** (ನಾ). ಉದ್ದವಾದ ಎಳೆಯ ಬಿದಿರು : ನಿಡುಗೞ[ಪಾಠಾಂ. ೞ]ಲೆಯ ಮೊನೆಯಂಚಿನ ಜಡಧರಮೆಸೆದುದು (ಶಬಶಂ. ೩-೩೭).

[ನಿಡು(<ನಿಡಿದು$_1$)+ಕೞಲೆ(<ಕೞುಲೆ)]

**ನಿಡುಗಾರಣೆ** (ನಾ). ಗೋಡೆಯ ಅಂಚಿನಲ್ಲಿರುವ ದೊಡ್ಡದಾದ ಹಸೆಯ ಗೀಟು,—ಕಾರಣೆ: ಹೊರೆದ ಕಸ್ತುರಿಸಾರಣೆಯ ನವಪರಿಮಳದ ಪನ್ನೀರ ಚಳೆಯದ ಪರಿಸರದ ಕುಂಕುಮದ ನಿಡುಗಾರಣೆಯ . . . ಧೂಮಗಂಧೋತ್ಕರಸಮುದ್ರದೊಳದ್ದನೊಲ್ಲದೆ ಪಥವ ಪವಮಾನ (ತೊರರಾ. ೧-೧೩-೫). [ನಿಡು(<ನಿಡಿದು$_1$)+ಕಾರಣೆ$_1$]

**ನಿಡುಗಾಲ್,** ನಿಡುಗಾಲು (ನಾ). ಉದ್ದವಾದ ಕಾಲು : 'ನಿಡುಗಾಲ$_1$' ಪರಾ. **ನಿಡುಗಾಲು :** ಐತಾಳರ ನಿಡುಗಾಲುಗಳು ಬೀಸು ಬೀಸಾಗಿ ನಡೆದವು (ಮರನು. ೮೭). [ನಿಡು(<ನಿಡಿದು$_1$)+ಕಾಲ್$_1$]

**ನಿಡುಗಾಲ$_1$** (ನಾ). ಉದ್ದವಾದ ಕಾಲುಗಳನ್ನು ಉಳ್ಳವನು : ಕುಡುವಿಲ್ಲಂ, ನಾಲ್ಬೋಳಂ, ನಿಡುಗಾಲಂ (ಶಬ್ದಾನು. ೩೨೭ ಪ್ರಯೋ).

[ನಿಡುಗಾಲ್+-ಅ$_7$]

**ನಿಡುಗಾಲ$_2$** (ನಾ). ಹೆಚ್ಚು ಸಮಯ; ದೀರ್ಘಕಾಲ : ಒಂದೇ ಸ್ಥಳದಲ್ಲಿ ನಿಡುಗಾಲ ವಾಸಮಾಡುವುದು ಒಳ್ಳೆಯದಲ್ಲ (ವ್ಯಾಸಪಿ. ೭೬).

[ನಿಡು(<ನಿಡಿದು$_1$)+ಕಾಲ]

**ನಿಡುಗಾಲು** 'ನಿಡುಗಾಲ್' ನೋ.

**ನಿಡುಗಾಲುವೆ** (ನಾ). ಉದ್ದವಾದ ಕಾಲುವೆ; ದೊಡ್ಡ ಕಾಲುವೆ : ಹರಿವ ನಿಡುಗಾಲುವೆಯುನಗಲಕೆ ಜರುಹಿ ರಕ್ಕಸದೋಟಿಗರ ಹೊಯ್ದೊರಸಿ ಬನದಲಿ ಬೀದಿವರಿದಾಡಿದನು (ತೊರರಾ. ೫-೪-೧೪).

[ನಿಡು(<ನಿಡಿದು$_1$)+ಕಾಲುವೆ(<ಕಾಲ್ವಾಯ್)]

**ನಿಡುಗಿಂಡಿ** (ನಾ). ಉದ್ದವಾದ ಗಿಂಡಿ,—ಬಟ್ಟಲು : ಮಿಸುನಿಯ ನಿಡುಗಿಂಡಿ ಕರಂ ಪರಿರಂಜನೆಯಂ ಪಡೆದತ್ತು (ಜಯಕಾ. ೨-೧೫); ಎಡಗೈಯೊಳಾಂತ ಹೊಂಬಟ್ಟೆ ಅಕ್ಷತೆ ಪುಷ್ಪ ನಿಡುಗಿಂಡಿ ಬಲದ ಹಸ್ತದೊಳು ತೊಡಿಗೆಯ ಪ್ರಭೆ ದಿಕ್ಕುದಿಕ್ಕಿಗೆ ಪಸರಿಸಿ ನಡೆಯೆ ನಡೆದನಾ ರಾಯ (ಭರಚ. ೩-೬). [ನಿಡು(<ನಿಡಿದು$_1$)+ಗಿಂಡಿ]

**ನಿಡುಗಿಚ್ಚು** (ನಾ). ಅತಿಶಯವಾದ ಉರಿ,—ಕಿಚ್ಚು : ದಶಕಂಧರನ ನಗರಾಂಗನೆ ವಿರಾಗದಲಿ ಪರಮಪ್ರಾಯಶ್ಚಿತ್ತಕಂಗೀಕರಿಸಿ ಹೊಗಲು ದ್ಯೋಗಿಸಿದ ನಿರ್ಭರದ ನಿಡುಗಿಚ್ಚಿನವೊಲಿರ್ದುದು ದಹನ ರಿಪುಪುರದ (ತೊರರಾ. ೫-೮-೬೪). [ನಿಡು(<ನಿಡಿದು$_1$)+ಕಿಚ್ಚು]

**ನಿಡುಗುಂಡು** (ನಾ). ದಪ್ಪವಾದ ಕಲ್ಲು ; ಹೆಬ್ಬಂಡೆ : ಜಾಳಿಸಿದ ಹದವಿಲ್ಲು ಮುಮ್ಮೊನೆ ಬೋಳೆಗಳ ನಿಡುಗುಂಡುಗಳ ಬಡಿಕೋಲುಗಳ ನೆಕ್ಕಡವನುರು ಪಾರಿಯುದ ಕುಪ್ಪಸವ ಮೇಳವಿಸಿ ಹೊಱವಂಟನವನೀಪಾಲ ಬೇಂಟೆಗೆ (ಕುವ್ಯಾಅ. ೨೩-೮); ಸಾಲ ಮುಗಿಲಟ್ಟಣೆಯ ಡೆಂಕಣೆಯ ಪಂದಿದಲೆಯೋಳಿಗಳ ಮರುಳಕೈಗಳ ತೂಗದೊಲೆಯ ಧ್ವಜಾಳಿಗಳ ನೆಟ್ಟ ಸಬಳಗಳ ನಿಡುಗುಂಡುಗಳ ಸಂದಣಿಯ . . . ದಿವಿಜಪತಿ ಕಂಡು (ಚೆಬಪು. ೪೨-೨೨). [ನಿಡು(<ನಿಡಿದು$_1$)+ಗುಂಡು]

**ನಿಡುಗುಂದ** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀ ನಿಡುಗುನ್ದದ ಮಹಾಜನಕ್ಕೆ ಪತ್ತುಗದ್ಯಾಣಗೊಟ್ಟು (ಎಕ. VI, ಮೂಡಗೆ. ೧೯-೧ ; ಸು. 1025) ; ಆ ನಾಡಿಂದ ಪೂರ ಬಸವನ ಹಳ್ಳಿ ಕೊಡಗಿನಾಡ ಬಾರಸಿ ಹಂನೆರಡು ನಿಡುಗುಂದ ಹಳ್ಳಿಗಳು ಸಹಿತ (ಎಕ. V, ಬೇಲೂರು. ೫೮-೮೨ ; 1117). 'ನಿಡುಂಗೊಂಡೆ' ಪರಾ. [ ? ]

**ನಿಡುಗುಂದಗೆ** (ನಾ). ಒಂದು ಊರಿನ ಹೆಸರು : ನಿಡುಗುನ್ದಗೆ ಪನ್ನೆರಡುಮಾನಾಳುತ್ತಿಬ್ದು (ಎಇ. VII, ೨೧೩-೯ ; 874) ; ನೈಷ್ಠಿಕಸ್ಥಾನಂ ಮಾಡಿ ಪೂರ್ವಭುಕ್ತಿಯೊಳು ನಡೆವ ಪಾನುಂಗಲ್ಲಯ್ನೂಱು ಕಮ್ಪಣಂ ನಿಡುಗುನ್ದಗೆ ಪನ್ನೆರಡಱ ಬಳಿಯ ಪಳ್ಳಿಪುರಂ ತಳವೃತ್ತಿಯಾಗೆ (ಕಇ. I, ೧೭-೩೩ ; ಸು. 1055). [ ? ]

**ನಿಡುಗುಂದಿ** (ನಾ). ಒಂದು ಊರಿನ ಹೆಸರು : ಅದುವೆ ವಸಂತಂ ಕೊಟ್ಟೊರೊದವಿದ ನಿಡುಗುಂದಿ ಮಿಕ್ಕ ವಿಕ್ರಮಪುರವೆಂಬುದುಮಗ್ರಹಾರ ಸಂಪತ್ಪದವಿಗಳೊಳಮಗ್ರಗಣ್ಯನೂರ್ಜಿತಪುಣ್ಯಂ (ಪಂಪಭಾ. ೧೪-೪೧) ; ಅಂದಣಿಗೆಯ ಕಲ್ಲಗಾಂಡನುಂ ನಿಡುಗುಂದಿಯ ಸಮಸ್ತಪ್ರಜೆ ಪಿ(ಹಿ?)ಟ್ಟುಕಾರರುಂ (ಕಕುಲ. ೧೭-೧೫ ; ಸು. 1050); ಅಗ್ರಹಾರಂ ನಿಡುಗುಂದಿಯ ಮಹಾಜನಂ ನಾಲ್ನೂರ್ವರುಂ ಪೂರ್ವಸ್ಥಿತಿಯಿಂ ನಡೆವ ಪಾರಿಖಾಯದ ಹೊಂಗೆ ಮೂಱುವರೆ ವೀಸವಮಂ ಪರಸ್ಥಾನದ ಮಹಾಜನದಭ್ಯಾಗತ ಪೂಜೆಗೆ ಬಿಟ್ಟರು (ಸೌಇಇ. XI-i, ೧೧೭-೪ ; 1076). [ ? ]

**ನಿಡುಗುಡಿ** (ನಾ). ನೀಳವಾದ ಕುಡಿ,—ಚಿಗುರು : ಬಳ್ಳಿವರಿದ ಬಳ್ಳಿವಂದರದ ಬಳ್ಳಿಗಳೊಳ್ ನಿಮಿರ್ದ ನಿಡುಗುಡಿಗಳಳ್ಳಱಯೆ (ಲೀಲಾವ. ೩-೨೧ ವ). [ನಿಡು(<ನಿಡಿದು$_1$)+ಕುಡಿ$_2$]

**ನಿಡುಗುರುಳ್,** ನಿಡಿಗುರುಳ್, ನಿಡಿಗುರುಳು, ನಿಡುಗುರುಳು (ನಾ). =ನಿಡುಗೇಶ : ಮೆಱೆವರ್ ಸುಕುರ್ಳಂಗುರುಳ ಸುಱುಗುರುಳ ನಿಡುಗುರುಳುರುಳಿಗುರುಳ ತುಂಬಿಗುರುಳ ಗೋಪಸ್ತ್ರೀಯರ್ (ಜಗವಿ. ೪-೧೨೫). **ನಿಡಿಗುರುಳ್ :** ನಿಡಿಗುರುಳ್ಗೆಸೆವ ಧೂಪದ ಪೊಗೆಗಳಂ ಕೊಟ್ಟು . . . ಮಧುಪಾನಮಂ ಮಾಡಿ ಕಪ್ಪುರವೀಳೆಯಂಗೊಂಡು ಸೊಗಯಿಸಿದರು (ಜೈಮಿಭಾ. ೩೦-೧೭). **ನಿಡಿಗುರುಳು :** ನಿಱುಗುರುಳ ಸುಕ್ಕುಂಗುರುಳ ನಿಡಿಗುರುಳ . . . ಕೋಮಲೆಯರೆಸೆವಿಡದೊದಗಿ ಬರುತಿರ್ದರು (ಚೆಬಪು. ೩೭-೪೬). **ನಿಡುಗುರುಳು :** ಬಾಲೆವೆಂಗಳು . . . ನಿಡುಗುರುಳಿನ ಮುತ್ತಿನ ಕುಚ್ಚಿನಿಂದ ಬಲ್ಪೆಡಗಾಗಿ ಮೆಱೆದರರ್ತಿಯಲಿ (ಕಂಸವಿ. ೨೪-೪೨).

[ನಿಡು(<ನಿಡಿದು$_1$)+ಕುರುಳ್$_1$]

**ನಿಡುಗುರುಳು** 'ನಿಡುಗುರುಳ್' ನೋ.

**ನಿಡುಗೆಡೆ** (ಕ್ರಿ). ೧. ಉದ್ದವಾಗಿ ಬೀಳು: ನೀಲಗಿರಿಯೆಡೆವೊಕ್ಕುದೆನೆ ಖಳನೋಡಲು ನಿಡುಗೆಡೆಯೆ (ಕುವ್ಯಾದ್ರೋ. ೧೭-೧). ೨. ಅಡ್ಡಬೀಳು; ಸಾಷ್ಟಾಂಗ ಬೀಳು: ಕೃಷ್ಣ ಜಯಜಯಯೆನುತ ನಿಡುಗೆಡೆದ (ಕುವ್ಯಾಭೀ. ೭-೧೬). [<ನಿಡಿದು$_2$+ಕೆಡೆ$_1$]

**ನಿಡುಗೆಱೆ$_1$** (ನಾ). ೧. ಒಂದು ಕೆರೆಯ ಹೆಸರು: ನಿಡುಗೆಱೆಯ ಬಯಲ ನೋಡಿ ಗಱ್ದೆಯ ಎಱೆಯ ಹಯ್ಯ ಪುಣುಸೆಯ ನಡುವೆ ಪದಿನಯ್ದು ಕೊಳಗ ಬೆದೆ ಗಱ್ದೆಯುಂ (ಎಕ. IV, ಹೆಗ್ಗಡ. ೧೬-೧೭ ; 1021). ೨. ಒಂದು ಊರಿನ ಹೆಸರು : ಮೂಡಲು ತಾವರೆಗೆಱೆಯ ತೆಂಕಣ ಕೋಡಿ ಸೀಮೆ ತೆಂಕಲು ನಿಡುಗೆಱೆಯೊಳಗಣಂ ಮೇರೆಯಾಗಿ (ಎಕ. VII, ಶಿಕಾರಿ. ೧೩೮-೪೯ ; 1194). [ನಿಡು(<ನಿಡಿದು$_1$)+ಕೆಱೆ]

**ನಿಡುಗೆಱೆ$_2$** (ನಾ). ಉದ್ದವಾದ ಗೆರೆ,—ಸಾಲು : ನಿಡುಗೆಱೆಯಾಗಿ ನಾಲ್ದೆಸೆಗೆ ಸಾಲಾಗಿ ಚೆಲ್ವಡರಿದ ಸೆಜ್ಜೆವನೆಗಳು ಇಡಿಕಿಱಿದಿದ್ದುವು (ಭರಚ. ೧೫-೨೦). [ನಿಡು(<ನಿಡಿದು$_1$)+ಗೆಱೆ]

**ನಿಡುಗೇರಿ** (ನಾ). ಉದ್ದವಾದ ರಸ್ತೆ; ದೊಡ್ಡ ಬೀದಿ; ಹೆದ್ದಾರಿ : ದಿವ್ಯಭೂಷದೀಪಗಳ ಗಡಣದಿಂ ಗಾಡಿವೆತ್ತೆಸೆದವಾ ನಗರದ ನಿಡುಗೇರಿಗಳೆ ಡೆವಿಡದೆ (ಕುರಾಸಾಂ. ೨೧-೧೭). [ನಿಡು(<ನಿಡಿದು$_1$)+ಕೇರಿ]

**ನಿಡುಗೇಶ** (ನಾ). ಉದ್ದವಾದ ಕೂದಲು; ನೀಳವಾದ ಕೇಶ : ನಿಡುಗೇಶದೊಳು ಮುದ್ರಿಕೆಯೊಳು ಲಾಮಂಚದೊಳು . . . ದೇವಕೀ ತನಯನೊಳು ಬಾಲಕಾಭಿಖ್ಯೆಯುಕ್ಕುಂ (ಮಂಗರಾ. ೧೫೩-೬೧); ನಿಡುಗೇಶವ ಬಗಿಬಗಿದು ಕಮ್ಮೆಣ್ಣೆಯನೊಡನೆಣಿಸಿದು (ಕುರಾಸಾಂ. ೨೯-೮೨); ನಿಡುಗೇಶವಾಜಿಯ ಮಡದಿರನ್ನೆಯರೊಪ್ಪಿದರು (ಕಂನವಿ. ೨೫-೧೩೩); ಮುತ್ತುಮಾಣಿಕವೇಕೆ ಮತ್ತೆ ಕುರುಳುಗಳೇಕೆ ಉತ್ತಮದ ಉಡಿಗೆ ಉಡಲೇಕೆ ನಿಡುಗೇಶ ಕೊತ್ತಿಗೇಕೆಂದ (ಸರ್ವಜ್ಞ. ೧೩೮೭).
[ನಿಡು(<ನಿಡಿದು$_1$)+ಕೇಶ]

**ನಿಡುಗೇಸ** (ನಾ). = ನಿಡುಗೇಶ : ವೀರಶೈವಾಗಮದ ನಡವಳಿಯ ಕುಡಿವರಿಸಿ ಬೆಳಹುವನೆನಿಪ್ಪಂತೆ ನಿಡುಗೇಸ ಕವಲಿಸಿದು ಬೆಳೆದುದು (ಸೌಂದಪು. ೨-೩೦); ತೀರಮುನಡರ್ದ ನಿಡುಗೇಸಂಗಳೊಳ್ ಸುರಿವ ನೀರನಾಱಿಸಿ (ಚೆಬಪು. ೪೫-೬೯). [ನಿಡು(<ನಿಡಿದು$_1$)+ಕೇಸ$_2$]

**ನಿಡುಗೈ, ನಿಡುಗಯ್** (ನಾ). = ನಿಡುಕರ : ತಿಸುಳಿಯಂ ಗೆಲ್ವುದರ್ಕೆ ಮುಡಿಗಿಕ್ಕುವಂತೆ ನಿಡುಗೈಗಳಂ ಮುಡಿಗಿಕ್ಕಿ ನಡೆದು (ಕಬ್ಬಿಕಾ. ೨೩೨). **ನಿಡುಗಯ್ :** ಮಿಂಚುದಲೆ ಒಣಕರುಂ ನಿಡುಗಯ್ಯ ದಡಿಗರುಂ (ವಾಗೀರ. ದೇ. ೨೫೪-೨೨); ರಾಣಿ ಬಂದುದನ್ನು ಕಂಡ ನಾಗಯ್ಯ ಗಂಗರಾಜರು ಎದ್ದು ನಿಂತು ನಿಡುಗಯ್ಯಳಲ್ಲಿ ಬಾಗಿ ನಮಿಸಿದರು (ಸಪತಿ. ೨೭). [ನಿಡು(<ನಿಡಿದು$_1$)+ಕೈ$_2$(<ಕೆಯ್$_2$)]

**ನಿಡುಗೊಂಬು** (ನಾ). ೧. ಉದ್ದವಾದ ಕೊಂಬೆ,—ಟೊಂಗೆ : ತೋರಗೊಂಬಿನ ನೊಗಂ ನಿಡುಗೊಂಬಿನ ಮುಳುಂಕು ಕಣ್ಗೆ ಚೆಲ್ವೆನೆ ನಡೆತಂದುವಂದಸುಗೆಯೆಂಬ ನೆಗಟ್ಟಿಯ ತೇರ್ಗಳ್ (ಕಬ್ಬಿಕಾ. ೨೧೩); ನಿಡುಗೊಂಬಿನೆಲೆದುಱುಗಲ ಪೊದಱ ಪೊರೆಯೊಳ್ ಮೆಯ್ಗರೆದಿರ್ದ ಗಂಧರ್ವ ಸೌಂದರಿ ನೆಲೆವಡೆದಕ್ಷೀಣರೂಪಯಕ್ಷಿಣಿಯಂತೆಸೆಯೆ ಮಿಸುಪ ವಟವಿಟಪಿಯಿಂ (ಶಬಶಂ. ೩-೩೫ ಪ). ೨. ಕೊಂಬಿನಾಕಾರದ ಉದ್ದವಾದ ಒಂದು ವಾದ್ಯ; ಕಹಳೆ : ಚಿನ್ನದ ಚೀಱುಗಳ ನಿಡುಗೊಂಬುಗಳ ಚಿಂಬಕನ ನಿರ್ಘೋಷ ಡೋಱುಗಳೆದುವು ನೆಲನನುದಧಿಯ ಕಾಱಿಸಿದವಡಿ ಮಳಲನೆನೆ ಹುರಿಯೇಱುತಬ್ಬರವಿವರ ಬಲದಲಿ (ಕುವ್ಯಾಕ. ೨೧-೭).
[ನಿಡು(<ನಿಡಿದು$_1$)+ಕೊಂಬು$_1$]

**ನಿಡುಗೊಂಬೆ**(ನಾ). = ನಿಡುಗೊಂಬು ೧ : ಆ ಉದ್ಯಾನದಲ್ಲಿ ಬೆತ್ತಲೆಯ ನಿಡುಗೊಂಬೆಗಳ . . . ವೃಕ್ಷಗಳು ದಟ್ಟವಾಗಿ ಬೆಳೆದಿದ್ದವು (ಪುನರು. ೫೬೩). [ನಿಡು(<ನಿಡಿದು$_1$)+ಕೊಂಬೆ$_1$]

**ನಿಡುಗೊನರು** (ನಾ). = ನಿಡುಗುಡಿ : ಎಸಳ ಕಱುಂಕೆಯೆಳೆಯ ನಿಡುಗೊನರಿಟ್ಟೆಸಿತೋತ್ಪಲಲೋಚನೆಯರ್ ಮಿಗೆ ಸಂತಸದಿಂ ತುಱುಗೆವೆಯೆತ್ತಿ ನಿರೀಕ್ಷಿಸಲ್ (ಜಯಕಾ. ೮-೧೭).
[ನಿಡು(<ನಿಡಿದು$_1$)+ಕೊನರು$_2$(<ಕೊನರ್$_2$)]

**ನಿಡುಗೊನೆ** (ನಾ). = ನಿಡುಗೊಂಬು ೧ : ಮುತ್ತುಗ ನಿಡುಗೊನೆ ನಿಕರ ಹೂವಾದಂತೆ ನೆತ್ತರ ಬಣ್ಣ ತೋಱಿಸಲು ಚಿತ್ತಜನಾತ್ಮಸಂಭವನ ಕೀರ್ತಿಸಿದ ಖಲೋತ್ತಮ ಕಡು ಮೆಚ್ಚಿ ನಗುತೆ (ಮೋಹತ. ೩೫-೪೧).
[ನಿಡು(<ನಿಡಿದು$_1$)+ಗೊನೆ$_2$(<ಕೊನೆ$_2$)]

**ನಿಡುಗೊರಲ್, ನಿಡಿಗೊರಲು, ನಿಡುಕೊರಳು, ನಿಡುಗೊರಲು** (ನಾ). ಉದ್ದವಾದ ಕೊರಳು; ನೀಳವಾದ ಕುತ್ತಿಗೆ : ನಿಡುಗೊರ[ಪಾಠಾಂ. ಡ]ಲೆತ್ತಲ್ ಶರಭಕ್ಕೆ ಕರಭನೆನೆಯೆನಿಸುಗುಮೇ (ಧರ್ಮನಾ. ೧-೫೪); ಸಿಂದರೆಗಣ್ಮುಗಿದಾತ್ಮಚಂಚುವಂ ನಿಡುಗೊರಲಿಂ ಮರಲ್ಚಿ ನಿಜಪಕ್ಷದೊಳೊಯ್ಯನೆ ಸಾರ್ಚಿ (ರಾಜಶೇ. ೬-೯). **ನಿಡಿಗೊರಲು :** ನಿಡಿಗೊರಲ ತುರ್ಪುರವ ಕೆದಱುತವೆಡೆಯೆತ್ತಿ ಪೊಯ್ಯುತ್ತ . . . ಕುಕ್ಕುಟದ ಸರ್ಪಗಳೆರಡು ಹೆಣಗುವವು (ನಾಗಷ. ೧೩-೧೦೦). **ನಿಡುಕೊರಳು :** ಪೇರುರ್ದಂ ನಿಡುಕೊರಳು [ಪಾಠಾಂ. ಗೊರಲು] . . . ಖಂಡಗಳ್ ಕೋಱು ಬಟುವಾಗಿರ್ಪ ವಾರುವಂ ರಾಜವಾಹನಮಪ್ಪ ತೇಜಿಯಕ್ಕುಂ (ಮಂಗರಾ. ೮೪-೨೨). **ನಿಡುಗೊರಲು :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ.
[ನಿಡು(<ನಿಡಿದು$_1$)+ಕೊರಲ್]

**ನಿಡುಗೊರಲು** 'ನಿಡುಗೊರಲ್' ನೋ.

**ನಿಡುಗೊಲೆ** (ನಾ). (ಅಲಂ) ಸಂಪೂರ್ಣ ನಾಶ : ಯಾವ ಭಾರತ ಸ್ತ್ರೀಯು ಸೀತಾ ಸಾವಿತ್ರಿಯರ ಮಟ್ಟಕ್ಕೇರಬೇಕೆಂದು ಆಶಿಸಿದ್ದೇವೋ ಅಂತಹರ ಶೀಲದ ನಿಡುಗೊಲೆಯಾಯಿತು (ಅಮಗಾಂ. ೭೧).
[ನಿಡು (<ನಿಡಿದು$_1$) + ಕೊಲೆ$_2$]

**ನಿಡುಗೊಳ** (ನಾ). ವಿಶಾಲವಾದ ಕೊಳ; ದೀರ್ಘಿಕೆ : ಅದಕ್ಕೆ ಸೀಮೆ ಪಡುವಲುಂ ಬಡಗಲುಂ ನಿಡುಗೊಳಂಗಳೆ ಮೇರೆ (ಎಕ. VII, ಶಿಕಾ. ೧೨೫-೩೮; 1019). [ನಿಡು (<ನಿಡಿದು$_1$) + ಕೊಳ$_2$]

**ನಿಡುಗೋಡು** (ನಾ). ೧. (ಪ್ರಾಣಿಯ) ಉದ್ದವಾದ ಕೊಂಬು,—ನೀಳವಾದ ಶೃಂಗ : ಮಿಗೆ ಬೆಚ್ಚಿಸಿದಂತೆ ಕೋಱುವಗ್ಗದ ನಿಡುಗೋಡು . . . ಕುಡಿವಾಲಮುಂದೆಸೆಯೆ ಕರ್ಬಸುಗಳ್ ಪರಿಗೊಂಡುವಾಜಿಯೊಳ್ (ಪಂಪಭಾ. ೮-೧೦೪). ೨. = ನಿಡುಗೊಂಬು ೧ : ಚಳಿಗಾಱದೆ ಪೇರಾಲದ ಕೆಳಗಿರ್ಪನಿತಱೊಳೆ ಚಪಲಕಪಿ ನಿಡುಗೋಡಂ ಸೆಳೆದಲುಗೆ ಸೂಸುವೆಲೆವನಿಗಳೆನೊರ್ವಂ ನೆನೆದು ನಡುಗಿ ಸಿಡಿಮಿಡಿಗೊಂಡಂ (ರಾಜಶೇ. ೯-೨೪). [ನಿಡು (<ನಿಡಿದು$_1$) + ಕೋಡು$_5$]

**ನಿಡುಗೋಣ್** (ನಾ). ಉದ್ದವಾದ ಕುತ್ತಿಗೆ : ನಿಡುಗೋಣುಂ ಕುಸಿಗೋಣುಮಾದೊಡಿಣೆ ದೊಡ್ಡಿತ್ತಾದೊಡೆ . . . ಅದನಾಳ್ವಾತಂ ಸುಖಂ ಬಾಳ್ವನೇ (ಲೋಕೋಪ. ೧೧-೯೮). 'ನಿಡುಗೋಣ' ಪಠಾ.
[ನಿಡು(<ನಿಡಿದು$_1$) +ಗೋಣ್]

**ನಿಡುಗೋಣ** (ನಾ). ಉದ್ದವಾದ ಕುತ್ತಿಗೆಯನ್ನುಳ್ಳವನು : ನಿಡುಗೋಣಂ ಶತನಂಗನಿರ್ಗತಶಿರಾಜಾಲಂ ಘುಟಪ್ರೋದ್ಭವಂ (ಜಾತತಿ. ೧೭-೧೧). [ನಿಡುಗೋಣ್+-ಅ$_7$]

**ನಿಡುಗೋಲ್, ನಿಡುಕೋಲ್, ನಿಡುಗೋಲು** (ನಾ). ೧. ಉದ್ದವಾದ ಕೋಲು : (೬). ೨. ನಿಡಿದಾದ ಕಣೆ; ಉದ್ದವಾದ ಬಾಣ; ನಿಡುಸರಳು : ಫಲುಗುಣಂ ಕಾಣುತತ್ಯುಗ್ರದಿಂ ವ್ಯಗ್ರದಿಂ ಸೆಳೆದು ಕೋದಂಡಮಂ ತೀಡಿದಂ ಪೂಡಿದಂ ಪೊಳೆವ ಕೆಂಗರಿಯ ನಿಡುಗೋ[ಪಾಠಾಂ. ಕೋ]ಲ್ಗಳಂ ಸಾಲ್ಗಳಂ ಕಟ್ಟಿದಂ ಗಗನಪಥಕೆ (ಜೈಮಿಭಾ. ೨೫-೩೧). **ನಿಡುಕೋಲ್ :** ೨. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ನಿಡುಗೋಲು :** ೨. "ಪ್ರಕ್ಷ್ವೇಡನಃ, ನಾರಾಚಃ — ೨ ನಾರಸದ ಹೆಸರುಗಳು, ನಿಡುಗೋಲು, ನಿಡುಸರಳು" (ಸಿದ್ಧಾಂತಿ. ೨೬೪). [ನಿಡು (<ನಿಡಿದು$_1$) + ಕೋಲ್$_1$]

**ನಿಡುಗೋಲು** 'ನಿಡುಗೋಲ್' ನೋ.

**ನಿಡುಚಾಪೆ** (ನಾ). ಉದ್ದವಾದ ಚಾಪೆ; ದೊಡ್ಡ ಮಂದಲಿಗೆ : ಗಾಳಿ ಸೋಂಕದ ಹಾಂಗೆ ಗಿಡುಗಳಿಗೋಲಿಯಲಿ ನಿಡುಚಾಪೆಗಳ ನಾಱಿಳನಾಗಳೆ ಕಟ್ಟೆ (ಬಸವು. ೩೮-೧೧). [ನಿಡು(<ನಿಡಿದು$_1$)+ಚಾಪೆ]

**ನಿಡುಚಾಲ್** (ನಾ). ಉದ್ದವಾದ ಸಾಲು,—ಶ್ರೇಣಿ; ದೊಡ್ಡ ಸಾಲು : ಕಡುಟೋಜಿಗಂ, ನಿಡುಚಾಲ್ (ಶಬ್ದಾನು. ೯೩ ವ್ಯಾಖ್ಯಾ).
[ನಿಡು (<ನಿಡಿದು$_1$) + ಸಾಲ್$_2$]

**ನಿಡುಚೀಲ** (ನಾ). ನೀಳವಾಗಿರುವ ಚೀಲ; ದೊಡ್ಡ ಚೀಲ: ನೀಡಗಲದ ಗಗನದ ನಟ್ಟ ನಡುವೆ ಮುಚ್ಚೋಡಿಯ ನಿಡುಚೀಲದಂತೆ ಕೂಡಿ ಗಾಳಿಗಳು ಮೂಡುಹುವದಱೊಳು ತುಂಬಿದೀಡಿನಂತಿಹುವಾಱು ವಸ್ತು (ಭರಚ. ೬೭-೬೯). [ನಿಡು (<ನಿಡಿದು$_1$) + ಚೀಲ]

**ನಿಡುಚು** (ನಾ). ಉದ್ದ; ನೀಳ: ಈ ಪಣಿಗಳು . . . ಕರಿದಾದ ನಿಡುಚಾದ ಕೂದಲುಗಳುಳ್ಳವರಾಗಿದ್ದಾರೆ (ತುಳುನಾ. ೨೧೫). [ನಿಡು (<ನಿಡಿದು$_1$) + -ಚು$_2$]

**ನಿಡುಜಂಘೆ** (ನಾ). ೧. ಉದ್ದವಾದ ಕಣಕಾಲು. ೨. ದೊಡ್ಡ ಹೆಜ್ಜೆ; ದಾಪುಗಾಲು: ಎಲ್ಲಿಗೆಯ್ದುವೆವೆಲ್ಲಿ ಹೋಗುವೆವದೆಲ್ಲಿ ಸಾರುವೆವೆನುತ ಕಳವಳದಲ್ಲಿ ಮಿಗೆ ಕುಱುಜಂಘೆಯಂ ನಿಡುಜಂಘೆ [ಪಾಠಾಂ. ಗೆ] ಗಳನಿಡುತ ಕುದುಕುವರಿಯಲಿ ಪರಿದು (ಬಸಪು. ೨೬-೩೧). [ನಿಡು (<ನಿಡಿದು$_1$) + ಜಂಘೆ]

**ನಿಡುಜಡೆ, ನಿಡುಜೆಡೆ** (ನಾ). ೧. ಉದ್ದವಾದ ಜಡೆ; ನೀಳವಾದ ಹೆರಳು: ಕಾಮಿನಿಯ ನಿಡುಜಡೆ ರಂಜಿಸಿದುದು (ಉದ್ಭಟ. ೯-೧೧೩); ಕಣ್ಗೆವಂದತ್ತು ಬೆನ್ನಂ ಮುಸುಕಿ ಪೊಱೆವಾಱುಗಿಳಿದ ನಿಡುಜಡೆ (ಚೆಬಪು. ೧೦-೭೩); ಅಳಿಮೆದೆಯಂ ಸಡಿಲ್ಚಿ ನಿಲಿಸಿದ ತನುಚಾಪಲತೆಯಂತೆ ತನುಲತೆ ನಿಡುಜ[ಪಾಠಾಂ. ಜೆ]ಡೆಯಿಂ ಕಡು ಬೆಡಂಗುವಡೆಯೆ (ರಾಜಶೇ. ೫-೧೯ ವ); ನಿಡುಜಡೆ ಬಡನಡು ಕುಡಿಹುಬ್ಬು ಕುಣಿಸುತ್ತ . . . ಪೊಡವಿಯೊಳೆನ್ನ ಸೋಲಿಸುವರಿಲ್ಲೆಂದು ಮಡದಿ ಒಪ್ಪಿದಳು (ಸೌಂದಕಾ. ೩-೩೩). ೨. ನೀಳವಾದ ಜಟೆ,—ಜಡೆಗಟ್ಟಿದ ಕೂದಲು: ನಿಡುಜಡೆ ಕರ್ಣದೊಳ್ ಪಳಿಕಿನೊಪ್ಪುವ ಕುಂಡಲಂ . . . ಒಳ್ಪಡರ್ದಿರೆ ಬಂದನೊರ್ವ ನವ ಪಾಶುಪತಾಸ್ತ್ರಕಧಾರಿ ತಾಪಸಂ (ದಶಕು. ೮-೧೪೦); ನಿಡುಜಡೆಯ ಶಶಿಕಲೆಯ . . . ಮೃಡನನು ಕಂಡುದಮರಗಣ (ಶಿಭಾಗ. ೪-೩-೨೭); ಛಿಟಿಛಿಟಿಲೆಂಬ ಮಧ್ಯಾಹ್ನದ ಬಿಸಿಲಿಂಗೆ ನಿಟಿಲಾಕ್ಷ ಭೀತಸ್ಥನಾಗಿ ಕುಟಿಲ ವರ್ಜಿತ ನಿಡುಜಡೆಯೊಳಗಾಕಾಶತಟಿನಿಯ ನೆಲೆಗೊಳಿಸಿದನು (ಮೋಹತ. ೧೯-೪೭). **ನಿಡುಜೆಡೆ**: ೧. ಮೇಲಿನ 'ರಾಜಶೇ. ೫-೧೯ ವ' ಪ್ರಯೋಗದ ಪಾಠಾಂತರವನ್ನು ನೋಡಿ. ೨. ಅಡರ್ದು ನಿಡುಜೆಡೆಯೆಡೆಯೊಳಹಿಯಡಂಗೆ ತನ್ಮಸ್ತಕಸ್ಥಫಣಮಣಿ ಪದಪಂ ಪಡೆದುದು ತನ್ನುನಿಪನ ತಲೆಯೆಡೆಯಣ ಚಿಜ್ಜ್ಯೋತಿ ಜಿಗಿದು ಪೊಱಪೊಣ್ಮಿದವೋಲ್ (ರಾಜಶೇ. ೧-೧೩೫). [ನಿಡು (<ನಿಡಿದು$_1$) + ಜಡೆ$_1$]

**ನಿಡುಜಲ್ಲಿ, ನಿಡುಝಲ್ಲಿ** (ನಾ). ಉದ್ದವಾದ ಗೊಂಡೆ,—ಗೊಂಚಲು: ಅಲ್ಲಲ್ಲಿ ಕಟ್ಟಿದ ಚೋಹಗಳಿಂ ನಿಡುಜಲ್ಲಿಗಳಿಂದ ಪಟ್ಟೆಗಳ ಪಲ್ಲವಕೋಟಿಗಳಿಂದಾ ಗಿರಿದುರ್ಗದಲ್ಲಿ ಶೂಲಗಳು ಮೆಱೆದವು (ಕುರಾಸಾಂ. ೨೧-೧೩). **ನಿಡುಝಲ್ಲಿ**: ಮುಡಿವಾಳದ ನಿಡುಝಲ್ಲಿಗಳನು ಕಟ್ಟಲೊಡನೊಪ್ಪಿದುದಾಗಸವ ಒಡೆದವನಿಗೆ ಬಪ್ಪ ಸುರತರುವಿನ ಬೇರ ಗಡಣವಿದೆಂಬಂದದೊಳು (ರಾಷಃವಿ. ೭-೨೯). [ನಿಡು (<ನಿಡಿದು$_1$) + ಜಲ್ಲಿ$_2$]

**ನಿಡುಜಾಗರ** (ನಾ). ಹೆಚ್ಚುಕಾಲ ಮಾಡುವ ಜಾಗರಣೆ; ಬಹಳ ಹೊತ್ತು ಎಚ್ಚರವಾಗಿರುವಿಕೆ: ಅಲಸದೆ ಮಾಡಿ ಬೇಸಱದೆ ಸಾಲ್ಗುವಿದೆನ್ನದೆ ಮೆಯ್ಯೊನಗಳ್ಕೆ ಪಂಬಲಿಸದೆ ನಿದ್ದೆಗೆಟ್ಟು [ನಿಡು]ಜಾಗರದೊಳ್ ತೊಡರ್ದು (ಪಂಪಭಾ. ೧-೧೩೭). [ನಿಡು (<ನಿಡಿದು$_1$) + ಜಾಗರ$_3$]

**ನಿಡುಜೆಡೆ** 'ನಿಡುಜಡೆ' ನೋ.

**ನಿಡುಝಲ್ಲಿ** 'ನಿಡುಜಲ್ಲಿ' ನೋ.

**ನಿಡುಡೆಂಕಣಿ** (ನಾ). ದೊಡ್ಡ ಡೆಂಕಣಿ: ಪಗೆಗಳ ಶೃಂಗಲಮಂ ಡೊಣೆಗೆ ಗೆತ್ತಿ ತತ್ಪುರವರೇಶನಾನಂದಲತಾಳಿಗೆಗಳ ಪರ್ಚುವುದೆಂತುಂ ಬಗೆಗೆ ನಿಷುರ ಪಿಂಕದಿಂದೆ ನಿಡುಡೆಂಕಣಿಗಳ್ (?) (ದಶಕು. ೧-೩೫); ಬಾಲಗಳ ಝಾಡಣೆಯ ನಿಡುಡೆಂಕಣೆಯ ಕಟ್ವಾಡಿಕೆಯ ಕಪಿಸೇನೆ ಸರಿಸದಲೀಡಱಾದು ಹತ್ತಿದುದು ಕೊತ್ತಳದಾಳುವೇರಿಯಲಿ (ತೊರರಾ. ೬-೧೧-೭). [ನಿಡು (<ನಿಡಿದು$_1$) + ಡೆಂಕಣಿ]

**ನಿಡುಡೊಳ್ಳು, ನಿಡುದೊಳ್ಳು** (ನಾ). ಮುಂದಕ್ಕೆ ಚಾಚಿ ಬೆಳೆದ ಹೊಟ್ಟೆ; ಬೊಜ್ಜು ಹೊಟ್ಟೆ: (ಕ). **ನಿಡುದೊಳ್ಳು**: ತುಂದಿಲಃ, ಬೃಹತ್ಕುಕ್ಷಿಃ—ನಿಡುದೊಳ್ಳುಳ್ಳವನು (ನಾಚಿರಾ. ಕ). [ನಿಡು(<ನಿಡಿದು$_1$) + ಡೊಳ್ಳು$_1$(<ಟೊಳ್ಳು)]

**ನಿಡುತೋಳ್** 'ನಿಡುದೋಳ್' ನೋ.

**ನಿಡುದಂಡೆ** (ನಾ). ಉದ್ದವಾದ ಸರ,—ಮಾಲೆ: ತೊಂಡಲ್ಗೂವಿನ ಗಾಲಿ ನನೆಯ ನಿಡುದಂಡೆ ಮನೋಹರಮಾದಚ್ಚು ತರಂಗೊಂಡಿಕ್ಕಿದ ಹೊಸಹೊಂಗೇದಗೆಯೆಸಳ್ಗಳ್ ನವಶಸ್ತ್ರತತಿ . . . ಒಪ್ಪಿದುದು (ಜಯಕಾ. ೫-೬). [ನಿಡು(<ನಿಡಿದು$_1$) + ದಂಡೆ$_1$]

**ನಿಡುದಡ** (ನಾ). ಎತ್ತರವಾದ ದಂಡೆ,—ಜಗಲಿ: ಹೆಡಗಯ್ಯ ಬಿಗಿದ ನೇಣಂ ಕೊಯ್ದು ಬಿಸುಟು ನಿಡುದಡದಲ್ಲಿ[ಪಾಠಾಂ. ಬಿಸುಟಿಳಿದು ಹಿಡಿತಂದು]ಮೂಡ ಮುಂತಾಗಿ ಕುಳ್ಳಿರಿಸಿ ಹಿಂದಡದಲ್ಲಿ ಕುಸಿದು ನೀಡಡಿಯಿಟ್ಟು ನಿಂದು ಖಡ್ಗವ ಸೆಳೆದು ಜಡಿದು ನೋಡಿ (ಹಚಕಾ. ೧೩-೧೨). [ನಿಡು(<ನಿಡಿದು$_1$) + ದಡ$_3$(<ತಡ$_2$)]

**ನಿಡುದನಿ** (ನಾ). ದೊಡ್ಡ ಸ್ವರ; ಜೋರಾದ ಧ್ವನಿ; ಗಟ್ಟಿಯಾದ ಧ್ವನಿ: "ಕೀಜ, ಕೂಜ, ಕುಜಿ—ಅವ್ಯಕ್ತೇ ಶಬ್ದೇ, ನಿಡುದನಿಯೊಳ್" (ಕಾಶಕೃ. ೧೪); ಹಾ ಎನುತೊಱಲುತಿಹ ನಿಡುದನಿಗಳಂ ಕೇಳಿ (ಬಸಪು. ೪೬-೨೨); ಕೊಬ್ಬಿ ಹರಿದುದು ವಿವಿಧವಾದ್ಯದ ನಿಬ್ಬರದ ನಿಡುದನಿಯು (ಕುವ್ಯಾಭೀ. ೮-೫); ಇಟ್ಟಣಿಪ ಜನದ ಕಡೆಗಾಲ್ಗಳಿಂದಾ ಸುತಂ ಪೊಡೆಗೆಡೆಯಲು ಕಡುತವಕದಿಂ ಬರ್ಪ ಮಂತ್ರಲಕ್ಷಂ ಕಂಡು ನಿಡುದನಿಯೊಳೊದಱು ತೇಜಿಯ ದಾಂಟಿಸಿದಂ (ಭಾವಚಿಂ. ೮-೧೮); ನನಗಾವ ನಿಡುದನಿಯೂ ಕೇಳ್ವುದಿಲ್ಲ! (ಬಿಗಾಳಿ. ೪೫-೧೮). [ನಿಡು(<ನಿಡಿದು$_1$) + ದನಿ$_1$]

**ನಿಡುದನಿಗೆಯ್** (ಕ್ರಿ). ಗಟ್ಟಿಯಾಗಿ ಧ್ವನಿ ಮಾಡು; ದೊಡ್ಡದಾಗಿ ಕೂಗು: ಕೀಜತಿ—ನಿಡುದನಿಗೆಯ್ದಪುದು (ಕಾಶಕೃ. ೧೪). [ನಿಡುದನಿ + ಕೆಯ್$_1$]

**ನಿಡುದಲೆ** (ನಾ). ಉದ್ದವಾದ ತಲೆ: ಈ ಮೆಡಿಟರೇನಿಯರೂ ಆಸ್ಟ್ರೇಲಿಯನರಂತೆ ನಿಡುದಲೆಯವರೇ ಆಗಿದ್ದರು (ದ್ರಾವಿವಿ. ೨೯); ಉದ್ದವಾದ ತಲೆಯುಳ್ಳ; ನಿಡುದಲೆಯ (Dolichocephalic. ಇಂಕನಿ). [ನಿಡು(<ನಿಡಿದು$_1$) + ತಲೆ$_1$]

**ನಿಡುದಲೆಯ**(ನಾ). ಉದ್ದವಾದ ತಲೆಯುಳ್ಳವನು: ಕುಱುಗಯ್ಯಂ, ನಿಡುದಲೆಯಂ (ಶಬ್ದಾನು. ೯೭ ಪ್ರಯೋ). [ನಿಡುದಲೆ + -ಅ$_7$]

**ನಿಡುದುರುಬು** (ನಾ). ನೀಳವಾದ ಹೆರಳು; ಉದ್ದವಾದ ಮುಡಿ: ನಿಡುದುರುಬಿನೊಯ್ಯಾರಿ ಬೈತಲೆಯ ಶೃಂಗಾರಿ (ಮಹಾವಿ. ೬-೧೮). [ನಿಡು(<ನಿಡಿದು$_1$) + ತುರುಬು$_2$(<ತುಱುಂಬು$_2$)]

**ನಿಡುದೆಂಗು** (ನಾ). ಎತ್ತರವಾದ ತೆಂಗಿನ ಮರ: ಜಿನಗೆ ಗಗನವ ತುಡುಕುವ ನಿಡುದೆಂಗಿನೆಳನೀರ ತೆಗೆತೆಗೆದಭಿಷೇಕಗೈದ (ಭರಚ. ೧೬-೭೨). [ನಿಡು(<ನಿಡಿದು$_1$) + ತೆಂಗು$_3$]

**ನಿಡುದೆನೆ** (ನಾ). ೧. ದೊಡ್ಡ ಕದಿರು; ದಪ್ಪವಾದ ಹೊಡೆ. ೨. ಕೋಟೆಯ ಮೇಲಿರುವ ದೊಡ್ಡ ಬುರುಜು,—ಗುಮ್ಮಟ. ೧, ೨: ನಿಡುದೆನೆಯಿಂ ಪ್ರಾಕಾರದೊಳುಡುಗದ ಕಣೆಯಿಂದೆ ಡೊಣೆಯೊಳೆಣೆಯೆನಿಸಿಡುವಂ ಶಾಳಿಗಳಂ . . . ಬೆಳೆವ ನೆಲನೆ ಪೊಲನಾನೆಲದೊಳ್ (ಪುಷ್ಪಪು. ೨-೧೩). [ನಿಡು(<ನಿಡಿದು$_1$) + ತೆನೆ$_1$]

**ನಿಡುದೆರೆ** (ನಾ). ೧. ದೊಡ್ಡ ಅಲೆ ; ದೀರ್ಘವಾದ ತರಂಗ : ಇಂಗಡಲ ನಿಡುದೆರೆಗಳೋ ಬೆಳುದಿಂಗಳೊಳುದಿರುಳುಗಳೊ . . . ಎನಲು ಮುಂಗಡೆಯೊಳಂತುಗಿವ ಪೊನ್ನ ಸಿಜಿಂಗುಗಳ ವಸ್ತ್ರಂಗಳುನ್ನತ ಕಂಗೆ ಮಂಗಳವಾಯ್ತು (ಬಸಪು. ೧೧–೩೪) ; ಪಾಡುವುದು ಅಳಿರವದಿ ಕೈಗಳ ನೀಡುವುದು ನಿಡುದೆರೆಗಳಿಂ ದೆಸೆ ನೋಡುವುದು ನೆಯ್ದಿಲುಗಳರಳಿಂ . . . ಕಾಸಾರವದು (ಸಾಳ್ವಭಾ. ೧೬–೯). ೨. ಅಗಲವಾದ ತೆರೆ,— ಪರದೆ : ಪಲ್ಲವದ ನಿಡುದೆರೆಯು ಧವಳಚ್ಛತ್ರಚಮರದೊಳೊದಗಿತತಿರಥರು (ಕುವ್ಯಾಕ. ೩–೧೩). [ನಿಡು(<ನಿಡಿದು$_1$) + ತೆರೆ$_4$]

**ನಿಡುದೊಡೆ** (ನಾ). ದಪ್ಪವಾದ ತೊಡೆ ; ತೋರವಾದ ತೊಡೆ : ಬಿಡದೆ ಜಂಘಾಕಾಂಡವ ನಿಡುದೊಡೆಯೊಳಗೊಡನೊಂದಿಸುತುಬ್ಬಿನಿಂದ . . . ಕೂಡಿ ರಾಜಿಪ ಕಡುಚೆಲ್ವವಿಟರೊಪ್ಪಿದರು (ಕಂಸವಿ. ೬–೧೨೫). [ನಿಡು(<ನಿಡಿದು$_1$) + ತೊಡೆ$_2$]

**ನಿಡುದೊರಳೆ** (ನಾ). ದಪ್ಪವಾದ ಗುಲ್ಫ ; ದೊಡ್ಡ ತೊರಳೆ : ಕಾಳಿಜದ ಹೆಮ್ಮೊರಡಿ ಕೆನ್ನೆತ್ತರಿನ ಮಡು ನಿಡುದೊರಳೆಗಳ ಹೇರಾಸಿ . . . ಭೂತಕೋಟಿಯ ನೆರವಿಗುಣಬಡಿಸಿದಪೊಲಿರ್ದುದು ಖರವಿರೋಧಿಯ ಕದನ (ತೊರರಾ. ೬–೪೫–೬೧). [ನಿಡು(<ನಿಡಿದು$_1$) + ತೊರಳೆ]

**ನಿಡುದೊಳ್ಳು** 'ನಿಡುಡೊಳ್ಳು' ನೋ.

**ನಿಡುದೋಳ್**, ನಿಡಿದೋಳ್, ನಿಡಿದೋಳು, ನಿಡುತೋಳ್, ನಿಡುದೋಳು (ನಾ). ನೀಳವಾದ ಬಾಹು ; ಉದ್ದವಾದ ತೋಳು : ಬಳ್ವಳ ಬಳೆದ ವಿಶ್ರಾಂತತುಂಗನ ನಿಡುದೋಳ್ಗಳ್ ಗಣಿಕಾಜನಕ್ಕೆ ಕಾಮಪಾಶಂಗಳುಮರಾತಿಜನಕ್ಕೆ ಯಮಪಾಶಂಗಳುಮಾದುವು (ಪಂಪಭಾ. ೨–೩೯ ವ) ; ಪಡೆದಂ ಮತ್ಪುಣ್ಯದಿಂದೀ ಪದಮನಿನಿತುಕಾಲಕ್ಕೆನುತ್ತುಂ ನರೇಂದ್ರಂ ನಿಡುದೋಳಿಂದಪ್ಪಿ ಭೋಂಕಲ್ ಭಯದೆ ನಡುಗುತಂ ಕಣ್ಗಳಂ ಮುಚ್ಚಿ (ಕಾದಂಉ. ೭೮೮) ; ನಿಡುದೋಳ್ ನೀಳ್ದುವು ನೀಳ್ಕಲುದ್ಧತಸಿತಚ್ಛತ್ರಂಗಳಂ ನಾಡೆಯುಂ ತೊಡೆಗಳ್ಕೊರ್ವಿದುವುಗ್ರದಂತಿಯ ನದಿರ್ಪಲ್ (ಮಲ್ಲಿಪು. ೪–೧೩೯) ; ವೀರಶ್ರೀಯುಂ ನಿಡು[ಪಾಠಾಂ. ಡಿ]ದೋಳ್ ಕೂರಿಸಿದುದು ಕೈದುಗಲ್ತು (ಅರ್ಧನೇ. ೨–೩೩) ; ಕೊಬ್ಬಿದ ಭುಜಯುಗಳದಿ ವೀರರಸದಿಂದುಬ್ಬಿದ ನಿಡುದೋಳ್ಗಳೆಡೆಯ ಪಡಿದ ಕಾಂತಿತಾಣಗಳೆನೆ ನೆಣಗೊಬ್ಬಿಲಿ ಗರುವನೊಪ್ಪಿದನು (ಮೋಹತ. ೩೩–೫೭) ; ನಿಡುದೋಳ್ ನೀಳ್ದ ತರಂಗಮಾನನಮರಲ್ದಂಭೋರುಹಂ . . . ಎಂಬಂತಿರೆ ಸಿಂಧುರಾಜನೊಸೆದೇಳ್ತಂದಂ ಗಭೀರಾನ್ವಿತಂ (ರಾಜಶೇ. ೧೨–೧೦೦). **ನಿಡಿದೋಳ್ :** ಇವಾತನ ನಿಡಿದೋಳ್ (ಶಮದ. ೫೩ ಪ್ರಯೋ). **ನಿಡಿದೋಳು :** ನಿಡಿದೋಳಿನಿಂದೆ ಕೃಷ್ಣಾಗ್ರಜಾತನ ಸಿರಿಮುಡಿಯಲ್ಲಿ ಪಿಟ್ಟನಿಕ್ಕಿದನು (ಮೋಹತ. ೪೦–೬೦). **ನಿಡುತೋಳ್ :** ಉತ್ಕಲಿಕಾಸಹಸ್ರವಿಷಮರಾಗಸಾಗರಮನೀಸಿದಪನೆಂಬಂತೆನ್ನ ನಪ್ಪುವಬಾಯಾಸೆಯಿಂ ದೂರದೊಳ್ ನಿಮಿರ್ಪ ನಿಡುತೋಳ್ಗಳುಂ ತನ್ನೊಳ್ ತೋಱಿ . . . ಬರುತಿರ್ದಂ (ಕಾದಂಉ. ೫೬೫). **ನಿಡುದೋಳು :** ಉಗಿದು ಹಾಯ್ಕುವ ಖಳನ ನಿಡುದೋಳುಗಳು ಬಳಲಿದವು (ಕುವ್ಯಾಸ. ೧೫–೨) ; ನಿಡು[ಪಾಠಾಂ. ಡಿ]ದೋಳು ತೋರಮುಂಡುಹು . . . ಬಿಡದೆ ಮೆಱೆಯೆ ರಾಮನಭಿರಾಮತೆ ಕಣ್ಪಿಡಿದುದು ಕಮಲನೇತ್ರೆಯರ (ಕುರಾಸಾಂ. ೮–೮೮) ; ಕಾದುಕೊಳ್ಳೆನುತಾರ್ದಿಟ್ಟ ಕೃಷ್ಣನು ಚಕ್ರದಲಿ . . . ದೈತ್ಯೇಶ್ವರನ ಇಡಿಕಿಱಿದೊಂಬೈನೂಱ ತೊಂಬತ್ತೆಂಟು ನಿಡುದೋಳ ಕತ್ತರಿಸಿದುವು (ಮೋಹತ. ೪೦–೮೦) ; ಮುಡಿಯ ಮುತ್ತಿನ ಬಲೆ . . . ನಿಡುದೋಳ ಬಳೆ ತಾತಿ ಕಡಗ ಕಂಕಣವಾಂತ ಕಡುಚೆಲುವೆಯರೆಸೆದಿಹರು (ಕಂಸವಿ. ೬–೧೦೪). [ನಿಡು(<ನಿಡಿದು$_1$) + ತೋಳ್]

**ನಿಡುದೋಳ** (ನಾ). ಉದ್ದವಾದ ಕೈಗಳುಳ್ಳವನು ; ದೀರ್ಘಬಾಹುಗಳುಳ್ಳವನು : ಕುಡುವಿಲ್ಲ, ನಿಡುದೋಳ, ಅರಮುಗ (ಶಬ್ದಾನು. ೮ ವ್ಯಾಖ್ಯಾ). [ನಿಡುದೋಳ್ + –ಅ$_7$]

**ನಿಡುದೋಳು** 'ನಿಡುದೋಳ್' ನೋ.

**ನಿಡುನಡಿಕೆ** (ನಾ). ಕುದುರೆಯ ನಡಗೆಯಲ್ಲಿ ಒಂದು ಬಗೆ : "ರೇಚಿತಂ . . . ಬಿಡುನಡೆ, ಜಾರುನಡಿಕೆ, ನಿಡುನಡಿಕೆ" (ಸಿದ್ಧಾಂತಿ. ೨೫೧). [ನಿಡು (<ನಿಡಿದು$_1$) + ನಡಿಕೆ (<ನಡಗೆ)]

**ನಿಡುನನೆ** (ನಾ). ನಿಡಿದಾದ ಮೊಗ್ಗು ; ದೊಡ್ಡ ಮುಗುಳು : ನಲವಿಂದಂ ಸೂಡಿ ಪೊಂಜಾದಿಯ ನಿಡುನನೆಯಂ ವೇಣಿಯೊಳ್ ಸಿಕ್ಕಿ (ಲೀಲಾಪ. ೫–೬೯). [ನಿಡು (<ನಿಡಿದು$_1$) + ನನೆ$_3$]

**ನಿಡುನರ** (ನಾ). ಉದ್ದವಾದ ನರ ; ನೀಳವಾದ ಸಿರೆ : ಅಡಗುಗಳ ತಿರುಳಿಂದೆ ನಿಡುನರದ ಕರುಳಿಂದೆ ಕಡಲಿಡುವ ನೆತ್ತರಿಂದೆಡೆವಿಡದೆ ಸತ್ತರಿಂದಿಡಿದಿರ್ದುದಾ ರಣದಲೋರಣದ ವೂರಣದ ಕಾರಣದ ಪೂರಣದೊಳು (ಜೈಮಿಭಾ. ೧೨–೪೪). [ನಿಡು (<ನಿಡಿದು$_1$) + ನರ$_1$ (<ನರವು)]

**ನಿಡುನಾಲಗೆ**, ನಿಡಿನಾಲಗೆ (ನಾ). ೧. ಉದ್ದವಾದ ನಾಲಗೆ ; ನೀಳವಾದ ಜಿಹ್ವೆ : ಮಾಡಿದನೇಕೆಯೊ ಮೇಲಂ ನೋಡದೆ ಬಿದಿ ವಿಷವುಫಣಿಗಣಲ್ಗಳ ಪಲ್ಲಂ ರೂಡಿಸಿದ ಕೇಟಿಗ್ ಮುಳ್ಳಂ ನಾಡಱಕೆಯ ದುರ್ಜನಂಗೆ ನಿಡುನಾಲಗೆಯುಂ (ಧರ್ಮನಾ. ೧–೬೨) ; ಸೂರ್ಯದೇವನೇಗಳುವರ್ ಕಡುವಿಂಗಿಲ್ ದ್ವೇಷಿಪನ್ ನಿಡುನಾಲಗೆಯೆ ಗಟಪಿದಾ ಸೊರ್ಕ್ಕುನುಡಿಗಳನ್ (ಅಂತಿಗೊ. ೬–೧೧೦). ೨. (ಆಲಂ) ಹರಟುವ ನಾಲಗೆ. **ನಿಡಿನಾಲಗೆ :** ೧. "ನಿಡಿನಾಲಗೆ = ದೀರ್ಘಜಿಹ್ವೆ, ಉದ್ದವಾದ ನಾಲಗೆ" (ಪ್ರಭಣ್ಣ). [ನಿಡು (<ನಿಡಿದು$_1$) + ನಾಲಗೆ]

**ನಿಡುನಿಗ್ಗವ** (ನಾ). ಉದ್ದವಾದ ಹಸ್ತಿದಂತ,—ಆನೆಯ ಕೋರೆ : ಹೊಳೆವ ನಿಡುನಿಗ್ಗವದ ಬೆಳುವೆಳಗು ಕುಡಿವಿಂಚುಗಳ ಬಳಗ . . . ಮಳೆವೊಸಲ್ಕದಧಾರೆಯಾಗೆ ಕಾರ್ಗಾಲವೆಂಬೊಲು ಮೈಮೆವಡೆದಿರ್ಪ ಮತ್ತಮಾತಂಗವಿಟ್ಟೆಳಸಿದ ಜನಂಗಳಂ ತೂಳ್ದು ಸೀಳ್ದೈದಿ ವಿಸಟಂಬರಿದು ಬರುತಿರ್ದುದು (ಸೌಂದಪು. ೩–೧೪). [ನಿಡು (<ನಿಡಿದು$_1$) + ನಿಗ್ಗವ]

**ನಿಡುನಿದ್ದೆ** (ನಾ). ೧. ಹೆಚ್ಚುಹೊತ್ತು ಮಾಡುವ ನಿದ್ರೆ ; ಗಾಢನಿದ್ರೆ : ನಿಡುನಿದ್ದೆಯಲ್ಲಿ ಗುಹೆಯೊಳಗೆ ಮೆಯ್ಮಱೆದಿರ್ದ ಕಡುಗಲಿ ಮೃಗಾಧೀಶನಾಡುವೊಲನಂ ಮಿಗಗಳೊಡಗೂಡಿಯುಲುಹುಮಾಡುವ ಕೆಱದಿನೆನ್ನ ಮಱವೆಯೊಳೆನಗೆಯಾಳ್ವೆಸನನು ಬಿಡದೆ ಮಾಡುವರು (ಸಮ್ಯಕೌ. ೨–೭) ; ನನ್ನ ನಿಡುನಿದ್ದೆ ಮುಗಿದು, ಎಚ್ಚರವಾಗುವಾಗ ಅವಳಂತು ಚಾವಡಿಯಲ್ಲಿರಲಿಲ್ಲ (ಮೂಕಜ್ಜಿ. ೨೩೪). ೨. (ಆಲಂ) ದೀರ್ಘನಿದ್ರೆ; ಸಾವು ; ಮರಣ : ಅರಸಾ ನಿನ್ನ ಸುಹೃದ್ಭೂವರಜಯತರುಣಿಯವಗೆ ನಿಡುನಿದ್ದೆಯನೊದವಿಸಿ ಭರದಿಂ ಬರ್ಪನೆನುತುಮೆನ್ನಂ ನಿನ್ನೆಡೆಗಟ್ಟಿದಳ್ (ಜಯಕಾ. ೭–೯). [ನಿಡು (<ನಿಡಿದು$_1$) + ನಿದ್ದೆ]

**ನಿಡುನಿದ್ರೆ** (ನಾ). ೧. = ನಿಡುನಿದ್ದೆ ೨ : 'ನಿಡುನಿದ್ರೆಗೈಸು' ಪರಾ. ೨. ನಾಶ ; ಅಂತ್ಯ : ಜಗದ ನಿಡುನಿದ್ರೆಯಲಿ ಮೋಹರದೆಗೆದ ಮುಗಿಲೋ ಮೇಣಖಿಳಕುಲದಿಗಿಭವೆಂಟೊಂದಾಯ್ತೊ ಕೈಕಾಲ್ ಮೂಡಿತೋ ಸಭೆಕೆ (ಕುವ್ಯಾದ್ರೋ. ೩–೯). [ನಿಡು(<ನಿಡಿದು$_1$) + ನಿದ್ರೆ]

**ನಿಡುನಿದ್ರೆಗೈಸು** (ಕ್ರಿ). ೧. (ಆಲಂ) ವಧಿಸು ; ಸಾಯಿಸು ; ಕೊಲ್ಲು : ಧೃಷ್ಟದ್ಯುಮ್ನನರಮನೆಗಾಗಿ ವಹಿಲದಲಿ ಬಂದು ಬಾಗಿಲ ಮುಱಿದು ಕಾಹಿನ ಮಂದಿಯನು ನಿಡುನಿದ್ರೆಗೈಸಿದನು (ಕುವ್ಯಾಗ. ೯–೨೭). ೨. ನಿಷ್ಕ್ರಿಯಗೊಳಿಸು : ನಿದ್ರೆಗೈವವನೊಡಲ ಧರ್ಮಾವ ತೊಡ್ಡ

ನೆಂದಡೆ ಕರಣವನು ನಿಡುನಿದ್ರೆಗೈಸಿ ನಿಜಾನುಭವದಲಿ ನಿಂದ ವರಯೋಗಿ (ಶಿಘಾಗ. ೬-೧೫-೨೬).

[ನಿಡುನಿದ್ರೆ + ಕೈಸು (< ಕೆಯ್ಸು)]

**ನಿಡುನೀಳ್** (ಕ್ರಿ). ಉದ್ದವಾಗಿ ಇಳಿಬೀಳು,—ಜೋಲುಬೀಳು : ನಿಡುನೀಳ್ದ ಸೆಜಗ ಸಾಗಿಸುತೊಮ್ಮೆ ಕೈಲಾಗುಗೊಡುತ ಮುಂದವಧಾನ ವೆಂದು ನುಡಿಯುತ ತಂದೆಯ ಹಿಂದುಮುಂದೆಡಬಲವಿಡಿದು ಕುಮಾರ ರೆಯ್ದಿದರು (ಭರಚ. ೪೫-೩೧). [< ನಿಡಿದು₂ + ನೀಳ್]

**ನಿಡುನೆನಪು** (ನಾ). "ಬಹುಕಾಲ ಮರೆಯದಿರುವ ಜ್ಞಾಪಕ ಶಕ್ತಿ; ನಿಡುನೆನಪು" (Long-memory. ಇಂಕಸಿ).

[ನಿಡು(< ನಿಡಿದು₁) + ನೆನಪು]

**ನಿಡುನೇಜೆಯು** (ನಾ). ಉದ್ದವಾದ ಬರ್ಜಿ; ದೊಡ್ಡ ಈಟಿ : ನಿಡುನೇಜೆ[ಪಾಠಾಂ. ಜೆ]ಯದಿನದೊರ್ವಂ ಜಡಿದಿಜಾದೆತ್ತಿದೊಡೆ ಮತ್ತವಂ ಕರವಾಳಿಂ ಪೊಡೆದಂ (ರಾಜಶೇ. ೬-೬೪).

[ನಿಡು (< ನಿಡಿದು₁) + ನೇಜೆಯ(< ನೇಜಯ)]

**ನಿಡುನೇಣ್**(ನಾ). ಉದ್ದವಾದ ಹಗ್ಗ; ನಿಡಿದಾದ ಪಾಶ : ಅಂ ನಿನ್ನಂ ತೆಗೆದು ಬಾಟುಪ್ಪಿನೆನಗೆ ರಸಮಂ ಮೊಗೆದು ಕುಡೆಂದು ನಿಡು ನೇಣಂ ಪಲವುಂ ಸೋರೆಗಳುಮಂ ತಂದು ತೀವಿಸಿ (ಪದ್ಮಾರಾ. ೧೪೭-೧೭).

[ನಿಡು (< ನಿಡಿದು₁) + ನೇಣ್₁]

**ನಿಡುನೊಗ** (ನಾ). ದೊಡ್ಡ ನೊಗ : ಕಡಿಯಣವನಾನೆಗಳ ಮೋಜಿಗೆ ತೊಡಸಿದರು ದಂತಿಗಳ ಹೆಗಲಲಿ ನಿಡುನೊಗನ ಕಟ್ಟಿದರು (ಕುಮಾವ್ಯಾದ್ರೋ. ೮-೪೫). [ನಿಡು (< ನಿಡಿದು₁) + ನೊಗ]

**ನಿಡುನೋಟ** (ನಾ). ೧. ಒಂದೇ ಸಮನೆ ನೋಡುವ ದೃಷ್ಟಿ; ನೆಟ್ಟ ನೋಟ : ಅರಸುಗಳ ನಿಡುನೋಟವಲ್ಲಿಯ ಗರುವೆಯರ ನಸುನೋಟ ತಮ್ಮೊಳು ಬೆರಸಿ ಹೊಯ್ದಾಡಿದವು ಖಾಡಾಖಾಡಿಯುಂದದಲಿ (ಕುಮಾವ್ಯಾಆ. ೧೩-೪೪). ೨. (ಅಲಂ) ದೂರಾಲೋಚನೆ; ದೂರದೃಷ್ಟಿ : ಹಲವರಂತೆ ತನ್ನ ಭವಿಷ್ಯದ ಕಡೆಗೆ ನಿಡುನೋಟ ಚಾಚಿದವನಲ್ಲ (ಚಗುಕ.೬).

[ನಿಡು (< ನಿಡಿದು₁) + ನೋಟ]

**ನಿಡುಪಗೆ** 'ನಿಡುವಗೆ' ನೋ.

**ನಿಡುಪಚ್ಚಳ** (ನಾ). ದೊಡ್ಡ ಪಿರ್ರೆ,—ಹಿಂಭಾಗ; ಬಾಲದ ವಿಸ್ತಾರವಾದ ಬುಡ : ಕೂರಂಬಿನಲಿ ಕೋದನು ಗಜದ ಮಸ್ತಕವ ನಿಲುಕಿ ನೆತ್ತಿಯನೊಡೆದು ನಿಡುಪಚ್ಚಳಕೆ ಹಾಯ್ದುವು ಬಾಣ (ಕುಮಾವ್ಯಾದ್ರೋ. ೩-೭೪). [ನಿಡು (< ನಿಡಿದು₁) + ಪಚ್ಚಳ]

**ನಿಡುಪತಾಕೆ** (ನಾ). (ಎತ್ತರದಲ್ಲಿರುವ) ದೊಡ್ಡ ಬಾವುಟ,—ಧ್ವಜ : ಗಗನದೊಳಿಡಿದ ಸತ್ತಿಗೆಯ ಮುತ್ತಿಗೆಯ ಢಾಳಿಸುವ ಚಮರಂ ಗಳ ನಿಡುಪತಾಕೆಯ ವಿವಿಧ ಧಾತುಗಳ ಕೇತುಗಳ . . . ಭೂರಿಗಳ ಪಡಪಿಂದೆ ಪಡೆ ನಡೆದುದು (ಜೈಮಿಭಾ. ೨೦-೩೭).

[ನಿಡು (< ನಿಡಿದು₁) + ಪತಾಕೆ]

**ನಿಡುಪನೆ** (ನಾ). ಉದ್ದವಾದ ಕೋರೆ ಹಲ್ಲು; ದೊಡ್ಡದಂತ : ತಲೆಯೊಲೆದು, ಸೊಂಡಿಲಂ ತೊನೆದು, ನಿಡುಪನೆಗಳಂ ತೂಗಿ, ಮೊರಗಿವಿ ಗಳಂ ಬೀಸಿ, ಘೀಳಿಟ್ಟೊಡನೆ ಮುನ್ನುಗ್ಗಿ ಹೋರಾಡಲನುವಾದುದಾ ಹೋರಿಹೇರಾನೆ (ಶ್ರೀರಾಮಾ. ೪೫೮-೩೫೭).

[ನಿಡು (< ನಿಡಿದು₁) + ಪನೆ₂]

**ನಿಡುಪು₁** (ನಾ). ದೀರ್ಘತೆ; ಗಾಢತೆ : ಮುಖೇಂದು ಬಿಗುರ್ತಿರೆ ಸುಯ್ಯ ಬೆಂಕೆಯುಂ ನಿಡುಪ[ವು]ಮಳುಂಬಮುಪ್ಪಿನೆಗವಿಾಶನದಲ್ಲಿದನೆತ್ತ ಪೋದನಾವೆಡೆಯನಧೀಶನೆಂದು ಪಲವಾಡಿದರಂದಜಿತಾಂಗನಾಜನಂ (ಅಜಿಪು. ೬-೧೨೧); ಸುಯ್ಯ ನಿಡುಪು[ಪಾಠಾಂ. ಕ]ದುಗದಿರೆಯುಂ ಮೆಯ್ಯೊರೆ ಮುಟ್ಟಿದೆಯುಮಿಂತು ಸಂದಂದಿಸಿಬರ್ ಬಯ್ಕಲೆ ಪೊಯ್ಕಲೆ ಕುರುಳಂ ಕೊಯ್ಕಲೆ ಪೋಯ್ತಿಂತು ವಿನಯವತಿಗಂ ಪತಿಗಂ (ಶಾಪ್ಯಾಪ. ೩೧೧).

[ನಿಡು (< ನಿಡಿದು₁) + -ಪು₂]

**ನಿಡುಪು₂** (ನಾ). (?) : ಜಡಿವ ಗುಳ ರೆಂಚೆಗಳ ಘಂಟೆಯ ತೊಡವುಗಳ ನಿಡುಪುಗಳ ಕುಂಡಿಲ ಕಡುಕಿಲೆಯ ದಡಿವಲೆಯ ಮಿಂಚುವ ಕೊಂಬುಗತ್ತಿ ಗಳ ಕುಡಿಹದದ ಕಡುಮದದ ಕರಿಗಳು . . . ನಡೆದವು ಪದ್ಮಸಂಖ್ಯೆ ಯಲಿ (ಅಂಬಿಕಾ. ೪೦-೯). [?]

**ನಿಡುಪುರ್ಬು** 'ನಿಡುವುರ್ವು' ನೋ.

**ನಿಡುಪುರ್ವು** 'ನಿಡುವುರ್ವು' ನೋ.

**ನಿಡುಪೊಂಗು** (ಕ್ರಿ). ದಪ್ಪವಾಗಿ ಊದು; ಅತಿಯಾಗಿ ಬಾತು ಕೊಳ್ಳು : ತೊಡೆದು ತಿಲತೈಲಮಂ ಕರಪು(ವು)ಡಿ ಸಾಸಿವೆ ಲೋಯಿ ಸರದ ತಿರುಳಿಂಬಿವನಿಟ್ಟಡಸಿ ಬಿಗಿತಾಗಿ ಕಟ್ಟಿಲ್ ನಿಡುಪೊಂಗುಡಿದಿರ್ದ ಕೆಯ್ಗೆ ಭಂಗಂಬಡುಗುಂ (ಲೋಕೋಪ. ೯-೧೩೨); "ಮುಂಬು ದ ಕೆಯ್ಗೆ—ಆ ಠಾವಿಂಗೆ ಎಳ್ಳೆಣ್ಣೆಯಂ ತೊಡೆದು ಸಾಸಿವೆಯ ಚೂರ್ಣಂ, ಲೋಯಿಸರದ ತಿರುಳ್ ಈ ಎರಡುಮಂ ಇಕ್ಕಿ ಬಿಗಿತಾಗಿ ಕಟ್ಟಲ್ ಸತ್ವವಿಲ್ಲದಿರ್ದ ಕೈಗೆ ಸತ್ವವಪ್ಪುದು" (ಲೋಕೋಪ. ಟೀಕೆ).

[< ನಿಡಿದು₂ + ಪೊಂಗು₁]

**ನಿಡುಪೊಳ್ತು** 'ನಿಡುಪೊಟ್ತು' ನೋ.

**ನಿಡುಪೊಳ್ತುಗಳೆ** (ಕ್ರಿ). ದೀರ್ಘಕಾಲವನ್ನು ಕಳೆ; ಬಹಳ ಹೊತ್ತನ್ನು ತಳ್ಳು : ತಾವೆಲ್ಲಿ ನೆಲಸಿರ್ಪರವರೆನಲ್ ಪೇಳಿದರ್ ಭಾವ ದಿಂದಿಲ್ಲಿಯೇ ನಿಡುಪೊಳ್ತುಗಳೆದವರ್ ಬೇಗದಿಂದೀಗ ಮನೆಗೆಯ್ದಿದರ್ ತಾವೆನಲ್ (ಶಿವಸಂ. ೯-೬೯).

[ನಿಡುಪೊಳ್ತು (< ನಿಡುಪೊಟ್ತು) + ಕಳೆ₁]

**ನಿಡುಪೊಟ್ತು, ನಿಡುಪೊಳ್ತು** (ನಾ). ಹೆಚ್ಚುಹೊತ್ತು; ಬಹಳ ಕಾಲ : ನೇಸಜಿಾಡಸಾ ಕೌರವನ್ ಮುಂಬುಗೆ, ನಿಡುಪೊಟ್ತು ಪಕ್ಕದೊಳ್ ಕುಳ್ತು (ಅಶ್ವತ್ಥಾ. ೨-೩೩). **ನಿಡುಪೊಳ್ತು** : 'ನಿಡುಪೊಳ್ತುಗಳೆ' ಪರಾ. [ನಿಡು(< ನಿಡಿದು₁) + ಪೊಟ್ತು]

**ನಿಡುಬತ್ತಳಿಕೆ** (ನಾ). ದೊಡ್ಡ ಮೂಡಿಗೆ,—ಬತ್ತಳಿಕೆ : ಪೊಳೆವಂಬು ಬೆನ್ನ ನಿಡುಬತ್ತಳಿಕೆ ವಿರಾಜಿಸೆ ಪುಳಿಂದನಂದೊಳಪೊಕ್ಕಂ (ರಾಜಶೇ. ೫-೨೪).

[ನಿಡು(< ನಿಡಿದು₁) + ಬತ್ತಳಿಕೆ(< ಪತ್ತಳಿಕೆ₁)]

**ನಿಡುಬತ್ತಿ** (ನಾ). (ದೀಪದ) ಉದ್ದವಾದ ಬತ್ತಿ; ನೀಳವಾದ ಬತ್ತಿ : ತೆಗೆತೆಗೆದು ಹೊತ್ತಿಸಿದ ನಿಡುಬತ್ತಿಗಳ ತೆಜದಲಿಯಲುಗುವೆಳಗುಜಿ ಝುಗಝುಗಿಸಿ ಧಾನುಷ್ಕಹಸ್ತದೊಳೆಸೆದಪಂಜುಗಳು (ತಿಮ್ಮಅ. ೬-೪೦).

[ನಿಡು(< ನಿಡಿದು₁) + ಬತ್ತಿ]

**ನಿಡುಬಯ್ತಲೆ** (ನಾ). ಉದ್ದವಾದ ಬೈತಲೆ; ನೀಳವಾದ ಬೈತಲೆ : ಚೆನ್ನಪೊಂಗರ ಕುಡಿ ಮುಂಜೆಜಂಗು ನಿಡುಬಯ್ತಲೆ [ಪಾಠಾಂ. ಬೈತಲೆ] ಬಾರ್ತೆಯೆ (ಅನಂಪು. ೮-೪೯); (ಸೂಕ್ತಿಸು. ೮-೩೭೭ ನೋ).

[ನಿಡು(< ನಿಡಿದು₁) + ಬಯ್ತಲೆ]

**ನಿಡುಬವಣೆ** (ನಾ). ಸತತವಾದ ತಿರುಗಾಟ; ನಿರಂತರವಾದ ಚಲನೆ : ಮೊಗಮುಂ ಮೆಯ್ಯುಂ ಪೊಗರುಂ ಮಿಗೆ ಸೊಗಸಂ ಪಡೆಯೆ ಕಂಡು ಕಳವಳದಿಂದನ್ನೆಗಮಿಂದುಕಾಮುಸೂರ್ಯರ್ ಜಗುಟ್ಟರ್ ಕಜಿ ರೂಪುಗೇಡು ನಿಡುಬವಣೆಗಳಿಂ (ಚಕವಿ. ೩-೧೦).

[ನಿಡು(< ನಿಡಿದು₁) + ಬವಣೆ(< ಬವಣೆ)]

**ನಿಡುಬವರಿ** (ನಾ). ಮಲ್ಲಯುದ್ಧ ಮುಂತಾದುವುಗಳಲ್ಲಿ ದೀರ್ಘ ವಾಗಿ ಸುತ್ತುವ ಒಂದು ಬಗೆಯ ವರಸೆ,—ಚಲನೆ : ಪ್ಲವಗಗತಿ ಜಂಘಾಕ್ರಮಣ ನಿಡುಬವರಿ ಭಂಜನೆ ಲಾಗು ಲಳಿ ಉಳಿ ತ್ರಿವಳಿ ವಂಚನೆ

ಯುತ್ತತನ ಪತನಪ್ರಬಂಧದಲಿ ದಿವದರಸುಗಳ ಸೂನುಗಳು . . . ಕಾದಿದ ರಖಿಳಚಿತ್ರದಲಿ (ತೊರರಾ. ೪-೪-೨೬). [ನಿಡು (<ನಿಡಿದು$_1$) + ಬವರಿ]

**ನಿಡುಬಾವಿ** (ನಾ). ಆಳವಾದ ಬಾವಿ; ದೊಡ್ಡ ಬಾವಿ: ಪೊಸ ದುರ್ಗವಂ ಪಾಟಸಿ ಪಿರಿಯ ನಿಡು ಬಾವಿಗಳನಗುಳಿಸಿದನದಱೊಳಗೆ (ಬಸಪು. ೧೬-೧೧). [ನಿಡು(<ನಿಡಿದು$_1$) + ಬಾವಿ]

**ನಿಡುಬಾಸೆ** 'ನಿಡುವಾಸೆ' ನೋ.

**ನಿಡುಬಾಳು$_1$** (ಕ್ರಿ). ಬಹುಕಾಲದವರೆಗೆ ಬದುಕು,—ಜೀವಿಸು: ಶ್ರೀಜಯನ್ ನಿಡುಬಾಳಿ ನಮ್ಮನೊಲಿದಾಳ್ಗೆ ; ಕನ್ನಡಿಗರುಸಿರಾಗಿ ಕನ್ನಡಂ ಬಾಳ್ಗೆ (ಹೊಂಗಳು. ೩೮-೨೨).

[<ನಿಡಿದು$_2$ + ಬಾಳು$_1$(<ಬಾೞ್$_1$)]

**ನಿಡುಬಾಳು$_2$** (ನಾ). ಬಹಳಕಾಲದ ಬದುಕು; ದೀರ್ಘಾವಧಿಯ ಜೀವನ: ಶ್ರೀವಾದಿರಾಜರು ಹೀಗೆ ನೂರಿಪ್ಪತ್ತು ವರ್ಷಗಳ ಕಾಲ ನಿಡು ಬಾಳನ್ನು ಬಾಳಿ ೧೬೦೦ರಲ್ಲಿ ಸಶರೀರರಾಗಿ ವೃಂದಾವನಪ್ರವೇಶ ಮಾಡಿದರು (ಜಗದಾ. ೯೮). [ನಿಡು(<ನಿಡಿದು$_1$) + ಬಾಳು$_2$(<ಬಾೞ್$_2$)]

**ನಿಡುಬಿಡುವು** (ನಾ). ದೀರ್ಘಕಾಲದ ರಜೆ,—ಸೂಟಿ: ಬೇಸಗೆಯ ಬೇಗೆ, ಶಾಲೆ ಕಾಲೇಜುಗಳ ನಿಡುಬಿಡುವಿನ ಬೇಸರಗಳಿಂದ ಜೀವ ತೀರ ಬೇಸರಿಸಿದಾಗ ಮಳೆಗಾಲದ ಕಾರ್ಮೋಡಗಳು ಸುಳಿಯುತ್ತಲೆ . . . ಚೇತರಿಸಿಕೊಂಡೇಳುವುದು (ಮುಂಗಾರು. ೩೨).

[ನಿಡು(<ನಿಡಿದು$_1$) + ಬಿಡುವು(<ಬಿಡು$_2$)]

**ನಿಡುಬಿಲ್** (ನಾ). ಉದ್ದವಾದ ಬಿಲ್ಲು; ದೊಡ್ಡ ಧನುಸ್ಸು.

ನಿಡುಬಿಲ್ಲಾಗು = ದೊಡ್ಡ ಬಿಲ್ಲಿನಂತೆ ಬಗ್ಗು ; ದೊಡ್ಡ ಕಮಾನಿನಂತಾಗು : ನಿಡುಬಿಲ್ ಬಾಗಿದ ಬಾನ ಗೋಲಮನ್ ಬೆನ್ನೊಳಗಿನ್ನುಂ ನರಲುತೆ ಪೊಱುವನ್ (ಬದ್ಧಪ್ರ. ೨೩-೪೮೭).

[ನಿಡು(<ನಿಡಿದು$_1$) + ಬಿಲ್$_2$]

**ನಿಡುಬೆನ್**, ನಿಡುಬೆನ್ನು (ನಾ). ಉದ್ದವಾದ ಬೆನ್ನು; ನೀಳವಾದ ಹಿಂಭಾಗ : ನಿ[ಪಾಠಾಂ. ನ]ಡುಬೆನ್, ಉಡುಮೊಗಂ (ಭಾಷಾಭೂ. ೩೧ ಪ್ರಯೋ). **ನಿಡುಬೆನ್ನು** : ಆ ಮಂದಿರದಲ್ಲಿ ಸಭೆಗೆಂಬಂತೆ ನಿಡುಬೆನ್ನಿನ ಕೆತ್ತನೆಯ ಕುರ್ಚಿಗಳನ್ನು ಸಾಲಾಗಿ ಜೋಡಿಸಿತ್ತು (ಪುನರು. ೩೪೫). [ನಿಡು(<ನಿಡಿದು$_1$) + ಬೆನ್]

**ನಿಡುಬೆನ್ನು** 'ನಿಡುಬೆನ್' ನೋ.

**ನಿಡುಬೆರಳು** 'ನಿಡುವೆರಲ್' ನೋ.

**ನಿಡುಬೇಸಱ** (ನಾ). ಅತಿಯಾದ ಬೇಜಾರು,— ಬೇಸರ : ನಿಟ್ಟುಸಿರು ನಿಡುಬೇಸಱಿನ ಕಡಲಿಟ್ಟಳಿವ ಕಂಬನಿಯ . . . ಗೋಳಿನಲಖಿಳ ಜನ ನಡೆತಂದುದರಮನೆಗೆ (ಸಿಭಾಗ. ೪-೧೨-೫).

[ನಿಡು(<ನಿಡಿದು$_1$) + ಬೇಸಱು$_2$]

**ನಿಡುಬೊಗರಿ** (ನಾ). ದೊಡ್ಡ ಬುಗುರಿ: ಹರಿಯು ವರವರೂಥಮನೆತ್ತಿ ಕರಯುಗಳದಿಂ ನಭಕೆ ತಿರುಪಿಟ್ಟ ನಿಡುಬೊಗರೆಯಂತೆ (ಚಿಬಪು. ೨೫-೨೬).

[ನಿಡು(<ನಿಡಿದು$_1$) + ಬೊಗರೆ(<ಬೊಗರಿ)]

**ನಿಡುಬೊಟ್ಟು** (ನಾ). ದೊಡ್ಡ ಬೊಟ್ಟು : ನಿಡುಬೊಟ್ಟಸೆಯೆ ದರ್ಬೆ ಕರಮತಿಶಯದಿಂ ಬೆರಳೊಳ್ ರಂಜಿಸೆ ಕಾಶಾಂಬರಮೆಸೆದಿರೆ ಬಂದು ನಿಂದು ಭೂಸುರನೊರ್ವಂ . . . ವೇದರುಕ್ಕಂ ಪೇೞ್ವ ಕ್ಷತೆಯನೀವುದುಂ (ಧರ್ಮಾಮೃ. ೧-೯೫).

[ನಿಡು(<ನಿಡಿದು$_1$) + ಬೊಟ್ಟು$_2$(<ಬಟ್ಟು$_1$)]

**ನಿಡುಬೊಬ್ಬೆ** (ನಾ). ದೊಡ್ಡ ಕೂಗಾಟ; ಭಾರಿ ಗದ್ದಲ : ಕುಂದಲಾ ಶಿವಭಕ್ತ ಲೋಕದೊಳೆಂದು ನಿಡುಬೊಬ್ಬೆಗಳನಿಡುತಾನಂದಿಸುತಾ ರುತ (ಬಸಪು. ೩೨-೨೩). [ನಿಡು(<ನಿಡಿದು$_1$) + ಬೊಬ್ಬೆ$_1$]



**ನಿಡುಭರಿಕೆಯ್** (ನಾ). ನೀಳವಾದ ಸೊಂಡಿಲು : ಕಡಿದ ಕದ್ದಾಳ ಕುಮ್ಮರಿಯಂತೆ ಕಂಸಾರಿಯಡಿಯಿಂದ ಮಡಿದ ಸರ್ಪಗಳ ಪಡೆಯಂತೆ ಮೆಱೆದುದು ಕಡಿಪಡೆದಾನೆಯ ನಿಡುಭ[ಪಾಠಾಂ. ಡಿಬ]ರಿಕೆಯ್ಗಳಾಜಿಯೊಳು (ಕುರಾಸಾಂ. ೧೬-೬೦). [ನಿಡು(<ನಿಡಿದು$_1$) + ಭರಿಕೆಯ್]

**ನಿಡುಮಗುಡ** (ನಾ). ಭಾರಿಯಾದ ಕಿರೀಟ : ನಿಡು ಮಗುಡಂ ತೆಱಂಬೊಳೆವ ನುಣ್ಬಣೆ . . . ಪೊದಟ್ದ ಕನ್ನಡಿಗದಪಿಂ ಮೊಗಂ ಕಱಗುಮೇಂ ಗಳ ಕಣ್ಗಳ ಮಂಗಳಂಗಳಂ (ಚಿಕವಿ. ೩-೮೮).

[ನಿಡು(<ನಿಡಿದು$_1$) + ಮಗುಡ]

**ನಿಡುಮರ**(ನಾ). ದೊಡ್ಡಮರ; ಹೆಮ್ಮರ : ನಿಡುಮರದ ತುದಿಗೋಡುಗಳೊಳ್ಕಟ್ಟಿದ ತೃಣಪುಲೀಚಿಹ್ನಂಗಳಿನಱಿಯಲಾದ ಕಾಡ ಪಟವಾವಿಗೆಗಳೊಳಂ (ಕಾದಂಬ. ೨೬೬); ಮೇಗೆಮೇಗುಬ್ಬೇಳ್ವ ಸುಯ್ಲಿನ ತಾಗುವಳ್ಳಿಯ ತೋಡ ಬೆಮರಿನ ಬಾಗುಗಳ ನಿ[ಪಾಠಾಂ. ಗಿ]ಡುಮರನ ಮಱೆಗಳಲಟ್ಟಿದನು ಮೃಗವ (ತೊರರಾ. ೩-೮-೫೨).

[ನಿಡು(<ನಿಡಿದು$_1$) + ಮರ$_1$]

**ನಿಡುಮಾಲೆ** (ನಾ). = ನಿಡುದಂಡೆ : ಇವನೆದೆಯೊಲಿಯದ ಭಾವಗಳು ಕರಿಗಲ್ಲಿನ ನಿಡುಮಾಲೆಗಳು ! (ಕವಿಕಾ. ೪೨-೮).

[ನಿಡು(<ನಿಡಿದು$_1$) + ಮಾಲೆ]

**ನಿಡುಮಾಳ** (ನಾ). ವಿಶಾಲವಾದ ಬಯಲು; ವಿಸ್ತಾರವಾದ ಮೈದಾನ: ಎರಡೂರೆಡೆಯ(ಂ) ನಿಡುಮಾಳ(ಮ)ಂ ಪ್ರಾಂತರಮೆಂಬುದು (ಹಲಾಯು. ೪೩-೧೦೬); ನಿಡುಮಾಳಂ ಮುಂದೆ ನೀರಿಲ್ಲಣಮೆ ಮಗುೞ್ದೊಡಂ ಪಿಂತಣೂರ್ಗೆಂಟು (ರಸುದ. ೧೮೧ ಪ್ರಯೋ).

[ನಿಡು(<ನಿಡಿದು$_1$) + ಮಾಳ$_4$]

**ನಿಡುಮಿಾನ್** (ನಾ). ಭಾರಿಯಾದ ಮಿಾನು; ದೊಡ್ಡ ಮಿಾನು : ನೆಱನೆಗೆವ ನಿಡುಮಿಾನ್ಗಂಗಳಿಂ ನಿಳ್ಕಿ ನೋಡಿ ಘುಳುಘುಳಿಸಿ ಮೊಱೆವ ನೆವದಿಂ ಪಲ್ಮೊಱೆದು (ರಾಜಶೇ. ೨-೮ ಪ).

[ನಿಡು(<ನಿಡಿದು$_1$) + ಮಿಾನ್$_3$]

**ನಿಡುಮುಗಿಲ್** (ನಾ). ದೊಡ್ಡ ಮೋಡ : ನಡೆವುವು ನಭಕ್ಕೆ ಮಿಂಚುವ ನಿಡುಮುಗಿಲಮರಿಯರ ಕಣ್ಗೆ ಕುಡಲೆಂದಗದೊಳ್ ಬಿಡದೋಡುವ ಖೇಚರಿಯರ ಕಡೆಗಣ್ಗಳ ಬೆಳಗನೇಱು ತೋಱುವ ತೆಱದಿಂ (ಅರ್ಧನೇ. ೨-೭೪). [ನಿಡು(<ನಿಡಿದು$_1$) + ಮುಗಿಲ್]

**ನಿಡುಮುಡಿ** (ನಾ). ೧. ಉದ್ದವಾದ ಜಡೆ,—ಹೆಳಲು : ನಿಡುಮುಡಿಯರಸಂಚೆನಡೆ ತಳಿರಡಿ ಬಟ್ಟದೊಡೆ ಬಡಬಾಸೆ ನುಣ್ದೊಳ್ಗಳ . . . ಜವ್ವನೆಯರೆಯ್ದಿದರಾಗ (ತ್ರಿಭುತಿ. ೧೪-೧೯); ಎಡೆಯಾಡುವಂಗನೆಯರ ಪದದಳಿರ್ಗೆಂಪು ಕೊಡಹಿದ ನಿಡುಮುಡಿಯಲರ ನಿಡುಗಂಪು . . . ತೀವಿಕೊಂಡಡಗಿಹುದಾ ಬೀದಿಯೊಳಗೆ (ಕಂಸವಿ. ೬-೯೬); ನಿಡುಮುಡಿಯಲರ ವಾಸನೆ ಕರಕಮಲದೆ ಪಿಡಿದ ಕಪ್ಪುರದ ವೀಳ್ಯಗಳ ಕಡುಪರಿಮಳ . . . ಬಿಡದೆ ದೆಸೆಯ ತುಂಬಿದುದು (ಕಂಸವಿ. ೨೧-೨೩). ೨. ನೀಳವಾದ ಜಟೆ,—ಜಡೆಗಟ್ಟಿದ ಕೂದಲು : ನಿಡುಮುಡಿಯೊಳು ರಂಜಿಸುವ ಹಸುಳೆವೆಱೆಯಂತೆ ವಿರಾಜಿಪ ಬೆಳರ್ಗೇದಗೆಯೆಸಳಿಂ . . . ದುರ್ಗಾಂಬಿಕೆಯಂತೊಪ್ಪಿದಳು (ಜಯಕಾ. ೨-೧೧).

[ನಿಡು(<ನಿಡಿದು$_1$) + ಮುಡಿ$_3$]

**ನಿಡುಮುಸುಕು** (ನಾ). (ಮುಖವನ್ನು ಮುಚ್ಚುವ) ದೊಡ್ಡ ಬಟ್ಟೆ,—ಮುಸುಕು : ಮೆಲ್ಲನೆಬ್ಬಿಸೆ ಸುಮ್ಮನಿರುತಮಿರೆ ನಿಡುಮುಸುಕ ನೋಸರಿಸೆ ದೇಹದುಸಿರಿಲ್ಲದಿರೆ (ಬಸರ. ೯-೧೫೦); ಪಿಡಿವ ತಲೆಗಳ ಬಳಿವಿಡಿದು ಧಾರಿಡುವ ರಕುತದಲೆರಡುಬಲದಲಿ ಹಿಡಿದ ದೀವಿಗೆ ನಂದಿದವು . . . ಸುಭಟರ ನಿಡುಮುಸುಕು ಮೋಹಿಸಿತು (ಕುಪ್ಪಾದ್ರೋ. ೧೬-೧೭);

ಹೊತ್ತ ದುಗುಡದ ನಿಡುಮುಸುಕುಗಳ ಬಿಗಿದ ಬೆಜಗಿನ ಬಿಟ್ಟ ಕಣ್ಣುಗಳ ಒಡೆಯನಿದಿರಲಿ ಕುಳ್ಳಿರದೆ (ಕುಪ್ಯಾಕ. ೧-೧೮).
[ನಿಡು(<ನಿಡಿದು$_1$)+ಮುಸುಕು$_2$(<ಮುಸುಂಕು$_2$)]

**ನಿಡುಮೂಗ** (ನಾ). ಉದ್ದವಾದ ಮೂಗುಳ್ಳವನು ; ನೀಳವಾದ ಮೂಗುಳ್ಳವನು : ಹೆಟೆಗಾಲಂ, ನಿಡುಮೂಗಂ, ಕುಸಿಗೊರಲಂ, ಸವಟೆವಾಯಂ (ಶಮದ. ೬೬ ಪ್ರಯೋ). [ನಿಡುಮೂಗು+-ಅ$_7$]

**ನಿಡುಮೂಗಿ** (ನಾ). ನೀಳವಾದ ಮೂಗಿರುವ ವ್ಯಕ್ತಿ : ಮೆಲ್ವಿನ್ನಣಿ, ಕಡುಗೇಡಿ, ನಿಡುಮೂಗಿ, ಹೆಟಿಗಾಲಿ (ಶಮದ. ೧೬೫ ಪ್ರಯೋ) ; ಕಡುಗೆಲಸಿ, ನಿಡುಮೂಗಿ, ಚಲವಾದಿ (ಶಮದ. ೧೮೬ ಪ್ರಯೋ).
[ನಿಡುಮೂಗು+-ಇ$_3$]

**ನಿಡುಮೂಗು**(ನಾ). ಉದ್ದವಾದ ಮೂಗು ; ನೀಳವಾದ ನಾಸಿಕ : ಈ ನಿಡುಮೂಗನು ನಾನೇ ಬಯಸಿದೆ ಈ ಹಿಂಕಿವಿಯನು ನಾನೇ ಬಯಸಿದೆ (ಗಣೇಶ. ೫-೨೪) ; ಅವರೆಲ್ಲರಿಗಿಂತ ಅತ್ಯಂತಾಸಕ್ತಿ ವಹಿಸಿದ್ದವನೆಂದರೆ ಕುರುಗಡ್ಡದ ನಿಡುಮೂಗಿನ ಮಂದ್ರಧ್ವನಿಯ ಎತ್ತರದ ವ್ಯಕ್ತಿ (ಪುನರು.೩೦೧). [ನಿಡು(<ನಿಡಿದು$_1$)+ಮೂಗು$_1$]

**ನಿಡುಮೂತಿ** (ನಾ). ನೀಳವಾದ ಮೂತಿ,—ಮುಖ : ನಿಡುಮೂತಿಯ, ನೀಳಮೂಗಿನ (Snipy. ೩೦೪೩).
[ನಿಡು(<ನಿಡಿದು$_1$)+ಮೂತಿ]

**ನಿಡುಮೆದೆ** (ನಾ). ದೊಡ್ಡ ರಾಶಿ,—ಒಟ್ಟಿಲು : ಬೆಳ್ಳಿಲೆಯ ನಿಡುಮೆದೆ ಘನಸಾರಚೂರ್ಣದ ರಾಶಿಗಳೊಡನೆಸೆದವು ಚಪ್ಪರದೊಳು (ರಾಮವಿ. ೬-೩೬).
[ನಿಡು(<ನಿಡಿದು$_1$)+ಮೆದೆ$_1$]

**ನಿಡುಮೆಯ್** (ನಾ). =**ನಿಡುಮೊಡಲು** : ಆಡದ ಮೆಯ್ಯೊಳಿಲ್ಲ ನಿಡುಮೆಯ್ಯೊಳುಮಾಡಿದುವಂತೆ ಮೆಟ್ಟುವಳ್ ನೋಡಿದರೆಲ್ಲರಂ ಪಿಡಿದು ಮೆಟ್ಟಿದಳ್ (ಪಂಪಭಾ. ೬-೯೧). [ನಿಡು(<ನಿಡಿದು$_1$)+ಮೆಯ್]

**ನಿಡುಮೊಗ** (ನಾ). ಉದ್ದವಾದ ಮುಖ ; ನೀಳವಾದ ಮುಖ. ನಿಡುಮೊಗದವಳ್ = ನೀಳವಾದ ಮುಖವುಳ್ಳವಳು ; ಕೋಲುಮುಖದವಳು : ನಿಡುಮೊಗದವಳ್ ತೃಷಾತುರೆ ತುಡಲುಣಲಾಟಸುವಳೊಂದೆ ಕಾಲೊಳ್ ನಿಲುವಳ್ . . . ತನ್ಮೇಷಮಧ್ಯಮದ್ರೇಕ್ಕಾಣಂ (ಜಾತತಿ. ೧೯-೨). [ನಿಡು(<ನಿಡಿದು$_1$)+ಮೊಗ]

**ನಿಡುಮೊಲೆ** (ನಾ). ದೊಡ್ಡ ಮೊಲೆ ; ತೋರಸ್ತನ ; ಉದ್ದವಾದ ಮೊಲೆ : ಬಾಂದಳಕಡರ್ದೀಳ್ವ ನಿಡುಮೊಲೆಗಳಿಂ ಬಲವನಪ್ಪಳಿಸಿದಳ್ತಿರುತಿರುಗಿ ಬೀಸುತ್ತೆ ಯೋಜನಸ್ತನಿ ಕನಲ್ದಾಕ್ಷಣದೊಳು (ಜೈಮಿಭಾ. ೧೬-೩೬). [ನಿಡು(<ನಿಡಿದು$_1$)+ಮೊಲೆ$_1$]

**ನಿಡುಮೋಹರ** (ನಾ). ದೊಡ್ಡ ಗುಂಪು,—ಸಮೂಹ : ದೊರೆ ಮುಗಿಲು ತೆರೆಮುಗಿಲು ನಿಡುಮೋಹರದ ಮುಗಿಲುಪ್ಪರದ ಮುಗಿಲುಬ್ಬರದ ಝಾಡಿಯ ಜೋಡಿಗಳ ಜಂಗಳದ ಮುಗಿಲಿನಲಿ ತರಣಿ ಶಶಿತಾರಾಗ್ರಹಂಗಳ ಹರವು ನಿಂದುದು (ತೊರವೆ. ೪-೬-೫).
[ನಿಡು(<ನಿಡಿದು$_1$)+ಮೋಹರ$_1$]

**ನಿಡುರೂಪು** (ನಾ). ದೊಡ್ಡ ಆಕೃತಿ : ತೊಡೆ ಮಡ . . . ಬೆನ್ನು ನಡುಗಳನತ್ತಿತ್ತ ಮುರಿದು ಅಡಗಿಸುವರು ನಿಮಿರಿಸುವರು ಮೇಣದೆ ನಿಡುರೂಪೊ ಮ್ಯೊಯೊಯೆಂಬಂತೆ (ಭರಚ. ೬೩-೫೨).
[ನಿಡು(<ನಿಡಿದು$_1$)+ರೂಪು]

**ನಿಡುವಕ್ಕರಿಕೆ** (ನಾ). ದೊಡ್ಡ ಹಕ್ಕರಿಕೆ,—ಪಕ್ಕರೆ : ಮಲೆಯಾಳ ಜನಪದದ ಅರಸಿನಂತಿರೆ ಚೇರಮಯಮೆನಲುರವಣಿಸಿ ನೂಕಿದರು ನಿಡುವಕ್ಕರಿಕೆಗಳ ಗರುವಾಯಿಗಳ ಘನಮದದ ತೇಜಿಗಳ (ಕುಪ್ಯಾಭೀ. ೪-೫೧).
[ನಿಡು(<ನಿಡಿದು$_1$)+ಪಕ್ಕರಿಕೆ(<ಪಕ್ಕರಕ್ಕೆ)]

**ನಿಡುವಗಲು** (ನಾ). ದೀರ್ಘವಾದ ಹಗಲು : ನಿಡುವಗಲಿನ ಬೆಳಕಿನಲ್ಲಿ ನಡುನಿಶಿಬೆಳುದಿಂಗಳಲ್ಲಿ ಕರಿನಿಶಿಕತ್ತಲೆಗಳಲ್ಲಿ ಕೊಳನ ನೋಡುತೆ (ವಿಸೀಗೀ. ೬೬-೧). [ನಿಡು(<ನಿಡಿದು$_1$)+ಪಗಲು(<ಪಗಲ್)]

**ನಿಡುವಗೆ, ನಿಡುಪಗೆ** (ನಾ). ೧. ದೀರ್ಘಕಾಲದ ಶತ್ರು ; ಬದ್ಧದ್ವೇಷಿ : ನಿಡುವಗೆ ಸ್ವೈಪಿನಿಂದೆ ದೊರೆಕೊಂಡುದು (ಪಂಪಭಾ.೧೧-೧೪೨); ಪಗೆಗೆ ಮೊದಲಿಗನೆ ನಾಂ ನಿ[ಪಾಠಾಂ. ನಾಂಗಿ, ನಾನಿ]ಡುವಗೆ ಕೌರವನಂತದಕ್ಕೆ ನೀಮೆಲ್ಲಂ ದಾಯಿಗತನಮನಿಲ್ಲಿ ತೋಱಲ್ವೇಡ (ಗದಾಯು. ೬-೬೨). **ನಿಡುಪಗೆ** : ೨. ದೀರ್ಘಕಾಲದ ವೈರ ; ಬದ್ಧದ್ವೇಷ ; ಬಹುಕಾಲದ ಶತ್ರುತ್ವ : ತಂತಮ್ಮ ನಿಡುಪಗೆಗಳನ್, ಕೆಳೆಗಳನ್, ಪೊರ್ದುಗೆಗಳನ್, ದೇವತೆಗಳನ್, ಮಿಗೆ ನಲಿಪ . . . ಪಲವಗೆಯ ಬಣ್ಣಗಳ್ ಸೂಚಿಸುವುದೇನೆಂದು ಕಲಿಸಿದೆನ್ ಅವರ್ಗೆ (ಬದ್ಧಪ್ರ. ೨೬-೫೫೬).
[ನಿಡು(<ನಿಡಿದು$_1$)+ಪಗೆ$_2$]

**ನಿಡುವಜ್ಜೆ** (ನಾ). ದೊಡ್ಡ ಹೆಜ್ಜೆ,—ದಾಪು : (ನಿಡುವಜ್ಜೆಗಳಿಂದ ಮುನ್ನುಗ್ಗಿ, ಚೆಲ್ಲಮ್ಮನ ಕಟ್ಟೆದಿರಲ್ಲಿ ನಿಂತು,) (ಬೆಟ್ಟಅ. ೧೨-೪).
[ನಿಡು(<ನಿಡಿದು$_1$)+ಪಜ್ಜೆ]

**ನಿಡುವಟ್ಟೆ** (ನಾ). ನಿಡಿದಾದ ದಾರಿ ; ದೀರ್ಘವಾದ ಮಾರ್ಗ : ಸಂಪಾತಿ ತಾಂ ಕುಳ್ತು, ಶಾಪದ ವಿಮೋಚನದ ನಿಡುವಟ್ಟೆಯಂ ನೋಡುತಿರ್ದನ್ (ಶ್ರೀರಾಮಾ. ೩೬೩-೪೩).
[ನಿಡು(<ನಿಡಿದು$_1$)+ಬಟ್ಟೆ$_1$]

**ನಿಡುವಣೆ, ನಿಡುಹಣೆ** (ನಾ). ಅಗಲವಾದ ಹಣೆ ; ವಿಶಾಲವಾದ ನೊಸಲು: 'ನಿಡುವಣೆಯ' ನೋಡಿ. **ನಿಡುಹಣೆ** : ಚಂದ್ರಬಿಂಬದ ಮೇಲೆ ಕೆಂಪು ಕಾಣುತಲಿರುವುದು ; ಕಂದ ಮುದ್ದನ ಅಚ್ಚ ನಿಡುಹಣೆಗೆ ಜೋ ; ಕಂದ ಮುದ್ದನ ಅಚ್ಚ ನಿಡುಹಣೆಗೆ ತಾಯ್ ತರಳೆ ಚಂದದಿಂ ಬೊಟ್ಟಿಟ್ಟ ಕತ್ತುರಿಗೆ ಜೋ ! (ಕಎವು. ೪-೨).
[ನಿಡು(<ನಿಡಿದು$_1$)+ಪಣೆ$_2$]

**ನಿಡುವಣೆಯ** (ನಾ). ಅಗಲವಾದ ಹಣೆಯುಳ್ಳವನು ; ವಿಶಾಲವಾದ ನೊಸಲುಳ್ಳವನು : ನಿಡುವಣೆಯಂ, ನುಣ್ಗೊಡೆಯಳ್ . . . ನಿಡುಜಡೆಯಳ್, ಪೆಱೆವಣೆಯಳ್ (ಶಬ್ದಾನು. ೩೨೮ ಪ್ರಯೋ).
[ನಿಡುವಣೆ+-ಅ$_7$]

**ನಿಡುವಯಣ** (ನಾ). ದೀರ್ಘವಾದ ಪ್ರಯಾಣ : ನಿಡುದೋಳ್, ನಿಡುವಯಣಂ, ನಡುನೆಱಿಂಗು (ಶಮದ. ೧೮೧ ಪ್ರಯೋ) ; ಪೆಡಸಾರ್ದ ಚೆನ್ನಬಸವಂ ನೆಲೆವಿಡಿದಂ ಪಡಿಬರಿಸಿದ ಕೂಪುಖಾನಂ ನಿಡುವಯಣಂ ಪೋದಂ (ಅಪ್ರತಿ.೩-೯೦ ಪ) ; ಏಗೆಯ್ವೆನೆನುತೆ ವಿಚಾರದಿಂ ಅಪ್ಪುದಪ್ಪುದು ನಿಡುವಯಣಂ ಇರ್ಕೆ ರಾಘವಂ ಪೇಟ್ವಂ ಅಲ್ಲದೊಡೆ ತಾಂ ತಮಗೆ ನೆಲೆಗೆಯ್ವರ್ (ರಾಮಾಶ್ವ. ೨೬-೨೯). [ನಿಡು(<ನಿಡಿದು$_1$)+ಪಯಣ]

**ನಿಡುವರಿ** (ನಾ). ವೇಗದಿಂದ ಕೂಡಿದ ಗತಿ,—ಚಲನೆ ; ನಿಟ್ಟೋಟ: ಮದಗಜದ ನಿಡುವರಿಯ ಕೇರಿನ ಕುದುರೆಕಾಜಿರ ಕಾಹಿನಲಿ ಕೊಬ್ಬಿದುದು ನಿಬ್ಬರವಾಗಿ ಬಹುವಿಧವಾದ್ಯನಿರ್ಘೋಷ (ಕುಪ್ಯಾದ್ರೋ. ೨-೬೮) ; ನಿಡುವರಿಯ ಗಜ ತೂಳಿದವು ತೋಳಿನ ಬಾಳ ಹೊಯ್ಲಿನಲಿ (ತೊರವೆ. ೩-೬-೧೫). [ನಿಡು(<ನಿಡಿದು$_1$)+ಪರಿ$_3$]

**ನಿಡುವಲ್, ನಿಡುಹಲ್ಲು** (ನಾ). ೧. ನೀಳವಾದ ಹಲ್ಲು. ೨. ಆನೆಯ ಉದ್ದವಾದ ಕೋರೆದಾಡೆ,—ದಂತ : ಘನಕರಘಟೆಗಳ್ . . . ಪೆಟ್ಟುವೆರ್ಚೆ ನಿಮಿರ್ಚೆ ನಿಡುವಲ್ ಬೆಳಗೆ, ತುಂಬಿಕೆಯೊಳಿಂಬುಗೊಂಡ ತುಂಬುನೀರಂ ಫೂತ್ಕರಿಸಿದಪುವೆಂಬಂತಿರೆ ಎಡೆಬಿಡದೆ ಬಲ್ಸರಿಯೆ ಮುಟೆಗಾಲಂ ಚೆಲ್ವಾಯ್ತು (ರಾಮಾಶ್ವ.೩-೧೦). **ನಿಡುಹಲ್ಲು**: ೧. ಕತ್ತೆಯ ರೂಪಿನಿಂ . . . ಪರಿದು ಬಹ ಭರಕಿತ್ತರೆದ ಪಿರ್ಮೊರಗಳವು

ಬುಡಗೆಡೆಯೆ ಬಾಯ್ಯನು ತೆಱೆದು ನಿಡುಹಲ್ಲುಗಳ ತೋಱುತಲಿದಿರೆ ನಡೆತರಲು (ಸಾಳ್ವಭಾ. ೨೧-೫೮). [ನಿಡು(<ನಿಡಿದು$_1$) + ಪಲ್]

**ನಿಡುವಲಗೆ** (ನಾ). ದೊಡ್ಡ ಹಲಗೆ,—ಗುರಾಣಿ : ಪಿಡಿದ ಪೆರ್ಬಾಳ ನಿಡುವಲಗೆಯ ತುಡುಕಿ ಗಗನವನಲೆವ ಮೌಳಿಗಳ ಚಲ್ಲಣದ ಕುಡಿಯ ತೊಂಗಲ ಹಲವು ವಿಧದ ನಾನಾರ್ಥ್ಯಾನಿವಿಡಿದ ಗರ್ಜನೆಯ ರಕ್ಕಸಭೂತ ವೇತಾಳರಪ್ಪುತಮಂ ಕಾದಿರ್ದರು (ಸಿದ್ಧರಾ. ೬-೪೪). [ನಿಡು(<ನಿಡಿದು$_1$) + ಪಲಗೆ]

**ನಿಡುವಲೆ,** ನಿಡಿವಲೆ (ನಾ). ಒಂದು ಬಗೆಯ ದೊಡ್ಡ ಬಲೆ : ತಡಿಕೆವಲೆ . . . ನಡುವಲೆ ತಡೆವಲೆ ಸಿಡಿವಲೆ ನಿಡುವಲೆಗಳೊಪ್ಪಿದವು ಲುಬ್ಧಕರೊಳ್ (ಗಿರಿಕ. ೧-೮೦) ; ಇಡುವಲೆ ಸಿಡಿವಲೆ. . . . ಕಕ್ಕಡವಲೆ ನಿಡುವಲೆ ಸಾಲ್ವಲೆ ಬಿಡುವಲೆಗಳೆನಿಪ್ಪುವೆಸೆದುವಾ ಬೇಂಟೆಗರೊಳ್ (ಶಬಶಂ. ೩-೨೪). **ನಿಡಿವಲೆ :** ಕೋಲುವಲೆಗಳ ಸಿಡಿವಲೆಯ ನಿ[ಪಾಠಾಂ. ಮಿ]ಡಿವಲೆಯ . . . ಬೇಟೆಗಾಱರು ಬಳಸಿದರು ಶಿವನ (ಕುಪ್ಯಾಅ. ೫-೩೩) ; ನಿಡಿವಲೆ ಪಾಜಿ ಬೆಳ್ವರ ಬಡಿವಲೆ ಬಲುವಲೆಗಾಱರು ಕೂಗಿ ಬೊಬ್ಬಿಡುತಲೈದಿದರು (ಮೋಹತ. ೧೯-೧೬). [ನಿಡು(<ನಿಡಿದು$_1$) + ಬಲೆ$_1$]

**ನಿಡುವಳ್ಳಿ** (ನಾ). ದೊಡ್ಡ ಹಳ್ಳಿ : ನಡುವಣ ಖಂಡದೊಳಿಪ್ಪತ್ತ ನಾಲ್ಕೋಟಿ ನಿಡುವಳ್ಳಿಗಳನಾಯ್ದು ಕೊಟ್ಟು ಅಡಿಗಡಿಗವರ ಸೇವೆಯ ಮಾಳ್ಪುದೆಂದವರೊಡೆಯರ್ಗೆ ನೇಮಿಸಿ ಬಿಟ್ಟ (ಭರತೇ. ೪೪-೨೬). [ನಿಡು(<ನಿಡಿದು$_1$) + ಪಳ್ಳಿ$_1$]

**ನಿಡುವಾನಿ** (ನಾ). ಒಂದು ಸ್ಥಳದ ಹೆಸರು : ನಿಡುವಾನಿಯ ತುಱು ಗೋಳೆಯೊಳ್ ಬಿದಿರ್ದಕದ ಏಚಗಾವುಣ್ಡನ ತಮ್ಮ ಕೆಞ್ಚ (ಎಕ. XV, ಹೊಳನ. ೧೨೯-೩ ; 970). [ ? ]

**ನಿಡುವಾಯಿದೆ** (ನಾ). ಬಹಳ ಕಾಲದ ಗಡುವು ; ದೀರ್ಘಕಾಲಾವಧಿ : ಡಿಪಾಸಿಟ್ (ಪುದುವಟ್ಟು ಅಥವಾ ಠೇವಣಿ) ಲೆಕ್ಕ ಎರಡು ಬಗೆಯಾಗಿ ಇರಬಲ್ಲದು : ಒಂದು ನಿಡುವಾಯಿದೆ (ಗಟ್ಟಿ) ಡಿಪಾಸಿಟ್ಟು ; ಇನ್ನೊಂದು ಕಿರುವಾಯಿದೆ (ಚಾಲ್ತಿ) ಡಿಪಾಸಿಟ್ಟು (ಹಣಪ್ರ. ೩೩) ; ಇನ್ನೊಂದು ಬೇಂಕಿನವರು . . . ನಿಡುವಾಯಿದೆಯ ಸಾಲ ಒದಗಿಸಿದರು (ಅಪೂಪ. ೭). [ನಿಡು(<ನಿಡಿದು$_1$) + ವಾಯಿದೆ]

**ನಿಡುವಾಸೆ,** ನಿಡಿವಾಸೆ, ನಿಡುಬಾಸೆ (ನಾ). ಹೆಂಗಸರ ಹೊಟ್ಟೆಯ ಮೇಲೆ ಸಾಲಾಗಿರುವ ಕೂದಲು,—ರೋಮರೇಖೆ : ತೆರೆದೋಳ ನ್ನೆತ್ತಿ ಕಳೆಗೊಂಡು ಪೊಡೆವಂತೆ ತಳ್ತು ಪಾಯ್ವ ನಿಡುವಾಸೆಯಿಂ ರಂಜಿಸಿ ನೀರಾಟಕೆಳಸಿ (ರಾಜಶೇ. ೨-೮ ವ). **ನಿಡಿವಾಸೆ:** ನೇರ್ಪುವಟ್ಟ ನಿಡಿವಾಸೆಯ ಕ್ಕರ್ದೆಗರಳಿಯಾಸೆ ಕಟ್ಟಿನಿವಾತು ವಿಟರ್ಗೆ ಕೇತು (ಉದ್ಭಟೇ. ೫-೧೮). **ನಿಡುಬಾಸೆ :** ಕಂಬುಗೊರಳ ಬಲ್ಮೊಲೆಗಳ ಸಿಯ ನಡುಗಿಂಬಾದ ನಿಡುಬಾಸೆಗಳ ಪೊಂಬಣ್ಣವೆಟ್ಟದಂತೆಸೆವ ಜಘನಗಳ ಪೊಂಬಾಳೆದೊಡೆಯ ವರೆಸೆಯೆ (ಜೀವಂಸಾಂ. ೧೯-೮೨) ; ಶಿವಜ್ಞಾನದೀಪದ ಕುಡಿಯೊಳಮರ್ದ ಧೂಮಚ್ಛವಿಯೊಯೆಂದೆನಲ್ ಕಪ್ಪಡರ್ದ ನಿಡುಬಾಸೆ ಕಣ್ಗೆಸೆದುದು (ಚೆಬವು. ೪-೧೨). [ನಿಡು(<ನಿಡಿದು$_1$) + ಬಾಸೆ$_1$]

**ನಿಡುವಾಳ್** (ನಾ). ಉದ್ದವಾದ ಕತ್ತಿ ; ನೀಳವಾದ ಖಡ್ಗ : ಮಡದಿ ಗಂಡನ ಕಾಣುತೇಳುತಲಿ . . . ನಿಡುವಾಳ್ಕ[ಳ]ತ್ತ ಪರವಾಂತು ಕಡುಜವದಿ ಬೆನ್ನಟ್ಟಿದಳು (ಸಾಳ್ವಭಾ. ೧೬-೩೩) ; ಮಾರನ ತರಿದ ನಿಡುವಾಳೊ ನಾಸಿಕವೊ ನೋಡ ! (ಗೊಲ್ಲೊಥಾ. ೪-೧). [ನಿಡು(<ನಿಡಿದು$_1$) + ಬಾಳ್$_3$]

**ನಿಡುವಾಳೆ** (ನಾ). ಒಂದು ಬಗೆಯ ಉದ್ದವಾದ ಬಾಳೆಮೀನು : ಪಿಡಿದಿರ್ದ ಬಾಳ್ಗಳುಣ್ಮಿದ ನಿಡುವಾಳೆಯಿಂ ಬೀಳಿಯ ಸತ್ತಿಗೆಗಳ್ ನೊರೆವಿಂಡಂ . . . ನೆಗೆಟ್ಟಿ ಪೆರ್ಚಿದ ಕಡಲೆಂಬಿನಂ ಮಸಗಿ ಬಂದುದು ಪೆರ್ಬಡೆ ಕಬುರ್ವಿಲ್ಲನಾ (ಕಬ್ಬಿಕಾ. ೨೦೭). [ನಿಡು(<ನಿಡಿದು$_1$) + ಬಾಳೆ$_2$]

**ನಿಡುವುಟಿ** (ನಾ). ಒಂದು ಸ್ಥಳದ ಹೆಸರು : ಕಾದಿ ತ × ಯಣ್ಣ ಸತ್ತೊಡೆ ನಿಡುವುಟಿಯನೆ ಕಲ್ನಡಾಗೆಯಿತ್ತ (ಎಕ. XIV, ನಾಗಮಂ. ೧೩೭-೯ ; ?). [ ? ]

**ನಿಡುವುರಿ** (ನಾ). ದೊಡ್ಡ ಉರಿ ; ಮಹಾಜ್ವಾಲೆ : ವಿಯೋಗಾವಳಿ ವನ್ಯಗಂಗಳಂ ಮಧುವೆಂಬ ಬೇಂಟೆಗಂ ಸುಡಲೆಂದು ಬನದೊಳಿಟ್ಟ ದಾವಾಗ್ನಿ ನಿಡುವುರಿಯ[ಪಾಠಾಂ. ಯುುರಿಯುರಿವ]ನಾಲಗೆಗಳೆನೆ ಕೆಂಪುದೀವಿ ದಟ್ಟಯಿಸಿರ್ದ ತಳಿರ್ವೊದರ್ಗಳ ಕೆಳಗನಾವರಿಸುತೆಲ್ಲ ತಳಿರಿಂದಶೋಕದ್ರುಮಂಗಳ್ ಕರಂ ಮೆಱೆದುವು (ಚೆಬವು. ೪೫-೧೯). [ನಿಡು(<ನಿಡಿದು$_1$) + ಉರಿ$_2$]

**ನಿಡುವುರ್ಬು** 'ನಿಡುವುರ್ಚು' ನೋ.

**ನಿಡುವುರ್ಚು,** ನಿಡಿವುರ್ಚು, ನಿಡುಪುರ್ಬು, ನಿಡುಪುರ್ಚು, ನಿಡುವುರ್ಬು, ನಿಡುಹುಬ್ಬು, ನಿಡುಹುರ್ಬು (ನಾ). ಉದ್ದವಾದ ಹುಬ್ಬು ; ನೀಳವಾದ ಭ್ರೂ : ನಿಜಮುಖಾಂಬುಜಮುಮಂಬುಜಮುಮೊಡನಲರ್ವಿನಂ ನಿಜದ ಚೆಲ್ವಮರೆ ನಿಡುವುರ್ಚುಗಳ್ ನಿಮಿರ್ವಿನಂ (ಅದಿಪು. ೬-೨೭ ರಗಳೆ) ; ಕರಂ ಪೊಳೆವಪಾಂಗೆ ಕಣ್ಣೆಂದಳುತುರ್ಚುಳುಂಕೆ ನಿಡುವುರ್ಚುಗಳ್ ಪೊಡರೆ . . . ಪಿಡಿದು ಮೆಟ್ಟುವಳ್ ನೋಟ್ಪರಂ (ಪಂಪಭಾ. ೪-೮೯) ; ಇವಳ ಲಲಾಟಮೆಂಬ ಸಸಿಯಂ ನೆಱೆ ನೋಡುವೆವೆಂದೊಡೀ ಮನೋಭವನೆಮಗಡ್ಡಮಾಗಿ ನಿಡುವುರ್ಚುಗಳೆಂಬ ಪೊದಟ್ಟ ಚಾಪಮಂ ಸುವಿಟಜನೋಪದಾಮನುದಗ್ರದಿಸಿಕ್ಕಿದಂ (ಧರ್ಮಾಮೃ. ೭-೨೦೦) ; ನಿಡುದೋಳ್, ನಿಡುವುರ್ಚು ; ನಡುವಗಲ್, ನಡುಮನೆ (ಭಾಷಾಭೂ. ೧೪೩ ಉದಾ). **ನಿಡಿವುರ್ಚು :** ನಿಱಿಂಗುರುಳ್ಪೆಱೆನೊಸಲ್ನಿಮಿರ್ದ ಕಣ್ಣಿಡಿವುರ್ಚು ಮಿಱುಪ ಕದಪು (ಕುರಾಸಾಂ. ೧-೧೦೪). **ನಿಡುಪುರ್ಬು :** ಪೊಳೆವ ಕಂಗಳ ತುಱುಗಿದೆವೆಯ ನಿಡುಪು[ಪಾಠಾಂ. ವು]ರ್ಬುಗಳ ಪೆಱೆನೊಸಲ . . . ಮೋಹನದ ಚೆಲ್ವಿನೊಬ್ಬುಳಿಯೆನಿಪ ರಾಘವನ ಸಿರಿಮೊಗವನೆಂತು ನೋಡದೆ ಮಾಣ್ಬೆಂ (ಜೈಮಿಭಾ. ೧೯-೨೧). **ನಿಡುಪುರ್ಚು :** ಮಿಱುಗುವ ನಿಡುಪುರ್ವಿಂಗೆ ತಾನಿಕ್ಷುಚಾಪಂ ದೊರೆಯಲ್ಲಂ (ಮಲ್ಲಕಾ. ೬-೭೪) ; ನಿಡುಪುರ್ಚುಕೋದಂಡವೇಱಿಸಿ ಕಡೆಗಣ್ಣಸರಳಿಂದಲೆಸೆವುತ . . . ಅಂಗಜಪಡೆಯು ಹಿನ್ನೆಲೆಯಾಗಿ ನಿಂತಿತು ಕಲಹಕಾಯತದಿ (ನಾಗಪ. ೪-೩೦). **ನಿಡುವುರ್ಬು :** ಮನೋಭವನ ಕಾರ್ಮುಕವ ಪೋಲ್ವ ನಿಡುವುರ್ಬುಗಳು ಸೊಗಯಿಸುವಲರ್ಮೆಯ್. . . ಬೆಳಮರ್ಚುಸುಂಕಿದ ಸೆಳ್ಳುಗುರ್ಮರ್ನೋಹರವಾಗೆ ಪರವೆಯೆಸೆದಳು (ಸೌಂದಪು. ೭-೧೧). **ನಿಡುಹುಬ್ಬು :** ಕುಂಭಿನೊಸಲಿನ ತಳತೆವೆಯ ನಿಡುಹುಬ್ಬುಗಳ ಕೋಮಲಸುಮುಕ್ತಾಫಲಕೆ ಸೆಣಸುವ ದಂತಪಂಕ್ತಿಗಳ . . . ಮುನ್ನಿನ ರೂಪ ತೋಱಿಂದ (ಕುಪ್ಯಾಭೀ. ೩-೭೭) ; ಕಬ್ಬುವಿಲ್ಲಗೆ ಹೇಳು ಭರತರಾಜನ ನಿಡುಹುಬ್ಬನೋಲ್ಪೆಸೆಂದು ಗಿಳಿಯೆ (ಭರತೇ. ೬-೪೫) ; ಕಡೆಗಣ್ಣು ಸವಿನುಡಿ ನಿಡುಹುಬ್ಬಿನ ಬೇಟ ಬಡನಡು ಕಡುನಿತಂಬಗಳ ಬಿಡದೆ ಬಳುಕೆ ಕುಣಿಸುವ ಚೆಲ್ವಿನ ಮುದ್ದುಮಡದಿರನ್ನೆಯರ್ಶೈದಿದರು (ಕಂಸವಿ. ೨೧-೭೫) ; ಬಡನಡು ಕಿರಿದೊಡೆ ಗಿರಿದಲೆ ತುರುಗೆವೆ ನಿಡುಹುಬ್ಬು . . . ಅಂಚೆಯ ನಡೆ ನುಡಿಯ ಜಾಣೆಯರು (ಸೌಂದಕಾ. ೩-೭೭). **ನಿಡುಹುರ್ಬು :** ಕಣ್ಣಳಿಗೆ ತಾವರೆಯ ನಿಟ್ಟಿಸಟ ವಿಳಾಸಮಂ ಪಟ್ಟಗಟ್ಟಿದಂತೆ ನಿಡುಹುರ್ಬಿಗಂ ಕರ್ವಿಲ್ಲ ಬಿಂಕಮಂ ಸುಂಕಮಿಕ್ಕಿದಂತೆ ನಗೆಮೊಗಕ್ಕೆ ಚಂದ್ರಮಂಡಲದೊಪ್ಪಮಂ ಕಪ್ಪಮಿಕ್ಕಿದಂತೆ . . . ಶೃಂಗಾರಕ್ಕೆ ಸೀಮೆಯಾಗಿಪ್ಪಳ್ (ಪುಣ್ಯಾಸ್ರ. ೨-೩೨ ವ). [ನಿಡು(<ನಿಡಿದು$_1$) + ಪುರ್ಚು]

**ನಿಡುವೆತ್ತಕೆಜ಼ಿ** (ನಾ). ಒಂದು ಸ್ಥಳದ ಹೆಸರು : ಉತ್ತರತಃ ನೇಸಜುಪಳ್ಳಂ ಸೆಜ಼ುವೆಣ್ಣೀ ಕಿಜುಬಳ್ಳಿಯುಕ್ಕ್ಯರ್ಜ಼ಿ ಸೆಳ್ಳಕೆಜ಼ಿ ನಿಡುವೆತ್ತ ಕೆಜ಼ಿ ಕೊಲ್ಲಿ ಸಹಿತಾ (ಎಕ. III, ಮಂಡ್ಯ. ೧೧೩-೬೦ ; 713).
[ ? + ಕೆಜ಼ಿ]

**ನಿಡುವೆರಲ್**, ನಿಡುಬೆರಳು (ನಾ). ಉದ್ದವಾದ ಬೆರಳು ; ನೀಳವಾದ ಅಂಗುಲಿ : ನೀಳ್ದ ಕಣ್ಮರಲ್ ನಿಡುವೆರಲಿಂಪು ಸೊಂಪಿಡಿದ ಚೆಂದುಟ . . . ಒಪ್ಪಿರೆ ಕಣ್ಗೆ ತೋಜ಼ಿದಳ್ (ರಾಜಶೇ. ೧೧-೮೫).
**ನಿಡುಬೆರಳು :** ಕಡಲ ಮುನ್ನಜ಼ಿಯದ ಪೆಂಗಳಚ್ಚರಿವಟ್ಟು ನಿಡು ಬೆರಳಿಟ್ಟು ನಾಸಿಕಕೆ ಮುಡಿಯೊಲೆದೊಲೆದು ನೋಡಿದರದಜ಼ಿಂದು ಬಲ್ಲಡಣೆಗೆ ಬಗೆಯೊಳು ಮೆಚ್ಚಿ (ಭರತ. ೨೩-೯೩).
[ನಿಡು(<ನಿಡಿದು$_1$) + ಬೆರಲ್]

**ನಿಡುವೆರಲ** (ನಾ). ಉದ್ದವಾದ ಬೆರಳಿರುವವನು: 'ನಿಡುವೆರಲಿ' ಪರಾ. [ನಿಡುವೆರಲ್ + -ಅ$_7$]

**ನಿಡುವೆರಲಿ** (ನಾ). ಉದ್ದವಾದ ಬೆರಳಿರುವವಳು ; ನೀಳವಾದ ಅಂಗುಲಿಯವಳು : ನಿಡುಗಣ್ಣಿ, ನಿಡುವೆರಲಿ, ಬಡಕಿ, ಮುದುಕಿ (ಶಬ್ದಾನು. ೨೯ ಪ್ರಯೋ). [ನಿಡುವೆರಲ + -ಇ$_2$]

**ನಿಡುವೇರು** (ನಾ). ಉದ್ದವಾದ ಬೇರು ; ನೀಳವಾದ ಬೇರು : ಇಡಿಕಿಜ಼ಿದಿಹ ಪುಷ್ಪದೊಳು ಗಂಧವಿರಲಾಜಡಿ ತುಡುಕುವುದೆಂದು ನೆಲದೆ ನಿಡುವೇರಿನೊಳು ಪರಿಮಳವೆತ್ತು ರಂಜಿಪ ಮುಡಿವಾಳವಸರವೊಪ್ಪಿದುವು (ಮೋಹತ. ೩-೧೬). [ನಿಡು(<ನಿಡಿದು$_1$) + ಬೇರು (<ಬೇರ್)]

**ನಿಡುವ್ಯೈಹಾಳಿ** (ನಾ). ದೀರ್ಘವಾದ ಸಂಚಾರ; ನಿಡಿದಾದ ಸುಳಿದಾಟ : ಸೂಳಗಿವ ನಿಟ್ಟುಸುರ ನಿಡುವ್ಯೈಹಾಳಿಯುಲಿ ತಜಗೆಲೆಯ ವೊಲು ಹೊಕ್ಕಾಳು ಹಾಜ಼ಿತು ಲಕ್ಷಸಂಖ್ಯೆಯುಲಭ್ರಮಂಡಲಕೆ (ತೊರರಾ. ೬-೨೬-೩೧). [ನಿಡು(<ನಿಡಿದು$_1$) + ವ್ಯೈಹಾಳಿ]

**ನಿಡುವೊಡಲು** (ನಾ). ನೀಳವಾದ ಹೊಟ್ಟೆ ; ಕೃಶವಾದ ಒಡಲು : ಮಡಿದ ಕೊಡಕೆಗಳೊಡ್ಡಿದುರದೊಪ್ಪಿಡಿಯ ನಡುವಿನ ಕೊಂಕಿದುಗುರಿನ ನಿಡುವೊಡಲ ನಿರ್ಮಾಂಸಜಂಘೆಯ . . . ನಾಯ್ ನೂಕಿದವು ಹಾಸದ ವಿಳಾಸದಲಿ (ಕುಪ್ಯಾಆ. ೧೩-೨೦).
[ನಿಡು(<ನಿಡಿದು$_1$) + ಒಡಲು(<ಒಡಲ್)]

**ನಿಡುವೊಡೆ** (ನಾ). ಉದ್ದವಾದ ತೆನೆ; ನೀಳವಾದ ಕಣಿಶ : ಪಾವುರಿಯರ ಪೆರ್ಮುಡಿಯಿನಲ್ಲೊಕ್ಕು ನಸುವಾಡಿದ ನೆಲ್ಲ ನಿಡುವೊಡೆ ಗಳಿಂ . . . ಮನೋಹರವಾದ ಮಾಧವೀಮಂಟಪದ ಮೊಗಶಾಲೆಯೊಳ್ ಕುಳ್ಳಿರ್ದು (ಲೀಲಾಪ. ೫-೫೯ ಪ). [ನಿಡು(<ನಿಡಿದು$_1$) + ಪೊಡೆ$_3$]

**ನಿಡುವೊನಲ್** (ನಾ). ದೊಡ್ಡ ಪ್ರವಾಹ : ರಸದಾಳಿಯೊಸರ್ದು ನಿಡುವೊನಲೆಸೆಗುಂ (ಹಸ್ತಿಮಾ.೧-೩೧). [ನಿಡು(<ನಿಡಿದು$_1$) + ಪೊನಲ್]

**ನಿಡುವೊಯ್ಲು** (ನಾ). ನೇರವಾಗಿ ಬೀಳುವ ಹೊಡೆತ, -ಪೆಟ್ಟು : ನಿಡುವೊಯ್ಲು ಓರೆವೊಯ್ಲು ಪ್ಪರದ ಹೊಯ್ಲುಬ್ಬೇಜ಼ುವೊಯ್ಲನಲೊದಗಿದರು ಭಟರಸಮುಸಮರದಲಿ (ತೊರರಾ. ೪-೪-೨೪).
[ನಿಡು(<ನಿಡಿದು$_1$) + ಪೊಯ್ಲು<ಪೊಯಲ್)]

**ನಿಡುವೊಸಗೆ** (ನಾ). (ಮದುವೆಯ) ದೊಡ್ಡ ಉತ್ಸವ, -ಮೆರವಣಿಗೆ : ದೊರೆವಟ್ಟೆಯಂ ಪಿಡಿದು ಮಂಗಳವರೆಯ ನಾದಕ್ಕೆ ನಡೆನಡೆಯೆ ನಿಡುವೊಸಗೆ, ತೆಕ್ಕನೆಯೆ ತೋರ್ದುವುತ್ಪಾತತತಿ (ಶ್ರೀರಾಮಾ. ೫೧-೬೪೮). [ನಿಡು(<ನಿಡಿದು$_1$) + ಒಸಗೆ]

**ನಿಡುಶ್ವಾಸ** (ನಾ). ನಿಟ್ಟುಸಿರು ; ದೀರ್ಘಶ್ವಾಸ : ಬಲವಿಳಿದು ಹೋದ ಹೆಬ್ಬುಲಿಯಂತೆ ನಿಡುಶ್ವಾಸ ಬಿಡುವ ಈರ (ಮುಂಗಾಮು.೭೧).
[ನಿಡು(<ನಿಡಿದು$_1$) + ಶ್ವಾಸ]

**ನಿಡುಸರ$_1$** (ನಾ). ದೊಡ್ಡ ಕೂಗು ; ಗಟ್ಟಿಯಾದ ಸ್ವರ; ದೀರ್ಘ ಧ್ವನಿ : ತುಡುಕಿ ನೆಗಹಿದ ಕಯ್ಯ ನಿಷ್ಕಾರಣಂ ನೃಪತಿ ಹೊಡೆದನೆಲೆ ಕೌಶಿಕಮುನೀಂದ್ರ ಮೊಜ಼ೆಯೋ ಎಂಬ ನಿಡುಸರದ ಮಡದಿಯರ ದನಿಯನಾಲಿಸಿ ಪರ್ಣಶಾಲೆಯಂ ಪೊಜಮಟ್ಟನು (ಹಚಕಾ. ೭-೨೬) ; ಕೋಗಿಲೆಯ ನಿಡುಸರಂ ಪಾರಿವದ ಕಲ್ಲುಣಿಸು ಗೂಗೆಗಳ ಕಜ್ಜೊಳಸು . . . ಗಹನಗಹ್ವರದೊಳಳುವ ಶಿಶುವಂ ನೋಡಲಾಗಿ ಬಂದೆಡೆಗೊಂಡ ದುಃಖಾತಿರೇಕಮೆಂಬಂತೆ ಕಾಣಿಸುತಿರ್ದುದು (ಜೈಮಿಭಾ. ೨೮-೩೮) ; ನಿಡುಸರದಿಂ ಕೂಗಿ ಕರೆಕರೆದು ಕಾಣದೆ (ರಾಜಶೇ. ೧೩-೧೦೨ ವ).
[ನಿಡು(<ನಿಡಿದು$_1$) + ಸರ$_2$]

**ನಿಡುಸರ$_2$** (ನಾ). ಉದ್ದವಾದ ಮಾಲೆ ; ದೊಡ್ಡ ಹಾರ : ಹೊಡೆದವಮರರ ಭೇರಿ ಹೂವಿನ ನಿಡುಸರದ ಸೋನೆಗಳ ದಿವಿಜರ ಮಡದಿಯರು ಸೂಸಿದರು ರಘುಕುಲಸುತ್ತಮಾಂಗದಲಿ (ತೊರರಾ. ೧-೧೦-೧೯).
[ನಿಡು(<ನಿಡಿದು$_1$) + ಸರ$_3$]

**ನಿಡುಸರಂಗೊಳ್** (ಕ್ರಿ). ದೊಡ್ಡ ಧ್ವನಿ ಮಾಡು ; ಹೆಚ್ಚು ಕಾಲ ಕಿರಿಚು ; ಒಂದೇ ಸಮನೆ ಕಿರಿಚು : ಒಡನೆದ್ದುವಾ ಬಾಗಿಲೊಳ್ಕಂಪಿ ಜ಼ಿಂಪೆಗಳು ನಿಡುಸರಂಗೊಂಡು ಕರೆದುವು ಪಗಲ ಬಳ್ಳುಗಳು ಈ ತೆಜದೊಳುತ್ಪಾತವಾಗುತಿರೆ ನಡೆತಂದು (ಏಕಾಂರ. ಹ. ೨೮೨-೨೫).
[ನಿಡುಸರ$_1$ + ಕೊಳ್$_1$]

**ನಿಡುಸರಳ್**, ನಿಡುಸರಳು (ನಾ). = ನಿಡುಗೋಲ್ ೨ : ಅನುಸಾಲ್ವಂ ಕನಲ್ದು ಜಗದಳಿವಿನಂದು ಸುಳಿವ ಬಿಜ಼ುಗಾಳಿಯಂ ಸೋಲಿಸುವ ನಿಡುಸರಳ್ಗಳ ಗಜ಼ಿಯ ಭರದನಿಲಘಾತದಿಂ ಬಯಲಾದುದಳವಿಯೆನಲಿಸುಗೆಯಂ ಕೈಗೊಂಡು ಸವಜ಼ಿದಂ ಬಂದ ರಿಪುಮೋಹರವನು (ಜೈಮಿಭಾ. ೧೨-೪೦).
**ನಿಡುಸರಳು :** "ಪ್ರಕ್ಷ್ವೇಡನಃ, ನಾರಾಚಃ—೨ ನಾರಸದ ಹೆಸರುಗಳು, ನಿಡುಗೋಲು, ನಿಡುಸರಳು" (ಸಿದ್ಧಾಂತಿ. ೨೬೪) ; ಕೈಗಿಡದಿರಿಸು ನಿಡುಸರಳ ತುಡು ಕೆಲಕೆ ಸಿಡಿಯದಿರ್ಪೊಡೆ ಸಾರ್ಚು (ಜೈಮಿಭಾ.೨೮-೪೫); ಸಿಡಿಲು ಹೊಡೆದಂತಾಗಿ ದೇವಿಯ ನಿಡುಸರಳು ತಾಗಲಿಕೆ ಕೋಪದ ಸಡಗರವನೇನೆಂಬೆ (ದೇವೀಮ. ೩೦೮-೩೧) ; ತುಡು ನಿಡುಸರಳ (ಚಂದ್ರಸ. ೨೮-೧೮). 'ನಿಡುಗೋಲ್' ಪರಾ.
[ನಿಡು(<ನಿಡಿದು$_1$) + ಸರಳ್(<ಸರಲ್$_1$)]

**ನಿಡುಸರಳು** 'ನಿಡುಸರಳ್' ನೋ.

**ನಿಡುಸಾಣ** (ನಾ). ಗರಡಿಯಲ್ಲಿ ಉಪಯೋಗಿಸುವ ಒಂದು ಬಗೆಯ ಸಾಧನ : ಗರುಡಿವನೆಯಂ ಪೊಕ್ಕು ವಾಸಿಪಂಥದೊಳಲ್ಲಿ ದುಡಿವವರಿಗಿಮ್ಮಡಿಯ ಸಾಸದಿಂ ದಂಡೆಗಳ ನೂಕುತ್ತೆ ತಿರುಹುತ್ತೆ ಲೋಡು ನಿಡುಸಾಣಂಗಳ (ಪರಶು. ೪-೧೦). [ನಿಡು(<ನಿಡಿದು$_1$) + ಸಾಣ]

**ನಿಡುಸಾಲ** (ನಾ). ದೀರ್ಘಾವಧಿಯ ಸಾಲ, -ಕಡ : ಲೇವಾದೇವಿ ಕೆಲಸಗಳ ಜೊತೆಗೆ ನಿಡುಸಾಲ ಕೊಟ್ಟು ಹೊಸ ಕೈಗಾರಿಕೆಗಳಿಗೆ ಬಂಡವಾಳ ಒದಗಿಸುವ ಕಾರ್ಯವನ್ನು ಮಾಡುವ ಬ್ಯಾಂಕುಗಳು ಬೇರೆ (ಹಣಪ್ರ.೬೯).
[ನಿಡು(<ನಿಡಿದು$_1$) + ಸಾಲ$_1$]

**ನಿಡುಸಿಂಬಿ** (ನಾ). = ನಿಡುಸುರುಳಿ : (ಹಗ್ಗ, ಮೊ.ವನ್ನು) ಸುರುಳಿ ಸುತ್ತು ; ಸಿಂಬಿ ಸುತ್ತು ; ಬಟ್ಟೆಸಿಂಬಿಯಾಗಿ ಅಥವಾ ನಿಡುಸಿಂಬಿಯಾಗಿ ಸುತ್ತು (coil. ಇಂಕನಿ). [ನಿಡು(<ನಿಡಿದು$_1$) + ಸಿಂಬಿ$_1$ ]

**ನಿಡುಸುಯ್$_1$**, ನಿಡುಸುಯ್ಯು (ಕ್ರಿ). ದೀರ್ಘವಾಗಿ ಉಸಿರನ್ನು ಬಿಡು ; ನಿಟ್ಟುಸಿರು ಬಿಡು : ಮೊಗಂ ಮೊಗದತ್ತ ಸಾರ್ಚೆ ಬೆಚ್ಚಗೆ ನಿಡುಸುಯ್ದು ನಲ್ಲಳ ಮುಖಾಂಬುಜಸೌರಭದೊಳ್ ಪೊದಟ್ದುದೇಂ ಮಗಮಗಿಸಿತ್ತೊ . . . ಕದಂಬದಂಬುಲಂ (ಪಂಪಭಾ. ೪-೧೦೭) ; ನಿಡುಸುಯ್ಯುತ್ತುಂ ಗುಡುಗುಡನೆ ಸುರಿವ ಕಣ್ಬನಿಗಳಂ ಮಿಡಿವುತ್ತುಂ ಮತ್ತ

ಮಿಂತೆಂದಲ್ (ಕಾದಂಪೂ. ೯.೨೨) ; ಒಡೆದಿರೆ ರೋಮಂ . . . ನೀರಡಿಕೆ ಪಿರಿದಾಗೆ ರ್ಪೆೊಂಪಿಸೆ ನಿಡುಸುಯ್ಕೆ ಹಯಂ ಕರಂ ಜ್ವರಾರ್ತನೆನಿಕ್ಕುಂ (ಲೋಕೋಪ. ೯–೨೩೪). **ನಿಡುಸುಯ್ಯು :** ಕಣ್ಣಿನ ಮುಂದಿರುವ ಈ ದೈನಂದಿನ ಚೆಲುವಿನ ಬಗೆಗೆ ಕುರುಡಾಗಿರುವ ಈ ಜನಕ್ಕೆ ಸೌಂದರ್ಯಾನುಭವ ಶಕ್ತಿ ಲಭಿಸುವುದೆಂದಿಗೆ ಎಂಬ ಹಂಬಲದಲ್ಲಿ ನಿಡುಸುಯ್ಯುವ ಕವಿ (ಸೌಂದಸ. ೨೭). [<ನಿಡಿದು$_2$ + ಸುಯ್$_1$]

**ನಿಡುಸುಯ್$_2$** (ನಾ). ನಿಡಿದಾದ ಉಸಿರು ; ನಿಟ್ಟುಸಿರು ; ದೀರ್ಘ ಶ್ವಾಸ : ದೆಸೆಗೆಟ್ಟಲರ್ಗಣ್ಣ ನೋಟಮುಣ್ಮಿದ ಬೆಮರೋಳಿವಟ್ಟ ನಿಡುಸುಯ್ ತೊದಳಿಂಗೆಡೆಗೊಂಡ ಮಾತು ಕುಂದಿದ ಲತಿಕಾಂಗಮೊಂದಿದ ವಿಕಾರಮದೀಕೆಯೊಳೀಗಳಾದುದು (ಪಂಪಭಾ. ೪–೬೦) ; ಓರೊರ್ಮೆ ರಣರಣಕವ್ಯಥಾವ್ಯಜನಪಲ್ಲವಭಂಗವಾದಪ್ಪುದೆಂದಂಜಿ ನಡುಗುವಂತೆ ನಿಡುಸುಯ್ಯ ಗಾಳಿಯಿಂ ನಡುಗುವ ಲತಾಮಂಟಪದೊಳಿರ್ಪಳ್ (ಕಾದಂಉ. ೩೩೪) ; ನಿಡುಸುಯ್ ಸುಯ್ಯೊಳ್ ಹೃದಯದ ನಡುಕಂ ಮಿಡುಕಿನೊಳ್ . . . ಬೆರಸಿತರಸನೊಳಾಗಳ್ (ಲೀಲಾವ. ೩–೫೩) ; ನಿಡುಸುಯ್ಯುಣ್ಮಲ್ ಕಪಟದೆ ಕೊಡುವೆಲೆಯಿಂ ಬಿಸುಟು ಮುಳಿದು ಪೋಯ್ಯಳ್ಕೆ (ಉದ್ಭಟ. ೧೦–೪೪) ; ಬೇಟಾರ್ಗೆ ಪೋದ ನಲ್ಲರ ನೆನೆದು ದೂಱುವ ನೀಱೆಯರ ನಿಡುಸುಯ್ಯ ಗಡಣದಿಂ (ಕಬ್ಬಿಕಾ. ೫೪) ; ನಿಡುಸುಯ್ಯಿಂ ಭುಗಿಲೆನೆ ಪೊಱಮಡೆ ಪೊಗೆ . . . ಗರ್ಜನಕ್ಕೆಳೆ ನಡುಗೆ ಮಹಾಹವಮನೆಸಗಿದರ್ ಧುರಗಲಿಗಳ್ (ಶಬಶಂ. ೪–೭೭) ; ಕುಚಂಗಳೊಳೆನ್ನುಂ ಮಿತಿವಿಹಿರಿಬರ್ಪ ನಿಡುಸುಯ್ಗಳ್ ಕಂಪಮಂ ಪುಟ್ಟಿಕುಂ (ಶಾಕುಂತ. ೧೬–೩೦) ; ನಿಡುಸುಯ್ಗಳ್ ತುಟಿಗೆಂಪನಿಲ್ಲೆನಿಸೆ ಚಿಂತಾಜಾಗರಂಬೆತ್ತು (ಶಾಕುಂತ. ೮೨–೧೩೭). [ನಿಡು(<ನಿಡಿದು$_1$) + ಸುಯ್$_2$]

**ನಿಡುಸುಯಲ್**, ನಿಡುಸುಯ್ಯಲ್ಲ (ನಾ). ೧. = ನಿಡುಸುಯ್$_2$ : ಎಱಗಿ ನೋಡುವುದೊಂದಱಲಿ ಎರಡಱಲಿ ಚಿಂತನೆ ನಿಡುಸುಯ [ಪಾಠಾಂ. ಯಿ]ಲ್ ಮೂಱಱಲಿ . . . ಮೇಣ್ ಹತ್ತಱಲಿ ಮರಣ ಇವು ದಶಾವಸ್ಥೆಗಳೆನಲು ಹೇಳುವವು ವಿರಹಿಜನರ್ಗೆ (ಬಸವು. ೩೫–೩೨). **ನಿಡುಸುಯ್ಯಲ್ಲು :** ೧. ಅಕ್ರೂರನೊಡನೆ ಹರಿ ಪೋಱಮಡಲಾಗಡೆ ಪೋಱಮಟ್ಟುದದೊರ್ವಳ ನಿಡುಸುಯ್ಲ ಸಮೀರನೊಡನೆ ಜೀವಸಮೀರಂ (ಜಗವಿ. ೫–೭೪) ; ಸೂಳುರಿಯ ನಿಡುಸುಯ್ಲ ಕಟ್ಬೊಗೆ ಜಾಳಿಗೆಯಲೇಶಾವಳಿಯ ಮುಕ್ತಾಳಿ ಕಂದಿತ್ತು (ಕುವ್ಯಾಸ. ೧೦–೨೩) ; ನಿಡಿಲೆ[ದೆ]ನಿಪ ನಿಡುಸುಯ್ಲುಗಳು ಪೊಱಮಡುತಿರಲು ಮೂಗಿನಲಿ . . . ಎಡೆಬಿಡದೆ ಗದ್ಗದನಿನಾದಗಳಡಸಿರಲು ಕಂಠದಲಿ ಜಾಹ್ನವಿ ನುಡಿದಳಾ ಸಮಯದಲಿ ಕೌರವ ಸಮಿತಿಯಿದಿರಿನಲಿ (ತಿಮ್ಮಭಾ. ೧೧–೩೬) ; ನಿಡುಸುಯ್ಲ ಧಾಳಿಯ ಜಳಕೆ ಚೆಂದುಟಿರಸವೊಡನೆ ಬಱತುದು (ಕಂಸವಿ. ೯–೧೭೨). ೨. ಏದುಸಿರು; ಉಬ್ಬಸ : ನಿಡುಸುಯ್ಲಂ ತನ್ನನೊತ್ತಂಬರಿಸೆ ನಿಲುವುತುಂ . . . ಪಾಶ್ವೆಯೊರ್ವಳ್ ನಿಜಮಣಿಭವನದ್ವಾರದೊಳ್ ಬಂದು ನಿಂದಳ್ (ಸೂಕ್ತಿಸು. ೭–೧೬೭) ; ಕಾಡಾನೆಯ ಅಳಿಗಾಲದ ನಿಡುಸುಯ್ಲಂತೆ ಕೇಳಿಸಿತಂತೆ (ಹಸುಹೊ. ೨೮೦). [ನಿಡುಸುಯ್$_1$ + -ಅಲ್$_2$]

**ನಿಡುಸುಯಿಲ್**, ನಿಡುಸುಯಿಲು (ನಾ). = ನಿಡುಸುಯ್$_2$: ಎಱಗಿ ನೋಡುವುದೊಂದಱಲಿ . . . ನಿಡುಸುಯಿ[ಪಾಠಾಂ. ಯ]ಲ್ ಮೂಱಱಲಿ (ಬಸವು. ೩೫–೨೨). **ನಿಡುಸುಯಿಲು :** ಬಿಡದೆ ಭುಸ್ಸೆನುತಿರ್ಪ ಫಣಿಪನ ನಿಡುಸುಯಿಲುಗಳೆಗಳುಕಿ ದ್ಯುಗುಶಿಖಿಕಿಡಿಗಳೊಗೆ ಭುಗಿಭುಗಿಲು ಭಿಟಿಭಿಟಿಲೆನುತ ಮಿಗೆ ನೆಗೆಯೆ (ಬಸವು. ೧೭–೧೯).

[ನಿಡುಸುಯ್$_1$ + -ಇಲ್$_3$]

**ನಿಡುಸುಯಿಲು** 'ನಿಡುಸುಯಿಲ್' ನೋ.

**ನಿಡುಸುಯ್ಯು** 'ನಿಡುಸುಯ್$_1$' ನೋ.

**ನಿಡುಸುಯ್ಯೆಲರ್** (ನಾ). ನಿಟ್ಟುಸಿರಿನ ಗಾಳಿ. ನಿಡುಸುಯ್ಯೆಲರಿಂ ಮೇಲುದು ತೊಲಗೆ ಚಾಮರದೆಲರ್ಗೆ ನಿಮಿತ್ತತೆಯನೊಡರ್ಚಿಯುಂ (ಕಾದಂಉ. ೩೬). ಆ ನಗೇಶ್ವರನ ನಿಡುಸುಯ್ಯೆಲರ್ಗಳೆ ಪೊಱಮಟ್ಟು ವೆಂಬಂತೆ ಗುಹಾಮುಖದಿಂ ಪೊಱಮಟ್ಟು ಜೀವಮಂ ಬಿಡುವ ಜರದಜಗರಂಗಳುಮಂ . . . ನೋಡಿ (ಜಗವಿ. ೩೪–೫ ವ) ; ಒಳಗಡೆವೊತ್ತುವ ಮದನಾನಳನಂ ಚಮರೀಜಧಾರಿಣೀಚಾಳಿತ ಕೋಮಳತಾಳವೃಂತಮಂದಾ ನಿಳಮುರಿಪಿದುದೊದವಿ ನೃಪನ ನಿಡುಸುಯ್ಯೆಲರಿಂ (ಪರ್ಧಪು. ೫–೧೬).

[ನಿಡುಸುಯ್$_2$ + ಎಲರ್]

**ನಿಡುಸುಯ್ಲು** 'ನಿಡುಸುಯಲ್' ನೋ.

**ನಿಡುಸುರಗಿ** (ನಾ). ಉದ್ದವಾದ ಕತ್ತಿ ; ನೀಳವಾದ ಖಡ್ಗ ; "ಗೇಣ್" (ಚತುಶಿ. ೬. I, ೮). [ನಿಡು(<ನಿಡಿದು$_1$) + ಸುರಗಿ$_2$]

**ನಿಡುಸುರುಳಿ** (ನಾ). ಯಾವುದಾದರೊಂದು ವಸ್ತುವಿನ ದೊಡ್ಡ ಸುರುಳಿ,—ಸುತ್ತು : ವಿದ್ಯುತ್ಪ್ರವಾಹದ ಚಲನೆಗಾಗಿ ಮಾಡಿರುವ ತಂತಿಯ ನಿಡುಸುರುಳಿ (Coil. ಇಂಕಸಿ.) ; ವಿದ್ಯುತ್ಪ್ರವಾಹವನ್ನು ಹೊತ್ತ ನಿಡುಸುರುಳಿಯು ಎಲ್ಲಾ ವಿಧದಲ್ಲಿಯೂ ದಂಡಕಾಂತಕ್ಕೆ ಸಮನಾಗಿರುವುದು (ಭೌತವಿ. ೩೩೫). [ನಿಡು(<ನಿಡಿದು$_1$) + ಸುರುಳಿ]

**ನಿಡುಸೂಟಿ** (ನಾ). ಅಧಿಕವಾದ ವೇಗ : ಇರ್ದಸೆಯ ಕುದುರೆಗಾಱರ್ ಚೆಱಿಯೊಳ್ ಕಾಣುತಾರ್ದು ನಿಡುಸೂಟಿಯೊಳ್ ನಿಲ್ಲದೋರ್ವಾಳೆಯೊಳ್ ವಿದಾರ್ದು ಸದಳಂಗಳಂ ಸುಲಿದು ಸೆಱೆತುಱುಗಳಂ ಪಿಡಿದರ್ (ಚೆಬಪು. ೪೮–೨೫). [ನಿಡು(<ನಿಡಿದು$_1$) + ಸೂಟಿ$_1$]

**ನಿಡುಸೂಳ್**, ನಿಡುಸೂಳು (ನಾ). ದೊಡ್ಡ ಧ್ವನಿ ; ಗಟ್ಟಿಯಾದ ಶಬ್ದ : ಕಡುಗಂಪು, ನಿಡುಸೂಳ್ (ಶಬ್ದಾನು. ೮೭ ಪ್ರಯೋ.). **ನಿಡುಸೂಳು :** ಗಬ್ಬರಿಸಿದುದು ಗಗನವನು ಬಲುಬೊಬ್ಬೆ ಬಹುವಿಧವಾದ್ಯ ರಭಸದ ನಿಬ್ಬರದ ನಿಡುಸೂಳು ಸೂಳೈಸಿದುದು ದಿಗುತಟವ (ಕುವ್ಯಾಕ. ೨೩–೩). [ನಿಡು(<ನಿಡಿದು$_1$) + ಸೂಳ್$_3$]

**ನಿಡುಸೂಳು** 'ನಿಡುಸೂಳ್' ನೋ.

**ನಿಡುಸೆರೆ** (ನಾ). ದೀರ್ಘವಾದ ಕಂಠನಾಳ : ಅರಸ ಬಳಲಿದನೀನ ಮಾಡುವೆ ದುರುಳ ನುಡಿದ್ದನ ನಾಲಗೆಯ ನಿಡುಸೆರೆಯ ಬಿಡಿಸುವೆ ಮೂವ ಸ್ಯೆರಿಸಿಯೆಂದನಾ ಭೀಮ (ಕುವ್ಯಾಕ. ೧೨–೩೦).

[ನಿಡು(<ನಿಡಿದು$_1$) + ಸೆರೆ$_3$]

**ನಿಡುಸೊಂಡೆ** (ನಾ). ಸೊಂಡೆಯ ಗಿಡದಲ್ಲಿ ಒಂದು ಬಗೆ : ಕುಟಜಂ ನಿ(ಗಿ)ಡುಸೊಂ [ಪಾಠಾಂ. ಗೊಂ, ಗೊ]ಡೆಯೆನಿಪ್ಪ ವೆಲ್ಲಮಂ ಗುಣನಿಧಿ ಸಾಧಿಸಿಟ್ಟಿಡಿದು ಕತ್ತುರಿಗೂಡಿದ ಚೂರ್ಣಮಾದೊಡಂ (ಖಮದ. ೧೬–೧೦೪). [ನಿಡು(<ನಿಡಿದು$_1$) + ಸೊಂಡೆ$_1$]

**ನಿಡುಸೋಗೆ** (ನಾ). ೧. ಉದ್ದವಾದ ಸೆರಗು : ತೆಲುದೊಗಲ ನಿಡುಸೋಗೆಯುಡುಗೆಯನೆಳಗುರುಳ ಸಿಂಗಾರದುಱುಬಿನ . . . ಕೊಡಗೂಸು ಪೊತನಿನಿಕರಮೊಪ್ಪಿದವು (ಕುವ್ಯಾಭೀ. ೫–೩೪). ೨. ಕಣ್ಣಿನ ಕುಡಿಗೆ ಮಾಡಿದ ಗೆರೆಯ ಅಲಂಕಾರ : ದೇವಕಾಮಿನಿಯೋರ್ವಳಾ ಶಿವದೇವಿಯಕ್ಷಿಗೆ ಕಜ್ಜಳವ ಪರಿಭಾವಿಸಿದ ನಿಡುಸೋಗೆ ಭೃಗುಪುತ್ರಿಕೆಯ ಸೋರ್ಮುಡಿಯ ಭಾವವಾಗಿರೆ (ನಾಲ್ವಭಾ. ೩೨–೨೩).

[ನಿಡು(<ನಿಡಿದು$_1$) + ಸೋಗೆ$_1$]

**ನಿಡುಹಣೆ** 'ನಿಡುವಣೆ' ನೋ.

**ನಿಡುಹಲ್ಲು** 'ನಿಡುವಲ್' ನೋ.

**ನಿಡುಹಾಸು** (ನಾ). ಉದ್ದವಾದ ಹಾಸು : ರಾಯನ ಸಿಂಹಾಸನಕ್ಕೆ ಹೋಗುವ ದಾರಿಯ ಉದ್ದಕ್ಕೂ . . . ಕೆಂಪುಮೊಖಮಲ್ಲಿನ ನಿಡುಹಾಸು (ಸಂಯಾತ್ರೆ. ೫೬). [ನಿಡು (<ನಿಡಿದು$_1$) + ಹಾಸು$_3$(<ಪಾಸು$_2$)]

**ನಿಡುಹುಬ್ಬು** 'ನಿಡುವುರ್ಬು' ನೋ.

**ನಿಡುಹುಬ್ಬು** 'ನಿಡುವುರ್ಬು' ನೋ.

**ನಿಡ್ಡಳ** (ನಾ). (?) : ಮನಸ್ಸಿನಲ್ಲಿ ನಿಡ್ಡಳಮಲ್ಲದೆ ಸತ್ವಮಿನಿಸುಂಟೆ ಯೆಡೆಯಲ್ಲಿ ಮಾತಿನೊಳು ದೀನತ್ವಮಲ್ಲದೆಯುಂಟೆ ನಿಷ್ಠುರಂ ನೋಡೆ ನಿಜಪರವಶತ್ವಮಲ್ಲದೆ ರತಿಯೊಳೆಚ್ಚಱುಂಟೇ ಮನ್ಮನೋವಲ್ಲಭೆಗೆ ಭಾವಿಸೆ (ಸಮ್ಯಕೌ. ೩-೧೭) ; ಬಲ್ಮೆಯಿಂ ನಿಡ್ಡಳದ ತನ್ನಳಲ ಕಂಬನಿಯೊಳೆರೆವಂ ಕಡ್ಡದೀ ಬಾಳ್ವೆಯಾಟದಿ ನಲ್ಮೆಯಂ ಪಡೆಯಲ್ (ಕಾಲೂರ. ೧೬೭-೩೭೨).
[?]

**ನಿತಂಬ** (ನಾ). ೧. (ಸ್ತ್ರೀಯರ) ಸೊಂಟದ ಕೆಳಗಿನ ಹಿಂಭಾಗ; ಕಟಿಪ್ರದೇಶ; ಪಿರ್ರೆ; ಕುಂಡೆ : "ಆರೋಹಃ, ನಿತಂಬಃ, ಕಟೀ– ಈ ೩ ಕಟಿ" (ಹಲಾಯು. ೮೪-೩೫೮); ವನಿತೆಯ ಪುಳಿನನಿತಂಬೋದ್ದೇಶಂ ಮನಸಿಜಮದಗಜಕುಂಭನಿಕಾಶಂ (ಸುಕುಮಾ. ೫-೫೧ ರಗಳೆ); ಮುಡಿಯ ಭಾರಕ್ಕೆ ಕೊರಲೆಸೆವ ಕುಚಭಾರಕ್ಕೆ ಬಡನಡು ನಿತಂಬಭಾರಕ್ಕೆಸೆವ ಬಟ್ಟೆ ನುಣ್ದೊಡೆ ಚೆಲುವನಾಂತವಯವದ ಸೌಕುಮಾರತೆಯ ಭಾರಕ್ಕೆ ಸರ್ವಾಂಗವೂ ಬಿಡದೆ ಬಳುಕುತಿವೆ (ಹಚಕಾ. ೪-೧೬). ೨. ಬೆಟ್ಟದ ಇಳುಕಲುಪ್ರದೇಶ; ಸಾನು : "ನಿತಂಬಃ, ಕಟಕಃ, ಸಾನು, ಪ್ರಸ್ಥಂ, ತಟಂ, ಭೃಗುಃ–ಈ ೬ ತಪ್ಪಿಲ್" (ಹಲಾಯು. ೨೭-೧೨); "ಸಾನು ಕಟಕಂ ಭೃಗು ಪ್ರಸ್ಥಂ ತಟಂ ನಿತಂಬಂ ಗಿರಿಯ ಹೊರೆಯಕ್ಕು" (ಮಂಗರಾ. ೩೦-೨); ಆ ಗಿರಿಯ ತೆಂಕಣ ದರಿಯ ರುಚಕಮಮೋಘಂ ವಿಮಳಂ ರುಚಕೋತ್ತರಮುಚಿತಸುಪ್ರಬುದ್ಧಂ ಭದ್ರಂ ರುಚಿನನ್ಮಂದರ ಮಪವರಕಚಾರುತರ ಸುಪ್ರತಿಷ್ಠಮೆಂಬ ನಿತಂಬಂ (ಶಾಂತಿಪು. ೯-೧೬೫); ಅಭ್ರಂಕಷೋತ್ತುಂಗಸಂಗತ ಗಿರಿವರ ನಿತಂಬಸಂವಾಸಶಬರಶಿಬಿರಸಂಕೀರ್ಣ ಮುಮಪ್ಪುದೊಂದು ಮಹಾಟವಿಯನೆಯ್ದಿದರ್ಪುದುಂ (ಪಂಚತಂ. ೨೩-೧೨); ದಶವದನಂ . . . ಕ್ರಮದಿಂ ಕೈಲಾಸಪರ್ವತಮನೆಯ್ದಿ ವಾಲಿದೇವರ ಸಾಮರ್ಥ್ಯಮಂ ನೆನೆದು ಪೊಗಬುತ್ತುಮಾ ನಗದ ನಿತಂಬ ದೊಳ್ ಬೀಡುವಿಟ್ಟಿರ್ಪುದುಂ (ಪಂರಾಮಾ. ೧೦-೧೮೪ ಪ); ಆ ಪೊಂಬೆಟ್ಟದ ನಿತಂಬದೊಳಿಂಬುವಡೆದ ಜಂಬುಜಂಬೀರಪನಸಪಾಟಳೀರಸಾಲತಮಾಲ . . . ಕಮಳಷಂಡಂಗಳಿಂದಿಡಿದು ಕಡುಬೆಡಂಗಾದ ಸಾರ್ವರ್ತುಕಮಾದ ಸದಮಳ ತಪೋವನದ (ರಾಜಶೇ. ೧-೧೨೫ ಪ). ೩. [ನಾಟ್ಯ] ಮೂವತ್ತು ಬಗೆಯ ನೃತ್ತಹಸ್ತಗಳಲ್ಲಿ ಒಂದು; ℙ "ಪತಾಕಹಸ್ತಗಳೆರಡರಲ್ಲಿ ಒಂದನ್ನು ಮೇಲ್ಮುಖವಾಗಿಯೂ ಇನ್ನೊಂದನ್ನು ಕೆಳಮುಖ ವಾಗಿಯೂ ಮಾಡಿ ಕೈಗಳನ್ನು ಭುಜ ಮತ್ತು ನಡುಗಳಿಗೆ ಕ್ರಮವಾಗಿ ಸುತ್ತಿಸುವುದು" (ಲಾಸ್ಯರಂ. ೨೫೦ ಗದ್ಯಾನುವಾದ) : ಚತುರಸ್ರ, ಉದ್ವೃತ್ತ, ತಲಮುಖ, ಸ್ವಸ್ತಿಕ, ವಿಪ್ರಕೀರ್ಣ, ಅರಾಳಕಟಕಾ ಮುಖ, ಆವಿದ್ಧವಕ್ತ್ರ, ಸೂಚ್ಯಾಸ್ಯ, ರೇಚಿತ, ಅರ್ಧರೇಚಿತ, ನಿತಂಬ, ಪಲ್ಲವ . . . ಲಲಿತ–ಈ ಮೂವತ್ತು ನೃತ್ಯಹಸ್ತಂಗಳ್ (ಲಾಸ್ಯರಂ. ೨-೪೪ ಪ). ೪. ನೂರೆಂಟು ಕರಣಗಳಲ್ಲಿ ಒಂದು; ℙ "ಪತಾಕ ಹಸ್ತಗಳೆರಡರ ಬೆರಳುಗಳನ್ನು ಕೆಳಕ್ಕೆ ಮಾಡಿ ಹಿಡಿದು ಪರಿವರ್ತ ದಿಂದ ಬೆರಳುಗಳನ್ನು ಮೇಲಕ್ಕೆ ಮಾಡಿ ತಲೆಯ ಹತ್ತಿರ ನಿಲ್ಲಿಸಿ, ಕೈಗಳನ್ನು ಎದುರಾಗಿಯೂ, ಬೆರಳುಗಳನ್ನು ದೇಹಕ್ಕಭಿಮುಖ ವಾಗಿಯೂ ಮಾಡಿ ಭುಜದ ಸಮಕ್ಕೆ ಇಳಿಸಿ, ನಿತಂಬಹಸ್ತವನ್ನು . . . ಮಾಡುವುದು" (ಲಾಸ್ಯರಂ. ೩೦೨ ಗದ್ಯಾನುವಾದ) : ತಲಪುಷ್ಪ ಪುಟ, ಲೀನ, ವಿವರ್ತಿತ . . . ಅಪಕ್ರಾಂತ, ನಿತಂಬ . . . ಗಂಗಾವ ತರಣ–ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨). [ಸಂ.]

**ನಿತಂಬದ್ವಯಸ** (ನಾ). ನಿತಂಬದವರೆಗೆ ಬರುವಷ್ಟು (ನೀರಿನ) ಆಳ; ಸೊಂಟದವರೆಗೆ ಮುಳುಗುವಷ್ಟು (ನೀರಿನ) ಆಳ : ಜಳಕೇಳಿ ನಿಮಿರ್ಗೆ ಭರತನ ಲಳಿತಾಂತಃಪುರದೊಳೆಂಬ ತನ್ನಟ್ಟಜಿಯೊಳಾ ಜಳದೇವಿ ಬೆಸಸೆ ಗಂಗಾಜಳಮಾಯ್ತು ನಿತಂಬಿನೀನಿತಂಬದ್ವಯಸಂ (ಆದಿಪು. ೧೧-೧೪೪). 'ಊರುದ್ವಯಸ' ಪರಾ. [ಸಂ.]

**ನಿತಂಬಬಿಂಬ** (ನಾ). ದುಂಡನೆಯ ಪೊರವಾರು; ವೃತ್ತಾಕಾರದ ಪಿರ್ರೆ : ಆಕೆಗಳ ಪೀವರತುಂಗನಿತಂಬಬಿಂಬದೊಂದಗಲದ ವೃದ್ಧಿ ಪೆರ್ಚೆ ನೆಲೆವೆರ್ಚದುದೀ ಕೊಳಂ (ಶಾಂತಿಪು.೮-೨೮); ತೆರೆವಿಡಿದೀಸುವೆಳವೇಡಿತಿಯ ಗುರುತರನಿತಂಬಬಿಂಬಮಂ ಮುಳುಂಗಿ ತೋರ್ಪ ಕರಿಣಿಯ ಶಿರಂಗೆತ್ತು (ರಾಜಶೇ. ೬-೨೪ ಪ). [ನಿತಂಬ + ಬಿಂಬ]

**ನಿತಂಬಸ್ಥ** (ಗು). ನಿತಂಬದ ಮೇಲಿರುವ. [ಸಂ.]

**ನಿತಂಬಹಸ್ತ** (ನಾ). = ನಿತಂಬ ೩ : ನೆಲೆವಡೆದ ಪತಾಕಂಗಳ್ ನೆಲೆ ಮೊಗಮಾಗೊಂದು ಮೇಗುಮೊಗಮಾಗೊಂದುಂ ಸಲೆ ಭುಜದಿನಿಳಿದು ಕಟಿಗಳೊಳಲಸದೆ ತಿರುಗಲ್ ನಿತಂಬಹಸ್ತಮದಕ್ಕುಂ (ಲಾಸ್ಯರಂ.೨-೫೫).
[ನಿತಂಬ + ಹಸ್ತ]

**ನಿತಂಬಿನಿ** (ನಾ). ೧. ಸ್ಥೂಲವಾದ ನಿತಂಬವನ್ನುಳ್ಳವಳು; ಚೆಲುವೆ; ಸುಂದರಿ : "ಸ್ಥೂಲನಿತಂಬವುಳ್ಳವಳು ನಿತಂಬಿನೀಯೆನಿಸುಗು" (ನಾಚಿರಾ. ೧೧೬); ಪರಿಜನವೆಬ್ಬಿದ್ದ ಕಯ್ಯುಗ್ಗಡೆ ನಿತಂಬಿನಿ ಮೆಲ್ಲನೆ ವಾಮ ಜಾನುವಂ ಕರತಳದಿಂದಮೂಱು . . . ಅತಿಸಂಭ್ರಮದಿಂದಮೆೞ್ದು (ಕಾದಂಪೂ. ೩೯೬); ಸುಗುಣಾವಲಂಬಿನಿಯರ ಶಿರೋಮಣಿಗೆ ತುಂಬಿತು ನವಮಾಸ ಮಣಿಮಂಚದೆಡೆಯ ನಿತಂಬಿನಿ ತನುವ ಸಾರ್ಚಿದಳು (ಮೋಹತ. ೧೭-೧೨); ನೋಡದೊ, ನಿತಂಬಿನಿ, ತೊರೆಯ ನಡುವಣಾ ನಿನ್ನ ಮೈಬಣ್ಣದ ಪುಳಿನಪುಂಜದೆಡೆಯಲ್ಲಿ, ಬೆಳ್ದಾವರೆಯ ಬೆಳ್ಪು (ಶ್ರೀರಾಮಾ. ೧೫೪-೫೧). ೨. ಹೆಂಗಸು; ಸ್ತ್ರೀ : "ರಾಮಾ, ವಾಮಾ . . . ರಮಣೀ, ನಿತಂಬಿನೀ, ವನಿತಾ, ದಯಿತಾ, ಪ್ರತೀಪದರ್ಶಿನೀ, ವಧೂಃ, ವಶಾ, ಯುವತಿಃ— ಈ ೨೮ ಸ್ತ್ರೀಯರ್" (ಹಲಾಯು. ೭೯-೩೨೮); "ಭಾಮಿನಿ ನಿತಂಬಿನಿ . . . ಮಹಿಳೆಯಬಳೆ ರಾಮೆ ವರವರ್ಣಿನಿಯೆನಲ್ಕೆ ಹೆಂಗೂಸೆನಿಕ್ಕು" (ಮಂಗರಾ. ೮೯-೧). [ಸಂ. ನಿತಂಬಿನೀ]

**ನಿತಂಬಿನೀಕದಂಬ** (ನಾ). ಚೆಲುವೆಯರ ಗುಂಪು; ಸುಂದರಿಯರ ಸಮೂಹ : ಒದವಿಸಲಾತುರ್ದಲ್ಲಿ ಜಳಕೇಳಿಯೊಳಿರ್ದ ನಿತಂಬಿನೀಕದಂಬದ ಮುಖಪದ್ಮಮಂ ನಯನಮುತ್ಪಲಮಂ (ಪುಷ್ಪಪು. ೬-೧೫). [ಸಂ.]

**ನಿತಂಬಿನೀಜನ** (ನಾ). = ನಿತಂಬಿನೀಕದಂಬ : ನೆಗಟ್ದ ನೃಪಂ ತನಗಹಿತನಾಗೆ ಮೈಮಱೆದು ನೆಗಟ್ಟೆ ಭೂಪಂ ನಿಜಸೈನ್ಯನಿತಂಬಿನೀಜನಾ ಕ್ರಂದನಮಂ ಕೇಳುತ್ತುಮಿರ್ಪಂ ಇರುಳುಂ ಪಗಲುಂ (ಪಂಚತಂ. ೨೧೮-೭). [ಸಂ.]

**ನಿತಂಬಿನೀನಿವಹ** (ನಾ). = ನಿತಂಬಿನೀಕದಂಬ: ಶುದ್ಧಾಂತನಿತಂಬಿನೀ ನಿವಹಮೊಲ್ದೆಳಸುತ್ತಿರೆಯುಂ ಧರಾಂಗನಾಕಾಂತನ ಚಿತ್ತಮೇಕಱಿಯೆ ಮೊಂದದಣಂ ಸುರತೋಪಭೋಗಮಂ (ಕಾದಂಪೂ. ೨೦). [ಸಂ.]

**ನಿತಪ್ತ** (ಗು). ಕಂದಿದ; ಕಾಂತಿಗುಂದಿದ : ಉಚ್ಛ್ವಾಸನಿತಪ್ತಾಧರ ರುಚಿಯಂ ಮನುಜೇಂದ್ರಾಂಗನೆಯನೆಯ್ದಿ ಕಂಡಿತೆಂದಳ್ (ಯಶೋಚ. ೨-೩೫). [ಸಂ.]

**ನಿತರಾಂ** (ಅ). ಅತಿಯಾಗಿ; ಸಂಪೂರ್ಣವಾಗಿ : ಶತರಾಜ್ಯಲಾಭದಿಂದ ಮುಮತಿಪ್ರಿಯಂ ಮಾತಿದೆನಗೆ ಸತ್ಯಂ ಸತ್ಯಂ ನಿತರಾಂ ಪ್ರಮಾದಿಯೊಳ್ ವಿಸ್ಮಿತಮಾಗದ ನೇಹಮೆನ್ನೊಳಂ ವಪಿಪುದರಿಂ (ಸ್ವಪ್ನವಾ. ೫೮). [ಸಂ.]

**ನಿತಾಂತ** (ಗು). ೧. ಅಧಿಕವಾದ; ಹೆಚ್ಚಾದ; ಅತಿಶಯವಾದ : ಮೇಘನಾದಂ ತನ್ನ ಮಗಂ ಸಿಂಹನಾದಂಗೆ ರಾಜ್ಯಭಾರಮನಿತ್ತು ತಪೋಭಾರ ದೊಳ್ ತಾಂ ನಿಂದು ಶುಭಭಾವನಿತಾಂತಶುದ್ಧಾಂತರಂಗಂ . . . ಕಲ್ನೆಲೆ ನಿಂದು (ಶಾಂತಿಪು. ೭-೧೦೭ ವ); ಕವಿಪ್ರತತಿ ನಿತಾಂತಸೇವ್ಯತೆಯಿನೊಂದಿ

ಸರಸ್ವತಿಯುಂದದಿಂ ಸರಸ್ವತಿ ದಯೆಗೆಯ್ಗೆ ನಮ್ಮೊಳನುಕೂಲತೆಯಿಂದವೆ ನಿರ್ಮಳತ್ವಮುಂ (ಶಾದಂಪೂ. ೨) ; ಮೋಕ್ಷನಿತಾಂತೇಚ್ಛೆಯಿನನಿಬರುಮುನಿ ವರ್ತಿತರಾದರ್ (ವಿಷ್ಣುಪು. ೪-೧೩೭) ; ಹನ್ನೆರಡುವರ್ಷಗಳಲ್ಲಿ ಕನ್ನಡ ಕಲಿತು ಇಂಥ ನಿತಾಂತಸುಂದರವಚನಗಳನ್ನು ರಚಿಸಿದುದು ಮರುಳು ಶಂಕರದೇವನ ಸಾಹಸವೆಂದೇ ಹೇಳಬೇಕು (ಶರಚ. ೩೪೫) ; ಭೂದೇವಿ ವಿಸ್ಮಯಮೂಕಳಾಗಿ ನೋಡುತ್ತಿರುವಂತೆ ಎಲ್ಲೆಡೆಯಲ್ಲೂ ನಿತಾಂತಮೌನ ವ್ಯಾಪಿಸಿರುತ್ತದೆ (ಚಿತಂಬಾ. ೯೩) ; ಈ ಷಡ್ದರ್ಶನಗಳ . . . ಉದ್ದೇಶ— ಬಂಧ, ಬಂಧಕಾರಣ, ಮೋಕ್ಷ, ಮೋಕ್ಷೋಪಾಯಗಳ ನಿತಾಂತ ವಿಮರ್ಶೆ (ಭಾದಘ. ೧೨೨). (ನಾ). ೨. ಹಿರಿದು ; ದೊಡ್ಡದು : "ಕಾಮಂ, ಪ್ರಕಾಮಂ, ಪರ್ಯಾಪ್ತಂ, ನಿತಾಂತಂ . . . ಅತಿಮಯರ್ಾದಂ, ಅತಿ ವೇಳಂ—ಈ ೮ ಹಿರಿದಾಗಿರ್ದುದು" (ಹಲಾಯು. ೧೧೯-೩೩) ; "ನಿತಾಂತ ಮತ್ಯರ್ಥಮತಿವೇಳಂ ಪ್ರಕಾಮಮತಿಮರ್ಯಾದಮೆನಲು ಪಿರಿದೆನಿಕು" (ಮಂಗರಾ. ೧೨೯-೧೪). [ಸಂ.]

**ನಿತಾಂತಂ** (ಅ). ಬಹುವಾಗಿ ; ಹೆಚ್ಚಾಗಿ ; ಅತಿಶಯವಾಗಿ ; ಬಹಳವಾಗಿ : ನುತಶಿಶಿರಕಿರಣಕಾಂತಿಪ್ರತತಿಯನೊದಗೂಡಿ ಮಾಡಿದ ಪೊಲಾಯಿತ್ತಂತತಿಶಯುವಿಾ ನಿನ್ನ ಮುಖಂ ನಿತಾಂತಮೆಂಬಾಗಳಜು ಗಭೂತೋಪಮೆಯಂ (ಕವಿರಾ. ೩-೭೮) ; ಆ ರಾಶಿಯಂ ನೋಟಕ್ಕೊಡೆ ಕೃಶತನುವಕ್ಕುಂ ನರಂ ತದ್ಗೃಹಂ ಸ್ತ್ರೀಗೃಹಮಾದಂದುಗ್ರರಾಲೋಕಿಸೆ ಕೃಶತನು ತತ್ಕಾಂತೆಯಕ್ಕುಂ ನಿತಾಂತಂ (ಜಾತತಿ. ೨೧-೮) ; ಆಗ್ರಹಿಸಿ ತರ್ಕಶಾಸ್ತ್ರಸಮಗ್ರತೆಯಂ ತೋರ್ಪುದಿಲ್ಲಿ ನೀಮೆನೆ ಕುಳಿಕಾಹಿಗ್ರಸ್ತರಂತೆ ನುಡಿವುದವಗ್ರಹಮೆಂದುಗರ್ುಗೊಂಡರಂತೆ ನಿತಾಂತಂ (ಸುಕುಸೂ. ೨-೧೯); ಈ ಧರೆಯೊಳ್ ದೌರ್ಜನ್ಯರೆಲ್ಲಂ ಪರಕೃತಿನುತಿಗಂ ಸಲ್ವರಲ್ಲಂ ನಿತಾಂತಂ (ಷಣ್ಮಾಸ್ರ. ೧-೨೪); ಸತ್ಕಾವ್ಯದಂತಬ್ಧಿಯಂತೆ ನಿತಾಂತಂ ಸರಸಂ ವಿರಾಜಿಸಿ ದನಾ ರಾಜೇಂದ್ರಪಂಚಾನನಂ (ರಾಜಶೇ. ೩-೧೦). [ಸಂ.]

**ನಿತಾಂತವಂದ್ಯ** (ನಾ). ಅತ್ಯಂತ ಪೂಜ್ಯ ; ಅಧಿಕ ಗೌರವಕ್ಕೆ ಪಾತ್ರನಾದವನು : ಜೈನದರ್ಶನಕ್ಕೆ ಮೂಲರಾದ ಆದಿತೀರ್ಥಂಕರರು, ಋಷಭದೇವರು ವೈಷ್ಣವ ಆಗಮಗಳಿಗೂ ನಿತಾಂತವಂದ್ಯರಾಗಿರುವ ರೆಂಬುದು ನಮಗೆ ಕಂಡುಬರುವುದು (ಭಾದಘ. ೧೬೮).

[ನಿತಾಂತ + ವಂದ್ಯ]

**ನಿತಾಂತಶಠ** (ನಾ). ಅತ್ಯಂತ ತಿಳಿಗೇಡಿಯಾದವನು ; ಮಹಾ ಮೂರ್ಖ : ನಿಷ್ಠುರನೊಳ್ ನಿತಾಂತಶಠನೊಳ್ ನಿಸ್ನೇಹಮಂ ತೋರ್ಪ ಸಂಚಳನೊಳ್ ಸದ್ಗುಣಹೀನನೊಳ್ ನೆರೆವ ಕೂಟಂ ನಂಜಿನೂಟಂ ಸಖೀ (ರಾಜಶೇ. ೧೧-೧೫೧). [ನಿತಾಂತ + ಶಠ]

**ನಿತ್ತ** 'ನಿಲ್' ಪರಾ.

**ನಿತ್ತಧರ್ಮ** (ನಾ). ಪ್ರತಿದಿನವೂ ಮಾಡುವ ಧರ್ಮ,—ಪುಣ್ಯ ಕಾರ್ಯ : ಈ ನಿತ್ತಧರ್ಮ್ಮಮಾನ್ನಾದೋರಾ ಕುಲವ್ ಪೆಟ್ಟಗೆ (ಎಕ. VI, ಕೊಪ್ಪ. ೩೭-೮ ; ಸು. 675 ?). [<ಸಂ. ನಿತ್ಯಧರ್ಮ]

**ನಿತ್ತರಣೆ** (ನಾ). ಉದ್ಧಾರ ; ರಕ್ಷಣೆ : ಪಳ್ಳದೊಳಗಣ ಬಳಂಬೆಯಂತೆ ದ್ರೋಹನ ನಿತ್ತರಣೆಯಂತೆ (ಧರ್ಮಾಮೃ. ೯-೨೩).

[<ಸಂ. ನಿಸ್ತರಣ]

**ನಿತ್ತರಿಸು** (ಕ್ರಿ). ೧. ಸಹಿಸು ; ಸೈರಿಸು ; ತಾಳಿಕೊಳ್ಳು : ಇನ್ನೆವರೆಗಮಿರ್ದವಿನ್ನೆಮಗೆ ನಿತ್ತರಿಸಲ್ ನೆಱವಿಲ್ಲ ತಾಜಿಲಾದುವು ತನು ಕೂಟಿ ನೀರ ದೆಸೆಯಿಲ್ಲದೊಡಲ್ಗಳನೆಂತು ತಾಳ್ವುವಂ (ಆದಿಪು. ೯-೮೯) ; ಇತ್ತಂ ವಿಶ್ವನಂದಿಗಂ ವಿಶಾಖನಂದಿಗಂ ಒಂದು ನಂದನ ವ್ಯತಿಕರಣದಿಂ ಕಲಹಮಾಗೆ ವಿಶಾಖನಂದಂ ನಿತ್ತರಿಸಲಾಜದೋಡುವುದುಂ (ಚಾವುಂಪು. ೧೪೧) ; ನಿಸಿತಾಸ್ತ್ರಾಘಾತದಿಂ ಸತ್ತ ಭೂಪರ ಪೆಂಡಿರ್ ಬಿಸುಸುಯ್ಯ ನೀಳ್ದ ಶಿಖಿ ತಂನಂ ಮುಟ್ಟೆ ನೊಂದಿಂದು ನಿತ್ತರಿಸಲ್ಕಾಣಮಾಜಿದೆ (ಎಕ. VIII, ಸಾಗರ. ೧೦೯-೩೫ ; 1042) ; ಹೊತ್ತು ತುಂಬಿದವಳು ತನ್ನ ನಿತ್ತರಿಸುವ ಬೇನೆಯನಜಿವಳು (ಮೋಳಿಸಾ. ೧೯-೨೬); ಮದನ ದಹನಂ ಪತ್ತೆ ನಿತ್ತರಿಸಲಾಜದೆ ಲಲನೆಯ ಲಾವಣ್ಯರಸದ ಬಯಲೊನಲೊ ಳೋಲಾಡಿ ಬಿಟ್ಟಂತೆಯುಂ . . . ಕಂದರ್ಪದೇವನಿರ್ಪುದುಂ (ಲೀಲಾವ. ೩-೬೦) ; ಸುರನದಿ ಬತ್ತೆ ನಿತ್ತರಿಸದೊರ್ವೊದಲಲ್ಲಿಯ ಬಾಳೆಮಿಾಂಗಳೇ ಧರಣೀತಳಕ್ಕೆ ಬಿಟ್ಟಪುವು (ಜಗವಿ. ೧೮-೪೮) ; ಬೊಜಗನೊರ್ವಳೊಲ್ವಳಂ ನುಡಿದು ಬೇಳಾಗಿ ಕೇಳಿವನದೊಳೆಸಟಿ ಪಸೆಯೊಳ್ ಪೊರಳ್ದು ಪೊತ್ತುಗಳೆ ದಿರುಳಿನ ಜೊನ್ನದುರಿವರಿಗೆ ನಿತ್ತರಿಸಲಾಜದೆ (ಅನಂಪು. ೮-೩೨ ಪ) ; ಸಿಡಿಮಿಡಿಗೊಂಡು ತನ್ನ ಮನೆಯ ವಿತ್ತಮೆಲ್ಲಂ ಪೋಗಲಿಯೆಂದು ಬಾರಿಸೆ ಎಲ್ಲಂ ಪೋಯ್ತಾ ನೆರೆಮನೆಯವನರ್ಥಂ ಪೋಯ್ತು ಮತ್ತೆ ನಿತ್ತರಿಸದೆನ್ನು ವೆರಡುಕಣ್ಣೊಡೆದು ಪೋಗಲಿ ಎಂದು ಬಾರಿಸೆ (ಧರ್ಮಪ. ೪-೧೫ ಪ); ಉತ್ತರ ನಗರದೊಳೊಬ್ಬ ಪಾತಕ ತನ್ನ ಪೆತ್ತ ತಾಯಿಗೆ ಅಳುಪಿದರೆ ನಿತ್ತರಿಸದೆ ಊರ ಜನರೆಲ್ಲ ಪೋಗೆಂದು ಅತ್ತ ನೂಕಲಾಗವರು (ನನ್ನಕಾ. ೧೩-೩). ೨. ಪಾರಾಗು : ಪರಹಿತವಿದಾತ್ಮಹಿತವೆಂಬೆರಡುಮನುಟಾದಟಿಲನೆಮಗೆ ಮಾಡಿದವಂ ನಿತ್ತರಿಸಂ ತಿರ್ಯಗ್ಗತಿಯೊಳೆರಡಿಲ್ಲದೆಯಿಂ ವಿಜಾತಿಪುಟ್ಟದೆ ಮಾಣಂ (ಕಾದಂಉ. ೪೮೪) ; ತಿರಿಕ ನಾರಕ ಮಾನವಾಮರಲೋಕದೊಳ್ ನೆಲೆಗೊಂಡು ನಿತ್ತರಿಸದೆಲ್ಲಿಯುಂ (ಧರ್ಮಾಮೃ. ೧-೬೫) ; ಸಿರಿಗೆಡಱು ಜಡತೆ ಭಾರತಿಗಿರದಾಡಪೊಳಾತ್ಮವೇದಿಗೆತ್ತಾನುಂ ದುಶ್ಚರಿತಂ ತೋಱು ದೊಡದು ನಿತ್ತರಿಕುಮೆ ಕಳ್ತಲೆ ತಮೋರಿಗಿದಿರಾದಪುದೇ (ಉಪಾರ. ೨೯-೧೭೫) ; ಒತ್ತಾಗಿ ಬಲೆಯ ಬೀಸಿದನು ನಿತ್ತರಿಸದೆ ಪಕ್ಷಿ ಬಲೆಯೊಳು ಬೀಳಲು ಸುತ್ತಿ ಹಾಕಿದ ಕಲ್ಲಿಯೊಳಗೆ (ಕಪೋತ. ೭-೨೪). ೩. ಸಾಗಿಸಿ ಕೊಂಡು ಹೋಗು ; ನಿಭಾಯಿಸು ; ನಿರ್ವಹಿಸು : ಅರಿದು ಗೆಲಲ್ಕೆ ಪಾರ್ಥನ ಶರಾಸನವಿದ್ಯೆಯನೆಂದು ನೊಂದು ನಿತ್ತರಿಸದೆ . . . ಭಾಸ್ಕರ ಸುತನೊಯ್ಯನೋಸರಿಸೆ (ಪಂಪಭಾ. ೩-೭೧) ; ತದ್ಭಾರಮಂ ಪೊತ್ತುಂ ನಿತ್ತರಿಸುತ್ತಿರ್ಪುದಱಿಂದೆ ನೀನೆ ಪಿರಿಯೈ ಶ್ರೀದಾನಚಿಂತಾಮಣೀ (ಅಜಿಪು. ೧೨-೯) ; ನಾಮವರೊಳ್ ಪಗೆಯನೆತ್ತಿಕೊಂಡು ನಿತ್ತರಿಸಲಱಿ ಯೆವು (ಪಂಚತಂ. ೨೪೦-೧೫); ಮಹೋಗ್ರನೆಂಬ ಪೆಸರಂ ಕೈಕೊಂಡನಂ ಪೊರ್ದಿ ಬಿತ್ತರದಿಂ ನಿತ್ತರಿಸಲ್ಕೆ ಬಾರದೆನುತಂ ನಿಶ್ಚಯಿಸಿ ಬಿಟ್ಟುಂ ಜಿನೇಶ್ವರನಂ ಶಂಕರನಂ ಗುಣಾಕರನನತ್ಯಾನಂದದಿಂ ಪೊರ್ದುವರ್ (ಸಮಸ. ೮-೧೦೭) ; ಕರಗಸ ಗಾಳ ನಿಚ್ಚಣಿಗೆ ದಬ್ಬುಕವೆಂಬಿವನಿಕ್ಕಿ ಕಾದಿ ನಿತ್ತರಿಸದೆಯೋಡಿಹೋದ ಬೆಳ್ಳಿರಳಿಯ ಬೇಂಟೆಯಲು ಕೊಲಲುವೊಲ್ಲದೆ ಕಾವನು ವಿಕ್ರ[ಮ]ಭೂಭುಜ (ಸೌಇಇ. IX-i, ೨೭೬-೩೩ ; 1183) ; ಅರರೆ ಚತುರ್ಬಲಂ ಬೆರಸು ಭೋಂಕನೆ ನೂಂಕಿದ ವೀರತಾರಕಾಸುರ ನೊಳ್ . . . ಅವನೊಡರ್ಚುವನಾವನಾಂತು ನಿತ್ತರಿಸುವಂ (ಗಿರಿಕ. ೬-೭೫) ; ಆ ನಾಗನಾಂತ ಪೊಱೆಯಂ ಭೂನಾಗಂ ಪೊತ್ತು ದೇವ ನಿತ್ತರಿಸುವುದೆ (ಅನಂಪು. ೩-೯೦) ; ಎಮ್ಮಯ ವಂಶದಿಕ್ಕರಿಗಳೆಂಟು ವಿಳಾತಳಭಾರಮಂ ಕೊರಳ್ ಕೊಮಿಕ್ಕಿಸಿ ಪೊತ್ತು ನಿತ್ತರಿಸುತಿರ್ದೊಡವಿಾ ನೆಲನೆಯ್ದೆ ಕಾಯ್ದು ಸುಡುತಿರ್ಪುದೆಂದಿಡುವಂತೆ ಪುಯ್ಯಲಂ ತಮ್ಮ ಕರಾಗ್ರದೊಳ್ ತೊವಲನಾಂತು ನೆಟಿಲ್ಗೆ ತೊಟಿಲ್ದವಾನೆಗಳ್ (ಬಾಧಪು. ೪-೮೩) ; ಬಹಳ ಭಂಗಂಬಡೆದು ಕದನಮಂ ನಿತ್ತರಿಸಲಾಜದಾಳ್ವೇರಿಯಿಂ ಕೆಡೆದರಗಳೊಳಗಾಗಲಸುರಭಟರು (ಚಿಬಪು. ೨೪-೩೦) ; ಎತ್ತಿಕೊಂಬಳು ಪೆಣನನು ಮತ್ತೆ ದಣಿಯದೆ ಮುತ್ತ ಕೊಡುವಳು ಮಗನಿಗೆ ನಿತ್ತರಿಸುವೆ ನಾಸಿನ್ನಾವಪರಿಯೆಂದು ಹೆತ್ತ ತಾಯಿ ಹಲುಬುವಳು (ಧನ್ಯಚ. ೯೨). ೪. ಪಾರುಮಾಡು ; ದಾಟಿಸು ; ಉದ್ಧಾರಮಾಡು : ಬಾಲತ್ವ ದೊಳ್ ಉಪಾಸಕಾಧ್ಯಯನಮನೋದಿ ಲಬ್ಧಸಂಸ್ಕಾರನಾದಾತಂ

ತನ್ನುಮಂ ಪೆಱರುಮಂ ಕೊಂಡು ನಿತ್ತ[ಪಾಠಾಂ. ಸ್ತ]ರಿಸುಗುಂ (ಚಾವುಂಪು. ೯೩) ; ಸುರಿವ ಕೂರ್ಗಣೆಯಿಂದ ಕೂರ್ಗಣೆಯೆಚ್ಚು ನಿತ್ತರಿಸಿ ಮಾರ್ಬಲವ ರಕ್ಷಿಸಿದ (ಮೋಹತ. ೪೦-೫೦). **೫.** ಉಳಿ ; ಸುರಕ್ಷಿತ ವಾಗಿರು ; ತಪ್ಪಿಸಿಕೊಳ್ಳು : ಅರಣ್ಯದೊಳ್ ನಿತ್ತರಿಪಂತು ನಾಡ ಗಡಿಯಂ ಮಱೆದುಂ ಪುಗದಂತವಂಗೆ ಭೂಪೋತ್ತಮನಾಜ್ಞೆಯೆಂಬ ಮಣಿಮಂಡನಮಂ ನಡುನೆತ್ತಿಗಿತ್ತು ದಿಗ್ಭಿತ್ತಿಗೆ ಕೀರ್ತಿಚಂದನವಿಲೇಪ ಮನಿತ್ತನಿದೇನುದಾತ್ತನೋ (ಪಂರಾಪೂ. ೪-೭೪) ; ಕುಡಲಾಪ್ಪನೇ ಕನಕಶೈಳಂ ದೂರವಾಗಿದ್ದ್ ನಿತ್ತರಿಸಿತ್ತು (ಎಕ. V, ಬೇಲೂರು. ೫೮-೩೯ ; 1117). **೬.** ತಡೆಯಲ್ಪಡು ; ಅಡ್ಡಿಹೊಂದು : ಎಣ್ದೆಸೆಯಿಂ ಬಿಡೆ ಬೀಸೆ ಗಾಳಿ ನಿತ್ತರಿಸದೆ ಬೀಸಿದಂದು ಮುಟಿಯಿಲ್ಲ[ಪಾಠಾಂ. ನಿಸ್ತರಿಸಿದೆಂದು ಮುಟಿ]ನೆಲಂ ಪುಡಿವಿಟ್ಟು ಪಾಱುಗುಂ (ಜಗನ್ನಾ. ೪-೨). **೭.** ಕಳೆ ; ಮಾರು : ಪೊತ್ತು ನಿತ್ತರಿಸಲಾ ಕನ್ನೆ ಕೈಸಾರ್ವುದಿನ್ನೆತ್ತ (ಜಿನಮು. ೩-೧೯). **೮.** ಬೀಸು ; ತೀಡು : ಕಂಪನವುಂಕಿ ಪೊತ್ತು ನಿತ್ತರಿಪೆರಲೆಂಬಿವೇವುವೊ ಮದೀಯ ಮನೋಗತಕಾಮರಾಗಸಾಗರದೊದವಿಂಗೆ ನಲ್ಲಳ ವಿಲೋಕನ ಚಂದ್ರಿಕೆಯೊಂದೆ ಸಾಲದೇ (ಪಂಪಭಾ. ೫-೧೧). [<ನಿಸ್ತರಿಸು]

**ನಿತ್ತ್ರವ್ಯವಸ್ಥೆ** (ನಾ). ನಿತ್ಯವೂ ನಡೆಯುವಂತೆ ಮಾಡಿದ ಏರ್ಪಾಡು: ಶ್ರೀರಣಸಾಗರಾಳುಪೇನ್ದ್ರರಾ ರಾಜ್ಯದುಳ್ಳೆ ಕವುಳಪ್ಪಳ್ಳುಟ್ಟಿಱಿಯೆ ಪದಿನೆಣ್ಬು ಪಟ್ಟಣಮುಮ್ ನಿತ್ತವ್ಯವಸ್ಥೆ . . . ಈ ವ್ಯವಸ್ಥೆ ಆಗೆ ಊರು ರಕ್ಷಿಪ್ಪುದು (ಸೌಇಇ. VII, ೨೮೪-೩ ; ?). [<ಸಂ. ನಿತ್ಯವ್ಯವಸ್ಥಾ]

**ನಿತ್ತಿರಿಕೆ** 'ನಿಲ್' ಪರಾ.

**ನಿತ್ತು** 'ನಿಲ್' ಪರಾ.

**ನಿತ್ತೆ** (ನಾ). ಒಂದು ಬಗೆಯ ಸಸ್ಯ : (ಮೈಡಿಗ. ೨-೩೬). [?]

**ನಿತ್ಯ₁** (ಗು). **೧.** ಪ್ರತಿದಿವಸದ ; ದಿನನಿತ್ಯದ : 'ನಿತ್ಯಜೀವನ', 'ನಿತ್ಯಜ್ವರ' ಪರಾ. (ನಾ). **೨.** ಪ್ರತಿದಿವಸ; ಪ್ರತಿದಿನ : ನಿತ್ಯದಲ್ಲಿ ಹಲವು ಕೆಲಸ ಭೃತ್ಯನಂತೆ ಮಾಡಿ ರಿಕ್ತಹಸ್ತದಿಂದ ಮನೆಗೆ ಸೇರುವೆ (ಕನಕ. ೪೬-೧) ; ದೇವಿಚರಿತವನಿದನು ನಿತ್ಯದಲೋದಿಕೊಂಡಿರಲು ಈವಳ್ಳೆ ಬೇಡಿದ್ದ ಬಯಕೆಗಳ (ದೇವೀವ. ೧೧-೧೮) ; ನಿತ್ಯ ಸಾಯುವವರಿಗೆ ಅಳುವವರು ಯಾರು ? (ಗಾದೆ).

ನಿತ್ಯಾಲು = ಪ್ರತಿದಿನ; ದಿನಂಪ್ರತಿ : ಪಂಚಪಾಂಡವರಾ ವರಜನನ ಗಳಾ ಕಾಲಕಾಲದೊಳಾವುವುದ್ಭವದಾಳಿದವರವರಾಲಯಕೆ ನಿತ್ಯಾಲು ಪೌರೋಹಿತರು ನಾವಹುದೆಂದ ಧರ್ಮಜನು (ಜಿನಭಾ. ೨೦-೫).

[ಸಂ. ನಿತ್ಯಂ]

**ನಿತ್ಯ₂** (ಗು). **೧.** ಶಾಶ್ವತವಾದ ; ನಿರಂತರವಾದ ; ಯಾವಾಗಲೂ ಇರುವ ; ಅನಂತವಾದ : ಇಂತೀ ತತ್ವದಾದಿ ತಾನೆಂತೆನಲು ಆ ಪರ ಬ್ರಹ್ಮವಪ್ಪ ನಿತ್ಯನಿರಾಳ ನಿಃಶೂನ್ಯಲಿಂಗವೇ ತನ್ನ ಲೀಲಾವಿಲಾಸದಿಂದ ತಾನೆ . . . ಮಹಾಲಿಂಗವೆಂದೆನಿಸಿತ್ತು (ಸುಹಾವೇ. ಕ. ೧೪೬-೩೪೧) ; ದೇಹ ಕರಣಾದಿ ಪ್ರಪಂಚವು ನಾಹಮೆನಲಳಿದುಳಿದ ನಿತ್ಯ ನಿರೀಹವಿಮಳ ಜ್ಞಾನರೂಪನು ನಿನ್ನ ನೋಡೆಂದ (ಕುಸ್ಯಾದ್ರೋ. ೧೮-೫೯). 'ಅನಿತ್ಯ' ಪರಾ. **೨.** ದಿನವೂ ಮಾಡುವ ; ದೈನಂದಿನ ಆಚರಣೆಯ. 'ನಿತ್ಯಕರ್ಮ' ಪರಾ. (ನಾ). **೩.** ಶಾಶ್ವತವಾದುದು : ಸ್ಥಿರ ವಾದುದು ; ಎಂದೆಂದಿಗೂ ನೆಲಸಿರುವಂಥದು : "ನಿತ್ಯಂ ಧ್ರುವಂ ಶಾಶ್ವತಮುದು ಸನಾತನಮನಶ್ವರಂ ಸ್ಥಿರಮೆನಿಕ್ಕು" (ಮಂಗರಾ. ೮-೨೫); ಸತಿಸುತರು ಮನೆ . . . ಭೋಗೈಕಸಂಪದವು ನಿತ್ಯವಲ್ಲ (ನಳಚ. ೪-೩೯) ; ನಿತ್ಯವಲ್ಲ ನಿತ್ಯವಲ್ಲ ಅನಿತ್ಯ ದೇಹವಿದಣ್ಣ (ಪುರಂದ. ೨-೯೪ ಪಲ್ಲವಿ) ; ಸತ್ತು ಚಿತ್ತು ಆನಂದ ನಿತ್ಯಪರಿಪೂರ್ಣ ಅಖಂಡವೆಂಬ ಆಱು ಲಕ್ಷಣಯುಕ್ತವಾದ ಮಹಾಲಿಂಗವೇ ಪತಿ ನಾನೇ ಶರಣಸತಿ (ಅಖಂಡೇ. ೨೪೬-೧) ; ವಾಗರ್ಥಗಳ ಸಂಬಂಧ ನಿತ್ಯವಾದುದು. ಹಾಗೆಯೇ ಪಾರ್ವತೀಪರಮೇಶ್ವರರ ಸಂಬಂಧವೂ ನಿತ್ಯವಾದುದೇ (ಭಾರದ. ೪೫೦) ; ಮುಕ್ತಿಕಾಲದಲ್ಲಿ ಅವನೊಳಗೇ ಸೇರಲಿರುವುದರಿಂದ ಜೀವ ಜಗತ್ತುಗಳು ಮಿಥ್ಯೆ ಅಥವಾ ವಸ್ತುಕಲ್ಪಿತವೆನಿಸಲಾರವು. ಆದರೆ ಅವು ಸತ್ಯ ನಿತ್ಯಶಾಶ್ವತ ವಸ್ತುಗಳೇ ಆಗಿರುವುವು (ಶಕ್ತಿವಿ. ೧೪). **೪.** ಶಾಶ್ವತವಾಗಿರುವವನು; ಪರಮಾತ್ಮ ; ದೇವರು : ನಿತ್ಯಂ ನಿರೀಂದ್ರಿಯಂ ಸಂಪ್ರತ್ಯಯನವಿನಾಶಿ (ಮಲ್ಲಿಪು. ೧೪-೬೮) ; ಕೂಡಲಸಂಗಯ್ಯನೇ ನಿತ್ಯ ಉಳಿದ ದೈವವೆಲ್ಲಾ ಅನಿತ್ಯ (ಬಸವ. ೫೫೨) ; ಪರಮಾತ್ಮನೆನ್ನನೆಂದೊಡೆ ಚರಮಾಂಗಪ್ರಮಿತ ನಖಿಲಲೋಕಸಮಾನಂ ನಿರವಯವಂ ನಿತ್ಯಂ[ಪಾಠಾಂ. ನಿರಂಜನ]ನಿರ್ದುರಿ ತನನಂತ ಪ್ರಬೋಧದರ್ಶನಸೌಖ್ಯಂ (ಯಶೋಚ. ೪-೨೦) ; ಸುರಗಿರಿಯ ಶಿಖರದೊಳು ಇರುತಿಹನ ನಿರ್ಮಲನ ನಿತ್ಯನ ನಿರುಪಮನ . . . ಗುರುತರಿ ಮರಾರೆಂದ (ಗಗತಾ. ೧೩-೧). **೫.** ಸ್ಥಿರವಾದ ಪದವಿ ; ಮೋಕ್ಷ : ಧ್ರುವಂ ಸನಾತನಂ ನಿತ್ಯಮವಿನಶ್ವರಮಪ್ರತಿಚ್ಯವ ಶಾಶ್ವತಸ್ಥಾನಮೆಮಗಕ್ಕೆ ನಿರಾಕುಳಂ (ವಸ್ತುಕೋ. ೨೧-೨೦). **೬.** ಮೋಕ್ಷವನ್ನು ಪಡೆದವನು; ಜೀವನ್ಮುಕ್ತ : ನಿತ್ಯನೆಂದೆನಿಸಯ್ಯ ಎನ್ನ (ಅಖಂಡೇ. ೭೮-೬೦) ; ಸತ್ಯರ ನುಡಿ ತೀರ್ಥ ನಿತ್ಯರ ನಡೆ ತೀರ್ಥ . . . ಹರಿವ ನೀರೆತ್ತಣದು ತೀರ್ಥ (ಸರ್ವಜ್ಞ. ೮೦೨). **೭.** (ಸಂಧ್ಯಾವಂದನೆ, ಪೂಜೆ ಮುಂತಾದ) ನಿತ್ಯಕರ್ಮ ; ನೇಮ : ಗುರುವಚನವಲ್ಲದೆ ನಿತ್ಯವೆಂದೆನಿಸದು ಗುರು ವಚನವಲ್ಲದೆ ನೇಮವೆಂದೆನಿಸದು (ಬಸವ. ೭೨) ; ಅಂಬರದಿ ಉಡುಗಣಂ ಗಳ ಸಹಿತೆ ವಿಭವದಿ ಉಡುಗಣಾಧೀಶ್ವರನು ಮೂಡಿದ ಪೊಡವಿಪತಿ ನಿತ್ಯ ವನು ಸಲಿಸಿದನು (ಕೌಶಿರಾ. ೧೬-೨೧) ; ನಿತ್ಯವಿಲ್ಲ ನೇಮವಿಲ್ಲ ಮತ್ತೆ ದಾನಧರ್ಮವಿಲ್ಲ ವ್ಯರ್ಥವಾಗಿ ಕೆಡದೆ ಪುರುಷೋತ್ತಮನ ನೆನೆಯಿರೊ (ಪುರಂದ. ೨-೧೦-೧) ; ನಿತ್ಯನೈಮಿತ್ತಿಕದ ಕರ್ಮಗಳ ಸನುಮತದಲಾರ್ಜಿ ಸಲು (ಗಗತಾ. ೧೬-೩೧) ; ಮಾನವನ ಕಾಯಿಕ . . . ನಿತ್ಯ, ನೈಮಿತ್ತಿಕ, ಕಾಮ್ಯ, ನಿಷಿದ್ಧ, ವಿಹಿತ, ಕೃತಿಗಳೆಲ್ಲ 'ಕರ್ಮ' ಪದದಲ್ಲಿಯೇ ಅಡಕವಾಗುತ್ತವೆ (ಧರ್ಮಸಾ. ೧೩೦). **೮.** ಪ್ರತಿದಿನದ ಸೇವೆ ; ನಿತ್ಯವ್ಯವಸ್ಥೆ : ಇನ್ತೀ ಚತು[ಃ]ಸೀಮೆಯೊಳಗಣ ಬಾಳನೂ ತೆಂಗಿನ ತೋಟವನೂ ನಿತ್ಯಕೆ ಬಿಟ್ಟನು (ಸೌಇಇ. IX-ii, ೪೪೮-೧೫ ; 1442). **೯.** ಒಂದು ಬಗೆಯ ಸಸ್ಯ ; ಪ್ರಿಯಾಲ : "ಸನ್ನಃ—ಪುರಾಣ, ನಿತ್ಯ" (ಓಷಧಿ. ೧೭೪). **೧೦.** ಕಡಲು ; ಸಮುದ್ರ. **೧೧.** [ವ್ಯಾಕ] ವಿಕಲ್ಪವಲ್ಲದುದು ; ಅಗತ್ಯವಾದುದು : ಪ್ರತಿಷೇಧದ ಧಾತುಗೆ ಮುಂದೆ ತಱುಂಬ ವಿಭಕ್ತಿಪೂರ್ವಕಾಲಕ್ರಿಯೆಯೊಳಾ ಪ್ರತಿಷೇಧದ ದೆಂಬುದು ತೋಱೆ ಮೇಣ್ ದ್ವಿತ್ವವೃತ್ತಿ ನಿತ್ಯಮೆನಿಕ್ಕುಂ (ಶಮದ. ೭೧); ಇದುವರೆಗೆ ಹೇಳಿದ ಸಂಧಿಕಾರ್ಯಗಳೆಲ್ಲ, ಪ್ರಕೃತಿಗೆ ಪ್ರತ್ಯಯವು ಸೇರು ವಾಗಲೂ ಸಮಾಸದಲ್ಲೂ ನಿತ್ಯವಾಗಿ ಬರುತ್ತವೆ (ಮಧ್ಯಮ. ೨೧). **೧೨.** [ವಿಶಿಷ್ಟಾ]ಮೂರು ಬಗೆಯ ಜೀವಾತ್ಮರಲ್ಲಿ ಒಂದು ಬಗೆ ; ⊫ ವಿಶಿಷ್ಟಾದ್ವೈತಸಿದ್ಧಾಂತದಂತೆ ಜೀವರಲ್ಲಿ ನಿತ್ಯ, ಮುಕ್ತ ಮತ್ತು ಬದ್ಧ ಎಂಬುದಾಗಿ ಮೂರು ವಿಧ. ಯಾವಾಗಲೂ ಸಂಸಾರಕ್ಕೆ ಸಿಲುಕದ ಜೀವರು ನಿತ್ಯರು—ಗರುಡ ಮೊದಲಾದ ವರು. ಇವರಿಗೆ ನಿತ್ಯಸೂರಿಗಳೆಂದೂ ಹೆಸರು. ಸಂಸಾರದಲ್ಲಿದ್ದು ಪ್ರಕೃತಿಸಂಬಂಧವನ್ನು ಬಿಡಿಸಿಕೊಂಡವರು ಮುಕ್ತರು—ಶುಕ, ವಾಮದೇವ, ವ್ಯಾಸ ಮತ್ತು ಆಳ್ವಾರರು ಮೊದಲಾದವರು. ಪ್ರಕೃತಿಸಂಬಂಧದಿಂದ ಸಂಸಾರದಲ್ಲಿರುವವರು ಬದ್ಧರು : ಈ ಜೀವಾತ್ಮತತ್ತ್ವವು ನಿತ್ಯ, ಮುಕ್ತ, ಬದ್ಧ ಎಂದು ಮೂರುವಿಧ. ಯಾವಾಗಲೂ ಸಂಸಾರವೆಂಬ ಪ್ರಕೃತಿಸಂಬಂಧವಿಲ್ಲದ ಅನಂತ, ಗರುಡ, ವಿಷ್ವಕ್ಸೇನ ಮೊದಲಾದ ಭಗವಂತನ ಪರಿಜನರು ನಿತ್ಯರು (ಹಿಂದಸಾ. ೨೪೭).

ನಿತ್ಯಾನಿತ್ಯ = ಶಾಶ್ವತ ಮತ್ತು ಅಶಾಶ್ವತ; ಸ್ಥಿರ ಮತ್ತು ಅಸ್ಥಿರ: ಆದಿ ಅನಾದಿಯ ನಿತ್ಯಾನಿತ್ಯವ ತಿಳಿಯಲರಿಯದೆ ವಾಯಕ್ಕೆ ಪರಬ್ರಹ್ಮವ ನುಡಿವ ವಾಯುಪ್ರಾಣಿಗಳವರೆತ್ತ ಬಲ್ಲರೋ ಆ ಪರಬ್ರಹ್ಮದ ನಿಜದ ನಿಲವ (ಮಹಾದೇ. ಬ. ೧೧೧–೨೬೫); ಅಮೃತಬಿಂದುವ ಸೇವಿಸಿ ನಿತ್ಯಾನಿತ್ಯವ ಗೆದ್ದು ನಿರ್ಮಲ ನಿರಾವರಣನಾದೆನು (ಸಿದ್ಧೇಸ.೧೨೭–೩೮೦); ಧರ್ಮ ಧರ್ಮಿಗಳಿಗೆ ಅಭೇದವನ್ನು ಸ್ವೀಕರಿಸಿರುವುದರಿಂದ ನಿತ್ಯಾನಿತ್ಯ ವ್ಯವಸ್ಥೆಯಿಲ್ಲದೆ ಹೋಗುವುದು (ಹಿಂದಸಾ. ೨೭೭). ನಿತ್ಯಾನಿತ್ಯವಸ್ತು = ಶಾಶ್ವತವಾದ ಮತ್ತು ಅಶಾಶ್ವತವಾದ ವಸ್ತು; ಸ್ಥಿರ ಮತ್ತು ಅಸ್ಥಿರವಾದ ವಸ್ತು: ಭಜಿಸು ನಿತ್ಯಾನಿತ್ಯವಸ್ತುವ ವಿಜಯನಹೆ ಇಹಪರಕೆ ತತ್ವದ ನಿಜವಿದೆಲೆ ಧೃತರಾಷ್ಟ್ರ ಚಿತ್ತೈಸೆಂದನಾ ಮುನಿಪ (ಕುಮ್ಯಾಉ. ೪–೧೦). ನಿತ್ಯಾನಿತ್ಯವಸ್ತುವಿವೇಕ = ಯಾವುದು ಶಾಶ್ವತ, ಯಾವುದು ಅಶಾಶ್ವತವೆಂದು ತಿಳಿಯುವ ಜ್ಞಾನ: ನಿತ್ಯಾನಿತ್ಯ ವಸ್ತುವಿವೇಕವೆಂದರೆ ಈ ಪ್ರಪಂಚದಲ್ಲಿ ಇದು ಶಾಶ್ವತ, ಇದು ಅಶಾಶ್ವತ ಎಂದು ತಿಳಿಯುವುದು (ಹಿಂದಸಾ. ೨೨೦); ನಿತ್ಯಾನಿತ್ಯವಸ್ತುವಿವೇಕ, ಈ ಲೋಕದ ಮತ್ತು ಪರಲೋಕದ ವಸ್ತುಗಳ ಉಪಭೋಗದಲ್ಲಿ ವಿರಕ್ತಿಯು . . . ಮೋಕ್ಷದಲ್ಲಿ ಇಚ್ಛೆಯುಳ್ಳವನಾಗಿರುವುದು (ಬ್ರಹ್ಮಭಾ. ೧೨). [ಸಂ.]

**ನಿತ್ಯ₃** (ಅ). ಯಾವಾಗಲೂ; ಸದಾ; ಎಡೆಬಿಡದೆ: ನಿತ್ಯ ಸಂಗರ ನಿಷ್ಣಾತ ಭೃತ್ಯಪುಂಗವಸಂಘದಿಂ ಸತ್ಯಮಂಗಲಸಂಪನ್ನಂ ಸತ್ಯಮಂಗಲ ವೊಂದಿದಂ (ಚಿಕವಿ. ೨–೧೩೪); ಈ ಸಮಸ್ತಮೂರ್ತಿ ಶ್ರೀಶರಂಗನೆಂದು ವಾಸನಾಮಯದಿಂದ ನೀ ಸೇವಿಸುತ ನಿತ್ಯ (ವಿದಾಕ್ಯ. ೭೭–೪). [< ನಿತ್ಯ₁]

**ನಿತ್ಯಂ** (ಅ). ಯಾವಾಗಲೂ; ಸದಾ: "ಸಂತತಂ, ಸತತಂ, ಅನಿಶಂ, ನಿತ್ಯಂ, ಅಜಸ್ರಂ, ಶಶ್ವತ್ . . . ಅಸಕೃತ್ಂ–ಈ ೧೧ ಸಂತತಂ" (ಹಲಾಯು. ೧೧೭–೧೩); ನಿತ್ಯಮಣುವ್ರತಮನದ ಪ್ರತ್ಯಾಖ್ಯಾನಂ . . . ಕಿಡಿಕುಂ (ಪಾರ್ಶ್ವಪು. ೫–೨೬); ಕಂದನೀತನ ರಕ್ಷೆಯೊಳ್, ಪ್ರಳಯಾಗ್ನಿ ಚಕ್ರ ಕೇಂದ್ರದೊಳಿರ್ಪ ಸುಧೆಯವೊಲ್, ನಿತ್ಯಂ ಸುರಕ್ಷಿತಂ (ಶ್ರೀರಾಮಾ. ೩೦–೭೪). [ಸಂ.]

**ನಿತ್ಯಕಟ್ಟಲೆ** 'ನಿತ್ಯಗಟ್ಟಳೆ' ನೋ.

**ನಿತ್ಯಕರ್ಮ** (ನಾ). ೧. ಪ್ರತಿದಿನವೂ ಕ್ಲುಪ್ತಕಾಲದಲ್ಲಿ ಮಾಡುವ ಸಂಧ್ಯಾವಂದನೆಯೇ ಮುಂತಾದ ಕರ್ಮ; ಈ ಕರ್ಮಗಳನ್ನು ಐದುವಿಧಗಳಾಗಿ ವಿಂಗಡಿಸಿದ್ದಾರೆ. (೧). ನಿತ್ಯಕರ್ಮ—ಪ್ರತಿನಿತ್ಯವೂ ಮಾಡಬೇಕಾದ ಕರ್ಮ. ಸಂಧ್ಯಾವಂದನೆ, ಬ್ರಹ್ಮಯಜ್ಞ ಮೊದಲಾದುವು. (೨). ನೈಮಿತ್ತಿಕ ಕರ್ಮ—ಒಂದು ನಿಮಿತ್ತದಿಂದ ಮಾಡುವ ಕರ್ಮ. ಗ್ರಹಣಸ್ನಾನ, ಉಪಾಕರ್ಮ ಮೊದಲಾಗುವು. (೩). ಪ್ರಾಯಶ್ಚಿತ್ತಕರ್ಮ—ಪಾಪಪರಿಹಾರಕ್ಕಾಗಿ ಮಾಡುವ ಗಂಗಾಸ್ನಾನ, ರಾಮಸೇತುದರ್ಶನ ಮೊದಲಾದುವು. (೪). ಕಾಮ್ಯಕರ್ಮ — ಯಾವುದಾದರೊಂದು ಇಷ್ಟಾರ್ಥವು ಸಿದ್ಧಿಸಲೆಂಬ ಆಶೆಯಿಂದ ಮಾಡುವ ಕರ್ಮ. ಸತ್ಯನಾರಾಯಣವ್ರತ ಮೊದಲಾದುವು. (೫). ನಿರ್ಮಲಕರ್ಮ —ಚಿತ್ತಶುದ್ಧಿಗಾಗಿ, ಎಂದರೆ ಫಲಾಭಿಲಾಷೆಯಿಲ್ಲದೆ ಮಾಡುವ ಪಂಚಾಕ್ಷರೀ ಜಪ ಮೊದಲಾದುವು. ಕೆಲವರು ಇದನ್ನು ನಿಷಿದ್ಧಕರ್ಮವೆಂದು ಹೇಳಿದ್ದಾರೆ, ಎಂದರೆ ಇದು ಮಾಡಬಾರದ ಕರ್ಮ, ಅಭಿಚಾರಿಕ ಕರ್ಮ. ಅವರು ನಿರ್ಮಲಕರ್ಮವನ್ನು ಬಿಡುತ್ತಾರೆ: "ನಿತ್ಯಕರ್ಮಮದು ಯಮನುಕ್ಕುಂ" (ವಸ್ತುಕೋ. ೫೮–೨೬); ನಿತ್ಯಕರ್ಮಂಗಳನು ಚರಿಸುವ ನಿತ್ಯದೌಪಾಸನನ ಬೇಳುವ . . . ರಾಕ್ಷಸವಿಪ್ರಗೃಹಗಳಲಿ (ಕಾಶಿರಾ. ೩೯–೭); ಮತ್ತಮಾ ಗೃಹಸ್ಥನಿಂದನುಷ್ಠಿಸಲ್ತಕ್ಕ ಕರ್ಮವಾದೊಡೆ ನಿತ್ಯನೈಮಿತ್ತಿಕ ಪ್ರಾಯಶ್ಚಿತ್ತ ಕಾಮ್ಯ ನಿರ್ಮಲವೆಂದು ಪಂಚವಿಧವಾಗಿಹುದದರಲ್ಲಿ ಸಂಧ್ಯಾವಂದನಾದಿ ಕವೇ ನಿತ್ಯಕರ್ಮವೆನಿಸುವುದು (ವಿವೇಕ. ೧೩೪); ಕರ್ಮಗಳಲ್ಲಿ ನಿತ್ಯ, ನೈಮಿತ್ತಿಕವೆಂದು ಎರಡು ವಿಧ. ಸಂಧ್ಯಾವಂದನ, ಶ್ರಾದ್ಧಾದಿಗಳು ನಿತ್ಯಕರ್ಮಗಳು. ವಿಷ್ಣು ಪಂಚಕ ಮೊದಲಾದವು ನೈಮಿತ್ತಿಕಕರ್ಮ (ಹಸಾರ. ೯–೧೬ ತಾತ್ಪರ್ಯ); ಮಾಡದಿದ್ದೊಡೆ ದೋಷ ಬರುತ್ತದೆಂದು ಶಾಸ್ತ್ರಗಳಲ್ಲಿ ಹೇಳಿರುತ್ತದೆ. ಆ ಕರ್ಮಂಗಳ ಸಮೂಹಕ್ಕೆ ನಿತ್ಯಕರ್ಮವೆನಬೇಕು (ನಿಗಮ. ೧–೪–೧); ದೇವ, ನಿನ್ನ ನಿತ್ಯಕರ್ಮ ಮುಗಿಯುವ ವೇಳೆಗೆ ನಾನು ಬಂದುಬಿಡುತ್ತೇನೆ (ಮಹಾಣ. ೧೭೬). ೨. ಪ್ರತಿನಿತ್ಯವೂ ಸಂಪ್ರದಾಯ ಮಾಡಿಕೊಂಡಿರುವ ಕ್ರಿಯೆ: ದಿನನಿತ್ಯದ ವ್ಯಾವಹಾರಿಕವಾದ ಕೆಲಸ. [ನಿತ್ಯ₁ + ಕರ್ಮ]

**ನಿತ್ಯಕೃತ್ಯ** (ನಾ). ಪ್ರತಿದಿನವೂ ಮಾಡುವ ಮುಖಪ್ರಕ್ಷಾಳನ, ದಂತಧಾವನ, ಸ್ನಾನ ಮೊದಲಾದ ಕೆಲಸ: ಮಂಗಳಗಾಯಿಕಾ ಮಧುರಗಾನದಿನೆಚ್ಚಿಱನೆಯ್ದಿ ನಿತ್ಯಕೃತ್ಯಂಗಳ ಮಂಗಳಾಚರಣಮಂ ನೆಗೞುತ್ತೆ (ಪುಷ್ಪಪು. ೩–೧೨೧); ಇಲ್ಲಿ ಹೇಳಿರುವ ಅನೇಕ ನಿತ್ಯಕೃತ್ಯಗಳು ಕೇವಲ ದ್ವಿಜರಿಗೆ ಮಾತ್ರ ನಿಯಮಿತವಾದವುಗಳಲ್ಲ (ಭಾರದ. ೫೪). [ನಿತ್ಯ₁ + ಕೃತ್ಯ₂]

**ನಿತ್ಯಕ್ಷೇತ್ರ** (ನಾ). ಸದಾ ಪವಿತ್ರವಾದ ಸ್ಥಳ; ತೀರ್ಥಯಾತ್ರಾಕ್ಷೇತ್ರ: ಜಾತರಿ ಕೂಡುವುದು ನಿತ್ಯಕ್ಷೇತ್ರವೆನ್ನುವರು (ಸಿದ್ಧಪು. ೫–೬೬). [ನಿತ್ಯ₃ + ಕ್ಷೇತ್ರ]

**ನಿತ್ಯಗಟ್ಟಲೆ** 'ನಿತ್ಯಗಟ್ಟಳೆ' ನೋ.

**ನಿತ್ಯಗಟ್ಟಳೆ, ನಿತ್ಯಕಟ್ಟಲೆ, ನಿತ್ಯಗಟ್ಟಲೆ, ನಿತ್ಯಗಟ್ಲೆ** (ನಾ). ೧. ಪ್ರತಿದಿವಸವೂ ಮಾಡುವಂಥದು; ದಿನವೂ ನಡೆಸುವ ಕೆಲಸ,— ಕಾರ್ಯ: ಯಾವುದಾದರೂ ಆಪತ್ತಿಗೋ ಮದುವೆಯಂಥ ದೊಡ್ಡ ಖರ್ಚಿಗೋ ಇರಲಿ; ಹುಡುಗರು ನೀವು ನಿತ್ಯಗಟ್ಟಳೆಗೆ ಖರ್ಚುಮಾಡಿಬಿಟ್ಟೀರಿ ಎಂದು ಹಾಗೆ ಹೇಳಿದೆನಪ್ಪ (ಮಹಾಗ. ೨೮೪). **ನಿತ್ಯಕಟ್ಟಲೆ:** ೧. ಅವರೆಲ್ಲರೂ ರತ್ನಮಯವಾದ ತಮ್ಮ ಬಿಡಾರಗಳಿಗೆ ಹೋಗಿ ವ್ಯಾಯಾಮ ಮುಂತಾದ ನಿತ್ಯಕಟ್ಟಲೆಯ ಕೆಲಸ ಮುಗಿಸಿಕೊಂಡು . . . ಅಂದಿನ ರಾತ್ರಿಯನ್ನು ಕಳೆದರು (ಪಚಭಾ. ೯೧). ೨. ಪ್ರತಿನಿತ್ಯವೂ ದೇವಸ್ಥಾನದಲ್ಲಿ ಮಾಡುವ ನೈವೇದ್ಯದ ಏರ್ಪಾಟು: ಸಾಂಪ್ರದಾಯಿಕ ದೇವಾಲಯಗಳಲ್ಲಿ ಈಗಲೂ ಅವೆಲ್ಲ ಸೇವೆ–ನಿತ್ಯಕಟ್ಟಲೆ ಉತ್ಸವಾದಿಗಳು ನಡೆಯುತ್ತಿರುವುದರಿಂದ, ಅವುಗಳನ್ನು ಪ್ರತ್ಯಕ್ಷವಾಗಿ ಈಗಲೂ ನೋಡಬಹುದಾಗಿದೆ (ಕರ್ನಾಜ. ೧೭೪). **ನಿತ್ಯಗಟ್ಟಲೆ:** ೧. ಹೆಂಗಸರು ತಮ್ಮ ಮನೆಯ ಮುಂದಿನ ನೀರಿನಲ್ಲಿಯೇ ಪಾತ್ರೆತೊಳೆಯುವುದು ಮೊದಲಾದ ನಿತ್ಯಗಟ್ಟಲೆಯ ಕೆಲಸಗಳನ್ನು ಮಾಡಿಕೊಳ್ಳುತ್ತಾರೆ (ನಿಬಂಧ. II, ೧೩೫); ಬರುವ ಚಿಲ್ಲರೆ ಹಣವು ನಿತ್ಯಗಟ್ಟಲೆಯ ಚಿಕ್ಕಪುಟ್ಟ ಖರ್ಚುಗಳಿಗೆ ಕರಗಿ ಹೋಗಿಬಿಡುತ್ತಿತ್ತು (ಚಿತಸ. ೧೨೪). **ನಿತ್ಯಗಟ್ಲೆ:** ೧. ನಿತ್ಯಗಟ್ಲೆ ಸಂಚಾರ ಮಾಡುವ ಕ್ರಮ–ನಾಲ್ಕು ಗಳಿಗೆ, ಎಂಟು ಗಳಿಗೆ, ಎರಡು ಗಳಿಗೆ, ಈ ಪ್ರಕಾರದಲ್ಲಿ ಉದಯ ಕಾಲದಲ್ಲಿ ಸಂಚಾರಮಾಡುವುದು. ಹೀಗೆ ಮಾಡಿದಲ್ಲಿ ಶರೀರವು ಲಘುವಾಗುವುದು; ಕೈಕಾಲಿನಲ್ಲಿ ತ್ರಾಣಹುಟ್ಟುವುದು (ಸಕವೈ. ೨೯). ೨. ಆಯಾ ದೇವಸ್ಥಾನದ ತಾರತಮ್ಯವಿದ್ದಂತೆ ನಿತ್ಯಗಟ್ಲೆ ಪಡಿತರ ದೀಪಾರಾಧನೆ ಬ್ರಹ್ಮೋತ್ಸವ ಮುಂತಾದ ಅನೇಕ ಉತ್ಸವಗಳಿಗೂ . . . ಅನೇಕ ವಸ್ತ್ರಾಭರಣ ಪಾತ್ರೆಗಳನ್ನು ಕೊಟ್ಟರು (ಜಾಮವಂ. I, ೪೩). [ನಿತ್ಯ₁ + ಕಟ್ಟಳೆ₁]

**ನಿತ್ಯಗಟ್ಟಿ** 'ನಿತ್ಯಗಟ್ಟಳೆ' ನೋ.

**ನಿತ್ಯಜೀವನ** (ನಾ). ದೈನಂದಿನ ಜೀವನ ; ಪ್ರತಿನಿತ್ಯವೂ ನಡೆಸುವ ಬಾಳು,— ಬದುಕು : ನಿತ್ಯಜೀವನದಲ್ಲಿ ಅಭಿವ್ಯಕ್ತವಾಗುವ ಸಚ್ಚಿದಾನಂದಸ್ವರೂಪವನ್ನರಿಯಬೇಕೆಂಬುದೇ ಭಾರತೀಯ ಕಲಾವಿದರ ಮಹೋದ್ದೇಶ (ಭಾರದ. ೫೮೧). [ನಿತ್ಯ$_1$ + ಜೀವನ]

**ನಿತ್ಯಜೀವಿ** (ನಾ). ೧. ಚಿರಂಜೀವಿ; ಚಿರಾಯು. ೨. ಅಶ್ವತ್ಥಾಮ, ಬಲಿ, ವ್ಯಾಸ, ಹನುಮಂತ, ವಿಭೀಷಣ, ಕೃಪ ಮತ್ತು ಪರಶುರಾಮ ಎಂಬ ಸಾವಿಲ್ಲವೆಂದು ನಂಬಲಾದ ಏಳು ಜನ ಪುರಾಣಪ್ರಸಿದ್ಧವ್ಯಕ್ತಿಗಳು. 'ಚಿರಂಜೀವಿ' ಪರಾ. [ನಿತ್ಯ$_2$ + ಜೀವಿ$_1$]

**ನಿತ್ಯಜ್ವರ** (ನಾ). ಪ್ರತಿನಿತ್ಯವೂ ಬರುವ ಜ್ವರ; ದೈನಂದಿನ ಜ್ವರ: ಇದನ್ನೇ ಗೋಮೂತ್ರದಿಂದೇಳುದಿನ ಕೆಗೆದುಕೊಳ್ಳಲು ನಿತ್ಯಜ್ವರಂ ಮಾಣ್ಗುಂ (ಸಕವ್ಯ. ೧೧೩). [ನಿತ್ಯ$_1$ + ಜ್ವರ]

**ನಿತ್ಯತತ್ತ್ವ** (ನಾ). ಶಾಶ್ವತವಾದ ತತ್ತ್ವ ; ಪರಮಾತ್ಮತತ್ತ್ವ : ನೀತಿಜ್ಞಂ ನಿಜನಿತ್ಯತತ್ತ್ವನಿಪುಣಂ ನಿಷ್ಠಾಪರಂ . . . ರಾಜೇಂದ್ರ ಚಕ್ರೇಶ್ವರಂ (ಹವ್ಯಾರ. ೧-೨೬). [ನಿತ್ಯ$_2$ + ತತ್ತ್ವ]

**ನಿತ್ಯತತ್ತ್ವವಾದ** (ನಾ). ಶಾಶ್ವತವಾದ ತತ್ತ್ವವು ಉಂಟೆಂಬ ವಾದ : ಬುದ್ಧಮತದಲ್ಲಿ ನಿತ್ಯತತ್ತ್ವವಾದವೂ ಒಂದಿರಬಹುದು (ಹಿಂದಸಾ. ೪೫). [ನಿತ್ಯತತ್ತ್ವ + ವಾದ$_2$]

**ನಿತ್ಯತಾಪ್ರತಿಭೆ** (ನಾ). ಸದಾಕಾಲವಿರುವ ಪ್ರತಿಭೆ; ಸದಾ ಎಚ್ಚರಗೊಂಡಿರುವ ಪ್ರತಿಭಾಶಕ್ತಿ : ವಾಲ್ಮೀಕಿ . . . ಧ್ಯಾನದೊಳ್ ಮುಳುಗಿರಲ್, ಮಿಂಚಿತಯ್ ಕಾವ್ಯದಿವ್ಯಪ್ರಜ್ಞೆ, ನವನವೋನ್ಮೇಷಶಾಲಿನಿ, ನಿತ್ಯತಾಪ್ರತಿಭೆ (ಶ್ರೀರಾಮಾ. ೨-೫೦). [ಸಂ. ನಿತ್ಯತಾಪ್ರತಿಭಾ]

**ನಿತ್ಯತೃಪ್ತ** (ನಾ). ೧. ಯಾವಾಗಲೂ ತುಷ್ಟಿಯನ್ನು ಹೊಂದಿರುವವನು ; ಸದಾ ತೃಪ್ತನಾಗಿರುವವನು : ಅವನು ನಿತ್ಯತೃಪ್ತ. ಯಾವ ಚಿಂತೆಯನ್ನೂ ಇಟ್ಟುಕೊಂಡಿಲ್ಲ (ರೂಢಿ). ೨. ದೇವರು ; ಪರಮಾತ್ಮ : ನಿತ್ಯತೃಪ್ತಂಗೆ ನೈವೇದ್ಯದ ಹಂಗೇತಕ್ಕೆ (ಮಹಾದೇ. ಬ. ೧೩೩-೩೦೪) ; ಅರ್ಪಿತವ ಮಾಡುವಡೆ ನೀನು ನಿತ್ಯತೃಪ್ತನು (ಅವಚಂ. ೯೫-೪೨೪) ; ಭೂವಂದಿತಂ ನಿತ್ಯತೃಪ್ತಂ ಸಮಸ್ತಮುಖಜೀವಾನುಕಂಪಿಯೆಂದೆನಿಸಿ ರಾಜಿಪ ಸುಕೃತಭಾವಿ ಹಂಪೆಯ ಶಂಕರಪ್ರಭು ಮದೀಯ ಮತಿಗೀಗೆ ಪ್ರಸನ್ನತೆಯನು (ಹಕಶಾ. ೧-೯) ; ನಿತ್ಯತೃಪ್ತನಿಗೆ ಹಸಿವಿನ ಭಯ ಉಂಟೇ (ಸಿದ್ಧೇವ. ೨೧೭-೬೮೩) ; ನಿಗಮಗೋಚರ ಬಂದ ನಿತ್ಯತೃಪ್ತನು ಬಂದ (ಪುರಂದ. ೧-೪೮-೬) ; ನಿತ್ಯತೃಪ್ತ ಸರ್ವಸಾರಭೋಕ್ತ ಪುರುಷೋತ್ತಮ . . . ಹರಿಗೆ ನಾನೋಪಚಾರದಿಂದ ಭಕ್ತಿವೆಗ್ಗಳವಾಗಿ ಮಜ್ಜನಾದಿಯ ಮಾಡಿ (ವಿವಾಕ್ಯ. ೫೯-೨೩). [ನಿತ್ಯ$_3$ + ತೃಪ್ತ]

**ನಿತ್ಯತೃಪ್ತತ್ವ** (ನಾ). ಸದಾಕಾಲ ತೃಪ್ತಿಯಿಂದಿರುವಿಕೆ: ಸರ್ವಜ್ಞತ್ವ, ನಿತ್ಯತೃಪ್ತತ್ವ . . . ಅನಂತಶಕ್ತಿತ್ವಗಳೆಂಬ ಷಡ್ಗುಣೈಶ್ವರ್ಯಸಂಪನ್ನನಾದ ಪರಮೇಶ್ವರನು . . . ಭಕ್ತಾನುಗ್ರಹ ಮಾಡುತ್ತಾನೆಂಬುದು ಶೈವಾಗಮದ ಸಿದ್ಧಾಂತ (ಭಾರದ. ೭೪). [ಸಂ.]

**ನಿತ್ಯತೃಪ್ತಿ** (ನಾ). ಯಾವಾಗಲೂ ಇರುವ ಆನಂದ; ನಿರಂತರವೂ ಇರುವ ತುಷ್ಟಿ,—ತೃಪ್ತಿ : ಕರದಿ ನಿರಹಂಕರದ ಪಾತ್ರೆಯ ಧರಿಸಿಯದರೊಳು ನಿತ್ಯತೃಪ್ತಿಯ ಭರಿತ ಸಿದ್ಧರಸಾಮೃತವ ಸೇವಿಸುತಲದರಿಂದೆ ಪರಮ ಸೌಖ್ಯಮೆನಿಪ್ಪ ತೃಪ್ತಿಯ ವರಿಸಿ (ಗಗತಾ. ೧೬-೨೧) ; ಮನೆಯವರೆಲ್ಲ ಆರೋಗ್ಯ, ನಿತ್ಯತೃಪ್ತಿ . . . ಇವೆಲ್ಲವನ್ನೂ ಸುಸೂತ್ರವಾಗಿ ಸಾಗಿಸುವುದು ಹೆಚ್ಚಾಗಿ ಹೆಣ್ಣುಮಕ್ಕಳ ಸಂಸ್ಕೃತಿ, ಚಾತುರ್ಯ, ಕಾರ್ಯದಕ್ಷತೆ ಇವನ್ನು ಅವಲಂಬಿಸಿರುವುದು ಸತ್ಯ (ಗೃಹವಿ. ೧೫೨). [ನಿತ್ಯ$_3$ + ತೃಪ್ತಿ]

**ನಿತ್ಯತೆ** (ನಾ). ೧. ಶಾಶ್ವತವಾಗಿರುವಿಕೆ ; ಸ್ಥಿರತೆ ; ಅನಂತತೆ : ಮನುಷ್ಯ ಕೀಟಜನ್ಮಪನಿರದೆಯ್ದಿ ಬಾಳುವರ ನಿತ್ಯತೆಯೇನಿದಟಿಯೊಳ್ ಕೃಪಾಪ್ರಸಾದವನಿರದಿತ್ತು ಕಾಯಿ ಪರಮಪ್ರಭುವೇ ಮಹದೈಶ್ವರೀಶ್ವರಾ (ಶತಕ. ೧೮೮-೭೦) ; ಎಲ್ಲ ಇದೆ, ಎಲ್ಲ ಇದೆ ನಿತ್ಯತೆಯ ಗಬ್ಬಪಟಿ ; ಮುಂದೆಯದು ತೋರುವುದು ಬಿಡುಗಡೆಯ ಹಬ್ಬದಟಿ ! (ಪಾಂಚಜ. ೬-೨). ೨. ಚಿರಂಜೀವಿತ್ವ. [ಸಂ. ನಿತ್ಯತಾ]

**ನಿತ್ಯತ್ವ** (ನಾ). ೧. = ನಿತ್ಯತೆ ೧ : ಶಿವನ ಸರ್ವಕರ್ತೃತ್ವ, ಸರ್ವಜ್ಞತ್ವ, ಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವ ಎಂಬ ಶಕ್ತಿಗಳು ಸಂಕೋಚವಾಗಿ ಕ್ರಮೇಣ ಪಂಚಕಂಚುಕಗಳಾಗುತ್ತವೆ (ಭಾರದ. ೨೧೪) ; ಸಮಸ್ತ ಜಗತ್ಕಾರಣವಾದ ಈ ಬ್ರಹ್ಮಕ್ಕೆ ವ್ಯಾಪಿತ್ವ, ನಿತ್ಯತ್ವ . . . ಎಂಬೀ ಜಾತಿಯ ಧರ್ಮಗಳನ್ನು ಹೇಳಿದಂತೆಯೇ ಆಗಿರುತ್ತದೆ (ಬ್ರಹ್ಮಭಾ. I, ೨೪೯); ಮೋಕ್ಷದಲ್ಲಿ ಜೀವಾತ್ಮನು ತನ್ನ ಸ್ವಾಭಾವಿಕಸ್ಥಿತಿಯಲ್ಲಿರುವನು. ಅದೆಂತೆಂದರೆ ವಿಭುತ್ವ ದ್ರವ್ಯತ್ವ ನಿತ್ಯತ್ವ . . . ಮೊದಲಾದ ಧರ್ಮಗಳೊಡನೆ ಯಾಪತ್ಕಾಲ ನಿರ್ದುಃಖಿಯಾಗಿರುತ್ತಾನೆ (ಹಿಂದಸಾ. ೧೨೪). ೨. ಮೋಕ್ಷಪದವಿ: ನಿನ್ನಂಥ ಬಗೆವ ತಾಯಿಂಗಳಿರುತಿರಲ್ ವ್ಯಾಧಿಗಳವೇಗೆಯ್ದಪವೆನುತ್ತವನಿಗೆ ಮೆಚ್ಚಿಯುಲಮ್ಮವ್ವೆಗಂ ನಿತ್ಯತ್ವಮಂ ಕೊಟ್ಟ (ಬಸಪು. ೧೫-೩೬) ; ಚಿಪ್ಪಳಿದು ಮುತ್ತು ಬೆರಸಲಾಗಿ ನಿತ್ಯತ್ವ ಪದವಾಯಿತ್ತೆಂಬೆನು (ಸಿದ್ಧೇವ. ೧೯೬-೫೯೭). ೩. [ವ್ಯಾಕ] ಅವಿಕಲ್ಪವಾಗಿರುವಿಕೆ ; ಅಗತ್ಯ ; ಕಡ್ಡಾಯವಾಗಿರುವಿಕೆ : ಆಕಾರಾಂತ ನಪುಂಸಕಲಿಂಗದ ಏಕವಚನದಲ್ಲಿ ದ್ವಿತ್ವದ ನಿತ್ಯತ್ವಕ್ಕೆ ಹೆಚ್ಚಿನ ಬಲವು ಹೊಸಗನ್ನಡದಲ್ಲಿದೆ (ಸಂಶೋಧ. ೬೧). [ಸಂ.]

**ನಿತ್ಯದರಿದ್ರ** (ನಾ). ಯಾವಾಗಲೂ ದರಿದ್ರನಾಗಿರುವವನು ; ದಟ್ಟದರಿದ್ರ : ಜೋತಿಷ್ಯರು ನಿತ್ಯದರಿದ್ರರಾಗಿ ತಪೋಬಲವಿಲ್ಲದೆ . . . ಭ್ರಾಂತರಾಗಲೆಂದು . . . ಶಾಪವಂ ಕೊಡಲು (ವಿವೇಕ. ೨೭೧); ನಿತ್ಯದರಿದ್ರನಿಗೆ ನಿಶ್ಚಿಂತೆ (ಗಾದೆ). [ನಿತ್ಯ$_3$ + ದರಿದ್ರ]

**ನಿತ್ಯದರಿದ್ರತನ** (ನಾ). ಯಾವಾಗಲೂ ಬಡತನದಿಂದ ಕೂಡಿರುವುದು ; ಬಹಳ ದಾರಿದ್ರ್ಯ : ತನ್ನ ನಿತ್ಯದರಿದ್ರತನಕ್ಕೆ ಮರಮರ ಮರುಗಿದಳು (ಜಯಂತ. ೮೯). [ನಿತ್ಯದರಿದ್ರ + -ತನ]

**ನಿತ್ಯದಾನ** (ನಾ). ದಿನವೂ ಮಾಡುವ ದಾನ : ಹೆತ್ತ ತಾಯಿತಂದೆಗಳ ಚಿತ್ತವ ನೋಯಿಸಿ ನಿತ್ಯದಾನವ ಮಾಡಿ ಫಲವೇನು (ಪುರಂದ. ೪-೧೯೬-೧). [ನಿತ್ಯ + ದಾನ]

**ನಿತ್ಯದೀಪಾವಳಿ** (ನಾ). ಪ್ರತಿನಿತ್ಯವೂ ಬೆಳಗುವಂಥ ದೀಪಗಳ ಸಮೂಹ : ದೀಪಗಳ ನಿತ್ಯದೀಪಾವಳಿಯ ಶಾರದಸಂಧ್ಯೆಯಲ್ಲಿ ಕರಗಿ ಕನಸಾಗಿತ್ತು ಆ ಹಕ್ಕಿ (ಶಿಲಾಲ. ೩೦-೪). [ನಿತ್ಯ$_1$ + ದೀಪಾವಳಿ]

**ನಿತ್ಯದುಃಖಿ** (ನಾ). ಯಾವಾಗಲೂ ದುಃಖದಿಂದ ಇರುವವನು ; ಸದಾದುಃಖಿ : ವಾಸ್ತವವಾಗಿ ನಿತ್ಯಸುಖಿಯಾದ ಜೀವನು ಮಲಸಂಬಂಧದಿಂದ ನಿತ್ಯದುಃಖಿಯಾಗಿ ನರಳುತ್ತಿರುವನು (ಶಕ್ತಿವಿ. ೬೨) ; ನಾಸ್ತಿಕನು ಇಹವೂ ಪರವೂ ಇಲ್ಲದೆ ನಿತ್ಯದುಃಖಿಯಾಗುವನು (ಹಿಂದಸಾ. ೨೭೨). [ನಿತ್ಯ$_3$ + ದುಃಖಿ]

**ನಿತ್ಯದೇಹ** (ನಾ). ಶಾಶ್ವತವಾದ ದೇಹ,—ಶರೀರ : ಕೊಲೆಗಡಿಕರಿಗೆ ನಿತ್ಯದೇಹವನೊಲಿದು ಕೊಟ್ಟರೆ ಲೇಸು (ಕುಪ್ಪಾಕ. ೬-೭). [ನಿತ್ಯ$_2$ + ದೇಹ]

**ನಿತ್ಯದ್ರವ್ಯ** (ನಾ). ದೈನಂದಿನವಾಗಿ ಗಳಿಸಿದ ವಸ್ತು,—ಪದಾರ್ಥ: ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ ದುರಾಸೆಯಿಂದ ಬಂದುದು ಅನರ್ಪಿತ ಇದು ಕಾರಣ ಸತ್ಯಶುದ್ಧಕಾಯಕದ ನಿತ್ಯದ್ರವ್ಯವಾದರೆ ಚಂದೇಶ್ವರಲಿಂಗಕ್ಕೆ ನೈವೇದ್ಯ ಸಂದಿತ್ತು ಕೇಳಯ್ಯ (ಶೂನ್ಯಸಂ. ೨೫೩-೧೫). [ನಿತ್ಯ$_1$ + ದ್ರವ್ಯ]

**ನಿತ್ಯನರಕ** (ನಾ). ಶಾಶ್ವತವಾದ ನರಕ : ಎರಡನೆಯವರು ನಿತ್ಯನರಕವೆಂಬ ತಮೋಲೋಕಪ್ರಾಪ್ತಿಗೆ ಸಾಧನವನ್ನು ಸಂಪಾದಿಸಿಕೊಂಡು ನಿತ್ಯದುಃಖಾನುಭವಕ್ಕೆ ಸಿದ್ಧರಾಗುವರು (ಹಿಂದಸಾ. ೨೭೫).
[ನಿತ್ಯ$_2$ + ನರಕ]

**ನಿತ್ಯನಾರಕಿ** (ನಾ). ೧. ನಿತ್ಯವೂ ನರಕಯಾತನೆಯನ್ನು ಅನುಭವಿಸುವವನು. ೨. [ದ್ವೈತ] ಶಾಶ್ವತವಾಗಿ ನರಕವನ್ನು ಅನುಭವಿಸುವವನು ; ಮೋಕ್ಷವನ್ನು ಪಡೆಯುವ ಅವಕಾಶವನ್ನೇ ಕಳೆದುಕೊಂಡಿರುವವನು ; ☞ ತಮೋಯೋಗ್ಯರಿಗೆ ಶ್ರೀಹರಿಯು ಕೊಡುವ ಕಠಿನದಂಡನೆಯೇ ನಿತ್ಯನರಕ. ಇಂಥ ನರಕದಲ್ಲಿರುವವನು ನಿತ್ಯನಾರಕಿ : ನಿತ್ಯನಾರಕಿಗಳೆಂದರೆ . . . ಭಗವದ್ದ್ವೇಷ ಪರಿಪಾಕದಿಂದ ನಿತ್ಯನರಕಲೋಕಪ್ರಾಪ್ತಿಯಾಗಿ, ನಿತ್ಯದುಃಖಾನುಭವದಲ್ಲಿರುವವರು (ಹಿಂದಸಾ. ೨೪೮).
[ಸಂ. ನಿತ್ಯನಾರಕಿನ್]

**ನಿತ್ಯನಿಗೋದ** (ನಾ). [ಜೈನ] ಶಾಶ್ವತವಾದ ನರಕಕ್ಕಿಂತ ಕೀಳಾದ ಸ್ಥಳ : ಆ ನರಕಭೂಮಿಗಳೇೞಱಿಂ ಕೆೞಗೇಕರಜ್ಜ್ವಂತರದೊಳನೇಕದುಃಖನಿಗೋದಮಪ್ಪ ನಿತ್ಯನಿಗೋದಂ ತಮೋಮಯಮಾಗಿರ್ಕುಂ (ಸುಕುಮಾ. ೧೧-೫೦ ಪ) ; ಆ ನರಕಂಗಳೇೞಱಿಂ ಕೆೞಗೆ ನಿತ್ಯನಿಗೋದಮೆಂಬ ನರಕಮಿರ್ಪುದು (ಮಲ್ಲಿಪು. ೧೩-೧೫೪). 'ನಿಗೋದ' ಪರಾ. [ಸಂ.]

**ನಿತ್ಯನಿಯಮ** (ನಾ). ದೈನಂದಿನ ನಿಯಮ ; ದಿನವೂ ಅನುಸರಿಸುವ ಪದ್ಧತಿ,—ವಿಧಿ : ಲೋಕಗುರುವುಂ ನಿಜಗುರುವುಮಪ್ಪ ಕ್ಷೇಮಂಕರಾವನೀಶ್ವರಂಗವನತೋತ್ತಮಾಂಗನಾಗಿ ಕಂಡು ನಿತ್ಯನಿಯಮದಿನೋಲಗಿಸುತ್ತುಮಿರ್ದು (ಶಾಂತಿಪು. ೮-೧೧೪ ಪ). [ನಿತ್ಯ$_1$ + ನಿಯಮ]

**ನಿತ್ಯನೂತನ** (ನಾ). ಸದಾ ಹೊಸದಾಗಿರುವುದು ; ಯಾವಾಗಲೂ ನವೀನವಾಗಿರುವುದು : ವಚನಸಾಹಿತ್ಯವು ನಿತ್ಯನೂತನವಾಗುತ್ತ ನಡೆದಿರುತ್ತದೆ (ಮಹಾಸಾ. ೧೩) ; ಗತಕಾಲದ ಇತಿಹಾಸಸಾಕ್ಷಿಯಾಗಿ ಪವಿತ್ರ ಪಂಪಾಕ್ಷೇತ್ರದಲ್ಲಿ ಹೇಮಕೂಟ ನಿಂತಿದ್ದರೆ . . . ಪುರಂದರದಾಸರೆಂಬ ಹೇಮಕೂಟ ಕನ್ನಡಸಾಹಿತ್ಯಕ್ಷೇತ್ರದಲ್ಲಿ ನಿಂತಿದೆ. ಎರಡೂ ಶಾಶ್ವತವೇ, ಆದರ್ಶವೇ, ನಿತ್ಯನೂತನವೇ ! (ಹೇಮಕೂ. ೧ ಮುನ್ನುಡಿ).
[ನಿತ್ಯ$_3$ + ನೂತನ]

**ನಿತ್ಯನೇಮ** (ನಾ). ದಿನಗಟ್ಟಳೆಯ ವಿಧಿ,—ನಿಯಮ ; ದಿನವೂ ಮಾಡುವ ಕಟ್ಟಳೆ : ಗುಣವಿರಹಿತನಾಗಿ ಚತುರ್ವಿಧಫಲ ಹೊಣೆತೆಯಾಗಿ ನಿತ್ಯನೇಮವೆಂದು ಮಾಡುವ ಭಕ್ತಿವಿದಂಗೆ ಮಾಡಿಯೂ ಮಾಡದಿದ್ದಡೇನು ದಗ್ಧಪಟದಂತೆ ನಿಃಕಳಂಕಮಲ್ಲಿಕಾರ್ಜುನಾ (ಮೋಳಿಮಾ. ೧೪-೫೦) ; ತನ್ನ ಲಿಂಗಕ್ಕೆ ಮಾಡುವ ನಿತ್ಯನೇಮವನು ತಾ ಮಾಡಬೇಕಲ್ಲದೆ ಬೇಱೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ (ಬಸವ. ೧೪೩) ; ನಿತ್ಯನೇಮಂಗಳ [ಪಾಠಾಂ. ನೇಮನಿತ್ಯಗಳ, ನಿತ್ಯನಿಯಮಂಗಳ] ಮಾಡುವಡೆ ನಿನಗನಂತ ನಾಮಂಗಳಾದವು ಗುಹೇಶ್ವರ (ಅವಚಂ. ೯೫-೪೨೪); ಸತ್ಯತಪ ನಿತ್ಯನೇಮಯುಕ್ತಿ ಶೈವಾಗಮಾವೇಶ ಲಿಂಗಾರ್ಚನಾಸಕ್ತಿಯಿಂ ಬೆಳೆದ ಪುಣ್ಯದೊಳರ್ಧಮಂ ಸುಧಾಭುಕ್ತರಱಿಯಲು ಕೊಡುವೆನಾ ಹರಿಶ್ಚಂದ್ರ ಹುಸಿಯಂ ನುಡಿಯದಿರಲಿ (ಹಚಕಾ. ೨-೨೭); ತಂದ ಘೃತವಂ ಚಿತ್ತಜಾರಿಗೆ ನಿತ್ಯನೇಮಂ ಪೊತ್ತು ಸಾವಿರದೀವಿಗೆಗಳಂ ಪೊತ್ತಿಸುತಮಿರಲು (ಬಸವು. ೫೦-೫೨). [ನಿತ್ಯ$_1$ + ನೇಮ$_1$]

**ನಿತ್ಯಪದ** (ನಾ). ಶಾಶ್ವತವಾದ ಪದವಿ ; ಮೋಕ್ಷ ; ಮುಕ್ತಿ : ನಿತ್ಯಸುಖ ಬಲುಹಿಂದಲ್ಲುಳಿದಾ ನಿತ್ಯಪದ ಬ್ರಹ್ಮಾದಿ ಭೋಗಗಳತ್ತ ಸಾರಿರದವನು ತುಷಮಾತ್ರದಿ ತೃಣೀಕರಿಸಿ (ಗಗತಾ. ೧೬-೨೨).
[ನಿತ್ಯ$_2$ + ಪದ$_2$]

**ನಿತ್ಯಪಯಣ** (ನಾ). ದಿನವೂ ಮಾಡುವ ಸಂಚಾರ,—ಪ್ರಯಾಣ: ನಿತ್ಯಪಯಣ ಬುತ್ತಿಗೇಡು (ಗಾದೆ). [ನಿತ್ಯ$_1$ + ಪಯಣ]

**ನಿತ್ಯಪರಿಪೂರ್ಣ** (ನಾ). ಪರಮಾತ್ಮ ; ದೇವರು : ನಾನು ತುರ್ಯ ತುರ್ಯಾತೀತವಪ್ಪ ಸಚ್ಚಿದಾನಂದನಿತ್ಯಪರಿಪೂರ್ಣವೇ ತನ್ನಿರವೆಂದು ತಿಳಿಯೆ (ಮಹಾದೇ. ಬ. ೧೮೨-೨೩೫) ; ಸಚ್ಚಿದಾನಂದ ನಿತ್ಯಪರಿಪೂರ್ಣ ನಿರಂಜನ ನೀನಾದ ಕಾರಣ ನಿನ್ನ ನಿಷ್ಕಲ ಶಿವತತ್ತ್ವವೆಂದೆನು ಕಾಣಾ (ಸಿದ್ಧೇಪ. ೯-೩೨) ; ಆ ಸಚ್ಚಿದಾನಂದನಿತ್ಯಪರಿಪೂರ್ಣವೆನಿಪಾ ಸಮರ್ಥ ಬ್ರಹ್ಮವೇ ಭಾವಿಸಲ್ (ವೀಶೈಪು. ೮-೧೧-೯).
[ನಿತ್ಯ$_2$ + ಪರಿಪೂರ್ಣ]

**ನಿತ್ಯಪರೀಕ್ಷಣ** (ನಾ). ದಿನವೂ ಮಾಡುವ ಪರೀಕ್ಷೆ : ನಿತ್ಯಪರೀಕ್ಷಣ ಸ್ಥಳವಿಪರ್ಯಯಪ್ರತಿಪತ್ತಿದಾನಂಗಳಿಂ ನಿಯೋಗಿಗಳಂ ಕಾಮದುಘರ್ ಮಾಡಿಯುಂ (ಚಂದ್ರಪು. ೨-೩೧). [ನಿತ್ಯ$_1$ + ಪರೀಕ್ಷಣ]

**ನಿತ್ಯಪುಣ್ಯ** (ನಾ). [ದ್ವೈತ] ಶಾಶ್ವತವಾದ ಪುಣ್ಯ ; ನಾಶರಹಿತವಾದ ಪುಣ್ಯ ; ☞ ಪುಣ್ಯ ಮತ್ತು ಪಾಪಗಳು ಅನುಭವಿಸುವುದರಿಂದ ನಾಶವಾಗುತ್ತವೆ. ಆದುದರಿಂದಲೇ ಪುಣ್ಯ ಮಾಡಿದರೂ ಜನ್ಮಾಂತರ ತಪ್ಪುವುದಿಲ್ಲವೆಂದು ಬೇರೆ ಸಿದ್ಧಾಂತಗಳು ಹೇಳುತ್ತವೆ. ದ್ವೈತಸಿದ್ಧಾಂತದಲ್ಲಿ ನಾಶವಾಗದಿರುವ ಪುಣ್ಯವುಂಟೆಂದೂ ಅದು ಬ್ರಹ್ಮಾದಿಗಳಲ್ಲಿರುವುದೆಂದೂ ಹೇಳಿದೆ. ಅದೇ ನಿತ್ಯಪುಣ್ಯ : ಧರ್ಮಾಧರ್ಮವೆಂಬ ಪುಣ್ಯಪಾಪಗಳಲ್ಲಿ ನಿತ್ಯಪುಣ್ಯವು ಬ್ರಹ್ಮಾದಿ ಸಜ್ಜೀವಸ್ವರೂಪವು (ಹಿಂದಸಾ. ೨೮೮).
[ನಿತ್ಯ$_2$ + ಪುಣ್ಯ]

**ನಿತ್ಯಪುಷ್ಪ** (ನಾ). ದಿನವೂ ಹೂವು ಬಿಡುವ ಒಂದು ಬಗೆಯ ಗಿಡ ಮತ್ತು ಅದರ ಹೂವು ; ನಿತ್ಯಮಲ್ಲಿಗೆ : ಅಂಗಳದಿ ಬೆಳೆಸಿದ್ದ ಬಂಗಾರಗೊಂಡೆಹೂ, ಸಚ್ಚೆ, ದಾಸಾಳ, ಕರಿತುಳಸಿ, ಬಿಳಿನಿತ್ಯಪುಷ್ಪ ಎಲ್ಲ ದಿಕ್ಪಾಲರು (ನಸ್ಯಧ್ವ. ೫-೨೫). [ನಿತ್ಯ$_1$ + ಪುಷ್ಪ]

**ನಿತ್ಯಪೂಜೆ** (ನಾ). ಪ್ರತಿದಿನವೂ ಮಾಡುವ ಅರ್ಚನೆ,—ಸೇವೆ,—ಆರಾಧನೆ : ಆದಿತ್ಯಬಿಂಬದರ್ಹದ್ಭಟ್ಟಾರಕಂಗೆ ಶಾಸ್ತ್ರೋಕ್ತಕ್ರಮದಿಂ ನಿತ್ಯಪೂಜೆಯುಮಂ ಅಷ್ಟಾಹ್ನಿಕಮುಮಂ . . . ಮಾಡುತ್ತುಂ (ಚಾವುಂಪು. ೩೭೩). [ನಿತ್ಯ$_1$ + ಪೂಜೆ]

**ನಿತ್ಯಪ್ರಯಾಣ** (ನಾ). = ನಿತ್ಯಪಯಣ : ದಕ್ಷಿಣಾಭಿಮುಖನಾಗಿ ನಿತ್ಯಪ್ರಯಾಣಂಗಳಿಂ ಬಂದು (ಆದಿಪು. ೧೩-೭೭ ಪ).
[ನಿತ್ಯ$_1$ + ಪ್ರಯಾಣ]

**ನಿತ್ಯಪ್ರಲಯ** (ನಾ). ೧. ಪ್ರತಿದಿನವೂ ಉಂಟಾಗುವ ಪ್ರಳಯ. ೨. ನಿದ್ದೆ ; ನಿದ್ರೆ : ಪ್ರತಿದಿವಸದಲ್ಲೂ ಪ್ರಾಣಿಗಳಿಗೆ ಬರುವ ಗಾಢನಿದ್ರೆಯೆಂಬ ಸುಷುಪ್ತ್ಯವಸ್ಥೆಯೇ ನಿತ್ಯಪ್ರಲಯ (ಹಿಂದಸಾ. ೧೯೭) ; ಸುಷುಪ್ತಿಯು ನಿತ್ಯಪ್ರಲಯ ಎನ್ನಿಸುವುದು (ಭಾತತ್ತ್ವ. ೩೧೩).
[ನಿತ್ಯ$_1$ + ಪ್ರಲಯ]

**ನಿತ್ಯಪ್ರವರ್ತಿತ** (ಗು). ದಿನವೂ ನಡೆಯುವ : ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸಹಸ್ರಫಳಭೋಗಭಾಗಿನಿ ನಿತ್ಯಪ್ರವರ್ತ್ತಿತ ದಯದಾನಧರ್ಮೋದ್ಯೋಗಿನಿ (ಸೌಇಇ. XX, ೪೬-೧೧ ; 1072).
[ನಿತ್ಯ$_1$ + ಪ್ರವರ್ತಿತ]

**ನಿತ್ಯಪ್ರಸಾದಿ** (ನಾ). = ನಿಚ್ಚಪ್ರಸಾದಿ : ಅನಿತ್ಯವಿಲ್ಲದ ನಿತ್ಯಪ್ರಸಾದಿ . . . ಕೂಡಲಸಂಗಮದೇವರಲ್ಲಿ ತಾನೇ ಪ್ರಸಾದಿ (ಬಸವ. ೯೪೨).
[ನಿತ್ಯ$_1$ + ಪ್ರಸಾದಿ]

**ನಿತ್ಯಬಿಂದು** (ನಾ). ೧. [ವ್ಯಾಕ] ಕಡ್ಡಾಯವಾಗಿ ಬರುವ ಅನುಸ್ವಾರ. ೨. ಯಾವಾಗಲೂ ಅನುಸ್ವಾರ ಸಹಿತವಾಗಿಯೇ

ಇರುವ ಶಬ್ದ : ಕೆಲವು ಪದಂಗಳ್ ಸ್ವಭಾವದಿಂ ನಿತ್ಯಬಿಂದುಗಳ್ (ಶಮದ. ೩೬ ವೃತ್ತಿ); ನಿತ್ಯಬಿಂದುಗೆ—ಬೆಡಂಗು, ಕಡಂಗು, ಅಡಂಗು . . . ಕರಂಡಗೆ, ತಂದಲ್ (ಶಮದ. ೩೬ ಪ್ರಯೋ). 'ನಿಜಬಿಂದು' ಪರಾ.
[ನಿತ್ಯ$_2$ + ಬಿಂದು]

**ನಿತ್ಯಬ್ರಹ್ಮಚಾರಿ** (ನಾ). ಬ್ರಹ್ಮಚರ್ಯವ್ರತವನ್ನು ಶಾಶ್ವತವಾಗಿ ಪಾಲಿಸುವವನು: ಪರ್ವತಗಳೂ ಗಿಡಮರಗಳೂ ಸಿದ್ಧಿಯನ್ನು ಪಡೆದಾವು! ಏಕೆಂದರೆ ಅವು ನಿತ್ಯಸಂನ್ಯಾಸಿಗಳು, ನಿತ್ಯಬ್ರಹ್ಮಚಾರಿಗಳು(ಪಚಭಾ. ೩೨೯).
[ನಿತ್ಯ$_3$ + ಬ್ರಹ್ಮಚಾರಿ]

**ನಿತ್ಯಮಲ್ಲಿಗೆ** (ನಾ). = ನಿತ್ಯಪುಷ್ಪ : ಮನೆಯ ಮುಂದಿರುವ ನಿತ್ಯ ಮಲ್ಲಿಗೆಯ ಬಳ್ಳಿಯ ತುಂಬಾ ಹೂವುಗಳು ಅರಳಿವೆ (ರೂಢಿ).
[ನಿತ್ಯ$_1$ + ಮಲ್ಲಿಗೆ]

**ನಿತ್ಯಮಹ** (ನಾ). ದಿನವೂ ನಡೆಯುವ ಪೂಜೆ; ಪ್ರತಿದಿನದ ಪೂಜೆ: ಮುನಿಜನಪೂಜಾನ್ನದಾನಾದಿ ಕರಣಜಿನಗೃಹಜನಸತತೋಪನೀಯಮಾನ ಪಾದ್ಯಗಂಧಾಕ್ಷತಕುಸುಮಚರು ಧೂಪದೀಪಫಲಾದ್ಯರ್ಚನಾತ್ಮಕಮಪ್ಪ ನಿತ್ಯಮಹಮುಂ (ಆದಿಪು. ೧೫-೧೩ ವ) ; ನಿತ್ಯ(ಮಹ)ಮೆಂಬುದು ನಿಚ್ಚಂ ಯಥಾಶಕ್ತಿಯಿಂ ಜಿನಗೃಹಂಗಳ್ಗೆ ತನ್ನ ಮನೆಯಿಂ ಗಂಧಪುಷ್ಪಾಕ್ಷತಾದಿಗಳನುಯ್ವುದುಂ . . . ಶಾಸನಂಗಳಂ ಬಿಡುವುದುಂ (ಚಾವುಂಪು. ೨೧೧); ಅಲ್ಲಿ ಯಥಾಶಕ್ತಿಯಿಂ ಸದಾ ಜಿನಗೃಹಕ್ಕೆ ನಿಜಗೃಹದಿಂ ಅಷ್ಟವಿಧಾರ್ಚನೆಯಂ ನಡೆಯಿಸುವುದು ಚೈತ್ಯಚೈತ್ಯಾಲಯಂಗಳಂ ಮಾಡಿಸಿ ಶಾಸನಪೂರ್ವಕದಿಂ ಗ್ರಾಮಕ್ಷೇತ್ರಾದಿಗಳಿಂ ಕುಡುವುದುಂ ಜಿನಪೂಜೆಯಂ ಮಾಳ್ಪುದುಂ ನಿತ್ಯಮಹವೆಂಬುದು (ತತ್ತ್ವಪ್ರ. ೨೮೭). [ನಿತ್ಯ$_1$ + ಮಹ]

**ನಿತ್ಯಮುಕ್ತ** (ನಾ). ೧. ಶಾಶ್ವತವಾಗಿ ಬಿಡುಗಡೆಯನ್ನು ಹೊಂದಿದವನು ; ಮೋಕ್ಷವನ್ನು ಪಡೆದವನು : ಮನ ಘನವಸ್ತುವಾದ ಬಳಿಕ ಮನವಚನಕಾಯ ಎಂಬ ತ್ರಿಕರಣಶುದ್ಧಾತ್ಮನೆಂಬೆ ನಿತ್ಯಮುಕ್ತನೆಂಬೆ (ಸಿದ್ಧೇಪ. ೨೧೫-೬೭೩). ೨. ಪರಮಾತ್ಮ ; ದೇವರು : ಭ್ರಾಂತಿಗಳು ಕೆಡಲಾತನೆಂದುವುಂ ತಾನಪ್ಪನಿಂತುಜಿದೆ ನಿತ್ಯಮುಕ್ತನುಮಪ್ಪ ತದ್ಬ್ರಹ್ಮನೆಂತು ಜೀವನ್ಮುಕ್ತನೆನಿಪನೆಂಬುದು ನಿಜಂ ಶ್ಲೋಕದ್ವಯಂಗಳರ್ಥಂ (ವೀಶೈಪು. ೫-೧೬-೩೨) ; ಪುಣ್ಯಪಾಪಾನುಸಾರವಾಗಿ ಜೀವರಿಗೆ ಫಲವನ್ನೀಯತಕ್ಕವನಿವನು. ಇವನು ನಿತ್ಯಮುಕ್ತನು (ಭಾರದ. ೨೩೭).
[ನಿತ್ಯ$_3$ + ಮುಕ್ತ]

**ನಿತ್ಯಮುತ್ತೈದೆ, ನಿತ್ಯಮುತ್ತೈದೆ**(ನಾ). ೧. ದೀರ್ಘಸುಮಂಗಲಿ: (೬). ೨. (ಅಲಂ)ಸೂಳೆ ; ವೇಶ್ಯೆ : (೬). **ನಿತ್ಯಮುತ್ತೈದೆ :** ೧. ಚಿತ್ರೈಸಿದ ವ್ಯಾಸರಾಯ ಚಿತ್ತಜನಯ್ಯನ ಸಭೆಗೆ ನಿತ್ಯಮುತ್ತೈದೆಯರೆಲ್ಲ ಎತ್ತಿ ರತುನದಾರತಿಯ (ಪುರಂದ. ೧-೨೧೪ ಅನುಪಲ್ಲವಿ). 'ನಿತ್ಯಸುಮಂಗಲಿ' ಪರಾ. [ನಿತ್ಯ$_2$ + ಮುತ್ತೈದೆ]

**ನಿತ್ಯಮುತ್ತೈದೆ** 'ನಿತ್ಯಮುತ್ತೈದೆ' ನೋ.

**ನಿತ್ಯಮೈತ್ರಿ** (ನಾ). ಸ್ಥಿರವಾದ ಸ್ನೇಹ ; ಶಾಶ್ವತವಾದ ಗೆಳೆತನ : ವ್ಯಾಕರಣಪಟುಗಳಿಂತೀ ರೇಖೆಗಳಿಂತೆಂಬುವಿವನ ಜತೆಯೆರಡಡಿಗಳ್ ಸಾಕುಗಡ ನಿತ್ಯಮೈತ್ರಿಗೆ ಲೋಕಾವಳೀಗೀತಸಲ್ತೆ ಪ್ರಥಮಂ ಸುಜನಂ (ವಸ್ತುವಂ. ೭-೪೭). [ನಿತ್ಯ$_2$ + ಮೈತ್ರಿ]

**ನಿತ್ಯಯಾತ್ರೆ** (ನಾ). ೧. ದಿನವೂ ಭಿಕ್ಷೆಗಾಗಿ ಹೋಗುವುದು ; ನಿತ್ಯವೂ ಭಿಕ್ಷೆಬೇಡುವುದು: ನಿತ್ಯಯಾತ್ರೆ ಮಾಡುವಾಗ ಪುತ್ರರ ಮೇಲಿನ ಚಿಂತೆ ಎತ್ತ ನೋಡಿದರತ್ತ ಉದರದ ಚಿಂತೆ (ಪುರಂದ. ಧಾ. ೨-೭೫-೨); ರಮಣಾಚಾರ್ಯರು ಸತ್ತ ಮೇಲೆ ದಾಸರು . . . ವಾರಕ್ಕೊಮ್ಮೆ ನಿತ್ಯಯಾತ್ರೆಗೆ ಹೋಗುತ್ತಿದ್ದವರೂ ಕೂಡ ಈಚೆಗೆ ಅತ್ತ ಸುಳಿಯುವುದನ್ನು ನಿಲ್ಲಿಸಿಬಿಟ್ಟಿದ್ದರು (ರಾಗಿಣಿ. ೪೭). ೨. ಜೀವನೋಪಾಯ ; ಉದರ ನಿರ್ವಾಹ : ನನ್ನಂತಹ ಕಳ್ಳನಿಗೆ ಸುಖಜೀವನದ ಸುದ್ದಿಯೇತರದು ? ಈ ರೀತಿ ಚಿಂತಿಸುತ್ತಾ ಕುಳಿತರೆ ನಿತ್ಯಯಾತ್ರೆಯು ಸಾಗದು(ಚೆನ್ನಬೀ. ೨೪).
[ನಿತ್ಯ$_1$ + ಯಾತ್ರೆ]

**ನಿತ್ಯಯೌವನ** (ನಾ). ೧. ಯಾವಾಗಲೂ ಇರುವ ತಾರುಣ್ಯ. ೨. ಸದಾಕಾಲ ಯುವಕನಾಗಿರುವವನು ; ಮುಪ್ಪಿಲ್ಲದವನು : ನಿತ್ಯಯೌವನನುಮಾಗಿ ಮಣಿಚೂಳಾಮರೇಶ್ವರನಿರೆ (ಶಾಂತಿಪು. ೭-೭೭ ವ).
[ನಿತ್ಯ$_3$ + ಯೌವನ]

**ನಿತ್ಯರುದ್ರ** (ನಾ). ಶಾಶ್ವತನಾದ ಶಿವ : ಜಗದಲ್ಲಿ ಹೊತ್ತು ಹೊರುವ ಮಿಥ್ಯವಂತರಿಗೆ ತತ್ವದ ಸುದ್ದಿಯ ಹೇಳಿದರೆ ನಿತ್ಯರುದ್ರನಾದಡೂ ತಪ್ಪದು ನರಕವೆಂದೆ ನಿಃಕಳಂಕ ಮಲ್ಲಿಕಾರ್ಜುನಾ (ಮೋಳಿಪು. ೨೩-೮೯).
[ನಿತ್ಯ$_2$ + ರುದ್ರ]

**ನಿತ್ಯರೂಪ** (ನಾ). ಶಾಶ್ವತವಾದ ರೂಪವುಳ್ಳವನು ; ನಾಶವಿಲ್ಲದ ಆಕಾರವುಳ್ಳವನು : ಗಣನಿಕರದಿಂದ ವೈಭವವೆರಸಿ ಯಮುನ ಪಟ್ಟಣದತ್ತ ನಡೆದನಾ ನಿತ್ಯರೂಪಂ (ವೀಶೈಪು. ೨-೩-೪೪). [ನಿತ್ಯ$_3$ + ರೂಪ]

**ನಿತ್ಯರೋಗ** (ನಾ). ಯಾವಾಗಲೂ ಇರುವ ವ್ಯಾಧಿ ; ಸದಾ ಇರುವ ಕಾಯಿಲೆ : ಕುಲಹೀನಂ . . . ವಂಚಕಂ ನಿತ್ಯರೋಗಾಕುಳನೆಂದೀ ನಾಮನಾಮಾವಳಿಗೆ ನಿಳಯನಕ್ಕುಂ ವ್ರತವ್ರಾತಹೀನಂ (ಪದ್ಮರಾ. ೧೦-೩೧). [ನಿತ್ಯ$_3$ + ರೋಗ]

**ನಿತ್ಯರೋಗಿ** (ನಾ). ಯಾವಾಗಲೂ ರೋಗದಿಂದಿರುವ ವ್ಯಕ್ತಿ ; ಸದಾ ರೋಗಿ : ಅವರ ಹೆಂಡತಿ ನಿತ್ಯರೋಗಿ (ಸಂಸ್ಕಾರ. ೪೨) ; ನಿಷ್ಫಲವಾದ ಯಾವುದೋ ಪರಿಶೋಧನೆಯ ಸಂಬಂಧದಲ್ಲಿ ಇತರ ಉಪಕರಣಗಳ ಜೊತೆಗೆ ತನ್ನ ಶರೀರದ ರಕ್ತವನ್ನೇ ಯಥೇಚ್ಛವಾಗಿ ಬೆರಸಿ ಉಪಯೋಗಿಸಿದನೆಂದೂ ಅಂದಿನಿಂದ ಅವನು ನಿತ್ಯರೋಗಿಯಾದನೆಂದೂ ಜನರು ಹೇಳಿಕೊಳ್ಳುತ್ತಿದ್ದರು (ಯೋಧಪು. ೫೩). [ನಿತ್ಯ$_3$ + ರೋಗಿ]

**ನಿತ್ಯಲಂಪಟ** (ಗು). ಸದಾ ಆಸಕ್ತಿಯುಳ್ಳ ; ಯಾವಾಗಲೂ ಆಸೆಯುಳ್ಳ : ವಿಭ್ರಮಮತಿರೌದ್ರಮಾಯ್ತು ಸುಮನಸ್ಸುಮನೋಭರನಿತ್ಯಲಂಪಟಭ್ರಮರಮನೇಕಭೂತನಿಳಯಂ ಸಮರಂ ಕುಮರಂಕರಾಮನಾ (ಗದಾಯು. ೧೦-೩). [ನಿತ್ಯ$_3$ + ಲಂಪಟ]

**ನಿತ್ಯಲಿಂಗಾರ್ಚನೆ** (ನಾ). ಪ್ರತಿದಿನವೂ ಮಾಡುವ ಲಿಂಗಾರಾಧನೆ: ನಿತ್ಯಲಿಂಗಾರ್ಚನೆಯ ಮಾಡದವರ . . . ಎನಗೊಮ್ಮೆ ತೋರದಿರು (ಬಸವ. ೪೫೪). [ನಿತ್ಯ$_1$ + ಲಿಂಗಾರ್ಚನೆ]

**ನಿತ್ಯವಂತ** (ನಾ). ಶಾಶ್ವತವಾದವನು; ನಿತ್ಯನಾದವನು; ದೇವರು; ಪರಮಾತ್ಮ : ಮಾತುಮಾತಿನೊಳಗೇಕೆ ಅಜಾತನ ಸಂಮ್ಯಾಜ್ಯ ಆ ನಿತ್ಯವಂತನದೇತಜಿಕೊಳಗಿದ್ದಿಹನೆಂಬುದನಜಿಯದೆ ಉದರದ ಹುತ್ತಕ್ಕಾಗಿ ಮಹಾಸುಪದದಾಸೆಯ ಸಂಬಯಸಲೇಕೆ (ಮೋಳಿಪು. ೧೭೩-೬೫೦).
[ಸಂ. ನಿತ್ಯವತ್]

**ನಿತ್ಯವರದ** (ನಾ). ಸದಾಕಾಲ ವರ ಕೊಡುವವನು : ಶರಣಜನಪುಣ್ಯಫಲಂ ಭಕ್ತಜನಭಾಗ್ಯೋದಯಂ ಭೃತ್ಯಕುಲನಿತ್ಯವರದಂ . . . ತಿರುವಾರೂರ ಶಿವಾಲಯಕ್ಕೆ ಬಿಜಯಂಗೆಯ್ದಂ (ನಂಬಿರ. ೧೬-೯೪) ; ನಿತ್ಯವರದ ಪುರಂದರವಿಠಲನ ನೆನೆದರೆ ಸ್ಥಿರವಾದ ಮುಕುತಿಯಹುದು (ಪುರಂದ. ೪-೧೩೦-೩). [ನಿತ್ಯ$_3$ + ವರದ]

**ನಿತ್ಯವಸ್ತು** (ನಾ). (ಜೀವಾತ್ಮ ಮುಂತಾದ) ಶಾಶ್ವತವಾದ ವಸ್ತು, — ಪದಾರ್ಥ : ನಿತ್ಯವಸ್ತುಗಳು ಪರಮಾತ್ಮನಿಗೆ ನಿತ್ಯಪ್ರತಿಬಿಂಬಗಳಾಗಿಯೇ ಇರುವುವು (ಹಿಂದಸಾ. ೨೭೧). [ನಿತ್ಯ$_2$ + ವಸ್ತು]

**ನಿತ್ಯವಾದ** (ನಾ). [ತತ್ತ್ವಶಾ] ಶಬ್ದವನ್ನು ಉಚ್ಚರಿಸಿದಾಗ ಹೊರಡುವ ಧ್ವನಿಯು ನಿತ್ಯವಾದುದು ಎಂಬ ತತ್ವ ; ☞ ತಾರ್ಕಿಕರ್

ವರ್ಣಗಳು ಅನಿತ್ಯವೆನ್ನುತ್ತಾರೆ. ಅವರ ಸಿದ್ಧಾಂತದಂತೆ ನಿಘಂಟು ಎಂಬ ಪದದಲ್ಲಿ ಮೊದಲನೆಯ ವರ್ಣವಾದ 'ನಿ' ಎಂಬುದು ಉಚ್ಚರಿತವಾದ ಮರುಕ್ಷಣದಲ್ಲಿ ನಷ್ಟವಾಗುತ್ತದೆ. 'ಘಂ' ಎಂಬ ವರ್ಣೋಚ್ಚಾರಣೆಯ ಕಾಲದಲ್ಲಿ 'ನಿ' ಇರುವುದಿಲ್ಲ. 'ಟು' ಎಂದಾಗ 'ನಿ' ಮತ್ತು 'ಘಂ' ಇರುವುದಿಲ್ಲ. ಆಗ 'ನಿ ಘ ಂ ಟು' ಎಂಬ ಮೂರಕ್ಷರಗಳು ಸೇರಿ ಕೋಶವೆಂಬ ಅರ್ಥವನ್ನು ಹೇಗೆ ಕೊಡುತ್ತವೆ ಎಂಬ ಅನುಪಪತ್ತಿ ಸಹಜವಾಗಿ ಬರುತ್ತದೆ. ಅದಕ್ಕೆ ಅವರು ಮೂರು ನಾಲ್ಕು ಬಗೆಯ ಸಮಾಧಾನವನ್ನು ಹೇಳಿದ್ದಾರೆ. ಪೂರ್ವವರ್ಣವು ನಷ್ಟವಾದರೂ ಸಂಸ್ಕಾರವಿಶೇಷದಿಂದ ಉತ್ತರವರ್ಣದ ಜೊತೆಯಲ್ಲಿ ಅದು ಇದ್ದಂತೆಯೆ ಗ್ರಹಿಸಲ್ಪಟ್ಟು ಕೊನೆಯ ವರ್ಣದ ಉಚ್ಚಾರಣೆಯಾದ ಮೇಲೆ ಎಲ್ಲಾ ವರ್ಣಗಳೂ ಸೇರಿದಂತಾಗಿ ನಿಘಂಟು ಮೊದಲಾದ ಪದಗಳು ಗ್ರಹಿಸಲ್ಪಟ್ಟು ಅರ್ಥವನ್ನು ಕೊಡುತ್ತವೆ. ಆದುದರಿಂದ ವರ್ಣಗಳು ಅನಿತ್ಯವೇ ಎನ್ನುತ್ತಾರೆ. ವೈಯಾಕರಣರು ಈ ವಾದವನ್ನು ನಿರಾಕರಿಸಿ ವರ್ಣಗಳು ನಿತ್ಯವೆನ್ನುತ್ತಾರೆ. ಈ ನಿತ್ಯವರ್ಣಗಳೇ ಶಬ್ದಗಳನ್ನು (ಪದಗಳನ್ನು) ನಿರ್ಮಿಸುತ್ತವೆ. ಅವುಗಳಿಗೆ ಅರ್ಥದೊಂದಿಗೆ ಸಂಬಂಧವಿರುತ್ತದೆ. ಈ ಸಂಬಂಧಕ್ಕೆ ಶಕ್ತಿ ಎಂದು ಹೆಸರು. ಈ ವಾದವನ್ನೇ ಮೀಮಾಂಸಕರೂ ವೇದಾಂತಿಗಳೂ ಸಾಂಖ್ಯರೂ ಯೋಗಶಾಸ್ತ್ರಜ್ಞರೂ ಅಂಗೀಕರಿಸಿರುತ್ತಾರೆ. ಒಬ್ಬರು ಹೇಳುವ ಸಂಗೀತ, ಭಾಷಣಗಳನ್ನು ಯಂತ್ರಗಳ ಸಹಾಯದಿಂದ ಸೆರೆಹಿಡಿದು ಮರುಪ್ರಸಾರ ಮಾಡುವ ಟೇಪ್ ರಿಕಾರ್ಡುಗಳು ಶಬ್ದ ನಿತ್ಯವಾದವನ್ನು ದೃಢೀಕರಿಸುತ್ತವೆ.

ವೈಯಾಕರಣರು ಹೇಳಿರುವ ಸ್ಫೋಟವಾದದಲ್ಲಿ ಅನಿತ್ಯವಾದ, ನಿತ್ಯವಾದ ಎಂಬ ಎರಡು ಬಗೆಗಳಿವೆ. ಅನಿತ್ಯವಾದವೆಂದರೆ ಉತ್ಪತ್ತಿವಾದ. ಗಂಟೆಯನ್ನು ಬಾರಿಸಿದರೆ ಅನುರಣನರೂಪವಾದ ಧ್ವನಿಯು ಹೊರಡುವಂತೆ ವಕ್ತೃ ಒಂದು ಮಾತನ್ನು ಹೇಳಿದರೆ ಅದೂ ಇದೇ ರೀತಿ ತರಂಗಾಕಾರವಾಗಿ ಒಂದಾದ ಮೇಲೆ ಒಂದರಂತೆ ಧ್ವನಿಯು ಹೊರಟು ಶ್ರೋತೃವಿನ ಕಿವಿಯನ್ನು ಸೇರುತ್ತವೆ. ಮೊಟ್ಟಮೊದಲು ವಕ್ತೃವಿನ ಬಾಯಿಂದ ಹೊರಟ ಪದವು ಸ್ಫೋಟವೆಂಬ ಹೆಸರನ್ನು ಪಡೆಯುತ್ತದೆ. ಕಿವಿಯವರೆಗೂ ಒಂದು ಶಬ್ದದಿಂದ ಮತ್ತೊಂದು ಶಬ್ದವು ಹುಟ್ಟುತ್ತಾ ಬರುವ ಶಬ್ದಜನ್ಯಶಬ್ದಕ್ಕೆ ಧ್ವನಿಯೆಂದು ಹೆಸರು. ಅದರಿಂದಲೇ ಅರ್ಥವು ವ್ಯಂಗ್ಯವಾಗುತ್ತದೆ. ಈ ಪಕ್ಷದಲ್ಲಿ ವ್ಯಂಗ್ಯವಾದ ಅರ್ಥಕ್ಕೆ ಧ್ವನಿಯೆಂದು ಹೆಸರು. ನಿತ್ಯವಾದದಲ್ಲಿ ಕಿವಿಗೆ ಬೀಳುವ ಅಕ್ಷರಕ್ಕೆ ನಾದವೆಂದು ಹೆಸರು. ಇಲ್ಲಿ ಇಡೀ ಪದದ ಶ್ರವಣಾನಂತರ ಪೂರ್ವವರ್ಣಶ್ರವಣಗಳ ಸಂಸ್ಕಾರವೆಲ್ಲ ಕಡೆಯ ವರ್ಣಶ್ರವಣಸಮಕಾಲದಲ್ಲಿ ಕೂಡಿಕೊಂಡು ಅಖಂಡ ಸ್ಫೋಟವನ್ನು ಪ್ರಕಾಶಿಸುತ್ತದೆ. ಹೀಗೆ ಅಂತ್ಯವರ್ಣಸಂಸ್ಕಾರವನ್ನು ಅಪೇಕ್ಷಿಸಿ ಸ್ಫೋಟಕ್ಕೆ ಅಭಿವ್ಯಂಜಕವಾದ ವರ್ಣಗಳು (ಗೌಃ ಎಂಬಲ್ಲಿ ಗ+ಉ+ಃ) ಧ್ವನಿಯೆನಿಸುತ್ತವೆ. ಆಲಂಕಾರಿಕರ ಅನಿತ್ಯಪಕ್ಷದ ಆಧಾರದಿಂದ ವ್ಯಂಗ್ಯಾರ್ಥವನ್ನೂ ನಿತ್ಯಪಕ್ಷದ ಆಧಾರದಿಂದ ವ್ಯಂಜಕವಾದ ಶಬ್ದ ಮತ್ತು ಅರ್ಥಗಳನ್ನೂ ಧ್ವನಿಯೆಂದು ವ್ಯವಹರಿಸುತ್ತಾರೆ: ವೈಯಾಕರಣರ ಸ್ಫೋಟವಾದದಲ್ಲಿ i ಅನಿತ್ಯವಾದ (=ಉತ್ಪತ್ತಿವಾದ), ii ನಿತ್ಯವಾದ (=ಅಭಿವ್ಯಕ್ತಿವಾದ)ವೆಂಬ ಪಕ್ಷದ್ವಯಗಳಿವೆ (ಧ್ವನ್ಯಾಲೋ. ೩೮ ಅಡಿಟ). [ಸಂ.]

**ನಿತ್ಯವಿಧಿ** (ನಾ). ೧. =ನಿತ್ಯಕರ್ಮ ೧ : ಅವರು ಸಂಧ್ಯಾವಂದನೆ ಮೊದಲಾದ ನಿತ್ಯವಿಧಿಗಳನ್ನು ಪೂರೈಸಿಕೊಂಡು . . . ಬಂದರು (ಕಳಹು. ೯). ೨. =ನಿತ್ಯಕರ್ಮ ೨ : ನಿತ್ಯವಿಧಿಗೆಂದು ಅತ್ತಿತ್ತ ತಿರುಗುವಾಗಲೂ ದೊಡ್ಡಮ್ಮನ ಬೈಗಳು ಕಾದಿದೆಯೆಂದು ಯಶೋದೆಗೆ ಗೊತ್ತು (ವಾತ್ಸಲ್ಯ. ೨೮೯) ; ಇದು ನಮ್ಮ ಜನಗಳ ಜೀವನದ ಸಾಮಾನ್ಯ ನಿತ್ಯವಿಧಿ ಎನ್ನಬಹುದು (ಭಾರದ. ೬). 'ನಿತ್ಯನಿಯಮ' ಪರಾ.

[ನಿತ್ಯ$_1$ + ವಿಧಿ]

**ನಿತ್ಯವಿಭೂತಿ** (ನಾ). [ವಿಶಿಷ್ಟಾ] ವಿಷ್ಣುವಿನ ಶಾಶ್ವತವಾದ ಪ್ರಭಾವ,—ದಿವ್ಯ ಪರಿಣಾಮ : ಶ್ರೀವೈಷ್ಣವಮತವೂ ಪಾಂಚರಾತ್ರಾಗಮವೂ ಮೋಕ್ಷ(=ಪರಮಪದ)ವೂ ದೇವರ ನಿತ್ಯವಿಭೂತಿ ಎಂದೂ . . . ಹೇಳುವುವು (ಭಾರದ. ೩೬೪) ; ಈಶ್ವರಸಂಕಲ್ಪಾನುಸಾರ ಪ್ರಾಕೃತಮಂಡಲದಂತೆ ಬಹುವಿಧ ಸನ್ನಿವೇಶಗಳು ಸೃಷ್ಟಿಸಲ್ಪಡುವುವು. ಆದರೂ ನಿತ್ಯವಾದ ಸನ್ನಿವೇಶಗಳೇ ಅಧಿಕವಾಗಿರುವುದರಿಂದ ನಿತ್ಯವಿಭೂತಿಯೆಂದು ಪ್ರಸಿದ್ಧಿ (ಹಿಂದಸಾ. ೨೩೮). [ನಿತ್ಯ$_2$ + ವಿಭೂತಿ]

**ನಿತ್ಯವೇಷ** (ನಾ). (ಮುಖ್ಯವಾಗಿ ಯಕ್ಷಗಾನಾದಿಗಳಲ್ಲಿ) ಯಾವ ಸಂದರ್ಭದಲ್ಲಿಯೂ ಯಾವ ಕಥೆಯಲ್ಲಿಯೂ ವ್ಯತ್ಯಾಸವಾಗದ ಪಾತ್ರ,—ವೇಷ : ನಿತ್ಯ – ನೈಮಿತ್ತಿಕಗಳೆನ್ನಬಹುದಾದ ಈ ಭೇದಗಳನ್ನು ಹೀಗೆ ಕಾಣಿಸಬಹುದು :—ಪ್ರಸ್ತಾವನೆ—ನಿತ್ಯ (೧) ೧. ಕೋಡಂಗಿಗಳು. ೨. ಬಾಲಗೋಪಾಲರು, ನಿತ್ಯವೇಷ ಅಲ್ಲವೆ ಕಟ್ಟುವೇಷ (ಪಾರ್ತಿಸು. ೩೨). [ನಿತ್ಯ$_2$ + ವೇಷ]

**ನಿತ್ಯವ್ರತ** (ನಾ). = ನಿತ್ಯನೇಮ : ಅವಗ್ರಹಂ ನಿತ್ಯವ್ರತದೊಳ್ ಆಸವಾಸಕ್ತಿ ಮಧುವ್ರತದೊಳ್ (ಚಂದ್ರಪ್ರ. ೩-೯ವ) ; ಅತಿಥಿಸತ್ಕಾರವು ಪ್ರತಿಯೊಬ್ಬ ಮನುಷ್ಯನ ನಿತ್ಯವ್ರತವಾಗಿತ್ತು (ಭಾರದ. ೧೦೫).

[ನಿತ್ಯ$_1$ + ವ್ರತ]

**ನಿತ್ಯಶುದ್ಧ** (ನಾ). ಯಾವಾಗಲೂ ಪರಿಶುದ್ಧನಾಗಿರುವವನು : ನಿತ್ಯಶುದ್ಧಂಗೀ ದ್ವಿಜಾದಿ ಕುಲೋಕ್ತಸಂಸ್ಕಾರದಲಿ ಸಿದ್ಧಿಯದೆತ್ತಣದು (ನಿಭಾಗ. ೧೦-೭-೩೯) ; ತಾನು ನಿತ್ಯಶುದ್ಧನೆಂಬ ಜ್ಞಾನ ಮತ್ತು ಅದರ ಸಾಕ್ಷಾತ್ಕಾರವೇ . . . ಸಾಂಖ್ಯದರ್ಶನದ ಮುಖ್ಯಾಂಶಗಳು (ಭಾರದ. ೧೫೧). [ನಿತ್ಯ$_3$ + ಶುದ್ಧ]

**ನಿತ್ಯಸಂಕಟ** (ನಾ). ನಿರಂತರವಾದ ಸಂಕಟ ; ಎಡೆಬಿಡದ ಯಾತನೆ : ಕೈಯಲ್ಲಿ ಹರಿಯದ ರಾಜನನ್ನು ಆಶ್ರಯಿಸಿರುವುದರಿಂದ ನಮಗೆ ಈ ನಿತ್ಯಸಂಕಟ ಬಂದಿದೆ (ಪಚಭಾ. ೪೫). [ನಿತ್ಯ$_2$ + ಸಂಕಟ]

**ನಿತ್ಯಸಂಗತಿ** (ನಾ). ದಿನವೂ ನಡೆಯುವ ಸಂಗತಿ : ಇಂತಹ ಅನುಭವ ನಿತ್ಯಸಂಗತಿಯಾಗಿ ಸತ್ಯದ ಕಥೆಯಾಗಿ ನಾವು ಒಲಿದ ಮದುಮಕ್ಕಳು ಭಾವೈಕರಸರಾಗಿ ಸಂಸಾರಪಥದನು ಹೂಡಿದೆವು (ಇಂಚಾಪ. ೩೭-೭೫).

[ನಿತ್ಯ$_1$ + ಸಂಗತಿ]

**ನಿತ್ಯಸಂದಿ** (ನಾ). =ನಿತ್ಯಸಂಧಿ : ಶ್ರೀಚೆಲಪಿಳರಾಯರಿಗೆ ನಿತ್ಯಸಂದಿ ತೆಪ್ಪ ತಿರುನಾಳು ಚಟಿವು ತಿರುನಂದಾವನ ಮೊದಲಾದ ಕೈಂಕರ್ಯದ ಶಿಲವಾಗಿ ಸಹಿರಣ್ಯೋದಕ ದಾನ ಧಾರಾಪೂರ್ವಕವಾಗಿ ನಿಮಿಗೆ ಸಮರ್ಪಿಸಿದೆವಾಗಿ (ಎಕ. XIV, ಶ್ರೀರಂಗ. ೯೫-೨ ; 1535).

[ℙ ಇದು 'ನಿತ್ಯಸಂಧಿ' ಎಂಬುದರ ಅಪಲಿಖಿತ]

**ನಿತ್ಯಸಂಧಿ** (ನಾ). ದೇವರಿಗೆ ದಿನವೂ ಮಾಡುವ ಒಂದು ಬಗೆಯ ಸೇವೆ : ಕೆಟಿಯ ಕಟ್ಟಿಸಿ ಮಾಡಿದ ನಿತ್ಯಸಂಧಿ ॥ ೪ ಮಯಿಲನಳಿಯ ಸಂಮಂಧ ನಿತ್ಯಸಂಧಿ ಖಂ ೧/೪ (ಎಕ. XIV, ಶ್ರೀರಂಗ. ೯೫-೩ ; 1535) ; ℙ ಮೇಲುಕೋಟೆ ಶ್ರೀ ನಾರಾಯಣಸ್ವಾಮಿ ದೇವಸ್ಥಾನದ ಕೈಪಿಡಿಯ ೧೬೭ನೆಯ ಪುಟದಲ್ಲಿ ದೇವರಿಗೆ ಮಾಡ

ಬೇಕಾದ ದಿನವಹಿ ಸೇವೆಗಳನ್ನು ವಿವರಿಸುತ್ತ — "ಈ ಕಾಲದಲ್ಲಿ ಪ್ರಬಂಧಸೇವಾಕಾಲಕ್ಕೆ 'ಅರುಳಪ್ಪಾಡ'ನ್ನು ಪ್ರಸಾದಿಸುವುದಕ್ಕೆ ಅರ್ಚಕರು ಹೇಳುವುದು. ಅಧ್ಯಾಪಕರು 'ನಿತ್ಯಾನುಸಂಧಾನ' ಪ್ರಬಂಧವನ್ನು ಹೇಳುವುದು" ಎಂಬ ನಿರ್ದೇಶವಿದೆ. ಸಂಧಿ ಮತ್ತು ಸಂಧಾನಗಳು ಪರ್ಯಾಯಪದಗಳಾಗಿರುವುದರಿಂದ ಇಲ್ಲಿರುವ 'ನಿತ್ಯಸಂಧಿ' ಎಂಬ ಪದಕ್ಕೆ ದೇವರ ಸನ್ನಿಧಿಯಲ್ಲಿ ಪಠಿಸುವ ಒಂದು ನಿರ್ದಿಷ್ಟವಾದ ಪ್ರಬಂಧವೆಂದು ಹೇಳಲು ಅವಕಾಶವಿದೆ. [ನಿತ್ಯ$_1$ + ಸಂಧಿ]

**ನಿತ್ಯಸಂಧ್ಯಾಕರ್ಮ** (ನಾ). ದಿನವೂ ಮಾಡಬೇಕಾದ ಸಂಧ್ಯಾವಂದನೆಯೇ ಮೊದಲಾದ ವೈದಿಕಕಾರ್ಯ : ಮಾಧ್ಯಾಹ್ನಿಕಾದಿ ನಿತ್ಯಸಂಧ್ಯಾಕರ್ಮಂಗಳನ್ನು ನಿಯಮಪೂರ್ವಕವಾಗಿ ಮಾಡಿದವನಾಗಿ . . . ಭೋಜನ ಮಾಡಬೇಕೆಂದು ಬಲ್ಲವರ ಮತವು (ಸಕವೈ. ೪೯). [ನಿತ್ಯ$_1$ + ಸಂಧ್ಯಾಕರ್ಮ]

**ನಿತ್ಯಸಂನ್ಯಾಸಿ** (ನಾ). ನಿರಂತರವಾಗಿ ಸಂನ್ಯಾಸವ್ರತವನ್ನು ಪಾಲಿಸುವವನು : ಪರ್ವತಗಳೂ ಗಿಡಮರಗಳೂ ಸಿದ್ಧಿಯನ್ನು ಪಡೆದಾವು ! ಏಕೆಂದರೆ ಅವು ನಿತ್ಯಸಂನ್ಯಾಸಿಗಳು, ನಿತ್ಯಬ್ರಹ್ಮಚಾರಿಗಳು ; ಅವುಗಳಿಂದ ಯಾರಿಗೂ ಏನೂ ಬಾಧೆಯಿಲ್ಲ ! (ಪಚಭಾ. ೩೨೯). [ನಿತ್ಯ$_3$ + ಸಂನ್ಯಾಸಿ]

**ನಿತ್ಯಸಂಶಯ** (ನಾ). ಬಹುಕಾಲದ ಸಂಶಯ ; ಬೇರೂರಿದ ಸಂಶಯ : (Chronic-doubt. ಇಂಕಕಿ). [ನಿತ್ಯ$_2$ + ಸಂಶಯ]

**ನಿತ್ಯಸಂಸಾರ** (ನಾ). [ದ್ವೈತ] ಸುಖದುಃಖಗಳಿಂದ ತುಂಬಿರುವ ಜೀವನ, — ಬಾಳು : ನಿತ್ಯಸಂಸಾರವೆಂಬ ನಿತ್ಯಸುಖದುಃಖಮಿಶ್ರಾನುಭವಸ್ಥಾನಗಳಲ್ಲಿ ಸಾಧನಾನುಷ್ಠಾನದಿಂದ ಮಿಶ್ರಾನುಭವಕ್ಕೆ ಸಿದ್ಧರಾಗುವರು (ಹಿಂದಸಾ. ೨೭೫). 'ನಿತ್ಯಸಂಸಾರಿ' ಪರಾ. [ನಿತ್ಯ$_2$ + ಸಂಸಾರ]

**ನಿತ್ಯಸಂಸಾರಿ** (ನಾ). [ದ್ವೈತ] ಜೀವಾತ್ಮರುಗಳಲ್ಲಿ ಇರುವ ಮೂರು ಭೇದಗಳಲ್ಲಿ ಒಂದು ; ಸಂಸಾರದಲ್ಲೇ ತೊಳಲುವವನು; ಮುಕ್ತಿಯಿಲ್ಲದವನು : ಜೀವಾತ್ಮರಲ್ಲಿ ಉತ್ತಮ ಮಧ್ಯಮಾಧಮ ಭೇದದಿಂದ ಮುಕ್ತಿಯೋಗ್ಯರು, ತಮೋಯೋಗ್ಯರು, ನಿತ್ಯಸಂಸಾರಿಗಳೆಂದು ಭೇದವಿರುವುದು (ಹಿಂದಸಾ. ೨೭೪). [ಸಂ. ನಿತ್ಯಸಂಸಾರಿನ್]

**ನಿತ್ಯಸಭೆ** (ನಾ). ದಿನವೂ ನಡೆಯುವ ಸಭೆ : ನಾಯಕರು ನಿತ್ಯಸಭೆ, ನೈಮಿತ್ತಿಕ ಸಭೆ, ಯುದ್ಧಸಭೆ, ಶ್ರಾದ್ಧಸಭೆ ಮೊದಲಾದವುಗಳಲ್ಲಿ ಯಾವಾಗಲೂ ಓಡಾಡುತ್ತಿರುತ್ತಾರೆ (ಶಿಬಂಧ. II, ೨೦೧). [ನಿತ್ಯ$_1$ + ಸಭೆ]

**ನಿತ್ಯಸುಂದರ** (ನಾ). ಸದಾ ಚೆಲುವಿನಿಂದ ಕೂಡಿರುವವನು : ಸತ್ಯವನ್ನು ನಿತ್ಯಸ್ಮರಣೆಯಿಂದ ಆರಾಧಿಸುವವನು ನಿತ್ಯಸುಂದರನಾಗಿ ಶೋಭಿಸಬಲ್ಲನು (ಶಕ್ತಿವಿ. ೩). [ನಿತ್ಯ$_3$ + ಸುಂದರ]

**ನಿತ್ಯಸುಖ** (ನಾ). ಶಾಶ್ವತವಾದ ಸುಖ : ನಿತ್ಯಸುಖಮಪಾತ್ಮರೂಪಮನಿತ್ಯಸುಖಂ ಮೋಹರೂಪವೆಂಬ ವಿವೇಕಂ ಸತ್ಯಸ್ವರೂಪಮಪಡಿಸೊಳಗತ್ಯಂತಾನುಭವವಿಭವಮಕ್ಕೆಮಗರುಹಾ (ಸಂರಾಪಾ. ೬-೪೬) ; ಧರ್ಮಾರ್ಥಕಾಮಂಗಳಂ ಕ್ರಮದಿಂ ಪೆರ್ಚಿಸಿ ಪೆತ್ತು ನಿತ್ಯಸುಖಮಂ ಸತ್ಕೀರ್ತಿಯಂ ತಾಳ್ದು ರಾಜ್ಯಮನಾರಾಳ್ದರೊ ಪದ್ಮರಾಜನವೊಲುರ್ವೀಭಾಗದೊಳ್ ಭೂಭುಜರ್ (ಪುಷ್ಪವು. ೩-೨೧) ; ನಿತ್ಯಸುಖವಹ ಸಂಕರುಪದಾಂಘ್ರಿಯನು ನೆನೆ (ಶಿಭಾಗ. ೬-೧೦-೪೦). [ನಿತ್ಯ$_2$ + ಸುಖ]

**ನಿತ್ಯಸುಖಾನುಭವ** (ನಾ). ಶಾಶ್ವತವಾದ ಸುಖದ ಅನುಭವ : ಸಂಶಯವ ಕಳೆದು ನಿತ್ಯಸುಖಾನುಭವಪದದೊಳಗೆ ನಿಲಿಸಿದುದೆನ್ನ ಜನ್ಮದ ಫಲಸಮಗ್ರವೆನಲ್ಕೆ ಸಲೆ ಸಂಪನ್ನವಾಯ್ತು (ಶಿಭಾಗ. ೫-೮-೪೨). [ನಿತ್ಯಸುಖ + ಅನುಭವ]

**ನಿತ್ಯಸುಖಿ** (ನಾ). ಸದಾಸುಖಿ ; ಯಾವಾಗಲೂ ಸುಖದಿಂದ ಇರುವವನು : ವಾಸ್ತವವಾಗಿ ನಿತ್ಯಸುಖಿಯಾದ ಜೀವನು ಮಲಸಂಬಂಧದಿಂದ ನಿತ್ಯದುಃಖಿಯಾಗಿ ನರಳುತ್ತಿರುವನು (ಶಕ್ತಿವಿ. ೬೨). [ಸಂ. ನಿತ್ಯಸುಖಿನ್]

**ನಿತ್ಯಸುಮಂಗಲಿ** (ನಾ). ೧. ದೀರ್ಘಸುಮಂಗಲಿ ; ಮುತ್ತೈದೆ. ೨. (ಆಲಂ) ಸೂಳೆ ; ವೇಶ್ಯೆ : ಅಲಂಕರಿಸಿಕೊಂಡಿರುವ ರೀತಿ ನೋಡಿದರೆ ತಿಳಿಯುವುದಿಲ್ಲವೇನೋ ಗುಗ್ಗೂ ? ಅವಳು ನಿತ್ಯಸುಮಂಗಲಿ ಕಣೋ (ಹೂಹಣ್ಣು. ೧೧೯). [ನಿತ್ಯ$_2$ + ಸುಮಂಗಲಿ]

**ನಿತ್ಯಸೂರಿ** (ನಾ). ಜೀವನ್ಮುಕ್ತನಾದವನು ; ಮುಕ್ತಿಯನ್ನು ಹೊಂದಿದವನು : ಯಾವಾಗಲೂ ಸಂಸಾರವೆಂಬ ಪ್ರಕೃತಿಸಂಬಂಧವಿಲ್ಲದ ಅನಂತ, ಗರುಡ, ವಿಷ್ವಕ್ಸೇನ ಮೊದಲಾದ ಭಗವಂತನ ಪರಿಜನರು ನಿತ್ಯರು. ಇವರೇ ನಿತ್ಯಸೂರಿಗಳು (ಹಿಂದಸಾ. ೨೪೬). [ನಿತ್ಯ$_2$ + ಸೂರಿ$_1$]

**ನಿತ್ಯಸೌಖ್ಯ** (ನಾ). = ನಿತ್ಯಸುಖ : ವರಮುನಿಗಳೆಲ್ಲರುಂ ಲಿಂಗಮಂ ಧರಿಸಿಯುಜಿಕೆ ದುರಿತವನೊರೆಸಿ ಪೂರ್ವವಳಿದು ಮಿಗಿಲೆನಿಸಿಹರು ನರಸುರೋರಗರೆಲ್ಲ ಲಿಂಗಧಾರಿಗಳಾಗಿ ನಿತ್ಯಸೌಖ್ಯದೊಳಿರ್ಪರು (ಪ್ರಾಭಲಾ. ೮-೨). [ನಿತ್ಯ$_2$ + ಸೌಖ್ಯ]

**ನಿತ್ಯಸ್ಥಿತಿ** (ನಾ). ದಿನವೂ ನಡೆಯುವ ಕಟ್ಟಳೆ : ಬರೆಯಲುಂ ಬಾಜಿಸಲು ಬಲ್ಲ ಶಬ್ದಸಂಸ್ಕಾರವುಳ್ಳಾತ ನಾಗದೇಸಿಗಗ್ಗೆ ನಿತ್ಯಸ್ಥಿತಿಯೊಂದು ಪೊಟ್ಟಜೀವಾಹಾರಮುಂ ಪರಿಷಕ್ಕೊನ್ನು ಕಪ್ಪಡವುವನಿಕ್ಕಿಯೋದಿಸಿ ಗುಣಶಾಸನದಿನಾಳ್ವಕ್ಕರಿಗವೃತ್ತಿ ಮತ್ತರಿಪ್ಪತ್ತೈದು (ಎಇ. XX, ೬-೨೬ ; 1012). [ನಿತ್ಯ$_1$ + ಸ್ಥಿತಿ]

**ನಿತ್ಯಸ್ಮರಣೆ** (ನಾ). ನಿರಂತರವಾದ ಸ್ಮರಣೆ, — ಚಿಂತನೆ, — ಧ್ಯಾನ : ಸತ್ಯವನ್ನು ನಿತ್ಯಸ್ಮರಣೆಯಿಂದ ಆರಾಧಿಸುವವನು ನಿತ್ಯಸುಂದರನಾಗಿ ಶೋಭಿಸಬಲ್ಲನು (ಶಕ್ತಿವಿ. ೩). [ನಿತ್ಯ$_2$ + ಸ್ಮರಣೆ]

**ನಿತ್ಯಸ್ವತಂತ್ರ** (ನಾ). ಯಾವಾಗಲೂ ಸ್ವತಂತ್ರನಾದವನು ; ಸದಾ ಸ್ವತಂತ್ರ : ನಿತ್ಯಸ್ವತಂತ್ರನು ನೀನೆ ವೃಷ್ಟಲಿಂಗಜಂಗಮ ಒಂದೆಂದಿಪ್ಪನು ಪರಮಪ್ರಭುವೆ (ಬಸವ. ೮೨೧). [ನಿತ್ಯ$_3$ + ಸ್ವತಂತ್ರ]

**ನಿತ್ಯಹರಿದ್ವರ್ಣ** (ನಾ). ಸದಾ ಹಸುರುಬಣ್ಣದಿಂದ ಕೂಡಿರುವುದು; ಯಾವಾಗಲೂ ಹಸುರಿನಿಂದ ಕೂಡಿರುವುದು : ಎಂದೆಂದೂ ಹಸುರಾಗಿರುವ ಸಮಭಾಜಕವೃತ್ತದ ನಿತ್ಯಹರಿದ್ವರ್ಣದ ಕಾಡುಗಳು (ಭೂವಿಪ. ೧೪೪). [ನಿತ್ಯ$_3$ + ಹರಿದ್ವರ್ಣ]

**ನಿತ್ಯಾಂಧಕಾರ** (ನಾ). ಶಾಶ್ವತವಾದ ಕಗ್ಗತ್ತಲೆ, — ಗಾಢಾಂಧಕಾರ : ಕ್ರೂರವ್ಯಾಗಪ್ರಕೀರ್ಣಕಟಕಂ ನಿತ್ಯಾಂಧಕಾರಂ ಮಣಿಪ್ರಭವಸ್ಥಾನನಿಕುಂಜವೆನ್ನಿದಜಿಕೊಳೆಂದೊಪ್ಪಿದುರ್ದಪೌನ್ನತ್ಯದಿಂ ನಭಮಂ ಚುಂಬಿಸುತಿರ್ಪದೊಂದು ಕುಧರಂ (ಮಲ್ಲಿಕಾ. ೩-೧೪). [ನಿತ್ಯ$_2$ + ಅಂಧಕಾರ]

**ನಿತ್ಯಾಗ್ನಿ** (ನಾ). ಶಾಶ್ವತವಾದ ಅಗ್ನಿ ; ಅಗ್ನಿಹೋತ್ರ ಮಾಡುವುದಕ್ಕಾಗಿ ವೈದಿಕರು ಉಪಯೋಗಿಸುವ ಅಗ್ನಿ : ನೀಲಕಂಠಭಕ್ತರು ಅಲ್ಲಿಗೆ ಹೋಗಿ ಅಲ್ಲಿರುವ ನಿತ್ಯಾಗ್ನಿಗೆ ಪ್ರದಕ್ಷಿಣೆಯಂ ಗೈದು . . . ಮಲಗಿದರು (ಪುರಾವಿ. ೧೪೨). 'ಅಗ್ನಿಹೋತ್ರ' ಪರಾ. [ನಿತ್ಯ$_2$ + ಅಗ್ನಿ]

**ನಿತ್ಯಾತುಮ** (ನಾ). = ನಿತ್ಯಾತ್ಮ : ಇಂದಿದನು' ವರ್ಣಿಸುವ ಕೇಳುವರಿಂದಧಿಕಸುಕೃತಿಗಳದಾರು ಮುಕುಂದ ನಿತ್ಯಾತುಮಪದಾಬ್ಜವರಪ್ರಸಾದದಲಿ (ಶಿಭಾಗ. ೯-೧೧-೫೩) ; ರಕ್ಷಿಸೆನುತಾ ಕಾಂತೆ ವ್ಯೆಯಿಕ್ಕಿದಳು ನಿತ್ಯಾತುಮನ ಚರಣದಲಿ (ಶಿಭಾಗ. ೧೦-೩-೫೪). [< ಸಂ. ನಿತ್ಯಾತ್ಮನ್]

**ನಿತ್ಯಾತ್ಮ** (ನಾ). ಶಾಶ್ವತನಾದವನು ; ಪರಮಾತ್ಮ : ದೊರಕುವುದು ಸರ್ವಾರ್ಥಸಿದ್ಧಿಗಳುರುದಯಾನಿಧಿ ಸಕಲಜಗದೀಶ್ವರನೆನಿಪ ನಿತ್ಯಾತ್ಮ ವಿಶ್ವಂಭರನ ಕರುಣದಲಿ (ನಿಭಾಗ. ೫-೮-೪೮). [ಸಂ. ನಿತ್ಯಾತ್ಮನ್]

**ನಿತ್ಯಾನಂದ** (ನಾ). **೧.** ಶಾಶ್ವತವಾದ ಆನಂದ ; ಸ್ಥಿರವಾದ ಸಂತೋಷ : ವೇದಾಂತಶ್ರವಣಮನನನಿದಿಧ್ಯಾಸನಗಳಿಂ ತೋರ್ಪುದೆ ನಿತ್ಯಾನಂದವೆನಿಸುವದು (ನಾನಾಗು. ೨೬-೨) ; ಮುಕ್ತಿಯೋಗ್ಯರಾದ ಜೀವರು ಭಗವತ್ಪ್ರಸಾದದಿಂದ ವೈಕುಂಠಲೋಕಕ್ಕೆ ಹೋಗಿ ನಿತ್ಯಾನಂದವನ್ನು ಅನುಭವಿಸುವ ಹಾಗೆ (ಹಿಂದಸಾ. ೨೪೫). **೨.** ಶಾಶ್ವತವಾದ ಆನಂದವನ್ನು ಪಡೆದವನು ; ಪರಮಾತ್ಮ : ಆರು ಏಳದ ಮುನ್ನ ಎಬ್ಬಿಸಿ ಶೃಂಗಾರ ಮಾಡಿ . . . ನಿತ್ಯಾನಂದಗೆ ನಿಲುವುಗನ್ನಡಿಯ ತೋಋ (ಪುರಂದ.೫-೧೧೪-೨); ನಿತ್ಯಾನಂದಂ ನಿಯತವರದಂ ನಿಷ್ಕಳಂ . . . ಭುವನ ಶರಣಂ ತ್ವಾಂ ಶರಣ್ಯಂ ಪ್ರಪದ್ಯೇ (ರಾಜಶೇ. ೧೩-೫೮); ಶರಣು ನಿಸ್ಸಂಕಲ್ಪ ನಿತ್ಯಾನಂದ ನಿಗಮನುತ (ಗಗತಾ. ೧-೪೩). [ನಿತ್ಯ$_2$ + ಆನಂದ]

**ನಿತ್ಯಾನುಮೇಯ** (ನಾ). ಕಡ್ಡಾಯವಾಗಿ ಊಹಿಸಿ ತಿಳಿಯಬೇಕಾದ ವಿಷಯ : ಸೃಷ್ಟಿವಿಷಯಕವಾದ ವೇದಾಂತವಾಕ್ಯಗಳಿಗೆಲ್ಲಾ ಕಾರ್ಯಕಾರಣವನ್ನು ಅನುಮಾನಪ್ರಮಾಣಗಳಿಂದಲೇ ನಿರ್ಣಯಿಸುವುದು ಉದ್ದೇಶವೆಂದೂ . . . ಪ್ರಧಾನ, ಪುರುಷ, ಅವುಗಳ ಸಂಯೋಗ —ಇವು ನಿತ್ಯಾನುಮೇಯಗಳೆಂದೂ ಸಾಂಖ್ಯರು ಭಾವಿಸುತ್ತಾರೆ (ಬ್ರಹ್ಮಭಾ. ೭೬). [ನಿತ್ಯ$_2$ + ಅನುಮೇಯ]

**ನಿತ್ಯಾಭಿಯೋಗ** (ನಾ). ಸದಾ ಕೂಡಿರುವಿಕೆ ; ನಿತ್ಯಸಂಬಂಧ : ಸತಿಯು ಪತಿಯೊಡನೆ ಕೂಡಿ ಬಾಳುವ ಮಾಡುವಂತೆ, ಜೀವನು ಶಿವನೊಡನೆ ಕೂಡಿ ನಿತ್ಯಾಭಿಯೋಗ ಹೊಂದಿರುವನು (ಶಕ್ತಿವಿ. ೮೧). [ಸಂ.]

**ನಿತ್ಯಾರ್ಚನ** (ನಾ). ದಿನವೂ ಮಾಡುವ ಪೂಜೆ:'ನಿತ್ಯಾರ್ಚನಂಗೈ' ಪರಾ. [ನಿತ್ಯ$_1$ + ಅರ್ಚನ]

**ನಿತ್ಯಾರ್ಚನಂಗೈ** (ಕ್ರಿ). ದಿನವೂ ಪೂಜೆಯನ್ನು ಮಾಡು,— ಸೇವಿಸು : ಹಿಮಗಿರೀಶ್ವರ ನಂದಿಗರುಹಿ ನಿತ್ಯದಿ ನಿನ್ನ ರಮಣನಂಘ್ರಿಯನು ಸದ್ಭಕ್ತಿಯಿಂ ಭಜಿಸಿಪೊಲಿಸುವದೆಂದು ಪೇಳಿ ಪೋಗೆ ಕ್ರಮವಿಡಿದು ನಿತ್ಯಾರ್ಚನಂಗೈವುತಿರಲು (ಸಪಮೋ. ೬-೧೯).

[ನಿತ್ಯಾರ್ಚನ + ಕೈ$_1$(<ಕೆಯ್$_1$)]

**ನಿತ್ಯಾರ್ಚನೆ** (ನಾ). = ನಿತ್ಯಾರ್ಚನ : ಜೀವನು ಶಿವನೊಡನೆ ಕೂಡಿ ನಿತ್ಯಾಭಿಯೋಗ ಹೊಂದಿರುವನು. ಹೀಗೆ ಅವನು ನಿತ್ಯಸಂಬಂಧದಿಂದ ನಿತ್ಯಾರ್ಚನೆಯಲ್ಲಿ ನಿರತನಾಗುವನು. ಈ ಬಗೆಯ ನಿತ್ಯಾರ್ಚನೆಯೇ ಈ ವೇದಾಂತದಲ್ಲಿ ಯಜ್ಞವೆನಿಸಿದೆ (ಶಕ್ತಿವಿ. ೮೧). [ನಿತ್ಯ$_1$ + ಅರ್ಚನೆ]

**ನಿತ್ಯಾರ್ಥ** (ನಾ). ತಪ್ಪದೆ ಇರುವುದು ಎಂಬ ಅರ್ಥ ; ಕಡ್ಡಾಯ ಎಂಬ ಅರ್ಥ : ಸಲೆಯೆಂಬುದು ನಿತ್ಯಾರ್ಥದೊಳಂ . . . ವರ್ತಿಸುಗುಂ (ಶಮದ. ೭೧೩ ವೃತ್ತಿ). [ನಿತ್ಯ$_2$ + ಅರ್ಥ]

**ನಿತ್ಯಾರ್ಥಾವಲಂಬಿ** (ನಾ). ನಿತ್ಯಾರ್ಥವನ್ನು ಹೊಂದಿಕೊಂಡಿರುವುದು : ಸಲೆಯೆಂಬುದು ನಿತ್ಯಾರ್ಥಾವಲಂಬಿ . . . ಅನುಮಾನಾರ್ಥಯುಗಳಮವು ಶಾಬ್ದಿಕರಿಂ (ಶಮದ. ೭೧೬).

[ಸಂ. ನಿತ್ಯಾರ್ಥಾವಲಂಬಿನ್]

**ನಿತ್ಯಾಲಂಬ** (ನಾ). ಸದಾಕಾಲದಲ್ಲಿರುವ ಆಶ್ರಯ ; ಯಾವಾಗಲೂ ಆಧಾರವಾಗಿರುವಿಕೆ : ಶೀಲಂ ಪಾಲಿತಪಟ್ಟಕಾರವೆನಿಸಿರ್ದಾವಶ್ಯಕಕ್ಕಾಯ್ತು ನಿತ್ಯಾಲಂಬಂ (ಚಂದ್ರಪ್ರ. ೧-೫). [ನಿತ್ಯ$_1$ + ಆಲಂಬ]

**ನಿತ್ಯಾವರಣ**(ನಾ). ಸದಾ ಆವರಿಸಿಕೊಂಡಿರುವಿಕೆ ; ಯಾವಾಗಲೂ ಸುತ್ತುಗಟ್ಟಿರುವಿಕೆ : 'ನಿತ್ಯಾವರಣದೇವತೆ' ಪರಾ.

[ನಿತ್ಯ$_3$ + ಆವರಣ]

**ನಿತ್ಯಾವರಣದೇವತೆ** (ನಾ). ಸದಾಕಾಲವೂ ಪ್ರಧಾನದೇವರ ಸುತ್ತಲೂ ಇರುವ ಪರಿವಾರದೇವತೆ : ಇಲ್ಲಿ ಅರ್ಕೇಶ್ವರಗೆ ನಿತ್ಯಾವರಣದೇವತೆಗಳಾದ ಗಣಪತಿ ಭೈರವ ಮೊದಲಾದ ಯಾವ ಗಣಗಳುಂಟೊ ಅವರ ಪೂಜೆಯೋ ಈ ಕ್ಷೇತ್ರದಲ್ಲಿ ಸರ್ವಕಾರ್ಯಗಳಿಗೂ ಸಾಧನೆಯಾಗುವದು (ಅರ್ಕಮಾ. ೧೮). [ನಿತ್ಯಾವರಣ + ದೇವತೆ]

**ನಿತ್ಯಾವಳಿ** (ನಾ). ವರ್ತನೆಯಾಗಿ ಪ್ರತಿನಿತ್ಯವೂ ಪೂಜೆಗೆ ಹೋಗುವುದು : ಬೆಳಗಿನ ಸ್ನಾನ ಬಗೆಹರಿಸಿ . . . ನಾಕು ನಿತ್ಯಾವಳೀ ಮನೆಯ ದೇವರ ತಲೆಯ ಮೇಲೆ ತಣ್ಣೀರು ಸುರುವಿ . . . ಮನೆಗೆ ಬರುತ್ತಿದ್ದವು (ದೀಪಹ. II, ೧). [←ಮರಾ. ನಿತ್ಯಾವಳಿ]

**ನಿತ್ಯೆ** (ನಾ). **೧.** ಗಿರಿಜೆ ; ಪಾರ್ವತಿ : ನಿತ್ಯೆ ಸತ್ಯೆ ನಿರ್ವಿಕಾರೆ . . . ಪಾಲಿಸಮ್ಮ ಸರ್ವಮಂಗಲೇ (ಹಾಲಾಸ್ಯ. ೨-೧೬-೪೭). **೨.** ಕಶ್ಯಪನ ಮಗಳು ; ಮನಸಾದೇವಿ. [ಸಂ. ನಿತ್ಯಾ]

**ನಿತ್ಯೇಷ್ಟಿ** (ನಾ). ನಿತ್ಯವೂ ಮಾಡುವ ಯಾಗ,—ಯಜ್ಞ : ನಿತ್ಯೇಷ್ಟಿ ಕಾಮ್ಯೇಷ್ಟಿ ಮೊದಲಾದವುಗಳಂ . . . ಕ್ಷತ್ರಿಯನಾದೊಡೆ ಅಧಿಕೃತಮಾಗಿ ಮಾಳ್ಪುದು (ವಿವೇಕ. ೧೪೩). 'ಕಾಮ್ಯೇಷ್ಟಿ' ಪರಾ.

[ನಿತ್ಯ$_1$ + ಇಷ್ಟಿ]

**ನಿತ್ಯೈಕೇಶ್ವರವಾದ** (ನಾ). ಶಾಶ್ವತನಾದ ಒಬ್ಬನೇ ದೇವರಿದ್ದಾನೆಂಬ ವಾದ : ಯಾರು ಬೇಕಾದರೂ ಈಶ್ವರನಾಗಬಹುದೆಂಬ ಸಿದ್ಧಾಂತದಲ್ಲಿ ಕಲಹವನ್ನು ತಳೆದು ಈಶ್ವರವಾದಿಗಳು ನಿತ್ಯೈಕೇಶ್ವರವಾದವನ್ನು ಆಶ್ರಯಿಸಿರುವರು (ಹಿಂದಸಾ. ೨೭೪).

[ನಿತ್ಯ$_2$ + ಏಕ + ಈಶ್ವರ + ವಾದ$_2$]

**ನಿತ್ಯೋತ್ಸವ** (ನಾ). **೧.** ದಿನವೂ ನಡೆಸುವ ಮಂಗಳಕಾರ್ಯ,— ಉತ್ಸವ : ಅಂತು ವಿಜಯಮಂಗಳಂ ನೆಗಟ್ಟೆ ಗೋಕುಲಮಂ ಪೊಕ್ಕು ನಂದನಂದನಂ ಗೋಪಾಲವಿನೋದದಿಂ ನಿತ್ಯೋತ್ಸವಮಾಗೆ ಸುಖದಿಂದಿರ್ಪನ್ನೆಗಂ (ಜಗವಿ. ೪-೫೮ ವ) ; ಭೂಲೋಲ ನರಸೇಂದ್ರನ ನಿತ್ಯೋತ್ಸವ ದೋಲಗಸಿರಿಯ ಬಣ್ಣಿಸುವೆ (ಕಂಸವಿ.೮ ಸೂಚನೆ) ; ಆಲಂಬನದಿ ನಿರುಪಮ ಶಿವಮಯಾವಸಿಯಿತ್ತು ನಿತ್ಯೋತ್ಸವದ ಪಾಲಿಸು (ಜಿರಾಪು. ೧-೩) ; ಮೂರ್ತಿಪೂಜೆಯು ಸ್ವ-ಪರ ಶ್ರೇಯಸ್ಸಾಧಕವಾದ ನಿತ್ಯೋತ್ಸವ ಮೊದಲಾಗಿ ರಥೋತ್ಸವ ಪರ್ಯಂತವಾದ ವಿಶೇಷೋತ್ಸವಾಚರಣೆಗಳಿಂದ . . . ಸಿದ್ಧರಿಗೂ ಕೂಡ ಜ್ಞಾಪಕವಾಗಿಯೂ ಬೋಧಕವಾಗಿಯೂ ಇದೆ (ಭಾರದ. ೮೨). **೨.** ನಿತ್ಯೋತ್ಸವಕ್ಕೆ ಪಾತ್ರನಾದವನು : ತೆತ್ತೀಸ ಕೋಟಿ ದೇವರ್ಕಳ ಒಡಗೂಡಿ . . . ನಿತ್ಯೋತ್ಸವ ಬಂದ ಕಾಣಿರೇನೆ (ಪುರಂದ. ೧-೧೪೦-೭). [ನಿತ್ಯ$_1$ + ಉತ್ಸವ]

**ನಿತ್ಯೋದಯ** (ನಾ). **೧.** ದಿನವೂ ಉದಯಿಸುವವನು : ನಿತ್ಯೋದಯನುಮಪ್ಪ ಗಭಸ್ತಿಮಾಲಿಗರ್ಘ್ಯಮನೆತ್ತಿದ ಹಸ್ತಕಮಲದೊಳ್ (ಪಂಚತಂ. ೨೫೭-೫). **೨.** ಯಾವಾಗಲೂ ಅಭ್ಯುದಯವುಳ್ಳವನು : ಪ್ರಕೃತಿಯೊಳ್ ನಿತ್ಯೋದಯನುಂ ನಿಸರ್ಗದೊಳ್ ರಿಪುವರ್ಗದುರ್ಗನಿರ್ಭೇದಿಯುಂ . . . ಅಜೇಯನುಮಪ್ಪ ದಮಿತಾರಿಗೆ ಷಾಡ್ಗುಣ್ಯದೊಳ್ ಯಾನಮುಮುಪಾಯಚತುಷ್ಟಯದೊಳ್ ದಂಡಮುಮಲ್ಲದುಱದ ಗುಣಪಂಚಕಮುಮುಪಾಯತ್ರಯಮುಮಂ ದೊರೆಯಲ್ಲವು (ಶಾಂತಿಪು. ೨-೫೧ ವ). [ಸಂ.]

**ನಿತ್ಯೋಪಹಾರ** (ನಾ). ಪ್ರತಿನಿತ್ಯವೂ ಅರ್ಪಿಸುವ ನೈವೇದ್ಯ : ಮತ್ತಮಾ ಹಂಸಿನ್ವರ್ರ್ ಗಾವುಂಡುಗಳ್ ಮುಖ್ಯಸಮಸ್ತಪ್ರಜೆಗಳುಂ ದೇವರ ನಿತ್ಯೋಪಹಾರಕ್ಕೆಂದು ಚಂದ್ರಾರ್ಕ್ಕಸ್ಥಾಯಿಯಾಗಿ ಮೇಟಿಗೊಳಗವ ಕೊಟ್ಟರ್ (ಸೌಇಇ. XX, ೨೪೮-೬೮ ; 1228).

[ನಿತ್ಯ$_1$ + ಉಪಹಾರ]

**ನಿಶ್ಪ್ರಾಣ** (ನಾ). ೧. ದುರ್ಬಲತೆ; ಶಕ್ತಿಹೀನತೆ: ಅಣೆಗಪಜಯವಿಲ್ಲಲೇ ಕೀಳಾಣಿ ಟಂಕದೊಳಿಲ್ಲಲೇ ನಿಶ್ಪ್ರಾಣದಲಿ ಸಂಗರವ ಹೊಗೆಯೆಲೆ . . . ಉಪೇಕ್ಷೆಯ ಕೇಣವನು ದಾನದಲಿ ಮಾಡೆಲೆ ರಾಯ (ಕುವ್ಯಾಸ. ೧-೪೪). ೨. ದುರ್ಬಲವಾದುದು; ಅಶಕ್ತವಾದುದು: ನಿಶ್ಪ್ರಾಣವಾದ ಬಿಳಿಯ ಕುದುರೆಯೂ . . . ನಿಧಾನವಾಗಿ ಸಾಗುತ್ತಿದ್ದುದರಿಂದ ಅವನು ಅಪರಿಚಿತವ್ಯಕ್ತಿಯನ್ನು ಮಾತಾಡಿಸಬೇಕೆಂದು ಕಾತರನಾಗಿದ್ದನು (ಪುನರು. ೨೬೩). ೩. ಅಶಕ್ತನಾದವನು; ದುರ್ಬಲ ವ್ಯಕ್ತಿ: ಪ್ರಾಣದಾಸೆಯ ಮಜಿದು ತನ್ನೊಳು ಕೇಣವಿಲ್ಲದೆ ಕಾದೆನುತೆ ನಿಶ್ಪ್ರಾಣನನು ನಿಬ್ಬರದ ನುಡಿಗಳಲಿಱದನಾ ಕರ್ಣ (ಕುವ್ಯಾಕ. ೧೩-೩೬); ಕಾಣದಿರೆ ಕುಂಡಲವ ಕೆಟ್ಟೆನೆಂದೆನುತ ನಿಶ್ಪ್ರಾಣನಾದನು ಮುನಿಪ (ತುರಂಗ. ೬-೧೫); ಇದುವರೆಗೂ ಮಾತಾಡಲು ಶಕ್ತಿಯಿಲ್ಲದೆ ನಿಶ್ಪ್ರಾಣನಾಗಿದ್ದ ಕನಕಸಭೆ, ಸ್ವಲ್ಪ ಚೇತರಿಸಿಕೊಂಡ (ಪ್ರತಾಪ. ೧೩). [ಸಂ.]

**ನಿಶ್ಪ್ರಾಣೆ** (ನಾ). = ನಿಶ್ಪ್ರಾಣ ೩: ಮೇಣ ತಿದ್ದಿದ ರೂಪಿಗಡಗಿಬಹಂತೆ ಕುಂದಾಣ ಬಹಂತೆ ಭೂಷಣಕೆ ಕ್ಷೀಣಕರ್ಮಗಳ ಕೈಮಾಟಕೆ ಬಂದು ನಿಶ್ಪ್ರಾಣೆಯಾಗಿರುತಿಹನಾತ್ಮ (ಭರಚ. ೬೮-೧೧೧). [ಸಂ. ನಿಶ್ಪ್ರಾಣಿನ್]

**ನಿಶ್ಪ್ರಾಣಿಸು** (ಕ್ರಿ). ಶಕ್ತಿಗುಂದು; ಅಶಕ್ತವಾಗು; ದುರ್ಬಲವಾಗು: ಏಣಲೋಚನೆಯ ಬಲ್ಮೊಲೆಯ ಭಾರಕೆ ನಿಶ್ಪ್ರಾಣಿಸಿ ನಡು ನಿಲ್ಲದೆನುತೆ ಕೇಣವಿಲ್ಲದೆ ರತ್ನಕೀಲಿತ ಸ್ವರ್ಣದೊಡ್ಯಾಣವ ತಂದಿಕ್ಕಿದರು (ಮೋಹತ. ೨೩-೪೪). [ನಿಶ್ಪ್ರಾಣ+-ಇಸು$_3$]

**ನಿದರ್ಶ** (ನಾ). = ನಿದರ್ಶನ ೨: ನಿದರ್ಶಮಂ ಮಾಡಿದಂದದಂ ನೀಂ ಮುಂದಂಗೊಳುತ್ತಂ ಮದೀಯ ಪೆಣ್ಣಂ ವಿವಾಹಮಾಗೆಂದು . . . ಪೇಳಲ್ (ಹಾಲಾಸ್ಯ. ೪-೯-೫೫). [ಸಂ.]

**ನಿದರ್ಶನ** (ನಾ). ೧. ಉದಾಹರಣೆ; ದೃಷ್ಟಾಂತ: ಮಹೀಪತಿ ಸಂಸ್ಕೃತಿಯ ಅನಿತ್ಯತೆಗಿದುವೆ ನಿದರ್ಶನಂ (ಚಂದ್ರಪು. ೪-೫೧ ಪ); ಈ ನಿದರ್ಶನ [ಪಾಠಾಂ. ನಿದರುಶನ]ದಿಂದ ಪಾಂಡವಸೇನೆಯನು ಕಗ್ಗೊಲೆಯೊಳಗೆ ಕೊಲಲೇನು ಹೊಲ್ಲೆಹ (ಕುವ್ಯಾಗ. ೯-೭); ಹಳೆಯ ತಮಿಳು ಮತ್ತು ಕುರುಖ್ ಭಾಷೆಗಳು ಈ ಮಾತಿಗೆ ಉತ್ತಮನಿದರ್ಶನ (ದ್ರಾವಿ. ೨೩೬); "ಕಾವ್ಯೇಷು ನಾಟಕಂ ರಮ್ಯಂ" ಎಂಬ ಪ್ರಶಸ್ತಿ ಮೇಲಿನ ಹೇಳಿಕೆಗೆ ಒಂದು ನಿದರ್ಶನ (ಭಾರವಿಾ. ೬). ೨. ನೋಟ; ದೃಶ್ಯ. ೩. ತೋರಿಸುವುದು; ಕಾಣಿಸುವುದು. ೪. ಸೂಚನೆ; ಶಕುನ: ಎಂದುವಿಲ್ಲದದೊಂದುಮಾರ್ಗಂ ಮುಂದೆಸೆಯೊಳಿರೆ ನೋಡಿ ಚೋದ್ಯಮನೊಂದಿ ದರುಶನವಿದು ನಿದರ್ಶನವಾಯ್ತಲಾ ಎನಗೆ ಎಂದು ತನ್ನೊಡತಣ ಶಬರರಂ ಪಿಂದಿರಿಸಿಯೊರ್ವನೆ ಬರುತ (ಬಸಪು. ೧೮-೫). ೫. ಗಮನ; ಲಕ್ಷ್ಯ: ಗೋವಿಂದರಾಯರ ಧರ್ಮಬಾಹಿರತೆ ನೀತಿಬಾಹಿರತೆಯನ್ನು ಶ್ರೀಗಳವರ ನಿದರ್ಶನಕ್ಕೆ ತರಬೇಕು (ಸಮಜೀ. ೩೭). ೬. = ನಿದರ್ಶನಾಲಂಕಾರ: ಸತತಮದಱಿಯೆ ನಿದರ್ಶನಗತಮಿಂತಕ್ಕುಂ ಪ್ರಮೋದದಿಂ ಕವಿಜನದೊಳ್ (ಕವಿರಾ. ೧-೮೬); ಸರಸೋಪಮಾನೋಪಮೇಯವಾಕ್ಯಾರ್ಥವನುರೆ ಐಕ್ಯ ಮಾಡೆ ನಿದರ್ಶನವು (ಕುವಲ. ೪೪-೧). [ಸಂ.]

**ನಿದರ್ಶನಾಲಂಕಾರ** (ನಾ). [ಕಾವ್ಯವಿಾ] ಅರ್ಥಾಲಂಕಾರಗಳಲ್ಲಿ ಒಂದು; ಇದನ್ನು ಅಲಂಕಾರಶಾಸ್ತ್ರದಲ್ಲಿ ಮೂರು ಬಗೆಯಾಗಿ ವಿವರಿಸಿದ್ದಾರೆ. ಹೆಸರು ಒಂದೇ ಆದರೂ ಲಕ್ಷಣಗಳು ಬೇರೆ ಬೇರೆ. (೧). ಹೇಳಬೇಕಾದ ವಾಕ್ಯಾರ್ಥವೊಂದನ್ನು ಹೇಳಿದ ಮೇಲೆ ಅದಕ್ಕೆ ಸಮಾನವಾದ ಮತ್ತೊಂದು ವಾಕ್ಯಾರ್ಥವನ್ನು ಉದಾಹರಣೆಯಾಗಿ ಕೊಡುವುದು. ಹೇಗೆಂದರೆ ಸತ್ಪುರುಷರು ಜನರ ಗುಣಗಳನ್ನು ಇದ್ದುದನ್ನು ಇದ್ದಂತೆಯೇ ಚೆನ್ನಾಗಿ ಗ್ರಹಿಸುತ್ತಾರೆ. ಕನ್ನಡಿಯೂ ತನ್ನ ಮುಂದಿರುವ ವಸ್ತುವನ್ನು ಇರುವ ರೀತಿಯಲ್ಲಿಯೇ ಸರಿಯಾಗಿ ಪ್ರತಿಬಿಂಬಿಸುತ್ತದೆ. ಇಲ್ಲಿ ಕವಿಯು ಹೇಳಬೇಕೆಂದಿರುವ ವಾಕ್ಯಾರ್ಥಕ್ಕೆ ಅನುಗುಣವಾದ ವಾಕ್ಯಾರ್ಥವನ್ನು ನಿದರ್ಶನವಾಗಿ ಕೊಟ್ಟಿದ್ದಾನೆ. ಇದು 'ಕವಿರಾಜಮಾರ್ಗ'ದ ನಿದರ್ಶನಾಲಂಕಾರ. (೨). ಒಂದು ವ್ಯಕ್ತಿ ಅಥವಾ ವಸ್ತು ತನ್ನ ಸಹಜಸಿದ್ಧವಾದ ಕ್ರಿಯೆಯಿಂದ ಜನರಿಗೆ ಸಂದರ್ಭಾನುಸಾರವಾಗಿ ನೀತಿಯೊಂದನ್ನು ಬೋಧಿಸುವುದು. ಸೂರ್ಯನು ಉದಯಿಸಿದ ಕೂಡಲೇ ತನ್ನ ಪ್ರೀತಿಪಾತ್ರವಾದ ತಾವರೆಗಳನ್ನು ಅರಳಿಸುತ್ತಾನೆ. ಇದರ ಉದ್ದೇಶವು—ಒಬ್ಬನಿಗೆ ಅಧಿಕಾರವಾಗಲಿ ಐಶ್ವರ್ಯವಾಗಲಿ ಒದಗಿದರೆ ಕೂಡಲೆ ಅವನು ತನ್ನ ಆಪ್ತೇಷ್ಟರಿಗೆ ತನ್ನ ಏಳಿಗೆಯ ಫಲವನ್ನು ಹಂಚಿಕೊಡಬೇಕು. ಎಂದರೆ ಕೈಲಾದಷ್ಟು ಸಹಾಯ ಮಾಡಲೇ ಬೇಕು ಎಂಬುದೇ ಆಗಿದೆ. ಇದು ದಂಡಿಯ ನಿದರ್ಶನಾಲಂಕಾರ. (೩). ಎರಡು ಸಮಾನವಾದ ವಾಕ್ಯಾರ್ಥಗಳನ್ನು ಹೇಳಿ ಅದೇ ಇದು ಎಂದು ಆರೋಪ ಮಾಡುವುದು ವಾಕ್ಯಾರ್ಥಾರೋಪ. ರೂಪಕಾಲಂಕಾರದಲ್ಲಿ ಎರಡು ಪದಾರ್ಥಗಳಿಗೆ 'ಮುಖವೇ ಚಂದ್ರ' ಎಂಬಂತೆ ಆರೋಪವಾಗುತ್ತದೆ. ಇಲ್ಲಿ ಎರಡು ವಾಕ್ಯಾರ್ಥಗಳಿಗೆ ಅದೇ ಇದು ಎಂದು ಮಾಡುವ ಆರೋಪ. ಉದಾ:—ಉದಾರಿಯಾದ ವ್ಯಕ್ತಿಯಲ್ಲಿ ಸೌಮ್ಯಸ್ವಭಾವವಿರುವುದೂ ಪೂರ್ಣಚಂದ್ರನಲ್ಲಿ ನಿಷ್ಕಳಂಕತ್ವವಿರುವುದೂ ಒಂದೇ. ಇಲ್ಲಿ ಸಮಾನವಾದ ಎರಡು ವಾಕ್ಯಗಳಿಗೆ ಒಂದೇ ಎಂಬ ಪದದಿಂದ ಐಕ್ಯಾರೋಪವಿದೆ. ಇದು ಕುವಲಯಾನಂದಕಾರರೇ ಮೊದಲಾದ ನವೀನಾಲಂಕಾರಿಕರು ಹೇಳಿರುವ ನಿದರ್ಶನಾಲಂಕಾರ: ಗುಣದೋಷಾದಿಗಳಿಂದನುಗುಣಮಾಗಿರೆ ಪೇಳ್ದು ತದನುಸದೃಶದಿನೊಂದಂ ಪ್ರಣಿಹಿತನಿದರ್ಶನಕ್ರಮದೆಣಿಸುವುದಕ್ಕುಂ ನಿದರ್ಶನಾಲಂಕಾರಂ (ಕವಿರಾ. ೩-೧೪೧); ಉಪಮೇಯವಾಕ್ಯಾರ್ಥಮುಂ ಉಪಮಾನವಾಕ್ಯಾರ್ಥಮುಂ ಏಕಮೆಂದಾರೋಪಿಸಿ ಪೇಳ್ದ ನಿದರ್ಶನಾಲಂಕಾರಂ (ಅಪ್ರತಿ. ೬೧-೧೬); ಉಪಮಾನೋಪಮೇಯವಾಕ್ಯಾರ್ಥವು ಐಕ್ಯದಿಂದಾರೋಪಿಸೆ ನಿದರ್ಶನಾಲಂಕಾರ (ಕುವಲ. ೪೪-೧೯ ಟೀಕೆ). [ನಿದರ್ಶನ+ಅಲಂಕಾರ]

**ನಿದರ್ಶಿಸು** (ಕ್ರಿ). ಉದಾಹರಿಸು: ನನಗೆ ಕೊಂಚಮಟ್ಟಿಗೆ ಪ್ರವೇಶವಿರುವ ಕಾವ್ಯಮೀಮಾಂಸಾಶಾಸ್ತ್ರದಿಂದ ಇದನ್ನು ನಿದರ್ಶಿಸುವುದು ಸಾಧ್ಯ (ಸಮಾಲೋ. ೧೩೫). [ನಿದರ್ಶನ+-ಇಸು$_3$]

**ನಿದಾಘ** (ಗು). ೧. ಸುಡುವ; ಉರಿಯುವ; ಬಿಸಿಯಾದ: ತಲೆಯ ಮೇಲೆ ನೆರಳು, ಕಾಲಿನ ಮೇಲೆ ಶೀತಲವಾರಿ, ಸುತ್ತ ನಿದಾಘ ರವಿಕಿರಣಸಮುದ್ರ (ಈಚಕೆ. ೨). (ನಾ). ೨. ಬಿಸುಪು; ಕಾವು; ಉಷ್ಣತೆ: "ನಿದಾಘಃ, ಘರ್ಮಃ, (ಉಚ್ಯತೆ)— ಈ ೨ ಬೆಂಕೆಯ ಪೆಸರ್" (ಹಲಾಯು. ೮-೪೦); ಅನಂತವೀರ್ಯನಿಶ್ಶ್ವಾಸಕುಕುಲಾಮೃತಾರ್ಣವಸುಧಾಕಿರಣಂ ರಣಮೇರು ಲೋಕಲುಂಟಾಕನಿದಾಘತಾಪಹರವರ್ಷಣಮೇಘನುದಾತ್ತರಾಘವಂ (ಪಂಪಭಾ. ೫-೭೨); ನವಘನಮಾಲಾರವದಿಂದವನೀದೇವಿಯ ನಿದಾಘಪರಿತಾಪಮಡಂಗುವವೋಲ್ ಸಖಿಯ ಸುಭಾಷಿತರವದಿನಡಂಗಿದುದು ದೇವಕೀಹೃತ್ತಾಪಂ (ಜಗವಿ. ೨-೭೦). ೩. ಬಿಸಿಲುಕಾಲ; ಬೇಸಗೆ: "ನಿದಾಘಃ, ಗ್ರೀಷ್ಮಃ— ಈ ೨ ಬೇಸಗೆ" (ಹಲಾಯು. ೨೦-೧೧೬); ಪಾದರಿ ಪೂತುವು ತೋರಿದುವಾದುವು ಮಲ್ಲಿಗೆಗಳೆಯ್ದೆ ಪಣ್ತುವು ಮಾವಿಂಬಾದುದು ನಿದಾಘಮಧುವಿನ ಭೇದಮದೀ ಬನದೊಳಾತಪಕ್ಕೆಡೆಯುಂಟೇ (ಆದಿಪು. ೧೧-೮೭); ಪರ್ವಿದುದತಿಶಯದೃಗ್ಗ್ಯಾನಿದಾಘಂ ನಿದಾಘಂ (ಜಗವಿ. ೧೭-೭೧); ಅಂತು ನಿದಾಘದ

ಚಾತಕದಂತೆ ಬಾಯ್ವಿಟ್ಟು . . . ಪಲಂಬುತ್ತಮೆತ್ತ ಪೋದಳೋ ನೋಟ್ಪೆನೆಂದು (ಪುಣ್ಯಾಸ್ರ. ೧೨-೩೫ ಪ) ; ಅರಸನಲುಕಿದನೆಂಬ ಜಯದುಬ್ಬರದ ಬೆಳಸಿರಿಗಿದೆ ನಿದಾಘದ ಬಿಱುಬಿಸಿಲು ಕೊಳ್ಳೆಂದು ಕೈಗೊಂಡೆಚ್ಚರತಿರಥರು (ಕುಮ್ಯಾವಿ. ೮-೪) ; ಪುಡಿ ತನಿಗೆಂಡದ ಬೂದಿಯ ಪಡಿ ನೆಲಮಟ್ಟೊಲೆಯ ತೊಲೆಯಲರ್ ಬಿರಯಿಯ ಬಾಯೆಡೆಯೆಲರ್ಗೆಣೆಯುರಿಗಿದು ಸರಿ ಕಡುವಿಸಿಲೆನಿಸಿರೆ ನಿದಾಘಮೇಂ ಪಸರಿಸಿತೋ (ರಾಜಶೇ. ೫-೩೪). ೪. ಕಡುಬಿಸಿಲು ; ಉಗ್ರವಾದ ಬಿಸಿಲು : "ಕಡುವಿಸಿಲು ಘರ್ಮಂ ನಿದಾಘಮೆನಿಕ್ಕು" (ಮಂಗರಾ. ೧೦-೨). ೫. ಬೆವರು ; ಸ್ವೇದ. [ಸಂ.]

**ನಿದಾಘಋತು** (ನಾ). ಬೇಸಗೆ ; ಬೇಸಗೆಯ ಸಮಯ ; ಗ್ರೀಷ್ಮಋತು : ವಸಂತದ ಕಡೆಯ ನಿದಾಘಋತುಕಾಲದೊಳೊಂದುದಿನಂ ಸಕಲನಿಯೋಗದೋಲಗದೊಳೊಪ್ಪಿರ್ದ ಸಮಯದೊಳ್ ಕಾಲವಿಕ್ರಮನೆಂಬ ಬೇಡನಾಯಕಂ ಬಂದು ನಿಂದಿರೆ (ಹವ್ಮಾರ. ೪-೩೬ ಪ). [ನಿದಾಘ + ಋತು]

**ನಿದಾಘಕಾಲ** (ನಾ). = ನಿದಾಘ ೩ : ಕುಲಗಿರಿ ಕಾಯ್ದ ಕರ್ಬುನದ ಬೆಟ್ಟು ವೊಲಿರ್ದುವು . . . ದಿಶಾವಿವರಂ ಸಲೆ ಕಾಜುಗಾಜಿನಟ್ಟೊಲೆಯವೊಲಿರ್ದುವೇಂ ಪ್ರಳಯಕಾಲಮೊ ತೀವ್ರನಿದಾಘಕಾಲಮೋ (ಸೂಕ್ತಿಸು. ೧೦-೧೦೧). [ನಿದಾಘ + ಕಾಲ]

**ನಿದಾಘಜ್ವಾಲೆ** (ನಾ). ಬೇಸಗೆಯ ಉರಿ, —ತಾಪ, —ಬೇಗುದಿ : ಏನನೆಂಬೆನು ಪಾರ್ಥನುಗ್ರತಪೋನಿದಾಘಜ್ವಾಲೆಯನುಸಂಧಾನವನು ತತ್ಪರಿಸರದ ಪಾವನತಪೋಧನರ ಮೌನವುಱಿ ಸೀದುದು (ಕುಮ್ಯಾಅ. ೫-೧೨). [ನಿದಾಘ + ಜ್ವಾಲೆ]

**ನಿದಾಘತಪ್ತ** (ಗು). ಬಿಸಿಲಿನ ಬೇಗೆಯಿಂದ ಬೆಂದ, —ಸುಟ್ಟ : ನಡುನೆತ್ತಿ ಬಿರಿದು ಮುತ್ತುಗಳೊಡೆದುಚ್ಚಳಿಸುತ್ತೆ ಪಾಱಿ ಪನಿಗೆತ್ತು ನವಿಲ್ ತುಡುಕೆ ನಿಜಚಂಚುವಂ ಸುಡೆ ಮಿಡುಕಿದುದು ನಿದಾಘತಪ್ತಕರಿಸಂಕುಳದಾ (ರಾಜಶೇ. ೫-೪೧). [ನಿದಾಘ + ತಪ್ತ]

**ನಿದಾಘತಾಪ** (ನಾ). = ನಿದಾಘಜ್ವಾಲೆ : ಉರಿವ ನಿದಾಘತಾಪದೊಳೆ ಮೇರುನಗಂ ಪೊಱಿವೋಗೆ ಸುತ್ತಲುಂ ಕರಗಿ ಬಟಾಕ್ಕಳಾವಳಯದೆಣ್ದೆಸೆಗಂ ನೆಱಿ ಸೂಸಿ (ಚಂದ್ರಪ್ರ. ೯-೭೦). [ನಿದಾಘ + ತಾಪ$_2$]

**ನಿದಾಘವ್ಯೋಮ** (ನಾ). ಬೇಸಗೆಕಾಲದ ಆಕಾಶ ; ನಿರ್ಮಲವಾದ ಗಗನ : ನಿದಾಘವ್ಯೋಮದಿ ಮೆಲ್ಲಗೆ ಮೆಲ್ಲಗೆ ತನ್ನೊಂದಿಚ್ಛೆಗೆ ತೇಲುವ ಮೇಘದ ಆಲಸ್ಯಕೆ ಅರಸನ ಅಳುಕಿಲ್ಲ (ಪಾಂಚಜ. ೩೬-೮). [ನಿದಾಘ + ವ್ಯೋಮ]

**ನಿದಾಘಸಮಯ** (ನಾ). = ನಿದಾಘ ೩ : ನಿಜಸ್ನುಷಾವಿರಹವಿಧುರೆ ಪೊಣ್ಮುವ ಕಣ್ಣ ನೀರ್ಗಳಂ ನಿದಾಘಸಮಯಸರಸಿಯಂತಱಿಸಿ ಮಿಗಲೀಯದೊಳಗಡಂಗಿಸಿ ಸಭೆಯೊಳಿಂತೆಂದಳ್ (ಶಾಂತಿಪು. ೬-೩೬ ಪ) ; ನಿದಾಘಸಮಯಮಧ್ಯಂದಿನಪ್ರಾಪ್ತಸಪ್ತಸಪ್ತಿಪ್ರತಾಪವಿಹ್ವಲೀಭೂತಜೀವಕಂ ಸಂಜೀವಕಂ ನಿಲ್ವುದುಂ (ಪಂಚತಂ. ೨೩-೧೭) ; ಅಂತತಿಪ್ರಬಲಮಾದ ನಿದಾಘಸಮಯದೊಳ್ ದಿನಮಂ ಕೆಲವಂ ದಶರಥತನುಜರ್ ದಶಪುರದೊಳಿರ್ದು ಪೋಗಲೊಡಂ ನೊಂದನದರ್ಕೆ ವಜ್ರಕರ್ಣಂ (ಪಂರಾಮಾ. ೭-೯೮ ಪ) ; ಅಪ್ರತಿಮಪ್ರತಾಪದಾ ರಾಜತೆಯಂ ನಿದಾಘಸಮಯಾರ್ಕನೊಳೂರ್ಜಿತಸಾರ್ವಭೌಮಮೆಂಬೀ ಜಸಮಂ ದಿಶಾಕರಿಯೊಳಲ್ಲದೆ ವೈರಿನೃಪಾಳರಲ್ಲಿ ರಾರಾಜಿಸಲೀಯದಿಂತು ನೆಗಟ್ದಂ . . . ಬಿಜ್ಜಳಂ (ಶಾಪಮಂ. ೮೧೫ ; 1172 ; ಎಇ. XV, ೩೨೦-೧೭ ನೋ). [ನಿದಾಘ + ಸಮಯ$_1$]

**ನಿದಾಘಾಕ್ರಾಂತ** (ಗು). ಬೇಸಗೆಯ ಝಳಕ್ಕೆ ಗುರಿಯಾದ, —ಸಿಕ್ಕಿದ; ಗ್ರೀಷ್ಮದ ತಾಪಕ್ಕೆ ಒಳಗಾದ : ನಿದಾಘಾಕ್ರಾಂತಭೂಜಾಳಿ ಶಾರಿಯ ಸಂಕಲ್ಪದೆ ಪತ್ರಪುಷ್ಪಫಲಭಾರಾಕ್ರಾಂತಮಾಗಿರ್ದುವು (ಜಗವಿ. ೩-೬೭). [ನಿದಾಘ + ಆಕ್ರಾಂತ]

**ನಿದಾನ$_1$** (ನಾ). ೧. ನಿಧಿ ; ಐಶ್ವರ್ಯ ; ಸಂಪತ್ತು : ಬಡವಂ ನಿದಾನಮಂ ಪಡೆದಂತೆ ಕುರುಡಂ ಕಣ್ಬಡೆದಂತೆ ಮನದೊಳ್ ಪಿರಿದು ಮುತ್ಸಾಹಮಂ ಪಡೆದಳಾತ್ಮಜರ ಬರವಿಂದೆ (ಸುಕುಮಾ. ೨-೭೨). ೨. ಸಂಕಲ್ಪ; ನಿರ್ಣಯ ; ನಿಶ್ಚಯ : ಇದು ನಿದಾನವೆನುತ್ತ ಮನದೊಳು ಮದನನೈಯನು ತಿಳಿದು ಬಾರ್ಕೆ ಸದಮಲಾತ್ಮಕಕ್ರೂರರಹಿತನಕ್ರೂರನಾಮದಲಿ (ಕೋಗಯ. ೧೨-೧೫) ; ದಾನವ–ಮಾನವ–ಸುರರೊಳಗೆ ನೀನೇ ಭಟ ಎಂಬ ನಿದಾನವನ್ನು ಕೇಳಿ ತಿಳಿದು, ನಾನು ಸಂಗ್ರಾಮದಾನವನ್ನು ಬಯಸಿ ಬಂದಿದ್ದೇನೆ (ಜಿದುರಿ.೫೭). ೩. ತಡ ; ವಿಳಂಬ ; ಸಾವಕಾಶ: ಮದಗಜಯಾನಮದೆನಿತುಂ ನಿದಾನಮಾದತ್ತನಿತ್ತು ಕೇಸರಿಮಧ್ಯಂ ಪದೆಪಿಂ ಪೊಂಗಿದುದು (ಚಂದ್ರಭ್ಯು. ೪-೩೮); ಅಣ್ಣನ ನಿದಾನವು ನಂಜರಾಜಯ್ಯನ ಮನಸ್ಸಿನಲ್ಲಿ ಅಸಮಾಧಾನವನ್ನು ಹುಟ್ಟಿಸಿತ್ತು (ಒಡೆಕ. ೬೬) ; ಇದು ನಿದಾನದ ದಾರಿ (ಮುಸಿಮಾ. ೨೬). ೪. ತಾಳ್ಮೆ ; ಸೈರಣೆ : ನಿದಾನವಿದ್ದವನು ಸ್ವಾಧೀನ ತಪ್ಪಾನೇ ? (ಗಾದೆ). [<ಸಂ. ನಿಧಾನ]

**ನಿದಾನ$_2$** (ನಾ). ೧. ಹಗ್ಗ ; ರಜ್ಜು ; ಮಿಣಿ. ೨. ಕಾರಣ ; ನಿಮಿತ್ತ : ಧರ್ಮಮೆ ದೇಹಿಗ(ಮಿ)ಹಪರಶರ್ಮಕ್ಕೆ ನಿದಾನಂ (ಪುಷ್ಪಪು. ೩ ೧೦೮) ; ಏನು ನಿನಗೀ ವನಕೆ ಬರವು ನಿದಾನವನು ಹೇಳೆನಲು ಕುಂತೀಸೂನು ನುಡಿದನು ತನ್ನ ಪೂರ್ವಾಪರದ ಸಂಗತಿಯ (ಕುಮ್ಯಾಅ. ೧೩-೪೪); ಎಷ್ಟು ದೋಷಗಳಿದ್ದರೂ ರಸಿಕತೆಯು ತಿರಸ್ಕಾರಕ್ಕೆ ತಕ್ಕದ್ದಲ್ಲ. ಅದು ನಾಗರಿಕತೆಗೆ ನಿದಾನ (ಸಾಹಿಜೀ. ೬೪). ೩. (ರೋಗದ) ಮೂಲಕಾರಣ ; ಆದಿಕಾರಣ : "ನಿದಾನಮೆಂಬುದು ಕುತ್ತದ ಕಾರಣಂ" (ಹಲಾಯು. ೧೦೦-೪೫೮). ೪. ರೋಗಮೂಲವನ್ನು ಕಂಡುಹಿಡಿಯುವಿಕೆ; ರೋಗಪರೀಕ್ಷೆ: "ರೋಗಂಗಳಂ ತಿಳಿವುದು ನಿದಾನಮಕ್ಕುಂ" (ಮಂಗರಾ.೧೧೫-೨); ನಿದಾನಪ್ರಾಗ್ರೂಪಲಕ್ಷಣೋಪಶಯಾಪ್ತಿಗಳೆಂಬೈದು ತೆರದಿಂದಲೂ ರೋಗವ ಪರೀಕ್ಷಿಸುವುದು. ನಿದಾನವೆಂಬುದು ರೋಗಕ್ಕೆಲ್ಲಾ ಆದಿಕಾರಣವಾದಂಥಾದ್ದು (ಸಕವೈ. ೨೧) ; ಆ ಡಾಕ್ಟರುಗಳ ನಿದಾನಕ್ರಮದಂತೆ ಆ ರೋಗಿಗಳು ಪೂರ್ಣನಿರೋಗಿಗಳಾಗಿದ್ದರು (ಮನೋರೋ. ೧೦). ೫. ಕೊನೆ; ಅಂತ್ಯ ; ಮುಕ್ತಾಯ : "ಮುಗಿದ ಬಗೆಯೊಳು ನಿದಾನಮೆನಿಸಿರ್ಕು" (ಮಂಗರಾ. ೧೪೨-೧೯). ೬. [ಜೈನ] ಭವಿಷ್ಯಜನ್ಮದಲ್ಲಿ ನಿರ್ದಿಷ್ಟಸುಖವು ಬೇಕೆಂಬ ಅಪೇಕ್ಷೆ, —ಬಯಕೆ : ಮನಮಲ್ಲಿಯೆ ಕೀಲಿಸೆ . . . . ಗತಜೀವಿತನಂತವಿವೇಕದಿಂ . . . ಬಂದಿಲ್ಲಿ ನಿದಾನದಿಂದತಿಬಲಂಗೆ ಮಹಾಬಲನಾಗಿ ಪುಟ್ಟಿದಂ (ಆದಿಪು. ೨-೪೨) ; ಪಲಕಾಲಂ ತಪಂಗೆಯ್ದವಸಾನಕಾಲದೊಳ್ ನಿದಾನಪೂರ್ವಕಂ ಸತ್ತಶನಿಘೋಷನಾಗಿ ಪುಟ್ಟಿ (ಶಾಂತಿಪು. ೭-೪೪ ಪ); ಈ ಸಮಾಧಿಯ ಫಲದಿಂದೆನಗಿಂತಪ್ಪೈಶ್ವರ್ಯಮಕ್ಕೆಂದು ಸಂಸಾರಭೋಗಮಂ ಬಯಸುವುದು ನಿದಾನವೆಂಬುದು (ಪಸಾರ. ೩೭೧). 'ನಿದಾನಂಗೆಯ್' ಪರಾ. ℙ ಇದರಲ್ಲಿ ಪ್ರಶಸ್ತನಿದಾನ, ಅಪ್ರಶಸ್ತನಿದಾನ ಮತ್ತು ಭೋಗಕೃತನಿದಾನ ಎಂದು ಮೂರು ಬಗೆಗಳಿವೆ. ಮರಣಕಾಲದಲ್ಲಿ ತಾನು ಬಲಶಾಲಿಯಾಗಬೇಕು, ಮುಂದೆ ಧನಿಕರ ಮನೆಯಲ್ಲಿ ಹುಟ್ಟಬೇಕು ಎಂಬಿತ್ಯಾದಿ ಅಭಿಲಾಷೆಯುಳ್ಳುದೇ ಪ್ರಶಸ್ತನಿದಾನ. ಮುಂದಿನ ಜನ್ಮದಲ್ಲಾದರೂ ತನ್ನ ವೈರಿಯನ್ನು ಕೊಲ್ಲಬೇಕು ಎಂಬಿತ್ಯಾದಿಯಾಗಿ ಕ್ರೋಧಾವೇಶದಿಂದ ಇಷ್ಟಪಡುವುದು ಅಪ್ರಶಸ್ತನಿದಾನ. ತಾನು ದೇವತೆಯಾಗಿ ದಿವ್ಯಭೋಗಗಳನ್ನು ಅನುಭವಿಸಬೇಕು ಎಂಬಿತ್ಯಾದಿಯಾದ ಅಪೇಕ್ಷೆಯೇ ಭೋಗಕೃತನಿದಾನ. [ಸಂ.]

**ನಿದಾನಂಗೆಯ್** (ಕ್ರಿ). [ಜೈನ] ಯಾವುದಾದರೊಂದು ನಿರ್ದಿಷ್ಟ ಸುಖವು ಭವಿಷ್ಯಜನ್ಮದಲ್ಲಿ ಸಿಗಲಿ ಎಂದು ಅಪೇಕ್ಷಿಸು,—ಬಯಸು : ಪಾದಿಯುಂ ಶ್ರೀಯಾದೇವತೆಯ ವಿಭೂತಿಯಂ ಕಂಡು ನಿದಾನಂಗೆಯ್ದು ಕೆಲವುದಿವಸದಿಂ ಕಾಲಂಗೆಯ್ದು (ಪಡ್ಡಾರಾ. ೧೦೭-೨೩); ಎನ್ನನೊದೆದ ನಿನ್ನ ಕಾಲ್ಗಳನೆನ್ನ ಮಕ್ಕಳುಮಾನುಮೊಂದಾಗಿಯುಮೇನಾಗಿಯುಂ ಸೀಳ್ದು ಪೋೞ್ದು ತಿಂಬೆವೆಂದಾರ್ತಧ್ಯಾನದಿಂ ನಿದಾನಂಗೆಯ್ದು ಸತ್ತು (ಸುಕುಮಾ. ೫-೮ ಪ); ನಂದಯಶೆಗಂತಿಯರ್ ಎಮಗೆ ಮಱುಭವದೊಳಮಿವರೆ ಮಕ್ಕಳಕ್ಕೆಂದು ನಿದಾನಂಗೆಯ್ಕೆ (ನೇಮಿಪು. ೬-೫೮ ಪ) ; ಆ ಭೀರುವಾವ ಜನ್ಮದೊಳಂ ಮತ್ತೆನಗೆ ನವವಯಸದೊಳ್ ತಾಂ ಜನಿಯಿಸದಿರ್ಕೆಮ ವಿಷಾದಗರ್ಭಂ ಗರ್ಭಂ ಎಂದು ನಿದಾನಂಗೆಯ್ದು (ಚಂದ್ರಪು. ೩-೭೭ ಪ) ; ಈತನನಾನೀ ಭವದೊಳ್ ಘಾತಿಸಲಣಮಾಱದಿರ್ದೊಡಂ ಮಱುಭವದೊಳ್ ಘಾತಿಸುವೆನಕ್ಕೆನುತ್ತಾ ಪಾತಕನೀಯುಂದದಿಂ ನಿದಾನಂಗೆಯ್ದಂ (ಪರ್ಶ್ವಪು. ೩-೨೨). [ನಿದಾನ$_2$+ಕೆಯ್$_1$]

**ನಿದಾನಂಬಡೆ** (ಕ್ರಿ). ನಿಧಿಯನ್ನು ಹೊಂದು ; ಐಶ್ವರ್ಯವನ್ನು ಪಡೆ : ಗಂಡಂ ಬೆಸಸಿದೊಡೋಸದೆಗೊಂಡರ್ಹತ್ಪೂಜೆಯುಂ ಸುದಾನಮುಮಂ ಕೈಕೊಂಡೊಲ್ದು ಮಾಡುತಿಪ್ಪಾ ಪೆಂಡತಿಯಂ ಪಡೆದವಂ ನಿದಾನಂಬಡೆದಂ (ಸಮಪ. ೫-೧೨೮). [ನಿದಾನ$_1$+ಪಡೆ$_1$]

**ನಿದಾನಫಲ** (ನಾ). [ಜೈನ] ಪೂರ್ವಜನ್ಮದ ಅಂತ್ಯಕಾಲದಲ್ಲಿ ಕೈಕೊಂಡ ನಿದಾನದ ಪರಿಣಾಮ : ಇಂತು ವಿಗತಜೀವಿತೆಯಾಗಿ ನಿದಾನಫಲದಿಂದಾ ತ್ರಿವೇದಿಯ ಗರ್ಭದೊಳ್ ನೆಲಸುವುದುಂ (ಸುಕುಮಾ. ೫-೪೮ ಪ). [ನಿದಾನ$_2$+ಫಲ$_1$]

**ನಿದಾನವಂತ** (ನಾ). ೧. ತಾಳ್ಮೆಯಿಂದ ಕೂಡಿದವನು ; ಸೈರಣೆಯಿಂದ ಕೂಡಿದವನು : (ಕಿ). ೨. ತಡಮಾಡುವವನು ; ಸಾವಕಾಶ ಮಾಡುವವನು : (ಕಿ). [ನಿದಾನ$_1$+-ವಂತ]

**ನಿದಾನಶಲ್ಯ** (ನಾ). [ಜೈನ]ವ್ರತಗಳನ್ನು ಆಚರಿಸುವವನಿಗೆ ಉಂಟಾಗುವ ಮೂರು ಬಗೆಯ ಶಲ್ಯಗಳಲ್ಲಿ ಒಂದು ; ಭವಿಷ್ಯಜನ್ಮದಲ್ಲಿ ಇಂಥ ವಿಷಯೋಪಭೋಗಗಳು ದೊರೆಯಬೇಕೆಂದು ಬಯಸುವುದು ; ☞ ಮಾಯಾಶಲ್ಯ, ಮಿಥ್ಯಾತ್ವಶಲ್ಯ ಹಾಗೂ ನಿದಾನಶಲ್ಯವೆಂಬ ಮೂರು ಬಗೆಗಳಿವೆ. ನಿದಾನಶಲ್ಯದಲ್ಲಿ ಪ್ರಶಸ್ತನಿದಾನ, ಅಪ್ರಶಸ್ತನಿದಾನ ಮತ್ತು ಭೋಗಾರ್ಥನಿದಾನ ಎಂದು ಮತ್ತೆ ಮೂರು ಭೇದಗಳಿವೆ. ಇವು ಸಂಸಾರಕ್ಕೆ ಕಾರಣವಾಗಿವೆ : ನಿಜನಿತ್ಯಾನಂದಾತ್ಮೈಕತ್ವಭಾವನಾಸಂಜಾತಪರಮಾನಂದಾಮೃತಸೇವೆಯಿಲ್ಲದೆ ದೃಷ್ಟಶ್ರುತಾನುಮಾನಂಗಳೆನಿಪ ಪಂಚೇಂದ್ರಿಯ ವಿಷಯಂಗಳಪ್ಪ ಭೋಗೋಪಭೋಗಂಗಳಂ ಬಯಸುವುದು ನಿದಾನಶಲ್ಯಮಹುದು (ಶ್ರಾಪಕಾ. ೧೨೫-೩). [ನಿದಾನ$_2$+ಶಲ್ಯ$_2$]

**ನಿದಾನಶಾಸ್ತ್ರ** (ನಾ). ವ್ಯಾಧಿಯ ಮೂಲಕಾರಣವನ್ನು ತಿಳಿಯುವ ಶಾಸ್ತ್ರ ; ರೋಗನಿದಾನಶಾಸ್ತ್ರ : "ಕಾರಣವಿಜ್ಞಾನ ; ನಿದಾನಶಾಸ್ತ್ರ" (Actiology. ಪಾರಿಸ. ೨). [ನಿದಾನ$_2$+ಶಾಸ್ತ್ರ]

**ನಿದಾನಸ್ತ** (ನಾ). = ನಿದಾನವಂತ : (ಕಿ). [ನಿದಾನ$_1$+-ಸ್ತ]

**ನಿದಾನಿ** (ನಾ). = ನಿದಾನವಂತ : (ಕಿ). [ನಿದಾನ$_1$+-ಇ$_3$]

**ನಿದಾನಿಸು$_1$** (ಕ್ರಿ). ೧. ತಡಮಾಡು ; ವಿಳಂಬಮಾಡು : ಪ್ರಾಣ ಹೋಗುವಾಗಲೂ ಅದನ್ನು ತೆಗೆಯಲು ನಿದಾನಿಸುತ್ತಿದ್ದನು (ಹುಟ್ಟಹ. ೧೫೮); ಸ್ವಲ್ಪವೂ ನಿದಾನಿಸದೆ ಈ ಕೆಲಸವನ್ನು ಮಾಡಿ ಮುಗಿಸು(ರೂಢಿ). ೨. ಸಾವಧಾನದಿಂದ ಕೇಳು,—ವಿಚಾರಿಸು : ಇತ್ತ ನಿಜಭಾಷೆಗೆ ಪರಾಭವ ಹತ್ತಿರಾಯಿತು ನರ ನಿದಾನಿಸೆನುತ್ತೆ ಮುರರಿಪು ರಥವ ಬಿಟ್ಟನು ಕಡೆಯ ಮೋಹರಕೆ (ಕುಮಾರವ್ಯಾದ್ರೋ. ೧೪-೨೫) ; ಸ್ತ್ರಳದ ಹನ್ನೆರಡುಮಂದಿ ಆಯಗಾರರ ನಿದಾನಿಸಿ ಯಥಾಪ್ರಕಾರ ನಿಮ್ಮ ಸ್ಥಳ ಮಿರಾಸಿ ನಿಮಗೆ ಕೊಟು (ಎಕ. XII, ತಿಪ. ೧೧೨-೩೧ ; 1720). ೩. ನಿರ್ಧರಿಸು : ಒಂದು ಹರ ಹಿಡಿವಂಬು ಶಕ್ರನದೊಂದು ಕೌಬೇರಾಗ್ನಿ ವಾಯುವದೊಂದು ಪಾರ್ಥನ ಬತ್ತಳಿಕೆ ದಿವ್ಯಾಸ್ತ್ರ ತುಂಬಿಹವು . . . ಒಂದ ಕೊಬ್ಬರು ಗುಜು ನಿದಾನಿಸಲಿಂದು (ಕುಮಾರವ್ಯಾದ್ರೋ. ೧೫-೧೫) ; ಶಲ್ಯ ಮಾಡಿದ ಭಾಷೆಯವರೊಡನೆ ಆವನಂಘೈಸುವನೊ ಪಾರ್ಥನೊ ಪಾವಮಾನಿಯೊ ನಕುಲನೋ ಸಹದೇವನೋ ತಾನೋ ನಿದಾನಿಸಲಱಿಯೆನಾನೆಂದ (ಕುಮಾರವ್ಯಾಶ. ೧-೨೯) ; ಮಾನನಿದಾನೆಯ ಮಂದಶ್ವಾಸಮನೇನವಸುರಭಿಸಮೀರಂಗೆತ್ತು ನಿದಾನಿಸಿಯುಂಗಜನೆಂಬ ಮಹಾಕಾಳೋರಗನೆಯ್ದುರುತ (ಜಯಕಾ. ೩-೫೧). [ನಿದಾನ$_1$+-ಇಸು$_3$]

**ನಿದಾನಿಸು$_2$** (ಕ್ರಿ). ೧. ರೋಗ ಮುಂತಾದುವುಗಳ ಮೂಲಕಾರಣವನ್ನು ಪರೀಕ್ಷಿಸು : ಪುರುಷರ ಬಲದ ಕೈಯ ಹೆಬ್ಬೆರಳ ಮೂಲದಲ್ಲಿ ಮೂರು ಬೆರಳ ತುದಿಗಳಿಂದೊತ್ತಿ ಪಿಡಿದು ನಾಡಿಯನ್ನು ನಿದಾನಿಸಬೇಕು (ಪಕವೈ.೧೦) ; ಅಲ್ಲಲ್ಲಿಯ ವೈದ್ಯ ಡಾಕ್ಟರುಗಳಿಂದ ನಿದಾನಿಸಿದ್ದಾಯಿತು. ಆದರೆ ಪ್ರಕೃತಿಯು ಸರಿಯಾಗಲಿಲ್ಲ (ಶ್ರೀರಂಗ.೩೧) ; ಒಬ್ಬ ರಾಜಕನ್ನಿಕೆಗೆ ಒಂದು ವಿಚಿತ್ರವಾದ ರೋಗ . . . ಆ ರೋಗ ಆವಳು ನಕ್ಕರೆ ನಿವಾರಣೆಯಾಗುವುದೆಂದು ರಾಜವೈದ್ಯರು ನಿದಾನಿಸಿದರು (ಕಥಕ. ೬೮). ೨. = ನಿದಾನಂಗೆಯ್ : ಕಿಱಿಯ ಪದ್ಮಾವತಿಯೋರ್ವ ಸೂಳೆಗೆ ಯಿರ್ವರು ಕೈಗೆಯ್ವುದ ಕಂಡು ಪಿರಿದು ಮನದಿ ರಾಗದಿ ನಿದಾನಿಸಿ ತಾ ಸುರವೇಶ್ಯೆಯಾಗಿರ್ದು (ಶಾಂತೀಚ. ೨-೫೪). [ನಿದಾನ$_2$+-ಇಸು$_3$]

**ನಿದಾನೆ** (ನಾ). ಭವಿಷ್ಯಜನ್ಮದಲ್ಲಿ ಯಾವುದೋ ಒಂದು ನಿರ್ದಿಷ್ಟ ಅಪೇಕ್ಷೆಯನ್ನು ಹೊಂದಿದವಳು : ನಂದಯಶೆಗಂತಿಯರ್ ಎಮಗೆ ಮಱುಭವದೊಳಮಿವರೆ ಮಕ್ಕಳಕ್ಕೆಂದು ನಿದಾನಂಗೆಯ್ಕೆ . . . ತಾನುಂ ನಿದಾನೆಯಾದಳ್ (ನೇಮಿಪು. ೬-೫೮ ಪ). [ನಿದಾನ$_2$+-ಎ$_2$]

**ನಿದಾರುಣ** (ಗು). ಬಹು ಉಗ್ರವಾದ; ಅತಿ ಕ್ರೂರವಾದ : ನಿದಾರುಣ, ನಿಷ್ಕಾರಣಹಿಂಸೆಯನ್ನು ನೀರಿನಲ್ಲಿಯೂ ನೆಲದ ಮೇಲೆಯೂ ಆಕಾಶದಲ್ಲಿಯೂ ಗುಹೆ ಗಹ್ವರಗಳಲ್ಲಿಯೂ ದೇಶದೇಶಾಂತರಗಳಲ್ಲಿಯೂ ಮನುಷ್ಯನು ವ್ಯಾಪ್ತಗೊಳಿಸಿಬಿಡುತ್ತಿದ್ದನು (ನಿಬಂಧ. I, ೮೭). [ಸಂ.]

**ನಿದಾಹ** (ನಾ). ಬೇಸಗೆ : 'ನಿದಾಹಸಮಯ' ಪರಾ.
[<ಸಂ. ನಿದಾಘ]

**ನಿದಾಹಸಮಯ** (ನಾ). ಬಿಸಿಲುಕಾಲ ; ಬೇಸಗೆಯ ಸಮಯ : ಚೋಳಕೀರ್ತಿವಲ್ಲಿಪಲ್ಲವ ನಿದಾಹಸಮಯದಿವಸಕರಂ (ಕಇಅ. ೨೧-೭-೧೮; 1083). [ನಿದಾಹ+ಸಮಯ$_1$]

**ನಿದಿ** (ನಾ). = ನಿಧಿ : ನಿಧಾನ—ನಿದಾನ, ನಿಧಿ—ನಿದಿ (ಶಪದ. ೨೫೫ ಪ್ರಯೋ) ; ಧರೆ, ದರೆ ; ನಿಧಿ, ನಿದಿ (ಶಬ್ದಾನು. ೧೪೩ ಪ್ರಯೋ).
[<ಸಂ. ನಿಧಿ]

**ನಿದಿಗ್ಧ** (ಗು). ೧. ಬಳಿದ ; ಪೂಸಿದ ; ಸವರಿದ. ೨. ಒಟ್ಟುಗೂಡಿಸಿದ ; ಸಂಗ್ರಹಿಸಿದ ; ಕಲೆಹಾಕಿದ. (ನಾ). ೩. ಒಟ್ಟುಗೂಡಿಸಿದುದು ; ರಾಸಿಹಾಕಿದುದು : "ನಿದಿಗ್ಧಸಂಕೀರ್ಣಮಾಚಿತಂ ಸಮುಚಿತ್ತಂ" (ಪಸ್ತುಕೋ. ೧೦೫-೪೫) ; "ನಿದಿಗ್ಧ, ಉಪಚಿತ, ಒದಗಿಸಲ್ಪಟ್ಟುದು" (ನಾಚಿರಾ. ಕಿ). [ಸಂ.]

**ನಿದಿಗ್ಧಿಕೆ** (ನಾ). ನೆಲಗುಳ್ಳದ ಗಿಡ ಮತ್ತು ಅದರ ಕಾಯಿ ; ಕಂಟಕಾರಿಕೆ : "ನಿದಿಗ್ಧಿಕಾ, ಕಂಟಕಾರಿಕಾ, ವ್ಯಾಘ್ರೀ—ಈ ೩ ನೆಲಗುಳ್ಳಂ" (ಹಲಾಯು. ೧೦೧-೪೬೫). [ಸಂ. ನಿದಿಗ್ಧಿಕಾ]

**ನಿದಿಧ್ಯಾಸ** (ನಾ). [ಯೋಗ] ಅರಿತ ವಿಷಯಕ್ಕೆ ಸಂಬಂಧಿಸಿದ ಆಳವಾದ ಚಿಂತನೆ,—ಸತತವಾದ ಅನುಸಂಧಾನ ; ☞ ಮೋಕ್ಷಾ

ಪೇಕ್ಷೆಗೆ ಮೂರು ಸಾಧನಗಳಿವೆಯೆಂದು ಯೋಗಿಗಳು ತಿಳಿಸುತ್ತಾರೆ. (೧) ಶ್ರವಣ—ಗುರುಗಳಿಂದ ವೇದಾಂತದ ಅರ್ಥವನ್ನು ಕೇಳುವುದು. (೨) ಮನನ—ಆ ಅರ್ಥದ ಚಿಂತನೆ. (೩) ನಿದಿಧ್ಯಾಸ(ನ)—ಮತ್ತೆ ಅದರ ನಿರಂತರವಾದ ಧ್ಯಾನ. ಈಚೀಚೆಗೆ ಎಲ್ಲ ಆಳವಾದ ಚಿಂತನೆಗೂ ಈ ಪದ ಉಪಯುಕ್ತವಾಗುತ್ತಿದೆ: ತ್ರಿವಿಧವಿಘ್ನಂಗಳಿಗೆ ಪರಿಹಾರವನು ಕೇಳ್ವೇದಾಂತಶಾಸ್ತ್ರಶ್ರವಣದಿಂದ ಜ್ಞಾನಮುಮ್ಮನನದಲಿ ಸಂಶಯವೂ ತವೆ ನಿದಿಧ್ಯಾಸದಲಿ ವಿಪರೀತವದ ಭಾವನಜಾರ್ವದಿಂತರಿಪವರೆ ಯೋಗ್ಯರು ಮುಕ್ತಿಗೆ (ಗಗತಾ. ೧೩–೧೬); ಘನಮಹಾಪಾತಕವು ಕಳೆದವು ದಿನಕರನ ತೆರನಂತೆ ತೋರಲು ಘನಮಹಾತ್ಮರು ಪೇಳ್ವರದನನು ನಿದಿಧ್ಯಾಸವೂಯೆಂದ (ಜ್ಞಾನಸಿಂ. ೧೨–೨೭); ಜ್ಞಾನಿಗಳಿಗೆ ಮನಸ್ಸು ಬಹಿರ್ಮುಖವಾಗಿದ್ದರೂ ಅವರಿಗೆ ಸರ್ವವೂ . . . ನಿದಿಧ್ಯಾಸವೆನಿಸಿಕೊಳ್ಳುವುದು (ಅಸ್ಮೃತ. ೬–೫೧ ಟೀಕು); ಅಹಂ ಬ್ರಹ್ಮಾಸ್ಮಿ ಅಹಂ ಬ್ರಹ್ಮಾಸ್ಮಿಯೆಂಬ ಸ್ವಜಾತಿಯ ವೃತ್ತಿಗಳಲ್ಲಿ ಆತ್ಮನು ಸಂಧಾನವ ಮಾಡಿಕೊಂಡರೆ ನಿದಿಧ್ಯಾಸವೂ (ಈಶ್ವಸ್ವ. ೨೧–೧೦). [ಸಂ.]

**ನಿದಿಧ್ಯಾಸನ** (ನಾ). = ನಿದಿಧ್ಯಾಸ : ಮನನದಿಂ ಶ್ರವಣದಿ ನಿದಿಧ್ಯಾಸನದಿ ನಿವ[ವು]ಗಳನೊತ್ತಿ ವಿದ್ಯಾವಿನಯಸೌಶೀಲ್ಯದಲಿ ನಡೆವುದು (ಕುಪ್ಯಾಅ. ೧೫–೧೬); ಶ್ರವಣ ಮನನವಾ ನಿದಿಧ್ಯಾಸನವೆನೆ ತ್ರಿಪುಟಭೇದಂಗಳಿಂದಂ ಪುಟ್ಟ ರಾಜಿಸಿರ್ಪ ಪರೋಕ್ಷದನುಭವಂ ಬಾಧಕಕ್ಕಲ್ಲಿಯಿಾ ನೆಪದೊಳಿಂತಾಗೆ ವೇದಾಂತವಾಕ್ಯಶ್ರವಣವಾಗಿ ಪ್ರಧಾನವಹುದ್ಯೆ (ವೀಶೈಪು. ೫–೧೧–೧೧); ಮನಕ್ಕೆ ಗೋಚರವಾದ ವಸ್ತುವಿನಲ್ಲಿ ಭಾವಾಭಾವಂಗಳಿಲ್ಲದೆ ಕಲ್ಪಿತಾ ಕಲ್ಪಿತಂಗಳಿಲ್ಲದೆ ಮನೋಲಯವಾಗುವದೇ ನಿದಿಧ್ಯಾಸನವೆನಿಸುವದು (ನಾನಾಗು. ೩೦–೧೮); (ಆತ್ಮನನ್ನು) ಶ್ರವಣ ಮಾಡಬೇಕು, ಮನನ ಮಾಡಬೇಕು . . . ನಿದಿಧ್ಯಾಸನ–ಇವುಗಳನ್ನು ಮಾಡಬೇಕು (ಬ್ರಹ್ಮಭಾ. I, ೫೨); ನಿದಿಧ್ಯಾಸನ ಎಂದರೆ ಧ್ಯಾನ (ಭಾತತ್ತ್ವ. ೪೩೯). [ಸಂ.]

**ನಿದುಗಟ್ಟೆ** (ನಾ). ಒಂದು ಊರಿನ ಹೆಸರು : ತತಃ ಕಿಞ್ಚದನ್ತರೇ ನಿದುಗಟ್ಟನಾ ದಕ್ಷಿಣಾನ್ತಭಾಗಂ (ಮೈಆರಿ. ೧೯೪೨, ೭೫–೧೧೫ ; 819). [ ? ]

**ನಿದೇಶ** (ನಾ). ಆಜ್ಞೆ ; ಆದೇಶ ; ಅಪ್ಪಣೆ : ಈ ಭಾಗದಿಂದ ಕೊಡಲಾಗಿರುವ ಅಧಿಕಾರಗಳಲ್ಲಿ ಯಾವುದೊಂದನ್ನಾದರೂ ಚಲಾಯಿಸುವ ಸಂಬಂಧವಾಗಿ ಉಚ್ಚತಮನ್ಯಾಯಾಲಯದವರು ಆಯಾ ಸಂದರ್ಭದಲ್ಲಿ ಉಚಿತವಾಗಿರಬಹುದಾದಂತೆ . . . ಯಾವ ನಿದೇಶವನ್ನಾಗಲಿ, ಆದೇಶವನ್ನಾಗಲಿ ಅಥವಾ ನಿರೂಪಲೇಖವನ್ನಾಗಲಿ ಸಾದರು ಮಾಡಲು ಶಕ್ತರಾಗಿ ಇರತಕ್ಕುದು (ಭಾಧಾನ. ೧೯). 'ನಿರ್ದೇಶ' ಪರಾ. [ಸಂ.]

**ನಿದ್ದಂಡಿ** (ಗು). ಸೋಮಾರಿಯಾದ ; "ಮಬ್ಬ ; ಆಲಸಿ" (ಜಾನಕೋ. ೧೧). [<ನಿದ್ದೆ]

**ನಿದ್ದಿಸು** (ಕ್ರಿ). ನಿದ್ರೆಮಾಡು; ನಿದ್ರಿಸು : ಪದುಮಮಿತ್ರನ ಉದಯ ಹರಿಗಭ್ಯುದಯದಂತಿರೆ ರಾಮ ನಿದ್ದಿಸದುದಯದಿಂದುಪವಾಸವಟ್ಟನು ಮೂಜುದಿನ ತನಕ (ತೌರಾ. ೧೫–೩೮); ಸ್ವಾಗತವನಲ್ಲಿ ಕೊಳ್ಳುತೆ ನೀಗುತೆ ಕಷ್ಟವನವರ್ ಸೊಗದೆ ನಿದ್ದಿಸಿದರ್ (ಮೈಸೂಮ. ೬–೧೩೩); ಎಂದುಂ ನಿದ್ದಿಸದ ಆ ಸ್ಯೂಸನಾಯುಧಂ . . . ಅವನ ಮೇಲ್ ಕಟ್ಟೆಜಗಿ . . . ಎತ್ತಿ ಬಡಿಯಿತ್ತು ಅವನನ್ (ಬದ್ಧಪ್ರ. ೨೦–೪೧೪). 'ನಿದ್ರಿಸು' ಪರಾ. [ನಿದ್ದೆ+–ಇಸು$_3$]

**ನಿದ್ದೆ** (ನಾ). ಎಚ್ಚರವಿಲ್ಲದಿರುವ ಸ್ಥಿತಿ ; ನಿದ್ರೆ : "ನಿದ್ರಾ, ಶಯನಂ, ಸ್ವಾಪಃ, ಸ್ವಪ್ನಃ, ಸಂವೇಶಃ –೫ ನಿದ್ದೆಯ ಹೆಸರುಗಳು" (ಸಿದ್ಧಾಂತಿ.೬೩); ಇಂದೆನಗೆ ನಿದ್ದೆ ಬಾರದು ಬಂದಪುದಾಲಸ್ಯಮಸದಳಂ (ಸುಕುಮಾ. ೭–೧೬); ಪಸಿವಱಿಯದೆ ತೃಷೆಯಱಿಯದೆ ದೆಸೆಯಱಿಯದೆ ನಿದ್ದೆಯಱಿಯದಿರುಳುಂ ಪಗಲುಂ[ಪಾಠಾಂ. ಮದನ ಮನದಿ ಪಲವುಂ ಕಾಲಂ]ಕುಸುಮದೆ ಲಿಂಗಮನೊಸೆದರ್ಚಿಸಿದ ಫಲಂ ಕಿರ್ಚಿನೊಳಗೆ ಬೇವಂತಾಯ್ತು (ಗಿರಿಕ. ೮–೬೯); ಹಸುಳೆ ನಿದ್ದೆಯ ಹಾವ ಹೊಯ್ದೆಬ್ಬಿಸುವರೇ (ಕುವ್ಯಾಕ. ೯–೬); ಪುಂಡರೀಕಾಕ್ಷಿ ನಿದ್ದೆಯೊಳಾನೊಱಗಿರೆ ಕಂಡೆನು ಬಲು ಕೆಟ್ಟ ಕನಸ (ಮೋಹತ. ೪–೮೯); "ಕಲ್ಕಿ ! ಕಲ್ಕಿ !" ಎನ್ನುತ ಚೀರಿ ಕನಸೊಡೆದೆದ್ದೆ ! ಇನ್ನೆಲ್ಲಿಯ ನಿದ್ದೆ ? (ಪಾಂಚಜ. ೭೧–೨೧); ಮುದ್ದೆಯಂತೆ ನಿದ್ದೆ. (ಗಾದೆ).

ನಿದ್ದೆ ಕಾಯು ನಿದ್ದೆಕಟ್ಟು : ಇಡೀ ರಾತ್ರಿಯೆಲ್ಲಾ ನಿದ್ದೆ ಕಾಯಲು ನನ್ನಿಂದ ಸಾಧ್ಯವಿಲ್ಲ (ರೂಢಿ). **ನಿದ್ದೆ ಮಂಪರು**=ನಿದ್ರೆಯಿಂದುಂಟಾದ ಜಡತ್ವ,—ಆಲಸ್ಯ : ನಿದ್ದೆಮಂಪರಿನಲ್ಲಿ ಅವಳು ಬಡಬಡಿಸುತಿದ್ದಾಳೆ (ರೂಢಿ). **ನಿದ್ದೆ ಮಾಡು** = ನಿದ್ದೆಗೆಯ್ : ಜಗದ ಕೂಡ ಬಂದೆವು ಜಗಳಾಡಿ, ಕೊಟ್ಟೆರಿ ನಿಮ್ಮ ತೊಡಿ, ಅಲ್ಲಿ ನಿದ್ದೆಮಾಡಿ ಎದ್ದೇವೀಗ ಯಾವುದೋ ಹೊಸಾ ನಸುಕಿನ್ಯಾಗ (ಹಾಡುಪಾ. ೪೦–೧). **ನಿದ್ದೆ ಹತ್ತು** =ನಿದ್ದೆಬರು : ನೀ ಏನೂ ಹೆದರಬೇಡ ಚಂದ್ರಭಾಗೀ, ಡಾಕ್ಟರರು ಹೇಳಿದ್ದಾರಲ್ಲ–ಅವಳಿಗೆ ನಿದ್ದೆ ಹತ್ತಿದೆ (ಮೂರುದಾ. ೩೧೩); ರಾಸಮಣಿಯು ನಿಶ್ಚೇಷ್ಟಿತಳಾಗಿ ನಿದ್ದೆ ಹತ್ತಿ ಮಲಗಿದ್ದಳು (ಇಪ್ಪಕ. ೩೯೫). **ನಿದ್ದೆ ಹರಿ**=ಎಚ್ಚರವಾಗು ; ನಿದ್ರೆತಿಳಿ : ನಿದ್ದೆಹರಿಯುವ ಹೊತ್ತು ನಸುಕುಹರಿಯುವ ಹೊತ್ತು (ನನಲ್ಲ. ೧೪–೬). **ನಿದ್ದೆ ಹಾರು**= ಎಚ್ಚರವಾಗು ; ನಿದ್ರೆ ಕೆಡು : ರಾತ್ರಿ ನಿದ್ದೆಹಾರಿ ಒಂದು ನಿಮಿಷ ಸಹ ಅವನ ಕಣ್ಣಿಗೆ ಕಣ್ಣು ಹಚ್ಚಲಾಗಿಲ್ಲ (ಇಪ್ಪಕ. ೩೯೪).

[<ಪ್ರಾ. ಣಿದ್ದಾ./ಸಂ. ನಿದ್ರಾ]

**ನಿದ್ದೆಕಟ್ಟು** (ಕ್ರಿ). ನಿದ್ರೆಯನ್ನು ಹತ್ತಿಕ್ಕು,—ತಡೆ; ನಿದ್ದೆಮಾಡದೆ ಇರು ; ಜಾಗರಣೆ ಮಾಡು : ಇತ್ತೀಚಿನ ದಶಾವತಾರ ಇಡೀ ನೋಡಲಾರದೆ ನಿದ್ದೆಕಟ್ಟಲು ಟ್ರ್ಯಾಜೆಡಿ ಆದದ್ದೂ ಉಂಟು (ಹುಚ್ಚಾಟ. ೮೨). [ನಿದ್ದೆ+ಕಟ್ಟು$_1$]

**ನಿದ್ದೆಕಣ್ಣು** 'ನಿದ್ದೆಗಣ್ಣು' ನೋ.

**ನಿದ್ದೆಗಣ್ಣು, ನಿದ್ದೆಕಣ್ಣು** (ನಾ). ನಿದ್ರೆಯಿಂದ ಮುಚ್ಚಿಕೊಳ್ಳುತ್ತಿರುವ ಕಣ್ಣು ; ನಿದ್ರೆಯಿಂದ ಅರೆಮುಚ್ಚಿದ ಕಣ್ಣು : ನಿದ್ದೆಗಣ್ಣೊಳೆದರ್ಜ ಗೂಗೆದಲೆಯನುದ್ದಂ ನೆಗಪಿ ಪರಿವ ಕದ್ದಲಿಗಳುಮಂ . . . ಕಂಡು (ಲೀಲಾಪ. ೫–೧೧೪ ಪ); ಗುದ್ದಲಿಗೆ ಹೊನ್ನ ಹಿಡಿಯೇಕೆ ಸೂಳೆಗೆ ನಿದ್ದೆಗಣ್ಣೇಕೆ (ಸರ್ವಜ್ಞ. ೧೮೯೩); ಗದ್ದಿಗೆಯ ಬಳಿ ಕೆಡವಿದರು . . . ನಿದ್ದೆಗಣ್ಣಿನ, ಒದ್ದೆಕೂದಲ ಡೊಂಬನಾ (ಕಎಪು. ೪೦–೨೯); ಟೈವಾಜ್ಞೆಯೆಂದು ನಾನು ಬಗೆದಿದ್ದು ನಿದ್ದೆಗಣ್ಣಲ್ಲಿದ್ದ ನನ್ನ ಭ್ರಮೆಯೋ . . . ನನ್ನ ಅಹಂಕಾರದ ಮೋಸವೋ ಬಗೆಹರಿಯಲಿಲ್ಲ (ಹೊಸಕ್ಷಿ. ೨೫೨); ಬೀಗರ ಪರಕೀಯಮುಖಗಳನ್ನು ನಿದ್ದೆಗಣ್ಣಿನಿಂದಲೆ ಬಂದು ಸೋಜಿಗದಿಂದ, ಕುತೂಹಲದಿಂದ ಕದ್ದುಕದ್ದು ನೋಡುತ್ತಿದ್ದೆ (ವೈಸಿ. ೭). **ನಿದ್ದೆಕಣ್ಣು:** ನಿದ್ದೆಕಣ್ಣಿ ನಾನಿದ್ದೆ ಗಂಡನೆಂದು ಬುದ್ಧಿಯಿಲ್ಲದೆ ಕೂಡಿದೆ (ಪುರಂದ. ೧–೬೦–೩). [ನಿದ್ದೆ+ಕಣ್ಣು(<ಕಣ್)]

**ನಿದ್ದೆಗರೆ** (ಕ್ರಿ). ನಿದ್ರೆಮಾಡು ; ನಿದ್ರಿಸು : ಮಗ್ಗುಲೊಳಗಿದ್ದವನ ಕೂಟಕೊದಗಲಾಱದೆ ನಿದ್ದೆಗರೆದು ವದನಕ್ಕೆ ಮಸಿಸುಣ್ಣವ ಬರೆಯಿಸಿಕೊಂಡ ಚದುರೆವೆಣ್ಣಲ್ಲವೆ ನೀನು (ಕಂನವಿ. ೬–೧೮೬). [ನಿದ್ದೆ+ಕರೆ$_1$]

**ನಿದ್ದೆಗುಳಿಗೆ** (ನಾ). ನಿದ್ರೆಯನ್ನು ಬರಿಸುವ ಮಾತ್ರೆ : ನಿದ್ದೆಗುಳಿಗೆ ಕೊಟ್ಟು ಇದನ್ನೆಲ್ಲ ಗುಣಪಡಿಸಬಹುದೇ ? (ಮೂರುದಾ. ೩೧೪). [ನಿದ್ದೆ+ಗುಳಿಗೆ$_1$]

**ನಿದ್ದೆಗೆಡಿಸು** (ಕ್ರಿ). ನಿದ್ರೆಯನ್ನು ಕೆಡಿಸು ; ಎಬ್ಬಿಸು : ನಿದ್ದೆಗೆಡಿಸಿದುದೆ ಕಾರಣವಾಗಿ ಹೆಂಡತಿಗೂ ಶಿಷ್ಯನಿಗೂ ಶಾಪ ಕೊಟ್ಟ ಋಷಿಗಳು ನನ್ನ ಬೆನ್ನು ಕಟ್ಟಿ ನಿಂತಿದ್ದಾರೆ (ಗಾಳಿಪ. ೧೪೯). [ನಿದ್ದೆಗೆಡು + -ಇಸು$_3$]

**ನಿದ್ದೆಗೆಡು** (ಕ್ರಿ). ನಿದ್ರೆ ಇಲ್ಲದಿರು ; ನಿದ್ರೆ ಮಾಡದಿರು ; ನಿದ್ರೆ ಕಟ್ಟು : ಅಲಸದೆ ಮಾಡಿ ಬೇಸಱದೆ ಸಾಲ್ವುವಿದೆನ್ನದೆ ಮೆಯ್ಯೊಗಕ್ಕೆ ಪಂಬಲಿಸದೆ ನಿದ್ದೆಗೆಟ್ಟು [ನಿಡು]ಜಾಗರದೊಳ್ ತೊಡರ್ದೇಕಪಾದದೊಳ್ ಬಲಿದುಪವಾಸದೊಳ್ ನಮೆದು (ಪಂಪಭಾ. ೧-೧೩೬) ; ನಿದ್ದೆಗೆಟ್ಟೊಡೆ ನಾಳೆ ಹಸಿವಿಲ್ಲದೆನ್ನವಂ ಇದ್ದಂತೆ ಇಪ್ಪನೇಸುವನುಣ್ಣನೆನ್ನವಂ (ಕಣ್ಣ. ರ. ದೇ. ೧೩೨-೧೧) ; ನಿದ್ದೆಗೆಟ್ಟವನೋ ಬುದ್ಧಿಗೆಟ್ಟವನೋ ? (ಗಾದೆ). [ನಿದ್ದೆ + ಕೆಡು$_1$]

**ನಿದ್ದೆಗೆಯ್** (ಕ್ರಿ). ಮಲಗು ; ನಿದ್ರೆಮಾಡು : ಪುಟ್ಟಂ ಸತ್ತೊಂ [ಕೆಟ್ಟಂ] ಕೊಟ್ಟೊಂ ಬಾಟ್ಟನ್ನಮಿಂದ್ರಿಯಾಳಿಗೆ ಪಸರಂಗೊಟ್ಟಂ ಮೆಯ್ಯೆಚ್ಚದವೋಲುಟ್ಟುಂಡುಂ ನಿದ್ದೆಗೆಯ್ದು ಸುಖಮಂ ಪಡೆಯಾ (ಶಾಂತಿಪು. ೮-೧೩೪) ; ನಿದ್ದೆಗೆಯ್ತುಂದೆ ಇನ್ನಾವ ದುಗುಡಂ ಬೇಡ ಇದ್ದಪೆಂ ಕಾಹಾಗಿ ಒಂದುಂ ಭಯಂ ಬೇಡ (ಕಣ್ಣ. ರ. ದೇ. ೧೩೨-೭) ; ಸತಿಪತಿಗಳ್ ಸುಖದಿಂ ಪರ್ಯಂಕಾಗ್ರದೊಳ್ ನಿದ್ದೆಗೆಯ್ವಾಗಳ್ (ಹವ್ಯಾ. ರ. ೨-೧೬ ಪ) ; ಉದ್ಯೋಗ ವೆವಹಾರ ನೃಪಸೇವೆಯಾಳ್ದರು ಮಧ್ಯರಾತ್ರಿಗೆ ಬರ್ಪನಕ ನಿದ್ದೆಗೆಯ್ದಂತೆ ಮಂದಿರದೊಳು ಹಾದರವಿದ್ದೆಯಂಗನೆಗಳೊಪ್ಪಿದರು (ಮೋಹತ. ೧೮-೨೯). [ನಿದ್ದೆ + ಕೆಯ್$_1$]

**ನಿದ್ದೆಗೇಡು** (ನಾ). ನಿದ್ರೆಯಿಲ್ಲದಿರುವಿಕೆ ; ನಿದ್ದೆಗೆಡುವಿಕೆ : ಕುಂಭಕರ್ಣನಿಗೆ ನಿದ್ದೆಗೇಡಿನಿಂದ ನಾಲ್ಕೈದು ದಿವಸ ಮೈಯಲ್ಲಿ ತುಸು ಸ್ವಸ್ಥವಿದ್ದಿಲ್ಲ (ಮುಂಗಾಪು. ೯೮). [ನಿದ್ದೆ + ಕೇಡು]

**ನಿದ್ದೆಗೊಳ್** (ಕ್ರಿ). ೧. ನಿದ್ರೆಮಾಡು. ೨. (ಅಲಂ) ಸಾಯು; ಮರಣ ಹೊಂದು : ನಾಲ್ಗಳಿಗೆಯೊಳೆ ರಕ್ಕಸಬಲದೊಳಡ್ಡವಡೆ ನಿದ್ದೆಗೊಂಡುದು (ಅದ್ಭು. ತ. ೪೭-೧೨). [ನಿದ್ದೆ + ಕೊಳ್$_1$]

**ನಿದ್ದೆತಿಳಿ** 'ನಿದ್ದೆದಿಳಿ' ನೋ.

**ನಿದ್ದೆದಿಳಿ,** ನಿದ್ದೆತಿಳಿ (ಕ್ರಿ). ನಿದ್ರೆಯಿಂದ ಎಚ್ಚರಗೊಳ್ಳು ; "ಎಚ್ಚರಗೊಳ್" (ಪ್ರಭಣ್ಣ). **ನಿದ್ದೆತಿಳಿ :** ನಿದ್ದೆತಿಳಿದೆರ್ದುವು ನಲ್ಲರ್ ಪೊಣರ್ ನಿಶಾಂತ್ಯದೊಳ್ (ಸೂಕ್ತಿಸು. ೯-೬೦) ; ಸುನೀತಿದೇವಿ ನಿದ್ದೆ ತಿಳಿದು ಎದ್ದು ಕುಳಿತಳು (ನನಲ್ಲ. ೨೩ ಪಲ್ಲವಿ). [ನಿದ್ದೆ + ತಿಳಿ$_1$]

**ನಿದ್ದೆನೆಲೆ** (ನಾ). ನಿದ್ರೆಯ ಆಳ,—ನೆಲೆ : ನಿದ್ದೆನೆಲೆ ನಮಗಿಲ್ಲ ; ತಿಳಿದೀತೆಂತು ಸಾವಿನ ಆಳವು ? (ಹಾಡುಪಾ. ೫೦-೧೦). [ನಿದ್ದೆ + ನೆಲೆ]

**ನಿದ್ದೆಬರು** (ಕ್ರಿ). ನಿದ್ರೆಯು ಆವರಿಸು ; ನಿದ್ರೆಬರು : ಆ ಪಂಡಿತನಿಗೆ ದಿನದಿನಕ್ಕೆ ಚೆನ್ನಾಗಿ ಜಾಡಿಸಿ ಹಾಸಿಗೆ ಹಾಸದಿದ್ದರೆ ನಿದ್ದೆಬರುತ್ತಿದ್ದಿಲ್ಲ (ಮುಂಬಯಿ. ೪-೧೩೪) ; ಭವಾನಿಚರಣನಿಗೆ ನಿದ್ದೆಬರುತ್ತಿರಲಿಲ್ಲ (ಇಪ್ಪ. ಕ. ೩೯೫). [ನಿದ್ದೆ + ಬರು (< ವರ್)]

**ನಿದ್ದೆಮೊಬ್ಬು** (ನಾ). ನಿದ್ರೆಯ ಜಡತೆ ; ನಿದ್ರಾಲಸ್ಯ : ನಿದ್ದೆಮೊಬ್ಬಿನಲ್ಲಿ ಅವನು ಏನು ಮಾತಾಡುತ್ತಿದ್ದಾನೆಂದು ಅವನಿಗೇ ಗೊತ್ತಿಲ್ಲ (ರೂಢಿ). [ನಿದ್ದೆ + ಮೊಬ್ಬು (< ಮರ್ಬು)]

**ನಿದ್ದೆವೋಗು,** ನಿದ್ದೆಹೋಗು (ಕ್ರಿ). ನಿದ್ರೆ ಮಾಡು ; ಮಲಗು : ಅಂತು ಬಗೆಯ ಬಗೆವಗೆಯ ನೆನಪಿನ ಕಳವಳದಿಂ ನಿದ್ದೆವೋದ ರಾಯಂ . . . ಕನಸಂ ಕಂಡು ಪೊಟ್ಟಜಿಕೆಯೊಳೆಟ್ಟು ನಿತ್ಯಕರ್ಮಂಗಳಂಗೆಯ್ದೋಲಗಮಂ ಪುಗುತಂದಂ (ರಾಮಾಶ್ವ. ೭೫-೧೫) ; ಅವನು ನಿದ್ದೆವೋಗುವ ಕಲ್ಮಂಚವಿರುವ ಸಜ್ಜೆಗೆ ಹೊಸದಾಗಿ ಕಟ್ಟಿಸಿರುವ ಗುಪ್ತಮಾರ್ಗದ ಬಾಗಿಲುಗಳನ್ನು ಬಲ್ಲಿರೇನು ? (ಮಂತ್ರಶ. ೫೩-೧೭). **ನಿದ್ದೆಹೋಗು:** ನಿದ್ರಾಣಃ, ಶಯಿತಃ—೨ ನಿದ್ದೇ ಹೋಗುವವನ ಹೆಸರು (ಸಿದ್ಧಾಂತಿ. ೩೩೧). [ನಿದ್ದೆ + ಪೋಗು$_1$]

**ನಿದ್ದೆಹೋಕ** (ನಾ). ಸದಾ ನಿದ್ರೆ ಮಾಡುವವನು ; ಸೋಂಬೇರಿ ಮನುಷ್ಯ : "ತೂಕಡಿಕೆಯ, ಗಮನವಿಲ್ಲದ,—ಮನುಷ್ಯ ; ಸೋಂಬೇರಿ; ನಿದ್ದೆಹೋಕ" (Sleepyhead. ಇಂಕನ್ನಿ). [ನಿದ್ದೆ + ಹೋಕ (< ಪೋಕ)]

**ನಿದ್ದೆಹೋಗು** 'ನಿದ್ದೆವೋಗು' ನೋ.

**ನಿದ್ರಸ್ತ** (ನಾ). ಮಲಗಿರುವವನು ; ನಿದ್ರಿಸುವವನು : ತಾನ ತೊಟ್ಟಿಲವಾಗಿ ತಾನ ಮಲಗಿದ್ದ ತನ್ನ ಕೈಲೆ ತೂಗಿ ನಿದ್ರಸ್ತನಾದ ತಾನ ಎಚ್ಚರಾಗಿ ಎದ್ದ ಕೂತಿದ್ದ ಹಿಂಗ ಅಲ್ಲಮಪ್ರಭುಲಿಂಗ ಲೀಲಾ ತೋರಿದ್ದ (ಲೋಕಗೀ. ೧೦೪). [< ಸಂ. ನಿದ್ರಾಸ್ಥ]

**ನಿದ್ರಾಂಗಿ** (ನಾ). ನಿದ್ದೆಮಾಡುತ್ತಿರುವವಳು ; ಮಲಗಿರುವವಳು: ಎಡಗಯ್ಯಂ ತಲೆಗಿಂಬಿನೊಳ್ ಮಡಗಿ . . . ಮೃದೂಲತಲ್ಪದೆಡೆಯೊಳ್ ನಿದ್ರಾಂಗಿ ಕಣ್ಗೊಪ್ಪಿದಳ್ (ಮಲ್ಲಕಾ. ೬-೧೧೦). [ಸಂ. ನಿದ್ರಾಂಗೀ (ನಿದ್ರಾ + ಅಂಗ + -)]

**ನಿದ್ರಾಕುಲ,** ನಿದ್ರಾಕುಳ (ನಾ). ನಿದ್ರೆಯಿಂದ ಆವೃತವಾದವನು; ನಿದ್ರೆಗೊಳಗಾದವನು : ತೋಳುಗಳ ತಲೆಯೊಳಾನಿಸಿ ಗುಜುಗುಜುಸಿ ರಥದೊಳಗೆ ಸಾರಥಿವೆರಸಿ ನಿದ್ರಾಕುಲ[ಪಾಠಾಂ. ಳ]ರು ಜೊಮ್ಮಿನ ಮೇಲೆ ಮೈಮಱೆದಿರ್ದರತಿರಥರು (ಕುಮ್ಮಾವಿ. ೮-೮೫). **ನಿದ್ರಾಕುಳ :** ಎಲೆಲೆ ಕವಿ ಕಳ್ಳೇಱುಕಾಱನ ತಲೆಯ ಹೊಯ್ಯ ಹೊಯ್ಯೆನುತ ನಿದ್ರಾಕುಳರು ಗರ್ಜಿಸುತಾಗುಳಿಸಿ ತೂಕಡಿಸಿದರು ಮರಳಿ (ಕುಮ್ಮಾಗ. ೯-೩೭). [ಸಂ.]

**ನಿದ್ರಾಕುಳ** 'ನಿದ್ರಾಕುಲ' ನೋ.

**ನಿದ್ರಾಜನಕ** (ಗು). ೧. ನಿದ್ರೆಯನ್ನು ಬರಿಸುವ : ಅಫೀಮು, ಭಂಗಿ ಮತ್ತು ಇತರ ನಿದ್ರಾಜನಕ ಔಷಧಗಳು ಮತ್ತು ನಿದ್ರಾಜನಕಗಳು (ಭಾಧಾನ. ೨೯೨). (ನಾ). ೨. ನಿದ್ರೆಯನ್ನು ಬರಿಸುವಂಥದು : ಅವನಿಗೆ ನಿದ್ರೆಬರಿಸಿ ತಾನು ತಪ್ಪಿಸಿಕೊಂಡು ಹೋಗುವ ಸಲುವಾಗಿ . . . ನಿದ್ರಾಜನಕವೆಂದು ತಿಳಿದಿದ್ದ ಒಂದು ಪುಡಿಯನ್ನು ಬ್ರಾಂದಿಗೆ ಬೆರೆಸಿ ಸ್ಮೈಲ್ಸ್‌ರ್ವ್‌ನಿಗೆ ಕೊಟ್ಟುದಾಗಿಯೂ . . . ಅವಳು ಹೇಳಿದಳು (ಪುನರು. ೪೪). [ಸಂ]

**ನಿದ್ರಾಣ** (ಗು). ೧. ನಿದ್ರೆ ಮಾಡುತ್ತಿರುವ ; ನಿದ್ರೆಯಲ್ಲಿರುವ. (ನಾ). ೨. ನಿದ್ರೆ ಮಾಡುವವನು : "ನಿದ್ರಾಣಃ, ಶಯಿತಃ—೨ ನಿದ್ದೇ ಹೋಗುವವನ ಹೆಸರು" (ಸಿದ್ಧಾಂತಿ. ೩೩೧). [ಸಂ.]

**ನಿದ್ರಾದರ್ಶನಾವರಣೀಯ** (ನಾ). [ಜೈನ] ನಾಲ್ಕು ಬಗೆಯ ಘಾತಿಕರ್ಮಗಳಲ್ಲಿ ಒಂದು ; ನಿದ್ದೆಯು ಆವರಿಸುವುದು : ನಿದ್ರಾದರ್ಶನಾವರಣೀಯಕರ್ಮೋದಯದಿಂದಮೆನಿತನೆಚ್ಚಱಿಸಿದೊಡಂ ದೃಷ್ಟಿಗಳಂ ತೆಱೆಯಲು ಶಕ್ತನಲ್ಲಂ (ಗೂಮ್ಮಸಾ. ೩-೫). 'ಘಾತಿಕರ್ಮ', 'ದರ್ಶನಾವರಣೀಯ' ಪರಾ. ☞ ರಾಜದ್ವಾರದಲ್ಲಿ ನಿಯುಕ್ತನಾದ ದ್ವಾರಪಾಲಕನು ರಾಜದರ್ಶನಕ್ಕೆ ಪ್ರತಿಬಂಧಕನಾಗಿರುವಂತೆ ದರ್ಶನಾವರಣೀಯವು ಜೀವನಿಗಿರುವ ದರ್ಶನಗುಣಕ್ಕೆ ಆವರಣವನ್ನುಂಟುಮಾಡುತ್ತದೆ. ಅಂದರೆ ಪ್ರತಿಬಂಧಕವಾಗಿದೆ. ಇದರಲ್ಲಿ ಚಕ್ಷುರ್ದರ್ಶನಾವರಣೀಯ, ಅಚಕ್ಷುರ್ದರ್ಶನಾವರಣೀಯ, ಅವಧಿದರ್ಶನಾವರಣೀಯ, ಕೇವಲದರ್ಶನಾವರಣೀಯ, ನಿದ್ರಾ, ನಿದ್ರಾನಿದ್ರಾ, ಪ್ರಚಲಾ, ಪ್ರಚಲಾಪ್ರಚಲಾ ಮತ್ತು ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆಗಳಿವೆ. ೧. ಚಕ್ಷುರ್ದರ್ಶನಾವರಣಕರ್ಮದ ಉದಯದಿಂದ ಚಕ್ಷುರಿಂದ್ರಿಯದಿಂದ ನೋಡಬಹುದಾದ ಮೂರ್ತದ್ರವ್ಯಗಳನ್ನು

ನೋಡಲಾಗುವುದಿಲ್ಲ. ೨. ಅಚಕ್ಷುರ್ದರ್ಶನಾವರಣೀಯದಿಂದ ಕಣ್ಣನ್ನು ಬಿಟ್ಟು (ಚಕ್ಷುರಿಂದ್ರಿಯವನ್ನು ಬಿಟ್ಟು ಉಳಿದ ಇಂದ್ರಿಯಗಳಿಂದ ಹಾಗೂ ಮನಸ್ಸಿನಿಂದ) ಗ್ರಹಿಸಬಹುದಾದುದನ್ನು ಗ್ರಹಿಸಲಾಗುವುದಿಲ್ಲ. ೩. ಅವಧಿದರ್ಶನಾವರಣೀಯದಿಂದ ದ್ರವ್ಯ, ಕ್ಷೇತ್ರ, ಕಾಲ, ಭಾವ ಇವುಗಳ ಚೌಕಟ್ಟಿಗೆ ಒಳಪಟ್ಟಿರುವ ರೂಪದ್ರವ್ಯಗಳನ್ನು ಇಂದ್ರಿಯಗಳ ಸನ್ನಿಕರ್ಷವಿಲ್ಲದಿದ್ದರೂ ಸಮ್ಯಗ್ದರ್ಶನ ಅಥವಾ ಸಮ್ಯಕ್ಚಾರಿತ್ರದ ವಿಶುದ್ಧತೆಯ ಪ್ರಭಾವದಿಂದಲೇ ಗ್ರಹಿಸುವ ಅವಧಿಜ್ಞಾನವು ತಿರೋಹಿತವಾಗುತ್ತದೆ. ೪. ಕೇವಲ ದರ್ಶನಾವರಣೀಯದಿಂದ ನಿರವಧಿಕವಾದ ತ್ರಿಕಾಲವರ್ತಿಯಾದ ಸಮಸ್ತ ಪದಾರ್ಥಗಳನ್ನೂ ಅವುಗಳ ಪರ್ಯಾಯ(ವಿಕಾರ)ಗಳನ್ನೂ ಕೈಗನ್ನಡಿಯಂತೆ ಸ್ಪಷ್ಟವಾಗಿ ತಿಳಿಯಬಹುದಾದ ಕೇವಲಜ್ಞಾನವು ನಿರುದ್ಧವಾಗುತ್ತದೆ. (ಈ ಕೇವಲಜ್ಞಾನವು ಜೀವನ್ಮುಕ್ತನಾದ ಯೋಗಿಗೆ ಉಂಟಾಗುವ ಒಂದು ಬಗೆಯ ಅತೀಂದ್ರಿಯಜ್ಞಾನ). ೫. ನಿದ್ರಾ—ಇದರ ಉದಯದಿಂದ ಸಾಮಾನ್ಯನಿದ್ರೆಯು ಬರುತ್ತದೆ. ೬. ನಿದ್ರಾನಿದ್ರಾ—ಇದರ ಉದಯದಿಂದ ಮೇಲೆ ಮೇಲೆ ಗಾಢನಿದ್ರೆ ಬರುತ್ತದೆ. ೭. ಪ್ರಚಲಾ—ಇದರ ಉದಯದಿಂದ ಕುಳಿತುಕೊಂಡಿರುವಾಗಲೇ ತೂಕಡಿಕೆಯುಂಟಾಗುತ್ತದೆ. ೮. ಪ್ರಚಲಾಪ್ರಚಲಾ—ಈ ತೂಕಡಿಕೆಯೇ ಪದೇ ಪದೇ ಅನುಸ್ಯೂತವಾಗಿ ಬರುತ್ತಿರುತ್ತದೆ. ೯. ಸ್ತ್ಯಾನಗೃದ್ಧಿ—ಇದರಿಂದ ಸ್ವಪ್ನದಲ್ಲಿ ವೀರ್ಯಾತಿಶಯವುಂಟಾದಂತಾಗಿ ಭಯಂಕರಕಾರ್ಯಗಳನ್ನು ಮಾಡುವಂತೆ ಭಾಸವಾಗುತ್ತದೆ. [ಸಂ.]

**ನಿದ್ರಾನಿದ್ರೆ** (ನಾ). [ಜೈನ] ದರ್ಶನಾವರಣೀಯಕರ್ಮಗಳಲ್ಲಿ ಒಂದು ; ಮೇಲಿಂದ ಮೇಲೆ ನಿದ್ರೆ ಬರುವುದು : ಪೂರ್ವೋಕ್ತವಿಧಾನದಿನಂತರ್ಮುಹೂರ್ತದಿಂ ನಿದ್ರಾನಿದ್ರಾಪ್ರಚಳಾಪ್ರಚಳಾಸ್ತ್ಯಾನಗೃದ್ಧಿ ನರಕಗತಿ ತತ್ಪ್ರಾಯೋಗ್ಯಾನುಪೂರ್ವಿತಿರ್ಯಗ್ಗತಿ ತತ್ಪ್ರಾಯೋಗ್ಯಾನುಪೂರ್ವೇಕೇಂದ್ರಿಯವಿಕಳೇಂದ್ರಿಯಜಾತ್ಯಾತಪೋದ್ಯೋತಸ್ಥಾವರ ಸಾಧಾರಣಸೂಕ್ಷ್ಮಂಗಳೆಂಬ ಪದಿನಾಱುಂ ಕರ್ಮಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೦-೧೪ ವ) ; ಮತ್ತಮಂತರ್ಮುಹೂರ್ತದಿಂ ನಿದ್ರಾನಿದ್ರಾಪ್ರಚಳಾಪ್ರಚಳಾ . . . ಸಾಧಾರಣ ಸೂಕ್ಷ್ಮಂ[ಗಳೆಂಬ] ಪೋಡಶಕರ್ಮಪ್ರಕೃತಿಗೆ ವಿಳಯಂ ಮಾಡಿ (ಶಾಂತಿಪು. ೧೧-೧೧೧ ವ) ; ಚಕ್ಷುರ್ದರ್ಶನಾವರಣೀಯಂ . . . ನಿದ್ರಾ ನಿದ್ರಾನಿದ್ರಾ ಪ್ರಚಳಾ ಪ್ರಚಳಾಪ್ರಚಳಾ ಸ್ತ್ಯಾನಗೃದ್ಧಿಭೇದದಿಂ ನವವಿಧಭೇದಮಪ್ಪ ದರ್ಶನಾವರಣೀಯಮುಮಂ (ಸುಕುಮಾ. ೩-೩೯ ವ) ; ನಿದ್ರಾನಿದ್ರೆಯುಂದಯದೊಳ್ದಿರ್ದೊಡಮೆಂತುಂ ಕಣ್ಣಂ ತೆಱೆಯಲಾಱದೊಱಗಿಸುವುದುಮಕ್ಕುಂ (ಪಸಾರ. ೧೦); ಆತ್ಮನ ದರ್ಶನಶಕ್ತಿಯನ್ನು ಮುಚ್ಚುವ ಕರ್ಮವು ದರ್ಶನಾವರಣೀಯಕರ್ಮವೆನಿಸುವುದು. ಇದು ಚಕ್ಷುರ್ದರ್ಶನಾವರಣೀಯ . . . ನಿದ್ರಾನಿದ್ರಾ, ಪ್ರಚಲಾ, ಪ್ರಚಲಾಪ್ರಚಲಾ ಮತ್ತು ಸ್ತ್ಯಾನಗೃದ್ಧಿ ಎಂದು ಒಂಬತ್ತು ವಿಧವಾಗಿದೆ (ಜೈನಪಾ. ೩೬೬). [ಸಂ. ನಿದ್ರಾನಿದ್ರಾ]

**ನಿದ್ರಾಪ್ರಬೋಧಿನಿ** (ನಾ). ನಿದ್ರೆಯಿಂದ ಎಚ್ಚರಿಸುವಂಥದು : ನಿದ್ರಾಪ್ರಬೋಧಿನಿಯೆಂಬ ದಿವ್ಯಬಾಣದಿಂ ಸುಗ್ರೀವಂ ಹನುಮಂ ಮೊದಲಾಗೆ ಮಿಕ್ಕ ನಾಯಕರ ನಿದ್ರಾಮುದ್ರೆಯಂ ಕಳೆವುದುಂ (ಪಂಂಪಾಮಾ. ೧೩-೧೩೨ ವ). [ಸಂ. ನಿದ್ರಾಪ್ರಬೋಧಿನೀ]

**ನಿದ್ರಾಭಂಗ** (ನಾ). ನಿದ್ರೆಗೆ ಉಂಟಾಗುವ ಅಡ್ಡಿ,—ತಡೆ : ಶ್ವಾಸನಳಿಕೆಗೆ ಸಂಬಂಧಪಟ್ಟ ಕೆಮ್ಮು, ಮೂಗಿನಲ್ಲಿ ರಕ್ತ ಸೋರುವುದು ಮತ್ತು ರಾತ್ರಿಯ ವೇಳೆ ನಿದ್ರಾಭಂಗಗಳುಂಟಾಗುತ್ತವೆ (ಕಲರೋ. ೭೩). [ಸಂ.]

**ನಿದ್ರಾಭರ** (ನಾ). ನಿದ್ರೆಯ ಆಧಿಕ್ಯ,—ಹೆಚ್ಚಳ : ತರುಣಿಯರ ಮುಱಿಗೊಂಡವರ . . . ನಿದ್ರಾಭರದೊಳಿರ್ದರ ಕೊಲುವುದುಚಿತವೆ (ನಳಚ. ೨-೨೦). [ಸಂ.]

**ನಿದ್ರಾಭಾರ** (ನಾ). = ನಿದ್ರಾಭರ : ನಿದ್ರಾಭಾರ[ಪಾಠಾಂ. ವ] ಮುದ್ರಿತಂಗಳುಂ ಕಿಂಚಿದಾಕುಂಚಿತಪರ್ಣಂಗಳುಮಾದುಪವನದ ತರುಲತಾಗುಲ್ಮಜಾಲಮುಂ ಸೋಂಕಿ ಬಂದು (ಚಂದ್ರಪು. ೮-೪ ವ) ; ನಾರಿ ನಸುನಗುತೊಳಗೆ ಹೊಕ್ಕು ಬಕಾರಿ ಮಂಚದೊಳಿರಲು ನಿದ್ರಾಭಾರವಿಹ್ವಲಕರಣನನು ಹೊದ್ದಿದಳು ಲಲಿತಾಂಗಿ (ಕುಪ್ಪಾವಿ. ೩-೩೮). [ಸಂ.]

**ನಿದ್ರಾಭಾವ** (ನಾ). ೧. ನಿದ್ರೆಯ ಸ್ಥಿತಿ : ನಿದ್ರಾಭಾವ[ಪಾಠಾಂ. ರ] ಮುದ್ರಿತಂಗಳು ಕಿಂಚಿದಾಕುಂಚಿತಪರ್ಣಂಗಳುಮಾದುಪವನದ ತರುಲತಾಗುಲ್ಮಜಾಲಮುಂ ಸೋಂಕಿ ಬಂದು (ಚಂದ್ರಪು. ೮-೪ ವ). ೨. ನಿದ್ದೆಯಿಲ್ಲದಿರುವಿಕೆ. [ಸಂ. (ನಿದ್ರಾ+ಭಾವ ; ನಿದ್ರಾ+ಅಭಾವ)]

**ನಿದ್ರಾಭಿಭೂತ** (ನಾ). ನಿದ್ರೆಗೆ ವಶವಾದವನು : ನಿದ್ರಾಭಿಭೂತನಾದ ಕಲ್ಯಾಣಮಲ್ಲನು . . . ಅರನಿದ್ದೆಯಲ್ಲಿ ಎಚ್ಚೆತ್ತು . . . ಬಾಯಿಗೆ ಬಂದ ಹಾಗೆ ಮಾತನಾಡಿಕೊಂಡನು (ಚಿನ್ನಜೀ. ೧೫೪). [ಸಂ.]

**ನಿದ್ರಾಮುಗುದ** (ನಾ). ನಿದ್ರೆಗೆ ಒಳಗಾದವನು,—ವಶವಾದವನು : ಬಿಗುಹು ಸಹಿತವೆ ಹೊನ್ನ ಮುರಗೋಡುಗಳ ಮೇಲಡಗೆಡೆದು ನಿದ್ರಾಮುಗುದರಾದರು ರಾವುತರು ತೂಕಡಿಸಿದವು ತುರಗ (ಕುಪ್ಪಾವಿ. ೮-೮೪). [<ಸಂ. ನಿದ್ರಾಮುಗ್ಧ]

**ನಿದ್ರಾಮುದ್ರೆ** (ನಾ). ನಿದ್ರೆಯು ಆವರಿಸಿರುವ ಸ್ಥಿತಿ ; ಎಚ್ಚರವಿಲ್ಲದಿರುವಿಕೆ : ಕುಂಭಕರ್ಣನತಿಕುಪಿತನಾಗಿ . . . ನಿದ್ರಾಪ್ರಬೋಧಿನಿಯೆಂಬ ದಿವ್ಯಬಾಣದಿಂ ಸುಗ್ರೀವಂ ಹನುಮಂ ಮೊದಲಾಗೆ ಮಿಕ್ಕ ನಾಯಂಕರ ನಿದ್ರಾಮುದ್ರೆಯಂ ಕಳೆವುದುಂ (ಪಂಂಪಾಮಾ. ೧೩-೧೩೨ ವ) ; ಭರತಂ, ಬಳಲ್ದ ಶಿಶು ಸೋವಂ ಮರೆತು ನೆಮ್ಮದಿಯನರಿತು ಮುಗ್ಧನಿದ್ರಾಮುದ್ರೆಯಪ್ಪಂತೆ . . . ತೀಲಿದನು ಶಾಂತಿಯ ತುರೀಯಕೆ (ಶ್ರೀರಾಮಾ. ೧೬೪-೩೪೫). [ಸಂ. ನಿದ್ರಾಮುದ್ರಾ]

**ನಿದ್ರಾಮೌನ** (ನಾ). ನಿದ್ರೆಯಿಂದ ಉಂಟಾಗುವ ನಿಶ್ಶಬ್ದತೆ,—ನೀರವತೆ : ಭಾನು ಭುವನದ ಜನದ ನಿದ್ರಾಮೌನಮುದ್ರೆಯನೊಡೆದ ನುತ್ತರಧೇನುವಿಗ್ರಹಣವನು ಮಾಡಿದನಂದು ಕುರುರಾಯ (ಕುಪ್ಪಾವಿ. ೪-೭೧) ; ಸೇನೆ ಮೈಮುಱಿದೊಱಗಿದಿದಟ ನಿದಾನವೊಗೆದಱಿಹಿತ್ತು ನಿದ್ರಾಮೌನ ವಿಭ್ರಮಿಸಿತ್ತು ಬಲು ಸಂಸಾರದಂದದಲಿ (ಕುಪ್ಪಾವಿ. ೮-೮೭). [ಸಂ.]

**ನಿದ್ರಾರಸ** (ನಾ). ನಿದ್ರೆಯಿಂದ ಉಂಟಾಗುವ ಆನಂದ : ಅನೇಕವಿಳಾಸಿನೀವಿಳಾಸಾವಾಸಭವನದೊಳಾ ದಂಪತಿಗಳನ್ಯೋನ್ಯಾಂಗಸ್ಪರ್ಶಸುಖೋನ್ಮೀಲಿತವಿಲೋಚನರಂತಂತೆ ನಿದ್ರಾರಸವಶಗತರಾಗಿರ್ದರ್(ಆದಿಪು. ೫-೨೨ ವ). [ಸಂ.]

**ನಿದ್ರಾರೂಢ** (ನಾ). ನಿದ್ರೆಯನ್ನು ಹೊಂದಿದವನು : ಅವನು ತನ್ನ ಕೋಣೆಗೆ ಹಿಂದಿರುಗಿ, ಹಾಸಿಗೆ ಮೇಲುರುಳಿಕೊಂಡು, ನಿದ್ರಾರೂಢನಾದನು (ಪುನರು. ೮೧). [ಸಂ.]

**ನಿದ್ರಾಲಸ್ಯ** (ನಾ). ನಿದ್ರೆಯಿಂದ ಬರುವ ಜಡತೆ,—ಆಲಸ್ಯ : ನಿದ್ರಾಲಸ್ಯಾಕ್ಷೀಪಕ್ಷ್ಮಪಾತೇತರನು . . . ನಿತ್ಯಯೌವನನುಮಾಗಿ ಮಣಿಕೂಟಾಮರೇಶ್ವರನಿರೆ (ಶಾಂತಿಪು. ೭-೭೭ ವ) ; ಗುಲ್ಮ ಸ್ವಲ್ಪ ದೊಡ್ಡದಾಗಿರುತ್ತದೆ. ನಿದ್ರಾಲಸ್ಯ ಹೆಚ್ಚಾಗಿರುತ್ತದೆ (ಕಲರೋ. ೭೫). [ಸಂ.]

**ನಿದ್ರಾಲಾಪ** (ನಾ). ನಿದ್ರೆಯಲ್ಲಿ ಮಾತನಾಡಿಕೊಳ್ಳುವ ಅಭ್ಯಾಸ; ಕನವರಿಕೆ : "ನಿದ್ರೆಯಲ್ಲಿ ಮಾತನಾಡಿಕೊಳ್ಳುವ ಅಭ್ಯಾಸ; ನಿದ್ರಾಲಾಪ" (Somniloquy. ಇಂಕಕ). [ಸಂ.]

**ನಿದ್ರಾಲಿಂಗನವಿಮುಖ** (ನಾ). ನಿದ್ರೆಯಿಂದ ಎಚ್ಚೆತ್ತವನು : ನೇಸಱ್ ಮೂಡುವುದುಂ ಪಟುಪುಣ್ಯಪಾಠಕಸಮುಚ್ಚಾರ್ಯಮಾಣ ಮಂಗಳವಚನರಚನಾಸಮುತ್ಕೃಷ್ಟಶ್ಲಥಬಾಹು ನಿದ್ರಾಲಿಂಗನವಿಮುಖನಾಗಿ ಸಜ್ಜೆಯಿಂದೆಱ್ದು (ಶಾಂತಿಪು. ೮-೧೧೪ ವ). [ಸಂ.]

**ನಿದ್ರಾಲು,** ನಿದ್ರಾಳು (ಗು). ೧. ನಿದ್ರೆಯಲ್ಲಿರುವ ; ನಿದ್ರಿಸುವ. ೨. ಆಲಸ್ಯಭಾವವುಳ್ಳ ; ಸೋಮಾರಿಯಾದ. **ನಿದ್ರಾಳು :** (ನಾ). ೩. ನಿದ್ರೆಯೇ ಸ್ವಭಾವವಾಗಿ ಉಳ್ಳವನು : "ಸ್ವಪ್ನಕ್, ಶಯಾಳುಃ, ನಿದ್ರಾಳುಃ–೩ ನಿದ್ರೆಗೈಯುವ ಸ್ವಭಾವವುಳ್ಳವನ ಹೆಸರುಗಳು" (ಸಿದ್ಧಾಂತಿ. ೩೩೧) ; ಕಾಳುನುಡಿಯಿನಿತೇಕೆ ನೀವ್ ನಿದ್ರಾಳುವಾಗಿರ್ದವನನೆಬ್ಬಿಸಲಾಱದವರು (ತೊರರಾ. ಪರಿ. ೬೯-೧). [ಸಂ.]

**ನಿದ್ರಾಲೋಲ** (ನಾ). ನಿದ್ರೆಯಲ್ಲಿ ಸುಖಿಸುವವನು ; ಸುಖದಿಂದ ನಿದ್ರಿಸುತ್ತಿರುವವನು : ಆ ವಿಷಯೆ . . . ನಿದ್ರಾಲೋಲನಾಗಿ ಮಲಗಿಹ ಚಂದ್ರಹಾಸನಂ ಕಂಡು ಸೈವೆಜಗಾದಳು (ಜೈಮಿಭಾ. ೩೦-೧೯). [ಸಂ.]

**ನಿದ್ರಾವಾತರೋಗ** (ನಾ). ನಿದ್ರೆಯನ್ನುಂಟುಮಾಡುವ ಒಂದು ಬಗೆಯ ವಾತರೋಗ : ಎಲ್ಲ ಕಡೆ ಹರಡಿದ್ದ ಭಯಂಕರ ನಿದ್ರಾವಾತ ರೋಗವನ್ನು (ಸ್ಲೀಪಿಂಗ್ ಸಿಕ್‍ನೆಸ್) ತಡೆಗಟ್ಟಲಾಗಿದೆ (ಕವಿಕೋ. I, ೬೧). [ಸಂ.]

**ನಿದ್ರಾವಿದ್ರಾವಣ** (ನಾ). ನಿದ್ರೆಯನ್ನು ಪರಿಹರಿಸುವವನು : ನಿದ್ರಾವಿದ್ರಾವಣನ ಲೋಚನದ್ವಯರಸನದಂತೊಡನೊಡನೆ ಮಾಣ್ಬುದು ಮಶನಿರ್ಘೋಷಂ ಮನದೊಳ್ ನಿಶ್ಶಂಕನಾಗಿ (ಶಾಂತಿಪು. ೬-೪೦ ವ). [ಸಂ.]

**ನಿದ್ರಾವ್ಯಸನ** (ನಾ). ನಿದ್ರೆ ಮಾಡಬೇಕೆಂಬ ಆಸಕ್ತಿ : ಎಸಲು ಸಮ್ಮೋಹನದ ಶರ ಪಸರಿಸಿತು ಬಲದಲಿ ಬಹಳ ನಿದ್ರಾವ್ಯಸನ (ಕುಮಾವ್ಯಾವಿ. ೮-೮೨). [ಸಂ.]

**ನಿದ್ರಾವ್ಯಾಕುಲ** (ನಾ). = ನಿದ್ರಾವ್ಯಸನ : ಆ ಕಮಲಜನ ತುರಗ ನಿದ್ರಾವ್ಯಾಕುಲದಿ ಮಲಗಿರಲು ಕಂಡು (ನಳಚ. ೨-೧೫). [ಸಂ.]

**ನಿದ್ರಾಸಕ್ತ** (ನಾ). ನಿದ್ರೆಯಲ್ಲಿ ಆಸಕ್ತನಾದವನು : ಸರಳ ಸೊಕ್ಕಿನ ಗಡಿಸಿ ಸಲೆ ಮೈಮಱೆದನಿತ್ತಲು ದ್ರೋಣ ರಥದಲಿ ಪರಮನಿದ್ರಾಸಕ್ತ [ಪಾಠಾಂ. ಗುಪ್ತ]ನಾದನು ತನ್ನ ಮಗ ಸಹಿತ (ಕುಮಾವ್ಯಾವಿ. ೮-೮೬). [ಸಂ.]

**ನಿದ್ರಾಹವ** (ನಾ). ನಿದ್ರೆಯಲ್ಲಿ ಮಾಡುವ ಕಾಳಗ : ಕೊಂದನು ಶ್ವಾಸದಲಿ ಕೆಲಬರು ಸಂದರಾಗುಳಿಕೆಯುಲಿ ಕೆಲಬರು ನಿದ್ರಾಹವದಲಳಿದರು ಗಣನೆಯಿಲ್ಲಿದಕೆ (ತೊರರಾ. ಪರಿ. ೭೦೨-೧). [ಸಂ.]

**ನಿದ್ರಾಳು** 'ನಿದ್ರಾಲು' ನೋ.

**ನಿದ್ರಿತ** (ಗು). ಮಲಗಿದ ; ನಿದ್ರಿಸಿದ. [ಸಂ.]

**ನಿದ್ರಿಸು** (ಕ್ರಿ). ನಿದ್ದೆಮಾಡು ; ಮಲಗು : ಕುಸಿದಂ ರಿಪುವಿಜಯ[ದೆ] ನಿದ್ರಿಸಿದಂ ಕಂಡೆಂದಿನಂದಮಂ ತಪ್ಪಿದನಾಳ್ವೆಸಕಗಿಯೆ ನುಡಿದನೆಂಬೀ ಪಿಸುಣನನಂ ಕೇಳ್ದಿನಿಲ್ಲ ಬೀಡಿನೊಳವನಾ (ಪಂಪಭಾ. ೭-೪೨); ಪುಳಿಂದರು ಬಳಸಿ ಬೇಂಟೆಯನೆಯ್ದಿ ಬನದೊಳು ತೋಹಿನಲ್ಲಿರ್ದು ಕಿಱುದು ನಿದ್ರಿಸಲಲ್ಲಿ ರುದ್ರನ ಕುಱುಪುವೆರಸು ತಪಸ್ವಿವೇಷಂ ಮೆಱೆಯೆ ಶಿವನೆಯಿತಂದು (ಬಸವು. ೧೪-೩) ; ಮಱಿಪೊಂದವೆಳ್ಳಱದ ಕಣ್ದೆಱೆಯದ ನಿದ್ರಿಸದ ಬೆರೆಯದಗಲದ ಕಣ್ಣಿಂ ಪೊಱಸೂಸದೊಳಗಿರದ ಸಯ್ತೋಱಗಿನ ಸಮರಸದ ಭಾವಮೇಂ ರಂಜಿಸಿತೋ (ಶಬಶಂ. ೨-೧೦೪) ; ಒಮ್ಮೆಲೆ ನಾನು . . . ನಿಶ್ಚಿಂತೆಯಿಂದ ನಿದ್ರಿಸುತ್ತಿದ್ದ ನಿಮ್ಮನ್ನು ಕಂಡೆ (ಮುಂಗಾಮು. ೧೯). 'ನಿದ್ದಿಸು' ಪರಾ. [ನಿದ್ರೆ+–ಇಸು₃]

**ನಿದ್ರೆ** (ನಾ). ೧. ಎಚ್ಚರವಿಲ್ಲದಿರುವ ಸ್ಥಿತಿ ; ನಿದ್ದೆ : ಅಂತಿಱುವಾಗಳ್ ಕೆಲವುದಿವಸಂ ಕಾದು ಪಿರಿದುಂ ಪಯಣಂ ಬಂದು ಬಟಿಲ್ದು ಕೋರೈಸಿ ನಿದ್ರೆಗೆಯ್ದುವರ್ ತೊಟ್ಟನೆ ನಿದ್ರೆಯಿಂದೆಟ್ಟುತ್ತು (ಗದಾಯು. ೯-೩೨ ವ) ; ಪಸಿವಿಂಗೆ ತೃಷೆಗೆ ನಿದ್ರೆಗೆ ಬಿಸಿಲ್ಗೆ ಸೀತಕ್ಕೆ ತಮಗೆ ಯತ್ನಂ ಮಾಟ್ಪಂತು ಸದಾ ಪ್ರಯತ್ನಮಂ ಭವ್ಯಸಮಿತಿ ನಿಜಸಮಯಿಗೊಲ್ದು ಮಾಟ್ಪಂ ನಿಚ್ಚಂ (ಸಮಪ. ೪-೭೨) ; ಶ್ವಾನನ ನಿದ್ರೆ ಅಜ್ಞಾನಿಯ ತಪದಂತೆ ಆಯಿತಯ್ಯಾ ಎನ್ನ ಮತಿ (ಬಸವ. ೨೫೦) ; ದೈವದ ನೆಲೆಯನಱಯದವಂಗೆ ದಿಟವಿದು ತಿಳಿಯೆ ಬಾರದು ನಿದ್ರೆ (ಕುಮಾವ್ಯಾಉ. ೩-೩) ; ನಿದ್ರೆಯಿನಾಗ ಕೊಂದಿರಲವಂ ಪಹೀಪತಿಯ ವಾಜಿ ಬಂದು ತುಳಿಯಲ್ (ಹಾಲಾಸ್ಯ. ೩-೮-೨೧) ; ಅವಳ ಕೆಲಸ–ಬೊಗಸಿ, ಊಟ–ಉಪಚಾರ, ನಿದ್ರೆ–ಜಾಗರಣೆ ಮೊದಲಾದುವುಗಳು ತನ್ನ ಸಲುವಾಗಿ ಗಂಡನ ಸುಖಕ್ಕಾಗಿ (ಕನ್ನಜಾ. ೧೯೯). ೨. ಆಲಸ್ಯ ; ಸೋಮಾರಿತನ : ನಿದ್ರೆಯಿದ್ದೆಡೆಯಲ್ಲಿ ಬುದ್ಧಿಯೆಂಬುದಿಲ್ಲ ನೋಡಾ ಕಾಯವೊಂದೆಸೆ ಜೀವವೊಂದೆಸೆ ಗುಹೇಶ್ವರಲಿಂಗ ತಾನೊಂದೆಸೆ (ಅಪಚಂ. ೨೬೧-೧೧೮೬). ೩. [ಕಾವ್ಯಮಿ] ಸಂಚಾರಿಭಾವಗಳಲ್ಲಿ ಒಂದು : ಚಿಂತೋಗ್ರತೇಷ್ಯಾಧೃತಿ ನಿದ್ರಾವೇಗ . . . ಇಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೪೫) ; ನಿದ್ರೆ ಧೃತಿ ತರ್ಕ . . . ಅಪಸ್ಮಾರವೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ ಪರಿವರ್ಧಿಸಿ (ವಿವೇಕ. ೨೨೭); "ಮನಃಸಂಮೀಳನಂ ನಿದ್ರೆ" ; ಇದು ಜೊಂಪು. ಮೈ ಮು ರಿ ಯು ವು ದು, ಆಗುಳಿಕೆ ಇವೆಲ್ಲ ಇಲ್ಲಿ ಉಂಟು (ಭಾರಮಿ. ೩೪೭). ೪. [ಯೋಗ]ಚಿತ್ತವೃತ್ತಿಗಳಲ್ಲಿ ಒಂದು : ನಿದ್ರೆ ಎಂದರೆ ಜಾಗ್ರತ್ಸ್ವಪ್ನಕಾಲಗಳಲ್ಲಿ ಬರುವ ಯಾವ ವಿಧ ಜ್ಞಾನವೂ ಇಲ್ಲದಿರುವ ಸ್ಥಿತಿ (ಹಿಂದಸಾ. ೧೦೪) ; ಪ್ರಮಾಣ, ವಿಪರ್ಯಯ, ವಿಕಲ್ಪ, ನಿದ್ರೆ, ಸ್ಮೃತಿ–ಈ ೫ ಅಂತಃಕರಣ ವೃತ್ತಿಗಳು (ಭಾರದ. ೧೨೭). 'ಸಂಚಾರಿಭಾವ' ಪರಾ. ೫. [ಜೈನ]ಒಂಬತ್ತು ಬಗೆಯ ದರ್ಶನಾವರಣೀಯಗಳಲ್ಲಿ ಒಂದು : ಧ್ಯಾನಪರಿಣತಪರಿಮಿತಪ್ರದೇಶನಿರ್ಜರಾದಿಕ್ರಿಯಾಕಲಾಪಕಲಿತನುಚಿತಕತಿಪಯಸಮಯಂಗಳಿನಾತ್ಮದ್ವಿಚರಮಸಮಯದೊಳ್ ನಿದ್ರಾಪ್ರಚಲೆಗಳಂ ಕಿಡಿಸಿ (ಆದಿಪು. ೧೦-೧೪ ವ) ; ಚಕ್ಷುರ್ದರ್ಶನಾವರಣೀಯಂ . . . ನಿದ್ರಾ ನಿದ್ರಾನಿದ್ರಾ . . . ನವವಿಧಭೇದಮಪ್ಪ ದರ್ಶನಾವರಣೀಯಮುಮಂ (ಸುಕುಮಾ. ೩-೩೯ ವ); ಆತ್ಮನ ದರ್ಶನಶಕ್ತಿಯನ್ನು ಮುಚ್ಚುವ ಕರ್ಮವು ದರ್ಶನಾವರಣೀಯಕರ್ಮವೆನಿಸುವುದು. ಇದು ಚಕ್ಷು . . . ನಿದ್ರಾ, ನಿದ್ರಾನಿದ್ರಾ . . . ಎಂದು ಒಂಬತ್ತು ವಿಧವಾಗಿದೆ (ಜೈನಪ. ೩೬೬).

ನಿದ್ರೆ ಮಾಡು = ನಿದ್ರಿಸು ; ಮಲಗು : ಕೆಲವರಿಗೆ ಊಟ ಮಾಡಿದ ಕೂಡಲೆ ನಿದ್ರೆ ಮಾಡುವುದು ಅಭ್ಯಾಸ (ರೂಢಿ). ನಿದ್ರೆ ಹತ್ತು = ನಿದ್ದೆಹತ್ತು ; ನಿದ್ರೆಬರು : ಚಿಂತೆ ಪ್ರಾಪ್ತಿಯಾದ ಕಾರಣ ಆತಗೆ ನಿದ್ರೆ ಹತ್ತದೆ (ಮುಂಬಯು. ೫-೪೧). [ಸಂ. ನಿದ್ರಾ]

**ನಿದ್ರೆಗೆಡು** (ಕ್ರಿ). = ನಿದ್ದೆಗೆಡು : [ಅಂತು ಬೆಗಡುಗೊಂಡು ನಿಲಲುಂ ನಿತ್ತರಿಸಲುಮಾಱದೆ] ಗಾಳಿಗೊಡ್ಡಿದ ಸೊಡರಂತೆ ನಡುಗಿ . . . ತಳಾಱನಂತೆ ನಿದ್ರೆಗೆಟ್ಟು ಸಮ್ಯಕ್ತ್ವಚೂಡಾಮಣಿಗಿಂತೆಂದಂ (ಧರ್ಮಾಮೃ. ೧-೧೬೮). [ನಿದ್ರೆ+ಕೆಡು₁]

**ನಿದ್ರೆಗೆಯ್,** ನಿದ್ರೆಗೈ (ಕ್ರಿ). = ನಿದ್ದೆಗೆಯ್ : ಮಹೇಂದ್ರಸಿಂಹನೊರ್ವನೆ . . . ಪ್ರಿಯಂಗುಷಂಡಮೆಂಬ ವನಮನೆಯ್ದಿ ತದ್ವನಮಧ್ಯಸ್ಥಗೃಹದೊಳಿರುಳಿರ್ದು . . . ದೇವತೆಯ ಮುಂದೆ ನಿದ್ರೆಗೆಯ್ದಿಂ (ಪದ್ಮಾರಾ. ೫೪-೧೨) ; ಅಂತಿಱುವಾಗಳ್ ಕೆಲವುದಿವಸಂ ಕಾದು ಪಿರಿದುಂ ಪಯಣಂ ಬಂದು ಬಟಿಲ್ದು ಕೋರೈಸಿ ನಿದ್ರೆಗೆಯ್ದುವರ್ ತೊಟ್ಟನೆ ನಿದ್ರೆಯಿಂದೆಟ್ಟುತ್ತು (ಗದಾಯು. ೯-೩೨ ವ) ; ರಕ್ಕಸಿಯ ಮನೆಗೆ ಹೋಗಿ ನಿದ್ರೆಗೆಯ್ದು ಬಂದೆನೆಂದರೆ ಇದ ಕಂಡು ಬೆಱಗಾದೆ (ಅಪಚಂ. ೬-೨೭); ಪುರದುರ್ಗಂಗಳ ಬಲ್ಮೆಮಾಡದೆ . . . ಆತುರದಿಂದುಂಡತಿನಿದೆ,ಗೆಯು

ಮದನಂಗಾಳಾಗಿಹಂ ಲೋಕದೊಳ್ ದೊರೆಯೇ ಸೊಕ್ಕಿದ ಕೋಣನ್ನೈ (ಸೋಮೇಶ. ೫೫) ; ಬಡಮುನಿಸು ಇಂತೊಂದು ಬಾರಿಯು ನುಡಿಯಲಿಲ್ಲದಹಂಗೆ ಹದುಳಿಸಿ ಕಡೆಯೊಳಾಂ ತಿಳುಹಿದಪೆನೆಲೆ ನೀ ನಿದ್ರೆಗೆಯ್ವುತಿರು (ಬಸವು. ೪೭-೨೨) ; ನಿದ್ರೆಗೆಯ್ದಿರ್ದ ಭೂಪಾಲಂ ರುದ್ರಜಂಗಮವೇಷದಿಂ (ಹಾಲಾಸ್ಯ. ೧-೪-೫೦). **ನಿದ್ರೆಗೈ:** ಶರಣ ನಿದ್ರೆಗೈದಡೆ [ಪಾಠಾಂ. ಗೆಯ್ದರೆ] ಜಪ ಕಾಣಿರೋ ಶರಣನೆದ್ದು ಕುಳಿತರೆ ಶಿವರಾತ್ರೆ ಕಾಣಿರೋ (ಬಸವ. ೮೭೨) ; ನಿದ್ರೆಗೈದರನಿಜಾವುದೇನಿದು ಪಂಥವೇ ಪೌರಾಣಮಾರ್ಗದಲಿ (ಕುಮ್ಯಾಗ. ೯-೧೧) ; ನಿದ್ರೆಗೈವವನೊಡಲ ಧರ್ಮವ ಹೊದ್ದನೆಂದ್ಧಡೆ ಕರಣವನು ನಿಡುನಿದ್ರೆಗೈಸಿ ನಿಜಾನುಭವದಲಿ ನಿಂದ ವರಯೋಗಿ (ನಿಭಾಗ. ೬-೧೫-೨೭) ; ನಿದ್ರೆಗೈದಿಂದುಹಾಸನ ಕಂಚುಕದ ಕೊನೆಯೊಳಿರ್ದ ಪತ್ರವನೋದಿಕೊಂಡು ಚದುರಿಂದದಂ ತಿರ್ದಿ (ಜೈಮಿಭಾ. ೩೦ ಸೂಚನೆ). 'ನಿದ್ದೆಗೆಯರ್' ಪರಾ. [ನಿದ್ರೆ+ಕೆಯ್$_1$]

**ನಿದ್ರೆಗೆಯ್ಸು** (ಕ್ರಿ). ನಿದ್ರೆ ಮಾಡಿಸು: ಪರಿಚಿತಚಕ್ರವಾಕಮಿಥುನಂಗಳ ನೊಯ್ಯನೆ ನಿದ್ರೆಗೆಯ್ಸುವಳ್ (ಕಾದಂಬ. ೨೪). [ನಿದ್ರೆಗೆಯ್+-ಸು$_1$]

**ನಿದ್ರೆಗೇಡು**(ನಾ). = ನಿದ್ದೆಗೇಡು : ಬರೀ ಗುಲ್ಲು, ನಿದ್ರೆಗೇಡು (ಗಾದೆ). [ನಿದ್ರೆ+ಕೇಡು]

**ನಿದ್ರೆಗೈ** 'ನಿದ್ರೆಗೆಯರ್' ನೋ.

**ನಿದ್ರೆತಿಳಿ** (ಕ್ರಿ). = ನಿದ್ದೆದಿಳಿ : ನಿದ್ರೆತಿಳಿದು ಕಣ್ದೆರೆದು ನೋಡಿ ಬೆಚ್ಚಿ ಬೆಗಡುಗೊಂಡು (ಬಸರ. ೪-೨೪) ; ಸತಿ ನಿದ್ರೆತಿಳಿದೆದ್ದು ನಡನಡುಗಿ ಹಾ ಎನುತೊಱಲುತಿಪ ನಿಡುದನಿಗಳಂ ಕೇಳಿ ಪತಿಯೆದ್ದೊಡನೆ ರಕ್ತಂ ಸುರಿವ ಕರವಂ ಸರ್ಪನಂ ಕಂಡು (ಬಸವು. ೪೬-೨೨) ; ಸರಸರನೆ ಸತಿ ಗೋಪೆಯ ನಗೆವುದ್ಧರದ ದನಿಯಂ ಕೇಳಿ ಥಿಕ್ಕನೆ ತರುಣನಾಗಳೆ ನಿದ್ರೆತಿಳಿದೆದ್ದು (ಬಸವು. ೪೭-೮); ನಿದ್ರೆ ತಿಳಿದೇಳ್ವವೋಲುನ್ನಿದ್ರೇಕ್ಷಣೆಯೆಳ್ದು ಚೌಡ ದೇವನ ಪದಭಾಸ್ವದ್ರಾಜೀವಕೆ ಮಣಿಯೆ (ವೃಷವಿ. ೨೧-೪೨). [ನಿದ್ರೆ+ತಿಳಿ$_1$]

**ನಿದ್ರೋಪಾಸಕ** (ನಾ). ನಿದ್ರೆಯನ್ನು ಅಪೇಕ್ಷಿಸುವವನು ; ನಿದ್ರೆಯಲ್ಲಿ ಆಸಕ್ತನಾದವನು : ತಗುಣಿ, ಸೊಳ್ಳೆ ಮೊದಲಾದವು ನಿದ್ರೋಪಾಸಕರನ್ನು ಚೆನ್ನಾಗಿಯೇ ಬಾಧಿಸುತ್ತಿದ್ದಿರಬೇಕು (ನಂಟರು. ೪೨). [ಸಂ.]

**ನಿಧತ್ತಿ** (ನಾ). [ಜೈನ] ಉದಯಾವಳಿಯಲ್ಲಿ ಇರಿಸಲೂ ಮತ್ತು ಬೇರೆ ಕರ್ಮಪ್ರಕೃತಿಯೊಂದಿಗೆ ಸಂಕ್ರಮಿಸಲೂ ಆಗದಿರುವ ಕರ್ಮಪ್ರಕೃತಿ; ℙ ಬಂಧ, ಉತ್ಕರ್ಷಣ, ಸಂಕ್ರಮಣ, ಅಪಕರ್ಷಣ, ಉದೀರಣಾ, ಸತ್ತ್ವ, ಉದಯ, ಉಪಶಮ, ನಿಧತ್ತಿ ಮತ್ತು ನಿಕಾಚನ ಎಂಬ ಹತ್ತು ಕರ್ಮಪ್ರಕೃತಿಗಳಿವೆ. ಇವಕ್ಕೆ ದಶಕರಣವೆಂದೂ ಹೆಸರು : ಈ ಕರ್ಮಪ್ರಕೃತಿಗಳೆಲ್ಲ ವಿಶ್ವದಲ್ಲಿ ಬಂಧ (ಆತ್ಮನಿಗೆ ಕಟ್ಟೆದ್ದು) . . . ನಿಧತ್ತಿ (ವೃದ್ಧಿ, ಕಡಿಮೆ ಆಗದೆಯೇ, ಉದೀರಣಾ ಅಥವಾ ಉಪಶಾಂತವಾಗುವುದು), ನಿಕಾಚನ (ಉದೀರಣಾ, ಸಂಕ್ರಮಣ, ಉತ್ಕರ್ಷಣ, ಅಪಕರ್ಷಣ ಆಗದಿರುವುದು) ಈ ಹತ್ತು ಅವಸ್ಥೆಗಳಲ್ಲಿ ಇರುತ್ತವೆಂದು ನೇಮಿಚಂದ್ರಸಿದ್ಧಾಂತಚಕ್ರವರ್ತಿಗಳು 'ಗೊಮ್ಮಟಸಾರ'ದಲ್ಲಿ ಹೇಳುವರು (ಜೈನಪ. ೩೬೯). [ಸಂ./ℙ ಪಾಣಿನಿಯ ಸೂತ್ರಗಳ ಪ್ರಕಾರ ಈ ಶಬ್ದದ ಸ್ವರೂಪ 'ನಿಹಿತಿ'ಎಂದಾಗಬೇಕು]

**ನಿಧನ**$_1$ (ನಾ). ಹೂಳಿಟ್ಟ ದ್ರವ್ಯ ; ನಿಧಿ ; ನಿಧಾನ : ಜ್ಯೋತೀಯ ಎತ್ತಿ ನೀತೀಲಿ ಕೈಮುಗಿದು ನೀತ್ಮುಳ್ಳ ಕಂದಯ್ಯಗೆ ನಿಧನಾವೆ ಹೆಚ್ಚಾಲಿ ಎಂದು ಜಗಜ್ಯೋತಿಗೆ ಕೈಯ ಮುಗಿದೇವು (ನನ್ನೂರು. ೧೯). 'ನಿಧನವೆತ್ತು' ಪರಾ. [<ಸಂ. ನಿಧಾನ]

**ನಿಧನ**$_2$ (ನಾ). ೧. ನೆಲೆ ; ಆಶ್ರಯಸ್ಥಾನ : ಅನಿಧನನಿಧನನಿಧನೋದ್ಭವ ಶಿವ ಶರ್ವಶ್ಚ ಎಂದೆನುತ (ವೀಶೈಪು. ೬-೪-೨೭). ೨. ವಂಶ; ಕುಲ ; ಮನೆತನ. ೩. ಅಂತ್ಯ ; ಕೊನೆ ; ಮುಕ್ತಾಯ. ೪. ಸಾವು ; ಮರಣ : "ನಿಧನಂ, ನಾಶಃ, ಮೃತ್ಯುಃ, ಮರಣಂ . . . ದೀರ್ಘನಿದ್ರಾ—ಈ ೧೨ ಸಾವು" (ಹಲಾಯು. ೧೦೩-೬); ಧನಮೆಂಬುದು ನಿಭುಗೆ ಯಶೋಧನಮುದನಿಂತಱಪಿ ಕಳಿಪಿ ಕಿಡೆ ಮಾಡಿರ್ದಾತನ ಪಡೆದ ಧನಮುದೇತಱ ಧನಮುದಱಿಂ ನಿಧನಮೆಯ್ದಿದರ್ ಪಲರರಸರ್ (ಆದಿಪು. ೧೪-೭೪) ; ಓಲೆಗಾಣುತ ಭರತ . . . ಹಾಳುಮೆಱಿವಾ ಪುರವ ಹೊಗುತವೆ ಕೇಳಿ ಪಿತೃ ನಿಧನವನು ಹಲುಬುತ ಗೋಳುಗುಟ್ಟುತ ಬಂದು ಕೈಕೆಯು ಕೇಳಿದನು ಹದನ (ಕೌತಂರಾ. ೪-೧೦) ; ಪಿತೃದೇವನಾ ದೈನ್ಯಮುಂ ದುಃಖಮುಂ ನಿಧನಮುಂ ಕೇಳ್ದನ್ನ ರಿಕ್ತಮತಿ ತತ್ತರಿಸಿತು (ಶ್ರೀರಾಮಾ. ೧೭೦-೫೦೭) ; ಪ್ರಭುಗಳು ರಾಜಧಾನಿಗೆ ಬಂದುದೂ ರಾಜಮಾತೆಯವರ ನಿಧನ ವೃತ್ತಾಂತವೂ . . . ಬೊಪ್ಪಣನಿಗೆ ತಿಳಿದು ಬಂದುವು (ಶಾಂತಲಾ. ೧೭೯); ಕೌಲ್ಯರನಂತಹ ಪ್ರತಿಭಾನ್ವಿತ ಸಸ್ಯವಿಜ್ಞಾನಿಯೊಬ್ಬನ ನಿಧನದಿಂದ . . . ವಿಜ್ಞಾನಜಗತ್ತಿಗೇ ಅಪಾರನಷ್ಟವಾಗಿದೆ (ಸಸ್ಯಕ. ೪೧). ೫. ನಾಶ : ನಿಧನಮನೆಯ್ದಿಸಿದಂ ಸುಗುಣಧನಂ ತತ್ತ್ವೈಕಸಾಧನಂ ವಿಜಿತಾರಿಪ್ರಧನಂ ಚಕ್ಷುರಚಕ್ಷುರವಧಿಕೇವಳದರ್ಶನಾವರಣಮಂ ನಾಲ್ಕಂ (ಚಂದ್ರಪು. ೧೪-೬೫) ; ವೈರಿಪಾಂಚಾಲಕರೊಳೈವರು ಧಾರುಣೀಶ್ವರರಸುವ ಬಿಟ್ಟರು ಚಾರುಚಾಪಳಚಾತುರಂಗದ ನಿಧನನಿರ್ಣಯವ ಆರು ಬಲ್ಲರು (ಕುಮ್ಯಾಕ. ೧೦-೨೫). ೬. ಸಾಮಗಾನದ ಐದು ಭಾಗಗಳಲ್ಲಿ ಒಂದು :ಉದ್ಗೀಥ, ಪ್ರಸ್ತಾವ, ಹಿಂಕಾರ, ಪ್ರತಿಹಾರ, ನಿಧನವೆಂಬ ೫ ಪ್ರಕಾರವಾಗಿ ಸಾಮಗಾನವು ಭಾಗಿಸಲ್ಪಟ್ಟಿರುವುದು (ಹಸಾರ. ೬-೧೪ ತಾತ್ಪರ್ಯ). ೭. ಅನಿರುದ್ಧರೂಪನಾದ ಪರಮಾತ್ಮ : ಸಂಹಾರಕರ್ತನಾದುದರಿಂದ ನಿಧನನೆಂದು ಸಂಕರ್ಷಣನಿಗೆ ಹೆಸರು (ಹಸಾರ. ೬-೧೪ ತಾತ್ಪರ್ಯ). ೮. ಬಡವ ; ದರಿದ್ರ. ೯. [ಜ್ಯೋತಿ] ಜಾತಕದಲ್ಲಿ ಲಗ್ನದಿಂದ ಎಂಟನೆಯ ಸ್ಥಾನ : ಶಶಲಕ್ಷ್ಮಂ ಕ್ಷೀಣಂ ದ್ವಾದಶದೊಳ್ ನಿಲೆ ಜನ್ಮಲಗ್ನದೊಳ್ ನಿಧನದೊಳಕ್ಕುಶುಭರಿರೆ ಕೇಂದ್ರದಿಂ ತೊಲಗೆ ಶುಭಗ್ರಹಮಂದೆ ಸಾಯ್ಗುಮಾ ಪುಟ್ಟಿದವಂ (ಜಾತತ. ೬-೫) ; ನಿಧನದೊಳಧಿಕ ಕ್ಷೀಣಂ ವಿಧು ನಿಲೆ ರವಿತನಯನುದಯದೊಳ್ ಹತ್ತನೆಯೊಳ್ ರುಧಿರಂ ನಾಲ್ಕನೆಯೊಳ್ ರವಿ ನಿಧನಂ ಮನುಜಂಗೆ ಲಗುಡಪಾತದಿನಕ್ಕುಂ (ಜಾತತ. ೨೩-೧೧). [ಸಂ.]

**ನಿಧನರಹಿತ** (ನಾ). ಸಾವಿನಿಂದ ದೂರವಾದವನು; ಅಮರ : ನಿಧನರಹಿತನೆ ಕೇಳ್ವಡೆನ್ನಾಶ್ರಯದೊಳಿರ್ದು ಬುಧರೊರ್ಚದ ಕಾರಣ ದೊಳಾದುದ್ವೈಯ ಗೋವಧೆ (ವೀಶೈಪು. ೪-೨-೧೨). [ನಿಧನ$_2$+ರಹಿತ]

**ನಿಧನವೆತ್ತು** (ಕ್ರಿ). (ಹೂಳಿಟ್ಟ) ನಿಧಿಯನ್ನು ಎತ್ತಿ ತೆಗೆ,— ಹೊರದೆಗೆ : ಉಱುದು ವಧೂಸಂಕುಳವೋಕುಳಿಯಂ ಪೊಜಮುಟ್ಟೊ ಪೋಪುದಂ ಪೆಜಗೆ ಕರಂಗಿಱುದಾಗಿ ನಿಧನವೆತ್ತಿದ ಕುಱುಯಂತಿರ್ದತ್ತು ಕಣ್ಗೆ ಪೂಗೊಳನಾಗಳ್ (ಚಂದ್ರಪು. ೭-೧೪೪). [ನಿಧನ$_1$+ಎತ್ತು$_1$]

**ನಿಧನವೈದಿಸು** (ಕ್ರಿ). ಸಾವನ್ನುಂಟುಮಾಡು ; ಕೊಲ್ಲು ; ಸಾಯಿಸು : ಬುಧರೊಳಗೆ ಹಗೆಗೊಳುವ ಬುಧರಂ ನಿಧನವೈದಿಪ ಬುಧರ ನೇಳಿಪ . . . ಬುಧರಂ ವಿಧಿಗೊಳಿಪ ಬುಧರ್ಗೀವರಂ ಕವರ್ಧಮ ಭೂಪರಿಗಂಟದಿಹುದೆ ವಿನಾಶಕರವೆಂದ (ಕುಮ್ಯಾಉ. ೩-೫೩). [ನಿಧನ$_2$+ಐದಿಸು(<ಎಯ್ದಿಸು)]

**ನಿಧನಸ್ಥ** (ನಾ). [ಜ್ಯೋತಿ]ಎಂಟನೆಯ ಸ್ಥಾನದಲ್ಲಿ ಇರುವವನು : ರವಿ ಲಗ್ನಾಪಸಥಕ್ಕೆ . . . ನಿಧನಸ್ಥನಾಗೆ ವಿಕಲಾಕ್ಷಂ ಸ್ವಲ್ಪಪುತ್ರಾನ್ವಿತಂ (ಜಾತತಿ. ೧೪-೩). [ಸಂ.]

**ನಿಧನೋದ್ಭವ** (ನಾ). ಜಗತ್ತಿನ ಲಯವನ್ನುಂಟುಮಾಡುವವನು; ಲಯಜನಕ; ಲಯಕಾರಣ : ಅನಿಧನ ನಿಧನ ನಿಧನೋದ್ಭವ ಶಿವ ಶರ್ವಶ್ಚ ಎಂದೆನುತ ಪರಮಾತ್ಮ ಮಹೇಶ್ವರ ಮಹಾತೇಜ ಎನುತ (ವೀಶೈಪು. ೬-೪-೨೭). ℙ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಗೆ ಪರಮೇಶ್ವರನೇ ಕಾರಣನೆಂಬುದು ಶೈವಸಿದ್ಧಾಂತ.
[ನಿಧನ$_2$+ಉದ್ಭವ]

**ನಿಧಾನ** (ನಾ). ೧. ಹುದುಗಿಟ್ಟ ಧನ,—ದ್ರವ್ಯ ; ನಿಕ್ಷೇಪ : ಪಿರಿದಪ್ಪ ನಿಧಾನಂ ಸಾರ್ದರೆ ಮನುಜನ ಪುಣ್ಯದುದಯದಿಂ (ಸಮಪ. ೪-೫); ನೆಲನನಗುಟ್ಟಿರೆಲ್ಲಂ ನಿಧಾನಮಂ ಕಾಣ್ಬರೇ (ಧರ್ಮಾಮೃ. ೫-೨೩೯); ನೆಲದ ಮಱೆಯ ನಿಧಾನ[ಪಾಠಾಂ. ನಿಕ್ಷೇಪ]ದಂತೆ ಫಲದ ಮಱೆಯ ರುಚಿಯಂತೆ (ಮಹಾದೇ.ಬ. ೧೦-೨); ಮಾಡುವ ನೀಡುವ ಭಕ್ತನ ಕಂಡರೆ ನಿಧಿ ನಿಧಾನವ ಕಂಡಂತಾಯಿತ್ತು (ಬಸವ. ೭೫೮); ಬಡವಂ ನಿಧಾನಮಂ ಕಂಡಂತೆ ಹರುಷಮಂ ತಾಳ್ದು (ಪುಣ್ಯಾಸ್ರ. ೨-೮ ಪ); ನೆಲನ ಮಱೆಯ ನಿಧಾನ ಮುಗಿಲೊಳಡಗಿದ ಮಿಂಚು ಸಲೆ ಭಸ್ಮದೊಳಗಡಗಿ ತೋರ್ಪ ಹುತವಹನವೊಲು ನಲಿದು ಶಿವಶರಣರಿರ್ಪರು (ಲಕಚಿಂ. ೩೮-೧೫೭); ಇದೋ ನಿಧಾನವನ್ನು ಎಡವಿ ಕಂಡ ಹಾಗೆ, ಸಮಯ ಒದಗಿ ಬಂದಿದೆ! (ಬಿದುರಿ. ೭೭). ೨. (ಚಿನ್ನ, ಬೆಳ್ಳಿ ಮೊದಲಾದ ನಿಧಿಯನ್ನು) ಹೂಳಿಟ್ಟ ಸ್ಥಳ ಅಥವಾ ಪಾತ್ರೆ. ೩. ಅಷ್ಟಭೋಗಗಳಲ್ಲಿ ಒಂದು ; ಸಂಪತ್ತು : ಐಶ್ವರ್ಯ : "ಸೇವಧಿಃ, ನಿಧಿಃ—ಈ ೨ ನಿಧಾನಂ" (ಹಲಾಯು. ೧೪-೮೨); ನಿಧಾನಮನೀಡಾಡುವಂತೆ ಕೂಸಂ ಗಂಗೆಯೊಳೀಡಾಡಿ ಬಂದಳ್ (ಪಂಪಭಾ. ೧-೯೫ ಪ); ಶ್ರೀಮತ್ ಕನ್ನಯ್ಯಂ ಕದಂಬಳಗೆಸಾಯಿರಮುಮಂ ನಿಧಿ ನಿಧಾನ ನಿಕ್ಷೇಪ ಸಹಸ್ರದಣ್ಡಂ ಮೊದಲಾಗಿ ದುಷ್ಟನಿಗ್ರಹ ವಿಶಿಷ್ಟಪ್ರತಿಪಾಳನಂಗೆಯ್ದು (ಎಕ. XI, ಚಿತ್ರದು. ೪೯-೧೯ ; 947); ನಿಧಾನ ತಪ್ಪಿ ಬಂದರೆ ಒಲ್ಲೆನೆಂಬವರಿಲ್ಲ (ಬಸವ. ೮೫೪). ೪. ಆಶ್ರಯಸ್ಥಾನ ; ನೆಲೆ : "ನಿಜಾಗಾರಗಳೊಳಂ ನಿಧಾನದೊಳು ನೆಲೆ" (ಶಬ್ದಮಂ. ೧೦೭); ಅಧಿಕತರರಾಗದೀಧಿತಿ ನಿಧಾನಮೆನಲೆಸೆವ ಚಕ್ರಿಚರಣಾಂಬುಜಮಾ ಮಧುಕೈಟಭಮದಮರ್ದನ ರುಧಿರಾರುಣಚಕ್ರಿಚರಣಮಂ ನೆನೆಯಿಸುಗುಂ (ಕಾದಂಪೂ. ೨೭); ಶೌಚ ಸಂಪತ್ತಿಗೆ ಕುಳಭವನಂ ಸಂತತಾನೂನದಾನಕ್ಕೆ ನಿಧಾನಂ (ಎಇ. XVI, ೫೫-೧೧ ; 1053); ಅನತಿಶಯಗರ್ಭಸುಖಿಸುಜನನಿಧಾನಂ . . . . ತನೂಭವಂ ನಿನಗೆ ಪುಟ್ಟುಗುಂ (ಸುಕುಮಾ. ೯-೧೧೦). ೫. (ಮಾಡಬೇಕಾದ) ಕೆಲಸ ; ಕಾರ್ಯ : ತನ್ನನಿಕ್ಕಿ ನಿಧಾನವ ಸಾಧಿಸಲಱಿಯದ ಹಂದೆಗಳಿದ್ದು ಫಲವೇನು (ಚನ್ನಪ. ಕ. ೪೦೧-೮೪೮). ೬. ತಡ ; ವಿಳಂಬ ; ಸಾವಕಾಶ : ಮನ ಸುವಿಧಾನದಿಂದ್ಯೆದುವಡೆ ಸ್ವಲ್ಪ ನಿಧಾನವಿರಲೆನ್ನೆದುರೊಳೆಂದನು ಭೀಮ ರಾಕ್ಷಸಗೆ (ಜಿನಭಾ. ೧೪-೧೧). ೭. ತಾಳ್ಮೆ ; ಸಹನೆ : ನಿಧಿ ಇದ್ದರೂ ನಿಧಾನವಿರಬೇಕು (ಗಾದೆ). ೮. ನಿಶ್ಚಯ ; ನಿರ್ಧಾರ ; ದೃಢಸಂಕಲ್ಪ : ಇದು ನಿಧಾನವು ಭೀಮ ಪಾರ್ಥರಿಗಿದು ಮುಹೂರ್ತವು ವೀಳೆಯವ ತಾ ಕೆಂಪಜಯದ ವೀರಸೇಸೆಯನಿಕ್ಕಿ ಕಳುಹೆಂದ (ಕುಮ್ಯಾಸ. ೨-೫೦); ದೇವಕಿಯ ಮೇಲಾಣೆ ವರವಸುದೇವನಂಘ್ರಿಗಳಾಣೆ ಮನುಮಥದೇವನಾಣೆ ನಿಧಾನವನು ಕೇಳಬಲೆ ನಿನ್ನಾಣೆ (ಕುಮ್ಯಾಉ. ೭-೧೩). ೯. (?) : ಉಂಡೆವ್ಯೆ ಹಲಕಾಲಕಿಂದಿನಲುಂಡದೂಟ ಕಣಾ ನಿಧಾನವು ಖಂಡಪರಶುವಿನಾಣೆನುತ ಮದವೇಱಿದನು ಭೀಮ (ಕುಮ್ಯಾಅ. ೧೦-೩೫).

ನಿಧಾನವಾಗು=ತಡವಾಗು ; ವಿಳಂಬಗತಿಯಿಂದ ಕೂಡಿರು : ಹುಟ್ಟುಹಾಕುವ ಜಾಗದಲ್ಲಿದ್ದ ಮನುಷ್ಯ . . . ನಿಧಾನವಾಗಿ ಬರುತ್ತಿದ್ದ (ಮಹಾತ್ಮಾ. ೧೨೧); ಕಲ್ಲುಬಂಡೆಗಳಿಲ್ಲದ, ಆಳವಾಗಿಯೂ ನಿಧಾನವಾಗಿಯೂ ಹರಿಯುವಲ್ಲಿ ಮಾತ್ರ ನದಿ ಸಂಚಾರಯೋಗ್ಯವಾದುದು (ನಸವಿ. ೧೯). [ಸಂ.]

**ನಿಧಾನತ್ರಿವುಡೆ** (ನಾ). ಯಕ್ಷಗಾನದ ವಾದನಪದ್ಧತಿಯಲ್ಲಿ ಪ್ರಚಲಿತವಿರುವ ಒಂದು ತಾಳಗತಿ : ತ್ರಿಶ್ರಜಾತಿ ತ್ರಿಪುಟತಾಳದಲ್ಲಿ ಬರುವ ಪ್ರತಿಯೊಂದು ಸಶಬ್ದ ಮತ್ತು ನಿಶ್ಶಬ್ದಕ್ರಿಯೆಗೂ ಎರಡೆರಡು ಅಕ್ಷರ ಕಾಲ ಕೊಡುವುದರಿಂದ ನಿಧಾನತ್ರಿವುಡೆಯಾಗುತ್ತದೆ (ಸಂಶೋಧ. ೧೬೦). 'ತ್ರಿಪುಡ' ಪರಾ. [ನಿಧಾನ+ತ್ರಿವುಡೆ$_1$(<ತ್ರಿಪುಡ)]

**ನಿಧಾನಿ** (ನಾ). ತಾಳ್ಮೆಯುಳ್ಳ ವ್ಯಕ್ತಿ : ಅವನು ತುಂಬಾ ನಿಧಾನಿ (ರೂಢಿ). [ನಿಧಾನ+-ಇ$_3$]

**ನಿಧಾನಿಸು** (ಕ್ರಿ). ೧. ಸಾವಕಾಶ ಮಾಡು ; ತಡ ಮಾಡು : ಒಂದು ನಿಮಿಷ ನಿಧಾನಿಸಿ, ಅದಕ್ಕೆ ಲೆಖ್ಖ ಮಾಡಲು ಅವಕಾಶ ಕೊಡಿ (ಶಾಲಿಸು. ೨೦೭). ೨. ಆಲೋಚಿಸು ; ವಿಚಾರ ಮಾಡು ; ವಿಚಾರಿಸು : ಆ ನುಡಿಯ ಮಾಕೊರ್ಂಡು ಶಿವಶಿವದೇನನಾಡಿದೆ ತಾಯೆ ನೀವೆಂದೂ ನಿಧಾನಿಸಲಚಲಸುಖಿಗಳು ಶಿವನ ಕರುಣದಲಿ (ಪ್ರಭುಲೀ. ೮-೨೩); ನಿಧಾನಿಸೆ ವೈದಿಕಾಂಗದಲಿ ಗುರುವಲಾ (ಕುಮ್ಯಾಸ. ೧೬-೩೫): ಮಗನೆ ಸಮಗ್ರಬಲ ನೀನಹೆ ನಿಧಾನಿಸಲಿಂದು (ಕುಮ್ಯಾದ್ರೋ. ೪-೪೨); ದೇವ ನೋಡೀ ಸಂಭ್ರಮವು ತಾನಾನ ರಾಯರಲುಂಟು ಸೇನಾರಾಮವಿದು ಲಯಸಾಗರದಲುಂಟೇ ನಿಧಾನಿಸಲು (ತೊರರಾ. ೬-೨೦-೫೬); ಶರ್ಯಾತಿ ತಾಂ ತಲೆವಾಗಿ ರಾಣಿಯೊಳ್ ನಿಧಾನಿಸಲ್ಕೆಂದು ತನ್ನಾವಾಸಕ್ಕೆ ನಡೆತಂದು ಅರಸಿಗೀ ಕತೆಯಂ ಪೇಟ್ದಂ (ರಾಮಾಶ್ವ. ೬೬-೨೯). ೩. ನಿರ್ಧರಿಸು : ಹೊಸಗೊಳಗೆ ಹದನಿದು ನಿಧಾನಿಸಲಱಿಯೆನೆನ್ನಸುವಿನಲಿ ಹೃದಯದ ಸೆಱೆ ಬಿಡದು ಶಿವಶಿವಯೆನುತ ಮಱುಗಿದನು ಧೃತರಾಷ್ಟ್ರ (ಕುಮ್ಯಾಸ. ೧೨-೬೯). ೪. ಎದುರಿಸು ; ಪ್ರತಿಭಟಿಸು : ಇಂದಿನೀ ಮೋಹರದ ಮುರಿವಸದಳ ನಿಧಾನಿಸಲರಿದೆನಲು ಮನದೊಳಗೆ ನಿಶ್ಚೈಸಿದನು ಮುರವೈರಿ (ಕುಮ್ಯಾದ್ರೋ. ೪-೨೬). [ನಿಧಾನ+-ಇಸು$_3$]

**ನಿಧಾನೆ** (ನಾ). ನೆಲೆಯಾದವಳು ; ಆಶ್ರಯ ನೀಡುವವಳು : ಕಲಕೀರವಾಣಿಯರ್ . . . ಕಾಯಜನಿಧಾನೆಯರ್ (ಜೈಮಿಭಾ. ३೦-३).
[ಸಂ. ನಿಧಾನಾ]

**ನಿಧಿ** (ನಾ). ೧. ಅಷ್ಟಭೋಗಗಳಲ್ಲಿ ಒಂದು ; ಸಂಪತ್ತು ; ಐಶ್ವರ್ಯ : "ಸೇವಧಿಃ, ನಿಧಿಃ—ಈ ೨ ನಿಧಾನಂ" (ಹಲಾಯು. ೧೪-೮೨); "ನಿಧಾನಮದು ನಿಧಿ ಶೇವಧಿಯೆನಿಕ್ಕುಂ" (ಮಂಗರಾ.೧೭-೧೭); ನಿಧಿ ದೊರೆಕೊಳ್ವೊಡಂ ಕುಲಧನಂ ದೊರೆಕೊಳ್ವೊಡಂ (ಆದಿಪು.೧೨-೨೦); ಶ್ರೀಮತ್ ಕನ್ನಯ್ಯಂ ಕದಂಬಳಿಗೆ ಸಾಯಿರಮುಮಂ ನಿಧಿನಿಧಾನನಿಕ್ಷೇಪ ಸಹಸ್ರದಣ್ಡಂ ಮೊದಲಾಗಿ ದುಷ್ಟನಿಗ್ರಹವಿಶಿಷ್ಟಪ್ರತಿಪಾಳನಂಗೆಯ್ದು (ಎಕ. XI, ಚಿತ್ರದು. ೪೯-೧೯ ; 947); ಭೋಗವಱಿಯದ ತರುಣನಂ ನಿಧಿಗೆ[ಪಾಠಾಂ. ತರಳನಂ ನಿಧಿಗೆ, ನಿಧಿಗೆ ತರುಣನಂ]ಕೂಡೆ ತೃಪ್ತನಾಗಿ ತನ್ನಂ ಕೊಡುವುದೆಂಬಾಗಳ್ (ಹಚಕಾ. ೧೦-೧೮); ಸುರಧೇನು ಪೊಸೆದು ಬಂದಂತಿರೆ ನಿಧಿ ಬಂದಂತಿರಮರಭೂಜಂ ಬಂದಂತಿರೆ (ಪುಷ್ಪಪು. ೧೩-೧೨೨); ಐತಕ್ಕೊ ಜಾರದ ಚಿಪ್ಪುಗಳನ್ನೊ, ಚೂರುಗಳನ್ನೊ, ಮಕ್ಕಳು ದೊಡ್ಡ ನಿಧಿಯಂತೆ ಕೂಡಿಟ್ಟುಕೊಂಡಿರುವುದನ್ನು ನೋಡಿರುತ್ತೇವೆ (ಶಿಕ್ಷದ. ೭೫). ೨. ಹುದುಗಿಟ್ಟ ಧನ,—ದ್ರವ್ಯ ; ನಿಕ್ಷೇಪ : ಮಾಡುವ ನೀಡುವ ಭಕ್ತನ ಕಂಡರೆ ನಿಧಿ ನಿಧಾನವ ಕಂಡಂತಾಯಿತ್ತು (ಬಸವ. ೭೫೮); ಪುಟ್ಟಿದಂದಿಂದ ಪುರುಳುಗಾಣದವರು ನೆಟ್ಟನೆ ನಿಧಿಯಂ ಕಂಡಂತೆ ಕಟ್ಟೆಱಕದೊಳಿನಿಯನ ಕಾಣುತ ಮರವಟ್ಟು ಮೈಮಱೆತು ನಿಟ್ಟಿಪಳು (ಹದಿಬ. ೭-೪೧). ೩. ನಿಯತಕಾರಣಕ್ಕಾಗಿ ಬಳಸಿಕೊಳ್ಳಲು ಮೀಸಲಾಗಿಡುವ ಹಣ ; ಪುದುವಟ್ಟು : ಆ ನಿಧಿಗಳಲ್ಲಿ ಕೂಡುವ ಒಟ್ಟು ಹಣವೂ . . .

ಪೋಷಣೆಗೆ ಒದಗುತ್ತದೆ (ಹಣಪ್ರ. ೧೫೧). **೪.** ಒಟ್ಟಿಲು ; ರಾಶಿ : "ನಿಧಿಯೆನಲು ರಾಶಿ" (ಮಂಗರಾ. ೧೧೯-೩). 'ನಿಧಿಗೊಳು' ಪರಾ. **೫.** ಆಶ್ರಯ ; ನೆಲೆ : ಸ್ವಾಭಾವಿಕಶುಭಗುಣನಿಧಿಗಂಬುಜನಾಭ ನಿಗಾನೆಜಿಗುವೆನು (ಹವಿಬ. ೩-೧). **೬.** ಕಡಲು ; ಸಮುದ್ರ. **೭.** [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : "ನಿಧಿ ಮಣಿ ಗ್ರಹ ರಂಧ್ರವಿರಲು ವೊಂಬತ್ತು" (ಮಂಗರಾ. ೧೦೪-೮); ವಸುಧಾಭಾವಂ ಕೇಶವ ದಿಶ ವಂಕಂ ಭಾವ ರಂಧ್ರ ನಂದ ಪದಾರ್ಥಂ . . . ನಿಧಿ ರತ್ನ ನವಮ ವೊಂಭತ್ತೆನಿಕುಂ (ಸ್ಮಸಹಾ. ೯-೯) ; ನವ ಪದಾರ್ಥ ರಂಧ್ರ ನಂದ ಲಬ್ಧ ನಿಧಿ ನವನಿಧಿ . . . ನಾಟ್ಯಾಂಗ ಇಂತಿನಿತುಂ ೯ಕ್ಕೆ ಪೆಸರು (ಸ್ಮಸಹಾ. ೧೧-೩) ; ಕೋವಿದರು ಕೇಳ್ದೊಳ್ಳಿತೆನಲುಡು ದೇವ ನಿಧಿ ನಯನೇಂದುಸಂಖ್ಯೆಗಳೋವಿ ಶಕವರುಷಂಗಳಾಗಲು (ಬಸಪು. ೬೧-೯೨). 'ಜಲನಿಧಿ', 'ವಿಷನಿಧಿ' ಪರಾ. **೮.** ಒಂದು ದೊಡ್ಡ ಸಂಖ್ಯೆ : ಎಕ್ಕಂ ದಹಂ ಶತಂ . . . ಕ್ಷೋಭ ಮಹಾಕ್ಷೋಭ ನಿಧಿ ಮಹಾನಿಧಿ ಸಾಗರ ಮಹಾಸಾಗರ ಹರಿ ಮಹಾಹರಿ ಶಂಖ ಮಹಾಶಂಖ ಫಣಿ ಮಹಾಫಣಿ ಕ್ರತು ಮಹಾಕ್ರತುವೆಂಬಿವೇ ಉಗ್ಘಡಣೆಗಳು (ವಿವೇಕ. ೭) ; ಕ್ಷೋಭ ಮಹಾಕ್ಷೋಭ ನಿಧಿ ಮಹಾನಿಧಿ ಸಾಗರ ಮಹಾಸಾಗರಾ ಪರಿಮಿತ . . . ಇವು ೩೨ ವುಘಡಣೆ ಹೆಸರುಗಳು (ಭಾಸ್ಕರ. ೧೧-೮). **೯.** [ಜೈನ] ಚಕ್ರವರ್ತಿಗೆ ಲಭಿಸುವ ನವನಿಧಿಗಳು ; ಚಕ್ರವರ್ತಿಗೆ ಇಷ್ಟಾರ್ಥವನ್ನು ಕೊಡುವ ದಿವ್ಯವಸ್ತುಗಳು ; ℙ**(೧). ಕಾಲನಿಧಿ**—ಋತುಗಳಿಗೆ ಅನುಸಾರವಾಗಿ ಫಲಪುಷ್ಪಾದಿಗಳನ್ನು ಕೊಡುವುದು. **(೨).** ಮಹಾಕಾಲನಿಧಿ—(ಪಂಚಲೋಹದ) ಭಾಜನವನ್ನು ಕೊಡುವುದು. **(೩).** ಪಾಂಡುನಿಧಿ—ಆಹಾರಕ್ಕೆ ಬೇಕಾದ ಧಾನ್ಯಗಳನ್ನು ಕೊಡುವುದು. **(೪).** ಮಾನವ ನಿಧಿ—ಬೇಕಾದ ಆಯುಧಗಳನ್ನು ಕೊಡುವುದು. **(೫).** ಶಂಖನಿಧಿ—ಚತುರ್ವಿಧ ವಾದ್ಯಗಳನ್ನು ಕೊಡುವುದು. **(೬).** ಪದ್ಮನಿಧಿ—ಬೇಕಾದ ಬಟ್ಟೆಗಳನ್ನು ಕೊಡುವುದು. **(೭).** ನೈಸರ್ಪನಿಧಿ—ಒಳ್ಳೊಳ್ಳೆಯ ಭವನಗಳನ್ನು ಕೊಡುವುದು. **(೮).** ಪಿಂಗಲನಿಧಿ—ಒಡವೆ, ವಸ್ತುಗಳನ್ನು ಕೊಡುವುದು. **(೯).** ನಾನಾರತ್ನ—ಅನೇಕ ಪ್ರಕಾರವಾದ ರತ್ನಗಳನ್ನು ಕೊಡುವುದು. ಇವುಗಳು ಯಾವಾಗಲೂ ನಾಶವಾಗುವುದಿಲ್ಲ. ನಿಧಿಪಾಲರೆಂಬ ದೇವಪುರುಷರು ಇವುಗಳನ್ನು ಕಾಯುತ್ತಿರುತ್ತಾರೆ. ಒಂದೊಂದೂ ಒಂಬತ್ತು ಯೋಜನ ಅಗಲವಾಗಿಯೂ ಹನ್ನೆರಡು ಯೋಜನ ಉದ್ದವಾಗಿಯೂ ಎಂಟುಯೋಜನ ಆಳವಾಗಿಯೂ ಇದ್ದು ಗಾಡಿಯ ಆಕಾರದಲ್ಲಿರುತ್ತವೆ : ನಿಧಿಯೆಂಬುದು ಪರಮಗುಣನಿಧಿಯನರ್ಹದ್ದೇವನನಾರಾಧಿಸಿ ತನ್ನ ನಿಧಿದ್ರವ್ಯಂಗಳಂ ಪತ್ತುವಿಟ್ಟು ದೀಕ್ಷೆಯೊಳ್ನಿಗಟಿರ್ದೊಡೆ ದಿವ್ಯವಿಜಯಂ ಪರಮನಿಧಿಗಳ್ಗಧೀಶ್ವರನಕ್ಕುಂ (ಚಾವುಂಪು. ೨೩೦). 'ನವನಿಧಿ' ಪರಾ.

**ನಿಧಿಯೊಡೆಯ** = ಐಶ್ವರ್ಯದ ಅಧಿಪತಿ: ನಿಧಿಯೊಡೆಯರ್ ನೀವಿರ[ಲಾ]ಮುಧನರ್ ಪೋದಪ್ಪೆವೆಂಬುದುಂ (ಮಹಾನೇ. ೧೪-೬೮). **[ಸಂ.]**

**ನಿಧಿಗಾಣ್** (ಕ್ರಿ). ಹೂಳಿಟ್ಟ ಹಣವನ್ನು ಕಾಣು : ಕರಂ ಮೇಳಿಸಿದಪ್ಪುದೆನ್ನೆರ್ದೆಯನೆಂದು ಬೊದಿಲ್ಲೆನೆ ಪಾಯ್ದು ನೀರೊಳಾ ಬಾಳನ ನಾದಮಾದರದೆ ಕಂಡೊಸೆದಂ ನಿಧಿಗಂಡನಂತೆವೋಲ್ (ಪಂಪಭಾ.೧-೯೬) ; ಮರ್ದನಗಟಿಲ್ಪೋದಂ ನಿಧಿಗಂಡಂತೆ ಪೆರ್ಚಿ (ಧರ್ಮಾಮೃ. ೧-೧೨೮) ; ದಾರಿದ್ರ್ಯನಾದರದಿಂದಂ ನಿಧಿಗಂಡವೋಲ್ ಕ್ಷಪಣಕತ್ವಂ ಪಿಂಗಿ ಸದ್ವ್ರತನಾಗಿರುತ (ವಾಗೀಶ. ಪೇ. ೨೬೩-೨) ; ನಿಧಿಗಂಡ ಬುದ್ಧಿವಂತಂ ಅದ ನಾನಾಬುದ್ಧಿಯಿಂದ ರಕ್ಷಿಸುವಂದದಿ (ಭವ್ಯಾಮೃ. ೩೪). [ನಿಧಿ + ಕಾಣ್]

**ನಿಧಿಗೊಳು** (ಕ್ರಿ). ರಾಶಿಮಾಡು ; ಒಟ್ಟುಗೂಡಿಸು : ಆ ನೆನಹಿನೊಸಗೆಗಳ ನಿಧಿಗೊಳುತ, ಗುಡಿಯ, ನಿಂತೆ ನನ್ನ ಮಾನಸ ನಿನ್ನ ಶ್ಯಾಮಸುಂದರಗರ್ಭದೊಳಗವನು ತಡತಡಕಿ ತೀರದಂತೆ (ಮಲೆದೇ. ೧೦-೯) ; ಆ ಧೂಪವಾ ದೀಪವಾ ತಾಳಮೇಳಗಳ ಆ ಸರ್ವಸಂಘಾತದಿ ಮೂಡಿಬಹ ದಿವ್ಯತೆಯು ದಿನದಿನವು ನಿಧಿಗೊಳುತ ಕಳಕಳಿಪುದೀ ಬಿಂಬದಿ (ಮಲೆದೇ. ೩೦-೧೦). [ನಿಧಿ + ಕೊಳು(<ಕೊಳ್$_1$)]

**ನಿಧಿತೆಗೆ** 'ನಿಧಿದೆಗೆ' ನೋ.

**ನಿಧಿದಾಣ** (ನಾ). ನಿಕ್ಷೇಪವಿರುವ ಸ್ಥಳ : ಸುಡುವೆಡೆ(ಕಾ)ಗಾಡು ಪುತ್ತಿನೊಳಮಕ್ಷಕುಜಂ ನಿಧಿದಾಣ ಕೋಟರಂ ಕಡೆಸಿಡಿದೊಂದೆ ಭೂಜವಟ ಕಾನನಮೊಪ್ಪುವ ವೇಣುಕುಂಜವೆಂಬೆಡೆಗಳೊಳಿರ್ದ ಪಾವು ಕೊಳಲಪ್ಪುದಸಾಧ್ಯಮಿಳಾತಳಾಗ್ರದೊಳ್ (ಖಮದ. ೩-೪೧). [ನಿಧಿ + ತಾಣ]

**ನಿಧಿದೆಗೆ,** ನಿಧಿತೆಗೆ (ಕ್ರಿ). **೧.** ಹೂತಿಟ್ಟ ಹಣವನ್ನು ಹೊರತೆಗೆ : ಚಾರದ ಕವಿತೆಯನುಸುರ್ವಂ ಧಾರುಣಿಯೊಳಗಿನ್ನದಾತನೇತಕ್ಕಂಜುವನಾರಾಯರ್ ಪಿಡಿದೋಯ್ದೊಡೆ ಚಾರದ ನಿಧಿದೆಗೆದು ಕೊಡುವುದಾತಂಗಂದೇ (ಮಲ್ಲಿಶಾ. ೧-೯೧). **ನಿಧಿತೆಗೆ : ೨.** ಜೋಳವನ್ನು ತುಂಬುವಾಗ ದೇವರಿಗೆಂದು ಒಂದು ಭಾಗವನ್ನು ತೆಗೆದಿರಿಸು ; ℙ ಹೀಗೆ ತೆಗೆದಿರಿಸಿದ ಜೋಳವನ್ನು ರಾಶಿಯ ಮೇಲೆ ಹಿಡಿಹಿಡಿಯಾಗಿ ಚೆಲ್ಲುತ್ತ ಹೋಗುವರು. ಇದರಿಂದ ರಾಶಿಯ ಜೋಳ ಹೆಚ್ಚಾಗುವುದೆಂದು ಭಾವನೆ. ಹೀಗೆ ಹಾಕಿ ಉಳಿದ ಜೋಳವನ್ನು ದೇವಸ್ಥಾನಕ್ಕೆ ಸಲ್ಲಿಸುವರು : ನಿಧಿತೆಗೆದು ರಾಶಿಯನ್ನು ತುಂಬು (ರೂಢಿ). [ನಿಧಿ + ತೆಗೆ$_1$]

**ನಿಧಿನಾಗರ** (ನಾ). ಐಶ್ವರ್ಯವನ್ನು ಕಾಯುವ ಸರ್ಪ,—ಹಾವು : ಥಟ್ಟನೆರಗಿ ಗರುಡನ ತೆರ ಆಹಮುಂಬೀ ನಿಧಿನಾಗರನೊಯ್ದುಹೆ ನೀ ಮುದವಿದ್ಯುತ್ಸ್ಪರ್ಶವ ಮನ ಪಡೆಯೆ (ಗಣೇಶ. ೨೫-೧೪). [ನಿಧಿ + ನಾಗರ$_1$ (<ನಾಗರು)]

**ನಿಧಿಪತಿ** (ನಾ). ನವನಿಧಿಗಳಿಗೆ ಒಡೆಯನಾದವನು ; ಐಶ್ವರ್ಯದ ಅಧಿದೇವತೆ ; ಕುಬೇರ : ನಿಧಿಪತಿಪಿತಸುತಶಿಕ್ಷಿತಶೀಲನೆ ಕುಧರಸ್ಥ ಕುಶಲವಿಡೆನ್ನ (ಶತಸಾಂ. ೬೨-೭). [ನಿಧಿ + ಪತಿ$_2$]

**ನಿಧಿಪತಿತ್ವ** (ನಾ). [ಜೈನ]ನವನಿಧಿಗಳಿಗೆ ಒಡೆಯನಾಗಿರುವಿಕೆ : ಮಗಧನ ಕೆಯ್ಯ ಚಕ್ರಮೆನಗಾವ ಪುರಾತನಪುಣ್ಯದಿಂದೆ ತೊಟ್ಟಗೆ ದೊರೆಕೊಂಡುದೀ ನಿಧಿಪತಿತ್ವಮುಮೆತ್ತಣಿನಾಯ್ತು (ಮಹಾನೇ. ೧೫-೧೩೦). [ಸಂ.]

**ನಿಧಿಪುರುಷ** (ನಾ). **೧.** ನವನಿಧಿಗಳುಳ್ಳವನು ; ಅತುಳೈಶ್ವರ್ಯವನ್ನು ಹೊಂದಿರುವವನು : ದಧಿ ನವನೀತಂ ತಕ್ರಂ ಸುಧೆ ಘೃತಮೆಂಬಿವನೆ ಮಾಜಿ ಗಳಿಸಿದ ಧನದಿಂ ನಿಧಿಪುರುಷರೆನಿಸುತೊಲವಿಂದಧಿಕಸುಖಂ ಬೆತ್ತು ಘೋಷಜನಮೆಸೆದಿರ್ಕುಂ (ತ್ರಿಪುವಿ. ೧೫-೪). **೨.** [ಜೈನ] ಚಕ್ರವರ್ತಿ : ನಿಧಿಪುರುಷಂ ಪುಟ್ಟುವುದುಂ ನಿಧಿಗಂಡುದು ನಿಖಿಳ ಲೋಕಮನೆ ಜನನದೊಳತ್ಯಧಿಕೋತ್ಸವದಿಂದಧನರ್ಗಧನತೆ ತಲೆದೋಱದಂತು ಪಾರ್ಥಿವನಿತ್ತಂ (ಪಾರ್ಶ್ವಪು. ೭-೮೪). [ನಿಧಿ+ಪುರುಷ]

**ನಿಧಿವಾಸ** (ನಾ). ಮುಖರಂಧ್ರಕ್ಕೂ ತಾರರಂಧ್ರಕ್ಕೂ ನಡುವೆ ಒಂಬತ್ತು ಭಾರತೀಯ ಅಂಗುಲಗಳು ಇರುವ ಕೊಳಲು : ಜಾತಿವಾಸ ಸುಜಾತಿವಾಸ . . . ದಿಗ್ವಾಸ ನಿಧಿವಾಸ ಋಷಿವಾಸ . . . ಶಿವಶಕ್ತಿವಾಸ ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವಱಿತು (ವಿವೇಕ. ೨೩೭). [ನಿಧಿ + ವಾಸ$_1$]

**ನಿಧಿಸಮಿತಿ** (ನಾ). [ಜೈನ]ನವನಿಧಿಗಳ ಗುಂಪು,—ಸಮೂಹ : ಪೊಸ ಪೊನ್ನವೇದಿ ನಾಲ್ಕುಂ ದೆಸೆಗಳೊಳಂ ಬೆಳ್ಳಿವೆಸದ ಬಾಗಿಲ್ವಾಡಂ

ಪಸರಿಸಿದ ಸಕಳಮಂಗಳವಿಸರಂ ನಿಧಿಸಮಿತಿ ಯಕ್ಷರಕ್ಷಕರೆಸೆ,ಪಿಂ (ಚಂದ್ರಪು. ೧೫-೫೫). [ನಿಧಿ + ಸಮಿತಿ]

**ನಿಧೀಶ** (ನಾ). **೧.** ಐಶ್ವರ್ಯಕ್ಕೆ ಅಧಿಪತಿಯಾದವನು; ಕುಬೇರ. **೨.** [ಜೈನ] ಚಕ್ರವರ್ತಿ : ಅಗ್ರಜನತ್ಯುನ್ನತಮಪ್ಪ ಮಸ್ತಕದ ಮೇಗೋರಂತೆ ಪಾಯ್ವಾತ್ಮಬಾಷ್ಪ ಜಲೌಘಂಗಳಿನಂದು ಬಾಹುಬಲಿ ತನ್ನಿಂದಂ ನಿಧೀಶಂಗೆ ವಂಶಜರಾಜ್ಯಾಭಿಷವೋತ್ಸವಂ ನೆಗಟ್ದುದೆಂಬಾ ಶಂಕೆಯಂ ಮಾಡಿದಂ (ಆಪಿಪು. ೧೪-೧೩೩). [ನಿಧಿ + ಈಶ]

**ನಿಧೀಶ್ವರ** (ನಾ). **೧.** ಐಶ್ವರ್ಯಕ್ಕೆ ಅಧಿಪತಿಯಾದವನು ; ಕುಬೇರ. **೨.** = ನಿಧೀಶ ೨ : ಏಲಾಲವಂಗಲವಲೀವೇಲಾವನಭೂಮಿ ಯೊಳ್ ನಿಧೀಶ್ವರಸೈನ್ಯವ್ಯಾಲಗಜಂಗಳ್ ವನಗಜಲೀಲೆಯನನುಕರಿಸೆ ಕಣ್ಗೆವಂದುವು ಪಲವುಂ (ಆದಿಪು. ೧೩-೨) ; ನಿಧೀಶ್ವರನಖಂಡಿತಮಂಡಳ ನಾಥನದ್ರಿವಿನ್ಯಸ್ತನಿಜಪ್ರಶಸ್ತಿಕೃತಶಾಂತಿಮಹೀಪತಿ ಸಿದ್ಧದಿಗ್ಜಯಂ (ಶಾಂತಿಪು. ೧೧-೬೪). [ನಿಧಿ + ಈಶ್ವರ]

**ನಿಧುವನ** (ನಾ). **೧.** ಕಂಪನ ; ಅಲ್ಲಾಡುವಿಕೆ ; ನಡುಕ. **೨.** ಸುರತ ; ಸಂಭೋಗ : "ಸಂವೇಶನಂ, ನಿಧುವನಂ, ಸಂಪ್ರಯೋಗಃ . . . ಮೋಹನಂ–ಈ ೭ ಸುರತಂ" (ಹಲಾಯು. ೯೩-೪೧೫) ; ಬಳವಿ ವಡೆದಟ್ಟಿಱುಮನೋರೊರ್ವರೊಳ್ ನೆಱೆದನೇಕವಿಧನಿಧುವನಸುಖಸುಧಾ ರಸಾಧೀನಚಿತ್ತರುಂ (ಆದಿಪು. ೪-೫೨ ವ) ; ವಸಂತೆಯುಂ ರಮಣಿಯುಂ ಮೆಂಬಿರ್ವರ್ ಗಣಿಕೆಯರ್ಗಾಸಕ್ತನಾಗಿ ಧನಮಂ ನಿಧುವನಕ್ಕೆ ಸಲಿಸಿ (ಪಂಚಾಮಾ. ೧೫-೪೭ ವ) ; ನಿಧುವನಸಮುದ್ಭೂತಂ ನೂತಂ ಮೃಗಾ ನ್ವಯಸಿಂಧುರಂ (ಬಂಹುರಿ. ೨-೪೯) ; ಇನ್ನು ಕೆಲವೇ ನಿಮಿಷಗಳಲ್ಲಿ ರತಿಮನ್ಮಥರು ಅವರನ್ನು ನಿಧುವನದ ಶಿಖರಾನುಭವಕ್ಕೂ ಒಯ್ಯು ತ್ತಿದ್ದರೊ ಏನೋ ? (ಮಲೆಸು. ೨೫೮). [ಸಂ.]

**ನಿಧುವನನಿಕೇತನ** (ನಾ). ಮಲಗುವ ಮನೆ ; ಸುರತಾಲಯ ; ಶಯ್ಯಾಗೃಹ : ಚತುರೋಕ್ತಿಜಳಮನೆಱೆದು ಮುಳಿಸಂ ಕಳೆದೆಗೆವಂತೆ ತೆಗೆದು ಬಗೆನೆಲದೊಳ್ಪೇಟವೆಂಬ ಸಸಿಯಂ ಬೇರ್ವರಿಯಿಸಿ ವಿನಯದಿಂದೊಡ ಗೊಂದು ಬಂದು ನಿಧುವನನಿಕೇತನಮಂ ಪುಗಿಸಲ್ (ರಾಜಶೇ. ೧೧-೧೪೦ ವ). [ನಿಧುವನ + ನಿಕೇತನ]

**ನಿಧ್ಯಾನ** (ನಾ). ನೋಡುವಿಕೆ ; ನೋಟ ; ದೃಷ್ಟಿ : "ನಿಭಾಳನಂ, ನಿಶಮನಂ, ನಿಧ್ಯಾನಂ . . . ದ್ಯೋತನಂ – ಈ ೮ ನೋಟಂ" (ಹಲಾಯು. ೯೩-೪೧೨). [ಸಂ.]

**ನಿನತು** 'ನಿನತ್ತು' ನೋ.

**ನಿನತ್ತು,** ನಿನತು, ನಿನ್ನತು, ನಿನ್ನದು (ಸ). ನಿಮತು, ನಿಮತ್ತು, ನಿಮ್ಮತು, ನಿಮ್ಮದು, ನಿಮ್ಮುತು (ಬಹುವ) : ನಿನಗೆ ಸೇರಿ ದುದು : "ನಿನತ್ತೆಂದುಂ ನಿನ್ನದು" (ಕಶಸಾ. ೬೮-೫೩೨) ; ನಿನ್ನದು ಎನ್ನದು ತನ್ನದು ಎಂಬವರ್ಕೆ ನಿನತು ಎನತು ತನತು ಎಂದಾದೇಶ ಮಕ್ಕುಂ ; ಮೇಣೆಂಬ ವಿಕಲ್ಪದಿಂದವರ್ಕೆ ದ್ವಿತ್ವಮುಂಟು ನಿನತ್ತು ಎನತ್ತು ತನತ್ತು – ಎಂದು (ಶಮದ. ೧೪೭ ವೃತ್ತಿ) ; ನಿನತು, ನಿನತ್ತು (ಶಬ್ದಾನು. ೨೮೪ ಪ್ರಯೋ) ; ನಿನ್ನ ರೂಪು ಕಾಮಿನಿಯೆರಡಚ್ಚಿಯೊಳ್ ನೆಲನುಮಾಗಸಮುಂ ದೆಸೆಯುಂ ನಿನತ್ತು ರೂಪನೆ ತಳೆದೊಪ್ಪಿ ತೋಱು ವುದು ನೀಱಗೆ ನಿನ್ನಯ ಮಾಯೆಯೇಂ ನೃಪಾ (ರಸರ. ೧-೭೩) ; ಎನ್ನ ಮತಿಯೊಳಗುಗಾಣದ ನಿನತ್ತೆಂದು ನುತಿಗೆಯ್ದು ಕಂಗಳ ಹಬ್ಬವಾಗೆ ನಿನ್ನಯ ಗುರುವರನ ನೋಳ್ಪಡುಜ್ಜುಗಿಸಿ ಬಂದೆನೆನಲು (ರಾಘಚ. ೧೪-೪೨). **ನಿನತು :** "ನಿನತೆಂದು ನಿನ್ನದಕ್ಕುಂ" (ಕವಿಕಂ. ೨೧೯) ; ನಿನ್ನದೀ ಮೇದಿನಿ ಪಟ್ಟಮುಂ ನಿನತೆ (ಪಂಪಭಾ. ೯-೬೪) ; ಎನಗೆ ಕೂರ್ಪುದನಾ ಘಟಸಂಭವಂ ನಿನಗೆ ಕೂರನಟಿಲ್ ನಿನತಲ್ತು ಕೇಳ್[ನ] ತುಮಾಱದ ಶೋಕಮನಿರ್ವರುಂ ಮುನಿವರಂ ತವೆ ಕೊಂದೊಡನೀಗುವಂ (ಪಂಪಭಾ. ೧೨-೩೬) ; ಸರಸತಿ ನಿನ್ನ ಭಾಗ್ಯಪರೆಯಾದುದೆ ಹಾ ನಿನತೋಲೆವಾಗ್ಯವೋಸರಿಸಿದುದೇ ಧರಿತ್ರಿ (ಪರ್ಶಪು. ೯-೭೦) ; ಆವ ರೂಪದಲಿ ನೋಡಿದೊಡೆ ಮಿಗಿಲು ಸೊಗಸು ನಿನತು ? (ನನ್ನಪ. ೧೬-೨). **ನಿನ್ನತು :** ಕವೀ ಎಂಬುದೊಂದೇ ಪೆಸರ್ ಸಾಲದೇ ನಿನ್ನತೆಲ್ಲಕ್ಕಮೇಂ ಪೇಳಲೇ ! (ಸಂಸಪ. ೧೩-೩೩). **ನಿನ್ನದು :** ಕೌರವನುಳಿವು ನಿನ್ನದು ಕಂದ ಕದನವ ಜಯಿಸು ಹೋಗೆಂದ (ಕುಪ್ಯಾದ್ರೋ. ೧-೨೩) ; ಕುಂತಿಯು ತನ್ನ ಮಕ್ಕಳೈವರ ತಂದು ಮುದ್ದುಕೃಷ್ಣನ ಕರದಿ ಕೊಟ್ಟು ಪರಿಭಾರವಿದುಯಿದ್ದು ನಿನ್ನದೆಂದು ಪೇಳಲ್ (ತುರಂಗ. ೧೩-೪೮). **ನಿಮತು :** ಸಾವೆ ನಿಮತಿಚ್ಛೆಯೆನೆ ಪೊಣರ್ದಾವಂ ತಳ್ತಿಱಿದು ಗೆಲ್ವಂ (ಪಂಪಭಾ. ೧೧-೩೧) ; ಕೃತಾರ್ಥನೆನಾದೆನಿನ್ನಿಮತು ದೆಸೆಯಿಂದನ್ಯರ್ ನಿಮ್ಮಂತು ಮಾನ್ಯರೆ ಧನ್ಯರೇ (ಪುಷ್ಪಪು. ೧೨-೧೧); ಬಲ್ಮೆಯಾಕ್ರೋಶಕ್ಕೆ ಮಣಿಯದಿಹ ಶಿರ ನಿಮತು (ಅಮತಂ. ೨೨-೭). **ನಿಮತ್ತು :** ನಿನತು ಎನತು ತನತು – ಎಂಬ ನಕಾರಕ್ಕೆ ಬಹುವಚನದೊಳ್ ಮತ್ವಮುಂಟು – ನಿಮತು ಎಮತು ತಮತು; ವಿಕಲ್ಪದಿಂದವಱ ದ್ವಿಭಾರ್ವಮುಮುಂಟು – ನಿಮತ್ತು ಎಮತ್ತು ತಮತ್ತು–ಎಂದು (ಶಮದ. ೧೪೭ ವೃತ್ತಿ); ಪ್ರೇಮದಿಂ ಶರ್ಕರಾಮೃತದೊಳ್ಗೂಟದವೋಲ್ ನಿಮತ್ತು ಸವಿಗೂಟಂ ಪಿಂಗೆ ಕಾಮಾಗ್ನಿಗಾಹುತಿಯಪ್ಪಂದಮದಲ್ತೆ (ರಸರ. ೪-೧೭೮). **ನಿಮ್ಮತು :** "ನಿಮ್ಮತೆಮ್ಮತು ತಮ್ಮತೆನೆ ಬಹುವಚನಮಕ್ಕುಂ" (ಕಬ್ಬಕೈ. ೭೦). **ನಿಮ್ಮದು :** ತನು ನಿಮ್ಮದೆಂಬೆ ಮನ ನಿಮ್ಮದೆಂಬೆ ಧನ ನಿಮ್ಮದೆಂಬೆ (ಬಸವ. ೩೦೮) ; ನಿಮ್ಮದೊಂದು ಗಿರಾಕಿ ಕಳೆದೆ ನಾನು (ಬೆಂಗಬ. ೨೩೦). **ನಿಮ್ಮುತು :** ದೇವಾ ಸುಭದ್ರೆಯುಂ ಪದ್ಮಾವತಿಯುಂ ನಿಮ್ಮುತಿರ್ವರರಸಿ ಯರಸ್ಮದ್ಭೂವಲ್ಲಭಾಗ್ರಜೆಯರಿನ್ನಾವೆಡೆ ವೈತರ್ಕ್ಯವಿಷಯವಿಾ ಕೊಳ್ಕೊಡೆ ಯೊಳ್ (ಮಹಾನೇ. ೩-೧೨೦) ; ನಿಮ್ಮುತಿರ್ವರುಂ, ಎಮ್ಮುತೈವರುಂ, ತಮ್ಮತಱುವರುಂ (ಶಮದ. ೧೪೮ ಪ್ರಯೋ).

[<ನೀನ್]

**ನಿನದ** (ನಾ). ಧ್ವನಿ ; ಸಪ್ಪುಳು ; ಶಬ್ದ : "ನಾದಂ ಸ್ವರಂ ಘೋಷಂ . . . ಧ್ವಾನಮಾ ನಿನದಮಾ ಧ್ವನಿಯೆನಿಕ್ಕುಂ" (ಮಂಗರಾ. ೯-೩೧) ; ಕನಕಕಾಂಚೀನಿನದಪ್ರಗಣಿತಮಗಲ್ದ ನಲ್ಲಳ ಜಗನಮಿದೆನ್ನೆರ್ದೆಯನೆಂತು ಪೊಕ್ಕಳಿಪುವುದೋ (ಪಂಪಭಾ. ೪-೭೩); ವನರುಹವದನದ ಮದಪಿಕನಿನದದ . . . ಮಳಯರುಹಗಂಧದ ವನಿತಾನಿಕರಕ್ಕೆ ದೇಮನಭಿನವಕಾಮಂ (ಸೌಇಇ. IX–i, ೧೧೮–೩೯ ; ಸು. 1057) ; ನೆರವುವ ಗೋಧನಮನ ಲಂಕರಿಸುವ ಘೋಷ ನಿವಾಸಿಗಳಿಂದವಾಯ್ತು ಕಳಕಳನಿನದಂ (ಜಗವಿ. ೪–೮೦) ; ಈ ನಿನದವೆಮ್ಮಂದಿನಗ್ಗದ ವಾನರನ ಗರ್ಜನೆಗೆ ಗುರು ವಾಯ್ತೇನನೆಂಬೆನೆನುತ್ತ ಮೆಲ್ಲನೆ ಮಿಡುಕಿದನು ಹನುಮ (ಕುಪ್ಯಾಅ. ೧೦-೧೩) ; ಮದಗಜದತ್ತ ಬೊಬ್ಬೆಯ ನಿನದದಲಿ ತಿರುಗಿದನು (ತೊರರಾ. ೨-೩೨-೩೧) ; ಪಣ್ ಎಂದುಂ ಬೀಯದ ಫಲವೃಕ್ಷಂಗಳೆತ್ತಂ ತುಱುಗಿ ಬೆಳೆದಿರೆ ಭ್ರಮದ್ಭ್ರಮರ ನಿನದಮೆಂದುಂ ಕಿವಿಗಿನಿದಂ ಕಱಿಯೆ, ಋಷ್ಯಾ ಶ್ರಮೋಪವನಂ ಸೀತೆಗೆ ಕಣ್ಗೆವಂದತ್ತು (ರಾಮಾಶ್ವ. ೪೩-೧೩). [ಸಂ.]

**ನಿನದಂಗೆಯ್** (ಕ್ರಿ). ಸದ್ದು ಮಾಡು ; ಧ್ವನಿ ಮಾಡು : ನಿನದಂ ಗೆಯ್ದುಱಿಪುತ್ತುಮೆಯ್ದೆ . . . ನೆರೆದುದೋರಂತಾ ರಥಾಂಗವ್ರಜಂ (ಕುಸುಮಾ. ೪-೭೪). [ನಿನದ + ಕೆಯ್$_1$]

**ನಿನದಿಸು** (ಕ್ರಿ). ನುಡಿ ; ಧ್ವನಿಸು ; ಮೊಳಗು : ೨ನೆಯ ಶತಮಾನದ ಆಡುನುಡಿಯ ಸ್ವರೂಪ ನಮಗೆ ತಿಳಿದು ಬಂದಿಲ್ಲವಾಗಿ, ಈ ಪ್ರಹಸನದ ಮಾತುಗಳು ಆ ಆಡುನುಡಿಯನ್ನು ನಿನದಿಸುತ್ತಿವೆಯೆ ? (ದ್ರಾವಿವಿ. ೮೧); ಇಗರ್ಜಿಯಿಂದ ಹೊರಟ ಗಂಟೆಯ ಧ್ವನಿ ಸುತ್ತಲಿನ ಗುಡ್ಡಗಳಲ್ಲಿ ನಿನದಿಸು

ವಾಗ ನಿರ್ಮಲೆಯ . . . ಮನಸ್ಸು ಪುಲಕಿತವಾಯಿತು (ಪೂರುವಾ. ೯೧) ; ವಸಂತನ ನಯವಾದ ಮಾತು ಅವಳ ಕಿವಿಯಲ್ಲಿ ನಿನದಿಸುತ್ತಿತ್ತು (ಕಮನೆ. ೧೯೭) ; ಭಾಗವತರ ತಬಲವಂತೂ ಕಿವಿಯಲ್ಲಿ ನಿನದಿಸುತ್ತಿದೆ (ಕತ್ತಬೆ. ೭೫). [ನಿನದ+-ಇಸು$_3$]

**ನಿನಾದ** (ನಾ). =ನಿನದ : ಮುನಿಕುಮಾರರೋದುವ ವೇದನಿನಾದದಿಂ ವಿಗತನಿದ್ರೆಯಾಗಿ ಪಾಂಡುರಾಜಂಗಮಲ್ಲಿಯ ಮುನಿಜನಂಗಳ್ಗಮಱಿಪಿದೊಡೆ (ಪಂಪಭಾ. ೧-೧೪೦ ವ) ; **ಪೊಣ್ಮಿತುಚ್ಛೃಂಖಲಂ ಗೋತ್ರಗಿರಿಚ್ಛಾತ್ರಾನುವಾದಾಧ್ಯಯನಗುರುಜರಾಸಂಧಭೇರೀನಿನಾದಂ** (ಜಗವಿ. ೭-೩೯) ; ಆ ಪುರದೊಳಗುಣ್ಮಿ ಪೊಣ್ಮಿ ಕೃತಮುಂಗಳತೂರ್ಯನಿನಾದವೆತ್ತಲುಂ (ಪುಷ್ಪಪು. ೮-೫೦) ; ನಾದ ನಿನಾದ ಗಗನಭೇದಿಯಾಗಿತ್ತು (ವೀಸಹ. II, ೩೮೪). [ಸಂ.]

**ನಿನಾದಗೊಳ್ಳು** (ಕ್ರಿ). ಧ್ವನಿಗೊಳ್ಳು : ಛಂದೋಬಂಧಗಳಲ್ಲಿ ಈ ಸಹಜ ನಾದಮಯ ವರ್ಣಗಳು ಲಯದ ಜಾಡ ಹಿಡಿದು ಹೊಂದಿಕೊಳ್ಳುವುದರಿಂದ ಲಯವು ನಾದಮಯವಾಗುತ್ತದೆ ; ನಿನಾದಗೊಳ್ಳುತ್ತದೆ (ಛಂದೋವಿ. ೧೩). [ನಿನಾದ+ಕೊಳ್ಳು$_1$(<ಕೊಳ್$_1$)]

**ನಿನ್ನತು** 'ನಿನತ್ತು' ನೋ.

**ನಿನ್ನದು** 'ನಿನತ್ತು' ನೋ.

**ನಿನ್ನೆ, ನೆನ್ನೆ** (ನಾ). **೧.** ಈ ದಿನದ ಹಿಂದಿನ ದಿನ ; ಈವತ್ತಿನ ಹಿಂದಿನ ದಿನ : "ನಿನ್ನೆಯೆಂಬಲ್ಲಿಯುಂ ಕಲ್ಯಮೆಂಬುದು" (ಹಲಾಯು. ೧೩೫-೨೩) ; ನಿನಗೆ ನಿನ್ನೆ ತಣಿಯೆಯುಂಡಲಿಕ್ಕಿದೆನೆಂದು ಮುಳಿದು ಬಡಿದಟ್ಟಿ ಕಳೆದೊಂ (ಪದ್ಮಾರಾ. ೭೭-೧೭) ; ಅನಱಿಯದೆ ನಿನ್ನೆ ನೋಯಿಸಿದೆಂ (ಪಂಪಭಾ. ೮-೭೩) ; ಸತ್ತ ಕಱುವಿನ ಮಾಂಸವಂ ಮುದವೆತ್ತಿಯಾರೋಗಿಸುವ ನೇಮಂಬೊತ್ತು ಬಂದೆನು ನಿನ್ನೆ (ಬಸಪು. ೫೬-೩೪) ; ಮೊನ್ನೆ ಮದುವೆಯಾದೆನ್ನೆ ಕಱಿವುದೊಂದೆರಡೆಮ್ಮೆ ನಿನ್ನೆ ಕೊಂಡೆನು ಕ್ಷೇತ್ರಫಲವು ಬಹುದು (ಪುರಂದ. ೨-೬೧-೨) ; ಜಗಳಾಡಿ ಹೋದಿರಿ ನಿನ್ನೆ ನೀವಿಂದೇನ ಮಾಡಬೇಕೆಂದೆಣಿಸಿದಿರಿ (ಭರಚ. ೪೨-೧೫) ; ನಾವು ಲೀಲಾಮಾತ್ರಜೀವರು, ನಮ್ಮ ಜೀವನಲೀಲೆಗೆ ! ನಿನ್ನೆ ನಿನ್ನೆಗೆ, ಇಂದು ಇಂದಿಗೆ, ಇರಲಿ ನಾಳೆಯು ನಾಳೆಗೆ ! (ನವಿಲು. ೫೧-೧೪). **೨.** ಸ್ವಲ್ಪ ದಿನಗಳ ಹಿಂದಿನ ದಿನ; ಈಚಿನ ದಿನ: ಬವರಂಗೆಯ್ದುಮಮೋಘಮೆಂಬ ಬಗೆಯಿಂ ನೀಮೆಲ್ಲಮಾದಂ ರಣೋತ್ಸವದಿಂ ನಿನ್ನೆಯೆ ಪೋದ ಗೋಗ್ರಹಣದಂದೇನಾದಿರ್ (ಪಂಪಭಾ. ೯-೫೬). **೩.** ಹಿಂದಿನ ದಿನ ; ಮುನ್ನಾ ದಿನ : ಯೇಸು ಸಾವಂದಿನ ನಿನ್ನೆಯ ಗುರುವಾರದ ರಾತ್ರಿ . . . ಯೂದನು ಅವರನ್ನು ಬಿಟ್ಟು ಹೊರಟು ಹೋದನು (ಗೊಲ್ಗೊಥಾ. VI, ಮುನ್ನುಡಿ). **ನೆನ್ನೆ :** ಇಲ್ಲಿಯವರೆಗೂ ಯೋಗ ಕೂಡಿ ಬಂದಿರಲಿಲ್ಲ. ನೆನ್ನೆ ಮನಸ್ಸು ಮಾಡಿದೆ (ಶಿಶಿಉ. ೧೪೧). ℙ ಕಾಲವಾಚಕಶಬ್ದಗಳು ಕನ್ನಡದಲ್ಲಿ ಅವ್ಯಯವಾಗಿಯೂ ಉಪಯೋಗವಾಗುತ್ತವೆ. [ದೇ.ll ತಮಿ. ನೆರುನಲ್, ನೆರುನ್ನೈ, ನೆನ್ನಲ್, ನೇಱು; ಮಲ. ಇನ್ನಲೇ ; ಕೊಡ. ನಿನ್ನಾಂದಿ ; ತೆಲು. ನಿನ್ನ ; ಗೊಂಡಿ. ನಿನ್ನೆ]

**ನಿಪ** (ನಾ). ನೀರು ತುಂಬುವ ಪಾತ್ರೆ ; ಕೊಡ : "ನಿಪಂ ಕುಂಭಂ ಕುಟಂ ಕಳಶಮೆಂದೆನಲು ಕೊಡಮೆ(ನೆ)ನಿಕ್ಕುಂ" (ಮಂಗರಾ. ೬೨-೨೨). [ಸಂ.]

**ನಿಪಕ** (ನಾ). ಜಾಣ ; ಚತುರ : ಆತಾಪಿಯೂ ನಿಪಕನೂ ಆದ ಭಿಕ್ಷುವು [ಗೋಜಿದ ಈ ಸಂಸಾರದ] ಗೋಜನ್ನು ಬಿಡಿಸುವನು (ಬುದ್ಧಪ. ೪೫ ಮಿಲಿಂದ). [←ಪಾಲಿ. ನಿಪಕ]

**ನಿಪಠ**(ನಾ). ಓದುವಿಕೆ; ಪಠನ; ಅಭ್ಯಾಸಮಾಡುವಿಕೆ : "ನಿಪಾಠಃ, ನಿಪಠಃ, ಪಾಠಃ-ಇ ಓದುವಿಕೆ" (ಸಿದ್ಧಾಂತಿ. ೩೬೫). [ಸಂ.]

**ನಿಪತನ** (ನಾ). ಕೆಳಗೆ ಬೀಳುವುದು ; ಪತನ : 'ನಿಪತನಂಗೆಯ್ಯು' ಪರಾ. [ಸಂ.]

**ನಿಪತನಂಗೆಯ್ಯು** (ಕ್ರಿ). ಕೆಳಗೆ ಬೀಳುವಂತೆ ಮಾಡು,- ಬೀಳಿಸು,- ಕೆಡಹು : ನಿನ್ನನೀ ರಥದಿಂದೆ ನಿಪತನಂಗೆಯ್ವೊಡೆ ತನಗೆ ಪರಲೋಕದೊಳ್ವಿಪರೀತಗತಿಯಾಗದಿರ್ದಪುದೆ ಪೇಳೆಂದು ತೆಗೆದೆಚ್ಚು ಬೊಬ್ಬಿಱಿದನು (ಜೈಮಿಭಾ. ೧೪-೧೩). [ನಿಪತನ+ಕೆಯ್ಯು]

**ನಿಪತಿತ** (ಗು). ಕೆಳಕ್ಕೆ ಬಿದ್ದ ; ಪತಿತವಾದ : ಸಂಗತೋರಗಖಗಮೃಗಾವಾಸಂಗಳೊಳು ಗಿರಿಶಿಖರನಿಪತಿತತುಂಗಧಾರೋದ್ಧಾರಕಲ್ಪೋರ್ವೀತಳಂಗಳೊಳು ಪೊಂಗಿ ನಡೆವುತೆ (ಬಸಪು. ೧೯-೩೫) ; ಶೀತಳಪ್ರದವಾಗಿ ರಾಜಿಸುವಾ ತರುಚ್ಛಾಯೆಗೆ ಮನಸಿಜಾರಾತಿ ಒಯ್ಯನೆ ಬಂದವನಿಯೊಳು ನಿಪತಿತಪ್ರಸವಜಾತವಾಸನನಾಗೆ ಕುಳ್ಳಿರ್ದು (ಬಸಪು. ೨೬-೪೨). [ಸಂ.]

**ನಿಪತ್ತಿ** (ನಾ). =ನಿಪತನ : 'ಪ್ರಣಿಪತ್ತಿ' ಪರಾ. [ಸಂ.]

**ನಿಪನ** (ನಾ). (?) : ಆಗತಮೆನಿಸಿದ ನಿಪನದನಾಗತಮುತ್ತದಱೊಳುತ್ತಮಂ ಮಧ್ಯಮಮೊಂದಾಗೆ ಕನಿಷ್ಠಾರ್ಥಮನೊಂದಾಗತ ನಾಲ್ಕುಂ ತೆಱಕ್ಕಮಯ್ದುಯ್ದಕ್ಕುಂ (ಅಶ್ವಶಾ. ೬-೮೩). [?]

**ನಿಪಾಠ** (ನಾ). ಓದುವುದು ; ಅಧ್ಯಯನ : "ನಿಪಾಠಃ, ನಿಪಠಃ, ಪಾಠಃ-ಇ ಓದುವಿಕೆ" (ಸಿದ್ಧಾಂತಿ. ೩೬೫). [ಸಂ.]

**ನಿಪಾತ** (ನಾ). **೧.** ಕೆಳಗೆ ಬೀಳುವುದು ; ಪತನ : ಘನಶರೌಘನಿಪಾತಗಳೊ ಘನಜನಿತ ವರುಷಾಸಾರಗಳೊ ತಾನೆನೆ ಭಟದ್ವಯದಾಹವಾಕೃತಿ ಮೋಹಿಸಿತು ಜಗವ (ತೊರಾರಾ. ೬-೨೪-೨೫). **೨.** (ಬಾಣದಂತೆ) ಎಸೆಯುವಿಕೆ,-ಪ್ರಯೋಗಿಸುವಿಕೆ : ತಮುದಂಬನರ್ಕಶರದಿಂದಾಶೀವಿಷೋಗ್ರಾಸ್ತ್ರಮಂ ಖಗರಾಜಾಸ್ತ್ರನಿಪಾತದಿಂ ಕಿಡಿಸಿ ದಿವ್ಯಾಸ್ತ್ರಂಗಳಿಂ ಗೆಲ್ದಂ (ಪಂರಾಸಾ. ೧೪-೨೦). **೩.** ಮೇಲೇರಿ ಬರುವಿಕೆ; ಧಾಳಿ. **೪.** ಮರಣ. **೫.** ನಾಶ ; ಹಾಳು. **೬.** ವೇದಕ್ಕೆ ಸಂಬಂಧಪಟ್ಟಂತೆ ವಿಭಾಗಿಸುವ ಶಬ್ದಗಳಲ್ಲಿ ನಾಲ್ಕನೆಯ ವಿಧ : ಯಾಸ್ಕರೇ ಮೊದಲಾದವರು ಪದಗಳನ್ನು ನಾಮ ಆಖ್ಯಾತ ಉಪಸರ್ಗ ನಿಪಾತ ಎಂದು ನಾಲ್ಕು ವಿಧಗಳಾಗಿ ಉಪದೇಶಿಸಿರುವರು(ಹಿಂದಸಾ.೧೪೬). **೭.** [ವ್ಯಾಕ] ನಿಯಮಕ್ಕೆ ಒಳಪಡದ ಶಬ್ದ ; ವ್ಯಾಕರಣಸೂತ್ರಕ್ಕೆ ಅಳವಡದ ಶಬ್ದ; ℙ ಸಂಸ್ಕೃತದಲ್ಲಿ 'ಸಿಂಹ', 'ಹಂಸ' ಮೊದಲಾದ ಶಬ್ದಗಳನ್ನು ಹೀಗೆ ಗುರುತಿಸುತ್ತಾರೆ. **೮.** ಭಯ, ವಿಸ್ಮಯಾದಿ ಭಾವಗಳನ್ನು ಸೂಚಿಸುವ ಅಕ್ಕಟಾ, ಅಯ್ಯೋ, ಅಃ, ಆಃ, ಎ, ಏ, ಒ, ಓ ಮುಂತಾದ ಉದ್ಗಾರವಾಚಕ ಪದ : ಅರಮೆ ಎಲೇ ಏ ಓಹೋ ಅರೆ ಎಂಬ ನಿಪಾತಮುಂ ವಿಶಂಕಾಪರಮುಂ ದೊರೆವೆತ್ತವಧಾರಣಮುಂ ಸ್ವರೂಪದಿಂ ನಿಲ್ಕುಮವಿಕೃತಂಗಳವೆಂದುಂ (ಕಾವ್ಯಾವ. ೪೬) ; ಎ, ಏ, ಒ, ಓ ಎಂಬೀ ಯುಗಲಾಕ್ಷರಂಗಳುಂ ವಿಶಂಕಾವಧಾರಣ ನಿಪಾತಂಗಳಲ್ಲದೆ ನಿಜದಿನೊಳವು (ಶಮದ. ಸ. ೧೪ ವೃತ್ತಿ) ; ಅವ್ಯಯಗಳನ್ನು (i) ಸಾಮಾನ್ಯ, (ii) ನಿಪಾತ . . . (V) ಕೃದಂತ ಎಂದು ವಿಭಾಗ ಮಾಡುತ್ತಾರೆ (ಕ್ಕಪಿಡಿ. ೫೨). ℙ ಅವ್ಯಯಗಳಲ್ಲಿ ಕೆಲವನ್ನು ಪ್ರತ್ಯೇಕಿಸಿ ನಿಪಾತವೆಂಬ ಸಂಜ್ಞೆಯನ್ನು ಹೇಳಿರುವುದು ಏಕೆಂದರೆ, ಇವುಗಳ ಮುಂದೆ ಸ್ವರ ಬಂದರೂ ಸಂಧಿಕಾರ್ಯಗಳು ಬರುವುದಿಲ್ಲ.

**ನಿಪಾತ ಮಾಡು**=ನಾಶ ಮಾಡು ; ಹಾಳುಮಾಡು: ತಾವು ಆವ ರೀತಿಯಿಂದಾದರೂ ಶತ್ರುವನ್ನು ನಿಪಾತ ಮಾಡೋಣವಾಗಲಿ (ಚಿನ್ನಬೀ. ೬೨). **ನಿಪಾತವಾಗು**=ಹಾಳಾಗು ; ನಾಶವಾಗು : ರಜಸ್ವಲೆ

ಯಾಗಿದ್ದ ದ್ರೌಪದಿಯನ್ನು ಸಭೆಗೆ ಎಳೆದು ತರಿಸಿ ನಮ್ಮ ಎದುರಿಗೇ ಅಪಚಾರ ಮಾಡಿದ ಪಾಪಿಗಳು ಎಲ್ಲರೂ ನಿಪಾತವಾದರು (ಅಗ್ರಹ. ೧೨). [ಸಂ.]

**ನಿಪಾತಕ** (ಗು). ೧. ಪಾಪದ ; ದುಷ್ಕರ್ಮದ : ಆಕ್ರಮಣಕಾರರ ನಿಪಾತಕ ಪರಿಣಾಮಗಳನ್ನೆಲ್ಲ ತಡೆದುಕೊಂಡು ಇವರು ತಮ್ಮ ಕಲೆಯನ್ನು ಉಳಿಸಿಕೊಂಡು ಬರುತ್ತಾರೆ (ಭಾರದ. ೫೫೧). (ನಾ). ೨. ಪಾಪ ; ದುಷ್ಕರ್ಮ. [ಸಂ.]

**ನಿಪಾತಗೊಳಿಸು**(ಕ್ರಿ). ಹಾಳುಮಾಡು; ನಾಶಮಾಡು: ಮುಹಮ್ಮದೀಯರನ್ನು ನಿಪಾತಗೊಳಿಸಲು ಒಂದು ದಂಡು ಬಂದಿತು (ಸ್ವಗಂಬ. ೮೦). [ನಿಪಾತ + ಕೊಳ್$_1$ + -ಇಸು$_3$]

**ನಿಪಾತತೃಣ** (ನಾ). ಕೆಳಗೆ ಬಿದ್ದಂಥ ಹುಲ್ಲುಕಡ್ಡಿ : ಯಜ್ಞನಿಟ್ಟ ನಿಪಾತತೃಣವಂ ನೆಗಪಲಾಜದೆ ಘಾತುಗೆಟ್ಟರು ವಿಷ್ಣು ಧಾತರು ತಾವೆ ಘನವೆಂದು (ಬಸವು. ೫೪-೪೫). [ನಿಪಾತ+ತೃಣ]

**ನಿಪಾತನ** (ನಾ). ೧. ಕೆಳಗೆ ಬೀಳಿಸುವುದು. ೨. ಕೆಳಗೆ ಬೀಳುವುದು. ೩. ಎಸೆಯುವುದು. ೪. ಕೆಳಕ್ಕೆ ಹಾರುವುದು. ೫. ಕೊಲೆ ; ಸಂಹಾರ : ಹರಿದುಬ್ಬಿ ಹಾಯ್ದೊಡೆ ವೇಡೆಯವರಿಗೆ ಹಬ್ಬವಾಯ್ತೇನೆಂಬೆನಗಣಿತ ಮೃಗನಿಪಾತನವ (ಕುಮ್ಯಾಅ. ೧೩-೨೫). [ಸಂ.]

**ನಿಪಾತಾವ್ಯಯ** (ನಾ). = ನಿಪಾತ ೮ : ನಿಪಾತಾವ್ಯಯಗಳು—ಇವು ಭಯ ವಿಸ್ಮಯಾದಿ ಭಾವಗಳನ್ನು ತಿಳಿಸುತ್ತವೆ (ಕೈಪಿಡಿ. ೫೨). [ನಿಪಾತ + ಅವ್ಯಯ]

**ನಿಪಾತಿಸು** (ಕ್ರಿ). ೧. ಹಾಳುಮಾಡು ; ನಾಶಮಾಡು : ಅಶನಿವೇಗನುಮಂ ಸಂಗ್ರಾಮದೊಳ್ ನಿಪಾತಿಸುವನಾವನೊರ್ವನಾತಂಗೆ ನಿಮ್ಮ ಮಗಳಂ ಕುಡಿಮೆಂದು ದೇವಗುರುವೆಂಬ ನೈಮಿತ್ತಿಕಂ ಪೇಳ್ದಂ (ಪದ್ಮಾರಾ. ೬೧-೨೪). ೨. [ವ್ಯಾಕ] ನಿಪಾತಶಬ್ದವೆಂದು ತಿಳಿ,—ವರ್ತಿಸು ; ಅವ್ಯಯವೆಂದು ಭಾವಿಸು : ಪೊಸತು ಪಟಿದೆಳದು ಪೊಜಗೊಳಗು ಸಮಮೆನಿಪ್ಪವಱೊಳತ್ವಮಂತಕ್ಕೆ ನಿಪಾತಿಸೆ ಪಡೆಗು ಮವಱೊಳೊಳಗಿಂಗಸಂಗದಿಂ ಸಮನಿಸಿರ್ಕುಮುಳ್ಳಾದೇಶಂ (ಶಾಬ್ದ್ಯಾಪ. ೨೩೯). [ನಿಪಾತ + -ಇಸು$_3$]

**ನಿಪಾನ** (ನಾ). ೧. ಕುಡಿಯುವುದು. ೨. ನೀರಿರುವ ಸ್ಥಳ ; ಜಲಾಶಯ. ೩. ಸಣ್ಣ ಹೊಂಡ ; ಬೆಂಚೆ : "ನಿಪಾನಂ, ಉದಪಾನಂ, ವಾಪೀ, ಆಹಾವಃ —ಈ ೪ ಬೆಂಚೆ" (ಹಲಾಯು. ೧೧೩-೬೨). ೪. ಬಾವಿ. ೫. ಪಶುಗಳು ನೀರು ಕುಡಿಯಲು ಏರ್ಪಡಿಸಿರುವ ತೊಟ್ಟಿ : "ಆಹಾವಃ, ನಿಪಾನಂ—೨ ಭಾವೀ ಬಳೀ ಪಶುಗಳು ನೀರು ಕುಡಿಯುವ ಬಗ್ಗೆ ಕಟ್ಟಲ್ಪಟ್ಟ ನೀರ ತೊಟ್ಟಿಯ ಹೆಸರುಗಳು" (ಸಿದ್ಧಾಂತಿ. ೮೫). [ಸಂ.]

**ನಿಪೀಡನ** (ನಾ). ೧. ಹಿಂಡುವುದು ; ಹಿಸುಕುವುದು. ೨. ಪೀಡಿಸುವುದು ; ಹಿಂಸಿಸುವುದು : 'ನಿಪೀಡಿಸು' ಪರಾ. [ಸಂ.]

**ನಿಪೀಡಿತ** (ಗು). ಹಿಂಡಿದ ; ಹಿಸುಕಿದ; ಒತ್ತಿದ : ಆ ಮಸ್ತಕದ ರೋಷೋತ್ಕರದ ಝುಳ ಝಳಾಡಿಸಿತು ಶುಭ್ರಸ್ಫುರಣದಂತ ನಿಪೀಡಿತಾಧರ ನಾದನಾ ಭೂಪ (ಕುಮ್ಯಾಗ. ೫-೩೭). [ಸಂ.]

**ನಿಪೀಡಿಸು** (ಕ್ರಿ). ಯಾತನೆಪಡಿಸು ; ಹಿಂಸಿಸು ; ಕಾಡು : ಮನಸಿಜನೆಂಬ ಬಲ್ಗ್ರಹಮದೊತ್ತಿ ನಿಪೀಡಿಸೆ (ರಾಘವು. ೧೬-೩೮). [ನಿಪೀಡನ+ -ಇಸು$_3$]

**ನಿಪೀತ** (ಗು). ಚೆನ್ನಾಗಿ ಕುಡಿದ : ಸುಧೆಯಂ ತೆಗೆದುಂಬ ಮರಾಳನೆತ್ತ . . . ನಿಪೀತಚಂದ್ರಿಕಾಮೃತಸುಚಕೋರನೆತ್ತ ಬಿಸಿಲಂ ಕುಡಿದಂದಮವೆತ್ತ ಲೋಕದೊಳ್ (ಪ್ರಷವಿ. ೯-೪೨). [ಸಂ.]

**ನಿಪುಣ** (ಗು). ೧. ನುರಿತ ; ಪ್ರವೀಣನಾದ. (ನಾ). ೨. ಪಾರಂಗತ ; ಜಾಣ : "ಕೃತಹಸ್ತಂ . . . ಪ್ರವೀಣಂ ವಿಚಕ್ಷಣಂ ನಿಷ್ಣಾತಂ ಕೃತಮತಿ ನಿಪುಣಂ ವಿಜ್ಞಂ ಕೃತಕರ್ಮಂ ಕೋವಿದಂ [ವಿದಂ ಜ್ಞಂ] ಜಾಣಂ" (ನಸ್ತುಕೋ. ೯೯-೫) ; ಕಿಱುದಱೊಳೆ ಪಿರಿದು ಮರ್ಥಮನಱಿಪಲ್ ನೆಱೆ(ವಾ)ತನಾತನಿಂದಂ ನಿಪುಣಂ (ಕವಿರಾ. ೧-೧೫) ; ಬುಧಕರ್ಣಾಂಶಮಾ ಸ್ಥಿತಿಯೊಳ್ ಕೂಡಿರೆ ಪಂಡಿತಂ ನಿಪುಣನಕ್ಕುಂ . . . ತದ್ವಧೂಟೀವರಂ (ಜಾತತಿ. ೨೨-೧೮) ; ಕಪಟವನು ನೆಱೆ ಮಾಡಿ ಜೂಜಿನೊಳು ಪರಿಕಾರ್ಯವ ಜೈಸಿಕೊಡುವೆನು ನಿಪುಣರೆನ್ನಂದದಲಿ ಲೋಕದೊಳಿಲ್ಲ . . . ಎಂದನಾ ಶಕುನಿ (ಕುಮ್ಯಾಸ. ೧೨-೧೯) ; ಯಾವನೋ ನಿಪುಣನಾದ ಕಲಾವಿದನು ವರುಷಗಟ್ಟಲೆ ದುಡಿದು ಅದರಲ್ಲಿ ತನ್ನ ಕಲಾಪ್ರೌಢಿಮೆಯ ಛಟ್ಟ ಇಳಿಸಿದ್ದನು (ಕಂಬಹು. ೧). ೩. ನೈಪುಣ್ಯ ; ಕುಶಲತೆ ; ಕೌಶಲ್ಯ : ತಾಂ ಪಟ್ಟುವಿಟ್ಟ ಕ್ಷೇತ್ರದೊಳು ಕೃಷಿ ಮೊದಲಾಗೊಡೆಯ ಕೆಲಸಂಗೆಯ್ಯುತಿರ್ದ ಭೃತ್ಯಾದಿಗಳ್ಗನ್ನ ರೂಪುಗಂಡಲ್ಲದೆ ನಿಪುಣವಾಗಿ ಗೆಯ್ಯರೆಂದು ದೂರದೊಳಿರ್ದು ಮೆಯ್ದೋರ್ಪುದು ರೂಪಾನುಪಾತಂ (ಶಾಪಕಾ. ೨೨೭) ; ಅಪರಿಮಿತ ಸೂಕ್ಷ್ಮದೊಳಬಿಳಮಂ ಕಪಟನಾಟಕಸೂತ್ರವಿದ್ಯಾನಿಪುಣದಿಂ ಪ್ರಕಟಿಸುವ ತತ್ಚೈತನ್ಯಭಾವಿ ಶಿವಂ (ಬಸವು. ೫೧-೩೧). [ಸಂ.]

**ನಿಪುಣತನ** (ನಾ). ಕುಶಲತೆ ; ನೈಪುಣ್ಯ : ಜಪ ಮಾಡಿದರೇನು ನೀ ತಪ ಮಾಡಿದರೇನು ಕಪಟ ಕಲ್ಮಷ ಕಳೆಯಲಿಲ್ಲ ನಿಪುಣತನ ಪಡೆಯಲಿಲ್ಲ (ಪುರಂದ. ೩-೧೫೫-೨). [ನಿಪುಣ+ -ತನ]

**ನಿಪುಣತೆ** (ನಾ). ೧. = ನಿಪುಣತನ : ಕೃತಿಪರಿಚಯಮುಂ (ತರ್ಕಂ) ಪ್ರತೀತಿ(ಯಂ) ವಾಗ್ವಿದಗ್ಧತಾ ನಿಪುಣತೆ (ಯೊಳ್) (ಕವಿರಾ. ೧-೧೧), ಸಾಂಖ್ಯತತ್ತ್ವದ ಕೃಪೆಯ ಮಾಡಿದನಾತ್ಮಯೋಗದ ನಿಪುಣತೆಯಲಿ (ನಿಭಾಗ. ೧-೨-೪) ; ರಥಾರೋಹಣ ನಿಪುಣತೆಯೊಳ್ ಪಾರ್ಥನಂ ಪಳಿವ ಪಾರ್ಥಿವಸಮುದಯಂ ಮುಂದಂದಳೆದೇಱಿ ಪನ್ನತಿಕೆಯಿಂ ಪರಿಯಿಪಾಗಳ್ (ರಾಜಶೇ. ೬-೧೧ ಪ). ೨. ಜಾಣತನ; ಬುದ್ಧಿವಂತಿಕೆ : ಅವರಲ್ಲನೇಕರು ಕೃಷಿಯಲ್ಲಿಯೂ ಅದೇ ನಿಪುಣತೆಯನ್ನು ಇಟ್ಟುಕೊಂಡಿದ್ದಾರೆಂದು ಕೇಳಿದ್ದೇನೆ (ಚಂಗಾಳ್ವ. ೩೪೨) ; ಶಕ್ತಿ (= ಪ್ರತಿಭೆ), ಲೋಕದ ನಡವಳಿಕೆ, ಶಾಸ್ತ್ರ, ಕಾವ್ಯ ಮೊದಲಾದುವುಗಳ ಪರಿಶೀಲನೆಯಿಂದ ಬರುವ ನಿಪುಣತೆ (= ವ್ಯುತ್ಪತ್ತಿ) . . . (= ಅಭ್ಯಾಸ)—ಇವು ಮೂರು ಒಟ್ಟಿಗೆ ಕಾವ್ಯನಿರ್ಮಾಣಕ್ಕೆ ಕಾರಣ (ಭಾರವಿಪಾ. ೧೭೯). ೩. ಸಾಮರ್ಥ್ಯ ; ದಕ್ಷತೆ. [ಸಂ. ನಿಪುಣತಾ]

**ನಿಪುಣತ್ವ** (ನಾ). = ನಿಪುಣತನ : ಅಪರಿಮಿತಕರ್ಮಗಳ ಅನುಸರಿಸಿ ನಡೆವುದಕೆ ನಿಪುಣತ್ವ ಮೊದಲೆ ಇಲ್ಲ (ಕನಕ. ೬೩-೧) ; ಆ ಲಲಿತತ್ವಂ ನಿಪುಣತ್ವಮಾ ರತಿವಿಲಾಸೌತ್ಸುಕ್ಯಮೇನಾದುದುಜ್ವಲ ಸಾಮಂತಕಿರೀಟ ರತ್ನರುಚಿಸಂಘಟ್ಟಾಂಘ್ರಿಪಂಕೇರುಹಾ (ವಿಷ್ಣುಪು. ೫-೫-೧೧೬). [ಸಂ.]

**ನಿಪುಣಿಸು** (ಕ್ರಿ). ಪಾರಂಗತನನ್ನಾಗಿ ಮಾಡು ; ನಿಪುಣನನ್ನಾಗಿ ಮಾಡು : ಶಸ್ತ್ರವಿದ್ಯೆಗೊವಜಂ ಕಣಾ ನೀನಾಗು, ನಿನ್ನೊಳಿವರೆಲ್ಲರಂ ನಿಪುಣಿಸಾ ಎಂದವನ ಕುರುಕುಲದ ಶಸ್ತ್ರಾಗಮಾಚಾರ್ಯನಾಗಿಸಿಹನಂತೆ (ಹೆಪ್ಪಿರ. ೨-೨೧). [ನಿಪುಣ+ -ಇಸು$_3$]

**ನಿಪುಣೆ** (ನಾ). ಜಾಣೆ ; ಬುದ್ಧಿವಂತೆ : ನೃಪಪುತ್ರಿ ಶೂರಸೇನಾಧಿಪ ನಿದಿರೊಳ್ ರಥಿನಿ ನಿಲ್ವುದುಂ ಚತುರಕಳಾಲಪನೆ ನೃಪೇಶ್ವರವರ್ಣನ ನಿಪುಣೆ ಪತಿಂವರೆಯ ಮುಂದೆ ನಿಂದಿಂತೆಂದಳ್ (ಶಾಂತಿಪು. ೫-೧೨೬) ; ಅಕ್ಕ ಮದನಶಾಸ್ತ್ರದಿ ನಿಪುಣೆಯರು ಸಿಕ್ಕ ಮಾಧವನ ಕಂಡರೆ ಅವರ್ ಬಿಡರು (ಪುರಂದ. ೩-೧೯೬-೧). [ಸಂ. ನಿಪುಣಾ]

**ನಿಪುತ್ರಿಕ** (ಗು). ೧. ಮಕ್ಕಳಿಲ್ಲದ ; ಸಂತಾನವಿಲ್ಲದ : ಖಾನಾವಳಿಯ ಊಟ ಮಗನಿಗೆ ಒಗ್ಗದೆಂದು ತಮ್ಮ ತಂಗಿಯಾದ ವನಮಾಲಾನನ್ನು ಜೊತೆಗೆ ಇಟ್ಟರು. ವನಮಾಲಾ ನಿಪುತ್ರಿಕ ವಿಧವೆ (ಜಯಂತ. ೧೫೩). (ನಾ). ೨. ಮಕ್ಕಳಿಲ್ಲದಿರುವಿಕೆ ; ಸಂತಾನವಿಲ್ಲದಿರುವಿಕೆ : **ಪುರದೊಳಗೆ ಅನ್ಯಾಯ ನಿಪುತ್ರಿಕವಿಲ್ಲ ನಾಡಿಂಗೆವು ಪಟ್ಟಣಕ್ಕೆವು ಅಸತು ಅಕಾಂತುಕಯೋನು ಹುಟ್ಟಿದಡೆವು ಅರಸುಮನೆಯ** (ಕೊಲ್ಲಾ ಶಾ. ೨೦-೩೪ ; 1265). ೩. ಮಕ್ಕಳಿಲ್ಲದವನು ; ಸಂತಾನವಿಲ್ಲದವನು : ಅಯುದೇ ನಾ ನಿಪುತ್ರಿಕ ?–ಇಹಪರದೊಳು ನಿರ್ಗತಿಕ ? (ಶ್ರಾಂಚಧ್ವ. ೩೮-೭). 'ಅಪುತ್ರಿಕ' ನರಾ. [ಸಂ.]

**ನಿಪುತ್ರಿಕತೆ** (ನಾ). = ನಿಪುತ್ರಿಕ ೨ : ಆ ಪರಿಹಾಸವು ತನ್ನ ನಿಪುತ್ರಿಕತೆಯನ್ನು ವ್ಯಂಗ್ಯವಾಗಿ ಸೂಚಿಸಿದಂತೆ ಸಿಟ್ಟಿಗೆ ಅನಿಸಿದ ಮೂಲಕ ಅವನ ಮುಖ ಗಂಭೀರವಾಯಿತು (ಗಂಗಾಯಿ. ೧೮೫).

[ಸಂ. ನಿಪುತ್ರಿಕತಾ]

**ನಿಪ್ಪಟೆ** (ಗು). ಅಧಿಕವಾದ ; ಅತಿಶಯವಾದ : ವಜ್ರದ ಹರಳೊಳಡಕವಾಗಿರುವ ದ್ರವಾಗ್ನಿಯಂತಾ ಫಾಲಗುಲ್ಪಮಾ ನಿಪ್ಪಟ ಬ್ರಹ್ಮಚರ್ಯದ ದೀಧಿತಿಯ ನೋಡ ! (ಗೊಲ್ಲೊ. ಧಾ. ೪-೮೮).

ನಿಪ್ಪಟನೀರು = ಬರೀ ನೀರು ; ತಂಬಾ ನೀರು : ಈ ದಿನ ಸಾರು ನಿಪ್ಪಟ ನೀರಾಗಿದೆ (ರೂಢಿ). [<ಪ್ರಾ. ಣಿಪ್ಪಟ್ಟ]

**ನಿಪ್ಪಟಂ** (ಅ). ಅಧಿಕವಾಗಿ ; ಅತಿಶಯವಾಗಿ : ನಿಪ್ಪಟಮೆ ಜೀರ್ಣ ಮಾಡುದನುಪ್ಪಟ್ಯಾಯ್ತನ ಮಹಾಜಿನೇಂದ್ರಾಲಯಮಂ ನಿಪ್ಪೊಸತು ಮಾಡಿದಂ ಕರಮೊಪ್ಪಿರೆ ಹುಳ್ಳಂ ಮನಸ್ವಿ ಬಂಕಾಪುರದೊಳ್ (ಎಕ. II, ೩೪೫-೪೦ ; ಸು. 1159). 'ನಿಪ್ಪಟಂ' ನರಾ. [<ನಿಪ್ಪಟ]

**ನಿಪ್ಪಟ್ಟು, ನಿಪ್ಪಿಟ್ಟು** (ನಾ). ಒಂದು ಬಗೆಯ ಕರಿದ ಕಾರದ ತಿಂಡಿ : ಏನು ಬೇಕಾದರೂ ಕೇಳು ಮಗು. ನಾಚಿಕೆಪಟ್ಟುಕೊಳ್ಳಬೇಡ. ನಿಪ್ಪಟ್ಟು ಬೇಕೆ ? (ಮಾನಚಿ. ೮೪). **ನಿಪ್ಪಿಟ್ಟು** : ಸೀತೆ ಹೆದರಿ ಅವರ ಕೈಗೆಲ್ಲ ಒಂದೊಂದು ನಿಪ್ಪಿಟ್ಟು ಕೊಟ್ಟು . . . ಹೊರಕ್ಕೆ ಕಳಿಸಿದಳು (ಅನಕಂ. ೬೦).

[**ದೇ.॥ ತೆಲು.** ನಿಪ್ಪಟ್ಟು, ನಿಪ್ಪಟ : **ಕೊೀಲಾ.** ನಿಪಟಿ, ನೀಪಟಿ]

**ನಿಪ್ಪಟ್ಟೆ** (ನಾ). ಒಂದು ಬಗೆಯ ಮಂಚ ( ? ) : ಚಪ್ಪರಮಂಚ ಗುಜ್ಜರಿಗಾಲಮಂಚ ಮೇಲುಪ್ಪರಮಂಚ ಹೂಮಂಚ ನಿಪ್ಪಟ್ಟೆ ಶಕುನಿ ತೂಗುವ ಮಂಚ ಸೆಳೆಮಂಚವೊಪ್ಪವಾಂತೆಸೆದುವು (ಭರಜ. ೧೫-೨೬).

[ ? ]

**ನಿಪ್ಪಡಂ** (ಅ). ಅಧಿಕವಾಗಿ ; ಅತಿಶಯವಾಗಿ ( ? ) : ಒಪ್ಪುವ ಮಾರ್ಗಶೀರುಷದ ಪುಣ್ಣಮೆಯೊಳ್ ಕುಜಾಪಾಗೆ ಶುಂಠಿಯಂ ತುಪ್ಪಮನುಪ್ಪು ಜೇನ ಘೃತ ಸರ್ಕರೆಯಂ ಪಿಡಿದಿರ್ದು ಮಾಜಿಕೊಳ್ ತಪ್ಪದೆ ಮೂಜುತಿಂಗಳೊಳೆ ಲಾಭಮನುನ್ನತಮುಂಟುಮಾಡುಗುಂ ನಿಪ್ಪಡಮಲ್ಲದಿರ್ದ [ಪಾಠಾಂ. ವೊಪ್ಪದೆ] ಪರದಂಗೆ ಧನಂ ಕಿಡದಂತೆ ನಿಶ್ಚಯಂ (ಬಿಟ್ಟಮ. ೬-೩೯). [<ನಿಪ್ಪಟ ?]

**ನಿಪ್ಪಡಿ** (ನಾ). ಎಲೆಗಳಿಲ್ಲದ ಕೆಂಪುಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ; "ಕ್ರಾಕರ" (ಸಂಡಿಕ. ೬೩೯). [ ? ]

**ನಿಪ್ಪತಿ** (ನಾ). ಒಡೆಯನಿಲ್ಲದಿರುವಿಕೆ.

**ನಿಪ್ಪತಿಯಾಗು** = ದಿಕ್ಕಿಲ್ಲದಾಗು : ಮನದ ಯುಕ್ತಿ ನಿಪ್ಪತಿಯಾಗಿ ನಿಜವನೊಡಗೊಂಡಿರ್ದ ಭಕ್ತರಿಗೆ ತೊತ್ತಾಗಿ ಬಾಳ್ವೆನೆಂಬುದು ನಿಜೈಕ್ಯಂಗೆ ಭೃತ್ಯಾಚಾರವು (ಪ್ಮೆಲಾರ. ೭-೩೧). [<ಸಂ. ನಿಃಪತಿ]

**ನಿಪ್ಪರಿ** (ನಾ). ನೀರು ಹರಿಯುವ ಹಳ್ಳ : ನಾಗಿಯಬ್ಬೆಗಳಬ್ಬೆ ನಾರಣಬ್ಬೆಯ ಕಟ್ಟಿಸಿದ ನೈರುತಿಭಾಗದ ಮುಟ್ಟಿದ ಕೆಱೆಯ ಎರಡು ಕಡೆಗೋಡಿನ ನಿಪ್ಪರಿಯೆ ಮೇರೆಯಾಗಿ (ಎಕ. XII, ಶಿರಾ. ३೯-३೭; 920).
[☞ ಇದು 'ನೀರ್ವರಿ' ಎಂಬುದರ ಅಪಲಿಖಿತವಿರಬಹುದೆ ?]

**ನಿಪ್ಪಲ್** (ನಾ). ಮಕ್ಕಳಿಗೆ ಶೀಶೆಯಲ್ಲಿ ಹಾಲು, ಹಣ್ಣಿನ ರಸ ಮುಂತಾದುವುಗಳನ್ನು ಕುಡಿಸುವಾಗ ಉಪಯೋಗಿಸುವ ಮೊಲೆತೊಟ್ಟಿನ ಆಕಾರದ ರಬ್ಬರಿನ ಸಾಧನ : **ಶೀಶೆಗಳು,** ನಿಪ್ಪಲ್‌ಗಳು, ಹಾಲನ್ನು ತಯಾರುಮಾಡುವ ಇತರ ಪಾತ್ರೆಗಳು ಇವೆಲ್ಲವುಗಳನ್ನೂ ಪರಿಶುದ್ಧವಾಗಿ ತೊಳೆದು ಶುಚಿಯಾಗಿಟ್ಟುಕೊಳ್ಳಬೇಕು (ಗೃಹವಿ. ೧೦೭). [←ಇಂ. Nipple]

**ನಿಪ್ಪಸರ** (ನಾ). ೧. ಅತಿಶಯ ; ಆಧಿಕ್ಯ ; ಹೆಚ್ಚಳ : ಲಲನೆ . . . ನಿಚ್ಚಲುಮಿಸೆ ಕಂತು ನಿಪ್ಪಸರದಿಂ ಸರದಿಂ ಸರದಿಂಪುದೋಱೆ ಕೋಗಿಲೆ ವಿಧು ಬೀಱೆ ಭೀತಿಕರಮಂ ಕರಮಂ ಕರಮಂ ಕಪೋಲದೊಳ್ ನಿಲಿಸುವಳೆಯ್ದೆ (ಜಗವಿ. ೧೧-೧೯) ; ಆಡುತೆ ಪಾಡುತೆ ಶಿವನಂ ಪರಸುತೆ ಒಪ್ಪುವ ಮುತ್ತೈದೆಯರಿಕ್ಕೆಗಳಿಂ ನಿಪ್ಪಸರದ ಕವಿಗಳ ತೆಕ್ಕೆಗಳಿಂ . . . ಪೊನ್ನಾಂಬಲದಧಿಪತಿಯೊಪ್ಪಿರ್ದಂ (ತಿರುನಾ. ಹ. ೧೧೧-೨೨) ; ಒಪ್ಪುವ ಕರಸ್ಥಲ ಉರಸ್ಥಲದಚಲರಲ್ಲಿ ನಿಪ್ಪಸರದಚ್ಚಶಿವಲಿಂಗವ್ರತಿಗಳಲ್ಲಿ ಪಂಚಾಕ್ಷರಿಯೆ ರೂಪುಗೊಂಡಂದದಿಂ ಕೆಲರು . . . ಕೋಟವೃಷಭಧ್ವಜದ ನಡುವೆ ಕೂಡೆ (ಏಕಾಂರ. ಹ. ೨೮೬-೧೨) ; ಹೊಸ ಹೊಗರ ಜವ್ವನ ಸಿರಿಯ ಜೋಡಣೆ ಜನಮನವನಾವರಿಸಿದುದು ನಿಪ್ಪಸರದಲಿ ಪಾಂಚಾಲನಂದನೆಯ (ಕುವ್ಯಾಆ. ೧೩-೨೬) ; ಬಸುಱ ಬಾಯ್ಗಳ ಹೊಯ್ಲುಗಳ ನಿಪ್ಪಸರದಾಕ್ರಂದನದ ನಾರೀವಿಸರ ಬಳಸಿತು ವೀರಧೀರೋದ್ಧತ ದಶಾನನನ (ತೊರರಾ. ೬-೫೧-೯೧). ೨. ವೇಗ ; ಶೀಘ್ರತೆ : ಅಸಿಯುಲಿಟ್ಟರೆದಂತೆ ಬಲ ನಿಪ್ಪಸರದಲಿ ನುಗ್ಗಾಯ್ತು ನೀಗಿದರಸುವನೀ ದುಶ್ಶಾಸನನ ನಂಬುಗೆಯ ಪರಿವಾರ (ಕುವ್ಯಾಕ. ೧೯-೨೦); ಈ ಸೈನ್ಯಸುಭಟರ ನೆರವಣಿಗೆ ನಿಪ್ಪಸರದಲಿ ಮುಸುಕಿತು ಧನಂಜಯನ (ಕುವ್ಯಾಶ. ೨-೫೩) ; ವಿಸುಪಸಂಪಗೆಯ ಕುಸುಮದ ಸುರಭಿಗೆಱಗಿ ನಿಪ್ಪಸರದಿಂ ಮೂರ್ಛೆಯೊಂದಿದ ಪರಮೆವಱಯಂತೆ (ಅರಚಿ. ೫-೫-೨೬) : ಚಪ್ಪರಿಸಲರಿದೀ ನಿಸಾಟನ ನಿಪ್ಪಸರದಿಂ ಪಾಂಡವರಿಗಣಿದಪ್ಪಿತೆಂದರೆ ಸಾಮವೇ ಹಿತವೆಂದು ನಡೆತಂದ (ಸಾಳ್ವಭಾ. ३೦-೨೭). ೩. ರಭಸ ; ಜೋರು ; ಆವೇಗ : ಕೇಳು ಭೂಮಿರುಹದ ಶಿಖರ ವಿಶಾಲದೊಳು ನಿಪ್ಪಸರದಿಂ ಸಲೆ ಬೀಳುತಿಹ (ಸ್ವರೂಪಾ. ೧-೨) ; ಮಸಗಿದುದು ಬಹುವಾದ್ಯಚಯ ನಿಪ್ಪಸರದಲಿ ನಿಸ್ಸಾಳತತಿ ಗರ್ಜಿಸಿದುವು (ಸಂಭಪ. ३೦-೫) ; ಮತ್ತೆ ಹೊಯ್ದನು ಭೀಮಸೇನನ ನೆತ್ತಿಯನು ನಿಪ್ಪಸರದಲಿ ಕಳೆ ಹತ್ತಿ ರೌಕೋಂಪಿಸಿ ತಿರುಗಿಬಿದ್ದನು ಬಿಗಿದ ಮೂರ್ಛೆಯಲಿ (ಕುವ್ಯಾಗ. ೭-३೬) ; ಬೆಸುಗೆಗಳಚಿದ ಶಾಲ್ಮಲಿಯ ಭೂರಸದವೊಲು ಬಯಲಾಯ್ತು ಬಲ ನಿಪ್ಪಸರದಲಿ ಬೊಬ್ಬಿಡಲು ಬಿರಿದುದು ಗಿರಿ (ತೊರಭಾ. ೬-೨೭-೧೯): ದರ್ಪಕ ದೈತ್ಯವಲ್ಲಭನೊಳಗಿದಿರಾಂತು ನಿಪ್ಪಸರದೆ ತೋಳ ಮೊದಲ ಚಪ್ಪಳೆಗೊಳಿಸಿ ದಂಡೆಯ ಹೂಡಿ ನಿಂದಿರುವೊಪ್ಪವನೇನ ಬಣ್ಣಿಪೆನು (ಮೋಹತ. ೧೨-೮೪). ೪. ನಿಷ್ಠುರ ; ಉರವಣೆ : "ಉರವಣೆಯೆಂದುಂ, ನಿಪ್ಪಸರಮೆಂಮುಂ ನಿಷ್ಠುರಂ" (ಕಶಸಾ. ೭೧-೬೨೮); ನಿಪ್ಪಸರದನಿ ಬಯಲ ದೇಹಿಯಸಪ್ಪಳಱಯದಿದೇನು ಚೋದ್ಯವೊ (ಪ್ರಭುಲೀ. ೧೯-३೫) ; ಅಪ್ಪುವೊಡೆ ನಿಜಕಾಂತನಿಲ್ಲದೊಡೆ ಮನ್ಮಥಂ ನಿಪ್ಪಸರದಿಂದಿಸುವ ಕುಸುಮಾಸ್ತ್ರಕನ್ಯರಂ ಬಪ್ಪ ನರಕವನಱಯದೊಡಗೂಡವೇಳ್ಪುದಿದಕಂಜುವೆಂ ತಾನೆಂದಳು (ಜೈಮಿಭಾ. ೨೭-೧३). ೫. ನಿಷ್ಠುರತೆಯಿಂದ ಕೂಡಿದವನು : ಪ್ರತಿಬಲದಗ್ಗಳೆ ರಿಪುಗೆ ನಿಪ್ಪಸರ ಕಲಿಯುಗಕಾಮಂ ಶ್ರೀಮತ್ ಕನ್ನಯ್ಯಂ (ಎಕ. XI, ಚಿತ್ರದು. ೪೯-೧೫ ; 947) ; ಸುಖಿಗೆಟ್ಟು ಕುಸುಮಕ್ಕೆ ಕೋಪಿಸುವ ಸ್ಥಾಣುವಂ ಹೊರೆವ ನಿಪ್ಪಸರ ಜೋ (ಸಿದ್ಧರಾ. ೧-೫೯). [<ನಿಡಿದು, + ಪಸರ]

**ನಿಷ್ಪಸರಂಬೆಱು** (ಕ್ರಿ). ಆಧಿಕ್ಯವನ್ನು ಪಡೆ ; ಅತಿಶಯವನ್ನು ಹೊಂದು: **ಪೊಸತಂಡಸದಿಂ ಕಿಳ್ತಂ ದಸಿಯಂ ಜೀರ್ಕೊಳವಿ ಚವ್ಮಿದಂತಿರೆ ಮುನ್ನುಂಡಸವುಸಿತಭಸಿತವುದು ನಿಪ್ಪಸರಂಬೆತ್ತೆಚ್ಚು ಪಾಯ್ದು ದೇಱುಂದಾಗಳ್** (ವೃಷವಿ. ೨೯-೧೩೫). [ನಿಪ್ಪಸರ+ಪೆಱು$_1$]

**ನಿಪ್ಪಸರಿಸು** (ಕ್ರಿ). ಹೆಚ್ಚಾಗು ; ಹರಡು ; ವ್ಯಾಪಿಸು : ಈ ಇಂದಿನ ನಮ್ಮವನು ಕೊಲೆಗಾದ ಬಳಿಕ ಕೆರಳ್ದು ಕಡಂಗಿ ನಿಪ್ಪಸರಿಸುವ ಕಡುಪಿನ ಅವನ ಪಕ್ಷದವರ ಮಂತ್ರತಂತ್ರಗಳು ಕಾರ್ಯರೂಪಕ್ಕೇರಿ ಬಂದು (ಮಂತ್ರಶ. ೧೩೪-೯). [ನಿಪ್ಪಸರ+-ಇಸು$_3$]

**ನಿಷ್ಪಾಳಿಯ** (ನಾ). ಪಾಳಿಯವನ್ನು ತೆಗೆಯುವಿಕೆ ; ಊರು ಬರಿದಾಗುವಿಕೆ : ಭೃಗು ಜಾಬಾಲಿ ಜಮದಗ್ನ್ಯಾದಿ ದಿವ್ಯಮುನೀಂದ್ರ ಗಣವಿದೆಲ ಓಲಗಿಸುವುದು ದುಷ್ಕೃತಿಗೆ ನಿಷ್ಪಾ[ಪಾಠಾಂ. ಪ್ಪಾ]ಳಿಯವು ಬಳಿಕಹುದು ಮಂತ್ರವಿಶಾಲಬೀಜದಿಯಹುದು ಸಂತತಿ ಕಾಂತೆ ಕೇಳೆಂದ (ಕುಮಾರ. ೪-೩೧). [<ನಿರ್ + ಪಾಳಿಯ]

**ನಿಪ್ಪಿಟ್ಟು** 'ನಿಪ್ಪಟ್ಟು' ನೋ.

**ನಿಪ್ಪು**$_1$ (ಕ್ರಿ). (ಕರಾ) ಹೊಡೆ ; ಜಪ್ಪು.

**ನಿಪ್ಪಿಸಿಕೊಳ್ಳು** = ಹೊಡೆಯಿಸಿಕೊಳ್ಳು ; ಜಪ್ಪಿಸಿಕೊಳ್ಳು : ಅವನ ಹತ್ತಿರ ಜಗಳಕ್ಕೆ ಹೋಗಿ ನಿಪ್ಪಿಸಿಕೊಂಡು ಬಂದೆಯಾ ? (ರೂಢಿ). 'ಜಪ್ಪಿಸು' ಪರಾ. [ ? ]

**ನಿಪ್ಪು**$_2$ (ನಾ). ಕೆಂಡ : ಉರಿಯುವ ಬೆಂಕಿಗಿಂತ ನಿಪ್ಪಿನಲ್ಲಿ ಗಡ್ಡೆ ಚೆನ್ನಾಗಿ ಬೇಯುತ್ತದೆ (ರೂಢಿ). [**ದೇ.॥ ತಮಿ.** ನೆರುಪ್ಪು ; **ಮಲ.** ನೆರಿಪ್ಪು, ನೇರಪ್ಪು ; **ತೆಲು.** ನಿಪ್ಪು, ನಿಪ್ಪುಕ ; **ಕೋಲಾ** ನಿಪ್ಪ]

**ನಿಪ್ಪುಗು** (ಕ್ರಿ). ನೀರು ಒಳಗೆ ನುಗ್ಗು,—ಪ್ರವೇಶಿಸು ( ? ) : **ಸಮುದ್ರಂ ಬಹಿತ್ರಂ ಬೆದಱುವಂದು ತಿಟ್ಟನೆ ತಿಱಿದು ಕಲ್ಲೆಯುಂ ಕವಿಯುಮಾಗೆ . . . ಕೀಲ್ ಕಟಿಲೆ ಬಿಗುವು ಬಟಲೆ ನಿಪ್ಪುಗೆ ಭಯಂ ಮಿಗೆ ನಾವಿಕಾಜನಮೆರ್ದೆಗೆಟ್ಟು ಬಾಯ್ವಿಟ್ಟು ಸುಯ್ದು ಪೊಯ್ದು ಬಟಲ್ದೆಬಲ್ದು ಮಮ್ಮಲಮಱುಗೆ ಚಾರುದತ್ತಂ ಕಂಡು** (ಬಂಹರಿ. ೪-೧೪ ವ). [P ಇದು 'ನೀರ್ಪುಗು' ಎಂಬುದರ ಅಪಲಿಖಿತವಿರಬಹುದೆ ?]

**ನಿಪ್ಪುಟಂ** (ಅ). ಸಂಪೂರ್ಣವಾಗಿ ; ಪೂರ್ತಿಯಾಗಿ : ವಿರಲಫಲಂಗಳಾದುವಖಿಲೌಷಧಿಗಳ್ ರಸವೀರ್ಯಪಾಕಮುಂ ವಿರಳಮೆ ವೃಕ್ಷರಾಜಿಗಳೊಡಲ್ ಪಸಿವಾರ್ದಳುರ್ದಳ್ಳೆ ನಿಪ್ಪುಟಂ ಕರಗಿದುದೆಮ್ಮ ಬಾಳ್ವ ತೆಱನಾವುದೊ (ಆದಿಪು.೮-೬೨). 'ನಿಪ್ಪಟಂ' ಪರಾ. [<ಸಂ. ನಿಸ್ಪುಟ]

**ನಿಪ್ಪೆಣ** (ನಾ). ನಿಡಿದಾದ ಹೆಣ : ಹನುಮನಂಗದ ನಿಪ್ಪೆಣನ ಕೊಂಡಗ್ನಿಸುತ ಸಹಿತೈದಿದನು ನೃಪನ (ತೊರರಾ. ೬-೪೮-೨೯).

[<ನಿಡಿದು$_1$ + ಪೆಣ]

**ನಿಪ್ಪೊಸ** (ಗು). ಹೊಚ್ಚಹೊಸ ; ಬಹಳ ನೂತನವಾದ: **ಪೊಸ ಪೊಸ ಕಾದಲೆಯರ್ ನಿಪ್ಪೊಸ ಪೊಸರುಚಿ ರಸನೆಗಂತೆ ಕಾಳ್ಗಳಪಂಗಳ್ ಪೊಸಪೊಸ ಬವಣೆಗಳುತ್ಕಟದ ಸುಖಂಗಳುಮಾಳ್ವವರಮೆ ಕವಿ ಕವಿ ನಿಸದಂ** (ಸಂಸಪ. ೪೫-೮೫) ; **ಪೊಸ ಪುಱುಸೆಯ ಪಗಿನಿಂ ನಿಪ್ಪೊಸ ಬೇವಿನ ಬಿತ್ತನರೆದು ಬಲ್ಲರ್ಬೇಗಂ ಪಶುವಿನ ಮೂಗಿನಲೆರೆದಡೆ ಬಸವಳಿದ ಜ್ವರಾತಿಸಾರಮಾಗಳೆ ಕೆಡುಗುಂ** (ಗೋವೈದ್ಯ.೧೯೯-೯). 'ನಿಪ್ಪೊಸತು' ಪರಾ.

[<ನಿಡಿದು$_1$ + ಪೊಸ]

**ನಿಪ್ಪೊಸತು** (ನಾ). ಹೊಚ್ಚಹೊಸದು ; ಅತಿ ಹೊಸದು : **ಪೊಸತಂ ಮಾಡಿಟ್ಟನೋ ನಿಪ್ಪೊಸತು ದಲಿದೆಱಿಂದಂದಮೆಂಬಂತದೇಂ ರಂಜಿಸಿತೋ ವಿದ್ಯಾಧರಾಧೀಶ್ವರನ ಕೆಲದ ವಿದ್ಯಾಧರಸ್ತ್ರೀಸಮೂಹಂ** (ಆದಿಪು. ೧-೮೨) ; **ನಿಪ್ಪೊಸತೆನಿಪ ದೇಸೆ ಮಾಸಱಮುಸಿದಿರೆ ಸಭೆ ಮೆಚ್ಚೆ ಪೊಚ್ಚಪೊಸತಾಯ್ತು ರಸಂ** (ಅಜಿಪು. ೪-೩೩) ; ನಿಪ್ಪಟಮೆ ಜೀರ್ಣವಾದುದನುಪ್ಪಟ್ಟಾಯ್ತನ ಮಹಾಜಿನೇಂದ್ರಾಲಯಮುಮಂ ನಿಪ್ಪೊಸತು ಮಾಡಿದಂ ಕರಮೊಪ್ಪಿರೆ ಹುಳ್ಳಂ ಮನಸ್ವಿ ಬಂಕಾಪುರದೊಳ್ (ಎಕ. II, ೩೪೫-೪೧; ಸು. 1159) ; ನೋಡು ಪೊಡಿಲ್ಲ ಕಣ್ಣಲಸಿ ನಿಪ್ಪೊಸತಂ (ಲೀಲಾವ. ೨-೭೯); ತೆಳ್ವಸಿಱುನಿಸಂ ಪೊಂಗದು ನಿಪ್ಪೊಸತು ಸತಿಯ ಗರ್ಭವಿಲಾಸಂ (ಅನಂಪು. ೪-೧೩೧) ; ನಿಪ್ಪೊಸತಪ್ಪ ರತ್ನಚಯಮುಮಂ ಪಿಡಿದಾಯ್ದು ಸುಧಾರಸಂಗಳಿಂ ತೊಪ್ಪನೆ ತೊಯ್ದವೊಲ್ ಪೊಳೆವ ಪಲ್ಗಳಂ (ಬಾಧಪು. ೨-೫೦) ; ಒಂದಿನಿಸುಂ ತಡವಂ ಮಾಡದೆ ತಮಗುಳ್ಳ ನಿಪ್ಪೊಸತಪ್ಪ ಸುವಸ್ತುವನೆಮ್ಮಯ ಬೊಪ್ಪಂಗೆಲ್ಲಾ ಲೋಕವಱುವವೊಲ್ ಕಪ್ಪಂದೆತ್ತವರಲ್ಲದೆ ನಿರ್ನೆರಮಾಗಿರ್ದವರಿಲ್ಲ (ಜಯಕಾ. ೬-೩) ; ನಿಪ್ಪೊಸತೆನಿಪ ನೈವೇದ್ಯದಿಂದೊಮ್ಮೆ ಲೇಸಪ್ಪ ಭಕ್ಷ್ಯಾಳಿಯಿಂದೊಮ್ಮೆ . . . ಜನಪನಂದಿಕೆಯನರ್ಚಿಸಿದ (ಭರಚ. ೧೯-೧೨೦).

**ನಿಪ್ಪೊಸವು** (ಬಹುವ) : ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮುಂ (ಆದಿಪು. ೯-೨೫).

[<ನಿಡಿದು$_1$ + ಪೊಸತು]

**ನಿಬಂದಿ,** ನಿಬಂಧಿ (ನಾ). ಒಂದು ಬಗೆಯ ತೆರಿಗೆ : ಗಾಣವಾರಿ ಗಾಣಂ ಪ್ರತಿಮಾನ ೧ ಅಸಗರೊಕ್ಕಲು ನಿಬಂದಿ ಹಿಡಿಯದೆ ಸೀರೆ ೧ ಉಪಿನ ಕಾವಲಿದೆಱಿ ಪ್ರತೇಕಂ ಪಣ ೫ ಉಪ್ಪು ಕೊಳಗ ೫ ಯಿಂತಿವು ಮೊದಲಾಗಿ . . . ದೇವರ ಶ್ರೀಪಾದಕ್ಕೆ ಧಾರೆಯನೆಱೆದು ಬಿಟ್ಟಳು (ಸೌಇಇ. IX-i, ೧೪೫-೩೬ ; 1079) ; ಹಲುಗೂರು ಬೋಡರ ಹಳ್ಳಿಯಲು ನಾಲು ಕೋಟೆ ಖಾಣ ನಿಬಂದಿ ದರುಸನ ಕಾಣಿಕೆ ಮುಂತಾದ ಕಾಣಿಕೆಗಳು (ಎಕ. IX, ಆನಕಾ. ೭೨-೨೭ ; 1277). **ನಿಬಂಧಿ** : ಖಾಣ ಎಳ್ಳು . . . ಕಳುಕು ಕಂಡಿಕೆವಣ ಖಾಣ ನಿಬನ್ಧಿ ನೂಲ ಹದಿಕೆ ಅಡಕೆಯ ಸುಂಕ (ಎಕ. VI, ತರೀಕೆ. ೨೦-೨೯ ; 1185).

[<ಸಂ. /ನಿಬಂಧ]

**ನಿಬಂಧ** (ನಾ). **೧.** ಕಟ್ಟು ; ಬಂಧ : "ಆನಾಹಮದು ನಿಬಂಧಂ" (ವಸ್ತುಕೋ. ೭೩-೩೫) ; ದಾಶರಥಿಸುತ ಕೇಳ್ ಕಪರ್ದಿಯ ಮೈಸಿರಿಯ ಮಿಕ್ಕನು - ಶಿರೋವಿನ್ಯಾಸವಿಮಲಜಟಾನಿಬಂಧದ [ಪಾಠಾಂ. ನಿಬದ್ಧಕ, ವಿಬಂಧದ]ನಾಟಕಾಂಗದಲಿ (ತೊರರಾ. ೨-೪-೧೩). **೨.** ಕರಾರು ; ನಿಯಮ ; ಕಟ್ಟಳೆ. **೩.** ಕಾರಣ ; ನಿಮಿತ್ತ : ನೂತನರುಂ ಪುರಾತನರುಮಪ್ಪ ಮಹಾಕವಿಗಳ್ಕವಿತ್ವವಿಖ್ಯಾತಿಗೆ ಶಾಸನಂ ಬರೆದ ಸತ್ಕೃತಿಬಂಧಮದರ್ಕೆ ಸಜ್ಜನಪ್ರೀತಿನಿಬಂಧಮಲ್ಲದೊಡದೇಂ ದುರಿತಕ್ಷಯಕಾರಣಂ ಜಿನಖ್ಯಾತಿನಿಬಂಧಮೆಂಬ ಬಗೆ ಕೈಮಿಗೆ ಪೇೞ್ದಪೆನೀ ಪ್ರಬಂಧಮಂ (ಮಲ್ಲಿಪು. ೧-೫೧). **೪.** ಒಂದು ನಿರ್ದಿಷ್ಟ ವಿಷಯದ ಮೇಲೆ ಬರೆಯುವ ಗ್ರಂಥ ; ಪದವಿಗಾಗಿ ಬರೆಯುವ ಸಂಶೋಧನಾತ್ಮಕ ಬರೆವಣಿಗೆ: ಅವರ ಪ್ರೋತ್ಸಾಹದ ಮತ್ತು ಮಾರ್ಗದರ್ಶನದ ಫಲವೇ ಈ ನಿಬಂಧ (ಕಶಾಅ. ಮೊದಲ ಅರಿಕೆ). **೫.** ಆಧುನಿಕ ಗದ್ಯ ಸಾಹಿತ್ಯದ ಒಂದು ಪ್ರಕಾರ ; ಪ್ರಬಂಧ : ನಾನು ಹಿರಕ್ಲಿಟೋಸನನ್ನು ಕುರಿತು ಒಂದು ನಿಬಂಧವನ್ನು ಬರೆದಿದ್ದೆ. ಆ ನಿಬಂಧವನ್ನು ಕುರಿತು ಶ್ರೀ ಅರವಿಂದರು ಹತ್ತು ಬರಹಗಳನ್ನು ಬರೆದರು (ಪರಪ. ೭). **೬.** ಒಂದು ಬಗೆಯ ತೆರಿಗೆ: ಮನ್ನೆಯ ನಿಬನ್ಧದ ಕಿಱುದೆಱೆಗಳವಾವುವೆನ್ದಡೆ (ಸೌಇಇ. XX, ೪೭-೩೫ ; 1074) ; ಅಲ್ಲಿ ತವಗೆ ನಡವ ಮನ್ನೆಯದ ನಿಬನ್ಧದ ಹೊನ್ನೊಳಗೆ ವರ್ಷಂಪ್ರತಿ ಮೂಱುಗದ್ಯಾಣ ಪೊನ್ನನಾಚಂದ್ರಾರ್ಕತಾರಂಬರಂ ಸಲ್ವನ್ತಾಗಿ ಧಾರಾಪೂರ್ವಕವಾಗಿ ಕಾಲಂ ಕಚ್ಚಿ ಬಿಟ್ಟರ್ (ಸೌಇಇ. XX, ೧೦೪-೨೨ ; 1133) ;

ಪಾಂಡ್ಯನಾಡ ಪಡಿಕೇಣಿಯು ಸ್ಥಳದ ಕೋಗಳಿನಾಡ ದವಸಾಯದೊಳಗೆ ವರಿಶಂ ಪ್ರತಿ ನಿಬಂಧವಾಗಿ ಸಲುವ ಗದ್ಯಾಣವೆರಡು (ಸೌಇಇ. IX–i, ೩೪೧–೧೦; 1226); ಅ ನಾಡಧಿಕಾರಿಯು ನಿಬಂಧ ಆ ನಾಡ ಸೇನಬೋವರ ನಿಬಂಧ ವೊಲಗಾಯಿತ್ತಕ್ಕೆ ತೆರ್ಉವ ಗ ೨೦೫ ಪ ೭ (ಎಕ. XV, ಬೇಲೂರು. ೨೯೮–೬೬; 1279); ತೊಡರು ಗ ೧ ಖಾಣ ನಿಬಂಧ ಪ ೯ ಅನ್ತೂ ಗ ೧೬ ಪ ೬ (ಎಕ. VI, ಕಡೂರು. ೬೮–೩೫; ?). ೭. [ವ್ಯಾಕ] (ವಾಕ್ಯ) ರಚನೆ,—ಪ್ರಕ್ರಿಯೆ. [ಸಂ.]

**ನಿಬಂಧನ** (ನಾ). ೧. ಕಟ್ಟುವುದು; ಬಂಧನ : ನಿಮಿತ್ತನಿಬಂಧನಮಪ್ಪ ಶಾಸ್ತ್ರದೊಳಂ ಪುರಾಣದೊಳಂ ತನ್ನ ಕಂಡ ತೆಱನನಿಂತೆಂದು ಬಿನ್ನಪಂಗೆಯ್ದಂ (ಚಾವುಂಪು. ೨೯೭). ೨. ನಿಯಮ ; ಕಟ್ಟಳೆ : ಹೀನಗತಿ ಪಡಿತಳದ ಹೊಯ್ಲುತ್ತಾನಘಾಯದಲೊದಗಬೇಕೆಂಬೀ ನಿಬಂಧನವಾರ ಲಳಿದುದು ಕೃಷ್ಣ ಹೇಳು (ಕುವ್ಯಾಗ. ೮–೩೦). ೩. =ನಿಬಂಧ ೪. ೪. [ವ್ಯಾಕ] (ವಾಕ್ಯ) ರಚನೆ,—ಪ್ರಕ್ರಿಯೆ. [ಸಂ.]

**ನಿಬಂಧನಶಾಸನ** (ನಾ).(ರಾಜ್ಯಾಡಳಿತದ) ಕಾನೂನಿಗೆ ಸಂಬಂಧಪಟ್ಟ ಶಾಸನ,—ಕಟ್ಟಳೆ : ಎಲ್ಲ ಅನಿರೀಕ್ಷಿತ ವಿಷಮಸನ್ನಿವೇಶಗಳಲ್ಲಿಯೂ ರಾಜ್ಯರಕ್ಷಣೆ ಮಾಡುವ ಕರ್ತವ್ಯವು (ರಾಜ) ರಾಷ್ಟ್ರಾಧ್ಯಕ್ಷನದು. ನಿಬಂಧನಶಾಸನವು ಅನ್ಯತ್ರ ದಿಗ್ದರ್ಶನ ಮಾಡಿಸದಿರುವ ಕಡೆ ಆತನು ರಾಜ್ಯಕ್ಕೆ ಪರಮಗತಿ (ರಾಜ್ಯಶಾ. ೯೮). [ನಿಬಂಧನ+ಶಾಸನ]

**ನಿಬಂಧನೆ** (ನಾ). =ನಿಬಂಧನ ೨ : ಕೋಪಿಸಿದಂತವರ್ಕೆ ಪರಿಭಾವಿಸೆ ಜನದನುರಾಗಮದೆ ನಿಬಂಧನೆಯಲ್ತೇ (ಚಂದ್ರಪು. ೪–೨೧) ; ಅವಳ ನಿಬಂಧನೆ ಬಲ್ಲೆಯಲ್ಲಾ ! ಅವಳ ಚಿಕ್ಕಮನೆಗೆ ಹೋಗು (ಆರ್ಯಕ.೩೮); ನಿಬಂಧನೆಯು ಅಸ್ಥಿರವಿರದೆ, ಜನರ ಗೌರವಾದರಗಳನ್ನು ದೊರಕಿಸಿಕೊಂಡರೆ ಪರಂಪರೆ ಎಂಬುದು ತಾನಾಗಿ ನಿರ್ಮಿತವಾಗುತ್ತದೆ (ರಾಜಪ.೫೪);ರಾಜ್ಯನಿಬಂಧನೆಯ ವಿಷಯದಲ್ಲಿ ಅಧ್ಯಕ್ಷನಾದವನು ಅಪರಾಧ ಮಾಡಿದನೆಂಬ ಕಾರಣದಿಂದ ಶಾಸನಸಂಸ್ಥೆಯು ಆತನನ್ನು ಅಧಿಕಾರಪದವಿಯಿಂದ ಚ್ಯುತಮಾಡಬಹುದು (ರಾಜ್ಯಶಾ. ೯೯) ; ಸಂಸತ್ತು ವಿಧಿದ್ವಾರಾ ತನಗೆ ಉಚಿತ ತೋರುವ ನಿಬಂಧನೆಗಳ ಮತ್ತು ಷರತ್ತುಗಳ ಸಮೇತ ನೂತನರಾಜ್ಯಗಳನ್ನು ಸಂಘಕ್ಕೆ ಸೇರಿಸಬಹುದು (ಭಾಧಾನ. ೨).
[ಸಂ. ನಿಬಂಧನ]

**ನಿಬಂಧಿ** ‘ನಿಬಂದಿ’ ನೋ.

**ನಿಬಡ್ಡಿ** ‘ನಿಬ್ಬಡ್ಡಿ’ ನೋ.

**ನಿಬದ್ದಿ** (ನಾ). ದಿಟ ; ಸತ್ಯ : “ಶಚಂ, ಶಚಿ . . . ಶಚ್ಯಂ ಈ ೬ ನಿಬದ್ದಿಯ ನುಡಿ” (ಕಾಶಕ್ಯ. ೯೩) ; ಸಕಲಭೋಗೋಪಭೋಗಂಗಳೆಲ್ಲವ ಸರಕ ಮಾಡಿ ಶ್ರದ್ಧೆ ನಿಬದ್ದಿಯೆಂಬ ರುದ್ರ ಮಾಱಾಡುತ್ತಿರಲಾಗಿ ವಿರಕ್ತಿಯೆಂಬ ಚೀಟಿಗೆ ಒಪ್ಪವಿಲ್ಲದಿರಲಲ್ಲಿ (ಸುಂಕಬಂ. ೬೫೩–೨೩).
[ದೇ.॥ ತಮಿ. ನಿಪತ್ತಿ ; ತೆಲು. ನಿಬದಿ, ನಿಬದ್ಧಿ, ನಿಬ್ಬದ್ದಿ]

**ನಿಬದ್ದಿವಿಡಿ** (ಕ್ರಿ). ಗೀತಕ್ಕೆ ಹೊಂದು, —ಮೇಳವಾಗು : ಶುದ್ಧ ಸಾಳಂಗ ಸಂಕೀರ್ಣ ಕವಣೆಗಳೆಂಬ ಮದ್ದಣೆಗಳುಲಿಯೆ ಕಂದಾವುಜ ಪಟಾವುಜ ನಿಬದ್ದಿವಿಡಿದಿರ್ದ ಕುಡುಪಾವುಜವಡಾವುಜಂಗಳು ಶಬ್ದದುಗ್ಘಡೆಯ ವೃದ್ಧಿವಡಿಯಿಸೆ . . . ವಿಮಳಹಿಮಕೃದ್ಧರನ ಸಮ್ಮುಖದೊಳೊಪ್ಪಿದವು ತತವಿತತಘನಸುಷಿರವೆನಿಪ ವಾದ್ಯ (ಸೌಂದಪು. ೮–೬).
[<ನಿಬದ್ಧ + ಪಿಡಿ₁]

**ನಿಬದ್ಧ** (ಗು). ೧. ಕಟ್ಟಿದ ; ಒಟ್ಟಿಗೆ ಸೇರಿಸಿದ ; ಹೊಂದಾಣಿಕೆಯಿಂದ ಕೂಡಿದ; ಬಂಧಿಸಿದ : ಮದಲೇಖೆಯು ಮಾತಿನೊಳ್ ನಿರ್ಭರಾನಂದೆಯಾಗಿ ಕಾದಂಬರಿ ಮಹಾಶ್ವೇತೆಗಂ ಚಂದ್ರಾಪೀಡ ಚರಣತಳನಿಬದ್ಧಜೀವಿತಮಪ್ಪ ರಾಜಲೋಕಕ್ಕಂ ಪ್ರಿಯತಮಾಕೃತಿಯಂ ತೋಱಲೊಡಂ (ಕಾದಂಬ. ೬೩೧); ಸದಾನುರಾಗನಿಬದ್ಧರಾಗುತವರ್ಕಳುಂಡೊಕ್ಕ ಪ್ರಸಾದವನು ಸಿದ್ಧಿತಾರ್ಥಮಿದೆಂದು ಮೊಗೆಮೊಗೆದುದ್ಧರಿಸುತಂ ಹೆಡಗೆಗಳನಭಿವೃದ್ಧಿಕರಮಾಗಲ್ಕೆ ತಂದು (ಬಸಪು. ೫೬–೯) ; ವಿಕಟರಶ್ಮಿನಿಬದ್ಧರತ್ನಪ್ರಕರಮಧ್ಯದ ಕೌಸ್ತುಭದ ವೋಲ್ ಚಕಿತಬಾಲಮೃಗಾಕ್ಷಿ ಪೊಱದಳು ಯುವತಿಮಧ್ಯದಲಿ (ಕುವ್ಯಾಸ. ೧೪–೪೮) ; ಏನೆಲವೊ ಶುಕ ನಮ್ಮೊಡನೆ ಮಾಯಾನಿಬದ್ಧೋಕ್ತಿಗಳೆ ತನ್ನನು ನೀನಱಿಯದವನೇ ವಿಚಾರಿಸಿ ಗಳಹದಾದೆಯಲಾ (ತೊರರಾ. ೬–೮–೪೩). ೨. ಅಡಚಣೆ ಉಂಟುಮಾಡಿದ; ಅಡ್ಡಿಪಡಿಸಿದ ; ತಡೆದ. ೩. ಬರೆದ ; ರಚಿಸಿದ. ೪. ನಿರ್ಬಂಧಕ್ಕೊಳಗಾದ. (ನಾ). ೫. ಕಟ್ಟಿದುದು ; ಬಂಧಿಸಿದುದು : ವೃದ್ಧಬಾಲವಧೂಜನರು ಸಹಿತಧ್ವಗಮನಶ್ರಮವನುಳಿದು ನಿಬದ್ಧವೆನೆ ಮನೆಮಾಡಿದರು ವೃಂದಾವನಾಂತದಲಿ (ಕಿಭಾಗ. ೧೦–೧೧–೧೯); ಪ್ರಕೃತಿಜನ್ಯವಾದ ಕರ್ಮವಶವಾಗಿ ಎಲ್ಲ ಕಾರ್ಯಗಳೂ ನಡೆಯುತ್ತಿವೆ. ಸ್ವಾಭಾವಿಕವಾದ ಸ್ವಕರ್ಮದಿಂದ ಸರ್ವವೂ ನಿಬದ್ಧವಾಗಿವೆ (ಭಾರದ. ೧೧೫). ೬. ಕಟ್ಟಳೆ ; ನಿಯಮ : “ಸತ್ಯಂ ನಿಬದ್ಧಮೆನೆ ಕಟ್ಟಳೆ” (ಪಂಗರಾ. ೧೦೫–೧೪). ೭. ಹೊಂದಾಣಿಕೆಯಾದುದು ; ಕೂಡಿದುದು : ಪದರಚನಾತಿಶಯಂ ರೀತಿ ಪಲದುವುಂ ನಿಯತವರ್ಣಗುಂಫನಗುಣದೊಂದೊದವಿಂ ಮೂಱೆಱನಕ್ಕುಂ ವಿದರ್ಭ ಪಾಂಚಾಲ ಗೌಡವಿಷಯ ನಿಬದ್ಧಂ (ಕಾವ್ಯಾವ. ೭೮೧) ; ತೊದಳೊಂದಿಲ್ಲದೊಳ್ಪಾತು ಶಾಸ್ತ್ರೋತ್ಕರ ಪಾಂಡಿತ್ಯಂ ಭವದ್ವಂಶಜರೊಳಿದು ನಿಬದ್ಧಂ ನಿತಾಂತಂ ಪ್ರಸಿದ್ಧಂ (ರಾಜಶೇ. ೬–೧೩೬). ೮. [ಸಂಗೀತ] ಯತಿ ಹಾಗೂ ಛಂದಸ್ಸಿನಿಂದ ಕೂಡಿ ನಿಯತಾಕ್ಷರಗಳನ್ನುಳ್ಳ ನಾಲ್ಕುಸಾಲಿನ ಒಂದು ಬಗೆಯ ರಚನೆ : ನಾಭಿಗತಮುರೋಗತಂ ಶಿರೋಗತಮೆಂಬ ತ್ರಿಸ್ಥಾನಶುದ್ಧಿಯೊಡೆದು ನಿಬದ್ಧಾನಿಬದ್ಧಭೇದಮನುಳ್ಳೆರಡುಂ ಮಾರ್ಗದೊಳಮನುನಾಸಿಕಾನುಕಂಪನ ಗದ್ಗದ ಗರ್ಘರಾದಿ ದೋಷಂಗಳಂ ಪೊರ್ದಲೀಯದೆ . . . ಪಾಡಿ ಪರೀಷಜ್ಜನಮಂ ತಲೆದೂಗಿಸುವುದುಂ (ಮಹಾನೇ. ೪–೫೪ ವ) ; ಜಾತಿತಾಳದ ಮಾನದಿಂಪಿನ ಧಾತುವಂಗಂ ಮಾತು ರೀತಿ ಸಮೇತವಾಗಲೊಡರ್ಚಿ ಸಿದ್ಧನಿಬದ್ಧರೂಪದಲಿ (ಬಸಪು. ೧೯–೧೨) ; ಕೀರ್ತನೆಗಳು ಮತ್ತು ಪಿಳ್ಳಾರಿ ಗೀತೆಗಳು—ಇವುಗಳಲ್ಲಿ ಬಹುತೇಕವಾಗಿ ವೈವಿಧ್ಯತೆಗೆ ಅವಕಾಶವಿದೆ . . . ಇವೆಲ್ಲವೂ ನಿಬದ್ಧ, ಅನಿಬದ್ಧ ಮತ್ತು ರಾಗಾಲಾಪನದ ಉದ್ದೇಶದಿಂದಲೇ ರಚಿಸಲ್ಪಟ್ಟಿವೆ (ಹೇಮಕೂ. ೧೦೫).
[ಸಂ.]

**ನಿಬದ್ಧಗಾಯನ** (ನಾ). [ಸಂಗೀತ] ನಿಯಮಗಳಿಗೆ ಹೊಂದಿಕೊಂಡ ಹಾಡುಗಾರಿಕೆ : ರಾಗಮಾಧುರ್ಯವನ್ನು . . . ಸವಿಯಲು ವಿಧವಿಧವಾದ ಮಾರ್ಗಗಳನ್ನು ನಿರ್ಮಿಸಿಕೊಂಡಿದ್ದಾರೆ. ಅದರಲ್ಲಿ ಪ್ರಧಾನವಾದುವು ನಿಬದ್ಧ, ಅನಿಬದ್ಧಗಾಯನ. . . ನಿಬದ್ಧಗಾಯನವು ನಿಯಮಪೂರಿತ, ಕಲಾವಿದನ ಕೌಶಲ್ಯಕ್ಕೆ ಸಾಧನ (ಭಾರದ. ೫೪೧) ; ನಿಬದ್ಧಗಾಯನದಲ್ಲಿ (೧) ಬರೀ ರಾಗಲಯಪ್ರಧಾನವಾದ ಪ್ರೌಢಬಂಧಗಳೂ (ಧ್ರುವ, ಪದ, ವರ್ಣ . . . ಇತ್ಯಾದಿ) (೨) ಕಾವ್ಯಗಾನ ಸಮಮಿಳಿತವಾದ (ಕೀರ್ತನ, ಪದ, ಭಜನ್ . . . ಜಾವಳಿ ಇತ್ಯಾದಿ) ಕೃತಿಗಳೂ ಸೇರುತ್ತವೆ (ಭಾರದ. ೫೪೨). [ನಿಬದ್ಧ + ಗಾಯನ]

**ನಿಬದ್ಧಮಂಗಳ** (ನಾ). ಕಾವ್ಯಾರಂಭದಲ್ಲಿ ಕವಿಯು ದೇವತಾಸ್ತುತಿರೂಪವಾಗಿ ರಚಿಸುವ ಮಂಗಳ ಅಥವಾ ನಾಂದೀಪದ್ಯ ; ಕವಿಯೇ ರಚಿಸಿದ ಮಂಗಳಪದ್ಯ : ಮೇಣ್ನಿಬದ್ಧಾನಿಬದ್ಧಭೇದದಿಂ ಮಂಗಳಂ ದ್ವಿವಿಧಮಕ್ಕುಂ ತನ್ನಿಂ ಮಾಡೆ ಪಟ್ಟ ನಾಂದೀನಿಬದ್ಧಮಂಗಳಂ ಪರಕೃತಮನಿಬದ್ಧಮಂಗಳಂ (ತತ್ತ್ವಪ್ರ. ೪).
[ನಿಬದ್ಧ + ಮಂಗಳ( = ಮಂಗಲ)]

**ನಿಬದ್ಧಾಂಜಳಿ** (ನಾ). ಜೋಡಿಸಿದ ಕೈ : ಸೂರ್ಯಮಿತ್ರಜಿನೇಂದ್ರನಂ ತ್ರಿಃಪ್ರದಕ್ಷಿಣಂಗೆಯ್ದು ಭಕ್ತಿಭರವಿನಮಿತೋತ್ತಮಾಂಗ ನಿಬಿಡ ನಿಬದ್ಧಾಂಜಳಿಗಳಾಗಿ (ಸುಕುಮಾ. ೮-೬೬ ಪ). [ನಿಬದ್ಧ + ಅಂಜಳಿ(= ಅಂಜಲಿ)]

**ನಿಬದ್ಧಿ** (ನಾ). (ಸಂಸಾರ) ಬಂಧನಕ್ಕೆ ಒಳಗಾದವನು : ನಿಬದ್ಧಿಯೆಂಬುದೊಂದನುಪಮಬೋಧಿ ಪುಟ್ಟಿದೊಡೆ ಪೇಟ್ ಮನೆಯೊಳ್ ತೊಡರ್ದಿಂತು ನಿಲ್ವುದೇ (ಜೀವಸಂ. ೨೧೦-೫೪). [<ನಿಬದ್ಧ]

**ನಿಬದ್ಧಿಸು** (ಕ್ರಿ). ೧. ಒಟ್ಟಾಗು; ಸೇರಿಕೊಳ್ಳು ; ಕೂಡಿಕೊಳ್ಳು : ಬುದ್ಧಿಸಾಗರನ ಕಂಡೆಮಗೇನು ಪ್ರಸ್ತ ನಿಬದ್ಧಿಸಿ ನಾವು ನಮ್ಮೊಳಗೆ ಬುದ್ಧಿಸಾಗರನೊಡೆಯನ ಮುಂದೆ ತಾಂಡವ ಪದ್ಧತಿಯೆಂದು ತೋಱುವೆವು (ಭರಚ. ೧೪-೧೬) ; ಶುದ್ಧಚಿತ್ತದೊಳು ನಮೋಸ್ತು ಗೈದರೆ ಧರ್ಮವೃದ್ಧಿಯೆಂದುಱಿ ಹರಸಿದರು ವೃದ್ಧಿ ತಪ್ಪದು ನಿಮ್ಮ ಹರಕೆಯಿಂದೆನುತ ನಿಬದ್ಧಿಸಿ ಬೀಳ್ಕೊಂಡನಿಂದ್ರ (ಭರಚ. ೭೦-೧೦೬). ೨. ನಿಬದ್ಧಗಾಯನವನ್ನು ಮಾಡು : ಶುದ್ಧದೊಳಗೆ ಜಿನಸಿದ್ಧರ ಪಾಡಿ ನಿಬದ್ಧಿಸಿ ಸಂಕೀರ್ಣದೊಳಗೆ ವೃದ್ಧಸಂಪನ್ನಯೋಗಿಗಳ ಪಾಡಿದರಹೊ ಶುದ್ಧಸಂಕೀರ್ಣಕೋವಿದರು (ಭರಚ. ೬೪-೧೮). [ನಿಬದ್ಧ + -ಇಸು₁]

**ನಿಬರ್ಹಣ** (ನಾ). ೧. ಕೊಲೆ ; ಸಂಹಾರ : "ಮಾರಣಂ, ನಿಶರಣಂ, ನಿಬರ್ಹಣಂ, ಸೂದನಂ . . . ಹಿಂಸಾ, ಸಂಜ್ಞಪನಂ—ಈ ೨೧ ಕೊಲೆ" (ಹಲಾಯು. ೭೮-೩೩೩) ; ಕಂಸಂ ತದೀಯ ಬಾಲಹಿಂಸಾಪರನಾಗಿ . . . ಪಾಸಱಿಯೊಳ್ ಕೂಸನಪ್ಪಳಿಸಿ ಬಾಲನಿಬರ್ಹಣಗರ್ಹಣಾತಿರೇಕದಿಂ ಗತಶ್ರೀಕನಾಗಿ ನಿಜರಾಜಮಂದಿರಮಂ ಪೊಕ್ಕಂ (ಜಗವಿ. ೨-೫೪ ಪ), ೨. ನಾಶ ; ಹಾಳು : ನರಭಸಿತಧಾರಿಗಳ ಭಾವೋತ್ಕರದ ಪರಿಯಲಿ ಪೂರ್ವಲಿಖಿತಾಕ್ಷರವಿತಾನನಿಬರ್ಹಣಕಳಾನಿಪುಣನಾಗುತ್ತ (ಬಸವು. ೩೮-೪೩). 'ನಿವರ್ಹಣ' ಪರಾ. [ಸಂ.]

**ನಿಬಾಯಿಸು** 'ನಿಭಾಯಿಸು' ನೋ.

**ನಿಬಿಡ** (ಗು). ೧. ದಟ್ಟವಾದ ; ಸಾಂದ್ರವಾದ ; ಒತ್ತಾದ : ನಿಜಪರಮಸ್ವಾಮಿಯಂ ನಿಷಾದಿಯಂತೆ ನಿಬಿಡ ನಿಬದ್ಧಪವಿತ್ರಕ್ಸ್ರೌಮೋಪಚ್ಛದೋಪಚಿತಸುಖಾಸನಾಂಕಿತಮಂ ನಿಜಾಂಕಮನೇಱಿಸಿಕೊಂಡು (ಶಾಂತಿಪು. ೧೦-೬೫ ಪ) ; ಶ್ರೀಲಲನಾಸ್ತನಭರನಿಬಿಡಾಲಿಂಗನಕುಂಕುಮಾಂಕಿತೋರಸ್ಸ್ಥಲನುರ್ವೀಲೋಕಮಂಡನಂ ಮಹಿಮಾಲಂಬನ ಚಾರುಚರಿತನಭಿನವಪಂಪಂ (ಪಂರಾಮಾ. ೧೦-೧) ; ಉತ್ತುಂಗನಿಬಿಡಸ್ತನಕಳಸಯುಗದಂದವಂ ನೆನೆವ ಅಂಗನೆಯ ಗಂಭೀರನಾಭಿಸುರಂಗವನು ನೆನೆವನು (ಬಸವು. ೪೧-೨೨) ; ನೀರಸತರುನಿಬಿಡವಿಪಿನ, ಹಸುರ ಹೆಸರ ಕಾಣದಿರುವ ನೆಲವು (ಸೂಂದಳ. ೩೪-೧೦). (ನಾ). ೨. ದಟ್ಟವಾದುದು ; ಸಾಂದ್ರವಾದುದು ; ಒತ್ತಾದುದು : "ನಿಬಿಡಂ, ನಿಬಿರೀಸಂ, ದೃಢಂ, ಗಾಢಂ – ಈ ೪ ತೆಱಪಿಲ್ಲದುದು" (ಹಲಾಯು. ೧೧೯-೩೩) ; ನಿಬಿಡವಾದ ನೆಳಲುಳ್ಳ ಪುಷ್ಪವೃಕ್ಷಂಗಳಿಂದ (ಗರಪು. ೯-೫೯-೬) ; ಚಿತ್ತ ಘನ ನಿಬಿಡ ವನ ; ಹೊತ್ತು ಗೊತ್ತಿಲ್ಲ ; ಮಿಸುಗುಡದೆ ಮನ ತನ್ನ ನುಂಗಿದೆ ತಾನು (ಉಯ್ಯಾಲೆ. ೪-೪) ; ತೆರೆಯ ಮೇಲೆ ತೆರೆಯೆದ್ದು ಬರುವಂತೆ, ರಹದಾರಿ ನಿಬಿಡವಾಗತೊಡಗಿತು (ಪೀಪಪ. II, ೨೦೪) ; ಸದ್ದಾಗದಂತೆ ಅಡ್ಡದಾರಿಯಿಂದ ನಿಬಿಡವಾದ ಕಾಡಿಗೆ ಕರೆದುಕೊಂಡು ಹೋದನು (ಮಜಿನಾ. ೧೦೫). ೩. ಅಧಿಕವಾದುದು : ದೇವತತಿಗಂಜಿಕೆಯಂ ನಿಬಿಡವೆನೆ ಮಾಡದೊಡೆ ನರಕಬಾಧೆಗೊಳಗಪ್ಪೆ ನರಸ (ದಶಕು. ೭-೫೭). ೪. ವಿಪುಲವಾದುದು ; ಬಹಳವಾದುದು : ಈ ವಿಪಿನದಲ್ಲಿ ಉಗ್ರವಾದ ಹಿಂಸ್ರಪಶುಗಳು ನಿಬಿಡವಾಗಿರುವವು (ಕಗದ್ಯ. ೧೦೦). ೫. [ಕಾವ್ಯಮಿ] ಕಾವ್ಯದ ಹತ್ತು ಗುಣಗಳಲ್ಲಿ ಒಂದು ; ಶಿಥಿಲವಲ್ಲದ ಪದರಚನೆ ; ಪದಗಳು ಒಂದಕ್ಕೊಂದು ಸಾಂದ್ರವಾಗಿ ಅಂಟಿಕೊಂಡಿರುವುದು ; ಶ್ಲೇಷವೆಂಬ ಕಾವ್ಯಗುಣ : ಸಮ ಮಧುರ ನಿಬಿಡ ಕಾಂತ ಸುಕುಮಾರಸುಸಮಾಹಿತ ಪ್ರಸನ್ನೋದಾರಪ್ರಮಿತಗ್ರಾಮ್ಯೋಜಸ್ವಿಕ್ರಮದಿಂ ದಶಭೇದಮಲ್ಲಿ ದಕ್ಷಿಣಮಾರ್ಗಂ (ಕವಿರಾ. ೨-೫೪). 'ನಿವಿಡ' ಪರಾ. [ಸಂ.]

**ನಿಬಿಡಂಬೆಱು** (ಕ್ರಿ). ದಟ್ಟವಾಗು ; ಸಾಂದ್ರವಾಗು ; ಒತ್ತಾಗು : ಆಮೂಲಾಗ್ರಭಾಗಂಬರಮತಿನಿಬಿಡಂಬೆತ್ತಿರಲ್ (ಕುಸುಮಾ. ೧-೨೫). [ನಿಬಿಡ + ಪೆಱು₁]

**ನಿಬಿಡತೆ** (ನಾ). ಒತ್ತೊತ್ತಾಗಿ ಇರುವ ಸ್ಥಿತಿ ; ಸಾಂದ್ರತೆ ; ದಟ್ಟಣೆ : ಪೆಂಪುವೆತ್ತ ಪರಿಮಿತ ಫಳಪರ್ಣಪುಷ್ಪಗುಚ್ಛಂಗಳೆನತಿನಿಬಿಡತೆಯನಪ್ಪುಗೈದು ರವಿಶಶಿಕರಂಗಳೆಡೆಯಾಟಕ್ಕೆ ತೆಱಪುಗೊಡದೆ (ರಬಶಂ. ೩-೩೫ ಪ) ; ಈ ವಚನಗಳನ್ನು . . . ಬಿಡಿಯಾಗಿ ಓದಿದಾಗ ಆದ ಪರಿಣಾಮದ ನಿಬಿಡತೆಯೇ ಇಡಿಯಾಗಿ ಓದಿದಾಗ ತಿಳಿದೀತು (ಕರ್ನಾಕ. ೭೯). [ಸಂ. ನಿಬಿಡತಾ]

**ನಿಬಿಡತ್ವ** (ನಾ). = ನಿಬಿಡತೆ : ಇಂತಪ್ಪ ಪುರವೀಥಿಯೊಳಗೆ ನಿಬಿಡತ್ವದಿಂ ಪಂತಿವಾಜಿವರೂಥಗಳನಡರಿಯಧಿಕಭೂಕಾಂತರಾತ್ಮಜರು ವೈಯ್ಯಾಳಿ ಕೇಳಿ ಮೇಳದೊಡನೆಯೆಡೆಯಾಡುತಿಹರು (ನವಮೋ. ೨-೪೯). [ಸಂ.]

**ನಿಬಿಡಬಂಧ** (ನಾ). [ಕಾವ್ಯಮಿ] ವರ್ಣಗಳು ಒಂದನ್ನೊಂದು ಅಗಲದೆ ಒತ್ತಾಗಿರುವ, ಶ್ಲೇಷೆಯಿಂದ ಕೂಡಿದ ಒಂದು ಬಗೆಯ ರಚನೆ : ಮಿಗೆ ನಿಬಿಡಬಂಧಮೆಂಬುದು ತಗುಳ್ವುವು ವರ್ಣಂಗಳಗಲದಿರೆ (ಕವಿರಾ. ೨-೬೪). [ನಿಬಿಡ + ಬಂಧ]

**ನಿಬಿಡಮತಿ** (ನಾ). ದಡ್ಡ ; ಮಂದಮತಿ : ನಿಬಿಡಮತಿ ನೃಪವರಂ ಬಂದು ಬನದೊಳಾಂ ಬೇಳ್ದ ಹೋಮಮಂ ಕಂಡು . . . ಬೆಕ್ಕಸಂಬಟ್ಟು ನೋಡಿದಂ ಮುದ್ರಾಪಂ (ದಶಕು. ೧೦-೧೦೩). [ನಿಬಿಡ + ಮತಿ]

**ನಿಬಿಡಸ್ಯೂತ** (ನಾ). ಒತ್ತಾಗಿ ಹೊಲಿದಿರುವುದು ; ದಟ್ಟವಾಗಿ ಹೊಲಿದಿರುವುದು : ಇದು ಜತುಮುದ್ರಾಮುದ್ರಿತಮಿದು ನಿಬಿಡಸ್ಯೂತಮಿದು ಮಹಾಗ್ರಹಧೃತಮಿಂತಿದು ಲೋಹಪಿನದ್ಧಮೆನಿಪ್ಪುದು ಪರಕೃತಿನುತಿಯೊಳಖಿಳ ಖಳಜನವಕ್ತ್ರಂ (ಚಂದ್ರಪು. ೧-೪೦). [ನಿಬಿಡ + ಸ್ಯೂತ]

**ನಿಬಿಡಿ,** ನಿಬ್ಬಡಿ, ನಿಬ್ಬಿಡಿ (ನಾ). ಗಟ್ಟಿಯಾದುದು ; ಸಾಂದ್ರವಾದುದು (?) : ಕಾರಣಕಾರ್ಯದಲ್ಲಿ ವ್ಯಾಪ್ತವಾಗಿದೆ ವಿಸ್ತಾರ ಬೊಮ್ಮಾಂಡದೊಳು ನಿಬಿಡಿಯಾಗಿ ದ್ವಿರಷ್ಟ ಪಂಚ ಪಂಚ ಚತುರಷ್ಟಾಚಮುತಾಗಿ ಚಾರುಪ್ರಕಾಶದಿಂದ ಅಭಿವ್ಯಕ್ತಿಯೊ ಆರು ಎರಡರಿಂದ ತಿಳಿಯಬೇಕು (ವಿವಾಸು. ೩-೧). **ನಿಬ್ಬಡಿ :** ಶಬ್ದಾದಿಗಳಲ್ಲಿ ಉಬ್ಬಿ ಉತ್ಸಹನಾಗಿ ಮುಬ್ಬು ಕವಿದಂತೆ ಗಬ್ಬುದೇಹದಲ್ಲಿ ಹಬ್ಬಿದ ಪಾಪದ ನಿಬ್ಬಡಿ ತಿಳಿಯದೆ . . . ನಿನ್ನ ಶಬ್ದವನ್ನು ಬಿಟ್ಟು ಕೊಬ್ಬಿದವನಾದೆ (ಮೋಕ್ಷಪೀ. ೩೪-೨). **ನಿಬ್ಬಿಡಿ :** ಅಬ್ಬಿದ ಜ್ಞಾನದಲ್ಲಿ ಪೊರೆಯೆಂದಿನೊ ನಿಬ್ಬಿಡಿಯಾದ ಇಹಸುಖವೆ ಒಲ್ಲೆನೆಂದು ಅರ್ಭಕನಾಗಿ ಕೇಳಿಕೊಂಡಿರಲು (ಮೋಕ್ಷಪೀ. ೭೫-೧). [<ನಿಬಿಡ ?]

**ನಿಬಿಡಿತ** (ಗು). ತುಂಬಿದ ; ಭರ್ತಿಯಾದ ; ಆವರಿಸಿದ : ವಿತರತ್ರೀತ್ಕಾರವಕ್ತ್ರಂ ಜಳನಿಬಿಡಿತವಾಸಸ್ಸ್ಥಟೀಭೂತನಿಮ್ನೋನ್ನತಮುದ್ಯದ್ರೋಮಹರ್ಷಸ್ತನವಿನಿಹಿತದೋಃಸ್ವಸ್ತಿಕಂ ಲೋಚನೋಷ್ಠದ್ವಿತಯವ್ಯತ್ಯಸ್ತವರ್ಣಸ್ಥಿತಿ ತಿಮಿತಕಪೋಳಾವಳಗ್ನಾಳಕಂ ಯೌವತಮಾದಂ ಕಣ್ಗೆ ಪಂದಿರ್ಮದು ಕೃತಸಲಿಲಕ್ರೀಡಮುತ್ಸೋತ್ಪನ್ನ ಪೀಡಂ (ಚಂದ್ರಪು. ೭-೧೪೯). [ಸಂ.]

**ನಿಬಿಡೀಕೃತ** (ಗು). ತುಂಬಿದ ; ಭರ್ತಿಮಾಡಿದ ; ಇಡಿಕಿರಿದ. [ಸಂ.]

**ನಿಬಿಡೋಕ್ತಿ** (ನಾ). [ಕಾವ್ಯಮೀ] ಶ್ಲೇಷಗುಣದಿಂದ ಕೂಡಿದ ಮಾತು,—ಉಕ್ತಿ : ಅದ್ಭುತರಸಂ ನಿಬಿಡೋಕ್ತಿಗಳಿಂದಮಲ್ತೆ (ಕವಿರಾ. ೨-೯೯). [ನಿಬಿಡ+ಉಕ್ತಿ]

**ನಿಬಿಡೋರು** (ನಾ). ದಪ್ಪವಾದ ತೊಡೆ; ತುಂಬಿಕೊಂಡ ತೊಡೆ : ಕುರುರಾಜ ನಿರ್ವ್ಯಾಜನಿಬಿಡೋರುದ್ವಯಭಂಗ ಪ್ರತಿಜ್ಞಾಭಾರನುಂ. . . ಸಾಹಸಾಂಕನುಮೆನಿಸಿದ ಭೀಮಸೇನನಂತು ಆರೂಢಕೋಪನುಂ ಪ್ರತಿಜ್ಞಾರೂಢನುಮಾಗೆ (ಗದಾಯು. ೨-೧ ವ). [ನಿಬಿಡ+ಊರು$_4$]

**ನಿಬಿರೀಸ** (ನಾ). ದಟ್ಟವಾದುದು ; ನಿಬಿಡವಾದುದು : "ನಿಬಿಡಂ, ನಿಬಿರೀಸಂ, ದೃಢಂ, ಗಾಢಂ– ಈ ೪ ತೆಱಪಿಲ್ಲದುದು" (ಹಲಾಯು. ೧೧೯-೩೩) ; ಖಲಸಮೂಹಚ್ಛಾಯೆ ಬಲುಹಿಂದ ಪರ್ಬಿದುದೊ ನಭ ದಂಜನಾಸಾರ ಕಲೆಯೊಯೆನಲಂಧಕಾರಂ ಪರಪಿತೆಣ್ದೆಸೆಗೆ ನಿಬಿರೀಸಮಾಗಿ ಜವದಿ (ವೆಂಕಾರಾ. ೫-೨-೩೨) ; ಅವನೀತನೂಜಾತೆಯ್ಯೆತರುತವಿರೆ ಲೋಕನಿವಹ ನಿಬಿರೀಸಮೆನೆ ನೆರೆದು ಪಂಥಾನಕುಂ ಪವಣೀಯದಿದೆ (ವೆಂಕಾರಾ. ೬-೬೩-೧೧). [ಸಂ.]

**ನಿಬುದ್ದಿ**, ನಿಬ್ಬುದ್ದಿ (ನಾ). ಹೆಡ್ಡತನ ; ಮಂದಬುದ್ಧಿ : ಪೀನ ಗ್ರಹಣದಿಂದೆ ಕೆಲವೆಡೆಯೊಳ್ ವತ್ವಮಿಲ್ಲ—ಅಚ್ಛಮಲ್ಲಿಕಾ–ಅಚ್ಚಮಲ್ಲಿಗೆ . . . ನಿರ್ಬುದ್ಧಿ–ನಿಬುದ್ದಿ (ಶಮದ.೨೯೨ ಪ್ರಯೋ). **ನಿಬ್ಬುದ್ದಿ** : ದ್ವಿತ್ವಾಗ್ರರೇಫಲೋಪಕ್ಕೆ—ಅರ್ಘ–ಅಗ್ಘ . . . ನಿರ್ಬುದ್ಧಿ–ನಿಬ್ಬುದ್ದಿ (ಶಮದ. ೨೬೧ ಪ್ರಯೋ) ; ಕೀಲಾರಂ, ಕೀರಾರಂ . . . ನಿಬ್ಬುದ್ದಿ, ಮಾಲೆದೋರಣಂ . . . ಇತಿ ಕೀಲಾರಾದಿರಾಕೃತಿಗಣಃ (ಶಬ್ದಾನು. ೩೭೮ ಪ್ರಯೋ). [<ಸಂ. ನಿರ್ಬುದ್ಧಿ]

**ನಿಬುದ್ಧಿ** (ನಾ). ೧. ಸ್ಪಷ್ಟವಾದ ತಿಳಿವಳಿಕೆ; ಜ್ಞಾನ; ಬುದ್ಧಿ. ೨. ಬುದ್ಧಿವಾದ : ಹಾನಿ ನಿನಗುಪಕರಿಸದಿರದೆಂಬೀ ನಿಬುದ್ಧಿಗೆ[ಪಾಠಾಂ. ನಿಬದ್ಧಕೆ, ವಿಪತ್ತಿಗೆ] ನಿನ್ನ ಮನದನುಮಾನವಾವುದು ಹೇಳು ಕೇಳುವೆ ನೆಂದನಸುರಮುನಿ (ತೊರರಾ. ೩-೭-೩೨). [ಸಂ.]

**ನಿಬ್ಬ** (?) (ನಾ). ಒಂದು ಬಗೆಯ ಹಕ್ಕಿ (?) : ಪಿಕ್ಕುಳಿಕ ಚೆಂಬೋತ ಗೀಜಗ ಕುಕ್ಕು ಕೋಗಿಲೆ ಕಾಮುರುಳಿ ಬೆಳ್ಳಕ್ಕಿಯೆಲಗೊಲೆ ಹುಲ್ಲಬಂದಿಗ ನಿ[ಪಾಠಾಂ. ಳಿ]ಬ್ಬ ನೀರ್ಮುಳುಕ . . . ಕೆಂಡವಕ್ಕಿಗಳವ ಱೊಳೊಪ್ಪಿದವು (ಸಾಳ್ವಭಾ. ೫-೨೨). [?]

**ನಿಬ್ಬಂದಿಗ** (ನಾ). ಬಂಧನಕ್ಕೆ ಒಳಗಾದವನು : "ನಿಬ್ಬಂದಿಗ—ನಿರ್ಬಂಧಿಕ" (ತದ್ಭಕೋ. ೨೨) ; ಪೀನಗ್ರಹಣದಿಂದೆ ಕೆಲವೆಡೆಯೊಳ್ ವತ್ವಮಿಲ್ಲ—ಅಚ್ಛಮಲ್ಲಿಕಾ–ಅಚ್ಚಮಲ್ಲಿಗೆ . . . ನಿಬ್ಬಂದಿಗ–ನಿರ್ಬಂಧಿಕ (ಶಮದ. ೨೯೨ ಪ್ರಯೋ). [<ಸಂ. ನಿರ್ಬಂಧಿಕ]

**ನಿಬ್ಬಗಡಿ** (ನಾ). ಒಂದು ಬಗೆಯ ಆಹಾರ (?) : ನೆಟಿಲು ಮೂಢ [ಡ]ಪರಿಧಿ[ದ] ಬಱುಕ್ಕುಂಬ ಪುರೀಮಂಡಳಂ ಬಱುಗೂಳನುಂಬ ನಿಬ್ಬಗಡಿಯುಂ ಕಳಿಯುಂ ಕೂೞನುಂಬ ಆಯಂಬಿಲಮುಮೆಂದಿವಂ ತನ್ನ ಶಕ್ತಿಯಿಂ ಮೞಸದಾವುದುಂ ಮಾಡಿದೊಡಂ ಪ್ರೋಷಧೋಪವಾಸ ಮೆಂಬೆರಡನೆಯ ಶಿಕ್ಷಾವ್ರತಮಕ್ಕುಂ (ಪಸಾರ. ೩೧೬). [?]

**ನಿಬ್ಬಡವ** (ನಾ). ಅತ್ಯಂತ ಬಡವ; ಕಡುಬಡವ: ಬಡವನೆ ರತ್ನ ತ್ರಯಮಂ ಪಡೆದಾತಂ ಪುಣ್ಯಮೂರ್ತಿ ಸಿರಿಯೊಡೆಯಂ ನಿಬ್ಬಡವಂ [ಪಾಠಾಂ. ನೋೞ್ಪಡೆ ತಾಂ]ರತ್ನತ್ರಯಮುಮಂ ಪಡೆಯದವಂ ಭಾಗ್ಯಹೀನ ನವನೆ ದರಿದ್ರಂ (ಸಮಪ. ೬-೬೭). [<ನಿಡಿದು$_1$+ಬಡವ]

**ನಿಬ್ಬಡಿ** 'ನಿಬಿಡಿ' ನೋ.

**ನಿಬ್ಬಡ್ಡಿ**, ನಿಬಡ್ಡಿ (ನಾ). ಬಡ್ಡಿರಹಿತವಾದುದು ; ಬಡ್ಡಿಯಿಲ್ಲ ದುದು : ನಿಬ್ಬಡ್ಡಿಯಾಗಿ ನಾನು ಸಾಲ ತೆಗೆದುಕೊಂಡಿದ್ದೆ (ರೂಢಿ). **ನಿಬಡ್ಡಿ** : ಸ್ವಲ್ಪ ಹಣ ಸಾಲ ಮಾಡಬಹುದು, ಅದನ್ನು ತಮ್ಮ ಸಾಹು ಕಾರರೇ ಒಂದೆರಡು ವರ್ಷಗಳ ಮಟ್ಟಿಗೆ ನಿಬಡ್ಡಿಯಿಂದಲೇ ಕೊಟ್ಟಾರು (ಜಾರುದಾ. ೮). [<ನಿರ್+ಬಡ್ಡಿ$_3$]

**ನಿಬ್ಬಣ** 'ಬಿರ್ದಿನ' ನೋ.

**ನಿಬ್ಬಣಗಿತ್ತಿ** (ನಾ). ಮದುವೆಯ ಗುಂಪಿನ ಮೆರವಣಿಗೆಯಲ್ಲಿ ಬರುವವಳು ; ಬೀಗರ ಗುಂಪಿನವಳು : ಹಳೆಗಾಲದಲೊಬ್ಬ ಪುರುಷಂಗೆ ಎಳೆಯ ಕನ್ನಿಕೆಯ ಮದುವೆಯ ಮಾಡಲು ಕೆಳದಿಯರೈವರು ನಿಬ್ಬಣ ಬಂದರು . . . ಕೂಡೆ ಬಂದ ನಿಬ್ಬಣಗಿತ್ತಿಯರೆಲ್ಲಾ ಹೆಂಡಿರಾದರು (ಅಪಚಂ. ೨೧–೮೬); ಅವಿರಳ ವಿಟನ ಮದುವೆಗೆ ನಿಬ್ಬಣಗಿತ್ತಿಯವರೆಲ್ಲಾ ಬಂದು ಕೆಂಡದಂಡೆಯನೆ ಮುಡಿದು (ಅಪಚಂ. ೧೩೭–೬೨೮).
[ನಿಬ್ಬಣ(<ಬಿರ್ದಿನ)+–ಗಿತ್ತಿ]

**ನಿಬ್ಬಣಗೂಡು** (ಕ್ರಿ). ಮದುವೆಯ ಮೆರವಣಿಗೆಯ ಗುಂಪಿನಲ್ಲಿ ಒಂದಾಗು ; ನಿಬ್ಬಣದೊಂದಿಗೆ ಸೇರು : ಗುಣನಿಧಿ ಶ್ರೀಕೃಷ್ಣ ರಾಮರು ಸಕಲ ನಿಬ್ಬಣಗೂಡಿ ಪೊಕ್ಕರಾಲಯವ (ಮೋಹತ. ೧೩–೭೧).
[ನಿಬ್ಬಣ(<ಬಿರ್ದಿನ)+ಕೂಡು$_1$]

**ನಿಬ್ಬಣಜನ** (ನಾ). ಮದುವೆಗೆ ಬಂದ ಆಪ್ತೇಷ್ಟಜನ : ಮದುವೆಗೆ ಬಂದ ನಿಬ್ಬಣಜನಂ ಬಿಡದಚ್ಚರಿವಟ್ಟಿರಲ್ಕರಂ ಮುದದೊಳದೃಶ್ಯಮಾಗಿ ಮುನಿ ಪೋಗೆ (ಉದ್ಭಟ. ೮–೭೯).
[ನಿಬ್ಬಣ(<ಬಿರ್ದಿನ)+ಜನ]

**ನಿಬ್ಬಣಿಗ** 'ದಿಬ್ಬಣಿಗ' ನೋ.

**ನಿಬ್ಬಯಲು** (ನಾ). ವಿಸ್ತಾರವಾದ ಬಯಲು : ಅಪರಭಾನುವಾಳ್ದ ಪನು ನಿಬ್ಬಯಲೊಳಗೆ ನೋಡ ! (ವೃಶಾಖ. ೭೦–೧೬೪).
[<ನಿಡಿದು$_1$+ಬಯಲು(<ಬಯಲ್$_2$)]

**ನಿಬ್ಬರ$_1$** (ಗು). ೧. ಅತಿಶಯವಾದ; ಅಧಿಕವಾದ. ೨. ಕಠೋರ ವಾದ ; ಸಹಿಸಲಸಾಧ್ಯವಾದ. ೩. ತೀಕ್ಷ್ಣವಾದ ; ಹರಿತ ವಾದ. ೪. ಹುರುಪಿನಿಂದ ಕೂಡಿದ. ೫. ತುಂಬಿದ ; ಪೂರ್ಣ ವಾದ. ೬. ಊದಿಕೊಂಡ ; "ಉಬ್ಬಿದ" (ಜಾನಕೋ. ೧೧). (ನಾ). ೭. ಅತಿಶಯ ; ಆಧಿಕ್ಯ; ಹೆಚ್ಚಳ : ಆತುರದಿಂ ಶೀತಾಂಶು ತಾರಾವಳಿವೆರಸಿಱುತಂದುರ್ವರಾಭಾಗದೊಳ್ ನಿಬ್ಬರದಿಂ ಭಾಸ್ವತ್ತಪೋ ಮೂರ್ತಿಯನೆ ತಳೆದವೋಲ್ ತಾಪಸಾವೃತ್ತದಿಂ ಭಾಸುರಮಾಗಿರ್ಪಂ ದಯಾಂಭೋನಿಧಿ ಕಪಿಲಮಹಾಚಾರ್ಯನಾಚಾರ್ಯವರ್ಯಂ(ಕುಸುಮಾ. ೧–೧೧೬) ; ದಂಡಾಧೀಶ್ವರಂ ಮನಗದಡಿ ಬೊಮ್ಮಯ್ಯಗಳನೀಕ್ಷಿಸಿ ಹದುಳಿಸದೆ ನಿಬ್ಬರದ ಶೋಕಾಕ್ರಾಂತನಾಗುತ್ತ (ಬಸವು. ೩೬–೧) ; ಸಭ್ಯತಾಲತೆ ಹೂತು ಹಸರಿಸಿ ಹಬ್ಬಿ ಫಲವಾದಂತೆ ಕಾಯುವ ನಿಬ್ಬರ ದಲೀಡಾಡಿದಳು ಹರಿಪದಪಯೋಜದಲಿ (ಕುಪ್ಕಾಅ. ೧೬–೩೪) ; ಸುಳಿ ಸುಳಿದು ಕಹ್ನೊಪ್ಪುವಂದಣದ ಗೊಂದಣದ ಕಳಕಳದ ವಾದ್ಯರವದಬ್ಬರದ ನಿಬ್ಬರದಲಾ ಪುರಂ ರಂಜಿಸಿದುದು (ಚಬಪು. ೧೧–೩೫) ; ನಂಬುಗೆಯು ಕೊಂಬುದು ನಿಬ್ಬರದಿಂದೆ ಬರ್ಪವೋಲ್ (ಚಿಕವಿ. ೬–೧೫೮). ೮. ಕಠೋರತೆ ; ಕಠಿನತೆ : ಧರೆಯೊಳುದಯಿಸಿ ಸೀವೆನುತ ನಿಬ್ಬರದ ಶಾಪವನಾಗಳೀಯಲು (ಬಸವು. ೩೪–೧೧) ; ನಿಬ್ಬರದ ಮನವೆಂದು ಕಾಮ ದೇವಂ ಕರಿಯ ಕಬ್ಬಿಸತ್ಯಧಿಕ ಬಿಲ್ಲಿಂಗೆಯುನ್ಮದವೆನಿಪ್ಪುಬ್ಬಟೆಯ ಬಾಣಮಂ ತೊಟ್ಟು ತೆಗೆದಾಕರ್ಣಪೂರಕ್ಕೆ ನಿಲಿಸಿ ಬಿಡಲು (ಲಾಚಿಂ. ೧೪–೫೦) ; ಒಬ್ಬನೇ ನೀನೆನ್ನ ಸಮರದ ಹಬ್ಬವನು ನೋಡೆಸಲು ನುಡಿಗಳ ನಿಬ್ಬರವ ತಾ ಕಂಡು ದ್ರುಪದನು ಪಾರ್ಥಗಿಂತೆಂದ (ಸಂಭಪ. ೧೮–೯೬) ; ಸಾಕು ಸತಿ ನಿಬ್ಬರದ ನುಡಿಗಳದೇಕೆ ಹೃದಯವನಱಿದು ಮತ್ತವಿವೇಕತನದಲಿ ಮುಳಿಯಬೇಡೆಂದೆನುತೆ ಕೈ ಮುಗಿದ (ಅಕ್ರೂಚ. ೪–೮೧). ೯. ತೀಕ್ಷ್ಣತೆ ; ಹರಿತ : ಹೆಬ್ಬೊಗೆಯನಡಗಿ ಸತತ ಪಿರಿಯುರಿ ಹಬ್ಬು

ತಡರುತ ಭಾಳನೇತ್ರನ ನಿಬ್ಬರದ ಭಾಳಾಂಬಕಾಗ್ನಿಗೆ ಸಮನೆನಿಸುತಿರಲು (ಬಸವು. ೪೪-೨೧) ; ಕಿಬ್ಬದಿಯ ಕೀಲಿಸಿದ ಕಾಮನ ನಿಬ್ಬರದ ಕೂರಂಬಿನಲಿ ತನುವಿಬ್ಬರಿವವೊಲು ನಿಮಿಷ ಕುಳ್ಳಿರಲಾಜಿದಳವಳಿದು (ಪ್ರಭುಲೀ. ೫-೨೧) ; ಪ್ರಾಣದಾಸೆಯ ಮಜಿದು ತನ್ನೊಳು ಕೇಣವಿಲ್ಲದೆ ಕಾದೆನುತ ನಿತ್ರಾಣನನು ನಿಬ್ಬರದ ನುಡಿಗಳಲಿಜಿಾದನಾ ಕರ್ಣ (ಕುವ್ಯಾ.ಕ. ೧೩-೩೬). ೧೦. ಹುರುಪು; ಉತ್ಸಾಹ; ಹುಮ್ಮಸ್ಸು : ಕುಡುದಾಡೆಯಂ ನಿಬ್ಬರದಿ ಮಸೆದು ಕೊಜಿಡಂ ಹೊಯ್ದು . . . ಹೆಬ್ಬಂದಿ ವಿಪಿನದೊಳು ನಿಂದುದಾ ಶಬರರಿಗೆ ಮೃತ್ಯು ತಾನೆಂಬಂದದಿ (ಹಚಶಾ. ೬-೬) ; ಒಬ್ಬರೊಬ್ಬರುಘೇ ಉಘೇ ಜಾಂಗು ಭಲ ಎನುತಿರಲು ನಿಬ್ಬರದ ನಿಡುಬೊಬ್ಬೆಗಳ ನಿಡುತುಬ್ಬರಿಸುತಬ್ಬರಿಸುತಾರುತ ಬಿಬ್ಬ ಬಾಚಯ್ಯಗಳು ಹೊಬ್ಬೂರೊಳಗೆ ಹುಗುತಿರಲು (ಬಸವು. ೫೬-೧೪) ; ಕೆಂಪೇಜಿಾದಕ್ಷಿಯುಲೆರಡುಕೋಡಿಯ ಲೊಗುತಲದೆ ಕಿಡಿಗಳ ತುಷಾರಚಯ ಸ್ಫುರದಹಂಕಾರಪ್ರತಾಪಜ್ವರದಿ ಮೈ ಕಾಹೇಱುತದೆ ನಿಬ್ಬರದ ಬಿರವಿಂದೀತನಡು ಕಲಿಕರ್ಣ ನೋಡೆಂದ (ಕುವ್ಯಾ.ಕ. ೧೨-೧೫) ; ಬೊಬ್ಬೆಯೊಳಂಗಜಾತಗೆ ವೀರರಸವುಕ್ಕಿ ನಿಬ್ಬರದಲಿ ಕೋಲ ಕಜಿದ (ಮೋಹತ. ೨೮-೧೪) ; ನಿಬ್ಬರದಿ ತಾ ಹಿಡಿದ ಖಡ್ಗದಿ ಬೊಬ್ಬಿಱಿದು ಧನಪತಿಯ ಸಚಿವನನುಬ್ಬಿ ಹೊಯ್ದನು ಚಿನಕಡಿದು ದೆಸೆದೆಸೆಗೆ ಚಿಮ್ಮಿದನು (ಉತ್ತ.ಕ. ೧೩-೨೫) ; ನಿಬ್ಬರದಿಂದಲಿ ಸರ್ಪರ ಕೊಡುಂಬೊ ಹಬ್ಬವನುಣಿಸುವ ಹರಿಯೆ (ವಿದ್ಯಾಕ್ಯ. ೯-೧) ; ಕೊಬ್ಬಿದ ಖಂಡವ ತಿಂದು ಭೂತಗಳಾಗ ನಿಬ್ಬರದಲಿ ಕುಣಿದಾಡಿ ಹಬ್ಬವಾಯಿತು ನಮಗೆಂದು ಮರುಳುಮನ ಉಬ್ಬಿ ಹರಸಿ ಹಾಡಿದವು (ಮಾದೇಸಾಂ. ೨-೧೩೫). ೧೧. ವೇಗ; ರಭಸ; ಜೋರು : "ನಿಬ್ಬರ—ನಿರ್ಭರ= ರಭಸ" (ತದ್ಭ ಕೋ. ೨೨); ಶ್ರವಣಕುಲವಂ ನಿಬ್ಬರದಿ ತಾಗುವ ಹೊಯಿಲು ಗಳುಮಾದವಾ ವೈಜವೆ ವಿನಿರ್ಮಳಭಕ್ತಿ ಮಾನಸೆಯಾದ ಕಾರಣವು (ಬಸವು. ೫೨-೨೦) ; ಒಬ್ಬ ದೈತ್ಯನ ಕೊಲಲು ನಮಗಿನಿತುಬ್ಬಸಂಗಳು ಕೋಟಿ ಹುಟ್ಟಲು ಹಬ್ಬ ನಮಗಹುದಿಂದು ಸಂಶಯವಿಲ್ಲ ಕೆಡಿಸುವೊಡೆ ನಿಬ್ಬರದಲಟ್ಟುವುದು ಹನುಮನ (ಕೌರಾ. ೩೮-೩೧) ; ಅದ್ಭುತವಾದ ಕನಸ ಕಂಡು ರಾಯನು ಉಬ್ಬಿ ಹೆದಱಿ ಕಣ್ಣ ತೆಱೆದು ಬೆಬ್ಬಳೆಯಾಗಿ ನೋಡಲು ನಾಲ್ಕುದೆಸೆಯನು ನಿಬ್ಬರದಲ್ಲಿ ತಬ್ಬಿದಳು (ಹರಿಸಾಂ. ೨-೨೦); ಕರದ ವಾಘೆಯು ಸಡಿಲ ಬಿಡೆ ನಿಬ್ಬರದೆ ಗಮನದೊಳೈದಿತವನಿಯೊಳುರವಣಿಸಿ (ನಳಚ. ೭-೬) ; ಅಬ್ಬರಿಸುತ ' ಬರ್ಪ ಹೆಂಗಳ ಬೀಳ್ಕೊಂಡೊಬ್ಬಳು ಕೆಳದಿಯ ಕೂಡಿ ನಿಬ್ಬರದಲಿ ಕಾಮನರ್ಥಾಂಗಿ ನಡೆದಳು ಹೆಬ್ಬನವನು ನಿಟ್ಟಿಸುತೆ (ಮೋಹತ. ೯-೨೨) ; ನಿಬ್ಬರದಿ ದಶಮುಖನು ಮಾಡುವ ಪೊಬ್ಬುಳಿಯ ದೇವೋಪಕರಣವ ಬೊಬ್ಬಿಡುತ ಕೊಂಡೊಯ್ದು ಯಾಕಶನ ನುಳುಹಿ (ಉತ್ತ.ಕ. ೧೯-೩೬) ; ಪರಿದು ಪೊಸಕೋಂಟೆಯಂ ಮುತ್ತಿರಲೊಡನವಾ ನಂಜರಾಜನಂಜುವಿನಂ ನಿಬ್ಬರದಿಂದೆ ನಾಗಮಂಗಲ ದರಸಂ ಬೆನ್ನಟ್ಟಿ ಬಂದನಂಗುಸರಾಜಂ (ಚಿಕವಿ. ೨-೭೩) ; ನಿಬ್ಬರದಲಿ ಬಂದ ನೀಲಕುದುರೆಯನೇರಿ ಹೆಬ್ಬೂರ ಚೆಲುವರಾಜೈಯ್ಯ (ಸೌಂದಕಾ. ೧-೬೧). ೧೨. ಅಗಲವಾದುದು; ದೊಡ್ಡದಾದುದು; ವಿಸ್ತಾರವಾದುದು : ಕೊಬ್ಬಿ ಕೋಮಲವಾದಸಿಗುರಿದ ನಿಬ್ಬರದ ನಿಡುಗಣ್ಣುಗಳ ಕಾಗಬ್ಬನಜಿಾಯದೆ ಕಬ್ಬಿನಿಚ್ಛೆಗೆ ಮೆಲುವ ಮರುಳಂತೆ . . . ಮಾಟ ನಿಷ್ಫಲವೆಂದಳಾ ವಿಮಳೆ (ಪ್ರಭುಲೀ. ೭-೭). ೧೩. ನೀಳವಾದುದು; ನಿಡಿದು : ನಿಬ್ಬರದ ನಿಡುಸುಯ್ಲು ತೋಡಿಯ ಮನದ ಕಳ್ಳುದಿಯ . . . ಕೇದದ ಮಬ್ಬಿನಲಿ ಹಣಗಿದರು ಪವನಜಫಲುಗುಣಾದಿಗಳು (ಕುವ್ಯಾ.ಸ. ೧೬-೫೬) ; ಹೆಬ್ಬಾವುಗಳ ನಿಬ್ಬರದುಸುರು (ಅರಸಾ. ೫-೨೧೫). ೧೪. ಭಾವೋದ್ವೇಗ; ಉದ್ರೇಕ; ತಳಮಳ : "ತಳವೆಳಗೆಂದೆನ್ನಲಮುವೆ ನಿಬ್ಬರಮುಕ್ಕುಂ" (ಕವಿಕಂ. ೨೪೩) ; ಕಜಿಕಂಕಣನಿಡಿಗೆಜಿಗಿ ಕದನದುದ್ಯೋಗಕ್ಕೆ ಪೊಜಿಮಡಲ್ಕೆಂದಿರ್ದರ್ದಾ ಸಮಯದಲ್ಲಿ ಗುಜಿ ನೆಜಿದಿರ್ದರ್ದಬ್ಬರಿಪ ಪರಸಮಯಿಗಳೆಗೆಲ್ಲ ನಿಬ್ಬರ[ಪಾಠಾಂ. ನಿರ್ಭರ] ವದೇವೊಗಳ್ವೆನು (ಸೋಮಚ. ೫-೩೩) ; ಕಂಡೆನರಸನ ನಿಬ್ಬರವ ಬಳಿಕಂಡಲೆದುದತಿಶೋಕಶಿಖಿ ಕೈಗೊಂಡುದಿಲ್ಲರೆಘಳಿಗೆ ಬಳಿಕೆಚ್ಚತ್ತು ಕಂದೆಱದು ಖಂಡಿಸಿದನೆನ್ನುಬ್ಬೆಯನು (ಕುವ್ಯಾ.ಗ. ೪-೬). ೧೫. ಕಷ್ಟ; ತೊಂದರೆ : ಕಬ್ಬುವಿಲ್ಲು ಬಿವೆದೆ ಪೊಸರಲ್ಪೊಣ್ಡಸಲ್ ನಿಬ್ಬರಮಿದೆಂದು ಮದನಂ ಮಾಲೆಗಾರ್ತಿಯರ ಹುಬ್ಬೆಂಬ ಚಾಪಮಂ ಕುರುಳೆಂಬ ನಾರಿಯಂ ಕಣ್ಣೆಂಬ ಕೂರ್ಗಣೆಯನು ಉಬ್ಬರದ ಸಾಹಸದೊಳಳವಡಿಸಿಕೊಂಡು (ಜೈಮಿಭಾ. ೬-೧೭) ; ಕಿಬ್ಬದಿಯೊಳಗೋಡಿದಂತಾ ನಿಬ್ಬರದಿ ಬೆಂಡಾಗಿ ಭೂಪತಿ . . . ಇಬ್ಬರಂಗದ ನೋವ ನಿಲ್ಲಿಸಿ ತಬ್ಬಿದನು ವೈರಾಗ್ಯವ (ಕೃಷ್ಣಾ.ಶಾ. ೯-೧೩). 'ನಿರ್ಭಾರ' ಪರಾ.

**ನಿಬ್ಬರವಾಗು**=ಅತಿಶಯವಾಗು : ಮದಗಜದ ನಿಡುಪರಿಯ ತೇರಿನ ಕುದುರೆಕಾಜಿರ ಕಾಹಿನಲಿ ಕೊಬ್ಬಿದುದು ನಿಬ್ಬರವಾಗಿ ಬಹು ವಿಧವಾದ್ಯನಿರ್ಘೋಷ (ಕುವ್ಯಾದ್ರೋ. ೩-೬೮) ; ಅನ್ನೆಯವಾಯಿತು ನನ್ನದು ಬಾಳು ; ಒಬ್ಬರನುಳಿದು ಹೋಗಲು ನನಗೆ ನಿಬ್ಬರವಾಗಿದೆ ಮನದಲಿ ದುಃಖ (ಚೆಲುವು. ೫೦-೮). [<ಸಂ. ನಿರ್ಭರ]

**ನಿಬ್ಬರ**₂ (ನಾ). ಆರುವಿಕೆ ; ಬತ್ತುವಿಕೆ ; ಒಣಗುವಿಕೆ : ನಾಲಗೆ ನಿಬ್ಬರಮಾಗೆ ಕಣ್ಣೊಡರ್ ಕನಲದೆ ನಂದೆವೊಯ್ದು ತೆಜನಾಗೆ ತೃಷಾತುರ ನಾದನಾ ನೃಪಂ (ಲೀಲಾವ. ೬-೪೪). 'ನಿಬ್ಬರಿಸು₂' ಪರಾ.

[<ನಿಡಿದು₁ + <ಬಱ ?]

**ನಿಬ್ಬರಂ** (ಅ). ಅತಿಶಯವಾಗಿ : ಅರಳಂಬುಗಳ್ ಕಬ್ಬುವಿಲ್ಲುಮಿವು ನಾಡೆ ನಿಬ್ಬರಮುಮುರರಂ ಜಯಿಸಲೆಂದವಂ ಬಿಟ್ಟ ಶಂಬರಮಥನ ನಾಂದೋಳಿಚಾಪದಿಂ ಸುದತಿಯೆಂಬೊಂದು ಬಾಣವನೆ ಪೂಡಿ (ಜಬವು. ೧೦-೧೩).

**ನಿಬ್ಬರಂ ಬಿರಿ**=ಅತಿಶಯವಾಗಿ ಅರಳು : ಕಾರ್ಗೆಯ್ಯ ಮೇರೆಯೊಳಿಟ್ಟ ಕೆಳ್ಕರೆಕೆ ಬಿರಿವಂತಾನುಂ ಮೆಯ್‌ ಬಿರ್ಕುಬಿರ್ಕೆನೆ ನಿಬ್ಬರಂ ಬಿರಿದೊಳಱುಗುಂ ಜೋಲ್ದುಂ ವೈಚಿತ್ರ್ಯ ಜೀವರ ರೂಪದಿಂ (ಶಾಂತಿಪು. ೭-೯೨) ; ತೆಱುಗುಡದೆ ಸೂಟ್ಟುಸುವ ನಿಸ್ಸಾಳದ ಬಲ್ಲರಕೆ ದೆಸೆವಟ್ಟುಗಳ್ ನಿಬ್ಬರಂ ಬಿರಿಯೆಯುಂ ಬೇಗದಿಂ ನಡೆದೆತ್ತಿ ಬಂದು ಮಂಜು ವಟ್ಟಮಂ ಮೂವಳಸಾಗಿ ಮುತ್ತಿದಾಗಳ್ (ಕಬ್ಬಿಕಾ.೨೮೮). [<ನಿಬ್ಬರ₁]

**ನಿಬ್ಬರಗತಿ** (ನಾ). ವೇಗವಾದ ಗತಿ ; ರಭಸದ ಗಮನ : ಜೋದರ ಜೀವ ಜಾಳಿಸೆ ದೀದಿವರಿದವು ಗಜಘಟಾಳಿಗಳು ತಾವು ನಿಬ್ಬರಗತಿಯ ರಥ ತುರಗಾವಳಿಗಳೆಳೆದವು ರಥಂಗಳನು (ಕುವ್ಯಾ.ಕ.೧೫-೨೯). [ನಿಬ್ಬರ₁ + ಗತಿ]

**ನಿಬ್ಬರಗಲಹ** (ನಾ). ಹುಮ್ಮಸ್ಸಿನಿಂದ ಕೂಡಿದ ಕಲಹ ; ಹುರುಪಿನ ಕಾದಾಟ : ನಿಲಿಸಿತವರುಬ್ಬರದ ನಿಬ್ಬರಗಲಹವಾ ದಿಶದುಭಯ ಸವರದ ಕಲಿಗಳಾಳಿಯನು (ತೊರರಾ. ೬-೧೪-೧೪).

[ನಿಬ್ಬರ₁ + ಕಲಹ]

**ನಿಬ್ಬರಣೆ** (ನಾ). ಅತಿಶಯತೆ ; ಆಧಿಕ್ಯ : ಆದಿರುದ್ರನ ವಾಮ ನಯನದಲ್ಲಿ ಚಂದ್ರನು ಹುಟ್ಟಿದನು ಬಲದ ನಯನದಲ್ಲಿ ಸೂರ್ಯ ಹುಟ್ಟಿದನು ಅವರ ನಿಬ್ಬರಣೆಗೆ ಸೋಡಶಚಂದ್ರರು ಹುಟ್ಟಿದರು (ರುದ್ರಭಾ. ೮೯).

[ನಿಬ್ಬರ₁ + -ಅಣೆ₄]

**ನಿಬ್ಬರದಿಟ್ಟಿ** (ನಾ). ತೀಕ್ಷ್ಣವಾದ ನೋಟ ; ಹರಿತವಾದ ದೃಷ್ಟಿ : ಕರುಣಿಯನ್ :—ಅರಮನೆಯ ನೆಲವಾಳಿಗೆಯಲ್ಲಿ . . . ಸಜ್ಜೆಗೆ ಹೊಸದಾಗಿ ಕಟ್ಟಿಸಿರುವ ಗುಪ್ತಮಾರ್ಗದ ಬಾಗಿಲುಗಳನ್ನು ಬಲ್ಲಿರೇನು ? . . . (ನಿಬ್ಬರದಿಟ್ಟಿಯಿಂದ) ಅವಕ್ಕೆ ಇರುವ ಒಳಗಣ ಹೊರಗಣ ಬಿಯ್ಗಗಳಿಗೆ ಎಷ್ಟು ಚಾವಿ (ಮಂತ್ರಶ. ೫೩-೨೨). [ನಿಬ್ಬರ₁ + ದಿಟ್ಟಿ]

**ನಿಬ್ಬರಿಬಾಯ್** (ನಾ). ದೊಡ್ಡ ಬಾಯಿ: ಮರುಳಿತ್ತಿತ್ತೊಂದು ಬಿಕ್ಕಂ ಮುಱಿದು ಮರುಳ ಮುಂಗೆಯ್ಯುಮಂ ಬಿಕ್ಕುಮಂ ನಿಬ್ಬರಿ [ಪಾಠಾಂ. ನಿಬ್ಬರಿ, ಗಿಬ್ಬರಿ]ಬಾಯೊಳ್ವೊಕ್ಕೊಡಂ ಕಂಡಿಸುವ ಸಿಡಿದ ಬೇತಾಳನಂ ಮಚ್ಚದಿಂ ಚೆಚ್ಚರದಿಂಪಂ ಕಿಱ್ತು ಬೇತಾಳನ ತಲೆಯನೆ ನಕ್ತಂಚರಂ ತಿಂದ ನಕ್ತಂಚರನಂ ನುಂಗಿತ್ತು ಭೂತಂ (ಅರ್ಜುನೇ. ೫-೪೦).

[<ನಿಬ್ಬರ$_1$ + ಬಾಯ್]

**ನಿಬ್ಬರಿಸು$_1$** (ಕ್ರಿ). ೧. ಅತಿಶಯವಾಗು ; ಅಧಿಕವಾಗು : ಪರಿಯೆ ಪರ್ವಿದ ಮಂಜು ಗಂಜಿಸುವಂತೆ ತಾವರೆ ನಾಡೆಯುಂ . . . ಧೂಳಿ ಧೂಸರಿತಮಾದ ಸುವರ್ಣಪುತ್ರಿಕೆ ಬಣ್ಣವಿಟ್ಟವೊಲೆಯ್ದೆ ನಿಬ್ಬರಿಸಿದಂಗ ಮಪೂರ್ವಕಾಂತಿಗೆ ತೊಟ್ಟನೇನೆಡೆಗೊಟ್ಟುದೋ (ಪುಲ್ಲಿಪು. ೪-೩೧) ; ಅಬ್ಬರಿಸುತ ಬಂದರು ದೊರೆದೊರೆಗಳು ಉಬ್ಬಿದವರ ಹಿಡಿಕೊಂಡು ಹೆಬ್ಬಾಗಿಲ ದಿಡ್ಡಿಯಲಿ ಹರಿಯ ಹೊಯ್ಕೆ ನಿಬ್ಬರಿಸಿತು ಚೋರಭಯವು (ಬಸವು. ೫-೪೧). ೨. ತುಂಬಿಕೊಳ್ಳು ; ನಿಬಿಡವಾಗು : ಕುಂಭಸ್ಥಳಂ ನಿಬ್ಬರಿಪಂತುದ್ಯತ್ಕುಚಂ ಬಿಂಬಿಣೆಸೆ . . . ಕಣ್ಣೊಣೆಸಿ ಬಿಡೆ ಮಣಿಭೂಷಾಳಿ ಮೈ ಸೋಂಕೆ ಬಿಂಬಾಧರೆ ಪಿಂಗಲ್ನಿಂದು ಕಂದರ್ಪನ ಕರುವಿಡುತರ್ಪಂತೆ ಕಣ್ಗೆಡ್ಡಮಾದಳ್ (ಅನಂಪು. ೪-೯೩).

[ನಿಬ್ಬರ$_1$ + -ಇಸು$_3$]

**ನಿಬ್ಬರಿಸು$_2$** (ಕ್ರಿ). ಬಾಡು ; ಕಂದು ; ಮಸುಳಿಸು : ನೇಸಱ ಸಾರೆ ನಿಬ್ಬರಿಸುವುತ್ಪಲಮಾಲೆಯೆನಿಪ್ಪ ದೃಷ್ಟಿವಿನ್ಯಾಸಮನೊಯ್ಯನೋಸರಿಸಿ ನಮ್ರಶಿರೋಧರೆ ಸೀತೆ ಲೋಕಸಂತ್ರಾಸಿಯ ರೂಪು ಪಾದನಖದರ್ಪಣ ದೊಳ್ ಪಲವಾಗಿ ತೋಱೆ ಕಂಡಾ ಸತಿ ಬೆರ್ಚಿ ಮುಚ್ಚಿದಳೆರಚ್ಚರದಿಂ ತರಲೇಕ್ಷಣಂಗಳಂ (ಪಂರಾಪೂ. ೯-೧೧೨) ; "ಮುಚ್ಚು" (ಪಂರಾಪೂ. ಕೋಶ); ವಿರಹಭರೋತ್ಕಂಠಮನೋಹರಿಯ ಕಪೋಳಂಗಳಂತೆ ನಿಬ್ಬರಿಸಿದ ಬೆಳ್ಕರಿಸಿದೆಲೆಗಳಿನದೆಲೆಗಳ ಬರಿಸುವುದನುನಯುದೆ ಪಂಟೆ ಗೆಂಟಱ ವಿಟರಂ (ಪುಷ್ಪಪು. ೨-೮೨). [ನಿಬ್ಬರ$_2$ + -ಇಸು$_3$]

**ನಿಬ್ಬಾಣ** 'ನಿಬ್ಬಾನ' ನೋ.

**ನಿಬ್ಬಾನ,** ನಿಬ್ಬಾಣ, ನಿಬರ್ಾಣ (ನಾ). ೧. ನಿರ್ವಾಣ; ಮೋಕ್ಷ : ಈ ಮೂರು ಸಂಕೋಲೆಗಳನ್ನು ಕಳಚಿ ಎಸೆಯದಿದ್ದರೆ ಶುದ್ಧಿಯ ಮೊದಲ ಘಟ್ಟವಾದ ಮೋಕ್ಷದ ಪ್ರವಾಹದೊಳಕ್ಕೆ ಇಳಿಯುವುದೂ ಕೂಡ ಸಾಧ್ಯ ವಿಲ್ಲ (ಸೋತಾಪತ್ತಿ). ಇನ್ನು 'ನಿಬ್ಬಾನ' ದೂರವೇ ಉಳಿಯಿತು (ತತ್ವಪ್ರಾ. ೧೬೬). **ನಿಬ್ಬಾಣ : ೧.** ಮಾರನಂ ಮುರಿದು ಸಂಬುದ್ಧ ನೆಮಗಗ್ಗಂ ನಿಬ್ಬಾಣಮೊಂದೆ, ತಣ್ಹೆಯರಣ್ಯಮಂ ತರಿದು, ತೋರ್ದನರಿಯ ಟ್ಠಂಗಿಕದ ಧಮ್ಮಮಗ್ಗಂ (ಗಿಳಿವಿಂ. ೪೫-೭). **ನಿಬರ್ಾಣ : ೨.** ಮುಕ್ತಾಯ; ಮುಗಿತಾಯ : ಚಿಂತಿಸಲಾರ್ಗಂ ಬಾರದು ಎಂಬಂತು ಟಣ ಕಳಸ ನಿಬರ್ಾಣಮುಪ್ಪನ್ನಗಂ (ಎಇ. XV, ೯೦-೫೩ ; 1060) ; ಶ್ರೀಸೋಮನಾಥದೇವರ ದೇವಾಲ್ಯಮನುತ್ತುಂಗಪ್ರಾಸಾದಶಿಖರ ಕಳಸಂಬರಂ ಕಲುವೆಸ ನಿಬರ್ಾಣವಾಗಿ ಮಾಡಿಸಿ (ಎಕ. XI, ಚಿತ್ರದು. ೩೬-೪೩; 1199); ಯಿಾ ದೇವರ ದೇವಾಲ್ಯದ ಕಳಸ ನಿಬರ್ಾಣ ಪವುಳಿ ಬಾಗಿಲುವಾಡ ಅಘುವಣೆಯ ಕೊಂಡ ಸಂಪೂರ್ನ್ನವಾದ ದಿನದಿಂ (ಎಕ. VI, ಕಡೂರು. ೪೯-೬೫ ; 1291).

[<ಪಾಲಿ. ನಿಬ್ಬಾನ./ಪ್ರಾ.ಣಿವ್ವಾಣ./ಸಂ.ನಿರ್ವಾಣ]

**ನಿಬ್ಬಿಡಿ** 'ನಿಬಿಡಿ' ನೋ.

**ನಿಬ್ಬುದ್ಧಿ** 'ನಿಬುದ್ಧಿ' ನೋ.

**ನಿಬ್ಬೆಗ** 'ನಿರ್ಬೇಗ' ನೋ.

**ನಿಬ್ಬೆದೆ** (ನಾ). "ಬೆದೆಯಿಲ್ಲದ್ದು" (ಜಾನಕೋ. ೧೧).

[<ನಿರ್ + ಬೆದೆ]

**ನಿಬ್ಬೆರಗು** 'ನಿಬ್ಬೆಱಗು' ನೋ.

**ನಿಬ್ಬೆರಸು** (ಕ್ರಿ). ಸಂಪೂರ್ಣವಾಗಿ ಬೆರೆತುಕೊಳ್ಳು, —ಒಂದಾಗು; ಸಮರಸವಾಗು : ಭಕ್ತಿಯು ಭಾವನಿಷ್ಠೆ ನಿಬ್ಬೆರಸಲಾಗಿ ಶಿವನ ತನ್ನ ವಶವ ಮಾಡಿತ್ತು ಭಕ್ತಿ (ಪಚಸಂ. ೨೮೨-೨೪); ನಿಷ್ಠೆ ನಿಬ್ಬೆರಸಿ [ಪಾಠಾಂ. ನಿಬ್ಬರಿಸಿ] ಗಟ್ಟಗೊಂಡು ಅಭಿಲಾಷೆ ಸಮನಿಸದೆ ಪರಿಚ್ಛೇದಬುದ್ಧಿಯುಳ್ಳಲ್ಲಿ ಮಾಹೇಶ್ವರ (ಚಸ್ನ. ಕ. ೫೯೯-೧೩೪೧).

[<ನಿಡಿದು$_2$ + ಬೆರಸು$_1$(<ಬೆರೆಯಿಸು)]

**ನಿಬ್ಬೆಳಕು** (ನಾ). ಅಧಿಕವಾದ ಬೆಳಕು; ಪ್ರಜ್ವಲವಾದ ಬೆಳಕು : ಯಾವ ಕಗ್ಗತ್ತಲಲ್ಲಿಯೂ ಯಾವ ನಿಬ್ಬೆಳಕಿನಲ್ಲಿಯೂ ಕಾಣಿಸುವಂತೆ (ಚಿತ್ರಸ್ಯ. ೧). [<ನಿಡಿದು$_1$ + ಬೆಳಕು$_2$(<ಬೆಳಗು$_2$)]

**ನಿಬ್ಬೆಱಗು,** ನಿಬ್ಬೆರಗು(ನಾ). ಅತಿಯಾದ ಆಶ್ಚರ್ಯ, —ವಿಸ್ಮಯ : "ತಳವೆಳಗೆನೆ ನಿಬ್ಬೆಱಗು" (ಚತುನಿ. ೯೮) ; ಜೊಗಳುವ ಕುನ್ನಿಗಳ ನೋಡಿ ಎನ್ನ ಮನ ಬೆಱಗು ನಿಬ್ಬೆಱಗು ಆಯಿತ್ತಯ್ಯಾ ಚೆನ್ನಮಲ್ಲಿಕಾರ್ಜುನ (ಮಹಾದೇ. ಬ. ೯೮-೨೨೫); ಕುಱುಹಳಿದ ಕರಸ್ಥಳದ ನಿಬ್ಬೆಱಗಿನ ನೋಟದ ಎನ್ನ ಪರಮಗುರುವ ಕಂಡು ಬದುಕಿದೆನು ಕಾಣಾ ಗೊಹೇಶ್ವರ (ಅಪಚಂ. ೧೬೭-೭೫೨) ; ಮಱುಗಿದನು ಸುರನಾಥನಗ್ನಿ ಬಸವಳಿದ ಯಮ ಬೆಱಗಾದ ನಿರುತಿ ಹಲುಗಚ್ಚಿದನು ವರುಣ ನಿಬ್ಬೆಱಗಿನೊಳಿರ್ದ (ಹಚಕಾ. ೪-೧೧) ; ಇದೇ ಕಣಾ ಶಿವಲಿಂಗಭಕ್ತಿಯ ಹೃದಯವನು ಸಾಧಿಸುವ ಪರಿ ಭಾವದಲಿ ನೆಱೆ ನಟ್ಟಾಲಿಯಲಿ ನಿಬ್ಬೆಱಗಿನಂದದಲಿ ಇದನು ಸಾಧಿಸದೆ (ಪ್ರಭುಲೀ. ೧೧-೨೩) ; ಯತಿರಾಜ ನಿಬ್ಬೆಱಗಿನಿಂ ಕೆಲದೊಳಿತರೇತರವನಱಿಯದಿರೆ ನೋಡಿ ಸಂಚಲಚಿತ್ತನಾಗಿ (ಸಿದ್ಧೇಪು. ೬-೨೮) ; ಶರಹತಿಗೆ ಗಾಱುಗೆಟ್ಟು ಬ್ಬಸಂಬಟ್ಟು ಮೈಮಱೆದನಾಗೆ ಬಲದೊಳೆತ್ತಂ ನಿಬ್ಬೆಱಗಿನ ಕಲಕಲಂ ಪಿರಿದಾಯ್ತು (ರಾಮಾಶ್ವ. ೧೪೫-೬). **ನಿಬ್ಬೆರಗು :** ಜನರು ನಿಬ್ಬೆರ ಗೊಂದಿ ಬಾಯ್ಬಿಡುತಿರಲ್ (ಮಹಾವಿ. ೫-೧೩); ಕೊನೆಕೊನೆಗೆ ಶರೀಫರು ದೇವೋನ್ಮಾದದ ಪೂರ್ಣ ನಿಬ್ಬೆರಗಿನಲ್ಲಿರುತ್ತಿದ್ದರು (ಶರೀಫ. ೬೧ ಕವಿಕಾವ್ಯಪರಿಚಯ); ಬಿರುಗಾಳಿ ಮತ್ತು ಮೊಳಗು ಮಿಂಚುಗಳ ಹೊಡ್ಲಿಗೆ ಕಡಿದುರುಳುವ ಹೆಬ್ಬಂಡೆ ಇವೆಲ್ಲ ನಿಬ್ಬೆರಗಿನ ನೋಟಗಳು(ಬದ್ಧಪ್ರ.LVIII, ಪೀಠಿಕೆ) ; ಜಗ ಜೀವಗಳನು ತಾ ಹೊರಗುಮಾಡಿ ನಿಬ್ಬೆರಗು ಮೌನವಾಂತ ಎರಡರಿಯದೊಂದು ಕೈವಲ್ಯ ನೈಜ ಬರಿ ಬೆತ್ತಲೆತ್ತಲೂನೂ (ಅರಳು. ೨೨೮-೧೦).

**ನಿಬ್ಬೆಱಗಾಗು, ನಿಬ್ಬೆರಗಾಗು** = ಅತ್ಯಾಶ್ಚರ್ಯವನ್ನು ಹೊಂದು: ಅತಿಮುದದಿಂದಂ ಸೌಂದರವತಿ ಬರಲೊಂದಸುಗೆಯುಮರ್ದ ತಣ್ಣೆಲೊ ಳ್ಪೊಪತಿಯುದ್ಭಟನಿರೆ ಕಂಡಾ ಸಿತಪಂಕಜಪತ್ರನೇತ್ರೆ ನಿಬ್ಬೆಱಗಾದಳ್ (ಉದ್ಭಟ. ೭-೯೨) ; ಕೂತಾಡಿ ದೇವರು ಪೊತ್ತ ತಾಂಡವಮೂರ್ತಿಯಂ ಕಾಣುತ್ತ ನಿಬ್ಬೆಱಗಾಗುತಂ ಪೂಜಾರಿಗಿಂತೆಂದ (ಬಸವು.೧೭-೧); ಪರವೆಯಿಾ ಪರಿಯಿಂದ ನರ್ತನಂಗೆಯ್ಯುತ್ತಲಿರಲು ನಿಬ್ಬೆಱಗಾಗಿ ನಟ್ಟ ದಿಟ್ಟಿಯಲಿ ಸೌಂದರಗಣಾಧೀಶ ನಿಟ್ಟಿಸುತಿರ್ದೊಡೆ (ಸೌಂದಪು. ೮-೧೪) ; ಆಲಿಸ ನಿಮಿಷಗಮಲಲಿಂಗಮಂ ನೀನಿತ್ತ ಮೇಲೆ ತಲ್ಲಿಂಗದೊಳ್ ಮನ ಲೀನವಾಗಿ ಕಣ್ಣಾಲಿಗಳ್ ನಟ್ಟು ದಿಟ್ಟಿಯಲಿ ನಿಬ್ಬೆಱಗಾಗಿ ನಿಜಸುಖಸಮಾಧಿಯೊಳಿರೆ (ಚೆಬಪು. ೬-೧೨) ; ಇಷ್ಟಲಿಂಗದಲ್ಲಿ ನಿಷ್ಠೆ ನಿಬ್ಬೆಱಗಾಗಿ ಆಚರಿಸುವಲ್ಲಿ (ಅಖಂಪೇ. ೨೭೩-೧೬) ; ನಾನು ನಿಬ್ಬೆರಗಾಗಿ, ಬಾಯಿ ಬಿಟ್ಟಿದ್ದರೂ ನುಡಿಯದೆ ಕುಳಿತಿದ್ದೆ (ನಡೆವಾ. II, ೧೦೧೭) ; ಉತ್ತರನು ಬಹುವಾಗಿ ಹೆದರಿ ರಥದಲ್ಲಿ ನಿಬ್ಬೆರಗಾಗಿ ಕುಳಿತುಬಿಟ್ಟನು (ಪಚಘಾ. ೨೦೮).

[<ನಿಡಿದು$_1$ + ಬೆಱಗು/ತೆಲು.ನಿವ್ವೆರಗು]

**ನಿಬ್ಬೆಱಗುವಡು** (ಕ್ರಿ). ಅತಿಯಾದ ಆಶ್ಚರ್ಯವನ್ನು ಹೊಂದು : ನಿಬ್ಬೆಱಗುವಟ್ಟು ಸೌಂದರಿಯೊಬ್ಬುಳಿಗೊಂಡಳ್ಕದುಣ್ಮದೀಕ್ಷಿಸಿ ನೃಪನಂ

ಬಿಬ್ಬೋಕಂ ಕುಡಿವರಿಯಲ್ ನಿಬ್ಬೆಗದೆ ನಿನಗಕಾರಣಹಸನಮುದೆಂದಳ್ (ಉದ್ಭಟ. ೧೧-೨೩). [ನಿಬ್ಬೆಱಗು + ಪಡು₁]

**ನಿಬ್ಬೆಱಗುವಡೆ** (ಕ್ರಿ). = ನಿಬ್ಬೆಱಗುವಡು : ಮಾಲೆ ತೊಡಱುವ ಕಜ್ಜವಂ ಮಱೆದು ನಿಬ್ಬೆಱಗುವಡೆದು ಲೆಪ್ಪದ ಪೆಣ್ಣನಂತಿರ್ದಳು (ಸೌಂದಪು. ೧೨-೪೦). [ನಿಬ್ಬೆಱಗು + ಪಡೆ₁]

**ನಿಬ್ಯಸನ** (ಗು). ೧. ಯಾವುದೇ ಬಗೆಯ ಚಟವಿಲ್ಲದಿರುವ : ಕುಸುಮಮಾಲೆಗಳಂ ರಚಿಸಿ ತಂದೊಸೆದು ಭಕ್ತರಿಗಿತ್ತು ತಾ ನಿಬ್ಯಸನ [ಪಾಠಾಂ. ತ್ಯಶನ]ಕಾಯಕಲಬ್ಧಿಯಲಿ ಜಂಗಮಕೆ ಮಾಡುತ್ತ ಪೆಸರು ಪಸರಿಸಿ ಕೀರ್ತಿಸುತ್ತಿರೆ (ಬಸಪು. ೨೨-೨೬). (ನಾ). ೨. ಯಾವುದೇ ಬಗೆಯ ಚಟವಿಲ್ಲದಿರುವುದು. [<ಸಂ. ನಿರ್ವ್ಯಸನ]

**ನಿಭ** (ಗು). ೧. ಸಮಾನವಾದ ; ಸದೃಶವಾದ ; ಹೋಲಿಕೆಯುಳ್ಳ. (ನಾ). ೨. ಸೋಗು ; ಕಪಟ ; ಮೋಸ. ೩. ನೆವ ; ನೆಪ : "ಕೈತವಂ, ಕಪಟಂ . . . ಮಿಷಂ, ನಿಭಂ, ನಿರ್ದಿಷ್ಟಂ, ವ್ಯಪದೇಶಃ – ಈ ೧೦ ನೆವಂ" (ಹಲಾಯು. ೧೧೭-೨೪) ; "ಕಪಟಂ ನಿಭಂ ಕೈತವಂ ಮೃಷಂ . . . ವ್ಯಪದೇಶಮೆನೆ ವ್ಯಾಜಮುಕ್ಕುಂ" (ಮಂಗರಾ. ೧೨೮-೧೦). ℙ 'ನಿಭ' ಎನ್ನುವುದು ಸಂಸ್ಕೃತದಲ್ಲಿ ಸಮಾಸದ ಕೊನೆಯಲ್ಲಿ ಸೇರಿಬರುವ ಒಂದು ಶಬ್ದ. ಇದಕ್ಕೆ ಸ್ವತಂತ್ರವಾದ ಪ್ರಯೋಗವಿಲ್ಲ. [ಸಂ.]

**ನಿಭಾಯಿಸು,** ನಿಬಾಯಿಸು (ಕ್ರಿ). ಸಾಗಿಸಿಕೊಂಡು ಹೋಗು ; ನಿರ್ವಹಿಸು : ಆ ಜನರು ತಮ್ಮ ಹೆಂಡರು ಮಕ್ಕಳಿಗೆ ಅನ್ನ ವಸ್ತ್ರ ಕೊಟ್ಟು ಯಾವ ಮೇರೆ ನಿಭಾಯಿಸುತ್ತಾ ಇದ್ದರು (ರಾಜೇಂದ್ರ. ೬೪) ; ಈಗ ಕೆಲಸವಿಲ್ಲದ ತಾನು ಅವಳನ್ನು ಕಟ್ಟಿಕೊಂಡು ಸಂಸಾರ ಹೇಗೆ ನಿಭಾಯಿಸುವುದು ? (ಮಾಸುಸೆ. ೩೩) ; ಆನಂದನಿಗೆ ಎಲ್ಲಾ ಕಡೆಗೂ ದೃಷ್ಟಿಯಿಟ್ಟು ನಿಭಾಯಿಸಲು ವ್ಯವಧಾನವೇ ದೊರೆಯುತ್ತಿರಲಿಲ್ಲ (ಮರಳಿ. ೩೭); ಶ್ರೋತ್ರಿಯರೇ ನನ್ನ ಸ್ಥಾನದಲ್ಲಿದ್ದಿದ್ದರೆ . . . ಅವರೊಬ್ಬರೇ ಈ ಕೆಲಸವನ್ನು ಮಾಡಿ ನಿಭಾಯಿಸುತ್ತಿದ್ದರು (ವಂಶಸ್ಪ. ೩೭೯) ; ಮುಂದೆ ಹೇಗೆ ತಾನೆ ನಿಭಾಯಿಸುತ್ತೇವೋ ತಿಳಿಯದು (ರಂಗಕ. ೧೭) ; ಸ್ವಭಾವ ತಿಳಿದರೆ ನಿಭಾಯಿಸಬಹುದು (ಗಾದೆ). **ನಿಬಾಯಿಸು :** ಈ ಕೆಲಸ ನಿಬಾಯಿಸಲು ಅವರೊಬ್ಬರಿಂದಲೇ ಸಾಧ್ಯವಿಲ್ಲ (ರೂಢಿ).

[←ಹಿಂ.ನಿಭಾನಾ, ನಿಬಹನಾ, ನಿಬಾಹನಾ ; ಮರಾ. ನಿಭಣೇ, ನಿಭಾವಣೆ./ತುಳು. ನಿಭಾಯಿಸು ನಿಭಾಸು, ನಿಬಾಸು ; ತೆಲು. ನಿಭಾಯಿಂಚು]

**ನಿಭಾರಿ** (ನಾ). ಒಂದು ಬಗೆಯ ಬಟ್ಟೆ (?) : ವರನಿಭಾರಿಯ ಬಳವಿನಲಿ ಬಲಮುರಿಯ ಬಿಗಿದನು ಪದಮುಖಕೆ ಮುಂಜೆಱಗ ಬಿಟ್ಟನು ಬಿಗಿದ ಬದ್ದುಗೆ ದಾರಗೊಂಡೆಯವ (ಕುಮ್ಯಾಕ. ೮-೧೭).

[ℙ ಇದು 'ನಿಖಾರಿ' ಎಂಬುದರ ಅಪಲಿಖಿತವಿರಬಹುದು]

**ನಿಭಾಲನ,** ನಿಭಾಳನ (ನಾ). ನೋಡುವಿಕೆ; ನೋಟ. **ನಿಭಾಳನ :** "ನಿಭಾಳನಂ, ನಿಶಮನಂ,ನಿಧ್ಯಾನಂ . . . ದ್ಯೋತನಂ ಈ ೮ ನೋಟಂ" (ಹಲಾಯು. ೯೩-೪೧೨). [ಸಂ.]

**ನಿಭಾಳನ** 'ನಿಭಾಲನ' ನೋ.

**ನಿಭೃತ** (ಗು). ೧. ಕೆಳಗೆ ಇಟ್ಟ,—ಇರಿಸಿದ. ೨. ತುಂಬಿದ ; ಆವರಿಸಿದ : ಪುಳಕಿತಕಪೋಳಫಳಕಂ ವಿಳಸಿತಮದಿರಾರುಣೇಕ್ಷಣಂ ಸ್ಫುರಿತೋಷ್ಠಂ ಕೆಳದೀ ನಿನ್ನ ಮುಖಂ ತಳಮಳಗೊಳಿಸುಗುಮಿಂತು ನಿಭೃತ ಶೃಂಗಾರರಸಂ (ಕವಿರಾ. ೩-೧೯೨) ; ಎರಡನೆಯಬ್ಧಿಯುಂ ಮೊದಲ ವಾರಿಧಿಯುಂ ಗಡಿಯಾಗೆ ಸೀಳ್ದು . . . ಕರಮೆಸೆದಿರ್ಪುದಾತತ ಗುಹಾದ್ವಯ ವಜ್ರಮಯಿಾದರೀಪ್ರಭಾಪರಿಚಿತಪಾರ್ಶ್ವಮಗ್ರನಿಭೃತಾಂಬುಧರಂ ವಿಜಯಾರ್ಧಭೂಧರಂ (ಚಂದ್ರಪು. ೬-೨) ; ಚಾರು ಮನಾಸಂದದ ಸಲುವಾಗಿ ಅತ್ಯಂತ ಏಕಾಂತದಲ್ಲಿ . . . ಸಾಹಿತ್ಯನೀಡವನ್ನು ನಿರ್ಮಿಸಿಕೊಂಡಿದ್ದಾಳೆ. ಅದರ ಮೇಲೆ . . . ಒಂದು ಶಿಲಾಖಂಡ ಬಂದು ಬಡಿದು ಅವಳ ನಿಭೃತನೀಡವನ್ನು ಆಮೂಲಾಗ್ರ ಕೆಡವಿಬಿಡುವಂತಾಯಿತಲ್ಲ (ಇಪ್ಪಕ. ೨೫೪). ೩. ಮರೆಮಾಚಿದ ; ಗುಪ್ತವಾಗಿರಿಸಿದ. ೪. ಬಲವಾದ ; ಶಕ್ತಿಯುತವಾದ ; ಸಮರ್ಥವಾದ : ಭಾನು ಭಾರಿಯತಮವ ತಿವಿವನದಾರ ನೆರವಿನ[ಪಾಠಾಂ. ಯ]ಲಿ ಈ ನಿಭೃತ ಗದೆಯಿರಲು ಕುಂತೀಸೂನುಗಳ ಕೈಕೊಂಬೆನೇ (ಕುಮ್ಯಾಗ. ೩-೩೧). (ನಾ). ೫. ಗುಟ್ಟು ; ರಹಸ್ಯ : ಏಕಾಂತವಾಗಿ, ನಿಭೃತವಾಗಿ ಆತನಿಗೆ ಬಾರಿಬಾರಿಗೆ ಯಾವುದನ್ನು ಸಮರ್ಪಣೆ ಮಾಡಿದ್ದೇನೆಯೊ ಅದೇ ಅರ್ಘ್ಯವನ್ನು ಇಂದು ಇಲ್ಲಿ ಅರ್ಪಿಸುತ್ತಿದ್ದೇನೆ (ನಿಬಂಧ. I, ೩) ; ಕಪಾಲಕುಂಡಲೆಯು ಪಥಿಕನನ್ನು ಸಂಗಡ ಕರೆದುಕೊಂಡು ನಿಭೃತವಾಗಿದ್ದ ಒಂದು ಕಾನನದೊಳಗೆ ಪ್ರವೇಶಿಸಿದಳು (ಕಪಾಕುಂ. ೨೯) ; ದೇವಮೂರ್ತಿಗಳೆಲ್ಲವೂ ಅತಿನಿಭೃತವಾದ ಗೃಹಗಳೊಳಗೆ ತರಗೆಲೆಗಳ ರಾಶಿಯಲ್ಲಿ ಮುಚ್ಚಿಡಲ್ಪಟ್ಟಿದ್ದುವು (ಕೋಹಿನೂ. ೬) ; ಇಷ್ಟು ರಾತ್ರಿ ಒಮ್ಮಿಂದೊಮ್ಮೆ ತಮ್ಮ ನಿರಾಪದವೂ ನಿಭೃತವೂ ಆದ ನಿವಾಸದ ಹತ್ತಿರ ಜನಸಮಾಗಮ ಕಂಡು ಅವು ಚಕಿತವಾಗಿ ಚೀತ್ಕರಿಸಿವೆ (ಇಪ್ಪಕ. ೧೨೭). [ಸಂ.]

**ನಿಭೃತಶಾಂತಿ** (ನಾ). ಏಕಾಂತದಲ್ಲಿ ದೊರಕುವ ಸಮಾಧಾನ,—ಸಮಚಿತ್ತತೆ : ಆ ಸಹಜಲಭ್ಯವಾದ ಸುಖಸಾಧನಗಳ ಮುಖಾಂತರ ಅವನ ಜೀವನದ ಗೃಹಕೋನದಲ್ಲಿ ಸಂಜೆಯ ದೀಪ ತೊಳಗಿಸಿ, ನಿಭೃತಶಾಂತಿಯನ್ನು ಅವನು ನೆಲೆಗೊಳಿಸತಕ್ಕವ (ಇಪ್ಪಕ. ೨೭೯).

[ನಿಭೃತ + ಶಾಂತಿ]

**ನಿಭೃತಸ್ಥಾನ** (ನಾ). ಗುಪ್ತಸ್ಥಾನ ; ಗುಟ್ಟಾದ ಸ್ಥಳ : ಅವರ ಸಂಗಡ ಆ ಕಲ್ಲುಮಂಟಪದ ನಿಭೃತಸ್ಥಾನಕ್ಕೆ ಹೋಗಿ ಅದನ್ನು ವಾಸಯೋಗ್ಯವನ್ನಾಗಿ ಮಾಡುವ ಸಾಹಸದಲ್ಲಿ ಅವರಿಗೆ ನೆರವಾಗಿದ್ದನು (ಮಲೆಮ. ೬೧೦). [ನಿಭೃತ + ಸ್ಥಾನ]

**ನಿಭೃತೇಂಗಿತ** (ನಾ). ಗುಪ್ತವಾದ ಇಂಗಿತವನ್ನುಳ್ಳವನು : ಸನ್ಮತಿಯ ನುಡಿಯಂ ಕೇಳ್ದು ಮುನಿದು ಸಂವೃತಾಕಾರನುಂ ನಿಭೃತೇಂಗಿತನುಮಾಗಿ ದಕ್ಷಜನೋಪಲಕ್ಷಿತಾಕೂತನಪರಾಜಿತಾನುಜನ್ಮಂ ನುಡಿವಾಗಳ್ (ಶಾಂತಿಪು. ೨-೫೧ ವ). [ನಿಭೃತ + ಇಂಗಿತ]

**ನಿಭ್ರಾಂತ** (ಗು). ೧. ಭ್ರಾಂತಿಯಿಲ್ಲದ; ಭ್ರಮೆರಹಿತವಾದ : ನುಡಿಯ ಸಡಗರದಲಾದ ಬಿಂದು ತಾನಲ್ಲ ಪದುಮಪರಿಮಳಕೆಱಗುವ ಭ್ರಮರ ತಾನಲ್ಲ ಭವದ ಕುಳವನು ಗೆಲಿದ ನಿಭ್ರಾಂತ ಶರಣ (ಅಪಚಂ. ೨೮೩-೧೨೯೬) ; (ನಾ). ೨. ಭ್ರಮೆಯಿಲ್ಲದವನು; ಭ್ರಾಂತಿಯಿಲ್ಲದವನು : ಹೊನ್ನು ಹೆಣ್ಣು ಮಣ್ಣನೊಳು ಸಿಲುಕದಾ ತ್ರಯದ ತನ್ನದೆನ್ನದೆ ಲಿಂಗಜಂಗಮಕೆ ಸವಿಸುತ್ತ ತನ್ಮೂರ್ತಿಯಾಗಿ ನಿಭ್ರಾಂತನಾಗಿರಬಲ್ಲಡಾತನೇ ಸದ್ಭಕ್ತನು (ಶಿವಗೀ. ೧೬-೬೨).

[<ಸಂ. ನಿರ್ಭ್ರಾಂತ]

**ನಿಭ್ರಾಂತಿ** (ನಾ). ಭ್ರಾಂತಿಯಿಲ್ಲದಿರುವಿಕೆ : ಎನ್ನ ದಿವ್ಯಜ್ಞಾನವೇ ದೀಪ ಎನ್ನ ನಿಭ್ರಾಂತಿಯೇ ನೈವೇದ್ಯ (ವಚಸಂ. ೧೫೧-೫೮).

[<ಸಂ. ನಿರ್ಭ್ರಾಂತಿ]

**ನಿಮಂತ್ರಣ** (ನಾ). ೧. ಕರೆಯುವಿಕೆ ; ಬರಹೇಳುವಿಕೆ. ೨. ಯಾವುದಾದರೂ ಸಮಾರಂಭಕ್ಕೆ ಕೊಡುವ ಕರೆ,—ಆಹ್ವಾನ. ೩. ಕರೆಯೋಲೆ ; ಆಹ್ವಾನಪತ್ರಿಕೆ : ಪ್ರೇಕ್ಷಕರು ನಿಮಂತ್ರಣದ ಮೂಲಕ ಆಹ್ವಾನಿಸಲ್ಪಟ್ಟಿದ್ದರು (ಧೂಮಾಂತಿ. ೮). ೪. ಶ್ರಾದ್ಧಭೋಜನಕ್ಕೆ ಹೇಳುವುದು ; ಪೂರ್ವಪಂಕ್ತಿಗೆ ಕರೆಯುವುದು. ೫. ಶ್ರಾದ್ಧದಲ್ಲಿ ಪೂರ್ವಪಂಕ್ತಿಯ ಊಟ ; ಶ್ರಾದ್ಧ ಭೋಜನ :

ಭಟ್ಟರು ನಿಮಂತ್ರಣಕ್ಕೆ ಹೋಗಿದ್ದಾರಂತೆ (ರೂಢಿ). ℙ ಅಂಗೀಕರಿಸಿದರೆ ನಡೆಸಲೇ ಬೇಕಾದ ಶ್ರಾದ್ಧಭೋಜನಕ್ಕೆ ನಿಮಂತ್ರಣವೆಂದೂ ನಡೆಸದಿದ್ದರೂ ಅಡ್ಡಿಯಿಲ್ಲದ ಆಹ್ವಾನಕ್ಕೆ ಆಮಂತ್ರಣವೆಂದೂ, ಹೇಳುತ್ತಾರೆ. 'ಆಮಂತ್ರಣ' ಪರಾ. [ಸಂ.]

**ನಿಮಂತ್ರಣೆ** (ನಾ). = ನಿಮಂತ್ರಣ ೪ : ಅದಕೆನಗೆ ನಿಮಂತ್ರಣೆ ಮೂರುದಿನಕೊಮ್ಮೆ . . . ನಮ್ಮ ಬ್ರಾಹ್ಮಣ್ಯದಲಿ ಶ್ರಾದ್ಧವೇ ಸಾರ (ಗಣೇಶ. ೬೮–೧೩). [ಸಂ. ನಿಮಂತ್ರಣ]

**ನಿಮಂತ್ರಿತ** (ಗು). ೧. ಕರೆದ; ಆಹ್ವಾನಿಸಿದ : ಶಂಭುಶಾಸ್ತ್ರಿಗಳು ನನ್ನನ್ನು ಸಭಾಭವನಕ್ಕೆ ಕರೆದೊಯ್ದು ಕೆಲವು ನಿಮಂತ್ರಿತ ದೊಡ್ಡ ವ್ಯಕ್ತಿಗಳಿಗೆ ಸಿದ್ಧಪಡಿಸಿದ ಸ್ಥಳದಲ್ಲಿ ಕೂಡ್ರಿಸಿದರು (ಆಬೋಲೀ. ೧೬೧). ೨. ಆಹ್ವಾನಿತನಾದವನು; ಆಮಂತ್ರಿಸಲ್ಪಟ್ಟವನು : ಉಂಡು ಹೊಟ್ಟೆಯುಬ್ಬಿಸಿ ತೇಗುತ್ತ . . . ನಿಮಂತ್ರಿತರು ಹಾದು ಹೋದರು (ಅನ್ನ. ೨೫೦). [ಸಂ.]

**ನಿಮಂತ್ರಿಸು** (ಕ್ರಿ). ಕರೆ; ಆಹ್ವಾನಿಸು : ಶ್ರೋತ್ರಿಯರು ತಮ್ಮ ಮನೆಯ ಶ್ರಾದ್ಧಗಳಲ್ಲಿ ಅವರನ್ನು ಪೂರ್ವಪಂಕ್ತಿಗೆ ನಿಮಂತ್ರಿಸುತ್ತಿದ್ದರು (ವಂಶವೃ. ೪೮೩). [ನಿಮಂತ್ರಣ + –ಇಸು₃]

**ನಿಮಕ್‌ಹರಾಮ** 'ನಮ್ಮಕ್‌ಹರಾಮ' ನೋ.

**ನಿಮಗ್ನ** (ಗು). ೧. ಮುಳುಗಿರುವ; ವಿಲೀನವಾದ : ದುಶ್ಶಾಸನೋರಸ್ಸ್ಥಳೋಚ್ಚಲದುಷ್ಣಾಂಬುನಿಮಗ್ನಪೂರ್ಣಜಠರಂ . . . ಚಾಳುಕ್ಯಕಂಠೀರವಂ (ಗದಾಯು. ೨–೪೮); ಫಣಿಶಿರೋಮಣಿಯಂತೆ ಪೊಳೆದುದರ್ಭನಿಮಗ್ನಬಿಂಬ ರವಿಮಂಡಲದ ವರ್ತುಲಾಗ್ರಂ (ಶ್ರೀರಾಮಾ. ೪೧೬–೩೭೦). ೨. ಕಾಣದ; ಅಡಗಿದ : ಮರೆಯಾದುದಾ ದೇವ ತೇಜಃಪುಂಜಮುಖಮೂರ್ತಿಯಗ್ನಿ ಮೆಯ್ಯೆ ಜ್ವಾಲಾನಿಮಗ್ನಮೆನಲ್ (ಶ್ರೀರಾಮಾ. ೧೪–೩೬೬). (ನಾ). ೩. ಮುಳುಗಿದವನು; ತಲ್ಲೀನನಾದವನು; ಅಡಗಿದವನು : ಭವವಾರಾಶಿನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ವಲಂ ಪೊತ್ತೆತ್ತುಗುಂ (ಆಪು. ೨–೭); ಜನನಿಯ ಮೊಗಮಂ ನೋಡಲ್ಕೆ ನಾಣ್ಚಿ ಸಿಗ್ಗಾಗಿ ಬಾಗಿ ತಲೆಯಂ ಚಿಂತಾಬ್ಧಿನಿಮಗ್ನರಾಗಿ ಕಣ್ಣೀರ ನಿಕ್ಕುತಿರೆ ನೋಡಿ (ಸುಕುಮಾ. ೨–೩೦); ತೆರಳಿದನ್ ಧಾನ್ಯಮಾಲಿನಿವೆರಸಿ ರಾವಣಂ, ಚಿಂತಾನಿಮಗ್ನನಂತರ್ಮಥಿತನಾ ಜೀವನಾಂಭೋಧಿ (ಶ್ರೀರಾಮಾ. ೩೩೪–೧೦೦). ೪. ಹೀನಸ್ಥಿತಿಯಲ್ಲಿರುವವನು; ಹಿಂದುಳಿದವನು; ಪಾಪಿ : ಈ ಪ್ರದೇಶದಲ್ಲಿ ನಿಮಗ್ನರನ್ನು ಉದ್ಧಾರಮಾಡಲು . . . ದ್ರಾವಿಡವೇದರೂಪವಾದ ದಿವ್ಯಪ್ರಬಂಧಗಳನ್ನು ರಚಿಸುವರೆಂದೂ ಭವಿಷ್ಯ ನುಡಿದಿದೆ (ಭಾರದ. ೩೯೬). [ಸಂ.]

**ನಿಮಗ್ನತೆ** (ನಾ). ಮುಳುಗಿರುವುದು; ತಲ್ಲೀನತೆ; ತತ್ಪರತೆ : ಆ ನಿಮಗ್ನತೆಯಿಂದ ಪಾರಾಗಿ ಬೇರೆಯಾಗಿ ನಿಲ್ಲುವ ಲಘಿಮಾಕೌಶಲ (ಕಾವ್ಯಕು. ೧). [ಸಂ. ನಿಮಗ್ನತಾ]

**ನಿಮಚಿಕಣಿ** (ನಾ). ಒಂದು ಬಗೆಯ ಅಡಕೆ : ಚಿಕಣಿ ಅಡಿಕೆ–ಥಳ್ಳಗೆ ಮತ್ತ ಚಪಟೆಯಾಗಿರಬೇಕು . . . ಇದರಲ್ಲಿ ನಿಮಚಿಕಣಿ ಅಂತೆಂದು ಒಂದು ಜಾತಿಯುಂಟು. ಅದು ಚಪಟಾಗಿದ್ದು ದಪ್ಪಿರುವದು (ಮುಂಬವ್ಯಾ. ೪೮). [←ಮರಾ. ನಿಮುಚಿಕಣೀ]

**ನಿಮಜ್ಜಕ** (ನಾ). ೧. ಮುಳುಗುವವನು. ೨. ಮುಳುಗಿಸುವವನು. ೩. ಆಳವನ್ನು ಅಳೆಯುವುದಕ್ಕಾಗಿ ನೀರಿನಲ್ಲಿ ಮುಳುಗಿಸುವ ಗುಂಡು : "ಗಾಳವನ್ನು, ಗಾಧಮಾಪಕವನ್ನು ನೀರಿನಲ್ಲಿ ಮುಳುಗಿಸಲು ಉಪಯೋಗಿಸುವ ಭಾರ; ನಿಮಜ್ಜಕ; ಮುಳುಗುಗುಂಡು" (Sinker. ಇಂಕನಿ). [ಸಂ.]

**ನಿಮಜ್ಜನ** (ನಾ). ೧. ಮುಳುಗುವುದು : ಪಾಷಂಡಾಗಮಕರ್ದಮದೊಳ್ ನಿಮಜ್ಜನಮಾಗದಂತೆ ವಿಜ್ಞಾನಮುಮನೆಮ್ಮುಮಂ ನೀನುದ್ಧರಿಸಲ್ವೇಳ್ಕುಂ (ಯಾದಚಂ. ೧೩–೧೮ ವ); ಶಿಕ್ಷಣವಿಧಾನದ ಗುಣಸನ್ನಿಪಾತದಲ್ಲಿ ನಿಮಜ್ಜನವಾಗದೆ–ಇರುವ ಏಕೋಪಿದೋಷ–ಈ ನಸುಕಿನ ನಿದ್ರಾಭಂಗ (ಗಾಳಿಪ. ೧೬೧). ೨. ಮುಳುಗಿಸುವುದು. ೩. ಸ್ನಾನ ಮಾಡುವುದು. [ಸಂ.]

**ನಿಮಜ್ಜರ** (ನಾ). ದೋಣಿ; ನಾವೆ : "ಜೋಗಂ ಪರೀತಂ ನಿಮಜ್ಜ[ಪಾಠಾಂ. ನಿಮಂಜ]ರಂ ದುಗ್ಗಿಯೋಡಂ ದೋಣಿಯೆಂದೆನಲ್ ನಾವೆಯಕ್ಕುಂ" (ಮಂಗರಾ. ೧೨೦–೪). [?]

**ನಿಮುತು** 'ನಿನತ್ತು' ಪರಾ.

**ನಿಮುತ್ತು** 'ನಿನತ್ತು' ಪರಾ.

**ನಿಮಾಜು** 'ನಮಾಜು' ನೋ.

**ನಿಮಾನಿಮಿ** (ನಾ). ಶೇಕಡ ಐವತ್ತರಷ್ಟು; ಅರ್ಧಾರ್ಧ : ಪಟ್ಟೇದಾರನ ಸಿಕಮಿಕುಳಗಳ ಗೋಣಗಾಟಗಳಿಗೆ ಸ್ವಲ್ಪವಾದರೂ ಅವಕಾಶವಿಲ್ಲದಂತೆ ನಿಮಾನಿಮಿ ಕಂದಾಯವನ್ನು ಪಟ್ಟೇದಾರನಿಗೆ ಇತರ ಕುಳಗಳು ಕೊಡುವುದೆಂದು ಗೊತ್ತುಮಾಡಿಕೊಡುವುದಕ್ಕೆ ಅನುಕೂಲವಾಗಿರುವುದು (ಭೂಮಿಆ. ೩೭). [←ಪಾರ. ನಿಮಾ; ಹಿಂ. ಮರಾ. ನಿಮಾ, ನಿಮ್ಮೆ]

**ನಿಮಿ** (ನಾ). ೧. ಕಣ್ಣಿನ ರೆಪ್ಪೆ ಆಡುವುದು; ರೆಪ್ಪೆ ಹೊಡೆಯುವಿಕೆ; ಎವೆಯಿಕ್ಕುವಿಕೆ. ೨. ಇಕ್ಷ್ವಾಕು ಎಂಬ ಸೂರ್ಯವಂಶದ ಚಕ್ರವರ್ತಿಯ ಮಗ; ವಿದೇಹದೇಶದ ರಾಜ : ವರವಿದೇಹನೃಪಾಲನಾ ನಿಮಿಧರಣಿಪಂಗುದುಭವಿಸಿದುದ ವಿಸ್ತರಿಸಿದನು . . . ಮುನಿ ವಸಿಷ್ಠಂಗೆ (ತೊರರಾ. ೧–೧೬–೨೧); ಈಕೆ ನಿಮಿಕುಲದೆ ಪುಟ್ಟಿದ ರಾಜಯೋಗಿಯಪ್ಪ ಜನಕನಣುಗುಗುವರಿ (ರಾಮಾಶ್ವ. ೩೯–೨). [ಸಂ.]

**ನಿಮಿತ್ತ** (ನಾ). ೧. ಕಾರಣ; ಹೇತು : ಪಲಂಬರ್ . . . ದೀಕ್ಷೋಪವಾಸತ್ರಿರಾತ್ರಂಗೆಯ್ದು ಶರೀರಸಂಧಾರಣನಿಮಿತ್ತಂ ಚರಿಗೆವೊಕ್ಕೊಡೆ (ವಡ್ಡಾರಾ. ೬೮–೨೫); ಪ್ರಭಾತಸಮಯದೊಳ್ ಪುರಬಹಿರುಪವನೋದ್ದೇಶೋಚಿತಾಂಭೋರುಹವನಕ್ಕೆ ವಂದು ಸಂಧ್ಯಾವಂದನಕ್ರಿಯಾನಿಮಿತ್ತಸ್ನಾನಾನಂತರಂ (ಸುಕುಮಾ. ೩–೩ ವ); ಆಗಳ್ ಪುರೋಹಿತಂ ವಿವಿಧಾಗಮವಿದನಿದುವೆ ಭಾವಿಪುತ್ರಾವಾಪ್ತಿಶ್ರೀಗೆ ನಿಮಿತ್ತಂ ಪಿಡಿನೀಂ ರಾಗದೊಳೆಂದೆನ್ನ ಕೆಯ್ಗೆ ಪರಸುತ್ತಿತ್ತಂ (ಪುಷ್ಪಪು. ೩–೧೦೪); ಮನೋವೃತ್ತಿನಿಮಿತ್ತಮಾಗಿ ಶಬ್ದಂ ಜನಿಯಿಸುಗುಂ (ಶಮದ. ೩೪); ನಾವು ಮೊದಲು ಕೊಟ್ಟ ನಿದರ್ಶನದಲ್ಲಿ ನಮ್ಮ ಚಿತ್ತವನ್ನು ಕಲಕಿದ "ನಿಮಿತ್ತ" ಯಾರೋ ನಡೆಸಿದ ಅಪಚಾರ (ಭಾವಗೀ. ೩೫). ೨. ಉದ್ದೇಶ; ಅಪೇಕ್ಷೆ : ಜಟಾಯುದೇವಂ ನೀನೀ ಪೆಣನಂ ಪೊತ್ತುತೊಳಲ್ವುದೇನಿಮಿತ್ತಮೆಂದು ತೋಜು ನುಡಿವುದುಂ (ಪಂರಾಮಾ. ೧೬–೫೫ ವ); ಪೂಜೆಕ್ಕೆ ಮಾಂಸಾದಿ ನಾನಾಬಲಿಯಿಂ ದೇವರ್ ನರರ್ ತ್ವಚ್ಚರಣಕಮಲಮಂ ಶ್ರೀಜಯಶ್ರೀನಿಮಿತ್ತಂ (ಜಗವಿ. ೨–೫೮); ಇಂದು ಶರ್ಮನಿಗೆ ಕ್ಷಪಣಕವೇಷಮಂ ಹಾಕಿಸುವುದಕ್ಕೆ ನಿಮಿತ್ತವೇನು (ಕಗದ್ಯ. II, ೮); ಬಡತನದಲ್ಲಿ ರೈತನು ಅಡಚಣಿಗಳಿಗಾಗಲಿ ಅಥವಾ ಬೇರೊಂದು ನಿಮಿತ್ತಕ್ಕಾಗಲೀ . . . ಸಾಲ ತೆಗೆದು ತನ್ನ ಅಡಚಣಿಯನ್ನು ಸಾಗಿಸುವನು (ಕನ್ನಜಾ. ೧೦೮). ೩. ಗುರಿ; ಲಕ್ಷ್ಯ : "ವೇಧ್ಯಂ, ಲಕ್ಷ್ಯಂ, ಶರವ್ಯಂ, ನಿಮಿತ್ತಂ—ಈ ೪ ಗುಱಿ" (ಹಲಾಯು. ೭೭–೩೧೪); "ಲಕ್ಷ್ಯಂ ಶರವ್ಯಂ ನಿಮಿತ್ತಮೆನೆ ಗುಱಿಯಕ್ಕು" (ಮಂಗರಾ. ೮೭–೩೫). ೪. ನೆಪ; ನೆವ : ಏನೋ ಒಂದು ಸುಳ್ಳುನಿಮಿತ್ತ ತೆಗೆದು ಹೇಳಿದನು (ಮುಂಬಯಿ. ೪–೧೯೩); ನಿಮಿತ್ತಕ್ಕೆ ಪೀತಾಂಬರವೊಂದು ನನ್ನ ಹತ್ತಿರ ಉಳಿಯಿತು (ಸ್ಮೃತಿಚಿ. ೩೨);

ಆಕೆಯ ಮೇಲಿದ್ದ ಮಮತೆಯನ್ನು ಅರಿತೇ ನನ್ನನ್ನು ಗುಣಪಡಿಸುವ 'ನಿಮಿತ್ತ'ವನ್ನಾಗಿ ಬಳಸಿಕೊಂಡಿತು (ಮನೋಸಂ. ೧೫೪). 'ನಿಮಿತ್ತ ಮಾತ್ರ' ಪರಾ. **೫.** ಮುಂದೆ ಬರುವ ಶುಭಾಶುಭಗಳನ್ನು ಸೂಚಿಸುವ ಶಕುನ: "ಶಕುನಂ ನಿಮಿತ್ತಮೆಂಬರ್" (ವಸ್ತುಕೋ. ೧೨೬-೪೪); ಪತ್ತಿ ಜೋತಿಷ ಶಕುನ ನಿಮಿತ್ತಂಗಳಂ ಬಲ್ಲಹಗೆ ಪ್ರತ್ಯ ಗೆಯ್ದುಂ . . . ಪಡೆಪವರ್ ಗೋಲೆಯ ಭಟ್ಟಪರ್ (ಸೌಇಇ. XI-i, ೮-೨೨; 862); ಪೆಜವು ನಿಮಿತ್ತಂಗಳಂ ನೋಡಿ ಪೇಟ್ (ಚಾವುಂಪು. ೩೯೦); ತಪೋಧನರೇನಾನುಂ ನಿಮಿತ್ತಂಗಳನಜಿವರಕ್ಕುಂ (ಸುಕುಮಾ. ೩-೮ ವ); ಪ್ರವೇಶವನ್ನು ಅಭಿನಯಿಸಿ ನಿಮಿತ್ತವನ್ನು ಸೂಚಿಸಿ (ಶಾಕುಂತ. ೭-೧೫); ಅವರ ಉದ್ಯೋಗಗಳಲ್ಲಿ ಮುಖ್ಯವಾದುವೆಂದರೆ ದೇವರ ಪೂಜೆ, ನಿಮಿತ್ತ ನೋಡುವುದು, ಭವಿಷ್ಯತ್ತು ಹೇಳುವುದು (ಕಾನೂರು. ೬೭). **೬.** ಗುರುತು; ಚಿಹ್ನೆ: "ನಿಮಿತ್ತ ಶಬ್ದವು ಕಾರಣಕ್ಕೂ ಗುರ್ತಿಗೂ ಹೆಸರು" (ಗುರುಬಾ. ೩೩೫). **೭.** = ನಿಮಿತ್ತಕಾರಣ. **೮.** [ಜೈನ] ಅಂತರಿಕ್ಷ, ಭೌಮ, ಅಂಗ, ಸ್ವರ, ವ್ಯಂಜನ, ಲಕ್ಷಣ, ಛಿನ್ನ, ಮತ್ತು ಸ್ವಪ್ನ ಎಂಬ ಎಂಟು ನಿಮಿತ್ತಗಳು; ⊪ ೧. ಸೂರ್ಯ ಚಂದ್ರಾದಿ ಗ್ರಹಗಳ ಉದಯಾಸ್ತಗಳನ್ನು ಅನುಲಕ್ಷಿಸಿ ಸುಖ ದುಃಖಗಳನ್ನು ತಿಳಿಯುವುದು ನಭ ಅಥವಾ ಅಂತರಿಕ್ಷ ನಿಮಿತ್ತ (ಜ್ಞಾನ). ೨. ಭೂಮಿಯ ಘನ, ಸುಷಿರ, ಸ್ನಿಗ್ಧತೆ, ರೂಕ್ಷತೆ ಮೊದಲಾದುವುಗಳಿಂದ ತಾಮ್ರ, ಕಬ್ಬಿಣ, ಬೆಳ್ಳಿ, ಬಂಗಾರಗಳ ಹಾನಿ ಅಥವಾ ವೃದ್ಧಿಯನ್ನು ತಿಳಿಯುವುದು ಭೌಮನಿಮಿತ್ತ(ಜ್ಞಾನ). ೩. ಮನುಷ್ಯ ಹಾಗೂ ತಿರ್ಯಗ್ಜೀವಿಗಳ ಅಂಗೋಪಾಂಗಗಳನ್ನು ದರ್ಶನ ಹಾಗೂ ಸ್ಪರ್ಶನದ ಮೂಲಕ ವಾತ, ಪಿತ್ತ, ಕಫರೂಪ ಪ್ರಕೃತಿಗಳನ್ನೂ ರುಧಿರಾದಿ ಸಪ್ತಧಾತುಗಳನ್ನು ನೋಡಿ ತ್ರಿಕಾಲದಲ್ಲಿ ಉಂಟಾಗುವ ಸುಖ, ದುಃಖ, ಮರಣಾದಿಗಳನ್ನು ತಿಳಿಯುವುದು ಅಂಗನಿಮಿತ್ತ(ಜ್ಞಾನ). ೪. ಮನುಷ್ಯರ ಹಾಗೂ ತಿರ್ಯಗ್ಜೀವಿಗಳ ವಿಚಿತ್ರ ಶಬ್ದಗಳನ್ನು ಕೇಳಿ ಮುಂದಾಗಲಿರುವ ಸುಖ ದುಃಖಗಳನ್ನು ತಿಳಿಯುವುದು ಸ್ವರನಿಮಿತ್ತ(ಜ್ಞಾನ). ೫. ತಲೆ, ಹೆಗಲು ಮೊದಲಾದುವುಗಳ ಮೇಲೆ ಇರುವ ಕಾರೆಳ್ಳು, ಮಚ್ಚೆ, ಸಂಗಾತಿ ಮೊದಲಾದುವನ್ನು ನೋಡಿ ಭವಿಷ್ಯವನ್ನು ತಿಳಿಯುವುದು ವ್ಯಂಜನನಿಮಿತ್ತ(ಜ್ಞಾನ). ೬. ಅಂಗೈ, ಅಂಗಾಲುಗಳಲ್ಲಿ ಇರುವ ರೇಖೆಗಳನ್ನು ನೋಡಿ ತ್ರಿಕಾಲದ ಸುಖದುಃಖಾದಿಗಳನ್ನು ತಿಳಿಯುವುದು ಲಕ್ಷಣನಿಮಿತ್ತ (ಜ್ಞಾನ). ೭. ಪ್ರಾಸಾದ, ನಗರ ಹಾಗೂ ದೇಶಾದಿಕಚಿಹ್ನೆಗಳನ್ನು ನೋಡಿ ತ್ರಿಕಾಲಭಾವಿ ಶುಭಾಶುಭಫಲಗಳನ್ನು ತಿಳಿಯುವುದು ಚಿಹ್ನ ಅಥವಾ ಛಿನ್ನನಿಮಿತ್ತ (ಜ್ಞಾನ). ೮. ವಾತ ಪಿತ್ತಾದಿ ದೋಷರಹಿತನಾದ ವ್ಯಕ್ತಿ ರಾತ್ರಿ ಮಲಗಿದಾಗ ಕಾಣುವ ಸ್ವಪ್ನಗಳನ್ನು ಗಮನಿಸಿ, ತನ್ಮೂಲಕ ಭವಿಷ್ಯದಲ್ಲಾಗುವ ಅವನ ಸುಖ ದುಃಖಗಳನ್ನು ತಿಳಿಯುವುದು ಸ್ವಪ್ನನಿಮಿತ್ತ (ಜ್ಞಾನ): ಇವಷ್ಟಾಂಗಮಹಾನಿಮಿತ್ತವಿವಂ ಕಲ್ತು (ಚಾವುಂಪು. ೧೮೬); ಅಂತರಿಕ್ಷಭೌಮಾಂಗಸ್ವರಸ್ವಪ್ನಲಕ್ಷಣವ್ಯಂಜನಚ್ಛಿನ್ನಾಭಿಧಾನಾಷ್ಟಾಂಗಮಹಾನಿಮಿತ್ತಂಗಳುಮಂ ಪೇಟ್ದುಂ (ತತ್ತ್ವಪ್ರ. ೬೩). 'ನಿಮಿತ್ತಾಂಗ' ಪರಾ. [ಸಂ.]

**ನಿಮಿತ್ತಕ** (ನಾ). ೧. ಹೇತು; ಕಾರಣ. ೨. [ಕಾಮಶಾ] ನಿಮಿತ್ತಕ, ಸಂಘಟಕ, ಸ್ಫುರಿತಕ, ಭ್ರಾಂತಕ, ತಿರ್ಯಗಾಯಿತಕ, ಅತಿದೃಷ್ಟಕ, ಉತ್ತರಸಂಘಟ್ಟಿತಕ, ಜಿಹ್ವಾಮೇಳನಕ, ಜಿಹ್ವಕ, ಅತಿಜಿಹ್ವಾಯೋಗ, ಸೀತ್ಕಾರ ಮತ್ತು ದಂಶನಕ ಎಂಬ ಹನ್ನೆರಡು ಬಗೆಯ ಚುಂಬನಗಳಲ್ಲಿ ಒಂದು; ಮುಖವನ್ನು ಎದುರೆದುರಿಗಿಟ್ಟು ತುಟಿಯನ್ನು ಚುಂಬಿಸುವುದು; ⊪ ಮಿಕ್ಕ ಕಾಮಶಾಸ್ತ್ರಗಂಥಗಳಲ್ಲಿ ಈ ಹೆಸರುಗಳು ಬೇರೆಬೇರೆಯಾಗಿವೆ. 'ಮನ್ಮಥವಿಜಯ'ದಲ್ಲಿ ನಿಮಿತ್ತಕ, ಸ್ಫುರಿತ, ಅಧರ, ಉತ್ತರ, ವಿಘಟಿತ, ಘಟ್ಟಿತ, ಸಂಘಟಿತ, ಜಿಹ್ವಕ, ಪೀಡಿತಕ, ಭ್ರಾಂತಾ, ತಿರ್ಯಕ್ಕು ಮತ್ತು ಅನುವದನವೆಂದೂ, 'ಜನವಶ್ಯ'ದಲ್ಲಿ ನಿಮಿತ್ತಕ, ಸಂಘಟಿತಕ, ಸ್ಫುರಿತಕ, ಭ್ರಾಂತಕ, ತಿರ್ಯಕ್ಕು, ಅತಿಕೃಷ್ಟ, ಉತ್ತರ, ಸಂಘಟಕ, ಜಿಹ್ವಾಮೇಳನ, ಜಿಹ್ವಕ, ಅಧಿಕ ಮತ್ತು ಜಿಹ್ವಾಪಾನವೆಂದೂ ಇದೆ: ಮುದದಭಿಮುಖವಾಗಿಸಿ ಸುಚ್ಪೊದವಿರೆ ಸಾರ್ದೋಪರೊರ್ವರೊರ್ವರ ದಂತಚ್ಛದಪೀಯೂಷಮನಿರದೀಂಟಿದೊಡದು ಪೆಸರಿಂ ನಿಮಿತ್ತಕಾಖ್ಯಮನಾಳ್ಗುಂ (ಮನ್ಮವಿ. ೧೨-೨); ಇಂಬಾದಳನೊತ್ತಂಬದಿ ಪಿಡಿದುಜೆ ಚುಂಬಿಸಲದುವೆ ನಿ[ಪಾಠಾಂ. ನೈ]ಮಿತ್ತಕವು (ಜನವ. ೭-೧೬); ನಿಮಿತ್ತಕ ಸಂಘಟಿತಕ ಸ್ಫುರಿತಕ ಭ್ರಾಂತಿಕ ತಿರ್ಯಗಾಯಿತಕ ಅತಿದೃಷ್ಟಕ ಉತ್ತರಸಂಘಟಿತಕ ಜಿಹ್ವಾಮೇಳನಕ ಜಿಹ್ವಕ ಅತಿಜಿಹ್ವಾಯೋಗ ಸೀತ್ಕಾರ ದಂಶನಕವೆಂಬ ದ್ವಾದಶವಿಧ ಚುಂಬನಸಂಭ್ರಮಗಳಂ (ವಿವೇಕ. ೨೨೯). [ಸಂ.]

**ನಿಮಿತ್ತಕಾರಣ** (ನಾ). [ತತ್ತ್ವಶಾ] ನ್ಯಾಯಶಾಸ್ತ್ರದಲ್ಲಿ ಹೇಳಿರುವ ಸಮವಾಯಿಕಾರಣ, ಅಸಮವಾಯಿಕಾರಣ, ನಿಮಿತ್ತಕಾರಣ ಎಂಬ ಮೂರು ಕಾರಣಗಳಲ್ಲಿ ಮೂರನೆಯದು; ತಾನೇ ಕಾರ್ಯರೂಪವನ್ನು ಹೊಂದದೆ ಕಾರ್ಯಕ್ಕೆ ಸಹಾಯಕವಾದ ಕಾರಣ; ವೇದಾಂತಿಗಳು ಹೇಳಿರುವ ಉಪಾದಾನಕಾರಣದಿಂದ ಭಿನ್ನವಾದ ಕಾರಣ; ⊪ ತಾರ್ಕಿಕರು ಕಾರಣದಲ್ಲಿ ಸಮವಾಯ ಕಾರಣ, ಅಸಮವಾಯಕಾರಣ ಮತ್ತು ನಿಮಿತ್ತ ಕಾರಣ ಎಂದು ಮೂರುವಿಧಗಳನ್ನು ಹೇಳುತ್ತಾರೆ. ೧. ಸಮವಾಯಕಾರಣವೆಂದರೆ ಕಾರ್ಯದಲ್ಲಿಯೇ ಸೇರಿಕೊಂಡು ಕಾರ್ಯವನ್ನು ಉಂಟುಮಾಡುವ ಕಾರಣ. ಉದಾ: ವಸ್ತ್ರಕ್ಕೆ ದಾರ ಕಾರಣವಾಗಿರುವಂತೆ. ೨. ಕಾರ್ಯ ಕಾರಣಗಳೆರಡರಲ್ಲಿ ಸೇರಿಕೊಂಡು ಕಾರ್ಯವನ್ನುಂಟುಮಾಡುವುದು ಅಸಮವಾಯಕಾರಣ. ಉದಾ: ಬಟ್ಟೆಯ ನೇಯ್ಗೆ. ೩. ಇವೆರಡನ್ನು ಬಿಟ್ಟು ಉಳಿದ ಕಾರಣಗಳು ನಿಮಿತ್ತಕಾರಣ. ಉದಾ: ಬಟ್ಟೆಗೆ ಮಗ್ಗ ಕಾರಣವಾಗಿರುವಂತೆ: ಸಾಗರನ ಮಗಳಜಾಯದಂತೆ ಸರಾಗದಲಿ ಸಂಚರಿಸುತಿಹ ಉದ್ಯೋಗವೇನು ನಿಮಿತ್ತ [ಪಾಠಾಂ.ತ] ಕಾರಣವಿಲ್ಲ ಲೋಕದಲಿ (ಹರಿಸಾ. ೨೬); ಈ ಉಪಾದಾನಕಾರಣದಿಂ ಕಾರ್ಯಮನುಂಟುಮಾಡುವ ತೆಜನಜಿತು ಉಂಟುಮಾಡುವ ಕರ್ತೃ ನಿಮಿತ್ತಕಾರಣಂ (ಚಿಕಬಿ. ೨೧); ಕಣಾದರ ಮತದವರಾದರೋ ಜಗತ್ತಿಗೆ ಈಶ್ವರನು ನಿಮಿತ್ತಕಾರಣವೆಂದೂ ಪರಮಾಣುಗಳು ಸಮವಾಯಿಕಾರಣವೆಂದೂ ಇದೇ ವಾಕ್ಯಗಳಿಂದ ಊಹಿಸಿ ಗೊತ್ತುಮಾಡುತ್ತಾರೆ (ಬ್ರಹ್ಮಭಾ. ೭೭); ವೇದಾಂತಸಿದ್ಧಾಂತದಲ್ಲಿ ಬ್ರಹ್ಮನೆಂಬ ಪರಮೇಶ್ವರನೇ ಉಪಾದಾನ ಕಾರಣವು, ನಿಮಿತ್ತಕಾರಣವು ಸಹ ಎಂದು ಅಭಿಪ್ರಾಯವಿರಬಹುದು (ಹಿಂದಸಾ.೯೩). 'ಉಪಾದಾನಕಾರಣ' ಪರಾ. [ನಿಮಿತ್ತ + ಕಾರಣ,]

**ನಿಮಿತ್ತಘುಟಿಕ** (ನಾ). ಯಾವುದಾದರೂ ಒಂದು ಕಾರಣವನ್ನು ಅವಲಂಬಿಸಿ ಕಲ್ಪಿತವಾದ ಘುಟಿಕ; ಕಾರ್ಯಕಾರಿ ಸಮಿತಿ: ರಚನೆಯಲ್ಲಿ ಸೆಲ್ ಅಥವಾ "ನಿಮಿತ್ತಘುಟಿಕ" ಇಬ್ಬಗೆಯ ಸ್ವರೂಪದ್ದಾಗಿರಬಹುದು (ರಾಜಪ. ೧೭). [ನಿಮಿತ್ತ + ಘುಟಿಕ]

**ನಿಮಿತ್ತಜ್ಞ** (ನಾ). ೧. ಶಕುನ, ಸಾಮುದ್ರಿಕ, ಗ್ರಹಗತಿಗಳನ್ನು ತಿಳಿದು ಅವುಗಳಿಂದುಂಟಾಗುವ ಫಲವನ್ನು ಹೇಳುವವನು; ಜ್ಯೋತಿಷ್ಯ, ಶಕುನ, ಸಾಮುದ್ರಿಕಶಾಸ್ತ್ರಗಳನ್ನು ಬಲ್ಲವನು. ೨. [ಜೈನ]ಅಷ್ಟಾಂಗನಿಮಿತ್ತಗಳನ್ನು ಬಲ್ಲವನು : ಅವನೀಶನೆಬ್ಬಿ ಬೆಸಗೊಂಡಾಗಳ್ ನಿಮಿತ್ತಜ್ಞನಂಬರಭೂಗೋಚರರೊಳ್ ಪರೀಕ್ಷಿಸಿ ನಿಮಿತ್ತಾಂಗಂಗಳೊಳ್ ನೋಡಿ ಕಂಡಿರದಿಂತೆಂದನಧೀಶನಂ ಬಗೆವು (ಶಾಂತಿಪು. ೫-೨೧). [ಸಂ.]

**ನಿಮಿತ್ತಮಾತ್ರ** (ನಾ).೧. ಹೆಸರಿಗೆ ಮಾತ್ರ ಕಾರಣವೆನಿಸಿಕೊಂಡಿರುವುದು ; ತೋರಿಕೆಯ ಕಾರಣ : ಆದರಾತನ ಗೆಲವಿಗಾ ಬಟ್ಟೆಗಲ್ಲೊಂದು ಬರಿ ನಿಮಿತ್ತಮಾತ್ರಂ (ಚಂದ್ರಸ. ೫೦-೧೮) ; ವಿಧಿ ಲಿಖಿತಕ್ಕೆ ಅನುಸಾರವಾಗಿ ನಾವು ನಡೆಯಬೇಕಾಗುವುದರಿಂದ . . . ತಪ್ಪುತಡೆಗಳಿಗೆ ಎಡೆಯುಂಟಾಗಿ, ಅವು ಮತ್ತು ಸಂಬಂಧಿಸಿದ ವ್ಯಕ್ತಿಯೂ ನಿಮಿತ್ತಮಾತ್ರವಾಗಿ ಉಳಿಯಬೇಕಾಗುತ್ತದೆ (ಹೇಮಂತ. ೧೪೧) ; ಶ್ರೀಕೃಷ್ಣನೇ ಎಲ್ಲ ಕೌರವರನ್ನೂ ಸಂಹರಿಸಿದ. ಅರ್ಜುನ, ಪಾಂಡವರು ನಿಮಿತ್ತಮಾತ್ರ (ಧರ್ಮಸಾ. ೧೦೭). ೨. ಹೆಸರಿಗೆ ಮಾತ್ರ ಕಾರಣನೆನಿಸಿಕೊಂಡವನು ; ತೋರಿಕೆಗೆ ಮಾತ್ರ ಕಾರಣನಾದವನು : ಕೇಳು ಧರ್ಮಜ ಕೃಷ್ಣರಾಯನು ಹೇಳಿ ಮಾಡಿಸುವೊಡೆಯ ನೀನವ ನೋಳಗದಲಿ ನಿಮಿತ್ತಮಾತ್ರ ಸ್ವತಂತ್ರ ನೀನಲ್ಲ (ತಿಪ್ಪುಶಾಂ ೧-೧೫). [ಸಂ.]

**ನಿಮಿತ್ತವಾದ** (ನಾ). [ತತ್ತ್ವಶಾ]ತನ್ನ ಸುಖಕ್ಕಾಗಿ ಯಜ್ಞಯಾಗಗಳನ್ನು ಮಾಡದೆ, ಸುಖದ ಅಪೇಕ್ಷೆ ಬಂದರೆ ಅದನ್ನು ಧ್ವಂಸ ಮಾಡುವುದಕ್ಕಾಗಿ ಯಾಗವನ್ನು ಮಾಡಬೇಕೆಂಬ ವಾದ; ಸ್ವಾರ್ಥಕ್ಕಾಗಿ ಮಾಡದೆ ಪರಾರ್ಥವಾಗಿ ಮಾಡಬೇಕೆಂಬ ವಾದ : ಯಾಗವನ್ನು ಸ್ವಾರ್ಥಕ್ಕಾಗಿ ಮಾಡುವುದು ಫಲಸಂಯೋಗವಾದವು. ಪರಾರ್ಥಕ್ಕಾಗಿ ಮಾಡುವುದೇ ನಿಮಿತ್ತವಾದವು (ಹಿಂದಸಾ. ೨೫೯). [ನಿಮಿತ್ತ + ವಾದ$_2$]

**ನಿಮಿತ್ತವಿದ** (ನಾ). = ನಿಮಿತ್ತಜ್ಞ ೨ : ತ್ರಿಜಗದ ತಿರಿಕಂ ವಿದ್ಯಾಭಿಜಾತಗಂಧಂ ನಿಮಿತ್ತವಿದನಾ ಸಭೆಯೊಳ್ ದ್ವಿಜನಬುದಿಂತೆಂದನಮೋಘ ಜಿಷ್ಣನೆಂಬೊಂ ಸಮಸ್ತವಸುಧಾಧಿಪನಂ (ಶಾಂತಿಪು. ೬-೨೪). [ಸಂ. ನಿಮಿತ್ತವಿದ್]

**ನಿಮಿತ್ತಸ್ಥಲ** (ನಾ). ವೈದಿಕವಾದ ಶ್ರಾದ್ಧಕರ್ಮದಲ್ಲಿ ನಿಯಮಿತವಾದ ಒಂದು ಅಧಿಕಾರಸ್ಥಾನ; ಉತ್ತರಕ್ರಿಯೆಯ ಸಪಿಂಡೀಕರಣಶ್ರಾದ್ಧದಲ್ಲಿ ಪ್ರೇತಸ್ಥಾನ; ಪಿತೃತ್ವಕ್ಕೆ ಏರಿಸಬೇಕಾದ ಮೃತನ ಸ್ಥಾನ; ℙ ಸತ್ತ ಹನ್ನೆರಡನೆಯ ದಿನ ಮಾಡುವ ಸಪಿಂಡೀಕರಣಶ್ರಾದ್ಧದಿಂದ ಮೃತನಿಗೆ ಪ್ರೇತತ್ವ ತೊಲಗಿ ಪಿತೃತ್ವ ಪ್ರಾಪ್ತಿಯಾಗುತ್ತದೆ. ಈ ಶ್ರಾದ್ಧದಿಂದ ಮೃತನಿಗೆ ಪರಲೋಕ ಪ್ರಾಪ್ತಿಯಾಗುತ್ತದೆ. ಈ ಸಂದರ್ಭದಲ್ಲಿ ಬ್ರಾಹ್ಮಣನೊಬ್ಬನನ್ನು ನಿಮಂತ್ರಿಸಿ ಭೋಜನಕ್ಕೆ ಪ್ರತ್ಯೇಕಸ್ಥಲದಲ್ಲಿ ಕೂರಿಸುತ್ತಾರೆ. ಇದು ನಿಮಿತ್ತ ಸ್ಥಲ. ಯಾರ ನಿಮಿತ್ತವಾಗಿ ಈ ಶ್ರಾದ್ಧ ನಡೆಯುವುದೋ ಅವನಿಗೆ ನಿಮಿತ್ತನೆಂದು ಹೆಸರು : ನಿಮಿತ್ತಸ್ಥಲಕ್ಕೆ ಕುಳಿತುಕೊಂಡವರಿಗೆ ಅವರ ಮನೆಯಲ್ಲಿ ನೂರೊಂದು ರೂಪಾಯಿ ದಕ್ಷಿಣೆ ಕೊಟ್ಟರು (ರೂಢಿ). [ನಿಮಿತ್ತ + ಸ್ಥಲ]

**ನಿಮಿತ್ತಾಂಗ** (ನಾ). ೧. ಭಾವೀಫಲಗಳನ್ನು ಸೂಚಿಸುವ ರೇಖೆಗಳುಳ್ಳ, ಕೈಕಾಲು ಮೊದಲಾದ ಮಾನವಶರೀರಭಾಗ : ಆತ ನಿಮಿತ್ತಾಂಗಗಳಲ್ಲಿಯ ರೇಖೆಯನ್ನು ನೋಡಿ, ಹುಟ್ಟಿದ ದಿನ, ನಕ್ಷತ್ರ ಮೊದಲಾದುವನ್ನು ಹೇಳುತ್ತಾನೆ (ರೂಢಿ). ೨. ಶಕುನದ ವಿಧ ; ಬೇರೆ ಬೇರೆ ಶಕುನ. ೩. = ನಿಮಿತ್ತ ೮ : ನಿಮಿತ್ತಜ್ಞನಂಬರಭೂಗೋಚರರೊಳ್ ಪರೀಕ್ಷಿಸಿ ನಿಮಿತ್ತಾಂಗಂಗಳೊಳ್ ನೋಡಿ (ಶಾಂತಿಪು. ೫-೨೧). [ನಿಮಿತ್ತ + ಅಂಗ$_2$]

**ನಿಮಿತ್ತಾಭ್ಯಾಸ** (ನಾ). [ಜೈನ] ನಿಮಿತ್ತಾಂಗದ ಅಭ್ಯಾಸ : ಅನುಮಾಕೆಯುಂ ಸುಖದೊಳಿರ್ದು ನಿಮಿತ್ತಾಭ್ಯಾಸಂಗೆಯ್ಯುತ್ತಿರೆ (ಚಾವುಂಪು. ೧೪೬). [ನಿಮಿತ್ತ + ಅಭ್ಯಾಸ]

**ನಿಮಿತ್ತೋದ್ಭೂತ** (ನಾ). ಯಾವುದಾದರೂ ಒಂದು ಕಾರಣಕ್ಕಾಗಿ ಹುಟ್ಟಿದವನು ; ಜಗತ್ತಿನ ಉದ್ಧಾರಕ್ಕಾಗಿ ಅವತಾರವನ್ನು ತಾಳಿದವನು ; ದೇವರು ; ಪರಮಾತ್ಮ : ಚಿದ್ರೂಪನಪ್ಪ ತಾನೇ ನಿಮಿತ್ತೋದ್ಭೂತ ಸದ್ರೂಮಾಕರನಪ್ಪ ಕರ್ತುವಾದಂದದಿಂ (ವೀಶೈಪು. ೫-೧೪-೩೦). [ನಿಮಿತ್ತ + ಉದ್ಭೂತ]

**ನಿಮಿತ್ಯ** (ನಾ). ೧. ಕಾರಣ: ಶೂ(ಸೂ)ರ್ಯ್ಯಗ್ರಹಣ ನಿಮಿತ್ಯ(ತ್ತ)ದಿಂ (ಇಅ. XIX, ೨೭೩-೩೪ ; 1054) ; ಇದು ನಿಮಿತ್ಯಂ[ಪಾಠಾಂ.ತ್ತಂ] ಹೇಳಲಂಜುವೆನು (ಬಸಪು. ೩೭-೧೫) ; ಗೋಬ್ರಾಹ್ಮಣರ ನಿಮಿತ್ಯವಾಗಿ ತನ್ನಾತ್ಮಾರ್ಥವಾಗಿ ಸರ್ವಧನವನಪಹರಿಸಿಕೊಂಡು ಹೋಗುವ ಸಮಯದಲ್ಲಿ (ಶೀಷಧ. ೬-೫) ; ಚಿತ್ತದೊಳ್ ಕುದಿಯದಿರು ಸತ್ಯಕಂ ನ್ಯಾಯದೊಳ್ ನಿತ್ತುರಗಲೇಕೀ ನಿಮಿತ್ಯದೋಳ್ ಮಗನೆ (ತುರಂಗ. ೮೦-೩). ೨. ಶಕುನ ; ಭವಿಷ್ಯ : ಪುರಾಣದಲ್ಲಿ ಹೋರುವರೆ ರೂಪಿನವನಲ್ಲ ಅರ್ಚಿಸಿ ಕಾಬುದಕ್ಕೆ ಹಕ್ಕಿ ಹಂಗನ ನಿಮಿತ್ಯವೆ ಈ ಸಚ್ಚಿದಾನಂದನ ಸಂಗ ಬಚ್ಚಬಯಲು (ಮೋಳಿಮಾ. ೬-೨೧) ; ಎಲ್ಲಾದರೂ ಹೋಗಿ ನಿಮಿತ್ಯ (ಪ್ರಶ್ನೆ) ಕೇಳಿ ಬರುವೆನೆಂದು ಧಾವಿಸಿದಳು (ಚೋಮದು. ೬೨) ; ಹಣೆ ತುಂಬ ಕುಂಕುಮ ಬಳಿದು, ಕೈಯಲ್ಲಿ ಅಡಿಕೆಯ ಹಿಂಗಾರ ಹಿಡಿದು ಅವಳು ನಿಮಿತ್ಯ ಹೇಳುತ್ತಿದ್ದಳು (ಪ್ರಶ್ನೆ. ೯೯) ; ಬೇಗೆ ಹತ್ತಿದ್ದಲ್ಲಿ ಹೊಗೆಗೆ ನಿಮಿತ್ಯ ಕೇಳಬೇಕೆ ? (ಗಾದೆ). ೩. ದೋಷಾರೋಪಣೆ ; ಅಪವಾದ : ಜನರಿಂದ ಬರುವ ನಿಮಿತ್ಯಕ್ಕೆ ಹೆದರಿ ಆಕೆ ಸುಮ್ಮನಾದಳು (ರೂಢಿ). [<ಸಂ. ನಿಮಿತ್ತ]

**ನಿಮಿತ್ಯಕ** (ನಾ). ಉದ್ದೇಶ : ನಗರೇಶ್ವರದೇವರ ಭೋಗಕ್ಕಂ ಖಣ್ಡಸ್ಫುಟಿತಕ್ಕಮಲ್ಲಿಪ್ಪ ತಪೋಧನರ ಪಥ್ಯಾಹಾರಮೋಷಧನಿಮಿತ್ಯಕವಾಗಿ . . . ಧಾರಾಪೂರ್ವ್ವಕಂ ಮಾಡಿ ಬಿಟ್ಟ ನೆಲಂ (ಸೌಇಇ. XX, ೨೧-೫೬ ; 1019). [<ಸಂ. ನಿಮಿತ್ತಕ]

**ನಿಮಿರ್**$_1$, ನಿಗುರ್, ನಿಗುರು$_1$, ನಿಗುಳ್, ನಿಮಿರು$_1$, ನಿಮಿಟಿರ್, ನಿಮುರು, ನಿವುರು (ಕ್ರಿ). ನಿಮಿರ್ದ (ಭೂತಕೃ). ನಿಗುತು, ನಿಗುರ್ದು, ನಿಮಿರ್ದು (ಭೂತನ್ಯೂ). ೧. ಹರಡು ; ವ್ಯಾಪಿಸು ; ಪಸರಿಸು ; ವಿಸ್ತಾರವಾಗು : "ನಿಮಿರ್ —ಪ್ರಸಾರಣೇ" (ಶಮಧಾ) ; ನಿಮಿರ್ದ ಲತೆಯ ಮೇಲೆ ವಿಳಾಸಂ ನಿಲೆ ನೀಡಿ ಕಾಲನರೆಬರ್ ಮಲಂಗಿದರ್ (ಆಪಿಪು. ೧೧-೭೬) ; ಆ ದೇವರ ತೆಂಕ ದೆಸೆಯಿಂ ಮೂಡಲ್ ನಿಮಿರ್ದ್ದ ಕೇರಿಯೆರಡು (ಇಅ. V, ೧೬-೩೩ ; 1019) ; ನಮ್ಮ ನೋಡಿ ನೋಡಿ ಮನದಲ್ಲಿ ರತಿ ಹುಟ್ಟಿ ನಿಮಿರ್ದುವೆನ್ನ ಕಳೆಗಳು (ಬಸಪ. ೪೯೧) ; ಕೆನ್ನೆವರಂ ನಿಮಿರ್ದಕ್ಷಿಗಳ್ಗೆ ರಾಗಂ ಮಧುಸೇವೆಯಿಂ ನೆಗಟಿ ರಂಜಿಸಿದರ್ ಮಧುಮತ್ತಕಾಂತೆಯರ್ (ಜಗವಿ. ೧೬-೧೧೮), ಕಾಂತೆಯೊಳ್ ನಿಮಿರ್ದ ಕಾಮಧ್ವಾಂತಮಂ ತವಿಸಿ ಕಂತುಹರಭಕ್ತಿಯೊಳಹೊಚಿಗನಾವರಿಸೆ (ಪದ್ಮರಾ. ೫-೩೨) ; ಸೌಖ್ಯದೊಳಮುದ್ದು ನಿಮಿರ್ದು ಮಹೋಲ್ಲಸಜ್ಜಳ ಕ್ರೀಡೆಯೊಳೊಂದಿ ನೋಡಿ ಸೊಗಸಂಬಡೆದರ್ಲಲಿತಾಂಗಿಯರ್ ವಲಂ (ಹವಿಸ್ಮಾರ. ೪-೨೭). ೨. (ಹೊರ) ಚಾಚು ; ನೀಡು : ಬಡಿ ಕೊಲ್ . . . ಸುಡು ಪಿಡಿ ಬಡಿ ನಿಮಿರ್ದಿಟು ಬಯಲ್ ಕಡಂಗಿ ನುಂಗು (ಪಡ್ನಾರಾ. ೧೨೭-೧೧) ; ದೇವಕನ್ಯೆ ಮತ್ತೊರ್ವಳ್ ಕೋಮಲಲತೆಯ

ನಿಮಿರ್ದ ಕುಡಿಯೊಳ್ ಗಿಳಿ ಪಱಯ್ದತ್ತೆನಿಸಿ ಸತಿಗೆ ತಂಬುಲಮಿತ್ತಳ್ (ಆದಿಪು. ೭-೧೨); ಇನಿತು ದಿವಸಕ್ಕೆಂತಾನುಂ ಕಂಡೆನಪ್ಪವೆ ಕಂದ ಹಾಯೆನುತ ನಿಮಿರಲ್ ತೋಳ್ಗಳ್ . . . ಎಟ್ಟಿಂದಳ್ ಸೋತ್ಕಂಠೆ ಪುತ್ರವಿಮೋಹದಿಂ (ಕಾದಂಬ. ೬೭೧); ಮಹೋಜ್ಜ್ವಳಲತೆಯಂದಮಂ ನಿಮಿರ್ದ ತೋಳ್ . . . ಪೋಲ್ತುದಱಿಂದರವಿಂದವಕ್ತ್ರ ಕೋಮಳೆ ಕಡುಗಾಡಿಕಾರ್ತಿ ಮರವಾನಿಸೆಯೆಂಬುದನುಂಟುಮಾಡಿದ೦ (ಧರ್ಮಾಮೃ. ೩-೧೮೦); ನಿಮಿರ್ದ ಕೊರಲ್ ಮರಲ್ದು ಮಡಿದೂಱಿದ ಮುಂದಣ ಕಾಲ್ಗಳ್ . . . ಮಿಡುಕೋಡುವ ಕಂಠನಾಳಮುಂದಮರ್ದಿರೆ ನೀರನುಂಬೆರಲೆಯಂ ಬರಲೊಲ್ಲದೆ ನೋಡಿದಂ ನೃಪಂ (ಲೀಲಾವ. ೬-೫೭); ನಿಮಿರ್ದುವು ಹಿಡಿದನು ಕಮಲಪಂಕ್ತಿಗಳ (ಕುಮಾರ. ೧೦-೫೭); ಸುಖಕೆಂದಿಟ್ಟ ಸೊಡರ್ನಿಮಿರ್ದು ಮನೆಯಂ ಸುಟ್ಟಂದದಿಂ (ಶತಕ. ೧೦೮-೫೪). **೩. ನೆಟ್ಟಗೆ ನಿಲ್ಲು; ನೇರವಾಗಿ ನಿಲ್ಲು; ಎದ್ದು ನಿಲ್ಲು :** ಅಡಿವಿಡಿದಿಟ್ಟ ಪುತ್ತುಗಳ ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗಳ್ವಿಡಿದು ವಿಷೋರಗಪ್ರತತಿ ನೋಟಿಕ್ಕೊಡಗುರ್ವಿಸೆ (ಆದಿಪು. ೧೪-೧೪೦); ತುಳುಕೆ ಸಪತ್ನಿ ಕುಂಕುಮರಜಂಗಳಕೋಪನ ಮೇಲೆ ಚಲ್ಲಮಂ ತುಳುಕುವ ಕಣ್ಗಳೊಳ್ ನಿಮಿರ್ದು ನಿಳ್ಕೆ ವಿಲೋಕಿಸುವಾಕೆಯಕ್ಷಿಗಳ್ (ಕಾವ್ಯಸಾ. ೭೬೮); ಕೋಪಂ ಪೆರ್ಚಿದುದು; ಕಣ್ಗಳ್ ಕೆಂಪಾದುವು; ಮೆಯ್ಮಯಿರ್ ನಿಮಿರ್ದತ್ತು (ಅದ್ಭುತ. ೪೨-೨); **೪. ಬೆಳೆ; ವರ್ಧಿಸು :** ಮದಕರಿಗಳ ಮದಜಳದೊಳ್ನಿಮಿರ್ದಿರ್ದ ಮರದ ತುದಿಗೊಂಬುಗಳೊಳ್ (ಕಾದಂಪೂ. ೯೪); ಅಕ್ಕುಳಿಸಿದ ಬಸಿಱುಂ ಬೆಮರಿಕ್ಕಿದ ಮೆಯ್ಯುಂ ಸಮಂತು ನಿಮಿರ್ದಿರೆ ಸುಯ್ಯುಂ ಮಿಕ್ಕ ಧರಾಮರನಾ ಸಭೆವೊಕ್ಕು ಕರಂ ಸೇದೆವಟ್ಟು ಬಿಟ್ಟುರ್ಪಿನೆಗಂ (ನೇಮಿಪು. ೩-೧೨೮); ಕಮಳವದನೆಗೆ ರುಚಿಯರುಚಿಯಾಯ್ತು ಮಳಕಾಯದ ಮೂರ್ತಿ ಸುದತಿಯ ನಿಮಿರ್ದ ಜಠರದೊಳಿರೆ ತನೂಲತೆ ಬೆಳುಪು ಬಲಿದಪುದು (ಬಸವ. ೩-೧). **೫. (ಕೊಂಕಳಿದು) ಉದ್ದವಾಗು; (ಬಿಚ್ಚಿ) ದೀರ್ಘವಾಗು,— ನೀಳವಾಗು :** ಜಲಕೇಳೀಲೀಲೆಯೊಳ್ ಮುೞಿದು ನಿಮಿರ್ದ ಕುರುಳ್ಗಳುಂ ಕೆಂಪೇಱಿದ ಕಣ್ಗಳುಂ ಬೆಳ್ಪೇಱಿದ ಬಾಯ್ದೆಱೆಗಳುಂ ಪಳಂಚಿದ ಬಣ್ಣಂಗಳುಮೆಸೆಯೆ ಸೊಗಯಿಸುವ ನಿಜವಧೂಜನಂಬೆರಸು ಪೊಱಮಟ್ಟಾಗಳ್ (ಪಂಪಭಾ. ೫-೬೭ ಪ); ಪೊಸಜಾದಿ ಚೆಲ್ವನೀಯುತ್ತಿರೆ ದೇಸಿಯಿಂ ನಿಮಿರ್ದ ಸೋರ್ಮುಡಿಯೊಳ್ (ಧರ್ಮಾಮೃ. ೪-೧೩೭); ಪೊಡರ್ವುತ್ತುಂಗಸ್ತನಂ ಕೊಂಕೞಿದು ನಿಮಿರ್ದ ನೀಳಾಳಕಂ . . . ಲಂಪಿಸುವ ತನು ರತಿಶ್ರಾಂತಿಯಿಂದಂ ಬೆಡಂಗಂ ಕುಡೆ (ಜಗವಿ. ೧೬-೧೨೪); ಸುದತೀರಾಜಿತರೋಮರಾಜಿ ನಿಮಿರ್ದತ್ತುತ್ಕೋಮಳಶ್ಯಾಮಳಂ (ಪುಷ್ಪಪು. ೪-೫); ನುಣ್ಪೊಗರೊಪ್ಪೆ ಘನಸ್ತನಂಗಳವ್ವಳಿಸೆ ನಿಮಿರ್ದ ವೇಣಿ ಕದಪಂ ಪುಗೆ . . . ನಸುಬಾಗಿ ಬೀಸುಗಲ್ಗಳನಿಡುತಿರ್ಪ ಪಾಮರಿಯರೊಪ್ಪುವರಾ ಕಳಮಪ್ರದೇಶದೊಳ್ (ದಶಕು. ೧-೨೯); ಎತ್ತಿದ ಸತ್ತಿಗೆಯ ಡಾಳಿಸುವ ಚಾಮರದ ಮಿಳಿರ್ವ ಕೇತನದ ಪಂತಿಯೆತ್ತಂ ನಿಮಿರ್ದಿರೆ (ರಾಜಾಶ್ವ. ೫೦-೫). **೬. ಅತಿಶಯವಾಗು; ಅಧಿಕವಾಗು; ಹೆಚ್ಚಾಗು :** ಅದಱಿಂದಂ ತನ್ನೊಳ್ ಪುಟ್ಟಿದ ಸಂತಸದಿಂದಮಾದ ಸುಖಮದು ಸುಖಮಲ್ಲದುದಲ್ತು ವಸ್ತುವಿಂದಾದುದು ವಸ್ತುವೆ ಕುಂದೆ ಕುಂದುಗುಂ ನಿಮಿರ್ದಪುದೇ (ಆದಿಪು. ೬-೪೫); ಪೊದಟ್ಟಿ ಭೃಂಗಾಳಿಯ ನಿಸ್ವನಂ ನಿಮಿರ್ದ ಮಂಗಳಗೀತಮನಂತೆ ಚೂತಭೂಜಾಳಿಗಳೊಪ್ಪು . . . ನೆಱೆಯೆ ಪೋಲ್ತುದು ನೋಡ ವಿವಾಹಗೇಹಮಂ (ಧರ್ಮಾಮೃ. ೧೩-೨೧); ಸುಮನಶ್ಶಿಲೀಮುಖಾಕ್ರಾಂತಮಿಂದಲಗುರ್ವಿ ದೇವ ತನ್ನೊಳುತ್ಕಳಿಕೆ ಕರಂ ನಿಮಿರ್ದಿರೆ ನಿನಗೆಱಕಮನಾಂತು (ಪರ್ವಪು. ೪-೧೨); ಮೇಗಾಯ್ತು ಯಾದವಾನ್ವಯಮಿಗಳ್ ನಿಮ್ಮುದಯದಿಂದಮಖಿಳಾನ್ವಯಕಂ ಯಾಗಂ ದಾನಂ ಧರ್ಮಂ ಚಾಗಂ ನಿಮಿರ್ವಪುವು (ಅನಂಪು. ೧೩-೩೪); ಚದುರೆಸೆವಂತು ಭಾವಮುಮುರ್ವಂತು ನಯಂ ನಿಮಿರ್ವಂತು ಮಲ್ಲಪಂ ಪದವಿಡೆ ಭಾರತೀವನಿತೆ ಭೋಂಕನೆ ಬಂದು ಮನಸ್ಸರೋಜದೊಳ್ ಚದುರೆಸೆವಂತು ಭಾವಮುಮುರ್ವಂತು ನಯಂ ನಿಮಿರ್ವಂತು ಲೀಲೆಯಿಂ ಪದವಿಡುತಿರ್ಪಳಾ ಹವನಕಾರಣಮಂತ್ರಮಿದಾಗದಿರ್ಕುಮೇ (ಸೂಕ್ತಿಸು. ೧-೨೭); ಅವಿರಳಿತ ಶಿವಭಕ್ತಿಯೆಲ್ಲಾ ಭುವಿಗಳೊಳು ಪಸರಿಸಿ ನಿಮಿರ್ದಿರೆ (ಬಸವ. ೫೮-೧೩); ಪರಮೋತ್ಸಾಹಂ ನಿಮಿರೆ ಕೊಂಡಾಡಿ (ಮಹಾವಿ. ೪-೨೫). **೭. ಎತ್ತರವಾಗು; ಉನ್ನತವಾಗು :** ತಕ್ಕವರವೊಲು ವಂಶಾವಳಿಗಳಿಂದಾ ಸದನದಂದದಿ ನಿಮಿರ್ದ ಭದ್ರದಿ ವಿದಿತ ಪತ್ರಲತಾವಳಿಗಳಿಂ (ಸಾಳ್ವಭಾ. ೧೬-೪). **೮. ಜರುಗು; ನಡೆ; ಉಂಟಾಗು :** ಜಲಕೇಳಿ ನಿಮಿರ್ಗೆ ಭರತನ ಲಲಿತಾಂತಃಪುರದೊಳೆಂಬ ತನ್ನಟ್ಟೞ್ತೊಳಾ ಜಳದೇವಿ ಬೆಸಸೆ ಗಂಗಾಜಲಮಾಯ್ತು ನಿತಂಬಿನೀನಿತಂಬದ್ವಯಸಂ (ಆದಿಪು. ೧೧-೧೪೪); ನಿಮಿರ್ದ ರತಿಕೇಳೀವಿನೋದದಿನಮುರ್ದದಕ್ಕೆನ್ನಂತರಾಯತ್ವಮುವಹುದೊ ತನಗೆನುತ ತತ್ ಕಮಲಾಸ್ಯೆ ತನ್ನೊಳಗೆ (ಬಸವ. ೩೫-೨೫). **೯. ಹೊರಡು; ನಿರ್ಗಮಿಸು :** ನಿಖಿಳಾಚಲ ಕಂಜಕುಂಜದಿಂದಮೆ ನಿಮಿರ್ದಾಗಳಾಗಳೆ ಪೊದಟ್ಟಿದು ಪರ್ವಿ ತಮಂ ದಿಗಂತಮಂ (ಕುಸುಮಾ. ೧-೪೬); ಅಧೀಶನಿಂ ನಿಮಿರ್ದು ಕುಮಾರನತ್ತಲೆಳಸಿರ್ದಳ್ . . . ರಾಜ್ಯರಮಾವಧು (ಪುಷ್ಪಪು. ೪-೮೬); ನಿಮಿರ್ದ ಹೊಂಗೞಿಯಂಬು ಹೊಳೆಹೊಳೆದು ಮುರಹರನ ಪಾದಾರವಿಂದದ ಹೊರೆಯೊಳಡಗಿತು (ಕುಮಾರವ್ಯಾದ್ರೋ. ೧೯-೪೯). **೧೦. ಮುಂದುವರಿ; ಮುಂದಕ್ಕೆ ಚಲಿಸು; ಮುನ್ನುಗ್ಗು :** ಅಂತು ರಥಮುಂ ಮನೋರಥಮುಂ ನಿಮಿರೆ ವಿವಾಹಮಂಗಳವೇಷಸನಾಥೆಯಾಗಿ ಮಂಚಾಂತರ ರಾಜಮಾರ್ಗಮಂ ಪೊಕ್ಕು (ಶಾಂತಿಪು. ೫-೯೭ ಪ); ಪೊಸವಿಸಿಲ ಪೊಳಪಿನಿಂ ನುಣ್ಣನುಜ್ಜಳಿಪ ರನ್ನದೆಳವೆಳಗಿನ ಬಳಗದಿಂ ಬಣ್ಣಿಸಿ ಸುರಶರಾಸನಂಗಳನೆೞಲಿಕ್ಕಿದಂತೆ ನಿಮಿರ್ವ ನಿರ್ಝರಂಗಳುಮನಪ್ಪುಕೆಯ್ದು ಕೇಳೀಪರ್ವತನಿತಂಬಂಗಳೊಳಂ (ಕಾದಂಬ. ೫೨೬); ನಿಱಿವಿಡಿದು ನಿಮಿರ್ವ ಪೆರ್ದೆರೆಗಳಿಂ . . . ನೆರೆವ ಬಟ್ಟೆದೆಱೆಗಳಿಂದೆಸೆದುದಬುಧಿ (ನಂವಿಪಾ. ೨-೧೪). **೧೧. ನೆರವೇರು; ಈಡೇರು; ಫಲಿಸು :** ಬಗೆಯುದಿರೆಯಿರೆ ಕೃತಾಂತಂ ಬಗೆದಂ ಪೆಱತೊಂದನಾರ ಪುಱಿವಗೆಯುಮವಂ ಬಗೆಯುದಿರೆ ನಿಮಿರ್ಗುಮಾತಂ ಬಗೆದೊಡೆ ಬಗೆದಂತೆ ಬಗೆದ ಬಗೆ ನಿಮಿರ್ದಪುದೇ (ಶಾಂತಿಪು. ೭-೧೧); ಮುಕ್ತಿಶ್ರೀಯ ಶೃಂಗಾರಪೂರದೊಳೋಲಾಡುವ ನಿನ್ನಪೇಕ್ಷೆ ನಿಮಿರ್ಗುಂ ಭದ್ರಂ ಶುಭಂ ಮಂಗಳಂ (ಪುಷ್ಪಪು. ೧೩-೭೧). **೧೨. ಚಿಮ್ಮು; ನೆಗೆ; ಪುಟಿ :** ನೆಣದಳಿರ್ ಸೂಸೆ ಬಂಬಲ್ಮಿದುಳ್ ಪಾಯ್ತರೆ ನೆತ್ತರ್ ಸುರ್ರೆನುತ್ತುಂ ನಿಮಿರೆ . . . ಕಾದಿತ್ತು ಖಡ್ಗಪ್ರತಾನಂ (ಜಗವಿ. ೭-೫೭). **೧೩. ಉಬ್ಬು; ಎದ್ದುಕಾಣು :** ಆಳಿ ನಿಜಾಸ್ಯದಿಂ ನಿಮಿರೆ ಪುತ್ತಿನ ಬಾಯ್ದಲೆಯೊಳ್ ಪಿಪೀಲಿಕಾಮಾಳಿಗೆ ಪಾಸಿ ನಾಲಗೆಯನೊಂದು ಭಯಂಕರ ಭಲ್ಲಮುಲ್ಲಸದ್ವ್ಯಾಳತಮಾಳಗುಲ್ಮದೊಳಗಿರ್ಪುದುಮಾ ಸೊವಡಿಂಗೆ ಕಾಯ್ಪಿನಿಂ ಕಾಳಿಗನಾಗನಿರ್ದಪುದಿದೊಂದು ತಮಾಳದ ಬಳ್ಳಿಯೆಂಬಿನಂ (ಪುಷ್ಪಪು. ೫-೭೨). **೧೪. ಸುರುಳಿ ಬಿಚ್ಚು; ನೇರವಾಗು :** ಆಶೀವಿಷಃ, ದೀರ್ಘಪೃಷ್ಠಃ —ಈ ೨ ನಿಮಿರ್ದ ಪಾ(ಹಾ)ವು (ಹಲಾಯು. ೧೦೫-೧೮). **೧೫. ಪ್ರಯತ್ನಪಡು; ಶ್ರಮಪಡು.**

**ನಿಗುರ್ : ೧.** ಅಗರುಧೂಪದ ಪೊಗೆಯ ಕಂಪಿಂದೆ ಪೆಂಪಿಂದೆ ಮೃಗನಾಭಿ ಕರ್ಪೂರದ ಸೊಂಪಿಂದೆ ತಂಪಿಂದೆ ನಿಗುರ್ವ ಪೂಮಾಲೆಗಳಲಂಪಿಂದಲಂಪಿಂದೆ ಮಂಟಪಂ ಚೆಲ್ವಾದುದು (ಚೆಬಪು. ೩೭-೩೨). **೨.** ತಳ್ಕಿಸುವ ಪ್ರೀತಿಯಿಂ ತವಕಿಸಿ ನಿಗುರ್ವ ತೋಳ್ ಸಲೆ ಚುಂಬಿಪಾತುರದೊಳೊರೆವ ಬಾಯ್ (ಚೆಬಪು. ೧೯-೩೨); ಶುಂಡಾದಂಡವಂ ನೆಗಪಿ ಕರ್ಣಾಗ್ರದಿಂ ಗಂಡ

ಮಂಡಲವನು ಪೊಡೆದು ಅಂಡಲೆದಭ್ರಕಡರುವಂತೆ ನಿಜವಾಲದಂಡವುಂ ನಿಗುರಿತಾಗಸಕೆ (ಅಂಜಚ. ೧೧-೯೩); ಬಿಣ್ಪುವೆತ್ತ ಬಟ್ಟಮೊಲೆಗಳ ದೆಯನೇಱಿಕೊತ್ತಿ ನಿಗುರೆ (ರಾಮಾಶ್ವ. ೫೯-೧೬). **೩.** ಬೆನ್ನನೊಯ್ಯನೆ ನುಲಿದುಕೊಳುತಾತಂ ನಿಗುರೆ ಕೈವೆರಳುಗಳು ತಲೆಯುಂ ನಿಲಿಸಿಯುಳ್ಳಿಗಳ ದಿರೆ ತೋಳೆರಡು ಪೂರ್ದೈಸೆ (ಬಸಪು. ೪೭-೫೮); ಅಂಬರವನಳ್ಳಿರಿವ ನಿಡುದಿನ ಕೊಂಬುಗಳ ನಿಗುತಿದ್ದ ಕಿವಿಗಳ . . . ಚರಣವಿಡಂಬಗಳ ಮಿಡುಕಿಡುವ ಬಾಲದ ಡಂಬಕದಿ ರಂಜಿಸಿದ ಶತಯೋಜನದ ನಿಲುವಿನಲಿ (ಅಂಬಿಕಾ. ೨೪-೭೧). **೬.** ಮಿಗೆ ನುಡಿಗಳಿಂದೊಲಿಸಿ ನೇಹಂ ನಿಗುರ್ದು . . . ಒಲುಮೆಯುಂ ತೋಱಿ (ಬಸಪು. ೪೨-೧೫). **೧೬. (ಅಲಂ)ಉತ್ಸಾಹಪಡು ; ಸಡಗರಪಡು :** ಶಿವನೆಂದು ನಿಶ್ಚಯಿಸಿ ನಿಗುರ್ವ ನಾಲಗೆಯಿಂದ ಪೊಗಳ್ದರಂದು (ಚೆಬಪು. ೨೦-೩೨). **೧೭. ಗರ್ವಿಸು ; ಹೆಮ್ಮೆಪಡು ; ಸೊಕ್ಕು :** ಹಂತವಂ ಮುಱಿದಾಳಿನಂತೆ ನಿಗುರ್ದಪಿರಿ ಸಂಕಿಸದೆ ಬಿಂಕದಲಿ (ಬಸಪು. ೫೬-೧೬). **ನಿಗುರು₁ : ೧.** ಅಗಿಲು ಸಾಂಬ್ರಾಣಿಯ ಧೂಪ ವಾಸನೆ ನೆಱೆ ನಿಗುರಿತು ಗಗನಮಂಡಲಕೆ (ಕಂಸವಿ. ೨೧-೧೮). **೨.** ನೆಲಕೆ ನಿಗುರುವ ಗಂಗೆವಾಳದ ಬಿಳಿಯ ಚೌರಿಗಳುಲಿವ ಗಂಟೆಯ . . . ಹೊಳೆವ ಕಡಿತಲೆಗಳ ವಿಲಾಸದೊಳಂದು ಹೊಕ್ಕುದು ತುಳುವಪಡೆ ಕಡುಗಿ (ಕುಪ್ಯಾಭೀ. ೪-೬೩); ನೆಗೆವ ನಿಗುರಿಯೊಳಸರಿವ ಲಗಡಿನಂತೆಜಿಗಿ ಲಾಗಿಸುವ ಹೋರಾಟದ ವಿಗಡಮಲ್ಲರುಗಳೊಪ್ಪಿದರು (ಕಂಸವಿ. ೨೧-೯೩). **೩.** ನಿಗುರುವ ನಿಲುವ ನಿರುಪಮ ಹಯವ ನೋಡಿದರು (ಕುಪ್ಯಾಉ. ೧೨-೧೭); ಪಗಡೆ ಚದುರಂಗ ಕವಡೆಯನಾಡ ಕರೆದರೆ ನಿಗುರಿದುವು ಕರ್ಣಗಳು ಮಚ್ಚೆಯಂತೆ (ಪುರಂದ. ೪-೫೨-೩); ಬಿನ್ನಣದೆ ಗೋಪುರದ ಮಂಟಪದ ಪೃಥುಮೆಗಳ ಚೆನ್ನಾಗಿ ನಿಗುರುತಂ ಬಗ್ಗುತ್ತ ಕೀಳ್ಮೇಲ ನನ್ನಿಯಂ ನೋಳ್ಪವೊಲ್ ನೋಡಿ (ಚತುಪು. ೨-೩-೩೬). **೪.** ರುದ್ರನ ಪರಿಗೆ ನೂರ್ಮಡಿಯೆನಲು ನಿಗುರಿದನಂಜನಾಸೂನು (ತೊರರಾ. ೪-೧೦-೨೭). **೧೦.** ಖುರಪುಟದಲಾಕಾಶವನು ಕತ್ತರಿಸುವವೊಲುಬ್ಬರ ದಲತಿಸಿಬ್ಬರದ ಗತಿಯಲಿ ನಿಗುರಿದವು ರಥವಾಜಿಗಳು (ಕುಪ್ಯಾಕ. ೨೩-೧೨); ಲಂಘಿಸಲು ಲಾಗಱಿದು ಮೃಗವುಲ್ಲಂಘಿಸಿತು ರಘುಪತಿಯ ನೃಪ ನಿಡು ಜಂಘೆಯಲಿ ನಿಗುರಿದಡೆ ನಿಗುರಿತು ನಿಮಿಷನಿಮಿಷದಲಿ (ತೊರರಾ. ೩-೮-೬೮); ವೀರಭಟರುಬ್ಬರಣೆ ನಿಗುರುವ ತೇರ ಚೀತ್ಕೃತಿ ಗಜದ ಬೃಂಹಿತ . . . ರಣಕಹಳಾರವದ ರಭಸದಲಿ ಮೇಲ್ಗಗದೋರಣೆಗೆ ಪೈಸರಿಸಿ ನಡೆತಂದನು ಸುರೇಂದ್ರಜಿತು (ತೊರರಾ. ೫-೬-೭). **೧೬.** ನಿಗುರುತಿದೆ ಚಿಗುರುತಿದೆ ನಾಲಗೆ ಪರಸಿಂದೆಗೆ ಮಹೇಶಭಜನೆಗದೇಕೋ ಹಗಲು ಕೌಶಿಕನ ಶೋಲು ಬಾಯ್ಬಿಗೆಯುದು (ಶಂಕಕಂ. ೫); ಕನ್ನವಂ ತೋಡಿದ್ದ ಬಾಗಿಲ ಹೊನ್ನನೀಕ್ಷಿಸುತದುಭುತಸ್ವಾಂತನ್ನಿಗುರಿ ಚಿಟುಕಿಡುತ ಬೆರಳಂ ನಾಸಿಕದೊಳಿಟ್ಟು . . . ಇಂತೆಂದಂ (ಬಸಪು. ೩೧-೧೬); ಹಗೆಯ ಪತಿಕರಿಸುವರೆ ನಾಲಗೆ ನಿಗುರುವುದು ನೂಱುಮಡಿಯಲಿ ಕಾಳೆಗಕೆ ತನ್ನನು ಬಿಟ್ಟು ನೋಡಿರೆ (ಕುಪ್ಯಾದ್ರೋ. ೧೦-೪೫). **೧೭.** ನಿಗುರುವದ್ವೈತಕ್ರಿಯಾ ಮಾಯೆಗಳ ದುರ್ವರ್ತದಿಂದ ಸದ್ವಿದ್ಯೆಗೆ ಪರಶಿವನ ಭಜನೆಯಿಲ್ಲದನಾಮಿಕರುಗಳಿರಾ (ಬಸಪು. ೫೦-೪೮). **೧೮. ಸೆಟೆದುಕೊಳ್ಳು ; ಬಿರುಸಾಗು ; ಸೆಟೆ :** ಆಱುದಿನದ ಕೂಸಂ ಪಿಂಗಳಾಶಿನಿಯೆಂಬ ದೇವತೆ ಪಿಡಿದೊಡಾ ಕೂಸು ಕೈಕಾಲನಾಡಿಸುಗುಂ . . . ಮೈ ಮೊಡೆನಾಱುಗುಂ ನಿಗುರುಗುಂ ಮೊಲೆಯನುಣ್ಣದುಂ (ಬಾಲಚಿ. ೧೨೬-೧). **೧೯. ಹೊಡೆ ; ಬಡಿ :** ಅಡಿಗಡಿಗೆ ಮಿಗೆ ಪೆರ್ಚುತಿಹ ಶಕ್ರಜಿತುವ ಕಾಣುತ ತೊಡರಿ ನಿಗುರಿದಂ ಸಿರಿನಿಟಲುನಿಟಲೆನುತ ಸಂಧಿಗಳು ನೆಗ್ಗುವೋಲ್ಮರುತಸುತನು (ವೆಂಕಾರಾ. ೫-೧೬-೧೮) △**ನಿಗುಳ್ :** **೩.** ಕೊರಳುದ್ದ ನೀರೊಳು ನಿಂದು ಕಾಲೊಂದ ಧರೆಯೊಳೂಱಿ ನಭಕ್ಕೆ ಮುಖಪಂಕರುಹವೊಗ್ಗಿ ನಿಗುಳ್ದು ಘೋರನೆ ಸುರಿವ ಪೆರ್ಮಳೆಯೊಳಗೆ ತಾಂ ಕಂಪಿಸದೆ ನಿಂದಿರ್ದು (ಬಸಪು. ೨-೧೨). **೬.** ಅಸಮನಿರತಿಶಯಾನುಭವ ಭವ್ಯಸುಖಮೆಯ್ದೆ ನಿಗುಳ್ದು ನಿಶ್ಚಲವೆಸೆವ ಪರಶಿವಯೋಗನಿದ್ರಾಮುದ್ರಿತದೊಳಿರಲು (ಬಸಪು. ೩೫-೮). **ನಿಮಿರು₁ : ೧.** ಬಾನ್ಕ್ಯೆಯೆ ಕದಿರ ಗರಿಗರಿ ಬಿಚ್ಚಿ ನಿಮಿರಿರಲು ಚೈತ್ಯದಾಕಾಶದಲಿ ಏರುತಿಹುದು (ಅರಳು. ೧೨೭-೭). **೩.** ಸ್ವಲ್ಪ ಕುಳ್ಳಾಗಿರುವವರು ತಮ್ಮ ಮುಂದೆ ನಿಂತಿದ್ದವರ ಬೆನ್ನ ಮೇಲೆ ಕೈಯೂರಿ ನಿಮಿರಿ ನಿಂತಿದ್ದರು (ಭೀಮಕಾ. ೨೪೭); ಅದನ್ನು ಕೇಳಿದೊಡನೆ ನಾಯಿಯ ಬೆನ್ನ ಕೂದಲೆಲ್ಲ ನಿಮಿರಿ ನಿಂತಿತು (ಯೋಧಪು. ೮೦); ದಾರುಣ ವಿಧ್ವಂಸಲೀಲೆಯನ್ನು ಜ್ಞಾಪಿಸಿಕೊಂಡಾಗ ರೋಮರೋಮವೂ ನಿಮಿರಿ ನಿಲ್ಲುತ್ತದೆ (ಬಾಣಊ. ೩೭೧). **೫.** ಆನನದಿ ಬೆಳ್ಪೊಂದಿರದೆ ಕುಂತಳ ನಿಮಿರಲೆಸೆದುದು ಗರ್ಭವಂಗನೆಯ (ಜೀಪಂಚ. ೪-೩೫). **೬.** ವಿಸುಪ ಮುಖದೊಡನೆ ತನುಕಾಂತಿ ನಳನಳಿಸೆ ಸಂತಸದೊಡನೆ ಪುಣ್ಯಕಳೆ ನಿಮಿರೆ . . . ಸುಮುಹೂರ್ತವನುವಾದವೈದುತಿಂಗಳೊಳಬಲೆಗೆ (ಸಿದ್ಧರಾ.೧-೫೨); ಮೃದುಮೋಹನಂ ನಿಮಿರೆ ತಾಳಲಯಕಾಲಮಾನಸ್ಥಾನವಿಧಿಯೊದವೆ ಬಾಲೆಯರ್ ಕೇಳಿಸಿದರಾರ್ಯನಂ ರಸಮೊಸರ್ವವೋಲ್ (ಪದ್ಮರಾ.೮-೬೧); ಪದಸರೋಜಕವನತನಾಗಿ ಸಾತ್ವಿಕಂ ನಿಮಿರೆ ಬಸವಂ ಭಯಭಕ್ತಿವೆರಸಿ ಕೀರ್ತಿಸಿ (ವೃಷವಿ. ೧೩-೧೮ ವ); ತೆರೆ ನೊರೆ ಬುದ್ಬುದಂ ನಿಮಿರೆ ತೋಯಕುಲಂ ಕಮಲೋದ್ಭವಾಂಡವಿಸ್ತರದೊಳಧಃಕಟಾಹವೊಡೆದೂರ್ಧ್ವಕದಂ ದುಱಿ ಚಿಮ್ಮಿ ಬಂದು (ಹಾಲಾಸ್ಯ. ೧-೧-೮೦). **೨೦. ನೆಟ್ಟಗೆ ನಿಲ್ಲುವಂತೆ ಮಾಡು ; ನೇರವಾಗಿಸು :** ಕಿವಿಗಳನು ನಿಮಿರಿ . . . ಕೊರಳ ಕೊಂಕಿಸಿ ಮರುತನಚ್ಚರಿಯ ಕುವರ ನೀರಧಿಯನುಲ್ಲಂಘಿಸುವಡುಲ್ಲಾಸದಿಂದೆಸೆದನು (ವೆಂಕಾರಾ.೪-೧-೧೫). **೨೧. ಅಲ್ಲಾಡು ; ಕಂಪಿಸು :** ಹಿಮಾನಿಲನಿಂ ನಿಮಿರುವ ಪೊಂಬಾಟೆಯ ಸುಟಿಯೆಲೆಯ ಬಿಜ್ಜಣಂಗಳಿಂ (ಕುಸುಮಾ. ೧೩-೪೬ ವ). △ **ನಿಮಿಱ್ :** ಆ[ಕಾ]ಶಗಂಗಾಜಳ ಜಳರುಹನೀಹಾರ ಕೀರ್ತ್ತಿಪ್ರತಾನಂ ನಿಮಿಟ್ದತ್ತಾ ಶಾನ್ತಮಂತಾ ಜನಮೆನಿಪುದು ಮಾರ್ತ್ತಣ್ಡನುಗ್ರಪ್ರತಾಪಂ (ಸೌಇಇ. XI–i, ೭೮-೭೧ ; 1045) ; ಈ ನಿಮಿಟ್ಟಿ ಚಂಚಸ್ಮಾತ್ರೆಗಳ್ (ಎಇ. XII, ೨೮೦-೧೬೩ ; 1077) ; ಶ್ರೀರಣಬೇಗೆಯ ಚೋಡ್ಡ ಕಳಿಂಗ ಬಲ್ಲಾಳ ನಿಮಿಟ್ಟುದು ಅರಸಂಕಕಾಜರ ಬಲ್ಲಹಣ್ಪೋಱಂ ಣಟ್ಟವ (ಕಇಅ. ೧೨೨-೩೦-೨ ; ?). **ನಿಮುರು:** **೧.** ಬೆಟ್ಟದ ಮೇಲೊಂದು ದಳ್ಳುರಿ ನಿಮು[ಪಾಠಾಂ. ಮಿ]ರಿ ಬಳ್ಳಿವರಿದು ಆಕಾಶಕ್ಕಡರಿ ಜಗದೊಳ್ಪಸರಿಸಿ ಸಪ್ತಸಮುದ್ರಂಗಳ ನುಂಗಿತ್ತು (ಆದವ. ೩೩-೯೬). 'ನಿಮುರಿಚು' ಪರಾ. **ನಿವುರು : ೩.** ಭವಿಗಳಂ ನೋಡೆವೆಂಬಂತೆ ಕಣ್ಣುಂ ಜೋಗೆ ನಿವುರಿ ತಲೆಗೇಱುತ್ತು ಸುಕೃತವೆನೆ ನರೆ ಮೇಗೆ ಬಲವರಲ್ಕಲ್ಲದಡಿಯಿಡದಂತೆ ನಡೆಯುಡುಗೆ . . . ಕೈ ನಡುಗಿ (ತಿರುರ. ದೇ. ೧೦-೩).

**ನಿಗಿತುಕೊಳ್ಳು** = **೧.** ನೆಟ್ಟಗಾಗು. **೨.** ಸೆಟೆದುಕೊಳ್ಳು : ಚಳಿಯಿಂದಾಗಿ ಕೈಕಾಲುಗಳೆಲ್ಲಾ ಸಿಗಿತುಕೊಂಡಿವೆ (ರೂಢಿ). **೩.** ಸಾಯು; ಮರಣ ಹೊಂದು : ಅಫೀಮನ್ನು ಸ್ವಲ್ಪ ಹೆಚ್ಚಿಗೆ ಪ್ರಮಾಣದಲ್ಲಿ ಬಳಸಿದ್ದರಿಂದ ತನ್ನ ಭಾವಮೈದುನನ ಹೆಂಡತಿ ಇನ್ನೇನು ನಿಗಿತುಕೊಳ್ಳುವುದರಲ್ಲಿದ್ದಳೆಂದೂ . . . ಹೇಳಿದನು (ಪುನರು.೧೦೫). **ನಿಗುರಿದ ಕಿವಿ** = ನೆಟ್ಟಗೆ ನಿಂತ ಕಿವಿ : ಹೊಗರುಗಣ್ಣು, ನಿಗುರಿದ ಕಿವಿ, ಹಗುರು ಮೈಯ ಚಿಗುರೆಯು (ನಾದಲೀ. ೨೭-೧). **ನಿಮಿರ್ದು ಪೇಳ್** = ವಿಸ್ತಾರವಾಗಿ ಹೇಳು ; ಬಣ್ಣಿಸು : ಆ ವೇಳೆಯೊಳೊರ್ವ ಕಳ್ಳ ಬಂಟನಂ ಕಳಪಿದೊಡವಂ ಬಂದು . . . ನಿಮಿರ್ದು ಪೇಳಿದಂ (ಹವಿಸ್ಮಾರ. ೩-೮). [ದೇ.‖ ತಮಿ. ನಿಮಿರ್ ; ಮಲ. ನಿವಿರು, ನೀರು ; ತುಳು. ನಿಮುರು ; ತೆಲು. ನಿವುಡು, ನಿಗುಡು]

**ನಿಮಿರ್**$_2$, ನಿಗುರು$_2$, ನಿಮಿರು$_2$ (ನಾ). ೧. ವಿಸ್ತಾರ; ವಿಶಾಲತೆ; ನೀಳ : 'ನಿಮಿರ್ವೆಱು' ಪರಾ. **ನಿಗುರು**$_2$ : ೨. ಚಾಚಿರುವಿಕೆ : ಭುಗುಭುಗಿಲ್ ಭುಗಿಲೆಂದು ಭೋರ್ಗರೆದುಗುಳ್ದವು ಬಲುಗಿಡಿಯನುರಿನಾಲಗೆಯು ನಿಗುರಿನಲಲಗುಗಳು (ತೊರರಾ. ೧-೧೧-೧೭). ೩. ಹೆಚ್ಚಳ; ಆಧಿಕ್ಯ ; ಸಮೃದ್ಧಿ : ಉಬ್ಬಿದನು ಹರುಷದಲಿ ಕಂಗಳ ಗಬ್ಬ ಮುಱಿದುದು ಮುದದ ನಿಗುರಿನ ಹಬ್ಬುಗೆಯ ಹೊಲಬಳಿಯೆ ನಾಲಗೆಯುಡುಗೆ . . . ಬೆಱಗಾದ (ಕುವ್ಯಾಭೀ. ೩-೬೭). **ನಿಮಿರು**$_2$: ೧. ಸೃಷ್ಟಿಯ ನಿಮಿರೊಳು ಹುಟ್ಟಿ ಚಂದದೊಳಿದ್ದ ಧಿಟ್ಟ ಜೀವಿಗಳ ಭಂಗದ ಬರಿಯುಂತರಂಗ (ವಿಸೀಗೀ. ೩-೭). [<ನಿಮಿರ್$_1$]

**ನಿಮಿರಿಸು**, ನಿಗಿರಿಸು, ನಿಗುರಿಸು (ಕ್ರಿ). ೧. ನೆಟ್ಟಗೆ ನಿಲ್ಲಿಸು ; ನೆಟ್ಟಗಿರಿಸು : ಬೆನ್ನು ನಡುಗಳನತ್ತಿತ್ತ ಮುರಿದು ಅಡಗಿಸುವರು ನಿಮಿರಿಸುವರು ಮೇಣದ ನಿಡುರೂಪೊ ಮೈಯೊಯೆಂಬಂತೆ (ಭರಚ. ೬೩-೫೨) ; ಮುಂಗಾಲಂ ನಿಮಿರಿಸಿ ಮಿಗೆ ಪೊಂಗುವ ಪೆರ್ಬುಲಿಯ ಕಂಡು (ಶ್ರೀಮಹಾ. ೧-೪೩) ; ಕಿವಿಗಳ ನಿಮಿರಿಸಿಕೊಂಡೆ ಸಾವಿರುವೆವು ಕರೆಯೆಂದು ಬರುವುದೆಂದೊ ಎಂದು (ಇಂಚಾಪ. ೨೧೯-೪೧) ; ಬಸ್ಸು ಗಾಡಿಗೆ ಎದುರಾಗಿ ಬರುತ್ತಿದ್ದರೆ ಎತ್ತುಗಳಿಗೆ ಬೆಟ್ಟದಾಕಾರದ ಭೂತವೇ ಬಂದಂತೆ ಕಂಡು . . . ಕಿವಿ ನಿಮಿರಿಸಿಕೊಂಡು . . . ಪರಾರಿಯಾಗುತ್ತಿದ್ದುವು (ನಸ್ಸೊರು. ೨೯). **ನಿಗಿರಿಸು** : ೧. ಕೃಷ್ಣರಾಯನು ಆನೆಯ ಕೊಂದ ತಾಣ . . . ಕೃಷ್ಣರಾಯನು ಕೂಸಿಯ ನಿಗಿರಿಸಿದ ತಾಣ (ಎಕ. XIV, ಶ್ರೀರಂಗ. ೨೭೩, ಪುಟ ೨೦೩; ?). **ನಿಗುರಿಸು**: ೧. ಹೊಗರೊಗುವ ಜವ್ವನದ ಸೊಂಪಿನ ನಿಗುರಿಸಿದ ನಿಡುದೋಳುಗಳ ಸೆಳ್ಳುಗುರ ಮಣಿ ಮುದ್ರಿಕೆಯ ಘನ ಶೃಂಗಾರದುಬ್ಬುಗಳ . . . ಅಬಲಾಜನದ ಕೈಗಳಲಗಿವ ಚಾಮರವೆಸೆದವು (ತೊರರಾ. ೬-೧೦-೧೨) ; ಮೃಗಮದದ ತಿಲಕವನು ನಿ[ಪಾಠಾಂ. ರಿ]ಗುರಿಸಿದನೀರ್ಕೈದಳಿಲಿ ಮಘಮಘಿಪ ನೂತನ ಯಕ್ಷಕರ್ದಮವನು ನಿಜಾಂಗದಲಿ (ತೊರರಾ. ೬-೨೦-೧೫); ನಿಗುರಿಸಿ ಗೋಣ್ಗಳಂ ದಿಗಿಭಸಂತತಿ ಸಂತಸವಿರ್ಪಿನಂ (ಅಪ್ರತಿ. ೧೨-೬) ; ಮುಗಿಲ ಮುಟ್ಟುವ ನಿಚ್ಚಣಿಗೆಗಳನು ತಂದು ನಿಗುರಿಸಿದರು ಕೋಟೆತೆನೆಗೆ (ಕಂಸವಿ. ೧೮-೧೫೩) ; ಎರಡು ತೋಳುಗಳನ್ನೂ ನಿಗುರಿಸಿಕೊಂಡು ನೋವು ಹೋಗು ನಿವಾರಿಸಿಕೊಂಡೆ (ಚೆಂಗಾಳ್ವ. ೪೨) ; ಕಣಕೆಯನ್ನು ಮೆಲ್ಲುತ್ತ ನಿಂತಿದ್ದ ಎತ್ತುಗಳೆರಡೂ ಒಡೆಯನನ್ನು ಕಂಡು ಕಿವಿಗಳನ್ನು ನಿಗುರಿಸಿದುವು (ಮಣ್ಣುಹ. ೨೫); ಕಿವಿಗಳನ್ನು ನಿಗುರಿಸಿ ನೋಡುತ್ತಿದ್ದ ವಿಮಲೆಯ ತಾಯಿಯು . . . 'ಏನು ಬಹಳ ಮಾತುಕಥೆ ನಡೆಯುತ್ತಿತ್ತು ?' ಎಂದು ಪ್ರಶ್ನಿಸಿದಳು (ಶಿಷ್ಯಾಮ. ೧೭). ೨. ಹರಡುವಂತೆ ಮಾಡು; ಹರಹು : "ನಿಮಿರ್ಚು— ಪ್ರಸಾರಣೇ (ನಿಗುರಿಸು)" (ಶಮಧಾ). ೩. ಉಂಟುಮಾಡು ; ಉಂಟಾಗಿಸು : ಅಸಿಕಿಯೊಳ್ಕಟ್ಟಿದೊಳ್ಪಟ್ಟೆಯ ಮುಱಿದುಂ ಸೆಱಿಂಗುಗಳೊಳ್ಕೋದು ನೇಲ್ವ ಬಟ್ಟಮುತ್ತುಗಳುಂ ಕಿವಿಯೊಳಿಟ್ಟ ಚೌಕುಳಿವಾವುಲಿಗಳುಮಿನಿಯನಂ ಬಱಸಂದುವಂದ ತಾರಗೆವೆಣ್ಗಳೆಂಬ ನೆನಪಂ ನಿಗುರಿಸುತ್ತಿದೆ (ಚಿಕಪಂ. ೪೨-೫). [ನಿಮಿರು$_1$(<ನಿಮಿರ್$_1$) + -ಇಸು$_3$]

**ನಿಮಿರು**$_1$ 'ನಿಮಿರ್$_1$' ನೋ.

**ನಿಮಿರು**$_2$ 'ನಿಮಿರ್$_2$' ನೋ.

**ನಿಮಿರ್ಕೆ**, ನಿಗುರಿಕೆ (ನಾ). ೧. ಹರಡುವಿಕೆ; ವಿಸ್ತಾರ; ಪಸರಿಸುವಿಕೆ : ತದಂಬು ಮೃದುತ್ವದಿಂ ತಳೋದರಿಯ ಮೆಯ್ಯ ಕುಂಕುಮದೊಳೊಂದಿ ನಿಮಿರ್ಕೆಯಿನೊಪ್ಪಿ ಮಾಣಿಕಾಭರಣದ ಭಂಗಿಯುಂ ನೆಱೆಯೆ ತಾಳ್ದಿದುದು (ಧರ್ಮಾಮೃ. ೧೪-೧೫); ಪಡೆಯ ನಿಮಿರ್ಕೆಗೀ ಧರಣಿ ಸಾಲದು ಕೇತುಗಳೀಟಿಗಂ ನಭಂ ಕಡುಕಿಱಿದು (ಜಗವಿ. ೯-೬೭). ೨. ನೆಟ್ಟಗಿರುವಿಕೆ; ನೇರವಾಗಿರುವಿಕೆ : ನೋತು ಜೋಲ್ದುದು ಮಿಾಸೆಯ ನಿಮಿರ್ಕೆ ತುಟಿಗಳ್ ವಿಕಂಪಿಸಿದುವು (ಶ್ರೀರಾಮಾ. ೫೭೮-೪೪). ೩. ಬೆಳವಣಿಗೆ; ಬೆಳೆಯುವಿಕೆ; ಅಭಿವೃದ್ಧಿ : ಕಾದಂಬರೀಪ್ರಣಯಕ್ಕೆ ನಿಮಿರ್ಕೆಯಂ ಮಾಡ್ಪುದೆಂತಾನುಂ ಕಯ್ಕೊಳ್ಳದಿರಲಾಕೆ ಭಗ್ನಪ್ರಣಯೆಯಾದಪ್ಪಳ್ (ಕಾದಂಉ. ೧೨೧); ಜನಪನ ನಿಜಾಭಿಮತಲತೆಯ ನಿಮಿರ್ಕೆಗೆ ನೀಲರತ್ನದಂಡದಡರ್ಪಂ ವನಜಭವನಿಟ್ಟನೆಂಬಂತೆ ನಭಕ್ಕೊಗೆದತ್ತು ಹೋಮಧೂಮೋದ್ದಾಮಂ (ಕುಸುಮಾ. ೪-೧೩೮). ೪. ಆಧಿಕ್ಯ ; ಅತಿಶಯ ; ಪೆಂಪು ; ಏಳಿಗೆ ; ಹಿರಿಮೆ : ಶ್ರೀಯ ನಿಮಿರ್ಕೆಗಂ ಸುಖದಳುರ್ಕೆಗಮುನ್ನತಕೀರ್ತಿಗಂ . . . ಆಟಪೊಡೆ ಪೂಜಿಸು . . . ದುರಿತಾರಿ ಚತುರ್ಮುಖಶಾಂತಿನಾಥನಂ (ಧರ್ಮಾಮೃ. ೫-೬೨) ; ಸೋಮವಂಶಜರೊಳಾದ್ಯೋರೆ. ತನ್ನೊಳೆನಿಪ್ಪುದೊಂದು ಸಾಹಸದ ನಿಮಿರ್ಕೆ . . . ಧರಿತ್ರಿಯೊಳ್ ವಿರಾಜಿಸುತಿರಲುತ್ತರೋತ್ತರ ವಿಳಾಸ್ಸುತಿಪೆತ್ತುದು ವೀರಪಾಂಡ್ಯನಾ (ಎಕ. XI, ಧಾವಣ. ೪೫-೨೦ ; 1143) ; ದಮಿತಾರಿಗೆ ಸಮಸ್ತಧಾತ್ರೀವಿಭಾಗದೊಳ್ ಭಾವಿಸೆ ವಿಕ್ರಮದ ನಿಮಿರ್ಕೆಗಮಾಯತಿಯುಮರ್ಕೆಗಂ ಪೇೞೆ ಪೋಲ್ಕೆಗಾವಂ ಬರ್ಪಂ (ಶಾಪ್ಯಾಪ. ೩೪೬) ; ಅದಟನಳುರ್ಕೆ ಮೆಯ್ಮೆಯ ನಿಮಿರ್ಕೆ ಯಶೋಧನದಿರ್ಕೆ . . . ತನ್ನದೆಂಬುದನೆನೆ ಪೆಮ್ಮೆಯುಂ ತಳೆದನೋ ನ್ರಿಪರೊಳು ನ್ರಿಪತ್ಯೆಲಶಾನ್ತರಂ (ಎಕ. VIII, ಸಾಗರ. ೧೪೯-೧೨೦ ; 1259). ೫. ಎತ್ತರ; ಔನ್ನತ್ಯ : ಆ ಪುಣ್ಯದಂಪತಿಗಳ ಮತಿಯ ನಿಷ್ಠೆಯ ನಿಮಿರ್ಕೆಗೆ ಮೆಚ್ಚಿ ಸಂತತಂ ಕ್ಷಿತಿಯೊಳಗೆ ಪುಟ್ಟಲಿರ್ಪಾದಿಗಣನಾಥನಂ ಸತಿಯುದರದೊಳಗಂದು ಮಡಗಿದಂ ಕರುಣದಿಂ ಸೌರಾಷ್ಟ್ರಪುರದರಸನು (ಸೋಮಚ. ೧-೬೮). 'ನಿಮಿರ್ಕೆವೆಱು' ಪರಾ. ೬. ಹೊರಹೊರಡುವಿಕೆ; ನಿರ್ಗಮನ : ಜೀವಪಿಂಡಸ್ಸ ಣಿಗ್ಗಮಣಂ—ಜೀವ ಪ್ರದೇಶದ ನಿಮಿರ್ಕೆ (ತಸೂವ್ಯ. ೬೧). ೭. ಜಂಬ ; ಗರ್ವ ; ಅಹಂಕಾರ : ಧರೆಗೆಸೆದತ್ತು . . . ತಾರಕಾಸುರನ ನಿಮಿರ್ಕೆ ತಾರಕನ ಮೂರ್ಖತೆ ತಾರಕನುತ್ಪಥಕ್ರಮಂ (ಗಿರಿಕ. ೬-೧೧). ೮. ಗತ್ತು ; ಠೀವಿ ; ಬಿಂಕ : ಕೆಲಬಲದಲ್ಲಿ ಕುಂಜರಘಟಾವಳಿಯಶ್ವಬಲಂ ಪದಾತಿಸಂಕುಳವೊಲವಿಂ ಬರುತ್ತಮಿರೆ ಮುಂದೆ ಸುವರ್ಣದ ಪಟ್ಟಕಾಳಿಯುಗ್ಗಳಿಸಿ ನಿಮಿರ್ಕೆಯಿಂ ನಡೆಯೆ ಕಾಲ್ನಡೆಯೊಳ್ ನಡೆತಂದನು . . . ಮರುಳಾಗಿ ಸೌಂದರಂ (ನಂಬಿರ. ೧೫ ಸೂಚನೆ). **ನಿಗುರಿಕೆ** : ೧. ಪ್ರತಾಪದ ಶಿಖಿಯ ನಿಗುರಿಕೆಯ ಝಳದ ಝಾಡಿಯ ಜೋಡಿಯಲಿ ಕಪಿಬಲಕೆ ಮೈದೋಱದನು ಬೊಬ್ಬೆಯ ಬಿಲುದನಿಯ ಬಱಸಿಡಿಲಬುಜಭವಾಂಡಘಟ ಬಿರಿಯೆ (ತೊರರಾ. ೬-೨೦-೪೯). [ನಿಮಿರ್$_1$ + -ಕೆ]

**ನಿಮಿರ್ಕೆಗುಂದು** (ಕ್ರಿ). ಅತಿಶಯವು ಕಮ್ಮಿಯಾಗು; ಹಿರಿಮೆಯು ಕ್ಷೀಣವಾಗು : ನಿಮಿರ್ಕೆಗುಂದದಾವಗಮತಿಸೌಖ್ಯಮುಂ ಪಡೆವುದೀದೊರೆಯು[ಪಾಠಾಂ. ತು]ನ್ನತಿ ಪಾತ್ರದಾನವಾ (ಅಪಿವು. ೫-೪೩).

[ನಿಮಿರ್ಕೆ + ಕುಂದು$_1$]

**ನಿಮಿರ್ಕೆವಡೆ** (ಕ್ರಿ). ಪೆಂಪನ್ನು ಹೊಂದು ; ಹಿರಿಮೆಯನ್ನು ಪಡೆ; ಆಧಿಕ್ಯವನ್ನು ಹೊಂದು ; ಅತಿಶಯವಾಗು : ಪದಿನೆಣ್ಸಾಸಿರ ಮ್ಲೇಚ್ಛರಾಜರುಮೆಣ್ಬತ್ತುನಾಲ್ಕುಕೋಟಿ ವೀರಭಟರ್ಕಳುಂ ನಿಮಿರ್ಕೆವಡೆದ ನಾಲ್ವತ್ತೆಂಟುಕೋಟಿ ಪತಾಕೆಗಳುಂ (ಪಾರ್ಶ್ವಪು. ೧೨-೧ ವ).

[ನಿಮಿರ್ಕೆ + ಪಡೆ$_1$]

**ನಿಮಿರ್ಕೆವೆಱು** (ಕ್ರಿ). ೧. ಹಬ್ಬು; ಹರಡು; ಪಸರಿಸು : ಮೊರಟದ ಬಂಕಿದೇವವಿಭುವಿಂದೆ ಕೊರಂಟು ತಳಿರ್ತ ಪಾಂಗಿನಿಂ . . . ಶಾಂತವಸರಯ್ಯನ ಭಾವದ ಬಳ್ಳಿನಿಂದಮಂಕುರಿಸಿ ನಿಮಿರ್ಕೆವೆತ್ತು ಕರಪಲ್ಲವ ಮೊಪ್ಪಿದುದಾ ತಪಸ್ವಿಯ (ವೃಷವಿ. ೨೬-೪೬). ೨. ಉದ್ದವಾಗು : ನೀಳವಾಗು ; ನಿಡಿದಾಗು : ನಿಮಿರ್ಕೆವೆತ್ತ ನಿಶ್ವಸಿತಮುಂ ಶೂನ್ಯ

ಮಾದ ಸಾಶ್ರುನಯನಂಗಳುಂ . . . ಜಡತೆಗೆಡೆಯಾದ ಯಾನಮುಮಂ ಬೆರಸು ಮೆಲ್ಲನಲ್ಲಿಗೆ ವಂದು (ಕುಸುಮಾ. ೧೩-೪೬ ಪ). **೩. ಆಧಿಕ್ಯ ಹೊಂದು ; ಹೆಚ್ಚಾಗು :** ಅದಱ ನಿಮಿರ್ಕೆವೆತ್ತ ಘುಸೃಣೋದಕಧಾರೆ ನವಾರುಣಾಂಶುವೋಲ್ ಪೊದೆಯಿಸಿತಂಬುಜಾನನೆಯರೆಂಬ ನವಾಂಬುಜಿನೀಕದಂಬಮಂ (ಜಗವಿ. ೧೪-೧೦೭) ; ಕುಸುಮಾವಳೀತನೂದರಿಯ ವಿವಾಹವೈಭವಮನೀಕ್ಷಿಪ ಕಾಂಕ್ಷೆ ನಿಮಿರ್ಕೆವೆತ್ತು (ಕುಸುಮಾ. ೧೫-೮೩). **೪. ಎತ್ತರವನ್ನು ಹೊಂದು ; ಎತ್ತರವಾಗು :** ನಿಮಿರ್ಕೆವೆತ್ತ ಕುಜಮೊತ್ತಿದ ಸತ್ತಿಗೆ ಸಿಂಹವಿಷ್ಟರಂ ತೋಱುವ ಚಂದ್ರಕಾಂತಶಿಲೆಯಾಗೆ . . . ಪರ್ವತರಾಜನೊಪ್ಪುಗುಂ (ಗಿರಿಕ. ೧-೫೦). [ನಿಮಿರ್ಕೆ + ಪೆಱು$_1$]

**ನಿಮಿರ್ಚು,** ನಿಗಚು, ನಿಗಿಚು, ನಿಗುಚು, ನಿಗುರ್ಚು, **ನಿಮುರಿಚು,** ನಿವುಚು (ಕ್ರಿ). **೧.** ಹರಡು; ವಿಸ್ತರಿಸು "ನಿಮಿರ್ಚು-ಪ್ರಸಾರಣೇ, (ನಿಗುರಿಸು)" (ಶಮಧಾ) ; ವನಧಿಪರೀತಭೂತಳದೊಳೀತನೆ ಸೋಲದ ಗಂಡನೆಂಬ ಪೆಂಪಿನ ಪೆಸರಂ ನಿಮಿರ್ಚಿದುದುಮಲ್ಲದೆ ವಿಕ್ರಮದಿಂದೆ ನಿಂದ ಗುರ್ಮೆನಲ್ . . . ಮೆಯ್ಗಲಿ ಬದ್ದೆಗನನ್ನನಾವನೋ (ಪಂಪಭಾ. ೧-೨೬) ; ಕೊಂಕಣೇಶ್ವರನನಿದಿರ್ಚಿ ಸಾಧಿಸಿದನಂಬುಧಿಸೀಮೆವರಂ ನಿಮಿರ್ಚಿದಂ ಧರೆಯನದೇಕೆ ಕೇಳ್ದಱಿಯ ಸಾಹಸಭೀಮನ ಸಾಹಸಂಗಳಂ (ಗದಾಯು. ೨-೪೭) ; ತುಂಗನಿಜಪ್ರತಾಪಮಂ ಸೇತುವರಂ ನಿಮಿರ್ಚಿ ತಳೆದಂ ಜಸಮಂ ರಘುವಂಶಮಂಡನಂ (ಪಂಚತಂ. ೧೦೩-೧೪); ಮನೆಯಂ ಪೆರ್ಚಿಸುವೊಡೆ ಮುನ್ನಿನ ಮಾಟಿಕ್ಕೆಯೊಳಿರ್ದು ಮೂಡಲುಂ ಬಡಗಲ್ ಪೊತ್ತಿ ನಿಮಿರ್ಚು ಗುಟಱಿದ ದೆಸೆಗಳೊಳನಿತಂ ಪೆರ್ಚಿಸಲೆವೇಡ ಪೆರ್ಚಂ ಬಗೆವಂ (ಲೋಕೋಪ. ೩-೧೩) ; ಸುತ್ತಣ ಕಡಲ್ವರೆಗಂ ನೆಲನಂ ನಿಮಿರ್ಚಿ ಭೂಪೋತ್ತಮನಿಂತು ತನ್ನ ಜಸಮಂ ದೆಸೆಯಂತುವರಂ ನಿಮಿರ್ಚಿದಂ (ಪಂರಾಮಾ. ೨-೩೮) ; ಶ್ರೀಬಮ್ಮರ್ದೇವಂ ಮಹೀತಳಮಂ ತೋಳುವಲದಿಂ ನಿಮಿರ್ಚಿದನಿದೇಂ ಪೆರ್ಮಾಡಿ ಶೌರ್ಯ್ಯಾತ್ಮನೋ (ಎಕ. VII, ಶಿಮೊ. ೫೭-೩೮; 1115) ; ಹಾವಭಾವವಿಳಾಸವಿಭ್ರಮವರ್ಧನಾತಿಶಯಂಗಳಿಂದಾವಗಂ ಧರಣೀತಳಾಧಿಪಚಿತ್ತವೃತ್ತಿಯುಮಂ ಲಸದ್ಭಾವದಿಂದದಱೊಡನೆ ಪಾತ್ರವಿಶೇಷದಾನದ ವೃತ್ತಿಯಂ ಪೀವರಸ್ತನೆ ಸೂಱೆಗೊಂಡು ನಿಮಿರ್ಚಿದಳ್ ನಿಜಕೀರ್ತಿಯಂ (ಬಾಧಪು. ೪-೫೦). **೨. ಹೊರಚಾಚು ; ನೀಡು :** ಇದಿರ್ಗೊಂಬಿನೊಳ್ ತೊಡರ್ದ ಚಂಚುವನಂಟ ನಿಮಿರ್ಚಿ ನೀವಿ . . . ವಿಹಂಗಮಂಗಳೆಟ್ಟಿಱೆ ಕುಟುಕಂ ಕೊಡಲ್ಕಿರದೆ ಪಾಱಿದುವು (ಕುಸುಮಾ. ೧೦-೮೫) ; ಸನತ್ಕುಮಾರಂ ಶೂನ್ಯಹೃದಯಯಾಂಧಂ ಕಣ್ಮುಚ್ಚಿ ಗೋಣಂ ನಿಮಿರ್ಚಿ ಬಲ್ಗರಂ ಪೊಡೆದಂತೆ ಬೆಬ್ಬನೆ ಬೆಱತಿರೆ ಮೂದಲಿಸುವಂತೆ ನಗುತ್ತುಂ (ಸಾನಂಚ. ೨೩ ಪ ಕಥಾಗರ್ಭಸಂಧಿ). **೩. ನೆಟ್ಟಗೆ ಮಾಡು; ನೇರವಾಗಿಸು :** ಉಳ್ಳಿಸಟಿಕ್ಕೊಂಕನೊಯ್ಯನೊಯ್ಯನೆ ಕರದಿಂ ನಿಮಿರ್ಚಿ . . . ಪದ್ಮಿನಿಯೊಳಿನಂ ಪ್ರವಾಸಪರಿಖೇದಮನಾಱಿಸಿದಂ ಪ್ರಭಾತದೊಳ್ (ಅನಂಪು. ೮-೬೭). **೪. ಅತಿಶಯಗೊಳಿಸು ; ಅಧಿಕಗೊಳಿಸು ; ವಿಜೃಂಭಿಸು :** ಖಡ್ಗಧರರ ಭುಜಬಲಮದೇಂ ನಿಮಿರ್ಚಿದುದೊ ರಣದೊಳದ್ಭುತರಸಮಂ (ಗದಾಯು. ೪-೩೦) ; ಜಯಕೇಶಿಯಂ ಮಹಾಹವದೊಳೆ ಮಾರಸಿಂಹನೃಪನಿಕ್ಕಿ ನಿಮಿರ್ಚಿದನಾತ್ಮಶೌರ್ಯಮಂ (ಎಕ. VII, ಶಿಮೊ. ೪-೪೬ ; 1122) ; ಭೂವನಿತೆ ನಿಮಿರ್ಚುಗೆನ್ನ ಮತಿಯಂ ಚತುರಪ್ರಿಯಮಾಗೆ ನಲ್ಮೆಯಿಂ (ಕಸುಮಾ. ೧-೩). **೫. ಏರ್ಪಡಿಸು ; ನಡೆಸು ; ಜರುಗಿಸು :** ದವಿತಾರಿಮಹಾರಾಜಾಧಿರಾಜವಂಶಕ್ಕಮನಂತವೀರ್ಯ ಸಂಬಂಧಮುಂಟಪನಱಿದು ತದೀಯ ಕುಲವೃದ್ಧರ್ ನಿಮಿರ್ಚಲುಂ ನಿರ್ವಹಿಸಲುಂ ಪೇೞ್ದುದು (ಶಾಂತಿಪು. ೨-೭೭ ಪ); ಸುರಗುರುವಂ ಕಳಿಪುವುದಾದರದಿಂ ಸಂಧಾನಮಂ ನಿಮಿರ್ಚುವುದು (ಗಿರಿಕ. ೬-೧೪). **೬. ನೆರವೇರಿಸು; ಈಡೇರಿಸು; ಸಫಲವಾಗಿಸು :** ವಿನಾಯಕಂ ತಾನ್ನಿಮಿರ್ಚುಗೆ ಕಬ್ಬಮಂ ನಯದಿಂ ಗುಣಾಣ...ವಭೂಷಣಾ (ಪಂಪಭಾ. ೧-೭) ; ಅನಿತಱಿೞವರ ಮನೋರಥಮಂ ನಿಮಿರ್ಚಲೆಂದು ಸೈಪು ಸಾಕಾರತೆವೆತ್ತು ಬರ್ಪಂತೆ (ರಾಜಶೇ. ೩-೭೮ ಪ). **೭. ತೋರಿಸು ; ಪ್ರಕಟಗೊಳಿಸು :** ಉದಾರರಾಗೋದಯಮಂ ನಿಮಿರ್ಚಿದುದು ಕಣ್ಗೆ ವಿಯತ್ತಳಚಾರಣೋದಯಂ (ಆದಿಪು. ೫-೪೬) ; ಸಾರ್ಚಿದ ಲೋಹಾಸನದೊಳಮರ್ಚಿದ ಬೊಂದರಿಗೆ ಪಱಿಯ ಬಿತ್ತರಿಗೆ ಕರಂ ಪೆರ್ಚುವ ಮಹಿಮೆಯನೆಯ್ದೆ ನಿಮಿರ್ಚೆ ಮಹಾಮಕುಟಬದ್ಧರೋಳಿಯೊಳಿರ್ದರ್ (ಪಂಪಭಾ. ೧೪-೨೪). **೮. ಸುರುಳಿಯನ್ನು ಬಿಚ್ಚು,—ಅಗಲವಾಗಿ ಮಾಡು :** ಪಿಶಾಚವೇಷಮಂ ಕೈಕೊಂಡರಮನೆಯಂಗಣದೊಳಿರ್ದ ಪಟಮಂ ನಿಮಿರ್ಚಿಯೆತ್ತಿ ತೋಱಿ ಪಾಡುತ್ತಂ (ವಡ್ಡಾರಾ. ೩೯-೨೪) ; ಮನಃಪ್ರಿಯತಮನ ಬರೆದ ಸಾಭಿಜ್ಞಾನಪಟಮನೀವುದುಮಾಕೆಯುಮದಂ ನಿಮಿರ್ಚಿ ನೋಡಿ (ಆದಿಪು. ೪-೨೨ ಪ); ಅನಂತರಮಾ ಲೇಖನಮಂ ಕಳೆದುಕೊಂಡು ನಿಮಿರ್ಚಿ ನೋಟ್ಪನ್ನೆಗಂ (ಕಾದಂಪೂ. ೮೦೦) ; ರತ್ನಕಂಬಲಮಂ ನಿಮಿರ್ಚಿ ತೋರ್ಪುದುಂ (ಸುಕುಮಾ. ೧೦-೧೧೭ ಪ). **೯. ನೆಟ್ಟಗಾಗು ; ನೇರವಾಗು :** ದೆಸೆಯ ನುಣ್ಣನೆ ನುಂಗಿ ಸೂರ್ಯನ ಹೊಸೆದು ಮುಕ್ಕಿತೊ ರಾಹು . . . ಸಿರ ಹಸರಿಸಿ ನಿಮಿರ್ಚಿತೊ (ಸಾಳ್ವಭಾ. ೫-೨). **೧೦. ಉಂಟುಮಾಡು ; ಉಂಟಾಗಿಸು :** ಸಿದ್ಧರನಂತಸುಖಪ್ರಯುಕ್ತರಭ್ಯುದಯಸುಖಂಗಳಂ ನಮಗೆ ಮಾಡಿ ನಿಮಿರ್ಚುಗೆ ಕಾವ್ಯಸಿದ್ಧಿಯಂ (ಅಜಿಪು. ೧-೨) ; ಮೇಳದವಳಂ ಸತಿ ನಿರ್ಭರಗರ್ಭಭಾರದಿಂ ನೆರ್ಮಿ ನಿಮಿರ್ಚುವಳ್ ಪುರುಳಿಯೊಳ್ ಪರಿಹಾಸವಚೋವಿಲಾಸಮಂ (ಪಂರಾಮಾ. ೩-೧೦೮) ; ವಿಗೆ ತೂರ್ಯಧ್ವನಿಯಂ ನಿಮಿರ್ಚೆ ಬಹುಳೋರ್ವೀಗರ್ಜಿತಂ . . . ಬಂದನಾಜಿಗೆ ಖಗೇಶಂ (ಪರ್ಶಪು. ೮-೪೧) ; ಭವತ್ತನೂಭವ ತ್ರಿಪಿಷ್ಟಕುಮಾರಂಗಂ ಮದೀಯ ನಂದನೆ ಸ್ವಯಂಪ್ರಭೆಕುಮಾರಿಗಂ ಪರಿಣಯಮನೊಡರ್ಚಿ ತಾಮೆಮಗೆ ಮಾಟ್ಪ ಸುಪ್ರೇಮಮಂ ನಿಮಿರ್ಚುವುದು (ಶಾಂತೀಶ್ವ. ೨-೧೨೧ ಪ) ; ನಡಬಾಗ್ನಿಗಳ್ಕೆ ತನ್ನಲ್ಲಿಯ ರತ್ನಮಂ ಕಳಿಪಿತೋ ಕಡಲೀಪುರಿಗೆಂಬ ಮಾತನಲ್ಲಲ್ಲಿ ನಿಮಿರ್ಚುಗುಂ ವಿಪಣಿವೀಧಿಯೊಳೊಪ್ಪುವ ರತ್ನರಾಶಿಗಳ್ (ಪುಷ್ಪಪು. ೨-೮೮) ; ವಾರ್ಧಿತರತ್ತರಂಗನಿನದತ್ಕಾಂಚೀಕಲಾಪಾಂಚಿತಾಸ್ಪದೆಯಂ ಸಾಧಿಸಿ ಕಬ್ಬಿಗಂಗೆ ನೆಲಸಂ ನಿರ್ವ್ಯಾಜದಿಂದಂ ನಿಮಿರ್ಚಿದಗೆಲ್ಲಂ ಭುವನೈಕರಾಮಮಹಿಪಂಗಳ್ಕುಂ ಪೆಱರ್ಗಕ್ಕುಮೇ (ಶಮದ. ೧೫೬ ಪ್ರಯೋ) ; ಖಂಜರೀಟಾಕ್ಷಿಯೊರ್ವಳು . . . ಮುತ್ತಿನ ಸರಗಳಂ ಜಾಣ್ಕೆಯಿಂದಮರ್ಚಿದಳು ಸೌಂದರನ ಬಗೆಗೊಲವಂ ನಿಮಿರ್ಚಲೆಂದು (ಸೌಂದಪು. ೧೩-೩೯). **೧೧. ನಿರ್ಮಿಸು; ರಚಿಸು; ಮಾಡು :** ಅಂತು ತಳತಳ ತೊಳಗುವ ದುಕೂಲದ ಸಕಳವಟ್ಟೆಯೊಳ್ ನಿಮಿರ್ಚಿದಂತಾನುಂ (ಪಂಪಭಾ. ೪-೪೧ ಪ) ; ಅಭಿಷೇಕಮಂ ಜಿನೇಂದ್ರಂಗೆ ಸುರೇಂದ್ರನಂದು ನೆಲೆವೆರ್ಚಿದ ಸಮ್ಮದದಿಂ ನಿಮಿರ್ಚಿದಂ (ಪರ್ಶಪು. ೧೪-೩೯) ; ಸಸಿದಲೆಯಂ ನಿಮಿರ್ಚಿದುರುಕಲ್ಪನೆಯಂ ಪರಿಲಂಘಿಸಲ್ಕಮಂತಸುರಹರಾದಿ ದೇವತತಿಗಾಗದು (ಉದ್ಭಟ. ೧೧-೪೨); ಅತ್ತಣೆನೆಂದು ನಿಮಿರ್ಚುವರತ್ತೆಂದಾಗಿರ್ದ ಪಂಚಮಿಯನಲ್ಲಿ ಕೆಲರ್ (ಶಮದ. ೧೧೬) ; ಪನ್ನೆರಡು ಪೊನ್ನಿಂ ಸಮಸ್ತ ಪೂಜಾದ್ರವ್ಯಮಂ ನಿಚ್ಚ ಮೊದಲಿಸೆ ಶಿವಾರ್ಚನಮನತಿಸಾಂಗದಿಂ ನಿಮಿರ್ಚಿ (ಪದ್ಮರಾ. ೨-೧೫). **೧೨. ಮಾಡಿಸು :** ಗಾಂಗತೋಯದೆ ಸಖಿಯರ್ ನೃಪಾಂಗನೆಗೆ ಮಂಗಳಮಜ್ಜನಮಂ ನಿಮಿರ್ಚಿದರ್ (ಪುಷ್ಪಪು. ೩-೧೧೭). **೧೩. ಬಿತ್ತರಿಸು ; ನಿರೂಪಿಸು :** ಕಿಱಿದೀ ಕಥಾಪರಿಸ್ಪಂದಮಿದಂ ನಿಮಿರ್ಚಿ ಕವಿತಾರಸಮಂ ನೆಱೆ ಪೇೞ್ದಿಲ್ಲ (ಮಲ್ಲಿಪು. ೧-೪೫) ; ಮಲಯಾನಿಲದಂತೆ ಮರಾಳನಂತೆ ಹಂಪೆಯ ಹರಿದೇವನೊಪ್ಪಿರೆ ನಿಮಿರ್ಚಿದ ಕಾವ್ಯವಿಳಾಜನೋತ್ಸವಂ (ಗಿರಿಕ. ೧-೧೪);

ಕಬ್ಬಿಗರ್ ಪದೆದೊಲವಿಂದ ಕೀರ್ತಿಸೆ ನಿಮಿರ್ಚುವೆನೀ ಸುಭಗಪ್ರಬಂಧಮಂ (ಶಬಶಂ. ೬೧-೨); ಕ್ಷಿತಿಗಿದಲೇ ಮಹೋಪಕೃತಿಯೆಂದೆನೆ ಕನ್ನಡದಿಂ ನಿಮಿರ್ಚೆ ಸತ್ಕೃತಿಯಂ . . . ಹರಿದೇವ ರಾಘವ ಷಡಕ್ಷರಿದೇವರನೊಲ್ದು ವಂದಿಪೆಂ (ದಪುಸ್ತ್ವ. ೫ ಪೀಠಿಕಾ ಪ್ರಕರಣಂ). **ನಿಗಚು : ೧೪.** ಕೊಲ್ಲು; ಸಾಯಿಸು : ಸರಕಾರೀ ಅಮಲದಾರರಿಗೇ ವಿಷ ಹಾಕೋ ಅವ ನೀನು ಯಾಕೋ ಅಮಲದಾರನ ನಿಗಚ ದೊಡ್ಡಪ ಅನಿಸಿಗೋಬೇಕಂತ ಮಾಡಿದ್ದಿಯೇನು? (ಗಂಪಾಯಿ. ೧೪೯). **ನಿಗಿಚು : ೧೫.** ಅಗಲಿಸು; ಹಿಗ್ಗಿಸು: ಗುರಿಯನಿಸುವ ಕಣಿಕವ ನಿಗಿಚಿ (ಚಿದಾಪ.೧೧೬-೧೧). **ನಿಗುಚು: ೨.** ಪವನಸುತ ಡೆಂಡಣಿಸಿ ಬಿದ್ದನು . . . ಜವದಿ ಹಸರಿಸಿಕೊಂಡನೊಯ್ಯನೆ ಅವಯವಂಗಳ ನಿಗುಚುತಿದ್ದನು (ಕೌತಿರಾ. ೨೨-೧೯); ಮಂತ್ರದಿಂ ಕುಂಡದೊಳ್ ತುತ್ತುಗಳ ಘೃತಧಾರೆಯೊಳ್ ಬಿಡಲು ಶಿಖಿಗೆದರಿ ನಿಗುಚಿದಂ ನಾಲಗೆಯನು (ತುರಂಗ. ೮೩-೨೯). **೩.** ಮಡಿವಳನ ಮಲಗಿಸಿ ನಿಗುಚಿದನು ಕುಬುಜೆಯ ಕಳೇಬರವ (ಸಿಭಾಗ. ೩-೩-೨೭); ಕೆಳದೀಯ ಕೂದಲು ಜೊಗಚೀಯ ಕಾಯ್ದ್ಹಂಗ ನಿಗುಚಿ ಬೈತಲೆ ತೆಗೆದಾಳ (ಹಳ್ಳಿಯ. ೫೭). **೯.** ನಿಂದೆಯ ನೆಗ್ಗಿಲ ಮುಳ್ಳು ಸ್ವಪ್ರಶಂಸೆಯ ಗೊಳಗುಳಿಕೆ . . . ಕೊಬ್ಬಿನ ಬಡ ಚೊಗಚಿ ನಿಂತಿವೆ ನಿಗುಚಿ! (ಮಾನಸ. ೭೯-೧೩). **೧೫.** ಸೂಲಿಸುವ ಬಗ್ಗಿಸುವ ನೋಯಿಸುವ ಸುಲಿವ ಮರ್ಮಸ್ಥಾನಮಂ ನಿಗುಚುವ ಬಾಲೆಯರ ಹಂಗಿಲ್ಲ (ಸಿದ್ಧರಾ. ೧-೫೫). **೧೬.** ಹೊಡೆ; ಬಡಿ; ಚಚ್ಚು; ಹಣಿ: ಚಿನ್ನವ ಕಾಸಿದಡೆ ಕರಗಿಸಿದಡೆ ಕಡಿದಡೆ ನಿಗುಚಿದಡೆ ಬಣ್ಣವಧಿಕವಪ್ಪುದು (ಚನ್ನಪ.ಕ.೧೨೪-೨೪೯); ಬಳವತ್ಕಾಲನ ಕೋಪದ ಬಂಟಂ ಪ್ರಳಯಾನಳನಿಂ ಕಾಯಿಸಿ ರಾಹುವ ಕೇತುವ ಬಲಿದಿಕ್ಕುಳಿನಿಂ ತೆಗೆದಂಥಾಸುರನೆರ್ಗಲ್ಲೊಳ್ ವಜ್ರದ ಸಮ್ಮಟಿಗೆಯ ನಿಗುಚಿ (ವೀರೇಚ. ೭-೯); ಕರ್ಣನ ನೆನಹಿನಲಿ ಪುಟವಿಟ್ಟು ಶಕುನಿಯ ನೀತಿಯಲಿ ನಿಗುಚಿ ಅನುಜಮತದಲಿ ವಿಸ್ತರಿಸಿ ಮೈದುನನ ನುಡಿಯಲಿ ಬಣ್ಣವಿಟ್ಟನು (ಕುಪ್ಯಾಉ. ೨-೨೨); ಕುಡಿದ ರಕುತದ ಜಿಗುಳೆ ನೀನಿನ್ನೊಡಲ ನಿಗುಚುವೆ ನಿಲ್ಲೆನುತ ಬಲನೆಡನ ಬಿರುದರ ಮೇಳದಲಿ ತೂಗಿದನು ವೃಷಸೇನ (ಕುಪ್ಯಾಕ. ೨೦-೪). **೧೭.** ಪ್ರಯೋಜನಕ್ಕೆ ಬರು; ಉಪಯೋಗಕ್ಕೆ ಬರು : ಓಡಲಜೀಯದೆ ಭೀಮನಂಬಿನ ರೂಢಿ ನಿಗುಚದೆ ಕಾದುವರೆ ಜಯ ಜೋಡಿಸದೆ ಜೋವಳಿಸಿ ಜವಗುಂದಿದನು ಕಲಿಭೀಮ (ಕುಪ್ಯಾಕ. ೨೦-೧೧). **೧೮. (ಅಲಂ)** ಹಿರಿಮೆಯನ್ನುಂಟುಮಾಡು; ಅಗ್ಗಳಿಕೆಯನ್ನುಂಟುಮಾಡು : ದೇವರಾವೆಂದೆಮ್ಮನುದ್ಧಕೆ ನೀವು ನಿಗುಚದಿರಾವು [ಪಾಠಾಂ. ನಿಗುರದಿರಾವು, ನೆಗಹಿದರಾವು] ಮರ್ತ್ಯರು (ತೊರರಾ. ೬-೪-೫೮). **ನಿಗುರ್ಚು : ೨.** ನಾಗೇಂದ್ರಂ ನಾಲಗೆಗಳಂ ನಿಗುರ್ಚಿದವೊಲ್ ಸರ್ತ್ಸಾಂದ್ರರುಚಿಖಡ್ಗಮರಸನ ರುಂದ್ರೋಜ್ಜ್ವಲಕರದೋಳಿರ್ದುದು (ಹವ್ಯಾರ. ೩-೩೭). **ನಿಮುರಿಚು : ೧೬.** ಶಿವಕೃಪೆಯೆಂಬ ಚಮ್ಮಟಿಗೆಯಿಂ ಪೊಡೆದು ನಿಮುರಿಚಿ ಪರಶುವೆಂಬಾಯುಧಮಂ ಮಾಡಿ (ನನ್ನಚಾ. ೧-೪೮ ಪ). **ನಿವುಚು : ೩.** ಅತಿವೃದ್ಧ ತಾಪಸಂ ನಸಿದೊಯ್ಯನೊಯ್ಯನೈತಂದು ನೆಳಲಂ ಸಾರ್ದು ಕುಸಿದ ಬೆನ್ನಂ ನಿವುಚಿಕೊಳುತ ಶಿವಶಿವ ಮಹಾದೇವಯೆನುತಂ ಕುಳ್ಳಿರೆ (ಸೋಮಚ. ೩-೮೧). **೧೫.** ಅಜಾತರಾ ಘಟ್ಟಗಳ ಪರಿಯನು ಇರಿಸಿ ಹೂವನು ತೋಚು ನಿವುಚಲು ಯರಕ ಮ್ಯಾಣದ ಕೆಲಸದಂತೆಯು ಹಚುದು ನಿವುಚಿದವು (ರೇಸಕಾ. ೫-೫೮). [ನಿಮಿರ್$_1$ + -ಚು$_1$]

**ನಿಮಿರ್ನವಿರ್** (ನಾ). ಮೇಲೆದ್ದ ಮೈಗೂದಲು; ರೋಮಾಂಚ; ಪುಳಕ : ಬಳ್ಳಿವೊದರ್ಮಡಲ್ತು ಸೊಂಪೇರುದುದು; ಮೇಣ್ ಪೊಸಸುಸಿಲೊಳ್ ಸಸಿದೆಟ್ಟ ನಿಮಿರ್ನವಿರೆನೆ ಪಸಲೆಯೆಸೆದುದು (ರಾಮಾಶ್ವ. ೩-೧೭). [ನಿಮಿರ್$_1$ + ನವಿರ್]

**ನಿಮಿರ್ವೇಱು** (ಕ್ರಿ). ನೀಳವಾಗು; ಉದ್ದವಾಗು : ನಯಂಬಡೆದ ರೋಮಚಯಂ ನಿಮಿರ್ವೆತ್ತ ವಾಳಮುತ್ಕೃತ್ತಮಲಕ್ಷಣಂ ಮೆಱೆವ ವಾರುವವಂ ಪದೆದಿತ್ತನಾ ನೃಪಂ (ದಶಕು.೫-೩೪). [ನಿಮಿರ್$_2$ + ಪೆಱು$_1$]

**ನಿಮಿಷ**(ನಾ).೧. ರೆಪ್ಪೆ ಹೊಯ್ಯುವುದು; ಕಣ್ಣು ಮಿಟುಕಿಸುವುದು: "ಪಳಚುವಕ್ಷಿ ನಿಮಿಷಂ ನಿಮೇಷಮೆನಿಕ್ಕುಂ" (ಮಂಗರಾ. ೯೪-೩); ನಿಮಿಷ ತಡೆದರೆ ಅನಿಮಿಷನಾದಾನೆ? (ಗಾದೆ). **೨.** ಒಂದು ಸಲ ರೆಪ್ಪೆ ಹೊಡೆಯುವಷ್ಟು ಕಾಲ; ಅತ್ಯಲ್ಪಕಾಲ: "ನಿಮಿಸ ನಿಮಿಷಂ" (ಶಬ್ದಮಂ. ೧೯); "ನಿಮಿಸಂ ನಿಮಿಷವು" (ಕಶಿರ. ೫೪); ಒಂದು ನಿಮಿಷವಾದರೆಯೂ ನಿಮ್ಮ ಶರಣರ ಸಂಗದಲ್ಲಿರಿಸಯ್ಯಾ (ಬಸವ. ೬೧); ನಿಮಿಷಮಂಗಲ್ಪು ತಾನಿರದವಳ್ ತಳರ್ದಿಂದಿನಿತೊಂದು ಪೊಱ್ತು ದೇಕೆಮ ತಡೆದಿರ್ದಳ್ (ಕುಸುಮಾ.೧೩-೩೭); ಸಂಗತಭುವನತ್ರಯರಾಜ್ಯಾಂಗನೆಯಂ ನಿಮಿಷದಿಂ ವಶಂ ಮಾಡುವ ಮಂತ್ರಂಗಳಂ . . . ಸಹಜಶುಭಮತಿ ಪೇೞ್ದಂ (ಪಾರ್ಶ್ವಪು. ೧೫-೨೪); ನಿಮಿಷದೊಳೆ ತುಂಬಿ ನೀಡಿದನಮರೇಶಂ ಸಲಿಲದೇವಿಯರ್ ಕಾಣಿಕೆಗೊಟ್ಟಮೃತದ ಕುಂಭಂಗಳ ಸುರಸಮಿತಿಗೆ ಕೊಡುತಿರ್ಪ ಮಾಣಿಕ್ಯಯಿದೆಂಬಿನೆಗಂ (ಬಾಥಪು. ೮-೮೭); ಕರ್ಣನ ಹೊಳ್ಳುಗಳೆದನು ಪಾರ್ಥ ನಿಮಿಷದಲಿ (ಕುಪ್ಯಾಕ. ೨೩-೨೫); ಕೇಳಿಸಿತು ಬಳಿಕಖಿಳಪೃಥ್ವೀಪಾಲಪಂಕ್ತಿಯನಶ್ವಮೇಧವಿಶಾಲಸುತಕಾಮೇಷ್ಟಿಯಧ್ವರವಾರ್ತೆ ನಿಮಿಷದಲಿ (ತೊರರಾ. ೧-೭-೧೬); ಕುಂಬಾರನಿಗೆ ವರುಷ, ದೊಣ್ಣೆಗೆ ನಿಮಿಷ (ಗಾದೆ). **೩.** ಒಂದು ಗಂಟೆಯ ಅರುವತ್ತನೆಯ ಒಂದು ಭಾಗ; ಅರವತ್ತು ಸೆಕೆಂಡುಗಳಷ್ಟು ಕಾಲ; ಮಿನಿಟ್ಟು : ಅದರೊಡನೆ ತೆಂಗಿನಕಾಯಿಹಾಲು, ಉಪ್ಪು ಮತ್ತು ಆಲೂಗಡ್ಡೆ ಹಾಕಿ ಕೆಲವು ನಿಮಿಷಗಳ ವರೆಗೆ ಅರಲು ಬಿಡಬೇಕು (ಅಡುಸೌ. ೯೩); ಒಂದೆರಡು ನಿಮಿಷ ಬಡಬಡಿಸುತ್ತಿದ್ದರು (ಮಹಾತ್ಮಾ. ೧೪೩); ಶಾಲೆ ಬಿಡುವುದಕ್ಕೆ ಹದಿನೈದು ನಿಮಿಷಗಳು ಮಾತ್ರ ಇವೆ (ನಾಡಿಗೇ. ೧೦೯). **೪.** [ಜ್ಯೋತಿ]ಒಂದು ಖಗೋಳೀಯ ರೇಖಾಂಶದ ಅರುವತ್ತನೆಯ ಒಂದು ಭಾಗ: ಖಗೋಳೀಯ ರೇಖಾಂಶಗಳನ್ನು ಡಿಗ್ರಿಗಳಿಂದ ಅಳೆಯುವುದಕ್ಕಿಂತ ಘಂಟೆಗಳಿಂದ ಅಳೆಯುವುದು ಹೆಚ್ಚು ರೂಢಿಯಲ್ಲಿದೆ . . . ಒಂದು ಘಂಟೆ ರೇಖಾಂಶಾಂತರವನ್ನು ೬೦ ಸಮಭಾಗಗಳನ್ನಾಗಿ ಮಾಡಿ ಅವನ್ನು ನಿಮಿಷಗಳೆಂದು ಕರೆಯುತ್ತಾರೆ (ನಕ್ಷತ್ರ. ೩೭). [ಸಂ.]

**ನಿಮಿಷಮಾತ್ರ** (ನಾ). ಕೇವಲ ಒಂದು ನಿಮಿಷ; ಅತ್ಯಲ್ಪಕಾಲ : ಹಿಳುಕ ಹೊದಿಸಿದಖಿಲದೆಸೆಗಳ ನಿಲುಕಲರಿದೆನೆ ನಿಮಿಷಮಾತ್ರಕೆ ಕಳಚಿ ಕಳೆದನು ಭೀಮ ತೊಟ್ಟನು ಮತ್ತೆ ಮಾರ್ಗಣವ (ಕುಪ್ಯಾದ್ರೋ.೧೩-೩೫); ನಿಮಿಷಮಾತ್ರದಲ್ಲೇ ಈ ಘಟನೆ ನಡೆದು ಹೋಯಿತು (ರೂಢಿ). [ಸಂ.]

**ನಿಮಿಷಾದೇವಿ** (ನಾ). ಒಬ್ಬ ದೇವತೆಯ ಹೆಸರು : ಜೀನಗಾರರು . . . ಇವರ ಕುಲದೇವತೆಯು ಮೈಸೂರುಶೀಮೆಯಲ್ಲಿ ಇರುವ ನಿಮಿಷಾದೇವಿಯು (ಕಭಾಗೆ. ೧೫೪). [?]

**ನಿಮಿಷಾರ್ಧ** (ನಾ). ನಿಮಿಷದ ಅರ್ಧದಷ್ಟು ಕಾಲ : ನಿಮಿಷಾರ್ಧಕ್ಕೊರ್ಮೊದಲೊಳೆ ಸಮನಿಸೆ ಪರ್ಯಾಪ್ತಿ (ಮಲ್ಲಿಪು. ೧೩-೧೩೪); ನಿಮಿಷಾರ್ಧಂ ಮುತಿಗೆಯ್ದೊಡಪ್ಪುದೆ ವಲಂ ಚಕ್ರೇಶ್ವರತ್ವಂ (ಶಾಂತೀಶ್ವ. ೧೭-೯೭); ನಿನ್ನಂ ಕಂಡು ನಿಮಿಷಾರ್ಧದಿ ಪೋಪುದು (ಮಲ್ಲಕಾ. ೧೫-೧೯೧); ರಾಘವನಾಡಿಸುವ ಮಱುಕೋಡಗಂಗಳ ನಾವು ನಿಮಿಷಾರ್ಧ ನೋಡುತಿರೆ (ಕೌತಿರಾ. ೧೫-೨೭). [ನಿಮಿಷ + ಅರ್ಧ]

**ನಿಮಿಸ, ನಿಮುಷ, ನಿವಿಸ** (ನಾ).= ನಿಮಿಷ **೨:** "ಇತ್ವಕ್ಕೆ—ನಿಮಿಷ—ನಿಮಿಸ" (ಶಮದ. ೨೭೧ ಪ್ರಯೋ); "ನಿಮಿಸ (ನಿವಿಸ)—ನಿಮಿಷ" (ತದ್ಭಕೋ. ೨೨). **ನಿಮುಷ :** ಎಂದು ನಳನೃಪ ನುಡಿಯೆ ಭೂವರ ಮುಂದಜಾಯದೆಂತೆಂದು ಬೆಸಗೊಳೆ ಒಂದು ನಿಮುಷಕೆ ಲೇಖನಾ

ರ್ಥದಿ ಒದಗಬೇಕೆಂದ (ಅಂಬಿಕಾ. ೪೮-೨೮) ; ವಿನೋದದೊಳಗವನೀಶ ಕಳೆದನು ವರುಷ ನಿಮುಷಾಗಿ (ಜೆಜ್ಞ ಪು. ೬೪-೫) ; ಅವರ ಪದಕ ಕಿರೀಟ ಕಂಕಣವವರ ಕರ್ನಾಭರಣ ಕೇಯೂರವನು ಕಡಿಕಡಿದೊಟ್ಟಿದನು ಕಲಿ ಪಾರ್ಥ ನಿಮುಷದಲಿ (ಕೃಕರ್ಣಾ. ೩-೨೩). **ನಿವಿಸ :** "ನಿವಿಸ ನಿಮಿಷಂ" (ಶಬ್ದಮಂ. ೯೧) ; ಅರೆನಿವಿಸದೊಳಗೆ ಧರೆಗೆ ನಾಂ ಕೆಡಹದಿರೆ . . . ಆಘಂ ಘಟಿಸಲೆನಗೆಂದು ಪೂಣ್ಕೆಗೈದು (ಶೀಷಂ. ೩೧-೧೮) ; ಅವನಿಯಲಿ ನಿನ್ನುಳಿಯುಂತೊರ್ವಳೆ ನಿವಿಸವಾದರು ಜೀವಿಸೆನು (ಸೀತಾಚ. ೩-೨೬) ; ನಿನ್ನ ಈ ಕುನ್ನಿಗಳು ಇನ್ನರೆನಿವಿಸದೊಳಗಾಗಿ ತೊಲಗಿಹೋಗಿರದಿದ್ದರೆ, ನೀನು ಯಮಪಾಶದಲ್ಲಿ ಹಲ್ಗಿರಿಯುತ್ತಿರುವುದು ಖಂಡಿತ (ಮಂತ್ರಶ. ೮೩-೪). [<ಸಂ. ನಿಮಿಷ]

△ **ನಿಮಿಟಿರ್** 'ನಿಮಿರ್$_1$' ನೋ.

**ನಿಮಿಾಲನ,** ನಿಮಿಾಳನ (ನಾ). ೧. (ಕಣ್ಣು)ರೆಪ್ಪೆಯನ್ನು ಮುಚ್ಚುವುದು : ಅಕ್ಷಿನಿಮಿಾಲನ ಮಾಡದೆ ನಕ್ಷತ್ರದ ಗಣ ಗಗನದಿ ಹಾರದಿದೆ (ನಾದಲೀ. ೫೦-೧೩). ೨. ದೃಷ್ಟಿಯನ್ನು ತಗ್ಗಿಸುವುದು; ಕೆಳಗೆ ನೋಡುವುದು ; ಅಧೋಮುಖವಾದ ದೃಷ್ಟಿ : "ಮೇಲ ದೀಕ್ಷಿಸಲದುನ್ಮೀಲನಾಖ್ಯಂ ಅಕ್ಷಿಯಿಂ ಕೆಟಗೆ ನೋಡಲ್ ನಿಮಿಾಲನ ಮೆನಿಕ್ಕು" (ಮಂಗರಾ. ೯೪-೩). 'ಉನ್ಮೀಲನ' ಪರಾ. ೩. (ಅರಳಿ ರುವ) ಹೂವು ಮುಚ್ಚಿಕೊಳ್ಳುವುದು,—ಸಂಕೋಚನಗೊಳ್ಳು ವುದು : "ಮುಗುಳ್—ನಿಮಿಾಲನೇ (ಕಣ್ಣು ಮುಚ್ಚು), ಕುಟ್ಮಲೇ ಚ (ಮೊಗ್ಗು)" (ಶಮಧಾ) ; ಇಲ್ಲಿ ಲೀಲಾಕಮಲನಿಮಿಾಲನವು ಯಾವ ಅಭಿ ಪ್ರಾಯಕ್ಕೆ ಸೂಚಕವೋ ಅದನ್ನು ನೇರವಾಗಿ ಶಬ್ದಗಳಿಂದಲೇ ಹೇಳಿ ಬಿಟ್ಟಿದೆ (ಧ್ವನ್ಯಾಲೋ. ೯೮). ೪. ಸಾವು ; ಮರಣ : "ಮೃತ್ಯು ಮರಣಂ ದೀರ್ಘನಿದ್ರೆ ನಿಧನಂ ನಾಶಮತ್ಯಯಂ ಕಾಲಂ ನಿಮಿಾಲನಂ ನಿಷ್ಠೆ ವಿನಿವೃತ್ತಿಯೆನೆ ಸಾವಕ್ಕುಂ" (ಮಂಗರಾ. ೧೧೬-೩). ೫. [ಕಾವ್ಯಮಿಾ] ಅರ್ಥಾಲಂಕಾರಗಳಲ್ಲಿ ಒಂದು ; ಒಂದು ಪದಾ ರ್ಥವು ತನಗೆ ಸದೃಶವಾದ ಪದಾರ್ಥದಲ್ಲಿ ಐಕ್ಯವನ್ನು ಪಡೆದು ಆ ಸದೃಶಪದಾರ್ಥಕ್ಕಿಂತ ಬೇರೆಯಾಗಿ ಕಾಣದಿರುವುದು ; ಸಾದೃಶ್ಯವುಳ್ಳ ವಸ್ತು ತನ್ನ ಸಾಮ್ಯವಸ್ತುವಿನಲ್ಲಿ ಬೆರೆತು ಭೇದ ತೋರದಿರುವುದು : ಜಾತಿ ಸಹೋಕ್ತಿ . . . ಸಾರ ನಿಮಿಾಲನಂಗ ಳೆಂದೀ ತೆಱದಿಂದಮೊಂದಿ ನೆಗಟ್ಟಿಂ ನೆಱೆ ವಾಸ್ತವಭೇದವೃತ್ತಿಗಳ್ (ಕಾವ್ಯಾವ. ೬೦೭). **ನಿಮಿಾಳನ :** ೪. "ನಿಧನಂ, ನಾಶಃ . . . ನಿಮಿಾಳನಂ, ದೀರ್ಘನಿದ್ರಾ—ಈ ೧೨ ಸಾವು" (ಹಲಾಯು. ೧೧೩-೬). ೫. ಪ್ರಕೃತಿಯಿನಲ್ಲದೊಡಾಗಂತುಕಹೇತುವಿನಿಂ ಪ್ರಕೋಪರಾಗಾದಿ ಮನೋವಿಕೃತಿಯನುಪಲಕ್ಷಿಸಿ ತಿಳಿಯೆ ಕಾಣದಿರಲದು ನಿಮಿಾಳನಂ ಪೆಸರಿಂದಂ (ಕಾವ್ಯಾವ. ೬೯೧). [ಸಂ.]

**ನಿಮಿಾಲಿಕೆ** (ನಾ). ಕಣ್ಣು ಮುಚ್ಚುವಿಕೆ : 'ಗಜನಿಮಿಾಲಿಕೆ' ಪರಾ. [ಸಂ. ನಿಮಿಾಲಿಕಾ]

**ನಿಮಿಾಲಿತ,** ನಿಮಿಾಳಿತ (ಗು). ೧. ಮುಚ್ಚಿದ:'ನಿಮಿಾಲಿತನಯನ' ಪರಾ. (ನಾ). ೨. ಮುಚ್ಚುವಿಕೆ : ಕಡಿಜಾವದ ಇರುಳಿನ ತೊಡೆ ಮೇಲೆ ಮೂಡುವ ಉಷೆಯ ನಿಮಿಾಲಿತದೋಲೆ ಶಿಶು ಮಲಗಿರೆ, ಕಾವ್ ಕೂತಿದೆ ಮೇಲೆ ಮಾತೃಪ್ರೇಮದ ನಿಃಸ್ವಾರ್ಥ (ಕೋಗಿಲೆ. ೫೯-೮೬). **ನಿಮಿಾಳಿತ :** ೧. ಸುಖನಿಮಿಾಳಿತೋನ್ಮೀಳಿತನಯನಂಗಳು ಮುಕು ಳಿತಮುಂ ಕುಸುಮಿತಮುಮಾದ . . . ವಧೂವರರಾಗವಿಷಯವಲ್ಲರಿ ಫಲಿತಮಾದುದೆನಿಸಿ (ಜಗವಿ. ೨-೫೨ ವ). ೨. ಲೋಚನಂಗಳನತ್ಯುನ್ಮೀಳಿತ ಮುಮತಿನಿಮಿಾಳಿತಮುಮಾಗಲೀಯದೆ (ಚಾವುಂಪು. ೪೪೩). [ಸಂ.]

**ನಿಮಿಾಲಿತನಯನ** (ನಾ). ಮುಚ್ಚಿದ ಕಣ್ಣುಳ್ಳವನು : ಅಂತು ಸಹಸ್ರನಯನಂ ಸುಖರಸನಿಮಿಾಲಿತನಯನನಾಗೆ (ಅಜಪು. ೮-೧೬ ವ). [ನಿಮಿಾಲಿತ + ನಯನ]

**ನಿಮಿಾಲಿತಾಕ್ಷ** (ನಾ). ೧. ಮುಚ್ಚಿದ ಕಣ್ಣುಳ್ಳದು : ರೋಮಂಥ ಲೀಲಾತತ್ಪರತೆಯಿಂ ದರನಿಮಿಾಲಿತಾಕ್ಷಂಗಳಾದ ಕಾಡೆರ್ಮೆಯ ಮೊಗದಿ ನುಗುವ ನೊರೆಯನುರುಳಿಗೊಂಡು ತಂದಡವಿಯ ಗಿಡುಗಳೊಳ್ ಗುಡಿ ಗಟ್ಟಿದಂತೆ ತೊಡರ್ಚಿಯುಂ (ಚಂದ್ರಪು. ೮-೪ ವ). ೨. = ನಿಮಿಾಲಿತ ನಯನ : ಆ ಲಲಿತತಲ್ಪದ ಯಶೋದಾಬಾಲಕಂಗಭಿನಮಿಸಿ ನಿಮಿಷ ನಿಮಿಾಲಿತಾಕ್ಷನು ಕಂದೆಱೆದು ಮುನಿಜನಕೆ ಕೈಮುಗಿದು (ಕುವ್ಯಾಸ. ೯-೧). [ಸಂ. (ನಿಮಿಾಲಿತ + ಅಕ್ಷಿ + –)]

**ನಿಮಿಾಲಿಸು** (ಕ್ರಿ). ಕಣ್ಣು ಮುಚ್ಚು : ಜ್ವಾಲಾಸಟಾಳಿಗಳ್ಗೆ ನಿಮಿಾ ಲಿಸಿದಿಂದ್ರನ ಸಹಸ್ರಲೋಚನಮೆನಲುನ್ಮೀಲಿಸೆ ಮಹಾಸ್ತ್ರದಿಂ ವನಮಾಲಾ ಧರನೆಚ್ಚು ಶಕ್ತಿಯಂ ಖಂಡಿಸಿದಂ (ಜಗವಿ. ೧೨-೪೪). [ನಿಮಿಾಲನ + –ಇಸು$_3$]

**ನಿಮಿಾಳನ** 'ನಿಮಿಾಲನ' ನೋ.

**ನಿಮಿಾಳಿತ** 'ನಿಮಿಾಲಿತ' ನೋ.

**ನಿಮುರಿಚು** 'ನಿಮಿರ್ಚು' ನೋ.

**ನಿಮುರು** 'ನಿಮಿರ್$_1$' ನೋ.

**ನಿಮುಷ** 'ನಿಮಿಸ' ನೋ.

**ನಿಮೇಷ** (ನಾ). ೧. ರೆಪ್ಪೆ ಹೊಡೆಯುವಿಕೆ : "ಪಳಚುವಕ್ಷಿ ನಿಮಿಷಂ ನಿಮೇಷಮೆನಿಕ್ಕು". (ಮಂಗರಾ. ೯೪-೩). 'ವಿಗತನಿಮೇಷ' ಪರಾ. ೨. ಕಣ್ಣನ್ನು ಮುಚ್ಚುವಿಕೆ ; ನಿಮಿಾಲನ : ನಿಜನಿಮೇಷೋನ್ಮೇಷ ಮಾತ್ರಂ ಜಗತ್ತ್ರಯಸೃಷ್ಟಿಕ್ಷಮನಾದ ಕೃಷ್ಣನ ಮಹತ್ತ್ವಕ್ಕೇನಿದಾಶ್ಚ ರ್ಯಮೇ (ಜಗವಿ. ೩-೬೭) ; ಈ ಸೂತ್ರದಲ್ಲಿ ಆತ್ಮನ ಚಿಹ್ನೆಗಳನ್ನು ಸೂಚಿಸಲಾಗಿದೆ. (೧) ಪ್ರಾಣ, (೨) ಅಪಾನ, (೩) ನಿಮೇಷ, (೪) ಉನ್ಮೇಷ . . . (೧೨) ಪ್ರಯತ್ನ (ಜೀವಾತ್ಮ. ೩೪). ೩. ಅತ್ಯಂತ ಸೂಕ್ಷ್ಮವಾದ ಕಾಲಭಾಗ; ಎರಡು ಲವದಷ್ಟು ಕಾಲ : "ಸಮಯ ಮನೇಹಂ ಕಾಲಂ ನಿಮೇಷ ಕಾಷ್ಠಾದಿ ತದ್ವಿಶೇಷಮದೆನಿಕುಂ"(ವಸ್ತು ಕೋ. ೧೫-೧) ; ವ್ಯವಹಾರಕಾಲಮೆಂಬುದು . . . ಸಮಯಾವಲಿಕೋ ಚ್ಛ್ವಾಸಸ್ತೋಕನಿಮೇಷನಾಡಿಕಾಮುಹೂರ್ತದಿವಸಪಕ್ಷಮಾಸರ್ತ್ವಯನಸಂ ವತ್ಸರಾದಿಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು(ಆದಿಪು. ೬-೪೮ ವ); ಒಮ್ಮೆ ಕಣ್ಣೆವೆಯನಿಕ್ಕುವನಿತಱ ನಾಲ್ಕುಭಾಗದೊಳೊಂದು ಭಾಗವೇ ತೃ[ತ್ರು]ಟಿಯೆನಿಸುವದು ಮತ್ತೆರಡಾಗಲೊಂದು ಲವವೆನಿಸು ವದು ಮತ್ತೆರಡಾಗಲೊಂದು ನಿಮೇಷವೆನಿಸುವದು (ವಿವೇಕ. ೩೨೦). ೪. ಒಂದು ನಿಮಿಷದ ಅರುವತ್ತನೆಯ ಒಂದು ಭಾಗ ; ಒಂದು ಸೆಕೆಂಡು : ಹೆಣಿಗೆಯ ದಬ್ಬಳದ ಒಂದು ತುದಿಯನ್ನು ಪರೀಕ್ಷೆಮಾಡ ಬೇಕಾದ ಹಾಲಿನಲ್ಲಿ ಕೆಲವು ನಿಮೇಷಗಳು (ಎಂದರೆ ಸೆಕೆಂಡುಗಳು) ಮುಳುಗಿಸಿಡಬೇಕು (ವಿಜ್ಞಾನ. ೨೬). [ಸಂ.]

**ನಿಮೇಷಶೂನ್ಯ** (ಗು). ಎವೆಯಿಕ್ಕದಿರುವ ; ರೆಪ್ಪೆ ಹೊಡೆಯ ದಿರುವ : ನವಕುಮಾರನು ನಿಮೇಷಶೂನ್ಯವಾದ ಚಕ್ಷುಗಳಿಂದಾ ನೂತನ ನೂತನವಾಗುತ್ತಿದ್ದ ಶೋಭಾರಾಶಿಯನ್ನು ನೋಡುತ್ತಿದ್ದನು (ಕಪಾಕುಂ. ೪೫). [ನಿಮೇಷ + ಶೂನ್ಯ]

**ನಿಮೇಷಿತ** (ನಾ). [ನಾಟ್ಯ] ಒಂಬತ್ತು ಬಗೆಯ ಎವೆಯ ಚಲನ ಭೇದಗಳಲ್ಲಿ ಒಂದು ; ರೆಪ್ಪೆಗಳನ್ನು ಮುಚ್ಚುವುದು : ಪ್ರಸೃತ, ಕುಂಚಿತ, ಉನ್ಮೇಷಿತ, ನಿಮೇಷಿತ, ವಿವರ್ತಿತ, ಸ್ಫುರಿತ, ಪಿಹಿತ, ವಿತಾಡಿತ, ಸಮ—ಈ ಒಂಬತ್ತು ಎವೆಯ ಭೇದಂಗಳ್ (ಲಾಸ್ಯರಂ. ೩-೪೯ವ). [ಸಂ.]

**ನಿಮೋನಿಯ** 'ನ್ಯುಮೋನಿಯ' ನೋ.

**ನಿಮ್ನ** (ಗು). ೧. ತಗ್ಗಾದ ; ಆಳವಾದ : ತೆವರೆಲ್ಲಂ ದೇವತಾಮಂದಿರ ನಿವಹಮೆ ನಿಮ್ನಸ್ಥಳೀರಾಜಿಯೆಲ್ಲಂ ಸುವಿರಾಜದ್ದೀರ್ಘಿಕಾಸಂಕುಳಭರಿತ ಪಯಃಪೂರ ನೀರೇಜಕಾಸಾರವೆ (ಎಇ. XVI, ೩೮–೨೪ ; 1152). ೨. ಕೀಳಾದ ; ಕೆಳಮಟ್ಟದ : ದರಿಯುರದೆ ಗಿರಿಯಿಲ್ಲ, ನೆರಳಿರದೆ ಬೆಳಕಿಲ್ಲ, ಮರಣವಿಲ್ಲದೆ ಜನನ ಜೀವನಗಳಿಲ್ಲ ವರಗುಣೋನ್ನತಿಗೆ ನಿಮ್ನಗುಣಂಗಳೊಡ ವುಟ್ಟು ತೆರೆ ಬೀಳದೇಳುವುದೇ ? (ಸಂಕುಕ. ೨೯೩) ; ಮಾನವಸಂಸ್ಕೃತಿ ಮತ್ತು ಸಂಸ್ಕೃತಿವಿಶೇಷಗಳ ಜನ್ಮಭೂಮಿಯಾದ ಏಶಿಯ . . . ಈಗ ತೀರ ನಿಮ್ನಹಂತವನ್ನು ಮುಟ್ಟಿದೆ (ಏಶಿಸಂ. ೧). (ನಾ). ೩. ಬಿಲ; ರಂಧ್ರ ; ಕುಳಿ : "ನಿಮ್ನಂ, ಅಗಾಧಂ . . . ದರಃ – ಈ ೧೫ ಕುಬಿಲ" (ಹಲಾಯು. ೧೦೩–೨). ೪. ಆಳವಾಗಿರುವ ಪ್ರದೇಶ ; ಆಳವಾಗಿರು ವುದು: "ನಿಮ್ನಂ, ಗಭೀರಂ, ಗಂಭೀರಂ–೩ ಆಳವಾಗಿರುವುದರ ಹೆಸರುಗಳು, ಅಂದರೆ ಘಾತವುಳ್ಳದ್ದು" (ಸಿದ್ಧಾಂತಿ. ೮೦); ಎಸೆವೀ ನಿಮ್ನೋನ್ನತಂಗಳ್ ವಿರಾಜಿಸಿ ಚೆಲ್ವಿಂಗೆಡೆಗೊಂಡುವು (ಆದಿಪು. ೪–೪); ತತ್ತರುಣಿಯಾ ಪೂರ್ವ ತಾಪತ್ರಯಂ ಪೋಪುದೆನುತಂ ಮುಂದೆ ಸಾರ್ವಂತೆ ತ್ರಿವಳಿಯುಡಗಿದುವು ಶಿವತತ್ವಮದು ಬೇರ್ವರಿಯಲಜ್ಞಾನಕೂಪ ನೆಲೆಗೆಟ್ಟುದೆನೆ ನಾಭಿ ನಿಮ್ನ ವನುಳಿದುದು (ಚೆಬಪು. ೪–೧೩) ; ಬರುತಬರುತಂ ಮುಂಗಡೆಯ ಕಂಡರು ಮಹಾಪಾತಾಳನಿಮ್ನದ ಪರಿಖೆಯಿಂದಟ್ಟಣೆಯ ಸಹ ಕಂಗೆಸೆವ . . . ಮಯೂರಪುರವಂ (ಶಂಕವಾ. ೨–೨೩) ; ಪರ್ಣಶಾಲೆಗೆ ಸಮೀಪಮಾ ನಿಮ್ನದೊಳ್ . . . ಗೋದಾವರಿಯ ತೆರದಿ ಪರಿದಿರಲ್ ಕಾಲನದಿ (ಶ್ರೀರಾಮಾ. ೧೯೬–೬೮). [ಸಂ.]

**ನಿಮ್ನಗಾತಟ** (ನಾ). ನದಿಯ ತೀರ ; ಹೊಳೆಯ ದಡ : ಸಿಂಧುವಿ ನೊಳ್ ಕೂಡಿದ ಗುಹಾಮಧ್ಯದೊಳುನ್ಮಗ್ನನಿಮಗ್ನಜಲನಿಮ್ನಗಾತಟ ದೊಳ್ ಬೀಡಂ ಬಿಡಿಸಿ (ಆದಿಪು. ೧೩–೫೦ ವ). [ಸಂ.]

**ನಿಮ್ನಗೆ** (ನಾ). ಹೊಳೆ ; ನದಿ : "ಹ್ರದಿನಿ ತರಂಗಿಣಿ ನಿಮ್ನಗೆ ನದಿ . . . ಧುನಿ ತೊಱೆ" (ವಸ್ತುಕೋ. ೨೩–೧೧) ; "ನದಿ . . . ನಿಮ್ನಗೆ ಸರಸ್ವತಿ ದ್ವೀಪವತಿಯಾಪಗೆಯೆನೆ ತೊಱೆಗೆ ನಾಮಂ" (ಸಂಗರಾ. ೧೨೨–೧೦) ; ಬೇಸಗೆಗೆ ಸಿಲ್ಕಿದ ನಿಮ್ನಗೆಯಂತೆ . . . ಕನ್ನೆವೇಟದ ಪೊಸಗಿಚ್ಚಿನೊಳ್ ಪೊರಳುತಿರ್ದು ಕರಂ ಕೊರಗಿರ್ದ ಕಾಂತೆಯಂ . . . ಕಂಡಂ (ಲೀಲಾವ. ೧೨–೩೫) ; ಪರಮಸುಖಾಮೃತಂ ನಯನನಿಮ್ನಗೆಯಂ ಕರೆಗಣ್ಮವಂತಿ ರುಬ್ಬರಿಸೆ ಮುದಶ್ರುಪೂರಂ . . . ಮಾತರಪಿತರರ್ ಕುಮಾರಮುಖ ದರ್ಶನದಿಂ ಪಡೆದರ್ ಪ್ರಮೋದಮಂ (ಅನಂಪು. ೫–೯೧) ; ವಾಪಿ ತಟಾಕಂ ದೀರ್ಘಿಕೆ ಕೂಪಂ ನಿಮ್ನಗೆ ಮಹಾಹ್ರದಂಗಳ್ ನೋಡಲ್ಕೆಪೊಳ್ತಿಂ ಸಕಳೋರ್ವೀತಾಪಮನಪಹರಿಸುತಿರ್ಪುವಾ ಜನಪದದೊಳ್ (ತ್ರಿಪುವಿ. ೨–೨೯); ಅತ್ಯುರುತರದಿವಿಜನಿಮ್ನಗೆಯಂ ತಾಳ್ದನಸೀಶ್ವರನ . . . ನೆನೆವೆಂ ಸತತಂ (ಉದ್ಭದೇ. ೬–೩೭) ; ಆ ದೇವದಂಪತಿಗಳಿರ್ವರುಂ ನಗಮೇಖಲಾ ನಿಮ್ನಗೆಯ ತಣ್ಪುತೀರ್ಥದೊಳ್ ಮನದಣಿಯೆ ಮಿಂದು ! (ಶ್ರೀರಾಮಾ. ೧೫೪–೬೫). [ಸಂ. ನಿಮ್ನಗಾ]

**ನಿಮ್ನನಾಭಿ** (ನಾ). ಆಳವಾದ ಹೊಕ್ಕುಳು,—ನಾಭಿ : ಜಳನಿಧಿ ಯನೆ ಪೋಲ್ವ ಶರಣಾಗತಜಳನಿಧಿಯ ನಿಮ್ನನಾಭಿ ಚೆಲ್ವಿಂಗೆ ತಾನೆ ನಾಭಿ ಯಾದುದು (ಪಂಪಭಾ. ೨–೩೯ ವ) ; ಒಯ್ಯನೊಯ್ಯನೆಯ್ದಿದುವು ವಿಲೋಲನೇತ್ರಜಲಬಿಂದುಗಳಾಕೆಯ ನಿಮ್ನನಾಭಿಯಂ (ಪಂಪಭಾ. ೫–೯); ನಿಮ್ನನಾಭಿಮಂಡಳಮನೊಳಪೊಕ್ಕು ಒಳಗೆ ತೀವಿದ ಪುಡಿಗತ್ತುರಿಯ ಸುಟ್ಟುರಿಯನಸಿದನೆ ಬೇಟಿಕೊಂಡು ಬಾಸೆಯೆಂಬಂತೆ ನೆಗಪಿ . . . ಸುಟಿ ದಾಡಿಯುಂ ಸಾಯಂತನಸಮಯಸವಿಾರಣಂ ಸೌಖ್ಯಸಾರಸರ್ವಸ್ವಮೆನಿ ಸಿದಾಗಳ್ (ಚಂದ್ರಪ. ೮–೪ ವ). [ನಿಮ್ನ + ನಾಭಿ]

**ನಿಮ್ನಪ್ರದೇಶ** (ನಾ). ತಗ್ಗಾದ ನೆಲ; ಹಳ್ಳವರಿ ಭೂಮಿ : ವತ್ಸಕಾವತೀವಿಷಯದಾವಾವೆಡೆಯೊಳಂ ನಿಮ್ನಪ್ರದೇಶಂದಪ್ಪದೆ ಪಥಿಕ ಜನದ ಕಣ್ಗಂ ಮನಕ್ಕಂ ಪಸರಂಬಡೆದ ನೆಱೆ ಸೊಗಯಿಸುವ ಸರಸ ಸರಸೀರುಹಾಕರಂಗಳೊಳ್ (ಶಾಂತಿಪು. ೧–೫೭ ವ). [ನಿಮ್ನ + ಪ್ರದೇಶ]

**ನಿಮ್ನಮಧ್ಯ** (ಗು). ಮಧ್ಯದಲ್ಲಿ ಹಳ್ಳವಾಗಿರುವ,—ತಗ್ಗಾಗಿರುವ : ರೂಪರೇಖೆ ಅಥವಾ ಹೊರಮುಖವು ವರ್ತುಲರೇಖೆಯ ಅಥವಾ ವರ್ತುಲದ ಒಳಭಾಗದಂತಿರುವ ; ಒಳಬಾಗಿನ ; ನಿಮ್ನಮಧ್ಯ ; ಪುಟಾಕಾರ (Concave. ಇಂಕನಿ). [ನಿಮ್ನ + ಮಧ್ಯ$_1$]

**ನಿಮ್ನಮಸೂರ** (ನಾ). ಒಳಬಾಗುಳ್ಳ ಮಸೂರ ; ಅಂತರ್ವಕ್ರ ಮಸೂರ : ಮಸೂರಗಳು ಮಧ್ಯೆ ದಪ್ಪವಾಗಿ ತುದಿಗಳಲ್ಲಿ ತೆಳುವಾಗಿದ್ದರೆ ಪೀನಮಸೂರಗಳೆಂದೂ (Convex lenses) ಮಧ್ಯೆ ತೆಳುವಾಗಿದ್ದು ತುದಿಗಳಲ್ಲಿ ಮಂದವಾಗಿದ್ದರೆ ನಿಮ್ನಮಸೂರಗಳೆಂದೂ (Concave lenses) ಹೆಸರು (ಭೌತವಿ. ೧೮೩). [ನಿಮ್ನ + ಮಸೂರ$_2$]

**ನಿಮ್ನವರ್ಗ** (ನಾ). ಕೆಳಗಿನ ವರ್ಗ ; ಹಿಂದುಳಿದ ಪಂಗಡ : ನಿಮ್ನವರ್ಗಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಪರೀಕ್ಷಾಶುಲ್ಕವಿಲ್ಲ (ರೂಢಿ). [ನಿಮ್ನ + ವರ್ಗ]

**ನಿಮ್ಮಕ್‌ಹರಾಮ** 'ನಮ್ಮಕ್‌ಹರಾಮ' ನೋ.

**ನಿಮ್ಮಕುಹರಾಮತನ** (ನಾ). ಸ್ವಾಮಿದ್ರೋಹ ಮಾಡುವಿಕೆ ; ಉಂಡ ಮನೆಗೆ ಎರಡು ಬಗೆಯುವಿಕೆ : ಟೀಪುಸುಲ್ತಾನರ ದಿವಸದಲ್ಲಿ ಅಧಿಕಾರಿಕೆ ಮಾಡಿದಂಥವರು ನಿಮ್ಮಕುಹರಾಮತನದಿಂದಾ ಹಣಕಾಸು ತಿಂದು, ರೈತರಿಗೂ ದುಃಖಕೊಟ್ಟು, ಟೀಪುಸುಲ್ತಾನರ ಒಡವೆ ತಿಂದಂಥ ವರು ಎಂಬದು ಇಂಗ್ರೇಜಸರಕಾರಕ್ಕೂ ಜಾಹೇರು ಇದೆ (ರಾಜೇಂದ್ರ. ೧೯೫). [ನಿಮ್ಮಕುಹರಾಮ್$_0$(<ನಮ್ಮಕ್‌ಹರಾಮ) + –ತನ]

**ನಿಮ್ಮಕುಹಲಾಲು** 'ನಮ್ಮಕ್‌ಹಲಾಲ್' ನೋ.

**ನಿಮ್ಮತು** 'ನಿನತ್ತು' ಪರಾ.

**ನಿಮ್ಮದ** (ನಾ). ಮದವಿಲ್ಲದಿರುವಿಕೆ ; ಸೊಕ್ಕಿಲ್ಲದಿರುವಿಕೆ : ಹರಿ ಕಾನ್ತೆಯುಮಿಾಕಾನ್ತೆಯ ದೊರೆಗೆವರಲ್ಕೋಲಿಳೆಂಬ ನಿಮ್ಮದದ ಗುಣೋತ್ಕರಮನೊಳಕೊಣ್ಡು ಹರಿಯಬೆ ಪರಹಿತದಿಂ ಧರೆಯೊಳೆಯ್ದೆ ಜಸಮಂ ತಳೆದಳ್ (ಎಕ. VI, ಮೂಡಗೆ. ೨೨–೨೪ ; 1129). [<ಸಂ. ನಿರ್ಮದ]

**ನಿಮ್ಮದು** 'ನಿನತ್ತು' ಪರಾ.

**ನಿಮ್ಮನೆ** (ಅ). ನೆಟ್ಟಗೆ ; ನಿಡಿದಾಗಿ : ಅದರ ಅಂಗಾಂಗಗಳೆಲ್ಲ ಮರ್ಮಾಂಗಗಳೂ ಸೇರಿ, ನಿಮ್ಮನೆ ನಿಗುರಿದ್ದುವು, ಹುಡುಗರ ಕುಚೋದ್ಯ ಟೀಕೆಗಳಿಗೆ ಪಕ್ಕಾಗಿ (ಪುಟಪು. ೪೯೫). [? + –ಅನೆ$_1$]

**ನಿಮ್ಮಳ** (ಗು). ೧. ಸ್ವಚ್ಛವಾದ ; ಪರಿಶುದ್ಧವಾದ : ದ್ವಿತ್ವಾಗ್ರ ರೇಫಲೋಪಕ್ಕೆ :— ಅಘ–ಅಗ್ಗ . . . ನಿರ್ಮಳ–ನಿಮ್ಮಳ (ಶಮದ. ೨೬೧ ಪ್ರಯೋ) ; ನಿಮ್ಮಳತನುಮಿನುಗಿಂದುಜಿದೆಳಸುವ ಮೊಗವೈದುಂ . . . ಸಮ್ಮಂಗುಡುಗೆಮಗೆ (ಉದ್ಭದೇ. ೭–೩). (ನಾ). ೨. ನಿರ್ಮಲತೆ ; ಪರಿಶುದ್ಧತೆ : ಅನ್ಯನಯೋಷಿ ಸ್ತ್ರೀಯರೊಳು ಮನ ನೆಮ್ಮಿಹುದು ಸುಖವಲ್ಲೆನುತ ಮನ ನಿಮ್ಮಳದಿ ಹೇಳಿದನು (ಸಾಳ್ವಭಾ. ೨೦–೫೨). [<ಪ್ರಾ. ಣಿಮ್ಮಲ. / ಸಂ. ನಿರ್ಮಲ]

**ನಿಮ್ಮಳಂ** (ಅ). ಸ್ವಚ್ಛವಾಗಿ ; ಪರಿಶುದ್ಧವಾಗಿ : ಉಮ್ಮಳಿಸದಿರ್ದಲೆ ಭೂಮಿಪ ನಿಮ್ಮಳಮಿಾ ಮುಗುಮಿನುರದ ಮಧ್ಯದ ಕುಚಮಂ ತಮ್ಮಯ್ಯ ದಲೆಯನೀಕ್ಷಿಸೆ ಗಮ್ಮನೆ ಬಯಲಪ್ಪುದೆಂದು ನುಡಿದುದು ವಾಣಿ (ಹಾಲಾಸ್ಯ. ೧–೫–೧೬). [<ನಿಮ್ಮಳ]

**ನಿಮ್ಮಳಿಕೆ** (ನಾ). ನಿರ್ಮಲತೆ ; ಸ್ವಚ್ಛತೆ : "ನಿಮ್ಮಳಿಕೆ ನಿರ್ಮಲದೊಳ್" (ಕರ್ನಾಶ. ೪) ; "ನಿಮ್ಮಳಿಕೆಯು ಬೆಳ್ಪೆಯುಂ . . .

ನಿರ್ಮಲಾಶ್ವಯಂ ತಾನಕ್ಕುಂ" (ಕವಿಕಂ. ೧೦೧) ; ಜೋಗಿಯ ಮನದ ನಿಮ್ಮಳಿಕೆಯಂತಿರೆ ದೆಸೆಯೆತ್ತಂ ನಿರ್ಮಲವಾದುದು (ರಾಪೂರ್ವ.೧೧೦-೨); ದಾಳಗಳನ್ನೂ ನಿಮ್ಮಳಿಕೆಗಾಗಿಸಿ ಆ ಹಸೆಯ ನಟ್ಟ ನಡುವೆ ಪ್ರತಿಷ್ಠಿಸಿ (ಮಂತ್ರಶ. ೧೬೪-೧೧). [ನಿಮ್ಮಳ + -ಇಕೆ]

**ನಿಮ್ಮುತು** 'ನಿನತ್ತು' ಪರಾ.

**ನಿಯಂತ** (ನಾ). ೧. ನಿಯಮಿಸುವವನು ; ವ್ಯವಸ್ಥೆ ಮಾಡುವವನು ; ನಿರ್ವಹಿಸುವವನು : "ನಿಯಂತ—ನಿಯಂತೃ = ವ್ಯವಸ್ಥಾಪಕ" (ತದ್ಭಕೋ. ೨೨); ವೇದಾಂತ ವೈತ್ಯಹಂತ ವಾದದುರಂತ ನುತ ನಿಯಂತ ಯುಕ್ತಿವಂತ (ಪುರಂದ. ೫-೧೨ ಅನುಪಲ್ಲವಿ) ; ಹಾದಿ ತೋರಿಸುವವನು . . . ನಿರ್ವಾಹಕ ; ನಿಯಂತ್ರಕ. ಮೇಳನಿಯಂತ್ರಕ. (ಮೋಟಾರು, ಟ್ರಾಂಬಂಡಿ, ಮೊ.ಗಳಲ್ಲಿ) . . . ಪ್ರಯಾಣಿಕರ ವಿಚಾರವನ್ನು ನೋಡಿಕೊಳ್ಳುವ ಅಧಿಕಾರಿ ; ನಿಯಂತ (Conductor-ಇಂಕನಿ). ೨. ರಥ, ಬಂಡಿ ಮೊದಲಾದುವನ್ನು ನಡೆಸುವವನು ; ಸಾರಥಿ : "ನಿಯಂತಾ, ಪ್ರಾಜಿತಾ . . . ಸೂತಃ—ಈ ೭ ಸಾರಥಿ" (ಹಲಾಯು. ೭೪-೨೯೫). [ಸಂ. ನಿಯಂತೃ]

**ನಿಯಂತ್ಯ** (ಗು). ೧. ನಿಯಮಿಸುವ ; ಹತೋಟಿ ಮಾಡುವ ; ಅಧೀನದಲ್ಲಿಟ್ಟುಕೊಳ್ಳುವ : ದುರ್ದಮನಿಯಂತ್ಯ ವಿಧಿ ತಾಂ ತಂದೊಡ್ಡಿದೀ ಮಹತ್‌ಕ್ಲೇಶಮಂ ಬುದ್ಧಿಯಿಂ ಪರಿಹರಿಸೆ ಯತ್ನಗೈ (ಶ್ರೀರಾಮಾ. ೧೧೭-೧೫೪)(ನಾ) ೨.ನಿಯಮಿಸುವವನು; ಅಧೀನದಲ್ಲಿ ಇಟ್ಟುಕೊಂಡಿರುವವನು : ಸರ್ವಾಂತರ್ಯಾಮಿಯುಮಾ ಸರ್ವನಿಯಂತ್ಯವುಮಶೇಷಿತತನು ಸತತಂ ಪರ್ವಿರೆ (ವಿಷ್ಣುಪು. ೩-೧೩೪) ; ಒಬ್ಬನೇ ಆತ್ಮನಾದರೆ ನಿಯಂತ್ಯ ನಿಯಂತವ್ಯ ಭೇದವು ಹೇಗಾಗುತ್ತದೆ ? (ಬ್ರಹ್ಮಭಾ. ೩೦೮ ಅಡಿಟಿ). [ಸಂ.]

**ನಿಯಂತ್ರಕ** (ನಾ). ಹತೋಟಿಯಿಟ್ಟುಕೊಂಡಿರುವವನು ; ನಿಯಂತ್ರಣ ಮಾಡುವವನು ; ನಡೆಸುವವನು : ಈ ಕ್ಷಪಣಿಗೆ ಯಾವ ನಿಯಂತ್ರಕನನ್ನು ನಿಯಮಿಸಲಿ ? (ಕಲ್ಲೋಲ. ೩೮-೩) ; ಭಾರತದ ನಿಯಂತ್ರಕ ಮಹಾಲೇಖಾಪರೀಕ್ಷಕರಿಗೆ ಅಥವಾ ಅವರ ಸಂಬಂಧವಾಗಿ, ಪಾವತಿಯಾಗಬೇಕಾದ ವೇತನ (ಭಾಥಾಸ. ೫೮). [ಸಂ.]

**ನಿಯಂತ್ರಣ** (ನಾ). ೧. ಅಂಕೆಯಲ್ಲಿಟ್ಟುಕೊಳ್ಳುವುದು ; ವಶದಲ್ಲಿಟ್ಟುಕೊಳ್ಳುವಿಕೆ ; ಅಧೀನದಲ್ಲಿಟ್ಟುಕೊಳ್ಳುವುದು ; ಹತೋಟಿ ; ಹಿಡಿತ ; ನಿರ್ಬಂಧ : ನಿನ್ನ ನಿಯಂತ್ರಣವ ಹೇಳ್ ನಿಧಾನವನೆಂದಳಿಂದುಮುಖಿ (ಕುಮ್ಯಾಅ. ೧೫-೨೨) ; ಆಗಿನ ಚಟುವಟಿಕೆಗಳು ಗುಪ್ತವಾಗಿಯೇ ನಡೆಯುತ್ತಿದ್ದವು. ಸುದ್ದಿಯ ಮೇಲೆ ಭೀಕರವಾದ ನಿಯಂತ್ರಣವಿತ್ತು (ಸಾಸಮಾ. ೧೭) ; ಈ ನಿಯಂತ್ರಣವು ಅಸಹ್ಯವಾಗಿ ತೋರಿತು (ಕಲಕ. ೬೯) ; ರಾಜ್ಯ ಶಿಕ್ಷಣದಲ್ಲಿ ಕೇಂದ್ರದ ಹೊಣೆಗಾರಿಕೆಯೂ ನಿಯಂತ್ರಣವೂ ಬಲಗೊಳ್ಳುತ್ತಿವೆ (ಶಿಕ್ಷದ. VII, ಮುನ್ನುಡಿ) ; ಎಲ್ಲರಿಗೂ ತಿಳಿದಿರುವಂತೆ ಮೂಷಕನಿಯಂತ್ರಣಕ್ಕೆ ಪ್ರಚಲಿತವಾದ ವಿಧಾನ ಮೂರು (ದೇಕನ್ಯೆ. ೪೭). 'ನಿಯಂತ್ರಣಕ್ರಮ', 'ನಿಯಂತ್ರಿಸು' ಪರಾ. ೨. ಮಾರ್ಗದರ್ಶನ ; ಚೋದನೆ; ನಿರ್ದೇಶನ : ಅಸಂಖ್ಯಾತ ವಿಷಯಗಳನ್ನು ಒಳಗೊಂಡಿರುವ ಅಧೀನ ನಿಯಮಗಳನ್ನು . . . ಮಾರ್ಗತೋರಿಸುವ ಅಪ್ಪಣೆ ಅಥವಾ ಕಾರ್ಯಕ್ರಮದ ವಿಷಯವಾದ ನಿಯಂತ್ರಣಗಳೆಂದೂ (ಡೈರೆಕ್ಷನ್ಸ್) . . . ಕರೆಯಬಹುದು (ಕವಿಕೋ. I, ೨೮೭). ೩. ಕಟ್ಟಿಹಾಕುವುದು ; ಬಂಧನದಲ್ಲಿಡುವುದು : ಮತ್ತಂ ನಿಯಂತ್ರಣ . . . ದುರ್ಭೋಗ್ಯ ನಾನಾವಿಧಾಸಂಖ್ಯಾತತೀವ್ರವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷಾಲೇಶಮೆಂದೆನಿಸಿ (ವಿವೇಕ. ೧೮೧). [ಸಂ.]

**ನಿಯಂತ್ರಣಕ್ರಮ** (ನಾ). ಹತೋಟಿಯಲ್ಲಿಡುವ ರೀತಿ ; ನಿರ್ಬಂಧಿಸುವ ವಿಧಾನ : ಈ ಮುಂದಿನ ನಿಯಂತ್ರಣಕ್ರಮಗಳಿಂದ ನೊಣಗಳನ್ನು ತಡೆಗಟ್ಟಬಹುದು (ಆಡುಸಾ. ೫೦). [ನಿಯಂತ್ರಣ + ಕ್ರಮ]

**ನಿಯಂತ್ರಣಗೊಳಿಸು** (ಕ್ರಿ). ಹತೋಟಿಗೆ ತರು ; ಅಧೀನಕ್ಕೆ ಬರುವಂತೆ ಮಾಡು : ಶಿಕ್ಷಕರು . . . ತಮ್ಮ ಕಾರ್ಯವನ್ನು ಸೂಕ್ತ ರೀತಿಯಲ್ಲಿ ನಿಯಂತ್ರಣಗೊಳಿಸಿಕೊಳ್ಳುವುದು (ಶಿಕ್ಷದ. ೪೧೦). [ನಿಯಂತ್ರಣ + ಕೊಳ್$_1$ + -ಇಸು$_3$]

**ನಿಯಂತ್ರಣೋಪಾಯ** (ನಾ). ಹತೋಟಿಯಲ್ಲಿಡುವ ಕ್ರಮ, —ಉಪಾಯ : ಆತನಿಗೆ ಕೀಟಕಗಳ ಪ್ರಕಾರಗಳು, ಅವುಗಳ ಸ್ವಭಾವ, ಹಾವಳಿಯ ರೀತಿ, ನಿಯಂತ್ರಣೋಪಾಯಗಳು ಮುಂತಾದ ವಿಷಯಗಳ ಬಗೆಗೆ ಸ್ಥೂಲವಾದ ಪ್ರಾತ್ಯಕ್ಷಿಕಜ್ಞಾನವಿರುವದು ಅತ್ಯಾವಶ್ಯಕವಾಗಿದೆ (ಕೀಟಪಿ. VI, ಅರಿಕೆ). [ನಿಯಂತ್ರಣ + ಉಪಾಯ]

**ನಿಯಂತ್ರಿ** (ನಾ). ರಥ, ಬಂಡಿ ಮೊದಲಾದುವುಗಳನ್ನು ನಡೆಸುವವನು ; ಸಾರಥಿ : "ದಕ್ಷಿಣಸ್ಥಂ ನಿಯಂತ್ರಿಯಾ ಕ್ಷತ್ತೃ ಸೂತನೆನೆ ಸಾರಥಿಗೆ ನಾಮಮಕ್ಕುಂ" (ಮಂಗರಾ. ೮೫-೨೫). [ಸಂ. ನಿಯಂತ್ರಿನ್]

**ನಿಯಂತ್ರಿತ** (ಗು). ೧. ಕಟ್ಟಿದ ; ಬಂಧಿಸಿದ ; ಬಿಗಿದ : ಮದೇಭಾಂತ್ರನಿಯಂತ್ರಿತಾಶ್ವಶವಮಾಂಸರಸಾಸವ ಮತ್ತಯೋಗಿನೀತಂತ್ರಮಿದೇನಗುರ್ವನೊಳಕೊಂಡುದೊ ಕರ್ಣನ ಗೆಲ್ದ ಕೊಳ್ಗುಳಂ (ಪಂಪಭಾ. ೧೨-೧೨೦). (ನಾ). ೨. ಹತೋಟಿಗೊಳಗಾದುದು : ಅಲ್ಲಿ . . . ಮೂಡುವ ಪಾತ್ರಗಳು ಬಹುಮಟ್ಟಿಗೆ ರಾಷ್ಟ್ರದ ವಸ್ತುದೃಷ್ಟಿಯಿಂದ ನಿಯಂತ್ರಿತವಾದುದು (ಭಾಪಗೀ. ೫). [ಸಂ.]

**ನಿಯಂತ್ರಿಸು** (ಕ್ರಿ). ೧. ಅಂಕೆಯಲ್ಲಿಟ್ಟುಕೊಳ್ಳು ; ವಶದಲ್ಲಿಟ್ಟುಕೊಳ್ಳು ; ಅಧೀನದಲ್ಲಿರಿಸಿಕೊಳ್ಳು ; ಹತೋಟಿಯಲ್ಲಿರಿಸು : ಆವ ದೇವಿ . . . ಮನುಜ ದನುಜಸುರನಿಸರ್ಗಯಂತ್ರತಂತ್ರಮಂತ್ರವಾಗಿ ನಿಯಂತ್ರಿಸಿರುವಳೋ ಅವಳೆ ಇಂದು ಮನೆಗೆ ಬಂದು . . . ಹರಸುತಿಹಳು (ಅನಿಕೇ. ೧೨-೧೩) ; ಈ ಎರಡು ಬಗೆಯ ಸಂಸ್ಥೆಗಳೂ ಒಂದನ್ನೊಂದು ಯಾವ ರೀತಿ ನಿಯಂತ್ರಿಸಬೇಕು (ರಾಜ್ಯಾಂಗ. ೫೩) ; ಜನಸಂಖ್ಯೆಯನ್ನು ನಿಯಂತ್ರಿಸಲು ನಾವು ಕೈಲಾದಷ್ಟು ಪ್ರಯತ್ನಿಸುತ್ತಿದ್ದೇವೆ (ಕಾಲಯಾ. ೫೬) ; ಇದಕ್ಕೆ ಬದಲಾಗಿ ಇಲಿಗಳ ಸಂತತಿಯನ್ನೆ ನಿಯಂತ್ರಿಸುವುದು ಸ್ಪೃಹಣೀಯವೆನಿಸುತ್ತದೆ (ದೇಕನ್ಯೆ. ೫೦). ೨. ಕೆಲಸ ಮಾಡುವಂತೆ ಮಾಡು ; ಚೋದಿಸು : ಶರೀರದೊಳಗೆ ಎಲ್ಲಕ್ಕಿಂತ ದೊಡ್ಡ ಪಿಂಡವೆಂದರೆ ಯಕೃತ್ತು (Liver) ರಕ್ತದ ಘಟಕಗಳನ್ನು ನಿಯಂತ್ರಿಸುವದು (ಗೋಗ್ರಾಸ. ೪೫). [ನಿಯಂತ್ರಣ + -ಇಸು$_3$]

**ನಿಯುತ** (ಗು). ೧. ಅಂಕೆಯಲ್ಲಿಟ್ಟ ; ಹತೋಟಿಗೆ ಒಳಗಾದ ; ನಿಗ್ರಹಿಸಲ್ಪಟ್ಟ. ೨. ಆಳಿಕೆಗೊಳಪಟ್ಟ ; ಅಧೀನವಾದ. ೩. ಗೊತ್ತುಮಾಡಿದ ; ನಿರ್ಣಯಿಸಿದ ; ನಿಶ್ಚಿತವಾದ : ನಿಯತಾಗಮಾರ್ಥದೊಳ್ ಸಂಶಯಮೊಂದೆಡೆಯಲ್ಲಿ ತೋಜೆ ಸಂಜಯವಿಜಯಾಹ್ವಯಚಾರಣಯುಗಳಂ ನಿರ್ಣಯಾರ್ಥಮೆಯ್ತಂದು ತೀರ್ಥಕರದಾರಕನಂ ಬಲವರೆ . . . ತೊಲಗಿದುದು ಪದಾರ್ಥಸಂಶಯಂ (ವರ್ಧಪು. ೧೪-೬೪) ; ನಿಯತರಸರಸಿಕೆ ಕಿಂಚಿದ್ಭಯತರತನು ವಿಜಿತವಿಷಯಮತಿಗರ್ವಸಮಾಶ್ರಯಮಾಗೆ ಸುಭಗೆಯೆನೆ ನೆಗಟ್ದ ಯುವತಿ ಸಲೆ ಮುಗ್ಧೆಯೆಂಬ ಪೆಸರಂ ಪಡೆಗುಂ (ಶೃಂಗಾರ.೩-೩೦) ; ನಿಯತಾಷ್ಟಾದ್ಶದುಷ್ಟದೋಷರಹಿತ ಶ್ರೀಜೈನಬಿಂಬಂ ವಿಶುದ್ಧಿಯನುತ್ಪಾದಿಕುಂ (ಪಾರ್ಶ್ವಪು. ೧೩-೧೪) ; ಅವಧಾರಣೆಯ ಏಕಾರಂ ತನ್ನ ನಿಯತಾರ್ಥಮಂ ಬಿಟ್ಟು ಅನಿಯೋಗಮಾದಲ್ಲಿಯುಂ . . . ಸಂಧಿಯುಂಟು (ಶಮದ. ೬೪ ವೃತ್ತಿ). ೪. ನಿಶ್ಚಲವಾದ ; ದೃಢವಾದ : ಅಚಲವಾದ ; ಸ್ಥಿರವಾದ :

ನಿರ್ದಿಷ್ಟವಾದ : ನಿಯತಸಮಯಸಾರಾಸಾಧನೀಯೊದಿ ತಾರಾನ್ವಯು ಪರಮತಪೋಸುಷ್ಮಾನಮಿಷ್ಟಾರ್ಥಸಿದ್ಧಂ (ಕವಿರಾ. ೩-೨೧೫); ಆ ಮಹಂತಂ ನಿಯತ [ಪಾಠಾಂ. ನಿಖಿಳ] ಭಕ್ತಿ ಮಹಾಮಹಿಮೆಯಿಂದೊಪ್ಪಿಪ್ಪ ಭಿರಾಮಪುರವೇ ರಾಜಧಾನಿಯೆನಲ್ಕೆ ನುತಿವೆತ್ತು ಭೂಮಿಯಂ ಪರಿಪಾಲಿಸುತ್ತ (ಬಸಪು. ೧೯-೪). **೫.** ತಪ್ಪಿಸಿಕೊಳ್ಳಲಾಗದ; ಅನಿವಾರ್ಯವಾದ. **೬.** ಬಂಧನಕ್ಕೆ ಒಳಗಾದ; ಬಂಧಿಸಿದ. (ನಾ). **೭.** ಗೊತ್ತುಮಾಡಲ್ಪಟ್ಟಿರುವುದು; ನಿಶ್ಚಿತವಾದುದು; ವ್ಯವಸ್ಥಿತವಾಗಿರುವುದು : "ನಿಶ್ಚಿತಂ, ನಿಯತಂ — ಈ ೨ ನಿಶ್ಚಯಿಸಲ್ಪಟ್ಟುದು" (ಹಲಾಯು. ೧೧೮-೨೫); ನಿಯತಾಯುರಬ್ದಸಂಖ್ಯಾಕ್ಷಯದೊಳ್ ದಿವದಿಂದವಿಂಟಿದು ಬಂದಮರಂ ಧಾತ್ರಿಯೊಳೆಲ್ಲಮಲ್ಲಿ ಪುಟ್ಟಲ್ ಬಯಸುವರೆನೆ ಪೆಱದನಿನ್ನದೇವಣ್ಣಿಸುವೆಂ (ವರ್ಧಮಾ. ೧೧-೩); ಪ್ರತಿಯೊಂದು ಇಂದ್ರಿಯಕ್ಕೂ ಬೇರೆ ಬೇರೆ ವಿಷಯಗಳು ನಿಯತವಾಗಿವೆ (ಜೀವಾತ್ಮ. ೬೬). **೮.** ನಿಶ್ಚಲವಾದುದು; ಸ್ಥಿರವಾದುದು; ದೃಢವಾದುದು: ನಿಯತವಹ ಶೌಚಾಚಮನ ನಿರ್ಣಯುವನುಱಿ ವಿಸ್ತರಿಸಿ . . . ಸಂಕಲ್ಪಸಮಯದಲಿ ಬಯಕೆಯಿಲ್ಲದೆ ವಿಷ್ಣುಚರಣದ್ವಯವ ಸಂಸ್ಮರಿಸುತ್ತೆ ವಾಣೀಪ್ರಿಯವಧುವ ಮಧ್ಯದಲಿ ಮುಳುಗಿದ ತನ್ನನೀಕ್ಷಿಸುತೆ (ಅಕ್ರೂಚ. ೫-೨೭). **೯.** ಕೂಡಿಕೊಂಡಿರುವುದು; ಯುಕ್ತವಾಗಿರುವುದು; ಗ್ರಥಿತ : ನಯಗಣದಿಂದಂ ನಿಯತಮಿದಕ್ಕುಂ ಪ್ರಿಯಲಲನೇ ಕೇಳ್ ನಯದಿನುದಾತ್ತಂ (ಛಂದೋಂಬು. ೨-೭೫). **೧೦.** ಖಂಡಿತ; ನಿಶ್ಚಯ: "ನಿಶ್ಚಿತ ನಿಯತಮೆನೆ ನಿಶ್ಚಯಂ" (ಮಂಗರಾ. ೧೨೯-೧೩); ನಿಯತದಿನಮರ್ದನೊಳಮರ್ದನ್ನಯ ಜೀವನಮಂ ಮರಾಳಮಿದು ಬೇರ್ಪಡಿಕುಂ (ಪ್ರಷವಿ. ೧೪-೧೪); 'ಹಿಪ್ಪಾರ್ಕಸ್' (Hipparchus) ಎಂಬಾತನೇ ಕ್ರಿಸ್ತಶಕಾರಂಭಕ್ಕೆ ೧೩೦ ಸಂವತ್ಸರಗಳ ಹಿಂದೆ ತಾರಾಪುಂಜಗಳ ಸ್ಥಾನಗಳನ್ನು ಸ್ವಲ್ಪಮಟ್ಟಿಗೆ ನಿಯತವಾಗಿ ಮೊಟ್ಟಮೊದಲು . . . ವರ್ಗೀಕರಿಸಿದನು (ಜ್ಯೋತಿರ್ವಿ. ೨೩). **೧೧.** ನಿಯಮಿತವಾಗಿ ನಡೆಯುವ ಕ್ರಮ; ನಿಯಮ : ಸುವ್ರತನಿಯತವಂ ಬುಧರಿಂದುಮುಖಿಗಱಿಪಿದಡೆ ಪರಮಾನಂದದಿಂ ಮಾದಾಯಿ ಶಿವಮಂದಿರಕೆ ನಡೆತಂದು (ಬಸಪು. ೨-೪೯); ಚೋರವಿದ್ಯವು ಸಹಜ ನಿಮಗಾ ಪಾರದಾರ್ಯವು ನಿಯತ ದಿಟ ದಿಟ (ಕೌಶಿರಾ. ೩೬-೪೩). **೧೨.** ಒಂದರಲ್ಲಿ ಚೆನ್ನಾಗಿ ಅಂಟಿಕೊಂಡಿರುವವನು; ನಿಷ್ಠ; ಸೇವಾಪರ; ಗಾಢಾಸಕ್ತ : ಭವದ ಭಾರಿಯ ತಪ್ಪಿಸಿಕೊಂಬರೆ ನೀನು ನಿಯತನಾಗಿ ಭಯಭರಿತನಾಗಿ ಅಹಂಕಾರಿಯಾಗದೆ ಶರಣೆನ್ನು ಮನವೇ (ಬಸವ. ೨೭೪); ದಾಸತ್ವಂ ವೀರದಾಸತ್ವಂ . . . ಎಂಬ ಶ್ರುತಿಯರ್ಥವ ನೋಡಿ ನಿಯತನಾಗಬಲ್ಲಡೆ ಆತ ಮಹೇಶ್ವರನಪ್ಪನಯ್ಯಾ (ಚನ್ನಪ. ೨೧-೬). [ಸಂ.]

**ನಿಯತಂ** (ಅ). **೧.** ಯಾವಾಗಲೂ; ತಪ್ಪದೆ; ಸತತವಾಗಿ; ಸದಾ: ನಿಯತಂ ಸಮ್ಯಙ್ಮಂತ್ರಪ್ರಯೋಗಪಟುವೆನಿಪ ಭೂತಳಾಧೀಶ್ವರನ ಪ್ರಿಯರಂ ಮರ್ದಿಸಿ ಧರೆಯಂ ಜಯಲಕ್ಷ್ಮೀಧಾಮನಾಗಿ ಪರಿರಕ್ಷಿಸುಗುಂ (ಪಂಚತಂ. ೨೧೨-೧೫); ನಿಯತಂ ಭಾವಿಸು ಚಿತ್ತದೊಳ್ ಬೆದಱದೊಲ್ದಾರಯ್ದು ಕೇಳಗ್ನಿಭೂತಿಯೆನಾನಗ್ರಜನೆಂ (ಸುಕುಮಾ. ೫-೨೪); ನಿಯತಂ ಪಡಿಯಱಬೆಸನಾದಿಯಾಗೆ ಬೆಸನೆನಿತನಿತ್ತುಮಂ ಸಲೆ ಸುರಕಾಂತೆಯರೆ ತನಗೆಸಪರ್ (ವರ್ಧಪು. ೧೩-೫೪); ಸಕಾರಂ . . . ಅರೆ ಎಡೆಯೊಳ್ ಜತ್ವಂ ಮೇಣರೆಎಡೆಯೊಳ್ ಸಂಖ್ಯೆಯಾಗೆ ನಿಯತಂ ಛತ್ವಂ (ಶಮದ. ೬೮). **೨.** ಖಂಡಿತವಾಗಿ; ನಿಶ್ಚಯವಾಗಿ; ಸಂದೇಹವಿಲ್ಲದೆ; ವಿಕಲ್ಪವಿಲ್ಲದೆ : ನಿಯತಂ ಕಶಿಪುವೆನಿಪ್ಪುಕ್ತಿಯೊಳೊಳಕೊಂಡಿರ್ಕುಮಶನವಸನಮಿವೆರಡುಂ (ವಸ್ತುಕೋ. ೧೪೦-೧೩೦); ಸತತಾಭ್ಯಾಸಪ್ರಯತ್ನಂ ಕವಿತೆಗೆ ನಿಯತಂ ಕಾರಣಂ (ಕಾಪಾಪ. ೪೨೪); ನಿಯತಂ ಶೀಲಕ್ಕೆ ಪಕ್ಕಾಗಿಯೆ ಪೆಸರ್ವಡೆವಂ ದೇವರಿಂದಂ ಕುಬೇರಪ್ರಿಯನೆಂಬಂ ರೂಪವಂತಂ (ಪುಣ್ಯಾಸ್ರ. ೭-೫); ನಿಯತಂ ಕಲ್ಯಾಣದ ಸಾರ್ಕೆಯೊಳೊಪ್ಪುವ ಕಾಡೊಳೆಯ್ದಿ ಕರಡಿಯ ರೂಪಿಂ ಭಯಮಿಲ್ಲದೊಗೆವುದೆಂದಾ ದಯಾಕರಂ ಬೆಸಸೆ (ಪ್ರಷವಿ. ೨೨-೩೧). [<ನಿಯತ]

**ನಿಯತಕಾಲ** (ನಾ). ನಿಗದಿಮಾಡಿದ ಕಾಲ,—ಅವಧಿ : ಶಿಕ್ಷಣಕ್ಕೆ ಸಂಬಂಧಿಸಿದ ನಿಯತಕಾಲದ ಯೋಜನೆಗಳನ್ನು ರೂಪಿಸುವಾಗ ರಾಜ್ಯ ಸರ್ಕಾರಗಳ ಸಲಹೆ ಸಹಕಾರಗಳನ್ನು ಪಡೆಯುತ್ತಿದೆ(ಶಿಕ್ಷದ. VII, ಮುನ್ನುಡಿ). [ನಿಯತ + ಕಾಲ]

**ನಿಯತಕಾಲಿಕ** (ಗು). **೧.** ನಿಗದಿಯಾದ ಕಾಲಕ್ಕೆ ಸಂಬಂಧಿಸಿದ; ನಿಯಮಿತ ಕಾಲದಲ್ಲಿ ಹುಟ್ಟುವ,—ಹೊರಡುವ : ನಿರ್ದಿಷ್ಟ ಸಮಾಂತರದಲ್ಲಿ ಪುನರಾವರ್ತವಾಗುವ; ನಿಯತಕಾಲಿಕ (Periodic. ಇಂಕನಿ). (ನಾ). **೨.** ನಿಗದಿಯಾದ ಕಾಲಗಳಲ್ಲಿ ಹೊರಡುವ ವಾರ, ಪಕ್ಷ, ಮಾಸ, ತ್ರೈಮಾಸಿಕ ಪತ್ರಿಕೆ ಮೊದಲಾದುವು : "ದಿನಪತ್ರಿಕೆ; ನಿಯತಕಾಲಿಕ; ಪತ್ರಿಕೆ" (Journal. ಪತ್ರಿನಿ. ೪೮); ಭಾರತದಲ್ಲಿನ ವೃತ್ತಪತ್ರಿಕೆಗಳು ಹಾಗೂ ನಿಯತಕಾಲಿಕಗಳ ಮಾಲಿಕರ ಸಂಘವಾಗಿದ್ದು ತನ್ನ ಸದಸ್ಯರ ನಡುವಣ ವ್ಯಾಪಾರಾಸಕ್ತಿಗಳನ್ನು ಉತ್ತೇಜನಗೊಳಿಸಿ ಅಭಿವೃದ್ಧಿಪಡಿಸುವುದು (ಕವಿಕೋ. I, ೧೬೭). [ಸಂ.]

**ನಿಯತದ್ವಿತ್ವ** (ನಾ). [ವ್ಯಾಕ] ಸ್ಥಿರವಾಗಿ ದ್ವಿತ್ವವಾಗಿಯೇ ಇರುವುದು; ಒತ್ತಕ್ಷರವಿಲ್ಲದೆ ಪ್ರಯೋಗವಾಗದುದು : ಇನ್ನು ನಿಯತದ್ವಿತ್ವಕ್ಕೆ ಪಪ್ಪುಕಂ, ಕಪ್ಪಡಿ, ಬಿಪ್ಪಂಡಂ, ಉಪ್ಪಂಡಂ (ಶಮದ. ೩೬ ಪ್ರಯೋ). 'ಶಿಥಿಲದ್ವಿತ್ವ' ಪರಾ. [ನಿಯತ + ದ್ವಿತ್ವ]

**ನಿಯತಧರ್ಮ** (ನಾ). ಒಂದು ವಸ್ತುವಿನಲ್ಲಿ ಸ್ಥಿರವಾಗಿ ಇರುವ ಧರ್ಮ; ಒಂದು ವಸ್ತುವಿನ ಹುಟ್ಟಿನಿಂದ ನಾಶ ಪರ್ಯಂತವಾಗಿ ಅವಿನಾಭಾವದಿಂದ ಅದರಲ್ಲಿ ಇರುವ ಜಾತಿ, ಗುಣ ಮೊದಲಾದುವು : "ಕಾಗೆ ಕುಳಿತ ಮನೆಯೇ ದೇವದತ್ತನ ಮನೆ", ಎಂದು. ಇಲ್ಲಿ "ಕಾಗೆ" ಮನೆಯ "ಲಕ್ಷಣ"ವಲ್ಲ, ನಿಯತಧರ್ಮವಲ್ಲವಾದ್ದರಿಂದ; ಆದರೆ "ಉಪಲಕ್ಷಣ", ಅಥವಾ ಪ್ರಸಂಗಾತ್ ಸೂಚಕ (ಧ್ವನ್ಯಾಲೋಕ ೫೧ ಅಡಿಟ). [ನಿಯತ + ಧರ್ಮ]

**ನಿಯತಪ್ರತೀತಿ** (ನಾ). **೧.** ಖಂಡಿತವಾಗಿ ನಡೆಯುವ ಲೋಕವಾದ; ಸುಳ್ಳಾಗದ ಜನವಾದ. **೨.** ನಡೆಯಬೇಕಾದುದು ನಡೆದೇ ತೀರುವುದೆಂಬ ಜ್ಞಾನ; ಅನುಭವಿಸಬೇಕಾದುದನ್ನು ಅನುಭವಿಸಲೇ ಬೇಕೆಂಬ ನಿಶ್ಚಯಜ್ಞಾನ : ಸತತೋದಯನಪ್ರತಿಹತಗತಿತೀವ್ರಂ ತದ್ದಿನಾಧಿನಾಥನುಮಸ್ತಂಗತನಾದನಂತೆ ನಿಯತಪ್ರತೀತಿಯಂ ಕಳೆಯಲಕ್ಕುಮೇ ವ್ಯಾಪಕಮಂ (ಕವಿರಾ. ೩-೩೦). [ನಿಯತ + ಪ್ರತೀತಿ]

**ನಿಯತವಿಧಿ** (ನಾ). ಆತ್ಮಸಾಕ್ಷಿಯ ಆದೇಶವೇ ನೀತಿಯ ಪರಮಪ್ರಮಾಣ ಎಂಬ ತತ್ತ್ವ : "ನಿಯತವಿಧಿ, ಪರಮವಿಧಿ, ನಿರಪೇಕ್ಷವಿಧಿ" (Categorical imperative. ಪಾರಿನಿ. ೧೨) [ನಿಯತ + ವಿಧಿ]

**ನಿಯತವೃತ್ತಸ್ಥಿತ** (ನಾ). **೧.** ಒಂದೇ ರೀತಿಯಾದ ನಡವಳಿಕೆಯಲ್ಲಿರುವವನು; ಸ್ಥಿರವಾದ ನೀತಿಯುಳ್ಳವನು. **೨.** ಬೇರೆ ಬೇರೆ ಸಂಕ್ರಾಂತಿವೃತ್ತಗಳಲ್ಲಿ ಸಂಚರಿಸದೆ ಒಂದೇ ವೃತ್ತದಲ್ಲಿ ನೆಲಸಿರುವವನು. **೧, ೨ :** ಪರಮೋದಯರಿರ್ ಕಮಲಾಕರಬೋಧಕರಿರ್ ದಿನೇಶನುಂ ನೀನುಂ ಭಾಸ್ಕರನನಿಯತವೃತ್ತಕ್ರಮನರಸಾ ನಿನ್ನಂತೆ ನಿಯತವೃತ್ತ[ಪಾಠಾಂ. ತ್ತಿ]ಸ್ಥಿತನೇಂ (ಕವಿರಾ. ೩-೪೧). [ಸಂ.]

**ನಿಯತಸಾಹಚರ್ಯ** (ನಾ). ಯಾವಾಗಲೂ ಕೂಡಿಕೊಂಡೇ ಇರುವುದು; ಯಾವಾಗಲೂ ಒಂದನ್ನು ಬಿಟ್ಟು ಮತ್ತೊಂದು

ಇರದೇ ಇರುವಿಕೆ; ಕಾರ್ಯಕಾರಣ ಭಾವ ಮೊದಲಾದುವುಗಳಲ್ಲಿರುವ ಸ್ಥಿರವಾದ ಸಂಬಂಧ : ಆ ಸಂಬಂಧವು ಕಾರ್ಯಕಾರಣಭಾವ, ಸಾಮಾನ್ಯವಿಶೇಷಭಾವ . . . ನಾಶ್ಯನಾಶಕ ಭಾವ–ಮೊದಲಾದ ಸಂಬಂಧ ಮೂಲಕ ನಿರ್ಣಯಿಸಲ್ಪಡಬೇಕು. ಇದನ್ನು ನಿಯತಸಾಹಚರ್ಯವೆಂದು ವ್ಯವಹರಿಸುವರು (ಹಿಂದಸಾ. ೧೪೦). [ನಿಯತ+ಸಾಹಚರ್ಯ]

**ನಿಯತಸ್ವರೂಪ** (ನಾ). ನಿರ್ದಿಷ್ಟವಾದ ಆಕಾರ,—ರೀತಿ : "ಸರ್ವೇಜನಾಸ್ಸುಖಿನೋಭವಂತು"–ಇಂಥಾ ಬೃಹದೌದಾರ್ಯದ ವಾಕ್ಯಗಳು ಎಲ್ಲರಿಗೂ ಸುಲಭವಾಗಿ ಬರುತ್ತವೆ. ಅವುಗಳನ್ನು ಒಂದು ನಿಯತ ಸ್ವರೂಪದಲ್ಲಿ ತೋರಿಸಿರೆಂದಾಗ ಮಾತ್ರ ಅದನ್ನು ಬಲ್ಲವರು ಬಹುಮಂದಿ ದೊರೆಯಲಾರರು (ರಾಜ್ಯಶಾ. ೨೪೭). [ನಿಯತ+ಸ್ವರೂಪ]

**ನಿಯತಸ್ವಾಂತ** (ನಾ). ಸ್ಥಿರವಾದ ಮನಸ್ಸು ; ದೃಢವಾದ ಮನಸ್ಸು : ಇಂತು ಲೋಕಹಿತೈಕ ನಿಯತಸ್ವಾಂತಚೇಷ್ಟಿತನಾದ ಮುನಿ ವೇದಾಂತಸಾಗರಸಾರಸಂಗ್ರಹವೆನಲು ವಿರಚಿಸಿದ (ಸಿಭಾಗ. ೧-೪-೧೨). [ನಿಯತ+ಸ್ವಾಂತ]

**ನಿಯತಾಂಕ** (ನಾ). [ಗಣಿತ]ಬದಲಾವಣೆಯಾಗದ ಅಂಕ; ಖಚಿತವಾಗಿರುವ ಅಂಕ : "ವ್ಯತ್ಯಾಸ ಹೊಂದದ ಅಂಕ, ಪದ: ನಿಯತಪದ ; ನಿಯತಾಂಕ" (Constant. ಇಂಕನಿ). [ನಿಯತ+ಅಂಕ$_2$]

**ನಿಯತಾಧಿಕಾರ** (ನಾ). ೧. ಸ್ಥಿರವಾದ ಅಧಿಕಾರ. ೨. ಸ್ಥಿರವಾದ ಅಧಿಕಾರವುಳ್ಳವನು ; ಒಂದು ಅಧಿಕಾರದಲ್ಲಿ ನಿಯಮಿಸಲ್ಪಟ್ಟವನು ; ಅಧಿಕಾರಿ : "ನಿಯತಾಧಿಕಾರನಚುಗಾಯುಕ್ತಂ" (ವಸ್ತುಕೋ. ೬೧-೫೭). [ನಿಯತ+ಅಧಿಕಾರ]

**ನಿಯತಾಪ್ತಿ** (ನಾ). ೧. ಯಾವ ಸಂಶಯವೂ ಇಲ್ಲದೆ ಪಡೆಯುವುದು. ೨. [ಕಾವ್ಯಮೀ] ನಾಟಕಲಕ್ಷಣದಲ್ಲಿ ಹೇಳಿರುವ ಕಥಾವಸ್ತುವಿನ ಐದು ಅವಸ್ಥೆಗಳಲ್ಲಿ ನಾಲ್ಕನೆಯದು ; ಅಪಾಯಗಳು ಇಲ್ಲದಿರುವುದರಿಂದ ನಾಯಕನಿಗೆ ಫಲ ದೊರಕುವುದರಲ್ಲಿ ಇರುವ ಭರವಸೆ,—ದೃಢವಾದ ನಂಬಿಕೆ,—ನಿಶ್ಚಯಜ್ಞಾನ : ನಿಯತಾಪ್ತಿ –ಅಡಚಣೆಗಳು ಕಳೆದುಹೋಗಿ ಫಲಪ್ರಾಪ್ತಿ ನಿಶ್ಚಯವಾಗಿ ಆಗಬಹುದೆಂಬ ಭರವಸೆ (ಕೈಪಿಡಿ. ೨೦೮). [ನಿಯತ+ಆಪ್ತಿ]

**ನಿಯತಾಹಂಕೃತಿ** (ನಾ). ಅಹಂಕಾರವನ್ನು ಅಡಗಿಸಿರುವವನು : ನಿಯತಾಹಂಕೃತಿ ಪೂತನಾಪ್ರತಿಭಯಂ . . . ಜಯಮಂ ತಾಳ್ದಿದುದಾತ್ಮಸನ್ನಿಭಗುಣಂ ಶ್ರೀಗಂಧಗೋಪಾಳನಾ (ಅರ್ಥನೇ. ೭-೯೩). [ನಿಯತ+ಅಹಂಕೃತಿ]

**ನಿಯತಾಹಾರ** (ನಾ). ಪರಿಮಿತವಾದ ಆಹಾರ. 'ನಿಯತಾಹಾರಯಜ್ಞ' ಪರಾ. [ನಿಯತ+ಆಹಾರ]

**ನಿಯತಾಹಾರಯಜ್ಞ** (ನಾ). ಪರಿಮಿತಾಹಾರ ಸೇವನಾರೂಪವಾದ ಯಜ್ಞ,—ದೇವತಾರಾಧನೆ ; ಆಹಾರನಿಯಮಪಾಲನೆಯಿಂದ ದೇವರನ್ನು ಒಲಿಸಿಕೊಳ್ಳುವುದು : ದ್ರವ್ಯಯಜ್ಞ, ತಪೋಯಜ್ಞ. . .ಪ್ರಾಣಾಯಾಮಯಜ್ಞ, ನಿಯತಾಹಾರಯಜ್ಞ– ಹೀಗೆ ಅನಂತ ಯಜ್ಞಗಳನ್ನು ಶ್ರೀಕೃಷ್ಣನು ಹೇಳುತ್ತಾ . . . ಮೇಲಣ ಮಾತನ್ನು ಹೇಳುತ್ತಾನೆ (ಭಾರದ. ೧೧೬). [ನಿಯತಾಹಾರ+ಯಜ್ಞ]

**ನಿಯತಿ** (ನಾ). ೧. ಹತೋಟಿ ; ನಿರ್ಬಂಧ ; ಅಡ್ಡಿ ; ತಡೆ. ೨. ಅದೃಷ್ಟ; ವಿಧಿ; ದೈವ; ಜನ್ಮಾಂತರೀಯ ಕರ್ಮ: "ಯಮ ನಿಯತಿ ದಿಷ್ಟ ವಿಧಿ ನಾಮ ಮಯಾನಯರೂಪಮಂತದಕ್ಕುಂ ದೈವಂ" (ವಸ್ತುಕೋ. ೧೦-೫೫) ; "ನಿಯತಿಃ, ವಿಧಿಃ—ಈ ೨ ಬಿದಿ" (ಹಲಾಯು. ೧೫-೮೭) ; "ನಿಯತಿಯೆನೆ ವಿಧಿಯಕ್ಕು" (ಮಂಗರಾ. ೨೨-೧) ; ನಿಯತಿಯನಾರ್ ಮಿಗಿಲ್ವವರ್ (ಯಶೋಚ. ೧-೪೯) ; ನಿಯತಿಯ ಗತಿಯನ್ನು ಯಾರು ಬಲ್ಲರು ? (ಕಸರಿ. ೧೮೧) ; ನಿಯತಿಯ ವಜ್ರಮುಷ್ಟಿಯಿಂದ ಬಿಡುಗಡೆಯೇ ಇಲ್ಲವೆ ? (ರೂಪಸ. ೪). ೩. ಕಟ್ಟು ; ನಿಯಮ ; ಕ್ರಮ; ವ್ಯವಸ್ಥೆ : ಪ್ರಾರಬ್ಧದಲಿ ನಿನ್ನ ಪುಣ್ಯವಿನಿತಾನುಮಿರೆ ಸೇರೆ ಪಶ್ಚಾತ್ತಾಪಭಾರವದರೊಡನೆ ದಾರುಣದ ಕರ್ಮನಿಯತಿಯುಮಿನಿತು ಶಿಥಿಲಿಪುದು ಕಾರುಣ್ಯದಿಂ ದೈವ (ಮಂಕುಕ. ೫೧೯) ; ಕಲಿತರ್ಗೆ ಬಿಲ್ಬಿಜ್ಜೆಯಂ, ವೇದಮಂ, ನೀತಿನಯವಿನಯನಿಯತಿಯಂ (ಶ್ರೀರಾಮಪೂ. ೨೫-೬೭೧) ; ತಾವು ದೊಡ್ಡವರು. ನಿಯತಿಗೆ ಭಂಗ ತರಬಾರದು (ನಡೆದಾ. II, ೧೩೯೧). ೪. ವ್ರತ ; ನೇಮ : ಧೀವರಂ ಬೆವಹಾರಕೆಯ್ದಿದ ಠಾವಿನಲಿ ಕಣ್ಬೇನೆಯಾಗಿರಲಾವಗಂ ಶಿವಲಿಂಗದರ್ಶನನಿಯತಿ ತಪ್ಪಿದಡೆ ಜೀವವಂ ತಾಂ ತ್ಯಜಿಸುವಂ (ಬಸವು. ೯-೬). ೫. ಪ್ರಪಂಚದ ವಸ್ತುಗಳಲ್ಲಿರುವ ಮೂಲಶಕ್ತಿ : ನಿಯತಿಗೂ( Norm ) ಪ್ರಕೃತಿಗೂ (Matter) ಇರುವ ಸಂಬಂಧ ಮತ್ತು ಪರಿಣಾಮಕ್ರಮ (ತತ್ವಪ್ರಾ. ೬೪೪). ೬. ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ; ಮನೋನಿಗ್ರಹ; ಆತ್ಮಸಂಯಮನ. ೭. ಪದಾರ್ಥಗಳ ನಿರ್ದಿಷ್ಟವಾದ ಕ್ರಮ : (೬). ೮. [ವ್ಯಾಕ] ವಿಕಲ್ಪವಿಲ್ಲದೆ ನಿತ್ಯವಾಗಿ ಬರುವಿಕೆ : ಕೆಲವು ಶಬ್ದದೊಳ್ = ಕೆಲವು ಶಬ್ದಂಗಳಲ್ಲಿ ; ದತ್ವನಿಯುಕ್ತಯತ್ವಮುಂ = ದತ್ವದೊಡನೆ ಕೂಡಿದ ಯತ್ವವುಂ ; ಜತ್ವನಿಯತಮಂ = ಜಕಾರದ ನಿಯತಿಯಂ ; ತಾಳ್ದಿರ್ಕುಂ = ಧರಿಸಿರ್ಪುದು (ಶಮದ. ೩. ೨೫೯ ಟೀಕು). ೯. [ಶೈವ] ಶೈವಾಗಮದಲ್ಲಿ ಹೇಳಿರುವ ಮೂವತ್ತಾರು ತತ್ತ್ವಗಳಲ್ಲಿ ಒಂದು ; ನಿಯಮನ ಶಕ್ತಿ : ಷಟ್ತ್ರಿಂಶತ್ತತ್ವಗಳು :–ಶಿವ, ಶಕ್ತಿ . . . ನಿಯತಿ, ಪುರುಷ . . . (ಇವು ಶೈವಾಗಮದಲ್ಲಿರುವ ತತ್ತ್ವಸಂದೋಹಗಳು)(ಭಾರದ.೭೩ಅಡಿಟ); ಷಡ್ಗುಣೈಶ್ವರ್ಯಸಂಪನ್ನನಾದ ಪರಮೇಶ್ವರನು —ನಿಯತಿ, ವಿದ್ಯಾ, ಪ್ರತಿಷ್ಠಾ, ಶಾಂತಿ, ಶಾಂತ್ಯತೀತಗಳೆಂಬ ಐದು ಕಲೆಗಳಿಗಾಶ್ರಯವಾದ . . . ಮೂರ್ತಿಗಳಿಂದ . . . ಭಕ್ತಾನುಗ್ರಹ ಮಾಡುತ್ತಾನೆ (ಭಾರದ. ೭೪). ೧೦. ಪರಮೇಶ್ವರನ ಐದು ಕಲೆಗಳಲ್ಲಿ ಒಂದು : ಅಶುದ್ಧಸೃಷ್ಟಿಯಲ್ಲಿ ಮಾಯಾತತ್ತ್ವವು ಕಾಲ, ನಿಯತಿ, ಕಲಾ, ವಿದ್ಯಾ, ರಾಗ ಎಂದು ಪಂಚವಿಧವಾಗಿ ಪರಿಣಮಿಸುವುದು (ಹಿಂದಸಾ. ೨೯೬) ; ಈ ನಿಮಿತ್ತವೇ ನಿಯತಿ. ಇದು ಆಯಾ ಜೀವನ ಕರ್ಮಭೋಗವನ್ನು ನಿಯಮಿಸುವುದು (ಭಾತತ್ತ್ವ. ೬೬೫). ೧೧. [ವೀಶೈ] ಪರಮೇಶ್ವರನಿಗೆ ಅಧೀನವಾಗಿರುವಿಕೆ : ನಿಯತಿ ಎಂದರೆ ಪರಾಧೀನತೆ ; ಪರಮಾತ್ಮನಿಗೆ ವಶನಾಗಿರುವಿಕೆ ; ಇದು ಸರ್ವನಿಯಾಮಕತೆಯ ಸಂಕೋಚ (ಶಕ್ತಿವಿ. ೪೫). ೧೨. [ತತ್ತ್ವಶಾ] ಹೃದಯಕಮಲದಲ್ಲಿರುವ ಹನ್ನೆರಡು ದಳಗಳ ಹನ್ನೆರಡು ರೂಪಗಳಲ್ಲಿ ಒಂದು : ಹೃದಯಕಮಲದಲ್ಲಿರುವ ೧೨ ದಳಗಳಲ್ಲಿ ೧೨ ರೂಪಗಳು. ಅವು ಶಕ್ತಿ, ಪ್ರತಿಷ್ಠಾ, ಸಂವಿತ್, ಸ್ಫೂರ್ತಿ, ಪ್ರವೃತ್ತಿ, ಪರಾ, ವಿದ್ಯಾ, ಮತಿ, ನಿಯತಿ, ಮಾಯಾ, ಕಾಲ, ಪುರುಷ—ಹೀಗೆ ೧೨ ರೂಪಗಳು (ಹಸಾರ. ೪-೨೩ ತಾತ್ಪರ್ಯ). [ಸಂ.]

**ನಿಯತಿಕೃತ** (ಗು). ೧. ವಿಧಿಯಿಂದ ಮಾಡಿದ ; ಅದೃಷ್ಟದಿಂದ ನೆರವೇರಿಸಿದ. (ನಾ). ೨. ಸೃಷ್ಟಿಯ ನಿಯಮದಿಂದ ಮಾಡಿದುದು : ನಿಯತಿಕೃತವೂ ನಿಯಮರಹಿತವೂ ಆದ ಸಾಹಿತ್ಯಿಕ ನಾಟಕಗಳಲ್ಲಿಯೂ ಕೂಡ ದೈವ ಪೌರುಷಗಳ ಸಂಘರ್ಷದಿಂದಲೇ ಸ್ವಭಾವದ ವಿಲಾಸವು ಪ್ರಕಟವಾಗುವುದು (ಪ್ರಬಂಧ. ೩೧). [ನಿಯತಿ+ಕೃತ]

**ನಿಯತಿಕ್ರಮ** (ನಾ). ನಿಯಮದ ರೀತಿ: ನಿಗದಿತ ಕಾವ್ಯೋಕ್ತಿಗಳೊಳ್ ನೆಗಟ್ದುವು ಮಾರ್ಗಂಗಳಿಂತುಮೆರಡುಕ್ತಿಗಳುಂ ಬಗೆವಾಗಳೆರಡು ಮಾಟಿಕ್ಕೆಯೊಳೊಗೆದುವು ವಕ್ರಸ್ವಭಾವ ನಿಯತಿಕ್ರಮದಿಂ (ಕವಿರಾ. ೨-೫೨). [ನಿಯತಿ+ಕ್ರಮ]

**ನಿಯತಿಕ್ಲೃಪ್ತ** (ನಾ). ನಿಯಮಕ್ಕೆ ಕಟ್ಟುಬಿದ್ದವನು : ಆಳದಲಿ ನಿರ್ಲಿಪ್ತ ಮೇಲೆ ನಿಯತಿಕ್ಲೃಪ್ತ ಲೀಲಾಪ್ರಿಯಂ ಬ್ರಹ್ಮ (ಮಂಕುಕ.೯೪).
[ನಿಯತಿ + ಕ್ಲೃಪ್ತ]

**ನಿಯತಿವಾದ** (ನಾ). ಮನುಷ್ಯನಿಗೆ ಇಚ್ಛಾಸ್ವಾತಂತ್ರ್ಯವಿಲ್ಲವೆಂಬ ವಾದ : (ಇಚ್ಛೆಯೇ ಅನ್ಯಶಕ್ತಿಸಂಸ್ಕಾರಗಳಿಗೆ ಅಧೀನವಾಗಿರುವುದರಿಂದ) ಮನುಷ್ಯನಿಗೆ ಇಚ್ಛಾಸ್ವಾತಂತ್ರ್ಯವಿಲ್ಲವೆಂಬ ವಾದ; ನಿಯತಿವಾದ ; ಸಂಕಲ್ಪನಿರ್ಣಯವಾದ (Determinism. ಇಂಕನ್).
[ನಿಯತಿ + ವಾದ$_2$]

**ನಿಯತಿವಾದಿ** (ನಾ). ನಿಯತಿವಾದವನ್ನು ಪ್ರತಿಪಾದಿಸುವವನು ; ನಿಯತಿವಾದದಲ್ಲಿ ಶ್ರದ್ಧೆಯುಳ್ಳವನು : (Determinist. ಇಂಕನ್).
[ಸಂ. ನಿಯತಿವಾದಿನ್]

**ನಿಯತೇಂದ್ರಿಯ** (ನಾ). ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡವನು; ಜಿತೇಂದ್ರಿಯ : ನಾವಪ್ಪೊಡೆ ನಿಯತೇಂದ್ರಿಯವರ್ತಿಗಳ್ (ಶಾಂತಿಪು. ೮-೭೭ ವ); ನಿಯತೇಂದ್ರಿಯನೊಳ್ ತೇಜೋಮಯನೊಳ್ ರೂಪೈಕಪಕ್ಷಪಾತದೆ ನೆಱೆ ನೀತಿಯನುಱದು ಮುನಿಪನೊಳ್ ನಿರ್ಭಯನಂಗಜನೆನ್ನನಿಂತಿರಲ್ ಸೋಲಿಕುಮೇ (ಕಾದಂಪೂ. ೭೪೯).
[ಸಂ.]

**ನಿಯತೋದ್ದೇಶಿ** (ನಾ). [ಕಾವ್ಯಮೀ] ಒಂದು ಕ್ರಮವಾಗಿರಬೇಕೆಂಬ ಉದ್ದೇಶದಿಂದ ಹೇಳಿರುವ ಪದ ; ನಿಶ್ಚಿತವಾದ ಕ್ರಮವನ್ನನುಸರಿಸಿ ಅನ್ವಯಿಸಿಕೊಳ್ಳಬೇಕಾದ ಪದಗಳ ಜೋಡಣೆ : ನಿಯತೋದ್ದೇಶಿಯುಮನುದೇಶಿಯುಮನನುವಿನಂತು ಪೇೞೆ ಯಾಥಾಸಂಖ್ಯಾಹ್ವಯಮಕ್ಕುಂ (ಕವಿರಾ. ೧-೮೭) ; “ನಿಯತವಾದ ಉದ್ದೇಶಿಯನ್ನೂ ಅನುದೇಶಿಯನ್ನೂ ಅನುವಾಗಿ ಹೇಳಿದರೆ ಯಥಾಸಂಖ್ಯ”. ಉದ್ದಿಷ್ಟವಾದ ಕ್ರಮದಲ್ಲಿ ಅರ್ಥಗಳನ್ನುಳ್ಳ ಪದವರ್ಗ ಉದ್ದೇಶಿ (ಕವಿರಾ. ೧-೮೭ ಟಿಪ್ಪಣಿ). [ಸಂ. ನಿಯತೋದ್ದೇಶಿನ್]

**ನಿಯತ್ತು,** ನೀಯತ್ತು (ನಾ). ೧. ದುರ್ಗುಣಗಳಿಂದ ದೂರವಾದ ವರ್ತನೆ; ಸದಾಚಾರ; ನೀತಿ; ಧರ್ಮ; ಪ್ರಾಮಾಣಿಕತೆ : ಇವನು ಯಾರೋ ಕಳ್ಳ ಅಂತ ನಾವು ಕರಕೊಂಡು ಬಂದಿವಿ. ನಿಜಕ್ಕೆ ಎಂತ ನಿಯತ್ತಿನ ಮನುಷ್ಯ ! (ಚಿಕರಾ. ೩೫೨) ; ಒಳ್ಳೇ ನಿಯತ್ತಿನಿಂದ ನ್ಯಾಯವನ್ನು ಮಾಡುತ್ತೇವೆ (ಚಾಮಪಂ. ೨೨೮) ; ಸ್ವಲ್ಪವಾದರೂ ನಿಯತ್ತಿಗೆ ಹೆದರಬೇಕಾಗುತ್ತದೆ (ಪದ್ಮಸ. ೭೧೫) ; ನನ್ನೂರಿನ ಪೂಜಾರಿ ಗಂಗಣ್ಣ ನಿಯತ್ತಿನ ಮನುಷ್ಯ (ನನ್ನೂರು. ೧೩೨) ; ಆಗ ನಮ್ಮಲ್ಲಿದ್ದ ಪೋಲೀಸ್ ಇನ್‌ಸ್ಪೆಕ್ಟರು . . . ಒಳ್ಳೆಯ ನಿಯತ್ತಿನವರು (ಕಲನೆ.೧೦೦). ೨. ಕರ್ತವ್ಯಪ್ರಜ್ಞೆ ; ಔಚಿತ್ಯಜ್ಞಾನ : ರಂಗಸ್ಥಳಕ್ಕೆ ಹೋಗುವ ಮೊದಲು ನನಗೆ ನಮಸ್ಕರಿಸದೆ ಹೊರಡುವದಿಲ್ಲ. ಅದೀಗ ನಿಯತ್ತು (ಬಣ್ಣಮಾ. ೧೮೭). ೩. ನಂಬಿಕೆ ; ವಿಶ್ವಾಸ : ಆತ ತುಂಬಾ ನಿಯತ್ತಿನ ಮನುಷ್ಯ (ರೂಢಿ). **ನೀಯತ್ತು :** ೧. ನನ್ನನ್ನು ಇದುವರೆಗೆ ಕಾಪಾಡಿರುವುದು ನನ್ನ ನೀಯತ್ತು. ನೀಯತ್ತಿದ್ದವರಿಗೇ ಬರಕತ್ತು ಎಂದು ತುರುಕರು ಹೇಳುವುದು ನಿಜ (ಕನಿಸಂ. ೧೪೨).
[←ಅರ. ಹಿಂ. ನೀಯತ್; ಮರಾ. ನಿಯತ್, ನಿಯೇತ್, ನೇತ್]

**ನಿಯಮ**(ನಾ).೧. ಅಂಕೆಯಲ್ಲಿಡುವುದು; ಹತೋಟಿ; ನಿರೋಧಿಸುವುದು ; ನಿಗ್ರಹಿಸುವುದು ; ಪ್ರತಿಬಂಧ. ೨. (ಹೀಗೆಯೇ ಇರಬೇಕೆಂಬ) ಕಟ್ಟು ; ವಿಧಿ ; ಕಟ್ಟಳೆ : ನಿಯಮಮುನೀವರ ಸಂಗಂ ನಿಯತಂ ಶಿಕ್ಷಿಸಲೆವೇಡಿದೆನಗಂ ಮನದೊಳ್ ದಯೆ ಪುಟ್ಟುವಂತೆ ನೆಗಟ್ದನೆ ನಯಹೀನಂ ಮೆಚ್ಚಿದಂಡದಿಂದಂ ನೆಗಟ್ದಂ (ಪಾರ್ಶ್ವಪು. ೪-೨೧) ; ನಿಯಮದ ತೈಲಂ ತೀರ್ದೊಡೆ ಭಯಮಿಲ್ಲದೆ ತನ್ನ ರುಧಿರದಿಂ ದೀಪ್ತಿಗಳಂ ನಯದಿಂ ಬೆಳಗಿದಂ (ತ್ರಿಷವಿ. ೪೭-೧೭) ; “ವಿಧಿ” ಎಂಬುದರಲ್ಲಿ, ಯಾವುದೊಂದು ಅಧ್ಯಾದೇಶ ಆದೇಶ ಉಪವಿಧಿ ನಿಯಮ ವಿನಿಯಮ ಅಧಿಸೂಚನೆ ಭಾರತ ರಾಜ್ಯಕ್ಷೇತ್ರದಲ್ಲಿ ವಿಧಿಯಂತೆಯೇ ಪ್ರಭಾವವುಳ್ಳ ರೂಢಿ ಅಥವಾ ಪದ್ಧತಿ ಸೇರಿರುತ್ತದೆ (ಭಾಧಾನ. ೭) ; ಧ್ವನಿಪರಿವರ್ತನೆ ಹಾಗೂ ಧ್ವನಿಸ್ಥಾಯಿತ್ವದ ನಿಯಮಗಳು ಈ ಹೋಲಿಕೆಯಲ್ಲಿ ಅಡಗಿವೆಯೇ ? (ದ್ರಾವಿ. ೩೮); ಕರ್ಮನಿಯಮ: ಪ್ರತಿಯೊಂದು ಕ್ರಿಯೆಗೂ ಸಮವಾದ ಹಾಗೂ ವಿರುದ್ಧವಾದ ಪ್ರತಿಕ್ರಿಯೆಯುಂಟೆಂಬುದು ನ್ಯೂಟನ್ನನ ನಿಯಮ (ನಿಶಿಉ. ೨೩೭). ೩. ಅಪ್ಪಣೆ ; ಆಜ್ಞೆ : ಗಿರಿಗುಹೆಯ ಪಡಿಗಳಂ ದಂಡರತ್ನದಿಂ ತೆಱೆದು ಬೆಂಕಿಯಾಱುವಿನಂ ಚಿಚ್ಚರಮಾ ಮ್ಲೇಚ್ಛ ಮಹೀಪಾಳರ ತೇಜಮನಾಱಸೆಂದು ನಿಯಮಮನಿತ್ತಂ (ಪಾರ್ಶ್ವಪು. ೧೧-೨೭). ೪. ನಿರ್ಣಯ ; ನಿರ್ಧಾರ ; ನಿಶ್ಚಯ. ೫. ಒಪ್ಪಿಗೆ ; ಸಮ್ಮತಿ ; ಅಂಗೀಕಾರ ; ವಾಗ್ದಾನ : “ಸಂವಿದ್, ಆಗೂಃ, ಪ್ರತಿಜ್ಞಾನಂ, ನಿಯಮಃ, ಆಶ್ರವಃ, ಸಂಶ್ರವಃ . . . ೧೦ ಅಂಗೀಕಾರದ ಹೆಸರುಗಳು ಅಂದರೆ ನನಗಿರಲಿ ಎಂದು ಒಪ್ಪುವಿಕೆ” (ಸಿದ್ಧಾಂತಿ.೪೩). ೬. ಕ್ರಮಬದ್ಧವಾದ ಅನುಷ್ಠಾನ,—ಆಚರಣೆ : ನಿಯಮದಿನಾಗಳುಂ ವನದೊಳಿರ್ಪವರೀಕ್ಷಿಸಿ ಕಲ್ತಳಕ್ಕುಮಿಾ ಕ್ರಿಯೆಗಳನೆಂಬಿನಂ ಶಬರಿ ತಾಳ್ದಿದ ಪುಲ್ಲೆಯ ಕೊಲ್ಲಿನೋಟಮುಂಚೆಯ ನಿಮಿರ್ದಿಂಚರಂ . . . ಒಱಲ್ಚಿತು ಕೂಟದೊಳೊರ್ವ ಭಿಲ್ಲನಂ (ಪುಷ್ಪಪು.೫-೯೭) ; ನಿಯಮದೆ ಸನ್ನಿಧಿಗುತ್ತರದಯನದೊಳೆಸೆದಿರ್ಪ ಕರಿಯ ಮಾಣಿಕ್ಯಸ್ವಾಮಿಯ ಸನ್ನಿಧಿಯೊಳವರ್ . . . ಕುಳ್ಳಿರಲೊಡಂ (ವಿಸ್ಮಚ.೧೦-೨೯); ಈ ನಿಯಮಗಳನ್ನು ಲಕ್ಷ್ಯದೊಳಗಿಟ್ಟುಕೊಂಡು ನಡೆಯುವವನಿಗೆ ಬಹುತರ ರೋಗಗಳು ಬರಲಿಕ್ಕಿಲ್ಲ (ಮುಂಬಯಿ. ೪-೨೫) ; ನಿಯಮ ಉಳ್ಳವನನ್ನು ಕಂಡರೆ ಯಮನಿಗೂ ಭಯ (ಗಾದೆ). ೭. ದೇವರ ಪ್ರೀತಿಗಾಗಿ ಮಾಡುವ ಉಪವಾಸ, ಧ್ಯಾನ ಮೊದಲಾದ ಆಚರಣೆ; ವ್ರತ : “ಪರಿಮಿತವ್ರತಸ್ಥಿತಿ ನಿಯಮಂ” (ವಸ್ತುಕೋ. ೫೮-೩೭) ; ದಯೆ ವೃಕ್ಷಮೂಲಮೆನಿಕುಂ ನಿಯಮಂ ವೃತಿ ಶೀಲಮಾಳವಾಳಮೆನಲ್ಕೇಟ್ಗೆಯನಾಳ್ದು ಸುಖದ ಫಲಪ್ರಾಪ್ತಿಯನಾಗಿಪ ಕಲ್ಪವೃಕ್ಷಮಲ್ಲದೆ ಧರ್ಮಂ (ಪುಷ್ಪಪು. ೧೩-೫೫). ೮. ತಪಸ್ಸು : “ವ್ರತಂ ನಿಯಮವೆನೆ ತಪಂ” (ಮಂಗರಾ. ೧೩೫-೩೭) ; ನಿಯಮದಿನಿರ್ದನಂ ನಿರಪರಾಧನನನ್ನೆಯದಿಂದಘೆನ್ನ ತಂಗೆಯ ಮಗನಂ ವಿದಾರಿಸಿದನಂ ತಱಿದು . . . ಆಱಪೆಂ ಖರನ ಶೋಕಕೃಶಾನುವಂ (ಪಂರಾಮಾ. ೯-೭೨). ೯. [ತತ್ತ್ವಶಾ] ಪರಮೇಶ್ವರನ ಪಂಚಕೃತ್ಯಗಳಲ್ಲಿ ಒಂದು ; ಪ್ರಪಂಚದ ಮೇಲಿನ ಹತೋಟಿ,—ಅಂಕೆ: ಸೃಷ್ಟಿ, ಸ್ಥಿತಿ, ಸಂಹಾರ, ನಿಯಮ, ಅನುಪ್ರವೇಶ ಎಂಬ ಪಂಚಕೃತ್ಯಗಳಿಂದ ಪ್ರವೃತ್ತಿ ಮಾಡಿದಂಥ ಪದಾರ್ಥಗಳ ಪ್ರಪಂಚಮಯನಾದವನು (ಈಶ್ವರ) (ಅಪ್ಪ್ಯತ. ೩-೧೫೦ ಅಡಿಟ). ೧೦. ಹೇತು ಮತ್ತು ಸಾಧ್ಯಕ್ಕೆ ಇರುವ ಸಂಬಂಧವಿಶೇಷ ; ವ್ಯಾಪ್ತಿ ; ☞ ಒಂದು ಬೆಟ್ಟದಲ್ಲಿ ಹೊಗೆಯನ್ನು ನೋಡಿದಾಗ ಅಲ್ಲಿ ಬೆಂಕಿ ಇದೆ ಎಂಬ ಊಹೆ ಬರುತ್ತದೆ. ಈ ಸಂದರ್ಭದಲ್ಲಿ ಬೆಂಕಿಯು ಸಾಧ್ಯ (ಸಾಧಿಸಬೇಕಾದ ವಸ್ತು), ಧೂಮವು ಹೇತು : ಮೀಮಾಂಸಕಮತದಲ್ಲಿ ವ್ಯಾಪ್ತಿಯೆಂದರೆ ಅದೊಂದು ಸಂಬಂಧವು . . . ಹೇತು ಸಾಧ್ಯಗಳಿಗೆ ವ್ಯಾಪ್ತಿಯೆಂಬ ಸಂಬಂಧವಿರುವುದು, ಅದಕ್ಕೆ ನಿಯಮವೆಂದು ಹೆಸರು (ಹಿಂದಸಾ. ೧೭೯). ೧೧. [ಕಾವ್ಯಮೀ] ಕವಿಸಮಯದಲ್ಲಿ ಒಂದು ಬಗೆ : ನಿಯಮವೆಂದರೆ, ಅನೇಕ ಕಡೆಗಳಲ್ಲಿ ದೊರಕಬಹುದಾದ್ದನ್ನು ಒಂದೇ ಕಡೆ ದೊರಕುವಂತೆ ಹೇಳುವುದು, ಅಥವಾ ಅನೇಕ ಗುಣಗಳು ಇರುವ ಕಡೆ ಒಂದೇ ಗುಣವಿರುವಂತೆ ಹೇಳುವುದು (ಕೈಪಿಡಿ. ೨೪೫). ☞ ಉದಾಹರಣೆಗೆ ಅನೇಕ ಕಡೆ ದೊರಕಬಹುದಾದ ಶಂಖವನ್ನು

ಸಮುದ್ರದಲ್ಲಿ ಮಾತ್ರ ಇದೆಯೆಂದು ವರ್ಣಿಸುವುದು. ೧೨. = ನಿಯಾಮ ೫ : ರೇಫ ಱಕಾರಂಗಳ ನಿಯಮಮಾಗ ದುದರ್ಕೆ – ಧುರದೊಳ್ ಪಱಮಱಯಾಡುವ ತೆಱದಿಂದುಱದಿಱದನೆಂಬ ನಿಯಮಂ ದೂಷ್ಯಂ (ಶಮದ. ೧೯ ಪ್ರಯೋ). ೧೩. [ಯೋಗ] ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬ ಯೋಗದ ಎಂಟು ಅಂಗ ಗಳಲ್ಲಿ ಎರಡನೆಯದು ; ☞ ಯೋಗದ ಮೊದಲನೆಯ ಅಂಗವಾದ ಯಮವು ಸಮಾಜದಲ್ಲಿ ಮನುಷ್ಯನ ನಡೆ ನುಡಿಗಳನ್ನು ಪರಿಷ್ಕರಿ ಸುತ್ತದೆ. ನಿಯಮವು ವ್ಯಕ್ತಿಯ ಅಂತರಂಗ ಜೀವನವನ್ನು ಪರಿಷ್ಕರಿಸುತ್ತದೆ. ನಿಯಮದಲ್ಲಿ ಐದು ಬಗೆಗಳಿವೆ. ೧. ಶೌಚ =ಶುಚಿಯಾಗಿರುವುದು: ೨. ಸಂತೋಷ=ತೃಪ್ತಿಯಿಂದಿರು ವುದು. ೩. ತಪಸ್ಸು=ಕಠಿನವಾದ ಕೃಚ್ಛ್ರ, ಚಾಂದ್ರಾಯಣ ಮೊದಲಾದ ವ್ರತೋಪವಾಸಗಳನ್ನು ಆಚರಿಸುವುದು; ಶಾಸ್ತ್ರೀಯ ಕ್ರಮದಿಂದ ಮಾಡುವ ದೇಹದಂಡನೆ. ೪. ಸ್ವಾಧ್ಯಾಯ=ಮಂತ್ರ ಜಪ, ವೇದಾಧ್ಯಯನ. ೫. ಈಶ್ವರಪ್ರಣಿಧಾನ = ದೇವರನ್ನು ಒಂದೇ ಮನಸ್ಸಿನಿಂದ ಧ್ಯಾನಿಸುವುದು : "ಯಮ ನಿಯಮಾದಿ ನಿಜಯೋಗಮಕ್ಕು"(ಮಂಗರಾ. ೭೭–೧೨) ; ಯಮನಿಯಮಸ್ವಾಧ್ಯಾಯ ಧ್ಯಾನಧಾರಣಮೋನಾನುಷ್ಠಾನಜಪಸಮಾಧಿಶೀಳಸಂಪ್ಪನ್ನರ್ . . .ರುದ್ರ ಭಟ್ಟೋಪಾಧ್ಯಾಯರ್ (ಸೌಇಇ. XX, ೪೬–೧೬ ; 1072) ; ಯಮ ನಿಯಮಸ್ವಾಧ್ಯಾಯಕ್ರಮಯುತರ್ . . . ಚಾರಣ[ರ್] ಋಷಿ [ಯುಗಳರ್] (ಬಂಹಿ. ೮–೬೫) ; ಯಮನಿಯಮಆಸನಪ್ರಾಣಾಯಾಮ ಪ್ರತ್ಯಾಹಾರಧ್ಯಾನಧಾರಣಸಮಾಧಿಗಳೆಂಬ ಅಷ್ಟಾಂಗಯೋಗದೊಳಗೆ (ಅಖಂಡೇ. ೨೧೪–೫೪) ; ಈ ಎರಡನೆಯದಾದ ನಿಯಮವು ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರಪ್ರಣಿಧಾನ ಎಂಬ ಐದು ಅಂಶಗಳನ್ನೊಳಗೊಂಡಿದೆ (ಭಾರದ. ೧೫೫). [ಸಂ.]

**ನಿಯಮಜ್ಞ** (ನಾ). ನಿಯಮವನ್ನು ಬಲ್ಲವನು ; ವ್ರತದ ಕ್ರಮವನ್ನು ತಿಳಿದಿರುವವನು : ನಿಯಮಜ್ಞರ್ ಸಕಳಾಗಮಜ್ಞ ರಮಳರ್ ಸಂದರ್ ಧರಾಚಕ್ರದೊಳ್ (ಸುಕುಮಾ. ೧–೧೨). [ಸಂ.]

**ನಿಯಮನ** (ನಾ). ೧. ಅಂಕೆಯಲ್ಲಿಡುವುದು ; ಹತೋಟಿಯಲ್ಲಿಡು ವುದು ; ನಿಗ್ರಹಿಸುವುದು : ನಾವು ಆಗಲೇ ಹೇಳಿರುವ ಐದು ವಿಧವಾದ ಚಿತ್ತವೃತ್ತಿಯ ನಿಯಮನವೇ, ನಿರೋಧವೇ ಯೋಗದ ಲಕ್ಷಣ (ತತ್ವಪ್ರ. ೨೬೯) ; ನಿಯಮನವೆಂದರೆ ಸರ್ವವಸ್ತುಗಳನ್ನು ಆಯಾ ಸ್ವಭಾವದಲ್ಲಿರಿಸುವ ಅಧಿಕಾರ (ಹಿಂದಸಾ. ೨೫೩). ೨. ಅಪ್ಪಣೆ ; ಆಜ್ಞೆ : ಯಮನ ಗೆಲ್ಲುವಡೆ . . . ಯಮಳಾರ್ಜುನಭಂಜನ ಶ್ರೀಹರಿಯ ನಿಯಮನವಿಲ್ಲದೆ ಘಟಿಸುವುದೆ (ಶತಸಾಂ. ೭೩–೬೮). ೩. = ನಿಯಮ ೯ : ನಿಯಮನ ವೆಂದರೆ ಸಕಲವಿಧಪ್ರಯತ್ನಕ್ಕೂ ಕಾರಣವಾಗಿರುವ ಪರಮಾತ್ಮಪ್ರೇರಣೆ (ಹಿಂದಸಾ. ೨೮೪) ; ನಿಯಮನವೆಂದರೆ ವ್ಯಾಪಾರ ಮಾಡುವುದರಲ್ಲಿ ಪ್ರೇರಣೆ (ಭಾತತ್ತ್ವ. ೯೨೫) ; ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಂಬ ೮ ಕರ್ತೃತ್ವ ಉಳ್ಳ ಶ್ರೀ ಪರಮಾತ್ಮನಿಗೆ (ಪಸಾರ. ೨೨–೧೧ ಪದ್ಯಾರ್ಥ). [ಸಂ.]

**ನಿಯಮನಿಧಾನ** (ನಾ). ತಪಸ್ಸೇ ನಿಧಿಯಾಗಿ ಉಳ್ಳವನು ; ತಪಸ್ವಿ : ಸ್ನಾನಾರ್ಥಮೊಂದು ಕಳಶಮನಾ ನಿಯಮನಿಧಾನನೆಟಿಲೆ ಪಿಡಿದಮಳಿನಗಂಗಾನದಿಗೆ ಪಂದು ಸುರತನಿಧಾನಿಯನಮರೇಂದ್ರಗಣಿಕೆಯಂ ಮುನಿ ಕಂಡಂ (ಪಂಪಭಾ. ೨–೪೧). [ನಿಯಮ + ನಿಧಾನ]

**ನಿಯಮನಿರತೆ** (ನಾ). ವ್ರತ, ಉಪವಾಸ ಮೊದಲಾದುವನ್ನು ಪಾಲಿಸುವವಳು : ನಿಯಮಪರಾಯಣೆ : ಎಲೌ ಸುವ್ರತೆ, ನಡೆ, ನಿಯಮನಿರತೆಯಾಗಿರುವ ಶಕುಂತಳೆಗೆ ಈ ವೃತ್ತಾಂತವನ್ನು ತಿಳಿಸೋಣ (ಶಾಕುಂತ. ೧೦೮–೧೦). [ಸಂ. ನಿಯಮನಿರತಾ]

**ನಿಯಮನಿಷ್ಠೆ** (ನಾ). ಕ್ರಮಬದ್ಧವಾದ ಅನುಷ್ಠಾನದಲ್ಲಿ ಆಸಕ್ತಿ; ವ್ರತೋಪವಾಸಾದಿಗಳಲ್ಲಿ ಶ್ರದ್ಧೆ : ಅವನು ವೈದಿಕವನ್ನು ಒಳ್ಳೆ ನಿಯಮನಿಷ್ಠೆಯಿಂದ ಮಾಡುತ್ತಾನೆ (ರೂಢಿ). [ನಿಯಮ + ನಿಷ್ಠೆ]

**ನಿಯಮಪಾಲನೆ** (ನಾ). ಕಟ್ಟಳೆಗಳನ್ನು ಪಾಲಿಸುವುದು : ದಂಡ ತೆಗೆದುಕೊಳ್ಳುವುದರ ಉದ್ದೇಶವು ಗ್ರಂಥಾಲಯಕ್ಕೆ ಉತ್ಪನ್ನವನ್ನು ಮಾಡಿಕೊಳ್ಳಬೇಕೆಂದಿರದೆ ಓದುಗರಿಗೆ ನಿಯಮಪಾಲನೆಯನ್ನು ಮನವರಿಕೆ ಮಾಡಿಕೊಡುವುದಾಗಿದೆ (ಗ್ರಂಥಾಲ. ೬೭). [ನಿಯಮ+ಪಾಲನೆ]

**ನಿಯಮಬದ್ಧ** (ನಾ). ಕ್ರಮದಿಂದ ಕೂಡಿರುವುದು ; ಕ್ರಮಬದ್ಧ ವಾದುದು : ಅವಳ ಕಾಲಿನ ಗೆಜ್ಜೆಯಂದಿಗೆಯು ಕೂಡ ನಿಯಮಬದ್ಧ ವಾಗಿರುವಂತೆ ಮೃದುವಾಗಿ ಮಂಜುಳನಾದಿಯಾಗಿ ಮನಸ್ಸನ್ನು ಮೆಚ್ಚಿ ಸುತ್ತಿತ್ತು (ಮಹಾಣ. ೨೩೭). [ನಿಯಮ+ಬದ್ಧ]

**ನಿಯಮರಹಿತ** (ನಾ). ನಿಯಮವನ್ನು ಬಿಟ್ಟಿರುವುದು ; ಕಟ್ಟು ಪಾಡಿಗೆ ಒಳಪಡದಿರುವುದು : ನಿಯತಿಕೃತನಿಯಮರಹಿತವಾದ ಸಾಹಿತ್ಯಿಕ ನಾಟಕಗಳಲ್ಲಿಯೂ . . . ಸ್ವಭಾವದ ವಿಲಾಸವು ಪ್ರಕಟವಾಗು ವುದು (ಪ್ರಬಂಧ. ೩೧). [ನಿಯಮ + ರಹಿತ]

**ನಿಯಮವಿಘ್ನ** (ನಾ). ತಪಸ್ಸಿಗೆ ತೊಂದರೆ,—ಎಡರು ; ತಪೋ ಭಂಗ : ಆ ರಾಜರ್ಷಿಯ ನಿಯಮವಿಘ್ನಾರ್ಥವಾಗಿ ಭೀತರಾದ ದೇವತೆ ಗಳಿಂದ ಮೇನಕೆಯೆಂಬ ಅಪ್ಸರಸ್ತ್ರೀಯು ಕಳುಹಿಸಲ್ಪಟ್ಟಳು (ಶಾಕುಂತ. ೧೪–೯). [ನಿಯಮ + ವಿಘ್ನ]

**ನಿಯಮವಿಚಾರ** (ನಾ). [ರಾಜನೀ] ಶಾಸನ ಸಭೆಗಳಲ್ಲಿ ಯಾವು ದಾದರೂ ಒಂದು ಅಂಶವು ಸಭೆಯ ನಿಯಮಗಳಿಗೆ ವ್ಯತಿರಿಕ್ತ ವಾಗಿದೆಯೆ ಎಂಬ ಅಂಶದ ಪರಿಶೀಲನೆ : (ಸಭಾ) ನಿಯಮವಿಚಾರ (Point of order. ಇಂಕನಿ). [ನಿಯಮ+ವಿಚಾರ]

**ನಿಯಮಸ್ಥ** (ನಾ). ಸದಾಚಾರವುಳ್ಳವನು ; ಆಚಾರಶೀಲ : ಮುಂದುಗಾಣನು ಲೋಗರಂ ತೃಣವೆಂದುವಱಯನು ತನ್ನನಱಯನ ಮುಂದಗರ್ವದಿ ತಾ ಮಹಾನಿಯಮಸ್ಥನಂದದಲಿ (ಬಸವು. ೪೩–೩೬). [ಸಂ.]

**ನಿಯಮಸ್ಥಾನ** (ನಾ). [ಕಾಮಶಾ] ಕಾಮಶಾಸ್ತ್ರದಲ್ಲಿ ಹೇಳಿರು ವಂತೆ ಯಾವಾಗ, ಎಲ್ಲಿ ಕಲೆಗಳಿರುತ್ತವೆ ಎಂದು ನಿಯಮಿಸಿರುವ ಸ್ಥಳ ; ☞ ಪಾಡ್ಯ ಮೊದಲಾದ ಹದಿನೈದು ತಿಥಿಗಳಿಗನುಗುಣ ವಾಗಿ ಪ್ರತಿಯೊಬ್ಬ ಮನುಷ್ಯನಲ್ಲೂ ಪಾದಾಂಗುಷ್ಠ, ಗುಲ್ಫ, ಊರು, ಭಗ, ನಾಭಿ, ಎದೆ, ಹೃದಯ, ಕಕ್ಷ, ಕಂಠ, ಓಷ್ಠ, ಗಂಡ, ನಯನ, ಶ್ರವಣ, ಲಲಾಟ, ಶಿಖೆ—ಈ ಹದಿನೈದು ಸ್ಥಾನಗಳಲ್ಲಿ ಯಥಾಕ್ರಮವಾಗಿ ಸ್ತ್ರೀಯರಿಗೆ ಎಡಪಾರ್ಶ್ವ ದಲ್ಲಿಯೂ ಪುರುಷರಿಗೆ ಬಲಪಾರ್ಶ್ವದಲ್ಲಿಯೂ ಕಾಮ ಸಂಚರಿಸು ತ್ತಾನೆ. ಪಕ್ಷದ ಆಯಾ ದಿನಗಳಿಗೆ ಸಂಬಂಧಿಸಿದಂತೆ ಕಾಮೋ ತ್ಪತ್ತಿಯಾಗುವ ಸ್ಥಳಗಳಿಗೆ ಈ ಹೆಸರು ಅನ್ವಯಿಸುತ್ತದೆ : ನಿಯಮಸ್ಥಾನಮನಂಟೆ ಸತ್ವದೊಡವಂ ಮುಂ ನೋಡಿ . . . ಅಂಗನೆ ಯಿಚ್ಚೆಯಂ ಸಲಿಸಿದೆಂ ಸಂಭೋಗದೊಳ್ ಯೋಗದೊಳ್ (ದಶಕು. ೧೦–೮೦). [ನಿಯಮ + ಸ್ಥಾನ]

**ನಿಯಮಸ್ಥಿತಿ** (ನಾ). ವ್ರತ ನಿಯಮಾದಿಗಳಿಂದ ದೇಹವನ್ನು ದಂಡಿಸುತ್ತಾ ಧ್ಯಾನಮಾಡುವುದು ; ತಪಸ್ಸು : "ತಪಸ್ಯಾ, ನಿಯಮಸ್ಥಿತಿಃ — ಈ ೨ ತಪಂ" (ಹಲಾಯು. ೧೨೮–೯೧). [ನಿಯಮ+ಸ್ಥಿತಿ]

**ನಿಯಮಪ್ರಾಂತರಿತ** (ನಾ). ನಿಯಮದಿಂದ ಕೂಡಿಕೊಂಡಿರುವುದು ; ನಿಯಮಿತವಾದುದು : ಸರಸಿಜದೊಳ್ ನಿನ್ನ ಮುಖಂ ತರುಣೀ ಸದೃಶಂ ಸಮಂತು ಪೋಲದು ಪೆಱತಂ ನಿರುತಮಿದೆಂಬುದು ನಿಯಮಪ್ರಾಂತರಿತಂ ನಿಯಮೋಪಮಾವಿಕಲ್ಪಿತಭಾಗಂ (ಕವಿರಾ. ೩-೬೪). [ನಿಯಮ+ಅಂತರಿತ]

**ನಿಯಮಾಧೀನ** (ನಾ). ನಿಯಮಕ್ಕೆ ಅಧೀನವಾದುದು ; ವ್ಯವಸ್ಥೆಗೆ ಒಳಪಟ್ಟುದು ; ಕಟ್ಟುಪಾಡಿಗೆ ವಶವಾದುದು : ಈಗ ಜೀವನ ಅತ್ಯಂತ ಸ್ಪಷ್ಟವಾಗಿ ಸರಳವಾಗಿ ಸ್ವನಿರ್ಮಿತ ನಿಯಮಾಧೀನವಾಗಿ ಸಾಗುತ್ತಿತ್ತು (ಪುನರು. ೫೯). [ನಿಯಮ+ಅಧೀನ]

**ನಿಯಮಾರ್ಥ** (ನಾ). = ನಿಯಮ ೧೧ : ಅತತಸತ್ಯವಿಸಮಯಂ ಜಾತಿದ್ರವ್ಯಕ್ರಿಯಾಗುಣಾಶ್ರಯಮಸದಾಖ್ಯಾತಿ ಸದಕೀರ್ತನಂ ನಿರ್ಣೀತಂ ನಿಯಮಾರ್ಥಮೈಕ್ಯಮೆನೆ ನಾಲ್ಕು ತೆಱಂ (ಕಾವ್ಯಾಸ. ೮೪೫). 'ನಿಯಮ' ಪರಾ. [ನಿಯಮ+ಅರ್ಥ]

**ನಿಯಮಾವಳಿ** (ನಾ). ೧. ನಿಯಮಗಳ ಗುಂಪು, — ಸಮೂಹ. ೨. ನಿಬಂಧನೆಗಳ ಗುಂಪು : ಪಕ್ಷದ ನಿಯಮಾವಳಿಗಳು, ಧೋರಣೆಗಳು ವ್ಯಕ್ತಿಯ ನಿಷ್ಠೆ ಎಲ್ಲವನ್ನೂ ಬೇಡುವುವು (ರಾಜಪ. ೭೬). [ನಿಯಮ+ಆವಳಿ ( = ಆವಲಿ$_1$)]

**ನಿಯಮಿಗ** (ನಾ). ನಿಯಮಗಳನ್ನು ಆಚರಿಸುವವನು : ಪಡಿಸಣಮನಾಚರಿಪಂ ಪಡಿಸಣಿಗಂ, ಏವಂ ಅಟಮಟಿಗಂ . . . ನಿಯಮಿಗಂ (ಶಬ್ದಾನು. ೪೦೭ ಪ್ರಯೋ). [ನಿಯಮ+ –ಇಗ]

**ನಿಯಮಿತ** (ಗು). ೧. ಹತೋಟಿಗೆ ತಂದ ; ಅಂಕೆಗೊಳಿಸಿದ ; ವಶಪಡಿಸಿಕೊಂಡ : ಶೀಲಸಂಬಂಧ ಬ್ರತಿಗಳಂ ಶೀಲಸಂಬಂಧಸ್ಥಿತಿಯೊಳನುಕೂಲಭಾವದೊಳಿರಿಸಿ ಯಿರಿಸಿ ನಿಯಮಿತಶೀಲರನು (ಬಸಪು. ೬-೩೧). ೨. ಗೊತ್ತುಮಾಡಿದ ; ನಿಗದಿಮಾಡಿದ ; ನಿರ್ಧರಿಸಿದ : ನಿಯಮಿತಾನ್ವಯ ಜಾತಿಗುಣಕ್ರಿಯಾಶ್ರಯಮಿದಾಯವಧಾರಣಲಕ್ಷಣಂ (ಕವಿರಾ. ೧-೧೩೮) ; ಹಿಂದುಸ್ತಾನದೊಳಗಿನ ಯಾವದೇ ಸ್ಥಳಕ್ಕೆ ಆಗಲಿ ನಿಯಮಿತ ತೂಕದವರೆಗೆ ಅರ್ಧ ಆಣೆಗೆ ಪತ್ರ ಮಾತ್ರ ಮುಟ್ಟಿಸುವ ಬಗ್ಗೆ ವ್ಯವಸ್ಥೆಯಾದಂದಿನಿಂದಲೂ ಪತ್ರವ್ಯವಹಾರವು ಬಹಳೇ ಬೆಳೆದದೆ (ಮುಂಬಯಿ. ೪-೮೩). ೩. ಆಳಿಕೆಗೆ ಒಳಗಾದ. ೪. (ಮಾತಿಗೆ) ಕಟ್ಟುಬಿದ್ದಿರುವ ; (ಪ್ರತಿಜ್ಞೆಯಿಂದ) ಬಂಧಿತನಾಗಿರುವ. (ನಾ). ೫. ಹತೋಟಿಗೊಳಗಾದುದು ; ಅಧೀನಕ್ಕೆ ಒಳಪಟ್ಟುದು : ವಾಚಸ್ಪತಿಯು ತನ್ನ "ಭಾಮತಿ"ಯಲ್ಲಿ ಪ್ರಕೃತಿಯ ಚಲನೆಯು ಈಶ್ವರನಿಂದ ಪ್ರೇರಿತವೂ ನಿಯಮಿತವೂ ಆಗಿದೆಯೆಂದು ಹೇಳುತ್ತಾನೆ (ತತ್ವಪ್ರಾ. ೨೬೯). ೬. (ಒಂದು ಕೆಲಸದಲ್ಲಿ) ನಿಯೋಜಿತನಾದವನು ; ನೇಮಕ ಹೊಂದಿದವನು : ಕಾಸರ್ ಜನಗಳಿಗೆ, ತಮ್ಮ ಹಳ್ಳಿಯನ್ನು ಕಾಯಲು ನಿಯಮಿತನಾಗಿರುವ . . . ರಷ್ಯನ್ ಶಿಪಾಯಿಯಲ್ಲಿ ದ್ವೇಷ ಹೆಚ್ಚು (ಮಲಿನಾ. ೨೧). ೭. ಕ್ರಮಬದ್ಧವಾಗಿರುವುದು ; ವ್ಯವಸ್ಥೆಯಿಂದ ಕೂಡಿರುವುದು : ಹೆಚ್ಚು ಶಾಸ್ತ್ರೀಯವಾಗಿ ಹಾಗು ನಿಯಮಿತವಾಗಿ ಮಾಡುತ್ತಾರೆಂದು ಕಾಣುತ್ತದೆ (ದೇಶಸ್ನೈ. ೩೮). [ಸಂ.]

**ನಿಯಮಿತತನ** (ನಾ). ನಿಯಮಬದ್ಧವಾಗಿರುವಿಕೆ ; ಕ್ರಮಬದ್ಧವಾಗಿರುವಿಕೆ ; ಸಮಯನಿಷ್ಠೆ ; ಕಾಲನಿಷ್ಠೆ : ಕೈಗಾಡಿಯಲ್ಲಿ 'ಉಪ್ಪು' ಬೇಕೇ ಎಂದು ಕೂಗುತ್ತ ಹೋಗುವಾತನ ನಿಯಮಿತತನ, ಪರಿಚಿತ ದನಿ, ಇವೆಲ್ಲವುಗಳಿಗೆ ಯಶೋದೆ ಹೊಸ ಅರ್ಥವನ್ನೇ ಕೊಡಲಾರಂಭಿಸಿದಳು (ವಾತ್ಸಲ್ಯ. ೧೨೦) ; ವಿದ್ಯಾರ್ಥಿಗಳಲ್ಲಿ ನಿಯಮಿತತನವು ಎದ್ದು ಕಾಣುತ್ತಿದೆ (ಕಜಪು. ೫-೨). [ನಿಯಮಿತ+ –ತನ]

**ನಿಯಮಿತಶ್ಲೇಷೆ** (ನಾ). [ಕಾವ್ಯಮೀ] ಶ್ಲೇಷೆಯಲ್ಲಿ ಒಂದು ವಿಧ ; ನಿಯಮಕ್ಕೆ ಒಳಪಟ್ಟಿರುವ ಶ್ಲೇಷೆ ; ꟼ ಅರಿಗೋತ್ರಭೇದಿ ವಿಬುಧೇಶ್ವರನಲ್ಲಂ (ಕವಿರಾ. ೩-೧೧೨) —ಎಂಬುದು ಉದಾಹರಣೆ. ಅರಿಗೋತ್ರಭೇದಿ ಎಂಬುದರಲ್ಲಿ "ದ್ವೇಷಿಗಳಾದ ಬೆಟ್ಟಗಳನ್ನು ಭೇದಿಸುವವನು" ಮತ್ತು "ಶತ್ರುಗಳ ವಂಶವನ್ನು ನಾಶಪಡಿಸುವವನು" ಎಂಬ ಎರಡು ಅರ್ಥಗಳಿವೆ. ಇಲ್ಲಿ ಆ ಪದದ ಇಂದ್ರಪರವಾದ ಅರ್ಥವು ಹೋಗಿ ಶತ್ರುಗಳ ವಂಶವನ್ನು ನಾಶಪಡಿಸುವವನು ಎಂಬ ಅರ್ಥದಲ್ಲಿ ನಿಯಮವನ್ನು ಹೊಂದಿದೆ. ಎಂದರೆ ಇಲ್ಲಿ ಶ್ಲೇಷೆಯಿಂದ ಎರಡು ಅರ್ಥ ಹೊರಡುವಾಗ ಒಂದು ಅರ್ಥವನ್ನು ಒಂದು ಕಡೆ ನಿಯಮ ಮಾಡಿ ಮತ್ತೊಂದು ಕಡೆ ಇಲ್ಲವೆಂದು ಹೇಳುವುದು. ಇದನ್ನು ಪರಿಸಂಖ್ಯಾಲಂಕಾರವೆಂದೂ ಹೇಳುತ್ತಾರೆ : ವರರೂಪಕಾದ್ಯಳಂಕಾರರಚನೆಯೊಳ್ ಮುನ್ನೆ ಪೇೞ್ದುಬಂದೆಂ ಕೆಲವಂ ದೊರೆಕೊಳೆ ಬಗೆಗೀ ತೆಱದಿಂ ನಿರಂತರವಿರುದ್ಧ ನಿಯಮಿತ ಶ್ಲೇಷೆಗಳಂ (ಕವಿರಾ. ೩-೧೧೩). [ನಿಯಮಿತ+ಶ್ಲೇಷೆ]

**ನಿಯಮಿತಾಕ್ಷರ** (ನಾ). [ಕಾವ್ಯಮೀ] ಇಂಥದೇ ಇರಬೇಕೆಂದು ಒಂದು ಕ್ರಮದಲ್ಲಿ ಗೊತ್ತುಮಾಡಿರುವ ಪದ : ನಿಯಮಿತಾಕ್ಷರದಿಂದುಪಮಾಪ್ರತಿಜ್ಞೆಯನೆ ತಿರ್ದುವುದಟ್ಟಿಯಿಂ (ಕವಿರಾ. ೧-೧೪೪). [ನಿಯಮಿತ+ಅಕ್ಷರ]

**ನಿಯಮಿಸು** (ಕ್ರಿ). ೧. ಹತೋಟಿಮಾಡು ; ಅಂಕೆಯಲ್ಲಿಟ್ಟುಕೊಳ್ಳು ; ವಶದಲ್ಲಿಟ್ಟುಕೊಳ್ಳು : ಪೇಟೀವೆನೆಂತಾಂ ನಿಯಮಿಸಿದದೆ ಪೆನಾ ಧೂರ್ತನಂ ಪತ್ರಲೇಖೇ (ಕಾದಂಉ. ೩೦೫) ; ನೆಲನಂ ಮರ್ಯಾದೆಯಿಂ ಪಾಲಿಸಿ ನಿಯಮಿಸಿ ವರ್ಣಾಶ್ರಮಾಚಾರಮಂ . . . ಆತ್ಯಂತಿಕಸುಖಪದಮಂ ಪೆತ್ತ ರಾಜಾಧಿರಾಜರ್ ಪಲರಿಂದಿಕ್ಷ್ವಾಕುವಂಶಂ ಕುಲನದಿಯ ಪೊಲಾಯ್ತವ್ಯವಚ್ಛಿನ್ನರೂಪಂ (ಪಂರಾಮ. ೧-೧೩೨) ; ಎಲ್ಲಾ ಇಂದ್ರಿಯಂಗಳಂ ನಿಯಮಿಸುವುದು ಬ್ರಹ್ಮಚರ್ಯಮೆಂಬುದು (ಹಲಾಯು. ೬೬-೨೪೩) ; ಮನಮಂ ನಿಯಮಿಸಲರಿಯರ್ . . . ಮನಮುಂ ತನುವಂ ನಿಯಮಿಸಲನುದಿನಮಿಾ ನೇಮಿದೇವನೋರ್ವನೆ ಬಲ್ಲಂ (ಎಕ. VII, ಶಿಮೊ. ೬೬-೧೭ ; 1227 ?). ೨. ಅಪ್ಪಣೆ ಮಾಡು ; ಆಜ್ಞೆಮಾಡು ; ವಿಧಿಸು ; ಕಟ್ಟುಮಾಡು : ಸಹದೇವನಂ ವರುಣನನದಿರ್ಪಲ್ ನಿಯಮಿಸುವಂತೆ ಪಶ್ಚಿಮದಿಗ್ಭಾಗಕ್ಕೆ ವೇೞ್ದು (ಪಂಸಭಾ. ೬-೨೮ ಪ) ; ಸರೋಜನಿಳಯೆಯನೆನ್ನ ಬರ್ಪನ್ನಮರಸನನಗಲದೆ ವಿಕಸಿತಶತಪತ್ರಾತಪತ್ರದ ತಣ್ಣೆಳಲುಮಂ ಕುಂದಲೀಯದಿರೆಂದು ನಿಯಮಿಸಿ ರುದ್ರಾವತಾರಂ . . . ಪೋದಂ (ಪಂಪಭಾ. ೧೩-೧೦೫ ಪ) ; ಪಡೆವಳನಂ ಬರಿಸಿ ಬೀಡೆಲ್ಲಮರ್ಚನಾದ್ರವ್ಯಂ ಬೆರಸು ಪೊಱಮಡುವಂತೆ ಸಾರೆಂದು ನಿಯಮಿಸಿ (ಧರ್ಮಾಮೃ. ೧-೬೨) ; ನಿಯಮಿಸೆ ವರೂಥಿನೀಪತಿ ಹಯರತ್ನಮನೇಱೆ ದಂಡರತ್ನಮನಹಿತಕ್ಷಯಕರಮಂ ಧರಿಯಿಸೆ (ಪಾರ್ಶ್ವಪು. ೧೧-೨೯) ; ನಿಮ್ಮನು ನಿಯಮಿಸುವರಾರುಂಟು ಭಾಗ್ಯೋದಯವಿಹೀನನು ತಾನೆನುತ ಕುರುರಾಯ ಬಿಸುಸುಯ್ದು (ಕುಮ್ಯಾಭಾ. ೧-೨೪). ೩. ಶಿಕ್ಷಿಸು ; ದಂಡಿಸು : ಅನ್ನೆಯದಿಂ ನಡೆವವರಂ ನೀನ್ನಿಯಮಿಸುವೈ ದಶಾಸ್ಯ ಪೆಱನಾವಂ ನಿನ್ನನ್ನಿಯಮಿಸುವಂ (ಪಂರಾಮ. ೯-೯೨). ೪. ಕಟ್ಟಿಹಾಕು ; ಕಟ್ಟು ; ಬಂಧಿಸು : ಆ ಮಹಿಪಂ ಪೀತಾಂಬುವನಂದು ಹಯವನಾಸನ್ನವಿಟಪಿಯೊಳ್ ನಿಯಮಿಸಿದಂ (ಕಾದಂಪೂ. ೬೪೬). ೫. ನೇಮಕಮಾಡು ; ನಿಯೋಜಿಸು : ಇಳಾದೇವಿ . . . ಸೀತೆ ಭದ್ರೆಯೆಂಬೆಣ್ಬರುಮಂ ನಾಕನಾಯಕಂ ತ್ರಿಲೋಕಗುರು ಸವಿತ್ರಿಗೆ ಸೀಯನಪ್ಪ ಗೇಯದಿಂ ಪೊಱ್ತುಗಳೆಯಲ್ ನಿಯಮಿಸಿದಂ (ಶಾಂತಿಪು. ೯-೧೬೮ ಪ) ; ಮತ್ತಮಿತರನಿವಾಸಿನಿಯರಪ್ಪ ಪೆಱಪೆಱರುಮೆನಿಬರಾನುಂ ದೇವಿಯರುಮಂ ದೇವರಾಜಂ ವಿಜಯಸೇನಾ

ದೇವಿಯ ಸಂಶೋಧನಾವಿಧಿವಧೂರಹಸ್ಯ ವ್ಯಾಪಾರಪರಾಯಣರುಂ ಪರಿಚಾರಿಕೆಯರುಮಾಗಿ ನೆಗಟ್ಟಿಂತು ನಿಯಮಿಸೆ (ಅಜಿಪು. ೩-೫ ಪ) ; ಮಹಾಶಿವಮೂರ್ತಿಯುಂ ಮತ್ತೆ ಖ್ಯಾತಲಿಂಗಸುಮೂರ್ತಿಯಾಗಿರಲೋತು ನಿಯಮಿಸಿ (ಬಸಪು. ३೯-೧೪). **೬.** ಗೊತ್ತುಪಡಿಸು ; ನಿಗದಿ ಮಾಡು ; ಏರ್ಪಡಿಸು ; ವ್ಯವಸ್ಥೆ ಮಾಡು : ಅವರ್ಗೆ ಬಾಧೆಯಾಗದಂತು ಕಾಪಂ ನಿಯಮಿಸುತ್ತಂ . . . ಬಂದು (ಪಂಪಭಾ. ೨-೯೬ ಪ) ; ದೆಸೆಗಳೆನೆ ಮೇರೆಯುಂ ನಿಯಮಿಸಿದಲ್ಲದೆ ನಡೆಯದು (ಶಾಂತಿಪು. ೧-೮೯) ; ಉಭಯಬಲದ ಮಂತ್ರಿಗಳಿರ್ವರುಂ . . . ಧರ್ಮಯುದ್ಧಕ್ಕೆ ಭರತ ಬಾಹುಬಲಿಗಳನೊಡಂಬಡಿಸಿ ಬಲಮೆರಡುಂ ಮಿಡುಕದೆ ನೋಡುವಂತು ನಿಯಮಿಸಿದಾಗಳ್ (ಚಾವುಂಪು. ೪೯). **೭.** ಉಪದೇಶಿಸು ; ನಿರ್ದೇಶಿಸು : ಸಾವದ್ಯಂ ಸಾರದಂತಾಗಿರೆ ನಿಯಮಿಸುವಾಚಾರ್ಯರಿನ್ನೆಮ್ಮನೇನೋದಾವಂ ತಳ್ತಟ್ಟಿದಂತೋಸರಿಸಿ ಕಳೆಗೆ ಸಂಸಾರಕಾಂತಾರದಿಂದಂ (ಆಪಿಪು. ೧-೩) ; ಗುರುಗಳ್ನಿಯಮಿಸಿದ ಮೋಕ್ಷಮಾರ್ಗದ ಮಾತಂ ನಿರುತಂ ಮಿಾಜಿಲ್ಸಲ್ಲದು (ಸಸುಪ. ३-೪೧) ; ಶಿಷ್ಯರಂ ನಿಯಮಿಸುವರ್ ತ್ರಿವಿಧಧನುಃಪ್ರಯೋಗದೊಳ್ . . . ಚತುರಚಾಪಾಚಾರ್ಯರ್ (ಪುಷ್ಪಪು. ೨-೫೯). [ನಿಯಮ + -ಇಸು₃]

**ನಿಯಮೋಪಮೆ** (ನಾ). [ಕಾವ್ಯಮಿಾ] ಉಪಮಾಲಂಕಾರದಲ್ಲಿ ಒಂದು ವಿಧ ; ℙ ಉಪಮೇಯಕ್ಕೆ ಇದೊಂದೇ ಸಮಾನವಾಗಿದೆ, ಮತ್ತಾವುದೂ ಸಮಾನವಾಗುವುದಿಲ್ಲ ಎಂದು ಪಕ್ಷಾಂತರವನ್ನು ಬಿಟ್ಟು ಪ್ರಕೃತೋಪಮಾನವನ್ನು ನಿಯಮಿಸುವುದು,— ದೃಢಪಡಿಸುವುದು : ಸರಸಿಜದೊಳ್ ನಿನ್ನ ಮುಖಂ ತರುಣೀಸದೃಶಂ ಸಮಂತು ಪೋಲದು ಪೆಜತಂ ನಿರುತವಿದೆಂಬುದು ನಿಯಮಾಂತರಿತಂ ನಿಯಮೋಪಮಾವಿಕಲ್ಪಿತಭಾಗಂ (ಕವಿರಾ. ३-೬೪).

[ಸಂ. ನಿಯಮೋಪಮಾ]

**ನಿಯಾಮ** (ನಾ). **೧.** ಅಂಕೆಯಲ್ಲಿಡುವುದು ; ಹತೋಟಿಮಾಡುವುದು. **೨.** ನಿರ್ದೇಶನ; ಮಾರ್ಗದರ್ಶನ : "ಉಯ್ – ನಿಯಾಮೇ" (ಶಮಧಾ). **೩.** ಅಪ್ಪಣೆ ; ಆಜ್ಞೆ : ಆ ಚವುಡಿಸೆಟ್ಟಿಯರ ನಿಯಾಮದಿಂ ನಾಗರಸರು ಪುರದಿಂ ಪಡುವಲು ತೊಱೆಯ ಕೂಡಿದ ಹಳ್ಳ (ಎಇ. XXI, ೧೪-೬೬ ; 1260). **೪.** ದೋಣಿ ನಡೆಸುವವನು ; ಅಂಬಿಗ. 'ನಿಯಾಮಕ' ಪರಾ. **೫.** [ಛಂದ] ಪದ್ಯದ ಪ್ರತಿಸಾಲಿನ ಪ್ರಥಮ ಮತ್ತು ದ್ವಿತೀಯ ಸ್ವರಗಳ ನಡುವೆ ಒಂದೇ ಬಗೆಯ ವ್ಯಂಜನ ಬರುವುದು ; ದ್ವಿತೀಯಾಕ್ಷರ ಪ್ರಾಸ : ಕುಳದ ನಿಯಾಮದೊಳೆಂದುಂ ಕ್ಷಳಕ್ಕೆ ಲಾಕ್ಷರವಿಕಲ್ಪಮಿಲ್ಲ (ಶಸುದ. ೫) ; ಇಂತೇಕಸ್ಥಾನಿಗಳಾದ ಕಾರಣದಿಂದಿವು ವರ್ಣಾವೃತ್ತಿಗೆ ಸಲ್ವುವು, ನಿಯಾಮಕ್ಕಂ ಯಮಕ ವ್ಯವಹೃತಿಗಮಾಗವು (ಶಮದ. ೧೯ ವೃತ್ತಿ). [ಸಂ.]

**ನಿಯಾಮಕ** (ಗು). **೧.** ಅಂಕೆಯಲ್ಲಿಡುವ ; ಹತೋಟಿಯಲ್ಲಿಟ್ಟುಕೊಳ್ಳುವ. (ನಾ). **೨.** ಅಂಕೆಯಲ್ಲಿಟ್ಟುಕೊಂಡಿರುವುದು ; ಹತೋಟಿ ಮಾಡುವುದು : ಮನುಷ್ಯನು ವಿಹಿತಕರ್ಮವನ್ನಾಚರಿಸಬೇಕೆಂದೂ ಎಲ್ಲಕ್ಕೂ ಕರ್ಮವೇ ನಿಯಾಮಕವೆಂಬ ಮಿಾಮಾಂಸಕರ ವಾದ ಮನುಷ್ಯನನ್ನು ಜಡತ್ವ ಬಿಡುವಂತೆ ಪ್ರೇರೇಪಿಸುತ್ತದೆ (ಗೋಪುರ. ೧೬೪) ; 'ಸರ್ಗಬಂಧ'ವು ಮುಖ್ಯವಾಗಿ ರಸಪ್ರತಿಪಾದನೆಗೆ ಹೊರಟಿದ್ದರೆ ರಸಾನುಗುಣವಾದ ಔಚಿತ್ಯವೇ ಅದರ ಸಂಘಟನೆಗೆ ನಿಯಾಮಕವಾಗುತ್ತದೆ (ಧ್ವನ್ಯಾಲೋ. ೧೪೩) ; ಬ್ರಹ್ಮಚರ್ಯಾದ್ಯಾಶ್ರಮವ್ಯವಸ್ಥೆಯೆ ಆದರ್ಶ ಜೀವನದ ನಿಯಾಮಕ (ಋಕ್ಸಾರ. ೮೮ ಪೀಠಿಕೆ). **೩.** ಅಂಕೆಯಲ್ಲಿಟ್ಟುಕೊಂಡಿರುವವನು ; ಹತೋಟಿಯಲ್ಲಿಟ್ಟುಕೊಂಡಿರುವವನು : ಈ ಪರಿಯಲಚ್ಯುತನ . . . ವಿಷಯ ಪ್ರಾಪಕ ಸ್ಥಾಪಕ ನಿಯಾಮಕ ವ್ಯಾಪಕನುಯೆಂದಱಿದು ನೀ ನಿರ್ಲೇಪನಾಗಿರು (ತಸಾರ. ೪-೨೯) ; ಈ ಕಾರಣದಿಂದಲೇ ಅವರು ಸ್ವಸ್ವರೂಪವನ್ನಾಗಲಿ ತಮಗೆ ನಿಯಾಮಕನಾದ ಭಗವಂತನ ಎಂದರೆ ಬ್ರಹ್ಮನ ಸ್ವರೂಪವನ್ನಾಗಲಿ ತಿಳಿಯದೆ . . . ಸಂಸಾರಬಂಧವನ್ನು ಹೊಂದುವರು (ಭಾತತ್ತ್ವ. ೯೨೫) ; ಪ್ರಾಣಿಗಳಿಗೆಲ್ಲಾ ನಿಯಾಮಕನಾದ ಆ ಯಮದೇವನು ಹೊರಟುಹೋದ (ಪಚಭಾ. ೧೬೪). **೪.** ರಥವನ್ನು ನಡೆಸುವವನು ; ಸಾರಥಿ. **೫.** ದೋಣಿ ಅಥವಾ ಹಡಗನ್ನು ನಡೆಸುವವನು ; ನಾವಿಕ; ಹಡಗಿನ ಮಾರ್ಗದರ್ಶಕ: "ನಿಯಾಮಕಾಃ, ಪೋತವಾಹಾಃ — ೨ ಹಡಗಿನ ಕಂಭದ ಮೇಲೆ ಇದ್ದು ಹಡಗು ನಡಿಸತಕ್ಕ ಉಪಾಯಗಳನ್ನು ಹೇಳುವವರ ಪೆಸರುಗಳು" (ಸಿದ್ಧಾಂತಿ. ೭೯). **೬.** ಅಪ್ಪಣೆ ; ನಿಯಮ ; ಶಾಸನ : (ಕಿ).

[ಸಂ.]

**ನಿಯಾಮಿಸು** (ಕ್ರಿ). **೧.** ಅಂಕೆಯಲ್ಲಿರಿಸು ; ಹತೋಟಿಯಲ್ಲಿರುವಂತೆ ಮಾಡು ; ನಿಗ್ರಹಿಸು : ಉನ್ಮಾರ್ಗದಿಂ ಪರಿವಿಂದ್ರಿಯಂಗಳಂ ನಿವಾರಿಸದೆಯುಂ ಕದಡಿದ ಮನಮಂ ನಿಯಾಮಿಸದೆಯುಂ ಇಂತಿರ್ಪುದುಚಿತಮಲ್ಲಂ (ಕಾದಂಪೂ. ೮೪೮) ; ಉತ್ಸಾಹಿಗಳಪ್ಪ ರಾಜಪುತ್ರರಂ ನಿಯಾಮಿಸುತ್ತಮಿರ್ದು ಪಗಲುಂ ಕಳೆಯೆ (ಕಾದಂಉ. ೫೦೧). **೨.** ಅಪ್ಪಣೆ ಮಾಡು ; ಆಜ್ಞಾಪಿಸು : "ನಿಯಾಮಿಸು—ಆಜ್ಞಾಪನೇ" (ಶಮಧಾ) ; ಮೆಱೆಮಿಂಡಮಾಹೇಶ್ವರನಂ ಶಂಕರಂ ಪರಮಕರುಣದಿಂದೆತ್ತಿ ತಾಂ ಬರಿಸಿದ ದಿವ್ಯವಿಮಾನದೊಳ್ ಕುಳ್ಳಿರಿಸಿ ನಿಯಾಮಿಸಲ್ಕಾಗಳ್ ಸುರಕಾಂತಾಜನವತ್ಯಾದರದಿಂ ನರ್ತಿಸುತಿರಲ್ಕೆ (ತ್ರಿಪುವಿ. ೬-೧೫ ಪ). **೩.** ನೇಮಿಸು ; ನೇಮಕ ಮಾಡು : ಒಸೆದೀವ ತೆಜಕಾಜನಾರಾತನಂ ನಿಯಾಮಿಸು ತಂದೆ ಎನೆ (ಹಚಕಾ. ೯-೧೫) ; ಸಕಳಬ್ರಹ್ಮಾಂಡಮಂ ರಕ್ಷಿಸುವ ರುದ್ರಾಣಿಗೆ ರಕ್ಷಣಾರ್ಥಂ ತಂದೆ ನಿಯಾಮಿಸಿ ಕೊಟ್ಟ ದಂಡಿಗೆಯ ಧವಳಛತ್ರದ ಅಂಗರಕ್ಷಕರ . . . ಷೋಡಶಸಹಸ್ರ ವಿಳಾಸಿನಿಯರ್ವೆರಸು ನಡೆತಂದು (ಗಿರಿಕ. ३-೯೧ ಪ). **೪.** ನಿರ್ದೇಶಿಸು ; ಅನುಸರಿಸುವಂತೆ ಮಾಡು : ಭವ್ಯನಿವಹಕ್ಕೆ ದಯಾಮಯಮಪ್ಪ ಧರ್ಮಮಂ ಕರಣದಿನೂಱತೋಱೆ ನೆಱೆ ಪೇಟ್ದು ನಿಯಾಮಿಸುವರ್ ಸುಧರ್ಮದೊಳ್ (ಬಾಧಪು. ೧-೪). **೫.** ನಿರೂಪಿಸು; ಹೇಳು : ನೇಹದ ರಮಣಿಯಾಕೆಯ ಸುತರು ಮಹದುದ್ಯಮರು ಕೇಳೆಂದಸುರರಿಪು ಕುಂತಿಗೆ ನಿಯಾಮಿಸಿದ (ಕುವ್ಯಾಉ. ೮-೨೦). [ನಿಯಾಮ + -ಇಸು₃]

**ನಿಯುಕ್ತ** (ಗು). **೧.** (ಒಂದು ಕೆಲಸದಲ್ಲಿ) ನೇಮಕಮಾಡಿರುವ. **೨.** ಸೇರಿಕೊಂಡಿರುವ ; ಕೂಡಿಕೊಂಡಿರುವ : ದುರ್ವಾರಸಂಸಾರವಿಚ್ಛೇದೋಪಾಯನಿಯುಕ್ತಸೂಕ್ತಿವೃಷಮಾರ್ಗಾಗ್ರೇಸರಂ . . . ದಯೆಗೆಯ್ವನಕ್ಕೆಮಗೆ (ಆಪಿಪು. ೧-೧) ; ನುಡಿದಂ ಕ್ರಮದಿಂ ಪ್ರಶ್ರಯನಿಯುಕ್ತ ಮಧುರೋಕ್ತಿಗಳಂ (ಚಂದ್ರಪು. ೫-೨೫) ; ಸಂಸ್ಕೃತಶಬ್ದನಿಯುಕ್ತ ಲಕಾರದ ನೆಲೆಗೆ ನಿಂದು ಸರಿಯಾಗಿ ಸಲ್ವುದಂ ಕ್ಷಳನೆಂಬರ್ (ಶಸುದ. ೧೬). **೩.** ಕಟ್ಟಿ ಹಾಕಿರುವ ; ಬಂಧಿಸಿರುವ. (ನಾ). **೪.** (ಕೆಲಸದಲ್ಲಿ) ನೇಮಕ ಹೊಂದಿರುವವನು: ದ್ವಾರನಿಯುಕ್ತಂ ರೌದ್ರಾಕಾರಂ ವಜ್ರಮುಖನೆಂಬ ದನುಜಂ . . . ತಾಗಿದೊಡೆ (ಪಂರಾಮಾ. ೧೧-೭೦) ; ನಿಯುಕ್ತನೆಂದರೆ ಒಂದು ಕೆಲಸದಲ್ಲಿ ಒಬ್ಬ ಧಿಕಾರಿಯಿಂದ ನಿಯಮಿಸಲ್ಪಡುವವನು (ಹೊನುಗ. ೮೬) ; ತಂದೆ ಚರ್ಚಿನ ಕೆಲಸದಲ್ಲಿ ನಿಯುಕ್ತ (ಗಂಮಾಯಿ. ೭೮) ; ಆ ಕಾರ್ಯಕ್ಕಾಗಿ ಭಾರತದ ಡೊಮಿನಿಯನ್ ಸರ್ಕಾರದಿಂದ ನಿಯುಕ್ತವಾಗಿರತಕ್ಕಂಥ ಪದಾಧಿಕಾರಿಗೆ (ಭಾಧಾನ. ೪). **೫.** ಗೊತ್ತುಮಾಡಿದುದು ; ನಿಗದಿಯಾಗಿರುವುದು ; ನಿಯಮಿತವಾದುದು : ಪಯೋಯುಗ್ಮದಿಂದಂ . . . ಪ್ರಯೋಗಪ್ರಸಿದ್ಧಂ ನಿಯುಕ್ತಂ ವಿಚಿತ್ರಂ (ಛಂದೋಂಬು. ೨-೭೭) ;

ಪ್ರಿಯೂನಿವರ್ಸಿಟಿ ಮತ್ತು ಡಿಗ್ರಿ ತರಗತಿಗೆ ನಿಯುಕ್ತವಾದ, ಸಮಾಜಶಾಸ್ತ್ರ ಮತ್ತು ವಿಜ್ಞಾನಗಳಿಗೆ ಸಂಬಂಧಿಸಿದಂತೆ . . . ಸುಮಾರು ೫೦ ಪುಸ್ತಕಗಳು ಈ ಮಾಲೆಯಲ್ಲಿ ಹೊರಬಿದ್ದಿವೆ (ಸುವರ್ಣ. ೨೧೫). [ಸಂ.]

**ನಿಯುಕ್ತಿ** (ನಾ). ೧. ಅಪ್ಪಣೆ; ಆಜ್ಞೆ. ೨. ನಿಯಮಿಸುವುದು ; ನೇಮಕ: ಪ್ರಧಾನಮಂತ್ರಿಯವರ ನಿಯುಕ್ತಿಯನ್ನು ರಾಷ್ಟ್ರಪತಿಯವರು ಮಾಡತಕ್ಕದು (ಭಾಧಾನ. ೩೭). ೩. ಸೇರುವಿಕೆ ; ಕೂಡುವಿಕೆ: ಹರುಷಂಬಟ್ಟು ಪುನರಪಿ ಜಂಗಮಕೆ ಪೊಡವಟ್ಟು ಭಕ್ತಿನಿಯುಕ್ತಿಯಲಿ ದಸರಯ್ಯನಿರುತಿರಲು (ಬಸಪು. ೩೮–೫೦) ; ಗುರುಪದಾಂಬುಜ ಭಕ್ತಿಯುಂ ಗುರುಕರುಣಾಕಾರ್ಯನಿಯುಕ್ತಿಯುಂ . . . ನಿರುತದಿಂ ರಂಜಿಸುತಮಿರಲು (ಬಸಪು. ೩೯–೪). ೪. ಹುದ್ದೆ ; ಅಧಿಕಾರ.

ನಿಯುಕ್ತಿ ಮಾಡು = ನೇಮಕ ಮಾಡು ; ನೇಮಿಸು : ಪದವೀಧರರಾಗಿದ್ದ ತರುಣಿಯರಿದ್ದರೆ ತಮ್ಮ ಶಾಲೆಯಲ್ಲಿ ಅಧ್ಯಾಪಿಕೆಯರಾಗಿ ನಿಯುಕ್ತಿ ಮಾಡಲು ಸಿದ್ಧರಾಗಿರುವುದಾಗಿಯೂ . . . ಪತ್ರ ಬರೆದರು (ಥೇಪುಸ್ಗಂ. ೧೬೧). [ಸಂ.]

**ನಿಯುತ** (ನಾ). ೧. ಕೂಡಿಕೊಂಡಿರುವುದು ; ಸೇರಿರುವುದು. ೨. ಒಂದು ಸಂಖ್ಯೆ ; ಒಂದು ಲಕ್ಷ. ೩. ಹತ್ತು ಲಕ್ಷ; ದಶಲಕ್ಷ. ೪. ಹತ್ತು ಸಾವಿರಕೋಟಿ; ಒಂದು ನೂರು ಅಯುತ. ೫. ಅತಿ ದೊಡ್ಡ ಸಂಖ್ಯೆ. ☞ ಈ ಶಬ್ದವು ಯಾವ ಸಂಖ್ಯೆಯನ್ನು ಸೂಚಿಸುತ್ತದೆ ಎಂಬುದರ ಬಗ್ಗೆ ಭಿನ್ನಾಭಿಪ್ರಾಯಗಳಿವೆ. [ಸಂ.]

**ನಿಯುದ್ಧ** (ನಾ). ಕುಸ್ತಿ ; ಮಲ್ಲಯುದ್ಧ ; ದ್ವಂದ್ವಯುದ್ಧ ; ಮಲ್ಲಗಾಳಗ: ಸಕಲಕಟಕಚಾತುರಂಗಬಲಮಕುಟಸಂಘಟಿತ ಚಕ್ರಚಟುಲಗತಿನಿಯುದ್ಧಾಯುಧಘಾತರುಧಿರಕರ್ದಮಸಮ್ಮರ್ದಿತಮುಮಪ್ಪ ಸಂಗ್ರಾಮಭೂಮಿಯೊಳಗನೆ ಬರ್ಪಲ್ಲಿ (ಗದಾಯು. ೪–೩೭ ಪ) ; ಘನದೃಢೋರುಥೊಕ್ಕರಣಪಾತನೋನ್ಮೂಲಿತನಿಯುದ್ಧಪ್ರಸಿದ್ಧಚಾಣೂರಮುಷ್ಟಿಕಾಸುರ . . . ಚಂದ್ರಕಾಪೀಡರೂಢಗೋಪಾಲ ಶ್ರೀಭಗವದ್ವಾಸುದೇವ ನಮಸ್ತೇ ನಮಸ್ತೇ (ಜಗವಿ. ೧೨–೫೭ ಪ) ; ಪತ್ತುವ ಲಗ್ಗೆಗೆ ಮಾರಿಯೊಳ್ ಮೊಗಂಬೊಕ್ಕವೊಲಾಗೆ ಬೆರ್ಚದನಮ ಕುವರಂಗೆನಸುಂ ನಿಯುದ್ಧದೊಳ್ (ಚಂದ್ರಪು. ೫–೮೦) ; ಅಲಘುಬಲ ನೀನೆಂದು ಬಗೆದಿಹೆ ನಿನ್ನ ಚಿತ್ತದಲಿ ತಿಳಿವಡರಿದಾದುದು ನಿಯುದ್ಧಕೆ ನಿಲುಕುವುದು ಬೆಜಗಲ್ಲವೇ (ತೊರರಾ. ೬–೬–೫೩) ; ನೆರೆ ಮುಳಿದದಕ್ಕೆ ಬಳಿಕನುಪಮ ನಿಯುದ್ಧಚಾತುರಿಯಿಂದೆ ಬಲ್ಸೊತ್ತು ಸೆಣಸುತ್ತೆ (ಶೀಷರಾ. ೨೨–೨೧) ; ನಿಯುದ್ಧದಲಿ ನನ್ನ ಸಮನಿಲ್ಲ (ಭಾಸನಾ. ೨೨). [ಸಂ.]

**ನಿಯುದ್ಧರಂಗ** (ನಾ). ಮಲ್ಲಶಾಲೆ ; ಅಖಾಡ : ವಸುದೇವಂ ಬಲದೇವಂಬೆರಸು ಚಾತುರ್ದಂತಬಲಮಂ ಕೂಡಿಕೊಂಡು ನಿಯುದ್ಧರಂಗದ ಕೆಲದೊಳ್ ಯುದ್ಧಸನ್ನದ್ಧರಾಗಿರ್ದಾಗಳ್ (ಅರ್ಧನೇ. ೮–೭೩ ಪ).
[ನಿಯುದ್ಧ + ರಂಗ]

**ನಿಯೂರ್** (ನಾ). ಒಂದು ಊರಿನ ಹೆಸರು : ಪೆರ್ಮ್ಮಾಕ್ಕಳ ಸನ್ತಾನ ಪಾರ್ವ್ವರ್ನ್ನಿ ನಿಯೂರಾ ಮಹಾಜನಕ್ಕೆ ಕೊಟ್ಟದು (ಎಕ. VII, ೩ಕಾರಿ. ೪೫–೨೭ ; ಸು. 890 ?). [ ? + ಊರ್]

**ನಿಯೋಕ್ತೃ** (ನಾ). ಪ್ರೇರಿಸುವವನು ; ಪ್ರೇರಕ; ಚೋದಕ : ಸುಯಶನೆ ನಿಯೋಕ್ತೃ ಕರ್ತೃ ಹರ . . . ಭಸ್ಮಾಂತಕಂ (ವೀಶೈಪು. ೬–೪–೨೨). [ಸಂ.]

**ನಿಯೋಗ** (ನಾ). ೧. ಸೇರುವುದು ; ಕೂಡುವುದು ; ಅನ್ವಯಿಸುವುದು. ೨. ನೇಮಿಸುವುದು; ನೇಮಕ. ೩. ನೇಮಿಸಿದ ಕೆಲಸ,—ಕಾರ್ಯ,—ವ್ಯವಹಾರ : ಇದರ್ಕೆ ಪ್ರಥಮಮೇಖಲಾಸ್ಥಿತೋಭಯಶ್ರೇಣಿಗಳೊಳ್ ಕರ್ಮಭೂಮಿಯ ನಿಯೋಗಮೆ ನಿಯೋಗಂ. (ಆದಿಪು. ೯–೧೨೧ ಪ) ; ವೀರಪುರುಷರಂ ಬರಿಸಿ ಯಥೋಚಿತಪ್ರತಿಪತ್ತಿಗಳೊಳಿರಿಸಿ ಪೇಬಿಮಿನ್ನೆಮ್ಮ ಗೆಯ್ವ ನಿಯೋಗಮೇನೆನೆ (ಪಂಪಭಾ. ೧೩–೨೦ ಪ) ; ಭರತಕ್ಷೇತ್ರದೊಳಲ್ಲಿಂದಿತ್ತಮೀ ತೆಜದ ನಿಯೋಗಮಕ್ಕುಮೆಂದಱಪಿ (ಚಾವುಂಪು. ೧೦); ಜನಕಜೆಯ ಸುದ್ದಿಯಂ ತರ್ಪ ನಿಯೋಗಂ ನಿನಗೆ ಮೊನೆಯೊಳಾಟಂದು ದಶಾಸ್ಯನನಿಕ್ಕಿ ದೇವಿಯಂ ತರ್ಪ ನಿಯೋಗಂ ಲಕ್ಷ್ಮಣಂಗೆ ಪುದು ಪೆಜಿಗುರ್ಣಟೇ (ಪಂರಾಪೂ.೧೧–೪೫); ಒಲಿವ ಹಿತವರು ಸೋದರರು ಮಕ್ಕಳುಗಳಾಜ್ಞಾಯ್ತಾದಡೀತನ ಬಲುನಿಯೋಗವನೆಲ್ಲವಂ ಪ್ರತಿಪಾಲಿಸುವರೊಳರೆ (ಬಸಪು. ೫–೪) ; ನಾಗನಗರಿಧರಿತ್ರಿಕೋಶವಿಭಾಗತಂತ್ರನಿಯೋಗ ಗಮನಸರಾಗ ಪಾಂಡವರಾಜಜಿತಸಂಗ್ರಾಮನಿಸ್ಸೀಮ (ಹರಿಸಾ. ೧೫). ೪. ಊಳಿಗ ; ಸೇವೆ : ಅಂತಾ ಸಮಯದೊಳ್ ಗಂಧರ್ವರಾಜನಂದನೆ ಸುರಭಿಗಂಧೋದ್ಗಾರಿಗಳಪ್ಪ ದೀವಿಗೆಗಳಂ ಪಿಡಿದು ದೀಪಧಾರಿಣಿಯರ್ವಂದು ನಿಜನಿಯೋಗಾಶೂನ್ಯಾರ್ಥಮಾಗಿ ಗೆಂಟಜಿಕೊಳೆ ಬಳಸಲವಂ ಸೈರಿಸದೆ ನಿವಾರಿಸುತ್ತಮಿರ್ದು (ಕಾದಂಉ. ೩೨೨) ; ಹಡವಳ ಬೋಕಣಂ ಕುಡೆ ನಿಯೋಗಮನೂರ್ಜ್ಜಿತತೇಜದೆಳ್ತರಂ ಪೊಡವಿಗಪೂರ್ವ್ವಮಾಗೆ . . . ಪೊಗಳ್ತೆವೆತ್ತ ಹೆಗ್ಗಡೆಯೆಜಗಂ ಪ್ರತಾಪನಿಧಿ ಸೋಭಿಸುವಂ (ಎಕ. V, ಹಾಸನ. ೬೯–೪೧ ; 1155); ಈ ನಿಯೋಗಮನೀತಂ ನಡೆಯಿಸುವನೆಂಬಲ್ಲಿ ವಳ–ವಳ್ಳ, ಆಯ್ತು ಪ್ರತ್ಯಯಂಗಳಕ್ಕುಂ (ಶಬ್ದ. ೧೯೮ ವೃತ್ತಿ) ; ಖುರಮಂ ಸೋದಿಸುವುದು . . . ಸಮತಲನೆಲದೊಳ್ ಪೊರಳಿಸುವುದೊರಸುವುದು ಪಗಲಿರುಳುಂ ಪರಿಚಾರಕಂಗೆ ನಿತ್ಯನಿಯೋಗಂ (ಅಶ್ವಶಾ. ೭–೯). ೫. ಅನುಷ್ಠಾನ; ಆಚರಣೆ : ಕಲ್ನೆಲೆ ನಿಂದು ಯೋಗದ ನಿಯೋಗದಿನಿರ್ಪುದುಮೊರ್ವಂ . . . ನೆನೆದಂ ವಿಭಂಗದಿನತೀತಭವಾಂತರಭೂರಿವೈರಮಂ (ಶಾಂತಿಪು. ೭–೧೦೮) ; ಮಹಾಕಾಳಶ್ಮಶಾನದೊಳಗೆ ಯೋಗನಿಯೋಗಧ್ಯಾನೋಪಯೋಗದಿಂ ನಿರುದ್ಧಕರಣ ನಿಷ್ಪಂದಶರೀರನಾಗಿ (ಸುಕುಮಾ. ೧೨–೨೪ ಪ). ೬. ಹಿಂದಿನ ಕಾಲದಲ್ಲಿ ರಾಜರು ಆಡಳಿತಕ್ಕಾಗಿ ಏರ್ಪಡಿಸುತ್ತಿದ್ದ ಸಭೆ,—ಮಂಡಲಿ ; ಅಧಿಕಾರಿಸಮಿತಿ : ಸಾರ್ವ್ವಭೌಮರಾಜ್ಯನಿಯೋಗರಾಜಾಧ್ಯಕ್ಷನುಂ (ಕಇಅ. ೫–೨–೧೪೬ ; 1058) ; ಬಿಜ್ಜಳಧರಣಿವಲ್ಲಭನು ಹರುಷದಿಂ ತಾನುಂ ಬಸವಧೀವರನುಮಖಿಳನಿಯೋಗದೋಲಗವೆರಸಿ ಬರುತಿಪ್ಪೆಡೆಯೊಳಾ ಪುರವೀಥಿವೀಥಿಯಲಿ (ಬಸಪು. ೫–೧೯) ; ಶರಣರ ಕೊಂಡಾಡಿದವರು ಮುಕ್ತರೆಂಬುದ ಕಂಡೆವೆಂದು ತನ್ನ ನಿ[ಪಾಠಾಂ. ವಿನಿ]ಯೋಗವೆರಸಿ ವಂದಿಸಿದನು ಬಿಜ್ಜಳನು (ಭೈರಸೂ. ೨೦). ೭. ಛತ್ರ, ದೇವಸ್ಥಾನ ಮೊದಲಾದ ಸಂಸ್ಥೆಗಳ ಆಡಳಿತ ವರ್ಗ; ಧರ್ಮದರ್ಶಿ ಸಮಿತಿ : ಮಂತ್ರಿಪದಮಂ ಕೈಕೊಳ್ಳೆಂದೊಡೆ ಸಕಟಾಳನೊಲ್ಲದೆ ಛತ್ರಶಾಲೆಯ ನಿಯೋಗಕಧ್ಯಕ್ಷನಾಗಿ ಯರಸಂಗಪಾಯಮಂ ಚಿಂತಿಸುತ್ತಿರ್ದು (ಕಗವಿ. ೯೦ ರಾಜಾಪ). ೮. ಯಾವುದಾದರೂ ಒಂದು ಅಂಶವನ್ನು ಅಥವಾ ಬೇಡಿಕೆಯನ್ನು ಮಂತ್ರಿಗಳೇ ಮೊದಲಾದ ಆಡಳಿತಕ್ಕೆ ಸಂಬಂಧಪಟ್ಟವರಿಗೆ ನಿವೇದಿಸಲು ಹಾಗೂ ಚರ್ಚಿಸಲು ಏರ್ಪಟ್ಟಿರುವ ಅಧಿಕಾರಿ ಅಥವಾ ಸಮಿತಿ : "೧. (ಪ್ರತಿನಿಧಿಗೆ) ಅಧಿಕಾರ ವಹಿಸಿಕೊಡುವುದು. ೨. ಪ್ರತಿನಿಧಿಗಳು; ಶಿಷ್ಟಮಂಡಲ, ನಿಯೋಗ" (Delegation. ಪತ್ರಿನಿ. ೩೦); ಅದು ರಣಧೀರನಿಗೆ ಪ್ರತಿಕೂಲವಾಗಿರುವುದಾದರೂ ರಣಧೀರನು ಆ ನಿಯೋಗದವರನ್ನು ಔದಾರ್ಯದಿಂದ ಉಪಚರಿಸುತ್ತಾನೆ (ಸಂಸಕ.೧೧೦); ಶಿಕ್ಷಕರ ನಿಯೋಗವೊಂದು ವಿದ್ಯಾಮಂತ್ರಿಗಳ ಬಳಿ ಹೋಗಿತ್ತು (ರೂಢಿ). ೯. ವೇದ: ನಿಯೋಗವೆಂದರೆ ಅಪ್ರತಿಹತವಾದ, ಅನುಲ್ಲಂಘನೀಯವಾದ, ಸಾರ್ವಭೌಮನ ಆಜ್ಞೆಯಂತಿರುವ ವೇದವೆಂಬ ಮಹಾಪುರುಷನ ಆಜ್ಞೆ (ಹಿಂದಸಾ.೧೬೫);ಸರ್ವರಿಗೂ ಕಾವ್ಯದಲ್ಲಿ ಉಂಟಾಗುವುದು ರಸಾಸ್ವಾದವೇ ಹೊರತು ತಿಳಿವಳಿಕೆಯಲ್ಲ, ನಿಯೋಗವಲ್ಲ(ಭಾರವಿಮಾ.೮೧). ೧೦. (ಗಂಡನ

ನಪುಂಸಕತ್ವ ಮೊದಲಾದ ಅನರ್ಹತೆಯಿಂದ ಅಥವಾ ವೈಧವ್ಯದಿಂದ) ಅಪುತ್ರವತಿಯಾದವಳು ಗಂಡನ ಸಹೋದರರೇ ಮೊದಲಾದ, ಧರ್ಮಶಾಸ್ತ್ರವು ಅನುಮತಿ ಕೊಟ್ಟಿರುವ, ಪುರುಷರಿಂದ ಪುತ್ರರನ್ನು ಪಡೆಯುವ ಒಂದು ಕ್ರಮ : ವಿಧವೆಯರ ಪುನರ್ವಿವಾಹಕ್ಕಾಗಲಿ ನಿಯೋಗಕ್ಕಾಗಲಿ ಅವಕಾಶವಿರಲಿಲ್ಲ (ಕಶಾಅ. ೪೨೧) ; ನಿಯೋಗ ಎಂದರೆ ಮಡಿದ ಗಂಡನ ಸೋದರನ ಸಂಬಂಧದಿಂದ ಮಕ್ಕಳನ್ನು ಪಡೆಯುವುದು (ಕಶಾಅ. ೪೨೧ ಅಡಿಟಿ).

**ನಿಯೋಗಯೋಗಂಧರ**= ರಾಜ್ಯತಂತ್ರದಲ್ಲಿ ಬಹಳ ನಿಪುಣನಾದವನು; ಒಂದು ಬಿರುದು: ನುಡಿದಂತೆ ಗಣ್ಡಂ ನಿಯೋಗಯೋಗಂಧರಂ ಸಮರಧುರಂಧರಂ . . . ದಣ್ಡನಾಯಕಂ ಭೀವಣಯ್ಯಂಗಳ ಬಿನ್ನಪದಿನ್ (ಸೌಇಇ. XI–ii, ೧೩೯–೨೧ ; 1095) ; ನೀತಿಚಾಣಕ್ಯ ನಿಯೋಗಯೋಗಂಧರ ನಾಯ ××× (ಸೌಇಇ. XX, ೧೮೧–೧೮, 1194).

**ನಿಯೋಗಯೋಗಂಧರಾಯಣ**= ನಿಯೋಗಯೋಗಂಧರ : ಚಾಳುಕ್ಯನಾರಾಯಣಂ ನಿಯೋಗಯೋಗಂಧರಾಯಣನ ಮೊಗಮ ನೋಪ್ಪರ್ಂದು (ಸೌಇಇ. XX, ೪೯–೧೦ ; ಸು. 1076). **P** ಯೌಗಂಧರಾಯಣನು ವತ್ಸರಾಜನ ಅತಿಸಮರ್ಥನಾದ ಮಂತ್ರಿಯೆಂಬುದು ಪ್ರಸಿದ್ಧ. [ಸಂ.]

**ನಿಯೋಗಕಾತಿ** (ನಾ). ಊಳಿಗದವಳು; ಸೇವಕಿ: ಸರಸದ ವಿನೋದದ ವಿಳಾಸದ ವಿಚಾರದಾಭರಣದೊಡ್ಡಿನ ಬಹುನಿಯೋಗಕಾತಿಯರೆನಿಪ ತರುಣಿಯರನೊಪ್ಪಿಸಿದನಂದು ವಿಶ್ವಾಮಿತ್ರಮುನಿಗೆ ಸತ್ಯರ ದೇವನು (ಹಚಕಾ. ೯–೨). [ನಿಯೋಗ + –ಕಾತಿ$_5$]

**ನಿಯೋಗಿ** (ನಾ). ೧. ರಾಜಕಾರ್ಯನಿರ್ವಾಹಕ ; ರಾಜಕಾರ್ಯವನ್ನು ನಿರ್ವಹಿಸುವ ಉನ್ನತಾಧಿಕಾರಿ : ಅನ್ನೆಗಂ ನಾಗಶ್ರೀಯುಂ ಪಂಚಮಿಯಂದು ಮಂತ್ರಿಯರ್ಕಳ ಪೆರ್ಗಡೆಗಳ ರಾಜಶ್ರೇಷ್ಠಿಯರ ಪ್ರಧಾನರಪ್ಪ ನಿಯೋಗಿಗಳ ಪಲಂಬರುಂ ಪೆಣ್ಗೂಸುಗಳ್ವೆರಸು . . . ನಾಗರನರ್ಚಿಸಿ (ವಡ್ಡಾರಾ. ೧೨–೨೧) ; ವಾವಣಲಕ್ಕಣದೇವರಾ ಮಹಾವಿಭವರ ಕಾರ್ಯಸಿದ್ಧಿಗೆ ಧುರಂಧರನಾದ ನಿಯೋಗಿ ಮಾಧವ ಪಲರಂ ಮೆಚ್ಚಿಸಿದಂ ನಿಯೋಗದೊಳನೇಕೋಪಾಯಚಾಣಕ್ಯಂ (ಸೌಇಇ. XI–ii, ೧೪೭–೧೬ ; 1099); ಕರಸಿ ಮಂತ್ರಿ ನಿಯೋಗಿಗಳನಾ ಪುರಜನಂಗಳನುಡುಗೊಜೆಗಳಲಿ ಹಿರಿದು ಮನ್ನಿಸಿ ರೋಮಪಾದಮಹಾಮಹೀಪತಿಯು ಪರಮಸತ್ಕಾರವನು ಕೈಕೊಂಡರಸ . . . ಬಂದನು (ತೊರರಾ.೧–೬–೧೯). ೨. ಸೇವಕ ; ಊಳಿಗದವನು : ದೈತ್ಯ ಹೊನ್ನಂದಣದಣ್ಣರ ಕಳುಹೆ ಸಂದಣಿಸಿದರಣ್ಣಗಳು ನಿಯೋಗಿಗಳ್ ಬಂದರು ರತಿಯಿದ್ದ ಬಳಿಗೆ(ಮೋಹತ. ೧೦–೮); "ಓಲೆಕಾರರು" (ಮೋಹತ.ಅಡಿಟಿ) ; ಅವಾವ ಮಾನವೇಂದ್ರರ ಯೋಗಕ್ಷೇಮಗಳೇನು ಬೆಸಗೊಂಡುಚಿತವಸ್ತುಗಳಾ ನರಾಧಿಪನೆತ್ತಿ ಕೊಟ್ಟ ನಿಯೋಗಿಜನಕೆಲ್ಲ (ಬಿಜ್ಜಪು. ೮೧–೨೫) ; ತನ್ನ ಆಶ್ರಿತ ದೊರೆಗಳಿಗೆ ಶೀಘ್ರವಾಗಿ ನೆರವು ನೀಡಲು ವಿಶೇಷ ನಿಯೋಗಿಗಳನ್ನು ಅಟ್ಟಿದನು (ರಾಜ್ಯೋದ. ೨೦೯). 'ಬಾಹತ್ತರನಿಯೋಗ' ಪರಾ. ೩. ಒಬ್ಬರ ಪರವಾಗಿ ಕೆಲಸ ಮಾಡುವವನು; ಪ್ರತಿನಿಧಿ: ಗ್ರೀಕ್ ರುದ್ರನಾಟಕದ ಮೇಳ ಒಮ್ಮೊಮ್ಮೆ ಕವಿಯ ನಿಯೋಗಿಯೂ ಅವನ ಜೀವನದರ್ಶನದ ವಕ್ತಾರನೂ ಆಗಿರುತ್ತದೆ (ಸಾಹಿಪ್ರ. ೨೪೯). ೪. ತೆಲುಗು ಮಾತನಾಡುವ ಒಂದು ಬ್ರಾಹ್ಮಣ ಪಂಗಡ : ಕರ್ನಾಟಕದಲ್ಲಿರುವ ಅನೇಕ ನಿಯೋಗಿಗಳು ಆಂಧ್ರದಿಂದ ಬಂದವರು (ರೂಢಿ). ೫. ವ್ಯಾಪಾರಿ ; ವರ್ತಕ (?) : ಕೆಟ್ಟ ನಿಯೋಗಿ ಬಿತ್ತು ಮೊದಲಿಲ್ಲದೆ ಬಂದ ಕೃಷೀವಲಂ ಮೊದಲ್ಗೆಟ್ಟ ಕಿರಾತನೋಲಗಿಸಲಾರದೆ ಸೇವಕನಾಗೆ (ಎಕ. IV, ಚಾಮರಾ. ೮೩–೨೩ ; 1117).

**ನಿಯೋಗಿನಿಧಾನ**= ಒಂದು ಬಿರುದು : ದಿಶಾವಳಿಯ ಪೂರಿತೋಜ್ವಳಕೀರ್ತಿವಿಧಾನ ನಿಯೋಗಿನಿಧಾನಂ ಉಭಯದೇಸೀಮನೋರಂಜನಂ (ಕಇಅ. ೧೦೩–೮–೧೪ ; 1076). [ಸಂ. ನಿಯೋಗಿನ್]

**ನಿಯೋಗಿತನ** (ನಾ). ಪ್ರತಿನಿಧಿಯ ಅಧಿಕಾರ : "ನಿಯೋಗಿತನ; ಪ್ರಾತಿನಿಧ್ಯ" (Legation. ಇಂಕನಿ). [ನಿಯೋಗಿ + –ತನ]

**ನಿಯೋಗಿಸು** (ಕ್ರಿ). ೧. ನಿಯಮಿಸು ; ನಿಯೋಜಿಸು ; ನೇಮಕ ಮಾಡು : ಅವರೆಲ್ಲರೂ ಮನುವಿನ ಬಳಿ ದಾಸಿಯರಂತೆ ಇರಲು ನಿಯೋಗಿಸಲ್ಪಟ್ಟಿದ್ದರು (ಝಾರಾಣಿ. ೬೧). ೨. ಕೊಡು ; ಹಂಚು ; ವಿನಿಯೋಗ ಮಾಡು : ಆರಾರಿಗೇನೇನ ಕೊಡಬೇಕಾದುದ ತಾರತಮ್ಯದಿ ನಿಯೋಗಿಸಲು . . . ಮಾನಿನಿಯರುಗಳು ಶೃಂಗಾರವ ತಾಳ್ದರುತ್ಸವದಿ (ಮೋಹತ. ೧೪–೪೦). [ನಿಯೋಗ + –ಇಸು$_3$]

**ನಿಯೋಜಕ** (ನಾ). ಪ್ರೇರಕ ; ವ್ಯವಸ್ಥಾಪಕ : ನಿಯೋಜಕರು ಬೇಕು ! ಈಗ ಭಾರತಕ್ಕೆ ಅಗತ್ಯವಾಗಿ ಬೇಕಾದ ಜನರೆಂದರೆ ನಿಯೋಜಕರು (ತಕ್ಕಡಿ. ೬೭). [ಸಂ.]

**ನಿಯೋಜನ** (ನಾ). ನೇಮಿಸುವುದು ; ನೇಮಕ ಮಾಡುವಿಕೆ: 'ನಿಯೋಜಿಸು' ಪರಾ.. [ಸಂ.]

**ನಿಯೋಜನೆ** (ನಾ). ಏರ್ಪಾಡು ; ವ್ಯವಸ್ಥೆ ; ಸಿದ್ಧತೆ: ನನ್ನ ನಿಯೋಜನೆ ಕಾರ್ಯರೂಪಕ್ಕೆ ಬರಲು ಕಾರಣರಾದ . . . ಡೈರೆಕ್ಟರು, ಅಸಿಸ್ಟೆಂಟ್ ಡೈರೆಕ್ಟರುಗಳ ಉಪಕಾರವನ್ನು ನಾನು ಸದಾ ಸ್ಮರಿಸುತ್ತೇನೆ (ಭಾರದ. II ಮುನ್ನುಡಿ). [ಸಂ. ನಿಯೋಜನ]

**ನಿಯೋಜಿತ** (ಗು). ೧. ಕೂಡಿಕೊಂಡಿರುವ ; ಸೇರಿಕೊಂಡಿರುವ : ದ್ವಾದಶರಾಜಮಂಡಲನಿಯೋಜಿತ [ಪಾಠಾಂ. ನುರಿ ನಿಯೋಗಿ] ಪ್ರಧಾನ ವಿಜಿಗೀಷುವೃತ್ತನುಂ . . . ಸುಖದಿನಿರಲ್ (ಆಜಿಪು. ೨–೪೯ ವ). ೨. ಏರ್ಪಡಿಸಿದ ; ಗೊತ್ತುಮಾಡಿದ : ಪೂರ್ವಸಿದ್ಧತೆಯಿದ್ದರೆ . . . ನಿಯೋಜಿತಕ್ರಮದಲ್ಲಿ ಮುಂದುವರಿಯುತ್ತ ವರ್ಷದ ಪಾಠವನ್ನು ಸಕಾಲದಲ್ಲಿ ಮುಗಿಸಲು ಅನುಕೂಲವಾಗುತ್ತದೆ (ಶಿಕ್ಷದ. ೨೬೩) ; ಮುಂದಿನ ಆಡಳಿತದ ಅವಧಿಗೆ ಇವರು ನಿಯೋಜಿತ ಅಧ್ಯಕ್ಷರಾಗಿದ್ದಾರೆ (ರೂಢಿ). (ನಾ). ೩. ನೇಮಕವಾದವನು ; ಗೊತ್ತುಮಾಡಲ್ಪಟ್ಟವನು : ಚಂದಾ ವಸೂಲಿಗೆ ಕೆಲವರು ನಿಯೋಜಿತರಾದರು (ಭೀಮಕಾ. ೧೬೩). [ಸಂ.]

**ನಿಯೋಜಿಸು** (ಕ್ರಿ). ೧. (ಒಂದು ಕಾರ್ಯವನ್ನು ಮಾಡುವಂತೆ) ನಿಯಮಿಸು ; ನೇಮಕ ಮಾಡು : ಸಕಳಜನಮುಮನಾಜ್ಞಾಕರಣವಿಧಾನದೊಳ್ ನಿಯೋಜಿಸಿ (ಆದಿಪು. ೬–೧೦೭ ವ) ; ತನ್ನ ತಮ್ಮನಂ ಯುವರಾಜನನಂತವೀರ್ಯನಂ ರಾಜ್ಯಭಾರದೊಳ್ ನಿಯೋಜಿಸಿ (ಶಾಂತಿಪು. ೨–೨೧ ವ) ; ತಡವಾದಪುದುಟಿದರನೀಯೆಡೆಗೆ ನಿಯೋಜಿಸಲಿಕೆಂಬವೊಲ್ ನೃಪವರನಿರ್ದೆಡೆಗೆ ನಿಯೋಜಿಸಿದಳ್ ಬಿಡದೆಡೆಯಾಡುವ ಬೆಸಕೆ ಕನ್ನೆ ತನ್ನಯ ಮನಮಂ (ಕಾದಂಉ. ೮೭). ೨. ವ್ಯವಸ್ಥೆಮಾಡು ; ಏರ್ಪಡಿಸು : ಪರದಾರಾಭಿಗಮನಮಂ ನಿಯೋಜಿಸುವ ದುಷ್ಟನೇ ವಿಶ್ವಾಸಭೂಮಿಯೆನಿಸಿದ ಮಿತ್ರನೆನಿಸುಗುಂ (ಕಾದಂಪೂ. ೫೭೩) ; ಆಗಳರಸನತಿಹರ್ಷಚಿತ್ತನರ್ಹತ್ಪರಮೇಶ್ವರಪೂಜಾವಿಧಿಗಳಂ ನಿಯೋಜಿಸಿ (ಮಲ್ಲಿಪು. ೪–೩೬) ; ಸರಳತರೋಷ್ಣನಿಶ್ವಸಿತಮಾರುತನಿಂದೆ ನಿಜೋತ್ತರೀಯದೊಳ್ ತರಳತೆಯಂ ನಿಯೋಜಿಪ ನೆಗಟ್ಟಿಗೆ ಕಾರಣಮೇನೊ ಕಾಮಿನೀ (ಚಂದ್ರಪು. ೩–೫೪) ; ಆ ಯೋಜನೆ ೭ನೇ ವಯಸ್ಸಿನಿಂದ ೧೪ನೆಯ ವಯಸ್ಸಿನವರೆಗೆ ಉಚಿತ, ಕಡ್ಡಾಯಶಿಕ್ಷಣವನ್ನು ನಿಯೋಜಿಸಿತ್ತು (ಶಿಕ್ಷದ. ೭೩೩) ; ಅದು ಲಿಂಗನಿರ್ಧರಕ್ರಮವನ್ನು ನಿಯೋಜಿಸುತ್ತದೆ (ಕೀಟಜಿ. ೧೧೦). ೩. ಗುರಿಪಡಿಸು ; ಒಳಪಡಿಸು ; ಈಡುಮಾಡು : ಆ ನಿತಂಬಿನಿ

ಭೂಶಯ್ಯೆಗೆ ಜಾಗರಕ್ಕನಶನಕ್ಕೇಕಾಂತರಕ್ಕೇಕಭುಕ್ತಿನಿಯಾಮಕ್ಕೊಡಲಂ ನಿಯೋಜಿಸಿದಳ್ (ಮಲ್ಲಿಪು. ೪-೪೭). [ನಿಯೋಜನ + -ಇಸು$_3$]

**ನಿಯೋಜ್ಯ** (ನಾ). ಯಾವುದಾದರೂ ಕಾರ್ಯಕ್ಕಾಗಿ ನೇಮಕವಾದವನು : ನಿಯೋಜ್ಯವೆಂದರೆ ನಿಯೋಗವನ್ನು ನೆರವೇರಿಸುವವನು (ಹಿಂದಸಾ. ೧೭೫). [ಸಂ.]

**ನಿರ್‌-**(ಉಪ). ಆಧಿಕ್ಯ, ಅತಿಕ್ರಮ, ಅಭಾವ, ನಿಷೇಧ ಮೊದಲಾದ ಅರ್ಥಗಳನ್ನು ಕೊಡುವ ಒಂದು ಉಪಸರ್ಗ : 'ನಿರ್ಮೂಟ', 'ನಿರ್ವಯಲು' ಪರಾ. P ಸಮಾಸದಲ್ಲಿ ಸ್ವರಗಳು ಮತ್ತು ಮೃದುವರ್ಣಗಳು ಪರವಾದಾಗ 'ನಿಸ್‌' ಎಂಬುದು 'ನಿರ್‌' ಎಂದಾಗುತ್ತದೆ. [ಸಂ.]

**ನಿರಂಕ** (ನಾ). ೧. ಲಾಂಛನವಿಲ್ಲದುದು. ೨. ಕಳಂಕವಿಲ್ಲದವನು. **೧, ೨ :** ನಿರುಪಮ ನಿರಂಕನೀ ಸಸಿಯ ಪ್ರಭಾತಿಶಯ . . . ಕಂಗಳಿಗೆ ಮಂಗಳವಿತ್ತುದು (ಕುವಲ. ೧೭). [ಸಂ.]

**ನಿರಂಕುಶ** (ಗು). ೧. ಯಾರ ಅಂಕೆಗೂ ಒಳಪಡದ ; ಸರ್ವಸ್ವತಂತ್ರವಾದ ; ಸ್ವೇಚ್ಛೆಯ : 'ನಿರಂಕುಶಮತಿ' ಪರಾ. (ನಾ). ೨. ಯಾರ ಅಂಕೆಗೂ ಒಳಪಡದಿರುವುದು ; ಸ್ವೇಚ್ಛೆ ; ಸ್ವಚ್ಛಂದತೆ : "ಅಯಂತ್ರಿತಂ, ಉದ್ದಾಮಂ, ಉಚ್ಛೃಂಖಳಂ, ಅನರ್ಗಳಂ — ಈ ೪ ನಿರಂಕುಶಂ" (ಹಲಾಯು. ೧೨೪-೬೭) ; ಮಾಂಕರಿಸದ ಬಾವು ಗುರುವಚನಾಂಕುಶಮಂ ಪಾಟಿಯೆಡೆಗೆ ಪೊಣರ್ದರಿಬಲಮಂ ಕಿಂಕೊಳೆ ಮಾ[ಟಿ್ಪಡೆಗಣಮೆ] ನಿರಂಕುಶಮೆನಿಸಿದುದು ಮುನಿಸು ಭದ್ರಾಂಕುಶ[ನಾ] (ಪಂಪಭಾ. ೧-೩೨) ; ಅಜ್ಞಾನ ಆವರಣ ವಿಕ್ಷೇಪಗಳು ಕೆಡಲು ಮದಗಜದೋಪಾದಿಯಲ್ಲಿ ಸಂಚರಿಸುವದೇ ನಿರಂಕುಶವೆನಿಸುವುದು (ನಾನಾಗು. ೨೮-೨೨). **೩.** ಸ್ವಚ್ಛಂದವೃತ್ತಿಯ ವ್ಯಕ್ತಿ : ಅವುಗಳ ರೂಪನಿರ್ಣಯದ ವಾದವೇಕೆ ? ಎಂದು ಪ್ರಶ್ನಿಸುವ ನಿರಂಕುಶರೂ ಇರುತ್ತಾರೆ (ಸಂಶೋಧ. ೨೩). [ಸಂ.]

**ನಿರಂಕುಶಪ್ರಭು** (ನಾ). ಪ್ರಜೆಗಳ ಮೇಲೆ ಅನಿರ್ಬಂಧವಾದ ಅಧಿಕಾರವನ್ನು ಉಳ್ಳ ಒಡೆಯ, —ರಾಜ ; ಶಾಸನಸಭೆ ಮೊದಲಾದುವುಗಳಿಗೆ ಒಳಪಡದ ಅಧಿಕಾರವುಳ್ಳ ಪ್ರಭು : ಪ್ರಜೆಗಳ ಮೇಲೆ ರಾಜನ ಅಧಿಕಾರವು ಅಪರಿಮಿತವಾಗಿದ್ದರೆ . . . ಅಂಥಾ ರಾಜನಿಗೆ ನಿರಂಕುಶಪ್ರಭುವೆಂದು ಹೆಸರು (ಭೂಗೋಳ. ೧೯).
[ನಿರಂಕುಶ + ಪ್ರಭು]

**ನಿರಂಕುಶಪ್ರಭುತ್ವ** (ನಾ). ಯಾವ ನಿರ್ಬಂಧವೂ ಇಲ್ಲದ ಒಡೆತನ : ಪರಚಕ್ರದ ಭಯವಿಲ್ಲದೆ ನಿರಂಕುಶಪ್ರಭುತ್ವವನ್ನು ನಡೆಯಿಸುತ್ತಾನೆ (ಮಂಜುಕ. ೧೩) ; ಪ್ರಜೆಗಳ ಮೇಲೆ ರಾಜನ ಅಧಿಕಾರವು ಅಪರಿಮಿತವಾಗಿದ್ದರೆ ನಿರಂಕುಶಪ್ರಭುತ್ವವೆಂದು . . . ಹೆಸರು (ಭೂಗೋಳ. ೧೯).
[ನಿರಂಕುಶ + ಪ್ರಭುತ್ವ]

**ನಿರಂಕುಶಪ್ರವೃತ್ತಿ** (ನಾ). ತನ್ನ ಅಪೇಕ್ಷೆಯಂತೆ ಎಲ್ಲವೂ ನಡೆಯಬೇಕೆಂಬ ಬುದ್ಧಿ ; ಸರ್ವಾಧಿಕಾರಿಯ ಮನೋಭಾವ.
[ನಿರಂಕುಶ + ಪ್ರವೃತ್ತಿ]

**ನಿರಂಕುಶಮತಿ** (ನಾ). ಸ್ವಚ್ಛಂದ ಮನೋವೃತ್ತಿಯುಳ್ಳವನು ; ತನ್ನ ಇಚ್ಛೆಯಂತೆ ನಡೆಯುವವನು : ನಿರಂಕುಶಮತಿಯಾದ ರಾಜನನ್ನು . . . ಶಿರಚ್ಛೇದನ ಮಾಡುವುದಕ್ಕೂ ಹೇಗೆ ಹಿಂಜರಿಯಲಿಲ್ಲವೆಂದು ಅರಿತರು (ಭಾರದ. ೪೨೭). [ನಿರಂಕುಶ + ಮತಿ]

**ನಿರಂಕುಶವೃತ್ತಿ** (ನಾ). ಸ್ವಚ್ಛಂದ ಮನೋವೃತ್ತಿ : ಮಾಡಲ್ತಕ್ಕ ಕೃತ್ಯವೆಲ್ಲಂ ಮಾಡಲ್ಪಟ್ಟಿತು . . . ಎಂದು ಸಹಜಪರಿತುಷ್ಟಿವಡದಿರ್ಪುದೇ ನಿರಂಕುಶವೃತ್ತಿಯೆನಿಸುವುದು (ವಿವೇಕ. ೪೩). [ನಿರಂಕುಶ + ವೃತ್ತಿ]

**ನಿರಂಕುಶೆ** (ನಾ). ಅಂಕೆಯಿಲ್ಲದವಳು ; ಸ್ವಚ್ಛಂದವೃತ್ತಿಯವಳು: ಮತ್ತಮೊರ್ವಳಭಿನವಯೌವನಾಸವಮದ ವಿಳಾಸನಿರಂಕುಶೆ . . . ಬಂದು ಚಕ್ರಧರರೂಪಾಶ್ಚರ್ಯಮಂ ನೋಡಿದಳ್ (ಆದಿಪು.೧೦-೨೦ ವ); ನಿರತಿಶಯರೂಪವಿಲಾಸನಿರಂಕುಶೆಯುಂ . . . ಎನಿಸಿ (ಸುಕುಮಾ. ೧೧-೧೫ ವ).
[ಸಂ. ನಿರಂಕುಶಾ]

**ನಿರಂಗ$_1$** (ಗು). ೧. ಅಂಗವಿಲ್ಲದ ; ಅವಯವವಿಲ್ಲದ ; ಆಕಾರವಿಲ್ಲದ : ಜಂಗಮವಪ್ಪ ನಿರಂಗ ಪ್ರಸಾದದಲ್ಲಿ ಬೆರೆದು ಅವಿರಳನಾದವಂಗೆ ಬಂಧಮೋಕ್ಷ ಕರ್ಮಂಗ ಬೆಂಬಳಿಗೆ ಸಲ್ಲ ಅದು ನಿರಂಗವಸ್ತು (ಪದಗೋ. ೪೫-೧೧೫). ೨. ಕ್ರಮಬದ್ಧವಾದ ಭೌತರಚನೆಯಿಲ್ಲದ ; ಜೀವಸಂಬಂಧವಿಲ್ಲದ ; ಜೀವವಿಲ್ಲದ : ಹೀಗೆ ಸಾಂಗ ಪದಾರ್ಥಗಳಂತೆ ಅವು ನಿರಂಗ ಪದಾರ್ಥಗಳಲ್ಲೂ ದೊರೆಯುತ್ತವೆ (ಬಾಲಪ್ರ. II, ೬೯೫). (ನಾ). ೩. [ವೀಶೈ] ಶರೀರದ ಧರ್ಮವನ್ನು ಮೀರಿದವನು ; ಶರೀರದ ಸಂಬಂಧದಿಂದ ಮುಕ್ತನಾದವನು ; P ವೀರಶೈವ ಸಿದ್ಧಾಂತದಂತೆ ಶಿವಜ್ಞಾನವನ್ನು ಪಡೆದು ಪ್ರಾರಬ್ಧವಶದಿಂದ ಇನ್ನೂ ದೇಹವನ್ನು ತ್ಯಜಿಸದ ಶಿವಜ್ಞಾನಿಯು ಶರೀರವಿದ್ದರೂ ತತ್ಪ್ರಯುಕ್ತವಾದ ಕರ್ಮಗಳನ್ನು ಮಾಡುವುದಿಲ್ಲ. ಅವನು ಜೀವನ್ಮುಕ್ತನೆನಿಸುತ್ತಾನೆ. ಅವನಿಗೆ ಅಂಗಾಲೇಪನೆಂದೂ, ನಿರಂಗನೆಂದೂ ಹೆಸರು. ಅವನ ಸ್ವರೂಪವು ದೇಶ ಕಾಲಾದಿ ಪರಿಚ್ಛೇದಶೂನ್ಯ ಮತ್ತು ಚಿದಾನಂದಸ್ವರೂಪ. ಅವನ ಸ್ಥಿತಿಯೂ ನಿರಂಗವೆನಿಸುತ್ತದೆ : ಕಂಗಳು ಮುಚ್ಚಿಯಲ್ಲದೆ ಲಿಂಗವ ಕಾಣಬಾರದು ಅದು ನಿರಂಗಂಗಲ್ಲದೆ ಜಗದ ಹಂಗಿನವರಿಗಿಲ್ಲ (ಶರಚ. ೩೨೫); ನಿರಂಗನನಂತವಿನುತ ನಿರ್ಮಲ ನಾಮಧೇಯಂ . . . ಎಂದುಲಿವ ಪೌರಾಣೋಕ್ತಿಗಳಂ ಕೇಳ್ದು (ಪ್ರಾಭರಾ. ೨-೧). ೪. ಶರೀರಸಂಬಂಧವಾದ ಕರ್ಮವಿಲ್ಲದಿರುವಿಕೆ ; ಜೀವನ್ಮುಕ್ತಿ : ವಿಚಾರಸಂಗನನಱಿದು ಹೇಳಲಿಲ್ಲವೆನಗೆ ಬಸವಾ ಹೇ ಹೇ ಎನಲೊಂದೆ ಸಂಗ ಸಂಗ ನಿರಂಗ ನಿರಂಗ ಬಸವ ಬಸವ ಎಲೆ ಬಯಲು (ಶೀಲವ.೧೦-೨೨) ; ಹುವ್ವಿನ ಮೇಗಳ ತುಂಬಿ ಹುವ್ವ ತಿಂದು ಗಂಧವನುಳುಹಿತ್ತು ಉಳುಹಿದ ಗಂಧ ತುಂಬಿಯ ತಿಂದು ತುಂಬಿ ಗಂಧವೊಂದೆಯಾಯಿತ್ತು ಅದು ನಿರಂಗದಿರವು (ಅಜಿಸೂ. ೧೩೮-೫೨೮). ೫. ನಿರಾಕಾರವಾದ ಲಿಂಗ ; ಪರಮಾತ್ಮ : ಜಂಗಮು ಜಂಗುಳಿಯಾಗಿ ಕಂಡಕಂಡವರಂಗಳಕ್ಕೆ ಜಂಘೆಯನಿಕ್ಕಲಾಗಿ ನಿರಂಗಕ್ಕೆ ಹೊಜಿಗು (೨ವಮಂ. ೭೧). ೬. ಅನುಕೂಲವಿಲ್ಲದವನು ; ಸಾಧನಸಂಪತ್ತಿಲ್ಲದವನು : (೬). ೭. [ಅದ್ವೈತ] ಬ್ರಹ್ಮಜ್ಞಾನಿ ; ಜೀವನ್ಮುಕ್ತ : ನೆಗಳದೀ ನಿಸ್ಸಂಗನಿರ್ಗುಣನಗಣಿತನಿಜಾನಂದ ನಿರುಪಮ ನಿಗಮವೇದ್ಯನಿರಂಗನೆನಗದಕೆಂತಹುದು ಸಂಗ (ಅಮೃತ. ೬-೨೩). [ಸಂ.]

**ನಿರಂಗ$_2$** (ನಾ). ವಿಶೇಷವಾದ ಬಣ್ಣ, —ರಂಗು (?) : ಬಿಂಗದ ಕುಪ್ಪಿಗೆಗಿಳಿವ ಕುಂಕುಮದ ನಿರಂಗದಿ ತಾಂಬೂಲರಸವಾ ನುಂಗುವಾಗಿದಿಂಗೆ ತೋಱುವುದರಸನ ನುಂಗೊರಳೇನ ಬಣ್ಣಿಪೆನು (ಭರತ. ೯-೫೫). [?]

**ನಿರಂಗಸ್ವರೂಪ** (ನಾ). [ವೀಶೈ] ಆಕಾರವಿಲ್ಲದವನು ; ನಿರಾಕಾರನಾದವನು ; ಅಂಗರಹಿತನಾದವನು : ಭೀತಿ ನಿರ್ಭೀತಿ ಇಲ್ಲದೆ ನಿರಂಗಸ್ವರೂಪನಾದಡೆ ವೇದಾಂತಿ ಎಂಬೆ (ಉರಿಪ. ೨೦೭-೨೮೬).
[ನಿರಂಗ$_1$ + ಸ್ವರೂಪ]

**ನಿರಂಗಿ** (ನಾ). ಶರೀರವಿಲ್ಲದ ವ್ಯಕ್ತಿ : ಅಂಗವಳಿದ ನಿರಂಗಿಯಾನು ಬಸವಾ (ಶೀಲವ. ೨೬-೮೨). [ಸಂ. ನಿರಂಗಿನ್‌]

**ನಿರಂಜನ** (ಗು). ೧. ಕಾಡಿಗೆಯಿಲ್ಲದ ; ಕಣ್ಕಪ್ಪು ಕೂಡಿರದ: ಸುರಿವ ನಿರಂಜನಾಶ್ರುಕಣದಿಂ ಕುಚದೊಳ್ ಪೊಸಮುತ್ತಿನಾರಮಂ . . . ನಿಯೋಜಿಪ ನೆಗಟ್ಟಿಗೆ ಕಾರಣಮೇನೋ (ಚಂದ್ರಪು. ೩-೫೪).

೨. ದೋಷರಹಿತವಾದ ; ನಿಷ್ಕಲಂಕವಾದ : ತಿರ್ಯಗ್ಗತಿಭ್ರಮಣ ಜನಿತ ದುಃಖವಿನಾಶಾರ್ಥ ನಿಜನಿರಂಜನ ಪರಮಾತ್ಮತತ್ತ್ವಭಾವನೆ ನಿರಂತರಂ ಮಾಡೆ ಪಡುವುದು (ತತ್ತ್ವಪ್ರ. ೧೭೭). (ನಾ). ೩. ಕಪ್ಪಿನಿಂದ ಕೂಡಿರದಂಥದು ; ಕಾಡಿಗೆ ಅಥವಾ ಅಂಜನದ ಲೇಪವಿಲ್ಲದುದು : ವೇಶ್ಯಾಜನಂ ಕಾಮನಿಧಿಗಿಟ್ಟ ವಿನುತಾಂಜನಂ ಮೋಹಿಜನ ರಂಜನಂ ಗತನಿರಂಜನಂ ಚೆಲ್ವಾದುದು(ಚೆಬಪು.೧೦-೧೨); ಅಂಧಕಾರ ರಾತ್ರಿ ಸಮುದ್ರದಂತೆ. ಅದು ಕಾಡಿಗೆಯಂತೆ ಕಪ್ಪು ; ಆದರೂ ನಿರಂಜನ (ನಿಬಂಧ. II, ೧೮೧). ೪. ಅಂಗಸಂಬಂಧರಹಿತವಾದುದು ; ಶರೀರೇಂದ್ರಿಯಗಳ ಸಂಬಂಧವಿಲ್ಲದಿರುವುದು : ನಿಷ್ಕಾಯುವ ಈಶ್ವರನಳವಡಿಸಿಕೊಂಡ ನಿರಂಜನವ ಸದಾಶಿವನಳವಡಿಸಿಕೊಂಡ(ಅಪಚಂ.೧೩೫-೬೨೦); "ಜ್ಞಾನತನು" (ಅಪಚಂ. ಕೋಶ) ; ಪಶು ಎಂಬುದು ಸಾಂಜನ ಮತ್ತು ನಿರಂಜನ ಎಂದು ಎರಡು ವಿಧ: ಸಾಂಜನವು ಶರೀರೇಂದ್ರಿಯಗಳ ಸಂಬಂಧ ಉಳ್ಳುದು ನಿರಂಜನವು ಅವುಗಳಿಂದ ರಹಿತ (ಭಾತತ್ತ್ವ. ೬೨೬) ; ವಚನದಲ್ಲಿ ಹೊಳಹುದೋರುವ . . . ನಿತ್ಯ ಸತ್ಯ ಪರಿಪೂರ್ಣ ನಿರ್ಮಾಯ ನಿರಂಜನದ ನೆಳಲನ್ನೂ ಕಂಡವ ನಾನಲ್ಲ (ವಚಸಂ. I, ಒಳಗೆ ಪ್ರವೇಶ). ೫. ಪವಿತ್ರವಾದುದು : 'ನಿರಂಜನಾರತಿ' ಪರಾ. ೬. ನಿರ್ಲಿಪ್ತ ; ವಿರಕ್ತನಾದವನು : ಸಕಲಸಂಸಾರಭಾರದುಃಖಭಾರಭಂಜನನುಂ ನಿರಂಜನನುಮಾಗಿ (ಪಂರಾಪೂ. ೧೬-೮೧.ವ) ; ನಿರಂಜನರಾಗಿರ್ದುಮಶೇಷ ಲೋಕನಿಹಿತಾರ್ಥಗ್ರಾಹಿಗಳ್ . . . ಉದ್ಧರಿಸುಗೆಮ್ಮಂ ಸಿದ್ಧಿಯಪ್ಪನ್ನೆಗಂ (ಪುಷ್ಪಪು. ೧-೨) ; ನಿರಾವರಣ ನಿರಂಜನನು ನೋಡಾ . . . ನಿಮ್ಮ ನಿಜಲಿಂಗೈಕ್ಯನು (ಅಖಂಡೇ. ೩೧೬-೫) ; ನೆರೆ ನಿರಂಜನನಾಗೆನುತ ಗುರು ಹರಸಿ ಅಭಯವನಿತ್ತ (ಗಗತಾ. ೨-೩೧). ೭. ಪರಮಾತ್ಮ ; ದೇವರು : "ನಿರಂಜನಃ—ಪರಮಶಿವಂ" (ಕಾಶಕ್ಯ. ೨೩೭) ; ಪರಮ ನಿರಂಜನ[ನೆ] ಮಱೆದ ಕಾಲಕ್ಕೆ ತುಂಬಿದ ಹರವಿಯ ಕಲ್ಲು ಕೊಂಡಂತೆ (ಬಸವ. ೧೬೯) ; ಗಿರಿನಂದನಾವಕ್ಷೋಜಘುಸೃಣಸ್ಕಂಧತನು ಚಿನ್ಮಯ ನಿರಂಜನ ಭೂರಿಪಂಜರನ . . . ಕಂಡನಬುಜಭವ (ಕುಪ್ಯಾಕ. ೬-೧೫) ; ಎಂಜಲವಶೌಚವು ಸಂಜೆಯೆಂದೆನಬೇಡ ಕುಂಜರವು ವನವ ನೆನೆವಂತೆ ಬಿಡದೆ ನಿರಂಜನನ ನೆನೆಯೊ (ಸರ್ವಜ್ಞ. ೨೯೭). [ಸಂ.]

**ನಿರಂಜನಜಂಗಮ** (ನಾ). [ವೀಶೈ] ಶಿವಾದ್ವೈತ ತತ್ತ್ವವನ್ನು ಬಲ್ಲವನು : ಚಿದ್ಘನ ಮಹಾಲಿಂಗದೇವನ ನಿರಂಜನಜಂಗಮದೋಪಾದಿಯಲ್ಲಿ ಸಗುಣನಿರ್ಗುಣ ಪೂಜೆಗಳ ಮಾಡಿ (ಮಹಾದೇ. ಬ. ೧೨೩-೨೮೪) ; ಈ ವೇದಾಂತವನ್ನು ತಿಳಿದವರಿಗೆ ವೀರಶೈವರೆಂದೂ. . .ನಿರಂಜನಜಂಗಮರೆಂದೂ ಹೆಸರಿದೆ (ಶಕ್ತಿವಿ. ೭೯). [ನಿರಂಜನ+ಜಂಗಮ$_1$]

**ನಿರಂಜನತತ್ತ್ವ** (ನಾ). ನಿರ್ಲಿಪ್ತತೆ ; ವಿರಕ್ತಿ : ಇದೆ ನಿರಂಜನತತ್ತ್ವ ಸಾಮ್ರಾಜ್ಯದ ಸಘಾಟಿಕೆ ನಾವು ಕಡುಮೂರ್ಖದಲಿ ಮೈಮಱೆದವು ಶರೀರದ ಬಂಧುಕೃತ್ಯದಲಿ (ಕುಪ್ಯಾಭೀ. ೩-೬೮). [ನಿರಂಜನ+ತತ್ತ್ವ$_1$]

**ನಿರಂಜನಪದ** (ನಾ). ಪರಮಾತ್ಮನ ಪದವಿ,—ಸ್ಥಾನ : ಕಾಶ್ಯಪ ಗೋತ್ರಪವಿತ್ರಂಗೆ ಕಟಿಸೂತ್ರಮಂ ಕಟ್ಟಿ ನಿರಂಜನಪದೇಚ್ಛುಗಂಜನ ಮನೆಚ್ಚು (ಚಂದ್ರಪು. ೧೨-೧೫೬ ವ). [ನಿರಂಜನ+ಪದ$_2$]

**ನಿರಂಜನಾರತಿ** (ನಾ). ಪವಿತ್ರವಾದ ಆರತಿ : ನಿರಂಜನಾರತಿಯ ಲೀಲೆಯಿಂದೆ ನಿವಾಳಿಸುತೆ ಸುರಮೌಳಿಮಣಿಯೆನಿಸಿದ ಮುಕುಂದನ ಲಾಲಿಸಿದನಾ ಪುಷ್ಪಲಾವಕನಧಿಕಹರ್ಷದಲಿ (ಅಕ್ರೂಚ. ೬-೪೨). [ನಿರಂಜನ+ಆರತಿ$_1$]

**ನಿರಂತ** (ಗು). ೧. ಕೊನೆಯಿಲ್ಲದ ; ಅಂತ್ಯವಿಲ್ಲದ. (ನಾ). ೨. ಅಂತ್ಯವಿಲ್ಲದುದು ; ಸತತವಾದುದು : ನೀನುಮೆನ್ನ ಕಜ್ಜದೊಳಿಸಗೆಂದು ಸ್ಯೆತಚಿತನಾದಿಯ ವೇದರಹಸ್ಯದೊಳ್ನಿರಂತದ[ಪರಿಚರ್ಯೆಯಿಂ] ನೆಱೆಯೆ ಯೋಜಿಸಿದಂ ಕದನತ್ರಿಣೇತ್ರನಂ (ಪಂಪಭಾ. ೧೦-೬೪). ೩. ಅಂತ್ಯವಿಲ್ಲದವನು ; ಮರಣವಿಲ್ಲದವನು ; ಪರಮಾತ್ಮ : ಆ ಗುಣ ಚಿಪ್ಪಿನ ಮುತ್ತಿನ ತೆಱ ಕಸ್ತುರಿಯ ಶುಕ್ಲದ ತೆಱ . . . ನಿರಂಗ ನಿರಂತ ಸುಸಂಗ ನಿಃಕಳಂಕ ಮಲ್ಲಿಕಾರ್ಜುನಾ ಇದಱಂದವ ಹೇಳಾ (ಮೋಳಿಮಾ. ೪-೧೨) ; ನಿರ್ವರಣ ನಿರವಯ ನಿಷ್ಕಳಂಕ ನಿರಂತ ನಿಶ್ಚಿಂತ . . . ನಿಜನಿರ್ಮಾಯ ಚಿತ್ರೈಸು (ಬಸಪು. ೬೧-೪೪) ; ನಿರ್ಮಲಾಚರಣ ನಿರಂತ ನಿರ್ಭವ . . . ಶಾಂಭವೀಧವಾ (ಶಬಶಂ. ೫-೨೪). [ಸಂ.]

**ನಿರಂತರ$_1$** (ಗು). ೧. ಎಡೆಬಿಡದ ; ಸತತವಾದ : ಬಂಡಿಗಳನೊಡ್ಡಿದರಾ ನಿರಂತರ ಶರವ ತಡೆದರು ತೆಕ್ಕೆವರಿಗೆಯಲಿ (ಕುಪ್ಯಾಕ. ೧೧-೫೦) ; ನಿರಂತರೋಚ್ಛ್ವಾಸದಿಂ ತಿದಿಯೊತ್ತಿದಂತೇದುತ್ತಿರ್ದಳ್ಳೆಗಳ ರಭಂ ಕಿರಿದಾಗೆ (ಶ್ರೀರಾಪೂ. ೧೦೫-೧೪೯) ; ಇದರಿಂದ ಸಕಲ ಮಾನಸಿಕ ನಿರಂತರ ವ್ಯಾಪಾರಗಳಿಗೆ ಮೆದುಳಿನ ಅವಸ್ಥಾವಿಶೇಷಗಳೇ ಕಾರಣವೆಂದು ಸಿದ್ಧವಾಗುತ್ತದೆ (ಜೀಪಾತ್ಮ. ೫೮) ; ನಿರಂತರ ಸೇವೆಯೆ ನದಿಗಳ ಧ್ಯೇಯ (ನನದಿ. ೧೭). ೨. ಸಮೃದ್ಧವಾದ ; ಸಮೀಚೀನವಾದ ; ತೃಪ್ತಿಕರವಾದ. (ನಾ). ೩. ನಿತ್ಯವಾದುದು ; ಸತ್ಯವಾದುದು : "ಸತತ(ತ)ಮವಿಚ್ಛಿನ್ನಂ . . .[ನಿರಂ]ತರಮಜಸ್ರಮೆನೆ ತಾಂ ನಿತ್ಯಂ" (ವಸ್ತುಕೋ. ೧೦೯-೬೭). ೪. ಸದಾಕಾಲವೂ ಇರುವಂಥವನು ; ಶಾಶ್ವತವಾಗಿರುವವನು : ಕಾಯವಂಚಕನಲ್ಲ ಜೀವವಂಚಕನಲ್ಲ ನಿರಂತರ ಸಹಜ ನೋಡಯ್ಯ . . . ಕೂಡಲಸಂಗನ ಶರಣನುಪಮಾತೀತ ನೋಡಯ್ಯ (ಬಸವ. ೯೪೦); ನಿರುಪಮನಿರಾಮಯನಿರಂತರನಿರವಶೇಷ . . . ಕರುಣಿಸುವುದೆಂದ (ಕುಪ್ಯಾಅ. ೬-೮೯). ೫. ದಟ್ಟವಾದುದು ; ಸಾಂದ್ರವಾದುದು : "ನಿರಂತರಂ, ಘನಂ, ಸಾಂದ್ರಂ, ಬಹುಳಂ, ವಿರಳೇತರಂ–ಈ ೫ ಮಂದಂ" (ಹಲಾಯು. ೧೮೯-೩೨) ; "ನಿರಂತರಂ ಸಾಂದ್ರಮತಿಘನಂ" (ವಸ್ತುಕೋ. ೧೦೪-೩೯). ೬. ತಣಿವು; ತೃಪ್ತಿ ; ತುಷ್ಟಿ ; ಸಮೃದ್ಧಿ (?) : 'ನೈರಂತರ್ಯ' ಪರಾ.

**ನಿರಂತರಂ ಮಾಡು**=ತೃಪ್ತಿಪಡಿಸು; ತುಷ್ಟಿಗೊಳಿಸು; ತಣಿಸು: ಸಿದ್ಧಾರ್ಥನ ಪಿರಿಯರಸಿ ಜಯಾವತಿಯೆಂಬೊಳ್ . . . ಒಂದು ದಿವಸಂ ವಿಜಯಭದ್ರರೆಂಬ ಭಟಾರರವಧಿಜ್ಞಾನಿಗಳ್ ಚರಿಗೆವೊಕ್ಕೊಡೆ ಕಂಡವರಂ ಜಯಾವತಿ ನಿಱಿಸಿಯಾದಮಾನುಂ ಭಕ್ತಿಯಿಂದಂ ಕೈಯಲಿಕ್ಕಿ ನಿರಂತರಂ ಮಾಡಿ ಕುಳ್ಳಿರ್ದ ಬೞಿಕ್ಕಂತೆಂದು ಬೆಸಗೊಂಡಳ್ (ವಡ್ಡಾರಾ. ೪೩-೨೧); ಪರಮಾನುರಾಗದಿಂದಂ ನಿರಂತರಂ ಮಾಡಿ ಬೞಿಕೆ ತಾನುಂಬುದು(ಅನಂಪು. ೧೦-೮೧). [ಸಂ.]

**ನಿರಂತರ$_2$** (ಅ). ಯಾವಾಗಲೂ ; ಸದಾ ; ಎಡೆಬಿಡದೆ : ನಿಮ್ಮ ಶರಣರ ಪ್ರಸಾದದಲ್ಲಿ ನಿರಂತರ ಆಡಿ ಹಾಡಿ . . . ಪರಿಣಾಮಿಸುವಂತೆ ಮಾಡು (ಬಸವ. ೪೫೮) ; ಹಳಿವಿನಲಿ ಹೆಮ್ಮೆಯನು ಕುಂದಿನ ಕುಲದೊಳಗ್ಗಳಿಕೆಯನು ತಮದಲಿ ಬೆಳಗ ಬಣ್ಣಿಸುತಿಹೆ ನಿರಂತರವೆಂದನಾ ಚೈದ್ಯ (ಕುಪ್ಯಾಸ. ೧೦-೧೧) ; ಹರಿಸ್ಮರಣೆ ಮಾಡೋ ನಿರಂತರ ಪರಗತಿಗೆ ಇದು ನಿರ್ಧಾರ (ಪುರಂದ. ೫-೮೫ ಪಲ್ಲವಿ) ; ನಂಬಿದ ಭಕ್ತರ ಹೃದಯದಲ್ಲಿ ಹೆರೆಹಿಂಗದೆ ನಿರಂತರ ನೆಲೆಸಿರ್ಪನು (ಅಖಂಡೇ. ೧೬೦-೧೮); ನಿರಂತರ ಬರುವವ ಪರ್ಯಂತರ ಬಾರನೇ (ಗಾದೆ). [<ನಿರಂತರಂ]

**ನಿರಂತರಂ** (ಅ). ಯಾವಾಗಲೂ ; ಸದಾ ; ಎಡೆಬಿಡದೆ : ಪರೆದಿರೆ ರಾಗಂ ತನ್ನೊಳ್ನಿರಂತರಂ (ಕವಿರಾ. ೧-೧೦೧) ; ಜಗತ್ಪ್ರಸಿದ್ಧ ಚಿರಂತನ ನೂತನ ಮಹಾಕವೀಶ್ವರಕೃತಿಶಾಸ್ತ್ರಾಂತರಸ್ಮಾರತೆ ನಿಲ್ಕೆ ನಿರಂತರಂ (ಜಾತತಿ. ೧-೩). [ಸಂ.]

**ನಿರಂತರಪಕ್ಷ** (ನಾ). ಸತತವಾಗಿರುವ ಪಕ್ಷಪಾತ,—ಒಲವು : ಅಳುಕುವನೆ ಸುಕುಮಾರ ಸಾರಥಿ ಬಲುಹನುಳ್ಳವನೇ ನಪುಂಸಕನಲಿ

ನಿರಂತರಪಕ್ಷವೆಂದು ವಿರಾಟ ಖತಿಗೊಂಡ (ಕುಪ್ಯಾವಿ. ೯-೧೫).
[ನಿರಂತರ$_1$ + ಪಕ್ಷ]

**ನಿರಂತರಬ್ರಹ್ಮಚರ್ಯ** (ನಾ). ಅಖಂಡ ಬ್ರಹ್ಮಚರ್ಯ; ಅಖಂಡವಾದ ಇಂದ್ರಿಯನಿಗ್ರಹ : ಪೂಜ್ಯರಾದ ಕಣ್ವರು ನಿರಂತರ ಬ್ರಹ್ಮಚರ್ಯದಲ್ಲಿ ಇರುವರೆಂದು ಪ್ರಸಿದ್ಧಿ (ಶಾಕುಂತ. ೧೩-೨೮).
[ನಿರಂತರ$_1$ + ಬ್ರಹ್ಮಚರ್ಯ]

**ನಿರಂತರಶ್ಲೇಷೆ** (ನಾ). [ಕಾವ್ಯವಿಾ] ಅರ್ಥಾಲಂಕಾರದಲ್ಲಿ ಒಂದು ಬಗೆ; ℙ ನಿರಂತರಶ್ಲೇಷೆಯಲ್ಲಿ ಅಭಿನ್ನನಿರಂತರಶ್ಲೇಷೆ (= ಪದಗಳನ್ನು ಒಡೆಯದೆ ಎರಡು ಅರ್ಥವನ್ನು ಕೊಡುವ ಪದಗಳು ಒಂದರ ಮೇಲೆ ಒಂದರಂತೆ ಸೇರಿರುವುದು) ಮತ್ತು ಭಿನ್ನನಿರಂತರಶ್ಲೇಷೆ (= ಬೇರೆ ಬೇರೆ ಪದವಿಭಾಗ ಮಾಡಿದರೆ ಬೇರೆ ಬೇರೆ ಅರ್ಥವನ್ನು ಕೊಡುವ ಪದಗಳು ಸೇರಿರುವುದು) ಎಂದು ಎರಡು ಬಗೆಗಳಿವೆ : ವರರೂಪಕಾದ್ಯಳಂಕಾರ ರಚನೆಯೊಳ್ಪುನ್ನೆ ಪೇಟ್ದು ಬಂದೆಂ ಕೆಲವಂ ದೊರೆಕೊಳೆ ಬಗೆಗೀ ತೆಱದಿಂ ನಿರಂತರ ವಿರುದ್ಧ ನಿಯಮಿತಶ್ಲೇಷೆಗಳಂ (ಕವಿರಾ. ೩-೧೧೩). [ನಿರಂತರ$_1$ + ಶ್ಲೇಷೆ]

**ನಿರಂತರಾಭ್ಯಾಸ** (ನಾ). ಸತತವಾದ ಅಭ್ಯಾಸ; ಎಡೆಬಿಡದ ಅಧ್ಯಯನ : ಒಂದು ಅಕೃತ್ರಿಮವಾದ ಅನುವಾದ ಅನಾಯಾಸವಾಗಿ ಒದಗಿ ಬರುವುದಕ್ಕೆ ವಸ್ತುವಿನ ಅಬಾಧಿತವಾದ ವ್ಯಾಪಕತೆ ಎಷ್ಟು ಕಾರಣವೋ ಅನುವಾದಕರ ರಸಿಕತೆಯೂ ನಿರಂತರಾಭ್ಯಾಸವೂ ತಿದ್ದಿ ತೀಡಿ ಮಿರುಗಿಸುವ ಉತ್ಸಾಹಶೀಲತೆಯೂ ಅಷ್ಟೇ ಕಾರಣ (ವೀರಯೋ. VI, ಈ ನಾಟಕವನ್ನು ಕುರಿತು). [ನಿರಂತರ$_1$ + ಅಭ್ಯಾಸ]

**ನಿರಂತರಾಯ** (ನಾ). ೧. ಅಡಚಣೆಯಿಲ್ಲದಿರುವುದು; ನಿರ್ವಿಘ್ನತೆ; ಸುಸೂತ್ರತೆ; ನಿರಾಯಾಸ : ಜಿನಧರ್ಮಮೆ ಕೆಲವು ಕಾಲಂ ನಿರಂತರಾಯಮಾಗಿ ನಡೆಯೆ (ಚಾವುಂಪು. ೪೦೪); ಕೃಷ್ಣನೊಡಂಬಟ್ಟೊಡೆ ವಿವಾಹ ನಿರಂತರಾಯವು ಚಿಂತೆ ಬೇಡ (ಕುಪ್ಯಾವಿ. ೧೦-೨೮); ಆದುದೀಪರಿ ಸಕಲಸೌರಂಭಾದಿವೈಭವದಿಂದಲಾ ಸುಕೃತೋದಯನ ಹಯ ಸಪ್ತತಂತು ನಿರಂತರಾಯದಲಿ (ತೊರರಾ. ೧-೭-೫೩). ೨. ತಡವಾಗದಿರುವಿಕೆ; ಶೀಘ್ರತೆ; ಬೇಗ : ಅಂತಾ ಜಗತ್ಪವಿತ್ರಚಾರಿತ್ರಪಾತ್ರಂಗೆ ಪುಷ್ಪಮಿತ್ರಂ ವಿಶುದ್ಧಮಪ್ಪಾಹಾರದಾನಮಂ ನಿರಂತರಾಯಮಾಗಿ ಮಾಡಿದಾಗಳ್ (ಪುಷ್ಪಪು. ೧೪-೧೦ ಪ); ಪರಿಣತಜನದಲಧಿಕನು ನೀ ನಿಧಾನಿಸಿ ನನಗೆ ಮಾರುತ್ತರವನಿತ್ತು ನಿರಂತರಾಯದಲಿ ತನುವಿಗಾಪ್ಯಾಯನವ ಮಾಡುವುದು (ಕುಪ್ಯಾಆ. ೨೩-೩೫); ಮುನಿಗಳ್ಗೆ ನಿರಂತರಾಯದೊಳು ಪಂಚಾಶ್ಚರ್ಯಮಾಗೆ ಕಂಡು (ಕಗವಿ. ೯೨ ರಾಜಾಪ.). ೩. ಎಡೆಬಿಡದಿರುವಿಕೆ; ನಡುವೆ ಅವಕಾಶವಾಗದಿರುವಿಕೆ : ನರಮೃಗಾಧಮ ನಿಮ್ಮ ಭಾರತವರುಷಭೂಮಿಯೊಳೊಂದು ವರುಷಾಂತರ ನಪುಂಸಕನಾಗಿ ಚರಿಸು ನಿರಂತರಾಯದಲಿ (ಕುಪ್ಯಾಆ. ೮-೪೩). [ಸಂ.]

**ನಿರಂತರಾಸ್ತ್ರ** (ನಾ). ಎಡೆಬಿಡದೆ ಸುರಿಯುವ ಬಾಣ : ನಿರಂತರಾಸ್ತ್ರದ ಜಲನಿಧಿಗೆ ವಡಬಾಗ್ನಿಯಾದನು ನಗುತ ಯಮಸೂನು (ಕುಪ್ಯಾಶ. ೩-೭೦). [ನಿರಂತರ$_1$ + ಅಸ್ತ್ರ]

**ನಿರಂತರಾಳ** (ನಾ). ಕಡಿಮೆ ಆಳವಿರುವ ಸ್ಥಳ; ಹೆಚ್ಚು ಆಳವಿಲ್ಲದ ಎಡೆ : ಕರಂಜತರು ಪುಟ್ಟೆ ಪುಲ್ಗಿಡುಗಳಾಗೆ ಮೇಣ್ ಪುಟ್ಟುವಂಕುರಂ ಕರಮೆ ಕೆಂಪುವೆತ್ತಿರೆ ತದುರ್ವಿಯಂ ತೋಡೆ ಮೇಣ್ ಸುರಕ್ತಮೆನಿಕುಂ ಬಟಾಕ್ಕೆ ಸಲೆ ಪುಟ್ಟುಗುಂ ನೀರ್ ನಿರಂತರಾಳದೊಳ್ (ಲೋಕೋಪ. ೫-೬).
[ಸಂ. ನಿರಂತರಾಲ]

**ನಿರಂತರಿತ** (ಗು). ಎಡೆಬಿಡದಿರುವ; ಒತ್ತಾಗಿರುವ; ನಿಬಿಡವಾದ : ಮತ್ತಮನೇಕಕುಸುಮಕಿಸಲಯ ಫಳಪರಿಣತಫಲಾವನಮ್ರಾಮ್ರಕಮ್ರತರುನಿರಂತರಿತ ವನಲಕ್ಷ್ಮಿಯನೊಜಿಲ್ದು ನೋಡುತಿರ್ಪನ್ನೆಗಂ (ಆದಿಪು. ೫-೪೫ ಪ); ನಿರಂತರಿತ ಶಾಲಿಸಸ್ಯಚಯಶಾಡ್ವಲೋರ್ವೀತಳಂ (ಚಂದ್ರಪು. ೫-೯೩). [ಸಂ.]

**ನಿರಂಧ** (ನಾ). ಕತ್ತಲಿಲ್ಲದಿರುವಿಕೆ; ಸಂಪೂರ್ಣ ಪ್ರಕಾಶ : ನಿರಂಧ ತಮಂಧವಿಲ್ಲದಂದು . . . ಬಸವಣ್ಣನೊಬ್ಬನೇ ಉದಯವಾದನು (ಚನ್ನಪ. ಕ. ೮-೧೪) [ಸಂ.]

**ನಿರಂಬರೆ** (ನಾ). ಬಟ್ಟೆಯಿಲ್ಲದವಳು; ಬೆತ್ತಲೆಯಾಗಿರುವವಳು; ದಿಗಂಬರೆ : ತನಿವೇಟದಲಿ ತಾಮಸಿ ನಿರಂ[ಪಾಠಾಂ. ನಿಶಾಂ, ದಿಗಂ]ಬರೆಯಾಗಿ ನಲಿದಪ್ಪಿದಳು ನಿಜಪತಿಯ (ತೊರರಾ. ೫-೩-೪).
[ಸಂ. ನಿರಂಬರಾ]

**ನಿರಂಬಳ$_1$** 'ನಿರುಮ್ಮಳ' ನೋ.

**ನಿರಂಬಳ$_2$** (ಅ). ನಿಶ್ಚಿಂತೆಯಾಗಿ : ಹೀಂಗ ಗಂಡಸರು ನಿರಂಬಳ ಇರೋದು ಛಲೋ ಅಲ್ಲ (ಹೊಸಂಸಾ. ೧೫೭); ಮರಗಳ ಕೊಂಬೆಗಳು ಕೊಟ್ಟ ರೂಪಕ್ಕೆ ಬಿಸಿಲು ಪಡೆಯುವ ರಂಗವಲ್ಲಿಯಂತೆಯೇ ಸದ್ಯಕ್ಕೆ ಇರಲಿ ಮನಸ್ಸು. ನಿರಂಬಳ ತೆರೆದು ಬಿಡಲಿ (ಸಂಸ್ಕಾರ. ೯೫).
[< ನಿರಂಬಳ$_1$]

**ನಿರಂಶ** (ಗು). ೧. ಅಂಶವಲ್ಲದ; ಭಾಗವಲ್ಲದ : 'ನಿರಂಶಜೀವ' ಪರಾ. (ನಾ). ೨. ಅಂಶವಲ್ಲದುದು; ಅಖಂಡವಾದುದು : ನಿರನ್ವಯ ಪ್ರತಿಕ್ಷಣವಿಶರಾರುಗಳ್ ನಿರಂಶಂಗಳಾಗಿಯುಂ ಭ್ರಾಂತಿವಶದಿಂ . . . ವಿಜ್ಞಾನಲಕ್ಷಣಂಗಳಾತ್ಮಾಭಿಧಾನಮಂ ಪುಟ್ಟಿಸುಗುಂ (ಆದಿಪು. ೨-೯ ಪ). ೩. = ನಿರಂಶಜೀವ : ಮನುಷ್ಯಜೀವರು ನಿರಂಶರು (ಹಿಂದಸಾ. ೨೮೬). [ಸಂ.]

**ನಿರಂಶಜೀವ** (ನಾ). [ದ್ವೈತ] ಜೀವರಲ್ಲಿ ಒಂದು ವಿಧ; ತನ್ನ ಅಂಶದಿಂದ ಅವತಾರ ಮಾಡಲು ಆಗದ ಜೀವ; ಮನುಷ್ಯ ಜೀವ; ℙ ರುದ್ರ, ಇಂದ್ರ ಮೊದಲಾದ ದೇವತೆಗಳು ತಮ್ಮ ಅಂಶವಿಶೇಷದಿಂದ ಭೂಮಿಯಲ್ಲಿ ಅವತರಿಸುತ್ತಾರೆ. ಇಂಥ ಜೀವರಿಗೆ ಸಾಂಶಜೀವರೆಂದು ಹೆಸರು. ಮನುಷ್ಯನಿಗೆ ಅವತರಿಸುವ ಶಕ್ತಿಯಿಲ್ಲವಾದುದರಿಂದ ಅವನಿಗೆ ನಿರಂಶಜೀವನೆಂದು ಹೆಸರು : ಜೀವರಲ್ಲಿ ಸಾಂಶಜೀವರೆಂತಲೂ, ನಿರಂಶಜೀವರೆಂತಲೂ ಎರಡು ಪ್ರಕಾರ ಉಂಟು (ಹಸಾರ. ೩-೮ ವಿಶೇಷಾರ್ಥ). [ನಿರಂಶ + ಜೀವ]

**ನಿರಂಹ** (ನಾ). ಜಂಬವಿಲ್ಲದಿರುವವನು; ಅಹಂಕಾರವಿಲ್ಲದಿರುವವನು; ಅಹಂಕಾರರಹಿತನಾದವನು : ರತ್ನತ್ರಯಪ್ರಭಾಪ್ರಭಾವಿತ ನಿಜಮನೋಭವನರುಂ . . . ನಿರಂಹರುಮಪ್ಪ ಶ್ರೀ ಶ್ರೀನನ್ದಿಪಣ್ಡಿತದೇವಜ್ಜೆ೯ವಿತಾರಾಧನಾಪುರಸ್ಸರ ಮಾಸಸಲ್ಲೇಖನೆ[ಯಿಂ]. . .ಚತುರ್ವ್ವಿಧಾರಾಧ[ನೆಯಿ]ನಾರಾಧಿಸಿ (ಸೌಇಇ. XX, ೫೨-೩೪; 1077).
[< ಸಂ. ನಿರಹಂ]

**ನಿರಕರ** (ನಾ). ಕಡೆಗಣಿಸುವಿಕೆ (?).

**ನಿರಕರ ಮಾಡು** = ಕಡೆಗಣಿಸು; ತುಚ್ಛೀಕರಿಸು (?) : ಈಶ . . . ಚೆನ್ನಾಗಿ ನಿಜದೋರಿ ಕತ್ತರಿಯ ಕಡೆಗಿಟ್ಟು ಚಿಣ್ಣ ನಿನಗಿಂತುಮಾಯಾಸಮೇಕೆ ಪೇಳೆನಲು ಯೆನ್ನ ಭಕ್ತಿಯನು ನಿರಕರ ಮಾಡಲಾನಿಂತು ಗೆಯ್ದೆನೆಂದಡಿಗೆರಗಲು (ಚೋರಬ. ೮-೪೮). [< ನೀಕರ ?]

**ನಿರಕು** 'ನಿಕರ$_2$' ನೋ.

**ನಿರಕ್ಕರ** (ಗು). = ನಿರಕ್ಷರ ೧ : 'ನಿರಕ್ಕರಿ' ಪರಾ.
[< ಸಂ. ನಿರಕ್ಷರ]

**ನಿರಕ್ಕರಿ** (ನಾ). ಅಕ್ಷರವನ್ನು ತಿಳಿಯದಿರುವವನು; ಅಕ್ಷರಜ್ಞಾನವಿಲ್ಲದಿರುವವನು : ದುಂದುಮಿ ಹಾಗೂ ಲಾವಣಿಗಳನ್ನು ರಚಿಸಿ

ಹಾಡಿದ ಕವಿಗಳು ತೀರ ನಿರಕ್ಕರಿಗಳಿದ್ದಂತೆ ಕಾಣುವುದಿಲ್ಲ (ಕನ್ನಜಾ. ೯೬).
[ನಿರಕ್ಕರ+-ಇ$_3$]

**ನಿರಕ್ಕು** 'ನಿಕರ$_2$' ನೋ.

**ನಿರಕ್ಷದೇಶ** (ನಾ). ಭೂಮಧ್ಯರೇಖೆಯ ದೇಶ ; ಸಮಭಾಜಕ ವೃತ್ತದ ಹತ್ತಿರದ ಪ್ರದೇಶ : (ಕ). [ಸಂ.]

**ನಿರಕ್ಷರ** (ಗು). ೧. ಅಕ್ಷರ ಜ್ಞಾನವಿಲ್ಲದ ; ಓದು ಬರಹ ಬಾರದ. (ನಾ). ೨. ಓದು ಬರಹ ಬಾರದಿರುವವನು.

**ನಿರಕ್ಷರ ಕುಕ್ಷಿ** = ಓದು ಬರಹ ಬಾರದ ವ್ಯಕ್ತಿ ; ಅಕ್ಷರಜ್ಞಾನವಿಲ್ಲದ ವ್ಯಕ್ತಿ : ಅವರು ಬಹಳ ಮಟ್ಟಿಗೆ ನಿರಕ್ಷರಕುಕ್ಷಿಗಳಾಗಿದ್ದುದರಿಂದ ಹಾಗಾಯಿತು (ಜಾನಗೀ. ೯); ನಿರಕ್ಷರಕುಕ್ಷಿಯಾಗಿದ್ದ ಪ್ರಫುಲ್ಲೆಯು ಶಾಸ್ತ್ರಪಂಡಿತಳೂ ವ್ಯವಹಾರದಕ್ಷಳೂ ಆದದ್ದು ಭವಾನೀಠಾಕೂರನ ದೀರ್ಘ ಶಿಕ್ಷಣದಿಂದ (ಬಂಕಿಮ. ೨೯೭). [ಸಂ.]

**ನಿರಕ್ಷೀಕೃತ** (ಗು). ಕಣ್ಣಿಗೆ ಕಾಣದಂತೆ ಮಾಡಿದ : ಗಾಳಿಯ ಪೊಯ್ಲಿಂದಂ ದ್ಯುತಿಮಾಳೆ ತೆರಳ್ದೊಡನೆ ನೆಗಟ್ದ ತಮದೊಡ್ಡನಲಾಭೀಳತೆವೆತ್ತುದು ನೀಳಘನಾಳಿನಿರಕ್ಷೀಕೃತಾಂಬರಂ ಘನಪಥದೊಳ್ (ಜಗವಿ. ೪-೮೭). [ಸಂ.]

**ನಿರಖ್,** ನಿರಖು (ನಾ). ನಿರ್ದಿಷ್ಟವಾದ ಬೆಲೆ; ನಿಖರವಾದ ಬೆಲೆ: (ರೈಸ್‌ಗ. II. ೫೫೭). **ನಿರಖು :** ನಿರಖು ಕಟ್ಟುವಲ್ಲಿ ಅರ್ಜಬಾಜಾರಿ ನಿರಖಿಗೆ . . . ಹಣ ಜಾಸ್ತಿ ಛಡಾಯಿಸಿ (ಮಹಾಪಂ. II, ೭೦); ೧೩೦೦೦ ರೂಪಾಯಿಯನ್ನು ಕಾಯಂ(ನಿರಖು) ಠೇವಣಿಯಾಗಿ (Fixed Deposit) ೨ ವರ್ಷಕ್ಕೆ ಬಡ್ಡಿಗೆ ಇರಿಸುತ್ತಾರೆ(ಬಾಲಪ್ರ.III,೧೫೫೬). 'ನಿಕರ$_2$' ಪರಾ.

**ನಿರಖು ಮಾಡು** = ನಿರ್ದಿಷ್ಟವಾದ ಬೆಲೆಯನ್ನು ಗೊತ್ತುಪಡಿಸು ; ಭೂಮಿಯ ಮೇಲಿನ ಕಂದಾಯವನ್ನು ನ್ಯಾಯವಾಗಿಯೂ . . . ನಿರಖು ಮಾಡಿದವನು ಇಕ್ಕೇರಿ ಶಿವಪ್ಪನಾಯಕ (ಪಾಳಗಾ. ೫೧).
[←ಪಾರ. ಹಿಂ. ನಿರ್ಖ್ ; ಮರಾ. ನಿರಖ್]

**ನಿರಖು** 'ನಿರಖ್' ನೋ.

**ನಿರಖುಪಟ್ಟಿ** (ನಾ). ಬೆಲೆಯ ಪಟ್ಟಿ ; ಕ್ರಯಪಟ್ಟಿ : (ಕ).
[ನಿರಖು (<ನಿರಖ್)+ಪಟ್ಟಿ$_2$]

**ನಿರಗುಂಡಿ** 'ನಿರ್ಗುಡಿ' ನೋ.

**ನಿರಗೆ$_1$** 'ನಿಜೀಗೆ' ನೋ.

**ನಿರಗೆ$_2$** 'ನಿಜೀಗ' ನೋ.

**ನಿರಘ** (ಗು). ೧. ಪಾಪವಿಲ್ಲದ ; ದೋಷವಿಲ್ಲದ : ಬೆಳ್ಗುಳಗಿರಿಯ ಮಸ್ತಕದಲ್ಲಿ ನೆಲಸಿದ ನಿರಘ ನಿರ್ಮಲ ವಸ್ತು ರಾಜಿಪ ಗೋಮಟೇಶ್ವರನು (ನಾಗಪ. ೧-೬೪). (ನಾ). ೨. ಪಾಪವಿಲ್ಲದಿರುವಿಕೆ; ದೋಷವಿಲ್ಲದಿರುವಿಕೆ : ನಿರಘದಾ ನಿರುತ್ತರಗುಣದ ನಿರ್ವಾಸನಾ ನಿರ್ವಹಾದ್ವೈತನಿಶ್ಚಲ ನಿರಂಜನನೊಳೆನ್ನ ನೋಡೆಂದನಾರ್ಯರ್ಗಂ (ವೀಶೈಪು. ೧-೨-೫). ೩. ಪಾಪರಹಿತನಾದವನು ; ದೋಷರಹಿತನಾದವನು : ನಿರ್ವಾಯಂ ನಿಜನಿತ್ಯತೃಪ್ತ ನಿರಘಂ . . . ಪ್ರಭುದೇವ ದೇವನನಿಶಂ ರಾಜಿರ್ಕೆ ಮಚ್ಚಿತ್ತದೊಳ್ (ಹವಿಸ್ಮಾರ. ೧-೧೧) ; ನಿರಘ ನಿರೀಹ ನಿರ್ಭಯ . . . ನಿಷ್ಕಳಂಕ ಜಯಶಂಕರ ನಿರ್ಜಡ ಶಾಂಭವೀಧವಾ (ಶಜಶಂ. ೫-೨೪); ನಿರಘ ನಿರ್ಮಲ ನಿರಾವರಣಾಶ್ರಿತ ಕಲ್ಪಧರಾರುಹ ಸ್ಫುರಿತ ವಿಷ್ಣುನಯನಾರ್ಚಿತ ಪಾದಸರೋಜ ಮದೀಶ್ವರಾ (ಪಾಲಾಸ್ಯ. ೧-೧೧-೨೭). [ಸಂ.]

**ನಿರಘತೆ** (ನಾ). ಪಾಪರಹಿತವಾಗಿರುವಿಕೆ ; ದೋಷವಿಲ್ಲದಿರುವಿಕೆ: ಸತ್ಸತ್‌ಶೌಚಾಚಾರಸತ್ಕುಲಪರಂಪರೆಗೆ ನಿತ್ಯನಿರಘತೆ ಕೀರ್ತಿ ದೇವತಾಪ್ರೀತಿ ಮತ್ತತ್ಯಧಿಕಸಂಪದಂ ಪತಿಸೇವೆಯಿಂದೊದಗುವುದು(ವೆಂಕಾರಾ.೨-೯-೪೫).
[ಸಂ.ನಿರಘತಾ]

**ನಿರಘೆ** (ನಾ). ದೋಷರಹಿತೆ ; ಕಳಂಕರಹಿತೆ ; ಪಾಪರಹಿತೆ : ನಿರುತೆ ನಿರ್ಮಲೆ ನಿರಘೆ ನಿರತಿಶಯೆ ನಿರ್ಭೇದ್ಯೆ (ಏಕೋಪು. ೧-೯).
[ಸಂ. ನಿರಘಾ]

**ನಿರಜ** (ನಾ). ೧. ನಿರ್ಮಲವಾದುದು ; ಪರಿಶುದ್ಧವಾದುದು. ೨. ನಿರ್ಮಲನಾದವನು ; ರಜೋಗುಣರಹಿತನಾದವನು ; ಪರಿಶುದ್ಧನಾದವನು : ನಿರಜ ನಿರಹಂಕಾರ ನಿರ್ಮಳ ನಿರಾಳ ಪಂಪಾವಿರೂಪಾಕ್ಷ ಶರಣು (ಹಚಕಾ. ೧-೪) ; ನಿರಜ ನಿರಹಂಕಾರ ನಿರವಯ ನಿರಾಸಕ್ತ ಪುರಹರನೆ (ಸೋಮಚ. ೧-೫) ; ನಿರಜ ನಿರ್ಜರ ನಿತ್ಯನಿರ್ಮಳ . . . ನಿರ್ಮಾಯ ಚಿತ್ತೈಸು (ಬಸಪು. ೬೧-೪೪). [ಸಂ.]

**ನಿರಜೆ** (ನಾ). ಕಳಂಕರಹಿತೆ ; ಪರಿಶುದ್ಧಳಾದವಳು : ತಮ್ಮ ನೀನಾಡಿದಂತವನಿಸುತೆ ನಿರಜೆಯಹುದು (ಜೈಮಿಭಾ. ೧೮-೫೪) ; ನಿರುಪಮೆ ನಿರಾವರಣೆ ನಿರಜೆ ನಿರಹಂಕಾರೆ (ಏಕೋಪು. ೧-೯). [ಸಂ. ನಿರಜಾ]

**ನಿರಜ್ಞ** (ನಾ). ಅಜ್ಞನಲ್ಲದವನು ; ಬುದ್ಧಿವಂತ: ನಿರವಮಾನ ನಿರಜ್ಞ . . . ನಿರ್ವಿಕಾರಾಕಾರ ಚಿತ್ತೈಸು (ಬಸಪು. ೬೧-೪೩). [ಸಂ.]

**ನಿರತ** (ಗು). ೧. ಆಸಕ್ತವಾದ; ತಲ್ಲೀನವಾದ ; ಮಗ್ನವಾದ : ಆಕೆಯ ಮನಸ್ಸೆಲ್ಲವೂ ಸೇವೆಯಲ್ಲಿಯೇ ನಿರತವಾಗಿರುತ್ತದೆ (ನನದಿ. ೧೪). (ನಾ). ೨. ತೊಡಗಿದವನು; ಮಗ್ನನಾದವನು : ಪರಮತತಪತ್ವರಣ ನಿರತರು ಪರವಾದೀ [ಶರಭ]ಭೇರುಣ್ಡಾ ಪರನಾಮಧೇಯರಪ್ಪ ಶ್ರೀಮತ್ ಶ್ರೀನನ್ದಿಪಣ್ಡಿತದೇವರ್ಗ್ಗೆ (ಸೌಇಇ. XX, ೪೬-೨೭ ; 1072) ; ಮೂಜಗದಲ್ಲಿ ನಿರತರು ಕೂಡಲಸಂಗನ ಶರಣರು ತ್ರಿವಿಧವನಱಿಯರು (ಬಸವ. ೯೦೧) ; ಎಸೆದರ್ ವತ್ಸಪಾಲಕರ್ ಬಲಕೃಷ್ಣರ್ . . . ಮಧುರಸ್ವನಪತ್ರವಾದ್ಯನಿರತರ್ (ಜಗವಿ. ೩-೭೭) ; ನಿರತರ್ ಭರಿತರ್ ಚರಿತರ್ ಪರತತ್ತ್ವರತರ್ ಸುತರ್ . . . ನೆಲಸಿರ್ದರ್ (ಗಿರಿಕ. ೫-೨೪) ; ಬಳಿಕ ಸ್ನಾನ ಮಾಡಿ ದೇವತಾರ್ಚನೆ ಮುಂತಾದ ಆಹ್ನಿಕಾದಿಗಳಲ್ಲಿ ನಿರತನಾಗುತ್ತಿದ್ದನು (ಕೃದೇಪ. ೧೦) ; ಆಯಾ ದೇಶದ ಸ್ಥಿತಿಗತಿಗಳನ್ನು ಕೂಲಂಕಷವಾಗಿ ವಿಚಾರಿಸಿ ತೃಪ್ತಿಯಾದ ಏರ್ಪಾಡುಗಳನ್ನು ಮಾಡುವುದರಲ್ಲಿ ನಿರತರಾಗಿದ್ದರು (ಶಾಂತಲಾ. ೧೫೭). [ಸಂ.]

**ನಿರತತ್ವ** (ನಾ). ತೊಡಗಿರುವಿಕೆ ; ನಿರತವಾಗಿರುವಿಕೆ ; ತಲ್ಲೀನವಾಗಿರುವಿಕೆ : ವರ ಭಗವದ್ಭಾಗವತಸ್ಫುರದಾಚಾರ್ಯಾಂಘ್ರಿಕಿಂಕರತ್ವದೊಳನಿಶಂ ನಿರತತ್ವಂಬೆತ್ತಿರ್ದಾ ಚರಮದ ದಶೆಯಲ್ಲಿ ನಲಿದು ವೈಕುಂಠಪುರಕ್ಕಿರದೆಯ್ದಿದರ್ (ವಿಸ್ಮಚ. ೫-೧೮). [ಸಂ.]

**ನಿರತಿಕ್ರಮ** (ನಾ). ನಿಯಮವನ್ನು ಉಲ್ಲಂಘಿಸದಿರುವಿಕೆ,—ಪಾಲಿಸುವಿಕೆ ; ಶಾಸ್ತ್ರಕ್ಕೆ ಅನುಸಾರವಾಗಿರುವಿಕೆ : ವರಪಂಚಾಣುವ್ರತಮಂ ನಿರತಿಕ್ರಮಮಾಗೆ ತಾಳ್ದಿ ಪರಮದಯಾತತ್ಪರನೆನಿಸಿದ ಶಲ್ಯತ್ರಯವಿರಹಿತನೆರಡನೆಯ ನೆಲೆಯವಂ ತಾಂ ವ್ರತಿಕಂ (ಸುಕುಮಾ.೬-೨೭).
[ಸಂ.]

**ನಿರತಿಚಾರ** (ನಾ). ಅತಿಚಾರಗಳಿಲ್ಲದಿರುವಿಕೆ : ಇಂತೀ ಸಮೀಚೀನ ಶ್ರಾವಕಾಚಾರಂಗಳಂ ನಿರತಿಚಾರಮಾಗೆ ತಾಳ್ದಿದ ದೇಶವಿರತಂಗಿಜ್ಯೆವಾರ್ತೆ ಪತ್ತಿ ಸ್ವಾಧ್ಯಾಯ ಸಂಯಮ ತಪಮೆಂದಾರ್ಯಕರ್ಮಮಾಱು ತೆಱನಕ್ಕುಂ (ಸುಕುಮಾ. ೬-೨೫ ವ) ; ನಿರತಿಚಾರವೃತ್ತಿಯಿಂ ಗುಣವ್ರತ ಶಿಕ್ಷಣವ್ರತಂಗಳೆಂಬ ಸಪ್ತಶೀಲಂಗಳನುಳ್ಳನುಂ (ಪ್ರತಿಷ್ಠಾ. ೧-೧೬).
[ಸಂ.]

**ನಿರತಿಶಯ** (ಗು). ೧. ಅತಿ ಹೆಚ್ಚಿನ ; ಶ್ರೇಷ್ಠವಾದ : ನಿರತಿಶಯ ರೂಪಯೌವನ ವಿರಾಜಿತಾಂಗಿಯರ್ . . . ನೆಗಟ್ದ ವಸುಂಧರೆಯುಂ ವಸುಮತಿಯುಮೆಂಬರರಸಿಯರಾದರ್ (ಶಾಂತಿಪು. ೧-೭೨) ; ನಿರತಿಶಯ ಸುಖಸುಧಾಸಾಗರದೊಳ್ ಮನಮಾರೆ ಮಾಡಿ ಮುಳುಗ್ಯಾಡುತ್ತುಂ

ಪರಮಾಯುವಂ ಪುನರ್ವಸು ಚರಾಮರಂ ತೀರ್ಚಿ ಬಂದು ಲಕ್ಷ್ಮಣನಾದಂ (ಪಂರಾಮಾ. ೧೪–೫೯) ; ನಿರತಿಶಯಸುಖದೊಳಗೆ ನಿಜವಾಗಿರಬಲ್ಲ ಗುಹೇಶ್ವರ ನಿಮ್ಮ ಶರಣ (ಅಪಚಂ. ೧೨೪–೫೬೭) ; ನಿರತಿಶಯತೇಜದಿಂ ಸುಂದರ ಕಾರು[ಣ್ಯ]ದಿಂ . . . ನೆಗಟ್ದಿನಮಿತಗುಣ ವಸುದೇವಂ (ಬಂಹರಿ. ೧–೩೯) ; ನಿರತಿಶಯಪದಂ ಕೂರ್ತು ಪೇಳ್ವಳ್ತಿಯಿಂದಂ ಕಾವ್ಯಂ ಕಲ್ಪಾಂತರಸ್ಥಾಯಿಯೆನಿಪ ನುಡಿ ಸತ್ಯಂ ಕವೀಶಾಧಿಪತ್ಯಂ (೧೨ಕ.೧–೧೬). (ನಾ). ೨. ಅತಿ ಹೆಚ್ಚಿನದು ; ಶ್ರೇಷ್ಠವಾದುದು : ನಿರತಿಶಯಮಕ್ಕುಮದು ಬಂಧುರಕವಿಜನತಾಪ್ರಯೋಗಸಂಬಂಧನದಿಂ(ಕವಿರಾ.೧–೭೫); ನಿರತಿಶಯಮೆನಿಪ ಧರ್ಮಾನುರಾಗಮಾ ತೋರ್ಪುದೆಂಬಿನಂ ಸುರವನಿತಾ ಕರಕಿಸಲಯದೊಳ್ . . . ಭಾಜನಂ ರಂಜಿಸುಗುಂ (ಪಂರಾಮಾ. ೧೬–೯೫) ; ನಿರತಿಶಯಮಾಗಿ ಪೆರ್ಚಿದ ಪರಿಬೋಧಾರಹಿತಮಾದ ಶಾಶ್ವತ ಸುಖದಿಂ ಪಿರಿದುಂ ತಣಿವುತ್ತಿರ್ದಂ (ಚಾಧಪು. ೧೬–೩೦೨) ; ನಿರುತವಿದು ಕೇಳಜ್ಜ ಸುಗತಿಗೆ ನಿರತಿಶಯವನಶನವು ದುರ್ಗತಿಗರಸುತನ ದುರ್ಮರಣ ವಿದು ತಾ ಶಾಸ್ತ್ರಸಿದ್ಧವಲೆ (ತೊರರಾ. ೪–೧೧–೯). ೩. ಶ್ರೇಷ್ಠತೆ ; ಅತಿಶಯತೆ : ಸುರಪುರಯುಗಪವನದ್ವಿತಯಾಕಾಶಾಂಬುಗಣಂಗಳ್ನೆರೆದಿರೆ ಯತಿ ನಿಧಿಯೊಳ್ನಲೆ ನಿಲ್ತಾನಂದದಿನೆಂದುಂ ನಿರತಿಶಯದೊಳಿದನೋದೆಲೆ ನೀಲಾಬ್ಜಾಂಬಕಿ (ಧಂಡೋಂಬು. ೨–೧೭೦). ೪. ಶ್ರೇಷ್ಠನಾದವನು : ನಿರತಿಶಯನ ನಿಜೋನ್ನತೋನ್ನತ ಭರಿತ ಬಹಳ ಬ್ರಹ್ಮಮಯನೀಶ್ವರ ಘನಸ್ವಾತಂತ್ರ್ಯದೈವವ ಕಂಡನಸುರೇಂದ್ರ (ತೊರರಾ. ೬–೫೧–೪೯).
[ಸಂ.]

**ನಿರತಿಶಯವಸ್ತು** (ನಾ). [ಸಾಂಖ್ಯ] ಗುಣ, ದೋಷ ಮೊದಲಾದ ಯಾವುದೂ ಇಲ್ಲದ ನಿರ್ವಿಕಾರ ವಸ್ತು ; ಆತ್ಮ : ಈ ಆತ್ಮನೆಂಬುದು . . . ಶುದ್ಧವಾದ ಕನ್ನಡಿಯಂತಿರುವುದು, ನಿರ್ವಿಕಾರ, ಅವನು ಕೂಟಸ್ಥನು, ಮಧ್ಯಸ್ಥನು. ಇದಕ್ಕೆ ನಿರತಿಶಯವಸ್ತುವೆಂದು ಹೆಸರು (ಹಿಂದಸಾ. ೫೮). [ನಿರತಿಶಯ + ವಸ್ತು]

**ನಿರತೆ** 'ನಿಜಿತೆ' ನೋ.

**ನಿರಧಿಕ** (ಗು). ೧. ಅತ್ಯುತ್ತಮವಾದ ; ಶ್ರೇಷ್ಠವಾದ. (ನಾ). ೨. ತನಗೆ ಅಧಿಕರಾರೂ ಇಲ್ಲದವನು ; ಶ್ರೇಷ್ಠನಾದವನು : ನಿರುಪಮಾನ ನಿರಧಿಕ ನಿರ್ಭಯನಿರತ . . . ನಿಜನಿರ್ಮಾಯ ಚಿತ್ಸುಖ (ಬಸಪು. ೬೧–೪೪). [ಸಂ.]

**ನಿರಧಿಷ್ಠಾನ** (ನಾ). ಊರೆಯಿಲ್ಲದುದು ; ಆಶ್ರಯರಹಿತವಾದುದು; ಆಧಾರವಿಲ್ಲದುದು : ನಿರಧಿಷ್ಠಾನಂ ದಿವಮೆಂಬರಂತಧಿಷ್ಠಾನಮಲ್ಲವೇ ನಗವಿದು ತತ್ಸುರಸದನಕ್ಕೆ (ಜಗವಿ. ೮–೩೧). [ಸಂ.]

**ನಿರನುಕ್ರೋಶ** (ನಾ). ದಯೆಯಿಲ್ಲದವನು ; ಕೃಪೆಯಿಲ್ಲದವನು : ಆವಳ ದೊಡ್ಡ ಆಕ್ಷೇಪಣೆ ಅವನು ಅಷ್ಟು "ನಿರನುಕ್ರೋಶ"ನಾಗಬಹುದೇ ಎಂಬುದು (ಸಂನಾಟ. ೨೭೭). [ಸಂ.]

**ನಿರನುಗ್ರಹೇಶ್ವರವಾದಿ** (ನಾ). ಪರಮೇಶ್ವರನ ಅನುಗ್ರಹ ಬೇಕಿಲ್ಲವೆಂದು ವಾದಿಸುವವನು : ಸರ್ಪಭ್ರಾಂತಿಯಿಂದ ಓಡಿಹೋಗುವವನಿಗೆ ಹಗ್ಗದ ತತ್ತ್ವಜ್ಞಾನ ನಿವರ್ತಕವೇ ವಿನಾ ಪರಮೇಶ್ವರನ ಪ್ರಸಾದ ಬೇಕಿಲ್ಲವೆಂದು ಅಭಿಪ್ರಾಯ. ಆದುದರಿಂದ ಇವರನ್ನು ನಿರನುಗ್ರಹೇಶ್ವರವಾದಿಗಳೆಂದು ಕೆಲವರು ಕರೆಯುವರು (ಹಿಂದಸಾ. ೧೨೫).
[ಸಂ. ನಿರನುಗ್ರಹೇಶ್ವರವಾದಿನ್]

**ನಿರನುನಾಸಿಕ** (ಗು). ೧. ಅನುನಾಸಿಕ ಅಕ್ಷರಗಳಿಂದ ಕೂಡಿರದ : ಆಕೆಯ ನಿರನುನಾಸಿಕ ಮಾತುಗಳನ್ನೂ ಹೀನುಗಳನ್ನೂ ಕೇಳಿ ಕೇಳಿ ರಾಮ ಲಕ್ಷ್ಮಣರಿಗೆ ಸಾಕಾಗಿ ಹೋಗಿತ್ತು (ಪೇಕಸ್ಪೈ. ೧೮). (ನಾ). ೨. [ವ್ಯಾಕ] ಮೂಗಿನ ಸಹಾಯವಿಲ್ಲದೆ ಉಚ್ಚರಿಸಬಹುದಾದ ವರ್ಣ ; ಅನುನಾಸಿಕವಲ್ಲದುದು : ಯವಲಂಗಳನುನಾಸಿಕಂಗಳುಂ ನಿರನುನಾಸಿಕಂಗಳುಮಪ್ಪುವು (ಶಮುದ. ೧೬ ವೃತ್ತಿ) ; ಗಕಾರವು (ತಾನು) ಒಂದೇ ಆಗಿದ್ದುಕೊಂಡೇ ಉದಾತ್ತವೂ, ಅನುದಾತ್ತವೂ, ಸ್ವರಿತವೂ, ಸಾನುನಾಸಿಕವೂ, ನಿರನುನಾಸಿಕವೂ (ಆಗಿದೆ) ಎಂದು ಒಂದೇ ಕಾಲಕ್ಕೆ ಅನೇಕ ರೂಪವುಳ್ಳದ್ದಾಗುವದು ಹೇಗೆ ತಾನೆ (ಸರಿ ಹೋದೀತು) ? (ಬ್ರಹ್ಮಭಾ. ೪೭೨). [ಸಂ.]

**ನಿರನುಭವಶಾಲಿ** (ನಾ). ಅನುಭವಸ್ಥನಲ್ಲದವನು : ಕವಿ ನಿರನುಭವಶಾಲಿ. ಆದರಿಂದೆ ಚೇಡಿದಪೆ ನಿನ್ನ ನಾಂ (ಚಿತ್ರಾಂಗ. ೩೧–೯೩೦).
[ಸಂ. ನಿರನುಭವಶಾಲಿನ್]

**ನಿರನುಭವಿ** (ನಾ). ಅನುಭವವಿಲ್ಲದವನು : ನೀನೇನ್ ನಿರನುಭವಿಯಲ್ಲಯ್, ಎನ್ನಿಂದೆ ಕಲ್ಪನ್ನನುಂ ಅಲ್ಲಯ್ (ಬದ್ಧಪ್ರ. ೨೦–೪೨೯) ; ನಾನು ನಿರನುಭವಿ. ನನ್ನ ಯಾವ ಮಾತಿಗೂ ಬೆಲೆಯಿಲ್ಲ (ಹೊಸಕ್ವಿ.೨೪೭).
[ಸಂ. ನಿರನುಭವಿನ್]

**ನಿರನ್ನವಿಕಾರ** (ನಾ). ಆಹಾರವನ್ನು ಸ್ವೀಕರಿಸದೆ ಇರುವುದರಿಂದ ಉಂಟಾಗುವ ವಿಕಾರ ; ಉಪವಾಸದಿಂದ ಉಂಟಾಗುವ ತಳಮಳ; ಹಸಿವಿನಿಂದಾದ ಮನೋವೈಕಲ್ಯ,— ಭ್ರಾಂತಿ : ರಾಘವನ ಸುದ್ದಿಯನೀಕೆಗೆ ಪೇಟ್ದುದಾಗದೇ ಕರ್ಣಪಿಶಾಚಮಾ ವಿಕಲಭಾಷೆ ನಿರನ್ನವಿಕಾರಮಾಗದೇ (ಪಂರಾಮಾ. ೧೧–೯೧). [ಸಂ.]

**ನಿರನ್ವಯ** (ಗು). ಮುಂದಿನ ಅನ್ವಯವಿಲ್ಲದ : ನಿರನ್ವಯ ಪ್ರತಿಕ್ಷಣವಿಶರಾರುಗಳ್ ನಿರಂಶಂಗಳಾಗಿಯುಂ ಭ್ರಾಂತಿವಶದಿಂ . . . ವಿಜ್ಞಾನಲಕ್ಷಣಂಗಳಾತ್ಮಾಭಿಧಾನಮಂ ಪುಟ್ಟಿಸುಗುಂ (ಆದಿಪು. ೨–೯ ವ) ; ವಸ್ತುಗಳಿಗೆಲ್ಲ ನಿರನ್ವಯವಿನಾಶ ಸಹಜವಾದುದೇ ಆಗಿದೆ (ತತ್ವಪ್ರಾ. ೧೯೮).
[ಸಂ.]

**ನಿರನ್ವೇಷ** (ನಾ). [ಜೈನ] ಎಂಟು ಬಗೆಯ ಧರ್ಮಗಳಲ್ಲಿ ಒಂದು; ಸುಖಸಾಧನಗಳಿಗೆ ಹಾತೊರೆಯದಿರುವಿಕೆ ; ☞ ಎಂಟು ಬಗೆಯ ಧರ್ಮಗಳು—೧. ಸತ್ಪ್ರಣೀತ—ಭಯ, ರಾಗಾದಿ ದೋಷವಿಲ್ಲದಿರುವಿಕೆ. ೨. ಸಮಾನ—ಜಾತಿ, ಕುಲ ತಾರತಮ್ಯವಿಲ್ಲದೆ ಎಲ್ಲರೂ ಪಾಲಿಸಬಹುದಾದ ಧರ್ಮ. ೩. ನಿರುಪಾದಾನ—ಯಾವ ಬಗೆಯ ಸುಖಸಾಧನಗಳನ್ನೂ ಬಯಸದಿರುವಿಕೆ. ೪. ನಿರನ್ವೇಷ-ಭೋಗೋಪಭೋಗಾದಿಗಳನ್ನು ಬಯಸದಿರುವುದು. ೫. ದುಶ್ಚರ—ಕಾಪುರುಷರಿಂದ ಒಂದು ದಿನವೂ ಮಾಡಲು ಅಶಕ್ಯವಾದುದು. ೬. ಪ್ರರೂಢ—ದೀರ್ಘಕಾಲ ಪ್ರವೃತ್ತವಾದುದು. ೭. ಅಹಿಂಸಾವ್ರತ—ಹಿಂಸೆ ಮಾಡದೆ ಇರುವಿಕೆ. ೮. ಫಲವಂತ—ಜಾತಿ, ಜರೆ, ರೋಗ, ಮರಣಗಳನ್ನು ನಾಶಪಡಿಸಿ ಪರಮ ನಿರ್ವಾಣವನ್ನು ಕೊಡುವುದು : ನಿರನ್ವೇಷವೆಂಬುದು ಭೋಗೋಪಭೋಗಪೂಜಾವಂದನಾದ್ಯೈಶ್ವರ್ಯಾದಿಗಳನಪೇಕ್ಷಿಸದೆ ಭವ್ಯವರ ಪುಂಡರೀಕರ್ ನಡೆವ ಧರ್ಮಂ (ಚಾವುಂಪು. ೭). [ಸಂ.]

**ನಿರಪರಾಧ** (ನಾ). ೧. ಅಪರಾಧ ಮಾಡದಿರುವುದು; ನಿರ್ದೋಷ: ನಿನ್ನ ಹೃದಯದ ಕರೆಗೆ ನಿರಪರಾಧದ ಕೂಗು ಕೇಳಿ ಬರುತ್ತದೆ (ರಕ್ತಧ್ವ. ೨೮೦). ೨. = ನಿರಪರಾಧಿ: ನಿರಪರಾಧನನನ್ನೆಯದಿಂದಮೆನ್ನ ತಂಗೆಯ ಮಗನಂ ವಿದಾರಿಸಿದನಂ ತಜಿಾದು . . . ಆಜಿಾಪೆಂ ಖರನ ಶೋಕಕೃಶಾನುವಂ (ಪಂರಾಮಾ. ೯–೭೨). [ಸಂ.]

**ನಿರಪರಾಧಿ** (ನಾ). ಅಪರಾಧ ಮಾಡದಿರುವವನು ; ನಿರ್ದೋಷಿ : ನಿರಪರಾಧಿಗಳಂ ನಿರ್ದೋಷಿಗಳಂ ನಿರರ್ಥಕಮಾ ಪಾತಕಂ ಕೊಂದನೆಂದು ತನ್ನಂತರಂಗದಲ್ಲಿ ಸೈರಿಸಲಾಜಿದೆ (ಪದ್ಮಾರಾ. ೧೭೮–೯) ; ನಿರಪರಾಧಿಯನು ಬನ್ನಬಡಿಸುವುದುಚಿತವೇ (ಬಸಪು. ೩೮–೩೦) ; ನಿರಪರಾಧಿಯನು ನಾರಿ

ಯೊಬ್ಬಳನಕಟ ಸಭೆಯುಲಿ ಸೀರೆಯುಡಿಯುಚ್ರ್ಚುವರು ಕೆಟ್ಟನು . . . ಎಂದೊಜಿಲಿದಳು ತರಳೆ (ಕುನ್ಯಾಸ. ೧೪–೧೦೭); ನಿರಪರಾಧಿಯ ಕೊಲೆಯು. ತನಗಿನ್ನಿರದೆ ಅಂಗೈ ಮೇಲೆ ವೊಳೆತುದು ಹರಹರಾ ಕಡುಪಾಪಿ ತಾನೆಂದ ಳಲಿದನು ರಾಮು (ಕೌಶಿರಾ. ೨೨–೬೨); ನಾನು ನಿರಪರಾಧಿ, ನನ್ನನ್ನೇಕೆ ಬಂಧಿಸಿ ಕಾಡುತ್ತೀರಿ? (ಮಣಿಸ. ೭). [ಸಂ. ನಿರಪರಾಧಿನ್]

**ನಿರಪರಾಧಿನಿ** (ನಾ). ತಪ್ಪು ಮಾಡದವಳು; ನಿರ್ದೋಷಿಯಾದವಳು: ನೀನು ಸಹಧರ್ಮಿಣಿ, ಧರ್ಮಶೀಲೆ . . . ಮಕ್ಕಳ ತಾಯಿ; ಪತಿವ್ರತೆ, ನಿರಪರಾಧಿನಿ–ಇಂಥ ಹೆಂಡತಿಯನ್ನು ಕೊಡಲೆ? (ವಚಭಾ.೪೨). [ಸಂ. ನಿರಪರಾಧಿನೀ]

**ನಿರಪವರ್ತನ** (ನಾ). [ಗಣಿತ] ಅಪವರ್ತನಗಳನ್ನು ಹೊಂದಿರದ ಸಂಖ್ಯೆ: ಲಕ್ಷದವರೆಗಿರುವ ನಿರಪವರ್ತನ ಸಂಖ್ಯೆಗಳ ಕೋಷ್ಟಕಗಳು ಇವೆ (ಕವಿಕೋ. I, ೩). [ಸಂ.]

**ನಿರಪವಾದ** (ನಾ). ಕಳಂಕರಹಿತವಾದುದು; ನಿರ್ದೋಷವಾದುದು: ಯೌವನಶ್ರೀಯಂ ನಿರಪವಾದಮನಾರ್ ಕಳೆದಪರವರೆ ಮಹಾತ್ಮರ್ (ಶಾಂತಿಪು. ೪–೭೯ ಪ). [ಸಂ.]

**ನಿರಪಾಯ** (ಗು). ೧. ಅಪಾಯವಿಲ್ಲದ; ನಾಶರಹಿತವಾದ; ಅವಿನಾಶಿಯಾದ. (ನಾ). ೨. ಅಪಾಯವಿಲ್ಲದಿರುವಿಕೆ; ತೊಂದರೆಗಳಿಂದ ದೂರವಾಗಿರುವಿಕೆ; ಸುರಕ್ಷಿತತೆ; ನಿರ್ವಿಘ್ನತೆ: ಸಮುಚಿತನೃಪತುಂಗದೇವಮಾರ್ಗಕ್ರಮ[ಮುಮನ]ಭಿಮುಖರ್ಕಳಪ್ಪ[ರಾ]ಕ್ರಮಸಹಿತಮಗಮ್ಯರೂಪ ಕಾ[ವ್ಯಾ]ಶ್ರಮಮಂ ನಿರಪಾಯ[ದೆ]ಯ್ದುಲಾರ್ಪರ್ (ಕವಿರಾ. ೧–೧೪೭); ನಿರಪಾಯಂ ನಿತ್ಯಮಾತ್ಯಂತಿಕ ಸುಖಮರುಜಂ . . . ಶಿವಮಮೃತಮಯಂ ನಿರ್ವೃತಿಸ್ಥಾನಮುಕ್ಯಂ(ವರ್ಧಮಾ. ೧೫–೩೦). ೩. ಅಪಾಯವಿಲ್ಲದವನು: ಹಾಯೆನುತ ತನ್ನವರು ಭಯದಲಿ ಬಾಯ ಬಿಡೆ ನಿಮಿಷಾರ್ಧದಲಿ ನಿರಪಾಯನೆದ್ದನು ನೋಡಿದನು ಚೇತರಿಸಿ ಕೆಲಬಲನ (ಕುವ್ಯಾಗ. ೭–೧೮); ನಿರಪಾಯಂ ಚಿನ್ಮಯಂ ತಾನೆನಿಪ ಪರಶಿವಂ ನೀನೆ ಕಾರುಣ್ಯದಿಂದಂ ಗುರುರೂಪಂ ತಾಳ್ದು ತೂಳ್ದ್ಯ ಭವಮಂ (ವೃಷವಿ. ೨೭–೧೦). [ಸಂ.]

**ನಿರಪೇಕ್ಷ** (ಗು). ೧. ಅಪೇಕ್ಷೆಯಿಲ್ಲದ; ಅನ್ಯ ಸಹಾಯ ಬೇಕಿಲ್ಲದ; ಸ್ವತಂತ್ರವಾದ: ಅರ್ಥನಿರಪೇಕ್ಷವಾದ ಶಬ್ದಕ್ಕೂ ಧ್ವನನವ್ಯಾಪಾರವುಂಟೆಂದು ಸಿದ್ಧವಾದಂತಾಯಿತು (ಧ್ವನ್ಯಾಲೋ. ೫೦). (ನಾ). ೨. ಅಪೇಕ್ಷೆಯಿಲ್ಲದಿರುವುದು: ಈ ಸ್ಪರ್ಶವನ್ನು ಪಡೆಯಬಲ್ಲ ಹೃದಯವು ವಿಷಯ ನಿರಪೇಕ್ಷವಾದ ಆನಂದದ ಪ್ರತೀಕವಾಗುವುದು (ಪ್ರಬಂಧ.೫೨). ೩. ಅಪೇಕ್ಷೆಯಿಲ್ಲದಿರುವವನು; ಯಾವುದನ್ನೂ ಬಯಸದವನು; ನಿಸ್ಪೃಹನಾದವನು; ವಿರಕ್ತನಾದವನು: ನಿರಪೇಕ್ಷನನೇಕೆರೆವಿರ್ ಪುರುದೇವನನಿನಿತು ಬಯಕೆಯುಳ್ಳೊಡೆ ನಿಮ್ಮಿರ್ವರುಮಂ ಮರುಳಾಗದೆಯಾ ಭರತನನೋಲಗಿಸಿ ಪಡೆಯಿಮಭಿಮತಫಲಮಂ (ಆದಿಪು. ೯–೧೦೪); ಅಮರರಿರ್ವರುಂ ನಿರಪೇಕ್ಷರ್ (ಶಾಂತಿಪು. ೯–೩೮); ಮನಮುಳ್ಳೊಡೆ ಜನಿಯಿಸುವಂ ಮನಸಿಜನಾಯುಷ್ಯಮುಳ್ಳೊಡಂತಕನೆಯ್ತರ್ಪನೆನುತ್ತವನುಟಾದಂತವರ್ಗಿನಿತೆಡೆಗುಡದಿರ್ದ ನೀನೆ ದಲ್ ನಿರಪೇಕ್ಷಾ (ಚಂದ್ರಪು. ೭–೯); ನಿರಪೇಕ್ಷ ನಿಷ್ಕಾಮಿ . . . ನಿರಾಳ ಪಂಪಾವಿರೂಪಾಕ್ಷ ಶರಣು (ಹಶಕಾ. ೧–೪). [ಸಂ.]

**ನಿರಪೇಕ್ಷಕ** (ನಾ). ೧. ಅಪೇಕ್ಷೆಯಿಲ್ಲದುದು: ನಿರಪೇಕ್ಷಕಮೆನಿಸಿಯುಮೇಂ ಪರಿದತ್ತಲೆ ಪರಿವ ಸುತನ ಕಣ್ಪೊಳಪಿಂದಂ ತೆರೆವುಸಗಿದುದರಸಿಯ ಮೋಹರಸಂ(ಪಂರಾಮಾ.೩–೧೭೧).೨. ಅಪೇಕ್ಷೆಯಿಲ್ಲದವನು; ಬಯಸದವನು: ಮೋಕ್ಷದೊಳ್ ನಿರಪೇಕ್ಷಕನುಮಾಗಿ(ಪಂಚತಂ.೨೮–೪); ಪರವನಿತಾನಿರಪೇಕ್ಷಕನೆನಿಸಿದ ದೇವರ ದೇವಂ ಕುಡುಗೆ ಸುವ್ರತಂ ಸುವ್ರತಮಂ (ಯಶೋಚ. ೧–೧). [ಸಂ.]

**ನಿರಪೇಕ್ಷಣೀಯ** (ನಾ). ಬಯಸದುದು; ಬೇಡಾದುದು; ಅಪೇಕ್ಷಣೀಯವಲ್ಲದುದು: ತನ್ನ ತ್ಯಾಗ ನಿರಪೇಕ್ಷಣೀಯವಾದುದೆಂಬಂತೆ ತೋರುತ್ತಿದ್ದ ಆವಳ ಮಾತಿನ ಭಂಗಿ . . . ನೀತಿಗೆಟ್ಟ ಹೆಂಗಸಿನ ಹೂಟಗಳೆಂದು ಅವನು ಯೋಚಿಸಿದ್ದನು (ಪುನರು. ೪೦೪); ಭಾವಗೀತೆಯ ಸಕಲವ್ಯಾಪಾರಗಳೂ ಅನ್ಯವಸ್ತು ನಿರಪೇಕ್ಷಣೀಯವಾಗಿ ಕವಿಯ ಅಂತರಂಗಜಗತ್ತಿನಲ್ಲಿಯೇ ಜನ್ಮ ತಳೆದು . . . ಪರ್ಯವಸಾನ ಹೊಂದುತ್ತವೆಯೇ? (ಭಾವಗೀ. ೬). [ಸಂ.]

**ನಿರಪೇಕ್ಷಭಾವ** (ನಾ). [ಕಾವ್ಯವಿಾ] ಆಲಂಬನವಿಭಾವವನ್ನು ಅಪೇಕ್ಷಿಸದಿರುವುದು; ☞ ಕರುಣರಸದಲ್ಲಿ ಆಲಂಬನ ವಿಭಾವವು ಕಣ್ಣೆದುರಿಗಿರಬೇಕಾದ ಅವಶ್ಯಕತೆ ಇಲ್ಲ: ವಿಪ್ರಲಂಭವು "ಸಾಪೇಕ್ಷಭಾವ"ವೆಂದೂ ಕರುಣವು "ನಿರಪೇಕ್ಷಭಾವ"ವೆಂದೂ ಭರತನು ನಿರೂಪಿಸುತ್ತಾನೆ (ಭಾರವಿಾ. ೪೦೫); ಕರುಣದಲ್ಲಿ ನಿರಪೇಕ್ಷಭಾವ; ವಿಪ್ರಲಂಭ ಶೃಂಗಾರದಲ್ಲಾದರೆ ಸಾಪೇಕ್ಷಭಾವ (ಧ್ವನ್ಯಾಲೋ. ೧೮೯ ಅಡಿಟ). [ನಿರಪೇಕ್ಷ+ಭಾವ$_2$]

**ನಿರಪೇಕ್ಷವಾದ** (ನಾ). [ತತ್ತ್ವಶಾ] ವಸ್ತುವಿನಲ್ಲಿ ಸ್ವಾಭಾವಿಕವಾಗಿಯೇ ಅಡಗಿರುವ ಚೈತನ್ಯವನ್ನು ಎತ್ತಿ ಹಿಡಿಯುವ ವಾದ,—ತತ್ತ್ವಪ್ರತಿಪಾದನೆ: ವಸ್ತುಸ್ವಭಾವಶಕ್ತಿಯಿಂದಲೇ ಸಕಲ ಕೆಲಸಗಳೂ ನಡೆಯುತ್ತವೆಂಬುದು ನಿರಪೇಕ್ಷವಾದವು, ಸ್ವಭಾವವಾದವು. ಪುರುಷಪ್ರಯತ್ನ ಸಂಕಲ್ಪಗಳಿಂದ ನಡೆಯುತ್ತವೆಂಬುದು ಸಾಪೇಕ್ಷವಾದವು (ಹಿಂದಸಾ. ೨೧). [ನಿರಪೇಕ್ಷ+ವಾದ$_2$]

**ನಿರಪೇಕ್ಷಿ** (ನಾ). ಅಪೇಕ್ಷಿಸದುದು; ಬಯಸದುದು: ಸಂಗೀತನಿರಪೇಕ್ಷಿಯಾದ ಭಾವಗೀತೆಗಳಂತೆಯೇ ಸಂಗೀತಸಾಪೇಕ್ಷಿಯಾದ ಭಾವಗೀತೆಗಳು ಇಂದಿಗೂ ರಚಿತವಾಗುತ್ತಿವೆ (ಭಾವಗೀ. ೨೨). [ಸಂ. ನಿರಪೇಕ್ಷಿನ್]

**ನಿರಬಯಲು** 'ನಿರ್ವಯಲು' ನೋ.

**ನಿರಭಿಧಾನ** (ನಾ). ಹೆಸರಿಲ್ಲದವನು: ನಿರಂಗನನಂತವಿನುತನಿರ್ಮಲನಾಮಧೇಯಂ ನಿರಭಿಧಾನನತುಲಗಿರಿವಾಸಂ ಸ್ಮಶಾನನಿಲಯಂ (ಪ್ರೌಢರಾ. ೨–೧). [ಸಂ.]

**ನಿರಭಿಮಾನ** (ನಾ). ಅಭಿಮಾನವಿಲ್ಲದಿರುವಿಕೆ; ಸ್ವಪ್ರತಿಷ್ಠೆಯಿಲ್ಲದಿರುವಿಕೆ; ನಮ್ರಭಾವ: ಕಲಿತ ವಿದ್ಯೆಗೆ ಈ ನಿರಭಿಮಾನವಲ್ಲವೆ ಕಲಶ! (ಶಾಂತಲಾ. ೩೧೬). [ಸಂ.]

**ನಿರಭಿಮಾನಿ** (ನಾ). ಅಭಿಮಾನವಿಲ್ಲದವನು; ಸ್ವಪ್ರತಿಷ್ಠೆಯಿಲ್ಲದವನು; ಅಹಂಕಾರವಿಲ್ಲದವನು: ದೇಹೇಂದ್ರಿಯಗಳಲ್ಲಿ ಅಭಿಮಾನಿಸಿಕೊಂಡು ಪ್ರವರ್ತಿಸುವ ಜೀವನು ನಿರಭಿಮಾನಿ ಪರಮಾತ್ಮನಿಗಿಂತ ತೀರ ಭಿನ್ನವೆಂಬ ಅಂಶ ನಿರ್ವಿವಾದವಾದದ್ದು (ಶಕ್ತಿವಿ. ೧೪). [ಸಂ. ನಿರಭಿಮಾನಿನ್]

**ನಿರಭ್ರ** (ಗು). ೧. ಮೋಡವಿಲ್ಲದ; ನಿರ್ಮಲವಾದ: ಅನಂತಾಕಾಶವು ನಿರಭ್ರ ನೀಲವರ್ಣದಿಂದ ಕಂಗೊಳಿಸುತ್ತಿದೆ (ಬಂಗಾಹೆ. ೧). (ನಾ). ೨. ಮೋಡಗಳಿಲ್ಲದಿರುವಿಕೆ; ನಿರ್ಮಲತೆ: "ಮುಗಿಲ್ಲಿಲ್ಲದಿರವು ನಿರಭ್ರಂ" (ವಸ್ತುಕೋ.೧೧–೬೨). ೩. ಮೋಡಗಳಿಲ್ಲದುದು: ನೆಲದ ಮೇಲೆ ಕುಳಿತಲ್ಲಿಂದ ಅವನ ದೃಷ್ಟಿಯು ಮುಗಿಲೆಡೆಗೆ ಹರಿಯಿತು. ಆಗ ಮುಗಿಲು ನಿರಭ್ರವಾಗಿತ್ತು (ಸಮಜೀ. ೧೭೪); ನಿರಭ್ರವಾದ ಆಕಾಶದಲ್ಲಿ ಮೆರೆಯುವ ಚಂದ್ರ, ನಕ್ಷತ್ರಗಳನ್ನು ನೋಡುತ್ತ ವಾಸುದೇವ ಲೋಕವನ್ನು ಮರೆತ (ಮೂರುದಾ. ೨೦೭). [ಸಂ.]

**ನಿರವಿಸು** (ಕ್ರಿ). ರಚಿಸು; ಕಟ್ಟು: ನಿರವಿಸಿದನ್ನೆ ಮಧುರೆಯೆಂಬ ಪುರಿಯ (ಶ್ರೀರಂಚ. ೩–೨೮). [<ನಿರ್ಮಿಸು]

**ನಿರಯ** (ನಾ). ೧. ನರಕ : "ನಿರಯಂ ಶ್ವಭ್ರಂ ದುರ್ಗತಿ ನರಕಂ" (ವಸ್ತುಕೋ. ೨೦-೧೧) ; ಜರಾಯುಜಾಂಡಜಪೋತಂಗಳ್ ಗರ್ಭಸಂಭವಂ ದೌಃನಿರಯೋದ್ಭೂತಂ (ಸುಕುಮಾ. ೮-೯) ; ಅಜಿಯದೆ ಪೊಟಿಲಂ ಪುಗೆ ಕೆಲರಜಗುಲಿ ಋಷಿಯರ್ಗೆ ಮುನಿದು ತನ್ನಾಜ್ಞೆಗೆ ಬೆಟ್ಕೆಜಿರೆಂದು ಕೊಂದು ಪಾತಕಿ ತೆಜಿದಂ ಪುಗಲೆಂದು ನಿರಯಪುರರೀಪುಟಮಂ (ಪಂರಾಮಾ. ೯-೧೧) ; ನಿರಯಂಗಳ ದುಃಖಂಗಳ ಪರಿಣಾಮಂ ನೆನೆವೊಡಾರ್ಗಮತಿ ಭೀಕರಂ (ನೇಮಿಪು. ೧೩-೬೩) ; ನರರ ಕೀರ್ತಿಸಿದ ಕಥೆಗೇಳಿ ವ್ಯರ್ಥ ನಿರಯಕ್ಕೆಳೆವ ಕೃತಿಯಲ್ಲಿದು (ಪ್ರಭುಪು. ೨-೬); ಅನೇಕ ಸಾವಿರ ವರ್ಷಗಳು ನೀನು ನಿರಯದಲ್ಲಿ ಬೇಯುತ್ತಿದ್ದೆ (ಉದ್ಧಪ. ೧೬೧). ೨. ಸಂತೋಷವಿಲ್ಲದಿರುವಿಕೆ; ದುಃಖ. ೩. ಪಾಪ. [ಸಂ.]

**ನಿರಯಕ್ಷೇತ್ರ** (ನಾ). ನರಕದ ಪ್ರದೇಶ,—ಸೀಮೆ : ಖರಪಂಕಸಲಿಲ ಭಾಗಂ ನಿರಯಕ್ಷೇತ್ರಕ್ಕೆ ಮೂದೆಜಿಂ (ಮಲ್ಲಿಪು. ೧೩-೧೨೮).
[ನಿರಯ + ಕ್ಷೇತ್ರ]

**ನಿರಯಗಾಮಿ** (ನಾ). ನರಕಕ್ಕೆ ಹೋಗುವ ವ್ಯಕ್ತಿ : ದಿವ್ಯಭಾಷೆಯನ್ನು ಪರಿತ್ಯಜಿಸಿ ಯಿತರ ಭಾಷೆಗಳಲ್ಲಿ ರಚಿಸಿದ ಶಾಸ್ತ್ರಂಗಳನು ಕೇಳುವವರೆಲ್ಲರೂ ನಿರಯಗಾಮಿಯಾಗುವರು (ಶೀಷಧ. ೧೬-೨೦).
[ಸಂ. ನಿರಯಗಾಮಿನ್]

**ನಿರಯಜ** (ನಾ). ನರಕದಲ್ಲಿ ಹುಟ್ಟಿದವನು ; ನಾರಕಿ : ಕರಾಲನಕ್ರಚಕ್ರಚರ್ವಿತೋದ್ಗೀರ್ಣವಿಶೀರ್ಣ ನಿರಯಜನಿಕುರುಂಬಶಲ್ಯಶಕಲಪರಿಪೂರಿತ ಧವಲಪ್ಲವ ದುರ್ನಿರೀಕ್ಷ್ಯವಿಷಮೆಯುಂ . . . ವೈತರಣಿಯುಂ ಪೊಕ್ಕಾಗಳ್ (ಆದಿಪು. ೫-೮೭ ಪ) ; ತಲ್ಲಟಿಸಿ ತಳಮಳಗುತ್ತು ಪೆಳ್ಪಳಿಸಿ ದೆಸೆದೆಸೆಗೆ ಬಿಜುವರಿವರಿದನಂ ಪುರಾತನ ನಿರಯಜ[ರ್ಕ]ಳ್ ಕ[ಂ]ಡು (ವರ್ಧಮಾ. ೫-೨೮ ಪ). [ಸಂ.]

**ನಿರಯನ** (ನಾ). [ಜ್ಯೋತಿ] ಗ್ರಹಗಳ ಸ್ಥಾನವನ್ನು ನಿರ್ದೇಶಿಸುವಾಗ ಅಯನದ ಗತಿಯನ್ನು ಗಮನಿಸದಿರುವಿಕೆ,—ಅಯನದ ಗತಿಯನ್ನು ಅನುಸರಿಸದಿರುವುದು : 'ನಿರಯನಪದ್ಧತಿ' ಪರಾ.
[ಸಂ.]

**ನಿರಯನಪದ್ಧತಿ** (ನಾ). [ಜ್ಯೋತಿ] ಅಯನದ ಗತಿಯನ್ನು ಅನುಸರಿಸದೆ ಮಾಡುವ ಗಣನೆಯ ಕ್ರಮ,—ರೀತಿ ; ಅಯನಾಂಶವನ್ನು ಬಿಟ್ಟು ಲೆಕ್ಕ ಮಾಡುವ ಪದ್ಧತಿ: ಇದಕ್ಕೆ ಪ್ರತಿಯಾಗಿ ರೇಖಾಂಶಗಳನ್ನು ಒಂದು ಸ್ಥಿರಬಿಂದುವಿನಿಂದ ಅಳೆಯುವ ಭಾರತೀಯ ಪದ್ಧತಿಯು ನಿರಯನಪದ್ಧತಿ (ನಕ್ಷತ್ರ. ೬೫). [ನಿರಯನ + ಪದ್ಧತಿ]

**ನಿರಯನಸೌರವರ್ಷ** (ನಾ). ನಿರಯನಪದ್ಧತಿಯಿಂದ ಗಣಿಸುವ ಸೌರವರ್ಷ : ನಿರಯನಪದ್ಧತಿಯಂತೆ ಸೂರ್ಯನು ರೇವತೀತಾರೆಯಿಂದ ಹೊರಟು ಪುನಃ ರೇವತೀತಾರೆಯನ್ನು ಸೇರುವ ಕಾಲವನ್ನು ಸೌರವರ್ಷವೆಂದು ಕರೆಯುತ್ತೇವೆ . . . ನಿರಯನಸೌರವರ್ಷವು ಸಾಯನಸೌರವರ್ಷಕ್ಕಿಂತ ೨೦ ನಿ. ೨೬ ಸೆ. ದೊಡ್ಡದು (ನಕ್ಷತ್ರ. ೬೫). [ನಿರಯನ + ಸೌರವರ್ಷ]

**ನಿರಯನಿಳಯ** (ನಾ). = ನಿರಯಕ್ಷೇತ್ರ : ನಿರಯನಿಳಯದಂತೆ ಪತಿತಾಸಿಪತ್ರಭೀಷಣಪ್ರದೇಶಮುಂ . . . ಅಪ್ಪ ಸಂಗ್ರಾಮಭೂಮಿಯಂ ಪೊಜಮಟ್ಟು (ಚಂದ್ರಪ್ರ. ೧೦-೧೦೫ ಪ) ; ಮಾತಿದು ವಾಯವಾದಡೆ ನಿರಯನಿಳಯದ ಯಾಯಿಗಳ ಗತಿಯಾಗಲೆಂದನು ನೀಡಿ ನಂಬುಗೆಯ (ತೊರರಾ. ೪-೩-೨೮). [ನಿರಯ + ನಿಳಯ( = ನಿಲಯ)]

**ನಿರಯಭವ** (ನಾ). ನರಕದಲ್ಲಿ ಹುಟ್ಟಿದವನು : ನಿರಯಭವರ್ಕಳ್ಗೆ ನಿರಂತರಮೊಂದುಂ ಕುಂದದೊಂದೆ ಮಾಟಿಕ್ಕೆಯೊಳಾತಂ ದೊರೆಕೊಳ್ಳುಮ ಶುಭಲೇಶ್ಯಾಪರಿಣಾಮ ಶರೀರವೇದನಾದಿಕ್ರಿಯೆಗಳ್ (ವರ್ಧಮಾ. ೧೫-೮).
[ಸಂ.]

**ನಿರಯಯಾತನೆ** (ನಾ). ನರಕದ ಬಾಧೆ ; ನರಕಯಾತನೆ : ನಿರಯಯಾತನೆಗಳಿಂದೆ ಮೇಣೊಗುವಿಂಗೆಯ ದುರ್ನೀತಿ . . . ಬಲ್ಕುನಿಸು ಹಾನಿಗಳುದಿಸಿದುವು (ಚೆಬಪು. ೧೪-೨೪). [ನಿರಯ + ಯಾತನೆ]

**ನಿರಯವಾಸ** (ನಾ). ನರಕಲೋಕದಲ್ಲಿ ವಾಸಿಸುವುದು ; ನರಕವಾಸ : ರಾವಣನುಂ ಲಕ್ಷ್ಮಣನುಂ ನಿರಯವಾಸದಿಂ ಪೊಜಮಟ್ಟು ಬಂದು (ಪಂರಾಮಾ. ೧೬-೭೨ ಪ). [ನಿರಯ + ವಾಸ$_2$]

**ನಿರರುತಿ** 'ನಿರುತಿ' ನೋ.

**ನಿರರ್ಗಲ,** ನಿರರ್ಗಳ (ಗು). ೧. ತಡೆಯಿಲ್ಲದ ; ಸರಾಗವಾದ : ಮೆಜಿದು ಕ್ಷೋಣಿಯೊಳು ಪೆಸರ್ವೆತ್ತ ಘನಕಲ್ಯಾಣದೊಳು ನಿತ್ಯಪ್ರಥಿತ ಕಲ್ಯಾಣಭಕ್ತಿನಿರರ್ಗಲಾ [ಪಾಠಾಂ. ಳಾ] ಲೌಲ್ಯಾಲಸತ್ವದಲಿ (ಬಸಪು. ೫೭-೧೦೦). **ನಿರರ್ಗಳ :** (ನಾ). ೨. ತಡೆಯಿಲ್ಲದುದು ; ಅಡ್ಡಿಯಿಲ್ಲದಿರುವುದು ; ಉಚ್ಛೃಂಖಲತೆ : "ಉದ್ಧುರಮುದ್ಭಟಮುನ್ಮುಖಮುದ್ಧತಮುಚ್ಛೃಂಖಲಂ ನಿರರ್ಗಳಮುಕ್ಕುಂ" (ವಸ್ತುಕೋ. ೧೦೭-೫೪). ೩. ಕಟ್ಟುಗಳಿಗೆ ಒಳಪಡದವನು ; ಸ್ವತಂತ್ರನಾದವನು: ಶ್ರೀಮದ್ಭರ್ಗ ನಿರರ್ಗಳಸೋಮಜಗನ್ನೇತ್ರ ವೀತಿಹೋತ್ರಾಂಬಕ . . . ಪಾಲಿಪುದೆನ್ನಂ (ಹಮ್ಮಿರ. ೭-೧).

ನಿರರ್ಗಳವಾಗಿ = ತಡೆಯಿಲ್ಲದೆ ; ಸರಾಗವಾಗಿ : ಅವನು . . . ನಿಂತು ನಿರರ್ಗಳವಾಗಿ ಮಾತನಾಡಿದನು (ಸಮಜೀ. ೧೫೫) ; ನನ್ನ ಲೇಖನಿಗೆ ವಿರಾಮವನ್ನು ಕೊಡದೆ ನಿರರ್ಗಳವಾಗಿ ಕಾವ್ಯವನ್ನು ಹೇಳುವುದಾದರೆ ಮಾತ್ರ ನಾನು ಬರೆಯುತ್ತೇನೆ (ಭಾರದ. ೯೬) ; ನಿರರ್ಗಳವಾಗಿ ಇವನು ಹತ್ತು ಹನ್ನೆರಡು ಭಾಷೆಗಳಲ್ಲಿ ಮಾತಾಡಬಲ್ಲ (ಭಾರತಿ. ೨೭). [ಸಂ.]

**ನಿರರ್ಗಳ** 'ನಿರರ್ಗಲ' ನೋ.

**ನಿರರ್ಗಳಿತ** (ಗು). = ನಿರರ್ಗಲ ೧ : ಗೆಲವಿನ ಸುಗ್ಗಿಗಿದೆ ಮಳೆಗಾಲವೆನುತ ನಿರರ್ಗಳಿತಭುಜಶೌರ್ಯ ಸುರಿದನು ಸರಳ ಸರಿವಳೆಯ (ಕುವ್ಯಾಕ. ೨೦-೭). [ಸಂ. ನಿರರ್ಗಲಿತ]

**ನಿರರ್ಗಳೆ** (ನಾ). (?) : ಇಂತಾಪ್ತಾಗಮ ತಪಸ್ವಿಗಳ ನಿರರ್ಗಳೆಯೆಂದು ನಂಬಿ ಕಬ್ಬುನವುಂಡ ನೀರವೋಲ್ಪೊಜಪೊಣ್ಮದಿಪ್ಪುದು ನಿಶ್ಶಂಕೆ (ರತ್ನಕ. ೧-೭ ಪ). [ ? ]

**ನಿರರ್ಥ$_1$** (ಗು). ೧. ಪ್ರಯೋಜನವಿಲ್ಲದ ; ಉಪಯೋಗವಿಲ್ಲದ ; ವ್ಯರ್ಥವಾದ : ಮನೆಯೆಂದುಂ ಮಕ್ಕಳೆಂದುಂ . . . ಸಕಲವಿಷಯವಿಂತೆನ್ನದೆಂದುಂ ನಿರರ್ಥಾರ್ಥನಿಮಿತ್ತಂ ಬೆಂದು ತಾಪತ್ರಯದೊಳೆ ಕುದಿದೆಂ (ರಕ್ಷಾಶ. ೨೨). (ನಾ). ೨. ಪ್ರಯೋಜನವಿಲ್ಲದುದು ; ವ್ಯರ್ಥವಾದುದು : "ವೃಥೆ ನಿಷ್ಫಲಂ ಮೋಘಮೆನಲದು ನಿರರ್ಥಕ್ಕೆ ನಾಮಂ" (ಮಂಗರಾ. ೧೩೬-೩೦) ; ಕ್ರಿಯಾವಾಚಕಮಾಗಿ ಸಲ್ಲದುದು, ಸಪ್ತವಿಭಕ್ತಿಗಳನಿಲ್ಲದುದು, ನಿರರ್ಥಮಾಗಿ ಸಲ್ಲದುದು ಲಿಂಗಮೆನಿಸುಗುಂ (ಶಮದ. ೭೨ ವೃತ್ತಿ) ; ರಾಯತನಮೆಮಗಿಂದ್ರಲೋಕದ ಲಾಯದಲಿ ದಿಟವೆಂದು ನುಡಿವರು ಜೋಯಿಸರು ಸಾಕವರ ವಚನ ನಿರರ್ಥವಲ್ಲೆಂದ (ಕುಸ್ವ್ಯಾಸ. ೧೨-೪೫).
[ಸಂ.]

**ನಿರರ್ಥ$_2$** (ಅ). ಸುಮ್ಮನೆ ; ವೃಥಾ ; ವ್ಯರ್ಥವಾಗಿ : ಹೇಸಿದೈವಂಗಳ ಬೇಡಿ ಬೇಡಿ ನಿರರ್ಥ[ಪಾಠಾಂ. ನಿರರ್ಥಕ] ಕೆಡಬೇಡ (ಜಸಪ. ೫೫೬) ; ನಳಿನನಾಭನ ಕೂಡೆ ವೈರವ ಬೆಳಸಿ ಕೆಟ್ಟೆ ನಿರರ್ಥ (ತೊರರಾ. ೬-೨-೩೬).
[< ಸಂ. ನಿರರ್ಥಂ]

**ನಿರರ್ಥಕ** (ಗು). = ನಿರರ್ಥ$_1$ ೧ : ತಾವು ತಮ್ಮಯ ಹೆಚ್ಚು ಕುಂದಿನ ಜೀವಕಳೆಯಜಿಯದ ನಿರರ್ಥಕ ಜೀವಿಗಳು (ಕುವ್ಯಾಕ. ೯-೧೭) ; ಇಂತಹ ನಿರರ್ಥಕ ವಿಚಾರಗಳಿಗೆ ಕೈ ಹಾಕದಿರುವುದೇ ಶ್ರೇಯಸ್ಕರ (ಜೀಮಾತ್ಮ. ೬). (ನಾ). ೨. ವ್ಯರ್ಥವಾದುದು ; ಪ್ರಯೋಜನವಿಲ್ಲದುದು :

"ಅಂತರ್ಗತಂ ನಿರರ್ಥಕಮಪ್ರಯೋಜನಂ" (ಮಂಗರಾ. ೧೩೫-೩೭) ; ನೀರಜಾವಲಿಯು ಚೆಲ್ವು ನಿರರ್ಥಕವಾಗದು (ಆದಿಪು.೪-೯೩); ಪಿತೃ ಮಾತೃ ಗುರು ದ್ವಿಜದೇವಪೂಜೆಯಿಂ ಕಾಲವಿದೆಯ್ದೆ ಸಲ್ಲದನ ಬಾಳ್ಕೆ ನಿರರ್ಥಕ ಮಲ್ತೆ ಲೋಕದೊಳ್ (ಜಗವಿ. ೬-೯೩) ; ಗುರುಗಳಲಿ ನಂಬುಗೆ ನಿರರ್ಥಕ ವಾಯ್ತೆನುತ ಕುರುರಾಯ ಬಿಸುಸುಯ್ದ (ಕುಮ್ಯಾದ್ರೋ. ೪-೫); ನಿರರ್ಥಕ ವಾದ ಕೆಲಸಕ್ಕೆ ಸ್ವಾರ್ಥ ಪಡೋದ್ಯಾಕೆ? (ಗಾದೆ). **೩.** ಕೆಲಸಕ್ಕೆ ಬಾರದ ವನು ; ಅಯೋಗ್ಯನಾದವನು : ಪಾರ್ಥ ಭೀಮರ ಮಱೆಯೊಳಿರ್ದು ನಿರರ್ಥಕರನಿಱಿದಿಱಿದು ಜಯವ ಸಮರ್ಥಿಸುವೆ ಫಡ ಹೋಗೆನುತ ತೆಗೆದೆಚ್ಚನಾ ಶಕುನಿ(ಕುಮ್ಯಾಗ. ೨-೨೭). **೪.** [ಕಾವ್ಯಮಿ]ಪದದೋಷ ಗಳಲ್ಲಿ ಒಂದು ; ಽ ಪದ್ಯದಲ್ಲಿ ಅರ್ಥ ಪರಿಪೋಷಣವೇನೂ ಇಲ್ಲದಿ ದ್ದರೂ ಪ್ರಾಸಕ್ಕಾಗಿ ಅಥವಾ ಪಾದಪೂರಣಕ್ಕಾಗಿ ಹಾಕುವ ಪದ. ಉದಾಹರಣೆಗೆ ಮೇಣ್, ನೆರೆ ಇತ್ಯಾದಿ : ನಿರರ್ಥಕ- ಪಾದಪೂರಣಕ್ಕೆ ಮಾತ್ರ ಹಾಕಿರುವುದು (ಕೈಪಿಡಿ. ೨೨೭). [ಸಂ.]

**ನಿರರ್ಥಕಂ** (ಅ). ವ್ಯರ್ಥವಾಗಿ; ವೃಥಾ: ನಿರ್ದೋಷಿಗಳಂ ನಿರರ್ಥಕಮಾ ಪಾತಕಂ ಕೊಂದನೆಂದು ತನ್ನಂತರಂಗದಲ್ಲಿ ಸೈರಿಸಲಾಱದೆ (ಪಡ್ಮಾರಾ. ೧೭೮-೧೦). [ಸಂ.]

**ನಿರರ್ಥಕರ** (ನಾ). ಅರ್ಥವಿಲ್ಲದುದು : ಪ್ರಸಿದ್ಧಾಭಿಧಾನಮಂ ಪಡೆದ ಪದಾರ್ಥಮಂ ಶಾಶ್ವತಮೆಂಬುದನುಕ್ತಸಿದ್ಧಮಲ್ಲದಂದಭಿಧಾನಂ ನಿರರ್ಥಕ ರಮುಮಾಧಾರರಹಿತಮುಮಕ್ಕುಮೆಂದುಮಿಲ್ಲದ ಪದಾರ್ಥಕ್ಕಭಿಧಾನಮು ನಿಡುವ ಮರುಳಾವೊಂ (ಶಾಂತಿಪು. ೮-೧೩೮ ಪ). [ಸಂ.]

**ನಿರಲಂಕಾರ,** ನಿರಳಂಕಾರ (ನಾ). ಅಲಂಕಾರ ರಹಿತವಾಗಿರುವಿಕೆ; ಆಭರಣವಿಲ್ಲದಿರುವಿಕೆ ; ಚೆಲುವು ತರುವ ಸಾಧನಗಳನ್ನು ಹೊಂದದಿರುವಿಕೆ ; ಸ್ವಭಾವ ಸೌಂದರ್ಯ : ನಿರಲಂಕಾರ ನಿಕಾಮ ಮಾಕೃತಿ ತದಾಕಾರಂಬೊಲಸ್ಮತ್ಪ್ರಿಯಾಧರದಂದಕ್ಷತಕೋಮಲಂ ಕಿಸಲ ಯಂ (ಲೀಲಾಪ. ೧೪-೯೨). **ನಿರಳಂಕಾರ :** ನಿರಳಂಕಾರ ವಿರಾಜಮಾನ ಜಿನನಂಗಶ್ರೀಯು ಸಂಸಂಗದಿಂ ಪಿರಿದುಂ ಶೋಭೆಗೆ ಸಂದುವಂದು ಶಚಿ ತಂದಾನಂದದಿಂದಿಕ್ಕಿದಾಭರಣಂಗಳ್ (ಪರ್ಶಪು. ೧೪-೪೪). [ಸಂ.]

**ನಿರಲಸ** (ಗು). **೧.** ಆಲಸ್ಯವಿಲ್ಲದ ; ಚಟುವಟಿಕೆಯ : ಶಕ್ತಿಯನ್ನು ಮೀರಿ ಹೋಗುವುದು ಎಷ್ಟು ನಿರಲಸ ಪ್ರಯತ್ನದ ಮತ್ತು ಬಲದ ಕೆಲಸ (ನಿಬಂಧ. II, ೩೭೯). (ನಾ). **೨.** ನಿರಾಯಾಸ ; ಚಟುವಟಿಕೆ : ಜ್ಞಾನೇಶ್ವರಿಯಲ್ಲಿ ಉಗಮ ಹೊಂದಿದ ಭಕ್ತ್ಯೋದ್ಧಾರ ತರಂಗಿಣಿಯು . . . ಈ ನಿರ್ಮಲೀಕರಣವನ್ನು ನಿರಲಸವಾಗಿ ಇಂದಿಗೂ ಮಾಡುತ್ತಿದೆ (ಮಸಾಹಿ. ೧೫). **೩.** (ಆಲಂ) ಆಲಸ್ಯ ; ಜಡತೆ : ಅವನು ತನ್ನ ಹೊದ್ದ ದೋತರವನ್ನು ಗೂಟಕಿಕ್ಕಿ, ಲೋಡಿಗೆ ಆತು, ಕಾಲು ಚಾಚಿ ದನು. ಕಾಲಲ್ಲಿ ಮಲೆತು ನಿಂತ ನಿರಲಸವು ಪ್ರಸರಣ ಹೊಂದಿತು (ರಕ್ತಧ್ವ. ೨೬೩). [ಸಂ.]

**ನಿರವ** (ನಾ). ತಿಳಿಸುವಿಕೆ ; ನಿರೂಪ : "ನಿರವ-ನಿರೂಪ = ತಿಳಿಸುವಿಕೆ" (ತದ್ಭಕೋ. ೨೨) ; ಕೆಳೆಯಂ ಬಂದನೆನಲ್ಕಾಗಳೆ ಮುದಮಂ ತಳೆದು ತನ್ನ ನಿರವಱಪಲ್ಕಾ ಬಳಮಂ ಬಿಡಿಸುವ ಬಗೆಯಿಂ ಘಳಿಲನೆ ನೃಪಕಂತು ಮುನಿಪನಂ ಬೀೞ್ಕೊಂಡಂ (ಕುಸುಮಾ. ೧೫-೭೦) ; ನಿರೂಪ-ನಿರವ, ಪ್ರಸಾಧನ-ಹಸದನ, ಉತ್ತರೀಯ-ಉತ್ತರಿಗೆ (ಶಬ್ದಾಸು. ೧೬೦ ಪ್ರಯೋ). [<ಸಂ. ನಿರೂಪ]

**ನಿರವಗ್ರಹ**(ನಾ). **೧.** ನಿರ್ಬಂಧಕ್ಕೆ ಸಿಲುಕಿದವನು; ತನ್ನ ಇಚ್ಛೆಯಂತೆ ನಡೆಯುವವನು ; ಸ್ವಚ್ಛಂದ ಪ್ರವೃತ್ತಿಯವನು; ಸರ್ವಸ್ವತಂತ್ರ ನಾದವನು : "ಯಥಾಕಾಮಿ, ಸ್ವರುಚಿಃ, ಸ್ವಚ್ಛಂದಃ, ನಿರವಗ್ರಹಃ —ಈಳ ತನ್ನಿಚ್ಛೆಕಾಱಂ" (ಹಲಾಯು. ೬೨-೨೨೪); "ಸ್ವರುಚಿ ನಿರವಗ್ರಹಂ ಸ್ವಚ್ಛಂದನೆಂದೆನಲ್ ತನ್ನಿಚ್ಛೆಗಾಱನಕ್ಕುಂ" (ಮಂಗರಾ. ೬೮-೯) ; ನಿರವ ಯವ ನಿರ್ಲೇಪ ನಿರವಗ್ರಹ ನಿರಾಧಾರ . . . ಕರುಣಿಸುವುದೆಂದ (ಕುಮ್ಯಾಅ. ೬-೪೯). **೨.** ಅಡ್ಡಿ ಇಲ್ಲದುದು ; ನಿರಾತಂಕವಾದುದು : ನಿರವಗ್ರಹಮಕ್ಕೆ ವಿಯಚ್ಚರೇಂದ್ರನಂದನೆಯೊಳೀ ಕುಮಾರಂಗೆ ಶುಭೋ ತ್ಕರವಿಧಿಪರಿಗ್ರಹಂ ತಾಂ ಕರಗ್ರಹಂ ಸಕಳದೇವತಾನುಗ್ರಹದಿಂ(ಪರ್ಶಪು. ೩-೬೭). [ಸಂ.]

**ನಿರವದ್ಯ** (ಗು). **೧.** ದೋಷರಹಿತವಾದ ; ಕಳಂಕವಿಲ್ಲದ : ಮಾನೋನ್ನತ ನಿರವದ್ಯ ಕುಲೀನ ಮಹಾಪುರುಷ ಪರಧನಂಗಳ ದತ್ತಾದಾನಂ ಗಳ್ ನಿನಗಾಗವಮಾನುಷಮಾ ರೂಪಿದಕ್ಕುಮರಿಯರ ಪೆಂಡಿರ್ (ಶಾಂತಿಪು. ೩-೭೭) ; ನೀವೀ ನಿರವದ್ಯರೂಪಿನೊಳಿಂತು ನೆಗೞಲಾಗದೆಂದು ವನದೇವತೆ ಗಳು ಜಡಿದೊಡಂಜಿ . . . ತ್ರಿದಂಡಿಗಳುಮಪ್ಪ ಪರಿವ್ರಾಜಕರುಮಾಗಿ (ಚಾವುಂಪು. ೩೮) ; ನಿರವದ್ಯನಿಖಿಲವಿದ್ಯಾತರಂಗಿಣೀಸಂಗದಲ್ಲಿ ತೋಱುವ ಸುೞಿಯಂತಿರೆ ಸುರುಳ್ದು ಮುನಿಕುಮಾರನ ಸುರುಚಿರಗಂಭೀರನಾಭಿ ಮಂಡಲಮೆಸೆಗುಂ (ಕಾದಂಪೂ. ೭೩೭). (ನಾ). **೨.** ಕಳಂಕವಿಲ್ಲ ದುದು ; ಶ್ರೇಷ್ಠವಾದುದು ; ಉತ್ತಮವಾದುದು : ಪದ್ಯಂಗಳ್ ನವರಸನಿರವದ್ಯಂಗಳ್ . . . ಮೆಱೆಯುತಿರ್ಪುವೀ ಸತ್ಕೃತಿಯೊಳ್ (ಗಿರಿಕ. ೧-೧೩) ; ನಿರವದ್ಯಂಗಳೆನಿಪ್ಪನೇಕವಿಧ ಪೂಜಾದ್ರವ್ಯ ಸಂಪೂರ್ಣ ಭಾಸು ರಮಂ ಭಾಜನರಾಜಿಯಂ ತಳೆದ ನಾನಾವಾರನಾರೀಜನಂ ಬರೆ (ಮಹಾನೀ. ೧-೧೦೦) ; ನಿರವದ್ಯಂ ನಿಜಮುಕಾರದೆಡೆಗಂ ವತ್ವಂ (ಶಮದ. ೧೦೪). **೩.** ಪರಮಾತ್ಮ : ಜಯ ಜಯ ವಾಸುಪೂಜ್ಯ ಸುರಪೂಜ್ಯ ಜಿನೇಶ್ವರ ವೀತರಾಗ ನಿರ್ಭಯ ನಿರವದ್ಯ (ಸುಕುಮಾ. ೪-೪೮) ; ನಿರವ[ಪಾಠಾಂ. ವಂ, ವೇ]ದ್ಯ ನಿರ್ಭಿನ್ನ . . . ನಿರ್ಮಳ ನಿರಾಳ ಪಂಪಾವಿರೂಪಾಕ್ಷ ಶರಣು (ಪಚಕಾ. ೧-೪); ಅಂತರ್ಯಾಮಿ ಮೊದಲಾದ ಈಶ್ವರತ್ರಯಕ್ಕೆ ಅಧಿಷ್ಠಾತೃ . . . ನಿರವದ್ಯ . . . ಎಂಬಿವು ಮೊದಲಾದವೇ ಅದ್ವೈತಬ್ರಹ್ಮಪರ್ಯಾಯ ನಾಮಂಗಳಕ್ಕುಂ(ವಿವೇಕ.೨೭); ನಿರವದ್ಯಂ ನಿಗಮಾಂತವೇದ್ಯನತುಳಂ . . . ಪೊರೆಗೆಮ್ಮಂ ಸುಂದರಾಧೀಶ್ವರಂ (ಹಾಲಾಸ್ಯ. ೨-೧೩-೪೪). **೪.** ಕಳಂಕ ವಿಲ್ಲದವನು ; ಶ್ರೇಷ್ಠ : ಉದಿತಶ್ರೀಕಟ್ವಪ್ಪಿನುಳ್ಳೆ ರಷಿಗಿರಿಸಿಲೆ ಮೇಲ್ನೋನ್ತು ತನ್ದೇಹಮಿಕ್ಕಿ ನಿರವದ್ಯನ್ನೇಱಿ ಸ್ವರ್ಗ್ಗಂ ಶಿವನಿಲೆ ಪಡೆದಾನ್ (ಎಕ. II, ೮೪-೨ ; ಸು. 700) ; ನಿರವದ್ಯರ್ ನಿರಘರ್ ನಿರುತ್ತರಸುಖರ್ . . . ಮೆಱೆವುದೀ ಹಾಲಾಸ್ಯ ಚಾರಿತ್ರಮಂ (ಹಾಲಾಸ್ಯ. ೪-೧೭-೧೨೭).

**ನಿರವದ್ಯವಿದ್ಯಾಧರ** = ಶ್ರೇಷ್ಠವಾದ ವಿದ್ಯೆಗಳನ್ನು ತಿಳಿದವನು : ಚಂದ್ರಿಕಾಶ್ರೀವಿಲಾಸದೊಳ್ ನಿರವದ್ಯವಿದ್ಯಾಧರನಜಿತನಾಥಂ ವಿದ್ಯಾಧರ ರೋಲಗಂಗೊಟ್ಟಿರ್ದು ದಿಗವಲೋಕನಂಗೆಯ್ದಂ (ಅಜಿಪು. ೬-೪೫ ಪ). [ಸಂ.]

**ನಿರವದ್ಯಚರಿತ** (ನಾ). ಪರಮಾತ್ಮ ; ನಿರವದ್ಯ : ನಿರವದ್ಯಚರಿತಂಗೆ ನರಬಾಣವರದಂಗೆ . . . ಶುಭಮುಸ್ತು ಶೋಭನಂ (ಹಾಲಾಸ್ಯ. ೧-೬-೪೧). [ನಿರವದ್ಯ + ಚರಿತ]

**ನಿರವದ್ಯಚರಿತ್ರ** (ನಾ). ತಪ್ಪಿಲ್ಲದ ನಡವಳಿಕೆಯುಳ್ಳವನು ; ನಿಷ್ಕಳಂಕವಾದ ಶೀಲವುಳ್ಳವನು ; ಶುದ್ಧಚಾರಿತ್ರ್ಯವುಳ್ಳವನು: ಸಿಂಗದ ಮಱಿಗಳ್ ಶರಭದ ಕೆಲದೊಳ್ ನಲಿದುವು ನಿರವದ್ಯಚರಿತ್ರನಿರ್ದ ಋಷ್ಯಾಶ್ರಮದೊಳ್ (ಮಲ್ಲಿಪು. ೧೪-೧೮). [ನಿರವದ್ಯ + ಚರಿತ್ರ]

**ನಿರವದ್ಯಮಾರ್ಗ** (ನಾ). ಶ್ರೇಷ್ಠವಾದ ಮಾರ್ಗ,— ಹಾದಿ ; ಉನ್ನತವಾದ ಪಥ : ನಿರವದ್ಯಮಾರ್ಗದೊಳಿರ್ಪ ಭವ್ಯಜನಂಗಳ ಶೀಲದ ಮಹಿಮೆಯಂ ಬಣ್ಣಿಸಲ್ ಬಲ್ಲನಾವಂ (ಪುಣ್ಯಾಸ್ರ. ೭-೨೮ ಪ). [ನಿರವದ್ಯ + ಮಾರ್ಗ]

**ನಿರವದ್ಯವಿದ್ಯೆ** (ನಾ). ದೋಷರಹಿತವಾದ ವಿದ್ಯೆ ; ಉತ್ತಮವಾದ ವಿದ್ಯೆ : ಮುನಿಸಾಗರಗಿರಿಯೊಳ್ ಮತ್ತನುಜೆಯೆ ನಿರವದ್ಯವಿದ್ಯೆಯಂ ಸಾಧಿಸೆ (ಶಾಂತಿಪು. ೯-೫). [ನಿರವದ್ಯ + ವಿದ್ಯೆ]

**ನಿರವದ್ಯವೃತ್ತ** (ನಾ). = ನಿರವದ್ಯಚರಿತ್ರ : ಮಣಿದೀಪದಿನುದ್ಧ ಧೂಪದಿಂ ಫಳಕುಳದಿಂ ಧರಾಧಿಪತಿ ಪೂಜಿಸಿದಂ ನಿರವದ್ಯವೃತ್ತನಂ (ಚಂದ್ರಪು. ೧೪-೯). [ನಿರವದ್ಯ + ವೃತ್ತ]

**ನಿರವದ್ಯಾಚಾರ** (ನಾ). ದೋಷರಹಿತವಾದ ಆಚರಣೆಯುಳ್ಳವನು ; ಸಚ್ಚಾರಿತ್ರನಾದವನು ; ಆಚಾರಶೀಲ : ನಿಜಯಶಂ ಸಜ್ಜನಾಧಾರನಾದಂ ನಿರವದ್ಯಾಚಾರನಾದಂ ಚತುರಕವಿಜನಾಸ್ಥಾನಂ ರತ್ನಪ್ರದೀಪಂ (ಮಲ್ಲಿಪು. ೪-೧೫೨). [ನಿರವದ್ಯ + ಆಚಾರ]

**ನಿರವದ್ಯಾನ್ವಯ** (ನಾ). ದೋಷರಹಿತವಾದ ವಂಶ ; ನಿಷ್ಕಲಂಕವಾದ ವಂಶ : ನಿರವದ್ಯಾನ್ವಯ[ಮು]ದ್ಧಮುದ್ಧತಮ[ಹಾಕ್ಷೀ]ರಾಬ್ಧಿ ಡಿಂಡೀರಪಾಂಡುರಂ . . . ಸ್ತ್ರೀಬಾಲವೃದ್ಧಾಹಿತಂ ಪರಮಾನಂದಿತ ಲೋಕಮೊಪ್ಪೆ ನೆಲೆಗೊಳ್ಗಾಚಂದ್ರತಾರಂಬರಂ (ಕವಿಜಿ. ೩-೨೩೧). [ನಿರವದ್ಯ + ಅನ್ವಯ]

**ನಿರವದ್ಯಾಹಾರ** (ನಾ). ಶ್ರೇಷ್ಠವಾದ ಆಹಾರ : ಪರಮತಪಶ್ಚರಣ ನಿರತ ಯತಿಸಮಿತಿಗೆಲ್ಲಂ ಪ್ರತಿಗ್ರಹಾದಿಪುರಸ್ಸರಂ ನಿರವದ್ಯಾಹಾರಾದಿ ವಿತರಣರೂಪಪಾತ್ರದತ್ತಿಯುಂ . . . ಬೆರಸಾರ್ಯಷಟ್ಕರ್ಮಂಗಳಂ ನಿಮಗಿವು ಕುಲಾಚಾರಂಗಳೆಂದಱಿಯೆ ಪೇೞ್ದು (ಆದಿಪು. ೧೫-೧೩ ವ) ; ವಿಧಿಪೂರ್ವಕಂ ನಿರವದ್ಯಾಹಾರಮಂ ಕುಡುವುದುಮವರ್ . . . ಕೈಯೆತ್ತಿ ಕೊಂಡಕ್ಷಯಂ ದಾನಮೆಂಬುದುಂ (ಪಂರಾಮಾ. ೯-೧ವ). [ನಿರವದ್ಯ + ಆಹಾರ]

**ನಿರವದ್ಯೆ** (ನಾ). ಕಳಂಕರಹಿತೆ ; ನಿರ್ದೋಷಿ : ನಿತ್ಯೆ ನಿರವದ್ಯೆ ಶರ್ವಾಣಿ ಶಾಂಭವಿ . . . ಷಡೂರ್ಮ್ಯುದ್ಭವನ ರಾಣಿ (ಉದ್ಭವೇ. ೪-೪). [ಸಂ. ನಿರವದ್ಯಾ]

**ನಿರವಧಿ** (ಗು). ೧. ಎಲ್ಲೆಯಿಲ್ಲದ ; ಸೀಮೆಯಿಲ್ಲದ ; ನಿಸ್ಸೀಮವಾದ : ಇತ್ತ ಬಲದೇವನುಂ ಪುರುಷೋತ್ತಮನುಮನೇಕವತ್ಸರಂ . . . ನಿರವಧಿಸಂಪತ್ತಿಗೆ ನೆಲೆಯೆನಿಸಿ ನಾಡೆ ನಲಿಯುತ್ತಿರ್ದರ್ (ಪಂರಾಮಾ. ೧೬-೪೩) ; ನಿರವಧಿಸೌಖ್ಯವದಿಂ ತನ್ನಿರವಧಿಕಂ ಚೆಲ್ವುವೀಱಿ ಕಬರೀಭರದಿಂ ಪರಭಾಗಂಬೆತ್ತಾಕೆಯಪರಭಾಗಂ ಪತಿಯ ಮನಮನುಱಿ ಸೆಱೆವಿಡಿಗುಂ (ಜಗವಿ. ೧೨-೪೭) ; (ಮಲ್ಲಿಕಾ. ೬-೨೪೪ ನೋ) ; ನಿರವಧಿ ಸುಖಕ್ಕೆ ಪಾತ್ರಂ . . . ಉರುತರಶೋಭಾಚಿತ್ರಂ ಕರಮೆಸೆಗುಂ ರಮ್ಯಮಪ್ಪ ಭರತಕ್ಷೇತ್ರಂ (ಬಾಧಪು. ೧-೬೯) ; ನಿರವಧಿಸ್ಥಿತ ಲಿಂಗನಿಷ್ಠಿತ ಸುರುಚಿರೇಂದ್ರಿಯರತುಳಚಿದಮಳನಿರತರುಂ (ಬಸವು. ೬-೧೬) ; ಮುಕ್ತಿ ಸುಖವಾಂತರಿಕವದು ನಿರವಧಿ ಸುಖ (ಮಂಕುತ. ೮೮೮). (ನಾ). ೨. ಎಲ್ಲೆಯಿಲ್ಲದುದು ; ಸೀಮೆಯಿಲ್ಲದುದು ; ಅಪರಿಮಿತವಾದುದು: ಆ ಸತಿಯ ಮುಖಮೇನೆಂದು ನೋಳ್ಪೆ ವಿಪರೀತಕರ ದುಃಖ ನಿರವಧಿಯ ಬುಧಿಯ (ಪಂಕಾರಾ. ೨-೬-೪೦) ; ಜೀವದ ಕಾಲ ನಿರವಧಿಯಾದ ಕಾಲ (ಸಮಜೀ. ೯೭೨). [ಸಂ.]

**ನಿರವಧಿಕ** (ಗು). ೧. ಎಲ್ಲೆಯಿಲ್ಲದ ; ಸೀಮೆಯಿಲ್ಲದ. ೨. ಅಧಿಕವಾದ ; ಹೆಚ್ಚಾದ ; ಅತಿಶಯವಾದ : ಕಾದಂಬರಿಗಾದಂ ಬುದ್ಧಿವೇಟ್ಟಿಟ್ಟದೆ ನಿರವಧಿಕ ಪ್ರೇಮದಿಂ (ಕಾದಂಪೂ. ೯೨೧) ; ವಧುಗಳಾ ಪರಮೇಶ್ವರನ ನಿರವಧಿಕ ಸೌಖ್ಯದ ಸಾರತರ ನವವಿಧ ರಸೋತ್ಸವದಿಂದ ಮೆಱೆದರು ಲೋಕವಿಭ್ರಮುವ (ಸಿಭಾಗ. ೩-೨-೪೫). (ನಾ). ೨. ಹೆಚ್ಚಾದುದು ; ಅತಿಶಯವಾದುದು : ಅಲಂಕಾರಗಳ ವರ್ಗವೇ ಉಕ್ತಿವೈಚಿತ್ರ್ಯದಿಂದ ಪ್ರಯುಕ್ತವಾದಾಗ, ನಿರವಧಿಕವಾಗುವುದಲ್ಲದೆ ನೂರಾರು ಶಾಖೆಗಳನ್ನೂ ಪಡೆಯುತ್ತದೆ (ಧ್ವನ್ಯಾಲೋ. ೨೫೬). ೩. ಆಧಿಕ್ಯ ; ಅಪರಿಮಿತತೆ : ನಿರವಧಿಕದಿಂ ಭೂತಿಶಾಸನಭರಣಾದಿ ಸಮಸ್ತ ಮಾಹೇಶ್ವರರಿಗಿಷ್ಟಾರ್ಥಂಗಳಂ ಸಲಿಸುತ್ತ ಮಿರುತಿರಲು (ಬಸವು. ೬-೩೪). ೪. ಸೀಮೆಯನ್ನು ಮೀರಿದವನು ; ಎಲ್ಲೆಗೆ ಅತೀತನಾದವನು: ನಿರವಧಿಕ ನಿರ್ಮಾಯ . . . ಕರುಣಿಸುವುದೆಂದ (ಕುಮಾರ. ೬-೮೯). [ಸಂ.]

**ನಿರವಮಾನ** (ನಾ). ತಿರಸ್ಕಾರ ತಗಲದವನು ; ತಿರಸ್ಕಾರ ಅಂಟದವನು : ನಿರವಮಾನ ನಿರಜ್ಞ ನಿಶ್ಚಲ ನಿರಸನೇಂದ್ರಿಯ ನಿರ್ವಿಷಯ ನಿರ್ನಿರುಹರಣ ನಿರಸೂಯ . . . ನಿರ್ವಿಕಾರಾಕಾರ ಚಿತ್ಸ್ವೈಸು (ಬಸವು. ೬೧-೪೩). [ಸಂ.]

**ನಿರವಯ** (ನಾ). ೧. [ವೀಶೈ] ದೇಹವಿಲ್ಲದುದು ; ನಿರಾಕಾರವಾದುದು ; ಶೂನ್ಯ : ನಿರವಯ ರೂಪಾಯಿತೆಂದು ನುಡಿವರು ಬಯಲು ರೂಪಾದ ಪರಿ ಇನ್ನೆಂತೋ (ಮೋಳಿಮಾ. ೬೪-೨೬೧) ; ನಿತ್ಯ ಪರಿಪೂರ್ಣವೇ ತನ್ನಿರವೆಂದು ತಿಳಿಯೆ ಆ ತಿಳಿದ ಮಾತ್ರದಲ್ಲಿಯೇ ಅನಿತ್ಯದಾ ಬೆಸುಗೆ ಬಿಟ್ಟು ನಿರಾಳದಲ್ಲಿ ನಿರವಯ[ಪಾಠಾಂ. ನಿಜ]ವನೆಯ್ದಲಱಿಯದೆ (ಮಹಾದೇ. ಬ. ೧೦೨-೨೩೪) ; ಇಂತೀ ಸರ್ವಾಚಾರ ಸಂಪತ್ತು ಎನ್ನ ತನು ಮನ ವೇದ್ಯವಾಯಿತು ಇನ್ನೆಲ್ಲಿಯಯ್ಯ ಎನಗೆ ನಿಮ್ಮಲ್ಲಿ ನಿರವಯುವು ಇನ್ನೆಲ್ಲಿಯಯ್ಯ ನಿಮ್ಮಲ್ಲಿ ಕೂಡುವುದು (ಮಹಾದೇ. ಬ. ೧೧೯-೨೭೬) ; ಕುಱುಹು ದೊರೆಯಿತು ದೇಹ ಅಱಿವನಱಿಯಿತು ಪ್ರಾಣ ಹರುವಾಗಿ ಹೋಯ್ತು ಭವಪಾಶ ಮುಕ್ತಿಯ ಇರವು ನಿರವಯವು (ಸರ್ವಜ್ಞ. ೧೭). ೨. ದೇಹವಿಲ್ಲದವನು ; ಆಕಾರವಿಲ್ಲದವನು ; ನಿರಾಕಾರ: ತುರೀಯ ಪರಮಾನಂದನು ನಿರವಯ . . . ಕೂಡಲಸಂಗಯ್ಯನು (ಬಸವ. ೯೫೪) ; ನಿರಹಂಕಾರ ನಿರವಯ ನಿರಾಸಕ್ತ ಪುರಹರನೆ (ಸೋಮಚ. ೧-೫) ; ನಿರ್ಮರಣ ನಿರವಯ ನಿಷ್ಕಳಂಕ . . . ನಿಜ ನಿರ್ಮಾಯ ಚಿತ್ಸ್ವೈಸು (ಬಸವು. ೬೧-೪೪) ; ಶ್ರೀ ಗುರು ಸದಾಮಳ . . . ನಿರವಯ ನಿರಾಮಯ (ಭೈರಸೂ. ೧).

ನಿರವಯವಾಗು = ನಿರಾಕಾರವಾಗು ; ಲಯವಾಗು ; ಸಕಲ ಲೋಕಂಗಳು ನಿರವಯುವಾದಲ್ಲಿ ನಿಜಬೆಳಗಿನೊಳಗೆ ಒಮ್ಮೆ ಸೋಹಂ ಎನಲು . . . ಗುಹೇಶ್ವರ ನೀನೆ ಲಿಂಗ (ಅಪಚಂ. ೨೭೮-೧೨೭೫). [<ಸಂ. ನಿರವಯವ]

**ನಿರವಯಲು** 'ನಿರ್ವಯಲು' ನೋ.

**ನಿರವಯವ** (ಗು). ೧. ಅವಯವವಿಲ್ಲದ; ಶರೀರವಿಲ್ಲದ: ನಿರವಯವ ತತ್ವೈಕ ರಸವಿದೆ ಸರವುನೋಹರ ರೂಪಿನಲಿ ವ್ಯವಹರಣ ಸಂಜ್ಞಾರಹಿತವಿದೆ ಕೃಷ್ಣಾಭಿಧಾನದಲಿ (ಕುಮಾರ. ೯-೩೫). ೨. ಭಾಗ ಮಾಡಲು ಆಗದ; ಅಖಂಡವಾದ; ಪರಿಪೂರ್ಣವಾದ. (ನಾ). ೩. ಶರೀರವಿಲ್ಲದುದು; ನಿರಾಕಾರವಾದುದು; ಅಮೂರ್ತವಾದುದು: ಎನ್ನಂಗವನು ಶ್ರೀಗುರು ಮಂತ್ರವ ಮಾಡಿ ತೋಱಿದನಾಗಿ ಸಾವಯುವಕ್ಕೆ ನಿರವಯುವಕ್ಕೆ ಭಿನ್ನವಿಲ್ಲವಯ್ಯ (ಮಹಾದೇ. ಬ. ೭೩-೧೪೧) ; ಅಮೂರ್ತ ಎಂದರೆ ನಿಷ್ಕಲ, ನಿರವಯವ ಎಂದರ್ಥ (ಶಕ್ತಿವಿ. ೨೩). ೪. ವಿಭಾಗಿಸಲಾಗದುದು ; ಅವಿಭಾಜ್ಯವಾದುದು : ಕಾಣುವ ಯಾವುದಾದರೂ ಹರಳನ್ನು . . . ವಿಭಜಿಸುತ್ತ ಹೋದರೆ ಯಾವ ರೀತಿಯಿಂದಲೂ ಅವಿಭಾಜ್ಯವಾದ ಒಂದಂಶವುಳಿಯುವುದು, ಇದೇ ಪರಮಾಣು. ಇದು ನಿರವಯವ (ಭಾರದ. ೨೩೦). ೫. ಶರೀರವಿಲ್ಲದವನು ; ನಿರಾಕಾರನಾದವನು : ಪರಮಾತ್ಮನೆನ್ನನೆಂದೊಡೆ . . . ನಿರವಯವನಿರಂಜನನಿರ್ಮರಿತನನಂತಪ್ರಬೋಧದರ್ಶನಸೌಖ್ಯಂ (ಯಶೋಚ. ೪-೨೭). [ಸಂ.]

**ನಿರವಯುವತ್ವ** (ನಾ). ದೇಹವಿಲ್ಲದಿರುವಿಕೆ ; ನಿರಾಕಾರತೆ : ಮೋಕ್ಷದಲ್ಲಿ ಜೀವಾತ್ಮನು ತನ್ನ ಸ್ವಾಭಾವಿಕಸ್ಥಿತಿಯಲ್ಲಿರುವನು. ಅದೆಂತೆಂದರೆ . . . ನಿರವಯುವತ್ವ ನಾನಾತ್ವ ಮೊದಲಾದ ಧರ್ಮಗಳೊಡನೆ ಯಾವತ್ಕಾಲ ನಿರ್ದುಃಖಿಯಾಗಿರುತ್ತಾನೆ (ಹಿಂದಸಾ. ೧೨೪). [ಸಂ.]

**ನಿರವಯುವರೂಪಕ** (ನಾ). [ಕಾವ್ಯಮಿ] ವಸ್ತುವಿನ ಅವಯುವಗಳ ಆರೋಪಣೆಯನ್ನು ಬಿಟ್ಟು ವಸ್ತುವನ್ನೇ ಇನ್ನೊಂದು ವಸ್ತುವಿನಲ್ಲಿ ಆರೋಪಿಸಿ ಹೇಳುವುದು ; ರೂಪಕಗಳಲ್ಲಿ ಒಂದು ಬಗೆ : ನಿರವಯುವರೂಪಕಕ್ಕೆ—ಆರಕ್ತಕಪೋಲಂ . . . ಆಸ್ಯಾಂಭೋರುಹವಿಾ ಸುದತಿಗಿಂತಿದೇನೊಪ್ಪಿದುದೋ (ಕಾವ್ಯಾವ. ೬೯೧). ☞ ಮೇಲಿನ ಈ ಲಕ್ಷ್ಯದಲ್ಲಿ ಆಸ್ಯವೆಂಬ ವಸ್ತುವಿನಲ್ಲಿ ಅಂಭೋರುಹವೆಂಬ ವಸ್ತುವನ್ನು ಆರೋಪಿಸಲಾಗಿದೆ. ಆದರೆ ಆಸ್ಯದ ಅಂಗಗಳಲ್ಲಿ ಅಂಭೋರುಹದ ಅಂಗಗಳನ್ನು ಆರೋಪಿಸಿಲ್ಲವಾದುದರಿಂದ ಇದು ನಿರವಯುವ ರೂಪಕ. [ನಿರವಯುವ+ರೂಪಕ]

**ನಿರವಯಾಂಗ** (ನಾ). ಅಂಗೋಪಾಂಗಗಳಿಲ್ಲದವನು ; ಶರೀರವಿಲ್ಲದವನು ; ನಿರಾಕಾರನಾದವನು : ಒಡಲುವಿಡಿದು ಕಂಡಿಹೆನೆಂದಡೆ ಅಗೋಚರ ಒಡಲು ಹಱದು ಕಂಡಿಹೆನೆಂದಡೆ ನಿರವಯಾಂಗ (ಮೋಳಮಾ. ೩೫-೧೪೭) ; ವಿವರವಿಲ್ಲದ ಮಣಿಗೆ ದಾರದ ಹಂಗೇಕೆ ನಿರವಯಾಂಗಂಗೆ ಪರಿಭ್ರಮಣವೇಕೆ (ಮೋಳಮಾ. ೧೦೫-೪೧೯). [<ಸಂ.ನಿರವಯುವಾಂಗ]

**ನಿರವಲ್** 'ನೆರವಲ್' ನೋ.

**ನಿರವಶೇಷ** (ಗು). ೧. ಶೇಷವಿಲ್ಲದ ; ಉಳಿಯದ : ನಿರವಶೇಷ ಮೋಹೋಪಶಮೋದ್ಭೂತಯಥಾಖ್ಯಾತಚಾರಿತ್ರಸಂಪನ್ನನಂತರ್ಮುಹೂರ್ತದಿಂ ಸ್ವಸ್ಥಾನಸ್ಥಿತನಾಗಿ (ಆದಿಪು. ೬-೩೩ ಪ) ; ವಿನಿರ್ಜಿತ ನಿರವಶೇಷ ನಿಳಿಂಪನಾಥ ವಿಭವನುಂ . . . ಅಪ್ಪ ಸ್ತಿಮಿತಸಾಗರಮಹೀವಲ್ಲಭಂಗೆ (ಶಾಂತಿಪು. ೧-೭೧ ಪ). (ನಾ). ೨. ಪರಿಪೂರ್ಣತೆ : ಬೇಡರಂತೆ ಪರಿಪರಿದು ನಿರವಶೇಷದಿಂ ಕಿಡಿಸಿಯುಂ (ಪಂಚತಂ. ೨೮-೧೦). [ಸಂ.]

**ನಿರವಶೇಷಂ** (ಅ). ಸಂಪೂರ್ಣವಾಗಿ ; ಶೇಷವಿಲ್ಲದಂತೆ : ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೯ ಪ) ; ಪ್ರಥಮಕರಣ ಚರಣಾನುಯೋಗಂಗಳಂ ನಿರವಶೇಷಂ ಕಲ್ತೊಡಲ್ಲದೆ ಜೋಯಿಸಮುಂ ಕಲಲ್ಬಾರದು (ಸುಕುಮಾ. ೩-೩೫ ಪ). [ಸಂ.]

**ನಿರವಸರ** (ನಾ). ಆತುರವಿಲ್ಲದಿರುವಿಕೆ ; ನಿಧಾನ ; ಸಾವಕಾಶ : ಲಕ್ಷ್ಮೀದೇವಮ್ಮನವರು ಭಕ್ತಿಯಿಂದ ಸಾಂಗವಾಗಿ ಶಾಸ್ತ್ರೋಕ್ತವಾಗಿ ಪೂಜೆಯನ್ನು ನಿರವಸರವಾಗಿ ಮಾಡಿದರು (ಇಬದು. ೬೬). [ಸಂ.]

**ನಿರವಸ್ಥ** (ನಾ). ಬಾಲ್ಯ, ಕೌಮಾರ, ಯೌವನ, ವಾರ್ಧಕಗಳೆಂಬ ಅವಸ್ಥೆಗಳಿಲ್ಲದವನು : ಸ್ವಸ್ಥ ತುರೀಯಾತೀತಾವಸ್ಥೆಯನೊಳಕೊಂಡು ತೊಳಪ ಶೃಂಗಾಟಕಪದ್ಮಸ್ಥಿತನೊಳನಘನೊಳ್ ನಿರವಸ್ಥನೊಳೊಡವೆರೆದು (ಶಬಶಂ. ೨-೧೦೩). [ಸಂ.]

**ನಿರವಾಣಿ** (ನಾ). ಬುದ್ಧ : ನೀರ ಪೊಕ್ಕನು ಗಿರಿಯ ನೆಗಹಿ ಧರಣಿಯ ತಂದು ನರಮೃಗ ಬಲಿಬಂಧ ಕೊರಳುಗೊಯಿಕ ಶರ ಮುಱಿದೊರಳೆಳೆದು ನಿರವಾಣಿ ಹಯ ಹತ್ತಿ ಪುರಂದರವಿಠಲ ಮನೆಗೆ ತಾ ಬಂದ (ಪುರಂದ. ೧-೮೫-೩). [<ಸಂ. ನಿರ್ವಾಣಿನ್]

**ನಿರವಿಸು** (ಕ್ರಿ). ೧. ಹೇಳು ; ನುಡಿ : ಅಡವಿಯೊಳೊಗೆದು ಬಳೆದ ಹುಲುಗಿಳಿ . . . ನಾಮಿತ್ತ ಕುಡುಕಂ ತೊಱದಿಹುದಚ್ಚರಿಯೆಂದೆನು ತುಡುಪಾನನೆ ನಿರವಿಸಲು (ಜಯಕಾ. ೨-೨೪) ; ನರಕದ ಸಗ್ಗದ ಸಂಜ್ಞೆಯದುರುತರಪಾಪಂಗಳಧಿಕಪುಣ್ಯದ ಫಲಮೇ ಸರಿಯೆಂದು ಬಲ್ಲರೆಂದುಂ ನಿರವಿಸುಗುಂ (ವಿಷ್ಣುಪು. ೨-೧-೨೧೬) ; ಸೆರೆವಿಗಿವ ಕೊರಲುಮುಣ್ಮುವನವಿರುಮಾದಿರವಂ ನಿರೂಪಿಸಿ ಆಯಿಂಗಿತಂಗಳಿಂ ಮಾನಸಾರಾಧನದೊಳಿನ್ನೆವರಮಾದುದೀ ನೀತಿಗಳಾಗುತಿರ್ಪುದೀಯಂಶಮೆಂಬುದಂ ಸಂಶಯುವಿಲ್ಲದೆ ನಿರವಿಸಿದಂ (ಚಕಸಂ. ೯೫-೨) ; ನೀನು ದುಃಖಮುಂ ನೀಗಿ ನಿನ್ನ ಸಹಜಾತರೊಡಗೂಡಿ ಸಂತಸದೊಳಿರ್ಪುದಂ ಕಂಡೆವು ಎಂದು ನಾರದಮುನೀಶ್ವರಂ ನಿರವಿಸಲಾಗಿ (ಭಾರಶಾಂ. ೧-೩) ; ಪ್ರಳಯಾಂಬುಧಿಯೊಳ್ ಪವಡಿಸಿದೆಳಮೆಯ ತೆಱನಿಂತಿದೆಂದು ನಿರವಿಸಿ ತಿಳಿದಾ ಪಟಿಯರ್ ಪಟುನುಡಿಯಿಂ ಗೋವಳಗುವರನ ಕವಡುನಿದ್ದೆಯುಂ ಪುಸಿಗೆಯ್ದರ್ (ಗೀತಗೋ. ೮-೧೯). ೨. ವಿವರವಾಗಿ ನಿರೂಪಿಸು ; ವಿವರಿಸು : ಆತ್ಮೀಯ ಪರಿ[ಜನಮಂ] ಪೆಸರ್ವೆಸರೊಳೆ ಕರೆದು ನಿರವಿಸಿ ಬೆಸಸಿದಾಗಳ್ (ಪರ್ಧಮು. ೧೧-೫೨ ಪ) ; ಕಂತು . . . ಬಂದಿರದೆ ಪೊಣರ್ಚೆ ಸೋಲ್ತು ವಿಜಯಧ್ವಜಮಂ ತೆಱದೆತ್ತು ಪೋದುದಂ ನಿರವಿಪ ಪುಷ್ಪದಂತಮಕರಧ್ವಜನೀಗೆ ಮನೋನುರಾಗಮುಂ (ಪುಷ್ಪಪು. ೧-೧೨) ; ನಿರವಿಸಿದ ತನ್ನಮಲಗುರುವಿಗೆ ಯಾಗದುಪಕ್ರಮವ (ಸಂಭಪ. ೩೦೮ ಪರಿ ೧) ; ಇತ್ತಲರಸಂ ನರಂಗಾಮಂತ್ರಮಂ ನಿರವಿಸಿ ಕಳುಪಲೊಡಂ (ಚೆಬಪು. ೫೩-೫); ಹರ್ಷಚಿತ್ತರಾದಾ ತವಸಿಗಳುಂ ವರ್ಣಾಶ್ರಮಧರ್ಮಂಗಳಂ ರಾಘವಂಗೆ ನಿರವಿಸುತುಮಿರ್ದರ್ (ರಾಮಾಶ್ವ. ೧೬-೧೪) ; 'ಸಾಹಿತ್ಯೋದಯ'ದ ಪ್ರಕರಣದಲ್ಲಿ . . . 'ಕವಿರಾಜಮಾರ್ಗ'ದ ವರೆಗೆ ನಿರ್ಮಾಣವಾಗಿರಬಹುದಾದ ಸಾಹಿತ್ಯವನ್ನು ಕುರಿತು ನಿರವಿಸಲಾಗಿದೆ (ಕಸಾಚ. ೪೫). ೩. ಹೇಳಿಕೊಳ್ಳು ; ಬಿನ್ನವಿಸು; ಬಿನ್ನಹ ಮಾಡು : ಮರದಡಿಯಲ್ಲಿ ದೇವರಿಱಿಯಿಂ ಶುಕನಾಸತನೂಜವಾರ್ತೆಯಂ ನಿರವಿಸಿದಪ್ಪೆವು (ಕಾದಂಉ. ೪೩೭) ; ಮೇಣುಂ ಮೇಣುಂ ದೇವರಡಿಯೊಳ್ ಪೊರಳ್ದು ತನ್ನ ಬನ್ನಮುಂ ನಿರವಿಪುದುಂ (ರಾಮಾಶ್ವ. ೧೪೭-೭). ೪. ಕೇಳು ; ಪ್ರಶ್ನಿಸು : ಕೊಳರ್ವಕ್ಕಿಗಳ ಕಳಕಳಕ್ಕೆ ಬೆರ್ಚಿದಂತೆಚ್ಚತ್ತು ಬೆಕ್ಕಸಂಬಟ್ಟುದೇನೆಂದು ನಿರವಿಸಿ (ಅರ್ಧನೇ. ೬-೧೪ ಪ). ೫. ಕೊಡು ; ಒಪ್ಪಿಸು : ತರಳಿಕೆಯೆಂಬ ನಮ್ಮ ಮಱುವುಲ್ಲೆಯನೊಂದು ತಪೋವನಕ್ಕೆ ನೀಂ ನಿರವಿಸು ಪಂಜರಾಂತರದ ಕನ್ನಡವಕ್ಕಿಯನೊಂದು ಬಂದ ಮಾಮರದೊಳೆ ಸಾರ್ಚು (ಕಾದಂಉ. ೫೯೪). ೬. ಅಪ್ಪಣೆ ಮಾಡು ; ಆಜ್ಞಾಪಿಸು : ನೀಂ ನೆಱಯೆ ತನ್ನೆಡೆಗೆ ಬರ್ಪುದೆಂದಂದು ನಿರವಿಸಿದನದಱಿಂದೆಮಗೆ ಕಾಶೀಪ್ರಯಾಣಮಾವಶ್ಯಕಂ (ಪದ್ಮರಾ. ೩-೧೦) ; ನೀನಿಳೆಯೊಳಾದರದಿನವತರಿಸಿ ಸರ್ವಮುಕ್ತರಪ್ಪಂತೆ ಪಿರಿದೆನಿಸುವೆನ್ನ ಭಕ್ತಿಯನುಂಟುಮಾಡು ಪೋಗೆಂದು ನಿರವಿಸಲು (ಪಾಸೋಪು. ೧-೬೧). ೭. ನೇಮಿಸು ; ನೇಮಕ ಮಾಡು : ದೇವಯಾನಿಯನಾ ಬೃಹಸ್ಪತಿಗೆ ಒಲಿದು ನಿರವಿಸಿ ತಾನು ರಾಕ್ಷಸತಿಲಕನವಸರ ಹಾಱುತಿರ್ದನು (ಸಂಭಪ. ೫-೭೯) ; ಇವರನರಮನೆಯೊಳಗೆ ಕನ್ಯಾಭವನ ಮಧ್ಯದೊಳಿರಿಸಿ ಬಳಿಕಿನೊಳವರ ಪರಿಚರ್ಯಕ್ಕೆ ನಿರವಿಸಿದಾ ಸುಭದ್ರೆಯನು . . . ಬೆಸಸಿದುದ ಮಾಡುವುದೆಂದು ನೇಮಿಸಿದ (ಸಂಭಪ. ೩೬-೬೭) ; ಭಟರನು ನಿರವಿಸಿದನಱದಜಿಸಿ ಬರಲು ವಿದೇಹನಂದನೆಯ (ತೊರರಾ. ೪-೮-೧೨) ; ಪಿರಿದು ಕಿಱದಂಗಳ ಭೇದವನೆಣಿಸದೆ ನಿರವಿಸಿದುದನೆಸಗುವುದು (ಹದಿಬ. ೩-೩೩). ೮. ಹತೋಟಿಯಲ್ಲಿರಿಸು ; ನಿಯಂತ್ರಣ ಮಾಡು : ಇರದಳುರ್ದಾವಗಂ ಬಿಡದೆ ಶೋಷಿಸುತಿರ್ದಪುದೆನ್ನ ಜನ್ಮಮಂದಿರಮೆನಿಪಬ್ಧಿಗರ್ಭಮನೆನುತ್ತಮೆ ತಾಂ ಮುಳಿದೌರ್ವವಹ್ನಿಯಂ ನಿರವಿಪೊಡಾರ್ಪಿನಿಂದಮೊಳಪೊಕ್ಕಪನೆಂಬವೊಲಾಗಳಸ್ತಭೂಧರಮನೆ ಬಿಟ್ಟು ಪಶ್ಚಿಮಪಯೋನಿಧಿಗಂದಿಱದಂ ಸುಧಾಕರಂ (ಕುಸುಮಾ. ೧೦-೭೭ ; ಶಾಂತೀಶ್ವ. ೧೧-೮೯ ನೋ) ; ಜಗವ ನಿರವಿಸಿದ ಕೈಯೊಂದಾದೊಡೇಕಿಂತು ಬಗೆಬಗೆಯ ಜೀವಗತಿ ? (ಮಂಕುಕ. ೬). ೯. ಪರೀಕ್ಷಿಸು; ವಿಚಾರಮಾಡು : ಇಂತಿರ್ದಿರವಂ ನಿರವಿಸಿ ಕಲಾಧರಂ ಮನದೊಳ್ . . . ಆ ಸೊಗಸಂ ನೋಡಿ ಕದುಬುತ್ತೆ (ಚಕವಿ. ೬-೨೦೯ ಪ).

**೧೦.** ನೋಡು; ಕಾಣು: ಸನ್ನಿದಮಾದ ಯದೂದ್ವಹನನ್ನಿರವಿಸಿ ಮಣಿದು ಪೊಗಟ್ದು ಪೊಡೆಮಡುವಿನೆಗಂ (ಚಿಕವಿ. ೩-೬೭) ; ಈ ಮಂತ್ರಮನುಚ್ಚರಿಸುತ್ತೆ ಮುಚ್ಚಿದ ಕಣ್ ಚಂದ್ರಕರಸ್ಪರ್ಶದಿಂದೆ ತಿಳಿತಳಮುಪ್ಪುದುಂ ತೆಱೆದು ನಿರವಿಸೆಂದವಳನಲ್ಲಿರಿಸಿ . . . ಪೋಪನಿತಱೊಳ್ (ಚಿಕವಿ. ೬-೨೦೫ ಪ). **೧೧.** ನಿರ್ಧಾರವಮಾಡು; ನಿರ್ಧರಿಸು; ನಿಶ್ಚಯಿಸು : ಹರಿಸಂಕೀರ್ತನವೊಂದೇ ಪರಗತಿಗನುಕೂಲವೆಂದು ನಿರವಿಸಿ ನೆಗಟ್ದಂ (ಗೀತಗೋ. ೧-೯). **೧೨.** ಉಂಟುಮಾಡು ; ಆಗಿಸು : ನಿರವಿಸಿ ನಾಡ ನೇರ್ಪ ನಿಜಮುದ್ರೆಯನೇಱಿಸಿ ಶಾಸನಂಗಳಂ ಬರಸಿ ಬುಧರ್ಗೆ ಬಿತ್ತರಿಸಿದಂ ಜಸಮುಂ ಯುವರಾಜಚಂದ್ರಮುಂ (ಕಾದಂಪೂ. ೬೧೩) ; ಶಂಭು ಜಯಮಂ ಕುಡೆ ಭಾರತಿ ಬಲ್ಮೆಯೆಲ್ಲಮಂ ನಿರವಿಸೆ ಮಂತ್ರಿ ಬಲ್ಲುಗಿಗೆ ಪುಟ್ಟಿದನೀ ನರಸಿಂಹನಳ್ಕಱಿಂ (ಸೌಇಇ. IX–i, ೩೪೩–೧೭ ; 1226) ; ಆಗಳ್ಮಾಯಾನಿದ್ರೆಯಂ ನಿರವಿಸಿ ನಿದ್ರಾಮುದ್ರಿತನೇತ್ರಶತಪತ್ರೆಯಾಗಿರ್ದ್ದರಾದೇವಿಯ ಮುಂದೆ ಮಾಯಾರ್ಭಕನನಿರಿಸಿ (ಶಾಂತೀಶ್ವ. ೧೪–೫೯ ಪ). **೧೩.** ಇಡು ; ಇರಿಸು : ಸುರಭಿಶರಂಗಳಂ ನಯನದೊಳ್ ಕುಡುವುರ್ವಿನೊಳಿಕ್ಷುಚಾಪಮಂ ಪರಿಚಿತಮೀನಕೇತನಮನಾವಗಮೊಪ್ಪುವ ಕೇಶಹಸ್ತದೊಳ್ ನಿರವಿಸಿ ಬಯ್ತು ಮೆಯ್ಗರೆದು ಶೂಲಧರಂಗಿದಿರ್ವರ್ಪನಲ್ಲಿ ಪೆಂಡಿರ ಮಱೆಯೊಳ್ ಮನೋಜನೆನೆ ಚೆಲ್ವೆಸೆವರ್ ಕಡುಗಾಡಿಕಾರ್ತಿಯರ್ (ಕಾವ್ಯಾವ. ೯೧೩) ; ಆ ಸೌಧರ್ಮೇಂದ್ರಂ . . . ಆಗಸದಿಸಿಱಿದು ತದೀಯ ವಿಶಾಳಶಾಳಾಬಹಿರ್ಭಾಗದೊಳ್ಸಕಳಸುರಸೇನೆಯಂ ನಿರವಿಸಿ (ಶಾಂತೀಶ್ವ. ೧೪–೫೪ ಪ) ; ವಜ್ರಮಯಕೇಯೂರವಮಂ ಬಾಹುಯುಗಳದೊಳ್ ನಿರವಿಸಿಯುಂ (ತ್ರಿಷವಿ. ೧೮–೪೯ ಪ). **೧೪.** ಸೂಚಿಸು ; ತಿಳಿಸು : ನಿರವಿಸಿದುದಸೇವ್ಯತೆಯಂ ಸೂರೆ ಭಸ್ಮ ಸ್ವಪದವೃತ್ತಿಯಂ ದಂಡು ವಿನಿಷ್ಕುರ ದಂಡಧರತೆಯಂ ತಾಂ ಧರಿಯಿಸೆ ರೌದ್ರಾಕ್ಷನೆಂಬುದಂ ರುದ್ರಾಕ್ಷಂ (ಶಬ್ದಾನು. ೧೨೧ ಪ್ರಯೋ). **೧೫.** ಲಕ್ಷಿಸು ; ಗಮನಿಸು : ಅಂತು ಸುತ್ತಲುಮಿರ್ದ ಲತೆ ಚೂತಲತೆ ಲಲಿತ ಸಖೀನಿಕರಮೆ ಬೆಸಗೆಯ್ವಂತಿರ್ದ ಲೀಲಾವತೀಲತೆಯ ಕಣ್ಣೆಳದುವರಿಯೆ ಕಂಡು ಮನವೆಳದುವರಿಯೆ ನಿರವಿಸಿ (ಲೀಲಾವ. ೧೪–೯೧ ಪ). **೧೬.** ಕಾಯು ; ನಿರೀಕ್ಷಿಸು ( ? ) : ನಿರವಿಸಿ ನಿರವಿಸಿ ನಿಂದೆಡೆಯೊಳು ಜಾವವರಿಗೆ ನಿಲುತ ತರುಣಿಯರು ಚರಣ ಬಳಲ್ವವು ಸ್ವಾಮಿ ಪರಾಕೆನಲೆರಗಿ ಕಾಣಿಕೆಯನಿಕ್ಕಿದನು (ಗೊಮ್ಮಚ. ೬–೮೫). [<ನಿರೂಪಿಸು]

**ನಿರಶನ** (ನಾ). ಆಹಾರವಿಲ್ಲದಿರುವುದು ; ಉಪವಾಸ : ತೆರಳುವುದು ನೀವಜಿಸುವುದು ನಿಮ್ಮರಸ ನೇಮಿಸಿದಂದದಲಿ ತಾ ನಿರಶನವ ಕೈಕೊಂಡವನು ನೀವ್ ಬಿಜಯ ಮಾಡೆಂದ (ತೊರರಾ. ೪–೧೧–೯) ; ಸಲ್ಲದು, ದೇವಿ, ಶಠವರ್ತನಂ ನಿನ್ನಾರ್ಯಸಂಸ್ಕೃತಿಗೆ ; ಮೇಣಾತ್ಮಹತ್ಯೆಯಿಾ ನಿರಶನಂ (ಶ್ರೀರಾಮಾ. ೩೨೪–೧೫೨). 'ನಿರಶನವ್ರತ' ಪರಾ. [ಸಂ.]

**ನಿರಶನಮರಣ** (ನಾ). ಉಪವಾಸ ಮಾಡಿ ಅವಸಾನ ಹೊಂದುವುದು,—ನಿಧನ ಹೊಂದುವುದು : ಮಾನನಿಧಿಯೇ ವಿವಿಧಗರಳವಿತಾನವನು ತರಿಸುವೆನು ನಿಶ್ಚಯವೇನು ನಿರಶನಮರಣವೇಕೆಂದಳು ಸರೋಜಮುಖಿ (ಕುಪ್ಯಾಅ. ೨೧–೧೪).

[ನಿರಶನ + ಮರಣ]

**ನಿರಶನವ್ರತ** (ನಾ). ಉಪವಾಸ ವ್ರತ : ನಿರಶನವ್ರತವೆಂದು ಮಂತ್ರೋಚ್ಚರಿತಸಂಕಲ್ಪದಲಿ ಕೌರವರರಸ ಪವಡಿಸಿದನು ಕೃತಪ್ರಾಯೋಪವೇಶದಲಿ (ಕುಪ್ಯಾಅ. ೨೧-೧೬). [ನಿರಶನ+ವ್ರತ]

**ನಿರಶನಸತ್ಯಾಗ್ರಹ** (ನಾ). ಉಪವಾಸಮುಷ್ಕರ : ಗೋಕಾಕ್ ವರದಿಯು ಜಾರಿಗೆ ಬರಲು ಕನ್ನಡ ಸಾಹಿತಿಗಳು ನಿರಶನಸತ್ಯಾಗ್ರಹವನ್ನು ಆಚರಿಸಿದರು (ವೂಫ). [ನಿರಶನ + ಸತ್ಯಾಗ್ರಹ]

**ನಿರಸ** (ಗು). **೧.** ಒಣಗಿದ ; ಶುಷ್ಕವಾದ ; ರಸವಿಲ್ಲದ ; ನೀರಸವಾದ : "ನಿರಸ—ನೀರಸ = ಶುಷ್ಕ" (ತದ್ಭಕೋ. ೨೨) ; ನಿರಸಮುಖದಲಿ ಕರವನೆತ್ತಲು (ನಾಗಷ. ೯–೬೬). (ನಾ). **೨.** ನೀರಸತೆ ; ನಿಸ್ಸಾರತೆ : ಅಲ್ಲಮಪ್ರಭುರಾಯನಾನತರೆಲ್ಲರನು ಸಂಸಾರ ನಿರಸ [ಪಾಠಾಂ. ವಿಷಯ]ದ ಕಲ್ಲ ಕಾಱುವ ಕೋಟಲೆಯ ಮಾಣಿಸಿ . . . ಬರುತಿರ್ದನು ವಿನೋದದಲಿ (ಪ್ರಭುಲೀ. ೧೨–೨). **೩.** ಗೌಣವಾದುದು ; ಹೀನವಾದುದು : ಸರಸ ವಿರಸವಾಗಿ ಮೌನ ನಿರಸವಾಗಿ ಒಗಟೆಯಾಗುವ ಬಾಳು ಒಡೆಯದಿದೆ (ಸಖೀಗೀ. ೪೦–೮೧೧). [ಸಂ.]

**ನಿರಸನ** (ನಾ). **೧.** ಹೊರದೂಡುವುದು ; ದಬ್ಬುವುದು ; ಅಟ್ಟುವುದು : "ಅಪಾಕರಣಂ ನಿರಸನಂ" (ವಸ್ತುಕೋ. ೧೧೫–೨೪) ; ಬಳಿಯೊಳಿದೆ ಕಿಷ್ಕಿಂಧೆ, ವಾನರ ರಾಜಧಾನಿ. ವಾಲಿಯಂದನಾಳ್ವನವನಿಂದೆ ನಿರಸನವೊಂದಿ ನೆಲೆಗೆಟ್ಟ ಸುಗ್ರೀವನಿಹನೈ (ಶ್ರೀರಾಮಾ. ೨೭೭–೩೭೦). **೨.** ಧ್ವಂಸ ; ನಾಶ : ದೇವಕಿ ಪಡೆದಮಳ್ಗಳನಾ ಕಂಸಂ ನಿಸ್ತ್ರಿಂಶತೆಯಿಂ ನಿರಸನಮನೆಯ್ದಿಸಿ ಋಷಿವಚನಮಂ ಪುಸಿ ಮಾಡಿದಂ (ನೇಮಿಪು.೬–೭೪ ಪ); ಮರೆ ಹುಲಿ . . . ಎಯ್ಯಮೃಗಂ ಕಡುಕೊರ್ಬಿ ಕಾನನಾಂತರದ ಕುಟೀರವಂ ಬೆಳೆದ ಕೆಯ್ಗಳನಂತಿರಲೀಯವಂತವಂ ನಿರಸನವೈದಿಸಲ್ ನೆಱೆವ ಬೇಂಟೆಗೆ ಕಾಲಮಿದು (ನಳಚಂ. ೬೫). **೩.** ಹತ್ಯೆ ; ಕೊಲೆ : "ಮಾರಣಂ, ನಿಶರಣಂ, ನಿಬರ್ಹಣಂ, ಸೂದನಂ, ನಿರಸನಂ . . . ಸಂಜ್ಞಪನಂ—ಈ ೨೧ ಕೊಲೆ" (ಹಲಾಯು. ೭೪–೩೨೩) ; "ವಿಶಸನಂ . . . ನಿರಸನಂ ಕ್ರಥನಂ ಪ್ರಮಾಪಣಂ ಕೊಲೆಗೆ ನಾಮಂ" (ಮಂಗರಾ.೮೪–೩೯). **೪.** ತಿರಸ್ಕಾರ ; ಹೀಯಾಳಿಸುವಿಕೆ ; ಧಿಕ್ಕಾರ : ಅಯ್ಯಾ ಸದಾಚಾರವೆಂದಡೆ ಚಿದ್ಘನಮಹಾಲಿಂಗಧ್ಯಾನಪರದ್ರವ್ಯನಿರಸನ (ಮಡಿವಾ. ೨೩–೩೨) ; ನಿರಸನಭಾಸವೃತ್ತಿ ಬಹುದೋಷ ಕುಸಂಧಿಯ ಮಾರ್ಗ . . . ಎನಿಪ್ಪುದಾ ಕುಕವಿ ಕಾವ್ಯದವೊಲ್ ಕಲಿಕಾಲಮಾವಗಂ (ದಶಾವ. ೧೧–೨೪). **೫.** ನಿಗ್ರಹ ; ಹತೋಟಿ. 'ನಿರಸನೇಂದ್ರಿಯ' ಪರಾ. **೬.** ಪರಿಹಾರ ; ಇಲ್ಲವಾಗುವುದು ; ನಿವಾರಣೆ : ಅರ್ಜುನನಿಗೆ ಈ ಭ್ರಮೆಯ ನಿರಸನವೂ ಆಗುತ್ತದೆ (ಬಿದುರಿ. ೬) ; ಅವನ ಭ್ರಮೆ ನಿರಸನವಾದುದನ್ನು ನೋಡಿ ವಿದ್ಯಾರಣ್ಯರು ಹೇಳಿದರು (ರಾಜ್ಯೋದ. ೧೮೩). 'ಭ್ರಮನಿರಸನ' ಪರಾ. **೭.** ಕೊನೆ ; ಅಂತ್ಯ ; ಮುಕ್ತಾಯ : ಕೂಡೆ ಮನೆಮನೆಯೊಳೊಯ್ಯನೆ ಬಾಡಿದುದೊಡನೊಡನೆ ಮಿಥುನತತಿಯಿರುಳೊಲವಿಂ ಸೂಡಿದ ಪೂಮಾಲೆಗಳುಂ ಮಾಡಿದ ಸೊಡರ್ಗುಡಿಗಳುಂ ನಿಶಾನಿರಸನದೊಳ್ (ಚಂದ್ರಪು. ೮–೯೮). [ಸಂ.]

**ನಿರಸನಗೊಳ್ಳು** (ಕ್ರಿ). ನಿವಾರಣೆಯಾಗು ; ಪರಿಹಾರವಾಗು : ನೀರ ಗುಳ್ಳೆಯಂತೆ ಇವರ ಭ್ರಮೆ, ಇವರ ತಪ್ಪುಕಲ್ಪನೆಗಳು ಕ್ರಮೇಣ ನಿರಸನಗೊಂಡುವು (ದ್ರಾವಿವಿ. ೧೯ ಹಿನ್ನೆಲೆ).

[ನಿರಸನ + ಕೊಳ್ಳು$_1$ (<ಕೊಳ್$_1$)]

**ನಿರಸನಿ** (ನಾ). ಧಿಕ್ಕರಿಸುವವನು ; ತಿರಸ್ಕಾರವುಳ್ಳವನು : "ಶಾ"ನ ನಾಟಕಗಳೆಂದರೆ ನಿಮಗೆ ತುಂಬ ಪ್ರೀತಿಯೇನು ? ನನಗೂ ಅಷ್ಟೆ. ಆದರೆ . . . ಅದೆಲ್ಲ ಜೊಳ್ಳು. ಅದು ಬರೇ ನಗಲು ಬಲ್ಲ ಆ ನಿರಸನಿಯ ಬರವಣಿಗೆಯ ಥಾಟಿಗಾಗಿ (ವಾತ್ಸಲ್ಯ. ೧೮೯). [←ಮರಾ. ನಿರಸನೀ]

**ನಿರಸನೆ** (ನಾ). = ನಿರಸನ **೬:** ಮುರಾರಿ ಅಡ್ಡತಿಡ್ಡ ಪ್ರಶ್ನೆ ಮಾಡಿ, ತನ್ನ ಶಂಕೆಗಳು ಪೂರ್ಣ ನಿರಸನೆಯಾಗುವಂತೆ ಮಾಡುತ್ತಲಿದ್ದನು (ಕೃತಕೈ.೧೮).

[ಸಂ. ನಿರಸನ]

**ನಿರಸನೇಂದ್ರಿಯ** (ನಾ). ಇಂದ್ರಿಯಗಳನ್ನು ನಿಗ್ರಹಿಸಿದವನು : ನಿರವಮಾನ ನಿರಜ್ಞ ನಿಶ್ಚಲ ನಿರಸನೇಂದ್ರಿಯ ನಿರ್ವಿಷಯ . . . ನಿರ್ವಿಕಾರಾಕಾರಾ ಚಿತ್ತೈಸು (ಬಸವು. ೬೧–೪ [illegible] [ನಿರಸನ + ಇಂದ್ರಿಯ]

**ನಿರಸಲ** (ನಾ). ಒಂದು ಬಗೆಯ ಮರ: ನಿರಸಲ ತೊಪ್ಪಲ, ಹುಲಗಲಿ ತೊಪ್ಪಲ, ಹೊನ್ನಾವರಿ ತೊಪ್ಪಲ ಮುಂತಾದ ಬಯಲುವನದಲ್ಲಿದ್ದ ಕಾಡ ತೊಪ್ಪಲುಗಳನ್ನು ತಗ್ಗಿಗೆ ಹಾಕಿ . . . ಗೊಬ್ಬರವನ್ನು ಮಾಡಿದರೆ . . . ಹೊಲಗಳಿಗಾದರೂ ಉಪಯೋಗವಾಗುವದು (ಕೃಷಿಪ್ರ. ೪೮) ; ನಿರಸಲ–ಸುಂದರವಾದ ವೃಕ್ಷವು, ಕಟ್ಟಿಗೆ ಕೆಲಸಕ್ಕೆ ಬರುವುದಿಲ್ಲ. ಬೀಜಗಳ ಎಣ್ಣೆ ಔಷಧಕ್ಕೆ ಬರುತ್ತದೆ (ಕಭಾಗ. ೪೨). [ ? ]

**ನಿರಸಿತ** (ನಾ). ನಿರಾಕರಣೆಗೆ ಒಳಗಾದುದು; ತೆಗೆದು ಹಾಕಿದುದು : ಈ ಸಂವಿಧಾನವು ಆರಂಭವಾಗುವುದಕ್ಕೆ ಮುಂಚಿತವಾಗಿ ಶೀರ್ಣವಾಗಿದ್ದ ಅಥವಾ ರಚಿತವಾಗಿದ್ದ ಮತ್ತು ಪೂರ್ವಭಾವಿಯಾಗಿ •ನಿರಸಿತವಾಗಿಲ್ಲದಿರತಕ್ಕ ವಿಧಿಗಳು . . . ಕೆಲವು ನಿರ್ದಿಷ್ಟ ಪ್ರದೇಶಗಳಲ್ಲಿ ಜಾರಿಯಲ್ಲಿಲ್ಲದಿರಬಹುದಾಗಿದ್ದರೂ ಸೇರಿರುತ್ತವೆ (ಭಾಧಾನ. ೭).
[<ಸಂ. ನಿರಸ್ತ]

**ನಿರಸು** (ನಾ). ಬಿರುಸು ; ಬಿಗಿ : ಗೋಧಿಯನ್ನು ಬಿತ್ತುವ ಹೊಲವು ಮಡಿಕಟ್ಟು ಅಥವಾ ನಿರಸಾದ ಎರಿಯಾದರೆ ಅಂಥ ಹೊಲವನ್ನು ಎರಡು ಸಾಲು ಮಡಿಕೆ ಹೊಡೆದು ಬೇಸಿಗೆಯಲ್ಲಿ ಮೂರು ಸಾಲು ಹರಗಬೇಕು (ಕೃಷಿಪ್ರ. ೮೨). [ ? ]

**ನಿರಸೂಯ** (ನಾ). ಕರುಬಿಲ್ಲದವನು; ಹೊಟ್ಟೆಕಿಚ್ಚು ಇಲ್ಲದವನು: ನಿರಸೂಯ ನಿಶ್ಚಿಂತ ನಿರ್ಲೇಪ . . . ನಿರಾಳ ಪಂಪಾವಿರೂಪಾಕ್ಷ ಶರಣು (ಹಚಕಾ. ೧-೪) ; ನಿರಸೂಯ ನಿರ್ವಾಣಪದ ನಿರ್ವಿಘ್ನ . . . ನಿರ್ವಿಕಾರಾಕಾರಾ ಚಿತ್ತ್ರೈಸು (ಬಸವು. ೬೨-೪೩) ; ನಿರ್ಲೋಭಿ ನಿರಸೂಯ ನಿರ್ಮೋಹಿ ನಿರ್ಮದ ನಿರಾಖ್ಯ (ಏಕೋಪು. ೬-೮೬). ‘ಅನಸೂಯ’ ಪರಾ. [ಸಂ.]

**ನಿರಸೂಯೆ** (ನಾ). ಕರುಬಿಲ್ಲದಿರುವಿಕೆ; ಹೊಟ್ಟೆಕಿಚ್ಚು ಇಲ್ಲದಿರುವಿಕೆ : ಭರತಂ ಮಹಾತ್ಮನೆಸೆದನು ದಿವ್ಯತೇಜಸ್ವಿ . . . ಸಂಯಮದ ಸೌಂದರ್ಯದಲ್ಲಿ, ನಿರಸೂಯೆಯಲಿ (ಶ್ರೀರಾಮಾ. ೨೬-೯೫).
[ಸಂ. ನಿರಸೂಯಾ]

**ನಿರಸ್ತ** (ಗು). ೧. ಹೊರದೂಡಿದ ; ದೂರಗೊಳಿಸಿದ ; ನಿವಾರಿಸಿದ: ನಿರಸ್ತವಿವೇಕಂಬೊಲಿದೇಕೆ ಮೋಹಿಸಿದಪ್ಪೈ ನೀಂ (ಆದಿಪು. ೧೬-೫೯) ; ಪರಹಿತಕುಲಪ್ರಸಂಗಂ ನಿರಸ್ತದೋಷಾನುಷಂಗನಿಜಾವ ಬೆಡಂಗಂ (ಗದಾಯು. ೧-೨೧) ; ಇಂತು ನೆಗಳ್ತೆವೆತ್ತೇಕಾದಶಸ್ಥಾನಂಗಳೊಳಾ ನಿರತಿಚಾರವ್ರತಶೀಲಸಂಪನ್ನನುಂ ನಿರಸ್ತಮಿಥ್ಯಾತ್ವನುಂ . . . ಆಗಿ (ಸುಕುಮಾ. ೬-೩೭ ಪ) ; ಸಕಳೇಳಾಪಾಳಮೌಳಿಲಾಳಿತಚಾರುಚರಣಾರವಿಂದದ್ವಂದರುಂ ನಿರಸ್ತದ್ವಂದ್ವರುಂ . . . ಅಪ್ಪ ಶ್ರೀಮತ್ಪ್ರಭಾಚಂದ್ರತ್ರೈವಿದ್ಯಭಟ್ಟಾರಕದೇವಶ್ಚಿರಂ ಜೀಯಾತ್ (ಕಇಅ. ೯೪-೩-೧೧ ; 1124); ನಿರಸ್ತ ಜಗದಂಹಂ ರೌದ್ರರಂಹಂ ನೃಸಿಂಹನೆನಿಪ್ಪಾಕೃತಿಯಿಂ ಹಿರಣ್ಯಕಶಿಪುಪ್ರಧ್ವಂಸಮಂ ಮಾಡಿದೈ (ಜಗವಿ. ೧-೫೮) ; ಅಸ್ತಮಿತದುರಿತನನವಿರತನಿರಸ್ತದೇಹಪ್ರಾಕೃತಗುಣಸಮಸ್ತನಂ. . .ಪಂಡಿತಯಮಸಮುದ್ದಂಡನಂ ನೋಡಿ (ಬಸವು. ೩೯-೫೪). ೨. ಮೀರಿದ ; ಸೋಲಿಸಿದ : ಆರವಮಂ ನಿರ್ಜಿತಕಂಠೀರವರವಮಂ ನಿರಸ್ತಘನರವಮಂ ಕೋಪಾರುಣನೇತ್ರಂ ಕೇಳ್ದಾ ನೀರೊಳಗಿರ್ದಂ ಬೆಮರ್ತನುರಗಪತಾಕಂ (ಗದಾಯು. ೭-೨೨); ಕೇಳಹಿತದಿತಿಜವಲ್ಲಭಲೀಳಂ ವಿಕ್ರಮನಿರಸ್ತಕಾಳಂ ದಿವಿಜಾಭೀಳಂ ಮಥಿತಾಖಿಳದಿಕ್ಪಾಳಂ ಶಿಶುಪಾಳನೆಂಬನೊರ್ವಂ ದನುಜಂ (ಪಂಚತಂ. ೨೩೫-೧೫) ; ಅತಿಬಲನಪ್ಪ ಲಕ್ಷ್ಮಣಕುಮಾರನ ವೀರರಸಪ್ರವಾಹಿನೀಪತಿತಮಹಾಮಹೀರುಹಮೆನಲ್ಕತನಾದನವಂತಿವಲ್ಲಭಂ ಹತಸುಮನೋವಿಳಾಸನಪಸಾರಿತಮೂಲಬಲಂ ನಿರಸ್ತವಿಸ್ತೃತನಯನಸ್ತಸಾರಂ (ಪಂರಾಮಾ. ೭-೬೬). (ನಾ). ೩. ಪರಿಹಾರವಾದುದು ; ನಿವಾರಣೆಯಾದುದು :“ಪ್ರ(ತ್ಯಾ) ಖ್ಯಾತಂ, ಪ್ರತಿಕ್ಷಿಪ್ತಂ. . .ನಿರಸ್ತಂ, ಅಪವಿದ್ಧಂ, ಪರಿಹೃತಂ—ಈ ೭ ಪರಿಹರಿಸಲ್ಪಟ್ಟುದು” (ಹಲಾಯು. ೧೧೭-೧೮) ; “ನಿರಸ್ತಮಪವಿದ್ಧಂ” (ವಸ್ತುಕೋ. ೧೦೪-೩೯). ೪. ವೇಗವಾಗಿ ಉಚ್ಚಾರಣೆಯಾದುದು ; ತ್ವರಿತವಾಗಿ ಉಚ್ಚಾರಣೆ ಮಾಡಿದ ನುಡಿ : “ತ್ವರಿತೋಚ್ಚಾರಿತವಕ್ಕುಂ ನಿರಸ್ತವ[ದು]” (ವಸ್ತುಕೋ. ೮೦-೩೧) ; “ಮರುಳಾಟನುಡಿಯುಟ್ಟುಳಿ ನಿರಸ್ತವಕ್ಕು” (ಮಂಗರಾ. ೨೬-೨) ; ತ್ವರಿತೋಚ್ಚಾರಣೆಗೆ ಒಳಪಟ್ಟು ಎರಡು ಮೂರು ಅಕ್ಕರಗಳಿಗೆ ಒಂದೇ ಅಕ್ಷರದ ಮೌಲ್ಯ ಬಂದರೆ ‘ನಿರಸ್ತ’ ಎನಿಸುವುದು (ಸಂಶೋಧ. ೧೨೦). ೫. [ನಾಟ್ಯ] “ಶಬ್ದ ಮಾಡುತ್ತ ಒಂದಾವರ್ತಿ ಉಸುರು ಬಿಡುವುದು” (ಲಾಸ್ಯರಂ. ೨೭೭ ಗದ್ಯಾನುವಾದ) : ಸ್ವಸ್ಥ, ಚಲ, ಪ್ರವೃದ್ಧ, ನಿರಸ್ತ . . . ಪ್ರಸೃತ—ಈ ಒಂಬತ್ತೂ ಕೋಹಳನ ಮತದಂತೆ ಗಾಳಿಯ ಭೇದಂಗಳ್ (ಲಾಸ್ಯರಂ. ೩-೭೮ ಪ).
 ನಿರಸ್ತಮಾನಸ್ತಂಭ = ಕೆಡೆದ ಮಾನವೆಂಬ ಸ್ತಂಭವುಳ್ಳವನು : ಎತ್ತಣದು ತನಗೀ ಮತಿಭ್ರಮೆ ಕೆತ್ತುದಖಿವಿನ ಕದವೆನುತ್ತ ನಿರಸ್ತ ಮಾನಸ್ತಂಭನಾದನು ನಿಮಿಷಮಾತ್ರದಲಿ (ನಿಭಾಗ. ೧೦-೨೩-೧೫).
[ಸಂ.]

**ನಿರಸ್ತಮಿತ** (ಗು). = ನಿರಸ್ತ ೧ : ಕೀಚಕಮಥನಂ ನಿರಸ್ತಮಿತವೈರಿನಿವಹಗಜಸಿಂಹಬಲಂ (ಗದಾಯು. ೧-೫೪). [ಸಂ.]

**ನಿರಸ್ತೆ** (ನಾ). ಹೊರದೂಡಿಸಿಕೊಂಡವಳು ; ಪರಿತ್ಯಕ್ತೆ : ಆ ಕೋಸಲನಿರಸ್ತೆ . . . ತೊಲಗಿದಳಯೋಧ್ಯೆಯಿಂ (ಶ್ರೀರಾಮಾ. ೧೨೨-೨೭೫). [ಸಂ. ನಿರಸ್ತಾ]

**ನಿರಹಂಕರ** (ನಾ). = ನಿರಹಂಕಾರ ೧ : ಕರದಿ ನಿರಹಂಕರದ ಪಾತ್ರೆಯ ಧರಿಸಿಯಪರೊಳು ನಿತ್ಯತೃಪ್ತಿಯ ಭರಿತ ಸಿದ್ಧರಸಾಮೃತವ ಸೇವಿಸುತ (ಗಗತಾ. ೧೬-೨೧). [<ನಿರಹಂಕಾರ]

**ನಿರಹಂಕರಣ** (ಗು). ಅಹಂಕಾರವಿಲ್ಲದ ; ಹೆಮ್ಮೆಯಿಲ್ಲದ : ಈ ಯುದಾರತೆಯೀ ಸರಸಪಾಂಡಿತ್ಯವೀ ನಿರಹಂಕರಣ ಭಕ್ತಿ . . . ಆರಿಗುಂಟು (ಬಸವು.೨-೩೧) ; ಅಹಂಕರಿಸಿದ ಸುರಾವಳಿಗಂತಕಂ ನಿರಹಂಕರಣ ಶರಣಾಂತರಂಗನು ಸಕಳಜಗದುದ್ಧರಣಕಾರಣನು (ಬಸವು. ೫೪-೫೪).
[ಸಂ.]

**ನಿರಹಂಕಾರ** (ನಾ). ೧. ಗರ್ವ, ಹಮ್ಮುಬಿಮ್ಮುಗಳಿಲ್ಲದಿರುವಿಕೆ ; ನಿಗರ್ವತೆ ; ವಿನಯ : ತನುವಿನಲ್ಲಿ ನಿರ್ಮೋಹ ಮನದಲ್ಲಿ ನಿರಹಂಕಾರ ಪ್ರಾಣದಲ್ಲಿ ನಿರ್ಭಯ . . . ಜ್ಞಾನದಲ್ಲಿ ಪರಮಾನಂದವೆಡೆಗೊಂಡ ಬಳಿಕ ಸೌರಾಷ್ಟ್ರ ಸೋಮೇಶ್ವರಲಿಂಗವು ಬೇಱಿಲ್ಲ ಕಾಣಿರೊ (ಆದಪ. ೨೦-೪೮) ; ಹರಿ ನಗುತೆ ಬಕುತನ ಮನದ ನಿರಹಂಕಾರ ಭಕ್ತಿಯ ನೆನೆನೆನೆದು ಪುಳಕಿಸುತೆ ಕೈವಿಡಿದೆತ್ತಿ (ಅಕ್ರೂಚ. ೮-೪೪) ; ನಿರಹಂಕಾರಮೆನಿಪ್ಪ ಬಲ್ಸುರಗಿಯಿಂ ಪೋಳ್ದುನ್ಮದೋದ್ರೇಕಸೂಕರಮಂ (ಪ್ರಷವಿ. ೨೨-೪೪). ೨. ಅಹಂಕಾರವಿಲ್ಲದವನು : ನಿರಹಂಕಾರ ನಿರ್ಮಳ ನಿರಾಳ ಪಂಪಾ ವಿರೂಪಾಕ್ಷ ಶರಣು (ಹಚಕಾ. ೧-೪) ; ನಿರಹಂಕಾರ ನಿರವಯ ನಿರಾಸಕ್ತ ಪುರಹರನೆ (ಸೋಮುಚ. ೧-೫). [ಸಂ.]

**ನಿರಹಂಕಾರಿ** (ನಾ). ಅಹಂಕಾರವಿಲ್ಲದವನು ; ನಿಗರ್ವಿ : ನಿರಹಂಕಾರಿ ನಿರ್ಮಮಕಾರಿ ನಿಃಪ್ರಪಂಚಿ ನಿರ್ಲೇಪಕನಯ್ಯ (ಸಿದ್ಧೇಪ. ೧೫೫-೪೬೧). [ಸಂ. ನಿರಹಂಕಾರಿನ್]

**ನಿರಹಂಕಾರೆ** (ನಾ). ಅಹಂಕಾರವಿಲ್ಲದವಳು : ನಿರುಪಮೆ ನಿರಾವರಣೆ ನಿರಜೆ ನಿರಹಂಕಾರೆ (ಏಕೋಪು. ೧-೯).
[ಸಂ. ನಿರಹಂಕಾರಾ]

**ನಿರಹಂಕೃತ** (ಗು). ಸ್ವಾರ್ಥರಹಿತವಾದ ; ಸೊಕ್ಕಿಲ್ಲದ. [ಸಂ.]

**ನಿರಹಂತೆ** (ನಾ). = ನಿರಹಂಕಾರ ೧ : ಮನದ ನಿರಹಂತೆಯಜುಾದ ಭಯವೀವುತ ಸಲಹಲನುಗ್ಗೈದು ನಿಜಮೂರ್ತಿಯಂ ತೋಱುದನ ವಿಮಲ ಚರಣಾಂಬುಜಕ್ಕೆ ಶರಣು (ಲಕಚಿಂ. ೪-೩೧) ; ಮರೆಯುವನು ತಾನೆಂಬುದನೆ ಮಹಾವೇಶದಲಿ ನಿರಹಂತೆಯುದು ಮೋಕ್ಷ (ಮಂಕುಕ. ೬೯೬). 'ಅಹಂತೆ' ಪರಾ. [ಸಂ. ನಿರಹಂತಾ]

**ನಿರಹಂಭಾವ** (ನಾ). = ನಿರಹಂಕಾರ ೧ : ನಿರಹಂಭಾವದಲ್ಲಿ ನಾನಿದ್ದೆ ನಯ್ಯಾ ನೋಡಿಹೆನೆಂದರೆ ನೋಡಲಿಲ್ಲ ಕೇಳಿಹೆನೆಂದರೆ ಕೇಳಲಿಲ್ಲ ಘನ ನಿರಂಜನದ ಬೆಳಗಿಂಬಾದುದು (ಅವಚಂ. ೧೫೧-೬೯). [ಸಂ.]

**ನಿರಹಮ್ಮು** (ನಾ). = ನಿರಹಂಕಾರ ೧ : ನಿಮ್ಮ ಮಾಡಿದವಜ್ಞೆಯುನು ನಿರಹಮ್ಮಿನಲಿ ರಂಜಿಸುವ ವಿಮಲ ಬ್ರಹ್ಮರೂಪನು ಬಗೆಯಲಜುವನೆ ಭೃತ್ಯವರ್ಗದಲಿ (ನಿಭಾಗ. ೧-೫-೪೦) ; ಗುರುಭಕ್ತಿ ನಿರಹಮ್ಮು ನಿರಪೇಕ್ಷೆ ಸ್ವೈರಣೆ ಕರಣಾನುಕೂಲತೆ ಪರಿಣಾಮ (ಪರಮೇ. ೬-೩-೩).

[ನಿರ್+ಅಹಮ್ಮು]

**ನಿರಳಂಕಾರ** 'ನಿರಲಂಕಾರ' ನೋ.

**ನಿರಳಂಕೃತಿ** (ನಾ). = ನಿರಲಂಕಾರ : ನಿರಳಂಕೃತಿವನಿತೆ ಮನೋಹರಿಯೆನಿಸದ ತೆಱದೆ ಸರಸಕೃತಿಯುಂಚಿತಾಳಂಕರಣದಿನಪಗತಮಾಗುತ್ತಿರೆ ಱದುರರ ಸರಸಹೃದಯಮುಮಂ ಮೆಚ್ಚಿಕುಮೇ (ಪಾರ್ಶ್ವಪು. ೧-೭೪).

[ಸಂ. ನಿರಲಂಕೃತಿ]

**ನಿರಳವ್ಯಾಧಿ** (ನಾ). ಒಂದು ಬಗೆಯ ರೋಗ (?) : ಆವರಿಕೆ ಬೇರಿನ ಪಟ್ಟೆಯಂ ಆವರಿಕೆ ಕೊನೆಯುನು ಸಹ ೬೦ ಗಳಿಗೆ ಮೊಸರಿಂದರೆದು ಗುಳಿಗೆಯಂ ಕಟ್ಟಿ ಸೇವಿಸೆ ನಿರಳವ್ಯಾಧಿ ಮಾಣುವುದು (ಸಕವೈ. ೩೯೧).

[ನಿರಳ ?+ವ್ಯಾಧಿ]

**ನಿರಾಕ**$_1$ (ನಾ). ಬೆವರು ; ಸ್ವೇದ. [ಸಂ.]

**ನಿರಾಕ**$_2$ (ನಾ). (?) : ಸೋರ್ಮುಡಿಯುಲೊಪ್ಪುವ ಪುಷ್ಪವೃಷ್ಟಿಗಳ ವಿಕರೂಪದಲಸಿಯ ಹುಬ್ಬುಗಳಾಕೃತಿಯ ಹೆರೆನೊಸಲ ತಿಲಕ ನಿರಾಕದಳಿಗಳ ಕುರುಳುಗಳ ಧ್ಯಾನಿಪುದು ಭಾವಕರು (ನಿಭಾಗ. ೧೧-೨೧-೪೧).

[ ? ]

**ನಿರಾಕರಣ** (ನಾ). ೧. ಅಲ್ಲಗಳೆಯುವುದು. ೨. ತಿರಸ್ಕಾರ : "ಸೂದನೀಯಂ, ಸೂದ್ಯಂ, ಸೂದಿಃ, ಕ ನಿರಾಕರಣಂ" (ಶಾಶಕ್ಕ. ೮೪). ೩. ನಿವಾರಿಸುವುದು ; ಹೋಗಲಾಡಿಸುವುದು : ವಿವೇಕಜ್ಞಾನದೀಪದಲಿ ಶೋಕ ಮೋಹಮಹಾಂಧಕಾರನಿರಾಕರಣವನು ಮಾಡಿ ಪುಣ್ಯಶ್ಲೋಕನನು ಸಂತವಿಸಿ ನಾರದನಡಱಿದನು ನಭವ (ನಿಭಾಗ. ೧-೯-೪೪). ೪. ಬಿಡುವುದು; ತ್ಯಜಿಸುವುದು. 'ನಿರಾಕರಿಸು' ಪರಾ. [ಸಂ.]

**ನಿರಾಕರಣಂಗೆಯ್** (ಕ್ರಿ). ೧. ಅಲ್ಲಗಳೆ. ೨. ತಿರಸ್ಕರಿಸು : ಈ ಪೇೞ್ದ ಮೂಱುಂ ತೆಱದೊಳ್ ನೆಗೞ್ದ ಜೈನದ್ವಿಜಂಗೆ ಹಿಂಸಾದೋಷಮಾಗದೆಂದು ನಿಜಪಕ್ಷದೋಷನಿರಾಕರಣಂಗೆಯ್ವುದು (ಚಾವುಂಪು. ೨೨೬); ದುರ್ಯೋಧನಂ ಹರನುಮಂ . . . ಕಂಜೋದರನುಮಂ ನಿರಾಕರಣಂಗೆಯ್ದು ನಿತಜೞಾಳಂ ಮಾಣ್ದು ಸ್ವೈರಿಸಲಾಱದೆ ಸಮರೋದ್ಯೋಗಂಗೆಯ್ಯೆ (ಗದಾಯು. ೩-೪೪ ಪ). [ನಿರಾಕರಣ+ಗೆಯ್$_1$]

**ನಿರಾಕರಣೆ** (ನಾ). ೧. = ನಿರಾಕರಣ ೧ : ಅನೇಕ ಪ್ರಾಚ್ಯಸಂಘದ ಪತ್ರಿಕೆಯ ಪ್ರಕಾಶನ ಸಮಿತಿಯ ಸದಸ್ಯರ ಅಭಿಪ್ರಾಯವೂ, ಸಂಪೂರ್ಣ ನಿರಾಕರಣೆಯಲ್ಲದಿದ್ದರೂ ಅಷ್ಟಾಗಿ ಕಾಲ್ಡ್‌ವೆಲ್ಲನ ಸೂಚನೆಗೆ ಪೋಷಕವಾಗಿಲ್ಲ (ದ್ರಾವಿ. ೪೧) ; ಆ ನಿರಾಕರಣೆಯಲ್ಲಿ ಕೋಪ ದ್ವೇಷಗಳು ತುಳುಕುತ್ತಿದ್ದಂತೆ ನೆಕ್ಲ್ಡೋವನಿಗೆ ಭಾಸವಾಯಿತು (ಪುನರು. ೨೫೫). ೨. ಸಂಪೂರ್ಣ ನಾಶ; ನಿರ್ಮೂಲನ : ಓಕರಿಸಿದಳು ಮೃತ್ಯುವೆನ್ನನು ಲೋಕದಲಿ ಹೊಱಗೆಂದು ಯಮನ ನಿರಾಕರಣೆಗಳ ಜೀವಜಾತಿಯೊಳಲ್ಲವಿವನೆಂದು ಲೋಕದಲಿ ಡಂಗುರವ ಹೊಯ್ಸಿದನೀ ಕಮಲನಾಭನೆ ಕಣಾ (ಕುವ್ಯಾಅ. ೧೪-೧೪). [ಸಂ. ನಿರಾಕರಣ]

**ನಿರಾಕರಿಷ್ಣು** (ನಾ). ತಿರಸ್ಕರಿಸುವವನು: ವ್ಯಾಕುಲರ ಬಯಲ್ಬಯ್ದು ಚಪಲಾನೀಕ ಬಂಡಿಸಿ ಚಂಡಪಾತ ನಿರಾಕರಿಷ್ಣುಗಳೊಕ್ಕಲಿಕ್ಕಿತು ದಳದ ಮಧ್ಯದಲಿ (ಕುವ್ಯಾಶ. ೨-೨೦). [ಸಂ.]

**ನಿರಾಕರಿಸು** (ಕ್ರಿ). ೧. ಅಲ್ಲಗಳೆ ; ಧಿಕ್ಕರಿಸು ; ಹೀಯಾಳಿಸು : ಪಾರ್ವರ ಸಭೆಯ ನಡುವಿರ್ದು ಕನಿಷ್ಠನಿಷ್ಠುರವಚನಂಗಳಿಂ ನಾನಾಪ್ರಕಾರದಿಂ ನಿರಾಕರಿಸಿ ನುಡಿದು ಪೊಲ್ಲದಂ ಪೇೞ್ದಿಟ್ಟ ಕಳೆಯೆ (ವಡ್ಡಾರಾ. ೭-೧೯) ; ತೆರೆಗಳ ಬಂಬಲಂ ಮಿಳಿರ್ವ ಕೇತನ[ರಾ]ಜಿಗಳ್ . . . ತೆಱಂಬೊಳೆವ ವಿಮಾಂಗಳನುಳ್ಳುವ ಕೈದುಗಳ್ ನಿರಾಕರಿಸಿರೆ ಮೇರೆದಪ್ಪಿ ಕವಿದತ್ತು ನರಾಧಿಪಸೈನ್ಯಸಾಗರಂ (ಪಂಪಭಾ. ೩-೭೪) ; ಪೊಳೆವ ಮಿಂಚಿನ ಗೊಂಚಲನಂಚಿತೋತ್ತಮಾಭರಣದ ದೀಪ್ತಿ ತೋರವನಿಯಂ ಪೊಸಮುತ್ತಿನ ಲಂಬಣಂ ನಿರಾಕರಿಸೆ (ಶಾಂತಿಪು. ೭-೧೪) ; ಈ ಮಹಾಗಂಭೀರಘೋರ ನಿರ್ಘೋಷಮಂ ನೀಂ ಶಬ್ದಮಾತ್ರಮೆಂದೇಕೆ ನಿರಾಕರಿಸುವೆ (ಪಂಚತಂ. ೩೭-೫); ದಮಘೋಷಪುತ್ರಂ ವಸುದೇವಪುತ್ರನಂ ನಿರಾಕರಿಸಿ ನುಡಿಯಲ್ (ಜಗವಿ. ೧೭-೨೪ ಪ) ; ತಾರಕಂ ನಯಮನೊಲ್ಲದೆ ನಿರಾಕರಿಸಿ ನುಡಿಯೆ (ಗಿರಿಕ. ೬-೨೮ ಪ) ; ಲೋಕಸಮ್ಮತವಾವುದದನು ನಿರಾಕರಿಸುವವರುಗಳು ತಾವೇನಾಕೆವಾಳರೆ ಜಗಕೆ (ಕುವ್ಯಾಉ. ೪-೧೦೦) ; ತಾನು ನಿರಾಕರಿಸುತ್ತಿದ್ದರೂ, ಅವನು ತನ್ನನ್ನು ಪ್ರೋತ್ಸಾಹಿಸುತ್ತಾ ಹೇಗಾದರೂ ಕಾರ್ಯಸಾಧನೆಯನ್ನು ಮಾಡಲು ಯತ್ನಿಸುತ್ತಿದ್ದ ಅತನು ತನ್ನ ಹಿತಚಿಂತಕನೆಂದೂ ನಿರ್ಧರಿಸಿದಳು (ರಾವಿಜ. ೧೯). ೨. ಬಿಡು ; ವರ್ಜಿಸು : ಪಂಚೇಂದ್ರಿಯ ವಿಷಯಸ್ಪರ್ಶರಸಗಂಧಶಬ್ದರೂಪಂಗಳಂ ನಿರಾಕರಿಸುತ್ತುಂ (ಅಜಿಪು. ೭-೮ ಪ) ; ಇಂತಪ್ಪ ಆಶೆ ಹುಸಿ ಬಾಧೆಯ ನಿರಾಕರಿಸಿ ಇರಬಲ್ಲ ಗುಹೇಶ್ವರ ನಿಮ್ಮ ಶರಣ (ಅವಚಂ. ೧೧೬-೫೨೭) ; ಮಹಾರಾಜನ ಈ ಮನೋವ್ಯಾಕುಲತೆಯಿಂದ ಉತ್ಸವವು ನಿರಾಕರಿಸಲ್ಪಟ್ಟಿರುವುದು (ಶಾಕುಂತ. ೮೨-೩). ೩. ಒಪ್ಪದಿರು ; ಸಮ್ಮತಿಸದಿರು : ತಿಮ್ಮನನ್ನು ಅತ್ತಿ ಹಣ್ಣು ಕೊಡೆಂದು ಕೇಳಿದರು . . . ತಿಮ್ಮನು ಕೊಡುವುದಕ್ಕೆ ನಿರಾಕರಿಸಿದ (ಚೆಂಗಾಳ್ವ. ೮೦) ; ಚಾಡಪ್ಪನವರು ತಮ್ಮ 'ಶೀವರ್‌ಲೆಟ್' ಕಾರು ಕಳುಹಿಸುತ್ತೇನೆಂದರೂ ಗೋದಿ ನಿರಾಕರಿಸುತ್ತಿದ್ದಳು (ಹಳ್ಳಿಹಾ. ೯೮) ; ಅವಳ ಸರಳಮನಸ್ಸು ಆವಳನ್ನು ಆದರ್ಶದತ್ತ ಕರೆಯುತ್ತಿತ್ತೇ ವಿನಃ ಹಿಂದಿರುಗಿ ಮತ್ತೆ ಬರಲು ನಿರಾಕರಿಸುತ್ತಿತ್ತು (ಜೀವರಂ. ೭೧) ; ಕುಪಿತಳಾದ ರಾಧೆಯು ಮೊದಲು ಕೃಷ್ಣನನ್ನು ಸ್ವೀಕರಿಸಲು ನಿರಾಕರಿಸುತ್ತಾಳೆ (ಭಾರಜಾ. ೪೫) ; ಬಡವನಾದಾಗ್ಯೂ ಸಂತುಷ್ಟನಾಗಿದ್ದ ಬ್ರಾಹ್ಮಣನು ಅವನ ಹಣವನ್ನು ನಿರಾಕರಿಸುತ್ತಿದ್ದನು (ಶಾಂಪಜೀ. ೧೪).

[ನಿರಾಕರಣ+-ಇಸು$_3$]

**ನಿರಾಕಾಂಕ್ಷೆ** (ನಾ). ಆಸೆಯಿಲ್ಲದಿರುವಿಕೆ ; ಆಕಾಂಕ್ಷೆಗಳಿಲ್ಲದಿರುವುದು : (ಕ): [ಸಂ. ನಿರಾಕಾಂಕ್ಷಾ]

**ನಿರಾಕಾರ** (ಗು). ೧. ಆಕಾರವಿಲ್ಲದ; ರೂಪವಿಲ್ಲದ; ಅಮೂರ್ತವಾದ: ಆ ಮೌನಮಯ ಅಂಧಕಾರದಲ್ಲಿ, ನಿಸರ್ಗ . . . ಮೌನದಲಿ ತೆಯ್ದು ಕತ್ತಲಿನಲ್ಲಿ ನಿರ್ಮಿಸಿದ, ನಿರಾಕಾರವಿಗ್ರಹದಂತಿರುತ್ತದೆ (ಚಿತಂಬಾ. ೯೩). (ನಾ). ೨. ಆಕಾರವಿಲ್ಲದುದು ; ರೂಪವಿಲ್ಲದುದು ; ದೇಹವಿಲ್ಲದುದು : ನಿರಾಕಾರವ ಮಾಡುವ ಸಾಕಾರವುಂಟೆ (ಅವಚಂ. ೨೭೦-೧೨೪೦) ; ಸಗುಣವೇ ಸಾಕಾರ ನಿರ್ಗುಣವೇ ನಿರಾಕಾರ (ಅಮೃತ. ೬-೭೪) ; ಸ್ವಪ್ನ ಲೋಕದೊಳು ಆಕಾರಪ್ರಳಯವಿರುವಂತೆ, ತುಂಬಿದೆ ನಿರಾಕಾರ ತಮ (ಉಯ್ಯಾಲೆ. ೪-೪) ; ನಿರಾಕಾರವಾದದ್ದು ಪ್ರತ್ಯಕ್ಷವಾದರೆ ಆಕಾರವಾದದ್ದು ಕಾಣದೆ ಹೋದೀತು (ಗಾದೆ). ೩. ಆಕಾರವಿಲ್ಲದವನು ;

ದೇಹವಿಲ್ಲದವನು ; ಅಮೂರ್ತಸ್ವರೂಪ : ಅಯ್ಯಾ ನೀನು ನಿರಾಕಾರವಾಗಿರ್ದಲ್ಲಿ ನಾನು ಜ್ಞಾನವೆಂಬ ವಾಹನವಾಗಿರ್ದೆ ಕಾಣಾ (ಬಸವ.೩); ನಿರಾಕಾರ ನಿರಜ . . . ಪಂಪಾವಿರೂಪಾಕ್ಷ ಶರಣು (ಹಚಕ೭. ೧-೪). **೪.** [ಜೈನ] ಯಾವುದೇ ಫಲಪ್ರಾಪ್ತಿಯ ಅಪೇಕ್ಷೆಯಿಲ್ಲದೆ ಮರಣಾಂತಿಕವಾಗಿ ಕೈಕೊಳ್ಳುವ ಉಪವಾಸ: ಸಾಕಾರ ನಿರಾಕಾರಾಗತಮಪ್ಪ ನಶನಮೆಂಬ ಮೊದಲ ತಪದೊಳಂ . . . ಇಂತಪ್ಪೆಡೆಯೊಳಿಂತೆಂಬವರ್ ನಿಜಿಸಿದೊಡಲ್ಲದೆ ನಿಲ್ಲೆನೆಂಬಾ ನಿಯಮಮಂ (ಆದಿಪು. ೬-೩೦ ವ) ; ಸಾಕಾರ ನಿರಾಕಾರ ವಿರಹಿತಮುಪವಾಸಂ (ಶಾಂತಿಪು. ೬-೪೯ ವ) ; ಆರಯೆ ಸಾಕಾರ ನಿರಾಕಾರಮೆನಿಪ್ಪೆರಡು ಭೇದದಶನಮಂ . . . ಆಂತಂ ಮುನಿಪಂ (ಚಂದ್ರಪು. ೧೧-೮). ℙ "ಅನಶನವೆಂಬುದು ಸಾಕಾಂಕ್ಷ ಮತ್ತು ನಿರಾಕಾಂಕ್ಷ ಎಂದು ಎರಡು ವಿಧವಾಗಿದೆ. ೧. ಷಷ್ಠಮ, ಅಷ್ಟಮ, ಮಾಸ ಮೊದಲಾದ ಉಪವಾಸಗಳೂ, ಕನಕಾವಳಿ, ಏಕಾವಳಿ, ಮುರಜ, ಸಿಂಹನಿಃಕ್ರೀಡಿತ ಮೊದಲಾದ ವ್ರತಗಳ ಅಂಗವಾದ ನಿಯಮಿತ ಕಾಲದ ಉಪವಾಸಗಳೂ ಸಾಕಾಂಕ್ಷ ; ಇದಕ್ಕೆ 'ಇತಿರಿಯ'ವೆಂತಲೂ 'ಅವಧೃತ'ವೆಂತಲೂ ಹೆಸರುಂಟು. ೨. ಭಕ್ತಪ್ರತ್ಯಾಖ್ಯಾನ, ಇಂಗಿನೀಮರಣ, ಪ್ರಾಯೋಪಗಮನ ಅಥವಾ ಇನ್ನಾವುದೇ ರೀತಿಯಿಂದ ಮರಣ ಪರ್ಯಂತವಾಗಿ ಆಚರಿಸುವ ಉಪವಾಸಕ್ಕೆ ನಿರಾಕಾಂಕ್ಷವೆಂದು ಹೆಸರು. ಇದಕ್ಕೆ 'ಯಾವಜ್ಜೀವ', 'ಅನವಧೃತ' ಎಂದೂ ಹೆಸರುಂಟು. 'ನಿರಾಕಾರ' ಎಂಬುದು ಇಲ್ಲಿ 'ನಿರಾಕಾಂಕ್ಷ' ಎಂಬರ್ಥದಲ್ಲಿ ಬಳಕೆಯಾಗಿದೆ. [ಸಂ.]

**ನಿರಾಕುಲ,** ನಿರಾಕುಳ (ಗು). **೧.** ಮನಃಕ್ಲೇಶವಿಲ್ಲದ ; ಚಿಂತೆಯಿಲ್ಲದ ; ವ್ಯಾಕುಲದಿಂದ ದೂರವಾದ ; ನೆಮ್ಮದಿಯಿಂದ ಕೂಡಿದ : ನಿರಾಕುಲಸುಕಮಯಂ . . . ಆಗಿ ಕಾನನಂ ಕಣ್ಗೆಸೆದುದು (ಹಚಕಾ. ೫-೧೮) ; ನಿರಾಕುಲಾಂತಃಕರಣನಾದನು ಬಳಿಕ ಕಲಿಭೀಮ (ಕುವ್ಯಾಆ. ೯-೮). (ನಾ). **೨.** ವ್ಯಾಕುಲವಿಲ್ಲದವನು ; ದುಃಖರಹಿತನಾದವನು : ನಿರಾಕುಲ ನಿಷ್ಕಲ ನೀಲಕಂಠ . . . ಜಯ ಶಂಕರ ನಿರ್ಜಡ ಶಾಂಭವೀಧವಾ (ಶಬಶಂ. ೫-೨೪) ; ನಾನೆಂಬ ನಾದಗಳು ಇಲ್ಲದಂದು . . . ತಾನು ತಾನೆಂಬ ವಸ್ತುಗಳು ಇಲ್ಲದಂದು ಅತ್ತಿತ್ತಲೆ ನಿಶ್ಚಿಂತ ನಿರಾಕುಲನಾಗಿರ್ದನಯ್ಯ (ನಿರಾಗೋ. ೭-೪೫). **ನಿರಾಕುಳ: ೧.** ಖಚರೇಶ್ವರನೆಯ್ದಿದಂ ನಿರಾಕುಳಗತಿಲೀಲನಪ್ರತಿರಥಂ ರಥನೂಪುರ ಚಕ್ರವಾಳಮಂ (ಶಾಂತಿಪು. ೬-೨೨). **೨.** ಖಳಕರ್ಮಪ್ರವಿಧೋಗ್ರ ಕಂಟಕಕುಳಪ್ರಧ್ವಂಸದಿಂದಂ ನಿರಾಕುಳರುಂ ನಿಷ್ಕಳರುಂ . . . ತಾವಾಗಿ ಲೋಕಾಗ್ರದೊಳ್ ತೊಳಗುತ್ತಿರ್ಪ ವಿಶುದ್ಧಸಿದ್ಧರೆಮಗೀಗಾತ್ಮೋದಯ ಪ್ರಾಪ್ತಿಯಂ (ಜೀವಸಂ.೧-೨) ; ನಿತ್ಯಾನಂದ ನಿಜನಿಶ್ಚಲ ನಿರಾಕುಳ ನಿರ್ವಿಕಾರ (ಪ್ರಭುಲೀ. ೨-೮). **೩.** ನಿರಾಯಾಸ ; ನಿಶ್ಚಿಂತೆ ; ನೆಮ್ಮದಿ : ಈ ಸಮುದ್ರತೀರಮುಪಾಯಬಹಳಮೆನಗಂ . . . ಇನ್ನಿಲ್ಲಿರಲ್ಬಾರದು ಪೆಜತೊಂದು ನಿರಾಕುಳಮಪ್ಪೆಡೆಯನೆಡೆಮಾಡಿ ಬಂದೆನ್ನನೊಡಗೊಂಡು ಪೋಗಿಮೆಂಬುದುಂ (ಪಂಚತಂ. ೧೫೦-೧೪) ; ನಿರಾಕುಳದ ಭಕ್ತಿ ನಿರ್ಭಯಲಾಯಿತ್ತು ಬಸವಾ (ಸೀಲವ. ೧೧-೨೬) ; ನಿಶ್ಚಿಂತವೆಂಬಾಶ್ರಮದಲ್ಲಿ ನಿರಾಕುಳ [ಪಾಠಾಂ. ನಿರಾಳ]ವೆಂಬ ಸಿಂಹಾಸನವನಿಕ್ಕಿ ಗಗನಗಂಭೀರದ ಭಾವಿಯೊಳಗೆ ಅಗೋಚರದ ಅಗ್ಘವಣಿಯ ತಂದು (ಅವಚಂ.೮೩-೩೭೪) ; ತಮವ ಹಿಂಗಿಸಿ ವ್ಯಾಕುಲವನಳಿದು ನಿರಾಕುಳದಲ್ಲಿ ನಿಂದು . . . ಮುಂದೆ ನೋಡಿದರೆ ಜ್ಯೋತಿಯ ಬೆಳಗ ಕಾಣಬಹುದೆಂದರು (ಲಿಂಗವ. ೬೫-೫೬) ; ನಮ್ಮ ವಿವೇಕವನು ದಳ ನೋಡುತಿರಲಿ ನಿರಾಕುಳದಲೆಚ್ಚಾಡುವೆವು ನಿಲ್ಲೆಂದನಾ ಭೀಮ (ಕುವ್ಯಾಕ. ೧೯-೨೯). [ಸಂ.]

**ನಿರಾಕುಲಂ,** ನಿರಾಕುಳಂ (ಅ). ವ್ಯಾಕುಲವಿಲ್ಲದ ಹಾಗೆ; ನೆಮ್ಮದಿಯಿಂದ ಕೂಡಿ : ಇಳೆಯೊಳ್ ಪೆರ್ಮೆಳೆಯುಂ ಸಮಸ್ತ ಫಲಮುಂ ಸಂತೋಷಮುಂ ಧರ್ಮಸಂಕುಳಮುಂ . . . ಶ್ರೀಯುಮಾಯುಂ ನಿರಾಕುಲ[ಪಾಠಾಂ.ಳ]ಮೆಂದುಂ ನೆಲಸಿರ್ಪುದೊಂದು ತೆಜನಂ ತಾಂ ಮಾಳ್ಕೆ (ಗಿರಿಕ. ೧೦-೧೧೫) ; ಅಲರ್ಗಂಪಿಗೆಜಗಿರ್ದ ತುಂಬಿಗಳ ಬಂಬಲ್ಮಾಮರ್ಗಿಲ್ . . . ಪಿಕಪ್ರಕರನಾದಂ ಮೇಘನಾದಂ ನಿರಾಕುಲವೊಂದಿರ್ಪ ಶುಕಾಳಿ ಶಕ್ರಧನುವೆಂಬಂತಾಗೆ ಮೇಘಾಗಮಂಬೊಲದೇಂ ಸೂಸಿದುದೋ ಮರಂದರಸವೃಷ್ಟಿವ್ರಾತಮಂ ಮಾಮರಂ (ರಾಜಶೇ. ೨-೭೨). **ನಿರಾಕುಳಂ :** ವೀರಲತಾಂಗಿಯ ಸೋಂಕು ಮೆಯ್ಯೊಳಂ ಕುರಿಸೆ ನಿರಾಕುಳಂ ಕಳೆದನಾಜಿಪರಿಶ್ರಮಮಂ ಗುಣಾರ್ಣವಂ (ಪಂಪಭಾ. ೧೧-೧೫೫) ; ಮಗನದೊಂದು ವೃತ್ತಾಂತಮಂ ನಿರಾಕುಳಮೆ ಪೇಟ್ದಿರ್ (ಕಾದಂಬ. ೬೪೦) ; ನಿರಾಕುಳಂ ಬಿಸುಟು ಹಿಂಸೆಯೊಳಾದನುಸಂಸ್ಕೃತಿಯಂ . . . ನೆಜಿೞಿಯೆ ನೋಂತುದು ನೋಂಪಿಗಳಂ ಮೃಗಾಧಿಪಂ (ವರ್ಧಮಾ. ೬-೩೨) ; ಧ್ರುವಂ ಸನಾತನಂ ನಿತ್ಯಮವಿನಶ್ವರಮಪ್ರತಿಹ್ಯತ ಶಾಶ್ವತ ಸ್ಥಾನವೆಮಗಕ್ಕೆ ನಿರಾಕುಳಂ (ವಸ್ತುಕೋ. ೨೧-೨೦) ; ಮಾಯ್ದ ವಿಧಾತ್ರನೆನ್ನಣುಗಿನಗ್ರತನೂಜನನಿಂತಗಲ್ಚಿ ಕೊಂಡುಯ್ದನಪಾರ ಶೋಕರಸಪೂರದೊಳೀ ಸಭೆಯಂ ನಿರಾಕುಳಂ ತೊಯ್ದನಡುತರ್ಗುರ್ವಿದನದಲ್ತಿರ್ದ ನಿಚ್ಚನರಲ್ಚೆ ತನ್ನೊಳಂ ಪೊಯ್ದನಿದರ್ಕೆ ಕೃತ್ಯವೆನಗೇನೆನುತುಂ ತಳೆದಂ ಪ್ರಳಾಪಮಂ (ಚಂದ್ರಪು. ೫-೧೦) ; ಶಿವನಲ್ಲಿ ತಿರುನಾಳ್ಗೆ ಬರೆ ಕಂಡು ತರುಕುಳಂ ಶಿವನ ರೂಪಂ ಬಯಸಿ ಬೆಳೆದವು ನಿರಾಕುಳಂ (ನಂಬಿರ. ೯-೨೬) ; ಏಕ ದ್ವಿ ತ್ರಿ ಚತುಃ ಪಂಚಾಕಲಿತಾರ್ಥಂಗಳಾಗಿ ಜಟನೊಳವು ನಿಸರ್ಗಾಕೃತಿ . . . ನಿರಾಕುಳಮುಸಿರ್ವೆಂ (ಶಮದ. ೨೩); ನಿರಾಕುಳಂ ಚಪ್ಪನ್ನದೇಶಂಗಳಂ ಸಂಚರಿಸುತುಂ ಕಪ್ಪ ಕಾಣ್ಕೆಗಳಂ ಕೂಡಿ ತರ್ಪುದು (ರಾಮಾಶ್ವ. ೪೬-೨೯). [ಸಂ.]

**ನಿರಾಕುಳ** 'ನಿರಾಕುಲ' ನೋ.

**ನಿರಾಕುಳಂ** 'ನಿರಾಕುಲಂ' ನೋ.

**ನಿರಾಕುಳತೆ** (ನಾ). ನಿಶ್ಚಿಂತೆ; ನೆಮ್ಮದಿ : ನಿರಾಮಯನುಮಪ್ರತಿರೂಪನುಮಾಗಿ ದೇವಕಾಂತಾದಯಿತಂ ನಿರಾಕುಳತೆಯಂ ತಳೆದು (ವರ್ಧಮಾ. ೧೧-೧). [ಸಂ. ನಿರಾಕುಲತಾ]

**ನಿರಾಕುಳಿತ** (ಗು). ವ್ಯಾಕುಲವಿಲ್ಲದ ; ಕ್ಲೇಶವಿಲ್ಲದ : ನಿರಾಕುಳಿತ ಮನಂ ಬೃಹಸ್ಪತಿ ಸಮಾಯತಮೇ ಎನಲಾಯತಂ (ಗಿರಿಕ. ೧೦-೮೮) ; ಏಕಮೇವಾದ್ವಿತೀಯಮೆಂಬ ನಿರಾಕುಳಿತ ತೇಜೋನಿಧಿಗೆ ಮಾಯಾಕಳತ್ರದೊಳಾಯ್ತು ನಿಜಗುಣಭೇದವು (ಕುವ್ಯಾಅ. ೧೪-೩೩). [ಸಂ. ನಿರಾಕುಲಿತ]

**ನಿರಾಕುಳಿಸು** (ಕ್ರಿ). (?) : ಸೋಕಿದನಿಲನನಂದಗೆಡಿಸಿದಳಾಕೃತಿಯ ಪರಿಮಳದಲಂಗನೆ ಮೂಕನಾದವು ಗಿಳಿಗಳಬಲೆಯ ಕಳರವಂಗಳಲಿ ನಾಕವನಿತೆಯ ನಯನಕಾಂತಿ ನಿರಾಕುಳಿಸೆ ಹರಿಣೀಕುಳವನಿಂತಾಕರಿಸಿದಳು ಚಾರುವನಲಕ್ಷುಮಿಯನು ಚಪಲಾಕ್ಷಿ (ನಿಭಾಗ. ೫-೨-೭).

[ℙ ಇದು 'ನಿರಾಕರಿಸು' ಎಂಬುದರ ಅಪಲಿಖಿತವಿರಬಹುದು]

**ನಿರಾಕೃತ** (ಗು). **೧.** ನಿವಾರಿಸಿದ ; ಹೊರದೂಡಿದ : ಪಿತೃಸಂದೇಶದಿನಾ ಮಹೋನ್ನತಿಯುತಂ ಸಾದ್ರಾರ್ಂತರಂಗಂ ನಿರಾಕೃತಭೂತಾಪಭರಂ ಕುಮಾರನಧಿಕೋತ್ಸಾಹಾವಗಾಹಂ ಪ್ರಭಾವತಿಯೆಂಬಗ್ಗದ ಕನ್ನೆಯಂ ಮದುವೆನಿಂದಂ (ಚಂದ್ರಪು. ೪-೧೨) ; ಕುಳಿರ್ವಭಿಷೇಕಗಂಧಸಲಿಲಂಗಳ ನಾಗಳೆ . . . ಕೋಮಳಾಂಗುಳಿಗಳೊಳಟ್ಟಿ ಕೊಂಡಿರ್ದಯೊಳಂಟೆ ನಿರಾಕೃತಪಾಪತಾಪಮುತ್ಪುಳಕಕದಂಬಕಂ ನಲಿದುದಂದು ಕರಂ ದಿವಿಜಾಂಗನೋತ್ಕರಂ (ಚಂದ್ರಪು. ೧೨-೧೪೮). (ನಾ). **೨.** ಕಡೆಗಣಿಸಿದುದು ; ನಿರಾಕರಿಸಿದುದು : "ಪ್ರ(ತ್ಯಾ)ಖ್ಯಾತಂ. . . ನಿರಾಕೃತಂ, ನಿರಸ್ತಂ,

ಅಪವಿದ್ಧಂ, ಪರಿಹೃತಂ–ಈ ೭ ಪರಿಹರಿಸಲ್ಪಟ್ಟುದು" (ಹಲಾಯು. ೧೧೭–೧೮). [ಸಂ.]

**ನಿರಾಕೃತಿ** (ನಾ). ೧. ರೂಪವಿಲ್ಲದುದು ; ಆಕಾರವಿಲ್ಲದುದು ; ಆಕೃತಿಯಿಲ್ಲದುದು : ಏಕಮಾತ್ಮಾಯೆಂದು ವೇದಾನೀಕ ಕೈವಾರಿಸಲು ಮೆಚಿಸುವ ನಿರಾಕೃತಿಯ ಪರಬೊಮ್ಮರೂಪಿನ ತಾತ ನೋಡೀತ (ಉಪ್ಪಾಲು. ೯–೫೩). ೨. ವೇದಾಧ್ಯಯನ ಮಾಡಿರದವನು ; ವೇದಗಳನ್ನು ಅಭ್ಯಾಸ ಮಾಡದವನು : "ಅಸ್ವಾಧ್ಯಾಯಃ, ನಿರಾಕೃತಿಃ —ಈ ೨ ವೇದವಿಲ್ಲದವಂ" (ಹಲಾಯು. ೬೭–೨೫೧) ; "ಓದಿಲ್ಲದಂ ನಿರಾಕೃತಿಯುನಧ್ಯಾಯನಕ್ಕುಂ" (ಮಂಗರಾ. ೭೫–೬). ೩. ಹೊರದೂಡಿದುದು ; ತಿರಸ್ಕೃತವಾದುದು : "ಪರಿಹೃತಂ . . . ಅಪವಿದ್ಧಮೆನೆ ನಿರಾಕೃತಿ ಪ್ರತಿಕ್ಷಿಪ್ತವೆನಲು" (ಮಂಗರಾ. ೧೨೮–೯). ೪. ತಿರಸ್ಕರಿಸುವುದು ; ಉಪೇಕ್ಷಿಸುವುದು : "ಪ್ರತ್ಯಾಖ್ಯಾನಂ, ನಿರಸನಂ, ಪ್ರತ್ಯಾದೇಶಃ, ನಿರಾಕೃತಿಃ — ೪ ತಿರಸ್ಕರಿಸುವಿಕೆ, ಜರಿಯುವಿಕೆ" (ಸಿದ್ಧಾಂತಿ. ೩೬೬). [ಸಂ.]

**ನಿರಾಕ್ಷೇಪ** (ಗು). ೧. ಆಕ್ಷೇಪವಿಲ್ಲದ; ದೂರಿಲ್ಲದ. (ನಾ). ೨. ಆಕ್ಷೇಪವಿಲ್ಲದುದು. ೩. ಆಕ್ಷೇಪವಿಲ್ಲದಿರುವಿಕೆ. [ಸಂ.]

**ನಿರಾಕ್ಷೇಪಣೆ** (ನಾ). ೧. ಆಕ್ಷೇಪಣೆಯಿಲ್ಲದುದು. ೨. ನಿಂದನೆಗೆ ಗುರಿಯಾಗದಿರುವಿಕೆ ; ನಿಂದೆಗೆ ಗುರಿಯಾಗದ ಸ್ಥಿತಿ : (ಕ). [ಸಂ. ನಿರಾಕ್ಷೇಪಣ]

**ನಿರಾಖ್ಯ** (ನಾ). ಹೆಸರಿಲ್ಲದವನು : ಅನಾಮಧೇಯ : ನಿರಾಕಾರ ನಿರ್ಗುಣ ನಿರುತ್ತರ ನಿರಾಖ್ಯ ನಿರ್ಜಡ ನಿರ್ವಿಕಲ್ಪ (ಏಕೋಪು. ೬–೨). [ಸಂ.]

**ನಿರಾಗ** (ಗು). ಆಸಕ್ತಿಯಿಲ್ಲದ ; ಮೋಹವಿಲ್ಲದ ; ಕಾಮವಿಲ್ಲದ. [ಸಂ.]

**ನಿರಾಗಮ** (ಗು). ವೇದೋಕ್ತವಲ್ಲದ ; ವೇದಾಧಾರವಿಲ್ಲದ : ವೇಗುಲಕೆ ನಿಮಗಿನ್ನು ನಿಚ್ಚಂ ಹೋಗಿ ಹೊಡವಡಲೇತಕೆಂಬ ನಿರಾಗಮ ಪ್ರಶ್ನೆಗೆ ಕೊಡುವೆನುತ್ತರವನು (ಬಸವು. ೫೧–೧೯). [ಸಂ.]

**ನಿರಾಗಸ** (ನಾ). ಪಾಪರಹಿತವಾದುದು ; ತಪ್ಪಿಲ್ಲದುದು : ಇಂಥ ಸಂಬಂಧ ಮುಂಬಯಿಯಲ್ಲಲ್ಲದೆ ಮತ್ತೆಲ್ಲಿಯೂ ಇಷ್ಟು ಸರಾಗವಾಗಿಯೂ ಸರಳವಾಗಿಯೂ ನಿರಾಗಸವಾಗಿಯೂ ತಿಳಿಯಾಗಿಯೂ ಸಾಗುವದು ಶಕ್ಯವಿಲ್ಲ (ಮುಕ್ತಿ. ೩೩). [ಸಂ. ನಿರಾಗಸ್]

**ನಿರಾಗಸೆ** (ನಾ). ಪಾಪವಿಲ್ಲದವಳು ; ತಪ್ಪು ಮಾಡದಿರುವವಳು : ನಿರಾಗಸೆಯ ನಿಷ್ಕಾರಣದಿ ಬಿಡುವುದುಚಿತವೆ ನರೇಶಾ (ವೆಂಕಾರಾ. ೨–೧೧–೨೩). [ನಿರಾಗಸ + –ಎ₂]

**ನಿರಾಜಿ, ನೀರಾಜಿ,** (ನಾ). ೧. ಜರತಾರಿ ; ಸರಿಗೆ ; ಕಲಾಬತ್ತು : ನಿರಾಜಿಯ ದುಪ್ಪಟ ಗುಣಶ್ರೇಷ್ಠವಾಗಿಯೂ . . . ವಾತಶ್ಲೇಷ್ಮಹರವಾಗಿಯೂ ಇರುವುದು (ಸಕಪ್ಪೆ. ೩೩) ; ನಿರಾಜಿಯ ತೆರೆಯ ಮರೆಯೊಳ್ ಪ್ರಾಶನೆಯಂಗೈಸಿ (ಸೌಗಂಧಿ. ೪೩–೭) ; ಸಿಗಿಸಿಗಿಸುತಿಹ ನಿರಾಜಿಯ ಹಾಶಿಕೆಯ ಹಾಕಿ (ಬಾಣಾಕ ೧೧) ; ಗದ್ದಿಗೇ ಮೇಲೆ ಕೂತುಕೊಳ್ಳುವಾಗ ಧರಿಸಿಕೊಳ್ಳುವುದಕ್ಕೆ ನಿರಾಜಿ ಅಂಚು ಸೆರಗು ಉಳ್ಳ ಹಳದೀ ಮಗುಟ ಕೆಂಪಿನ ಮಗುಟಗಳಾದವು (ಮಾಮರಾ. ೧೨೮). **ನೀರಾಜಿ₁** : ೨. ಜರತಾರಿಯ ಬಟ್ಟೆ, —ಹಾಸು : ನೀರಾಜಿಯ ಮೇಲುಕಟ್ಟುಗಳಂ ಕಟ್ಟಿ . . . ನೋಡುವವರಿಗೆ ವಿಸ್ಮಯವಾಗುವಂತೆ ರಾಜದ್ವಾರಮಂ ರಚಿಸಿದಂ (ಮುದ್ರಾಮಂ. ೯೨) ; ಹಾಸಿ ನೀರಾಜಿಯುನದರಲ್ಲಿ ರತ್ನದ ರಾಶಿ ರಾಶಿಗಳನು ಸುರಿದೂ ಮಾಸಲೀಯದೆ ಜವಳಿಗಳ ಮೆದೆಯನಿಟ್ಟು ಲೇಸಿನ ಶಿಟ್ಟಿಗಳಿಹರು (ಸೌಗಂಪ. ೧–೧೧).

ನಿರಾಜಿಯ ಖಿಲ್ಲತ್ತು = ಸನ್ಮಾನಾರ್ಥವಾಗಿ ಕೊಡುವ ಜರತಾರಿ ಅಂಚಿನ ಉಡುಗೊರೆ, —ಶಾಲು : ದೊರೆಗಳವರು ಅಪ್ಪಣೆಕೊಟ್ಟು ಕಳುಹಿದ್ದ ನಿರಾಜಿಯ ಖಿಲ್ಲತ್ತು ನವರತ್ನಾಭರಣ ಮುಂತಾದ ಪದಾರ್ಥಗಳನ್ನೂ ಕುಶಲಪತ್ರಿಕೆಯನ್ನೂ ಒಪ್ಪಿಸಿದನು (ಮಹಾವಂ. I, ೧೪೩). [?. / ತುಳು. ನಿರಾಜಿ, ನಿರಾಸಿ ; ತೆಲು. ನಿರಾಸೀ]

**ನಿರಾಜಿಕಂಬಿ** (ನಾ). ಕಲಾಬತ್ತಿನ ಅಂಚು : ಬೀದಿಯಲ್ಲಿ ಹಳೇ ನಿರಾಜಿಕಂಬಿಯವನು ಕೂಗಿಕೊಂಡು ಹೋಗುತ್ತಿದ್ದಾನೆ (ರೂಢಿ). [ನಿರಾಜಿ + ಕಂಬಿ₁]

**ನಿರಾಜಿಗೌಸು** (ನಾ). ಜರತಾರಿ ಬಟ್ಟೆಯ ಮುಸುಕು, –ಹೊದಿಕೆ : ಮಣಿಮಯದ ತಟ್ಟೆಗಳಲ್ಲಿ ಮಡಗಿ ನಿರಾಜಿಗೌಸುಗಳಿಂದೊಡಗೂಡಿ ರಾಜೇಂದ್ರನ ಮುಂದಿರಿಸಿ (ಸೌಗಂಧಿ. ೫೭೧–೨). [ನಿರಾಜಿ + ಗೌಸು (<ಗವಸು)]

**ನಿರಾಜಿತೆರೆ** (ನಾ). ಜರತಾರಿ ಬಟ್ಟೆಯ ಪರದೆ, —ಜವನಿಕೆ : ದೊಡ್ಡ ಉಪ್ಪರಿಗೆ . . . ಪಟ್ಟೇ ತೆರೆಗಳು, ನಿರಾಜಿತೆರೆಗಳು, ಗೋಡೆಯ ಸುತ್ತ ಲಕ್ಷಣವಾಗಿ ಕಟ್ಟಿರತಕ್ಕ ಭಾವಚಿತ್ರಗಳೂ . . . ಕಾಣಿಸಿದವು (ಶೀಟಿಮಾ. ೫೫). [ನಿರಾಜಿ + ತೆರೆ₄]

**ನಿರಾಜಿದುಪ್ಪಟ** (ನಾ). (ಹಾಸಲು ಮತ್ತು ಹೊದೆಯಲು ಉಪಯೋಗಿಸುವ) ಜರತಾರಿಯ ದುಪ್ಪಟ : ರಂಗುವಡದ ಬೆರಳುಂಗುರ ಗೆಲಸದ ಅಂಗಿ ನಿರಾಜಿದುಪ್ಪಟಿಯು (ಸೌಂದರಾ. ೫–೧೨೧). [ನಿರಾಜಿ + ದುಪ್ಪಟ]

**ನಿರಾಜಿಬಟ್ಟೆ** (ನಾ). ಜರತಾರಿಯ ಬಟ್ಟೆ, —ವಸ್ತ್ರ : ಬೆರಳಿಗೆ ಉಂಗುರವಾಯಿತು . . . ಪಟ್ಟೇಅಂಚಿನ ಧೋತ್ರವಾಯಿತು, ನಿರಾಜಿಬಟ್ಟೆಯಾಯಿತು (ಮಾಮರಾ. ೧೨೮). [ನಿರಾಜಿ + ಬಟ್ಟೆ₂]

**ನಿರಾಜಿವಸ್ತ್ರ** (ನಾ). = ನಿರಾಜಿಬಟ್ಟೆ : ಚಿನ್ನ ಬೆಳ್ಳಿ ಪಾತ್ರೆಗಳನ್ನೂ ನಿರಾಜಿವಸ್ತ್ರಗಳನ್ನೂ . . . ಕೊಟ್ಟು (ಕೃವಾಸ. ೫೫). [ನಿರಾಜಿ + ವಸ್ತ್ರ]

**ನಿರಾಜಿಸೀರೆ,** ನೀರಾಜಿಶೀರೆ, ನೀರಾಜಿಸೀರೆ (ನಾ). ಜರತಾರಿ ಸೀರೆ; ಕಲಾಬತ್ತಿನ ಸೀರೆ : ಇನ್ನು ಸ್ವಲ್ಪ ತಡವಾಗಿದ್ದಲ್ಲಿ ಆ ಧೂರ್ತರು . . . ಅವಳುಟ್ಟಿದ್ದ ನಿರಾಜಿಸೀರೆಯನ್ನು ಕೂಡಾ ದಯಾದಾಕ್ಷಿಣ್ಯವಿಲ್ಲದೆ ಸುಲಿದುಕೊಂಡು ಬಿಡುತ್ತಿದ್ದರು (ಭಾರವೀ. ೩). **ನೀರಾಜಿಶೀರೆ :** ತೇಜದಿಂ ಮೆರೆವ ಕನಕಾವರಣ ಮತ್ತು ನೀರಾಜಿಶೀರೆಯುಮೆನಿಸಿ ಯಾಜ್ಞಿಕರ ಹೋಮವಿಭ್ರಾಜಿತಾಸಿತ ಧೂಮಮುಳಕಾಳಿಯಾಗಲಾ ನಗರನಾರಿಯೊಲೆಸೆವುದು (ಅರ್ಜುವಿ. ೧–೪೭). **ನೀರಾಜಿಸೀರೆ :** ಆರು ತಿಂಗಳಿಗೊಂದರಂತೆ ಕೊಂಡುಕೊಳ್ಳುವ ವರ್ಣರಂಜಿತ ನೀರಾಜಿಸೀರೆಗಳನ್ನೂ ತಂಗಿಗೆ ತೋರಿಸಿದ್ದಾಳೆ (ಬೆಳಮು. ೨೫೩). [ನಿರಾಜಿ + ಸೀರೆ₂]

**ನಿರಾಡಂಬರ** (ಗು). ಆಡಂಬರವಿಲ್ಲದ ; ಸರಳವಾದ : ಅವರ ನಿರಾಡಂಬರ ವ್ಯಕ್ತಿತ್ವ ಅವರ ಮನಸ್ಸನ್ನು ಸೆಳೆಯಿತು (ರಂಗಲೋ. ೬೨); ವಾಯುಗುಣಕ್ಕೆ ಅನುಗುಣವಾಗಿರುವಂತೆ ಉಡಿಗೆ ತೊಡಿಗೆಗಳು ನಿರಾಡಂಬರವಾಗಿದ್ದುವು (ದಭಾಇ. ೮೧). [ಸಂ.]

**ನಿರಾತಂಕ** (ಗು). ೧. ಅಡೆತಡೆಯಿಲ್ಲದ ; ಸುಗಮವಾದ; ಅಡ್ಡಿಯಿಲ್ಲದ. (ನಾ). ೨. ನಿರ್ವಿಘ್ನವಾದುದು ; ತೊಂದರೆಯಿಲ್ಲದುದು ; ಅಡೆತಡೆಯಿಲ್ಲದುದು ; ಸುಗಮವಾದುದು : ಸಾಮ್ರಾಜ್ಯಮಂ ನಿಷ್ಕಂಟಕಮುಂ ನಿರಾತಂಕಮುಂ ನಿಜಾಯತ್ತಮುಮೆನಿಸಿದಂ (ಚಂದ್ರವು. ೨–೬೦ ಪ); ಆಗಸದ ಗಂಟುಮೋರೆಯಲಿ ಹೊಂಬಿಸಿಲ ತುಂಬುನಗೆ ಹರಿಸಿ ಹರಿದಿಹುದು ನೀರು ನೀರೇ ನಿರಾತಂಕ (ನೆಲಮು. ೧೫–೧೮).

೩. ನಿರ್ಭೀತಿ ; ಹೆದರಿಕೆಯಿಲ್ಲದಿರುವಿಕೆ : ಇನ್ನು ನಿಮ್ಮ ಕೆಲಸಕ್ಕೆ ನಿರಾತಂಕವಾಗಿ ಕೈಯಿಕ್ಕಿರಿ (ಸವ.ತಿ. ೩೭); ಹಿಂಡುಹಿಂಡಾಗಿ ನೊಣಗಳು ಬಂದು ಎಲೆಯ ಹತ್ತಿರ ತೊಟ್ಟಿಕ್ಕಿದ್ದ ಪಾಯಸದ ಬಿಂದುಗಳನ್ನು ನಿರಾತಂಕವಾಗಿ ಹೀರಿದ ದೃಶ್ಯವನ್ನು . . . ನೋಡಿದ್ದು ಇಂದಿಗೂ ನೆನಪಿದೆ (ನಂಟರು. ೪೩). **[ಸಂ.]**

**ನಿರಾತ್ಮ** (ನಾ). ಕೈಗೊಂಡ ವ್ರತವನ್ನು ಬಿಟ್ಟವನು : "ಆತ್ತವ್ರತ ಸಂಸ್ಕಾರನಿವರ್ತಿತನವಕೀರ್ಣನುಂ ನಿರಾತ್ಮನುಮುಕ್ಕುಂ" (ವಸ್ತು.ಕೋ. ೫೮-೩೮). **[ಸಂ. ನಿರಾತ್ಮನ್]**

**ನಿರಾತ್ಮಜ** (ನಾ). ಮಗನಿಲ್ಲದಿರುವವನು; ಪುತ್ರಹೀನ : ದಿನಪಾಂಶದೊಳಿರೆ ಹಿಮಕರನಿನಾದಿಗಳ್ ನೋಡೆ ಪುಟ್ಟಿದಂ ತರದಿಂ ಕೋಪನನವನಿಪಪ್ರಿಯಂ ಬಹುಧನಾನ್ವಿತಂ ಪ್ರಭು ನಿರಾತ್ಮಜಂ ವಧಶೀಲಂ (ಜಾತತಿ. ೨೦-೧೬). **[ಸಂ.]**

**ನಿರಾದರ** (ಗು). ೧. ಆದರವಿಲ್ಲದ; ಮನ್ನಣೆಯಿಲ್ಲದ; ಗೌರವವಿಲ್ಲದ. (ನಾ). ೨. ಆದರವಿಲ್ಲದವನು ; ಆಸಕ್ತಿಯಿಲ್ಲದವನು : ಸಾರವಸ್ತುಗಳೊಳ್ ನಿಸರ್ಗದಿಂದೆ ತಾಂ ನಿರಾದರನಾಗಿ ಶುಭಭಾವನೆಯೊಳ್ ರಾಜ್ಯಕಾಲಮಂ ಸಲಿಸುತ್ತುಮಿರೆ (ಶಾಂತಿಪು. ೭-೧೧೬ ವ) ; ಭಯವಿವರ್ಜಿತಹೃದಯರುಂ ಪಾಪಮೆ ಮೂರ್ತಿವಂತಮಾಗಿರ್ದು ದಂಡಸಂಯುತರೊಳ್ ನಿರಾದರರುಮಪ್ಪಲ್ಲಿ ಧರ್ಮತತ್ತ್ವಮಂ ಕೇಳ್ದು ನಿರ್ವೇಗದಿಂ ಕುಮಾರದೀಕ್ಷಿತರಾದರ್. (ಚಾವುಂಪು. ೨೮೧). **[ಸಂ.]**

**ನಿರಾದರಣೆ** (ನಾ). ಗೌರವಿಸದೆ ಇರುವಿಕೆ ; ಮನ್ನಿಸದಿರುವಿಕೆ. **[ಸಂ. ನಿರಾದರಣ]**

**ನಿರಾದಾನ** (ನಾ). ಏನನ್ನೂ ತೆಗೆದುಕೊಳ್ಳದಿರುವುದು ಅಥವಾ ಕೊಡದಿರುವುದು : ಅಂತು ಮಡಿಪಿ ಶರೀರಸಮೇತಂ ನಿರಾದಾನವಿಧಾನದಿಂ ಗಾಳಿವೆಳಿಗಿನೊಳಿರ್ದಮಳದೀಪಿಕೆಯಂತಿರ್ದರುಮೊಡನದೃಶ್ಯರಾಗಿ ಬಂದು (ಶಾಂತಿಪು. ೭-೪೧ ವ). **[ಸಂ.]**

**ನಿರಾಧಾರ** (ಗು). ೧. ಆಧಾರವಿಲ್ಲದ ; ನಿರಾಲಂಬವಾದ. (ನಾ). ೨. ಆಧಾರವಿಲ್ಲದುದು ; ನೆಲೆಯಿಲ್ಲದುದು : ಬಸವನಜೀವು ನಿರಾಧಾರವಾಯಿತ್ತು (ಸೀಲವ. ೨೨-೬೬) ; ಭೂಮಿಯೂ, ಚಂದ್ರನ ಹಾಗೆ ನಿರಾಧಾರವಾಗಿ, ಅಂತರಿಕ್ಷದಲ್ಲಿ ತೇಲಾಡುತ್ತದೆ (ಭೂಗೋಳ. ೩). ೩. ನಿರಾಲಂಬನಾದವನು ; ಸ್ವತಂತ್ರ ; ನಿಶ್ಚಿಂತ ನಿರ್ಲೇಪ ನಿರ್ಗುಣ ನಿರಾಧಾರ . . . ಪುರಹರನೆ (ಸೋಮಚ. ೧-೫). **[ಸಂ.]**

**ನಿರಾಧಾರಿ** (ನಾ). ಆಧಾರವಿಲ್ಲದವನು ; ಬಡವ : ಆತ ಎಲ್ಲವನ್ನೂ ಕಳೆದುಕೊಂಡು ನಿರಾಧಾರಿಯಾಗಿದ್ದಾನೆ (ರೂಢಿ). **[ಸಂ. ನಿರಾಧಾರಿನ್]**

**ನಿರಾನಂದ** (ಗು). ಆನಂದರಹಿತವಾದ ; ದುಃಖದಿಂದ ಕೂಡಿದ : ನಿರಾನಂದಜನೋಪೇತೆಯುಂಮಮಾನಿತಹರ್ಷೋತ್ಕರ್ಷೆಯುಮಾಗಿರ್ದ ತನ್ನನ್ವಯರಾಜಧಾನಿಯನನುಜಸಮೇತನಪರಾಜಿತನೆಯ್ದೆವಂದು (ಶಾಂತಿಪು. ೧-೯೩ ವ). **[ಸಂ.]**

**ನಿರಾಪದ** (ನಾ). ಆಪತ್ತಿನಿಂದ ದೂರವಾದುದು ; ಅಪಾಯರಹಿತವಾದುದು; ಸುರಕ್ಷಿತವಾದುದು: ಇಷ್ಟು ರಾತ್ರಿಯಲ್ಲಿ ಒಮ್ಮಿಂದೊಮ್ಮೆ ತಮ್ಮ ನಿರಾಪದವೂ ನಿಭೃತವೂ ಆದ ನಿವಾಸದ ಹತ್ತಿರ ಜನಸಮಾಗಮ ಕಂಡು ಅವು ಚಕಿತವಾಗಿ ಚೀತ್ಕರಿಸಿವೆ (ಇಪ್ಪ.ಕ. ೧೨೭) ; ನಿರಾಪದವಾದ ಆಶ್ರಮಪ್ರಾಂತದಲ್ಲಿ . . . ಹಸುವಿನ ಕರುಗಳು, ಸೂರ್ಯದೇವ ಸಕಲ ಜೀವಿಗಳಲ್ಲೂ ಮೂಡಿಸಿದ ಹರ್ಷ, ಚಟುವಟಿಕೆಗಳಿಗೆ ರೂಪುಕೊಟ್ಟಂತಿವೆ (ಜಿತಂಬಾ. ೧). **[ಸಂ.]**

**ನಿರಾಪರಾಧಿ** (ನಾ). ನಿರಪರಾಧಿ : ಮಾರನೆಂಬ ನಿರಾಪರಾಧಿಯ ಬೇರುಗೋಲೆಯನೆಗ್ಗೆದ ಲಜ್ಜೆಗೆ ನಾರಿ ಗಂಗೆಯ ಶಿರದಿ ತೊಡೆಯಲಿ ಗೌರಿಯನು ತಾಳ್ದ (ಕೌಶಿರಾ. ೨-೧) ; ರಾಪುಮಾಡದೆ ಬಿಡನು ಯಮನು ನಿರಾಪರಾಧಿಯ ನೋಡಿ ಕೀರ್ತಿಕಲಾಪವನು ನೀ ಕಾಯ್ದು ರಕ್ಷಿಸು (ಹರಿಸಾ. ೬೮) ; ತಂದೆಗೆ ಸರ್ಪದಷ್ಟಮಿರದಾದುದೆನುತ್ತ ಭುಜಂಗಯಾಗಮಂ ಕುಂದಿನಿತಿಲ್ಲದಂತೆ ರಚಿಸುತ್ತಿರುವಾಗ ನಿರಾಪರಾಧಿಗಳ್ ಬೆಂದುದಜಿಂದಲಂದು ಜನಮೇಜಯನೆಂಬ ನೃಪಂಗೆ ಕುಷ್ಠ ತಾ ಬಂದುದು (ಕಜಿಕೆಂ. ೨೮). **[<ಸಂ. ನಿರಪರಾಧಿನ್]**

**ನಿರಾಪೇಕಂ** (ಅ). ಅಪೇಕ್ಷೆಯಿಲ್ಲದೆ ; ನಿಸ್ಪೃಹವಾಗಿ ( ? ): ಧರ್ಮಸುತನನಾಂ ನಿನಗೆ ನಿರಾಪೇಕನೊಡಂಬಡಿಸುವೆಂ (ಪಂಪಭಾ. ೧೩-೧೩). **[ ? ]**

**ನಿರಾಪೇಕ್ಷ** (ನಾ). ೧. ಅಪೇಕ್ಷೆಯಿಲ್ಲದಿರುವಿಕೆ ; ಬಯಕೆಯಿಲ್ಲದಿರುವಿಕೆ : ಉರ್ವರಾಸ್ಯತಿಲಕನಪ್ಪ ತಪೋಧನನುಂ ಸಿದ್ಧಗಿರಿಯೊಳಾತ್ಮಪರನಿರಾಪೇಕ್ಷಮಪ್ಪ ಪ್ರಾಯೋಪಗಮನದಿಂ . . . ಅಚ್ಯುತೇಂದ್ರಪದಮಂ ಪಡೆದಂ (ಶಾಂತಿಪು. ೪-೧೯ ವ) ; ಶೃಂಗರಿಸಿಕೊಂಡಿದ್ದಂಥಾ ಕಾಂತಿಯುಳ್ಳ ಶರೀರದ ಪುರುಷನಂ ಸ್ತ್ರೀಯರು ಬಯಸಿದೊಡೆ ಅದು ನಿರಾಪೇಕ್ಷ (ಕಾಮಶಾ. ೯-೧೯೭). ೨. ಬಯಕೆಗಳಿಲ್ಲದವನು ; ಏನನ್ನೂ ಬಯಸದಂಥವನು ; ನಿರಪೇಕ್ಷ : ಕಾನನಮಧ್ಯಸ್ಥಿತರುಂದ್ರಗಿರೀಂದ್ರಶೃಂಗದೊಳ್ ಆತ್ಮಪರಪರ್ಯಾಪ್ತಿ ನಿರಾಪೇಕ್ಷರಾಗಿ . . . ತದದ್ರಿಶಿಖರದೊಳೊಂದೆಡೆವೆತ್ತು (ಶಾಂತಿಪು. ೭-೭೧ ವ) ; ಗುರೂಪರೋಧವಶದಿಂ ಸ್ನಾನಾನ್ನಪಾನಂ ವಿಲೇಪನಮಾಲ್ಯಾದಿಗೆ ತಾನೊಡಂಬಡುವನೇಂ ದೇವಂ ನಿರಾಪೇಕ್ಷನೋ (ಅಜಿಪು. ೫-೪೬). **[<ಸಂ. ನಿರಪೇಕ್ಷ]**

**ನಿರಾಬಾಧ** (ಗು). ೧. ಬಾಧೆಯಿಲ್ಲದ ; ಅಡ್ಡಿಯಿಲ್ಲದ ; ನಿರಾತಂಕವಾದ. (ನಾ). ೨. ಬಾಧೆಯಿಲ್ಲದಿರುವಿಕೆ ; ಅಡ್ಡಿ, ಅಡಚಣೆಗಳಿಲ್ಲದಿರುವಿಕೆ ; ಸುಗಮತೆ : ಪುಲಿಕೇಶಿಯು ಸ್ವತಂತ್ರ ರಾಜ್ಯವನ್ನು ನಿರಾಬಾಧವಾಗಿ ಸ್ಥಾಪಿಸಿದನೆಂದೂ ಅವನ ಮಗನಾದ ಕೀರ್ತಿವರ್ಮನು ಅದನ್ನು ಸ್ಥಿರಪಡಿಸಿದುದಲ್ಲದೆ ಹಬ್ಬಿಸಿದನೆಂದೂ ತಿಳಿಯಬಹುದು (ಕರ್ಣಾಅ. ೫೩). **[ಸಂ.]**

**ನಿರಾಬಾಧಕ** (ನಾ). ನೋಯಿಸದಿರುವವನು ; ಅಹಿಂಸಾಪರ : ಅಕುಟಿಲರಿಗೇಕಿದು ನಿರಾಬಾಧಕರಿಗೇಕಿದು ಸಕಲಸುಜನಪ್ರಕರವೆಂದ್ಯರಿಗೇಕೆನುತ್ತ ಸುರಾರಿ ಚಿಂತಿಸಿದ (ಉಮ್ಯಾಅ. ೨-೩). **[ಸಂ.]**

**ನಿರಾಬಾಧೆ** (ನಾ). ಅಡ್ಡಿ, ಅಡಚಣೆಗಳಿಲ್ಲದಿರುವಿಕೆ : ದನುಜೇಜ್ಯಜ್ಞಕುಜಾಂಗಿರರ್ ಸಮವಿಲಗ್ನಕ್ಷೇತ್ರದೊಳ್ ಬಾಲ್ಯರಾಗಿ ನಿರಾಬಾಧೆಯಿಂ ನಿರ್ದೋಷಾ ಸಕಲಶಾಸ್ತ್ರೋಪೇತೆಯುಂ ಬ್ರಹ್ಮವಾದಿನಿಯುಂ ಖ್ಯಾತೆಯುಮಕ್ಕುಂ (ಜಾತತಿ. ೨೨-೨೩). **[ಸಂ. ನಿರಾಬಾಧ]**

**ನಿರಾಭರಣ** (ನಾ). ೧. ಆಭರಣವಿಲ್ಲದಿರುವುದು ; ಆಭರಣವನ್ನು ಧರಿಸದಿರುವುದು : ಅವಳು ಬಿಳಿಯ ಸೀರೆಯುಟ್ಟಿದ್ದಾಳೆ. ನಿರಾಭರಣಭೂಷಿತಳಾಗಿದ್ದಾಳೆ (ಮಹಾಣ. ೨೩೭). ೨. ಆಭರಣ ಧರಿಸದೆ ಇರುವ ವ್ಯಕ್ತಿ : ನಾಲ್ವರೂ ನಿರಾಭರಣರು. ಅಚ್ಚ ಬಿಳಿಯ ರೇಶಿಮೆಗಳನ್ನು ಉಟ್ಟ ಅವರು ವೈರಾಗ್ಯದ ಮೂರ್ತಿಗಳಂತೆ ಕಂಡರು (ಸವತಿ, ೩೧). ೩. ಕಾವ್ಯಾಲಂಕಾರವಿಲ್ಲದಿರುವುದು. ೧, ೩ : ಆರುಹನ ಮೂರ್ತಿಯಂತಿರೆ ನಿರಾಭರಣಂ ಮೆಚ್ಚಿಯಲ್ಕೆ ಪೇಳ್ದಪೆಂ ಚರಿತಪುರಾಣಮಂ (ಅನಂಪು. ೧-೩೬).

ನಿರಾಭರಣಸುಂದರಿ = ಆಭರಣವನ್ನು ಧರಿಸಿಕೊಂಡಿರದ ಚೆಲುವೆ ; ಸಹಜಸೌಂದರ್ಯವನ್ನು ಹೊಂದಿರುವವಳು : ನಿರಾಭರಣಸುಂದರಿಯರು ಹೇಗಿರುತ್ತಾರೆ ಅಂತ ಇವತ್ತು ಅರ್ಥವಾಯಿತು (ದೂಜಿಟ್ಟ. ೩೫). **[ಸಂ.]**

**ನಿರಾಭರಣೆ** (ನಾ). ಆಭರಣವನ್ನು ಧರಿಸಿಕೊಂಡಿರದವಳು : ಪಾಳ್ಮನೆಯಂ ತೆರದಿನೆಸೆದಳ್ ಮಾತೆ, ನಿರ್ಜನೆ, ನಿರಾಭರಣೆ, ನಿಶ್ಚಲೆ, ರವವಿಹೀನೆ (ಶ್ರೀರಾಮಾ. ೧೦೭-೧೯೪) ; ನೀನು ನಿರಾಭರಣೆಯಾಗಿ ಅನಾಥಳಂತೆ ಕಾಣುತ್ತಿದ್ದರೂ ನಿನ್ನ ಮುಖದಲ್ಲಿ ರಾಜಶ್ರೀಯು ವಿರಾಜಿಸುತ್ತಿದೆ (ಶ್ರೀರಾಯ. ೨೨೨) ; ನಾನು ನಿರಾಭರಣೆ ಇರಬಹುದು. ಆದರೆ ಸುಂದರಿ ಖಂಡಿತ ಅಲ್ಲ (ದೂಬಿಟ್ಟ. ೩೫). [ಸಂ. ನಿರಾಭರಣ]

**ನಿರಾಭಾರಿ** (ನಾ). [ವೀಶೈ] ವಿರಾಗಿ ; ವಿರಕ್ತ ; ಸಂನ್ಯಾಸಿ : ಸಹಜ ನಿರಾಭಾರಿಗಳ ಮೇಳದಿಂದ ನಿಸ್ಸೀಮದ ನಿಭ್ರಾಂತಿನ ಸಂಗದಲ್ಲಿ ನಿರಾಶಾಪದವೆ ಅನುಕೂಲ (ಅಪಚಂ. ೪೪-೩೭೪) ; ಅಂಗದ ನಿರಾಭಾರಿಗಳೆಲ್ಲರು ಕೂಡಿ ಲಿಂಗದ ಹೊಲಬ ಬಲ್ಲೆವೆಂದು ಅನಂಗನ ಬಲೆಯೊಳಗೆ ತಾವಿಲ್ಲವೆಂದು . . . ವಿಕಳತೆಗೊಂಡವರ ನೋಡಾ (ಪ್ರೋಳಮಾ. ೧೭೦-೬೩೪) ; ಇಟ್ಟ ಕಬ್ಬಿನ ಜಾಜಿನೊಳಗೊಬ್ಬೊಟ್ಟನರ್ಥದೊಳೆನಿತುಳಿದಡಂ ದೃಷ್ಟಿಸಲ್ಕದು ಸೋಲವಲ್ಲಾ ಕೇಳ್ ನಿರಾಭಾರಿ (ಬಸವು.೨೦-೨೩); ನಿಸ್ಸಂಗಿ ನಿರ್ಮಲ ನಿರಾಭಾರಿ . . . ಪ್ರಭುಜಂಗಮದ ಪಾದಮಿರ್ಕೆನ್ನ ಹೃದಯದೊಳಗೆ (ವೀಶೈಪು. ೧-೧-೫) ; ನಿಜಸುಖವಿತ್ತು ಗುರುಸಿದ್ಧದೇವನೆನಿಸುವ ನಿರಾಭಾರಿ ಗುರುತಿಲಕ(ಕೈಕಸ.೧-೧-೫).[ನಿರ್-+<ಆಭಾರ?]

**ನಿರಾಭಾಸಿ** (ನಾ). ಪರಮಾತ್ಮ: ಆಶ್ರಯವು ತನಗಿಲ್ಲ ತಾನೇ ಆಶ್ರಯವು ತನಗನ್ಯವಿಲ್ಲ ನಿರಾಶ್ರಯ ನಿರಾಭಾಸಿ ನಿತ್ಯಾನಂದಪದವೆಂದ (ನಿಭಾಗ. ೨-೪-೮). P ಈ ಶಬ್ದಕ್ಕೆ ಅಸದೃಶ, ಅದ್ವಿತೀಯ ಎಂದೂ ಮಿಥ್ಯಾಜ್ಞಾನಕ್ಕೆ ಗೋಚರನಾಗದವನು ಎಂದೂ ಅರ್ಥವನ್ನು ಸಾಧಿಸಬಹುದು. [ಸಂ. ನಿರಾಭಾಸಿನ್]

**ನಿರಾಮಯ** (ಗು). ೧. ರೋಗವಿಲ್ಲದ ; ಆರೋಗ್ಯದಿಂದ ಕೂಡಿದ. ೨. ದುಃಖ, ಸಂಕಟಗಳಿಲ್ಲದ ; ಉಪದ್ರವವಿಲ್ಲದ ; ಕ್ಷೇಮಕರವಾದ. ೩. ನಿಷ್ಕಳಂಕವಾದ ; ಪರಿಶುದ್ಧವಾದ : ನಿಸದಂ ತನ್ನ ನಿರಾಮಯಾಕೃತಿ ಜಗದ್ವಿಖ್ಯಾತಮಾದತ್ತು (ಪುಷ್ಪಪು. ೧-೨೪). (ನಾ). ೪. ಸಂಕಟವಿಲ್ಲದಿರುವಿಕೆ ; ನೆಮ್ಮದಿ ; ಸಂತೋಷ : ಆ ಮುಕುಂದನ ನೆನಹು ನಮಗೆ ನಿರಾಮಯವು (ಕುವ್ಯಾಸ. ೧೧-೨೪) ; ಇನ್ನೆತ್ತಂ ನಿರಾಮಯಂ, ನಿರಾಕುಳಂ ; ಸುಭಿಕ್ಷಂ ; ಶಾಂತಿ (ರಾಮಾಶ್ವ. ೧೬೩-೧೮). ೫. ರೋಗವರ್ಜಿತನಾದವನು ; ನಿರೋಗಿ ; ಆರೋಗ್ಯಶಾಲಿ : "ನಿರಾಮಯಂ ಪಟುವೆನಿಪ್ಪ ನಾರೋಗ್ಯಮಯಂ" (ವಸ್ತುಕೋ. ೭೨-೩೩) ; ನಿರಾಮಯನುಮಪ್ರತಿರೂಪನುಮಾಗಿ ದೇವಕಾಂತಾಪದಯಿತಂ ನಿರಾಕುಳತೆಯಂ ತಳೆದು (ವರ್ಧಮಾ. ೧೧-೧) ; ಇಂತಹ ಸಂಜೀವಿನಿಯ ಪ್ರಭಾವದಿಂದ ಜೀವನು ತನ್ನ ಸಕಲ ಆಧಿವ್ಯಾಧಿಗಳನ್ನೂ ಕಳೆದುಕೊಂಡು ನಿರಾಮಯನಾಗುವನು (ಶಕ್ತಿವಿ. ೬೩). ೬. ಮೋಕ್ಷ ; ಕೈವಲ್ಯ ; ಮುಕ್ತಿ : "ಮೋಕ್ಷಂ ಮುಕ್ತಿಪದಂ ಬ್ರಹ್ಮಂ ಕೈವಲ್ಯಪದವಿ ಶಿವಗತಿ ನಿರಾಮಯಂ ನಿರ್ವಾಣಂ" (ವಸ್ತುಕೋ. ೨೧-೧೯) ; ಮಿಕ್ಕಭವ್ಯತೆಯ ಕೇಡಿಂದಕ್ಕುಮಕ್ಷೂಣಮೋಕ್ಷಪದಂ ಮುಕ್ತಿಪದಂ ನಿರಾಮಯಪದಂ ನಿರ್ವಾಣಸೌಖ್ಯಾಸ್ಪದಂ (ಸುಕುಮಾ. ೮-೩೩) ; ಭವ್ಯತೆ ನಿರಾಮಯ ಲಕ್ಷ್ಮಿಯ ದೂತಿಯಾಕೆಯೊಳ್ ಸಂದೊದಗೂಡುವನ್ನಮೆಡೆಯೊಳ್ ನಿಲಲೀಗುಮೆ ಶುದ್ಧವೃತ್ತರಂ (ಚಂದ್ರಪು. ೭-೨೭). ೭. ಮುಕ್ತನಾದವನು : ನಿರುತ್ತರ ನಿರಾಮಯ ನಿರ್ವಿಕಾರಾಕಾರ ಚಿತ್ತೈಸು (ಬಸವು. ೬೧-೪೩) ; ಆ ಮಹೀಶ್ವರಪಂಕ್ತಿಯಲ್ಲಿ ನಿರಾಮಯನು ನಿಮ್ಮಯ್ಯನಿಹನು ಸತೇಜದಲಿ (ಕುವ್ಯಾಸ. ೧-೯೨) ; ನಿರಾಮಯ ನಿರ್ಗುಣ . . . ನಿಷ್ಕಳಂಕ ಜಯಶಂಕರ ನಿರ್ಜಡ ಶಾಂಭವೀಧವಾ (ಶಬಶಂ. ೫-೨೪) ; ಇನ್ನು ಮೇಲೆ ನನ್ನ ಹಾಡಿಗಿಲ್ಲವಯ್ಯ ತಾಳ ಲಯ ; ನಾ ನಿರಾಮಯ (ಭಾರಂಗ. ೫೩-೨). [ಸಂ.]

**ನಿರಾಮಿಷ** (ಗು). ಮಾಂಸ ತಿನ್ನದ ; ಸಸ್ಯಾಹಾರದ : ಹಾಗೆ ಸೇರುವ ಜನರು ನಿರಾಮಿಷ ಆಹಾರಿಗಳೇ ಇರುತ್ತಿದ್ದರೆಂದಲ್ಲ. ಎಷ್ಟೋ ಜನರು ಸಾಮಿಷ ಆಹಾರಿಗಳೂ ನಿರ್ಗ್ರಂಥಸಂಘದಲ್ಲಿ ಸೇರಿದರು (ಜೈನಪ. ೫೨೭) ; 'ಜೈನೆಡೆ' ಎಂದರೆ ಜೈನರ ಎಡೆ ಎಂದರ್ಥ. ಎಂದರೆ ನಿರಾಮಿಷ ನೈವೇದ್ಯ ! (ಕಾನೂರು. ೨೫೦). [ಸಂ.]

**ನಿರಾಮ್ಲ** (ನಾ). [ಭೌತವಿ] ಆಮ್ಲವಲ್ಲದುದು : ಜಲಜನಕದೊಡನೆ ಒಂದು ಅಥವಾ ಹೆಚ್ಚಾದ ಮೂಲದ್ರವ್ಯಗಳ ಸಂಯೋಗದಿಂದ ಹುಟ್ಟಿ . . . ಕ್ಷಾರವಸ್ತುಗಳಿಂದ ನಿರಾಮ್ಲವಾಗತಕ್ಕದ್ದಾಗಿಯೂ ಇರುವ ರಾಸಾಯನಿಕ ವಸ್ತು(Acid. ಇಂಕನಿ). [ಸಂ.]

**ನಿರಾಯಸ** (ನಾ). = ನಿರಾಯಾಸ : ಅನಾಯಾಸದಿಂದ ಮನೆಯ ಮಾಡಿ ನಿರಾಯಸದಿಂದ ಪರಮಸುಖಿ . . . ಕೂಡಲಸಂಗನ ಶರಣರ ನಿಲವು (ಬಸವ. ೯೧೬) ; ಪೊಡವಿಯೊಳಗಿಂತೀಗ ಬಸವಂ ಪಡೆದನಮಮ ನಿರಾಯಸದೊಳೀ ಮೃಡನ ಕರುಣವನು (ಬಸವು. ೪-೬೩) ; ಆಯಿತೇ ನವರಿಗೆ ಸರೋಜದಳಾಯತಾಕ್ಷನ ಚರಣಸೇವೆ ನಿರಾಯಸದ ಸಹವಾಸ ಭೋಜನವೆಂದನಾ ನೃಪನ (ಕುವ್ಯಾಅ. ೧೪-೧೬) ; ನಿರಾಯಸದೊಳರಿ ಭಟನ ಕಾಲನ ಬಾಯೊಳ್ಗಡಸದಡಿಂದ್ರಜಿತುವೆಂಬಸುರನಲ್ಲೆಂದ (ತೊರರಾ. ೬-೪೦-೪). [<ಸಂ. ನಿರಾಯಾಸ]

**ನಿರಾಯಾಸ** (ನಾ). ಆಯಾಸವಿಲ್ಲದಿರುವಿಕೆ ; ಸುಲಭತೆ ; ಅನಾಯಾಸ: ನಿರಾಯಾಸವಾಗಿ ಪದವಿಯನ್ನು ಪಡೆಯಬಹುದು(ಚಂಗಾಳ್ವ.೩); ನಿರಾಯಾಸವಾಗಿ ಬಂದದ್ದನ್ನು ಏಕೆ ಬಿಡಬೇಕೂಂತ ಇರಬಹುದು (ವೀರಯೋ. ೨೪) ; ರೈತರ ಮೇಲೆ ಅವರ ಪ್ರೀತಿಯಿತ್ತು. ಎಂತಲೇ ಲಾವಣಿಹಣ ಅವರಿಗೆ ನಿರಾಯಾಸವಾಗಿ ಬಂದು ಬೀಳುತ್ತಿತ್ತು (ಚಿಪರಿ. ೧೩೩). [ಸಂ.]

**ನಿರಾಯುಧ** (ನಾ). ಆಯುಧವಿಲ್ಲದವನು : ನಿರಾಯುಧನನಿಸೆನೆಂದ ನಂತವೀರ್ಯನಂ ದಮಿತಾರಿಯಿಂತೆಂದಂ (ಶಾಂತಿಪು. ೪-೪೮ ವ) ; ಜಲವ ಹೊಕ್ಕನ . . . ವಲ್ಮೀಕಸಂಗತನನು ನಿರಾಯುಧನ ಕೊಲುವುದನುಚಿತವೆಂಬ ಶಾಸ್ತ್ರವ ತಿಳಿದು ನಂಬಿದೆ (ಕುವ್ಯಾಗ. ೫-೨೪) ; ಧರ್ಮವ ಬಲ್ಲೆಯಾಗಿ ನಿರಾಯುಧರನೆಸಲೊಲ್ಲೆ (ನಿಭಾಗ. ೧೦-೪-೪೧) ; ಹರಿ ಚಕ್ರಮಂ ನೀಗಿ ಬಂದಾ ನಿರಾಯುಧಂ ಪಾಲ್ಗಡಲೊಳಿರುತಿರ್ದನು (ವೀಶೈಪು. ೨-೧೩-೩೮). [ಸಂ.]

**ನಿರಾರ** (ನಾ). ಆಹಾರವಿಲ್ಲದಿರುವುದು ; ಉಪವಾಸ ; ನಿರಾಹಾರ : ಒಪ್ಪತ್ತು ಉಂಡ್ರ ಒಪ್ಪತ್ತು ನಿರಾರ (ಗಂಗಾಸಾ. ೧೧೧). [<ಸಂ. ನಿರಾಹಾರ./ತುಳು. ನಿರಾರ]

**ನಿರಾಲಂಬ,** ನಿರಾಳಂಬ(ನಾ). ೧. ಆಶ್ರಯವಿಲ್ಲದಿರುವಿಕೆ; ದಿಕ್ಕಿಲ್ಲದಿರುವಿಕೆ : ಬಳಿಕ ಪಸುಳೆಗೆ ನಿರಾಲಂಬಮಾಗಲಾ ಪಟ್ಟಣದೊಳೆಲ್ಲರ್ಗೆ ಕಾರುಣ್ಯಕೀಡಾದನು (ಜೈಮಿಭಾ. ೨೮-೧೯); ಆದುದರಿಂದ ಆ ಅಪ್ರಧಾನ ಕರ್ತೃಕ ವಾಕ್ಯವು ನಿರಾಲಂಬವಾಗಿ ತ್ರಿಶಂಕುವಿನಂತೆ ಉಳಿದುಬಿಡುತ್ತದೆ (ಕನ್ನಇ.೧೭೪). ೨. ಯಾವುದನ್ನೂ ಅವಲಂಬಿಸದುದು ; ಸ್ವತಂತ್ರವಾದುದು : ಸಹಜದಿಂದ ನಿರಾಲಂಬವಾಯಿತ್ತು ನಿರಾಲಂಬದಿಂದ ನಿರಾಳವಾಯಿತ್ತು (ಅಪಚಂ. ೧೬೪-೭೪೨) ; ನಿರ್ಮೂಲವಾಯಿತ್ತಾಹಾ ನಿರಾಲಂಬವಾಯಿತ್ತಾಹಾ ನಿರಾಕುಳವಾಯಿತ್ತಾಹಾ ಪುಣ್ಯದ ಫಲ ತೋಱಿ ಬಯಲನೆ ಕೂಡಿತ್ತು (ಸೀಲವ. ೩೧-೧೧೧); ನಿರಂಜನತತ್ತ್ವ . . . ಸರ್ವಥಾ ನಿರಾಲಂಬಮೆನಿಪುದು (ಗಗತಾ. ೧೮-೪೧) ; ಸ್ವಾತ್ಮಾರಾಮಸ್ವಾಮಿಯು ರಾಜಯೋಗ . . . ನಿರಾಲಂಬ, ನಿರಂಜನ, ಜೀವನ್ಮುಕ್ತಿ, ಸಹಜಾವಸ್ಥಾ, ತುರೀಯಾವಸ್ಥಾ ಇವುಗಳೆಲ್ಲ ಒಂದೇ ಅರ್ಥವೆಂದು ತಿಳಿಸಿರುತ್ತಾನೆ (ಭಾರದ. ೧೬೫). ೩. ಸ್ವತಂತ್ರನಾದವನು : ನಿರುಪಮ

ನಿರಾಲಂಬ ನಿತ್ಯನಿರ್ಭಯ . . . ಪುರಹರನೆ (ಸೋಣಚ. ೧-೫).

**ನಿರಾಳಂಬ** : **೨.** ವನಧಿದ್ವೀಪಕುಲಾದ್ರಿಮುದ್ರಿತಜಗಚ್ಚಕ್ರಂ ಯುಗಾಂತಪ್ರಭಂ ಜನನೀರಾವತಚಕ್ರದಂತೆ ತಿರಿವಂತಾಳ್ದುಂ ನಿರಾಳಂಬಂ (ಅಜಿಪು. ೨-೩). [ಸಂ.]

**ನಿರಾಲಂಬನ** (ಗು). **೧.** ಆಧಾರವಿಲ್ಲದ; ಹುರುಳಿಲ್ಲದ: ನಿಷ್ಕಾರಣ ಕಾಯಕಂಪನಮುಂ ನಿರಾಲಂಬನ ವಾಗಾಡಂಬರಮುಂ ತಕ್ಕುದಲ್ತು (ಆದಿಪು. ೧೪-೮೧ ಪ). (ನಾ). **೨.** ಆಧಾರವಿಲ್ಲದುದು : ಪಂಪ—ಕಂತಿಯರ ಸಂವಾದವಾಕ್ಕೇಳಿಯನ್ನು ಅರ್ವಾಚೀನನಾದವನೊಬ್ಬನು ತನ್ನ ಯೋಗ್ಯತಾನುಗುಣದಿಂದ ಪ್ರಕಟಿಸುವುದು ನಿರಾಲಂಬನವಾದುದಲ್ಲ (ಕರ್ನಾಕ. ೫೮). [ಸಂ.]

**ನಿರಾಲಂಬನವಾದ** (ನಾ). (ವಸ್ತುವಿನ ಅವಲಂಬನೆಯಿಲ್ಲದೆ) ಜ್ಞಾನವನ್ನೇ ಮೂಲತತ್ವವನ್ನಾಗಿಟ್ಟುಕೊಂಡು, ಜ್ಞಾನಕ್ಕೆ ಪ್ರಾಧಾನ್ಯ ಕೊಟ್ಟಿರುವ ವಾದ : ಬೌದ್ಧರು ನಿರಾಲಂಬನವಾದವನ್ನು ಸ್ಥಾಪಿಸಿರುತ್ತಾರೆ, ಎಂದರೆ ವಸ್ತುವಿಲ್ಲದೆ ಜ್ಞಾನಮಾತ್ರವೇ ತತ್ವವೆಂದು ಭಾವ (ಹಿಂದಸಾ. ೨೦೯). [ನಿರಾಲಂಬನ + ವಾದ$_2$]

**ನಿರಾಲಸ್ಯ** (ನಾ). ಆಲಸ್ಯವಿಲ್ಲದಿರುವಿಕೆ; ಸೋಮಾರಿತನವಿಲ್ಲದಿರುವಿಕೆ; ಚಟುವಟಿಕೆ : ನಿರಾಲಸ್ಯದಿಂ ನಿರ್ಬಂಧದಿಂ ನಿರ್ವಿಕಲ್ಪದಿಂ ನೀವಿರ್ವರುಂ ನಿಶ್ಚಯಮೋದುವೊಡಾವುಮಾ ಮಾರ್ಗದಿಂದೋದಿಸಿ ಪಂಡಿತರಾಗೆ ಮಾಟ್ಪೆಂ (ಸುಕುಮಾ. ೨-೫೫ ಪ). [ಸಂ.]

**ನಿರಾಲೋಚಂ** (ಅ). ಯೋಚನೆ ಮಾಡದೆ ; ನಿರ್ಯೋಚನೆಯಿಂದ : ಅನುರೂಪಂ ಕನ್ನೆಗೀತಂ ಕುಲಭುಜಬಲವಿದ್ಯಾಬಲಖ್ಯಾತನಿನ್ನಂಗೆ ನಿರಾಲೋಚಂ ಕುಡಲ್ವೇಟ್ಪುದು ಯುವತಿಯಂ (ಪಂಪಾಮಾ. ೧೦-೧೧೪). [ಸಂ.]

**ನಿರಾವರಣ**(ನಾ). ಭ್ರಮೆ, ಭ್ರಾಂತಿಗಳಿಲ್ಲದವನು; ಮಾಯಾರಹಿತ; ಪರಮಾತ್ಮ : ನಿತ್ಯ ನಿರ್ಭಯ ನಿರಾವರಣ . . . ಪಂಪಾವಿರೂಪಾಕ್ಷ ಶರಣು (ಹಚಕಾ. ೧-೪) ; ಜಯ ಜಯ ನಿರಾವರಣ ಜಯ ಪುಣ್ಯಮಯ ಚರಣ (ಚೆಬಪು. ೩೬-೧೧ ) ; ಜೀಯ ಶುದ್ಧಾನ್ವಯ ನಿರಂಜನ ನಿರಾವರಣ . . . ನೀನೇ ಸತ್ಯರೂಪ (ಜೈಮಿಭಾ. ೧೩-೨೮); ಪರಮಪಾವನ ನಿರ್ಗುಣ ನಿರಾವರಣ ನಿರವಯ . . . ಕೃಪಾಮೃತೇಕ್ಷಣ ಪರಶಿವನುಂ(ಭೈರಸೂ.೧); ಪಾವನದ ಗುರುಪಾದಪದ್ಮದ ಸೇವೆಯಲಿ ಸಂಸಾರವಳಿಯೆ ನಿರಾವರಣ ನಿಸ್ಸೀಮ ನಿಜ ನೀನೆಂದು ನಿಶ್ಚಯಿಸು (ಅಮೃತ. ೫-೫೭). [ಸಂ.]

**ನಿರಾವರಣೆ** (ನಾ). ಭ್ರಮೆ, ಭ್ರಾಂತಿಗಳಿಲ್ಲದವಳು; ಪರಮೇಶ್ವರಿ: ನಿರುಪಮೆ ನಿರಾವರಣೆ ನಿರಜೆ ನಿರಹಂಕಾರೆ (ಏಕೋಪು. ೧-೯). [ಸಂ. ನಿರಾವರಣಾ]

**ನಿರಾವಸಥ** (ನಾ). **೧.** ನೆಲೆಯಿಲ್ಲದವನು ; ವಸತಿಯಿಲ್ಲದವನು. **೨.** ಸರ್ವವ್ಯಾಪಕ ; ಪರಮಾತ್ಮ : ರವಿಯಿಲ್ಲ ಬಿಸಿಲುಂಟೆಂಬ ದೆಸೆಯಂತೆ ನಿಷ್ಕ್ರಿಯಾತ್ಮಕ ನಿರ್ಮಳಂ ನಿರಾವಸಥ ನಿರುಪಾಧಿಕ ಜ್ಯೋತಿರ್ಮಯಾಕಾರ ಶಿವಲಿಂಗವಾದನಂದು (ಸಿದ್ಧರಾ. ೬-೧೩). [ಸಂ.]

**ನಿರಾವಾಸ** (ನಾ). = ನಿರಾವಸಥ ೨ : ವಿಶ್ವಾವಾಸನಂ ನಿರಾವಾಸನಂ . . . ಕೂರ್ತು ವಂದಿಸುವೆಂ (ವೀಶೈಪು. ೬-೧-೩೫). [ಸಂ.]

**ನಿರಾಶ** (ನಾ). **೧.** ಆಶಾಭಂಗ ; ನಿರುತ್ಸಾಹ ; ವಿಷಾದ : ಅವನು ನಿರಾಶದ ನಿಟ್ಟುಸಿರಿನಿಂದ ವಿಮಲೆಯನ್ನು ಗುರುತಿಸಿದನು (ರಕ್ತಧ್ವ. ೨೮೯). **೨.** ಆಶಾಭಂಗವನ್ನು ಹೊಂದಿದವನು ; ನಿರಾಶೆಗೊಂಡವನು : "ಕಂಡುದ ಹಿಡಿಯಲೊಲ್ಲದೆ ಕಾಣದುದ ಹಿಡಿವೆನೆಂದು" ಅಪೇಕ್ಷಿಸಿ, ನಿರೀಕ್ಷಿಸಿ, ನಿರಾಶರಾಗಿ ಪ್ರತಿನಿತ್ಯ ಕೊರಗುತ್ತಿದ್ದೇವೆ (ದೇಕಸ್ಯೆ. ೨). [ಸಂ.]

**ನಿರಾಶಕ** (ನಾ). **೧.** ಆಸೆಯಿಲ್ಲದವನು ; ಇಚ್ಛೆಯಿಲ್ಲದವನು. **೨.** ಪರಮಾತ್ಮ : ಭಾಷೆಗೆ ತಪ್ಪ ನಿರ್ಗುಣ ನಿರಾಶಕ ನಿಃಕಳಂಕ ಮಲ್ಲಿಕಾರ್ಜುನ (ಪೋಳಪಾ. ೧೦೩-೪೧೧). [ಸಂ.]

**ನಿರಾಶಾಪದ** (ನಾ). ಆಸೆಯಿಲ್ಲದಿರುವ ಸ್ಥಿತಿ ; ನಿಸ್ಪೃಹ ಸ್ಥಿತಿ : ಸಹಜ ನಿರಾಭಾರಿಗಳ ಮೇಳದಿಂದ ನಿಸ್ಸೀಮದ ನಿಭ್ರಾಂತಿನ ಸಂಗದಲ್ಲಿ ನಿರಾಶಾ[ಪಾಠಾಂ. ಸಾ]ಪದವೆ ಅನುಕೂಲ (ಅಪಚಂ. ೮೪-೩೭೪). [ಸಂ.]

**ನಿರಾಶಾವಾದ** (ನಾ). ಆಸೆಯೇ ಇಲ್ಲವೆಂಬ ಭಾವನೆಯನ್ನು ಹೊಂದಿರುವಿಕೆ; ಜೀವನ, ಜಗತ್ತು ಯಾವಾಗಲೂ ದುಃಖಮಯವೆಂಬ ಮನೋಭಾವ : ನಿರಾಶಾವಾದ, ತಳಬುಡವಿಲ್ಲದ ಆಶಾವಾದ . . . ಇವೇ ಮೊದಲಾದ ದರ್ಶನಗಳು ಚಕ್ರಮಡುವುಗಳಿದ್ದಂತೆ (ನವ್ಯಕಾ. ೧೧) ; ಸಾತ್ವಿಕರಿಗೆ ಮಾತ್ರ ಮೋಕ್ಷಪ್ರಾಪ್ತಿ ಎನ್ನುವ ಭೇದಭಾವದ ನಿಮ್ಮ ಮತ ನಿರಾಶಾವಾದವಲ್ಲವೆ ? (ಸಂಸ್ಕಾರ. ೮೦). [ಸಂ.]

**ನಿರಾಶಾವಾದಿ** (ನಾ). ಆಶೆಯನ್ನು ಕಳೆದುಕೊಂಡವನು ; ಭರವಸೆಯನ್ನು ತಾಳದವನು ; ನಿರುತ್ಸಾಹಿ : ಆದರ್ಶವಾದಿ ನಿರಾಶಾವಾದಿಯಾಗಲು ಈ ನಾಲ್ಕು ಹರದಾರಿಯ ಜಾಣತನವೆ ಕಾರಣ (ದೇಕಸ್ಯೆ. ೭). [ಸಂ. ನಿರಾಶಾವಾದಿನ್]

**ನಿರಾಶಾಸಂಪನ್ನ** (ನಾ). ಆಸೆಯಿಲ್ಲದವನು; ನಿಸ್ಪೃಹನಾದವನು : ಈಯಾಶೆ ಎಂಬ ವಿಧಿ ಶಿವನೊಲಿದವರನು ಹೊದ್ದಲಮ್ಮದಾಗಿ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನ ಶರಣರು ನಿರಾಶಾಸಂಪನ್ನರು (ಉರಿಪ. ೯೯-೮೩). [ಸಂ.]

**ನಿರಾಶೆ** (ನಾ). **೧.** ಆಶೆಯಿಲ್ಲದಿರುವುದು ; ಇಚ್ಛೆಯಿಲ್ಲದಿರುವುದು ; ಅನಿಚ್ಛೆ : ನಿರಾಶೆ ನಿರ್ಭಯ ಕೂಡಲಸಂಗಮದೇವಾ ನೀನೊಲಿದ ಶರಣಂಗಲ್ಲದಿಲ್ಲ (ಬಸವ. ೮೫೪) ; ದುರಾಶೆಯಂ ಬಿಟ್ಟು ನಿರಾಶೆಯಾಗಿ ಲಿಂಗವನಾಶ್ರೈಸಿದಡೆ ಪ್ರಸಾದವಪ್ಪುದು (ಉರಿಪ. ೫೧-೮೪) ; ನಿರಾಶೆಯುಳ್ಳವನಲ್ಲಿ ಆಶೆ ಮಾಡಿದರೆ ಭೋಪ ಹೋಗದೇ?(ಗಾದೆ). **೨.** ಆಶಾಭಂಗ ; ಆಸೆಗೇಡು ; ಆಸೆಯು ಭಂಗವಾಗುವುದು : ನಿರಾಶೆಯ ಬಸಿರಿನಲ್ಲಿಯೇ ಆಶೆಯ ಬೀಜವಿದೆ (ಕಲ್ಲೋಲ. ೪೨-೧೧) ; ಮನಸ್ಸಂಕೀರ್ಣತೆ ತನ್ನ ಪ್ರಭಾವವನ್ನು ಬೀರಲು . . . ಕಾರಣ ಅವನ ಗುಪ್ತ ಮನಸ್ಸಿನಲ್ಲಡಗಿರುವ ನಿರಾಶೆ (ತಕ್ಷದ. ೬೫೧). [ಸಂ. ನಿರಾಶಾ]

**ನಿರಾಶೆಗೊಳಿಸು** (ಕ್ರಿ). ಆಶಾಭಂಗವನ್ನುಂಟುಮಾಡು : ಹಾಗಾದರೆ ನಿಮ್ಮನ್ನು ನಿರಾಶೆಗೊಳಿಸದೆ . . ಇರೋ ಹಾಗೇ ಇಲ್ಲ ಅಂತ ಕಾಣಿಸುತ್ತೆ (ರಂಗನಾ. ೧೦೨) [ನಿರಾಶೆಗೊಳು + – ಇಸು$_3$]

**ನಿರಾಶೆಗೊಳು,** ನಿರಾಶೆಗೊಳ್ಳು (ಕ್ರಿ). ಆಶಾಭಂಗವನ್ನು ಹೊಂದು; ನಿರುತ್ಸಾಹಗೊಳ್ಳು : 'ನಿರಾಶೆಗೊಳಿಸು' ಪರಾ. **ನಿರಾಶೆಗೊಳ್ಳು:** ಒಂದು ಜಾತಿಯ ಜನರಿದ್ದಾರೆ. ಅವರು ತುಂಬ ನಿರಾಶೆಗೊಂಡಿದ್ದಾರೆ (ಪುನರು. ೨೩೬). [ನಿರಾಶೆ + ಕೊಳು (< ಕೊಳ್$_1$)]

**ನಿರಾಶೆಗೊಳ್ಳು** 'ನಿರಾಶೆಗೊಳು' ನೋ.

**ನಿರಾಶ್ರಮವಂತ** (ನಾ). ಆಶ್ರಮಗಳ ವ್ಯವಸ್ಥೆಯನ್ನು ಮೀರಿದವನು ; ಆಶ್ರಮಧರ್ಮಕ್ಕೆ ಹೊರತಾದವನು : ಶರಣ ಆಶ್ರಮವಂತನಾದಡೆ ಕಿರಿದೆಂಬರು ಶರಣ ನಿರಾಶ್ರಮವಂತನಾದಡೆ ಹಿರಿದೆಂಬರು (ಅಖಂಡೇ. ೩೦೬-೮೯). [ಸಂ. ನಿರಾಶ್ರಮವತ್]

**ನಿರಾಶ್ರಯ** (ಗು). **೧.** ಆಶ್ರಯವಿಲ್ಲದ ; ಆಧಾರವನ್ನು ಹೊಂದಿರದ. (ನಾ). **೨.** ಯಾರ ಆಶ್ರಯವೂ ಇಲ್ಲದವನು. **೩.** ಪರಮಾತ್ಮ : ನಿರಘ ನಿರೀಹ ನಿರ್ಭಯ ನಿರಾಶ್ರಯ . . . ಶಂಕರ ನಿರ್ಜಡ ಶಾಂಭವೀಧವಾ (ತಬಶಂ. ೫-೨೪). [ಸಂ.]

**ನಿರಾಶ್ರಿತ** (ನಾ). ಆಶ್ರಯವನ್ನು ಕಳೆದುಕೊಂಡವನು ; ನೆಲೆಗೆಟ್ಟವನು ; ಆಧಾರವಿಲ್ಲದವನು : ಒಂದೂವರೆಲಕ್ಷ ಜನ ನಿರಾಶ್ರಿತರು . . . ಜನರಲ್ಲಿ ಉದ್ರೇಕಗೊಳಿಸುತ್ತಿದ್ದಾರೆ, ಗಲಭೆ ಎಬ್ಬಿಸುತ್ತಿದ್ದಾರೆ (ದಿಲ್ಲಿಪ. ೫೦). [ಸಂ.]

**ನಿರಾಸ** (ಗು). ೧. ವೈರಾಗ್ಯಭಾವದಿಂದ ಕೂಡಿದ: 'ನಿರಾಸಮತಿ' ಪರಾ. (ನಾ). ೨. ತೊಲಗಿಸುವುದು ; ಅಟ್ಟುವುದು ; ತಳ್ಳುವುದು : ಭಸ್ಮಾಲೇಪನಂಗೆಯ್ದು ಭಾಸುರಭಾಳಸ್ಥಳದಲ್ಲಿ ದುರ್ಲಿಪಿ ನಿರಾಸಂಗೆಯ್ದು (ವೃಷವಿ. ೩೪-೩೩); ಆದಿನಾಥನ ಜನ್ಮಾವಳಿಯ ಕಥೆಗಳಲ್ಲಿ ಭೋಗದ ನಿರಾಸವನ್ನು ನೋಡಿದೆವು ; ಇನ್ನು ವಿಭವದ ನಿಷ್ಫಲತೆಯನ್ನು . . . ಭರತನ ವೃತ್ತಾಂತದಲ್ಲಿ ನೋಡಬೇಕಾಗಿದೆ (ಕಸಾಚ. ೯೧). [ಸಂ.]

**ನಿರಾಸಕ** (ಗು). ೧. ತಿರಸ್ಕರಿಸುವ ; ಖಂಡಿಸುವ : ಬ್ರಹ್ಮನು ಸ್ವತಂತ್ರ ಎಂದು ತಿಳಿದ ಹೊರತು ಅವನ ಪೂರ್ಣತ್ವವು ಸಂಭಾವಿತವಾಗುವುದಿಲ್ಲ. ಈ ಕಾರಣದಿಂದ ಸ್ವಾತಂತ್ರ್ಯಕ್ಕೆ ಉಪಪಾದಕವಾದ ಪರಪಕ್ಷ ನಿರಾಸಕ ಮತ್ತು ಸ್ವಪಕ್ಷಸ್ಥಾಪಕವಾದ ಪ್ರಮಾಣಚಿಂತೆಯು ಪ್ರಕೃತವಾಗಿರುವುದು (ಭಾತತ್ತ್ವ. ೯೧೧). ೨. ನಿವಾರಿಸುವ ; ನಾಶಪಡಿಸುವ : ಸರಸಿರುಹಸಂಭವಕೃತ ದುರಾಕ್ಷರವಿನಿಯತ ನಿರಾಸಕಮಹಾನಿರುಪಮಿತ ಮಹಿಮಾಢ್ಯನಂ ಪ್ರೌಢನನಮೌಢ್ಯನನು . . . ಕೊಂಡಾಡಿ (ಬಸಪು. ೪೬-೭೧). ೩. ವೈರಾಗ್ಯದಿಂದ ಕೂಡಿದ ; ತ್ಯಾಗಬುದ್ಧಿಯುಳ್ಳ : ಜಗವ ಸಿಕ್ಕಿಸುವ ವೇಷಲಾಂಛನಧಾರಿ ಸೆಟ್ಟಿಯಾಗಿ ಸರ್ವ ಪ್ರಕೃತಿದೇಶದಲ್ಲಿ ಬೆವಹಾರವ ಮಾಡುತ್ತಿರಲಿ ನಿರಾಸಕ ಕೋಲುಕಾಜಿ ತನುವಿನ ಸೆಟ್ಟಿಯ ತಡೆ ಬಿಟ್ಟಿತ್ತು (ಸುಂಕಬಂ. ೬೫೪-೨೬). (ನಾ). ೪. ವೈರಾಗ್ಯದಿಂದ ಕೂಡಿರುವವನು : ನಿತ್ಯ ನಿಶ್ಚಿಂತ ನಿರ್ಮಲ ನಿರ್ಮಾಯ ನಿರಾಸ[ಪಾಠಾಂ. ೪]ಕಂ (ಸಿದ್ಧೇಪ. ೧-೧). [ಸಂ.]

**ನಿರಾಸಕ್ತ** (ಗು). ೧. ಆಸಕ್ತಿಯಿಲ್ಲದ. (ನಾ). ೨. ಆಸಕ್ತಿಯಿಲ್ಲದವನು: ನಿರಹಂಕಾರ ನಿರವಯ ನಿರಾಸಕ್ತ ಪುರಹರನೆ (ಸೋಮಚ. ೧-೫). [ಸಂ.]

**ನಿರಾಸಕ್ತಿ** (ನಾ). ಆಸಕ್ತಿಯಿಲ್ಲದಿರುವಿಕೆ : ಜಯಂತನ ದನಿಯಲ್ಲಿ ನಿರಾನಂದ, ನಿರಾಸಕ್ತಿ, ನಿರಾಭಯ ತುಂಬಿ ತುಳುಕುತ್ತಿದ್ದಿತು (ಜಯಂತ. ೨೩೭). [ಸಂ.]

**ನಿರಾಸಮತಿ** (ನಾ). ಆಸಕ್ತಿಯಿಲ್ಲದಿರುವುದು ; ವಿರಕ್ತಿ ; ವೈರಾಗ್ಯ: ಬೇಸತ್ತು ನಿರಯದನುಭವಗೈಯಲಾರದೆ ನಿರಾಸಮತಿಯಿಂ ಜನ್ಮಕರ್ಮಗಳ ನೆನೆನೆನೆದು ಕೂಸು ತನ್ನೊಳ್ ತಾನೆ ಹಂಬಲಿಪ ತೆರನದೇನೆಂಬೆನಚ್ಚರಿಯ ಪರಿಯ (ವೆಂಕಾರಾ. ೨-೩೫-೧೦). [ನಿರಾಸ+ಮತಿ]

**ನಿರಾಸಮಾರ್ಗ** (ನಾ). ವೈರಾಗ್ಯಮಾರ್ಗ : 'ಜಗನ್‌ಮಿಥ್ಯೆ'ಯನ್ನು ಪ್ರತಿಪಾದಿಸುವ ಶುದ್ಧಾದ್ವೈತಮಾರ್ಗ, ಮಾಯಾಮಾರ್ಗ, ಕೇವಲ ನಿವೃತ್ತಿಮಾರ್ಗ, ಸಂನ್ಯಾಸಮಾರ್ಗ, ನಿರಾಸಮಾರ್ಗ (ವಚಸಂ. XXXII ಒಳಗೆ ಪ್ರವೇಶ). [ನಿರಾಸ+ಮಾರ್ಗ]

**ನಿರಾಸೆ** (ನಾ). ೧. ಆಸೆಯಿಲ್ಲದಿರುವುದು ; ನಿರಿಚ್ಛೆ : ಆಶೆಯೇ ದಾಸತ್ವ ನಿರಾಸೆಯೇ ಈಶತ್ವ ದಾಸತ್ವದ ಈಶತ್ವದ ಅನುವ ವಿಚಾರಿಸಿ ನಿರಾಸೆಯಾಗಿಪ್ಪುದೆ ಈಶಪದವಯ್ಯ (ಉರಿಪ. ೯೮-೭೯) ; ಆಸೆಯನಳಿದು ನಿರಾಸೆಯಲ್ಲಿ ನಿಂದು ವೇಷವ ಮಱೆದು ಜಗದ ಹೇಸಿಯಾಟವ ತೊಱೆದು (ವಚಸಂ. ೩೭೫-೩೦). ೨. ಆಶಾಭಂಗ ; ಉತ್ಸಾಹಹೀನತೆ : ಬಾಳಿನಲ್ಲಿ ಜಿಹಾಸೆ, ನಿರಾಸೆ ಹೊಂದಿದ್ದ (ಮುನಿಮಾ. ೧೯೨) ; ನಂಜಪ್ಪಾಜಿಯು ನಿರಾಸೆಯ ನಗುವನ್ನು ನಕ್ಕು . . . ಎಂದನು (ಶ್ರೀರಾಯ. ೧೬). [<ಸಂ. ನಿರಾಶಾ]

**ನಿರಾಸ್ರವ** (ನಾ). [ಜೈನ] ಕರ್ಮದಿಂದ ಮುಕ್ತನಾದವನು : ಕರ್ಮವನ್ನು ಕ್ಷಯಿಸಿದವನು : ಕಾಲಾಂತದೊಳಾ ಜಿನಂ ವೃಜಿನಮಂ ತವಿಸುತ್ತೆ ನಿರಾಸ್ರವಂ ತ್ರಿಲೋಕಾಂತಮನೆಯ್ದಿ ತಾಮುಮಿರದೆಯ್ದಿದರಾತ್ಮನಿಕೇತನಂಗಳಂ (ಶಾಂತಿಪು. ೧೨-೪೬). 'ಆಸ್ರವ' ಪರಾ. [ಸಂ.]

**ನಿರಾಹಾರ** (ನಾ). ೧. ಆಹಾರವನ್ನು ತೆಗೆದುಕೊಳ್ಳದೆ ಇರುವುದು; ಅನಶನ ; ಉಪವಾಸ : ಈ ನಿರಾಹಾರವು ನಿರರ್ಥಕವೇನನೆಂಬೆನು ಜೀಯ ಮುಱಿದಭಿಮಾನ ಬೆಸುವುದೆ ಬಣ್ಣವಳಿವುದೆ ಬಂದ ದುರಿಯಶದ (ಕುಪ್ಯಾಅ. ೨೧-೨೦) ; ಕೋಗಿಲೆಯ ನಿಡುಸರಂ ಪಾರಿವದ ಕಲ್ಲುಣಿಸು ಗೂಗೆಗಳ ಕಣ್ಗೊಳಿಸು ಬಕನ ಮೌನದ ಬೆಱಗು ನಾಗದ ನಿರಾಹಾರಂ. . . ಅಳುವ ಶಿಶುವಂ ನೋಡಲಾಗಿ ಬಂದೆಡೆಗೊಂಡ ದುಃಖಾತಿರೇಕಮೆಂಬಂತೆ ಕಾಣಿಸುತಿರ್ದುದು (ಜೈಮಿಭಾ. ೨೮-೩೮) ; ಏಕಾದಶಿವ್ರತ ನಿರಾಹಾರವು ನಮಗೆ (ಕರ್ನಾಕ. ೨೬೮). ೨. ಆಹಾರವನ್ನು ಸ್ವೀಕರಿಸದಿರುವವನು ; ಉಪವಾಸವನ್ನಾಚರಿಸುವವನು : ನಿರಾಹಾರ ನಿಜನಿರಂಜನ ಪರಮಾತ್ಮ ಭಾವನಾನಿರತ ಪ್ರಮತ್ತ ಸಂಯತಂಗೆ ಸೂಕ್ಷ್ಮಪದಾರ್ಥಂಗಳೇನಾನುಂ ಸಂಶಯಮಾದೊಡೆ (ಪಸಾರ. ೫೩೪) ; ಅವನು ಕೋಪದಿಂದ ಒಂದು ದಿನ ಪೂರ್ತಿ ನಿರಾಹಾರನಾಗಿದ್ದನು (ರೂಢಿ). [ಸಂ.]

**ನಿರಾಹಾರವ್ರತ** (ನಾ). ಉಪವಾಸವ್ರತ : ದರ್ಭಶಯ್ಯೆಯಲ್ಲಿ ನಿರಾಹಾರವ್ರತ ಹಿಡಿದು ಮಲಗುತ್ತಿದ್ದಂತೆ ನಾನೂ ಬರಿಯ ಹೊಟ್ಟೆಯಲ್ಲಿ ಹೊರಳಾಡಿದೆ (ನಂಟರು. ೩೮). [ನಿರಾಹಾರ+ವ್ರತ]

**ನಿರಾಹಾರಿ** (ನಾ). ೧. ಆಹಾರವಿಲ್ಲದವನು ; ತಿನ್ನುವುದಕ್ಕೇನೂ ಇರದವನು. ೨. ಉಪವಾಸವಿರುವವನು ; ಆಹಾರವನ್ನು ತೆಗೆದುಕೊಳ್ಳದಿರುವವನು : ದಂಪತಿಗಳಿಬ್ಬರೂ ನಿರಾಹಾರಿಗಳಾಗಿ ನಿಯಮಸ್ತರಾಗಿ ಬಾಯಿಬೀಗ ಸಹಿತವಾಗಿ ತಿರುಪತಿಗೆ ಹೋಗಿ (ಈಶ್ವಸ್ವ. ೫-೧೨) ; ಕಡೆಕಡೆಗೆ ನಿರಾಹಾರಿಯಾಗಿ ತಪಸ್ಸಿಗೆ ಕುಳಿತರು (ರಾಜ್ಯೋದ. ೧೦೪). [ಸಂ. ನಿರಾಹಾರಿನ್]

**ನಿರಾಳ** (ಗು). ೧. ಪರಿಶುದ್ಧವಾದ ; ನಿರ್ಮಲವಾದ : "ನಿರಾಳ—ನಿರಾವಿಲ=ಪರಿಶುದ್ಧ" (ತದ್ಭಕೋ. ೨೨) ; ಒಡಲಿಲ್ಲದ ನಿರಾಳಕರ್ತೃ ಕೂಡಲಸಂಗಮದೇವ ಜಂಗಮಮುಖವಾದನಾಗಿ ಮತ್ತೊಂದನಱಿಯೆನಯ್ಯಾ (ಬಸಪ. ೩೯೮) ; ಸಂಗಯ್ಯನಲ್ಲಿ ಕೂಡಿ ನಿರಾಳ ಪ್ರಸನ್ನಮೂರ್ತಿಯಾದ ನಮ್ಮ ಬಸವಯ್ಯನು (ನೀಲಪ.೧-೧) ; ಏಕಮೇವಾದ್ವಿತೀಯನಪ್ಪ ನಿರಾಳ ಪರವಸ್ತುವೆ (ಭೈರಸೂ. ೨) ; ಕೀಳುಸುಖಗಳ ಬಾಳು ಕಾಲಿನ ಕೋಳ ಸುಖವಿಂತೆಂಬವನಿಗೆಯು ಹೇಳಬಹುದೀ ಗಗನನಿತ್ಯನಿರಾಳವಚನ (ಗಗತಾ. ೪-೩). ೨. ನಿಶ್ಚಿಂತನಾದ : ನಿಸ್ಥಲವ ಸ್ಥಲವಿಡಲು ನಿರ್ಮಲಾತ್ಮಂಗೆ ಇಹವಿಲ್ಲ ಪರವಿಲ್ಲ ಆದಿಮಧ್ಯಾಂತ ನಿರಾಳ ಗುಹೇಶ್ವರನ ಅನುಭವಿಗೆ ಸರ್ವಾಂಗ ಲಿಂಗವು (ಅಪಚಂ. ೧೩೧-೫೯೭). (ನಾ). ೩. ನಿಶ್ಚಿಂತೆ; ಶಾಂತಿ ; ನೆಮ್ಮದಿ : ತನ್ನಲ್ಲಿ ತಾನೆಯಾಯಿತ್ತು ಭಿನ್ನವಿಲ್ಲದೆ ನಿಂದ ನಿರಾಳ ಅನಾಯಾಸದನುವ ಕಂಡು ಅನುಬೆಱಗಾದೆನು (ಅಪಚಂ. ೧೯೪-೮೭೯) ; ಮತ್ತೊಂದು ಕಡೆ ಶಾಸ್ತ್ರಗತ ಪ್ರಮಾಣವನ್ನು ಬಿಟ್ಟು ನಿರಾಳವಾಗಿ ವಿಚಾರಮಾಡಲು ಹಿಂಜರಿಯುತ್ತಿದ್ದ ಹಿಂದೂಗಳು (ಬಂಕಿಮ. XXIV, ಮುನ್ನುಡಿ) ; ನಮ್ಮ ಮಕ್ಕಳ ಕಾಲಕ್ಕೆ ತಂಟೆ ತಕರಾರು ಇರಕೂಡದು. ಅದು ನಮ್ಮಿಬ್ಬರಿಗೂ ನಿರಾಳ (ಅನಾಮಿ.೬); ಭಾರತದ ಕವಿಗಳ, ಕಲೆಗಾರರ ಅಂತರಾತ್ಮ ಬಿಡುಗಡೆಯ ಸಮಾಧಾನವನ್ನು ಹೊಂದಿ ನಿರಾಳವಾಗಿ ಉಸಿರಾಡಿತು (ಶ್ರೀಷಪ್ರ. ೧೭೫) ; ನಿರಾಳ ಎಂಬ ಪದಕ್ಕೆ ಶಾಂತಿ ಎಂಬ ಅರ್ಥವಿದೆ (ಆಳನಿ. I, ಮುನ್ನುಡಿ). ೪. ಚಿಂತೆಯಿಲ್ಲದವನು ; ನಿಶ್ಚಿಂತ : ಅಯ್ಯ ನೀನು ನಿರಾಳ ನಿರ್ಮಾಯನಾಗಿಪ್ಪೆಯಾಗಿ . . . ನಿಜದ ನಿಲವ ನೋಡಿ ಕಂಡೆನು (ಅಪಚಂ. ೨-೮) ;

ನಿರಾಕಾರ ನಿರಜ . . . ನಿರಾಳ ಪಂಪಾವಿರೂಪಾಕ್ಷ ಶರಣು (ಹಚಕಾ. ೧–೪) ; ನಿರ್ವಿಕಾರ ನಿರಾಳ ನಿಶ್ಚಿಂತ . . . ರುದ್ರನಿರುತಿರ್ಪನು ವಿನೋದದಲಿ (ಪ್ರಭುಲೀ. ೨–೯) ; ಸ್ಥೂಲ ಸೂಕ್ಷ್ಮಗಳೆರಡು ಮಾಯೆಯು . . . ಬಾಲಕನೆ ನೀನೆರಡು ತನುವಿನ ಮೇಲಣಭಿಮಾನವನು ಬಿಟ್ಟು ನಿರಾಳ ನಿಜ ನೀನೆಂದು ಚಿಂತಿಸು ತಿರ್ಪುದನವರತ (ಅಪ್ಯ್ರತ. ೩–೬೩). **೫.** ಅನೂಹ್ಯತೆ : ಇಹಪರ ಸ್ವರ್ಗ ನರಕಾದಿಗಳಿಲ್ಲದಂದು ಸುರಾಳ ನಿರಾಳಂಗಳೇನೂ ಇಲ್ಲದಂದು . . . ಅಂದೇನೋ ಇಂದೇನೋ (ಆದವ. ೧–೧) ; ನಿರಾಳ ಸುರಾಳವೆಂಬ ಬಯಲು ಅವಗವಿಸುವುದಕ್ಕೆ ಮುನ್ನವೆ ಬ್ರಹ್ಮಾಂಡವೆಲ್ಲಿ ಆಯಿತ್ತು (ಮೋಳಿಮಾ. ೭೯–೬೧೨) ; ಎನ್ನಭಿಮಾನದ ಕರ್ತು ನಿರಾಳದಲ್ಲಿ ನಿಂದ ಬಳಿಕ ಸಯಿದಾನ ಸುಯಿದಾನವಾಯಿತ್ತಯ್ಯಾ (ಸೀಲವ. ೧೮–೪೯). [<ಸಂ. ನಿರಾವಿಲ]

**ನಿರಾಳಂ** (ಅ). ನಿಶ್ಚಿಂತೆಯಿಂದ ಕೂಡಿ : ಲೋಹಕ್ಕೆ ನಿರಾಳಮಾಗಿ ಪೊಗಮಿತ್ತು . . . ಮೆಜಿಸ್ಟರ್ ವಾಹಂಗಳಂ ವಾಹಕರ್ (ಅನಂಪು. ೨–೩೧). [<ನಿರಾಳ]

**ನಿರಾಳಂಬ** 'ನಿರಾಲಂಬ' ನೋ.

**ನಿರಾಳತ್ವ** (ನಾ). ನಿರಾವರಣ ; ಹೊದಿಕೆಯಿಲ್ಲದಿರುವಿಕೆ : ಕುಂಭಿನಿಯ ಮೊಲೆಯ ಮೇಲುದ ಸೆಳೆದ ಜಾರನಂತದ್ರಿಗಳು ಸಲೆ ನಿರಾಳತ್ವ ದಿಂದವನೆಯ್ದೆ ತೋರಿಸುತೆ ಹೈಮಂತರುತು ಪ್ರಾಪ್ತಿಸೆ (ಪರಶು. ೧೫–೨೭). [ನಿರಾಳ + –ತ್ವ]

**ನಿರಾಳಲಿಂಗ** (ನಾ). [ವೀಶೈ] (ಮಾಯಾಸಂಬಂಧವನ್ನು ಬಿಟ್ಟ) ಪರಿಶುದ್ಧವಾದ ಲಿಂಗ : ನಿರಾಳಲಿಂಗವ ಕಾಂಬುದಕ್ಕೆ ಮನ ಮತ್ತೊಂದೆಡೆಗೆ ಹರಿಯದಿರಬೇಕು (ಲಿಂಗಪ. ೭೭–೮೦) ; ಮಾನವನ . . . ಭಾವಾಂಗವೆಲ್ಲ ಚಿದಂಗವಾಗಿ, ಚಿತ್‌ಪ್ರಭಾಂಗವಾಗಿ, ನಿರಾಳ ಲಿಂಗಕ್ಕೆ ಬೆಳಗಿನ ಸೆಜ್ಜೆಯಾಗಿ . . . ಪರಿಣಮಿಸಬೇಕೆಂಬುದೇ ಶರಣರ ಅನುಭವ ವಿಚಾರ (ವಚಸಂ. XVII ಒಳಗೆ ಪ್ರವೇಶ) ; ಬಯಲೇ ಸೆಜ್ಜೆಯಾಗಿ ಬೆಳಗುವ ನಿರಾಳಲಿಂಗದ ನಿಲವನ್ನು ವೇದ ವೇಧಿಸಲಿಲ್ಲ (ಮೋಳಿಮಾ. ೧೦ ಪ್ರಸ್ತಾವನೆ). [ನಿರಾಳ + ಲಿಂಗ]

**ನಿರಿ**$_1$ (ಕ್ರಿ). **೧.** ಕೊಲ್ಲು ; ಸಾಯಿಸು : ಮರುಳಾದಂ ಜನಪಂ ಸಮಸ್ತಹನನವ್ಯಾಸಂಗಮುಂ ಸಿಂಗಮುಂ ನಿರಿಯಿಂ ನೀಮದನೆಂದು ಮಕ್ಕಳ ನಿವಂ ತಾನಟ್ಟಿದಂ (ಪರ್ವಪು. ೩–೪೧) ; ನಿರಿದಪ್ಪಂ ಮಗಧೇಶನಂ ನಿಜಾಸಿದಪ್ಪಂ ಚೋಟನಂ (ಸೂಕ್ತಿಸು. ೧೮–೧೪) . **೨.** ಚುಚ್ಚು ; ತಿವಿ : ಮರ್ಮಮಂ ಸ್ಮರಂ ನಿರಿದಪನೆನ್ನ ಜೀವಿತಮಿದೇಕೆಯೋ ಪೋಗದು (ಲೀಲಾವ. ೧೪–೬೧). **೩.** ನಿವಾರಿಸು ; ಪರಿಹರಿಸು : ಆ ಪಟುಕರ್ಮದಿನಪ್ಪ ನೋವನಾವಂ ನಿರಿಯಲ್ ಸಮರ್ಥನೆಲೆ ಜೀವನೆ ಕೇಳ್(ಶಾಂತೀಶ್ವ. ೯–೧೧೯). 'ನೇರ್$_1$' ಪರಾ. [ದೇ. ॥ತಮಿ. ಮಲ. ನಿರಿ]

**ನಿರಿ**$_2$ 'ನಿಱು$_2$' ನೋ.

**ನಿರಿಂದ್ರಿಯ** (ಗು). ೧. ಇಂದ್ರಿಯಗಳಿಗೆ ತಿಳಿಯದ,—ವೇದ್ಯ ವಾಗದ ; ಇಂದ್ರಿಯಾತೀತವಾದ : 'ನಿರಿಂದ್ರಿಯಸುಖ' ಪರಾ. (ನಾ). ೨. ಇಂದ್ರಿಯಗಳಿಂದ ಕೂಡಿರದವನು ; ಇಂದ್ರಿಯ ಗಳಿಗೆ ಅತೀತನಾದವನು : ನಿತ್ಯಂ ನಿರಿಂದ್ರಿಯಂ ಸಂಪ್ರತ್ಯಯ ನವಿನಾಶಿಜೀವನಿತರಂ ತನುವೆಂದತ್ಯಂತ ಭೇದವಿಷಯಾಪತ್ಯಾದಿಯನೆನ್ನವೆನ್ನ ನಸ್ಯತ್ವವಿದಂ (ಮಲ್ಲಿಪು. ೧೪–೬೮). [ಸಂ.]

**ನಿರಿಂದ್ರಿಯಸುಖ** (ನಾ). ಇಂದ್ರಿಯಗಳಿಂದ ಅನುಭವಿಸಲಾಗದ ಸುಖ,—ಆನಂದ ; ಮೋಕ್ಷಸುಖ : ದುರಿಂದ್ರಿಯಸುಖಕ್ಕೆ ಕೊಕ್ಕರಿಕೆ ಪುಟ್ಟೆ ನಿರ್ವೇಗದಿಂ ನಿರಿಂದ್ರಿಯಸುಖಕ್ಕೆ ನಾಡೆ ಮನಮಿಟ್ಟು (ಸುಕುಮಾ. ೧೦–೩೧). [ನಿರಿಂದ್ರಿಯ + ಸುಖ]

**ನಿರಿಕೆ** (ನಾ). ಕಾಯುವುದು ; ನಿರೀಕ್ಷೆ : "ನಿರಿಕೆ—ನಿರೀಕ್ಷಾ = ಕಾದಿರುವಿಕೆ" (ತದ್ಭ ಕೋ. ೨೨). [<ಸಂ. ನಿರೀಕ್ಷಾ]

**ನಿರಿಗೆ** 'ನಿಱುಗೆ' ನೋ.

**ನಿರಿಗೆಗಟ್ಟು**, ನೆರಿಗೆಗಟ್ಟು (ಕ್ರಿ). ಸುಕ್ಕುಗಟ್ಟು ; ಮಡಿಕೆಯಾಗು : ಗದ್ದ . . . ಸ್ವಲ್ಪ ನಿರಿಗೆಗಟ್ಟಿತ್ತು ಅಷ್ಟೆ (ಮಹಾತ್ಮಾ. ೧೯). **ನೆರಿಗೆಗಟ್ಟು** : ನೋವಿನ ಆಳಕ್ಕೆ ಇಳಿದ ಅತನ ಹಣೆ ನೆರಿಗೆಗಟ್ಟುತ್ತಿತ್ತು (ಬದುಜ. ೧೧೯). [ನಿರಿಗೆ(<ನಿಱುಗೆ) + ಕಟ್ಟು$_1$]

**ನಿರಿಗೆಗೊಳ್ಳು** (ಕ್ರಿ). ಸುಕ್ಕಾಗು ; ನಿರಿಗೆಯಾಗು : ಅವಳ ತುಟಿ ಸಂತೋಷಾರ್ಥವಾಗಿ ನಿರಿಗೆಗೊಂಡುವು (ಪುನರು. ೪೨೦). [ನಿರಿಗೆ(<ನಿಱುಗೆ) + ಕೊಳ್ಳು$_1$(<ಕೊಳ್$_1$)]

**ನಿರಿಗೆಹೊಯ್** (ಕ್ರಿ). ನಿರಿಗೆ ಹಾಕು ; ನೆರಿ ಹಿಡಿ : ತುದಿಕಾಲ್ಬೆರಳುಗಳು ಮುಚ್ಚುವಂತೆ ನಿರಿಗೆಹೊಯ್ದು ದಡೀಧೋತರವನ್ನು ಉಡುತ್ತಿದ್ದರು (ಶರೀಫ. ೬೧ ಕವಿಕಾವ್ಯ ಪರಿಚಯ). [ನಿರಿಗೆ(<ನಿಱುಗೆ) + ಹೊಯ್$_2$(<ಪೊಯ್$_2$)]

**ನಿರಿಚ್ಛೆ** (ನಾ). ಇಚ್ಛೆಯಿಲ್ಲದಿರುವುದು ; ನಿರಪೇಕ್ಷವಾದುದು ; ನಿಷ್ಕಾಮವಾದುದು : ಪ್ರೇಮವು ನಿರಿಚ್ಛೆಯುಳ್ಳದ್ದು (ಸ್ಮೃತಿಚಿ. ೪೪೫). [ಸಂ. ನಿರಿಚ್ಛಾ]

**ನಿರಿಡಿಬಿತ್ತ** (ನಾ). ಒಂದು ಬಗೆಯ ಗಿಡ : ತಿಲೋಣ, ಶ್ರೀಕಲ, ಸೂರ್ಯಾವರ್ತ, ನಿರಿಡಿಬಿತ್ತ (ಮೈಪಗಿ. ೪೧–೫೨೦). [ನಿರಿಡಿ ? + ಬಿತ್ತ(<ಬಿಟ್ಟು)]

**ನಿರಿನಿರಿ**$_1$ (ನಾ). (ಕಾಂತಿಯನ್ನು ಸೂಚಿಸುವ) ಒಂದು ಅನುಕರಣ ಶಬ್ದ : ನಿರಿನಿರಿ ಮೆರೆದುದು ನೀಲಿಯ ಸೀರೆ (ಸೌಂದಸ. ೩೪೧) ; ಕಾಮನ ಬಿಲ್ಲೇ ಕುಣಿದೊಲು ನಿರಿನಿರಿ (ಹೂಹಾದಿ. ೧೩–೫).

**ನಿರಿನಿರಿ**$_2$ 'ನಿಱು$_2$' ಪರಾ.

**ನಿರಿಬಿಗಿ** (ಕ್ರಿ). ನಿರಿಗೆಗಳನ್ನು ಸೇರಿಸಿ ಬಿಗಿದು ಕಟ್ಟು : ಹುಡುಗಿಯರು ಕೊರಚಾಡುತ್ತಾ ನಿರಿಬಿಗಿಯುತ್ತಾ ಮುಂದೆ ಹೋದರು (ಕಾಲೂರ. ೯ ಕಥಾಸಾರ). [ನಿರಿ$_2$(<ನಿಱು$_2$) + ಬಿಗಿ$_1$]

**ನಿರಿಮುಗಿಲು** 'ನಿಱುಮುಗಿಲ್' ನೋ.

**ನಿರಿಯಣ** 'ನಿರಿಯಾಣ' ನೋ.

**ನಿರಿಯಾಣ**, ನಿರಿಯಣ (ನಾ). **೧.** ಸಾವು ; ಮರಣ. **೨.** ಸಾಯುಜ್ಯ ; ಐಕ್ಯ : ಆ ಲಿಂಗದ ಕೂಟವೆ ನಿರಿಯಾಣ (ಮೋಳಿಮಾ. ೨೧೨) ; ಹರಣವಿದ್ದೂ ಹರಣವಿಲ್ಲ ಹರಣ ಲಿಂಗದಲ್ಲಿ ನಿರಿಯಾಣವಾಯಿತ್ತಾಗಿ (ಆದವ. ೪೭–೧೩೩). **ನಿರಿಯಣ : ೧.** ನಿರಿಯಣದ ಕಾಲದಲಿ ಗತಿಗೆಡಿಸಿ ಕೊಂಡೊಯ್ದು ವೈವಸ್ವತನು ನಾಯಕನರಕದೊಳಗದ್ದುತ ಬಹನು (ಕುವ್ಯಾಉ. ೪–೮೬). [<ಸಂ. ನಿರ್ಯಾಣ]

**ನಿರಿಯಿಡು**(ಕ್ರಿ). ನಿರಿಗೆ ಹಾಕು: ನಿರಿಯಿಟ್ಟು ಪಟ್ಟೆಬಟ್ಟೆಯನ್ನುಟ್ಟರು (ಕಾಲೂರ. ೧೩ ಕಥಾಸಾರ). [ನಿರಿ$_2$(<ನಿಱು$_2$) + ಇಡು$_1$]

**ನಿರಿವಿಡಿ** 'ನಿಱುವಿಡಿ' ನೋ.

**ನಿರಿಸು** 'ನಿಱುಸು$_1$' ನೋ.

**ನಿರಿಹಪರ** (ಗು). ೧. ಇಹ ಮತ್ತು ಪರಗಳಿಗೆ ಸಂಬಂಧಿಸದ ; ಇಹವೂ ಅಲ್ಲದ ಪರವೂ ಅಲ್ಲದ. (ನಾ). ೨. ಇಹ ಮತ್ತು ಪರಗಳೆರಡಕ್ಕೂ ಸಂಬಂಧಿಸದವನು ; ಇಹ ಮತ್ತು ಪರಗಳೆರಡನ್ನೂ ಕಳೆದುಕೊಂಡವನು: ಶ್ರಾಂತಿಯಿಂ ಭ್ರಾಂತಿಯಿಂ ಗತಿಗೆಟ್ಟು ಮತಿಗೆಟ್ಟು ಮುಂತನರಿಯದೆ ನಿರಿಹಪರನಾಗಿ . . . ಶಂಕಿಸುತ ನಿಂದಿರುವ ಕರ್ಮಸಂದೇಹಿ (ಗಣೇಶ. ೩೭–೩). [ಸಂ.]

**ನಿರಿಹಿಡಿ** 'ನಿಱುವಿಡಿ' ನೋ.

**ನಿರೀಕ್ಷಣ** (ನಾ). ೧. ನೋಟ ; ದೃಷ್ಟಿ : ದಿವ್ಯಾಂಗನಾಭಾವಾಪಾಂಗ ನಿರೀಕ್ಷಣಾಮೃತಕೃತಾನಂಗೋತ್ಸವಂ (ಆದಿಪು. ೨-೬) ; ಪೊಸಮುತ್ತಂ ಪಾಲೊಳ್ ತೊಳೆದೆಸೆದಿರೆ ದೆಸೆದೆಸೆಗೆ ಕೆದಱಿದಂತಾಗೆ ನಿರೀಕ್ಷಿಸುವ ನಿರೀಕ್ಷಣಮೆ ಮನಃಪ್ರಸಾದವಂ ಪೇಟಿದಱಿವುಗುಂ (ಶಾಂತಿಪು. ೩-೩೮) ; ತನ್ಮನೋಹರಾಂಗ ನಿರೀಕ್ಷಣತ್ಯಾಗ ಆ ಸ್ತ್ರೀಯರ ಮನೋಹರಮಪ್ಪ ಅವಯವಂಗಳ ನೋಟಮಂ ತೊಱೆವುದುಂ (ತತ್ತ್ವಪ್ರ. ೨೬೦) ; ಫಣಿಧರನ ಕಣ್ಣೊಳು. . . ಉಗುವಂಬುಗಳೆ ಭೂಷಣವದಾಯಿತ್ತೆಂದಡಂ ಕರುಣಾನಿರೀಕ್ಷಣದ ಪ್ರಣುತಕಂಕಣನಿಕರಮದು ತಾಂ ಗಣಿದಿಸುವಡಾನಂದ ಕರಕಾರಣಮೆನಿಸಿದುದು ಚೋದ್ಯಮೇ (ಬಸಪು.೧೮-೬೬). ೨. ನೋಡುವುದು ; ಕಾಣುವುದು ; ದರ್ಶನ : ನೀಗಿದುದೀಗಳೆಮ್ಮ ವನವಾಸ ಪರಿಶ್ರಮವಿಾಗಳಾಳ್ದವಾ ಸಾಗರಮೇಖಳಾವೃತ ಧರಿತ್ರಿಯಂ . . . ಏನಾಗದೊ ಪೇಟ್ ಭವಚ್ಚರಣಪದ್ಮನಿರೀಕ್ಷಣದಿಂ ಮುನೀಶ್ವರಾ (ಪಂಪಭಾ.೬-೬೦) ; ತನ್ಮುನಿನಿರೀಕ್ಷಣಕ್ಷಣದೊಳಲರ್ದ ಕಡವಿನ ಮರಗಳ್ ಪರಿಗತರೋಮಾಂಚತೆಯಿಂ ದೊರೆಮಾಡಿದುದೆನ್ನ ತನುವುಮಂ ನೆಱೆ ತನ್ನೊಳ್ (ಚಂದ್ರಪು. ೨-೯೯). ೩. ಪ್ರತೀಕ್ಷೆ ; ಭರವಸೆ. [ಸಂ.]

**ನಿರೀಕ್ಷಣೆ** (ನಾ). ೧. ನೋಡುವಿಕೆ; ವೀಕ್ಷಣೆ : ಸಾಹೇಬರ ನಿರೀಕ್ಷಣೆ ಪರೀಕ್ಷಣೆ ನಡೆದಿದ್ದರೂ ಗುರುಗಳು ತಮ್ಮನ್ನೇ ಸಾವರಿಸಿಕೊಳ್ಳುತ್ತ ಹುಡುಗರಿಗೆ ಕ್ರಮ ಹೇಳಿಕೊಡುತ್ತಿದ್ದರು (ಜಯಂತ. ೨೩). 'ನಿರೀಕ್ಷಣೆಗೆಯ್' ಪರಾ. ೨. ಪ್ರತೀಕ್ಷೆ; ಭರವಸೆ: ಯಾರು ಯಾರಿಗೆ ವಿದ್ಯಾಪ್ರಚಾರದಲ್ಲಿ ಶ್ರದ್ಧೆಯುಂಟೋ ಅಂಥವರೆಲ್ಲರಿಗೂ ಈ ಉಪನ್ಯಾಸಗಳು ಇಷ್ಟವಾದಾವೆಂಬುದು ಪರಿಷತ್ತಿನ ನಿರೀಕ್ಷಣೆ (ಸಾಹಿಶ. ೬೨). ೩. ಯಾವುದೇ ವಸ್ತು, ವಿಷಯ ಇತ್ಯಾದಿಗಳಿಗಾಗಿ ಕಾಯುವಿಕೆ : ಮಗನ ಆಗಮನದ ನಿರೀಕ್ಷಣೆಯಲ್ಲಿ ಗೌಡರಿದ್ದುದನ್ನು ತಿಳಿದ ರಂಗಮ್ಮ ಕತ್ತಲಾದೊಡನೆಯೆ ಎಂದಿಗಿಂತ ಸ್ವಲ್ಪ ಬೇಗನೆ ದೀಪ ಹಾಕಿದರು (ರಂಗವ. ೨೪೮); ಕೆಲವು ದಿನ ನಾವು ಅವರ ನಿರೀಕ್ಷಣೆಯಲ್ಲೇ ಇದ್ದೆವು (ಬಾಳಹೊ. ೫೫). [ಸಂ. ನಿರೀಕ್ಷಣಾ]

**ನಿರೀಕ್ಷಣೆಗೆಯ್** (ಕ್ರಿ). ನೋಡು ; ಕಾಣು : ಭಾಳಾಕ್ಷನ ಜಡೆಗಳಿನಿಳಿದು ಮೋಕ್ಷವ ಕುಡಬಂದ ಪರಮಪಾವನೆಯ ನಿರೀಕ್ಷಣೆಗೆಯ್ದು ಮನ್ಮಥನು (ಮೋಹತ. ೬-೩೨). [ನಿರೀಕ್ಷಣೆ+ಕೆಯ್$_1$]

**ನಿರೀಕ್ಷಣೆಗೊಡು** (ಕ್ರಿ).(ಮದುವೆಯಲ್ಲಿ)ವಧೂವರರಿಗೆ (ಪರಸ್ಪರವಾಗಿ) ಪ್ರಥಮದರ್ಶನ ಮಾಡಿಸು : ನೆಟ್ಟನೆ ತೆರೆವಿಡಿದರು ಕ್ಷತ್ರವಿಧಿಯಿಂದೆ ಮೆಟ್ಟಕ್ಕಿಯ ಮೇಲೆ ನಿಲಿಸಿ ಶ್ರೇಷ್ಠರು ಮಂಗಳಾಷ್ಟಕದಿ ನಿರೀಕ್ಷಣೆಗೊಟ್ಟರು ದಂಪತಿಗಳಿಗೆ (ಮೋಹತ. ೧೩-೬೮).

[ನಿರೀಕ್ಷಣೆ+ಕೊಡು$_1$]

**ನಿರೀಕ್ಷಿಸು** (ಕ್ರಿ). ೧. ನೋಡು ; ಈಕ್ಷಿಸು ; ಅವಲೋಕನ ಮಾಡು ; ಕಾಣು : ವಿನುತಸಮಗ್ರಮಂಡಲದ ಚಂದ್ರನ ಚಂದ್ರಿಕೆವೊಲ್ನರೇಂದ್ರಚಂದ್ರನ ರುಚಿರೋತ್ಕರಗ್ರಹಣಶೋಭಿತೆಯಂ ಸೊಸೆಯಂ ನಿರೀಕ್ಷಿಸಲ್ (ಕಾದಂಬ.೪೯೨); ನಿರೀಕ್ಷಿಸಿ ನಿಕೃಷ್ಟ ದುಷ್ಟಗಣರಂ ಗತಪ್ರಜ್ಞ[ರಂ] . . . ಆಗ್ರಹಿಸಿ (ಸುಕುಮಾ. ೨-೧೮) ; ನಡುವಿರುಳಂತೆ ಕಟ್ಟಲಿಸೆ ಪಟ್ಟಪಗಲ್ ರಣಮಂ ನಿರೀಕ್ಷಿಸಲ್ ಪಡೆಯದೆ ದೇವರುಂ ದಿವಿಜಕಾಂತೆಯರುಂ ಬೆಱಗಾಗೆ (ಪಂರಾಮಾ.೧೩-೪೪) ; ಅಮಲ ಚಿದ್ರೂಪಕನನೊಲ್ದು ಕರುಣಾಪಾಂಗದಿಂ ನಿರೀಕ್ಷಿಸಿ (ಪದ್ಮರಾ. ೩-೪) ; ಭೂಮಿಪನಿವಹವಾಪುರುಷಾಮೃಗದ ಕಾಯುವ ನಿರೀಕ್ಷಿಸಿ ಹೋಹುದೀ ಪರಿವಿಡಿಯಲನುದಿನವು (ಕುವ್ಯಾಸ. ಓರಿಇ.೬-೫೦) ; ಯುವತಿ ನಿರೀಕ್ಷಿಸುವರ ಕಣ್ಗೆರದೆ ಕೃತಾರ್ಥತೆ ಮಾಡುವಳು (ಜಯಕಾ. ೩-೫೬). ೨. ಎವೆಯಿಕ್ಕದೆ ನೋಡು ; ನಿಟ್ಟಿಸು ; ದಿಟ್ಟಿಸು : ಕಂಗಳು ತುಂಬಿ ನಿರೀಕ್ಷಿಸಿ ಶ್ರೋತ್ರ ತುಂಬಿ ಹಾರೈಸಿ . . . ಮಾಡುವುದು ಭಕ್ತಿಸ್ಥಲ (ಬಸಪ. ೮೬೪) ; ಆಗಳತಿ ಕ್ರೋಧಮಂ ತಳೆದು ಮಗಧರಾಜಂ ಚೇದಿರಾಜನಂ ನಿರೀಕ್ಷಿಸಿ (ಜಗವಿ. ೬-೪೫ಪ) ; ಸರಳ ಹಿಳುಕಿನ ಹೊಂಗಱಿಯ ತುದಿವೆರಳಲೊಯ್ಯಾರಿಸುತ . . . ಕೂರಲಗ ಧಾರೆಯ ನಿರೀಕ್ಷಿಸುತ ಇರಲು (ತೊರರಾ. ೩-೪-೧೫). ೩. ಎದುರುನೋಡು ; ಕಾಯು ; ಪ್ರತೀಕ್ಷೆಯಲ್ಲಿರು ; ಹಾದಿನೋಡು : ಹಂದಿಯು . . . ಕೋರೆಯನ್ನು ಮಸೆಯುತ್ತಾ ಹುಲಿಯನ್ನೇ ನಿರೀಕ್ಷಿಸುತ್ತಾ ನಿಂತಿತ್ತು (ಚಂಗಾಳ್ವ. ೫೪) ; ಪತಿ ಎಂದಾದರೊಂದು ದಿನ ಹಿಂದಿರುಗುವರೇನೋ ಎಂದು ನಿರೀಕ್ಷಿಸುತ್ತಿದ್ದಳು(ಮೂಲಾನ. ೨೧೪) ; ಪ್ರಮಿಾಲ ಪ್ರಕಾಶರು ಬಸ್ಸಿನಿಂದ ಇಳಿದು ಆನಂದನನ್ನು ನಿರೀಕ್ಷಿಸುತ್ತಿದ್ದರು (ಮರಳಿ. ೧೪೩) ; ರೋಗಿಗಳೆಲ್ಲ ಉತ್ಸುಕತೆಯಿಂದ ಅವಳ ಬರುವಿಕೆಯನ್ನು ನಿರೀಕ್ಷಿಸುತ್ತಿದ್ದರು (ಕುಂಕುಮ. ೮೪). ೪. ಬಯಸು; ಹಾರೈಸು : ಜನತೆ ಇವರಿಂದ ಹೆಚ್ಚಿನ ಸೇವೆಯನ್ನು ನಿರೀಕ್ಷಿಸುತ್ತದೆ (ಸಮಾಲೋ. ೧೪೨). [ನಿರೀಕ್ಷಣ+-ಇಸು$_3$]

**ನಿರೀಕ್ಷೆ** (ನಾ). ೧. ನೋಡುವುದು ; ಈಕ್ಷಣ : ಮಧುರತರ ಮಧುಸೂದನಾನನಸುಧೆಗೆಜಗಿದೀ ಜಗದ ಕಂಗಳು ವಿಧುರತೆಯನ್ನೈದುವುವು ರೂಪಾಂತರನಿರೀಕ್ಷೆಯುಲಿ (ಸಿಭಾಗ. ೩-೨-೪೫). ೨. ಎದುರು ನೋಡುವುದು ; ದಾರಿಕಾಯುವುದು : ತಾಂಬೂಲದ ಬಗ್ಗೆ ಯಾವ ನಿರೀಕ್ಷೆ ನಿರಾಸೆಗಳೂ ಇರಲಿಲ್ಲ (ಬಾಳಹೊ. ೯೬). [ಸಂ. ನಿರೀಕ್ಷಾ]

**ನಿರೀಶ** (ನಾ). ಒಡೆಯನಿಲ್ಲದವನು ; ತಾನೇ ಒಡೆಯನಾದನು : ನಿರೀಶ ನಿರಂತರಾಯ ನಿರ್ದ್ವಂದ್ವ ನಿರತ್ಯಯ ನಿಷ್ಕಷಾಯ (ಪರ್ಣಮಾ. ೧೪-೬). [ಸಂ.]

**ನಿರೀಶ್ವರ** (ನಾ). ೧. ಯಾವ ಒಡೆತನಕ್ಕೂ ಒಳಪಡದವನು ; ಪರಮಪುರುಷ ; ದೇವರು : ನಿರತಿಶಯ ನಿಸ್ಸೀಮ ನಿಗಮೇತರ ನಿರೀಶ್ವರ . . . ನಿರ್ವಿಕಾರಾಕಾರಾ ಚಿತ್ತೈಸು (ಬಸಪು. ೬೧-೪೩). ೨. =ನಿರೀಶ್ವರವಾದಿ : ತನಗೆ ತಾನೇ ದೈವವೈದೆ ಶಿವನಿಲ್ಲವೆಂದಾ ನಿರೀಶ್ವರರನರೆ ಬರಮಾಡಿದಂ(ವೀಶೈಪು. ೪-೩-೧೩). [ಸಂ.]

**ನಿರೀಶ್ವರವಾದ** (ನಾ). ದೇವರಿಲ್ಲವೆಂಬ ವಾದ ; ನಾಸ್ತಿಕವಾದ : ಸಾಂಖ್ಯದರ್ಶನವನ್ನು ನಿರೀಶ್ವರವಾದವೆಂದೂ ನಾಸ್ತಿಕವಾದವೆಂದೂ ವೇದಾಂತದಾರ್ಶನಿಕರು ದೂರ ತಳ್ಳಿದ್ದಾರೆ (ಭಾರದ. ೧೧೩).

[ನಿರೀಶ್ವರ+ವಾದ$_2$]

**ನಿರೀಶ್ವರವಾದಿ** (ನಾ). ದೇವರಿಲ್ಲವೆಂದು ವಾದಿಸುವವನು ; ನಾಸ್ತಿಕ : ವಾದಿಗಳಲ್ಲಿ ಚಾರ್ವಾಕ ಜೈನ ಬೌದ್ಧ ಮಿಾಮಾಂಸಕ ಸಾಂಖ್ಯರೆಂಬನೈವರೆ ನಿರೀಶ್ವರವಾದಿಗಳು (ವಿವೇಕ. ೧೨) ; ಸಾಂಖ್ಯರಿಗೂ ಮಿಾಮಾಂಸಕರಿಗೂ ಈಶ್ವರನೇ ಬೇಕಿರಲಿಲ್ಲ. ಎರಡು ಗುಂಪಿನವರೂ ನಿರೀಶ್ವರವಾದಿಗಳು (ಋಕ್ಸಾರ. ೧೦೦ ಪೀಠಿಕೆ) ; ಶಾಶ್ವತವಾದ ಒಬ್ಬ ಈಶ್ವರನಿಲ್ಲವೆಂದು ಸಿದ್ಧಾಂತವಾದುದರಿಂದ ಇವರಿಗೆ ನಿರೀಶ್ವರವಾದಿಗಳು, ಪ್ರವಾಹೇಶ್ವರವಾದಿಗಳೆಂದು ಪ್ರಸಿದ್ಧಿ (ಹಿಂದಸಾ. ೪೯).

[ಸಂ. ನಿರೀಶ್ವರವಾದಿನ್]

**ನಿರೀಶ್ವರಸಾಂಖ್ಯ** (ನಾ). ಈಶ್ವರನ ಅಸ್ತಿತ್ವವನ್ನು ಅಂಗೀಕರಿಸದಿರುವ ಸಾಂಖ್ಯಮತದ ಒಂದು ಗುಂಪಿನವನು ; ☞ ಈಶ್ವರನು ಇಲ್ಲವೆಂದು ಸಾಂಖ್ಯರು ಹೇಳುತ್ತಾರೆ. ಇವರಿಗೆ ನಿರೀಶ್ವರ ಸಾಂಖ್ಯರೆಂದು ಹೆಸರು. ಕೆಲವರು ಸಾಂಖ್ಯ ವಿದ್ವಾಂಸರು ಈಶ್ವರನನ್ನು ಅಂಗೀಕರಿಸಿದ್ದಾರೆ. ಇವರು ಸೇಶ್ವರಸಾಂಖ್ಯರು : ನಿರೀಶ್ವರಸಾಂಖ್ಯನು ಈ ಆಕ್ಷೇಪವನ್ನು ತರುವದಕ್ಕೆ ಆಗುವ ಹಾಗಿಲ್ಲವಾದರೂ ಸೇಶ್ವರಸಾಂಖ್ಯನು ತರಬಹುದಾಗಿದೆ (ಬ್ರಹ್ಮಭಾ. ೫೬೬ ಅಡಿಟ).

[ನಿರೀಶ್ವರ + ಸಾಂಖ್ಯ]

**ನಿರೀಷ** (ನಾ). ಈಚಿಲ್ಲದ ನೇಗಿಲು; ದಂಡವಿಲ್ಲದ ನೇಗಿಲು: "ನಿರೀಷಂ, ಕೂಟಕಂ – ಈ ೨ ಮರಕ್ಕೆ ಸೇರದೇ ಇರುವ ಕಬ್ಬಿಣದ ನೇಗಲ ಹೆಸರುಗಳು" (ಸಿದ್ಧಾಂತಿ. ೨೭೭). [ಸಂ.]

**ನಿರೀಹ** (ಗು). ೧. ಏನನ್ನೂ ಬಯಸದ, —ಇಚ್ಛಿಸದ: ಕೊನೆಗೆ ಶಾಂತಿಪ್ರಿಯನಾದ ನಿರೀಹ ಸ್ವಭಾವದ ಶಶಿಭೂಷಣನು ಊರು ಬಿಟ್ಟು ಕಲಕತ್ತಾಕ್ಕೆ ಓಡಿಹೋಗುವ ಸಿದ್ಧತೆ ನಡೆಸಿದನು (ಇಪ್ಪಕ. ೮೮); ಇಂತಹ ಪ್ರಾತಃಸ್ಮರಣೀಯರಾದ ನಿರೀಹ ಪುರುಷರು ನಮ್ಮ ದೇಶದಲ್ಲಿರುವದೇ ನಮ್ಮ ಭಾಗ್ಯೋದಯವು (ಚೆನ್ನಜೀ. ೧೨೬). (ನಾ). ೨. ಏನನ್ನೂ ಬಯಸದುದು: ಅನಯಂ ಪೊಜಿಮಾಜಿದುದೆಲ್ಲಿಯುಂ ಪ್ರಜಾನಂದಮಳುಂಬಮಾದುದು ನಿರೀ[ಹ] ನಿರಂತರಮಾದುದೊಳ್ಗುಣಂ ಕುಂದದಳುರ್ಕೆವೆತ್ತುದು (ಪರ್ಥಮಾ. ೭-೫೯). ೩. ಬಯಕೆಗಳಿಲ್ಲದವನು; ಪರಮಾತ್ಮ: ನಿರ್ವಿಕಾರ ನಿಶ್ಶೀಲ ನಿರೀಹ ನಿಷ್ಕ್ರಿಯ ನಿರಂಜನ (ಶಂಕಶ. ೩೪); ನಿಗಮಾಗಮವಂದ್ಯ ನಿರೀಹ . . . ನಿರಾಮಯ ಕೂಡಲಸಂಗಮೇಶ್ವರಾ (ವೃಷವಿ. ೪೨-೩೯); ಭಕ್ತಜನವತ್ಸಲ . . . ಭಕ್ತಪಾಲನೋದ್ಯುಕ್ತ ನಿರೀಹ ಭಕ್ತಪರಮೋಕ್ಷದ (ಶಬಶಂ. ೫-೧೬). ೪. ಇಚ್ಛೆಯಿಲ್ಲದ ವ್ಯಕ್ತಿ; ನಿಷ್ಕಾಮಿ. ೫. ಉದಾಸೀನನಾದವನು; ಉದಾಸೀನವೃತ್ತಿಯವನು: ನಡೆಸುವೊಲೆ ನಡೆವಂಥ ಕುರಿಗಳೆ ನೀವು ಭಾರತಪುತ್ರರೇ ಪಡೆದುದನು ಪಡುವಂಥ ದುರ್ಬಲದೈವದೇಹ ನಿರೀಹರೇ ನಡೆಯಿರೀ ಬಳಿ, ನೋಡಿಕೊಳ್ಳಿರಿ, ಪಡಿನೆಳಲನೆನ್ನಿರವೊಳು (ಅಮತಂ. ೫೩-೬). ೬. ನಿರಾಶೆಹೊಂದಿರುವುದು; ಆಸೆಯಿಲ್ಲದಿರುವುದು: ಅಂದಾರ್ತಪ್ಲವಗವಾಹಿನಿ ವಿಂಧ್ಯಕಾನನದ ಬಳಿಗೆಟ್ಟು ನಿರೀಹಮಾಗಿ ಋಕ್ಷಬಿಲಮುಖದಿ ನಿಂದವೊಲು ಧರ್ಮಗಹ್ವರಮುಖದಿ ಶಂಕಿಸುತ ನಿಂದಿರುವ ಕರ್ಮಸಂದೇಹಿ . . . ಗವಿಯ ತಮ ಕಂಜಿ ಹಿಂಜರಿದು ನಿಲಬೇಡ (ಗಣೇಶ. ೩೭-೫). [ಸಂ.]

**ನಿರೀಹತಾವೃತ್ತಿ** (ನಾ). ೧. ಆಸೆಯಿಲ್ಲದಿರುವುದು; ನಿಷ್ಕಾಮತೆ; ನಿಸ್ಪೃಹತೆ. ೨. ಚಲನೆಯಿಲ್ಲದಿರುವಿಕೆ; ನಿಶ್ಚಲತೆ. ೧, ೨: ಆಸ್ರವಿರಾಗವರ್ತನೆ ದೃಢೀಕೃತಮೂಲಗುಣಂ ನಿರೀಹತಾವೃತ್ತಿ . . . ಕರಂ ವಿರಾಜಿಸೆ ವನಸ್ಥಿತಶಾಖಿನಿಕಾಯಮಾವಗಂ ಪೆತ್ತುದು ಚೆಲ್ವನಾ ಮುನಿಪನೊಳ್ ತಳೆದಂತೆ ತಪೋನಿಯೋಗಮಂ (ಚಂದ್ರಪು. ೨-೧೦೩). [ಸಂ.]

**ನಿರೀಹಿತ** (ನಾ). ಆಸೆ, ಬಯಕೆಗಳಿಲ್ಲದವನು; ನಿಷ್ಕಾಮಿ: ಶಾಂತನುಂ ನಿರ್ವಿಕಾರನುಂ ನಿರೀಹಿತನುಂ ನಿರ್ಮಲನುಮಾಗಿ (ಅನಂಪು. ೬-೨೨ ವ). [ಸಂ.]

**ನಿರುಂಬಳ** 'ನಿರುಮ್ಮಳ' ನೋ.

**ನಿರುಂಬಳತೆ** (ನಾ). ಶಾಂತಿ; ನೆಮ್ಮದಿ: ವ್ಯಾಸಪೀಠದ ಮೇಲೆಲ್ಲ ನಿರುಂಬಳತೆಯ ಮಂದಹಾಸವೊಂದು ಸುಳಿದು ಹೋಯಿತು (ಸಮಜೀ. ೭೨೫). [ನಿರುಂಬಳ (<ನಿರುಮ್ಮಳ) + –ತೆ$_2$]

**ನಿರುಕಿಸು** (ಕ್ರಿ). ೧. ನೋಡು; ಈಕ್ಷಿಸು: ಮನಸಿಜನಂತಕನ ಬಲವಂದು ಪೊಡವಂಟಂತರಿಕ್ಷದಲೆಸೆವ ಪುಷ್ಪಕವನ್ನು ನಿರುಕಿಸಿದ (ಕೌಶಿರಾ. ೪೪-೨೬); ಜನಪನ ದೀನಾನನಮಂ ನಿರುಕಿಸಿ (ದಮಸ್ವ. ೧-೩೦ ವ); ಮರೆಯಾಗುವನ್ನೆಗಂ ಲಕ್ಷ್ಮಣಂ ಪೋಪುದನೆ ನಿರುಕಿಸುತ್ತ (ಶೇಷರಾ. ೪-೧೬); ಆಡುವ ಬಾಲೆ ತನ್ನಿದಿರೊಂದು ಪುತ್ತಂ ನಿರುಕಿಸಿ (ರಾಮಾಶ್ವ. ೬೬-೧); ಅವರಂತಿಲ್ಲದ ನನ್ನನ್ನು ಎವೆಯಿಕ್ಕದೆ ನಿರುಕಿಸಿದರು (ಕಾಲಯಾ. ೪೬); ಅರುಣೋದಯ ಪ್ರಭೆಯು, ಗಿರಿಶೃಂಗದುನ್ನತಿಯ ವರುಣಾಲಯಾಯತಿಯ ನಿರುಕಿಸಿದೊಡಹುದೇಂ? (ಮಂಕುಕ. ೪೯೫); ಕವಿಗಳ ನವೋಜ್ಜ್ವಲದ ನೋಟವೊಂದು . . . ಪಂಡಿತರ ನಿಶ್ಚಯದ ನೋಟವೊಂದು ಈ ಎರಡನೂ ನೆರವುಗೊಂಡು ವಿಶ್ವವ ನಾವು ತಿರುತಿರುಗಿ ನಿರುಕಿಸುತ ಬಲು ದಣಿದೆವು (ಜಗದಾ. ೨೪). ೨. ಪರಿಶೀಲಿಸು; ಪರಿಶೀಲನೆ ಮಾಡು: ಆ ಪದ್ಯಗಳಲ್ಲಿ ವರ್ಣಿತವಾದ ಗಂಗರಾಜನ ಚರಿತ್ರೆಯನ್ನು ನಿರುಕಿಸಿದರೆ ೧ನೆಯ ಗುಣವರ್ಮನ ಕಾಲ ೯ನೆಯ ಶತಮಾನದ ಉತ್ತರಾರ್ಧವೆಂದು ತಿಳಿಯುತ್ತದೆ (ತಪನಿ. ೩೬); ನಿರುಕಿಸಲಾಗಿ ಅವು ಮೋಟರಗಾಲಿಯ ಕಲೆಗಳೆಂದು ತಿಳಿಯಿತು (ಕನಕೆ. ೩೫); ಮಹಾರಾಜನಿಗೆ ವಿಜಯವಾಗಲಿ! ಉಪವನ ಪ್ರದೇಶಗಳು ನಿರುಕಿಸಲ್ಪಟ್ಟುವು (ಶಾಕುಂತ. ೮೩-೬).

**ನಿರುಕಿಸಿ ನೋಡು** = ೧. ಎವೆಯಿಕ್ಕದೆ ನೋಡು: ಮೊಮ್ಮಗನನ್ನು ನಿರುಕಿಸಿ ನೋಡಲು (ಮಣ್ಣುಹೆ. ೨೫). ೨. ಪರಿಶೀಲಿಸು; ಗಮನಿಸು: ಆ ಹಿರಿಮೆಯ ಅಂಗಾಂಗಗಳನ್ನು ಒಂದಿಷ್ಟೂ ನಿರುಕಿಸಿ ನೋಡಲಾರದ ಜನಗಳಿಗೆ, ಈ ಸಂಸ್ಕೃತಿಯ ಸ್ಮಶಾನವನ್ನು ಕಂಡು ಏನು ತೃಪ್ತಿಯೋ? (ಅಳನಿ. ೧೪೭). [<ನಿರೀಕ್ಷಿಸು]

**ನಿರುಕು** 'ನಿಕರ$_2$' ನೋ.

**ನಿರುಕ್ತ** (ಗು). ೧. ಸ್ಪಷ್ಟವಾಗಿ ಹೇಳಿದ, —ವಿವರಿಸಿದ. (ನಾ). ೨. ಸ್ಪಷ್ಟವಾಗಿ ಹೇಳಿದುದು; ವಿವರಣೆ. ೩. ಶಬ್ದದ ನಿಷ್ಪತ್ತಿ, —ವ್ಯುತ್ಪತ್ತಿ: ನಾರಾಯಣರಾಯರ 'ಕರುನಾಡು' ಎಂಬ ನಿರುಕ್ತವನ್ನು ಕುರಿತು ಹೇಳಿದ ಆಕ್ಷೇಪಣೆಗಳೇ ಇಲ್ಲಿಯೂ ಎದ್ದು ನಿಲ್ಲುತ್ತಲಿವೆ (ದ್ರಾವಿ.೯೦). ೪. ಆರು ವೇದಾಂಗಗಳಲ್ಲಿ ಒಂದು; ವೇದದಲ್ಲಿರುವ ಪದಗಳ ನಿಷ್ಪತ್ತಿಯನ್ನು ಮತ್ತು ಅರ್ಥವನ್ನು ತಿಳಿಸುವ ಶಾಸ್ತ್ರ; ಯಾಸ್ಕಮುನಿಯ ನಿರುಕ್ತಶಾಸ್ತ್ರ; ℙ ಇದು ವೇದಪುರುಷನ ಶ್ರೋತ್ರರೂಪವಾದ ಅಂಗವೆಂದು ಪ್ರಸಿದ್ಧವಾಗಿದೆ. ವೇದದ ಅರ್ಥವನ್ನು ತಿಳಿಯಬಯಸುವವರಿಗೆ ನಿರುಕ್ತದ ಅಧ್ಯಯನವು ಅತ್ಯಾವಶ್ಯಕವಾಗಿದೆ. ಕ್ಲಿಷ್ಟವಾದ ಅನೇಕ ವೈದಿಕ ಪದಗಳನ್ನು ಸಂಗ್ರಹಿಸಿ ರಚಿತವಾಗಿದ್ದ ನಿಘಂಟು ಎಂಬ ಗ್ರಂಥಕ್ಕೆ ನಿರುಕ್ತವು ಭಾಷ್ಯರೂಪವಾಗಿದೆ. ಇದರಲ್ಲಿ ನೈಘಂಟುಕ ಕಾಂಡ, ನೈಗಮಕಾಂಡ, ದೇವತಾಕಾಂಡವೆಂಬ ಮೂರು ಕಾಂಡಗಳಿವೆ. ವೇದಮಂತ್ರಗಳಿಗೆ ಅರ್ಥಜ್ಞಾನವು ಬಹಳ ಮುಖ್ಯವೆಂದು ಯಾಸ್ಕರು ಹೇಳಿದ್ದಾರೆ. ಎಲ್ಲಾ ನಾಮಪದಗಳೂ ಧಾತುಗಳಿಂದಲೇ ಹುಟ್ಟಿವೆ ಎಂಬುದು ನಿರುಕ್ತದ ಸಿದ್ಧಾಂತ. [ಸಂ.]

**ನಿರುಕ್ತಿ** (ನಾ). ೧. ಹೇಳಿದುದು; ಹೇಳಿಕೆ: ವೇದವು ಯಾರ ನಿರುಕ್ತಿಯೂ ಅಲ್ಲ. ಅದು ಸ್ವಯಂಭು (ಭಾರದ. ೧೨೯). ೨. ವಿವರಣೆ; ವ್ಯಾಖ್ಯಾನ: ಈ ಕ್ರಮದಿಂ ಕ್ಷಾಯಿಕಮುಂ ಕ್ಷಾಯೋಪಶಮಿಕಮುಂ ಔದಯಿಕಮುಂ ಪಾರಿಣಾಮಿಕಮುಂ ಅಕ್ಕುಮೆಂದು ನಿರುಕ್ತಿಯಂ ಮಾಟ್ಟುದು (ತತ್ತ್ವಪ್ರ. ೭೮); ಸಂಜ್ಞಾನಂ ಸಂಜ್ಞಾ ಎಂಬೀ ನಿರುಕ್ತಿಯಿಂ ಜ್ಞಾನಮೆಂಬೊಡೆ ಎಲ್ಲಾ ಜೀವಂಗಳುಂ ಜ್ಞಾನಾತ್ಮಕಂಗಳಪ್ಪುದು (ತತ್ತ್ವಪ್ರ. ೯೯). ೩. ವೇದಾಂಗಗಳಲ್ಲಿ ಒಂದು; ವೇದದಲ್ಲಿರುವ ಶಬ್ದಗಳ ನಿಷ್ಪತ್ತಿಯನ್ನೂ ಅರ್ಥವನ್ನೂ ವಿವರಿಸುವ ಶಾಸ್ತ್ರ: ನಿರುಕ್ತಿಯೆ ವೈದಿಕಶಬ್ದನಿರ್ವಚನಮಂ ನಿಯಾಮಿಸುತ್ತಿರ್ಕುಂ (ವಿವೇಕ. ૩). ೪. ಶಬ್ದದ ಹುಟ್ಟು, —ವ್ಯುತ್ಪತ್ತಿ: 'ನಿರುಕ್ತಿಕಾರ' ಪರಾ. ೫. [ಕಾವ್ಯಮೀ] ಒಂದು ಅರ್ಥಾಲಂಕಾರದ ಹೆಸರು; ಪ್ರಸಿದ್ಧವಾದ ಹೆಸರುಗಳಿಗೆ ಯೌಗಿಕವಾಗಿ ಬೇರೊಂದು ಅರ್ಥವನ್ನು ಹೇಳುವುದು; ಅವಯವ ಶಕ್ತಿಯಿಂದ ನಾಮಪದಗಳಿಗೆ ಬೇರೊಂದು ಅರ್ಥವನ್ನು ಕಲ್ಪಿಸುವುದು: ಪ್ರಸಿದ್ಧಮಾದ ಪೆಸರ್ಗಳ್ಗೆ ಯೌಗಿಕಮಾಗಿ ಪೆಱತೊಂದರ್ಥಮಂ

ಪೇೞ್ವುದು ನಿರುಕ್ತಿಯೆನಿಪುದು (ಅಪ್ರತಿ. ೧೩೬-೨೨) ; ನಾಮಂಗಳಿಗೆ ಯೋಗವಶದಿಂದನ್ಯಾರ್ಥ ಪ್ರೇಮದಿ ಕಲ್ಪಿಸಲು ನಿರುಕ್ತಿ (ಕುವಲ. ೧೭೪-೧). [ಸಂ.]

**ನಿರುಕ್ತಿಕಾರ** (ನಾ). "ಶಬ್ದವ್ಯುತ್ಪತ್ತಿ ವಿಚಾರ ಮಾಡುವವನು" (Derivationist. ಇಂಕನಿ). [ಸಂ.]

**ನಿರುಕ್ತಿಸು** (ಕ್ರಿ). ವಿವರಿಸಿ ಹೇಳು ; ನಿರೂಪಿಸು : ಮುಕ್ತಿಯೆಂಬುದು ಮೂಱು ರತ್ನದಿಂದಹುದೆಂಬ ಯುಕ್ತಿಯುಂಟಾಗಮದಲ್ಲಿ ವ್ಯಕ್ತಾತ್ಮನೊಂದು ರೂಪನೆ ದೇವರೀಗ ನಿರುಕ್ತಿಸಲೇಕೆ (ಭರಜ. ೧೭-೯೬).

[ನಿರುಕ್ತಿ + -ಇಸು$_3$]

**ನಿರುಕ್ತ್ಯಲಂಕಾರ** (ನಾ). = ನಿರುಕ್ತಿ ೫ : ಇದಱೊಳ್ . . . ಬಸವವಡೆಯೆಂಬ ಪೆಸರ್ಗೆ ಪುಲ್ಲರ್ಚಿದುದಱಿಂ ಬಸವವಡೆಯೆಂದು ಪೆಱತೊಂದರ್ಥಮಂ ಪೇೞ್ವುದಱಿಂದಿದು ನಿರುಕ್ತ್ಯಲಂಕಾರಂ (ಅಪ್ರತಿ. ೧೩೭-೯). [ನಿರುಕ್ತಿ + ಅಲಂಕಾರ]

**ನಿರುಗ** (ನಾ). ಒಂದು ಬಗೆಯ ನೀರುಹಕ್ಕಿ : "ಜಳರಂಕು ದಾತ್ಯೂಹಮೆನಲಾ ನಿರುಗನಕ್ಕು" (ಮಂಗರಾ. ೫೨-೧೦). [ ? ]

**ನಿರುಗಮ್ಮಯ್ಯ** (ನಾ). ಒಬ್ಬಾತನ ಹೆಸರು : ಕಣ್ಣಮ್ಮಯ್ಯನ ಮಗ ನಿರುಗಮ್ಮಯ್ಯನು . . . ಕೆರನೂರ ಮಹಾಜನಂ ಅಯ್ವದಿಂಬರ್ಗ್ಗಂ ಇಪ್ಪತ್ತು ಗದ್ಯಾಣ ಪೊನ್ನೊಟ್ಟು (ಎಕ. X, ಕೋಲಾರ. ೫೭-೮ ; ಸು. 925). [ನಿರುಗ$_0$ + ಅಮ್ಮಯ್ಯ$_1$]

**ನಿರುಗೆ$_1$** 'ನಿಱುಗೆ' ನೋ.

**ನಿರುಗೆ$_2$** 'ನಿಱುಗ' ನೋ.

**ನಿರುಗೆಕಾರ** (ನಾ). ಸ್ಥಿತಿಗೊಳಿಸುವವನು ; ಆಳುವವನು; ಪಾಲಕ: ಎರಡು ತೋಳುಗಳಿಂದ ದಿಕ್ಕಿನ ನಿರುಗೆಕಾರರು ಚಂದ್ರ ಭಾಸ್ಕರರೆರಡು ಕಣ್ಣಿಂ ದ್ವಿಶ್ರುತಿಯುಲೀ ದಿಗ್ವಿದಿಕ್ಕುಗಳು ಮೆರೆವ ನಾಸಾಪುಟದೊಳು ಸುರನ ಬರವು (ಅಧ್ಯಾರಾ. ೨-೩೬).

[ನಿರುಗೆ$_1$(<ನಿಱುಗೆ) + -ಕಾರ$_1$(<-ಕಾಱ)]

**ನಿರುಚ್ಛ್ವಾಸ** (ಗು). ೧. ಉಸಿರಿಡದ; ಉಸಿರಾಡಿಸದಿರುವ. (ನಾ). ೨. ಒಂದು ನರಕದ ಹೆಸರು : ನಿರುಚ್ಛ್ವಾಸ ಸುದೀರ್ಘ ಕೂಟ ಶಾಲ್ಮಲಿ ಅರಿಷ್ಟ ಸುಮನವೆಂಬೈದು ಮಂತ್ರಿನರಕಂಗಳೊಡನೆ ಭಯೋತ್ಕಟವೆಂಬರಸುನರಕವಿಹುದು (ವಿವೇಕ. ೧೮೦). [ಸಂ.]

**ನಿರುಜ** (ಗು). ೧. ರೋಗವಿಲ್ಲದ; ರೋಗರಹಿತವಾದ. (ನಾ). ೨. ರೋಗವಿಲ್ಲದುದು ; ರೋಗರಹಿತವಾದುದು ; ಆರೋಗ್ಯವಾದುದು : ನಿರುಜಂ ತ್ರಿಜಗದ್ಭೂಷಣ ಕರಿ ಕವಳಂಗೊಳ್ಳದೆಂದು ಸಾಹಣದ ಮಹತ್ತರರಱಿಪೆ (ಪಂರಾಮಾ. ೧೫-೩೨). ೩. ರೋಗವಿಲ್ಲದವನು ; ನಿರೋಗಿ ; ಆರೋಗ್ಯಶಾಲಿ : ದೊರೆಕೊಂಡಂದಧಿಯೋಗಂ ನರಪತಿ ದೀರ್ಘಾಯುಂ ವಿಭವಸಂಯುತನಭಯುಂ ನಿರುಜಂ . . . ತಾನೆನಿಸಿ ವರ್ತಿಕುಂ (ಜಾತತಿ. ೧೪-೧೧) ; ಅವ್ಯಾಧಿತಚಿತ್ತನವ್ಯರಮಣೀದೂರಂ . . . ನಿರುಜಂ ಸರ್ವಜನೋಪಕಾರಿ ಶುಚಿ ಸದ್ವಾಕ್ಯಂ ನಿರಾಲಸ್ಯರಪ್ಪರ ನಾರಯ್ದುಪದೇಶಮಂ ಕುಡುವುದು (ಅಶ್ವಶಾ. ೧೦-೩) ; ಬದರೀಫಳ ಮಾತ್ರಾಹಾರರುಂ ವಿಗತಮಲಮೂತ್ರವಿಹಾರರುಂ ನಿರುಜರುಂ ಅಶೋಕರುಂ ಅಜರರು (ರತ್ನಕ. ೩-೨೪ ಪ) ; ನಿರುಜಂ ನಿರ್ಮರಣನು . . . ಘನಗುಗ್ಗುಳಮಂ ನಿನ್ನೆಣೆದೂಕಮನನುನಯದಿಂ ಸಿರಿಕಂಡದ ಕೆಂಡದೊಳನು ದಿನಮೆನಗೀಯೆಂದುಸಿರ್ದು (ಉದ್ಭದೇ. ೩-೪೨). [ಸಂ.]

**ನಿರುಜೆ** (ನಾ). ಖಾಯಿಲೆಯಿಲ್ಲದಿರುವುದು ; ಆರೋಗ್ಯ : ನೃಪತಿಯ ಮನೋರಥವ ಪೂರಿಸಲ್ ನಿರುಜೆಯಹುದು (ವೆಂಕಾರಾ. ೨-೮-೯).

[ಸಂ. ನಿರುಜಾ]

**ನಿರುತ$_1$** (ನಾ). ೧. ದಿಟ ; ಸತ್ಯ : "ನಿರುತಮೆನಲ್ ಸ[ಪಾಠಾ.ನಿ]ತ್ಯಂ" (ಭಾರನಿ. ೫೪) ; ಇಂತಪ್ಪ ಶ್ರೀವಿಭೂತಿಯ ಧರಿಸಿರೇ ಭವವ ಪಱಿವುದು ದುರಿತಸಂಕುಳವನೊರಸುವುದು ನಿರುತವಿದು ನಂಬು ಮನುಜ (ಮಹಾದೇ. ಚ. ೯೩-೭೧೯) ; ಸತ್ಯನಿಧಿ ಹರಿಶ್ಚಂದ್ರರಾಯನ ವಾಕ್ಯದೊಳು ಹುಸಿಗಳು ಮೊಳೆಯುವಿದು ನಿರುತ (ಹಚಕಾ. ೨-೧೪) ; ಗುರುದೇವವಚನೋಕ್ತಿ ನಿರುತದಿಂ ರಂಜಿಸುತವಿರಲನವರತವುಂ ತನುಧರ್ಮವಂ ಮಱಿದರಿದೆನಲು ವರ್ತಿಸುವನದು ತಾನಾವ ಪರಿಯೆನಲು (ಬಸವು. ೩೮-೮); ಒಡೆಯ ನೀನೆಂದಂಜಿ ನಿರುತವ ನುಡಿಯಲಮ್ಮರು (ಕುವ್ಯಾಕ. ೯-೧೧) ; ನೀ ನರನೋ ನಿಶಾಚರನೋ ನಿರುತವಾವುದು ಹೇಳೆನಲು (ತೊರರಾ. ೨-೫-೧೪) ; ಕಳುಹಿದರಾರು ನಿರುತದಿಂ ಪೇಳೆಂದು ಬೆಸಗೊಳಲ್ಕೆ (ಚೆಬಪು. ೨೩-೨೦). ೨. ನಿಶ್ಚಯ ; ಖಂಡಿತಭಾವನೆ ; ನಿಸ್ಸಂದೇಹವಾದ ನಂಬಿಕೆ : ಆ ಒಕ್ಕಳವ ಕುಟ್ಟ ಮಿಕ್ಕುದ ಕೇರೆ ಮತ್ತೆ ಅದು ಒಬ್ಬಳವಾಯಿತ್ತು ಆ ಒಬ್ಬಳವ ಕುಡಿಕೆಯಲ್ಲಿ ಹೊಯಿದು ನಿರುತದಿಂದ ನೋಡೆ ಮೂಱು ಮಾನವ ನುಂಗಿ ಒಮ್ಮಾನವಾಯಿತ್ತು (ಮೋಳಿಮಾ. ೨೧೭-೧೧೮) ; ಮುನಿಸಂ ಮನ್ಮಥಯುದ್ಧದೊಳು ನಿರುತಮಂ ತತ್ವಾರ್ಥದೊಳು ಭಕ್ತಿಯಂ ಜಿನಪಾದಾಂಬುಜದೊಳು . . . ನಿಱಿಸಿದರು ವಾಕ್ಯಾದಿವರ್ಣಾಹ್ವಯರ್ (ಎಕ. VIII, ಸೊರಬ. ೧೪೬-೧೧ ; 1388); ಅವ ವೇಗದೊಳಿದಿರಲೆಸುವನದಾವ ನಿರುತದಲೊಡ್ಡುವನು ಕೊರಳಿಂಗೆ ಕೋಲುಗಳ (ಕುವ್ಯಾದ್ರೋ. ೫-೬) ; ನಿರುತವಿದು ನಿಜವೆಂದು ಬಗೆ ನಿರ್ಧರಿಸಿದೆವು ನಿಗಮಾರ್ಥದಲಿ ನಿನಗುರುತರಾನುಗ್ರಹದ ಬೀಜಾಕ್ಷರವಿದೀಗೆಂದ (ತೊರರಾ. ೧-೨-೯). ೩. ಪ್ರಾಮಾಣಿಕ ; ಸತ್ಯವಂತ : ದೊರಕಿದನು ಉಂಡುಂಡು ದೊರಕಿದನು ಉಟ್ಟುಟ್ಟು ದೊರಕಿದಲಿ ಶಯನ ಪಡೆವಾತ ಲೋಕಕ್ಕೆ ನಿರುತನಾಗಿಕ್ಕು (ಸರ್ವಜ್ಞ. ೪೦೨). ೪. ಪ್ರಾಮಾಣಿಕತೆ ; ಮೋಸವಿಲ್ಲದಿರುವಿಕೆ : ಕಾಷ್ಠಾಂಗಾರನಿವ ತಾನು ನಿರುತದಿಂದಡುಗಬ್ಬ ತಂದಾ ಪುರದೊಳಗೆ ವಿಕ್ರಯಿಸಿ ತನ್ನನು ಹೊರೆದುಕೊಳುತಿಹನು (ಜೀವಂಚ. ೩-೩). ೫. ಕತ್ತರಿಸದುದು ; ಒಡೆಯದುದು; ಭಾಗವಾಗದೆ ಇರುವಂಥದು : (ಕ).

**ನಿರುತಮಾಗು, ನಿರುತವಾಗು** = ನಿಶ್ಚಯವಾಗು ; ದೃಢವಾಗು : ಭರತನ ಮನದೊಳ್ ನಿರುತಮಾದ ವೈರಾಗ್ಯವಜ್ರಲೇಪಮಂ ಕರ್ಚಿ ಕಳೆಯಲ್ಕೆಂದು ತನ್ನಂತಃಪುರದ ವಧೂಜನಸಮೇತಂ ಸೀತೆವೆರಸು ನೀಂ ಪೋಗೆಂದು ಭರತನಂ ಕಳಿಪುವುದುಂ (ಪುಣ್ಯಾಸ್ರ. ೨-೭ ಪ) ; ವರವೃಕೋದರನೆಂಬ ನಾಮವು ನಿರುತವಾಯ್ತವಗಂದು (ಸಂಭಪ. ೧೭-೩೫) ; ತೊಟ್ಟು ಬಿಟ್ಟು ಹಣ್ಣಾಗಿ ಎನಗೆ ನಿಜೈಕ್ಯದ ಬಟ್ಟೆ ನಿರುತವಾಯಿತಯ್ಯ (ಘನಪ. ೪೨-೩೮). 'ಖುತ' ಪರಾ. [ದೇ.?॥ /ಪ್ರಾ. ಣಿರುತ್ತ]

**ನಿರುತ$_2$** 'ನಿರುತಂ' ನೋ.

**ನಿರುತಂ, ನಿರುತ$_2$** (ಅ). ೧. ದಿಟವಾಗಿ ; ಸತ್ಯವಾಗಿ : ವಿನಮಿತ ಲಲಿತಪದೋಕ್ತಿಗಳಿಂ ಜನಹಿತಮಿಂತಿದು ಮುನಿಮತಮೆಂಬುದು ನಿನಗಱಿಪಿದೆ ಕೆಳದೀ ನಿರುತಂ (ಛಂದೋಂಬು. ೨-೧೯೮) ; ಫಣಿನಿಳಯಂ ತಾಟಿಂ ತೆಂಗಿನಮರನನಡದು(ದ)ರ್ಮ(ದ)ದಱಿಂದಱುಗೆಯ್ಯಂತರದೊಳ್ ಬಡಗಲ್ ನಿರುತಂ ತೋಡುಗೆ ನಾಲ್ಕು ಪುರುಷದೊಳ್ ನೀರಕ್ಕುಂ (ಲೋಕೋಪ. ೫-೨೬) ; ಅಧಿಗಮಶಿಷ್ಯೋತ್ಕರಾನುಗ್ರಹತ್ವಂ ನಿರುತಂ ಕೈಗಣ್ಮೆ ಪೊಣ್ಮುತ್ತಿರಲ್ (ಸುಕುಮಾ. ೧-೩) ; ಬಿರುದವಾದಿಮದವಿಸ್ಫಾಳಂ ನಿರುತಂ ತಾನೆನಲೆಸೆದಂ ಧರೆಯೊಳ್ (ಎಕ. VII, ಶಿಮೊ. ೪-೬೨ ; 1122) ; ನಿರುತಂ ಸತ್ಯವಿಗೊರ್ವ ಗರ್ವಿ ಪುಸಿಯುತ್ತಂ ಲೋಭಿಯಾಗಲ್ ನಿಜಂ ಧರೆಯೊಳ್ ದಾತರು ಪುಟ್ಟರೇ (ಸೋಮೇಶ. ೨೬) ; ಗೆಲ್ಲೆ ನಿರುತಂ ಖುತಂ ! (ಶ್ರೀರಾಮಾ. ೮೪-೧೬೮). ೨. ನಿಶ್ಚಯವಾಗಿ : ನರನೊರ್ವಂ

ಪೊಡಗಾಗಲೊಂದು ದಿವಸಂ ಕೌಂತೇಯರಂ ಕಾದಿ ಗೆಲ್ ನಿರುತಂ ನೀನೆನೆ (ಪಂಪಭಾ. ೧೧–೯೮). **ನಿರುತ**$_2$**: ೧.** ನಿರುತ ಕೌರವನರ್ಥದಲಿ ಕಿಂಕರತೆ ಯೆಮಗಾಯಿತ್ತು ರಾಜ್ಯೈಶ್ವರಿಯ ಸೇವಾಪರರಿಗೀ ಸ್ವಾತಂತ್ರ್ಯವಿಲ್ಲೆಂದ (ಕುಮಾ.ಭೀ. ೨–೩೨) ; ನಿರುತ ಕರಣೇಂದ್ರಿಯಗಳುಪಸಂಹರಣೆಯೆನಿಸುವ ತಪದ ಪೆರ್ಚುಗೆ (ಅಮೃತ. ೧೦–೭೬) ; ನಿರುತ ಪರಿಪೂರ್ಣಗೆ ಪ್ರದಕ್ಷಿಣೆ ದಿರುಗಲೆಲ್ಲಿ (ಗಗತಾ. ೧೬–೩೮). [<ನಿರುತ$_1$]

**ನಿರುತಿ,** ನಿರರುತಿ (ನಾ). **೧.** ನೈಋತ್ಯದಿಕ್ಕು : ನಿರುತಿಯ ಕಂಭ ದಿಂದಮನಿಳಾಸೆಯೊಳಿಕ್ಕುವ ಕಂಭಮುಪ್ಪುದೊರ್ವೆರಲನಿತರ್ಕೆ ತಗ್ಗಿತು (ಲೋಕೋಪ. ೩–೨೮). **೨.** ಅಷ್ಟದಿಕ್ಪಾಲಕರಲ್ಲಿ ಒಬ್ಬ ; ನೈಋತ್ಯ ದಿಕ್ಕಿನ ಒಡೆಯ : "ಮಾನಸದೇರನುಂ ಪಿಚ್ಚವುಣಿಗನೆಂದೊಡೆ ನಿರುತಿವೆಸರಕ್ಕು"(ಕಬ್ಬಿಕ್ಕೈ.೧೪);"ಮಾನಿಸದೇರ ಕೊಂತಗಯ್ಯಂ ಪಿಚ್ಚವುಣಿಗನೆನಲು ನಿರುತಿವೆಸರಕ್ಕು"(ಶಬ್ದಮಂ.೧೪); ಮುಱುಗಿದನು ಸುರನಾಥನಗ್ನಿ ಬಸವಳಿದ ಯಮ ಬೆಱಗಾದ ನಿರುತಿ ಹಲುಗಚ್ಚಿದನು (ಹಜಕಾ. ೫–೧೧) ; ಸುರರಾಜ ನಗ್ನಿ ಕಾಲಂ ನಿರುತಿ ವರುಣನಾ ಮರುತಂ ಕುಬೇರನೀಶಂ ದಿಶಾಧಿಪರು (ಮಂಗರಾ. ೧೭–೧೮) ; ಹಾಯೆನುತ ಹರಿ ವರುಣ ಶಂಕರ ವಾಯು ವಿತ್ತಪ ನಿರುತಿ[ಪಾಠಾಂ. ತ] ಶಿಖಿ ಯಮರಾಯುಂಥದ ನಿರ್ಗಮಕೆ ಲಘು ಸಂಧಾನ ಕೌಶಲಕೆ . . . ರಾಘವರಾಯ ಧರಣಿ ವರಾಹಯೆಂದುದು (ತೊರರಾ. ೩–೬–೪೯) ; ನಿರುತಿ ಮಾನಿಸನಂ . . . ಗಿರಿಶಂ ವೃಷೇಂದ್ರನಂ ಮಮತೆಯೊಳೇಱಿ ಪಾಲ್ಗಡಲ ಸಾರಿದರು (ದಶಾವ. ೨–೫). **೩.** ರಾಕ್ಷಸ ; ದೈತ್ಯ : "ನಿಶಾಚರಂ ರಾಕ್ಷಸಂ ಕೋಣಪಂ ಯಾತುಧಾನಂ ಕೈಕಸೇಯನೆನೆ ನಿರುತಿ" (ಮಂಗರಾ.೧೫–೧೦);"ಕರ್ಬುರಃ = ನಿರುತಿಯುಂ, ಬಣ್ಣವುಂ" (ಕಾಶಕ್ಯ. ೫೪) ; ಅರಿಗಳೈತರದಂತೆ ಕಾವಲನಿರಿಸಿದನು ಬೇತಾಳ ಜಟ್ಟಿಗ ನಿರುತಿ ಭೈರವ ಭೂತನಾಥ ಪ್ರಮುಖ ಭುಜಬಲರ (ತೊರರಾ. ೬–೪೮–೯). **೪.** (?) : ಆರಾರ ಇರವಿನ ತೆಱನ ಪರಿಹರಿಸಿ ತಾ ಸರಿಸವಾಗಿ ನಿರುತಿಗಳ ನಿಜವನಱಿದು ಪೂಸರ ಆಸೆಯನಱಿದು . . . ಇಪ್ಪಾತ ತ್ರಿವಿಧದವನಲ್ಲ (ಸರ್ವವ. ೧೨೨–೬೨೪). **ನಿರರುತಿ : ೨.** ವಾಯುಸಖ ಬಾಣಸಿಗಂ ತಳವಾಱನಂತಕಂ ನಿರರು [ಪಾಠಾಂ.ರು]ತಿ ಬಾಗಿಲಾತ . . . ರಕ್ಕಸ ರಾವಣೇಂದ್ರಂಗಂ (ದಶಾವ. ೮–೧೦).

[<ಸಂ. ನಿರ್ಋತಿ]

**ನಿರುತಿವಾಹನ** (ನಾ). ಕತ್ತೆ : ನಿರುತಿವಾಹನದ ವೃಂದಂ ನೆಗಳ್ಗೆಳ ಸಾಲ್ . . . ಗರುಡೋತ್ಕರಂ ಪುರಬಹಿರ್ಮಳಯುದೊಳಗೆಲ್ಲಿಯುಂ ತೀವಿರಲ್ (ಚೆಬಪು. ೩೦–೬). [ನಿರುತಿ + ವಾಹನ]

**ನಿರುತ್ತರ** (ನಾ). **೧.** ಉತ್ತರವಿಲ್ಲದಿರುವಿಕೆ ; ಉತ್ತರ ಕೊಡದಿರುವಿಕೆ : ಅವಳ ನಿರುತ್ತರದಿಂದ ರಾಮಯ್ಯನಿಗೆ ಮತ್ತಷ್ಟು ರೇಗಿತು (ಚಂದತೋ. ೨೩೩). **೨.** ಉತ್ತರಿಸಲಾರದವನು; ಉತ್ತರ ಕೊಡಲು ಅಸಮರ್ಥನಾದವನು : ಪ್ರತಿವಾದಿ ನಿರುತ್ತರನಾಗಿ ಪಕ್ಷಪರಿತ್ಯಾಗಂ ನಿಗ್ರಹಸ್ಥಾನಮೆಂಬುದಱಿಂ ನಿಗ್ರಹಸ್ಥಾನಮನೆಯ್ದಿಯುಂ (ಶಾಂತಿಪು. ೮–೧೪೧ ಪ) ; ಆ ನೃಪಾಳೋತ್ತಮಂ . . . ದುರ್ನೀತಿನಿರ್ಣಯನಿಪುಣರಪ್ಪ ಪ್ರತಿವಾದಿಗಳಂ ನಿರುತ್ತರರಂ ಮಾಡಿ (ಬಾಥಪು. ೫–೭೧ ಪ); ಗಂಗವ್ವ . . . ದೇಸಾಯರನ್ನು ನಿರುತ್ತರರನ್ನಾಗಿ ಮಾಡಿದಳು (ಗಂಮಾಯಿ.೫೧). **೩.** ತನಗಿಂತ ಹೆಚ್ಚಿನವರಾರೂ ಇಲ್ಲದವನು ; ಶ್ರೇಷ್ಠ : ನಿಃಪಿತ ನಿರುತ್ತರ ನಿರಾಮಯ ನಿರ್ವಿಕಾರಾಕಾರ ಚಿತ್ಸ್ವಯಸು (ಬಸಪು. ೬೧–೪೩). **೪.** [ಕಾವ್ಯಮಿ] ಒಂದು ಬಗೆಯ ಶಬ್ದಾಲಂಕಾರ; ಉತ್ತರವಿಲ್ಲದ ಮಾತು : ಪೆ[ಜ]ನಾವಂ ಧರಾಚಕ್ರಕ್ಕೈಱಿಯಂ ಕೆಳೆಯಪ್ಪವಂ ನೆಱಿ ಯಾರೆಡೆಯೆಂಬನ್ನಂ ಕುಱತಬ್ಧಿಗೆ ಬನ್ನಮಂ (ನಿರುತ್ತರಂ) (ಕವಿರಾ. ೨–೧೨೭) ; "ಪದ್ಯದಲ್ಲಿ ಪ್ರಶ್ನೆಗಳನ್ನು ಅಳವಡಿಸಿ, ಅದಕ್ಕೆ ಉತ್ತರವು ಹೊರಪಡದಿದ್ದರೆ ಅದು 'ನಿರುತ್ತರ'ವೆನಿಸುವುದು" (ಕವಿರಾ. ಟಿಪ್ಪಣಿ).

[ಸಂ.]

**ನಿರುತ್ತರವಾದಿ** (ನಾ). ಹೊಣೆಗೇಡಿ; ಬೇಜವಾಬುದಾರ: ನಿರುತ್ತರವಾದಿಯನ್ನು ನಿಸರ್ಗವೆಂದಿಗೂ ಕ್ಷಮಿಸಲಾರದು (ದೇಕನ್ಯೆ. ೪).

[ಸಂ. ನಿರುತ್ತರವಾದಿನ್]

**ನಿರುತ್ತರೆ** (ನಾ). ಉತ್ತರವಿಲ್ಲದವಳು ; ಉತ್ತರ ಕೊಡಲು ಅಸಮರ್ಥೆಯಾದವಳು : ಇವಂ ಕುಶಾಗ್ರಮತಿ ಕಲ್ಗಂ ಮತ್ತಮಿವ ರ್ಕಳೇಗೆಯ್ದಂ ಕಲಲಾಱರೇಗೆಯ್ವೆನೆಂದೊಡಾಕೆ ನಿರುತ್ತರೆಯಾಗಿ (ಶಾಂತಿಪು. ೬–೬೪ ಪ) ; ಅವಳು ನಿರುತ್ತರೆಯಾಗಿ ನಿಂತಿದ್ದುದನ್ನು ಕಂಡು (ಕಪಾಕುಂ. ೧೦೧). [ಸಂ. ನಿರುತ್ತರಾ]

**ನಿರುತ್ಸಾಹ** (ನಾ). ಉತ್ಸಾಹವಿಲ್ಲದಿರುವುದು ; ಉದಾಸೀನತೆ : ಆ ಸಾರಥಿ ನಿರುತ್ಸಾಹದಿಂದ ಉತ್ತರವಿತ್ತನು (ಮಲಿನಾ. ೧೮). [ಸಂ.]

**ನಿರುತ್ಸಾಹಿ** (ನಾ). ಉತ್ಸಾಹವಿಲ್ಲದ ವ್ಯಕ್ತಿ ; ಉದಾಸೀನ : ಈಗ ಅಂಥದೊಂದು ಸಂಕಟವನ್ನು . . . ನೆನೆದು ಧೈರ್ಯಗುಂದಿ ನಿರುತ್ಸಾಹಿಯಾದೆ (ಹೇಸುಂತ. ೩೨). [ಸಂ. ನಿರುತ್ಸಾಹಿನ್]

**ನಿರುತ್ಸುಕತೆ** (ನಾ). = ನಿರುತ್ಸಾಹ : ಅನಿಲ ಮಾತ್ರ ಯಾವದೇ ರೀತಿಯ ಉತ್ಸುಕತೆ ತೋರಿಸದಾದ. ನಿರುತ್ಸುಕತೆಯ ಕಾರಣವನ್ನು ತಿಳಿದಿದ್ದ ಹೊಸಮನಿ ರಂಗಣ್ಣನವರ ಮೂಲಕ ಅವನ ಪರಿಸ್ಥಿತಿಯೆಲ್ಲಾ ವಿದಿತವಾಗಿತ್ತು (ಅಪನಾ. ೨೩೧). [ಸಂ. ನಿರುತ್ಸುಕತಾ]

**ನಿರುದಯ** (ನಾ). ಕರುಣೆಯಿಲ್ಲದಿರುವಿಕೆ; ನಿರ್ದಯೆ : ನಿರುದಯವು ನಿಷ್ಠುರವು ದುರುಳತ್ವ ಧಾಳಕವು ಪರಬಂಧಕವು ಡಂಭವಪವಾದವು (ಸುಸಾರ. ೬–೨). [<ಸಂ. ನಿರ್ದಯ]

**ನಿರುದ್ಧ** (ಗು). **೧.** ತಡೆಹಿಡಿದ; ಪ್ರತಿಬಂಧಿಸಿದ : ನೀಳ್ದು ಪೊದಟ್ಟು ಪರ್ವಿ . . . ನಿರುದ್ಧೋಚ್ಛ್ವಾಸಮಪ್ಪನ್ನೆಗಂ ಪುದಿದಾ ದಂಪತಿಯಂ ಪುದುಂಗೊಳಿಸಿ ಲೋಕಾಶ್ಚರ್ಯಮಂ ಮಾಡಿ ಕೊಂದುದು ಕೃಷ್ಣಾಗರುಧೂಪಧೂಮನಿವಹಂ (ಆದಿಪು. ೫–೨೩); ನಿರುದ್ಧನಿಜಬಾಷ್ಪ ಮೋಕ್ಷರತಿದುಃಖದೀನಾನನರ್ ಪರಿಚ್ಯುತಮುದರ್ ಮದಾನನವಿಲೋಕನ ತ್ರಸ್ತರಿಂತಿರಲ್ಕೆ ಬೆಸಗೊಳ್ವುದೇಂ (ಕಾದಂಉ. ೬೪೦) ; ಬಹುಶಾಖೆಯಿಂದಮಿಂದ್ರಾಲಯಮಂ ಪಳಂಚಿ ತಮಮಂ ಸೆಱಿಗೆಯ್ದು ಹಿಮಕ್ಕೆ ಕೊಂಬುಗೊಟ್ಟಾಲಮನಗ್ರಪಲ್ಲವಕರಾಗ್ರನಿರುದ್ಧಮರುತ್ತರಂಗೀಣೀಕೂಲಮನೆಯ್ದಿದರ್ (ಪಂರಾಮಾ. ೭–೧೨೭). (ನಾ). **೨.** ತಡೆಯಲ್ಪಟ್ಟುದು ; ಪ್ರತಿಬಂಧಕ್ಕೆ ಒಳಗಾದುದು : ಜ್ಞಾನವಾಗುವುದರಿಂದ ಇಂದ್ರಿಯಗಳು ನಿರುದ್ಧವಾಗುವಂತೆ ಹಾದಿಕಾರರು ಅಲ್ಲಲ್ಲಿ ತಡೆದು ನಿಲ್ಲುತ್ತಿದ್ದರು (ತುಳಸೀ. ೨೫೪) ; ಅಂತು ಪೈಥಾಗೋರಾಸಿನ ಸಂಪ್ರದಾಯ ಇಲ್ಲಿಗೆ ನಿರುದ್ಧವಾಯಿತು (ಋಕ್ಸಾರ. ೧೭ ಪೀಠಿಕೆ) ; ಇಂಗ್ಲಿಷ್ ಶಿಕ್ಷಣ ಸಂಕುಚಿತವಾದ ಎಲ್ಲೆಯಲ್ಲಿ ನಿರುದ್ಧವಾಗಿದ್ದಾಗ, ಆ ಕ್ಷುದ್ರ ಎಲ್ಲೆಯೊಳಗೆ ಇಂಗ್ಲಿಷ್ ನಾಗರೀಕತೆಯ ತ್ಯಾಜ್ಯಾಂಶಗಳು ಕೂಡಿಕೊಂಡು ಎಲ್ಲವನ್ನೂ ಕೆಡಿಸಿ ಬಿಟ್ಟಿತು (ನಿಬಂಧ. II, ೨೯೦). **೩.** ಹಿಂಸೆ ; ತೊಂದರೆ ; ಬಾಧೆ : ನಿನ್ನ ಸುತನ ದೆಸೆಯಿಂದೆ ನಮ್ಮಾ ನೆಲಂ . . . ಪಶುಪಕ್ಷಿಮೃಗಕೀಟ ತರುಗುಲ್ಮಲತೆಗಳೆಲ್ಲ ಈ ನಿರುದ್ಧಕೆ ಧನ್ಯವಾದವೇಂ ಕೃತನೊ ನೀಂ ಭಾನುರಶ್ಮಿಗೆ ಕಂಡೆಱೆಯದ ಗೂಗೆಯವೊಲಜ್ಞಾನಿ ದ್ವಿಜಾಧಮಂ ತಾನಾದೆಂ (ಜೈಮಿಭಾ. ೧೨–೨). **೪.** [ಯೋಗ] ನಿಗ್ರಹಿಸಿದ ಚಿತ್ತವೃತ್ತಿ : ಕ್ಷಿಪ್ತ ಮೂಢ ವಿಕ್ಷಿಪ್ತ ಏಕಾಗ್ರ ನಿರುದ್ಧವೆಂದು ಚಿತ್ತಸ್ಥಿತಿ ಐದು ವಿಧ . . . ನಿರುದ್ಧವೆಂದರೆ ಯಾವ ವಿಷಯದಲ್ಲಿಯೂ ಚಿತ್ತವನ್ನು ಬಿಡದೆ ತಡೆಯುವುದು ; ಎಂದರೆ, ತಡೆಯತಕ್ಕ ಚಿತ್ತವೃತ್ತಿ ಎಂದರ್ಥ (ಹಿಂದಸಾ. ೧೦೨). [ಸಂ.]

**ನಿರುದ್ಧಕರ** (ನಾ). (ಶ್ವಾಸವನ್ನು) ತಡೆದ ಕೈ; (ಉಸಿರಾಟವನ್ನು) ತಡೆದ ಹಸ್ತ : ದರನಿಮಿಾಲಿತದೃಷ್ಟಿನಿವಿಷ್ಟಮಾಗೆ ಮೂಗಿನ ತುದಿಯೊಳ್ ನಿರುದ್ಧಕರಮುಂ ನಿಲೆ ಮಂತ್ರಪದಾಕ್ಷರಂಗಳಂ ಜಿನುಗುತಲಿರ್ದನಾ ಪರಮಯೋಗಿಯವೋಲ್ ಫಣಿರಾಜಕೇತನಂ (ಗದಾಯು. ೬-೧೫). [ನಿರುದ್ಧ + ಕರ$_3$]

**ನಿರುದ್ಧಕರಣ** (ಗು). ೧. ಇಂದ್ರಿಯಗಳನ್ನು ಹತೋಟಿಯಲ್ಲಿರಿಸಿಕೊಂಡ. (ನಾ). ೨. ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡವನು ; ಇಂದ್ರಿಯನಿಗ್ರಹಿ : ಮಹಾಕಾಳಶ್ಮಶಾನದೊಳಗೆ ಯೋಗನಿಯೋಗಧ್ಯಾನೋಪಯೋಗದಿಂ ನಿರುದ್ಧಕರಣ ನಿಷ್ಪಂದಶರೀರನಾಗಿ ಮೆಲ್ಲನಡಕಂಬೆರಸು ಪಟ್ಟಿರ್ದ ಋಷಿರೂಪಕಮಂ ಕಂಡು (ಸುಕುಮಾ. ೧೨-೨೪ ವ). ೩. ತಡೆಯಲ್ಪಟ್ಟ ಇಂದ್ರಿಯ ; ವಿಷಯಗಳ ಕಡೆಗೆ ಹೋಗದಂತೆ ನಿಗ್ರಹಿತವಾದ ಕಣ್ಣು, ಕಿವಿ ಮೊದಲಾದುವು. [ನಿರುದ್ಧ + ಕರಣ]

**ನಿರುದ್ಧಯೋಗ** (ನಾ). [ಯೋಗ] ತಡೆಯಲ್ಪಟ್ಟ ಕಾಯಕ, ವಾಚಕ, ಮಾನಸಿಕ ಸಂಬಂಧವುಳ್ಳವನು : ಕೈಲಾಸಶೈಲಶಿಖರಾಲಂಕಾರ ನಿರುದ್ಧಯೋಗನುಮುಪಗತಯೋಗಗುಣಸ್ಥಾನನುಂ . . . ಅಗಿ (ಆಪಿಪು. ೧೬-೭೪ ವ). [ನಿರುದ್ಧ + ಯೋಗ]

**ನಿರುದ್ಧೇಂದ್ರಿಯೆ** (ನಾ). ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡಿರುವವಳು ; ಇಂದ್ರಿಯನಿಗ್ರಹವುಳ್ಳವಳು : ಮನಮಂ ನಿಗ್ರಹಿಸುತ್ತ ಸದ್ವಿಷಯದತ್ತಲ್ ಪೊರ್ದದಂತಾಗೆ ಮಾಡಿ ನಿರುದ್ಧೇಂದ್ರಿಯೆಯಾಗಿ . . . ಆಶ್ರೈಸಿದೆಂ ಸ್ಥಾಣುವಂ (ಕಾದಂಪೂ. ೯೫೩). [ಸಂ. ನಿರುದ್ಧೇಂದ್ರಿಯಾ]

**ನಿರುದ್ಯೋಗ** (ನಾ). ೧. ಜಡತನ; ಆಲಸ್ಯ ; ಸೋಮಾರಿತನ : ಅಸ್ತಮಯುದು ದಯಕಾಲದೆ ನಿದ್ರೆಗೈವನಾತ್ಮಸ್ತುತಿಯ ಪರನಿಂದೆಯವನ ಸಾಧಿಸಿ ಪರರ ವಸ್ತುವಂ ಕಳುವನ ನಿರುದ್ಯೋಗದವನ ಸಿರಿ ತೊಲಗಿದಲ್ಲದೆ ಮಾಣ್ಬಳೆ (ಜೈಮಿಭಾ. ೫-೬೮). ೨. ನೌಕರಿಯಿಲ್ಲದಿರುವುದು ; ಉದ್ಯೋಗವಿಲ್ಲದಿರುವುದು : ಒಂದೆಡೆಗೆ ನಿರುದ್ಯೋಗ . . . ಇನ್ನೊಂದೆಡೆಗೆ ಹೊಸಶಿಕ್ಷಣದಿಂದ ಬಂದ ಸ್ವಾಭಿಮಾನ, ಸ್ವದೇಶಾಭಿಮಾನಗಳ ಉರಿ-ಉಬ್ಬರ ಇವುಗಳಿಂದ ನಮ್ಮ ರಾಷ್ಟ್ರೀಯ ಆಂದೋಲನ ಆರಂಭವಾಯಿತು! (ಮಾವಾದ. ೯೫) ; ಇಂತಹ ನೌಕರಿಯು ಶ್ರೀಧರನ ನಿರುದ್ಯೋಗದ ಸಮಸ್ಯೆಯನ್ನು ಕೊನೆಗಾಣಿಸಿತೇ ಹೊರತು ಮತ್ತೇನನ್ನೂ ಸಾಧಿಸಿ ಕೊಡಲಿಲ್ಲ (ಅಂಬುಜಾ. ೧೦).

ನಿರುದ್ಯೋಗವೇತನ = ಉದ್ಯೋಗ ಸಿಕ್ಕಿಲ್ಲದವನಿಗೆ ತಾತ್ಕಾಲಿಕವಾಗಿ ಕೊಡಲಾಗುವ ವೇತನ,—ಸಂಬಳ : ಉದ್ಯೋಗ ದೊರೀದಿದ್ದರೆ ಅವನಿಗೆ ನಿರುದ್ಯೋಗವೇತನ ಸಿಗುತ್ತೆ (ಹೊಸಕ್ಷಿ. ೨೨೧). [ಸಂ.]

**ನಿರುದ್ಯೋಗತನ** (ನಾ). ನೌಕರಿಯಿಲ್ಲದಿರುವುದು ; ಉದ್ಯೋಗವಿಲ್ಲದಿರುವುದು : ಈ ನಿರುದ್ಯೋಗತನದಿಂದ ನನ್ನ ಜೀವನ ಎಷ್ಟು ದಿನ ಸಾಗಬಲ್ಲದು ? (ಸ್ವಾವಲಂ. ೫) ; ಇತ್ತ ಉತ್ಪನ್ನ ಹೆಚ್ಚಾದಂತೆ ಕೆಲಸಗಾರರ ನಿರುದ್ಯೋಗತನ ಇನ್ನೂ ಬೆಳೆಯುವದು (ಮಾಪಾದ. ೧೩೨). [ನಿರುದ್ಯೋಗ + -ತನ]

**ನಿರುದ್ಯೋಗಿ** (ನಾ). ೧. ಸೋಮಾರಿ ; ಜಡ; ಆಲಸಿ : ಸೆಣಸುಳ್ಳುದ್ವೃತ್ತರಂ ತಳ್ತಿ ಜಾಯದೆ . . . ಒರ್ವಂ ಗುಣಮುಂಟೆಂದುಂಡು ಪಟ್ಟಿರ್ಪನನಣಮೆ ನಿರುದ್ಯೋಗಿಯುಂ ಭೂಪನೆಂಬರ್ (ಪಂಪಭಾ. ४-೧೧) ; “ನಿರುದ್ಯೋಗಿಗಳ ತಲೆ ಪಿಶಾಚಿಯ ಕಾರ್ಖಾನೆ” ಎಂಬ ಆಂಗ್ಲ ನಾಣ್ಣುಡಿ ಇದೆ (ನಾಡಿಗೇ. ೨೭೪); ಸೋಮಾರಿಗಳೇ (ನಿರುದ್ಯೋಗಿಗಳೇ) ಬಲು ಕಾಮುಕರಿರುವರೆಂದು ಜಗತ್ತಿಗೆ ಪ್ರತ್ಯಕ್ಷ ಅನುಭವವದೆ (ಬ್ರಹ್ಮಜೀ. ೧೭೧). ೨. ನೌಕರಿಯಿಲ್ಲದಿರುವವನು ; ಉದ್ಯೋಗವಿಲ್ಲದವನು : ತನ್ನ ಕೆಲಸ ಕಳೆದುಕೊಂಡು . . . ಆ ಹುಡುಗ ನಿರುದ್ಯೋಗಿಯಾಗಿ ಪಟ್ಟಣದ ಬೀದಿಗಳಲ್ಲಿ ಅಲೆದಾಡುತ್ತಿದ್ದನು(ಪುಸರು.೧೫೯).

ನಿರುದ್ಯೋಗಿ ಭತ್ಯ = ನಿರುದ್ಯೋಗವೇತನ : ಇಂಗ್ಲೆಂಡಿನಲ್ಲಿ ಅವನಿಗೆ ಉದ್ಯೋಗ ದೊರಕುವವರೆಗೂ ನಿರುದ್ಯೋಗಿ ಭತ್ಯ ಸಿಗುತ್ತಿತ್ತು (ದೂಥ). [ಸಂ. ನಿರುದ್ಯೋಗಿನ್]

**ನಿರುದ್ವಿಗ್ನ** (ಗು). ೧. ಆವೇಗವಿಲ್ಲದ ; ಉದ್ವೇಗವಿಲ್ಲದ ; ಶಾಂತನಾದ. (ನಾ). ೨. ಉದ್ವೇಗವಿಲ್ಲದವನು ; ಆವೇಗವಿಲ್ಲದವನು; ಶಾಂತವಾಗಿರುವವನು : ಅವನು ನಿರುದ್ವಿಗ್ನನಾಗಿ ನಿರ್ಭಯನಾದನು (ಪುಸರು. ೧೩೧) ; ನೊವೋದರೋವ್ ನಿರುದ್ವಿಗ್ನನಾಗಿ ಉತ್ತರಿಸಿದನು (ಪುಸರು. ೫೩೪). [ಸಂ.]

**ನಿರುಪಕ್ರಮ** (ನಾ). ಆರಂಭವಿಲ್ಲದುದು ; ಆದಿಯಿಲ್ಲದುದು ; ಅನಾದಿ : ಆ ಯತಿ . . . ಹಿಂದಿಕ್ಕಿ ಬಾಗಿಲನೇಳನಾ ನಿರುಪಕ್ರಮದ ನಿಜದೈವದಂತಃಪುರಕೆ ನಡೆತಂದ (ಸಿಭಾಗ. ೯-೪-೧೯). [ಸಂ.]

**ನಿರುಪದ್ರ** (ನಾ). = ನಿರುಪದ್ರವ : (ಕಿ). ‘ಉಪದ್ರ’ ಪರಾ. [<ಸಂ. ನಿರುಪದ್ರವ]

**ನಿರುಪದ್ರವ** (ನಾ). ೧. ತೊಂದರೆಯಿಲ್ಲದಿರುವುದು ; ಬಾಧೆಯಿಲ್ಲದಿರುವುದು ; ಕಾಟವಿಲ್ಲದಿರುವುದು : ಆ ದಾನವರ ಮರ್ದಿಸಿ ದೇವಲೋಕವನೆವಗೆ ನಿರುಪದ್ರವದಲೆಡೆಮಾಡೆಂದನಮರೇಂದ್ರ (ಕುವ್ಯಾಅ. ೧೨-೯). ೨. ಹಾನಿ, ರೋಗ, ನಾಶ ಮೊದಲಾದ ಯಾವ ಬಗೆಯ ಪೀಡೆಗಳನ್ನೂ ಹೊಂದದವನು; ಪರಬ್ರಹ್ಮ : ಆ ಅಂತರ್ಯಾಮಿ ಮೊದಲಾದ ಈಶ್ವರತ್ರಯಕ್ಕೆ ಅಧಿಷ್ಠಾತೃ . . . ನಿರ್ಮಾಯಿ ನಿರುಪದ್ರವ . . . ಎಂಬಿವು ಮೊದಲಾದವೇ ಅದ್ವೈತಬ್ರಹ್ಮಪರ್ಯಾಯನಾಮಂಗಳಕ್ಕುಂ (ವಿವೇಕ. ೨೭). [ಸಂ.]

**ನಿರುಪದ್ರವಿ** (ನಾ). ೧. ತೊಂದರೆ ಕೊಡದಂತಹುದು; ಕೆಡುಕು ಮಾಡದಿರುವಂತಹುದು : ನೆಲ ಪಾತ್ರೆ ಇತ್ಯಾದಿಗಳನ್ನು ಸ್ವಚ್ಛವಾಗಿ ಮತ್ತು ತೇವವಿಲ್ಲದಂತೆ ಇರಿಸಿದರೆ ಈ ಅಣುಗಳು ಸತ್ತು ಹೋಗಿ ನಿರುಪದ್ರವಿಗಳಾಗುತ್ತವೆ (ಅಡುಸಾ. ೩೭). ೨. ತೊಂದರೆ ಕೊಡದವನು ; ಕೆಡುಕನಲ್ಲದವನು : ಅವನ ಕಾಲದಲ್ಲಿ ಅವನನ್ನು ಅನುಸರಿಸಿ ಬಂದ ಜನರು, ನಿರುಪದ್ರವಿಗಳಾಗಿಯೇ ಇದ್ದರು (ಬಾಲಪ್ರ. II, ೮೦೬). [ಸಂ. ನಿರುಪದ್ರವಿನ್]

**ನಿರುಪಧಾವಿ** (ನಾ). ೧. (ಅತ್ಯಾಸೆಯಿಂದ) ಯಾರ ಸಮಿಾಪಕ್ಕೂ ಹೋಗದವನು; ನಿಸ್ಪೃಹ. ೨. ಯಾವ ಚಿಂತೆಯೂ ಇಲ್ಲದವನು ; ನಿಶ್ಚಿಂತ : ವಿಜಿತಷಡ್ವರ್ಗನು ನಿರರ್ಗಳ ನಿಜಶಿವೈಕ್ಯನು ನಿರುಪಧಾವಿ[ಪಾಠಾಂ. ದಾದಿ] ಭವಿಜನಸಂಗತ್ಯಾಗಿ (ಬಸಪು. ३೦-३). [ಸಂ. ನಿರುಪಧಾವಿನ್]

**ನಿರುಪಪ್ಲವ** (ಗು). ೧. ತೊಂದರೆಯಿಲ್ಲದ ; ನಿರ್ವಿಘ್ನ: ‘ನಿರುಪಪ್ಲವಾನಂದ’ ಪರಾ. ೨. ತೊಂದರೆ ಕೊಡದ. (ನಾ). ೩. ಶಿವ. [ಸಂ.]

**ನಿರುಪಪ್ಲವಾನಂದ** (ನಾ). ೧. ಅಡ್ಡಿ ಆತಂಕಗಳಿಲ್ಲದ ಆನಂದ; ಶುದ್ಧವಾದ ಆನಂದ ; ಬ್ರಹ್ಮಾನಂದ. ೨. ಪರಬ್ರಹ್ಮ : ಆ ಅಂತರ್ಯಾಮಿ ಮೊದಲಾದ ಈಶ್ವರತ್ರಯಕ್ಕೆ ಅಧಿಷ್ಠಾತೃ . . . ಅಸಂಗಿ ನಿರುಪಪ್ಲವಾನಂದ . . . ಎಂಬಿವು ಮೊದಲಾದ ಅದ್ವೈತಬ್ರಹ್ಮಪರ್ಯಾಯನಾಮಂಗಳಕ್ಕುಂ (ವಿವೇಕ. ೨೭). [ನಿರುಪಪ್ಲವ + ಆನಂದ]

**ನಿರುಪಮ** (ಗು). ೧. ಹೋಲಿಸಲಾಗದ; ಅಸದೃಶವಾದ; ಉಪಮಾತೀತವಾದ : ಧರಿತ್ರೀಸ್ತುತ್ಯನತ್ಯುಜ್ವಲನಿರುಪಮದೇಹಪ್ರಭಾ

ದಿವ್ಯಸರ್ವಾವಧಿಬೋಧಂ (ಸುಕುಮಾ. ೩-೪೮); ನಿರುಪಮಕಲ್ಪವಲ್ಲಿಗೆ ಲತಾವಳಿ ಬಂದೆಱಗುತ್ತುಮಿರ್ಪವೊಲ್ ಪರಿಕರಕಾಂತೆಯರ್ವೆರಸು ತಾಂ ಕಳಭಾಷಿಣಿ ಬಂದು (ಕುಸುಮಾ. ೧೫-೧೪೬) ; ನಿರುಪಮಗುಣಾವೇಷಿಯ ಚಲಿತಸರಸಸೂನೃತಭಾಷಿ (ಬಸಪು. ೭-೪); ಹರಿ ತೋಱಿದನು ನಿರುಪಮ ವಿಶ್ವರೂಪವನಾ ಮಹಾಸಭೆಗೆ (ಕುವ್ಯಾಉ. ೯-೫೭); ಪೆಣ್ಣೆಂಬ ತಪಕೆ ನೀಂ ನಿರುಪಮಪ್ರತಿಮೆಯೌ (ಶ್ರೀರಾಮಾ. ೫೯-೫೬೯). (ನಾ). ೨. ಅಸದೃಶವಾದುದು ; ಉಪಮಾತೀತವಾದುದು : ಪರಿವೃತ್ತಿಯೆಂಬುದಕ್ಕುಂ ನಿರುಪಮಮರ್ಥಸ್ವರೂಪವಿನಿಮಯವಚನಂ (ಕವಿರಾ. ೩-೧೫೮); ನಿರುಪಮವಲೇ ಹೊಗಳುವಡೆ ಹೊಸಪರಿಯ ಬಲ ಬರುತಿರ್ದುದದ್ರಿಯ ಹರಹುಗಳ ಪೊದಱುಗಳ ಬಲು ಹೆಮ್ಮರನ ನೆಗಹಿನಲಿ (ತೊರರಾ. ೪-೭-೯). ೩. ಹೋಲಿಕೆಯಿಲ್ಲದವನು ; ಅಸದೃಶ ; ಉಪಮಾತೀತ : ನಿರುಪಮರವರಂದಿರ್ಪತ್ತೆರಡಂಬುಧಿಯುಪಮೆಯಾಯು ತನಗಾಗಲ್ಕಯ್ವರುಮಿರ್ದರ್ ಸುಖರತ್ನಾಕರದೊಳಗೋಲಾಡಿ ಮೂಡಿ ಮುೞುಂಗಾಡುತ್ತುಂ (ನೇಮಿಪು. ೧೪-೧೨೫); ನಿರುಪಮನ ನಿರ್ಮತ್ಸರನ ನಿರ್ಮರಣ ನಿಶ್ಚಿಂತನನು . . . ಕಂಡನಸುರೇಂದ್ರ (ತೊರರಾ. ೬-೫೧-೪೯); ನಿರುಪಮ ನಿರಾಳನು ನೋಡಾ ಲಿಂಗೈಕ್ಯನು(ಅಖಂಡೇ. ೩೧೬-೫); ಗಿರಿಯ ಕರದೊಳಗಾಂತವನ ನಿರುಪಮನ . . . ಗುರುತರಿವರಾರೆಂದ (ಗಗತಾ. ೧೩-೧). ೪. [ಛಂದ] ಪ್ರತಿ ಸಾಲಿನಲ್ಲಿಯೂ ಹನ್ನೆರಡು ಅಕ್ಷರಗಳು ಇರುವ ಜಗತೀಛಂದಸ್ಸಿನ ಒಂದು ವೃತ್ತ ; ⊫ ಇದರ ಪ್ರತಿಸಾಲಿನಲ್ಲಿಯೂ ನಗಣ, ಭಗಣ, ಜಗಣ, ರಗಣಗಳು ಕ್ರಮವಾಗಿ ಬರುತ್ತವೆ: ಸುರಪುರೇಂದುದಿವಸಾಧಿಪಾಗ್ನಿಗಳ್ ಬರೆ . . . ಪೆಸರ್ ನೆಗೞೆ ಪಿಂಗಳೋಕ್ತಿಯೊಳ್ ನಿರುಪಮಂ ನಿರುಪಮಾನ ವಿಭ್ರಮಂ (ಛಂದೋಂಬು. ೨-೧೩೧). [ಸಂ.]

**ನಿರುಪಮಚರಿತ್ರೆ** (ನಾ). ಅಸದೃಶವಾದ ನಡತೆಯನ್ನುಳ್ಳವಳು ; ಉತ್ತಮವಾದ ಚಾರಿತ್ರ್ಯವನ್ನು ಹೊಂದಿರುವವಳು : ನಿರುಪಮಚರಿತ್ರೆ ಸೂರ್ಯಜನರಸಿಯೆನಿಪ್ಪಿಂದುಮಾಲೆ ಪೆತ್ತಳ್ ಲೋಕೋತ್ತರರೆನಿಪ ವಾಲಿಸುಗ್ರೀವರುಮಂ (ಪಂರಾಮಾ. ೧೦-೧೬೫).
[ಸಂ. ನಿರುಪಮಚರಿತ್ರಾ (ನಿರುಪಮ + ಚರಿತ್ರ + -)]

**ನಿರುಪಮತೇಜ** (ಗು). ೧. ಅಸದೃಶವಾದ ಕಾಂತಿಯಿಂದ ಕೂಡಿದ ; ಉಪಮಾತೀತವಾದ ತೇಜಸ್ಸನ್ನು ಹೊಂದಿರುವ : ನಿರುಪಮತೇಜನಾ ಖಚರರಾಜನ ತದ್ಭುಜಶಾಖೆಯಲ್ಲಿ ಬಿತ್ತರಿಪ ನಿಶಾತ ಖಡ್ಗಲತೆ (ಶಾಂತೀಶ್ವ. ೧-೧೫೨). (ನಾ). ೨. ಅಸದೃಶವಾದ ಕಾಂತಿ,— ತೇಜಸ್ಸು : ನಿರುಪಮತೇಜದಿಂ ದಿನಪನೋಲಗದೋರಗೆ . . . ಸಂಪದಂಗಳಿಂ ಸುರಪತಿಯೋಲಗಕ್ಕೆ ಸಮಮಾಯ್ತು ನರೇಶ್ವರ ಚಕ್ರಿಯೋಲಗಂ (ಕುಸುಮಾ. ೩-೯೭). [ ನಿರುಪಮ + ತೇಜ$_1$ ]

**ನಿರುಪಮಸುಖ** (ನಾ). ಅಸದೃಶವಾದ ಸುಖ ; ಪರಮಸುಖ : ನಿರುಪಮಸುಖ ಪಂಚಾನುತ್ತರೆಗಳೊಳಹಮಿಂದ್ರಬೃಂದವಂದ್ಯಂಗಳ್ ಮಂದರದಂತಿರೆಯ್ದೆ ಜಿನಮಂದಿರಮೆಸೆಗುಂ ನಂದನಾಳಿ ಸುಂದರವಿಭವಂ (ಪಾರ್ಶ್ವಪು. ೧೩-೨೪). [ನಿರುಪಮ + ಸುಖ]

**ನಿರುಪಮಾತ್ಮ** (ನಾ). ಪರಮಾತ್ಮ : ಸಚ್ಚಿದಾನಂದೈಕಘನವೆನಿಪ ನಿರುಪಮಾತ್ಮನ ನಿಲವನಱಿಯದೆ ನರಕಿ ಜಡನಾ ಜೀವವೆಂಬೀ ತರಳತನವೇ ಹಿಂಸೆಯುಱಿವಡಹಿಂಸೆ ಕೇಳೆಂದ (ಕುವ್ಯಾಭೀ. ೩-೫೧).
[ನಿರುಪಮ + ಆತ್ಮ]

**ನಿರುಪಮಾದ್ಭುತ** (ನಾ). ಅಸದೃಶವಾದ ಅದ್ಭುತ : ನಮ್ಮ ವಿಶ್ವಕೆ ನಾವೆ ನಿರುಪಮಾದ್ಭುತವಯ್ಯಾ! (ಪಾಂಚಜ. ೪೧-೧೨).
[ನಿರುಪಮ + ಅದ್ಭುತ]

**ನಿರುಪಮಾನ** (ಗು). ೧. ಹೋಲಿಕೆಯಿಲ್ಲದ ; ಅಸದೃಶವಾದ ; ಉಪಮಾತೀತವಾದ : ಸುರಪುರೇಂದುದಿವಸಾಧಿಪಾಗ್ನಿಗಳ್ ಬರೆ . . . ಪೆಸರ್ ನೆಗೞೆ ಪಿಂಗಳೋಕ್ತಿಯೊಳ್ ನಿರುಪಮಂ ನಿರುಪಮಾನವಿಭ್ರಮಂ (ಛಂದೋಂಬು. ೨-೧೫೩); ಗಂಗಾಧರನ ಗರುವೆ ಚಂದ್ರಧರನರಸಿಯೆನಿಪ ಗಿರಿರಾಜತನೂಜೆಯಿರ್ದ ನಿರುಪಮಾನ ತಪಃಪ್ರಭಾವಂ ವಿರೂಪಾಕ್ಷನ ಕರಣಂಗಳೊಳ್ ಬೆರಸಿ ಬಳೆಯೆ (ಗಿರಿಕ. ೯-೮೩ ಪ). (ನಾ). ೨. ಹೋಲಿಕೆಯಿಲ್ಲದವನು ; ಅಸದೃಶ ; ಉಪಮಾತೀತ : ನಿರುಪಮಾನ ನಿರಧಿಕ ನಿರ್ಭಯ . . . ನಿಜ ನಿರ್ವಾಣಯ ಚಿತ್ತೈಸು (ಬಸಪು. ೬೧-೪೪).
[ಸಂ.]

**ನಿರುಪಮಿತ** (ಗು). = ನಿರುಪಮ ೧ : ನಿರುಪಮಿತಪ್ರದೇಶಪರಿಶೋಭೆಯನಾ ಸಮುದಾಯಶೋಭೆಯಂ . . . ಅಭೀಕ್ಷಿಸುತಿರ್ದವಲಂಪಿನಿಂ ತನೂದರಿ ಕುಸುಮಾವಳೀವಿಲುಳಿತಾಕ್ಷಿಗಳಾ ಪಟಲೇಖ್ಯಚಿತ್ರದೊಳ್ (ಕುಸುಮಾ. ೧೨-೮೧) ; ವಾಙ್ಮನಸುಗಳಿಗೆ ಕ್ಷೀಣಪದದಲಿ ಮಿಗೆ ತೋಱುವ ನಿರುಪಮಿತಮೂರ್ತಿ (ಬಸಪು. ೫೦-೭೦) ; ಧರಣಿಪನ ಕಾಣಿಸುವುದಂಥನ ನಿರುಪಮಿತಶೋಕಾನಳನ ಸಂಹರಿಸುವುದು ನಯವೆಂದು ವೇದವ್ಯಾಸಮುನಿ ನುಡಿದ (ಕುವ್ಯಗ. ೧೧-೫೧). [ಸಂ.]

**ನಿರುಪಮೆ** (ನಾ). ಉಪಮಾತೀತಳಾದವಳು; ಸಮಾನರಿಲ್ಲದವಳು: ಸತತಗುಣನಿಲಯೆ . . . ನಿರುಪಮೆ ಚಿನ್ಮಯೆ ಭಾರತಿಯೆನಸುಂ ನೆಲಸುಗೆಮ್ಮ ಮುಖಸರಸಿಜದೊಳ್ (ರಸರ. ೨-೨) ; ನಿರುಪಮೆ ನಿರಾವರಣೆ ನಿರಜೆ ನಿರಹಂಕಾರೆ (ಏಕೋಪು. ೧-೯). [ಸಂ. ನಿರುಪಮಾ]

**ನಿರುಪಯುಕ್ತ** (ಗು). ಪ್ರಯೋಜನವಿಲ್ಲದ ; ಕೆಲಸಕ್ಕೆ ಬಾರದ: ನಾನು ಆಗಾಗ ಹೋಗಿ ಆ 'ನಿರುಪಯುಕ್ತ' ಮುದುಕನ ಬಳಿ ಕುಳಿತುಕೊಳ್ಳುವುದನ್ನು ಕಂಡು, ಅನೇಕರು ಆಶ್ಚರ್ಯಪಡುತ್ತಿದ್ದರು (ಜನಜೀ. ೩). [ಸಂ.]

**ನಿರುಪಯೋಗ** (ನಾ). ಪ್ರಯೋಜನಕ್ಕೆ ಬಾರದಿರುವಿಕೆ; ನಿಷ್ಪ್ರಯೋಜನ : ರೋಗಪೀಡಿತವಾದ ಶರೀರಕ್ಕೆ ಎಷ್ಟು ಆಭರಣಗಳನ್ನು ಹಾಕಿದರೂ ನಿರುಪಯೋಗ (ಸ್ವಾವಲಂ. ೧೩) ; ಕರ್ತವ್ಯದ, ನೀತಿನಿಯಮದ ಅಂಕೆಯಿಲ್ಲದ ಮಾಧುವಿನ ನಿರುಪಯೋಗವಾದ, ಅಪೇಕ್ಷೆಯಿಲ್ಲದ, ಹುಂಬಪ್ರೇಮವಿದೆ (ಹೊಸಕ್ಷಿ. ೨೨೪). [ಸಂ.]

**ನಿರುಪಯೋಗಿ** (ಗು). ೧. = ನಿರುಪಯುಕ್ತ : ಇಬ್ಬರು ನಿರುಪಯೋಗಿ ಧಾಂಡಿಗ ತಮ್ಮಂದಿರು ಇರೋ ಮನೆಗೆ . . . ಕಲಿತವಳು ಬಂದು ಸೇರಿದರೆ ಖಂಡಿತ ಜಗಳವೆಬ್ಬಿಸುತ್ತಾಳೆ (ಹೊಸಕ್ಷಿ. ೨೨೫). (ನಾ). ೨. ಉಪಯೋಗಕ್ಕೆ ಬಾರದುದು ; ನಿಷ್ಪ್ರಯೋಜಕವಾದುದು : ಒಡೆದು ಅಥವಾ ನಾದುರುಸ್ತಿಯಾಗಿ ನಿರುಪಯೋಗಿಯಾಗಿ ಹೋಗುವಂಥ ಜೀನಸುಗಳನ್ನು ಹೊರ ಊರಿಗೆ ಕಳುಹಿಸುವುದು (ಮುಂಬವ್ಯಾ. ೧೫) ; ಮರಗೆಣಸಿನ ಗೆಡ್ಡೆಯನ್ನು ಹೆಚ್ಚು ಸಮಯ ಹಾಗೆಯೇ ಇಟ್ಟರೆ ಅದು ವಿಷಮಯವಾಗಿ ನಿರುಪಯೋಗಿಯಾಗುತ್ತದೆ (ಅಡುಸಾ. ೧೧೨). ೩. ಉಪಯೋಗಕ್ಕೆ ಬಾರದ ವ್ಯಕ್ತಿ ; ನಿಷ್ಪ್ರಯೋಜಕ : ಅವರ ಮಕ್ಕಳು ಶುದ್ಧ ನಿರುಪಯೋಗಿಗಳು (ರೂಢಿ). [ಸಂ. ನಿರುಪಯೋಗಿನ್]

**ನಿರುಪಹತಿ** (ಗು). ೧. ನಿರ್ವಿಘ್ನವಾದ; ಅಪಾಯವಿಲ್ಲದ : ನಿರುಪಹತಿಸ್ಥಲಂ ಮೃದುತರಾಸನಮೊಳ್ಪೆಣೆಸಿಂಪುದಂಬುಲಂ . . . ಸತ್ಕಳತ್ರಸಾದರತೆಯುಮುಳ್ಳ ಸತ್ಕವಿಯುಮಿವಾಸು ಪೊಡಾಗದೆ ಕಾವ್ಯವಾರ್ಧಿಯಂ (ಸೂಕ್ತಿಸು. ೧-೭೦). (ನಾ). ೨. ನಿರ್ವಿಘ್ನವಾದುದು ; ಅಪಾಯವಿಲ್ಲದುದು. [ಸಂ.]

**ನಿರುಪಾದಾನ** (ನಾ). [ಜೈನ] ಸುಖೋಪಭೋಗವಸ್ತುಗಳನ್ನು ಬಯಸದೆ ಹಾಗು ಇತರರಿಂದ ಸ್ವೀಕರಿಸದೆ ಇರುವ ಧರ್ಮ :

ನಿರುಪಾದಾನವೆಂಬುದು ಶಯನಾಸನ ವಸ್ತ್ರ ಛತ್ರ ಪಾನಕನಕಭಾಜನಾದಿಗಳುಮಂಪೆಜಿವು ಸುಖಸಾಧನಂಗಳುಮನಪೇಕ್ಷಿಸದೆ ಪ್ರವರ್ತಿಸುವ ಧರ್ಮಂ (ಚಾವಂಪು. ೭). [ಸಂ.]

**ನಿರುಪಾಧಿ**(ಗು). ೧. = ನಿರುಪಾಧಿಕ ೧ : ಭೇದದೋರದ ನಿರುಪಾಧಿ ಭಕ್ತಿಯ ಸುಪ್ರಸಾದತೃಪ್ತಿಯೊಳೆರ್ಪನಾದಿಜಂಗಮದ ಶ್ರೀ (ಮೈಲಾರ. ೧೨೮-೭). (ನಾ). ೨. ಪರಮಸತ್ಯ ; ಪರವಸ್ತು :. ಎಲ್ಲಿ ಸುಳಿದಡೆ ಅಲ್ಲಲ್ಲಿ ಉಪಾಧಿ ಬಿಡದಯ್ಯ ಈ ಉಪಾಧಿಗೆ ಅಪಾಯವನಿತ್ತು ನಿರುಪಾಧಿಯಲ್ಲಿ ನಿಲಿಸಯ್ಯ (ಆದವ. ೧೩-೨೭) ; ಉಪಾಧಿಯನಳಿದು ನಿರುಪಾಧಿಯ ತಿಳಿದು . . . ಮೂಲೋಕದೊಡೆಯನಲ್ಲಿ ಮನವಡಗಿರ್ಪ ಮಹಾಶರಣರ ಶ್ರೀಪಾದಕ್ಕೆ ನಮೋನಮಃ ಎಂಬೆನಯ್ಯ (ಅಖಂಡೇ. ೮೭-೯೦). [ಸಂ.]

**ನಿರುಪಾಧಿಕ**(ಗು). ೧. ತೊಂದರೆಯಿಲ್ಲದ ; ಉಪಾಧಿರಹಿತವಾದ: ಭಾವವಿಲ್ಲದೆ ಭಾವಿಸಿ ಮಾಯವಿಲ್ಲದೆ ಸಂಗವ ಮಾಡಿ ನಿಸ್ಸಂಗಿಯಾದೆನು ನಿರುಪಾಧಿಕ ನಿಃಕಳಂಕ ಮಹಾಲಿಂಗಗುರು ಶಿವ ಸಿದ್ಧೇಶ್ವರಪ್ರಭುವೇ (ವಚಸಂ. ೪೯೯-೮) ; ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ ಬೆಳಗುತಿದೆ ಮಾತು ಮನಂಗಳಿಂದತ್ತತ್ತ ವಿರಾಜಿಪ ಸಾತಿಶಯದ ನಿರುಪಾಧಿಕ ನಿರ್ಮಲ (ಕೈವಲ್ಯ. ೮೦-೪೯ ಪಲ್ಲವಿ) ; ನಿರುಪಾಧಿಕಪ್ರಕಾಶಾಂತರಚಿಜ್ಯೋತಿಗೆ ಸಮಾನಮಲ್ತೆಂದು ಕರಂ ಪರಿಹಾಸಂಗೆಯ್ವಂತಿರೆ ತರುಣಂ ಮಣಿದೀಪಮಂ ನಿರೀಕ್ಷಿಸಿ ನಗುವಂ (ರಾಜಶೇ. ೪-೬೩). ೨. ಭಂಗ ಬಾರದಿರುವ ; ಅವ್ಯವಚ್ಛಿನ್ನವಾದ ; ಸಮಗ್ರವಾದ. (ನಾ). ೩. ತೊಂದರೆಯಿಲ್ಲದುದು ; ಉಪಾಧಿರಹಿತವಾದುದು : ಇಷ್ಟು ದೊಡ್ಡ ರಾಜ್ಯವನ್ನು ನಿರುಪಾಧಿಕವಾಗಿ ನಡಸುತ್ತಿರುವ ನೀವುಗಳು ಇದನ್ನು ಯೋಚಿಸಬೇಡವೆ? (ಶಾಂತಲಾ. ೧೯) ; ಆ ಬಹಿರಂಗ ದೇಶವು ನಿರುಪಾಧಿಕವಾದದ್ದು (ಜಗತ್ತು. ೨೧೯). ೪. ಸತ್ಯ ; ನಿಜ ; ಪರವಸ್ತು : ಸರಸಭಕ್ತಿಸತಿಯ ಪರವಶಾವರಣದಿಂ ನಿರುಪಾಧಿಕದ ವಿಸ್ತರದವಸ್ಥೆಯೊಳುರು ಸುಖಾಸ್ತಿ ಮಿತೇಂದ್ರಿಯನೊಳಹಗೆ (ಬಸವು. ೩೫-೩೪). ೫. ಸ್ವತಂತ್ರನಾದವನು : ಉಪಮಾತೀತ ನಿರುಪಾಧಿಕ . . . ಕೃಪಾಮೃತೇಕ್ಷಣ ಪರಶಿವನುಂ (ಭೈರಸೂ. ೧) ; ನಿರುಪಾಧಿಕರೂ ನಿಶ್ಚಿಂತರೂ ಆದ ಸಿದ್ಧಪರಮೇಷ್ಠಿಗಳಲ್ಲಿ ಕೆಲವರ ಪಾದಕ್ಕೆ ಅತ್ತಿ ಮಬ್ಬೆ ಭಕ್ತಿಯಿಂದೆರಗಿದಳು (ದಾನಚಿಂ. ೧೧೪). ೬. [ತತ್ತ್ವಶಾ] ಕಾರಣ, ಹೇತುಗಳಿಗೆ ಅಧೀನವಾಗದಿರುವುದು ; ಉಪಾಧಿರಹಿತವಾದುದು : ಭೇದವು ಪುನಃ ಸೋಪಾಧಿಕವೆಂದೂ ನಿರುಪಾಧಿಕವೆಂದೂ ಎರಡು ವಿಧ (ಭಾತತ್ತ್ವ. ೬೦೩) ; ತಾಯ ಪ್ರೀತಿಯು ನಿರುಪಾಧಿಕವಾದುದು (ಸೀಗಟ್ಟು. ೧೬). [ಸಂ.]

**ನಿರುಪಾಧಿಕಾಧ್ಯಾಸ** (ನಾ). [ಅದ್ವೈತ] ಒಂದು ವಸ್ತು ಮತ್ತೊಂದು ವಸ್ತುವಿನಂತೆ ತೋರಿ ಉಂಟುಮಾಡುವ ಭ್ರಮೆ; ಒಂದನ್ನು ಮತ್ತೊಂದಾಗಿ ಭಾವಿಸುವುದು ಅಧ್ಯಾಸ. ಇದರಲ್ಲಿ ಸೋಪಾಧಿಕಾಧ್ಯಾಸ, ನಿರುಪಾಧಿಕಾಧ್ಯಾಸವೆಂದು ಎರಡು ವಿಧ. ಉಪಾಧಿ(ನಿಮಿತ್ತ)ಯಿಂದ ಆಗುವ ಅಧ್ಯಾಸ ಸೋಪಾಧಿಕಾಧ್ಯಾಸ. ಉದಾಹರಣೆಗೆ ಕೆಂಪುದಾಸವಾಳದ ಹೂವಿನ ಹತ್ತಿರದಲ್ಲಿರುವ ಬಿಳಿ ಸ್ಫಟಿಕಮಣಿಯನ್ನು ನೋಡಿ ಕೆಂಪುಮಣಿ ಎಂಬ ಭಾವನೆ ಬರುತ್ತದೆ. ಇಲ್ಲಿ ದಾಸವಾಳವು ಹತ್ತಿರದಲ್ಲಿ ಇರುವ ಕಾರಣದಿಂದಲೇ ಕೆಂಪುಮಣಿ ಎಂಬ ಭ್ರಾಂತಿ ಬರುತ್ತದೆ. ಆದರೆ ಹಗ್ಗದಲ್ಲಿ ಹಾವು ಅಥವಾ ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯೆಂಬ ಭ್ರಮೆಯುಂಟಾದಾಗ ಹತ್ತಿರದಲ್ಲಿ ಹಾವಾಗಲೀ ಬೆಳ್ಳಿಯಾಗಲೀ ಇರುವುದಿಲ್ಲ. ಇಂತಹುದು ನಿರುಪಾಧಿಕಾಧ್ಯಾಸ : ಅಹಂ ಎಂಬುವುದುಂ ಪ್ರತ್ಯಗಾತ್ಮಾಹಂಕಾರಗಳಿಗೆ ರಜ್ಜುಸರ್ಪವೆಂಬಂತೆ ನಿರುಪಾಧಿಕಾಧ್ಯಾಸಮೆನಿಸುವುದು (ವಿವೇಕ. ೩೭). [ನಿರುಪಾಧಿಕ + ಅಧ್ಯಾಸ]

**ನಿರುಪಾಯ** (ಗು). ೧. ಉಪಾಯಗಾಣದ; ನಿಸ್ಸಹಾಯಕವಾದ: ನಿರುಪಾಯಭಾವವನ್ನು ಮುಖದ ಮೇಲೆ ಮೂಡಿಸಿಕೊಂಡು ಕುಳಿತರು (ಜನಜೀ. ೧೦೨). (ನಾ). ೨. ದಾರಿಗಾಣದಿರುವಿಕೆ; ನಿಸ್ಸಹಾಯಕತೆ : ಮಲಕಪ್ಪ ಜೋಳವನ್ನು ಅಳೆಯುತ್ತಿರುವಾಗ, ಮೇಲಗಿರಿಸೆಟ್ಟರು ನಿರುಪಾಯದ ಕರುಣಾದೃಷ್ಟಿಗಳಿಂದ ನೋಡುತ್ತಿದ್ದರು (ಜನಜೀ. ೨). ೩. ಉಪಾಯಗಾಣದವನು ; ನಿಸ್ಸಹಾಯಕ : ಉಳಿದವರು ನಿರುಪಾಯರಾಗಿ ಅಲ್ಲಿಂದ ಹೋದರು (ಮೇದಿಸು. ೧೦೭) ; ತಮಗೆ ಬಿಡುವಿದ್ದರೆ ತಡೆಯಿರಿ. ಇಲ್ಲವಾದರೆ ನಾನು ನಿರುಪಾಯ (ಸ್ಮೃತಿಚಿ. ೧೯೭). [ಸಂ.]

**ನಿರುಪಾಯತೆ** (ನಾ). ದಾರಿಗಾಣದಿರುವಿಕೆ ; ನಿಸ್ಸಹಾಯಕತೆ : ಟೆಲಿಫೋನ್ ತೆಗೆದುಕೊಂಡ ನೌಕರ ನಮ್ರಭಾಷೆಯಲ್ಲೇ ತನ್ನ ನಿರುಪಾಯತೆಯನ್ನು ತಿಳಿಸಿದ (ಹೊಸಕ್ತಿ. ೧೬೩). [ಸಂ. ನಿರುಪಾಯತಾ]

**ನಿರುಮ್ಮಳ**, ನಿರಂಬಳ$_1$, ನಿರುಂಬಳ (ನಾ). ನಿಶ್ಚಿಂತೆ ; ನೆಮ್ಮದಿ ; ಶಾಂತಿ : ನಿರುಮ್ಮಳವಾಗಿ ಬಾಳುವ ಮಾಡಬೇಕಾದರೆ ವಿದ್ಯೆ ಇಲ್ಲದೆ ಆಗದು (ಬಿಳುಮು. ೧೦೩). **ನಿರಂಬಳ**$_1$ : ಚೀನದೇಶದ ದುಃಖಗಳೆಲ್ಲ ಒಮ್ಮೆಲೆ ನಿವಾರಣೆಯಾಗಿ ನಿರಂಬಳವಾದೀತು (ಚೀನಬಾ. ೨೫೧) ; ಗಣಪ್ಪ ಎಲ್ಲಿಯೂ ಹೋಗದೆ ತುಳಸಿಕಟ್ಟೆಯ ಮೇಲೆ ಒಬ್ಬನೇ ಕಾಲಾಡಿಸುತ್ತ ನಿರಂಬಳಭಾವದಿಂದ ಕುಳಿತಿರುತ್ತಾನೆ (ಅಮುಸಿ. ೩೬). **ನಿರುಂಬಳ** : ಇನ್ನೇನು ಬಿಡು, ನಿರುಂಬಳ ಆಯ್ತಲ್ಲಾ ಇವರಿಗೆ (ಮಲೆಮ. ೫೫೦) ; ಹಯಾತನು ಅಪ್ಪಾಜಿಯ ಬೆಂಬಲದಿಂದ ನಿರುಂಬಳವಾಗಿ ಜೀವನ ಮಾಡುತ್ತಿದ್ದ (ಜೆಂಗಾಳ್ವ. ೨೮). [ನಿರ್- + ಉಮ್ಮಳ]

**ನಿರುವಾಣ** (ನಾ). ನಗ್ನತೆ ; ಬತ್ತಲೆ : ಮಂದಗಮನೆಯರ ಮುಂದೆ ನಿರುವಾಣದಿ ನಿಂದ ಮೂರುತಿಗಾರತಿಯೆತ್ತಿರೆ (ಪಾದಿಕೀ. ೧೫೬-೨). [<ಸಂ. ನಿರ್ವಾಣ]

**ನಿರುಹಣ** (ನಾ). = ನಿರೂಹಣ : ನಿರುಹಣಮುಂಪ(ಮುನು)ವಾಸ(ಹ)ನಮುಂ ಸೆರೆವಿಡುವುದುಮಗ್ನಿಕರ್ಮಮುಂ ಸ್ವೇದಮನುತ್ತರವಸ್ತು(ಸ್ತಿ)ವಿಧಾನಮುನಾವರಿಸಿದುದು (ಅಶ್ವಶಾ. ೧೦-೩೧). [<ಸಂ. ನಿರೂಹಣ]

**ನಿರುಹರಣ** (ಗು). ೧. ನಿವಾರಿಸುವ ; ಪರಿಹರಿಸುವ. (ನಾ). ೨. ನಿವಾರಣೆ ಮಾಡುವುದು ; ಪರಿಹರಿಸುವುದು. ೩. ಪರಿಹರಿಸುವವನು ; ನಿವಾರಿಸುವವನು : ಧನ್ಯನಾದೆನು ಪುಣ್ಯನಾದೆನು ದೈನ್ಯನಿರುಹರಣಾ ನಿರಸ್ತಜಘನ್ಯ ಬಹಳವದಾನ್ಯ ಮಾಯಾಶೂನ್ಯ (ಬಸವು. ೪೭-೬೧) ; ಕಲ್ಲಾದಹಲ್ಯಾಶಾಪನಿರುಹರಣಚರಣವಿದು ಕಾಳಿಂಗ ಮರ್ದನ ಚರಣವಿದು (ಕುಪ್ಯಾಲಿ. ೧೬-೩೫). [<ಸಂ. ನಿರ್ಹರಣ]

**ನಿರುಹಾದ** (ನಾ). ಶಬ್ದ ; ಗಲಭೆ ; ಸದ್ದು : ಕ್ರವ್ಯಾದಸೇನಾ ಮಧ್ಯದಲಿ ವಡಬಾಗ್ನಿಯಂದದಲಿ ಕೈದುಗಳ ಬೆಳಗಿನಲಿ ಘನನಿರುಹಾದ ದಬ್ಬರಣೆಯಲಿ ಬಲು ಚಲವಾದಿಗಳ ಬಿರುದಂಕನಹನೆಲೆ ದೇವ ನೋಡೆಂದ (ತೊರರಾ. ೬-೨೦-೭೮). [<ಸಂ. ನಿರ್ಹ್ರಾದ]

**ನಿರೂಢ** (ಗು). ೧. ಹೆಸರಾದ; ಖ್ಯಾತವಾದ; ಪ್ರಸಿದ್ಧಿ ಹೊಂದಿದ: ಚಾರುಚರಿತಂ ಮತ್ತೆಯುಂ ಬಾಹೂರ ಬೊಮ್ಮಯನೆಂಬ ಭಕ್ತನುದಾರಕೀರ್ತಿ ನಿರೂಢಗಾಢಮಹತ್ವತತ್ತ್ವಾರ್ಥಿ (ಬಸವು. ೨೨-೨೩). ೨. ಬಳಕೆಗೆ ಬಂದ ; ರೂಢಿಗೆ ಬಂದ ; ಸಾಂಪ್ರದಾಯಿಕವಾದ : ಗಾಢ ವಿಕ್ರಯ ಸಕ್ರಯದೊಳೇ ಗೂಢಕರು ಮೂಲ್ಯೈಕಲಾಭನಿರೂಢಪರ

ರೊಪ್ಪಿದರು ವೈಶ್ಯರು ಧರ್ಮಕಾಲದಲಿ (ಕುವ್ಯಾಆ. ೧೪-೪೨). (ನಾ). ೩. ಬಳಕೆಗೆ ಬಂದುದು ; ಸಾಂಪ್ರದಾಯಿಕವಾದುದು : ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬೀ ನಾಲ್ಕುವರ್ಣಗಳು ಜಗದುತ್ಪತ್ತಿಯ ನಂತರ ಬಹಳ ಕಾಲ ಸಂದ ಮೇಲೆ ನಿರೂಢವಾದಂತೆ ಸಿದ್ಧವಾಗುತ್ತದೆ (ಮುಂಬಯಿ. ೬-೧೦೦). [ಸಂ.]

**ನಿರೂಢಿ** (ನಾ). ೧. ಖ್ಯಾತಿ ; ಪ್ರಸಿದ್ಧಿ : ನೆರೆದ ಸೇನೆಗೆ ನೆಲನಗಲ ನೆಱೆಯದು ನಿರೂಢಿಯ ಭಟರ ವಿಕ್ರಮಕೆ ಅಳವು ಕಿಱಿದರಿರಾಯರಿಗೆ ದಿಗುವಳಯವಿಟ್ಟೆಡೆಯಾಗೆ ರಥಹಯ ದಳವುಳಕೆ ಕುರುಸೇನೆ ನಡೆದುದು (ಕುವ್ಯಾದ್ರೋ. ೧-೪೫) ; ಆ ನಿರೂಢಿಯ ದೊರೆಗಳಿವನ ಸಮಾನರೇ ಗುಣದಲಿ (ಕುವ್ಯಾಕ. ೨೨-೩೮). ೨. ಕಾರ್ಯ ; ವ್ಯವಹಾರ: ಆ ನರೇಂದ್ರ ಮನೋಹರದ ಮೃಗಯಾನಿರೂಢಿಯ ಬಿಸುಟು ಬಂದನು (ಕುವ್ಯಾಆ. ೨೨-೨೩). ೩. ಕೌಶಲ ; ನಿಪುಣತೆ ; ಪ್ರಾವೀಣ್ಯ. [ಸಂ.]

**ನಿರೂಪ** (ನಾ). ೧. ಆಕಾರವಿಲ್ಲದಿರುವುದು ; ನಿರಾಕಾರವಾದುದು: ಮಹಾಲಿಂಗಸ್ಥಾನಂಗಳು ಮಹಾಲಿಂಗದ ಹೆಸರಲ್ಲದೆ ಲಿಂಗ ಬೇಱೆ ರೂಪ ನಿರೂಪನಲ್ಲ (ಬಸವ. ೯೫೦) ; ಹೇಳುವುದಕ್ಕೆ ನುಡಿಯಿಲ್ಲ ನೋಡುವುದಕ್ಕೆ ರೂಪಿಲ್ಲ ಇಂತಪ್ಪ ನಿರೂಪದ ಮಹಾಘನವು ಶರಣರ ಹೃದಯದಲ್ಲಿ ನೆಲೆಗೊಂಬುದಲ್ಲದೆ ಈ ಜನನಮರಣಕ್ಕೊಳಗಾಗುವ ಮನುಜರೆತ್ತ ಬಲ್ಲರು (ಲಿಂಗಸ. ೬೧-೪೭). ೨. ಆಕಾರವಿಲ್ಲದವನು ; ನಿರಾಕಾರ ; ಪರಮಾತ್ಮ : ಪರಮಪರ . . . ಪರಂಜ್ಯೋತಿಸ್ವರೂಪ ನಿರೂಪ ಚಿತ್ತೈಸು (ಬಸಪು. ೬೧-೪೫). ೩. ಹೇಳುವಿಕೆ; ವಿವರಿಸುವುದು ; ವಿವರಣೆ : ಇದಕ್ಕೆ ಮಡಿವಾಳಯ್ಯಗಳ ನಿರೂಪ (ಶೂನ್ಯಸಂ. ೨೫೧-೩) ; ರುದ್ರಾಕ್ಷೆಯೆಂದು ಜನಿಸಿತ್ತು ಶರೀರದೊಳಿನಿತ ಧರಿಸಬೇಕು ಶರಣಜನ ಕಲ್ಪವೃಕ್ಷನೆ ನಿರೂಪವನಿತ್ತು ಪರಿಪಾಲಿಸು (ಸೌಂದಪು. ೬-೨೮). 'ನಿರೂಪಿಸು' ಪರಾ. ೪. ಹಿರಿಯರ ಉಪದೇಶ, —ಬೋಧನೆ: "ನಿರೂಪಂ, ನಿರೂಪಣಂ, ನಿರೂಪಿತಂ, ಈ ೩ ಗುರುವಾಕ್ಯಂ" (ಶಾಶಕ್ಯ. ೨೯೦); ಪ್ರಭುದೇವರು ಚನ್ನಬಸವಣ್ಣನ ನಿರೂಪವ ಕೇಳಿ ಬದುಕೆಂದು ಹೇಳಲಾ ಚಂದಯ್ಯಗಳು ನಿರೂಪಕ್ಕೆ ಒಪ್ಪಿ ಒಡಂಬಟ್ಟು ತಮ್ಮ ಇಷ್ಟಲಿಂಗಮಂ ಧರಿಸಿಕೊಂಡು (ಶೂನ್ಯಸಂ. ೨೬೨-೪೯). ೫. ಸಂದೇಶ : ಕಣ್ವಮಹಾಮುನಿಗಳ ನಿರೂಪವನ್ನು ತೆಗೆದುಕೊಂಡು ಬಂದಿದ್ದಾರೆ (ಮುಂಬಯಿ. ೬-೩೮೧). ೬. ಅಪ್ಪಣೆ ; ಆಜ್ಞೆ : ನನಗೂ ನಿನಗೂ ಚೈತನ್ಯಸ್ವರೂಪನಾದ ನಿರಂಜನ ಜಂಗಮಲಿಂಗ ಲಿಂಗಜಂಗಮನೇ ಗತಿಯೆಂದು ನಿರೂಪವ ಕೊಡಲು (ಚನ್ನಪ. ಕ. ೩೫೪-೭೩೮) ; ಹಿಂದೆ ಬರುತಿಹ ಸುತನನುರವಣಿಸಿ ಘನಭುಜಂಗಂ ಕಚ್ಚಲೊಡನೊಯ್ಯನೆ ನಗುತ್ತ ಶಿವನ ನಿರೂಪವಿದೆನುತ (ಬಸಪು. ೪೮-೮) ; ಕೋಪಿಸುತ ತನ್ನಯ ತೇರನಿಳಿದನು ಪಾರ್ಥನಸುರಾರಿಯ ನಿರೂಪದಲಿ (ಕುವ್ಯಾದ್ರೋ. ೮-೧೨) ; ಹರಿ ನಿರೂಪವನೀಯಲಾ ತರುಚರರು ಋಕ್ಷರದೆಲ್ಲರೇಱಿತು ವರವಿಮಾನದಲನಿಬರಿಗೆ ಎಡೆಯಿರಲು (ಕೌಶಿರಾ. ೪೪-೧೨) ; ನೀಲಧ್ವಜಂ ಮನೆಯೊಳಾ ಜ್ವಾಲೆಯ ನಿರೂಪಮಂ ತಲೆಯೊಳಾಂತು ಸಲ್ಲಲಿತ ವಾಜಿಯಂ ಬಿಡೆನೆನ್ನೊಡನೆ ಕಾದಿದಲ್ಲದೆಂದಾ ಕಿರೀಟಿಗೆ ಪೇಳಿಸಿದಂ (ಜೈಮಿಭಾ. ೯-೧೨) ; ನಾಗವ್ವೆ . . . ರಾಜಮಾತೆಯ ನಿರೂಪವನ್ನು ಮುಟ್ಟಿಸಿದಳು (ಸವತಿ. ೩೧). ೭. ಬರಹದ ರೂಪದಲ್ಲಿರುವ ಆಜ್ಞೆ ; ಆಜ್ಞಾಪತ್ರ; ಶಾಸನ: ಉಂಬಳಿ ಉತ್ತಾರವ ಕೊಟ್ಟು ಪ್ರಾಕು ನಿರೂಪವಾಗಿ ಅದೇ ಗಡಿ ಕಲು ಹಾಕಿಸಿ ಕೊಡುವ ರೀತಿ ಅಪ್ಪಣೆಯಾಗಬೇಕೆಂದು (ಎಕ. VII, ತಿಕಾರಿ. ೨೧೦-೨೬ ; 1758); ಅಪ್ಪಣೆಯಾದಂತೆ ನಿರೂಪವನ್ನು ಬರೆದು . . . ಆ ನಿರೂಪಕ್ಕೆ ದೊರೆಗಳವರ ದಸ್ತಖತ್ತು ಮೊಹರು ಮಾಡಿಸಿ, ಆಯಾ ಜನಗಳಿಗೆ ಕಳುಹಿಸಿಕೊಡುವಂತೆ ನಿಬಂಧನೆ ಮಾಡಿದರು (ಮಹಾಸಂ. I, ೧೪೭); ಇಸ್ಲಾಂಮತವನ್ನವಲಂಬಿಸುವಂತೆ ನಾನಾದೇಶಗಳ ರಾಜರುಗಳಿಗೆ . . . ಮಹಮ್ಮದನು ನಿರೂಪಗಳನ್ನು ಕಳುಹಿಸಿದನು (ಪೈಗಂಬ. ೮೮).

**ನಿರೂಪದ ಚಾವಡಿ** = (ಮೈಸೂರು ಸೀಮೆಯಲ್ಲಿ ಚಿಕ್ಕದೇವರಾಜ ಒಡೆಯರು ಏರ್ಪಡಿಸಿದ್ದ ೮೪ ಜಿಲ್ಲೆಗಳ) ಪೂರ್ಣವಾದ ರಾಜಾಜ್ಞೆಗಳನ್ನು ಸಿದ್ಧಪಡಿಸುತ್ತಿದ್ದ ಇಲಾಖೆ : ನಿರೂಪದ ಚಾವಡಿ :— ಇದರಲ್ಲಿ ರಾಯಸದವರು ಗಡಿಗಳು ಮುಂತಾದ ಅಧಿಕಾರ ಸ್ಥಾನಗಳಿಂದ ಯಾರು ಯಾರು ಅರ್ಜಿಗಳನ್ನು ಬಿನ್ನವಿಸಿಕೊಂಡರೂ, ಅವುಗಳನ್ನು ಸುಲಾವಣೆ ಮಾಡಿ, ಅಪ್ಪಣೆಯಾದಂತೆ ನಿರೂಪವನ್ನು ಬರೆದು ಅದರ ನಕಲನ್ನು ಇಟ್ಟುಕೊಂಡು ಆ ನಿರೂಪಕ್ಕೆ ದೊರೆಗಳವರ ದಸ್ತಖತ್ತು ಮೊಹರು ಮಾಡಿಸಿ ಆಯಾ ಜನಗಳಿಗೆ ಕಳುಹಿಸಿಕೊಡುವಂತೆ ನಿಬಂಧನೆ ಮಾಡಿದರು (ಮಹಾಸಂ. I, ೧೪೭). [ಸಂ.]

**ನಿರೂಪಕ** (ಗು). ೧. ಹೇಳುವ ; ವಿವರಿಸುವ : ಒಂದು ವಸ್ತುವಿನಲ್ಲಿ ವಿರುದ್ಧಾಂಶಗಳಿರಬಹುದೇ ಎಂದರೆ, ಆಪೇಕ್ಷಿಕವೆಂಬ ನಿರೂಪಕಭೇದದಿಂದ ಇರಬಹುದು. ಒಂದೇ ವಸ್ತುವಿನಲ್ಲಿ ದೀರ್ಘತ್ವವೂ . . . ಕನಿಷ್ಠತ್ವವೂ ನಿರೂಪಕಭೇದದಿಂದಿರುವುವು (ಹಿಂದಸಾ. ೭೯). (ನಾ). ೨. ಗಮನಿಸುವುದು ; ಲಕ್ಷಿಸುವಿಕೆ. ೩. ಹೇಳುವುದು ; ವಿವರಿಸುವುದು. ೪. ಅಪ್ಪಣೆ; ಆಜ್ಞೆ : ಒಲ್ಲೆನೆನಬಹುದೇ ನಿಜಸ್ವಾಮಿಯ ನಿರೂಪಕವ(ತೊರರಾ. ೬-೧೯-೫೦). ೫. ನೋಡುವವನು ; ಗಮನಿಸುವವನು : ತಿಂಗಳು ಮೊದಲು ಕರ್ಮವ ಬೆಳ್ದಿಂಗಳುಮಕ್ಕುಂ ನಿರೂಪಕಾಂತಃಕರಣಕ್ಕಿಂಗಡಲ ಕುವರಿ ತಾಂ ಪಡೆದಂಗಜಶಿಶುಗೆಱೆಯುಲಿಟ್ಟ ಪಾಲ್ಪಡಿಕ್ಲೆಯವೊಲ್ (ಚಿಕವಿ. ೬-೨೫). ೬. ಹೇಳುವವನು ; ವಿವರಿಸುವವನು ; ನಿವೇದಕ : ನಿರೂಪಕರು ವಿಷಯವನ್ನು ಚೆನ್ನಾಗಿ ಮನದಟ್ಟು ಮಾಡಿಸಿದರು (ರೂಢಿ). ೭. [ಗಣಿತ] ಒಂದು ಜ್ಞಾತ ಅಥವಾ ಅಜ್ಞಾತ ಮೊತ್ತದ ಹಿಂದೆ ಬರುವ ಮತ್ತು ಆ ಮೊತ್ತವನ್ನು ಗುಣಿಸುವ ಸಂಖ್ಯೆ ; ಗುಣಾಂಕ ; ಗುಣಕ : "ಗುಣಕ, ಅವಚ್ಛೇದಕ ನಿರೂಪಕ, ನಿರ್ಧಾರಕ" (Coefficient. ಪಾರಿಶ. ೧೭). [ಸಂ.]

**ನಿರೂಪಕ್ರಿಯಾಪ್ರವೃತ್ತ** (ನಾ). ತತ್ತ್ವೋಪದೇಶವನ್ನು ಮಾಡುವವನು,—ಬೋಧಿಸುವವನು : ನಿರೂಪಕ್ರಿಯಾಪ್ರವೃತ್ತನೆಂಬೊನಾನೆಂತು ತತ್ವಜ್ಞನಾದೆನೆನ್ನ ಪೊರ್ದಿದ ಜನಂಗಳುಮಿಂತೆ ತತ್ವಜ್ಞರಕ್ಕೆಂದು ಖ್ಯಾತಿಭೋಜನ ಪಾನೋಪಕರಣ ಪೂಜೆಗಳನಪೇಕ್ಷಿಸದೆ ತತ್ತ್ವೋಪದೇಶಂಗೆಯ್ವಂ (ಚಾವುಂಪು. ೫) ; ಪರಿಣತವಯಸ್ಕನುಂ . . . ನಿರು[ರೂ]ಪಕ್ರಿಯಾಪ್ರವೃತ್ತನುಂ ಪವಿತ್ರಚಾರಿತ್ರನುಮೆಂಬ ಅಷ್ಟವಿಧೋತ್ಕೃಷ್ಟಗುಣಂಗಳಿಂದಂ ನೆಱೆದನಾಚಾರ್ಯನಕ್ಕುಂ (ಆಜಿಪು. ೧೧-೨ ವ). [ಸಂ.]

**ನಿರೂಪಣ** (ನಾ). ೧. ನೋಡುವುದು ; ಈಕ್ಷಣ ; ನೋಟ ; ದೃಷ್ಟಿ. ೨. ವಿವರಿಸುವುದು ; ವಿವರಣೆ : ಬಱಿಪೆನಮೋಘಮಿಂದುಪವನಾಂತರದಲ್ಲಿಗೆ ನಲ್ಲನಂ ತಗುಳ್ದಿರಿಪೆನನಾರತಂ ಸುರತರಾಗನಿರೂಪಣ ಕಾರಣಂಗಳಂ ತರಿಪೆಂ (ಕವಿಮಾ. ೨-೧೦೩) ; ಆ ಪುರಾಣಕ್ಕಂ ಲೋಕಾಕಾರಕಥನಮುಂ . . . ಚತುರ್ಗತಿಸ್ವರೂಪನಿರೂಪಣಮುಂ ತಪೋದಾನವಿಧಾನವರ್ಣನಮುಂ ತತ್ಫಲಪ್ರಾಪ್ತಿಪ್ರಕಟನಮುಮೆಂದಿಂತವಯವಂಗಳೆಂಟಕ್ಕುಂ (ಆದಿಪು. ೧-೪೨ ವ) ; ಶ್ರೀಪದಮಂ ಸಮುವೃತ್ತನಿರೂಪಣಸಮಯದೊಳೆ ತಂದು ಮೊದಲಿಟ್ಟಿಂ (ಛಂದೋಂಬು. ೨-೫೦) ; ಗುಣವಿವೇಕಂ ರೀತಿಕ್ರಮರಸನಿರೂಪಣಂ ಕವಿಸಮಯಯಮಿವಿಂತಯ್ದುವಿವಿದಱೊಳಧಿಕರಣಂಗಳ್ (ಕಾವ್ಯಾವ. ೧-೫). ೩. ನಿರ್ದಿಷ್ಟವಾಗಿ ಹೇಳುವುದು : ಸದಸದಾದಿ ವಸ್ತುಸ್ವರೂಪನಿರೂಪಣಪ್ರವೀಣ ಸಿದ್ಧಾಂತಾದಿ ಸಮಸ್ತ ಶಾ[ಸ್ತ್ರಾ]ಮೃತಪಾರಾವಾರಪಾರಗರುಂ (ಸೌಇಇ. XX, ೪೬-೨೫ ; 1072). ೪. ಹಿರಿಯರ ಮಾತು,—ಬೋಧನೆ : "ನಿರೂಪಂ,

ನಿರೂಪಣಂ, ನಿರೂಪಿತಂ, ಈ ೩ ಗುರುವಾಕ್ಯಂ" (ಕಾಶಕ್ಯ. ೨೯೦). **೫.** ಸಂಗೀತರೂಪದ ಕಥೆ ; ಕಾಲಕ್ಷೇಪ : ಗಾಯನರೂಪದ ಕೀರ್ತನೆಗಳನ್ನು ಮಧ್ಯೆ ಮಧ್ಯೆ ಹಾಡಿ, ಭಗವತ್ಕಥೆಯನ್ನು ಗೋಷ್ಠಿಗೆ ಶ್ರವಣ ಮಾಡಿಸುತ್ತಾರೆ . . . ಇಂತಹ ಸನ್ನಿವೇಶ ಸಮಾರಂಭಕ್ಕೆ 'ಕಾಲಕ್ಷೇಪ'ವೆಂದೂ 'ನಿರೂಪಣ' ಎಂದೂ . . . ಹೆಸರುಗಳಿವೆ (ಸಂಗೀಚಂ. ೬೮) ; ಮಹಾದೇವಭಾಗವತರು . . . ಗೀತೆಗಳು, ಸ್ವರಜತಿಗಳು . . . ಮತ್ತು ನಿರೂಪಣಗಳು (ಸಂಗೀತ ಕಥೆಗಳು) ಇವುಗಳನ್ನು ರಚಿಸಿದ್ದಾರೆ (ಸಂಗೀತ. ೪೫). [ಸಂ.]

**ನಿರೂಪಣಂಗೆಯ್** (ಕ್ರಿ). ವಿವರಿಸು ; ತಿಳಿಸು : ಕಾಲಸ್ವರೂಪ ನಿರೂಪಣಂಗೆಯ್ದುವರ ಶೋಕಪ್ರತ್ಯನೀಕಮನದಿರ್ಪಿದಂ (ಪಂರಾಮಾ. ೧–೮೪ ಪ) ; ತರಣಿಯುುದಯಿಸುವ ಸೊಗಮಂ ನಿರೂಪಣಂಗೆಯ್ವನಲ್ತೆ ಮುಂಬರ್ಪರುಣಂ (ಪಸ್ತವಂ. ೧–೩). [ನಿರೂಪಣ + ಕೆಯ್$_1$]

**ನಿರೂಪಣಾತ್ಮಕ** (ನಾ). ವಿವರಣೆಗಳಿಂದ ಕೂಡಿದುದು ; ವರ್ಣನಾತ್ಮಕವಾದುದು : ಮೊಘಲ್ ಕಲೆ ನಿರೂಪಣಾತ್ಮಕವೂ, ಸಾಹಿತ್ಯಕವೂ , ವಾಸ್ತವವೂ ಆಗಿತ್ತು (ಭಾರದ. ೫೨೯). [ಸಂ.]

**ನಿರೂಪಣೆ** (ನಾ). **೧.** ದೃಷ್ಟಿ ; ನೋಟ ; ನೋಡುವುದು. **೨.** ವಿವರಣೆ : ಅವನ ಕವಿವ್ಯಾಪಾರವಕ್ರತೆಯ ಅನೇಕ ಪ್ರಕಾರಗಳು 'ಧ್ವನ್ಯಾಲೋಕ'ದ ಮೂರನೆಯ ಉದ್ಯೋತದಲ್ಲಿ ವರ್ಣ . . . ಮೊದಲಾದ ವ್ಯಂಜಕಗಳಿಂದ ಧ್ವನಿ ಹೊರಡುವುದರ ನಿರೂಪಣೆಯನ್ನೇ ಅನುಸರಿಸಿ ಕಲ್ಪಿತವಾದಂತಿವೆ (ಭಾರಮೀ. ೮೪); ಘಟನೆಗಳ ನಿರೂಪಣೆ ಮತ್ತು ಪಾತ್ರ ಸೃಷ್ಟಿಗಳೇ ಅಲ್ಲಿನ ಮುಖ್ಯೋದ್ದೇಶ (ಭಾವಗೀ.೫); ಅದರ ನಿರೂಪಣೆಯು ಕೆಲವು ಪ್ರಸಿದ್ಧವಾದ ಅಲಂಕಾರವಿಶೇಷಗಳ ಪ್ರತಿಪಾದನೆಗೆ ಯಾವ ಬಗೆಯಿಂದಲೂ ಸಮಾನವಲ್ಲವೆಂಬುದೂ ಮನದಟ್ಟಾಗುವುದು (ಧ್ವನ್ಯಾಲೋ. ೩೯). **೩.** ಹೇಳಿಕೆ : "ಹೇಳಿಕೆ, ನಿರೂಪಣೆ"(Statement· ಪತ್ರಿನಿ. ೭೭). [ಸಂ. ನಿರೂಪಣ]

**ನಿರೂಪದಸ್ಕತ್ತು** (ನಾ). ಆಜ್ಞಾಪತ್ರಕ್ಕೆ ಮಾಡಲಾಗುವ (ಅಧಿಕಾರಿಯ) ಸಹಿ : ರಾಜ್ಯದ ಆದಾಯವ್ಯಯವನ್ನು ತಾವೇ ನಡೆಸುತ್ತ ದೊರೆಯನ್ನು ಮೂಲವಿಗ್ರಹದಂತಿಟ್ಟು ನಿರೂಪದಸ್ಕತ್ತುಗಳನ್ನು ಮಾತ್ರ ಮಾಡಿಸುತ್ತಲಿದ್ದರು (ಒಡೆಕ. ೫೬). [ನಿರೂಪ + ದಸ್ಕತ್ತು (< ದಸಕತ್ತು)]

**ನಿರೂಪಲೇಖ** (ನಾ). ಬರೆಹ ರೂಪದ ಆಜ್ಞೆ ; ಆಜ್ಞಾಪತ್ರ : ಈ ಭಾಗದಿಂದ ಕೊಡಲಾಗಿರುವ ಅಧಿಕಾರಗಳಲ್ಲಿ . . . ನಿರೂಪಲೇಖವೂ ಸೇರಿ ಯಾವ ನಿರ್ದೇಶವನ್ನಾಗಲಿ . . . ಸಾದರು ಮಾಡಲು ಶಕ್ತರಾಗಿ ಇರತಕ್ಕುದು (ಭಾಧಾನ. ೧೯). [ನಿರೂಪ + ಲೇಖ]

**ನಿರೂಪಿತ** (ಗು). **೧.** ನೋಡಿದ ; ಈಕ್ಷಿಸಿದ. **೨.** ಕಂಡುಹಿಡಿದ ; ಶೋಧಿಸಿದ. **೩.** ನಿಯುಕ್ತ ಮಾಡಲಾದ ; ಆಯ್ಕೆಗೊಂಡ. **೪.** ವಿವರಿಸಿದ ; ನಿರೂಪಿಸಲಾದ : ವಿಕಟವೇದಾಗಮನಿರೂಪಿತ ಸುಕರನಾನಾರ್ಥಂಗಳಿಂ ಗೆಲಿದಕುಟಿಲಾತ್ಮನು ಮಂಚಣಾಚಾರ್ಯನು ಮೆಚ್ಚುತಿರಲು (ಬಸವು. ೫೩–೬೦). **೫.** ಹೇಳಿದ ; ತಿಳಿಸಿದ. (ನಾ). **೬.** ವಿವರಿಸಿದುದು ; ವಿವರಣೆಯಾದುದು : ಪರಮಪುರಾಣ ಕವೀಶ್ವರ ನಿರೂಪಿತಂಗಳ್ ವಿಚಿತ್ರಮಾರ್ಗಯುತಂಗಳ್ (ಕಾವ್ಯಾವ. ೪೯೯). **೭.** ಹಿರಿಯರ ಮಾತು ; ಬೋಧನೆ : "ನಿರೂಪಂ, ನಿರೂಪಣಂ, ನಿರೂಪಿತಂ, ಈ ೩ ಗುರುವಾಕ್ಯಂ" (ಕಾಶಕ್ಯ. ೨೯೦). [ಸಂ.]

**ನಿರೂಪಿಸು** (ಕ್ರಿ). **೧.** ಹೇಳು ; ವಿವರಿಸು : ಎನ್ನಯ ತೀವ್ರಶಾಪವಾಙ್ನಿಹಿಮೆಯಿನಾತನಂದು ಕಡಿದಿಕ್ಕಿದ ಪೆರ್ವುರನಂತೆಪೋಲದೇನಹಹ ನಿರೂಪಿಪೆಂ ಕೆಡೆದು ಪೊಂದಿದನಾಯಿಳೆಯುಲ್ಲಚೇತನಂ(ಶಾದಂಉ. ೫೭೫) ; ಸಂಸ್ಕೃತಕ್ಕೆ ಪುಟ್ಟಿದ ಕನ್ನಡಮಂ ನಿರೂಪಿಸುವೆಂ (ಶಮದ. ೨೫೩ ವೃತ್ತಿ) ; ಮಾವೆಲ್ಲಿ ಫಲಂದೋಱುವುದೀ ಕಾಲದೊಳುಲ್ಲಸದಿಂದ ನಿರೂಪಿಸೆನಲ್ಕಗುತುಸಿರಿದನಿಂತೆಂದು (ಜಯಕಾ. ೨–೩೧) ; ಈ ಭವದ ಕೋಟಲೆಗೆ ತವ ಮಹಾಸ್ಥಾನದೊಳಗಿರ್ಪ ಘನಮಹಿಮರುಂ ಬಹರೊ ಪರಮಾನಂದ ನಿತ್ಯಸುಖದಿಂದಿರ್ಪರೋ ನಿರೂಪಿಸವೇಳ್ಕುಂ (ಚಿಬಪು. ೩–೧೭) ; ಎಲೆ ದೇವ ಬಿಜಯಂಗೈದ ಕಥನವನೆನಗೆ ನಿರೂಪಿಸಬೇಹುದು (ಜೈಮಿಭಾ. ೧೪–೨೮) ; ಇಂದೂ ಹೇಳಲಾಗುವ ಕೆಲವು ಮಹಿಮೆಗಳನ್ನು ಮಾತ್ರ ಇಲ್ಲಿ ಸಂಕ್ಷೇಪವಾಗಿ ನಿರೂಪಿಸಿದೆ (ಜಗದಾ. ೧೬೭). **೨.** ಅಪ್ಪಣೆಮಾಡು ; ಆಜ್ಞೆಮಾಡು ; ಆಜ್ಞಾಪಿಸು : ಕಟ್ಟದಿರೊಳಂತೊಮ್ಮೆ ಎಮ್ಮನು ಪಟ್ಟಿಮಂಚವನೇಱು ಎಂದಿರಿ ನಟ್ಟ ಶೂಲವನೇಱುಯೆಂದು ನಿರೂಪಿಸಿದಿರೀಗ (ಬಸವು. ೩೯–೪೮) ; ಎಮಗೆ ಬೆಸನೇನುಂಟು ಜೀಯ ನಿರೂಪಿಸುವುದೆನಲು (ಕುಪ್ಯಾಅ. ಓರಿಇ. ೨೫–೨೧) ; ನಿರೂಪಿಸು [ಪಾಠಾಂ. ಸಿ]ಜೀಯ ಸಂಗರಕೆ (ತೊರರಾ. ೩–೫–೧೨) ; ಬೆಸಗುಡು ದೈತ್ಯಾಧೀಶ್ವರ ನೀ ನಿರೂಪಿಸಲಾನು ವಿುತಿಯ ಮಿಾಱುವನೆ (ಪೋಹತ. ೩೩–೩೦). **೩.** ಒಪ್ಪಿಸು ; ನೇಮಿಸು ; ವಹಿಸು : ಮಗಂ ಪುಟ್ಟದೊಡಾತಂಗೆ . . . ಪಟ್ಟಂಗಟ್ಟಿ ಸಮಸ್ತರಾಜ್ಯಭಾರಮೆಲ್ಲಮಂ ನಿರೂಪಿಸಿ (ಪದ್ಮಾರಾ. ೭೫–೨೪). **೪.** ರಚಿಸು ; ಕಟ್ಟು : ಮಲ್ಲಣಾರ್ಯಂ ನಿರೂಪಿಸಿದನೀ ಭಾವಚಿಂತಾರತ್ನಮಂ (ಭಾಪಚಿಂ. ೯–೬೦). [ನಿರೂಪ + –ಇಸು$_3$]

**ನಿರೂಪು** (ನಾ). **೧.** ರೂಪ ಅಥವಾ ಆಕಾರಗಳಿಲ್ಲದಿರುವುದು ; ನಿರಾಕಾರ : ರೂಪಿಂಗೆ ಕೇಡುಂಟು ನಿರೂಪಿಂಗೆ ಕೇಡಿಲ್ಲ ರೂಪು ನಿರೂಪಿನೊಳೊಡಗೂಡುವ ಪರಿಯೆಂತು ಹೇಳಾ (ಅಪಚಂ. ೨೭೬–೧೨೬೬) ; ಹಿರಿದಕ್ಕೆ ಹಿರಿದು ಕಿಱದಕ್ಕೆ ಕಿಱದು ವಾಙ್ಮನಕ್ಕಗೋಚರ ಕೂಡಲಸಂಗಮದೇವ ಸ್ವರೂಪು ಪ್ರಸಾದ ನಿರೂಪು ಲಿಂಗೈಕ್ಯ (ಬಸವ. ೮೩೪) ; ತನುವಿಲ್ಲ ಬಸವಯ್ಯಂಗೆ . . . ಸಂಗಯ್ಯನಲ್ಲಿ ಬಸವಯ್ಯನ ರೂಪು ನಿರೂಪಾದ ಬಳಿಕ (ನೀಲವ.೨೦–೫೯) ; ಪರಾತ್ಪರಮೂರ್ತಿಯ ಶರೀರ ಚಿದಾಕಾಶ ವರ್ಣ ನಿರೂಪು (ರುದ್ರಭಾ. ೮೩). **೨.** ಅಪ್ಪಣೆ ; ಆಜ್ಞೆ : ಲಿಂಗಪ್ರತಿಷ್ಠೆಯ ಮಾಡೆಂದು ಎನಗೆ ನಿರೂಪಿಸುತಿರ್ದ ಕಾರಣ ಮಾಡುತ್ತಿರ್ದೆನಲ್ಲದೆ ಎನಗೆ ಬೇಱೆ ಸ್ವತಂತ್ರ ಉಂಟೆ ಹಿಂದೆ ನೀವು ಕೊಟ್ಟ ನಿರೂಪು ಹುಸಿಯಾದರೆ ಇನ್ನು ಮುಂದೆ ಸ್ವಯವಪ್ಪಂತೆ ನಡಿಸಾ (ಸಿದ್ಧವ. ಕ.೬೨–೧೯೯). **೩.** ಆಜ್ಞಾಪತ್ರ ; ನಿರೂಪ (?) : ಥಿಟದೊಳಪ್ಪ ಹೆ ನಿರೂಪುಗಳಾಗಿ ಮಡಗಿಹವು (ಕೃಷ್ಣವಿ. ೨–೪೧). [< ಸಂ. ನಿರೂಪ]

**ನಿರೂಹ** (ನಾ). **೧.** ದೇಹದೊಳಗಿನ ದೋಷವನ್ನು ಹೋಗಲಾಡಿಸಲು ಪ್ರಯೋಗಿಸುವ ಒಂದು ವಿಧವಾದ ಬಸ್ತಿಕ್ರಿಯೆ; ವಿರೇಚಕ ಕ್ರಿಯೆ. **೨.** ತರ್ಕ ; ಚರ್ಚೆ ; ವಾದವಿವಾದ. **೩.** ಅಧ್ಯಾಹಾರ ಪದಗಳಿಲ್ಲದ ವಾಕ್ಯ. **೪.** ನಿಶ್ಚಯ. [ಸಂ.]

**ನಿರೂಹಣ** (ನಾ). [ವೈದ್ಯ] ವಿರೇಚನವಾಗುವಂತೆ ಮಾಡುವಿಕೆ ; ವಿರೇಚಕ ಕ್ರಿಯೆ : ನಿರೂಹಣಂ ಮಾಟಿಕ್ಕೆ ಸರ್ವಶೂಲಾಪಹರಂ (ಅಶ್ವಶಾ. ೧೧–೫) ; (ಶೋಧನವು) ನಿರೂಹಣ, ವಮನ, ವಿರೇಕ, ನಸ್ಯ, ರಕ್ತಮೋಕ್ಷಂಗಳೆಂದೈದು ತೆರನಾಗಿರುವುದು (ಸಕವೈ. ೧೮). [ಸಂ.]

**ನಿರೂಹಣಕ್ರಿಯೆ** (ನಾ). = ನಿರೂಹಣ : ಸರುಷಪಮಂ ಘೃತಮಂ ನಾಗರಮಂ . . . ವಿಸ್ತರದಿಂ ತ್ರಿಫಲಾರಸದೊಳ್ ನಿರೂಹಣಕ್ರಿಯೆಗೆ ಯೋಜಿಪುದು (ಅಶ್ವಶಾ. ೧೦–೧೬). [ನಿರೂಹಣ + ಕ್ರಿಯೆ]

**ನಿರೂಹಣಗೆಯ್** (ಕ್ರಿ). ವಿರೇಚನವಾಗುವಂತೆ ಮಾಡು ; ಭೇದಿ ಮಾಡಿಸು : ಸರುಷಪಮಂ ಸೈಂಧವಮುಮನರೆದೆಳ್ಳೆಣ್ಣೆಯೊಳೆ ಕೂಡೆ ಪೊರ್ಕುಳ ಕಱು(ಳಿ)ಯೊಳ್ ಬೆರಸಿ ನಿರೂಹಣಗೆಯ್ವುದು ತುರಗಕ್ಕದು ಸರ್ವ ಶೂಲನಿರ್ಮೂಲಕರಂ (ಅಶ್ವಶಾ. ೧೧–೬). [ನಿರೂಹಣ + ಕೆಯ್$_1$]

**ನಿರೂಹದ್ರವ್ಯ** (ನಾ). ವಿರೇಚನವಾಗುವಂತೆ ಮಾಡುವ ವಸ್ತು; ವಿರೇಚನಕ್ರಿಯೆಗೆ ಸಹಾಯಕವಾದ ಔಷಧಿ : ದಾರು = ದೇವದಾರು, ರಾಸ್ನಾ = ರಾಸ್ನೆ . . . ತ್ರಿವೃತಾ = ತಿಗಡೆ, ಎಂಬಿವು ನಿರೂಹಣಾಸಿ = ನಿರೂಹದ್ರವ್ಯಂಗಳು (ವೈವಿ. ೬೦). [ನಿರೂಹ+ದ್ರವ್ಯ]

**ನಿರೋಗ** (ಗು). ೧. ರೋಗವಿಲ್ಲದ; ಆರೋಗ್ಯಕರವಾದ; ಆರೋಗ್ಯದಿಂದ ಕೂಡಿದ. (ನಾ). ೨. ರೋಗನಿವಾರಣೆ, —ಪರಿಹಾರ : ಶೂಲಿ ಮಂತ್ರವಜಿಡೆಯಾದಡೆ ಶೂಲೆ ರೋಗ ನಿರೋಗನಹುದು (ಬಸಪು. ೪೮–೨೮). [ಸಂ.]

**ನಿರೋಗಿ**(ನಾ). ೧. ರೋಗವಿಲ್ಲದುದು; ಆರೋಗ್ಯಕರವಾದುದು; ಆರೋಗ್ಯದಿಂದ ಕೂಡಿದುದು : ನಿರೋಗಿಯೂ ಪುಷ್ಟವೂ ಆಗಿರುವ ಪಶುವಿನ ಮಾಂಸವು ಎಲ್ಲಕ್ಕೂ ಹೆಚ್ಚಿಗೆ ಬಲು ಪುಷ್ಟಿಕಾರಕವಿರುತ್ತದೆ (ಮುಂಬಯಿ. ೫–೧೬೫); ಪ್ರಕೃತಿ ಅಂತೂ ಎಂದಿನಿಂದಲೂ ನಿರೋಗಿ (ಅನ್ನ. ೧೯೦); ನಿರೋಗಿಯಾದ ಮನಸ್ಸು ಇಷ್ಟವಾದ, ಯೋಗ್ಯವಾದ ಮತ್ತು ಸಮರ್ಥವಾದ ರೀತಿಯಲ್ಲಿ ವ್ಯವಹರಿಸಬಲ್ಲ ಶಕ್ತಿಯುಳ್ಳದ್ದಾಗಿದೆ (ಮನೋರೋ. ೧೪). ೨. ರೋಗವಿಲ್ಲದವನು; ಆರೋಗ್ಯಶಾಲಿ : ಚಿರಂಜೀವಿ ಎಂದಡೆ ನಿರೋಗಿ ಚಿರಂಜೀವಿ ಎಂದಡೆ ಸಶಕ್ತ ಚಿರಂಜೀವಿ ಎಂದಡೆ ಬಹುಕಾಲ ಬದುಕುವವನು (ಸಿದ್ಧಪ. ಕ. ೪೦–೧೨೬); ಮಿಗೆ ವಾತಗುಲ್ಮಪರಿವೃತರಾಗಿಯುಂ ನಿರೋಗಿಗಳು . . . ಕುಲಗೋತ್ರ ಮಧ್ಯಸ್ಥಿತಿಗಳಾಗಿಯುಂ ಸೊಗಯಿಪೇಕಾಕಿಗಳೆನಿಸಿ ಶಿವನನೊಲಿಸಿದ ಮುನೀಶ್ವರರು ಕಣ್ಗೆಸೆದರು (ಹಚಕಾ. ೬–೩೬); ಚೆನ್ನಾಗಿ ನೀವನುನಯದಿ ನೋಡಲು ರೋಗಿಯಾದವನುಂ ನಿರೋಗಿಯೆನಲ್ಕೆ ಬಾಳ್ವನಲಾ (ಬಸಪು. ೪೭–೬೫); ರಾಗಿಯನು ಉಂಬುವ ನಿರೋಗಿ ಎಂದೆನಿಸುವನು (ಸರ್ವಜ್ಞ. ೨೦೨೨); ನನ್ನ ಮಾತು ಕೇಳಿದ್ದರೆ, ಅವರು ಸಂಪೂರ್ಣ ನಿರೋಗಿಗಳಾಗುತ್ತಿದ್ದರೆಂದು ನನಗೆ ವಿಶ್ವಾಸವಿದೆ (ಪೇಕನ್ಯೆ. ೨೮).
[ಸಂ. ನಿರೋಗಿನ್]

**ನಿರೋಧ್** (ನಾ). (ಸಂತಾನ ನಿಯಂತ್ರಣಕ್ಕಾಗಿ) ಸಂಭೋಗ ಸಮಯದಲ್ಲಿ ಗಂಡಸರು, ಗರ್ಭನಿರೋಧಕ ಸಾಧನವಾಗಿ ಬಳಸುವ, ರಬ್ಬರಿನಿಂದ ಮಾಡಿದ ಲಿಂಗಕವಚ : ಗಂಡಸರು, ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುವುದಕ್ಕಿಂತ ನಿರೋಧ್ ಬಳಸುವುದು ಹೆಚ್ಚು ಸುಲಭ (ರೂಢಿ). [< ನಿರೋಧ]

**ನಿರೋಧ** (ನಾ). ೧. ಕಟ್ಟು; ಬಂಧನ; ತಡೆ : ಜನನ ಮರಣ ತಾಗು ನಿರೋಧ ಉಳ್ಳನ್ನಕ್ಕರ ನೀವೆಂತು ಲಿಂಗವಪ್ಪಿರಿ ಹೇಳಿರಣ್ಣಾ (ಚೆನ್ನಪ. ಕ. ೧೬೯–೭೬೮). ೨. ತಡೆ ಹಿಡಿಯುವುದು; ಪ್ರತಿಬಂಧ : ಮಲಮೂತ್ರಗಳ ನಿರೋಧ, ಅತ್ಯಂತ ಆಹಾರ, ಜಾಗರಣ . . . ಶೋಕ, ಇವಜಿಂದಲೂ ವರ್ಷಾಕಾಲದಿಂದಲೂ ವಾತಪ್ರಕೋಪವಹುದು (ವೈದ್ಯಸಾ. I, ೨೧). ೩. ಮುಚ್ಚುವುದು; ಆವರಣವನ್ನುಂಟು ಮಾಡುವುದು. ೪. ನಿಗ್ರಹ; ಹತೋಟಿ; ಅಂಕೆ; ಅಧೀನ : ನಿರೋಧಮುಂ ನಿಃಪರಿಗ್ರಹಮುಂ ತಪೋವೃತ್ತಿಯೊಳ್ (ಎಇ. XIII, ೩೩೨–೪೪; 929); ಈ ತೆಜಿದಿಂದಮಿಾ ತೆಜದ ಜೀವಮನೋವುವೀ ನಿರೋಧದಿಂದೀ ತೆಜಿದಿಂದ್ರಿಯಂಗಳನಡಂಗಿಪುದೀ ಪರಿಣಾಮ ಶುದ್ಧಿಯಿಂದೀ ತೆಜಿದುದ್ಧತಾಘನಿಕರಂ ಕಿಡುಗುಂ (ಜೀಪಸಂ. ೧೮೬–೪); ತೆರಳುವ ಕುಕ್ಕುಟಾಸನದ . . . ಏಕಪಾರ್ಶ್ವದುಬ್ಬರದ ನಿರೋಧಮಂ ತಳೆದು ತೀವ್ರತಪಂ ತನುವೊತ್ತು ಬಂದುದು (ಧರ್ಮನಾ. ೨–೯೪). ೫. ವಿರೋಧ; ವೈರ : ಎನ್ನಯ ಕುಮಾರಿಯರ ಮದುವೆಯಾಗೆಲ್ಲಾ ನಿರೋಧಮಂ ಬಿಡುವೆನು (ಹಚಕಾ. ೮–೨೧). ೬. ಧ್ವಂಸಪಡಿಸುವುದು; ನಾಶಗೊಳಿಸುವುದು; ನಾಶ : ತೊಡಗಿದರೊಂದುಲೆಗ್ಗೆಗೆ ವಿಶೇಷ ವಿರೋಧ ನಿರೋಧ ಗಾಢದಿಂ ಕಡುದನಿ ಪುಟ್ಟೆ ನಿರ್ಜನಿಜಾಳೆಂದು ನಿಟಿಲ್ಲಿಳಿಲೆಂದು (ಹಮ್ಮಿರ. ೩–೪೬); ಸ್ಕಂಧಪಂಚಕವು ಆತ್ಯಂತಿಕವಿನಾಶವಾಗುವುದಕ್ಕೆ ನಿರೋಧವೆಂದು ಹೆಸರು (ಹಿಂದಸಾ. ೩೨). ೭. ನಿರಾಶೆ; ಆಶಾಭಂಗ : ‘ನಿರೋಧನಿಬಂಧನ’ ಪರಾ. ೮. ನೋವು; ದುಃಖ; ವ್ಯಥೆ; ಸಂಕಟ : ಭೂಭಾರಮಂ ಪಿಂಗಿಸಲು ದಯಿಸಿದಂ ಚಕ್ರಿ ನಿಮ್ಮಿನ್ನು ಭರಾಕ್ರಾಂತಿನಿರೋಧಂ ಮಾಣ್ದುದು (ಜಗವಿ. ೩–೪); ಉಳ್ಳಿಯಿಂ ಕಿನ್ನರಯ್ಯಂಗಾದ ಮುಳಿಸುವಂ ಉಳ್ಳಿಯಿಂದವೆ ತೀರ್ಚಿ ಕಳೆವುದು ನಿರೋಧವಂ (ಬಸರ. ೧೧–೯೪); ಇದಜಿ ಕೆಳಗೆ ಕವಿವ ನೆಳಲೊಳಗಾವನಿರ್ದನಾತಂಗೆ ತಾಂ ತವಿಲೆಡರು ಬಡತನ ನಿರೋಧ[ಪಾಠಾಂ. ನಂ ರೋಗ, ನಂ ಲೋಭ]ವಪಕೀರ್ತಿ . . . ಹರೆವುದು(ಹಚಕಾ. ೭–೧೦); ಅಡಿಗೆಡೆದನಾ ಭೀಮನಿತ್ತಲು ಕಡುನಿರೋಧದ ಹಿಡಿದು ತಾನೇ ನಡೆದು ಬಂದನು ಧರ್ಮಸುತನಾ ಕೊಳನ ಪಥವಿಡಿದು (ಕುಪ್ಯಾಅ. ೨೩–೩೦). ೯. = ನಿರೋಧ್. ೧೦. = ನಿರೋಧರತಿ : ಈರ್ವರಿಗೂ ರತಿಭಾವ ಮುಪ್ಪುದು. ಅದು ನಾಲ್ಕು ಪರಿ. ನಿಜ ನಿರೋಧ ಪರಾಧೀನ ಸ್ವಾಧೀನ (ಕಾಮಶಾ. ೨೩೧).

ನಿರೋಧದವಳು = ನಿರೋಧವೆಂಬ ರತಿಭಾವವನ್ನುಳ್ಳವಳು : ಪುರುಷನೊಲವು ಮಿಗಲಾಲಿಂಗನಂಗೆಯ್ಯಲು ಅಲುಗಿ ಬಿಸಿ ಬಿಸಿಯತನು ಜಲಮನುಂಟಾಗಿ ಮುಂಚಲಿಸಿ ತೋರ್ಪಳೆ ನಿ[ಪಾಠಾಂ. ವಿ]ರೋಧದವಳಬಲೆ (ಜನವ. ೮–೩೪). [ಸಂ.]

**ನಿರೋಧಂಗೊಳ್** (ಕ್ರಿ). ವ್ಯಥೆಪಡು; ಸಂಕಟಗೊಳ್ಳು : ಮಗನ ಕರುಣಾಸ್ಯಮಂ ಚಂದ್ರಚೂಡಂ ಕಂಡು ನಗುತೆತ್ತಿ ತಕ್ಕೈಸುತಂ ನಿರೋಧಂಗೊಂಡು (ಬಸರ. ೧–೫೪). [ನಿರೋಧ+ಕೊಳ್$_1$]

**ನಿರೋಧಂಬಡಿಸು** (ಕ್ರಿ). ಅಡ್ಡಿಪಡಿಸು; ತಡೆಯನ್ನುಂಟುಮಾಡು; ಕಾಡು : ಒಡಲ ಹಮ್ಮಿನ ಯೋಗಿಗಳನವಗಡಿಸಿ ಕಾಡುವ ಮಾಯೆಯಂತಿರೆ ಕಡುನಿರೋಧಂಬಡಿಸಿದನು ಖಳನಚ್ಯುತನ ಹಿಡಿದು (ನಿಭಾಗ. ೧೦–೭–೯). [ನಿರೋಧ+ಪಡಿಸು]

**ನಿರೋಧಕ** (ಗು). ೧. ಅಡ್ಡಿಯನ್ನುಂಟುಮಾಡುವ; ಪ್ರತಿಬಂಧಕವಾದ : ವಿಟಮಿನ್ ‘ಡಿ’ :—ಇದನ್ನು ರಿಕೆಟ್ಸ್ ನಿರೋಧಕ ಸತ್ವವೆಂದೂ ಸೂರ್ಯಪ್ರಕಾಶ ವಿಟಮಿನ್ (Sunshine Vitamin) ಎಂದೂ ಕರೆಯುವರು (ಗೃಹವಿ. ೩೦). (ನಾ). ೨. ಅಡ್ಡಿಯನ್ನುಂಟುಮಾಡುವಂತಹುದು; ಪ್ರತಿಬಂಧಕವಾದುದು : ಕರುಣಾರಸಕ್ಕೆ ಮಿಗೆ ಹಾಸ್ಯರಸಂ . . . ರೌದ್ರರಸಕ್ಕಮದ್ಭುತಂ ವೀರರಸಕ್ಕೆ ಭಯಾನಕಂ ನಿರೋಧಕಮ[ಪಾಠಾಂ. ವಿರೋಧಿಗಳ]ಕ್ಕುಂ (ಕಾವ್ಯಾವ. ೮೩೧). ೩. ತಡೆಯುವವನು; ಅಡ್ಡಿಪಡಿಸುವವನು. ೪. ಬಂಧನದಲ್ಲಿಡುವವನು; ಸೆರೆಹಿಡಿದು ನಿರ್ಬಂಧಿಸುವವನು. [ಸಂ.]

**ನಿರೋಧರತಿ** (ನಾ). [ಕಾಮಶಾ] ನಿಜ, ನಿರೋಧ, ಪರಾಧೀನ ಮತ್ತು ಸ್ವಾಧೀನವೆಂಬ ನಾಲ್ಕು ಬಗೆಯ ರತಿಗಳಲ್ಲಿ ಒಂದು : ಆಲಿಂಗನ ಚುಂಬನಮಾಡದ ಮುನ್ನವೆ ನೋಡಲ್ಕೆ ಕ್ರೋಧದಿಂ ಮುನ್ನವೆ ಉಷ್ಣದಿಂ ಪಿರಿದುಮಾಗಿ ಸ್ರವಿಸಿದೊಡೆ ನಿರೋಧರತಿ (ಕಾಮಶಾ. ೨೩೧).
[ನಿರೋಧ+ರತಿ$_1$]

**ನಿರೋಧಸಮಾಧಿ** (ನಾ). ಬಾಹ್ಯವಸ್ತುಗಳನ್ನು ಗಮನಿಸದಂತೆ ಮನಸ್ಸನ್ನು ನಿಗ್ರಹಿಸಿ ಧ್ಯಾನಮಗ್ನನಾಗುವಿಕೆ : ಎಂದಿಗೆ ಗಡಾ ನಿರೋಧಸಮಾಧಿಯಲಿ ವಿಹರಿಪನೊ ಸುಗತನವನ ದೇಹಕ್ಕೆ ನೆಮ್ಮದಿಯಂದೆ (ವೈಶಾಖಿ. ೬೬–೪೫). [ನಿರೋಧ+ಸಮಾಧಿ]

**ನಿರೋಧಿಸು** (ಕ್ರಿ). ನಿರ್ಬಂಧಿಸು; ನಿಗ್ರಹಿಸು; ತಡೆಹಿಡಿ; ಹತೋಟಿಯಲ್ಲಿಡು : ದಕ್ಷಿಣವಾಮನಾಸಾರಂಧ್ರನಿರ್ಗಮನಾಗಮನ

ಮುಳ್ಳ ವಾಯುಗಳಾದ ಇಡಾ ಪಿಂಗಳಗಳ ಗತಿಗಳಂ ನಿರೋಧಿಸಿ (ವಿವೇಕ. ೯೭); ಪಿರಿದಸದಳವು ಮನವ ನಿರೋಧಿಸಲು (ಗಗತಾ. ೧೩-೧೦); ಮನುಷ್ಯ, ಪಶು, ಸಕಲ ಪದಾರ್ಥಗಳೂ ಭೂಮಿಗೆ ಅಂಟಿಕೊಂಡು ಭಾರವಾಗಿರಲು ಕಾರಣವೇನು ? ನಿರೋಧಿಸಲಶಕ್ಯವಾದ ಒಂದು ಬಲವು ಅವುಗಳನ್ನು ಸಂತತವೂ ಆಕರ್ಷಿಸುತ್ತಿರುವುದೇ (ಜ್ಯೋತಿರ್ವಿ. ೨೮೨).

[ನಿರೋಧ + -ಇಸು₃]

**ನಿರೋಷಿ** (ನಾ). ಕೋಪವಿಲ್ಲದವಳು : ದಾಸಿ ರಜಕಕ್ಸ್ಯೈರಕಸ್ತ್ರೀ . . . ನಿರೋಷಿ ಸೂಚನೆಗೂಡಿ ಗುಣಮೆಜಿವಾ ಸತಿಯರನು ಪೂಡು ದೂತಿಯನು (ಜೀವಂಜ.೧೭-೮೫). [ಸಂ. ನಿರೋಷೀ]

**ನಿರೋಷ್ಠ** (ನಾ). = ನಿರೋಷ್ಠ್ಯ ೧ : ಅಕ್ಷರಬಿಂದುಚ್ಯುತಕಂ ದ್ವ್ಯಕ್ಷರಿಯೇಕಾಕ್ಷರಂ ನಿರೋಷ್ಠ [ಪಾಠಾಂ.ಷ್ಠ್ಯ]ಮುತಾಲವ್ಯಾಕ್ಷರಮೆನೆ ನಿಜನಾಮ ಸದ್ವಕ್ಷಂ ಲಕ್ಷಣಮದಾಗೆ ನೆಗಟ್ಟುಂ ಪಲವುಂ (ಕಾವ್ಯಾವ.೫೭೦).

**ನಿರೋಷ್ಠಕಂದ** = [ಕಾವ್ಯಮಿಾ] ಓಷ್ಠ್ಯಾಕ್ಷರಗಳನ್ನು ಬಳಸದೆ ರಚಿಸಿದ ಕಂದಪದ್ಯ ; ಚಿತ್ರಕವಿತ್ವದ ಕಂದ : ನಿರೋಷ್ಠ ಕಂದ॥ ಖರಕಿರಣನ ತನಯನ ಖರಕಿರಣಕರ ದಶರಥನ ನಳನ ಜಳಜಜನ ಧರಾವರನ ಶಶಧರನ ಚಕ್ರನ ಚರಿತೆಯೆ ನಿಜಚರಿತಮೆನಿಸಿದಾತನನೊಲ್ಲುಂ (ಸುದತಿ. ೬-೧೩). [ಸಂ.]

**ನಿರೋಷ್ಠ್ಯ** (ನಾ). ೧. ಶಬ್ದವನ್ನು ಉಚ್ಚರಿಸುವಾಗ ತುಟಿಯ ಸಹಾಯವನ್ನು ಪಡೆಯದೆ ಇರುವುದು. ೨. [ಕಾವ್ಯಮಿಾ] ಚಿತ್ರಕವಿತ್ವದಲ್ಲಿ ಒಂದು ಪ್ರಕಾರ; ಉಕಾರ ಬಕಾರ ಹಾಗೂ ಪಕಾರಗಳನ್ನು ಬಳಸದೆ ಬರೆದ ಪದ್ಯ: ನರನಾಯಕನಂ ನಿಂದಾನಿರದೀಗಳೆ ಕಾಂತನಂ ನೆರೆದೇನದಱಿಂದಿಲ್ಲಾ ನೆರೆದಿರ್ದಾಗೆನಾಗೆನೆ (ನಿರೋಷ್ಠ್ಯಂ) (ಕವಿರಾ. ೨-೧೨೫) ; ಇವುಗಳಲ್ಲಿ ನಿರೋಷ್ಠ್ಯ . . . ಹಾರಬಂಧ, ಮುರಜಬಂಧ ಮುಂತಾದ ನಾನಾವಿಧಗಳುಂಟು (ಕೈಪಿಡಿ. ೨೫೪). [ಸಂ.]

**ನಿರೋಹಣ** (ನಾ). ಮರದಲ್ಲಿ ಬೆಳೆದುದು; ಹೂವು; ಪುಷ್ಪ : ನಿವ್ಯಾರ್ಕುಳಮಿಾಗಳಲ್ಲಿ ನೆಲಸಿತ್ತ ಜಡಾತ್ಮಕರೂಪಮಾಗಿ ರತ್ನಾಕರಸಂಕುಳಂ ವಿಪಿನವೃಕ್ಷವಿವರ್ಜಿತಮಾ ನಿರೋಹಣಾನೀಕಮೆನಲ್ಕೆ ರನ್ನವಸರಂ ಬಗೆಗಚ್ಚರಿಯಂ ನೆಗಟ್ಟುಗುಂ (ಮಲ್ಲಕಾ. ೪-೬೩೭). [ಸಂ.]

**ನಿರ್ಋತಿ** (ನಾ). ೧. ಅಳಿವು ; ನಾಶ ; ಕ್ಷಯ. ೨. ಮೃತ್ಯು ದೇವತೆ. ೩. ನೈರುತ್ಯ(ದಿಕ್ಕು). ೪. ಅಷ್ಟದಿಕ್ಪಾಲಕರಲ್ಲಿ ಒಬ್ಬ ; ನೈರುತ್ಯದಿಕ್ಕಿನ ಒಡೆಯ,—ಅಧಿಪತಿ : "ನಿರ್ಋತಿಃ—ದಿಕ್ಪಾಲಕ"(ಕಾಶಕ್ಯ. ೨೪೭). ೫. ಬಡತನ; ದಾರಿದ್ರ್ಯ: "ಅಲಕ್ಷ್ಮೀಃ—ನಿರ್ಋತಿ ೨ ಅಭಾಗ್ಯದ ಹೆಸರುಗಳು, ನಿರ್ಭಾಗ್ಯತನ" (ಸಿದ್ಧಾಂತಿ. ೭೫). [ಸಂ.]

**ನಿರ್ಕಲಿಸು** (ಕ್ರಿ). ಅತಿಶಯವಾಗಿ ಬೆರೆತುಕೊಳ್ಳು; ಸಂಪೂರ್ಣವಾಗಿ ಸೇರಿಕೊಳ್ಳು : ಪೊರ್ಕುಳಿಯಾಡಿದುವಲರೊಳ್ ನಿರ್ಕಲಿಸಿದವಟ್ಟುಬಂಡಿನೊಳ್ ತನಿಗಂಪಿಂದಟ್ಟಿಮೆವಟ್ಟುವು ಕುಡಿಯೊಳ್ ದರ್ಕುಂದಲೆವಾಯ್ದುವಲ್ಲಿ ಮದಮಧುಪಂಗಳ್ (ಮಲ್ಲಿಪು. ೧೪-೧೪೪).

[ನಿರ್- + ಕಲಿಸು₂ (<ಕಲಸು₁)]

**ನಿರ್ಕುಳಿಗೊಳ್** 'ನೀಳ್ಕುಳಿಗೊಳ್' ನೋ.

**ನಿರ್ಗ** 'ನಿಗ್ಗರ' ನೋ.

**ನಿರ್ಗಂಧ** (ಗು). ೧. ವಾಸನೆಯಿಲ್ಲದ; ಗಂಧರಹಿತವಾದ: 'ನಿರ್ಗಂಧಕುಸುಮ' ಸರಾ. (ನಾ). ೨ = ನಿರ್ಗಂಧವಾಯು : ಬೇಳೆಯು ಕಾಳುಗಳಲ್ಲಿ ನಿರ್ಗಂಧದ ಪ್ರಮಾಣವು ಹೆಚ್ಚಿರುತ್ತದೆ (ಮುಂಬಯಿ. ೬-೨೪೯). [ಸಂ.]

**ನಿರ್ಗಂಧಕುಸುಮ** (ನಾ). ವಾಸನೆಯಿಲ್ಲದ ಹೂವು : ಏಕೋ ನಿರ್ಗಂಧಕುಸುಮದ ಕಲ್ಪನೆಯೇ ನನಗೆ ಸಹಿಸದು (ಆಜೋಲೀ. ೨).

[ನಿರ್ಗಂಧ + ಕುಸುಮ]

**ನಿರ್ಗಂಧವಾಯು** (ನಾ). ವಾಸನೆಯಿಲ್ಲದ ಅನಿಲ; ಸಾರಜನಕ; ನೈಟ್ರೋಜನ್ : ನೈಟ್ರೋಜನ್ನೆಂಬ ನಿರ್ಗಂಧವಾಯು ೩ ಪಾಲು ಆಕ್ಸಿಜನ್ನೆಂಬ ಪ್ರಾಣವಾಯು ೧ ಪಾಲು, ಈ ಪ್ರಕಾರ ಎರಡು ಮೂಲತತ್ವಗಳು ಕೂಡಿ ಹವೆಯುಂಟಾಗಿದೆ (ಮುಂಬಯಿ. ೫-೧೫೧).

[ನಿರ್ಗಂಧ + ವಾಯು]

**ನಿರ್ಗಡಿ** 'ನಿರ್ಗೇಡಿ' ನೋ.

**ನಿರ್ಗಣ್ಯ** (ಗು). ೧. ಮಾನ್ಯವಲ್ಲದ ; ಗಣನೆಗೆ ಬಾರದ; ಗಣ್ಯವಲ್ಲದ; ಗೌಣವಾದ : ಕೆಲವರು ಹೊಲೆಯರು ಕಾಫಿಬೀಜ ಕದ್ದು ಮಾರುವುದರಲ್ಲಿ ನಿಸ್ಸೀಮರಾಗಿದ್ದರು . . . ಹೊಲೆಯರಿಗೆ ಸಿಗುವ ಕ್ರಯ ಕಾಫಿಬೀಜದ ನಿಜವಾದ ಕ್ರಯದ ಬರೇ ಒಂದು ನಿರ್ಗಣ್ಯ ಅಂಶ ಮಾತ್ರ (ರಕ್ತರೂ. ೯೦). (ನಾ). ೨. ಮಾನ್ಯವಲ್ಲದುದು; ಗೌಣವಾದುದು : ಪುಣ್ಯಾವರ್ತನೆಗಾಗಿ ಮಾಳ್ಪ ಯೋಗಗಳಲ್ಲ ಪುಣ್ಯಾದಾಸ್ರವಗಳು ಮತ್ತೆ ಪುಣ್ಯವಲ್ಲದ ಕೃತ್ಯಕಾದ ಯೋಗಗಳು ನಿರ್ಗಣ್ಯ ಪಾಪಾಸ್ರವವಲ್ತೆ (ಭರಚ. ೬೫-೯೮). [ಸಂ.]

**ನಿರ್ಗತ** (ಗು). ೧. ಹೊರಬಿದ್ದ; ಹೊರಬಂದ : ಮುನಿಮುಖ್ಯಮುಖಾಂಭೋಜೋದರ ನಿರ್ಗತಮಂತ್ರಪೂತಾಂಗಮಂ ಸ್ನಪನೆಯ್ದಿದ ಸುಮೃಚ್ಛೃಂಗಮಂ (ಪಂಪಭಾ. ೧-೧೧೫). ೨. ಹೊರಟುಹೋದ; ಅದೃಶ್ಯವಾದ. ೩. ಬಿಡುಗಡೆಯಾದ; ಸ್ವತಂತ್ರವಾದ; ಮುಕ್ತವಾದ. (ನಾ). ೪. (ಬಾಯಿಂದ) ಹೊರಬಿದ್ದುದು; ಹೇಳಿದುದು : ಮಾನಿತಭವ್ಯಲೋಕಮನಿದಂ ಭುವನತ್ರಿತಯಾಗ್ರದಲ್ಲಿಗೊಯ್ವಾನೆವದಿಂದನೂಪ್ತಮುಖ(ಖ)ನಿರ್ಗತಮಂ . . . ಆಗಮಮಂ ಪ್ರತಿಬೋಧಿಪರ್ (ಜೀವಸಂ. ೨-೪). [ಸಂ.]

**ನಿರ್ಗತಿ** (ನಾ). ಗತಿಯಿಲ್ಲದಿರುವಿಕೆ ; ಬಡತನ ; ದಾರಿದ್ರ್ಯ : ಕನಸಿನಲ್ಲಿಯೂ ಊಹಿಸದೆ ಇದ್ದ ನಿರ್ಗತಿ ಹೇಗೆ ಉಂಟಾಯಿತೋ ಹಾಗೇ ಮಾಯವಾಯಿತು (ರೂಢಿ). [ಸಂ.]

**ನಿರ್ಗತಿಕ** (ನಾ). ಗತಿಯಿಲ್ಲದವನು; ಕಡುಬಡವ : ಈಗಲೆ ನಾವು ನಿರ್ಗತಿಕರಾಗಿದ್ದೇವೆ. ಅದು ನಮ್ಮನ್ನು ಸಂಪೂರ್ಣವಾಗಿ ತೊಳೆದು ಬಿಡುತ್ತದೆ (ಪುನರು. ೨೯೩); ಬಟ್ಟೆಗಳಿಲ್ಲದ ನಿರ್ಗತಿಕರಿಗೆ ಬಟ್ಟೆಯನ್ನು ಕೊಡುವ ಮುಹಮ್ಮದೀಯ (ಜೈಮುಹ. ೪೪) ; ನೀನು ದಿಕ್ಕಿಲ್ಲದವ, ನಿರ್ಗತಿಕ . . . ಒಂದೆರಡು ಕಾಸು ಗಿಟ್ಟಿಸಿಕೊ (ಹಸುಹೊ. ೩೮೦). [ಸಂ.]

**ನಿರ್ಗಮ** (ನಾ). ೧. ಹೊರಡುವಿಕೆ; ಹೋಗುವಿಕೆ; ಗಮನ : ಚಕೋರಿಗೆ ತಳರ್ದೊಪ್ಪಲೊಪ್ಪಿದುದು ನೀರದಶಾರದನಿರ್ಗಮಾಗಮಂ (ಪುಷ್ಪಪು. ೪-೫೮) ; ಅಡಿಗೆ ಯೋಜನ ಯೋಜನವ ಮೆಲ್ಲಡಿಗೆ ಬೆಳವುತ ಬಂದನಿಳೆ ಕೆಳಕಡೆಗೆ ಯೋಜನಯೋಜನವ ತಗ್ಗಿದುದು ನಿರ್ಗಮಕ್ಕೆ (ತೊರರಾ. ೪-೧೨-೧೯). ೨. ಹೊರಹೋಗುವ ದಾರಿ.

**ನಿರ್ಗಮವಾಗು** = ಹೊರಟುಹೋಗು ; ಗಮಿಸು : ಆ ಸರ್ಪಮಂಗಳೆ ಜನಿಸಲಘುಕುಲಗರ್ವ ನಿರ್ಗಮವಾಯ್ತು (ಶಿಭಾಗ. ೧೦-೫-೫). [ಸಂ.]

**ನಿರ್ಗಮನ** (ನಾ). ಹೊರಡುವಿಕೆ ; ಗಮನ : ಅರ್ಪಣ ಮುನ್ನವೆ ಇಲ್ಲ ಗಮನ ನಿರ್ಗಮನವಾಯಿತ್ತು (ಬಸವ. ೩೯೨); ನೆಜಿಕೆ ನರಂ ಸಂತೈಸೆ ಬಳಿಕ ದುಶ್ಯಳೆ ಶೌರಿಗೆಜಿಗಿ ಭಕ್ತರ ಬೆಳವಿಗೆಗಳನೊಸೆದಾವಾವ ತೆಜದಿಂದೆ ಮಾಡುವಂತೆನ್ನನುದ್ಧರಿಸೆಂದು ನಿರ್ಗಮನಕನುವಾದಳು (ಜೈಮಿಭಾ.

೩೨-೫೬) ; ದಿನಗಳು ಕಳೆದಂತೆ ಅವನ ಆಗಮನ ನಿರ್ಗಮನಗಳನ್ನು ಗಮನಿಸದೆ ಕಳೆದುದುಂಟು (ಹೇಮಂತ. ೪೫). [ಸಂ.]

**ನಿರ್ಗಮನಿ** (ನಾ). ಪ್ರಾಪಂಚಿಕ ವ್ಯವಹಾರಗಳ ಕಡೆ ಗಮನವಿಲ್ಲದವನು ; ಸಂಸಾರದಲ್ಲಿ ಅಲಿಪ್ತನಾದವನು ; ವಿರಕ್ತ : ಗಮನವಿಲ್ಲದೆ ಸುಳಿಯಬಲ್ಲಡೆ ನಿರ್ಗಮನಿಯಾಗಿ ನಿಲಬಲ್ಲಡೆ ಅದು ವರ್ಮ ಅದು ಸಂಬಂಧ (ಅನಚಂ. ೧೨೬-೫೭೩) ; ಶರಣ ಗಮನಿಯಾದಡೆ ಕಿರಿದೆಂಬರು ಶರಣ ನಿರ್ಗಮನಿಯಾದಡೆ ಹಿರಿದೆಂಬರು (ಅಖಂಡೇ. ೩೦೬-೫).
[ಸಂ. ನಿರ್ಗಮನಿನ್]

**ನಿರ್ಗಮನಿರತ** (ನಾ). ಹೊರಡುವ ಆಸಕ್ತಿಯುಳ್ಳವನು : ಹೊರಡಲು ಉತ್ಸುಕನಾದವನು : ಮಱುದಿವಸ ಮಂಗಳಮಯ ಮುಹೂರ್ತದ ಜೋಯಿಸರ ಜೋಕೆಯಲಿ ನಿರ್ಗಮನಿರತನಾದನು ಕೃಷ್ಣ ನೊಲವಿನಲಿ (ಕುವ್ಯಾಉ. ೭-೪). [ನಿರ್ಗಮ + ನಿರತ]

**ನಿರ್ಗಮಿಸು** (ಕ್ರಿ). ಹೊರಟುಹೋಗು ; ಹೊರಹೋಗು : ಕೆಲಸಕ್ಕೆ ರಾಜೀನಾಮೆ ಸಲ್ಲಿಸಿ ನಿರ್ಗಮಿಸುತ್ತಾರೆ (ಹಸುಹೊ. ೩೨೬).
[ನಿರ್ಗಮನ+-ಇಸು$_3$]

**ನಿರ್ಗರ** (ನಾ). ವಿಷರಹಿತ ಮನಸ್ಸಿನವನು ; ನಿರ್ಮಲಾಂತಃಕರಣದವನು : ತಲೆ ನೀಡುಂ ಜಡಯುಕ್ತಮಾಗಿವೆ ಶರೀರಂ ನೋಡೆ ವಾತಕ್ಕೆ ತಾಂ ನೆಲೆಗೊಂಡಿರ್ದಬಲಾಂಗಮಾಯ್ತು ಪಸಿವಿಲ್ಲೆಂದುಂ ಜಲಾಪೇಕ್ಷೆಯುಜ್ವಲಿಸುತಿರ್ದಪುದಾವಗಂ ನಿನಗ ನಿನ್ನಂ ಜಾನಿಸುತ್ತಿರ್ಪರೀ ನೆಲದೊಳ್ನಿರ್ಗರರಪ್ಪರಿಂತರಿದಲಾ (ಶ್ರೀಸೋಶ. ೩೭). [ಸಂ.]

**ನಿರ್ಗರ್ವ** (ಗು). ೧. ಅಹಂಕಾರವಿಲ್ಲದ ; ಗರ್ವವಿಲ್ಲದ. (ನಾ). ೨. ವಿನಯ ; ನಮ್ರತೆ. [ಸಂ.]

**ನಿರ್ಗರ್ವತೆ** (ನಾ). ಗರ್ವವಿಲ್ಲದಿರುವಿಕೆ ; ನಮ್ರತೆ : ಗಮಿಸಲು ಬಾರದಂತಾ ನಿರ್ಗರ್ವತೆ[ಪಾಠಾಂ. ನಿರ್ಗಮನದವನು]ನೆಲೆಗೆ ನೆಲೆಯಾಗಿಪ್ಪವಂ . . . ಮನದ ಕೊನೆಯಲಿ ಹೊಳೆವುತಿಪ್ಪವನು (ಬಸಪು. ೫೧-೪೭).
[ಸಂ. ನಿರ್ಗರ್ವತಾ]

**ನಿರ್ಗರ್ವಿ** (ನಾ). ಸೊಕ್ಕಿಲ್ಲದವನು ; ವಿನಯಶೀಲ ; ನಮ್ರತೆಯುಳ್ಳವನು : ಸರ್ವಜೀವದಯಾಪರಂ ನಿರ್ಗರ್ವಿ ಕಿನ್ನರಬೊಮ್ಮಿದೇವನ ಪೂರ್ವವೀರವ್ರತ ಸದಾಚಾರಾನುಪಾಲಕನು (ಬಸಪು. ೨೮-೩).
[ಸಂ. ನಿರ್ಗರ್ವಿನ್]

**ನಿರ್ಗಲಿತ,** ನಿರ್ಗಳಿತ (ಗು). ಸುರಿದುಹೋದ ; ಹರಿದುಹೋದ ; ಹೊರಟುಹೋದ : ನಿರ್ಗಲಿ[ಪಾಠಾಂ. ಳಿ]ತ ಸರಾಗಭಾವಮೆನಿಸಿತ್ತು ರದಚ್ಛದಂ (ಚಂದ್ರಪು. ೮-೭೬). **ನಿರ್ಗಳಿತ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ನಿರ್ಗಹನ** (ನಾ). ಕ್ಲೇಶವಿಲ್ಲದಿರುವಿಕೆ; ಸುಲಭತೆ; ಅನಾಯಾಸ : ದುರ್ಗಮಮಪ್ಪಾ ಪಥದೊಳ್ ನಿರ್ಗಹನದಿನಂದು ಪೋಗಿ ಕಂಡಂ . . . ಸಮುಭೂತಳಮಂ (ನೇಮಿಪು. ೪-೧೦೦) ; ಸ್ವರ್ಗಫಲಮಂ ಸ್ವಕೀಯ ಭುಜಾರ್ಗಳದಿಂ ಸಿಳ್ಕಿ ಕಳೆಮಕೊಂಡಪನೀತಂ ನಿರ್ಗಹನದಿನೆನೆ ಗಹನಾಂತರ್ಗತನೆಸೆದಿರ್ದನೂರ್ಧ್ವಬಾಹುವದೊರ್ವಂ (ಜಗವಿ. ೧೬-೫೫). [ಸಂ.]

**ನಿರ್ಗಹನವೃತ್ತಿ** (ನಾ). ಆಯಾಸವಿಲ್ಲದಿರುವಿಕೆ ; ಸುಲಭವಾದ ರೀತಿ ; ಅನಾಯಾಸ : ಅಂತು ಮುತ್ತಿ ಕಾದುತಿರ್ದ ಸೇನಾಮುಹೋದಧಿಯಂ ಮಂದರಾಚಲದಂತೆ ಪೊಕ್ಕು ನಿರ್ಗಹನವೃತ್ತಿಯಿಂ ಪುರಮಂ ಪುಗಲ್ ಪೋಪಾಗಳ್ (ಚಂದ್ರಪು. ೫-೧೦೬ ವ). [ನಿರ್ಗಹನ+ವೃತ್ತಿ]

**ನಿರ್ಗಳಿತ** 'ನಿರ್ಗಲಿತ' ನೋ.

**ನಿರ್ಗಾವಿಲ** (ನಾ). ಗಾಂಪನಲ್ಲದವನು ; ಜಾಣ ; ಚತುರ : ಪಿರಿದೀವಂ ಕಲಿ ಕೂರೆ ಕೂರ್ಪನುಜುವಂ ನೀಱಂ ಕರಂ ಭಾವಕಂ ಬೆರಸಲ್ತ್ಯಕ್ತನುದಾತ್ತನಿತ್ತು ನೆರೆವಂ ನಿರ್ಗಾವಿಲಂ ಭೋಗಿ ನಾಟ್ಯರಸಂ ಗೀತದ ಗೊಟ್ಟಿಗೊಲ್ವನಿನಿಯಂ ತೋಳ್ಗೊಪ್ಪುವಂ (ಲೀಲಾವ. ೨-೭೧).
[ನಿರ್-+ಗಾವಿಲ]

**ನಿರ್ಗಾಳಿ** (ನಾ). ಗಾಳಿಯಿಲ್ಲದ ಜಾಗ; ನಿರ್ವಾತಸ್ಥಳ: ನಿರ್ಗಾಳಿಯಲ್ಲಿ (ವ್ಯಾಕ್ಯೂಮ್) ನೀರ್ಗಳೆಯುವ ನೀರ್ಗಲ್ಲಾಗಿಸಿ ಒಣಗಿಸುವ ತಂತ್ರದಿಂದ ಅಂಗಾಂಶಗಳು ಅಷ್ಟಾಗಿ ಬದಲಾಗವು (ಕವಿಕೋ. I, ೩೧).
[ನಿರ್-+ಗಾಳಿ$_1$]

**ನಿರ್ಗುಂಡಿ$_1$** (ನಾ). ಒಂದು ಬಗೆಯ ಚಿಕ್ಕ ಗಿಡ ; ಲೊಕ್ಕಿಗಿಡ ; ಸಿಂಧುವಾರ : "ನಿರ್ಗುಂಡೀ, ಸಿಂಧುವಾರಃ-ಈ ೨ ಲೊಕ್ಕಿ" (ಹಲಾಯು. ೩೩-೪೭); ಪಾಕಕುಶಕಾಶವಿಶದಂ ಕಾಕಾಂದೋಳಾತ್ಮಗುಪ್ತಾಲಾಬೂ ನಿರ್ಗುಂಡೀ ಕೃಷ್ಣಲಾಮರೀ ಬಿಂಬಾಕೀರ್ಣಂ ತನ್ನದೀತಟಂ ಕಡು ರಯ್ಯಂ (ಲೀಲಾವ. ೫-೮೦); ಮರುಗ ಮಲ್ಲಿಗೆ ಜಾಜಿ ಮದಯಂತಿ ಮಾಗಧಿ ತರಣಿ ನಿರ್ಗುಂಡಿ ಸಪ್ತಲದ (ಜ್ಞಾನಚ. ೨೫-೬೧). 'ನಿರ್ಗುಡಿ' ಪರಾ. [ಸಂ. ನಿರ್ಗುಂಡೀ]

**ನಿರ್ಗುಂಡಿ$_2$** (ನಾ). [ಜೈನ] ಮುನಿಗಳ ಒಂದು ಸಮಯ,— ಪದ್ಧತಿ : ಪಿಂಛ ಕಮಂಡಲಾದಿ ವ್ಯವಹರಣ ವಿಲೋಪಮುಮೆಂಬಿವು ಮೊದಲಾದ ಸತ್ಕಲ್ಪಮಂ ಕಲ್ಪಿಸಿ ಪೇಟ್ವ ಶ್ವೇತಪಟಯಾಪನೀಯ ಕಾಷ್ಠ ದ್ರಾವಿಡ ನಿಃಪಿಂಛ ನಿರ್ಗುಂಡಿ ಸಂಘಂ ಮೊದಲಾದಿಂದ್ರಸಮಯ ಸಮುಚ್ಚಯಮಪ್ಪ ಸಂಶಯ ಮಿಥ್ಯಾತ್ವಮುಂ (ಪಸಾರ. ೫). [ ? ]

**ನಿರ್ಗುಂಡ** 'ನೀರ್ಗುಂಡ' ನೋ.

**ನಿರ್ಗುಡಿ,** ನಿರಗುಂಡಿ, ನೀರ್ಗುಂಡಿ (ನಾ). ಒಂದು ಬಗೆಯ ಗಿಡ ಮೂಲಿಕೆ ( ? ) : ದ್ರಮ್ಮ ಸಾಸಿರದ ಮೂನುಪೊಟಲ ನಿರ್ಗ್ನುಡಿ ಆಚದೊಳೆರಡು ದ್ರಮ್ಮ ಮಾವಮಿಾಲ್ಲಾದ ಮಣೆಯೊಳ್ಮೂರು ಪಣ (ಕಇಅ. ೮೬-೧೮-೨೧ ; 932) ; ಬಿಜ್ವ (ನಿರ್ಗುಡಿ) . . . ಸೂರ್ತಿ ಮಣ (ಮುಂಬಪ್ಯಾ. ೧೬೭). **ನಿರಗುಂಡಿ :** ಸೂರ್ತಿ ಮಣದ ಮೇಲೆ ಕಿಮ್ಮತ್ತು ಆಗತಕ್ಕ ಜೀನಸುಗಳು ೧, ಅಕ್ಕಲಖಾರ . . . ೧೬, ಬಿಚವಾ (ನಿರಗುಂಡಿ) (ಮುಂಬಪ್ಯಾ. ೧೨೨). **ನೀರ್ಗುಂಡಿ :** ನೀರ್ಗುಂಡಿ, ನೋಚ್ಚಿ, ನೀರ್ಲಕ್ಕಿ (ವ್ಯೆಔಗಿ. ೭೮-೧೬೦೧). 'ನಿರ್ಗುಂಡಿ$_1$' ಪರಾ.
[ ? ]

**ನಿರ್ಗುಣ** (ಗು). ೧. ಸೂತ್ರವಿಲ್ಲದ ; ಹೆದೆಯಿಲ್ಲದ. ೨. ಗುಣರಹಿತವಾದ; ಗುಣವಿಲ್ಲದ: 'ಸಃ ಆತ್ಮಾ ಸ ನಿತ್ಯಃ ಶುದ್ಧಃ ಕೇವಲೋ ನಿರ್ಗುಣಶ್ಚ' ಎಂಬ ಈ ವಾಕ್ಯದಲ್ಲಿ ನಿರ್ಗುಣ ಎಂದು ಹೇಳಲ್ಪಟ್ಟ ವಸ್ತುವಿನಲ್ಲಿಯೇ ಆತ್ಮತ್ವ, ನಿತ್ಯತ್ವ, ಶುದ್ಧತ್ವ, ಕೇವಲತ್ವ ಮುಂತಾದ ಗುಣಗಳು ಹೇಳಲ್ಪಟ್ಟಿರುವುವು (ಭಾತತ್ತ್ವ. ೫೨೦). (ನಾ). ೩. ಹೆದೆ ಇಲ್ಲದುದು. ೪. ಆಕಾರರಹಿತವಾದುದು : ದೈವೀಸಂಪತ್ತನ್ನು ವಶಪಡಿಸಿಕೊಳ್ಳಬಯಸುವ ಆಸ್ತಿಕನಿಗೆ ನಿರ್ಗುಣವಾದ ದೈವೀತೇಜಸ್ಸು ಸಗುಣರೂಪದಲ್ಲಿ ಮೂರ್ತೀಭವಿಸಿದಾಗ ಆಗುವ ಆನಂದ ಬ್ರಹ್ಮಾನಂದವೆನಿಸುವುದು (ಭಾರದ. ೮೦). ೫. ನಿಷ್ಠುರ ಸ್ವಭಾವದವನು ; ನಿಷ್ಕರುಣಿ : ಅಮರರುಮಂ ನೋಱೆವನೇಂ ಜವಂ ನಿರ್ಗುಣನೋ (ಮಲ್ಲಿಪು. ೧೩-೧೧೮). **೩, ೫ :** ಆ ಬಾಲಕರ್ ಬಾಲ್ಯದಿಂ ತೊಟ್ಟು . . . ಸುರಶರಾಸನದಂತೆ ನಿರ್ಗುಣರುಂ ತೀಕ್ಷ್ಣ ಕೌಕ್ಷೇಯದಂತೆ ನಿಸ್ತ್ರಿಂಶಭಾವರುಂ . . . ಎನಿಸಿ (ಸುಕುಮಾ. ೨-೫ ವ). ೬. ಸತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ಮೂರು ಗುಣಗಳಿಗೆ ಅತೀತನಾದವನು; ಪರಮಾತ್ಮ : ಮುರಾಂತಕನಗಣಿತೋಪಮಮಹಿಮನಲಾ ಸಗುಣ ನಿರ್ಗುಣನಾ ಮಹಾತ್ಮನನಂತರೂಪವನು ವಿಗಡಿಸಲು ಜಯವಹುದೆ (ಕುವ್ಯಾಭೀ. ೧-೨೧) ; ಆ ಅಂತರ್ಯಾಮಿ ಮೊದಲಾದ ಈಶ್ವರತ್ರಯಕ್ಕೆ ಅಧಿಷ್ಠಾತೃ . . . ನಿರ್ಗುಣ

. . . ಎಂಬಿವು ಮೊದಲಾದವೇಅದ್ವೈತಬ್ರಹ್ಮಪರ್ಯಾಯನಾಮಂಗಳಕ್ಕುಂ (ವಿವೇಕ. ೨೭); ನಿತ್ಯನಿರಂಜನ ಪರಮಪಾವನ ನಿರ್ಗುಣ ನಿರಾವರಣ . . . ನಿಃಕಳಂಕ ಮಹಿಮಾನಂದಾರ್ಣವ ಕೃಪಾಮೃತೇಕ್ಷಣ ಪರಶಿವನುಂ (ಭೈರಸೂ.೧). **೭.** [ಯೋಗ] ಸಮಾಧಿಯಲ್ಲಿ ಒಂದು ವಿಧ; **ನಿರಾಕಾರ** ಬ್ರಹ್ಮೋಪಾಸನೆ; ನಿರ್ವಿಕಲ್ಪ ಸಮಾಧಿ; ☞ ಸಗುಣೋಪಾಸನೆಯಿಂದ ಸಾಲೋಕ್ಯ ಮೊದಲಾದ ಮುಕ್ತಿಗಳು ದೊರಕುತ್ತವೆಯೆಂದೂ ನಿರ್ಗುಣೋಪಾಸನೆಯಿಂದ ಶಾಶ್ವತ ಮುಕ್ತಿ ದೊರಕುವುದೆಂದೂ ಹೇಳಲಾಗಿದೆ: ಸಗುಣ ನಿರ್ಗುಣವೆಂದು ಯೋಗದ ಬಗೆಗಳೆರಡಾಗಿರ್ಪುವದಱೊಳು ಸಗುಣವೇ ಸಾಕಾರ ನಿರ್ಗುಣವೇ ನಿರಾಕಾರ . . . ನಿರ್ಗುಣದಿಂದಲಾ ಸಾಯುಜ್ಯವಹುದೆಂದ (ಅಮೃತ. ೬–೭೪). [ಸಂ.]

**ನಿರ್ಗುಣತತ್ತ್ವ** (ನಾ). ತ್ರಿಗುಣಗಳಿಗೆ ಅತೀತವಾದ ತತ್ತ್ವ; ಪರಮಾತ್ಮ: ಅಕಟ ನಿರ್ಗುಣತತ್ತ್ವವಿದೆ ನಾಟಕದ ಬಹುರೂಪಿನಲಿ ವಿಶ್ವಾತ್ಮಕ ಪರಾನಂದೈಕರಸವಿದೆ ಮನೆಯ ಕೇರಿಯಲಿ (ಕುಮ್ಯಾಸ. ೯–೩೪). [ನಿರ್ಗುಣ + ತತ್ತ್ವ$_1$]

**ನಿರ್ಗುಣತೆ** (ನಾ). ಗುಣಹೀನತೆ: ಕೇವಲ ಅಡಿಯ ಕೆಳಗೆ ಇರುವುದರಿಂದಲೆ ಮೆಟ್ಟಿಗೆ ಈ ಮರ್ಯಾದೆ ಬಂದಿತೆ? ಹಾಗೆನ್ನಿಸುವುದಿಲ್ಲ. ಅದಕ್ಕೊಂದು ದುರ್ಗುಣವಿದೆ ಅಥವಾ ನಿಷ್ಠುರವಾದ ನಿರ್ಗುಣತೆಯಿದೆ ಎನ್ನೋಣ (ದೇಕನ್ನ. ೧೪೬). [ಸಂ. ನಿರ್ಗುಣತಾ]

**ನಿರ್ಗುಣತ್ವ** (ನಾ). **೧.** ದಾರ ಇಲ್ಲದಿರುವಿಕೆ. **೨.** ಗುಣಹೀನತೆ. **೧, ೨**: ನಿರ್ಗುಣತ್ವಂ ಬಿಡುವೂಗಳೊಳ್ . . . ಪಂಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨–೧ ಪ). **೩.** [ದ್ವೈತ] ಪರಮಾತ್ಮನು ಗುಣರಹಿತನೆಂದು ಹೇಳುವುದು,—ನಂಬುವುದು: ಜೀವಾಭೇದ, ನಿರ್ಗುಣತ್ವ, ಅಪೂರ್ಣಗುಣತ್ವ, ಇತರಸಾಮ್ಯ, ಇತರಾಧಿಕ್ಯ, ಬ್ರಹ್ಮನಾನಾತ್ವ, ಅವತಾರನಿಂದೆ, ಭಕ್ತನಿಂದೆ, ತತ್ತ್ವಮಾಣನಿಂದೆ ಈ ಒಂಬತ್ತೂ ಹರಿದ್ವೇಷಗಳು (ಹಿಂದಸಾ.೨೯೩). [ಸಂ.]

**ನಿರ್ಗುಣಬ್ರಹ್ಮ** (ನಾ). ಶುದ್ಧಬ್ರಹ್ಮ; ಪರಮಾತ್ಮ: ತಾಳಿಸುತ್ತಿಹ ಪ್ರತ್ಯಗಾತ್ಮನ ಹೇಳುವರು ಸಚ್ಚಿತ್ಸುಖೈಕ ನಿರಾಳ ನಿರ್ಗುಣಬ್ರಹ್ಮವೆಂದದ ಬಲ್ಲ ಯೋಗಿಗಳು (ಅಮೃತ. ೩–೫೨); ನಿನ್ನ ನಿನ್ನದು ನಿನಗೆ ನೀನೆಲ್ಲ ಎನ್ನುವಿರೆ,—ನಿರ್ಗುಣಬ್ರಹ್ಮವೇ ನೀವು? (ಬೀಪಸು. ೩೦–೪); "ಬ್ರಹ್ಮತತ್ತ್ವವು ಅಸತ್ಯವಲ್ಲ, ಜಡವಲ್ಲ, ಅವಧಿಯುಳ್ಳುದಲ್ಲ (ಸತ್ಯಂ ಜ್ಞಾನಮನಂತಂ ಬ್ರಹ್ಮ)" ಎಂಬ ವಾಕ್ಯವು ನಿರ್ಗುಣಬ್ರಹ್ಮಸ್ವರೂಪವನ್ನು ತಿಳಿಸುವುದು (ಭಾತತ್ತ್ವ. ೭೫). [ನಿರ್ಗುಣ + ಬ್ರಹ್ಮ]

**ನಿರ್ಗುಣಬ್ರಹ್ಮವಾದಿ** (ನಾ). ನಿರ್ಗುಣಬ್ರಹ್ಮತತ್ತ್ವವನ್ನು ಪ್ರತಿಪಾದಿಸುವವನು: ಬ್ರಹ್ಮವಾದಿಗಳಾದ ವೇದಾಂತಿಗಳಲ್ಲಿ ಕೆಲವರು ನಿಷ್ಪ್ರಪಂಚಬ್ರಹ್ಮವಾದಿಗಳು . . . ಕೆಲವರು ನಿರ್ಗುಣಬ್ರಹ್ಮವಾದಿಗಳು (ಭಾರದ. ೧೩೧). [ಸಂ. ನಿರ್ಗುಣಬ್ರಹ್ಮವಾದಿನ್]

**ನಿರ್ಗುಣಬ್ರಹ್ಮವಿದ್ಯೆ** (ನಾ). ಶುದ್ಧಬ್ರಹ್ಮನನ್ನು ತಿಳಿಸುವ ವಿದ್ಯೆ: ವಿಶುದ್ಧಾದ್ವೈತ ಸಂಪ್ರದಾಯದವರು ಶೂದ್ರರಿಗೆ ನಿರ್ಗುಣ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನೂ ಅನುಗ್ರಹಿಸಿರುವರು (ಹಿಂದಸಾ. ೧೬೧). [ಸಂ. ನಿರ್ಗುಣಬ್ರಹ್ಮವಿದ್ಯಾ]

**ನಿರ್ಗುಣಭಕ್ತಿ** (ನಾ). ನಿರಾಕಾರನೂ ಗುಣಾತೀತನೂ ಆದ ಪರಮಾತ್ಮನಲ್ಲಿ ಇರುವ ಭಕ್ತಿ,—ನಿಷ್ಠೆ: ಕಬೀರರು ಹಿಂದೂ ಮಹಮ್ಮದೀಯರಿಬ್ಬರಿಗೂ ಪ್ರಿಯವಾಗುವಂತೆ ನಿರ್ಗುಣಭಕ್ತಿಯ ಕಬೀರಪಂಥವನ್ನೇ ನಿರ್ಮಿಸಿದರು (ಕರ್ನಾಕ. ೩೯). [ನಿರ್ಗುಣ + ಭಕ್ತಿ]

**ನಿರ್ಗುಣವಾಯು** (ನಾ). [ವಿಜ್ಞಾ] ಬಣ್ಣ, ರುಚಿ ಮತ್ತು ವಾಸನೆಗಳಿಲ್ಲದ ಒಂದು ಅನಿಲ; ಸಾರಜನಕ; ನೈಟ್ರೋಜನ್: ಈ ವಾತಾವರಣವು ಎರಡು ವಾಯುರೂಪಪದಾರ್ಥಗಳಿಂದ ಆಗಿರುತ್ತದೆ. ಅವುಗಳಿಗೆ "ನೈಟ್ರೋಜನ" (ನಿರ್ಗುಣವಾಯು)ವೆಂತಲೂ "ಆಕ್ಸಿಜನ"ವೆಂತಲೂ ಹೆಸರುಗಳುಂಟು (ಮುಂಬಯಿ. ೫–೭೪). [ನಿರ್ಗುಣ + ವಾಯು]

**ನಿರ್ಗುಣಶ್ರುತಿ** (ನಾ). [ವೇದಾಂತ] ಪರಮಾತ್ಮನು ಗುಣಾತೀತನೆಂದು ಹೇಳುವ ಶ್ರುತಿ: ಎಂಟನೆಯದಾದ ನಿರ್ಗುಣಶ್ರುತಿ ನಾರಾಯಣನಲ್ಲಿ ಸಗುಣಶ್ರುತಿಯಿಂದ ವಿಧಿಸಲ್ಪಟ್ಟ ಕಲ್ಯಾಣಗುಣಗಳಿಗೆ ವಿರುದ್ಧವಾದ ಸತ್ತ್ವರಜಸ್ತಮಸ್ಸೆಂಬ ಹೇಯಗುಣಗಳು ಯಾವಾಗಲೂ ಅವಕಾಶವನ್ನು ಪಡೆಯಲಾರವೆಂದೂ ಬೋಧಿಸುವುದರ ಮೂಲಕ ಕಲ್ಯಾಣಗುಣಗಳಿಗೆ ಹೇಯಗುಣಗಳ ಸಂಬಂಧದಿಂದುಂಟಾದ ಕೊರತೆಯಿರಬಹುದೆಂಬ ಶಂಕೆಯನ್ನು ಹೋಗಲಾಡಿಸಿ ಕಲ್ಯಾಣಗುಣಗಳ ಸರ್ವೋತ್ಕರ್ಷವನ್ನು ತೋರಿಸುವುದಕ್ಕೋಸ್ಕರ ಹೊರಟಿರುವುದು (ತತ್ತ್ವಶು. ೧). [ನಿರ್ಗುಣ + ಶ್ರುತಿ]

**ನಿರ್ಗುಣಾರಾಧನೆ** (ನಾ). ನಿರ್ಗುಣನಾದ ಪರಮಾತ್ಮನನ್ನು ಆರಾಧಿಸುವಿಕೆ: ಭವರಹಿತಯೋಗಿಗಳ ಚರಿತೆಯ ಸುವಿಮಲಾತ್ಮಕ ನಿರ್ಗುಣಾರಾಧನೆಯ ನಿರ್ಣಯವ . . . ಅಱಿಯಲು ಬೇಕು ಮೊದಲಲಿ (ಅಮೃತ. ೧–೧೭). 'ಸಗುಣಾರಾಧನೆ' ಪರಾ. [ನಿರ್ಗುಣ + ಆರಾಧನೆ]

**ನಿರ್ಗುಣಾಷ್ಟಾಂಗ** (ನಾ). [ವೇದಾಂತ] ಬ್ರಹ್ಮಜ್ಞಾನವನ್ನು ಪಡೆಯಲು ಸಾಧಕವಾದ ಎಂಟು ಅಂಗಗಳು; ಯಮನಿಯಮಾದಿ ಯೋಗದ ಎಂಟು ಅಂಗಗಳು: ನಿರ್ಗುಣಾಷ್ಟಾಂಗವನು ಸಾಧಿಸುವಗ್ಗಳಿಕೆಯುಳ್ಳವರಿಗಾವಗ ಭರ್ಗನಲ್ಲಿಯೆ ಭಕ್ತಿಭಾವವ ಮಾಳ್ಪ ಸುಜನರಿಗೆ . . . ಉಸುರೀ ಅನುಭವಾಮೃತವ (ಅಮೃತ. ೬–೩). 'ಅಷ್ಟಾಂಗಯೋಗ' ಪರಾ. [ನಿರ್ಗುಣ + ಅಷ್ಟಾಂಗ]

**ನಿರ್ಗುಣಿ** (ನಾ). **೧.** ಒಳ್ಳೆಯ ಗುಣವಿಲ್ಲದ ವ್ಯಕ್ತಿ; ನೀಚವ್ಯಕ್ತಿ: ಗುಣಮಂ ಕಿನಿಸುವೊಡಱಿ ನಿರ್ಗುಣಿಯಂ ನೀನನ್ಯಚಿತ್ತದವಳೆಂದವಳಂ (ಮದತಿ. ೧೧–೪೦). **೨.** ಗುಣಾತೀತನಾದವನು; ಗುಣರಹಿತ; ಪರಮಾತ್ಮ: ಓವಿ ನಿರ್ಗುಣಿಯಾಗಿ ಸಗುಣವನೀವನಂ ಪ್ರಣವಾತ್ಮನಾಗಿ ಸದಾಪಯವದಿಂದೊಂದಿದವನಂ ಕಂಡು (ಬಸವು. ೭–೧೩). [ಸಂ. ನಿರ್ಗುಣಿನ್]

**ನಿರ್ಗುಣೋಪಾಸಕ** (ನಾ). ಗುಣಾತೀತನಾದ ಪರಮಾತ್ಮನನ್ನು ಆರಾಧಿಸುವವನು: ಭಕ್ತಿಯುಗದಲ್ಲಿ ಎರಡು ವಿಧವಾದ ಕವಿಗಳು ನಮಗೆ ಕಾಣಬರುತ್ತಾರೆ. ಮೊದಲನೆಯವರು ನಿರ್ಗುಣೋಪಾಸಕರು (ಭಾರದ. ೪೫೮). [ನಿರ್ಗುಣ + ಉಪಾಸಕ]

**ನಿರ್ಗುಣೋಪಾಸನ** (ನಾ). = ನಿರ್ಗುಣಾರಾಧನೆ: ಹೈಮವತಿಸುತ ಕೇಳು ಸಾಮರಸ್ಯದಿ ಸಗುಣೋಪಾಸನಧಾಮವನು ತರುವಾಯ ನಿರ್ಗುಣೋಪಾಸನವನೆಂದ (ಜ್ಞಾನಸಿಂ. ೨೦–೧೭). [ಸಂ.]

**ನಿರ್ಗುಣೋಪಾಸನೆ** (ನಾ). = ನಿರ್ಗುಣಾರಾಧನೆ: ಅದರ ಅಂಗವಾಗಿ ನಡೆಯುವ ಹೋಮ, ಹವನ . . . ನಿರ್ಗುಣೋಪಾಸನೆಯ ಕಡೆಗೆ ಮನಸ್ಸನ್ನು ಸ್ಥಿಮಿತಗೊಳಿಸಲು ಸಹಾಯಕಗಳಾದವು(ಭಾರದ.೪೧). [ಸಂ. ನಿರ್ಗುಣೋಪಾಸನ]

**ನಿರ್ಗೇಡಿ,** ನಿಗ್ಗಡಿ, ನಿಗ್ಗೇಡಿ, ನಿರ್ಗಡಿ (ನಾ). ಅವಿವೇಕಿ: ಮತ್ತೊರ್ವನಗಡಿನ ಪೆಂಡಿರೊಳ್ ವ್ಯವಹಾರಮುಲ್ಲದೆ ಬೇಟಮಿಲ್ಲೆಂದ ನಿರ್ಗೇಡಿಬೊಜಗಂಗೆ ಸೊಬಗುಬೊಜಂಗನಿಂತೆಂದಂ (ಲೀಲಾವ. ೨–೯೩ ಪ).

**ನಿಗ್ಗಡಿ :** ನೃಪನಿಂ ತನ್ನಯ ತಲೆಯಂ ಕಡಿಪಡೆದಂ ಪುರೆಯಿಂ ರೂಪಿಸಿಂ ತನುಜೆಗೆ ಸೋಲ್ತೊಡವರ್ದಂ ನಾಣಿಲಿ ನಿಗ್ಗಡಿ [ಪಾಠಾಂ. ಗುರ್ಣಿ] ನಿಜ ದಿನಪೂಜ್ಯನಾಪ್ತನೆನಲಾಗಜಾವಂ (ಸಮಸ. ೮-೧೩೧) ; ದುಷ್ಮಾರ್ಗ್ಗನುಂ ಗೆಡೆಗೊಂಡಾಚರಣಂ ಗಡಂ ತನಗೆನಲ್ ಬೀಯೆಂಬಿನಂ ಬಾಳ್ದ ನಿಗ್ಗಡಿಗಳ್ ಮತ್ತಿನ ಭೂಭುಜದ್ರೋಹಿರೆಯೆ ಪೇಳ್ ಬಲ್ಲಾಳಭೂಪಾಳನೊಳ್ (ಎಕ. V, ಹಾಸನ. ೭೧-೨೧; 1173?) ; ಪಿಂತೆ ಬಾಳ್ವ ನಿಗ್ಗಡಿ ಸಚಿವಕ್ಕ್ಯಳಂ ನಗುವವೋಲೆಸೆದಿರ್ಪ್ಪುದು ವೀರಶಾಸನಂ (ಎಕ. V, ಬೇಲೂರು. ೧೧೨-೧೨೧; ಸು. 1220). **ನಿಗ್ಗೆಡಿ :** ಸುಡು ಪೊಲ್ಲಳನೆನ್ನದೆ ತನ್ನೊಡಮೆಯ ಕೇಡಿಂಗನುವಳ ಪೋಗಿಂಗಂ ನಿಗ್ಗೆಡಿ [ಪಾಠಾಂ. ಗಡಿ, ಗರ್ಡೆ, ಳ್ದಡಿ] ಬೆನ್ನೊಳಜಿಸಿ ಪೋಪಂ ಕಡುಮೋಹಿತರಾರುಮುಚಿತಮಂ ನೆನೆವರೇ (ಪಂಪಾಪು. ೬-೩೫). **ನಿರ್ಗಡಿ :** ಮೇಲಿನ 'ಪಂಪಾಪು' ಪ್ರಯೋಗದ ಪಾಠಾಂತರವನ್ನು ನೋಡಿ. [ನಿರ್‌- + ಕೇಡಿ$_1$]

**ನಿಗೋ೯ತ್ರ** (ನಾ). ೧. ದೇಶ ಅಥವಾ ರಾಜ್ಯವನ್ನು ಕಳೆದುಕೊಂಡವನು. ೨. ಬಳಗ ಮತ್ತು ಮಕ್ಕಳನ್ನು ಬಿಟ್ಟವನು. **೧, ೨ :** ನಿಶಾಂತವಿರಕ್ತನಪ್ಪ ನಿಗೋ೯ತ್ರನೆನಿಪ್ಪ ಸತ್ಕುವಳಯೋದ್ಗತ ಲಕ್ಷ್ಮಿಯನೊಕ್ಕು ಪೋಗಲಿರ್ಪತ್ರಿಜನಂದು ಕನ್ನಡಿಸಿದಂ ಸುವಿಧೀಶನ ಚಿತ್ತವೃತ್ತಿಯಂ (ಪುಷ್ಪಪು. ೧೩-೫೯). [ಸಂ.]

**ನಿರ್ಗ್ರಂಥ** (ನಾ). ೧. ಬತ್ತಲೆ; ನಗ್ನತೆ : ಕುಟಿಲಾಸೀಲಾಳಕಂಗಳ್ ನಿಮಿರ್ದಿರೆ . . . ವಿಟವೃತ್ತಂ ಮೆಯ್ಯೊಳೆತ್ತಂ ಪಸರಿಸಿರೆ ವಿಟಂ ಬೀಸೆ ನಿಂದಿರ್ದಳೊರ್ವಳ್ ಸ್ಫುಟಿತೋರೋಮಧ್ಯೆ ಭಿನ್ನಾಪಟುತಟವಿಹಟದ್ಗ್ರಂಥಿ ನಿರ್ಗ್ರಂಥದಿಂದಂ (ಕಾವ್ಯಾವ. ೮೦೨). ೨. ಕಟ್ಟುಗಳನ್ನು ಕಳಚಿಕೊಂಡವನು ; ಸಂಸಾರಬಂಧನದಿಂದ ಹೊರತಾದವನು : ನಿರ್ಗ್ರಂಥರೆಂದರೆ ಯಾವ ತೊಡಕೂ ಇಲ್ಲದವರು (ಭಾರದ. ೧೮೫). ೩. ಜೈನ ಅಥವಾ ಬೌದ್ಧ ಮುನಿ: "ನಗ್ನಾಟಃ . . . ಮಲಧಾರೀ, ನಿರ್ಗ್ರಂಥಃ, ಸಾಧುಃ – ಈ ೧೦ ಸವಣರ ಪೆಸರ್" (ಹಲಾಯು. ೫೭-೧೮೯) ; ನೀಮರ್ಥಗಪ್ಪಡಮಂ ಬಿಸುಟ್ಟು ನಿರ್ಗ್ರಂಥಮಪ್ಪ. ರಿಸಿರೂಪಂ ಕೈಕೊಂಡು ಬಟಿಯೆ ತಪಂಗೆಯ್ವುದು (ವಡ್ಡಾರಾ. ೯೩-೧೩); ನಿರ್ಗ್ರಂಥಂ ಸಮಂತದಂ ನೆಜೆ ತಾಳ್ದಿರ್ಪುದು ದಿವ್ಯಮಪ್ಪ ತಪಮಂ (ಧರ್ಮಾಮೃ. ೯-೭೩); ಇಲ್ಲಿ ನಿರ್ಗ್ರಂಥರು ಬಿದ್ದರು (ಬುದ್ಧಪ. ೧೩೧); ಆಗಿನ ಅನೇಕ ಪ್ರವ್ರಜಿತರಲ್ಲಿ ನಿರ್ಗ್ರಂಥರಿಗೆ ವಿಶೇಷಸ್ಥಾನ ಕೊಡುವುದನ್ನು ಪಿಟಕಗಳಲ್ಲಿಯೂ ಕಾಣಬಹುದು (ತೀರ್ಥಕ. ೨೮). ೪. ಜೈನರಲ್ಲಿ ಒಂದು ಪಂಗಡ: ಈ ಕಾಲದಲ್ಲಿ ಜೈನರಲ್ಲಿ ಯಾಪನೀಯ, ನಿರ್ಗ್ರಂಥ, ಕೂರ್ಚಕ, ಶ್ವೇತಪಟ, ಆಹರಿಷ್ಟಿ ಸಂಘಗಳೆಂಬ ಪಂಗಡಗಳಿದ್ದುವು (ಕರ್ನಾಅ. ೪೦); ಮುನಿಗಳಲ್ಲಿ ಪುಲಾಕ, ಬಕುಶ, ಕುಶೀಲ, ನಿರ್ಗ್ರಂಥ, ಸ್ನಾತಕ ಎಂದು ಐದು ಪ್ರಕಾರಗಳು (ಜೈನಧ. ೮೯). ೫. ನಿರ್ಮಲವಾದುದು; ದೋಷರಹಿತವಾದುದು : ನೆಲಂ ನಿರ್ಗ್ರಂಥಮಾದೊಡೆ ಬಿತ್ತುವಂಗೆ ರಾಗಂ ಗಗನಂ ನಿರ್ಗ್ರಂಥಮಾದೊಡೆ ಮದುವೆಗುತ್ಸವಂ ನೀರ್ ನಿರ್ಗ್ರಂಥಮಾದೊಡೆ ಕುತ್ತದ ಕೇಡು ಕಿರ್ಚು ನಿರ್ಗ್ರಂಥಮಾದೊಡೆ ಅಡುಗೆಯ ಕಾರ್ಯಂ ಅಕ್ಕಿ ನಿರ್ಗ್ರಂಥಮಾದೊಡೂಟದ ರುಚಿ ಪಾಲ್ ನಿರ್ಗ್ರಂಥಮಾದೊಡಳೆಯ ಸವಿ . . . ಅಂತೆ ಜಿನೇಶ್ವರನ ತಪದ ನಿರ್ಗ್ರಂಥದಿಂದಮೆ ಲೋಕದ ಕಾರ್ಯಂಗಳೆಲ್ಲಂ ಸಿದ್ಧಿಯಕ್ಕು (ಧರ್ಮಾಮೃ. ೯-೭೪). [ಸಂ.]

**ನಿರ್ಗ್ರಂಥತ್ವ** (ನಾ). ದಿಗಂಬರತೆ ; ಬತ್ತಲಾಗಿರುವಿಕೆ : ಜಯಂಧರಯೋಗಿ ನಿರ್ಗ್ರಂಥತ್ವದಲಿ ನೆಗಳಿ ಕೇವಲಿಯು ತಾನಾಗಿ ನಿಜ ತತ್ತ್ವವಿಚಾರವ ತಾಳಿ ಪ್ರತಿಮಾಭಾವನೆಯ ಯೋಗೀಂದ್ರನಾದನು (ನಾಗಕು. ೩೦-೧೮). [ಸಂ.]

**ನಿರ್ಗ್ರಂಥಧರ್ಮ** (ನಾ). ಜೈನಧರ್ಮ : ಈಗ ಜೈನಧರ್ಮವೆಂದು ಯಾವ ಆಚಾರ-ವಿಚಾರಗಳಿಗೆ ತಿಳಿಯಲಾಗುತ್ತಿದೆಯೊ ಅದಕ್ಕೆ ಭಗವಾನ್ ಪಾರ್ಶ್ವನಾಥ ಹಾಗೂ ಮಹಾವೀರರ ಕಾಲಗಳಲ್ಲಿ 'ನಿಗ್ಗಂಥಧಮ್ಮ' ಅಂದರೆ 'ನಿರ್ಗ್ರಂಥಧರ್ಮ' ಎಂದು ಕರೆಯಲಾಗುತ್ತಿದ್ದಿತು(ಜೈನಪ. ೩). [ನಿರ್ಗ್ರಂಥ + ಧರ್ಮ]

**ನಿರ್ಗ್ರಂಥನ** (ನಾ). ಕೊಲೆ ; ಹಿಂಸೆ ; ಪೀಡನೆ : "ಮಾರಣಂ, ವಿಶರಣಂ . . . ನಿರ್ಗ್ರಂಥನಂ, ಆಳಂಭಃ, ಪ್ರಮಯಃ, ಹಿಂಸಾ, ಸಂಜ್ಞಪನಂ—ಈ ೨೧ ಕೊಲೆ" (ಹಲಾಯು. ೭೮-೩೨೩). [ಸಂ.]

**ನಿರ್ಗ್ರಂಥಯತಿ** (ನಾ). ಜೈನಸಂನ್ಯಾಸಿ; ಸವಣ : ಮತ್ತೊಂದು ದಿವಸಮೊರ್ವ ನಿರ್ಗ್ರಂಥಯತಿ ಭೈಕ್ಷಭಾಜನಮಂ ಕೊಂಡು . . . ಭೈಕ್ಷಂ ಬೇಡಿ (ವಡ್ಡಾರಾ. ೯೨-೯). [ನಿರ್ಗ್ರಂಥ + ಯತಿ]

**ನಿರ್ಗ್ರಂಥರೂಪ** (ನಾ). ದಿಗಂಬರ ರೂಪ : ನಿಜತನೂಭವರಯ್ನೂಸಿರ್ವರ್ ಪದಿನಾಜುಸಾಸಿರ್ವರ್ ಮಕುಟಬದ್ಧರ್ . . . ಬೆರಸಾಗಳ್ ವಜ್ರನಾಭಿ ನಿಜದ ರೂಪಮುಂ ನಿರ್ಗ್ರಂಥರೂಪಮುಂ ಕಯ್ಕೊಂಡು ನೆಗಟ್ದು ನಿಂತೀ ಮಾಟಿಕ್ಕೆಯಿಂ (ಆದಿಪು. ೬-೨೭); ಸುಭದ್ರಸೂರಿಸನ್ನಿಧಾನದೊಳ್ ನಿರ್ಗ್ರಂಥರೂಪಮಂ ತಾಳಿ (ಶಾಂತಿಪು. ೯-೧೧ ವ). [ನಿರ್ಗ್ರಂಥ + ರೂಪ]

**ನಿರ್ಗ್ರಂಥರೂಪು** (ನಾ). = ನಿರ್ಗ್ರಂಥರೂಪ : ವಜ್ರನಾಭಿ ನಿಜದ ರೂಪುಮಂ ನಿರ್ಗ್ರಂಥರೂಪು[ಪಾಠಾಂ. ಪ]ಮಂ ಕೈಕೊಂಡು (ಆದಿಪು. ೬-೨೭). [ನಿರ್ಗ್ರಂಥ + ರೂಪು]

**ನಿರ್ಗ್ರಂಥಸಾಧು** (ನಾ). = ನಿರ್ಗ್ರಂಥಯತಿ : ಎಲ್ಲ ಪ್ರಕಾರದ ವಸ್ತ್ರಗಳನ್ನು ತ್ಯಜಿಸಿದವನೇ ನಿರ್ಗ್ರಂಥಸಾಧುವೆನಿಸುತ್ತಾನೆ (ಜೈನಪ. ೪೮೦). [ನಿರ್ಗ್ರಂಥ + ಸಾಧು$_2$]

**ನಿರ್ಗ್ರಂಥಾಚಾರ್ಯ** (ನಾ). ಜೈನರ ಗುರು : ನಿರ್ಗ್ರಂಥಾಚಾರ್ಯರಪ್ಪ ಮದೀಯ ಗುರುಗಳ್ ಬರೆದರ್ (ತತ್ತ್ವಪ್ರ. ೨). [ನಿರ್ಗ್ರಂಥ + ಆಚಾರ್ಯ]

**ನಿರ್ಗ್ರಂಥಾವಸ್ಥೆ** (ನಾ). ದಿಗಂಬರತ್ವದ ಸ್ಥಿತಿ : ಈತನ ನಿಷ್ಠೆಯನ್ನು ಕಂಡ ಗುರುವು ಈ ಕೌಪೀನಪರಿಗ್ರಹವನ್ನೂ ತೊರೆಯಿಸಿ ದಿಗಂಬರದೀಕ್ಷೆಯನ್ನು ಕೊಡುತ್ತಾನೆ. ಸಾಧುವಿನ ಈ ಅವಸ್ಥೆಗೆ ನಿರ್ಗ್ರಂಥಾವಸ್ಥೆಯೆಂದು ಹೆಸರು (ಭಾರದ. ೧೮೫). [ನಿರ್ಗ್ರಂಥ + ಅವಸ್ಥೆ]

**ನಿರ್ಗ್ರಂಥೆ** (ನಾ). ಬತ್ತಲೆಯಾದವಳು ; ನಗ್ನೆ : ಅವಳ ಕೈಯೊಳಿರ್ದ ಧನಮನಾಭರಣಂಗಳನಾ ಪುಷ್ಕಳೆಯುಟ್ಟಿರ್ದ ಮುತ್ತಿನ ಸೆಜಗಿನ ಪಟ್ಟೆಯುದೆಜಕದ ಚೀನಾಂಬರದ ಸೀರೆಯೊಳ್ ಪೊಜೆಯಂ ಕಟ್ಟಿ ನಿರ್ಗಂಥೆ [ಗ್ರಂಥೆ] ಯಾಗಿರ್ದವಳಂ ನೀರೊಳ್ ಕುಳ್ಳಿರಿಸಿ . . . ಆ ಶೌಂಡಿಕಂ ಹೊಳೆಯಂ ಹಾಯ್ದು . . . ಪೋಗುತ್ತಿರೆ (ನನ್ನಚಾ. ೩-೧೧೩ ವ) ; ಪೋಗೆಂದು ಪೋದನವನತಿಬೇಗದೊಳಂ ಶೌಂಡನತ್ತ ಪುಷ್ಕಳೆ ಜಲದಿಂಬಾಗಿ ನಿರ್ಗಂಥೆ [ಗ್ರಂಥೆ] ಯಾಗಿರ್ದಾ ಗಾದೆಯಾದುದೀಗ ಭಾವಕಿ ನಿನಗಂ (ನನ್ನಚಾ. ೩-೧೧೭ ವ). [ನಿರ್ಗ್ರಂಥ + -ಎ$_2$]

**ನಿರ್ಘಾತ** (ನಾ). ೧. ಬಿರುಗಾಳಿ; ಝಂಝಾವಾತ. ೨. ಭೂಮಿಯ ಅದಿರುವಿಕೆ ; ಭೂಕಂಪ : ನಡುಗಿತಿಳೆ ನಿರ್ಘಾತದಲಿ ಬಜಿಸಿಡಿಲು ಸುಳಿದುದು . . . ಕೌರವೇಂದ್ರನ ಪತನಕಾಲದಲಿ (ಕುಮಾವ್ಯಾಗ. ೮-೩). ೩. ಸಿಡಿಲು : ಕಾಲಾಂತಪವನಹತಕಲ್ಲೋಲಾವಿಲಜಲಧಿನಿನದಮೋ ನಿರ್ಘಾತಾಭೀಳಖರರುದಿತಮೋ ಲಯಕಾಲಾಂಬುದಘೋಷಮೋ ನೆಲಂ ಮೊಟಿಗಿದುದೋ (ಆದಿಪು. ೧೨-೬೭); ಇದು ನಿರ್ಘಾತಮೊ ಮೇಣ್ ನೆಲಂ ಮೊಟಿಗಿತೋ (ಪಂಚತಂ. ೨೬-೫). ೪. ಬಿರುಸಿನ ಹೊಡೆತ; ಬಲವಾದ ಪೆಟ್ಟು; ಜೋರಾದ ಏಟು: ಪ್ರಳಯಕಾಲ ಜಾತೋತ್ಪಾತ

ವಾತನಿರ್ಘಾತದಿಂದಮಳ್ಳಾಡಿ ತಳ್ಳಂಕಂಗುಟ್ಟುವ ಜಳನಿಧಿಗಳಂತೆ ಮೇರೆದಪ್ಪಲ್ ಬಗೆವುಭಯಸೈನ್ಯಂಗಳಂ ಕಂಡು (ಪಂಪಭಾ.೧೦-೬೫ ವ); ಆಶ್ರಮದೊಳಲ್ಲಿಂದೊಳಗೊಗೆದ ನಿರ್ಘಾತತರ್ಜಿತವೇದಸ್ವಾದಮಂ ಮುಟ್ಟಲೀಯದೆ ಸೇನಾಪತಿರತ್ನಂ ತುರಂಗರತ್ನಮನವಯವದೊಳಿನಿಸಾನುಂ ಕಣ್ಣೆತ್ತಿದಂತೆ (ಶಾಂತಿಪು. ೧೧-೪೧ ವ); ಆ ತೆಲುಗಬೊಮ್ಮಯ್ಯನ ಶರನಿರ್ಘಾತಪಾತಕೆ ತೊಡರ್ದು ಮಡಿಯಲು (ಬಸವು. ೩೪-೨೫). **೫.** ಉತ್ಪಾತ. **೬.** ಖಡ್ಗಯುದ್ಧದ ಒಂದು ಪಟ್ಟು,—ವರಸೆ: ಆಗಳಿರ್ವಲದ ಕಡಿತಲೆಕಾಜರಲಗಲಗಿನೊಳ್ ಪಳಂಚೆ ತಾಗಿ ನಿರ್ಘಾತವುಪ್ಪರಂ ತಾಳಪಟ್ಟಮವಿತಮುಟಿತಮೆಂಬ ಪಲವುಂ ತೆಜದಿಱುವ ಬಿನ್ನಣದೊಳ್ ನೆಱೆದು ತಾಳುಂತಟ್ಟುಂ ಪೊಯ್ಯೆ (ಪಂರಾಮಾ. ೧೩-೫೪ ವ). [ಸಂ.]

**ನಿರ್ಘಾತನ** (ನಾ). ಹೊಡೆತ ; ಪೆಟ್ಟು : 'ನಿರ್ಘಾತನಂಗೆಯ್' ಪರಾ. [ಸಂ.]

**ನಿರ್ಘಾತನಂಗೆಯ್** (ಕ್ರಿ). ಹೊಡೆ ; ಬಡಿ : ಕಡುಕೈದು ದುರ್ಗಿನಿರ್ಘಾತನಂಗೆಯ್ಯೆ ಕೋಡುಡಿದ ಮಹಿಷಾಸುರನೊ ಎಂದೆಂಬ ಸಂದೇಹಕೆಡೆಯಾದ ಸೊಕ್ಕಿದೆಕ್ಕಲನನೊಂದಂ ಕಂಡೆನರಸ (ಹಚಕಾ. ೬-೨೦).
[ನಿರ್ಘಾತನ + ಕೆಯ್$_1$]

**ನಿರ್ಘಾತವಾತ** (ನಾ). ಪ್ರಬಲವಾದ ಬಿರುಗಾಳಿ : ಪರವಾಚಾಳನೃಪಾಳಜಾಳಕುಳನಾಶೋತ್ಪಾತನಿರ್ಘಾತವಾತರವಂ ವಿಕ್ರಮನಾಟಕಾಭಿನಯನಾಂದೀಮಂಗಳಾತೋದ್ಯಹೃದ್ಯರವಂ ತಾನೆನೆ ಘೂರ್ಣಿಸಿತ್ತು . . . ಭೇರೀರವಂ (ಪುಷ್ಪಪು. ೫-೭). [ನಿರ್ಘಾತ + ವಾತ]

**ನಿರ್ಘಾತಾಪಾತ** (ನಾ). ಸಿಡಿಲು ಬೀಳುವಿಕೆ; ಸಿಡಿಲಿನ ಹೊಡೆತ: ಇಂದಿಂಗೇೞನೆಯ ದಿವಸದಂದಿಗೆ ಪೌದನಪುರಾಧೀಶನುಸ್ತಕದೊಳ್ ನಿರ್ಘಾತಾಪಾತಮಕ್ಕುಮೆಂದಾದೇಶಂಗೆಯ್ವುದುಂ (ಶಾಂತಿಪು. ೬-೨೪ ವ).
[ನಿರ್ಘಾತ+ಆಪಾತ]

**ನಿರ್ಘಾತಿಸು**(ಕ್ರಿ). ಬಲವಾಗಿ ಹೊಡೆ: ಜೋರಾಗಿ ಪೆಟ್ಟು ಕೊಡು: ನಿಮ್ಮವನಾದಡೆ ಮಾತನಾಡದೆ ಹಗೆಯವೊಲು ನಿರ್ಘಾತಿಸುವನೇ (ನಿಭಾಗ. ೭-೨-೨೬). [ನಿರ್ಘಾತ+-ಇಸು$_3$]

**ನಿರ್ಘೃಣ** (ನಾ). **೧.** ಕ್ರೂರವಾದುದು : ನಡುವೆ ಕಬ್ಬಿಣದ ಸಲಾಕೆಗಳು ನಿರ್ಘೃಣವಾಗಿ ನಿಂತಿದ್ದರೂ . ಅವಳು ನರಹರಿಯನ್ನು ಕಣ್ತುಂಬ ನೋಡಿ ಹಿಗ್ಗಿದಳು (ಸಸುಜೀ. ೬೬೧). **೨.** ಕರುಣೆಯಿಲ್ಲದವನು ; ದಯಾಹೀನ ; ಕ್ರೂರ : ಜೀವಡೆಗಳ ಪುಣ್ಣಲಿಂ ತೊರೆವ ನೆತ್ತರ ಕೆಯ್ಯಡುಗಲ್ಕೆ ನೀಡಿ ಕೀಲಿಡೆಯಿಡೆ ಗಂಟಲಿಂ ಮುಱಿದನೊರ್ಮೆಯೆ ನಿರ್ಘೃಣನೆನ್ನಯ ತಂದೆಯಂ (ಕಾದಂಪೂ. ೧೮೩); ಪಾಪಿ ಕೈವಲ್ಯಲಕ್ಷ್ಮಿಯಂ ಬಿಡುವಂತಿರೆ, ನಿರ್ಘೃಣನಾಂ ಭಾಗ್ಯಲಕ್ಷ್ಮಿಯಂ ಬಿಡುವೆಂ (ರಾಮಾಶ್ವ. ೨೬-೧೪) ; ಶಾಸ್ತ್ರಿ ಇಷ್ಟು ನಿರ್ಘೃಣನಾಗಬಹುದೆಂದು ಸುಬ್ಬ ಒಂದು ಕ್ಷಣವೂ ಯೋಚಿಸಿರಲಿಲ್ಲ (ಅನಾಥೆ. ೨೭೬). [ಸಂ.]

**ನಿರ್ಘೃಣಾತ್ಮಕ** (ನಾ). ದಯವಿಲ್ಲದವನು ; ನಿಷ್ಕರುಣಿ : ಪುತ್ರನನು . . . ನಿರ್ಘೃಣಾತ್ಮಕರಾಗಿ ಹೊಡೆವಂದದೆಂತವರ ತೋಳು ಬೀಳದೆ ನಿಂದುವು ? (ಭಾಸನಾ. ೬೬). [ಸಂ.]

**ನಿರ್ಘೋಷ** (ನಾ). ಏರುದನಿ ; ದೊಡ್ಡಧ್ವನಿ ; ಜೋರಾದ ಧ್ವನಿ : ವಿಬುಧವಂದಿವ್ರಾತಮಾಂಗಲ್ಯಪಾಠರವಂ ಭೋಂಕನೆ ಕೇಳಲಾಯ್ತು ಗೆಲೆವಂದಂಭೋಧಿನಿರ್ಘೋಷಮಂ (ಜಗವಿ. ೧-೪೬); ನೇವುರದ ದನಿ ದಟ್ಟಿಸಿತು ವೇದಾವಳಿಯ ನಿರ್ಘೋಷವನು ನಾನಾವಿಭೂಷಣಕಾಂತಿ ಕೆಣಕಿತು ಮುನಿಸಮಾಧಿಗಳ(ಕುವ್ಯಾಅ.೧೮-೬); ನೀರುಬ್ಬುಗಳ ನಿರ್ಘೋಷ ದಬ್ಬರದ ಬಿಱುಬು ತೆರೆಗಳ . . . ತೂಳುವ ಫೇನಪಿಂಡದ ಗುಱುಬಿನಲಿ ಗಾಡಿಸಿತು ಗೋದಾವರಿ ಕಕುತ್ಸ್ಥಜನ (ತೊರರಾ. ೩-೧-೪೭). [ಸಂ.]

**ನಿರ್ಘೋಷಣ**(ನಾ). = ನಿರ್ಘೋಷ: ಘನಘಂಟಾಘೋರನಿರ್ಘೋಷಣಚಕಿತದಿಶಾಸಿಂಧುರಂ (ಮಲ್ಲಿಪು. ೮-೧೩೩) ; ಚಾತಕೋದಕಕೇಳೀಕೃತ ತೂರ್ಯನಾದಮೆಸೆದತ್ತಂಭೋದನಿರ್ಘೋಷಣಂ (ಚಂದ್ರಪು. ೪-೩೫).
[ಸಂ.]

**ನಿರ್ಘೋಷಿಸು** (ಕ್ರಿ). ದೊಡ್ಡಧ್ವನಿ ಮಾಡು ; ಉದ್ಘಾರಿಸು : ಭಾಸುರಾಸೆಯೊಳು ನಿರ್ಘೋಷಿಸುವ ಪ್ರಣವಸ್ವರೂಪಿಯಾದವ ಶಿವಗೆ (ಕರಿಕ. ೧೪೩-೩). [ನಿರ್ಘೋಷ+-ಇಸು$_3$]

**ನಿರ್ಜಂತುಕ** (ಗು). ಜೀವಿಗಳಿಲ್ಲದ; ಜನರಹಿತವಾದ; ನಿರ್ಜನವಾದ : ವಿಶಾಳ ನಿರಾಕುಳ ನಿರ್ಜಂತುಕ ನಿರ್ಮಲಶಿಲಾಪಟ್ಟದೊಳ್ . . . ಪೂರ್ವಾಭಿಮುಖನುಮಾಗಿರ್ದಾಗಳ್ (ಆದಿಪು. ೧೦-೧೩ ವ) ; ನಿರ್ಜಂತುಕ ಪ್ರದೇಶದೊಳಿರ್ದ ಶಿಲಾಪಟ್ಟಕದ ಮೇಲೆ ಪೂರ್ವಾಭಿಮುಖನಾಗಿ . . . ನಿಂದಂ (ಸುಕುಮಾ.೮-೫೮ ವ); ಸೀತೆಯನೊಡಗೊಂಡು ಪೋಗಿ ಭೀಮಾಟವಿಯೊಳ್ ನಿರ್ಜಂತುಕ [ಪಾಠಾಂ. ನಿರ್ಜನ]ಪ್ರದೇಶದೊಳ್ ಬಿಟ್ಟು ಬರ್ಪುದು (ಪಂರಾಮಾ. ೧೫-೭೩ ವ). [ಸಂ.]

**ನಿರ್ಜಡ** (ಗು). **೧.** ಆಲಸ್ಯವಿಲ್ಲದ; ಲವಲವಿಕೆಯ; ಉಲ್ಲಾಸದ ; ಉತ್ಸಾಹದ. (ನಾ). **೨.** ಆಲಸ್ಯವಿಲ್ಲದವನು ; ಲವಲವಿಕೆಯುಳ್ಳವನು ; ಉತ್ಸಾಹಿ : ನೀತಿಜ್ಞಂ ನಿಜ ನಿತ್ಯತತ್ತ್ವನಿಪುಣಂ ನಿಷ್ಪಾಪರಂ ನಿರ್ಜಡಂ ಪೂತಾತ್ಮಂ ಪರಿತೋಷಪಂಡಿತವರಂ (ಹಮ್ಮಿ. ೧-೨೭) ; ನಿಷ್ಕಳಂಕ ಜಯಶಂಕರ ನಿರ್ಜಡ[ಪಾಠಾಂ. ರ]ಶಾಂಭವೀಧವಾ (ಶಬಶಂ. ೫-೨೪). [ಸಂ.]

**ನಿರ್ಜಣಿಸು ?** (ಕ್ರಿ). ( ? ) : ಬಜ್ಜಿ ತಾಳಿದಗಳಂ ಕೆಲಬಲದಿ ಬಡಿಸುತಂ ಕಜ್ಜಳಮನಳಿದು ಬೆಳ್ಪೆಸೆವ ಗೋಧಿಯನೌಚ ನಿರ್ಜಣಿಸಿ ತುಯ್ಯಲಂ ಕಾಸಿ ಗೋಕ್ಷೀರಮಂ ಪರ್ಜಳಿಸುತಿನಿದುಗೂಡಿ ಸರ್ಜಕದ ಪಂಚಧಾರೆಯ ನೆಱದು ಪರಿಮಳದೊಳುರ್ಜುಗಿಸಿ ಪಚನದಿಂ ಚೆಲ್ವಾಗಿ ರಸ ಬಸಿವ ಸೊರ್ಜಗೆಯ ಪರಮಾನ್ನಮಂ ಸವಿದು ಕರುಣಿಪುದು ಮಜ್ಜೀವಿತೇಶಬಲರು (ಲಿಂಗಪು. ೮-೪). 'ಜಣಿಸು' ಪರಾ. [ ? + -ಇಸು$_3$]

**ನಿರ್ಜನ** (ಗು). **೧.** ಜನರಹಿತವಾದ ; ಜನವಿಲ್ಲದ : ಬಿಟ್ಟು ಬಂದೈ . . . ರಾಜಪುತ್ರರ ನಟ್ಟಡವಿಯಲಿ ನಿರ್ಜನಾರಣ್ಯಪ್ರದೇಶದಲಿ (ತೊರರಾ. ೨-೫-೪) ; ನಿರ್ಜನಾಟವಿಯೊಳೆಂತೊರ್ವಳೆಯೆ ಬರ್ದುಕುತಿಹೆ? (ಶ್ರೀರಾಮಾ. ೨೪೪-೪೪೪). (ನಾ). **೨.** ಜನರಹಿತವಾದ ಜಾಗ ; ಏಕಾಂತವಾದ ಸ್ಥಳ : ಆಭರಣವನು . . . ಪಾಂಡುಪುತ್ರರ ಮಾನಿನಿಗೆ ಕೊಡಿ ನಿರ್ಜನದೊಳಬುಜಾನನೆಯ ಸೇರಿಸುವುದೆಮಗೆಂದಟ್ಟಿದನು ಚರರ (ಕುವ್ಯಾಅ. ೨೨-೭) ; ಆ ಪ್ರದೇಶವು ನಿರ್ಜನವಾಗಿ ತೋರುತ್ತಿದ್ದಿತು (ಹೇಮಂತ. ೩೭). [ಸಂ.]

**ನಿರ್ಜರ**$_1$ (ನಾ). = ನಿರ್ಝರ : ನಿರ್ಜರದ ನಿಱಿಸು ನಿಡು ಜಂಝಾಸಮೀರನ ಬಿಱುಸು . . . ಕೇಳ್ ನನಮೇಘಕಾಲದಲಿ (ತೊರರಾ. ೪-೬-೭); ಹರಿವ ನಿರ್ಜರವಾರಿಗಳ . . . ತರುನಿಕರ ಪಲ್ಲವ ಪಲಾಶೋತ್ಕರ ಫಲಚ್ಛಾಯಾನಿವಾರಿತ ಕರಮರೀಚಿ ಮರೀಚಿಗಳಲೊಪ್ಪಿದುದು ವನಭೂಮಿ (ನಿಭಾಗ. ೧೦-೧೮-೫) ; ಪಂಚಬಾಣ ರಕ್ತಕಿರಣೆ ಮನ್ಮಥಸತಿ ಅಲಕ್ತಚರಣೆ ಜೀರ್ಕೋವಿಯ ಓಕುಳಿಯೆಣೆ ಚಿಮ್ಮುವಳೀ ನಿರ್ಜರಾ! (ಅನಿಕೇ. ೧೮-೮).
[<ಸಂ. ನಿರ್ಝರ]

**ನಿರ್ಜರ**$_2$ (ಗು). **೧.** ಪ್ರಾಯವಳಿಯದ ; ಮುಪ್ಪಾಗದ. **೨.** ಶಾಶ್ವತವಾದ ; ಅಮರವಾದ. **೩.** ದೇವಲೋಕಕ್ಕೆ ಸಂಬಂಧಿಸಿದ : 'ನಿರ್ಜರಕರಿ' ಪರಾ. (ನಾ). **೪.** ಶಾಶ್ವತವಾದುದು ; ನಿರಂತರವಾದುದು. **೫.** ಮುಪ್ಪಿಲ್ಲದವನು ; ದೇವತೆ; ಅಮರ : ಭುಜಬಲರೆನಿಪ್ಪ ನಿರ್ಜರರ ಮೊತ್ತಂಗಳಂ ಪರಿಪರಿಯ ವಾಹನದಿ ನಡೆವ

ದಿಗಧೀಶರಂ. . . ನೋಡುತಂ (ಸಂಜಿರ.೧೯-೯೬); ನುಡಿಯುನಾಲಿಸಿದನಾರೈ ನೀನು ನಿನಗಾಗಸದಲಿರವೇನಸುರನೋ ಕಿನ್ನರನೊ ನಿರ್ಜರನೊ ಉಸುರೆನಲು (ಕುಪ್ಯಾಅ.೨೩-೩೬); ಸೊಗಯಿಪುದು . . . ಗುರ್ಜರದೇಶಂ ನಿರ್ಜರರಾವಾಸದವೊಲ್ (ಉದ್ಭದೇ. ೨-೧೦) ; ವಡಬನುಪಟಳವೆಂದು ನಿರ್ಜರರೊಡೆಯ ಪಥವನು ಬೇಡೆ (ಸುದಾಪು. ೨-೨೫). **೬.** = ನಿರ್ಜರೆ **೩ :** ಇದನ್ನು ಕರ್ಮದ ಬಿದ್ದುಹೋಗುವಿಕೆ (ನಿರ್ಜರ) ಎಂದು ವರ್ಣಿಸಿದ್ದಾರೆ (ಕಶಾಅ. ೬೮) ; ಭಾವ–ಕರ್ಮಗಳ ನಿರ್ಜರ (ಕ್ಷಯ) (ಜೈನಪ. ೩೩೯).

**ನಿರ್ಜರರ ನಗರಿ** = ನಿರ್ಜರನಗರಿ : ಕೈದುಕಾಜರ ಗುರು ಛಡಾಳಿಸಿ ಮೈದೆಗೆದು ನಿರ್ಜರರ ನಗರಿಗೆ ಹಾಯ್ದನು (ಕುಪ್ಯಾದ್ರೋ. ೧-೩). [ಸಂ.]

**ನಿರ್ಜರಕಟಕ** (ನಾ). ದೇವತೆಗಳ ಸಮುದಾಯ; ಅಮರರ ಗುಂಪು : ರೂಢಿಗಗ್ಗದ ರಾಜಸೂಯದಲೂಡಿ ನಿರ್ಜರಕಟಕವನು ಖಿಯ ಖೋಡಿಯಿಲ್ಲದೆ ನಿಲಿಸಿದ್ಯೆ ತ್ರಿದಿವದಲಿ (ಕುಪ್ಯಾಸ. ೧೫-೬೧).
[ನಿರ್ಜರ$_2$ + ಕಟಕ$_3$]

**ನಿರ್ಜರಕರಿ** (ನಾ). ದೇವಲೋಕದ ಆನೆ ; ಐರಾವತ : ನಿರ್ಜರಕರಿ ಪಾಂಸುಕೇಳಿಯನೊಡರ್ಚುಗುಮಲ್ಲಿ ಜಯಪ್ರಯಾಣದೊಳ್ (ರಾಜಶೇ. ೩-೮). [ನಿರ್ಜರ$_2$ + ಕರಿ$_4$]

**ನಿರ್ಜರಗುರು** (ನಾ). ದೇವತೆಗಳ ಗುರು ; ಬೃಹಸ್ಪತಿ : ನಿರ್ಜರ ಗುರುವ ಪೋಲ್ವ ವಿಬುಧರ್ಕಳಿಂ ವರಮುನಿಯ ಸಭೆಯಂತೆ . . . ಮೆಱೆದುದಾ ರಾಯನೊಡ್ಡೋಲಗಂ ಸೈಪಿನಿಂದೆ (ಭಾಪಚಿಂ. ೭-೫).
[ನಿರ್ಜರ$_2$ + ಗುರು$_2$]

**ನಿರ್ಜರಣ** (ನಾ). [ಜೈನ] ಕರ್ಮವು ಕ್ಷಯಿಸುವುದು : 'ನಿರ್ಜರಣ ಕರಣ' ಪರಾ. [ಸಂ.]

**ನಿರ್ಜರಣಕರಣ** (ನಾ). [ಜೈನ] ಕರ್ಮವು ಕ್ಷಯಿಸುವಂತೆ ಮಾಡುವಿಕೆ : ಸಕಳಮಳನಿರ್ಜರಣ[ಪಾಠಾಂ. ನಿರ್ಜರಾ]ಕರಣಕಾರಣಮಂ ತಪಶ್ರೀಯಂ ಕೈಕೊಳಲ್ಬಗೆದು (ಆದಿಪು. ೧-೮೦ ಪ). [ನಿರ್ಜರಣ + ಕರಣ]

**ನಿರ್ಜರತತಿ** (ನಾ). = ನಿರ್ಜರಕಟಕ : ನಿರ್ಜರತತಿ ಮೊಱೆವುತ್ತಿರೆ ದುರ್ಜನಗಿರಿವಜ್ರನೆನಿಪ ಗಣನಾಥಂಗತ್ಯೂರ್ಜಿತ ಗಣಪದವಿತ್ತು (ತ್ರಿಷವಿ. ೩೯-೧೩). [ನಿರ್ಜರ$_2$ + ತತಿ$_2$]

**ನಿರ್ಜರಧೇನು** (ನಾ). ದೇವಲೋಕದ ಹಸು ; ಕಾಮಧೇನು : ಪರುಷದಂತಾ ವೇದದಳತೆಗೋಲಂತೆ ನಿರ್ಜರಧೇನುವಂತೆ ಪತಿಭಕ್ತಿಯಂತೆ . . . ರಂಜಿಸುವ ಕರಮಾ ಪ್ರವಾಳದಿಂದೆಸೆವ ದಂಡಿಗೆವಿಡಿದು ಜಾಣ ಗಾಣಂ ಪಾಡಿದಂ (ಭಾಪಚಿಂ. ೭-೭). [ನಿರ್ಜರ$_2$ + ಧೇನು]

**ನಿರ್ಜರನಗರಿ** (ನಾ). ದೇವತೆಗಳ ಪಟ್ಟಣ; ಅಮರಾವತಿ: ಕುಶಲವೇ ದೇವೇಂದ್ರನಾತನ ಶಶಿವದನೆಯರು ಸುಖಿಗಳೇ . . . ನಿರ್ಜರನಗರಿ ನಿರ್ಭಯವೇ (ಕುಪ್ಯಾಅ. ೧೧-೨೬). [ನಿರ್ಜರ$_2$ + ನಗರಿ]

**ನಿರ್ಜರನದೀಧಾರ** (ನಾ). ಗಂಗೆಯನ್ನು ಧರಿಸಿದವನು ; ಶಿವ ; ಈಶ್ವರ : ನಿರ್ಜರನದೀಧಾರನಂತತಿಚಪಲನಂದದಿಂ ಮದುವೆಯಾಗಾರ ದಂತಾ ಮುಸಲಿಯಂತೆ . . . ಮುಂಗಾರ್ ಬಂದುದು (ಭಾಪಚಿಂ. ೬-೨). [ಸಂ.]

**ನಿರ್ಜರನಾರಿ** (ನಾ). ದೇವತಾಸ್ತ್ರೀ : ನಿರ್ಜರನಾರಿಯರು ತೊತ್ತಾದರ ಮರಾರಿಗಳ ಮನೆಗಳಿಗೆ (ಕುಪ್ಯಾಕ. ೬-೧೧). [ನಿರ್ಜರ$_2$ + ನಾರಿ$_2$]

**ನಿರ್ಜರಪರ** (ನಾ). ದೇವತೆಗಳ ಶತ್ರು; ರಾಕ್ಷಸ: 'ನಿರ್ಜರಪರಭಂಗ' ಪರಾ. [ಸಂ.]

**ನಿರ್ಜರಪರಭಂಗ** (ನಾ). ರಾಕ್ಷಸರನ್ನು ನಾಶಮಾಡಿದವನು ; ಶಿವ : ನಿರ್ಜರಪರಭಂಗ ತುಂಗಮಹಿಮಾಕರ . . . ನಿತ್ಯಜಯಕಿಂಕರ ಶಂಕರ ಚಂದ್ರಶೇಖರಾ (ರಾಜಶೇ. ೧೩-೫೩). [ನಿರ್ಜರಪರ + ಭಂಗ]

**ನಿರ್ಜರಾತತ್ತ್ವ** (ನಾ). [ಜೈನ] ಏಳು ತತ್ತ್ವಗಳಲ್ಲಿ ಒಂದು : ಜೀವತತ್ತ್ವಮಜೀವತತ್ತ್ವಮಾಸ್ರವತತ್ತ್ವಂ ಬಂಧತತ್ತ್ವಂ ಸಂವರಾತತ್ತ್ವಂ ನಿರ್ಜರಾತತ್ತ್ವಂ ಮೋಕ್ಷತತ್ತ್ವಮೆಂಬ ಸಪ್ತತತ್ತ್ವರೂಪಮುಮಂ . . . ಕೈಕೊಂಡು (ಸುಕುಮಾ. ೩-೩೯ ಪ). 'ಸಪ್ತತತ್ತ್ವ' ಪರಾ. [ಸಂ.]

**ನಿರ್ಜರಾಧಿಪ** (ನಾ). ದೇವತೆಗಳ ಒಡೆಯ ; ಇಂದ್ರ : ನಿರ್ಜರಾಧಿಪ ಮುಖ್ಯ ದಿಕ್ಪಾಲನಮಿತಚರಣಾರ್ಜವಸುಮಿತ್ರ ಸಿತದೀಪ್ತಿಯುಷಿ ದೂರ್ಯಗೋ ಅರ್ಜುನಂಗೊಲಿದು ಶರವಿತ್ತಭವ ಸಂಗಮೇಶ್ವರ ರಕ್ಷಿಸೆನ್ನ (ಪ್ರಾಥಂರಾ. ೭-೧). [ನಿರ್ಜರ$_2$ + ಅಧಿಪ]

**ನಿರ್ಜರಾಧೀಶ** (ನಾ). = ನಿರ್ಜರಾಧಿಪ : ಸಲೆ ನಿರ್ಜರಾಧೀಶ ವೃದ್ಧ ಶ್ರವಂಗೆಯೊಪ್ಪಲು ಜೀವನಾಗಿ ಚಿತ್ರಶಿಖಂಡಿಜಂ ಮಂತ್ರಿತಿಲಕಂ ಗಡಾ (ಭಾಪಚಿಂ. ೨-೧೯). [ನಿರ್ಜರ$_2$ + ಅಧೀಶ]

**ನಿರ್ಜರಾನುಪ್ರೇಕ್ಷೆ** (ನಾ). [ಜೈನ] ಹನ್ನೆರಡು ಅನುಪ್ರೇಕ್ಷೆಗಳಲ್ಲಿ ಒಂದು ; ☞ ಕರ್ಮವನ್ನು ಕ್ಷಯಿಸುವ ಅನಶನವೇ ಮೊದಲಾಗಿ ಹನ್ನೆರಡು ಪ್ರಕಾರವಾದ ತಪಸ್ಸನ್ನು ಕುರಿತು ವಿಚಾರ ಅಥವಾ ಚಿಂತನೆ ಮಾಡುವಿಕೆ : ವಿಭಾವಪರಿಣತಿಯಿಂ ಜೀವಪ್ರದೇಶಂಗಳಿಂ ಕ್ಷೀರನ್ಯಾಯದಿಂ ಬಂದು ಪೊರ್ದಿದ ಕರ್ಮಮಲಕಲಂಕಪಂಕಮುಂ ವ್ರತ ಗುಣಚಾರಿತ್ರಮುಂ ಭೇದವಿಜ್ಞಾನಮೆಂಬ ಜಲದಿಂ ತೊಳೆದು ಕಳೆವುದು ನಿರ್ಜರಾನುಪ್ರೇಕ್ಷೆ (ಶ್ರಾಪಕಾ. ೧೪೭-೨೨) ; ನಿರ್ಜರಾನುಪ್ರೇಕ್ಷೆ— ಕರ್ಮನಿರ್ಜರೆಯು ಏತರಿಂದಾದೀತೆಂದು ಭಾವಿಸುವುದು (ಜೈನಧ. ೮೩).
[ನಿರ್ಜರ$_2$ + ಅನುಪ್ರೇಕ್ಷೆ]

**ನಿರ್ಜರಾರ್ಯ** (ನಾ). = ನಿರ್ಜರಗುರು : ನಿರ್ಜರಾರ್ಯಹಿತೆ ಹೈಮ ಕ್ಷ್ಮಾಧ್ರಸಂಜಾತೆಯಾಕ್ರಮಿತಸ್ಥಾಣು ಮೃಡಾನಿ ಕಲ್ಪಲತೆಯಂತೀಗೆಮ್ಮಭೀಷ್ಟಾರ್ಥಮಂ (ರಾಜಶೇ. ೧೪-೧೮೩). [ನಿರ್ಜರ$_2$ + ಆರ್ಯ]

**ನಿರ್ಜರಾವಿಧಿ** (ನಾ). [ಜೈನ] ಕರ್ಮಗಳನ್ನು ನಾಶಪಡಿಸುವ ಕ್ರಮ (?) : ಯಥಾಪ್ರಯೋಗಸಮಯಪ್ರತಿಸಮಯಂಗಳನಂತಗುಣ ಹಾನಿರೂಪ ನಿರ್ಜರಾವಿಧಿಯಿನಾಯುಃಕರ್ಮಮುೞಿಯಲುೞಿದ ಕರ್ಮಂಗಳ ಪ್ರಕೃತಿಸ್ಥಿತ್ಯನುಭಾಗಂಗಳಂ ಕೞಲ್ಚಿ ಕಳೆಯುತ್ತುಂ (ಸುಕುಮಾ. ೮-೬೨ ಪ). 'ನಿರ್ಜರೆ' ಪರಾ. [ಸಂ.]

**ನಿರ್ಜರಿಸು** (ಕ್ರಿ). ೧. [ಜೈನ] ಕರ್ಮವು ಕ್ಷಯಿಸು,— ನಾಶ ಹೊಂದು,—ಸವೆ : ಇಂತೀ ಪ್ರಕಾರದಿಂ ಅಗೃಹೀತಗ್ರಹಣಶಲಾಕಾ ನಿಚಯಂ ಅನಂತವಾರಂ ಪೋಗಿ ಪುದ್ಗಲಪರಿವರ್ತನಪ್ರಥಮಸಮಯ ಗೃಹೀತನೋಕರ್ಮಸಮಯ ಪ್ರಬಂಧಪುದ್ಗಲಂಗಳ್ ದ್ವಿತೀಯಾದಿ ಸಮಯದೊಳ್ ನಿರ್ಜರಿಸಿದುವು (ತತ್ತ್ವಪ್ರ. ೮೮); ಕರ್ಮಂ ತನ್ನುದಯಮಂ ತಾನೆ ಕೊಟ್ಟು ನಿರ್ಜರಿಸುಗುಂ (ಪಸಾರ.೩೪) ; ಏಕಾದಶ ನಿರ್ಜರೆಗಳಸಂಖ್ಯಾತಗುಣಿತಕ್ರಮದಿಂ ಕರ್ಮ ನಿರ್ಜರಿಸುಗುಂ (ಶ್ರಾಪಕಾ.೭೫-೨೦). **೨.** (ಕರ್ಮವನ್ನು) ಕ್ಷಯಿಸುವಂತೆ ಮಾಡು,—ಹೋಗಲಾಡಿಸು: ಕರಣಮನುಪಶಮಿಸುವ ನಿರ್ಜರಿಸುವ ಕರ್ಮಂಗಳಂ ಶುಭಧ್ಯಾನಮನುದ್ಧರಿಸುವ ಬಗೆಯಿಂ ತಳೆದಂ . . . ಅನಶನಮಂ (ಮಲ್ಲಿಪು. ೧೧-೨೨) ; ಸರಸದೊಳಗೆ ಸವಿಮಾತಿನೊಳಘುವ ನಿರ್ಜರಿಸುವ ಸಾಮರ್ಥ್ಯವುಳ್ಳ ಪರಮ ನೀನೆನ್ನಂತರಂಗದ್ಪೊಳಿರು (ಭರಚ. ೩೩-೯೧). [ನಿರ್ಜರ$_2$ + -ಇಸು$_3$]

**ನಿರ್ಜರೀಭವೆ** (ನಾ). ದೇವತಾಸ್ತ್ರೀಯ ಮಗಳು : ಅವಳನದೇಪರಿ ವಿವರಿಪೆ ನಿರ್ಜರೀಭವೆಯಲಾ ಸುಂದರಿ ನವರಸಲಹರಿ (ಶಾಕುಂತ. ೨೪ ಅಡಿಟ). [ಸಂ. ನಿರ್ಜರೀಭವಾ(ನಿರ್ಜರೀ + ಭವ + -)]

**ನಿರ್ಜರೆ** (ನಾ). ೧. ಮುಪ್ಪು ಇಲ್ಲದುದು ; ಅಮರತೆ ; ಶಾಶ್ವತತೆ: ಪಂಪ ಹುಟ್ಟೆ ಭಾರತವ ಕಟ್ಟೆ ಹಿರಿ ಸಿದ್ಧಪದವ ಮುಟ್ಟೆ ನಿರ್ಜರೆಯ ಪಡೆದ (ಮುಕ್ತಕಂ. ೨೪-೧೦). **೨.** ದೇವಲೋಕದ ಹೆಂಗಸು :

ದೇವತಾಸ್ತ್ರೀ : ಮನ್ಮಥಸೃಷ್ಟಿಯಂತೆಸೆವ ಮಾಹೇಂದ್ರಾಗ್ರದಿಂ ಬಂದ ನಿರ್ಜರನಾ ನಿರ್ಜರೆಯುರ್ಜಯಾವತಿಯುಮಂತಾ ಸೀತೆಯುಂ ಪೆಂಡಿರಾಗಿರೆ . . . ಧರೆಯನಾಳ್ದಂ ಸಂದ ಸೋಮಪ್ರಭಂ (ಅನಂಪು. ೧೨-೪೪). ೩. [ಜೈನ] ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ ಮತ್ತು ಮೋಕ್ಷಗಳೆಂಬ ಸಪ್ತತತ್ತ್ವಗಳಲ್ಲಿ ಒಂದು ; ಸಂಚಿತ ಕರ್ಮಗಳು ತಪಸ್ಸಿನಿಂದ ನಾಶವಾಗುವಿಕೆ ; ಕರ್ಮಕ್ಷಯ : ಯಥಾಕಾಲಾನುಭವನ ತಪೋನಿಮಿತ್ತಮಾಗಿ ಸವಿಪಾಕಾವಿಪಾಕರೂಪದಿಂ ಪೂರ್ವಾರ್ಜಿತಕರ್ಮನಿರ್ಜರಣಂ ನಿರ್ಜರೆಯೆಂಬುದು (ಆಪಿಪು. ೧೦-೬೩ ಪ); ಪೂರ್ವೋಪಾರ್ಜಿತ ಪರುಷಕರ್ಮನಿರ್ಜರಣಾಕಾರಣಂ ನಿರ್ಜರೆಯೆಂಬುದಕ್ಕುಂ (ಶಾಂತಿಪು. ೧೨-೫ ಪ) ; ತರದಿಂ ಜೀವಮಜೀವಮಾಸ್ರವಮುಘ ವ್ಯಾಪಾರಬಂಧಂ ಸುಸಂವರಮಾ ನಿರ್ಜರೆ ಮೋಕ್ಷಮೆಂದು ಸಲೆ ತತ್ತ್ವಂ ಸಪ್ತಭೇದಂ (ಸುಕುಮಾ. ೮-೪) ; ಹೊಸತಾಗಿ ಬರ್ಪುದ ತಡೆವುದೆ ಸಂವರೆ ಕಿಸುರದೆ ಹಳೆಯ ಕರ್ಮಗಳ ಕುಸಿಗುಟ್ಟುವುದೆ ತಾನೆ ನಿರ್ಜರೆ (ಭರಚ. ೬೮-೭೧). ೪. = ನಿರ್ಜರಾನುಪ್ರೇಕ್ಷೆ : ಎಂದಿಂತಧ್ರುವಮಶರಣಮೇಕತ್ವಮನ್ಯತ್ವಮಶುಚಿತ್ವಂ ಸಂಸಾರಂ ಲೋಕಮಾಸ್ರವ ಸಂವರೆ ನಿರ್ಜರೆ ಬೋಧಿ ದುರ್ಲಭಧರ್ಮಸ್ವಾಖ್ಯಾತಮೆಂಬುವ ಪನ್ನೆರಡುಮನುಪ್ರೇಕ್ಷೆಯಂ ಕ್ರಮದಿನನುಸ್ಮರಿಸುತ್ತಾ ವಿರ್ಪನ್ನೆಗಂ (ಅಜಿಪು. ೬-೬೧ ಪ). 'ದ್ವಾದಶಾನುಪ್ರೇಕ್ಷೆ' ಪರಾ. ೫. (?) : ಋಜುಮತಿಯ ಜಘನ್ಯಂ ದ್ರವ್ಯದಿಂ ಔದಾರಿಕಶರೀರನಿರ್ಜರೆಯಂ ಉತ್ಕೃಷ್ಟದಿಂ ಚಕ್ಷುರಿಂದ್ರಿಯನಿರ್ಜರೆಯಂ ಅಱಿಗುಂ (ತತ್ತ್ವಪ್ರ. ೬೯). [ಸಂ. ನಿರ್ಜರಾ]

**ನಿರ್ಜರೇಂದ್ರ** (ನಾ). = ನಿರ್ಜರಾಧಿಪ : ನಿರ್ಜರೇಂದ್ರನ ಸೂನು ಪೊನಲಿಡಲ್ಪಿಸಿಯನೆತ್ತರ್ಜೊಂಪಿಸುತೆ ಮೈಮಱೆದು ಬಿದ್ದನಿಳೆಯೊಳ್ (ಜೈಮಿಭಾ. ೨೫-೩೫). [ನಿರ್ಜರ$_2$ + ಇಂದ್ರ]

**ನಿರ್ಜಲ, ನಿರ್ಜಳ** (ಗು). ೧. ನೀರಿಲ್ಲದ ; ಒಣಗಿದ. (ನಾ). ೨. ನೀರಿಲ್ಲದುದು : ದೂರವಾದುದು ನಿಳಯವೀ ಕಾಂತಾರ ನಿರ್ಜಲವೈದಲಂಘ್ರಿಗೆ ಭಾರ ಪಥವಿನ್ನೇನು ಹದನು (ಕುಪ್ಯಾಅ. ೨೩-೧೨). **ನಿರ್ಜಳ** : ೨. ಆತಪತಾಪದಿಂದಮಿದು ನಿಸ್ತೃಣ ನಿರ್ಜಳ ನಿಷ್ಪಾಳವಲ್ಲೀತರುವಾದುದೀಯೆಡೆಯೊಳಿನ್ನಿರವಾಗದು ಪೋಪುದುತ್ತಮಂ (ಜಗವಿ. ೩-೬೫). [ಸಂ.]

**ನಿರ್ಜಳ** 'ನಿರ್ಜಲ' ನೋ.

**ನಿರ್ಜಾಡಿಸು** 'ನಿರ್ಧಾಟಿಸು' ನೋ.

**ನಿರ್ಜಾತ** (ಗು). ೧. ಕಾಣಿಸುವ ; ವ್ಯಕ್ತವಾಗುವ ; ಗೋಚರವಾಗುವ. (ನಾ). ೨. ಹುಟ್ಟಿಲ್ಲದವನು ; ಜನ್ಮರಹಿತನಾದವನು : ಸಸಿ ಫಲವ ಬಲ್ಲುದೆ ನಿರ್ಜಾತರ ಜಾತ ಬಲ್ಲನೇ ಅವನೇತಕ್ಕೂ ಸಿಕ್ಕ (ಮೋಳಿಮಾ. ೮೭-೩೪೪) ; ನಿರ್ಜಾತ ನಿರ್ಮಾಯಲನೆಯ್ದಿದ ಮಹಾಂತ ಕೂಡಲಚನ್ನಸಂಗಮ (ಪದಗೋ. ೭೦೦-೫) ; ನಿರ್ಲೇಪ ನಿರ್ಜಾತ ನಿರ್ಮಾಯ ನಿರಾಕಾರ ನಿರ್ಲಕ್ಷ್ಯ (ಏಕೋಪು. ೫-೭೫). [ಸಂ.]

**ನಿರ್ಜಿತ** (ಗು). ಜಯಿಸಿದ ; ಗೆದ್ದ : ಅದನಾಳ್ವಂ . . . ಅನೇಕಸಮರ ಸಮ್ಮರ್ದನನಿರ್ಜಿತೋರ್ಜಿತಾರಾತಿಬಲನತಬಲನೆಂಬಂ (ಆದಿಪು. ೧-೭೧ ಪ); ಶ್ರೀನಾರೀಕಾನ್ತಂ ನಿರ್ಜ್ಜಿತವೈರಿವ್ರಜನೆನಿಸಿ ಪಿಟ್ಟುಗಂ ಸಲೆ ನೆಗೞ್ದಂ (ಸೌಇಇ. XX, ೧೮-೧೨ ; 980) ; ಆ ರವಮಂ ನಿರ್ಜಿತಕಂಠೀರವರವಮಂ ನಿರಸ್ತಘನರವಮಂ ಕೋಪಾರುಣನೇತ್ರಂ ಕೇಳ್ದಾ ನೀರೊಳಗಿರ್ದುಂ ಬೆಮರ್ತನುರಗಪತಾಕಂ (ಗದಾಯು. ೭-೨೨) ; ದಂದಶೂಕಪತಾಕನ ಸೆರಗಿಲ್ಲದ ಮೆಯ್ಗಲಿತನಕ್ಕೆ ಮೆಚ್ಚಿ ತಲೆಯಂ ತೂಗಿ ನಿಜಭುಜಪ್ರತಾಪ ನಿರ್ಜಿತ ನಿಖಿಲಭೀಮಸೇನಂ ಭೀಮಸೇನಂ ಕೌರವನಿದಿರ್ಗೆ ವಂದು (ಗದಾಯು. ೭-೩೦ ಪ). [ಸಂ.]

**ನಿರ್ಜಿತಕಾಮ** (ನಾ). ೧. ಕಾಮವನ್ನು ಗೆದ್ದವನು. ೨. ಶಿವ ನಿರ್ಜಿತಕಾಮಂ ಮನದಿಷ್ಟವಸತಿಶಯದಿಂದೀಯಲೆಂದು ಬಂದಂ ಬೇಗಂ (ಹವಿಸ್ಮರ. ೨-೮). [ನಿರ್ಜಿತ + ಕಾಮ]

**ನಿರ್ಜಿತಮಾಯ** (ನಾ). ೧. ಮಾಯೆಯನ್ನು ಗೆದ್ದವನು. ೨. ವಿಷ್ಣು : ಪಾಂಡವರಾಯ ಜಂಗಮಜೀವ ನಿರ್ಜಿತಮಾಯ ನಿಜವನು ತೋಱಿ ಪಾರ್ಥನನೊಲಿದು ಬೋಧಿಸಿದ (ಕುಪ್ಯಾಭೀ. ೩ ಸೂಚನೆ). [ನಿರ್ಜಿತ + ಮಾಯ]

**ನಿರ್ಜಿತಮಾರ** (ನಾ). ೧. = ನಿರ್ಜಿತಕಾಮ ೨. ೨. ಮನ್ಮಥನನ್ನು ಮಾರಿಸಿದ ಸುಂದರ ; ಕೃಷ್ಣ : ಭುವನಾಧಾರ ನಿರ್ಜಿತಮಾರ ಮುರಹರ ಸಲಹಬೇಕೆಂದ (ಕುಪ್ಯಾಭೀ. ೩-೮೭). [ನಿರ್ಜಿತ + ಮಾರ]

**ನಿರ್ಜಿತಸುರ** (ನಾ). ೧. ದೇವತೆಗಳನ್ನು ಸೋಲಿಸಿದವನು. ೨. ದೇವತೆಗಳೆಲ್ಲರಿಗಿಂತಲೂ ಶ್ರೇಷ್ಠ : ಶಿವ : ನಿರ್ಜಿತಸುರ ನಿಟಲಾಕ್ಷ ಮಹೋರ್ಜಿತ ಮಹಿಮಾಭಿರಾಮ . . . ಜಯ ಭವನಾಶ (ತ್ರಿಪುವಿ. ೭-೬೦). [ನಿರ್ಜಿತ + ಸುರ]

**ನಿರ್ಜಿತೇಂದ್ರಿಯ** (ನಾ). ಇಂದ್ರಿಯಗಳನ್ನು ಗೆದ್ದವನು : ನೋಟದಲಿ ಮದನಾಸ್ತ್ರವೆದೆಯಲಿ ನಾಟಿದವು ವಿಟರುಗಳ ಹುಬ್ಬಿನ ಬೇಟದಲಿ ಬೆಂಡಾದರಗ್ಗದ ನಿರ್ಜಿತೇಂದ್ರಿಯರು (ತೊರರಾ. ೧-೧೪-೨೪). [ನಿರ್ಜಿತ + ಇಂದ್ರಿಯ]

**ನಿರ್ಜೀರ್ಣ** (ಗು). ೧. ಕ್ಷಯವಾಗದ ; ಕ್ಷೀಣಿಸದ ; ಕುಗ್ಗದ. (ನಾ). ೨. ಕ್ಷೀಣಿಸದಂತಹುದು ; ಕ್ಷಯಿಸದುದು : ಸಮಯಾಧಿಕಾವಲಿಕಾಲಾತಿಕ್ರಾಂತಾನಂತರ ದ್ವಿತೀಯಾದಿ ಸಮಯಂಗಳೊಳ್ ನಿರ್ಜೀರ್ಣಮುಂ ಅಪ್ಪ ಪುದ್ಗಲಚಯಂ ಕರ್ಮಪುದ್ಗಲಪರಿವರ್ತನಮಕ್ಕುಂ (ತತ್ತ್ವಪ್ರ. ೮೭). [ಸಂ.]

**ನಿರ್ಜೀವ** (ಗು). ೧. ಜೀವವಿಲ್ಲದ ; ಜಡವಾದ ; ಅಚೇತನವಾದ: ಧರಣಿಗರಸುಂಟಾದಡರ್ಥೋತ್ಕರ ಸಕಲವುಂಟಹವದಿಲ್ಲದಡರಸ ಕೇಳ್ ನಿರ್ಜೀವ ದೇಹವಿದೆಂದನಾಂಗಿರಸ (ತಿಮ್ಮಶಾಂ. ೨-೩೯). (ನಾ). ೨. ಜೀವರಹಿತವಾದುದು ; ಜೀವವಿಲ್ಲದುದು : ಗರ್ಜನೆಯ ದನಿಗಖಿಳ ಲೋಕದ ಜನಂ ಬೆರ್ಚಿ ನಿರ್ಜೀವಮಾಯ್ತು (ಚೆಬಪು.೪೭-೨೦) ; ಪೃಥಿವಿಪತಿ ಮುಕುಗಣ್ಣಿಂ ದಿಟ್ಟಿಸಿರ್ದನು ಶವಾಕ್ಷಿಯೋಲ್, ನಿರ್ಜೀವನೆನೆ ನಿಶ್ಚಲಂ (ಶ್ರೀರಾಮಾ. ೧೦೧-೩೪). [ಸಂ.]

**ನಿರ್ಜೀವತತ್ತ್ವ** (ನಾ). [ಜೈನ] ಜೀವ, ಅಜೀವ, ಆಸ್ರವ, ಬಂಧ, ಸಂವರೆ, ನಿರ್ಜರೆ, ಮೋಕ್ಷಗಳೆಂಬ ಸಪ್ತತತ್ತ್ವಗಳಲ್ಲಿ ಎರಡನೆಯದು ; ಅಜೀವ ಪದಾರ್ಥ ; ಚೈತನ್ಯರಹಿತ ವಸ್ತು ; ☞ ಈ ಸಿದ್ಧಾಂತದಂತೆ ಅಜೀವತತ್ತ್ವದಲ್ಲಿ ಪುದ್ಗಲ (ಪ್ರಾಣಿಗಳ ಶರೀರ), ಧರ್ಮ, ಅಧರ್ಮ, ಆಕಾಶ, ಕಾಲ ಎಂಬ ಐದು ಭೇದಗಳಿವೆ. ಪುದ್ಗಲದಲ್ಲಿ ಮೂರ್ತನಿರ್ಜೀವ (ಕಣ್ಣಿಗೆ ಕಾಣುವ ವಸ್ತು) ಅಮೂರ್ತ ನಿರ್ಜೀವ (ಕಣ್ಣಿಗೆ ಕಾಣದ ವಸ್ತು) ಎಂಬ ಎರಡು ಭಾಗಗಳಿವೆ : ನಿರ್ಜೀವತತ್ತ್ವವನಿನ್ನು ಕೇಳು ಜೀವತತ್ತ್ವವ ಕಳೆದುಳಿದ್ಯೆದುವಸ್ತು ನಿರ್ಜೀವಗಳೆಲೆ ಭವ್ಯಜೀವಾ (ಭರಚ. ೬೮-೩೦). 'ಅಜೀವತತ್ತ್ವ' ಪರಾ. [ನಿರ್ಜೀವ + ತತ್ತ್ವ]

**ನಿರ್ಜೀವತೆ** (ನಾ). ಅಚೇತನಸ್ಥಿತಿ ; ಜೀವವಿಲ್ಲದಿರುವಿಕೆ : 'ನಿರ್ಜೀವತೆವೆಱು' ಪರಾ. [ಸಂ. ನಿರ್ಜೀವತಾ]

**ನಿರ್ಜೀವತೆವೆಱು** (ಕ್ರಿ). ಜೀವರಹಿತವಾದ ಸ್ಥಿತಿಯನ್ನು ಹೊಂದು: ಜೀವವಿವಾದಮೆತ್ತ ಪರಲೋಕಫಲೋದಯಮೆತ್ತದರ್ಕೆ ಮೆಯ್ಯೋವದೆ ಪೂಣ್ದು ಕೊಳ್ವ ತಪಮೆತ್ತಡಮಣ್ಣದ ಮಾಯದಂಗ ನಿರ್ಜೀವತೆವೆತ್ತುದೆತ್ತ (ಶಾಂತಿಪು. ೮-೧೨೯). [ನಿರ್ಜೀವತೆ + ಪೆಱು$_1$]

**ನಿರ್ಜೀವಿ** (ನಾ). ೧. ಜೀವವಿಲ್ಲದುದು ; ಅಚೇತನವಾದುದು ; ಮರಗಟ್ಟಿದುದು : ನಿರ್ಜೀವಿಯ ತೆಱದೊಳಿರ್ದಂತಿರುತ್ತಳುಗು ದಟ್ಟಿಸುಗು ತೊಪ್ಪನೆ ಕೆಡೆಗು (ಬಸಪು. ೧೪-೧೮) ; ಸಮುದ್ರಾಂಬೆ . . . ನೋಳ್ಪಳಾ ತನ್ನ ಪೊಸ ಪೆತ್ತ ಸಿಸುದೀವಿಯುಂ ತಾಯ್ಗಳಲ ಬರುನೆಲದ ಬತ್ತಲೆಯ ಬೇಸರದ ನಿರ್ಜೀವಿಯುಂ (ಶ್ರೀರಾಪೂ. ೧೬೫-೩೬೬). ೨. ಬದುಕಿದ್ದೂ ಸತ್ತಂತೆ ಇರುವ ವ್ಯಕ್ತಿ ; ಜೀವಚ್ಛವ.

[ಸಂ. ನಿರ್ಜೀವಿನ್]

**ನಿರ್ಝರ** (ನಾ). ಬೆಟ್ಟದಿಂದ ಕೆಳಕ್ಕೆ ಹರಿಯುವ ಪ್ರವಾಹ; ಬೆಟ್ಟದ ಹೊಳೆ : "ನಿರ್ಝರಮೆಂಬುದು ಬೆಟ್ಟದ ತಪ್ಪಲೊಳ್ ಪುಟ್ಟಿ(ದ) ಪರಿವ ತೊಱೆ" (ಹಲಾಯು. ೨೭-೧೨) ; ಉಚ್ಚಮಪ್ಪ ಬೆಟ್ಟುಗಳ ತಟಂಗಳಿಂ ಸುರಿವ ನಿರ್ಝರಮುಂ ಪೊಸ ಕಾರೊಳಿಂತು ಬೆಳ್ಪಗೆ ಪಥಿಕಾಂಗನಾಜನ ಮನಂಜಿಸುವಂತಿರೆ ತೋಱೆ ಸುತ್ತಲುಂ (ಕವಿರಾ.೧-೧೨೪); ನಿರ್ಝರೋಚ್ಛ್ರಿತ ಶೀಕರಶೀತಳವಾತನರ್ತಿತೋನ್ಮದ ಶಬರೀಜನಾಳಕಮ[ದಾ]ಯತ ವೇತ್ರಲತಾವಿತಾನಕಂ (ಪಂಪಭಾ. ೩-೧೦); ಆ ಮಹಾಗಹನಮಂ ಪೊಕ್ಕು ತನ್ಮಧ್ಯ ನಿರ್ಝರವಾರಿಧಾರಾಪರೀತಗಿರಿದರೀಪ್ರದೇಶದೊಳ್ ಮಹಾಸತಿಯುಂ ರಥದಿಂದಿೞಿಪಿ (ಪಂರಾಮಾ. ೧೫-೭೫ ವ). [ಸಂ.]

**ನಿರ್ಝರಜಲ** (ನಾ). ಬೆಟ್ಟದ ಝರಿಯ ನೀರು : ಗಿರಿದರೀವನಕ್ಕೆ ನಿರ್ಝರಜಲಾಭಿಷವಣಮನೊಡರ್ಚೆಯುಂ (ಮಲ್ಲಿಪು. ೮-೧೦೨).

[ನಿರ್ಝರ + ಜಲ$_2$]

**ನಿರ್ಝರಪ್ಲವ** (ನಾ). ಬೆಟ್ಟದ ಝರಿಯ ಪ್ರವಾಹ : ಬೆದಱೆ ಮನಂ . . . ಮದಪ್ಲವಮಲ್ಲಿದು ನಿರ್ಝರಪ್ಲವಂ ಮದಗಜವಲ್ಲಿದಿಂದ್ರನೊಳಿದಿರ್ಚಿದ ನೀಲನಗೇಂದ್ರಮೆಂಬಿನಂ (ಪಂರಾಪೂ. ೧೦-೧೫೯).

[ನಿರ್ಝರ+ಪ್ಲವ]

**ನಿರ್ಝರಿಣಿ** (ನಾ). ಹೊಳೆ ; ತೊರೆ ; ನದಿ : "ಸಿಂಧುಃ, ಸ್ರವಂತೀ, ತಟಿನೀ, ತರಂಗಿಣೀ, ನದೀ; ಧುನೀ, ನಿರ್ಝರಿಣೀ, ನಿಮ್ನಗಾ . . . ರೋಧೋವಕ್ರಾ— ಈ ೨೧ ತೊಱೆ" (ಹಲಾಯು. ೧೧೦-೪೩) ; ದುಮುಕುತಿದೆ ಆ ತಪೋವನದ ನೇಮಿಯೊಳೊಂದು ನಿರ್ಝರಿಣಿ (ಶ್ರೀರಾಪೂ. ೧೩೨-೨೦೪) ; ಆನಂದದ ನಿರ್ಝರಿಣಿಯ ಜಲ ಧುಮ್ಮಿಕ್ಕಿ! (ಕೋಗಿಲೆ. ೩೬-೧೭). [ಸಂ. ನಿರ್ಝರಿಣೀ]

**ನಿರ್ಝರೋದಕ** (ನಾ). =ನಿರ್ಝರಜಲ : ಪಸಿದಾಗಲ್ ಪಣ್ಗಳಂಗಳಂ ತಿಂದು ನೀರಡಸಿದಾಗಳ್ ನಿರ್ಝರೋದಕಮಂ ಕುಡಿದು ಬೞಲ್ದಾಗಳ್ ರಮ್ಯಮಪ್ಪೆಡೆಗಳೊಳ್ ವಿಶ್ರಮಿಸುತ್ತುಂ (ಜೀಪಸಂ. ೫೬-೩೫ ವ).

[ನಿರ್ಝರ+ಉದಕ$_2$]

**ನಿರ್ಣಯ** (ನಾ). ೧. ತೆಗೆದು ಹಾಕುವಿಕೆ. ೨. ತೀರ್ಮಾನ ; ತೀರ್ಪು ; ನಿರ್ಧಾರ : ಫಲುಗುಣನ ನಾವಿತ್ತಲೊಯ್ದರೆ ಬಳಿಕ ನಿರ್ಣಯವೆಂದು ಮನದಲಿ ತಿಳಿದು ಪಾರ್ಥಂಗೆಂದನಸುರಾರಾತಿ ನಸುನಗುತ (ಕುಪ್ವಾದ್ರೋ. ೪-೨೭) ; ಈ ಬಗೆಯ ಉಚ್ಚಭಿನ್ನಾಭಿಪ್ರಾಯದಲ್ಲಿ ಯಾವುದೇ ನಿರ್ಣಯವನ್ನು ಕೊಡುವುದು ಕಠಿಣವಾಗುವುದು (ಧರ್ಮಸಾ. ೧೪೯) ; ನಾನು ಬಿಟ್ಟು ಬಂದಿದ್ದ ಜಗತ್ತಿನ ಅಭಿಪ್ರಾಯಗಳೂ ನಿರ್ಣಯಗಳೂ ನನ್ನ ಮನಸ್ಸಿನಲ್ಲಿ ಇನ್ನೂ ಹೊಸದಾಗಿದ್ದವು (ಮಲೆನಾ. ೧೭೪). ೩. ಗೊತ್ತುವಳಿ ; ಠರಾವು : ಸಾರ್ವಜನಿಕ ಸಭೆಯಲ್ಲಿ ಸದಸ್ಯರು ಮಂಡಿಸಿದ ನಿರ್ಣಯವನ್ನು ಎಲ್ಲರೂ ಒಪ್ಪಬೇಕೆಂದು ಅಧ್ಯಕ್ಷರು ಸೂಚಿಸಿದರು (ರೂಢಿ). ೪. ನ್ಯಾಯಾಸ್ಥಾನ ಮೊದಲಾದುವುಗಳಲ್ಲಿಯ ವ್ಯಾಜ್ಯದ ತೀರ್ಪು. ೫. ನಿರ್ದಿಷ್ಟವಾದುದು; ನಿರ್ಧಾರವಾದುದು : ಅರ್ಣವಜಾತನನೆ ಸಂಪೂರ್ಣತೆಯಿಂ ಸರ್ವವಿಷಯಭಾಷಾದಿಗಳಂ ನಿರ್ಣಯಮಾಗಱಿಪಿದೆನಿಂ ಕರ್ಣಾಟಕವಿಷಯಜಾತಿಯುಂ ಕೇಳ್ ಪೇೞ್ವೆಂ (ಛಂದೋಂಬು.೫-೨); ಸೀಮೀಯತಿಸ್ವರೂಪಮಂ ಕೈಕೊಂಡ ವಾರ್ತೆಯಂ ನಿಮ್ಮ ಮುನ್ನಿನ ಧರ್ಮಪತ್ನಿಯಪ್ಪ ಸೋಮದತ್ತೆ ನಿರ್ಣಯಮಾಗಿ ಕರ್ಣಪರಂಪರೆಯಿನಱಿದು (ಸುಕುಮಾ. ೫-೭ ವ). ೬. ನಿಶ್ಚಿತಜ್ಞಾನ ; ನಿಶ್ಚಯಾತ್ಮಕವಾದ ಜ್ಞಾನ : ಶೀಲ ಶೀಲವೆಂದು ನುಡಿವ ಉದ್ದೇಶಿ ಪ್ರಾಣಿಗಳೆಲ್ಲರು ಅನಂತಶೀಲರು ಅಱುವಿನ ನಿರ್ಣಯವನಱಿಯರು(ಚನ್ನ ವ.ಕ. ೪೦೭-೪೪೯). ೭. ವಿವರಣೆ ; ಸಮಜಾಯಿಷಿ : ನಿಂದ ಹೊನ್ನಿಂಗೆ ನಿರ್ಣಯಮಂ ಕೊಡುವುದು ಎಂದು ನಿರೋಧಮಂ ನುಡಿಯೆ ಬಸವಂ ಕೇಳ್ದು (ಬಸರ. ೮-೧೧೭) ; ಪ್ರತಿಕೋಶಗಳ ನಿರ್ಣಯವರುಹಿದನು ಸುತಗೇ (ಗಗತಾ. ೧೮ ಸೂಚನೆ). ೮. [ನ್ಯಾಯ] ನ್ಯಾಯಶಾಸ್ತ್ರಕಾರರು ಹೇಳಿರುವ ಹದಿನಾರು ಬಗೆಯ ಪದಾರ್ಥಗಳಲ್ಲಿ ಒಂದು; ಪಕ್ಷ ಪ್ರತಿಪಕ್ಷಗಳಿಂದ ಚರ್ಚೆ ಮಾಡಿ ವಿಷಯವನ್ನು ತೀರ್ಮಾನಿಸುವುದು : ಗೌತಮೋಕ್ತನ್ಯಾಯವು ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ ಸಿದ್ಧಾಂತ ಅವಯವ ತರ್ಕ ನಿರ್ಣಯ ವಾದ ಜಲ್ಪ ವಿತಂಡಾ ಹೇತ್ವಾಭಾಸ ಛಲ ಜಾತಿ ನಿಗ್ರಹಸ್ಥಾನಂಗಳೆಂಬ ಷೋಡಶ ಪದಾರ್ಥಂಗಳಂ ನಿರೂಪಿಸುತ್ತ (ವಿವೇಕ. ೧೨) : ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ ಸಿದ್ಧಾಂತ ಅವಯವ ತರ್ಕ ನಿರ್ಣಯ ವಾದ ಜಲ್ಪ ವಿತಂಡಾ ಹೇತ್ವಾಭಾಸ ಛಲ ಜಾತಿ ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದಸಾ. ೧೧೨).

**ನಿರ್ಣಯ ಮಾಡು** =ತೀರ್ಮಾನ ಮಾಡು ; ನಿರ್ಧರಿಸು : ಆದಷ್ಟು ಬೇಗನೇ, ಅವನಿಗೆ ಅದನ್ನು ದಾನಪತ್ರವೋ, ಉಯಿಲೋ ಮಾಡಿಕೊಡಬೇಕು–ಎಂದು ನಿರ್ಣಯ ಮಾಡಿದ್ದೇನೆ (ಬೆಟ್ಟಜೀ. ೧೮೧).

**ನಿರ್ಣಯವಾಗು** =೧. ನಿರ್ಧಾರವಾಗು : ಅಹುದೋ ಅಲ್ಲವೋ ಎಂಬುದು ಮಾತ್ರ ಇನ್ನೂ ನಿರ್ಣಯವಾಗಬೇಕು (ಕುರುಕಾ. ೨೪). ೨. ಕ್ರಮಬದ್ಧವಾಗು ; ಆಯವರಿ ; ನಿಯಮಬದ್ಧವಾಗು : ಅಲ್ಲಿನ ಬೆಟ್ಟದ ಮೇಲೂ ಅದರ ಸುತ್ತಲೂ ನಿರ್ಣಯವಾಗಿ ಕಟ್ಟಿದ ಕೋಟೆ ಕೊತ್ತಲಗಳೂ, ಎಣ್ಣೆ ತುಪ್ಪವನ್ನು ತುಂಬುವ ಭಾವಿಗಳೂ . . . ನೋಡಲಾಗಿ, ಅಲ್ಲಿ ಆಳುತ್ತಿದ್ದ ದೊರೆಗಳ ಐಶ್ವರ್ಯ ಎಂಥಾದ್ದಾಗಿರಬಹುದೆಂದು ಆಶ್ಚರ್ಯ ಹುಟ್ಟಿತು (ಚಿತ್ರಪಾ. ೪ ಪೀಠಿಕೆ). [ಸಂ.]

**ನಿರ್ಣಯಂಬಡೆ** (ಕ್ರಿ). ನಿಶ್ಚಯಿಸು; ನಿರ್ಧಾರಮಾಡು; ತೀರ್ಮಾನಿಸು : ಕಡುಚೆಲುವೊಪ್ಪೆ ಸಾರ್ದ ಪೊಸವೆಣ್ಣದನಾರಯೆ ಮುನ್ನಮೇಂ ಕರಂಬಿಡಿದೆನೊ ಮೇಣ್ ಕರಂಬಿಡಿಯೆನೋ ಎನುತಂ ಮನದಲ್ಲಿ ನಿರ್ಣಯಂಬಡೆಯದೆ . . . ಭೋಗಿಸಲ್ಕಮುಳಿಯಲ್ಕಮಣಂ ಬಗೆದಪೊಡಾರೆ ನಾಂ (ಶಾಕುಂತ. ೬೭-೧೯೯). [ನಿರ್ಣಯ + ಪಡೆ$_1$]

**ನಿರ್ಣಯಕಾರ** (ನಾ). ಸಾಧಿಸುವವನು ; ನಿರ್ಣಯಿಸುವವನು : "ಸಾದ್ಧಾ, ಸಾಧನ್, ಸಾಧಕಃ, ಸಾದ್ಧಃ, ಸಾಧವಾನ್, ಈ ೫ ನಿರ್ಣಯಕಾರಂ" (ಕಾಶಕ್ಕ. ೧೮೬). [ಸಂ.]

**ನಿರ್ಣಯಪ್ರಮಾಣ** (ನಾ). ಅಂತಿಮ ತೀರ್ಮಾನ : ಪ್ರತಿಯೊಂದು ವ್ಯವಹಾರವೂ ನಾಲ್ಕು ಹಂತಗಳನ್ನು ಹೊಂದಬೇಕಾಗಿತ್ತು. ಅವು ಕ್ರಮವಾಗಿ . . . ಸಂಶಯಹೇತು ಪರಾಮರ್ಶ (Weighing of evidence) ಮತ್ತು ನಿರ್ಣಯಪ್ರಮಾಣ (Final conclusion) ಎಂದು ವಿಭಾಗಿಸಲ್ಪಟ್ಟಿದ್ದವು (ಭಾರದ. ೫೬). [ನಿರ್ಣಯ+ಪ್ರಮಾಣ]

**ನಿರ್ಣಯವಿಹೀನ** (ಗು). ನಿಶ್ಚಯವಾಗದ ; ತೀರ್ಮಾನವಾಗದ : "(ವಾದ, ನಿದರ್ಶನ, ಕ್ರಿಯೆ, ಮೊ.) ಒಂದು ಗೊತ್ತಿಗೆ ಬರದ, ತೀರ್ಮಾನವಾಗದ ; ನಿರ್ಣಯವಿಹೀನ" (Inconclusive. ಇಂಕನಿ).

[ನಿರ್ಣಯ + ವಿಹೀನ]

**ನಿರ್ಣಯಾರ್ಥ** (ನಾ). ನಿರ್ಧಾರವಾದ ಅರ್ಥವನ್ನುಳ್ಳುದು : ಪುರಜನಪದಶೈಲಾದಿತ್ಯಚಂದ್ರೋದಯಾಸ್ತಾಂತರ ಸಮ್ಯಗಗಣವ್ಯಾವರ್ಣನಾ ನಿರ್ಣಯಾರ್ಥಂ (ಕವಿರಾ. ೩-೨೧೧). [ನಿರ್ಣಯಂ + ಅರ್ಥ]

**ನಿರ್ಣಯಿಸು, ನಿರ್ಣೈಸು, ನಿರ್ಣೇಸು** (ಕ್ರಿ). ೧. ಗೊತ್ತುಪಡಿಸು ; ತೀರ್ಮಾನಿಸು ; ನಿಶ್ಚಯಿಸು : ಜಯಮನಿನ್ನಾಹವದೊಳಗೆ ನಿರ್ಣಯಿಸಬಹುದೆಮಗೆನುತ ಗುರು ಪಾಳಯಕೆ ನೇಮವ ಕೊಟ್ಟನು (ಕುಮ್ಯಾದ್ರೋ. ೨-೧೨); ಸೀರೆಯ ಬೆಲೆಯನು ಜನರು ನಿರ್ಣಯಿಪರು ಸೆರಗಿನ ಝರಿಯನು ನೋಡಿ (ಇಂಚಾಪ. ೨೦೮-೨೯); ಕರ್ಣಾಟಕ-ಕರ್ನಾಟಕಗಳಲ್ಲಿ ಕೊನೆಗೆ ಯಾವುದು ನಿಲ್ಲಬೇಕೆಂಬುದನ್ನು ಕಾಲಪುರುಷನು ನಿರ್ಣಯಿಸಲಿ (ಪ್ರಾವಿವಿ. ೮೭). ೨. ವಹಿಸು; ಧರಿಸು : ಅರ್ಣವವೃತ ಭೂಭರಮಂ ನಿರ್ಣಯಿಸುವ ಪುತ್ರನಲ್ಲಿ ಗತಿವಡೆಯದೆ ಪೋಪರ್ (ಅರ್ಥನೇ. ೧-೧೧೯). ೩. ಪೂರೈಸು; ಮುಗಿಸು; ಕೊನೆಮುಟ್ಟಿಸು : ಹೇಮಸಂಪುಟದಲ್ಲಿ ವಿಷ್ಣುವಿಗ್ರಹ ಸಾಲಗ್ರಾಮದೇವರ ಪೂಜೆಗೆಯ್ದು ಪ್ರೇಮದಿ ನಿಖಿಲೋಪಚಾರವನರ್ಪಿಸಿ ನೇಮವ ನಿರ್ಣಯಿಸಿದರು (ಮೋಹತ. ೩-೪೭). **ನಿರ್ಣೈಸು :** ೧. ನಿಜತತ್ವಾಯದ ಬೀಯಂದೊಂದು ಪರಿಯಂ ನಿರ್ಣೈಸಲಿತ್ತಂ ನೃಪಂ (ಮೈಸೂಮ. ೫-೭೦). ೨. ಈ ಸಕಲಸಾಮ್ರಾಜ್ಯಭಾರವನೀ ಸುಬಾಹುಧ್ವಂಸಿಯಲಿ ನಿರ್ಣೈ[ಪಾಠಾ. ನಿರ್ಣೈ]ಸಿದಡೆ ನಿಶ್ಚಿಂತರಾವೆಂದರಸ ನೇಮಿಸಿದ (ತೊರರಾ. ೨-೧-೧೨). ೪. ವಿವರಿಸು; ವಿಶದಪಡಿಸು; ಸಿದ್ಧಾಂತೀಕರಿಸು: ಬಂಧುರವಹ ತರ್ಕಶಬ್ದಗಳ ನೆರೆದು ನಿರ್ಣೈಸಿ ತೋಱುಸುವ ವಿದ್ವಾಂಸರ ಪರಿವಿಡಿ ಮೆಱೆದುದೇನೆಂಬೆ (ಕಂಸವಿ. ೮-೩೫). ೫. ತೀರಿಸು; ಸಲ್ಲಿಸು; ಸಂದಾಯಮಾಡು : ಅವಧಿಯಂ ಕೊಟ್ಟು ಚಿತ್ತವಿಟ್ಟನುಸರಿಸಿ ಕೊಂಬಿರಾದಡೆ ತಂದು ನಿರ್ಣೈಸಿ ಕೊಡುವೆನು (ಹಚಕಾ. ೮-೫೫). ೬. ನಾಶಪಡಿಸು; ಹಾಳುಮಾಡು : ಎದ್ದಿದಾರೋಯೆಂಬವರನೊಳಗುದ್ದಿನಲಿ ನಿರ್ಣೈಸಿ ಮೆಲ್ಲನೆ . . . ಸೀತೆಯ ಕದ್ದ ಕಳ್ಳನ ಖಳನ ಸೆಜ್ಜೆಯ ಸದನಕೈತಂದ (ತೊರರಾ. ೫-೨-೬೭); ನಿಂಬೆಯುಂಬಟಿಮಾತುಳಂಗ ವಿಳಂಗನಾರಂಗ ಎಂಬ . . . ತರುನಿಕುರುಂಬವನು ನಿರ್ಣೈಸಿದನು ನಿಶ್ಶೇಷವೆನೆ ಹನುಮ (ತೊರರಾ. ೫-೪-೬). **ನಿರ್ಣೇಸು :** ೪. [ಹೇ]ಮದೇವಾಚಾರ್ಯ್ಯರಿಗೆ ನಿರ್ಣೇಸಿ ಕೊಟ್ಟ ಜಯಪತ್ರದ ಕ್ರಮವೆಂತೆಂದೊಡೆ (ಸೌಇಇ. XX, ೨೩೨-೧೧ ; 1412).

**ನಿರ್ಣೈಸಿಕೊಳ್** = ತಡೆದುಕೊಳ್ಳು; ನಿಭಾಯಿಸಿಕೊಳ್ಳು : ಈ ಬಾಣವ ನಿರ್ಣೈಸಿಕೊಂಬಾತನ ಕಾಬೆನೆಂದೀಶ್ವರ ನುಡಿದು ಲಾಭಹತಿಯ ಮುಂಚಿ ತೆಗೆದುಕೊಳ್ಳೆನುತಬ್ಜನಾಭನನೆಚ್ಚು ಬೊಬ್ಬಿಱಿದ (ಮೋಹತ. ೩೯-೨೫). [ನಿರ್ಣಯಂ + -ಇಸು$_3$]

**ನಿರ್ನಾಮ** (ನಾ). ಹೆಸರಿಲ್ಲದುದು ; ಸಂಪೂರ್ಣ ನಾಶ : ಅರ್ಣವೋಪಮ ಯೌವನಾಶ್ವ ಚತುರಂಗಮಂ ನಿರ್ನಾ[ಪಾಠಾಂ. ನರ್ಾ]ಮವೆನಿಸಿ ವಾಜಿಗ್ರಹಣಕಾರ್ಯಮಂ ನಿರ್ಣಯಿಸಿ ಕೊಡುವೆನು (ಜೈಮಿಭಾ. ೨-೪೨); ಈ ಮೈಸೂರ ರಾಜ್ಯದ . . . ಹೆಸರೂ ನಿರ್ನಾಮವಾಗಿ ಹೋಗುವುದು (ಸುಗುಗಂ. ೪೮-೨೨). [<ಸಂ. ನಿರ್ನಾಮನ್]

**ನಿರ್ನಾಮೋದಕ** (ನಾ). = ನಿರ್ನಾಮೋದಕ : ಆ ಜಂಗಮಕ್ಕೆ ನಮಸ್ಕರಿಸುವಂತಹದೇ ನಿರ್ನಾಮೋದಕವೆನಿಸುವುದು (ಚನ್ನಪ. ಕ. ೭೮-೧೭೩). [<ನಿರ್ನಾಮೋದಕ]

**ನಿರ್ಣಾಯಕ** (ಗು). ೧. ನಿರ್ಣಯ ಮಾಡುವ; ನಿರ್ಧಾರ ಮಾಡುವ; ಬಗೆಹರಿಸುವ : ರಾಮಾವತಾರದಲ್ಲಿ ತಾನು ಆರ್ಜಿಸಿದ್ದ ಪುಣ್ಯರಾಶಿಯನ್ನೆಲ್ಲ ಅರ್ಜುನನ ಆ ನಿರ್ಣಾಯಕ ಬಾಣಕ್ಕೆ ಎರೆದು ತೋಳು ಹೊಯ್ದ (ಬಿದುರಿ. ೬೨) ; ಸಾಮುದ್ರಿಕ ಹಾಗು ಸಂಸಾರ ಎರಡರಲ್ಲಿ ಒಂದನ್ನು ಉಳಿಸಿಕೊಳ್ಳುವ ಈ ನಿರ್ಣಾಯಕ ಪ್ರಸಂಗದಲ್ಲಿ, ಹೃದಯ-ಬುದ್ಧಿಗಳ ಹೋರಾಟದಲ್ಲಿ ನಾನು ಸೋತು ಸಂಸಾರವುಳಿಸಿಕೊಂಡೆ (ಗಾಳಿಪ. ೧೨೪); ನಿರ್ಣಾಯಕ ಅಂಶಗಳಿಲ್ಲದಿರುವಾಗ ಸಾಮಾನ್ಯವಾಗಿ ಒಂದು ಆಳಿಕೆಗೆ ಇಪ್ಪತ್ತೈದುವರ್ಷಗಳ ಕಾಲವನ್ನು ಕೊಡುವ ಸಂಪ್ರದಾಯವುಂಟು (ಕರ್ಣಾಅ. ೧೩) ; ಖಾಸನೀಸರ 'ತಬ್ಬಲಿಗಳು' ಕೆಲವು ತಬ್ಬಲಿಜೀವಗಳ ಅಂತಿಮವೆನ್ನಬಹುದಾದ ಒಂದು ನಿರ್ಣಾಯಕ ಕ್ಷಣದ ಕತೆ (ಹೊಸಕ್ಷ. ೨೯೩). (ನಾ). ೨. ನಿರ್ಧಾರಿತವಾದುದು; ಖಚಿತವಾದುದು : ನಿರ್ಣಾಯಕವಾದ ಘಳಿಗೆ ಸಮಾಪಿಸುವುದರಲ್ಲಿತ್ತು (ಪುನರು. ೧೮೯); ಮೇಲೆ ನಿರ್ದೇಶಿಸಿದ ಆಂಡಯ್ಯನ ಕಾಲವು ನಿರ್ಣಾಯಕವೆಂದು ತಿಳಿದುಕೊಳ್ಳಲು ಬರುವಂತಿಲ್ಲ (ಸಾಹಿಸ. ೧೫೧). ೩. ತೀರ್ಮಾನಿಸುವವನು ; ನಿರ್ಧರಿಸುವವನು : ಗುರುಸೂನು ಮೊದಲಾದ ನಾಯಕರು ದುಷ್ಕೀರ್ತಿನಾರಿಯ ನಾಯಕರು ಸುಪಲಾಯನದ ನಿರ್ಣಾಯಕರು ಮಝು ಪೂತುರೆಂದುದು ನಿಖಿಳಪರಿವಾರ (ಕುಮ್ಯಾಕ. ೧೩-೪೭); ದೊರೆತ ಸತ್ಯದಿಂದ ನಿರ್ಣಾಯಕರಿಗೇನೋ ಸಮಾಧಾನವಾಯಿತು (ಗ್ರಾಮಾಯ. ೮೭). [ಸಂ.]

**ನಿರ್ಣಾಯಕತನ** (ನಾ). ನಿರ್ಧರಿಸುವಿಕೆ ; ನಿಷ್ಕರ್ಷಿಸುವಿಕೆ ; ನಿರ್ಣಯಿಸುವಿಕೆ : ನಿರ್ಣಾಯಕತನವೇ ಕ್ರಿಯಾಶಕ್ತಿಯಾಗಿ, ಮೋಡವು ಭೂಮಿಯನ್ನಪ್ಪಿತ್ತು (ಪಂಶಪ್ರ. ೧೬೫). [ನಿರ್ಣಾಯಕ + -ತನ]

**ನಿರ್ಣಾಯಕಮತ** (ನಾ). (ಅಂತಿಮವಾಗಿ) ನಿರ್ಧರಿಸುವ ಮತ; ನಿರ್ಧಾರಕ ಅಭಿಮತ : ಉಭಯ ಪಕ್ಷಗಳ ಮತಗಳ ಸಮತೆಯು ಕಂಡುಬಂದ ಸಂದರ್ಭದಲ್ಲಿ ಅವರು ನಿರ್ಣಾಯಕಮತ ಕೊಡಲು ಅವರಿಗೆ ಅಧಿಕಾರವಿರತಕ್ಕುದು (ಭಾಧಾಸ. ೪೮). [ನಿರ್ಣಾಯಕ + ಮತ]

**ನಿರ್ಣಾಯಕಶಕ್ತಿ** (ನಾ). ನಿರ್ಧಾರಮಾಡುವ ಸಾಮರ್ಥ್ಯ : ಸರಿಯಾದ ಪಾಠವನ್ನು ಆರಿಸಿಕೊಳ್ಳುವುದರಲ್ಲಿ ಇವನ ಉತ್ತಮ ಅಭಿರುಚಿಯೂ ನಿರ್ಣಾಯಕಶಕ್ತಿಯೂ ಮಿಗಿಲಾಗಿದ್ದುವು (ಕನ್ನಸಂ. ೨೬). [ನಿರ್ಣಾಯಕ + ಶಕ್ತಿ]

**ನಿರ್ಣಿಕ್ತ** (ಗು). ೧. ತೊಳೆದ ; ಶುಚಿಮಾಡಿದ ; ನಿರ್ಮಲವಾದ : ವರುಣಮಂತ್ರಾಕ್ಷರದ ಜಪಪರಿಕರಣದಲ್ಲಿ ನಿರ್ಣಿಕ್ತ ಚೇತಃಸ್ಫುರಣ ಸಲಿಲಸ್ತಂಭನವನವನೀಶ ಮಂತ್ರಿಸಿದ (ಕುಮ್ಯಾಗ. ೩-೪೨). ೨. (ಪಾಪ) ಪರಿಹಾರ ಮಾಡಿಕೊಂಡ ; ಪ್ರಾಯಶ್ಚಿತ್ತ ಮಾಡಿಕೊಂಡ. ೩. ನಿರ್ಧಾರಗೊಂಡ : ಸಕಳಕಳಾಭಾಷಾಲೌಕಿಕಸಾಮಯಿಕಾದಿವರ್ಣನಾನಿರ್ಣಿಕ್ತ ಪ್ರಕಟತರವಸ್ತುವಿಸ್ತರವಿಕಲ್ಪ(ವಿ)ದನಲ್ಲದಾಗದಾಗದು ಪೇಟಿಲ್ (ಕವಿರಾ. ೧-೨೮) ; ಅವನೀಪಾಳಾನತ ಶ್ರೀಪಾದಕಮಳಯುಗಂ ತತ್ವನಿರ್ಣಿಕ್ತರಾದ್ಧಾಂತವಿದಂ (ಸೌಇಇ. XX, ೫೦-೨೯; ?). [ಸಂ.]

**ನಿರ್ಣೀತ** (ಗು). ೧. ಗೊತ್ತುಮಾಡಿದ; ನಿಶ್ಚಯಿಸಿದ; ಒಪ್ಪಿತವಾದ : ಜಿನಚರಿತಮ ನಿರ್ಣೀತ[ಪಾಠಾಂ. ನಿರಕ್ತ]ಚಾರಿತ್ರಮಾದತ್ತೆನಸುಂ ವಿದ್ವಜ್ಜನಂ ಬಣ್ಣಿಸೆ (ಸುಕುಮಾ. ೧-೪೯). (ನಾ). ೨. ಗೊತ್ತಾದುದು ; ಖಚಿತವಾದುದು ; ನಿಶ್ಚಯಿಸಿದುದು ; ನಿರ್ಧರಿಸಿದುದು : ಆತತಸತ್ಯವಿಸಮಯಂ ಜಾತಿದ್ರವ್ಯಕ್ರಿಯಾಗುಣಾಶ್ರಯಮಸದಾಖ್ಯಾತಿ ಸದಕೀರ್ತನಂ ನಿರ್ಣೀತಂ ನಿಯಮಾರ್ಥಮೈಕ್ಯಮೆನೆ ನಾಲ್ಕುತೆಱಂ (ಕಾವ್ಯಾಪ. ೮೪೫) ; ಮಹಾವೀರ ನಿರ್ವಾಣವು ಕ್ರಿ.ಪೂ. ೫೨೭ರಲ್ಲಿ ಆಯಿತೆಂದು ನಿರ್ಣೀತವಾಗಿದೆ (ತೀರ್ಥಕ. ೩೨) ; ಶತಕತ್ರಯಿಯ ಭರ್ತೃಹರಿಯ ಕಾಲವು ಇನ್ನೂ ಕಂಡಿತವಾಗಿ ನಿರ್ಣೀತವೂ ಆಗಿಲ್ಲ (ಮೂರುಉ. ೧೧೪). [ಸಂ.]

**ನಿರ್ಣೀತಿ** (ನಾ). ನಿರ್ಧಾರ ; ನಿರ್ಣಯ : ನೀತಿನಿರಂತರಾನುಗತವೃತ್ತಿವಿಕಲ್ಪಿತಮಂ ತದೀಯ ನಿರ್ಣೀತಿಯನೀತೆಱತ್ತು ತಱಿಸಲ್ಕೆ

ಬುಧೋತ್ತಮರುಕ್ತಿಪೂರ್ವಕಂ (ಕವಿರಾ. ೨-೧೦೧); ರೀತಿ ವಿನೂತವಸ್ತುಕೃತಿಗೊಪ್ಪುವ ಮೆಯ್ ರಸಭಾವವೃತ್ತಿನಿರ್ಣೀತಿಯೆ ಜೀವಂ (ಕಾವ್ಯಾವ. ೭೮೦). [ಸಂ.]

**ನಿರ್ಣೇಜಕ** (ನಾ). (ಬಟ್ಟೆಗಳನ್ನು) ಮಡಿ ಮಾಡುವವನು ; ಮಡಿವಾಳ; ಅಗಸ: "ನಿರ್ಣೇಜಕಃ, ರಜಕಃ — ಈ ೨ ಅಗಸಂ" (ಹಲಾಯು. ೯೭-೪೩೯). [ಸಂ.]

**ನಿರ್ಣೇಜನ** (ನಾ). ತೊಳೆಯುವಿಕೆ; ಪ್ರಕ್ಷಾಳನ: ಆರು ತೊಳೆದರು ದೇವ ನಿನ್ನೀ ಚಾರುಚರಣನಖಾಗ್ರವನು ಮತ್ತಾರು ಧರಿಸಿದರಮಳನಖನಿರ್ಣೇಜನದ ಜಲವ (ತಿಭಾಗ. ೧೦-೬೮-೪೧). [ಸಂ.]

**ನಿರ್ಣೇಜಿತ** (ಗು). ತೊಳೆದ; ಶುಭ್ರಮಾಡಿದ: ಸರಭಸೋನ್ನತಿತೋರು ಮಂದರ ಗಿರಿನಿಕರನಿರ್ಣೇಜಿತಾಂಗದ ಕರಕಮಲಕಂಕಣದ ಮಣಿಮುದ್ರಿಕೆಯ ಬೆರಳುಗಳ . . . ಸುಭೂರಿಭಾಗ್ಯದ ಲಕ್ಷಣದ ಮೂರ್ತಿಯನು ನೆನೆ (ತಿಭಾಗ. ೩-೧೩-೩೪). [ಸಂ.]

**ನಿರ್ಣೇಯ** (ನಾ). ನಿರ್ಣಯಿಸಬಹುದಾದುದು ; ನಿಶ್ಚಯಿಸಬಹುದಾದುದು: ಕಾಯ ನಿರ್ಣೇಯವದರೊಳು ಮನವನಿರ್ಣೇಯ (ಮಂಕುಕ. ೧೦೨). [ಸಂ.]

**ನಿರ್ಣ್ಯಸು** 'ನಿರ್ಣಯಿಸು' ನೋ.

**ನಿರ್ದಂಭ** (ಗು). ಜಂಬವಿಲ್ಲದ; ವಿನಯಶಾಲಿಯಾದ: ಕುಂಭಜನೀತೆಱದಿಂ ನಿರ್ದಂಭ ತಪಸ್ವಿಗಳ ಮೊಗ್ಗರಕ್ಕಂ ಸುಂದರ ಶಂಭುಚರಿತ್ರಮನೊರೆದಾರಂಭಿತ ಶಿವಭಕ್ತಿಯಿಂದಮೊಪ್ಪಿರ್ದನಣಂ (ಹಾಲಾಸ್ಯ. ೧-೩-೩೧). [ಸಂ.]

**ನಿರ್ದಗ್ಧ** (ಗು). ೧. ಸುಡದಿರುವ; ಬೇಯದ. ೨. ಸಂಪೂರ್ಣವಾಗಿ ಸುಟ್ಟುಹೋದ; ಪೂರ್ತಿಯಾಗಿ ಬೆಂದ: ಏಳು ತಂದೆ ಮುಕುಂದ ಕದನವ್ಯಾಳವಿಷನಿರ್ದಗ್ಧ ಧರಣೀಪಾಲವರ್ಗವ ತೋಱುಸೆಂದಳು ತರಳೆ ಕೈಮುಗಿದು (ಕುವ್ಯಾಗ. ೧೨-೧). [ಸಂ.]

**ನಿರ್ದಯ** (ಗು). ೧. ದಯೆಯಿಲ್ಲದ ; ಕರುಣೆಯಿಲ್ಲದ: ಸ್ವರ್ಗಲಕ್ಷ್ಮಿಯ ಮೇಲಟ್ಟಿಱಿಕೊಳಲೆಂದದೇಂ ನಲಿದನೋ ಸಂಭೋಗಸಮ್ಮರ್ದನಿರ್ದಯನಿಷ್ಪೀಡಿತದೇವವಾರವನಿತಾಬಿಂಬಾಧರಂ ಶ್ರೀಧರಂ (ಆದಿಪು. ೫-೭೧). (ನಾ). ೨. = ನಿರ್ದಯೆ ೧: ಸಮಾಜವಾದದ . . . ಸಿದ್ಧಾಂತಗಳನ್ನೂ ಧೋರಣೆಗಳನ್ನೂ ಮಾರ್ಕ್ಸನು ನಿರ್ದಯವಾಗಿ ನಿರಂತರವಾಗಿ ಖಂಡಿಸಿ ಬರೆಯಬೇಕಾಗುತ್ತಿತ್ತು (ಮಾವಾದ. ೩೧). ೩. ದಯೆಯಿಲ್ಲದ ವ್ಯಕ್ತಿ ; ದಯಾಹೀನ: ತೊಟಿಲ್ವಂ ನಿರ್ದಯಂ ಮಾತುಗೇಳ್ವನುಮಲ್ಲಾಂಗನೆ ವೃದ್ಧೆಯೆಂಬಿವರೊಳೋತಿರ್ಪಂ ಮೃಗಪ್ರೋದ್ಭವಂ (ಜಾತತಿ. ೧೭-೧೦); ಏನು ಬರೆದೆಯೊ ಬ್ರಹ್ಮ ಎಂತು ನಿರ್ದಯನು (ಪುರಂದ. ಧಾ. ೨-೧ ಪಲ್ಲವಿ); ರಕ್ಕಸರನಿಬರೆಲ್ಲರುಂ . . . ಮಾಯಾವಿಗಳ್ನಿರ್ದಯರ್ಕೊಲೆಗಡಿಕರು ಹೊಕ್ಕ ಸಮರಕ್ಕೆ ಹಿಮ್ಮೆಟ್ಟರು (ಜೈಮಿಭಾ. ೧೬-೨೨). [ಸಂ.]

**ನಿರ್ದಯತನ** (ನಾ). ಅನುಕಂಪೆಯಿಲ್ಲದಿರುವಿಕೆ ; ಕರುಣೆಯಿಲ್ಲದಿರುವಿಕೆ; ಕಠಿನಸ್ವಭಾವ: ಪಟ್ಟಣದ ಕ್ಷೇತ್ರ ದೊಡ್ಡದು, ಜನವಸತಿ ಬಹಳ. ಆದರೆ ವ್ಯಕ್ತಿ-ವ್ಯಕ್ತಿಗಳು ಸ್ವತಂತ್ರತೆಯ ನಿರ್ದಯತನವನ್ನು ಪ್ರದರ್ಶಿಸುತ್ತಿದ್ದರು (ಜಯಂತ. ೩೪೨); ಅವನ ನಿರ್ದಯತನಕ್ಕಾಗಿ ಕೋಪಗೊಂಡಿದ್ದ ಅವಳೇ ಮುಂದೆ . . . ಉಜ್ವಲವಾದ ಹೊಗಳಿಕೆಯ ಮಾತುಗಳನ್ನು ಬರೆದಿದ್ದಾಳೆ (ದೂರಸ. ೬೩). [ನಿರ್ದಯ + -ತನ]

**ನಿರ್ದಯೆ** (ನಾ). ೧. ಕಠಿಣತೆ; ಉಗ್ರತೆ: ತದ್ರ್ಗಗಳೞಿಗುಂ ಬಱಟೆಯೊಳುರ್ದಿ ನೆಲಾವರೆಯ ಬೇರನಾಮಳಕಮುಮಂ ಬರ್ದಿಲಿಮಿಂಚೆಯ ರಸದೊಳ್ ನಿರ್ದಯೆಯಿಂದೊರೆಸಿ ಪೂಸೆ ದಿನಪಂಚಕದೊಳ್ (ಶಪುದ. ೨೬೧ ಪ್ರಯೋ). ೨. ದಯೆಯಿಲ್ಲದವಳು ; ದಯಾಹೀನೆ: ಅಯಶಕ್ಕೀಡಾದ ನಿರ್ಲಕ್ಷಣೆಯನಶುಭೆಯಂ ನಿಷ್ಫಲೋತ್ಪನ್ನೆಯಂ ನಿರ್ದಯೆಯಂ . . . ಪಾಪೆಯಂ ನೀಂ ಬೆಸಗೊಳೆ ಫಲಮೇಂ ಪೇೞ್ ಮಹೀಪಾಲಚಂದ್ರಾ (ಕಾದಂಪೂ. ೯೫೭). [ಸಂ. ನಿರ್ದಯಾ]

**ನಿರ್ದಲನ** (ನಾ). ೧. ಒಡೆಯುವಿಕೆ; ಸೀಳುವಿಕೆ. ೨. ನಾಶಗೊಳಿಸುವಿಕೆ. [ಸಂ.]

**ನಿರ್ದಹಿಸು** (ಕ್ರಿ). ೧. ಚೆನ್ನಾಗಿ ಸುಡು. ೨. ನಾಶಮಾಡು: ಬಹ ವಿಪತ್ತಿನ ಶರಕೆ ಜೋಡೆಂದಿಹುದಲಾ ಸುವಿವೇಕಗತಿ ನಿರ್ದಹಿಸದೇ ಶೋಕಾಗ್ನಿ ಧರ್ಮದ್ರುಮದ ಬೇರುಗಳ (ಕುವ್ಯಾಗ. ೧೧-೧೨). [ನಿರ್- + ದಹಿಸು]

**ನಿರ್ದಳಿತ** (ಗು). ನಾಶಪಡಿಸಿದ ; ನಾಶಗೊಳಿಸಿದ: ಜಯಜಯ ಜನಾಧಾರ ನಿರ್ದಳಿತ ಸಂಸಾರ (ಅಜಿಪು. ೭-೧೫ ರಗಳೆ). [ಸಂ. ನಿರ್ದಲಿತ]

**ನಿರ್ದಾಕ್ಷಿಣ್ಯ** (ನಾ). ದಾಕ್ಷಿಣ್ಯವಿಲ್ಲದಿರುವಿಕೆ ; ನಿಸ್ಸಂಕೋಚಪ್ರವೃತ್ತಿ ; ಖಡಾಖಂಡಿತ: ಈ ಎರಡು ಸಂಗತಿಗಳಿಂದಲೂ ನಿರ್ದಾಕ್ಷಿಣ್ಯವಾಗಿ ಯುದ್ಧ ಮಾಡುವುದೇ ನಿಶ್ಚಿತವಾದಂತಾಯಿತು (ಭಾರವೀ. ೧೬) ; ಏನೂ ತಿಳಿಯದಿದ್ದರೂ ಎಲ್ಲವನ್ನೂ ತಿಳಿದವನಂತೆ ಮಾತನಾಡುವ ಪಾರ್ಥನ ಸ್ವಾರ್ಥಸ್ವಭಾವವನ್ನು ನಿರ್ದಾಕ್ಷಿಣ್ಯವಾಗಿ ಶ್ರೀಕೃಷ್ಣನು ಖಂಡಿಸುತ್ತಾನೆ (ಭಾರದ. ೧೧೨). [ಸಂ.]

**ನಿರ್ದಾಟಿಸು** 'ನಿರ್ಧಾಟಿಸು' ನೋ.

**ನಿರ್ದಾಯ** (ನಾ). ೧. ಅಖಂಡತೆ ; ಸಂಪೂರ್ಣತೆ: ಧೂರ್ಜಟಿಯ ಶರ . . . ನಿರ್ದಾಯದಲಿ ವಶವರ್ತಿಯಾಯ್ತೆನಗೆಂದನಾ ಪಾರ್ಥ (ಕುವ್ಯಾಅ. ೧೧-೨೮) ; ಆ ಮಾಯೆಯಲಿ ನಿರ್ದಾಯದಿಂದೊಳಬಿದ್ದು ತೊಳಲುವ ಜೀವರಾಶಿಗಳ (ತಿಭಾಗ. ೧-೪-೩). ೨. ನಿರ್ಧಾರ ; ನಿಶ್ಚಯ: ಬೊಬ್ಬಿಱಿದು ವಿಪ್ರನಿಕಾಯ ಕುಣಿದುದು ಕಮಲಮುಖಿ ನಿರ್ದಾಯದಲಿ ಸೇರಿದಳು ಹಾರುವಗೆನುತ ಹರುಷದಲಿ (ಕುವ್ಯಾಆ. ೧೫-೩೦) ; ಕಾಯಬಲ್ಲವನೊಬ್ಬನೇ ತಾನಾಯುವನು ನೀಗಾಡದಿರು ನಿರ್ದಾಯದಲಿ ನುಡಿ ಬೇಗ ಭಯ ಬೇಡೆಂದನಸುರೇಂದ್ರ (ತೊರರಾ. ೬-೪೯-೪೦) ; ಜೀಯ ಸಂದೇಹಮೇಕುಜ್ಜುಗಿಸು ಮಖಮಂ ಸಹಾಯಮುಂ ಧನಮುಂ ತುರಂಗಮುಂ ನಿನಗೆ ನಿರ್ದಾಯದಿಂ ತೋಱಿಸಿದನೀ ಮುಖಿಪನು (ಜೈಮಿಭಾ. ೨-೩೬). [ಸಂ.]

**ನಿರ್ದಾಯಕ** (ನಾ). ಪರಿಪೂರ್ಣನಾದವನು ; ಅಖಂಡನಾದವನು: ಬೀಯವಾಗುವ ತನುವಿನಲಿ ನಿರ್ದಾಯಕನು ನೀನಿರ್ದು ಅತಿಹಿರಿದಾಯಸಂಬಡಿಸುವರೆ (ಹರಿಸಾ. ೯೪). [ಸಂ.]

**ನಿರ್ದಾಯವಱಿ** (ಕ್ರಿ). ಕ್ರಮವನ್ನು ತಿಳಿ ; ರೀತಿಯನ್ನು ಗ್ರಹಿಸು ; ವಿಧಾನವನ್ನು ತಿಳಿ: ಪ್ರಾಯದೆ ಹಣ ತೆಗೆಯದ ಸೂಳೆ ಕೃಷಿಯ ನಿರ್ದಾಯವಱಿಯದ ಪಾದಜರು ಕಾಯ್ದುವಿಡಿದ ಮೃತಜೀವಿಯಂದದೆ ಬಹುಳಾಯಸಗೊಳ್ವರು (ಕಂನವಿ. ೬-೧೫೪). [ನಿರ್- + ದಾಯ$_2$ + ಅಱಿ]

**ನಿರ್ದಾಯಾದ್ಯ** (ನಾ). ದಾಯಾದಿಗಳಿಲ್ಲದುದು: ಈಗಳಾಯ್ತು ಧರೆ ನಿರ್ದಾಯಾದ್ಯಮೆಂದಾ ಸುಯೋಧನನಾಳುತ್ತಿರೆ (ಪಂಪಭಾ. ೩-೩೨). [ಸಂ.]

**ನಿರ್ದಾರಕ** (ನಾ). ೧. ಒಡೆಯುವವನು ; ಸೀಳುವವನು. ೨. ಹಾಳು ಮಾಡುವವನು: ತಂಭುವೆಂಬ ದಾರಕನುಂ ಜಿನಧರ್ಮನಿರ್ಧಾ[ದಾ]ರಕನುಮಾಗಿ ಮದ್ಯಮಧುಮಾಂಸಸೇವನೆಗೆಯ್ದು ನರಕತಿರ್ಯಗಾದಿ ಗತಿಗಳೊಳ್ ಪಲಕಾಲಂ ತಿರಿತಂದು (ಪಂರಾಮಾ. ೧೬-೩೮ ವ). [ಸಂ.]

**ನಿರ್ಧಾರಣ** (ನಾ). ಒಡೆಯುವುದು ; ಸೀಳುವುದು : ಸಂತಸದಿಂದಂ ಮದಮುಂಟೆ ವೈರಿಜನತಾ ನಿರ್ಧಾರಣಂ ವಾರಣಂ(ಲೋಕೋಪ.೧೨–೨೧). [ಸಂ.]

**ನಿರ್ಧಾರಿತ** (ಗು). ಒಡೆದ; ಸೀಳಿದ: ರಣಕ್ಷಿತಿಹತಕ್ಷತ್ರಂ ಹತಕ್ಷತ್ರ ನಿರ್ದ್ಧಯನಿರ್ದ್ಧಾರಿತದೇಹಲೋಹಿತಪಯಶ್ಶ್ಯಾತಾಸಿ ಶಾತಾಸಿ ದುಜ್ಜಯ ಧಾರಾಚಕಿತಾರಿರಕ್ಷಣ ಭುಜಾದಂಡಂ (ಎಕ. VI, ಚಿಕ್ಕಮ. ೧೬೧–೫೬ ; 1137). [ಸಂ.]

**ನಿರ್ಧಾರಿಸು** (ಕ್ರಿ). ಒಡೆ ; ಸೀಳು : ಕೂರಿದರಪ್ಪ ಧನುರ್ಧರಬೀರರ ನಿದಿರೊಳ್ ನಿಶಾತಶರಹತಿಯಿಂ ನಿರ್ಧಾರಿಸೆ ಸಮರಪ್ರಥಮಪ್ರಾರಂಭಂ ಪೋಲ್ತುದಂತಕಾಪೋಶನಮಂ (ಶಾಂತಿಪು. ೪–೧೧) ; ತಗರಾಗಿ ಪಳಂಚುವ ಪಂದಿಯಾಗಿ ನಿರ್ಧಾರಿಪ . . . ಮಾಭೈರವನಾಗಿ ನುಂಗುವ ಮಹಾಸ್ತ್ರದಿ ನೆಚ್ಚು ಕಿರೀಟಿ ಕಾದಿದಂ (ಜಗವಿ. ೧೫–೨೧). [ನಿರ್ಧಾರಣ+ –ಇಸು₃]

**ನಿರ್ಧಾಲನ, ನಿರ್ಧಾಳನ** (ನಾ). ೧. ನಿವಾರಣೆ ; ಪರಿಹಾರ : ಭೂತಗಳ ಪಾಲನೆಗೂ ಕಂಟಕಗಳ ನಿರ್ಧಾಲನಕ್ಕೂ ದಯೆ ಎಂದು ಹೆಸರು (ಬ್ರಹ್ಮಜೀ. ೨೫೫). **ನಿರ್ಧಾಳನ:** ೨. ನಾಶ : 'ನಿರ್ಧಾಳಿಸು' ಪರಾ. [ಸಂ.]

**ನಿರ್ಧಾವ** (ನಾ). ಬೆಂಕಿ ಇಲ್ಲದಿರುವ ಸ್ಥಳ ; ಕಿಚ್ಚಿಲ್ಲದಿರುವ ಸ್ಥಳ: ಕೊಂಡೊಯ್ದೆನ್ನನೊಂದು ನಿರ್ಧಾವದಲ್ಲಿ [ಪಾಠಾಂ. ನಿವ್ವಾದಲ್ಲಿ] ನಿಜಾಸು ಮಹೀಶಾ (ನಳಚಂ. ೫೯೫). [ಸಂ.]

**ನಿರ್ಧಾಹ** (ನಾ). ೧. ಉರಿಯುವಿಕೆ; ಉರಿಯುವ ಕ್ರಿಯೆ. ೨. ಬಾಯಾರಿಕೆ ಇಲ್ಲದಿರುವಿಕೆ : "ಬಾಯಾರಿಕೆಯೇ ಇಲ್ಲದಿರುವುದು"; ಅತೃಷ್ಣೆ ; ನಿರ್ಧಾಹ" (Adipsia. ಇಂಕನಿ). [ಸಂ.]

**ನಿರ್ಧಾಳನ** 'ನಿರ್ಧಾಲನ' ನೋ.

**ನಿರ್ಧಾಳಿಸು** (ಕ್ರಿ). ೧. ನಾಶಮಾಡು ; ಹಾಳುಮಾಡು. ೨. ಕೊಲ್ಲು ; ಸಂಹರಿಸು : ಕಾವನನು ನಿರ್ಧಾಳಿಸಾತನ ಭಾವಕೆಯ ಪ್ರಾರ್ಥನೆಗೆ ಮೆಚ್ಚುತ್ತಾವನವನನು ಮರಳಿ ಬದುಕಿಸಿದ (ಪಾರ್ವಪ. ೩–೫೨). [ನಿರ್ಧಾಳನ (= ನಿರ್ಧಾಲನ) + – ಇಸು₃]

**ನಿರ್ದಿಗಂತ** (ನಾ). ಕ್ಷಿತಿಜವೆ ಇಲ್ಲದುದು ; ದಿಕ್ಕುಗಳನ್ನು ಮೀರಿದುದು : ಎಲ್ಲ ತತ್ತ್ವದಲ್ಲೆ ಮೀರಿ, ನಿರ್ದಿಗಂತವಾಗಿ ಏರಿ, ಓ ನನ್ನ ಚೇತನ, ಆಗು ನೀ ಅನಿಕೇತನ ! (ಅನಿಕೇ. ೬೦–೧೧). [ಸಂ.]

**ನಿರ್ದಿಗ್ಧಿಕೆ** (ನಾ). ಒಂದು ಬಗೆಯ ಸಸ್ಯ ; ಕರಮರಿಕೆಗಿಡ : "ಕರವಂದಂ ಕರವಂದಿಗೆ ಬಜುವಣೆ ನಿರ್ದಿಗ್ಧಿಕಾಖ್ಯೆ" (ವಸ್ತುಕೋ. ೩೭–೨೮). [ಸಂ. ನಿರ್ದಿಗ್ಧಿಕಾ]

**ನಿರ್ದಿಶ** (ನಾ). ದಿಕ್ಕಿಲ್ಲದಿರುವವನು ; ದೆಸೆಗೆಟ್ಟಿರುವವನು ; ನಿರ್ಗತಿಕ; ಪರದೇಶಿ : ಹರಹರ ನಿರ್ದಿಶನು ತಾನಾದೆನಾವುದೊ ತನಗೆ ಗತಿಯಿನ್ನು (ಸಿಭಾಗ. ೬–೨–೩೩) ; ಕೈಗಾವರಾರೋ ಹರ ಮಹಾದೇವ ನಿರ್ದಿಶರಿಗಿನ್ನೇನು ಗತಿ (ಸಿಭಾಗ. ೮–೧೦–೨೮). [ಸಂ. ನಿರ್ದಿಶ್]

**ನಿರ್ದಿಷ್ಟ** (ಗು). ೧. ತೋರಿಸಿದ ; ನಿರ್ದೇಶಿಸಿದ ; ಗೊತ್ತಾದ : ಮೆಲ್ಲಗೆ ಎದ್ದು, ನಿರ್ದಿಷ್ಟವಾದ್ಯವನ್ನು ತಂದುಕೊಂಡು, ಸುಖೋಪವಿಷ್ಟೆಯಾಗಿ, ಮೀಟಿತೊಡಗುವಳು (ಬಿಟ್ಟಅ. ೧೧–೭) ; ಯಾವ ಪ್ರಶ್ನೆಯೇ ಆಗಲಿ, ನಿರ್ದಿಷ್ಟ ಉತ್ತರ ಬಯಸಿ ಮಕ್ಕಳ ಆಲೋಚನಾಶಕ್ತಿಯನ್ನು ಪ್ರಚೋದಿಸುವಂತಿರಬೇಕು (ಶಿಕ್ಷದ. ೨೭೯) ; ಈ ಮನೆ ಎಷ್ಟು ಸರ್ವಸಂಪನ್ನವಾಗಿದೆಯೆಂದರೆ ಕಸಪೊರಕೆಯನ್ನು ಇರಿಸುವುದಕ್ಕೆ ಕೂಡ ಅದರಲ್ಲಿ ಉಚಿತವಾದ ನಿರ್ದಿಷ್ಟವಾದ ಸ್ಥಾನವಿದೆ (ನಂಟರು. ೧೯). **೨.** ನಿಶ್ಚಿತವಾದ; ನಿರ್ಧರಿಸಿದ; ಖಚಿತವಾದ : ಗುರುಲಘುರಚನೆಗೆ ನಿರ್ದಿಷ್ಟರೂಪಹೀನಾಧಿಕಾಕ್ಷರಂ ಛಂದದೊಳೊಂದಿರೆ ಭಿನ್ನವೃತ್ತಮೆಂಬುದು ದುರುಕ್ತಮತ್ಯಂತದೋಷಮಕ್ಕುಂ ಕೃತಿಯೊಳ್ (ಕಾವ್ಯಾವ. ೪೮೨). **೩.** ವಿವರಿಸಿದ ; ವಿಶದೀಕರಿಸಿದ ; ಹೇಳಿದ. (ನಾ). **೪.** ನೆಪ ; ನಿಮಿತ್ತ : "ಕೈತವಂ, ಕಪಟಂ . . . ನಿರ್ದಿಷ್ಟಂ, ವ್ಯಪದೇಶಃ – ಈ ೧೦ ನೆವಂ" (ಹಲಾಯು. ೧೧೭–೨೪) ; "ಕಪಟಂ ನಿಭಂ ಕೈತವಂ ಮೃಷಂ ನಿರ್ದಿಷ್ಟಮುಪಧಿ . . . ವ್ಯಪದೇಶವೆನೆ ವ್ಯಾಜಮಕ್ಕುಂ" (ಮಂಗರಾ. ೧೨೪–೧೦).

**ನಿರ್ದಿಷ್ಟಪಡಿಸು** = ಖಚಿತವಾಗಿ ಗೊತ್ತುಪಡಿಸು ; ನಿರ್ಧಾರಗೊಳಿಸು : ಮೇಲೆ ಹೇಳಿದ ಹದಿನಾಲ್ಕು ಭಾಷೆಗಳಲ್ಲೆಲ್ಲ ಉಪಯೋಗಿಸಬೇಕಾದ ಶಬ್ದಗಳನ್ನು ನಿರ್ದಿಷ್ಟಪಡಿಸಿದ ಒಂದು ಶಬ್ದಕೋಶವನ್ನೂ ಭಾರತಸರ್ಕಾರದವರು ಗೊತ್ತುಮಾಡಿದರು (ಭಾಧಾನ. ಪೀಠಿಕೆ). [ಸಂ.]

**ನಿರ್ದಿಷ್ಟಕಾಲ** (ನಾ). ಖಚಿತವಾದ ಕಾಲ ; ನಿರ್ಧಾರಿತವಾದ ಕಾಲ : ಈ ಶಾಸನಬದ್ಧ ಕಾಲಕ್ಕೆ ಆ ದೇಶದ ನಿರ್ದಿಷ್ಟಕಾಲವೆಂದು ಹೆಸರು (ನಕ್ಷತ್ರ. ೫೬). [ನಿರ್ದಿಷ್ಟ + ಕಾಲ]

**ನಿರ್ದಿಷ್ಟತೆ** (ನಾ). ಖಚಿತತೆ : ಪ್ರಕೃತವಿಷಯದ ವಿವರಣೆಯ ನಿರ್ದಿಷ್ಟತೆಗಾಗಿ, ಬಾಹ್ಯವಸ್ತುವನ್ನು ನಿರ್ದೇಶಿಸಿದೆವು (ಭಾಪಗೀ. ೫). [ಸಂ. ನಿರ್ದಿಷ್ಟತಾ]

**ನಿರ್ದಿಷ್ಟಿತ** (ಗು). = ನಿರ್ದಿಷ್ಟ ೨ : ಇಷ್ಟಮಾಗಿರಲನ್ಯಕವಿನಿರ್ದಿಷ್ಟಿತಾರ್ಥಮನೊರೆವುದೊಂದುತೃಷ್ಟಮತಿಯ ನವೋಪಮೆಗಳಂ ತನ್ನೊಳಾಪನಿತ ಸೃಷ್ಟಿಸುತ್ತಿರವೇಳ್ಕು (ಬಸವು. ೧–೧೩). [<ನಿರ್ದಿಷ್ಟ ?]

**ನಿರ್ದುರಿತ** (ನಾ). ಪಾಪರಹಿತನಾದವನು ; ಪುಣ್ಯಸ್ವರೂಪ : ನಿರವಯವಂ ನಿತ್ಯಂ ನಿರ್ದುರಿತನನಂತಪ್ರಬೋಧದರ್ಶನಸೌಖ್ಯಂ (ಯಶೋಚ. ೪–೨೦). [ಸಂ.]

**ನಿರ್ದುಷ್ಟ** (ಗು). ೧. ದೋಷರಹಿತವಾದ ; ಕಳಂಕವಿಲ್ಲದ ; ತಪ್ಪಿಲ್ಲದ. (ನಾ). ೨. ದೋಷರಹಿತವಾದುದು ; ತಪ್ಪಿಲ್ಲದುದು : ಮೇಲಿನ ವರ್ಗೀಕರಣವು ಶಾಸ್ತ್ರದೃಷ್ಟಿಯಿಂದ ನಿರ್ದುಷ್ಟವೂ ಆಗಿಲ್ಲ ಸರ್ವಗ್ರಾಹಿಯೂ ಆಗಿಲ್ಲ (ಭಾಷಾಶಾ. ೩೨) ; ನಿರ್ದಿಷ್ಟವೂ ಮತ್ತು ನಿರ್ದುಷ್ಟವೂ ಆದ ಪಾಂಡಿತ್ಯ ಮತ್ತು ಅನುಭವ ದೊರೆಕಿ . . . ಶಿಕ್ಷಣಕ್ಕೆ ಪಠ್ಯವಸ್ತುವನ್ನೂ ರೂಪಿಸಬೇಕಾಗುತ್ತದೆ (ಶಿಕ್ಷದ. ೧೭೯) ; ಒಂದು ವಾಕ್ಯವನ್ನು ಕನ್ನಡದಲ್ಲಿ ಪ್ರಾರಂಭಿಸಿ ಕನ್ನಡದಲ್ಲೇ ಮುಗಿಸಿದ ಬಳಿಕ ಮುಂದಿನ ವಾಕ್ಯಕ್ಕೆ ಇಂಗ್ಲೀಷನ್ನು ಶರಣುಹೊಕ್ಕರೆ ಅದು ನಿರ್ದುಷ್ಟವೆಂದೇ ಒಪ್ಪಿಕೊಳ್ಳಲಾಯಿತು (ನಂಟರು. ೨೩). [ಸಂ.]

**ನಿರ್ದುಷ್ಟತನ** (ನಾ). ದೋಷರಹಿತತೆ ; ಕಳಂಕವಿಲ್ಲದಿರುವಿಕೆ ; ತಪ್ಪಿಲ್ಲದಿರುವಿಕೆ : ರತ್ನಗಳ ತೇಜಸ್ಸು, ಆಕಾರ ಹಾಗೂ ನಿರ್ದುಷ್ಟತನಗಳಿಂದಲೇ ಅವುಗಳ ಬೆಲೆಯೆಷ್ಟೆಂಬುದನ್ನು ನಿರ್ಧರಿಸಲು ಸಾಧ (ರತ್ನಗೋ. ೨೫). [ನಿರ್ದುಷ್ಟ + – ತನ]

**ನಿರ್ದುಷ್ಟತೆ** (ನಾ). = ನಿರ್ದುಷ್ಟತನ : ಟೆನಿಸನ್ನನ ಪ್ರಕೃತಿನಿರೂಪಣೆಯಲ್ಲಿ ವಿಶಿಷ್ಟವಾಗಿ ಕಂಡುಬರುವ ವಿವರಗಳ ನಿರ್ದುಷ್ಟತೆಯನ್ನು ನಾವು ಗಮನಿಸಬಹುದು (ಸಾಹಿಪ್ರ. ೭೭). [ಸಂ. ನಿರ್ದುಷ್ಟತಾ]

**ನಿರ್ದೇಶೆ** (ನಾ). ದಿಕ್ಕಿಲ್ಲದಿರುವಿಕೆ.

**ನಿರ್ದೇಶೆಯ ಮಾಡಿಕೊಳ್ಳು** = ಬಯಲಾಗು : ಗುರುಲಿಂಗಜಂಗಮ ತಾನೆಯಾಗಿ ಮತ್ತೆ ತಾನೆಂಬುದೇನೂ ಇಲ್ಲದ ಪರಿಯ ನೋಡಾ ತನ್ನ ತಾ ನಿರ್ದೆಶೆಯ ಮಾಡಿಕೊಂಡು ನಿಜಪದವನೆಯ್ದಿಪ್ಪ ಪರಿಯ ನೋಡಾ (ಚನ್ನಪ. ಕ. ೩೯೪–೮೩೬). **ನಿರ್ದೆಶೆಯಾಗು** = ಕಾಣದಂತೆ ಆಗು ; ಕಾಣದಾಗು : ರೌದ್ರವನು ವನದೊಳಗೆ ಹರಿ ಬಲಭದ್ರರಿಂತೆಸಗಿರಲು ತಾವರೆ ನಿದ್ರೆಗಳಿವಮುಖವಾಯ್ತು ನಿರ್ದೆಶೆಯಾಯ್ತು ರವಿದೀಪ (ಸಿಭಾಗ. ೧೦–೧೫–೩೬). [ನಿರ್ – + ದೆಶೆ₂ (<ದೆಸೆ₂)]

**ನಿರ್ದೆಸೆ** (ನಾ). ಒಂದು ಬಗೆಯ ಚರ್ಮರೋಗ : ನಿರ್ದೆಸೆಗೆ:— ಕಕ್ಕೇಬೇರ ತಿಗಡ ಶರ್ಕರೆ ಬೆರೆಸಿ ಮೆಲ್ಲಲು ನಿರ್ದೆಸೆ ಮಾಣ್ಗುಂ (ವಿದ್ಯೈವಿ. ೧೯೪). [ ? ]

**ನಿರ್ದೇಶ** (ನಾ). ೧. ತೋರಿಸುವಿಕೆ ; ಸೂಚಿಸುವಿಕೆ ; ಗುರುತಿಸುವಿಕೆ. ೨. ಆಜ್ಞೆ ; ಅಪ್ಪಣೆ ; ನಿರ್ದೇಶನ : "ಅಪವಾದಃ, ಶಾಸನಂ, ಶಿಷ್ಟಿಃ, ನಿರ್ದೇಶಃ, ಆಜ್ಞಾ—೫ ಆಜ್ಞೆಗೆ ಹೆಸರುಗಳು, ಹೀಗೆ ನಡಕೊಳ್ಳಬೇಕೆಂದು ಅಧಿಕಾರದಿಂದ ವಿಧಿಸಿ ಹೇಳುವಿಕೆ" (ಸಿದ್ಧಾಂತಿ. ೨೧೯) ; ನಾಮಾದಿ ನಿರ್ದೇಶಾದಿ ಸದಸದಾದಿಗತ್ಯಾದಿ ಪ್ರಮಾಣ ನಯ ನಿಕ್ಷೇಪ ಮಾರ್ಗಣಾವಿಷಯಮುಮೆಂಬಿವು ಮೊದಲಾಗೆ ಚೇತನಸ್ವಭಾವಾನುಚಿಂತನಂ ತೃತೀಯಧರ್ಮ್ಯಂ (ಚಾವುಂಪು. ೪೪೪) ; ಯೋಜನೆಗಳೂ . . . ಕಾರ್ಯಗತವಾಗುವಂತೆ ಮಾಡಲು ಕೇಂದ್ರ ಆದೇಶ ನಿರ್ದೇಶಗಳ ಮೂಲಕವೂ . . . ಪ್ರೋತ್ಸಾಹಿಸಬೇಕು (ಶಿಕ್ಷದ. ೭೬೪). ೩. ಹೇಳುವಿಕೆ ; ನಿರೂಪಣೆ : ಉಪಮಾನಾರ್ಥಾಪತ್ತ್ಯಾದಿಗಳಲ್ಲಿಯೆ ಅಂತರ್ಭಾವಮಪ್ಪುದಱಿಂ ಪ್ರಮಾಣಾಂತರಸಂಖ್ಯಾನಿವೃತ್ತ್ಯರ್ಥಂ ದ್ವಿವಚನ ನಿರ್ದೇಶಂ ಪ್ರಮಾಣಕ್ಕೆ ಮಾಡೆ ಪಟ್ಟಿತ್ತು (ತತ್ತ್ವಪ್ರ. ೫೩). ೪. ಘೋಷಿಸುವಿಕೆ. ೫. ವಿವರಣೆ ; ವಿಶದೀಕರಿಸುವಿಕೆ. ೬. ಮಾರ್ಗದರ್ಶನ. [ಸಂ.]

**ನಿರ್ದೇಶಕ** (ಗು). ೧. ಸೂಚನೆ ನೀಡುವ : "ನಿರ್ದೇಶಿಸುವ, ನಿರ್ದೇಶಕ" (Directive. ಪತ್ರಿಸ. ೩೨). (ನಾ). ೨. ಕಾರ್ಯನಿರ್ವಾಹಕ ; ನಿಯಂತ್ರಕ ; ಆಡಳಿತಗಾರ : "ನಿರ್ದೇಶಕ, ನಿಯಂತ್ರಕ, ಡೈರೆಕ್ಟರ್" (Director. ಪತ್ರಿಸ. ೩೨). ೩. ನಾಟಕ, ಚಲನಚಿತ್ರ ಮೊದಲಾದುವುಗಳಿಗೆ ಮಾರ್ಗದರ್ಶನ ನೀಡುವ ವ್ಯಕ್ತಿ ; ದಿಗ್ದರ್ಶಕ : ಅವಳು ನಿರ್ದೇಶಕರ ಮುಖ್ಯ ಕಾರ್ಯದರ್ಶಿನಿಯಾಗಿ ನೇಮಕಗೊಂಡಳು (ರೂಢಿ). [ಸಂ.]

**ನಿರ್ದೇಶಕಮಂಡಲ** (ನಾ). ಆಡಳಿತಗಾರರ ಸಮಿತಿ ; ನಿರ್ದೇಶಕರ ಸಮಿತಿ : ಅನೇಕ ಪಾಲುಗಾರರು ಒಂದೆಡೆ ಸೇರಿ, ತಮ್ಮ ಸಂಸ್ಥೆಯ ಆಡಳಿತವನ್ನು . . . ಕಾಯಲು ನಿರ್ದೇಶಕಮಂಡಲವೊಂದನ್ನು ಆರಿಸುತ್ತಾರೆ (ತಕ್ಕಡಿ. ೪೬). [ನಿರ್ದೇಶಕ + ಮಂಡಲ]

**ನಿರ್ದೇಶಚಿಹ್ನೆ** (ನಾ). ಸೂಚನೆ ಕೊಡುವ ಗುರುತು : ಇಂಗ್ಲೀಷ್ ಭಾಷೆಯ ಮೇಲ್ಪಟ್ಟಿಯಲ್ಲಿ ದೊಡ್ಡಕ್ಷರಗಳು . . . ಸಂಯುಕ್ತಾಕ್ಷರಗಳು, ನಿರ್ದೇಶಚಿಹ್ನೆಗಳು . . . ಅಡ್ಡಗೀಟುಗಳೂ ಇರುತ್ತವೆ (ಮುದ್ರಕ. ೨೩). [ನಿರ್ದೇಶ + ಚಿಹ್ನೆ]

**ನಿರ್ದೇಶನ** (ನಾ). ೧. ತಿಳಿಯಪಡಿಸುವಿಕೆ ; ಸೂಚಿಸುವಿಕೆ : ಮೂರುಬೆರಳನ್ನು ಮೂರು ಸಲ ತೋರಿಸಿದರೆ ಅವರಿಗೆ ಉತ್ತರ ಹೊಳೆಯುವುದು. ಹಾಗೆ ನೀಡುವ ಸಹಾಯವೇ ನಿರ್ದೇಶನ (ಶಿಕ್ಷದ. ೪೩೧). ೨. ಮಾರ್ಗದರ್ಶನ : ಆ ಕಾಲದಲ್ಲಿ ಮಕ್ಕಳು ವಿವೇಚನೆಯ ನಿರ್ದೇಶನಗಳಿಗೆ ಅಷ್ಟಾಗಿ ಮಣಿಯಲಾರರು (ಶಿಕ್ಷದ. ೩೧೧) ; ಮನೋವಿಜ್ಞಾನ ಎಂದರೆ . . . ವ್ಯಕ್ತಿ ಸಮಾಜಜೀವನದಲ್ಲಿ ಸುರಕ್ಷತೆ ಮತ್ತು ತೃಪ್ತಿಗಳಿಂದ ಭಾಗವಹಿಸಲು ನೆರವಾಗುವಂತೆ ನಿರ್ದೇಶನ ನೀಡಲು . . . ನೆರವಾಗುವ ಜ್ಞಾನ (ಶಿಕ್ಷದ. ೪೦೮). ೩. ನಾಟಕ, ಚಲನಚಿತ್ರ ಮೊದಲಾದುವುಗಳಿಗೆ ನೀಡುವ ಮಾರ್ಗದರ್ಶನ ; ದಿಗ್ದರ್ಶನ : ಆ ಚಿತ್ರದ ನಿರ್ದೇಶನ ಯಾರದು ? (ರೂಢಿ). [ಸಂ.]

**ನಿರ್ದೇಶಾರ್ಥಕ** (ನಾ). ಅದು ಅಲ್ಲಿಯದು ಎಂದು ತೋರಿಸುವುದು,—ಸೂಚಿಸುವುದು ; ನಿರ್ದೇಶ ಮಾಡುವುದು : ನಿರ್ದೇಶಾರ್ಥಕವಾದ ಅಕಾರಕ್ಕೆ ಅತಿ ಪರವಾದಾಗ—ಉದಾ :- ಆ ಅರಸಂ, ಆ ಆಳ್ (ಕೈಪಿಡಿ. ೯). [ಸಂ.]

**ನಿರ್ದೇಶಿಸು** (ಕ್ರಿ). ೧. ತೋರಿಸು ; ಸೂಚಿಸು : ಹರಿದಾಸವಾಙ್ಮಯದಲ್ಲಿ ಅವರಿಗಿರುವ ಹಿರಿಯ ಸ್ಥಾನವನ್ನು ನಿರ್ದೇಶಿಸುವುದು (ಜಗವಾ. ೩) ; ಮುದ್ದೆಯಾಗಿ ಬಿದ್ದ ಅವಳ ಅವಸ್ಥೆ, ಅವಳ ಮನಸ್ಸಿನ, ಅವಳ ದೇಹದ ಅವಸ್ಥೆಯನ್ನು ನಿರ್ದೇಶಿಸುವಂತಿತ್ತು (ಕಪುಸಿ. ೭೦೧) ; ಮನುಷ್ಯನಿಗೆ ಕೆಲವು ಸಾಮಾನುಗಳನ್ನು ಕೆಲವು ಸ್ವರಗಳಿಂದ ನಿರ್ದೇಶಿಸಿ ಹೇಳುವುದು ಸಾಧ್ಯವಾಗಿರಬೇಕು (ನಮ್ಮನು. ೨೯). ೨. ಗುರುತಿಸು ; ಹೆಸರಿಸು : ಕನ್ನಡದಲ್ಲಿ ಹೊಸಕವಿತೆ ಸೊಂಪಾಗಿ ಚಿಗುರಿ ಫಲಿಸಿದ್ದನ್ನು ನೆನೆದರೆ "ಆಧುನಿಕಕರ್ನಾಟಕವಿಜೂತವನಚೈತ್ರ" ಎಂದು ಅವರನ್ನು ನಿರ್ದೇಶಿಸಬೇಕೆನ್ನಿಸುತ್ತದೆ (ಸಮಾಲೋ. ೨೬). ೩. ಅಪ್ಪಣೆ ಮಾಡು ; ಆಜ್ಞಾಪಿಸು : ಮಾಣಿಗೆ "ಎರಡು ಇಡ್ಲಿ ತಾ" ಎಂದು ನಿರ್ದೇಶಿಸಿದ ಯಶೋದೆ ದಿನಪತ್ರಿಕೆಯ ತಲೆಬರಹಗಳೆಡೆ ಕಣ್ಣೋಡಿಸುತ್ತಿದ್ದಾಗ ಪಕ್ಕದ ಕುರ್ಚಿ ಎಳೆದ ಸದ್ದಾಯಿತು (ನಾಕ್ಸಸ್ಕ್ಯ. ೭೦೨). ೪. ವಿವರಿಸು : ಇಂತು ಮೋಹನೀಯ ಸತ್ವಸ್ಥಾನಂಗಳು ಪದಿನಯ್ದಪ್ಪುವೆಂದು ನಿರ್ದೇಶಿಸಲ್ಪಟ್ಟುವು (ಗೊಮ್ಮಸಾ. ೧೩೦-೯) ; ಅವುಗಳನ್ನು ಪರೀಕ್ಷಿಸಿದರೆ ಅವುಗಳಿಂದ ಬರುವ ಕೀಟಗಳ ಬಗೆಗಳನ್ನು ನಿರ್ದೇಶಿಸಬಹುದು (ಕೀಟಜೆ. ೯೬). ೫. ಮಾರ್ಗದರ್ಶನ ಮಾಡು,— ನೀಡು : ಹೆಚ್ಚು ಲಾಭಪ್ರದವಾಗುವಂತೆ ನಿರ್ದೇಶಿಸುವ ಎಂಜಿನಿಯರು ಬೇಕು (ಶಿಕ್ಷದ. ೧೯೫). ೬. ನಾಟಕ, ಚಲನಚಿತ್ರ ಮೊದಲಾದುವುಗಳಿಗೆ ಮಾರ್ಗದರ್ಶನ ನೀಡು,— ಸೂಚನೆಕೊಡು ; ದಿಗ್ದರ್ಶನ ನೀಡು : ಆತನಿಗೆ ವಿಪರೀತ ತಲೆನೋವಿನಿಂದಾಗಿ ಮತ್ತೆ ಸ್ಟುಡಿಯೋಕ್ಕೆ ಹೋಗಿ ಚಿತ್ರವನ್ನು ನಿರ್ದೇಶಿಸುವುದು ಸಾಧ್ಯವಿಲ್ಲವೆನಿಸಿತ್ತು (ರೂಢಿ). [ನಿರ್ದೇಶನ + — ಇಸು₁]

**ನಿರ್ದೇಹ** (ಗು). ೧. ದೇಹವಿಲ್ಲದ ; ಶರೀರರಹಿತವಾದ ; ಕಾಯವಿಲ್ಲದ : ಭಕ್ತನಿಧಿ ನಿರ್ದೇಹದೇಹಿ ವಿರಕ್ತಗತಿ ನಿರ್ನಾಮಿನಾಮಿ ಚಿದುಕ್ತಮತಿ ನಿಃಶಬ್ದಶಬ್ದಿ ವಿಭಾವಭಾವಿತನು (ಬಸವು. ೬-೫). (ನಾ). ೨. ದೇಹವಿಲ್ಲದಿರುವಿಕೆ ; ನಿರಾಕಾರ : ದೇಹವೆಂದೆಱಿಯೆ ನಿರ್ದೇಹವೆಂದೆಱಿಯೆ ಜಂತ್ರದ ಸೂತ್ರದಂತಿರ್ಪ ನಿಬ್ಬೆಱಗಿನ ಮೂರ್ತಿಯ ನೋಡಾ (ಬಸಹೆ. ೪೪-೨೫೩). [ಸಂ.]

**ನಿರ್ದೇಹಿ** (ನಾ). ದೇಹವಿಲ್ಲದವನು ; ಕಾಯವಿಲ್ಲದವನು : ನಚ ಭೂಮಿರ್ನಚ ಜಲಂ ನಚ ತೇಜೋ ನಚ ವಾಯುರ್ನಚಾಕಾಶಃ ಇವೆಲ್ಲವು ಘಟಕ್ಕೆ ಸಂಬಂಧವಾಗಿ ಘಟ ಕೆಡುವುದು ಇಂತಹ ನಿರ್ದೇಹಿ ಶರಣಂಗಲ್ಲದೆ ಅಱಿಯಬಾರದು (ಚನ್ನಪ. ಕ. ೫೮೧-೧೨೯೩) ; ದೇಹಿಯೆನಬೇಡ ನಿರ್ದೇಹಿ ಜಂಗಮಲಿಂಗ ದೇಹಗುಣದಾಸೆಯುಳಿದಡೆ ಅತ ನಿರ್ದೇಹಿ ಕಾಣಯ್ಯ (ಸರ್ವಜ್ಞ. ೧೪೯) ; ಶರಣ ದೇಹವಿಡಿದು ಚರಿಸಿದಡೆಯೂ ಎಲ್ಲಾ ದೇಹಿಗಳಂತೆ ದೇಹಿಯಲ್ಲ ಶರಣನು ನಿರ್ದೇಹಿ (ಪಚಸಂ. ೫೩೬-೧೬ ಟೀಕು). [ಸಂ. ನಿರ್ದೇಹಿನ್]

**ನಿರ್ದೈವ** (ನಾ). ೧. ಅದೃಷ್ಟವಿಲ್ಲದವನು; ದೈವಗೇಡಿ ; ದುರ್ದೈವಿ : ದೈವಬಲವೇ ಬಲವಲಾ ನಿರ್ದೈವರಂಗೈತಳಕೆ ಬಂದರೆ ಪರುಷ ಪಾಷಾಣ (ಕುಮ್ಯಾದ್ರೋ. ೧೪-೪೬) ; ನಿರ್ದೈವರೇ ನಿಮ್ಮಂತೆ ನಾವೆನುತ . . . ಎಜಗಿದನು (ತೊರಂರಾ. ೬-೧೪-೨೬). ೨. ನಾಸ್ತಿಕ : ಶಿವಭಕ್ತರಲ್ಲಿಯತಿವಿಶ್ವಾಸಿಗಳು ಯಶೋಮಾನಿನಿಯ ನಲ್ಲರುಂಟಲ್ಲದಾ ದೇಶದೊಳು ನಿರ್ದೈವರಿಲ್ಲ ನೋಳ್ಪೊಡೆ ಭಾವಿಸಿ (ರಾಘಶ. ೧-೩೩). [ಸಂ.]

**ನಿರ್ದೈವಿ** (ನಾ). ಅದೃಷ್ಟಹೀನ ; ದುರ್ದೈವಿ : ಈ ನೀಚ ನಿರ್ದೈವಿಯನ್ ಎಂದುಂ ಜಗಿಗ್ ಜಗುಟಿದ ವಜ್ರಸಮಸಂಕಲೆಗಳಿಕ್ಕಿ ಬೆಟ್ಟದೆಟ್ಟರದ ಮುಡಿಗೆ ಕಟ್ಟುವುದು (ಬದ್ಧಪ್ರ. ೧-೪). [ಸಂ. ನಿರ್ದೈವಿನ್]

**ನಿರ್ದೋಷ** (ಗು). ೧. ದೋಷರಹಿತವಾದ; ಕಳಂಕವಿಲ್ಲದ. (ನಾ). ೨. ದೋಷರಹಿತವಾದುದು; ಕಳಂಕವಿಲ್ಲದುದು: ಸಭಾಸದರೆಲ್ಲಂ ಶ್ರೋತೃಗಳಾಗಿರೆ ನಿರ್ದೋಷಮಪ್ಪ ವೀಣೆಯಂ ತಪ್ಪದೆನೆ ಗಾಂಧರ್ವದತ್ತೆ ನಾಲ್ಕುಯ್ದು ವೀಣೆಯಂ ತಂದು ಮುಂದಿಕ್ಕೆ (ಚಾವುಂಪು. ೪೧೩); ಎರಡುಂ ವಿರುದ್ಧರಸಮೊಡವೆರಸಿರೆ ತದವಾಂತರಸ್ಥಮೊಂದನ್ಯರಸಂ ಪರಿಪುಷ್ಟಮಾಗೆಯುಂ ವ್ಯತಿಕರಣಂ ಮೇಣ್ ಕ್ರಮವಾಗೆಯುಂ ನಿರ್ದೋಷಂ (ಕಾವ್ಯಾವ. ೮೩೩); ಯುಗಳಂಗಳೊಳ್ ಹ್ರಸ್ವಕ್ಕೆ ಹ್ರಸ್ವಂ ಪರಮಾದೊಡಂ, ದೀರ್ಘಕ್ಕೆ ದೀರ್ಘಂ ಪರಮಾದೊಡಂ, ನಿರ್ದೋಷವಾಗಿ ಸವರ್ಣಸಂಜ್ಞೆ ವರ್ತಿಸುಗುಂ (ಶಮದ. ೭ ವೃತ್ತಿ); ಸಮರದಲಿ ಹೊಸಕದ ಛಲವೀಯುಹಂಕೃತಿ ವಿಲಾಸಲಳಿದುದೆ ಶಿವಶಿವಾ ನಿರ್ದೋಷದಲಿ ಬಹುದೋಷವಿದು ವಿಪರೀತವಾಯ್ತೆಂದ (ಕುವ್ಯಾಕ. ೨೬-೩೧); ಪ್ರತಿಪಾದಿಸಬೇಕಾಗಿರುವ ವಿಷಯ ನಿರ್ದೋಷವಾಗಿಯೂ ನಿರ್ವಿವಾದವಾಗಿಯೂ ಇರಬೇಕು (ರಕ್ಷದ. ೨೬೮). ೩. ದೋಷವಿಲ್ಲದವನು; ಕಳಂಕರಹಿತನಾದವನು: ನಿರ್ದೋಷಂ ತಾಯುಂದಿರ ದೋರ್ದುರ್ಗಮುಪದ್ರವಮನೇನುಮಂ ಮಾಡನೆ (ಪಾರ್ಶ್ವಪು. ೧೪-೯); ಜಯಮಂಗಳಂ ನಿತ್ಯಶುಭಮಂಗಳಂ ಸಚ್ಚಿದಾನಂದ ಸರ್ವಗುಣಪೂರ್ಣಗೆ . . . ನಿತ್ಯಕಲ್ಯಾಣ ನಿರ್ದೋಷಗೆ (ಪುರಂದ. ೨-೨೩೧-೧). ೪. ರಾತ್ರಿಯಿಲ್ಲದವನು; ಕತ್ತಲೆಯಿಲ್ಲದವನು. ೨, ೪: ದಿವಾಕರನಂತೆ ನಿರ್ದೋಷಂ . . . ಎಂದು ಧರ್ಮಜನ ಧರೆ ಪೊಗಳುತಿರೆ (ಜೈವಿಭಾ. ೨-೧೩). [ಸಂ.]

**ನಿರ್ದೋಷತೆ** (ನಾ). ೧. ದೋಷರಹಿತತೆ; ಕಳಂಕರಾಹಿತ್ಯ: ಸುಘೋಷೆಯೆಂಬ ವೀಣೆಯಂ ತನ್ನಮನೆ ತಾನದಱ ನಿರ್ದೋಷತೆಯುಮನದಱ (ಬಂದ) ಸಂಬಂಧಮುಮನಱಿವಳಪ್ಪುದಱಿಂ ತರಿಸಿ ಕುಡೆ (ಚಾವುಂಪು. ೪೧೪). ೨. ಕತ್ತಲೆಯಿಲ್ಲದಿರುವಿಕೆ. ೧, ೨: ಅತಿಶಯ ಪದಾರ್ಥನಿಕರಪ್ರತೀತಿಯಂ ಪಡೆದ ಪಾದವಿನ್ಯಾಸಂ ಭೂಸುತಮಾಗದಲ್ತೆ ನಿರ್ದೋಷತೆಯಿಂದಲ್ಲದೆ ಸಮಂತು ಕವಿಗಂ ರವಿಗಂ (ಚಂದ್ರಪು. ೧-೪೭). [ಸಂ. ನಿರ್ದೋಷತಾ]

**ನಿರ್ದೋಷಿ** (ನಾ). ದೋಷವಿಲ್ಲದವನು; ಕಳಂಕರಹಿತನಾದವನು; ಪರಿಶುದ್ಧನಾದವನು: ಪಾಂಡುತನಯರ್ ನಿರ್ದೋಷಿಗಳ್ (ಪಂಪಭಾ. ೧೩-೯೦); ಒಂದಿಂದ್ರಿಯ ಮೊದಲಾಗಿ ಐದಿಂದ್ರಿಯ ಕಡೆಯಾದ ಜೀವಜಾಲವಲ್ಲವೇ ಚರಾಚರವೆಲ್ಲಾ ಅದು ಕಾರಣ ಕೂಡಲಸಂಗನ ಶರಣರು ಲಿಂಗಕ್ಕರ್ಪಿಸಿ ಪ್ರಸಾದವ ಕೊಂಡು ನಿರ್ದೋಷಿಗಳಾಗಿ ಬದುಕಿದರು (ಬಸವ. ಕ. ೧೧೨೨); ತುಡುಕಿದ ದೋಷಿಯನಲ್ಲದೆ ಪಿಡಿಯದು ಘಟಸರ್ಪನಂತುಟಲ್ಲದೆ ತನ್ನಂ ತುಡುಕದ ನಿರ್ದೋಷಿಯುಮಂ ಪಿಡಿವುದು ಖಳಮುಖ ಘಟೋಗ್ರಜಿಹ್ವಾಸರ್ಪಂ (ಜಗವಿ. ೧-೧೨); ಸತತಂ ಶರಣಜನಪರಿತೋಷಿ ಕಾಲದ್ವೇಷಿ ನಿರ್ದೋಷಿ (ಬಸಪು. ೭-೪). [ಸಂ. ನಿರ್ದೋಷಿನ್]

**ನಿರ್ದ್ರವ** (ಗು). ೧. ತೇವವಿಲ್ಲದ; ಒಣಗಿದ: 'ನಿರ್ದ್ರವಜಿಹ್ವೆ' ಪರಾ. (ನಾ). ೨. ತೇವವಿಲ್ಲದಿರುವಿಕೆ; ದ್ರವವಿಲ್ಲದಿರುವಿಕೆ; ಒಣಗಿರುವಿಕೆ: ಮಣಿಮಕುಟದೊಲಹಿನ ನಾಲಗೆಯ ನಿರ್ದ್ರವದ ಮಾದ್ರಾಧೀಶನಿಂತೆಂದ (ಕುವ್ಯಾಕ. ೫-೨೦); ಬಿಸಿಲ ಬೇಗೆಗೆ ಕಂದಿ ಕುಂದಿದ ಮುಸಡ ಮಸುಳಿಸಿದಂಗರೋಚಿಯ ಮುಸುಕುಕೆಂಪಿನ ಲೋಚನದ ನಿರ್ದ್ರವದ ನಾಲಿಗೆಯ . . . ಅಸಮವೀರರ ದೇವ ಧೈರ್ಯವಿಸಂಚಮನನಾದ (ತೊರವೆ. ೩-೮-೬೧). [ಸಂ.]

**ನಿರ್ದ್ರವಕರಣ** (ನಾ). ದ್ರವವನ್ನು ಹೋಗಲಾಡಿಸುವಿಕೆ,—ಇಂಗಿಸುವಿಕೆ; ಒಣಗಿಸುವಿಕೆ: "ನಿರ್ದ್ರವ[ಪಾಠಾಂ. ವೀ]ಕರಣ ತಂತುಗಳೊಳು ಪುರಿ" (ಶಬ್ದಮಂ. ೧೦೬). [ಸಂ.]

**ನಿರ್ದ್ರವಜಿಹ್ವೆ** (ನಾ). ಒಣಗಿದ ನಾಲಗೆ: ಉರು ಪರಾಕ್ರಮತೇಜಪಡುವಣತರಣಿಯಾದುದು ಧಟ್ಟಣೆಯ ಧರಧುರಕೆ ನಿರ್ದ್ರವಜಿಹ್ವೆಯಾದುದು ನಿಮಿಷನಿಮಿಷದಲಿ (ಕುವ್ಯಾಸ. ೨-೧೧೩). [ನಿರ್ದ್ರವ + ಜಿಹ್ವೆ]

**ನಿರ್ದ್ರುಮ** (ನಾ). ಗಿಡ, ಮರಗಳು ಇಲ್ಲದಿರುವಿಕೆ: ಆ ಶಿಲೋಚ್ಚಯ ಕೊತ್ತಲಿಕ್ಕಿದ ಬಲದ ಬೊಬ್ಬೆಗೆ ಕಿತ್ತು ಹಾಯಿದವದ್ರಿ ನಿರ್ದ್ರುಮ[ಪಾಠಾಂ. ನಿರ್ದ್ರವ]ವಾಗಲಭ್ರದಲಿ ಹತ್ತಿದುದು ಕೆಂಧೂಳಿ (ತೊರವೆ. ೬-೪೨-೧೮). [ಸಂ.]

**ನಿರ್ದ್ವಂದ್ವ** (ಗು). ೧. ಎರಡಿಲ್ಲದ; ಒಂದೇ ಆದ: 'ನಿರ್ದ್ವಂದ್ವಭಾವ' ಪರಾ. ೨. ಅಸಮಾನವಾದ; ಅಪ್ರತಿಮವಾದ: ನಿಖಿಳನಿರಾಕುಳ ನಿರ್ದ್ವಂದ್ವ ನಿಳಿಂಪ ನಿರತಿಶಯ ಪರಮಾನಂದನಿಳಯಮುಮಪ್ಪ ಶ್ರೀನಿಲಯವಿಮಾನದೊಳಗೆ ಪಲ್ಯೋಪಮ ಪಂಚಕಾವಸಾನದೊಳದುದಿಂಗಳಾಯುಷ್ಯಮುಂಟೆನೆ (ಶಾಂತಿಪು. ೭-೩೭ ವ). (ನಾ). ೩. ಸುಖ–ದುಃಖ, ಶೀತ–ಉಷ್ಣ, ಜನನ–ಮರಣ ಮೊದಲಾದ ದ್ವಂದ್ವಗಳಿಗೆ ಅತೀತವಾದುದು: ನಿರ್ದ್ವಯವೂ, ನಿರ್ದ್ವಂದ್ವವೂ ಆದ ಏಕಮೇವ ಅದ್ವಿತೀಯ ಬ್ರಹ್ಮವೊಂದೇ ವೇದವೇದಾಂತಗಳ ಅರ್ಥವೆಂಬುದು ಅದ್ವೈತ ಸಿದ್ಧಾಂತ (ಭಾರದ. ೧೩೧). ೪. ಸುಖ–ದುಃಖಗಳಿಗೆ ಅತೀತನಾದವನು; ನಿರ್ಲಿಪ್ತ: ನಿರವದ್ಯ ನಿರ್ಘಸ್ನ ನಿರ್ದ್ವಂದ್ವ ನಿರ್ದೋಷ ನಿರಪೇಕ್ಷ ನಿಷ್ಕಾಮಿ ನಿಷ್ಕಳ ನಿರಾಕಾರ . . . ಪಂಪಾವಿರೂಪಾಕ್ಷ ಶರಣು (ಹಚಕಾ. ೧-೪); ನಿರವಧಿಕ ನಿರ್ಮಾಯ ನಿಸ್ಪೃಹ ನಿರುಪಮಿತ ನಿರ್ದ್ವಂದ್ವ . . . ನಿಷ್ಕಳ ಮಹೇಶ್ವರ ಕರುಣಿಸುವುದು (ಕುವ್ಯಾಅ. ೬-೮೯); ನಾನೂ ದುಃಖಿಪಡಲಾರೆ, ನೋಡು. ಈಗ ನಾನೂ ನಿನ್ನಂತೆ ನಿರ್ದ್ವಂದ್ವನಾಗಿರುವೆ (ಜಮುಂತ. ೩೧೬). ೫. ಏಕೈಕನಾದವನು; ಅಪ್ರತಿಮನಾದವನು; ಅದ್ವಿತೀಯ. [ಸಂ.]

**ನಿರ್ದ್ವಂದ್ವಕ** (ನಾ). ಸಾಂಸಾರಿಕ ದ್ವಂದ್ವಗಳನ್ನು ಮೀರಿದವನು: ಕಂಡು ಕಲೆ ತನಗೆತ್ತಣದು ನಿರ್ದ್ವಂದ್ವಕನು ಮೃತಜಾತ ತಾನಲ್ಲೆಂದು ಕಂಡರವಂಗೆ ಪಾಪವಿಲೇಪವಿಲ್ಲೆಂದ (ಕುವ್ಯಾಘೀ. ೩-೪೯). [ಸಂ.]

**ನಿರ್ದ್ವಂದ್ವಭಾವ** (ನಾ). ಎರಡಿಲ್ಲದ ಮನಸ್ಸು; ಏಕಚಿತ್ತ: ಆ ಕನ್ನೆ ತಸ್ಮನೀಂದ್ರಪಾದಾರವಿಂದದ್ವಂದ್ವದೊಳ್ ನಿರ್ದ್ವಂದ್ವಭಾವದಿಂ ವಿನೀತೋತ್ತಮಾಂಗೆ ಕೆಲದೊಳ್ ಕುಳ್ಳಿರ್ದುಂ (ಸುಕುಮಾ. ೭-೩೯ ವ). [ನಿರ್ದ್ವಂದ್ವ + ಭಾವ₂]

**ನಿರ್ದ್ವಯ** (ನಾ). ಯಾವಾಗಲೂ ಒಂದೇ ಆಗಿರುವುದು: ನಿರ್ದ್ವಯವೂ ನಿರ್ದ್ವಂದ್ವವೂ ಆದ ಏಕಮೇವ ಅದ್ವಿತೀಯ ಬ್ರಹ್ಮವೊಂದೇ ವೇದವೇದಾಂತಗಳ ಅರ್ಥವೆಂಬುದು ಅದ್ವೈತ ಸಿದ್ಧಾಂತ (ಭಾರದ. ೧೩೧). [ಸಂ.]

**ನಿರ್ಧನ** (ನಾ). ೧. ಏನೂ ಇಲ್ಲದಿರುವಿಕೆ; ಬಡತನ; ದಾರಿದ್ರ್ಯ: ೨. ಬಡವ; ದರಿದ್ರ; ನಿರ್ಗತಿಕ: ದಿನನಾಥಂ ಜನನೋದಯಕ್ಕೆ . . . ಐದಱಿಯೊಳಿರಲ್ ನಿರ್ಧನಂ ನಿರ್ಧನಂ (ಜಾತಕ. ೧೮-೨); ಕೇಣದಿಂ ನಾಣೊಡೆಯನನೆಡೆಯೊಳ್ನಿರ್ಧನಂ ಮಾಟ್ಪಳ್ (ಲೀಲಾವ. ೨-೯೭). [ಸಂ.]

**ನಿರ್ಧನತ್ವ** (ನಾ). ಬಡತನ; ದಾರಿದ್ರ್ಯ: ಹಾಳೆಸಿಸಿದುದು ದೇಶವು ನಿರ್ಧನತ್ವವದಾದುದು (ಶಿವ್ಯಾಅ. ೧-೧೯). [ಸಂ.]

**ನಿರ್ಧನಿಕ** (ನಾ). ಹಣವಿಲ್ಲದಿರುವವನು; ಬಡವ; ದರಿದ್ರ: ನಿರ್ಧನಿಕ ಧನದ ಬಯಕೆಯಲ್ಲಿ ನಡೆವುತ್ತ ಎಡಹಿದ ಕಲ್ಲು ಪರುಷವಾದಂತಾಯಿತ್ತು (ಅಪಚಂ. ೨೦೯-೯೪೦); ನಿರ್ಧನಿಕನಾಗಿಯು ಮತ್ತೆ ಬಿಡದೇ ದ್ಯೂತ ದುರ್ವ್ಯಸನ (ಕುವ್ಯಾಸ. ೧೪-೨೪); ವ್ಯುತನ ನಿರ್ಧನಿಕನ ನಡುವಿರುವಂತರ ವಾವುದೊ ಕಾಣೆನು ನಾನು (ಇಂಚಾಪ. ೧೫೨-೫೦). [ಸಂ.]

**ನಿರ್ಧರ** (ನಾ). ದೃಢವಾದುದು ; ಸ್ಥಿರವಾದುದು : ಅಂಗದ ಮೇಲೆ ಲಿಂಗ ಸಂಬಂಧವಾದ ಬಳಿಕ ಪ್ರಾಣನ ಮೇಲೆ ಜ್ಞಾನ ನಿರ್ಧಾರವಾಯಿತ್ತು, ನೋಡಾ (ಅಪಚಂ. ೧೬೮-೭೫೬); ಅನಿರುದ್ಧನ ತಹೆನೆಂದು ನಗುತ ನಿರ್ಧರವಾಗಿ ನಂಬುಗೆಯಿತ್ತು, ಬೀಳುಕೊಂಡೆದ್ದಳು (ಮೋಹತ. ೩೧-೧೧). [ಸಂ.]

**ನಿರ್ಧರಂಗೈ** (ಕ್ರಿ). ತೀರ್ಮಾನಿಸು ; ದೃಢಪಡಿಸು : ರಾಜೇಂದ್ರನುಕ್ತಿಯನೆಂತಾನುಂ ಮನದೆಗೊಂಡು ನಿಜಮಹತ್ವದರ್ಶನಾರ್ಥಮಿದು ಶಿವಕೃತಮಕ್ಕುಮೆಂದು ನಿರ್ಧರಂಗೈದು (ರಾಜಶೇ. ೧೩-೨೬ ಪ). [ನಿರ್ಧರ + ಗೈ(<ಕೆಯ್$_1$)]

**ನಿರ್ಧರಿಸು**(ಕ್ರಿ). ೧. ತೀರ್ಮಾನಿಸು; ನಿಶ್ಚಯಿಸು ; ನಿರ್ಣಯಿಸು : ಹರಿಯೆನೆ ಶಂಖ ಚಕ್ರಗಳಿಲ್ಲ ಸ್ಮರನೆನೆ ಅಲರಂಬಿಲ್ಲಿಂದ್ರನೆನಲು ಶರೀರದಿ ಕಣ್ಣುಗಳಿಲ್ಲವಾ ಜೀವಂಧರನೆಂದು ನಿರ್ಧರಿಸಿದಳು (ಜೀವಂಸಾಂ.೧೨-೩೪); ನರಚರಿತ್ರದ ರಾಮಚಂದ್ರಗೆ ಪರಿಣಯವ ಮಾಳ್ಪುಜ್ಜುಗವ ನಿರ್ಧರಿಸಿ ಪಯಣೋದ್ಯೋಗವನನಾದನು ಸರಾಗದಲಿ (ತೊರೆರಾ. ೧-೧೨-೩) ; ಅರವುನೆಯೊಳಗಾದುದೆಂದರಾರೆಂದು ನಿರ್ಧರಿಸಬಹುದು ಹೊಸಕೃತಿಯ ವಿರಚಿಸಿದಾಕೆಯ ಹೆಸರ ಹೇಳೆಂದನು ಪರಿಹಾಸದಿಂದ ಭೂವರನು (ಭರತ. ೬-೬). ೨. ಸ್ವೀಕರಿಸು ; ಭುಜಿಸು : ಇಂತು ಸರ್ವದ್ರವ್ಯವನು ಲಿಂಗಕ್ಕಿತ್ತು ಲಿಂಗಕಾಯದಿಂದ ಭೋಗಿಸಿ ಲಿಂಗಕ್ಕೆ ಭೋಗಿಸಲಿತ್ತು ಆ ಪ್ರಸಾದವ ತಾ ನಿರ್ಧರಿಸಿ . . . ಪ್ರಸಾದಿಯಾದೆನಯ್ಯಾ (ಚನ್ನಪ. ೬೦-೧೩). [ನಿರ್ಧರ + -ಇಸು$_3$]

**ನಿರ್ಧರ್ಮಿ** (ನಾ). ಧರ್ಮಾಚರಣೆಯಿಲ್ಲದವನು ; ಧರ್ಮವಿಲ್ಲದವನು ; ಧರ್ಮಬಾಹಿರ : ಧರ್ಮಿ ನೀಂ ನಿರ್ಧರ್ಮಿ ನಾಂ ಸುಕರ್ಮಿ ನೀಂ ದುಷ್ಕರ್ಮಿ ನಾಂ ನೀಂ ಪಶುಪ ನಾಂ ಪಶುವು (ಬಸವು. ೨೨-೬೦); ಮರ್ಮಭಕ್ತರನೇ ಕೊಲುವ ನಿರ್ಧರ್ಮಿಯಾತನು ಸೂನೆಗಾಜನು (ಬಸವು. ೨೫-೩೧). [ಸಂ. ನಿರ್ಧರ್ಮಿನ್]

**ನಿರ್ಧಾಟಣ** (ನಾ). ೧. ಸೋಲಿಸುವಿಕೆ ; ಹಿಮ್ಮೆಟ್ಟಿಸುವಿಕೆ : 'ನಿರ್ಧಾಟಿಸು' ಪರಾ. ೨. ಸೋಲಿಸಿದವನು ; ಗೆದ್ದವನು : ಏಕಾಂಗವೀರ ಸಂಗ್ರಾಮಧೀರ ಪೊಂಬುಚ್ಚನಿರ್ದ್ಧಾಟಣ ಸಾವಿಮಲೆ ನಿರ್ಲೋಟಣ ವೈರಿಕಾಳಾನಳ (ಎಕ. II, ೧೪೩-೩೭ ; 1131). [ಸಂ.]

**ನಿರ್ಧಾಟಿಸು,** ನಿಜ್ಜಾಡಿಸು, ನಿರ್ಜಾಡಿಸು, ನಿರ್ದಾಟಿಸು, ನೀರ್ಜಾಡಿಸು (ಕ್ರಿ). ೧. ಹಿಮ್ಮೆಟ್ಟಿಸು ; ಪರಾಜಯಗೊಳಿಸು; ಸೋಲಿಸು : ರತಿಯಂ ನಿರ್ಧಾಟಿಪರ್ ಯೋಗಿಪುಂಗವರೆಂದಾ ಜಿನಮಂದಿರಕ್ಕೆ ಮಜ್ಜಿದಂ ಪೋಗಂ ಪ್ರಸೂನಾಯುಧಂ (ಧರ್ಮನಾ. ೨-೧೦೬). ೨. ಧಿಕ್ಕರಿಸು ; ತಿರಸ್ಕರಿಸು ; ಅವಮಾನಿಸು : ಚೇದಿನಾಥಂ ಜಗನ್ನಾಥನಂ ನಿರ್ಧಾಟಿಸಿ ನುಡಿದ ಸಮಯದೊಳ್ (ಜಗವಿ. ೧೭-೪೬ ಪ). ೩. ಬಿಸುಡು ; ಎಸೆ : ಕಾಪಿನವರಂ ಕೊಂದು ನಿರ್ಧಾಟಿಸಿ ಕೆಳೆದು (ವರ್ಧಮಾ. ೨-೩೦ ಪ). **ನಿಜ್ಜಾಡಿಸು :** ೨. ಬಿಡು ಬಿಡು ಬೇಡ ಬೀಡಾಡಿತನದಿ ಬಂದು ಹಿಡಿದ ಸೆಜಗನೆಂದೆನುತ ನುಡಿದು ನಿಜ್ಜಾಡಿಸಿ ನಿಲ್ಲದಲ್ಲಿಂ ಪೊಜಮಡಲಡಿಯಿಡುವೆನೆಂಬಾಗ (ನೇಮಿಸಂ. ೧೯-೪೯). ೪. ಮೀರು ; ಅತಿಕ್ರಮಿಸು : ವೈರಿಜಜ್ಜಾರನಾ ಕವಾಟವನು ಜಜ್ಜರಿ ಮಾಡಲಾಗಳೆ ಕಿಚ್ಚು ಜಿಹ್ವೆಯ ನಿಜ್ಜಾಡಿಸುತ ಹಬ್ಬಿತೊಡನೆ (ಭರತ. ೨೯-೭೬). **ನಿರ್ಜಾಡಿಸು :** ೧. ಪಕ್ಷಿವಾಹನನಂ ಗಜಾಸುರರಾಕ್ಷಸರು ನಿರ್ಜಾಡಿಸಿದವುದನೀ ಕ್ಷಿತಿಯೆ ಬಲ್ಲುದು (ಬಸವು. ೫೪-೩೭). **ನಿರ್ದಾಟಿಸು :** ೧. ದುರ್ಧರವೆನಿಪ ಕರ್ಮಾರಾತಿಗಳನ್ನು ನಿರ್ದಾಟಿಸಿ . . . ವರ್ಧಮಾನರಿಗೆಜಿಗುವೆನು (ತ್ರಿಪುಸಾಂ. ೧-೫) ; ನಿನ್ನ ತಂದೆ ಸೂರ್ಯಜಂಗೆ ವೈರಿಯಾಗಿರ್ದ ಯಮುನೆಂಬನಂ ನಿರ್ದಾಟಿಸಿಯಾತನ ರಾಜ್ಯಮುಂ ನಿನಗೆ ಕೊಟ್ಟು ಮಾಡಿದುಪಕಾರಮಂ ನೆನೆಸು (ಪುಣ್ಯಾಸ್ರ. ೫-೫೩ ಪ) ; ತೋಟಿಗೆ ನಡೆದನು ತುರುಕಬಲವನು ನಿರ್ದಾಟಿಪಶೌರ್ಯಗರ್ವದೊಳು (ಕುಂರಾಸಾಂ. ೪೩-೬೭). ೨. ನೀಂ ಶ್ರೀಷೇಣನಾದಂದು ಸತ್ಯಭಾಮೆಯಂ ಮದುವೆನಿಂದೊಡೆ ತನ್ನಂ ನಿರ್ದಾಟಿಸಿ ಕಳೆಯೆ ಪೋಗಿಸತ್ತು (ಶಾಂತಿಪು. ೭-೪೨ ಪ) ; ಶಿವನೊಳ್ ದ್ವೇಷಮನುಚಿತಮೆಂದುಸಿರ್ದ ಮಾತ್ಮನಂ ನಿರ್ದಾಟಿಸುವುದಕೃತ್ಯಂ (ವೀರವಿ. ೭-೭೮) ; ನಿಮ್ಮ ಬೆಸದಿಂ ಮಧುರೆಗೆ ಪೋಗಿ ಜೈನಸಮಯಮಂ ನಿರ್ದಾಟಿಸಿ ಸವಣರಂ ಸಂಹರಿಸಿ . . . ಬರ್ಪಲ್ಲಿ (ತ್ರಿಪುವಿ. ೩೩-೧೫೦ ಪ). ೪. ಚಂದ್ರಸೂರ್ಯರ್ಸರಿದೆ ನಿರ್ದಾಟಿಪ ನಾಲ್ವತ್ತೆಂಟು ಕೋಟಿ ಪತಾಕೆಗಳಾ ಸೇನೆಯೊಳು ಸಘಾಟಿಯಿಂದೆತ್ತಿ ನಡೆದುದು (ಶ್ರೀಪಾಲ. ೧೩-೧೮೫). ೫. ಪೀಡಿಸು ; ಹಿಂಸಿಸು : ಎಮಗೆ ತಾಯೊಡಹುಟ್ಟಿದನು ನಿರ್ಮಮತೆಯಲಿ ನಿರ್ದಾ [ಪಾಠಾಂ. ರ್ದಾ೦, ರ್ಧಾ]ಟಿಸಿದನಾ ಕ್ರಮದಲೇ ಕಂಸಂಗೆ ಹಿಂಸಾಕೃತಿಯ ರಚಿಸಿದೆವು (ಕುಮ್ಯಾಗ. ೫-೧೦). ೬. ತಡೆ ; ಅಡ್ಡಿಪಡಿಸು : ಊಟದ ನೆವದಿಂದೆದ್ದು ದಾಟಿ ನೀ ಪೋಗಲು ಬಿಡೆನೆನುತಲಿ ನಿರ್ದಾಟಿಸಿ ಪಿಡಿದಳು ಸೆರಗ (ಜಿನರಾ. ೪-೭೧). **ನೀರ್ಜಾಡಿಸು :** ೪. ಇದುಪುದಲ್ಲದೆ ಹರಿಯಜೇಂದ್ರತ್ರಿದಶರಂ ನೀರ್ಜಾಡಿಸು [ಪಾಠಾಂ. ನೀಚಾಡಿಸು]ವರೆಂಬುದು ವಿಚಿತ್ರಮೆ . . . ನೀ ನೋಡು ತತ್ ಪ್ರಮಥರ ಮಹತ್ವವನು (ಬಸವು. ೮-೫೧). [ನಿರ್ಧಾಟಣ + -ಇಸು$_3$]

**ನಿರ್ಧಾಮಧೂಮ** (ನಾ). ೧. ಕಿಂಚಿತ್ತೂ ಹೊಗೆಯಾಡಲು ಅವಕಾಶವಿಲ್ಲದಿರುವಿಕೆ. ೨. ಸರ್ವನಾಶವಾಗುವಿಕೆ; ಸರ್ವನಾಶ : ಆ ಮಹಾಭೂತದ್ವಯದ ಸಂಗ್ರಾಮದಲಿ ನಿಜಬಲವನಧಿ ನಿರ್ಧಾಮಧೂಮವೆನಲ್ಕೆ ಕೆಡುವುದ ಕಂಡು ಕಳನೊಳಗೆ (ಸಿಭಾಗ. ೧೨-೪೯-೧೦). 'ನಿರ್ಧೂಮಧಾಮ' ಹೋ. [ಸಂ.]

**ನಿರ್ಧಾಮಧೂಮಂ** (ಅ). ೧. ಕಿಂಚಿತ್ತೂ ಹೊಗೆಯಾಡಲು ಅವಕಾಶವಿಲ್ಲದಂತೆ. ೨. ಸರ್ವನಾಶವಾಗುವಂತೆ : ಆರಸನಜಾದಾಳ್ವ ನಗರದ ತರುಣಿಯರುಡೆಯುರ್ಚದೊಂ . . . ಏಂ ಸೂರೆನೊಚೇತಃಪುರಮಂ ನಿರ್ಧಾಮಧೂಮಮಾಗಿರೆ ಸುಟ್ಟಂ (ಅರ್ಹನೇ. ೫-೨). [<ನಿರ್ಧಾಮಧೂಮ]

**ನಿರ್ಧಾರ** (ನಾ). ನಿಶ್ಚಯ ; ತೀರ್ಮಾನ : ನಿರ್ಧಾರವಾಗಿ ಎನ್ನಯ ಸೌಮನಸಿನೊಳಿರ್ದ ನೂತನಯುಕ್ತಿಯಿಂದ ಮುದ್ದಾಗಿ ಪೇಳುವೆ ಶ್ರೀಕೃಷ್ಣವೊಮ್ಮನಿರುದ್ಧನ ಚಾರಿತ್ರಗಳನು (ಹೋಪತ. ೧-೩೫) ; ತದ್ವಿನದೋಳಣುಗನಂ ತಂದಬ್ಧಿಯೊಳು ಬಿಸುಟೆ ನಿರ್ಧಾರವೆನಲು ನಾರದನೆಂದ (ನಮೋ. ೧೨-೨೯) ; ನಾನಿಂತು ನಿರ್ಧಾರ ಮಾಡಿಹೆನೀ ದಿನ ಹಣವಿಲ್ಲದವನೇ ದೀನ (ಇಂಚಾಪ. ೧೫೬-೬೭) ; ಮುಖವು ಸಾಹಸದ ಕೆಲಸ ಮಾಡುವೆನೆಂಬ ನಿರ್ಧಾರ ಸೂಚಿಸುವಂತಿತ್ತು (ಜೀವರಂ. ೨೨). [ಸಂ.]

**ನಿರ್ಧಾರಕ** (ಗು). ೧. ನಿರ್ಧರಿಸುವ. (ನಾ). ೨. ನಿರ್ಧರಿಸುವವನು. [ಸಂ.]

**ನಿರ್ಧಾರಣ** (ನಾ). ೧. ನಿರ್ಣಯ ; ನಿಶ್ಚಯ. ೨. ವಿವರಣೆ ; ಸ್ಪಷ್ಟೀಕರಣ: "ಸಮಾಧಾನ, ನಿರ್ಧಾರಣ, ವ್ಯಾಖ್ಯೆ" (Explanation ಸಾಂಶಿ. ೪೦). ಪುದಿಗುಂ ನಿರ್ಧಾರಣದಲ್ಲದೆಯೆಂಬ ದೆಕಾರದೆಡೆಗೆ ಪಿರಿದುಂ ಲೋಪಂ (ಶಮದ. ೪೬). ೩. [ವ್ಯಾಕ] ಅನೇಕ ವ್ಯಕ್ತಿ, ವಸ್ತು ಮುಂತಾದುವುಗಳಲ್ಲಿ ಒಬ್ಬನನ್ನು ಅಥವಾ ಒಂದನ್ನು ಪ್ರತ್ಯೇಕಿಸಿ ಹೇಳುವುದು : ಕಾರಕಮಾಜು ಕರ್ಮಕರಣಾದಿಕದಿಂ ಪ್ರಥಮಾದಿಭೇದನಿರ್ಧಾರಣ[ಪಾಠಾಂ. ನಿರ್ಧಾರ]ದಿಂದದಂ ಪಿಡಿದು ನಿಲ್ವ ವಿಭಕ್ತಿಗಳೇಟಿಕಿನಿಕ್ಕುಂ (ಕವಿರಾ. ೧-೧೧೪) ; ಸಜಾತೀಯಂಗಳಾದವುಗಳಲ್ಲಿ ಕ್ರಿಯೆಯಿಂದಲಾಗಲಿ ಗುಣದಿಂದಾಗಲಿ ಯಾವದು ನಿರ್ಧರಿಸಲ್ಪಡುತ್ತದೊ ಅದು ನಿರ್ಧಾ

ರಣವು. ಅದರಲ್ಲಿ ಷಷ್ಠೀ ಸಪ್ತಮೀ ವಿಭಕ್ತಿಗಳೆರಡೂ ಪ್ರಯೋಗಿಸಲ್ಪಡುವವು (ಭಾಷಾಭೂ. ೮೯ ತಾತ್ಪರ್ಯ). [ಸಂ.]

**ನಿರ್ಧಾರಣೆ** (ನಾ). ತೀರ್ಮಾನ; ನಿಶ್ಚಯ; ನಿರ್ಧಾರ: ತಮ್ಮ ಎಡಗಣ್ಣನ್ನು ಕಿತ್ತು ಲಿಂಗಕ್ಕಿಡುವದಕ್ಕೆ ನಿರ್ಧಾರಣೆ ಮಾಡಿಕೊಂಡವರಾಗಿ, ತಮ್ಮ ಕಣ್ಣನ್ನು ಕಿತ್ತು (ಪುರಾವಿ. ೪೮); ಆದರೂ ಅಂತಹ ಅಜ್ಞೇಯ ವಸ್ತುಗಳ ಚರ್ಚೆ–ವಿಮರ್ಶನೆಯು ವ್ಯರ್ಥವಲ್ಲ. ಕರ್ತವ್ಯ ನಿರ್ಧಾರಣೆಗೆ ತುಂಬ ಸಹಕಾರಿ (ಜೀವಾತ್ಮ. ೮). [ಸಂ. ನಿರ್ಧಾರಣ]

**ನಿರ್ಧಾರಿತ** (ಗು). ೧. ನಿಶ್ಚಿತವಾದ; ಸ್ಪಷ್ಟವಾದ; ನಿರ್ದಿಷ್ಟವಾದ: ನಿರ್ಧಾರಿತಕ್ರಮದೆ ಪೇೞ್ವೆನುದಾಹರಣಂಗಳಂ (ಕವಿರಾ. ೧–೧೨೫); ನಿಷ್ಕೃಷ್ಟ ಅಥವಾ ನಿರ್ಧಾರಿತ ಕಾಲಮಾನ (Standard Time)–ಸ್ಥಳೀಯ ಕಾಲಮಾನ ರೀತ್ಯಾ ಒಂದೊಂದು ಊರಿಗೆ ಒಂದೊಂದು ಕಾಲ ಏರ್ಪಡುತ್ತಾ ಬಂದಲ್ಲಿ ಬಹಳ ರಗಳೆಗಿಡುತ್ತದೆ (ಭೂವಿವ. ೨೦). (ನಾ) ೨. ನಿರ್ದಿಷ್ಟವಾದುದು; ನಿಶ್ಚಿತವಾದುದು; ಸ್ಪಷ್ಟವಾದುದು: ಇತರೇತರ ಕಾರಕ ಸಂಪ್ರತಿಪತ್ತಿ ಪರಸ್ಪರಂ ಸಮೂಹದೊಳೆಸೆವೊಂದತಿಶಯು ಗುಣದಿಂ ನಿರ್ಧಾರಿತಮುಪ್ಪುದು ಸಾರಮೆಂಬ ಸದಲಂಕಾರಂ (ಕಾವ್ಯಾವ. ೬೫೮). [ಸಂ.]

**ನಿರ್ಧಾರ್ಯ** (ಗು). ೧. ಗೊತ್ತುಮಾಡಬೇಕಾದ. ೨. ನಿರ್ಣಯಿಸಲಾಗುವ. ೩. ದಿಟ್ಟತನದಿಂದ ವರ್ತಿಸುವ; ನಿರ್ಧಾರ ವೃತ್ತಿಯ. (ನಾ). ೪. ದಣಿವಿಲ್ಲದುದು; ನಿರಾಯಾಸವಾದುದು. ೫. ಅಳುಕಿಲ್ಲದೆ ಕೆಲಸ ಮಾಡುವವನು; ದಿಟ್ಟತನದಿಂದ ಕೆಲಸ ಮಾಡುವವನು: "ನಿರ್ಧಾರ್ಯಃ, ಸತ್ವಸಂಪದಾ, ಆಪತ್ಸಂಪದಗಳಲ್ಲಿ ಒಂದೇ ರೀತಿಯಾಗಿರುವ ಧೈರ್ಯಸಂಪತ್ತುಗಳ ಸಂಗಡ, ಸಂಪನ್ನಃ – ಕೂಡಿಕೊಂಡಿದ್ದವನಾಗಿ, ಯಃ – ಯಾವನು, ಕಾರ್ಯಕರ್ತಾ–ಕಾರ್ಯವನ್ನು ಮಾಡುವನೋ ಅವನ ಹೆಸರುಗಳು" (ಸಿದ್ಧಾಂತಿ. ೩೨೫). [ಸಂ.]

**ನಿರ್ಧಾವನ** (ನಾ). ೧. ಮುನ್ನುಗ್ಗಿ ಹರಿಯುವಿಕೆ; ಪೂರ ಹೊಮ್ಮುವಿಕೆ. ೨. ಶುದ್ಧೀಕರಣ; ನಿರ್ಮಲಗೊಳಿಸುವಿಕೆ [ಸಂ.]

**ನಿರ್ಧಾಸ್ತ** (ಗು). ೧. ನಿರಾಳವಾದ; ನಿಶ್ಚಿಂತವಾದ; ನಿರಾತಂಕವಾದ. (ನಾ). ೨. ನಿಶ್ಚಿಂತ ವ್ಯಕ್ತಿ; ನಿರಾಳ ಮನಸ್ಕ: ವಾಡೆಯ ಕ್ಷೇಮ ತನಗೆ ಹತ್ತಿತೆಂದು ರಾಚಪ್ಪ ಹೇಳಿದ್ದರಿಂದ, ಕಾಕಾ ನಿರ್ಧಾಸ್ತರಾದರು (ಬೀಸಹ. II,೯); ರಾಹು ಮನೆಗೆ ಬಂದ ಬಳಿಕ ಅವರೆಲ್ಲರೂ ನಿರ್ಧಾಸ್ತರಾಗಿ ಮಲಗಿದರು (ಸೋಜೀಸ. ೧೨೯); ಅಣ್ಣನ ಪತ್ತೆ ಹತ್ತಿತೆಂದರೆ, ನಾನು ನಿರ್ಧಾಸ್ತನಾಗುವೆನು (ಹಂಸಾ. ೧೪೪).

[←ಮರಾ. ನಿರ್ಧಾಸ್ತ]

**ನಿರ್ಧಾಸ್ತತನ** (ನಾ). ನಿರ್ಭಯತೆ; ನಿಶ್ಚಿಂತತೆ: ಬಸ್ಸಾನ ಶೀಕ... ಕೂತ ನಿರ್ಧಾಸ್ತತನ ಬಂದ ಮೇಲೆ, ಒಂದು ರವಿವಾರ ತಯ್ಯಬ್ಜೀ ಮಂಡಳಿಗೆ ನನ್ನ ಗೆಳೆಯನನ್ನು ಕಾಣುವ ಕಾರಣ ತಿಳಿಸಿ.. ಬಾಗಿಲ ಮೇಲೆ ಟಿಕ್... ಟಿಕ್ ಟೀಂಕಾರ ಮಾಡಿದೆ (ಬೀಸಹ. II, ೩೫೩). [ನಿರ್ಧಾಸ್ತ + –ತನ]

**ನಿರ್ಧೂತ** (ಗು). ೧. ಮೇಲಕ್ಕೆದ್ದ: ಹರಡಿದ; ವ್ಯಾಪಿಸಿದ: ಕಂಪಿಸಿದ ಚಾತುರಂಗದ ಚರಣಹತಿನಿರ್ಧೂತ ಧೂಳೀಮಯಮಖಿಳ ದಿಗು ಜಾತವೆನೆ ಘಟ್ಟಣಿಯಲೇಱಿತು... ಸೇನೆ (ಕುಮಾವ್ಯಾಸ.೧೪–೨೫); ಮೂತರಹುದೇಯೆಂದು ರಿಪುನಿರ್ಧೂತಧೂಳೀಪಟಲ ರಿಪುಸಹಜಾತನನು ಬೆಸಗೊಳಲು (ತೊರರಾ. ೬–೬–೨೯). ೨. ಹೋಗಲಾಡಿಸಿದ; ಪರಿಹರಿಸಿದ; ನಿವಾರಿಸಿದ: ಅಂಭೋಧಿಯಂತೆ ಗಂಭೀರಾಶಯುರು ಮಾದಿತ್ಯನಂತೆ ನಿರ್ಧೂತತಮಸ್ತಮರುಂ (ಆದಿಪು. ೪–೯೫ ವ); ಅಸ್ತಮಿತ ಲೌಕಿಕನು ಗುರುಭಕ್ತಿಸ್ತವನಪಾತ್ರೋತ್ತಮಂ ಮಾತೃಸ್ತವಸ್ತನ್ಯಾಹಿತಂ ನಿರ್ಧೂತಷಡ್ವರ್ಗಂ (ಬಸವು. ೭–೨); ದ್ಯೂತದಲಿ ಮುನ್ನೇನನೊಡ್ಡಿದ ಸೋತನೇನನು ಶಿವ ಶಿವಾ ನಿರ್ಧೂತಕಿಲ್ಬಿಷನರಸನೆಂದಳು ದ್ರೌಪದಾದೇವಿ (ಕುಮಾವ್ಯಾಸ. ೧೪–೫೨); ನಿಜರುಚಿ ನಿರ್ಧೂತಯಮಿಹೃದಯತಮಸಂಪ್ರೀತಿ ಯೊಳೆಮಗೀಗೆ ಸೌಖ್ಯಮಂ ಶಿವಲಿಂಗಂ (ರಾಜಶೇ. ೩–೧). ೩. ಸ್ವಚ್ಛಗೊಳಿಸಿದ; ತೊಳೆದ. [ಸಂ.]

**ನಿರ್ಧೂನನ** (ನಾ). ೧. ಹೆಚ್ಚಾಗಿ ಅಲುಗಾಡಿಸುವುದು; ಕೊಡಹುವುದು; ನಡುಗಿಸುವುದು. ೨. ತೊಳೆಯುವಿಕೆ; ಶುದ್ಧಗೊಳಿಸುವಿಕೆ. ೩. ಹೋಗಲಾಡಿಸುವವನು; ಪರಿಹರಿಸುವವನು: ಅನತಜನಕಲ್ಮಷನಿರ್ಧೂನನನೀ ಸಕಲಚಕ್ರವರ್ತಿಯ ಕೋಶಕ್ಕೇನೆಂಬೆಂ (ಪಸ್ತಪಂ. ೧೦–೭೬). [ಸಂ.]

**ನಿರ್ಧೂಮ** (ಗು). ೧. ಹೊಗೆಯಿಲ್ಲದ. (ನಾ). ೨. ಹೊಗೆಯಿಲ್ಲದುದು: ಮನುಜತನದ ವಿಕಾರಗಳ ತೊಱೆದನು ಬಳಿಕ ನಿರ್ಧೂಮವಾಗಿದ್ದನಲನಂದದಿ ಉಜ್ವಲಿಸಿದನು ದಿವ್ಯತೇಜದಲಿ (ತಿಮ್ಮಸ್ವ. ೧–೪೬). ೩. ನಾಶವಾದುದು; ಹಾಳಾದುದು: ಈ ಕ್ಷಣದಿ ಲಂಕೆ ನಿರ್ಧೂಮವನು ಮಾಳ್ಪೆ ಭೂತ (ಪುರಂದ. ೪–೭೪–೬).

ನಿರ್ಧೂಮ ಮಾಡು = ನಾಶಪಡಿಸು: ಕಾಲನ ತೆತ್ತಿಗರ ನಿರ್ಧೂಮ ಮಾಡಿದ ಧ್ಯಾನಪೂರ್ವಕದಿ (ಸಾಗಸ. ೩೨–೧೦೮). [ಸಂ.]

**ನಿರ್ಧೂಮಧಾಮ** (ನಾ). ೧. ಹೊಗೆಯೇಳದಂತಾದ ಮನೆ; ಸಂಪೂರ್ಣ ನಾಶವಾದ ಗೃಹ; ಪಾಳುಮನೆ: ಸೋಮಯಾಜಿಗಳಾಲಯುಂ ನಿರ್ಧೂಮಧಾಮವದಾಯ್ತು (ಬಸಪು. ೫೪–೩೬). ೨. ಸಂಪೂರ್ಣ ನಾಶಪಡಿಸುವವನು; ಪೂರ್ಣವಾಗಿ ಹಾಳುಮಾಡುವವನು: ಪರಸುಕೃತೈನೋದ್ಧರಣಕರಣರು ಪರಸಮಯನಿರ್ಧೂಮಧಾಮರು ಪರಸಮಯಕೋಳಾಹಳರು (ಬಸಪು. ೫೮–೫೨). 'ನಿರ್ಧಾಮಧೂಮ' ಹೋ. [ಸಂ. ನಿರ್ಧೂಮಧಾಮನ್]

**ನಿರ್ಧೌತ** (ಗು). ಚೆನ್ನಾಗಿ ತೊಳೆದ; ಚೆನ್ನಾಗಿ ಶುಚಿಗೊಳಿಸಿದ: ನಿರ್ಧೌತಜಟಾಕಳಾಪನುಂ ಪೂರ್ಣಕಮಂಡಳಾಕಲಿತ ಕರತಳನುಮಾಗೆನ್ನಂ ಪರ್ಣಪುಟದೊಳ್ ತಳೆದು... ಮುನಿಕುಮಾರರ್ ಬೆರಸು ನಿಜಾಶ್ರಮಕ್ಕೆ ಪೋಗೆವೋಗೆ (ಕಾದಂಪೂ. ೨೧೧). [ಸಂ.]

**ನಿರ್ನಂದನ** (ನಾ). ಮಗನಿಲ್ಲದವನು; ಪುತ್ರಹೀನ: ದಿನನಾಥಂ ಜನನೋದಯಕ್ಕೆ ಐದಱೊಳಿರಲ್ ನಿರ್ನಂದನಂ ನಿರ್ಧನಂ (ಜ್ಞಾತತಿ. ೧೮–೨).

[ಸಂ.]

**ನಿರ್ನಯ** (ನಾ). ತೀರ್ಮಾನ; ಕೊನೆ: ಜಯವಹುದೆ ನಿರ್ವೇದದಲಿ ನಿರ್ಭಯವಹುದೆ ಬಿಸುಸುಯ್ಲಿನಲಿ ನಿರ್ನಯವಹುದೆ ರಿಪುನೃಪರಿಗಿದು ತಾನೀತಿಮಾರ್ಗದಲಿ (ಕುಮಾವ್ಯಾಸ. ೧೭–೭); ಶ್ರೀಮತು ಹರಿಯುಪಗಳೂ ಮಾಡಿದ ನಿರ್ನಯ (ಎಕ. X(s), ಮುಳಬಾ. ೫–೧; 15ನೆಯ ಶತ).

[<ಸಂ. ನಿರ್ಣಯ].

**ನಿರ್ಗವಿಸು,** ನಿರ್ಬನಿಸು, ನಿರ್ಬಿನಿಸು, ನಿರ್ವನಿಸು, ನಿರ್ವಿನಿಸು (ಕ್ರಿ). ೧. ಚೆನ್ನಾಗಿ ಬಾಗು; ಹೆಚ್ಚು ಬಾಗು: ಅಮರರ ದಂತಿ ನಿರ್ಗವಿಸೆಯುಂ ಶಚಿ ನೀಡೆಯುಮಿಂದ್ರನಾಂತು ಸಂಭ್ರಮಮನನಾಗಿ ಬಾಗಿಕೊಳೆಯುಂ ಜಿನಬಾಲಕನೇಱೆಯುಂ... ಉತ್ಸವಂ ಮನೋರಮ ಹೃದಯಂಗಮಾನುಷಮುಮಾದುದು ಜನ್ಮದೊಳಿಂದ್ರವಂದ್ಯನಾ (ರಾಂತಿಪು. ೧೧–೧೨). **ನಿರ್ಬನಿಸು**: ೨. ಕುಗ್ಗು; ಕುಂದು: ಧನುವುಂ ಕರ್ಬಿನ ಬಿಲ್ ಗಡಂ ಗೊಣೆಯುಮುಂ ನೀರೇಜಸೂತ್ರಂ ಗಡಂ ನನೆಗಳ್ ಬಾಣಚಯಂ ಗಡಂತತನು ತಾಂ ಮತ್ತಂ ಮನಂ ನೊಂದು

ನಿರ್ಬ [ಪಾಠಾಂ. ಬ್ರಿ]ನಿಪಂತಾರ್ದಿಸುತಿರ್ಪನುರ್ಚಿದೆರ್ದೆಯೊಳ್ ಪುಣ್ಣಿತ್ತರೆಂದಿಂತಿದಿಲ್ಲಿನಿಸುಂ ಮನ್ಮಥಶಸ್ತ್ರಕಲ್ಪಮಿದು ದಲ್ ಬೇಱಿಕೊಂದು ಶಿಕ್ಷಾಕ್ರಮಂ (ಕಾಪ್ಯಾಪ. ೭೫೨). **ನಿರ್ಬನಿಸು :** ೨. ಮೇಲಿನ 'ಕಾವ್ಯಾವ.' ಪ್ರಯೋಗದ ಪಾಠಾಂತರವನ್ನು ನೋಡಿ. **ನಿರ್ವನಿಸು :** ೧. ದಿನಕರನ ಮುಂದೆ ಧಾತ್ರೀತನಯಂ ಕುಜನಿಂದೆ ಮುಂದೆ ಭೃಗುತನಯಂ ನಿರ್ವನಿಸದೆ ನಡೆದೊಡೆ ಮಱೆ ಬೇಟ್ಪಿನಿತುಂ ತಪ್ಪಿಲ್ಲದಕ್ಕುಂ (ಜಿಟ್ಟಪು. ೭–೯೬). **ನಿರ್ವನಿಸು :** ೨. ಅನಿತಿನಿತೆನಿಸದೆ ರಿಪುಬಲಮೆನಗಿನಿಸಂ ನೆಱೆಯದೆಂಬ ಬಗೆ ಬಳೆದಿರೆ ನಿರ್ವನಿಸಿದನಾ ಜಿನಚಂದ್ರಂ (ಶಾಂತಿಪು. ೪–೮) ; ಜಂಕರಿಸಂ ಕಾತರಿಸಂ ಮೂಂಕರಿಸಂ ಬೆಕ್ಕಸಂಬಡಂ ಬೆಕ್ಕರಿಸಂ ಹೂಂಕರಿಸಂ ನಿರ್ವನಿಸಂ ಜೀಂಕರಿಸಂ ಜಿನುಗನವನಿಸಂ (ಅಜಿಪು. ೫–೮೯) ; ನಿರ್ವನಿಸಿ ಕಿನಿಸಿದಳವಳ್ ದಿನಪನುದಯದೊಳ್ ಕಾಯ್ದುಳರ್ಕ ಮಣಿಪುತ್ರಿಕೆವೋಲ್ (ಲೀಲಾಪ. ೧೪–೨೪).

[<ನಿರ್ನಮನ$_0$ + –ಇಸು$_3$]

**ನಿರ್ನಾಮ** (ಗು). ೧. ಹೆಸರಿಲ್ಲದ; ಹೆಸರಳಿದ : ಚರಿತ್ರೆಯಲ್ಲಿ ನಿರ್ನಾಮ ವ್ಯಕ್ತಿಗಳು ಎಷ್ಟು ಜನ ಆಗಿ ಹೋಗಿಲ್ಲ (ರೂಢಿ). ೨. ಹೆಸರಿಸಲಾಗದ : ಭಕ್ತನಿಧಿ ನಿರ್ದೇಹ ದೇಹಿ ವಿರಕ್ತಗತಿ ನಿರ್ನಾಮ [ಪಾಠಾಂ. ನಿರ್ನಾಮಿ] ನಾಮಿ ಚಿದುಕ್ತಮತಿ ನಿಃಶಬ್ದ ಶಬ್ದಿ ವಿಭಾವ ಭಾವಿತನು (ಬಸಪು. ೮–೫). (ನಾ). ೩. ನಾಶ ; ಅಳಿವು ; ಕೊನೆ : "ನಿರ್ನಾಮ ಮೆನಲ್ ನಾಶಂ" (ಭಾರನಿ. ೨೮) ; ಶ್ಯಾಮರಾಯನ ನಿರ್ನಾಮಕ್ಕೆ ಹೊಸ ಕತ್ತಿ ಮಸೆಯಿತು (ಪೀಪಪ. II, ೨೭೯). ೪. ಹೆಸರಿಲ್ಲದುದು : ಸತ್ತುವೆನಿಸಿದ ಶಬ್ದ ನಿಃಶಬ್ದಕ್ಕೆ ಬಾರದ ನಿಶ್ಶೂನ್ಯಲಿಂಗವೇ ಪ್ರಾಣವಾಗಿ ಚಿತ್ತುವೆನಿಸಿ ನಾಮ ನಿರ್ನಾಮಕ್ಕೆ ಬಾರದ ಸ್ವರೂಪು ನಿರೂಪಿಲ್ಲದ ಶರಣನೇ ಅಂಗವಾಗಿ ಉಭಯಸಂಪುಟದಿಂದ ಸಕಲನಿಷ್ಕಲವೆನಿಸಿತ್ತು (ಉರಿಪ. ಕ. ೨೦೭–೨೮೬). ೫. ಹೆಸರಿಲ್ಲದವನು ; ಹೆಸರಳಿದವನು ; ನಾಶವಾದವನು ; ಸತ್ತವನು : ಇಂದಿನಲಿ ಕಡೆ ತನಗೆ ಮೇಣು ಪುರಂದರನು ನಿರ್ನಾಮನೈಸಲೆಯೆಂದು ಬಿಟ್ಟನು ಚೂಣಿಯನು ಪಟುಭಟರ ಬೊಬ್ಬೆಯಲಿ (ಕುವ್ಯಾಅ. ೧೨–೧೮) ; ತಾಮಸದ ಕೈದುಗಳಿನಿಂದಾ ರಾಮ ಲಕ್ಷ್ಮಣರೆಂಬ ನರರನು ಭೂಮಿಯೊಳು ನಿರ್ನಾಮರೆನಿಸುವೆನಿಂದಿನಿರುಳಿನಲಿ (ತೌಶಿರಾ. ೩೯–೨೭).

**ನಿರ್ನಾಮ ಮಾಡು** = ನಾಶಗೊಳಿಸು : ರಣದಲಿ ರಾಮಸೇನೆಯ ಹೊಕ್ಕು ಸಲೆ ನಿರ್ನಾಮ ಮಾಡುವೆನು (ತೌಶಿರಾ. ೨೦–೭). **ನಿರ್ನಾಮವಾಗು** = ಅಳಿದುಹೋಗು ; ನಶಿಸಿಹೋಗು ; ನಾಶವಾಗು : ನಿರ್ನಾಮವಾಯಿತ್ತು ನಿಷ್ಪತ್ತಿಯಾಯಿತ್ತು . . . ಕೂಡಲ ಚನ್ನಸಂಗಮದೇವರಲ್ಲಿ ಶಬ್ದ ಮುಗ್ಧವಾಯಿತ್ತು (ಚನ್ನಪ. ಕ. ೬೬೦–೧೪೯೩) ; ನಿರ್ನಾಮವಾದುದೆ ಬಿರುದು ಪಾಂಡವತಿಮಿರರವಿಯೆಂಬ (ಕುಪ್ಯಾಗ. ೫–೨೬) ; ಈ ಮರುಳುತನವೇಕೆ ಬಲ ನಿರ್ನಾಮವಾಯ್ತೆಂದುಬ್ಬಿ ಮಚಿಸುವ ಕೈಮುಗಿದ ಕೋಯೆನುತ ಕವಿದೆಚ್ಚನು ಕಕುತ್ಸ್ಥಜನ (ತೊರರಾ. ೩–೬–೫೪). [ಸಂ. ನಿರ್ನಾಮನ್]

**ನಿರ್ನಾಮಿಕೆ** (ನಾ). ಹೆಸರಿಲ್ಲದವಳು : ತಾಮಿರ್ಬರುಂ ತಿರಿದು ತಂದಿಕ್ಕಿದೆಂಜಲೆವುಱುವಂ ತಿಂದು ಪೆಸರುಮಿಲ್ಲದೆ ನಿರ್ನಾಮಿಕೆಯೆಂದು ಪೆಸರಾಗಿ ಬಳೆಯೆ (ಆಪಿಪು. ೩–೩೪ ವ) ; ತಿರಿದು ತಂದಿಕ್ಕಿದೆಂಜಲುಮುಗುಱುವುಂ ತಿಂದು ಪೆಸರುಮಿಲ್ಲದೆ ನಿರ್ನಾಮಿಕೆಯಾಗಿ ಬಳೆವನ್ನೆಗಂ (ಚಾಪುಂಪು. ೧೮).

[ಸಂ. ನಿರ್ನಾಮಿಕಾ]

**ನಿರ್ನಾಮೋದಕ** (ನಾ). [ವೀಶೈ] ದಶವಿಧ ಪಾದೋದಕಗಳಲ್ಲಿ ಒಂದು ; ಅವರ್ಣನೀಯವಾದಂಥ ತೀರ್ಥ : ಆ ಪಾದೋದಕವನ್ನು ಅಂತಿಂತೆಂದು ಹೆಸರಿಡಲಿಲ್ಲವಾಗಿ ನಿರ್ನಾಮೋದಕ (ಕರ್ನಾಕ. ೧೩೭). 'ದಶವಿಧ ಪಾದೋದಕ', 'ನಿರ್ಣಾಮೋದಕ' ಪರಾ.

[ನಿರ್ನಾಮ + ಉದಕ$_2$]

**ನಿರ್ನಾಯಕ** (ಗು). ೧. ನಾಯಕನಿಲ್ಲದ ; ಮುಂದಾಳು ಇಲ್ಲದ. (ನಾ). ೨. ನಾಯಕನಿಲ್ಲದುದು ; ಅನಾಯಕವಾದುದು : ನೀವಿರಲು ನಿರ್ನಾಯಕವೆ ಸೇನಾವಳಿ ಮಹಾದೇವ (ಕುಪ್ಯಾಭೀ. ೯–೩೧) ; ಅಕಟಕಟ ಕುರುಸೇನೆ ನಿರ್ನಾಯಕವಲಾ ಹಾ ಎನುತ ಮಂತ್ರಿಪ್ರಕರ ಮಱುಗಿತು (ಕುಪ್ಯಾಕ. ೧೮–೩೦). [ಸಂ.]

**ನಿರ್ನಾಳ** (ಗು). ನಾಳವಿಲ್ಲದ ; ನಾಳರಹಿತವಾದ : 'ನಿರ್ನಾಳ ಗ್ರಂಥಿ' ಪರಾ. [ಸಂ. ನಿರ್ನಾಲ]

**ನಿರ್ನಾಳಗ್ರಂಥಿ** (ನಾ). ನಾಳವಿಲ್ಲದ ಗ್ರಂಥಿ ; ಒಳಗೇ ರಸ ಸ್ರವಿಸುವ ಗ್ರಂಥಿ : ಕೆಲವರು ಈ ಸ್ಥಿತಿಗೆ ನಿರ್ನಾಳಗ್ರಂಥಿಗಳ ಆಂತರಿಕ ಬದಲಾವಣೆಗಳು ಕಾರಣವೆಂದು ತಿಳಿಸಿರುತ್ತಾರೆ (ನಿಮ್ಮದೃ. ೬೬) ; ಒಳ ಸ್ರವಿಸುವ ನಿರ್ನಾಳಗ್ರಂಥಿಗಳು (endocrine glands) ಇವುಗಳ ಚೋದಕ ಸ್ರವಣಗಳು–"ಹಾರ್ಮೋನ್ಸ್" ರಕ್ತದ ಹರಿವಿಗೆ ಪ್ರಸರಿಸುತ್ತವೆ (ತೀಟಬ. ೪೧) ; ನಮ್ಮ ಕುತ್ತಿಗೆಯ ತಳದಲ್ಲಿ ಶ್ವಾಸನಾಳದ ಮುಂದೆ ಒಂದು ಬಹುಮುಖ್ಯವಾದ ನಿರ್ನಾಳಗ್ರಂಥಿ ಇದೆ (ಗೃಹವಿ. ೨೪)

[ನಿರ್ನಾಳ + ಗ್ರಂಥಿ]

**ನಿರ್ನಿಕ್ತ** (ಗು). ೧. ತೊಳೆದ ; ಮಡಿ ಮಾಡಿದ ; ಶುಚಿಗೊಳಿಸಿದ. ೨. ವಿಶದವಾದ ; ಸ್ಪಷ್ಟವಾದ : ಮಿಹಿರಪ್ರದ್ಯೋತಿಸಂಧ್ಯಾಭವನ ಸಮಯದೊಳ್ ಪದ್ಮಿನೀಷಂಡದೊಳ್ ಪೊದಟ್ಟು ಹಬಿರ್ವೆದುರ್ಗಂಗುರಂ(?) ನೀರೊಳಗಣ ಮುಗ್ಗುಳೊಳ್ ಸಿಲ್ಕಿ ನಿರ್ನಿಕ್ತ ಸತ್ಯಂ ಸಹಕೃತ್ಯಂ ಸೂರ್ಯ ಮಿತ್ರಾಹ್ವಯದಿನೆನಗೆ ತಾನೆಂದು ಪೇೞ್ವಿಂತಿರಿರ್ದತ್ತು (ಸುಕುಮಾ. ೩–೧೫) ; ಅಂತು ಮಂತ್ರಿಗಳ್ವೆರಸು ನಿರ್ನಿಕ್ತಕಾರ್ಯನಾಗಿ ಮಱುದಿವಸ ಮವಸರಂಗೊಟ್ಟು ಗಜಕರ್ಣದೂತನ ಮುಖಾವಲೋಕನಂ ಮಾಡಿ(ಪುಷ್ಪಪು. ೭–೫೨ ವ). (ನಾ). ೩. ತೊಳೆದುದು ; ಮಡಿ ಮಾಡಿದುದು : "ನಿರ್ನಿಕ್ತಂ, ಪ್ರಕ್ಷಾಳಿತಂ, ಧೌತಂ– ಈ ೩ ತೊಳೆಯಲ್ಪಟ್ಟುದು" (ಹಲಾಯು. ೬೮–೨೫೪). ೪. ಸ್ಪಷ್ಟವಾಗಿ ಕಾಣುವವನು : ಮೂಗರುಂ ಮೃದುಮಧುರನಿನಾದದಿಂ ನುಡಿಗುಂ ಕುರುಡರುಂ ನಿರ್ನಿಕ್ತರುಮಾಗೆ ಕಾಣ್ಗುಂ (ಪಸಾರ. ೫೬೮).

**ನಿರ್ನಿಕ್ತಮಾಗು** = ತಿಳಿಯಾಗು ; ಸ್ಪಷ್ಟವಾಗು ; ವ್ಯಕ್ತವಾಗು: ಮುನ್ನೋದಿದೋದಿಂದೆನಗಿದು ಪಿರಿದಲ್ತೆಂದು ಪೂರ್ಣೋದಿದಂ ಗ್ರಂಥಾರ್ಥಂ ನಿರ್ನಿಕ್ತಮಾಗಲ್ (ಸುಕುಮಾ. ೩–೩೬). [<ಸಂ. ನಿರ್ಣಿಕ್ತ]

**ನಿರ್ನಿದ್ರತೆ** (ನಾ). ನಿದ್ರೆ ಬಾರದಿರುವಿಕೆ ; ನಿದ್ರಾಹೀನತೆ : "ನಿದ್ದೆ ಹತ್ತದಿರುವುದು ; ನಿದ್ದೆ ಬಾರದ ಸ್ಥಿತಿ ; ನಿರ್ನಿದ್ರತೆ" (Insomnia. ಇಂಕನಿ). [ಸಂ. ನಿರ್ನಿದ್ರತಾ]

**ನಿರ್ನಿದ್ರೆ** (ನಾ). = ನಿರ್ನಿದ್ರತೆ : ಭೇದಿ, ರಕ್ತಭೇದಿ, ಹೊಟ್ಟೆನೋವು, ನಿರ್ನಿದ್ರೆ, ನೂತಿ, ಬಾಯಿಹುಣ್ಣು, ಗಂಟಲುಹುಣ್ಣು, ಕಾವುಗಣ್ಣುಗಳಿಗೆ ಇದು ಸಂಜೀವನ (ಬಚಿಕಿ. ೪). [ಸಂ. ನಿರ್ನಿದ್ರಾ]

**ನಿರ್ನಿಮಿತ್ತ** (ಗು). ೧. ಕಾರಣವಿಲ್ಲದ; ಉದ್ದೇಶವಿಲ್ಲದ ; ಅಕಾರಣವಾದ : ಸೊಲ್ಲೊಳ್ ಕ್ರಿಯಾತ್ಮಕಾವ್ಯಯಮಿಲ್ಲೆಂಬುದು ಕೀಱಿದೆಂಬುದಾಕೀರ್ಣಾರ್ಥಂ ಬಲ್ಲರ್ಗೆ ನಿರ್ನಿಮಿತ್ತಾರ್ಥೋಲ್ಲಸಿತಂ ನಿರ್ನಿರೆಂಬುದುಂ ನಿರ್ನೆರಮುಂ (ಶಮದ. ೩೦೧). (ನಾ). ೨. ಕಾರಣವಿಲ್ಲದಿರುವಿಕೆ ; ನಿಷ್ಕಾರಣ : ಅಕ್ಕಟಾ ಮರುಳ್ದೊಂಬಿಗಳೇಕೆ ಸಂಪಗೆಗಳೊಳ್ ಪಗೆಗೊಂಡುವೊ ನಿರ್ನಿಮಿತ್ತದಿಂ (ಶಮದ. ೧೧೭ ಪ್ರಯೋ). ೩. ಸ್ವಚ್ಛಂದತೆ : "ಸ್ವಚ್ಛಂದಃ, ನಿರ್ನಿಮಿತ್ತಂ, ಯದೃಚ್ಛಾ — ಈ ೩ ತನ್ನಿಚ್ಛೆ" (ಹಲಾಯು. ೧೨೭–೮೯). [ಸಂ.]

**ನಿರ್ನಿಮಿತ್ತಂ** (ಅ). ನಿಷ್ಕಾರಣವಾಗಿ ; ಅಕಾರಣವಾಗಿ : ಎಸೆವ ದರಹಾಸಪ್ರಭಾಸಪ್ರಸರವೆನ್ನಂ ನಿರ್ನಿಮಿತ್ತಂ ಮುಸುಕಿತೆನುತುಂ ಲಜ್ಜೆಯುಂ ನಾಚಿಕೆಯುಂ ಮೊಳೆವುತಿರೆ (ಬಸಪು. ೪೩-೧೧) ; ಕೌಸಲೆಗೆ ರಾಮನೆ ಮರಳ್ದು ಬಂದಂತೆವೊಲ್ ನಿರ್ನಿಮಿತ್ತಂ ತೋರ್ದುದೆರ್ದೆಗೆ ಧೈರ್ಯಜ್ಯೋತಿ ಭೀಷಣನಿರಾಶಾ ತಮದ ಮಧ್ಯೆ (ಶ್ರೀರಾಮಾ. ೧೧೬-೧೧೫). [<ನಿರ್ನಿಮಿತ್ತ]

**ನಿರ್ನಿಮಿತ್ತಹಸಿತ** (ನಾ). ನಿಷ್ಕಾರಣವಾದ ನಗು : ಮೊಳೆವಲ್ ಶೋಭಿಸೆ ನಿರ್ನಿಮಿತ್ತಹಸಿತಂ ಚೆಲ್ವಾಗೆ ಲಾಲಾಜಲಂ ತುಳುಕಲ್ ಬರ್ಪ ತೊದಲ್ ಮನಂಗೊಳಿಸಲಂಕಾರೋಹಕಿಚ್ಛೈಪ ಮಕ್ಕಳನಿರ್ಕೈಗಳಿನೆತ್ತಿಕೊಂಡು (ಶಾಕುಂತ. ೧೦೫-೧೫). [ನಿರ್ನಿಮಿತ್ತ + ಹಸಿತ]

**ನಿರ್ನಿಮೇಷ** (ಗು). ೧. ಎವೆಯಿಕ್ಕದ; ರೆಪ್ಪೆ ಬಡಿಯದ : 'ನಿರ್ನಿಮೇಷಾಕ್ಷಿ' ಪರಾ. (ನಾ). ೨. ಎವೆಯಿಕ್ಕದವನು : ಆದಿತ್ಯಬಿಂಬಕ್ಕೆ ಯೋಗೀಂದ್ರನತಂದ್ರಂ ನಿರ್ನಿಮೇಷಂ ನಗನಿಕಟಹಟದ್ರತ್ನಕೂಟಂಬೊಲಿರ್ದಂ (ಪಂರಾಮಾ. ೨-೧೪) ; ನಿರ್ನಿಮೇಷನಾ ದೃಶ್ಯಮಂ ಮನಶ್ಚಕ್ಷುವಿಂ ನೋಳ್ಪವೊಲ್ ದಾನವೇಶ್ವರಂ ದೂರಗತದೃಷ್ಟಿಯಾದನ್ (ಶ್ರೀರಾಮಾ. ೭೪೬-೩೨೬). ೩. ದೇವತೆ : 'ನಿರ್ನಿಮೇಷದ್ವೇಷಿ' ಪರಾ. [ಸಂ.]

**ನಿರ್ನಿಮೇಷದ್ವೇಷಿ** (ನಾ). ದೇವತೆಗಳ ಶತ್ರು; ರಾಕ್ಷಸ; ದೈತ್ಯ : ಅಂತನೇಕ ದುರ್ಣಯಂ ನಿರ್ನಿಮೇಷ[ಪಾಠಾಂ. ಅನಿಮಿಷ]ದ್ವೇಷಿ ಪುರದೊಳಾಗೆ ಸುವರ್ಣಕೇತು ಜೀಮೂತಪಥದಿಂದತಿವೇಗದಿಂ ಪೋಗೆವೋಗೆ (ಜಗವಿ. ೧೨-೪ ಪ). [ಸಂ. ನಿರ್ನಿಮೇಷದ್ವೇಷಿನ್]

**ನಿರ್ನಿಮೇಷಾಕ್ಷಿ** (ನಾ). ಎವೆಯಿಕ್ಕದ ಕಣ್ಣು ; ಬಿಡುಗಣ್ಣು ; ಬಿಚ್ಚುಗಣ್ಣು : ಮಾನವೇಶ್ವರಂ ಮಾನಸಪೂಜೆಯಂ ರಚಿಸಿ ಬಾಹ್ಯಪೂಜೆಗೆ ಮನಂದಂದು ನಿಜೇಷ್ಟಲಿಂಗಮಂ ಕರಾಬ್ಜಪೀಠದೊಳ್ನೆಲೆಗೊಳಿಸಿ ನಿರ್ನಿಮೇಷಾಕ್ಷಿಯಿಂ ನಿರೀಕ್ಷಿಸಿ (ರಾಜಶೇ. ೧೩-೪೭ ಪ). [ನಿರ್ನಿಮೇಷ + ಅಕ್ಷಿ]

**ನಿರ್ನಿರುಹರಣ** (ಗು). ೧. ನಿವಾರಿಸುವ. (ನಾ). ೨. ನಾಶವಿಲ್ಲದವನು ; ಅಳಿವಿಲ್ಲದವನು : ನಿರ್ವಿಷಯ ನಿರ್ನಿರುಹರಣ ನಿರಸೂಯ ನಿರ್ವಾಣಪದ ನಿರ್ವಿಘ್ನ ನಿರತಿಶಯ ನಿಸ್ಸೀಮ . . . ನಿರ್ವಿಕಾರಾಕಾರ ಚಿತ್ತೈಸು (ಬಸಪು. ೬೧-೪೩). [<ಸಂ. ನಿರ್ನಿರ್ಹರಣ]

**ನಿರ್ನೀತ** (ಗು). ತೀರಿಸಿದ ; ಮುಗಿಸಿದ ; ಪೂರೈಸಿದ : ತನ್ನಿಕಟದೊಳ್ ನಿಂದು ನಿರ್ನೀತವೇತನಸುಭಟರುಂ ಶಸ್ತ್ರಾಘಾತಮರಣರುಮಾದ ಬಂಧುನೃಪಾಲರ ನಿಜಸಂಬಂಧಿಗಳ ಶರೀರದಹನ ಲೌಕಿಕಮಂ ನಿರ್ಬಂಧದೆ ಮಾಡಿಸಿದಂ ದಯೆಯಿಂ ಧರಣಿಪಂ (ಚಂದ್ರಪು. ೧೦-೧೧೫ ಪ). [<ಸಂ. ನಿರ್ಣೀತ]

**ನಿರ್ನೀರದ** (ಗು). ಮೋಡವಿಲ್ಲದ ; ಮೇಘವಿಲ್ಲದ : ನೀರದಮಾರ್ಗಂ ನಿರ್ನೀರದ ತುಷಾರಪಾಂಸುಪಟಳಮಾಗೆಯುಂ . . . ನಿರಂತರಮಿರೆಯಿರೆ (ಶಾಂತಿಪು. ೧೨-೧೪ ಪ). [ಸಂ.]

**ನಿರ್ನೆರ್** 'ನಿರ್ನೆರಂ' ನೋ.

**ನಿರ್ನೆರ** (ನಾ). ಆಧಾರವಿಲ್ಲದುದು ; ಆಶ್ರಯವಿಲ್ಲದುದು : ಮುಗಿಲಂತಸ್ಥಿರಮಪ್ಪ ಗಾಳಿಯಂತೆ ನಿರ್ನೆರಮಪ್ಪ . . . ಸಂಸಾರಮಂ ನಂಬಿ (ಧರ್ಮಾಮೃ. ೩-೧೮೬). [ನಿರ್– + ನೆರ$_2$]

**ನಿರ್ನೆರಂ, ನಿರ್ನೆರ್** (ಅ). ಕಾರಣವಿಲ್ಲದೆ ; ನಿಷ್ಕಾರಣವಾಗಿ ; ನಿರ್ನಿಮಿತ್ತವಾಗಿ : ನಿಚ್ಚಲುಮಿಂದ್ರನೋಲಗದೊಳಂತಾ ಪಾಂಡುರಾಜಂಗೆ ನಿರ್ನೆರಮಪ್ಪೊಂದಪಮಾನದಿಂದಮಿನಿತೊಂದೂನತ್ವಮಪ್ಪಂತುಟೇ (ಪಂಪಭಾ. ೬-೧೭); ಈ ದಿಗ್ವಿಜಯಪ್ರಘಟ್ಟಕದೊಳುರ್ವೀಭೃತ್ಸಮಾಜಕ್ಕೆ ನೋಯಿಸಿದಂ ನಿರ್ನೆರಮೆನ್ನನೆಂದು ಮೊಜಕಿಯಿಟ್ಟಂತಾಯ್ತು ರೂಪಾಚಳಂ (ಶಾಂತಿಪು. ೧೧-೪೦) ; ನಿರ್ನೆರಂ ಬಂದನೆಂಬಲ್ಲಿ ನಿರ್ನಿಮಿತ್ತಂ ಬಂದನೆಂಬ ಪ್ರಥಮೆಯನಱಿವುದು (ಶಮದ. ೯೦ ಪ್ರಯೋ) ; ಬಾಯ್ವಿಡದಿರೆಲೆ ಚಾದಗೆಯೆ . . . ನಿರ್ನೆರಮುಟಿಲದಿರ್ (ರಾಮಾಶ್ವ. ೧-೧೫). **ನಿರ್ನೆರ್** : ಬಿದಿಯೆಂಬಾರಡಿಗಳ್ಸನ್ನೆನ್ನ ಸುಜನಂ ಗೋವಿಂದನಂ ನಿರ್ನೆರುಯ್ವುದುಂ(ಆದಿಪು. ೩-೫೨) ; ನಿರ್ನಿಮಿತ್ತಾರ್ಥೋಲ್ಲಸಿತಂ ನಿರ್ನೆ[ಪಾಠಾಂ. ನಿರ್]ರೆಂಬುದುಂ ನಿರ್ನೆರಮುಂ (ಶಮದ. ೩೦೧ ಪ್ರಯೋ). [<ನಿರ್ನೆರ]

**ನಿರ್ನೆಲಯ** ( ? ). ( ? ) : ಬಡಗಲ್ಸೀತು ನಿರ್ನೆಲಯ ತೆಂಕಣೀರಿಯ ಮೇಗಣ ಕವಿಲೆಯ ಕಲ್ಸರಂ (ಎಕ. VIII, ಸಾಗರ. ೧೦೮-೪೩ ; 1042). [IP ಇದು 'ನೀರ್ನೆಲೆ' ಎಂಬುದರ **ಅಪಲಿಖಿತವಿರಬಹುದು**]

**ನಿರ್ನೇಸು** 'ನಿರ್ಣಯಿಸು' ನೋ.

**ನಿರ್ಬಂಕೆ** (ನಾ). ( ? ) : ಭರದುಣ್ಮುವಿಂದ್ರಿಯದ್ರವದಿರವದು ನಿರ್ಬಂಕೆ ಪುಟ್ಟೆ ಸಿತವರ್ಣಂ ಬಂಧುರಮಧುರಾಮ್ಲ ಕಷಾಯೋತ್ಕರರುಚಿಯೋರ್ವ ಸತಿಯರೊಳ್ ದೊರೆಕೊಳ್ಗುಂ (ಪುನ್ಮವಿ. ೧೦-೨೦). [ ? ]

**ನಿರ್ಬಂಧ** (ನಾ). ೧. ಪಟ್ಟುಹಿಡಿಯುವಿಕೆ ; ದೃಢಸಂಕಲ್ಪ : ನಿರಾಲಸ್ಯದಿ ನಿರ್ಬಂಧದಿಂ ನಿರ್ವಿಕಲ್ಪದಿಂ ನೀಮಿರ್ವರುಂ ನಿಶ್ಚಯಮೋದುವೊಡಾವುಮಾ ಮಾರ್ಗದಿಂದೋದಿಸಿ ಪಂಡಿತರಾಗೆ ಮಾಟಿಪ್ಪಂ (ಸುಕುಮಾ. ೨-೫೫ ಪ). ೨. ಮೊಂಡುತನ ; ಹಠ ; ಛಲ : ಇದಿರುಗಾಣದೆ ಕೊಲೆಗೆ ನಿರ್ಬಂಧದಲಿ ಬೆಸಸುವ ಕೃಷ್ಣನಕಟಾ ಮದಮುಖನೊ ದುರ್ಯೋಧಕನೊ ವಂಚಕನೊ(ಕುಮ್ಯಾಭೀ. ೩-೨೮). ೩. ಬಲಾತ್ಕಾರ ; ಬಲವಂತ;ಒತ್ತಾಯ : ಬಂಧುವಿಯೋಗದಿನೆನಗನುಬಂಧಿಸಿದ ಮಹೋಪತಾಪಮದು ನೀಂ ಬರೆ ನಿರ್ಬಂಧದಿನನಳಱಿದತ್ತದಱಿಂ ಬಂಧುಗಳಿಂ ನೀನೆ ಬಂಧು ಜಗತೀಬಂಧೂ (ಚಂದ್ರಪು. ೫-೨೮); ವೃಥಾ ಪಾತಕವಿದೇಕೆ ಹೇಳು ಜಯಕಾಮುಕರು ನಾವೊಲ್ಲದಡೆ ನಿಮಗೇಕೀಸು ನಿರ್ಬಂಧ (ಕುಮ್ಯಾಕ. ೨೬-೩೫) ; ಐಸಲೇ ವೈದೇಹಿ ನೀನಿಂದೀಸು ನಿರ್ಬಂಧದಲಿ ದಿಟ ಬಿನ್ನೈಸಲೇನಿದು ದೊಡ್ಡಿತೇ ತನಗೆ (ತೊರರಾ. ೩-೮-೩೪). ೪. ಬಂಧನವಿಲ್ಲದಿರುವಿಕೆ ; ಬಿಡುಗಡೆ ; ಸ್ವಾತಂತ್ರ್ಯ ; ಮೋಕ್ಷ : ನಿನ್ನಱಿಕೆಯ ನರಕವೆ ಮೋಕ್ಷ ನೋಡಯ್ಯಾ ನಿನ್ನನಱಿಯದ ಮುಕ್ತಿಯೆ ನರಕ ಕಂಡಯ್ಯಾ . . . ನೀ ಕಟ್ಟಿ ಕೆಡಹಿದ ಬಂಧನವೆ ನಿರ್ಬಂಧವೆಂದಿಪ್ಪೆನು (ಮಹಾದೇ. ಕ. ೫೧-೧೩೨). ೫. ಅಡ್ಡಿ ; ತಡೆ ; ಆತಂಕ : ನಿರ್ಬಂಧ ಮಾಡಿದವನ ಸ್ವಬಂಧ ಹೋದೀತೆ ? (ಗಾದೆ). ೬. ವಿರೋಧ ; ವೈಮನಸ್ಯ ; ಜಗಳ : ಅನಾಮಿಕರೊಡನೆ ಕೆಳೆ ಗೋಷ್ಠಿ ಬಲದೊಡನೆ ನಿರ್ಬಂಧ ಧರ್ಮದ ನೆಲೆಯನಱಿಯದ ದಾಸಿಗಳ ಸಿರಿ ಸುಳಿವ ಗಾಳಿಗೆ ಮಲೆವ ದೀಪವು ಕೇಳು ಧೃತರಾಷ್ಟ್ರ (ಕುಮ್ಯಾಉ. ೩-೭೦). [ಸಂ.]

**ನಿರ್ಬಂಧಗೊಳಿಸು**(ಕ್ರಿ). ಬಲಾತ್ಕಾರಮಾಡು; ಒತ್ತಾಯಪಡಿಸು: ಪ್ರಸಭಂ, ಬಲಾತ್ಕಾರಃ, ಹಠಃ – ೩ ಬಲಾತ್ಕಾರದ ಹೆಸರು ; ಬಲವಂತ ಮಾಡುವಿಕೆ ; ನಿರ್ಬಂಧಗೊಳಿಸುವಿಕೆ(ಸಿದ್ಧಾಂತಿ. ೨೩೨). [ನಿರ್ಬಂಧ + ಕೊಳ್$_1$ + –ಇಸು$_3$]

**ನಿರ್ಬಂಧನ** (ನಾ). ೧. ಬಿಡುಗಡೆ : ಚನ್ನಮಲ್ಲಿಕಾರ್ಜುನಯ್ಯಾ ನೀ ಕಟ್ಟಿ ಕೆಡಹಿದ ಬಂಧನವೆ ನಿರ್ಬಂಧನ[ಪಾಠಾಂ. ನಿರ್ಬಂಧ]ವೆಂದಿಪ್ಪೆನು (ಮಹಾದೇ. ಕ. ೫೧-೧೩೨). ೨. ಮೊಂಡುತನ ; ಹಠಮಾರಿತನ ; ಛಲ : ಎಲೆ ಸುಯೋಧನ ಕೃಷ್ಣರಾಯನ ಅಳಲಿಸುವರೇ ಲೋಭವೀವೆಗ್ಗಳದ ನಿರ್ಬಂಧನವು ಪ್ರಾಜ್ಞರಿಗುಚಿತವಲ್ಲ (ಕುಮ್ಯಾಉ. ೯-೯). [ಸಂ.]

**ನಿರ್ಬಂಧಿಕ** (ನಾ). ಒತ್ತಾಯ ಮಾಡುವವನು : ಪೀನಗ್ರಹಣದಿಂದೆ ಕೆಲವಱಿಕೊಳ್ ಮತ್ವಮಿಲ್ಲ—ಅಚ್ಚಮಲ್ಲಿಕಾ–ಅಚ್ಚಮಲ್ಲಿಗೆ. . .ನಿರ್ಬಂಧಿಕ –ನಿಬ್ಬಂದಿಗ (ಶಮದ. ೨೯೨ ಪ್ರಯೋ). 'ನಿಬ್ಬಂದಿಗ' ಪರಾ. [ಸಂ.]

**ನಿರ್ಬಂಧಿಗ** (ನಾ). ಬಲವಂತಮಾಡುವವನು ; ನಿರ್ಬಂಧಪಡಿಸುವವನು : ಅಂಡಳದ ಮುಂದೆ ವಂದಿಸಿಕೊಂಡಿಹೆನೆಂದು ತ್ರಿವಿಧವ ಹೆಚ್ಚಿ ಹಿಂಗಿ ಮಾಡುವ ನಿರ್ಬಂಧಿಗನ ನೋಡಾ (ಮೋಳಿಪೂ. ೧೬-೫೯).
[ನಿರ್ಬಂಧ + -ಇಗ]

**ನಿರ್ಬಂಧಿಸು** (ಕ್ರಿ). = ನಿರ್ಬಂಧಗೊಳಿಸು : ಭೂವಧೂವರ ಕೇಳಿದ್ಯೆ ಸಂಭಾವನೋಚಿತವಿನಿತಲೇ ಮತ್ತಾವದಕೆ ನಿರ್ಬಂಧಿಸುವವರಲ್ಲೆಂದನಾ ಮುನಿಪ (ತೊರರಾ. ೧-೯-೨೭) ; ತಂದೆಯು ಕೂಡ ಈಗವನು ರಾಘುವನ್ನು ತೆಗೆದುಹಾಕಬೇಕೆಂದು ನಿರ್ಬಂಧಿಸಿದನು (ಮೂಲಾನ. ೧೪೬).
[ನಿರ್ಬಂಧನ + -ಇಸು$_3$]

**ನಿರ್ಬದ್ಧ** (ಗು). ೧. ಕಟ್ಟುಹಾಕಿದ; ಬಿಗಿಯಾಗಿ ಬಂಧಿಸಿದ. ೨. ಬಲಾತ್ಕಾರಕ್ಕೆ ಒಳಪಟ್ಟ. [ಸಂ.]

**ನಿರ್ಬನಿಸು** 'ನಿರ್ವನಿಸು' ನೋ.

**ನಿರ್ಬಯಲು** 'ನಿರ್ವಯಲು' ನೋ.

**ನಿರ್ಬಲ,** ನಿರ್ಬಳ (ನಾ). ೧. ಬಲವಿಲ್ಲದುದು : ವಾತವಿಕಾರದಿಂದ ಅವರ ಕಾಲುಗಳು ನಿರ್ಬಲವಾದುವು (ಜನಜೀ. ೪). ೨. ಕಸುವು ಕಳೆದುಕೊಂಡವನು ; ಶಕ್ತಿಹೀನ ; ದುರ್ಬಲ. **ನಿರ್ಬಳ : ೨.** "ನಿರ್ಬಳನೆನೆ ತಾಂ ಕ್ಷೀಣಮಾಂಸಂ" (ವಸ್ತುಕೋ. ೭೪-೪೧). [ಸಂ.]

**ನಿರ್ಬಲೆ** (ನಾ). ಬಲಹೀನೆ ; ಅಬಲೆ : ನಿನ್ನ ಬಲದಿ ನಾ ಬಾಳುತಿಹೆನೆ ನಿರ್ಬಲೆಯು ಸಬಲೆಯಂತೆ (ಕರ್ನಾಕ. ೪೨೭). [ಸಂ. ನಿರ್ಬಲಾ]

**ನಿರ್ಬಹಣ** (ನಾ). ನಡೆಸುವಿಕೆ ; ನಿರ್ವಹಣೆ : ಇಬ್ಬರಂಧಕರದಕ್ಕೊಳಗೆ ಪುರನಿರ್ಬಹಣವಹುದೊಬ್ಬನಿಂ ಮತ್ತೊಬ್ಬನಿಂದಲೆ ಕರ್ಮವಹುದವು ಪಾದಪಾಣಿಗಳು (ನಿಭಾಗ. ೪-೧೭-೧೯). [<ಸಂ. ನಿರ್ವಹಣ]

**ನಿರ್ಬಳ** 'ನಿರ್ಬಲ' ನೋ.

**ನಿರ್ಬಾಣ** 'ನಿಬ್ಬಾನ' ನೋ.

**ನಿರ್ಬಾಧ** (ಗು). ೧. ತಡೆಯಿಲ್ಲದ ; ವಿರೋಧವಿಲ್ಲದ. (ನಾ). ೨. ಬಾಧೆಯಿಲ್ಲದಿರುವಿಕೆ ; ತೊಂದರೆಯಿಲ್ಲದಿರುವಿಕೆ; ನಿರಾತಂಕವಾಗಿರುವಿಕೆ : ನಿರ್ಬಾಧವಾಗಿ ಪ್ರವೇಶಿಸಿದೆನು (ಕಳ್ಳಕಾ. ೬೧). ೩. ವಿರೋಧವಿಲ್ಲದುದು ; ಎದುರಿಲ್ಲದುದು : ಸಾಧುಸಮಾಧಿಪರೇಂಗಿತಬೋಧಂ ನಿರ್ಬಾಧ[ಪಾಠಾಂ.ನಿರ್ವಾದ]ಮಪ್ಪುದಂತದು ಸೂಕ್ಷ್ಮಂ (ಕಾವ್ಯಾವ. ೬೩೪). [ಸಂ.]

**ನಿರ್ಬಾಧಂ** (ಅ). ಅಡ್ಡಿಯಿಲ್ಲದೆ ; ಆತಂಕವಿಲ್ಲದೆ : ತನ್ಮಧ್ಯದೊಳ್ ಸೊಡರಿರ್ಪಂತಿರೆ ಚಕ್ರರತ್ನಮುದಜಿತೊಳ್ ನಿರ್ಬಾಧಮಿರ್ದತ್ತು ಪೆರ್ವಡೆವಾರಾಶಿಯೋಳಿರ್ದ ಛೈತ್ರದೊಳಗೆಂದೆತ್ತಂ ತೆರಳ್ದಿರ್ದವೋಲ್ (ಆದಿಪು. ೧೩-೬೦). [<ನಿರ್ಬಾಧ]

**ನಿರ್ಬಾಧಕ** (ನಾ). ತೊಂದರೆ ಕೊಡದಂತಹುದು ; ಅಡ್ಡಿ ಮಾಡದುದು ; ನಿರುಪದ್ರವಿಯಾದುದು : ಮಕರಕೇತನನಸ್ತ್ರ ನಿರ್ಬಾಧಕವೆಯುಕಟಕಟ್ಯೆಹಿಕಾಮುಷ್ಮಿಕಕೆ ಸಲ್ಲದ ಮತಿಯು ಮನದಲಿ ನೆನೆದನೇ (ತೊರರಾ. ೬-೨೬-೬೩) ; ಅವನನ್ನು ನಿರ್ಬಾಧಕವಾದ ಕ್ರೀಡಾಸಾಧನವನ್ನಾಗಿ ಉಪಯೋಗಿಸಿಕೊಳ್ಳುತ್ತಿದ್ದನು (ರಾವಿಜ. ೩೦). [ಸಂ.]

**ನಿರ್ಬಾಧಿತ** (ಗು). ೧. ತೊಂದರೆಗೊಳಗಾಗದ ; ನಿರಾತಂಕವಾದ. (ನಾ). ೨. ಕಾನೂನಿಗೆ ಸಂಬಂಧಿಸಿದಂತೆ ಒಬ್ಬನನ್ನು ಅಪರಾಧದಿಂದ ಮುಕ್ತಗೊಳಿಸುವಿಕೆ,—ಮಾನ್ಯಗೊಳಿಸುವಿಕೆ : ಇತರ ಯಾವನೊಬ್ಬನನ್ನೇ ಆಗಲಿ, ಭಾರತ ರಾಜ್ಯಕ್ಷೇತ್ರದೊಳಗೆ ಸೇನಾವಿಧಿಯು ಜಾರಿಯಲ್ಲಿದ್ದ ಪ್ರದೇಶದಲ್ಲಿ ವ್ಯವಸ್ಥೆಯನ್ನು ರಕ್ಷಿಸುವುದಕ್ಕಾಗಿ . . . ಆತನು ನಡೆಯಿಸಿದ ಯಾವುದಾದರೂ ಕೆಲಸದ ಸಲುವಾಗಿ ನಿರ್ಬಾಧಿತ ಮಾಡಬಹುದು (ಭಾಧಾನ. ೨೦). [ಸಂ.]

**ನಿರ್ಬೀಜ** (ನಾ). ೧. ನಪುಂಸಕನಾದವನು; ಪುಂಸತ್ವವಿಲ್ಲದವನು. ೨. [ಯೋಗ] ಸಮಾಧಿಯ ಎರಡು ಪ್ರಕಾರಗಳಲ್ಲಿ ಒಂದು; ನಿರ್ವಿಕಲ್ಪ ಸಮಾಧಿ; ☞ ಸಬೀಜಸಮಾಧಿಯಲ್ಲಿ ಧ್ಯಾನ ಮಾಡಲ್ಪಡುವ ವಸ್ತುವಿನಲ್ಲೇ ಚಿತ್ತವು ಲಯವಾಗುವುದು. ನಿರ್ಬೀಜ ಸಮಾಧಿಯಲ್ಲಿ ಯಾವ ವ್ಯಾಪಾರವೂ ಇಲ್ಲದೆ ಚಿತ್ತವು ಲಯಾಭಿಮುಖವಾಗಿರುವುದು : ಸಮಾಧಿಯೆಂಬ ಯೋಗವು ಸಂಪ್ರಜ್ಞಾತ ಅಸಂಪ್ರಜ್ಞಾತ ಅಥವಾ ಸಬೀಜ ನಿರ್ಬೀಜ, ಸಾಲಂಬ ನಿರಾಲಂಬ ಅಥವಾ ಸವಿಕಲ್ಪ ನಿರ್ವಿಕಲ್ಪವೆಂದು ಎರಡು ಪ್ರಕಾರವು (ಹಿಂದಸಾ. ೧೦೭).
[ಸಂ.]

**ನಿರ್ಬುದ** (ನಾ). [ಗಣಿತ] ಒಂದು ದೊಡ್ಡ ಸಂಖ್ಯೆ ; ಹತ್ತು ಅರ್ಬುದ : ಅರ್ಬುದಹಸ್ತದೊಳರ್ಚಿಸಿ ನಿರ್ಬುದನೇತ್ರದಿಂ ನೋಡಿ ಶಿವ ನಿಮ್ಮಡಿಯಂ ಖರ್ವಜಿಹ್ವೆಯೊಳು ಕೀರ್ತಿಸಿ ಕೊರ್ಬುವೆನು (ಶಂಕಕಂ. ೩೦-೧೧೬) ; ಐದರ್ಬುದದೊಳಗ್ನಿಯದನು ಬಳಸಿಕೊಂಡ್ಯೆದುನಿರ್ಬುದದೊಳಂ ವಾಯುವದ ಬಳಸಿಕೊಂಡ್ಯೆದುಕರ್ಬುದೊಳಗಾಕಾಶವದ ಬಳಸಿಕೊಂಡಾ ಮಹಾಕರ್ಬುವ್ಯೆದಹಂಕಾರಮಂತದ ಬಳಸಿಯ್ಯೆದು ಪದ್ಮ (ವೀಶೈವು. ೪-೧೩-೮) ; ಹರಿಯು ಪಿಡಿತಂದು ಮನೆಯೊಳಗೆ ಘೋರದಿಂ ಮೂಱುನಿರ್ಬುದವರ್ಷಪರಿಯಂತರಂ ಸೆಱೆಯನಿಟ್ಟುದಱಿಯಾ (ಚೆಬಪು. ೫೨-೧೬) ; ಕೋಟಿ ದಹಕೋಟಿ ಶತಕೋಟಿ ಅರ್ಬುದ ನಿರ್ಬುದ ಖರ್ವ ಮಹಾಖರ್ವ . . . ಇವು ೩೨ ವುಘುಡಣೆ ಹೆಸರುಗಳು (ಭಾಸ್ಕರ. ೧೧-೭).
[<ಸಂ. ನ್ಯರ್ಬುದ]

**ನಿರ್ಬುದ್ಧ** (ನಾ). ತಿಳಿಗೇಡಿ ; ದಡ್ಡ ; ಮಂದಮತಿ : ಬುದ್ಧರಿರಲಿ ನಿರ್ಬುದ್ಧರಿರಲಿ, ಅನ್ಯಾಯಿ ನ್ಯಾಯಿ ಇರಲಿ . . . ಇದು ಒಂದೆ ದೇವನಾಟ ಬೇಲೂರ ಕಲ್ಲು ಕನ್ನಡಿಸಿದಂತೆ ನಡೆದೀತು ಎಂದು ಮಾಟ? (ಸೂರ್ಯಪಾ. ೫೯-೧). [ಸಂ.]

**ನಿರ್ಬುದ್ಧಿ** (ಗು). ತಿಳಿಗೇಡಿಯಾದ ; ದಡ್ಡತನದಿಂದ ಕೂಡಿದ ; ಅಜ್ಞಾನದಿಂದಿರುವ : ಒಬ್ಬರಿಗಾಳಾಗಿ ಒಬ್ಬರನೋಲೈಸುವ ನಿರ್ಬುದ್ಧಿ ಮನುಜರನೇನೆಂಬೆ (ಬಸವ. ಕ. ೬೧೮) ; ವೇದದಲುಳ್ಳೊಡೆ ಪ್ರಾಣವಧೆಯುಪ್ಪುದೆ . . . ಪರ್ವತದಲ್ಲಿ ಉಳ್ಳೊಡೆ ಹೋದವರು ಮರಳಿ ಬಪ್ಪರೇ ನಿರ್ಬುದ್ಧಿ ಮಾನವರನೇನೆಂಬೆನು ಮನ ವಚನ ಕಾಯ ಶುದ್ಧವಾಗಿರ್ಪಾತನ ಹೃದಯದಲ್ಲಿ ನಿಮ್ಮ ಕಂಡೆ (ವಚಸಂ. ೨೨೦-೬೯). [ಸಂ.]

**ನಿರ್ಬುದ್ಧಿಗೊಳ್** (ಕ್ರಿ). ಏನೂ ತಿಳಿಯದಾಗು ; ದಿಗ್ಭ್ರಮೆಗೊಳ್ಳು : ಜೀವಾತ್ಮ ಅಂತರಾತ್ಮನ ಸುದ್ದಿಯ ಬೆಸಗೊಂಬಡೆ ಹೇಳಿಹೆ ಕೇಳಿ ಭೋ ಹುಸಿಯ ಸಂಕಲೆಯಾಗಿದ್ದಲ್ಲಿ ಕಾದುಕೊಂಡಿದ್ದನೊಬ್ಬ ಕಥೆ ಕನಸ ಮಾಡಿ ಹೇಳುತ್ತಿದ್ದನೊಬ್ಬ ಪರಾಪರಕ್ಕೆ ಹೋಗಿ ಪರಮನ ಸುದ್ದಿಯ ಕೊಂಡುಬರುತ್ತಿಪ್ಪ ಅವರಿಬ್ಬರನೂ ಕೆಡೆ ಮೆಟ್ಟಿ ಹೋಹಾಗ ಲೋಕ ನಿರ್ಬುದ್ಧಿಗೊಂಡತ್ತು (ಬಸವ. ಕ. ೯೨೬). [ನಿರ್ಬುದ್ಧಿ + ಕೊಳ್$_1$]

**ನಿರ್ಬುದ್ಧಿತನ** (ನಾ). ದಡ್ಡತನ; ಮೂರ್ಖತನ : ಲೋಗರಂ ಮನೆಯಂ ಕಾದಿರಿಮೆಂಬಂತೆ ನಿರ್ಬುದ್ಧಿತನದಿಂ ಪೆಜರೆನಗೆಂದಿರ್ದೊಡೆ ಶಾಶ್ವತಸುಖಂ ದೊರೆಕೊಳ್ಳದು (ಧರ್ಮಾಮೃ. ೭-೯೭).
[ನಿರ್ಬುದ್ಧಿ + -ತನ]

**ನಿರ್ಬೇಗ,** ನಿಬ್ಬೆಗ (ನಾ). ೧. ವಿರಕ್ತಿ ; ವೈರಾಗ್ಯ : ಉಸಿರ್ದೌ ನೀಂ ನಿನ್ನ ನಿರ್ಬೇ[ಪಾಠಾಂ. ರ್ವೇ]ಗಮನಱಿದೆನಿದಂ ಶಕ್ತಿಯೊಳ್ ಮುಕ್ತಿಯಂ ಸಾಧಿಸಲಕ್ಕುಂ (ಆದಿಪು. ೩-೪೪) ; ಗಂಧತೈಲದಿಂ ಶಿರೋಭ್ಯಂಗನಂಗೆಯ್ಯುತ್ತುಮೊಂದು ನರೆಯಂ ಕಂಡು ನಿರ್ಬೇಗದಿಂ ಸ್ವಯಂಬರಗಮನನಿರಾದರನಾಗಿರ್ಪುದುಂ (ಚಾವುಂಪು. ೨೮೪). **ನಿಬ್ಬೆಗ : ೨.** ದುಃಖ ; ಚಿಂತೆ : ಸುಖವ ಹಡೆದೆನೆಂದು ಹಡೆದಡೆ ನಿಬ್ಬೆಗ [ಪಾಠಾಂ. ನಿಬ್ಬೆಜಗ]

ದಿಂದ ಕೈಕೊಂಬುದೀ ದುಃಖವ (ಸಿದ್ಧವ. ಕ. ೨೦-೫೯). **೩.** ಮನಸ್ಸು ಕದಡುವಿಕೆ ; ಉದ್ವೇಗ : ನಿರ್ಬೈಜಿಗುವಟ್ಟು ಸೌಂದರಿಯೊಬ್ಬುಳ್ ಗೊಂಡಳದುಣ್ಮದೀಕ್ಷಿಸಿ ನೃಪನಂ ಬಿಬ್ಬೋಕಂ ಕುಡಿವರಿಯಲ್ ನಿರ್ಬೈಗದೆ ನಿನಗಕಾರಣಹಸನವುದೆಂದಳ್ (ಉದ್ಭಟ.೧೧-೨೩). [<ಸಂ. ನಿರ್ವೇಗ]

**ನಿರ್ಬೈಲು** 'ನಿರ್ವಯಲು' ನೋ.

**ನಿರ್ಬೋಧೆ** (ನಾ). ವಿಶೇಷವಾದ ಉಪದೇಶ,—ಬೋಧೆ : ಬೋಧೆಯ ಬೋಧಿಸಿ ಉಂಬವರೆಲ್ಲರು ಸಾಧಾರಣಕ್ಕೀಡಾದರು ನಿರ್ಬೋಧೆಯ ಹೇಳುವ ಹಿರಿಯರೆಲ್ಲರು ಬಾಗಿಲ ಕಾವುದಕ್ಕೊಳಗಾದರು (ನೋಳಮಾ. ೧೦೨-೪೦೬). [ಸಂ. ನಿರ್ಬೋಧ]

**ನಿರ್ಬ್ಯಾಜ** (ನಾ). ಸಹಜತೆ ; ಸ್ವಾಭಾವಿಕತೆ : ದುಷ್ಟರಂ ದುರ್ಜ್ಞನರಂ ಸಿಂಹಾಸನದ್ರೋಹರನುಜಿದಿಜಿದುತ್ತುಂಗಮಂ ವೀರಸಿಂಹಾಸನಮಂ ನಿರ್ಬ್ಯಾಜದಿಂದ್ದೇಜಿದನತುಳಬಳಂ ರಾಯಬೆಂಕೊಳ್ವದೇವಂ (ಸೌಇಇ. XX, ೯೩-೨೧ ; ?). [<ಸಂ. ನಿರ್ವ್ಯಾಜ]

**ನಿರ್ಭಂಗ** (ನಾ). ನಾಶವಿಲ್ಲದವನು ; ಅಂತ್ಯವಿಲ್ಲದವನು : ತುಂಗ ತರಂಗಗಂಗಾಜಲಸಂಗಕುರಂಗಧರೋತ್ತಮಾಂಗ ನಿರ್ಭಂಗ ನಿರಂಗ . . . ಚಿದಂಗನಾಪ್ರಿಯಾ (ಶಬಶಂ. ೫-೨೬). [ಸಂ.]

**ನಿರ್ಭಯ** (ಗು). **೧.** ಹೆದರಿಕೆಯಿಲ್ಲದ ; ಭಯವಿಲ್ಲದ ; ಭೀತಿಯಿಲ್ಲದ : ಭವವಿಲ್ಲಧ ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ ನಾನು (ಸುಹಾದೇ. ಕ.೧೦೮-೨೫೦) ; ಈ ವಿಕಲ್ಪವ ಬಿಟ್ಟು ನಿರ್ಭಯಭಾವಭರದಲಿ ಹೊಡೆದು ನೋಡು (ಪ್ರಭುಲೀ. ೧೯-೨೭). (ನಾ). **೨.** ಭಯವಿಲ್ಲದಿರುವಿಕೆ ; ನಿರ್ಭೀತಿ ; ಧೈರ್ಯ : ಧನದಲ್ಲಿ ಶುಚಿ ಪ್ರಾಣದಲ್ಲಿ ನಿರ್ಭಯ ಇದಾವಂಗಳವಡುವುದಯ್ಯಾ : . . ನಿರಾಶೆ ನಿರ್ಭಯ ಕೂಡಲಸಂಗಮದೇವಾ ನೀನೊಲಿದ ಶರಣಂಗಲ್ಲದಿಲ್ಲ (ಬಸವ. ೮೫೪) ; ತನುವಿನಲ್ಲಿ ನಿರ್ಮೋಹ ಮನದಲ್ಲಿ ನಿರಹಂಕಾರ ಪ್ರಾಣದಲ್ಲಿ ನಿರ್ಭಯ ಚಿತ್ತದಲ್ಲಿ ನಿರಪೇಕ್ಷೆ . . . ಜ್ಞಾನದಲ್ಲಿ ಪರಮಾನಂದವೆಡೆಗೊಂಡ ಬಳಿಕ ಸೌರಾಷ್ಟ್ರ ಸೋಮೇಶ್ವರಲಿಂಗವು ಬೇಜಿಲ್ಲ ಕಾಣಿರೊ (ಆದಪ. ೨೦-೪೮). **೩.** ಭಯವಿಲ್ಲದಿರುವವನು : ನಿರುಪಮಾನ ನಿರಧಿಕ ನಿರ್ಭಯ . . . ನಿಜನಿರ್ಮಾಯ ಚಿತ್ತೈಸು (ಬಸವು. ೬೧-೪೪) ; ಈತ ಶುಚಿ ರುಜುವೀತ ನಿಸ್ಪೃಹನೀತ ನಿರ್ಭಯನೀತ ನಿರ್ಮಲನೀತ ರಾಗದ್ವೇಷರಹಿತನು ಪಾರ್ಥ ನೋಡೆಂದ (ಕುಪ್ವಾಅ. ೭-೭೬) ; ನಿರಘ ನಿರೀಹ ನಿರ್ಭಯ ನಿರಾಶ್ರಯ ನಿಶ್ಚಲ . . . ಜಯಶಂಕರ ನಿರ್ಜಡ ಶಾಂಭವೀಧವಾ (ಶಬಶಂ. ೫-೨೪). **೪.** ಕ್ಷೇಮ ; ಸುರಕ್ಷತೆ ; ಸುಭದ್ರತೆ ; ಅಪಾಯರಹಿತತೆ. [ಸಂ.]

**ನಿರ್ಭಯತೆ** (ನಾ). = ನಿರ್ಭಯ **೨** : ಈತನು ಶತ್ರುವೇ ಆಗಿದ್ದರೆ. . . ನಿರ್ಭಯತೆಯಿಂದ ಮನೆಯೊಳಗೆ ಹೇಗೆ ಬರುತ್ತಿದ್ದ (ಜವಿಾನ್ದಾ. ೯೩). [ಸಂ. ನಿರ್ಭಯತಾ]

**ನಿರ್ಭಯತ್ವ** (ನಾ). = ನಿರ್ಭಯ **೨** : ಶೌರ್ಯವಾವುದು ನಿನಗೆ ದಾನವವರ್ಯ ಹೇಳ್ಳೆ ನಿರ್ಭಯತ್ವವಿದಾರ್ಯ ಜನ ಮೆಚ್ಚುವವೊಲಿದೆ ನೀನೆನಲು ಬಲಿ ನುಡಿದ (ತಿಮ್ಮಶಾಂ. ೬-೮೨). [ಸಂ.]

**ನಿರ್ಭರ** (ಗು). **೧.** ಹೆಚ್ಚಾದ ; ಅಧಿಕವಾದ ; ಅತಿಶಯವಾದ : ಜಾತಕರ್ಮೋತ್ಸವದೊಳ್ ಪರಿಜನಮುಂ ಪುರಜನಮುಮೊಸಗೆ ಮರುಳ್ಗೊಂಡು ನಿರ್ಭರಕ್ರೀಡಾರಸಪರವಶರಾದಾಗಳ್ (ಆದಿಪು. ೭-೧೧೧ ವ) ; ಧರ್ಮಂ ನಿರ್ಭರಸಾರ್ವಭೌಮಪದಮಂ ಧರ್ಮಂ ಸುರೇಂದ್ರತ್ವಮಂ . . . ಧರ್ಮಂ ಧಾರ್ಮಿಕನಪ್ಪವಂಗೆ ಕುಡುಗುಂ ನಿರ್ವಾಣಕಲ್ಯಾಣಮಂ (ಸುಕುಮಾ. ೬-೪೨) ; ಚತುರ್ದಶಲೋಕಮನೆಯ್ದೆ ಗರ್ಭದೊಳ್ ಧರಿಯಿಸಿದಚ್ಯುತಂ ಬಳೆಯೆ ತನ್ನುದರಾಂತರದೊಳ್ ತದೀಯ ನಿರ್ಭರಭರದಿಂದವಾದ ಗಮನಾಲಸವೃತ್ತಿಯನೇನನೆಂದಪೆಂ (ಜಗವಿ. ೨-೯೮). **೨.** ತುಂಬಿದ ; ಪೂರ್ಣವಾದ : ತರಳತರಲೋಡನಂ ನಿರ್ಭರರಾಗರಸಮುಖಾರವಿಂದಂ ನಿನ್ನಾ ದೊರೆಕೊಳಿಸಿದೊಸಗೆಯೆಂ ಬಂಧುರಂ (ಕವಿರಾ. ೩-೧೬). (ನಾ). **೩.** ರಭಸ ; ಜೋರು ; ವೇಗ ; ತೀವ್ರತೆ : ಆದಿತ್ಯೇಂದುಗಳನಾವರಿಸಿತಾ ಪರಿವೇಷವತಿನಿರ್ಭರದೊಳನಿಲಂ ಬೀಸಿದನು (ಬಸವು. ೬೧-೧೧) ; ಕ್ರೋಧಶಿಖಿ ಕರಣೇಂದ್ರಿಯಾದಿಗಳ ತುಜುಗಿದಂತಃ ಪೇದಮಂತ್ರಾಕ್ಷರಕೆ ಜವನಿಕೆಯಾದುದ್ಯೆ ನಿರ್ಭರದ ವೀರಾವೇಶದಲಿ ಪಲ್ಲಟಿಸಿದನು ಭೂಪ (ಕುಪ್ವಾಗ. ೫-೩೧) : ಕೆಂಗಣ್ಗಳಿಂ ನೋಡಿ ನಿರ್ಭರದಿಂ ಗರ್ಜಿಸಿ ಕೋಡೊಳೀಡಿಜಿಯಲಾರ್ಪಿಂ ಬರ್ಪಸಂದ್ರಪ್ತ ಸಿಂಧುರಮಂ ಪಾಯ್ದು ಪಳಂಚಿ ಪೊಯ್ದುನಸಿಯಿಂ ಧೀರೋತ್ತನುಂ ಧೀವರಂ (ಶಬಶಂ. ೩-೫೭). **೪.** ಕ್ರೌರ್ಯ ; ಕಠೋರತೆ : ನಿಲ್ಲದೆ ನಿಬ್ಬರಕೆ ಓಡಿಸುವುದು ನಿರ್ಭರವೆನಿಸಿಕೊಂಬುದು (ಅಶ್ವಟೀ. ೨೫-೯). **೫.** ತುಂಬಿರುದು ; ಪೂರ್ಣವಾದುದು : ವ್ಯಾಮೋಹವಿಲ್ಲದ ಪ್ರೇಮ ನಿರ್ಭರವಿರಲಿ (ಮಂಕುಕ. ೭೫೭) ; ಆನಂದವರ್ಧನನ ಜೀವನ ಸರ್ವಾಂಗಸುಂದರವೂ ತತ್ತ್ವಾನುಭವಬಂಧುರವೂ ಭಕ್ತಿನಿರ್ಭರವೂ ಆಗಿತ್ತು (ಧ್ವನ್ಯಾಲೋ. XXVII ಪೀಠಿಕೆ). **೬.** ಎಡೆಬಿಡದ ಪ್ರಯತ್ನ ; ಛಲದಿಂದ ಮಾಡುವ ಸಾಧನೆ. [ಸಂ.]

**ನಿರ್ಭರಂ** (ಅ). ಹೆಚ್ಚಾಗಿ ; ಅಧಿಕವಾಗಿ ; ಅತಿಶಯವಾಗಿ : "ಆತಾಂತವತ್ಕಂತವಮತೀವಬಾಢಂ . . . ನಿರ್ಭರಮಿಂತಿವೆಲ್ಲಂ ಕೃತಕ್ರಿಯಾಭೂಮವಿಶೇಷಣಂಗಳ್" (ವಸ್ತುಕೋ. ೧೧೬-೩೪) ; ಸ್ಮರನಸ್ತ್ರಸಮಿತಿಯದು ನಿರ್ಭರಮಂಗಮನುರ್ಚಿ ಪೋಗೆಯುಂ ಪೋಬಟಿಯುಂ ದೊರೆಕೊಳಿಸಲಾಗದು (ಕವಿರಾ. ೩-೧೮೫) ; ಆ ಕೊಳನಂ ಬಳಸಿ ಬಂದು ನಿರ್ಭರವಾಗಿ ಬೊಬ್ಬಿಜಿದಬ್ಬರಂಗೆಯ್ದು (ಗದಾಯು. ೭-೧ ವ). [ಸಂ.]

**ನಿರ್ಭರಗರ್ಭ** (ನಾ). ತುಂಬಿದ ಬಸಿರು ; ಪೂರ್ಣವಾದ ಬಸಿರು : ಅಂತು ನಿರ್ಭರಗರ್ಭ[ಪಾಠಾಂ. ಗರ್ಭನಿರ್ಭರ]ಪ್ರದೇಶದೊಳರಾತಿಗಳ್ಗಂತಕಾಲಂ ದೊರೆಕೊಳ್ವಂತೆ ಪ್ರಸೂತಿಕಾಲಂ ದೊರೆಕೊಳೆ (ಪಂಪಭಾ. ೧-೧೨೬ ವ) ; ಬಂಬಲ ಬಾಡಿದ ರೂಪು ಗಾಡಿಯಂ ನೂರ್ಮಡಿ ಮಾಡೆ ಮೇಳದವಳಂ ಸತಿ ನಿರ್ಭರಗರ್ಭಭಾರದಿಂ ನೆರ್ಮಿ ನಿಮಿರ್ಚುವಳ್ ಪುರುಳಿಯೊಳ್ಪರಿಹಾಸನಚೋವಿಳಾಸಮಂ (ಮಲ್ಲಿಪು. ೪-೧೧೦). [ನಿರ್ಭರ+ಗರ್ಭ]

**ನಿರ್ಭರತೆ** (ನಾ). ಹೆಚ್ಚಳ ; ಅತಿಶಯತೆ ; ಗಾಢತೆ : ಮೌನದ ನಿರ್ಭರತೆ ಹೆಚ್ಚಾಗಿ . . . ಅನಿರೀಕ್ಷಿತವಾದ ಸ್ಫೋಟಕ್ಕಾಗಿಯೇ ಕಾದು ನಿಂತಿದೆ (ಸ್ವದರ್ಶಿ. ೪) ; ಕೊರಳ ನಗುವಿನಲ್ಲಿ ಕೃತ್ರಿಮ ಕೋಮಲತೆಯೂ ನಿರ್ಭರತೆಯೂ ಒಟ್ಟುಗೂಡಿದ್ದವು (ರಕ್ತಧ್ವ. ೩೦೭). [ಸಂ. ನಿರ್ಭರತಾ]

**ನಿರ್ಭರಭಕ್ತಿ** (ನಾ). ಅತಿಶಯವಾದ ಭಕ್ತಿ ; ಅಧಿಕವಾದ ಭಕ್ತಿ : ಜಿನ ನಿನಗಶೋಕಲಾಂಛನಮಾಯ್ತಾ ಜವನಂ ಗೆಲ್ದುದಜಿಂದೆಂಬವೊಲುಲಿದುದು ಚಂಚರೀಕರವದಿನಶೋಕಂ ಎಂದು ನಿರ್ಭರಭಕ್ತಿಯಿಂ ಸ್ತುತಿಯಿಸಿ (ಮಲ್ಲಿಪು. ೧೪-೨೨೭) ; ಮತಿಯೊಳ್ ನಿರ್ಭರಭಕ್ತಿ ಕಣ್ಮಲರೊಳಾನಂದಾಶ್ರು ಮೆಯ್ಯೊಳ್ ಸಮುದ್ಗತರೋಮಂ ಮುಖದೊಳ್ ವಿಲಾಸಮೆಸೆಯುತ್ತಿರ್ಪನ್ನಮಿಂತೆಂದರಾನತಮೂರ್ಧರ್ (ಜಗವಿ. ೩-೫) ; ಪುರದ ತೆಲ್ಲಿಗರಯ್ಯತೊಕ್ಕಲುಗಳು ನಿರ್ಭರಭಕ್ತಿಯಿಂ . . . ಸೊಂಟಿಗೆಯೆಣ್ಣೆಯಂ ಪ್ರತಿದಿನಮಾಚಂದ್ರಾರ್ಕ್ಕತಾರಂ ಕೊಟ್ಟರು (ಸೌಇಇ. XX, ೧೯೧-೨೫ ; 1215). [ನಿರ್ಭರ + ಭಕ್ತಿ]

**ನಿರ್ಭರಯೌವನ** (ನಾ). ತುಂಬುಹರೆಯ ; ಪೂರ್ಣಯೌವನ : ಒದವಿದ ನಿರ್ಭರಯೌವನ [ಪಾಠಾಂ. ಯವ್ವನ]ಮದದಿಂ ಮೆಯ್ಮಜಿದು ಕಂಭಮೆಂದು ಮಣಿಸ್ತಂಭದ ರುಚಿಯನಲಘುಕುಚಭಾರದೆ ಜೋಲ್ದು ಮಲಂಗಿ ನಗಿಸಿದರ್ ಕೆಳದಿಯರಂ (ಕಾದಂಪೂ. ೧೦೦೭). [ನಿರ್ಭರ + ಯೌವನ]

**ನಿರ್ಭರರಾಗ** (ನಾ). ಅತಿಶಯವಾದ ಪ್ರೀತಿ,— ಅನುರಾಗ : ನಿರ್ಭರರಾಗದಿನಂದು ನಿಜಾರ್ಭಕನಂ ಜಾತಕರ್ಮಮಂ ನಿರ್ವತಿಸಿದಂ . . . ಸುಪುಣ್ಯನಿಭ್ಯವಂಶವರೇಣ್ಯಂ (ನೇಮಿಪು. ೪-೨೩). [ನಿರ್ಭರ + ರಾಗ]

**ನಿರ್ಭರವಿಲಾಸ** (ನಾ). ಅತಿಶಯವಾದ ಶೋಭೆ,—ವೈಭವ : ಪೂಜೆಯಲ್ಲಿ ಮೈಮರೆದೊರಗಿ ಲಿಂಗವಶವಾಗಿರುವ ಷಣ್ಮುಖಸ್ವಾಮಿಗಳ ಶಿವಾದ್ವೈತಭಕ್ತಿಯ ನಿರ್ಭರವಿಲಾಸವನ್ನು ನೋಡಿ (ವಚಸಂ. LXXI, ಒಳಗೆ ಪ್ರವೇಶ). [ನಿರ್ಭರ + ವಿಲಾಸ]

**ನಿರ್ಭರಸ್ವೇದ** (ನಾ). ಅತಿಯಾದ ಬೆವರು : ನಿರ್ಭರಸ್ವೇದಸಲಿಲ ಸೇಚನದಿಂ ನಯಂಬಡೆದ . . . ನಿಶ್ವಾಸಪವನನಿಂ ಪರಿಮಳಮಂ ಬೀಱುವ ವಧೂವರರಾಗವಿಷಯವಲ್ಲರಿ ಫಲಿತಮಾದುದು (ಜಗವಿ. ೨-೫೨ ವ). [ನಿರ್ಭರ + ಸ್ವೇದ]

**ನಿರ್ಭರಾನಂದ** (ನಾ). ೧. ಅಧಿಕವಾದ ಆನಂದ ; ಅತ್ಯಾನಂದ : ವಿಜಾಱುವರಾರೆಮ್ಮಮನೆಂಬ ದೋರ್ಬಲದಗುರ್ವಿಂ ನಿರ್ಭರಾನಂದದಿಂ [ಪಾಠಾಂ. ದಿರ್ಪರಾನಂದದಿಂ]ದವರಿರ್ವರ್ ಮನುಜರ್ ತನೂಭವನುಮಂ ಕೊಂದೆನ್ನನಾದಂ ಪರಾಭವಮಂ ಪೊರ್ದಿಸಿ ನಿರ್ದಯರ್ ಬಗೆಯದಿರ್ದರ್ ದಂಡಕಾರಣ್ಯದೊಳ್ (ಪಂಪಾರಾಮಾ. ೯-೪೬). ೨. ಅತ್ಯಾನಂದವುಳ್ಳ ವ್ಯಕ್ತಿ. [ನಿರ್ಭರ+ಆನಂದ]

**ನಿರ್ಭರಾನಂದೆ** (ನಾ). ಅತ್ಯಾನಂದವನ್ನುಳ್ಳವಳು : ಈ ದೇಹ ಲಾವಣ್ಯವಾದಂ ಮಿಗುತಿರ್ಕುಂ ತನ್ಮಹಾಭಾಗನ ನುಡಿಯಿಂದಱಿಂ ಸತ್ಯವಾಗಿರ್ದುದಲ್ತೇ ಎಂದು ನುಡಿದ ಮದಲೇಖೆಯ ಮಾತಿನೊಳ್ ನಿರ್ಭರಾನಂದೆಯಾಗಿ ಕಾದಂಬರಿ ಮಹಾಶ್ವೇತೆಗಂ . . . ಪ್ರಿಯತಮಾಕೃತಿಯಂ ತೋಱಿಲ್ (ಕಾದಂಬ. ೬೩೧). [ಸಂ. ನಿರ್ಭರಾನಂದಾ]

**ನಿರ್ಭರಾಲೋಕ**(ನಾ). ಕ್ರೂರವಾದ ನೋಟ ; ಕ್ರುದ್ಧವಾಗಿ ನೋಡುವಿಕೆ ; ತೀವ್ರದೃಷ್ಟಿ : ಲಿಂಗಣ್ಣ :—(ಕಿಂಚಿತ್ಕಾಲದ ಬಳಿಕ, ತೆಪ್ಪತ್ತು, ಎದ್ದು ಕುಳಿತು, ಹುಚ್ಚನಂತೆ ಸುತ್ತ ನೋಡಿ ವಿಕ್ರಮರಾಯನಿಗೆ ನಿರ್ಭರಾಲೋಕವನ್ನು ನಟ್ಟು ಕೊಂಡಿರುವನು) (ಬಿಟ್ಟಅ. ೫೭-೨೦). [ನಿರ್ಭರ+ಆಲೋಕ]

**ನಿರ್ಭರಾಲೋಕನ** (ನಾ). =ನಿರ್ಭರಾಲೋಕ : ಚಂಡನುದ್ದಂಡ ಕೋದಂಡಮಂ ಜೀವೊಡೆಗೆಯ್ದು ಕಾಯ್ದುಬ್ಬರಿಸಿ ನಿರ್ಭರಾಲೋಕನಂಗೆಯ್ದು ಘೂರ್ಣಿಸಿ . . . ಮುಂದಕ್ಕೆ ಸಾಗಿದಾಗಳ್ (ಹವಿಸ್ಮಾರ. ೩-೪೨ವ). [ನಿರ್ಭರ+ಆಲೋಕನ]

**ನಿರ್ಭರಿತ**(ನಾ). ಬಯಲಾದುದು; ಇಲ್ಲವಾದುದು; ಶೂನ್ಯಸ್ಥಿತಿ : ನೀನು ಪರಿಣಾಮಿಯಾದೆ ಬಸವಾ ರೂಪು ನಿರೂಪುವಿಡಿದೆ ಬಸವಾ ಸಂಗಯ್ಯನಲ್ಲಿ ಮನಃಪ್ರೀತಿಯ ಬಸವಾ ಭರಿತ ನಿರ್ಭರಿತವಾಯಿತ್ತೇ (ಶೀಲವ. ೧೧-೨೬). [ನಿರ್‌- + ಭರಿತ]

**ನಿರ್ಭರೋಕ್ತಿ** (ನಾ). ಬಿರುಸಿನ ಮಾತು; ರಭಸದ ನುಡಿ ; ಕಠಿಣವಾದ ಮಾತು : ಅವನ ಗರ್ವಗರ್ಭಂಗಳಪ್ಪ ನಿರ್ಭರೋಕ್ತಿಗಳಂ ಕೇಳ್ದು ಕುಮಾರಂ ಪರ್ಜನ್ಯಗರ್ಜನಮಂ ಕೇಳ್ದ ಕೇಸರಿಕುಮಾರನಂತು ಕೆಳರ್ದು (ಚಂದ್ರಪು. ೫-೭೪ ವ). [ನಿರ್ಭರ+ಉಕ್ತಿ]

**ನಿರ್ಭರ್ತ್ಸನ** (ನಾ). ೧. ಬೆದರಿಸುವಿಕೆ ; ಗದರಿಸುವಿಕೆ ; ಜಬರಿಸುವಿಕೆ. ೨. ನಿಂದನೆ ; ದೂಷಣೆ ; ಜರೆಯುವಿಕೆ : ನಿರ್ಭರ್ತ್ಸನ (Invective) ದಲ್ಲಿ ಹಾಸ್ಯವು ಬಹುತೇಕ ಮಾಯವಾಗಿ ಹೋಗಿರುತ್ತದೆ (ಗೊತ್ತುಗು. ೪೭). [ಸಂ.]

**ನಿರ್ಭರ್ತ್ಸನೆ** (ನಾ). =ನಿರ್ಭರ್ತ್ಸನ ೨ : ಗಂಗವ್ವ ಹಟ ಹಿಡಿದರೆ . . . ಎಲ್ಲರ ಕಡೆಯಿಂದ ಆಕೆಯ ನಿರ್ಭರ್ತ್ಸನೆ ಮಾಡಿಸತಕ್ಕದ್ದು (ಗಂಪೂಯಿ. ೧೪೦). [ಸಂ. ನಿರ್ಭರ್ತ್ಸನ]

**ನಿರ್ಭರ್ತ್ಸಿತ** (ಗು). ಹೀಯಾಳಿಸಿದ ; ಧಿಕ್ಕರಿಸಿದ : ನಿಜತೇಜೋನಿರ್ಭರನಿರ್ಭರ್ತ್ಸಿತ ರವಿಗ್ರಹನುಂ ಜನ್ಮಾಂತರಾಭ್ಯಾಸಜನಿತಾವಧಿಬೋಧೋದಯವಿದಿತಕಾಲನಿಯೋಗನುಂ . . . ಪ್ರತಿಶ್ರುತಿಯೆಂಬಂ (ಆದಿಪು. ೬-೫೨ ವ). [ಸಂ.]

**ನಿರ್ಭವ** (ಗು). ೧. ಹುಟ್ಟುಗೆಟ್ಟ ; ಜನ್ಮವಿಲ್ಲದ. (ನಾ). ೨. ಹುಟ್ಟಿಲ್ಲದವನು ; ಜನ್ಮವಿಲ್ಲದವನು ; ಭವರಹಿತನಾದವನು : ನಿರಜ ನಿರ್ಜರ . . . ನಿರ್ಭವ ನಿರ್ವಿರಳ ನಿಸ್ತರಣ ನಿರ್ವೃದ್ಧಾಂಗ ನಿಜನಿರ್ಮಾಯ ಚಿತ್ತೈಸು (ಬಸಪು. ೬೧-೪೪) ; ನಿರಂತ ನಿರ್ಭವ ನಿರಾಮಯ ನಿರ್ಗುಣ ನಿಸ್ತುಳಪ್ರಭಾವರಣ ನಿರಂಗ . . . ಜಯಶಂಕರ ನಿರ್ಜಡ ಶಾಂಭವೀಧವಾ (ಶಬಶಂ. ೫-೨೪). [ಸಂ.]

**ನಿರ್ಭವ್ಯ** (ನಾ). [ಜೈನ]ಮುಕ್ತಿಗೆ ಸಲ್ಲದ ಜೀವ ; ಮೋಕ್ಷವನ್ನು ಹೊಂದಲಾಗದ ಜೀವ : ಭವ್ಯರೆಂದುಂಟು ನಿರ್ಭವ್ಯರೆಂದುಂಟೆಲೆ ಭವ್ಯ ಕೇಳವರ ಭೇದವನು ಭವ್ಯರೆಂಬವರು ಮುಕ್ತಿಗೆ ಸಲುವವರು ನಿರ್ಭವ್ಯರಲ್ಲಿಗೆ ಸಲ್ಲದವರು (ಭರಚ. ೬೪-೧೨). 'ಅಭವ್ಯ' ಪರಾ. [ಸಂ.]

**ನಿರ್ಭಾಗಧೇಯ** (ನಾ). ೧. ದುರ್ದೈವಿ; ಅದೃಷ್ಟಹೀನ : ಪೂತು ಮಝು ನಿರ್ಭಾಗಧೇಯನು ರಾಯನಕಟಾ . . . ಎನುತ ಮಱುಗಿದನು ಕಲಿಕರ್ಣ (ಕುಪ್ಕಾಕ. ೨೬-೧೪); ನಿರ್ಭಾಗಧೇಯನ ಮುಂದೆ ಸಿರಿ ತಾನಾಗಿ ಸುಳಿವುದೆ (ತೊರರಾ. ೬-೧೬-೧೨). ೨. ದರಿದ್ರ ; ನಿರ್ಧನ ; ಏನೂ ಇಲ್ಲದವನು: ಆ ಗಯಾಳರ ಗಾವಿಲರ ನಿರ್ಭಾಗಧೇಯರ ಮಾಡಿಯುತ್ತರ ಭಾಗದಲಿ ತಿರುಗಿತ್ತು ಪಾಳೆಯವು (ಕುಪ್ಯಾಸ. ೩-೨೪). [ಸಂ.]

**ನಿರ್ಭಾಗಿನಿ**(ನಾ). ನತದೃಷ್ಟೆ; ಅಭಾಗಿನಿ; ಅದೃಷ್ಟಹೀನೆ: ಗಂಡನನ್ನು ಕಳೆದುಕೊಂಡ ನಿರ್ಭಾಗಿನಿ ಈರಮ್ಮನ ದುಃಖಕ್ಕೆ ಮಿತಿಯೇ ಇರಲಿಲ್ಲ (ಪಂಜಪಂ. ೩೫). 'ಅಭಾಗಿನಿ' ಪರಾ. [ಸಂ. ನಿರ್ಭಾಗಿನೀ]

**ನಿರ್ಭಾಗ್ಯ** (ಗು). ೧. ಅದೃಷ್ಟಹೀನವಾದ ; ದುರ್ದೈವಿಯಾದ : ನಿರ್ಭಾಗ್ಯ ಮಗುವೊಂದಿದೆ. ನಾಲ್ಕು ತಿಂಗಳು (ನಿರಾತೆ. ೧೧). (ನಾ). ೨. ದರಿದ್ರ ; ನಿರ್ಗತಿಕ ; ನತದೃಷ್ಟನಾದ ವ್ಯಕ್ತಿ : ಭಕ್ತಿಯಿಲ್ಲದ ಬಡವ ನಾನು ನಿಮ್ಮ ನೆನಹುವಿಲ್ಲದೆ ನಿರ್ಭಾಗ್ಯನಾದೆ ಎನಗೆ ನೀ ಕರುಣಿಸಾ (ಬಸವ. ೨೫೭) ; ಸಿರಿಯು ಕರವಿಡಿದಾತ ನೀ ನಿರ್ಭಾಗ್ಯನಾದೆಯಲ (ಕೌತಿರಾ. ೨೯-೧೫); ಇಲ್ಲಿ ಸಭಾಸದರಾಗಿರುವ ಕೌರವರಾಜರು ನಿನ್ನ ದುಃಖವನ್ನು ಕಂಡೂ ಕಂಡೂ ಸುಮ್ಮನಿರುವುದು ಪಾಂಡವರು ನಿರ್ಭಾಗ್ಯರೆಂದು ತಿಳಿದಿರುವುದರಿಂದ ! (ವಚಭಾ. ೧೦೨).

ನಿರ್ಭಾಗ್ಯದಾಮೋದರ= ನಿರ್ಗತಿಕ; ದಟ್ಟದರಿದ್ರ : (ಕ). [ಸಂ.]

**ನಿರ್ಭಾಗ್ಯೆ** (ನಾ). =ನಿರ್ಭಾಗಿನಿ : ಓ ಕೈಕೆ, ಮತಿಗೇಡಿ, ನಿರ್ಭಾಗ್ಯೆ, ಇನ್ನುಮೇನೀ ನಿದ್ದೆ ನಿನಗೆ ? (ಶ್ರೀರಾಮಾ. ೬೦-೧೭೭) ; ಹೌದು ನಾನೇ -ನಿರ್ಭಾಗ್ಯೆ ತುಳಸಿ (ನಿರಾತೆ. ೧೧). [ಸಂ. ನಿರ್ಭಾಗ್ಯಾ]

**ನಿರ್ಭಾವ** (ನಾ). ೧. ಭಾವವಿಲ್ಲದುದು ; ನಿರ್ವಿಕಾರವಾದುದು : ಕನ್ನಡಿಯಲ್ಲಿ ಮೋರೆ ನೋಡಿಕೊಂಡಳು. ಮೋರೆ ನಿರ್ಭಾವವಾಗಿತ್ತು (ಮೂರುದಾ. ೨೩೦). ೨. ನಿರ್ವಿಕಾರಚಿತ್ತ ; ಭಾವರಹಿತವಾದ ಮನಸ್ಸು : ತನುಗುಣಸಂಬಂಧವ ತಾನೆಂದು ತೋಱಲೀಯದೆ ನಿಶ್ಚಯವ ಮಾಡಿ ತಾತ್ಪರ್ಯವ ಕಳೆಯಾಗಿರಿಸಿ ಸಕಲದಲ್ಲಿ ನಿಃಕಲದಲ್ಲಿ ರೂಪಿನಲ್ಲಿ ಅರೂಪಿನಲ್ಲಿ ಭಾವದಲ್ಲಿ ನಿರ್ಭಾವದಲ್ಲಿ ಅವೆ ಅವಾಗಿ ತೋಱಬಲ್ಲಾತ ಗುರು (ಸಿದ್ಧಪ. ೪-೨೬) ; ಭಾವನಿರ್ಭಾವಪ್ರಸಿದ್ಧ ಕಳಾವಿರುದ್ಧ ವಿಶುದ್ಧ ಮೂರ್ತಿಗೆ ಜೀವಬದ್ಧಾಶುದ್ಧಬುದ್ಧಿಗಳೆಂತು ಸರಿಯಹರು (ಬಸಪು. ೫೪-೨೧) ; ಈ ವಿಧಿಯಲೇನುಂಟು ನೆಱೆ ನಿರ್ಭಾವದಂಗವನಱಿಯದನ್ನಕ ಸಾವುದಾದರೆ ಮಾಣದೈ ಗೊಗ್ಗಯ್ಯ (ಪ್ರಭುಲೀ. ೧೧-೧೫). ೩. ಜನ್ಮವಿಲ್ಲದವನು ; ಸಂಸಾರವಿಲ್ಲದವನು : ಭವಸಾಗರದ ಸಮಯದಲ್ಲಿದ್ದ

ವಂಗೆ ನಿರ್ಭಾವನ ಭಾವವನೆತ್ತ ಬಲ್ಲರು (ವಚಸಂ. ೭೨-೬೭). ೪. [ವೀಶೈ] ಇಂದ್ರಿಯಗೋಚರವಲ್ಲದುದು ; ಇಂದ್ರಿಯಾತೀತವಾದುದು : ಭಾವ ಭ್ರಮೆಗಳು ನಷ್ಟವಾಗಿ ಅನುಭಾವದಲ್ಲಿ ಲೀನವಾಗಿ ಭಾವ ಸದ್ಭಾವ ನಿರ್ಭಾವವೆಂಬ ಭಾವತ್ರಯಂಗಳಲ್ಲಿ ಭರಿತವಾಗಿ ಭಾವ ಬ್ರಹ್ಮವೆಂಬ ಭೇದವಿಲ್ಲದೆ ಸನ್ನಿಹಿತ ಭಾವದಿಂದಿಪ್ಪುದೆ ಭಾವಲಿಂಗ (ಆದವ. ೧೩೯-೨೩೫) ; ಹುಸಿಯಿಂದಲಿ ಲಿಂಗವ ಹೆಸರುಗೊಂಡು ಕರೆದೆನಯ್ಯಾ ಅದು ಎನಗೆ ಭಾವವೂ ಅಲ್ಲ ನಿರ್ಭಾವವೂ ಅಲ್ಲದೆ ನಿಂದಿತ್ತಯ್ಯಾ ಅದಱ ಅವಯವಂಗಳೆಲ್ಲ ಜಂಗಮವಯ್ಯಾ (ಬಸವ. ೯೪೩). [ಸಂ.]

**ನಿರ್ಭಾವಿ** (ನಾ). ಇಂದ್ರಿಯಗೋಚರನಲ್ಲದವನು : ನಿನಗೆ ಮಜ್ಜನವ ಮಾಡುವಲ್ಲಿ ನಾನು ಮಲದೇಹಿ ನೀನು ನಿರ್ಮಲದೇಹಿ . . . ನಿನಗೆ ಧೂಪವನಿಕ್ಕುವಲ್ಲಿ ನಾ ಭಾವಿ ನೀ ನಿರ್ಭಾವಿ (ಮೋಳಿಪೂ. ೩೬-೧೫೧).
[ಸಂ. ನಿರ್ಭಾವಿನ್]

**ನಿರ್ಭಾವಿಕ** (ನಾ). = ನಿರ್ಭಾವಿ : ತನ್ನ ಭಾವದ ಬಗೆಗೆ ಬಣ್ಣವಿಟ್ಟು ಕೊಂಡರೆ ಆ ನಿರ್ಭಾವಿಕಂಗೆ ಸಹಜವೆ ಬಂದವರ ಅನುವರಿಯಬೇಕು ವರಯೋಗಿ (ಸಿದ್ಧಪು. ೨೩-೭೨). [ಸಂ.]

**ನಿರ್ಭಿಡೆ** (ನಾ). ನಿಸ್ಸಂಕೋಚ ; ನಿರ್ದಾಕ್ಷಿಣ್ಯ : ಗೋಪಾಲ ಎಷ್ಟು ನಿರ್ಭಿಡೆಯಿಂದ ಅವಳ ಮುಖಸ್ತುತಿ ಮಾಡುತ್ತಾನಲ್ಲ (ಮುಕ್ತಿ. ೬೯) ; ನಿಡ್ಡಿಯಿಂದ "ವಿಮಾನದಲ್ಲಿ ಹೋಗಿದ್ದರೆ ಚೆನ್ನಾಗಿತ್ತಲ್ಲ ?" ಮಂದಾಕಿನಿ ನಿರ್ಭಿಡೆಯಿಂದ ಕೇಳಿದಳು (ಕ್ಷಿತಿಜ. ೪) ; ನನಗೆ ಇಷ್ಟು ನಿರ್ಭಿಡೆಯಿಂದ ಕಟ್ಟಪ್ಪಣೆ ಮಾಡುವ ನೀವಾರು ? (ಗೌರಾಂಗ. ೧೧೪).
[←ಮರಾ. ನಿರ್ಭೀಡ]

**ನಿರ್ಭಿನ್ನ** (ಗು). ೧. ಬಹುವಾಗಿ ಭಗ್ನಗೊಂಡ ; ಚೂರು ಚೂರಾದ: ಲಕುಟಹತನಿರ್ಭಿನ್ನಭಾಂಡಪ್ರಕರವೋ ನಿನ್ನಾಳುಕುದುರೆಯೊ ಸಕಲಸುಭಟರನೊಕ್ಕಲಿಕ್ಕಿದನೊಂದುನಿಮಿಷದಲಿ (ಕುವ್ಯಾಕ. ೨೦-೬). ೨. ಚೆನ್ನಾಗಿ ಅರಳಿರುವ,—ವಿಕಸಿಸಿರುವ : ನಿರ್ಭಿನ್ನತಾಮರಸಂ ಶ್ರೀಮೊಗವಾಗೆ ವಿಶಾಲ್ ನಯನಮಾಗೊರ್ವಳ್ ಮನೋಜಾಂಬುಜಾಕರದಂತಾ ನೃಪನಂದನಂಗೆ ಪಡೆದಳ್ ಬೇಱೊಂದತಿಪ್ರೀತಿಯಂ (ಶಾಂತಿಪು. ೮-೭೬) ; ಸನ್ನುತಾಕಲಿತಾಷ್ಟದಳನಿರ್ಭಿನ್ನಮಧ್ಯಸ್ಥಿತಕನದ್ವಿಲಸನ್ನವಕರ್ಣಿಕೆಯೊಳೆಸೆವೀಶ್ವರನೊಳಡಗಿರಲು (ಬಸಪು. ೩೫-೭). ೩. ಭೇದಿಸಲಾಗದ ; ತಿಳಿಯಲಾಗದ; ರಹಸ್ಯವಾದ : ದುರ್ಭವಕ್ಷಯಕರನ ಗರ್ಭಾವಿರ್ಭವಂ ನಿರ್ಭಿನ್ನಭಾವಂ ನಿರ್ಭರಾಶಾಪಾಶಮೋಚನಕರ್ಮ ಕರ್ಮಠನು (ಬಸಪು. ೫೩-೩). ೪. ಹೊರಹೊಮ್ಮಿದ ; ತೂರಿ ಬಂದ : ವಿನತಪ್ರಾಹ್ಣಸುಧಾಂಶುಬಿಂಬಮುಖಿಯಂ ಚೀನೋತ್ತರೀಯಾವಗುಂಠನ ನಿರ್ಭಿನ್ನಕಪೋಲಪಾಂಡುರುಚಿಯಂ ಸಾರ್ದಂ ತದುರ್ವೀಶ್ವರಂ (ಅನಂಪು. ೧೧-೮೬). (ನಾ). ೫. ಕೂಡಿಕೊಂಡವನು ; ಸೇರಿಕೊಂಡ ವ್ಯಕ್ತಿ : ತನ್ನ ಸುಖದುಃಖಂಗಳಿಗೆ ನಿರ್ಭಿನ್ನರಹ ಬಾಂಧವರ ವರ್ಜಿಸಿ ಗನ್ನಗತಕದಲುಂಡು ಜಾಱುವ ಗಾವಿಲರು ಕೂಡಿ ಅನ್ಯರನು ಪತಿಕರಿಸಿ ಬಹುಮಾನೋನ್ನತಿಕೆಯನು ವಿರಚಿಸುವುದಿದು ತನ್ನ ತಾನೇ ಕೊಂದುಕೊಂಬುದು (ಕುವ್ಯಾಉ. ೩-೨೬). ೬. ಅಖಂಡನಾದವನು ; ಪರಿಪೂರ್ಣನಾದವನು ; ಅಭಿನ್ನನಾದವನು : ನಿರ್ಭಿನ್ನ ನಿರುಜ ನೀರಜಗರ್ಭಪ್ರಿಯ ನಿಖಿಳಲೋಕಸಂಸ್ತುತ ನಿತ್ಯ ಸ್ವರ್ಭವಪೂಜಿತ . . . ಜಯ ಭವನಾಶಾ (ತ್ರಿಪುವಿ. ೭-೬೦). [ಸಂ.]

**ನಿರ್ಭಿನ್ನತೆ** (ನಾ). ಭಿನ್ನಭಾವವಿಲ್ಲದಿರುವಿಕೆ ; ಹೊಂದಿಕೊಂಡಿರುವಿಕೆ ; ಮಿಳಿತವಾಗುವಿಕೆ : ಸನ್ನುತದಿ ನೀವೆ ಪಿತ ಮಾತೆಯರುಯೆಂದು ನಿರ್ಭಿನ್ನತೆಯೊಳಿರುತಿರ್ದನು (ನಪಪೊ. ೯-೪೮).
[ಸಂ. ನಿರ್ಭಿನ್ನತಾ]

**ನಿರ್ಭಿನ್ನೆ** (ನಾ). ಜೊತೆಯಲ್ಲಿರುವವಳು ; ಜೊತೆಗಾತಿ ; ಮೇಳದವಳು : ನಿರ್ಭಿನ್ನೆಯರ ಕನ್ನೆಯರ ಚೆನ್ನೆಯರ ನಡುವೆ ಘನತೇಜದಿಂದೋಜೆಯಿಂ ಪೂಜೆಯಿಂ ಪಿಡಿದ ಪಲ್ಲಕ್ಕಿಯೊಳು ಬಂದಳು ಭವಾನಿ (ಗುಭಜ. ೩-೪೫). [ಸಂ. ನಿರ್ಭಿನ್ನಾ]

**ನಿರ್ಭೀತ** (ಗು). ೧. ಭಯವಿಲ್ಲದ; ಹೆದರಿಕೆಯಿಲ್ಲದ. (ನಾ). ೨. ಅಂಜಿಕೆಯಿಲ್ಲದವನು ; ದಿಟ್ಟ ; ಧೈರ್ಯಶಾಲಿ : ಧಾತುವೊಳ್ಳಿತು ದಿಟ್ಟನೈ ನಿರ್ಭೀತ ಗರ್ವಿತನಿವನೆನುತ ಭಟರೀತನನು ಹೊಗಳಿದರು ಸಾತ್ಯಕಿ ಸೋಮಕಾದಿಗಳು (ಕುವ್ಯಾಶ. ೩-೨೭) ; ಭರದಿಂ ಸುವೇಗನೆಂಬಾ ಯವೌನಾಶ್ವಭೂವರನ ತನುಜಾತನಾಹವಕೆ ನಿರ್ಭೀತನುಬ್ಬರದ ಬಿಲ್ದಿರುವಿನಬ್ಬರದ ಕೋಳಾಹಳಕೆ ಧರೆ ಬಿರಿಯೆ ನಡೆತಂದನು (ಜೈಮಿಭಾ. ೪-೨೬) ; ಬಿಡಿ ಮಾಗುಗಳನ್ನು ತಯಾರಿಸಿ ಮನುಷ್ಯರಿಗೆ ಅಂಟಿಸುವ ಚಿಕಿತ್ಸೆ ಯಶಸ್ವಿಯಾಗುವವರೆಗಾದರೂ ನಮ್ಮ ಮಾಗು ನಮಗೇ ಎಂದು ನಾವು ನಿರ್ಭೀತರಾಗಿ ಇರೋಣ (ದೇಕನ್ಯ. ೨೨). [ಸಂ.]

**ನಿರ್ಭೀತಚಿತ್ತ** (ನಾ). ಹೆದರಿಕೆಯಿಲ್ಲದ ಮನಸ್ಸುಳ್ಳವನು ; ಧೈರ್ಯಶಾಲಿ ; ಅಳುಕಿಲ್ಲದವನು : ಅನುಮಾನವನ್ನು ಪರಿಹರಿಸಿಕೊಳ್ಳೋಣವೆಂದು ನಿರ್ಭೀತಚಿತ್ತನಾಗಿ ಬೆಳಕಿನ ಕಡೆ ನೋಡುತ್ತ ನಡೆದನು (ಕಪಾಕುಂ. ೧೩). [ನಿರ್ಭೀತ+ಚಿತ್ತ]

**ನಿರ್ಭೀತವರ್ತನೆ** (ನಾ). ದಿಟ್ಟತನದ ನಡವಳಿಕೆ ; ಹೆದರದ ವ್ಯವಹಾರ : ಡಾರ್ಟನಾನನ ನಿರ್ಭೀತವರ್ತನೆಯ ಪರಿಣಾಮವಾಗಿ ಅವನನ್ನು ಕೂಡಲೆ . . . ರಾಜರಕ್ಷಕದಳದಲ್ಲಿ ತರಬೇತಿಗಾಗಿ ಸೇರಿಸಿದರು (ಯೋಧರು. ೩೭). [ನಿರ್ಭೀತ+ವರ್ತನೆ]

**ನಿರ್ಭೀತಹೃದಯ** (ನಾ). ಹೆದರದವನು ; ಭಯಪಡದ ಚಿತ್ತವುಳ್ಳವನು : ನಿರ್ಭೀತಹೃದಯವುಳ್ಳವರಾಗಿ ಅಮಾನುಷ ಸಹಾಯದಿಂದ ಆ ಅಸ್ತ್ರವೃಷ್ಟಿಯ ಮೇಲೆ ಸಿಡಿಲು ಬಿದ್ದ ಹಾಗೆ . . . ಶತ್ರುಗಳನ್ನು ನಿಪಾತ ಮಾಡುತ್ತಿದ್ದರು (ಕೋಹಿನೂ. ೧೪).
[ನಿರ್ಭೀತ+ಹೃದಯ]

**ನಿರ್ಭೀತಿ** (ನಾ). ಅಂಜಿಕೆಯಿಲ್ಲದಿರುವಿಕೆ ; ಧೈರ್ಯ : ಕುರುಪತಿಯ ಬಿಱುನುಡಿಯ ಕೇಳಿದು ಕರಣದಲಿ ಕೋಪಾಗ್ನಿಯುಕ್ಕಲು ಕೆರಳಿ ನಿರ್ಭೀತಿಯಲಿ ನುಡಿದನು ವಿದುರನರಸಂಗೆ (ಕುವ್ಯಾಉ. ೮-೬೬) ; ಹುಲಿಯೂ ತಾನು ಕುಳಿತಿದ್ದ ಸ್ಥಳವನ್ನು ನಿರ್ಭೀತಿಯಿಂದ ಬಿಟ್ಟು . . . ನಡುದಾರಿಯಲ್ಲಿ ಕುಳಿತುಬಿಟ್ಟಿತು (ಕಳಹು. ೫). [ಸಂ.]

**ನಿರ್ಭುಗ್ನ** (ಗು). ೧. ಬಾಗಿಲ್ಲದ ; ಸಮತಲವಾದ. (ನಾ). ೨. [ನಾಟ್ಯ] ಸಮ, ಆಭುಗ್ನ, ನಿರ್ಭುಗ್ನ, ಕಂಪಿತ ಮತ್ತು ಉದ್ವಾಹಿತ ಎಂಬ ಐದು ವಕ್ಷೋಭೇದಗಳಲ್ಲಿ ಒಂದು; ℙ "ಬೆನ್ನಿನಲ್ಲಿ ಹಳ್ಳ ಬೀಳಿಸಿ ಎದೆಯನ್ನು ಉಬ್ಬಿಸುವುದು" (ಲಾಸ್ಯರಂ. ೨೫೬ ಗದ್ಯಾನುವಾದ) : ಸಮುಮಾಭುಗ್ನಂ ನಿರ್ಭುಗ್ನಮುಮತಿವಿಲಸತ್ಪ್ರಕಂಪಮುದ್ವಾಹಿತಮುಂ ಕ್ರಮದಿಂ ವಕ್ಷೋಭೇದಂ ಸಮನಿಸುಗುಂ ನೃತ್ತದಲ್ಲಿ ಸರಸಿಜಗಂಧೀ (ಲಾಸ್ಯರಂ. ೨-೮೫); ಬೆನ್ನು ಗುಳಿಯಾಗಲೆರ್ದೆ ಕೇಳುನ್ನತಿಯಿಂದಿರ್ದೊಡಂತದೇ ನಿರ್ಭುಗ್ನಂ (ಲಾಸ್ಯರಂ. ೨-೮೭).
[ಸಂ.]

**ನಿರ್ಭೂತ** (ನಾ). ಇಲ್ಲದಂತಾದುದು ; ನಷ್ಟವಾದುದು : ಈ ತನುವನೀ ಪರಿಯಲೇ ನಿರ್ಭೂತವನೆ ಮಾಡುವೆನು ನನ್ನನುಜಾತನಲಿ ಭೂವಧುವ ಸೇರಿಸಿ ಬದುಕಿ ನೀವೆಂದ (ಕುವ್ಯಾಅ. ೨೧-೫೦). [ಸಂ.]

**ನಿರ್ಭೇದ** (ಗು). ೧. ಭೇದವನ್ನರಿಯದ ; ಅಭಿನ್ನವಾದ : ಯುಕ್ತಿಯಱಿದು ಧ್ಯಾನದಭ್ಯಾಸದೊಳು ಭೇದಭಕ್ತಿಯ ಮಾಡಿ ಧ್ಯಾನದೊಳು ಶಕ್ತನಾದವನು ಮತ್ತದ ಬಿಟ್ಟು ನಿರ್ಭೇದ ಭಕ್ತಿಯೊಳಿರೆ

ಮುಕ್ತಿಯರಿದೆ (ಭರತ. ೬೪–೯೬). (ನಾ). ೨. ಸೀಳುವಿಕೆ : ಆವುದಚ್ಚರಿ ಹೊಜವಿಡುವ ವಸುದೇವನಂಘ್ರಿಯ ನಿಗಳಮೋಕ್ಷವದಾವುದೈ ನೃಪ ಚಿತ್ರಬಂಧಕವಾಟ ನಿರ್ಭೇದ (ಶಿಭಾಗ. ೧೦–೪–೧೧). [ಸಂ.]

**ನಿರ್ಭೇದತೆ** (ನಾ). ಭೇದಿಸಲು ಅಸಾಧ್ಯವಾಗಿರುವಿಕೆ; ಅಭೇದ್ಯತೆ: ವಿಷಾಗ್ನಿಪಾಷಾಣ ಶೀತಾತಪವೃಷ್ಟಿ (ಕಾಷ್ಠ) ನಿರ್ಭೇದತೆಯುಂ . . . ತನಗನುಸಂಗತಮಾಗೆ ಯೌವನಪ್ರಾಪ್ತನಾಗಿ (ಶಾಂತಿಪು. ೧೦–೯೪ ವ). [ಸಂ. ನಿರ್ಭೇದತಾ]

**ನಿರ್ಭೇದಿ** (ನಾ). ಸೀಳುವವನು ; ಭೇದಿಸುವವನು ; ನಾಶಗೊಳಿಸುವವನು : ಅಂತುಂ ಪ್ರಕೃತಿಯೊಳ್ ನಿತ್ಯೋದಯನುಂ ನಿಸರ್ಗದೊಳ್ ರಿಪುವರ್ಗದುರ್ಗನಿರ್ಭೇದಿಯುಂ . . . ಅಜೇಯನುಮಪ್ಪ ದವಿತಾರಿಗೆ . . . ಉಪಾಯಚತುಷ್ಟಯದೊಳ್ ದಂಡಮುಮಲ್ಲದುೞಿದ ಗುಣಪಂಚಕಮುಮುಪಾಯತ್ರಯಮುಂ ದೊರೆಯಲ್ಲವು (ಶಾಂತಿಪು. ೨–೫೧ ವ). [ಸಂ. ನಿರ್ಭೇದಿನ್]

**ನಿರ್ಭೇದಿಸು** (ಕ್ರಿ). ಇಲ್ಲವಾಗಿಸು; ನಾಶಪಡಿಸು; ಹಾಳುಮಾಡು: ವಾದಿನಗ ವಾದಿಗಜ ಪರವಾದಿತಮಸ್ತಮಮನೊಡೆವ ಬಿಡೆ ಬೆದಱಿಪ ನಿರ್ಭೇದಿಪಿಡೆಗೆಶನಿ ಹರಿದಿನಪೋದಯ ಮೆನಿಸಿದುದು ವಿದ್ಯೆಯೊಂದುಕರ್ಣವರಾ (ಆದಿಪು. ೩–೬೫). [ನಿರ್ಭೇದ+-ಇಸು₃]

**ನಿರ್ಭೇದ್ಯ** (ಗು). ೧. ಅಖಂಡವಾದ ; ಭೇದಿಸಲಾಗದ : ನಿರುಪಮ ನಿರ್ಭೇದ್ಯ ನಿರಾಳ ನಿಶ್ಶೂನ್ಯ ಪರಮಪ್ರಸಾದಿಗಳಿಗೆ ಸಂಸಾರಿಗಳೆಂದು ನುಡಿವರು ಅಜ್ಞಾನಿ ಸಂದೇಹಿಗಳು (ಪಚಸಂ. ೬೧೭–೨೭) ; ನಿರ್ಭೇದ್ಯ ಚಿತ್ತನಿಂದ್ರಹವಿರ್ಭಾಗಪ್ರದನವೋಘವಾಜ್ಯುನಿಶಿಷ್ಯಂ ದರ್ಭೇಂಧನಕ್ಕೆ ಪೋಗುತ್ತಭರ್ಕನಂ ತಳೆದ ವೃದ್ಧಸತಿಯಂ ಕಂಡಂ (ದಶಕು. ೨–೭೪). (ನಾ). ೨. ಭೇದಿಸಲು ಅಸಾಧ್ಯನಾದವನು ; ಅಖಂಡ ; ಪರಮಾತ್ಮ : ಶ್ರೀಗುರು ಸದಾಮಳ ನಿತ್ಯನಿರಂಜನ ಪರಮಪಾವನ ನಿರ್ಗುಣ ನಿರಾವರಣ ನಿರವಯ ನಿರಾಮಯ ನಿರ್ದ್ವಂದ್ವ ನಿರ್ಭೇದ್ಯ (ಭೈರಸೂ. ೧). [ಸಂ.]

**ನಿರ್ಭೋಗಿ** (ನಾ). ಭೋಗವನ್ನು ಬಿಟ್ಟವನು ; ವಿಷಯರಹಿತನಾದವನು ; ಭೋಗಕ್ಕೆ ಹೊರತಾದವನು : ಶರಣ ಸಕಲ ಭೋಗೋಪಭೋಗಿಯಾದಡೆ ಕಿಱಿದೆಂಬರು ಶರಣ ನಿರ್ಭೋಗಿಯಾದಡೆ ಹಿರಿದೆಂಬರು ನಾವಿದನಱಿಯೆವಯ್ಯಾ (ಅಖಂಡೇ. ೭೦–೪೯). [ಸಂ. ನಿರ್ಭೋಗಿನ್]

**ನಿರ್ಭ್ರಾಂತ** (ನಾ). ಭ್ರಮೆಯಿಲ್ಲದವನು ; ಅಜ್ಞಾನವನ್ನು ಕಳೆದುಕೊಂಡವನು ; ಜ್ಞಾನಿ : ಇಂತಪ್ಪ ರುದ್ರಾಕ್ಷಿಯ ಎನ್ನಂತರಂಗಶುದ್ಧವಾಗಿ ಅವಿರಳಭಕ್ತಿಯಿಂದ ಧರಿಸಿ ನಿಶ್ಚಿಂತ ನಿರ್ಭ್ರಾಂತನಾಗಿರ್ದೆನಯ್ಯ (ಅಖಂಡೇ. ೪೮–೭). [ಸಂ.]

**ನಿರ್ಮಂಥ** (ನಾ). ೧. ಕಡೆಯುವುದು ; ಮಥನಮಾಡುವುದು. ೨. ಯಾಗದಲ್ಲಿ ಬೆಂಕಿಯನ್ನು ಉತ್ಪತ್ತಿಮಾಡಲು ಬನ್ನಿಕೊರಡುಗಳನ್ನು ಉಜ್ಜುವುದು. ೩. ಯಾಗದಲ್ಲಿ ಬೆಂಕಿಯನ್ನು ಉತ್ಪತ್ತಿಮಾಡಲು ಉಪಯೋಗಿಸುವ ಬನ್ನಿಯ ಕೊರಡು; ಶಮೀಕಾಷ್ಠ. ೪. ಹಾಳುಮಾಡುವುದು : ನಾಶಪಡಿಸುವುದು. [ಸಂ.]

**ನಿರ್ಮಂಥಕಾಷ್ಠ** (ನಾ). ಯಜ್ಞಯಾಗಗಳಲ್ಲಿ ಅಗ್ನಿಯನ್ನು ಹುಟ್ಟಿಸಲು ಉಪಯೋಗಿಸುವ ಬನ್ನಿಯ ಕೊರಡು,—ಶಮೀಕಾಷ್ಠ. [ನಿರ್ಮಂಥ+ಕಾಷ್ಠ₂]

**ನಿರ್ಮಂಥ್ಯ** (ಗು). ೧. ಕಡೆಯಬೇಕಾದ ; ಮಥಿಸಬೇಕಾದ. ೨. ಉಜ್ಜುವ; ತಿಕ್ಕುವ. [ಸಂ.]

**ನಿರ್ಮಜ್ಜ** (ಗು). ೧. ಕೊಬ್ಬಿಲ್ಲದ ; ಬೊಜ್ಜಿಲ್ಲದ ; ಬಡಕಲಾದ. (ನಾ). ೨. ಒಂದು ಬಗೆಯ ಸಸ್ಯ : "ನಿರ್ಮಜ್ಜಮೆನೆ ಗೊದ್ದ ವಕ್ಕು" (ಮಂಗರಾ. ૩೫–೧೪). [ಸಂ.]

**ನಿರ್ಮತ್ಸರ** (ಗು). ೧. ಹೊಟ್ಟೆಕಿಚ್ಚಿಲ್ಲದ; ಮಾತ್ಸರ್ಯವಿಲ್ಲದ; ಅಸೂಯಾರಹಿತವಾದ. (ನಾ). ೨. ಮತ್ಸರವಿಲ್ಲದವನು ; ಹೊಟ್ಟೆಕಿಚ್ಚಿಲ್ಲದವನು: ಸುಕವಿಯಶೋನಿರ್ಮತ್ಸರನಮೃತಮಯೋಕ್ತಿ ಶರತ್ಸಮಯಸುಧಾಂಶುವಿಶದಕೀರ್ತಿವಿತಾನಂ . . . ಜಿನಚರಣಕಮಲ ಭೃಂಗಂ ಪಂಪಂ (ಆದಿಪು. ೧–೩೦) ; ಬಹುಶ್ರುತನ ಮಂತ್ರನಿಶ್ಚಯ ಮುಮಂ . . . ಪ್ರಜ್ಞರುಂ ನಿರ್ಮತ್ಸರರುಂ ಗುಣಗ್ರಾಹಿಗಳುಮಪ್ಪ ದಱಿಂ ಸಚಿವಸಮೂಹಂ ಮಚ್ಚಿ (ಶಾಂತಿಪು. ೨–೦೬ವ); ಈತ ನಿರ್ಮತ್ಸರನಸೂಯಾತೀತನಿವನತಿವಿಪ್ರಪೂಜಕನೀತ ಮಾತಾಪಿತರಭಕ್ತನು (ಕುಪ್ಪಾಅ. ೭–೭೫). [ಸಂ.]

**ನಿರ್ಮಥನ** (ನಾ). ೧. ಕಡೆಯುವುದು; ಮಥಿಸುವುದು : ವರ್ಧಮಾನಮೆಂಬುದು ಅರಣಿ ನಿರ್ಮಥನೋತ್ಪನ್ನಶುಷ್ಕಪತ್ರೋಪಚೀಯಮಾನೇಂಧನನಿಚಯಸಮಿದ್ಧಪಾವಕದಂತೆ . . . ಪುಟ್ಟಿತ್ತು (ತತ್ತ್ವಪ್ರ. ೬೪). ೨. ನಾಶ; ಧ್ವಂಸ : ಶಾಂತಿಜಿನೇಂದ್ರಪಾದಕಮಲದ್ವಯಮಂ ಪ್ರತಿಮಾಸ್ವರೂಪದಿಂ ಚಿಂತಿಸಿದೊಂಗೆ ಕರ್ಮಮಲನಿರ್ಮಥನಂ ದೊರೆಕೊಳ್ಗುಂ (ಶಾಂತಿಪು. ೧೨–೪೮). ೩. ಉಜ್ಜುವುದು; ತಿಕ್ಕುವುದು. [ಸಂ.]

**ನಿರ್ಮಥಿತ** (ಗು). ೧. ಚೆನ್ನಾಗಿ ಕಡೆದ,— ಮಥನಮಾಡಿದ. ೨. ಸದೆಬಡಿಯಲ್ಪಟ್ಟ ; ನಾಶಗೊಳಿಸಲ್ಪಟ್ಟ : ರಥವ ಬಿಟ್ಟನು ಸೂಠಿಯಲಿ ನಿರ್ಮಥಿತರಿಪುಬಲನಟ್ಟಿದನು (ಕುಪ್ಪಾದ್ರೋ. ೨–೩೧). [ಸಂ.]

**ನಿರ್ಮಥಿತರಿಪು** (ನಾ). ವೈರಿಗಳನ್ನು ನಾಶಮಾಡಿದವನು: ಪೃಥೆಯ ಮಕ್ಕಳ ಕರೆ ಮಹೀಸಂಪ್ರಥಿತಬಲರನು ಕರೆಯೆನುತ ನಿರ್ಮಥಿತರಿಪು ಪರಬಲವ ಹೊಕ್ಕನು ಬಿಟ್ಟ ಸೂಟಿಯಲಿ (ಕುಪ್ಪಾದ್ರೋ. ೧೭–೨೩). [ನಿರ್ಮಥಿತ+ರಿಪು]

**ನಿರ್ಮಥಿಸು** (ಕ್ರಿ). ೧. ಚೆನ್ನಾಗಿ ಕಡೆ,—ಮಥನಮಾಡು ; ೨. ಪರ್ಯಾಲೋಚಿಸು : ಧರ್ಮಸಂಕಟದಿ ಮನ ತಲ್ಲಣಿಸುತಿರುವಂದು ನಿರ್ಮಥಿಸು ನಿನ್ನಾತ್ಮವನೆ ಮಮತೆ ಬಿಟ್ಟು (ಮಂಕುಕ. ೫೫೫). ೩. ನಾಶಪಡಿಸು ; ಧ್ವಂಸಗೊಳಿಸು. [ನಿರ್ಮಥನ+-ಇಸು₃]

**ನಿರ್ಮದ** (ಗು). ೧. ಸೊಕ್ಕಿಲ್ಲದ ; ಹಮ್ಮು ಬಿಮ್ಮುಗಳಿಲ್ಲದ : ನಿರ್ಮದಗುಣೇಶ್ವರರಿಗಾವಾಸಮೆನಿಸಿ ಶಿವಧರ್ಮಕಾಶ್ರಯಮಾಗಿ ಶಿವಪುರಂ ರಂಜಿಸುಗು (ಕುಸುಪು. ೧–೪೭). ೨. ಅಮಲೇರದ ; ಮತ್ತೇರದ. (ನಾ). ೩. ಸೊಕ್ಕಿಲ್ಲದವನು ; ನಿಗರ್ವಿ : ಹದುಳವಿಟ್ಟನು ಭೀಮನನು ನಿರ್ಮದನು (ಕುಪ್ಪಾವಿ. ೧–೧೭). [ಸಂ.]

**ನಿರ್ಮಧ್ಯಂ** (ಅ). ಬೇರೆಯವರ ಸಂಬಂಧವಿಲ್ಲದೆ; ನೇರವಾಗಿ : ಶ್ರೀಮನ್ನೂಱಿ ನಾಲ್ವಗ್ಗೆ ಪಾದಪೂಜೆ[ಗೆ] ೫೦ ಗದ್ಯಾಣ[ವನ್]ಪೊನ್ನವನ್ ಕೊಟ್ಟ ಧರ್ಮ್ಮಮಂ ರಕ್ಷಿಸುವುದೆಂದು ನಿರ್ಮ್ಮಧ್ಯಮೊಪ್ಪಿಸಿದರ್ (ಎಇ. XIX, ೨೨೪–೧೮ ; 1033). [ಸಂ.]

**ನಿರ್ಮನ** (ನಾ). ಮನಸ್ಸಿಲ್ಲದಿರುವುದು ; ನಿರಾಸಕ್ತಿ : ನೀ ಬರದಿರೆ ಈ ಜಗವೇ ನಿರ್ಜನ ನೀರವ ನಿಶ್ಚಲ ನಿಷ್ಕ್ರಿಯ ನಿರ್ಮನ ಸಂಸಾರವೆ ಶೂನ್ಯ (ಕರುಶ್ರಾ. ೯೭–೨೨). [ಸಂ. ನಿರ್ಮನಸ್]

**ನಿರ್ಮಮ** (ನಾ). ೧. ತನ್ನದು ಎಂಬ ಭಾವವಿಲ್ಲದಿರುವಿಕೆ; ನಿರಹಂಕಾರ. ೨. ವಿರಕ್ತಿ ; ವೈರಾಗ್ಯ. ೧, ೨ : ಸಂಜೆ ಬೆಳಗುಗಳಿಲ್ಲ ಸುಜ್ಞಾನಾಂಜನದ ಬಲುಹಿಂದೆ ಶೋಕದ ನಂಜು ಮೋಹಗಳಿಲ್ಲ ನಿರ್ಮಮದಾಳುತನದಿಂದೆ (ಗಗತಾ. ೧೬–೪೮) ; ನಿರ್ಮಮದ ಸದ್ವಿವೇಕದ

ದೀಪಕಿಂತ ನೀಂ ನೆಮ್ಮಲಿನ್ನೇನಿಹುದೋ ? (ಸಂಕುಶ. ೫೫೫). ೨. ವಿರಕ್ತಿಯಿಂದ ಕೂಡಿದುದು ; ಅನಾಸಕ್ತವಾದುದು : ತನ್ನ ಸ್ಥಿತಿಯನ್ನು ಭಾರಗ್ರಸ್ತವೂ ನೀರಸವೂ ನಿರ್ಮಮವೂ ಅಸುಂದರವೂ ಆಗಿ ಮಾಡಿಕೊಳ್ಳುತ್ತಾನೆ (ನಿಬಂಧ. II, ೨೦೫). ೩. ನಿರಾಸಕ್ತ; ವಿರಕ್ತ: ನಿರ್ಮಮನೂ ಧೀಮಂತನೂ ಧೀರನೂ ಆದ ಈ ಮಹಾನುಭಾವರು. . . ಕಲ್ಯಾಣಮಂಟಪಕ್ಕೆ ಬಿಜಯಮಾಡಿದರು (ಶಾಂತಲಾ. ೧೦೭). [ಸಂ.]

**ನಿರ್ಮಮಕಾರ** (ನಾ). ತನ್ನದು ಎಂಬ ಭಾವನೆಯಿಲ್ಲದಿರುವುದು ; ಸ್ವಾರ್ಥವಿಲ್ಲದಿರುವುದು : ಇಲ್ಲಿ ಮುಖ್ಯವಾದುದು ವಸ್ತುಸ್ಥಿತಿಯ ಅಂಕಿಅಂಶಗಳ ಆಧಾರದಿಂದ ನಿರ್ಮಮಕಾರದಿಂದ ನಡಸುವ ವಿವೇಚನೆ (ವ್ಯಾವಿವಿ. ೪೯). [ಸಂ.]

**ನಿರ್ಮಮತೆ** (ನಾ). ೧. ಆಸಕ್ತಿಯಿಲ್ಲದಿರುವುದು ; ಅನಾಸಕ್ತಿ : ಕರ್ಮ ತಾನೇನಾದಡಾಗಲಿ ನಿರ್ಮಮತೆಯಲಿ ಮಾಡಿ ನಮ್ಮಲಿ ನಿರ್ವಿಸಲು ಕಲಿ ಪಾರ್ಥ ನೀ ನಿರ್ಲೇಪನಹೆಯೆಂದ (ಕುವ್ಯಾಭೀ. ೩-೫೩) ; ಈ ಗಟ್ಟಿಭಿತ್ತಿಯೇ ಸಂಯಮ . . . ಆದರಲ್ಲಿ ನಿರ್ಮಮತೆಯ ದಾರ್ಢ್ಯವಿದೆ (ನಿಬಂಧ. II, ೨೭೪). ೨. ಪ್ರೀತಿಯಿಲ್ಲದಿರುವುದು ; ವಾತ್ಸಲ್ಯವಿಲ್ಲದಿರುವುದು : ಎಮಗೆ ತಾಯೊಡಹುಟ್ಟಿದನು ನಿರ್ಮಮತೆಯಲಿ ನಿರ್ದಾಟಿಸಿದನಾ ಕ್ರಮದಲೇ ಕಂಸಂಗೆ ಹಿಂಸಾಕೃತಿಯ ರಚಿಸಿದೆವು (ಕುವ್ಯಾಗ. ೫-೧೦). [ಸಂ. ನಿರ್ಮಮತಾ]

**ನಿರ್ಮರಣ** (ನಾ). ಸಾವಿಲ್ಲದವನು ; ಅಂತ್ಯವಿಲ್ಲದವನು ; ಅಮರ; ಪರಮಾತ್ಮ : ನಿರ್ಮರಣ ನಿರವಯ ನಿಷ್ಕಳಂಕ . . . ನಿರ್ಮಾಯ ಚಿತ್ಸ್ವರೂಪ (ಬಸವು. ೬೧-೪೪). [ಸಂ.]

**ನಿರ್ಮಲ,** ನಿರ್ಮಳ (ಗು). ೧. ಶುದ್ಧವಾದ; ಸ್ವಚ್ಛವಾದ : ನಿರ್ಮಲದಿವ್ಯಮೌಕ್ತಿಕ ಶಿಲಾಲಿಂಗಂ ಚತುರ್ವರ್ಗ ಸುಂದರಮಲ್ಲಿರ್ದುದು ರತ್ನಪೀಠಘಟಿತಂ ದೇದೀಪ್ಯಮಾನಪ್ರಭಂ (ಶಾದಂಪೂ. ೬೫೭); ಮಲಿನದೇಹಕ್ಕೆ ಮಜ್ಜನವಲ್ಲದೆ ನಿರ್ಮಲದೇಹಕ್ಕೆ ಮಜ್ಜನವೇಕೋ (ಅಪಚಂ. ೯೫-೪೨೩) ; ನಿರ್ಮಲಶರಚ್ಚಂದ್ರಕಿರಣಗಳನಂಬರಂ ಪ್ರೋಲ್ಲಾಸಗೊಳ್ವಂತೆ ದಶರಥಂ ಬಗೆಯುಬ್ಬಿ (ತ್ರೀರಾಮಾ. ೧೪-೩೭೦). ೨. ಪವಿತ್ರವಾದ ; ಪುಣ್ಯಕರವಾದ: 'ನಿರ್ಮಲಾಕ್ಷತೆ' ಪರಾ. (ನಾ). ೩. ಶುದ್ಧತೆ; ಸ್ವಚ್ಛತೆ ; ನೈರ್ಮಲ್ಯ : "ಶುಕ್ತಂ . . . ಶೌಚಂ, ಶೌಚ್ಯಂ, ಈ ೭ ನಿರ್ಮಲಂ" (ಕಾಶಕ್ಯ. ೨೦೪) ; ಎನ್ನ ಮಲತ್ರಯದಲ್ಲಿ ಹೊದಕುಳಿಗೊಂಬ ಮನದ ಪ್ಯಲಿಗೆಯ ತಂದು . . . ತನ್ನ ಪಾದದೊಳಗೆ ಮೆಟ್ಟಿ ಅಲುಬಿ ಸೆಳೆದನಯ್ಯ ತನ್ನ ನಿರ್ಮಲವ ಕೊಟ್ಟೆನೆನಗೆ (ಬಸವ. ಕ. ೧೫೫೧); ಮನ ಮುಟ್ಟದ ಪೂಜೆ ಮಣ್ಣ ಗೋಡೆಯ ತೊಳೆದು ನಿರ್ಮಲವನಜಸುವಂತೆ (ಮಹಜೀಲ. ೬೦-೬೦) ; ಎನ್ನ ನಿರ್ಮಲವೆ ದರ್ಪಣವಯ್ಯಾ ನಿಮಗೆ ಎನ್ನ ಸತ್ಯವೆ ಘಂಟೆಯಯ್ಯಾ ನಿಮಗೆ (ಅಖಂಡೇ. ೨೪೧-೮೭). ೪. ನೆಮ್ಮದಿ ; ನಿರಾಳ : ತಮ್ಮ ತಾಯ್ಗಳ ಕಂಡು ಕರುಗಳು ಅಮ್ಮನೆಂದೂ ಕೂಗಿ ನಲಿಯುತ ಸುಮ್ಮಾನದೊಳು ಮೊಲೆಯನುಂಡು ನಿರ್ಮಲದೊಳು ಇದ್ದವು (ಗೋಪಾಡು. ೫-೨೩). ೫. ಹೊಳಪು ; ಉಜ್ವಲತೆ; ಕಾಂತಿ : "ಬೆಳ್ಪಳಿಯೆ ನಿರ್ಮಲಂ" (ಕಬ್ಬಿಕೈ. ೪೫) ; "ನಿರ್ಮಲಕೆ ಬೆಳ್ಪಳಿಯಕ್ಕು" (ಶಬ್ದಮಂ. ೭೨). ೬. ದೋಷಲೇಪವಿಲ್ಲದವನು ; ಪರಿಶುದ್ಧನಾದವನು ; ಕಳಂಕರಹಿತ : ನಿರ್ಮಲರ ಸಂಗತಿ ಮಾಳ್ಕುಮಪಾಯನಾಶಮಂ (ಜಗವಿ. ೧೬-೪೯) ; ಗಿರಿಯ ಕರದೊಳಗಾಂತವನ ಸುರಗಿರಿಯ ಶಿಖರದೊಳ್ ಇರುತಿಹನ ನಿರ್ಮಲನ ನಿತ್ಯನ . . . ಗುರುತರಿಪರಾರು (ಗಗತಾ. ೧೩-೧). **ನಿರ್ಮಳ :** ೧. ವೃಷಭನಾಥನುಂ . . . ಆಲದ ಮರನ ಕೆಟಗೆ ನಿರ್ಮಳ ಶಿಲಾಪಟ್ಟದೊಳಪ್ಪ ಮೋಪವಾಸದಿಂ . . . ಶುಕ್ಲಧ್ಯಾನದಿಂ ಘಾತಿಗಳಂ ಕಿಡಿಸಿ (ಚಾವುಂಪು. ೪೦) ; ಆ ಕುತ್ತಿಲಿಂ ಸೊಗಯಿಪುದಾಕಾಶೋರಗವಿಮುಕ್ತನಿರ್ಮಳತರನಿರ್ವಾಣಕಂ ತಾನೆನೆ ರಜತಾಳೋಕಸಹಸ್ರಾಂಶುಧವಳಿತಾಶಾವಳಿಯಂ (ಚಂಪ್ರಪು. ೬-೩) ; ತಿಳಿದು ನೋಡಿರೆ ರಾಮ ಧರ್ಮಸ್ಥಳಕೆ ನೀವು ಸಹಾಯವಿನಿಬರಗೆಲವು ನಿರ್ಮಳ ಧರ್ಮಮೂಲವೊ ಧರ್ಮವಿರಹಿತವೊ (ಕುವ್ಯಾಗ. ೬-೫). ೩. ಮಹದಾಕಾಶವೆ ಅಕ್ಷತೆ ಪರಾಪರವೆ ಪತ್ರೆಪುಷ್ಪ ನಿರ್ಮಳವೆ ಲಿಂಗಾರ್ಚನೆ ಮಹಾಪ್ರಕಾಶವೆ ಪೂಜೆ (ಅಪಚಂ. ೮೪-೩೭೪). ೫. "ಪಳಕನೆ ಜಳಕನೆಯೆನೆ ನಿರ್ಮಳಾರ್ಥಂ" (ಚಪಂಸಿ. ೩೦). ೬. ಈತ ನಿಸ್ಪೃಹನೀತ ನಿರ್ಭಯನೀತ ನಿರ್ಮಳನೀತ ರಾಗದ್ವೇಷರಹಿತನು (ಕುವ್ಯಾಆ. ೭-೬೭). ೭. ಶುದ್ಧವಾದುದು : ಕುಲವ ನಾಲಗೆಯಂಜಿಹಿತೆಂಬ ನಾಣ್ಣುಡಿಗಿಂದು ನೆಲೆಯಾಯ್ತಲಾ ಬ್ರಹ್ಮಋಷಿಯಾದಡೊಳಗು ನಿರ್ಮಳವಪ್ಪುದಯ್ಯ (ಹಚಕಾ. ೨-೩೨) ; ಎನ್ನ ಮಾನಸಂ ನಿರ್ಮಳಮಪ್ಪ ಮೋಕ್ಷಸುಖಮಂ ಪಿರಿದುಂ ಬಯಸುತ್ತುಮಿರ್ದೊಡಂ ಪೆರ್ಮೆಯೊಳೊಂದುವಾತ್ಮಭವಲಾಭಮದಿಲ್ಲದೆ ಮಾಣ್ದು ಬಳ್ವಪೆಂ (ಧರ್ಮಪು. ೩-೫೬). [ಸಂ.]

**ನಿರ್ಮಲಕರ್ಮ** (ನಾ). ೧. ಶುದ್ಧವಾದ ಕೆಲಸ. ೨. ಪವಿತ್ರ ಕಾರ್ಯ. ೩. ಗೃಹಸ್ಥನ ಐದು ಬಗೆಯ ಕರ್ಮಗಳಲ್ಲಿ ಒಂದು; ಚಿತ್ತಶುದ್ಧಿಯನ್ನುಂಟುಮಾಡುವ ಕರ್ಮ : ಗೃಹಸ್ಥನಿಂದನುಷ್ಠಿಸಲ್ಪಡ್ಡ . ಕರ್ಮವಾದೊಡೆ ನಿತ್ಯನೈಮಿತ್ತಿಕ ಪ್ರಾಯಶ್ಚಿತ್ತ ಕಾಮ್ಯ ನಿರ್ಮಲವೆಂದು ಪಂಚವಿಧವಾಗಿಹುವದಲ್ಲಿ . . . ಈಶ್ವರೋಪಾಸನೆಯೇ ನಿರ್ಮಲಕರ್ಮನೆಂದು ತಿಳಿಯಲಕ್ಕುಂ (ವಿವೇಕ. ೧೩೪). 'ನಿತ್ಯಕರ್ಮ' ಪರಾ. [ನಿರ್ಮಲ + ಕರ್ಮ]

**ನಿರ್ಮಲಚರಿತ್ರ** (ನಾ). ಶುದ್ಧವಾದ ನಡೆವಳಿ,—ಆಚಾರ : ನಿರ್ಮಲಚರಿತ್ರನೆಂತಧಿಕವೆಲ್ಲಾ ಗುಣಂಗಳೊಳು . . . ಪರಶಿವಾಗಮ ಶಾಸ್ತ್ರದ ಸೂತ್ರವೆಂತಧಿಕನಿಗಮಾಗಮದೊಳೆಂತು ಸರ್ವತ್ರ ಮೋಳದೊಳಧಿಕವಾಯ್ತು . . ಮಂಗಲೆಯ ಪುತ್ರಿಕೆಯ ಮಧುರಗಾನ (ಸೌಂದಪು. ೮-೮). [ನಿರ್ಮಲ + ಚರಿತ್ರ]

**ನಿರ್ಮಲಚಿತ್ತ,** ನಿರ್ಮಳಚಿತ್ತ (ನಾ). ಪರಿಶುದ್ಧವಾದ ಮನಸ್ಸುಳ್ಳವನು : ನೀನೇ ದಯಾಳು ನಿರ್ಮಲಚಿತ್ತ ಗೋವಿಂದ (ಪುರಂದ. ಧಾ. ೧-೯೨ ಪಲ್ಲವಿ). **ನಿರ್ಮಳಚಿತ್ತ :** ಕಳಕಂಠವಾಣಿಯರುಮಿರದಕೆ ನಿರ್ಮಳಚಿತ್ತ ತಾನೊಡಂಬಟ್ಟ (ಭರಚ. ೧೪-೯). [ನಿರ್ಮಲ + ಚಿತ್ತ]

**ನಿರ್ಮಲತೆ,** ನಿರ್ಮಳತೆ (ನಾ). ಸ್ವಚ್ಛತೆ ; ಶುದ್ಧತೆ; ನೈರ್ಮಲ್ಯ: ಭಸಿತ ರುದ್ರಾಕ್ಷಾದಿ ಮುದ್ರೆಗಳ ನಿರ್ಮಲತೆಯಿಂ ಧರಿಸಿ ಜಲಿಸುತ (ಬಸವು. ೩-೪೮). **ನಿರ್ಮಳತೆ :** ಶ್ರಾವಕಧರ್ಮದ ನಿರ್ಮಳತೆಯಂ ತೋರ್ಪಂತೆ ಧೌತಸಿತಸಾಧಕ ಮುಂಗಂಡುಡಿಸುತ್ತುವುದೂರುಲಿಂಗಂ (ಚಾವುಂಪು. ೭೧೫). [ಸಂ. ನಿರ್ಮಲತಾ]

**ನಿರ್ಮಲತೆವೆಱು** (ಕ್ರಿ). ತಿಳಿಯಾಗು ; ಸ್ವಚ್ಛವಾಗು : ಸದಮಳಬೋಧದಿಂದೆಸೆವ ಸಾಧುಜನಾಶಯದಂತೆ ಪದ್ಮಷಂಡದ ವರವಾರಿ ನಿರ್ಮಲತೆವೆತ್ತುದು (ಕುಸುಮಾ. ೫-೪೫). [ನಿರ್ಮಲತೆ + ಪೆಱು]

**ನಿರ್ಮಲತ್ವ,** ನಿರ್ಮಳತ್ವ (ನಾ). ೧. ಪರಿಶುದ್ಧತೆ ; ಸ್ವಚ್ಛತೆ. ೨. [ವೇದಾಂತ] ಸತ್ವಗುಣದ ಸ್ವಭಾವ ; ತಮೋಗುಣದ ಕಾರ್ಯವಾದ ಆವರಣವಿಲ್ಲದಿರುವುದರಿಂದ ಪರಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧಕವಾದುದು : ಶ್ರೀ ಮಧುಸೂದನಸರಸ್ವತಿಯವರು, ನಿರ್ಮಲತ್ವ ಎನ್ನುವುದು 'ಚಿದ್ಬಿಂಬಗ್ರಹಣಯೋಗ್ಯತ್ವ'ವೆಂದು ವ್ಯಾಖ್ಯಾನಿಸುತ್ತಾರೆ (ಶೌಂದಸ. ೧೧೧). ☞ ಇದನ್ನು 'ಚಿದ್ಬ್ರಹ್ಮಗ್ರಹಣಯೋಗ್ಯತ್ವ' ಎಂದು ರೂಢಿಯಲ್ಲಿ ಪ್ರಯೋಗಿಸುತ್ತಾರೆ. **ನಿರ್ಮಳತ್ವ :** ೧. ಇಸಿವಿರಿವೊಂದು ದರ್ಪಮೆನಗಾದುದು ತನ್ನಯ ನಿರ್ಮಳತ್ವದಿಂ (ಕಾದಂಬ. ೧೯೩). [ಸಂ.]

**ನಿರ್ಮಲಯಶ**(ನಾ). ಪರಿಶುದ್ಧವಾದ ಯಶಸ್ಸು ; ಕಳಂಕರಹಿತವಾದ ಕೀರ್ತಿ : ಶಶಿಖಂಡ ನಿರ್ಮಲಯಶೋವಿವಿಧಾವತಂಸಂ (ಕವಿರಾ. ೩-೨೨೯). [ನಿರ್ಮಲ+ಯಶ]

**ನಿರ್ಮಲಹೃದಯ** (ನಾ). =ನಿರ್ಮಲಾಂತಃಕರಣ ೨ : ಓಜರು ನಿರ್ಮಲಹೃದಯರು ಸದಯರು ಚದುರರು ಶಿಷ್ಯವತ್ಸಲರು (ಇಂಚಾಪ. ೨೫-೧೫). [ನಿರ್ಮಲ+ಹೃದಯ]

**ನಿರ್ಮಲಾಂತಃಕರಣ,** ನಿರ್ಮಳಾಂತಃಕರಣ (ನಾ). ೧. ಪರಿಶುದ್ಧವಾದ ಮನಸ್ಸು ; ಒಳ್ಳೆಯ ಮನಸ್ಸು. ೨. ಪರಿಶುದ್ಧವಾದ ಹೃದಯವನ್ನು ಹೊಂದಿರುವವನು : ತ್ರಿಜಗಾಧಿಪತಿಯ ನೇಮದೊಳು ಕಮಲೋದ್ಭವಂ . . . ಸೃಜಿಸಿದಂ ನಿರ್ಮಲಾಂತಃಕರಣರಂ ವಿಮಲಸದ್ಗುಣಗಣಾವರಣರಂ (ವೀಶೈವು. ೬-೧-೬). **ನಿರ್ಮಳಾಂತಃಕರಣ :** ೧. ನಿರ್ಮಳಾಂತಃಕರಣಕೃತ ಪರಿಕರ್ಮವಿಳಸಿತೆ ತಾಯೆ ಸೈರಿಪುದುಮ್ಮಳವು ಬೇಡೆಂದು ಮೆಯ್ಯಿಕ್ಕಿದನು ಕಲಿ ಭೀಮ (ಕುಪ್ಯಾಗ. ೧೧-೫೭). [ನಿರ್ಮಲ+ಅಂತಃಕರಣ]

**ನಿರ್ಮಲಾಕ್ಷತೆ** (ನಾ). ಪವಿತ್ರವಾದ ಅಕ್ಷತೆ : ಪ್ರಥಮಲೋಕಾಮರೇಶನುಮಾಶಾನೇಶನುಂ ಚಂಚತ್ಪಂಚರತ್ನ ಗೋಶೀರ್ಷ ಚಂದನ ನಿರ್ಮಲಾಕ್ಷತಾರ್ಘ್ಯಮನೆತ್ತಿದಿಂ ಬಟ್ಟಿಯಿಂ (ಶಾಂತಿಪು. ೧೦-೩೬ ಪ).
[ನಿರ್ಮಲ+ಅಕ್ಷತೆ]

**ನಿರ್ಮಲಾಚಾರ,** ನಿರ್ಮಳಾಚಾರ (ನಾ). =ನಿರ್ಮಲಚರಿತ್ರ : ಮನವ ಶೋಧಿಸಬೇಕು ನಿಚ್ಚ . . . ನಿರ್ಮಲಾಚಾರದಿ ಚರಿಸಿ (ಪುರಂದ. ಧಾ. ೨-೩೯-೧). **ನಿರ್ಮಳಾಚಾರ :** ನಿರ್ಮಳಾಚಾರಪುರಸ್ಸರಮಾ ಮುನೀಂದ್ರನಾರ್ತೆಸಗಿ ರಸಪರಿತ್ಯಾಗಮೆಂಬ ತಪಮಂ ತಳೆದಂ (ಸುಕುಮಾ. ೪-೭). [ನಿರ್ಮಲ+ಆಚಾರ]

**ನಿರ್ಮಲಿತ** (ಗು). ಶುದ್ಧವಾದ; ಸ್ವಚ್ಛವಾದ: ಶಕ್ತ ನಿರ್ಮಲಿತಾಂಗಲಿಂಗನಿಯುಕ್ತ ಸತ್ಕ್ರಿಯೆಗಳಿನಲರ್ದಸುರಕ್ತಿ ಸಲು ಸದ್ಯಃಪ್ರಸಾದಶರೀರಿಯಂ ಮಾಡಿ (ಬಸವು. ೪೯-೩೪) ; ನಿಜನಿರ್ಮಲಿತರೂಪನಂ . . . ದೇವದೇವನಂ ಭಜಿಸಿದಳಗಜೆ (ಜೈಮಿಭಾ. ೧೫-೨೩). [ಸಂ.]

**ನಿರ್ಮಲಿನ,** ನಿರ್ಮಳಿನ (ಗು). ೧. ಮಲಿನವಾಗದಿರುವ; ನಿರ್ಮಲವಾದ ; ಶುದ್ಧವಾದ. (ನಾ). ೨. ಶುದ್ಧವಾದುದು ; ಸ್ವಚ್ಛವಾಗಿರುವುದು : ನಿರ್ಮಲಿನಮಪ್ಪ . . . ದೀರ್ಘಿಕೆಯ ವಿಚಿತ್ರಾ[ತ್ರೋ]ರ್ಮಿಕೆಗಳ ಸಂಚಲಿಸುವ ನೀರ್ಮಾನಸ ಲಹರಿ ಸರ್ವದೋಷಾಪಹರಂ (ಅಶ್ವಶಾ. ೭-೬೦) ; ತಿಳಿವೊಡೀತನ ಬುದ್ಧಿಯೇ ನಿರ್ಮಲಿನವಹುದು (ಕುಪ್ಯಾಸ. ೧೨-೬೫). **ನಿರ್ಮಳಿನ :** ೧. ನಿರ್ಮಳಿನಾದ್ಯಾಸನದ ಚತುರ್ಮುಖತಳದಲ್ಲಿ ನೆಲಸಿ ಯಕ್ಷಕುಮಾರರ್ ಕೂರ್ಮೆಯೊಳೆ ಧರ್ಮಚಕ್ರಮನೊರ್ಮೆಯುಮಮಾತ್ಮೀಯ ಮೌಳಿಯೊಳ್ ತಳೆದಿರ್ಪರ್ (ಪಾರ್ಶ್ವಪು. ೧೬-೭೧). [ಸಂ.]

**ನಿರ್ಮಲಿಸು** (ಕ್ರಿ). ೧. ಸ್ವಚ್ಛಮಾಡು ; ಶುದ್ಧಿಪಡಿಸು : ಕೋಣೆಯ ಒಳಗಿರುವ ಜೇಡನ ಬಲೆಯನ್ನೆಲ್ಲಾ ನಿರ್ಮಲಿಸಿ ಬಣ್ಣದ ಕಾಗದ ಹಚ್ಚಿ ಶೃಂಗಾರ ಮಾಡಿದರು (ಕಾವೇರಿ. ೧೧೭). ೨. ಹೊಳೆ; ಥಳಥಳಿಸು : ನಿರ್ಮಲಿಪ ಭೂಷಣಕಾಂತಿಯಿಂ ಪಸರಿಸುತ ಸುರಧನುವ . . . ಅಮರಿಯರು ಸೊಗಯಿಪರು (ಸಾಳ್ವಭಾ. ೩೨-೧೬). [ನಿರ್ಮಲ+-ಇಸು$_3$]

**ನಿರ್ಮಲೀಕರಣ** (ನಾ). ಶುದ್ಧಗೊಳಿಸುವುದು ; ಸ್ವಚ್ಛಮಾಡುವಿಕೆ : ಮಂದಗಾಮಿಯಾಗಿ ಪ್ರವಹಿಸುತ್ತಿದ್ದ ಅಂತರಿಕಜೀವನಕ್ಕೆ ತಡೆಯೊದಗಿ ನಿಂತು ಕಸ ಕೊಳೆ ತುಂಬಿ ನಾರುವಂತಾದಾಗ ಮತ್ತೆ ತಾನು ಕೈಗೊಳ್ಳುತ್ತಿದ್ದ ನಿರ್ಮಲೀಕರಣಕಾರ್ಯಕ್ಕೆ-ಅವನು ಹೆಸರು ಕೊಟ್ಟಿದ್ದನು (ಘನರು. ೧೩೩). [ಸಂ.]

**ನಿರ್ಮಲೀಕೃತ,** ನಿರ್ಮಳೀಕೃತ (ಗು). ೧. ಮಲಿನತೆಯಿಂದ ದೂರವಾದ; ಶುದ್ಧವಾದ; ಸ್ವಚ್ಛವಾದ. ೨. ಥಳಥಳಿಸುವಂತೆ ಮಾಡಿದ; ಪ್ರಜ್ವಲಿತಗೊಳಿಸಿದ. (ನಾ). ೩. ಮಲಿನತೆಯಿಲ್ಲದುದು; ಸ್ವಚ್ಛವಾದುದು. ೪. ಕಾಂತಿಮಯವಾದುದು: ಆ ಪಾರ್ವತಿಯ ನವಯೌವನಂ . . . ಶಶಿಕಾಂತಕೃತಕಾಚಳದಂತೆ ನಿರ್ಮಲೀ[ವಾ೩೩೦. ೪೧]ಕೃತಂ . . . ವ್ಯೋಮದಂತೆ ಘನಚಿತ್ರಮೆನಿಸಿರ್ದುದು (ಗಿರಿಜಾ. ೪-೧೨ ಪ). **ನಿರ್ಮಳೀಕೃತ : ೨.** ಮಾಚು ಪೊಣ್ಮಿದ ಸರ್ವೇಶನಿಜಪ್ರಕಾಶನಿಧಿಯೋ ಪೇಳೆಂಬಿನಂ ತೋರ್ಪುತಿರ್ದುದು ದಿಕ್ಪಂಕುಳ ನಿರ್ಮಳೀಕೃತವಿರೂಪಾಕ್ಷಪ್ರಭಾಮಂಡಲಂ (ಗಿರಿಜಾ. ೫-೩೧). [ಸಂ.]

**ನಿರ್ಮಲೆ,** ನಿರ್ಮಳೆ (ನಾ). ಕಳಂಕವಿಲ್ಲದವಳು ; ಪರಿಶುದ್ಧೆ : ಪ್ರಿಯೆ ನಿನಗೆ ಪರಿಶುದ್ಧೆ ಕುಲಕೆ ಮಂಗಳೆ ಸುತೋದಯಕೆ ನಿರ್ಮಲೆ ತನಗೆ ಗತಿಗುಡುವ ಸೊಸೆಯೆಂದು ಬಯಸಿದೊಡೆ ಬಂದಯ್ಯನಾಡನೆ ಸುರಾಸುರರ ಮುಂದೆ ಕಪಿಕಟಿಕಮಜಾಯೆ (ಜೈಮಿಭಾ. ೧೮-೫೨). **ನಿರ್ಮಳೆ:** ಅತಿಗಂಭೀರೆಯನೂರ್ಜಿತಮತಿಯಂ ನಿರ್ಮಳೆಯಂ . . . ದೃಢಪಾಶುಪತವ್ರತೆಯಂ ಕನ್ಯಕೆಯನಂದು ಕಂಡಂ ಕ್ಷಿತಿಪಂ(ಕಾದಂಪೂ. ೬೮೨).
[ಸಂ. ನಿರ್ಮಲಾ]

**ನಿರ್ಮಳ** 'ನಿರ್ಮಲ' ನೋ.

**ನಿರ್ಮಳಚಿತ್ತ** 'ನಿರ್ಮಲಚಿತ್ತ' ನೋ.

**ನಿರ್ಮಳತೆ** 'ನಿರ್ಮಲತೆ' ನೋ.

**ನಿರ್ಮಳತ್ವ** 'ನಿರ್ಮಲತ್ವ' ನೋ.

**ನಿರ್ಮಳಮೌಕ್ತಿಕ** (ನಾ). ಶುದ್ಧವಾದ ಮುತ್ತು ; ಚೊಕ್ಕ ಮುತ್ತು : ಶರದದ ಬೆಳ್ಮುಗಿಲ್ವೊಯಿನುಣ್ಮುವ ನಿರ್ಮಳಮೌಕ್ತಿಕಕ್ಕೆ ತಾಂ ದೊರೆಯೆನೆ ಪುಟ್ಟಿದಂ . . . ನವೋರುಶೇಖರಧರಂ (ಚಂದ್ರಪು. ೪-೬೧). [ನಿರ್ಮಳ(=ನಿರ್ಮಲ)+ಮೌಕ್ತಿಕ]

**ನಿರ್ಮಳಾಂತಃಕರಣ** 'ನಿರ್ಮಲಾಂತಃಕರಣ' ನೋ.

**ನಿರ್ಮಳಾಂಭ**(ನಾ). ಸ್ವಚ್ಛವಾದ ನೀರು ; ತಿಳಿನೀರು : ಸುಮನೋಭೂಭೃದ್ಧರೀಸುಂದರತರವನದೊಳ್ ನಿರ್ಮಳಾಂಭಸ್ಸ್ವಯಂಭೂರಮಣಾಕೂಪಾರದೊಳ್ . . . ಮನಃಪ್ರಹ್ಲಾದಮಂ ತಾಳ್ದುವನನವರತಂ ಶ್ರೀಧರಂ (ಚಂದ್ರಪು. ೪-೭೬). [ಸಂ. ನಿರ್ಮಲಾಂಭಸ್]

**ನಿರ್ಮಳಾಚಾರ** 'ನಿರ್ಮಲಾಚಾರ' ನೋ.

**ನಿರ್ಮಳಿ,** ನಿವಳ್$_2$, ನಿವಳಿ$_1$ (ನಾ). ೧. ಒಂದು ಬಗೆಯ ವೃಕ್ಷ ; ಚಿಲ್ಲದ ಮರ ; ಕತಕ : ನಿರ್ಮಳಿ-ದೊಡ್ಡಮರ ; ಹೂವಿಗೆ ಸುಗಂಧವಿರುತ್ತದೆ. ರಾಡಿನೀರೊಳಗೆ ಬೀಜಗಳನ್ನು ಚೆಲ್ಲಿದರೆ, ಆ ನೀರು ನಿರ್ಮಲವಾಗುತ್ತದೆ (ಕಭಾಗಿ. ೪೨). **ನಿವಳ್$_2$ : ೧.** ದಾಳಂಬರಿಬೀಜ, ನಿವಳದಬೀಜ, ಬಚಲಿಯದ ಬೀಜ (ಮುಂಬಪ್ಯಾ. ೧೬೭). **ನಿವಳಿ$_1$ : ೧.** ನಿವಳಿ (ನೆವಳಿ) . . . ಇದರ ಬೀಜವನ್ನು ಪುಡಿಮಾಡಿ ರಾಡಿನೀರೊಳಗೆ ಚೆಲ್ಲಿದರೆ ನೀರು ತಿಳಿಯಾಗುತ್ತದೆ (ಕಭಾಗಿ. ೪೨). ೨. ಕತಕದ ಮರಗಳಿರುವ ಭೂಮಿ (?) : ಆ ಕೋಡಿಯಿಂದೊಳಗಾದ ದೋಂಟಿಸ್ಥಳದ ನಿವಳಿಯಲು ಬೆದ್ದಲುಗಳೆಯ ಮತ್ತರು ೭ (ಎಕ. VII, ೩ಸಮೊ. ೫೨-೬೭; 1115). [←ಮರಾ. ನಿರ್ಮಳೀ, ನಿವಳೀ]

**ನಿರ್ಮಳಿಕೆ** (ನಾ). ೧. ಶುದ್ಧತೆ : ಉಪಾದೇಯಂಗಳಪ್ಪ ರತ್ನತ್ರಯದ ನಿರ್ಮಳಿಕೆಯಂ ಕೆಡಿಸುವುದೆಂದವಱ ಮೇಗಣ ಮಮತ್ವಮನುಱುದು ನಿರ್ಮಮತ್ವರತನುಂ ಸ್ವಸ್ಥನುಂ ಸಂತೋಷಪರನಾಗಿ ನೆಗಟ್ದ ಗೃಹಸ್ಥಂ ಪರಿಗ್ರಹವಿರತನೆಂಬೊಂಬತ್ತನೆಯ ಶ್ರಾವಕಂ (ಪಸಾರ. ೩೪೭). **೨. ಕಾಂತಿ :** "ಬೆಳ್ಪುಳಿಯೆಂದು ನಿರ್ಮಳಿಕೆ" (ಕಬ್ಬಿಕೈ. ೫).
[ನಿರ್ಮಳ(=ನಿರ್ಮಲ)+-ಇಕೆ]

**ನಿರ್ಮಳಿನ** 'ನಿರ್ಮಲಿನ' ನೋ.

**ನಿರ್ಮಳೀಕೃತ** 'ನಿರ್ಮಲೀಕೃತ' ನೋ.

**ನಿರ್ಮಳೆ** 'ನಿರ್ಮಲೆ' ನೋ.

**ನಿರ್ಮಾಂಸ** (ಗು). ೧. ಮಾಂಸವಿಲ್ಲದ ; ಕೃಶವಾದ : ಪೇರುರಂ ನಿಡುಕೊರಳು ನಿರ್ಮಾಂಸ ಜಂಘೆಗಳು (ಮಂಗರಾ.೪೪-೨೨); ನಿಡುವೊಡಲ ನಿರ್ಮಾಂಸ ಜಂಘೆಯ ಕೆಂಪಿನಾಲಿಗಳ . . . ನಾಯ್ ಸೂಕಿದವು ಹಾಸದ ವಿಳಾಸವಲಿ (ಕುಮ್ಯಾಆ. ೧೩-೨೦). (ನಾ). ೨. ಮಾಂಸವಿಲ್ಲದುದು ; ಕೃಶವಾದುದು ; ಬತ್ತಿದುದು : ಅವಾಕೆಯ ಹಸ್ತಪಾದ ನಿರ್ಮಾಂಸವಾಗಿರೆ ಅಂಗ ಒಣಗಿರೆ ಆಕೆ ಅಮಂಗಲೆಯೆಹಳು (ಸಾಮುಲ. ೨೯-೧೬). [ಸಂ.]

**ನಿರ್ಮಾಟ** (ನಾ). ಕ್ರಿಯೆಯಿಲ್ಲದಾಗುವಿಕೆ; ನಿಷ್ಕ್ರಿಯ ಸ್ಥಿತಿ : ಬಸವನಜೀವು ನಿರಾಧಾರವಾಯಿತು ಬಸವನ ಮಾಟ ನಿರ್ಮಾಟವಾಗಿತ್ತು (ಶೀಲಪ. ಕ. ೨೨-೬೬). [ನಿರ್‍+ಮಾಟ$_1$]

**ನಿರ್ಮಾಣ** (ನಾ). ೧. ಅಳೆಯುವುದು ; ಅಳತೆ ಮಾಡುವಿಕೆ. ೨. ಅಳತೆ; ಮಾನ. ೩. ಕಟ್ಟುವುದು; ರಚಿಸುವುದು; ರಚನೆ : ಚೈತ್ಯಚೈತ್ಯಾಲಯನಿರ್ಮಾಣನಿರ್ಮಾಪಣಶಾಸನಾರೋಪಿತಗ್ರಾಮ ಕ್ಷೇತ್ರವಿತರಣಮುಂ (ಆದಿಪು. ೧೫-೧೩ ವ); ಪ್ರಾಚೀನಯುಗದಲ್ಲಿ ನಿರ್ಮಾಣವಾದ ಕೆಲವು ಲೇಖನಗಳು . . . ಲಭಿಸಿವೆ (ದ್ರಾವಿ. ೪೫). ೪. ಸೃಜನ; ಸೃಷ್ಟಿ. ೫. [ಜೈನ] ಒಂದು ಬಗೆಯ ನಾಮಕರ್ಮ; ☞ ಯಾವ ನಾಮಕರ್ಮದ ಉದಯದಿಂದ ಶರೀರದಲ್ಲಿ ಅಂಗೋಪಾಂಗಗಳ ರಚನೆಯುಂಟಾಗುವುದೋ ಅದಕ್ಕೆ ನಿರ್ಮಾಣನಾಮಕರ್ಮವೆಂದು ಹೆಸರು. ಇದರಲ್ಲಿ ಸ್ಥಾನನಿರ್ಮಾಣ, ಪ್ರಮಾಣನಿರ್ಮಾಣಗಳೆಂದು ಎರಡು ಬಗೆ. ಸ್ಥಾನನಿರ್ಮಾಣಕರ್ಮವು ಕಣ್ಣು, ಕಿವಿ, ಮೂಗು ಮೊದಲಾದ ಅಂಗಗಳು ನಿಯಮಿತ ಸ್ಥಳದಲ್ಲಿಯೇ ಇರುವಂತೆ ಮಾಡುತ್ತದೆ. ಪ್ರಮಾಣನಿರ್ಮಾಣವು ಮೂಗು, ಕಣ್ಣು ಮೊದಲಾದ ಅಂಗಗಳು ನಿಯಮಿತ ಪ್ರಮಾಣದಲ್ಲಿ ಉದ್ದ, ಅಗಲಗಳಿರುವಂತೆ ಮಾಡುತ್ತದೆ : ಅಗುರುಲಘುಚತುಷ್ಕವಿಹಾಯೋಗತಿ . . . ಸುಸ್ವರದುಸ್ವರಸುಭಗದುರ್ಭಗಪ್ರತ್ಯೇಕಶರೀರಾಯಶಸ್ಕೀರ್ತ್ಯನಾದೇಯನಿರ್ಮಾಣಪರ್ಯಾಪ್ತನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೯ವ); ಸುಸ್ವರ ದುಃಸ್ವರ ಅದೇಯ ಅನಾದೇಯ ಯಶೋಯಶಸ್ಕೀರ್ತಿ ನಿರ್ಮಾಣ ತೀರ್ಥಕರನಾಮಮೆಂದಿಂತಲ್ಲಿ ಗತಿನಾಮಕರ್ಮಂ ಚತುರ್ವಿಧಮಕ್ಕುಂ (ಗೊಮ್ಮಸಾ. ೩-೭). [ಸಂ.]

**ನಿರ್ಮಾಣಕಾಯ** (ನಾ). ೧. ಅವತಾರಸ್ಥಿತಿಯಲ್ಲಿ ಕಾಣಿಸಿಕೊಳ್ಳುವ (ಪರಮಾತ್ಮನ) ಶರೀರ, —ಆಕಾರ : ಈಶ್ವರನಿಗೆ ಶುದ್ಧಸತ್ತ್ವಪ್ರಧಾನವಾದ ನಿರ್ಮಾಣಕಾಯವೆಂಬ ಅವತಾರಶರೀರವಿರುವುದು (ಹಿಂದಸಾ. ೯೬). ೨. [ಬೌದ್ಧ] (ಬುದ್ಧನು) ಲೀಲೆಗೋಸ್ಕರವಾಗಿ ಹೊಂದಿದ ದೇಹ : ಮಹಾಯಾನದ ಪ್ರಕಾರ, ಬುದ್ಧನು ಮನುಷ್ಯಮಾತ್ರನಲ್ಲ, ದೇವತೆಗಳನ್ನು ಮೀರಿಸಿದ ದೇವ, ದೇವಾಧಿದೇವ . . . ಲೋಕದ ಮೇಲಿನ ಅನುಗ್ರಹಕ್ಕಾಗಿ 'ನಿರ್ಮಾಣಕಾಯ'ದಿಂದ ಕಾಣಿಸಿಕೊಂಡು ತನ್ನ ಲೀಲೆಗಳನ್ನು ನಡಸುತ್ತಾನೆ (ಭಾರದ. ೨೦೫). [ನಿರ್ಮಾಣ+ಕಾಯ]

**ರ್ಮಾಣತಂತ್ರ** (ನಾ). ರಚನೆಯ ವಿಧಾನ; ಕೃತಿರಚನೆಯ ಪ್ರಕ್ರಿಯೆ: ಕುಂಚವನ್ನಾಡಿಸುವುದರಲ್ಲಿ ಅಜಂತಾ ಕಲಾಕಾರರ . . . ನಿರ್ಮಾಣತಂತ್ರ ವಿಶ್ವದ ಎಲ್ಲ ಕಲಾವಿಮರ್ಶಕರನ್ನೂ ದಿಗ್ಭ್ರಮೆಗೊಳಿಸಿದೆ (ಭಾರದ. ೫೨೫). [ನಿರ್ಮಾಣ+ತಂತ್ರ]

**ನಿರ್ಮಾಣಶಕ್ತಿ** (ನಾ). ರಚಿಸುವ ಸಾಮರ್ಥ್ಯ; ರಚನಾತ್ಮಕ ಶಕ್ತಿ: ಗ್ರಹಣಶಕ್ತಿಗಿಂತ ನಿರ್ಮಾಣಶಕ್ತಿಯು ಹೆಚ್ಚಿನದೆಂದು ಅವನ ಅಭಿಪ್ರಾಯವಿದ್ದ ಹಾಗೆ ಕಾಣುತ್ತದೆ (ನವ್ಯಕಾ. ೧೦೬). [ನಿರ್ಮಾಣ+ಶಕ್ತಿ]

**ನಿರ್ಮಾತೃ** (ನಾ). ಮಾಡುವವನು ; ರಚಿಸುವವನು : ಆ ಮಂಚವನ್ನು . . . ಅಲಂಕರಿಸಲು ಆದರ ನಿರ್ಮಾತೃವಾದ ಕಲಾವಿದನು ಅದೆಷ್ಟು ಕಾಲ ವ್ಯಯ ಮಾಡಿದ್ದನೆಂದು ನನ್ನಿಂದ ಹೇಳಲಿಕ್ಕೆ ಸಾಧ್ಯವಿಲ್ಲ (ಕಂಬಹು. ೭೭). [ಸಂ.]

**ನಿರ್ಮಾತೃಸ್ಥಾನ** (ನಾ). ಸೃಷ್ಟಿಯಾಗುವ ಸ್ಥಳ; ಉಗಮಸ್ಥಾನ: ಸಕಲಭೂತಗಳಿಗೂ ನಿರ್ಮಾತೃಸ್ಥಾನವಾದ ಅಂತರಿಕ್ಷದಲ್ಲಿ ಆದಿತ್ಯನು . . . ಉದಕವನ್ನು ಧರಿಸಿದ್ದಾನೆ (ಋಕ್ಸಾರ. ೨೭೬). [ನಿರ್ಮಾತೃ+ಸ್ಥಾನ]

**ನಿರ್ಮಾತ್ಸರ್ಯ** (ನಾ). ಅಸೂಯೆಯಿಲ್ಲದಿರುವುದು ; ನಿರ್ಮತ್ಸರತೆ : ಸಮಸ್ತ ಜನರೂ ನಿರ್ಮಾತ್ಸರ್ಯದಿಂದ ಶ್ಲಾಘಿಸುತ್ತಿದ್ದರು (ಅಂಬಿಕ. ೧೮). [ಸಂ.]

**ನಿರ್ಮಾನುಷ** (ನಾ). ಜನರು ಇಲ್ಲದಿರುವುದು; ನಿರ್ಜನವಾದುದು : ಹಾದಿಯಲ್ಲಿ ಆತನಿಗೊಂದು ನಿರ್ಮಾನುಷವಾದ ಆಶ್ರಮವು ಕಣ್ಣಿಗೆ ಬಿದ್ದಿತು (ತುಳಸೀ. ೬೨). [ಸಂ.]

**ನಿರ್ಮಾನುಷ್ಯ** (ನಾ). = ನಿರ್ಮಾನುಷ : ಶ್ರೀನಾಗದತ್ತಂ . . . ಪಲಾಶಪುರಮನೆಯ್ದಿ ನಿರ್ಮಾನುಷ್ಯಮಪ್ಪುದಂ ಕಂಡು (ಚಾವುಂಪು. ೩೯೯); ಭರತನಂ ತಂದಿಟ್ಟು ದುಷ್ಕಾರ್ಯಕರಣೆಗಳನೊರಸಿ ನಿರ್ಮಾನುಷ್ಯವೆನಿಪೆನೀ ಧರಣಿಯಂ (ವೆಂಕಾರಾ. ೨-೯-೧೨). [ಸಂ.]

**ನಿರ್ಮಾಪಕ** (ಗು). ೧. ಸೃಜನಾತ್ಮಕ; ಸೃಜನಕ್ರಿಯೆಗೆ ಸಂಬಂಧಿಸಿದ: 'ನಿರ್ಮಾಪಕಶಾಸ್ತ್ರ' ಪರಾ. (ನಾ). ೨. ಕಟ್ಟುವವನು; ಸೃಷ್ಟಿಮಾಡುವವನು : ಸಕಲಜಗತ್ತಿಗೂ ನಿರ್ಮಾಪಕನೂ ಮನಸ್ಸಿನಂತೆ ವೇಗವುಳ್ಳವನೂ ಆದ ವಿಶ್ವಕರ್ಮನನ್ನು ಈಗ ಯಜ್ಞದಲ್ಲಿ ರಕ್ಷಣಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇವೆ (ಋಕ್ಸಾರ. ೨೨೬). ೩. ಚಲನಚಿತ್ರ, ನಾಟಕ ಮುಂತಾದುವುಗಳ ನಿರ್ಮಾಣಕ್ಕೆ ಹಣವನ್ನು ಒದಗಿಸುವವನು,—ಬಂಡವಾಳ ಹಾಕುವವನು : ಚಿತ್ರ ತಯಾರಿಸುವಾಗ ನಿರ್ಮಾಪಕರಿಗೆ ತಾವು ಹಾಕಿದ ಹಣ ಹಿಂದಕ್ಕೆ ಬಂದರೆ ಸಾಕು ಎಂಬ ದೃಷ್ಟಿಯೇ ಮುಖ್ಯವಾಗಿದ್ದರೆ ಕಲಾತ್ಮಕಚಿತ್ರಗಳ ನಿರ್ಮಾಣ ಸಾಧ್ಯವಿಲ್ಲ (ರೂಢಿ). [ಸಂ.]

**ನಿರ್ಮಾಪಕಶಾಸ್ತ್ರ** (ನಾ). ಕಲಾನಿರ್ಮಿತಿಗೆ ಉಪಯುಕ್ತವಾದ ಶಾಸ್ತ್ರ : ಅರಿಸ್ಟಾಟಲನ ಶಾಸ್ತ್ರಗಳು ಮೂರು ಭಾಗಗಳಾಗಿ ವಿಂಗಡವಾಗಿವೆ. ಅವುಗಳಲ್ಲಿ ಗಣಿತ, ಭೌತಶಾಸ್ತ್ರ, ಅಧಿಭೌತಶಾಸ್ತ್ರಗಳು ಕೇವಲ ಜ್ಞಾನಾತ್ಮಕ ಶಾಸ್ತ್ರಗಳು; ರಾಜನೀತಿ, ನೀತಿಶಾಸ್ತ್ರಗಳು ಪ್ರಾಯೋಗಿಕ ಶಾಸ್ತ್ರಗಳು ; ಭಾಷಣಶಾಸ್ತ್ರ, ಕಾವ್ಯಮೀಮಾಂಸೆಗಳು ನಿರ್ಮಾಪಕಶಾಸ್ತ್ರಗಳು (ಅರಿಕಾ. ೧೦). [ನಿರ್ಮಾಪಕ+ಶಾಸ್ತ್ರ]

**ನಿರ್ಮಾಪಕಿ** (ನಾ). ಚಲನಚಿತ್ರ, ನಾಟಕ ಮುಂತಾದುವುಗಳ ನಿರ್ಮಾಣಕ್ಕೆ ಹಣವನ್ನು ಹಾಕುವವಳು : ಈ ಚಿತ್ರಕ್ಕೆ ಆಕೆಯೇ ನಿರ್ಮಾಪಕಿ (ರೂಢಿ). [ನಿರ್ಮಾಪಕ+-ಇ$_2$]

**ನಿರ್ಮಾಪಣ** (ನಾ). ಕಟ್ಟಿಸುವುದು ; ರಚನೆ ಮಾಡಿಸುವುದು : ಚೈತ್ಯಚೈತ್ಯಾಲಯನಿರ್ಮಾಣ ನಿರ್ಮಾಪಣಶಾಸನಾರೋಪಿತಗ್ರಾಮ ಕ್ಷೇತ್ರವಿತರಣಮುಂ (ಆದಿಪು. ೧೩-೧೫ ವ) ; ಅತುಳಚೈತ್ಯಾಲಯಾನೀಕನಿರ್ಮಾಪಣಮುಹೂರ್ತಸ್ತೂಕ್ತಯುಕ್ತಿಶ್ರವಣಮಿವೆ ದಲೆಂದಿಂತವಂ ತನ್ನ ಚಿತ್ತಂ ತಣಿವನ್ನಂ ಮಾಡಿ (ಚಂದ್ರಪು. ೨-೭೧). [ಸಂ.]

**ನಿರ್ಮಾಯ** (ನಾ). ಮಾಯೆಗೆ ಸಿಲುಕದವನು ; ಮಾಯಾತೀತ; ಭ್ರಮಾರಹಿತ ; ಭ್ರಮೆಗೆ ಸಿಲುಕದವನು : ಅಯ್ಯಾ ನೀನು ನಿರಾಳ

ನಿರ್ಮಾಯನಾಗಿಪ್ಪೆಯಾಗಿ . . . ನಿಜದ ನಿಲವ ನೋಡಿ ಕಂಡೆನು (ಅಪಚಂ. ೨-೮); ನಿರಘ ನಿರ್ಭವ ನಿರ್ವಿರಳ ನಿಸ್ತರಣ ನಿರ್ವ್ಯದ್ಧಾಂಗ ನಿಜ ನಿರ್ಮಾಯ ಚಿತ್ತೈಸು (ಬಸಪು. ೬೧-೪೪) ; ಅವನೀಶ್ವರಂ ನಿರ್ಮಾಯನಂ ಮಗುಳೆ ತಕ್ಕೈಸಲಾಗಳವುರರ್ಮಹೀಪಾಲಕನ ಪೂರ್ವಕೃತಪುಣ್ಯಮಂ ಬಣ್ಣಿಸಿದರ್ (ಜೈಮಿಭಾ. ೭-೧೮). [ಸಂ.]

**ನಿರ್ಮಾಲ್ಯ** (ನಾ). ೧. ನಿರ್ಮಲತೆ; ಶುದ್ಧತೆ. ೨. ದೇವರಿಗೆ ಅರ್ಪಿಸಿ ತೆಗೆದ ಹೂವು, ಪತ್ರೆ ಮುಂತಾದುವು : "ಪ್ರಸಾದಃ – ಬೆಳ್ದಿಂಗಳುಂ, ನಿರ್ಮಾಲ್ಯಮುಂ" (ಕಾಶಕ್ಯ. ೧೪೯) ; ಪಾವನಪ್ರದವೆನಿಸಿದ ಮಹಾದೇವನಿರ್ಮಾಲ್ಯವನೆ ಮೆಲಿದಾಚರಿಸುವನುದಿನವ (ಬಸಪು. ೪೩-೬೫) ; ಕರ್ಣ ಗೀತಂಗಳ ಕೇಳಲಿ ನಿನ್ನ ನಿರ್ಮಾಲ್ಯ ನಾಸವಾಘ್ರಾಣಿಸಲಿ ಹರಿಯೆ (ಪುರಂದ. ೧-೨೧-೧) ; ನಿಮ್ಮ ಪಾದಾಂಬುಜನಿರ್ಮಾಲ್ಯವ ಕೊಡು (ಭೈರಸೂ. ೧೧೧) ; ಒಮ್ಮೊಮ್ಮೆ ಶಾಲಿಗ್ರಾಮದ ನಿರ್ಮಾಲ್ಯ ತುಳಸಿಯ ಪತ್ರವನ್ನು ತನ್ನ ಕಿಸೆಯಲ್ಲಿ ಇಟ್ಟುಕೊಳ್ಳುವನು (ಗಂಪೂಯಿ. ೧೮೧). ೩. ಹಳೆಯದಾದುದು ; ಮಾಸಲು ಮುರಿದುದು ; ಮಾಸಿದುದು : ಅನನ್ಯ ಸಾಧಾರಣ ದಿವ್ಯಭಾವದ ಕಡೆಗಿನ ಆಕರ್ಷಣದ ಕೋಲ್ಮಿಂಚು ಸೋಂಕಿದ ಜೀವಕ್ಕೆ, ಸುತ್ತಲಿನ ಬೇರಾವ ಸುಖ ಸೊಬಗು ನಿರ್ಮಾಲ್ಯದಂತೆ ತ್ಯಾಜ್ಯವೆನಿಸತೊಡಗುತ್ತದೆ (ಕರ್ಣಾಟ. ೨೯೨) ; ದೇವರಿಗೆ ಸಲ್ಲತಕ್ಕ ಹೂವು ನಿರ್ಮಾಲ್ಯವಾಯಿತು (ಗಂಪೂಯಿ. ೨೮೯). ೪. ಮಾಸುವಿಕೆ ; ಮಲಿನವಾಗುವಿಕೆ : ಪರುಷಕ್ಕೆ ಬೆಲೆಯಿಲ್ಲ ಪ್ರಾಣಕ್ಕೆ ನಿರ್ಮಾಲ್ಯವಿಲ್ಲ ರುಚಿಗೆ ಎಂಜಲಿಲ್ಲ (ಅಪಚಂ. ೧೦೦-೪೫೫). ೫. ಮುಡಿದು ತೆಗೆದ ಹೂವು ; ಬಾಡಿದ ಹೂವು : ತಳಿರ್ಗಳ್ ಬೀಟುಡೆ ಹಸ್ತಪಾದತಳರಾಗಶ್ರೀಗೆ ಕಣ್ಗೊಳ್ವ ಕಣ್ಗಳ ನಿರ್ಮಾಲ್ಯದ ಮಾಲೆ ಕೈರವವನಂ ಸ್ಮೇರಾಸ್ಯಬಿಂಬಕ್ಕೆ ಮಂಗಳನೀರಾಜನಭಾಜನಂ ವಿಧು ಮರಾಳಂ ಮಂದಯಾನ ಕ್ರಮಂಗಳ ಕಾಲ್ಗಾಪೆನೆ ಬಣ್ಣಿಸಲ್ಪವಣೆ ರೂಪಂ ಭೂಪನರ್ಧಾಂಗಿಯಾ (ಅನಂಪು. ೨-೧೬). ೬. ಒಂದು ಬಗೆಯ ಸಸ್ಯ : ಧೂಪ– ಲೊಕ್ಕಿಸೊಪ್ಪು, ಬೇವಿನ ಸೊಪ್ಪು . . . ಬಿಳಿಗರುಕೆ, ನಿರ್ಮಾಲ್ಯ, ಕೊಡಸಿಗೆಬೀಜ ಇವಂ ಚೂರ್ಣಿಸಿ ಧೂಪವಿಕ್ಕಲು ಸನ್ನಿಪಾತಗುಣವಹುದು (ಸಕವೈ. ೧೮೧). [ಸಂ.]

**ನಿರ್ಮಿತ** (ಗು). ೧. ಅಳೆಯಲ್ಪಟ್ಟ ; ಅಳೆದ. ೨. ರಚಿಸಿದ ; ರಚಿತವಾದ. (ನಾ). ೩. ರಚಿತವಾದುದು ; ಕಟ್ಟಿದುದು : ಸುರನಗಮುಂ ನಿರ್ಮಿತ ತೆರೆಸುತ್ತಿದನಲ್ತೆ ಸರೋಜಸಂಭವಂ ಪುರಕೆನೆ ಚೆಲ್ವನಪ್ಪ ನವಹಾಟಕನಿರ್ಮಿತಮಪ್ಪ ಕೋಂಟೆ ಮುಟ್ಟಿರೆ ಮುಗಿಲಂ (ಚಂದ್ರಪು. ೧-೧೧೪) ; ಶ್ರೀಪರಂಜ್ಯೋತಿಸ್ವರೂಪಿಗೆ ದೀಪವೊಂದಂ ಪೊತ್ತಿಸುವವೊಲುಮಾಪನಿರ್ಮಿತವಪ್ಪ ಪತ್ರಪ್ರಸರವಿಸರವನು ಆ ಪರಮಶಿವಗರ್ಪಿಸುವೆನು (ಬಸಪು. ೧-೩೫). ೪. ಸೃಷ್ಟಿ ; ನಿರ್ಮಾಣ : ಪಾಪಿಷ್ಠ ಹೆಂಗಳನೇಕೆ ನಿರ್ಮಿತವ ಮಾಡಿದನೋ (ಮೋಹತ. ೧೦-೩೧). [ಸಂ.]

**ನಿರ್ಮಿತಿ** (ನಾ). ರಚನೆ ; ನಿರ್ಮಾಣ : ನಾಟಕಸಂಸ್ಥೆಯೂ ಕಲಾಮಂಡಿತ ಸಮಾಜವೂ ತಮ್ಮ ಮಹಾಧ್ಯೇಯವನ್ನು ಅರಿತುಕೊಂಡು ನವಮಾನವನಿರ್ಮಿತಿಯ ದಿವ್ಯಯಜ್ಞದಲ್ಲಿ ತಮ್ಮ ಕರಭಾರವನ್ನು ಸಾದರಪಡಿಸುವುದು ಪ್ರಾಪ್ತವಾಗಿರುವುದಲ್ಲವೆ? (ಪ್ರಬಂಧ. ೨೩) ; ಶಾಸ್ತ್ರ ನಿರ್ಮಿತಿಯಾಗುವವರೆಗೆ ಪ್ರಯೋಗವೇ ಶಾಸ್ತ್ರದ ನಿರ್ಣಯಕ್ಕೆ ಆಧಾರ (ಸಂಶೋಧ. iii, ಅ೨೪). [ಸಂ.]

**ನಿರ್ಮಿತ್ರ** (ಗು). ೧. ಮಿತ್ರನಿಲ್ಲದ ; ಒಂಟಿಯಾದ. (ನಾ). ೨. ಮಿತ್ರನಿಲ್ಲದವನು ; ಏಕಾಕಿ : ಒರ್ವನೇ ನಿಲುವೆ ನೀನುತ್ಕಟಕ್ಷಣಗಳಲಿ . . . ನಿರ್ವಾಣದೀಕ್ಷೆಯಲಿ, ನಿರ್ಯಾಣಘಟ್ಟದಲಿ ನಿರ್ಮಿತ್ರನಿರಲು ಕಲಿ (ಮಂಕುತಿ. ೬೮೯). [ಸಂ.]

**ನಿರ್ಮಿಸು**[1] (ಕ್ರಿ). ೧. ಕಟ್ಟು ; ರಚಿಸು : ಸುರಪತಿ ಸೂತ್ರಧಾರನಮರಾವಳಿ ಶಿಲ್ಪಿಗಣಂ ಧನೇಶ್ವರಂ ಬರೆದು ಪವಣ್ಗೆ ಜಾಣ್ಗೆವರೆ ನಿರ್ಮಿಸಿದಂ ಪುರಮಂ ನೃಪಂ (ಶಾಂತಿಪು. ೯-೧೫೮) ; ನಮ್ಮ ಮನೆಗೆಲದೊಳರಮನೆಯನಿರದಾಗಿಸೆನಲವರ್ ಭಯಭರಿತ ಭಕ್ತಿಯಿಂ ನಿರ್ಮಿಸಿದರ್ (ಚಿಬಪು. ೫-೪೭) ; ನಿರ್ಮಲಸತಿಯರ ಧರ್ಮವ ಕೃತಿಯಾಗಿ ನಿರ್ಮಿಸಿ ನೆಗಳಿಪೆ (ಹದಿಬ. ೧-೪೮) ; ಕರ್ಮವೆಂಬುದು . . . ಶೃಂಖಲೆಗಳನ್ನು ನಿರ್ಮಿಸಿ ನಮ್ಮನ್ನು ಸಂಸಾರಕ್ಕೆ ಕಟ್ಟುತ್ತದೆ (ಧರ್ಮಸಾ. ೧೧೭). ೨. ಉಂಟುಮಾಡು ; ಸೃಷ್ಟಿಸು ; ಸೃಜಿಸು : ಸುರಸಂದೋಹದ ತೀವಿ ತಂದ ಘಟಸಂಘಾತಂಗಳಾನಲ್ಕೆರಬ್ಬಿರದಿಂ ಬಾರದೆ ಮಾಣೆ ನಿರ್ಮಿಸಿದ ದೋರ್ದಂಡಂಗಳೊಳ್ ಭೂಪಣೋತ್ಕರವಿಂಬಾಗಿರೆ (ಆದಿಪು. ೭-೮೬) ; ಉರಗನರ ದಿವಿಜಾದಿಗಳಿಗಿದು ಪರಿಹರಿಸಲಳವಲ್ಲ ದೈವದ ಪರುಠವಣೆ ಮುನ್ನಾದಿಯಲಿ ನಿರ್ಮಿಸಿತು ಮೃತ್ಯುವನು (ಕುವ್ಯಾದ್ರೋ. ೭-೨೯) ; ಸುರಪನಾಪವನಜನ ಪರಿಯನು ಪರಿಕಿಸಲು ನಿರ್ಮಿಸಿದನಾಕ್ಷಣ ಸುರಸೆಯನು (ತೊರರಾ. ೫-೧-೧) ; ವಿಪ್ರರು ಕಪಟದ ಗೋವ ನಿರ್ಮಿಸಿದರು ಕ್ಷಣದೆ (ಕಂಸವಿ. ೫-೧೬) ; ವಿಜ್ಞಾನಿಗಳು . . . ಕೃತ್ರಿಮಹೃದಯ ನಿರ್ಮಿಸಿ ಜೋಡಿಸಿದ್ದಾರೆ (ದೇಕನ್ನೆ. ೨೨). ೩. ಏರ್ಪಡಿಸು ; ನೆರವೇರಿಸು : ನಿಜತನುಜಂಗಾಗಳ್ ಜಾತಕರ್ಮವಂ ನಿರ್ಮಿಸಿದಳ್ (ಸುಕುಮಾ. ೧೦-೩೫) ; ಕುಮಾರನಂ ಪಡೆವುದುಮಾಗಳ್ . . . ಅರಸಂ ಬೇಡುವವರ್ಗೆ ಬೇಡಿದುದಂ ಬೇಡಿದಾಗಳೆ ಕೈಮುಡಗದೆ ಕೊಟ್ಟು ಜಾತಕರ್ಮಮಂ ನಿರ್ಮಿಸಿ (ಬಾಧಪು. ೪-೩೮ ಪ). [ನಿರ್ಮಾಣ + – ಇಸು[3]]

**ನಿರ್ಮಿಸು**[2] (ಕ್ರಿ). ಆಶ್ರಯಿಸುವಂತೆ ಮಾಡು ; ಆಧಾರ ದೊರಕಿಸು : ಅತಿಭಕ್ತಿಗೆಯ್ವ ತತ್ಪುರುಷರನೆಯ್ದೆ ಧರ್ಮ್ಮದೊಳೆ ನಿರ್ಮ್ಮಿಸಿ ದಾನಿಗಳಾಗಿ ಸನ್ದ ತತ್ಪುರುಷ ಮಹಾಮುನೀಶ್ವರೆ (ಸೌಇಇ. XI–i, ೧೧೬–೨೧ ; 1075).

[℗ ಇದು 'ನೆರ್ಮಿಸು' ಎಂಬುದರ ಅಪಲಿಖಿತವಿರಬಹುದು]

**ನಿರ್ಮುಕುತ** (ನಾ). ಮುಕ್ತನಾದವನು ; ಬಿಡುಗಡೆ ಹೊಂದಿದವನು : ಅಕುಟಿಲತೆಯಿಂದೆನ್ನನರ್ಚಿಸಿ ಭಕತರೊಡನಾಡುವ ನರನು ನಿರ್ಮುಕುತನಹ ಕ್ರಮದಿಂದಲದ್ರಿಯನೇಱುವಂದದಲಿ (ಸಿಭಾಗ. ೧೧-೧೭-೨). [<ಸಂ. ನಿರ್ಮುಕ್ತ]

**ನಿರ್ಮುಕ್ತ** (ಗು). ೧. ಬಂಧನದಿಂದ ಬಿಡಿಸಿಕೊಂಡ ; ಬಿಡುಗಡೆಯಾದ ; ಬಿಟ್ಟ : ನಿರ್ಮೋಕ ನಿರ್ಮುಕ್ತ ನಿರ್ಮಲನಪ್ಪ ಫಣಿಯೆಂತಂತೀ ಸೀತೆಯಂ ತೊಱೆದೇಸೊಗಂ ಬಾಳ್ವೆಂ (ರಾಮಾಶ್ವ. ೨೫-೨೯). (ನಾ). ೨. ಸಂಸಾರಬಂಧನದಿಂದ ಬಿಡುಗಡೆ ಹೊಂದಿದವನು ; ಮುಕ್ತ : ಚಿತ್ತವ ಸುಯಿಧಾನವ ಮಾಡಿ ಮೊತ್ತಾದ ಹೆಣ್ಣು ಹೊನ್ನು ಮಣ್ಣುಗೆದ್ದರೆ ನಿರ್ಮುಕ್ತ (ವಚಸಂ. ೨೨೨-೭೮). ೩. ಸಮರಸತೆಯನ್ನು ಹೊಂದಿದ ವ್ಯಕ್ತಿ ; ಐಕ್ಯಹೊಂದಿದ ವ್ಯಕ್ತಿ : ನಿಮ್ಮಲ್ಲಿ ನಿರ್ಮುಕ್ತನಾದ ಬಳಿಕ ಈ ಜಗವೇನಾದರೇನಯ್ಯ (ವಚಸಂ. ೩೨೧-೧೦೬); ಸಚ್ಚಿದಾನಂದದಲ್ಲಿ ಐಕ್ಯವಾಗಿ ಸತ್ಯಶರಣರ ಪಾದದಲ್ಲಿ ನಿರ್ಮುಕ್ತಳಾದೆನಯ್ಯಾ (ವಚಸಂ. ೫೦೧-೧೮). ೪. ಸದಾಕಾಲವೂ ಮುಕ್ತಸ್ಥಿತಿಯಲ್ಲಿಯೇ ಇರುವವನು ; ಪರಮಾತ್ಮ : ಮುಕ್ತನಪ್ಪನು ಜೀವನುಂ ನಿರ್ಮುಕ್ತನಪ್ಪನು ಶಿವನು (ಬಸಪು. ೫೧-೨೮). ೫. ಅದೇ ತಾನೆ ಪೊರೆ ಬಿಟ್ಟ ಹಾವು. [ಸಂ.]

**ನಿರ್ಮುಕ್ತಿ** (ನಾ). ಬಿಡುಗಡೆ ; ಮುಕ್ತಿ : ಶ್ರೀಪ್ರಭವಮುನಿಪ್ರಭುವ ಪಾದಮೂಲದೊಳ್ ನಿಷ್ಕೃತದಿಗಂಬರಶ್ರೀಕನಾಗೆ ನಿಖಿಲಕರ್ಮನಿರ್ಮುಕ್ತಿಯಿಂ ಪ್ರಾಪ್ತ ಸಪ್ತಪರಮಸ್ಥಾನನಾದಂ (ಚಂದ್ರಪು. ೪-೨೪ ಪ). [ಸಂ.]

**ನಿರ್ಮುಕ್ತೋಷ್ಣ** (ನಾ). ಉಷ್ಣತೆಯಿಲ್ಲದುದು ; ತಂಪಾದುದು: ಮುಕ್ತಜ್ವರದಂತೆ ನಿರ್ಮುಕ್ತೋಷ್ಣಮುಂ ಮೂರ್ಛಾಪ್ರಾಪ್ತನಂತೆ ತಮೋಮಯಮುಮಪ್ಪ ತಮಿಸ್ರಗುಹೆಯನೆಯ್ದಿದಾಗಳ್ (ಆಪು. ೧೩-೪೬ ಪ). [ನಿರ್ಮುಕ್ತ+ಊಷ್ಮ]

**ನಿರ್ಮೂಢ** (ನಾ). ಕಡುಮೂರ್ಖ: ರೂಢಿಗಚ್ಚರಿಯಾಯ್ತು ಲಾ ಪರಿಗೂಢಮ್ಮ ಗಗಣವಿಲ್ಲವಿದೆ ನಿರ್ಮೂಢರನು ಹಿಡಿತರಿಸುಯೆಂದನು ದೂತ ನೊಡೆಯಂಗೆ (ಕುಪ್ರಾಅ. ೧೨-೧೬). [ಸಂ.]

**ನಿರ್ಮೂಲ,** ನಿರ್ಮೂಳ (ಗು). ೧. ಬೇರಿಲ್ಲದ ; ಬುಡವಿಲ್ಲದ. ೨. ಬೇರುಸಹಿತ ಕಿತ್ತ ; ಬುಡಸಹಿತ ಕಿತ್ತ. (ನಾ). ೩. ಬೇರುಸಹಿತ ಕಿತ್ತುದು ; ಸಂಪೂರ್ಣ ನಾಶವಾದುದು : ಶ್ರುತಿರಹಿತರಾಗಿ ಚರಿಸುತಿಹ ಜಿನ ಬೌದ್ಧ ಚಾರ್ವಾಕರ ಕುಪಥಸಮಯತ್ರಯಂ ನಿಷ್ಕಾರದಿ ನಿರ್ಮೂಲಂಗಳಾಗಲ್ಕೆಂದು ನಿಶ್ಚಯಿಸಿ (ಬಸವು. ೫೦-೬೫). **ನಿರ್ಮೂಳ:** ೩. ನಿರ್ಮೂಳಂ ಮಾಡರಿಯಂ (ಬಂಹು. ೧೦-೨೦).

**ನಿರ್ಮೂಲಂ ಮಾಡು, ನಿರ್ಮೂಲ ಮಾಡು** = ಬೇರು ಸಹಿತ ಕೀಳು ; ಪೂರ್ಣವಾಗಿ ನಾಶಗೊಳಿಸು : ಎಮ್ಮೊಳಾವನೊರ್ವಂ ನಮ್ಮ ಪಗೆಯುಸಿಜುಯಲುಂ ನಂದನವಂಶಮುಂ ನಿರ್ಮೂಲಂ ಮಾಡಿ ಕಿಡಿಸಲು ಮಾರ್ಕುಂ (ಪಞ್ಚಾರಾ. ೧೪೨-೧೫) ; ನಂದನರನ್ನು ನಿರ್ಮೂಲ ಮಾಡಿದ ಈ ನನ್ನ ಬುದ್ಧಿ ಒಂದು ಮಾತ್ರ ಹೋಗದಿರಲಿ ! (ರಾಕ್ಷಸು. ೨೮). **ನಿರ್ಮೂಲಮಾಗು, ನಿರ್ಮೂಲವಾಗು** = ಬೇರು ಸಹಿತ ಕಿತ್ತು ಹೋಗು ; ಸಂಪೂರ್ಣ ನಾಶವಾಗು : ಆ ಮೂಲದ ಕಡೆಯ ಮಾವಸೆಯ ದಿವಸದೊಳಂ ನಿರ್ಮೂಲಮಾಯ್ತು ಕೌರವವಂಶಂ (ಗದಾಯು. ೯-೩೭) ; ಸೌಂದರಿಯ ವಶರಾಗಿ ಭೂವರನಂದನರು ನಿರ್ಮೂಲವಾದರು (ಬಸವು. ೩೧-೨೨) ; ನಂದವಂಶವು ನಿರ್ಮೂಲವಾದರೂ ಅವನ ಸ್ವಾಮಿಭಕ್ತಿ ಸ್ವಲ್ಪವೂ ಚಲಿಸಿಲ್ಲ (ರಾಕ್ಷಸು. ೧೧). [ಸಂ.]

**ನಿರ್ಮೂಲಕ** (ನಾ). ಬುಡಸಹಿತ ಕೀಳುವವನು ; ನಾಶಮಾಡುವವನು ; ಹುಟ್ಟು ಅಡಗಿಸುವವನು : ಅಕಟ ಗುರುಹತ್ಯಾಮಹಾಪಾತಕಕೆ ತಂದೈ ಮನವ ಭರತಪ್ರಕಟಕುಲನಿರ್ಮೂಲಕನೆ ನೀನೊಬ್ಬನುದಿಸಿದಲ (ಕುಪ್ರಾಕ. ೧೭-೫). [ಸಂ.]

**ನಿರ್ಮೂಲನ,** ನಿರ್ಮೂಳನ (ನಾ). ಬೇರುಸಹಿತ ಕೀಳುವುದು ; ಸಂಪೂರ್ಣವಾಗಿ ನಾಶಗೊಳಿಸುವುದು : ತದುಭಯಕರ್ಮನಿರ್ಮೂಲನಂ ಮೋಕ್ಷವೆಂಬುದು (ಶಾಂತಿಪು. ೧೨-೫ ಪ) ; ನೀವಿಂತಿರಾನನ್ನೆಗಂ ಮುನಿಸಂ ತೀರ್ಚೆ ನರೇಂದ್ರವೈರಿತರುವಂ ನಿರ್ಮೂಲನಂ ಮಾಡುವೆಂ (ಗದಾಯು. ೬-೨೪) ; ಲೋಲನಾಪರಿಕರ್ಮ ತರುನಿರ್ಮೂಲನೈಕಕ್ಷಮ ಸುಧಾಕರಮೌಳಿ (ಕುಪ್ರಾಕ. ೬-೧). **ನಿರ್ಮೂಳನ:** ಮಜುಭವದೊಳ್ ಸಗರವಂಶಮುಂ ನಿರ್ಮೂಳನಂ ಮಾಜ್ಪಿನಕ್ಕೆಂ(ನೆಂ)ದು ನಿದಾನಂಗೆಯ್ದು (ಚಾವುಂಪು. ೨೮೭). [ಸಂ.]

**ನಿರ್ಮೂಲನಂಗೆಯ್** (ಕ್ರಿ). ಪೂರ್ಣವಾಗಿ ನಾಶಮಾಡು : ನಿನ್ನ ಮಗಂ ಪಗೆಯಂ ನಿರ್ಮೂಲನಂಗೆಯ್ದು ನಿನ್ನ ಶೋಕಮುಂ ಪಿಂಗಿಸುಗುಂ (ಚಾವುಂಪು. ೪೧೦) ; ದನುಜಕ್ಷತ್ರಾಧಮಾನೀಕಮನಗಣಿತಮುಂ ಕೂಡೆ ನಿರ್ಮೂಲನಂಗೆಯ್ದನಿತುಂ ಭೂಭಾರಮುಂ ಪಿಂಗಿಸಲುದಯಿಸಿದಂ ಚಕ್ರಿ (ಜಗವಿ. ೩-೪). [ನಿರ್ಮೂಲನ+ಕೆಯ್$_1$]

**ನಿರ್ಮೂಲನಕರ** (ನಾ). ಸಂಪೂರ್ಣ ನಾಶ ಮಾಡುವವನು : ಸಕಳ ಕರ್ಮನಿರ್ಮೂಲ[ಪಾಠಾಂ.ಳ]ನಕರನುಂ ತ್ರಿಲೋಕಶಿಖರಿಶೇಖರನುಮಪ್ಪ ಜೀವನುಂಟೆಂದು . . . ತಿಳಿಪಿ (ಆಪು. ೨-೧೦ ಪ). [ಸಂ.]

**ನಿರ್ಮೂಲಿತ** (ಗು). ಬೇರು ಸಹಿತ ಕಿತ್ತ ; ಬುಡ ಸಹಿತ ತೆಗೆದು ಹಾಕಿದ ; ಸಮಗ್ರವಾಗಿ ನಾಶಗೊಳಿಸಿದ : ಚಿತ್ತದೊಳ್ ಲಿಂಗಾಭಿಮಾನಿ . . . ನಿರ್ಮೂಲಿತೋಭಯಕರ್ಮಸಂಚಯನು (ಬಸವು. ೨೯-೧). [ಸಂ.]

**ನಿರ್ಮೂಲಿಸು,** ನಿರ್ಮೂಳಿಸು (ಕ್ರಿ). ೧. ಬೇರುಸಹಿತ ಕೀಳು ; ಸಂಪೂರ್ಣವಾಗಿ ನಾಶಮಾಡು : ಇಂತಪ್ಪ ಪಗೆವರಂ ನಿರ್ಮೂಲಿಸುವುದು ಭೇದನವೆಂಬುದಕ್ಕುಂ (ಪಂಚತಂ. ೨೧೪-೨೦) ; ಸಕಲದುರಿತತಿಮಿರಪಟಲಮುಂ ನಿರ್ಮೂಲಿಸುವ ಸಹಸ್ರಕರಪ್ರಭಾವಕರಮಾವುದು (ಅನಂಪು. ೩-೬೧ ಪ) ; ಅಪಯಶಸ್ಸಿನ ಅಂಕುರವನ್ನೇ ನಿರ್ಮೂಲಿಸಿಬಿಡುವೆನು (ಗುರುಣಿ. ೯೯). ೨. ದೂರಮಾಡು ; ತೊಲಗಿಸು : ತ್ರಿವಿಧಮಪ್ಪ ದರ್ಶನಮೋಹನೀಯಮುಮಂ ನಿರ್ಮೂಲಿಸಿ (ಶಾಂತಿಪು. ೧೧-೧೧೧ ಪ). **ನಿರ್ಮೂಳಿಸು:** ೧. ನಮ್ಮ ಪಗೆಯುಸಿಜುಯಲುಂ ನಂದನವಂಶಮುಂ ನಿರ್ಮೂಳಿಸಲಾನಾರ್ಪೆಂ (ಪಞ್ಚಾರಾ. ೧೪೨-೧೭) ; ಅಳಿಬ್ರ್ಯಾದ ಬಸನಂಗಳೆಳುಮನೇಟಿಬ್ದು ನಿರ್ಮ್ಮೂಳಿಸಿ ಪರಿದನರಿಷಡ್ವರ್ಗ × × × ಕಾಲಾಗ್ನಿಯುತ್ತೆ ಗುಣಗಳ್ಳ (ಎಕ. VII, ಶಿಕಾರಿ. ೧೨೯-೩೧ ; 1071) ; ರವಿಗ ದಣ್ಣಾಧಿಪನಂ ಮಾಳವವೇಳುವ ನೆಜಿ ನಿರ್ಮೂಳಿಸಿ ನಿಜನಾಥನಾಜ್ಞೆಯಂ . . . ಸುಮನೋಮಾಳಿಕೆಯಂ ನಿಲಿಸುವನ್ತೆ ನಿಲಿಸಿದನದಟಂ (ಸೌಇಇ. IX-i, ೧೫೮-೨೪; 1128). [ನಿರ್ಮೂಲನ+-ಇಸು$_3$]

**ನಿರ್ಮೂಳ** 'ನಿರ್ಮೂಲ' ನೋ.

**ನಿರ್ಮೂಳನ** 'ನಿರ್ಮೂಲನ' ನೋ.

**ನಿರ್ಮೂಳಿಸು** 'ನಿರ್ಮೂಲಿಸು' ನೋ.

**ನಿರ್ಮೇಘ** (ನಾ). ಮೋಡವಿಲ್ಲದುದು ; ಮುಗಿಲಿಲ್ಲದುದು ; ನಿರಭ್ರ : ನಿರ್ಮೇಘಮೆನಿಪ ದಿನದೊಳ್ ನಿರ್ಮಳಮೆನಿಪೊಂದು ಠಾವಿನೊಳ್ ನಿಂದಿನಿಸುಂ ನಿರ್ಮಲಚಿತ್ತದೆ ನೋಡಲು ಘಮ್ಮನೆ ತಾಂ ತೋರ್ಕುಮಲ್ಲಿ ಛಾಯಾಪುರುಷಂ (ಪಸಾರ. ೩೬೩) ; ವಿಂತಚಲನವಿಲ್ಲದೆ ಮೆಜಿವ ಮಾರುತನವೊಲು ನಿರ್ಮೇಘವಾಗಿಹ ವಿತತ ನಭದವೊಲಿಂದ್ರಿಯಂಗಳ ಗಜಬಜೆಯನುಡುಗಿ (ಬಸವು. ೩೪-೧೦). [ಸಂ.]

**ನಿರ್ಮೋಕ** (ನಾ). ೧. ಬಿಡುವುದು; ಬಿಡುಗಡೆ ಮಾಡುವುದು. ೨. ಹಾವಿನ ಪೊರೆ : "ನಿರ್ಲಯನೀ, ನಿರ್ಮೋಕಂ, ಕಂಚುಕಂ – ಈ ೩ ಹಾವಿನ ಹೆರೆ" (ಹಲಾಯು. ೧೨೬-೨೨); "ನಿರ್ಮೋಕಮಾ ನಿರ್ಲಯಿನಿ ಯುರಗಮುಕ್ತಮೆನಲ್ಕೆ ಹೆರೆಯಕ್ಕು" (ಮಂಗರಾ. ೧೧೮-೨) ; ತರುಣೋರಗ ನವನಿರ್ಮೋಕರುಚಿರಮೆನಿಸಿರ್ದ ಧೌತಧವಳಾಂಬರದಿಂ ಕರಮೆಸೆದಂ (ಕಾದಂಪೂ. ೭೮); ರವಿಹಯಲಾಲಾಪಿಂಡಂ ದಿವಿಜನದೀಫೇನಮಾಲೆ ರಾಹುವ ನಿರ್ಮೋಕವಿದೆಂಬಿನಮಲ್ಲಲ್ಲಿಗೆ ಧವಳಾಂಬುದಪಟಲಮೆಸೆದುದು (ಜಗವಿ. ೪-೬೧). ೩. ಚರ್ಮ; ತೊಗಲು. ೪. ಯುದ್ಧಕವಚ. ೫. ಆಕಾಶ. [ಸಂ.]

**ನಿರ್ಮೋಕನಿರ್ಮುಕ್ತ** (ಗು). = ನಿರ್ಮೋಕಮುಕ್ತ : ನಿರ್ಮೋಕನಿರ್ಮುಕ್ತ ನಿರ್ಮಲನಪ್ಪ ಫಣಿಯೆಂತಂತೀ ಸೀತೆಯಂ ತೊಜಿದೇಸೊಗಂಬಾಜಿಪ್ಪೆಂ (ರಾಮಾಶ್ವ. ೨೫-೨೯). [ನಿರ್ಮೋಕ+ನಿರ್ಮುಕ್ತ]

**ನಿರ್ಮೋಕಮುಕ್ತ** (ಗು). ಪೊರೆಯನ್ನು ಬಿಟ್ಟ : ಹರನ ಕೋಮಲಪಾಣಿಕಮಲಸ್ಪರುಶಪೀಯೂಷದಲಿ ಮುಳುಗಿದ ನರನ ತನು ನಿರ್ಮೋಕಮುಕ್ತಭುಜಂಗನಂದದಲಿ . . . ಚಾರುಸ್ಫುರಣದಲಿ ಬೋಳೈಸಿದುದು ಸುರ ನರರ ಕಣ್ಮನವ (ಕುಪ್ರಾಅ. ೬-೧೦೧). [ನಿರ್ಮೋಕ+ಮುಕ್ತ]

**ನಿರ್ಮೋಕಿ** (ನಾ). ತುಂಬೆಗಿಡದಲ್ಲಿ ಒಂದು ಬಗೆ : "ನಿರ್ಮೋಕಿ [ಪಾಠಾಂ. ನಿರ್ನಾಕಿ, ನಿರ್ನೋಕಿ, ನಿರ್ಮೆಕಿ, ನಿರ್ಮೋಖಿ]ಯೆನೆ ಕಾಡತುಂಬೆಯದಕ್ಕು" (ಮಂಗರಾ. ೪೦-೩೨). [ ? ]

**ನಿರ್ಮೋಹ** (ನಾ). ೧. ಮೋಹವಿಲ್ಲದಿರುವುದು; ಭ್ರಾಂತಿಯಿಲ್ಲದಿರುವುದು : ದೇಹಸುಖಹೇತುಗಳುಮಂ ದೇಹಮುಮಂ ತನ್ನವೆಂದು

ಪಂಬಲಿಸದೆ ನಿರ್ಮೋಹದಿನಿರೆ (ಮಲ್ಲಿಪು. ೧೧-೪೮) ; ತನುವಿನಲ್ಲಿ ನಿರ್ಮೋಹ ಮನದಲ್ಲಿ ನಿರಹಂಕಾರ ಪ್ರಾಣದಲ್ಲಿ ನಿರ್ಭಯ . . . ಎಡೆಗೊಂಡ ಬಳಿಕ ಸೌರಾಷ್ಟ್ರಸೋಮೇಶ್ವರನೆಂಬ ಲಿಂಗವು ಬೇಱಿಲ್ಲ ಕಾಣಿರೊ (ಆದಪ. ೧೬೬-೯೧). ೨. ನಿಷ್ಠುರತೆ ; ನಿರ್ದಯೆ : ಆ ಹೊಗುವಳೀ ಹೊಗುವಳದೆಯಿದೆ ಹೋಹಳೆಂದತಿಶೀಘ್ರದಲಿ ನಿರ್ಮೋಹದಲಿ ಪಿತನೆಯ್ದಿ ಚಂಡಿಕೆಯುಂ ಪಿಡಿಯಲು (ಬಸಪು. ೧೪-೩೩). ೩. ಮೋಹವಿಲ್ಲದವನು : ಅಘಮಂ ಗೆಲ್ದು ನಿರ್ಮೋಹನಾದಂ (ಶಾಂತಿಪು. ೯-೧೪). [ಸಂ.]

**ನಿರ್ಮೋಹಿ** (ನಾ). ಮೋಹವಿಲ್ಲದಿರುವ ವ್ಯಕ್ತಿ ; ಭ್ರಾಂತಿಯಿಲ್ಲದವನು : ತನ್ನೊಡನಾತಂ ನಿರ್ಮೋಹಿಯಾಗಿ ಬಾರದಿರೆ (ಚಾವುಂಪು. ೬೩); ಲಿಂಗವ ಮುಟ್ಟಿ ಮತ್ತೊಂದೇಸುವ ಮುಟ್ಟದ ನಿರ್ಮೋಹಿಯನು ಮಾಹೇಶ್ವರನೆಂಬೆನು (ಸಿದ್ಧೇಸ. ೧೦೧-೩೧೫) ; ರತಿರಾಜನಂಬಿಗೆರ್ದೆಗೊಡದತಿನಿರ್ಮೋಹಿಗಳಾರಿಹಪರದೊಳ್ (ಹಮ್ಮಿರ. ೬-೩೨).
[ಸಂ. ನಿರ್ಮೋಹಿನ್]

**ನಿರ್ಮೋಹೆ** (ನಾ). ೧. ಮೋಹವಿಲ್ಲದಿರುವವಳು; ಭ್ರಾಂತಿಯಿಲ್ಲದವಳು. ೨. ಕಠಿಣಚಿತ್ತವುಳ್ಳವಳು ; ನಿರ್ದಯೆ : ಇರಿಸಿ ಹೋದವಳಾವಳೋ ಶಿಶುವರನ ತಾಯ್ ನಿರ್ಮೋಹೆಯ್ಯೆ (ಕುಪ್ಯಾಆ. ೩-೩೪). [ಸಂ. ನಿರ್ಮೋಹಾ]

**ನಿರ್ಯಂತ್ರಣ** (ಗು). ೧. ಅನಿರ್ಬಂಧವಾದ; ನಿಯಂತ್ರಣವಿಲ್ಲದ; ಸ್ವತಂತ್ರವಾದ. (ನಾ). ೨. ಅನಿರ್ಬಂಧತೆ; ಸ್ವೇಚ್ಛಾವೃತ್ತಿ. ೩. ಮೃಗಪಕ್ಷಿಗಳನ್ನು ಹಿಡಿಯಲು ಬಳಸುವ ಬಲೆ, ಬೋನು ಮುಂತಾದುವು ; ಕೂಟಯಂತ್ರ : "ಉನ್ಮಾಥಃ, ಕೂಟಯಂತ್ರಂ, ನಿರ್ಯಂತ್ರಣಂ—ಈ ೩ ತಗವುದು [ಬಲೆ, ಬೋನು]" (ಹಲಾಯು. ೧೨೯-೯೭). [ಸಂ.]

**ನಿರ್ಯದ್ದಾನಗಜ** (ನಾ). ಮದೋದಕವನ್ನು ಸುರಿಸುತ್ತಿರುವ ಆನೆ ; ಉನ್ಮತ್ತವಾದ ಆನೆ : ವಿಗಳನ್ನಿರ್ಝರಹರಿನೀಳಗಿರೀಂದ್ರಮನೊಳಗುಮಾಡಿಪುಜ್ಜ್ವಳತಾರಾನಗಮೆನಿಪುದು ನಿರ್ಯದ್ದಾನಗಜಂಗಳ ಸೌಧಶಾಲೆ ನೃಪಮಂದಿರದೊಳ್ (ಚಂದ್ರಪು. ೧-೧೪೦). [ಸಂ.]

**ನಿರ್ಯಾಣ** (ನಾ). ೧. ಬಿಟ್ಟು ಹೋಗುವುದು ; ಹೊರಡುವುದು; ನಿರ್ಗಮನ. ೨. ಮಾಯವಾಗುವಿಕೆ ; ಅದೃಶ್ಯವಾಗುವಿಕೆ. ೩. ಸಾವು ; ಮರಣ : 'ನಿರ್ಯಾಣಪ್ರಾಪ್ತಿ' ಪರಾ. ೪. ಹಾಲು ಕರೆಯುವಾಗ ದನದ ಕಾಲಿಗೆ ಕಟ್ಟುವ ಹಗ್ಗ; ದಳೆ. ೫. ಆನೆಯ ಕಡೆಗಣ್ಣು : "ಅಪಾಂಗದೇಶಃ, ನಿರ್ಯಾಣಂ—ಈ ೨ ಆನೆಯ ಕಡೆಗಣ್" (ಹಲಾಯು. ೩೬-೬೪); ಯಥಾರ್ಥಂ ಸ್ತುತಿಗೆಯ್ದು ರತ್ನಮಕುಟಂ ನಿರ್ಯಾಣಮಂ ತಾಗೆ ದಂತಿಯ ಮೇಗಿರ್ದು ವಿನಮ್ರನಾಗೆ ದಿವಿಜೇಂದ್ರಂ (ಶಾಂತಿಪು. ೧೦-೧೦); ಕರ್ಣಜಾಲಾಂತರಮಂ ನಿರ್ಯಾಣಮಂ ಸೃಕ್ಕಮನುದರಮನುದ್ಭೂತಮಂ ಘಾಟಮಂ ಪುಷ್ಕರಮಂ . . . ಕೂಡೆ ತೀರೀ ಶರಸಂಘಾತಂಗಳುಚ್ಚುತ್ತಿರೆ ಕೆಡೆದು ವಿಭಾನೀಕಂ (ಪರ್ಣಮೂ. ೪-೭೯); ಆ ಪುರಂದರನ ಸತಿ ನಿಜಪತಿಯ ಕೆಯ್ಯೊಳ್ . . . ಜಿನಬಾಳಕನಂ ನೀಡೆ ನಿಜರುಚಿರಮೌಳಿ ಸುರಮದಗಜನಿರ್ಯಾಣಪ್ರಲಗ್ನಮಾಗಲ್ ಪೊಡೆವಟ್ಟು ಜಯಸ್ವಾಮಿಯೆನುತ್ತುಂ ಭುಜಯುಗಮಂ ನೀಡಿ ತಳೆದುಕೊಂಡು ಮಹೇಂದ್ರಂ (ನೇಮಿಪು.೮-೧೧೬). ೬. ಮೋಕ್ಷ ; ಮುಕ್ತಿ. ೭. ಬೀಡು ತೆಗೆಯುವುದು; ಪಾಳೆಯ ಎತ್ತುವುದು: "ಮೃತೋಽಪಯಣಂ ವಿಭಾಗ ನಿರ್ಯಾಣಸಮಾಹ್ವಯಂ" (ನಾನಾರ. ೯೧). ೮. ಊರಿನಿಂದ ಹೊರಹೋಗುವ ಮಾರ್ಗ. ೯. ಕಬ್ಬಿಣ. [ಸಂ.]

**ನಿರ್ಯಾಣಘಟ್ಟ** (ನಾ). ಸಾಯುವ ಸಮಯ ; ಕೊನೆಯ ಗಳಿಗೆ ; ಮರಣಕಾಲ : ಒರ್ವನೇ ನಿಲುವೆ ನೀನುತ್ಕಟಕ್ಷಣಗಳಲಿ ಧರ್ಮಸಂಕಟಗಳಲಿ ಜೀವಸಮರದಲಿ ನಿರ್ವಾಣದೀಕ್ಷೆಯಲಿ, ನಿರ್ಯಾಣಘಟ್ಟದಲಿ ನಿರ್ವಿಚಿತ್ರನಿರಲು ಕಲಿ (ಪಂಕುಕ. ೬೮೯). [ನಿರ್ಯಾಣ+ಘಟ್ಟ]

**ನಿರ್ಯಾಣದೀಕ್ಷಿತ** (ನಾ). ಮರಣದೀಕ್ಷೆಯನ್ನು ಪಡೆದವನು ; ಪ್ರಾಣತ್ಯಾಗಕ್ಕೆ ಸಿದ್ಧನಾದವನು : ದ್ರೋಣನೆಂಬರೆ ಮುನ್ನವೇ ನಿರ್ಯಾಣದೀಕ್ಷಿತನಾದನಾತನ ಕಾಣೆವೈ ಗುರುಸುತನದೃಶ್ಯಾಂಜನವೆ ಸಿದ್ಧಿಸಿತು (ಕುಪ್ಯಾದ್ರೋ. ೧೬-೧೮). [ನಿರ್ಯಾಣ+ದೀಕ್ಷಿತ]

**ನಿರ್ಯಾಣಪ್ರಾಪ್ತಿ** (ನಾ). ಮರಣ ಹೊಂದುವುದು ; ಮರಣಪ್ರಾಪ್ತಿ : ಮನುಜರ ನಿರ್ಯಾಣಪ್ರಾಪ್ತಿ ನಷ್ಟಜಾತಕಮೆನಿಪ್ಪ ಭೇದದಿನಖಿಳಾವನಿಯೊಳ್ ನೆಗಟ್ದಿರ್ಪಿರ್ಪತ್ತುನಾಲ್ಕುಮಧಿಕಾರದಿಂದೆ ಜಾತಕತಿಲಕಂ (ಜಾತತಿ. ೨೪-೩೫). [ನಿರ್ಯಾಣ+ಪ್ರಾಪ್ತಿ]

**ನಿರ್ಯಾಣಮಂಗಳ** (ನಾ). ಚರಮಗೀತೆ : ಪರಾಂತಃಕರಣಪ್ರವೇಶವುಳ್ಳ ಕವಿಯು ತನ್ನ ಕಾವ್ಯನಾಯಿಕೆಯ ನಿರ್ಯಾಣಮಂಗಳವನ್ನಿಂತು ಹಾಡಿದನು (ಕೃಷ್ಣಾಕು. ೧೧-೧೧).
[ನಿರ್ಯಾಣ+ಮಂಗಳ (=ಮಂಗಲ)]

**ನಿರ್ಯಾಣಹೊಂದು** (ಕ್ರಿ). ಸಾವನ್ನು ಹೊಂದು ; ಸಾಯು : ಆತನು . . .ಈಗ ಶ್ರವಣಬೆಳ್ಗೊಳವಿರುವ ಸ್ಥಳದಲ್ಲಿ ಜೈನಸಂನ್ಯಾಸಿಯಾಗಿ ತಪಸ್ಸು ಮಾಡಿ ನಿರ್ಯಾಣಹೊಂದಿದನು (ಭಾರದ. ೧೭೬).
[ನಿರ್ಯಾಣ+ಹೊಂದು$_1$(<ಪೊರ್ದು$_1$)]

**ನಿರ್ಯಾತ** (ಗು). ೧. ಹೊರಬಿದ್ದ ; ಹೊರಟುಹೋದ : ಅಂತು ಪರಿತ್ರಾಸ ನಿರ್ಯಾತ ಕಿರಾತಸಂಜಾತಮೊಡವರೆ ಪನ್ನತಿಕೆಯಿಂ ಬರ್ಪಾಗಳ್ (ರಾಜಶೇ. ೫-೧೨೦ ಪ). (ನಾ). ೨. ಹೊರದೇಶಕ್ಕೆ ಕಳಿಸುವ ಸರಕು ; ರಫ್ತು. 'ಆಯಾತ' ಪರಾ. [ಸಂ.]

**ನಿರ್ಯಾತಗೊಳಿಸು** (ಕ್ರಿ). ಒಂದು ದೇಶದಲ್ಲಿ ತಯಾರಾದ ವಸ್ತುವನ್ನು ಹೊರದೇಶಗಳಿಗೆ ಕಳುಹಿಸು ; ರಫ್ತುಮಾಡು : ವಿದೇಶಗಳಿಗೆ ೩ ಕೋಟಿ ಟನ್ ಅಕ್ಕಿಯನ್ನು ನಿರ್ಯಾತಗೊಳಿಸಲು ಸಾಕೆಂದು ತಜ್ಞರು ಲೆಕ್ಕ ಹಾಕಿದರು (ಪ್ರಹಾರ. ೭೪).
[ನಿರ್ಯಾತ+ಕೊಳ್$_1$+-ಇಸು$_3$]

**ನಿರ್ಯಾತನ** (ನಾ). ೧. ನ್ಯಾಸವಾಗಿಟ್ಟುಕೊಂಡಿದ್ದ ವಸ್ತುವನ್ನು ಅದರ ಒಡೆಯನಿಗೆ ಮರಳಿ ಒಪ್ಪಿಸುವುದು. ೨. ಉಡುಗೊರೆ ; ಕೊಡುಗೆ. ೩. ಸೇಡು ತೀರಿಸಿಕೊಳ್ಳುವಿಕೆ : "ನಿರ್ಯಾತನಂ—ಹಗೆ ತೀರಿಸಿಕೊಳ್ಳುವಿಕೆ, ದಾನ, ಬಚ್ಚಿಟ್ಟುಕೊಂಡದ್ದನ್ನು ಹಿಂದಕ್ಕೆ ಕೊಡುವಿಕೆ, ಸಾಲ ತೀರಿಸುವಿಕೆ"(ಸಿದ್ಧಾಂತಿ.೪೦೩). ೪. ಕೊಲ್ಲುವುದು; ವಧೆ. ೫. ಬೆಲೆ ; ಶುಲ್ಕ : "ನಿರ್ಯಾತನಂ=ಬೆಲೆ"(ಕಾಶಕ್ಯ. ೨೭೭).
[ಸಂ.]

**ನಿರ್ಯಾತವ್ಯಾಪಾರ** (ನಾ). ಒಂದು ದೇಶದಲ್ಲಿ ತಯಾರಾದ ವಸ್ತುವನ್ನು ಹೊರದೇಶಗಳಿಗೆ ಕಳುಹಿಸುವುದು ; ರಫ್ತುವ್ಯಾಪಾರ : ನಮ್ಮಣ್ಣ . . . ಬೇರೊಬ್ಬ ಪಾರ್ಟನರ್ ಸಂಗಡ ತೆಂಗಿನ ಕಾಯಿಯ ನಿರ್ಯಾತವ್ಯಾಪಾರ ಮಾಡುತ್ತಾರೆ (ಸಂಶಪ್ಯ. ೧೦೨) ; ಈ ಸ್ಥಾಪಕರು . . . ಆಯಾತ—ನಿರ್ಯಾತ ವ್ಯಾಪಾರವನ್ನು ಮತ್ತಿತರ ಆರ್ಥಿಕಸಂಸ್ಥೆಗಳನ್ನು ಆರಂಭಿಸುವ ಕೆಲಸವನ್ನು ಮಾಡಿದರು (ತಕ್ಕಡಿ.೭೧).
[ನಿರ್ಯಾತ+ವ್ಯಾಪಾರ]

**ನಿರ್ಯಾತಶುಲ್ಕ** (ನಾ). ರಫ್ತಾಗುವ ಸರಕಿಗೆ ಕೊಡಬೇಕಾದ ಸುಂಕ : ಸೆಣಬಿನ ಮೇಲಿನ ಮತ್ತು ಸೆಣಬಿನ ವಸ್ತುಗಳ ಮೇಲಿನ ನಿರ್ಯಾತಶುಲ್ಕದ ನಿವ್ವಳಉತ್ಪತ್ತಿಯ ಯಾವುದಾದರೂ ಭಾಗವನ್ನು

. . . ಭಾರತದ ಸಂಚಿತನಿಧಿಯಿಂದ ಕೊಡತಕ್ಕುದು (ಭಾಘಾನ. ೧೫೫).

[ನಿರ್ಯಾತ + ಶುಲ್ಕ]

**ನಿರ್ಯಾಪಕಾಚಾರ್ಯ** (ನಾ). [ಜೈನ] ಸಲ್ಲೇಖನವ್ರತವನ್ನು ಉಪದೇಶಿಸುವ ಗುರು,—ಆಚಾರ್ಯ : ಆಗಳಾ ಸ್ವಯಂಬುದ್ಧಂ ನಿರ್ಯಾಪಕಾಚಾರ್ಯನಾಗಿ . . . ಮಹಾಬಲನಂ ಜಾತರೂಪಧರನಂ ಮಾಡಿ (ಆಪು. ೨-೫೧ ಪ) ; "ಸಲ್ಲೇಖನವ್ರತವನ್ನು ಅಂಗೀಕರಿಸುವ ಮುನಿಗಳಿಗೆ ಸಲ್ಲೇಖನವನ್ನು ಉಪದೇಶಮಾಡುವ ಮತ್ತು ಅದನ್ನು ಸಾಧಿಸಿ ಕೊಡುವವರಿಗೆ ನಿರ್ಯಾಪಕಾಚಾರ್ಯರೆಂದು ಹೆಸರು" (ಆಪು. ಕೋಶ). [ಸಂ.]

**ನಿರ್ಯಾಮ** (ನಾ). ೧. ನಾವಿಕ; ಅಂಬಿಗ. ೨. ಹಡಗಿನ ಚಾಲಕ; ಕರ್ಣಧಾರ : "ನಿರ್ಯಾಮಃ, ಕರ್ಣಧಾರಕಃ—ಈ ೨ ಕೂವಕಂಬಿಗಂ" (ಹಲಾಯು. ೧೦೮-೩೩). [ಸಂ.]

**ನಿರ್ಯಾಮಕ** (ನಾ). ೧. ಸಹಾಯ ಮಾಡುವವನು; ಸಹಾಯಕ. ೨. = ನಿರ್ಯಾಮ ೨ : "ಪೋತ ನಿರ್ಯಾಮಕಂ ಕರ್ಣಧಾರನೆನಲ್ಕಾ ತುದಿಯ ಕೂಕಂಭದವನಕ್ಕು" (ಮಂಗರಾ. ೧೨೦-೪). [ಸಂ.]

**ನಿರ್ಯಾಸ** (ನಾ). ೧. ಮರದಿಂದ ಒಸರುವ ಅಂಟು ; ಮರದ ರಸ ; ಗೋಂದು : ಪರಿರಾಜತ್ಸಹಕಾರಸಾಂಪ್ರರಸಮುಂ ಸಪ್ತಚ್ಛದೋದ್ಗಂಧಿಬಂಧುರನಿರ್ಯಾಸಮುಮಾಸ್ರವತ್ಸರಳಸಾರಾಸಾರಮುಂ ಹೇಮತಾಮರಸಾಂಭಃಕಣಮುಂ ನಿವರ್ತನೆ ವರಂ ತಾನಾ ಮದಂ ಸೀಧುಸೀಕರಮಾದುಗ್ರವಸಂತದಂತಿ ಜೆಣಜು ತ್ತೊಲ್ದಿರ್ದಗಲ್ದಿರ್ದೊರಂ (ಶಾಂತಿಪು. ೭-೧೩೭) ; ಕೆಲಬಲದ ಮಾಮರದೊಳಿಪ್ಪ ನಿರ್ಯಾಸಮಂ ತೆಗೆದು ಕಿಱುವೆರಳುಗುರ್ಗೊನೆಯಿಂದೆ ತಿದ್ದಿ ಬರೆದು . . . ಮಂತ್ರಿಸುತೆ ತೊಲಗಿ ಬರುತಿರ್ದಳು (ಜೈಮಿಭಾ. ೩೦-೨೯). ೨. ಮಂದವಾದ ದ್ರವಪದಾರ್ಥ : ತಳಿರಂ ತೂಗಿ ಪರಾಗಮಂ ಪೊರೆದು ಪೂನೀರಂ ತಡಂಗೂಡಿ ಗುಗ್ಗುಳನಿರ್ಯಾಸಮನಾಂತು . . . ಏಂ ಗಂದಿಗರಂತೆ ಬಂದೊಲೆದುದೋ ಮತ್ತೊಂದು ಮಂದಾನಿಲಂ (ಅರ್ಥನೇ. ೫-೯೭). ೩. ಕುದಿಸಿ ತೆಗೆದ ಅರ್ಕ ; ಸಾರ ; ಕಷಾಯ. [ಸಂ.]

**ನಿರ್ಯೂಹ** (ನಾ). ೧. ಏನನ್ನಾದರೂ ತೂಗುಹಾಕುವುದಕ್ಕಾಗಿ ಗೋಡೆಯಲ್ಲಿ ಮಾಡಿದ (ಆನೆಯ ಕೋರೆಗಳಂತಿರುವ) ಗೂಟ ಮೊದಲಾದ ಸಾಧನ. ೨. ತಲೆಯಲ್ಲಿ ಧರಿಸುವ ಆಭರಣ ; ಶಿರೋಭೂಷಣ ; ಬಾಸಿಂಗ. ೩. ಬಾಗಿಲು ; ದ್ವಾರ. ೪. ಸಾರ ; ಕಷಾಯ : "ನಿರ್ಯೂಹಃ—ಬಾಗಿಲು, ಮಂಡೆಯೊಳು ಮುಡಿದ ಪೂಸರ, ಕಷಾಯ, ಗಜದಂತ" (ಸಿದ್ಧಾಂತಿ. ೪೨೮). [ಸಂ.]

**ನಿರ್ಯೋಗ** (ನಾ). ೧. ಸಂಬಂಧವಿಲ್ಲದಿರುವುದು ; ಸಂಬಂಧ ತಪ್ಪಿರುವುದು. ೨. ಶೃಂಗಾರ ; ಅಲಂಕಾರ. ೩. ದನಗಳನ್ನು ಕಟ್ಟುವ ಹಗ್ಗ. [ಸಂ.]

**ನಿರ್ಯೋಚನೆ** (ನ್ಹಾ). ಯೋಚನೆಯಿಲ್ಲದಿರುವಿಕೆ ; ನಿಶ್ಚಿಂತೆ : ನಾಗಣ್ಣ ನಿರ್ಯೋಚನೆಯಿಂದಲೇ ಹೇಳಿದ (ಜನಜೀ. ೫೧).

[ನಿರ್– + ಯೋಚನೆ]

**ನಿರ್ರನೆ** (ಅ). ಒಂದು ಅನುಕರಣಾವ್ಯಯ : ಬರ್ರನೆ ಬೆರೆಯುತ ನಿರ್ರನೆ ನಿಲ್ಲುತ ಚಿರ್ರನೆ ಚೀರುತಲಿ (ಹಪಚ. ೧೯). [ನಿರ್$_0$ + –ಅನೆ$_1$]

**ನಿರ್ಲಕ್ಷ** (ನಾ). ಅನಾದರ ; ಉಪೇಕ್ಷೆ : ಯಾವ ಕೆಲಸವೇ ಆದರೂ ನಿರ್ಲಕ್ಷದಿಂದ ಮಾಡಬಾರದು (ರೂಢಿ). 'ನಿರ್ಲಕ್ಷಿಸು' ಪರಾ.

[<ನಿರ್ಲಕ್ಷ್ಯ]

**ನಿರ್ಲಕ್ಷಿಸು** (ಕ್ರಿ). ಕಡೆಗಣಿಸು; ಲಕ್ಷ್ಯ ಕೊಡದಿರು ; ಉಪೇಕ್ಷಿಸು: ಪಠ್ಯವಸ್ತುವಿನ ಹಲವು ಭಾಗಗಳಿಗೆ ಹೆಚ್ಚಿನ ಗಮನವನ್ನೂ ಕಾಲವನ್ನೂ ವಿನಿಯೋಗಿಸಿ ಇತರ ಭಾಗಗಳನ್ನು ನಿರ್ಲಕ್ಷಿಸಬಹುದು (ಶಿಕ್ಷದ. ೨೫೭) ; ಅವರನ್ನು ನಿರ್ಲಕ್ಷಿಸಿದ್ದೆವು, ಕೊಟ್ಟಿಗೆಗೆ ನಮ್ಮನ್ನು ದೂಡಿದವನು ಇವನೇ ಎಂಬುದು ಎಲ್ಲರ ಅರಿವಿಗೂ ಬಂದಿತ್ತು (ಹಸುಹೊ. ೩೮೭).

[ನಿರ್ಲಕ್ಷ + –ಇಸು$_3$]

**ನಿರ್ಲಕ್ಷ್ಯ** (ಗು). ೧. ಗಮನಕ್ಕೆ ಬಾರದ ; ಕಣ್ಣಿಗೆ ಬೀಳದ. (ನಾ). ೨. ಅಸಡ್ಡೆ ; ಅನಾದರ ; ಉಪೇಕ್ಷೆ : ಹಿಡಿದ ಕಾರ್ಯದಲ್ಲಿ ನಿರ್ಲಕ್ಷ್ಯ ತೋರಿಸುವುದು ಸರಿಯಲ್ಲ (ರೂಢಿ). ೩. ಉದಾಸೀನವಾಗಿರುವ ವ್ಯಕ್ತಿ ; ಲಕ್ಷ್ಯವಿಲ್ಲದಿರುವ ವ್ಯಕ್ತಿ : ಮಾತು ಮಾತಿಗೂ ನೀನು ನಿರ್ಲಕ್ಷ್ಯನಾಗಿ ವರ್ತಿಸುವಿ (ಹಳ್ಳಿಹಾ. ೧೦೦). ೪. ಕಾಣದಿರುವವನು ; ಅಗೋಚರನಾದವನು : ನಿರ್ಲೇಪ ನಿರ್ಜಾತ ನಿರ್ಲಯಂ ನಿರಾಕಾರ ನಿರ್ಲಕ್ಷ್ಯ (ಏಕೋಪು. ೫-೭೫).

**ನಿರ್ಲಕ್ಷ್ಯಮಾಡು** ಕಡೆಗಣಿಸು ; ಅಸಡ್ಡೆಮಾಡು : ನನ್ನನ್ನು ತಾವು ನಿರ್ಲಕ್ಷ್ಯ ಮಾಡಿದರೂ ನಾನು ತಮ್ಮ ಆಚಾರ್ಯತ್ವವನ್ನು ಗೌರವಿಸಿದೆನು (ಛೇಷ್ಮಜ. ೭೩). [ಸಂ.]

**ನಿರ್ಲಜ್ಜ** (ಗು). ೧. ನಾಚಿಕೆಯಿಲ್ಲದ ; ಲಜ್ಜೆಯಿಲ್ಲದ. (ನಾ). ೨. ನಾಚಿಕೆಯಿಲ್ಲದವನು; ಲಜ್ಜೆಗೇಡಿ; ನಾಚಿಕೆಗೇಡಿ: ಎಂತುಮಾ ನಿರ್ಲಜ್ಜಂ ಬತ್ತಲಿಗನಪ್ಪ ನವಣನಲ್ಲಿಗೆವೋಗಿ ಕಂಡು ನುಡಿದು ಕಾಡಿಬರ್ಪಂ ಜಾ ಮಗಳೆ (ವಡ್ಡಾರಾ. ೨೨-೨೧) ; ಗೋವಳರು ನಿರ್ಲಜ್ಜರದಱೊಳು ನೀವು ಗರುವರು ರಾಜಪುತ್ರರು ನಾವ ಬಯಸುವನೊಡನೆ ಬಂದಿರಿ (ಕುಮ್ಯಾಸ. ೨-೮೩) ; ನಿನ್ನನ್ನು ಇದೇ ಕಂಬಕ್ಕೆ ಕಟ್ಟಿಸಿ ಬೆತ್ತದಿಂದ ಹೊಡೆಸುವೆ, ನಿರ್ಲಜ್ಜ (ಶ್ರೀಶಾಂತ. ೩೮). [ಸಂ.]

**ನಿರ್ಲಜ್ಜಕ** (ನಾ). = ನಿರ್ಲಜ್ಜ ೨ : ಇನಜಂ . . . ವೃಷರಾಶಿಯೊಳ್ ನೆಲಸೆ ವರ್ಜ್ಯಂ . . . ಒಂದಿ ನಿಲೆ ಸೌಮ್ಯಕ್ಷೇತ್ರದೊಳ್ ದುಃಖಿತಂ ಧನಹೀನಂ ಸ್ಖಲಿತಾಂತರಂಗನಸುತಂ ನಿರ್ಲಜ್ಜಕಂ ರಕ್ಷಕಂ (ಜಾತತಿ. ೧೭-೩೨). [ಸಂ.]

**ನಿರ್ಲಜ್ಜಿಕೆ** (ನಾ). = ನಿರ್ಲಜ್ಜೆ : ಬಿಸುಡಿರೆ ನೀವಜ್ಜ ನಿಮ್ಮ ನಿರ್ಲಜ್ಜಿಕೆಯಂ (ಅಜಿಪು. ೨-೧೦೦). [ನಿರ್ಲಜ್ಜ + –ಇಕೆ]

**ನಿರ್ಲಜ್ಜೆ** (ನಾ). ನಾಚಿಕೆಯಿಲ್ಲದಿರುವುದು ; ಲಜ್ಜೆಗೇಡಿತನ : ದೆಸೆಗಳೇ ವಾಸಸ್ಸು ರಾಜ್ಯಪ್ರಸರಣವು ನಿರ್ಲಜ್ಜೆ ಜಟೆ ರಂಜಿಸುವ ಧೂಳೀದೂಸರದ ಗಂಗಾಧರನವೋಲು ಎಸೆವ ಸುತರುಗಳಿಲ್ಲದಿರೆ ಶೋಭಿಸುವುದೇ ಸಂಸಾರವೆಂಬುದು (ಕುಮ್ಯಾಉ. ೪-೧೧೧) ; ಲಜ್ಜೆಯೆ ಗಣಿಕೆಗೆ ನಾಶನಿಮಿತ್ತವು ನಿರ್ಲಜ್ಜೆ ಸತಿಯರಿಗಳಿವು (ಇಂಚಾಪ.೧೪೩-೨). [ಸಂ. ನಿರ್ಲಜ್ಜ]

**ನಿರ್ಲಪಿತ** (ಗು). ಮಾತಿಲ್ಲದ ; ಮೌನದಿಂದ ಕೂಡಿದ : ವಿಫಲವಾದುದೆ ಜನಕಭೂಪನ ತಪದ ಫಲವೆಂದಿಷ್ಟಜನ ನಿರ್ಲಪಿತಚಿಂತಾಭರದಲಿರ್ದುದು ಬೆರಳ ಬೆಜಿಗಿನಲಿ (ತೊರರಾ. ೧-೧೫-೧೭). [ಸಂ.]

**ನಿರ್ಲಯ** (ನಾ). ಅಂತ್ಯವಿಲ್ಲದವನು; ಲಯವಿಲ್ಲದವನು : ನಿರ್ಲಯ ಲಯಕಾಲ ನಾಯುಧಕರಾಲ ಕರಾಲ ಕರಾಲಸದ್ಭುಜಾ (ರಾಜಶೇ. ೧೩-೫೨).

[ಸಂ.]

**ನಿರ್ಲಿಂಗ** (ಗು). ಯಾವ ಲಿಂಗಕ್ಕೂ ಸೇರದ ; ಪುಲ್ಲಿಂಗ, ಸ್ತ್ರೀಲಿಂಗ ಜಾತಿಗಳೆರಡಕ್ಕೂ ಸೇರದ ; ಲಿಂಗರಹಿತ : "ಪುಂಸ್ತ್ರೀತ್ವರಹಿತ ; ಲಿಂಗರಹಿತ ; ನಿರ್ಲಿಂಗ" (Asexual. ಇಂಕನಿ). 'ನಿರ್ಲಿಂಗ ಹೂವು' ಪರಾ. [ಸಂ.]

**ನಿರ್ಲಿಂಗಜನನ** (ನಾ). ಪುರುಷಲಿಂಗ ಸಂಪರ್ಕವಿಲ್ಲದೆ ಆಗುವ ಹುಟ್ಟು,— ಉತ್ಪತ್ತಿ : ಹಲವು ಕೀಟಗಳಲ್ಲಿ ಹಾಗೆ ಗರ್ಭಾಧಾನವಿಲ್ಲದೆ ಹೆಣ್ಣು ಕೀಟ ಮರಿಗಳನ್ನು ಉತ್ಪತ್ತಿಮಾಡುತ್ತದೆ. ಇದು ನಿರ್ಲಿಂಗಜನನ (ಕೀಟಜೀ. ೯೫). [ನಿರ್ಲಿಂಗ + ಜನನ]

**ನಿರ್ಲಿಂಗಹೂವು** (ನಾ). ಲಿಂಗರಹಿತವಾದ ಹೂವು ; ಪುಂಕೇಸರವಾಗಲೀ ಸ್ತ್ರೀಕೇಸರವಾಗಲೀ ಇಲ್ಲದ ಹೂವು : ಎರಡು ಲಿಂಗಗಳಿಲ್ಲದ ಹೂವುಗಳನ್ನು ನಿರ್ಲಿಂಗಹೂವುಗಳೆಂದು (Neuter flower) ಕರೆಯುತ್ತಾರೆ (ಸಸ್ಯಶಾ. ೫೩). [ನಿರ್ಲಿಂಗ + ಹೂವು (<ಪೂ$_{2}$)]

**ನಿರ್ಲಿಖಿತ** (ಗು). (ವಿಧಿ) ಬರಹವಿಲ್ಲದ ; ಲಿಖಿತವಿಲ್ಲದ : ನಿರ್ಲಿಖಿತ ಭಾಲ ಕೈವಲ್ಯಕಾಂತಾಲೋಲ ನಿರ್ಲೇಪ ನಿರ್ಜಾತ ನಿರ್ಲಯ (ಏಕೋಪು. ೫-೭೫). [ಸಂ.]

**ನಿರ್ಲಿಪ್ತ** (ಗು). ೧. ಯಾವುದಕ್ಕೂ ಅಂಟದ ; ಅನಾಸಕ್ತವಾದ: ನಿರ್ಲಿಪ್ತ ಯೋಗಿನಿಯಂತೆ ಸುಶೀಲೆಯು ಬೆಳೆಯುತ್ತಿದ್ದಳು (ಸಮಜೀ. ೯೬೬) ; ಬಹುಮಂದಿಗೆ ಆ ದೃಢಸಂಕಲ್ಪವಾಗಲಿ, ನಿರ್ಲಿಪ್ತಜೀವನದರ್ಶನವಾಗಲಿ ನಿಲುಕಲಾರದ ಆದರ್ಶವೆಂಬುದರಲ್ಲಿ ಸಂಶಯವಿಲ್ಲ (ಶಿಕ್ಷದ. ೬೬೪) ; ಆ ವಸ್ತು ನಮ್ಮ ನಿರ್ಲಿಪ್ತ ಪರಿಭಾವನೆಯ ಫಲವಾಗಿ ಒಂದು ರೀತಿಯ ಸಂತೋಷವನ್ನು ನೀಡುವುದರಿಂದ ಸುಂದರವಾಗುತ್ತದೆ (ಸೌಂದಸ. ೬೩). (ನಾ). ೨. ಯಾವ ಬಗೆಯ ಸಂಬಂಧವನ್ನೂ ಹಚ್ಚಿಕೊಳ್ಳದವನು ; ಅನಾಸಕ್ತಿಯಿಂದ ಕೂಡಿದವನು ; ಅನಾಸಕ್ತ : ಆಳದಲಿ ನಿರ್ಲಿಪ್ತ ಮೇಲೆ ನಿಯತಿಕ್ಲುಪ್ತ ಲೀಲಾಪ್ರಿಯಂ ಬ್ರಹ್ಮ (ಮಂಕುಕ. ೯೪) ; ಇದನ್ನು ನೀವುಗಳು, ಸೂಕ್ಷ್ಮವಾಗಿ ಹಾಗೂ ನಿರ್ಲಿಪ್ತರಂತೆ ಇದ್ದುಕೊಂಡು ಗಮನಿಸಬೇಕು (ಶಾಂತಲಾ. ೨೨). [ಸಂ.]

**ನಿರ್ಲಿಪ್ತತೆ** (ನಾ). ಯಾವುದರ ಬಗೆಗೂ ಆಸಕ್ತಿಯನ್ನು ಇಟ್ಟುಕೊಳ್ಳದಿರುವುದು ; ನಿರಪೇಕ್ಷತೆ ; ಅನಾಸಕ್ತಿ : ಲೋಕವ್ಯಾಮೋಹಗಳ ನಡುವೆ ಮಾನವ ನೆಲಸಿದ್ದರೂ ನಿರ್ಲಿಪ್ತತೆ ನಿರಭಿಮಾನಗಳಿಂದ ಬಾಳುತ್ತ, ಕೊನೆಗೆ ಮಹಾದೇವನೊಡನೆ ಸಮರಸವಾಗಿ ಬೆರೆಯುವನು (ಶಕ್ತಿವಿ. ೨) ; ಎಡ್ವಿನ್‌ನ ವ್ಯಕ್ತಿತ್ವದಲ್ಲಿ ಕತೆಯ ಬೌದ್ಧಿಕತೆಯನ್ನು ತೂಗಿಸಿಕೊಂಡು ಹೋಗುವ ನಿರ್ಲಿಪ್ತತೆಯಿಲ್ಲ (ಹೊಸಕ್ಷಿ. ೨೬೧). [ಸಂ. ನಿರ್ಲಿಪ್ತತಾ]

**ನಿರ್ಲಿಪ್ತವೃತ್ತಿ** (ನಾ). ಯಾವುದಕ್ಕೂ ಅಂಟಿಕೊಳ್ಳದಂತೆ ಇರುವ ವೃತ್ತಿ ; ಅನಾಸಕ್ತವಾಗಿರುವಿಕೆ: ಮಾನವನಿಗೆ ನಿರ್ಲಿಪ್ತವೃತ್ತಿಯಿಂದ ಅವನ ಅಂತರಂಗದ ವಿಚಾರ-ಭಾವನೆಗಳ ಸಮೀಕ್ಷೆ ಶಕ್ಯವಾಗತೊಡಗುತ್ತದೆ (ಕರ್ನಾಟ. ೮). [ನಿರ್ಲಿಪ್ತ + ವೃತ್ತಿ]

**ನಿರ್ಲೇಪ** (ಗು). ೧. ಯಾವುದಕ್ಕೂ ಅಂಟಿಕೊಳ್ಳದ: ಅಯ್ಯಾ ನಿಮ್ಮ ಶರಣರ ನಿಲವ ಸ್ವರ್ಗ ಮರ್ತ್ಯ ಪಾತಾಳದೊಳಗೆ ಬಲ್ಲವರಿಲ್ಲವಯ್ಯಾ ಅಘಟಿತಘಟಿತರು ಅಖಂಡಮಹಿಮರು ನಿಜದಲ್ಲಿ ನಿರ್ಲೇಪ ಭಾವುಕರು (ಬಸಹೆ. ೬೯-೧೯೮). (ನಾ). ೨. ಯಾವುದಕ್ಕೂ ಅಂಟಿಕೊಳ್ಳದವನು ; ಬಂಧಗಳಿಂದ ದೂರನಾದವನು : ಕರ್ಮ ತಾನೇನಾದಡಾಗಲಿ ನಿರ್ಮಮತೆಯಲಿ ಮಾಡಿ ನಮ್ಮಲಿ ನಿರ್ಮಿಸಲು ಕಲಿಪಾರ್ಥ ನೀ ನಿರ್ಲೇಪನಹೆಯೆಂದ (ಕುವ್ಯಾಭೀ. ೩-೫೩) ; ಕಲ್ಲ ರಾಶಿಯ ಮೇಲೆ ನಿಂದನು ಮತ್ತೆ ತನ್ನಯ ಲೀಲೆಯಲಿ ನಿರ್ಲೇಪನಿದ್ದನು ನಗುತ ಪ್ರಭುರಾಯ (ಪ್ರಭುಲೀ. ೧೩-೧೮) ; ಪಾದರಸ ಕರತಳದಲ್ಲಿರುತದನಂಟದಂದದಿ ತಿಳಿವಿಗರು ಸಂಸೃತಿಯಲಿರೆ ನಿರ್ಲೇಪರು (ಗಗಶಾ. ೧೫-೨೫). [ಸಂ.]

**ನಿರ್ಲೇಪಕ** (ನಾ). ಯಾವುದಕ್ಕೂ ಅಂಟಿಕೊಳ್ಳದವನು ; ಯಾವುದರಲ್ಲೂ ಆಸಕ್ತಿಯಿಲ್ಲದವನು : ಸಂಚಲವಿಲ್ಲದೆ ನಿರೀಕ್ಷಿಸಲು ಪಂಚ ಪಂಚೀಕೃತಿಯ ಪ್ರಪಂಚ ಪರಿಹರವಾಗಿ ನಿಷ್ಪ್ರಪಂಚ ನಿರ್ಲೇಪಕನಾದೆನು ಕಾಣಾ (ಸಿದ್ಧೇಪ. ೩೩-೮೫). [ಸಂ.]

**ನಿರ್ಲೇಪಗೈ** (ಕ್ರಿ). ಯಾವುದಕ್ಕೂ ಅಂಟಿಕೊಳ್ಳದಂತೆ ಇರು ; ದೂರಮಾಡು : ಈ ಪರಿಯನರಿದೆರಡನೂ ನಿರ್ಲೇಪಗೈದನೆ ಮುಕ್ತನು (ಬಜ್ಜಪು. ೮೬-೪೭). [ನಿರ್ಲೇಪ + ಗೈ (<ಕೆಯ್$_{1}$)]

**ನಿರ್ಲೇಪಿ** (ನಾ). ೧. ಯಾವ ಲೇಪವೂ ಇಲ್ಲದವನು ; ಪರಮಾತ್ಮ. ೨. ಪರಮಾತ್ಮನಲ್ಲಿ ಒಂದಾಗುವವನು,—ಐಕ್ಯವಾಗುವವನು; ಸಾಯುಜ್ಯ ಹೊಂದುವವನು: ಗುಹೇಶ್ವರಲಿಂಗದಲ್ಲಿ ನಿರ್ಲೇಪಿಯಾದಲ್ಲದಿಲ್ಲ ಕಾಣಾ (ಅವಚಂ. ೨೩೭-೧೦೭೪). [ಸಂ. ನಿರ್ಲೇಪಿನ್]

**ನಿರ್ಲೋಟಣ** (ನಾ). ಕೆಡಹುವವನು ; ನಾಶಮಾಡುವವನು : ಏಕಾಂಗವೀರ ಸಂಗ್ರಾಮಧೀರ ಪೊಂಬುಚ್ಚ ನಿದ್ಧಾರ್ಟಣ ಸಾವಿಮಲೆ ನಿರ್ಲೋಟಣ ವೈರಿಕಾಳಾನಳ (ಎಕ. II, ೧೪೩-೩೮ ; 1131). [<ಸಂ. ನಿರ್ಲೋಟನ]

**ನಿರ್ಲೋಟಿಸು** (ಕ್ರಿ). ಸೀಳು ; ಖಂಡತುಂಡು ಮಾಡು ; ನಾಶಮಾಡು : ಆ ಚಪಳಂ ಲಪನಕರತಳ ವಿಕೃತಿಸಂಜ್ಞೆಗಳಿಂ ಗೌತಮಾಖ್ಯಾನ ಮನವಜ್ಞೆಗೆಯ್ದು ಮತ್ತಂ ವಚನನಿಚಯದಿಂ ನಿರ್ಲೋಟಿಪ ಪಾಟವಮನವಳಂಬಿಸಿ (ವರ್ಧಪು. ೧೬-೯ ವ) ; ಬೇಟೆದಲಿ ಮೂವಣ್ಣದಾಬೆಯ ಕೂಟದಲಿ ಕುಚಿಹಾಗಿ ಖಿಂಗೆ ನಿರ್ಲೋಟಿಸುವ ನಿಜದಿಟ್ಟಬೊಮ್ಮವಿದು (ಕುವ್ಯಾಸ. ೯-೧೭); ಕೂಟಸ್ಥ ನಾನು ನಿರ್ಲೋಟಿಸುವೆ ಕಲ್ಪಶತಕೋಟಿ ಪ್ರಳಯಯುಗಂಗಳನು ಲೀಲೆಯಲಿ (ಲಕ್ಷ್ಮಭಾ. ೬-೨-೩೬). [ನಿರ್ಲೋಟಣ + -ಇಸು$_{3}$]

**ನಿರ್ಲೋಭ** (ನಾ). ೧. ಆಸೆಯಿಲ್ಲದಿರುವುದು; ಲೋಭರಹಿತತೆ. ೨. ಆಸೆ ಮಾಡದ ವ್ಯಕ್ತಿ ; ಲೋಭಕ್ಕೆ ಒಳಗಾಗದವನು. [ಸಂ.]

**ನಿರ್ಲೋಭಿ** (ನಾ). ಲೋಭವಿಲ್ಲದವನು. [ಸಂ. ನಿರ್ಲೋಭಿನ್]

**ನಿರ್ಲ್ವಯನಿ** (ನಾ). ಹಾವಿನ ಪೊರೆ. [ಸಂ. ನಿರ್ಲ್ವಯನೀ]

**ನಿರ್ವಂಗ** (ನಾ). (?) : "ಉರದಿಂದ ಮೇಲಿಪ್ಪ ಸುಚಿ ರೋಚಮಾನ ನಡುಗೊರಲ ಸುಚಿ ದೇವಮಣಿ ತಳಹೀನನೇ ಕಾಂಡ ಖುರ ಕಂಠಕಟಿಯಡಿಸ್ತನಿ ಶೃಂಗಿಯಹ ಕಷ್ಟ ಕೊಲಗೆ ನಿರ್ವಂಗನಕ್ಕುಕ" (ಮಂಗರಾ. ೮೩-೨೦). [ ? ]

**ನಿರ್ವಂಚಕ** (ಗು). ೧. ವಂಚನೆಯಿರದ ; ನಿಷ್ಕಪಟವಾದ : ಭಕ್ತನಾದಡೆ ನಿರ್ವಂಚಕಭಾವದಿಂದೆ ತ್ರಿವಿಧಕ್ಕೆ ತ್ರಿವಿಧಪದಾರ್ಥವನರ್ಪಿಸಬೇಕು (ಅಖಂಡೇ. ೮೦-೬೮). (ನಾ). ೨. = ನಿರ್ವಂಚನೆ : ನಾವು ಶರಣರೆಂದು ಒಪ್ಪವಿಟ್ಟು ನುಡಿವ ಅಣ್ಣಗಳಿರಾ . . . ಸತಿ ಸುತರಿಗೆ ಸದಾಚಾರ ಸನ್ಮಾರ್ಗವ ತೋರಿ ನಿರ್ವಂಚಕದಿಂದ ಆಚರಿಸಬಲ್ಲಾತನೇ ಅಚ್ಚಶರಣ ನೋಡಾ (ಮಡಿಮಾ. ೬-೬); ಪಂಚವದನನ ಭಕ್ತರಿಗೆ ನಿರ್ವಂಚಕದೊಳರ್ಥಂಗಳೆಲ್ಲವನಂಚಿತಪ್ರಿಯದಿಂದವಾರಾಧಿಸಿ (ಬಸಪು. ೨೮-೫). ೩. ವಂಚನೆ ಮಾಡದವನು; ಪ್ರಾಮಾಣಿಕ; ನಿಷ್ಕಪಟಿ: ವಂಚಿಸುವ ಸತಿ ಸುತ ಬಂಧುಗಳು ಮೊದಲಾದ ಲೋಕವ ನಂಬಿ ನಿರ್ವಂಚಕರಪ್ಪ ಗುರುಲಿಂಗ ಜಂಗಮವ ವಂಚಿಸಿ ನರಕಕ್ಕೀವರನೇನೆಂಬೆನಯ್ಯ (ಉರಿಪ. ೧೧೨-೯೮); ಸಾಮಾನ್ಯರಿಗೆ ಭಾವಿಸುವಡತಿನಿರ್ವಂಚಕನು ಸಕಲಪ್ರಮಥರೊಳಗೆ (ಬಸಪು. ೧-೩೧). [ಸಂ.]

**ನಿರ್ವಂಚಕತ್ವ** (ನಾ). = ನಿರ್ವಂಚನೆ : ಸತ್ಯಶುದ್ಧಕಾಯಕವ ಮಾಡಿ ನಿರ್ವಂಚಕತ್ವದಿಂದ ಸಮರ್ಪಿಸಿ ಅತಿಭೃತ್ಯನಾಗಿ ಆಚರಿಸುವರೇ ಲಿಂಗಾಂಗಿಗಳು ನೋಡಾ (ಮಡಿಮಾ. ೧೧-೧೩); ನಿರುತದಲಿ ಮಾಡುವ ಬಸವವಿಭುಗರರೆ ತನ್ನೊಡಲೆಯ್ದೆ ಭಕ್ತಿಯೆ ಪರಿಕಿಪಡೆಯಿನ್ನಾರೊಳರು ನಿರ್ವಂಚಕತ್ವದಲಿ (ಬಸಪು. ೮-೨೨). [ಸಂ.]

**ನಿರ್ವಂಚನೆ** (ನಾ). ವಂಚನೆಯಿಲ್ಲದಿರುವುದು ; ನಿಷ್ಕಪಟತೆ : ಎಮ್ಮ ನಲ್ಲನಪ್ಪ ನಲ್ಲರಿಗೆ ನಲ್ಲನು ವಂಚನೆಗೆ ನೆರೆಯನು ನಿರ್ವಂಚನೆಗೆ ನೆರೆವನು (ಉರಿಪ. ೧-೧) ; ವಿಶ್ವಾಸವೇ ಭಕ್ತಿ ಗುರುಲಿಂಗಜಂಗಮ ಒಂದೆಂದರಿವುದೇ ಜ್ಞಾನ ತ್ರಿವಿಧದಲ್ಲಿ ನಿರ್ವಂಚನೆಯೇ ವೈರಾಗ್ಯ ಪ್ರಸಾ

ದವೇ ಮುಕ್ತಿ (ಉರಿಶ. ೧೨೪–೧೧೪); ಗೊತ್ತಿದ್ದರೆ ನಿರ್ವಂಚನೆಯಿಂದ ಉತ್ತರ ಕೊಡ್ತೀನಿ (ವೀರಯೋ.೮೩). [ಸಂ. ನಿರ್ವಂಚನಾ]

**ನಿರ್ವಂದ** (ನಾ). ೧. ಬಲಾತ್ಕಾರ; ಒತ್ತಾಯ; ನಿರ್ಬಂಧ: ಮದಾಂಧಗಂಧಸಿಂಧುರದ ಬಟಿಾಯಂ ನಿರ್ವಂದದಿಂ ತಗುಳ್ವುದುಂ (ಪಂಪಭಾ. ೮–೩೭ ವ); ತಂದೆ ಕಡಂಗಿ ಕಲ್ಪಿಸುವ ಕಲ್ಪಿಯನೊಲ್ಲದೆ ತಾಯ್ಮಗುಟ್ಟು ನಿರ್ವಂದದಿನೆಯ್ದಿ ಬಗ್ಗಿಸುವ ಬಗ್ಗಣೆಗಳ್ಗದೆ . . . ದಕ್ಕುಂದಲೆವಾಯ್ವರ್ (ಸುಕುಮಾ. ೨–೮). ೨. ಹಟ; ಛಲ: ಒಂದು ಪರ್ವದ ಶಿಲಾತಳದೊಳಿರ್ವರುಂ ಕರ್ವಂ ಬಿತ್ತಿ ನಿರ್ವಂದದೆ ನೀರ್ವೊಯ್ಯುತ್ತಿರೆ (ನೇಮಿಪು. ೧೪–೧೦೩ ವ). ೩. ಅತಿಶಯವಾದ ಪ್ರಯತ್ನ: ಸರ್ವಾರ್ಥಸಿದ್ಧಿಗಿದು ದಲಗುರ್ವಿನ ನಿಶ್ರೇಣಿಯೆಂಬ ತೆಱದೇಱದನಂದುರ್ವಿಗಿಡೆ ಮೋಹನೀಯಂ ನಿರ್ವಂದದೆ ಬಟಿಾಯಮುಪಶಮಶ್ರೇಣಿಯುಮಂ (ಚಂದ್ರಪು. ೧೧–೨೫). [<ಸಂ. ನಿರ್ಬಂಧ]

**ನಿರ್ವಂದಿ** (ನಾ). ಅಗುಳಿ; ಕೀಲು (?): ಶಂಕುವೆಂದುಕೊಱಡುಂ ನಿ(ಗಿ)ರ್ವಂದಿಯುಮುಳ್ಳುಂ(ಶಸುದ. ಪು. ೨೬೭ ಅಡಿಟಿ) 'ಗಿರ್ವಂದಿ' ಪಠಾ. [?]

**ನಿರ್ವಂಶ** (ಗು). ೧. ಮಕ್ಕಳಿಲ್ಲದ; ಸಂತಾನರಹಿತ. (ನಾ), ೨. ಸಂತಾನವಿಲ್ಲದುದು; ವಂಶವೇ ಇಲ್ಲದಂತಾದುದು: ಹಂಸಡಿಬಿಳರ ಪೌಂಡ್ರಕರ ನಿರ್ವಂಶವೆನೆ ಸವಱದೆವು (ಕುಪ್ಯಾ ಸ. ೨–೨೪); ತನಗಿದಿರಾದ ಮನ್ನೆಯರ ತೊತ್ತಳಂದುಳಿದು ನಿರ್ವಂಶಮಂ ಮಾಡುವೆನೆನುತ್ತ . . . ದಾಳಿಯಿಟ್ಟು (ಸಮ್ಯಕಾ. ೨–೯). ೩. ಸಂತಾನವಿಲ್ಲದ ವ್ಯಕ್ತಿ; ವಂಶವೇ ಉಳಿಯದಂತೆ ಸಂಪೂರ್ಣವಾಗಿ ನಾಶಹೊಂದಿದ ವ್ಯಕ್ತಿ: ಮಹಾಕಾಳನೆನ್ನ ವೈರಿಯಪ್ಪ ಸಾಕೇತಪತಿಯಂ ನಿರ್ವಂಶಂ ಮಾಳ್ಪಲ್ಲಿಗೀತನೆನಗೆ ಸಹಾಯನಾ(ವಾ)ಗಲ್ವೇಳ್ಕುಂ (ಚಾವುಂಪು. ೨೯೦); ನಿನಗೆ ಮಕ್ಕಳೇ ಆಗದೆ ನಿರ್ವಂಶಳಾಗಿ ಹೋಗು . . . ಎಂದು ಮುಂಚಾಗಿ ಕರ್ಣಕಠೋರವಾಗಿ ಶಪಿಸಿದನು (ಮಂಜುಕ. ೩೨). [ಸಂ.]

**ನಿರ್ವಕ್ರ** (ಗು). ೧. ಕೊಂಕಿಲ್ಲದ; ನೇರವಾದ. ೨. ಕಡು ಮೋಸಗಾರಿಕೆಯ; ಮಹಾಕಪಟದ: ಸಂತತಾಭಸಹಾಯಂಗನನಶ್ರಾಂತ ದುರಹಂಕಾರಯಾತನನನಂತನಿರ್ವಕ್ರಾಪರಾಧಿಯನಧಿಕಕೋಪಿಯಸು . . . ಎನ್ನಂ ಸಳಹು (ಬಸಪು. ೨೨–೫೦); ಕೊಡದಿರ್ ತಱಪಂಬನಿಂದು ನಿರ್ವಕ್ರಪರಕ್ರಮಾಕ್ರಮಿತ ವಿಕ್ರಮವಿಕ್ರಮ ರಾಜಶೇಖರಾ (ರಾಜಶೇ. ೬–೧೧೧). (ನಾ). ೩. ನೇರವಾಗಿರುವಿಕೆ; ನಿಷ್ಕಪಟತೆ; ಪ್ರಾಮಾಣಿಕತೆ: ಅವನಿಯೆಲ್ಲವನಾಳನೇ ನಿರ್ವಕ್ರದಿಂದಾತ (ಬಸಪು. ೫–೮). [ಸಂ.]

ನಿರ್ವಚನ (ನಾ). ೧. ಮಾತು; ನುಡಿ. ೨. ಸಾರವತ್ತಾದ ಮಾತು,–ನುಡಿ; ಸಾರೋಕ್ತಿ: ಪ್ರಭುದೇವರ ಹತ್ತುವಚನಕ್ಕೆ ಅಜಗಣ್ಣನ ಐದುವಚನ ಅಜಗಣ್ಣನ ಐದುವಚನಕ್ಕೆ ಕೂಡಲಚೆನ್ನಸಂಗಮದೇವಾ ಮಹಾದೇವಿಯಕ್ಕಗಳ ಒಂದು ನಿರ್ವಚನ [ಪಾಠಾಂ. ಒಂದೇ ವಚನ] (ಚನ್ನವ.೪ ೨೬೧–೫೬೩). ೩. ವಿಶೇಷವಾದ ವಿವರಣೆ; ಸಾರವತ್ತಾದ ವರ್ಣನೆ: ವಿಮಲಸೂರಿಯ ಈ ಪಾತ್ರಕಲ್ಪನೆಯನ್ನು ನಾಗಚಂದ್ರನು ತನ್ನದಾಗಿ ಮಾಡಿಕೊಂಡು ಅದರ ನಿರ್ವಚನ ಮಾಡಿದ್ದಾನೆ (ಕಸಾಚ. ೧೨೯); ವೈದ್ಯಕ ಈ ನಿರ್ವಚನ ನನ್ನ ಉತ್ತಮ ಮಸ್ತಿಷ್ಕಾರ್ಥಗೋಲಗಳನ್ನು ಬಡಿದೆಬ್ಬಿಸಿತು (ದೇಕನ್ನ. ೯); ಜೀವ, ಬ್ರಹ್ಮ . . . ಪ್ರಪಂಚ ಈ ಪದಾರ್ಥಗಳ ನಿರ್ವಚನ ಅದರಲ್ಲಿದೆ ಎಂಬುದೆ ಎರಡೂ ಗ್ರಂಥವ ನೋದರಸಾದೃಶ್ಯ ಬಲ್ಲವರಿಗೆ ತಾನೇ ಹೊಳೆಯುವುದು (ಮಸಾಹಿ. ೭). ೪. ನಿಷ್ಪತ್ತಿ; ನಿರುಕ್ತಿ: ಪೂರ್ವಪಕ್ಷ, ಉತ್ತರಪಕ್ಷ . . . ನಿರ್ವಚನ, ನಿದರ್ಶನ, ಅನಾಗತವೀಕ್ಷಣ ಇವುಗಳ ಅರ್ಥಪ್ರಯೋಗಗಳು ಶಾಸ್ತ್ರಗ್ರಂಥಗಳಲ್ಲಿ ವಿಧವಿಧವಾಗಿವೆ (ಭಾರದ.೩೬೯). ೫. ಸೂತ್ರೀಕರಣ: ಈ ಭಾಗದಲ್ಲಿ, ಪ್ರಸಂಗೋಚಿತವಾಗಿ ಅನ್ಯಥಾ ನಿರ್ವಚನ ಮಾಡಬೇಕಾಗಿದ್ದ ಹೊರತು (ಭಾಧಾನ. ೧೫೦). ೬. ಲಕ್ಷಣ ನಿರೂಪಣೆ. ೭. ಸುಮ್ಮನಿರುವುದು; ಮೌನ. [ಸಂ.]

**ನಿರ್ವಚಿಸು** (ಕ್ರಿ). ೧. ಹೇಳು; ವಿವರಿಸು: ಸರ್ವೋವೈ ರುದ್ರ ಎನುತ್ತುರ್ವಿತೆ ವಿಶ್ವಾಧಿಕಃ ಪಶೂನಾಂ ಪತಿಯೆಂದೊರ್ವಂಗೆರಡುಂ ಬಗೆಯಂ ನಿರ್ವಚಿಪಾಗಮದ ನುಡಿಗಿದೇ ತಾತ್ಪರ್ಯಂ (ವೃಷವಿ.೩೫–೨೫). ೨. ಸೂತ್ರೀಕರಿಸು. [ನಿರ್ವಚನ+–ಇಸು₃]

**ನಿರ್ವದಿಸು** (ಕ್ರಿ). ಚೆನ್ನಾಗಿ ತಿಳಿಯುವಂತೆ ಹೇಳು,–ಬೋಧಿಸು: ಪೂರ್ವಾಪರವೈರವಿಲ್ಲದ ಶಾಸ್ತ್ರದಪೂರ್ವಾರ್ಥವ ಭವ್ಯತತಿಗೆ ನಿರ್ವದಿಪಂತುಸುರ್ವುಪದೇಶಕರಾದ ಸರ್ವರಸಭಿಸು ತಿಸುವೆನು (ಶ್ರಿಭಂಜ. ೩–೪). [ನಿರ್ವದ₀ (P ←ಸಂ. ನಿರ್ವದ್)+–ಇಸು₃]

**ನಿರ್ವನಿಸು** 'ನಿರ್ನವಿಸು' ನೋ.

**ನಿರ್ವಪಣ** (ನಾ). ೧. ಸುರಿಯುವುದು. ೨. ಚಿಮುಕಿಸುವುದು. ೩. ದಾನವಾಗಿ ಕೊಡುವುದು. ೪. ಕೊಡುಗೆ; ದಾನ: "ತ್ಯಾಗಃ . . . ನಿರ್ವಪಣಂ, ಅಪವರ್ಜನಂ, ಅಂಹತಿಃ–೧೩ ಕೊಡುವುದಕ್ಕೆ ಹೆಸರುಗಳು" (ಸಿವ್ಯಾಂತಿ. ೨೨೨). ೫. ಪಿಂಡದಾನ. [ಸಂ.]

**ನಿರ್ವಯಲು**, ನಿರಬಯಲು, ನಿರವಯಲು, ನಿರ್ಬಯಲು, ನಿರ್ಬೈಲು (ನಾ). ರೂಪಿಲ್ಲದಿರುವುದು; ಆಕಾರವಿಲ್ಲದಿರುವುದು; ನಿರಾಕಾರ; ಶೂನ್ಯ: ನಿಜವಡಗಿಹ ರೂಪು ನಿರ್ವಯಲ ಸ್ಥಾನ ನಡೆಲಿಂಗ ಜಂಗಮ (ಬಸವೆ. ೪೧೫); ಪರಮಾರ್ಥದಲಿ ತಾನೇಕೈಕನಾದ ಹೆನೆಂದೆನುತಲಜಗಣ್ಣ ನಿರ್ವಯಲ ಸ್ವೀಕರಿಸಿದೊಡೆ (ಪ್ರಭುಲೀ. ೧೨–೧೧); ಬಯಲ ಪುರುಷ ಬಯಲಾಕಾರ . . . ಬಯಲಾಧಾರನೆ ಮತಿದೋಱ ನಿಜ್ಜ ನಿರ್ವಯಲ ನಿರಂಜನಸಿದ್ಧ (ಭರಚ. ೬೭–೧). **ನಿರಬಯಲು**: ನಿದ್ದಿಗಣ್ಣಲಿ ಕಂಡ ಸುದ್ದಗುರುವಿನ ಪಾದ ಎದ್ದು ನೋಡಿದರ ನಿರಬಯಲ ಗುರುರಾಯ ರುದ್ರತನ ಮಹಿಮೆ ತಿಳಿಯಾವ (ಗರತಿ. ೪೦). **ನಿರವಯಲು**: ನಿಶ್ಯಸಹ . . . ಚರಲಿಂಗ ಹಸ್ತದೊಳು ನಿರವಯಲ ನಿಜಸಮಾಧಿ (ಪ್ರಾಥರಾ. ೨–೨೧); ಶಿಖಿ ಕರ್ಪೂರ ಸಂಯೋಗದಂತೆ ಪರತತ್ವಪನೊಡಗೂಡಿದ ಮಹಾತ್ಮನ ಕಾಯ ನಿರವಯಲಪ್ಪುದು (ಅಪಂಡೇ. ೧೧೦–೫೨). **ನಿರ್ಬಯಲು**: ಅರ್ಥದಲ್ಲಿ 'ನಿರ್ಬಯಲು' ಎಂಬುದು ಅಭಾವಾತ್ಮಕ ಮಾತು (ಶರಪ. ೧೭). **ನಿರ್ಬೈಲು**: ಪರವಸ್ತುವಿನಲ್ಲಿ ಬೆರೆತು, ತಮ್ಮ ವ್ಯಕ್ತಿತ್ವವನ್ನು ಕಳೆದುಕೊಳ್ಳುವದೇ 'ಶೂನ್ಯ' ಇಲ್ಲವೆ 'ನಿರ್ಬೈಲು' ಎಂಬುದು ಅವರ ಹೇಳಿಕೆ (ಶರಪ. ೧೭). ನಿರ್ವಯಲಾಗು, ನಿರವಯಲಾಗು = ಐಕ್ಯವಾಗು; ಲೀನವಾಗು; ಸೇರು: ಇಂದಿನಲ್ಲಿ ಎನ್ನನೆಡೆಗೊಂಡ ಅಹಂಕಾರ ನಿರ್ವಯಲಾಯಿತ್ತು (ಬಸಹೆ. ೭೯–೨೩೩); ಗೊತ್ತಳಿದು ಲಿಂಗದೊಳ್ ನಿಬ್ಬೆಱಗಿನಿಂದ ನಿರ್ವಯಲಾದನು (ಪ್ರಾಥರಾ. ೨–೨೦); ಮಿಡಿವಿಲ್ಲಿನೊಳಗೆ ಲಿಂಗವನೆಚ್ಚು ಆ ಲಿಂಗದೊಡನೆ ನಿರವಯಲಾದರು (ಘನವ. ೩೨–೨೩). ℙ 'ಬಯಲು' ಎಂಬುದು 'ಶೂನ್ಯ'ವನ್ನು ಸೂಚಿಸುವ ಒಂದು ಪದ. ವೀರಶೈವ ಸಾಸಹಿತ್ಯದಲ್ಲಿ ಈ ಶಬ್ದದ ಪ್ರಯೋಗ ಅನೇಕ ಕಡೆಗಳಲ್ಲಿ ಬರುತ್ತದೆ. 'ನಿರ್–' ಎಂಬ ಉಪಸರ್ಗವು 'ವಿಶೇಷವಾಗಿ' ಎಂಬ ಅರ್ಥದಲ್ಲಿ ಈ ಪದಕ್ಕೆ ಸೇರಿ ಈ ರೂಪವಾಗಿರುವಂತೆ ಕಂಡು ಬರುತ್ತದೆ – 'ಬಟ್ಟಬಯಲು' ಎಂಬರ್ಥ ಬರುವಂತೆ. [ನಿರ್–+ಬಯಲು(<ಬಯಲ್₁)]

**ನಿರ್ವರ** (ನಾ). ಬಿರುಸು; ಜೋರು; ತೀವ್ರತೆ: ಒರ್ಬುರ್ವರ ದೇಹಂಗಳ ದುರ್ವಾಹ ಸಂಘಟ್ಟನಂಗಳಂ ಹಾರಂಗಳ್ ನಿರ್ವರದೆ ಪಱದು

ಬೀಟಿತ್ತೊಡೆ ಸರ್ವಗರ್ಗಂ ಚರಿಸಬಾರದಿರ್ದುದು ಮಾರ್ಗಂ (ಬಾಧಪು. ೩-೨೩). 'ನಿಬ್ಬರ' ಪರಾ. [<ಸಂ. ನಿರ್ಭರ]

**ನಿರ್ವರಂ** (ಅ). ರಭಸವಾಗಿ ; ಜೋರಾಗಿ : 'ನಿರ್ವರಂಪೊಯ್' ಪರಾ. [<ನಿರ್ವರ]

**ನಿರ್ವರಂಪೊಯ್** (ಕ್ರಿ). ರಭಸವಾಗಿ ಹೊಡೆ ; ಬಿರುಸಾಗಿ ಬಡಿ: ವಿಟ್ಟಿತ್ತು ದೇವತೆಯುಮೊತ್ತರಿಸುವ ಮಾರಿಯುಮೆಕ್ಕೈಕ್ಕೈಯಿನಿಕ್ಕುವ ಮುಸಲ ದಂಡದಂತೆ ತೊತ್ತಟಬಡುಟಿಂಡು ಸುತ್ತಿ ಸುಟುಡೊಗೆದೊರಸುವ ಕಾಲ ಕಂಭಂಗಳೊಳಮುಬ್ಬರಮೆತ್ತಿ ನಿರ್ವರಂ ಪೊಯ್ವ ತಾಳವಟ್ಟದೊಳಂತಿವಳಿ ವಟ್ಟವಮಾದ ತೇರ ತೆಕ್ಕೆಗಳ್ . . . ಸುಗ್ಗಸುಜಾಯಿಯಾಗಿರ್ದುವು (ಅನಂಪು. ೧೪-೭ ವ). [ನಿರ್ವರಂ + ಪೊಯ್₁]

**ನಿರ್ವರ್ಣ** (ಗು). ಬಣ್ಣವಿಲ್ಲದ; ವರ್ಣರಹಿತವಾದ : "ನಿರ್ವರ್ಣ, ವರ್ಣಶೂನ್ಯ" (Achromatic. ಪಾರಿಶ. ೧). [ಸಂ.]

**ನಿರ್ವರ್ಣನ** (ನಾ). ೧. ನೋಡುವುದು ; ನೋಟ. ೨. ಲಕ್ಷ್ಯವಿಟ್ಟು ಗಮನಿಸುವುದು ; ಸೂಕ್ಷ್ಮವಾಗಿ ನೋಡುವುದು: "ನಿರ್ವರ್ಣನಂ . . . ಈಕ್ಷಣಂ—ಜ ನಿರೀಕ್ಷಿಸುವಿಕೆ, ಚೆನ್ನಾಗಿ ನೋಡುವಿಕೆ" (ಸಿದ್ಧಾಂತಿ. ೩೬೬). ೩. ವಿವರಿಸುವುದು. 'ನಿರ್ವರ್ಣಿಸು' ಪರಾ. [ಸಂ.]

**ನಿರ್ವರ್ಣಿಸು** (ಕ್ರಿ). ೧. ಚೆನ್ನಾಗಿ ನೋಡು; ಗಮನವಿಟ್ಟು ಈಕ್ಷಿಸು : ಅದನ್ನು ನಿರ್ಮಿಸುವವರ ಮನೋವೃತ್ತಿಯನ್ನು ನಾವು ಲಕ್ಷಿಸಬೇಕು . . . ಚಿತ್ರಲೇಖನಲಾಲಸೆಯಲ್ಲಿಯೂ ಅದನ್ನು ನಿರ್ವರ್ಣಿಸುವಾಗಲೂ ಅವರು ಸ್ಥಿರರಿರುವರೇ, ಅಸ್ಥಿರರಾಗುವರೇ ? ಇದನ್ನೂ ನಾವು ಯೋಚಿಸಬೇಕು (ನಿಂಬಂಧ. ೩೮). ೨. ಚೆನ್ನಾಗಿ ವಿವರಿಸು ; ವರ್ಣಿಸು : ಪ್ರಾಕೃತಕರ್ಣಾಟಕವಾಕ್ಯಾರ್ಥತತ್ತ್ವನಿಶ್ಚಿತ್ತಿಯಾಗೆ ನಿರ್ವರ್ಣಿಸಿದಂ (ಕವಿಚ. I. ೨೮೬, ಪಂಚಾಸ್ತಿಕಾಯ ಪ್ರಾಭೃತವೃತ್ತಿ). [ನಿರ್ವರ್ಣನ + -ಇಸು₃]

**ನಿರ್ವರ್ತಕ** (ಗು). ೧. ಕರ್ತವ್ಯವನ್ನು ನೆರವೇರಿಸುವ,—ಮುಗಿಸುವ : ಈತಂ ಹೀನಾಂಗನಾದೊಂ ಇವರಿಂದ ಶಕುನಾದಿಗಳು ಮುನ್ನುಪಾರ್ಜಿತಶುಭಾಶುಭಕರ್ಮಪರಿಪಾಕಪ್ರಕಾಶನಸಾಧನಂಗಳಲ್ಲದೆ ನಿರ್ವರ್ತಕ ಸಾಧನಂಗಳಲ್ಲವೆಂದು ಎಲ್ಲರುಂ ಮೆಚ್ಚೆ (ಚಾವುಂಪು. ೬೩). (ನಾ). ೨. =ನಿರ್ವರ್ತನ. ೩. ಕರ್ತವ್ಯವನ್ನು ಮುಗಿಸುವವನು,—ಪೂರ್ಣಗೊಳಿಸುವವನು. [ಸಂ.]

**ನಿರ್ವರ್ತನ** (ನಾ). ಕರ್ತವ್ಯವನ್ನು ಮುಗಿಸುವುದು,—ಪೂರೈಸುವುದು : ತನ್ನುನಿಯುಗಳಂ ವೃಕ್ಷಮೂಲನಿಯೋಗನಿರ್ವರ್ತನಾನಂತರಂ ಯೋಗ್ಯಕಾಲಾಪೇಕ್ಷೆಯಿಂ ಕಾಂತಾರಭಿಕ್ಷೆಗೆ ಬರುತಿರೆ (ಪಂಂಪಪೂ. ೨-೫೨ ವ). [ಸಂ.]

**ನಿರ್ವರ್ತನಾಧಿಕರಣ** (ನಾ). [ಜೈನ]ಅಜೀವಾಧಿಕರಣಾಸ್ರವದ ಭೇದಗಳಲ್ಲಿ ಒಂದು ; ⓟ ಕರ್ಮದ ಆಸ್ರವಕ್ಕೆ ಅಜೀವವೂ (ಶರೀರಾದಿಗಳು) ಆಧಾರವಾಗುತ್ತದೆ. ಇವು ಒಟ್ಟು ಹನ್ನೊಂದು ಭೇದಗಳನ್ನು ಹೊಂದಿವೆ. ಇದರಲ್ಲಿ ನಿರ್ವರ್ತನಾಧಿಕರಣವು ಮೊದಲನೆಯದಾಗಿ ಪರಿಗಣಿತವಾಗಿದೆ. ಕಾರ್ಯವನ್ನು ಮುಗಿಸುವುದು ಅಥವಾ ನಿಷ್ಪಾದಿಸುವುದು. ಇದರಲ್ಲಿ ಎರಡು ಬಗೆಗಳಿವೆ. ೧. ಮೂಲಗುಣನಿರ್ವರ್ತನಾಧಿಕರಣ. ೨. ಉತ್ತರಗುಣನಿರ್ವರ್ತನಾಧಿಕರಣ. ಮೂಲಗುಣನಿರ್ವರ್ತನಾಧಿಕರಣದಲ್ಲಿ ಶರೀರ, ವಾಕ್ಕು, ಮನಸ್ಸು, ಪ್ರಾಣ, ಅಪಾನ—ಈ ಐದರಿಂದ ಕಾರ್ಯವು ನಿಷ್ಪನ್ನವಾಗುವುದು. ಉತ್ತರಗುಣನಿರ್ವರ್ತನಾಧಿಕರಣದಲ್ಲಿ ಮರದ ಬೊಂಬೆ ನಿರ್ಮಾಣ, ಚಿತ್ರಕರ್ಮಗಳು ಸೇರುತ್ತವೆ (ಸರ್ವಾರ್ಥಸಿದ್ಧಿಯ ಆಧಾರದಿಂದ) : ಅಜೀವಾಧಿಕರಣಾಸ್ರವ ಭೇದಗಳು ೧೧ ; (೧) ನಿರ್ವರ್ತನಾಧಿಕರಣ, ಇದರಲ್ಲಿ ದೇಹದುಃಪ್ರಯುಕ್ತ ನಿರ್ವರ್ತನಾಧಿಕರಣ (ಶರೀರದಿಂದ ಕುಕೃತಿ ಮಾಡುವುದು), ಉಪಕರಣ ನಿರ್ವರ್ತನಾಧಿಕರಣ (ಶಸ್ತ್ರಾದಿ ಹಿಂಸೋಪಕರಣಗಳನ್ನು ಮಾಡುವುದು) ಎಂಬ ಎರಡು ಪ್ರಕಾರಗಳು (ಜೈನಧ. ೬೪). [ನಿರ್ವರ್ತನ + ಅಧಿಕರಣ]

**ನಿರ್ವರ್ತನೆ** (ನಾ). ಚಟುವಟಿಕೆಯಿಲ್ಲದಿರುವಿಕೆ ; ನಿಷ್ಕ್ರಿಯೆ ; ನಿರ್ವ್ಯಾಪಾರ : ವರ್ತನೆ ನಿರ್ವರ್ತನೆ ಇಲ್ಲದಂದು ಉಮೆಯ ಕಲ್ಯಾಣವಿಲ್ಲದಂದು ಇವರಾರೊಬ್ಬರ ನಾಮ ಸೀಮೆ ಇಲ್ಲದಂದು ನೀನುಲುಹಡಗಿದ್ದೆಯಲ್ಲಾ (ಪುತಿಸಾ. ೧-೧). [ಸಂ. ನಿರ್ವರ್ತನ]

**ನಿರ್ವರ್ತಿತ** (ಗು). ಮುಗಿಸಿದ ; ತೀರಿಸಿದ ; ನೆರವೇರಿಸಿದ : ಅನೇಕಪ್ರಕಾರ ದೇವಾಂಗವಸ್ತ್ರವಿಸ್ತಾರಿತ ರತ್ನಸಂಚಿತಮಣಿವಿತಾನಂಗಳಿಂದ ಮನುಕ್ರಮಂದಪ್ಪ ದರ್ಚಿಸಿ ನಿರ್ವರ್ತಿತದೇವತಾರ್ಚನನಾಗಿ(ಆದಿಪು. ೨-೩೨ವ); ಆಗಳ್ ಮಹಾಶ್ವೇತೆಯುಂ ನಿರ್ವರ್ತಿತಾನುಷ್ಠಿತೆಯಾಗಿ (ಕಾದಂಪೂ. ೯೮೭); ಸೂರ್ಯಮಿತ್ರಂ ನಿರ್ವರ್ತಿತ ಸಂಧ್ಯಾನಿಯಮಕ್ರಿಯಾಯೋಗನಾಗಿ (ಸುಕುಮಾ. ೩-೪ ವ). [ಸಂ.]

**ನಿರ್ವರ್ತಿಸು** (ಕ್ರಿ). ೧. ಮುಗಿಸು ; ಪೂರೈಸು ; ನೆರವೇರಿಸು : ತದ್ದಂಪತಿಗಳ್ಗೆ ಶರೀರಶೋಭೆಯಂ ಮಾಡಿ ಚಂದನಹರಿಚಂದನೇಂಧನಂಗಳೊಳ್ ದಹನಕ್ರಿಯೆಯುಂ ನಿರ್ವರ್ತಿಸಿ (ಆದಿಪು. ೫-೨೭ ವ); ನಿಜಸ್ತ್ರೀಲಿಂಗನ ವಿಮುಖನಾಗಿ ಸೆಜ್ಜೆಯಿಂದೆಟ್ದು ಪ್ರತ್ಯೂಷಕೃತ್ಯಮಂ ನಿರ್ವರ್ತಿಸಿ (ಶಾಂತಿಪು. ೮-೧೧೪ ವ) ; ಜಿನಪೂಜಾಪ್ರಧಾನಪ್ರಭಾತಸಮಯನಿತ್ಯನಿಯಮಂಗಳಂ ನಿರ್ವರ್ತಿಸಿ (ಸುಕುಮಾ.೯-೧೧೧ವ); ಬೆರಳ ಸಧುಧೆಯ ಬಾಧಿಚಾರಾಧ್ವರವ ನಿರ್ವರ್ತಿಸಿದನ್ಯೆ (ತೊರಂ. ೬-೩೫-೬). ೨. ಮಾಡು : ಅಕ್ಷಯತ್ರಿತೀಯ ಪರ್ವನಿಮಿತ್ತಂ ಪಲವುಂ ಮಹಾದಾನಂಗಳಂ ನಿರ್ವರ್ತಿಸುವಲ್ಲಿ (ಸೌಇಇ. XI-i, ೧೧೬-೧೬ ; 1075). ೩. ರಚಿಸು ; ನಿರ್ಮಿಸು ; ಕಟ್ಟಿಸು : ಕನಕರಜತಮಣಿಮಯಘಂಟಾಜಾಲಪ್ರದೀಪಮಾಲೆಗಳಂ ನಿರ್ವರ್ತಿಸಿಯುಂ (ಅಜಿಪು. ೧೨-೪ ವ) ; ಸರ್ವತೋಭದ್ರವೆಂಬೆಂಬ ದೇಗುಲವ ಸುಪರ್ವಲೋಕವ ಸೋಂಕುವಂತೆ ನಿರ್ವರ್ತಿಸಿದನು (ನಾಗಕು. ೧-೪೭). [ನಿರ್ವರ್ತನ + -ಇಸು₃]

**ನಿರ್ವರ್ತ್ಯ** (ಗು). ೧. ಮುಗಿಸಬೇಕಾದ; ಪೂರ್ಣಗೊಳಿಸಬೇಕಾದ; ನೆರವೇರಿಸಬೇಕಾದ. (ನಾ). ೨. ಪೂರೈಸಬೇಕಾದುದು ; ನೆರವೇರಿಸಬೇಕಾದದು: ಸಮಯಾದಿ ಕ್ರಿಯಾವಿಶೇಷಂಗಳ್ಗಂ ಸಮಯಾದಿ ನಿರ್ವರ್ತ್ಯಂಗಳಪ್ಪ ಪಾಕಾದಿಗಳ್ಗಂ ಸಮಯಪಾಕಮೆಂಬಿವು ಮೊದಲಾಗೊಡೆಯ ನಿಜಾಭಿಧಾನರೂಢಿಯಾದೊಡಂ (ತತ್ತ್ವಪ್ರ. ೨೪೧). ೩.[ವ್ಯಾಕ] ಕರ್ಮದ ನಾಲ್ಕು ಭೇದಗಳಲ್ಲಿ ಒಂದು: ಪ್ರವಿದಿತ ತತ್ಕರ್ಮಂ ಕರ್ತೃವಿನೀಪ್ಸಿತತಮಪದಾರ್ಥಮದು ನಾಲ್ಕುಂ ಭೇದವನಾಳ್ದಿರ್ಕುಂ ನಿರ್ವರ್ತ್ಯ ವಿಕಾರ್ಯಂ ಪ್ರಾಪ್ಯಮೆತ್ತಲುಂ ವೈಷಯಿಕಂ (ಶಮದ. ೧೨೭) ; ನಿರ್ವರ್ತ್ಯಕ್ಕೆ—ಮನೆಯಂ ಮಾಡಿದಂ, ಕಾವ್ಯಮಂ ಪೇಟ್ದಂ (ಶಮದ. ೧೨೭ ಪ್ರಯೋ). ⓟ ನಿರ್ವರ್ತ್ಯ ಎಂದರೆ ಕಾರ್ಯಮಾಡುವುದು. ವಿಕಾರ್ಯ ಎಂದರೆ ರೂಪವನ್ನು ವ್ಯತ್ಯಾಸಮಾಡುವುದು. ಪ್ರಾಪ್ಯ ಎಂದರೆ ಒಂದು ಕಡೆಗೆ ಹೋಗಿ ಸೇರುವುದು. ವೈಷಯಿಕ ಎಂದರೆ ಇಂದ್ರಿಯಗಳಿಗೆ ವಿಷಯವಾದುದು. [ಸಂ.]

**ನಿರ್ವಸ್ತುಕ** (ನಾ). ವಸ್ತುವಲ್ಲದುದು ; ಭಾವಾತ್ಮಕವಾದುದು : ಇಂಗ್ಲಿಷಿನಲ್ಲಿ 'ಆ್ಯಬ್‌ಸ್ಟ್ರಾಕ್ಟ್' ಎನ್ನುತ್ತಾರೆ . . . ಬಂಗಾಳಿಯಲ್ಲಿ ಇದಕ್ಕೆ ಒಂದು ಹೊಸ ಪ್ರತಿಶಬ್ದದ ಆವಶ್ಯಕತೆ ಇದೆ. 'ನಿರ್ವಸ್ತುಕ' ಎಂದರೆ ಕೆಲಸ ನಡೆಯುತ್ತದೆ (ನಿಬಂಧ. II, ೨೩೯). [ಸಂ.]

**ನಿರ್ವಹಣ** (ನಾ). ೧. ಕೊನೆ ; ಅಂತ್ಯ ; ಮುಕ್ತಾಯ ; ಉಪಸಂಹಾರ : ಕಾದಂಬರಿಯ ರಚನೆಯಲ್ಲಿ ನಾಲ್ಕನೆಯ ಹಾಗೂ ಐದನೆಯ ಸ್ಥಾನಗಳಾದ ಶ್ರಾಂತಸ್ಥಾನ ಹಾಗು ನಿರ್ವಹಣ (Catastrophe) ಇಲ್ಲಿ ಬಂದಿದೆ (ಸಮಜೀ. ೩೪ ಪೀಠಿಕೆ) ; ಕಥೆಯ ಪ್ರಾರಂಭದಿಂದ ಹಿಡಿದು ನಾಯಕನ ಪರಿಸ್ಥಿತಿಯ ಬದಲಾವಣೆಗೆ ಸ್ವಲ್ಪ ಮೊದಲಿನವರೆಗೆ ಇರುವುದೆಲ್ಲವೂ ಸಂಗ್ರಥನವೆಂದೂ ಬದಲಾವಣೆಯ ಪ್ರಾರಂಭದಿಂದ ಹಿಡಿದು ಮುಕ್ತಾಯದವರೆಗೆ ಇರುವುದೆಲ್ಲವೂ ನಿರ್ವಹಣವೆಂದೂ ನನ್ನ ಅರ್ಥ (ಅರಿಕೆ.೧೧೦). ೨. ಸಾಗಿಸಿಕೊಂಡು ಹೋಗುವಿಕೆ ; ನಿಭಾಯಿಸುವಿಕೆ : ಇತರ ಸಂಘಸಂಸ್ಥೆಗಳು ಇವೆಲ್ಲವನ್ನೂ ರಚಿಸಿ, ಅವುಗಳ ನಿರ್ವಹಣವನ್ನು ಬಾಲಕರೇ ವಹಿಸಿಕೊಂಡು ನಡೆಸುವುದನ್ನು ಕಲಿಸಬೇಕು (ಶಿಕ್ಷದ. ೨೧). [ಸಂ.]

**ನಿರ್ವಹಣಲೇಖೆ** (ನಾ). [ಚಿತ್ರಶಾ] ಚಿತ್ರಣದ ಕೊನೆಯ ಘಟ್ಟದಲ್ಲಿ ಹೊಂದಿಸುವ ರೇಖೆ,—ಮುಕ್ತಾಯದ ಗೆರೆ: ನಿರ್ವಹಣಲೇಖೆಯುಲಕ್ತಕದಣ್ಕೆ ಪತ್ತಿ ಕೈಯುಂಗುರ್ಗೆಸೆಯಲ್ ಸಚಿತ್ರಪಟಧಾರಿಣಿ ಬಂದಳತಿಪ್ರಮೋದದಿಂ (ಜಗವಿ. ೧೭-೧೧೫). [ನಿರ್ವಹಣ+ಲೇಖೆ]

**ನಿರ್ವಹಣಸಂಧಿ** (ನಾ). [ಕಾವ್ಯಮೀ]ನಾಟಕರಚನೆಯಲ್ಲಿ ಹೇಳಿರುವ ಐದು ಸಂಧಿಗಳಲ್ಲಿ ಕೊನೆಯದು ; ¶ ನಾಟಕದ ಮೊದಲು ಸೂಚಿಸಿದ್ದ ಕಥಾಂಶವು ಬೆಳೆದು ನಾನಾಮುಖವಾಗಿ ಹರಡಿಕೊಂಡಿರುತ್ತದೆ. ಅವೆಲ್ಲವೂ ಪ್ರಧಾನನಾಯಕನ ಕಾರ್ಯಸಿದ್ಧಿಯೆಂಬ ಮುಖ್ಯಾಂಶದಲ್ಲಿ ಏಕಮುಖವಾಗಿ ಸೇರುತ್ತವೆ. ಅದು ನಾಟಕದ ಕೊನೆಯ ಘಟ್ಟ. ಈ ಹಂತಕ್ಕೆ ನಿರ್ವಹಣಸಂಧಿಯೆಂದು ಹೆಸರು : 'ಉಪಸಂಹೃತಿ (ಉಪಸಂಹಾರ, ನಿರ್ವಹಣ) ಸಂಧಿ'ಯಲ್ಲಿ ಹಿಂದೆ ನಾನಾ ಮುಖವಾಗಿದ್ದ ಕಾರ್ಯವೆಲ್ಲವೂ ಏಕಮುಖವಾಗಿ ಮುಗಿಯುತ್ತದೆ (ಕೈಪಿಡಿ. ೨೦೮) ; (ನಾಟಕ, ಮೊ. ಗಳ) ಅಂತ್ಯ, ಮುಕ್ತಾಯ, ಸಮಾಪ್ತಿ. ನಾಟಕದ ನಿರ್ವಹಣಸಂಧಿ(Final. ಇಂಕನಿ). [ನಿರ್ವಹಣ+ಸಂಧಿ]

**ನಿರ್ವಹಣಸ್ಥಿತಿ** (ನಾ). ಕೊನೆಯ ಘಟ್ಟ ; ಮುಕ್ತಾಯ : ಪುನ್ನಮ್ಮನುಮಟ್ಟಿಯಿಂ ಗುರುಸಮಕ್ಷಪರೋಕ್ಷವಿನೇಯವೃತ್ತಿಯಿಂದಮ್ಮನದುಕ್ಕೆಮಂ ತಗುಳ್ಚಿ ನಿರ್ವಹಣಸ್ಥಿತಿಗುಯ್ದರೀ **ಪುರಾಣಮ್ಮಹಿರತ್ನ**ಮಿಂತಿದೆಯುಳಂಕೃತಿ ತಾಂ ಕವಿಚಕ್ರವರ್ತಿಯಾ (ಶಾಂತಿಪು. ೧೨-೬೧). [ನಿರ್ವಹಣ+ಸ್ಥಿತಿ]

**ನಿರ್ವಹಣೆ** (ನಾ). ನಿಭಾಯಿಸುವುದು ; ನಡೆಸುವುದು ; ಸಾಗಿಸಿಕೊಂಡು ಹೋಗುವುದು: ರಾಜ್ಯಭಾರನಿರ್ವಹಣೆಯಲ್ಲಿ ನನಗೆ ಸಹಾಯ ಮಾಡಬೇಕೆಂದು ಅವರನ್ನು ಕೇಳಿಕೊಳ್ಳುತ್ತೇನೆ (ಪ್ರತಾಪ. ೯೦);ಶಾಲೆಯ ಕಾರ್ಯಕ್ರಮಗಳಿಗೂ ಅವುಗಳ ನಿರ್ವಹಣೆಗೂ ಆಧಾರವೆನಿಸುವ ನೀತಿನಿಷ್ಠೆಗಳಿಗೆ ಅವರ ಸಹಕಾರ ದೊರಕಬಲ್ಲದು (ಶಿಕ್ಷದ. ೩೧೯) ; ಅವನ ಪಾತ್ರದ ನಿರ್ವಹಣೆಯಲ್ಲಿ ಒಂದು ಸಾರಿಯಾಗಲಿ ಅಸಹಜತೆಯಾಗಲಿ ಅತಿಯಾಗಲಿ ಕಾಣಲಿಲ್ಲ (ಆಲಹೂ. ೧೮). [ಸಂ. ನಿರ್ವಹಣ]

**ನಿರ್ವಹಿಸು** (ಕ್ರಿ). ೧. ಮಾಡು; ನೆರವೇರಿಸು : ವಿಹಿತಚರಿತರು ನೀವಲಾ ನಿರ್ವಹಿಸುವೆನು ಶುಶ್ರೂಷೆಯನು (ಕುಪ್ಯಾಅ. ೧೯-೩೧); ವಕಾರವೇ ಬಕಾರದ ಕೆಲಸವನ್ನು ನಿರ್ವಹಿಸುತ್ತಿತ್ತೆಂದು ಹೇಳುವುದಕ್ಕೆ ಆಧಾರಗಳಿವೆ (ವ್ಯಾವಿವಿ. ೩೭೪). ೨. ನಿಭಾಯಿಸು; ನಡೆಸು; ಸಾಗಿಸಿಕೊಂಡು ಹೋಗು : ಅಂಘವಣೆಯನು ನೋಡು ನೀನೇಕಾಂಗದಲಿ ನಿರ್ವಹಿಸುವೆನು (ಕುಪ್ಯಾಅ. ೨೦-೧೮); ಕಲಹಮಂ ನಿರ್ವಹಿಸಲಾಪಿರೇ ಪುದ್ವಸ್ತ್ರಮಂ ಕೊಟ್ಟು ಸರ್ವಥಾ ಕಂಡು ಬದುಕುವುದು (ಚೆಒಪು. ೨೩-೨೨); ಆ ಕಾಲದಲ್ಲಿ ಅವರು ದಕ್ಷತೆಯಿಂದ ಪೋಲೀಸ್ ಇಲಾಖೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದರಂತೆ (ಮೂಲಾನ. ೧೧). ೩. ಹೊರು; ಜವಾಬ್ದಾರಿಯನ್ನು ವಹಿಸು; ಹೊಣೆಯಾಗು : ಆಭರಣಗಳನ್ನೆಲ್ಲ ಮಾರಿ ಮಕ್ಕಳ ವಿದ್ಯಾಭ್ಯಾಸದ ವೆಚ್ಚವನ್ನು ನಿರ್ವಹಿಸುತ್ತಿದ್ದಳು (ರಂಗವ. ೨೩೮). ೪. ಅನುಭವಿಸು : ಪೂರ್ವೋಕ್ತಭವನಿಕರದೊಳು ಮಿಥ್ಯೋದಯ ಸರ್ವಸ್ವಫಲದುಃಖಚಯವ ನಿರ್ವಹಿಸಿದೆಯಿನ್ನು ಪುಗುಪುಗು ಸತ್ಪಥನಿರ್ವಾಣಗುಹೆಯ ಮೃಗೇಂದ್ರ (ಪರ್ವಚ. ೮-೬೩). ೫. ನಾಶಮಾಡು: ಧ್ವಂಸಪಡಿಸು : ಅಹಿತಕುಲವನು ಸಮರದಲಿ ನಿರ್ವಹಿಸಿ ಶರಣಾಗತರ ಪಾಲಿಸುತಿಹಡವನು ಮಗನೆನಿಸುವನು (ಕುಪ್ಯಾಉ. ೩-೮೨). ೬. ಪೂರೈಸು ; ಮುಗಿ ; ತೀರು : ವನಜಾಕ್ಷ ಭವದ್ಬೋರ್ವಳದ ಬಳದಿನಲ್ಲದೆ ನಿರ್ವಹಿಸದು ಯಾಗಂ (ಜಗವಿ. ೧೭-೬). ೭. ಸಾಗು; ನಡೆತರು : ಮಿಹಿರಸುತ ಪರಿಯಂತ ಕಥೆ ನಿರ್ವಹಿಸಿ ಬಂದುದು (ಕುಪ್ಯಾಶ. ೧-೬). ೮. ಮುಂದುವರಿಯುವಂತೆ ಮಾಡು; ಮುಂದುವರಿಸು: ದಮಿತಾರಿ ಮಹಾರಾಜಾಧಿರಾಜವಂಶಕ್ಕಮನಂತವೀರ್ಯಸಂಬಂಧಮುಂಟದನಱಿದು ತದೀಯ ಕುಲವೃದ್ಧರ್ ನಿಮಿರ್ಚಲುಂ ನಿರ್ವಹಿಸಲುಂ ಪೇೞ್ವುದುಭಯಕುಲ ಸಹಾಯತ್ವಮಿತರೇತರೋಪಕಾರದಿಂ . . . ಇನಿಸೆಡೆಯಾಗಿರ್ದ ಸಂಬಂಧಮಂ ನೀನಿರ್ದು ಪೊಸಯಿಸುವುದು (ಶಾಂತಿಪು. ೨-೭೭ ಪ). ೯. ಸಮರ್ಥವಾಗು; ಶಕ್ಯವಾಗು : ಉರ್ವಿಯೊಳ್ಪೌಸಲ್ಕೆ ಪಡೆದ ಕುವರಂ ರಾಮಂ . . . ಆತನ ಯಜ್ಞತುರಗಮಿದು ನಿರ್ವಹಿಸಲಾರ್ಪರಾರಾದೊಡಂ ತಡೆಯಲೆಂದಿರ್ದ ಲೇಖನವನೋದಿ (ಜೈಮಿಭಾ. ೨೦-೭). ೧೦. ಗೆಲ್ಲು; ವಿಜಯಿಯಾಗು : ಕರ ಹರಿಯೊಳ್ ಸೆಣಸಿ ಪೋದರ್ದು ನಿರ್ವಹಿಸುಗುಮೇ (ಶಾಂತಿಪು. ೩-೮೫). ೧೧. ಉಳಿ; ಬದುಕು : ಅಹಿತಾಲಯಮೆನಿಪಷ್ಟಮಗ್ಗ ಹದೊಳ್ ಸೌಮ್ಯೇತರಗ್ರಹಂ ನಿಲೆ . . . ಏಕಹಾಯನದಿನತ್ತಲರ್ಭಕಂ ನಿರ್ವಹಿಸಂ (ಜಾತತಿ. ೬-೧೭); ಕೊರಲುಱುಗೆಡದೆಸೆಯೊಳ್ ನೆತ್ತರ ಧಾರೆಗಳುಣ್ಮೆ ಪೊಣ್ಮೆ ವಾಜಿಗೆ ತೋರ್ಕುಂ ಮರಣಭಯಮೊಂದೆ ತಿಂಗಳ್ವರೆಗಂ ನಿರ್ವಹಿಸದು (ಅಶ್ವಶಾ. ೬-೫೧). ೧೨. ತಾಳು ; ಹೊಂದು ; ಪಡೆ : ಮನೋವಾಕ್ಕಾಯಬಳದಿಂ ಮಹಾಪುರುಷರು ನಿರ್ವಹಿಸುವ ಮೂಲೋತ್ತರಗುಣಂಗಳಂ ತದ್ಬಲಹೀನರುಮಲ್ಪಸತ್ತ್ವರುಂ ನಿರ್ವಹಿಸಲಾಱದೆ ಗುರುಕುಳಮಂ ದೂಷಿಸುವರು (ಚಾವುಂಪು. ೫೩). [ನಿರ್ವಹಣ+–ಇಸು$_3$]

**ನಿರ್ವಳಿತ** (ನಾ). ನಿಶ್ಚಲತೆ ; ಸ್ಥಿರತೆ ; ದೃಢತೆ : ನಿರ್ವಳಿತದಲ್ಲನವರತ ಕರ್ತವ್ಯವಿತರವಿರಕ್ತಿಮುನಿಜನಸೇವ್ಯನಂತದಱಿಂದ ಮಹದೈಶ್ವರ್ಯಸಿದ್ಧಿಗಳ ಭವ್ಯಸುಖದೌಪಾಧಿಕವಿದೆಂದವ್ಯಯನು ಮೈಗೊಡದೆ ವಿಸ್ರಸ್ತವ್ಯವಿದೆಯೆನುತಾಡುತಿರ್ದನು ಸೌಖ್ಯನಿಷ್ಠೆಯಲಿ (ನಿಭಾಗ. ೫-೪-೨೮). [ಸಂ. ನಿರ್ವಲಿತ]

**ನಿರ್ವಾಚಕ** (ನಾ). ಚುನಾಯಿಸುವ ಹಕ್ಕುಳ್ಳವನು; ಮತದಾರ: 'ನಿರ್ವಾಚಕಗಣ' ಪರಾ. [ಸಂ.]

**ನಿರ್ವಾಚಕಗಣ** (ನಾ). ಮತದಾರರ ಸಂಘ, —ಸಂಸ್ಥೆ : ರಾಷ್ಟ್ರಪತಿಯವರನ್ನು . . . ನಿರ್ವಾಚಕಗಣದ ಸದಸ್ಯರು ನಿರ್ವಾಚಿಸತಕ್ಕದು (ಭಾಧಾನ. ೨೬). [ನಿರ್ವಾಚಕ+ಗಣ]

**ನಿರ್ವಾಚಕನಾಮಾವಳಿ** (ನಾ). ಮತದಾರರ ಹೆಸರಿನ ಪಟ್ಟಿ,—ದಾಖಲೆಯಿರುವ ವಿವರ : ಪ್ರತಿಯೊಂದು ರಾಜ್ಯದ ವಿಧಾನಮಂಡಲಕ್ಕೂ ಸಂಬಂಧಪಟ್ಟ ನಿರ್ವಾಚಕನಾಮಾವಳಿಗಳನ್ನು ತಯಾರಿಸುವುದರ ಸಂಬಂಧದ . . . ವಿವಾದಗಳನ್ನೂ ಇತ್ಯರ್ಥ ಪಡಿಸುವುದಕ್ಕಾಗಿ (ಭಾಧಾನ. ೧೯೦). [ನಿರ್ವಾಚಕ+ನಾಮ+ಆವಳಿ$_1$(=ಆವಲಿ)]

**ನಿರ್ವಾಚನ** (ನಾ). ಚುನಾಯಿಸುವುದು; ಚುನಾವಣೆ; ಆಯ್ಕೆ : ಸಂಸತ್ತಿಗೂ . . . ರಾಜ್ಯಗಳ ವಿಧಾನಮಂಡಲಗಳಿಗೂ ನಡೆಯತಕ್ಕ

ನಿರ್ವಾಚನಗಳಿಂದ ಅಥವಾ ನಿರ್ವಾಚನಗಳ ಸಂಬಂಧದಲ್ಲಿ ಹುಟ್ಟಿತಕ್ಕ ಸಂದೇಹಗಳನ್ನೂ ವಿವಾದಗಳನ್ನೂ ಇತ್ಯರ್ಥಪಡಿಸುವುದಕ್ಕಾಗಿ (ಭಾಧಾನ. ೧೯೦).

**ನಿರ್ವಾಚನ ಆಯೋಗ** = ಚುನಾವಣಾಸಮಿತಿ ; ಮತದಾನದ ಸಮಿತಿ: ರಾಷ್ಟ್ರಪತಿಯವರು ನಿರ್ವಾಚನ ಆಯೋಗದ ಅಭಿಪ್ರಾಯವನ್ನು ಪಡೆದು ಆ ಅಭಿಪ್ರಾಯಕ್ಕನುಸಾರವಾಗಿ ವರ್ತಿಸತಕ್ಕುದು (ಭಾಧಾನ. ೫೦). [ಸಂ.]

**ನಿರ್ವಾಚನಕ್ಷೇತ್ರ** (ನಾ). ರಾಜಕೀಯವಾದ ಆಡಳಿತಸಭೆಗಳಿಗೆ ತಮ್ಮ ಪ್ರತಿನಿಧಿಯಾಗಿರಲು ಸದಸ್ಯರನ್ನು ಚುನಾಯಿಸುವ ಹಕ್ಕುಳ್ಳ ಮತದಾರರ ಕ್ಷೇತ್ರ; ಮತದಾರರು ಇರುವ ಸ್ಥಳ : ಯಾವುದೊಂದು ಸದನಕ್ಕೆ ನಿರ್ವಾಚನ ನಡೆಯಿಸಲು ಪ್ರತಿಯೊಂದು ಪ್ರಾದೇಶಿಕ ನಿರ್ವಾಚನಕ್ಷೇತ್ರಕ್ಕೂ ಒಂದು ಸಾಧಾರಣ ನಿರ್ವಾಚಕ ನಾಮಾವಳಿಯು ಇರತಕ್ಕುದು (ಭಾಧಾನ. ೧೯೧). [ನಿರ್ವಾಚನ+ಕ್ಷೇತ್ರ]

**ನಿರ್ವಾಚನಮನವಿ** (ನಾ). ಚುನಾವಣೆಯ ಅರ್ಜಿ : ವಿಧಿಯ ಮೇರೆಗೆ ವಿಧಾಯಕವಾಗಿರಬಹುದಾದಂಥ ಪ್ರಾಧಿಕಾರಿಗೆ . . . ಒಪ್ಪಿಸ ಲಾದ ನಿರ್ವಾಚನಮನವಿಯ ಮೂಲಕವಾಗಿ ಹೊರತು, ಪ್ರಶ್ನೆ ಮಾಡಿ ಶಂಕಿಸಲು ಅವಕಾಶವಿರತಕ್ಕುದಲ್ಲ (ಭಾಧಾನ. ೧೯೩) [ನಿರ್ವಾಚನ+ಮನವಿ]

**ನಿರ್ವಾಚನಾಧಿಕಾರ** (ನಾ). ಚುನಾಯಿಸುವ ಅಧಿಕಾರ ; ಮತ ದಾನ ಮಾಡುವ ಹಕ್ಕು. [ನಿರ್ವಾಚನ+ಅಧಿಕಾರ]

**ನಿರ್ವಾಚನಾಧಿಕಾರಿ** (ನಾ). ಚುನಾವಣೆಯ ಕಾರ್ಯವನ್ನು ನಿರ್ವ ಹಿಸುವವನು ; ಚುನಾವಣಾಧಿಕಾರಿ : ಈ ಸಲದ ಚುನಾವಣೆಗೆ ನಮ್ಮ ಕಚೇರಿಯಿಂದ ಇಬ್ಬರನ್ನು ನಿರ್ವಾಚನಾಧಿಕಾರಿಗಳನ್ನಾಗಿ ನೇಮಿ ಸಿದ್ದರು (ರೂಢಿ). [ನಿರ್ವಾಚನ+ಅಧಿಕಾರಿ₁]

**ನಿರ್ವಾಚಿತ** (ಗು). ಆರಿಸಿದ; ಚುನಾಯಿಸಿದ : 'ನಿರ್ವಾಚಿತ ಸದಸ್ಯ' ಪರಾ. [ಸಂ.]

**ನಿರ್ವಾಚಿತಸದಸ್ಯ** (ನಾ). ಚುನಾಯಿತನಾದ ಸದಸ್ಯ : ಸಂಸತ್ತಿನ ಉಭಯಸದನಗಳ . . . ರಾಜ್ಯಗಳ ವಿಧಾನಸಭೆಗಳ ನಿರ್ವಾಚಿತಸದಸ್ಯರಿಂದ ಕೂಡಿದ ನಿರ್ವಾಚಕಗಣದ ಸದಸ್ಯರು ನಿರ್ವಾಚಿಸತಕ್ಕುದು (ಭಾಧಾನ.೨೬). [ನಿರ್ವಾಚಿತ+ಸದಸ್ಯ]

**ನಿರ್ವಾಚಿಸು** (ಕ್ರಿ). ಆರಿಸು ; ಚುನಾಯಿಸು : ನಿರ್ವಾಚಿತಸದಸ್ಯರಿಂದ ಕೂಡಿದ ನಿರ್ವಾಚಕಗಣದ ಸದಸ್ಯರು ನಿರ್ವಾಚಿಸತಕ್ಕುದು (ಭಾಧಾನ.೨೬). [ನಿರ್ವಾಚನ+-ಇಸು₃]

**ನಿರ್ವಾಣ** (ನಾ). **೧.** ನಂದುವುದು ; ಆರುವುದು ; ಶಾಂತವಾಗು ವುದು : "ನಿರ್ವಾಣಃ . . . ಶಾಂತವ್ಯಾಪಾರನಾದ ಯೋಗಿಗೂ ಆರಿ ಹೋದ ಬೆಂಕಿ ಮೊದಲಾದ್ದಕ್ಕೂ ಹೆಸರು" (ಸಿದ್ಧಾಂತಿ. ೭೪೯) ; ನಿರ್ವಾಣವೆಂದರೆ ಶಾಂತವಾಗುವುದು (ಹಿಂದಸಾ. ೩೪). 'ನಿರ್ವಾಣ ಹೊಂದು' ಪರಾ. **೨.** ಮರೆಯಾಗುವುದು; ಕಾಣದಾಗುವುದು. **೩.** ಸಾವು ; ಮರಣ : ನರೇಂದ್ರನಾಥರು . . . ಶ್ರೀರಾಮಕೃಷ್ಣರ ನಿರ್ವಾಣಾನಂತರ ಸ್ವಾಮಿವಿವೇಕಾನಂದರಾಗಿ ಭರತಖಂಡದಲ್ಲೆಲ್ಲಾ ಸಂಚರಿಸಿದರು (ಭಾರದ. ೩೨೩). **೪.** ಮುಕ್ತಿ ; ಮೋಕ್ಷ : "ಕೈವಲ್ಯಂ, ನಿರ್ವಾಣಂ . . . ಮೋಕ್ಷಃ, ಮಹಾನಂದಃ — ಈ ೧೧ ಮೋಕ್ಷದ ಪೆಸರ್" (ಹಲಾಯು. ೨೧-೧೨೪) ; ಇಂತೀ ಕಲ್ಯಾಣಚತುಷ್ಕಂ ಪ್ರಾಕಟ ಕಲ್ಯಾಣಮಿರ್ದುದಿಂ ನಿರ್ವಾಣಂ (ಆಜಿಪು. ೮-೧೪) ; ಕಾಣದಗೆ ಕನ್ನಡಿ ಯದೇತಕೆ . . . ಗೀರ್ವಾಣಭಾಷೆಯದೇಕೆ ಗೊರವಗೆ ಕೇಣವಿಲ್ಲದ ವಿಷಯಲಂಪಟಗೇಕೆ ನಿರ್ವಾಣ (ಅಮೃತ. ೧-೪೦) ; ಮಹಾವೀರನು . . . ಎಪ್ಪತ್ತೆರಡನೆಯ ವಯಸ್ಸಿನಲ್ಲಿ ನಿರ್ವಾಣ ಪಡೆದಾಗ ಬುದ್ಧನಿಗೆ ಎಪ್ಪ ತ್ತೈದು ವರುಷವಾಗಿತ್ತು (ತೀರ್ಥಕ. ೩೩). **೫.** ಪರಮಸುಖ ; ಅತ್ಯಾನಂದ. **೬.** ಸಂಪೂರ್ಣ ; ಪೂರ್ತಿ : ಅಶೇಷಮಹಾಜನ ಮೂನೂರ್ವರುಂ ಸೇಡಿಂಬದಲು ಬಸದಿಯ ನಿರ್ವ್ವಾಣವಾಗಿ ಮಾಡಿಸಿ ಶಾಂತಿನಾಥದೇವರಂ ಪ್ರತಿಷ್ಠೆಯಂ ಮಾಡಿ . . . ಬ್ರಹ್ಮಜಿನಾಲಯ ಮೆಂದು ಪೆಸರನಿಟ್ಟು (ಕಇಆ. ೯೫-೩-೩೭ ; 1124). **೭.** ಮುಗಿವು ; ಕೊನೆ ; ಅಂತ್ಯ : ಶಾಂತಿಪುರಾಣದ ನಿರ್ವಾಣಂ ತಕ್ಕುದೆ ಮಲ್ಲಪಯ್ಯನಿಂ ತದನುಜನಿಂ ಶಾಂತಿಧನ ಪುನ್ನಮಯ್ಯನಿನೇಂ ತಮ್ಮುತ್ತಿರ್ವರುಂ ಕೃತಾರ್ಥರೊ ಜಗದೊಳ್ (ಶಾಂತಿಪು. ೧-೫೨). **೮.** ಶೂನ್ಯ ; ಬರಿದು : ಮನ ನಿರ್ವಾಣವಾಗಿ ವಿವೇಕಜ್ಞಾನ ಪರಮಾರ್ಥದಲ್ಲಿ ಪರಿಣಾಮಿಯಾಗಿ ಸುಳಿದು ಸೂತಕಿಯಲ್ಲದೆ ನಿಂದು ಬದ್ಧನಲ್ಲದೆ ಸುಜ್ಞಾನದಲ್ಲಿ ಸುಳಿದು ನಿರ್ಮಲದಲ್ಲಿ ನಿಂದವರು ಅವರು ಪರದೇಶಾಂತರಿಗಳು (ಉರಿಪ. ೯೦-೬೪). **೯.** ಬತ್ತಲೆ ; ದಿಗಂಬರತ್ವ : ನಿಂದನೇಕಾಂತನಿವಾಸಂ ಬೆಳ್ಳವಾಸಂ ನಿಶೆಯೊಳೆಸೆಯೆ ನಿರ್ವಾಣದೊಳ್ ಯೋಗಿನಾಥಂ (ಸುಕುಮಾ. ೪-೧೧) ; ಮಂಡೆ ಬೋಳಾದರೇನು ಹುಟ್ಟು ಬೋಳಾಗದನ್ನಕ್ಕ ತನು ನಿರ್ವಾಣ ವಾದರೇನು ಆಶೆ ನಿರ್ವಾಣವಾಗದನ್ನಕ್ಕ (ಆದಪ. ೨೧-೫೪) ; ಉಟ್ಟಂತ ಉಡಿಗೆ ತೊಡಿಗೆಯನೆಲ್ಲ ಸೆಳೆದುಕೊಳಬಹುದಲ್ಲದೆ ಮುಚ್ಚಿ ಮುಸುಕಿರ್ದ ನಿರ್ವಾಣವ ಸೆಳೆದುಕೊಳಬಹುದೇ (ಮಹಾದೇ. ಬ. ೫೧-೧೨೪). **೧೦.** ತಪಸ್ಸು. **೧೧.** ಸಾಯಂಕಾಲ ; ಸಂಜೆ. **೧೨.** ಆನೆ ; ಗಜ. **೧೩.** ಮಿಾಹ ; ಮಜ್ಜನ; ಸ್ನಾನ. **೧೪.** ಆನೆಯ ಸ್ನಾನ. **೧೫.** ಕಾರ್ಯ. **೧೬.** ಜಿನ ; ಅರ್ಹಂತ : "ವಪುಸಿದ್ಧಿ ಯೊಳು ಮಜ್ಜನನೊಳು ಜಿನನೊಳು ಜನ್ಮದಪಹರಣೆಯೊಳು ಗಜದೊಳ ಸ್ತಮಯದೊಳ್ ಪ್ರವರ್ತಿಪುದು ನಿರ್ವಾಣನಾಮಂ" (ಮಂಗರಾ.೧೪೪-೪೩); "ಕಾರ್ಯೆ ಜೀವಾಸ್ತಮಯಸಮಯ ಜನ್ಮಾಂತ್ಯ ದೇಹೋತ್ತರಕರ್ಮಂ ಸಾಮಜಂ ವೈರಿದಶನ ತಪಮಿಂತೈದೆ ನಿರ್ವಾಣಮಕ್ಕುಂ" (ನಾನಾರ. ೨೦). **೧೭.** [ವೀಶೈ] ವೀರಶೈವದಲ್ಲಿ ಒಂದು ಪ್ರಭೇದ : ಶುದ್ಧ ವಿಶೇಷ ನಿರ್ವಾಣ ಎಂದು ವೀರಶೈವವು ಮೂಜು ತೆಱನಾಗಿರ್ಪುದು ಮೂಱು ತೆಱ ತಾನೆ ಆಱು ತೆಱನಾಗಿ ತೋಱುತ್ತದಂತೆಂದೊಡೆ ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಎಂದು (ಸಿದ್ಧೇಪ. ೪-೯). **೧೮.** [ಬೌದ್ಧ] ಸಂಸಾರಕ್ಲೇಶಗಳ ನಿವೃತ್ತಿ ; ದೇಹಾತ್ಮಗಳ ಅಂತಿಮ ವಾದ ಅಳಿವು; ℙ ಬೌದ್ಧರು ಮೋಕ್ಷವೆಂಬ ಅರ್ಥದಲ್ಲಿ 'ನಿರ್ವಾಣ' ಎಂಬ ಪದವನ್ನು ಬಳಸುತ್ತಾರೆ. ದೇಹಾತ್ಮಗಳ ನಂದಿಹೋಗುವಿಕೆಯೇ ಎಂದರೆ ಸಂಪೂರ್ಣವಾದ ಅಳಿವೇ ನಿರ್ವಾಣ. ಸರ್ವಂ ಕ್ಷಣಿಕಂ, ಸರ್ವಂ ದುಃಖಂ, ಸರ್ವಂ ಸ್ವಲಕ್ಷಣಂ, ಸರ್ವಂ ಶೂನ್ಯಂ ಎಂಬ ಭಾವನಾ ಚತುಷ್ಟಯ ವನ್ನು ಅತಿಶಯವಾಗಿ ಅಳವಡಿಸಿಕೊಳ್ಳಬೇಕು; ಇದರಿಂದ ಸಂಸಾರದುಃಖಕ್ಕೆ ಕಾರಣವಾದ ಆಶೆ ಮೊದಲಾದ ಎಲ್ಲ ವಾಸನೆ ಗಳೂ ನಾಶವಾಗುತ್ತವೆ. ಆಗ ವಾಸನಾರಹಿತವಾದ, ವಿಶುದ್ಧ ವಾದ ವಿಜ್ಞಾನವೊಂದೇ ಉಳಿದಿರುತ್ತದೆ. 'ನಾನು' ಎಂಬ ಅಹಂಕಾರವೂ 'ನನ್ನದು' ಎಂಬ ಮಮಕಾರವೂ ಇರುವುದಿಲ್ಲ. ನಾನೇ ಇಲ್ಲವೆಂಬ ನಿರಾತ್ಮತಾ ಭಾವನೆಯು ಬಂದು, ನಾನೇ ಇಲ್ಲದಿರುವಾಗ ನನಗೆ ಯಾವುದು ಬೇಕು ಎಂಬ ಮಮಕಾರ ನಿವೃತ್ತಿಯು ಬರುತ್ತದೆ. ಬೌದ್ಧಮತದಲ್ಲಿ ಈ ಅಹಂಕಾರ ಮಮಕಾರ ನಿವೃತ್ತಿಗೆ ನೈರಾತ್ಮ್ಯದರ್ಶನವೆಂದು ಹೆಸರು. ಇದೇ ನಿರ್ವಾಣ, ಮೋಕ್ಷಕ್ಕೆ ದ್ವಾರ. ಎಣ್ಣೆ ತೀರಿಹೋದರೆ ದೀಪ ಆರಿಹೋಗುವಂತೆ ರಾಗವೆಂಬ ಆಶೆಯು ತೀರಿಹೋದರೆ ವಿಜ್ಞಾನ

ರೂಪವಾದ ಆತ್ಮವು ಆರಿಹೋಗುತ್ತದೆ. ಆದುದರಿಂದ ಮೋಕ್ಷಕ್ಕೆ ನಿರ್ವಾಣವೆಂದು ಹೆಸರು : ಬುದ್ಧನ ನಿರ್ವಾಣಾನಂತರ ಎರಡು ಮೂರು ಶತಮಾನಗಳಾದ ಮೇಲೆ . . . ವಿದ್ವಾಂಸರು ಬುದ್ಧನ ಉಪದೇಶಗಳನ್ನೆಲ್ಲಾ ಸಂಗ್ರಹಿಸಿದರು (ಹಿಂದಸಾ. ೨೩) ; ಇವರೆಲ್ಲರೂ ಸರ್ವಕಾಮಗಳನ್ನೂ ಬುಡಸಹಿತ ಕಿತ್ತು . . . ನಿರ್ವಾಣವೊಂದರಲ್ಲಿಯೇ ಅಭಿರಮಿಸಿ, ವಿಮುಕ್ತಿಯನ್ನು ಸಾಧಿಸಿದವರು (ರಾಮಂಶ. ೨೩). [ಸಂ.]

**ನಿರ್ವಾಣಕ್ಷೇತ್ರ** (ನಾ). [ಜೈನ] ತೀರ್ಥಂಕರರೇ ಮೊದಲಾದವರು ಮೋಕ್ಷವನ್ನು ಪಡೆದ ಸ್ಥಳ. [ನಿರ್ವಾಣ + ಕ್ಷೇತ್ರ]

**ನಿರ್ವಾಣಗೊಡು** (ಕ್ರಿ). ಸಂಸಾರವನ್ನು ನಡೆಸಿಕೊಂಡು ಹೋಗಲು ಸಹಾಯ ಮಾಡು ; ಸಂಸಾರವನ್ನು ನಿಭಾಯಿಸಲು ಅನುವು ಮಾಡಿಕೊಡು : ಸರ್ವಜ್ಞ ಸರಸಿಜೋದರ ಕಂಸು ರತಿಗೆ ಗಾಂಧರ್ವವಿವಾಹವ ಮಾಡಿ ನಿರ್ವಾಣಗೊಟ್ಟು ಬೀಳುಕೊಂಡು ಮುನಿನಿರ್ಗರ್ವದಿಂ ಬಿನ್ನಯಿಸಿದನು (ಮೋಹತ.೧೬-೬೨) ; ಸರ್ವರ ಬೀಳ್ಕೊಟ್ಟು ಪಿಚುಮಂದರಸವೀಂಟಿ ತರ್ವಾಯ ಭರದಿ ತಂಬುಲವ ಚರ್ವಣಗೆಯ್ದು ದಾದಿಯರಿಂಗೆ ಸುತರಕ್ಷೆ ನಿರ್ವಾಣಗೊಟ್ಟಳುತ್ಸವದಿ (ಮೋಹತ. ೧೭-೨೬). [<ನಿರ್ವಹಣ + ಕೊಡು$_1$]

**ನಿರ್ವಾಣಧಾತು** (ನಾ). ಮೋಕ್ಷಸತ್ವ : ಭಗವಂತನು ಅನುಪಾದಿಶೇಷವಾದ ನಿರ್ವಾಣಧಾತುವಿನಲ್ಲಿ ಪರಿನಿರ್ವಾಣ ಪಡೆದನು (ಬುದ್ಧಪ. ಮಿಲಿಂದ. ೧೦೧). ''ರಾಗರಹಿತವಾದ ಸ್ಥಿತಿ'' (ಬುದ್ಧಪ. ಮಿಲಿಂದ. ಕೋಶ). [ನಿರ್ವಾಣ + ಧಾತು]

**ನಿರ್ವಾಣನಾಥ** (ನಾ). ಜಿನ ; ಅರ್ಹಂತ : ಜಿನೇಂದ್ರಃ . . . ನಿರ್ವಾಣನಾಥಃ, ಸರ್ವಜ್ಞಃ, ತ್ರಿಲೋಕೇಶಃ, ತ್ರಿಕಾಲವಿತ್-ಈ ಲ ಜಿನೇಶ್ವರನ ಪೆಸರ್ (ಹಲಾಯು. ೧೫-೮೬); "ಆ ನಿರ್ವಾಣನಾಥನರುಹಂ ಶೌದ್ಧಂ ತ್ರಿಕಾಲವಿದ್ವೀತರಾಗಂ ಜ್ಞಾನವರ್ಧನಂ ಸರ್ವಜ್ಞನೆನೆ ಜಿನೇಂದ್ರಂ"(ಮಂಗರಾ. ೭-೨೩). [ನಿರ್ವಾಣ + ನಾಥ]

**ನಿರ್ವಾಣಪದ** (ನಾ). ಮೋಕ್ಷ ; ಕೈವಲ್ಯಪದವಿ : ನಿರ್ವಾಣಪದಸ್ಥಿತನಂ . . . ಸರ್ವೇಶ್ವರನಂ ಪೊಗಟ್ಟುದಪೂರ್ವಗುಣಸ್ತುತಿಶತಂಗಳಿಂ ಮತಿವಂತಂ (ಸಸುಪ. ೧-೫೩); ನಿರ್ವಾಣಪದಕ್ಕೆ ಕಾಮಿತನಾಗಿ ಸಕಲಪ್ರಪಂಚದ ಗರ್ವಮಂ ನೆಗ್ಗಲೊತ್ತಿ . . . ಆಚರಿಸುವ ಪರಮವಿರಕ್ತರ ಉಪಾಧಿಕೆಯಿಲ್ಲದ ಕ್ರೀಗಳಾವುವಯ್ಯಾ (ಘನಪ. ೨೫-೨೧). [ನಿರ್ವಾಣ + ಪದ$_2$]

**ನಿರ್ವಾಣಪೂಜೆ** (ನಾ). ನಿರ್ವಾಣಕ್ಷೇತ್ರದ ಪೂಜೆ : ಅಂತು ನಿರ್ವಾಣಪೂಜೆಗೆ ನಿಖಿಲಗೀರ್ವಾಣಪತಿಗಳೆಟ್ಟೆಪರ್ಗಳ್ (ಪಂಚಾಪೂ. ೧೬-೮೫ ಪ). [ನಿರ್ವಾಣ + ಪೂಜೆ]

**ನಿರ್ವಾಣಪ್ರಾಪ್ತಿ** (ನಾ). ಮೋಕ್ಷವನ್ನು ಪಡೆಯುವುದು; ಕೈವಲ್ಯಪ್ರಾಪ್ತಿ : ಸಾಧನೆಯಿಂದಲೂ ಆತ್ಮವಿಕಾಸದಿಂದಲೂ ನಿರ್ವಾಣಪ್ರಾಪ್ತಿ (ಭಾರದ. ೬೭೫). [ನಿರ್ವಾಣ + ಪ್ರಾಪ್ತಿ]

**ನಿರ್ವಾಣಭೂಮಿ** (ನಾ). = ನಿರ್ವಾಣಕ್ಷೇತ್ರ : ನಿರ್ವಾಣಭೂಮಿಯನನೇಕಸುರಭಿಸುರತರುಕುಸುಮಗಂಧಾಕ್ಷತಂಗಳಿಂ ದಮ ರ್ಚಿಸಿ (ಆದಿಪು. ೧೬-೫೧ ಪ). [ನಿರ್ವಾಣ + ಭೂಮಿ]

**ನಿರ್ವಾಣರೇಖೆ** (ನಾ). (ಅಲಂ) ಕೊನೆಯ ಹಂತ ; ಸೀಮಾರೇಖೆ; ಪರಾಕಾಷ್ಠೆ : ಸ್ಮರವಿಜಯಕ್ಕಿದೆ ನಿರ್ವಾಣರೇಖೆಯೆನೆ ಮುಸಗಿ ಮುದನಮುದಕರಿ ವಿಸಟಂಬರಿದುದೆನೆ ಕಾಮನೇಸಿನ ಪರಿಣತಿಯೆನೆ ತರುಣಿ ಬಹುವಿಧಂ ನರ್ತಿಸಿದಳ್ (ಮಲ್ಲಿಪು. ೮-೫೭). [ನಿರ್ವಾಣ + ರೇಖೆ]

**ನಿರ್ವಾಣರೇಖೆಗೊಳ್** (ಕ್ರಿ). ಚಿತ್ರಣಕ್ಕೆ ಕೊನೆಯ ಸ್ವರೂಪವನ್ನು ಕೊಡು : ಆಗಸದೊಳಡರ್ದು ಪರೆದಿರದೀಗಡೆ ನಿರ್ವಾಣರೇಖೆಗೊಂಡನೊ ಬಿದಿಯೆಂಬೀ ಗಮನಿಕೆಯಂತಾ ದೇವಾಗಮ[ನ]ದ ಚೆಲ್ವು ವಾಗಗೋಚರಮಲ್ತೇ (ಶಾಂತಿಪು. ೧೦-೫). [ನಿರ್ವಾಣರೇಖೆ + ಕೊಳ್$_1$]

**ನಿರ್ವಾಣರೇಖೆವಡೆ** (ಕ್ರಿ). ಅಲಂಕರಣದಲ್ಲಿ ಅಂತಿಮಸ್ವರೂಪವನ್ನು ಕೊಡು : ನೇತ್ರಪುತ್ರಿಕೆಗೆ ನಿರ್ವಾಣರೇಖೆವಡೆವಂತೆ ನಗೆಗಣ್ಗೊಳ್ ಕಜ್ಜಳರೇಖೆಯನಳಂಕರಿಸಿಯುಂ (ಚಂದ್ರಪು. ೬-೬೩ ಪ). [ನಿರ್ವಾಣರೇಖೆ + ಪಡೆ$_1$]

**ನಿರ್ವಾಣಸಂಚಾರಿ** (ನಾ). ಮುಕ್ತಿಮಾರ್ಗದಲ್ಲಿ ನಡೆಯುವವನು; ವಿರಕ್ತ; ಯೋಗಿ : ಗರ್ವಪಡದುಪಕಾರಿ . . . ನಿರ್ವಾಣಸಂಚಾರಿ ಉರ್ವರೆಗೆ ಗುರುವವನು (ಮುಂಕುಂಕ. ೮೦೬). [ನಿರ್ವಾಣ + ಸಂಚಾರಿ]

**ನಿರ್ವಾಣಸಮಾಧಿ** (ನಾ). [ವೀಶೈ] ಎಂಟು ಬಗೆಯ ಸಮಾಧಿಗಳಲ್ಲಿ ಒಂದು ; ಮೋಕ್ಷಸಮಾಧಿ : ಆ ಲಿಂಗವನೆ ಸರ್ವಾಂಗದಲ್ಲಿ ವೇಧಿಸಿಕೊಂಡನೊಬ್ಬ ಶರಣ ಆ ಸರ್ವಾಂಗವನೆ ನಿರ್ವಾಣಸಮಾಧಿಯಲ್ಲಿ ನಿಲಿಸಿದನೊಬ್ಬ ಶರಣ ನಾನು ನಿರ್ವಾಣದಲ್ಲಿ ನಿಂದು ಅಗಮ್ಯನಾದೆನೆಂದರೆ ಭಕ್ತಿಕಂಪಿತನೆನಿಸಿ ಎನ್ನ ತನ್ನಲ್ಲಿಗೆ ಬರಿಸಿಕೊಂಡನೊಬ್ಬ ಶರಣ (ಅಪಚಂ. ೨೨೭-೧೦೨೭). 'ಕಾಯಸಮಾಧಿ' ಪರಾ. [ನಿರ್ವಾಣ + ಸಮಾಧಿ]

**ನಿರ್ವಾಣಸ್ಥಾನ** (ನಾ). ತಪೋಪ್ರದೇಶ : ನಿರ್ವಾಣಸ್ಥಾನದೊಳೇಳುದಿವಸ ಮನಃಪೂರ್ವಕಮುಪವಾಸಮಿರ್ದು ಸರ್ವಶಕ್ತಿಯೊಳ್ಪ್ರಜ್ಞಪ್ತಿ ವಿದ್ಯೆಯನಂದುರ್ವೀಶ ಲಕ್ಷ್ಮಣ ಪಡೆಯೆ (ರಾಮವಿ. ೧೬-೧೫). [ನಿರ್ವಾಣ + ಸ್ಥಾನ]

**ನಿರ್ವಾಣಹೊಂದು** (ಕ್ರಿ). ೧. ಮೋಕ್ಷವನ್ನು ಪಡೆ. ೨. ಆರಿಹೋಗು ; ತಣ್ಣಗಾಗು ; ನಂದು : ಅವನ ದುಸ್ಸಹವಾದ ಜ್ವಲಂತ ಅಗ್ನಿಯು ಎಂದಿಗೂ ನಿರ್ವಾಣ ಹೊಂದದು (ಇಪ್ಪಕ. ೧೯೪). [ನಿರ್ವಾಣ + ಹೊಂದು$_1$ (<ಪೊರ್ದು)]

**ನಿರ್ವಾಣಿ** (ನಾ). ೧. ಬತ್ತಲೆ ಇರುವವನು ; ದಿಗಂಬರ. ೨. ವಿರಕ್ತ; ಮುಕ್ತ : ಕತ್ತೆ ಬತ್ತಲೆ ಇದ್ದಡೆ ನೆಟ್ಟನೆ ನಿರ್ವಾಣಿಯೆ (ಮೋಳಿಮಾ. ೨೩-೪೦); ಉಟ್ಟುದ ತೊಱೆದು ಊರ ಹಂಗಿಲ್ಲದೆ ನಿರ್ವಾಣಿಯಾಗಿ ನಿಜಮುಕ್ತಿಸೋಪಾನವಾಗಿಪ್ಪ ಕರಪಾತ್ರೆಯೆಂಬ ಬಿರಿದು (ಘನಪ. ೧೯-೧೬) ; ನಿರ್ಮಾಯ ನಿತ್ಯ ನಿರ್ವಾಣಿ ಶ್ರೀಪ್ರಭುರಾಯ ಧರ್ಮಸ್ವರೂಪ ಸಂಗನ ಬಸವರಾಯ (ನವನೋ. ೧-೧೪). [ಸಂ. ನಿರ್ವಾಣಿನ್]

**ನಿರ್ವಾಣೋರ್ವಿ** (ನಾ). = ನಿರ್ವಾಣಕ್ಷೇತ್ರ : ವಂದನಾಭಕ್ತಿಯಿನನವರತಂ ಬಂದು ಬಂದಾಗಳುಂ ಕುಂದದೆ ನಿರ್ವಾಣೋರ್ವಿಯಂ ಪೂಜಿಸುವಖಿಳವಿನೇಯೋತ್ಕರಾಶೇಷಲೋಕಂ (ಸುಕುಮಾ. ೪-೪೭). [ನಿರ್ವಾಣ + ಉರ್ವಿ]

**ನಿರ್ವಾತ** (ಗು). ೧. ಗಾಳಿಯಿಲ್ಲದ; ಶೂನ್ಯವಾದ. ೨. ಸ್ಥಿರವಾದ ; ಪ್ರಶಾಂತವಾದ : 'ನಿರ್ವಾತದೀಪ' ಪರಾ. (ನಾ). ೩. ನಿಶ್ಚಲವಾದ ಗಾಳಿ; ನಿಂತುಹೋಗಿರುವ ಗಾಳಿ : "ನಿರ್ವಾತಃ . . . ನಿಂತು ಹೋದ ಗಾಳಿಯ ಹೆಸರು" (ಸಿದ್ಧಾಂತಿ. ೩೪೫). [ಸಂ.]

**ನಿರ್ವಾತದೀಪ** (ನಾ). ಗಾಳಿಯಿಂದ ಅಲುಗದಿರುವ ದೀಪ ; ಹೊಯ್ದಾಡದೆ ನಿಶ್ಚಲವಾಗಿ ಉರಿಯುತ್ತಿರುವ ದೀಪ : ನಿರ್ವಾತದೀಪದ ಕೆಂಪುಕುಡಿಯಂತೆ ಹಣೆ ತುಂಬ ಪ್ರಭೆ ಬೀರಿದ ಉದ್ದ ಕುಂಕುಮ (ನಿರಾಭ. ೩೧). [ನಿರ್ವಾತ + ದೀಪ$_2$]

**ನಿರ್ವಾತವಲಯ** (ನಾ). ಗಾಳಿಯಿಲ್ಲದ ಪ್ರದೇಶ. [ನಿರ್ವಾತ + ವಲಯ]

**ನಿರ್ವಾದ** (ನಾ). ೧. ವಾದಕ್ಕೆಡೆಯಾಗದುದು ; ನಿರ್ವಿವಾದವಾದುದು; ಆಕ್ಷೇಪವಿಲ್ಲದುದು. ೨. ಅಪವಾದ; ನಿಂದೆ; ದೂಷಣೆ:

"ಅಪವಾದಃ, ಉಪಕ್ರೋಶಃ, ನಿರ್ವಾದಃ . . . ಜುಗುಪ್ಸಾ – ಈ ೮ ಅಪವಾದದ ನಾಮಂ" (ಹಲಾಯು. ೨೪–೧೪೭) ; "ಅಪವಾದಂ ಜುಗುಪ್ಸೆ ನಿರ್ವಾದಮುಪಕೀರ್ತಿ ಪರಿವಾದಮುದವರ್ಣವಾದಮುಡುಪಕ್ರೋಶಮೆನೆ ನಿಂದೆಯಕ್ಕುಂ" (ಮಂಗರಾ. ೨೬–೪). [ಸಂ.]

**ನಿರ್ವಾಥೆ** (ನಾ). ಬಾಧೆಯಿಲ್ಲದಿರುವುದು; ನಿರಾತಂಕ : ತದೀಯ ದೇಶಮುನದಂ ನಿರ್ವ್ವಾಥೆಯಿಂದಾಳ್ದು (ಎಇ. XVI, ೩೪–೧೫ ; 1102). [<ಸಂ. ನಿರ್ಬಾಧ]

**ನಿರ್ವಾಪ** (ನಾ). = ನಿರ್ವಾಪಣ. [ಸಂ.]

**ನಿರ್ವಾಪಣ** (ನಾ). ೧. ಹೊರಸುರಿಯುವುದು; ಚೆಲ್ಲುವುದು ; ಸೂಸುವುದು. ೨. (ದಾನವಾಗಿ) ಕೊಡುವುದು ; ಅರ್ಪಿಸುವುದು. ೩. ಪಿತೃಗಳಿಗೆ ಪಿಂಡವನ್ನರ್ಪಿಸುವುದು. ೪. ದಾನ; ಕೊಡುಗೆ. ೫. ಕೊಲ್ಲುವುದು; ಕೊಲೆ: "ಮಾರಣಂ, ನಿಶರಣಂ . . . ನಿರ್ವಾಪಣಂ . . . ಪ್ರಮಯಾ, ಹಿಂಸಾ, ಸಂಜ್ಞಪನಂ–ಈ ೨೧ ಕೊಲೆ" (ಹಲಾಯು. ೭೪–೩೨೪). ೬. ಕಳೆಯುವುದು ; ನೀಗುವುದು ; ಪರಿಹರಿಸುವುದು : ಮುನಿಸೆಂಬ ಕಿಚ್ಚಿನೊಳೆ ಬೆಂದು ನಿಲ್ಲದಂಬುಧಿಯ ನೋಡಿ ಪೊಕ್ಕರಿನ್ನಪಸಾಧನದಿರವಿನಂದಮೆಂತೆನೆ ತನುನಿರ್ವಾಪಣನಿಮಿತ್ತದಿರವಂ ಪೋಲ್ಕುಂ (ಶಾಂತಿಪು. ೯–೧೫೩) ; ಲೇಸು ಮಾಡಿದೆ ನಾಕವನು ಖಳರೀಸು ದಿವಸ ವಿಭಾಡಿಸಿದರೆ ಸುರೇಶನಾಪತ್ತಾಪನಿರ್ವಾಪಣವ ರಚಿಸಿದೆಲ (ಕುವ್ಯಾಅ. ೧೨–೬೧) ; ತಾಯೆ ಕೇಳವಧರಿಸಿ ಮೋಕ್ಷೋಪಾಯವನು ಸಂಸಾರದುಃಖನಿಕಾಯನಿರ್ವಾಪಣವೆನಿಪ್ಪ ಧ್ಯಾತೃಯೋಗವನು (ನಿಭಾಗ. ೩–೧೨–೩೨). ೭. ನಾಶಗೊಳಿಸುವವನು; ವಿಧ್ವಂಸಕ : ಅಂಜನಾಸೂನು ರೂಪುದೋರಿದನೊಡನೆ ಸಮರಾಟೋಪದಲಿ ರಿಪುಬಲಕೆ ಕಲಿನಿರ್ವಾಪಣನು ಕಲಿವೃಷಭ ಬೇಡಿದನಾ ಮಹಾಹವವ (ತೊರಾ. ೬–೩೨–೪೭). [ಸಂ.]

**ನಿರ್ವಾಪಿತ** (ಗು). ಶಮನವಾದ ; ಶಾಂತವಾದ : ಆ ಪುರೋಹಿತ ವರ್ಗದಲಿ ನಿರ್ವ್ವಾ[ರ್ವಾ]ಪಿತಾಂತರ್ವ್ಯಥೆಯುಲವನಿಪನಾ ಪುರಪ್ರಾಂತ್ಯದಲಿ ಸುತ್ತಲು ಮೂರುಯೋಜನದ ತೋಪಿನಲಿ ಕಟ್ಟಿಸಿದನಗ್ಗದ ಭೂಪರಿಗೆ ಭವನವನು (ಕುವ್ಯಾಅ. ೧೧–೧೭). [ಸಂ.]

**ನಿರ್ವಾಯ**[1] (ನಾ). ನೆಪವಿಲ್ಲದುದು : ತಾಯೆ ಕೇಳ್ಕುಂತಿಯ ಕುಮಾರಕರ ಸೇರಿ ನಿರ್ವಾಯದಲಿ ಜೀವನೋಪಾಯಮುಂ ಮಾಡಿ ವೃಥಾಯದಿಂ ಸಾವೆನೆಂದೆನುತ ಪೊರಡಲ್ (ತುರಂಗ. ೨೩–೩೦). [<ನಿರ್ವ್ಯಾಜ]

**ನಿರ್ವಾಯ**[2] (ನಾ). ಒಂದು ಬಗೆಯ ಬಾಣ (?) : ನೆಜಿದು ನಿರ್ವಾಯಂ ನರುವಾಯಂ . . . ಕವಲ[ಬು ವೆಂ]ಬಂಕದಂಬೆತ್ತ[ಲುಂ] ತುಜುಗಿ ನಡುವಿನಂ ಸಾರ್ದು ಸಾರ್ದೆಚ್ಚೆಚ್ಚು ಕಾದಿದರತಿರಥರ್ (ಪಂಪಭಾ. ೧೩–೩೯) ; "ನಿರ್ವಾಯಂ–ಬಾಯಿಲ್ಲದಿರುವ ಬಾಣ ಎಂದರೆ ಅಲಗಿಲ್ಲದ ಬಾಣ ?" (ಪಂಪವೀ. ೫೨೪). [?]

**ನಿರ್ವಾಯು** (ಗು). = ನಿರ್ವಾತ ೧. 'ನಿರ್ವಾಯುಸ್ಥಳ' ಪರಾ. [ಸಂ.]

**ನಿರ್ವಾಯುಸ್ಥಳ** (ನಾ). ವಾಯುವಿಲ್ಲದ ಸ್ಥಳ; ಶೂನ್ಯಪ್ರದೇಶ : ನೀರನ್ನು ನಿರ್ವಾಯುಸ್ಥಳ (Vaccum)ಕ್ಕೆ ಬಿಟ್ಟು ಈ ಯಂತ್ರಗಳನ್ನು ನಡೆಸುತ್ತಿದ್ದನು (ಶಿಲ್ಪನಾ. ೭೪); ನಿರ್ವಾಯುಸ್ಥಳ(Vaccum)ದಲ್ಲಿಯೂ ಅನಿಲಗಳಲ್ಲಿಯೂ ಶಾಖವು ವಿಕಿರಣ (Radiation)ದ ಮೂಲಕ ಹರಡುತ್ತದೆ (ಶಿಲ್ಪನಾ. ೧೨೧). [ನಿರ್ವಾಯು + ಸ್ಥಳ(= ಸ್ಥಲ)]

**ನಿರ್ವಾರಿಸು** (ಕ್ರಿ). ತೊಲಗಿಸು; ಪರಿಹರಿಸು: ನಿವಾರಿಸು: ತಮವ ನಿರ್ವಾ[ಪಾಠಾಂ. ವ್ವಾ]ರಿಸಿದ ಹರನಂಘ್ರಿಗಂ ಮಣಿದು ಹರುಷಿಸಿದಳದ್ರಿಜಾತೆ (ವೆಂಕಾರಾ. ೪–೭–೩೨). [ನಿರ್ವಾರಣ$_0$ + –ಇಸು$_3$]

**ನಿರ್ವಾರ್ಯ** (ಗು). ೧. ತಡೆಯಲಾಗದ ; ಸಹಿಸಲಾಗದ. ೨. ನಿರ್ಭಯದಿಂದ ವರ್ತಿಸುವ ; ಧೈರ್ಯವಾಗಿರುವ. [ಸಂ.]

**ನಿರ್ವಾಸನ** (ನಾ). ೧. ವಾಸಕ್ಕೆ ಅವಕಾಶವಿಲ್ಲದಂತೆ ಮಾಡುವುದು; ದೇಶದಿಂದ ಹೊರದೂಡುವುದು; ಗಡೀಪಾರು ಮಾಡುವಿಕೆ : ಭಾರತದೊಳಕ್ಕೆ ಪ್ರವೇಶ ಮತ್ತು ಅಲ್ಲಿಂದ ಉತ್ಪ್ರವಾಸನ ಮತ್ತು ನಿರ್ವಾಸನ (ಭಾಧಾನ. ೨೬೯). ೨. ನಾಶಮಾಡುವುದು ; ಕೊಲ್ಲುವುದು ; ಕೊಲೆ : "ಮಾರಣಂ, ನಿಶರಣಂ . . . ನಿರ್ವಾಸನಂ, ಕದನಂ . . . ಸಂಜ್ಞಪನಂ–ಈ ೨೧ ಕೊಲೆ" (ಹಲಾಯು. ೭೪–೩೨೪). [ಸಂ.]

**ನಿರ್ವಾಸನೆ** (ನಾ). ವಾಸನೆಯಿಲ್ಲದಿರುವಿಕೆ ; ನಿರ್ಗಂಧ. [ಸಂ. ನಿರ್ವಾಸನಾ]

**ನಿರ್ವಾಸಿತ** (ಗು). ೧. ಹೊರದೂಡಲ್ಪಟ್ಟ : ಅವಳ ಮರಣವಿಚಾರದಲ್ಲಿ ಅಥವಾ ಅವಳ ಚಿರನಿರ್ವಾಸಿತ ವಿಚಾರದಲ್ಲಿ ಆ ಕೆಟ್ಟ ಆಲೋಚನೆಯು ನಡದಿರಬೇಕು (ಕಪಾಕುಂ. ೧೦೪). (ನಾ). ೨. ಹೊರದೂಡಲ್ಪಟ್ಟವನು ; ನಿರಾಶ್ರಿತ : ನಾನು ಅಲೆಅಲೆಯುತ್ತ ಈಗ ಈ ನಿರ್ವಾಸಿತರ ಕ್ಯಾಂಪಿಗೆ ಬಂದೆ (ಹೊಸಬೆ. ೪೩) ; ನಿರ್ವಾಸಿತನೂ ನಿರಾಶ್ರಿತನೂ ಆದ ಮಾರ್ಕ್ಸ್‌ನಿಗೆ ಲಂಡನ್‌ಪಟ್ಟಣವು ಆಶ್ರಯವನ್ನು ಕೊಟ್ಟಿತು (ಮಾವಾದ. ೨೭). [ಸಂ.]

**ನಿರ್ವಾಹ** (ನಾ). ೧. ನಿವಾರಣೋಪಾಯ ; ಬೇರೆಯ ದಾರಿ ; ಗತ್ಯಂತರ : ಇಂತು ಗುರುವವನ ತರ್ತ್ಪ್ರಶ್ನೆಗಳ್ಗೆ ಮೊದಲಿಂದುವುಂ ನಿರ್ವಾಹಮುಂ ಪೇಳೆ (ಪದ್ಮರಾ. ೧೧–೨೪೭) ; ಇತ್ತಲು ಮಹೀಶನ ಹೊರೆಯಲಾಯಿತ್ತುತ್ಪಾತಶತ . . . ಕರೆಸಿ ಧೌಮ್ಯಂಗಲುಹಲಿದು ನಮ್ಮರಸುಗಳಿಗಪಘಾತಸೂಚಕವಿರಿದಿದಲಿ ನಿರ್ವಾಹವೆಂದೊಡೆ ನೃಪತಿ ಚಿಂತಿಸಿದ (ಕುವ್ಯಾಅ. ೧೩–೩೬) ; ಆ ಜ್ವರದಲ್ಲಿ ಅವನು ಸಂಪೂರ್ಣ ಕ್ಷೀಣವಾಗಿ ಹೋಗಿದ್ದ . . . ಆದರೂ ಕೆಲಸ ಮಾಡದೆ ನಿರ್ವಾಹವಿಲ್ಲ (ರಕ್ತರೂ.೬೯). ೨. ವಾಸದ ಏರ್ಪಾಟು,–ವ್ಯವಸ್ಥೆ : ನಿರ್ವಾಹವಾಯಿತ್ತು ಬಸವಣ್ಣಂಗೆ ಕಪ್ಪಡಿಯ ಸಂಗಯ್ಯನಲ್ಲಿ (ಸುಡಿಮಾ. ೨೬–೬೭) ; ಮೆಚ್ಚಿದಳಾ ವಿರಾಟನ ವನಿತೆ ವೀರರ ವಧುವನಾ ಸಖಿಜನದೊಳಗೆ ನೇಮಿಸಿದಳ ನಿಬರಿಗಾಯ್ತು ನಿರ್ವಾಹ (ಕುವ್ಯಾವಿ. ೧–೩೨). ೩. ನಡೆಸಿಕೊಂಡು ಹೋಗುವುದು; ನಿಭಾಯಿಸುವುದು; ನಿರ್ವಹಿಸುವಿಕೆ : ಭೂಮಿಪತಿ ಭುಲ್ಲವಿಸಿದನು ನಿಸ್ಸೀಮಸಂತೋಷದಲಿ ಸುಜನಸ್ತೋಮ ರಕ್ಷಣಕಾದ ನಿರ್ವಾಹದ ರೂಢಿಯಲಿ (ಕುವ್ಯಾಅ. ೧–೧೦) ; ಉರ್ವಸಂತಾನಮಂ ಕಾಣದಿಕ್ಷ್ವಾಕುಕುಲನಿರ್ವಾಹಮಂ ನೆನೆದು ರಘುವರಂ ನುಡಿದನೇಕಾಂತದೊಳ್ ಜಾನಕಿಯೊಳು (ಜೈಮಿಭಾ. ೧೪–೧೫). ೪. ಬದುಕು ; ಬಾಳುವೆ : ಇನ್ನೆನ್ನ ನಿರ್ವಾಹಮುಂ ಮರಸನ ದೆಸೆಯೊಳಾದ ಮೋಹಮುಮಂಬುದುದೆಂದು ಮಲಮಲಮಜಂಗುತ್ತುಂ (ಸುಕುಮಾ. ೩–೫ ಪ) ; ಬೀಸಿದರೆ ಸಿಲುಕುವರು ಮಾಯಾಪಾಶದೊಳಹಂಕಾರಿಗಳು ತದ್ದೇಶಕಾಲಕ್ರಿಯೆಗಳಲಿ ನಿರ್ವಾಹವನು ಬೆದಕಿ ಬೇಸಱುವರು (ಕುವ್ಯಾಭೀ. ೩–೫೪) ; ಸೀತಾರಾಮಲಕ್ಷ್ಮಣರು . . . ಫಲಗಳ ಮೇಲೆ ನಿರ್ವಾಹ ಸಾಗಿಸುತ್ತ (ತುಳಸೀ. ೧೬೫). ೫. ಸಮಾಪ್ತಿಗೊಳಿಸುವುದು ; ಮುಕ್ತಾಯ ; ಉಪಸಂಹಾರ : ಚೆನ್ನಬಸವರಾಜದೇವರು ನಿರ್ವಾಹವಾಗಿ ನಿರೂಪಿಸಿದ ಪ್ರಸ್ತಾವದ ವಚನ (ವಚಸಂ. ೨೭೧–೯೨) ; ಪಂಚಾಕ್ಷರಿ ಮುಂತಾದ ಷಡಕ್ಷರಿಯೊಳಗಾದ ಐವತ್ತೊಂದನೆಯ ಅಕ್ಷರದಲ್ಲಿ ನಿರ್ವಾಹ ವೇದ ಮುಂತಾದ ಶಾಸ್ತ್ರದೊಳಗಾದ ಪುರಾಣಾಗಮಂಗಳೆಲ್ಲವೂ ತಾನಾರೆಂಬುದ ತಿಳಿಯುವುದಕ್ಕಿಕ್ಕಿದ ಭಿತ್ತಿ (ಸರ್ವಜ್ಞ. ೧೩೫–೭೭೩). ೬. ಅಂತ್ಯ ; ಕೊನೆ : ಅವಳು ಬಂದಾಗಿನಿಂದ ಮನೆಗೆ ಹೋಗುವವರೆಗೂ ಕೊಚ್ಚಿಕೊಂಡ ಜಂಬಕ್ಕೆ ನಿರ್ವಾಹವೇ ಇಲ್ಲ (ರೂಢಿ). [ಸಂ.]

**ನಿರ್ವಾಹಕ** (ಗು). ೧. ನಡೆಸುವ ; ನಿರ್ವಹಿಸುವ : "ಕಾರ್ಯ ನಡಸುವ ; ನಿರ್ವಾಹಕ. ಕಾರ್ಯನಿರ್ವಾಹಕ ಶಾಖೆ ; ಕಾರ್ಯಾಂಗ" (Executive. ಪತ್ರಿನಿ. ೩೬). (ನಾ). ೨. ನಿರ್ವಹಿಸುವವನು ; ಮುನ್ನಡೆಸುವವನು : ಭರತಕುಲನಿರ್ವಾಹಕನೆನೆ ಬಾ ಕುರುಕುಲಾನ್ವಯ ದೀಪ . . . ಬಾಯೆಂದಪ್ಪಿದನು ಮಗನ (ಕುಪ್ವಾಭ. ೧೨-೨೪). [ಸಂ.]

**ನಿರ್ವಾಹರೇಖೆ** (ನಾ). = ನಿರ್ವಹಣಲೇಖೆ : ಅಬ್ಬಿಜಾಂ ಚಿನ್ನಪೂವಿನ ಚೆಂಬೊನ್ನ ಮಯೂಖಲೇಖೆಗಳಿನಂತಾ ಚಿತ್ರ ನಿರ್ವಾಹರೇಖೆ ನೆರಂಬೆತ್ತಿರೆ ನೋಡಿ ನೋಡಿ ತಲೆದೂಗಿತ್ತಂಗನಾಸಂಕುಲಂ (ಜಗವಿ. ೧೭-೧೧೭).
[ನಿರ್ವಾಹ+ರೇಖೆ]

**ನಿರ್ವಾಹಸಂಗತಿ** (ನಾ). ಪರಿಹಾರ ; ನಿವಾರಣೆ : ವಾರಕದ ವಿವಿಧಾಭರಣಶೃಂಗಾರವಂತಿರಲೀಕೆಯಾಡಿದ ಸಾರಭಾಷೆಗೆ ನೆನೆಯಿರೇ ನಿರ್ವಾಹಸಂಗತಿಯ (ಕುಪ್ವಾಭ. ೧೪-೮೪). [ನಿರ್ವಾಹ + ಸಂಗತಿ₂]

**ನಿರ್ವಾಹಸಾಧನ** (ನಾ). ನೆರವೇರಿಸಲು ಬೇಕಾಗುವ ಸಾಮಗ್ರಿ,– ಸಾಧನ : ಸರ್ವಹಿತವೊಂದುಂಟೆ ? ಅದಕೆ ಪಥ ನಮಗುಂಟೆ ? ನಿರ್ವಾಹಸಾಧನಗಳೆತ್ತ ? ಗುರುನೆತ್ತ ? (ಮಂಕುತ. ೮೫೪).
[ನಿರ್ವಾಹ + ಸಾಧನ]

**ನಿರ್ವಾಹಸೂತ್ರ** (ನಾ). ಚಲಿಸುವಂತೆ ಮಾಡುವ ಸೂತ್ರ,— ದಾರ : ಹೂಹೆಗಳು ಹೋಯ್ದಾಡವೇ ನಿರ್ವಾಹಸೂತ್ರದ ಕುಣಿಕೆಗಾಣದ ಗಾಹಿನಲಿ (ಕುಪ್ವಾಭ. ೯-೯). [ನಿರ್ವಾಹ + ಸೂತ್ರ]

**ನಿರ್ವಾಹಿಸು** (ಕ್ರಿ). ೧. ನಡೆಯುವಂತೆ ಮಾಡು ; ನಡೆಸು ; ನಿಭಾಯಿಸು : ತೊಡಗಿದೀತನ ರಾಜಕಾರ್ಯವ ಕೆಡಿಸದಿರು ನಿರ್ವಾಹಿಸಲಿ ನೀ ಬಿಡುಬಿಡೆನೆ ಜಡಿಕಿದನು ಮುರಾಂತಕನಿಂದ್ರನಂದನನ (ಕುಪ್ವಾಕ. ೧೭-೪). ೨. ಮುಗಿಸು ; ನೆರವೇರಿಸು ; ಈಡೇರಿಸು : ಅಸುರರಿಪು ಕೃಪೆಯಿಂದ ನಿರ್ವಾಹಿಸಿದನೀ ಯಜ್ಞವನು (ಕುಪ್ವಾಭ. ೧೧-೨೬).
[ನಿರ್ವಾಹ + – ಇಸು₃]

**ನಿರ್ವಿಕಲ್ಪ**(ನಾ).೧. ಬದಲಾಗದಿರುವಿಕೆ;ಮಾರ್ಪಾಡಿಲ್ಲದಿರುವಿಕೆ; ಸ್ಥಿರತೆ ; ದೃಢತೆ : ನಿರಾಲಸ್ಯದಿಂ ನಿರ್ಬಂಧದಿಂ ನಿರ್ವಿಕಲ್ಪದಿಂ ನೀವಿರ್ವರುಂ ನಿಶ್ಚಯಮೋದುವೊಡಾವುಮಾ ಮಾರ್ಗದಿಂದೋದಿಸಿ ಪಂಡಿತರಾಗೆ ಮಾಟಿಪ್ಪೆಂ (ಸುಕುಮಾ. ೨-೫೫ ವ) : ಮುಕುಳನನಿಮಿಷಾಳನಂಗಳ್ ವಿಕಾಸಹಾಸಪ್ರಬೋಧನೋನ್ಮೇಷಂಗಳ್ ಪ್ರಕಟಿಸುಗುಮೈಕ್ಯಮುಂ ನಿರ್ವಿಕಲ್ಪದಿಂ ಗೌಣಮುಖ್ಯವೃತ್ತಿಕೃತಂಗಳ್ (ಕಾವ್ಯಾವ. ೯೧೪) ; ಹೀಗೆ ಬ್ರಹ್ಮವಸ್ತು . . . ತನಗೆ ತಾನು ನಿರ್ಗುಣ ನಿರಾಕಾರ ನಿರ್ವಿಕಾರ ನಿರ್ವಿಕಲ್ಪ ಕಾಲದೇಶರಹಿತ ಸಚ್ಚಿದಾನಂದದಂತಿರುತ್ತದೆ (ನಿಶೀಉ. ೨೩೫). ೨. ಭೇದಭಾವವಿಲ್ಲದಿರುವಿಕೆ; ಅಭಿನ್ನತೆ: ಸ್ಥಾನದಾಚಾರ್ಯ್ಯರ್ಗ್ಗಂ ಎರಡುಂ ಕೇರಿಯ ಸಾಸಿರ್ವ್ವರ್ಗ್ಗಂ ನಿರ್ವಿಕಲ್ಪದಿಂ ಸಭಾಯರಾಗಿ ಬಳಿವನ್ನು ಬಾಳ್ವುದು (ಸೌಇಇ. XI–i, ೬೪-೩೬ ; 1028). ೩. = ನಿರ್ವಿಕಲ್ಪಸಮಾಧಿ : ನಿರ್ವಿಕಲ್ಪ [ಪಾಠಾಂ. ನಿರ್ವಿಕಲ್ಪಿತ]ವೆಂಬ ನಿಜದೊಳಗಯ್ಯ ನಿರಹಂಭಾವದಲ್ಲಿ ನಾನಿದ್ದೆನಯ್ಯ ನೋಡಿಹೆನೆಂದರೆ ನೋಡಲಿಲ್ಲ ಕೇಳಿಹೆನೆಂದರೆ ಕೇಳಲಿಲ್ಲ ಘನ ನಿರಂಜನದ ಬೆಳಗಿಂಬಾದುದೇನೆಂಬೆ (ಅವಚಂ. ೧೫೧-೬೯೨) ; ಸಮಾಧಿಯೆಂಬ ಯೋಗವು ಸಂಪ್ರಜ್ಞಾತ ಅಸಂಪ್ರಜ್ಞಾತ . . . ಸವಿಕಲ್ಪ ನಿರ್ವಿಕಲ್ಪವೆಂದು ಎರಡು ಪ್ರಕಾರವು (ಹಿಂದಸಾ. ೧೦೭). ೪. ಬದಲಾಗದಿರುವವನು ; ಒಂದೇ ರೀತಿಯಾಗಿರುವವನು ; ನಿಶ್ಚಲ : ಜಯಜಯ ವಾಸುಪೂಜ್ಯ ಸುರಪೂಜ್ಯ . . . ನಿರ್ಮಮ ನಿರ್ವಿಕಲ್ಪ ನಿಷ್ಕ್ರಿಯ (ಸುಕುಮಾ. ೪-೪೮) ; ನಿರಾವರಣ ನಿರ್ಮಾಯ ನಿರ್ಮಳ ನಿರ್ವಿಕಲ್ಪ . . . ನಿರಾಳ ಪಂಪಾವಿರೂಪಾಕ್ಷ ಶರಣು (ಹಚಳಾ. ೧-೪) ; ನಿರ್ವಿಕಲ್ಪಾಕಲ್ಪ ಕೇಳು ಚತುರ್ವಿಧವ ಪದವಿಗಳು ಮೊದಲಹ ಸರ್ವಭೋಗಸುಖಂಗಳಂ ಕೊಡುವೆಂ ಬಯಸು ನಿನಗೆ (ಬಸವು. ೧೮-೧೦೦) ; ನಿರುಪಾಧಿಕ ನಿರ್ವಿಕಾರ ನಿರ್ವಿಕಲ್ಪ . . . ಕೃಪಾಮ್ಬು ತೇಕ್ಷಣ ಪರಶಿವನುಂ (ಭೈರಸೂ. ೧). [ಸಂ.]

**ನಿರ್ವಿಕಲ್ಪಕ** (ನಾ). = ನಿರ್ವಿಕಲ್ಪಸಮಾಧಿ : ಧ್ಯಾನ ನಿಶ್ಚಲವೇ ಸಮಾಧಿಯದೇ ನಿದಾನಿಸಲಾಜು ಭೇದವು ಮಾನನಿಧಿ ಸವಿಕಲ್ಪಕವು ಕಿಳಿ ನಿರ್ವಿಕಲ್ಪಕವು (ಅಮೃತ. ೬-೫೫) ; ನಿರ್ವಿಕಲ್ಪಕವು ವಿಶೇಷಣ ವಿಶೇಷ್ಯ ಸಂಬಂಧವನ್ನು ಗ್ರಹಿಸದಿರುವ ಜ್ಞಾನ (ಭಾತತ್ತ್ವ. ೫೨೮); ಪ್ರತ್ಯಕ್ಷಜ್ಞಾನ ನಿರ್ವಿಕಲ್ಪಕ, ಸವಿಕಲ್ಪಕವೆಂದು ಎರಡು ಪ್ರಕಾರ (ಹಿಂದಸಾ. ೨೦೨).
[ಸಂ.]

**ನಿರ್ವಿಕಲ್ಪನೆ** (ನಾ). ಏಕಾಗ್ರತೆ; ದೃಢಚಿತ್ತತೆ: ಎನ್ನ ನಿರ್ವಿಷಯವೇ ತಾಂಬೂಲ ಎನ್ನ ಮೌನವೇ ಘಂಟೆ ಎನ್ನ ನಿರ್ವಿಕಲ್ಪನೆಯೇ ಪ್ರದಕ್ಷಿಣೆ ಎನ್ನ ಶುದ್ಧಿಯೇ ನಮಸ್ಕಾರ (ಅವಚಂ. ೨೦೬-೯೨೭).
[ಸಂ. ನಿರ್ವಿಕಲ್ಪನ]

**ನಿರ್ವಿಕಲ್ಪಭೂಮಿ** (ನಾ). ನಿರ್ವಿಕಲ್ಪಸಮಾಧಿಯ ಸ್ಥಿತಿ : ದೇಶ ಕಾಲ ಆಕಾರಗಳಿಗೆ ಒಳಪಟ್ಟಿರುವುದೆಲ್ಲಾ ವಿಕಲ್ಪವೆಂದೂ ಅದಿಲ್ಲದ ಸ್ಥಿತಿಯು ನಿರ್ವಿಕಲ್ಪವೆಂದೂ ಹೇಳುತ್ತಾರೆ . . . ಹಾಗೆಯೇ ಅಭೇದ ದೃಷ್ಟಿಯಿಂದ ನಿರ್ವಿಕಲ್ಪಭೂಮಿಯನ್ನು ಸಾಧಿಸಬೇಕು (ಭಾರದ. ೨೧೬).
[ನಿರ್ವಿಕಲ್ಪ + ಭೂಮಿ]

**ನಿರ್ವಿಕಲ್ಪಸಮಾಧಿ** (ನಾ). [ಯೋಗ] ಯಾವ ವ್ಯಾಪಾರವೂ ಇಲ್ಲದೆ ಚಿತ್ತಲಯಾಭಿಮುಖವಾಗಿರುವ ನಿಶ್ಚಲಸಮಾಧಿ ; ಈ ಸಮಾಧಿಯ ಧ್ಯಾತೃ, ಧ್ಯಾನ ಮತ್ತು ಧ್ಯೇಯವೆಂಬ ತ್ರಿಪುಟಿಯಲ್ಲಿ ಧ್ಯಾತೃ, ಧ್ಯಾನಭಾವಗಳು ಹೋಗಿ ಧ್ಯೇಯ ಮಾತ್ರ ಉಳಿದಿರುವ ಜ್ಞಾನ ; ಚಿತ್ತವು ಧ್ಯೇಯವಸ್ತುವಿನಲ್ಲೇ ಲಯ ಹೊಂದುವಿಕೆ : ನಿರ್ವಿಕಲ್ಪಸಮಾಧಿಯೊಂದನಿರ್ವಚನೀಯಮೌನಮಂ ಕರುವಿಟ್ಟ ಶಾಂತಿಯ ನಿಜಾಕೃತಿಯೊ ಪೇಳೆನಲ್ಕೈತಂದನಾ ಸನಾತನ ಯೋಗಿ (ಶ್ರೀರಾಮಾ. ೧೭೭-೩೭). [ನಿರ್ವಿಕಲ್ಪ + ಸಮಾಧಿ]

**ನಿರ್ವಿಕಲ್ಪಿತ** (ನಾ). ಬದಲಾಗದಿರುವುದು ; ನಿಶ್ಚಲವಾದುದು ; ಸ್ಥಿರವಾದುದು : ನಿರ್ವಿಕಲ್ಪಿತದ ಅದ್ವೈತವ ನೋಡಿರೇ ಬೆಳಗಿನೊಳಗಣ ಬೆಳಗು ಅಡಗಿತ್ತು ನೋಡಿರೇ (ಅವಚಂ. ೨೨೧-೧೦೦೪). [ಸಂ.]

**ನಿರ್ವಿಕಳತೆ** (ನಾ). ಪರಿಪೂರ್ಣವಾಗಿರುವುದು ; ಪೂರ್ಣತೆ : ನಿರ್ಘಟದಲ್ಲಿ ಘಟ ಹುಟ್ಟಿ ಪ್ರಕಟಿಸುವುದ ಕಂಡೆ ನಿರ್ವಿಕಳತೆಯಲ್ಲಿ ವಿಕಳತೆಯು ಹುಟ್ಟಿ ಉಭಯಗತಿ ಆ ಉಭಯದ ಗತಿಗೆಟ್ಟವರ ಕಂಡೆ (ಮೋಳಿಮಾ. ೧೦-೩೬). [ಸಂ. ನಿರ್ವಿಕಲತಾ]

**ನಿರ್ವಿಕಾರ** (ಗು). ೧. ಬದಲಾವಣೆ ಹೊಂದದ ; ವಿಕಾರಗೊಳ್ಳದ; ಸ್ಥಿರಭಾವದ : ನಿಃಪಿತ ನಿರುತ್ತರ ನಿರಾಮಯ ನಿರ್ವಿಕಾರಾಕಾರ ಚಿತ್ಪ್ರೈಸು (ಬಸವು. ೬೧-೪೩) ; ಅದನ್ನು ಅವರು ಈವರೆಗೂ ನಿರ್ವಿಕಾರ ಭಾವದಿಂದ ಸಾಗಿಸುತ್ತಲೇ ಇದ್ದರು (ರಂಗರೋ. ೯೭) ; ಸರ್ವವನು ತನ್ನಾತ್ಮವೆಂದು ಬದುಕುವನು ನಿರ್ವಿಕಾರಾಂತರಂಗದಿ ಜಗವ ಧರಿಸುವನು ಸರ್ವಮಂಗಳನವನು (ಮಂಕುತ. ೮೦೫). (ನಾ). ೨. ಬದಲಾವಣೆಗೊಳ್ಳದವನು ; ಸಮಭಾವದಿಂದಿರುವವನು ; ಪರಮಾತ್ಮ : ಉರ್ವಿಯೊಳು ಸೈಗೆಡೆದು ಸವಿನಯಪೂರ್ವಕದಿ ವಂದಿಸುತ ದಸರಯ ನಿರ್ವಿಕಾರನು ಮತ್ತೆ ಅಡಿಗಳಿಗೆಚಿಗಲು (ಬಸವು. ೩೮-೨೭) ; ಸರ್ವಸಂಸಾರ ಕಾರಣಭಕ್ತಿಗಮ್ಯನಂ ನಿರ್ವಿಕಾರನ ಲಿಂಗವರ್ಜಿತನುದಾರನಂ ಸರ್ವಾಂಗವೊಂದಿ ವಂದಿಸುವೆಂ (ವೀರ್ಶೈವು. ೬-೧-೩೫) ; ಉಪಮಾತೀತ ನಿರುಪಾಧಿಕ ನಿರ್ವಿಕಾರ ನಿರ್ವಿಕಲ್ಪ . . . ಕೃಪಾಮ್ಬು ತೇಕ್ಷಣ ಪರಶಿವನು (ಭೈರಸೂ. ೧).
[ಸಂ.]

**ನಿರ್ವಿಕಾರತೆ** (ನಾ). ಬದಲಾಗದಿರುವಿಕೆ ; ಸ್ಥಿರತೆ : ಆ ತಪಸ್ವಿ ನಿಷ್ಕಂಪ ನಿರ್ವಿಕಾರತೆಯಿಂ ರಂಜಿಸಿರ್ಪನ್ನೆಗಂ (ಶಬಶಂ. ೨-೧೦೫ ಪ) ; ಸ್ವರೂಪ ಬದಲಾಯಿಸದೆ ಸರ್ಪವು ಋಜು ಕುಂಡಲ ವಕ್ರಭಾವಗಳನ್ನು ಹೊಂದುವ ರೀತಿಯಲ್ಲಿ ಆಗುವ ಪರಿಣಾಮವೊಂದು. ಎರಡನೆಯ ಪರಿಣಾಮ ವಿಕಾರವಲ್ಲ, ನಿರ್ವಿಕಾರತೆಗೆ ಬಾಧಕವಿಲ್ಲ ಎಂದು ಪ್ರಾಚೀನರ ಹೃದಯ (ಹಿಂದಸಾ. ೬೪). [ಸಂ. ನಿರ್ವಿಕಾರತಾ]

**ನಿರ್ವಿಕಾರಿ** (ಗು). ೧. = ನಿರ್ವಿಕಾರ ೧ : ಕೇವಲ ನಿರ್ವಿಕಾರಿ ಚೈತನ್ಯಕ್ಕೆ ಈಶ್ವರತ್ವ ಜಗತ್ಸೃಷ್ಟ್ಯಾದಿಗಳ ಕೂಡದಾಗಿಯೂ ಆದಕ್ಕೆ ಈಶ್ವರತ್ವವ ಹೇಳಕೂಡದು (ಈಶ್ವಸ್ವ. ೨-೭). (ನಾ). ೨. ವಿಕೃತಿಯನ್ನು ಹೊಂದದಿರುವಂತಹುದು ; ಬದಲಾವಣೆ ಹೊಂದದಿರುವುದು : ನಿರ್ವಿಕಾರಿಗಳಪ್ಪ ಎ ಏ ಒ ಓ ಎಂಬಿವು ಕಡೆಯಾದ ನಿಪಾತಮುಂ ಅವಧಾರಣೆಯುಂ ವಿಶಂಕೆಯುಂ ಎಂಬಿವರ್ಕೆ ಸ್ವರಂ ಪರಮಾಗೆ ಸಂಧಿಯಿಲ್ಲ (ಶಮದ. ೫೬ ವೃತ್ತಿ). [ಸಂ. ನಿರ್ವಿಕಾರಿನ್]

**ನಿರ್ವಿಘ್ನ** (ಗು). ೧. ಅಡ್ಡಿಯಿಲ್ಲದ ; ತೊಡಕುಂಟಾಗದ ; ಸರಾಗವಾದ. (ನಾ). ೨. ಅಡ್ಡಿಯಿಲ್ಲದಿರುವಿಕೆ ; ತೊಡಕುಂಟಾಗದಿರುವುದು ; ಸರಾಗ : ಯುಕ್ತಿ . . . ಮತ್ಕೃತಿಗೆ ಮಾಟಿಕ್ಕೋಲಂತೆ ನಿರ್ವಿಘ್ನಮಂ (ಪುಷ್ಪಪು. ೧-೧೦); ನಾನೆ ಬಹೆನತಿಬಲಸಮನ್ವಿತಂ ನಿರ್ವಿಘ್ನ ಮೆಸಗೆ (ಶ್ರೀರಾಮೂ. ೨೯-೪೪). ೩. ವಿಘ್ನಗಳನ್ನು ಹೊಂದದಿರುವವನು : ನಿರಸೂಯ ನಿರ್ವಾಣಪದ ನಿರ್ವಿಘ್ನ ನಿರತಿಶಯ ನಿಸ್ಸೀಮ . . . ನಿರ್ವಿಕಾರಾಕಾರ ಚಿತ್ಸೈಸು (ಬಸಪು. ೬೧-೪೩).

**ನಿರ್ವಿಘ್ನಮಾಗಿ, ನಿರ್ವಿಘ್ನವಾಗಿ** = ತೊಡಕಿಲ್ಲದೆ ; ಸರಾಗವಾಗಿ: ಸರ್ವಸಂಪತ್ಸಮೃದ್ಧಿಗಳಿಂ ಸ್ವಧರ್ಮದಿಂ ನಿರ್ವಿಘ್ನಮಾಗಿ ಸಕಲಪ್ರಕೃತಿ ಜಾತಿ ಚಾತುರ್ವರ್ಣ್ಯಮಂ ಬಿಡದೆ ಪೊರೆವಲ್ಲಿ (ಜೈಮಿಭಾ. ೧೪-೧೫); ತಮ್ಮೆಲ್ಲರ ಅನುಗ್ರಹದಿಂದ ಸಕಲವೂ ನಿರ್ವಿಘ್ನವಾಗಿ ನಡೆದಿದೆ (ಬಿತಂಬಾ. ೪). [ಸಂ.]

**ನಿರ್ವಿಘ್ನತೆ** (ನಾ). ಅಡ್ಡಿಯುಂಟಾಗದಿರುವುದು; ತೊಡಕಾಗದಿರುವುದು : ಸಮಸ್ತಸಿದ್ಧಿಪ್ರದಾಯಕ ವಿನಾಯಕ ಮಾಳ್ಪುದೆಮಗೆ ನಿರ್ವಿಘ್ನತೆಯನು (ಜೈಮಿಭಾ. ೧-೩). [ಸಂ. ನಿರ್ವಿಘ್ನತಾ]

**ನಿರ್ವಿಘ್ನದಾಯಕ** (ನಾ). ೧. = ನಿರ್ವಿಘ್ನತೆ : ಕರಿನಿಭಾಕೃತಿಯೆನಿಪ ವದನದ ಕರದ ಪಾಶದ ಮೋದಕದ ವಿಸ್ತರದ ಗಣಪತಿ ಮಾಡೆಮಗೆ ನಿರ್ವಿಘ್ನದಾಯಕವ (ಕುಮ್ಯಾಆ. ೧-೩). ೨. ಗಣಪತಿ; ವಿಘ್ನೇಶ್ವರ : ಕಾಯಕವಿದು ನಿನ್ನದು ಕೇಳು ನಿರ್ವಿಘ್ನದಾಯಕ ಎನಗೆ ಸತ್ಕೃಪೆಯ ಜೀಯ ಕಾರುಣ್ಯದಿ ಕುಡು (ಮೋಹತ. ೧-೧೨). [ಸಂ.]

**ನಿರ್ವಿಚಾರ** (ನಾ). ವಿಚಾರಮಾಡದಿರುವುದು ; ಯೋಚಿಸದೆ ಇರುವುದು : ಆ ದೇವಕಿ . . . ಕಂಸಕೃತಾಪಚಾರದಿಂ ನಿರ್ವಿಚಾರಮೆ ಪೊಲ್ಲಮೆಯಾದುದೆಂದು ಖೇದಿಸುತ್ತಿರಲ್ (ಜಗವಿ. ೨-೬೧ ಪ). [ಸಂ.]

**ನಿರ್ವಿಚಿಕಿತ್ಸೆ** (ನಾ). ೧. ಸಂದೇಹವುಂಟಾಗದಿರುವಿಕೆ ; ನಿಸ್ಸಂದಿಗ್ಧತೆ. ೨. [ಜೈನ]ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಮೂರನೆಯದು ; ಜುಗುಪ್ಸೆ ಹೊಂದದಿರುವಿಕೆ ; ☞ ಇದರಲ್ಲಿ ದ್ರವ್ಯನಿರ್ವಿಚಿಕಿತ್ಸೆ, ಭಾವನಿರ್ವಿಚಿಕಿತ್ಸೆ ಎಂಬ ಎರಡು ಭೇದಗಳಿವೆ : ೧. ದ್ರವ್ಯನಿರ್ವಿಚಿಕಿತ್ಸೆಯೆಂದರೆ ಸಾಧುಗಳ ಶರೀರದಲ್ಲಿ ಮಲ, ಮೂತ್ರ, ಮಾಂಸ, ಕಫ ಮೊದಲಾದ ಅಸಹ್ಯ ವಸ್ತುಗಳಿವೆಯೆಂದು ಭಾವಿಸಿ ಹೇಸಿಗೆಪಡದಿರುವಿಕೆ. ಧರ್ಮಾತ್ಮರ ಶರೀರವು ರತ್ನತ್ರಯದಿಂದ ಪವಿತ್ರವಾಗಿದೆ. ೨. ಅರ್ಹಂತರು ಹೇಳುವ ಉಪದೇಶಗಳು ಬಹಳ ಕಷ್ಟ ಮುಂತಾಗಿ ಅಶುಭ ಭಾವನೆಯನ್ನು ಮಾಡದಿರುವುದು ಭಾವ ನಿರ್ವಿಚಿಕಿತ್ಸೆ : ನಿಶ್ಶಂಕಿತ ನಿಷ್ಕಾಂಕ್ಷಿತ ನಿರ್ವಿಚಿಕಿತ್ಸಾ ಅಮೂಢದೃಷ್ಟಿತಾ ಉಪಬೃಂಹಣ ಸ್ಥಿತಿಕರಣ ವಾತ್ಸಲ್ಯ ಪ್ರಭಾವನಾ ಎಂಬೆಂಟಂಗಂಗಳ್ . . . ಘೋರತಪಶ್ಚರಣದಿಂದಂ ಪೊರ್ದಲಾಗದೆಂಬ ಪೆ(ಪ)ಸುಗೆಯಂ .ಪತ್ತುವಿಡುವುದುಂ ದ್ರವ್ಯಭಾವ ಭೇದ ನಿರ್ವಿಚಿಕಿತ್ಸೆ (ಚಾವುಂಪು. ೨೪೧) ; ನಿರ್ವಿಚಿಕಿತ್ಸೆಯೊಳಜಾದಾರ್ತುರ್ವರೆ ಕೈಕೊಂಡು, ಬಣ್ಣಿಸಲ್ಕೆಗಟ್ಟ ನರಂ ನಿರ್ವಾಣಪದದೊಳಿರಿಸುವ ಸರ್ವಜ್ಞಶ್ರೀಗೆ ಮೊತ್ತ ಮೊದಲಿಗನಕ್ಕುಂ (ಧರ್ಮಾಮೃ. ೪-೩) ; ಶರೀರಾದ್ಯಶುಚಿಸ್ವಭಾವಮನರಿದು ಶುಚಿಯೆಂಬ ಮಿಥ್ಯಾಸಂಕಲ್ಪೋಪನಯನಮುಂ ಅರ್ಹತ್ತವಚನದೊಳ್ ಇದಯುಕ್ತಂ ಘೋರಂ ಕಷ್ಟಂ ಇದಲ್ಲದೊಡೆಲ್ಲಂ ಉಪಪನ್ನಮೆಂಬ ಅಶುಭಭಾವನಾವಿರಹಮುಂ ಮೇಣ್ ನಿರ್ವಿಚಿಕಿತ್ಸೆ (ತತ್ತ್ವಪ್ರ. ೨೬೫) ; ನಿರ್ವಿಚಿಕಿತ್ಸಾ : ರೋಗಿಯೂ, ಕುರುಪಿಯೂ ದುಃಖಿಯೂ ಆದ ದೇಹಿಯನ್ನು ಕಂಡು ಹೇಸಕೂಡದು . . . ಮನುಷ್ಯನ ವೈಭವ ಹಾಗೂ ದೈಹಿಕಸ್ಥಿತಿಯನ್ನು ನೋಡದೆ ಅವನ ಗುಣಗಳನ್ನು ನೋಡುವುದು (ಜೈನಪ. ೪೭೦). [ಸಂ. ನಿರ್ವಿಚಿಕಿತ್ಸಾ]

**ನಿರ್ವಿಣ್ಣ** (ಗು). ೧. ನಿರಾಶೆಗೊಂಡ ; ನಿರುತ್ಸಾಹದ : ನಿರ್ವಿಣ್ಣಭಾವದೊಳಂದು ಲಕ್ಷ್ಮಣಂ ತುರಗ ಸಾರಥಿ ಕೇತನಂಗಳಿಂದೆ ಹಣ್ಣಿದ ವರೂಥಮಂ ತರಿಸಿ ಪೂಜಿಗಿರಿಸಿ (ಜೈಮಿಭಾ. ೧೮-೬೦) ; ನಿರ್ವಿಣ್ಣ ರಾಷ್ಟ್ರದ ಕವಿಗಳಿಂದ ವೀರಗಾಥಗಳ ಸೃಷ್ಟಿಯಾಗುವುದು ಸಾಧ್ಯವಿರಲಿಲ್ಲ (ಭಾರದ. ೪೫೪). (ನಾ). ೨. ನಿರಾಶೆಯಿಂದ ಕೂಡಿದುದು : ಕಣ್ಣು ತೆಱೆದರೆ ಕೆಳದಿ ಕೇಳಾ ಕಣ್ಣು ಮುಚ್ಚುವುದೀ ಪ್ರಪಂಚದ ಬಣ್ಣಿಗೆಯ ಭುವನಾವಳಿಗಳಿವು ತಾಮುಸಾಂಗದಲಿ ಗಣ್ಯವೇ ತಾನಿದಱೊಳಗೆ ನಿರ್ವಿಣ್ಣವೆನಿಸಿ ದಡುಳಿವಳೊಬ್ಬಳೆ ಹೆಣ್ಣು ಕಡೆಗಾವನಲಿ ಲಯಿಸುವಳಾತ ನೋಡೆಂದ (ನಿಭಾಗ. ೧-೬-೨೯) ; ಭೀತಿಯಿಂದ ನಿರ್ವಿಣ್ಣವಾದ ಮೋರೆಯ ಬಣ್ಣ ಇನ್ನೂ ಮರುಕಳಿಸಿರಲಿಲ್ಲ (ಮೂರುದಾ. ೨೫೩). ೩. ನಿರುತ್ಸಾಹದಿಂದ ಕೂಡಿದ ವ್ಯಕ್ತಿ ; ನಿರಾಶೆಗೊಂಡ ವ್ಯಕ್ತಿ : ಈ ತೆಱನೊಳ್ ಮೂರ್ಛೆಗೆ ಸಂದ ರಾಯನೆಂತಾನುಂ ಬೇಗದಿಂ ಸೋದರರ ಶೈತ್ಯೋಪಚಾರದತ್ತಣಿಂ ತೆಪ್ಪರ್ತನಾಗೆ ಮುನಿಪಂ ನಿರ್ವಿಣ್ಣನಾಗಿ ನೋಟ್ಟಪ್ಪುದುಂ (ರಾಮಾಶ್ವ. ೧೩-೨೨) ; ಭಾಗೀರಥಿ ನಿರ್ವಿಣ್ಣಳಾಗತೊಡಗಿದಳು (ಭಾರಥಿ. ೧೫೨); ಎಲ್ಲರೂ ಚಿಂತಿಸಿ ನಿರ್ವಿಣ್ಣರಾದರು (ಕುರುಕಾ. ೨೩). [ಸಂ.]

**ನಿರ್ವಿಣ್ಣತೆ** (ನಾ). ೧. ಕುಗ್ಗಿದ ಸ್ಥಿತಿ ; ಸೋಲಿನ ಭಾವ ; ಅಸಹಾಯಕತೆ : ನಿಂತು ಮಾತನಾಡುತ್ತಿದ್ದ ಅವರ ನಿರ್ವಿಣ್ಣತೆ . . . ಅವರು ಅನುಭವಿಸುತ್ತಿರುವ ಯಾತನೆಯನ್ನು ಸಾರಿ ಸಾರಿ ಹೇಳುವಂತಿತ್ತು (ಹೊಸಕ್ತಿ. ೪೪) ; ನಾನು ನನ್ನ ನಾಡಿನಲ್ಲಿರುವವರನ್ನು ಪ್ರೀತಿಸುವುದು . . . ಅವರ ನಿರ್ವಿಣ್ಣತೆಗಾಗಿ (ಪ್ರಪಾತೋ. ೧೨೩) ; ಮನದ ವಮಾಮರಕೆ ಹಿಡಿದಿಹುದು ನನಗೆ ನಿರ್ವಿಣ್ಣತೆಯು ಬಂದಿಳಿಕೆ (ಶ್ರೀರಾಮಾ. ೯-೭೧೯). ೨. ದುಃಖ ; ಅಳಲು : ನಿರ್ವಿಣ್ಣತೆಯುಂ ಇಂದು . . . ನಿರ್ಜನತೆಯು ಒತ್ತಡಕ್ಕೆ ಒಡ್ಡೊಡೆದು ಉಬ್ಬಸಬಟ್ಟು ಹೊರಬೀಳಹತ್ತಿದೆ (ಇಷ್ಟಕ. ೧೪೨). [ಸಂ. ನಿರ್ವಿಣ್ಣತಾ]

**ನಿರ್ವಿಣ್ಣಮನ** (ನಾ). ೧. ನಿರುತ್ಸಾಹದಿಂದ ಕೂಡಿದ ಮನಸ್ಸು. ೨. ನಿರುತ್ಸಾಹಿಯಾದ ಮನಸ್ಸಿನವನು : ಮುದದಿನೆಲ್ಲರ ಕುಶಲವನು ಕೇಳಿದನು ದುರಿಯೋಧನಗೆ ಬಿಲುಕಿದ ಹದನನೆಲ್ಲವ ಹೇಳಿದನು ನಿರ್ವಿಣ್ಣಮನನಾಗಿ (ಕುಮ್ಯಾಉ. ೨-೧೪). [ನಿರ್ವಿಣ್ಣ + ಮನ]

**ನಿರ್ವಿಣ್ಣ್ಯ, ನಿರ್ವೀಣ್ಯ** (ನಾ). ೧. = ನಿರ್ವಿಣ್ಣತೆ ೨ : ಪುಣ್ಯದಿಂ ಮಡಿದು ಮುಕ್ತಿಗೆ ಸಂದನಿದಕೆ ನಿರ್ವಿಣ್ಣ್ಯವೆಮಗಿಲ್ಲ [ಪಾಠಾಂ. ನಿರ್ವಿಣ್ಣರಹುದಿಲ್ಲ] (ಜೈಮಿಭಾ. ೧೪-೧೦). **ನಿರ್ವೀಣ್ಯ** : ೨. = ನಿರ್ವಿಣ್ಣಮನ ೨ : ಪತಿತರು ಪಾಪಾತ್ಮರೆಂಬ ನಂಬಿಕೆಯಿಂದ ನಿರ್ವೀಣ್ಯರಾಗಿ (ಶರಜ. ii, ಮುನ್ನುಡಿ). [<ಸಂ. ನಿರ್ವಿಣ್ಣ]

**ನಿರ್ವಿದ್ಯ** (ಗು). ೧. ವಿದ್ಯೆಯಿಲ್ಲದ; ಏನನ್ನೂ ಕಲಿಯದೆ ಇರುವ. (ನಾ). ೨. ವಿದ್ಯೆಯಿಲ್ಲದವನು; ಓದು ಕಲಿಯದವನು. ೩. ವಿದ್ಯೆಗಳನ್ನು ಕಳೆದುಕೊಂಡವನು; ವಿದ್ಯಾಬಲ ನಷ್ಟವಾದವನು: ಅಂತಶ್ವಗ್ರೀವಂ ನಿರಾಯುಧಂ ನಿರ್ವಿದ್ಯನುಮಾಗಿ ಕೆಲನಂ ನೋಡಿ (ಶಾಂತಿಪು. ೫-೬೨ ವ). [ಸಂ.]

**ನಿರ್ವಿಧಿ** (ನಾ). ಆಗಿಯೇ ತೀರಬೇಕೆಂಬ ನಿಯಮವಿಲ್ಲದಿರುವುದು; ಕಟ್ಟಳೆಯಿಲ್ಲದಿರುವುದು: ಮುದ್ದನ ಹರಸಲು ಗಣಪನ ಕರೆದೆ ನಿರ್ವಿಧಿಯಾದರು ಕಡುಬನು ಮಾಡಿ ಪೂಜಿಪುದೊಳ್ಳಿತು ಸುತನಂ ಕೂಡಿ (ಗಣೇಶ. ೬-೬೯). [ಸಂ.]

**ನಿರ್ವಿನಿಸು** 'ನಿರ್ವವಿಸು' ನೋ.

**ನಿರ್ವಿಭವ** (ನಾ). ಸಂಪತ್ತಿನಿಂದ ಕೂಡಿರದುದು; ವೈಭವಹೀನವಾದುದು: ಸರ್ವಮಯವದು ಪರಿಕಿಪಡೆ ಸಂಕೀರ್ಣಪದವಲ್ಲ ನಿರ್ವಿಭವವಂತಲ್ಲ ಕೇಳಿರೆ ಪಾರ್ವತೀಶಾದ್ವೈತವೆಂಬುದದು (ಬಸವು. ೫೧-೧೮). [ಸಂ.]

**ನಿರ್ವಿರಲ,** ನಿರ್ವಿರಳ (ಗು). ೧. ವಿರಳವಲ್ಲದ; ಪೂರ್ಣವಾದ ಅಖಂಡ. (ನಾ). ೨. ಪೂರ್ಣಸ್ವರೂಪಿ; ಅಖಂಡನಾದವನು ನಿರಜ ನಿರ್ಜರ ನಿತ್ಯ ನಿರ್ಮಳ ನಿರಘ ನಿರ್ಭವ ನಿರ್ವಿರಲ[ಪಾಠಾಂ. ಳ] ನಿಸ್ತರಣ ನಿರ್ವ್ಯಧ್ವಾಂಗ ನಿಜನಿರ್ಮಾಯ ಚಿತ್ಸೈಸು (ಬಸವು. ೬೧-೪೪) **ನಿರ್ವಿರಳ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ನಿರ್ವಿರಳ** 'ನಿರ್ವಿರಲ' ನೋ.

**ನಿರ್ವಿವಾದ** (ನಾ). ವಿವಾದಕ್ಕೆ ಎಡೆಗೊಡದಿರುವುದು; ಚರ್ಚಾಸ್ಪದವಲ್ಲದುದು: ಗುರುದೇವನ ಕಾವ್ಯಗಳಲ್ಲಿರುವ ಒಂದು ಹೆಚ್ಚಿನ ಮೇಲ್ಮೆ ಅವನ ನಾಟಕ, ಕಾದಂಬರಿ, ಕಥೆಗಳಲ್ಲಿ ಕಾಣಬರುವದಿಲ್ಲವೆಂಬ ಮಾತು ನಿರ್ವಿವಾದ (ಧರ್ಮಸಾ. ೮೦); ಪ್ರತಿಪಾದಿಸಬೇಕಾಗಿರುವ ವಿಷಯ ನಿರ್ದೋಷವಾಗಿಯೂ ನಿರ್ವಿವಾದವಾಗಿಯೂ ಇರಬೇಕು (ಶಿಕ್ಷದ. ೨೬೮); ಪ್ರಾಚೀನ ಗ್ರೀಕ್‌ವಿಜ್ಞಾನಿಗಳಿಗೆ ವಿಶ್ವದ ರಹಸ್ಯವನ್ನರಿಯಬೇಕೆಂಬುದೇ ಮುಖ್ಯಗುರಿಯಾಗಿತ್ತೆಂಬುದು ನಿರ್ವಿವಾದ (ಯುಕ್ತಾಸ್ವ. ೫ ಪೀಠಿಕೆ). [ಸಂ.]

**ನಿರ್ವಿಶಿಷ್ಟ** (ಗು). ೧. ಅನನ್ಯವಾದ; ಪರಮ: ವಿಶ್ವಚಿತ್ತಿಗೆ ಪ್ರಪಂಚ ಹೇಗೆ ಗೋಚರವಾಗುತ್ತದೆಯೋ ಅದೇ ನಿರ್ವಿಶಿಷ್ಟ ಸತ್ಯವಾಗಿರಬೇಕು . . . ವಿಶ್ವಚಿತ್ತಿಗೂ ಒಂದು ಇರವು ಮಾತ್ರ ಗೋಚರವಾಗಬೇಕು. ಅಂದರೆ ಕೇವಲ ಸತ್ಯಪ್ರಜ್ಞಾಮಯವಾದ ಒಂದು ನಿರ್ವಿಶಿಷ್ಟ ಇರವು (ನಿಶಿಲು. ೨೩೫). ೨. ವಿಶೇಷವಲ್ಲದ; ಸಾಧಾರಣವಾದ; ಸಾಮಾನ್ಯವಾದ. [ಸಂ.]

**ನಿರ್ವಿಶೇಷ** (ಗು). ೧. ಅನಿರ್ದಿಷ್ಟವಾದ; ವಿಶಿಷ್ಟವಲ್ಲದ: ಅನಿತು ಇನಿತು ಎನಿತು ಎಲ್ಲವು ಎಂದು ಪವಣಂ ಪೇಳ್ವ ನಿರ್ವಿಶೇಷ ಶಬ್ದಂಗಳ್ [ಪಾಠಾಂ. ನಿರ್ವಿಶೇಷದಿಂ] ಸಂಖ್ಯೆಯಂ ಪೇಳ್ವ ಎಲ್ಲವು ಕೆಲವು ಪಲವು ಎಂಬ ಶಬ್ದಂಗಳ್ . . . ಅಂತ್ಯಲೋಪಮಂ ಪಡವುವು (ಶಮದ. ೧೧೦ ವೃತ್ತಿ). ೨. ಅತ್ಯಧಿಕವಾದ; ಅತಿಶಯವಾದ: ಸುರನಿರ್ವಿಶೇಷಸುಖಸರ್ವಸ್ವಂ ಕುರೂರ್ವೀತಳಂ (ಶಾಂತಿಪು. ೬-೧೨೨). (ನಾ). ೩. ಅಭೇದ; ಏಕರೂಪತೆ; ಸಮಾನತೆ: ಪರಲೋಕವೆಂಬುದು ಖರವಿಷಾಣನಿರ್ವಿಶೇಷಂಗಳುಂ . . . ಅಕ್ಕುಂ (ಶಾಂತಿಪು. ೮-೧೩೨ ವ); ಶಶಧರಲಕ್ಷ್ಮದೊಳಕ್ಕುಂ ಶಶಹರಿಣಂಗಳ್ಗನನ್ಯಭಾವಂ ಸುಮನೋವಿಶಿಖಧ್ವಜಾಂಕದೊಳ್ ನಿರ್ವಿಶೇಷದಿಂ ಮತ್ಸ್ಯ ಮಕರಯುಗಳಕ್ಕೈಕ್ಯಂ (ಕಾವ್ಯಾವ. ೯೧೧); ಉಂಟೆಲ್ಲೆಂಬೀಯೆರಡಜಿ ಗೆಂಟಂ ಪರಿಹರಿಸಿ ಮುಜಿನೆಯ ಪೊಸವಗೆಯಂ ಗಂಟಿಕ್ಕಿ ನಿರ್ವಿಶೇಷದೊಳಂಟುದೀ ಜಗಮುನವುರೆ ತಿಮಿರಾದ್ವೈತಂ (ಚಿಕವಿ. ೬-೧೪). ೪. ಬೇರೆಯಲ್ಲದವನು; ಸಮಾನನಾದವನು: ಮದವದರಿಹಸ್ತಿ ಮಸ್ತಕಧಿದುರಂ [ಭಯ]ವಿದುರನನ್ಯಬಾಣಚ್ಛಿದುರಂಮದ **ಪಕ್ಷನಿರ್ವಿಶೇಷಂ**[ಮದವದ್ಬೋಲ್ಗಲಿತನೆತ್ತಣಂ] ವೃಷಸೇನಂ(ಗದಾಯು. ೪-೬೩). ೫. = ನಿರ್ವಿಶೇಷಬ್ರಹ್ಮ: ನೆರೆದೂರ್ಧ್ವರೇತನೊಳ್ **ಪುರುಹಿರಣ್ಯರೇತೋಲಿ ತೀವ್ರನೊಳ್** ಮುನಿವರನೊಳ್ ಪರಮಭಗಸಹಿತೆ ಮುಂದದಿರೆ ಪರಿಶ್ರಮಕ್ಕೆನ್ನ ನಿರ್ವಿಶೇಷನೊಳಾಗಳ್ (ಕವಿಶಾ. ೧-೬೩); ಅಂತರ್ಯಾಮಿ ಮೊದಲಾದ ಈಶ್ವರತ್ರಯಕ್ಕೆ ಅಧಿಷ್ಠಾತೃ . . . ನಿರ್ಗುಣ ನಿರ್ವಿಶೇಷ . . . ಎಂಬಿವು ಮೊದಲಾದವೇ ಅದ್ವೈತಬ್ರಹ್ಮಪರ್ಯಾಯನಾಮಂಗಳಕ್ಕುಂ (ವಿವೇಕ. ೨೯). [ಸಂ.]

**ನಿರ್ವಿಶೇಷಬ್ರಹ್ಮ** (ನಾ). [ಅದ್ವೈತ] ತ್ರಿಗುಣಾತೀತವಾದ ಶುದ್ಧಬ್ರಹ್ಮ; ಪರಮಾತ್ಮ; ನಿರ್ಗುಣಬ್ರಹ್ಮ: ಈ ಆತ್ಮನೆಂಬುದು ಬೇರೆ ವಸ್ತುವಾದರೂ ಅದರಲ್ಲಿ ಯಾವ ವಿಧವಾದ ಗುಣವೂ ಇಲ್ಲ . . . ಇದಕ್ಕೆ ಬೌದ್ಧರ ಸ್ವಲಕ್ಷಣವಸ್ತುವನ್ನೂ ವೇದಾಂತಿಗಳ ನಿರ್ವಿಶೇಷಬ್ರಹ್ಮನನ್ನೂ ಹೋಲಿಸಬಹುದು (ಹಿಂದಸಾ. ೫೪). [ನಿರ್ವಿಶೇಷ+ಬ್ರಹ್ಮ]

**ನಿರ್ವಿಷ** (ಗು). ೧. ವಿಷವಿಲ್ಲದ; ನಂಜಿಲ್ಲದ. (ನಾ). ೨. ವಿಷರಹಿತವಾದುದು; ನಂಜಿಲ್ಲದಿರುವುದು: ಉರಗಂ ಕೊಂಡಲ್ಲಿಂ ನಾಲ್ವೆರಲನಿತಂ ಕಳೆದು ಕಟ್ಟಿ ಮೇಗಂ ಬೇಗಂ ಸೆರೆವಿಡುಗೆ ಸುಡುಗೆ ಕಡಿಗಿರದರದಿಕ್ಕುಗೆ ನೀವಿ ಕಳೆಗೆ ನಿರ್ವಿಷಮಕ್ಕುಂ (ಶಮದ. ೧೮೯ ಪ್ರಯೋ); ವಿಷಮಂ ದೆಸೆಗಿಡಿಪುದದುವೆ ನಿರ್ವಿಷಂ (ಖಸುದ. ೬-೭); ನಿರ್ವಿಷವಾಗಲಿಕ್ಕೆ: ಎಲೆ ಹೊನ್ನೆಯ ಬೇರಂ ಅಂಬಿಲದಲ್ಲಿ ಅರೆದು ಮಂತ್ರಿಸಿ ಕುಡಿಯೆ ನಿರ್ವಿಷ. ವಿಳಂಗ ಎರಡಂ ನೀರಲ್ಲಿ ತೇದು ಮೂಗಿನ ನಸ್ಯಂಗೈಯೆ ನಿರ್ವಿಷ (ವಿಸ್ಯವಿ. ೯೩). ೩. ನಂಜನ್ನು ಕಳೆದುಕೊಂಡಿರುವವನು; ವಿಷವಿಲ್ಲದಿರುವವನು: ವಿಷಯಾಮಿಷಲಂಪಟತೆಯೆ ವಿಷಧರನೆನಿಸಿದುದು ನಿನ್ನನೆಲೆ ವಿಷಧರನಿಂ ವಿಷಧರನಾಗದೆ ಬೇಗಂ ವಿಷಯಾಮಿಷ ವಿಷಮನುಗುಟ್ಟು ನಿರ್ವಿಷನಾಗಾ (ಆದಿಪು. ೨-೧೭); ನೀವೊಂದುಪಾಯದಿಂ ಬಂದು ನೀರನಭಿಮಂತ್ರಿಸಿ **ತಳಿಯಲೊಡಂ ನಿರ್ವಿಷನಪ್ಪಂ** (ಪಂಚತಂ. ೧೧೩-೫). ೪. ವಿಷವನ್ನು ಪರಿಹಾರ ಮಾಡುವಂಥ ಒಂದು ಬಗೆಯ ಔಷಧಿ ಸಸ್ಯ ಮತ್ತು ಅದರ ಬೇರು: "ವಿಷಹಾ–ನಿರ್ವಿಷ, ಬಾಗೆ, ದೇವದಾಳಿ" (ಓಷಧಿ. ೧೫೫); ನಿರ್ವಿಷ, ಚೆಂಗಲ್ವ–ಕೋಷ್ಟ, ಶುಂಠಿ . . . ಇವನ್ನೆಲ್ಲಾ ಕೂಡಿ . . . ಮಂದಾಗ್ನಿಯಿಂದ ಎಣ್ಣೆ ನಿಲುವತನಕ ಅಟ್ಟು ಒಂದು ಗದ್ಯಾಣ ತೂಕವಂ ತೆಗೆದುಕೊಂಡು ದೇಹಕ್ಕೆ ಲೇಪವಂ ಮಾಡಿಸಲು . . . ಅಷ್ಟಾದಶಕುಷ್ಟ ಸಹ ಮಾಣ್ಗುಂ (ಸಕವೈ. ೧೭೯).

ನಿರ್ವಿಷಂಮಾಡು = ವಿಷವಿಲ್ಲದಂತೆ ಮಾಡು; ವಿಷವನ್ನು ಪರಿಹರಿಸು: ಪದ್ಮೋತ್ತಮೆಯಂ ಪಾವು ಕೊಳೆ ನಿರ್ವಿಷಂಮಾಟ್ಪಾತಂಗೆನ್ನ ಮಗಳುಮನರ್ಧರಾಜ್ಯಮುಮಂ ಕೊಡುವೆನೆಂದು ಗೋಷನೆಗಳೆಯೆ (ಚಾವುಂಪು. ೪೧೫). [ಸಂ.]

**ನಿರ್ವಿಷಯ** (ನಾ). ೧. ಇಂದ್ರಿಯ ವಿಷಯದಿಂದ ದೂರವಾಗಿರುವುದು; ವಿರಕ್ತಿ: ವಿಷಮವಿಷಂಗಳ್ಗಂ ಪ್ರತಿವಿಷಮೆನಿಸುವ ಮಂತ್ರನಿಚಯದೊಳಮಾರ್ಗೆಂದುಂ ವಿಷಯಮೆ ಮಾಣಿಸಲಿಂತೀ ವಿಷಯವಿಷಾಸ್ವಾದಮೋಹಮಂ ನಿರ್ವಿಷಯಂ (ಕಾದಂಪೂ. ೫೩೨); ಎನ್ನ ನಿಭ್ರಾಂತಿಯೇ ನೈವೇದ್ಯ ಎನ್ನ ನಿರ್ವಿಷಯವೇ ತಾಂಬೂಲ ಎನ್ನ ಮೌನವೇ ಘಂಟೆ (ಅವಚಂ. ೨೦೬-೯೨೭); ಧರೆಯುಂ ಸತಿಸುತರ ಭೋಗಭಾಗ್ಯವನು ತೃಣೀಕರಿಸಿ ನಿರ್ವಿಷಯಪರನಾಗಿ (ನವಮೋ. ೩೨-೪೫);

ನಾನಿಹೆನು ಇಹೆನೆಂಬ ನಿರ್ವಿಷಯದರಿವಿನೊಳು ಐಕ್ಯನಾಗಿ (ಮುಲಿದೇ. ೫೨-೯). ೨. ಇಂದ್ರಿಯ ವಿಷಯಗಳಿಂದ ದೂರವಾದವನು; ವಿಷಯಾತೀತನಾದವನು; ಪರಮಾತ್ಮ : ನಿರಸನೇಂದ್ರಿಯ ನಿರ್ವಿಷಯ ನಿರ್ನಿರುಹರಣ . . . ನಿರ್ವಿಕಾರಾಕಾರ ಚಿತ್ತೈಸು (ಬಸಪು. ೬೧-೪೩). [ಸಂ.]

**ನಿರ್ವಿಷಯಿ** (ನಾ). ವಿಷಯಾಸಕ್ತಿ ಇಲ್ಲದಿರುವವನು ; ವಾಸನಾರಹಿತನಾದವನು; ವಿರಾಗಿ: ದೇವ ನಿರ್ವಿಷಯಿಯಯಾನಾದೆನವಧರಿಸೆಂದು ದೇವ ಭವಬಂಧಮಂ ಬಿಡಿಸು ಬಿಡಿಸಿನ್ನೆಂದು ಬೇಡಿಕೊಂಬಂದದಿಂ ಮಯ್ಯಿಕ್ಕಿ ನಡೆವುತುಂ (ಸಂಬರ. ೧೭-೮೧). [ಸಂ. ನಿರ್ವಿಷಯಿನ್]

**ನಿರ್ವಿಷಸಿದ್ಧ** (ನಾ). ವಿಷದಿಂದ ತನಗೆ ಕೆಡುಕುಂಟಾಗದ ಸಿದ್ಧಿಯನ್ನು ಪಡೆದ ವ್ಯಕ್ತಿ : ವಿಷಯವಿಷವನುಂಡು ದಕ್ಕಿಸಬಲ್ಲ ನಿರ್ವಿಷಸಿದ್ಧ ನೀನೆವನೀಶ (ಭರತ. ೨-೬೧). [ನಿರ್ವಿಷ+ಸಿದ್ಧ]

**ನಿರ್ವಿಷೀಕರಣ** (ನಾ). ವಿಷವಿಳಿಯುವಂತೆ ಮಾಡುವಿಕೆ; ನಂಜನ್ನು ಕಳೆಯುವಿಕೆ: ಮದನಫಣಿ ನಿರ್ವಿಷೀಕರಣದಿವ್ಯಮಂತ್ರಸ್ವನಂ ಜರಾಮರಣ ಶಿಲಾವಿದಳನ ಟಂಕಧ್ವನಿ ಪೊಣ್ಮಿದತ್ತು ಮುನಿ ಪರಸೆ ಧರ್ಮವೃದ್ಧಿನಿನಾದಂ (ಪಂಚಾಮಾ. ೬-೨೮). [ಸಂ.]

**ನಿರ್ವಿಷೀಕರಣಂಗೆಯ್** (ಕ್ರಿ). ವಿಷಪರಿಹಾರ ಮಾಡು ; ನಂಜಿಲ್ಲದಂತೆ ಮಾಡು : ಗರಳೇಂದೀವರವಾಸಿತೋಗ್ರವಿಷಮಂ ಪುಣ್ಯಾಮೃತಂ ನಿರ್ವಿಷೀಕರಣಂಗೆಯ್ವವೊಲ್ (ಶಾಂತಿಪು. ೬-೧೨೩). [ನಿರ್ವಿಷೀಕರಣ+ಕೆಯ್$_1$]

**ನಿರ್ವಿಷ್ಟ** (ನಾ). ಆಶ್ರಯಿಸಿರುವವನು ; ಸೇರಿಕೊಂಡಿರುವವನು : ಸೃಷ್ಟಿವಿಲಯಸ್ಥಾನವಾವನಭೀಷ್ಟಮಾಯಾಗುಣಗಳಲಿ ನಿರ್ವಿಷ್ಟನೆನಿಸುವನಾವನೀ ಸಚರಾಚರಂಗಳಲಿ (ಸಿಭಾಗ. ೧೦-೭೪-೧೩). [ಸಂ.]

**ನಿರ್ವೀಜ** (ನಾ). ಎಲ್ಲಕ್ಕೂ ಮೂಲವಾದುದು ; ಆದಿಮೂಲ : ಆತ್ಮಂಗೆ ಕಾಯವೆ ರೂಪು ಆ ಕಾಯಕ್ಕೆ ಆತ್ಮನೆ ಹಾಹೆ ಆ ಹಾಹೆಗೆ ಅಱಿವೆ ಬೀಜ ಆ ಬೀಜಕ್ಕೆ ಗೋಪತಿನಾಥ ವಿಶ್ವೇಶ್ವರಲಿಂಗವೆ ನಿರ್ವೀಜ (ತುರುಗಾ. ೬-೩೧) ; ಭಕ್ತಿಸ್ಥಲ ಮಹೇಶ್ವರನ ನಿರ್ವೀಜ ಆ ನಿರ್ವೀಜ ಪ್ರಸಾದಿಯ ಪ್ರಣಮ ಆ ಪ್ರಣವು ಪ್ರಾಣಲಿಂಗಿಯ ಎರಡಳಿದ ಅಱಿವು (ಮೋಳಿಮಾ. ೧೪೬-೫೫೭). [ಸಂ.]

**ನಿರ್ವೀಣ್ಯ** 'ನಿರ್ವಿಣ್ಣ್ಯ' ನೋ.

**ನಿರ್ವೀರೆ** (ನಾ). ಗಂಡ ಮತ್ತು ಮಕ್ಕಳು ಇಲ್ಲದವಳು. 'ಅವೀರೆ' ಪರಾ. [ಸಂ. ನಿರ್ವೀರಾ]

**ನಿರ್ವೀರ್ಯ** (ಗು). ೧. ಬಲವಿಲ್ಲದ ; ಅಶಕ್ತ. ೨. ಗಂಡಸುತನವಿಲ್ಲದ. (ನಾ). ೩. ಬಲವಿಲ್ಲದಿರುವುದು ; ಶಕ್ತಿಗುಂದಿದುದು. ೪. ಷಂಡ. ೫. ಬಲವನ್ನು ಕಳೆದುಕೊಂಡವನು ; ಶಕ್ತಿಗುಂದಿದವನು : ಈ ವಿಶಿಷ್ಟ ಸನ್ನಿವೇಶದಲ್ಲಿ ಅರ್ಜುನನು ವೀರೋಚಿತವಾಗಿ ವರ್ತಿಸದೆ ನಿರ್ವೀರ್ಯನಾಗಿ ನಿರ್ವಿಣ್ಣನಾಗಿ ಹೇಡಿಯಂತೆ ನಡುಗುತ್ತಿದ್ದಾನೆ (ಭಾರದ. ೧೧೧) ; ಈ ಜನ ಪ್ರಪಂಚದ ಪ್ರಗತಿಗೆ ಏನೂ ಕಾಣಿಕೆ ನೀಡಲಾರದ ನಿರ್ವೀರ್ಯರು (ದ್ರಾವಿವಿ. V, ಮುನ್ನುಡಿ) ; ಇಂಥ ಶಿಕ್ಷಣ ನಮ್ಮ ಮುಂದಿನ ಜನತೆಯನ್ನು ನಿರ್ವೀರ್ಯರನ್ನಾಗಿ ಮಾಡಿತು ! (ಶಿಕ್ಷದ. ೧೩೧).

**ನಿರ್ವೀರ್ಯವಾಗು**=೧. ಬಲವಿಲ್ಲವಾಗು ; ಶಕ್ತಿಗುಂದು : ಕಲಿಯುಗದ ಪ್ರಾಬಲ್ಯದಿಂದ ಶ್ರುತಿಮಾರ್ಗಗಳು ನಿರ್ವೀರ್ಯವಾಗುತ್ತಾ ಬಂದಾಗ . . . ಆಗಮೋಕ್ತ ಕರ್ಮಾನುಷ್ಠಾನವೇ ಪ್ರಶಸ್ತವೆನಿಸುವುದು (ಭಾರದ. ೬೮) ; ಸ್ವಪ್ನಿಯ ಪ್ರಾಥಮಿಕಶಕ್ತಿಯನ್ನು ಪ್ರೇಮದ ಬಲದಿಂದ ಚೇತರಿಸುವುದು ಮಾತ್ರ ಒಳಿತಿನ ಕೆಲಸ. ಆಗ ಕೆಡುಕು ನಿರ್ವೀರ್ಯವಾಗುತ್ತದೆ (ಬದ್ಧಪ್ರ. lxxviii, ಪೀಠಿಕೆ) ; ವಸಿಷ್ಠನ ಬ್ರಹ್ಮದಂಡಕ್ಕೆ ತಗುಲಿ ನಿರ್ವೀರ್ಯವಾಗಿ ಕೆಳಕ್ಕೆ ಬಿದ್ದ ಕೌಶಿಕನ ಅಸ್ತ್ರದಂತೆ ರೋಗಗಳು ಇದನ್ನು ನೋಕಿದ ಕೂಡಲೇ ನಿರ್ವೀರ್ಯವಾಗುತ್ತವೆ (ಕ್ಷೇಮಾತೀ. ೮೪). ೨. ಪುಂಸತ್ತ್ವವಿಲ್ಲದಾಗು. [ಸಂ.]

**ನಿರ್ವೀರ್ಯೆ** (ನಾ). = ನಿರ್ವೀರೆ : "ಪತಿ ಪುತ್ರರಿಲ್ಲದಳು ನಿರ್ವೀರ್ಯೆಯಕ್ಕು" (ಮಂಗರಾ. ೯೦-೩). [ಸಂ. ನಿರ್ವೀರ್ಯಾ]

**ನಿರ್ವೃತ** (ಗು). ೧. ಸಮಾಧಾನ ಹೊಂದಿದ ; ತೃಪ್ತಿಯನ್ನು ಪಡೆದ : ಚಂಡಾಲಕನ್ನಿಕೆ . . . ಪದಿಯಂ ಕೆತ್ತಗುಟಿಯನಿಕ್ಕಿ ನೀನಿಂತಿರೆಂದು ನಿರ್ವೃತಾಂತರಾತ್ಮೆಯಂತೆ ನುಡಿದು (ಕಾದಂಉ. ೭೫೨). (ನಾ). ೨. ಸಮಾಧಾನ ಹೊಂದಿದ ವ್ಯಕ್ತಿ ; ತೃಪ್ತನಾದ ವ್ಯಕ್ತಿ ; ಸುಖಿ : ನಿನ್ನನ್ನಂ ಪ್ರತಿಭಾಸಂಪನ್ನಂ ನಂಬುಗುಮೆ ಮೆಯ್ಗೆ ಮಚ್ಚಿದ ತೆಜದಿಂದನ್ನಂಬಿ ವಿಷಯಸುಖದೊಳ್ ತನ್ನಿಷ್ಟನೆಯಾಗಿ ಮರುಳೆ ನಿರ್ವೃತನಾಗಾ (ಶಾಂತಿಪು. ೮-೧೩೩) ; ಕುರುಪತಿಯ ಸೋದರರು ಮಕ್ಕಳು ಸರಸಿಜಾನನೆ ಭಾನುಮತಿ ಮಿಕ್ಕರಸಿಯರು ಕರ್ಣಾದಿಗಳು ನಿರ್ವೃತರೆ ಹೇಳು (ಕುಪ್ಯಾಉ. ೨-೩೪). ೩. ಮನೆ ; ನಿವಾಸ : "ಗೇಹಂ, ನಿಕೇತನಂ, ಆಗಾರಂ, ನಿಶಾಂತಂ, ನಿರ್ವೃತಂ, ಗೃಹಂ" (ಧನಂಸಿ. ೧೩೪ ಟೀಕೆ). [ಸಂ.]

**ನಿರ್ವೃತಿ** (ನಾ). ೧. ಆನಂದ ; ಸುಖ ; ಸಂತೋಷ : ಕಾದಂಬರಿಯ ಮನಃಪ್ರಿಯಸಮಾಗಮನ ನಿರ್ವೃತಿಯುಂ ಸಮನಿಸಿತಿಲ್ಲೆಂದು ಮನಂನೊಂದು (ಕಾದಂಉ. ೫೪೬). 'ನಿರ್ವೃತಿಕರ' ಪರಾ. ೨. ಮೋಕ್ಷ; ಮುಕ್ತಿ : ನಿರಪಾಯಂ ನಿರ್ವಿಕಲ್ಪಂ . . . ನಿರುತಶ್ರೀ ನಿರ್ವೃತಿಶ್ರೀ (ಸುಕುಮಾ. ೧೧-೭೬) ; ಎನಗೆ ದಯೆಗೆಯ್ವುದು ನೀನಿರದೆ ಜಿನದೀಕ್ಷೆಯಂ ಬಿತ್ತರಿಸುಗುಂವೆನಗದುವೆ ಬಟುಕೆ ನಿರ್ವೃತಿಸುಖಮಂ (ಚಂದ್ರಪು. ೯-೩೭); ಒಡಲಂ . . . ಸುಖಮುಖಮುದ್ರೆಯ ಹೊಡಲಂ ಬಿಡಲಱಿಯದಂಗೆ ನಿರ್ವೃತಿಯುಂಟೇ (ಪುಷ್ಪಪು. ೧೩-೩೩). 'ನಿರ್ವೃತಿಪದ' ಪರಾ. ೩. ಬಿಡುಗಡೆ : ಜೀವಜೀವದ ನಡುವೆ ಹರಿದೆನ್ನ ಜೀವನಿದು ಪಡೆಯುತಿಹ ನಿರ್ವೃತಿಯ ಚಿತ್ರಚಿತ್ರದೊಳು (ಮುಲಿದೇ. ೫೩-೮). ೪. ಮರಣ ; ಸಾವು. ೫. [ಜೈನ] ಅಯ್ವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು : ದ್ವಾದಶಾಂಗದೊಳ್ ಪೇಟ್ದ ಆಧಾನ . . . ನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ). [ಸಂ.]

**ನಿರ್ವೃತಿಕರ** (ಗು). ಸಂತೋಷಕರವಾದ ; ಆನಂದಕರವಾದ : ಕ್ಷಿತಿವಧು ತಾಳ್ದಲಂಕೃತಿಯಿದೆಂದೆನಿಸಿರ್ಪುದು ಸಾರವಸ್ತುಸಂಗತಿ ಮಣಿಹರ್ಮ್ಯಸಂಹತಿ ಸುರೇಂದ್ರಪುರಾಕೃತಿ ಲೋಕನೇತ್ರನಿರ್ವೃತಿಕರ ರಾಜಪದ್ಧತಿ . . . ಧರ್ಮವತಿಯೆಂಬ ಪುರಂ ವಿತತಪ್ರಭಾವದಿಂ (ರಾಜಶೇ. ೨-೩೨). [ಸಂ.]

**ನಿರ್ವೃತಿಪದ** (ನಾ). ಮೋಕ್ಷಪದ ; ಮುಕ್ತಿಪದವಿ : ನಿರ್ವೃತಿಪದಾಸ್ಪದೇ ಚತುರ್ವಿಧಫಲಪ್ರದೇ ಸಕರ್ವತನು ಪಾಲಿಪುದು ಪರ್ವತತನೂಜೇ (ರಾಜಶೇ. ೮-೧೨೭). [ನಿರ್ವೃತಿ+ಪದ$_2$]

**ನಿರ್ವೃತಿವಿದೂರ** (ನಾ). ಮೋಕ್ಷಪ್ರಾಪ್ತಿಯಾಗದವನು ; ಮುಕ್ತಿಯಿಂದ ದೂರವಾದವನು : ಸೋಮನಾಮಧೇಯ ತಾಪಸಂಗಂ ಶ್ರೀದತ್ತೆಗಂ ಸೋಮಿಲನೆಂಬೊಂ ಮಗನಾಗಿ ತಾಪಸವೃತ್ತಿಯೊಳ್ ನೆಗಟ್ದು ನಿರ್ವೃತಿವಿದೂರನಾಗಿಯುಂ ನಿರ್ವೃತಿನಾಮನದೀತೀರದ ಕಾಶ್ಯಪಾಶ್ರಮದೊಳ್ ಮುಡಿಪಿ . . . ದೇವನಾಗಿರ್ದ (ಶಾಂತಿಪು. ೯-೯೧ ವ). [ನಿರ್ವೃತಿ+ವಿದೂರ]

**ನಿರ್ವೃತಿಸೌಖ್ಯ** (ನಾ). ಮುಕ್ತಿಸೌಖ್ಯ ; ಮೋಕ್ಷಸುಖ : ದೇವೇಂದ್ರಂ ನಿರ್ವೃತಿಸೌಖ್ಯಾವಾಪ್ತಿಗೆ ಬಯಸಿ ಬಲ್ಮೆಯಂ ನೆಱೆ ಮೆಱೆದಾ ದೇವನ ಮುಂದಾಡಿದನೆನಲೇವೇೞ್ದುದೊ ನೃತ್ಯಕುಳಮುಮಂ ನೃತ್ಯಮುಮಂ (ಮಲ್ಲಿಪು. ೧೩-೪೯). [ನಿರ್ವೃತಿ+ಸೌಖ್ಯ]

**ನಿರ್ವೃತ್ತ** (ಗು). ೧. ಪೂರ್ತಿಯಾಗಿ ಮಾಡಿ ಮುಗಿಸಿದ; ಮುಕ್ತಾಯ ಮಾಡಿದ. (ನಾ). ೨. ಮುಗಿಸಿದುದು ; ನೆರವೇರಿಸಿದುದು : "ಸಿದ್ಧಃ, ನಿರ್ವೃತ್ತಃ, ನಿಷ್ಪನ್ನಃ – ೩ ನೆರವೇರಿಸಲ್ಪಟ್ಟಿರುವದು" (ಸಿದ್ಧಾಂತಿ. ೩೫೧). [ಸಂ.]

**ನಿರ್ವೃತ್ತಿ** (ನಾ). ೧. ಉಂಟಾಗುವುದು. ೨. ಕಾರ್ಯವು ಮುಕ್ತಾಯ ಹೊಂದುವುದು. ೩. ಈಡೇರುವುದು ; ನೆರವೇರುವುದು. ೪. [ಜೈನ] ಕರ್ಮದ ನಿಮಿತ್ತದಿಂದ ಪುದ್ಗಲ ಕಣಗಳು ಇಂದ್ರಿಯಗಳ ಆಕಾರ ಅಥವಾ ರೂಪವಾಗಿ ರಚನೆಯಾಗುವುದು: ಕರ್ಮನಿಮಿತ್ತದಿಂದ ವಿಶಿಷ್ಟಪ್ರಕಾರದ ರಚನೆಯಾಗುವುದು ನಿರ್ವೃತ್ತಿಯು (ಜೈನಧ. ೩೧). [ಸಂ.]

**ನಿರ್ವೃದ್ಧ** (ಗು). ಮುಪ್ಪಿಲ್ಲದ ; ಚಿರಯೌವನದಿಂದ ಕೂಡಿದ. 'ನಿರ್ವೃದ್ಧಾಂಗ' ಪರಾ. [ಸಂ.]

**ನಿರ್ವೃದ್ಧಾಂಗ** (ನಾ). ಮುಪ್ಪುಂಟಾಗದ ದೇಹವುಳ್ಳವನು ; ಪರಮಾತ್ಮ : ನಿರ್ವಿರಳ ವಿಸ್ತರಣ ನಿರ್ವೃದ್ಧಾಂಗ ನಿಜನಿರ್ಮಾಯ ಚಿತ್ಕೈಸು (ಬಸವು. ೬೧-೪೪). [ನಿರ್ವೃದ್ಧ+ಅಂಗ$_2$]

**ನಿರ್ವೇಗ** (ನಾ). ೧. ವೇಗವಿಲ್ಲದುದು ; ಮಂದಗತಿಯುಳ್ಳುದು. ೨. ಜುಗುಪ್ಸೆ ; ಬೇಸರ ; ಬೇಜಾರು : ನವೋತ್ಪಳದಳೇಕ್ಷಣೆ ಮನದೊಳಾದ ನಿರ್ವೇಗಮೊಂದವಶ್ಯಮದು ಕೂರ್ಪರೊಳ್ ನುಡಿದಲ್ಲದೇಂ ಪೋಕುಮೇ(ಆದಿಪು. ೩-೩೧); ಆ ಪುರುಷನತಿಪರುಷವಚನಂಗಳಿಂ ತಿರಸ್ಕರಿಸಿ ನುಡಿದೊಡದುವೆ ನಿರ್ವೇಗದಿಂ ಸಂವೇಗಂ ಪುಟ್ಟೆ (ಸುಕುಮಾ. ೫-೭ ವ) ; ಪ್ರಸಾದಮನೊಲ್ಲದೆ ಬಸವಂ ಮುಸುಂಕಿಟ್ಟು ಪಶುಪತಿಯ ಪದದ ಕೆಳಗೆ ನಿರ್ವೇಗದಿಂ ಪಟ್ಟಿರ್ದಿರೆ (ಬಸರ. ೪-೪೪). ೩. ವೈರಾಗ್ಯ ; ವಿರಕ್ತಿ : ಇದೇಂ ಪಾಪದ ಫಲಮೋ ಎಂದು ಸಂಸಾರ ನಿರ್ವೇಗಮಾಗೆ (ಪಜ್ಞಾರಾ. ೯-೨೧) ; ಪಾಂಡುರಾಜಂಗೆ ಜಳದಾನಾದಿ ಕ್ರಿಯೆಗಳಂ ನಿರ್ವರ್ತಿಸಿ ತದನಂತರದೊಳದುವೆ ನಿರ್ವೇಗಮಾಗೆ . . . ಮುನಿವನಮನಾಶ್ರಯಿಸಿದರ್ (ಪಂಪಭಾ. ೨-೨೯ ವ) ; ವಾಯುರಥನೊಮ್ಮೆ ಮುಗಿಲ್ ಕರಗಿದುದಂ ಕಂಡದುವೆ ನಿರ್ವೇಗದಿಂ ಮನೋರಥನೆಂಬ ಮಗಂಗೆ ರಾಜ್ಯಮಂ ಕೊಟ್ಟು ತಪಂಬಡುವುದುಂ (ಚಾವುಂಪು. ೬೫) ; ಧರೆಯಂ ರಾಮಂಗಿತ್ತಂ ಗುರುವಾನಳಿಪಿಂದಮಿರ್ದೊಡೆನಗಕ್ಕುಂ ಕಿಂಕರಭಾವಮೆಂಬ ಬಗೆಯಿಂ ಭರತಂಗೊಡರಿಸಿದುದಕ್ಕುಮಿಾ ನಿರ್ವೇಗಂ (ಪಂರಾಮಾ. ೬-೪೯) ; ಭರತಂ ಮಹಾತ್ಮನೆಸೆದನು ದಿವ್ಯತೇಜಸ್ವಿ, ತ್ಯಾಗಬುದ್ಧಿಯಲಿ, ನಿರ್ವೇಗದಲಿ, ತಪದಲ್ಲಿ (ಶ್ರೀರಾಮಾ. ೨೬-೬೯೪). [ಸಂ.]

**ನಿರ್ವೇಗರಸ** (ನಾ). ೧. ವೈರಾಗ್ಯಭಾವನೆ ; ವಿರಕ್ತಿ : ಮುನ್ನಾದ ಶೋಕರಸಮೆಲ್ಲಂ ಪೋಗಿ ನಿರ್ವೇಗರಸಂ ಪುಟ್ಟೆ ಸಿದ್ಧರಸಮಂ ಮುಟ್ಟಿದ ಲೋಹದಂತೆ ಶುದ್ಧಾಂತರಂಗನಾಗಿ (ಆದಿಪು. ೩-೫೬ ವ). ೨. ವೈರಾಗ್ಯ ಭಾವನೆಯುಳ್ಳವನು ; ವಿರಕ್ತ : ಅದಂ ಕಂಡಪಗತಮೋಹರಸನುಮುಪಗತನಿರ್ವೇಗರಸನುಮಾಗಿ ಹೇಯಂ ಸಾಮ್ರಾಜ್ಯಮುಪಾದೇಯಂ ಪ್ರವ್ರಜ್ಯಮೆಂದು ಮಾಣದೆ ರಾಜ್ಯಶ್ರೀಯುಂ ಕೊಟ್ಟಂ(ಆದಿಪು.೧೬-೬೧ವ). [ನಿರ್ವೇಗ+ರಸ]

**ನಿರ್ವೇದ** (ನಾ). ೧. ಆತ್ಮ ಜುಗುಪ್ಸೆ ; ತನ್ನ ಬಗೆಗೇ ಉಂಟಾಗುವ ಜಿಗುಪ್ಸಾಭಾವ ; ವೈರಾಗ್ಯ ; ವಿರಕ್ತಿ : ಸದಾ ದುಃಖ ದುಃಖವೆಂಬ ಭಾವನೆ ಮಾಡುತ್ತಿದ್ದರೆ ನಿರ್ವೇದ ಬರುತ್ತದೆ. ನಿರ್ವೇದವೆಂದರೆ ಅಯ್ಯೋ, ಇದುವರೆಗೆ ವಿವೇಕವಿಲ್ಲದೆ ಕೆಟ್ಟೆನಲ್ಲಾ ಎಂಬ ಆತ್ಮನಿಂದೆ (ಹಿಂದಸಾ. ೧೧೫). ೨. ಖೇದದಿಂದ ಎದೆಗುಂದುವುದು ; ನಿರಾಶಾಭಾವ ; ನಿರುತ್ಸಾಹ : ಜಯವಹುದೆ ನಿರ್ವೇದದಲಿ ನಿರ್ಭಯವಹುದೆ ಬಿಸುಸುಯ್ಲಿನಲಿ (ಕುವ್ಯಾಸ. ೧೬-೭) ; ಹೀಗೆ ತಿಳಿದವನಿಗೆ ಐದು ಸ್ಕಂಧಗಳಲ್ಲಿಯೂ ನಿರ್ವೇದ ಹುಟ್ಟುತ್ತದೆ. ನಿರ್ವೇದದಿಂದ ವಿರಾಗ ಜನಿಸುತ್ತದೆ (ತೀರ್ಥಕ. ೯೨). ೩. ಖೇದ ; ಸಂಕಟ ; ದುಃಖ : "ನಿರ್ವೇದಃ, ಖೇದಃ—ಈ ೨ ಉಮ್ಮ(ಳಂ)ಳಿ" (ಹಲಾಯು. ೧೨೪-೬೯); ಅದಱಿನಾನೀ ನಿಕೃಷ್ಟದಾಸೆಯಂ ಕೆಯ್ಕೊಂಡು ನಿರ್ವೇದಮಂ ಪೆಱಗಿಕ್ಕಿ (ಶಾಂತಿಪು. ೪-೭೯ ವ) ; ನಿಜಸಖಿಯ ನಿರ್ವೇದೋಕ್ತಿಯಂ ಕೇಳಲಾಱದವಳಿನಿಯ ನಿರ್ದೆಡೆಗೆ ಪರಿತಂದು ವಿನಯದಿಂದಿಂತೆಂದಳ್ (ರಾಜಶೇ. ೧೧-೧೩೮ ವ) ; ಸಂಸಾರವನ್ನು ತೊರೆಯುವ ತೀವ್ರ ಮನೋವೇದನೆಗೆ ನಿರ್ವೇದಕ್ಕೆ ಕಾರಣವಾಗುವ ಸಂಗತಿಗಳು ಎರಡು ಬಗೆಯವು (ಕರ್ನಾಟ. ೩೨). ೪. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು ; ಶಾಂತರಸಕ್ಕೆ ಸ್ಥಾಯಿಭಾವ, ತತ್ತ್ವಜ್ಞಾನ, ಆಪತ್ತು, ಅಸೂಯೆ ಮೊದಲಾದುವುಗಳಿಂದ ತನ್ನಲ್ಲಿ ಉಂಟಾಗುವ ತುಚ್ಛಭಾವನೆ : ಮತಿನಿರ್ವೇದಾವಹಿತ್ಥಶ್ರಮಮದಜಡತಾಗ್ಲಾನಿ . . . ಚಿತ್ತಭ್ರಂಶ ಮೋಹಾಮಯಮೃತಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೫) ; ದಾರಿದ್ರ್ಯ, ಆಪತ್ತು, ತತ್ತ್ವಜ್ಞಾನ ಈ ಮೊದಲಾದವುಗಳಿಂದ ಒದಗುವ ಸ್ವಾವಮಾನವೇ, ತನ್ನ ವಿಷಯದಲ್ಲಿ ಇಳಿಕೆಯ ಭಾವವೇ ನಿರ್ವೇದ (ಭಾರಮೀ. ೩೪೬) ; ಸಂಚಾರಿಭಾವಗಳು ಮೂವತ್ತುಮೂರು:—೧. ನಿರ್ವೇದ (ಬೇಸರ), ೨. ಗ್ಲಾನಿ (ಬಳಲಿಕೆ) . . . ೩೨. ತ್ರಾಸ (ಭಯ), ೩೩. ವಿತರ್ಕ (ವಿಚಾರ) (ಕೈಪಿಡಿ. ೧೮೮). 'ನಿರ್ವೇಗ' ಪರಾ. [ಸಂ.]

**ನಿರ್ವೇದಂಗೊಳ್** (ಕ್ರಿ). ದುಃಖಪಡು ; ಖೇದಗೊಳ್ಳು : ಆವೂರ ಅಂತ್ಯಜರ್ ಸಾರಮೇಯಂಗಳಿನೆಯ್ತಂದು ಸತ್ತಿರ್ದನಡ್ವಾಹನಂ ಕಂಡದಱ ಪೊಡೆಯಂ ದಾಣೆಯಿಂ ಪೊಯ್ಯಲ್ಕೆಯಾ ಕ್ರೋಷ್ಟು ನಿರ್ವೇದಂಗೊಂಡೊಂದುಪಾಯಮಂ ಕಂಡು (ಪಂಚತಂ. ೧೯-೧೪). [ನಿರ್ವೇದ+ಕೊಳ್$_1$]

**ನಿರ್ವೇದನಿ** (ನಾ). [ಜೈನ] ನಾಲ್ಕು ಬಗೆಯ ಧರ್ಮಕಥೆಗಳಲ್ಲಿ ಒಂದು ಬಗೆ ; ಪಾಪಫಲವನ್ನು ನಿರೂಪಿಸುವ ಕಥೆ : ಧರ್ಮಕಥೆಯೆಂಬುದು ಆಕ್ಷೇಪಣೆಯುಂ ವಿಕ್ಷೇಪಣೆಯುಂ ಸಂವೇದನಿಯುಂ ನಿರ್ವೇದನಿಯುಮೆಂದು ಚತುರ್ವಿಧಮಕ್ಕುಮವಱೊಳ್ ಅವುದೊಂದಱೊಳ್ ಜೀವಾದಿಪದಾರ್ಥಂಗಳನವಱ ಭಾ(ಗಂ)ವಂಗಳಂ ಯಥಾತ್ಮಪ್ರರೂಪಣಂಗೆಯ್ವುದು ಆಕ್ಷೇಪಣೆಯೆಂಬುದು ನಿಜಮತನಿರೂಪಣದೊಳ್ ಪರಮತದೂಷಣಂಗೆಯ್ವುದುಮೆಣ್ಬರ ಮತಕಥನದೊಳ್ ನಿಜಮತಪ್ರಕಾಶನಂಗೆಯ್ವುದು ವಿಕ್ಷೇಪಣೆಯೆಂಬುದು ಜಿನಧರ್ಮಫಲವಿಭೂತಿಯಂ ಪೇೞ್ವುದು ಸಂವೇದನಿಯೆಂಬುದು ದರ್ಪದಿಂ ಪ್ರಮಾದದಿಂದಾದ ಪಾಪಫಲಮಂ ಪೇೞ್ವುದು ನಿರ್ವೇದನಿಯೆಂಬುದು (ಚಾವುಂಪು. ೩೮೦). [ಸಂ. ನಿರ್ವೇದನೀ]

**ನಿರ್ವೇಧನ** (ನಾ). ನಾಶ ; ಅಳಿವು : ಘನ ದುಷ್ಕೃತಬಳ ನಿರ್ವೇಧನಕರ (ಜಿನಾಲಿ. ೫-೫). [ಸಂ.]

**ನಿರ್ವೇಶ** (ನಾ). ೧. ಲಾಭ ; ಗಳಿಕೆ. ೨. ಕೂಲಿ ; ಸಂಬಳ; ವೇತನ : "ಕರ್ಮಣ್ಯಾ . . . ನಿರ್ವೇಶಃ ಪಣಃ—೧೧ ಕೂಲಿಯ ಹೆಸರುಗಳು" (ಸಿದ್ಧಾಂತಿ. ೩೧೮). ೩. ಪ್ರಾಯಶ್ಚಿತ್ತ. ೪. ಸುಖ ; ಭೋಗ : "ನಿರ್ವೇಶಃ, ಉಪಭೋಗಃ—ಈ ೨ ಉಪಭೋಗಂ" (ಹಲಾಯು. ೧೨೪-೭೦) ; "ಉಪಭೋಗಮೆನಲು ನಿರ್ವೇಶಮೆನೆ ಭೋಕ್ತಮದು" (ಪಂಗರಾ. ೧೩೫-೩೫). ೫. ಮದುವೆ ; ವಿವಾಹ. [ಸಂ.]

**ನಿರ್ವೈಕಾರ** (ಗು). = ನಿರ್ವಿಕಾರ ೧ : ವಿರತ ಪದಿನೇಳುತತ್ತ್ವಾಕಾರ ಸೂಕ್ಷ್ಮ ತತ್ಪೂರೆಯಲವಿಕೃತಿಕಾರಣಾಖ್ಯವಿಾ ಮೂರಿಸಂ ಪರಿಕಿಸಿದ ರಂದಿರಂಪುರುಷ ನಿರ್ವೈಕಾರ ಭೋಗಿಗಳ್ಗೆ ಸುಗಳಲ್ತೆ (ವೆಂಕಾರಾ.೨-೯-೨೭). [<ಸಂ. ನಿರ್ವಿಕಾರ]

**ನಿರ್ವೈರ** (ನಾ). ೧. ವೈರವಿಲ್ಲದಿರುವುದು ; ಮೈತ್ರಿ : ಕುಶಲ ಮಪ್ಪುದು ಹರುಷ ಕಾಮಧುಗ್ಗೆಡಿದುದ ವಶಗೈವುದಾ ಕ್ರಮದಿ ನೋಡಿದರೆ ನಿರ್ವೈರ ವಿಶದಮೆನೆ ಕಾಣ್ಬುದುಗುಮಾನಂದ ತನ್ನಿಂದ ತಾನೆ ಸಂಭೂತಮಹುದು (ವೆಂಕಾರಾ. ೨-೯-೨೯). ೨. ವೈರವಿಲ್ಲದಿರುವವನು; ಮಿತ್ರ : ಮೇಣ್ ಪ್ರೀತಿ ಪಶ್ಚಾತ್ತಾಪದಿಂ ಭ್ರಾತೃಮೈತ್ರಿಯಿಂ ಶುದ್ಧನೆಂ, ನಿರ್ವೈರನೆಂ (ಶ್ರೀರಾಮಾ. ೩೧೪-೩೪೧). [ಸಂ.]

**ನಿರ್ವೇಸು** (ಕ್ರಿ). ಬೇಸರಗೊಳ್ಳು ; ಜುಗುಪ್ಸೆಗೊಳ್ಳು ; ಹೇಸು : ಸಂಜಯನ ನುಡಿಗೆ ದುರ್ಯೋಧನಂ ನಿರ್ವೇಸಿ (ಗದಾಯು.೩-೪೫ ಪ); "ಪ್ರತಿಕೂಲಿಸು" (ಪ್ರಭಣ್ಣ). [<ನಿರ್ವೇಗ+-ಇಸು$_3$]

**ನಿರ್ವ್ಯಗ್ರ** (ಗು). ೧. ಹೊಯ್ದಾಟವಿಲ್ಲದ ; ಚಂಚಲತೆಯಿಲ್ಲದ : ನಿರ್ವ್ಯಗ್ರಪದವಿಸ್ಫೃತಿಪರಚಿತ್ತಗ್ರಹಣ ಸಮರ್ಥಮಪ್ಪುದಂತದು ಕಾಂತಂ (ಕಾವ್ಯಾವ. ೫೦೯). ಚಂಚತ್ಕಾಂಚನಸ್ಥಾನದೀಪಿಕಾಗ್ರನಿರ್ವ್ಯಗ್ರದೇದೀಪ್ಯಮಾನದೀಪಪ್ರಭಾಭಿಭೂತತಮಸ್ತೋಮಮುಮಪ್ಪ ಗರ್ಭಗೃಹಮನಭ್ಯುಕ್ಷಿತೋಜ್ಜ್ವಲನಾಗಿ ಪೊಕ್ಕಾಗಳ್ (ಚಂದ್ರಪ್ರ. ೩-೯೭ ಪ). ೨. ಅತಿಯಾದ ಆಸಕ್ತಿಯಿಲ್ಲದಿರುವ ; ತಲ್ಲೀನತೆ ಇಲ್ಲದಿರುವ. [ಸಂ.]

**ನಿರ್ವ್ಯಗ್ರತೆ** (ನಾ). ನಿಶ್ಚಿಂತೆ ; ನಿರ್ವ್ಯಾಕುಲತೆ : ಆಗ್ರಹಮಂ ಬಿಸುಟದುವೆ ನಗಾಗ್ರಣಿಯೆಂದಿದನೆ ನೋಡೆ ಬಲಗೊಳ್ವುವು ನಿರ್ವ್ಯಗ್ರತೆಯಿಂ ಚಂದ್ರಾದಿತ್ಯಗ್ರಹನಕ್ಷತ್ರತಾರಕಾನಿಕರಂಗಳ್ (ಆದಿಪು. ೨-೩೦). [ಸಂ. ನಿರ್ವ್ಯಗ್ರತಾ]

**ನಿರ್ವ್ಯಥನ** (ನಾ). ೧. ಕುಳಿ ; ಗುಳಿ ; ಕುಣಿ : "ನಿಮ್ನಂ . . . ನಿರ್ವ್ಯಥನಂ, ರಂಧ್ರಃ, ರೋಕಃ, ಕುಹರಃ, ದರಃ—ಈ ೧೫ ಕುಬಿಾ" (ಹಲಾಯು. ೧೦೩-೩) ; "ವಿವರಂ ಬಿಲಂ ಛಿದ್ರಮಂತರಂ ನಿರ್ವ್ಯಥನಂ . . . ಶ್ವಭ್ರಮೆಂದೆನಲು . . . ಗುಬಿಾಗಕ್ಕು ನಾಮಂ" (ಮಂಗರಾ. ೧೧೭-೨). ೨. ವ್ಯಸನದಿಂದ ಬಿಡುಗಡೆಯಾದುದು ; ನೋವು ಪರಿಹಾರವಾದುದು. ೩. ಅತ್ಯಧಿಕವಾದ ನೋವು ; ಯಾತನೆ. [ಸಂ.]

**ನಿರ್ವ್ಯಭಿಚಾರ** (ನಾ). ಅಪೋಹವಿಲ್ಲದಿರುವಿಕೆ; ತಪ್ಪದಿರುವಿಕೆ; ಸ್ಥಿರವಾಗಿರುವಿಕೆ : ಆಚಾರಂ ನಿಸದಾಗಿ ಸದ್ಗುಣಗಣಂ ಮುಂತಾಗಿ ಮಂತ್ರಕ್ರಿಯಾಲೋಚಂ ನಿರ್ವ್ಯಭಿಚಾರವಾಗಿ ಜಿನರಾಜಪ್ರಾಜ್ಯಸಾಮ್ರಾಜ್ಯದೊಳ್ . . . ಆಚಾರ್ಯರ್ ನಮಗೀವರಕ್ಕೆ ನಯನಿಕ್ಷೇಪಪ್ರಮಾಣಂಗಳಂ (ಆರ್ಧನೇ. ೧-೪). [ಸಂ.]

**ನಿರ್ವ್ಯಯ** (ಗು). ೧. ವ್ಯಯವಾಗದ ; ಅಕ್ಷಯವಾದ. (ನಾ). ೨. ಶಾಶ್ವತವಾದ ಸ್ಥಾನ ; ಮೋಕ್ಷ : ಜಯ ವಿಮಳಕೇವಳಾಕರ್ಣೋದಯಗಿರಿವರ ಜಯ ದಯಾರಸಾರ್ಣವ ಜಯ ನಿರ್ವ್ಯಯಲಕ್ಷ್ಮೀ ನಿಳಯಾಂಬುಜ. (ಚಂದ್ರಪ್ರ. ೭-೭). [ಸಂ.]

**ನಿರ್ವ್ಯಸನ** (ನಾ). ಚಿಂತೆಯಿಲ್ಲದಿರುವಿಕೆ ; ವ್ಯಸನವಿಲ್ಲದಿರುವಿಕೆ. [ಸಂ.]

**ನಿರ್ವ್ಯಸನಿ** (ನಾ). ವ್ಯಸನವಿಲ್ಲದವನು; ಸುಖಿ : ಇಂತೀ ಅಷ್ಟಭೋಗದೈಶ್ವರ್ಯದಲ್ಲಿಪ್ಪ ರಾಜಯೋಗಿ ಚರಲಿಂಗ ನಿಶ್ಚಿಂತ ನಿರ್ವಾಣಿ ನಿರಂಜನ ನಿರ್ಮಾಯ ನಿರ್ವ್ಯಸನಿ ಪರಮಜಂಗಮ (ಅಪಚಂ.೨೫೪-೧೧೭೨). [ಸಂ. ನಿರ್ವ್ಯಸನಿನ್]

**ನಿರ್ವ್ಯಾಕುಲ,** ನಿರ್ವ್ಯಾಕುಳ (ಗು). ೧. ದುಃಖವಿಲ್ಲದ; ಚಿಂತೆಯಿಲ್ಲದ. ೨. ಭೀತಿಯಿಲ್ಲದ; ಅಂಜಿಕೆಯಿಲ್ಲದ. (ನಾ). ೩. ದುಃಖವಿಲ್ಲದಿರುವುದು ; ನಿಶ್ಚಿಂತತೆ ; ಸಂತೋಷ : ಶೋಕಶತಾಕುಲಮುಂ ದುಃಖಾಕರಮುಮೆನಿಪ್ಪ ಮಾಯ್ದುಮತ್ತಾಯುಮನಿನ್ನೇಕೆಗಡ ಪಿಡಿದಪೆಂ ನಿರ್ವ್ಯಾಕುಲದಿಂ ಬಿಡುವೆನೆಂದು ಚಿಂತಿಸುವಿನೆಗಂ (ಕಾದಂಉ. ೭೦೯) ; ಅನಂತದರ್ಶನಮುಮವ್ಯಾಬಾಧಶೋಭಾಕರಾಕ್ಷರನಿರ್ವ್ಯಾಕುಲಮಪ್ಪನಂತಸುಖಮುಂ ಮೆಯ್ವೆತ್ತು ನಿನ್ನೊಳ್ಪರಂ ದೊರೆವೆತ್ತಿರ್ದುದು (ಸುಕುಮಾ. ೪-೫೨). ೪. ಅಂಜಿಕೆಯಿಲ್ಲದವನು ; ನಿರ್ಭೀತ : ಸಾಕು ಪೂರ್ವದ ರೂಪಿನಲಿ ನಿರ್ವ್ಯಾಕುಲನ ಮಾಡೆನಲು ಪವನಜನಾ ಕಪೀಶ್ವರ ನಗುತ ಮುನ್ನಿನ ರೂಪ ಕೈಕೊಂಡ (ಕುಪ್ಯಾಅ. ೧೧-೩೯). **ನಿರ್ವ್ಯಾಕುಳ** : ೧. ಪ್ರವೃತ್ತಪದಿಂದಮಲ್ಲದೆ ನಿರ್ವ್ಯಾಕುಳಭಾವತಪಮುಮಂ ತಳೆಯಂ ತಾಂ ನಿರ್ವ್ಯಾಜವಿಾತಂ (ಸುಕುಮಾ. ೩-೩೫). ೩. ಆ ಕಳಮಧಾತ್ರಿ ಕಣಿಶಕುಚಾಕಳಿತಪಯಃಪ್ರತಾನದಿಂ ಬಳಯಿಸೆ ನಿರ್ವ್ಯಾಕುಳಮೆನೆ ರಾಜಶುಕಾನೀಕಶಿಶುಪ್ರತತಿ ಬಳೆವುದುಚಿತಸ್ಥಿತಿಯಿಂ (ಚಂದ್ರಪ್ರ. ೧-೯೩). [ಸಂ.]

**ನಿರ್ವ್ಯಾಕುಳ** 'ನಿರ್ವ್ಯಾಕುಲ' ನೋ.

**ನಿರ್ವ್ಯಾಜ** (ಗು). ೧. ಕಪಟವಿಲ್ಲದ ; ಮೋಸವಿಲ್ಲದ. ೨. ನೆವವಿಲ್ಲದ. (ನಾ). ೩. ಕಪಟವಿಲ್ಲದಿರುವುದು; ನಿಷ್ಕಪಟತೆ : ಧರ್ಮರಾಜಂ ರಾಜರಾಜನಲ್ಲಿಗೆ ನಿರ್ವ್ಯಾಜದಿಂ ದಿತಿಜಕುಳವಿಜಯಿಯಪ್ಪ ಜಿತನನೆದೂತಕಾರ್ಯಕ್ಕಟ್ಟಿದೊಡಸುರವಿಜಯಿಯುಂ ಕತಿಪಯಪ್ರಯಾಣಂಗಳಿಂ ಮದಗಜೇಂದ್ರಪುರಮನೆಯ್ದಿ (ಪಂಪಭಾ. ೯-೨೬ ಪ). ೪. ಕಾರಣವಿಲ್ಲದುದು; ನೆಪವಿಲ್ಲದಿರುವುದು. ೫. ಮೋಸವಿಲ್ಲದಿರುವವನು ; ನಿಷ್ಕಪಟಿ. ೬. ನಿಸ್ಸಂದೇಹ ; ನಿಸ್ಸಂಶಯ : ಅಬಿಾಯಂ ಸೋದರನೆಂದು ಧರ್ಮತನಯಂ ನಿರ್ವ್ಯಾಜದಿಂ ನಿನ್ನನಾನಬಿಾವೆಂ (ಪಂಪಭಾ. ೧೩-೫) ; ಶಿವೆಯಂ . . . ಶಿಲಾಜಿತುವಂ ಲೋಹವುಮಂ ಸಣ್ಣಿಸಿ ತಿನೆ ಬೇಬಿಾವೇಬಿಾ ನಿರ್ವ್ಯಾಜದಿಂ ಪ್ರಮೇಹಂ ಕಿಡುಗುಂ (ಲೋಕೋಪ. ೯-೧೩೭) ; ರಾಜಮಂದಿರದೊಳಗೆ ನೀತಿಗಳೋಜೆಯಿಲ್ಲದ ಸಚಿವರಿಂ ನಿರ್ವ್ಯಾಜದಲಿ ಕೇಡಹುದು ತಪ್ಪದು ಲೋಕವಾರ್ತೆಯಿದು (ಕುಪ್ಯಾವಿ. ೪-೧೬). [ಸಂ.]

**ನಿರ್ವ್ಯಾಜಂ** (ಅ). ೧. ನಿಷ್ಕಾರಣವಾಗಿ; ಸುಮ್ಮನೆ : ಪ್ರವೃತ್ತಪದಿಂದಮಲ್ಲದೆ ನಿರ್ವ್ಯಾಕುಳಭಾವತಪಮುಮಂ ತಳೆಯಂ ತಾಂ ನಿರ್ವ್ಯಾಜಮಾತನೆಂದಾ ದಿವ್ಯಾವಧಿಬೋಧರಬಿಾದು ತಪಮಂ ಕೊಟ್ಟರ್ (ಸುಕುಮಾ. ೩-೩೫); ನಿರ್ವ್ಯಾಜಮನಗನೊರ್ವಂ ತೆಗಟ್ದನೆಂದಬಲೆಯನಿಂತು ಕಾರಡವಿಯೊಳ್ ಬಿಡುವರೇ ! (ರಾಮಾಶ್ವ. ೩೫-೨೯). ೨. ನಿಜವಾಗಿ ; ಯಥಾರ್ಥವಾಗಿ : ನಿನ್ನೀ ಲೀಲೆಗೆ ನಿರ್ವ್ಯಾಜಂ ಎದೆ ಒಲಿದಿಹುದೈ ಮುದವಾನುತಲೀಗ (ಗಣೇಶ. ೭೪-೧೬). [<ನಿರ್ವ್ಯಾಜ]

**ನಿರ್ವ್ಯಾಜತೆ** (ನಾ). ಕಪಟವಿಲ್ಲದಿರುವಿಕೆ; ಪ್ರಾಮಾಣಿಕತೆ : ಸೇಟರ ಮೋರೆಯ ಮೇಲಿನ ನಿರ್ವ್ಯಾಜತೆಯನ್ನು ನೋಡಿದರೆ ಇವರ ಬಿನ್ನಹವನ್ನು ಮನ್ನಿಸದಿರುವುದೇ ಅಪರಾಧವೆಂದೆನಿಸುವ ಹಾಗಿತ್ತು (ಸಸುಜೀ. ೨೯೮). [ಸಂ. ನಿರ್ವ್ಯಾಜತಾ]

**ನಿರ್ವ್ಯಾಜಶೌರ್ಯ** (ನಾ). ಸ್ವಾಭಾವಿಕ ಶೌರ್ಯ ; ಸಹಜವಾದ ಪರಾಕ್ರಮ: ಅಂತು ಪೊಗಟ್ದು ರಾಜರಾಜನ ನಿರ್ವ್ಯಾಜಶೌರ್ಯಕ್ಕೆ ಸಂಕರ್ಷಣನಾಶ್ಚರ್ಯಂಬಟ್ಟು (ಗದಾಯು. ೭-೬೦ ಪ). [ನಿರ್ವ್ಯಾಜ+ಶೌರ್ಯ]

**ನಿರ್ವ್ಯಾಜಸೇವೆ** (ನಾ). ನಿಷ್ಕಪಟವಾದ ಪರಿಚರ್ಯೆ ; ನಿಸ್ವಾರ್ಥ ಸೇವೆ : ಪಾಶ್ಚಾತ್ಯಪಂಡಿತಪಂಕ್ತಿಯೊಂದು ನಿರ್ವ್ಯಾಜಸೇವೆಯನ್ನು ಸಲ್ಲಿಸಿತು (ದ್ರಾವಿವಿ. ೧೬ ಹಿನ್ನೆಲೆ). [ನಿರ್ವ್ಯಾಜ+ಸೇವೆ$_1$]

**ನಿರ್ವ್ಯಾಜಸ್ನೇಹ** (ನಾ). ಅನಿಮಿತ್ತವಾದ ಸ್ನೇಹ ; ಸ್ವಾರ್ಥವಿಲ್ಲದ ಮಿತ್ರತ್ವ : ಒಂದೇ ಬೀಡಿಯನ್ನು ಪಾಲುಗಾರಿಕೆಯಿಂದ ಇವರು ಸೇದುತ್ತಾರೆಂದು ಕೇಳಿದ್ದೇನೆ. ಇದು ನಿರ್ವ್ಯಾಜಸ್ನೇಹವೆಂದು ನಾನು ಹೇಗೆ ನಂಬಲಿ ? (ದೇಕನ್ನ.೩೫). [ನಿರ್ವ್ಯಾಜ+ಸ್ನೇಹ]

**ನಿರ್ವ್ಯಾಧಿತ** (ಗು). ರೋಗವಿಲ್ಲದ; ನಿರೋಗವಾದ : ದಂಡಕಂಸಿಯರ ಮೆಯ್ಯ ತೊಗಲ್ ಪಾವಿನ ಪೆರೆ ಸುಲಿವಂತೆ ಸುಲಿದು ಪೋಗಿ ನಿರ್ವ್ಯಾಧಿತದೇಹರಾಗಿ ಮೆಯ್ಯ ತೇಜಂ ತೊಳಗುತ್ತಿರ್ದುದಂ ವಿಷ್ಣು ಕಂಡು ವ್ಯಾಧಿ ಕೆಟ್ಟುದೆಂದಱಿದು (ಪದ್ಮಾರಾ. ೧೭೨-೨). [ಸಂ.]

**ನಿರ್ವ್ಯಾಪಾರ** (ನಾ). ೧. (ಜಗತ್ತಿನ ಚಟುವಟಿಕೆಗಳಿಗೆ) ನಿಷ್ಕ್ರಿಯನಾದವನು. ೨. ಪರಮಾತ್ಮ : ಶ್ರೀಪಾರ್ವತೀನಾಥ ಕಾಪಾಲಕರತಳ ಸದಾಪಾವನಾಂಗ ನಿರ್ವ್ಯಾಪಾರ ಘನಮೇರು ಚಾಪಾಗಮಜ್ಞ ನಿರ್ಲೇಪಾತ್ಮ ಭೂವಿಷ್ಣು (ವೀಶೈಪು. ೭-೧-೧). [ಸಂ.]

**ನಿರ್ವ್ಯಾಪಾರಿ** (ನಾ). ಪ್ರಪಂಚವ್ಯವಹಾರದಲ್ಲಿ ಆಸಕ್ತಿಯಿಲ್ಲದಿರುವ ವ್ಯಕ್ತಿ ; ನಿಶ್ಚಿಂತ ; ವಿರಕ್ತ : ಶರಣ ಸರ್ವವ್ಯಾಪಾರಿಯಾದಡೆ ಕಿಱಿದೆಂಬರು ಶರಣ ನಿರ್ವ್ಯಾಪಾರಿಯಾದಡೆ ಹಿರಿದೆಂಬರು (ಅಖಂಡೇ. ೩೦೭-೮೯). [ಸಂ. ನಿರ್ವ್ಯಾಪಾರಿನ್]

**ನಿರ್ವ್ರಣ** (ಗು). ೧. ಗಾಯವಿಲ್ಲದ. ೨. ನಿರ್ದೋಷವಾದ; ಚೊಕ್ಕ : ಜಳಧಿಯೊಳಾದ ಮುತ್ತುಗಳವೇಂ ಪೊಸತಾದುವೆ ನಿನ್ನ ತೋಳ ಬಾಳೊಳೆ ಬಲಗರ್ವದಿಂ ತೆಗೆದುದಗ್ರವಿರೋಧಿಮದೇಭಮಸ್ತಕಸ್ಥಳಜಳರಾಶಿಯೊಳ್ ಬಳೆದ ನಿರ್ಮಳನಿರ್ವ್ರಣ ವೃತ್ತಮೌಕ್ತಿಕಾವಳಿಯುನೆತರ್ಪುದೆಂದು ನುಡಿದಟ್ಟುಱಿಯೊಳಾಱಿಸಿದಳ್ ನಿಜೇಶನಂ(ಪಂಪಭಾ.೧೦-೪೭). [ಸಂ.]

**ನಿರ್ಹರಣ** (ನಾ). ಹೋಗಲಾಡಿಸುವುದು; ನಾಶಮಾಡುವುದು : ಅಖಿಳವಿನತಜನಕರ್ಮಾಂಧಕಾರನಿರ್ಹರಣಸೂರಂ . . . ಸಲಹುಗನುದಿನಂ ಶ್ರೀಮಹೇಶಂ ಸದಾ ಕೈಲಾಸವಾಸಂ ಕೃಪಾಳು ನಂದಿಗಿರೀಶನು (ಭಕ್ತಾಚ. ೧-೧). [ಸಂ.]

**ನಿರ್ಹಾರ** (ನಾ). ೧. ಎಳೆದು ತೆಗೆಯುವುದು; ಹೊರದೆಗೆಯುವುದು : "ನಿರ್ಹಾರಃ, ಅಭ್ಯವಕರ್ಷಣಂ—೨ ಈಚೆಗೆ ತೆಗೆದುಹಾಕುವಿಕೆ, ಮೇಲಕ್ಕೆ ಎಳೆದು ಹಾಕುವಿಕೆ" (ಸಿದ್ಧಾಂತಿ. ೩೭೧). ೨. ಇಲ್ಲದಂತೆ ಮಾಡುವುದು ; ನಾಶ ; ಹಾಳು. ೩. ಮೂಲೋತ್ಪಾಟನ ; ಸರ್ವನಾಶ. [ಸಂ.]

**ನಿರ್ಹಾರಿ** (ನಾ). ೧. ಒಂದು ಬಗೆಯ ಸುಗಂಧ,—ಸುವಾಸನೆ : ೨. ಒಂದು ಬಗೆಯ ಸುಗಂಧದ್ರವ್ಯ : "ಸಮಾಕರ್ಷೀ, ನಿರ್ಹಾರೀ — ೨ ದೂರವಾಗಿ ವ್ಯಾಪಿಸುವ ಗಂಧವುಳ್ಳ ದ್ರವ್ಯದ ಹೆಸರುಗಳು" (ಸಿದ್ಧಾಂತಿ. ೪೭). [ಸಂ. ನಿರ್ಹಾರಿನ್]

**ನಿರ್ಹಾಸ** (ನಾ). ಅರಳದಿರುವಿಕೆ : ನಿರ್ಹಾಸಂ[ಪಾಠಾಂ. ನಿರಹಾಸಂ] ಕುಚಕಂಜಕುಟ್ಮಲಯುಗಂ ಮುಗ್ಧಾನನಂ ವರ್ಜಿತಾಂತರ್ಹಾಸಂ ಕುಸುಮಚ್ಯುತಂ ಕಚಭರಂ (ಅರ್ಧನೇ. ೧-೭೨). [ಸಂ.]

**ನಿರ್ಹೇತುಕ** (ನಾ). ಕಾರಣವಿಲ್ಲದುದು : ಚಿಂತಾತರಳತ್ವಮಂ ತೊಱೆವುದೆಂತದಱಿಂ ತರಳಾಯತಾಕ್ಷಿ ನಿರ್ಹೇತುಕಮಪ್ಪ ಖೇದಮನಿದಲ್ತು ಕೃಪಾವತಿಯರ್ಗೆ ಚೇಷ್ಟಿತಂ (ಚಂದ್ರಪು. ೩-೭೫); ಉಪನಿಷತ್ತುಗಳಿಂದಲೇ ಬೌದ್ಧದರ್ಶನವು ಪ್ರಚೋದಿತವಾಗಿರಬೇಕು ಎಂಬ ಮಾತು ನಿರ್ಹೇತುಕವಲ್ಲ (ಭಾರದ. ೧೨೧). [ಸಂ.]

**ನಿರ್ಹ್ರಾದ** (ನಾ). ಶಬ್ದ ; ಸದ್ದು ; ಧ್ವನಿ : "ಶಬ್ದಃ . . . ನಿರ್ಹ್ರಾದಃ . . . ವಿರಾವಃ—೧೭ ಧ್ವನಿಯ ಹೆಸರುಗಳು" (ಸಿದ್ಧಾಂತಿ. ೫೭). [ಸಂ.]

**ನಿಲ್**, ನಿಲು₁, ನಿಲ್ಲು (ಕ್ರಿ). ನಿಂತ, ನಿಂದ, ನಿತ್ತ, ನಿಲ್ತ, ನಿಲ್ದ (ಭೂತಕೃ), ನಿಂತು, ನಿಂದು, ನಿಲ್ತು (ಭೂತನ್ಯೂ). ೧. ಚಲಿಸದಿರು ; ನಡೆಯದಿರು ; ಮುಂದುವರಿಯದಿರು : "ನಿಲ್—ಗತಿಮುಕ್ತೌ" (ಶಮಧಾ); ನಿಲ್ತೊಳಂ ಬರ್ಪುದು (ಕವಿರಾ.೧-೬೨); ಉಗ್ರಸೂತಹಯಸಂಘಾತಂಗಳಂ ತಿಣ್ಣಮೆಚ್ಚಿದಿರೊಳ್ ನಿಲ್ಲಿದಿರೋಡು ಸತ್ತೆ (ಪಂಪಭಾ.೧೨-೨೨); ನೊಂದವರು ನಿಲಿ ಸ್ವಾಮಿಕಾರ್ಯಕೆ ಹಿಂದುಗಳೆವರು ಮರಳಿ (ಕುವ್ಯಾಕ. ೮-೨೯). ೨. ಕಾಲೂರಿ ಇರು; ಸ್ಥಿತವಾಗಿರು : ಮುನ್ದೆ ನಿನ್ದು ಕೊಟ್ಟಾ ತೊಱದು (ಶಾಇಇ. XI-i, ೧೧-೧೭ ; 865) ; ಅನಂಗಜಂಗಮಲತೆವೊಲ್ ನಿಲ್ತು ಜವನಿಕೆಯ ಮಱೆಯೊಳ್ ಪೋಲ್ತಳವಳ್ ಮುಗಿಲ ಮಱೆಯ ವಿದ್ಯುಲ್ಲತೆಯಂ (ಆದಿಪು. ೯-೨೦); ಕಟ್ಟದಿರೊಳ್ ನಿಂದನಂ ಪಿಂಗಳಕಂ ಕಂಡು (ಪಂಚತಂ. ೩೩-೯) ; ಊರೊಳ್ ಕಂಡು ನಿಂದಿರ್ದನಿಂದಿರ್ದಲ್ಲಿಯೆ ಕುಳ್ಳಿರ್ದಕುಳ್ಳಿರ್ದಲ್ಲಿಯೆ ಕಂಪಿತರಂತೆ ಬಿಟ್ಟೋಡದಿರೆ ಸೂಳೆಗೇರಿಯಂ ಪೊಕ್ಕು (ಧರ್ಮಾಮೃ. ೨-೩೯). ೩. ಇರು ; ಉಳಿ : ಈಶಾನದ ಮುಕೂಡಲೊಳ್ ಕೂಡಿ ನಿನ್ದತ್ತು (ಇಅ. XII, ೧೩-೨೦; 735) ; ದಿವಿಜನೋ ಫಣಿನಾಯಕನೋ ಮನೋಭವನಿವಂ ಕರಮೊಪ್ಪಿದನೆಂಬುದಂ ಕವಿಗಳಿಟ್ಟ ವಿಶಂಕೆಯ ಪಾಟಿಯಂ ತವಿಸಿ ನಿಲ್ಕೆ ಮನೋಹರಕಾವ್ಯದೊಳ್ (ಕವಿಾ. ೧-೧೪೦) ; ತಪದಿಂ ಸ್ಮರರಿಪು ದೇಹಾರ್ಧಪಥದೊಳಾ ಗೌರಿ ನಿಂದ ಪೊಲ್ಮೆಲ್ವೆ ನೀಂ ತಪದಿಂದನಿಯನ ತೊಡೆಯೊಳ್ (ಕಾದಂಉ. ೬೨೬) ; ಕೊಂಬಿನ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನವು ನಿಂದಲ್ಲಿ ನಿಲ್ಲಲೀಯದೆನ್ನ ಮನವು (ಬಸವ. ೩೨); ಇಲ್ಲಿ ನಿಲ್ಲಜರ್ಮನ ತಪೋವನಕಿಲ್ಲಿ ನೆಲೆ (ಕುವ್ಯಾಅ. ೪-೪೦). ೪. ಚಿರಸ್ಥಾಯಿಯಾಗಿರು ; ಸ್ಥಿರವಾಗಿರು ; ಶಾಶ್ವತವಾಗಿ ನೆಲಸು : ಶ್ರೀರೂಪಲೀಲಾಧನವಿಭವಮಹಾರಾಶಿಗಳ್ನಿಲ್ಲವಾಗ್ಗಂ (ಎಕ.II, ೮೮-೨; ಸು. 700) ; ಆತಂ ಭರತೇಶ್ವರನಿಂತೀ ತೆಱದಿಂ ನೆಗಟ್ದ ತನ್ನ ಕೀರ್ತಿಯನೀ ವಿಖ್ಯಾತವೃಷಭಾದ್ರಿಯೊಳ್ ಸುರಗೀತಯಶಂ ನಿಱಿಸಿದಂ ನೆಲಂ ನಿಲ್ವಿನೆಗಂ (ಆದಿಪು. ೧೩-೭೭) ; ನಿಲ್ವೊಡೆ ಗುಣಂ ನಿಲ್ಕುಂ ಪಣಂ ನಿಲ್ಕುಮೇ (ಅಜಿಪು. ೧-೯೧) ; ಮೊಗದೊಳ್ ವಾಗ್ವಧು ಸಂತತಮಗಲದೆ ನಿಲೆ (ಸಮಪ. ೧-೨೦) ; ಪಾಲಿಸಮ್ಮ ಮುದ್ದು ಶಾರದೆ ಎನ್ನ ನಾಲಿಗೆಯಲಿ ನಿಲ್ಲಬಾರದೆ (ಪುರಂದ. ೧-೧೯೦ ಪಲ್ಲವಿ). ೫. ತಂಗು ; ಇಳಿದುಕೊಳ್ಳು : ತಡೆದಿಲ್ಲಿ ನಿಂದೆನಪ್ಪೊಡೆ ಮಡಿವಾದಪುದುಱಿವೆನಪ್ಪೊಡೆಲ್ಲಿಡೆಮುಂದೊಂದಡಿಯುಂ ತೆಱಪಱವಿಲ್ಲೀಯೆಡೆಗಾವುದುಪಾಯಂ (ಧರ್ಮಾಮೃ. ೬-೯೧) ; ಭೂತಂಗಳಾವಾಸದೊಳ್ ಸಲೆ ಬಲ್ಲರ್ ನಿಲೆಸಲ್ಲದೈ (ಸೋಮೇಶ. ೧೫). ೬. ಭಿಕ್ಷಾಸ್ವೀಕಾರಕ್ಕಾಗಿ ಸ್ವಲ್ಪ ಕಾಲ ಇರು,—ತಡೆ : ಧರ್ಮಧರಸಾಗರಸೇನರೆಂಬ ಗಗನಚಾರಣರ್ ಕಾಂತಾರಚರ್ಯಾಮಾರ್ಗದೊಳ್ ತನ್ಮಾವಾಸಕ್ಕೆ ಬರ್ಪರಂ ಶ್ರೀಮತಿಯುಂ ತಾನುಂ ಕಂಡು ಸಸಂಭ್ರಮಂ ಬೆರಸಿದಿರಂ ನಡೆದು ಬದ್ಧಾಂಜಳಿಪುಟಘಟಿತನಿಟಿಲರಾಗಿ ನಿಲ್ಕೆಂದು ನಿಲಿಸಿ (ಆದಿಪು. ೪-೯೫ ವ). ೭. ಎದುರಿಸು ; ಪ್ರತಿಭಟಿಸು ; ಹೋರಾಡು : ಕದನದೊಳಿದಿರಂ ನಿಮಿಱಿ ಮಾಱಾಂತು ನಿಂದಾಂತರಿಭೂಪರ್ ಭಸ್ಮಮಾದರ್ (ಕಾವ್ಯಸಾ. ೨೧೫ ಶೂದ್ರಕ) ; ಬೂತುಗನುಂ ಮನಾಲರಂ ತನ್ನ ಮುನ್ದೆ ನಿನ್ದಿಱಿದುದಕ್ಕೆ ಮೆಚ್ಚಿ ಆತುಕೂರ್ಪ್ಪನ್ನೆರಡುಂ ಬೆಳ್ವೊಲದ ಕಾದಿಯೂರಮುಂ ಬಾಳ್ಗೆಮೆಚ್ಚುಗೊಟ್ಟ (ಎಕ. III, ಮಂಡ್ಯ. ೪೧-೨೨ ; 950) ; ನಿಲಲುಂ ನೂಂಕಲುಮರಿಯಂ ಗೆಲಲುಂ ಪೆಱರೊಳರೆ ಕರ್ಣನಲ್ಲದೆ (ಗದಾಯು. ೩-೬೪) ; ಮರುಳಿಲ್ಲೆ ಹನುಮಂತ ದಾನವನಱಿತು ಮಾಡುವುದೇನು ಮರ್ಮವನೊರೆದು ಮಾಡುವದೇನು ನಿತ್ತರೆ ಕೊಲುವೆ ಸಮರದಲಿ (ತೊರಾ. ೧೭-೯). ೮. ಅಣಿಯಾಗು; ಸಿದ್ಧವಾಗು : ಅವರೊಳಗಲಕೆ

ನಿಂದ ರಿಪುಗಳ ಜವನ ಬೋನವ ಮಾಡದಿದ್ದರೆ . . . ದಿವಿಜಪತಿ ತನಯಂಗೆ ತಾ ಜನಿಸಿದವನಲ್ಲ (ಕುಮಾರವ್ಯಾಸ ದ್ರೋ. ೪-೩೯). **೯.** ತೊಡಗು ; ಆರಂಭಿಸು : ಮುಂತೆ ಕಿನ್ನರರು ನವರಸದಿ ಪಾಡಲ್ಕಾಗ ನಂತರಂ ಭೃಂಗೀಶ ನರ್ತನಕೆ ನಿಂದಾಗ ಹೊಸಪರಿಯ ಗತಿಗಳಂ ನಟಿಸಿ ತೋಱುತ್ತಮಿರೆ (ಬಸರ. ೧-೨೪). **೧೦.** ಕಾಯು ; ಎದುರು ನೋಡು : ಇರ್ಬರೊಳೊರ್ಬ ಮುನಿಕುಮಾರಂ ಭೂಭೃನ್ನಿಳಯದ ಬಾಗಿಲೊಳಕ್ಷಾವಳಿಯಂ ಬೇಡಲ್ಕೆ ಬಂದು ನಿಂದಿರ್ದಪ್ಪಂ (ಕಾದಂಪೂ. ೮೧೧) ; ಇದಾವ ಗಹನವಿಾಗಳಾಂ ಪೋಗಿ ಬರ್ಪನ್ನೆವರಮಿಲ್ಲಿಯೇ ನಿಲ್ಲಿಮೆಂದು ವಾಯುವೇಗದಿಂ ವಾಯಸಂ ಪೋಗಿ ಬಂದು (ಪಂಚತಂ. ೪೦-೨೨). **೧೧.** ಗೋಚರವಾಗು ; ಕಾಣಿಸಿಕೊಳ್ಳು : ಇದಿರೊಳ್ ನಿಂದೊಡೆ ವಜ್ರಿ ಸೈರಿಸನಿರಲ್ವೇಡೆಮ್ಮೊಳೊಳ್ಪೊಕ್ಕು ನಿಲ್ವುದು ನೀಂ (ಪಂಪಭಾ. ೪-೨೪). **೧೨.** ಸೈರಿಸು ; ನಿತ್ತರಿಸು ; ಸಹಿಸು : ತಲೆಯಂ ಬಲು ದಡಿಗರ್ಕಿಟಿಕಿ ನಿಲಲಾಱದೆ ಸುಂಟೆದಿಂದ ಕೋಡಗದಂತುಮ್ಮಳಿಸಿ (ಧರ್ಮಾಮೃ. ೧-೧೪೧) ; ಗಿರಿಯುಂ ಕರಿಯುಂ ನಿಲ್ಲವು ಪವಿಮುಖದ ಕೋಟ್ಲಮೂತನ ಬಾಳ್ಗಂ (ಶಮದ. ೨೪೪ ಪ್ರಯೋ). **೧೩.** ತಡೆ : ಕಾಯ್ದುಕೊಳ್ಳೈ ಕೌರವಾನುಜ ಹೊಯ್ದುಹೋಗಲುಬಹುದೆ ಹರನಡ ಹಾಯ್ದಡೆಯು ಗೆಲುವೆನು ಕಣಾ ನಿಲ್ಲೆನುತ ತೆಗೆದೆಸಲು (ಕುಮಾರವ್ಯಾಸ ದ್ರೋ. ೫-೫೦). **೧೪.** ತಾಳು ; ಧರಿಸು ; ಪಡೆ : ಕೂಡಲಸಂಗನ ಶರಣರು ಬಂದ ಭರವ ನಿಂದ ನಿಲವ ಅನಂಗಸಂಗಿಗಳೆತ್ತ ಬಲ್ಲರು (ಬಸವ. ೧೨೫). **೧೫.** ಸುಮ್ಮನಿರು ; ತಟಸ್ಥವಾಗು : ಇಂದೆ ಕಡಂಗಿ ಸಾರ್ಚಿ ಬಿಟ್ಟುಸಿರದೆ ನಿಲ್ವ ಕಾರಣಮದಾವುದೊ ನೆಟ್ಟನೆ ನಾಳೆ ಕಾಳಗಂ (ಪಂಪಭಾ. ೧೦-೩೨) ; ಗುರುಗಳಾಡಿದ ಭಾಷೆ ಪರಬಲದರಸ ಕಟ್ಟುವ ದದು ನಿಲಲಿ . . . ಎಂಬಬ್ಬರದೊಳಗೆ ಭಗದತ್ತ ಮೇಳೈಸಿದನು ನಿಜಗಜವ (ಕುಮಾರವ್ಯಾಸ ದ್ರೋ. ೩-೧). **೧೬.** ಅಲುಗಾಡದೆ ಇರು ; ಇದ್ದಂತೆ ಇರು ; ನಿಶ್ಚಲವಾಗಿರು : ಬೆಳ್ಗೊಡೆ ನೋಡೆ ನೋಡೆ ನಿಂದುರಿದುವು ಸಾಲಭಂಜಿಕೆಗಳಟ್ಟುವು ವೈರಿನರೇಂದ್ರಗೇಹದೊಳ್ (ಪಂಪಭಾ. ೬-೨೯) ; ಎಪ್ಪಿಸಿದುದ್ಧತಿಯೊಳುದ್ದಂ ಬಂದು ದಳ್ಳಿಂದು ನಿಂದುರಿದಂದಿನೇಟಿನೆಯ ದಿವಸಕ್ಕೆ (ಸುಕುಮಾ.೫-೧೦ ವ); ಉದಕಕ್ಕೆ ಉರಿ ಹುಟ್ಟಿ ಮತ್ತಾ ಉದಕ ವಱಿಸುವದ ಕಂಡೆ ಮಡಕೆ ನಿಂದುರಿದು ಅಕ್ಕಿ ಉಳಿಯಿತ್ತು (ಮೋಳಿಮಾ. ೧೯೬-೭೩೧). **೧೭.** ಸಮಾಧಾನದಿಂದಿರು ; ಶಾಂತಿಯಿಂದಿರು ; ನೆಮ್ಮದಿಯಿಂದಿರು : ಪೊಸತೆನೆ ಪೇಟ್ವ ತಿರ್ದುವಱಿವೆನ್ನೊಳೆ ಸನ್ನಿದ ಮಾದೊಡಂ ಕರಂ ರಸಿಕರಿನೆಯ್ದೆ ತಿರ್ದಿಸಿದೊಡಲ್ಲದೆ ನಿಲ್ಲದು ಚಿತ್ತಂ (ಜಗವಿ.೧-೧೫). **೧೮.** ತಲ್ಲೀನವಾಗು: ಭಾವ ನಿರ್ಭಾವದೊಳ್ನಿಂದು ನೋಟ ನಟ್ಟು . . . ಅಱಿವು ಕಂಗೊಂಡು ತಾನೆಂಬುದು ತರಹರಮಾಗಿ (ಶೂನ್ಯಸಂ. ೧೦-೨೯). **೧೯.** ಬದ್ಧವಾಗಿರು ; ಅಂಟಿಕೊಂಡಿರು : ಬಂಧಿರೇ ಮಾಚಯ್ಯ ಕುಳ್ಳಿರಿ ಸಂದ ಶರಣನ ಹಿಂದೆ ಬಸವಂ ಸಂದ ಪರಿಯಂ ನೋಡು ಭಾಷೆಗೆ ನಿಂದು ಸಂದನಲಾ (ಬಸವು. ೩೭-೨೭). **೨೦.** ಹೆಸರುವಾಸಿಯಾಗು ; ಪ್ರಸಿದ್ಧಿಯಾಗು : ಮುಂದೆ ಅವ ಸಾಲೆ ಸರ್ವಜ್ಞನೆಂದೆನಿಸಿ ನಿಂದವನು ನಾನೆ ಸರ್ವಜ್ಞ (ಸರ್ವಜ್ಞ. ೪). **೨೧.** (ಹೆಚ್ಚುಕಾಲ) ಉಳಿದಿರು : ಚೆಲ್ವಹ ಮೃದುವಪ್ಪ ಗಂಧಂ ನಿಲ್ವ ಕೋಮಲವಾದ ನುಣ್ಪಂ ತಾಳ್ವ ಶೋಭಿತವೆನಿಪ ಛಿದ್ರಿತವಾಗಿರದಖಂಡ ಬಿಲ್ವಪತ್ರೆಯನೆಯ್ದೆ ಕೊಯ್ದು (ಬಸವು. ೪೩-೨೭). **೨೨.** ನೆರವೇರು ; ಆಗು : ನಿಜಕೂಟಾಗ್ರದೊಳ್ ಪಾಯ್ವ ಗಂಗಾಜಲದಿಂ ಮೂರ್ಧಾಭಿಷೇಕೋನ್ನತಿ ನಿಲೆ . . . ಚಕ್ರೇಶತ್ವಮಂ ತಾಳ್ದಿದುದಖಿಳ ಧರಾರಮ್ಯಹೈಮಾಚಳೇಂದ್ರಂ (ಪಂಪಭಾ.೪-೧೪). **೨೩.** ಕೈಗೊಳ್ಳು ; ಗ್ರಹಿಸು : ಅಂತು ಕುಂಭಸಂಭವನ ಬೆಸನಂ ಪಿಡಿದು ಅಶ್ವಮೇಧಮಂ ಕೈಗೊಂಡ ರಾಘವಂ ಸ್ವರ್ಣಸೀತಾಸಮೇತಂ ದೀಕ್ಷೆನಿಂದಂ (ರಾಮಾಶ್ವ. ೪೬-೨೫). **೨೪.** ಜೀವಿಸು ; ಬದುಕು : ಸುರಲೋಕಭ್ರಷ್ಟನೆಂ ಮರ್ತ್ಯರೊಳುದಯಿಪ ತಿರ್ಯಕ್ತ್ವದೊಳ್ ನಿಲ್ವ ಚಂಡಾಲರ ಕಯ್ಯೊಳ್ ಬೀಟ್ವ ತೋಲ್ ಪಂಜರದ ಪಡಿಯೊಳ್ ನಿಲ್ವ ದುರ್ವಾರದುಃಖೋತ್ಕರ ಮೆಲ್ಲಂ ನೋಡಲೆನ್ನಿಂದ್ರಿಯನಿವಹದ ದೋಷಂ ದಲ್ (ಕಾದಂಬ. ೭೫೪) ; ಬಾಲಕರಂತೆ ಕಂದಮೂಲಫಲಂಗಳಂ ಪೆಱಿರ್ ತಂದಿಕ್ಕೆ ತಿಂದಾನಂದಮನಸ್ಕರಾಗಿ ನಿಂದ ತಪೋಧನರುಮಂ (ಪಂಚತಂ. ೧೧೯-೧೧). **೨೫.** ನೆಡು ; ನಿಲ್ಲಿಸು : ಇದಂ ಕಿಡಿಪ್ಪೋನ್ ಬಾರಣಾಸಿಯನಱಿದ ಪಞ್ಚಮಹಾಪಾತಕನಕ್ಕುಂ ಶ್ರೀರಾಜಮಲ್ಲ ಪೆರ್ಮ್ಮಾನಡಿ ರಾಜ್ಯಂಗೆಯೆ ನಿಲ್ಗೋದು (ಎಕ. IX, ಬೆಂಗಳೂ. ೪೨-೪ ; ಸು. 820). **ನಿಲು**[1] : **೧.** ನಿಲು ನಿಲ್ಲೆಲವೊ ಹೋಗದಿರೆನುತ ಬೆಂಬತ್ತಿದನು ಕಲಿಕರ್ಣ (ಕುಮಾರವ್ಯಾಸ ಕ.೧೪-೩೫); ಉರಿಯುದಕ ಮಾರುತವು ಉರಗ ಹರಿನಾಗವು ಗುರುವಾಜ್ಞೆಗಂಜಿ ನಿಲುವವು ಇದನು ನರರಱಿಯದಲೆ ಕೆಡುಗು (ಸರ್ವಜ್ಞ.೫೪). **೩.** ಹೊಂಗಱಿಯ ಗಾಳಿಯ ಸರಳ ಸೋನೆಯಲಿ ನಿಲುವ ಹಂಸವ್ಯೂಹವೆಲ್ಲಿಯದು (ಕುಮಾರವ್ಯಾಸ ದ್ರೋ. ೧೦-೨೦) ; ನೆಟ್ಟನೋರ್ವನೆ ಬೈಗಿನಿಂ ರವಿ ಪುಟ್ಟುವನ್ನೆಗ ಜಾನ ಜಪವಳವಟ್ಟು ನಿಲುವಾ ಪಾಲಕೀರ್ತಿನಮೋಸ್ತು[ಗೆ]ಱಗುವೆನು (ಸಾಳ್ವಭಾ. ೧-೨೨). **೪.** ದೇಹ ಕೀರ್ತಿಗಳೊಳಗೆ ನಿಲುವುದು ದೇಹವೋ ಕೀರ್ತಿಯೊ ಮುರಾಂತಕ ಬೇಹುದನು ಬೆಸಸಿದಡೆ ಮಾಡೆನು (ಕುಮಾರವ್ಯಾಸ ದ್ರೋ. ೧೯-೪೩) ; ನಿಲ್ಲಬೇಕಯ್ಯಾ ನೀ ಮಲ್ಲಮರ್ದನ ಸಿರಿವಲ್ಲಭ ಎನ್ನ ಹೃದಯದಲ್ಲಿ ಸತತ (ಪುರಂದ. ಧಾ. ೧-೧೧೭ ಪಲ್ಲವಿ). **೫.** ಅಷ್ಟದಿಕ್ಪಾಳರು ತಮ್ಮಯ ಪಟ್ಟಣಗಳಿಗಟ್ಟುಳಿಯಾಗೆ ರಕ್ಕಸರ ನೆಟ್ಟನೆ ನಿಲುವ ತಾಣಗಳೆನೆ ಕೊತ್ತಳ ಕಟ್ಟೆಸಕದೊಳೊಪ್ಪಿದುವು (ಕಂಸವಿ. ೨-೬೨). **೮.** ಭುಜಶಿಥಿಲಸಾಹಸರೇನ ನಿಲುವರು ದ್ರೋಣನುರವಣೆಗೆ (ಕುಮಾರವ್ಯಾಸ ದ್ರೋ. ೨-೩೧). **೧೫.** ಏನಿದೇನೈ ಭೀಮ ನಿಲು ಯಮಸೂನು ಶಿವಶಿವ ಗುರುವಲಾ ನಮಗೆ (ಕುಮಾರವ್ಯಾಸ. ೧೪-೮೯). **೧೮.** ಸರಕುದೆಗೆದುದು ಬೊಮ್ಮಚರಿಯದ ಬೆರಳ ಜಪಗಳ ತಾಪಸರು ತರಹರಿಸಿ ನಿಲುವವನಾವನೈ ತರುಣೀಜನಂಗಳಲಿ (ತೊರಂರಾ. ೧-೫-೩೬). **ನಿಲ್ಲು :** **೧.** ಬಳ್ಳದ ಬಾಯಂತೆ ಒಂದೇ ಮನವ ಮಾಡಿ ನಿಲ್ಲೆಂದು ನಿಲ್ಲಿಸಯ್ಯಾ (ಬಸವ. ೭೩೫) ; ಇನ್ನೆಲ್ಲಿ ಹೊಗುವೈ ಕಂದ ಕುಂತಿಯ ಜಠರವಲ್ಲವಲೆ ನಿಲ್ಲು ನಿಲ್ಲೆನುತೈದಿ ಬರಲಲ್ಲಿ ಮಱುಗಿತು ಸೇನೆ ಸಾಹಸಮಲ್ಲನಡಹಾಯಿದನು (ಕುಮಾರವ್ಯಾಸ ದ್ರೋ. ೨-೪೭); ನಡೆ ಪಜ್ಜೆವಿಡಿ ಪೋಗು ತಡೆ ನಿಲ್ಲು ಜಡಿ ಬೊಬ್ಬೆಗುಡು . . . ಕೆಡಪೆಂಬ ನುಡಿಗಳಡಿಗಡಿಗೆ ಕಿವಿಗಿಡಿದುದು (ಜೈಮಿಭಾ. ೨೮-೪೫) ; ನಿಲ್ಲು, ನೋಡು, ಕಾಣ್ ! ಗಮನಿಸು, ಬಾಗು . . . ಧ್ಯಾನಿಸು ! ಒಂದಾಗು ! (ಅನಿಕೇ. ೧೮-೯). **೨.** ಕಾಲನಡ್ಡಲುವೊಡ್ಡಿ ನಿಲ್ಲು[ಪಾಠಾಂ.ಲು]ತ ಜೋಲಿ ನಡೆವುತ ಕೊಡಲಿ ಗಡಿಗೆಯು ಕೋಲುವಿಡಿದಾಡಿನ ಮಱಿಗಳಂ ಕೌಂಕುಳೊಳಗಮರ್ಚಿ (ಬಸವು. ೨೦-೧೩) ; ನಿಲ್ಲುವ ನಿಱಿವಸನವ ಮೆಟ್ಟಿ ನಲಿದಾಡಿ ಕೊಲ್ಲುವ ಪುಟ್ಟ ಕೈಗಳಲಿ ಜೊಲ್ಲು ಸುರಿವ ಮುದ್ದುಮೊಗದಲ್ಲಿ ನಗೆಯಾಂತು ಸೊಲ್ಲಿಸುವನು ತೊಡಳ್ನುಡಿಯ (ಮೋಹತ. ೧೭-೬೯). **೪.** ದುರ್ಲಭವು ಮಾನುಷಶರೀರವು ನಿಲ್ಲದೀ ಕ್ಷಣದಲ್ಲಿ ಕೆಡುವುದು (ನಿಭಾಗ. ೧೧-೨-೩೩). **೧೦.** ಗಣಿಸದದನು, ತರುವೆ, ನಿಲ್ಲು ; ಮೌನದಿಂದೆ ಮನವ ಗೆಲ್ಲು, ಹೇ ಸ್ವತಂತ್ರವಶಮತಿ ! (ಅನಿಕೇ. ೧೭-೫).

ನಿಂತ ಕಾಲ ಮೇಲೆ = ಆಗಿಂದಾಗಲೆ ; ಇದ್ದುದಿದ್ದ ಹಾಗೆ ; ಕೂಡಲೆ : ಈಗ ನಿಂತ ಕಾಲ ಮೇಲೆ ಈ ವಿಷಯದ ಚರ್ಚೆಯಾಗಬೇಕೆ ? (ಮೂರುದಾ. ೩೭); ಯಾವಳಾದರೂ ಹುಡಿಗೆ ವಿನಾಕಾರಣ ನಿಂತ ಕಾಲಮೇಲೆ ನನ್ನನ್ನೇಕೆ ಮದುವೆಯಾಗಬೇಕೋ ನನಗೆ ತಿಳಿಯದು (ಇಪ್ಪಕ. ೪೭೭).

**ನಿಂತ ಪಟ್ಟು** = ನಿಂತ ಸ್ಥಿತಿ : ಈಗಿಂದೀಗಲೇ ನಿಂತ ಪಟ್ಟನ ಮೇಲೆಯೇ ನಮಗೆ ಪ್ರಾಂತವನ್ನು ಕೊಡಲೇಬೇಕು (ಹಸ್ನೊಂದ.೧೦೧). **ನಿಂತು ಹೋಗು** = ೧. ಬರದಿರು : ಬೆಳಗ್ಗೆಯಿಂದ ನೀರು ನಿಂತುಹೋಗಿ ಬಹಳ ತೊಂದರೆಯಾಗಿದೆ (ರೂಢಿ). ೨. ನಿಲ್ಲು ; ಚಲಿಸದಿರು ; ಸ್ಥಗಿತಗೊಳ್ಳು : ಗಡಿಯಾರ ನಿಂತು ಹೋಗಿದೆ (ರೂಢಿ). ೩. ಫಲ ಬಿಡದಿರು : ನಮ್ಮ ತೋಟದ ಮಾವಿನ ಮರದಲ್ಲಿ ಕಾಯಿ ಬಿಡುವುದು ನಿಂತು ಹೋಗಿದೆ (ರೂಢಿ). ೪. ಸಂಚಾರನಿಯಂತ್ರಣಕ್ಕಾಗಿ ನಿಂತು ಮುಂದೆ ಹೋಗು : ರಸ್ತೆಗಳಲ್ಲಿ 'ನಿಂತು ಹೋಗಿ' ಎಂಬ ಫಲಕವಿದ್ದರೂ ಅದರಂತೆ ನಡೆಯುವವರು ಬಹಳ ಕಡಮೆ ಜನ (ರೂಢಿ). **ನಿಂದಿರಿಕೆ, ನಿತ್ತಿರಿಕೆ** = ನಿಂತ ನಿಲುವು : ಅರಸ ಹಿಡಿಯಲಿ ದಾನವರು ನಿಂದಿರಿಕೆಯಲಿ ನುಂಗಲಿ ಕೃತಾರ್ಥರು ಧರೆಯೊಳಾವೆಂದೊದಱಿದರು ಮಾದ್ರೀಕುಮಾರಕರು (ಕುವ್ಯಾಅ. ೯-೨) ; ನಿನ್ನನು ನಿಂದಿರಿಕೆಯಲಿ ಸುಟ್ಟುರುಹುವೆನು (ನಿಭಾಗ. ೯-೧೩-೧೦) ; ಧರ್ಮಜಂ ಶೀಘ್ರದಿಂದರ್ಜುನನ ನಿತ್ತಿರಿಕೆಯಿಂ ಕಳುಪೆ (ತುರಂಗ. ೩೯-೧೦). **ನಿಂದಿರಿಸು** = ನಿಲ್ಲಿಸು ; ಇರುವಂತೆ ಮಾಡು : ವೃದ್ಧಮಾಹೇಶ್ವರನಂ ಮುತ್ತಿಕೊಂಡೆತ್ತಲನುವಾಗಿ ಮೆಲ್ಲನೆ ನೆಗಪಿ ನಿಂದಿರಿಸಲ್ (ನಂಬಿರ. ೬-೪೪) ; ಭವಿಷ್ಯದತ್ತನಂ ಬರಿಸಿ ಸಭಾಜನದ ಮುಂದೆ ನಿಂದಿರಿಸಲ್ (ಪುಣ್ಯಾಸ್ರ. ೪-೧೩ ಪ) ; ಆಂದಿನಿರುಳೋಲಗ ದೊಳವನನು ಹಿಂದೆ ಸಿಕ್ಕಿದ ಶುಕನನಿಬ್ಬರ ನಿಂದಿರಿಸಿದರು ಹಿಡಿದು ಬಳಿಯಲಿ ರಾಘವೇಶ್ವರನ (ತೊರರಾ. ೬-೬-೨೮); ಮುಂದೇನೂ ಮಾತನಾಡಲಾಗದೆ ಅವನು ಅರ್ಧಕ್ಕೆ ನಿಂದಿರಿಸಿದ (ಎರಸೆ. ೭೫). **ನಿಂದಿರು** = ನಿಲ್ಲು ; ಚಲಿಸದಿರು : ಅಹಗೆ ಹೋಗದೆ ನಿಂದಿರೆನುತವಗಡಿಸಿಯಾತನು ತನ್ನ ಕರವಾಳ ಮುಂದೆ ಕೊರಳಿಗೆ ಮೋಹಿಸಲು (ಬಸವು. ೨೭-೩೧). **ನಿಂದು ನಿತ್ತರಿಸು** = ಸಮರ್ಥವಾಗಿ ಎದುರಿಸು : ಒತ್ತಂಬದಿಂದ ರಿಪುಭೂವರನ ಪಡೆ ನಿಂದು ನಿತ್ತರಿಸಬಾರದೆಂಬಂತಿರೋಡಿದುದು (ಸಮ್ಯಕೌ. ೮-೪೬). **ನಿತ್ತ ಕಲ್ಲು** = ನಿಲ್ಲಿಸಿದ ಕಲ್ಲು : ತತ ನಿತ್ತ ಕಲ್ಲು (ಇಅ. VI, ೯೩-೩೩ ; 693). **ನಿಲುವಱಕೆಗ** = ನಿಲ್ಲುವ ಅಪೇಕ್ಷೆಯುಳ್ಳವನು ; ನಿಲ್ಲ ಬಯಸುವವನು : ಮಱುಕೊಳಿಸಿ ಮತ್ತೇಳ್ವವನ ಗೋಣುಱುಗೆ ತಿವಿದನು ಪಡಿಬರಿಸಿ ನಿಲುವಱಕೆಗನನಿಕ್ಕಿದನು ಮಗುಳೆ ಮಡಪ್ರಹಾರದಲಿ (ತೊರರಾ. ೬-೩೦-೪೦). **ನಿಲ್ಪಡು, ನಿಲೆವಡು** = ೧. ನಿಲ್ಲಿಸಲ್ಪಡು ; ಸ್ತಂಭಿತವಾಗು : ಕಲ್ಪನಾಕುಶಲತೆಯ ಶಿಲ್ಪಕೆ ಮನಂ ಮೆಚ್ಚಿ ನಿಲ್ಪಟ್ಟು ತಲೆ ತೊನೆದನು (ಶ್ರೀರಾಮೂ.೪೪೮-೯೦). ೨. ಭಿಕ್ಷೆಗಾಗಿ ನಿಲ್ಲಿಸಲ್ಪಡು : ಭಟ್ಟಾರರ್ ನಿಲೆವಟ್ಟುದೆಯೆಂದು ಬೆಸಗೊಂಡೊಡೆ (ವಡ್ಡಾರಾ. ೮೯-೯). **ನಿಲ್ಲಗೊಡಿಸು** = ನಿಲ್ಲುವುದಕ್ಕೆ ಅವಕಾಶ ಕೊಡು : ಅವರ ಮನೆಯಲ್ಲಿ ಮಕ್ಕಳು ನನ್ನನ್ನು ಒಂದು ಕ್ಷಣವೂ ನಿಲ್ಲಗೊಡಿಸದೆ ಮನೆಗೆ ಕರೆದುಕೊಂಡು ಬಂದು ಬಿಟ್ಟರು (ರೂಢಿ). **ನಿಲ್ಲದಿಕೆ, ನಿಲ್ಲದಿಕ್ಕೆ** = ೧. ಅಶಾಶ್ವತತೆ : ಜೋಳಕ್ಕೆ ತಪ್ಪಿಯುಮಿಂ ಬಾಟ್ಟುದೆ ಪೂಣ್ದು ನಿಲ್ಲದಿಕೆಯಿಂ ಬಾಟ್ಟಂತು ವಿಖ್ಯಾತಕೀರ್ತಿಯ ಪೋಲೀಯೊಡಲಬ್ಬೆ ಪೇೞುಮೆನಗೇಂ ಕಲ್ಪಾಂತರಸ್ಥಾಯಿಯೇ (ಪಂಪಭಾ. ೯-೮೪). ೨. ಚಂಚಲತೆ : ಬಯ್ಕೆ ಬೇಟಕಾಱನ ಬಗೆ [ನಿಲ್ಲದಿ]ಕ್ಕೆಗೊಳಗಪ್ಪುದು (ಪಂಪಭಾ. ೪-೧೦೩). **ನಿಲ್ಲದೆ** = ೧. ಎದುರಿಸದೆ ; ಪ್ರತಿಭಟಿಸದೆ : ಅವಧಿಯ ಲೆಕ್ಕಮಂ ನೆಱಪಿ ನನ್ನಿಗೆ ಮಾಣದೆ ಕಾದಲೆಂದು ಬಂದವನಿವನರ್ಜುನಂ ತೊಡರ್ದು ನಿಲ್ಲದೆ ನೀನೊಡಗೊಂಡು ಪೋಗು ಗೋನಿವಹಮಂ (ಪಂಪಭಾ.೮-೧೦೨). ೨. ತಡೆಯದೆ ; ನಿಧಾನಿಸದೆ : ನಿಲ್ಲದೊಡ್ಡೈಸೆನುತ ಸಾಹಸಮಲ್ಲ ಸಾರಥಿಗಱುಹೆ . . . ದ್ರೋಣ ಹೊಕ್ಕನು ರಾಯಮೋಹರವ (ಕುವ್ಯಾದ್ರೋ. ೨-೩೪) ; ನಿಲ್ಲದಾಕ್ಷಣ ಕೃಷ್ಣ ಬಿಗಿಯಪ್ಪಿ . . . ಗಲ್ಲವ ಪಿಡಿದು ಮುದ್ದಿಸಿದ (ಮೋಹತ. ೪-೯೨); ನಿಲ್ಲದನುರಾಗದಿಂದಾರ ಸುತನೀ ತರುಣನೆಲ್ಲಿಂದೆ ಬಂದನೆಂದು . . . ಕೇಳ್ದೊಡೆ (ಜೈಮಿಭಾ. ೨೮-೨೬). ೩. ಬಿಡದೆ ; ತೊರೆಯದೆ : ಬಲ್ಲಿದ ಕರ್ಣಾಟಕವಿಗಳೆಲ್ಲರ ಗೆಲ್ದು ಬಲ್ಲಾಳಭೂವಿಶ್ವರನನಿಲ್ಲದೆ ಮೆಚ್ಚಿಸಿಕೊಂಡ ಜನ್ನನ ಪಾದಪಲ್ಲವಗಳಿಗೆಱಗುವೆನು (ಕುರಾಸಾಂ. ೧-೩೨). ℙ 'ನಿಲ್' ಎಂಬ ಶಬ್ದವನ್ನು ನಡುಗನ್ನಡದಲ್ಲಿ ಕವಿಗಳು ವ್ಯಂಜನಾಂತವಾಗಿಯೂ ಸ್ವರಾಂತವಾಗಿಯೂ ಪ್ರಯೋಗಿಸಿದ್ದಾರೆ.

[ದೇ.॥ತಮಿ. ಮಲ. ನಿಲ್ ; ತುಳು. ನಿಲ್, ನಿಲಿ ; ಕೊಡ. ನಿಲ್ ; ತೆಲು. ನಿಲುಚು; ಕೋಲಾ ನಾಯ್ಕಿ. ಇಲ್ ; ಪರ್ಜಿ. ಗಡಬ. ಕುಇ. ನಿಲ್ ; ಕುರುಖ್. ಇಲ್ನಾ ; ಮಲ್ತೊ. ಇಲೆ]

**ನಿಲ** 'ನಿಲವು' ನೋ.

**ನಿಲಂಬನ** (ನಾ). ತಾತ್ಕಾಲಿಕವಾಗಿ ರದ್ದುಮಾಡುವುದು : ಅಧಿಕಾರವನ್ನು ಈ ಸಂವಿಧಾನದಲ್ಲಿ ಅನ್ಯಥಾ ಕಾಣಿಸಿರುವ ಮೇರೆಗಲ್ಲದೆ ನಿಲಂಬನ ಮಾಡತಕ್ಕುದಲ್ಲ (ಭಾಧಾನ. ೨೦). [ಸಂ.]

**ನಿಲಂಬನಗೊಳಿಸು** (ಕ್ರಿ). ತಾತ್ಕಾಲಿಕವಾಗಿ ರದ್ದುಗೊಳಿಸು : ಗಣಪೂರ್ತಿ ಸಂಖ್ಯೆಯಷ್ಟು ಜನ ಸದಸ್ಯರು ಹಾಜರಿರುವಂತಾಗುವವರೆಗೂ ಸಭೆಯನ್ನು ನಿಲಂಬನಗೊಳಿಸುವುದು ಅಧ್ಯಕ್ಷರ . . . ಕರ್ತವ್ಯವಾಗಿರತಕ್ಕುದು (ಭಾಧಾನ. ೧೦೦). [ನಿಲಂಬನ + ಕೊಳ್$_1$ + -ಇಸು$_3$]

**ನಿಲಕಾಲಂ** (ಅ). ಯಾವಾಗಲೂ ; ನಿರಂತರ ; ಸತತ ; ಸದಾ : ತುಲವನೇಱಲು ಗುರುವು ನೆಲೆಯಾಗಿ ಮಳೆಯಕ್ಕು ಫಲ ಧಾನ್ಯ ಬೆಳಸು ಪ್ರಜೆಗೆಳಿಗೆ ಇಳೆಯಲ್ಲಿ ನಿಲಕಾಲಮಕ್ಕು (ಸರ್ವಜ್ಞ. ೧೫೮೬).

[<ನಿಲಗಾಲ]

**ನಿಲಕು** 'ನೀಳ್ಕು' ನೋ.

**ನಿಲಗಾಯಿಸು** (ಕ್ರಿ). (ನೀರು ಆವಿಯಾಗಿ, ಹಾಲು ಮಾತ್ರ ನಿಲ್ಲುವಂತೆ) ಒಂದೇ ಸಮನೆ ಕಾಯಿಸು : ಭದ್ರಮುಸ್ತೆ ಲಾಮಂಚ ಇಂತಿವರೊಳು ಹಾಲನೆರೆದು ತದರ್ಧ ನೀರನೆರೆದು ಹಾಲ ನಿಲಗಾಯಿಸಿ ಮಧುವಂ ತುಪ್ಪವನೆರೆದು ಮಗ್ಗಾರೆ . . . ಯಷ್ಟಿಮಧುಕ ಇವನಿಕ್ಕಿ ಅಟ್ಟ ತೈಲದಿಂದ ವಸ್ತಿಯಂ ಮಾಡಲೆಲ್ಲ ಜ್ವರದೋಷಂಗಳುಂ ಸಹ ಮಾಣ್ಗುಂ (ಸಕವೈ. ೧೨೯). [<ನಿಲ್$_2$ + ಕಾಯಿಸು$_2$]

**ನಿಲಗಾಲ** (ನಾ). ಬಿಡುವು ; ವಿರಾಮ : ಅಂದಿನಿಂದ ಅವರಿಗೆ ನಿಲಗಾಲ ದೊರಕಿತು (ದಕಚ. ೩೩) ; ಯೂಸೂಫ್‌ಖಾನನು ಹಿಮ್ಮೆಟ್ಟ ತನ್ನ ತಲೆ ಮೈ ಕಾಲುಗಳ ಮೇಲೆ ಗುರಿಯಾಗಿ ನಿಲಗಾಲವಿಲ್ಲದೆ ಬೀಳುತ್ತಿದ್ದ ಪೆಟ್ಟುಗಳನ್ನೆಲ್ಲಾ . . . ತಪ್ಪಿಸಿಕೊಳ್ಳುತ್ತ ನಿಂತನು (ಭಾರವೀ. ೧೨೪).

[ನಿಲ (<ನಿಲವು) + ಕಾಲ]

**ನಿಲಗುದುರೆ** (ನಾ). ಎತ್ತರವಾದ ನಿಲುವಿನ ಕುದುರೆ; "ನಿಲುವಿಕೆಯುಳ್ಳ ಕುದುರೆ" (ಪುಲ್ಲಿಗೆ. ಟೀಕೆ) : ನಿಲಗುದುರೆಂಬೋ ತೇಜಿಯ ನೇರಿ ಮದನಾರಿ ಬಂದು ಬಾಗಿಲ್ಗೆ ನಿಂತ (ಪುಲ್ಲಿಗೆ. ೭೬).

[ನಿಲ(<ನಿಲವು) + ಕುದುರೆ]

**ನಿಲಪು** 'ನಿಲಿಪು' ನೋ.

**ನಿಲಬಾಕಿ** (ನಾ). ಬಹುದಿನಗಳಿಂದ ಉಳಿದ ಬಾಕಿ ; ನಿಂತ ಬಾಕಿ: ನಿಲಬಾಕಿ ಕೇಳಲಿಕ್ಕೆ ಹೋಗಿ, ಗೊಲ್ಲಮಿಂಡನಿಂದ ಪೆಟ್ಟು ತಿಂದ (ಗಾದೆ).

[ನಿಲ(<ನಿಲವು) + ಬಾಕಿ]

**ನಿಲಯ, ನಿಳಯ** (ನಾ). ೧. ಮನೆ; ಬೀಡು ; ವಾಸಸ್ಥಳ : "ಆವಾಸಃ . . . ನಿಲಯಃ . . . ಆಲಯಃ— ಈ ೩೧ ಮನೆ" (ಹಲಾಯು. ೪೯-೧೩೬) ; ಅಂತರಿಕ್ಷಭುವನತಲತಿಲಕ(ವಿಲಾಸ)ವಿಲಸಿತನಿಲಯನುಂ . . . ಜಿತಾಖಂಡಭೂಮಂಡಲನುಮಪ್ಪ ಸ್ತಿಮಿತಸಾಗರಮಹೀವಲ್ಲಭಂಗೆ (ಶಾಂತಿಪು. ೧-೭೧ ಪ); ಮನಸಿಜನಾಯುಧನಿಲಯಂ ಮನಸಿನಜನ

ಸಮಗ್ರರಾಜ್ಯಲಕ್ಷ್ಮೀಸದನಂ . . . ಎನೆ ಸೊಗಯಿಸುವುವು ಮನೋಹರೇಕ್ಷುವನಂಗಳ್ (ಸುಕುಮಾ. ೯-೫೫) ; ಕುಲಕಮಲಖರಕಿರಣಪಾಂಡವ ಬಲಕೆ ಶರಣಾಗತಜಲಧಿ ವರನಿಲಯವೆನೆ ರಂಜಿಸಿತು ಗಂಗಾಸುತನ ಶರಶಯನ (ಕುಪ್ಪಾಭೀ. ೧೦ ಸೂಚನೆ). ೨. [ಜೈನ] ಶ್ರಾವಕರು ಆಚರಿಸಬೇಕಾದ ಹನ್ನೊಂದು ವ್ರತಸ್ಥಿತಿಗಳು : 'ಪ್ರತಿಮೆ' ಪರಾ.

**ನಿಳಯ** : ೧. "ಭುವನಂ ಸದನಂ ಸದ್ಮಂ ನಿವಾಸಮಾವಸಥಮಾಸ್ಪದಂ ನಿಳಯಂ . . . ಗೃಹಮುಟಜಂ" (ವಸ್ತುಕೋ. ೪೬-೮); ನೆರೆದಿರ್ದರಿರ್ದ ಕೃತಕಾಚಲಂ ಚೆಲ್ವನಪ್ಪಿದೇಂ ಕನಕಪದ್ಮಿನೀನಿಳ [ಪಾಠಾಂ. ಲ]ಯಮೆನ್ನ ಲೀಲಾಸರಂ (ಆದಿಪು. ೪-೮) ; ನಿಳಯಕ್ಕೋರೊಂದು ಕೇಳೀವನಮುಮಮೃತಕಾಸಾರಮುಂ ವಾಟಮುಂ (ಜಗವಿ. ೯-೯೬) ; ಇಳಿದು ರಥವನು ದಿವಿಜರಾಯನ ನಿಳಯವನು ಹೊಕ್ಕನು (ಕುಪ್ಪಾಆ. ೬-೮೩) ; ಬಳಿಕ ಪಸಿದು ಪಾರ್ವರ ಬೀದಿಯೊಳೊಂದು ನಿಳಯವ ಪೊಕ್ಕು (ಹರಿಬ.೨-೩೬). ೨. 'ಏಕಾದಶನಿಳಯ' ಪರಾ. [ಸಂ.]

**ನಿಲಯಕಾಣು** (ಕ್ರಿ). ಆಶ್ರಯವನ್ನು ಪಡೆ ; ನೆಲೆಗಾಣು : ಬಲುಕಾಲಗಳಿಂದ ನಿಲಯ ಕಾಣದೆ ನಿನ್ನ ಚಲುವ ಚರಣದ್ವಂದ್ವನೆಳಲ ನಾಶ್ರೈಸಿದೆ (ವಿದಾಕ್ಯ. ೨೬-೧). [ನಿಲಯ + ಕಾಣು (<ಕಾಣ್)]

**ನಿಲಯನಕ್ರೀಡೆ**(ನಾ). ಅವಿತುಕೊಳ್ಳುವ ಆಟ; ಕಣ್ಣುಮುಚ್ಚಾಲೆಯಾಟ : ಚಂದದಿಂದಲಿ ನಿಲಯನಕ್ರೀಡೆಯ ಸುಂದರರಾಡಿದರು (ಪ್ರಸಭಾ. ೫೪-೧). [<ಸಂ. ನಿಲಾಯನಕ್ರೀಡಾ]

**ನಿಲಯೈಕವೃತ್ತಿ** (ನಾ). ಮನೆಯಲ್ಲಿಯೇ ಇರತಕ್ಕವನು; ಏಕಾಂತವಾಸಪ್ರಿಯ : ಕುಲಜಾತಿದೇಶವಿಶದಂ ವಿನಯೋಪಚಾರಂ ನಿಲಯೈಕವೃತ್ತಿ [ಕೃತಿಬಿಂಬಿತ ಸತ್ತ್ವಸಾರಂ] (ಕವಿರಾ. ೩-೨೨೬). [ಸಂ.]

**ನಿಲವರ, ನೆಲವರ**$_1$ (ನಾ). ನಿಜ ; ಸತ್ಯ ; ಯಥಾರ್ಥ : ನಿಲವರ ಪೇಳು ಎನ್ನಾಮಲ ಮನಸಿಗೆಯಿಂದು ಬಲುಧಾವಂತಿಬಟ್ಟರು ಸಲುವದೆ ಗತಿಮಾರ್ಗ (ಮೋಕ್ಷದೀ. ೬೧-೫). **ನೆಲವರ**$_1$ : ಟೀಪುಸುಲ್ತಾನರು . . . ನಾನಾಪ್ರಕಾರ ವಿರುದ್ಧಮಾಡುವ ಮತಲಪ್ಪಿನಲ್ಲಿ ಇದ್ದಾರೆ ಎಂಬ ಸಮಾಚಾರ ಮಹಾರಾಜರವರು ಕೇಳಿದರಿಂದ, ಅದನ್ನು ನೆಲವರ ತಿಳಿಯಬೇಕೆಂಬದಾಗಿ ಒಂದು ಜೋಡಿಹರಿಕಾರರನ್ನು ಶ್ರೀರಂಗಪಟ್ಟಣಕ್ಕೆ ಕಳುಹಿದಲ್ಲಿ (ರಾಜೇಂದ್ರ. ೧೦೨).

[ದೇ.॥ ತಮಿ. ನಿಲವರ, ನಿಲೈವರ ; ತೆಲು. ನಿಲವರ, ನಿಲುವರ, ನಿಲ್ವರ]

**ನಿಲವು, ನಿಲ, ನಿಲು**$_2$**, ನಿಲುವು**$_2$ (ನಾ). ೧. ನಿಂತಿರುವಿಕೆ; ನಿಂತುಕೊಳ್ಳುವಿಕೆ : "ನಿಲವೆನೆ ನಿಲ್ಕೆಯೊಳ್" (ಕರ್ನಾಸಿ. ೫೮) ; ಅವನಾದ ಗತಿಯ ನಾನಪ್ಪೆನು ಅವ ನಿಂದ ನಿಲವ ನಿಲುವೆನು (ಸಿದ್ಧಪ. ಕ. ೧೮೮-೬೨೯); ಸದಮಲಾಭರಣ ಮುಸುಕಿದ ಮೆಯ್ ವಿಳಾಸ ಮುಸುಕಿದ ನಿಲವು ಮೋಹನಂ ಮುಸುಕಿದಾಕಾರವೆಸೆವಬಲೆಯರು ಕಣ್ಗೆಸೆದರು (ಹಚಕಾ.೪-೩೪); ದುರಾತ್ಮನ ನಿಲವ ತೆಗೆತೆಗೆಯೆನುತ ಚಾಪವನಿಳುಹಿದನು ರಥದೊಳಗೆ ಗಂಗಾಸೂನು ವಹಿಲದಲಿ (ಕುಪ್ಪಾಭೀ. ೧೦-೩); ಗತಿಗೆ ಗತಿ ಮುಂಚುವುದು ನಿಲವಿನ ಗತಿಗೆ ನಿಲುವುದು ಮುರಿಯೆ ಮುರಿವುದು. . . ಆತುಳಮಾಯಾಮಹಿಮ ಮಾರೀಚಪ್ರತಾಪಮೃಗ (ತೊರರಾ. ३-೮-೪೪). ೨. ನೆಲಸುವಿಕೆ ; ತಂಗುವಿಕೆ : ನೇತ್ರದ ಬಗೆ ಮನದೊಳ್ ತನ್ನನಂ ಬುದ್ಧಿಯೊಳ್ ಬುದ್ಧಿ ನಿತಾಂತಂ ಚಿತ್ತದೊಳ್ ಚಿತ್ತದ ನಿಲವದಹಂಕಾರದೊಳ್ ಸಂದಹಂಕಾರನಿಯೋಗಂ ಜೀವನೊಳ್ ಜೀವನೆ ಪರಮನೊಳಾಳ್ದೈಕ್ಯಮಂ ನಿಲ್ವಿನಂ . . . ಸಾಲ್ವನಿರ್ದಂ ಮುನೀಂದ್ರಂ (ಶಬಶಂ. ೨-೧೧೧). ೩. ನೆಲೆ ; ನಿವಾಸ; ಸ್ಥಳ : "ಸಂಸ್ಥಾನಂ, ಸನ್ನಿವೇಶಃ —ಈ ೨ ನಿಲವು" (ಹಲಾಯು. ೧೨೮-೯೩) ; ಅನತನಲ್ಲದಂಗೆ ಪದುಳಂ ನಿಲವಿಲ್ಲ ನಿಜಾನ್ವಯಾಗತಸ್ಥಾನದೊಳಾನತಂಗೆ ಭಯಮಿಲ್ಲ (ಪಂರಾಮಾ. ೧೧-೩೭) ; ಒಂದೆಡೆಯೊಳುಂ ತನಗೆ ನಿಲವಿಲ್ಲದತಿವೇಗದಿಂದೆ ನಿರತಂ ಪ್ರಬಲವಾಗಿ ಬೀಸುವ ಗಾಳಿ (ಜೈಮಿಭಾ. ೮-೨). ೪. ಇರುವಿಕೆ; ಸ್ಥಿತಿ; ಅವಸ್ಥೆ : ಭಾವದ ಮಱೆಯ ಬ್ರಹ್ಮವಾಗಿಪ್ಪ ಚೆನ್ನಮಲ್ಲಿಕಾರ್ಜುನನ ನಿಲವನಾರೂ ಅಱಿಯಬಾರದು (ಮಹಾದೇ. ಬ. ೧೦-೨); ಯೋಗಿಪ್ರವರನ ನಿಲವೀಯದಾರ್ಗೆ ಪೆರ್ಚಿದ ನಲವಂ (ಪರ್ವಪು. ೧೫-೬೩); ಕಿಚ್ಚನುರಿಗೋಲಲ್ಲಿ ಬಚ್ಚಿಟ್ಟಂತಿರಬೇಕು ಅಚ್ಚಳಿದು ಐಕ್ಯಸ್ಥಲವಾದ ಶರಣಂಗೆ ನಿಚ್ಚಟದ ನಿಲವು (ಸರ್ವಜ್ಞ. ೧೫೨) ; ಪಿತನು ರತ್ನಾಕರ ಲಕ್ಷ್ಮೀಸಹೋದರಿ ಆದರು ಶಂಖದ ನಿಲವು ಭಿಕ್ಷೆಯೊಳೊಳುವುದು (ಇಂಚಾಪ. ೮೯-೩೩). ೫. ಉಳಿದುದು; ಉಳಿತಾಯ; ಶಿಲ್ಕು: ಕುಳ್ಳಿರ್ದು ತನ್ನ ಲೆಕ್ಕಂಗಳಂ ಕೇಳುತಿರೆ ಒಳ್ಳಿತೆನೆ ಗಣಕರ್ಕಳೆಲ್ಲರುಂ ನೋಡುತಿರೆ ಆಯದೊಳು ಬೀಯಮಂ ಕಳೆದು ನಿಲವಂ ಕಂಡು . . . ಮನಂಗೊಂಡು (ಬಸರ. ೫-೭೫) ೬. ಆಕಾರ ; ಸ್ವರೂಪ : ಕಾಣಬಾರದ ಕಾಯ ನೋಡಬಾರದ ತೇಜ ಉಪಮಿಸಬಾರದ ನಿಲವು (ಅನಚಂ. ೨೦೭-೯೩೩); ಈ ಸುಕುಮಾರತೆಯಾ ನಿಲವು . . . ಈ ಸುಖದೊಳ್ ತಪಮಿದೆಂತು ಬಂದುದು ಮುಗ್ಧೆ (೧ರಿಕ. ೯-೧೦೦); ಅದೆ ಶಿಖಾಳಿಯು ನುಗುಳ್ವ ಸರಳಿನ ಹೊದಱ ಹೋರಟೆ ನೋಡಿ ಮೂರುತಿಯದೆ ಜಗದ್ವ್ಯಾಪಕನ ನಿಲವಿನ ನಿಗರದವೊಲೆಂದ (ತೊರರಾ. ೩-೬-೩೩). ೭. ರೀತಿ; ಸ್ವಭಾವ: ಸವಿಮಾತುಗಳ ಸೋನೆಯ ಸೊಗಸುಕಾಱರು ನಿಂದ ನಿಲವನು ಕರ್ಣ ನೋಡು (ಕುಪ್ಪಾದ್ರೋ. ೧೬-೨೪); ಮೌನದಾಭರಣವು ಜಗದೊಳ ಮೂಲ್ಯವು ಪೆಣ್ಗಳಿಗಿದು ಕಡುಚೆಲುವು. ಆದರು ಅವರಿದನಿಡುವುದಪೂರ್ವವು ಚೋದ್ಯವು ಸತಿಯರ ನಿಲವು (ಇಂಚಾಪ. ೨೦೨-೯೬). ೮. ಘನತೆ ; ಮಹತಿ ; ಔನ್ನತ್ಯ : ಮಹಾದೇವಿಯಕ್ಕಗಳ ನಿಲವ ಬಸವಣ್ಣನ ಕೃಪೆಯಿಂದಲಱಿದೆನಯ್ಯ (ಮಡಿಮಾ. ೧೫-೧೮); ಹರನನೊಂದಿನವಾದದಂ ತಾಂ ಧರಿಸಲಾಱದ ಮಾನಸೋತ್ತಮಗಿರಿಯ ನಿಲವೆನಿತೀಶ್ವರಂ ತನ್ನುವನಗಲಿ ಪೋದ ಸುರಪಕೀಲದ ಧೈರ್ಯವೆನಿತು (ಬಸಪು. ೧೯-೨೯); ಪಡೆವೊಡೀ ಪರಿ ಬೇಹ ಮಕ್ಕಳ ಪಡೆದು ಪರಿಣಮಿಸುವುದು ತಪದಲಿ ನಡೆವುದೀ ಪರಿ ನಿಜಸಮಾಧಿಯ ನಿಲವ ನಿಲುಕುವುದು (ಪ್ರಭುಲೀ. ೬-೪೧); ಈ ಮನುಷ್ಯತ್ವವೇ ಅವನಿಗೂ ನಮಗೂ ಇರುವ ಸ್ನೇಹಸಂಬಂಧದ ಗಂಟು—ಅವನ ಬಾಳು ನಮ್ಮ ನಿಲವಿಗೆ ಎಟಕುವಂತೆ ಮಾಡುವ ಆಕರ್ಷಣೆ (ರಾಮಾನಿ. ೧೦೬). ೯. ಅಭಿಪ್ರಾಯ; ಮತ; ನಿಟ್ಟು : ಶಿಕ್ಷಣ ಸಂಬಂಧವಾಗಿ ಮನಶ್ಶಾಸ್ತ್ರಭಾವನೆಯ ನಿಲವನ್ನೂ ಸಮಾಜಶಾಸ್ತ್ರಭಾವನೆಯ ನಿಲವನ್ನೂ . . . ಆತನು ಸ್ಪಷ್ಟವಾಗಿ ರೂಪಿಸಿದನು (ಕ್ರಿಯಾಶಿ.೩೬); ಪಂಡಿತರೆಲ್ಲರು ಒಂದೆಡೆ ಸೇರಲಿ ಬೇರೊಂದು ನಿಲವಿಗೆ ಬರಲಿ (ಇಂಚಾಪ. ೧೫೬-೬೭). ೧೦. ಉದ್ದ; ನೀಳ; ಎತ್ತರ: ನಿಲವ ನೋಡವನಂಜನಾದ್ರಿಯ ನಿಲವಿಗೊಮ್ಮೊಳ ಮಿಗಿಲು (ತೊರರಾ. ೬-೮-೪) ; ತೋಳ ಸುಮಾರು ಎರ್ಡುವರೆ ಫೂಟ ನಿಲವಾಗಿಯೂ ಮೂರೂವರೆ ಫೂಟ ನಿಡಿದಾಗಿಯೂ ಇರುತ್ತದೆ (ಮುಂಬಯಿ. ೫-೨೫೨). ೧೧. ದೃಢತೆ: ಧರೆಗೆಲ್ಲಂ ತನ್ನ ಬಾಹಾಬಲದ ನೆಱವು ತನ್ನಣ್ಣ ತನ್ನುಗ್ರತೇಜಸ್ಪುರಿತಂ ತನ್ನಾರ್ಪ್ಪು ತನ್ನೊನ್ನುಡಿಯ ನಿಲವು ತನ್ನೂರ್ಜ್ಜಿತಖ್ಯಾತಿಯೊಳ್ಪಚ್ಚರಿಯಾಗುತಿರ್ಪ್ಪಿನಂ ರಂಜಿಸಿ (ಎಕ. VII, ಶಿಕಾರಿ. ೧೨೪-೧೮; 1077). ೧೨. ಬಾಗಿಲು, ತೊಲೆ ಮುಂತಾದುವುಗಳಿಗೆ ಆಧಾರವಾಗಿ ನಿಲ್ಲಿಸುವ ಮರದ ಚೌಕಟ್ಟು : ಹರಿನೀಲದ ಪಳುಕಿನ ನೆಲ ನಿಂಗದಿರ್ವರಲ ಮಿಸುಪ ವೇದಿಕೆ ಪವಳದ ನಿಲವರುಣಮಣಿಯ ಕೆಲಸದ ಬೋದಿಗೆ . . . ಒಪ್ಪಿದುದು (ಜಯಕಾ. ೮-೩) ; ರಂಗೈಯ್ಯಾ ಗುಡಿಯಾ ಬಾಗಿಲಿಗೆ ನಿಲವಾದೊ ರಂಗೈಯ್ಯ ಗುಡಿಯಾ ಬಾಗಿಲಗೆ ಕದವಾದೋ (ಹುಟ್ಟಿಹ. ೫೦) ; ನೆಕ್ಲುದೋವ್ ಟೋಪಿಯನ್ನು ಕೈಗೆ

ಕೆಗೆದುಕೊಂಡು ತಗ್ಗು ನಿಲವಿನ ಮೂಲಕ ಹಾದು ಹೋಗುವ ಸಲುವಾಗಿ ಬಾಗಿ . . . ಗುಡಿಸಲನ್ನು ಪ್ರವೇಶಿಸಿದನು (ಪುನರು. ೨೭೪). **೧೩.** ಠೀವಿ; ಗತ್ತು : ದಂಡಾಯುಧದ ನಿಲವಿನಲಿ ಸುಭಟರ ದಾಯುಗೆಡಿಸಿದನೊಂದು ನಿಮಿಷದೊಳೊರಸಿದನು ಬಲವ (ಕುಪ್ಯಾದ್ರೋ.೧೬-೮). **೧೪.** ವಿಶ್ರಾಂತಿ; ಬಿಡುವು : (ಕಿ). **೧೫.** ಮಲ್ಲಯುದ್ಧದ ಒಂದು ವರಸೆ,— ಪಟ್ಟು : ನಿಲವಂ ನಿಲವಳವಳವಂ ಗೆಲೆ ಗೆಲಲರಿದಾಯ್ತು ತಮ್ಮೊಳೊರ್ವರ ನೊರ್ವರ್ (ಜಗವಿ. ೯-೭೬). **೧೬.** [ಛಂದ] ಪದ್ಯವನ್ನು ಹೇಳು ವಾಗ ಮಧ್ಯೆ ಕೊಡುವ ವಿರಾಮ,— ನಿಲುಗಡೆ : ಶತಮುಖೇಂದು ರವಿತೋಯಮುಮಾಗಲ್ ಯತಿಪದಂ ನಿಲವು ದಂತಿಯೊಳಕ್ಕುಂ (ಛಂದೋಂಬು. ೨-೧೩೨). **೧೭.** [ನಾಟ್ಯ] ಭಂಗಿ; ಪ್ರಕಾರ; ರೀತಿ : ಒರ್ಮೆಯೆ ನಿಲವುಗಳನಿತುಮನೊರ್ಮೆಯೆ ಪದಗತಿಗಳನಿತುಮಂ ವಿಕ್ರಿಯೆ ಯಿಂದೊರ್ಮೆಯೆ . . . ಹರಿ ಮೆಱೆದಂ (ಚಂದ್ರಪು. ೧೨-೧೮೬); ನಿಲವಿವು ಗತಿಗಳಿವಾಸನಕುಲಮಿವು ಚಾರಿಗಳಿವೆಂದು ತಾನಭಿನಯಿಸು ತ್ತೊಲವಿಂದೆ ಭದ್ರಚಂಡಂ ಪಲವಂದದೆ ನೃಪಸುತಂಗೆ ತೋಱು ತ್ತಿರ್ದಂ (ಕುಸುಮಾ. ೭-೬೨); ನಿಲವಿನ ಭಂಗಿ ಸುರೇಖಾವಿಲಸಿತ ಮುಂದಿಟ್ಟ ಹಸ್ತಗತಿಸಂಗತಿಗಳ್ ಸಲೆ ಸೊಗಯಿಸೆ ರಸಭಾವಂ ನಲವಿಂ ನರ್ತಿಸುತುಮಿರ್ದರಮರಾಂಗನೆಯರ್ (ಶಾಂತೀಶ್ವ. ೧೪-೭೨). **ನಿಲ :** **೫.** ನೆರೆವರಿ ವರಾಡ ಕಡಮುಸವರಿ ವಂಚನೆ ವಟ್ಟ ಲಂಚ ಹೊರನಿಲ ಹಸ್ತಾಂತರಸಂಜಾಯಿತ ನಿಲಗಳ ಪರಿವಿಡಿಯಂ ನಿಲಿಸಿ ಸೀಮೆಯಂ ರಕ್ಷಿಸಿದಂ (ಕೆಳನೃ. ೭-೨೯); ನಿಲವಿಲ್ಲದೆ ಹಲದಿಂದ ಹೊಲದ ಉಕ್ಕೆ, ನಿಲ ನೋಡಿ ಸಂಸಾರ (ಗಾದೆ). **೧೮.** ಎತ್ತರವನ್ನು ಅಳೆಯುವ ಒಂದು ಸಾಧನ; ಅಳತೆಗೋಲು : ಒಂದು ಮೂಲೆಯಲ್ಲಿ ಖೈದಿಗಳ ಎತ್ತರ ವನ್ನಳೆಯುವ ಸಲುವಾಗಿ ಕಪ್ಪು ನಿಲವೊಂದನ್ನಿಟ್ಟದ್ದರು (ಪುನರು. ೨೩೭). **ನಿಲು**$_2$ **:** **೧೨.** ನಾಲ್ಕುದಿಕ್ಕುಗಳಲ್ಲಿಯೂ ಪಚ್ಚೆಗಳಿಂ ನಿರ್ಮಿತಂಗಳಾದ ನಿಲುಗಳಿಂದಲು (ಸೌಗಂಧಿ. ೧೦೫-೭); ಆಧಾರವು ನದಿಯ ಎರಡು ದಂಡೆಗಳಲ್ಲಿರುವ ಮರದ ಬುಡಗಳೋ ಗಟ್ಟಿಯಾದ ಇನ್ನಿತರ ನಿಲುಗಳೋ ಇರಬಹುದು (ಬಾಲಪ್ರ. I, ೧೭೪). **ನಿಲುವು**$_2$ **:** **೪.** ದರ್ಪಣದೊಳಿಸೆವ ಪ್ರತಿಬಿಂಬವಂತಾಗಸದೊಳಿರ್ಪ ಸುರಚಾಪದಿರ ವೆಂತಂತೆ ದಗ್ಧಪಟ ತೋರ್ಪಂತೆ ಘನಮರೀಚಿಯ ಜಲದ ನಿಲುವಿನಂತೆ . . . ಮೆಱೆದು ಕಂದರ್ಪನಂ ಸುಟ್ಟತುಳನಿರ್ಮಾಯನಲ್ಲಮಪ್ರಭುರಾಯ ಸಲಹೆಮ್ಮನು (ಚೆಬಪು. ೧-೧೧); ಸತ್ಯದ ಸಾರದಂತೆ ನಿತ್ಯತೆಯ ನಿಲು [ಪಾಠಾಂ.ಲ] ವಿನಂತೆ . . . ಒಪ್ಪುತಿರ್ದಂ (ಶಬಶಂ. ೧-೮೧ ಪ). **೬.** ಜೀವನದ ನೋವನ್ನೆಲ್ಲ ಅನುಭವಿಸಿ ಇರುವಿಕೆಯ ಮೂಲವನ್ನೇ ಕೆದಕಿ ನೋಡಲು ಪ್ರಯತ್ನಿಸುವಂತಿದೆ ಕತೆಯ ನಿಲುವು (ಹೊಸಕ್ಷಿ. ೨೯೪). **೭.** ಲುಕಾಪ್ಪನ ಮುಖವೂ ನಿಲುವೂ ಗಂಭೀರವಾಗಿದ್ದುವು (ಮಲೆನಾ. ೨೦೪). **೮.** ಚೆನ್ನಮಲ್ಲಿಕಾರ್ಜುನನ ಧ್ಯಾನ ಮನನ ನಿದಿಧ್ಯಾಸವೇ ಅಕ್ಕನ ಆನಂದ. ಮತ್ತೆ ಚೆನ್ನಮಲ್ಲಿಕಾರ್ಜುನನ ನಿಲುವನು ಯಾರೂ ಅರಿಯಲಾಗದು ಎಂದು ಹೇಳುತ್ತಾಳೆ (ಕರ್ನಾಕ. ೭೬); ಈ ವಚನಗಳು ಅಲ್ಲಮ ಏರಿ ನಿಂತ ನಿಲುವನ್ನು, ಆ ನಿಲುವನ್ನು ಮುಟ್ಟಲು . . . ಜೀವನದ ಆದಿಭಾಗದಲ್ಲಿ ಪಟ್ಟ ಶ್ರಮವನ್ನೂ ಕನ್ನಡಿಸುತ್ತವೆ (ಶೂನ್ಯಕು. ೮೧). **೯.** ಅವನ ಹೇಳಿಕೆಯಲ್ಲಿ ಏಕರೂಪದ ಖಚಿತತೆಯಿಲ್ಲ, ಸ್ಪಷ್ಟವಾದ ನಿಲುವಿಲ್ಲ (ದ್ರಾವಿವಿ. ೨೧೫); ನಾನು ಅವರ ನಿಲುವಿಗೆ ಮರುಳಾದೆ (ದೀಪದ. ೧೯೭). **೧೦.** ಹುಲಿಗಳ ನಿಲುವು ಸಾಧಾರಣವಾಗಿ ಎರಡುಎರಡುವರೆ ಮೊಳ ಇರುತ್ತದೆ (ಮುಂಬಯಿ. ೪-೩೫); ಅಡುಗೆಮನೆಗಳಲ್ಲಿ ಅಡುಗೆ ಮಾಡುವ ವರ ನಿಲುವಿಗೆ ಸರಿಯಾದ ಎತ್ತರದಲ್ಲಿ ಒಲೆ . . . ಇತ್ಯಾದಿ ಸೌಕರ್ಯ ಗಳಿರುತ್ತವೆ (ಅಡುಸಾ. ೨೬). **೧೨.** ಚಲುವಾಂಬೇಶ್ವರ ದೇವಸ್ಥಾನಕ್ಕೆ ಚಾಮಪ್ಪಾಜೀಯವರಿಂದ ಹಿತ್ತಾಳೆ ಚೌಕಟ್ಟು ಗುಬ್ಬೀ ಕದ ಸಹಿತವಾಗಿ ಮಾಡಿಶಿ ವಪ್ಪಿಶಿದ ನಿಲುವಿನ ಸೇವಾರ್ಥ (ಎಕ.XIV, ಚಾಮರಾ. ೨೦೬-೩; 1868). **೧೩.** ಅವನ ಉಡಿಗೆ ತೊಡಿಗೆಗಳು, ನಿಲುವು ಶ್ರೀಮಂತರದಾಗಿ ದ್ದವು (ಯೋಧರು. ೫); ಮೂರ್ತಿ ಸಣ್ಣದಾದರೂ ನಿಂತ ಆ ನಿಲುವಿನಲ್ಲಿ ಒಂದು ತೇಜಸ್ಸಿತ್ತು (ಹೊಸಕ್ಷಿ. ೩೩). **೧೫.** ನಿಲುವಿನಲಿ ಸ್ವಸ್ಥಾನದಲಿ ಕೈಚಳಕದಲಿ . . . ಶಸ್ತ್ರಾವಳಿಯ ಸಾಂಗೋಪಾಂಗಕ್ರಮವನು ತೋಱಿ ದನು ಪಾರ್ಥ (ಕುಪ್ಯಾಆ. ೭-೪೧.). **೧೯.** ಎಡೆ; ಅವಕಾಶ; ಆಸ್ಪದ : ಭೀಷ್ಮನು . . . ಪರಶುರಾಮನ ಮೇಲೆ ನಿಲುವಿಲ್ಲದೆ ಬಾಣಗಳನ್ನು ಬಿಟ್ಟನು (ಭೀಷ್ಮಚ. ೨೪). **೨೦.** ನೇರವಾಗಿರುವಿಕೆ; ನೆಟ್ಟಗಿರುವಿಕೆ: ವ್ಯಸನ ಇರುವವರಿಗೆ ಹಸುವಿನ ಹಾಲು ಸಕ್ಕರೆಯಲ್ಲಿ ಎಂಟು ದಿನ ಕೊಳ್ಳಲು ವ್ಯಸನ ಉಂಟಾಗದು. ನಿಲುವಿಗೆ ಜೇನುತುಪ್ಪದಲ್ಲಿ ಕೊಡಲು ನಿಲುವು ಸ್ತಂಭನ (ವಿವೈವಿ. ೪೨).

**ನಿಲವಿನ ಸೂಡು** = ನೆಟ್ಟಗೆ ಉರಿಯುತ್ತಿರುವ ಜ್ವಾಲೆ ; ಏರಿಳಿತ ಗಳಿಲ್ಲದ ಒಂದೇ ಸಮವಾದ ಉರಿ : ಆಸನದಿಂ ಬಾಯಿಂ ಪೊಯ್ದ್ ಸಾಸವೆ ಮೆಣಸುಪ್ಪು ಕೂಡೆ ನಿಲವಿನ ಸೂಡಿಂ ಲೇಸಾಗಿ ಬೆಂದ ಬಾಡಂ ಬಾಸಣಿಸಿಟ್ಟದನೆಯಮೃತಮತಿಗಟ್ಟಿಸಿದಂ (ಯಶೋಚ. ೩-೭೦). **ನಿಲುವು ಬೀಳು** = ಎತ್ತರವಾಗಿ ಬೆಳೆದ ಪೈರಿನ ಮಧ್ಯೆ ನುಗ್ಗು,—ಪ್ರವೇಶಿಸು : ತುಡುಗ ಆವು ಗಪಗಪ ತಿಂದು, ಹೊಲ ಕಾಯುವವರ ಸುಳಿವು ಕಂಡ ಕೂಡಲೆ ಜೋಳದ ನಿಲುವು ಬಿದ್ದು ಓಡಿ ಹೋಯಿತು (ಮುಂಬಯಿ. ೩-೨೨).

[**ದೇ.॥** **ತಮಿ.** ನಿಲುವೈ ; **ಮಲ.** ನಿಲವು, ನಿಲ ; **ತುಳು.** ನಿಲುವು, ನಿಲಾವು, ನಿಲೆವು ; **ತೆಲು.** ನಿಲವ, ನಿಲುವ, ನಿಲುವು, ನಿಲ್ವ]

**ನಿಲವುಗನ್ನಡಿ,** ನಿಲುಗನ್ನಡಿ, ನಿಲುವುಗನ್ನಡಿ (ನಾ). ನಿಂತು ಇಡೀ ದೇಹವನ್ನು ನೋಡಿಕೊಳ್ಳುವುದಕ್ಕೆ ಅನುಕೂಲವಾದ ಉದ್ದನೆಯ ಕನ್ನಡಿ; ದೊಡ್ಡ ಕನ್ನಡಿ : ತರುಣಿ ಕೇಳ್ನಿನ್ನಯ ವಿವಾಹಸಮಯದೊಳಲಂಕರಿಸಿ ರನ್ನದ ನಿಲವುಗನ್ನಡಿಯೊಳೆನ್ನ ಸೌಂದರಿ ಯಮಂ ನೋಡಿ ಮೋಹಿಸಿ ಜೀವಕಳೆಯನಾ ಮಾರ್ಪೊಳಪಿನೊಳು ಪುದಿ ದೆನು (ಸೌಂದಪು. ೧-೪೭); ಚೆಲುವೆಗೆ ತಕ್ಕ ಸಿಂಗರವ ನಿರ್ಮಿಸಿ ಮನ ದೊಲವಿಂದೆ ನೋಡಿ ದಾದಿಯರು ಉಲುಹಿಂಗೆ ಹರಳುದುಂಬಿದ ರತ್ನ ಮಯ ಹೊನ್ನ ನಿಲವುಗನ್ನಡಿಯ ತೋಱಿದರು (ಮೋಹತ. ೨೩-೫೩). **ನಿಲುಗನ್ನಡಿ :** ಕಾಂತೆಗೆ ನೋಡೆಂದು ತೋರಿಸುವಂತೆ ನಿಲುಗನ್ನಡಿಯ ತಂದು ನಿಲ್ಲಿಸಲು (ಸೌಗಂಧಿ. ೨೧೨-೨); ತುರುಬುಗಳಿಗೆ ಹುವ್ವುಗಳನ್ನು ಮುಡಿಸುವುದಕ್ಕೂ ನಿಲುಗನ್ನಡಿಗಳಿಗೆ ಮಿರುಗಿಕ್ಕುವುದಕ್ಕೂ ನನ್ನಲ್ಲಿರುವ ಕರಕೌಶಲಗಳು ಮಿಕ್ಕ ಸ್ತ್ರೀಜನಂಗಳಲ್ಲಿರಲಾರವು (ಕೃಪಾವಿ. ೧೬); ನಿಲುಗನ್ನಡಿಯ ಎದುರಿನಲ್ಲಿ ನಿಂತುಕೊಂಡು ಕ್ರಾಪು ಬಾಚಿಕೊಳ್ಳುತ್ತಿದ್ದ (ಪರಿಣೀ. ೯). **ನಿಲುವುಗನ್ನಡಿ :** ಎರಡು ದೊಡ್ಡ ನಿಲುವುಗನ್ನಡಿ ಗಳನ್ನು ಅಲ್ಲಿ ಗೋಡೆಗೆ ತಂಗಿಸಲಾಗಿತ್ತು (ಹೇಮಂತ. ೪೦೬).

[ನಿಲವು + ಕನ್ನಡಿ$_1$]

**ನಿಲವುಗೆಡಿಸು** (ಕ್ರಿ). (ಆಲಂ) ಕೀರ್ತಿಯನ್ನು ಕಡಮೆ ಮಾಡು; ಹೀಗಳೆ ; ಕೀಳುಮಾಡು : ಅಮಲಧರ್ಮಜನ ಕೀರ್ತಿ . . . ಮಥನಾಗೇಂದ್ರಧರನ ಜಾತೆಯ ನಿಲವುಗೆಡಿಸಿ ನೆಱೆ ರಾಜಿಸಿತು (ಜೈಮಿಭಾ. ೨-೧೨). [ನಿಲವು + ಕೆಡಿಸು$_1$]

**ನಿಲಹ** (ನಾ). ಉಳಿದುದು; ಶೇಷ ; ಬಾಕಿ : ಕಳೆದುಳಿದ ಲೆಕ್ಕಗುತ್ತಿಗೆ ಗಳ ನಿಲಹದ ನಾಮಿಯಡ್ಡವಂತಿಕೆ ನಾನಾಸುಲಿಗೆ ಲಾವಣಿಗೆಯೆಂಬೀ ಗಳಬಳಮಂ ನಿಲಿಸಿ ಸುಂಕಮಂ ಬಾಳಿಸಿದಂ (ಕೆಳನೃ. ೭-೩೦).

[ನಿಲ (< ನಿಲವು) + -ಹ$_2$ (< -ಪ$_2$)]

**ನಿಲಹಾಸ** (ನಾ). ಮಂಕು; ಕಾಂತಿಹೀನತೆ : ನಿಲಹಾಸ [ಪಾಠಾಂ. ಸ್ಯ]ವಿರದೆ ಸೋಮಯ್ಯನಂ ತಂದಿಲ್ಲಿ ನಿಲಿಸು ದೂಷಕರ ಮೂದಲಿಸು (ಸೋಮುಚ. ೨-೧೨೦). [<ಸಂ. ನಿಹ್ರಾಸ]

**ನಿಲಾಭಿ** (ನಾ). ಒಂದು ಬಗೆಯ ಗಿಡ : ಮುಡುಬುಶೂಲೆಗೆ :— ಹೊಸತರುತುಂಬಿಯ ನಿಲಾಭಿಯ ಹಣ್ಣಿನ ರಸದಲ್ಲಿ ಅರೆದು ಕಟ್ಟುವುದು (ವೈವಿ. ೧೯೭). [ ? ]

**ನಿಲಿಂಪ,** ನಿಳಿಂಪ (ನಾ). ಸುರ; ದೇವತೆ : ಉರಗನಿಕಾಯ ದಿಕ್ಪತಿನಿಕಾಯ ನಿಲಿಂಪನಿಕಾಯಮೆಲ್ಲಮಾದರದೊಳೆ ತಮ್ಮತಮ್ಮ ನಿಳಯಕ್ಕಿರದೊಯ್ದುಪರೊಲ್ದು ಕನ್ನೆಯಂ (ಕಾದಂಪೂ. ೧೧೧೪); ನಿಲಿಂಪರ್ ಕಾವುದೆನುತೆ ತುತಿಸುತಿರ್ದರ್ (ಅದ್ಭುತ. ೪೮-೨೮). **ನಿಳಿಂಪ :** "ಅಮರರ್ . . . ಸುಮನರ್ ಗೀರ್ವಾಣರ್ ಸುರರಮೃತಾಶರ್ ಕ್ರತುಭುಜರ್ ನಿಳಿಂಪರ್ ತ್ರಿದಶರ್" (ವಸ್ತುಕೋ. ೬-೩೧); ಮದಿರೋನ್ಮತ್ತನಿಳಿಂಪಕಿಂಪುರುಷಕಾಂತಾರಬ್ಧಸಂಗೀತಮೊಪ್ಪಿದುದಲ್ತೇ (ಪಂಪಭಾ. ೭-೭೨); ಪ್ರಮಥರಾನಂದಿಸೆ ನಿಳಿಂಪರು ನಮಿಸಲುಮೆ ಬೆಱಗಾಗುತಿರಲಾ ವಿಮಳಮೂರ್ತಿಯನಾಗ ಕಾಣುತ (ಬಸಪು. ೧೦-೩೮); ಜಯತು ಜನನದೂರಾಯೆಂದು ನಿಳಿಂಪಸಂಚಯವೆಯ್ದಿತು ತಮ್ಮ ನೆಲೆಗೆ (ಶ್ರೀಪಾಲ. ೧೪-೧೦೨). [ಸಂ.]

**ನಿಲಿಂಪನಿಲಯ,** ನಿಳಿಂಪನಿಳಯ (ನಾ). ದೇವತೆಗಳ ನಿವಾಸ; ಸ್ವರ್ಗ: "ಬರ್ದಿಲಮೆನಲ್ ನಿಲಿಂ [ಪಾಠಾಂ. ಳಿಂ]ಪನಿಲಯಕ್ಕೆ ನಾಮಂ" (ಚತುನಿ. ೬೫). **ನಿಳಿಂಪನಿಳಯ :** ಸಲೆ ದೇವಾಂಗನೆಯರ್ ನಿಳಿಂಪನಿಳಯಪ್ರೋದ್ಭೂತಸದ್ವಸ್ತುಸಂಕುಳದಿಂ ಶೋಧಿಸಿ ತನ್ನ ಗರ್ಭಮಂ . . . ಚೆಲ್ವಿನೊಳೊಂದಿ ಕಂಡರಿಸಿದಂತಾ ಕಾಂತೆ ಕಣ್ಗೊಪ್ಪಿದಳ್ (ಪರ್ಧಪೂ. ೧೧-೫೫); ಕಳವಿಂಗೆಱಗಿದ ಮನುಜರ ಕಳೇಬರಂಗಳುಮವರ್ಗೆ ಬಸವಲ್ಲೆಂತುಂ ಕಳವಿಂಗೆಱಗದ ನರಗರ್ೆ ನಿಳಿಂಪನಿಳಯಮುಮಧೀನಮಲ್ಲದುದಲ್ಲಂ (ನೀತಿಸುಂ. II, ೨೪೦). [ನಿಲಿಂಪ + ನಿಲಯ]

**ನಿಲಿಂಪೇಶ** (ನಾ). ದೇವತೆಗಳ ಒಡೆಯ; ದೇವೇಂದ್ರ : ಈ ನಿಲಿಂಪೇಶನಂ ಹಿಂದಿಕ್ಕಿಕೊಂಡ ರುಜೆಗಾನರೆವೆನೌಷಧಿಯಂ (ಚೆಬಪು. ೨೫-೧೫). [ನಿಲಿಂಪ + ಈಶ]

**ನಿಲಿಕು** 'ನೀಳ್ಕು' ನೋ.

**ನಿಲಿಕೆ** 'ನಿಲ್ಕೆ' ನೋ.

**ನಿಲಿಗೆ** 'ನಿಲ್ಕೆ' ನೋ.

**ನಿಲಿಪು,** ನಿಲಪು, ನಿಲುಪು (ಕ್ರಿ). ೧. ಸ್ಥಾಪಿಸು ; ಪ್ರತಿಷ್ಠೆಗೊಳಿಸು : ಇಂತಿವನರ್ಥಿಯಿಂ ನಿಲಿಪುವೆಂ[ಪಾಠಾಂ.ಪೆನೆಂ]ದು ಮುನಿಶ್ವರರೇಟುಲಿಂಗಮಂ ತಂದಿರೆ (ಸಮಪ. ೨-೬೨) ; ನಿಲಿಪಿ ಪೂಜಿಸಿ ನೆಲಪಿನ ಕಾಲಂ ಕೊಯ್ಕಲಣ್ಮದೇಱುತ್ತುಮಿಟಿಯುತ್ತುಮಿರ್ಪನಂ ಕಂಡು (ಧರ್ಮಾಮೃ. ೨-೧೨೯). **ನಿಲಪು :** ೧. ವೀರಗಲ್ಲ ನಿಲಪಿದಕೆ ××× (ಎಕ. XI, ಚಳ್ಳಕೆ. ೩೯-೩ ; 1553). **ನಿಲುಪು :** ೨. ಇಡು ; ಇರಿಸು : ಕಿನ್ನರನ ಮುನಿಸನಾ ಪರ್ಬುದಿಂಪಂ ತಿಳಿಪಿ ಮನ್ನಿಸುತಲವರ ಪದದೊಳು ಚಿತ್ತಮಂ ನಿಲುಪಿ (ಬಸರ. ೧೧-೨೧೨). ೩. ಶಾಶ್ವತವಾಗಿರು ; ಸ್ಥಿರವಾಗಿ ನಿಲ್ಲು : ಉಡುಪತಿ ರವಿ ಜಲಧಿ ಧಾತ್ರಿ ನಿಲುಪನ್ನೆವರ[ಂ] (ಇಅ. XVIII, ೩೯-೨೭ ; ಸು. 1076). ೪. ತಡೆ ; ನಿಗ್ರಹಿಸು : ನಿಡುಸುಯ್ಯಲ್ಲಂ[ಯ್ಲಂ] ತನ್ನನೊತ್ತಂಬರಿಸೆ ನಿಲುಪುತುಂ ನೀಳ್ದ ನಲ್ಕೇಶದಿಂದಂ ತೊಡೆಯುತ್ತುಂ ತೊಂಡೆವಾಯಂ ಶ್ರಮಜಲಕಣಮಂ ಮೇಲುದಿಂ ವಾರಿಸುತ್ತುಂ . . . ಪಾಣ್ಬೆಯೊರ್ವಳ್ ನಿಜಮಣಿಭವನದ್ವಾರದೊಳ್ ಬಂದು ನಿಂದಳ್ (ಸೂಕ್ತಿಸು. ೮-೧೬೭).
[<ನಿಲ್ + -ಪು₁]

**ನಿಲಿಸು,** ನಿಲ್ಲಿಸು (ಕ್ರಿ). ೧. ಸ್ಥಾಪಿಸು ; ಪ್ರತಿಷ್ಠೆಗೊಳಿಸು : ವಿಲಸಿತ ರತ್ನನಿರ್ಮಿತದಿವ್ಯಪ್ರತಿಮೆಯ ನಿಲಿಸಿದ ಮಯನ ಕೀರ್ತಿಸಿದ (ಮೋಹತ. ೨೨-೧೧). ೨. ನಡಿಗೆಯನ್ನು ತಡೆ ; ಗತಿಭಂಗ ಮಾಡು; ಚಲಿಸದಂತೆ ಮಾಡು : ಲೀಲೆಯೊಳೆ ಪಿಡಿದು ನಿಲಿಪಂ ವ್ಯಾಳೇಭಮನೊಂದು ಪೊಯ್ಲಿನಿಂದಮೆ ಕಡಿವಂ ತಾಳಂಗಳನುರ್ಚಿಸುವಂ ಶೈಲಶಿಳಾತಳಮನೆಳವೆಯೊಳ್ ನೃಪತನಯಂ (ಕಾದಂಪೂ. ೪೩೮) ; ಪೊಱಿತ್ತನಂತೆ ನಿಲಿಸಲರಿದಪ್ಪುದು ತೊಱೆಯಂತೆ ಪಾಯಲರಿದಪ್ಪುದು (ಧರ್ಮಾಮೃ. ೪-೧೭೫); ಪುಬ್ಬಿನಲಿ ನಿಲಿಸಿದನು ಪವನಜನುಬ್ಬಟೆಯನರ್ಜುನನ ವಿಕೃತಿಯನಿಬ್ಬರಾಲಾಪವನು ಧರ್ಮರಹಸ್ಯನಿಷ್ಠೆಯಲಿ (ಕುಪ್ರ್ಯಾಸ. ೧೪-೭೬). ೩. ಭದ್ರಗೊಳಿಸು ; ಭದ್ರವಾಗಿಸು : ಬನ್ನಿಯೂರ ಕೆಱೆಯಂ ಮುನ್ನಿರ್ದರಸುಗಳ್ ಪಲವು ಸೂೞ್ ಕಟ್ಟಿಸಿಯುಂ ನಿಲಿಸಲಾರ್ತರಿಲ್ಲ (ಮೈಆರಿ. ೧೯೩೦, ೭೬-೪೦ ; 1080). ೪. ಇಲ್ಲದಂತೆ ಮಾಡು ; ಅಡಗಿಸು : ಪರಸಮಯದ ಗರ್ವಮಂ ನಿಲಿಸಿ . . . ಪರಮ ಸುಖದಿಂದಿರ್ಪುದು (ಬಸರ. ೪-೫೪) ; ಜಲರುಹದಳಲೋಚನ ಮಮಕಾರದ ಲಲನೆಯರುಗಳ ಸಾಲ್ಗೊಳಿಸಿ ಗಲಭೆಯ ನಿಲಿಸುವ ಕಟ್ಟಿಗೆಗಾರ್ತಿಯರುಲುಹೆಸೆದುದು ಸಭೆಯೊಳಗೆ (ಮೋಹತ. ೪-೫). ೫. ತಂಗುವಂತೆ ಮಾಡು; ನೆಲಸುವಂತೆ ಮಾಡು ; ಬಿಡಾರ ಮಾಡಿಸು : ಅತಿಪ್ರತಾಪನಿಳಯನೆನಿಪ್ಪದ್ಭುಟದೇವನಾಲೋಕನಂಗೈದು ಎಲ್ಲರುಮನಂಜದಿರೆಂದಭಯಂಗೊಟ್ಟು ಸಂತವಿಸಿ ನಿಲಿಸಿ . . . ಅಧ್ವರಶಾಲೆಯಂ ಪೊಱಮಟ್ಟು (ಉದ್ಭಟ. ೪-೬೬ ಪ) ; ಕಾನನಾಂತರನಿಳಯದಲಿ ನಿಲಿಸೆಮ್ಮನೆಂದುದು ಸಕಲಮುನಿನಿಕರ (ಕುಪ್ರ್ಯಾಅ. ೧೮-೧೮) ; ಅವರ ಒಂದುಗೂಡಿ ಕೃತಾರ್ಥರಿವರಿನ್ನೆಂದು ಕೌಶಿಕನವರನಾ ದಳವಂದಿರದಲೇ ನಿಲಿಸಿ ಬಂದರು ಮಿಥುಳೆಗೊಲವಿನಲಿ (ತೊರರಾ. ೧-೧೨-೨೩). ೬. ಭಿಕ್ಷಾಸ್ವೀಕಾರಕ್ಕಾಗಿ ಸ್ವಲ್ಪಕಾಲ ತಂಗುವಂತೆ ಮಾಡು,—ವಿರಮಿಸುವಂತೆ ಮಾಡು : ನಾಗಸೇನರುಮೆಂಬ ಚಾರಣರ್ಕಾಂತಾರದ ಚರ್ಯಾಮಾರ್ಗದೊಳ್ಬರ್ಪರಂ ತಾನುಂ ಶ್ರೀಮತಿಯುಂ ಕಂಡು ನಿಲಿ[ಪಾಠಾಂ.ಱಿ]ಸಿ ನವವಿಧಪುಣ್ಯಸಪ್ತಗುಣಸಂಪನ್ನರಾಗಿ ಚರಿಗೆಯಂ ಮಾಡಿ (ಚಾವುಂಪು. ೨೪) ; ಒಂದು ದಿವಸಂ ಜಂಘಚಾರಣರ್ಚರಿಗೆಗೆವರೆ ಕುಬೇರಕಾಂತನುಂ ಪ್ರಿಯದತ್ತೆಯುಂ ಇದಿರ್ಗೊಂಡು ನಿಲಿಸುವುದುಂ (ಚಾವುಂಪು. ೬೧). ೭. ಉಳಿಸಿಕೊಳ್ಳು ; ಇರುವಂತೆ ಮಾಡು : ಇಂತಪ್ಪಪರಾಧಂಗೆಯ್ದುಂ ತಾನಲ್ಲದವೊಲೆಸೆವುದೀ ಶುಕನೊಳ್ಮತ್ತಂ ತೊಡರ್ದು ನಿಂದುದಪ್ಪೊಡಿದಂ ತೊಱೆಯದೆ ನಿಲಿಸಲಕ್ಕುಮೇ ಸಾರಿಕೆಯಂ (ಕಾದಂಉ. ೭೧) ; ಕೌಶಿಕಯಾಜ್ಞವಲ್ಕ್ಯಪ್ರಮುಖಮುನಿಜನರ ನಿಲಿಸಿದನು ಋತ್ವಿಕ್‌ಪ್ರಪೂತಸ್ಥಳದ . . . ಸ್ಥಾನಕದಲಜಸೂನು ಹರುಷದಲಿ (ತೊರರಾ. ೧-೭-೩೭) ; ವಿಷಮಚಿತ್ತವನಾತ್ಮನೊಳು ನಿಲಿಸಿದ ರಾಜಋಷಿಯಲ್ತೆ ರಾಜನೆ ನೀನು (ಭರಚ. ೨-೬೧). ೮. ಇರಿಸು ; ಮಡಗು : ಗಾಯಿಕೆಯರನಿರಿಸಿ ನೃಪಾಸ್ಥಾಯಿಕೆಯಿಂ ಪೊಱಗೆ ದೂತನೊಳಪುಗೆ ವರವೇತ್ರಾಯತಕರರ್ ಸಸಂಭ್ರಮಮಾಯೆಡೆಯೊಳ್ ತಂದು ನಿಲಿಸಿಯೆಡೆವಿಡಿಸುವುದುಂ (ಶಾಂತಿಪು. ೩-೩೦); ಶೀತವಾತಾತಪವರ್ಷಾದಿ ಸರ್ವದ್ವಂದ್ವದೋಷರಹಿತಮಪ್ಪದೊಂದು ರತ್ನಶಿಲಾತಲದೊಳ್ ಚಂದ್ರಾಪೀಡದೇವನಂ ನಿಲಿಸಿ (ಕಾದಂಉ. ೬೨೯) ; ಕಿಚ್ಚು ನವಿರುಡೆಗಳಂ ಕಾವಲ್ಗೆ ನಿಲಿಸಿ ಹುಚ್ಚನಿಂ ತಪ್ಪೊಪ್ಪೆ ಬಾಯ್ಕ್ಕೈಗಳಂ ಬಿಗಿದು (ಕಾಲೂರ. ೭೬-೧೪೦). ೯. ನೆಲೆಗೊಳ್ಳುವಂತೆ ಮಾಡು ; ಶಾಶ್ವತಗೊಳಿಸು ; ಸ್ಥಿರವಾಗಿರಿಸು : ವಿಹ್ವಳಸಂಸಾರಗುಹಾಗಹ್ವರಮಂ ಪೊಱಮಡಲ್ಕೆ ಬಗೆಯುಳ್ಳಾತಂ ಪ್ರಹ್ವಪರನಾಗಿ ನಿಲಿಪುದು ಜಿಹ್ವಾಗ್ರದೊಳರುಹನೆಂಬ ಮೂಱಕ್ಕರಮಂ (ಸಮಪ. ೧-೯೬) ; ಸಂಶುದ್ಧರ್ ಸಿದ್ಧರ್ ನಿತಾಂತಂ ನಿಲಿಸುಗೆ ನಿಜಶ್ರೇಯಸಶ್ರೀಯೊಳೆಮ್ಮಂ (ಅನಂಪು. ೧-೨) ;

ಇನ್ನುಂ ಧರಣಿಯೊಳೈವತ್ತು ಬರಿಸದ ವರ್ತನಂ ನೆಱೆವುದದನೆಮ್ಮ ಬಸವಾದಿಗಳ್ ಭಕ್ತಿಯಂ ನಿಲಿಸಲೆಂದು ಕಲ್ಯಾಣದೊಳ್ ಬಂದಿರ್ಪರವರೊಡನೆ ಕಳೆ (ಪದ್ಮರಾ. ೨-೨೨); ನಾರಾಯಣ ನಿನ್ನ ನಾಮಾಮೃತವನು ನಾಲಿಗೆಯಲ್ಲಿ ನಿಲಿಸಯ್ಯ (ಪುರಂದ. ೧-೧೬೬ ಪಲ್ಲವಿ). **೧೦.** ಪದವಿ, ಸ್ಥಾನ ಮುಂತಾದುವಕ್ಕೆ ಕೂರಿಸು : ಅವರಂ ಮಾಂಡಳಿಕ ಪದದೊಳ್ನಿಲಿಸಿ ಚತುಸ್ಸಹಸ್ರಮಕುಟಬದ್ಧಪರಿವೃತರಂ ಮಾಡಿ (ಚಾವುಂಪು. ೩೬); ಧರಣಿಪತಿ ಸಪ್ರಾಣನೇ ಗಜಪುರದ ರಾಜ್ಯಕೆ ನಿಲಿಸುವೆನು ಮೇಣ್ ಸುರರೊಳಗೆ ಸಮ್ಮೇಳವೇ ಕುಂತೀಕುಮಾರಂಗೆ (ಕುಮ್ಯಾಕ. ೧೪-೧೨). **೧೧.** ನಿಲ್ಲುವಂತೆ ಮಾಡು : ಸಿದ್ಧರ್ಕಳಾಗಿರ್ಪರೆಮ್ಮಾವಿಲಭಾವಂ ಪಿಂಗೆ ಕೈವಲ್ಯದೊಳೆ ನಿಲಿಸಿ ರಕ್ಷಿಕ್ಕೆ ಸದ್ಭಾವದಿಂದಂ (ಖಮದ. ೧-೨); ಹತ್ತಿರಾತನ ನಿಲಿಸಿ ಬಟ್ಟಲಲಿತ್ತು ವೀಳಯವನು ಸುಯೋಧನ • ಕೆತ್ತುಕೊಂಡಿರೆ ನುಡಿಸಿದನು ಕಲಿಕರ್ಣನವನಿಪನ (ಕುಮ್ಯಾದ್ರೋ. ೧-೧೫); ಸಮಸ್ತಸುರಜನಮುನಿಜನವ್ರಜವ ತಂದು ನಿಲಿಸಿದನಬುಜನಾಭನ ಮುಂದೆ (ತೊರರಾ. ೧-೮-೫೫); ಹುಚ್ಚನಿಂ ತಪ್ಪೊಪ್ಪೆ ಬಾಯ್ಕೈಗಳಂ ಬಿಗಿದು ಎಚ್ಚರವನೊರೆಯುತಿದೆ ಬಿಸಿಲಲ್ಲಿ ನಿಲಿಸಿ (ಕಾಲೂರ. ೭೬-೧೪೦). **೧೨.** ರಚಿಸು; ನಿರ್ಮಿಸು ; ಕಟ್ಟು : ಜಲರುಹಬೀಜರಾಜಿಗಳನಾಱಿಪ ಪರ್ಣಕುಟೀರಕಂಗಳಂ ನಿಲಿಸುವ . . . ವ್ಯವಸಾಯಮೆತ್ತಲುಂ (ಕಾದಂಪೂ. ೨೨೨); ಬಲಿದರೊಡ್ಡನು ಮಂಡಳಾಕೃತಿಗೊಳಿಸಿ ಕೌರವರಿವರು ಥಟ್ಟನು ನಿಲಿಸಿದರು ಚಂದ್ರಾರ್ಧಸದೃಶದಲಖಿಳಮೋಹರವ (ಕುಮ್ಯಾದ್ರೋ. ೧-೪೯). **೧೩.** ಕಾಪಾಡು ; ರಕ್ಷಿಸು ; ಉಳಿಸು : ಯತ್ನದಿಂ ನಿಜಶರೀರಮಂ ನಿಲಿಸವೇಟ್ಟುದಿಂ ದೇವಿಯರ್ (ಕಾದಂಉ. ೪೦೫); ನೀನೆ ಸಂತಂ ನಿಲಿಸಿದ ನೋಲವಿಂದಂ ವಿರೂಪಾಕ್ಷಲಿಂಗಾ (ಪಂಪಾಶ. ೧೪); ಅಖಿಳಜೀವವ್ರಾತವನು ನಿರ್ಮಿಸುವ ನಿಲಿಸುವ ಘಾತಿಸುವ ಲೀಲಾವಿನೋದವನಱಿವರಾರು(ನಿಭಾಗ. ೬-೩-೩೭). **೧೪.** ಹಿಂದಕ್ಕೆ ಸರಿಸು,—ತಳ್ಳು : ತಾಯ ನಿಲಿಸಿಯೆ ಪರಶುಗೊಡಲಿಯ ಬಾಯ ಮಸೆವುತ ಬಂದು ಭೂಪನ ದಾಯಿಗರ ಹರೆಗಡಿದು ಹಿಡಿದನು ಕಾರ್ತವೀರ್ಯಕನ (ಸಂಭಪ. ೨೬-೨೧). **೧೫.** ತಡೆ ; ನಿಗ್ರಹಿಸು ; ನಿರೋಧಿಸು : ಶತ್ರು ಬಲವಂತನಾದುದನಱಿದಿಂ ಬಱಿಕ್ಕಂ ಅದರ್ಕೆ ತಕ್ಕುದಂ ನೆಗಟ್ಟೆನೆಂದು ಪಲವುಮುಪಾಯದಿಂ ತಿಳಿಪಿ ನಿಲಿಸಿ (ಪಂಚತಂ. ೩೯-೧೯); ನೆಲಸದ ಯೋನಿ ಮುಟ್ಟದೆಡೆ ಕಾಣದ ಕಾಲಮುತತ್ವದೊಳ್ ಮನಂ ನಿಲಿಸದ ಭಾವಮುಳ್ಳಸದ ಪುದ್ಗಳವಿಲ್ಲ (ಸುಕುಮಾ. ೫-೩೨); ನಿಲಿಸಿರ್ಪೆ ತಂಗಿಯನು ತನ್ನಯ ಕೊಲೆಗೆ ಮಗನಳಿವೊಂದು ಸಾಲದೆ ತನ್ನ ನುಡಿಯೇಕೆ (ಕುಮ್ಯಾದ್ರೋ. ೬-೧೯); ಮನವ ನಿಲಿ[ಪಾಠಾಂ.ಒಲಿ]ಸಿಹೆನೆಂದು ನುಡಿವ ಅಣ್ಣಗಳ ಕಣ್ಣಗೆಡಿಸಿ ಬಣ್ಣಗುಂದಿಸಿ ಬಂಧನಕ್ಕೊಳಗುಮಾಡಿ ಭವದಲ್ಲಿ ಸೆಱೆಹಿಡಿದಿರ್ಪುದು ನೋಡಾ ಮನವು (ಅಖಂಡೇ.೨೫೭-೧). **೧೬.** ಮುಗಿಸು ; ಮುಕ್ತಾಯಮಾಡು ; ಪೂರೈಸು: ನಿಲಿಸಿ ಬೇಂಟೆಯನಲ್ಲಿ ಬಳಲಿದ ಬಲಸಮೇತದಿ ಬಂದು ತತ್ಪುರವಳೆಯುದುದ್ಯಾನವನು ಹೊಕ್ಕನು(ನಳಚ.೨-೧೪). **೧೭.** ತ್ಯಜಿಸುವಂತೆ ಮಾಡು;ಬಿಡಿಸು; ತೊರೆಯಿಸು:ಅಂಗವಿಕಾರದ ಸಂಗವ ನಿಲಿಸಿ ಲಿಂಗವನಂಗದ ಮೇಲೆ ಸ್ಥಾಪ್ಯವ ಮಾಡಿದನೆನ್ನ ಗುರು (ಸುಹಾದೇ. ಬ. ೨೩-೪೪); ಹಮ್ಮಂ ನಿಲಿಸಿ ಶಿವಭಕ್ತಸಂತತಿಯ ಕಡುಮನದ ಮೈಲಿಗೆಯ ತೊಳೆದ ಮಡಿವಳತಂದೆ ಕೊಡು ಮತಿಗೆ ಮಂಗಳವನು (ಚೆಬಪು. ೧-೧೬). **೧೮.** ಕಳೆ ; ಪರಿಹರಿಸು ; ನಿವಾರಿಸು : ನೀರಂ ತೋಱದೆ ಪಸಿದುದನಾರಯ್ಯದೆ ಸೇದೆಯಱಿದು ನಿಲಿಸದೆ ಪಿರಿದುಂ ಭಾರಮನೇಱಿಸಿ ಪಸುವಂ ದೂರಾಂತರಮೊಯ್ಯದೋವಿ ನೆಗಟ್ಟರ್ ಜೈನರ್ (ಸಮಪ. ೫-೧೨); ರಾಯಕಟಕವ ಬೆದಱಿಸಿದ ನಾರಾಯಣಾಸ್ತ್ರದ ಬಾಧೆಯನು ಕಮಲಾಯತಾಂಬಕ ನಿಲಿಸಿ ಸಂತೈಸಿದನು (ಕುಮ್ಯಾದ್ರೋ. ೧೯ ಸೂಚನೆ); ಹರಿಯ ಕೋಪಜ್ವಾಲೆಗಾ ಶಂಕರ ವಿರಂಚಿಸುರೇಂದ್ರಮುಖ್ಯರು ತರಹರಿಸಲಾರದೆ ಮಹೋಗ್ರವ ನಿಲಿಸು ನೀನೆನುತಾ ಸಿರಿಯ ಮರೆಯೊಗಲ್ (ಅನಂರಾ. ೧-೫-೭೬). **೧೯.** ಭಂಗಗೊಳಿಸು ; ನಾಶಮಾಡು : ಗುರುಸುತನನೊಟ್ಟೈಸಿ ಶಲ್ಯನ ಭರವಸವ ನಿಲಿಸಿದನು ಕೃಪನುಬ್ಬರದ ಗರ್ವವ ಮುಱಿದು ಕೃತವರ್ಮಕನ ನೋಯಿಸಿದ (ಕುಮ್ಯಾದ್ರೋ. ೫-೨೬). **೨೦.** (ಅಲಂ) ಉಡುಗೊರೆಯನ್ನಾಗಿಸು ; ಕಾಣಿಕೆಯನ್ನಾಗಿ ಮಾಡು : ರಾಯ ಜನಕನುದಗ್ರಹರಚಾಪಾಯುಧವನೊಡ್ಡಿದನು ಕಮಲದಳಾಯತಾಕ್ಷಿಯ ನಿಲಿಸಿದನು ಬರಿಸಿದನು ಭೂಭುಜರ (ತೊರರಾ. ೧-೧೪ ಸೂಚನೆ). **ನಿಲ್ಲಿಸು :** ೧. ೬೦ ವರಹದ ಭೂಮಿಯಂನು ಕಂಲು ನೆಟು ಫಲಿಸಿ ಕೊಟದರಿಂದ ಸೊಸ್ತಿಯಲಿ ಕೆಳುವನು ಕಲುಕಟದು ನಿಲ್ಲಿಸಿ ಆ ಹೊಲವ ಮೇರೆಯಲ್ಲಿ ನಿಂದಿರಿಸಿ (ಎಕ. VII. ಶಿಮೊ. ೧೦೫-೨೩; 1558). **೯.** ಬಳ್ಳದ ಬಾಯಂತೆ ಒಂದೇ ಮನವ ಮಾಡಿ ನಿಲ್ಲೆಂದು ನಿಲ್ಲಿಸಯ್ಯಾ (ಬಸವ. ೭೩೫). **೧೬.** ಓದುಗಾರಿಕೆ ಪ್ರಾರಂಭವಾಯಿತು. “ಶ್ರೀ”ಎಂದು ಸಿಗರದ ಗೌಡರು ರಾಗ ಎಳೆದರು. ಗದುಗಿನ ವೀರನಾರಾಯಣ ಎಂದು ನಿಲ್ಲಿಸಿದರು (ಚಂಗಾಳ್ವ. ೨೦). **೨೧.** ಬಿಡು ; ತೊರೆ ; ತ್ಯಜಿಸು : ನನ್ನೂರ ಹೊಲೆಯರು ಆಗಾಗ್ಗೆ ಬಡಿಯುವುದನ್ನು ನಿಲ್ಲಿಸಿ ಅವರದೇ ಆದ ಮಟ್ಟನಲ್ಲಿ ಹಾಡುತ್ತಾರೆ (ನನ್ನೂರು. ೫೦); ಏನಾದರೂ ಆ ನಿರ್ಧಾರವನ್ನು ನಿಲ್ಲಿಸುವುದಿಲ್ಲ (ಚಂಗಾಳ್ವ. ೪೮೫).

[ನಿಲ್ + -ಇಸು$_3$]

**ನಿಲೀನ** (ಗು). ೧. ಚೆನ್ನಾಗಿ ಕೂಡಿಕೊಂಡಿರುವ ; ಸರಿಯಾಗಿ ಹೊಂದಿಕೊಂಡಿರುವ : ಆನೆಗಳ ಸಾಲೆಗಳ್ ಪರಮಾನಂದಮನೆಯ್ದೆ ಮಾಱ್ಪುವಖಿಳಜನಕ್ಕಂ ದಾನಪರಿಮಳವಿಲೋಭನಿಲೀನಾಳಿಕುಳ ಪ್ರಣಾದದಿಂ ಮುಖರಂಗಳ್ (ಬಾಧಪು. ೧-೧೫೦). **೨.** ಚೆನ್ನಾಗಿ ಅಡಗಿರುವ.

[ಸಂ.]

**ನಿಲು**$_1$ ‘ನಿಲ್’ ನೋ.

**ನಿಲು**$_2$ ‘ನಿಲವು’ ನೋ.

**ನಿಲುಂಬಿಸು** (ಕ್ರಿ). ಒಟ್ಟುಗೂಡಿಸು ; ರಾಶಿಮಾಡು : ನಂಬುಗೆವಂತರ ಕರೆದು ನೂತನದ ನಿತಂಬಿನಿಯರು ಬೆಸಸಿದುದಾ ಇಂಬಿನೊಳೆಮಗಱುಹುತ ಬಹುದೆಂದು ನಿಲುಂಬಿಸಿ ಮನ್ನಣೆಯಿತ್ತ (ಭರಚ. ೩೨-೫). ‘ನಿಗುಂಬಿಸು’ ಪರಾ. [ನಿಲುಂಬು + -ಇಸು$_3$]

**ನಿಲುಂಬು,** ನಿಲುವು$_1$ (ಕ್ರಿ). ೧. ಒಟ್ಟುಗೂಡಿಸು ; ಒಟ್ಟುಸೇರಿಸು : “ನಿಲುಂಬು—ಪುಂಜೀಕರಣೇ (ಒಟ್ಟುಗೂಡಿಸು)” (ಶಮಧಾ); ಕೋಟಿಕೋಟಿ ಪ್ರಭೆಗಳ ತುಂಬಿಗುರುಳ್ಗಳೊಳ್ ನಿಲುಂಬಿ ಮೆಱೆವ ಚಿನ್ನಪೂದುಱುಗಲ ರತ್ನಕೆನ್ನಕೆಂಪುಗಳ ಬೆರಕೆವೆಳಗು . . . ನಿಂದು (ಅನಂಪು. ೧೪-೬೮ ಪ); ದಳಗೃಹಮಂ ನಿಯಾಮಿಪ ಸುಮೌಂಜಿಯ ತೀಡುವ ಪುಷ್ಪ ದರ್ಭೆಯಂ ದಳಫಳಮಂ ನಿಲುಂಬುವ ಮೃಗಾಜಿನಮಂ ಸರಿಮಾಳ್ಪ . . . ಮುನೀಂದ್ರರಿನೊಪ್ಪುಗುಮಾ ತಪೋವನಂ (ಚಂದ್ರಪ್ರ. ೧-೧೩೪). **೨.** ಗುಂಪುಗೂಡು ; ಒಟ್ಟಾಗು : ವನಿತಾರೂಪದ ಕಾಮಕಲ್ಪಲತೆಯೋ . . . ಲಲನಾಸ್ವರೂಪದತನುಶ್ರೀರೂಪಮೋ ಬರ್ಪುದೆಂಬಿನೆಗಂ ಮೆಲ್ಲನೆ ಬಂದು ಕಾಲ್ಗೆಱಗೆ ಲೀಲಾಲಂಬಿಲಂಬಾಲಕಾಳಿ ನಿಲುಂಬಿರ್ದಪು ಚಕ್ರವರ್ತಿಯ ಪದಾಂಭೋಜಂಗಳೊಳ್ ಕನ್ನೆಯಾ (ಆದಿಪು. ೩-೪೭); ಸಾರಿ ಬರ್ಪ ಭೇರುಂಡಂಗಳಿಂ ನಲಿವ ಪುಲಿಗಳಿಂ ನಿಲುಂಬಿದ ಮೊಲಂಗಳಿಂ. . . ಸರ್ವಪರ್ವತಸಾರ್ವಭೌಮನಖರ್ವಸಂಪದಂ ಮಿಗೆ ಮೆಱೆವುತಿರ್ದುದು (ರಾಜಶೇ. ೧-೧೩೫ ಪ). **೩.** ಮುತ್ತು ; ಆವರಿಸು : ತುಂಬಿ ಪರಿಮಳಕೆ ಬಳಸಿ ನಿಲುಂಬಿರೆ ನಿರ್ದಂಡಚಂದ್ರಕಚ್ಛತ್ರಮನಾಲಂಬಿಸಿದುದವನ ಸೇಸೆ ತುಱುಂಬಿನ ಮಂದಾರಪಾರಿಜಾತಪ್ರಸವಂ

(ಅನಂಪು.೨-೪೩). **೪.** ಗೊಂಚಲಾಗು ; ಜೊಂಪೆಯಾಗು : ಕೊಂಬು ಕೊಂಬುಗಳೊಳೊಂದೊಂದಱೊಳ್ಸಂದಣಿಸಿ ನಿಲುಂಬಿದ ರಸಾಲಪನಸ ಕದಳೀಕಪಿತ್ಥ . . . ತಿಂತ್ರಿಣೀಪರಿಪಕ್ವಫಲಂಗಳಂ ತಳೆದು ನಿಂದ ಕುಜ ಪ್ರಜಾತಮುಂ (ಪ್ರಪವಿ. ೧೧-೪೨ ಪ). **೫.** ಏರು ; ಮೇಲೆ ಬರು : ಕಮಳಿನಿ ಘನಮೋಹಂಬಡೆದು ಮುಳುಗಿದಂತೆ ನಿಲುಂಬಿದ ತೆರೆ ಪೊಯ್ಯೆ ಮುಳುಗುತುಂ ಮೋಹಿಸುಗುಂ (ರಾಜಶೇ. ೨-೬೮). **೬.** ನೆಗೆ ; ಹಾರು; ಕುಪ್ಪಳಿಸು : "ನಿಲುಂಬಿತು = ಕುಪ್ಪಳಿಸಿತ್ತು" (ಶಮದ.ಪಂ.೨). **೭.** ನೆಟ್ಟಗೆ ನಿಲ್ಲು ; ಮೇಲೇಳು : ಪೂಗೊಯ್ವ ಪುಳಿಂದಿ ಪಾಡುವ ಸಂಗೀತದಿಂಚರಕ್ಕೆ ಶ್ರುತಿಗುಡುವಂತೆಸೆವ ಪವನಪೂರಿತಕೀಚಕರಂಧ್ರ ನಿನದಕ್ಕೆ ಪೆಡೆಯೆತ್ತಿ ನಿಲುಂಬಿ ನಲಿವ ಫಣಿಗಳಿಂ (ರಾಜಶೇ. ೫-೫೫ ಪ). **ನಿಲುವು**$_1$ **: ೬.** ಚವುಡರಾಯನು ಮುಂದೆ ನಡೆಯಲು ಶಿವಗಣಾವಳಿ ನಲಿದು ಪರಮೋತ್ಸವದೊಳುಬ್ಬುತ್ತಲ್ಲಿಗಲ್ಲಿಗೆ ನಿಲುವುತಾರುತ್ತ ತವಕದಿಂ ಪಾರ್ಗುಪ್ಪೆಯಾಡುತ . . . ನಡೆಯಲು (ಬಸಪು. ೩೨-೩೭).

**ನಿಲುಂಬಿ** ನಿಲ್ = ಒಟ್ಟಾಗಿರು ; ಗುಂಪುಗೂಡು : ಸಾಂದ್ರ ಮರಂದರಸಭರಭರಿತ ಸುರಭಿಯುತ ವಿಕಚಕುಸುಮ ಮಂಜುಮಂಜರಿಪುಂಜ ದೋಳಿರದೆಱಗಿ ಪೊಱಮಡದೆ ನಿಲುಂಬಿ ನಿಂದು ನಿಬಿಡಮೆನೆ ಮುಸುಂಕಿದ ಮಧುಮುದಿತಮಧುಕರಪ್ರತಾನದಿಂ ಶ್ಯಾಮಳತೆವೆತ್ತು (ಶಬಶಂ.೨-೪೨ ಪ). 'ನಿಗುಂಬು' ಪರಾ. [<ನಿಲ್]

**ನಿಲುಕಡೆ** 'ನಿಲ್ಕಡೆ' ನೋ.

**ನಿಲುಕಿಸು** 'ನಿಲ್ಕಿಸು' ನೋ.

**ನಿಲುಕು**$_1$ 'ನೀಳ್ಕು' ನೋ.

**ನಿಲುಕು**$_2$ (ನಾ). **೧.** ಚಾಚುವಿಕೆ : ಪಡಿತಳವ ಬೀಸಿದರೆ ಕಾಲಿಕ್ಕಡಿ ನಡುವ ತಾಗಿದರೆ ಮಂಡಲವುಡಿದು ಬಿದ್ದುದು ನಿಲುಕಿನುಪ್ಪರ ಶಿರವ ಮನ್ನಿಸದು (ಕುಪ್ಯಾಭೀ. ೪-೩೭). **೨.** ಬಿಡುವು ; ವಿರಾಮ : ನಿಲುಕಿಲ್ಲದೆ ಪೊತ್ತು ತಂದುತಂದಂದುತಿರೆ ಖಳರಾಯ ಸಾವಿರಕರಂಗಳಿಂದೊಂದು ಜಲಕುಂಭಮುಮನಾಂತು ಮೇರುಶಿಖರಕ್ಕೆ ಕುಂಭದ್ರೋಣಮಳೆಗರೆವೊಲು ಅಲಸದೆಯೆರೆವುತಿರೆ (ನಪಮೋ. ೨೧-೨೫). **೩.** ಆರಂಭ ; ತೊಡಗುವಿಕೆ : 'ಯಕ್ಷಗಾನ'ದ ನಿಲುಕು (ದೊರೆತ ಸಾಕ್ಷಿಗಳಿಂದ) ಹನ್ನೊಂದನೆಯ ಶತಮಾನದ ತನಕವೂ ಹೋದೀತೆಂದೂ ಊಹಿಸಬಹುದು (ಯಕ್ಷಬ. ೩೪).
[<ನಿಲುಕು$_1$./**ತೆಲು.** ನಿಲಕ]

**ನಿಲುಕುಗಾಲ್,** ನಿಲುಕುಗಾಲು (ನಾ). ಹಿಮ್ಮಡಿಯನ್ನೆತ್ತಿ ಮುಂಗಾಲಿನ ಮೇಲೆ ನಿಂತುಕೊಳ್ಳುವಿಕೆ ; ಮೆಟ್ಟಂಗಾಲು ; ತುದಿಗಾಲು : ನೀಡುಂಗೊರಲು ನಿಲುಕುಗಾಲುಡಿದೆದೆಗೂಡು ವಿರಾಜಿಸುತಿರಲು (ನೇಮಿಸಂ. ೨-೪೭) ; ಒಳಸುತ್ತನೊತ್ತಿ ಬಿಗಿವನಿತಱೊಳ್ಬಾಗಿಲಿಂದೊಳಹೊಗುವುದಂ ಕಂಡು ಹಿಡಿವ ನಿಜಾಯಂ ಮಱೆದು ತಳುವ ದಂಗಣಕೆಯ್ದಿ ನಿಲುಕುಗಾಲೊಳ್ನಿಂದು ನಿಗುರಿ . . . ಬಿಗಿಯುಪ್ಪಿ (ಸಪ್ಯಕಾ. ೩-೧೨). **ನಿಲುಕುಗಾಲು :** ಸಲೂನು ತುಂಬಿ ಹೊರ ಚೆಲ್ಲಿದ್ದ ಗಿರಾಕಿಗಳು ಬಾಗಿಲಿಂದೀಚೆಗೆ ನಿಲುಕುಗಾಲಲ್ಲಿ ನಿಂತು ಒಳಗಿನವರನ್ನು ಕೆಕ್ಕಳಿಸುತ್ತಿದ್ದರು (ಗಾಳಿಪ. ೭೯).
[ನಿಲುಕು$_1$ (<ನೀಳ್ಕು) + ಕಾಲ್$_1$]

**ನಿಲುಕುಗಾಲು** 'ನಿಲುಕುಗಾಲ್' ನೋ.

**ನಿಲುಗಂಬ** (ನಾ). ಧ್ವಜ, ಚಪ್ಪರ, ಮಾಳಿಗೆ ಮುಂತಾದುವುಗಳಿಗೆ ಆಧಾರವಾಗಿ ನಿಲ್ಲಿಸುವ ಕಂಬ ; ಊರೆಗಂಬ : ಚಲುಮೆಯ ಭೂಮಿಯೊಳು ನಿಲುವುದೇ ನಿಲುಗಂಬ ಒಲೆಯುವದು ನಿಲದೆ ಎಳೆದತ್ತ ಹೆಣ್ಣಿನ ನೆಲೆಯನಾರ್ಬಲ್ಲ (ಸರ್ವಜ್ಞ. ೧೭೬೩).
[ನಿಲು$_1$ (<ನಿಲ್) + ಕಂಬ$_1$ (<ಕಂಭ)]

**ನಿಲುಗಂಬಳಿ** (ನಾ). ಉದ್ದವಾದ ಕಂಬಳಿ :(೬). 'ತುಂಡುಗಂಬಳಿ' ಪರಾ. [ನಿಲು$_2$ (<ನಿಲವು) + ಕಂಬಳಿ]

**ನಿಲುಗಡೆ** 'ನಿಲ್ಕಡೆ' ನೋ.

**ನಿಲುಗನ್ನಡಿ** 'ನಿಲುವುಗನ್ನಡಿ' ನೋ.

**ನಿಲುಗಾಲು** (ನಾ). (ಆಲಂ) ಬಿಡುವು; ವಿರಾಮ: ಕೆಲವರು ಆಹಾರ ಸಾಮುಗ್ರಿಗಳನ್ನು ಕೂಡಿಸಿಕೊಳ್ಳುವ ಸಲುವಾಗಿ ನಿಲುಗಾಲಿಲ್ಲದೆ ಓಡಾಡುತಿದ್ದರು (ಪುನರು. ೪೫೬). [ನಿಲು$_1$(<ನಿಲ್)+ಕಾಲು$_1$(<ಕಾಲ್$_1$)]

**ನಿಲುಗೊಳವೆ** (ನಾ). ಉದ್ದವಾದ ಕೊಳವೆ, —ನಳಿಕೆ: ನಿಲುಗೊಳವೆ, ಲಂಬನಾಳ (Stand-pipe. ಇಂಕಶ).
[ನಿಲು$_2$ (<ನಿಲವು)+ಕೊಳವೆ (<ಕೊಟವಿ)]

**ನಿಲುನೇಸರು** (ನಾ). ನಿಂತಲ್ಲಿಯೇ ಇರುವ ಸೂರ್ಯ ; ಸ್ಥಿರವಾಗಿರುವ ರವಿ : ಯೇಸುವಿನಾತ್ಮಮೊಡನೆ . . . ನಿಲುನೇಸರುಗಳೆಡೆಗಯ್ದೆ, ಕಣ್ಮುಗಿದು ತಲೆವಾಗಿ, ತನ್ನ ಪಡೆದೆರವನೊಡೆಯುಂಗೆ ಮರಳೀವಂತೆ ತನ್ನ ತಂದೆಗೆ ಯೇಸುವಸುವನೊಪ್ಪಿಸಿದಂ (ಗೊಲ್ಗೊಥಾ. ೧೩-೩೩೭).
[ನಿಲು$_1$ (<ನಿಲ್) + ನೇಸರು (<ನೇಸಱ್)]

**ನಿಲುಪಯಣ** (ನಾ). ಪ್ರಯಾಣ ಮಧ್ಯದಲ್ಲಿ ತಂಗುವುದು,— ನಡುವೆ ಬೀಡು ಬಿಡುವುದು ; "ನಿರ್ಯಾಣ, ಉಪ್ಪಯಣ" (ನಾನಾರ. ೬. ೯೦). [ನಿಲು$_1$ (<ನಿಲ್)+ಪಯಣ]

**ನಿಲುಪು** 'ನಿಲಿಪು' ನೋ.

**ನಿಲುಬಗೆ** (ನಾ). ನಿಲ್ಲುವ ರೀತಿ, —ಭಂಗಿ : ನಿಡುತೋಳೋ . . . ನಿಲುಬಗೆಯೋ ನಗುಮೊಗವೋ ತಹ ಸೊಗವೋ ಕನಸಿಗು ಇಂಥವ ಸುಳಿವೊಲ್ಲ (ಗೋಕುನಿ. ೧೩-೧೧). [ನಿಲು$_1$ (<ನಿಲ್)+ಬಗೆ$_3$]

**ನಿಲುಬಟ್ಟಲು** (ನಾ). ದೊಡ್ಡ ಬಟ್ಟಲು : ಅವನು ಟೆನ್ನಿಸ್ ಪಂದ್ಯಗಳಲ್ಲಿ ಗೆದ್ದಿದ್ದ ಹಲವು ಬೆಳ್ಳಿಯ ನಿಲುಬಟ್ಟಲುಗಳಿದ್ದವು (ಮಹಾಗ.೧೧೩).
[ನಿಲು$_2$ (<ನಿಲವು) + ಬಟ್ಟಲು (<ಬಟ್ಟಲ್)]

**ನಿಲುಮನೆ** 'ನಿಲ್ಮನೆ' ನೋ.

**ನಿಲುಮೆ** (ನಾ). **೧.** ರೀತಿ ; ಸ್ವಭಾವ : "ಕಾಲುಚೀಲದ ತೂತನ್ನು ಬೇರೆ ಯಾರಾದರೂ ನೋಡುವುದು ಸಾಧ್ಯವೇ ?" ಎಂದು ವಾದಿಸುವ ನಿಲುಮೆ ಅವರದು (ವಾತ್ಸಲ್ಯ. ೨೯) ; ಶರಣನು ಮಾನವರಂತೆ ಕಂಡರೂ ಅವನು ಮಾನವನಲ್ಲ. ಅವನ ನಿಲುಮೆ ಬೇರೆ (ಬಾಳಬ. ೧೨). **೨.** ಗುರಿ; ಲಕ್ಷ್ಯ : ಸೊಸೈಟಿಯ ನಿಲುಮೆ ಮತ್ತು ಮುನ್ನಡೆಗಳನ್ನು ಆಡಳಿತದ ವರದಿಯ ಮುಖಾಂತರ ನಿರೂಪಿಸಲಿಕ್ಕಾದರೂ ಜನರಲ್‌ಬಾಡಿ ಮೀಟಿಂಗ್ ನಡೆಸುವುದು ಮುಖ್ಯವಾಗಿತ್ತು (ಪುರಳಿ.೧೦೪) ; ಕಲ್ಮಡನನ್ನು ಬೆದರಿಸುವ ನಿಲುಮೆ ಗಳಿಸುತ್ತದೆ ಅವನ ಮನಸ್ಸು ಒಮ್ಮೊಮ್ಮೆ (ಕುಡಿಕೂ. ೯). **೩.** ಅಭಿಪ್ರಾಯ ; ಮತ ; ನಿಲವು ; ಧೋರಣೆ : ಈ ದೀರ್ಘ ಓಲೆಯ ಮುಖಾಂತರ ನಾನು ನನ್ನ ನಿಲುಮೆ ಸ್ಪಷ್ಟೀಕರಿಸುತ್ತಿದ್ದೇನೆ (ಸಿರೀಕ್ಷೆ. ೧೦೧) ; ನಿನ್ನ ಈ ನಿಲುಮೆಯನ್ನು ಬದಲಿಸಿಕೊಂಡರೆ ಎಲ್ಲರಿಗೂ ಒಳ್ಳೆಯದಾಗುತ್ತದೆ (ರೂಢಿ).
[ನಿಲು$_1$ (<ನಿಲ್) + -ಮೆ$_1$./**ತಮಿ.** ನಿಲೈಮೈ ; **ಮಲ.** ನಿಲಮ]

**ನಿಲುವಂಗಿ** (ನಾ). ಮೊಳಕಾಲವರೆಗೆ ಇರುವ ಉದ್ದವಾದ ಅಂಗಿ: ನಿಲುವಂಗಿ ಮುಂಡಾಸು ಮೂಲೆಗೊಂಗಡಿ ಮತ್ತೆ ತಲೆಯ ಮೇಲ್ಮುತ್ತಿನ ತುರಾಯಿ (ಸಿದ್ಧಕಾ. ೧೧-೧೨) ; ವೆಂಕಟಪ್ಪನಾಯಕನು . . . ಬಿಳಿಯ ಸುರುವಾಲು ಧರಿಸಿ ಬಿಳಿಯ ನಿಲುವಂಗಿಯನ್ನು ತೊಟ್ಟಿದ್ದನು (ಶ್ರೀರಾಯ. ೨೩೪) ; ಅವನು ಪ್ರಾರ್ಥನೆ ನಿಲ್ಲಿಸಿ ರೇಷ್ಮೆಯಂಚಿನ ನಿಲುವಂಗಿಯನ್ನು ಮೇಲೆತ್ತಿಕೊಂಡು ಒಂದೇ ಒಂದು ಮಂಡಿಯೂರಿ ನೆಲಕ್ಕೆ ಬಾಗಿದನು (ಪುನರು. ೧೭೮). [ನಿಲುವು$_2$ (<ನಿಲವು)+ಅಂಗಿ$_2$]

**ನಿಲುವಳಿ** (ನಾ). **೧.** ಉಳಿದುದು; ಬಾಕಿ; ಶಿಲ್ಕು : ಚಕ್ರವರ್ತಿಯು ತನ್ನ ಬೊಕ್ಕಸದಲ್ಲಿ ನಿಲುವಳಿಯಾಗಿ ಐದುವರ್ಷಗಳಿಂದ ಶೇಖರವಾಗಿದ್ದ ಧನರಾಶಿಯನ್ನೆಲ್ಲವನ್ನೂ . . . ವಿದ್ವಾಂಸರಿಗೂ ಬಡಬಗ್ಗರಿಗೂ ದಾನ ಮಾಡಿದನು (ಭಾಇಪ್ರ. ೩೪೨). **೨.** ತಡೆಯುವುದು : "ನಿಲುವಳಿ ; ನಿಲುಗಡೆ ; ಮುಂದಕ್ಕೆ ತಳ್ಳುವುದು" (Adjournment. ಇಂಕನಿ).

**ನಿಲುವಳಿ ಸೂಚನೆ**=ಸಭೆಯನ್ನು ಮುಂದುವರಿಸಲು ನೀಡುವ ಸೂಚನೆ. [ನಿಲು$_2$ (<ನಿಲವು)+-ವಳಿ$_3$]

**ನಿಲುವಾಭರಣ** (ನಾ). ತಲೆಯಿಂದ ಕಾಲಿನವರೆಗೂ ಧರಿಸಿರುವ ಒಡವೆ ; ಮೈ ತುಂಬ ತೊಟ್ಟ ಆಭರಣ : ಸವಿರಾದ ಸೀರೆ ; ನಿಲುವಾಭರಣ ; ಮುಡಿಯಲ್ಲಿ ಹೂವು (ವಚಭಾ. ೩೮) ; ಇನ್ನೊಂದು ಆತಂಕವೆಂದರೆ ಅವರ ಮೈಮೇಲೆ ನಿಲುವಾಭರಣ. ಆಗಿನ ಕಾಲಕ್ಕೂ ಒಬ್ಬೊಬ್ಬರ ಮೈಮೇಲೂ ಒಂದು ಸಾವಿರಕ್ಕೆ ಕಡಿಮೆಯಿಲ್ಲದಷ್ಟು ಒಡವೆಗಳು (ಅನಾಮಿ. ೬೦). [ನಿಲುವು$_2$ (<ನಿಲವು)+ಆಭರಣ]

**ನಿಲುವು$_1$** 'ನಿಲುಂಬು' ನೋ.

**ನಿಲುವು$_2$** 'ನಿಲವು' ನೋ.

**ನಿಲುವು$_3$** 'ನೆಲುವು' ನೋ.

**ನಿಲುವುಗನ್ನಡಿ** 'ನಿಲವುಗನ್ನಡಿ' ನೋ.

**ನಿಲೆ$_1$** 'ನೆಲೆ$_1$' ನೋ.

**ನಿಲೆ$_2$** (ಅ). **೧.** ಶಾಶ್ವತವಾಗಿ ; ಸ್ಥಿರವಾಗಿ : ಗಾಡಿಯಮ್ಮನಾಬಾಟಂ ಪ್ರತಿಪಾಲಿಸಿ ನಿಲೆ ಪಡೆದಂ (ಎಇ. VII, ೨೧೩-೧೬ ; 874) ; ಅಲರ್ಗಳನಾಂತ ಪಾದರಿಗಳೊಳ್ ತರದಿಂದೆಱಗಿರ್ದ ತುಂಬಿಗಳ್ . . . ರೂಢಿಯ ಬರ್ದುವೆಂದಿರಂ ನಿಲೆ ಸೆಱಗೆಯ್ವೆನೆಂದು ಪಲವಾಗಿರೆ ಮಾಡಿದ ತನ್ನ ಬಳ್ಳಿಸಂಕಲೆಗಳೆಂಬಿನಂ ಬಗೆಯನಿರ್ಕುಳಿಗೊಂಡುವದೊಂದು ತಾಣದೊಳ್ (ಕಬ್ಬಿಕಾ. ೫೬). **೨.** ದೃಢವಾಗಿ ; ಗಟ್ಟಿಯಾಗಿ ; ಭದ್ರವಾಗಿ : ಕೂರ್ತಂಗನೆಯರ್ ನೀತಿಯ ವಾರ್ತೆಯುಮಂ ಬಿಸುಟು ಪತ್ತುವರ್ ಪತ್ತಲೊಡಂ ಧೂರ್ತೆಯಿಂವಳೆಂಗುಮೋ ಎಂತಾರ್ತಪೆನಿಲ್ಲಾವತೆಱದೊಳಂ ನಿಲೆ ಪಿಡಿಯಲ್ (ಕಾದಂಪೂ. ೭೫೦) ; ಇರುಳುಂ ಪಗಲುಂ ಮಿಸುಕದೆ ನಿಲೆ ನಿಂದೆಸೆವಂ ಪಸರಿಸಿದಲ್ಲೋಕದೊಳ್ ಚತುರ್ಮುಖದೇವರ್(ಸಮುಪ. ೧-೧೬) ; ಕಾಪೋತ್ಕಂಠೆಯುಂ ಪಂಚತಟಪ್ರತಿಷ್ಠಾನುವಾದ ನಲ್ಲಳಸುವನಾಂ ಸಾಹಸದೊಳ್ ತಗುಳ್ಚಿ ನಿಲೆ ಪಿಡಿವ ನಯಮಂ ಬಗೆದು (ವರ್ಧಪು. ೪-೮೪).

**ನಿಲೆ ನಿಲ್**=ಸ್ಥಿರವಾಗಿ ನಿಲ್ಲು ; ಅಚಲವಾಗಿ ನಿಲ್ಲು : ನಿಲೆ ನಿಂದಂ ಜಿನಚಂದ್ರಭಾನುಪರಮಂ ಸಮ್ಮೋದಶೈಲಾಗ್ರದೊಳ್ (ಅನಂಪು. ೧೪-೪೯). **ನಿಲೆ ನುಡಿ**=ನಿರ್ಧಾರವಾಗಿ ನುಡಿ ; ದೃಢವಾಗಿ ಹೇಳು ; ಭಾಷೆ ಕೊಡು : ಆ ಮಾತಂ ನಿಲೆ ನುಡಿದುದರ್ಕೆ ಮೆಚ್ಚಿ (ಪಂಪಭಾ. ೬-೧೯ ಪ) ; ನಿಲೆ ನುಡಿವೀವ ಕಾವ ಧರೆಯಂ ಪ್ರತಿಪಾಲಿಪ ಧರ್ಮವೀಥಿಯಿಂ ತೊಲಗದ ಪೆರ್ಮೆಯಂ ತಳೆದ ಪೆರ್ಮಗನಂ ಭುವನಾಧಿಪತ್ಯದೊಳ್ ನಿಲಿಸಿ (ಪಂಂರಾಮಾ. ೬-೭೯) ; ಪಿರಿದೀವಂ ನಿಲೆ ನುಡಿವಂ (ಶಮದ. ೭೨ ಪ್ರಯೋ). **ನಿಲೆ ನುಡಿಯಿಸು**=ಪ್ರತಿಜ್ಞೆ ಮಾಡಿಸು : ಎನಗಾದ ತನುಜರಂ ದ್ಯುನದಿಯೊಳಾಂ ಬಿಡುವುದರ್ಕಂ ಕಡೆಯೊಳಾಂ ತಪಂಬಡುವುದರ್ಕಮೊಡಂಬಡುವುದೆಂದು ನಿಲೆ ನುಡಿಯಿಸಿ (ನೇಮಿಪು. ೩-೧೪ ವ). **ನಿಲೆಬೇ**=ಒಂದೇ ಸಮನೆ ಉರಿ ; ನಿರಂತರವಾಗಿ ಬೇಯು : ನಲೆ ನಿಲೆ ಬೇವ ಗುಗ್ಗುಳದ ಕರ್ವೊಗೆಯಿಂದಮಗುರ್ವಿನಾಳ್ದು ಕತ್ತಲಿಸುವ ಚಂಡಿಕಾಭವನದೊಳ್ . . . ವಸುಧಾತಳೇಶಯನಸುವ್ರತಮಂ ಲಲಿತಾಂಗಿ ತಾಳ್ದಿದಳ್ (ಕಾದಂಪೂ. ೩೬೫). **ನಿಲೆವಿಡಿ**=ಸ್ಥಿರವಾಗಿ ನಿಲ್ಲುವ ಹಾಗೆ ಮಾಡು ; ಶಾಶ್ವತವಾಗಿರುವಂತೆ ಮಾಡು : ತನುವಿಂದಂ ಪೋಗೆ ಜೀವಂ ನಿ [ಪಾಠಾಂ.ನಿ] ಲೆವಿಡಿಯದಱಂ ಬಾರದೆಂಬನ್ನೆಗಂ ತನ್ಮನಿಗಂತಪ್ಪೊಂದು ಕಾವಾಮಾತುರತೆ ಸಮನಿಸಿತ್ತೇತಱಿಂ (ಕಾದಂಪು. ೬೯೭).

[ದೇ.॥ ತಮಿ. ನಿಲ್ಲೈ,=ಸ್ಥಿರತೆ ; ತುಳು. ನಿಲೆ ,ದೃಢವಾದ]

**ನಿಲ್ಕಡೆ**, ನಿಲುಕಡೆ, ನಿಲುಗಡೆ (ನಾ). **೧.** ನಿಲ್ಲುವ ಜಾಗ; ಇರುವ ಸ್ಥಳ,—ನೆಲೆ. **೨.** ಬಿಡುವು ; ವಿರಾಮ : ನಿಲ್ಕಡೆವೆತ್ತಂದಿನಾಯುಷ್ಯವೆಂಭತ್ತನಾಲ್ಕು ಲಕ್ಷಾಂಕಪೂರ್ವಗಳು (ಭರಚ.೭೬-೭); ಕಡಲ ಮಧ್ಯದ ವಡಬಶಿಖಿಗೆ ಘನಘೋರವಾದಡವಿಯೊಳಗೊಗೆದ ದಾವಾಗ್ನಿಗಂ ದಕ್ಕಾರಿ ಪಿಡಿದ ಖಡ್ಗಕೆ ನಿಮಿಷಮುಂಟೆ ನಿಲ್ಕಡೆಯೆನಲ್ ಸವೞಿದಂ ಪರಬಲವನು (ಚೆಬಪು. ೪೩-೪೧) ; ಬಾಣಗಳಿಂದ ನಿಲ್ಕಡೆಗಳಿಲ್ಲದಲೆ ತೂರುತಿರೆ (ಮಲ್ಲಾರಿ. ೮-೮). **ನಿಲುಕಡೆ : ೧.** ವೇದ ಬಲ್ಲಿತ್ತೆಂಬೆನೆ ನಾನಾಮುಖದಲ್ಲಿ ಸ್ತುತಿಯಿಸಿತ್ತಲ್ಲದೆ ಲಿಂಗದ ನಿಲುಕಡೆಯ ಕಾಣದು (ಬಸವ. ೫೫೨) ; ಜಂಗಮದ ನಿಲುಕಡೆಯನಱಿಯಬೇಕು ಪ್ರಸಾದದಲ್ಲಿ ಪರಿಪೂರ್ಣನಾಗಿರಬೇಕು (ಚನ್ನವ. ಕ. ೮೩೮-೯೩೧). **೩.** ಕೊನೆ ; ಅಂತ್ಯ ; ಮುಕ್ತಾಯ : ಇಷ್ಟಮಹಾಲಿಂಗದೇವಂಗೆ ಕೊಟ್ಟು ಕೊಂಬುವಂತಹದೆ ಇದಿರಿಟ್ಟು ಜಂಗಮಪಾದೋದಕಪ್ರಸಾದವ ಕೊಂಬ ಆಚರಣೆಯ ನಿಲುಕಡೆ ನೋಡಾ (ಮಹಾದೇ. ಕ. ೭೭-೧೯೨) ; ಕೆಲಸವಿದು ಲೇಸಾಗಿ ತೋಱಿತು ಸಿಲುಕು ರಾಮನ ರಾಜಕಾರ್ಯಕೆ ನಿಲುಕಡೆಯಿದೇನೆಂದು ಚಿಂತಿಸಿದನು ವಿರಂಚಿಸುತ (ತೊರರಾ. ೪-೧೧-೧೦) ; ಶಾಂತಿಪರ್ವವೆಂಬ ಮಹಾಫಲವುಳ್ಳದ್ದಾಗಿ ಆಶ್ರಮವಾಸಪರ್ವವೆಂಬ ನಿಲುಕಡೆಯುಳ್ಳದ್ದಾಗಿ (ಕೃವಾಆ. ೩) ; ಊಹೆಯ ಮೇಲೆ ಬುದ್ಧಿ ಓಡಿಸುತ್ತಾ ಹೋದರೆ ಎಲ್ಲಿ ನಿಲುಕಡೆ ಉಂಟು ? (ತವನಿ. ೧೨೩). **೪.** ಸ್ಥಿತಿ ; ಇರವು ; ಅವಸ್ಥೆ ; ಸ್ವರೂಪ : ಇಂತು ಪ್ರಭುದೇವರು ನಿರ್ವಾಣದ ನಿಲುಕಡೆಯ ನಿರೂಪಿಸಲು (ಶೂನ್ಯಸಂ. ೬೭-೧೩೧) ; ಗುರುವಿನ ನಿಲುಕಡೆಗೆ ಬೆಱಗಾಗುತಿರ್ದನು ಬಳಿಕ ಗೋರಕ್ಷ (ಪ್ರಭುಲೀ. ೧೯-೫೩) ; ತೋಱುಕೆಯಳಿದು ನಿಂದ ತುರ್ಯಾತೀತದಿಂ ತೊಲಂಗಿ ದೂರವಾದ ಸರ್ವಸಾಕ್ಷಿಕವಾಗಿ ನಿಂದ ನಿಲುಕಡೆಯೆ ಸಹಜಾವಸ್ಥೆಯೆನಿಪುದಭಿಪ್ರಾಯ (ಶಿವಪ್ರ. ೫೭-೩) ; ವಿಮರ್ಶೆಗೆ ಹೊಸ ನಿಲುಕಡೆ ಬಂದಿದೆ (ಕಸಾಚ. ೧೨೮). **೫.** ಅಭಿಪ್ರಾಯ ; ನಿಲುವು : ಧರಣೀಶ ಪರನಾರಿಯರ ಮನದ ನಿಲುಕಡೆಯ ನರಿಯದೆ ಮನದಿ ಭ್ರಮಿಸಲು ಬರ್ಪುದತಿಬಾಧೆ (ನವಮೋ. ೮-೪೯). **೬.** ನಿರ್ಣಯ ; ತೀರ್ಮಾನ ; ನಿರ್ಧಾರ : ಮೊದಲು ನಿಲುಕಡೆಯಾದ ಬಳಿಕವೆ ತುದಿಗೆ ಬಡ್ಡಿಯ ಮಾತು (ಕೋಗಯ. ೨೭-೨೦). **೭.** ಎತ್ತರ ; ಉದ್ದ : ಬಲವೆತ್ತ ಕೃತಯುಗದವರ ಅಳತೆಗೊಂದೆ ಮೂರು ಪುರುಷಪ್ರಮಾಣದ ನಿಲುಕಡೆಯವರ ದೇಹಗಳು (ಭರಚ. ೫೧-೬೨). **೮.** ತಡೆ ; ಅಡ್ಡಿ : ನೆಲದೊಳ್ ಜಲವೆಂಬ ಭ್ರಾಂತಿಯಿಂ ನಿಲುಕಡೆಗಳೆಲ್ಲಿ ಬಾಗಿಲೆಂದು ಭ್ರಾಂತಿಯಿಂ ತನಗೆ ಆದ ಅಪಮಾನವಂ ನೋಡಿ (ಕೃಷ್ಣಕ. ೧೦-೧೭೧). **೯.** [ಸಂಗೀತ] ಸ್ವರಗಳು ನಿಲ್ಲುವ ನಿರ್ದಿಷ್ಟವಾದ ಸ್ಥಾನ ; ಸ್ಥಾಯಿ : ಎಸೆವ ಪಂಚಮ ಮಧ್ಯ . . . ಮಂದ್ರ ತಾರಮೆಂಬಿವಱ ನಿಲುಕಡೆಯನಱಿದು (ಚೆಬಪು. ೨-೨೮). **ನಿಲುಗಡೆ: ೧.** ನಮ್ಮ ನೆಲವಿದು, ನಮ್ಮ ಹೊಲವಿದು ನಮ್ಮ ನೆತ್ತರು ಬಿಡುಗಡೆ ; ನಮ್ಮ ತಾಯಿಯ ಪಾದಧೂಳಿಯು ನಮ್ಮ ಪ್ರಾಣದ ನಿಲುಗಡೆ (ನೆಲಮು. ೪೭-೨೮). **೨.** ಉಭಯಸೈನ್ಯಗಳಿಗೆ ನಡುವೆ ನದಿಯೊಂದು ಅಡ್ಡವಾಗಲು, ಎರಡು ಬಣಕ್ಕೂ ನಿಲುಗಡೆ (ಅಳೌಕ. ೨೮). **೩.** ಮುಖ್ಯಕೃತಿಯ ಕೊನೆಯ ಸಂಪುಟ ಹೊರಬಿದ್ದದ್ದು ೧೯೨೮ರಲ್ಲಿ. ಈ ನಿಲುಗಡೆಯನ್ನು ಕಾಣುವುದಕ್ಕೆ ಎಷ್ಟೋ ಮುಂಚೆಯೇ ಈ ನಿಘಂಟಿನ ಪ್ರವರ್ತಕರೆಲ್ಲರೂ . . . ತಮ್ಮ ದೀರ್ಘಜೀವನಗಳನ್ನು ಮುಗಿಸಿದ್ದರು (ಸಮಾಲೋ. ೨೬೫) ; ಬಿಡುಗಡೆಯೋ ಹೋ ಬಿಡುಗಡೆ

ಎಲ್ಲ ತಪಕೂ ನಿಲುಗಡೆ (ಗೋಕಾಶಿ. ೩೬–೧೭) ; ತಾನೇ ಅನೇಕವಾಗು ವುದರಲ್ಲೇನೂ ಅರ್ಥವಿಲ್ಲವೆಂದೂ ಅಂಥ ಅನೇಕವಾಗುವ ವ್ಯಾಪಾರಕ್ಕೆ ನಿಲುಗಡೆಯೊಂದನ್ನು ಯೋಚಿಸುವುದಕ್ಕಾಗುವುದಿಲ್ಲವೆಂದೂ ಮಾಧ್ಯಮಿ ಕನು ಪ್ರಭಾವಶಾಲಿಯಾಗಿ ವಾದಿಸುತ್ತಾನೆ (ತತ್ತ್ವಪ್ರಾ. ೨೧೨). **೪.** ಈಗ ಅವಳ ಜೀವನ ಒಂದು ನಿಲುಗಡೆಗೆ ಬಂದಿತು (ದುಂಬಿಕ. ೫೦) ; ದುಸ್ಥಿತಿಗೆ ಇಳಿಯುತ್ತಿದ್ದ ರಾಷ್ಟ್ರೀಯಪಕ್ಷದ ಪರಿಸ್ಥಿತಿಯನ್ನು ಸುಧಾರಿಸಿ ಉತ್ತಮ ಗೊಳಿಸಿ ನಿಶ್ಚಿತ ನಿಲುಗಡೆಗೆ ಮುಟ್ಟಿಸುವ ಸಾಹಸದಲ್ಲಿ ಅವರು ಕೃತಕೃತ್ಯ ರಾದರು (ರಾಜಸ. ೨೦). **೧೦.** ನಿಂತಿರುವ ರೀತಿ ; ಠೀವಿ : ನಿಲಿಸಿ ನಾಸಾಗ್ರದೊಳೆಡಗೈಯ ಬೆರಲೊಂದ ಬಲಗೈಯ ಜಾನುವಿಗಿಟ್ಟು ಚಲುವನೆಸೆದನು ಕಂಭವ ನೆಮ್ಮಿ ತಾ ನಿಂದ ನಿಲುಗಡೆ ಜಗವ ಸೋಲಿಸುತ (ಭರಚ. ೩–೨೦). **೧೧.** ನಿಲ್ಲುವಿಕೆ ; ನಿಂತುಕೊಳ್ಳುವಿಕೆ : ಬೆಂಗಳೂರಿನಿಂದ ಮೈಸೂರಿಗೆ ಅನೇಕ ನಿಲುಗಡೆರಹಿತ ಬಸ್ಸುಗಳು ಓಡಾಡುತ್ತವೆ (ರೂಢಿ).

[ನಿಲ್‌+ಕಡ್ಡಿ$_3$./**ತುಳು.** ನಿಲಗಡೆ, ನಿಲ್ಗಡೆ ; **ತೆಲು.** ನಿಲುಕಡ]

**ನಿಲ್ಕಿಸು,** ನಿಲುಕಿಸು (ಕ್ರಿ). **೧.** ಎಟುಕಿಸು; ಮುಟ್ಟು ; ಹಿಡಿದು ಕೊಳ್ಳು : ಪಾತಾಳದಿಂ ನಿಲ್ಕಿಸಲ್ಕುನಿಪಾಂಘ್ರಿದ್ವಯಮುಂ ಫಣೀಂದ್ರ ನೊಲವಿಂ ಸದ್ಭಕ್ತಿಯಿಂದೊಲ್ದು . . . ಕೂರ್ತು ನೋಡಿದಪನೋ ಪೇಟಿಂಬ ಭ್ರಾಂತಿಯಂ ಪುಟ್ಟಿಸಿ ತೊಳತೊಳಗುವ ಬಾಲಾರ್ಕನಂತಪ್ಪ ಶಿಶುವಂ ಕಂಡು (ಧರ್ಮಾಮೃ. ೮–೧೦೪). **ನಿಲುಕಿಸು : ೨.** ಚಾಚು ; ನೀಡು : ತನು ಮುರಿಮುರಿದು ನಿಲು[ಪಾಠಾಂ. ಲಿ]ಕಿಸುತ್ತಂ ಮನವ ಲರಿಸುತ್ತಾಗಳಿಸುತುಸುರನುಗೊಳಿಸುತಂ ಕಣ್ದೆರೆದು ನೆರೆ ಚಿಕ್ಕಮಾದಣ್ಣ ಅನಘ ಮಾದರಸಯ್ಯನಂ ಕಂಡು (ಬಸಪು. ೪೭–೫೯). **೩.** ಸಿಕ್ಕುವಂತೆ ಮಾಡು ; ದೊರಕಿಸು: ಮಹಾತ್ಮರು . . . ಮಾನವಕುಲಕ್ಕೆ ಒಂದೇ ಪರಮಸತ್ಯವನ್ನು ಬೇರೆಬೇರೆ ನಿಟ್ಟುಗಳಿಂದ ನಿಲುಕಿಸಬಹುದೆಂಬುದನ್ನು ಸಾರಿ ಹೇಳುವರೆಂದೂ ಭವಿಷ್ಯ ನುಡಿಯಬಹುದಾಗಿದೆ (ತತ್ತ್ವಪ್ರಾ. ೫೯೭).

[ನಿಲ್ಕು (<ನೀಳ್ಕು) +–ಇಸು$_3$]

**ನಿಲ್ಕು** 'ನೀಳ್ಕು' ನೋ.

**ನಿಲ್ಕೆ,** ನಿಲಿಕೆ, ನಿಲಿಗೆ, ನಿಲ್ಗೆ (ನಾ). **೧.** ನಿಲ್ಲುವಿಕೆ ; ನೆಲೆಗೊಳ್ಳು ವಿಕೆ ; ನೆಲಸುವಿಕೆ : "ನಿಲವೆನೆ ನಿಲ್ಕೆಯೊಳ್" (ಕರ್ಣಾನಿ. ೫೮) ; ನೀತಿಯ ನಿಲ್ಕೆ ಜಾನದ ನೆರಂ ಪಳವಾತಿನ ಗಾದೆ (ಸಂಸಪ. ೪–೧). **೨.** (ಸಂಖ್ಯೆಯ) ನಿಲುಗಡೆ : ನಾಲ್ಕುತತ್ತ್ವದ ಪಿಡಿ ಮೂಱು ತತ್ತ್ವಗಳಲ್ಲಿ ಸಿಲ್ಕದಿರೆಂಬ ಶಿಕ್ಷಕರು ನಾಲ್ಕುಸಾವಿರದ ನೂಱೈವತ್ತು ಯೆಂಬೊಂದು ನಿಲ್ಕೆಯೊಳಿಹರಲ್ಲಿ ಕೇಳು (ಭರಚ. ೬೬–೬೯). **ನಿಲಿಕೆ : ೩.** ಶಾಶ್ವತವಾದುದು : ಬಾಗ್ಯತ × × × ರುಗೂಡಿ ನಿಲಿಸಿದ ನಿಲಿಕೆಯ ಧರ್ಮ್ಮಶಾಸನವನಾನೊಬ್ಬನರಸು ತಪ್ಪಿದಡೆ ಸಾಯಿರ ಕವಿಲೆಯ ಬಾಣರಾಸಿಯಲು ಅಳಿದ ದೋಷವು (ಎಕ. VI, ಮೂಡಗೆ. ೩೭–೧೩ ; 1154 ?). **೪.** ಧಾನ್ಯವನ್ನು ಅಳೆಯುವಾಗ ಸೇರಿನಲ್ಲಿ ನಿಲ್ಲಿಸಿ ತುಂಬುವುದು : ನಾಗಂಡುಗದಲು ನಿಲಿಕೆ ಬತ್ತದ ಹಾನೆಯಲು (ಸೌಇಎ. 1932, ಉಡುಪಿ. ೩೧೪–೨೩ ; 1293). 'ತೇಕೆ' ಪರಾ. **ನಿಲಿಗೆ: ೪.** ಶ್ರೀಕಳಸನಾಥದೇವರಿಗೆ ಮಾಡಿದ ಸೋಮವಾರದ ಧರ್ಮ್ಮ . . . ಸಂಕ್ರಮಣದ ನಿಲಿಗೆತ್ತಿಂಗಳು ಲಕ್ಕ ಸೋಮವಾರ ೧ಕ್ಕೆ ಅಮೃತ ಪಡಿ ಖ ೩ ೧/೨ (ಎಕ. VI, ಮೂಡಗೆ. ೪೦–೧೪; 1552). **ನಿಲ್ಗೆ : ೧.** ನಿಲ್ಕೆ, ನಿಲ್ಗೆ (ಶಬ್ದಾನು. ೪೭೨ ಪ್ರಯೋ). [ನಿಲ್‌+–ಕೆ./**ತುಳು.** ನಿಲಿಕೆ]

**ನಿಲ್ಗಡಿ** (ನಾ). (ನೀರನ್ನು ತಡೆದು ನಿಲ್ಲಿಸುವ) ಏರಿ; ದಡ : ಮರು ತಜನ ಕಣ್ಣುರಿಗೆ ಗುಡಿಯವಾಗಿ, ಕಡಲ ನೀರ್ನಡೆಗೆ ನಿಲ್‌ಗಡಿಯಾಗಿ . . . ಕುಳ್ತುದೆಲೆವನೆವಕ್ಕಿ (ಶ್ರೀರಾಮಾ. ೪೮೨–೨೧೨). [ನಿಲ್‌+ಗಡಿ$_1$]

**ನಿಲ್ಗಲ್ಲು** (ನಾ). (ಎತ್ತರವಾಗಿ) ನಿಂತಿರುವ ಕಲ್ಲು ; ಎತ್ತರವಾದ ಶಿಲೆ : ಆ ಪುರದ ಸೀಮೆ ಎನ್ತೆಂದಡೆ ಮೂಡಲು ಹೆಮ್ಮಾಡಿಯ ಬಸದಿಯ ಕೆಯ್ಯ ಹಡುವಣ ನಿಲ್ಗಲ್ಲು ಮೇರೆ ತೆಂಕಲು ಭಗವತಿಯ ಕೆಯ್ಯ ಬಡಗಣ ಸೀಮೆ (ಎಕ. VII. ಶಿಕಾರಿ. ೧೨೩–೭೮; 1159).

[ನಿಲ್‌+ಕಲ್ಲು(<ಕಲ್$_3$)]

**ನಿಲ್ಗೆ** 'ನಿಲ್ಕೆ' ನೋ.

**ನಿಲ್ದಾಣ** (ನಾ). **೧.** ಸ್ಥಿರವಾದ ಆವಾಸಸ್ಥಾನ ; ನೆಲೆ : ಆನಂದದ ನಿಲ್ದಾಣವೇ ಸೌಂದರ್ಯ (ಸೌಂದಸ. ೧೬). **೨.** ಪ್ರಯಾಣಿಕರು ಹತ್ತಿ ಇಳಿಯುವುದಕ್ಕೆ ಅವಕಾಶವಿರುವಂತೆ ವಾಹನಗಳು ನಿಲ್ಲುವ ಸ್ಥಳ; ನಿಲ್ಮನೆ ; ಸ್ಟೇಷನ್ನು : ರೈಲುನಿಲ್ದಾಣದಲ್ಲಿ ನಿಂತು ಒಂದುದಿನ ಅಲ್ಲಿಗೆ ಬಂದ ಹೊಸಮುಖಗಳನ್ನೆಲ್ಲ ನೋಡಿದಾಗ ಯಾರಿಗೇ ಆಗಲಿ ಆ ಜನರ ಬಗ್ಗೆ ಯಾವ ಭಾವನೆಯೂ ಬರಲಾರದು (ಅಪನಾ. ೨೪೪) ; ನಿಲ್ದಾಣದಲ್ಲಿ ರೈಲು ಬಂದು ನಿಂತ ಕೂಡಲೇ . . . ಸಾಮಾನುಗಳನ್ನು ಗಾಡಿ ಯಲ್ಲಿಡಲು ಓಡಿಹೋದನು (ಸುಂದರಿ. ೧೦) ; ಪ್ರತಿಯೊಂದು ನಿಲ್ದಾಣ ದಲ್ಲಿಯೂ ಜೀವರುಗಳು ಬಂದು ನಿಂತು ಏನಾದರೂ ಸ್ವಲ್ಪ ವಿಕಾಸ ಪಡೆದು ಹೋಗುತ್ತಿರುತ್ತಾರೆ (ಜೀವಾತ್ಮ. ೨೫೭). [ನಿಲ್‌+ತಾಣ]

**ನಿಲ್ನೀರು** (ನಾ). ನಿಂತ ನೀರು ; ದಡದ ಬಳಿಯಿರುವ ನೀರು : ಲಕ್ಷ್ಮಣನದಂ ಪಡದೆಡೆಯ ತೆಳ್ಪೆ ನಿಲ್‌ನೀರಿಂದೆ ಹರಿನೀರ್ಗೆ ನೂಂಕಿದನ್ ನೀಳ್ಗಳುಗಳಿಂ (ಶ್ರೀರಾಮಾ. ೧೩೯–೩೮೧). 'ಪರಿನೀರ್' ಪರಾ.

[ನಿಲ್‌+ನೀರು (<ನೀರ್$_1$)]

**ನಿಲ್ಪು** (ನಾ). ನಿಲ್ಲಿಸುವಿಕೆ ; ತಡೆ : ಕೋಡಿ ಗಂಗೆಯಾ ನಿಲ್ಪು ಮಾಡ [ಡಿ]ದೆಯೆಂದರವನಿಪನ ನುಡಿಗೇಳ್ದು ಬಲ್ಪಿನಿಂದೂರುವಂ ನಖದೊಳುಂ ಶೀಳಿ ಬಿಡೆ ಪೊಲ್ಪಿನಿಂ ಜಾಹ್ನವಿಯುಳೀಂ ನಿಶಾನಂದಕಾನನದಿ ನಡೆಗೊಂಡಳು (ಪರಶು. ೩೪–೨೨). [ನಿಲ್‌+–ಪು$_2$]

**ನಿಲ್ಮನೆ,** ನಿಲುಮನೆ, ನಿಲ್ಲುಮನೆ, ನಿಲ್ಲುವನೆ (ನಾ) ೧=ನಿಲ್ದಾಣ **೨.** ದೇಶದ ಮೂಲೆಮೂಲೆಗಳಿಂದ ಕಾಂಗ್ರೆಸ್ ವರ್ಕಿಂಗ್ ಕಮಿಟಿಗೆಂದು ಬಂದ ದೇಶಭಕ್ತರು ನಿಲ್ಮನೆಯಲ್ಲಿ ನೆರೆದಿದ್ದಾರೆ (ಪ್ರಣಸ. ೨೩) ; ರೈಲು ನಿಲ್ಮನೆಯನ್ನು ಬಿಟ್ಟು ಒಂದು ಫರ್ಲಾಂಗು ಮುಂದೆ ಬಂದಿದೆ (ತೇಮೋಜ. ೬೫) ; ಇಲ್ಲಿದೋ ! ಗಂಧರ್ವಲೋಕಕಿಹ ಮುಗಿಲುಗಾಡಿ ! ಓಡುತಿದೆ ರೈಲಿಲ್ಲದೆ ! ಅದಕೆ ನಿಲ್ಮನೆಯಿಲ್ಲ ನಿಯಂತ್ರಕನಿಲ್ಲ (ದ್ಯಾವಾಪೃ. ೪೫–೧೫). **ನಿಲುಮನೆ : ೧.** ನೆಕ್ಲುದೋವ್ . . . ರೈಲ್ವೆ ನಿಲುಮನೆಯ ಕಡೆಗೆ ಹೊರಟನು (ಪುನರು. ೪೪೯); ಮನ್ನಾರ್‌ಪರ್ಯಾಯದ್ವೀಪದ ತುದಿಯಲ್ಲಿ ಸಿಲೋನ್ ಗವರ್ನಮೆಂಟ್ ರೈಲ್ವೆ ತುದಿಯ ನಿಲುಮನೆಯಾದ ತಲೈ ಮನ್ನಾರ್ ಇದೆ (ಭೂವಿಸ. ೪೦೪). **ನಿಲ್ಲುಮನೆ : ೧.** ಇಂದಿರಾ—ಜಯ ರಾಯರು ಪ್ರವಾಸಮಾಡಿ ಬೆಂಗಳೂರಿಗೆ ಮರಳಿ ಬಂದರು ; ಶ್ರೀಕಂಠನು ಅವರನ್ನು ಬರಮಾಡಲೆಂದು ನಿಲುಮನೆಗೆ ಹೋಗಿದ್ದನು (ಇಂದಿರೆ. ೨೪). **ನಿಲ್ಲುವನೆ : ೨.** ನೆಲೆ ; ನೆಲೆವೀಡು : ಈ ಪ್ರತೀತಜೀವನಪರ್ವತದ ಉತ್ತುಂಗಶಿಖರದಲ್ಲಿ ಆತ್ಮವಿದ್ಯೆಯ ನಿಲ್ಲುವನೆಯಿದೆ(ಸಾಹಿವಿ. ೫೩).

[ನಿಲ್‌+ಮನೆ]

**ನಿಲ್ಮಾನಸ** (ನಾ). ನಿಂತಿರುವ ಮನುಷ್ಯ : ನಿಲ್ಮಾನಸನೆಂಬರೆ ನಿಲ್ವ ಲ್ಮೀಕೋರಗನನಪ್ರತೀಕಾರಶ್ರೀ ಗುಲ್ಮವ್ಯಾಧಿಯನೀ ವನಶಾಲ್ಮಲಿಯಂ ಲುಬ್ಧನೆಂಬ ಗೃಹಲುಬ್ಧಕನಂ (ಲೀಲಾಪ. ೧–೪೭).

[ನಿಲ್‌+ಮಾನಸ$_1$]

**ನಿಲ್ಲಿಸು** 'ನಿಲಿಸು' ನೋ.

**ನಿಲ್ಲು** 'ನಿಲ್' ನೋ.

**ನಿಲ್ಲುವಮನೆ** 'ನಿಲ್ಮನೆ' ನೋ.

**ನಿಲ್ಲುವನೆ** 'ನಿಲ್ಮನೆ' ನೋ.

**ನಿಲ್ಲೆಡೆ** (ನಾ). ೧. ರೈಲು ಮುಂತಾದ ವಾಹನಗಳು ನಿಲ್ಲುವ ಸ್ಥಳ : "ಸ್ಥಳೀಯ ಅನುಕೂಲ್ಯಕ್ಕಾಗಿ (ಕಟ್ಟಡ, ಮೊ.ಗಳಿಲ್ಲದ) ರೈಲ್ವೆಯ ನಿಲ್ಲೆಡೆ" (Halt. ಇಂಕನಿ). **೨.** ತಾತ್ಕಾಲಿಕವಾಗಿ ತಂಗುವ ಸ್ಥಳ; ಬಿಡಾರ ಮಾಡುವ ಸ್ಥಳ : "(ದಾರಿಯಲ್ಲಿ)ನಿಲ್ಲೆಡೆ, ನಿಲ್ದಾಣ, ಮಜಲು, ಟಪ್ಪಾ ; ಎರಡು ಮಜಲುಗಳ ನಡುವಣ ದೂರ" (Stage. ಇಂಕನಿ). [ನಿಲ್+ಎಡೆ$_3$]

**ನಿವಟ** ( ? ). ( ? ) : ಧರ್ಮ್ಮಮನೆ ಮುಖ್ಯಮಾಡಿದತ್ತ ನಾಳುವ ದೇಶ ಹಳ್ಳವುರ ನಿವಟ ಹಿರಿಯು ಕಬ್ಬಾಜಿಓಳು (ಕಇ. IV, ೩೮-೪೬; 1187). [ ? ]

**ನಿವಡ** (ನಾ). ಆಯ್ಕೆ ; ಆರಿಸುವಿಕೆ : ನಿವಡ ಏನು ಹರಕತ್ತ ಇಲ್ಲ ಅಂಥಾಂಗಾತು (ದೀಪಹ. I, ೧೩೧) ; ನಿನ್ನ ಯಜಮಾನರ ನಿವಡ ಏನು ಹರಕತ್ತ ಇಲ್ಲ ಅನ್ನು (ದೀಪಹ. II, ೨೨).
[←**ಮರಾ.** ನಿವಡ./**ಪ್ರಾ.** ಣಿವ್ವಡ=ಆರಿಸಿದ]

**ನಿವಡಿಕೆ** (ನಾ). ಆಯ್ಕೆಮಾಡಿ ಅಳವಡಿಸಿದ ಶೈಲಿ; ಉತ್ತಮವಾದ ಜೋಡಣೆ : ವಿಧಿ ಮುಂಬಗೆದು ನಿನ್ನುದಯಂ ಚನ್ನೆಯಿವಳಿಗೆ ಮೂರನೆಯ ಮೊಲೆಯನ್ನವಾಯಿಸಲದರಿನೊದವಿದ ಬಿನ್ನಣಮಿದೇಂ ನಿನ್ನ ನುಡಿಯ ನವೀನನಿವಡಿಕೆಗೆ ? (ಗಳವಿಂ. ೯೭-೫) ; "ವಿಶಿಷ್ಟತೆ; ಪ್ರಸಿದ್ಧಿ" (ಗಳವಿಂ. ಟಿಪ್ಪಣಿ). [ನಿವಡ+-ಇಕೆ]

**ನಿವಡಿಸಾರ.** (ನಾ). ಮಲ್ಲಯುದ್ಧದ ಒಂದು ಪಟ್ಟು : ಲವುಡಿಸಾರದ ಲೌಕಿ ಗಳಹತ್ತದಲಿ ಮುಟ್ಟಿಸುವ ಬವರಿವರಿದುಪ್ಪರಿಸಿ ಲಂಘಿಸಿ ನಿವಡಿಸಾರದಲೆಜಿಗಿ ಜಾಜುವ ಜವಳಿಬಿನ್ನಾಣದಲಿ ಕಾದಿದರೊಬ್ಬರೊಬ್ಬರಲಿ (ಅಕ್ರೂಚ. ೭-೬೫). [ ? ]

**ನಿವಡಿಸು** (ಕ್ರಿ). ೧. ಆಯ್ಕೆಮಾಡು ; ಗೊತ್ತುಮಾಡು : ನಿವಡಿಸಿದ ಸುಮುಹೂರ್ತದಲಿ ವೈಭವದೊಳಾಯ್ತಭಿಷೇಕವಾ ರಾಜೇಂದ್ರಶರಣಂಗೆ (ತೊರರಾ. ೬-೩-೩೯); ಅವನಿಗಿಳಿದನು ಕುಸುಮಯುತುಭೂಪಾಲನವನಿಂದ ನಿವಡಿಸಿದವಖಿಳಾವನೀರುಹ ನವವಿಧದಿ ನೆರೆ ಹೂತು ಕಾತಿಹ ವರವಿಚಿತ್ರವ ನೋಡಲಚ್ಚರಿಯಾಗಿ ತೋರುವುದು (ಕೋಗಯ. ೩-೫೪). **೨.** ಎದ್ದು ಕಾಣು ; ಪ್ರಮುಖವಾಗಿ ತೋರು ; ಸ್ಫುಟವಾಗು : ಕವಿ ಗಮಕಿವಾದಿ ವಾಗ್ಮಿಕಮಾಗತೇಯುರುಂ ನಿವಡಿಸಿದ ಸಿದ್ಧಪ್ರಸಿದ್ಧಕೋವಿದರುಗಳು . . . ಶಿಷ್ಟರಗಣಿತರುವೊಪ್ಪೆ (ಲಶಿಚಂ. ೩೧-೩೮) ; ಬಿಸುಟಳೊದಜುತ ಶೂರ್ಪನಖಿ ನಿವಡಿಸಿದ ಕಟ್ಟಭಿಮಾನ ವಿಲಸಿತ ಬೆಸುಗೆಗಳಚಿದ ನಾಸಿಕವ ನಿದಿರಲಿ ಖರಾಸುರನ (ತೊರರಾ. ೩-೫-೩) ; ನೀವ್ ಕ್ಷತ್ರಿಯರು ಮಾಗಧನ ನಿವಡಿಸಿದ ರಣದಲ್ಲಿ ನಿಲ್ಲದೆಯವನಿಯಲಿ ಚೌಶೀತಿದುರ್ಗದ ಗವಿಗಳೊಳ್ ಹೊಕ್ಕಡಗಿ ಜೀವಿಸಿದದಟರಹುದು (ಕೋಗಯ. ೨೨-೩೬). **೩.** ಪಡೆ ; ಹೊಂದು : ನವರತುನಮಣಿಮಯದ ಪುಷ್ಪಕದೊಳನಿಬರುಂ ನಿವಡಿಸಿದ ವರದಿವ್ಯಮಂಗಳಶರೀರದಿಂ ಕವಿವ ಸೂರ್ಯಪ್ರಭೆಯನೇಳಿಸುವ ಕಾಂತಿಯಿಂ (ಲಶಿಚಂ. ೪೦-೪೦) ; ನಿವಡಿಸಿದ ವಿದ್ಯಕ್ಕೆ ಸಮಬಂಧುವನು ರೋಗಾವಳಿಗೆ ಸಮಶತ್ರುವನು ಸಂತಾನಕ್ಕೆ ಸಮಸಂತೋಷದುದಯವನು . . . ಕಾಣೆ ನಾನು (ಕುಪ್ಯಾಉ. ೩-೩೩). **೪.** ನೆರವೇರಿಸು; ಈಡೇರಿಸು : ಶಿವನಿಯಮಂ ಮಾಳ್ಪರ ಲವಲವಿಕೆಯಿಂ ಸದಾ ಸೇವೆಯಂ ಮಾಡಲಾಂ ತವಕದಿಂ ಮೆಚ್ಚಿ ವರವೀವೆನವರಿಷ್ಟಮಂ ನಿವಡಿಸಿದ ಬುದ್ಧಿ ನಿಮಗೆಂದನು (ಲಶಿಚಂ. ೭-೧೮). **೫.** ನಿರ್ಣಯ ಕೊಡು ; ತೀರ್ಮಾನಿಸು ; ನಿರ್ಧರಿಸು : ರವಿಕುಲೇಂದ್ರನ ಚಿತ್ತವೃತ್ತಿಯ ಹವಣಜಾದು ಬಳಿಕಾ ಭವಾನಿಯ ನಿವಡಿಸಿದ ನುಡಿಗಗ್ನಿದೇವರು ನಡುಗಿ ದೇವಿಯರ ದಿವಿಜತತಿ ಜಯಯೆನಲು ತಂದರು . . . ಪೂರ್ಣಗೋವಿನಿಯ (ತೊರರಾ. ೬-೫೩-೯೯). **೬.** ಆವರಿಸು ; ಕವಿ : ದಿವದೊಳವನೀಜನಂ ವ್ಯಾಪ್ತಿ ಹಲವಂ ಬಳಸಿ ನಿವಡಿಸಿದ ನಿದ್ರೆಯಿಂ ರಾತ್ರಿವಿಶ್ರಾಂತಿಯಂ ಹವಣಿಸಿದ ತೆಜದಿ ಭವಭವದಿ ಬಹರೆಂಬವನ ಚರಣಾಂಬುಜಕ್ಕೆ ಶರಣು (ಲಶಿಚಂ. ೨೫-೪). **೭.** ಬೀಸು; ಎಸೆ: ವಿಪ್ರನ ಕುವರನನು ತಹೆನೆಂದು ನಡೆಯಲ್ಕವನು ವನಮಧ್ಯದಲಿ ಪುಷ್ಪಂಗಳನು ಕೊಯ್ಯುತಿರೆ ತವಕದಲಿ ಕಂಡಾಗ ಪಾಶವ ನಿವಡಿಸಲು ಹೆರೆದೆಗೆದು ಸಿಕ್ಕದೆ ಭವನ ಭವನವ ಪೊಗಲು ಬೆಂಬತ್ತಿದವು ಬಿಡದವನ (ಅಂಬಿಕಾ. ೪-೪೯). **೮.** ಒದಗು; ಉಂಟಾಗು ; ಸಂಭವಿಸು : ಬವರ ಬಲಿದುದು ಬಳಿಕ ಕಲಿಜಾಂಬವನೊಳಗ್ಗದ ವೀರಕುಂಭಗೆ ಪವನಸುತ ಕುಂಭೋದರಂಗಾ ವಾಲಿಸುತನೊಡನೆ ನಿವಡಿಸಿತ್ತು ನರಾಂತಕಂಗುತ್ಸವದ ರಣವು (ತೊರರಾ. ೬-೧೯-೪೧). **೯.** ಸಂತೋಷಪಡಿಸು ; ಮೆಚ್ಚಿಸು : ವರರತ್ನಖಚಿತಮಂಚದೊಳ್ ಕುಳ್ಳಿರ್ದ ನವಯುವತಿ ನೃಪನೋರ್ವರೋರ್ವರ್ ಸವಿನುಡಿಯ ಬೀರಿ ನಿವಡಿಸುತ ತಾಂಬೂಲಮಂ ಸವಿವುತ (ರುಕ್ಮಾಂಗ. ೧೫-೨೮). **೧೦.** ರಚಿಸು ; ನಿರ್ಮಿಸು : ರವಿತನೂಭವನಾಜ್ಞೆಯಲಿ ನಳ ನಿವಡಿಸಿದ ಪಾಳೆಯವನಾ ಸಿಂಧುವಿಗೆ ಪ್ರತಿಸಿಂಧುವೆನೆ ಬಳಸಿತು ಮೂರು ವಲಯದಲಿ (ಅನಂರಾ. ೫-೧-೧೮) ; ನವರುಚಿರ ಸಿಲೆ ಪಚ್ಚೆ ನಿಚ್ಚಳ ವಿವಿಧಕೆಲಸದ ಟಾಕುವಿಾಟನ ಕವಕವಿಪ ಕಾಂತಿಗಳೊಳೊಪ್ಪಿಹ ಕಲಶಗೋಪುರದ ನವರತುನಪೊಂಗಂಟಿಕದಗಳು ನಿವಡಿಸಿದ ನೆಲೆಗಟ್ಟು ತೋರಣಂ (ಅಂಬಿಕಾ. ೩-೩೬).
[ನಿವಡ + -ಇಸು$_3$]

**ನಿವರ್ತಕ** (ಗು). ೧. ಮುಗಿಸುವ ; ಪೂರೈಸುವ. **೨.** ಹಿಂದಿರುಗುವ ; ಮರಳುವ. **೩.** ವಿಮುಖವಾಗುವ ; ಹಿಂಜರಿಯುವ. **೪.** ವಿಮುಖಗೊಳಿಸುವ ; ಪ್ರವರ್ತಿಸದಂತೆ ಮಾಡುವ. 'ನಿವರ್ತಕಧರ್ಮ' ಪರಾ. (ನಾ). **೫.** ನಿವೃತ್ತಿಮಾರ್ಗವನ್ನು ಅನುಸರಿಸುವವನು : ಆದಿಶಿವಸಂಸ್ಕಾರದಾತನು ಮೇದಿನಿಯೊಳು ನಿವರ್ತಕ ಶ್ರುತಿ ವೇದಿತಾರ್ಥ ಚರಿತೆಗಳಿರುತಿರೆ ಮೊನ್ನೆ ಹುಟ್ಟಿರ್ದ ಆ ಕುಲಂಗಳ ಮಾತವೇತಕೆ (ಬಸಪು. ೫೫-೧೯). [**ಸಂ.**]

**ನಿವರ್ತಕಧರ್ಮ** (ನಾ). ನಿವೃತ್ತಿಯನ್ನು ಬೋಧಿಸುವ ಧರ್ಮ ; ಇಹ, ಪರಲೋಕಗಳ ಸುಖಕ್ಕಾಗಿ ಮಾಡುವ ಕರ್ಮಾನುಷ್ಠಾನದಿಂದ ವಿಮುಖಗೊಳಿಸುವ ಧರ್ಮ ; ವೈರಾಗ್ಯವನ್ನು ಬೋಧಿಸುವ ಧರ್ಮ : ನಾವು ಭಾರತೀಯಸಂಸ್ಕೃತಿಯನ್ನು ನಿರೀಕ್ಷಿಸಿದಾಗ, ಆತ್ಮವಾದಿದರ್ಶನಗಳಲ್ಲಿ ಮೀಮಾಂಸಕದರ್ಶನವೊಂದನ್ನು ಬಿಟ್ಟು ಉಳಿದೆಲ್ಲ ದರ್ಶನಗಳೂ ನಿವರ್ತಕಧರ್ಮವಾದಿಗಳಾಗಿವೆ (ಜೈನಪ. ೫೧೭).
[ನಿವರ್ತಕ + ಧರ್ಮ]

**ನಿವರ್ತನ** (ನಾ). ೧. ನೆರವೇರಿಸುವಿಕೆ; ಪೂರೈಸುವಿಕೆ. **೨.** ಹಿಂದಕ್ಕೆ ತಿರುಗುವಿಕೆ; ಹಿಂದಿರುಗುವಿಕೆ; ಮರಳುವಿಕೆ; ವಾಪಸ್ಸು ಬರುವಿಕೆ. **೩.** ಆಗದಿರುವಿಕೆ ; ಸಂಭವಿಸದಿರುವಿಕೆ ; ನಿಲ್ಲುವಿಕೆ. **೪.** ದೂರ ಉಳಿಯುವಿಕೆ ; ಪ್ರವರ್ತಿಸದಿರುವಿಕೆ ; ನಿವೃತ್ತಿ. **೫.** ಪಶ್ಚಾತ್ತಾಪ ಪಡುವಿಕೆ. **೬.** ಹಿಂದಿರುಗಿಸುವಿಕೆ; ಮರಳಿಸುವಿಕೆ. **೭.** ಮಲ್ಲಯುದ್ಧದಲ್ಲಿ ಒಂದು ಕ್ರಮ,—ಭಂಗಿ ; ಹಿಂದಕ್ಕೆ ಹೋಗಿ ತಪ್ಪಿಸಿಕೊಳ್ಳುವ ಒಂದು ವರಸೆ : ನಿವರ್ತನಾವರ್ತನ ಭ್ರಮಣ ವಲ್ಗನ ಪ್ಲವನಾವಸ್ಥಾನಾದಿ ಕ್ರಿಯಾಪರಿಣತಂ (ಚಾವುಂಪು. ೩೪೧). **೮.** ಹಿಡಿಯುವಿಕೆ : 'ತಾಳನಿವರ್ತನ' ಪರಾ. **೯.** ಭೂಮಿಯನ್ನು ಅಳೆಯುವ ಒಂದು ಪ್ರಮಾಣ ; ಸುಮಾರು ಐದು ಎಕರೆ : ರಾಜಮಾನೇನ ಮಾನೇನ ಕ್ಷೇತ್ರಮೇಕನಿವರ್ತ್ತನಂ (ಮೈಆರಿ. ೧೯೩೩, ೧-೧೮ ; ಸು. 530) ; ರಾಜಮಾನೇನ ಶತಾರ್ದ್ಧ ನಿವರ್ತ್ತನಪ್ರಮಾಣಕ್ಷೇತ್ರಂ ಸರ್ವ್ವಬಾಧಾಪರಿಹಾರಂ

ದತ್ತಂ (ಸೌಇಇ. XX, ೭-೧೬ ; 735) ; ಅಲ್ಲಿ ದೀಪಗಳನ್ನುರಿಸಲು ಹನ್ನೆರಡು ನಿವರ್ತನಗಳಷ್ಟು (ಸುಮಾರು ಅರವತ್ತು ಎಕರೆ?) ಭೂಮಿಯನ್ನು ಬಿಟ್ಟುಕೊಟ್ಟಿದ್ದರು (ಕಶಾಅ. ೭೧೯). **೧೦.** ಚಿಕ್ಕದಾಗುವಿಕೆ ; ಆಕುಂಚನ ; ಸಂಕೋಚವಾಗುವಿಕೆ : ವಸ್ತುತಃ, ವಿಶ್ವದ ಆಕುಂಚನ—ವಿಕಾಸಗಳ ಇಲ್ಲವೆ ನಿವರ್ತನ—ವಿವರ್ತನ (Involution and evolution)ಗಳ ಪೂರ್ಣವಿಧಾನವೊಂದು ಪರಮಾತ್ಮನ ನಿತ್ಯ ಯೋಗವೇ ಆಗಿವೆ (ಮಹಾಯೋ. ೧೮೪). [ಸಂ.]

**ನಿವರ್ತನೆ** (ನಾ). ಕುದುರೆಸವಾರಿಯಲ್ಲಿ ಒಂದು ಬಗೆ ; ಕುದುರೆಯನ್ನು ಹಿಂದಕ್ಕೆ ಬರುವಂತೆ ಮಾಡುವಿಕೆ : ಪಸುಗೆ ನೆಲಂ ಜಲಂ ಹಯದೊಡಂಬಡು ವಂಚನೆ ಕೇಣಮಾಸನಂ ಕೊಸೆ ದೆಸೆ ದಿಟ್ಟಿ ಮುಟ್ಟೆ ಕೆಲಜಂಕೆ ನಿವರ್ತನೆ ಕಾಣ್ಕೆ ಪರ್ವಿದೇರ್ವೆಸನದೊಳಾದ ಬಲ್ಮೆಯೊಳೊಡಂಬಡೆ ತಳ್ತುಬಾವಲ್ಲಿ ಮಿಂಚಿನೊಳ್ ಮುಸುಕಿದ ಮಾಟಿಕ್ಕೆಯಾಯ್ತು ಸಮರಾಂಗಣ ಮುಳ್ಳುವ ಬಾಳ್ಗಳುಳ್ಕದಿಂ (ಪಂಪಭಾ.೧೦-೭೭) ; "ಹಿಂದಿರುಗುವಿಕೆ" (ಪಂಪನಿ) ; "ಮರುಳುವುದು" (ಪಂಪದೀ. ೩೬೬) ; ದಾರೆ ಗತಿ ಲಯ ಪೊಯ್ದು ಕಾಯಕ್ಷಂ ತಿತಿಕ್ಷೆ ಪಿತನೆರಿತುರ(ಗ ? ) ಸಮಾನಂ ಭಾರಿ ಕೊಸಿ ಮುಷ್ಟಿಭಾಗಂ ವ್ಯೂಹಂ ನಿವರ್ತನೆ ಪದಂ ಯತಿ ಗಾತ್ರವೆ ವಿಮಾರ್ಗಂ . . . ವಹಳಿ ಸತ್ಯಂ ದಾರಿಮೆಂಬ ಭೇದಂಗಳಿಂದಶ್ವಮನೇಜಿಲು ರೇಚಿಗ ನೃಪತಿ ತಾನೆ ಬಲ್ಲಂ (ಮದತಿ. ೧-೨೧). [ಸಂ. ನಿವರ್ತನ]

**ನಿವರ್ತಿ** (ನಾ). ನಿವೃತ್ತಿ ; ನಿವಾರಣೆ : ಶಿವಭಕ್ತಿಯುಕ್ತರಾದ ಮೂರ್ತಿನಾಹರ ಕೈಂಕರ್ಯವನ್ನು ನಿವರ್ತಿ ಮಾಡಿಸಲೋಸುಗ ಕರ್ನಾಟಕಜೈನ ರಾಜನು ಎಲ್ಲಿಯೂ ಯಾರೂ ಚಂದನಕಟ್ಟಿಗೆಯನ್ನು ಕೊಡಕೂಡದೆಂದು ಆಜ್ಞಾಪಿಸಿದನು (ಪುರಾವಿ. ೯೮). [<ಸಂ. ನಿವೃತ್ತಿ]

**ನಿವರ್ತಿತ** (ಗು). ೧. ಹಿಂದಕ್ಕೆ ತಿರುಗಿದ ; ವಿಮುಖವಾದ. (ನಾ). **೨.** [ನಾಟ್ಯ] ತೊಡೆಯ ಐದು ಭಂಗಿಗಳಲ್ಲಿ ಒಂದು ; "ಹಿಮ್ಮಡಿಗಳೆರಡನ್ನೂ ಸೇರಿಸಿ ಅಡಿಗಳನ್ನು ಅಡ್ಡಲಾಗಿಡುವುದು. ಸಂಭ್ರಮದಿಂದ ಸುತ್ತುವಾಗ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೨೬೩ ಗದ್ಯಾನುವಾದ) : ಸ್ಖಲೆ ಕಂಪಿತಮುಂ ವಲಿತಮು ಮೊಲವಿಂ ಸ್ತಬ್ಧಂ ಪೊಗಳ್ದವುದ್ವರ್ತಿತಮುಂ ವಿಲಸನ್ನಿವರ್ತಿತಮುಂ ಲಲನೆ ಕೇಳ್ ತೊಡೆಗೆ ಭೇದವೈದೆನಿಸಿರ್ಕುಂ (ಲಾಸ್ಯರಂ. ೨-೧೩೮). [ಸಂ.]

**ನಿವರ್ತಿಸು** (ಕ್ರಿ). ೧. ನಿವಾರಿಸು ; ಪರಿಹರಿಸು ; ದೂರಮಾಡು: ಅನಂಗನೆಂಬ ದುರಾಚಾರನಂ ನಿವರ್ತಿಸಲ್ವೇಟ್ಟುಂ (ಕಾದಂಪೂ. ೮೪೮). **೨.** ಓಡಿಹೋಗು ; ಮರೆಯಾಗು ; ಇಲ್ಲವಾಗು : ದೆಸೆಯಿಂ ಕಾಳಿಗೆ ತೂಳ್ದು ಪೋಗೆ ನಭದಿಂ ದೇವೇಂದ್ರಚಾಪಂ ನಿವರ್ತಿಸೆ . . . ಕಣ್ಗೆಸೆದಿರ್ದತ್ತು ವಿನಿರ್ಮಳಪ್ರಕೃತಿರೋದಂ ಶಾರದಂ ಶಾರದಂ (ವರ್ಧಮಾ. ೯-೪೮). [ನಿವರ್ತನ+-ಇಸು$_3$]

**ನಿವರ್ಹಣ** (ನಾ). ನಾಶಮಾಡುವಿಕೆ ; ಧ್ವಂಸಗೊಳಿಸುವಿಕೆ. [ಸಂ.]

**ನಿವಸ** (ನಾ). ವಾಸಸ್ಥಾನ ; ಮನೆ ; ನಿವಾಸ : ಅರೆಲವೊ ನೀವಿದ ಜಿಕೊಳಗೆ ನಿರ್ವೈರ ವೈಷ್ಣವನಿವಸದೊಳು ದುರ್ವಾರ ದುರಿತಾತ್ಮಕರು (ನಿಭಾಗ. ೩-೫-೧೪). [<ಸಂ. ನಿವಾಸ]

**ನಿವಸತಿ** (ನಾ). = ನಿವಸ : ಓರ್ವ ಸಿದ್ಧನಿಹ ನಿವಸತಿಯ ಮುಂದೆ ಭಿಕ್ಷಾ ಎನಲು ಘೋರತರ ವಿಷವ ತಂದೆಚಿಯಲು (ಗುರುಚಾ. ೩-೭) ; ನಿವಸತಿಯಂ ತೇಗುಮರಂ ಕವಿದೆಡೆಯೊಳ್ ಮಾಡಿಕೊಂಡ ಕಾರಣದಿಂದಂ ಅವರೇ ಶಾಕ್ಯರೆನಿಪ್ಪರುಮವನಿಯೊಳಿಕ್ಷ್ವಾಕುವಂಶ್ಯರಾಗಿರೆಯುಂ ತಾಂ (ಸೌನಂದ. ೧-೨೪). [ಸಂ.]

**ನಿವಸನ** (ನಾ). ೧. = ನಿವಸ : ಆವಾಸಃ, [ಅ]ವಸಥಂ, ಗೃಹಂ . . . ಅಗಾರಂ, ನಿವಸನಂ, ಆಲಯಃ—ಈ ೩೧ ಮನೆ" (ಹಲಾಯು. ೪೯-೧೩೭). **೨.** ಉಡುಪು ; ಬಟ್ಟೆ ; ವಸ್ತ್ರ : "ಉಪಸಂವ್ಯಾನಂ, ಪರಿಧಾನಂ, ಅಂತರೀಯಂ, ನಿವಸನಂ—ಈ ೪ ಉಟ್ಟುದು" (ಹಲಾಯು. ೯೦-೩೯೨) ; ಶಿಲಾಸ್ತಂಭವಿಭ್ರಮನಿತಂಬಶಿಖರತರಂಗಿತಚತುರಂಗುಳಾಗ್ರ ಪಲ್ಲವನಿವಸನಂ (ಆದಿಪು. ೧೩-೪೫ ವ) ; ಖಳನ ಗದಾಯುಧದ ಗಾಡಿಕೆಗೆ ದೈತ್ಯನಿಕಾಯ ನಿರುಪಮನಿವಸನವಸು ನಿವಾಳಿಸಿತು ರಣಕೆ (ತೊರಾ. ೬-೧೪-೧೮). **೩.** ಒಳ ಉಡುಪು. [ಸಂ.]

**ನಿವಹ** (ಗು). ೧. ಉಂಟುಮಾಡುವ ; ತರುವ. (ನಾ). **೨.** ತಂಡ ; ಗುಂಪು ; ಸಮೂಹ : "ನಿಕುರುಂಬಂ ನಿವಹಂ ವ್ರಜಂ ಸಮುದಯಂ ಬೃಂದಂ ನಿಕಾಯಂ . . . ಸಮೂಹಂ ವ್ರಾತಮೇ ಕಾರ್ಥಕಂ" (ವಸ್ತುಕೋ. ೧೦೨-೨೭) ; ಪ್ರತಿಮೆಗಳಬ್ಬಿತ್ತು . . . ಭೂತ ಪ್ರತತಿಗಳಾಡಿದುವೊಳಜಬಿದುವತಿರಮ್ಯಸ್ಥಾನದೊಳ್ ಶಿವಾಸಿವಹಂಗಳ್ (ಪಂಪಭಾ. ೧-೧೩೨) ; ಸತ್ಯವಿನಿವಹಂ ಪೊಗಟಿ ಚಮತ್ಕೃತಿಯಂ ಪಡೆದು ಸೊಬಗುವಡೆದತ್ತು (ಕಾದಂಪೂ. ೫) ; ಸಕರಣೇಂದ್ರಿಯನಿವಹವರ್ಕನ ಕೂಡೆ ರಶ್ಮಿಗಳಸ್ತಮಿಸಿದಂತೆ ಶಿವನೊಳಸ್ತಮಿಸಲು (ಬಸವು. ೩೫-೬) ; ಅವಯವದೊಳು ಗಂಧವಡೆದ ಚಂದನವೃಕ್ಷನಿವಹವೊಪ್ಪಿರ್ದುದಾ ವನದಿ (ಮೋಹತ. ೨೪-೫೦). **೩.** ಸಪ್ತವಾಯುಗಳಲ್ಲಿ ಒಂದು. **೪.** ಅಗ್ನಿಯ ಏಳು ಜ್ವಾಲೆಗಳಲ್ಲಿ ಒಂದು. **೫.** ಕೊಲೆ ; ವಧೆ. [ಸಂ.]

**ನಿವಳ$_1$**, ನಿವ್ವಳ (ಗು). ೧. ಒಳ್ಳೆಯ ; ಉತ್ತಮವಾದ ; ಹದವಾದ: ಬಿಳಿಯ ತಿಲ ನಿವಳ ತಂಡುಲ ತಿಳಿಗೋದುಮೆ ಚಣಕದೊಡಕುಮುದ್ಗನ ವಿದಳಂ ಮಿಳಿತಮಾದಕ್ಷತೆಯ ಕರನಳಿನಸ್ಥಳದಿಷ್ಟಲಿಂಗದ ಪಣೆಗಾಂ ನೀಡುವೆಂ (ಮೈಲಾರ. ೨೧೩-೪೧) ; ಹವಳ ಮಲ್ಲಿಗೆ ನಿವಳ ಪತ್ತರಿ ಹಳಕಟ್ಟೆ ವೀರಭದ್ರನಿಗೆ (ಕಜಾಗೀ. ೪೪). (ನಾ). **೨.** ಚೆಲುವಾದುದು ; ಅಂದವಾದುದು : ಏನವಳ ಚಿತ್ತರದ ಚೆಲುವು ! ಮುಪ್ಪಿರದ ಒಲವು ! ಇದು ಹವಳ ಇದು ನಿವಳ (ದ್ಯಾವಾಪೃ. ೪೮-೧೧). **ನಿವ್ವಳ :** (ಗು). **೩.** (ಖರ್ಚನ್ನು ಕಳೆದ ಬಳಿಕ) ಉಳಿಯುವ; ಉಳಿತಾಯವಾಗುವ : ಆ ಹಣದ ಜೊತೆಗೆ ಬ್ಯಾಂಕುಗಳವರು ಹೊಸದಾಗಿ ನಿರ್ಮಾಣ ಮಾಡಿದ ಡಿಪಾಸಿಟ್ ಮೊಬಲಗೂ ವಿಶೇಷವಾಗಿ ಅವರ ಚಾಲ್ತಿ ಡಿಪಾಸಿಟ್ಟು ಮಾಡಿರುವ ಒಟ್ಟು ನಿವ್ವಳ ಕೆಲಸದ ಮೊತ್ತವೂ ಸೇರುವುವು (ಹಣಪ್ರ. ೩೭).

**ನಿವ್ವಳ ಆದಾಯ** = ಖರ್ಚು ಕಳೆದು ಉಳಿಯುವ ಲಾಭ : ಇಡೀ ಇಂಡಿಯಾದಿಂದ ನಮಗೆ ಬರುವ ನಿವ್ವಳ ಆದಾಯ ೧೫೪೯೧೩ ಪೌಂಡುಗಳು (ಪ್ರವಾಇ. II, ೪೮೫). **ನಿವ್ವಳ ಉತ್ಪತ್ತಿ** = ನಿವ್ವಳ ಆದಾಯ : ಅಂಥ ಯಾವುದಾದರೂ ಕರದ ನಿವ್ವಳ ಉತ್ಪತ್ತಿಯ ಪೈಕಿ, ಗೊತ್ತುಮಾಡಬಹುದಾದಷ್ಟು ಸೇಕಡಾವಾರು ಮೊಬಲಗು . . . ಭಾರತದ ಸಂಚಿತನಿಧಿಗೆ ಸೇರತಕ್ಕುದಲ್ಲ (ಭಾಧಾನ. ೧೫೩). **ನಿವ್ವಳ ನಫೆ** = ನಿವ್ವಳ ಆದಾಯ : "ವೆಚ್ಚ ಕಳೆದುಳಿದ ನಿಜವಾದ ಲಾಭ; ನಿವ್ವಳ ನಫೆ" (Net-Profit. ಇಂಕನಿ). **ನಿವ್ವಳ ಲಾಭ** = ನಿವ್ವಳ ಆದಾಯ : ಪ್ರತಿವರ್ಷವೂ ಕಂಪೆನಿಗೆ ಲಕ್ಷಾಂತರ ರೂಪಾಯಿಗಳ ನಿವ್ವಳ ಲಾಭ ಬರುತ್ತದೆ (ಭಾಗ್ಯಶಿ. ೧೨೮). **ನಿವ್ವಳ ಹುಟ್ಟುವಳಿ** = ನಿವ್ವಳ ಆದಾಯ : ಕೆಲವು ಕರಗಳ ಮತ್ತು ಶುಲ್ಕಗಳ ನಿವ್ವಳ ಹುಟ್ಟುವಳಿಯನ್ನು ಪೂರ್ತಿಯಾಗಿ . . . ರಾಜ್ಯಗಳಿಗೆ ಹಂಚುವುದಕ್ಕೆ ಸಂಬಂಧಪಟ್ಟ ಈ ಅಧ್ಯಾಯದ ಉಪಬಂಧಗಳಿಗೆ ಒಳಪಟ್ಟು . . . ಒಂದು ನಿಧಿಯಾಗಿ ಏರ್ಪಡತಕ್ಕುದು (ಭಾಧಾನ. ೧೫೦). [←ಮರಾ. ನಿವಳ]

**ನಿವಳ$_2$** 'ನಿರ್ಮಳಿ' ನೋ.

**ನಿವಳಿ₁** 'ನಿರ್ಮಳಿ' ನೋ.

**ನಿವಳಿ₂** (ನಾ). ಸುತ್ತಾಡುವಿಕೆ: ಆ ಮಾಯದಶ್ವವನು ತಂದು ತೋಱಿ ನೃಪಾಲನದನಾನಂದದಿಂದಿರದೇಱಲೊಡನಲ್ಲಿಂದ ನಿವಳಿಯು ನೆವದೆ ಗಗನ ಕ್ಕೊಯ್ದುದದು (ಕುಮಾರರಾ. ೩-೬೪). [ ? ]

**ನಿವಳಿತ** (ಗು). (ಮಂಡಲಾಕಾರವಾಗಿ) ಎತ್ತಿದ; ಚಲಿಸಿದ: ಲಲನಾನಿಕಾಯನಿವಳಿತನೀರಾಜನದೀಪಕಳಿಕಾಪ್ರತಿಫಳಿತಮೌಳಿಮಾಣಿಕ್ಯ ನುಂ . . . ಆಗಿ (ಚಂದ್ರಪು. ೮-೨೪ ಪ). [ಸಂ. ನಿವಲಿತ]

**ನಿವಳಿವಟ್ಟ,** ನಿವಾಳಿವಟ್ಟ, ನಿವಾಳಿವಟ್ಟು, ನೀವಳಿವಟ್ಟ (ನಾ). ಸಂಪೂರ್ಣನಾಶ; ನಿರ್ನಾಮ: ಜವಂ ನೇಱು ಬರ್ಚಿದಂತೆ ಪಿಂಡಿ ಮರ್ಕಳೆನ್ನದೆ ನಿವಳಿವಟ್ಟಮಪ್ಪಿನಮೊಂದಕ್ಷೋಹಿಣೀಬಲಮೆಲ್ಲಮಂ ಪೇೞಿ ಪೆಸರಿಲ್ಲಮೆಂಬಂತೆ ಕೊಂದು (ಗದಾಯು. ೯-೩೨ ಪ); "ನಿವಳಿವಟ್ಟಂ ಅಪ್ಪಿನಂ–ಬಲಿಗೊಟ್ಟು ನಿವಾಳಿಸಿ ಎಸೆದಂತೆ (?)"(ಗದಾಸಂ. ೨೦೨ ಟಿಪ್ಪಣಿ); ಅರುಹಸಮಯವಡಗಿರ್ದುದು ಸವಣಕುಲಂ ನಿವಳಿವಟ್ಟ ಮಾದುದು (ನಾಚಿರ. ೧೭೯-೪); ಅಂತೂರೆಲ್ಲಂ ನಿವಳಿವಟ್ಟಮಾಗಿ ಬೆಂದು ಸೋಮಶರ್ಮನ ಮನೆಯೊಂದುೞಿದಿರೆ (ಪುಣ್ಯಾಸ್ರ. ೧೨-೩೪ ಪ). **ನಿವಾಳಿವಟ್ಟ:** ಲೋಯಿಸರದ ಮೇಲೆ ಬಂಡಿ ಪರಿದಂತೆ ಪೊಟಲೆಲ್ಲಮಂ ನಿವಾಳಿವಟ್ಟಮುಂ ಮಾಡಿದೆಯಾ ಬೊಡೇನಾಯ್ತು (ಧರ್ಮಾಮೃ. ೨-೮೯). **ನಿವಾಳಿವಟ್ಟು. ನೀವಳಿವಟ್ಟ:** 'ನೀವಳಿವಟ್ಟಂಗೆಯ್' ಪರಾ.

**ನಿವಳಿವಟ್ಟಂ ಮಾಡು, ನಿವಾಳಿವಟ್ಟಂ ಮಾಡು, ನಿವಾಳಿವಟ್ಟು ಮಾಡು** = ಸಂಪೂರ್ಣನಾಶ ಮಾಡು; ನಿರ್ನಾಮಗೊಳಿಸು: ತಮ್ಮನುಂ ನಿಜಾಗ್ರಜನೊಳ್ ಕೂಡಿ ದಮಿತಾರಿಗಿದಿರ್ಚಿ ತಳವರ್ಗಮಂ ನಿವಳಿವಟ್ಟಂ ಮಾಳ್ಪಾಗಳ್ (ಶಾಂತಿಪು. ೪-೩೪ ಪ); ಈತನಿನ್ನು ನಾಡೆಲ್ಲಮಂ ನಿವಾಳಿವಟ್ಟಂ ಮಾಡಿ ಕಳದೆ ಮಾಣಂ (ಧರ್ಮಾಮೃ. ೨-೧೪೯); ಮುಳಿದು ಮೇಲೆರ್ದು ಚತುರಂಗಬಲಂಬೆರಸು ಕಾದುವುದುಂ . . . ಬಲಮಂ ನಿವಾಳಿವಟ್ಟು ಮಾಡೆ (ಚಾವುಂಪು. ೧೪೮). [ ? ]

**ನಿವಳಿಸು** 'ನಿವಾಳಿಸು' ನೋ.

**ನಿವಾಂತ** (ಗು). ೧. ಸದ್ದುಗದ್ದಲಗಳಿಲ್ಲದ; ಶಾಂತವಾದ: ಲಖ್ಖದ ಈ ನಿವಾಂತ ಜಾಗಾ ನನ್ನ ಕೆಲಸಕ್ಕ (ಸಾಧಾರಿ. ೪೮). (ನಾ). ೨. ಸದ್ದುಗದ್ದಲಗಳಿಲ್ಲದಿರುವುದು; ನಿಶ್ಶಬ್ದವಾಗಿರುವುದು: ಸ್ಥಳವು ನಿವಾಂತವಲ್ಲವೆಂಬುದಿಷ್ಟೇ ನಾನಿಲ್ಲಿ ಹೇಳಬೇಕಾದುದು (ಬೆಳಗು. ೫೭). ೩. ನಿಶ್ಚಿಂತತೆ; ನೆಮ್ಮದಿ: ಗುರುಭಟ್ಟ ಒತ್ತಾಯದಿಂದ ನನ್ನನ್ನು ಗಣಪತಿಪ್ರಸಾದದ ಪಂಕ್ತಿಗೆ ಎಳೆದುಕೊಂಡು ಹೋದ. ಇಬ್ಬರದೇ ಪ್ರಸಾದ ನಿವಾಂತವಾಗಿ ನಡೆದಾಗ . . . ವಿಚಿತ್ರವಾಗಿ ನಕ್ಕ (ದೀಪಹ. II, ೧೬೦); ಇಬ್ಬರೂ ನಿವಾಂತವಾಗಿ ಕುಳಿತೆವು (ದೀಪನಿ. ೧೬೫).

[←ಮರಾ. ನಿವಾಂತ./ಸಂ. ನಿವಾತ]

**ನಿವಾಟ** (ನಾ). ೧. ಚೆದರುವಿಕೆ; ಚೆಲ್ಲಾಪಿಲ್ಲಿ: ಒಲೆಯುರಿಯು ನುರುಹಿದಡೆ ಹೊಗೆ ಗೋಳಕನಾಥನ ಕೊರಳ ಸುತ್ತಿತ್ತು . . . ರುದ್ರನ ಹಾವುಗೆ ಉರಿಯಿತ್ತು ದೇವಗಣಂಗಳು ನಿವಾಟವಾದರು (ಬಸವ. ೯೩೦). ೨. ತೆರೆದುದು; ಅಡೆತಡೆಯಿಲ್ಲದುದು; ಬಯಲಾದುದು: ವಾರಣದ ಉದರ ಬೆಂದಿತ್ತು ಮಾರಿ ಸತ್ತಳು ದಾರಿ ನಿವಾಟವಾಯಿತ್ತು (ಸಿದ್ಧೇಪ. ೩೭-೯೯). [ಸಂ.]

**ನಿವಾಡ** (ನಾ). ೧. ಉಪಾಯ; ಹಂಚಿಕೆ: ಏನು ಮಾಡುವೆನಿದಕೆ ಹೇಳವ್ವಾ ನಿವಾಡವನೆನುತವಳಲುತನೂನಶೋಕದಿ ಬೀಳ್ವನೇಳ್ವನು ನಿಂದು ನೋಡುವನು (ಬಸಪು. ೪೫-೨೭); ವಾದ್ಯಪ್ರಬಂಧಂಗಳಲ್ಲಿ ತನ್ನ ಸೇರುವೆಯನಾರೈವುತ್ತೆ ನಿವಾಡದಿಂ ನಿಗುರಿಸುತ್ತೆ ಚಾಳಿಯಿಂ ಚಳಿಸುತ್ತ . . . ಬಾಜಿಸುತಿರ್ದಂ (ವಿರೂಪಾ. ೮೧ ಪ); ರೂಢಿಪತಿ ಸರಿದ ಸುರನಗರಿಗಂ ಬಾಲಕರು ಹೇಡರಾದರು ರಾಜ್ಯಮನ್ನಾಳಲಾರದೆ ನಿವಾಡವಿಲ್ಲದೆ ಕ್ಷಾತ್ರ ಧರ್ಮ ಕಿರಿದಾಗಿ ಬೆಳೆ ಬಿತ್ತುಗಳ್ ಕಿರಿದಾದುದು (ತುರಂಗ. ೧೨-೯). ೨. ನಿರ್ಣಯ; ತೀರ್ಮಾನ: ನೋಡಬೇಹುದು ಮೂಱು ಬಾರಿ ನಿವಾಡವ [ಪಾಠಾಂ.ಬ]ಹುದೆಂದಿಂದುಲೇಖಾಚೂಡಮಂತ್ರದ ಲೇಖೆಯುಂ ಜಿನಮಂತ್ರಲೇಖೆಯನು ಕೂಡೆ ಕಾವೇರಿಯಲಿ ಹಾಯ್ಕಲು ರೂಢಿದೊಱಿ ಯಲಿ ಹೋದಡಪಜಯ ಓಡದಿದಿರೇಱಿದಡೆ ಜಯ (ಬಸಪು. ೫೦-೩೮). ೩. ಗುರಿ; ಲಕ್ಷ್ಯ: ಇನಿತು ಸುಖದ ಸುರಾಡವನು ಕೊಂಡೆಯರ ನುಡಿಗೆ ನಿವಾಡವನು ಮಾಡಿದರು (ತೊರವೆ. ೩-೭-೩೯). (ಗು). ೪. ಆಯ್ದು ತೆಗೆದ; ವಿಶಿಷ್ಟವಾದ: ಮಾಡದ ಮಾಟವ ಮಾಡಿ ನೀ ಮುನ್ನೊಂದು ಕೋಡಗವನು ಬೇಳಲೆಚ್ಚ ಪಾಡನೆನ್ನೊಳು ತೋಱು ಸೆಂದು ಕಪರ್ದಿ ನಿವಾಡ ಕೂರ್ಗಣೆಯೊಳಿಕ್ಕಿದನು (ಮೋಹತ. ೩೯-೩೦).

[←ಮರಾ. ನಿವಾಡ]

**ನಿವಾಡಿಸು** (ಕ್ರಿ). ಲಕ್ಷ್ಯದಲ್ಲಿಟ್ಟುಕೊಳ್ಳು; ಗಮನಿಸು: ಜಂಗುಳಿಯ ಕಾವ ಗೋವ ಹಲವು ಹಸುವ ನಿವಾಡಿ[ಪಾಠಾಂ. ರಿ] ಸುವಂತೆ ತನು ಭಕ್ತನಾಯಿತ್ತು ಎನ್ನ ಮನ ಭವಿ (ಬಸವ. ೨೮೪).

[ನಿವಾಡ + -ಇಸು₃]

**ನಿವಾತ** (ಗು). ೧. ಗಾಳಿ ಬೀಸದ; ಗಾಳಿಯಿಲ್ಲದ: ನಿರ್ಮಾಯ ನಿಷ್ಕಾಮಿ ನಿಷ್ಕಂಪ ನಿವಾತ ಜ್ಯೋತಿರೂಪಂ ನಿರುಪಮನೆನಿಸಿರ್ದಂ ವಿರೂಪಾಕ್ಷಲಿಂಗಂ (ಗಿರಿಕ. ೫-೩೩). (ನಾ). ೨. ಗಾಳಿಯ ಹೊಡೆತ ವಿಲ್ಲದಿರುವಿಕೆ; ಗಾಳಿ ಬೀಸದ ಸ್ಥಿತಿ: ನಡುಗಿತಿಳೆ ನಿರ್ಘಾತದಲಿ . . . ಸಿಡಿದವಱಿಗಳು ಕೆಱಿಗಳುಕ್ಕಿದವಡಿಗಡಿಗೆ ಹೆಮ್ಮರ ನಿವಾತದಲುಡಿದು ಬಿದ್ದವು ಕೌರವೇಂದ್ರನ ಪತನಕಾಲದಲಿ (ಕುಮ್ಯಾಗ. ೮-೩). ೩. ಶಾಂತನಾದ ವ್ಯಕ್ತಿ: ಪರಮಸುಖದಿಂದಂ ನಿವಾ[ಪಾಠಾಂ. ರ್ವಾ]ತ ನಿಶ್ಚಿಂತನಾಗಿರುತಿಪ್ಪೆನೋ ಹೇಳು ಹೇಳು ಅಯ್ಯಯ್ಯ (ಸಿದ್ಧರಾ. ೪-೨೯). ೪. ಅಭೇದ್ಯವಾದ ಉಕ್ಕಿನ ಕವಚ: "ನಿವಾತಃ . . . ಗಾಳಿ ಸುಳಿಯದ ಸ್ಥಳ. ಆಯುಧಗಳಿಂದ ಕತ್ತರಿಸಕೊಡದ ಕವಚ" (ಸಿದ್ಧಾಂತಿ. ೩೯೫).

**ನಿವಾತವಾಗು** = ನೆಮ್ಮದಿ ಹೊಂದು; ಶಾಂತವಾಗು: ಉಪಾಧಿಕ ಮನವು ಉಪಾಧಿಕರಹಿತ ಮನವು ನಿಂದಲ್ಲಿಯೆ ನಿವಾತವಾಯಿತ್ತು ಆನಂದ ಭಾವವು ಬಿಂದು ತಾನುಳಿದು ನಿಂದಲ್ಲಿಯೆ ನಿವಾತವಾಯಿತ್ತು (ಅವಚಂ. ೧೪೭-೬೬೯). [ಸಂ.]

**ನಿವಾಪ** (ನಾ). ೧. ನೆಲದಲ್ಲಿ ಕಾಳುಗಳನ್ನು ಬಿತ್ತುವಿಕೆ. ೨. ಕಾಳು; ಬೀಜ. ೩. ಪಿತೃಗಳಿಗೆ ಬಿಡುವ ತರ್ಪಣ; ತಿಲೋದಕ; ಎಳ್ಳುನೀರು ಬಿಡುವುದು: ನಿವಾಪಃ, ಪಿತೃತರ್ಪಣಂ–ಈ ೨ ನೀರ್ಗುಡುವುದು" (ಹಲಾಯು. ೧೦೫-೧೭); "ಪ್ರೇತತರ್ಪಣಮೆನೆ ನಿವಾಪಮೆಂದೆನೆ ಕರ್ಮದಾ ತಿಲೋದಕಮಕ್ಕು" (ಮಂಗರಾ. ೧೧೭-೨೪). [ಸಂ.]

**ನಿವಾರ** (ಗು). ೧. ತಡೆಯುವ; ನಿರೋಧಿಸುವ; ಅಡ್ಡಿಪಡಿಸುವ: ಚಕ್ರವೈತಂದುದು ತತ್‌ಕ್ಷಣಕೆ ವೈರಿಭೀಕರಪಾಂಚಜನ್ಯೋದಾರಶಂಖ ಪ್ರವರಸಹಿತ ನಿವಾರಕೌಮೋದಕಿಯೆನಿಪ ಗದೆಯಿಳಿದುದೊಂದೆಸೆಗೆ (ನಿಭಾಗ. ೧೦-೪೭-೨೧). (ನಾ). ೨. ಪರಿಹಾರ; ನಿವಾರಣೆ: ನಿಖಿಳ ಮಾಹೇಶಪ್ರಸಾದಸುಖ ಸೇರಿದೊಡೆ ನಾಂ ಕಾಲು ನಿಲ್ಲದನಾರತಂ ತೊಳಲುವ ಬಳಲ್ಕೆ ನಿವಾರವಹುದಿನ್ನೆಂಬವೊಲು ಬಂದಿನನುದಯವಾದ (ಬಸಪು. ೧೨-೪೭). 'ಅನಿವಾರ' ಪರಾ. [ಸಂ.]

**ನಿವಾರಕ** (ಗು). ೧. ಕಳೆಯುವ; ಹೋಗಲಾಡಿಸುವ; ಪರಿಹರಿಸುವ. (ನಾ). ೨. ದೂರಮಾಡುವವನು; ಪರಿಹರಿಸುವವನು:

ವಿಘ್ನನಿವಾರಕ ಗಣಾಧಿನಾಯಕ (ಗಣೇಶ. ೧-೯); ಐತಂದರಂ ಸಂಕಟನಿವಾರಕರನೀಕ್ಷಿಸಿ ತಪೋಧನರ್ . . . ಉಪಚರಿಸಿದರ್ (ಶ್ರೀರಾಪಾ. ೩೫-೧೪೬). [ಸಂ.]

**ನಿವಾರಣ** (ನಾ). ೧. ದೂರಮಾಡುವಿಕೆ; ಕಳೆಯುವಿಕೆ; ನಿವಾರಿಸುವಿಕೆ. ೨. ಪರಿಹಾರ : ಮೊದಲಲಿದು ಸುದ್ಯೂತವವಸಾನದಲಿ ವಿಷಮ ದ್ಯೂತದಲಿ ನಿಲುವುದು ನಿವಾರಣವುಂಟೆ (ಕುಮ್ಯಾಸ. ೧೨-೭೯). 'ಭವನಿವಾರಣ' ಪರಾ. ೩. ತಡೆಯುವಿಕೆ ; ನಿರೋಧ ; ಪ್ರತಿಬಂಧ : ಸವನಿವುದೋಹೋ ಹೋ ಎನೆ ನಿವಾರಣಾರ್ಥಂ (ಶಪುದ. ೩೦೯) ; ಗೋಧೆ = ಕರತಲದಲ್ಲಿ ಜ್ಯಾಘಾತನಿವಾರಣಾರ್ಥಂ ಆಗಿ ಕಟ್ಟಿದ ಚರ್ಮ (ನಾಚಿಂ೨. ೬). ೪. ನಿಷೇಧಿಸುವಿಕೆ. ೫. [ಬೌದ್ಧ] ಪರಿಹಾರದ ಆಲೋಚನೆ,—ಚಿಂತನೆ: 'ಪಂಚನಿವಾರಣ' ಪರಾ. [ಸಂ.]

**ನಿವಾರಣಹೇತು** (ನಾ). ಪರಿಹಾರಕ್ಕೆ ಕಾರಣವಾದುದು ; ನಿವಾರಕ : ಯಕ್ಷನೊ ರಕ್ಷನೊ ಚೌಳದ ಭೂತವೊ ಮುಗ್ಧರ ಭೀತಿನಿವಾರಣಹೇತುವೋ (ಗಣೇಶ. ೬-೧೪೬). [ನಿವಾರಣ + ಹೇತು$_2$]

**ನಿವಾರಣೆ** (ನಾ). = ನಿವಾರಣ ೨ : ಇಡೀ ಪತ್ರವನ್ನು ಓದಿದಾಗ ನಿಮ್ಮ ಸಂದೇಹ ನಿವಾರಣೆಯಾಗಬಹುದು (ಮುಂಗಾಮು. ೧೭) ; ದಿ. ಪ್ರೊ. ಮೆಹತಾ ಭಾರತದಲ್ಲಿ ಸಸ್ಯಗಳಿಗೆ ತಗಲುವ "ರಸ್ಟ್" ( rust = ಕುಂಕುಮ) ಎಂಬ ರೋಗದ ನಿವಾರಣೆಗೆ ಜೀವಮಾನವೆಲ್ಲ ದುಡಿದವರು (ಸಸ್ಯಕ. ೧೨೧). [ಸಂ. ನಿವಾರಣ]

**ನಿವಾರಣೋಪಾಯ** (ನಾ). ಪರಿಹಾರ ಮಾಡುವ ಉಪಾಯ : ಕೇಡು ಒದಗಿದ ಮೇಲೆ ನಿವಾರಣೋಪಾಯವನ್ನು ಹುಡುಕತೊಡಗುವುದಕ್ಕಿಂತ ಕೇಡಿನ ಸೂಚನೆ ಮಿಂಚಿ ಕಾಣಿಸಿದ ಕೂಡಲೇ ಮಾಡಬೇಕಾದ್ದನ್ನು ಮಾಡಿದರೆ ಕೇಡು ಬೆಳೆಯಲು ಆಸ್ಪದವಿಲ್ಲವಾಗುತ್ತದೆ (ಹಣಪ್ರ. ೧೯೩). [ನಿವಾರಣ + ಉಪಾಯ]

**ನಿವಾರಿತ** (ಗು). ೧. ತಡೆಹಿಡಿದ ; ನಿರ್ಬಂಧಿಸಿದ; ಪ್ರತಿಬಂಧಿಸಿದ. (ನಾ). ೨. ಪರಿಹರಿಸಿದುದು ; ನಿವಾರಿಸಿದುದು : ಧರಣೀತಳಕೆಲ್ಲಂ ಭೀತಿ ನೆಟ್ಟನೆ ನಿವಾರಿತಮಕ್ಕುಂ (ಜಿಟ್ಟಪು. ೭-೭೪) ; ಈ ಬಗೆಯಗೊಂದಲ ಜಿ. ಎ. ಗ್ರಿಯರ್ಸನ್ನನ ವಿವರಣೆಯಿಂದ ಸ್ವಲ್ಪ ನಿವಾರಿತವಾಯಿತು (ದ್ರಾವಿವಿ. ೧೫೧). ೩. ತಡೆ ಹೊಂದಿದವನು ; ಅಡ್ಡಿ ಹೊಂದಿದವನು : ಒರ್ವಂ ದ್ವಾರಪಾಲನಿವಾರಿತಂ ವೇತ್ರಧರನಿವೇದಿತನಾ ಮಹಾಸ್ಥಾನಮಂ ಪೊಕ್ಕು ಮೈಯಿಕ್ಕಿ ಕೈಯಂ ಮುಗಿದು ನಿಂದು (ರಾಜಶೇ. ೧೦-೧ ಪ). [ಸಂ.]

**ನಿವಾರಿಸು** (ಕ್ರಿ). ೧. ನೀಗು ; ಹೋಗಲಾಡಿಸು ; ಪರಿಹರಿಸು : ಸಸಿಯ ಕೆಲಗೆಲದೊಳೊದವಿದ ಕಸಮಂ ಕಿಟ್ಟಿ . . . ಮೊಸಗರ್ಬಿಟಂ ವಿಧಿಯಿಂದೆ ಸೂಸೆ ಭರದಿಂ ಬೀಟ್ವಾಲಿಕಲ್ಲಂ ನಿವಾರಿಸುಗುಂ (ಲೋಕೋಪ. ೬-೧೦) ; ಸೌಂದರಸೆಟ್ಟಿಯುಂ ಸೋಮಶರ್ಮನುಮೇಗೆಯ್ದುಂ ದುಷ್ಟತನಮಂ ನಿವಾರಿಸಲಾರದೆ (ಧರ್ಮಾಮೃ. ೨-೧೬೧) ; ಅವರುಗಳ ತಪ್ಪಯವನ್ನಿವಾರಿಸಲೆಂದು ಬಗೆದು (ಬಸವು. ೨-೨೦) ; ಕನಕಮೃಗವನು ತಾರನೆಂಬೀ ಮುನಿಸದೊಂದಿದೆ ತಮ್ಮ ತನ್ನಯ ಮನದ ಸಂಶಯವನು ನಿವಾರಿಸು ಹೊಗು ಗೃಹಾಂತರವ (ತೊರರಾ. ೩-೧೧-೧೩); ಘೋರಸಂಸಾರದೊಳ್ಮುಸುಕುವ ಮಬ್ಬಿನಯಂ ನಿವಾರಿಸಿ ಮಹಾಯೋಗಿ ಜೀವ ಪರಮಾತ್ಮರ ವಿಚಾರಿಸುವ ತೆಜದಿಂದೆ ರಿಪುಮೋಹರದೊಳೊತ್ತಿ ಕವಿವ ಭಟರಂ ಗಣಿಸದೆ ವೀರಸುರಥಂ ಕೃಷ್ಣ ಫಲ್ಗುಣರನಜಿಸಿದನು (ಜೈಮಿಭಾ. ೧೪-೭). ೨. ತಡೆ; ನಿಗ್ರಹಿಸು ; ತರುಬು : ಅತಿ ಬಹುಳರಜದೊಳ್ಪೊರೆದ ಪೊನಲ್ಗಳಂತುನ್ಮಾರ್ಗದಿಂ ಪರಿವಿಂದ್ರಿಯಂಗಳಂ ನಿವಾರಿಸದೆಯುಂ ಕದಡಿದ ಮನಮಂ ನಿಯಾಮಿಸದೆಯುಂ ಇಂತಿರ್ಪುದುಚಿತಮಲ್ಲಂ (ಕಾದಂಪೂ. ೮೪೮) ; ಈ ಗುಹೆಯುತ್ತ ಸಾರದಂತಿರಲಿವನಂ ನಿವಾರಿಸುಟಿಾದಂದೆನಸುಂ ಬಟಿಾಸಂದು ಪೊರ್ದುಗುಂ (ಕಾದಂಉ.೫೫೭); ಪುರಾರಿಯ ದೆಸೆಯನೀಕ್ಷಿಸಿ ಸಾಕು ಹೋ ಎನುತಂ ನಿವಾರಿಸಲು (ಬಸವು. ೨೮-೬೧); ತನ್ನ ಹೆಬ್ಬಯಕೆಯ ಇಂದ್ರನೇ ಇವನೆಂದು ಗೊತ್ತಾದಾಗಲೂ ಅವನನ್ನು ನಿವಾರಿಸುವಷ್ಟು ವಿವೇಕ ಅವಳಿಗುಂಟು (ಸಮಾಲೋ. ೭೬). ೩. ಕಳೆ ; ಬಿಸುಡು ; ತೆಗೆ : ಸೂಡಿರ್ದ ಕುಸುಮ ಸೌರಭವನಾಘ್ರಾಣಿಸಿ ಮಾಡಿ ಮುದದಿ ತಿರಸ್ಕರಿಸಿ ಊಡಿರ್ದ ಗಂಧ ಕಸ್ತೂರಿಯ ನಿವಾರಿಸಿ ನೋಡಿದ ಪರಮಾತ್ಮಕನ (ಮೋಹತ. ೨೧-೨೩) ; ಇಕ್ಕಡಿವಡೆದ ಕಾರ್ಮುಕವ ನಿವಾರಿಸಿ ತೆಕ್ಕೊಂಡು ಭಾರಿಯ ಹಲವ ಒಕ್ಕಯ್ಯೊಳಾಂತ ಪೇರೊನಕೆಯಿಂದಿಕ್ಕಿದ ಸೊಕ್ಕಾನೆದಲೆಗನ ಮೇಲೆ (ಮೋಹತ. ೩೮-೫೯). ೪. (ಕಾಲವನ್ನು) ತಳ್ಳು,—ನೂಕು ; ಕಾಲಹರಣ ಮಾಡು : ನೆತ್ತ ಪಗಡೆ ಚತುರಂಗವ ಗೆಲುವಳು ಮತ್ತೇಭಗಮನೆ ಮಂತ್ರಿಜೆಯ ಚಿತ್ತವೈಕಲ್ಯವಾಗಲು ಸೋಲ್ವಳು ಸೋತು ಹೊತ್ತ ನಿವಾರಿಸುವುದಕೆ . . . ಕೇಳಿದಳಿತಿಹಾಸ ಪೌರಾಣಗಳನು (ಮೋಹತ. ೨೭-೧೫). ೫. ಅಲ್ಲಗಳೆ ; ನಿರಾಕರಿಸು : ಎನ್ನ ಮೆಲ್ನುಡಿಯ ನಿವಾರಿಸಬೇಡೆಂದು ಬಿನ್ನಹಗೈದಳು ರತಿಗೆ (ಮೋಹತ. ೧೦-೨೫). ೬. ಬಿಡು ; ರದ್ದುಪಡಿಸು ; ನಿಲ್ಲಿಸು : ಹೆಚ್ಚಿನ ಶಿಕ್ಷಣಕ್ಕೆ ಪ್ರೋತ್ಸಾಹ ಕೊಡುವ ಉದ್ದೇಶದಿಂದ ಈ ಸಾರ್ವತ್ರಿಕ ಪರೀಕ್ಷೆಗೆ ಕೂಡುವ ಅವಶ್ಯಕತೆಯನ್ನು ನಿವಾರಿಸಲಾಗಿತ್ತು (ಶಿಕ್ಷದ.೧೪೯). ೭. ಆರಿಸು ; ನಂದಿಸು ; ಶಮನಗೊಳಿಸು : ತನ್ನ ಕೋಪ ನಿವಾರಿಸಲೆಂದು ಹಾಗೇ ಕೂತಳು (ಹಳ್ಳಿಹಾ. ೧೧೯).

**ನಿವಾರಿಸಿಕೊಳ್ಳು** = ಹೋಗಲಾಡಿಸಿಕೊಳ್ಳು ; ಪರಿಹರಿಸಿಕೊಳ್ಳು : ಇಟ್ಟಾದ ಮೇಲೆ ಎರಡು ತೋಳುಗಳನ್ನೂ ನಿಗುರಿಸಿಕೊಂಡು ನೋವು ಜೋಗು ನಿವಾರಿಸಿಕೊಂಡೆ (ಚೆಂಗಾಳ್ವ. ೮೨).

[ನಿವಾರಣ + -ಇಸು$_3$]

**ನಿವಾಸ** (ನಾ). ೧. ವಾಸಸ್ಥಾನ ; ಮನೆ : "ಭವನಂ ಸದನಂ ಸದ್ಮಂ ನಿವಾಸಮಾವಸಥಮಾಸ್ಪದಂ ನಿಳಯಂ . . . ನಿಕೇತನಂ ಗೃಹಮುಟಜಂ" (ವಸ್ತುಕೋ. ೪೬-೮) ; ಭೌಮಮೆಂಬುದು . . . ಪೂರ್ವಾದಿ ದಿಕ್ಸೂತ್ರ ನಿವಾಸದಿಂದಂ ಹಾನಿ ವೃದ್ಧಿ ಜಯಾಪರಾಜಯಾದಿ ವಿಜ್ಞಾನಮುಂ ನೆಲದೊಳಿರ್ದ ಸುವರ್ಣರಜತಾದಿಗಳಿಂದಂ ಸೂಚಿಸುವುದು (ಚಾವುಂಪು. ೧೮೬); ಆತ್ಮಲಿಂಗ ಪರಮಾತ್ಮ ಜಂಗಮ ತನುಮಧ್ಯೆ ಪ್ರಸಾದವಾಯಿತ್ತು ನಿಶ್ಚಿಂತ ನಿವಾಸವಾಯಿತ್ತು (ಬಸವ. ೮೩೭) ; ಕವಿ ಕವಿರಾಜಂ ವಚಸ್ಸುಂದರೀನೃತ್ಯನಿವಾಸಂ . . . ರುದ್ರಾಂಕನೆ ಪೇಟ್ದಂ (ಜಗವಿ. ೧-೨೨) ; ಸದಯವಿಲ್ಲದ ಚಾಗಿ ಸೊಡರಿಲ್ಲದ ನಿವಾಸಂ . . . ಪ್ರವರ್ಧನವಹುದೆ ಲೋಕದೊಳು (ಬಸವು. ೩೭-೩೪). ೨. ಆಶ್ರಯಸ್ಥಾನ; ನೆಲೆವೀಡು : ಇಂತತಿಶಯವಿಲಾಸಕ್ಕೆ ನಿವಾಸಮುಂ ವಿಭೂತಿಗೆ ನಿಕೇತನಮುಂ ಪೆರ್ಮೆಗೆ ತವರ್ಮನೆಯುಂ ಧರ್ಮಕ್ಕಾರ್ಮುಮೆನಿಸಿದ ರಾಜಗೃಹಪುರವರಶ್ರೀಯನ[ಟ್ಟ]ವಟ್ಟು ನೋಡಿ (ಸುಕುಮಾ. ೨-೪೭ ಪ) ; ದೇಶವೆಲ್ಲವನನೃತ ಹೊದ್ದದಂಬದಿ ಕೊಟ್ಟು ಕಾಶಿಯ ನಿವಾಸದೊಳು ಸತಿಸುತರ ಮಾಜಿ ಋಣವನುತ್ತರಿಸಿದ ಹರಿಶ್ಚಂದ್ರನು (ಹಚಕಾ. ೧೧ ಸೂಚನೆ); ವಾಜಶ್ರವಸನ ಕುಟೀರ . . . ಹರ್ಷಕ್ಕೆ ನಿವಾಸವಾಯಿತು (ಚಿತಂಬಾ. ೧೦೫). [ಸಂ.]

**ನಿವಾಸಕ** (ನಾ). = ನಿವಾಸ ೨ : ಹೊಗಳುತ್ತೈದಿದರಾಲಯಕೆ ಮೂಜಗದ ಜನ . . . ಪಾಂಡುಕುಮಾರಕರ ಸಿರಿಯ ಮಿಗೆ ಚತುರ್ದಶಭುವನದಲಿ ಕೀರ್ತಿಗೆ ನಿವಾಸಕವಾಯ್ತು (ಸಿಭಾಗ. ೧೦-೮೦-೪೫). [ಸಂ.]

**ನಿವಾಸಸ್ಥಾನ** (ನಾ). ವಾಸಿಸುವ ಸ್ಥಳ ; ಆವಾಸ ; ನೆಲೆ : ಶಿವಾತ್ಮ ಶರಣನ ಹೃದಯವೇ ಪರಮೇಶ್ವರಂಗೆ ನಿವಾಸಸ್ಥಾನ (ನೆಲೆವನೆ)ಯಾಗಿ

ಹೃದಯ್ಕೆ (ಸಿದ್ಧೇಸ. ೮೫-೨೫೩); ಹರಿಗಿರ್ಕೆಯಾಗಿ ಪಾಲ್ಗಡಲಲ್ಲ ಶಿಖಿ ನಿವಾಸಸ್ಥಾನಮಾಗಿ ದಿಗ್ಭಾಗಮಲ್ಲ . . . ಎನಿಸಿರ್ದುದಾಶ್ಚರ್ಯಸಾಂದ್ರ ಮಚಲೇಂದ್ರಮೆಸೆದು (ಜೈಮಿಭಾ. ೧೦-೬). [ನಿವಾಸ+ಸ್ಥಾನ]

**ನಿವಾಸಿ** (ಗು). ೧. ಇರುವ; ವಾಸಿಸುವ; ನೆಲಸುವ. (ನಾ). ೨. ಇರುವವನು; ವಾಸಿಸುವವನು; ನೆಲಸಿರುವವನು: ಭಾವದಲ್ಲಿ ವ್ರತಗೆಟ್ಟುದಾಗಿ ಆ ಭಾವದಲ್ಲಿ ಜೀವಸಂಹಾರಿ ಕೂಡಲಸಂಗಮದೇವ ಸರ್ವನಿವಾಸಿಯಾಗಿ (ಬಸವ. ೯೪೫); ಘೋಷನಿವಾಸಿಗಳಿಂದಮಾಯ್ತು ಕಳಕಳನಿನದಂ (ಜಗವಿ. ೪-೮೦); ಅಂತರಂಗದ ನಿಳಯದಲ್ಲಿ ನಿಜವ ಕಂಡು ನಿವಾಸಿಗಳಾಗಿ . . . ಚಿದ್ಬ್ರಹ್ಮವೇ ಸ್ಥಲಕುಳವೆಂದಱಿದು ಸುಳಿಯ ಬಲ್ಲರೆ ಸ್ಥಲಜ್ಞರೆಂಬೆ (ಸಿದ್ಧೇಸ. ೧೫೭-೪೬೭); ತೊದವರು ಸಾಮಾನ್ಯವಾಗಿ ಪರ್ವತದ ನಿವಾಸಿಗಳು (ರೂಢಿ). [ಸಂ. ನಿವಾಸಿನ್]

**ನಿವಾಸಿನಿ** (ನಾ). ವಾಸಿಸುವವಳು: ಅನ್ಯನಗನಿವಾಸಿನಿಗಳಪ್ಪ ಮರ ಕಾಂತೆಯರುಮಂ ಮರುದೇವಿಗೆ ಪರಿಚಾರಕೆಯರಾಗಿರಲುಂ . . . ಸೌಧರ್ಮೇಂದ್ರಂ ಬೆಸಸೆ (ಚಾವುಂಪು. ೩೧). [ಸಂ. ನಿವಾಸಿನೀ]

**ನಿವಾಸಿಸು** (ಕ್ರಿ). ಇರು; ವಾಸಮಾಡು; ನೆಲಸು: (೬). [ನಿವಾಸ+-ಇಸು₃]

**ನಿವಾಳಿ, ನಿವಾಳೆ, ನೀವಳಿ, ನೀವಾಳಿ, ನೈವಾಳಿ** (ನಾ). ೧. ದೃಷ್ಟಿ ಪರಿಹಾರಕ್ಕಾಗಿ ಉಪ್ಪು, ಮೆಣಸಿನಕಾಯಿ, ಅನ್ನ, ಕುಂಕುಮದ ಕದಡು ಮೊದಲಾದುವುಗಳಿಂದ ಇಳಿ ತೆಗೆಯುವುದು; ನೀವಳಿಸುವುದು; ದೃಷ್ಟಿ ತೆಗೆಯುವುದು: ವಿಡಾಯದಿಂದೈತಂದು ದಂಡಿಗೆಯನಿಳಿದ ನಾರತಿಗಳ ನಿವಾಳಿಯಿಂ ಚಂದ್ರಹಾಸಂ ಭದ್ರಮಂಟಪದೊಳು (ಜೈಮಿಭಾ. ೩೧-೧೪); ರಕ್ಕಸತಿಲಕಮಹಿಷಾಮೌಳಿ ಪಾತಕರುಲುಹಿನಿಂದೆಡಬಲ ನಿವಾಳಿಯ ಪಸುರುಗೂಳ್ಗಳಲಿ ಲಲನೆಯರ ಶೇಷಾಕ್ಷತೆಯೊಳು . . . ಬಂದನು ಮಗಳ ಮಂದಿರಕೆ (ಅಂಬಿಕಾ. ೧೯-೨೮); ಪಡೆದ ಶಿಶುವ ಕಾಣುತಾಗಲು ಸ್ತ್ರೀಯರು ಬಿಡದೆ ನಿವಾಳಿಯ ಹಾಕಿ (ಅಬ್ಬಲೂ. ೨-೪೪). ೨. ಆರತಿ; ನೀರಾಜನ: ಅಗ್ಘವಣಿ ಪತ್ರೆ ಧೂಪ ದೀಪ ನಿವಾಳಿಯಲ್ಲಿ ಪೂಜಿಸಿ ಪೂಜಿಸಿ ಬಳಲುತ್ತೈದಾರೆ (ಅವಚಂ.೨೮-೧೧೮); ವನಲಕ್ಷ್ಮಿಯಾಗಳೆ ನಿವಾಳಿಗೆ ತೀವಿದ ರತ್ನದೀಪಮಾಲಿಕೆಯೆನಿಸಿತ್ತು ಕುಟ್ಮಲಿತ ಚಂಪಕ ಸಂಚಯಮಾ ವನಾಂತದೊಳ್ (ಕುಸುಮಾ. ೧-೯೪); ಸೋಮವಾರದಲು ನಿವಾಳಿಗೆ ಗಾಣಕ್ಕೆ ಯೆಂಣ್ಣೆ ಸೊಳಸಗೆ ಯೆರಡು ದೇವರಿಗೆ ನಡೆವ ಗಾಣವೊಂದು (ಕಇ. I, ೩೦-೪೭; ಸು. 1222); ಬಾಲೆಯರ ಬರಹೇಳು ರತುನನಿವಾಳಿಗಳ ತರಹೇಳೆನುತ . . . ಬಂದನಿದಿರಾಗಿ(ಕುಪ್ಪಾಅ.೧೨-೫೭); ಅವಳೇ ತಾರಕ್ಕನಿಗೆ ನಿವಾಳಿ ತಂದು ಇಳಿಸಿ ಸ್ವಾಗತಿಸಿದಳು(ನಿಸರ್ಗ.೨೨೧). ೩. ಆರತಿಯನ್ನೆತ್ತುವ ಉಪಕರಣ: ಶಚಿ ಸುರಪತಿಯ ನೇಮದಲಿ ಇರುಳಿನಗ್ರದಲಮಳಮಣಿಬಂಧುರದ ಹೊಂದಳಿಗೆಯ ನಿವಾಳಿಯ ಧರಿಸಿದಳೊ ದರಹಾಸ ಮಿಗಲೆನಲೆಸೆದುದಿನಬಿಂಬ (ತೊರಂರಾ. ೨-೨-೯); ಅನುಜನಂ ತಕ್ಕೈಸಿ ಬೀಳುಕೊಡಲರಸಿಯರ ತಂಡದಾರತಿಗಳ ನಿವಾಳಿಗಳ ಸಡಗರದೊಳರಮನೆಗೆ ಬಂದು (ಜೈಮಿಭಾ. ೪-೭೨). ೪. ದೃಷ್ಟಿದೋಷ ಪರಿಹಾರಕ್ಕಾಗಿ ಇಳಿದೆಗೆದು ಬಿಸುಡುವ ವಸ್ತು: ಶರ್ವಂ ಸರ್ವಸಂಭ್ರಮದಿಂ ಬರೆ ನಡೆತಂದಿದಿರ್ಗೊಳ್ವ ಸುವಾಸಿನಿಯರೊಯ್ಯಾರದಿಂ ನಿವಾಳಿಗಳಂ ಪಿಡಿದು ನಿವಾಳಿಸಲ್ (ಗಿರಿಕ.೧೦-೭೯ ಪ). ೫. ಕಾಣಿಕೆ; ಉಪಹಾರ: ಪೊಂಬೆಳಸಾಗಿ ಪಲವು ಪರಿಯಿಂ ನೆಲ್ಲ ಗರ್ದೆಗಳೊಪ್ಪಿದುವು ಮುಂದದೆಂತೆನಲ್ ತಲ್ಲಕ್ಷ್ಮೀ ಪದ್ಮನಾರ್ಯನ ಪದಾಂಬುಜಕೆ ಪರಮೋಲ್ಲಾಸದಿಂ ನಿವಾಳಿಯನಿಟ್ಟ ಬಹುವರ್ಣದಂಬರಂಗಳೊಯೆಂಬಿನಂ (ಪದ್ಮರಾ. ೮-೧೭); ಬಂದು ನಿವಾಳಿಯನಿಟ್ಟು ರಾಮನ ಕಂಡಂದವನನು ಕೂಡಿಕೊಂಡು ಬಂದನು ರಾಯನ ಪದವ ಕಾಣಿಸುವಾನಂದ ಕೈವಿಂಗೆ ಚಾವಡಿಗೆ (ಕುರಾರಾಸಾಂ.೪೦-೫೪); ವರರತ್ನಂಗಳ ಪುಂಜವನಿಕ್ಕಿ ಮೇಲಿರಿಸಿ ಚಿತ್ರದ ಪಟವೊಂದ ಇರದಿಟ್ಟು ದಿವ್ಯದುಕೂಲನಿವಾಳಿಯು ದೊರೆಗೆ ಕೈಮುಗಿದನಾ ವಣಿಜ (ನಾಗಕು. ೩-೨); ನಿವಾಳಿಯನ್ನಿಟ್ಟು ಜಿನಚಂದ್ರರನ್ನು ಭಕ್ತಿಯಿಂದ ಸ್ವಾಗತಿಸಿದರು (ದಾನಚಿಂ. ೨೭). **ನಿವಾಳಿ:** ೧. ರಾಜಪುತ್ರನು . . . ಬಾಗಿಲಿಗೆ ಬರಲು, ಅಲ್ಲಿ ಸುಮಂಗಲೆಯರು ಆರತಿಗಳನ್ನು ಮಾಡಿ ನಿವಾಳಿಗಳನ್ನು ತೆಗೆದರು(ಕುಮುದಿ.೧೭೮). ೨. ಅಗ್ಘವಣಿ ಪತ್ರ ಪುಷ್ಪ ಧೂಪ ದೀಪನಿವಾಳಿ[ಪಾಠಾಂ.ಳಿ]ಯಲ್ಲಿ ಪೂಜಿಸಿ ಪೂಜಿಸಿ ಬಳಲುತ್ತಿದ್ದಾರೆ (ವಚರ. ೭೫-೩೫೦; ಅವಚಂ. ೨೮-೧೧೮ ನೋ). **ನೀವಳಿ:** ೪. 'ನೀವಳಿಗರೆ' ಪರಾ. **ನೀವಾಳಿ:** ೨. 'ನೀವಾಳಿತೆಗೆ', 'ನೀವಾಳಿಯೆತ್ತು' ಪರಾ. **ನೈವಾಳಿ:** ೪. ಪಟ್ಟೆ ದೇವಾಂಗ ದುಕೂಲ ವಸನಗಳನಿಟ್ಟರು ನೈವಾಳಿಗಳ ಮುಟ್ಟೆ ತಳಿದು ಮುತ್ತಿನಕ್ಷತೆಗಳ ಪಣೆಗಿಟ್ಟರು ಮುತ್ತೈದೆಯರು (ಕುರಾರಾಸಾಂ. ೧೯-೪೧); ಆರತಿಗಳೆತ್ತಿ ನೈವಾಳಿಗಳ ತೆಗೆದಿಡುತ ಸೂರೆಗೈವುತ ಈ ವರಹ ರೂಪಾಯ್ಗಳಂ (ಕೃಷ್ಣವಿ. ೫-೧೧೩).

**ನಿವಾಳಿಯಂ ತೆಗೆ**=ಇಳಿದೆಗೆ; ನಿವಾಳಿಸು: ಹಿಡಿಯೊಳು ತೆಗೆದು ಮೇಲಕ್ಕೆ ನೆಗಹಿ ರಾಜೇಂದ್ರ ಕೃಷ್ಣೇಂದ್ರಂಗೆ ನಿವಾಳಿಯಂ ತೆಗೆದು ಯಿಡುವಾ (ಕೃಷ್ಣವಿ. ೫-೧೦೦). **ನಿವಾಳಿಯಂ ತೆಗೆಸು**=ದೃಷ್ಟಿ ತೆಗೆಯಿಸು; ನಿವಾಳಿಸುವಂತೆ ಮಾಡು: ಭಿನ್ನವಿಲ್ಲದೆ ಸಖೀಕಳವಿಳಾಸಿನಿಯರಿಂದೆ ಬಣ್ಣ ಪಸುಗರ್ಗೂಳ ನಿವಾಳಿಯಂ ತೆಗೆಸುತ್ತೆ ಚೆನ್ನಾಗಿ ಸೊಡರ್ಗಳ ನಿವಾಳಿಸಿ ವರಚಿತ್ರಲೇಖೆ ಪ್ರದ್ಯುಮ್ನಸುತನ (ನನಮೋ. ೨೬-೫೪). **ನಿವಾಳಿಯನೆತ್ತು**=ಆರತಿ ಎತ್ತು: ಆ ಜಂಗಮಕ್ಕೆ ದೀಪಾರತಿಯನೆತ್ತದೆ ತಾನೆ ಎತ್ತಿಕೊಂಡಡೆ ಸತ್ತ ಹೆಣಕ್ಕೆ ನಿವಾಳಿಯನೆತ್ತಿದ ಸಮಾನ (ಚನ್ನವ. ೧೦-೬); ಶಿವನ ಪೂಜಿಸಿ ಪುಷ್ಪದಿಂ ನಿವಾಳಿಯನೆತ್ತುವ ವಿರಳದ ನೇಮ ವಿರಲಾ ನಿವಾಳಿಗೆ ಪುಷ್ಪ ಸವನಿಸದೆ ಶಿರವ ಕೊಯ್ದುಂ ನಿವಾಳಿಸಲೀಶ ಪ್ರತ್ಯಕ್ಷನಾಗಿ ಮುಂದದಿಂ (ಗುರುಚಾ. ೬-೩೫). **ನಿವಾಳಿಯ ವಸ್ತ್ರ**=ದೃಷ್ಟಿ ತೆಗೆದು ಬಿಸುಟಿ ಬಟ್ಟೆ; ನಿವಾಳಿಸಿ ಒಗೆದ ವಸ್ತ್ರ: ಇಟ್ಟ ನಿವಾಳಿಯ ವಸ್ತ್ರವಿಕ್ಕೆಲದೊಳಗೊಟ್ಟೆದವೆಂತೆನೆ ಕಣ್ಗೆ ಬೆಟ್ಟಗಳಂತೆ ಮೆಱೆದವು (ರಾಮವಿ. ೮-೯೬). **ನಿವಾಳಿಯ ಸೀರೆ**=ನಿವಾಳಿಯ ವಸ್ತ್ರ: ಆರತಿ ಕುಸುಮೋಪಹಾರ ನಿವಾಳಿಯ ಸೀರೆ ರಕ್ತಾಂಬುಗಳಿಂದ ವೀರರಾಮನನುಪಚರಿಸಿ ನಾರಿಯರು ಕಣ್ಣಾರೆ ದಣಿಯ ನೋಡಿದರು(ಕುರಾರಾಸಾಂ. ೨೦-೯೨). **ನಿವಾಳಿಯಾಗು**=ಬಿಸುಡು; ದೂರ ಹಾಕು: ಸನಾಯಿಕವಿಯ ಮೌಢ್ಯದ ನಿವಾಳಿಯಾಗಿ ಒಂದು ಬಟ್ಟಲು ಹೆಂಡವನ್ನು ಕೊಡಯ್ಯಾ ಎಂದನಂತೆ (ಉರ್ದುಪಾ. ೧೯೪).

[ದೇ.॥ತುಳು. ನಿವಾಳಿ;-ತೆಲು. ನಿವಾಳಿ, ನಿವ್ವಾಳಿ]

**ನಿವಾಳಿಕಾಣಿಕೆ** (ನಾ). ನಿವಾಳಿಸುವಾಗ ಒಪ್ಪಿಸುವ ಕಾಣಿಕೆ,—ನಜರು: ರತ್ನಭೂಷಾಳಿ ಮಕುಟದ ಪ್ರಕಾಶ ಥಾಳಿಸೆ ಹಿಮವಂತ ದೇವನೆಯ್ತಂದು ನಿವಾಳಿಕಾಣಿಕೆಯನಿಕ್ಕಿದನು (ಭರಚ. ೩೬-೭).

[ನಿವಾಳಿ+ಕಾಣಿಕೆ(<ಕಾಣ್ಕೆ)]

**ನಿವಾಳಿತೆಗೆ** 'ನಿವಾಳಿದೆಗೆ' ನೋ.

**ನಿವಾಳಿದೆಗೆ, ನಿವಾಳಿತೆಗೆ, ನೀವಾಳಿತೆಗೆ** (ಕ್ರಿ). ೧. ದೃಷ್ಟಿತೆಗೆ; ನಿವಾಳಿಸು; ಇಳಿದೆಗೆ: ನೀಲಗಿರಿಯಂಬಾನೆಯಿಳಿದು ವಿಶಾಲನೇತ್ರದ ಮದನನೈತರೆ ಲೀಲೆಯಿಂ ನೃಪಜಾಲ ದುಗುಲನಿವಾಳಿದೆಗೆದೆರೆಗೆ (ನಾಗಪ. ೭-೬೦). **ನಿವಾಳಿತೆಗೆ:** ೧. ನಿವಾಳಿತೆಗೆದ ಮೇಲೆ ವಧುವು ಮುಂದಕ್ಕೆ ಕಾಲಿಟ್ಟಳು(ಸುವಸಂ. ೫೪); ಚಂದ್ರಹಾಸನನ್ನು ಆರತಿಗಳ ನಿವಾಳಿತೆಗೆದು ಭದ್ರಮಂಟಪಕ್ಕೆ ಕರೆದೊಯ್ದರು (ಬಿದುರಿ. ೧೭೪). **ನೀವಾಳಿತೆಗೆ:** ೨. (ಅಲಂ) ಹೀಗಳೆ; ಕಡೆಗಣಿಸು; ತಿರಸ್ಕರಿಸು: ನಿನ್ನ ಮುಂದೆ ಅವಳ್ನ ನೀವಾಳಿತೆಗೀಬೇಕು (ಸರ್ವಮಂ. ೧೪೦); ಮೂವತ್ತು

ಮೂರ್ಕೋಟಿ ದೇವತೆಗಳನಾಳ್ಕೆ ನೀವಾಳಿತೆಗೆವಳು ಪತಿಗೆ (ಮೂಗುತಿ. ೪–೧೮). [ನಿವಾಳಿ + ತೆಗೆ$_1$]

**ನಿವಾಳಿಯೆತ್ತು,** ನೀವಾಳಿಯೆತ್ತು (ಕ್ರಿ). ೧. = ನಿವಾಳಿಸು ೧ : ಹಳೆಯ ವೇತಾಳಕರು . . . ರೌದ್ರಮುಖರಿರಲು ತಲೆಯನರಿದು ನಿವಾಳಿಯೆತ್ತುವ ಬಲಿದು ಶೂಲವನೇಱಿ ಕೂಗುವ ಒಲಿದು ಕೆಂಡದ ನೀರ ಮಿಾವುದ ಕಂಡನಿಂದ್ರಾರಿ (ಕೌಶಿರಾ. ೧೯–೩೫); ಕಡಿದ ತಲೆಯ ನಿವಾಳಿಯೆತ್ತುವರುಡಿದ ಕೈಗಳ ಮೃತ್ಯುದೇವಿಗೆ ಕೊಡುವ ಹರಕೆಯ ಕಂಡು ರಾವಣ ನೋಡಿ ಮೆಚ್ಚಿದ (ಕೌಶಿರಾ.೨೧–೧೨). **ನೀವಾಳಿಯೆತ್ತು :**೧. ಬಿಸಿಯ ರಕ್ತಜಲಾಭಿಷೇಕವನೆಸೆವ ಕರುಳಿನ ಕುಸುಮದಿಂದರ್ಚಿಸುವ ತಲೆಗಳನರಿದರಿದು ನೀವಾಳಿಯೆತ್ತುತಿಹ ಬಸಿವ ಶೂಲವನಳುಕದೇಱುವ . . . ಒಸೆದು ಕೆಂಡದ ನೀರ ಮಿಾವರ ಕಂಡ ಕಪಿರುದ್ರ (ಕೌಶಿರಾ. ೩೮–೩೩); ಆರುತಿಯ ನೀವಾಳಿಯೆತ್ತುತ . . . ಮೋರೆದೊಳದು ಕಸ್ತೂರಿಯ ಗಂಧ ಬಾಸಿಂಗ ಧರಿಸಿದರು (ನಂದಿಲೀ. ೩–೫೬). **೨.** ಆರತಿ ಎತ್ತು. [ನಿವಾಳಿ + ಎತ್ತು$_1$]

**ನಿವಾಳಿವಟ್ಟ** 'ನಿವಳಿವಟ್ಟ' ನೋ.

**ನಿವಾಳಿವಟ್ಟು** 'ನಿವಳಿವಟ್ಟ' ನೋ.

**ನಿವಾಳಿಸು,** ನಿವಳಿಸು, ನೀವಾಳಿಸು (ಕ್ರಿ). ೧. ದೃಷ್ಟಿದೋಷ ಪರಿಹಾರಕ್ಕಾಗಿ ಉಪ್ಪು, ಅನ್ನ, ಬಟ್ಟೆ, ಕುಂಕುಮದ ಕದಡು ಮೊದಲಾದುವುಗಳನ್ನು ಮುಖದೆದುರು ಮೇಲಿನಿಂದ ಕೆಳಗೆ ಸುಳಿದಾಡಿಸಿ ಚೆಲ್ಲು ; ಇಳಿತೆಗೆ; ದೃಷ್ಟಿತೆಗೆ : ಮಾತೃ ಪಿತೃದೃಷ್ಟಿಯಂ ಸಮಸ್ತ ದೃಷ್ಟಿಯಂ ನಿವಾಳಿಸುವ ಮಂತ್ರಮಂ ಅಂಬಿಲಮಂ ಮಂತ್ರಿಸಿ ಮುಖದಲ್ಲಿ ತಳಿವ ಮಂತ್ರಮುಂ . . . ಬೇಱಿಬೇಱಿ ವಿವರಿಸಿ ದೇವೇಂದ್ರ ಮುನೀಂದ್ರರು ಪೇೞ್ದಪರು (ಬಾಲಚಿ. ೧೨೪–೯); ವೀರಂ ವೀರಪುರುಷನ ಶಿರೋಂಬುರುಹಮಂ ಧಾರಿಣೀಪತಿಗೆ ನಿವಾಳಿಸಿ (ಅನಂಪು. ೧೧–೭೬ ಪ); ಶಿಶುವ ತೂಪಿಱಿದಳು ನಿವಾಳಿಸಿ ಬಿಸುಟು ರಜವನು ಮಂತ್ರರಕ್ಷಾಪ್ರಸರವನು ಮುನಿಗಳಲಿ ಮಾಡಿಸಿದಳು ಕುಮಾರಂಗೆ (ಕುಮಾ್ಯಿ. ೪–೫೮); ಲಲನೆಯರು ಸಿಂಗಾರದಾರತಿ ಸುಳಿದರೈ . . . ಹಲವು ಕಾಲದಲುಳ್ಳ ಭಾಗ್ಯವ ಬಳಿದು ಬಿಸುಡುವ ಪರಿ ನಿವಾಳಿಸೆ (ಕೌಶಿರಾ. ೨೧–೧೧). **೨.** (ದೃಷ್ಟಿ ಪರಿಹಾರಾರ್ಥವಾಗಿ) ಆರತಿ ಎತ್ತು,—ಬೆಳಗು : ಆ ಕುಮಾರಂ. . . ಬರ್ಪುದಂ ಕಂಡು ಸೌಭಾಗ್ಯಕಾರ್ತಿಯರ್ ಸೌಭಾಗ್ಯಮುಮಂ ಸೇಸಿಕ್ಕಿಯುಮಂ ಚೆಲ್ಲಕಾರ್ತಿಯರ್ ಚೆಲ್ಲದಿಂ ನಿವಾಳಿಸಿ ನಾಣಂ ಬಱಿದೀಡಾಡಿಯುಂ (ಅರ್ಧನೇ. ೫–೨ ಪ); ಕರ್ಪೂರದೆಸೆವಾರತಿಯ ನಿವಾಳಿಸುತಾಡಿಹಾಡಿ ಮೆಚ್ಚಿಸಿ . . . ಕೈಮುಗಿದನು (ಹಚಕಾ. ಪರಿ. ೨೦೭–೬೭); ಈ ರಮಣೀಸುನಿರ್ಮಲಮುಖೇಂದುಗೆ ಪಾಸಟಿಯಿಲ್ಲೆನುತ್ತೆ ನೀಹಾರಮಯೂಖಬಿಂಬಮನೆ ತಂದು ನಿವಾಳಿಸುವಂತೆ ಕಾಂತೆಯರ್ . . . ಮಂಜುಳತಾರಪಾತ್ರೆಯಿಂದಾರತಿಯೆತ್ತಿದರ್ ನೃಪಕುಮಾರಿಗೆ (ಉದ್ಭಟ. ೮–೨೪); ವನಿತೆಯರು ನಲವಿನಲಿ ಜಯಜಯವೆನುತ ಕರನಖನಯನಗಳ ಬೆಳಗನೆ ನಿವಾಳಿಸುತ್ತೆತ್ತುತಿರ್ದರು ಮಂಗಳಾರತಿಯ (ಪ್ರಭುಲೀ.೨೨–೪೧). **೩.** ಮೇಲೆ, ಕೆಳಗೆ ಆಡಿಸು; ತೂಗಾಡಿಸು : ಮೂಗಂ ಪತ್ತಿಸಿ ಕೊಡಕೆಯನಾಡಿಸಿ . . . ಕೊರಲಂ ತೂಗಿಸಿ ತಲೆಯ ನಿವಾಳಿಸಿ ಕರವಂ ಬಾಱಿಸಿ (ಭೃಂಗೀರ. ಹ. ೪೭೪–೮). **೪.** ಬೆಳಗಿಸು : ಕರಸ್ಥಲದ ಬೆಳಗಿನೊಳಗೊಂದು ಘನಲಿಂಗದ ಬೆಳಗ ಕಂಡೆ . . . ಸಂಗನ ಬಸವಣ್ಣನ ನಿವಾಳಿಸುತ್ತಿದ್ದಿತ್ತು (ಅಪಚಂ. ಕ. ೩೫೭–೯೭೪). **೫.** (ಅಲಂ) (ನಿವಾಳಿಸಿದ ವಸ್ತುವಿನಂತೆ) ಬಿಸುಡು; ಎಸೆ: ಪೊಯ್ದಾಡಿ ತಲೆಯಂ ನಿವಾಳಿಸಿದರಾಳ್ದಂಗೆ (ಜೈಮಿಭಾ. ೨೨–೭); ಅವನ ಹೊಲಿಗೆಯ ಮುಂದೆ ಇದನ್ನೆಲ್ಲ ನಿವಾಳಿಸಬೇಕು! (ಬಾಗಿನ. ೭೬). **ನಿವಳಿಸು : ೧.** ಅಱಿಕೆಯ ಕೀರನಾಂ ಪರಸೆ ಪುಟ್ಟಿದುದೀ ಶುಕಶಾಬಮಿಂದು ಕಣ್ದೆಱಿದುದು ಸಂಜೆಯೊಳ್ ನಿವಳಿಸಾದರದಿಂ ಸೊಡರಕ್ಕೆಯಿಟ್ಟು ತೂಪಿಱಿ (ಲೀಲಾವ. ೧೪–೧೧೯); ಇಭಕುಂಭದ ಮೇಲೆ ಬರ್ಪನಂ ಪರಿದಿದಿರ್ಗೊಂಡಱುಗನನದೆಂತು ನಿವಳಿಸಿದಪೆನೋ (ಅನಂಪು. ೧೨–೫೬); ಹಸುಗರ್ಗಳ ಹರಿವಾಣಗಳೊಳು ತುಂಬಿ ರಂಜಿಸುವ ರತ್ನಾರತಿವೆಳಗಿ ದಸರಿ ಪಟ್ಟಾವಳಿ ಚಿತ್ರವಸ್ತ್ರವ ನಿವಳಿಸಿದರಚ್ಯುತನಂಘ್ರಿಗಳಲಿ (ನೋಹತ. ೪೨–೨೭); ಖಡ್ಗದ ಕೂರ್ಮೊನೆಯನ್ನು ಮಹಾರಾಜನ ಮುಖದ ಸುತ್ತವೂ ಭುಜಕೀರ್ತಿಗಳನ್ನು ಬಳಸಿಯೂ ಮೂಮೂರ್ಮೆ ನಿವಳಿಸಿ (ಬಿರುಗಂ.೩೨–೩). **೨.** ಮಕುಡಮಣಿ ಸೊರ್ಡಗರ್ಳಿನೆ ಮಸ್ತಕ ಸಹಿತಮೆ ನೆಗೆದು ತಿರುಗುವಾ ಪರಿಯಣಮೇಂ ಪ್ರಕಟಿಸಿದುದೊ ಕೃಷ್ಣನ ವಿಜಯಕಾಂತೆಗಾಕಾಶಲಕ್ಷ್ಮಿ ನಿವಳಿಪ ತೆಱದಿಂ (ಜಗವಿ. ೧೭–೫೨); ದಿಟ್ಟಿವೆಳಗಿನಿಂ ನಿವಳಿಸುವಂತೆಯುಂ . . . ಪುತ್ರನಂಗಪ್ರತ್ಯಂಗಂಗಳಂ ನೀಡುಂ ಭಾವಿಸಿ ನೋಡಿ (ಚಂದ್ರಪ್ರ. ೩–೧೦೨ ಪ) ; ಮೇರುನಗೇಂದ್ರಂ ನಿನ್ನ ರಾಜ್ಯೋದ್ಯವವಿಜಯವಕ್ಷಃ ಕೀರ್ತಿಲಕ್ಷ್ಮೀಸದೃಕ್ಷಾಂಗನೆಯರ್ ಕಜ್ಯೋಲಮಂ ಸಾಲಿಡೆ ನಿವಳಿಪ ದೀಪಾವಳೀ ಚಾರುನೀರಾಜನಮಾಂಗಲ್ಯಕ್ಕೆ ಮಾಂಗಲ್ಯಮನೆಸಗುಗು (ಅನಂಪು. ೭–೫೮). **ನೀವಾಳಿಸು : ೧.** ಮಗು ಸಾಯಂಕಾಲದಿಂದ ಒಂದೇ ಸಮನೆ ರಚ್ಚೆ ಹಿಡಿದಿದೆ. ಉಪ್ಪು ಮೆಣಸಿನಕಾಯಿ ನೀವಾಳಿಸಿ ಹಾಕು (ರೂಢಿ). 'ನಿವಾರಿಸು' ಪರಾ.

**ನಿವಾಳಿಸಿ ಒಗೆ**=೧. ದೃಷ್ಟಿತೆಗೆದು ಚೆಲ್ಲು; ಇಳಿದೆಗೆದು ಬಿಸುಡು: ಅನ್ನ ಮೊಸರು ಕಲಸಿ ತಂದು ಕೂಡಲೆ ಗೊಂಬೆಯ ಮೇಲೆ ನಿವಾಳಿಸಿ ಒಗೆಯಬೇಕಾಗಿತ್ತು (ಸ್ಮೃತಿಚಿ. ೮೪). **೨**=ನಿವಾಳಿದೆಗೆ ೨ : ಇವಳ ಮುಂದೆ ಆ ಮಲ್ಲವ್ವ ಸುಂದರವ್ವ ಎಲ್ಲರನ್ನೂ ನಿವಾಳಿಸಿ ಒಗೆಯಬಹುದು (ನಾಪೋಲೀ. ೨೨೨). **ನಿವಾಳಿಸಿ ಚಲ್ಲು**=೧. ನಿವಾಳಿಸಿ ಒಗೆ ೧ : ನಾನು . . . ಹೋಗಿ ಮೊಸರನ್ನ ನಿವಾಳಿಸಿ ಚೆಲ್ಲಿದೆ (ಸ್ಮೃತಿಚಿ. ೮೫). **೨.**=ನಿವಾಳಿದೆಗೆ ೨ : ಉಳಿದ ಹುಡಿಗೆಯರನ್ನು ನಿನ್ನ ಮುಂದೆ ನಿವಾಳಿಸಿ ಚಲ್ಲಬೇಕು (ರಂಗರೋ. ೧೭೨). [ನಿವಾಳಿ+-ಇಸು$_3$]

**ನಿವಾಳಿಸುಹ** (ನಾ). ಇಳಿದೆಗೆಯುವಿಕೆ; ನಿವಾಳಿಸುವಿಕೆ : ಲೋಹಾಭಿಸಾರ=ಶಸ್ತ್ರಧರರಹ ಅರಸುಗಳಿಗೆ ಪರಿವಾರ ಕೆಯ್ಯುಧಗಳ ನಿವಾಳಿಸುಹಂ (ನಾಚಿರಾ. ೬). [ನಿವಾಳಿಸು+-ಹ(<-ಪ)]

**ನಿವಾಳಿಹಾಕು** (ಕ್ರಿ). = ನಿವಾಳಿಸು ೧ : ಅನೇಕರು ಆ ಬುರುಡೆಗಳನ್ನು ಕೈಯಲ್ಲಿ ಹಿಡಿದು ಬಾಯಲ್ಲಿ ಕಚ್ಚಿಕೊಂಡು ಸಹ ಬಂದು ದೊರೆಗೆ ನಿವಾಳಿಹಾಕುತ್ತಿದ್ದರು (ಚಿತ್ರಪಾ. ೬೮).

[ನಿವಾಳಿ+ಹಾಕು (<ಪಾಯ್ಸು$_1$)]

**ನಿವಾಳೆ** 'ನಿವಾಳ' ನೋ.

**ನಿವಾಳೆಯಿಡು** (ಕ್ರಿ). ಕಾಣಿಕೆ ಕೊಡು : ಪುರಜನ ಪರಿಜನವನಿತಂ ನೆರೆದೊಡನೆ ನಿವಾಳೆಯಿಟ್ಟು ಪೊಡೆವಡಲಾಗಳ್ ಧುರಧೀರಘಂಟೆನ್ನಪತಿಗೆ ತರುಣಿಯರಾರತಿಯನೆತ್ತಿದರ್ ಸಂತಸದಿಂ (ಬೀಳಸಂ. ೧–೬೨).

[ನಿವಾಳೆ (<ನಿವಾಳಿ) + ಇಡು$_1$]

**ನಿವಿಡ** (ಗು). ೧. ಒತ್ತಾದ; ನಿಬಿಡವಾದ; ಸಾಂದ್ರವಾದ. (ನಾ). **೨.** ಹೇರಳ; ಅತಿಶಯ : ನಿವಿಡವಾಗಿವೆ ಸಾಧನಂಗಳು ಪವನಜನೆನೀಂ ನೋಡು (ರಾಮಾಸಂ. ೫–೨–೩೨). 'ನಿಬಿಡ' ಪರಾ. [ಸಂ.]

**ನಿವಿಡೀಶ** (ಗು). = ನಿವಿರೀಶ. [ಸಂ.]

**ನಿವಿರೀಶ** (ಗು). ಒತ್ತಾದ; ದಟ್ಟವಾದ. [ಸಂ.]

**ನಿವಿಷ್ಟ** (ಗು). ೧. ಒಳಹೊಕ್ಕ; ಪ್ರವೇಶಿಸಿದ. **೨.** ಕುಳಿತ; ಆಸೀನವಾದ. **೩.** ಇರುವ; ಬೀಡು ಬಿಟ್ಟ : ತೃತೀಯದ್ವೀಪದಂತೆ ನಿವಿಷ್ಟೇಷ್ವಾಕಾರಮಾನುಷೋತ್ಕರಮುಂ . . . ಅಪ್ಪ ಸಂಗ್ರಾಮ

ಭೂಮಿಯಂ ಪೊಱಮಟ್ಟು (ಚಂದ್ರಪ್ರ. ೧೦-೧೦೫ ಪ). **೪.** ತತ್ಪರ ವಾದ; ತೀವ್ರವಾದ ಆಸಕ್ತಿಯುಳ್ಳ. (ನಾ). **೫.** ಕುಳಿತಿರುವುದು : ಅಜಾಂಡತತಿ ನಿಜತನುರೋಮನಿವಿಷ್ಟವೆನಿಪ ಕೃಷ್ಣಂ ಬಿನದದೆ ಸಮಸತ್ತ್ವನಂತೆ ಕಾದಿದನವನೊಳ್ (ಜಗವಿ. ೯-೮೦). **೬.** ಸ್ಥಿರವಾಗಿ ನೆಲೆಗೊಳಿಸಿರುವುದು ; ನೆಟ್ಟಿರುವುದು : ನೆತ್ತಿಯೊಳ್ದರನಿಮಿಾಲಿತ ದೃಷ್ಟಿ ನಿವಿಷ್ಟಮಾಗೆ ಮೂಗಿನ ತುದಿಯೊಳ್ನಿರುದ್ಧಕರಮುಂ ನಿಲೆ . . . ಮಿನುಗುತುಮಿರ್ದನಾ ಪರಮಯೋಗಿಯವೋಲ್ಪಣಿರಾಜಕೇತನಂ (ಗದಾಯು. ೬-೧೫). **೭.** ಕುಳಿತಿರುವವನು : ಅವತರಿಸಿ ಚಕ್ರಿಯಂ ಕಂಡವನತಮಣಿಮಕುಟನುಚಿತಪೀಠನಿವಿಷ್ಟಂ ಭುವನೇಶಂ ಬೆಸಗೊಳೆ . . . ನುಡಿದಂ (ಆದಿಪು. ೧೩-೨೪). [ಸಂ.]

**ನಿವಿಸ** 'ನಿಮಿಸ' ನೋ.

**ನಿವೀತ** (ನಾ). ೧. ಜನಿವಾರವನ್ನು ಕೊರಳಲ್ಲಿ ಹಾರದಂತೆ ಹಾಕಿಕೊಳ್ಳುವುದು : "ಜನ್ನವಿರಮಂ ಬಲಂದೊಡುವುದು ಉಪವೀತಮೆಂಬುದು . . . ಕೊರಲೊಳಗೆ ಇೞಿಯಲಿಕ್ಕುವುದು ನಿವೀತಮೆಂಬುದು" (ಹಲಾಯು. ೬೭-೨೫೩) ; ಪೀನಜಘನನಿವೀತವಿಮಳನವೀನ ಪೀತಾಂಬರದ ಯೋಗಿಧ್ಯಾನಮಂಗಳಚರಣಕಮಲನ ಮೂರ್ತಿಯನು ಕಂಡ (ಭಾಗ. ೩-೯-೧೧). **೨.** ಕೊರಳಲ್ಲಿ ಹಾರದಂತೆ ಧರಿಸಿರುವ ಜನಿವಾರ. **೩.** ಹೊದಿಕೆ; ಆಚ್ಛಾದನ : "ಪ್ರಾವೃತ, ನಿವೀತ– ಹೊದಕೆಯ ಸೀರೆ" (ನಾಚಿರಾ. ೬); "ನಿವೀತಂ, ಪ್ರಾವೃತಂ – ೨ ಹೊದಿಯುವ ಬಟ್ಟೆ, ಅಂಗವಸ್ತ್ರ" (ಸಿದ್ಧಾಂತಿ. ೨೦೩). [ಸಂ.]

**ನಿವೀತಿ** (ನಾ). ೧. = ನಿವೀತ ೧ : ಬರುತ ಕಂಡನು ದೂರದಲಿ ಮುರಹರನ ಮಂಗಳಮೂರ್ತಿಯನು . . . ಗರುಡಭುಜಮೂಲಾಂತರಿತ ಮೇದುರನಿತಂಬನಿವೀತಿಪೀತಾಂಬರವಿಲಂಬಿತ ರತ್ನಕಾಂಚೀಗುಣಮಣಿದ್ಯುತಿಯ (ಭಾಗ.೧೦-೬೨-೨೦); ಚಿತ್ರದಲ್ಲಿ ರಾಯರು ತಲೆಯನ್ನು ಕೆದರಿಕೊಂಡು, ಜನಿವಾರವನ್ನು ನಿವೀತಿ ಹಾಕಿಕೊಂಡು ಕುಳಿತಿದ್ದ ಹಾಗೆ ಬರೆದಿತ್ತು (ತುರಾಯಿ. ೧೧೫). **೨.** =ನಿವೀತ ೨ : (೬). **೩.** ಜನಿವಾರವನ್ನು ಕೊರಳಿನಲ್ಲಿ ಹಾರದಂತೆ ಹಾಕಿಕೊಂಡಿರುವವನು.

[ಸಂ. ನಿವೀತಿನ್]

**ನಿವುಚು** 'ನಿಮಿರ್ಚು' ನೋ.

**ನಿವುದಿ** (ನಾ). ಒಂದು ಊರಿನ ಹೆಸರು : ಸಕ ವರ್ಷ ಎಣ್ಬನೂಱ ಅಯ್ದನೆಯ ವರ್ಷಂ ಪ್ರವರ್ತಿಸುತ್ತಿರೆ ಕಿಡಲೆಗಧಿಪಾಣ್ನನ್ ಎಱೆಯಮ್ಮಂ [ನಿ]ವುದಿ ತೊಱುಗೊಳೊಳ್ಕಾದಿ ಸತ್ತೋನ್ (ಸೌಇಇ. XI-i, ೧೯-೩ ; 883). [?]

**ನಿವುರು** 'ನಿಮಿರ್$_1$' ನೋ.

**ನಿವೃತ** (ಗು). ೧. ಸುತ್ತುವರಿದ; ಆವರಿಸಿಕೊಂಡ : ನಿವೃತಾಖಿಳರಾಜನ್ಯಕನಿವಹಂ ನೃಪಮೇರು ಪೋಘುರಥನೊಲೆ[ದದಱೊಳ್]ಸವಿಳಾಸದಿನಿರೆಯುಂ (ಶಾಂತೀಶ್ವ. ೧೩-೩೫). (ನಾ). **೨.** ಸುತ್ತುವರಿದುದು ; ಆವರಿಸಿದುದು : "ನಿವೃತಂ, ವೇಷ್ಟಿತಂ, ಪರಿವಿಷ್ಟಂ, ವಳಯಿತಂ, ಪರಿಕ್ಷಿಪ್ತಂ—ಈ ೫ ಸುತ್ತಲ್ಪಟ್ಟುದು" (ಹಲಾಯು. ೧೧೮-೨೭) ; ಸಚಿತ್ತಾಚಿತ್ತಶೀತೋಷ್ಣನಿವೃತಸಂವೃತಾದಿಭೇದದಿಂ ಚತುರಶೀತಿಲಕ್ಷಪ್ರಮಾಣಯೋನಿಮುಖಂಗಳೊಳಾವರ್ತನಪರಿವರ್ತನದಿಂ ದುರಿತವರ್ತಿಯಾಗಿ ನಮೆವ ಸಂಸಾರಿ ಜೀವಕ್ಕೆ . . . ಮುನಿಪುಂಗವಂ ಪ್ರಸಾದಂಗೆಯ್ದಂ (ಸುಕುಮಾ. ೫-೩೨ ಪ). **೩.** = ನಿವೀತ ೩. [ಸಂ.]

**ನಿವೃತ್ತ** (ಗು). ೧. ಹಿಂದಿರುಗಿದ ; ಮರಳಿದ. **೨.** ಹೋದ ; ಅದೃಶ್ಯವಾದ ; ಮರೆಯಾದ. **೩.** ನಿಲ್ಲಿಸಿದ ; ಕೊನೆಗೊಳಿಸಿದ ; ಮುಗಿಸಿದ. **೪.** ವಿಮುಖವಾದ. **೫.** ಇಹಲೋಕ ಮತ್ತು ಲೌಕಿಕವ್ಯಾಪಾರಗಳಿಂದ ದೂರ ಸರಿದ. **೬.** ನಿರ್ದಿಷ್ಟಕಾಲದ ಸೇವೆಯಿಂದ ಮುಕ್ತನಾದ ; ಕೆಲಸದಿಂದ ವಿಶ್ರಾಂತಿ ಪಡೆದ. (ನಾ). **೭.** ಬಿಡುಗಡೆಹೊಂದಿದ ವ್ಯಕ್ತಿ : ಕ್ರೂರರತ್ಯಥಮರುದ್ರೇಕಿಗಳು . . . ಶರಣೆನಲು ನಿಜವೈರಮಂ ಬಿಡುವರೆಂಬಾಗಳೀ ಸರ್ವಸಂಗನಿವೃತ್ತರೆನಿಪ ನಿಮಗೆ ಓರಂತೆ ಬೇಡಿಕೊಳುತಿಪ್ಪೆನ್ನ ಮೇಲಿನಿತು ಕಾರುಣ್ಯವೇಕಿಲ್ಲ (ಹಚಕಾ. ೮-೨೧). **೮.** ಸೇವೆಯಿಂದ ಮುಕ್ತನಾದವನು ; ನಿವೃತ್ತಿ ಹೊಂದಿದವನು : ಟಿಸ್ಲರ್ . . . ೩೦ ವರ್ಷಗಳು ಅವಿರತವಾಗಿ ಸೇವೆ ಸಲ್ಲಿಸಿದನು. ೧೯೫೧ ರಲ್ಲಿ ಅಲ್ಲಿಯೇ ಸೇವೆಯಿಂದ ನಿವೃತ್ತನಾದನು (ಸಸ್ಯಕ. ೭೮). **೯.** [ನಾಟ್ಯ] ಒಂಬತ್ತು ಬಗೆಯ ಕೊರಳಿನ ಭಂಗಿಗಳಲ್ಲಿ ಒಂದು ; "ನೆಟ್ಟಗಿರುವ ಕತ್ತನ್ನು ತಿರುಗಿಸುವುದು" (ಲಾಸ್ಯರಂ. ೨೫೯ ಗದ್ಯಾನುವಾದ) : ಸಮಮುಂ ನಿವೃತ್ತಮುಂ ವಲಿತಮುಮೊಪ್ಪುವ ರೇಚಿತಾಖ್ಯಮಾಕುಂಚಿತಮುಂ ಕ್ರಮದಂಚಿತಮುಂ ತ್ರ್ಯಸ್ರಮುಮುಮಿತ[ದ]ನತಮುನ್ನತಂಗಳೊಂಬತ್ತು ಕೊರಲ್ (ಲಾಸ್ಯರಂ. ೨-೧೧೪) ; ಕೊಂಕಿಲ್ಲದೆ ಸಾಜದಿ ನೀ ಟೆಂಕಿಸೆ ಸಮಮದುವೆ ತಿರುಗಲೊಡನೆ ನಿವೃತ್ತಂ (ಲಾಸ್ಯರಂ. ೨-೧೧೫). ℙ "ನಿವೃತ್ತ—ಪಕ್ಕಕ್ಕೆ ತಿರುಗಿರುವ ಕತ್ತನ್ನು ಸಮಸ್ಥಿತಿಗೆ ತರುವುದು. ವಲಿತ— ಕತ್ತನ್ನು ಪಕ್ಕಕ್ಕೆ ತಿರುಗಿಸುವುದು" ಎಂದು ಭರತನಾಟ್ಯ ಮತ್ತು ಸಂಗೀತರತ್ನಾಕರ ಇವುಗಳಲ್ಲಿದೆ (ಲಾಸ್ಯರಂ.) ೨-೧೧೫ ಅಡಿಟ). [ಸಂ.]

**ನಿವೃತ್ತಿ** (ನಾ). ೧. ಹಿಂತಿರುಗುವಿಕೆ ; ಮರಳುವಿಕೆ. **೨.** ಮರೆಯಾಗುವಿಕೆ ; ಕಣ್ಮರೆ ; ಅದೃಶ್ಯವಾಗುವಿಕೆ. **೩.** ನಿಲ್ಲಿಸುವಿಕೆ. **೪.** ಕರ್ಮ ಮಾಡದೆ ಇರುವಿಕೆ ; ಕರ್ಮದಿಂದ ವಿಮುಖವಾಗುವಿಕೆ ; ಲೌಕಿಕವ್ಯವಹಾರ ಮತ್ತು ಐಹಿಕಸುಖಗಳಲ್ಲಿ ಆಸಕ್ತಿ ಇಲ್ಲದಿರುವಿಕೆ : "ವ್ಯಾವೃತ್ತಿ ನಿವೃತ್ತಿ" (ವಸ್ತುಕೋ. ೧೧೩-೧೬) ; ಧರ್ಮಾಧರ್ಮ ವಿವೇಕ, ಪ್ರವೃತ್ತಿನಿವೃತ್ತಿಮಾರ್ಗಗಳ ಸಮನ್ವಯ . . . ಮಾನವಧರ್ಮದ ವಿವೇಚನೆಯೇ ಈ ಕಥೆಗಳ ತತ್ತ್ವವಾಗಿದೆ (ಭಾರದ.೧೦೨); ವೇದಾಂತವು . . . ಪ್ರವೃತ್ತಿ—ನಿವೃತ್ತಿಗಳ ಸಾಮರಸ್ಯವನ್ನು ಸೂಚಿಸಿ ನಮ್ಮ ಕರ್ತವ್ಯ ಹೊಣೆಗಾರಿಕೆಗಳ ಎಚ್ಚರಮಾಡಿಕೊಡುತ್ತದೆ (ಧರ್ಮಸಾ. ೫೨). **೫.** ಮುಕ್ತಿ ; ಪರಮಸುಖ : ನಿಮ್ಮ [ನವ್ಯವ]ಚೋವೃತ್ತಿಯಿನೀ ನಿವೃತ್ತಿ ದೊರೆಕೊಂಡತ್ತು (ಸುಕುಮಾ. ೧೨-೧೫) ; ಉತ್ಕೃಷ್ಟ ನರೇಂದ್ರಪದವಿಯಂ ಬಿಸುಟ್ಟು ತಪೋಭಿಮುಖರಾಗಿ ನಿವೃತ್ತಿಯನೆಯ್ದಿದರ್ (ಜೀವಸಂ. ೨೭-೫೦ ಪ) ; ದ್ವೈತಲಯವೆನಿಪುದೆ ನಿವೃತ್ತಿ ನಿವೃತ್ತಿಯೆಂದೆನಿಪುದೇ ವಿಶ್ರಾಂತಿಯೆಂದೆನಿಪುದು (ಲಿಚಂ. ೫೨-೨೧). **೬.** ಬಿಡುಗಡೆ : ಪೂರ್ವಜನ್ಮ ನಿವೃತ್ತಿಯಾಗಿ ಗುರುಕರುಣವಿಡಿದಂಗೆ ಬಂಧನವೆಲ್ಲಿಯದೊ (ಬಸವ. ೮೭೦). **೭.** (ನಿಗದಿಯಾದ ಅವಧಿ ಮುಗಿದ ನಂತರ) ನೌಕರಿ ಅಥವಾ ಸೇವೆಯಿಂದ ಹೊಂದುವ ಬಿಡುಗಡೆ : ಅವರ ನಿವೃತ್ತಿಯ ಕುರಿತ ಇತ್ಯರ್ಥವು . . . ತಡವಾಗುತಿರುವಾಗ ಬಂದಿತು ಮೃತ್ಯು ಅದಕೆ ತಡೆಬಡೆಯಿಲ್ಲವಾಗಿ (ಇಂಚಾಪ. ೨೧-೯೩). **೮.** [ನಾಟ್ಯ] 'ಭಾಣಿಕಾ' ಎಂಬ ಉಪರೂಪಕದ ಏಳು ಅಂಗಗಳಲ್ಲಿ ಒಂದು ; ℙ ಭಾಣಿಕಾ ಎಂಬುದೊಂದು ಉಪರೂಪಕ. ಒಂದು ಅಂಕದ ದೃಶ್ಯ. ಇದರಲ್ಲಿ ಏಳು ಅಂಗಗಳಿವೆ. ೧. ಉಪನ್ಯಾಸ— ಪ್ರಸಂಗವಶದಿಂದ ಪ್ರಕೃತ ಕಾರ್ಯವನ್ನು ತಿಳಿಸುವುದು. ೨. ವಿನ್ಯಾಸ—ಬೇಸರಿಕೆಯ ಮಾತುಗಳನ್ನು ಹೇಳುವುದು. ೩. ವಿಬೋಧ—ಭ್ರಾಂತಿಯು ಪರಿಹಾರವಾಗುವುದು. ೪. ಸಾಧ್ವಸ—ಇಲ್ಲದುದನ್ನು ಹೇಳುವುದು. ೫. ಸಮರ್ಪಣ— ಕೋಪಪರವಶತೆಯಿಂದ ಮಾತನಾಡುವುದು. ೬. ನಿವೃತ್ತಿ—

ದೃಷ್ಟಾಂತಗಳನ್ನು ಕೊಡುವುದು. **೭.** ಸಂಹಾರ ಕಾರ್ಯವು ಮುಕ್ತಾಯವಾಗುವುದು : ಭಾಣಿಕಾ—ಇದರಲ್ಲಿಯೂ ಒಂದೇ ಅಂಕ . . . ಉಪನ್ಯಾಸ, ವಿನ್ಯಾಸ, ವಿಬೋಧ, ಸಾಧ್ವಸ, ಸಮರ್ಪಣ, ನಿವೃತ್ತಿ, ಸಂಹಾರ ಎಂಬ ಏಳು ಅಂಗಗಳು (ಸಂನಾಟ. ೩೭). **[ಸಂ.]**

**ನಿವೃತ್ತಿಗೊಳಿಸು** (ಕ್ರಿ). ನಿಗದಿಯಾದ ಕೆಲಸದಿಂದ ಬಿಡುಗಡೆ ಮಾಡು : ಪ್ರಭಾಕರನು ಮಿತ್ರಪಾಲನನ್ನು ತಾನು ಕೊಟ್ಟಿದ್ದ ಅಧಿಕಾರದಿಂದ ನಿವೃತ್ತಿಗೊಳಿಸಿದನು (ಕವಿಕ. ೪೦).

[ನಿವೃತ್ತಿ + ಕೊಳ್$_1$ + –ಇಸು$_3$]

**ನಿವೃತ್ತಿಧರ್ಮ** (ನಾ). **೧.** ವೈರಾಗ್ಯವನ್ನು ಬೋಧಿಸುವ ಧರ್ಮ; ನಿವರ್ತಕ ಧರ್ಮ : ಸಂಜೀವಕನುಂ . . . ಸಂಸಾರಿಯುಂ ಪರಾಕ್ರಮಿಯುಮಪ್ಪ ನಿನಗೆ ದಿವ್ಯಮುನಿಗೆ ಪೇಳ್ವಂತೆ ನಿವೃತ್ತಿಧರ್ಮಮಂ ಪೇಟ್ದೊಡೆ (ಪಂಚತಂ. ೯೭–೧೫). **೨.** (ತಾರ್ಕಿಕ ದರ್ಶನದ ಮೇರೆಗೆ) ಜೀವಿಗೆ ಹಿಂದಿನಿಂದ ಕೂಡಿಕೊಂಡು ಬಂದ ಧರ್ಮಾಧರ್ಮಗಳ ನಿವೃತ್ತಿ : ಪ್ರಾಚೀನ ಸಂಚಿತ ಧರ್ಮಾಧರ್ಮಗಳು ನಿವೃತ್ತಿಯಾಗಿ ನಿವೃತ್ತಿಧರ್ಮ ಉದಯಿಸುವುದು (ಹಿಂದಸಾ. ೧೨೩). **[ಸಂ.]**

**ನಿವೃತ್ತಿಪರ** (ನಾ). ಸಂಸಾರಬಂಧನದಿಂದ ನಿವೃತ್ತಿಯನ್ನು ಪಡೆಯುವುದೇ ಗುರಿಯಾಗಿರುವುದು ; ಲೌಕಿಕಜೀವನದಿಂದ ಬಿಡುಗಡೆ ಹೊಂದುವುದೇ ಧ್ಯೇಯವಾಗಿರುವುದು : ಭಕ್ತಿಯ ಮಾರ್ಗ ನಿವೃತ್ತಿಪರ. ಶಕ್ತಿಯ ಮಾರ್ಗ ಪ್ರವೃತ್ತಿಪರ (ಭಾರದ. ೧೧೮).

**[ಸಂ.]**

**ನಿವೃತ್ತಿಪರಿಣತಿ** (ನಾ). (ಸಂಸಾರದಿಂದ) ಮುಕ್ತಿಯನ್ನು ಹೊಂದುವ ಪರಿಪಕ್ವಸ್ಥಿತಿ : ಮನಕ್ಕೆಂತಾನುಂ ಕಾಲಲಬ್ಧಿವಶದಿಂ ನಿವೃತ್ತಿಪರಿಣತಿಯೊಳ್ ಪರಿಣಮಿಸಿದ ಸುಸ್ಥತೆಯುಂ ವ್ಯರ್ಥಂ ಮಾಡದೆ ತಪೋವನಾಭಿಮುಖನಾದೆನ್ನ ಪರಿನಿಷ್ಕ್ರಮಣದೊಳ್ ಪರಿಪಂಥಿಭಾವಮಂ ಪೊರ್ದದೊಡಂಬಡುವುದೆ ನಿನಗೆ ವಿನಯಂ (ಚಂದ್ರಪು. ೪–೧೮ ಪ).

[ನಿವೃತ್ತಿ + ಪರಿಣತಿ]

**ನಿವೃತ್ತಿಮಾರ್ಗ** (ನಾ). ಲೌಕಿಕಸುಖಕ್ಕಾಗಿ ಆಚರಿಸುವ ಕರ್ಮಗಳಿಂದ ವಿಮುಖವಾಗುವಿಕೆ ; ವಿರಕ್ತಿ ; ℙ ಹಿಂದೂಧರ್ಮದಲ್ಲಿ ಪರಲೋಕಸಾಧನೆಗಾಗಿ ಎರಡು ಮಾರ್ಗಗಳು ಪ್ರತಿಪಾದಿತವಾಗಿವೆ. ಮೊದಲನೆಯದು ಪ್ರವೃತ್ತಿಮಾರ್ಗ. ಎರಡನೆಯದು ನಿವೃತ್ತಿಮಾರ್ಗ. ಸಾಧಕನು ಪ್ರಪಂಚ ವ್ಯವಹಾರವನ್ನು ಬಿಡದೆ ದೇವತಾರಾಧನೆ, ಜಪ ಮೊದಲಾದ ಪುಣ್ಯಕರ್ಮಗಳನ್ನು ಮಾಡಿದರೆ ಆ ಪುಣ್ಯದಿಂದ ಪರಲೋಕಸಾಧನೆಗೆ ಪ್ರಯತ್ನಿಸುವುದೇ ಪ್ರವೃತ್ತಿಮಾರ್ಗ. ಈ ಪ್ರವೃತ್ತಿಮಾರ್ಗದಿಂದ ಉಂಟಾಗುವ ಪುಣ್ಯವು ಸಂಚಿತವಾದುದರಿಂದ ಕೆಲ ಕಾಲಾನಂತರ ಆ ಪುಣ್ಯವು ಮುಗಿದುಹೋಗುತ್ತದೆ. ಆಗ ಭೂಮಿಯಲ್ಲಿ ಮತ್ತೆ ಹುಟ್ಟಬೇಕಾಗುವುದು. ಆದುದರಿಂದ ಸರ್ವಕರ್ಮಸಂನ್ಯಾಸ ಅಥವಾ ವಿರಕ್ತಿಯನ್ನು ತಳೆದು 'ತಾನು ಯಾರು' ಎಂಬ ಸಮಸ್ಯೆಯನ್ನು ಬಿಡಿಸುವ ಆತ್ಮಜ್ಞಾನವನ್ನು ಪಡೆದರೆ ಶಾಶ್ವತ ಮುಕ್ತಿಯುಂಟಾಗುತ್ತದೆ ಎಂದು ನಂಬಿ ನಡೆಯುವುದೇ ನಿವೃತ್ತಿಮಾರ್ಗ : ಸ್ಥಲಗಳಲ್ಲಿ—ಭಕ್ತಾದಿಯಿಂದ ಐಕ್ಯಾಂತವಾಗಿ ಹೇಳುವುದು ನಿವೃತ್ತಿಮಾರ್ಗವೆಂದೂ ಸ್ಥಲಜ್ಞರು ಹೇಳುವರು (ಶಿವಾಸೂ. ೫೯–೪೩ ವಿಚಾರ) ; ನಿವೃತ್ತಿಮಾರ್ಗಕ್ಕಿಂತ ಪ್ರವೃತ್ತಿಮಾರ್ಗವನ್ನು ಅನುಸರಿಸುವುದು ಅಗತ್ಯವೂ ಅನಿವಾರ್ಯವೂ ಆದುದೆಂದು ಅವನು ಬೋಧಿಸಿದ (ಭಾರದ. ೪೬೧) ; ದಾಸರದು ಮುಖ್ಯವಾಗಿ ನಿವೃತ್ತಿಮಾರ್ಗ (ಧರ್ಮಸಾ. ೮೮). [ನಿವೃತ್ತಿ + ಮಾರ್ಗ]

**ನಿವೃತ್ತಿವೇತನ** (ನಾ). (ಸರಕಾರಿ) ಸೇವೆಯಿಂದ ವಿಶ್ರಾಂತಿ ಹೊಂದಿದ ಮೇಲೆ ಪಡೆಯುವ ವೇತನ ; ವಿಶ್ರಾಂತಿವೇತನ ; ಪಿಂಚಣಿ; ಪೆನ್‌ಷನ್ನು : ನ್ಯಾಯಾಲಯದ ನ್ಯಾಯಾಧೀಶರುಗಳಿಗೆ . . . ಪಾವತಿಯಾಗಬೇಕಾದ ವೇತನಗಳು . . . ಮತ್ತು ನಿವೃತ್ತಿವೇತನಗಳು (ಭಾಧಾನ. ೫೮) ; ನಿವೃತ್ತಿವೇತನದ ರೂಪದಲ್ಲಿ ಅವನು ವರ್ಷಂಪ್ರತಿ ಹತ್ತಾರು ಸಾವಿರ ರೂಬಲ್ ವರಮಾನ ಪಡೆಯುತ್ತಿದ್ದನು (ಪುನರು. ೩೩೪).

[ನಿವೃತ್ತಿ + ವೇತನ]

**ನಿವೇದಕ** (ಗು). **೧.** ತಿಳಿಸುವ; ಹೇಳುವ : ಸುತಲಾಭ ನಿವೇದಕ ವಾರ್ತೆ ತೀವೆ ಪುಳಕಮನಾಂತಳ್ (ಜಗವಿ. ೨–೮೭). (ನಾ). **೨.** ಹೇಳುವವನು ; ತಿಳಿಸುವವನು : ಆ ನೃಪನೋಲಗಕ್ಕೆ ಖುಷಿಯಾಗ ನಿವೇದಕನೊರ್ವನೆಯ್ದಿ ಬಂದಾನತನಾಗಿ . . . ಎಂದು ಬಿನ್ನವಿಪುದುಂ (ಚಂದ್ರಪು. ೯–೧೭). 'ಖುಷಿನಿವೇದಕ' ಪಠಾ. [ಸಂ.]

**ನಿವೇದನ** (ನಾ). **೧.** ತಿಳಿಯಪಡಿಸುವಿಕೆ ; ಮಾಹಿತಿ ಕೊಡುವಿಕೆ : ಸಭೆ ಸಮಾಜ ಭಾಷಣ ನಿರ್ಣಯ ಆವೇದನ ನಿವೇದನ ಸಮವೇದನ —ಇತ್ಯಾದಿ ನನಗೆ ಅದು ಒಪ್ಪುವುದಿಲ್ಲ (ಬಂಕಿಮ. ೧೧೦) ; ಕಾವ್ಯ ಎಂದರೇನು ಎಂಬುದನ್ನು ವಿಚಾರಮಾಡುತ್ತಾ ಅದು "ಅನ್ಯವಿಧದಿಂದ ಅಸಾಧ್ಯವಾದ, ಕೆಲವು ಅನುಭವಗಳ ವಾಗ್ರೂಪದ ನಿವೇದನ" . . . ಎನ್ನುತ್ತಾನೆ (ಭಾಪಗೀ. ೨೭). **೨.** ಸಮರ್ಪಣೆ ; ದೇವರು, ಗುರು, ಹಿರಿಯರು ಮೊದಲಾದವರಿಗೆ ಕಾಣಿಕೆ ಮೊದಲಾದುವನ್ನು ಅರ್ಪಿಸುವಿಕೆ ; ನೈವೇದ್ಯ : ಗಿಡದ ಮೇಲೆಯೇ ಹಣ್ಣಾದ ಎರಡು ಖರ್ಜೂರವನ್ನು ನಿತ್ಯವೂ ತಂದು ನಿವೇದನಕ್ಕಾಗಿ ಅದನ್ನು ತೆಗೆದು ಇರಿಸುತ್ತಿದ್ದನು (ನೀತಿಚಿಂ. VI, ೮). 'ಆತ್ಮನಿವೇದನ' ಪಠಾ. **೩.** ಹೇಳಿಕೆ ; ನಿರೂಪಣೆ. **೪.** ಅರಿಕೆ ; ಬಿನ್ನಹ ; ವಿಜ್ಞಾಪನೆ.

[ಸಂ.]

**ನಿವೇದನೆ** (ನಾ). = ನಿವೇದನ ೪ : ನನ್ನ ದುಃಖವನ್ನು ತಮ್ಮಲ್ಲಿ ನಿವೇದನೆ ಮಾಡಿಕೊಂಡಿದ್ದೇನೆ (ರೂಢಿ). [ಸಂ. ನಿವೇದನ]

**ನಿವೇದಿತ** (ಗು). **೧.** ತಿಳಿಯಪಡಿಸಿದ ; ಹೇಳಿದ : ಗುಣಧರರೆಂಬ ದಿವ್ಯಜ್ಞಾನಿಗಳನಲ್ಲಿರ್ದರಂ ಕಂಡು ನಿವೇದಿತ ನಿಜಜನಕವೃತ್ತಾಂತಮನವರ ವಚನದಿಂ ತಮ್ಮಯ್ಯನ ಸಾವುಮಂ ನರಕಕ್ಕೆ ಪೋಪುದುಮನಱಿದು (ಚಾವುಂಪು. ೧೪). **೨.** ಅರ್ಪಿಸಿದ ; ಸಮರ್ಪಿಸಿದ : ಸಂಗತ ನಿವೇದಿತಪದಪದಾರ್ಥಂಗಳಿಂ ಮುನ್ನಂಬಿಕಾನಾಥಂಗೆ ತನ್ನ ಪ್ರಾಣಪದಮಂ ತಾ ಸಮರ್ಪಿಸಲು (ಬಸಪು. ೩೩–೮). (ನಾ). **೩.** ಹೇಳಲ್ಪಟ್ಟವನು ; ತಿಳಿಸಲ್ಪಟ್ಟವನು : ಉದ್ಧವನೆಂಬ ದೂತಮುಖ್ಯನನಟ್ಟದೊಡಾತಂ ಬಂದು ದೌವಾರಿಕ ನಿವೇದಿತಂ ಸಭಾಭವನಮಂ ಪೊಕ್ಕು ಸಮುಚಿತಾಸನದೊಳ್ ಕುಳ್ಳಿರ್ದು (ಚಂದ್ರಪು. ೬–೧೮ ಪ) ; ಅಂತುಮಾಯುವರಾಜಂ ರಾಜಿಸುತ್ತಿರ್ಪಿನಮೊರ್ವಂ ದ್ವಾರಪಾಲನಿವಾರಿತಂ ವೇತ್ರಧರನಿವೇದಿತನಾಮುಹಾಸ್ಥಾನಮಂ ಪೊಕ್ಕು ಮೆಯ್ಯಿಕ್ಕಿ ಕಯ್ಯಂ ಮುಗಿದು ನಿಂದು (ರಾಜಶೇ. ೧೦–೧ ಪ). [ಸಂ.]

**ನಿವೇದಿಸು** (ಕ್ರಿ). **೧.** ಹೇಳು ; ತಿಳಿಸು : ಅರಸಿಗಮೋಘಂಗಳಪ್ಪ ಕನಸಿನ ಫಲಂಗಳುಮಂ ನಿವೇದಿಸುವುದುಂ (ಶಾಂತಿಪು. ೯–೨೧೨ ಪ); ನೀನು ಮಾತನ ವೃತ್ತಾಂತಮನವರಯ್ಯನಪ್ಪ ಶ್ವೇತಕೇತುವಿಂಗೆ ನಿವೇದಿಸು (ಕಾದಂಬ. ೬೧೨) ; ಹರಿತಾಳದೊಳ್ ನಖಾಗ್ರದೆ ಬರೆದ ನಿಜಾವಸ್ಥೆಯುಂ ನಿವೇದಿಸೆ ಬನದಿಂದರಗಿಳಿ ತಳರ್ವುವು ದೇಶಾಂತರಕ್ಕೆ ಸಂದೇಶಹರರವೋಲ್ ಬಿರಯಿಗಳಾ (ಅಜಿಪು. ೨–೯) ; ಪುಷ್ಪಕವಿಮಾನದ ರತ್ನವಿಚಿತ್ರಪುತ್ರಿಕಾಸಂಕುಳ . . . ಅಬ್ಬಿತ್ತುವು . . . ಆ ಲಂಕೆಯ ಸೂಡಸುನ್ನತಿಯ ಕೇಡನವಂಗೆ ನಿವೇದಿಪಂತೆವೋಲ್ (ಪಂಂಪಾಮಾ. ೯–೧೦೯). **೨.** ಒಪ್ಪಿಸು ;

ಕೊಡು ; ಸಮರ್ಪಿಸು : ಸುನಂದೆಯೆಂಬೆಂ ಸನತ್ಕುಮಾರಂಗೆ ಗರ್ಭದೊಳಿರ್ದಂತೆ ನಿವೇದಿಸೆಪಟ್ಟಂ (ಪಡ್ಮಾರಾ. ೫೯-೭) ; ತನ್ನೊಡವುಟ್ಟಿದರ್ ಪೆಸರ ನಾಲ್ವರೊಳೊರ್ವರುವಿಲ್ಲದಿರ್ದೊಡಂ ತನ್ನಸುವಂ ನಿವೇದಿಸುವನಗ್ನಿಗೆ ಧರ್ಮತನುಜಂ (ಗದಾಯು. ೪-೯) ; ತನುಲೋಭ ಮನಲೋಭ ಧನಲೋಭ ಮುಂದುಗೆಡಿಸಿ ಕಾಡಿಹುವೆನ್ನಾ ತನುಮನಧನವ ನಿವೇದಿಸಿದವರ ಮಗ ನಾನಯ್ಯಾ (ಬಸವ. ೩೧೫) ; ತಂದ ಭಿಕ್ಷಾಶನವನ್ನೈವರು ನಂದನರು ತಾಯಿಂಗೆ ನಿವೇದಿಸಲು (ಕುಮಾವ್ಯಾ. ೧೦-೪) ; ಕಾದಿಹೆನು ಹದಿನಾಲ್ಕುವರುಷ ಮೇದಿನಿಯ ಸೀಮೆ ಬಾರದಿರಲು ನಿವೇದಿಸುವೆನೀ ತನುವನನಲಂಗೆಂದನಾ ಭರತ (ತೊರರಾ. ೨-೬-೩೩). **೩.** ನಿರೂಪಿಸು : ಇಲ್ಲಿಯು ದೇಸಿ ಭೀಷ್ಮನ ಅದ್ಭುತತ್ಯಾಗವನ್ನು ಅಚ್ಚೊತ್ತಿದಂತೆ ನಿವೇದಿಸುತ್ತದೆ (ತಪಸಿ. ೬೯). **೪.** ಬಿನ್ನವಿಸು ; ವಿಜ್ಞಾಪಿಸು : ನನಗೆ ಇರುವ ತೊಂದರೆಗಳನ್ನೆಲ್ಲಾ ನಿಮ್ಮ ಹತ್ತಿರ ನಿವೇದಿಸಿದ್ದೇನೆ (ರೂಢಿ). [ನಿವೇದನ+-ಇಸು₃]

**ನಿವೇದ್ಯ** (ಗು). ೧. ತಿಳಿಸಬೇಕಾದ; ಹೇಳಬೇಕಾದ. (ನಾ). ೨. ದೇವರಿಗೆ ಅರ್ಪಿಸುವ ಫಲ, ಅನ್ನ ಇತ್ಯಾದಿ ; ನೈವೇದ್ಯ : ಶ್ರೀಮೂಲಸ್ಥಾನದೇವರ್ಗ್ಗೆ . . . ನಿವೇದ್ಯಕ್ಕೆ ಬಿಟ್ಟ ಹರಳ ಮತರು ೬ (ಸೌಇಇ. XI-i, ೬೮-೧೪; 1038); ಲಕ್ಷ್ಮಣೇಶ್ವರದೇವರ ಅಂಗಭೋಗಕ್ಕಂ ನಿವೇದ್ಯಕ್ಕಂ ಚೈತ್ರಪವಿತ್ರಾದಿಗಳ್ಗಂ . . . ಆಯಂ ಮಾಡಿ ಬಿಟ್ಟರು (ಕಇಅ. ೧-೧-೮ ; 1092) ; ಅಕ್ಷೂಣಕನಕಪಾತ್ರೋದ್ಧೃತನಿವೇದ್ಯದಿಂ . . . ಪೂಜಿಸಿ (ಚಂದ್ರಪ್ರ. ೬-೧೦೧ ರಗಳೆ) ; ಸುರುಚಿರಸುಧಾನಿವೇದ್ಯವನಿತ್ತು ಕಾಪಾಲಿಗೆಸೆವ ಕರ್ಪೂರವೀಳೆಯಂಗೊಟ್ಟು (ಹಚಕಾ. ೫-೮೧). [ಸಂ.]

**ನಿವೇದ್ಯಂಗೊಡು** (ಕ್ರಿ). ನೈವೇದ್ಯವನ್ನು ಸಮರ್ಪಿಸು : ಹೊಂಬರಿಯಣದೊಳೊಸೆದು ಬಿಡಿಸಿದ ಸುಘೃತದಿವ್ಯಾನ್ನಮಂ ನಿವೇದ್ಯಂಗೊಟ್ಟು (ಹರಿಶಾ. ಪು. ೨೦೭-೬೭). [ನಿವೇದ್ಯ+ಕೊಡು₁]

**ನಿವೇಶ** (ನಾ). ೧. ಪ್ರವೇಶಿಸುವಿಕೆ. ೨. ನೆಲೆಯಾಗಿ ನಿಲ್ಲುವಿಕೆ ; ನೆಲಸುವಿಕೆ. **೩.** ನೆಲೆ ; ನಿವಾಸ ; ಮನೆ : ದೇಶಂ ಪರರಾಷ್ಟ್ರಾದಿನಿವೇಶಾಂತಂ ತದ್ವಿರುದ್ಧ ವಚನಂ ಮಿಗೆ ಸಂಕ್ಲೇಶಕರಂ (ಕವಿರಾ. ೧-೧೦೯); ಮುನಿತತಿಗಳ ಮನವೆಯ್ದಿದ ಮನುಗಳ ಬಗೆಪುಗದ . . . ಘನತೇಜೋರಾಶಿ ನಿಜನಿವೇಶದೊಳಿರ್ದಂ (ಗಿರಿಕ. ೫-೩೭). **೪.** ಬಿಡಾರ ; ಪಾಳೆಯ ; ಶಿಬಿರ : "ನಿವೇಶಃ, ಶಿಬಿರಂ—ಈ ೨ ಬೀಡಿಕೆ" (ಹಲಾಯು. ೭೪-೨೯೮). **೫.** [ನಾಟ್ಯ]ನೂರೆಂಟು ಕರಣಗಳಲ್ಲಿ ಒಂದು ; "ಮಂಡಲಸ್ಥಾನಕವನ್ನು ಮಾಡಿ ನಿರ್ಭುಗ್ನ ವಕ್ಷಸ್ಸಿನಲ್ಲಿ ಕಟಕಾಮುಖ ಹಸ್ತಗಳೆರಡನ್ನೂ ಹಿಡಿಯುವುದು" (ಲಾಸ್ಯರಂ. ೩೦೩ ಗದ್ಯಾನುವಾದ) : ತಲಪುಷ್ಪಪುಟ, ಲೀನ, ವಿವರ್ತಿತ . . . ಅವಹಿತ್ಥ, ನಿವೇಶ . . . ನಾಗಾಪಸರ್ಪಿತ, ಗಂಗಾವತರಣ—ಈ ನೂರೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). 'ದಿಕ್ಸ್ವಸ್ತಿಕ' ಪರಾ. [ಸಂ.]

**ನಿವೇಶಕ** (ನಾ). ಪ್ರವೇಶವನ್ನುಂಟುಮಾಡುವವನು : ಜ್ಞಾನಮಾರ್ಗನಿವೇಶಕನೆ ತತ್ತ್ವಜ್ಞಾನಸಾಧನವಿಗ್ರಹನೆ ಅಜ್ಞಾನಹರಗುಣನಾಮಧೇಯನೆ ಜಯ ನಮೋ (ಸಿಭಾಗ. ೧೦-೬೩-೪). [ಸಂ.]

**ನಿವೇಶಕರಣ** (ನಾ). =ನಿವೇಶ **೫:** ಒದವಿದ ಮಂಡಲ ತಾಣವಪದಂಗಳೆಸಗಲ್ಕೆ ಹಸ್ತಮೆರಡುಂ ಕಟಕಾಸ್ಯದೆ ನಿರ್ಭುಗ್ನಾಸ್ಥಿತವಕ್ಷದೊಳಿರೆ ಸತಿ ಕೇಳ್ ನಿವೇಶಕರಣಮೆನಿಕ್ಕುಂ (ಲಾಸ್ಯರಂ. ೪-೧೫೫). [ಸಂ.]

**ನಿವೇಶಣ, ನಿವೇಸಣ, ನೆವೇಸಣ, ನೆಸಣ, ನೇಸಣ** (ನಾ). ಮನೆ ಮೊದಲಾದ ಕಟ್ಟಡಗಳನ್ನು ಕಟ್ಟುವುದಕ್ಕಾಗಿ ಇರುವ ಜಾಗ,—ಖಾಲಿ ಸ್ಥಳ: ನಿವೇಶನ : ಕೇರಿಯ ತೆಂಕಣ[ದ]ಲು ಹದಿನೆಂಟು ಕಂಯು ಮನೆಯ ನಿವೇಶಣಮುಂ (ಕಇಅ. ೪೬-೪-೨೧ ; 1152). **ನಿವೇಸಣ :** × × × ಯ ನಿವೇಸಣ × × × (ಸೌಇಇ. XX, ೮೫-೪೫ ; 1124). **ನೆವೇಸಣ :** ಮನೆಯ ನೆವೇಸಣ ಮೂಡ ಸೋಮನಥದೇವರ ಗದ್ದೆಯಿಂ ಪಡುವ ತೆಂಕ ಮುಖವಾಗಿ ಬಂದ ಕೈ ೪೮ (ಸೌಇಇ. XV, ೪೩-೩೩; ?). **ನೆಸಣ :** ದೇವಂಗೇರಿಯೊಳೇಟ್ಟಯೊಳ್ಗಂ ಅಯ್ನುಯೊಳ್ಗಂ ಮನೆಯ ನೆಸಣವಿಪ್ಪರ್ತುನಾಲ್ಕು (ಎಇ. XIV, ೩೬೫-೧೯ ; 945). **ನೇಸಣ :** ಪಸರಿಸೆ ಸಮ್ಮತಿ ತನ್ನಯ ದಸವಂದದ ನೇಸಣಂಗಳೊಳ್ ಕೆಲವನದರ್ಕ್ಕೆ ಸದೃಶನಿತ್ತಿತ್ತುದನೀ ವಸುಧೆಗೆ ನೆಗಟ್ವಂತು ಶಾಸನಂ ಬರೆಯಿಸಿದೊಂ (ಎಇ. IV, ೬೪-೨೪ ; 945) ; ದೇವರ್ಗ್ಗೆ ಪುರವರ್ಗ್ಗದ ಪನ್ನೆರಡು ಮನೆಯ ನೇಸಣಮುಮಂನೊನ್ದುಗಾಣಮುಮಂ ಬಿಟ್ಟರ್ (ಕಇ. V, ೬-೧೩ ; 1032 ?). [<ಪ್ರಾ. ನಿವೇಸಣ./ಸಂ. ನಿವೇಶನ]

**ನಿವೇಶನ** (ನಾ). ೧. ಹೊಗುವಿಕೆ ; ಪ್ರವೇಶಿಸುವಿಕೆ. ೨. ನಿವಾಸ; ಮನೆ : "ಆವಾಸಃ . . . ಶಾಲಾ, ವೇಶ್ಮ, ನಿವೇಶನಂ, ಉದವಸಿತಂ, ಸದ್ಮ, ಓಕಃ, ಶರಣಂ, ಅಗಾರಂ, ನಿವಸನಂ, ಆಲಯಃ—ಈ ೩೧ ಮನೆ" (ಹಲಾಯು.೪೯-೧೩೬). **೩.** =ನಿವೇಶಣ : ಊರೊಡೆಯಗ್ಗೆ ಮಾನ್ಯದ ಕೆಯ್ಮತ್ತರಿನ್ನೂಱು ಘನೆಗೆಣ್ಣೆಯ್ಯಗಲವಿಪ್ಪತ್ತೈಗೈನೀಳದ ನಿವೇಶನಂ ಮೂರು (ಎಇ. XX, ೬-೩೩ ; 1012) ; ರೇವದಾಸಭಟ್ಟರ ಕೆಯ್ಯಿಂ ಬಡಗ ಬಿಟ್ಟ ಪಿರಿಯ ಕೋಲ ಮತ್ತ [೫] ಮನೆಯ ನಿವೇಶನ ೧ (ಸೌಇಇ. XX, ೭೨-೧೨ ; 1111) ; ದೇವರಿಗೆ ಬಿಟ್ಟ ಮನೆಯ ನಿವೇಶನವೆರಡು ಬಣಂಜೆಯ ನಿವೇಶವೊಂದುವರೆ (ಸೌಇಇ. XX, ೯೩-೬೧ ; ?) ; ಮಸೀದಿಗೆ ಬೇಕಾದ ನಿವೇಶನವನ್ನು ತಾಯಿ ತಂದೆಗಳಿಲ್ಲದ ಇಬ್ಬರು ಬಾಲಕರು ಮಹಮ್ಮದನಿಗೆ ಸಮರ್ಪಿಸಿದರು (ಕೃಗಂಜ. ೪೩). [ಸಂ.]

**ನಿವೇಶಿತ** (ಗು). ೧. ಒಳಗೆ ಇರಿಸಿದ ; ಒಳಹೊಕ್ಕ ; ಒಳಗಿಟ್ಟ : ಅದುದಭಿಷೇಕದ ಮಹಾಸಂಪಾದನದ ಮಂಗಳತೆ ಮಿಗೆ ದಾಮೋದರಗೆ ಬ್ರಹ್ಮಾಂಡನಿಕರನಿವೇಶಿತೋದರಗೆ (ನಿಭಾಗ. ೧೦-೨೩-೪೧). ೨. ಇರಿಸಿದ ; ಇಟ್ಟ ; ಸೇರಿಸಿದ : ವಿಜೃಂಭಮಾಣ ನವನಳಿನಪರಿಕರಾಕೃಷ್ಟಮಧುಕರರಮಣೀಯಪುಳಿನಪರಿಸರಪ್ರದೇಶನಿವೇಶಿತವಿರಹಿಜನನಿಚಯನಿಚಿತಮಾನಸ . . . ಮತ್ತಕೋಕಿಲೋಲ್ಲಾಸಿತ ಶೀಕರೋದ್ದಾಮ ದುರ್ದಿನವನಮನೆಯ್ದೆವಂದು (ಸಂಪಭಾ. ೫-೧೦ ವ) ; ನರ್ಮಸಚಿವಪ್ರಕೋಷ್ಠನಿವೇಶಿತಸವ್ಯಪಾಣಿಪಲ್ಲವನುಂ . . . ಆಗಿ ಬರ್ಪಾಗಳ್ (ಚಂದ್ರಪ್ರ. ೭-೮೩ ವ). [ಸಂ.]

**ನಿವೇಶ್ಯ** (ನಾ). ಇರಲು ಯೋಗ್ಯವಾದುದು ; ವಾಸಯೋಗ್ಯವಾದುದು : ಎಲೆ ಎಲೆ ಭೂಸುರಾಧಮರಿರಾ ಹರಭಕ್ತನಿವೇಶ್ಯಮಪ್ಪ ಮನ್ನಿಲಯಮಶಕ್ಯಮೊರ್ಮೆ ನಿಮಗಂ ಪುಗಲ್ (ಸ್ವಪವಿ. ೩೯-೯). [ಸಂ.]

**ನಿವೇಸಣ** 'ನಿವೇಶಣ' ನೋ.

**ನಿವ್ವಳ** 'ನಿವಳ₁' ನೋ.

**ನಿವ್ವಳ್ಕೆ** (ನಾ). ಒಂದು ಬಗೆಯ ಭೂಮಿ (?) : ವಕ್ಕಾಣಭಟಾರರ ಶಿಷ್ಯರ್ ಚಿಲ್ಲುಕಭಟಾರರ ಕಾಲಂ ಕರ್ಚ್ಚಿ ಕೊಟ್ಟ ಮರ್ಯ್ಯಾದೆಯೊಳಗೆ ನಿವ್ವಳ್ಕೆ ಕಿಟಿಕಿಕ್ಕಿ ಮೂನೂಱುಗಣ್ದುಗಂ ರಾಜಮಾನವಂ ಕೊಟ್ಟಂ (ಎಕ. XII, ತಿಪ. ೨೮-೪೩ ; 943). [ ? ]

**ನಿಶಠ** (ಗು). ೧. ಸರಳಸ್ವಭಾವದ ; ಕಪಟವಿಲ್ಲದ ; ಪ್ರಾಮಾಣಿಕವಾದ. (ನಾ). ೨. ಪ್ರಾಮಾಣಿಕತೆ ; ನಿರ್ವಂಚನೆ. **೩.** ಯಾದವರಲ್ಲಿ ಒಬ್ಬ ; ಬಲರಾಮನ ಮಗ : ಪ್ರದ್ಯುಮ್ನ ಗದ ಸಾಂಬನನಿರುದ್ಧ ನಿಶಠ ಶಠನಕ್ರೂರ ಸಾತ್ಯಕಿಪ್ರಮುಖರಾದವರೆಮ್ಮ ಕೂಡೆ ಬರಲಿ (ಜೈಮಿಭಾ. ೭-೨). [ಸಂ.]

**ನಿಶಮನ** (ನಾ). ೧. ನೋಟ; ದೃಷ್ಟಿ: "ನಿಭಾಳನಂ, ನಿಶಮನಂ, ನಿಧ್ಯಾನಂ, ಅವಲೋಕನಂ, ಲಕ್ಷಣಂ, ದರ್ಶನಂ, ದೃಷ್ಟಿಃ, ದ್ಯೋತನಂ—ಈ ೮ ನೋಟಂ" (ಹಲಾಯು. ೯೩-೪೧೨). ೨. ಕೇಳುವುದು; ಶ್ರವಣ. [ಸಂ.]

**ನಿಶರಣ** (ನಾ). ಕೊಲೆ; ವಧೆ: "ಮಾರಣಂ, ನಿಶರಣಂ, ನಿಬರ್ಹಣಂ . . . ಹಿಂಸಾ, ಸಂಜ್ಞಪನಂ—ಈ ೨೧ ಕೊಲೆ" (ಹಲಾಯು. ೭೮-೩೨೩). [ಸಂ.]

**ನಿಶಾ** 'ನಶೆ' ನೋ.

**ನಿಶಾಂತ** (ಗು). ೧. ಶಾಂತವಾದ; ನಿಶ್ಶಬ್ದವಾದ. (ನಾ). ೨. ಆವಾಸ; ನೆಲೆ; ಮನೆ: ಅವಿರಳಧೂಪಾಮೋದಸಂಸಂಗಿಭೃಂಗಾಸ್ನಿತಮುದಿತಮೃದಂಗಧ್ವಾನನೃತ್ಯನ್ಮಯೂರಾಂಚಿತಮೆಸೆದುದು ಕಾಂತಂ ದೇವಪೂಜಾನಿಶಾಂತಂ (ಚಂದ್ರಪು. ೧-೧೫೦); ಇಂತು ಕೃತಕಕುತ್ಕೀಳಕೇಳೀಸರಸ್ಸಂತತಿಗಳಿಂ ಸಮಂತು ಶೋಭಾನಿಶಾಂತಮಾದ . . . ಜಗತ್ಪಾವನವನವನಳಿವಿಳಾಸಭವನವನವನಜಾತಪೂರ್ವಮೆನೆ ಮಾಡಿಸಿದಂ (ವರ್ಧಪು. ೨-೨೨ ವ); ಜಯಜಯ ಮಹಾಮಹಿಮಗಿರಿಸುತಾಕಾಂತ ಜಯಜಯ ಸುಭಿಕ್ಷಾಟನೇಕ್ಷಿತೇಂದ್ರನಿಶಾಂತ (ರಾಜಶೇ. ೧೪-೧೬೯ ರಗಳೆ); ನೀಂ ಮನುಜೇಶನತಿದಯಾವಂತನಾರ್ತಸ್ವಾಂತವಿನಯದಿಂದಖಿಳರಂ ರಕ್ಷಿಸುವ ನಿಶ್ಚಿಂತ ಸದ್ಗುಣನಿಶಾಂತನಲ್ತೆ (ವೆಂಕಾಂಬ. ೨-೧೪-೧೭). ೩. ರಾತ್ರಿಯ ಕೊನೆ; ಮುಂಜಾವ; ಅರುಣೋದಯದ ಸಮಯ: ಒಂದು ಬಾಳರವಿ ತನ್ನಯ ಸೋಗಿಲ ಮೇಗೆ ರಾಗದಿಂ ಪೊಡರ್ವುದನಂತೆ ದಿಕ್ಕರಿಗಳಂಬುಜಪತ್ರಪುಟಾಂಬುವಿಂ ಬೆಡಂಗಡಸಿರೆ ಮಜ್ಜನಂಬುಗಿಪುದಂ ಸತಿ ಕಂಡೊಸೆದಳ್ ನಿಶಾಂತದೊಳ್ (ಪಂಪಭಾ. ೧-೧೪೦); ಆ ಪುರಂ ಪದ್ಮರಾಗಾರುಣೀಕೃತ ನಿಶಾಂತಮಾಗಿಯುಂ ಅಸ್ತಮಿತರಾಜಲೀಲಾವಿಲಾಸಮಲ್ತು (ಚಂದ್ರಪು. ೧-೧೩೬); ಅತುಳಸಿಂಹಾಸನಮಂ ಬಿಡದಡರ್ದ ಕಪಿಯನಾಗಳು ಪೊಡವೀಶಂ ಕನಸಿನೊಳ್ ನಿಶಾಂತಂ ಕಂಡಂ (ಪುಣ್ಯಾಸ್ರ. ೯-೧೪); ಹಲವು ಕಪ್ಪಡಿಗಳು ನಿಶಾಂತವ ಕಳೆಯೆ ದೇಗುಲದೆಡೆಗೆ ಹರಿಯವೆ (ಕೌಶಿರಾ. ೧೪-೪೧). [ಸಂ.]

**ನಿಶಾಂತವಿರಕ್ತ** (ನಾ). ೧. ಅತ್ಯಂತ ಶಾಂತನಾದ ವಿರಾಗಿ; ಶಾಂತ ಮನಸ್ಸಿನ ವಿರಕ್ತ. ೨. ಮುಂಜಾವದಲ್ಲಿ ಕಾಂತಿಹೀನನಾದವನು. ೧, ೨: ಮಿತ್ರಸಮಾಗಮಕ್ಕೆ ಸೆಡೆದಂಬರಮಂ ಬಿಡು(ತಿರ್ಪ ತೇಜ)ನಕ್ಷತ್ರಗಣಂ ಕಟಿಲ್ವಿನಮಗಲ್ಚಿ ನಿಶಾಂತವಿರಕ್ತನಪ್ಪ ನಿರ್ಗೋತ್ರನೆನಿಪ್ಪ ಸತ್ಕುವಳಯೋದ್ಗತಲಕ್ಷ್ಮಿಯನೊಕ್ಕು ಪೋಗಲಿರ್ಪ ತ್ರಿಜನಂದು ಕನ್ನಡಿಸಿದಂ ಸುವಿಧೀಶನ ಚಿತ್ತವೃತ್ತಿಯಂ (ಪುಷ್ಪಪು. ೧೩-೫೯). [ನಿಶಾಂತ+ವಿರಕ್ತ]

**ನಿಶಾಂಧ** (ನಾ). ರಾತ್ರಿಯಲ್ಲಿ ಕಣ್ಣು ಕಾಣದವನು; ಇರುಳುಗಣ್ಣಿನ ದೋಷವುಳ್ಳವನು: ಉದಯಸ್ಥಂ ದಿನನಾಥನಾಗೆ ವಿಕಲಾಕ್ಷಂ ನಿರ್ಭಯಂ ನಿರ್ದಯಂ ಸದನಂ ಸಿಂಹವಿಲಗ್ನದೊಳ್ ನಿಲೆ ನಿಶಾಂಧಂ ಮೇಷಲಗ್ನಕ್ಕೆ ಪೊರ್ದಿದೊಡಾಢ್ಯಂ ತಿಮಿರಾಕ್ಷಂ (ಜಾತತಿ. ೧೮-೧). [ಸಂ.]

**ನಿಶಾಕರ** (ನಾ). ರಾತ್ರಿಯನ್ನುಂಟುಮಾಡುವವನು; ಚಂದ್ರ: ಪರಿತಾಪಮನೆನಗೆ ನಿಶಾಕರನಾಗಿಸುಗುಂ ವಸಂತಸಮಯಾನುಗತಂ (ಕವಿಾ. ೩-೩೬); ಇನಿಯನಗಲ್ದು ಪೋಗಿ ಪರದೇಶದೊಳಿರ್ದಪಂ . . . ನೀನುಮನ್ನನೆ ನಡೆನೋಡುತುಂ ನಭದೊಳಿರ್ದಪೆಯಪ್ಪುದಱಿಂದೆ ನಿನ್ನ ನಾನನುವಿಪೆನೆನ್ನ ಮೆಯ್ಬಡವೊ ನಲ್ಲನ ಮೆಯ್ಬಡವೋ ನಿಶಾಕರಾ (ಆದಿಪು. ೧೨-೪೧); ಅಂಗಜನೆನ್ನ ಪಕ್ಕದೊಳ್ಪರುತಿರೆ ಲಜ್ಜೆ ಪಿಂದೆ ನಿಲೆ ಮುಂದೆ ಮದಿಂದ್ರಿಯವರ್ಗವಾವಗಂ ಪರಿಯೆ ನಿಶಾಕರಂ ನಿಜಕರೋತ್ಕರದಿಂ ಪಿಡಿದೊಯ್ಯೆ ಬೇಱೆಪೇೞ್ ಪರಿಜನಮೇವುದು(ಕಾದಂಪೂ.೮೯೩); ಪುಣ್ಯಕಥೆಯಂದದೆ ಭಾವಿಸಿ ಕೇಳ್ವುದಾ ಧರಾಧಿಪನ ಶರನ್ನಿಶಾಕರಕಳೋಜ್ಜ್ವಳನುಂ ಜಸಮುಂ ಜಗಜ್ಜನಂ (ಚಂದ್ರಪು. ೨-೬). [ಸಂ.]

**ನಿಶಾಕರವಿಳಂಬಿ**(ನಾ). ಚಂದ್ರನವರೆಗೂ ಬೆಳೆದುದು,-ಹಬ್ಬಿದುದು: ಕೊಳೆ ನೋಡುವ ಕಣ್ಗಳಸುಂಗೊಳೆ ದಿವ್ಯಶರೀರಮಂತುಮಲ್ಲದೆಯುಂ ತಾಂ ತೊಳ[ತೊಳತೊಳಗೆ] ನಿಶಾಕರವಿಳಂಬಿಯಾಯ್ತು ಮಿತವಿಕ್ರಮಪ್ರಭೆ ದಿವದೊಳ್ (ಶಾಂತಿಪು. ೯-೩೫). [ನಿಶಾಕರ+ವಿಳಂಬಿ(=ವಿಲಂಬಿ)]

**ನಿಶಾಕರವೀಥಿ** (ನಾ). ಪಟ್ಟಣದಲ್ಲಿರುವ ದಕ್ಷಿಣೋತ್ತರವಾದ ಮಾರ್ಗ; ಚಂದ್ರವೀಧಿ: ಅಲ್ಲಿ ನಿರಂತರಂ ಮೆಱೆವುದು . . . ಸಲ್ಲಲಿತಪ್ರಭಾಕರನಿಶಾಕರವೀಥಿಯ ಗೋಪುರಂಗಳಲ್ಲಲ್ಲಿಯ ಚಿತ್ರದಿಂ ವಿಮಳಪಟ್ಟಣಮೆಂಬುದು (ನಳಚಂ. ೧೩). [ನಿಶಾಕರ+ವೀಥಿ]

**ನಿಶಾಕರಸುತ** (ನಾ). ಚಂದ್ರನ ಮಗ; ಬುಧ: ಸುರಗುರುವಿಂದೆ ಧರ್ಮ ದಶಮಾಷ್ಟಮಲಾಭ ತನೂಜದೊಳ್ ನಿಶಾಕರಸುತನಿಂದೆ ಷಷ್ಠನವ ಪಂಚಮಲಾಭ ತೃತೀಯರಾಶಿಯೊಳ್ . . . ಒಳ್ಪಿದಂ ಸಿತಂ (ಜಾತತಿ. ೧೦-೧೩). [ನಿಶಾಕರ+ಸುತ]

**ನಿಶಾಕಾಂತ** (ನಾ). ಇರುಳಿನ ಒಡೆಯ; ಚಂದ್ರ: ಎಂತೀಗಳೆನ್ನನೊಯ್ದಪನಂತೋವದೆ ಕರಕಚಗ್ರಹಂಗೆಯ್ದು ನಿಶಾಕಾಂತಂ ತಡೆಯದೆ ನಮಗಿದಿರೇಂ ತರ್ಕುಮೆ ಜೀವಿತೇಶನಂ ತರಳಾಕ್ಷೀ (ಕಾದಂಪೂ. ೮೯೪); ಇನವಿರಹಿಣಿ ಪದ್ಮಿನಿ . . . ನಿಶಾಕಾಂತನ ಕರಕೆ ಬೆರ್ಚಿ ಮುಚ್ಚಿದಳೆನೆ ಮೊಗಮಂ ಮುಗಿವ ಪಂಕಜಂ ಕರಮೆಸೆಗುಂ (ರಾಜಶೇ. ೧೧-೧೦). 'ನಿಶಾನಾಥ' ಪರಾ. [ಸಂ.]

**ನಿಶಾಖೋರ,** ನಿಷಾಖೋರ (ನಾ). ಮಾದಕಪಾನೀಯ ಅಥವಾ ಮಾದಕದ್ರವ್ಯವನ್ನು ಸೇವಿಸುವ ಚಟವಿರುವವನು: (ಕಿ). **ನಿಷಾಖೋರ**: ಪ್ರಸನ್ನ ಗೌಳಗಿತ್ತಿಯು ಅರಚುತ್ತಿದ್ದಾಳೆ—"ನಿಷಾಖೋರ, ನಿರ್ಲಜ್ಜ, ತಿಂಡಿಪೋತ" ಇತ್ಯಾದಿ (ಕಮಕ. ೧೨೯). [ನಿಶಾ(<ನಶೆ)+-ಖೋರ(<-ಕೋರ$_3$)]

**ನಿಶಾಗಂಧಿ** (ನಾ). ರಾತ್ರಿಯಲ್ಲಿ ಸುಗಂಧವನ್ನು ಬೀರುವ ಹೂವುಗಳನ್ನು ಬಿಡುವ ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು; ರಾತ್ರಿರಾಣಿ: ಪಾರಿಜಾತ, ಮಲ್ಲಿಗೆ, ಗುಲಾಬಿ, ನಿಶಾಗಂಧಿ ಮೊದಲಾದವುಗಳ ಅರಳ ಮೊಗ್ಗೆಗಳ ಪಕಳೆಗಳಲ್ಲಿ ಗಾಳಿಯು ಸೇರಿ . . . ಘಮಘಮಿಸುತ್ತಲಿದೆ (ಕುಸುಮಿ. ೧೧೭). [ಸಂ. ನಿಶಾಗಂಧಿನ್]

**ನಿಶಾಚರ** (ಗು). ೧. ರಾತ್ರಿಯಲ್ಲಿ ಓಡಾಡುವ: ದೂರದಲ್ಲಿ ನಿಶಾಚರಪಕ್ಷಿಯೊಂದು ವಿಕಟವಾಗಿ ಕೂಗಿದಂತಾಗಿ ರವಿಕೀರ್ತಿ ಎಚ್ಚರಗೊಂಡನು (ರೂಲೀಬಾ. ೧೦೧). (ನಾ). ೨. ರಾತ್ರಿಯಲ್ಲಿ ಸಂಚರಿಸುವ ದೆವ್ವ, ಭೂತ, ಪಿಶಾಚಿ ಮೊದಲಾದುವು: ಈಗಳಿನ ಪೊತ್ತಪ್ಪುದು ಖೇಚರನಿಶಾಚರದ್ಯುಚರಸಂಚಾರಮಲ್ಲದೆ ಭೂಚರಗೋಚರಮಲ್ಲೆಂದು ಮುಟ್ಟಿವರ್ಪುದುಂ (ಸುಕುಮಾ. ೭-೧೮ ವ). ೩. ರಾಕ್ಷಸ: "ನಿಶಾಚರಂ ರಾಕ್ಷಸಂ" (ಮಂಗರಾ. ೧೫-೧೦); ಕಿಡೆ ಕೊಲ್ವ ರಾಮಬಾಣದೆ ಕೆಡೆದ ನಿಶಾಚರರ ನೆತ್ತರೊಳ್ಪೆಳೆದು ವೆನಲ್ಮಡುಗೆಂಪುವೊರೆದ ತಳಿರ್ಗಳೆನೆಡೆವಿಡದಿಡಿದಡವಿ ಸುತ್ತಿ ಸೊಗಯಿಸಿ ತೋರ್ಕುಂ (ಕಾದಂಪೂ. ೧೧೦); ಮೂರ್ಖನಿಶಾಚರವನಸಂಹಾರಂ ಸೀತಾದುಃಖವಿನಾಶನಕಾರಂ (ಕನಕ. ೬-೨); ಯಮಭಯಂಕರಿಯಾಗು ಲೋಕಮೂರಕೆ ಶೋಕವಾಗಿಹ ನಿಶಾಚರರ ನಿಷ್ಠುರ ನೀಚಕುಲಕೆ (ಶ್ರೀರಾಮಾ. ೧೯೩-೪೭೩). 'ನಿಶಾಚರಬಲ' ಪರಾ. ೪. ಚಂದ್ರ. ೫. ಕಳ್ಳ; ಚೋರ. ೬. ಗೂಗೆ; ಗೂಬೆ. ೭. ಹಾಲಕ್ಕಿ; ಶಕುನದ ಹಕ್ಕಿ. ೮. ಉಗ್ರವಾದ ಸರ್ಪ. ೯. ಒಂದು ಬಗೆಯ ಮೀನು: "ಉಗ್ರಾಹಿ ತಸ್ಕರ ಪಾಲ್ವಕ್ಕಿ ಮೃಗಾಂಕ ಘೂಕ ದನುಜಂ ಪಾಠೀನ

ವಿಂತು ನಿಶಾಚರನುಕ್ಕು" (ನಾನಾರ. ೨೪). `೧೦. ಬಾವಲಿ; ಕಣ್ಣು ಕಪ್ಪಡೆ. [ಸಂ.]

**ನಿಶಾಚರಬಲ** (ನಾ). ೧. ರಾತ್ರಿಯಲ್ಲಿ ಚರಿಸುವ ಭೂತ, ಪಿಶಾಚಿ ಮೊದಲಾದ ದುಷ್ಟಶಕ್ತಿಗಳ ಸಮೂಹ : ಓಡೆ ತಮೋಬಳಮುಗಿದ ಳ್ಪಾಡೆ ನಿಶಾಚರಬಲಂ ರಥಾಂಗಯುಗಂಗಳ್ ಕೂಡೆ ಬಗೆ ಕೂಡೆ ನೇಸರ್ ಮೂಡಿದುದು ಬಕಂಗೆ ವಿಟ್ಟು ಮೂಡುವ ತೆಜದಿಂ (ಪಂಪಭಾ. ೩-೨೭). ೨. ರಾಕ್ಷಸರ ಸೇನೆ. [ನಿಶಾಚರ+ಬಲ]

**ನಿಶಾಚರಿ** (ನಾ). ರಾತ್ರಿಯಲ್ಲಿ ಸಂಚರಿಸುವವಳು ; ರಕ್ಕಸಿ; ರಾಕ್ಷಸಿ : ಖೇಚರಿಯೋ ಭೂಚರಿಯೊ ನಿಶಾಚರಿಯೋ ರೂಪು ಬಣ್ಣಿಸಲ್ಕಾರ್ಗಮವಾಗ್ಗೀಚರಂ (ಪಂಪಭಾ. ೩-೧೪); ನೀತಿಗಳ ಗತಿಯನಜು ದೊಡೆ ನಿಶಾಚರಿಯನಿವನಾಳ್ವನೇ ರಾಣಿಯೆಂದರಮನೆಯೊಳು (ಜೈಮಿಭಾ. ೨-೫೮). [ಸಂ. ನಿಶಾಚರೀ]

**ನಿಶಾಚರೀಜನ** (ನಾ). ಹೆಣ್ಣು ಪಿಶಾಚಿಗಳ ತಂಡ : ಆರ್ವ ಪಿಶಾಚಿ ಯರ್ಕಳನಸುಂಗೊಳೆ ಬೇವ ಪೆಣಕ್ಕೆ ಕೋಪದಿಂ ಪೋರ್ವ ಮರುಳ್ಗಳಂ ಪಿಶಿತಭೋಜನದಲ್ಲಿಗೆ ನಿಲ್ಲದೆಕ್ಕೆಯಿಂ ಸಾರ್ವ ನಿಶಾಚರೀಜನಮನಂತದನಿಕ್ಕುವುದಂ ನಿರಂತರಂ ಪಾರ್ವ ಪುರಾಣ ರಾಕ್ಷಸರನೀಕ್ಷಿಸಿದಂ ಪ್ರತಿರೂಪಶೂದ್ರಕಂ (ಕಾವ್ಯಸಾ. ೫೩೪). [ಸಂ.]

**ನಿಶಾಚೂರ್ಣ** (ನಾ). ಅರಿಸಿನದ ಪುಡಿ : ತಿಳಜಾಭ್ಯಂಗಮನಳ್ಕಱಂ ರಚಿಸಿ ಮಂದೋಷ್ಣಾಂಬುವಿಂ ಮಜ್ಜನಂಗೊಳಿಸುತ್ತಂಕದೊಳಿಟ್ಟು ಕಣ್ಗೆವಿಗಳಂ ಸೈತೂದಿ ದಿವ್ಯಾಂಬರಾಂಚಳದಿಂ ಮೈಯೊರಸುತ್ತೆ ಮೈದಿಗುರ ನಿಟ್ಟಾಗಳ್ ನಿಶಾಚೂರ್ಣದಿಂದಳಕಂದೀವಿ ಸುರಕ್ಷೆಯಂ ಪೊರೆದಳಾ ಮಾದೇವಿ ತದ್ಬಾಲನಂ (ವೃಷವಿ. ೯-೧೧೦). [ಸಂ.]

**ನಿಶಾಜೀವಿತೇಶ್ವರ** (ನಾ). = ನಿಶಾಕಾಂತ : ನಮ್ಮ ಗೆಲ್ಲನೆ ಸೂಚಿಸುವ ಹೊನ್ನ ಲೇಪಮಂ ತಳದೆಸೆವ ಜೊನ್ನವೆಳ್ಪಿಯು ಗುರಾಣಿಯೆನಲ್ಕೆ ಶೋಭಿಸುತ್ತಿ ಹಸೀ ನಿಶಾಜೀವಿತೇಶ್ವರಂ ! (ಚಂದ್ರಸ. ೫೧-೧೦). [ಸಂ.]

**ನಿಶಾಟ** (ನಾ). ೧. ರಾಕ್ಷಸ : "ರಕ್ಷಃ ಕೋಣಪ ನೈಋತ ರಾಕ್ಷಸ ಪುಣ್ಯಜನಯಾತುಧಾನಕ್ರವ್ಯಾದ ಕ್ಷಣದಾಚರರೆಂದು ಸದೃಕ್ಷಾರ್ಥಂಗಳ್ ನಿಶಾಟಪರ್ಯಾಯಂಗಳ್" (ವಸ್ತುಕೋ. ೮-೪೨) ; ಪ್ರತಿವಿಷಮಗ್ನಿಗಗ್ನಿ ವಿಷಕಂ ವಿಷಮೆಂಬವೊಲಾ ನಿಶಾಚರಂಗತಿಬಲರೀ ನಿಶಾಟ[ರಿವ]ರಕ್ಕೆನುತುಂ ಬೆಸವೇಟಿ (ಪಂಪಭಾ. ೧೨-೯); ಮಾರುತಿಯನ್ನರಿಲ್ಲಿ ಸಾಸಿರ್ವರಖರ್ವ ದೋರ್ವಲಯುತರ್ ಖಚರಾಧಿಪರಿರ್ದಪರ್ ನಿಶಾಟರ್ವಯಲಿಂಗೆ ಬಂದಪರೆ ನಿಂದಪರೇ ರಣರಂಗಭೂಮಿಯೊಳ್ (ಪಂರಾಮಾ. ೧೧-೧೭೫). 'ನಿಶಾಟದಲ್ಲಣ' ಪರಾ. ೨. ಮರುಳು; ಪಿಶಾಚಿ : ವ್ರಣದ ಬಂಧದ ಜಗಿಯ ದಾಡೆಗೆ ಕುಣಿದು ಕವಿವ ವಿಹಂಗತತಿಗಳಿನಣಲೊಳಡಸಿದ ತಲೆಗೆ ಕೈಗುತ್ತುವ ನಿಶಾಟರಲಿ ಹೆಣನ ಬೀಸುವ ಕೈಗಳಲಿ . . . ಚಂಡಿಯಾದುವು ಸೊಕ್ಕಿದಾನೆಗಳು (ಕುಮ್ಯಾಭೀ. ೪-೮೧). ೩. ಇರುಳಲ್ಲಿ ಸಂಚರಿಸುವವನು ; ಇರುಳುಗಳ್ಳ : ಆ ನಿಶಾಟರು ಮೆಚ್ಚರಗ್ಗದ ಭಾನುರಶ್ಮಿಯನಂಧಕಾರಜ್ಞಾನನಿಷ್ಠರು ನಿಪುಣರೈಸಲೆಯೆಂದನಾ ಭೀಷ್ಮ (ಕುವ್ಯಾಸ. ೮-೫೧). ೪. ಗೂಗೆ ; ಗೂಬೆ : ಪಿಕ ಪಿಂಗಲಿ ನಿಶಾಟ ಧ್ವಾಂಕ್ಷ ಚಾತಕಿ . . . ಶಿಖಿ ಮಡಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡು (ತೊರರಾ. ೩-೧-೩೩). [ಸಂ.]

**ನಿಶಾಟಕೋಟಿ** (ನಾ). ರಾಕ್ಷಸರ ಗುಂಪು ; ರಾಕ್ಷಸಸೈನ್ಯ : ಮುನಿಜನಂಗಳ ಬೇಳ್ವೆಗಳ್ಗುಪದ್ರವಂಗೆಯ್ವ ನಿಶಾಟಕೋಟಿಯಂ ನಿಶಿತ ಶರಕೋಟಿಯಿಂದಮುಚ್ಚಾಟಿಸಿ (ಪಂಪಭಾ. ೪-೧೫ ವ) ; ಮಸಕಂಗುಂದೆ ನಿಶಾಟಕೋಟಿ ಕಿಡೆ ಶುಕ್ರಾಲೋಕಸಂಪತ್ತಿ ಪುಟ್ಟೆ ಸುರೇಂದ್ರಾಶೆಗೆ ರಾಗಂ . . . ಚಕ್ರಸಹಾಯನಾಕ್ರಮಿಸಿದಂ ಭೂಚಕ್ರಮಂ ಪಾದದಿಂ (ಪುಷ್ಪಪು. ೮-೨೩). [ನಿಶಾಟ+ಕೋಟಿ]

**ನಿಶಾಟದಲ್ಲಣ** (ನಾ). ೧. ರಾಕ್ಷಸರಿಗೆ ಭಯವನ್ನುಂಟುಮಾಡುವವನು; ವಿಷ್ಣು : ಕೋಟಿಸಿಡಿಲೊಮ್ಮೆ ಗರ್ಜಿಸುವೊಲೂದಿದನಾ ನಿಶಾಟದಲ್ಲಣನತುಳಪಾಂಚಜನ್ಯವಂ (ಜೈಮಿಭಾ. ೧೩-೪೩). ೨. ಶಿವ; ಈಶ್ವರ : ಕೋಟಿರವಿಶಶಿತೇಜಗಾತ್ರ ತ್ರಿನೇತ್ರ ಶ್ರುತಿಘೋಟಕಂ ಗೂಢಪದಭರಣ ಸುರಪತಿನತ ನಿಶಾಟದಲ್ಲಣ ಕಾಳಹಸ್ತೀಶ ಲಿಂಗದೋಲಗಕವಳನಿರಿಸಿ ಪೋಗೆ (ಪ್ರೌಢರಾ. ೧೦-೩). [ನಿಶಾಟ+ತಲ್ಲಣ (<ತಲ್ಲಟ)]

**ನಿಶಾಟನ** (ನಾ). ಗೂಗೆ ; ಗೂಬೆ : "ಉಲೂಕಃ, ಕೌಶಿಕಃ, ಧ್ವಾಂಕ್ಷಾರಾತಿಃ, ನಿಶಾಟನಃ – ಈ ೪ ಗೂಗೆ" (ಹಲಾಯು. ೪೧-೯೩); ಏನು ಗುರುಸುತ ಕಾರ್ಯದನುಸಂಧಾನವೇನೆನೆ ವಾಯುಸಂಗಳನಾ ನಿಶಾಟನನಿಱುವುತದೆ ಗೂಡುಗಳನಬ್ಬರಿಸಿ ಈ ನಿದರುಶನದಿಂದ ಪಾಂಡವಸೇನೆಯನು ಕಗ್ಗೊಲೆಯೊಳಗೆ ಕೊಲಲೇನು ಹೊಲ್ಲೆಹ ಮಾವ ಎಂದನು ಗುರುಸುತನು ಕೃಪಗೆ (ಕುವ್ಯಾಗ. ೯-೭) ; ಚಾತಕ ಬಕ ಖಂಜನ ದ್ವಾಪರಿ ಘೂಟ ನಿಶಾಟನ ಪತ್ರಿ ಕಂಕ ವರ್ತಕ ಕುರರೀಪ್ಲವಪ್ರಕರದಿಂದೆ ವಿರಾಜಿಕು ಮುನ್ನತಂ ವನಂ (ಹವಿಮ್ಮಾರ. ೪-೭೨). [ಸಂ.]

**ನಿಶಾಟಿ** (ನಾ). ಹೆಣ್ಣು ಪಿಶಾಚಿ : ನೆಣದ ಬಣಂಬೆ ಪೆರ್ವೆಣದ ಬೆಟ್ಟ . . . ನೆತ್ತರನೀಂಟಿ ರಾಗದಿಂ ಕುಣಿಕುಣಿದಾಡಿ ಪಾಡುವ ನಿಶಾಟಿಯರೆಂಬವರಿಂದೆ ಸಂಗರಾಂಗಣವತಿ ರೌದ್ರವಾಗಿಱುದು ಕೊಲ್ಲುದು ಬಪ್ಪನ ಗನ್ಧವಾರಣಂ (ಎಕ. V, ಬೇಲೂರು. ೧೯೩-೫೫ ; 1161). [ಸಂ. ನಿಶಾಟಾ]

**ನಿಶಾತ** (ಗು). ಹರಿತವಾದ ; ಮಸೆದ ; ಚೂಪಾದ : ಮತ್ಸ್ಯಕೋಟಿಯಂ ಸ್ಫುರಿತನಿಶಾತಹೇತಿಯುತಸದ್ಭಟಕೋಟಿ ನಿರಂತರಂ ತಿರಸ್ಕರಿಸಿ ಘೂರ್ಣಿತಾರ್ಣವಮನೊತ್ತರಿಸಿತ್ತು ಚತುರ್ಬಲಾರ್ಣವಂ (ಪಂಪಭಾ. ೧೦-೨೪); ಪರಭೂವಿಶ್ವರಭೀಕರಂ ಕರನಿಶಾತೋಗ್ರಾಸಿತತ್ಕ್ಷತ್ರೀಶ್ವರ ವಿಧ್ವಂಸಪರಂ . . . ಭುಜಬಲಂ ಶ್ರೀರಾಜಮಾರ್ತಣ್ಡನ (ಎಕ. II, ೧೩೩-೯ ; 982) ; ಮಾಲಿ ಮುಳಿಸಿಂದಮಿಂದ್ರನ ಮೇಲೆ ನಿಶಾತಾಸ್ತ್ರವರ್ಷಮಂ ಕಱೆವುದುಂ (ನಂರಾಮಾ. ೧೨-೧೩೭) ; ಮುರಮಥನ ಕೆಲ್ಲೈಸಿ ನೋಡಿದನುರುಭಯಂಕರಚಕ್ರವನು ದುರ್ಧರುಪಧಾರಾ ಲೂಯಮಾನ ನಿಶಾತಚಕ್ರವನು (ಕುವ್ಯಾಭೀ. ೬-೩೧). [ಸಂ.]

**ನಿಶಾದರ್ಶಿ** (ನಾ). ರಾತ್ರಿಯಲ್ಲಿ ನೋಡಬಲ್ಲುದು ; ಗೂಗೆ ; ಗೂಬೆ. [ಸಂ. ನಿಶಾದರ್ಶಿನ್]

**ನಿಶಾನ** 'ನಿಶಾನಿ' ನೋ.

**ನಿಶಾನಾಥ** (ನಾ). ರಾತ್ರಿಯ ಒಡೆಯ ; ಚಂದ್ರ : ನಿಶಾನಾಥನುಂ ಶನಿಯುಂ ಭಾಸ್ಕರನುಂ ವಿಲಗ್ನದೊಳಿಳಾಜಂ ದ್ಯೂನದೊಳ್ ಕೂಡೆ ಯಂತ್ರನಿರೋಧೋತ್ಥಿತಬಾಧೆಯಿಂದೆ ಪರಲೋಕಪ್ರಾಪ್ತನಕ್ಕುಂ ನರಂ (ಜಾತತಿ. ೨೩-೧೫). [ಸಂ.]

**ನಿಶಾನಾಥಾಂಶಕ** (ನಾ). [ಜ್ಯೋತಿ] ಚಂದ್ರನ ನವಾಂಶ ; ಕರ್ಕಾಟಕ ನವಾಂಶ : ರಜನೀವಲ್ಲಭವಾರಮುಶ್ಚಿನಿ ನಿಶಾನಾಥಾಂಶಕಂ ಕೂಡೆ . . . ಪುಟ್ಟಿದಳ್ ನಿಜವರ್ಣೋತ್ತಮೆಯುತ್ತಿಮುಬ್ಬೆ ಕವಿರತ್ನಾಂಭೋಧಿಯೊಳ್ ಲಕ್ಷ್ಮಿವೋಲ್ (ಅಜಿಪು. ೧೨-೫೨). 'ನವಾಂಶ' ಪರಾ. [ನಿಶಾನಾಥ+ಅಂಶಕ]

**ನಿಶಾನಿ**, ನಿಶಾನ, ನಿಶಾನು, ನಿಶಾನೆ, ನಿಷಾನಿ, ನಿಸಾನಿ (ನಾ). ೧. ಗುರುತು ; ಚಿಹ್ನೆ ; ಲಾಂಛನ : ದೊರೆಗಳವರು ಸುಮ್ಮನೆ ಸರಕಾರಕ್ಕೆ ವರ್ಷವರ್ಷಕ್ಕೆ ಬಂದು ನಿಶಾನಿ ಕೊಡಬೇಕು ಎಂತಾ ಬರದು ಇದ್ದರು (ರಾಜೇಂದ್ರ. ೨೦೪) ; ಬಿರುದಿನ ಬಳಿಗೆ ನಾವು—ಬಿರುದಿನ

ನಿಶಾನಿಗೆ ಹೆಸರು (ಶಬ್ದಮಂ. ೪೧ ಟೀಕು) ; ಮೇಲೆ ಬರದ ತರದ ಮಾಲ ವನ್ನು ಕಳಿಸುವದಕ್ಕೋಸ್ಕರವಾಗಿ ಭಾವ (ಧಾರಣೆ) ಕಟ್ಟಿ ನಮಗೆ ಬರಿಯುತ್ತಿರುವದರಿಂದ ಅದೇ ನಿಶಾನಿಯ ಮಾಲವನ್ನು ನಮಗೆ ತಗೋ ಬೇಕಾಗುತ್ತದೆ (ಮುಂಬಪ್ಯಾ. ೬೪). **೨.** ಬಾವುಟ ; ಧ್ವಜ : ಎಸೆ ದೊಪ್ಪವೆತ್ತ ಸಿಂಹನ ಮಿಸುನಿಯ . . . ಹಸುರುನಿಶಾನಿಯು ಮತ್ತಂ ಪೊಸರನ್ನ[ದ] ಸಿಂಹವಿಷ್ಟರಂಗಳನಿತ್ತರ್ (ಬೀಳಸಂ. ೧-೧೧೦) ; ಮಿಾನ ಮಕರಾಂಕಿತದ ಮೇಲು ನಿಶಾನಿಗಳು ಮುಂಬರಿಯೆ (ಅನಂರಾ. ೧-೯೯-೧೩) ; ಮಿಸುನಿ ರಜತದ ಹವುದವೆರಸಿದಾನೆಗಳು ಮುಂದೆಸೆಯೊಳು ನಿಶಾನಿಗಳು (ಕೃಷ್ಣವಿ. ೨-೨೪); ಒಂಟೆಯ ಮೇಲೆ ಹಸುರು ನಿಶಾನಿಯನ್ನು ಹಿಡಿಸಿಕೊಂಡು ಸಂಚಾರ ಮಾಡಬೇಕೆಂಬ ಮರ್ಯಾದೆಯನ್ನು . . . . ಸಮರ್ಪಿಸಿದನು (ಕಥವಿ. I, ೧೧೩). **೩.** ಗುರಿ ; ಲಕ್ಷ್ಯ. **ನಿಶಾನ :** **೨.** ಜಿನಚಂದ್ರರ ಮಹದಾಶೆಯ ನಿಶಾನ ಹಾರಾಡಿದಂತೆ ಭಾಸವಾಯಿತು ! (ದಾನಚಿಂ. ೩೭). **ನಿಶಾನು : ೧.** ಸ್ವಲ್ಪದೂರದಲ್ಲೇ ಹೊಸದಾಗಿ ತೋಡಿ ಮುಚ್ಚಿದ ನಿಶಾನು . . . ದಶಿ ಸಹ ಕಂಡುಬಂದುವು (ಕೆಲನೆ. ೧೨೪). **ನಿಶಾನೆ : ೧.** ಗರಡಿಯ ಎದುರು ಅವರ ನಿಶಾನೆಯಾಗಿ ಹನುಮಾನ್ ಝಂಡಾ ಸ್ಥಾಪನೆ (ಭೀಮಕಾ. ೩೭). **೨.** ಆ ಹಡಗುಗಳು ತೀರ ಹತ್ತಿರ ಬಂದ ಬಳಿಕ ಅವುಗಳ ಮೇಲಿನ ನಿಶಾನೆಗಳನ್ನು ಕಂಡು . . . ಎಲ್ಲರು ಬಹಳ ಹೆದರಿದರು (ಮುಂಬಯಿ. ೫-೧೩೨) ; ಕುಣಿಯಲ್ಲಿ ನೆಟ್ಟ ನಿಶಾನೆಯು ದೂರ ಆಟಗಾರರಿಗೆ ತನ್ನ ಇರವನ್ನು ತಿಳುಹಿ ಕೊಡುತ್ತಿತ್ತು (ರಕ್ತಧ್ವ. ೧೩೦). **ನಿಷಾನಿ : ೨.** ಇಲ್ಲಿಂದ ಒಂದು ಕಂಪನಿ ಶಿಪಾಯಿ ಗಳು, ನಿಷಾನಿ ಸಹ ಕೂಡಿಸಿ, ಕಪಿತಾನ್ ಬ್ರೋನ್ ಸಾಹೇಬ ಎಂಬ ಸರದಾರರನ್ನು ಕಳುಹಿಸಿ ಇದ್ದೇವೆ (ರಾಜೇಂದ್ರ. ೫೬). **ನಿಸಾನಿ : ೨.** ರಾಮುಗೆದುರೇ ನೀನು ಧ್ವಜವಭಿರಾಮುಗೊಳಿಸುವೆನೆಂದು ರಣನಿಸ್ಸೀಮ ನೆತ್ತೆ ನಿಸಾನಿಯಂ[ಯೊಂ]ದನು ಚರರನೀಕ್ಷಿಸುತ (ಪಕುಭಾ. ೨೩-೪೦).

**ನಿಶಾನೆ ಆನೆ** = **ಪತಾಕೆ ಕಟ್ಟಿದ ಆನೆ :** ೧೦೦೦ ನಿಶಾನೆ ಆನೆಗಳೂ ೨೦೦೦ ಬಜಾಯಿ ಆನೆಗಳೂ ಇದ್ದುವು (ಬಖೈರು. ೧೩).

[<—ಪಾರ. ನಿಶಾನ್ ; ಹಿಂ. ನಿಶಾನ್, ನಿಶಾನಾ ; ಮರಾ. ನಿಶಾಣ, ನಿಶಾಣೀ, ನಿಶಾನ, ನಿಶಾನೀ]

**ನಿಶಾನಿಕಲ್ಲು** (ನಾ). ಗುರುತಿಗಾಗಿ ನೆಟ್ಟ ಕಲ್ಲು : ಕೊಡಗರಹಳ್ಳಿ ಯೆಂಬಲ್ಲಿ ಕೊಡಗಿನ ನಿಶಾನಿಕಲ್ಲು ನಟ್ಟುಯಿದೆ (ರಾಜೇಂದ್ರ. ೩) ; ಸರ ಹದ್ದಿನಲ್ಲಿ ಅಲ್ಲಲ್ಲಿ ನಿಶಾನಿಕಲ್ಲುಗಳು ಇಲ್ಲದ್ದರಿಂದಾ ಮರದ ಗೂಟಗಳ ನಿಲ್ಲಿಸಿ ಇದ್ದೇವೆ (ರಾಜೇಂದ್ರ. ೨೬೦). [ನಿಶಾನಿ + ಕಲ್ಲು (<ಕಲ್₃)]

**ನಿಶಾನಿರಸನ** (ನಾ). ರಾತ್ರಿಯ ಕೊನೆ ; ಬೆಳಗಿನ ಜಾವ ; ಮುಂಜಾವ : ಕೂಡೆ ಮನೆಮನೆಯೊಳೊಯ್ಯನೆ ಬಾಡಿದುದೊಡನೊಡನೆ ಮಿಥುನತತಿಯಿರುಳೊಲವಿಂ ಸೂಡಿದ ಪೂಮಾಲೆಗಳುಂ ಮಾಡಿದ ಸೊಡ ರ್ಗುಡಿಗಳುಂ ನಿಶಾನಿರಸನದೊಳ್ (ಚಂದ್ರಪು. ೮-೯೪). **[ಸಂ.]**

**ನಿಶಾನು** 'ನಿಶಾನಿ' ನೋ.

**ನಿಶಾನೆ** 'ನಿಶಾನಿ' ನೋ.

**ನಿಶಾಪ** (ನಾ). = ನಿಶಾನಾಥ. 'ನಿಶಾಪಮುಖಿ' ಪರಾ. **[ಸಂ.]**

**ನಿಶಾಪತಿ** (ನಾ). = ನಿಶಾನಾಥ : "ಹಿಮಾಂಶುಃ . . . ಓಷಧೀಶಃ, ನಿಶಾಪತಿಃ . . . ಕ್ಷಪಾಕರಂ—೨೦ ಚಂದ್ರನ ಹೆಸರುಗಳು" (ಸಿದ್ಧಾಂತಿ. ೨೯). 'ನಿಶಾಪತಿಸುತ' ಪರಾ. **[ಸಂ.]**

**ನಿಶಾಪತಿಸುತ** (ನಾ). ಚಂದ್ರನ ಮಗ ; ಬುಧ : ಕ್ಷಿತಿಜನೊಳೊಂದಿದ ಗುರುವಿಂ [ನೇತಾರಂ] ಮಿತ್ರಪುತ್ರನಿಂ ದುಃಖಿ ನಿಶಾಪತಿಸುತನಿಂ ಮಲ್ಲಂ ಭೃಗುಸುತನಿಂ ಪರದಾರಶೀಲನೆನಿಕುಂ ಮನುಜಂ (ಜಾತತಿ. ೧೫-೩).

[ನಿಶಾಪತಿ + ಸುತ]

**ನಿಶಾಪಮುಖಿ** (ನಾ). ಚಂದ್ರಮುಖಿ : ನೀರಜಾಂಬಕಿಯು ನೀಲಾಳಕಿ ನಿಶಾಪಮುಖಿ ವಾರಣಾರಿಸೂಕ್ಷ್ಮಮಧ್ಯೆ (ನಸಮೋ. ೩-೧೬).

[ಸಂ. ನಿಶಾಪಮುಖೀ]

**ನಿಶಾಪರಿಯಟನ** (ನಾ). ರಾತ್ರಿಯ ಓಡಾಟ ; ರಾತ್ರಿಯ ಸಂಚಾರ: 'ನಿಶಾಪರಿಯಟನಪಟು' ಪರಾ. [<ಸಂ. ನಿಶಾಪರ್ಯಟನ]

**ನಿಶಾಪರಿಯಟನಪಟು** (ನಾ). ರಾತ್ರಿಯ ಓಡಾಟದಲ್ಲಿ ಕುಶಲ ನಾದವನು : ಕುಟಿಲ ಭಾರದ್ವಾಜನಿವನುಬ್ಬಟೆಗೆ ಮದ್ದರೆವೆನು ನಿಶಾ ಪರಿಯಟನಪಟುಗಳು ಬರಲಿ ಕಾಳೆಗಕೆಂದನಸುರಾರಿ (ಕುಪ್ಯಾದ್ರೋ. ೧೫-೪೨). [ನಿಶಾಪರಿಯಟನ + ಪಟು]

**ನಿಶಾಪ್ರವೇಶ** (ನಾ). ರಾತ್ರಿಯ ಪ್ರಾರಂಭ : ನಳಿನದಳಂಗಳಲ್ಲಿ ಪುಳಿನ ಸ್ಥಳದಲ್ಲಿ ಲತಾವಿತಾನದೊಳ್ ತಿಳಿಗೊಳದಲ್ಲಿ ತನ್ನ ಮನದನ್ನಳನೊಲ್ದಜಿ ಸುತ್ತೆ . . . ತೊಳಲ್ದಳಲ್ದು ಮೇಣ್ಕಳವಳಿಸಿತ್ತು ಕಾಂತೆಯನಗಲ್ದೆಣೆ ವಕ್ಕಿ ನಿಶಾಪ್ರವೇಶದೊಳ್ (ರಾಜಶೇ. ೧೧-೧೬). **[ಸಂ.]**

**ನಿಶಾಮಧ್ಯ** (ನಾ). ನಟ್ಟಿರುಳು ; ಮಧ್ಯರಾತ್ರಿ : ಶ್ರಾವಣ ಕೃಷ್ಣಪಕ್ಷಾಷ್ಟಮಿರೋಹಿಣೀನಕ್ಷತ್ರದೊಳ್ ಮಹೋತ್ಕೃಷ್ಟಮಪ್ಪ ಮುಹೂರ್ತದಿಂ ಸನಾಥವಾದ ನಿಶಾಮಧ್ಯಸಮಯದೊಳ್ . . . ಶಾಶ್ವತ ನವತರಿಸಿರ್ದಂ (ಜಗವಿ. ೨-೯೯ ಪ). **[ಸಂ.]**

**ನಿಶಾಮನ** (ನಾ). **೧.** ನೋಡುವಿಕೆ ; ದೃಷ್ಟಿಸುವಿಕೆ. **೨.** ನೋಟ ; ದೃಷ್ಟಿ. **೩.** ಕೇಳುವಿಕೆ ; ಶ್ರವಣ : "ಚಾಯ್ಯ—ಪೂಜಾನಿಶಾ ಮನಯೋಃ, ಅರ್ಚನೆಯೊಳಂ, ಕೇಳ್ವಿಯೊಳಂ . . . ಚಾಯಲ್, ಚಾಯಂ, ಚಾಯನಂ, ಚಾಯನೀಯಂ, ಚಾಯ್ಯಂ, ಈ ೫ ಪೂಜನವುಂ, ನಿಶಾಮನವುಂ" (ಕಾಶಕ್ಕ. ೧೫೫). **[ಸಂ.]**

**ನಿಶಾಮುಖ** (ನಾ). = ನಿಶಾಪ್ರವೇಶ : ನಿಶಾಮುಖದೊಳ್ ನೆಗೆದ ತಾರಗೆಗಳೋರಗೆಗಳೆನಿಪ ಪೊಚ್ಚ ಪೊಸಮುತ್ತಿನ ಪಚ್ಚದೊಡವಿನೊಳಂ . . . ಅಳಂಕರಿಸೆ (ಪುಷ್ಪಪು. ೪-೫೧ ಪ). **[ಸಂ.]**

**ನಿಶಾರ** (ನಾ). ಎರಡು ಮಡಿಕೆಯ ಬಟ್ಟೆ ; ಹಚ್ಚಡ ; ದುಪ್ಪಟಿ : "ಶೀತವಾತಗಳ ನಿವಾರಿಸಲೆಂದು ಮಾಡಿದ ಹೊದಿಕೆಯಲ್ಲಿ ನಿಶಾರ ಯೆನಿಸುಗು" (ನಾಚಿರಾ.೧೨೪); "ನಿಶಾರಃ . . . ಮಂಜು, ಗಾಳಿ ಇವುಗಳ ಬಾಧೆಯನ್ನು ಪರಿಹರಿಸುವ ಹಚ್ಚಡ ಮುಂತಾದ ವಸ್ತ್ರವಿಶೇಷದ ಹೆಸರು" (ಸಿದ್ಧಾಂತಿ. ೨೦೪). **[ಸಂ.]**

**ನಿಶಾರಣ** (ನಾ). ಕೊಲ್ಲುವಿಕೆ; ಕೊಲೆ : "ಪ್ರಮಾಪಣಂ, ನಿಬರ್ಹಣಂ, ನಿಕಾರಣಂ, ನಿಶಾರಣಂ . . . ವಧಃ—ಈ ೩೦ ಕೊಲ್ಲುವದಕ್ಕೆ ಹೆಸರುಗಳು" (ಸಿದ್ಧಾಂತಿ. ೨೭೧). **[ಸಂ.]**

**ನಿಶಾರಮಣ** (ನಾ). ಚಂದ್ರ : ನಗೆ ಸುಧೆಯೊಳ್ ನಿಶಾರಮಣ ನೊಳ್ ವದನಂ . . . ಸುರದ್ರುಮದ ಪಲ್ಲವದೊಳ್ ಪದಪಲ್ಲವಂ ತಳರ್ದೊಗೆದವೆನಿಪ್ಪ ಪಟ್ಟದ ಮಹಾಸತಿ ಲಕ್ಷ್ಮಿಗೆ (ಎಕ. V, ಬೇಲೂರು. ೧೭೧-೩೧ ; ಸು. 1160). **[ಸಂ.]**

**ನಿಶಾವಸಾನ** (ನಾ). ಇರುಳಿನ ಕೊನೆ; ಬೆಳಗು : ನಿಶಾವಸಾನ ಸಮಯದೊಳ್ . . . ಅತಿಮಧುರಮಾಗೆ ವೃದ್ಧಂ ಪಾಡೆ (ಚಾವುಂಪು. ೪೨೩). **[ಸಂ.]**

**ನಿಶಾಸ** (ನಾ). ಅಂಕೆಯಿಲ್ಲದುದು ; ಹತೋಟಿಗೆ ಒಳಪಡದುದು : ಮಾಸಾವಸಾನದಗ್ರದ ವಾಸರದೊಳ್ ಚಂದ್ರಗತಿಯಿನಾ ಯತಿ ಬರುತಿರ್ಪಾ ಸಮಯದೊಳವನೀಶ ನಿಶಾಸದ ಗಜಮೊಂದು ಬಿಟ್ಟುಕೊಂಡು ಮದಾಂಧಂ ಗೋಟಿಡಿಸೆ (ಮಹಾನೇ. ೫-೧೯). **[ಸಂ.]**

**ನಿಶಿ₁**, ನಿಸಿ, ನಿಸೆ (ನಾ). **೧.** ಇರುಳು ; ರಾತ್ರಿ : ನಿಶಿ ಬಿಟ್ಟೋಡೆ ಶಶಾಂಕನುನ್ನತಕರಂಗಳ್ ಬಾಡೆ . . . ಪೂರ್ವಾದ್ರಿ ಕೆಂಬಿಸಿಲಿಂದೊಪ್ಪಿರೆ

ಮೂಡಿದಂ ಭಗಣಶೋಭಾತಸ್ಕರಂ ಭಾಸ್ಕರಂ (ಸೂಕ್ತಿಸು. ೯-೭೫); ಪಶ್ಚಿಮಾಂಬುಧಿಯೊಳು ಜೀವವ ತೊಱೆದ ಚಂದ್ರಮನು ಪೋಗಲಾಣ್ಮನ ಕೂಡೆ ನಕ್ಷತ್ರ ನಿಶಿವೆಣ್ಣು ಸಾಗಮನವನೆ ಮಾಡಿದುವು(ಮೋಹತ.೧೮-೧೦೭); ಏಳಿ, ಎಚ್ಚರಗೊಳಿರಿ ನಿಶಿಯು ಅಳಿದಿಹುದು (ವಿಸೀಗೀ. X, ೧೨); ವರ್ಷದ ನಿಶಿಯೊಳು ಮುಗಿಲಿನ ಮರೆಯೊಳು ಇಣಿಕುವ ಚಂದ್ರನ ಜೊನ್ನದೊಲು . . . ಆಂಡಾಳಿನ ನಗೆಯು (ಮಾಂದಳಿ. ೧೬-೧); ಜೀವನವನದಲಿ ಕವನಮಯೂರಂ . . . ಕುಣಿವುದಾವೇಶದಲಿ, ದಿನದಿನ ನಿಶಿನಿಶಿ ಮಾಯಾರೂಪಸಿ ಮೆರೆಯಲು ನವನವವೇಷದಲಿ (ನವಿಲು. ೧-೫). **೨.** ಕಪ್ಪನೆಯ ಸ್ವರೂಪ: ಕಲಿ ಬಭ್ರುವಾಹನಂ ಪಾರ್ಥನೊಳ್ ಕಲಹಕಂ ಕಲಿಯಾಗಿ ನಿಶಿಯಾಗಿ ತೋರಿದಂ ಕಾಯದೋಳ್ಪಾರ್ಥಸೂನು (ತುರಂಗ. ೮೨-೨೩). **ನಿಸಿ : ೧.** ನಿಶಾ–ನಿಸಿ; ವಿಷ–ಬಿಸ (ಶಮದ. ೨೭೧ ಪ್ರಯೋ); ಅತಿ ನಿಸಿ[ಪಾಠಾಂ. **ಶಿ**]ಯೊಳಾ ಗುರುಗಳನು ಕೊಲ ಬಂದನಾ ಬಲಿಯು (ಸಾಳ್ವಭಾ. ೧೮-೧೪); ನಿಸಿಯು ಬೆಸಲಿಗೆ ಸುಸಿಲ್ಮಿಸುಕು ವಂತೊಲ್ಲದೇಕೆನ್ನ ಮಬ್ಬೆದೆಗೆ ಮೂಡೆ 'ಆತ್ಮಾನಂ ವಿದ್ಧಿ' ಎಂಬೀ ಸತ್ಯ ದರಿವೆಯ ಮ್ಲಾನಂ ? (೧೪ವಿಂ. ೫೬-೯). **೩.** ಕಪ್ಪು ; ಕರಿದು : ಒಂದೆಸೆಯೊಳಬ್ಜಜಂ ಸರಸತಿಯ ಮೇಲೆ ತಾನೊಂದೆಸೆಯೆ ಕತ್ತುರಿಯ ಜಲಂಗಳಂ ನಿಸಿ ಬಳಸಿ ನಿಂದೆಸೆಯಲೆಸೆವ ಸಸಿಗಲ್ಲ ಪುತ್ತಳಿಯೊಲಾ ವಾಣಿ ಜೀರ್ಕೊಳವಿಯೊಳಗೆ ಒಂದಿಸಿದ ಮಲಯಜಜಲಂ ಬೊಮ್ಮನಂಗದೆಪೊಳ್ ಸ್ಪಂದಿಸಿದೊಡೆ . . . ಕನಕಾದ್ರಿಯಂತೆ ಕಣ್ಗಳ್ಗದೇಂ ರಾಜಿಸಿದನೋ (ಚೆಬಪು. ೩೭-೭೦). **ನಿಸೆ : ೧.** ಪಗಲೆಂದುಂ ತಲೆಯೆತ್ತಲಣ್ಮಳೆನಸುಂ ಚಂದ್ರಂಗೆ ಕೂರ್ತಂತೆ ಪತ್ತುಗೆಗುಂದಳ್ ನಿಸೆಯುಪ್ಪುದುಂ ಪರಿದು ದುಗ್ಧಾಂಭೋಧಿಯೊಳ್ ಕೂಡುವಳ್ . . . ಕೌಮುದಿಯೆಂಬ ಪೊಚ್ಚ ಪೊಸವೆಣ್ಣೇನೆಂಬೆ ನಾಣ್ಚೋಡೆಯೋ (ಲೀಲಾವ. ೨-೫೨).

**ನಿಶಿರಾತ್ರಿ** = ನಡುರಾತ್ರಿ ; ಮಧ್ಯರಾತ್ರಿ ; ಸರಿರಾತ್ರಿ : ನಿಶಿರಾತ್ರಿಯಲ್ಲಿ ನಿಮ್ಮನ್ನು ನಡಸಿಕೊಂಡು ಕರೆದುಹೋದೆ (ಮನೋನಂ. ೧೨೮) ; ರಾಜಒಡೆಯನು . . . ಈಶ್ವರಪ್ರಸಾದವನ್ನು ಸ್ವೀಕರಿಸಿ ಆ ನಿಶಿರಾತ್ರಿಯಲ್ಲಿ ತನ್ನರಮನೆಗೆ ಹಿಂತಿರುಗಿದನು (ಶ್ರೀರಾಯ. ೭).

[<ಸಂ. ನಿಶಾ]

**ನಿಶಿ₂** (ಅ). ಒಡಗೂಡಿ ; ಸಹಿತವಾಗಿ : ಒಂದು ನಕಲನ್ನು ಸಮನಿನ ಒಂದು ನಕಲು ನಿಶಿ ಇನ್ನು ಮುಂದೆ ಹೇಳಿರುವ ರೀತಿಯಲ್ಲಿ ಕೊಡತಕ್ಕದ್ದು (ಗ್ರಾಮಾಕ. ೨೪). [←**ಮರಾ.** ನಿಶೀ]

**ನಿಶಿಕರ** (ನಾ). = ನಿಶಾಕರ : "ಇಂದು ಜೈವಾತೃಕಂ ನಿಶಿಕ[ಪಾಠಾಂ.ವ]ರಂ ಹಿಮಕರಂ ಚಂದ್ರಂ . . . ದ್ವಿಜರಾಜನೆನೆ ಸುಧಾಂಶುವೆನಿಕ್ಕುಂ" (ಮಂಗರಾ. ೧೧-೪). [**ಸಂ.**]

**ನಿಶಿಚರ** (ನಾ). **೧.** ರಾತ್ರಿಯಲ್ಲಿ ಸಂಚರಿಸುವವನು ; ರಾಕ್ಷಸ : ನಿಶಿಚರ ಶಕಟಾಸುರನ ಶಿಶುಗಾಲಲೊರಸಿದೆನಂತೆ (ಪುರಂದ. ೨-೧೯-೨) ; ಬಿಸಿಗಂಜಿದವನಂತೆ ಹನುಮನಂಗವಿಕಾರಮೆಸಗಲಸುರೇಶ ಗಹಗಹಿಸಿ ನಗು ತಲೆ ನಗರ ರಸೆಯೊಳಗೆ ಮೆರೆಸಿ ಬಿಟ್ಟಪುದೆಂದು ನಿಶಿಚರರಿಗೊರೆದನುಲ್ಲಾಸ ದಿಂದ (ವೆಂಕಾರಾ. ೫-೧೮-೨೩). **೨.** ಕಳ್ಳ ; ಚೋರ : "ನಿಶಿಚರಂ ಕನ್ನಗಳ್ಳಂ" (ಮಂಗರಾ. ೬೭-೫). [**ಸಂ.**]

**ನಿಶಿತ₁** (ನಾ). ಮಧ್ಯರಾತ್ರಿ : ರಕ್ಷಿಸುಗೆ ನೆಱೆ ಪದುಮನಾಭನು ರಕ್ಷ ಮೂರುತಿ ನಿಶಿತದಲಿ ನೆಱೆ ರಕ್ಷಿಸುಗೆ ಸಿರಿವತ್ಸಲಾಂಛನನಪರರಾತ್ರೆಯಲಿ (ನಿಭಾಗ. ೬-೮-೧೬). [<**ಸಂ.** ನಿಶೀಥ]

**ನಿಶಿತ₂** (ಗು). **೧.** ಹರಿತವಾದ ; ಮಸೆದ ; ಚೂಪಾದ : ಮುನಿಜನಂಗಳ ಬೇಳ್ವೆಗಳ್ಗುಪದ್ರವಂಗೆಯ್ವ ನಿಶಾಟಕೋಟಿಯುಂ ನಿಶಿತ ಶರಕೋಟಿಯಿಂದಮುಚ್ಚಾಟಿಸಿ (ಪಂಪಭಾ. ೪-೧೫ ವ) ; ಖರನಖರಂಗಳಿಂ ನಿಶಿತಚಂಚುಗಳಿಂದಿಱಿಯಲ್ಕರುತ್ತು ಸಾರ್ತರೆ ನಸುನಕ್ಕು ಪೊಯ್ಕೆ ಕರದಿಂ . . . ಕೆಡೆದತ್ತು ವಜ್ರದಿಂ ಸುರಪತಿ ಪೊಯ್ಕೆ ಬೆಟ್ಟು ಕೆಡೆದಂತೆ ಜಟಾಯು ನಭೋವಿಭಾಗದಿಂ (ಪಂರಾಮಾ. ೯-೧೦೪) ; ಸಂತವಿಸಿಕೊಂಡರ್ಜುನನು ದ್ರೋಣನ ನವನಿಶಿತಬಾಣೌಘದಲಿ ಹೂಳಿದನು ನಿಮಿಷದಲಿ (ಕುಮ್ಯಾದ್ರೋ. ೯-೪೬) ; ಆತನಂ ಮಗುಟ್ಟುವೊಡೆಂದು ಕುಶಂ ನಿಶಿತವಿಶಿಖವಿಸರವಿಲಾಸಿ ಬೆಂಗೊಂಡುದನಿನ್ನುಂ ಬಾರದೆ ತಡೆದುದಂ ಬಿನ್ನಯಿಸಿದಳ್ (ರಾಮಾಶ್ವ. ೧೬೧-೧೨) ; ನಿಷಂಗದಿಂ ತೆಗೆ, ನಿಶಿತನಾರಾಚಮೃತ್ಯುವಂ ! (ಶ್ರೀರಾಮಾ. ೧೫೭-೧೫೬). (ನಾ). **೨.** ಹರಿತವಾದುದು ; ಚೂಪಾಗಿರುವುದು : "ನಿಶಾತಂ, ನಿಶಿತಂ, ಧೌತಂ, ತೇಜಿತಂ—ಈ ೪ ಮಸೆದುದು" (ಹಲಾಯು. ೭೮-೩೨೦). **೩.** ಚುರುಕಾದುದು ; ತೀಕ್ಷ್ಣವಾದುದು : ಹಿರಿದೆನ್ನ ಮತಿ ಪೇಣಿದು ನಿಶಿತ (ಗಣೇಶ. ೭-೧೬೩). 'ನಿಶಿತಮತಿ' ಪರಾ.

[**ಸಂ.**]

**ನಿಶಿತಕೋಪ** (ನಾ). ಉಗ್ರವಾದ ಕೋಪ; ತೀಕ್ಷ್ಣವಾದ ಸಿಟ್ಟು : ಪೂರ್ವದಿಶಾನಿತಂಬಿನಿ ನಿಶಿತಕೋಪದ ಕಿಡಿಯನುಗುಳಿದಳೆನಲು ರವಿ ಮೆಱೆದ (ಕುಮ್ಯಾದ್ರೋ. ೨-೧೩). [ನಿಶಿತ₂+ಕೋಪ]

**ನಿಶಿತಗೊಳಿಸು** (ಕ್ರಿ). ಹರಿತಗೊಳಿಸು ; ತೀಕ್ಷ್ಣಗೊಳಿಸು : ಈ ದೃಷ್ಟಿಯಿಂದ ಕಾವ್ಯಪ್ರಜ್ಞೆಯನ್ನು ಖಚಿತ, ನಿಶಿತಗೊಳಿಸುತ್ತ ಕಾವ್ಯ ಬರೆಯದೇ ಕೆಲವು ಕಾಲ ಇರುವುದೇ ಒಳ್ಳೆಯ ಕಾವ್ಯನಿರ್ಮಿತಿಗೆ ನಾಂದಿ ಯಾಗುತ್ತದೆ (ಚಂದ್ರಮಾ. ಒಳ್ನುಡಿ). [ನಿಶಿತ₂+ಕೊಳ್₁+-ಇಸು₃]

**ನಿಶಿತಧಾರೆ** (ನಾ). ಹರಿತವಾದ ಅಲಗು,— ಚೂಪಾದ ಬಾಯಿ : ನಿಶಿತಧಾರೆಯ ಹೊಳಹು ಸೂರ್ಯನ ಮುಸುಕಿಹುದು (ಕುಮ್ಯಾಭೀ. ೬-೩೨). [ನಿಶಿತ₂+ಧಾರೆ]

**ನಿಶಿತಪರಿಮಳ** (ನಾ). ತೀಕ್ಷ್ಣವಾದ ಸುವಾಸನೆ : ನಿಶಿತಪರಿಮಳ ಮೋದದಿಂ ಮೋದಿಸುವ ಗಂಧದ್ರವ್ಯದಲಿ ಪಂಠಿಸಿದ ಜೀವನ ಜೀವ ತನ್ನಯ ಜೀವನವೆಯೆಂದು ವಸುಮತೀಶರಿಗಿತ್ತು ತಾ ಭೋಗಿಸದೆ ಬಳಸದೆ ರಾಜನನೋಲಗಿಸುವವನೆ ಪಾನೀಯಧಾರಕನು (ಕುಮ್ಯಾಉ. ೩-೯೩).

[ನಿಶಿತ₂ + ಪರಿಮಳ (= ಪರಿಮಲ)]

**ನಿಶಿತಮತಿ** (ನಾ). **೧.** ತೀಕ್ಷ್ಣವಾದ ಬುದ್ಧಿಶಕ್ತಿ : ಅನೇಕ ಸಮಸ್ಯೆಗಳು ಇನ್ನೂ ಅಪರಿಹಾರ್ಯವಾಗಿ, ವಿಜ್ಞಾನಿಗಳ, ನಿಶಿತಮತಿಗೆ ಮತ್ತು ವಿಚಾರಬುದ್ಧಿಗೆ ಸವಾಲಾಗಿ ಉಳಿದಿವೆ (ದ್ರಾವಿವಿ. V, ಮುನ್ನುಡಿ). **೨.** ತೀಕ್ಷ್ಣವಾದ ಬುದ್ಧಿಯುಳ್ಳವನು ; ಕುಶಾಗ್ರಮತಿ : ನಿಶಿತ ಮತಿ ಮಹಾಸತ್ತ್ವವೃತ್ತಂ ತ್ರಿವರ್ಗೋಪೇತಂ ಷಾಡ್ಗುಣ್ಯಶೀಲಂ ವರ ಬುಧನಿವಹಸ್ತೋತ್ರಪಾತ್ರಂ ಪ್ರಶಸ್ತಂ (ಕಾದಂಪೂ. ೩೧೫) ; ಅದು ನಿಮ್ಮನ್ನರಪ್ಪ ನಿಶಿತಮತಿಗಳ್ಗೆ ಪಂಚರಾತ್ರಿಯೊಳೆ ಪ್ರತೀತಿಯಕ್ಕುಂ (ಸುಕುಮಾ. ೩-೩೭ ವ) ; ನಿಶಿತಮತಿ ಮೆಚ್ಚಿದನು ಬೇಡಿನ್ನಸುವನೊಬ್ಬಂಗಿತ್ತೆನು (ಕುಮ್ಯಾಆ. ೨೩-೪೭) ; ಬೇರೆ ನುಡಿದನಿಲ್ಲೊಂದುಮಂ ಆ ನಿಶಿತ ಮತಿ, ಮಿತಭಾಷಿ, ಯೋಗಿಗಳ ಯೋಗಿ, ಪವನಾತ್ಮಜಂ (ಶ್ರೀರಾಮಾ. ೩೬೧-೫೭೭). [ನಿಶಿತ₂ + ಮತಿ]

**ನಿಶಿತವಿಶಿಖ** (ನಾ). ಹರಿತವಾದ ಬಾಣ,—ಶರ : ನಿಶಿತವಿಶಿಖಂ ಗ[ಳಿಂ]ದೊಂದಶನಿಯೆ ಗಿರಿಕುಲಮನಳಱುವಂತೆ ಮದೇಭಪ್ರಸರಸಹಸ್ರಂ ಕೆಡೆದುವು ವಿಸಸನದೊಳ್ ದ್ರೋಣನಿದಿರ್ಗೆ ಮಾರ್ವಲಮೊಳವೇ (ಪಂಪಭಾ. ೧೨-೨೬). [ನಿಶಿತ₂ + ವಿಶಿಖ]

**ನಿಶಿತಾಸ್ತ್ರ** (ನಾ). = ನಿಶಿತವಿಶಿಖ : ಬಿಗಿದ ತವದೊಣೆಗೆ ಕೆಯ್ಯಂ ನೀಡಿ ನಿಶಿತಾಸ್ತ್ರಮನೊಂದನುರ್ಚಿಕೊಂಡು (ಶಾಂತಿಪು. ೪-೪ ವ) ; ನಿಶಿತಾಸ್ತ್ರ ಹತಿಯಿನಾ ಮುನಿಯ ಶರೀರಂ ಕೂಡೆ ಜಾಳರಂಬೋಗಿರೆ (ಪಾರ್ಶ್ವಪು. ೧೨-೮೫). [ನಿಶಿತ₂ + ಅಸ್ತ್ರ]

**ನಿಶಿದಿ** 'ನಿಸಿದಿ' ನೋ.
**ನಿಶಿದ್ದಿ** 'ನಿಸಿದಿ' ನೋ.
**ನಿಶಿಧಿ**$_1$ 'ನಿಸಿದಿ' ನೋ.
**ನಿಶಿಧಿ**$_2$ (ನಾ). ದಾಖಲೆ; ನಮೂದು; ನಿರೂಪಣೆ : ಯಿ‌ಾ ಹೆಣ್ಣಾಳು ಹುಡುಗಿಯನ್ನು ನಿಮಗೆ ಕ್ರಯ ಮೂಲಕ್ಕೆ ಕೊಟ್ಟೆನಾಗಿ ಯಿ‌ಾ ಹೆಣ್ಣಿಗೆ ಆದಿ ಅಡಮು ಅಡ್ಡಿಸಡ್ಡಿಯೇನು ಉಂಟಾದ್ದನ್ನು ನಾನೇ ನೋಡಿ ಕೊಂಡೇನುಯೆಂದು ಬರೆಸಿಕೊಟ್ಟೆ ಕ್ರಯಚೀಟು ಹಣ ಸಂದ ನಿಶಿಧಿ ಯಾಗಿದೆ (ಮೈಆರಿ. ೧೯೨೮, ೬೭–೧೩ ; 1808).
[←ಪಾರ. ನವಿಶ್ತ, ನವಿಶ್ತಾ]
**ನಿಶಿಧಿಗೆ** 'ನಿಸಿದಿಗೆ' ನೋ.
**ನಿಶಿವಗೆಯು,** ನಿಸಿವಗೆಯು (ನಾ). ರಾತ್ರಿಯ ಹಗೆ ; ಸೂರ್ಯ : "ನಿಶಿವಗೆಯುನೆಂಬಭಿಧಾನ ತಾಳುವಂ ದಿನಕರಂ" (ಕಶರ. ೫೪).
**ನಿಸಿವಗೆಯು :** "ಬಿಸಿಗದಿರ ನಿಸಿವಗೆಯು ಕೆಂಗದಿರ . . . ಪಗಲ ಬೊಜಂಗ ನೆಂದು ಸಪ್ತಾಶ್ವಂಗೆ ನಾಮಮಕ್ಕುಂ" (ಕಬ್ಬಿಕೈ. ೪೪) ; "ನಿಸಿವಗೆಯು ತಾವರೆಗೆಳೆಯ . . . ಜಗುನೆಯಯ್ಯನೆನಲ್ಕೆ ಸೂರ್ಯನಾಮಂ" (ಶಬ್ದಮಂ. ೧೫). [ನಿಶಿ$_1$ + ಪಗೆಯು]
**ನಿಶಿವರ** (ನಾ). = ನಿಶಾಕಾಂತ : "ಇಂದು ಜೈವಾತೃಕಂ ನಿಶಿವ[ಪಾಠಾಂ. ಕ]ರಂ ಹಿಮಕರಂ ಚಂದ್ರಂ . . . ದ್ವಿಜರಾಜನೆನೆ ಸುಧಾಂಶುವೆನಿಕ್ಕು" (ಮಂಗರಾ. ೧೧–೪). [ಸಂ.]
**ನಿಶಿವೈರಿ** (ನಾ). = ನಿಶಿವಗೆಯು : "ನಿಶಿವೈರಿ ಮಿಹಿರಂ ವಿರೋಚನಂ ಭಾಸ್ಕರಂ . . . ಪೂಷ್ಣನೆನೆ ಸೂರ್ಯನಕ್ಕುಂ" (ಮಂಗರಾ. ೧೦–೨).
[ಸಂ.]
**ನಿಶೀಥ** (ನಾ). ೧. ರಾತ್ರಿ ; ಇರುಳು. ೨. ನಡುರಾತ್ರಿ ; ಮಧ್ಯರಾತ್ರಿ ; "ನಿಶೀಥಃ, ಮಹಾನಿಶಾ – ಈ ೨ ನಡುವಿರುಳ್" (ಹಲಾಯು. ೧೮–೧೯) ; ಅದೇಂ ಮೊಬಗಿತೋ ಮೇಘಂ ನಿಶೀಥಂ ಗಳೊಳ್ (ಜಗವಿ. ೪–೨೮); ನಿನ್ನಯ ಪಿಂತೆ ಕಾಂತಿಯಂ ಕಾಣದ ಭಾರತಂ ಬರಬರುತ್ತ ನಿಶೀಥಕೆ ಕಂದಿ ಬಂದುದೈ (೧೪ವಿಂ. ೫೩–೧೨) ; ರಾತ್ರಿ ಮಹಾನಿಶೀಥದಲ್ಲಿ ಕಾಲಿಟ್ಟಿತು (ನೂರಜ. ೩೮). [ಸಂ.]
**ನಿಶೀಥಿನಿ** (ನಾ). ಇರುಳು ; ರಾತ್ರಿ : "ತಮಿಾ, ತಮಿಸ್ರಾ . . . ನಿಶೀಥಿನೀ, ನಿಶಾ . . . ಶ್ಯಾಮಾ, ರಾತ್ರಿಃ–ಈ ೧೯ ಇರುಳಿನ ಪೆಸರ್" (ಹಲಾಯು. ೧೮–೧೦೭); ನಿಶೀಥಿನಿಯೊಳ್ ಖಳ ರಾಹು ಬಂದು ಸಂಪೂರ್ಣ ಸುಧಾಂಶುವಂ ಪಿಡಿಯಲೆಂದನುಗೆಯ್ಯೆ (ಬಾಧಪು. ೪–೩೪) ; ಮಲಗುವು ದೊಲ್ದು ನಿಶೀಥಿನಿಯೊಳ್ ನಿರ್ಮಲಮನಸ್ಕನೆನಿಸುವುದು (ವಿಷ್ಣುಪು. ೧೨–೫೮) ; ಆಂಜನೇಯನ ಬರವಿಗಂಜಿ ಲಂಕಾರಾತ್ರಿ ವಿಕಂಪಿಸುತೆ ಬೆಳ್ಪೇ ರ್ದದಂ ತೋರ್ಪ ಮಾಳ್ಕೆಯಿಂ ಶ್ವೇತವಾದುದು ಮುಖಂ ಶೀತಲ ನಿಶೀಥಿನಿಗೆ ನಾಥನೈತಹ ನಾಣಿಗೆಂಬಂತೆ (ಶ್ರೀರಾಮಾ. ೪೨೦–೩).
[ಸಂ. ನಿಶೀಥಿನೀ]
**ನಿಶೀಥಿನೀನಾಥ** (ನಾ). ರಾತ್ರಿಯ ಒಡೆಯ ; ಚಂದ್ರ : "ಇಂದುಃ . . . ನಿಶೀಥಿನೀನಾಥಃ, ಜೈವಾತೃಕಃ, ಮೃಗಾಂಕಃ, ವಿಧುಃ, ದಾಕ್ಷಾಯಣೀರಮಣಃ — ಈ ೨೧ ಚಂದ್ರನ ಪೆಸರ್" (ಹಲಾಯು. ೮–೪೩).
[ಸಂ.]
**ನಿಶೀಥೆ** (ನಾ). ನಡುರಾತ್ರಿ ; ನಟ್ಟಿರುಳು : "ಅರ್ಧರಾತ್ರೆ ನಿಶೀಥೆಯೆನೆ ಮಧ್ಯರಾತ್ರಿಯಕ್ಕುಂ" (ಮಂಗರಾ. ೨೦–೭). [ಸಂ. ನಿಶೀಥ]
**ನಿಶೀಧಿ** 'ನಿಸಿದಿ' ನೋ.
**ನಿಶೀಧಿಕೆ** 'ನಿಸಿದಿಗೆ' ನೋ.
**ನಿಶೀಧಿಗೆ** 'ನಿಸಿದಿಗೆ' ನೋ.

**ನಿಶುಂಭನ** (ನಾ). ಕೊಲ್ಲುವಿಕೆ ; ನಾಶಗೊಳಿಸುವಿಕೆ : "ಮಾರಣಂ, ನಿಶರಣಂ, ನಿಬರ್ಹಣಂ, ಸೂದನಂ, ನಿರಸನಂ, ನಿಶುಂಭನಂ . . . ಸಂಜ್ಞಪನಂ—ಈ ೨೧ ಕೊಲೆ" (ಹಲಾಯು. ೭೮–೩೨೩). [ಸಂ.]
**ನಿಶುಂಭಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; ₱ "ಬಲಗಾಲನ್ನು ಕುಂಚಿತ ಮಾಡಿ, ಎಡಗಾಲಿನ ಹಿಮ್ಮಡಿಯ ಹತ್ತಿರಕ್ಕೆ ತಂದು ಅಥವಾ ಚೇಳಿನ ಬಾಲದಂತೆ ಹಿಂದಕ್ಕೆತ್ತಿ ಎದೆಯನ್ನು ಮುಂದಕ್ಕೆ ಚಾಚಿ, ಕಟಕಾಮುಖಹಸ್ತದ ಮಧ್ಯ ಬೆರಳನ್ನು ತಿಲಕವಿಡುವಂತೆ ಹಣೆಯ ಮೇಲೆ ಚಲಿಸುವುದು" (ಲಾಸ್ಯರಂ. ೨೯೮ ಗದ್ಯಾನುವಾದ): ತವೆ ಕುಂಚಿತಮುಂ ಡೋಲಂ ವಿವೃತ್ತ ವಿನಿವೃತ್ತ ಮೆಸೆವ ಪಾರ್ಶ್ವಕ್ರಾಂತಂ ಯುವತೀ ನಿಶುಂಭಿತಂ ಕೇಳವಿರಳಗುಣೆ ರಂಜಿಸಿರ್ಪ ವಿದ್ಯುದ್ಭ್ರಾಂತಂ (ಲಾಸ್ಯರಂ. ೪–೩೪). [ಸಂ.]
**ನಿಶೆ**$_1$ (ನಾ). ೧. ಇರುಳು ; ರಾತ್ರಿ ; ರಜನಿ : "ತಮಿಾ, ತಮಿಸ್ರಾ. . . ನಿಶಾ, ದೋಷಾ . . . ರಾತ್ರಿಃ—ಈ ೧೯ ಇರುಳಿನ ಪೆಸರ್" (ಹಲಾಯು. ೧೮–೧೦೭) ; ಒದವಿದವಶ್ಯಾಯದೊಳ್ ನಿಂದನೇಕಾಂತನಿವಾಸಂ ಬೆಳ್ಪವಾಸಂ ನಿಶೆಯೊಳೆಸೆಯೆ ನಿರ್ವಾಣದೊಳ್ ಯೋಗಿನಾಥಂ (ಸುಕುಮಾ. ೪–೧೧); ಪರಿಪೂರ್ಣಚಂದ್ರನಂ . . . ದರವಿಕಸದ್ವಾರಿರುಹಮನಾ ಕಾಂತೆ ನಿಶೆಯ ಕಡೆಯೊಳ್ ಕಂಡಳ್ (ಪುಷ್ಪಪು. ೩–೧೨೦); ಲಂಕಿಣಿಯ ಮರ್ದಿಸಿ ನಿಶೆಯೊಳಾ ಧರಾನಂದನೆಯ ನೋಡಿ (ವೆಂಕಾರಾ. ೫–೧–೨) ; ಮಂಥರೆಯ ಬಾಳ್‌ನಿಶೆಗೆ ಶಶಿಯುದಿಸಿದಂತಾಯ್ತು (ಶ್ರೀರಾಮಾ. ೨೩–೬೧೯). ೨. ಕತ್ತಲೆ ; ಅಂಧಕಾರ. ೩. ಅರಿಸಿನ ; ಹರಿದ್ರ : "ನಿಶಾಖ್ಯಾ, ಕಾಂಚನೀ, ಪೀತಾ, ಹರಿದ್ರಾ, ವರವರ್ಣಿನೀ—೫ ಅರಿಸಿನದ ಪೆಸರುಗಳು" (ಸಿದ್ಧಾಂತಿ. ೨೮೫) ; ಸವನಾಗಿ ಕೊಂಡು ಧೂಪಿಸುಗೆ ವಿಳಂಗಂ ಮಹಿಷಿ ಮತ್ಸ್ಯಮಾಂಸಂ ನಿಶೆ ಸಾಸಿವೆಯುಂ ಮತ್ತಿಯ ಪೂವೆಂಬಿವಱಿಂ ತರು ನಿರುಜವಾಗಿ ಫಳದೊಳ್ ನೆರೆ(ಱೆ)ಗುಂ (ಲೋಕೋಪ. ೬–೧೨) ; ನಿಶಾ, ಅರಸಿನ (ಪ್ರತಿಷ್ಠಾ. ೭–೨೬). [ಸಂ. ನಿಶಾ]
**ನಿಶೆ**$_2$ 'ನಶೆ' ನೋ.
**ನಿಶೇಶ** (ನಾ). ರಾತ್ರಿಯ ಒಡೆಯ ; ಚಂದ್ರ : ಸುತೆಯರ್ ಪುಟ್ಟುವ ರಂತಾಶ್ರಿತರೊಳ್ ಬಲ್ಲಿದರೊಳೊಂದುಗುಂ ವೈರಂ ನಿಸ್ವತೆ ಕೀರ್ತಿಹಾನಿ ಬಹುನಿದ್ರತೆ ದೊರೆಕೊಳ್ಗುಂ ನಿಶೇಶನವರೋಹಿಣಿಯೊಳ್ (ಜಾತತಿ. ೯–೨೦).
[ಸಂ.]
**ನಿಶೇಶಶೇಖರ** (ನಾ). ಚಂದ್ರನನ್ನು ಮುಡಿಯಲ್ಲಿ ಧರಿಸಿದವನು ; ಚಂದ್ರಶೇಖರ ; ಶಿವ : ಆ ಸಮಯದಂಧಕಾಸುರನ ಸೀಳ್ದ ಪಟುತರ ನಿಶೇಶಶೇಖರನು ಬೆಳಬೆಳಗುತ್ತ ಬಂದಂತೆ (ನಪಮೋ. ೧೪–೨೭).
[ನಿಶೇಶ + ಶೇಖರ]
**ನಿಶ್ಚಂಚಲ** (ಗು). ಸ್ಥಿರವಾದ ; ಅಚಲವಾದ; ದೃಢವಾದ. [ಸಂ.]
**ನಿಶ್ಚಂಚಲಿತ** (ಗು). = ನಿಶ್ಚಂಚಲ : ನಿಚ್ಚ ಸಾವಿರಜಂಗಮಂಗಳಿಗೆ ಪಂಚವಿಧ ಪಕ್ವಾನ್ನಪಾನಾದ್ಯಂಚಿತಿಷ್ಟಾರ್ಥಂಗಳಂ ನಿಶ್ಚಂ[ಪಾಠಾಂ. ನಿಃಸಂ] ಚಲಿತಮತಿಯಿಂದೆ ನೀಡುತ ವರ್ತಿಸುತ್ತಿರಲು (ಬಸವು. ೨೪–೩).
[ಸಂ.]
**ನಿಶ್ಚಕ್ರನಿರಾಹಾರ** (ನಾ). ಸಂಪೂರ್ಣವಾದ ಉಪವಾಸ ; ಒಂದು ತೊಟ್ಟು ನೀರೂ ಕುಡಿಯದೆ ಮಾಡುವ ಉಪವಾಸ ; ನಿಟ್ಟು ಪವಾಸ: ಅಂದು ಏಕಾದಶೀ ಆದ್ದರಿಂದ ನನಗೆ ನಿಶ್ಚಕ್ರನಿರಾಹಾರವೆಂದು ಗುಳಿಗೆ ಉರುಳಿಸಿದೆ (ಡೇಕನ್ನೆ. ೧೦೪). [ಸಂ.]
**ನಿಶ್ಚಟೆ** 'ನಿಚ್ಚಟ$_2$' ನೋ.
**ನಿಶ್ಚಯ** (ನಾ). ೧. ನಿಜ ; ಸತ್ಯ ; ದಿಟ : [ಪರಿರ]ಕ್ಷಿಸಿದೀ ಸ್ಥಾನ ಕ್ಕೆರಡಂ ಬಗೆದಳಿ(ಱಿ)ದವಂಗೆ ನಿಶ್ಚಯದಿಂ ಕೇಳಿರೆ ವಾರಣಾಸಿಯೊಳ್

ಪಾ ××× ಕವಿಲೆಯುಂಮನಟಿಿದ ಪಾಪಂ ಸಾರ್ಗು೯ಂ (ಎಇ. XXVIII, ೫–೬೩ ; ಸು. 1082) ; ಅನ್ಯರ ಮನೆಗೆ ಹೋಗಿ ತನ್ನುದರವ ಹೊರೆಯುದ ಅಚ್ಚಶರಣರ ಕಂಡರೆ ನಿಶ್ಚಯವಾಗಿ ಕೂಡಲಸಂಗಯ್ಯನೆಂಬೆನು (ಬಸವ. ೭೫೮) ; ಮತ್ತೆ ಕೇಳ್ನಿಶ್ಚಯವುಯೇಳದು ಪುತ್ರ ಅರಿ ಮೌನವದು ಯೆಂಟಿದು ಅತ್ಯಧಿಕಮಹಕ್ಷಮವುಯೆಂವೆನಿಸುವದು (ಜ್ಞಾನಸಿಂ.೨೬–೫) ; ದೇವರಿಗೆ ಕನಿಕರ ಹುಟ್ಟಿ ಆತನು ತಮ್ಮ ಅಪರಾಧಗಳನ್ನು ಕ್ಷಮಿಸುವ ನೆಂದು ನಿಶ್ಚಯವಾಗಿ ತಿಳಿದುಕೊಳ್ಳಿರಿ (ಮುಂಬಯಿ. ೪–೮೬) ; ನಿಶ್ಚಯಕ್ಕೆ ಪಕ್ಷಪಾತವೇ ? (ಗಾದೆ). **೨.** ದೃಢವಾದ ಭಾವನೆ ; ಖಚಿತವಾದ ಅಭಿಪ್ರಾಯ ; ಸ್ಥಿರವಾದ ನಿರ್ಣಯ : “ನಿಶ್ಚಿಂತ ನಿಯತಮೆನೆ ನಿಶ್ಚಯಮದು” (ಮಂಗರಾ. ೧೨೯–೧೩) ; ನಚ್ಚು ಮಚ್ಚಿಂಗೆ ಪೂಜಿಸಿ ನಿಶ್ಚ[ಪಾಠಾಂ. ಚ್ಚ]ಯವೆಂದೆನಲಿಲ್ಲ . . . ಅಂಗದಲ್ಲಿ ಸಂಗಿಯಲ್ಲ ಸಂಗದಲ್ಲಿ ವ್ಯಸನಿಯಲ್ಲ ಅಂಗವಿಲ್ಲದ ಸಂಗ ಗುಹೇಶ್ವರ ನಿಮ್ಮ ಶರಣ (ಅಪಚಂ. ೮೧–೩೬೬). **೩.** ಮನೋವೃತ್ತಿಯ ನಾಲ್ಕು ವಿಧ ಗಳಲ್ಲಿ ಒಂದು : ಜೀವಾತ್ಮ ಪರಮಾತ್ಮರನ್ನು ಆಶ್ರಯಿಸಿಕೊಂಡಿರುವ ದ್ರವ್ಯವು ಜ್ಞಾನ. ಇದು . . . ವಿಷಯಸಂಬಂಧದಿಂದ ಸಂಶಯ ನಿಶ್ಚಯ ಪ್ರತ್ಯಕ್ಷ ಪರೋಕ್ಷ ಮೊದಲಾದ ವಿಭಾಗವನ್ನು ಹೊಂದುವುದ ರಿಂದ ದ್ರವ್ಯವೆಂದೂ ಕ್ಷಣಿಕವೆಂದೂ ಹೇಳಲ್ಪಡುವುದು (ಹಿಂದಸಾ. ೨೩೯); ವೃತ್ತಿಯು ಸಂಶಯ, ನಿಶ್ಚಯ, ಗರ್ವ ಮತ್ತು ಸ್ಮರಣ ಎಂದು ನಾಲ್ಕು ವಿಧ (ಭಾತತ್ತ್ವ. ೫೮೮). **೪.** = ನಿಶ್ಚಯತಾಂಬೂಲ.

**ನಿಶ್ಚಯಪಡಿಸು** = ದೃಢಪಡಿಸು ; ಸ್ಥಿರೀಕರಿಸು : ಕಾಲ್ಡ್ವೆಲ್ಲನು . . . ಪೋಪನ ಹೇಳಿಕೆಗಳಲ್ಲಿದ್ದ ಒಂದೆರಡು ಮಾತುಗಳನ್ನು ಇನ್ನೂ ನಿಶ್ಚಯಪಡಿಸಿದನು (ದ್ರಾವಿವಿ. ೧೯). **ನಿಶ್ಚಯ ಮಾಡು** = ನಿಶ್ಚಯಿಸು ; ನಿರ್ಧರಿಸು : ನೆಂಟರಲ್ಲಿಗೆ ಹೋಗಿದ್ದ ಕಾಳ ಮದುವೆಯ ದಿನವನ್ನು ನಿಶ್ಚಯ ಮಾಡಿ ಅದೇ ದಾರಿಯಲ್ಲಿ ಬರುತ್ತಾ ಬಿದ್ದ ಬೋಳನನ್ನು ಕಂಡು . . . ಕರೆದು ತಂದನು (ಕಾಲೂರ. ೧೧ ಕಥಾಸಾರ). **ನಿಶ್ಚಯ ಹಾಕು** = (ಮದುವೆಯನ್ನು) ನಿರ್ಧರಿಸು,—ನಿರ್ಣಯ ಮಾಡು ; ನಿಶ್ಚಿತಾರ್ಥ ಮಾಡು : ಭೀಮ್ಯನ ಹೆಂಡತಿ ಸತ್ತು ಇನ್ನೂ ಏಳುದಿನ ಆಗಿಲ್ಲ. ಆಗಲೆ ನಿಶ್ಚಯ ಹಾಕಿದರಂತ (ತಿಡುಗು. ೩೨). [ಸಂ.]

**ನಿಶ್ಚಯಂಗೆಯ್** (ಕ್ರಿ). ನಿರ್ಣಯಿಸು ; ಖಚಿತವಾಗಿ ನಿರ್ಧಾರ ಮಾಡು : ಚೆಚ್ಚರಮೆನ್ನೀ ಪ್ರಾಣಮಂ ತಾಂ ಬಿಡದಿರೆನೆನುತಂ ನಿಶ್ಚಯಂಗೆಯ್ದಳ್ (ಕಾದಂಪೂ. ೯೭೮) ; ಬರವೇಟಿದ್ಧಾತ್ರೀಯ ಮಂತ್ರಿ ಪ್ರಮುಖರನವರೊಳ್ ನಿಶ್ಚಯಂಗೆಯ್ದು ಧಾತ್ರೀಭರಮಂ ಕೊಟ್ಟಾತ್ಮಜನ್ಮಂಗಧಿಕವಿಭವದಿಂ ಪಟ್ಟಮಂ ಕಟ್ಟಿ (ಅಜಿಪು. ೨–೧೧೬) ; ಜೀವಾದಿ ಪದಾರ್ಥತತ್ವಂಗಳಂ . . . ಪಿರಿದುಮಬ್ಬಿಜಿಶೊಳ್ ನಿಶ್ಚಯಂಗೆಯ್ವು ದೆಂಬುವುದು ಸಮ್ಯಗ್ದರ್ಶನವೆಂಬುದಕ್ಕುಂ (ಸುಕುಮಾ. ೬–೮ ಪ).
[ನಿಶ್ಚಯ + ಕೆಯ್$_1$]

**ನಿಶ್ಚಯಂಬಡೆ** (ಕ್ರಿ). ನಿರ್ಧಾರವನ್ನು ಹೊಂದು ; ನಿರ್ಧಾರಕ್ಕೆ ಬರು ; ಸ್ಥಿರತೆಯನ್ನು ಪಡೆ : ಪರಿಣಾಮತೆಯನೆಯ್ದಿ ನಿಶ್ಚಯಂ ಬಡೆವುದು ಮಹಾಲಿಂಗದ ವಿಷಯ (ಆದಸ. ೧೯೩–೩೫೧).
[ನಿಶ್ಚಯ + ಪಡೆ$_1$]

**ನಿಶ್ಚಯಗುಣ** (ನಾ). **೧.** ನಿರ್ಧಾರವಾದ ಗುಣ ; ವ್ಯತ್ಯಾಸಕ್ಕೆ ಒಳಗಾಗದ ಸ್ವಭಾವ. **೨.** ನಿರ್ಧಾರವಾದ ಗುಣವುಳ್ಳವನು : ನಿಶ್ಚಯಗುಣರೊಳರೆಂಬುದಿದಾಶ್ಚರ್ಯಂ ಭರತಭೂಮಿಯೊಳ್ (ಧರ್ಮಾಮೃ. ೪–೭೨). [ನಿಶ್ಚಯ + ಗುಣ]

**ನಿಶ್ಚಯಗುಣಿ** (ನಾ). ನಿರ್ಧಾರವಾದ ಗುಣವುಳ್ಳವನು : ನಿಶ್ಚಯ ಗುಣರೊಳರೆಂಬುದಿದಾಶ್ಚರ್ಯಂ ಭರತಭೂಮಿಯೊಳ್ ಸುರಪತಿ ತಾಂ ನಿಶ್ಚಲ[ಯ]ಗುಣಿಗಳನಲ್ಲದೆ ದುಶ್ಚರಿತರನಘಸಮೇತರಂ ಪೊಗಟ್ದಪನೇ (ಧರ್ಮಾಮೃ. ೪–೭೨). [ಸಂ. ನಿಶ್ಚಯಗುಣಿನ್]

**ನಿಶ್ಚಯತಾಂಬೂಲ** (ನಾ). ಮದುವೆಯನ್ನು ನಿರ್ಧಾರ ಮಾಡಿದ ಮೇಲೆ ಮಾಡುವ ಶಾಸ್ತ್ರ ; ನಿಶ್ಚಿತಾರ್ಥ ; ಕಡಲೆಬೆಲ್ಲ ; ಗಟ್ಟಿ ಗಡುಬು (ಕರಾ) ; ಸಕ್ಕರೆಕಾರಣ (ಉಕ) : ದೇವ ಕೇಳ್ನಮ್ಮ ನಂದನ ಸೌಂದರೇಶಗೆ ನಾವಿತ್ತೆ ಮೆಮ್ಮ ಪುತ್ರಿಯನೆನೆ ಆ ವೇಳೆಯೊಳೆ ನಿಶ್ಚಯ ತಾಂಬೂಲವ ನಾ ವಿನಯದೊಳಿತ್ತು ಬೀಳ್ಕೊಂಡೆ (ತ್ರಿಭುತಿ. ೨೧–೫೮).
[ನಿಶ್ಚಯ + ತಾಂಬೂಲ]

**ನಿಶ್ಚಯನಯದೃಷ್ಟಿ** (ನಾ). [ಜೈನ] ದಾರ್ಶನಿಕರ ಎರಡು ದೃಷ್ಟಿಕೋನಗಳಲ್ಲಿ ಒಂದು ; ಜೀವಸ್ವರೂಪದ ಗುಣಗಳನ್ನು ವಿಮರ್ಶಿಸುವ ದೃಷ್ಟಿ ; ☞ ಸುವರ್ಣವು ಒಂದು ಮೂಲದ್ರವ್ಯ. ಅದರ ಗುಣ, ಸ್ವರೂಪಗಳನ್ನು ವಿವರಿಸುವ ದೃಷ್ಟಿ ನಿಶ್ಚಯ ದೃಷ್ಟಿ. ಸುವರ್ಣದಿಂದ ನಿರ್ಮಿತವಾದ ಆಭರಣಗಳ ಗುಣ, ಸ್ವರೂಪಗಳ ವಿವೇಚನೆಯೆ ವ್ಯವಹಾರದೃಷ್ಟಿ. ಹೀಗೆಯೇ ಆತ್ಮ ತತ್ವದಲ್ಲಿ ಮೂಲದ್ರವ್ಯದ ವಿಚಾರ ಹೇಳುವುದು ನಿಶ್ಚಯನಯ ದೃಷ್ಟಿ. ಆತ್ಮ ಕರ್ಮಗಳ ಸಂಯೋಗದಿಂದ ಜೀವ ಪರ್ಯಾಯಗಳ ವಿಷಯವನ್ನು ಹೇಳುವುದು ವ್ಯವಹಾರನಯ ದೃಷ್ಟಿ : ಜೀವದ ಸ್ವರೂಪವನ್ನು ವಿವರಿಸುವಾಗ ಜೈನದಾರ್ಶನಿಕರು ಎರಡು ದೃಷ್ಟಿಕೋನ ಗಳನ್ನು ಇಟ್ಟುಕೊಂಡಿದ್ದಾರೆ. ಒಂದು ನಿಶ್ಚಯನಯದೃಷ್ಟಿ, ಇನ್ನೊಂದು ವ್ಯವಹಾರನಯ ದೃಷ್ಟಿ (ಜೈನಪ. ೨೮೪). [ಸಂ.]

**ನಿಶ್ಚಯಬುದ್ಧ** (ನಾ). ಬುದ್ಧಿವಂತ ; ಜ್ಞಾನಿ ; ಪ್ರತಿಭಾವಂತ : ದಿವಿಜೇಜ್ಯಂ ನಿಲೆ ಜನ್ಮಲಗ್ನಗೃಹದೊಳ್ ಪ್ರಾಜ್ಞಂ . . . ತನೂಭವ ದೊಳ್ ನಿಶ್ಚಯಬುದ್ಧಂ (ಜಾತತಿ. ೧೪–೧೧). [ನಿಶ್ಚಯ + ಬುದ್ಧ]

**ನಿಶ್ಚಯಬುದ್ಧಿ** (ನಾ). ದೃಢವಾದ ಬುದ್ಧಿ : ಇಂತಪ್ಪ ನಿಶ್ಚಯ ಬುದ್ಧಿಯೊಳಪಗತಚಿಂತಾತುರ ತನ್ನ ತಾನೆ ಸಂತವಡಿಸಿ ನಾಲ್ದೆಸೆಯ ನೋಡುತ ಕಂಡನಂತಲ್ಲಿರ್ದ ದೇಗುಲವ (ಶ್ರೀಪಾಲ. ೬–೪೯) ; ನಿಶ್ಚಯ ಬುದ್ಧಿಯುಳ್ಳವನು ಎಂದಿಗೂ ಅಳಿಯುವುದಿಲ್ಲ (ಶಕ್ತಿವಿ. ೧೦೩).
[ನಿಶ್ಚಯ + ಬುದ್ಧಿ]

**ನಿಶ್ಚಯಶಕ್ತಿ** (ನಾ). ನಿರ್ಧಾರಕ ಶಕ್ತಿ ; ನಿರ್ಣಯಿಸುವ ಸಾಮರ್ಥ್ಯ : ಬೆಟ್ಟದ ಮೇಲೆ ಹೊಗೆಯನ್ನು ನೋಡಿ ಅಲ್ಲಿ ಬೆಂಕಿ ವುಂಟೆಂದು ತಿಳಿಯುವುದೇ ನಿಶ್ಚಯಶಕ್ತಿ (ಅನಂಶ. ೧೬–೬೫).
[ನಿಶ್ಚಯ + ಶಕ್ತಿ]

**ನಿಶ್ಚಯಿಸು,** ನಿಶ್ಚಯ್ಸು, ನಿಶ್ಚೈಸು (ಕ್ರಿ). **೧.** ತೀರ್ಮಾನಿಸು ; ನಿರ್ಧರಿಸು ; ದೃಢವಾದ ಅಭಿಪ್ರಾಯಕ್ಕೆ ಬರು ; ಖಚಿತವಾದ ತೀರ್ಮಾನಕ್ಕೆ ಬರು : ತನ್ನಯ ತಂದೆಯೆಂದುದನೆ ಕೊಟ್ಟು ವಿವಾಹ ಮನಿಂದೆ ಮಾಡುವೆಂ ಎಂದು ನಿಶ್ಚಯಿಸಿ ಗಾಂಗೇಯಂ ದಾಶರಾಜನಲ್ಲಿಗೆ ವಂದು (ಪಂಪಭಾ. ೧–೭೨ ಪ) ; ಈಗಳ್ . . . ಪಿಂಗಳಕನಲ್ಲಿಗುಯ್ವೆ ನೆಂಬುದನೆ ನಿಶ್ಚಯಿಸಿ ಸಂಜೀವಕಂಗಿಂತೆಂದಂ (ಪಂಚತಂ. ೫೪–೬) ; ಉಳಿದ ಚತುರ್ವಿಧಾಹಾರಂ ಕೇವಲಿಗಿಲ್ಲೆಂದು ನಿಶ್ಚಯಿಸುವುದು (ಶಾಸ್ತ್ರಟೀ. ೯೭–೬) ; ಧರಣಿಪನ ನಿಜಾಗೆಯಲಿ ಕಂದನ ಮರಣವನು ನಿಶ್ಚಯಿಸಿ ಪ್ರಳಯದ ಹರನ ಕೋಪವ ಕೇಣಿಗೊಂಡನು ತನ್ನ ಚಿತ್ತದಲಿ (ಕುಮಾರದ್ರೋ. ೮–೧೪) ; ದೇವರೊಬ್ಬನಿದ್ದಾನೆಂದು ಬಲ್ಲವರು ನಿಶ್ಚಯಿಸಿ ದ್ದಾರೆ (ಮುಂಬಯಿ. ೪–೫೯). **೨.** ಗೊತ್ತುಪಡಿಸು ; ಖಚಿತ ಪಡಿಸು : ಮಾಯಾವಿ ನುಡಿದ ನಸುಮಾತಿಗೆ ನಿಶ್ಚಯಿಸಿದ ಪಯಣವ ನುಷೆಯ ತಾತ್ಪರ್ಯದುಬ್ಬಿನಲಿ ಸಂತಸವಡೆದು ತತ್ಕುವರನ ಮೂರ್ತಿಯ ನಾಂತಳು ಬೆನ್ನ ಭಾಗದಲಿ (ಮೋಹತ. ೩೧–೨೫) ; ಆ ದಾನಗಳನ್ನು

ಕೊಟ್ಟುದೇತಕ್ಕೆ. . .ನಿಶ್ಚಯಿಸಿದ್ದ ಪ್ರಯಾಣವು ಸುಗಮವಾಗಿ ನಡೆಯ ಲೆಂದು (ಚೆಂಗಾಳ್ವ. ೧೪೧). **೩.** ನಂಬು ; ನಚ್ಚು: ಮಹಾದಾನಿ ಕೂಡಲಸಂಗಮದೇವನ ಪೂಜಿಸಿ ಬದುಕುವೋ ಕಾಯವ ನಿಶ್ಚಯಿಸದೆ (ಬಸವ. ೧೬೨). **ನಿಶ್ಚಯಿಸ್ಸು :** **೧.** ರಕ್ಕಸಮಣಿಯ ಕೋಣೆಯ ಗಂಗನ ಕಾಳೆಗದೊಳ್ತನ್ನ ಸಾವಂ ನಿಶ್ಚಯಿಸ್ಸಿ (ಎಕ. II, ೧೩೪-೪ ; ಸು. 940). **ನಿಶ್ಚೈಸು :** **೧.** ತಲೆಯಂ ಬಾಗಿ ನೆಲನಂ ಬರೆಯುತ್ತುಮಿರ್ದ ವೀರಭಟರುಮಂ ಕಂಡು ಮಗನ ಸಾವಂ ನಿಶ್ಚೈ[ಪಾಠಾಂ.ನಿಶ್ಚಯಿ]ಸಿ ರಾಜ ಮಂದಿರಮಂ ಪೊಕ್ಕು (ವಂಚಭಾ. ೧೧-೧೧೫ ವ) ; ಬಲ್ಪಿನಿಂ ದೇವಿಯ ಪಾದಮೂಲಮನೆಯ್ದಿಸಲುಂ ಸಾಲ್ವುವೆಂದು ನಿಶ್ಚೈಸಿ(ಕಾದಂಊ. ೪೦೪) ; ಭರದಿಂ ಸುಜ್ಜನೆ ಸುಯ್ಯೆ ಸೂಗುಜುಸೆ ಕಣ್ಬಕ್ಕಾಲಿಗಳ್ ಬೀಟಿಕೆ ಮೆಯ್ಯರ್ ಮರವಟ್ಟಂತಿರೆ ನೋ(ಡಿ)ಡೆ ಪೇಟಿರ್ ನರಡಿದಾಯ್ತೆಂದೆಂದು ನಿಶ್ಚೈಸಿ (ಲೋಕೋಪ. ೯-೨೦೭) ; ಧೌವಮ್ಯಾದಿ ಸುಜನವ್ರಾತ ನಿಶ್ಚೈಸಿದರು ಮನದಲಿ ಧರ್ಮನಿರ್ಣಯವ (ಕುಮ್ಯಾಅ. ೨೨-೩೯). **೨.** ಪುಂಡರೀಕಿಣಿಗೆ ಪಯಣಂಬೋಗಲ್ ನಿಶ್ಚೈಸಿದಂ ಧರಣೀಶ್ವರಂ (ಆದಿಪು. ೪-೯೦) ; ಮಱು ದಿವಸಂ ಪಯಣಮೆಂಬುದನಲ್ಲಿಯೆ ನಿಶ್ಚೈಸಿ ನಿಜರಾಜಭವನಕ್ಕೆ ಬಿಜಯಂ ಗೆಯ್ದು (ಕಾದಂಊ. ೪೯೯). **೪.** ನಿರ್ಧಾರಗೊಳ್ಳು : ಜ್ಞಾತೃ ಜ್ಞಾನ ಜ್ಞೇಯ ಸಂಪುಟವಾಗಿ ಅಱಿವು ನಿಶ್ಚೈಸಿ [ಪಾಠಾಂ. ನಿರ್ಣಯ, ನಿರ್ಣಯಿಸಿ] ನಿಷ್ಪತ್ತಿಯಾಗಿ ಕುಱುಹುಗೆಟ್ಟಲ್ಲಿ ಲಿಂಗಕ್ಕೆ ಆ ಅಱಿವೆ ಅರ್ಪಿತ (ಚನ್ನಪ. ಕ. ೬೪೧-೧೪೩೯). [ನಿಶ್ಚಯ + -ಇಸು₃]

**ನಿಶ್ಚಯಿಸ್ಸು** 'ನಿಶ್ಚಯಿಸು' ನೋ.

**ನಿಶ್ಚರತೆ** (ನಾ). ಸ್ಥಿರತೆ ; ನಿಶ್ಚಲತೆ : ಹರಸಿದರು ಲೇಸಾಗಲೋ ನಿಶ್ಚರತೆಯಲಿ ದೀರ್ಘಾಯುವಾಗೆಂದು (ತೊರಂಪಾ. ೫-೮-೭೨).

[ಸಂ. ನಿಶ್ಚರತಾ]

**ನಿಶ್ಚಲ,** ನಿಶ್ಚಳ (ಗು). **೧.** ಚಲಿಸದೆ ಇರುವ ; ದೃಢವಾದ ; ಸ್ಥಿರವಾದ. 'ನಿಶ್ಚಲಪ್ರದೀಪ' ಪರಾ. (ನಾ). **೨.** ಚಲನೆಯಿಲ್ಲದುದು ; ಸ್ಥಿರವಾದುದು : ಮುತ್ತಿಗೆಯ ಜಂಬುಕ ಖಗಾಳಿಯ ಚಿತ್ತ ನಿಶ್ಚಲವಾಯ್ತು (ಕುಮ್ಯಾಭೀ. ೫-೨೯) ; ನೀವು ಭಕ್ತದೇಹಿಕನೆಂಬುದು ಎನಗೆ ನಿಶ್ಚಲವಾಗಿ ಕಾಣಬಂದಿತ್ತು (ಅಖಂಡೇ. ೧೪೯-೧೪೭) ; ಭೀಷ್ಮನ ನಿಶ್ಚಲವಾದ ಮನಸ್ಸನ್ನು ತಿರುಗಿಸುವುದಕ್ಕಾಗುವುದಿಲ್ಲವೆಂದು ಅಂಬೆಗೆ ಹೇಳಿ ಪರಶುರಾಮರು ತಪಸ್ಸಿಗೆ ಹೊರಟುಹೋದರು (ನೀತಿಚಿಂ. XIV, ೨೭); ಪೃಥಿವಿಪತಿ ಮಂಕುಗಣ್ಣಿಂ ದಿಟ್ಟಿಸಿರ್ದನು ಶವಾಕೃತಿಯೋಲ್ ನಿರ್ಜೀವವೆನೆ ನಿಶ್ಚಲಂ (ಶ್ರೀರಾಮಾ. ೧೧೧-೩೪). **೩.** ಅಲುಗಾಡದುದು ; ಕದಲದುದು ; ಗಿರಿ ; ಪರ್ವತ. **೪.** ಭೂಮಿ. **೫.** ಅಲುಗಾಡದೆ ಇರುವ ವ್ಯಕ್ತಿ ; ಚಂಚಲತೆಯಿಲ್ಲದ ವ್ಯಕ್ತಿ : ಅಲಘುಭುಜನಾಗಿಯುಂ ನಿಶ್ಚಲನಾಗಿಯುಮಖಿಳಭೂಭೃದುತ್ತುಂಗತೆಯೊಳ್ ನೆಲಸಿಯುಮೆಯ್ದುದು ನಿನ್ನಾ ವಿಲಸಿತಮಂ ಮೇರು ಕಠಿನಭೋಗಾಧಾರಂ (ಕವಿರಾ. ೩-೪೩) ; ನೆಲವನ್ನೇ ದಿಟ್ಟಿಸುತ್ತ ನಿಶ್ಚಲಳಾಗಿ ಕುಳಿತಿದ್ದಳು (ಪುನರು. ೧೩೭). **೬.** ಚಂಚಲತೆಯಿಲ್ಲದವನು ; ಮನೋನಿಗ್ರಹಿ ; ತಪಸ್ವಿ; ಸಂಯಮಿ: ಚಲದಿಂದಂ ನಗರಾಜಪುತ್ರಿ ಹೃದಯಾಬ್ಜಾವಾಸದೊಳ್ ಭಾವು ನಿಶ್ಚಲನಂ ನಿರ್ಮಳನಂ . . . ನಿಲಿಸುತ್ತೆ (ಗಿರಿಕ. ೯-೧೧) ; ನಿಗಮ ವಿಶಾಲನುತ ನಿಶ್ಚಲ ನಿಜಾತ್ಮ . . . ಶೂಲಧರ ಶ್ರೀಮಲ್ಲಿಕಾರ್ಜುನ ಸಲಹು ಮೂಜಗವ (ಅಮೃತ. ೧-೫೪); "ಇಳಾಚಲ ಸಂಯಮಿ ನಿಶ್ಚಲಾಂಕಿತಂ" (ನಾನಾರ. ೪೭). **ನಿಶ್ಚಳ :** **೫.** ಬಿಳಿಯ ಮುಗಿಲ್ಗಳ ಪಟಳಾವಳಿಯೊಳ್ ದಿಕ್ಪಾಳರುಂ ಸುರೇಂದ್ರರುಮೇಂ ನಿಶ್ಚಳರಾಗಿರ್ದರೆನಲ್ಕಾ ಕಳ ಧೌತವಿಶಾಳಮಪ್ಪ ಚೌಪಳಿಗೆಗಳೊಳ್ ಬಂದಿರ್ಪುದುಂ (ನೇಮಿಪು. ೯-೭೯). **೬.** ನಿಶ್ಚಳರುಂ ಪ್ರಣೂತಬಲರುಂ ತಾಮಾಗಿ ಲೋಕಾಗ್ರದೊಳ್ ತೊಳಗುತ್ತಿರ್ಪ ವಿಶುದ್ಧ ಸಿದ್ಧರೆಮಗೀಗಾತ್ಮೋದಯಪ್ರಾಪ್ತಿಯಂ(ಜೀವಸಂ. ೨-೭೨) ; ನಿಶ್ಚಳ[ಪಾಠಾಂ. ಲ] ನಿರಾಕುಳ . . . ರುದ್ರನಿರುತಿರ್ಪನು ವಿನೋದದಲಿ (ಪ್ರಭುಲೀ. ೨-೯). **[ಸಂ.]**

**ನಿಶ್ಚಲತೆ,** ನಿಶ್ಚಳತೆ (ನಾ). ಅಚಲವಾಗಿರುವಿಕೆ ; ದೃಢತೆ ; ಸ್ಥಿರವಾಗಿರುವಿಕೆ : ಇದೇಂ ಕಳಕಳಮೆನ್ನ ಭಕ್ತನಿವನೀತನೊಳಾಂಪ ವಿನೋದ ಮುಂಟು ನಿಶ್ಚಲ[ಪಾಠಾಂ.ಳ]ತೆಯೊಳಿರ್ಪುದೆಂದವರ್ಗೆ ನೇಮಿಸಿದಂ ಕರುಣಾಬ್ಧಿ ಶಂಕರಂ (ಶಬಶಂ.೪-೪೬) ; ಅರ್ಜುನರೂಪದಿ ಮುಂಚ್ಚಿ ಮಹಿಮೆಯ ನಿಶ್ಚಲತೆಯಿಂದಿರುವೆಯಾದರು ನೆಚ್ಚಲಾರೆನು ಕೃಷ್ಣ ನಿನ್ನನು (ನೀಸಾರಾ. ೭೬-೧). **ನಿಶ್ಚಳತೆ :** ದಿಗಿಭಕುಂಭಮಿದೆಂದು ಧರಿತ್ರಿ ಬಂದು ನಿಶ್ಚಳತೆಯಿನಿರ್ಪಳಲ್ತೆ ಭುಜಮಂಡಳದೊಳ್ ವಸುಧಾಧಿನಾಥನಾ (ಚಂದ್ರಪು. ೨-೨೧). [ಸಂ. ನಿಶ್ಚಲತಾ]

**ನಿಶ್ಚಲತ್ವ**(ನಾ). =ನಿಶ್ಚಲತೆ : ನಿಶ್ಚಲತ್ವವು ಚಲನೆಯ ಒಂದು ಸಂದರ್ಭ ಅಥವಾ ಉದಾಹರಣೆ ಮಾತ್ರ (ಭೌತವಿ. ೨೭). **[ಸಂ.]**

**ನಿಶ್ಚಲನೆ** (ನಾ). =ನಿಶ್ಚಲತೆ : ನೀವು ವಿಕಳತೆಯಿಂದ ಭ್ರಮಿಸಲಿನಿತಾಯ್ತು ನಿಶ್ಚಲನೆಯಿಂಡಿ ಮನದೊಳೀಗ (ನಮೋ. ೮-೫೦).

[ಸಂ. ನಿಶ್ಚಲನಾ]

**ನಿಶ್ಚಲಪ್ರದೀಪ** (ನಾ). ಚಲನೆಯಿಲ್ಲದ ಜ್ಯೋತಿ ; ಅಲುಗಾಡದ ದೀಪ : ಆ ಭುವನತ್ರಯವಿಜಯಿಯಪ್ಪ ರೂಪಾತಿಶಯದೊಡನಮಳ್ದಳೆದಂತೆ ಬಳೆದ ನಿಸರ್ಗ ಶೌಚಾದಿ ಗುಣಂಗಳಿಂ ಬಿಣ್ಣಂಡಿಕ್ಕಿದ ಭೈತ್ರಮುಮಂ ನಿಶ್ಚಲಪ್ರದೀಪಪವಿತ್ರಪ್ರದೀಪಮುಮಂ ಪೋಲ್ತು (ಶಾಂತಿಪು. ೧೦-೯೨ ವ). [ನಿಶ್ಚಲ+ಪ್ರದೀಪ]

**ನಿಶ್ಚಲಾಂಗ,** ನಿಶ್ಚಳಾಂಗ (ನಾ). **೧.** ಮಿಸುಕಾಡದ ದೇಹ ; ಅಚಲವಾದ ಶರೀರ : ಅರೆಮುಗುಳ್ದಕ್ಷಿಗಳ್ ಮಿಡುಕುಗುಂದಿದ ಚೆಂದುಟಿ ನಿಶ್ಚಲಾಂ[ಪಾಠಾಂ.ಳಾಂ]ಗಮುರ್ವರೆಯೊಳೆ ತಳ್ತ ಕಾಲ್ದುದಿ . . . ಒಪ್ಪೆ ಪೊಸವೇಷದ ತಾಪಸನೊಪ್ಪಿ ತೋಱಿದಂ (ಶಬಶಂ. ೨-೭೯). **೨.** ಚಲಿಸದೆಯಿರುವ ಅವಯವಗಳನ್ನು ಹೊಂದಿರುವವನು. **ನಿಶ್ಚಳಾಂಗ :** **೧.** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ನಿಶ್ಚಲ+ಅಂಗ₂]

**ನಿಶ್ಚಲಿತ,** ನಿಶ್ಚಳಿತ (ಗು). ಚಲಿಸದೆಯಿರುವ ; ಅಚಲವಾದ ; ಸ್ಥಿರವಾದ ; ದೃಢವಾದ : ಪೊಡವಿಯೊಳು ಮುನ್ನಿಂದು ಕಾಣಲ್ವಡೆದುದೀ ವೈಜಾಂಬಿಕೆಯ ನಿಶ್ಚಲಿತ ಶಿವಭಕ್ತಿ (ಬಸಪು. ೫೨-೨೭). **ನಿಶ್ಚಳಿತ :** ಮಳವಿಳಯನರೆನಿಸಿದ ಕೇವಳಿಗಳ . . . ನಿಶ್ಚಳಿತ ಶ್ರುತಕೇವಳಿಗಳ ಚಳನಂ ನಮಗಚಳಸುಖಮನೀಗನವರತಂ (ಚಂದ್ರಪು. ೧-೧೩) ; ಪಶ್ಚಿಮದಿಙ್ಮ್ಲೇಚ್ಛನೃಪತಿಗಳನೆಜಗಿಸಿದಂ ನಿಶ್ಚಳಿತಧೈರ್ಯಮೇರುವಿಪಶ್ಚಿನ್ನುತ ಕೀರ್ತಿ ಚಕ್ರಿಚರಣಾಂಬುಜದೊಳ್ (ಪಾರ್ಶ್ವಪು. ೧೧-೧೧೯) ; ಇಭಯೂಥಂ ಪರಿದತ್ತು ನಿಶ್ಚಳಿತಕರ್ಣಂ ಕ್ಷಿಪ್ರಹಸ್ತಂ ರದಪ್ರಭೆ ಚೆಲ್ವಾಗೆ ಮದಾಂಬು ಸೂಸೆ ಸಮರಕ್ರೀಡಾಮಹೋತ್ಸಾಹದಿಂ (ರಾಜಶೇ. ೬-೭೦).

[ಸಂ.]

**ನಿಶ್ಚಲಿತಚಿತ್ತೆ** (ನಾ). ದೃಢವಾದ ಮನಸ್ಸುಳ್ಳವಳು ; ಸ್ಥಿರವಾದ ಮನಸ್ಸುಳ್ಳವಳು : ಸಕಳಕಳೆಗಳನೊಚ್ಚತಂಗೊಂಡು ನಿಶ್ಚಳಿತ ಚಿತ್ತೆಯುಚ್ಚಾಸನಮನೇಱಿ ವಿಲಾಸಿನಿಯರ್ ಕೆಲಬಲದೊಳ್ ನೆಲಸುಗ್ಗಡಿಸೆ ಪುರಾಭಿಮುಖಿಯಾಗಿ ಬರುತ್ತುಮಿರೆ (ಗಿರಿಕ. ೪-೩೩ ವ).

[ಸಂ. ನಿಶ್ಚಲಿತಚಿತ್ತಾ]

**ನಿಶ್ಚಲೆ** (ನಾ). ಚಂಚಲೆಯಲ್ಲದವಳು ; ಸ್ಥಿರವಾಗಿರುವವಳು : ಭಾಸುರತೇಜಂ ಕಂಚುಕಿಯಂತಿರೆ ನಿಶ್ಚಲೆ ಮಾಡಿತಾ ನೃಪಶ್ರೀವಧುವಂ (ಚಂದ್ರಪು. ೩-೭೩). [ಸಂ. ನಿಶ್ಚಲಾ]

**ನಿಶ್ಚಳ** 'ನಿಶ್ಚಲ' ನೋ.

**ನಿಶ್ಚಳಚಿತ್ತ** (ನಾ). ೧. ದೃಢವಾದ ಮನಸ್ಸು. ೨. ದೃಢವಾದ ಮನಸ್ಸುಳ್ಳ ವ್ಯಕ್ತಿ : ಆದಿದೇವರ ಕುಂತಳಂಗಳುಂ ಬೆಳೆದು ಜಡೆಗಳಾಗೆ ನಿಶ್ಚಳಚಿತ್ತನಿರ್ಪನ್ನೆಗಂ (ಚಾವುಂಪು. ೬೮).
[ನಿಶ್ಚಳ (=ನಿಶ್ಚಲ) + ಚಿತ್ತ]

**ನಿಶ್ಚಳತನು** (ನಾ). = ನಿಶ್ಚಲಾಂಗ ೨ : ಲಲಿತಮುಖಸರಸಿಜಂ ನಿಶ್ಚಳಪಕ್ಷ್ಮಂ ಸ್ತಿಮಿತತಾರಕಂ ಭುಜಬಲಿ ಕಣ್ಗೆಳೊಳೆ ತವೆ ಪೀರ್ವವೊಲ್ನಿಶ್ಚಳತನು ನಡೆನೋಡೆ ಭರತರಾಜಂ ಸೋಲ್ತಂ(ಆದಿಪು. ೧೪-೧೦೫).
[ನಿಶ್ಚಳ(=ನಿಶ್ಚಲ) + ತನು]

**ನಿಶ್ಚಳತೆ** 'ನಿಶ್ಚಲತೆ' ನೋ.

**ನಿಶ್ಚಳಪಕ್ಷ್ಮ**(ನಾ). ೧. ಅಲುಗಾಡದ ಕಣ್ಣೆವೆ ; ಚಲನೆಯಿಲ್ಲದ ರೆಪ್ಪೆ. ೨. ಅಲುಗಾಡದ ಕಣ್ಣೆವೆಯುಳ್ಳ ವ್ಯಕ್ತಿ : ಲಲಿತಮುಖಸರಸಿಜಂ ನಿಶ್ಚಳಪಕ್ಷ್ಮಂ ಸ್ತಿಮಿತತಾರಕಂ ಭುಜಬಲಿ ಕಣ್ಗೆಳೊಳೆ ತವೆ ಪೀರ್ವವೊಲ್ನಿಶ್ಚಳತನು ನಡೆನೋಡೆ ಭರತರಾಜಂ ಸೋಲ್ತಂ (ಆದಿಪು. ೧೪-೧೦೫). [ನಿಶ್ಚಳ (=ನಿಶ್ಚಲ) + ಪಕ್ಷ್ಮ]

**ನಿಶ್ಚಳಲಕ್ಷ್ಮಿ** (ನಾ). ನೆಲೆಯಾಗಿ ನಿಂತ ಲಕ್ಷ್ಮಿ: ಮೈಲ[ಮಯಾ]ಕಮಾಂಬಿಕಾಸುತ ತದಮಾತ್ಯ [ಬೇ]ತ [ಹೃ]ದಯೇಶ್ವರಿ ನಿಶ್ಚಳಲಕ್ಷ್ಮಿ ಭಾವಿಸಲು (ಕಇಅ. ೮೧-೧೫-೫೫ ; 1117).
[ನಿಶ್ಚಳ (=ನಿಶ್ಚಲ) ಲಕ್ಷ್ಮಿ]

**ನಿಶ್ಚಳಾಂಗ** 'ನಿಶ್ಚಲಾಂಗ' ನೋ.

**ನಿಶ್ಚಳಿತ** 'ನಿಶ್ಚಲಿತ' ನೋ.

**ನಿಶ್ಚಿಂತ** (ಗು). ೧. ಚಿಂತೆಯಿಲ್ಲದ; ಸ್ವಸ್ಥ ಮನಸ್ಸಿನ ; ಶಾಂತ ಮನದ ; ನಿರ್ವಿಕಾರದ : ಆತ್ಮ ಲಿಂಗ ಪರಮಾತ್ಮ ಜಂಗಮ ತನುಮಧ್ಯೆ ಪ್ರಸಾದವಾಯಿತ್ತು . . . ಕೂಡಲಸಂಗನ ಶರಣರ ಸಂಗದಿಂದ ನಿಶ್ಚಿಂತನಿವಾಸವಾಯಿತ್ತು (ಬಸವ. ೮೩೭) ; ಇಂತು ವರ್ತಿಸುತಿರ್ಪುದಿದು ನಿಶ್ಚಿಂತಗುರುಭಕ್ತಿ ಪ್ರಯುಕ್ತಿಯದಂತುವಲ್ಲದುದರನಿಮಿತ್ತಕ್ಕೆ ಭಾಷೆಯಂ ನೀಗಿ (ಬಸವು. ೩೯-೧೭). (ನಾ). ೨. ಆತಂಕದಿಂದ ಮುಕ್ತವಾದುದು; ಚಿಂತೆಯಿಂದ ದೂರವಾದುದು ; ನಿರಾತಂಕವಾದುದು : ಕಾಯದಲ್ಲಿ ಕಾಯ ಸವೆದು ನಿಶ್ಚಿಂತವಾದ ಬಳಿಕ ಹಸಿವು ತೃಷೆಗಳೆಂಬವು ಅಳಿದು ಹೋದವು ಕೇಳಾ (ಅಪಚಂ. ೨೪೫-೧೧೧೭); ನಿಶ್ಚಿಂತ ನಿರಾಳದಲ್ಲಿ ಆಡುವ ಮಹಾದೇವನ ಕರ್ತೃವೆಂದಱಿದ ಕಾರಣದಿಂದ ತತ್ತ್ವವೆಂಬುದನಱಿದು ಮನವ ನಿಶ್ಚಿಂತವ ಮಾಡಿ . . . ಮುಂದೆ ನೋಡಿದಡೆ ಜ್ಯೋತಿಯ ಬೆಳಗ ಕಾಣಬಹುದೆಂದರು (ಲಿಂಗಪ. ೬೫-೫೬೨). ೩. ಶಾಂತಮನಸ್ಸಿನವನು ; ಸ್ವಸ್ಥಚಿತ್ತ : ನಿರಂತ ನಿಶ್ಚಿಂತ ನಿರಜ ನಿರ್ಜರ . . . ನಿಜ ನಿರ್ಮಾಯ ಚಿತ್ತೈಸು (ಬಸವು. ೬೧-೪೩); ನಿರವದ್ಯ ನಿಸ್ಸಂಗ ನಿಶ್ಚಿಂತ ನಿಖಿಲೇಶ ಇರದೆ ನೀ ಸಲಹೆಂದನು (ಪುರಂದ. ಧಾ. ೩-೯೮-೬) ; ಶಂಕರಪ್ರಸನ್ನವಾಕ್ಯವಂ ನೆನೆದು ನಿಶ್ಚಿತ ನಿಶ್ಚಿಂತರಾಗುತೆ ಸಂತಸಂಬಡೆದಿರ್ದ ರಾಜದಂಪತಿಗಳ್ (ಹಮ್ಮಿ್ರ.೨-೧೬೫); ಹೊಱಗೆ ಹೊನ್ನ ಬಿಟ್ಟೆನೆಂದು ನುಡಿವುತಿರ್ಪೆನಲ್ಲದೆ ಒಳಗೆ ಬಿಟ್ಟು ನಿಶ್ಚಿಂತನಲ್ಲವಯ್ಯ ನಾನು (ಅಖಂಪೇ. ೯೫-೧೨); ತಮ್ಮಾ ಇನ್ನು ಮೇಲೆ ನೀನು ನಿಶ್ಚಿಂತನಾಗಿರು (ಸುಂಬಯಿ. ೪-೭೮). ೪. ಶಾಂತಿ ; ನಿರಾಳ ; ನಿಶ್ಚಿಂತೆ : ಕಾರುಣ್ಯಸಾಗರನೆ ನಿಶ್ಚಿಂತದಿಂದಾರೋಗಣಂಗೆಯ್ದೆಮ್ಮಂ ಪೊರೆ (ಬಸವು. ೨೪-೩೪); ಸಂದೆಗಂಗಳ ಪರಿಸಿ ತಿಳಿವೆನಿತು ಸರಿದರೂ ಅರಕೆಗೊಳದರಿವಿನೊಳು ನಿಶ್ಚಿಂತವಾಗೆ (ಮಲಿಪೇ. ೨೪-೮). [ಸಂ.]

**ನಿಶ್ಚಿಂತಂ** (ಅ). ೧. ನಿರಾತಂಕವಾಗಿ : ನಿರಾಳವಾಗಿ ; ನಿಶ್ಚಿಂತೆಯಾಗಿ : ನಯಮುಂ ಪಿಡಿದರಸುಗಳಾಳೋಚನಕಾಲದೊಳ್ ಮಂತ್ರಶಾಲೆಯೊಳ್ ಮಂತ್ರಿಗಳುಂ ತಾನುಂ ನಿಶ್ಚಿಂತಮಿರ್ದಾಳೋಚಿಸುವರ್ (ಪಂಚತಂ. ೨೦೪-೧೪); ಇಂತೋರೊರ್ವರನೊರ್ವರ್ ಸಂತೈಸುತ್ತುಂ ನೃಪೇಂದ್ರತನುಜಾತರ್ ನಿಶ್ಚಿಂತಂ ಪೊಕ್ಕರ್ ಪಸಿದ ಕೃತಾಂತನ ಬಾಣಸುವೊಲಿರ್ದ ಮಾರಿಯ ಮನೆಯಂ (ಮಶೋಚ. ೧-೫೩). ೨. ಅನುಮಾನವಿಲ್ಲದೆ; ನಿರ್ಧಾರವಾಗಿ ; ಖಂಡಿತವಾಗಿ : ಇಂತು ಪೇಟಿಗೊಡ್ಡಿದು ಗೌರವದೋಷದ ಮಾಟಿಕ್ಕೆ ನಿಶ್ಚಿಂತಮಿಾ ತೆಱದವಂ ಕಳೆಗಾ ಕೃತಿಯತ್ತಣಿಂ (ಕವಿರಾ. ೧-೧೨೯). [<ನಿಶ್ಚಿಂತ]

**ನಿಶ್ಚಿಂತತೆ** (ನಾ). ಚಿಂತೆ ಇಲ್ಲದಿರುವಿಕೆ ; ನಿರಾತಂಕವಾಗಿರುವಿಕೆ; ಸ್ವಸ್ಥವಾಗಿರುವಿಕೆ : ಸುತನೊಳಜಿತಂಜಯಂ ವಿಸ್ತೃತಮಂ ಭೂಭರಮನೆಯ್ದೆ ಯೋಜಿಸಿ ನಿಶ್ಚಿಂತತೆಯನೊಳಕೆಯ್ದಂ (ಚಂದ್ರಪು. ೭-೩).
[ಸಂ. ನಿಶ್ಚಿಂತತಾ]

**ನಿಶ್ಚಿಂತವಾಸಿ** (ನಾ). ಚಿಂತೆಯಿಲ್ಲದಿರುವವನು ; ಶಾಂತಮನಸ್ಸಿನವನು : ದಾಸೋಹದಲ್ಲಿ ತನ್ನ ಮಱೆದು ನಿಶ್ಚಿಂತವಾಸಿ [ಪಾಠಾಂ. ನಿವಾಸಿ] ಯಾಗೈದಾನೆ (ಅಪಚಂ. ೧೬೯-೭೬೨ ; ಪಚಸಂ. ೫೯೩-೫೫ ನೋ).
[ಸಂ. ನಿಶ್ಚಿಂತವಾಸಿನ್]

**ನಿಶ್ಚಿಂತೆ** (ನಾ). ಚಿಂತೆಯಿಲ್ಲದಿರುವಿಕೆ ; ನಿರಾತಂಕವಾಗಿರುವಿಕೆ ; ನೆಮ್ಮದಿ : ಆನಂದೆ ಸಂದೆನು ಮೃತ್ಯುವಿನ ವಶಕೆಂದು ನಿಶ್ಚಿಂತೆಯಲಿ ನೃಪನಿವಹ ಮತ್ತರಾದರು ಮೈಮಱೆದು ದುರ್ವೃತ್ತತನದಲಿ (ನಿಭಾಗ. ೧೦-೫೪-೨೬); ಮುತ್ತಿದರ್ ಕೆಳದಿಯರವಳ ಸುತ್ತಿ, ನಿರ್ಜನತೆ ನಿಶ್ಚಿಂತೆ ನಿರ್ಮಲತೆಗಳ ತಪಸ್ವಿನಿ, ರಾಣಿ, ಅರಮನೆಗೆ ಇರುಳೊಳೊರ್ವಳೆ ಬಂದುದ ಕ್ಕಕ್ಕಜಂ ತಾಳ್ದು (ಚಿತ್ರಾಂಗ. ೮೪-೨೩೧೮) ; ನಿತ್ಯದರಿದ್ರನಿಗೆ ನಿಶ್ಚಿಂತೆ (ಗಾದೆ) ; ಅವರು ಮಾಡಬೇಕಾದುದನ್ನೆಲ್ಲಾ ಮಾಡಿ ನಿಶ್ಚಿಂತೆಯಿಂದಿದ್ದಾರೆ (ರೂಢಿ). [ಸಂ. ನಿಶ್ಚಿಂತಾ]

**ನಿಶ್ಚಿತ** (ಗು). ೧. ಗೊತ್ತಾದ ; ನಿರ್ಧಾರವಾದ ; ನಿರ್ಣಯಿಸಿದ ; ನಿಶ್ಚಯಿಸಿದ : ಅತಿಶಯಮಾಗಿರೆ ಗುಣಸಂತತಿಯಂ ದೋಷಮನೆ ಪೇಟ್ದವೋಲ್ಪೇಟ್ದುದು ನಿಶ್ಚಿತ ಶಬ್ದಾರ್ಥಂ ವ್ಯಾಜಸ್ತುತಿಯೆಂಬುದುಂ (ಕವಿರಾ. ೩-೧೬೦); ನಿಶ್ಚಿತಮಂತ್ರ ಚಮೂಪತಿ ಪಶ್ಚಿಮದಿಱೆಲ್ಲೇಚ್ಛ ನೃಪತಿಗಳನೆಱಗಿಸಿದಂ . . . ಚಕ್ರಿ ಚರಣಾಂಬುಜದೊಳ್ (ಪಾರ್ಶ್ವಪು. ೧೧-೧೦೯). (ನಾ). ೨. ನಿರ್ಧರಿಸಿದುದು; ನಿರ್ಣಯಿಸಿದುದು: "ನಿಶ್ಚಿತಂ, ನಿಯತಂ-ಈ ೨ ನಿಶ್ಚಯಿಸಲ್ಪಟ್ಟುದು" (ಹಲಾಯು.೧೧೮-೨೫). ೩. ಖಂಡಿತವಾದುದು; ದಿಟ; ನಿಜ; ಸತ್ಯ : ನಿಶ್ಚಿತಮಿದೆನಗೆ ಸಕಲವಚಶ್ಚತುರಜನೋಪದೇಶದಿಂ ಪಿಶುನವಚೋವೃಶ್ಚಿಕವಿಷಹರಮಖಿಳ ವಿಪಶ್ಚಿಸ್ನುತಿಮಂತ್ರಮೆಂಬುದಿನ್ನುಂ ಮುನ್ನುಂ (ಲೀಲಾವ. ೧-೧೪) ; ಈ ಹಿಂದು ಮುಂದಿನ ಪರಿಮಿತಿಗಳಲ್ಲಿ ಹಿಂದಿನದು ನಿಶ್ಚಿತ ಮುಂದಿನದು ಅನಿಶ್ಚಿತ (ಸಾಹಿಸ. ೧೫೨). ೪. [ಅದ್ವೈತ] ಮೋಕ್ಷಕ್ಕೆ ಸಾಧನವಾದ ಆರು ಬಗೆಯ ಸಮಾಧಿಗಳಲ್ಲಿ ಎರಡನೆಯದು ; ಜೀವಭ್ರಾಂತಿಯನ್ನು ತೊಡೆದುಹಾಕುವ ಸಮಾಧಿ ; ☞ ಆರು ಬಗೆಯ ಸಮಾಧಿಗಳು ಈ ರೀತಿ ಉಕ್ತವಾಗಿವೆ. ೧. ವ್ಯಷ್ಟಿಸಮಾಧಿ = ಮಿಥ್ಯೆಯನ್ನು ದೂರೀಕರಿಸಿ ಸತ್ಯವನ್ನು ತೋರಿಸುವುದು. ೨. ನಿಶ್ಚಿತಸಮಾಧಿ = ಆತ್ಮನಲ್ಲಿ ಜೀವಭ್ರಾಂತಿಯನ್ನು ಬಿಡಿಸುವುದು. ೩. ವಿಲಕ್ಷಣಸಮಾಧಿ = ಸಾಕ್ಷಿಚೈತನ್ಯದರ್ಶನವನ್ನು ಮಾಡಿಸುವುದು. ೪. ನಿರ್ವಿಷಯಸಮಾಧಿ = ಅಂತಃಸುಖಾನುಭವವನ್ನು ಹೊಂದುವುದು. ೫. ಸಮಷ್ಟಿಸಮಾಧಿ = ಭೇದಭಾವನೆಗಳೆಲ್ಲವನ್ನೂ ಬಿಟ್ಟು ನಾಮರೂಪವಿಕಾರಗಳನ್ನು ಹರಿದು ಏಕತೆಯನ್ನು ನೆಲೆಗೊಳಿಸುವುದು. ೬. ಪೂರ್ಣಸಮಾಧಿ = ನಿರ್ವಿಕಲ್ಪಕ ಸಮಾಧಿ, ಬ್ರಹ್ಮಾನಂದಾನುಭವದಿಂದ ಶರೀರಮೋಹ

ವನ್ನು ಬಿಡುವುದು : ವೇದದಧಿಕರಣಿಗಳಲಾರು ಸಮಾಧಿಯುಂಟು . . . ಮೊದಲು ವ್ಯಷ್ಟಿಸಮಾಧಿಯೆರಡನೆಯದಕೆ ನಿಶ್ಚಿತವೆಸರು (ಗಗತಾ. ೧೩-೨೮). [ಸಂ.]

**ನಿಶ್ಚಿತನಾಮ** (ನಾ). ರೂಢಿಯಲ್ಲಿ ಸ್ಥಿರವಾಗಿ ನಿಂತ ಹೆಸರು ; ರೂಢನಾಮ : ಕ್ಷಿತಿಯೊಳೆ ರೂಢಾನ್ವರ್ಥಾಂಕಿತಮೆಂದಾ ನಾಮಮುಱಗೆ ಮೂದೆಜನಸಮಾಸತೆಯೊಳ್ ನೆಲಸಿರ್ಪುದು ನಿಶ್ಚಿತನಾಮಂ ಪಂಚವರ್ಣ ಕೃತಪರಿಮಾಣಂ (ಶಮದ. ೭೬). [ನಿಶ್ಚಿತ+ನಾಮ]

**ನಿಶ್ಚಿತಮನ** (ನಾ). ೧. ದೃಢವಾದ ಮನಸ್ಸು. ೨. ದೃಢವಾದ ಮನಸ್ಸುಳ್ಳವನು : ನಿಶ್ಚಿತಮನರಲ್ಲದರಂ ದುಶ್ಚರಿತರನೆಯ್ದೆ ಪಡೆದ ದೋಷಕಂ ಪ್ರಾಯಶ್ಚಿತ್ತಮೆಂದು . . . ದುರ್ಗನಂ ಬಿದಿ ಪಡೆದಂ (ಪಂಚತಂ. ೧೧-೯). [ನಿಶ್ಚಿತ+ಮನ$_1$]

**ನಿಶ್ಚಿತಾರ್ಥ** (ನಾ). ೧. ನಿರ್ಧಾರವಾದ ವಿಷಯ ; ನಿರ್ಣಯಿಸಿದ ವಿಷಯ. ೨. ಮದುವೆಯ ಮುನ್ನ ನಡಸುವ ನಿಶ್ಚಯಕಾರ್ಯ; ವೀಳೆಯಶಾಸ್ತ್ರ : 'ನಿಶ್ಚಿತಾರ್ಥದ ಕುರುಹಿದು' ಎಂಬಂತೆ ರಾಜಮಾತೆಯವರು ತಾಂಬೂಲಫಲಾದಿಗಳನ್ನು ತರಿಸಿದರು (ಶಾಂತಲಾ. ೯೦) ; ಉಪಾಧ್ಯಾಯರ ಮನೆಯಲ್ಲಿ ನಿಶ್ಚಿತಾರ್ಥ ನಡೆಯುತ್ತಿದ್ದಿತು (ಮಲೆನಾ. ೧೫೨). ೩. ಬಯಸಿದುದನ್ನು ಹೊಂದುವೆನೆಂಬ ದೃಢವಾದ ನಂಬಿಕೆಯಿರುವವನು : ರಿಪುಜಯಕಾರಣ ಶರಮಂ ಪ್ರಪತ್ತಿಯಿಂ ಪಡೆವೆನೆಂದು ಬಯಸುತ್ತೆಮ್ಮಿಂ ತಪಮಿರ್ದಪನಾ . . . ನಿಶ್ಚಿತಾರ್ಥಂ ಪಾರ್ಥಂ (ಶಬಶಂ. ೨-೧೧೭). [ನಿಶ್ಚಿತ+ಅರ್ಥ]

**ನಿಶ್ಚೇತನ** (ಗು). ೧. ಚೇತನವಿಲ್ಲದ ; ಜಡವಾದ; ಉತ್ಸಾಹವಿಲ್ಲದ. (ನಾ). ೨. ಉತ್ಸಾಹರಹಿತವಾಗಿರುವಿಕೆ; ಜಡವಾಗಿರುವಿಕೆ; ಮಾಂದ್ಯತೆ : ಚೇತನಂ ತಾನಾಗಿಯುಂ ನಿಶ್ಚೇತನದ ಪರಿಣಾಮಿ . . . ನೆನಹುಗಳಿಗೆಯತೀತನಪ್ಪ ಮಹಾನುಭಾವ ಪ್ರಜ್ಞಾಮಾನಸನು (ಬಸಪು. ೮-೧೨). ೩. ಉತ್ಸಾಹನಿಲ್ಲದವನು ; ಜಡಸ್ವಭಾವದವನು : ಏತೆಱದಿಂ ಮೃಗಾಕ್ಷಿ ದಮಯಂತಿಯ ಸಂಗಮದಪ್ಪುದೆಂದು ನಿಶ್ಚೇತನನಾಗಿ ರಾಜ್ಯಸುಖಮಂ ಬಗೆಗೊಳ್ಳದೆ . . . ನವಚಿತ್ರಪಟಂಬೊಲಿರ್ದನಾ ಭೂತಳವಲ್ಲಭಂ (ನಳಚಂ. ೬೩). ೪. ಅವಿವೇಕಿ; ವಿಚಾರಶೂನ್ಯ : ಅತಿಕ್ಷಣಿಕಂ ಶರೀರಮೆನಿಪೀ ಮಾನುಷ್ಯಮುಂ ದೂಷ್ಯಮುಂ ಚಿರಮೆಂಧಾಟಿಪನಾವನಾತನೆ ವಲಂ ನಿಶ್ಚೇತನಂ ಲೋಕದೊಳ್ (ಚಂದ್ರಪು. ೪-೫೩) ; ನಿಶ್ಚೇತನರೆಂದು ಪರಿಗಣಿತರಾದ ಭಾರತೀಯರು ಸಚೇತನರೆಂದು ಸ್ವಸಾಕ್ಷಾತ್ಕಾರ ಮಾಡಿಕೊಳ್ಳಲು ಈ ಎಲ್ಲಾ ಮಹಾಮಹಿಮರ ಪ್ರಭಾವದಿಂದ ಎಚ್ಚರಗೊಂಡರು (ಋಕ್ಸಾರ.೧೨೦ ಪೀಠಿಕೆ). [ಸಂ.]

**ನಿಶ್ಚೇಷ್ಟ** (ಗು). ೧. ಚಲನೆಯಿಲ್ಲದ ; ಅಲುಗಾಟವಿಲ್ಲದ; ಅಚೇತನವಾದ. ೨. ತ್ರಾಣವಿಲ್ಲದ ; ಶಕ್ತಿಯಿಲ್ಲದ ; ಅಸಹಾಯಕವಾದ. (ನಾ). ೩. ಚಲಿಸಲು ಅಸಮರ್ಥನಾಗಿರುವವನು ; ಮರಗಟ್ಟಿದಂತೆ ಆದವನು ; ಜಡತ್ವ ಹೊಂದಿದವನು : ಜಂಗಮವೆತತ್ ಪ್ರಾಣವೆಂಬಾ ಸಾಂಗಭಾಷೆಯನಿಂದು ಮಱದನೆ ಅಂಗಲಾಚುತ್ತಿಳಲುವುದು ನಿಶ್ಚೇಷ್ಟನಾಗಿಹುದು . . . ಜಂಗಮಪ್ರಾಣಿಗಳ ಗುಣವೇನಲ್ಲವೋ (ಬಸಪು. ೩೬-೧೪) ; ಭೀಮಸೇನನು . . . ಹೆಬ್ಬಾವಿನಿಂದ ಹಿಡಿಯಲ್ಪಡುತ್ತಾನೆ, ಸ್ವಸಾಮರ್ಥ್ಯದಿಂದ ಬಿಡಿಸಿಕೊಳ್ಳಲಾರದೆ ನಿಶ್ಚೇಷ್ಟನಾಗಿ ಬೀಳುತ್ತಾನೆ (ಭಾರದ. ೧೦೬). [ಸಂ.]

**ನಿಶ್ಚೇಷ್ಟಸ್ಥಿತಿ** (ನಾ). ಅಲುಗಾಡದಿರುವಿಕೆ ; (ಮರಗಟ್ಟಿ) ಸೆಟೆದುಕೊಂಡಿರುವಿಕೆ ; (ಶೀತದಿಂದ) ಚಲನೆಯಿಲ್ಲದಿರುವಿಕೆ : ಸಸ್ಯಹೇನುಗಳಲ್ಲಿ . . . ಗಂಡುಗಳು ಮಾಗಿಕಾಲದಲ್ಲಿ ಮಾತ್ರ ಬಂದು, ಛಳಿಗಾಲದ ನಿಶ್ಚೇಷ್ಟಸ್ಥಿತಿ (Over wintering) ಮೊಟ್ಟೆಗಳಿಗೆ ಗರ್ಭಾದಾನ ಮಾಡುತ್ತವೆ (ಕೀಟಜೀ. ೯೫). [ನಿಶ್ಚೇಷ್ಟ+ಸ್ಥಿತಿ]

**ನಿಶ್ಚೇಷ್ಟಿತ** (ನಾ). ೧. ಚಲನೆಯಿಲ್ಲದಿರುವಿಕೆ ; ಮರಗಟ್ಟಿರುವ ಸ್ಥಿತಿ ; ಜಡವಾಗಿರುವಿಕೆ ; ಚೈತನ್ಯಹೀನತೆ ; ವಿತತ ಲಿಂಗಧ್ಯಾನಿ ನಿಶ್ಚೇಷ್ಟಿತಮವಸ್ಥೆಯನೊಂದಿದಂತಪ್ರತಿಮ ನಂದೀಶಾವತಾರನು ಬೆಱಗು ನೆರೆದಿಹನು (ಬಸಪು. ೩-೩೫). ೨. ಮರಗಟ್ಟಿದಂತೆ ಆದವನು ; ಜಡತ್ವ ಹೊಂದಿದವನು: ನಿಂತವರು ನಿಂತಂತೆಯೇ ನಿಶ್ಚೇಷ್ಟಿತರಾದರು (ಕಭವಿ. II, ೪೫೧). [ಸಂ.]

**ನಿಶ್ಚೇಷ್ಟಿತೆ** (ನಾ). ಚೈತನ್ಯವನ್ನು ಕಳೆದುಕೊಂಡವಳು ; ಚೈತನ್ಯಶೂನ್ಯೆ : ಒರ್ಮೊದಲೊಳೆ ದೇವರನಾಡಿದ ಪರುಷತರವಾಕ್ಯಮಾರ್ಗಣಂ ಕರ್ಣಕೋಟರಮಂ ನಾಂಟೆ ಮೊಗಂಗುಂದಿ ದುಃಖಾವೇಶದಿಂ ನಿಶ್ಚೇಷ್ಟಿತೆಯಾಗಿ ಮೇಣೊರ್ಮೆ ಹಮ್ಮಿದಂಬೋದಳ್ (ರಾಮಾಶ್ವ. ೩೫-೮). [ಸಂ. ನಿಶ್ಚೇಷ್ಟಿತಾ]

**ನಿಶ್ಚೇಷ್ಟೆ** (ನಾ). ೧. ಚಲನವಲನವಿಲ್ಲದಿರುವಿಕೆ. ೨. ಮೂರ್ಛೆ ; ಮರವೆ. [ಸಂ. ನಿಶ್ಚೇಷ್ಟಾ]

**ನಿಶ್ಚೈತನ್ಯ** (ನಾ). ಚೈತನ್ಯಹೀನತೆ; ಬಲಹೀನತೆ : ಯಜ್ಞಸೂತ್ರದ ತ್ರಿನಾಡಿಯು ತ್ರಿಸರ ಹರಿದು ಚೈತನ್ಯ ನಿಶ್ಚೈತನ್ಯವಾದಲ್ಲಿ ಸೌರಾಷ್ಟ್ರಸೋಮೇಶ್ವರಲಿಂಗ ನಿರುತಭರಿತ (ಆದವ. ೧೩೨-೨೩೦). [ಸಂ.]

**ನಿಶ್ಚೈಸು** 'ನಿಶ್ಚಯಿಸು' ನೋ.

**ನಿಶ್ಛಿದ್ರ** (ನಾ). ಬಿರುಕಿಲ್ಲದುದು ; ತೂತಿಲ್ಲದುದು ; ರಂಧ್ರವಿಲ್ಲದುದು : ಅರಸುಗಳಾಳೋಚನಕಾಲದೊಳ್ ನಿಸ್ತಂಭಮುಂ ನಿರ್ಗವಾಕ್ಷಮುಂ ನಿಶ್ಛಿದ್ರಭಿತ್ತಿಯುಂ ನಿರಾಶ್ರಯಮುಂ . . . ಅಪ್ಪ ಮಂತ್ರಶಾಲೆಯೊಳ್ ಮಂತ್ರಿಗಳುಂ ತಾನುಂ ನಿಶ್ಚಿಂತಮಿರ್ದಾಳೋಚಿಸುವರ್ (ಪಂಚತಂ. ೨೦೪-೧೨) ; ದೇವತೆ ರಕ್ಕಸಂಗೆ ಮುಳಿದು . . . ಪಿರಿಯ ಬಿಲದೊಳಗೊಯ್ದಿರಿಸಿ ಬಿಲದ ಬಾಗಿಲೊಳ್ ಪಿರಿಯದೊಂದು ಶಿಲೆಯುಂ ಕವಿದಿರಿಸಿ ನಿಶ್ಛಿದ್ರಮಾಗಿ ಮುಚ್ಚಿ ... ಪೋದಳ್ (ಜೀಸಸಂ.೪೦-೨೯ ಪ); ಕುದಿರೊಳಗಿರ್ದುದಿದ ಶಂಖದ ದನಿ ನಿಶ್ಛಿದ್ರಮಾದೊಡಂ ಪೊಣ್ಮದೆ ಶಂಖದಿನನ್ಯವಲ್ಲದೇಂ ಪೊಣ್ಮದ ನಾದಂ ಕಾಯದಿಂದೆ ಜೀವನುಮನ್ಯಂ (ಯಶೋಚ. ೪-೨೪). [ಸಂ.]

**ನಿಶ್ಧಿ** 'ನಿಸಿದಿ' ನೋ.

**ನಿಶ್ರಾವ** (ನಾ). "ಅನ್ನದ ಗಂಜಿಯ ಕೆನೆ" (ಪದ್ಮಾರಾ. ೨೮೦ ಟಿಪ್ಪಣಿ): ಚಾಣಾಕ್ಯಂಗಂ ಯಶೋಮತಿಗೆಂದಿರ್ವರ್ಗಂ ನಿಶ್ರಾವಮಂ ತನ್ನ ಭಾರ್ಯೆಯಪ್ಪ ನಂದವತಿಯ ಕೆಯ್ಯೊಳಟ್ಟಿದೊಡೆ ಆಕೆಯುಂ ಕೊಂಡು ಪೋಗಿ ನಿಮಗಿರ್ವರ್ಗಂ ನಿಶ್ರಾವಮೆಂದು ಪೇೞ್ದು (ಪದ್ಮಾರಾ. ೧೫೪-೨೦). [<ಸಂ. ನಿಸ್ರಾವ]

**ನಿಶ್ರೇಣಿ** (ನಾ). ಏಣಿ ; ನಿಚ್ಚಣಿಕೆ : "ನಿಶ್ರೇಣೀ, ಅಧಿರೋಹಿಣೀ— ಈ ೨ ನಿಚ್ಚಣಿಗೆ" (ಹಲಾಯು. ೫೦-೧೪೬) ; ಪೊಂಗಿ ಖೇಚರರಿಟ್ಟ ನಿಶ್ರೇಣಿಯೋ ಕಡುಬೆಡಂಗಿನಿಂ ಜಲದೇವತೆಯರಾಡಲೆಂದೊಲ್ದು ಸಿಂಗರಿಸಿ ನಿಲಿಸಿದುಯ್ಯಲೆಯ ಕಂಬಂಗಳೋಯೆನಿಸಿ ತುಂಬೇಂ ಮೆಱೆದುದೋ (ಪದ್ಮರಾ. ೬-೭೧) ; ತಿಳಿಯೆ ಘನಸತ್ಯಕ್ಷಮಾದಮೆಗಳು ಪರಮಪದಕೇಱುವಡೆ ಮಿಗೆ ವಿಲಸಿತದ ನಿಶ್ರೇಣಿಯಾಗಿಯೆ ಸತ್ಪುರುಷರೆಲ್ಲ ಲಲಿತ ಸತ್ಸಂಗತಿಯಲದಱಂದಿಳಿಯೊಳಾವಗೆ ಮುಖ್ಯಕಾರ್ಯದ ನೆಲೆಯೆನಿಪುದೀ ನಡವಳಿಯು ತಾ ಲೇಸ ಕೊಡದಿಹುದೆ (ತಿಮ್ಮಶಾಂ. ೮-೨೦) ; ಇಹಪರದ ನಡುವೆ ನೆಟ್ಟನೆಯ ನಿಶ್ರೇಣಿಯೆನೆ ನಿಂದಿಹನ ನೋಡ ! (ಗೊಲ್ಲೊಥಾ. ೩-೭೮). [ಸಂ.]

**ನಿಶ್ರೇಯಸ** (ನಾ). ೧. ಅತಿಶಯವಾದ ಅಭಿವೃದ್ಧಿಯನ್ನುಂಟು ಮಾಡುವುದು; ಅತಿ ಶ್ರೇಷ್ಠವಾದುದು; ಅತ್ಯುತ್ತಮವಾದುದು : ಲೌಕಿಕಸಾಮಯಿಕೋರುವಿವೇಕಮುಮಭ್ಯುದಯಪರಮನಿಶ್ರೇಯಸಮುಂ ಪ್ರಾಕಟಮಕ್ಕುಂ ವಿದಿತಾನೇಕ ಕವೀಶ ಪ್ರಯೋಗ ಪದಪದ್ಧತಿಯೊಳ್ (ಕವಿರಾ. ೧-೧೯). ೨. ಶ್ರೇಷ್ಠಪದವಿ ; ಮೋಕ್ಷ ; ಮುಕ್ತಿ : "ಕೈವಲ್ಯಂ, ನಿರ್ವಾಣಂ, ನಿಶ್ರೇಯಸಂ . . . ಮಹಾನಂದಃ —ಈ ೧೧ ಮೋಕ್ಷದ ಪೆಸರ್" (ಹಲಾಯು. ೨೧-೧೨೪) ; ವಿದುರ ಕೇಳ್ವೈ ಸಕಲ ಲೋಕಾಭ್ಯುದಯ ನಿಶ್ರೇಯಸದ ಗತಿಗೀ ಮೊದಲ ಸಾಧನವೆನಿಪ ಮನು ವಂಶದ ಪರಂಪರೆಯು (ಸಿಭಾಗ. ೪-೬-೧) ; ಇದೇ ಪರಮಪುರುಷಾರ್ಥವೆಂದೂ ಅಪವರ್ಗವೆಂದೂ ನಿಶ್ರೇಯಸವೆಂದೂ ಸಿದ್ಧಾಂತಪಡಿಸುವರು (ಹಿಂದಸಾ. ೧೨೦). [ಸಂ.]

**ನಿಶ್ರೇಯಸ್ಸು** (ನಾ). ಮುಕ್ತಿ ; ಮೋಕ್ಷ : ಮಂತ್ರಸಿದ್ಧಿಯಿಂದ . . . ಪರಲೋಕದಲ್ಲಿ ನಿಶ್ರೇಯಸ್ಸನ್ನು ಪಡೆಯಬಹುದು (ಭಾರದ. ೧೫೪). [ಸಂ. ನಿಶ್ರೇಯಸ್]

**ನಿಶ್ರೋತ್ರ** (ನಾ). ರೈತರಿಗೆ ಗುತ್ತಿಗೆಯ ಮೇಲೆ ಹಾಕುತ್ತಿದ್ದ ತೆರಿಗೆಯು ಇಲ್ಲದಿರುವಿಕೆ : ಬೆಣಯುಹಳಿಯ ಗುರುದೇವರು ಹಂನಿಬ್ಬರು ಮಹಾಜನಂಗಳ ಕೈಯ್ಯಲು ಅವ[ರಿ]ಕ್ಕುವ ಶ್ರೋತ್ರದೊಳಗೆ ಗದ್ಯಾಣಂ ಎಂಟನು ಇಳಿಹಿಕೊಟು ರಮಾಬಾಯಿ ಧ(ಂ)ರ್ಮಕೆ ಸಂಥೆಯೊಳಗಳ[ಅ]ಜವಟಗೆಗೆ ಮತರು ‖೨‖ ಕಲಜೀಯಂಗೆ ಧಾರೆಯನೆಱದು ನಿಶ್ರೋತ್ರವಾಗಿ ಕೊಟರು (ಸೌಇಇ. IX-i, ೩೭೯-೧೪ ; 1280). 'ಶ್ರೋತ್ರ' ಪರಾ. [ಸಂ.]

**ನಿಶ್ವಸಿತ** (ನಾ). ೧. ಉಸಿರು : ವಿಶ್ವಪರಿಧಿಯದೆಲ್ಲೊ ಸೂರ್ಯಚಂದ್ರರಿನಾಚೆ ವಿಶ್ವಕೇಂದ್ರವು ನೀನೆ ನೀನೆಣಿಸಿದೆಡೆಯೆ ನಿಶ್ವಸಿತಸಂಬಂಧ ಸಿನಗಂ ದಿಗಂತಕಂ ಪುಷ್ಪವಾಗಿರು ನೀನು (ಮಂಕುಕ. ೧೩೬). ೨. ನಿಟ್ಟುಸಿರು : ಸರಳತರೋಷ್ಣನಿಶ್ವಸಿತಮಾರುತನಿಂದೆ ನಿಜೋತ್ತರೀಯದೊಳ್ ತರಳತೆಯುಂ ನಿಯೋಜಿಪ ನೆಗಟಿಕ್ಕೆಗೆ ಕಾರಣಮೇನೋ (ಚಂದ್ರಪು. ೩-೫೪). [ಸಂ.]

**ನಿಶ್ವಾಸ** (ನಾ). ೧. ಉಸಿರು ಬಿಡುವಿಕೆ; ಉಸಿರನ್ನು ಹೊರ ಬಿಡುವಿಕೆ : ಅಂತು ಸಾರ್ಧ ಪಂಚದಶಮಾಸನಿಶ್ವಾಸನುಮೇಕತ್ರಿಂಶದಂಭೋನಿಧಿಮಿತಜೀವಿತನುಮಾಗಿ ಸಹಾಯೋತ್ತಮನಮಿತವಿಕ್ರಮನುಂ ತಾನುಂ ಅಗಲದಿರೆ(ಶಾಂತಿಪು. ೯-೩೨ ಪ); ಅಮರರ್ಗೆ ದೇವಪ್ರಾಣಾಯುಷ್ಯಪ್ರವಿಚಾರೋಚ್ಛ್ವಾಸ ನಿಶ್ವಾಸಲೇಪ್ಯ ಭೇದಂಗಳುಮಕ್ಕುಂ (ಚಂದ್ರಪು.೩-೩೨ ಪ); ರಭಸದಿಂದ್ಯೆದುವ ಸುಪರ್ಣನಂ ಹಿಂದಣ ವೃಷಭನ ಮುಖದುಚ್ಛ್ವಾಸ ನಿಶ್ವಾಸಮಾರುತಂ ತಡದತ್ತಲಿತ್ತಲೆಳೆಯೆ (ಜೈಮಿಭಾ. ೧೪-೨೨); ಜಗತ್ತಿನ ಎಲ್ಲ ವ್ಯಾಪಾರಗಳಲ್ಲಿಯೂ ನಿಶ್ವಾಸ, ಪ್ರಶ್ವಾಸ . . . ನಿದ್ರೆ, ಜಾಗರಣೆಗಳ ಸರದಿ ಒಂದು ಇದೆ (ನಿಬಂಧ.I,೯೪). ೨. ನಿಟ್ಟುಸಿರು : ತಾಯಿ-ಮಗಳು ಒಬ್ಬರನ್ನೊಬ್ಬರು ನೋಡುತ್ತ ನಿಶ್ವಾಸ ಬಿಟ್ಟರು (ಮೂರುದಾ. ೧೩೦). ೩. ಶ್ವಾಸಕ್ಕೂ ಉಚ್ಛ್ವಾಸಕ್ಕೂ ನಡುವಿನ ವಿರಾಮಕಾಲ : ಶ್ವಾಸದಲ್ಲಿ ಶ್ವಾಸ, ಉಚ್ಛ್ವಾಸ, ನಿಶ್ವಾಸಗಳೆಂದು ಮೂರು ವಿಧಗಳುಂಟು. ಶ್ವಾಸವೆಂದರೆ ಮೂಗಿನಿಂದ ಗಾಳಿಯನ್ನು ಹೊರಗೆ ಬಿಡುವುದು. ಉಚ್ಛ್ವಾಸವೆಂದರೆ—ಗಾಳಿಯನ್ನು ಒಳಗೆ ಶೆಳೆದುಕೊಳ್ಳುವುದು. ನಿಶ್ವಾಸವೆಂದರೆ—ಮಧ್ಯಮವಾದ ವಿರಾಮಕಾಲ (ಹಸಾರ. ೧-೪ ಟೀಕೆ). ೪. [ವೀಶೈ] ಇಪ್ಪತ್ತೆಂಟು ಶೈವಾಗಮಗಳಲ್ಲಿ ಒಂದು : ನಿಶ್ವಾಸ, ಉತ್ತರನಿಶ್ವಾಸ, ನಿಶ್ವಾಸಮುಖೋದಯ, ನಿಶ್ವಾಸನಯನ, ನಿಶ್ವಾಸಕಾರಕ, ಘೋರಸಂಹಿತೆ, ಸುಸಾಂಖ್ಯಾಗುಹ್ಯಂಗಳೆಂದು ನಿಶ್ವಾಸಾಗಮದೆಂಟು ಭೇದಂಗಳು (ವಿವೇಕ.೭೦); ಕಾಮಿಕ, ಯೋಗಜ . . . ನಿಶ್ವಾಸ, ಕಿರಣ, ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಭಾರದ. ೭೨). 'ದೀಪ್ತ' ಪರಾ. [ಸಂ.]

**ನಿಶ್ವಾಸಾಗಮ** (ನಾ). = ನಿಶ್ವಾಸ ೪ : ನಿಶ್ವಾಸ, ಉತ್ತರನಿಶ್ವಾಸ, ನಿಶ್ವಾಸಮುಖೋದಯ, ನಿಶ್ವಾಸನಯನ, ನಿಶ್ವಾಸಕಾರಕ, ಘೋರಸಂಹಿತೆ, ಸುಸಾಂಖ್ಯಾಗುಹ್ಯಂಗಳೆಂದು ನಿಶ್ವಾಸಾಗಮದೆಂಟು ಭೇದಂಗಳು (ವಿವೇಕ. ೭೦). [ನಿಶ್ವಾಸ + ಆಗಮ]

**ನಿಶ್ಶಂಕ** (ನಾ). ೧. ಸಂಶಯವಿಲ್ಲದಿರುವಿಕೆ; ಶಂಕೆಯಿಲ್ಲದಿರುವಿಕೆ; ನಿರ್ಭಯ ; ನಿರ್ಭೀತಿ : ಹೇಳಿ ಕೇಳಿ ಬಂದಿರುವ ಹಾಡು, ನೆರಳಲ್ಲಿ, ನಿಶ್ಶಂಕವಾಗಿ, ನಿಶ್ಚಿಂತೆಯಿಂದ ಕುಳಿತಿರುವ ಹಕ್ಕಿಯ ಕಂಠದಿಂದ . . . ಹೊರಹೊಮ್ಮುತ್ತದೆ (ಕರ್ನಾಸಂ. ೭೧). ೨. ಸಂಶಯವಿಲ್ಲದಿರುವವನು ; ಶಂಕೆಯಿಲ್ಲದಿರುವವನು ; ಭೀತಿಯಿಲ್ಲದವನು : ನಿಶ್ಶಂಕನು ನಿಸ್ಸಹಾಯನುಮಾಗಿ ನುಡಿದಮೋಘಜಿಹ್ವನ ಸ್ಥಿರತ್ವಕ್ಕೆ ಮೆಚ್ಚಿ (ಶಾಂತಿಪು. ೬-೨೫ ಪ) ; ಉಡಿಯುತ್ತುಂ ನಂದನಂಗಳಂ ನೀರ್ನೆಲನಂ ಕಿಡಿಸುತ್ತುಂ ಲಂಕೆಗವರ್ ಪಡೆದರ್ ನಿಶ್ಶಂಕರಳವಿಗಭ್ಯುದೆರ್ದವಟಿಲಂ (ಪಂರಾಮ. ೧೪-೮೯) ; ಪ್ರಾಣಭಾವವಳಿದು ಶಂಕೆ ತಲೆದೋಱದೆ ನಿಶ್ಶಂಕನಾಗಿ ನಿಜೈಕ್ಯನಾಗಿಪ್ಪನು ನೋಡಾ ಬಸವಣ್ಣನು (ಅಪಚಂ. ೧೯೮-[illegible]): ಶಿವಲೆಂಕ ಮಂಚಯ್ಯಂ ಕುಸುಮಯುಗಜಾಂಕುಶಂ ನಿಶ್ಶಂಕನಹಿತ ಭಯಂಕರಂ (ಭಸಪು. ೫೩-೫೫).

**ನಿಶ್ಶಂಕಪ್ರತಾಪ** = ಒಂದು ಬಿರುದು : ಚಲದಂಕರಾಮ ನಿಶ್ಶಂಕ ಪ್ರತಾಪಭುಜಬಳ ಚಕ್ರವರ್ತ್ತಿ ಹೊಯ್ಸಳ ವೀರಬಲ್ಲಾಳದೇವರು (ಎಕ. III(R), ಗುಂಡ್ಲುಪೇ. ೩-೫ ; 1196). **ನಿಶ್ಶಂಕಪ್ರತಾಪ ಚಕ್ರವರ್ತಿ** = ಒಂದು ಬಿರುದು : ಚಲದಂಕರಾಮನೇಕಾಂಗವೀರ ನಿಶ್ಶಂಕಪ್ರತಾಪಚಕ್ರವರ್ತ್ತಿ ಹೊಯ್ಸಣ ವೀರಬಲ್ಲಾಳದೇವರು (ಎಕ. III (R), ಹೆಗ್ಗಡ. ೭೪-೭ ; 1211) ; ಪಾಣ್ಡ್ಯಕುಲಸಮುದ್ಧರಣ ನಿಶ್ಶಂಕ ಪ್ರತಾಪಚಕ್ರವರ್ತಿ ಶ್ರೀ ವಿಷ್ಣುವರ್ದನ ಹೊಯ್ಸಳ ಶ್ರೀ ವೀರನಾರಸಿಂಹದೇವರ್ (ಎಕ. III (R), ನಂಜನ. ೩೨೧-೯ ; 1222). [ಸಂ.]

**ನಿಶ್ಶಂಕತೆ** (ನಾ). ನಿಸ್ಸಂಶಯ ಸ್ಥಿತಿ ; ನಿರ್ಭಯತೆ : ಭೋಂಕೆನಲು ತೆನೆತೆನೆಗೆ ತಪ್ಪದವುಂಕಿ ಪಲವಾಗಿಪ್ಪವೊಲು ನಿಶ್ಶಂಕತೆ[ಪಾಠಾಂ.ನಿಃಶಂಕತೆ]ಯೊಳೊಬ್ಬನೆ ಬಳಸುತಾಳ್ವರಿಯ ಮೇಲಿರ್ದ (ಬಸಪು. ೧೬-೧೮). [ಸಂ. ನಿಶ್ಶಂಕತಾ]

**ನಿಶ್ಶಂಕತೆವೆಱು** (ಕ್ರಿ). ನಿಸ್ಸಂಶಯವನ್ನು ಹೊಂದು ; ಶಂಕೆಯಿಂದ ದೂರವಾಗು ; ನಿರ್ಭೀತಿಯನ್ನು ಹೊಂದು : ಜಯೋದ್ಯಮಕ್ಕೆ ನಿಶ್ಶಂಕತೆ[ಪಾಠಾಂ. ನಿಃಶಂಕತೆ]ವೆತ್ತು ನಿರ್ಭರದೆ ಗರ್ಜಿಸಿ ಮುಂಬರಿದತ್ತ್ರಿಚಾಪದಿಂದಂ ಕಲಿಪಾರ್ಥನಪ್ಪಳಿಸಿದಂ ಪಳಿಪೊರ್ದದ ಚಂದ್ರಮೌಳಿಯುಂ (ಶಬಶಂ. ೪-೫೮). [ನಿಶ್ಶಂಕತೆ + ಪೆಱು$_1$]

**ನಿಶ್ಶಂಕಮಲ್ಲ** (ನಾ). ೧. ಶಂಕೆಯಿಲ್ಲದ ಭಟ ; ನಿರ್ಭೀತನಾದ ಸೈನಿಕ ; ಕೆಚ್ಚೆದೆಯ ಕಲಿ : ಉಲಿವ ಬಿರುದಿನ ಕಹಳೆಗಳ ಕಳಕಳಿಕೆ ಮಿಗೆ ನಿಶ್ಶಂಕಮಲ್ಲರು ಕಳನೊಳಗೆ ತಲೆದೋಱದರು (ಕುಮ್ಯಾಭೀ.೪-೪೦); ಅಂಥ ಸಂಕಟ ಸಮಯದಲ್ಲಿ ತುರುಕರೊಡನೆ ಹೋರಾಡಿ, ಅವರನ್ನು ಗಡಿಯಾಚೆ ಹೊಡೆದಟ್ಟಿದ ನಿಶ್ಶಂಕಮಲ್ಲ (ನಂಜುಂಡ. ೩೨). ೨. ಒಂದು ಬಿರುದು : ಕದನಪ್ರಚಣ್ಡನಸಹಾಯಶೂರನೇಕಾಂಗವೀರ ನಿಶ್ಶಂಕಮಲ್ಲ ಶ್ರೀಮತ್ ಪ್ರತಾಪ ಚಕ್ರವರ್ತ್ತಿ ಶ್ರೀ ವೀರಬಲ್ಲಾಳದೇವರು (ಎಕ. IV (R), ಎಳಂದೂ. ೮೬-೩ ; 1193). [ನಿಶ್ಶಂಕ + ಮಲ್ಲ]

**ನಿಶ್ಶಂಕಿ** (ನಾ). ಶಂಕೆಯಿಲ್ಲದವಳು ; ಸಂಶಯವಿಲ್ಲದವಳು : ಕೇಳ್ದಿಯೇನ್ ದೇವಿ ಸಾರಣನೆಂದ ರಣವರದಿಯಂ ? ನಿಶ್ಶಂಕಿಯಾಗಿನ್ನಾದೊಡಂ (ಶ್ರೀರಾಮಾ. ೬೫೯-೩೮೨). [ಸಂ. ನಿಶ್ಶಂಕೀ]

**ನಿಶ್ಶಂಕಿತ** (ನಾ). **೧.** ಸಂಶಯವಿಲ್ಲದಿರುವಿಕೆ; ಶಂಕೆಯಿಲ್ಲದಿರುವಿಕೆ. **೨.** ಸಂಶಯಗ್ರಸ್ತನಲ್ಲದವನು ; ನಿರ್ಭಯನಾದವನು ; ನಿರ್ಭೀತ : ಹುತ್ತದ ಮೇಲಣ ರಜ್ಜು ಮುಟ್ಟಿದರೆಯೂ ಸಾವರು ಶಂಕಿತರಾದವರು ಸರ್ಪದಷ್ಟವಾದರೆಯೂ ಸಾಯರು ನಿಶ್ಶಂಕಿತರಾದವರು (ಒಸಪ. ೭೭೧). **೩.** [ಜೈನ] ಜಿನಮತದಲ್ಲಿ ಸಂಶಯ ಪಡದಿರುವಿಕೆ ; ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಮೊದಲನೆಯದು : ಮೊದಲ ದರ್ಶನವಿಶುದ್ಧಿಯೆಂಬುದು ನಿಶ್ಶಂಕಿತ ನಿಷ್ಕಾಂಕ್ಷಿತ ನಿರ್ವಿಚಿಕಿತ್ಸಾ . . . ವಾತ್ಸಲ್ಯ ಪ್ರಭಾವನಾ ಎಂಬೆಂಟಱೊಳರ್ಹದುಪದಿಷ್ಟಮಪ್ಪ ಮಾರ್ಗಮಿದಕ್ಕುಮಾಗದೆಂಬ ಸಂಶಯಮಂ ಪತ್ತುವಿಡುವುದು ನಿಶ್ಶಂಕೆ (ಚಾವುಂಪು. ೨೪೧). 'ನಿಶ್ಶಂಕೆ' ಪರಾ. [ಸಂ.]

**ನಿಶ್ಶಂಕಿತ್ವ** (ನಾ). = ನಿಶ್ಶಂಕಿತ **೩ :** ನೀನಿಲ್ಲಿ ಪುಟ್ಟಿದುದನಱಿದು ಮೋಕ್ಷಕ್ಕೆ ಮುಖ್ಯಕಾರಣಮಪ್ಪ ಸಮ್ಯಕ್ತ್ವಮಂ ಕೈಕೊಳಿಸಲು ಬಂದೆ ಮೆಂದು ನಿಶ್ಶಂಕಿತ್ವಾದಿಯುಕ್ತಮಪ್ಪ ಸಮ್ಯಕ್ತ್ವಮಂ ಕೈಕೊಳಿಸಿ (ಚಾವುಂಪು. ೭೮). [ಸಂ.]

**ನಿಶ್ಶಂಕೆ** (ನಾ). **೧.** ಸಂಶಯವಿಲ್ಲದಿರುವಿಕೆ; ಶಂಕೆಯಿಲ್ಲದಿರುವಿಕೆ: ನಿಶ್ಶಂಕೆಯಿಂ ನೃಪನ ಪೇೞಿ (ಶಬ್ದ. ೧೩೪ ಪ್ರಯೋ) ; ಗೋಪರಿರಾ ನಿಶ್ಶಂಕೆಯಲಿ ಹೊಜಿವಡುವುದಂಜದೆ ಗುಹಾಂತರವ (ಸಿಭಾಗ.೧೦–೭೩–೮); ರಾಮನಂ ಕಳುಹು ನಿಶ್ಶಂಕೆಯಿಂ (ಶ್ರೀರಾಪಟಾ.೩೦–೭೧). **೨.** [ಜೈನ] ಜಿನಮತದಲ್ಲಿ ಸಂಶಯವನ್ನು ಪಡದಿರುವಿಕೆ; ಸಮ್ಯಗ್ದರ್ಶನದ ಎಂಟು ಅವಯವಗಳಲ್ಲಿ ಮೊದಲನೆಯದು ; ಈ ಅವಯವಗಳ ವಿವರಣೆ ಈ ರೀತಿ ಇದೆ : "ಅವಯವ—೮ : ಸಮ್ಯಗ್ದರ್ಶನದ : ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿತ್ವ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ, ಪ್ರಭಾವನೆ; ಎಂದರೆ ಕ್ರಮವಾಗಿ ಜಿನಮತದಲ್ಲಿ ಸಂಶಯಪಡದಿರುವುದು, ಭೋಗಗಳನ್ನು ಬಯಸದಿರುವುದು, ದೇಹವನ್ನು ಪ್ರೀತಿಸದೆ ದ್ವೇಷಿಸದೆ ಸಮಭಾವದಿಂದಿರುವುದು, ಮೂರು ಮೂಢತೆಗಳನ್ನು ಬಿಡುವುದು, ಪೂರ್ಣಶ್ರದ್ಧೆಯಿಲ್ಲದವರ ದೋಷಗಳನ್ನು ತಿದ್ದುವುದು, ಸಮ್ಯಗ್ದರ್ಶನದಲ್ಲಿ ಜೀವಿಗಳನ್ನು ನೆಲೆಗೊಳಿಸುವುದು, ಸಾಧುಗಳಲ್ಲಿ ವಾತ್ಸಲ್ಯವಿಡುವುದು, ಜೈನಧರ್ಮದ ಪ್ರಭಾವವನ್ನು ಬೆಳಗುವುದು (ಆದಿಪು. ೫–೫೫–೫೮)" (ಶ್ರೀವತ್ಸ. ೪೦): ಮೊದಲ ದರ್ಶನ ವಿಶುದ್ಧಿಯೆಂಬುದು ನಿಶ್ಶಂಕಿತ ನಿಷ್ಕಾಂಕ್ಷಿತ . . . ಪ್ರಭಾವನಾ ಎಂಬೆಂಟಱೊಳರ್ಹದುಪದಿಷ್ಟಮಪ್ಪ ಮಾರ್ಗಮಿದಕ್ಕುಮಾಗದೆಂಬ ಸಂಶಯಮಂ ಪತ್ತುವಿಡುವುದು ನಿಶ್ಶಂಕೆ (ಚಾವುಂಪು. ೨೪೧) ; ಈ ದರ್ಶನಸೌಖ್ಯಕ್ಕಷ್ಟಾಂಗಮುಂ ಶರೀರಕ್ಕವಯವಮುಂ ಮರಕ್ಕೆ ಶಾಖೆಯುಮೆಂತಂತೆ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮುಂ ವಾತ್ಸಲ್ಯಮುಂ ಧರ್ಮಪ್ರಭಾವನೆಯುಮೆಂದು ಎಸೆವಂಗಮೆಂಟಱಿಂ (ಧರ್ಮಾಮೃ. ೧–೭೮) ; ಇದು ದೈವಮಿಂತುಟಾಗಮಮಿದು ತಪವೆಂದಱಿದು ನಂಬಿ ತಳರದೆ ಮನಮಂ ಪದಿನಾಱಿಡೆಗೆಸಪುತ್ತಿರದೆ ನಿಲ್ವುದು ನಿರಾಕುಳಂ ನಿಶ್ಶಂಕೆ (ಶ್ರಾಪಕಾ.೪೧–೭). [ಸಂ. ನಿಶ್ಶಂಕಾ]

**ನಿಶ್ಶಕ್ತ** (ನಾ). ಶಕ್ತಿಹೀನವಾದ ವ್ಯಕ್ತಿ : ಬಳಲಿದ ಹೆಂಗಸು, ನಿಶ್ಶಕ್ತಳಾದ ಹೆಂಗಸು, ಹೆಚ್ಚು ಮಾತಾಡುವುದು ಸರಿಯಲ್ಲ ಎಂಬ ಅರಿವು ಶೀನಪ್ಪನಿಗೆ ಬಹು ಬೇಗ ಮೂಡಿತು (ಅನಾಫೆ. ೧೮). [ಸಂ.]

**ನಿಶ್ಶಕ್ತಿ** (ನಾ). ಶಕ್ತಿಹೀನತೆ ; ದುರ್ಬಲತೆ : ತಂದೆಯ ಆರೋಗ್ಯ ಮತ್ತೊಮ್ಮೆ ಕೆಟ್ಟಿತು ನಿಶ್ಶಕ್ತಿ ಹೆಚ್ಚಿತು ಮುಂದೆ (ಇಂಚಾಪ. ೧೮–೭೭) ; ಈಗ ಅವರಿಗೆ ಮೈ ಚೆನ್ನಾಗಿಲ್ಲ. ಯಾವಾಗಲೂ ನಿಶ್ಶಕ್ತಿ (ಬಸತಂ. ೨೩೮) ; ಆ ನಾಲ್ವರ ಕೃಪಾಶಕ್ತಿ ಚೇತರಿಸಿತೆನೆ ತನ್ನ ಚೇತನದಿ, ಜಾನಕಿಗೆ ಮಾಣ್ದತ್ತು ನಿರಶನವ್ರತಜನ್ಯ ನಿಶ್ಶಕ್ತಿ (ಶ್ರೀರಾಮಾ. ೪೮೭–೩೦).
[ಸಂ.]

**ನಿಶ್ಶತ್ರು** (ನಾ). ಶತ್ರುವಿಲ್ಲದವನು ; ಹಗೆಯಿಲ್ಲದವನು : ವನಜದ್ವಿಟ್ಸುತಮೊಂದಿದಂದುದಯದೊಳ್ ಪ್ರಾಜ್ಞಂ . . . ರಿಪುವೊಳ್ ನಿಶ್ಶತ್ರು (ಜಾತತಿ. ೧೮–೧೦). [ಸಂ.]

**ನಿಶ್ಶಬ್ದ** (ನಾ). **೧.** ಶಬ್ದವಿಲ್ಲದಿರುವಿಕೆ ; ನೀರವತೆ ; ಮೌನ : ಶಬ್ದವೇದಿಗಳೆಂದು ನುಡಿದು ನಡೆವರು ನೋಡಾ ನಿಶ್ಶಬ್ದ ವೇದಿಸದಿದ್ದರೆ ಗುಹೇಶ್ವರ ನೋಡಿ ನೋಡಿ ನಗುತ್ತಿಪ್ಪ ನೋಡಾ (ಅವಚಂ.೧೦೬–೪೮೩); ನಿಶ್ಶಬ್ದಮಿರ್ದುದಾ ಮಂದಿರಂ (ಶ್ರೀರಾಮಾ. ೫೭೨–೫೫೨) ; ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ ನಿಶ್ಶಬ್ದವಿದ್ದರೂ ಮೌನವಲ್ಲ (ನನಲ್ಲ. ೧೩–೧). **೨.** ಪರಮಾತ್ಮ. [ಸಂ.]

**ನಿಶ್ಶಬ್ದತೆ** (ನಾ). ನಿಶ್ಶಬ್ದವಾಗಿರುವಿಕೆ ; ನೀರವತೆ ; ಮಂದ್ರಗಂಭೀರ ದುಂದುಭಿಧ್ವನಿ ಸಭಾನಿಶ್ಶಬ್ದತೆಯಂ ಮಥಿಸಿ ಪೊಣ್ಮೆ (ಶ್ರೀರಾಮಾ. ೧೩–೩೫೨) ; ಕೆಲವು ನಿಮಿಷಗಳು ನಿಶ್ಶಬ್ದತೆಯಲ್ಲಿ ಕಳೆದವು (ಹೇಮಂತ. ೧೯). [ಸಂ. ನಿಶ್ಶಬ್ದತಾ]

**ನಿಶ್ಶಬ್ದವೇದಿ** (ನಾ). ಆತ್ಮಜ್ಞಾನಿ : ಲಿಂಗಜಂಗಮದ ಮಾಟ ಸಮರ್ಪಿತವಾಯಿತ್ತಲ್ಲ ಬಸವಣ್ಣ ನಿಶ್ಶಬ್ದವೇದಿಯಾದೆಯಲ್ಲ ಬಸವಣ್ಣ (ಮಡಿಮಾ. ೫೫–೭೮). [ಸಂ. ನಿಶ್ಶಬ್ದವೇದಿನ್]

**ನಿಶ್ಶಬ್ದಿ** (ನಾ). **೧.** ಶಬ್ದದಿಂದ ತಿಳಿಯದುದು ; ಶಬ್ದಕ್ಕೆ ಅತೀತವಾದುದು : ನಿಶ್ಶಬ್ದಿಯೈ ಈಶ್ವರಕೃಪಾಬ್ಧಿ (ಶ್ರೀರಾಮಾ.೩೯೦–೭೬೩). **೨.** ಮಾತನಾಡದಿರುವವನು ; ಮೌನಿ : ಶಬ್ದಿಯಾದಾತ ತರುಗಳ ಹೋತ ನಿಶ್ಶಬ್ದಿಯಾದಾತ ಪಾಷಾಣದ ಹೋತ . . . ಅಱಿವಿನ ಕುಱುಹನಳಿದುಳಿದು ಗುಹೇಶ್ವರನೆಂಬ ಲಿಂಗವ ಹೋತವರನಾರನೂ ಕಾಣೆ (ಅವಚಂ. ೧೦೮–೪೯೧). [ಸಂ. ನಿಶ್ಶಬ್ದಿನ್]

**ನಿಶ್ಶರಣಯುದ್ಧ** (ನಾ). ಶರಣಾಗದ ಯುದ್ಧ : ಈ ನಿಷ್ಠುರ ನಿಶ್ಶರಣಯುದ್ಧಕ್ಕೆ ಬೇಕಾದ ಸಾಹಾಯ್ಯಸಾಮಗ್ರಿಗಳ ಅಣಿಯನುಕೂಲತೆಗಳ ಸತ್ತ್ವಶಕ್ತಿಗಳ ಐಶ್ವರ್ಯವು ನನಗೆ ಉಳ್ಳಷ್ಟು ಪ್ರೌಢೆಯರಾಗಿದ್ದರೂ ಈ ಭೂತಗಳಿಗೆ ದಿಟವಾಗಿ ಇಲ್ಲ (ಜಿಟ್ಟಆ. ೨೫–೪).
[ಸಂ.]

**ನಿಶ್ಶಲಾಕ, ನಿಶ್ಶಳಾಕ** (ನಾ). ರಹಸ್ಯಸ್ಥಳ ; ಏಕಾಂತ : "ವಿವಿಕ್ತಃ, ವಿಜನಃ, ಛನ್ನಃ, ನಿಶ್ಶಲಾಕಃ, ರಹಃ, ರಹಸ್, ಉಪಾಂಶು—೭ ಏಕಾಂತಕ್ಕೆ ತಕ್ಕ ವಿಜನವಾದ ರಹಸ್ಯಸ್ಥಳಕ್ಕೆ ಹೆಸರುಗಳು" (ಸಿದ್ಧಾಂಶಿ. ೨೪೨). **ನಿಶ್ಶಳಾಕ :** "ರಹಃ, ಪ್ರಚ್ಛನ್ನಂ, ಏಕಾಂತಂ, ನಿಶ್ಶಳಾಕಂ . . . ಗುಹ್ಯಂ—ಈ ೯ ಏಕಾಂತಂ" (ಹಲಾಯು. ೧೧೭–೨೩). [ಸಂ.]

**ನಿಶ್ಶಲ್ಯ** (ನಾ). **೧.** ಬಾಣದಿಂದ ದೂರವಾದುದು ; ಕಣೆಯಿಂದ ಬೇರಾದುದು. **೨.** ಮನಸ್ಸಿನಲ್ಲಿ ಕೊರಗಿಲ್ಲದಿರುವಿಕೆ. **೩.** [ಜೈನ] ಮಾಯಾ (ಕಪಟ), ಮಿಥ್ಯಾ (ಶ್ರದ್ಧೆಯ ಅಭಾವ), ನಿದಾನ (ಭೋಗಾಕಾಂಕ್ಷೆ)ಗಳೆಂಬ ಶಲ್ಯಗಳಿಲ್ಲದಿರುವುದು ; ಈ ಶಲ್ಯವೆಂದರೆ ವ್ರತಗಳನ್ನಾಚರಿಸುವವರಿಗೆ ಉಂಟಾಗುವ ದೋಷ ಅಥವಾ ವಿಘ್ನಗಳು. ವ್ರತಗಳನ್ನಾಚರಿಸುವವರು ಮಾಯೆ, ಮಿಥ್ಯಾತ್ವ, ನಿದಾನ ಎಂಬ ಮೂರು ಬಗೆಯ ಶಲ್ಯಗಳಿಲ್ಲದವರಾಗಿರಬೇಕು. ಮನಸ್ಸಿನಲ್ಲೊಂದು ಕ್ರಿಯೆಯಲ್ಲೊಂದು ಈ ತರದ ಸ್ಥಿತಿಯು ಮಾಯಾಶಲ್ಯ. ತತ್ತ್ವಾರ್ಥದಲ್ಲಿ ಶ್ರದ್ಧೆಯಿಲ್ಲದಿರುವುದು ಮಿಥ್ಯಾತ್ವಶಲ್ಯ. ಭವಿಷ್ಯತ್ಕಾಲದಲ್ಲಿ ಇಂತಹ ವಿಷಯೋಪಭೋಗಗಳು ದೊರೆಯಬೇಕೆಂದು ಬಯಸುವುದು

ನಿದಾನಶಲ್ಯ : ಪೋದ ಭವಾಯತ್ತಂ ವಿರೋಧಂ ಮನದೊಳಗೆ ನಿಶ್ಶಲ್ಯನಿನ್ನೆಂದು ನಾಕಪ್ರಭವೋದ್ಯನ್ಮಾಲೆಯಂ ಭೂಪತಿಯನೆಸೆದೊಜಿಲ್ದರ್ಚಿಸಿರ್ದಂ ಸುರೇಂದ್ರಂ (ಶಾಂತಿಪು. ೯-೯೩). ೪. ಮಾಯಾ, ಮಿಥ್ಯಾತ್ವ ಮತ್ತು ನಿದಾನವೆಂಬ ಶಲ್ಯಗಳಿಲ್ಲದಿರುವವನು : ದಶಾನನಂ . . . ಇಂದ್ರನಂ ಬರಿಸಿ ನಿಷ್ಕಷಾಯಂ ನಿನ್ನ ರಾಜ್ಯದೊಳ್ ಸುಖಮಿರೆಂದು ಕಟಿಾಪುವುದುಂ ರಾವಣಂಗೆ ನಿಶ್ಶಲ್ಯನಾಗಿ ತನ್ನ ಪೊಟಲ್ಗೆ ವಂದು . . . ದೀಕ್ಷೆಗೊಂಡು ಮೋಕ್ಷಕ್ಕೆವೋದಂ (ಪಂರಾಮಾ. ೧೦-೨೧೨ ವ) ; ಪ್ರತೀಂದ್ರಂ ನಿಶ್ಶಲ್ಯಂ ನಿಯಮಿತಮನೋವೃತ್ತಿ ಸುಭಗಂ ಮಿತತ್ಯಾಗೋದ್ಯೋಗಂ ದೃಢತರ ಮಹಾಸಂಯಮಸುಖಂ (ಮಲ್ಲಿಪು. ೧೧-೩೭). 'ಅಶಲ್ಯ', 'ಶಲ್ಯ₂' ಪರಾ. [ಸಂ.]

**ನಿಶ್ಶಲ್ಯಂಗೆಯ್** (ಕ್ರಿ). [ಜೈನ] ಮಾಯಾ, ಮಿಥ್ಯಾತ್ವ ಮತ್ತು ನಿದಾನವೆಂಬ ಶಲ್ಯಗಳನ್ನು ನಿವಾರಿಸು ; ಶಲ್ಯಗಳಿಲ್ಲದಿರುವಂತೆ ಮಾಡು : ಎಲ್ಲರುಮಂ ಕ್ಷಮೆಗೊಳಿಸಿ ನಿಶ್ಶಲ್ಯಂಗೆಯ್ದು ವಿದ್ಯುದಂಗನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ರಾಜ್ಯಾಭಿಷೇಕಂಗೆಯ್ದು (ವಡ್ಡಾರಾ. ೧೩೩-೧೪); ಅನುಮೆನ್ನ ಜನ್ಮಾಂತರಮನಱಿದೆನೆಂಬುದುಮದಂ ಕೇಳ್ದು ನೀವುಂ ಕೊಲೆ ಸತ್ತವರೆ ನಾಮೆಂದಱಿಪಿ ನಿಶ್ಶಲ್ಯಂಗೆಯ್ದು ಬಂದಿಸಿ ಪೋದರೆಂದು ಸುಲೋಚನೆ ಜಯಕುಮಾರಂಗೆ ಪೇೞ್ದು (ಚಾವುಂಪು.೭೧); ರಾಮಂ . . . ಲಕ್ಷ್ಮಣಾದಿಗಳ್ವೆರಸು ನಿಶ್ಶಲ್ಯಂಗೆಯ್ದು ದಿವ್ಯಮುನಿಯ ಸಭಾಮಂಡಲಮಂ ಪೊಱಮಟ್ಟು (ಪಂರಾಮಾ. ೧೬-೪೧ ವ).

[ನಿಶ್ಶಲ್ಯ + ಕೆಯ್₁]

**ನಿಶ್ಶಸ್ತ್ರ** (ಗು). ಆಯುಧಗಳಿಲ್ಲದಿರುವ ; ನಿರಾಯುಧವಾದ : ಹೊಟ್ಟೆಯ ಹೆಸರಿನಲ್ಲಿ ನಿಶ್ಶಸ್ತ್ರ ಸ್ತ್ರೀಪುರುಷರ ಮೇಲೆ ಗುಂಡು ಹಾರಿಸುವುದೇನು ? (ಬಾಳಿಗಿ. ೧೯೩). [ಸಂ.]

**ನಿಶ್ಶಸ್ತ್ರೀಕರಣ** (ನಾ). ಆಯುಧವಿಲ್ಲದಂತೆ ಮಾಡುವಿಕೆ; ಶಸ್ತ್ರತ್ಯಾಗ : ವಿಶ್ವದಲ್ಲಿ ಈಗೀಗ ನಿಶ್ಶಸ್ತ್ರೀಕರಣದ ಬಗ್ಗೆ ಇರುವ ಅಗತ್ಯವು ಹೆಚ್ಚು ಸ್ಪಷ್ಟವಾಗಿ ರೂಪುಗೊಳ್ಳುತ್ತಿದೆ (ರೂಢಿ). [ಸಂ.]

**ನಿಶ್ಶಳಾಕ** 'ನಿಶ್ಶಲಾಕ' ನೋ.

**ನಿಶ್ಶಾಠ್ಯ** (ನಾ). ಕಪಟವಿಲ್ಲದುದು ; ವಂಚನೆಯಿಲ್ಲದುದು ; ಪ್ರಾಮಾಣಿಕವಾದುದು ; ದಿಟ : "ಅನವಸ್ಕರಂ ನಿಶ್ಶಾಠ್ಯಮೆ ಅತಿ ದಿಟಮುದಕ್ಕು" (ಪೆಂಗರಾ. ೧೩೩-೩೧). [ಸಂ.]

**ನಿಶ್ಶಿಖರ** (ನಾ). ಶಿಖರವಿಲ್ಲದಿರುವುದು ; ಶಿಖರದ ತುಟ್ಟತುದಿ : ಅನಂತತೆಯನಾಕ್ರಮಿಸೆ ನಿಶ್ಶಿಖರಮೆನಲೇರ್ದ ಗಿರಿಯ ಸಾಹಸಗರ್ವ ಗೋಪುರ ಶಿಲ್ಪಕೃತಿಯಂತೆ ನಿಮಿರಿ ! ರೋಮಾಂಚಿಸಿತು ಸೃಷ್ಟಿ (ಶ್ರೀರಾಮಾ. ೪೦೫-೭೭). [ಸಂ.]

**ನಿಶ್ಶಿಥಿಲ** (ನಾ). ಸ್ಪಷ್ಟವಾದುದು ; ವ್ಯಕ್ತವಾದುದು ; ನಿರ್ಧಾರವಾದುದು ; ನಿಶ್ಚಯವಾದುದು : ಪಥವನಂಬುಧಿ ತೋಱದಿರೆ ಸುರಮಥನ ಸೀತೆಯನೀಯದಿರೆ ನಿಶ್ಶಿಥಿಲವಲ್ಲಾ ಮೇಲೆ ನೆಗಳುವ ದಾಯ ದೇವರಿಗೆ (ತೊರರಾ. ೬-೪-೧೯). [ಸಂ.]

**ನಿಶ್ಶೂನ್ಯ** (ನಾ). [ವೀಶೈ] ಸೂಕ್ಷ್ಮತಮ ಶೂನ್ಯ; ಮಹಾಶೂನ್ಯ; ಪರಮಾತ್ಮ ; ಶೂನ್ಯಾತೀತ : ಅನುಪಮದ ನಿಶ್ಶೂನ್ಯವೇ ನಿರಾಕಾರವೆ ಗಮನ ನಿರಂತರ ಪಾತಾಳ ಊರ್ಧ್ವಪವನ ತ್ರಿಭುವನಗಿರಿಯೆಂಬ ಪರ್ವತವನೇಱಿ . . . ಸುಳಿದಾಡುವ ಮಹಾಮಹಿಮಂಗೆ ಇಹಲೋಕವೇನು ಪರಲೋಕವೇನು (ಅಪಚಂ. ೪೪-೩೭೪) ; ನಿಮ್ಮಂತರಂಗವೆಂಬ ಚಿದಂಬರದಲ್ಲಿ ನಿಶ್ಶೂನ್ಯವಾಗಿರಿಸೆನ್ನ (ಆದಸ. ೧೩-೨೭) ; ಇಂತೀ ತ್ರಿವಿಧಪ್ರಸಾದ ಏಕಾರ್ಥವಾಗಿ ಮಹಾಘನ ಪರಿಪೂರ್ಣ ಪ್ರಸಾದ ಪಳವಟ್ಟ ಶರಣನು ಜ್ಞಾನಿ ಅಲ್ಲ ಅಜ್ಞಾನಿ ಮುನ್ನವೇ ಅಲ್ಲ ಶೂನ್ಯನಲ್ಲ ನಿಶ್ಶೂನ್ಯನಲ್ಲ (ಮಹಾದೇ. ... ೧೦೪-೨೩೫). 'ನಿರ್ವಯಲು' ಪರಾ. [ಸಂ.]

**ನಿಶ್ಶೇಷ** (ಗು). ೧. (ಉಳಿದ ಎಲ್ಲವನ್ನೂ) ಮುಳುಗಿಸುವ ; ಅಡಗಿಸುವ : ನಿಸ್ಸಾಳಧ್ವನಿಗಳ್ ಢಳಢಳಮೆನೆ ನಿಶ್ಶೇ[ಪಾಠಾಂ. ಸ್ಸೇ]ಷಧ್ವನಿ ಭರದಿಂ ಘೋರಿಸೆನೆ (ತಿರುನಾ. ಪೇ. ೨೨೨-೨). (ನಾ). ೨. ಉಳಿಯದುದು ; ಶೇಷವಿಲ್ಲದುದು : ಸಂಪೂರ್ಣ ಮುಗಿದುದು : "ನಿಶ್ಶೇಷಂ, ನ್ಯಕ್ಷಂ - ಈ ೨ ಉಳಿಯದುದು" (ಹಲಾಯು.೧೨೭-೮೫); ಲಬ್ಧಕಷಾಯವೈರಿಜಯನಂ ವಿಜ್ಞಾತನಿಶ್ಶೇಷವಾಙ್ಮಯನಂ ಸ್ವೀಕೃತ ಸತ್ತಪಃ ಪ್ರಚಯನಂ . . . ವಂದಿಪೆನಟ್ಟಿಯಿಂದೆ (ಚಂಪ್ರಪು. ೧-೨೧) ; ತತ್ಕಾನನಾಂತರದೊಳ್ ಪೆರ್ಬುಲಿಯಿಂ ದುರ್ದೇಣಕುಲಮಂ ನಿಶ್ಶೇಷಮಂ ಮಾಡುತಂ (ನಳಚಂ. ೭೬) ; ಕುವರನನ್ನು ಯುವರಾಜಪದವಿಗೆ ತಂದು ಕೊಳ್ಳೋಣವೆಂದು ನೀವು ಹೇಳಿದ ಮೇಲೆ ನನ್ನ ಸಂಕಟ ನಿಶ್ಶೇಷವಾಯಿತು (ಶಾಂತಲಾ. ೩೯೧). ೩. ಸಂಪೂರ್ಣನಾಶ,—ಅಳಿವು : ನಿಯತವಿದು ನಿಶ್ಶೇಷ ನಿಮ್ಮನ್ವಯಕೆ ನಿರ್ವಾಹವನು ಗಾಂಧಾರಿಯಲಿ ನಿಮ್ಮಯ್ಯನಲಿ ಬೆಸೆಗೊಳ್ಳೆಂದನಾ ಶಕುನಿ (ಕುವ್ಯಾಸ. ೧೬-೭). [ಸಂ.]

**ನಿಶ್ಶೇಷಂ** (ಅ). ಸಂಪೂರ್ಣವಾಗಿ ; ಏನೂ ಉಳಿದದಂತೆ : ಭವದೇಕಶೇಷಮಾದುದು ಯುವರಾಜಾದಿಗಳ ಸಾಯೆ ನೀಂ ಕಾದದೆ ಕೌರವ ನಾಯಕ ನಿಶ್ಶೇಷಂ ಭುವನಮಶೇಷಂ ಬಱಿಕ್ಕೆ ಶೇಷಂಗೆ ಭರಂ (ಗದಾಯು. ೩-೮೩). [ಸಂ.]

**ನಿಶ್ಶೇಷಿಸು** (ಕ್ರಿ). ಸ್ವಲ್ಪವೂ ಉಳಿಯದಂತೆ ಮಾಡು ; ಸಂಪೂರ್ಣವಾಗಿ ನಾಶಮಾಡು ; ಪೂರ್ಣವಾಗಿ ಅಳಿಸು : ಶತ್ರು ವಿಷ ಋಣ ರೋಗ ವಹ್ನಿಗಳಿತ್ತಲಾದರೂ ಸ್ವಲ್ಪವುಳಿದರು ಮತ್ತೆ ಬೆಳೆದಾವರಿಸುವುವು ಯಿವ ಕಿತ್ತು ನಿಶ್ಶೇಷಿಸುವುದುತ್ತಮ (ನೀಸಾರಾ. ೨೪೧).

[ನಿಶ್ಶೇಷ + -ಇಸು₃]

**ನಿಶ್ಶೇಷೀಕರಣ** (ನಾ). ೧. ಸಂಪೂರ್ಣವಾಗಿ ನಾಶಮಾಡುವಿಕೆ. ೨. ಪಂಚಶಕ್ತಿಮಂತ್ರಗಳಲ್ಲಿ ಒಂದು : ಜೃಂಭಕ ಪ್ರಸ್ಥಾಪನ ಅಪ್ರತಿಹತ ನಿಶ್ಶೇಷೀಕರಣ ಜೀವಗ್ರಾಹಗಳೆಂಬ ಪಂಚಶಕ್ತಿಮಂತ್ರಂಗಳಂ . . . ಬೇಱೆ ಬೇಱೆ ಉಪದೇಶ ಅನುಷ್ಠಾನ ಪರೀಕ್ಷೆಗಳಿಂ ವಿವೇಕಿಸಿ ತಿಳಿದಿರಲಕ್ಕುಂ (ವಿವೇಕ. ೮೬). [ಸಂ.]

**ನಿಶ್ಶೋಧ್ಯ** (ನಾ). ಕಲ್ಮಷವಿಲ್ಲದ ಹಾಗೆ ಶುದ್ಧಮಾಡಿದುದು : "ನಿರ್ಣಿಕ್ತಂ, ಶೋಧಿತಂ, ಮೃಷ್ಟಂ, ನಿಶ್ಶೋಧ್ಯಂ, ಅನವಸ್ಕರಂ – ೫ ಕಲ್ಮಷವಿಲ್ಲದ ಹಾಗೆ ಶುದ್ಧಗೊಳಿಸಲ್ಪಟ್ಟದ್ದು" (ಸಿದ್ಧಾಂತಿ. ೩೩೮). [ಸಂ.]

**ನಿಶ್ಶ್ರೇಣಿಕ** (ನಾ). = ನಿಶ್ರೇಣಿ : ಜೀವಹಿಂಸಾವಿರತಿ . . . ಬಹ್ವಾರಂಭಾಕಾಂಕ್ಷೆಯೆಂದಿಂತಿವು ಜಿನಗದಿತಾಣುಬ್ರತಂಗಳ್ ವಿನೇಯಾಧಾರಂಗಳ್ ಭಾಗಧೇಯಪ್ರಕೃತಿಗಳಮೃತಾವಾಸ ನಿಶ್ಶ್ರೇಣಿಕಂಗಳ್ (ಸುಕುಮಾ. ೬-೯). [ಸಂ.]

**ನಿಶ್ಶ್ರೇಯಸ** (ನಾ). ಶಾಶ್ವತ ಸುಖ ; ಮೋಕ್ಷ; ಮುಕ್ತಿ : ಗುರು ಪಞ್ಚಾಷ್ಟಮ ಕಂಟಕಂಗಳೆನಿಪಾಱುಂ ಗೇಹದೊಳ್ ಸ್ವೋಚ್ಚದಲ್ಲಿರೆ . . . ನಿಶ್ಶ್ರೇಯಸಲಕ್ಷ್ಮಿಯೊಳ್ ನೆರೆದು [ತಾಂ] ಸತ್ಸೌಖ್ಯನಕ್ಕುಂ ನರಂ (ಜಾತತಿ. ೨೩-೨೮) ; ನಿಶ್ಶೇಷವಾಗಿ ಶ್ರೇಯಸ್ಸಾಗುವುದು ನಿಶ್ಶ್ರೇಯಸವು ಅಂದರೆ ಮೋಕ್ಷವು (ಆರ್ಯಧ. ೧೭). [ಸಂ.]

**ನಿಷಂಗ** (ನಾ). ೧. ಸಂಗ ; ಸಂಪರ್ಕ ; ಸಂಬಂಧ. ೨. ಬತ್ತಳಿಕೆ; ತೂಣೀರ : "ತೂಣೀರಮುಪಾಸಂಗಂ ಬಾಣಧಿ ಬಾಣಾಶ್ರಯಂ ನಿಷಂಗಂ ಡೊಣೆಗಳ್" (ವಸ್ತುಕೋ. ೮೫-೧೯) ; ನಿಜಾಗ್ರಸ್ಕಂಧದೊಳ್ ಕೇದಗೆಯೆಸೆವರಲೆಂದೆಂಬ ಕೂರಂಬು ತೀವಿರ್ದ ನಿಷಂಗಂ ಕಣ್ಗೊಳಲ್ಕೊಲ್ಲೆಯ

ನನೆಗಣೆಯುಂ ತೂಗುತುಂ ಕಂತುವೀ ಬಂದನೆನುತ್ತುಂ ಗರ್ಜಿಪಂತಾದುದು ವಿರಹಿಗಳಂ ಕೇಕಿಭೇಕಪ್ರಣಾದಂ (ಜಗವಿ. ೪-೨೧) ; ಅಗ್ನಿಯಿತ್ತನು ಹರಿ ಧನಂಜಯರಿಗೆ ರಥಂಗಳ . . . ವರತನುತ್ರ ಸಿತಾಶ್ವವಕ್ಷಯ ಶರ ನಿಷಂಗಾದಿಗಳ (ಕುವ್ಯಾಅ. ೨೦-೨೦) ; ಆ ವನಂ . . . ನೀರಜದಂತೆ ನಿಷಂಗದಂತೆ ನಿಬಿಡಶಿಳೀಮುಖಮುಂ . . . ಎನಿಸಿದುದು (ರಾಜಶೇ. ೨-೭೮ ಪ) ; ಸರಂದೆಗೆಯದಿರ್ಪುವು ಕೋಗಿಲೆಗಳ್ ನಿಷಂಗದಿಂದರೆಯುಗಿದಂಬನಂಜುತುಪಸಂಹರಿಪಂ ಸ್ಮರಂ (ಶಾಕುಂತ. ೮೧-೧೩೫). **೩.** ಖಡ್ಗ. [ಸಂ.]

**ನಿಷಂಗಿ** (ನಾ). ಬತ್ತಳಿಕೆಯನ್ನು ಧರಿಸಿದವನು ; ಬಿಲ್ಲುಗಾರ : "ಧನ್ವೀ, ಧನುಷ್ಮಾನ್, ಧಾನುಷ್ಕಃ, ನಿಷಂಗೀ, ಅಸ್ತ್ರೀ, ಧನುರ್ಧರಃ – ೬ ಬಿಲುಗಾರನ ಹೆಸರು" (ಸಿದ್ಧಾಂತಿ. ೨೫೭). [ಸಂ. ನಿಷಂಗಿನ್]

**ನಿಷಣ್ಣ** (ಗು). **೧.** ಕುಳಿತುಕೊಂಡಿರುವ ; ಆಸನಸ್ಥ : ಆ ಕುಮಾರೋತ್ತಮಂ ನಿರವಧಿ ಚತುರುದಧಿವನನಿಷಣ್ಣ ಕಿನ್ನರೀಜನಸಂಗೀಯಮಾನ ಮಾನನೀಯ ವಿಶದತರನಿಜಯಶಸ್ತೋಮದಿಂ ಧವಳೀಕೃತನಿಖಿಳ ದಿಕ್ಪಾಳಕನಿಳಯನಪ್ಪುದುಂ (ಬಾಧಪು. ೯-೮೮ ಪ). (ನಾ). **೨.** ಕುಳಿತಿರುವವನು ; ಕುಳಿತುಕೊಂಡವನು : ಅಂತಿರ್ದನಂ ತ್ರಿಪ್ರದಕ್ಷಿಣಂಗೆಯ್ದು ವಿವಿಧಪೂಜಾಪುರಸ್ಸರಂ ಗುರುಭಕ್ತಿಯಿಂ ವಂದಿಸಿ ತದಾಶೀರ್ವಚನಾಮೃತಭರಿತಕರ್ಣಕುಹರನುಂ ಪಾದಪ್ರದೇಶನಿಷಣ್ಣನುಮಾಗೆ (ಚಂದ್ರಪ್ರ. ೩-೨ ಪ). [ಸಂ.]

**ನಿಷದ್ಯಾಕ್ರಿಯೆ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂಬತ್ತನೆಯದು ; ℙ ಶಿಶುವನ್ನು ಉತ್ತಮವಾದ ಆಸನದ ಮೇಲೆ ಕುಳ್ಳಿರಿಸಿ ಸಿದ್ಧಾರ್ಚನೆ ಮೊದಲಾದ ವಿಧಿಗಳನ್ನು ನೆರವೇರಿಸುವುದು : ಮಂಗಳಾಳಂಕೃತಮಪ್ಪ ವಿಸ್ತೀರ್ಣತ ತಲ್ಪದೊಳ್ ಸಿದ್ಧಾರ್ಚನಾವಿಧಿಪೂರ್ವಕಂ ದಿವ್ಯಾಸನಾರ್ಹತ್ವಮುಮುವುತ್ತರೋತ್ತರಮುಮಕ್ಕೆಂದು ಬಾಲಕನನಿಱಿಸುವುದು ನಿಷದ್ಯಾಕ್ರಿಯೆ (ಚಾವುಂಪು. ೭೧೪). 'ದೀಕ್ಷೆ' ಪರಾ. [ಸಂ. ನಿಷದ್ಯಾಕ್ರಿಯಾ]

**ನಿಷದ್ಯಾಪರೀಷಹ** (ನಾ). [ಜೈನ] ಇಪ್ಪತ್ತೆರಡು ಪರೀಷಹಗಳಲ್ಲಿ ಹತ್ತನೆಯದು ; ℙ ಜೈನಮುನಿಗಳು ನಿಯಮಿತಕಾಲದ ವ್ರತವನ್ನು ಕೈಕೊಂಡು ನಿರ್ಜನವಾದ ಸ್ಥಳದಲ್ಲಿ ಕುಳಿತಿದ್ದು, ಆ ಕಾಲದಲ್ಲಿ ವ್ಯಾಘ್ರಾದಿಗಳ ಗರ್ಜನೆ ಮೊದಲಾದುವುಗಳಿಂದ ಅವರಿಗೆ ಆಗುವ ಉಪಸರ್ಗ : ಅನನುಭೂತಪೂರ್ವಪರೇತವನೋದ್ಯಾನಶೂನ್ಯಾಯತನಗಿರಿಗುಹಾಗಹ್ವರಾದಿ ನಿವಾಸಿಯುಂ ಸಹಸ್ರಕಿರಣಸ್ವೇಂದ್ರಿಯಜ್ಞಾನಪ್ರಕಾಶಪರೀಕ್ಷಿತಪ್ರದೇಶದೊಳ್ ನಿಯಮಕ್ರಿಯೆಯಂ ಮಾಡಿ ಕಾಲನಿಯಮದಿಂ ಕುಳ್ಳಿರ್ದನುಂ ಸಿಂಹ ವ್ಯಾಘ್ರಾದಿ ವಿವಿಧಭೀಷಣಧ್ವನಿಶ್ರವಣನಿವೃತ್ತಭಯನುಂ ಚತುರ್ವಿಧೋಪಸರ್ಗಸಹಿಷ್ಣುತ್ವದಿಂ ಅಪ್ರಚ್ಯುತಮೋಕ್ಷಮಾರ್ಗನುಂ ವೀರಾಸನೋತ್ಕುಟಿಕಾಸನಾದಿಗಳಿಂ ಅಚಲಿತವಿಗ್ರಹನುಮಪ್ಪ ಯಮಿಗೆ ತತ್ಕೃತಬಾಧಾಸಹನಂ ನಿಷದ್ಯಾಪರೀಷಹಜಯಮೆಂದು ನಿಶ್ಚಯಿಸೆ ಪಡುಗುಂ (ತತ್ತ್ವಪ್ರ. ೩೩೫). [ಸಂ.]

**ನಿಷದ್ಯೆ** (ನಾ). **೧.** ಹಾಸುಗೆ; ಸುಪ್ಪತ್ತಿಗೆ; ಮೆತ್ತೆ. **೨.** ವ್ಯಾಪಾರದ ಸ್ಥಳ; ಮಾರುಕಟ್ಟೆ; ಅಂಗಡಿಬೀದಿ: "ಆಪಣಃ, ನಿಷದ್ಯಾಯಾಂ . . . ದೊಡ್ಡ ಅಂಗಡಿಗಳಿರುವ ಸ್ಥಳದ ಹೆಸರು" (ಸಿದ್ಧಾಂತಿ. ೮೮). **೩.** = ನಿಷದ್ಯಾಕ್ರಿಯೆ : ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ ಬಹಿರ್ಯಾನ ನಿಷದ್ಯಾನ್ನಪ್ರಾಶನ . . . ತ್ಯಾಗ ನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿ ನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ). 'ದೀಕ್ಷೆ' ಪರಾ. **೪.** = ನಿಷದ್ಯಾಪರೀಷಹ : ನಿಷದ್ಯಾ—ಕುಳ್ಳಿರ್ಪುದುಂ. ಶಯ್ಯಾ—ಒಱಗುವುದುಂ . . . ಅದರ್ಶನಾನಿಕ್ಷಾಯಿಕದರ್ಶನಮುಂ ಪಡೆಯದುದುಮೆಂದು ಪರೀಷಹಂ ದ್ವಾವಿಂಶತಿವಿಧಮಕ್ಕುಂ (ತತ್ತ್ವಪ್ರ. ೩೩೩). [ಸಂ. ನಿಷದ್ಯಾ]

**ನಿಷದ್ವರ** (ನಾ). ಕೆಸರು ; ಪಂಕ : "ಪಂಕಃ, ಸಾದಃ, ನಿಷದ್ವರಃ, ಜಂಬಾಳಃ, ಕರ್ದಮಃ, ಅವಕಿಲಃ – ಈ ೬ ಕೆಸಱು" (ಹಲಾಯು. ೧೧೨-೫೬) ; "ಕರ್ದಮಮೆನಲ್ ಪರಿದಂ ನಿಷದ್ವರಂ ಜಂಬಾಲಮವಕಿಳಂ ಪಂಕಮೆನೆ ಕೆಸಱಿನಿಕ್ಕುಂ" (ಮಂಗರಾ. ೧೨೩-೧೫). [ಸಂ.]

**ನಿಷಧ** (ನಾ). **೧.** ಒಂದು ಪರ್ವತದ ಹೆಸರು ; ℙ ಮೇರು ಪರ್ವತದ ಸುತ್ತಲೂ ಇರುವ ಪರ್ವತಗಳಲ್ಲೊಂದು ; ಹರಿಕ್ಷೇತ್ರ ಮತ್ತು ವಿದೇಹಕ್ಷೇತ್ರಗಳ ಮೇರೆಯಲ್ಲಿರುವ ಈ ಪರ್ವತವು ನಾನೂರು ಯೋಜನ ಎತ್ತರವಾಗಿದೆಯೆಂದೂ ಇದರ ಬಣ್ಣವು ಕಾಸಿದ ಬಂಗಾರದಂತೆ ಇದೆಯೆಂದೂ ನಂಬಲಾಗಿದೆ : "ಹಿಮವಾನ್, ನಿಷಧಃ, ವಿಂಧ್ಯಃ, ಮಾಲ್ಯವಾನ್, ಪಾರಿಯಾತ್ರಕಃ, ಗಂಧಮಾದನಂ . . . ಮುಂತಾದವುಗಳೆಲ್ಲ ಪ್ರಸಿದ್ಧಗಳಾದ ಆಯಾ ಬೆಟ್ಟಗಳ ಬೇರೆ ಬೇರೆ ಹೆಸರುಗಳು" (ಸಿದ್ಧಾಂತಿ. ೧೦೬) ; ಆಗಳಿರ್ವರುಂ ನೀಲ ನಿಷಧ ಗಿರಿಗಳೊಂದೊಂದಱೊಳ್ ಬಂದು ಪೊಣರ್ವಂತೆ ನಿಂದೊರ್ವರೊರ್ವರೆಮೆಯಿಕ್ಕದೆ ನೋಡುವಲ್ಲಿ (ಆದಿಪು. ೧೪-೧೦೪ ಪ) ; ತ್ರಿಕೂಟ ಕುರುವಿಂದ ಪತಂಗ ರುಚಕ ನಿಷಧವೆಂಬೈದು ಗಿರಿಗಳೇ ಟೆಂಕಣ ಗಂಧಮಾದನ ಶೈಲದ ಪಡುವಲ ವಿಪುಲಾದ್ರಿಯ ಮಧ್ಯಭಾಗದೊಳಗಿಹವು (ವಿವೇಕ. ೨೨೯). **೨.** ನಳ ಮಹಾರಾಜನು ಆಳಿದ ಒಂದು ರಾಜ್ಯದ ಹೆಸರು : ಉತ್ತಮೋತ್ತಮ ಚತುರ್ವಿಧ ನಾಯಕನಾಯಿಕಾಮನಃಪ್ರೇಮದಿನೊಪ್ಪುಗುಂ ನಿಷಧಮೆಂಬ ಮಹಾವಿಷಯಂ ಧರಿತ್ರಿಯೊಳ್ (ನಳಚಂ.೯); ಕುರು ನೇಪಾಳ ನಿಷಧ ವಿದರ್ಭ ಧರಣೀಪಾಲತತಿ ಸಂದಣಿಸಿದುದು ಸಾಕೇತ ನಗರಿಯಲಿ (ತೊರರಾ. ೧-೭-೧೮) ; ನಿಷಧವಸುಧಾಪರಿವೃಢಗರ್ವನಿರ್ವಾಪಣ ಪರಾಕು (ಯಾದಚಂ. ೩-೧ ಪ). **೩.** ನಿಷಧರಾಜ್ಯವನ್ನು ಆಳಿದವನು ; ನಳಮಹಾರಾಜ : ಸೃಜಿಸಿದನು ಸುದ್ದಿಯನು ನೃಪಭೂಭುಜರ ನಗರಂಗಳಲಿ ನಿಷಧನ ನಿಜವನಿತೆಗೆ ಪುನಃ ಸ್ವಯಂವರವೆಂದು (ತೊರರಾ. ೩-೨-೧೭). **೪.** [ನಾಟ್ಯ] ಸಂಯುತಹಸ್ತಗಳಲ್ಲಿ ಒಂದು : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತಹಸ್ತಗಳು ಯಾವುವೆಂದರೆ—೧. ಅಂಜಲಿ . . . ೬. ಉತ್ಸಂಗ, ೭. ನಿಷಧ (ಅಭಾನ್ಯ.೪೮). **೫.** = ನಿಷಾದ **೪. ೬.** ಒಂದು ರಾಗದ ಹೆಸರು : "ಮೇಳಕರ್ತರಾಗಗಳು — ೭೨ . . . (ಅ) ಅಸಂಪೂರ್ಣಪದ್ಧತಿಯ : ಕನಕಾಂಬರಿ, ಫೇನದ್ಯುತಿ . . . ಧಾಮವತಿ, ನಿಷಧ, ಕುಂತಳ, ರತಿಪ್ರಿಯ . . . ಕುಸುಮಾಕರ, ರಸಮಂಜರಿ (ಕರ್ನಾಟಕ ಸಂಗೀತ ತರಂಗಿಣಿ. II, –೯)" (ಶ್ರೀವತ್ಸ. ೩೫೪). [ಸಂ.]

**ನಿಷಧಿ** 'ನಿಸಿದಿ' ನೋ.

**ನಿಷಾ** 'ನಶೆ' ನೋ.

**ನಿಷಾಖೋರ** 'ನಿಶಾಖೋರ' ನೋ.

**ನಿಷಾದ** (ನಾ). **೧.** ಬೇಟೆಯಾಡುವವನು ; ಕಿರಾತ ; ಬೇಡ : ಏಕಲವ್ಯಾಹ್ವಯ ನಿಷಾದಾನೀಕಪತಿಯ ಸಹಾಯವನು ಮತ್ತಾ ಕುಮತಿಗಾಚರಿಸುತ್ತೆಂಭತ್ತೆಂಟುಸಾವಿರದ ಭೀಕರಾಕಾರದ ನಿಷಾದಾನೀಕದಲಿ ನಡೆತಂದನಿರುಳು ನಿರಾಕುಳನು ದೆಸೆಗೆಸೆವ ಕೈದೀವಿಗೆಯ ಬೆಳಕಿನಲಿ (ನಿಭಾಗ. ೧೦-೬೪-೬) ; ಮಾಣ್, ನಿಷಾದನೆ, ಮಾಣ್ ! ಕೊಲೆ ಸಾಲ್ಗುಮಯ್ಯೊ ಮಾಣ್ ! (ಶ್ರೀರಾಮಾ. ೨-೩೬) ; ಕ್ರೌಂಚಮಿಥುನದಲಿ ಒಂದರ ಕೊಲೆಗೆ ವಾಲ್ಮೀಕಿ ಶಪಿಸಿದ ನಿಷಾದ ರಾವಣನಾಗಿ ಭೂಮಿಯಲಿ ಹುಟ್ಟಿ, ಕಾಡಿದನು ಸೀತೆಯನು (ದೀಪಸು. ೪೦-೧೨). **೨.** ಬೆಸ್ತ. 'ನಿಷಾದಪತಿ' ಪರಾ. **೩.** ಹೊಲೆಯ : "ಅಂತಾವಸಾಯಿಃ,

ಚಂಡಾಳಃ, ನಿಷಾದಃ, ಜನಂಗಮಃ — ಈ ೪ [ಪೊಲೆಯಂ]" (ಹಲಾಯು. ೯೮-೪೪೪) ; ಪಂದಿ . . . ಅನಿವಿರಿದು ದುಃಖದೊಳ್ ನಮೆದು ನಾರುಗಿದು ಪೊಗೆದು ಸತ್ತಲ್ಲಿ ನಿಷಾದನ ಮನೆಯೊಳ್ಪೆಣ್ಣಾ ಯಾಯ್ತು (ಸುಕುಮಾ. ೫-೧೯). **೪.** [ಸಂಗೀತ] ಸಪ್ತಸ್ವರಗಳಲ್ಲಿ ಕಡೆಯದು : "ಷಡ್ಜಮಾ ಋಷಭಮಾ ಗಾಂಧಾರಮಾ ಮಧ್ಯಮಂ ಮಿಾಟಾಱಪ್ಪ ಪಂಚಮಂ ಧೈವತಂ ಸುನಿಷಾದಮೆಂಬೀರಂತೆ ಸಪ್ತಸ್ವರಂಗಳಕ್ಕು" (ಮಂಗರಾ.೨೩-೩) ; ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಂಗಳೆಂಬ ಸಪ್ತಸ್ವರಮುಮಂ . . . ದಶರೂಪಲಕ್ಷಣಮುಮಂ ಪಾತ್ರಸಂಕ್ರಮಣದೊಳ್ ನೆಱೆಯೆ ತೋಱಿ (ಅಜಿಪು. ೫-೩೦ ಪ) ; ಸಪ್ತಸ್ವರಂಗಳುತ್ಪತ್ತಿಕ್ರಮದಲ್ಲಿ ಪರಶಿವನ ಈಶ್ವರ, ಸದ್ಯೋಜಾತ . . . ನಿರಂಗವೆಂಬೀಳು ಮುಖಂಗಳ ಕ್ರಮವಿಡಿದು ಷಡ್ಜ ಋಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದವೆಂಬ ಸಪ್ತಸ್ವರಂಗಳುದಿಸಿದವು (ವಿವೇಕ. ೨೪೭) ; ಕ್ರಮವಾಗಿ ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದ ಎಂದು ಸಪ್ತಸ್ವರಗಳ ಹೆಸರುಗಳು (ಸಂಗೀತಚಂ. ೧೫). **೧, ೪ :** ಆ ಮಹಾವನಂ . . . ಸ್ವರ ಸಮುದಯದಂತೆ ನಿಷಾದನಿಷೇವ್ಯಮುಮಂ ಆರಾಧಕನಂತಕ್ಷಮಾಲಾಗಣಿತ ಜಪೋಪೇತಮುಮಂ (ಚಂದ್ರಪು. ೫-೫೨ ಪ). **೫.** ಮಣ್ಣು ; ಅರಲು : ನಾದಬಿಂದುಗಳದ್ವಲಿಗೆಗಳಾದಿಶಕ್ತಿಯೆ ತಿಗುರಿ . . . ವೇದಿಸಲು ಬ್ರಹ್ಮಾಂಡ ಖಾಂಡ ನಿಷಾದ ಭಾಂಡಾವಳಿಗಳಂ ಸಮ್ಮೋದದಿಂದಂ ವಿರಚಿಸುವ ಕುಂಬಾರನುಂ ತಾನೆ (ಬಸವು. ೨೧-೨೭). [ಸಂ.]

**ನಿಷಾದಕರ್ಮ** (ನಾ). ಚಂಡಾಲರ ಕೆಲಸ; ಕ್ರೂರಕಾರ್ಯ : ಭೃಗುಂಶಾಪೋಪಗತರಾಗಿ ವೇದನಾವಸ್ಥೆಗಳೊಳಿಪ್ಪ ನಿಷಾದಕರ್ಮಶ್ವಪಚ ರೊಡನೆಯನಾದರದಿ ಪಶುವಂ ಕೊಲುವ ಪಶುಕರ್ಮಿಗಳ ಕೂಡೆ . . . ನಿಂದು ನುಡಿದಡೆ ದೋಷವೊಂದುವುದು (ಬಸವು. ೫೭-೭೭).

[ನಿಷಾದ + ಕರ್ಮ]

**ನಿಷಾದಪಡೆ** (ನಾ). ಬೇಡರ ಸೈನ್ಯ : ನಿಷಾದಪಡೆ ಮುಸುಕಿತ್ತು ಹಲಧರನ (ನಿಭಾಗ. ೧೦-೬೪-೩೯). [ನಿಷಾದ + ಪಡೆ$_2$]

**ನಿಷಾದಪತಿ**(ನಾ). ಬೆಸ್ತರ ಒಡೆಯ, — ಮುಖಂಡ: ನಾವೆಯಿಂದಿಳಿದು ಬೀಳ್ಕೊಂಡು ಗುಹನಂ ನಿಷಾದಪತಿಯಂ . . . ತಾಂ ಮುಂತೆ ನಡೆಗೊಂಡಂ (ಶ್ರೀರಾಮಾ. ೧೨೬-೫೧). [ನಿಷಾದ + ಪತಿ$_2$]

**ನಿಷಾದಿ** (ಗು). **೧.** ಕುಳಿತುಕೊಂಡ ; ಆಸೀನವಾದ. (ನಾ). **೨.** ಕುಳಿತುಕೊಳ್ಳುವಿಕೆ ; ಸ್ಥಿರವಾಗಿರುವಿಕೆ. **೩.** ಆನೆಯನ್ನು ನಡೆಸುವವನು ; ಮಾವಟಿಗ ; ಮಾವುತ : "ನಿಷಾದೀ, ಗಜಾರೋಹಃ — ಈ ೨ ಆನೆಯನೇಱುವಾತಂ" (ಹಲಾಯು. ೬೫-೨೩೬) ; ವಿರೋಧಿಸಾಧನಘಟಾಳಿಯನೋಡಿಸಲಾಗಳಾರ್ಮಬಿಟ್ಟಿಕ್ಕಿದರುಗ್ರಸಿಂಧುರ ಘಟಾವಳಿಯಂ ಮುಳಿಸಿಂ ನಿಷಾದಿಗಳ್ (ಪಂಪಭಾ. ೧೦-೯೨) ; ಅಯಸಮನಣಮಲ್ತು ಪರರದನಿಯನಿಕ್ಕುವುದಂತುಮಾನೆಯೊಳ್ ಕಾದೆ ನಿಷಾದಿಯನುರುಳೆಚ್ಚು ಗಜಪ್ರಿಯತೆಯನಹಿತರ್ ಪೊಗೞೆ ಸೀರಹಸ್ತಂ ಮೆಱೆದಂ (ಶಾಂತಿಪು. ೪-೧೯) ; ಮೊಗವಡಮಂ ನಿಷಾದಿ [ಪಾಠಾಂ. ಬಿಸುಟ್ಟು] ಕಳೆದಂಕುಶದಿಂದಣೆದಾರ್ದು ನೂಂಕೆ ಗಾಳಿಗೆ ಗಱಿ ಮೂಡಿದಂತೆ ಪರಿದಾನೆಗಳಾನೆಗಳೊಳ್ ಕಡಂಗಿ . . . ಪೋರ್ದುವು (ಪಂಪರಾಮಾ. ೧೩-೭೪). [ಸಂ. ನಿಷಾದಿನ್]

**ನಿಷಾದಿನಿ** (ನಾ). [ಸಂಗೀತ] ಒಂದು ರಾಗದ ಹೆಸರು : ಧೈವತ ನಿಷಾದಿನಿ ಷಡ್ಜ ಕೇಸರಿ ಷಡ್ಜ ದಿವ್ಯವತಿ ಷಡ್ಜ ಮಾಧ್ಯಮವೆಂಬೈದು ರಾಗಂಗಳು ಷಡ್ಜ ಗ್ರಾಮದಿಂ ಪುಟ್ಟುವುವು (ವಿವೇಕ. ೨೪೯).

[ಸಂ. ನಿಷಾದಿನೀ]

**ನಿಷಾದಿವ್ರಜ** (ನಾ). ಮಾವಟಿಗರ ಸಮೂಹ; ಮಾವುತರ ಗುಂಪು : ವಿಸಟಂಬರ್ಪಾನೆಯಂ . . . ಕೂರಂಕುಸದಿಂದಂಗುಷ್ಠದಿಂ ಪಾರ್ಷ್ಣಿಯನಳವಡಿಸುತ್ತುಂ ನಿಷಾದಿವ್ರಜಂ ಬೆಕ್ಕಸಮುತ್ತಿರ್ಪಂತು ಬಂಬಲ್ವರಿಯಿಸಿ ದೆಸೆಗೆಲ್ಲಂ ಬಟಿಕ್ಕುಯ್ದು ನೀರೂಡಿಸಿದಂ ಕಂಭಕ್ಕೆ ತಂದಂ ಮಗುಟಿಕೆ ಗಜಕಳಾಖಂಡಲಂ ಪದ್ಮನಾಭಂ (ಚಂದ್ರಪು. ೯-೯೫).

[ನಿಷಾದಿ + ವ್ರಜ]

**ನಿಷಾನಿ** 'ನಿಶಾನಿ' ನೋ.

**ನಿಷಾನಿಖಲು** (ನಾ). ಪಾಳೆಯಗಾರರ ಕಾಲದ ಒಂದು ಚಿನ್ನದ ನಾಣ್ಯ : ಇದಲ್ಲದೆ ಇನ್ನೂ ಇತರ ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು. ಯಾವವೆಂದರೆ :— ೧. ಗಬರು . . . ೧. ನಿಷಾನಿಖಲು (ಚಿತ್ರಪಾ. ೧೦೪). [ ? ]

**ನಿಷಾವಸ್ತು** (ನಾ). ಮತ್ತನ್ನು ಬರಿಸುವ ವಸ್ತು ; ಮಾದಕ ಪದಾರ್ಥ : ಸಾರಾಯಿಯಲ್ಲಿ ಉದ್ರೇಕ ಬರುವಂತಹ ನಿಷಾವಸ್ತು ಹುಟ್ಟುವಂತೆ ಪಂಚಭೂತಗಳ ಸಂಯೋಗದಿಂದ ಚೈತನ್ಯ ಅಥವಾ ಜ್ಞಾನ ಹೊರಹೊಮ್ಮುವುದು (ಜೀವಾತ್ಮ. ೫೯). [ನಿಷಾ (<ನಶೆ) + ವಸ್ತು]

**ನಿಷಿಕ್ತ** (ಗು). **೧.** ಎರಚಿದ; ಸಿಂಪಡಿಸಿದ ; ಚಿಮುಕಿಸಿದ. (ನಾ). **೨.** ಸಿಂಪಡಿಕೆ ಹೊಂದಿದವನು; ಸಿಂಚನವನ್ನು ಪಡೆದವನು : ಗುರುಪದಾಂಬುಜ ಸರಳಭಕ್ತಾ ಗುರುದಯಾಮೃತರಸನಿಷಿ [ಪಾಠಾಂ. ಯು]ಕ್ತಾ (ಬಸವು. ೩೪-೬೪). [ಸಂ.]

**ನಿಷಿದಿ** 'ನಿಸಿದಿ' ನೋ.

**ನಿಷಿದಿಗೆ** 'ನಿಸಿದಿಗೆ' ನೋ.

**ನಿಷಿದ್ದಿ** 'ನಿಸಿದಿ' ನೋ.

**ನಿಷಿದ್ಧ** (ಗು). **೧.** ನಿಷೇಧಿಸಿದ; ಬಹಿಷ್ಕೃತವಾದ; ಮಾಡಬಾರದ : ಮಾನವನ ಕಾಯಿಕ, ವಾಚಿಕ, ಮಾನಸಿಕ, ನಿತ್ಯ, ನೈಮಿತ್ತಿಕ, ಕಾಮ್ಯ, ನಿಷಿದ್ಧ, ವಿಹಿತ, ಕೃತಿಗಳೆಲ್ಲ 'ಕರ್ಮ' ಪದದಲ್ಲಿಯೇ ಅಡಕವಾಗುತ್ತವೆ (ಧರ್ಮಸಾ. ೧೩೦). 'ನಿಷಿದ್ಧಕರ್ಮ', 'ನಿಷಿದ್ಧಫಲ' ಪರಾ. (ನಾ). **೨.** ಬಹಿಷ್ಕರಿಸಿದುದು ; ಮಾಡಬಾರದುದು : ಅನಭ್ಯಸ್ತಶಸ್ತ್ರನೊಳ್ ಯುದ್ಧವತಿನಿಷಿದ್ಧಮುಂ (ಜಗವಿ. ೫-೬೧ ಪ); ನಿತ್ಯನೈಮಿತ್ತಿಕವ ಕಳೆದಾ ಪ್ರತ್ಯವಾಯಕೆ ಮಾಡಿ ಪ್ರಾಯಶ್ಚಿತ್ತವನು ಜಪತಪದಿ ಕಾಮ್ಯನಿಷಿದ್ಧಗಳ ಬಿಟ್ಟು . . . ಮೋಕ್ಷವನರ್ಥಿಸುತ್ತಿಹ ಸಾಧುಗಳೆ ತತ್ತ್ವಾಧಿಕಾರಿಗಳು (ಅಮೃತ. ೧-೨೧) ; ನಾಟಕ ಆಡುವುದಾಗಲಿ, ನೋಡುವುದಾಗಲಿ ನಿಷಿದ್ಧವೆಂದು ಅನೇಕರು ಭಾವಿಸಿದ್ದರು (ಶಿಕ್ಷದ. ೫೪). [ಸಂ.]

**ನಿಷಿದ್ಧಕರ್ಮ** (ನಾ). ಧರ್ಮಬಾಹಿರವಾದ ಕರ್ಮ ; ಧರ್ಮವಿರುದ್ಧವಾದ ಕಾರ್ಯ ; ಮಾಡಬಾರದ ಕೆಲಸ : ವೇದೋಕ್ತ ಕರ್ಮಗಳನ್ನು ಕಾಮ್ಯಕರ್ಮ, ನಿಷಿದ್ಧಕರ್ಮ, ನಿತ್ಯಕರ್ಮ ಎಂದು ಮೂರು ತೆರನಾಗಿ ವಿಂಗಡಿಸಿದ್ದಾರೆ . . . ನಿಷಿದ್ಧಕರ್ಮಗಳನ್ನು ಮಾಡದಿರಬೇಕು (ಭಾರದ. ೧೨೯). [ನಿಷಿದ್ಧ + ಕರ್ಮ]

**ನಿಷಿದ್ಧಕಾಲ** (ನಾ). ನಿಷೇಧಿತವಾದ ಕಾಲ; ಸೂಕ್ತವಲ್ಲದ ಸಮಯ : ನಿಷಿದ್ಧಕಾಲ ಮೈಥುನಾದಿ ಪ್ರಯುಕ್ತವಾದ ದೋಷವೇ ಬೈಜಿಕದೋಷ (ಭಾರದ. ೫೫). [ನಿಷಿದ್ಧ + ಕಾಲ]

**ನಿಷಿದ್ಧಗುರು** (ನಾ). ಯೋಗ್ಯನಲ್ಲದ ಗುರು ; ಶಿಷ್ಯರಿಗೆ ಕೆಟ್ಟ ಸಾಧನೆಯನ್ನು ಹೇಳಿಕೊಟ್ಟು ದುಃಖಕ್ಕೆ ಈಡು ಮಾಡುವ ಗುರು : ವಶ್ಯಾಕರ್ಷಣಾದಿಗಳಿಂ ಇಹಲೋಕದಲ್ಲಿ ಸುಖವಂ ಪರಲೋಕದಲ್ಲಿ ದುಃಖಂಗಳನೀವಾತನೇ ನಿಷಿದ್ಧಗುರು (ವಿವೇಕ. ೧೮).

[ನಿಷಿದ್ಧ + ಗುರು$_2$]

**ನಿಷಿದ್ಧಗೊಳ್** (ಕ್ರಿ). ಬಹಿಷ್ಕಾರ ಹೊಂದು; ತಿರಸ್ಕೃತವಾಗು: 'ನಿಷಿದ್ಧಗೊಳಿಸು' ಪರಾ. [ನಿಷಿದ್ಧ + ಕೊಳ್$_1$]

**ನಿಷಿದ್ಧಗೊಳಿಸು** (ಕ್ರಿ). ಬಹಿಷ್ಕರಿಸು; (ಕಾನೂನಿಗೆ) ವಿರುದ್ಧವೆಂದು ಸಾರು: ಅಸ್ಪೃಶ್ಯತೆಯನ್ನು ತೆಗೆದುಹಾಕಲಾಗಿದೆ ಮತ್ತು ಯಾವ ರೂಪದಲ್ಲೂ ಅದರ ಆಚರಣೆಯನ್ನು ನಿಷಿದ್ಧಗೊಳಿಸಲಾಗಿದೆ (ಭಾಥಾನ. ೯). [ನಿಷಿದ್ಧಗೊಳ್ + -ಇಸು$_3$]

**ನಿಷಿದ್ಧಪ್ರೇಮ** (ನಾ). ಸಮಾಜದಲ್ಲಿ ನೀತಿವಿರುದ್ಧವಾದ ಪ್ರೇಮ; ನಿಯಮಬಾಹಿರವಾದ ಪ್ರೇಮ: ಈ ನಿಷಿದ್ಧಪ್ರೇಮದ ಸಹವಾಸದಿಂದ ದೂರಾಗುವುದಕ್ಕಾಗಿಯೇ, ನಾನು ಕೆಲವು ದಿವಸಗಳ ಮಟ್ಟಿಗೆ ದೂರದ ಪ್ರವಾಸ ಕೈಕೊಳ್ಳಲು ಸಿದ್ಧನಾದುದು (ಹೇಮಂತ. ೨೯೯). [ನಿಷಿದ್ಧ + ಪ್ರೇಮ]

**ನಿಷಿದ್ಧಫಲ** (ನಾ). ಬಹಿಷ್ಕರಿಸಿದ ಫಲ; ಸೇವಿಸಬಾರದೆಂದು ವಿಧಿಸಿದ ಫಲ; ☞ ಆದಮನೆಂಬ ಆದಿಮಾನವನು ತಿನ್ನಬಾರದೆಂದು ನಿಷೇಧಿತವಾಗಿದ್ದ ಹಣ್ಣನ್ನು ತಿಂದುದರಿಂದಲೇ ಕ್ಷುತ್ಪಿಪಾಸಾ ಮರಣಗಳಿಗೆ ಪಕ್ಕಾದನೆಂಬ ಸಂಗತಿಯು ಬೈಬಲ್ ಗ್ರಂಥದಲ್ಲಿ ಉಕ್ತವಾಗಿದೆ: ಆದಮನು ಬೇಡವೆಂದರೂ ತಿಂದು ಸ್ವರ್ಗದಿಂದ ತಳ್ಳಲ್ಪಟ್ಟು ಮರ್ತ್ಯಕ್ಕೆ ಬಂದ ನಿಷಿದ್ಧಫಲ(Forbidden fruit)ವೇ ಇದಾಗಿರಬಹುದಲ್ಲವೆ? (ಶರಚ. ೬೩೫). [ನಿಷಿದ್ಧ + ಫಲ$_1$]

**ನಿಷಿದ್ಧವಾಕ್ಯ** (ನಾ). ಇಂತಿಂತಹುದನ್ನು ಮಾಡಕೂಡದೆಂದು ವಿಧಿಸುವ ಮಾತು; ಬೇಡವೆಂದು ಹೇಳುವ ನಿಯಮ; ☞ 'ಇಂಥದನ್ನು ಮಾಡು' ಎಂದು ಹೇಳುವ ವಾಕ್ಯ ವಿಧಿವಾಕ್ಯ. 'ಹೀಗೆ ಮಾಡಬೇಡ' ಎಂದು ತಿಳಿಸುವ ವಾಕ್ಯ ನಿಷಿದ್ಧವಾಕ್ಯ. ಹೀಗೆ ವೇದಗಳಲ್ಲಿ ಎರಡು ಬಗೆಯ ವಾಕ್ಯಗಳು ಕಂಡುಬರುತ್ತವೆ: ವೇದವಾಕ್ಯವಿಚಾರವೆಂತೆನಲಾದಿಯಲಿ ವಿಧಿವಾಕ್ಯವಾ ಬಳಿಕಾದುದೈಸೆ ನಿಷಿದ್ಧವಾಕ್ಯವು (ಗಗತಾ. ೨೨-೫). [ನಿಷಿದ್ಧ + ವಾಕ್ಯ]

**ನಿಷಿದ್ಧಿ** 'ನಿಸಿದಿ' ನೋ.

**ನಿಷಿದ್ಧಿಕ್ರಿಯೆ** (ನಾ). [ಜೈನ] ಸಮಾಧಿಯ ಬಳಿಯಲ್ಲಿ ಮಾಡಬೇಕಾದ ಕರ್ಮ: ಚಂದ್ರಗುಪ್ತಮುನಿಗಳು ವಿಶಾಖಾಚಾರ್ಯರ್ಗಿದಿರೆದ್ದು ವಂದಿಸೆ ಇವರು ಕಂದಮೂಲಫಲಾಹಾರಿಗಳು ಕ್ಸ್ಪಾರದೊಳು ಚಾರಿತ್ರಂಗೆಟ್ಟಪ್ಪರೆಂದು ಪ್ರತಿವಂದನೆಗೆಯ್ಯದೆ ನಿಷಿದ್ಧಿಕ್ರಿಯೆಯಂ ಮಾಡಿ(ಕಗವಿ. ೯೮ ರಾಜಾವಳೀಕಥೆ). [ನಿಷಿದ್ಧಿ(<ನಿಸಿದಿ) + ಕ್ರಿಯೆ]

**ನಿಷಿದ್ಧಿಸ್ಥಾನ** (ನಾ). [ಜೈನ] ಸಮಾಧಿಯಾದ ಸ್ಥಳ; ಸಮಾಧಿ; ನಿಸಿದಿಗೆ: ಭಾಸ್ಕರನೆಂಬರಸಂ ಗುರುವಂದನಾರ್ಥ_ಬಲಸಹಿತಂ ಬಂದು ಭದ್ರಬಾಹುಸ್ವಾಮಿಗಳ ನಿಷಿದ್ಧಿಸ್ಥಾನಮಂ ಪೂಜಿಸಿ (ಕಗವಿ. ೯೯ ರಾಜಾವ.) [ನಿಷಿದ್ಧಿ (<ನಿಸಿದಿ) + ಸ್ಥಾನ]

**ನಿಷಿಧಿ** 'ನಿಸಿದಿ' ನೋ.

**ನಿಷಿಧಿಗೆ** 'ನಿಸಿದಿಗೆ' ನೋ.

**ನಿಷೀಧಿ** 'ನಿಸಿದಿ' ನೋ.

**ನಿಷೂದನ** (ನಾ). ೧. ಕೊಲ್ಲುವಿಕೆ; ಕೊಲೆ: "ಪ್ರಮಾಪಣಂ, ನಿಬರ್ಹಣಂ . . . ನಿಷೂದನಂ, ನಿಹಿಂಸನಂ, ನಿರ್ವಾಪಣಂ . . . ಉನ್ಮಂಥಃ, ವಧಃ—ಈ ೩೦ ಕೊಲ್ಲುವುದಕ್ಕೆ ಹೆಸರುಗಳು, ಸಂಹಾರ ಮಾಡುವಿಕೆ . . . ಸಾಯುಗೊಳಿಸುವಿಕೆ" (ಸಿದ್ಧಾಂತಿ. ೨೭೨); ದುರ್ವಿನೀತ ದುಷ್ಟಮಧುಕರಗಳು ಹಿಂಡುಗಟ್ಟಿ ಅಂಡಲೆವ ಈ ನಾಡಿನಲ್ಲಿ . . . ಅಕಸ್ಮಾತ್ತಾಗಿ ಹೊರಬಿದ್ದಾಗ ಷಟ್ಪದನಿಷೂದನ ಮಾಡುವ ದುಷ್ಯಂತ ಎಂತಹ ನಳಕೂಬರನೋ ಯಾರು ಬಲ್ಲರು? (ಗಾಳಿಪ. ೨೧೧). ೨. ಕೊಲ್ಲುವವನು; ನಾಶಮಾಡುವವನು. [ಸಂ.]

**ನಿಷೇಕ** (ನಾ). ೧. ಸುರಿಯುವಿಕೆ. ೨. ಸಿಂಪಡಿಸುವಿಕೆ: ಚಿಮುಕಿಸುವಿಕೆ: ಮತ್ತಮಲ್ಲಿ . . . ವನದೇವತಾನಯನಾಂಶುಕ್ಷೀರರಸನಿಷೇಕದಿಂ ಮುಂಕುಳಿಸದ ಪಕುಳಮಿಲ್ಲ (ಪುಷ್ಪಪು. ೯-೨೧ ಪ). ೩. ಫಲಶೋಭನ; ಪ್ರಸ್ತ; ಗರ್ಭಾಧಾನ: ಪುಣ್ಯಕರವೂ ವೇದೋಕ್ತವೂ ಆದ ನಿಷೇಕಾದಿ ಸಂಸ್ಕಾರಗಳು ಮಾನವನ ಇಹಪರ ಸುಖಸಾಧನೆಗೆ ಅತ್ಯಾವಶ್ಯಕ (ಭಾರದ. ೫೫); ಈಗ ಮದುವೆಯಾದರೂ ಚೀನಿಯ ಬಿ.ಎಸ್‌ಸಿ. ಆಗುವವರೆಗೆ ನಿಷೇಕಮಾಡುವುದು ಬೇಡವೆಂದು ಶ್ರೋತ್ರಿಯರೂ ಹೇಳಿದರು (ಸಂಶಸ್ಯ. ೪೮೫); ಆ ಸಲ ಗೌರಿಹಬ್ಬಕ್ಕೆ ಹೋದಾಗ ನಿಷೇಕವನ್ನು ಮಾಡಿಕೊಟ್ಟರು (ಮೂರಸ. ೭೪). ೪. (ಆಲಂ) ಸಾವು; ಅಳಿವು; ಅಂತ್ಯ; ನಾಶ: ವನಿತಾಹೇತುವೆ ಕೇತುವಾಯ್ತು ನಿಮಗಂ ಗಾಂಧರ್ವರಿಂದಿಂದು ನಿಮ್ಮ ನಿಷೇಕಂ ನೆಱೆದತ್ತು ಸತ್ತಿರೆನುತುಂ ಪೊಕ್ಕಾರ್ದು . . . ಪೊಯ್ದುನಿಸುಂ ಮಾಣದೆ ನೀಚಕೀಚಕನಿಕಾಯಧ್ವಂಸನಂ ಮಾಡಿದಂ (ಪಂಪಭಾ. ೮-೮೦); "ತಕ್ಕ ಶಾಸ್ತಿಯು ಅಥವಾ ಶಿಕ್ಷೆಯು" (ಪಂಪವೀ. ೨೯೨); ಇತ್ತ ನಿಷೇಕಮಾಗೆ ಗುರುಗತ್ತಭಿಷೇಕವಿಭೂತಿಗೊಂದುಗುಂ ತತ್ತ ನಯರ್ಕಳೊಳ್ ಮೃತಕತೂರ್ಯಮೆ ಮಂಗಳತೂರ್ಯಮಕ್ಕುಮಾಸತ್ತವರೆತ್ತ ಸೀರಿಬೀವರೆತ್ತ ಜನಂ ನೆರದಿಂಡೆಯಾಡಿ ಪಾಡುತ್ತೆಸೆದಿರ್ಪರಿಂತು ಮೃತರಾಜವಿಡಂಬಮನೇಕೆ ಕಾಣ್ಬರೇ (ಅಜಿಪು. ೨-೧೦೫); ತವೆ ತೈಲಂ ದೀಪಂ ನಂದುವಂತೆ ಗಟಿಯಿಸೆ ನಿಷೇಕಮಟಿಪಮರ್ನ್ನಂ ಪವನಪ್ರಹಾರದಿಂ ತೈಲವುಳ್ಳೊಡಂ ನಂದುವಂತೆ ಪೊಂದುವರೀಗಳ್ (ಪಂರಾಪೂ. ೧-೮೨); "ಆಯುಸ್ಸು" (ಪಂರಾಪೂ. ಕೋಶ); ನೆಱೆದುದು ನಿನ್ನ ನಿಷೇಕಂ ನೆಱೆಗೊಳ್ಳದೆ ಮಾಣವೆನ್ನ ಬಾಣಾವಳಿಗಳ್ ಗಜಿ ಸೋಂಕದೆ ಪೋಗೆನುತುಂ ಗಜಿ ಗಜಿಯಂ ಸೋಂಕಿ ಪರಿಯೆ ಲಕ್ಷ್ಮಣನೆಚ್ಚಂ (ಪಂರಾಪೂ. ೧೪-೧೫೫). 'ನಿಸೇಕ' ಪರಾ. [ಸಂ.]

**ನಿಷೇಕಪ್ರಸ್ತ** (ನಾ). = ನಿಷೇಕ ೩: ಒಂದು ಶುಭಮುಹೂರ್ತದಲ್ಲಿ ನಿಷೇಕಪ್ರಸ್ತ ಮಾಡಿ ಕಳಿಸಿಕೊಟ್ಟರು (ಬೆಂದಜೀ. ೪೨); ನಿಷೇಕಪ್ರಸ್ತವಾದುದೂ ಇದೇ ಮನೆಯಲ್ಲಿ (ಬಾಳಿಗಿ. ೫೦). [ನಿಷೇಕ + ಪ್ರಸ್ತ]

**ನಿಷೇಧ** (ನಾ). ೧. ನಿರಾಕರಣೆ; ಅಲ್ಲಗಳೆಯುವಿಕೆ; ಇಲ್ಲವೆಂದು ಹೇಳುವಿಕೆ: ಗಗನಕುಸುಮಮನತ್ಯಂತಾಭಾವಮಂ ನಿಷೇಧಮಾತ್ರದಿಂದಮುಂಟುಮಾಡಲಕ್ಕುಮೆ (ಶಾಂತಿಪು. ೮-೧೩೮ ವ). ೨. ಕೂಡದು ಎಂಬ ನಿಯಮ; ನಿಷಿದ್ಧವಾದುದು: ಪುರುಷತ್ರಯದೊಳ್ ದತ್ತ ನಿಷೇಧಂ (ಶಮದ. ೨೪೫); ವಿಧಿ ನಿಷೇಧವು ನಿನ್ನವರಿಗೆಂತೊ ಹರಿಯೇ ವಿಧಿ ನಿನ್ನ ಸ್ಮರಣೆಯು ನಿಷೇಧವಿಸ್ಮೃತಿಯೆಂಬ ವಿಧಿಯನೊಂದನೆ ಬಲ್ಲರಲ್ಲದೇ ಮತ್ತೊಂದು (ಪುರಂದ. ಥಾ. ೧-೧೪೦ ಪಲ್ಲವಿ); ಮುನ್ನಮೊಂದರ್ಥಮಂ ಪೇಳ್ದು ಬಳಿಕ್ಕೆ ವಿಚಾರಿಸಿ ಅಂತಲ್ಲದೊಡಂ ಕೊರತೆಯಿಲ್ಲೆಂದು ನಿಷೇಧಮಂ ಗೆಯ್ಯೆ ಅಕ್ಷೇಪಮೆನಿಪುದು (ನರಚ. ೧೩೩ ವೃತ್ತಿ); ನಿಷೇಧ (Taboo) ಗಳು ಆತುರವನ್ನು ಕೆರಳಿಸುತ್ತವೆ (ಬಾಲಪ್ರ. III, ೧೨೫೫). ೩. (ವೇದ, ಸ್ಮೃತಿ ಮುಂತಾದುವುಗಳಲ್ಲಿ) ಮಾಡಬಾರದೆಂದು ಹೇಳಿರುವ ಕರ್ಮ: ವಿಧಿನಿಷೇಧಗಳೆರಡು ಮರಿಯದೆ ಮಧುವಿರೋಧಿಯ ಪಾದಕರ್ಪಿಸು (ಹಸಾರ. ೧೮-೩೧); ನಿಷೇಧವೆಂದರೆ ಶಾಸ್ತ್ರದಲ್ಲಿ ಮಾಡಬಾರದೆಂದು ಹೇಳಿರುವ ಕರ್ಮಗಳು (ಹಸಾರ. ೧೮-೩೧ ತಾತ್ಪರ್ಯ); ವಚನಗಳನ್ನು ವಿಧಿ ನಿಷೇಧ ಅರ್ಥವಾದಗಳೆಂದೂ . . . ವಿಂಗಡಿಸಿಕೊಂಡು ನಡೆಯಬೇಕು (ಆರ್ಯಧ. ೩೪); ವೈದಿಕಜ್ಞಾನವು ವಿಧಿ, ನಿಷೇಧ, ಮಂತ್ರ, ನಾಮಧೇಯ, ಅರ್ಥವಾದವೆಂದು ವಿಭಜಿತವಾಗಿದೆ (ಭಾರದ. ೧೨೯). ೪. [ವ್ಯಾಕ] ಧಾತುವಿನ ಒಂದು ರೂಪ; ಕ್ರಿಯೆ ನಡೆಯದೆ ಇರುವುದನ್ನು ಸೂಚಿಸುವ ರೂಪ: ವಿಧಿ, ನಿಷೇಧ, ಸಂಭಾವನೆ—ಇವು ಒಂದು ಕ್ರಿಯೆಯ

ವಿಷಯದಲ್ಲಿ ಮಾತಾಡುವಾತನ ಅಭಿಪ್ರಾಯವೇನು ಎಂಬುದನ್ನು ತಿಳಿಸುತ್ತವೆ (ಮಧ್ಯಮ. ೬೩) ; ನಿಷೇಧವೆಂಬುದು ದ್ರಾವಿಡಭಾಷೆಗಳಲ್ಲಿ ಒಂದು ವ್ಯವಸ್ಥಿತವಾದ ಕ್ರಿಯಾರೂಪವೆಂದು . . . ತೀರ್ಮಾನಿಸಬಹುದು (ದ್ರಾವಿವಿ. ೨೮೪). 'ನಿಷೇಧರೂಪ', 'ನಿಷೇಧಾರ್ಥ' ಪರಾ.

**ನಿಷೇಧ ಮಾಡು** = ನಿಷೇಧಿಸು : ಕವಿಯು 'ಸಮಾಗಮದ' ಎಂದರೆ ಕಲ್ಪಿತವಸ್ತು ವಿನ ನಿಷೇಧ ಮಾಡುವುದನ್ನು 'ನಿಷೇಧಾಭಾಸ'ವೆಂದೇಕೆ ಭಾವಿಸಬಾರದು ? (ಧ್ವನ್ಯಾಲೋ. ೩೧ ಅಡಿಟಿ). [ಸಂ.]

**ನಿಷೇಧಕ** (ಗು). ಪ್ರತಿರೋಧಿಸುವ; ಅಡ್ಡಿ ಪಡಿಸುವ; ತಡೆಯುವ; ಬಹಿಷ್ಕರಿಸುವ : "ನಿಷೇಧಕ, ಪ್ರತಿಬಂಧಕ" (Prohibitory. ಪತ್ರಿಸಿ. ೬೫). 'ನಿಷೇಧಕಗುರು' ಪರಾ. [ಸಂ.]

**ನಿಷೇಧಕಗುರು** (ನಾ). = ನಿಷಿದ್ಧಗುರು : ಆಕರ್ಷಣ ವಶ್ಯಾದಿಗಳಿಂದಿಹ ಸುಖವ ಮೇಲೆ ಶೋಕವನ್ನೈದಿಸುವವನೆ ನಿಷೇಧಕಗುರುವಹನು (ಕೈವಲ್ಯ. ೫೬–೧–೧). [ನಿಷೇಧಕ + ಗುರು$_2$]

**ನಿಷೇಧಕ್ರಿಯೆ** (ನಾ). [ವ್ಯಾಕ] ಕ್ರಿಯೆ ನಡೆಯದುದನ್ನು ಸೂಚಿಸುವ ಕ್ರಿಯಾಪದ ; ನಿಷೇಧಾರ್ಥಕ ಕ್ರಿಯಾಪದ : ಈ ಅಭಿಪ್ರಾಯದ ಪ್ರಕಾರವಾಗಿ ನಿಷೇಧಾರ್ಥ ಸೂಚಕವಾದ ಪ್ರತ್ಯಯವಾವುದೂ ಸೇರದೆಯೇ ನಿಷೇಧಕ್ರಿಯೆಯಾಗುತ್ತದೆ (ಕೈಪಿಡಿ. ೪೮) ; ಧಾತುವಿನ ಮೂಲರೂಪವನ್ನು ತಿಳಿದುಕೊಳ್ಳಲು ಈ 'ನಿಷೇಧಕ್ರಿಯೆ'ಯನ್ನು ಹುಡುಕುವುದಕ್ಕಿಂತ, 'ವಿಧ್ಯರ್ಥ'ವನ್ನು ಗಮನಿಸುವುದು ಹೆಚ್ಚು ಸುಲಭವೆಂದು ಕಾಣುತ್ತದೆ (ಭಾಷಾಶಾ. ೨೭೯). [ನಿಷೇಧ + ಕ್ರಿಯೆ]

**ನಿಷೇಧನ್ಯೂನ** (ನಾ). [ವ್ಯಾಕ] "ಒಂದು ಕ್ರಿಯೆಯ ನಿಷೇಧವನ್ನು ತಿಳಿಸಿ, ಅರ್ಥಪೂರ್ತಿಗಾಗಿ ಬೇರೊಂದು ಕ್ರಿಯೆಯ ಸಹಾಯವನ್ನು ಅಪೇಕ್ಷಿಸುವ ಕ್ರಿಯಾರೂಪಕ್ಕೆ ನಿಷೇಧನ್ಯೂನರೂಪವೆಂದು ಹೆಸರು . . . ಉದಾಹರಣೆ :— ನನಗೆ ತಿಳಿಸದೆ ನಳಮಹಾರಾಜನು ಎಲ್ಲಿಗೆ ಹೋದನು ?" (ಮಧ್ಯಮ. ೧೦೩). [ನಿಷೇಧ + ನ್ಯೂನ]

**ನಿಷೇಧಮಾರ್ಗ** (ನಾ). [ತತ್ತ್ವಶಾ] (ಪ್ರಪಂಚವು) ಇಲ್ಲ ಎಂದು ಹೇಳುವ ಮಾರ್ಗ : ಬ್ರಹ್ಮನ ಇರುವಿಕೆಯಿಂದಲೇ ಪ್ರಪಂಚಕ್ಕೆ ಇರುವಿಕೆಯಾದುದರಿಂದ ಪ್ರಪಂಚವಿಲ್ಲವೆಂದು ನಿಷೇಧಮಾರ್ಗವು (ಹಿಂದಸಾ. ೨೩೫). [ನಿಷೇಧ + ಮಾರ್ಗ]

**ನಿಷೇಧರೂಪ** (ನಾ). ೧. ನಕಾರಾತ್ಮಕವಾದ ರೂಪ ; ನಿಷೇಧವನ್ನು ಸೂಚಿಸುವ ರೂಪ : "ಆಕ್ಷೇಪ"ವೆಂಬ ಅಲಂಕಾರದಲ್ಲಿಯೂ . . . ವಿಶೇಷವನ್ನು ಸೂಚಿಸುವ ಇಚ್ಛೆಯಿಂದಲೇ ನಿಷೇಧರೂಪವಾದ ಅಂಶವು ಶಬ್ದತಃ ಹೇಳಲ್ಪಟ್ಟಿರುತ್ತದೆ (ಧ್ವನ್ಯಾಲೋ. ೩೦). ೨. [ತತ್ತ್ವಶಾ] ಆತ್ಮನ ಸ್ವರೂಪವನ್ನು ಇದಲ್ಲ, ಇದಲ್ಲ ಎಂಬ ನೇತಿ ಮಾರ್ಗದ ಮೂಲಕ ನಿರೂಪಿಸುವಿಕೆ : ಆತ್ಮಸ್ವರೂಪವನ್ನು ಶ್ರುತಿಗಳೂ ಗುರುಗಳೂ ಹೇಗೆ ಉಪದೇಶಿಸುವರು ಎಂದರೆ ದೇಹೇಂದ್ರಿಯಾದಿಗಳನ್ನೂ ಆತ್ಮನನ್ನೂ ಒಂದೆಂದು ಭ್ರಮಿಸಿರುವವರಿಗೆ ದೇಹವೂ ಆತ್ಮಸ್ವರೂಪವಲ್ಲ, ಇಂದ್ರಿಯಗಳೂ ಆತ್ಮಸ್ವರೂಪವಲ್ಲ ಎಂದು ಪರಿಶುದ್ಧಾತ್ಮಸ್ವರೂಪವನ್ನು ನಿಷೇಧರೂಪದಿಂದ ತಿಳಿಯಪಡಿಸುತ್ತಾರೆ (ಹಿಂದಸಾ. ೧೭೧). ೩. = ನಿಷೇಧ ೪ : ಧಾತುಗಳ ಆದಿ ಇಕಾರ ಉಕಾರ ಏಕಾರಂ, ತರ್, ಬರ್ ಧಾತುಗಳ ನಿಷೇಧರೂಪವಿಚಾರಂ (ಶಮದ. ಮ. ೨೪೯ ವಿವರಣೆ) ; ಕ್ರಿಯಾನಿಷೇಧ ತೋರುವಾಗ ನಿಷೇಧರೂಪವಾಗುವುದು (ಕೈಪಿಡಿ. ೪೯.) [ನಿಷೇಧ + ರೂಪ]

**ನಿಷೇಧರೂಪಪರಿವರ್ತನೆ** (ನಾ). [ತರ್ಕಶಾ] ವಿಧಿರೂಪವನ್ನು ನಿಷೇಧಾರ್ಥಕವಾಗಿ ಪರಿವರ್ತಿಸುವಿಕೆ : ವಿಧಿರೂಪದಲ್ಲಿದ್ದ ರೂ ವಿರುದ್ಧಾರ್ಥವನ್ನು ಸೂಚಿಸುವಿಕೆ : "(ತರ್ಕ) ಒಂದು ತೆರದ ಪರಿವರ್ತನೆ ; ನಿಷೇಧರೂಪಪರಿವರ್ತನೆ" (Contraposition. ಇಂಕನಿ). [ನಿಷೇಧರೂಪ + ಪರಿವರ್ತನೆ]

**ನಿಷೇಧವಚನ** (ನಾ). ಅಲ್ಲ ಅಥವಾ ಇಲ್ಲ ಎಂದು ಹೇಳುವ ಮಾತು : ಮತ್ತಮೆತ್ತಾನುಮುಳ್ಳುದನಲ್ಲದಿಲ್ಲೆನಲ್ಪಾರದು ಎಂಬ ನಿಷೇಧವಚನಮನೆ ಪಿಡಿದು ಜೀವಸಿದ್ಧಿಗೆಯ್ವೊಡೆ (ಶಾಂತಿಪು. ೮–೧೩೪ ವ). [ನಿಷೇಧ + ವಚನ]

**ನಿಷೇಧವ್ರಾತ** (ನಾ). ಮಾಡಬಾರದ ಕಾರ್ಯಗಳ ಸಮುದಾಯ: ಜನನೀಗರ್ಭಾಂಡದಿಂ ಬರ್ಪತಿವಿಷಮತರ ಕ್ಲೇಶಮಂ ಬಾಲ್ಯದೊಳ್ ಮಾಳ್ಪ ನಿಷೇಧವ್ರಾತಮಂ . . . ಸಾವ ನಿರೋಧ ಸ್ತೋಮಮಂ ಕಂಡಲಸಿದೆನದಿರ್ದಂ ಪೇಸಿದೆಂ (ರಕ್ಷಾಶ. ೪೨). [ನಿಷೇಧ + ವ್ರಾತ]

**ನಿಷೇಧಶ್ರುತಿ** (ನಾ). [ಅದ್ವೈತ] ಜೀವ ಹಾಗೂ ಬ್ರಹ್ಮರಲ್ಲಿ ಅಭೇದವನ್ನು ನಿರೂಪಿಸುವ ವೇದವಾಕ್ಯ ; ಜೀವಾತ್ಮ ಪರಮಾತ್ಮರಿಗೆ ಭೇದವಿಲ್ಲವೆಂದು ಹೇಳುವ ಶ್ರುತಿ; ಅಭೇದಶ್ರುತಿ: ನಿಷೇಧಶ್ರುತಿ ಪರಮಾರ್ಥದಶೆಯನ್ನುಪದೇಶಿಸುವುದೆಂದು ನಿರ್ಣಯ (ಹಿಂದಸಾ. ೨೨೩). [ನಿಷೇಧ + ಶ್ರುತಿ]

**ನಿಷೇಧಾಜ್ಞೆ** (ನಾ). ಪ್ರತಿಬಂಧಕಾಜ್ಞೆ ; ಮಾಡಬಾರದೆಂಬ ಅಪ್ಪಣೆ ; ಅಡ್ಡಿ ; ತಡೆ : "ನಿರೋಧ, ನಿಷೇಧ, ತಡೆ, ನಿಷೇಧಾಜ್ಞೆ ; ಪ್ರತಿಬಂಧಕಾಜ್ಞೆ" (Prohibition. ಇಂಕನಿ); ಭಾರತ ಸರ್ಕಾರ . . . ಭಾರತದ ಪತ್ರಿಕೆಗಳ ಮೇಲೆ, ಬಿಗಿಯಾದ ಮತ್ತು ಭೀತಿ ಹುಟ್ಟಿಸುವ ನಿಷೇಧಾಜ್ಞೆಯನ್ನು ಜಾರಿ ಮಾಡಿತು (ಕವಿಕೋ. I, ೧೬೬). [ನಿಷೇಧ + ಆಜ್ಞೆ]

**ನಿಷೇಧಾತ್ಮಕ** (ನಾ). ನಿಷೇಧದಿಂದ ಕೂಡಿದುದು ; ಅಲ್ಲ, ಇಲ್ಲ ಎಂದು ಹೇಳುವುದು ; ನಕಾರವನ್ನು ಸೂಚಿಸುವುದು : ಇಂತಹ ನಿಷೇಧಾತ್ಮಕವಾದ ಯುಕ್ತಿಯು ಯುಕ್ತಿಯಲ್ಲ (ಜೀವಾತ್ಮ. ೯೪). [ಸಂ.]

**ನಿಷೇಧಾಧಿಕಾರ** (ನಾ). ನಿಷೇಧಿಸುವ ಅಧಿಕಾರ ; ಪ್ರತಿಬಂಧಿಸುವ ಅಧಿಕಾರ ; ತಡೆ ಮಾಡುವ ಹಕ್ಕು : "ನಿಷೇಧ ; ನಿರೋಧ ; ವೀಟೋ (ಪಾರಿ) ನಿಷೇಧಾಧಿಕಾರ" (Veto. ಪತ್ರಿನಿ. ೮೬). [ನಿಷೇಧ + ಅಧಿಕಾರ]

**ನಿಷೇಧಾಭಾಸ** (ನಾ). [ಕಾವ್ಯಮೀ] ಆಕ್ಷೇಪಾಲಂಕಾರದಲ್ಲಿ ಒಂದು ಬಗೆ ; ಮೇಲುನೋಟಕ್ಕೆ ಮಾತ್ರ ನಿಷೇಧಾತ್ಮಕವಾಗಿ ತೋರುವಿಕೆ ; ವಿಮರ್ಶೆ ಮಾಡಿ ನೋಡಿದಾಗ ನಿಷೇಧವಿಲ್ಲದಿರುವಿಕೆ : ಅವ ನಿಷೇಧಂ ತಾಂ ಅವಾಸ್ತವಮಾಗುವುದರಿಂ ಪೆರತೊಂದರ್ಥದೊಳ್ಪರ್ಯವಸಾನಮಂ ಪಡೆದು, ಒಂದಾದರ್ಥವಿಶೇಷಮಂ ಆಕ್ಷೇಪಗತಿಯಿಂ ತೋರಿಸುವುದೋ ಆ ನಿಷೇಧಾಭಾಸಮೇ ಆಕ್ಷೇಪಮೆಂದು ಕೆಲಂಬರೆ ಮತಂ (ನರಚ. ೧೩೫ ವೃತ್ತಿ); 'ವ್ಯಂಗ್ಯಾರ್ಥ'ವನ್ನು ಮನಸ್ಸಿನಲ್ಲಿಟ್ಟುಕೊಂಡು, ಅದರ ಪ್ರಕಟನೆಗೆ ನಿಷೇಧಾಭಾಸರೂಪವಾದ ವಾಕ್ಯವನ್ನು ಆಶ್ರಯಿಸುವುದು ಭಾಮಹ ಸಮ್ಮತವಾದ 'ಆಕ್ಷೇಪ' (ಧ್ವನ್ಯಾಲೋ. ೩೧ ಅಡಿಟಿ). [ನಿಷೇಧ + ಆಭಾಸ]

**ನಿಷೇಧಾರ್ಥ** (ನಾ). [ವ್ಯಾಕ] ಒಂದು ಕ್ರಿಯೆ ನಡೆಯದುದನ್ನು ಸೂಚಿಸುವ ಅರ್ಥ : ಈ ಅಭಿಪ್ರಾಯದ ಪ್ರಕಾರವಾಗಿ ನಿಷೇಧಾರ್ಥ ಸೂಚಕವಾದ ಪ್ರತ್ಯಯವಾವುದೂ ಸೇರದೆಯೇ ನಿಷೇಧಕ್ರಿಯೆಯಾಗುತ್ತದೆ (ಕೈಪಿಡಿ. ೪೮); ಹೊರಡು, ಹೊರಡನು, ಹೊರಟಾನು ಎಂಬ ರೂಪಗಳು ಕ್ರಮವಾಗಿ ವಿಧ್ಯರ್ಥನಿಷೇಧಾರ್ಥಸಂಭಾವನಾರ್ಥಗಳಿಗೆ ಸೇರಿದುವು (ಮಧ್ಯಮ. ೬೩). [ನಿಷೇಧ + ಅರ್ಥ]

**ನಿಷೇಧಾರ್ಥಕ** (ಗು). ೧. [ವ್ಯಾಕ] ಒಂದು ಕ್ರಿಯೆ ನಡೆಯದುದನ್ನು ಸೂಚಿಸುವ : ಅ ಎಂಬ ನಿಷೇಧಾರ್ಥಕ ಪ್ರತ್ಯಯವು ಧಾತುವಿಗೆ ಸೇರಿ ಅದರ ಮುಂದೆ ಬರುವ ಪುರುಷವಾಚಕ ಆಖ್ಯಾತಪ್ರತ್ಯಯದ ಸ್ವರದೊಡನೆ ಬೆರೆತುಹೋಗುವುದೆಂಬುದು ಇನ್ನೊಂದು ಮತ (ಕೈಪಿಡಿ. ೪೮). (ನಾ). ೨. ಒಂದು ಕ್ರಿಯೆ ನಡೆಯದುದನ್ನು ಸೂಚಿಸುವುದು : ಕ್ರಿಯಾಪದಗಳನ್ನು ಸಾಮಾನ್ಯಾರ್ಥಕ, ವಿಧ್ಯರ್ಥಕ, ನಿಷೇಧಾರ್ಥಕ ಎಂದು ಮೂರು ಪಂಗಡಗಳಾಗಿ ವಿಭಾಗಿಸಬಹುದು (ಕೈಪಿಡಿ. ೪೩). [ಸಂ.]

**ನಿಷೇಧಿತ** (ನಾ). ಬಹಿಷ್ಕೃತವಾದುದು ; ತಿರಸ್ಕೃತವಾದುದು : ಕಡಲೆ . . . ವಿಜ್ಞಾನೇಶ್ವರನ (ಸು.ಕ್ರಿ.ಶ. ೧೧೦೦) ಪ್ರಕಾರ ಈ ಧಾನ್ಯ ಸ್ಮೃತಿಶಾಸ್ತ್ರಗಳಲ್ಲಿ ನಿಷೇಧಿತವಾಗಿದೆ (ಶಾಸಗಿ. ೨೧). [ಸಂ.]

**ನಿಷೇಧಿಸು** (ಕ್ರಿ). ತಡೆ : ಅಡ್ಡಿಪಡಿಸು : ಬಹಿಷ್ಕರಿಸು : ಅಚೇತನನ ಅಸರ್ವಜ್ಞನೆಂಬಿದು ಮೊದಲಾದ ಧರ್ಮಮುಂ ನಿಷೇಧಿಸುವೆಂಬ ತ್ರೈಂಟುಂ ಭೇದಮುಳ್ಳ ಸೂತ್ರಮುಂ (ಶಾಸ್ತ್ರಟೀ. ೧೦೭-೧); ತಂತಮ್ಮ ಬಂಧುಗಳಿಗಂತ್ಯಸಂಸ್ಕಾರಮಂ ಬಿಡಿಬಿಡಿಯೆ ಮಾಳ್ಪುದಂ ನಿಷೇಧಿಸಿದೆ ರಾಜಾಜ್ಞೆ (ಶ್ರೀರಾಮಾ. ೬೯೯-೪೫); ಅಭೇದಶ್ರುತಿಗಳು ಭೇದವನ್ನು ನಿಷೇಧಿಸುತ್ತವೆ (ಹಿಂದಸಾ. ೨೨೩). [ನಿಷೇಧ + -ಇಸು₃]

**ನಿಷೇಧ್ಯ** (ಗು). ೧. ನಿಷೇಧಿಸ ಬೇಕಾದ ; ಬಹಿಷ್ಕರಿಸಬೇಕಾದ : 'ನಿಷೇಧ್ಯಾಂಶ' ಪರಾ. (ನಾ). ೨. ನಿಷೇಧಿಸಬೇಕಾದುದು ; ಪ್ರತಿರೋಧಿಸಬೇಕಾದುದು; ಬಹಿಷ್ಕರಿಸಬೇಕಾದುದು : ನಿಷೇಧ್ಯವನ್ನು ತಿಳಿಯಿಸುವುದಕ್ಕಾಗಿ ಭೇದಶ್ರುತಿಗಳು ವ್ಯವಹಾರವಿಚಾರಪರವು (ಹಿಂದಸಾ. ೨೨೩). [ಸಂ.]

**ನಿಷೇಧ್ಯಾಂಶ** (ನಾ). ನಿಷೇಧಿಸಬೇಕಾದ ಅಂಶ ; ಬಹಿಷ್ಕರಿಸಬೇಕಾದ ವಿಚಾರ : ನಿಷೇಧಕ್ಕೆ ಪ್ರಸಕ್ತಿ ಬೇಕು ಎಂದರೆ ನಿಷೇಧ್ಯಾಂಶವು ತಿಳಿದಿರಬೇಕು (ಹಿಂದಸಾ. ೨೨೩). [ನಿಷೇಧ್ಯ + ಅಂಶ]

**ನಿಷೇವಕ** (ನಾ). ಆರಾಧಿಸುವವನು ; ಆರಾಧಕ : ಜೀವನ್ಮುಕ್ತಂ ಸಕಲಗುಣಾವಹ ವಿಶ್ವಾವಬೋಧ ಪರಮಾನಂದಂ ಪಾವನನಿಜಪದಪದ್ಮ ನಿಷೇವಕ ರಕ್ಷೈಕದಕ್ಷನಕ್ಷಯನರ್ಹಂ (ಉಸಾರ. ೩೮೫) ; ಆ ವಿದುರನಾ ದಂಪತಿಗಳನುಭಾವವನು ತದ್ಯೋಗನಿಷ್ಠೆಯ ಜೀವನಿರ್ಮೋಕ್ಷವನು ಕಾಣುತ ಹರುಷ ಶೋಕವನು ಲಾವಣಿಗೆಗೊಂಡಿರದೆ ತೀರ್ಥನಿಷೇವಕನು ತಾನಾಗಿ ಹೋದಪನು (ನಿಭಾಗ. ೧-೯-೪೩). [ಸಂ.]

**ನಿಷೇವಣ** (ನಾ). ೧. ಸೇವೆ ; ಪರಿಚರ್ಯೆ. ೨. ಪೂಜೆ ; ಅರ್ಚನೆ; ಆರಾಧನೆ. ೩. ಉಪಯೋಗಿಸುವುದು; ಸೇವಿಸುವುದು: ಮದೀಯರ ಪಾದಾಬ್ಜ ಪಯೋನಿಷೇವಣದಿನಸ್ಮತ್ಕೀರ್ತನಂಗೆಯ್ಯಲಾಂ ಪರವಶ್ಯತ್ವ ಮನೆಯ್ದಿದೆಂ (ಯಾದಚಂ. ೧೨-೪೨) ; ಲಲಿತಚಿಂತಾಮಣಿಯ ಮಾತ್ರೆಯ ಫಲವು ಪದ್ಯನಿಷೇವಣದೊಳುಜ್ವಲಿಸುವದದೀಶಮಸುಖಂ ದೊರಕುವುದು ಅದರಿಂದ (ವಿವೇಭ. ೧೧-೩೦). [ಸಂ.]

**ನಿಷೇವಣೀಯ** (ನಾ). ಪೂಜೆಯನ್ನು ಹೊಂದುವವನು; ಆರಾಧನೆಯನ್ನು ಪಡೆಯುವವನು : ತದ್ದೇವಂ ದೇವನಿಷೇವಣೀಯನಣಿಮಾದ್ಯೈಶ್ವರ್ಯಯುಕ್ತಂ ತ್ರಿದಶದ್ದೇವೇಂದ್ರಂ ಮಣಿಚೂಳನೆಂಬ ಪೆಸರಿಂ ಪೆತ್ತಂ ದಿವ್ಯೈಶ್ವರ್ಯಮಂ (ಶಾಂತಿಪು. ೭-೭೩). [ಸಂ.]

**ನಿಷೇವಿತ** (ಗು). ೧. ಆರಾಧಿಸಿದ ; ಪೂಜಿಸಿದ : ಹೋದರವರಂತೊಂದುದಿನ ಜಗದಾದಿ ತತ್ವಾವಳಿನಿಷೇವಿತ ಪಾದಪೀಠನ ಯೋಗಮಾಯಾಧೀಶ್ವರೇಶ್ವರನ . . . ವಿಷ್ಣುವಿನ ವೈಕುಂಠಪುರವರಕೆ (ನಿಭಾಗ. ೩-೪-೩೫); ಪರಮ ಹರುಷವ ಮಾಡುತಿರ್ದನು ಶರಣಜನ ಸಂಸಾರಿಕನು ಸುರವರನಿಷೇವಿತಮೂರ್ತಿ ನಿತ್ಯಾತುಮನು ನಿಜಜನಕೆ (ನಿಭಾಗ. ೧೦-೫೦-೪೩). (ನಾ). ೨. ಗೌರವ ಹೊಂದಿದುದು ; ಆರಾಧಿತವಾದುದು : ಈ ರೂಪೆಂಬುದು ಭುವನಜನಾರಾಧ್ಯಂ ಚಕ್ರಿಜನನಿಷೇವಿತಮಿದಜಿಠೊಳ್ ಸಾರದಳಿವೆಂದು ಪೇಳ್ವನೆ ಬಾರಿಸಿದುವು ಬಿಡದೆ ಜಡಿದು ವನದೇವತೆಗಳ್ (ಆಪಿಪು. ೯-೯೩). ೩. ಸೇವ್ಯವಾದುದು ; ಯೋಗ್ಯವಾದುದು : ವಿಪಿನಂ ಕ್ರೂರವ್ಯಾಳವೃಕಸೂಕರಚಮೂರಕಂಠೀರವನಿಷೇವಿತಂ (ರಾಮಾಶ್ವ. ೨೮-೧೩). ೪. ಸೇವೆ ಹೊಂದಿದವನು ; ಪೂಜೆಗೊಂಡವನು : ಈರೈದು ದೆಸೆಗಳಲಾ ಗಿರಿಯ ಹೊಱಗಿಹರು ಸುರಜನಯೋಗಿಸಿದ್ಧನಿಷೇವಿತರು ತಾವಾಗಿ ವಿಭವದಲಿ (ಕುಮ್ಯಾಅ. ೭-೪೦). [ಸಂ.]

**ನಿಷೇವೆ** (ನಾ). ಸೇವೆ : ಪರಿಚರ್ಯೆ : ಕೈಂಕರ್ಯ : ಧರೆಯೆಂಬ ತರುಣಿ ನರಪನ ವಿರಹದ ಸಂತಾಪವೇೞ್ಗೆಯಂ ಮಟ್ಟಿಸಿದಳ್ ಪಿರಿದಾದ ದಾನಧಾರಾಪರಿಷೇಕನಿಷೇವೆಯಿಂ ಕುಮಾರಾಗ್ರಣಿಯಾ (ಬಾಧಪು. ೧೨-೧೬೯). [ಸಂ. ನಿಷೇವಾ]

**ನಿಷೇವ್ಯ** (ನಾ). ೧. ಯೋಗ್ಯವಾದುದು ; ಸೇವ್ಯವಾದುದು : ಉಪಯುಕ್ತವಾದುದು : ಅದು . . . ಕ್ಷಾಯೋಪಶಮಿಕ ಭಾವೋಪೇತಾರ್ಥವ್ಯಂಜನಯೋಗಸಂಕ್ರಮಣಮುಂ ಚತುರ್ದಶನವಪೂರ್ವಧರಯತಿವೃಷಭನಿಷೇವ್ಯಮುಂ ಅಪ್ಪುದಱಿಂ . . . ಸ್ವರ್ಗಾಪವರ್ಗ ನಿಮಿತ್ತಮಕ್ಕುಂ (ತತ್ತ್ವಪ್ರ. ೩೫೨); ವಾಯುಸನಿವಹನಿರ್ಮಿತತೀರ್ಥ ಹಂಸನಿಷೇವ್ಯವಲ್ಲೆಂದ (ನಿಭಾಗ. ೧-೩-೨೩). ೨. ಕೂಡಿರುವುದು : ಹೊಂದಿರುವುದು. ೧, ೨ : ಮತ್ತಮಾ ಮಹಾವನಂ ಯೌವನದಂತೆ ಮದನೋತ್ಕಳಿಕಾಕಮನೀಯಮುಂ . . . ಸ್ವರಸಮುದಯದಂತೆ ನಿಷಾದನಿಷೇವ್ಯಮುಂ (ಚಂದ್ರಪು. ೫-೫೨ಪ). ೩. ಕೂಡಿರುವವನು ; ಹೊಂದಿರುವವನು : ಕುಸುಮದಾಮದಿನುದ್ದಾಮಕೀರ್ತಿಯುಂ ಭವ್ಯಮಧುಕರ ನಿಷೇ[ಪಾಠಾಂ.ಸೇ]ವ್ಯನುಂ . . . ಎನಿಸಿ (ಅಜಿಪು. ೩-೧೪ಪ). [ಸಂ.]

**ನಿಷ್ಕ** (ನಾ). ೧. ಚಿನ್ನ ; ಸುವರ್ಣ : "ಹೇಮ, ಸ್ವರ್ಣಂ, ಜಾತರೂಪಂ . . . ಕಲ್ಯಾಣಂ, ನಿಷ್ಕಂ, ಅಷ್ಟಾಪದಂ . . . ಕರ್ಬುರಂ, ತಪನೀಯಂ—ಈ ೨೫ ಹೊನ್ (ಪೊನ್)" (ಹಲಾಯು. ೨೯-೧೯) ; "ಗೈರಿಕಂ ಕರ್ಬುರಂ . . . ನಿಷ್ಕಮೆನೆ ಹೇಮವಾ ಸ್ವರ್ಣಮೆನೆ ಹೊನ್ನಿಂಗೆ ನಾಮಮಕ್ಕುಂ" (ಮಂಗರಾ. ೩೦-೪). ೨. ಒಂದು ಚಿನ್ನದ ನಾಣ್ಯ ; ಗದ್ಯಾಣ ; ℙ ಮೂವತ್ತೆರಡು ಅಥವಾ ಅರುವತ್ತು ನಾಲ್ಕು ಗುಂಜಿ ತೂಕದ ನಾಣ್ಯ : ಹತ್ತು ನಿಷ್ಕಮಂ ನಿರುತಮೆ ಕೊಟ್ಟಂ (ಸೌಇಇ. XI-ii, ೧೫೯-೪೧; 1111); ವಿರೋಧಿಸೇನೆಗಿದು ಸೂಸುವ ಜೀವನಮೂಲ್ಯ ನಿಷ್ಕರಾಜಿಗಳೆನೆ ವಿಸ್ಫುಲಿಂಗಮಲಗಿಂ ಕೆದಱುತ್ತಿರೆ ಪಾಯ್ದುವಂಬುಗಳ್(ಜಗವಿ. ೭-೭೮); ಬಳಿಕ ಯಮತನುಜನು ಸದಸ್ಯಾವಳಿಗೆಯೊಬ್ಬೊಬ್ಬರಿಗೆ ಮಿಗೆ ವೆಗ್ಗಳವೆನಿಪವೊಲ್ ಕೊಟ್ಟನಾಗ ಸಹಸ್ರನಿಷ್ಕಗಳ (ತಿಮ್ಮಅ. ೮-೨೭) ; ನಿನಗೆ ಅಚ್ಚಬಂಗಾರದ ನೂರು ನಿಷ್ಕಗಳನ್ನು ಕೊಡುತ್ತೇನೆ (ಪಚಭಾ. ೨೦೫). ೩. ಒಂದು ಬಗೆಯ ಚಿನ್ನದ ಆಭರಣ,—ಕಂಠಹಾರ : ಮಹಾಹಾರಮಂ ತೊಡಿಸಿದನು ಕಂಠಕೆ, ಸತೋಯನೀಲಾಂಬುದಕೆ ಸುರಧನುಸ್ ಶೋಭೆಯಂ ನೀಳ್ಪ ರವಿಕರದಂತೆ, ರತ್ನರಮಣೀಯ ವಜ್ರದ್ಯುತಿಯ ನಿಷ್ಕಮಂ (ಶ್ರೀರಾಮಾ. ೬೭೬-೪೦೯). ೪. ಚಿನ್ನ ಮೊದಲಾದುವನ್ನು ತೂಗುವ ಒಂದು ತೂಕದ ಪ್ರಮಾಣ : ಅಳತೆ ವಿವರಾ ‖ ಭತ್ತ ನಾಲ್ಕಕೆ ಮಂಡಂ ಕಾಕಣ್ಯಮೆನಿಪುದದು ಮತ್ತೆ ಪಂಚಕಕೊಂದು ಪಣಮಕ್ಕುಮಾ ಪಣ ಮೂವತ್ತೆನಿಸಲದು ನಿಷ್ಕ (ಭಾಸ್ಕರ. ೭೪-೭). [ಸಂ.]

**ನಿಷ್ಕಂಟಕ** (ನಾ). ೧. ಮುಳ್ಳುಗಳಿಲ್ಲದುದು. ೨. ಪೀಡೆಯಿಲ್ಲದಿರುವುದು ; ತೊಂದರೆಯಿಲ್ಲದಿರುವುದು ; ಶತ್ರುರಹಿತವಾಗಿರುವುದು:

ನಿಷ್ಕಂಟಕಂ ಮಾಡಿದನಖಿಲಮಹೀಚಕ್ರಮಂ ವಜ್ರಜಂಘಂ (ಆದಿಪು. ೫-೨೧) ; ಮುದವದ್ವೈರಿಯಸಿಕ್ಕಿ ಭೂವಳಯಮಂ ನಿಷ್ಕಂಟಕಂ ಮಾಚಿಪ್ಪಿಂ (ಗದಾಯು. ೭-೬೮) ; ಎಂಟುದೆಸೆಯು ತನುವನು ಕೆಡಿಸುವಡೆ ನಿಷ್ಕಂಟಕರವಿ ಮಾಡುವಂತೆ ತುಂಟ ಕಾಮನ ಬಲಗಳನಿಜಾದೊಡೆ ತಪದೊಂಟಿತೇರನು ನೂಂಕಿದನು (ಪ್ರಭುಚ.೧೭-೬) ; ರಾಜ್ಯವನ್ನು ನಿಷ್ಕಣ್ಟಕ ಮಾಡಿ ಕುಡುವುದಕ್ಕೋಸ್ಕರವಾಗಿ ಬಿಜಯ ಮಾಡಿದ್ದಾರೆ (ಚಿಟ್ಟಿಅ. ೩೩-೨೬). ೧,೨ : ಪರಕ್ಕಾತ್ಮಪರನಿಕ್ಕಿ ಕೆಯ್ಯ ಬೆಸಗೊಳ್ವಾರಂಭಿಗಂಬೋಲ್ ಪಯೋಧಿಪರೀತಾವನಿಯಂ ನಿವಿರ್ಚಿ ನಿನಗಾಂ ನಿಷ್ಕಂಟಕಂ ಮಾಡುವೆಂ (ಶಾಂತಿಪು. ೭-೫೫). [ಸಂ.]

**ನಿಷ್ಕಂಟಕಂಗೆಯ್** (ಕ್ರಿ). ೧. ಮುಳ್ಳು ಇಲ್ಲದಂತೆ ಮಾಡು. ೨. ಪೀಡೆ ಇಲ್ಲದಂತೆ ಮಾಡು ; ಶತ್ರುರಹಿತವಾಗಿ ಮಾಡು : ದುಷ್ಟಮತಿ ಬಂದನಾ ಭರತಂ ದುರುದ್ದೇಶದಿಂ, ತನ್ನ ರಾಜ್ಯಮಂ ನಿಷ್ಕಂಟಕಂಗೆಯ್ಯಲೋಸುಗಂ (ಶ್ರೀರಾಮಾ. ೧೫೮-೧೭೮). [ನಿಷ್ಕಂಟಕ + ಕೆಯ್$_1$]

**ನಿಷ್ಕಂಟಕತ್ವ** (ನಾ). ಪೀಡೆಯಿಲ್ಲದಿರುವಿಕೆ : ಶತ್ರುರಹಿತವಾಗಿರುವಿಕೆ : ತ್ಯಾಗಕ್ಕೆ ಬುಧರು ತಣಿವವಧಿ . . . ವಿಪುಳ ಭೋಗಕ್ಕೆ ಸರ್ವಸುಖವವಧಿ ವೀರಕ್ಕೆ ಭೂಭಾಗದೊಳು ನಿಷ್ಕಂಟಕತ್ವವೇ ಅವಧಿ ತಾನಾಗಿ ಪಿರಿಯರಸುತನಮಂ ಮಾಡುತಿರ್ದನು ಹರಿಶ್ಚಂದ್ರ ಭೂನಾಥನು (ಹಚಕಾ. ೧-೪೮) ; ಹೋದುದೊಂದೇ ಕಣ್ಣ ಹರಳುಗಳೀ ದುರಾತ್ಮಕನಳಿವಿನಲಿ ಸಂಪಾದಿಸಿತು ಸದ್ಧರ್ಮಪಥ ನಿಷ್ಕಂಟಕತ್ವದಲಿ (ನಿಭಾಗ. ೩-೮-೪೨). [ಸಂ.]

**ನಿಷ್ಕಂಟಕಿತ** (ನಾ). ಪೀಡೆಯಿಲ್ಲದಂತೆ ಮಾಡಿದುದು ; ಶತ್ರುರಹಿತವಾಗಿ ಮಾಡಿದುದು : ರಾಜ್ಯಮಿದು ನಿಷ್ಕಂಟಕಿತಮಾಗಲೋಸುಗಂ ಕೌಸಲ್ಯೆಯಾತನಂ ಕಳುಹು ವಿಪಿನಾಂತರಕೆ (ಶ್ರೀರಾಮಾ. ೬೯-೪೨೧). [ಸಂ.]

**ನಿಷ್ಕಂಟಕೀಕೃತ** (ಗು). ಪೀಡೆಯಿಲ್ಲದಂತೆ ಮಾಡಿದ ; ಶತ್ರುರಹಿತವಾಗಿ ಮಾಡಿದ : ನಿಷ್ಕಂಟಕೀಕೃತಾಶೇಷ ಜಗದಕಾಂಡೋತ್ಥಿತಪ್ರಚಂಡವಿಪಕ್ಷೋತ್ಪಾತಪ್ರಶಮನಶಾಂತ್ಯುದಕಧಾರಾಕಾರತತ್ಕ್ಷಣಕ್ಷರದಜಸ್ರದಾನಜಲಧಾರಾಭಿರಾಮಕರಟಘಟಾಚಕ್ರಮಂ (ಆದಿಪು. ೧೪-೯೧ ವ). [ಸಂ.]

**ನಿಷ್ಕಂಪ** (ನಾ). ೧. ಕಂಪನವಿಲ್ಲದಿರುವಿಕೆ ; ನಿಶ್ಚಲತೆ ; ಸ್ಥಿರತೆ : ಅರ್ಕಕರಂಗಳತ್ತಮಿತ್ತಂ ಪುದಿದುಷ್ಣರಶ್ಮಿ ಪುರುಷಾಕೃತಿಯಂತಿರೆ ನಿತ್ಯಯೋಗ ನಿಷ್ಕಂಪಮಂ ಮಂಗೆ ಶಾಂತಮನುತಾಪಮನಾಱಿಸಿ ತಂ[ದುದಂ]ದು ಬರ್ದೊಂ ಪರೆದಿರ್ದವೋಲ್ ಮುನಿಗೆ ಕಲ್ನೆಲೆ ಬಲ್ನೆಲೆಯಂ ನಿದಾಘದೊಳ್ (ಶಾಂತಿಪು. ೯-೧೦೮). ೨. ಕಂಪಿಸದೆ ಇರುವವನು ; ನಿಶ್ಚಲನಾಗಿರುವವನು ; ಸ್ಥಿರವಾಗಿರುವವನು : ಪಂಪಂ ಧಾತ್ರೀವಳಯನಿಳಿಂಪಂ ಚತುರಂಗಬಳಭಯಂಕರಣಂ ನಿಷ್ಕಂಪಂ ಲಲಿತಾಲಂಕರಣಂ (ಪಂಪಭಾ. ೧೪-೪೯) ; ಕನಕಮಹಾದ್ರೀಂದ್ರದಂಡದಿಂ ನಿಷ್ಕಂಪಂ ವನನಿಧಿಯಂತ ಕ್ಷೋಭಂ ಘನಮಾರ್ಗದವೋಲ್ ಮುನೀಶ್ವರಂ ನಿಂದಿರ್ದಂ(ಅಜಿಪು. ೭-೫); ಜಲಧಿಯವೋಲ್ ಗಂಭೀರಂ ಬಲವೈರಿಯವೋಲ್ ಸಮಗ್ರವಿಭವಸನಾಥಂ ಕುಲಗಿರಿವೋಲ್ ನಿಷ್ಕಂಪಂ ಬಲಿಯಂತೆವೊಲಧಿಕದಾನಿ (ಶಮದ. ೨೧೪ ಪ್ರಯೋ). [ಸಂ.]

**ನಿಷ್ಕಂಪಪಕ್ಷ್ಮ** (ನಾ). ಅಲುಗಾಡದ ರೆಪ್ಪೆ ; ನಿಶ್ಚಲವಾದ ಎವೆ : ಗೂಡುವಾಯ್ವೆರ್ದೆಯನೊತ್ತಿ ನಿಷ್ಕಂಪಪಕ್ಷ್ಮಮಾಂತು ತರಳಾಕ್ಷಿ ವಿಸ್ಮಯದೆ ಚಕ್ರಿಯಂ ನೋಡಿದಳ್ (ಆದಿಪು. ೧೧-೨೦). [ನಿಷ್ಕಂಪ + ಪಕ್ಷ್ಮ]

**ನಿಷ್ಕಂಪಿತ** (ಗು). ೧. ಕಂಪಿಸದೆ ಇರುವ ; ಅಲುಗದೆ ಇರುವ : ಸ್ಥಿರವಾಗಿರುವ : ಪುಷ್ಕಳಾವತಿ ಪುಂಡರೀಕಿಣಿ ಪುರವಮಾವಿಷ್ಕೃತವಿಭವ ಸುಮಿತ್ರ ನಿಷ್ಕಂಪಿತಾಸೆಯ ಸುವ್ರತೆ ಪುಷ್ಪಧನುಷ್ಮನ ರಾಣಿಸಮಾನೆ (ಪರ್ವಚ. ೯-೪೫). 'ನಿಷ್ಕಂಪಿತಾಂಗ' ಪರಾ. (ನಾ). ೨. ಅಚಲವಾದುದು ; ಸ್ಥಿರವಾದುದು : ದೇಹಂ ಸುವರ್ಣಾದ್ರಿಯವೊಲ್ ನಿಷ್ಕಂಪಿತಂ ಕಣ್ಗೆಸೆಯೆ ಕುಸಿಯೆ ಬಾಹ್ಯೇಂದ್ರಿಯಂ ಬಾಹ್ಯಸಾಮಗ್ರಿಯೊಳೆವ್ಯಗ್ರ ಪ್ರತಿಷ್ಠಾಪದನೆನಿಸಿದನೇಕಾಂತದೇಶಂ ಮುನೀಶಂ (ಮಲ್ಲಿಪು. ೧೪-೫೭). [ಸಂ.]

**ನಿಷ್ಕಂಪಿತಾಂಗ** (ನಾ). ಕಂಪಿಸದೆ ಇರುವ ಅಂಗವುಳ್ಳುದು ; ಅಲುಗದೆ ಇರುವ ಶರೀರವುಳ್ಳುದು: ಅಗಾಧಸ್ರಮಂತೀಹ್ರದಾಂತರ್ಜಲದೊಳ್ ನಿಷ್ಕಂಪಿತಾಂಗಂ ಮುಳುಗಿದುದು ಬಹಿಃಪುಷ್ಕರಂ ಹಸ್ತಿಯೂಥಂ (ಚಂದ್ರಪು. ೯-೧೮). [ನಿಷ್ಕಂಪಿತ + ಅಂಗ$_2$]

**ನಿಷ್ಕಪಟ** (ಗು). ೧. ಕಪಟವಿಲ್ಲದಿರುವ ; ಮೋಸವಿಲ್ಲದ ; ಪ್ರಾಮಾಣಿಕವಾದ : ನಿಷ್ಕಪಟವಿನಯವಿನಮಿತಜನಚಿಂತಾಮಣಿ (ಜಿನಾಲಿ.೧-೧) ; ಕಪಟದಲಿ ಭೀಮಾರ್ಜುನರು ಸಹಿತುಪಚಿತ ದ್ವಿಜವೇಷದಲಿ ನಿಷ್ಕಪಟ ಮಗಧನ ಮನೆಯನದ್ವಾರದಲಿ ಹೊಕ್ಕರಲ (ಕುಮ್ಯಾಸ.೧೦-೨೧). (ನಾ). ೨. ಕಪಟವಿಲ್ಲದಿರುವುದು ; ಮೋಸವಿಲ್ಲದುದು : ಸರಳವಾದ ಉಡಿಗೆ, ನಿಷ್ಕಪಟವಾದ ಮುಖ (ದೂಜಿಟ್ಟ. ೨೧). [ಸಂ.]

**ನಿಷ್ಕಪಟತನ** (ನಾ). ಕಪಟವಿಲ್ಲದಿರುವಿಕೆ ; ಮೋಸವಿಲ್ಲದಿರುವಿಕೆ; ಪ್ರಾಮಾಣಿಕತೆ : ನಿಷ್ಕಪಟತನದಿಂದ ರೋಗಿಯನ್ನು ಆತ್ಮಪೂರ್ವಕವಾಗಿ ದೈವೀಸಂಭೂತವಾಗಿ ಉಪಚರಿಸಬೇಕು (ಕಲರೋ. ೪೬). [ನಿಷ್ಕಪಟ + – ತನ]

**ನಿಷ್ಕಪಟಸ್ಥ** (ನಾ). ಕಪಟವಿಲ್ಲದವನು ; ಮೋಸವಿಲ್ಲದವನು ; ಪ್ರಾಮಾಣಿಕ. [ಸಂ.]

**ನಿಷ್ಕಪಟಿ** (ನಾ). = ನಿಷ್ಕಪಟಸ್ಥ : ಅವನು ಯಾವ ವಿಚಾರವೂ ತಿಳಿಯದ ನಿಷ್ಕಪಟಿ (ರೂಢಿ). [ಸಂ. ನಿಷ್ಕಪಟಿನ್]

**ನಿಷ್ಕರ$_1$** (ನಾ). = ನಿಷ್ಕರ್ಷ ೩ : ಪುಷ್ಕರನೆ ಕೇಳೊ ನೀನೀಗ ಪೇಳ್ವ ನಿಷ್ಕರದ ಮಾತ ನಾನೀಗ (ಯನಳ. ೧೫೫). [<ಸಂ. ನಿಷ್ಕರ್ಷ]

**ನಿಷ್ಕರ$_2$** (ನಾ). ೧. ಹೊರತೆಗೆಯುವಿಕೆ; ಕಳಚುವಿಕೆ. ೨. ಸಿದ್ಧಪಡಿಸುವಿಕೆ; ತಯಾರಿಸುವಿಕೆ; ಪೂರೈಸುವಿಕೆ ; ನಿರ್ವಹಣೆ. ೩. ಕಾರ್ಯ ಮಾಡದವನು ; ಸೋಮಾರಿ; ಮೈಗಳ್ಳ : ಒಬ್ಬ ಮಾಸ್ತರರು ನಿಷ್ಕರರೆಂದು ಇಡೀ ಸಾಲೆಯನ್ನು ದೂಷಿಸಲು ಬರುವುದಿಲ್ಲ (ರಂಗರೋ. ೨೨). [ಸಂ.]

**ನಿಷ್ಕರಿಸು$_1$** (ಕ್ರಿ). ನಿರ್ಧಾರ ಮಾಡು ; ನಿರ್ಣಯಿಸು : ತಸ್ಕರರುಪದ್ರದಿಂ ಭೂಸುರರ ಕಳಕಳವ ನಿಷ್ಕರಿಸಿ ಕೇಳ್ದರ್ಜುನಂ ಪೋಗಿ ಧನುಸರಳಿಗೋಸ್ಕರಂ ರಾಯ ರಮಣಿಯರೊಂದೆಯೆಡೆಯಿದ್ದುದಂ ಕಂಡು ಭೂಪ್ರದಕ್ಷಿಣೆಗೈದನು (ತುರಂಗ. ೧೫ ಸೂಚನೆ) ; ಬಾಜೀರಾಯನ ವೇತನವಾದರೋ "ಅವನ ಮತ್ತು ಅವನ ಕುಟುಂಬಕ್ಕಾಗಿ" ನಿಷ್ಕರಿಸಲ್ಪಟ್ಟದ್ದಿತು (ಝಾನ್ಸಿರಾಣಿ. ೩೦). [ನಿಷ್ಕರ$_1$ + – ಇಸು$_3$]

**ನಿಷ್ಕರಿಸು$_2$** (ಕ್ರಿ). ಕಾಂತಿಗುಂದು ; ನಿಸ್ತೇಜವಾಗು (?) : ನಿಷ್ಕಲಾನ್ವಿತನಾಗಿ ಕಳೆಗೊಂಬನಮೃತಾಂಶು ಪುಷ್ಕರದೆ ಭಾಸ್ಕರಪ್ರಭೆಯುಂ ದಿನದಿನಕೆ ನಿಷ್ಕರಿಸಿ ದೂರಸ್ಥನಾದಪಂ ಸತ್ಯಮೆಲ್ಲಿದ್ದಪುದು ಸಿರಿಯೊದಗಲು (ಪರಶು. ೬-೨೩). [ ? ]

**ನಿಷ್ಕರುಣ** (ಗು). ೧. ದಯೆಯಿಲ್ಲದ ; ಕನಿಕರವಿಲ್ಲದ ; ಕ್ರೂರ : ಕಂದಿದಳುಬ್ಬಿದೊಡೆ ಬೆಳ್ಪಿನೊಳೊಂದಿದಳೊಂದದೊಡೆ ಬಂದೊಡತಿರಾಗಕ್ಕಂ ಸಂದಳಿವಳ್ ಮೂವಣ್ಣಂ ಬಂದಳ್ ನಿಷ್ಕರುಣ ತರುಣಿ ನಿಷ್ಕಾರಣದಿಂ

(ಜಾಂಪ್ರ.ಸ್ತ. ೮-೭೪) : ತನ್ನ ಶಿಷ್ಯಾಳಿಯೊಳು ನೋಡಿ ಮುನಿಯುಸೂಯಾ ನೀಚಪ್ರವೃತ್ತಿ ನಿರ್ದಾಕ್ಷಿಣ್ಯ ನಿಷ್ಕರುಣನೀತಿಗಳಲಿ ಹೆಸರುಳ್ಳ ಹಿರಿಯ ನಕ್ಷತ್ರಕ ನೆನಿಪ್ಪ ಮಾನಸನ . . . ಕಳುಹಲು (ಹರಿಕ. ೯-೧೫). (ನಾ). ೨. ಕರುಣೆಯಿಲ್ಲದಿರುವುದು : ನಿಷ್ಕರುಣೆ : ನಿರ್ದಯೆ : ಮೊರೆ ಮಗಳು ಜರೆದು ನಿಷ್ಕರುಣದಲಿ ನೂಕಿಬಿಡಲು, ಅಡವಿಯೊಳಗಾ ನೀರ ಜೆನ್ನಿಗನು ಹುಚ್ಚುಹಿಡಿದೆಡೆಬಿಡದೆ ಹಗಲಿರುಳು ತೊಳಲಿದುದನು (ಸಂಗೀತ. ೪೫-೧೮). ೩. ಕರುಣೆಯಿಲ್ಲದ ವ್ಯಕ್ತಿ ; ನಿರ್ದಯ ವ್ಯಕ್ತಿ : ಅಲಿತದಲಿ ಈ ಹುಚ್ಚು ನನಗೆ ಬಂದುದದೆಂತು ? ನಿಷ್ಕರುಣ ! ಹೇಳೇಕೆ ಬಹುದೂರನಾದೆ ? (ಫ್ಲಸ್ಯಾಲೋ. ೩೨). [ಸಂ.]

**ನಿಷ್ಕರುಣತೆ** (ನಾ). ಕರುಣೆಯಿಲ್ಲದಿರುವಿಕೆ: ದಯೆಯಿಲ್ಲದಿರುವಿಕೆ: ಕ್ರೌರ್ಯ : ಪರಿಜನಕೆ ದಯೆಯನು ಪರಸ್ತ್ರೀಯರಲಿ ಭೀತಿಯ ಹಗೆಗಳಲಿ ನಿಷ್ಕರುಣತೆಯ . . . ಪಿಸುಣರ ನುಡಿಗಳಲಿ ಮೂರ್ಖತೆಯ ನೀ ವಿರಚಿಸೆಯೊ ಬೇಸಜುಪೆಯೊ (ಕಂನ್ಯಾಸ. ೧-೫೭). [ಸಂ. ನಿಷ್ಕರುಣತಾ]

**ನಿಷ್ಕರುಣಿ** (ನಾ). ಕರುಣೆಯಿಲ್ಲದವನು : ನಿರ್ದಯ ; ಕ್ರೂರಿ : ಪಾಪಿ ನಿಷ್ಕರುಣಿ ನಿರ್ದಯ . . . ಆಳಲ ಬೇಗೆಯ. ಬೆಂಕಿಯುರಿ ನಿನ್ನ ನಜಾಯದೇ ಹೇಳು ವಿಶ್ವಾಮಿತ್ರ್ಯವಾದ ವಿಶ್ವಾಮಿತ್ರ (ಹರಿಶಾ. ೯-೭) : ಸಿಂಧುಭೂಪನಲಾ. ಭುಜಾಗ್ರದ ಬಂಧನವ ಬಿಡು ಭೀಮ ಶಿವಶಿವ ನೊಂದನೆ ನಿಷ್ಕರುಣಿಗಳು ನೀವೆಂದನವನೀಶ (ಕುಮಾವ್ಯಾ. ೨೨-೩೭) ; ತನ್ನ ನೀ ನಿಷ್ಕರುಣಿಯೈ ನೆಳಲಿಂಗೆ ಕೊಂಡೊಯ್ದೆನ್ನನುಳುಹಂದ (ತೊರವೆ. ೩-೧೧-೫೦) ; ತಾನು ನಿಷ್ಕರುಣಿ ಎಂದು ಆ ಎಳೆಯರು ಭಾವಿಸಿದ್ದಿರಬೇಕು (ಒನರಂ. ೨೯೪). [ಸಂ. ನಿಷ್ಕರುಣಿನ್]

**ನಿಷ್ಕರುಣೆ** (ನಾ). ನಿಷ್ಕರುಣ ೨ : ನಿಷ್ಕರುಣೆಯಿಂದ ವರ್ತಿಸಿದರೆ ಯಾವ ಕೆಲಸವೂ ಆಗುವುದಿಲ್ಲ (ದಾಫ). [ಸಂ. ನಿಷ್ಕರುಣಾ]

**ನಿಷ್ಕರ್ಮ** (ಗು). ೧. ಕರ್ಮರಹಿತವಾದ : ನಿಷ್ಕ್ರಿಯವಾದ : ಚಾರುಕುಲಗೋತ್ರವನ್ನಿಗಿ ನಿಷ್ಕರ್ಮೋಪಚಾರಕ್ಕೆ ಪಕ್ವಾಗಿಯಧಿಕ ಷಟ್ಕರ್ಮಗಳ ನೀರುಗೂಡಿ . . . ವಿಕಾರವರ್ತನೆಗೆ ನೆಲೆಯನೆಯಾಗಿ ಬಾಳುವ ವಿಕಾರಸಚಿವರ್ಗಳಿಲ್ಲಕ್ಕೊಡೆಯರಾಗಿರಲ್ಕೆಲ್ಲಿಯೆಂದು ಧನವು ನಿಮಗೆ (ಸಂಗಿರಾ. ೨೨-೬). (ನಾ). ೨. ಕರ್ಮರಹಿತತೆ : ನಿಷ್ಕ್ರಿಯತೆ : ಕಾರ್ಯ ಮಾಡದಿರುವುದು : ಅಕರ್ಮದಲ್ಲಿ—ನಿಷ್ಕರ್ಮದಲ್ಲಿ ಆಸಕ್ತಿ ವಹಿಸದಿರು (ಧರ್ಮಸಾ. ೧೬೪). ೩. ಪಾಪರಹಿತನಾದವನು: ಪಾಪವಿಲ್ಲದವನು. ೪. ಕರ್ಮರಹಿತನಾದವನು : ಯಾವ ಕರ್ಮಫಲಕ್ಕೂ ಒಳ ಪಡದವನು : ಪರಮಾತ್ಮ : ನಿಷ್ಕರ್ಮ ನಿತ್ಯನಿರಂಜನ ನಿರುಪಲೇಪ ನಿಜಶುದ್ಧಾತ್ಮನೆಯೆನಗೆ ಸಾಕ್ಷಾನ್ಮೋಕ್ಷಕ್ಕೆ ಕಾರಣಂ (ಪಸಾರ. ೧೧೯). [ಸಂ. ನಿಷ್ಕರ್ಮನ್]

**ನಿಷ್ಕರ್ಮಿ** (ನಾ). ೧. ಕರ್ಮರಹಿತನಾದವನು : ಯಾವ ಕರ್ಮಕ್ಕೂ ಒಳಪಡದವನು : ಪರಮಾತ್ಮ : ವಿಷ್ಣು ಕರ್ಮಿ ರುದ್ರ ನಿಷ್ಕರ್ಮಿ ಕ್ರಮವನರಿಯದೆ ನುಡಿವರೋ (ಒನಪ. ೫೪೫) ; ನೀನಿಲ್ಲದಾನೇನ್ ? ನಿರಂಜನಂ, ನಿಷ್ಕರ್ಮಿ ! (ಶ್ರೀರಾಮಾ. ೩೭೯-೪೧). ೨. ಪಾಪರಹಿತನಾದವನು : ಪಾಪವಿಲ್ಲದವನು. [ಸಂ. ನಿಷ್ಕರ್ಮಿನ್]

**ನಿಷ್ಕರ್ಷ** (ನಾ). ೧. ಹೊರತೆಗೆಯುವುದು : ಹೊರಕ್ಕೆ ಎಳೆಯುವುದು. ೨. ವಸ್ತುವಿನ ಮೂಲಸತ್ವ,—ಸಾರ ; ಮುಖ್ಯತತ್ವ. ೩. ನಿಶ್ಚಯ : ನಿರ್ಣಯ : ನಿರ್ಧಾರ : ಗೊತ್ತುವಳಿ. ೪. [ನಾಟ್ಯ] ಎಂಟು ಬಗೆಯ ದಂತವಿನ್ಯಾಸಗಳಲ್ಲಿ ಒಂದು : "ಕಚ್ಚಿರುವ ಹಲ್ಲುಗಳನ್ನು ಬಿಡಿಸುವುದು" (ಭಾಸ್ಕರ. ೨೮೦ ನಾಟ್ಯಶಾಸ್ತ್ರ) : ಕುಟ್ಟನ ಖಾದನ ಭಿನ್ನ . . . ನಿಷ್ಕರ್ಷ— ಈ ಎಂಟು ಹಲ್ಲಿನ ಭೇದಂಗಳ್ (ಭಾಸ್ಕರ. ೩-೮೮) : ಪಲ್ಲಂ ಗೆಲೆ ಬಿಡುವ ಪರಿಯ ನೊಲವಿಂ ನೆಲೆಗೊಳೆ ನಿಷ್ಕರ್ಷವೆಂಬ ದಂತಮೆನಿಕ್ಕುಂ (ಭಾಸ್ಕರ. ೩-೯೧). [ಸಂ.]

**ನಿಷ್ಕರ್ಷಿಸು** (ಕ್ರಿ). ನಿರ್ಣಯ ಮಾಡು : ಗೊತ್ತು ಮಾಡು : ನಿರ್ಧಾರ ಮಾಡು : ಭಾವನಾಪರವಶನಾಗದೆ ಚೇತನಸ್ವಭಾವವನ್ನು ಶಾಸ್ತ್ರವಿಮರ್ಶೆಯಿಂದ ನಿಷ್ಕರ್ಷಿಸಿ ಅದಕ್ಕೆ ತಕ್ಕಂತೆ ಮನಸ್ಸನ್ನು ಪರಿಪಾಕಗೊಳಿಸುವುದು ತತ್ವಶಾಸ್ತ್ರ ವಿಮರ್ಶಕನ ಆದ್ಯ ಕರ್ತವ್ಯ (ಭಾರತ. ೨೮೦) ; ಅಕ್ಷರಗಳನ್ನು "ಲಘು", "ಗುರು" ಎಂದು ವಿಂಗಡಿಸಿ, ಲಘುವಿನ ಉಚ್ಚಾರಕ್ಕೆ ಒಂದು ಮಾತ್ರೆಯ ಕಾಲವೆಂದೂ ಗುರುವಿನ ಉಚ್ಚಾರಕ್ಕೆ ಎರಡು ಮಾತ್ರೆಯ ಕಾಲವೆಂದೂ ನಿಷ್ಕರ್ಷಿಸಿದ್ದಾರೆ (ಸಮಾಲೋ. ೧೮೬). [ನಿಷ್ಕರ್ಷ + ಇಸು₃]

**ನಿಷ್ಕರ್ಷೆ** (ನಾ). ನಿಷ್ಕರ್ಷ ೩ : ಇನ್ನೂ ನಿಷ್ಕರ್ಷೆಯಾಗದಿರುವ ಹಲವು ಆಧಾರಗಳನ್ನು ಒಂದೊಂದು ಪಂಥವೂ ಒಂದೊಂದು ರೀತಿಯಲ್ಲಿ ಸೃಷ್ಟಿಸಿಕೊಂಡಿದೆ (ಶಿಕ್ಷದ. ೪೧೦) ; ದಶಮಿಯ ದಿನವೇ ಸುಮುಹೂರ್ತವೆಂದು ನಿಷ್ಕರ್ಷೆಯಾಯಿತಲ್ಲವೆ ? (ಕವಿಕ. ೪೯).

**ನಿಷ್ಕರ್ಷೆ ಮಾಡು** ನಿಷ್ಕರ್ಷಿಸು : ಕಂಠೀರವನರಸರಾಜಒಡೆಯರವರ ಶೌರ್ಯವಂ ತಿಳಿದು, ಅವನು ದಂಡನೆಹಣವನ್ನು ಕೊಡುತ್ತೇನೆಂದು ನಿಷ್ಕರ್ಷೆ ಮಾಡಿಕೊಂಡನು (ಮಹಾಸಂ. I, ೭೨) ; ಹುಡುಗಿಯನ್ನು ನೀನು ಒಪ್ಪಿಲ್ಲದಿದ್ದರೆ ಹಾಗೆ ಹೇಳಿಬಿಡು. ಬೇರೆ ಕಡೆ ನಿಷ್ಕರ್ಷೆ ಮಾಡೋಣ (ಮಹಾಗ. ೫೦) ; ಬ್ರಹ್ಮನೇ ಅದನ್ನು ನಿಷ್ಕರ್ಷೆ ಮಾಡಬೇಕು (ಮೇಪದ. ೧೧೬). [ಸಂ. ನಿಷ್ಕರ್ಷ]

**ನಿಷ್ಕಲ, ನಿಷ್ಕಳ** (ಗು). ೧. ಪರಿಪೂರ್ಣವಾದ : ನಿರ್ಗುಣವಾದ: ಅಂತರಂಗ ಬಹಿರಂಗ ಪರಮಾಕಾಶಮಧ್ಯದಲ್ಲಿ ಪರಮಾತ್ಮನು ಪರಬ್ರಹ್ಮ ಸ್ವರೂಪನು . . . ಕೇವಲ ನಿಷ್ಕಲ ಸ್ವರೂಪನು (ಬಸಂ. ೪೧೦-೭೪) : ನಿಷ್ಕಲವಸ್ತು ತಾನೊಂದೆಯಲ್ಲದೆ ಅನ್ಯವಾಗಿ ತೋರುವ ತತ್ವಂಗಳೇನೂ ಇಲ್ಲದೆ . . . ತನ್ನ ನಿಜಸ್ವಭಾವದಲ್ಲಿಪ್ಪ ನಿಶ್ಶೂನ್ಯವಸ್ತುವನು ನಿಷ್ಕಲ ಲಿಂಗಸ್ಥಳವೆಂದು ಹೇಳಲಾಯಿತ್ತು (ಲಿಂಗಲೀ. ೬-೧) ; ಜೀವನಿಗೆ ಆಕಾರದಿಂದ ಆಕಾರದ ಅರ್ಚನೆ ; ನಿರಾಕಾರ ಮನಸ್ಸಿನಿಂದ ನಿಷ್ಕಲ ಪರಮಾತ್ಮನ ಧ್ಯಾನ ಇವೆರಡೂ ಸಹಜವಾಗಿ ಅನ್ವಯಿಸುತ್ತವೆ (ಶಕ್ತಿವಿ. ೨೫). (ನಾ). ೨. ಪರವಸ್ತು : ತನು ಪೃಥ್ವಿಯಿಂದಲಾಯಿತ್ತು . . . ಕಲ್ಪಿತಾಪ್ತ ಸಲಿಲ ನಿಷ್ಕಲದಿಂದಲಾಯಿತ್ತು (ಅವಚಂ. ೧೮೯-೮೫೪). ೩. ಅಖಂಡ : ಪರಿಪೂರ್ಣ : ಪರಮಾತ್ಮ : ಆದಿಯೋ ಸಕಲ ಅನಾದಿಯೋ ನಿಷ್ಕಲ (ಮಹಾದೇ. ... ೧೦೧-೨೩೫) ; ಸಕಲ ನಿಷ್ಕಲ [ಶಾಸ್ತ್ರ. ೪]ವ ಕೂಡಿಕೊಂಡಿಪ್ಪೆಯಾಗಿ ಸಕಲ ನೀನೇ ದೇವಾ ನಿಷ್ಕಲ ನೀನೇ (ಒನಪ. ೫೬೬) ; ಪರಮಾತ್ಮನು ನಿಷ್ಕಲನಾಗಿದ್ದರೂ ಸಕಲನೂ ಆಗಿರುವನೆಂದು ಶ್ರುತಿ ಸ್ಪಷ್ಟವಾಗಿ ತಿಳಿಸುತ್ತದೆ (ಶಕ್ತಿವಿ. ೨೩). ೪. ಶಕ್ತಿಗುಂದಿದುದು : ದುರ್ಬಲವಾದುದು : ನಿರ್ವೀರ್ಯ ವಾದುದು. **ನಿಷ್ಕಳ** : ೧. ಮುಗಿದೆತ್ತುಗೈಯಿಂದು ಕೊಂಡೆತ್ತಿ ನೆಳೆವರಾರ್ ಸುಮನಸ್ಕರಾಲಯಕೆ ನಿಷ್ಕಳವಿದಾಗೆ (ಮಲೆದೇ. ೨೪-೬). ೩. ಜಯ ನಿಷ್ಕಳ ನಿಶ್ಚಲ ನಿರ್ಭೇದ ಸರ್ವಜ್ಞ (ಅಬಪು. ೬-೧೫ ...) : ನಿಷ್ಕಳ ನಿಜೈಕ್ಯ ತ್ರಿವಿಧನಿರ್ಣಯ ಕೂಡಲಸಂಗಮದೇವಾ (ಬಸವ. ೭೬೯) ; ನಿಷ್ಕಳ ನಿರಾಕಾರ ನಿರಜ ನಿರಹಂಕಾರ ನಿರ್ಮಳ ನಿರಾಳ ಪಂಪಾ ವಿರೂಪಾಕ್ಷ ಶರಣು (ಹರಿಶಾ. ೧-೪) ; ನಿರುಪಮಾನ ನಿರ್ಧಿಕ ನಿರ್ಭಯ ನಿರತ ನಿಷ್ಕಳ . . . ನಿಜನಿರ್ವಾಣ ಚಿತ್ತ್ಯನು (ಒನಪು. ೬೧-೪೪) ; ಸುಲಭವಂತ ನಿಷ್ಠರಿಗೆ ನಿಷ್ಕಳ ನಿರೂಪನನಂತ ನಿಜನಿರ್ಮಳವೆನಿಪ ಪರಮಾತ್ಮ ಚಿನುಮಯರೂಪ ತಾನೆಂದ (ಕುಮಾವ್ಯಾ. ೩-೬೬). ೫. [ಸಂಗೀತ]

ವೀಣೆ ನುಡಿಸುವುದರಲ್ಲಿ ಒಂದು ರೀತಿ: ಅತಿ ಸೂಕ್ಷ್ಮವಾದ ನಾದವನ್ನು ಹೊರಡಿಸುವುದು. 'ನಿಃಕಳ' ಪರಾ. ೬. ಷಡ್ಜದ ಎರಡನೆಯ ಶ್ರುತಿ. 'ನಿಷ್ಕಲಿ' ಪರಾ. [ಸಂ.]

**ನಿಷ್ಕಲಂಕ,** ನಿಷ್ಕಳಂಕ (ಗು). ೧. ಕಲೆಗಳಿಲ್ಲದ: ಕಪ್ಪು ಗುರುತುಗಳಿಲ್ಲದ; ಕಳಂಕವಿಲ್ಲದ. 'ನಿಷ್ಕಲಂಕೇಂದು' ಪರಾ. ೨. ದೋಷವಿಲ್ಲದ; ಪಾಪರಹಿತವಾದ; ಶುದ್ಧವಾದ. (ನಾ). ೩. ಕಳಂಕರಹಿತನಾದವನು: ಪಾಪರಹಿತನಾದವನು; ದೋಷಗಳಿಲ್ಲದವನು: ಸರ್ವಕಾರಣಕಾರಣನ ನಿಷ್ಕಲಂಕನಂ ಸರ್ವತಾಕಾರನಂ . . . ಸರ್ವಾಂಗವೊಂದಿ ವಂದಿಸುವೆನು(ವೀಶೈಪು.೬-೧-೬೫). **ನಿಷ್ಕಳಂಕ:** ೨. ಪ್ರಾಚೀನ ವತ್ಸಲ ನಿಷ್ಕಳಂಕ ಕೋಸಲ ಕಾಶಿಯಾದ ಭೂಮಿಾತಳದೊಳುದಿತಜಾವಿಕಥನವನು ಶಂಕಿಸಡೆ ಕೊಟ್ಟಪೆನು (ವೆಂಕಾರಾ. ೩-೬-೧೪); ಪುಟ್ಟ ಯೋಗಿನಿಯ ನಿರ್ಮಲ, ನಿಷ್ಕಳಂಕ, ಪವಿತ್ರ, ಸ್ನೇಹಪ್ರೇಮಗಳು ಅವಳನ್ನು ಅರಿಯದ ಮತ್ತೊಂದೆಡೆಗೆ ಕೊಂಡೊಯ್ಯುದ್ದಹಗುರಗೊಳಿಸುತ್ತಿದ್ದುವು (ಕಮಕು. ೧೧೫). ೩. ನಿಷ್ಕಳಂಕ ನಿರಂಜನ ನಿಶ್ಚಿಂತ . . . ನಿಜ ನಿರ್ಮಾಯ ಚಿತ್ತೈಸು (ಬಸಪು. ೬೧-೪೪); ನಿಷ್ಕಲ ನೀಲಕಂಠ ನಿರ್ಜರನತ ನಿಷ್ಕಳಂಕ ಜಯ ಶಂಕರ ನಿರ್ಜಡ ಶಾಂಭವೀಧವಾ (ರಚರಂ. ೫-೨೪); ಜಂಗಮವೆಂದಡೆ ನಿಷ್ಕಳಂಕನು ನೋಡಾ ಜಂಗಮವೆಂದಡೆ ನಿರಪೇಕ್ಷನು ನೋಡಾ (ಅಬಂಜೀ. ೧೨೪-೫೨). 'ಅಕಲಂಕ' ಪರಾ. [ಸಂ.]

**ನಿಷ್ಕಲಂಕೇಂದು,** ನಿಷ್ಕಳಂಕೇಂದು (ನಾ). ಕಳಂಕರಹಿತನಾದ ಚಂದ್ರ: ಕಪ್ಪು ಕಲೆಗಳಿಲ್ಲದ ಚಂದ್ರ: ನಿಷ್ಕಲಂ[ಪಾಠಾಂ. ಳಂ]ಕೇಂದು ಮಂಡಲಸದೃಶವದನದಿಂ . . . ಎಸೆವ ನಿನ್ನ ರೂಪೆರ್ದೆಯೊಳಿರೆ ದುಷ್ಕಂಟಕದ ಭೀತಿಯೆನಗದೇಕೆಲೆ ದೇವ (ಜೈಮಭಾ. ೧೫-೩೬). **ನಿಷ್ಕಳಂಕೇಂದು:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ನಿಷ್ಕಲಂಕ+ಇಂದು₃]

**ನಿಷ್ಕಲಲಿಂಗ** (ನಾ). ಚೈತನ್ಯ ರೂಪನಾದ ಪರಮಾತ್ಮ: ನಿರಾಕಾರ ಪರಮಾತ್ಮನು ನಿಷ್ಕಲಲಿಂಗವೆನಿಸಿದರೆ ಸಾಕಾರ ಪರಮಾತ್ಮನು ದಿವ್ಯ ಮಂಗಳವಿಗ್ರಹನಾಗಿ ಶಿವನೆನಿಸಿ ಮಹಾಕೈಲಾಸದಲ್ಲಿ ನೆಲಸಿರುವನು. ನಿಷ್ಕಲಲಿಂಗವೆಂದರೆ ಸರ್ವಾಧಾರವಾದ ಚೈತನ್ಯ . . . ಮಹಾಪ್ರಕಾಶ (ಶಕ್ತಿವಿ. ೨೫); ಅಲ್ಲಿಂದ ಮುಂದೆ ಹೋಗಲು ನಿಷ್ಕಲಲಿಂಗವು ತೋರುವದು. ಅದು ನಿರುಪಾಧಿಕ ಜ್ಯೋತಿಯು (ಶಿವಾಕೋ. ೩೮). [ನಿಷ್ಕಲ+ಲಿಂಗ]

**ನಿಷ್ಕಲಾನ್ವಿತ** (ನಾ). ಕಳೆಯನ್ನು ಕಳೆದುಕೊಂಡವನು; ನಿಸ್ತೇಜನಾದವನು: ನಿಷ್ಕಲಾನ್ವಿತನಾಗಿ ಕಳೆಗೊಂಬನನ್ಯತಾಂಶು ಪುಷ್ಕರದೆ ಭಾಸ್ಕರಪ್ರಭೆಯುಂಟೈ ದಿನದಿನಕೆ ನಿಷ್ಕರಿಸಿ ದೂರಸ್ಥನಾದಪಂ ಸತ್ಯಮೆಲ್ಲಿದ್ದಪುದು ಸಿರಿಯೊದಗಲು (ಪರಶಿ. ೬-೨೩). [ಸಂ.]

**ನಿಷ್ಕಲಾಪ** (ನಾ). ನಿಷ್ಕ್ರಿಯನಾದವನು: ಯಾವ ಕರ್ಮಕ್ಕೂ ಒಳಪಡದವನು: ಶರಣು ನಿಷ್ಕ್ರಿಯ ನಿಷ್ಕಲಾಪನೆ (ಗಗಶಾ. ೧-೪೩). [ಸಂ.]

**ನಿಷ್ಕಲಿತ,** ನಿಷ್ಕಳಿತ (ಗು). ೧. ಅಖಂಡವಾದ: ಪರಿಪೂರ್ಣವಾದ: ಝಳಪಿಸಿದುದೆರಡಂಕದಲಿ ನಿಷ್ಕಲಿತ ತೇಜಃಪುಂಜವಿಬ್ಬರ ಹಳಹಳಿಕೆ ಹಬ್ಬಿದುದು (ಕುಮ್ಯಾಕ. ೨೪-೫೩). ೨. ಬಿಟ್ಟ: ಕಳೆದ: ತ್ಯಜಿಸಿದ: ತ್ಯಕ್ತ: ಜನನಲಯನಿಷ್ಕಲಿತ ವಿಮಲಬ್ರಹ್ಮಚೂಡಾರತ್ನ ನಡೆತಂದ (ತೊರರಾ. ೬-೫೩-೧೦೨). **ನಿಷ್ಕಳಿತ:** ೨. ವಿನೀತನ ವಿನುತವನಿತಾನತಮುಖನ ನಿಷ್ಕಳಿತರೋಷಕನ . . . ವಿಶೇಷ ಕಳಾಪ್ರವೀಣನ ಜನಪ ಚಿತ್ತೈಸುವುದೆಲ್ಲೈ ತಾಂಬೂಲಧಾರಕನ (ಕುಮ್ಯಾಉ. ೬-೯೧). [ಸಂ.]

**ನಿಷ್ಕಲಿ,** ನಿಷ್ಕಳಿ (ನಾ). ೧. ಮುಟ್ಟು ನಿಂತುಹೋದವಳು: ವಯಸ್ಸಾದವಳು. **ನಿಷ್ಕಳಿ:** ೧. "ಪುಷ್ಪಹೀನಾ, ನಿಷ್ಕಳಾ—ಈ ೨ ಮುಟ್ಟವೆ ಮಾಣ್ದವಳ್" (ಶಲಾಮು. ೪೦-೩೩೩); "ಹೊಲೆ ಕೆಡಲು ನಿಷ್ಕಳಿಯೆನಿಸಿಕ್ಕುಂ" (ಮಂಗರಾ. ೯೯-೨). ೨. ='ನಿಷ್ಕಲ ೬: ಗಹ್ವರಿ ನಿಷ್ಕಳಿ ಗೂಢೆ ಸಕಲೆಯರೆಂಬ ನಾಲ್ಕು ಶ್ರುತಿಗಳೇ ಷಡ್ಜಸ್ವರದಿಂ ಪುಟ್ಟಿದವು (ವಿವೇಕ. ೨೩೨). [ಸಂ. ನಿಷ್ಕಲಾ]

**ನಿಷ್ಕವಚ** (ಗು). ಕವಚವಿಲ್ಲದ: ಒರೆಯಿಂದ ಹೊರಕ್ಕೆ ಹಿರಿದ; ಒರೆಗಳಚಿದ: ಉದ್ವೀಚಿ ಮರುಮರೀಚಿನಿಚಯಚಂಚಲೋದ್ದಾಮ ಬಲಬಹುಲನಿಷ್ಕವಚಪ್ರಾಸಪಾಣಿ ವಾರಾಶ್ವಿಕಂ (ಅಪಿಪು. ೧೩-೪೫ ವ). [ಸಂ.]

**ನಿಷ್ಕಶೃಂಖಲೆ** (ನಾ). ಚಿನ್ನದ ಸರಪಳಿ: **ನಿಷ್ಕಶೃಂಖಲಾಚತುಷ್ಕ** ಘಟಿತ ನಿಯೂರ್ಹದಂತಪರ್ಯಂಕಿಕಾಪಟ್ಟದೊಳಮುಳವಟ್ಟು ಮದನ ಮಂಗಳಾಗಾರದ್ವಾರಮಕರತೋರಣದಂತಿರ್ದ ನವಿಲುಯ್ಯಲ ಕೆಲಕ್ಕೆ ವಂದು(ಚಂದ್ರಪು. ೮-೪೫ ವ). [ನಿಷ್ಕ+ಶೃಂಖಲೆ]

**ನಿಷ್ಕಷಾಯ** (ನಾ). [ಜೈನ] ಕ್ರೋಧ, ಮಾನ, ಮಾಯೆ, ಲೋಭ ಎಂಬ ನಾಲ್ಕು ಬಗೆಯ ದೋಷಗಳಿಂದ ಮುಕ್ತನಾದವನು; ಕಷಾಯರಹಿತನಾದವನು: ☞ ಕರ್ಮಫಲವನ್ನು ಬೆಳೆಸುವ ಭಾವನೆಗಳಿಗೆ 'ಕಷಾಯ'ವೆಂದು ಹೆಸರು. "ಕರ್ಮ ಕ್ಷೇತ್ರಂ ಕಷಂತೀತಿ ಕಷಾಯಾಃ" ಎಂಬುದು (ಪಸಾರ. ೫೨) ರಲ್ಲಿಯ ವಾಕ್ಯ. ಕಷಾಯಗಳಲ್ಲಿ ಅನೇಕ ಉಪಭೇದಗಳಿವೆ: ನೆಗಟ್ಟಿ ವೆತ್ತೇಕಾದಶಸ್ಥಾನಂಗಳೊಳಾ ನಿರತಿಚಾರವ್ರತಶೀಲಸಂಪನ್ನನುಂ ನಿರಸ್ತಮಿಥ್ಯಾತ್ವನುಂ ನಿಷ್ಕಷಾಯನುಮಾಗಿ ಸಮಾಚರಿಸಿ ಚರಮಕಾಲದೊಳ್ (ಸುಕುಮಾ. ೬-೩೭ ವ); ಅ ಭೋಗಭೂಮಿಯೊಳ್ . . . ವೃಷಗತ ಸೀಹಾರರುಂ **ದ್ವಿಚತುಷ್ಷಟ್ಸಹಸ್ರಚಾಪೋತ್ಸೇಧರುಂ** ನಿಷ್ಕಷಾಯರು ಮಾರ್ಯಾಭಿಧಾನರುಮಾಗಿ ದಂಪತಿಸ್ವರೂಪದಿಂ ಪುಟ್ಟಿ (ಚಂದ್ರಪು. ೩-೩೭ ವ). [ಸಂ.]

**ನಿಷ್ಕಷಾಯಂ** (ಅ). ಕಷಾಯಗಳಿಲ್ಲದವನಾಗಿ: ದಶಾನನಂ ಮಹಾಪ್ರಸಾದಮಂತೆಗೆಯ್ವೆನೆಂದಿಂದ್ರನಂ ಬರಿಸಿ ನಿಷ್ಕಷಾಯಂ ನಿನ್ನ ರಾಜ್ಯದೊಳ್ ಸುಖಮಿರೆಂದು ಕಳುಪುವುದುಂ (ಪಂರಾಮಾ. ೧೦-೨೧೨ ವ). [ಸಂ.]

**ನಿಷ್ಕಷಾಯತ್ವ** (ನಾ). [ಜೈನ] ಕಷಾಯಗಳಿಲ್ಲದಿರುವಿಕೆ; ರಾಗದ್ವೇಷಗಳಿಂದ ಮುಕ್ತವಾಗಿರುವಿಕೆ; ದೋಷರಾಹಿತ್ಯ: ಕುಂಭಕರ್ಣಾದಿಗಳ್ ರಾಮಲಕ್ಷ್ಮಣರ ನಿಷ್ಕಷಾಯತ್ವಮುಮಂ ಸಂಸಾರಭೀರುತ್ವಮುಮಂ . . . ಮೆಚ್ಚಿ ಪೊಗಟ್ಟು (ಪಂರಾಮಾ. ೧೪-೨೦೪ ವ). [ಸಂ.]

**ನಿಷ್ಕಳ** 'ನಿಷ್ಕಲ' ನೋ.

**ನಿಷ್ಕಳಂಕ** 'ನಿಷ್ಕಲಂಕ' ನೋ.

**ನಿಷ್ಕಳಂಕಿನಿ** (ನಾ). ಕಳಂಕವಿಲ್ಲದವಳು; ಕಳಂಕರಹಿತಳಾದವಳು: ಅವಳು ನಿರಪರಾಧಿನಿ, ನಿಷ್ಕಳಂಕಿನಿಯೆಂಬ ವಿಷಯದಲ್ಲಿ ಸ್ವಲ್ಪವೂ ಸಂದೇಹವಿರಲಿಲ್ಲ (ರೂಢಿ). [ಸಂ. ನಿಷ್ಕಲಂಕಿನೀ]

**ನಿಷ್ಕಳಂಕೇಂದು** 'ನಿಷ್ಕಲಂಕೇಂದು' ನೋ.

**ನಿಷ್ಕಳತತ್ವ** (ನಾ). ಪರಮಾತ್ಮ ತತ್ವ: ಸಕಲಸಿದ್ಧಿಗಳ ಸಾಕಾರ ತಪದಾಕಾರ ಮುಖದಿ ಮೂರ್ತಿಸಿತೋ ನಿಷ್ಕಳತತ್ವ ಬ್ರಹ್ಮಸಾಕ್ಷಿಕವಾದುದೋ (ಸಿಂಗಿರಾ. ೩-೩೩). [ಸಂ. ನಿಷ್ಕಲತತ್ವ]

**ನಿಷ್ಕಳಿತ** 'ನಿಷ್ಕಲಿತ' ನೋ.

**ನಿಷ್ಕಳಿ** 'ನಿಷ್ಕಲಿ' ನೋ.

**ನಿಷ್ಕಳೋಪಾಸನೆ** (ನಾ). ನಿರಾಕಾರವಾದ ಪರಮಾತ್ಮನ ಉಪಾಸನೆ, ಆರಾಧನೆ : ಪರಶಿವನ ನಿಷ್ಕಳೋಪಾಸನೆಯು ಲಿಂಗದ ಮೂಲಕವೂ, ಸಕಳೋಪಾಸನೆಯು ಮೂರ್ತಿಪೂಜೆಯ ಮೂಲಕವೂ ವ್ಯಕ್ತವಾದಂತೆ ವಿಷ್ಣುವಿನ ಉಪಾಸನೆಯು . . . ಐದು ವಿಧವಾಗಿದ್ದು ಸಾಧಕನ ಯೋಗ್ಯತೆಗೆ ಅನುಸಾರವಾಗಿದ್ದು ಆಚರಿಸಲು ಮಾರ್ಗವಾಯಿತು (ಪಾರದ. ೫೧). [ನಿಷ್ಕಳ (= ನಿಷ್ಕಲ) + ಉಪಾಸನೆ]

**ನಿಷ್ಕಾಂಕ್ಷಿತ** (ಗು). ೧. ಬಯಸದ ; ಅಪೇಕ್ಷಿಸದ. (ನಾ). ೨. [ಜೈನ] ಸಮ್ಯಗ್ದರ್ಶನದಲ್ಲಿ ವ್ರತಗಳನ್ನು ಆಚರಿಸುವವರು ಭೋಗಗಳನ್ನು ಬಯಸದೆ ಇರುವುದು ; ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಎರಡನೆಯದು : ಮೊದಲ ದರ್ಶನವಿಶುದ್ಧಿಯೆಂಬುದು ನಿಶ್ಶಂಕಿತ ನಿಷ್ಕಾಂಕ್ಷಿತ ನಿರ್ವಿಚಿಕಿತ್ಸಾ . . . ವಾತ್ಸಲ್ಯ ಪ್ರಭಾವನಾ ಎಂಬೆಂಟರೊಳರ್ಹದುಪದಿಷ್ಟಮಪ್ಪ ಮಾರ್ಗಮುನಿದಕ್ಕುಮಾಗದೆಂಬ ಸಂಶಯಮಂ ಪತ್ತುವಿಡುವುದು ನಿಶ್ಶಂಕೆ (ಚಾವುಂಪು. ೨೪೧). 'ನಿಶ್ಶಂಕೆ', 'ನಿಷ್ಕಾಂಕ್ಷೆ' ಪರಾ. [ಸಂ.]

**ನಿಷ್ಕಾಂಕ್ಷೆ** (ನಾ). ೧. ಬಯಕೆಯಿಲ್ಲದಿರುವುದು ; ಅಪೇಕ್ಷೆಯಿಲ್ಲದಿರುವುದು. ೨. [ಜೈನ] ಸಮ್ಯಗ್ದರ್ಶನದ ಎಂಟು ಅವಯವಗಳಲ್ಲಿ ಎರಡನೆಯದು ; ವ್ರತಗಳನ್ನು ಆಚರಿಸುವವರು ಭೋಗಾಕಾಂಕ್ಷೆಗಳನ್ನು ಬಯಸದೆ ಇರುವುದು : ಇಹಲೋಕ ಪರಲೋಕ ವಿಷಯೋಪಭೋಗಕಾಂಕ್ಷೆಯುಮಂ ಪರಶ್ರುತಿಕಾಂಕ್ಷೆಯುಮಂ ಪತ್ತುವಿಡುವುದು ನಿಷ್ಕಾಂಕ್ಷೆ (ಚಾವುಂಪು. ೨೪೧); ಈ ದರ್ಶನ ಸೌಖ್ಯಕಷ್ಟಾಂಗಮುಂ ಶರೀರಕ್ಕವಯವಮುಂ ಮರಕ್ಕೆ ಶಾಖೆಯುಮೆಂತಂತೆ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮುಂ ವಾತ್ಸಲ್ಯಮುಂ ಧರ್ಮಪ್ರಭಾವನೆಯುಮೆಂದು (ಧರ್ಮಾಮೃ. ೧-೭೮); ಸಂಸಾರಮುಮಂ ಬಯಸದೆಯುಂ . . . ಮೋಕ್ಷಮಂ ಬಯಸುವುದು ನಿಷ್ಕಾಂಕ್ಷೆಯೆಂಬುದು (ಪಸಾರ. ೪೭೯). 'ನಿಶ್ಶಂಕೆ', 'ನಿಷ್ಕಾಂಕ್ಷಿತ' ಪರಾ. [ಸಂ. ನಿಷ್ಕಾಂಕ್ಷಾ]

**ನಿಷ್ಕಾಪಟ್ಯ** (ನಾ). = ನಿಷ್ಕಪಟತನ : ಹಾಗೆ ಮಾತಾಡುವಾಗ ಅವನ ನಿಷ್ಕಾಪಟ್ಯ ಸೌಜನ್ಯಗಳು, ಪ್ರಶಾಂತವಾದ ಅವನ ನೀಲಿಗಣ್ಣುಗಳಲ್ಲಿ ... ಸದಾ ಮಿನುಗುತ್ತಿದ್ದ ಸ್ನೆಹಹಾಸದಲ್ಲಿ ಮಾರ್ಮೊಳೆಯುತ್ತಿದ್ದುವು (ಪುನರು. ೪೭೩). [ಸಂ.]

**ನಿಷ್ಕಾಮ** (ಗು). ೧. ಪ್ರತಿಫಲದ ಆಸೆಯಿಲ್ಲದ ; ನಿಸ್ಸ್ವಾರ್ಥವಾದ ; ನಿರಾಸಕ್ತವಾದ : ಸರ್ವರಂ ಸರ್ವಮಂ ನಿಷ್ಕಾಮದೃಷ್ಟಿಯಿಂ ವೀಕ್ಷಿಸುತೆ ವಿಗ್ರಹಂಬೋಲುನ್ನತಾನತಂ ನಿಂದಿರ್ದ ಮನದನ್ನೆಡೆಗೆಯ್ದು (ಶ್ರೀರಾಮಾ. ೮೪೫-೪೮೮); ಹೊಗೆಯ ಗೋಪುರವೇಳುತಿದೆ ಬಂಡೆಗಳ ಮುಂದೆ, ತರಗೆಲೆರಾಸಿಗಾಗುತಿದೆ ನಿಷ್ಕಾಮದಹನ (ಶಿಲಾಲ. ೪೧-೧೪). 'ನಿಷ್ಕಾಮಕರ್ಮ' ಪರಾ. ೨. ಕಾಮವಾಸನೆಯಿಲ್ಲದ ; ಲೈಂಗಿಕಭಾವನೆಯಿಲ್ಲದ. (ನಾ). ೩. ಕಾಮವಿಲ್ಲದುದು ; ಆಸೆಯಿಲ್ಲದುದು ; ನಿಸ್ವಾರ್ಥವಾದುದು ; ಪರವಸ್ತು : ನಿಷ್ಕಾಮವ ಕಾಮಿಸುವ ಮಹಾಕಾಮಿಯೇ ಶಿವಭಕ್ತನು (ಉರಿಪ. ೧೯-೩೬). ೪. ಕಾಮವಿಲ್ಲದವನು; ನಿಸ್ಸ್ವಾರ್ಥಿ : ಶ್ರೀಮನ್ನಾಕಾಧಿನಾಥಾನತ ಮಕುಟಮಣಿದ್ಯೋತಿತಾಂಘ್ರಿದ್ವಯಂ ನಿಷ್ಕಾಮಂ . . . ತ್ರೈಲೋಕ್ಯನಾಥಂ ಕುಡುಗೆಮಗಮೃತಾವಾಸಮಂ (ಸುಕುಮಾ. ೧-೧) ; ಅವಗುಣನೆನಿಪ್ಪ ಕಾಮಂಗವಸಾನಮನೀಯೆ ರತಿಯುಮೊಡನಟಿಯೆ ಮುನಿಪ್ರವರಂ ನಿಷ್ಕಾಮಂ ಕರ್ಮಮೆಂಟುಮಂ ನೆಱೆಯೆ ಕಿಡಿಸಲುದ್ಯತನಾದಂ (ಮಲ್ಲಿಪು. ೧೪-೫೫); ಗುರುವೆ ನಿಮ್ಮ ಕೃಪಾವಲೋಕನದಿ ನಾನು ಸಲೆ ನಿಷ್ಕಾಮನಾದೆ (ನಗತ೬. ೨-೨೮). [ಸಂ.]

**ನಿಷ್ಕಾಮಕರ್ಮ** (ನಾ). ಪ್ರತಿಫಲಾಪೇಕ್ಷೆಯಿಲ್ಲದೆ ಮಾಡುವ ಕರ್ಮ : ನಿಸ್ವಾರ್ಥ ಕಾರ್ಯ : ಪೂರ್ಣ ಚಿತ್ತಶುದ್ಧಿಯಾಗುವುದಕ್ಕೆ ನಿಷ್ಕಾಮಕರ್ಮವೆನಬೇಕು (ನಿಗಮ. ೧-೪-೧) ; ಗೀತೆಯಲ್ಲಿ . . . 'ಲೋಕಸಂಗ್ರಹ' ರೂಪವಾದ ಈಶ್ವರಸೇವೆಯನ್ನೂ ನಿಷ್ಕಾಮಕರ್ಮದಿಂದ ಲಭಿಸುವ ಆತ್ಮಪ್ರಶಾಂತಿಯ ಸ್ವರೂಪವನ್ನೂ ಸಾಧಾರಣಮತಿಗೂ ಅರ್ಥವಾಗುವಂತೆ ವಿವರಿಸಿದೆ (ಸುಕ್ಷ್ವಾರ. ೧೦೨, ಪೀಠಿಕೆ) ; ಕರ್ತವ್ಯಕ್ಕಾಗಿ ಕರ್ತವ್ಯ—ಅಂತಾರಲ್ಲ ಹಾಗೆ, ನಿಷ್ಕಾಮಕರ್ಮ (ವೀರಯೋ. ೨೦). [ನಿಷ್ಕಾಮ + ಕರ್ಮ]

**ನಿಷ್ಕಾಮಭಾವನೆ** (ನಾ). ಪ್ರತಿಫಲಾಪೇಕ್ಷೆಯಿಲ್ಲದ ಮನೋಭಾವ ; ಅನಾಸಕ್ತ ಮನಃಸ್ಥಿತಿ : ಕೈಗಳಿಂದ ಮಾಡಬೇಕಾದುದೆಲ್ಲವನ್ನೂ ಭಗವಂತನ ಸೇವೆಯೆಂದು ನಿಷ್ಕಾಮಭಾವನೆಯಿಂದ ಮಾಡುತ್ತಾ ಭಗವದನುಗ್ರಹದಿಂದ ಸುಖಶಾಂತಿಗಳನ್ನು ಅನುಭವಿಸಬೇಕಾಗಿದೆ (ಶಕ್ತಿವಿ. ೧೦೩). [ನಿಷ್ಕಾಮ + ಭಾವನೆ]

**ನಿಷ್ಕಾಮಯೋಗ** (ನಾ). ನಿಷ್ಕಾಮಕರ್ಮದಿಂದ ಸಾಧಿಸುವ ಯೋಗ : ಜನಕ ಮಹಾರಾಜನ ನಿಷ್ಕಾಮಯೋಗ ಸುಪ್ರಸಿದ್ಧವಿದೆ (ಧರ್ಮಸಾ. ೧೩೫). [ನಿಷ್ಕಾಮ + ಯೋಗ]

**ನಿಷ್ಕಾಮಿ** (ನಾ). ಕಾಮವಿಲ್ಲದ ವ್ಯಕ್ತಿ ; ಕಾಮವನ್ನು ಜಯಿಸಿದ ವ್ಯಕ್ತಿ : ಜಿತೇಂದ್ರಿಯಂ ನಿಷ್ಕಾಮಿ ದೇಹಗುಣವಾವರಿಸದಮಲ ನಿರ್ಲೇಪನು . . . ಹಂಪೆಯ ಶಂಕರಪ್ರಭು ಮದೀಯ ಮತಿಗೀಗೆ ಪ್ರಸನ್ನತೆಯನು (ಹಚಕಾ. ೧-೯); ಅಕ್ಕಮಹಾದೇವಿಯಂತೆ ನಿಷ್ಕಾಮಿಯೆಂದೆನಿಸಯ್ಯ ಎನ್ನ (ಅಖಂಡೇ. ೭೩-೪೫). [ಸಂ. ನಿಷ್ಕಾಮಿನ್]

**ನಿಷ್ಕಾರಣ** (ಗು). ೧. ಕಾರಣವಿಲ್ಲದ ; ನಿಮಿತ್ತವಿಲ್ಲದ : ಉದಾರವೀರಚರಿತನಿರತಕದನಕರ್ಕಶಕ್ಷತ್ರಿಯಂಗೆ . . . ನಿಷ್ಕಾರಣಕಾಯಕಂಪನಮುಂ ನಿರಾಲಂಬನವಾಗಾಡಂಬರಮುಂ ತಕ್ಕುದಲ್ತು (ಆದಿಪು. ೧೪-೮೧ ವ). (ನಾ). ೨. ಕಾರಣವಿಲ್ಲದುದು ; ಅನಿಮಿತ್ತವಾದುದು : ದಮನಕ ನೀನೆಂದೊಡಮವಶ್ಯವಾಂ ಮುಳಿವುದಿಲ್ಲ . . . ಸಂಜೀವಕಂಗೆ ನಿಷ್ಕಾರಣದಿಂ (ಪಂಚತಂ. ೯೯-೭); ಕೊಂದೆನೆಂದೋ ಎನ್ನ ಸಾರಿಯನಿಂದು ಮಗುಣವನಿಕ್ಕಿ ಗೆಲಿದಪೆನೆಂಬೊ ನಿಷ್ಕಾ [ಪಾಠಾಂ. ನಿಃಕಾ] ರಣದ ಹಾಸ್ಯವದಾವುದು (ಬಸಪು. ೪೩-೧೫); ಕುಳಿರ್ದಿಂಗಳಾ ಮುನ್ನೆಳಗು . . . ಅಲರ ತುರುಗಲಿನ ಶೋಭೆಯಂ ಪೆರ್ಚಿಸುತೆ, ನಿಷ್ಕಾರಣಮೆನಲ್ಕೆ, ಮೈಥಿಲಿಯ ಮನಕೊಂದು ತಂದುದಿಂಪಂ (ಶ್ರೀರಾಮಾ. ೪೮೭-೪೭). [ಸಂ.]

**ನಿಷ್ಕಾರಣಂ** (ಅ). ವಿನಾಕಾರಣವಾಗಿ ; ಕಾರಣವಿಲ್ಲದೆ ; ನಿಮಿತ್ತವಿಲ್ಲದೆ : ಘೋಃಪರಿಘಂ ದುರ್ಧರಮೆಂದು ಸಾಧುಜನಮಂ ನಿಷ್ಕಾರಣಂ ಕೊಂದನೇ (ಪಂರಾಮಾ. ೯-೧೨) ; ಶಿವಂ ಕೌತುಕಂಬಟ್ಟು ನಿಷ್ಕಾ [ಪಾಠಾಂ. ನಿಃಕಾ] ರಣಂ ಮುನಿದ ಕಾರಣಮಂ ಪೇಳ್ದು ಬಳಿಕ್ಕ ಮುನಿವುದೆನೆ (ನಂಬಿರ. ೧೨-೬೯) ; ನಾನೆನ್ನಿಚ್ಛೆಯಿಂ ದುರುಳತನದಿಂ ನಡೆದ ಸತ್ಯಮಂ ನುಡಿದು ಹೊಲೆಯರ ಸಂಗಮಂ ಮಾಡಿ ನಿಷ್ಕಾರಣಂ ಘೋರ ನರಕಾಳಿಯೊಳು ಬಿದ್ದು ಹೊರಳುವವನಲ್ಲ (ಹಚಕಾ. ೮-೨೭). [ಸಂ.]

**ನಿಷ್ಕಾರುಣಿಕತೆ** (ನಾ). = ನಿಷ್ಕಾರುಣ್ಯ ೧ : ಕೊರಚಾಟವು, ಬಯ್ಗುಳು, ನಿಷ್ಕಾರುಣಿಕತೆಯು, ಕಕ್ಕಸಮೂದಲೆಯು . . . ಆ ನಿನ್ನ ಮೃದುಮಧುರಸ್ವರದಲ್ಲಿ . . . ಮೆಯ್ಮುಲಿತದಲ್ಲಿ, ಪರಮತಾಣ್ಮವದಿಂದ ನಿಜವಾಗಿ ಧನ್ಯವಾದುವು ! (ಬಿಟ್ಟಅ. ೧೩-೭). [ಸಂ. ನಿಷ್ಕಾರುಣಿಕತಾ]

**ನಿಷ್ಕಾರುಣ್ಯ** (ನಾ). ೧. ಕರುಣೆಯಿಲ್ಲದಿರುವಿಕೆ ; ನಿರ್ದಯತೆ ; ಕ್ರೌರ್ಯ : ಇದಱೊಳಾತಂಗಿಲ್ಲ ಕರುಣಾಸ್ಪದತೆ ನಿಷ್ಕಾರುಣ್ಯ ಭೂಯಂತ್ರದ ವಿನೋದಕ್ರೀಡೆ ಕೃಷ್ಣನದೆಂದನಾ ದ್ರೋಣ

(ಕುಪ್ಯಾಪ್ರೋ. ೮-೬೨). ೨. ಜೆನ್ನದಿಂದ ಉಂಟಾದ ಕೆಂಪು ಹೊಳಪು,— ಕಾಂತಿ. ೧, ೨ : ವಂಶಚ್ಛೇದಂ ಮೇದರೊಳ್ ನಿಷ್ಕಾರುಣ್ಯಂ ಭೂಷಣಂಗಳೊಳ್ . . . ಪಂಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ).

[ಸಂ. (ನಿಷ್ + ಕಾರುಣ್ಯ ; ನಿಷ್ಕ + ಅರುಣ್ಯ)]

**ನಿಷ್ಕಾಸ** (ನಾ). ೧. ಹೊರಬರುವಿಕೆ ; ಪ್ರಕಟವಾಗುವಿಕೆ ; ಆವಿರ್ಭವಿಸುವಿಕೆ : ವೈಶಾಖಮಾಸದ ಸಿತದಶಮಿಯೊಳು ನಿಷ್ಕಾಸದ ಹಸ್ತತಾರೆಯೊಳು ಆ ಶುಭ ಸಕಲವಿಮಲಬೋಧದಿಂದ ಜಿನೇಶನೊಪ್ಪಿದ ದೀಪ್ತಿಪುಂಜ (ಪರ್ಧಚ. ೧೨-೬೧). ೨. ಹೊರಕ್ಕೆ ಹೋಗುವಿಕೆ ; ಬಹಿರ್ಗಮನ : "(ಆವಿಯ ಎಂಜಿನಿನ ಅಥವಾ ಮೋಟಾರು ಎಂಜಿನಿನ) ನಾಳಿಯಲ್ಲಿ ಸೀರಾವಿಯು ಅಥವಾ ಚಾಲಕಪ್ರವಹಿಸಿಯು ಕಾರ್ಯ ನುಂಗಿದ ನಂತರ ಅದರ ಹೊರಡುವಿಕೆ : ಬಹಿರ್ಗಮನ ; ನಿಷ್ಕಾಸ" (Exhaust. ಶಂಕಸ). ೩. ಮನೆಯ ಅಂಗಳ ; ಮನೆಯ ಮುಖ ಮಂಟಪ. [ಸಂ.]

**ನಿಷ್ಕಾಸಿತ** (ಗು). ೧. ದೂಷಿತವಾದ ; ನಿಂದಿತವಾದ ; ತಿರಸ್ಕೃತ ವಾದ. ೨. ಹೊರಹಾಕಿದ ; ದೂರೀಕರಿಸಿದ ; ಹೊರದೂಡಿದ. ೩. ಹೊರಬಿದ್ದ ; ಹೊರಹೊರಟ. ೪. ವಿಸ್ತರಿಸಿದ ; ಹರಡಿದ. ೫. ಇಟ್ಟ ; ಇರಿಸಿದ. ೬. ನೇಮಿಸಿದ : ನಿಯೋಜಿಸಿದ. (ನಾ). ೭. ಕುಗ್ಗಿದುದು ; ಸಂಕೋಚ ಹೊಂದಿದುದು : "ಅವಕುಂಚಿತಂ ಮೇಣವರೂಪಿತಮವಲೀನಮವನೀತ ನಿಷ್ಕಾಸಿತಂ ಅವಕೃಷ್ಟಮೆನೆ ಹರಹುಗೆಟ್ಟುದೆಸಿಸಿರ್ಕುಂ" (ಮಂಗರಾ. ೧೩೩-೨೯). ೮. ದೂರೀಕೃತ ನಾದವನು ; ಹೊರದೂಡಿಸಿಕೊಂಡವನು : "ಅವಕೃಷ್ಟಂ ನಿಷ್ಕಾಸಿತಂ" (ವಸ್ತುಕೋ. ೧೦೬-೫೦) ; "ನಿಷ್ಕಾಸಿತಃ, ಅವಕೃಷ್ಟಃ— ಹೊರಗೆ ಹಾಕಲ್ಪಟ್ಟವನು" (ಸಿದ್ಧಾಂತಿ. ೨೮೮). [ಸಂ.]

**ನಿಷ್ಕಾಳಜಿ** (ನಾ). ಗಮನವಿಲ್ಲದಿರುವಿಕೆ ; ನಿರ್ಲಕ್ಷ್ಯ ; ಅಸಡ್ಡೆ : 'ನಿಷ್ಕಾಳಜಿತನ' ಪರಾ.

**ನಿಷ್ಕಾಳಜಿ ಮಾಡು** ಉಪೇಕ್ಷಿಸು ; ನಿರ್ಲಕ್ಷಿಸು : ನಿಮ್ಮ ಎದುರಿಗೆ ವಿಶಾಲ ಕರ್ಮಕ್ಷೇತ್ರ, ಜೀವನ, ಅಸೀಮ ಕರ್ತವ್ಯ ಉಂಟು— ನಿಷ್ಕಾಳಜಿ ಮಾಡಿ ಅವನ್ನು ಕೆಡಿಸಿಕೊಳ್ಳಬೇಡಿರಿ (ಕೊಂದಯೊ. ೪೫).

[←ಮರಾ. ನಿಷ್ಕಾಳಜೀ]

**ನಿಷ್ಕಾಳಜಿತನ** (ನಾ). ಅಲಕ್ಷ್ಯ ; ಎಚ್ಚರಗೇಡಿತನ ; ಅಜಾಗರೂಕತೆ : ಇಂಥ ಸಾಧನವು ನಿಷ್ಕಾಳಜಿತನದಿಂದಲೂ ಹುಡುಗಾಟಿಕೆಯಿಂದಲೂ ಉಪಯೋಗಿಸಲ್ಪಡುವುದು ತರವಲ್ಲ (ಪ್ರಬಂಧ. ೨೪).

[ನಿಷ್ಕಾಳಜಿ + -ತನ]

**ನಿಷ್ಕಾಳಿಸು** (ಕ್ರಿ). ೧. ಕಾಂತಿಗುಂದು ; ತೇಜೋಹೀನವಾಗು. ೨. (ಆಲಂ) ಬಡವಾಗು : ಹೇಳು ನಿನ್ನಯ ಮನದ ಚಿಂತೆಗೆ ಮೂಲ ಕಾರಣವೇನು ತನು ನಿಷ್ಕಾಳಿಸಿತಲಾ ತಾಯೆ ಜೀವಿಸುವಂದವೆಂತೆನುತ (ನಿಭಾಗ. ೧-೧೧-೨೧). [ನಿಷ್ಕಾಳ$_0$ + -ಇಸು$_3$]

**ನಿಷ್ಕಿಂಚನ** (ನಾ). ಏನೂ ಇಲ್ಲದಿರುವವನು ; ದರಿದ್ರ : ಧನವಲಾ ಸಿರವಧಿಕ ನಿಷ್ಕಿಂಚನರಿಗೆ (ನಿಭಾಗ. ೧-೧೫-೧೦). [ಸಂ.]

**ನಿಷ್ಕಿಂಚನತ್ವ** (ನಾ). ೧. ಏನೂ ಇಲ್ಲದಿರುವಿಕೆ ; ಬಡತನ ; ದಾರಿದ್ರ್ಯ. ೨. [ಜೈನ] ಯಾರಿಂದಲೂ ಏನನ್ನೂ ದಾನವಾಗಿ ತೆಗೆದುಕೊಳ್ಳದಿರುವಿಕೆ ; ಅಪರಿಗ್ರಹ : ಬಯಸುವ ಬಯಸದ ಪಂಚೇಂದ್ರಿಯವಿಷಯಂಗಳನತಿಪ್ರಿಯಂ ಸಂತತಮಪ್ರಿಯಮೆಂಬಿವ ನುಬಿಡದ ತಪೋನಿಯಮಂ ನಿಷ್ಕಿಂಚಿ[ಚ]ನತ್ವಮರ್ಹನ್ಮತದೊಳ್ (ಶಾಂತಿಪು. ೬-೫೬). [ಸಂ.]

**ನಿಷ್ಕುಂಡಲೆ** (ನಾ). ಕರ್ಣಾಭರಣಗಳಿಲ್ಲದವಳು : ಕುಂಡಲಗಳನ್ನು ಕಳೆದುಕೊಂಡವಳು : ನಾನೀಗ ಕಳ್ಳರ ಕೈಗೆ ಸಿಲುಕಿ ನಿಷ್ಕುಂಡಲೆಯಾಗಿದ್ದೇನೆ ; ಅವರೆನ್ನ ಮೈಮೇಲಿದ್ದ ಕುಂಡಲಾದಿ ಆಭರಣಗಳನ್ನು ತೆಗೆದುಕೊಂಡು ಹೋದರು (ಕಪಾಕುಂ. ೪೧). [ಸಂ. ನಿಷ್ಕುಂಡಲಾ]

**ನಿಷ್ಕುಟ** (ನಾ). ೧. ಮನೆಯ ಬಳಿಯಿರುವ ತೋಟ : "ಗೃಹವಾಟ ನಿಷ್ಕುಟಂ ರಮಣಹೇತುವದು ಪುಷ್ಪವಾಟಿ ತಾಂ ಪೂದೋಟಂ" (ವಸ್ತುಕೋ. ೩೨-೧೨) ; ನಿಷ್ಕುಟಾಂಭೋರುಹಸಲಿಲಯುಜಲಾರ್ದ್ರಂ ರತಿಶ್ರಾಂತಿಸಿರ್ಯಲ್ಲಳನಾನಿಶ್ವಾಸಪುಷ್ಪಪ್ರಸರದಗುರುಸೌರಭ್ಯಸಂದೋಹಭಾರಾಕಳಿತಂ ಬಂದೊಯ್ಯನೇನೂದಿದುದೊ ಪಣಸಧೂಗೇಹದಿಂ ಗಂಧವಾಹಂ (ಚಂದ್ರಪು. ೮-೪೫). ೨. ಮರದ ಪೊಟರೆ,—ಪೊಳ್ಳು : "ನಿಷ್ಕುಟಃ, ಕೋಟರಃ — ಈ ೨ ಮರದ ಪೋಟಿಲ್" (ಹಲಾಯು. ೩೦-೨೮). ೩. ಹೊಲ ; ಕ್ಷೇತ್ರ. ೪. ಬಾಗಿಲು ; ದ್ವಾರ. ೫. ಅರಸನ ಅಂತಃಪುರ : ಜನಾನಾ. ೬. = ನಿಷ್ಕುಟಕ್ಷೇತ್ರ. [ಸಂ.]

**ನಿಷ್ಕುಟಕ್ಷೇತ್ರ** (ನಾ). [ಜೈನ] ಲೋಕಶಿಖರದಲ್ಲಿ ಕೋಣಭಾಗ: ಸಿದ್ಧಶಿಲೆಗೆ ಕೆಳಗಿನ ಲೋಕಾಕಾರದ ಇಳುಕಲು ಭಾಗ : ಪ್ರಾಣವು ಒಂದು ದೇಹವನ್ನು ಬಿಟ್ಟು ಇನ್ನೊಂದು ದೇಹವನ್ನು ಸೇರುವ ಮುನ್ನ ತ್ರಿವಿಗ್ರಹಗತಿಯ ಮೂಲಕ ಕ್ಷೇತ್ರವನ್ನು ಹಾದುಹೋಗಬೇಕು. ನಿಷ್ಕುಟಕ್ಷೇತ್ರ ಮೂರು ವಕ್ರಗತಿಗಳನ್ನು ಉಳ್ಳುದು : ಸರ್ವೋತ್ಕೃಷ್ಟವಿಗ್ರಹನಿಮಿತ್ತಂ ನಿಷ್ಕುಟಕ್ಷೇತ್ರದೊಳ್ ಪುಟ್ಟುವ ಜೀವಕ್ಕೆ . . . ನಿಷ್ಕುಟಕ್ಷೇತ್ರಪ್ರಾಪಣನಿಮಿತ್ತಂ ತ್ರಿವಿಗ್ರಹಗತಿಯುಕ್ಕುಮೆಂದಱಿವುದು (ತತ್ತ್ವಸೂ. ೧೨೧). [ನಿಷ್ಕುಟ + ಕ್ಷೇತ್ರ]

**ನಿಷ್ಕುಟಿ** (ನಾ). ದೊಡ್ಡ ಏಲಕ್ಕಿ : "ಪೃಥ್ವೀಕಾ, ಚಂದ್ರಬಾಲಾ, ಏಲಾ, ನಿಷ್ಕುಟೀ, ಬಹುಲಾ—೫ ದೊಡ್ಡಯಾಲಕ್ಕೀ ಹೆಸರುಗಳು" (ಸಿದ್ಧಾಂತಿ. ೧೪೧). [ಸಂ.]

**ನಿಷ್ಕುಟಿಲ** (ನಾ). ಅಸ್ಪಟವಾದುದು : ಶುದ್ಧವಾದುದು : ಪುಟವಿಟ್ಟರಾಜಿಕೀಳು ಬಣ್ಣದ ಚಿನ್ನ ನಿಷ್ಕುಟಿಲದ ಮಿಂಸುಸಿಯುಪ್ಪುದಂತೆ ಘಟಿತ ಕರ್ಮವ ಸುಟ್ಟರೆಲ್ಲರು ಮುಕ್ತರು (ಭರತೇ. ೬೮-೨೬). [ಸಂ.]

**ನಿಷ್ಕುಹ** (ನಾ). = ನಿಷ್ಕುಟ ೨ : "ನಿಷ್ಕುಹಃ, ಕೋಟರಂ—೨ ಮರದ ತೊರ್ರೆ ಹೆಸರು. ಮರದ ಡೊರ್ರೆ, ಗಿಡದ ತೊರಲು, ಮರದ ಪಟ್ರೆ, ಮರದ ಬೊಕ್ಕೆ" (ಸಿದ್ಧಾಂತಿ. ೧೧೩). [ಸಂ.]

**ನಿಷ್ಕೂಜಿತ** (ನಾ). ೧. ಪಕ್ಷಿಗಳ ವಿಶೇಷವಾದ ಕೂಗು,— ಅತಿಯಾದ ಕಿರುಚಾಟ. ೨. ಪಕ್ಷಿಗಳ ಕೂಗಿಲ್ಲದುದು : ಪಕ್ಷಿನಿಷ್ಕೂಜಿತಂ ನೀರವಂ ಝಿಲ್ಲಿಕಾನಾದ ಘರ್ಘರಘೋರಕರ್ಕಶಂ (ಶ್ರೀರಾಮಾ. ೧೮೦-೧೦೮). [ಸಂ.]

**ನಿಷ್ಕೃತ** (ಗು). ೧. ಬಿಟ್ಟ ; ತ್ಯಜಿಸಿದ. ೨. ಹೊಂದಿಸಿದ : ಅಳವಡಿಸಿದ : ಶ್ರೀಷೇಣಭೂಪತಿ . . . ಶ್ರೀಪ್ರಭವಮುನಿಪ್ರಭುವ ಪಾದಮೂಲದೊಳ್ ನಿಷ್ಕೃತದಿಗಂಬರಶ್ರೀಕನಾಗಿ ನಿಖಿಲಕರ್ಮನಿರ್ಮುಕ್ತಿಯಿಂ ಪ್ರಾಪ್ತಸಪ್ತಪರಮಸ್ಥಾನನಾದಂ (ಚಂದ್ರಪು. ೪-೨೪ ವ). (ನಾ). ೩. ತನ್ನ ಅಪರಾಧಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಂಡವನು.

[ಸಂ.]

**ನಿಷ್ಕೃತಿ** (ನಾ). ೧. ಯಾವ ಕರ್ಮವನ್ನೂ ಮಾಡದಿರುವುದು : ಕ್ರಿಯಾರಹಿತವಾಗಿರುವುದು. 'ನಿಷ್ಕೃತಿತನ' ಪರಾ. ೨. ಬಿಡುಗಡೆ ; ವಿಮೋಚನೆ : ರಕ್ಕಸನು ಲಲನಾಹತಿಗೊಡಂಬಟ್ಟಿಹಿಗುವನಿತ ಜಿಹೊಳವನ ಮಂತ್ರಿಗಳು ಮತವಿದಲ್ಲೆಂದಡ್ಡವಿಸಿ ದೂಹತಿಯ ಹಸ್ತವ ಹಿಡಿದು ರಣನಿಷ್ಕೃತಿಗೆ ರಂಜಕವಾವುದನಿತಜಿಹೊಳೆಂದರವರಂದು (ತೊರಾ. ೬-೪೫-೩೨) ; ಅರಸ ನಿಷ್ಕೃತಿಯುಂಟು ವಿಪ್ರಘ್ನರಿಗೆ ಶಿಶಿಯು ಕೃತಘ್ನರಿಗೆ

ತಾ ನರಕವಲ್ಲದೆ ಬೇಱಿ ನಿಷ್ಕೃತಿಯಿಲ್ಲ ಕೇಳೆಂದ (ತಿಸ್ಮೃತಾಂ. ೪-೧೫೧) ; ಎಂತಾದುದೋ ಈ ವಿಪತ್ತಿದಕೆ ನಿಷ್ಕೃತಿಯನೆಂತೊ ಶಿವನೇ ಬಲ್ಲಂ(ಚೆಬಪು. ೪೬-೨೧) ; ಪರಸೇವನಾಪರರಿಗೆಲ್ಲಿಯದು ಗತಿ ನಿರಯದಿಂದಂ ನಿಷ್ಕೃತಿ (ವೆಂಕಾರಾ. ೫-೪-೩೯). **೩.** ಪ್ರಾಯಶ್ಚಿತ್ತ ; ಪರಿಹಾರ : ಅರಸಿಯನು ಪತಿಸಹಿತ ಮಂಚದೊಳಿರಲು ಕಾಬುದು ಸಲ್ಲದದು . . . ಆರು ಕಂಡರು ಆತನೊಬ್ಬನೆ ಧಾರುಣಿಯಲಿ ಸುತೀರ್ಥಯಾತ್ರಾಭಾರದಲಿ ತಿರುಗುವುದು ಸುತ್ತಲು ವರುಷವೊಂದಱಲಿ ಚಾರು ನಿಷ್ಕೃತಿಯೆನಲು (ಕುವ್ಯಾಅ. ೧೮-೩೩) ; ಮಱಿಹಿನಲಿ ಕರ್ಣನನು ಕೊಂದೆವು ತಿಳಿವಡೀಯಣ್ಣನ ವಧಿಸಿದಘುತತಿಗೆ ನಿಷ್ಕೃತಿಯೆಂತುಟೆನಗೆಂದ (ತಿಸ್ಮೃಶ್ರ. ೩-೧೮) ; ಪತಿವಚನಕೆ ಮಾರ್ನುಡಿವುದುಂಟಾದೊಡಾ ಸತಿಗೆ ನಿಷ್ಕೃತಿಯಿಲ್ಲ (ಮೋಹತ. ೬-೪) ; ಶ್ರುತಿ ಧರ್ಮಶಾಸ್ತ್ರಾಗಮಸ್ಮೃತಿವಿಚಾರದಿಂ ಗತಿಗೆಟ್ಟ ಬ್ರಹ್ಮಹತ್ಯಾದಿ ಪಾತಕಕೆ ನಿಷ್ಕೃತಿ ತವ ಸ್ಮರಣಮಾತ್ರದೊಳಪ್ಪುದು (ಜೈಮಿಭಾ. ೭-೧೪). **೪.** (ಋಣವನ್ನು) ತೀರಿಸುವುದು. **೫.** ಪೂರ್ವಸ್ಥಿತಿಗೆ ಬರುವುದು ; ಮೊದಲಿನ ಸ್ಥಿತಿಗೆ ಬರುವುದು. [ಸಂ.]

**ನಿಷ್ಕೃತಿತನ** (ನಾ). ಯಾವ ಕರ್ಮವನ್ನೂ ಮಾಡದಿರುವಿಕೆ ; ಕ್ರಿಯಾರಾಹಿತ್ಯ ; ಕರ್ಮರಹಿತತೆ : ರೂಪುನಾಮಾಶ್ರಯವೆನಿಪ ಪರಮಾತ್ಮತತ್ತ್ವವನು ತಾ ಪರಮನಾಗಱಿದು ನಿಷಯನಿರೂಪವನು ಬಿಟ್ಟ ಹುಳ ಸುಖದಲಿ ಸ್ವಾಪವಡದವನಂತೆ ನಿಷ್ಕೃತಿತನದಲಿರುತಿಹುದು (ನಿಭಾಗ. ೧೧-೨೦-೪೨). [ನಿಷ್ಕೃತಿ+-ತನ]

**ನಿಷ್ಕೃಪ** (ನಾ). ಕೃಪೆಯಿಲ್ಲದವನು ; ನಿಷ್ಕರುಣಿ ; ಕ್ರೂರಿ : ಅಪದೋಷನನೇಳಿಸಿ ಕೊಂದ ಪಾಪಿಯಂ ಪಲವು ತೆಱದ ಕೊಲೆಗಳಿನೀ ನಿಷ್ಕೃಪನಂ ಕೊಲ್ಲೆನುತಂ ಬರ್ಪ ಪುರಜನಂಗಳ ರವಂಗಳಂ ಸತಿ ಕೇಳ್ದಳ್ (ಸುಕುಮಾ. ೬-೫೩) ; ಈ ಪೊಟಿಲನಾಳ್ವ ನೃಪಂ ನಿಷ್ಕೃಪಂ ನಿಷ್ಕಾರಣಮನೇಕ ಋಷಿಯರಂ ಘಾತಿಸಿದಂ (ಪಂರಾಮಾ. ೯-೧೧ ಪ). [ಸಂ.]

**ನಿಷ್ಕೃಪೆ** (ನಾ). ಕೃಪೆಯಿಲ್ಲದಿರುವಿಕೆ ; ನಿರ್ದಯತೆ ; ಕ್ರೌರ್ಯ : ಕೈತವದ ಅಪದೆಸೆಗೆ ಭಯಗೊಳ್ಳದಿರು ನಿಷ್ಕೃಪೆಯಲಿರು (ಕುವ್ಯಾಸ. ೧೨-೧೯) ; ಕೃಪನು ಧೃಷ್ಟದ್ಯುಮ್ನನುಂ ನಿಷ್ಕೃಪೆಯನಾಂತು (ಸಾಳ್ವಭಾ. ೪೭-೪೨) ; ಎತ್ತಣಿಂದ್ಯೆತಂದುದಿಂದ್ರಜಾಲೋಪಮಿತ ವಿತ್ತ ಕೈಕಾವಚನ ರೂಪಾಂತು ಕಾಲಕುಲವೆತ್ತುದಂ ನೃಪ ಕೇಳಿ ಬನಕಪ್ಪಣೆಯನಿತ್ತು ನಿಷ್ಕೃಪೆಯೊಳೀವುತ್ತವಂ ಎತ್ತಲಾದುದು (ವೆಂಕಾರಾ. ೨-೯-೯).

[ಸಂ. ನಿಷ್ಕೃಪಾ]

**ನಿಷ್ಕೃಷ್ಟ** (ಗು). **೧.** ನಿರ್ದಿಷ್ಟವಾದ ; ನಿಖರವಾದ ; ಕರಾರುವಾಕ್ಕಾದ ; ಖಚಿತವಾದ : "ಸರಿಯಾದ ; ಹೆಚ್ಚುಕಡಿಮೆಯಿಲ್ಲದ ; ಯಥಾರ್ಥವಾದ; ನಿಷ್ಕೃಷ್ಟವಾದ" (Accurate. ಇಂಕನಿ). **೨.** ಗೊತ್ತು ಪಡಿಸಿದ; ನಿಷ್ಕರ್ಷೆಯಾದ: ನಿಷ್ಕೃಷ್ಟ ಅಥವಾ ನಿರ್ಧಾರಿತ ಕಾಲಮಾನ (ಭೂವಿಪ. ೨೦). 'ನಿಷ್ಕೃಷ್ಟಕಾಲಮಾನ' ಪರಾ. **೩.** ಸೆಳೆದ ; ಎಳೆದ. (ನಾ). **೪.** ನಿರ್ದಿಷ್ಟವಾದುದು ; ನಿಖರವಾದುದು ; ಕರಾರುವಾಕ್ಕಾದುದು : ಒಂದು ಕೃತಿಯ ಕಾವ್ಯಗುಣವನ್ನು ನಿಷ್ಕೃಷ್ಟವಾಗಿ ಅಳೆದು ವಿಂಗಡಿಸುವುದು ಸಮಕಾಲೀನಕೃತಿಗಳ ವಿಷಯದಲ್ಲಿ ಕಷ್ಟ (ಕಾವ್ಯಕು. ೧೩) ; ತಾತಾ ಅವರು . . . ಯಾವ ವಿಚಾರವನ್ನು ತೆಗೆದುಕೊಂಡರೂ ಅದನ್ನು ತೂಕ ಹಾಕಿ ಅದರ ಸಾಧಕ ಬಾಧಕಗಳನ್ನು ಪರಿಗಣಿಸಿ ತಮ್ಮ ನಿಷ್ಕೃಷ್ಟವಾದ ಅಭಿಪ್ರಾಯವನ್ನು ಕೊಡುತ್ತಿದ್ದರು (ಭಾಗ್ಯತಿ. ೧೧೬); ಪ್ರೌಢವಾದ ವಿಜ್ಞಾನವಿಷಯವನ್ನು ಕನ್ನಡದಲ್ಲಿ ಎಷ್ಟು ಲಲಿತವಾಗಿ ಸರಾಗವಾಗಿ ನಿಷ್ಕೃಷ್ಟವಾಗಿ ಲೀಲಾಜಾಲವಾಗಿ ಬರೆಯಬಹುದೆಂಬುದಕ್ಕೆ ಈ ಕೃತಿ ಅಮೂಲ್ಯ ನಿದರ್ಶನವಾಗಿದೆ(ದ್ರಾವಿವಿ. VII, ಮುನ್ನುಡಿ).

[ಸಂ.]

**ನಿಷ್ಕೃಷ್ಟಕಾಲ** (ನಾ). ಕರಾರುವಾಕ್ಕಾದ ಕಾಲ ; ನಿರ್ದಿಷ್ಟವಾಗಿ ಗೊತ್ತುಪಡಿಸಿದ ಕಾಲ : "ಒಂದು ಗಂಟೆಯ ೧ ೬೦ ಭಾಗ : ನಿಮಿಷ; ಕ್ಷಣ (ಕಾಲ); ನಿಷ್ಕೃಷ್ಟಕಾಲ" (Minute. ಇಂಕನಿ). [ನಿಷ್ಕೃಷ್ಟ+ಕಾಲ]

**ನಿಷ್ಕೃಷ್ಟಕಾಲಮಾನ** (ನಾ). ನಿಖರವಾಗಿ ಗೊತ್ತುಪಡಿಸಿದ ಕಾಲಪ್ರಮಾಣ ; ನಿರ್ದಿಷ್ಟವಾಗಿ ನಿರ್ಣಯಿಸಿದ ಕಾಲದ ಗಣನೆ ; ನಿಷ್ಕರ್ಷೆ ಮಾಡಿದ ಕಾಲಮಾನ : ಕಲ್ಕತ್ತೆಯಲ್ಲಿ ಸಾಮಾನ್ಯ ಕೆಲಸ ಕಾರ್ಯಗಳಿಗೆ . . . ಕಲ್ಕತ್ತಾ ಸ್ಥಳೀಯ ನಿಷ್ಕೃಷ್ಟಕಾಲಮಾನವನ್ನು ಅನುಸರಿಸುತ್ತಾರೆ (ಭೂವಿಪ. ೨೧). [ನಿಷ್ಕೃಷ್ಟ+ಕಾಲಮಾನ]

**ನಿಷ್ಕೃಷ್ಟತೆ** (ನಾ). ನಿರ್ದಿಷ್ಟತೆ ; ನಿಖರತೆ ; ಕರಾರುವಾಕ್ಕು ; ಸ್ವಲ್ಪವೂ ಹೆಚ್ಚುಕಡಮೆ ಇಲ್ಲದಿರುವಿಕೆ : "ನಿಷ್ಕೃಷ್ಟತೆ, ಸೂಕ್ಷ್ಮತಾದೃಷ್ಟಿ" (Accuracy. ಇಂಕನಿ); ಇದರ ರಚನೆಯಲ್ಲಿ ಕಂಡುಬರುವ ಶಿಲ್ಪಶಾಸ್ತ್ರದ ನಿಷ್ಕೃಷ್ಟತೆಯು (accuracy) ಆಶ್ಚರ್ಯಕರವಾದುದು (ಗಣಿಚ. ೫). [ಸಂ. ನಿಷ್ಕೃಷ್ಟತಾ]

**ನಿಷ್ಕೃಷ್ಟಮಾಪನ** (ನಾ). [ತರ್ಕಶಾ] "(ಒಂದು ಭಾವನೆಗೆ ಅಥವಾ ಕಲ್ಪನೆಗೆ, ಅದರ ಮುಖ್ಯಲಕ್ಷಣಗಳನ್ನು ಕೊಟ್ಟು) ವ್ಯಾಪ್ತಿನಿರ್ಧಾರ ಮಾಡುವುದು, ಲಕ್ಷಣ ಹೇಳುವುದು. ಮೊತ್ತ, ಮೊ. ನ್ನು ಕರಾರುವಾಕ್ಕು ತಿಳಿದುಕೊಳ್ಳುವುದು : ನಿಷ್ಕೃಷ್ಟಮಾಪನ" (Determination. ಇಂಕನಿ). [ನಿಷ್ಕೃಷ್ಟ+ಮಾಪನ]

**ನಿಷ್ಕೃಷ್ಟವಿಜ್ಞಾನ** (ನಾ). ಯಥಾರ್ಥವಾದ ವಿಜ್ಞಾನ : ನಿಷ್ಕೃಷ್ಟ ವಿಜ್ಞಾನಗಳ (Exact Sciences)ಲ್ಲಿ ಭೌತಶಾಸ್ತ್ರವು ಅಗ್ರಸ್ಥಾನವನ್ನು ಪಡೆದಿದೆ (ಭೌತವಿ. ೧೯). [ನಿಷ್ಕೃಷ್ಟ+ವಿಜ್ಞಾನ]

**ನಿಷ್ಕೇವಲ,** ನಿಷ್ಕೇವಳ (ಗು). **೧.** ಶುದ್ಧವಾದ ; ಅಪ್ಪಟವಾದ. **೨.** ವಿಶೇಷವಾದ ; ವಿಶಿಷ್ಟವಾದ. **ನಿಷ್ಕೇವಳ : ೨.** ಆವುದಶೇಷಲೋಕವಿಷಯಸ್ಥಿತಿಯಲ್ತಖಿಳಾಗಮಾರ್ಥಮಂ ಭಾವಿಪೊಡಲ್ತು ಸತ್ಕವಿಪರಂಪರೆಯಿಂ ಪರಿಗೀತಮಾಗಿ ನಿಷ್ಕೇವಳಮಾದ ರೂಢಿವಶದಿಂ ಸಲೆ ಸಲ್ವುದಿದಲ್ತೆ ಶಿಷ್ಟಸಂಭಾವಿತಮಪ್ಪ ಕಾವ್ಯಸಮಯಂ ಭುವನತ್ರಯವಸ್ತುಗೋಚರಂ (ಕಾವ್ಯಾಪ. ೮೪೪). [ಸಂ.]

**ನಿಷ್ಕೇವಳ** 'ನಿಷ್ಕೇವಲ' ನೋ.

**ನಿಷ್ಕೈತವ** (ನಾ). ಮೋಸವಿಲ್ಲದುದು ; ಕಪಟವಿಲ್ಲದುದು : ವಿವರಿಸುವೆನಿದಱಿೊಳಗೆ ನಿಷ್ಕೈತವವೆನಿಪ ನಿಜಧರ್ಮವನು ವಾಸ್ತವವೆನಿಪ ವಸ್ತುವನು (ನಿಭಾಗ. ೧-೪-೮). [ಸಂ.]

**ನಿಷ್ಕ್ರಮ** (ನಾ). **೧.** ಹೊರಕ್ಕೆ ಹೋಗುವಿಕೆ ; ಬಹಿರ್ಗಮನ. **೨.** ಬುದ್ಧಿಶಕ್ತಿ; ಬುದ್ಧಿಮತ್ತೆ; ಬುದ್ಧಿಸಾಮರ್ಥ್ಯ: "ನಿಷ್ಕ್ರಮಃ, ಧೀಶಕ್ತಿಃ—ಗ್ರಹಣಧಾರಣಸ್ಫುರಣಾದಿ ಬುದ್ಧಿಸಾಮರ್ಥ್ಯದ ಹೆಸರು" (ಸಿದ್ಧಾಂತಿ. ೩೧೩). [ಸಂ.]

**ನಿಷ್ಕ್ರಮಣ** (ನಾ). **೧.** = ನಿಷ್ಕ್ರಮ ೧ : "ತೋಡುಃ = ನೆರವುಂ, ನಿಷ್ಕ್ರಮಣವುಂ" (ಕಾಶಕ್ಕ. ೨೨೯). **೨.** ಷೋಡಶಸಂಸ್ಕಾರಗಳಲ್ಲಿ ಒಂದು ; ಶಿಶುವು ಹುಟ್ಟಿದ ನಾಲ್ಕನೆಯ ತಿಂಗಳಿನಲ್ಲಿ ಮೊದಲ ಬಾರಿಗೆ ಮನೆಯಿಂದ ಹೊರಗಡೆ ಕರೆದು ತಂದು ಸೂರ್ಯದರ್ಶನ ಮಾಡಿಸುವ ಒಂದು ಸಂಸ್ಕಾರ : ನಾಲ್ಕನೆಯ ತಿಂಗಳಲ್ಲಿ ಶಿಶುವನ್ನು ಮನೆಯಿಂದ ಹೊರಗೆ ಕರೆತಂದು ಸೂರ್ಯದರ್ಶನವನ್ನು ಮಾಡಿಸಿ . . . ಈ ನಿಕ್ಷೇಪವನ್ನು ರಕ್ಷಿಸಿ ಎಂದು ಪ್ರಾರ್ಥಿಸುವುದು ನಿಷ್ಕ್ರಮಣವು (ಆರ್ಯಧ. ೧೨೩). [ಸಂ.]

**ನಿಷ್ಕ್ರಮಿಸು** (ಕ್ರಿ). **೧.** ಹೊರಕ್ಕೆ ಹೋಗು ; ತೆರಳು ; ಹೊರಡು : ತಲೆವಾಗಿ, ನಿಷ್ಕ್ರಮಿಸುವಳು (ಬೆಟ್ಟಅ. ೧೨-೧೯) ; ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತ ನಿಷ್ಕ್ರಮಿಸಿದರು (ದಾಸಹು. ೧೬).

೨. [ರಾಜನೀ] (ಪರದೇಶಗಳಿಗೆ) ಹೋಗಿ ಶಾಶ್ವತವಾಗಿ ನೆಲಸು ; ವಲಸೆಹೋಗು : ಈ ಮುಂದೆ ರಾಜ್ಯವು . . . ನಿಷ್ಕ್ರಮಿಸಿದವರ ಸ್ವತ್ತೆಂಬುದಾಗಿ ವಿಧಿಯ ಮೂಲಕ ಸಾರಿರುವ ಸ್ವತ್ತಿನ ಸಂಬಂಧವಾಗಿ . . . ಪ್ರಭಾವವುಳ್ಳುದಾಗಿರತಕ್ಕುದಲ್ಲ (ಭಾಧಾನ. ೧೯).
[ನಿಷ್ಕ್ರಮಣ+-ಇಸು$_3$]

**ನಿಷ್ಕ್ರಯ** (ನಾ). ೧. ಬೆಲೆ ; ಕಿಮ್ಮತ್ತು ; ಮೌಲ್ಯ. ೨. ಪಡೆದುದಕ್ಕೆ ಪ್ರತಿಯಾಗಿ ಕೊಡುವುದು ; ಪ್ರತಿಫಲ ; ಋಣಪರಿಹಾರ : ಅಂತು ಕೈತವಮಿಲ್ಲದೆ ವಿಧೇಯತ್ವದ ತುದಿಯನೆಯ್ದೆ ಮಣಿಯೆಂಬ ಪಸುರ್ಮಣಿಯಂ . . . ತಂದುರ್ವರಾಸ್ಯತಿಲಕನಪ್ಪ ದೇವದೇವಂಗವಟೆಯ್ದಿ ತತ್ಪರಮಪ್ರಸಾದ ನಿಷ್ಕ್ರಯಕ್ಕೆ ತಲೆಯೆಂದು ಪೂಜ್ಯಾಳಾದರ್ (ಶಾಂತಿಪು. ೧೧-೫೫ ಪ). ೩. ನಷ್ಟವನ್ನು ಸರಿದೂಗಿಸುವಿಕೆ ; ಪರಿಹಾರವನ್ನು ನೀಡುವಿಕೆ : "ಕ್ಷತಿಪೂರ್ಣ, ನಿಷ್ಕ್ರಯಂ" (Compensation· ಪಾರಿಸಿ. ೧೪). ೪. ಇನಾಮು ; ಬಕ್ಷೀಸು. ೫. ವಿನಿಮಯ. ೬. ವಿನಿಮಯದ್ರವ್ಯ. [ಸಂ.]

**ನಿಷ್ಕ್ರಾಂತ** (ಗು). ೧. ಮನೆಯಿಂದ ಹೊರಕ್ಕೆ ಹೊರಟಿರುವ. (ನಾ). ೨. (ನಾಟಕದಲ್ಲಿ) ರಂಗಸ್ಥಳದಿಂದ ಹೊರಟವನು,—ಒಳಕ್ಕೆ ಹೋಗುವವನು. ೩. ಮೇಲಕ್ಕೇರಿದವನು ; ಒಂದರಿಂದ ಮತ್ತೊಂದಕ್ಕೆ ಹೋಗುವವನು : ಅನಂತಗುಣಶಕ್ತಿಕಚೈತ್ಯೇಕಪರಿಣಾಮಮಪೂರ್ವಕರಣಗುಣಸ್ಥಾನ ನಿಷ್ಕ್ರಾಂತಂ ···ದರ್ಶನಾವರಣಚತುಷ್ಕಮುಮಂತರಾಯಪಂಚಕಮುಮಂ ನಿರ್ಮೂಲಮಪ್ಪಂತೊರ್ಮೊದಲೊಳೆ ಕಿಡಿಸಿದಾಗಳ್ (ಸುಕುಮಾ. ೮-೬೨ ಪ). [ಸಂ.]

**ನಿಷ್ಕ್ರಾಂತಿ** (ನಾ). ೧. ಹೊರಗಡೆ ಹೋಗುವುದು. ೨. [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ನಲವತ್ತೆಂಟನೆಯದು ; ಸಂಸಾರವನ್ನು ಬಿಟ್ಟು ತಪಸ್ಸಿಗೆ ಹೊರಡುವಿಕೆ ; ℗ ರಾಜ್ಯವನ್ನು ಬಹುಕಾಲ ಪರಿಪಾಲಿಸಿದ ನಂತರ ಯಾವುದೋ ಒಂದು ಕಾಲದಲ್ಲಿ ವಿರಕ್ತಿಯುಂಟಾಗಿ, ಜ್ಯೇಷ್ಠಪುತ್ರನಿಗೆ ರಾಜ್ಯಭಾರವನ್ನು ವಹಿಸಿ, ಹೇಳಬೇಕಾದುದನ್ನು ಹೇಳಿ ಮನೆಯನ್ನು ತ್ಯಜಿಸಿ ಹೊರಡುವುದು : ಅಥಾನಮುಂ . . . ನಿಷ್ಕ್ರಾಂತಿಯುಂ ಯೋಗಸನ್ಮಾಹಮುಂ . . . ನಿರ್ವಾಣಪರ್ಯಂತಮಪ್ಪಯ್ವತ್ತುಮೂಱು ಗರ್ಭಾನ್ವಯಕ್ರಿಯೆಯೊಳ್ (ಚಾವುಂಪು. ೨೧೨). [ಸಂ.]

**ನಿಷ್ಕ್ರಾಮ** (ಗು). ೧. ಹೊರಕ್ಕೆ ಬರುತ್ತಿರುವ,—ಹೊರಡುತ್ತಿರುವ. (ನಾ). ೨. [ನಾಟ್ಯ] ಕಣ್ಣುಗಳ ಒಂಬತ್ತು ಬಗೆಯ ಅಭಿನಯಗಳಲ್ಲಿ ಒಂದು ; ℗ "ಹೊರಹೊರಡುವಂತೆ ಆಲಿಯನ್ನು ಕಣ್ಣಿನ ಮಧ್ಯದಲ್ಲಿ ನಿಲ್ಲಿಸುವುದು" (ಲಾಸ್ಯರಂ. ೨೭೪ ಗದ್ಯಾನುವಾದ): ಭ್ರಮಣ, ವಲನ, ಪಾತ, ಚಲನ, ಪ್ರವೇಶ, ವಿವರ್ತ, ಸಮುದ್ವೃತ್ತ, ನಿಷ್ಕ್ರಾಮ, ಪ್ರಾಕೃತ ಈ ಒಂಬತ್ತು [ಸ್ವನಿಷ್ಠ] ಆಲಿಯ ಭೇದಂಗಳ್ (ಲಾಸ್ಯರಂ. ೩-೫೪ ಪ) ; ಆಲಿ . . . ಪೊಱಮಡೆ ತೋಱಲ್ ಮಧ್ಯದಲ್ಲಿ ನಿಷ್ಕ್ರಾಮಾಖ್ಯಂ (ಲಾಸ್ಯರಂ. ೩-೫೭). [ಸಂ.]

**ನಿಷ್ಕ್ರಿಯ** (ನಾ). ೧. ಯಾವ ಕರ್ಮಕ್ಕೂ ಒಳಪಡದವನು ; ನಿಷ್ಕರ್ಮ : ನಿಷ್ಕ್ರಿಯ ನಿರಪೇಕ್ಷ ನಿನ್ನ ಚರಣಂ ಶರಣಕ್ಕೆಮಗಿಂ ಜಿನೇಶ್ವರಾ (ಸುಕುಮಾ. ೪-೪೮) ; ಶರಣು ನಿಷ್ಕ್ರಿಯ ನಿಷ್ಕಲಾಪನೆ (ಗಗತಾ. ೧-೪೩). ೨. ಯಾವ ಕಾರ್ಯವನ್ನೂ ಮಾಡದವನು : ಸುಮ್ಮನೆ ಕೂರುವವನು ; ಕ್ರಿಯಾಹೀನ : ಇಲ್ಲದ ಪ್ರತಿಷ್ಠೆಗೆ ಬಿದ್ದು ನಿಷ್ಕ್ರಿಯನಾಗಿ ಕೂಡದೆ ಕೇಶವನು ಈ ಕೆಲಸಕ್ಕಾದರೂ ಕೈಹಾಕಿದ್ದ (ಸಮಜೀ. ೭೩೦) ; ಪಿಂಟೋ ತನ್ನ ಪ್ರಭಾವದ ಕುರಿತು ಪೂರ್ಣ ನಿಷ್ಕ್ರಿಯನಾಗಿರಲಿಲ್ಲ (ಭ್ರಮಾಸ. ೮೩). ೧, ೨ : ಹರಿಯೆಂಬಂತೆಯೆ ಕೃಷ್ಣನದಾವನೊ ಚತುರಾತ್ಮನು ಸಲೆ ನಿಷ್ಕ್ರಿಯನು ಆ ಅರಿಮಥನನ ಚಕ್ರವ ಪಿಡಿದನ ನಮಿಂತಿರಿ ಸರ್ವರು ಸಂಪದಕೆ (ಧ್ವನ್ಯಾಲೋ. ೯೬). [ಸಂ.]

**ನಿಷ್ಕ್ರಿಯತೆ** (ನಾ). ಕ್ರಿಯಾಶೂನ್ಯತೆ ; ಯಾವ ಕಾರ್ಯವನ್ನೂ ಮಾಡದಿರುವಿಕೆ : ನೈಷ್ಕರ್ಮ್ಯ ಬೇರೆ, ನಿಷ್ಕ್ರಿಯತೆ ಬೇರೆ ಎಂಬುದನ್ನು ತಿಳಿಯುವ ಶಕ್ತಿ ಜನಸಾಮಾನ್ಯರಲ್ಲಿ ಉಳಿದಿರಲಿಲ್ಲ. ಆ ಸಂದರ್ಭದಲ್ಲಿ ಭಕ್ತಿಮಾರ್ಗವು ಬಹುದೊಡ್ಡ ಆಶ್ರಯವನ್ನು ಕಲ್ಪಿಸಿಕೊಟ್ಟಿತು (ಕರ್ನಾಕ. ೩೮) ; ಮತ್ತೆಂಥದೇನೋ ವಿಚಿತ್ರವಾಗಿರುವ ಹೃದಯ, ಪಿತ್ಥಕೋಶಗಳ ಜೊತೆ ಎಗರಾಡದಿದ್ದರೆ ಮಾತ್ರ ಸಫಲತೆ, ಮೈಪರಿವೆಯಿರದ ನಿಷ್ಕ್ರಿಯತೆಯಲ್ಲಿ ಸಂಭವಿಸುವ ಸಫಲತೆ (ಪ್ರಶ್ನೆ. ೩೬). [ಸಂ. ನಿಷ್ಕ್ರಿಯತಾ]

**ನಿಷ್ಕ್ರಿಯತ್ವ** (ನಾ). = ನಿಷ್ಕ್ರಿಯತೆ : ಆ ಹಂಸನ ನಿಷ್ಕ್ರಿಯತ್ವವನ್ನು ಹೇಳುವ ಚಾತುರ್ಯವನ್ನು ನೋಡಿರಿ (ಕರ್ನಾಸಂ. ೭೫). [ಸಂ.]

**ನಿಷ್ಕ್ರಿಯವೃತ್ತಿ** (ನಾ). ಯಾವ ಕಾರ್ಯವನ್ನೂ ಮಾಡದಿರುವ ಸ್ವಭಾವ ; ಕ್ರಿಯಾಶೂನ್ಯ ಮನೋಭಾವ : ಅವನ ನಿಷ್ಕ್ರಿಯವೃತ್ತಿಯು . . . ದಿನಂಪ್ರತಿಯ ದುರ್ಬೋಧನೆಯ ಮಂತ್ರ ಊದಿ ಪ್ರೇರೇಪಿಸುತ್ತಿದ್ದಿತು (ಜಯಂತ. ೨೦೪). [ನಿಷ್ಕ್ರಿಯ + ವೃತ್ತಿ]

**ನಿಷ್ಕ್ರಿಯಾತ್ಮಕ** (ನಾ). ನಿಷ್ಕ್ರಿಯೆಯಿಂದ ಕೂಡಿದುದು ; ಕ್ರಿಯಾಶೂನ್ಯತೆಯಿಂದ ಕೂಡಿದುದು : ನಿಷ್ಕ್ರಿಯಾತ್ಮಕವಾದ ಧರ್ಮದಿಂದಾಗಲೀ ಧರ್ಮವಿರೋಧವಾದ ಕರ್ಮದಿಂದಾಗಲೀ ಕಲ್ಯಾಣವಿಲ್ಲ (ಭಾರದ. ೧೧೦). [ಸಂ.]

**ನಿಷ್ಕ್ರಿಯಾವಾದಿ** (ನಾ). ಎಲ್ಲವೂ ದೈವೇಚ್ಛೆಯಿಂದಲೇ ನಡೆಯುತ್ತದೆ, ಅದೃಷ್ಟವಿದ್ದರೆ ತಾನಾಗಿಯೇ ಆಗಿ ಹೋಗುತ್ತದೆ ಎಂದು ವಾದಿಸುವವನು ; ಕಾರ್ಯಸಿದ್ಧಿಗೆ ಅದೃಷ್ಟವೇ ಕಾರಣ, ಪೌರುಷವಲ್ಲ ಎಂದು ಹೇಳುವವನು : ನನ್ನ ಪಾಲಿನ ರಾಶಿ, ಗ್ರಹ, ನಕ್ಷತ್ರಗಳು ಹೀಗೆ ಒಳಸಂಚು ಮಾಡಿ ನನ್ನ ಭಾಗ್ಯಚಕ್ರವನ್ನು ನಡಿಸಹತ್ತಿದ ಮೇಲೆ ಈ ನಿಷ್ಕ್ರಿಯಾವಾದಿಯು ಸಕ್ರಿಯಾವಾದಿಯಾಗುವ ಮಾತು ದೂರ ಉಳಿಯಿತು (ಜಯಂತ. ೮೦).
[ಸಂ. ನಿಷ್ಕ್ರಿಯಾವಾದಿನ್]

**ನಿಷ್ಕ್ರಿಯೆ** (ನಾ). ಯಾವ ಕೆಲಸವನ್ನೂ ಮಾಡದಿರುವಿಕೆ ; ತೂಷ್ಣೀಂಭಾವ; ℗ ಬುದ್ಧನ ಸಮಕಾಲೀನನಾದ ಪೂರಣಕಸ್ಸಪನೆಂಬುವನು ಆತ್ಮೋದ್ಧಾರಕ್ಕೆ ನಿಷ್ಕ್ರಿಯೆಯೇ ಸರಿಯಾದ ಮಾರ್ಗವೆಂದು ಹೇಳಿದ್ದಾನೆ. ಇವನ ವಾದಕ್ಕೆ 'ಅಕ್ರಿಯಾವಾದ'ವೆಂದು ಹೆಸರು : ಈಶ್ವರನ ಕೃತಿಯಾದ ಪ್ರಕೃತಿಯಲ್ಲಿ ನಿಷ್ಕ್ರಿಯೆಗೆ ಸ್ಥಾನವಿಲ್ಲ (ಭಾರದ. ೧೧೫) ; ಯಾವುದನ್ನೂ ಮಾಡದ ನಿಷ್ಕ್ರಿಯೆಯೇ ಸರಿಯಾದ ಮಾರ್ಗ ಎಂಬುದು ಇವನ ತತ್ತ್ವ (ಕವಿಕೋ. I, ೧೫೯).
[ಸಂ. ನಿಷ್ಕ್ರಿಯಾ]

**ನಿಷ್ಕ್ರೋಧಿ** (ನಾ). ಕ್ರೋಧವಿಲ್ಲದವನು ; ಶಾಂತಚಿತ್ತ : ನಿರವದ್ಯ ನಿಷ್ಕಾಮಿ ನಿಷ್ಕ್ರೋಧಿ ನಿರ್ಲೋಭಿ,ನಿರಸೂಯ (ಏಕೋಪು. ೬-೮೬).
[ಸಂ. ನಿಷ್ಕ್ರೋಧಿನ್]

**ನಿಷ್ಖಲಿತ** (ನಾ). ದೋಷವಿಲ್ಲದುದು ; ಸ್ಖಾಲಿತ್ಯವಿಲ್ಲದುದು ; ನಿರ್ದೋಷವಾದುದು : ನೀಲಾಳಕಿಯನೊಡ್ಡುವೆನು ಬಾಲಕಿಯ ಉಳಿದ ಧನವೆಮ್ಮವರಿಗೆ ನಿಷ್ಖಲಿತವಿದು ಹೂಡೆನಲು ಹರುಷದ ಲಳಿಯ ಚೌಪಟಮಲ್ಲ ಸಾರಿಯ ಸಾಲ ಜೋಡಿಸಿದ (ಕುಮಾವ್ಯಾಸ. ೧೪-೨೬) [ಸಂ.]

**ನಿಷ್ಟಪ್ತ** (ಗು). ೧. ಚೆನ್ನಾಗಿ ಕಾಯಿಸಿದ ; ತಪ್ತವಾದ : ಸುತಪ್ತಾಯೋರಸಪಾಯನ ನಿಷ್ಟಪ್ತಾಯಸ್ತಂಭಾಲಿಂಗನ . . . ಯಂತ್ರನಿಷ್ಪೀಡನಾದಿಗಳಿಂ ನಾರಕರ್ಗೆ ಸಂಕ್ಲಿಷ್ಟಾಸುರರ್ ದುಃಖಮಂ ಪುಟ್ಟಿಸಿದೊಡಂ (ತತ್ತ್ವಪ್ರ. ೧೨೩). ೨. ಅಗ್ನಿಯಿಂದ ಶುದ್ಧಗೊಳಿಸಿದ ;

ಪುಟಕ್ಕಿಟ್ಟ : ಸಮಚತುರಸ್ರಸಂಸ್ಥಾನನುಂ ನಿಷ್ಟಪ್ತಕನಕವರ್ಣನುಂ . . . ಅಪ್ರತಿಹತಶಾಸನನುಮಾಗಿ (ಆದಿಪು. ೧೫-೩ ವ) ; ನಿಷ್ಟಪ್ತಸುವರ್ಣಕಾಂತಿ ಕಮನೀಯಂ ನಾಲ್ವೆರಲ್ಮುಟ್ಟದಿರ್ಪುದು ಸಿಂಹಾಸನದೇಶಮಂ ಚರಮ ದೇಹಂ ದೇವದೇವೇಶನಾ (ಮಲ್ಲಿಪು. ೧೪-೧೯೮) ; ಆ ದೇವಂ . . . ನಿಜಮಂದಿರಪುರೋಭಾಗದ ಚಂಚತ್ಪಂಚರತ್ನಮಯಮಂಡಪಮಧ್ಯಾಧಿಷ್ಠಿತ ನಿಷ್ಟಪ್ತಕಾಂಚನ ಪಂಚಾನನವಿಷ್ಟರದೊಳ್ ಎಸೆವ ಜಿನೇಂದ್ರಬಿಂಬ ಮನಳುಂಬಮಿಂದೆಂಬಿನಮಬ್ಬಿಯಿಂ ಪ್ರತಿಷ್ಠಿಸಿ (ಚಂದ್ರಪು. ೪-೬೮ ವ). ೩. ಚೆನ್ನಾಗಿ ಬೇಯಿಸಿದ,—ಕುದಿಸಿದ. [ಸಂ.]

**ನಿಷ್ಠುರ** 'ನಿಟ್ಟುರ' ನೋ.

**ನಿಷ್ಠುರಬ್ರಹ್ಮಚಾರಿ** (ನಾ). ಬ್ರಹ್ಮಚರ್ಯವನ್ನು ಕಟ್ಟುನಿಟ್ಟಾಗಿ ಪಾಲಿಸುವವನು,—ನಿಷ್ಠೆಯಿಂದ ಅನುಸರಿಸುವವನು : ನಿನ್ನಂತೆ ನಿಷ್ಠುರಬ್ರಹ್ಮಚಾರಿ ನಾನಲ್ಲ (ಜಯಂತ. ೩೯೯).

[ನಿಷ್ಠುರ (<ನಿಟ್ಟುರ) + ಬ್ರಹ್ಮಚಾರಿ]

**ನಿಷ್ಠೂರ** 'ನಿಟ್ಟುರ' ನೋ.

**ನಿಷ್ಟ್ಯ** (ನಾ). ಬೇಡ, ಬೆಸ್ತ ಮುಂತಾದ ಕೀಳುಜಾತಿ ಮತ್ತು ಆ ಜಾತಿಗೆ ಸೇರಿದವನು : "ಕಿರಾತಃ, ಶಬರಃ, ನಿಷ್ಟ್ಯಃ . . . ಮ್ಲೇಚ್ಛಃ—ಈ ಆ ಬೇಡವೊದಲಾಗುಳ್ಳಂತ್ಯಜಾತಿಗಳ್" (ಹಲಾಯು. ೯೮-೪೪೫) ; "ಈವರ್ಮಕಾಜಂ ಕೀಲಿಗನೆನಿಕ್ಕುಮಾ ಜಾತಿಧರ್ಮದಿಂ ಶ್ರೇಷ್ಠನಹ ಕಬ್ಬಿಲಂ ನಿಷ್ಟ್ಯನಕ್ಕುಂ" (ಮಂಗರಾ. ೧೧೨-೬). [ಸಂ.]

**ನಿಷ್ಠ** (ಗು). ೧. ಇರಿಸಿದ ; ಇಟ್ಟ ; ಮಡಗಿದ ; ನೆಲೆಗೊಳಿಸಿದ : ಕೃಷ್ಣದ್ವೈಪಾಯನನಂ ಕಂಡಜಾತಶತ್ರು ತನ್ನೇಱಿದ ಸ್ಫಟಿಕಶಿಲಾತಳದ ಪಟ್ಟಕದಿಂದಿೞಿದು ನಿಜಾನುಜಸಹಿತಮಿದಿರ್ವಂದು ಧರಾತಳನಿಷ್ಠಲಲಾಟ ಪಟ್ಟಂ ಸಾಷ್ಟಾಂಗವೆಱಗಿ ಪೊಡವಟ್ಟು (ಪಂಪಭಾ. ೭-೫೯ ವ). ೨. (ಧರ್ಮ ಮೊದಲಾದ ವಿಚಾರಗಳಲ್ಲಿ) ಶ್ರದ್ಧೆಯುಳ್ಳ,—ಆಸಕ್ತಿಯುಳ್ಳ. (ನಾ). ೩. (ಧರ್ಮ ಮೊದಲಾದ ವಿಚಾರಗಳಲ್ಲಿ) ಶ್ರದ್ಧೆಯುಳ್ಳವನು ; ಆಸಕ್ತಿಯುಳ್ಳವನು ; ದೃಢವಾದ ನಂಬಿಕೆಯುಳ್ಳವನು : ಈತ ಕ್ಷತ್ರಿಯಯೋಧರಿಗೆ ಸಲ್ಲುವ ಸಕಲ ಅಸ್ತ್ರಶಸ್ತ್ರ ವಿದ್ಯೆಗಳನ್ನು ಬಹುಕಾಲ ಸಾಧಿಸಿ ಸಿದ್ಧಿಸಿಕೊಂಡಿದ್ದ ನಿಷ್ಠ (ಶಾಂತಲಾ. ೧೧೭). [ಸಂ.]

**ನಿಷ್ಠತೆ** (ನಾ). ನಿಷ್ಠೆಯಿಂದ ಕೂಡಿರುವಿಕೆ ; ಶ್ರದ್ಧೆಯಿಂದ ಕೂಡಿರುವಿಕೆ : ಪತಿಭಕುತಿಯುನ್ನತಿಕೆಯಲಿ ನಿಷ್ಠತೆಯಲಾ ಸಾವಿತ್ರಿಯಾಕೆಯ ನುತಚರಿತ್ರದವೋಲು ನಿಮ್ಮ ದ್ರೌಪದಾದೇವಿ ಹಿತವನಾಚರಿಪವಳು (ಕುಮ್ಯಾಅ. ೨೩-೨). [ಸಂ. ನಿಷ್ಠತಾ]

**ನಿಷ್ಠಾಗರಿಷ್ಠ** (ನಾ). ನಿಷ್ಠೆಯಿಂದ ಶ್ರೇಷ್ಠನಾದವನು ; ಶ್ರದ್ಧಾಸಕ್ತಿಗಳಿಂದ ಉತ್ತಮನಾದವನು ; ಶ್ರದ್ಧಾಳು : ದಂಡಿಭಕ್ತರವರು ಕೆಲಕಾಲಪರಿಯಂತ ಶಿವಯೋಗ ನಿಷ್ಠಾಗರಿಷ್ಠರಾಗಿದ್ದು ತರುವಾಯ ಪರಮಶಿವಸಾಯುಜ್ಯವನ್ನು ಪಡೆದರು (ಪುರಾವಿ. ೧೯೧). [ಸಂ.]

**ನಿಷ್ಠಾತ್ಮ** (ನಾ). ನಿಷ್ಠೆಯುಳ್ಳವನು ; ಶ್ರದ್ಧೆಯುಳ್ಳವನು : ವನ ವನದೊಳಾಶ್ರಮದೊಳಗೆ ಕುಲವನಿತೆಸಹಿತ . . . ತಪೋವ್ರತಾದಿಗಳನಿತಱಲಿ ನಿಷ್ಠಾತ್ಮನಾದೊಡೆ ವಿನುತ ವಾನಪ್ರಸ್ಥನೆಂಬರು (ಕುಮ್ಯಾಅ. ೧೪-೪೬).

[ಸಂ.]

**ನಿಷ್ಠಾದೀಕ್ಷೆ** (ನಾ). [ವೀಶೈ] ಒಂದು ಬಗೆಯ ದೀಕ್ಷೆ : ಆದಿದೀಕ್ಷೆಯ ವಿದ್ಯೆಯಂ ಕರ್ಮಮಂ ತೀರ್ಚಿ ಸಾದರದ ಮೋಕ್ಷವೀವುದದೆರಡನೆಯದೆ ನಿಷ್ಠಾದೀಕ್ಷೆ ಸಂಚಿತಾಗಾಮಿಗಳ ಬಿಡಿಸಿ ತತ್ಪ್ರಾರಬ್ಧಮಂ ಭೋಗದಿಂ ಪೋದುದೆನಿಸುತ ಮೋಕ್ಷವೀವುದು (ವೀಶೈಪು. ೬-೬-೬೩).

[ಸಂ. ನಿಷ್ಠಾದೀಕ್ಷಾ]

**ನಿಷ್ಠಾನ** (ನಾ). ೧. ಊಟದೊಂದಿಗೆ ನಂಜಿಕೊಳ್ಳುವ ಗೊಜ್ಜು, ಪಳಿದ್ಯ ಮುಂತಾದ ವ್ಯಂಜನಪದಾರ್ಥ : "ವ್ಯಂಜನಮದು ನಿಷ್ಠಾನಂ" (ವಸ್ತುಕೋ. ೯೨-೪) ; "ತೇಮನಂ, ನಿಷ್ಠಾನಂ-೨ ತೇವನವೆಂಬ ಮಜ್ಜಿಗೆಪಳಿದ್ಯ, ಹಸೀಮಜ್ಜಿಗೆ, ಹಸೀಯಾಳೆ, ಮಸರುಚಟ್ಣಿ (ಸಿದ್ಧಾಂತಿ. ೨೪೬). ೨. ಅಂಬಲಿ ; ಗಂಜಿ : "ನಿಷ್ಠಾನಮೆನಲಂಬಲಿಗೆ ಪೆಸರೆನಿಕ್ಕು" (ಮಂಗರಾ. ೬೪-೨). [ಸಂ.]

**ನಿಷ್ಠಾಪರ** (ನಾ). = ನಿಷ್ಠಾತ್ಮ ; ನಿಷ್ಠಾಪರಂ ಪ್ರಭಾತಾನುಷ್ಠಾನ ನಿಮಿತ್ತಮೆಟ್ಟಿನಲ್ಲಿಂದಂ ತದ್ಗೋಷ್ಠಿಯನುೞಿದು ಮುನೀಂದ್ರಗರಿಷ್ಠಂ ಜಾಬಾಲಿನಾಮಧೇಯ ಮುನೀಂದ್ರಂ (ಕಾದಂಬ. ೭೦೫); ಅಂತ ವಿಶ್ರಾಂತನಿಯಮನಿಷ್ಠಾಪರನಾಗಿ ಮೂಲಗುಣಂಗಳಿಂದೆ ದಶಧರ್ಮಮ ನೇಱಿಸಿಕೊಂಡು . . . ಆ ಮುನೀಶ್ವರಂ ಮೇಳಿಸೆ ಕೀರ್ತಿ ಕೀರ್ತಿ ಮುಖದಂತೆ ದಿಶಾರದನೀರದಂಗಳಂ (ಮಲ್ಲಿಪು. ೧೧-೫೩) ; ಶ್ರೇಷ್ಠನಘ ಸಂಹಾರಿ ಭಕ್ತಶ್ರೇಷ್ಠನರಿಷಡ್ವರ್ಗದೂರಂ ನಿಷ್ಠಿತೇಂದ್ರಿಯ ಲಿಂಗಸುಖ ನಿಷ್ಠಾಪರಂ (ಬಸಪು. ೨೧-೪). [ಸಂ.]

**ನಿಷ್ಠಾಪರತ್ವ** (ನಾ). ನಿಷ್ಠೆಯಿಂದಿರುವಿಕೆ ; ಶ್ರದ್ಧೆಯಿಂದ ಕೂಡಿರುವಿಕೆ : ನಿಷ್ಠಾಪರತ್ವದಿಂ ಪರಮೇಷ್ಠಿಸ್ತವನಮನನೂನಮಂ ಮಾಡಿ ಗುಣಜ್ಯೇಷ್ಠನೆನಿಸಿರ್ದ ಕವಿಪರಮೇಷ್ಠಿಗುಣಸ್ತವನಮೆಮಗೆ ದಲ್ ಕರಣೀಯಂ (ಪಾರ್ಶ್ವಪು. ೧-೧೭). [ಸಂ.]

**ನಿಷ್ಠಾಪಿಸು** (ಕ್ರಿ). ಶ್ರದ್ಧೆಯಿಂದ ಆಚರಿಸು,—ಮಾಡು ; ನೆರವೇರಿಸು : ಶ್ರುತಪಂಚಮಿಯೊಳು ಸಿದ್ಧಶ್ರುತಭಕ್ತಿಗೆಯ್ದುಚ್ಚರಿಸಿ ಶ್ರುತಭಕ್ತಿ ಆಚಾರ್ಯಭಕ್ತಿಯಂ ಸ್ವಾಧ್ಯಾಯಮಂ ನಿಷ್ಠಾಪಿಸಿ ಶಾಂತಿ ಭಕ್ತಿಯಂ ಮಾೞ್ಕೆ (ಶ್ರಾವಕಾ. ೫೨-೭) ; **ಅಸಂಕ್ಲೇಶಾದ್ಯಯವಶೇಷವಾಗುತ್ತಿರ** ಲುತ್ತರ ಭವಾಯುಷ್ಯ ನಿಷ್ಠಾಪಿಸಲ್ಪಡುಗುಂ (ಗೊಮ್ಮಸಾ. ೩೦-೧); ನೆನವುತ್ತಂ ಮುನಿಯ ಸಮೀಪಕ್ಕೆ ಬರೆ ಅವರು ಆತ್ಮಧ್ಯಾನಮಂ ನಿಷ್ಠಾಪಿಸಿ ಕುಳ್ಳಿರ್ದು ತದನಂತರಂ ತಾವು ಮನಃಪರಿಯ ಜ್ಞಾನಿಗಳು ಅಪ್ಪುದಱಿಂ (ನೋಂಪಿಕ. ೨೫-೭).

[ನಿಷ್ಠಾಪನ್$_0$ + -ಇಸು$_3$]

**ನಿಷ್ಠಾಭಕ್ತಿ** (ನಾ). [ವೀಶೈ] ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ ಮತ್ತು ಸಮರಸ ಎಂಬ ಭಕ್ತಿಯ ಆರು ಮೆಟ್ಟಿಲುಗಳಲ್ಲಿ ಎರಡನೆಯದು ; ಸ್ಥಿರವಾದ ನಂಬುಗೆಯಿಂದ ಕೂಡಿದ ಭಕ್ತಿ ; ಶ್ರದ್ಧೆಯಿಂದ ಕೂಡಿದ ಭಕ್ತಿ : ಮೂಲವಾದ ಧ್ಯೇಯವಸ್ತು ವಿನ ವಿನಾ ಬೇರೆಡೆಗೆ ಮನವನ್ನು ಹೋಗಗೊಡಲೀಯದೆ, ಆ ವಸ್ತುವಲ್ಲದೆ ಬೇರೆ ಆಧಾರವಿಲ್ಲವೆಂದು ತಿಳಿಯುವುದೇ ನಿಷ್ಠಾಭಕ್ತಿ (ಮಹಾಸಾ. ೫೨ ಪ್ರಸ್ತಾವನೆ) ; ಆ ಶ್ರದ್ಧಾಭಕ್ತಿಯೇ ನಿಷ್ಠಾಭಕ್ತಿಯಾಗಿ ಆ ಮಹೇಶಸ್ಥಲದ ಕ್ರಿಯಾಚರಣೆಗೆ ಸಹಾಯವನ್ನು ನೀಡುವುದು (ಭಾರದ. ೨೫೪).

[ಸಂ.]

**ನಿಷ್ಠಾವಂತ** (ಗು). ೧. ಶ್ರದ್ಧೆಯಿಂದ ಕೂಡಿದ ; ಸ್ಥಿರವಾದ ನಂಬಿಕೆಯುಳ್ಳ : ಹೊಸದಾಗಿ ಕಾಂಗ್ರೆಸ್ಸಿಗೆ ಸೇರಿದ್ದ ನಿಷ್ಠಾವಂತ ಜನರೂ ಸಹ ರಂಗನಾಥಮಿತ್ರಮಂಡಳಿಯವರ ಉಪಟಳವನ್ನು ತಡೆಯಲಾರದೆ ನಿಸ್ಸಹಾಯಕರಾಗಿ ಸುಮ್ಮನಿದ್ದರು (ಪಂಜಪಂ. ೧೮೦). ೨. (ಧಾರ್ಮಿಕ ವಿಚಾರಗಳಲ್ಲಿ) ಶ್ರದ್ಧೆಯುಳ್ಳ ; ಆಚಾರನಿಷ್ಠನಾದ: ಗಂಗಾಧರಶಾಸ್ತ್ರಿಗಳಂಥ ನಿಷ್ಠಾವಂತ ಬ್ರಾಹ್ಮಣತಜ್ಞರಿಗೆ ಒಬ್ಬ ಸಚ್ಛಿಷ್ಯ ದೊರೆತಂತಾಗಿತ್ತು (ಹೊಸಕ್ಷಿ. ೩೬). (ನಾ). ೩. ಶ್ರದ್ಧೆಯಿಂದ ಕೂಡಿದವನು ; ಸ್ಥಿರವಾದ ನಂಬಿಕೆಯುಳ್ಳವನು : ಆಗಾಗ್ಗೆ ಅವಳು ತನ್ನ ಮನೆಯಲ್ಲಿ ನಿಷ್ಠಾವಂತರಾದ ಭಕ್ತರನ್ನು ಸಭೆ ಸೇರಿಸುತ್ತಿದ್ದಳು (ಪುನರು. ೩೨೯) ; ಈ ಮನುಷ್ಯನು ಮಹಾನಿಷ್ಠಾವಂತನಾದ

ಹಾಗೂ ಉತ್ಸಾಹಿಯಾದ ಕೆಲಸಗಾರನು (ನೀಶಸ್ಮೃ. ೬೬). **೪. ಆಚಾರನಿಷ್ಠನಾದವನು** : ಯಾವುದಾದರೂ ನಿಷ್ಠಾವಂತರ ಮನೆಯ ಹುಡುಗಿಯನ್ನು ನೋಡಿ ನಿನ್ನ ಅಪೂರ್ವನ ಮದುವೆ ಮಾಡಿ ಮುಗಿಸು (ಧಾರೆ.೧).
[ಸಂ. ನಿಷ್ಠಾವತ್]

**ನಿಷ್ಠಾವಂತೆ** (ನಾ). ಶ್ರದ್ಧೆಯಿಂದ ಕೂಡಿದವಳು : ನನ್ನ ಹೆಂಡತಿ ನಿಷ್ಠಾವಂತೆ (ಪುನಮ. ೪೭೧). [ನಿಷ್ಠಾವಂತ + -ಎ$_2$]

**ನಿಷ್ಠಿತ** (ಗು). ೧. ಸ್ಥಿರವಾಗಿ ಕೂಡಿಕೊಂಡಿರುವ ; ಚೆನ್ನಾಗಿ ಸೇರಿಕೊಂಡಿರುವ, ಹೊಂದಿಕೊಂಡಿರುವ. ೨. ಗೊತ್ತಾದ ; ವ್ಯವಸ್ಥಿತವಾದ ; ನಿರ್ದಿಷ್ಟಪಡಿಸಿದ : 'ನಿಷ್ಠಿತಕಾರ್ಯ' ಪರಾ. ೩. ನಂಬಿಕೆಯಿಂದ ಕೂಡಿದ : ಶ್ರದ್ಧೆಯುಳ್ಳ. ೪. ಚೆನ್ನಾಗಿ ತಿಳಿದಿರುವ ; ಪರಿಣತ. (ನಾ). ೫. ಸ್ಥಿರವಾಗಿ ಕೂಡಿಕೊಂಡಿರುವುದು ; ಚೆನ್ನಾಗಿ ಹೊಂದಿಕೊಂಡಿರುವುದು : ಶಬ್ದಾಲಂಕಾರನಿಷ್ಠಿತಮಪ್ಪಲಂಕಾರದೊಳಂ ವ್ಯಾಸವಾಲ್ಮೀಕಿಕಶ್ಯಪಪ್ರಭೃತಿವಿರಚಿತಂಗಳಪ್ಪ ಮಹಾಕಾವ್ಯಂಗಳೊಳಂ . . . ಅತಿಪ್ರವೀಣ[ನು]ಮಾರೂಢಸರ್ವಜ್ಞ ಮಹೇಂದ್ರಜಾಣ (?)[ನು]ಮಾಗಿ (ಶಂಸಭಾ. ೨-೩೪ ಪ) ; ನಿರವಧಿಸ್ಥಿತ ಲಿಂಗನಿಷ್ಠಿತ ಸುರುಚಿರೇಂದ್ರಿಯರತುಳ ಚಿದಮಳನಿರತರುಂ (ಬಸಪು. ೬-೧೬) : ಈ ಸಂಸ್ಕಾರಕಾರ್ಯ . . . ಇತರರ ಅನುಭವಗಳನ್ನು ಪರೀಕ್ಷಿಸಿ ತನ್ನದರೊಡನೆ ಹೋಲಿಸುವುದರಿಂದಲೋ ಅಥವಾ ಕೃತಿರೂಪದಲ್ಲಿ ನಿಷ್ಠಿತವಾಗಿರುವ ಅನ್ಯರ ಅನುಭವದ ಅಧ್ಯಯನದಿಂದಲೋ ಆಗಬಹುದು (ಸೌಂದಸ. ೫). ೬. ಹೊಂದಿಕೊಂಡಿರುವವನು ; ಸೇರಿಕೊಂಡಿರುವವನು : ಆ ಮುನೀಂದ್ರಂ ತಪೋನುಷ್ಠಾನದೊಳ್ ನಿಷ್ಠಿತನಾದನೀ ನರೇಂದ್ರಂ ರಾಜ್ಯಾನುಷ್ಠಾನದೊಳ್ ನಿಷ್ಠಿತನಾದಂ (ಆದಿಪು. ೬-೨೪ ವ). [ಸಂ.]

**ನಿಷ್ಠಿತಕಾರ್ಯ** (ನಾ). ಗೊತ್ತುಪಡಿಸಿದ ಕಾರ್ಯ ; ನಿಗದಿ ಮಾಡಿದ ಕಾರ್ಯ : ಯುಧಿಷ್ಠಿರಂ ನಿಷ್ಠಿತಕಾರ್ಯಮನನುಷ್ಠಿಸಿ ನಿಜಪರಿಜನಮೆಲ್ಲಮನೀಯೊಂದು ವರುಷಮುಂ ನಿಮ್ಮ ನಿಮ್ಮ ಬಲ್ಲಂದದೊಳಿರಿಮೆಂದು ಧೌಮ್ಯಸಮೇತಂ ಪೋಗಲ್ವೇಟ್ಟು (ಪಂಪಭಾ. ೮-೫೦ ವ). [ನಿಷ್ಠಿತ + ಕಾರ್ಯ]

**ನಿಷ್ಠಿತಾತ್ಮ** (ನಾ). ೧. ನಿಷ್ಠೆಯಿಂದ ಕೂಡಿದ ಮನಸ್ಸುಳ್ಳವನು ; ದೃಢಮನಸ್ಸಿನವನು : ಪರಮಾನಂತಚತುಷ್ಟಯೈಕನಿಳಯರ್ ಲೋಕೈಕಪೂಜ್ಯರ್ ಪ್ರಸಿದ್ಧರಮೂರ್ತರ್ ನಿರಪಾಯರಕ್ಷರರಜೀಯರ್ ನಿಷ್ಠಿತಾತ್ಮರ್ . . . ದಯೆಗೆಯ್ವರಕ್ಕೆಮಗನಂತೋದಾತ್ತ ಸಂಸಿದ್ಧಿಯಂ (ಸುಕುಮಾ. ೧-೨); ಪರಮಾತ್ಮಂ ನಿಷ್ಠಿತಾತ್ಮಂ ಜಿನಪತಿ ಪರಮಸ್ವಾಮಿ . . . ವ್ರತಿಪತಿ ಸುಕುಮಾರಂ ಕಥಾನಾಯಕಂ (ಸುಕುಮಾ. ೧-೬೦).
[ಸಂ. ನಿಷ್ಠಿತಾತ್ಮನ್]

**ನಿಷ್ಠೀವ** (ನಾ). ಉಗುಳುವಿಕೆ ; ತುಪ್ಪಿಕ್ಕುವಿಕೆ : ಥೂಕರಿಸುವಿಕೆ. [ಸಂ.]

**ನಿಷ್ಠೀವನ** (ನಾ). = ನಿಷ್ಠೀವ : "ನಿಷ್ಠೀವಃ, ನಿಷ್ಠ್ಯೂತಿ . ನಿಷ್ಠೀವನಂ, ನಿಷ್ಠೇವನಂ — ೪ ಕೇಕರಿಕೆ, ಉಗುಳುವಿಕೆ, ಥೂಕರಿಸುವಿಕೆ" (ಸಿದ್ಧಾಂತಿ. ೩೬೮); ದೇವ ಕಂಡಿರೆ ಕುರುಪತಿಯ ಮಾಯಾವಿಡಂಬನವಿದ್ಯೆಯನು ನಿಷ್ಠೀವನಾವಿರ್ಭೂತ ಸಲಿಲಸ್ತಂಭ ಡಂಬರವ (ಕುಮಾವ್ಯಾಸ. ೫-೫). [ಸಂ.]

**ನಿಷ್ಠುರ** (ಗು). ೧. ಕಠಿಣವಾದ ; ಬಿರುಸಾದ ; ಒರಟಾದ : ತನ್ನ ನಿಷ್ಠುರಚರಣಸಂಘಟ್ಟದೊಳ್ ಪಡಲ್ವಟ್ಟ ವೀರಭಟರ ಮಕುಟಂಗಳೊಳ್ ತಲೆಗರೆದಿರ್ದನೆ ಗೆತ್ತು ಸೋದಿಸಿ ನೋಡಿಯುಂ . . . ಕುರುಕ್ಷೇತ್ರದೊಳೆಲ್ಲಿಯುಂ ದುರ್ಯೋಧನನನರಿಸಿ ಕಾಣದೆ ವಿಸ್ಮಯಂಬಟ್ಟು (ಗದಾಯು. ೬-೨೮ ವ) : ಅಸ್ಖಾಲಿತಪ್ರವರ್ಧಮಾನ ಮದ್ಧರಿವಿದ್ಯಾಧರಪೀರರಜವನ ಬಾಯೊಳ್ ತೂಂಕಿದಂ ತನ್ನ ನಿಷ್ಠುರ ಪಾದಾಹತಿಯಿಂ ಪ್ರಭಂಜನಸುತಂ ಹಸ್ತಪ್ರಹಾರಂಗಳಿಂ (ಪಂಪರಾಮಾ. ೧೧-೧೧೨) : ತುರಗಗರ್ಜನೆ ರಥದ ಚೀತ್ಕೃತಿ ನರಥನುಷ್ಟಂಕಾರ ಕಪಿಯಬ್ಬರಣೆ ಪಾರ್ಥನ ಬೊಬ್ಬೆ ನಿಷ್ಠುರ ದೇವದತ್ತರವ ಅರರೆ ಹೊಮ್ಮಿಜಿಸಿದ್ದುವು (ಕುಮಾವ್ಯಾವಿ. ೬-೬೬) ; ಶಾಪದಿನಹಲ್ಯೆ ತಾಂ ಪರ್ಪ ರತಮಾನಂಗಳಿಂದೆ ಜಡರೂಪದಿಂ ನಿಷ್ಠುರಶಿಲಾತಪಸ್ವಿನಿಯಾಗಿ . . . ಒರಗಿರ್ಪ ಸುಕ್ಷೇತ್ರಂ (ಶ್ರೀರಾಮಾ. ೩೬-೨೨೭). ೨. ಕ್ರೂರವಾದ : ನಿರ್ದಯವಾದ : 'ನಿಷ್ಠುರಚರಿತ್ರ' ಪರಾ. ೩. ಕಠೋರವಾದ : ಕರ್ಕಶವಾದ : (ರಂಯ್ಯನೆ ಹೋಗಿ, ದೀಕ್ಷಿತನ ರಟ್ಟೆಯನ್ನು ತುಡುಕಿ ಹಿಡಿದೆಳೆದುಕೊಂಡೊಯ್ದು . . . ನಿಷ್ಠುರಕಣ್ಣಿಂದ) ಸತಿ ! ನೀನಾಳ್ವ ಅಭಿಚಾರಿಕೆಯ ಮತ್ತಿನಿಂದ. ಬಿಜ್ಜರುವವರಿಗೆ ಇತ್ತ ಸುಳಿಯಬೇಡ ! (ಮಿಚ್ಚ. ೬೭-೬). (ನಾ). ೪. ಕಠಿಣವಾದುದು ; ಬಿರುಸಾದುದು : ಒರಟಾದುದು : "ಕಠಿನಂ ನಿಷ್ಠುರಂ ಕಠೋರಂ" (ಅಭಿಧಾ. ೧೦೫-೪೫) : "ನಿಟ್ಟುರ ನಿಷ್ಠುರಂ" (ಕವಿಕಂ. ೨೦೩) ; ತೆಗೆದತಿ ನಿಷ್ಠುರಂ ತಳೆಯಲಾ ಕಮಠಂ ವಿಷಪಕ್ತನಾಗಿ ನಾಲಗೆಯೆರಡಾದ ವಾಸುಗಿ ಕರಂ ತಲೆವಾಗಿಯುಂ (ಪುಷ್ಪದ. ೩-೪) : ಕೊಟ್ಟ ಧನಿಕರು ಬಂದು ನಿಷ್ಠುರದ ಮಾತಾಡಿ, ಕೆಟ್ಟ ಬೈ ಬೈಯುವರು (ಕಾಪು. ೨೨-೧). ೫. ಕ್ರೂರವಾದುದು : ನಿರ್ದಯವಾದುದು : ಮಾತಂಗನಾಗಿರ್ದುಮೇಂ ನಿಷ್ಠುರಮಲ್ತಾಕಾರಮಿಾತಂಗೆನಿಸಿ ಧವಳವಾಸೋನ್ವಿತಂ ಮತ್ತಮೊರ್ವಂ ಬರುತಿರ್ದಂ (ಕಾದಂಪೂ. ೬೬) ; ಇರುಳೊಳುಂ ಘೋರಾಂಧ ಮದ್ಯಮಂ ಪೀರ್ದು ಮೂರ್ಛೆಗೆ ಸಂದ ಪ್ರಾಣಮತಿನಿಷ್ಠುರಂ, ಕಠಿನಂ, ಭಯಾನಕಂ, ಹೃದಯಭಾರಂ, ಮಹಾಕ್ರೂರಂ ! (ಶ್ರೀರಾಮಾ. ೮೯-೨೯೪) ; ರಂಗ ಶಾರದೆಯನ್ನು ನಿಷ್ಠುರವಾಗಿ ನೋಡಿದ (ಪ್ರಶ್ನೆ. ೪೨). ೬. ಆಕ್ಷೇಪಣೆ : ಅಪವಾದ : ದೂರು : ನಿಂದೆ : ನಾನು ನಾಮಕರಣಕ್ಕೆ ಬರುತ್ತೇನೆ ; ಆದರೆ ತಾಯಿ ಅಡ್ಡ ಬರುತ್ತಾಳೆ ಎನ್ನುವ ಹಾಗೆ ನಟನೆ ಮಾಡುತ್ತೀಯಲ್ಲ, ನನ್ನನ್ನು ನಿಷ್ಠುರಕ್ಕೆ ಸಿಕ್ಕಿಸಿದ್ದೀಯಲ್ಲ ! (ಮಯಾಗ. ೧೫೦) ; ನಿಜವಾಡಿದರೆ ನಿಷ್ಠುರ (ಗಾದೆ). ೭. ಒರಟುತನ ; ಕಠಿಣತೆ : ಬಂದು ಗಣಮುಖಿಕೆಜಗಲವರು ನಿಷ್ಠುರಗೂಡಿ ಬಂದ ವಾಕ್ಯಗಳೆತ್ತಿ ಲಿಂಗತಲ್ಪಕ ಬಸವನೆಂದ ನುಡಿ ಸಿದ್ಧಿಸಿತು ನೋಡೆಂದು ತೋರಿಲು (ಸಿಂಗಿರಾ. ೧೧-೧೮). ೮. ಕ್ರೌರ್ಯ ; ದುಷ್ಟತನ : ಅಳುಕಿದನೆ ಸುಡಲವನ ಮೇಲುದ ಸೆಳೆದನುನ್ನತ ಕುಚವ ನಳಿತೋಳ್ಗಳಲಿ ಮುಚ್ಚಿದಳಬಲೆ ಬೆಚ್ಚಿದಳವನ ನಿಷ್ಠುರಕೆ (ಕುಮಾವ್ಯಾಸ. ೧೪-೧೦೩). ೯. ಕಠಿಣನಾದವನು : ಇರೆ ಲಗ್ನಕ್ಕೆ ಚತುರ್ಥದೊಳ್ ಹಿಮಕರಂ ಸತ್ಪುತ್ರಮಿತ್ರಾರ್ಥ್ಯಂ . . . ಅರಾತಿಸ್ಥಾನದೊಳ್ ಕೂಡೆ ನಿಷ್ಠುರನಾಲಸ್ಯಸಮನ್ವಿತಂ ಮೃದುಮಪುಃಕಾಮನಾಗ್ನಿನಾನಾರಿ (ಜಾತತಿ. ೧೮-೭). ೧೦. ನಿರ್ದಯ : ಕ್ರೂರಿ : ನಿಷ್ಕರುಣಿ : ಕೃಷ್ಣಕಾಂತನು ತಾನೆಂತಹ ನಿಷ್ಠುರ, ಪಕ್ಷಪಾತಿ ! ಎಂತಹ ಅಪರಾಧಿ !! ಎಂದುಕೊಂಡನು (ಕಮಲಕು. ೧೩೦) ; ತುಂಬುಗರ್ಭಿಣಿ ಸೀತೆಯನ್ನು ನಿಷ್ಠುರನಾದ ರಾಮಚಂದ್ರ ಲೋಕಾಪವಾದಭೀತಿಯಿಂದ ಲಕ್ಷ್ಮಣನೊಡನೆ ಕಾಡಿಗಟ್ಟಿದ ಸಂದರ್ಭ (ಅನಾಥೆ. ೧೦) ; ಯಮುನೆ (ಕಣ್ಣೀರು ಸುರಿಸುತ್ತ) ನೀನು ಅವನಿಗೆ ಇಷ್ಟು ನಿಷ್ಠುರನಾಗಬೇಡ (ಮುಂಬೆಳಕು. ೪-೧೯೭). ೧೧. [ಸಂಗೀತ] ಹದಿನೈದು ಸ್ವರದೋಷಗಳಲ್ಲಿ ಒಂದು : ಕಂಪಿತ ಚಿಂತಿತ ಅನುನಾಸಿಕ ಶಿರೋದ್ಗತ ಕಂಠಕುಂಚನ ವಿಕ್ಲಿಷ್ಟ ನೀರಸ ನಿಷ್ಠುರ ದುರ್ಶ್ರಾವ್ಯ ಚಿತ್ರಾಂತ ಪರುಷ ಶ್ರುತಿಹೀನ ಪ್ರಯಾಣ ಅಸಮಾನ ತಾಲಹೀನವೆಂಬ ಹದಿನೈದು ಸ್ವರದೂಷಣಂಗಳಂ ತೊಲಗಿಸಿದು ನಿಜಹೃದಯತೃಪ್ತಿಯಿಂ . . . ಹಾಡಿ (ವಿವೇಕ. ೨೫೩).

**ನಿಷ್ಠುರ ಮಾಡಿಸು** = ನಿಷ್ಠುರವಾಗುವಂತೆ ಮಾಡು: ನನ್ನನ್ನು ಏಕೆ ನಿಷ್ಠುರ ಮಾಡಿಸುತ್ತೀಯೆ ? ನನ್ನ ಜೀಗಿತ್ತಿಯ ಬಾಯಿಂದ ನನಗೇಕೆ ವಿವೇಕ ಹೇಳಿಸುತ್ತೀಯೆ ? (ಮಹಾಗ. ೧೫೩). **ನಿಷ್ಠುರ ಮಾಡು** = ಕಠೋರವಾಗಿ ವರ್ತಿಸು : ನಾಯಕನು ಆ ಮಾತಿಗೆ ತಾಳ್ಮೆಗೊಳ್ಳದೆ ಈಗಲೆ ತಂದುಕೊಡು, ಇಲ್ಲವಾದರೆ ಇಟ್ಟಿರುವ ಸ್ಥಳವನ್ನಾದರೂ ತೋರಿಸೆಂದು ನಿಷ್ಠುರ ಮಾಡಿದನು (ಕಥವಿ. ೧೮೨). [ಸಂ.]

**ನಿಷ್ಠುರಗಾಥೆ** (ನಾ). ಬಿರುನುಡಿ ; ಕೆಟ್ಟಮಾತು : ನಿಷ್ಠುರಗಾಥೆಯೊಳಗಿಹರಿಂಗೆ ಪೇಳದಿರಾಡಿಗಗನಬೋಧೆಯಿಂದ (ಗಗತಾ. ೩-೨).
[ನಿಷ್ಠುರ + ಗಾಥೆ ( < ಗಾದೆ) ]

**ನಿಷ್ಠುರಗುಣ** (ನಾ). ಕಠಿಣಸ್ವಭಾವ ; ಕೆಟ್ಟ ಮನೋಭಾವ : ದುಷ್ಟನಿಗೆ ಕಷ್ಟ ಬಂದರೂ ನಿಷ್ಠುರಗುಣ ಬಿಡಲಾರ (ಗಾದೆ).
[ನಿಷ್ಠುರ + ಗುಣ]

**ನಿಷ್ಠುರಚರಿತ್ರ** (ನಾ). ಕ್ರೂರವಾದ ನಡೆವಳಿಕೆ : ನೀನತ್ಯಂತ ಕರುಣಿ ನಾಂ ಪಾಳ್ಪುದತಿನಿಷ್ಠುರಚರಿತ್ರಂ (ನಂಬಿರ. ೬-೧೧).
[ನಿಷ್ಠುರ + ಚರಿತ್ರ]

**ನಿಷ್ಠುರಜಿಹ್ವ** (ನಾ). ೧. ಕಠೋರವಾಗಿ ಮಾತನಾಡುವವನು ; ನಿರ್ದಯವಾಗಿ ಮಾತನಾಡುವವನು. ೨. ತೀಕ್ಷ್ಣವಾದ ಜ್ವಾಲೆಯುಳ್ಳದು. ೧, ೨ : ಪರಿಕಿಪೊಡವಿಚಾರಿ ಸಿತೇತರಗತಿಯಾದಂ ಪ್ರಭಂಜನಪ್ರಿಯನತಿನಿಷ್ಠುರಜಿಹ್ವನುಪರ್ಬುಧನಂತಿರೆ ದುರ್ಬುಧನಾರೊಳೊಂದಿ ಪಡೆಯಂ ನೋವಂ (ಚಂದ್ರಪ. ೧-೪೨). [ಸಂ.]

**ನಿಷ್ಠುರತನ** (ನಾ). ೧. ಒರಟುತನ ; ಕಠೋರತೆ : ತಂದೆಯ ಮುಖ ಅವನೆದುರು ನಿಂತರೂ ಕಮಲಕ್ಕನ ನಿಷ್ಠುರತನ ಅವನಿಗೆ ಅಸಹ್ಯವೆನಿಸಿತು (ಜೀವರಂ. ೪೧). ೨. ಕ್ರೂರತೆ ; ನಿರ್ದಯತೆ : ಖಳನ ನಿಷ್ಠುರತನದ ನಿಂದೆಗಳ್ಕೆ ನವರಸಾಲಂಕಾರಭರಿತಮಾಗಿರ್ಪ ಕಬ್ಬಮನೊಲ್ದು ಕಥಿಸದುಳಿದಪುದು ನೀತಿಯೆ (ಚಿಒಪು. ೧-೬೨). [ನಿಷ್ಠುರ + -ತನ]

**ನಿಷ್ಠುರತೆ** (ನಾ). ೧. ಕಠೋರತೆ; ಉಗ್ರತೆ ; ತೀಕ್ಷ್ಣತೆ : ನಿದಾಘನಿಷ್ಠುರತೆಯೊಳಂ ಮಳೆಗಾಲದ ಪ್ರಳಯಜಲದೊಳಂ . . . ಗಿರಿರಾಜತನುಜೆಯಿರ್ದ ನಿರುಪಮಾನ ತಪಃಪ್ರಭಾವಂ ವಿರೂಪಾಕ್ಷನ ಕರಣಂಗಳೊಳ್ ಬೆರಸಿ ಬಳೆಯೆ (ಗಿರಿಕ. ೯-೮೩ ವ) ; ನಿಷ್ಠುರತೆಗಲ್ಲದೆ ಮನವನೀಯದು ಮಹಿಯ ಮೂಢಜನ (ಕುಮ್ಯಾಬು. ೯-೪೫) ; ಮಲ್ಲಿಮಯ್ಯ ಜೈನಧರ್ಮದ ನಿಷ್ಠುರತೆಯನ್ನು ಕಂಡು ಬೆಡಗಚ್ಚಿದನು (ವಾಸಚಿಂ. ೨೫). ೨. ಕ್ರೌರ್ಯ ; ನಿರ್ದಯತೆ : ಓರಿದು ಮುನಿಸಿಲ್ಲವನಿಜೆಗೆ ನಿಷ್ಠುರತೆ ಜನ್ಮದೊಳಿಲ್ಲ ಗರ್ವದ ಗರಗರಿಕೆ ಮುನ್ನಿಲ್ಲ (ತೊರರಾ. ೩-೧೧-೧೨) ; ಹಾ ಜೀವನದುರಂತತೆಯೆ, ತಂದೆತಾಯಿಂದಿರಂ ನಲ್ಲರಂ ಮಕ್ಕಳಂ ಪೂಜ್ಯರಂ ಮೇಣರ್ದೆಯೊಲಿದರಂ ಕಳೇಬರಂ ಮಾಡಿ ತೋರುವ ನಿನ್ನ ನಿಷ್ಠುರತೆಯಂ ಸುಡಲಿ ! (ಶ್ರೀರಾಮಾ. ೧೧೮-೧೬೪).
[ಸಂ. ನಿಷ್ಠುರತಾ]

**ನಿಷ್ಠುರತ್ವ** (ನಾ). = ನಿಷ್ಠುರತೆ. [ಸಂ.]

**ನಿಷ್ಠುರನಿನಾದ** (ನಾ). ಕಠೋರವಾದ ಶಬ್ದ ; ಘೋರವಾದ ಧ್ವನಿ ; ಕರ್ಕಶವಾದ ಧ್ವನಿ : ಮೊಜಿಸಿದು ಮಿಗೆ ತಲೆಯೊತ್ತಿ ತೆರೆ ಮೈಮುರಿದು ಘುಳುಘುಳುಘುಳಿತ ಘನನಿಷ್ಠುರನಿನಾದದ ಗಜಬು ಗಾಢಿಸಿ ಬಹಳ ಲಹರಿಯಲಿ (ಕುವ್ಯಾಬು. ೧-೧೯). [ನಿಷ್ಠುರ + ನಿನಾದ]

**ನಿಷ್ಠುರವಚನ** (ನಾ). ಕಠಿಣವಾದ ಮಾತು ; ಬಿರುನುಡಿ : ಅತಿಕಠೋರನಿಷ್ಠುರವಚನಂಗಳಿಂ ಗಜಬು ಗರ್ಜಿಸುತ್ತುಂ ಸುತ್ತಿ ಮುತ್ತಿಪತ್ತಿದಾಗಳ್ ದೆಸೆಗಳೆ ನುಂಗುವಂತಾಗೆ (ಸುಕುಮಾ. ೧೧-೪೨ ವ).
[ನಿಷ್ಠುರ + ವಚನ]

**ನಿಷ್ಠುರವಾದಿ** (ನಾ). ಕಠಿಣವಾಗಿ ಮಾತನಾಡುವವನು ; ನಿರ್ದಾಕ್ಷಿಣ್ಯವಾಗಿ ಮಾತಾಡುವವನು : ಈ ಗುಲಗಂಜಿ ಕಣ್ಣಿನ ಕೊರಡು— ಮರಾಠಿ ಪಿಚಿತ್ರಹಿಂದಿ ಮಾತಾಡುವ ನಿಷ್ಠುರವಾದಿಯಾದ ಪಿನ್ಸಿಪ್ಲನು ಬ್ಯಾಂಕಿನಲ್ಲಿ ಪರಿಚಿತ ವ್ಯಕ್ತಿಯಾಗಿರಬೇಕು (ಗಂಪೂಯಿ. ೨೬೦).
[ಸಂ. ನಿಷ್ಠುರವಾದಿನ್]

**ನಿಷ್ಠುರವೃತ್ತಿ** (ನಾ). ೧. ಉಗ್ರಸ್ವಭಾವವುಳ್ಳದು ; ತೀಕ್ಷ್ಣವಾದುದು. ೨. ವ್ಯವಹಾರದಲ್ಲಿ ಬಿಗುವಾಗಿರುವವನು ; ಕಟ್ಟುನಿಟ್ಟಾಗಿ ವ್ಯವಹರಿಸುವವನು. ೧, ೨ : ಪರಿಕಿಪೊಡತಿವೃದ್ಧಂ ನಿಷ್ಠುರವೃತ್ತಿ ಸದಾನುವರ್ತಿ ನೀತಿಯುತಂ ಭಾಸುರತೇಜಂ ಕಂಚುಕಿಯಂತಿರೆ ನಿಶ್ಚಲೆ ಮಾಡಿತಾ ನೃಪಶ್ರೀವಧುವಂ (ಚಂದ್ರಪು. ೩-೨೩).
[ನಿಷ್ಠುರ + ವೃತ್ತಿ]

**ನಿಷ್ಠುರಸ್ವಭಾವ** (ನಾ). ಕಟ್ಟುನಿಟ್ಟಿನ ಮನೋಭಾವ : ಮುಖದ ಮೇಲೆ ನಿಷ್ಠುರಸ್ವಭಾವವು ಒಡೆದು ಕಾಣುತ್ತಿತ್ತು (ಬೋಧರು. ೫).
[ನಿಷ್ಠುರ + ಸ್ವಭಾವ]

**ನಿಷ್ಠುರಾಕ್ಷರ** (ನಾ). ಕಠಿಣವಾದ ಅಕ್ಷರ ; ಕರ್ಕಶವಾದ ಅಕ್ಷರ : ಅತಿರೂಢಾರ್ಥಮಗೂಢಂ ಪ್ರತೀತಿಸುಭಗಂ ಪ್ರಸನ್ನಮೆನೆ ಪಡೆಗುಮಪಾಕೃತನಿಷ್ಠುರಾಕ್ಷರಂ ಲಾಲಿತಲಲಿತಪದಪ್ರಕಾರಮದು ಸುಕುಮಾರಂ (ಕಾವ್ಯಾವ. ೫೧೨). [ನಿಷ್ಠುರ + ಅಕ್ಷರ]

**ನಿಷ್ಠುರಾಲಾಪ** (ನಾ). = ನಿಷ್ಠುರವಚನ : ದವನಕನ ನಿಷ್ಠುರಾಲಾಪಂಗಳ್ಗೆ ಪಿಂಗಳಕಂ ಕರಂ ಮುಳಿದಿಂತೆಂದಂ (ಪಂಚತಂ. ೯೯-೨).
[ನಿಷ್ಠುರ + ಆಲಾಪ]

**ನಿಷ್ಠುರಿ** (ನಾ). ನಿಷ್ಠುರತೆಯುಳ್ಳವನು ; ಕಟ್ಟುನಿಟ್ಟಾಗಿ ಇರುವವನು : 'ನ್ಯಾಯನಿಷ್ಠುರಿ' ಪರಾ. [ಸಂ. ನಿಷ್ಠುರಿನ್]

**ನಿಷ್ಠೂರ** 'ನಿಟ್ಟುರ' ನೋ.

**ನಿಷ್ಠೂರತನ** (ನಾ). = ನಿಷ್ಠುರತನ ೨ : ಚೋರನನು ಕಾಣುತ್ತ ಮರಳಿದು ಚೋರನೆಂದೊಡೆ ಪತಿತನನು ನಿಷ್ಠೂರತನದಿಂ ಪತಿತನೆಂದೊಡೆ ಸಾಮ್ಯದೋಷವದು ಸಾರುವುದು (ಕುವ್ಯಾಬು. ೪-೯೧).
[ನಿಷ್ಠೂರ( < ನಿಟ್ಟುರ) + -ತನ]

**ನಿಷ್ಠೂರವಾದಿ** (ನಾ). ಅಪ್ರಿಯವಾಗಿ ಮಾತನಾಡುವವನು ; ನಿರ್ದಾಕ್ಷಿಣ್ಯವಾಗಿ ಮಾತನಾಡುವವನು : "ದುರ್ಮುಖಃ, ಮುಖರಃ, ಅಬದ್ಧಮುಖಃ—೩ ಅಪ್ರಿಯವಾಗಿ ಮಾತನಾಡುವವನ ಪೆಸರು, ತಡೆಯಿಲ್ಲದ ನಿಷ್ಠೂರವಾದಿ" (ಸಿದ್ಧಾಂತಿ. ೩೩೨).
[ < ಸಂ. ನಿಷ್ಠುರವಾದಿನ್]

**ನಿಷ್ಠೆ** (ನಾ). ೧. ದೃಢತೆ ; ಸ್ಥಿರತೆ : "ನಿಟ್ಟೆಯೆನೆ ನಿಷ್ಠೆಯಕ್ಕುಂ" (ಕವಿಕಂ. ೨೨೮). ೨. ನಿಯಮಕ್ಕೆ ಬದ್ಧವಾಗಿರುವಿಕೆ,—ಒಳಪಟ್ಟಿರುವಿಕೆ : ಗ್ರಹದ ನಿಷ್ಠೆಯನೇಕೆ ನಿಷ್ಠೆ ಮಾಡುವೆ ರವಿಗೆ (ಶ್ರೀರಾಮಾ. ೩೨೮-೨೩೮). ೩. ಶ್ರದ್ಧೆ ; ದೃಢವಾದ ನಂಬಿಕೆ : ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ ಇದ್ದರೇನೊ ಶಿವಶಿವಾ ಹೋದರೇನೊ (ಬಸವ.೧೨೯) ; ಮಗನೆ ನಿನ್ನಯ ಮನದ ನಿಷ್ಠೆಗೆ ಸೋಗಸಿದೆನು ಪಿರಿದಾಗಿ (ಕುವ್ಯಾಅ. ೪-೪೭) ; ಆ ಕಾಲದಲ್ಲಿ ಚಿತ್ರಕಲೆಯನ್ನು ಜನ ಬಹುನಿಷ್ಠೆಯಿಂದ ಅಭ್ಯಸಿಸುತ್ತಿದ್ದರು (ಭಾರದ. ೫೨೪) ; ಸೌಂದರ್ಯದ ಅನುಭವವು ಸತ್ಯದೃಷ್ಟಿ ಮತ್ತು ನಿಷ್ಠೆಗಳನ್ನು ಅಪೇಕ್ಷಿಸುತ್ತದೆ (ಶಕ್ತಿವಿ. ೨) ; ನಿಷ್ಠೆ ಇದ್ದವನಿಗೆ ನಷ್ಟವಿಲ್ಲ (ಗಾದೆ). ೪. ಧಾರ್ಮಿಕ ಶ್ರದ್ಧೆ ; ಮತೀಯವಾದ ಆಚಾರ ವಿಚಾರಗಳಲ್ಲಿರುವ ದೃಢತೆ : ಅಂಧನೃಪನೈದನೆ ಸಮಾಧಿನಿಬಂಧನದ ನಿಷ್ಠೆಯಲಿ (ನಿಭಾಗ. ೧-೯-೪೨). ೫. ಬುನಾದಿ ; ತಳ

ಹದಿ ; ಅಡಿಪಾಯ. **೬.** ಇರುವಿಕೆ ; ಸ್ಥಿತಿ; ಅವಸ್ಥೆ. **೭.** ಕೌಶಲ್ಯ ; ನೈಪುಣ್ಯ ; ಪರಿಣತಿ. **೮.** ವಿನಾಶ ; ಮರಣ ; ಸಾವು : "ನಿಧನಂ, ನಾಶಃ . . . ನಿಷ್ಠಾ, ಅಂತಃ, ನಿಮೀಲನಂ, ದೀರ್ಘನಿದ್ರಾ—ಈ ೧೨ ಸಾವು" (ಹಲಾಯು. ೧೦೩-೬) ; "ನಿಷ್ಠಾ—೧ ನಿಷ್ಪತ್ತಿಃ, ಕಾರ್ಯವಾಗುವಿಕೆ, ನಾಶಃ, ಕಾಣದೇ ಹೋಗುವಿಕೆ. ಅಂತಃ, ಕೆಟ್ಟುಹೋಗುವಿಕೆ" (ಸಿದ್ಧಾಂತಿ. ೩೮೩) **೯.** ಕ್ಲೇಶ ; ಸಂಕಟ ; ನೋವು. **೧೦.** ಸ್ಪಷ್ಟವಾದ ತಿಳಿವಳಿಕೆ; ನಿಸ್ಸಂದೇಹವಾದ ಅರಿವು ; ನಿಶ್ಚಿತವಾದ ಜ್ಞಾನ. **೧೧.** [ಕಾವ್ಯಮೀ] ನಾಟಕದಲ್ಲಿಯ ಕೊನೆಯ ಸಂಧಿ,—ಮುಕ್ತಾಯಸಂಧಿ ; ನಿರ್ವಹಣ ಸಂಧಿ : "ನಿಷ್ಠಾ, ನಿರ್ವಹಣಂ—೨ ನಾಟಕ ಕಥೆಯನ್ನು ಮುಗಿಸುವುದಕ್ಕೆ ಹೆಸರು" (ಸಿದ್ಧಾಂತಿ. ೬೧). **೧೨.** [ವೀಶೈ] ಷಡ್ವಿಧಭಕ್ತಿಗಳಲ್ಲಿ ಒಂದು : ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ, ಸಮರಸ (ಇವು ಆರು ಷಡ್ವಿಧಭಕ್ತಿಗಳು) (ಶಿವಾಸೂ. ೨ ಅಡಿಟಿ).

ನಿಷ್ಠೆ ಮಾಡು = ನಿಯಾಮಿಸು : ಗ್ರಹದ ನಿಷ್ಠೆಯನೇಕೆ ನಿಷ್ಠೆ ಮಾಡುವೆ ರವಿಗೆ (ಶ್ರೀರಾಮಾ. ೩೭೮-೨೩೮). [ಸಂ. ನಿಷ್ಠಾ]

**ನಿಷ್ಠೆಗೆಡು** (ಕ್ರಿ). ಶ್ರದ್ಧೆಯನ್ನು ಕಳೆದುಕೊಳ್ಳು ; ನಂಬಿಕೆಯನ್ನು ಕಳೆದುಕೊಳ್ಳು : ದೇವರು ಅತ್ಯಂತ ಸಂದಿಗ್ಧಸನ್ನಿವೇಶಗಳಲ್ಲಿ ನಮ್ಮನ್ನು ಪರೀಕ್ಷಿಸುತ್ತಾನೆ. ಆಗಲೂ ನಾವು ನಿಷ್ಠೆಗೆಡದಿದ್ದರೆ, ಅಂದು ಆತ ಮೆಚ್ಚಾನು ! (ನಿಶಉ. ೧೪೮). [ನಿಷ್ಠೆ + ಕೆಡು$_1$]

**ನಿಷ್ಠೆವಿಡಿ**(ಕ್ರಿ). ನಂಬಿಕೆಹೊಂದು ; ಶ್ರದ್ಧೆಯಿಡು : ಇಂದುಶೇಖರಂಗೆ ಮಜ್ಜನಕ್ಕೆ ಕೊಟ್ಟು ನಿಷ್ಠೆವಿಡಿದು ತಂದೆ ತವರೆ ಬಂಧು ನೀವೆ ಎಂದು ನೇಹದಿಂದೆ ನುಡಿದು (ನಮರ. ದೇ. ೧೯೫-೧೫).

[ನಿಷ್ಠೆ + ಪಿಡಿ$_1$]

**ನಿಷ್ಠೇವ** (ನಾ). ಉಗುಳುವಿಕೆ ; ಥೂಕರಿಸುವಿಕೆ ; ತುಪ್ಪಿಕ್ಕುವಿಕೆ: "ನಿಷ್ಠೇವಃ, ನಿಷ್ಠ್ಯೂತಿಃ, ನಿಷ್ಠೀವನಂ, ನಿಷ್ಠೇವನಂ—೪ ಕೇಕರಿಕೆ, ಉಗುಳುವಿಕೆ, ಥೂಕರಿಸುವಿಕೆ" (ಸಿದ್ಧಾಂತಿ. ೩೬೮). [ಸಂ.]

**ನಿಷ್ಠೇವನ**(ನಾ). = ನಿಷ್ಠೇವ: "ನಿಷ್ಠ್ಯೂತಿ ನಿಷ್ಠೇವನಮಾಸ್ಯಪ್ಲೋಷಂ" (ವಸ್ತುಕೋ. ೧೧೪-೨೨) ; "ನಿಷ್ಠೇವಃ, ನಿಷ್ಠ್ಯೂತಿಃ, ನಿಷ್ಠೀವನಂ, ನಿಷ್ಠೇವನಂ—೪ ಕೇಕರಿಕೆ, ಉಗುಳುವಿಕೆ, ಥೂಕರಿಸುವಿಕೆ" (ಸಿದ್ಧಾಂತಿ. ೩೬೮). [ಸಂ.]

**ನಿಷ್ಠೈಕಭಕ್ತ** (ನಾ). ಏಕನಿಷ್ಠೆಯುಳ್ಳ ಭಕ್ತ ; ಅನನ್ಯಭಕ್ತಿಯುಳ್ಳವನು : ಸಂಗನೊಳಗೆ ಸಂದಂ ಬಸವ ನಿಷ್ಠೈಕಭಕ್ತರಿಗೆ ಪೇಳದೊಲವಿಂ ಬಸವ (ಬಸರ. ೯-೧೫೩). [ಸಂ.]

**ನಿಷ್ಠ್ಯೂತ** (ನಾ). **೧.** ಉಗುಳಿದುದು; ಥೂಕರಿಸಿದುದು; ತುಪ್ಪಿದುದು. **೨.** ಎಸೆದುದು ; ನೂಕಿದುದು ; ತಳ್ಳಿದುದು : "ನುತ್ತಃ, ನುನ್ನಃ, ಅಸ್ತಃ, ನಿಷ್ಠ್ಯೂತಃ, ವಿದ್ಧಃ, ಕ್ಷಿಪ್ತಃ, ಈರಿತಃ—೭ ನೂಕಲ್ಪಟ್ಟದ್ದು, ತಳ್ಳಲ್ಪಟ್ಟದ್ದು" (ಸಿದ್ಧಾಂತಿ. ೩೪೬). [ಸಂ.]

**ನಿಷ್ಠ್ಯೂತಿ** (ನಾ). = ನಿಷ್ಠೇವ : "ನಿಷ್ಠ್ಯೂತಿ ನಿಷ್ಠೇವನಮಾಸ್ಯಪ್ಲೋಷಂ" (ವಸ್ತುಕೋ. ೧೧೪-೨೨) ; "ನಿಷ್ಠೇವಃ, ನಿಷ್ಠ್ಯೂತಿಃ, ನಿಷ್ಠೀವನಂ, ನಿಷ್ಠೇವನಂ—೪ ಕೇಕರಿಕೆ, ಉಗುಳುವಿಕೆ, ಥೂಕರಿಸುವಿಕೆ" (ಸಿದ್ಧಾಂತಿ. ೩೬೮). [ಸಂ.]

**ನಿಷ್ಣಾತ** (ಗು). **೧.** ಚೆನ್ನಾಗಿ ತಿಳಿದ; ನುರಿತ. **೨.** ಉತ್ಕೃಷ್ಟವಾದ ; ಶ್ರೇಷ್ಠವಾದ ; ಪರಿಪೂರ್ಣವಾದ. (ನಾ). **೩.** ಚೆನ್ನಾಗಿ ತಿಳಿದವನು ; ನಿಪುಣ ; ಪರಿಣತ : "ಚತುರಃ, ಕ್ಷೇತ್ರಜ್ಞಃ . . . ನಿಷ್ಣಾತಃ, ಶಿಕ್ಷಿತಃ, ಪ್ರವೀಣಃ—ಈ ೧೧ ಬಲ್ಲವಂ" (ಹಲಾಯು. ೫೫-೧೮೦); "ಚತುರಂ ಪ್ರವೀಣಂ ಕುಶಲನಭಿಜ್ಞಂ . . . ನಿಷ್ಣಾತನಾ ಕ್ಷೇತ್ರಜ್ಞನೆನಲು ಬಲ್ಲವಗೆ ನಾಮಂ" (ಮಂಗರಾ. ೬೬-೩) ; ಅವುಗಳೆಲ್ಲದರಲ್ಲೂ ನಿಷ್ಣಾತರಾಗುವುದು ಯಾರಿಂದಲೂ ಶಕ್ಯವಿಲ್ಲ (ಕ್ರಿಯಾಶಿ. ೧೯೮) ; ಷಡಕ್ಷರಿ ಬಾಲ್ಯದಿಂದ ಜೀವನರಸಿಕನೂ ಕವಿತಾರಚನೆಯಲ್ಲಿ ನಿಷ್ಣಾತನೂ ಆದನು (ಕಸಾಚ. ೩೪೯). [ಸಂ.]

**ನಿಷ್ಣಾತತೆ** (ನಾ). ಪ್ರಾವೀಣ್ಯ ; ಪರಿಣತಿ; ನೈಪುಣ್ಯ : ಏಟಿಗ್ಗೆಯ ಚಂದ್ರನ ತೇಜದಿಂ ಕೃಷ್ಣನೆಯ್ದೆ ನಿಷ್ಣಾತತೆಯಂ (ಮಹಾನೇ. ೬-೮).

[ಸಂ. ನಿಷ್ಣಾತತಾ]

**ನಿಷ್ಪಂಕ** (ನಾ). ಕೆಸರಿಲ್ಲದುದು ; ರಾಡಿಯಿಲ್ಲದುದು : ಬಿಂಕ ಬೀತುದು ಮಳೆಗಳಿಗೆ ನಿಷ್ಪಂಕವಾಯ್ತಿಳೆ ಗೋಪರಿರಾ ನಿಶ್ಶಂಕೆಯಲಿ ಹೊಱವಡುವುದಂಜದೆ ಗುಹಾಂತರವ (ನಿಭಾಗ. ೧೦-೨೩-೮).

[ಸಂ.]

**ನಿಷ್ಪಂದ** (ಗು). **೧.** ಸ್ಪಂದಿಸದ ; ಅಲುಗದ : ನಿಶ್ಚಲವಾದ : ಕದನಕರ್ಕಶಕ್ಷತ್ರಿಯಂಗೆ . . . ನಿಷ್ಪ್ರಯೋಜನಸ್ವೇದಜಲೋದ್ಗಮಮುಂ ನಿಷ್ಪಂದ ನಾಸಾಸ್ಫುರಿತಮುಂ ನಿಷ್ಕಾರಣಕಾಯಕಂಪನಮುಂ ನಿರಾಲಂಬನ ವಾಗಾಡಂಬರಮುಂ ತಕ್ಕುದಲ್ತು (ಆದಿಪು. ೧೪-೮೧ ವ) ; ಪಂದಿಯಿಂ ದಂದಿನಗ್ಗದ ಗಜಾಸುರನಿಂ ಮದವತ್ತರಕ್ಷು ಸಂಕ್ರಂದನವೈರಿಯಿಂ ಬಲದೊಳುಗ್ರತರಾಕೃತಿಯೊಳ್ಪೊದಳ್ದ ನಿಷ್ಪಂದ ಪರಾಕ್ರಮಸ್ಥಿತಿಯೊಳಿರ್ದುಡಿ ವೆಗ್ಗಳಮಪ್ಪುದು (ಶಬಶಂ. ೪-೨೦). (ನಾ). **೨.** ಚಲಿಸದೆ ಇರುವುದು ; ಅಲುಗದೆ ಇರುವುದು ; ನಿಶ್ಚಲವಾಗಿರುವುದು : ತಿರುಗುವೀ ಗದೆಯೇಕೆ ನಿಷ್ಪಂದವಾಗಿಹುದು ? (ಕೋಗಿಬೆ. ೪೦-೧); ಆ ನಿಬಿಡ ಕೇಶರಾಶಿಧಾರಿಣಿಯಾದಾ ಅರಣ್ಯದೇವಿಯ ಮೂರ್ತಿ ! ಮೊದಲಿನಂತೆ ನಿಶ್ಶಬ್ದ ! ನಿಷ್ಪಂದ ! (ಕಪಾಕುಂ. ೨೩). **೩.** ಚಲಿಸದೆ ಇರುವ ವ್ಯಕ್ತಿ; ಅಲುಗದೆ ಇರುವ ವ್ಯಕ್ತಿ : ಈ ಬಾಧೆಯೊಳ್ ಮೆಯ್ಮನೊಡ್ಡಿಸೆ ಮೆಯ್ಯೊಳ್ ಮಿಡುಕುಳ್ಳ ತಾಣಮಣಮಿಲ್ಲೆಂಬಂತು ನಿಷ್ಪಂದನಾಗಿ (ಆದಿಪು. ೬-೩೪) ; ಕೆಲರ್ಪಲವುಂ ಭಂಗಿಯಿಂದಿರ್ದು ಜಾನಕಿಯ ರೂಪಾಶ್ಚರ್ಯಮಂ ನೋಡಿ ಕಣ್ಮಲರಂ ಚಿತ್ತಮನಿತ್ತು ಚಿತ್ರಿಸಿದವೋಲ್ ನಿಷ್ಪಂದರಾಗಿರ್ಪುದುಂ (ಪಂರಾಮಾ. ೫-೬೫) ; ಅದಾರವಂ ದೇವವಂದಿತ ಮೋಹನಾಕೃತಿಯ ರುಕ್ಮರಾಗಾತಪಸ್ನಾತ ಮಾನವಮೂರ್ತಿ ? ಕಂಡು ನಿಷ್ಪಂದಳಾದಳು ಕನ್ಯೆ (ಚಿತ್ರಾಂಗ. ೭-೧೬೯). [ಸಂ.]

**ನಿಷ್ಪಂದಂ** (ಅ). ಚಲಿಸದೆ; ಅಲುಗದೆ ; ನಿಶ್ಚಲವಾಗಿ : ಮೇಣ್ ಜಡಂ, ಜೀವವನಣಕಿಪಂತೆ, ನಿಷ್ಪಂದಮಿರ್ದತ್ತು ಸಾರ್ವಭೌಮಿಕ ಮಹೌದಾಸೀನ್ಯಮಂ ಮೆರೆದು ಕ್ರೂರದರ್ಪದಲಿ (ಶ್ರೀರಾಮಾ. ೧೧೮-೧೮೪).

[ಸಂ.]

**ನಿಷ್ಪಂದಕಾರಿತ್ವ** (ನಾ). ಚಲಿಸದೆ ಇರುವಿಕೆ ; ಅಲುಗದೆ ಇರುವಿಕೆ ; ನಿಶ್ಚಲತೆ : ಕಪೋಲನ್ಯಸ್ತಹಸ್ತಪ್ರವರ್ತನೆ ಚಿತ್ರಾರ್ಪಿತಕಾಂತೆಯಂತೆ ತಳೆದಳ್ ಸ್ವಾತೀವಚಿಂತಾವಿಚೇತನೆಯಂ ನಿನ್ನ ವಿಯೋಗದುಃಖದಿನವಳ್ ನಿಷ್ಪಂದಕಾರಿತ್ವಮಂ (ಚಂದ್ರಪು. ೮-೮೫). [ಸಂ.]

**ನಿಷ್ಪಂದದೃಷ್ಟಿ** (ನಾ). ಅಲುಗಾಡದ ಕಣ್ಣು ; ನಟ್ಟ ಕಣ್ಣು ನಿಷ್ಪಂದದೃಷ್ಟಿಯಿಂ ಸುಖಬಾಷ್ಪಾಂಬು ತುಱುಂಕೆ ದಶನರುಚಿ ಹರ್ಷಲತಾಪುಷ್ಪದವೋಲ್ ಪಸರಿಸಲೇಂ ಪುಷ್ಪೋದ್ಭವ ಸುಖಮೆ ಎಂದು ನರಪತಿ ಕೇಳ್ದಂ (ದಶಕು. ೪-೮). [ನಿಷ್ಪಂದ+ದೃಷ್ಟಿ]

**ನಿಷ್ಪಂದಪ್ರಕಾಶ** (ನಾ). ಕುಗ್ಗದೆ ಇರುವ ಪ್ರಕಾಶ ; ಸ್ಥಿರವಾದ ಬೆಳಕು : ವಿಕಾಸಾಬ್ಜಕಾಸಾರದೊಳ್ ನಿರ್ಮಳನಿಷ್ಪಂದಪ್ರಕಾಶಸ್ಥಳದೊಳಮಳಲಿಂಗಾರ್ಚನಾಸಕ್ತ ಚಿತ್ತೋಜ್ಜ್ವಳನಾಗಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೬೩).

[ನಿಷ್ಪಂದ + ಪ್ರಕಾಶ]

**ನಿಷ್ಪಂದಶರೀರ** (ನಾ). **೧.** ಚಲನೆಯಿಲ್ಲದ ಶರೀರ ; ನಿಶ್ಚೇಷ್ಟಿತವಾದ ದೇಹ : ನವಕುಮಾರನು ಅಂತಹ ದುರ್ಗಮಮಧ್ಯದಲ್ಲಿ ಆ ದೇವಿಯ ಮೂರ್ತಿಯನ್ನು ಆಕಸ್ಮಾತ್ತಾಗಿ ನೋಡಿ ನಿಷ್ಪಂದಶರೀರವುಳ್ಳವನಾಗಿ ನಿಂತುಕೊಂಡನು (ಕಪಾಕುಂ. ೧೯). **೨.** ಸ್ಥಿರವಾಗಿರುವವನು; ನಿಶ್ಚಲಶರೀರಿ : ಪೆಣ್ಣುರಿಯಾಗಿ . . . ಯೋಗನಿಯೋಗಧ್ಯಾನೋಪಯೋಗದಿಂ ನಿರುದ್ಧಕರಣನಿಷ್ಪಂದಶರೀರನಾಗಿ ಮೆಲ್ಲನಡಕಂಬೆರಸು ಪಟ್ಟರ್ದ ಋಷಿರೂಪಕಮಂ ಕಂಡು ಶಬಮೆಂದೆ ಸಾರ್ದು (ಸುಕುಮಾ. ೧೨–೨೪ ವ). [ನಿಷ್ಪಂದ+ಶರೀರ]

**ನಿಷ್ಪಂದಾವಯವ** (ನಾ). **೧.** ಚಲಿಸದೆ ಇರುವ ಅವಯವ ; ಅಲುಗದೆ ಇರುವ ಶರೀರ. **೨.** ಚಲಿಸದೆ ಇರುವವನು ; ನಿಶ್ಚಲನಾಗಿರುವವನು : ಆಗಳಾ ಭೋಜರಾಜಂ . . . ಭಯನಿಷ್ಪಂದಾವಯವಂ ಪರ್ಯಾಕುಲಜೀವಂ ಪಾವಡರ್ದ ಪಂದೆಯಂತೆವೊಲಿರ್ದಂ (ಜಗವಿ. ೫–೫೭). [ನಿಷ್ಪಂದ+ಅವಯವ]

**ನಿಷ್ಪಂದಿತೆ** (ನಾ). ಅಲುಗಾಡದವಳು ; ಕಂಪನಕ್ಕೊಳಗಾಗದವಳು (?) : ಕುಂದಲತೆ ಪುಷ್ಪಮಂ ನಿಷ್ಪಂದಿತೆ ಸೊಗಯಿಸಳೆ ಮಧುಪನಿಕರಕ್ಕೆ ಜರತ್ಸುಂದರಿ ಸೊಗಯಿಸುಗುಮೆ ವಿಟಸಂದೋಹಕ್ಕೆನಿತು ನಯಮನಳವಡಿಸಿದೊಡಂ (ಶಾಂತಿಪು. ೬–೧೩೯). [ಸಂ. ನಿಷ್ಪಂದಿತಾ]

**ನಿಷ್ಪಕ್ವ** (ನಾ). ಚೆನ್ನಾಗಿ ಬೇಯಿಸಿದುದು ; ಪಕ್ವವಾದುದು : "ನಿಷ್ಪಕ್ವಂ, ಕ್ವಥಿತಂ—೨ ಎಂಟನೇ ಭಾಗ ಉಳಿಯುವಂತೆ ಕಾಯಿಸಲ್ಪಟ್ಟದ್ದು, ಅಷ್ಟಮಾಂಶಾವಶಿಷ್ಟವಾದ ಕಷಾಯಾದಿಗಳ ಹೆಸರುಗಳು" (ಸಿದ್ಧಾಂತಿ. ೩೪೪). [ಸಂ.]

**ನಿಷ್ಪಕ್ಷಪಾತ** (ನಾ). ಯಾವ ಪಕ್ಷವನ್ನೂ ವಹಿಸದಿರುವಿಕೆ ; ಸಮಭಾವವನ್ನು ಹೊಂದಿರುವಿಕೆ ; ಸಮದೃಷ್ಟಿ : ವಿಶ್ವಕರ್ತೃವಿನಾಜ್ಞೆ; ತರಗೆಲೆಯಂನೆಂತಂತು ಸುಗ್ಗಿಯ ಮುಗುಳ್ಗಳಂ, ಶವವನೆಂತಂತೆ ಜೀವಿಪ ಹಸುಳೆಯಂ, ದಹಿಸಿ ತೋರ್ದಪುದು ನಿಷ್ಪಕ್ಷಪಾತಮಂ (ಚಿತ್ರಾಂಗ. ೩೮–೧೦೪೪) ; ಬೋಧಿಸುತ್ತಿರುವಾಗ ಮಕ್ಕಳು ನಿಷ್ಪಕ್ಷಪಾತದಿಂದ ಆಲೋಚಿಸಿ ತೀರ್ಮಾನಗಳಿಗೆ ಬರುವಂಥ ಸನ್ನಿವೇಶಗಳನ್ನು ತರಬೇಕು (ಶಿಕ್ಷದ. ೨೧೭) ; ಅಧಿಕಾರಾಕಾಂಕ್ಷೆಯಿಲ್ಲದ ರಾಷ್ಟ್ರಕನು ರಾಜಕೀಯದಲ್ಲಿ ಜಡ್ಜಿಯಂತೆ ನಿಷ್ಪಕ್ಷಪಾತವಾಗಿ ನ್ಯಾಯನಿರ್ಣಯ ಮಾಡತಕ್ಕವನು (ರಾಜ್ಯಾಂಗ. ೧೩೯). [ಸಂ.]

**ನಿಷ್ಪತಿ** (ನಾ). **೧.** ಪರಿಪೂರ್ಣತೆ ; ಏಕತೆ : ಆಚಾರದ ಭಾವ ಪರತಂತ್ರವಿಲ್ಲದ ನಿಷ್ಪತಿ[ಪಾಠಾಂ. ತ್ತಿ] ಮಜಹಿನ ಭಾವ ಪರತಂತ್ರವಿಲ್ಲದ ನಿಷ್ಪತಿ [ಪಾಠಾಂ. ತ್ತಿ]. (ಅಪಚಂ. ೫೧–೧೩೦೪); ಭಾವ ನಿರ್ಭಾವ ನಿಷ್ಪತಿಯಾದಲ್ಲಿ ಮಹಾದಾನಿ ಸೊಡ್ಡಳಂಗೆ ಸರ್ವನಿರ್ವಾಣವಾಯಿತ್ತು (ವಚಸಂ. ೫೮೯–೧೦೨) ; ಲಿಂಗವೆಂಬ ಎಲೆಯ ಮೇಲೆ . . . ನಿಷ್ಪತಿ[ಪಾಠಾಂ. ತ್ತಿ] ಯೆಂಬ ಹಣ್ಣಾಯಿತ್ತು ನಿಷ್ಪತಿ [ಪಾಠಾಂ. ತ್ತಿ] ಯೆಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ (ಬಸವ. ೫೨೭). **೨.** ತನ್ಮಯ ; ಐಕ್ಯ : ಜಪಸಮಾಧಿಹೋಮನೇಮದುಪಮೆಗಳಿಗತೀತನು ನಿಷ್ಪತಿ ನಿರಂಜನ ಸೂಕ್ಷ್ಮದಪರಿಮಿತನಕಲ್ಪಿತ (ಶಿವಗೀ. ೫೦–೩೩೭) ; ಕ್ರೀಯಳಿದು ನಿಃಕ್ರಿಯಲ್ಲಿ ನಿಂದನು ನಿಃಕ್ರಿಯ ವಿರಾಜಿ ನಿಷ್ಪತಿಯಾದ (ಶಿವಗೀ. ೧೧೧–೫೪೫).

[<ಸಂ. ನಿಷ್ಪತ್ತಿ]

**ನಿಷ್ಪತಿತ** (ನಾ). ತಾಗಿದುದು ; ತಗುಲಿದುದು : ಸತಿ ಸತ್ಯಭಾಮೆ ವಿಕಸಿತಶತಪತ್ರಪರಾಗಮಾತ್ಮನಾಸಾಪುಟ ನಿಷ್ಪತಿತಂ ಕೊಳೆ ಮಡಿದಳ್ ಮಹಿಪತಿಯೊಳಮರಸಿಯರೊಳಂ ಪೊದಟ್ಟಿರೆ ಮೋಹಂ (ಶಾಂತಿಪು. ೬–೫೫). [ಸಂ.]

**ನಿಷ್ಪತಿಪದ** (ನಾ). ಪರಿಪೂರ್ಣತೆಯ ಪಟ್ಟ ; ಐಕ್ಯಪದವಿ : ಸಂಗವಾಯಿತ್ತು ನಿಷ್ಪತಿಪದವೆ ತಾನಾಗಿ ಸಂಗವಾಯಿತ್ತು ಚಿದ್ಘನ ಬೆಳಗಿನ ಬೆಳಗಿನೊಳಗೆ (ಶಿವಗೀ. ೧೦೭–೫೨೪). [ನಿಷ್ಪತಿ+ಪದ$_2$]

**ನಿಷ್ಪತ್ತಿ** (ನಾ). **೧.** ಹುಟ್ಟು ; ಉತ್ಪತ್ತಿ : ಶಾಳಿ ವ್ರೀಹಿಯವಗೋಧೂಮಾದಿ ಪ್ರಕೃಷ್ಟ ಸಸ್ಯನಿಷ್ಪತ್ತಿಯುಂ (ಚಾವುಂಪು. ೮೩); ಲೊಲ್ಲಟ ಶಂಕುಕರು ಆನಂದವರ್ಧನನಿಗಿಂತ ಹಿಂದೆ ಇದ್ದವರು; ಇವರು ನಾಟ್ಯರಸದ ನಿಷ್ಪತ್ತಿಯನ್ನೇ ವಿಚಾರವಮಾಡಿದರು (ಭಾರವಿಾ. ೩೬೫) ; ವಸ್ತು ವ್ಯಕ್ತಿಗಳ ಸಂಯೋಗದಿಂದ ನಿಷ್ಪತ್ತಿಯಾಗುವ ಸೌಂದರ್ಯಾನುಭವವೆಂಬ ಆನಂದವಿಶೇಷ (ಸೌಂದಸ. ೧೧). **೨.** ಪರಿಪೂರ್ಣತೆ ; ಸಮಾಪ್ತಿ ; ಮುಕ್ತಾಯ. **೩.** ಪರಿಪಾಕ ; ಸಿದ್ಧಿ : ಎನಗೊಂದು ನಿಜವಿಲ್ಲ ಎನಗೊಂದು ನಿಷ್ಪತ್ತಿಯಿಲ್ಲ ಲಿಂಗವ ತೋರು ಉದರವ ಹೊರೆವ ಭಂಗಗಾರ ನಾನು (ಬಸವ. ೩೦೬). **೪.** ಐಕ್ಯವಾಗುವಿಕೆ ; ಅದೃಶ್ಯವಾಗುವಿಕೆ ; ಇಲ್ಲವಾಗುವಿಕೆ : ಕೆಂಡ ಕೆಟ್ಟಲ್ಲಿ ಹೊರೆ ನಿಂದಿತ್ತು ಆಕಾಶಕ್ಕೆ ಸಂದಿಲ್ಲ ನಿಃಕಳಂಕಮಲ್ಲಿಕಾರ್ಜುನನಲ್ಲಿ ನಿಷ್ಪತ್ತಿಯಾದ ಶರಣಂಗೆ (ಮೋಳಿಗಮಾ. ೧೨೪–೧೧೪) ; ಅಖಂಡೇಶ್ವರನೆಂಬ ಮಹಾಘನ ಪರಾತ್ಪರಪರಿಪೂರ್ಣಪ್ರಸಾದದೊಳಗೆ ಮನವಡಗಿ ನೆನಹು ನಿಷ್ಪತ್ತಿಯಾಗಿ ಏನೆಂದರಿಯದಿರ್ದೆನಯ್ಯಾ (ಅಖಂಡೇ. ೧೪೬–೭೫) ; ಲೋಕಾದಿ ಲೋಕಂಗಳೇನೂ ಇಲ್ಲದಂದು ನೆನಹು ನಿಷ್ಪತ್ತಿಯಾಗಿತ್ತು ನೋಡಾ (ವಚರ. ೧೦–೩೧). **೫.** ತೀರ್ಮಾನ ; ನಿರ್ಣಯ ; ಸಿದ್ಧಾಂತ : ಶ್ರೀಪತಿಯು ದೀಪಾಲಿಯನ್ನು ಮದುವೆ ಆಗಲು ಆಗ್ರಹ ಹಿಡಿದು ಸಮಾಜವನ್ನೂ ತೊರೆದುಹೋಗಲು ಸಿದ್ಧ . . . ಈ ಬಗ್ಗೆ ತರ್ಕ ನಡೆದಿದೆ. ಏನು ಮಾಡಿದರೂ ಇದರ ನಿಷ್ಪತ್ತಿಯೇ ಆಗುತ್ತಿಲ್ಲ (ಇಷ್ಟಕ. ೪೪೪). **೬.** [ವ್ಯಾಕ] ಶಬ್ದದ ಹುಟ್ಟು,—ವ್ಯುತ್ಪತ್ತಿ ; ☞ ಪ್ರಕೃತಿ ಪ್ರತ್ಯಯಗಳ ಕೂಡುವಿಕೆಯಿಂದಾಗುವ ರೂಪಸಿದ್ಧಿ: ಒಂದು ಪದದ ಮೂಲವನ್ನು ಕಂಡು ಹಿಡಿದು ಅದರಿಂದ ಪ್ರಕೃತ ಪದವನ್ನು ಸೂಚಿಸುವುದು : ಅನ್ಯಭಾಷೆಯ ಶಬ್ದಗಳು ಸಂಸ್ಕೃತದಲ್ಲಿ ಕಾಣಿಸಿಕೊಂಡಾಗ ಅವುಗಳ ನಿಷ್ಪತ್ತಿಯನ್ನು ಹೇಗೆ ಹೇಳಬೇಕು ? (ದ್ರಾವಿವಿ. ೨೫೪). [ಸಂ.]

**ನಿಷ್ಪನ್ನ** (ಗು). **೧.** ಉತ್ಪತ್ತಿಯಾದ ; ಹುಟ್ಟಿದ: 'ನಿಷ್ಪನ್ನರೂಪ' ಪರಾ. (ನಾ). **೨.** ಹೊರಬಂದುದು ; ಹುಟ್ಟಿದುದು ; ಉಂಟಾದುದು : "ನಿಷ್ಪನ್ನಂ ಸಿದ್ಧಂ" (ವಸ್ತುಕೋ. ೧೦೪–೪೦) ; ಇಂದ್ರನಿಂ ಮಾಡೆಪಟ್ಟುದು ಇಂದ್ರಿಯಂ ಮೇಣ್ ಇಂದ್ರನೆಂಬುದು ನಾಮಕರ್ಮಂ ಅದರಿಂ ನಿಷ್ಪನ್ನಮಪ್ಪುದು ಇಂದ್ರಿಯಂ (ತತ್ತ್ವಪ್ರ. ೫೫) ; ಬೇರೆ ರೀತಿಯಾಗಿ ಆಗಲೇ ನಿಷ್ಪನ್ನವಾಗಿರುವ ರಸವನ್ನು ಆ ಶಬ್ದಗಳು ಹೆಸರಿಸುತ್ತವೆಯೇ ಹೊರತು, ರಸಪ್ರತೀತಿಯೇ ಆ ಶಬ್ದಗಳಿಂದ ಹುಟ್ಟುತ್ತೆನ್ನಲಾಗದು (ಧ್ವನ್ಯಾಲೋ. ೧೪). **೩.** ನೆರವೇರಿದುದು ; ಈಡೇರಿದುದು ; ಪೂರೈಸಿದುದು : ನಿನ್ನ ಕೃಪೆಯುಳಿ ರಾಜಮುಖಿ ನಿಷ್ಪನ್ನವಾದರೆ ಬೊಪ್ಪನಿಂದ್ರನ ಮನ್ನಣೆಯ ಮೈಸೋಂಕಿನೋಲಗ ಸುಲಭವಹುದೆಂದ (ಕುಮ್ಯಾಸ. ೬–೧೯). **೪.** ಸಿದ್ಧವಾದುದು ; ನಿರ್ಣಯವಾದುದು ; ತೀರ್ಮಾನವಾದುದು. **೫.** ಪರಿಪೂರ್ಣವಾದುದು. **೬.** ಹುಟ್ಟಿದವನು ; ಉತ್ಪನ್ನನಾದವನು : ಅತಿಸೌಮ್ಯಾಕೃತಿಯುಂ ಮನುಗ್ರತಪಸ್ತೇಜಮುಮನಾದವೊಳಕೆಯ್ದಂತಾ ಪ್ರತಿಪತಿ ಶಶಿಸೂರ್ಯಸಮಾಹೃತಿಯಿಂ ನಿಷ್ಪನ್ನನಾದ ತೆಜದಿಂದಿರ್ದಂ (ಚಂದ್ರಪ್ರ. ೨–೮೩). **೭.** ಪರಿಪೂರ್ಣಜ್ಞಾನವನ್ನು ಹೊಂದಿದವನು ; ಸಿದ್ಧಿಯನ್ನು ಪಡೆದವನು : ತುಪ್ಪವಾದಾ ಬಳಿಕ ಹೆಪ್ಪನೆರಿದವರುಂಟೆ ನಿಷ್ಪನ್ನನಾದ ಗುರುವಿನುಪದೇಶದಿಂ ತಪ್ಪದದು ಮುಕ್ತಿ (ಸರ್ವಜ್ಞ. ೬೫). [ಸಂ.]

**ನಿಷ್ಪನ್ನತೆ** (ನಾ). ಘನತೆ ; ಗೌರವ : ನನ್ನಿ ನಿಮ್ಮಯ ನುಡಿಯ ಕೈಕೊಂಡೆನ್ನ ಭೂಮಿಯನೀಯೆನುಯ್ಯನ ಬನ್ನಣೆಯ ಮಾತಿನ್ನು ಕೊಳ್ಳದು ಸಾಕು ಸಂಧಿಯನು ಮನ್ನಿಸುತ ಮರುಳಾದೆನೀ ನಿಷ್ಪನ್ನತೆಯ ಬೀಳ್ಕೊಂಡ ಪಾಂಡವಗುನ್ನಿಗಳ ಗರುವಾಯ ಮಾಡುವಿರೆಂದು ಖಳ ನುಡಿದ (ಕುಮಾವ್ಯಾವಿ. ೪-೧೮). [ಸಂ. ನಿಷ್ಪನ್ನತಾ]

**ನಿಷ್ಪನ್ನಯೋಗ** (ನಾ). [ಜೈನ]ಮೂರು ಪ್ರಕಾರವಾದ ಯೋಗಗಳಲ್ಲಿ ಒಂದು ; ☞ ಪ್ರಾರಬ್ಧಯೋಗ, ಧನಮಾನಯೋಗ ಮತ್ತು ನಿಷ್ಪನ್ನಯೋಗ ಎಂಬ ಮೂರು ಬಗೆಯ ಧ್ಯಾನಾಭ್ಯಾಸಗಳಲ್ಲಿ ಒಂದು ; ಈ ಯೋಗದಲ್ಲಿ ಧ್ಯಾನವು ಪೂರ್ಣತೆಯ ಪ್ರಾಪ್ತಿಯನ್ನು ಹೊಂದುತ್ತದೆ : ಯೋಗದಲ್ಲಿ ಪ್ರಾರಬ್ಧಯೋಗವೆಂದು, ಧನಮಾನಯೋಗವೆಂದು, ನಿಷ್ಪನ್ನಯೋಗವೆಂದು ಮೂರು ಪ್ರಕಾರವಹುದು (ಸಾಗಾಧ. ೩೦-೭). [ನಿಷ್ಪನ್ನ+ಯೋಗ]

**ನಿಷ್ಪನ್ನರೂಪ** (ನಾ). ಉತ್ಪನ್ನವಾದ ರೂಪ ; ಪಡೆದ ರೂಪ ; ಸಾಧಿತವಾದ (ಶಬ್ದ)ರೂಪ : ಕುಱು. ಗುರುತು ಮಾಡು ಎಂಬ ಅರ್ಥದ ಬೇರು . . . ಕುರಿತು ಎಂಬ ಪದದಲ್ಲಿ ಅದರ ಒಂದು ನಿಷ್ಪನ್ನ ರೂಪ ಉಳಿದು ಬಂದಿದೆ (ನಮ್ಮನು. ೯೦). [ನಿಷ್ಪನ್ನ+ರೂಪ]

**ನಿಷ್ಪನ್ನಶಬ್ದ** (ನಾ). [ವ್ಯಾಕ] ಮೂಲಶಬ್ದದಿಂದ ಉತ್ಪತ್ತಿಯಾದ ಇನ್ನೊಂದು ಶಬ್ದ ; ಸಾಧಿತ ಶಬ್ದ ; (ಒಂದು ಮೂಲದಿಂದ) ಹೊಸದಾಗಿ ಹುಟ್ಟಿಕೊಂಡ ತದ್ಧಿತ ಮೊದಲಾದ ಶಬ್ದ : ದೇಶ್ಯ ಶಬ್ದಗಳನ್ನು ಮೂಲಶಬ್ದಗಳು, ನಿಷ್ಪನ್ನ (Derivative) ಶಬ್ದಗಳು, ಸಮಾಸಶಬ್ದಗಳು ಎಂದು ಮೂರು ಪಂಗಡಗಳಾಗಿ ವಿಭಾಗಿಸಬಹುದು . . . ಕಲ್ಕುಟಿಗಂ, ಪೂವಡಿಗಂ ಮೊದಲಾದುವು ನಿಷ್ಪನ್ನಶಬ್ದಗಳು (ಕೈಪಿಡಿ. ೧೪). [ನಿಷ್ಪನ್ನ+ಶಬ್ದ]

**ನಿಷ್ಪಾಕ್ಷಿಕ** (ಗು). ಯಾವ ಪಕ್ಷಕ್ಕೂ ಸೇರದ ; ನಿಷ್ಪಕ್ಷಪಾತದೃಷ್ಟಿಯುಳ್ಳ ; ಸಮದೃಷ್ಟಿಯುಳ್ಳ : ಸ್ವತಂತ್ರನಾದ ನಿಷ್ಪಾಕ್ಷಿಕ ರಾಷ್ಟ್ರಕನೇ ರಾಜ್ಯಕ್ಕೆ ರಕ್ಷಾಮಣಿ (ರಾಜ್ಯಾಂಗ. ೧೩೯). [ಸಂ.]

**ನಿಷ್ಪಾಕ್ಷಿಕತೆ** (ನಾ). ಯಾವ ಪಕ್ಷಕ್ಕೂ ಸೇರದಿರುವಿಕೆ ; ಪಕ್ಷಪಾತವಿಲ್ಲದಿರುವಿಕೆ : ಅವರ ನಿಷ್ಪಾಕ್ಷಿಕತೆಯೇ ಅವರನ್ನು ಉನ್ನತಮಟ್ಟಕ್ಕೇರಿಸಿದೆ (ರೂಢಿ). [ಸಂ. ನಿಷ್ಪಾಕ್ಷಿಕತಾ]

**ನಿಷ್ಪಾದನ** (ನಾ). ಉಂಟುಮಾಡುವಿಕೆ ; ಸೃಷ್ಟಿಸುವಿಕೆ : ಏಂ ಜಾಣನೊ ಧಾತ್ರಂ ರೂಪನಿಷ್ಪಾದನವಿಧಿಯೊಳ್ (ಆಪು. ೩-೯೧) ; ವಿಷಯಸುಖಾಸ್ವಾದನಂ ದೋಷನಿಷ್ಪಾದನಮಲ್ತೆಂಬಂತೆ ಚಿತ್ತಕ್ಕೊಡವಿಸೆ ಪದೆಪಂ ಭಾರತೀಹಂಸಿ ವಕ್ತ್ರಾಬ್ಜನಿಯೊಳ್ ನಾನಾವಿಧಂ ನರ್ತಿಸೆ (ಪಂಪಾರಾಮಾ. ೩-೧೬೧) ; ಅವಳ್ಗನಿತಾನಿಷ್ಪಾದನಕ್ಕುಜ್ಜವಣೆವಡೆದಳೋ ಪದ್ಮಜಂಗೆ (ಲೀಲಾವ. ೪-೨೯). [ಸಂ.]

**ನಿಷ್ಪಾದಿತ** (ಗು). ಉತ್ಪತ್ತಿಮಾಡಿದ ; ಹುಟ್ಟಿಸಿದ ; ಉಂಟುಮಾಡಿದ : ಬಹುಶ್ರುತ ಮಂತ್ರಿ ಮಂತ್ರರೂಪನಿಷ್ಪಾದಿತ ಮಾಯೂ ಗಾಣಿತಿಯರನಮಿತಂಗೆ ತರಿಸಿ ಕೊಟ್ಟು (ಶಾಂತಿಪು. ೨-೮೧ ವ). [ಸಂ.]

**ನಿಷ್ಪಾದ್ಯ** (ಗು). ೧. ಉತ್ಪತ್ತಿಯಾಗುವ ; ಸಿದ್ಧವಾಗುವ. ೨. ಪರಿಪೂರ್ಣವಾಗುವ. [ಸಂ.]

**ನಿಷ್ಪಾಪ** (ಗು). ೧. ಪಾಪವಿಲ್ಲದ ; ಪಾಪರಹಿತ : ಇನಿತು ನೀನಱು ಯದೆ ದುರಾಗ್ರಹವನೆ ಬಲಿದು ಧರ್ಮಜಗೆ ಶಾಪವನನುವಿಸಲು ನಿಷ್ಪಾಪ ಧರ್ಮಜನಿಂಗೆ ಹೊದ್ದುವುದೆ (ತಿಮ್ಮಸ್ತ್ರೀ. ೨-೬೯). (ನಾ). ೨. ಪಾಪವಿಲ್ಲದವನು ; ಶುದ್ಧನಾದವನು : ಫಲುಗುಣಂ ಕೃಷ್ಣನ ನಿರೂಪಮಂ ಕೈಕೊಂಡು ಹರ್ಷದಿಂದಾಗ ನಿಷ್ಪಾಪನಾಗಿಹ ಚಂದ್ರಹಾಸನಂ ಬಂದು ಗಾಢಾಲಿಂಗನಂಗೈಯಲು (ಜೈಮಿಭಾ. ೩೨-೧೬) ; ನಾವು ನಿಷ್ಪಾಪರಾಗದೆ ಭಗವಂತನ ದರ್ಶನವನ್ನು ಪಡೆಯಲರಿಯೆವು ; ಮತ್ತು ಭಗವಂತನ ದರ್ಶನವನ್ನು ಪಡೆಯದೆ ನಿಷ್ಪಾಪರಾಗಲರಿಯೆವು (ಪರಪ. ೧೭೩). ೩. ಏನೂ ತಿಳಿಯದವನು ; ಮುಗ್ಧ. [ಸಂ.]

**ನಿಷ್ಪಾಪತೆ** (ನಾ). ಪಾಪವಿಲ್ಲದಿರುವಿಕೆ ; ಶುದ್ಧವಾಗಿರುವಿಕೆ ; ಪಾಪರಾಹಿತ್ಯ : ನಿಷ್ಪಾಪತೆ ಹಾಗೂ ಭಗವದ್ದರ್ಶನ ಇವುಗಳಲ್ಲಿಯ ಸಂಬಂಧವು ಅದೆಂತಹುದು ? (ಪರಪ. ೧೭೩). [ಸಂ. ನಿಷ್ಪಾಪತಾ]

**ನಿಷ್ಪಾಪಿ** (ನಾ). ಪಾಪವಿಲ್ಲದ ವ್ಯಕ್ತಿ : ಪುಣ್ಯಪಾಪವಿರಹಿತನಾಗಿ ನಿಷ್ಪಾಪಿಯಯ್ಯಾ ಭಕ್ತನು (ಸಿದ್ಧೇಪ. ೩೫೮-೬೪) ; ನನ್ನ ಮಗೂನ ಆಯುಷ್ಯ ಹಾಳು ಮಾಡಬೇಡಿರೇ. ಅವಳು ನಿಷ್ಪಾಪಿ (ಮೂರುವಾ. ೨೫೩). [ಸಂ. ನಿಷ್ಪಾಪಿನ್]

**ನಿಷ್ಪಾರದರ್ಶಕ** (ಗು). ೧. ಪಾರದರ್ಶಕವಲ್ಲದ ; "ಬೆಳಕನ್ನು ಪ್ರತಿಫಲಿಸದ ; ತನ್ನಲ್ಲಿ ಬೆಳಕನ್ನು ಹಾಯಿಸದ ; ನಿಷ್ಪಾರದರ್ಶಕ" (Opaque. ಇಂಕನಿ). (ನಾ). ೨. ತನ್ನ ಮೂಲಕ ಬೆಳಕನ್ನು ಹರಿಯಬಿಡದುದು ; ಅಪಾರದರ್ಶಕವಾದುದು : ಬೀಟರಿನಲ್ಲಿಯೇ ಜೇಡಿಮಣ್ಣು ಸೇರಿಸಿ ತಯಾರಾದ ಕಾಗದದಲ್ಲಿರಬಹುದಾದ ರಂಧ್ರಗಳು ಮುಚ್ಚುವಂತೆಯೂ ಬಣ್ಣವು ಸರಿಯಾಗುವಂತೆಯೂ ಕಾಗದವು ನಿಷ್ಪಾರದರ್ಶಕ (Opaque) ವಾಗುವಂತೆಯೂ ಮಾಡಲಾಗುತ್ತದೆ (ಮುದ್ರಕ. ೮೦). [ಸಂ.]

**ನಿಷ್ಪಾವ** (ನಾ). ೧. (ಧಾನ್ಯ ಮೊದಲಾದುವನ್ನು) ಗಾಳಿಯಲ್ಲಿ ತೂರಿ ಶೋಧಿಸುವಿಕೆ : "ಲವಮಭಿಲಾವಂ ಲವನಂ ಪವನಂ ನಿಷ್ಪಾವ ಮಂತೆ ಪವಂ" (ವಸ್ತುಕೋ. ೧೧೪-೨೧) ; "ನಿಷ್ಪಾವಃ, ಪವನಂ, ಪವಃ – ೩ ಧಾನ್ಯಾದಿಗಳನ್ನು ಗಾಳಿಗೊಡ್ಡುವಿಕೆ, ತೂರುವಿಕೆ" (ಸಿದ್ಧಾಂತಿ. ೩೬೪). ೨. = ನಿಷ್ಪಾವಕ : "ನಿಷ್ಪಾವ ವಲ್ಲ ಸಂಜ್ಞಿಕವದವರೆ" (ವಸ್ತುಕೋ. ೯೪-೧೭) ; ಕುಲತ್ಥ ಮುದ್ಗ ಮಾಷ ರಾಜಮಾಷಾಢಕೀ ನಿಷ್ಪಾವ ಚಣಕ ಕುಸುಂಭ ಕಾರ್ಪಾಸ ಸರ್ಷಪ ಜೀರಕ ಧಾನ್ಯಕಾದಿ ವಿವಿಧ ಧಾನ್ಯಭೇದಂಗಳುಂ (ಆಪು. ೬-೭೨ ವ) ; ಬಾವುಜಿಗೆಯನೆಳ್ಳಂ ನಿಷ್ಪಾವಮುನಗಸೆಯುಮನಿಕ್ಕಿದಂದೆರ್ಮೆಗೆ ಮೇಣಾವಿಂಗೆ ಬಸಿಱ ಕಱು ಸತ್ತಾವಡಿ (ದಿ)ಗೊಳಿಸುತ್ತುಮಿರ್ಪೊಡದು ಪೋಪುಮಡುಗುಂ (ಲೋಕೋಪ. ೯-೧೯೦). [ಸಂ.]

**ನಿಷ್ಪಾವಕ** (ನಾ). ಒಂದು ಬಗೆಯ ಧಾನ್ಯ ; ಅವರೆ : "ವಲ್ಲಃ, ನಿಷ್ಪಾವಕಃ —ಈ ೨ ಅವರೆ" (ಹಲಾಯು. ೯೬-೪೩೦) ; "ನಿಷ್ಪಾವಕಮೆನೆ ವಲೆಯೆನಲ್ಕವರೆ" (ಮಂಗರಾ. ೧೧೦-೫). [ಸಂ.]

**ನಿಷ್ಪಿಷ್ಟ** (ಗು). ೧. ಕುಟ್ಟಿ ಪುಡಿಮಾಡಿದ ; ಅರೆದು ಹಿಟ್ಟುಮಾಡಿದ. ೨. ಗಾಯಗೊಂಡ ; ಹಿಂಸೆಗೆ ಗುರಿಯಾದ : ಗುರು ಪಾದಾಂ[ಬುರುಹಕ್ಕೆ] ಮುಗ್ಗಿ ಪೊಡೆವಟ್ಟಂಗುಂ ಭುಜಂಗೇಂದ್ರ ಭೀಕರ ಬಾಹಾಭ್ರಮಿತಾಭ್ರವಿಭ್ರಮಗದಾನಿರ್ಘಾತನಿಷ್ಪಿಷ್ಟಸಿಂಧುರಮೇ [ದೋಸ್ಸರ] ಸಾರ್ದ್ರಮಾರಣರಣಕ್ಷೋಣೀತಳಂ ಕೌರವೇಶ್ವರಚೂಡಾಮಣಿ ಚೂರ್ಣಕಲ್ಕಕುಲದಿಕ್ಚಕ್ರಂ ಹಿಡಿಂಬಾಂತಕಂ (ಗದಾಯು. ೮-೬೩) ; ನಷ್ಟವಾದುದು ಸತ್ವವಾತನಿಷ್ಪವೈರಿಯ ಕರಹತಿಗೆ ನಿಷ್ಪಿಷ್ಟಗಾತ್ರನು ಜಾಂಬವಂತನು ಬಳಲುತಿಂತೆಂದ (ನಿಭಾಗ. ೧೦-೬೭-೧೫). [ಸಂ.]

**ನಿಷ್ಪೀಡನ** (ನಾ). ಹಿಂಡುವಿಕೆ ; ಹಿಸುಕುವಿಕೆ : ಯಂತ್ರ ನಿಷ್ಪೀಡನಾದಿಗಳಿಂ ನಾರಕರ್ಗೆ ಸಂಕ್ಲಿಷ್ಟಾಸುರರ್ ದುಃಖಮಂ ಪುಟ್ಟಿಸಿದೊಡಂ (ತತ್ತ್ವಪ್ರ. ೧೨೩) ; ಕುಚಯುಗಳ ನಿಷ್ಪೀಡನದ . . . ದೃಢಾಲಿಂಗನದ ಮನುಮುಥಚರಿತೆಗಳ ಚಾತುರಿಯನಿಧಿ ರಮಿಸಿದನು ರಮಣಿಯರ (ನಿಭಾಗ. ೧೦-೨೬-೮) ; ಕಾವ್ಯಾತ್ಮಕ ಶಬ್ದದ ನಿಷ್ಪೀಡನದಿಂದಲೇ ಅಲ್ಲಲ್ಲ ಚರ್ವಣೆ ಕಾಣುತ್ತದೆ (ಧ್ವನ್ಯಾಲೋ. ೫೦ ಅಡಿಟಿ). [ಸಂ.]

**ನಿಷ್ಪೀಡನಂಗೈ** (ಕ್ರಿ). ಹಿಂಡು : ಉದ್ದಾಲಕಂ ಎಂಬ ರುಷಿಯೊಂದು ದಿನಂ ಗಂಗೆಯೊಳ್ ಸ್ನಾನಂ ಮಾಡಿ ಕೌಪೀನವಂ ಪ್ರಕ್ಷಾಲಿಸಿ ಕಮಳಕರ್ಣಿಕೆಯೊಳು ನಿಷ್ಪೀಡನಂಗೈಯಲ್ (ಪ್ರಾಕ್ಕಾವ್ಯ. ೧೫೫೨ ಶಾಸ್ತ್ರಸಾರ).
[ನಿಷ್ಪೀಡನ+ಗೈ (<ಕೆಯ್$_1$)]

**ನಿಷ್ಪೀಡನೆ** (ನಾ). = ನಿಷ್ಪೀಡನ : ಅಶ್ರು, ಸಂತೋಷ ತೀಕ್ಷ್ಣತೆಯ ನಿಷ್ಪೀಡನೆಗೆ ಬಿಡದೆ ಆತ್ಮೇಕ್ಷು ಸೋರ್ವ ಅನವರತ ರಸಧಾರೆಯೋಲ್, ತೊರೆಯೊಳ್ಕಿದುದು ಹನುಮನಕ್ಷಿಯ ಕೃತಜ್ಞತಾಶತಪತ್ರದಿಂ (ಶ್ರೀರಾಮಾ. ೪೭೮-೧೦೦). [ಸಂ. ನಿಷ್ಪೀಡನ]

**ನಿಷ್ಪೀಡಿತ** (ಗು). ಪೀಡಿಸಿದ ; ಹಿಸುಕಿದ ; ಒತ್ತಿದ : ಸ್ವರ್ಗಲಕ್ಷ್ಮಿಯ ಮೇಲಟ್ಟಿಱಿಕೊಳಂಪದೇಂ ನಲಿದನೋ ಸಂಭೋಗಸಮ್ಮರ್ದನಿರ್ದಯನಿಷ್ಪೀಡಿತ ದೇವವಾರವನಿತಾಬಿಂಬಾಧರಂ ಶ್ರೀಧರಂ (ಆದಿಪು. ೫-೭೧). [ಸಂ.]

**ನಿಷ್ಪುರುಷೆ** (ನಾ). ಮದುವೆಯಾಗದವಳು ; ವಿವಾಹವಿಲ್ಲದವಳು: ಅರಸ ವಿಸ್ಮಯಬಟ್ಟು ಸತಿ ನಿಷ್ಪುರುಷೆಯೆಂದನ್ಯಾಯವಾಡಿದ ಪರಿಯ ತನ್ನಱಿಕೆಯನು ನೆನೆದವಗರಸನಿಂತೆಂದ (ಜೈಮಿನಿ. ೧೨-೩೬). [ಸಂ. ನಿಷ್ಪುರುಷಾ]

**ನಿಷ್ಪೇಷಣ** (ನಾ) ೧. ಉಜ್ಜುವಿಕೆ. ೨. ಅರೆಯುವಿಕೆ. ೩. ಪುಡಿಮಾಡುವಿಕೆ. [ಸಂ.]

**ನಿಷ್ಪೇಷಿತ** (ನಾ). ಅಜಿಗಿಜಿಯಾದವನು ; ಪುಡಿಪುಡಿಯಾದವನು : ಪರ್ವತದ ಕಿಬ್ಬದಿಯಲ್ಲಿ ವಾಸ ಮಾಡುವವರ ಮೇಲೆ ಶಿಖರವು ಬಿದ್ದರೆ ಹೇಗೆ ನಿಷ್ಪೇಷಿತರಾಗುವರೋ . . . ನವಕುಮಾರನ ಹೃದಯವು ಹಾಗೆ ಜರ್ಝರಿತವಾಗಿ ಹೋಯಿತು (ಕಪಾಕುಂ.೧೧). [ಸಂ.]

**ನಿಷ್ಪ್ರಕಂಪ** (ಗು). ಅಲುಗದೆ ಇರುವ ; ನಿಶ್ಚಲವಾದ; ಸ್ಥಿರವಾದ : ಸೌಮನಸ್ಯನು ನಿಷ್ಪ್ರಕಂಪಸನಾಮನರ್ಜುನದೇವನಿದಿರಲಿ ಭೂಮಿಯಲಿ ಬಿಲ್ಲಾಳದಾವವನೆಂದನಾ ಶಕುನಿ (ಕುಮ್ಮಾಅ. ೮-೧೪). 'ನಿಷ್ಪ್ರಕಂಪಸಲಿಲ' ಪರಾ. [ಸಂ.]

**ನಿಷ್ಪ್ರಕಂಪನ** (ನಾ). ಚಲಿಸದೆ ಇರುವಿಕೆ ; ಅಲುಗದೆ ಇರುವಿಕೆ ; ನಿಶ್ಚಲತೆ : ತುದಿಗಾಲುಗಳ ಹೊಱಗೆಯ ತಪದ ನಿಱಗೆಯ ನಿಷ್ಪ್ರಕಂಪನದ ಬಿಗಿದ ಬಿಲ್ಲಿನ ಬೆನ್ನ ಬತ್ತಳಿಕೆಗಳ . . . ಹೊಸ ತಪಸಿ ತೊಡಗಿದನು ಬಲುತಪವ (ಕುಮ್ಮಾಅ. ೪-೪೩). [ಸಂ.]

**ನಿಷ್ಪ್ರಕಂಪಸಲಿಲ** (ನಾ). ೧. ಅಲ್ಲಾಡದೆ ಇರುವ ನೀರು. ೨. ನೀರು ಚಲಿಸದಿರುವುದು ; ಶಾಂತವಾದ ನೀರುಳ್ಳುದು : ಹೇಮಾಚಲೇಂದ್ರಂ ಜಗಕ್ಕಿದು ಬೇಱೆಂದತಿನಿಷ್ಪ್ರಕಂಪಸಲಿಲಂ ಗಂಭೀರಕೂಪಾರಮೆಂಬುದನೆಂದರ್ಚಿಸೆ ಖೇಚರಾಮರಗಣಂ ನಿಂದಂ . . . ಆದಿ ಭಟ್ಟಾರಕಂ (ಆದಿಪು. ೯-೧೨೩). [ನಿಷ್ಪ್ರಕಂಪ+ಸಲಿಲ]

**ನಿಷ್ಪ್ರತಿ** (ಗು). ಪ್ರತಿಯಿಲ್ಲದ ; ಎಣೆಯಿಲ್ಲದ ; ಅದ್ವಿತೀಯ : ನೀಲಗಿರಿಯಿಕ್ಕೆಲಕೆ ವಾರಿಧಿ ಮೇಲೆ ನಿಷ್ಪ್ರತಿಶೃಂಗವಿವು ಮೈನೀಳದಲಿ ಪೂರ್ವಾಪರದ ಜಲನಿಧಿಯ ಮುಟ್ಟಿಹವು (ಕುಮ್ಮಾಅ. ೭-೪೬). [ಸಂ.]

**ನಿಷ್ಪ್ರತ್ಯೂಹ** (ಗು). ೧. ಅಡ್ಡಿ ಇಲ್ಲದಿರುವ ; ತೊಡಕಿಲ್ಲದಿರುವ ; ನಿಷ್ಕಂಟಕವಾಗಿರುವ : ನಿಷ್ಪ್ರತ್ಯೂಹಮೋಹರಸಪರವಶತೆಯಿಂ ನೆರೆವ ನಗರದಂಪತೀಶತೋತ್ತಾರರಣಿತಕುಹರಣಸೂತ್ರಮುಂ ಕಲ್ತು ಪರಿವಿಡಿಗೆಯ್ವ ಪಾರಾವತಪ್ರಕರಕ್ಕೆ ಮಕರಕೇತು ಶಾಸ್ತ್ರಾಭ್ಯಾಸಪ್ರಾಸಾದಂಗಳಾದ ಮಣಿಮಯಕೃತಕಗಿರಿಗಳುಂ . . . ಮನೋಹರಂಗಳೆನಿಸಿರ್ದುವು(ಚಂದ್ರಪು. ೧-೧೦೬). (ನಾ). ೨. ಅಡ್ಡಿ ಇಲ್ಲದಿರುವಿಕೆ ; ಅಡಚಣೆಯಿಲ್ಲದಿರುವಿಕೆ ; ನಿಷ್ಕಂಟಕವಾಗಿರುವಿಕೆ ; ನಿರಾತಂಕ ಸ್ಥಿತಿ : ಸಮರಜಯವಿನ್ನಾಯ್ತು ಯಂಜ್ಞೋದ್ಯಮಕೆ ನಿಷ್ಪ್ರತ್ಯೂಹವಿನ್ನು ಭ್ರಮೆಯ ಮಾಡದಿರು (ಕುಮ್ಮಾಸ. ೨-೩೨) ; ಆಹ ಲೇಸಾಯ್ತು ಮಮ ನಿಷ್ಪ್ರತ್ಯೂಹದಲಿ ನಾವ್ ಬಂದ ಕಾರ್ಯ ಮಹಾಹವವ ಜೈಸಿದೆವು (ತೊರರಾ. ೫-೮-೮೬) ; ತಾವಾಗಿ ನಿಷ್ಪ್ರತ್ಯೂಹದಲಿ ಜೀವಿಸುವುದು (ನಿಭಾಗ. ೪-೩-೫೭). [ಸಂ.]

**ನಿಷ್ಪ್ರಪಂಚ** (ನಾ). ೧. ಸಂಸಾರಬಂಧಕ್ಕೆ ಅತೀತವಾದುದು : ಮಾಯಾತೀತವಾದುದು : ಕಿನ್ನರಯ್ಯನನೊಡನೆ . . . ತೆಗದು ಬಿಗಿದಪ್ಪಿ ಜಡವಿರಹಿತಂ ನಿಷ್ಪ್ರ [ಪಾಠಾಂ. ನಿಃಪ್ರ]ಪಂಚದ ಬೆಡಗಿನೊಳ್ಪಿನ ಮತಿಯ ಕೀಲಂ ಪಿಡಿಸಿ ಲಿಂಗಪ್ರಾಣಮಥನ ಸದನುಭವವನಱುಹಿ (ಬಸವು. ೨೯-೩೩); ನಿಷ್ಪ್ರಪಂಚವೂ ನಿರ್ಗುಣವೂ ಆದ ಬ್ರಹ್ಮನನ್ನೇ ಹಿಡಿದು ವಾದಿಸುವವರು ಅದ್ವೈತಿಗಳು (ಭಾರದ. ೧೩೧). 'ನಿಷ್ಪ್ರಪಂಚಬ್ರಹ್ಮವಾದಿ' ಪರಾ. ೨. ಸಂಸಾರವನ್ನು ಬಿಟ್ಟವನು ; ಪ್ರಪಂಚವನ್ನು ತೊರೆದವನು; ಯೋಗಿ : ಪಂಚಗುರುಚರಣಸರಸಿರುಹಂ ಚಿತ್ತದೊಳಖಿಳಮಳಹರಂ ನಾಲಗೆಯೊಳ್ ಪಂಚಪದಂ ನೆಲಸಿರೆಯಿರೆ ಪಂಚತೆಯಂ ನಿಷ್ಪ್ರಪಂಚನೆಯ್ದಿದನಮರಂ (ಚಂದ್ರಪು. ೪-೭೮) ; ಪಂಚಪಂಚೀಕೃತಿಯ ಪ್ರಪಂಚ ಪರಿಹರವಾಗಿ ನಿಷ್ಪ್ರಪಂಚ ನಿರ್ಲೇಪಕನಾದೆನು(ಸಿದ್ಧೇಪ. ೩೩-೮೫). [ಸಂ.]

**ನಿಷ್ಪ್ರಪಂಚಬ್ರಹ್ಮವಾದಿ** (ನಾ). ನಿಷ್ಪ್ರಪಂಚಬ್ರಹ್ಮನು ಇರುವನೆಂದು ಪ್ರತಿಪಾದಿಸುವವನು ಮತ್ತು ಆ ಗುಂಪಿಗೆ ಸೇರಿದವನು; ☞ ಬ್ರಹ್ಮವೊಂದೆ ಸತ್ಯ ಜಗತ್ತೆಲ್ಲವೂ ಮಿಥ್ಯ ಎಂಬ ಅರ್ಥದಲ್ಲಿ ನಿಷ್ಪ್ರಪಂಚನೆಂದು ಪರಬ್ರಹ್ಮನಿಗೆ ಹೆಸರು : ಬ್ರಹ್ಮವಾದಿಗಳಾದ ವೇದಾಂತಿಗಳಲ್ಲಿ ಕೆಲವರು ನಿಷ್ಪ್ರಪಂಚಬ್ರಹ್ಮವಾದಿಗಳು (ಭಾರದ. ೧೩೦). [ಸಂ. ನಿಷ್ಪ್ರಪಂಚಬ್ರಹ್ಮವಾದಿನ್]

**ನಿಷ್ಪ್ರಭ** (ನಾ). ೧. ಕಳೆಗುಂದಿರುವುದು ; ಕಾಂತಿಹೀನವಾಗಿರುವುದು ; ಮಂಕಾಗಿರುವುದು : "[ವಿಗತಚ್ಛವಿ ನಿಷ್ಪ್ರಭಮದು]" (ವಸ್ತುಕೋ. ೧೦೬-೫೨); "ನಿಷ್ಪ್ರಭಃ, ವಿರತಃ, ಆರೋಕಃ—೩ ಕಳೆ ಕುಂದಿ ಕಾಂತಿ ಇಲ್ಲದೇ ಇರುವದು" (ಸಿದ್ಧಾಂತಿ. ೩೫೦) ; ಸೋತು ಬೆಂಡಾಗಿ ನಿಷ್ಪ್ರಭವಾಗಿದ್ದರೂ ಜಗತ್ತಿನ ಕಾರುಣ್ಯವನ್ನೆಲ್ಲ ಉಕ್ಕಿಸುವಂಥ ಕೋಮಲ ಮುಖ (ಅನಾಥೆ. ೧೫). ೨. ಕಳೆಗುಂದಿದವನು ; ಕಾಂತಿಹೀನ : ತರಣಿ ನಿಷ್ಪ್ರಭನಾದ ನಭದಿಂದುರಿವ ಕೊಳ್ಳಿಗಳುದುರೆ ದಿವಸದೊಳಿರದೆ ತಾರೆಗಳುರಿಯೆ ಕವಿದುವು ಹದ್ದು ಕಾಗೆಗಳು (ಕೌಶಿರಾ. ೨೫-೩). [ಸಂ.]

**ನಿಷ್ಪ್ರಭತನು** (ನಾ). ಕಾಂತಿಹೀನವಾದ ದೇಹವುಳ್ಳವನು : ಉಱಿದರ್ ನಿಲೆ ಕಲ್ಪಲತಾಶ್ರಯಕ್ಕೆ ನಿಷ್ಪ್ರಭತನುವುಳ್ಳರಂ ದೊರೆಗೆವಾರದವೋಲ್ ದೊರೆಯಾಗಲಾರ್ಕುಮೋ (ಶಾಂತಿಪು. ೫-೨೮). [ನಿಷ್ಪ್ರಭ+ತನು]

**ನಿಷ್ಪ್ರಯೋಜಕ** (ನಾ). ೧. ಉಪಯೋಗಕ್ಕೆ ಬಾರದುದು ; ಅಪ್ರಯೋಜಕವಾದುದು ; ಕೆಲಸಕ್ಕೆ ಬಾರದುದು : ನನ್ನ ಜೊತೆಯಲ್ಲಿನ ಬಾಳ್ವೆ ಬಿಟ್ಟು ಉಳಿದದ್ದೆಲ್ಲ ಅಸಂಗತ, ನಿಷ್ಪ್ರಯೋಜಕ ಎಂಬ ಹೆಣ್ಣಿನ ತಿರಸ್ಕಾರದ ಭಾವ (ಪ್ರಶ್ನೆ. ೧೧೨) ; ಈ ಖಂಡಕ್ಕೆ ವಿರೋಧವಾಗಿ ರಚಿತವಾದ ಯಾವುದೇ ವಿಧಿಯು ಹಾಗೆ ವಿರುದ್ಧವಾಗಿರುವ ಮಟ್ಟಿಗೆ ನಿಷ್ಪ್ರಯೋಜಕವಾಗಿರತಕ್ಕುದು (ಭಾಧಾನ. ೭). ೨. ಉಪಯೋಗಕ್ಕೆ ಬಾರದವನು ; ಕೆಲಸಕ್ಕೆ ಬಾರದವನು ; ಅಪ್ರಯೋಜಕ : ಅವನೊಬ್ಬ ನಿಷ್ಪ್ರಯೋಜಕ (ರೂಢಿ). [ಸಂ.]

**ನಿಷ್ಪ್ರಯೋಜನ** (ಗು). ೧. ಪ್ರಯೋಜನವಿಲ್ಲದ; ಉಪಯೋಗಕ್ಕೆ ಬಾರದ : ಕಠಿನಕರ್ಕಶಕ್ಷತ್ರಿಯಂಗೆ . . . ನಿಷ್ಪ್ರಯೋಜನಸ್ವೇದಜಲೋದ್ಗಮಮುಂ ನಿಷ್ಪಂದ ನಾಸಾಸ್ಫುರಿತಮುಂ ನಿಷ್ಕಾರಣ ಕಾಯಕಂಪನಮುಂ ನಿರಾಲಂಬನವಾಗಾಡಂಬರಮುಂ ತಕ್ಕುದಲ್ತು (ಆದಿಪು. ೧೪-೮೧ ವ). (ನಾ). ೨. ಉಪಯೋಗಕ್ಕೆ ಬಾರದುದು ; ನಿರುಪಯುಕ್ತ

ವಾದುದು : ಈ ನಿಷ್ಪ್ರಯೋಜನವಾದ ದೇಹವನ್ನು, ಸಾಗರರಾಜನೆ, ನಿನಗೆ ಸಮರ್ಪಿಸುವೆನು (ನಿಷ್ಕ್ರಾಪ. ೧೭೫). [ಸಂ.]

**ನಿಷ್ಪ್ರಯೋಜನಂ** (ಅ). ಪ್ರಯೋಜನವಿಲ್ಲದೆ ; ಸುಮ್ಮನೆ; ವ್ಯರ್ಥವಾಗಿ : ಆ ಕೃತಘ್ನನನ್ ನಿಷ್ಪ್ರಯೋಜನಮಿಂತು ನೆನೆನೆನೆದು, ಬೇಳ್ವೆಯೋ೯ನ್ (ಶ್ರೀರಾಮಾ. ೪೯೭-೧೭೪). [ಸಂ.]

**ನಿಷ್ಪ್ರವರ** (ನಾ). ಅಪೌರುಷೇಯನಾದವನು ; ಪರಮಾತ್ಮ : ನೆನೆಯುತೆ ದೇವಿ ನಿಷ್ಪ್ರವರನಂ ವರನಂ ವರನಂ ಮಹೇಶನಂ (ಗಿರಿಕ. ೯-೧೨). [ಸಂ.]

**ನಿಷ್ಪ್ರವಾಣಿ** (ನಾ). ಮಗ್ಗದಿಂದ ಆಗ ತಾನೇ ಹೊರಬಂದ ಬಟ್ಟೆ ; ಇನ್ನೂ ಬೆಲುವೆ ಮಾಡದ ಹೊಸಬಟ್ಟೆ : "ನವವಸ್ತ್ರಂ ಪೊಸತದು ನಿಷ್ಪ್ರವಾಣಿ ತಾಂತ್ರಿಕವೆನಿಕ್ಕುಂ" (ವಸ್ತುಕೋ. ೭೭-೧೭) ; "ಅನಾಹತಂ, ನಿಷ್ಪ್ರವಾಣಿ, ತಂತ್ರಕಂ—ಕ ನವಾಂಬರ, ಹೊಸ ಬಟ್ಟೆ" (ಸಿದ್ಧಾಂತಿ.೨೦೨). [ಸಂ.]

**ನಿಷ್ಪ್ರವಾಳ** (ಗು). ಚಿಗುರದೆ ಇರುವ ; ಕೊನರದೆ ಇರುವ : ಆತಪತಾಪದಿಂದಮಿದು ನಿಸ್ತೃಣ ನಿರ್ಜಳ ನಿಷ್ಪ್ರವಾಳವಲ್ಲೀತರುವಾದುದೀಯೆಡೆಯೊಳಿನ್ನಿರವಾಗದು ಪೋಪುದುತ್ತಮಂ (ಜಗವಿ. ೩-೬೪). [ಸಂ. ನಿಷ್ಪ್ರವಾಲ]

**ನಿಷ್ಪ್ರವೀಚಾರ** (ನಾ). ೧. [ಜೈನ] ಸಂಭೋಗವಿಲ್ಲದಿರುವಿಕೆ ; ರತಿಕ್ರೀಡೆಯಿಲ್ಲದಿರುವಿಕೆ: ಒದವುವುದು ನಿಷ್ಪ್ರವೀಚಾರದಿನವರ್ಗೆ ಮನೋಜಪರಮಸುಖಮಿನ್ನವರಭ್ಯುದಯಮನದನಿನ್ನೇವೇಳ್ವುದೊ ದೇವರ ದೇವರಪ್ಪ ಭವಸಂಭವದಿಂ (ಶಾಂತಿಪು. ೯-೧೨೫). ಸಮಧಿಗತ ಮಾನಸಾಮೃತಾಹಾರರುಂ ಸಪ್ರವೀಚಾರಾನಂತಗುಣ ನಿಷ್ಪ್ರವೀಚಾರಸುಖರುಂ . . . ಅಗಿ ಸುಖಮಿರ್ಪನಂ (ಚಾವುಂಪು. ೩೧) ; ಮಱುಮೆಯ್ಯೊಳ್ ತೀಂದ್ರಿಯಸುಖದೆಱೆವಟ್ಟಾದಪ್ಪನೆಂಬುದರ್ಕಿದುವೆ ವಲಂ ಕುಱುಪೆಂಬತೆಱದಿನೆಸೆದುದು ನೆಱೆದಹಮಿಂದ್ರಂಗೆ ನಿಷ್ಪ್ರವೀಭಾಗ[ಚಾರ]ಸುಖಂ (ಚಂದ್ರಪು. ೧೧-೩೬). ೨. ಸಂಭೋಗ ಮಾಡದವನು ; ಸುರತದಲ್ಲಿ ತೊಡಗದವನು ; ಮೈಥುನವಿಲ್ಲದವನು : ನೆನೆವಂ ಮೂವತ್ತು ಮೂಸಾಸಿರಬರಿಸದೊಳಾಹಾರಮಂ ನಿಷ್ಪ್ರವೀಚಾರನಪಾರಂ ತನ್ನೊಳಾದ ಭ್ಯುದಯಂ ಸಕಳಸೌಖ್ಯಂ ತ್ರಯಸ್ತ್ರಿಂಶದಂಭೋಧಿ ನಿಜಾಯುಸ್ಸಂಖ್ಯೆ ಪಕ್ಷಾಧಿಕಮೆನೆ ಪದಿನಾಱಾದ ಮಾಸಕ್ಕುಸಿರ್ಪತ್ತೆನೆ ಮೋಸಂಗೊಳ್ಳ ದೇನಂ ಪೊಗಟ್ದಪೆನಹಮಿಂದ್ರಂಗೆ ಕೈಸಾರ್ದ ಸೈಪಂ (ಮಲ್ಲಿಪು. ೧೧-೬೪). [<ಸಂ. ನಿಷ್ಪ್ರವಿಚಾರ]

**ನಿಷ್ಪ್ರವೀಚಾರತೆ** (ನಾ). = ನಿಷ್ಪ್ರವೀಚಾರ ೧ : ನಿಷ್ಪ್ರವೀಚಾರತೆಯಿಂ ನೆಱೆದ ಸುಖಾಂಭೋಧಿಯೊಳವಗಱನುಱು ದವಗಾಹಮಿರ್ದನಿಂತಹಮಿಂದ್ರಂ (ಚಂದ್ರಪು. ೧೧-೩೯). [<ಸಂ. ನಿಷ್ಪ್ರವಿಚಾರತಾ]

**ನಿಷ್ಪ್ರಾಣ** (ಗು). ೧. ನಿರ್ಜೀವವಾದ ; ಜೀವವಿಲ್ಲದ. ೨. ಬಲವಿಲ್ಲದ; ನಿರ್ಬಲವಾದ. (ನಾ). ೩. ಪ್ರಾಣವಿಲ್ಲದುದು; ನಿರ್ಜೀವವಾದುದು : ಬಲದೇವಾಕೃತಿಯಂ ಸರಾಗನವುರಂ ನಿಷ್ಪ್ರಾಣಮಂ ವಿಕ್ರಿಯಾಬಲದಿಂ ನಿರ್ಮಿಸೆ ಕಂಡು ಲಕ್ಷ್ಮಣಂ . . . ಬಿಟ್ಟಂ ಧರಾತಲದೊಳ್ (ಪಂರಾಮಾ. ೧೬-೪೯). [ಸಂ.]

**ನಿಷ್ಪ್ರೇಮ** (ಗು). ೧. ಆಸಕ್ತಿಯಿಲ್ಲದ ; ಅನಾಸಕ್ತವಾದ : ಕಾಮಿಸಿ ಭೋಗಿಸುವಗೆ ಕರ್ಮಬಂಧ ನಿಷ್ಪ್ರೇಮಭೋಗಿಗೆ ಬಂಧವುಂಟೆ (ಭರಚ. ೨-೩೨). (ನಾ). ೨. ಪ್ರೇಮವಿಲ್ಲದಿರುವಿಕೆ ; ನಿರಾಸಕ್ತಿ. [ಸಂ.]

**ನಿಷ್ಫಲ,** ನಿಷ್ಫಳ (ಗು). ೧. ಫಲವನ್ನು ಕೊಡದಿರುವ ; ಹಣ್ಣು ಬಿಡದ. ೨. ವ್ಯರ್ಥವಾದ ; ನಿರರ್ಥಕವಾದ: ಮಕ್ಕಳನೀಯದೆ ನೋಡೆ ನಾಡೆ ನೋಯಿಸಿದಪುದಿಕ್ಷುಪುಷ್ಪದವೊಲೆನ್ನಯ ನಿಷ್ಫಲ ಪುಷ್ಪದರ್ಶನಂ (ಪಂಪಭಾ. ೧-೧೧೭) ; ನಿಷ್ಫಲಪ್ರಾಣಿಯನಾದಂ ಕ್ರೂರಿಯಂ ಬ್ರಾಹ್ಮಣಹನನ ಮಹಾಪಾಪಮಂ ಗೆಯ್ದು ನಿಸ್ತ್ರಿಂಶಿಯನೆನ್ನಂ ಪಾಪಿಯಂ ನೀಂ ಬೆಸಗೊಳೆ ಫಲವೇಂ (ಕಾದಂಪೂ. ೯೫೭). ೩. ನಪುಂಸಕವಾದ ; ಪುಂಸತ್ವವಿಲ್ಲದ. (ನಾ). ೪. ನಿರರ್ಥಕವಾದುದು ; ವ್ಯರ್ಥವಾದುದು; ಉಪಯೋಗವಿಲ್ಲದುದು; ಅಪ್ರಯೋಜಕವಾದುದು: "ವೃಥೆ ನಿಷ್ಫಲಂ ಮೋಘಮೆನಲದು ನಿರರ್ಥಕ್ಕೆ ನಾಮಂ" (ಮಂಗರಾ. ೧೩೬-೪೦) ; ಅನ್ನವನಿಕ್ಕಿದರೇನು ಹೊನ್ನ ಕೊಟ್ಟರೇನು . . . ಸದಮಳ ಶಾಶ್ವತ ಮಹಾಘನಲಿಂಗವನಱಿಯದೆ ಇವೇನ ಮಾಡಿದರು ಕಡೆಗೆ ನಿಷ್ಫಲ (ವಚಸಂ. ೩೬೭-೧) ; ಕಟ್ಟಾಸೆವಟ್ಟೆಯ್ತಂದು ಬೇಡಿ ನಿಷ್ಫಲವಾಗದಂತೆ. . . ನೀನೆಮಗೆ ವಲ್ಲಭನಾಗಿ ಚಿತ್ತದುಮ್ಮಳಿಕೆಯಂ ಕಳೆ (ಹಚಕಾ. ೭-೧೫) ; ಶ್ರೀಗುರುಸ್ಥಿರಭಕ್ತಿಯಿಂದು ಹೊಱಗಾಗಿ ಕೋಟಿವಿಧಂಗಳಲಿ ಶ್ರುತಿಯೋಗದಲಿ ಹರಭಕ್ತಿಯಂ ಮಾಡಿದಡೆ ನಿಷ್ಫಲವು (ಬಸಪು. ೩೯-೨೪) ; ನಡೆವೆಣನೇ ದರಿದ್ರನು ಸಾಲದೆನಿಸಿದ ದಕ್ಷಿಣೆಯ ಯಜ್ಞಾಳಿ ನಿಷ್ಫಲವು (ಕುಪ್ಯಾಅ. ೨೩-೪೪) ; ತೋರಿಕೆಯ ಪೂಜೆಯೆಲ್ಲವೂ ನಿಷ್ಫಲವಾದವು (ಶಮಪಾಂ. ೧೨೦). ೫. [ಜೈನ] ಉದಯಕರ್ಮದ ಹದಿನಾಲ್ಕು ಭೇದಗಳಲ್ಲಿ ಒಂದು : ಉದಯಿಪ ಕರ್ಮಮಂ ಸಫಲ ನಿಷ್ಫಲಯುಗ್ಮದ . . . ಚತುರುಕ್ತಭೇದದಿನಿವೆಂದಱಿಯಿಂ ಪದಿನಾಲ್ಕು ಭೇದಮಂ (ಚಾವುಂಪು. ೩೯೪). **ನಿಷ್ಫಳ : ೪.** ಅಱಿಯಂತ್ತಂ ಕಲ್ಲೊಳ್ ನಾರಱಸುವುದುಂ . . . ಇವರೊಳಕ್ಕರಮಱಸುವುದುಂ ಭಾವಿಪಂದು ನಿಷ್ಫಳಮಲ್ತೇ (ಸುಕುಮಾ. ೨-೨೩). [ಸಂ.]

**ನಿಷ್ಫಲದಾಯಕ** (ನಾ). ಫಲವನ್ನು ಕೊಡದೆ ಇರುವವನು ; ಆಸೆಯನ್ನು ನೆರವೇರಿಸದೆ ಇರುವವನು : ಹಂಗುಹಱಿಯಿಲ್ಲದ ಕಾರಣ ಕೂಡಲಸಂಗಮದೇವ ನಿಷ್ಫಲದಾಯಕನಾಗಿ ಆನು ಮಾಡಿ ಶುದ್ಧ ನಯ್ಯಾ (ಬಸವ. ೫೦೮). [ಸಂ.]

**ನಿಷ್ಫಲವಿಧಾನ** (ನಾ). ೧. ಪ್ರಯೋಜನಕ್ಕೆ ಬಾರದ ಕ್ರಮ ; ನಿರುಪಯುಕ್ತ ರೀತಿ. ೨. ಪ್ರಯತ್ನಕ್ಕೆ ಫಲವನ್ನು ಪಡೆಯಲಾರದವನು ; ವ್ಯರ್ಥಪ್ರಯತ್ನದವನು : ಖಳರು ಕೌರವರು . . . ದೌರ್ಜನ್ಯಮುಖದೀಕ್ಷಿತನು ಕಲಿಕರ್ಣ ಉಳಿದ ಭೀಷ್ಮ ದ್ರೋಣರೇ ನಿಷ್ಫಲ ವಿಧಾನರು (ಕುವ್ಯಾಸ. ೧೨-೯೦). [ನಿಷ್ಫಲ+ವಿಧಾನ]

**ನಿಷ್ಫಲಾಕಾಂಕ್ಷೆ** (ನಾ). ಫಲಾಪೇಕ್ಷೆ ಇಲ್ಲದಿರುವಿಕೆ ; ಮಾಡುವ ಕರ್ಮದಲ್ಲಿ ಪ್ರತಿಫಲಾಪೇಕ್ಷೆ ಇಲ್ಲದಿರುವಿಕೆ : ನಿರಪೇಕ್ಷ ದೃಷ್ಟಿಯಿಂದ ನಿಷ್ಫಲಾಕಾಂಕ್ಷೆಯಿಂದ ಮಾಡುವ ಕರ್ಮದ ರಹಸ್ಯ-ಧರ್ಮವನ್ನು ಶ್ರೀಕೃಷ್ಣನು ಹೇಳುತ್ತಾನೆ (ಭಾರದ. ೧೧೪). [ಸಂ. ನಿಷ್ಫಲಾಕಾಂಕ್ಷಾ]

**ನಿಷ್ಫಲಾರಂಭ** (ನಾ). ಬೆಳೆಯನ್ನು ನೀಡದ ವ್ಯವಸಾಯ,—ಬೇಸಾಯ : ಕೇಳು ಶುಕಯೋಗೀಂದ್ರ ಸಂಸ್ಕೃತಿ ಹಾಳುವಾದವಲಾ ವಿಚಾರಿಸೆ ಹೇಳಲೇನದು ಬಯಲ ಬಳಲಿಕೆ ನಿಷ್ಫಲಾರಂಭ (ಅನ್ನುಕ. ೨-೪). [ನಿಷ್ಫಲ+ಆರಂಭ]

**ನಿಷ್ಫಲೆ** (ನಾ). ಮುಟ್ಟು ನಿಂತವಳು ; ಮಕ್ಕಳನ್ನು ಹಡೆಯುವ ವಯಸ್ಸು ಮೀರಿದವಳು. [ಸಂ. ನಿಷ್ಫಲಾ]

**ನಿಷ್ಫಲೋತ್ಪನ್ನೆ** (ನಾ). ವ್ಯರ್ಥವಾಗಿ ಹುಟ್ಟಿದವಳು ; ನಿಷ್ಪ್ರಯೋಜಕವಾಗಿ ಜೀವಿಸುವವಳು : ನಿಷ್ಫಲೋತ್ಪನ್ನೆಯಂ ನಿರ್ದಯೆಯಂ . . . ಪಾಪೆಯಂ ನೀಂ ಬೆಸಗೊಳೆ ಫಲವೇಂ (ಕಾದಂಪೂ. ೯೫೭). [ಸಂ. ನಿಷ್ಫಲೋತ್ಪನ್ನಾ]

**ನಿಷ್ಫಲೋದ್ಯೋಗ** (ನಾ). ಪ್ರಯೋಜನವಿಲ್ಲದ ಕೆಲಸ ; ವ್ಯರ್ಥಪ್ರಯತ್ನ : ಶಿಲೆಯೊಳ್ ಧಾನ್ಯಂಗಳಂ ಬಿತ್ತಿಯುಂ ಮೊಳಗಿದ ಭೂಜಕ್ಕೆ

ಸ್ತೀರ್ವೊಯ್ವುದುಂ ಕೋಟಲೆವಟ್ಟೀ ನಿಷ್ಫಲೋದ್ಯೋಗಮನೊಡರಿಪುದೇಂ (ಪಂರಾಮಾ. ೧೬-೫೫). [ನಿಷ್ಫಲ+ಉದ್ಯೋಗ]

**ನಿಷ್ಫಳ** 'ನಿಷ್ಫಲ' ನೋ.

**ನಿಷ್ಫಳಕುಜ** (ನಾ). ಹಣ್ಣು ಬಿಡದಿರುವ ಮರ; ಫಲ ಬಿಡದಿರುವ ವೃಕ್ಷ: "ನಿಷ್ಫಳಕುಜಮವಕೇಶಿ" (ವಸ್ತುಕೋ. ೩೦-೨). [ನಿಷ್ಫಳ (=ನಿಷ್ಫಲ)+ಕುಜ]

**ನಿಷ್ಯಂದ** (ನಾ). ೧. ಒಸರುವಿಕೆ; ಸೋರುವಿಕೆ; ಸ್ರವಿಸುವಿಕೆ. ೨. ಪ್ರವಾಹ; ಧಾರೆ: ವಂದ್ಯಮಾನಸುರಾಸುರೋರಗವೃಂದ ಮಣಿಮಕುಟ ಪ್ರಭಾನಿಷ್ಯಂದ ಭೂಯಿಸ್ತಿಮಿತಕಾಯನ ಕಂಡನಬುಜಭವ (ಕುವ್ಯಾಕ. ೬-೧೫). [ಸಂ.]

**ನಿಷ್ಯಂದಿ** (ಗು). ೧. ಸ್ರವಿಸುತ್ತಿರುವ; ಒಸರುತ್ತಿರುವ; ಜಿನುಗುತ್ತಿರುವ: ಸಪ್ತಧಾತುಮಯಮುಂ ಅವಸ್ಕರದವೋಲ್ ಮೂತ್ರಪುರೀಷಾದಿ ಮಲಭಾಜನಮುಂ ಅಲ್ಲಿ ಪೂತಿರಸನಿಷ್ಯಂದಿ ಶ್ರವಣಾದಿ ನವರಂಧ್ರಪರೀತಮುಂ . . . ಅಪ್ಪ ಶರೀರಮುಂ (ತತ್ತ್ವಪ್ರ. ೩೨೯). (ನಾ). ೨. ಸೂಸುವುದು; ಬೀರುವುದು; ಹೊರಬರುವುದು: ಆಂ ದಯೆಗೈದು ಕಾದನುಜೆಯಂ ವಸುದೇವಸಮೇತಮಂದು ಮನ್ಮಂದಿರಮಧ್ಯಕೇಳಿಗೃಹದೊಳ್ ಸೆಜೆಗೆಯ್ದು ತದೀಯ ಗರ್ಭನಿಷ್ಯಂದಿಗಳಪ್ಪ ಕೂಸುಗಳನಿಂ ಕೊಲಲಿರ್ದೆಂ (ಜಗವಿ. ೨-೫೧); ಕುಂಜಸ್ಫುರಿತಕುಟಜಕುಂದಾಮೋದನಿಷ್ಯಂದಿ ತೀಡುತ್ತಿರದೆ ಮುದಿತವಿಶ್ವಂ ನಾಭಸಂ ಮಾತರಿಶ್ವಂ (ಚಂದ್ರಪು. ೪-೩೦); ರಸಕ್ಲಿನ್ನಹಂಸಸಂಸೇವಿತಂ, ಸಮನಆಮೋದನಿಷ್ಯಂದಿ, ಮೇಣಾವಿಷ್ಟಹೃಷ್ಟನಭಸಂಗಮಾರಾವಮಾ ಬಿಲಮುಖಂ (ಗಣೇಶ. ೩೭-೧೦). [ಸಂ. ನಿಷ್ಯಂದಿನ್]

**ನಿಷ್ಯಂದಿಸು** (ಕ್ರಿ). ಒಸರು; ಸೋರು; ಜಿನುಗು: ಮಾಂದಳಿರ ತೊಂಗಲ ಕರ್ದುಂಕಿಯಲ್ಲಿಂದ ನಿಷ್ಯಂದಿಸುವ ರಸಕೆ ಬಾಯ್ದೆಱೆದು (ಸೌಂದಪು. ೫-೯೦). [ನಿಷ್ಯಂದ+-ಇಸು₃]

**ನಿಷ್ಯೂತ** (ಗು). ಸೇರಿಕೊಂಡ; ಹೆಣೆದುಕೊಂಡ; ಕೂಡಿಕೊಂಡ. 'ನಿಷ್ಯೂತಚೈತನ್ಯ' ಪರಾ.' [ಸಂ.]

**ನಿಷ್ಯೂತಚೈತನ್ಯ** (ನಾ). ಕೂಡಿಕೊಂಡ ಚೇತನ; ಹೆಣೆದುಕೊಂಡಿರುವ ಚೈತನ್ಯ: ಇಂದುಶೇಖರನಗ್ನಿಯುಮನರವಿಂದಸಖಕಾಲಾಗ್ನಿಮೂರ್ತಿಯರೊಂದುಮೂರುತಿ ವಿಶ್ವದೊಳು ನಿಷ್ಯೂತಚೈತನ್ಯ (ಕುವ್ಯಾದ್ರೋ. ೩-೬೮). [ನಿಷ್ಯೂತ+ಚೈತನ್ಯ]

**ನಿಸಂಗಿ** (ನಾ). ಎಲ್ಲ ಸಂಗಗಳನ್ನೂ ಬಿಟ್ಟವನು; ಸಾಂಸಾರಿಕ ಜಂಜಾಟವನ್ನು ತೊರೆದವನು; ವಿರಕ್ತ: ಹಾವಿನ ಹಾಳ ಕಲ್ಲಯ್ಯಂ ನಿಸಂಗಿ ನಿರಾಳದೇವನು ಸಿಗುರೆ ಚಂದಯ್ಯಂ ಮುರುಘದೇವ (ಬಸವು. ೫೮-೭). [<ಸಂ. ನಿಸ್ಸಂಗಿನ್]

**ನಿಸಟು,** ನಿಸುಟು (ಕ್ರಿ). ೧. ನುಣುಚಿಕೊಳ್ಳು; ಜಾರಿಕೊಳ್ಳು; ತಪ್ಪಿಸಿಕೊಳ್ಳು: ಈಗಲೇ ಪ್ರಸಂಗ ಕೈ ನಿಸಟಬಾರದೆಂದು ಚಟ್ಟನೇ . . .ಸೂಚನೆ ಕೊಟ್ಟು ಜಾಗರಿಸಿದ (ದೀಪಹ. II, ೨೭೪). **ನಿಸುಟು:** ೨. ಹೊರಹೊಮ್ಮು; ಹೊರಬೀಳು; ಸ್ಥಳ ಬಿಟ್ಟು ಹೊರಡು: ಆಗಿನ ಕಾಲದ ಕವಿಗಳ ಆಡಂಬರ ಬಹಳ. ಅವರಿಗೆ ಬೇಕು—ಉಪವನ, ಚಂದ್ರ, ಮಾಲಯಾನಿಲ, ಕೋಕಿಲ. ಅನಂತರ ಎಲ್ಲಿಯೋ ಪಂಚಶರಗಳು ನಿಸುಟಬೇಕು (ತುರಿಹಿಂ. ೧೧೫). [←ಮರಾ. ನಿಸಟಣೇ]

**ನಿಸದ,** ನಿಸದು (ನಾ). ದಿಟ; ನಿಶ್ಚಯ; ಸತ್ಯ; ನಿಜ: "ನನ್ನಿ, ನಿಕ್ಕುವಂ, ನಿಸದಂ, ಸಾಜಂ, ನನಸು, ದಿಟಂ—ಈ ೬ ಸತ್ಯಂ" (ಕಶಸಾ. ೫೭-೨೫೪); ನಿಸದಮೆನಿಪ್ಪ ಪುಟ್ಟಿಸಿನ ಜವ್ವನದಿಂದೆ. . .ನಲವಿಂದೆ ದಂಪತಿಪ್ರಸರಮೆ ನಾಡೆ ಮೂಡಿ ಮುಟುಗಾಡುವುದೀಡಿತ ಭೋಗಭೂಮಿಯೊಳ್ (ಚಂದ್ರಪು. ೩-೩೭); ಎಸೆವ ಪ್ರಸಾದವಿರ್ದಲ್ಲಿ ಪರಿಣಾಮವದು ನಿಸದದಿಂದಿಪ್ಪುದು (ಸಿದ್ಧೇಪು. ೨೩-೪೮); ಅಶನ ದೊರಕದೆಯುಪವಾಸಮೊದಗಿತ್ತು ನಿಸದದಿಂ ಬಿಲ್ವಪತ್ರೆಯನೆಯ್ದೆ ಲಿಂಗಕರ್ಪಿಸಿದ ಫಲವಾದುದೆಂದೊಯ್ದರಾ ಕೈಲಾಸಗಿರಿಗೆ (ಪಾಸೋಪು. ೧೩-೫೩); ಇಹುದೊ ಇಲ್ಲವೊ ತಿಳಿಯಗೊಡದೊಂದು ವಸ್ತು ನಿಜಮಹಿಮೆಯಿಂ ಜಗವಾಗಿ ಜೀವವೇಷದಲಿ ವಿಹರಿಪುದೊಳ್ಳಿತೆಂಬುದು ನಿಸದವಾದೊಡಾ ಗಹನತತ್ತ್ವಕೆ ಶರಣೊ (ಮಂಕುಕ. ೩). **ನಿಸದು:** ಆಚಾರಂ ನಿ[ಪಾಠಾಂ.ಬ]ಸದಾಗಿ ಸದ್ಗುಣಗಣಂ ಮುಂತಾಗಿ ಮಂತ್ರಕ್ರಿಯಾಲೋಚಂ ನಿರ್ವ್ಯಭಿಚಾರಮಾಗೆ ಜಿನರಾಜಪ್ರಾಜ್ಯ ಸಾಮ್ರಾಜ್ಯದೊಳ್ ಸಾಚಿವ್ಯೋಚಿತ ಭಾಗ್ಯಲಕ್ಷ್ಮೀ ತಮಗೇಕಚ್ಛತ್ರಮಾಯ್ತೆಂದುಮೆಂಬಾಚಾರ್ಯರ್ ನಮಗೀವರಕ್ಕೆ ನಯನಿಕ್ಷೇಪಪ್ರಮಾಣಂಗಳಂ (ಅರ್ಥನೇ. ೧-೪). [ ? ]

**ನಿಸದಂ** (ಅ). ದಿಟವಾಗಿ; ನಿಜವಾಗಿ; ಖಂಡಿತವಾಗಿ: ಮೃಗದ ಮೈಯೊಳ್ ನಿಸದಮೆಸೆವುದು ಬಲ್ಲಾಳ ಬಿಲ್ಬಲ್ಮೆ (ಪಂಪಭಾ. ೫-೪೭); ನಿಸದಂ ಕಪಿಂಜಲಂ ಜೀವಿಸುತಿರೆ ನಿನ್ನಲ್ಲಿಗೆಯ್ದದಿರಂ (ಕಾದಂಪೂ. ೯೪೭); ವಸುಧೇಶ ಚರ್ಮರತ್ನದ ದೆಸೆಯಿಂದೀ ವರಪುರಾಂತದೊಳ್ ಪದೆಪಿಂ ಜೀವಿಸಿದಪೆನದಱ ಕ್ಷೇಮಂ ನಿಸದಂ ನಿಮ್ಮಡಿಯದು (ದಶಕು. ೮-೧೫೦); ಅಜನಜಗರಗರದಿಂದಭ್ರಜಶಿಖರವದಿಂದೆ ಪುಲಿಯ ಕಾಯ್ಪಿಂ ನಿಸದಂ ವೃಜಿನ ಘನಕುಜನಜನಮುಂ ಸೃಜಿಸಿದನಲ್ಲದೊಡವಂಗೆ ಜಗಮುಂಜುವುದೇ (ರಾಜಶೇ. ೧-೩೮); ಎಲೆ ದುಟ್ಟಬಿದಿ, ನಿಸದಮಿಂ ಜಲಜೋದರನಾಣೆ! ಪೆಣ್ಗಳಂ ಸೃಷ್ಟಿಸದಿರ್ (ಸುಗುಗಂ. ೬೮-೧೭). [<ನಿಸದ]

**ನಿಸದಿ** 'ನಿಸಿದಿ' ನೋ.

**ನಿಸದಿಗೆ** 'ನಿಸಿದಿಗೆ' ನೋ.

**ನಿಸದು** 'ನಿಸದ' ನೋ.

**ನಿಸರ್ಗ** (ನಾ). ೧. ಕೊಡುವಿಕೆ; ನೀಡುವಿಕೆ. ೨. ಕೊಟ್ಟುದು; ಕೊಡುಗೆ; ದಾನ: 'ಶ್ರೀನಿಸರ್ಗ' ಪರಾ. ೩. ತ್ಯಜಿಸುವುದು; ಬಿಟ್ಟುಬಿಡುವುದು. ೪. ಸೃಷ್ಟಿ; ಉತ್ಪತ್ತಿ. ೫. ಸಹಜವಾದುದು; ಸ್ವಾಭಾವಿಕವಾದುದು: "ಸರ್ಗ ಸ್ವಭಾವವಾಚಿ ನಿಸರ್ಗಂ" (ವಸ್ತುಕೋ. ೧೨೫-೪೨); ಸುಮತಿ . . . ಅಂತು ನಿಸರ್ಗದೊಳ್ ದೇವಗುರುಭಕ್ತಿಯುಂ ಮಾತಾಪಿತೃಶಿಕ್ಷಾನುರಕ್ತಿಯುಮಾಗಿ (ಶಾಂತಿಪು. ೪-೮೭ ಪ); ತನ್ನ ನಿಸರ್ಗವತ್ಸಲತ್ವದಿನೆನಗಾ ಪ್ರಸಾದಪದಮಂ ದಯೆಗೆಯ್ದ ಮಹಾನುಭಾವೆಗಾ ಸುದತಿಗೆ ಪೇಟ್ದು ಬರ್ಪನಿತು ಗೌರವಮಂ ಮೊದಲಾಗಿ ಮಾಡಲಾಱದೆ ಖಳರೋಳಿಯೊಳ್ ದೊರೆಗೆವಂದನೆನ್ನನದೇನನೆಂದಪೆಂ (ಕಾದಂಉ. ೪೦೦); ಕಿಱಿಯಾತಂ ನಿಸರ್ಗದಿಂ ವಕ್ರಗತಿ ಪರಿಣಾಮದಿನುದ್ವೃತ್ತಚಿತ್ತದಿನುನ್ಮತ್ತನಾದಂ (ಸುಕುಮಾ. ೨-೫೭); ಕಪಿವಂಶಕ್ಕೆ ನಿಸರ್ಗಂ ಚಪಲತೆ (ಪಂರಾಮಾ. ೧೩-೧೩೭). ೬. ಪ್ರಕೃತಿ: ತದ್ಭೂಮಿ ಗರ್ಭಿತದ ಶ್ರೀಕರಾಲಯವಿದು ನಿಸರ್ಗಪುರಾಕೃತಿಯಲಿರಲೆಂಬ ಸಮಯಕೆ ನಾಕಮುನಿ ನಡೆತಂದು ಬಳಿಕಿಂತೆಂದು ನೇಮಿಸಿದ (ತೊರರಾ. ೧-೧೬-೨೮); ಗಾಳಿಯ ಮಂಡಲ ಸ್ಫಟಿಕದವೋಲಿದೆ . . . ಅಲ್ಲಲ್ಲಿಯೇ ಮುಗಿಲಿನ ಪಟ ತೇಲಿದೆ ವೈಕುಂಠವಿದೆ ನಿಸರ್ಗದಲಿ (ಪಕ್ಷಿಕಾ. ೨೧-೧೬); ಮೊದಲನೆಯ ಯುದ್ಧದ ಅನಂತರ ಪ್ರಕೃತಿ ಪಾಠ ಬೋಧನವಿಷಯವಾಯಿತು . . . ಪರಿಚಿತ ಮರಗಿಡಗಳು, ಪ್ರಾಣಿಗಳು, ನಿಸರ್ಗದ ಆಗುಹೋಗುಗಳು ಇವು ಆ ವಿಷಯದಲ್ಲಿ ಸೇರಿದ್ದುವು (ಶಿಕ್ಷದ. ೭೩೮); ನಿಸರ್ಗದಲ್ಲಿ ಕೂಡ ಕಾರ್ಯವು ಎಂದಿನಂತೇ ಅವಿರತವಾಗಿ ಸಾಗಿದೆ (ಧರ್ಮಸಾ. ೧೩೦). ೭. [ಜೈನ] ಪಂಚವಿಂಶತಿಕ್ರಿಯೆಗಳಲ್ಲಿ ಒಂದು; ಕೆಟ್ಟ

ಕೆಲಸವನ್ನು ಸರಿಯೆಂದು ತಿಳಿಯುವುದು ಮತ್ತು ಪಾಪಕಾರ್ಯವನ್ನು ಮಾಡಲು ಅನುಮತಿ ನೀಡುವುದು : ೧. ಸಮ್ಯಕ್ತ್ವಕ್ರಿಯೆ (ದೇವಗುರು ಶಾಸ್ತ್ರಾದಿ ಪೂಜೆ) . . . ೧೭. ನಿಸರ್ಗ (ಪಾಪೋತ್ಪಾದಕ ಕ್ರಿಯೆಯನ್ನು ತಾನು ಸಾಧುವೆಂದು ತಿಳಿವುದೂ ಪರರಿಗೆ ಮಾಡಲಪ್ಪಣೆಯೀವುದೂ) (ಜೈನಧ. ೬೩). 'ಪಂಚವಿಂಶತಿಕ್ರಿಯೆ' ಪರಾ. [ಸಂ.]

**ನಿಸರ್ಗಂ** (ಅ). ಸಹಜವಾಗಿ ; ಸ್ವಾಭಾವಿಕವಾಗಿ ; ಸ್ವಭಾವಸಿದ್ಧವಾಗಿ : ಪ್ರತಿಭೆ ನಿಸರ್ಗಮುಂಟು ಕಿಱಿದೋದುಗಳೊಳ್ಕಿಱಿದುಂಟು ಬಲ್ಮೆ (ಗದಾಯು. ೧-೫೦). [<ನಿಸರ್ಗ]

**ನಿಸರ್ಗಗುಣ** (ನಾ). ಸಹಜಗುಣ; ಹುಟ್ಟುಗುಣ ; ಸ್ವಭಾವಸಿದ್ಧವಾದ ಗುಣ : ಎಂತಪ್ಪ ಬುದ್ಧಿವಂತನುಂ ಸಂಸರ್ಗವಶದಿಂದ ನಿಸರ್ಗಗುಣಮಂ ಪತ್ತುವಿಡುವುದು ಕಡುದಿಟಂ (ಪಂಚತಂ. ೧೨೧-೨೧). [ನಿಸರ್ಗ + ಗುಣ]

**ನಿಸರ್ಗತತ್ತ್ವ** (ನಾ). ಪ್ರಕೃತಿಯೇ ಎಲ್ಲ ಲೌಕಿಕವ್ಯಾಪಾರಗಳಿಗೆ ಮೂಲವೆನ್ನುವ ತತ್ತ್ವ : ನಿಸರ್ಗತತ್ತ್ವ ದೃಷ್ಟಿ . . . ನಿಸರ್ಗತತ್ತ್ವವಾದಿಗಳು ಲೌಕಿಕಕ್ಕೆ ಹೆಚ್ಚಿನ ಸ್ಥಾನ ಕೊಟ್ಟರು (ಶಿಕ್ಷದ. ೨೯). [ನಿಸರ್ಗ + ತತ್ತ್ವ$_1$]

**ನಿಸರ್ಗತತ್ತ್ವವಾದಿ** (ನಾ). ಪಾರಮಾರ್ಥಿಕ ದೃಷ್ಟಿಯನ್ನು ಒಪ್ಪದೆ, ಲೌಕಿಕ ಪ್ರಯೋಜನದ ದೃಷ್ಟಿಯಿಂದಲೇ ಎಲ್ಲವನ್ನೂ ನೋಡುವವನು ; ಲೌಕಿಕವಾದಿ; ಪ್ರಯೋಜನವಾದಿ : ಭಾವಪ್ರಧಾನವಾದಿಗಳು ಆಧ್ಯಾತ್ಮಿಕಜ್ಞಾನಾರ್ಜನೆಗೆ ಹೆಚ್ಚಿನ ಸ್ಥಾನ ಕೊಟ್ಟದ್ದರೆ, ನಿಸರ್ಗತತ್ತ್ವವಾದಿಗಳು ಲೌಕಿಕಕ್ಕೇ ಹೆಚ್ಚಿನ ಸ್ಥಾನ ಕೊಟ್ಟರು(ಶಿಕ್ಷದ.೨೯). [ಸಂ. ನಿಸರ್ಗತತ್ತ್ವವಾದಿನ್]

**ನಿಸರ್ಗದತ್ತ** (ನಾ). ಸಹಜವಾಗಿ ದೊರೆತುದು ; ಸ್ವಭಾವಸಿದ್ಧವಾದುದು : ಇರುವಷ್ಟನ್ನೇ ಆದಷ್ಟು ಉಪಯುಕ್ತ ರೀತಿಯಲ್ಲಿ ಪೋಷಿಸಿ, ವ್ಯವಸ್ಥೆಗೊಳಿಸಿಕೊಂಡರೆ ನಿಸರ್ಗದತ್ತವಾಗಿ ಬಂದದ್ದನ್ನು ಭಂಗಾರ ಮಾಡಿಕೊಂಡ ಹಾಗಾಗುತ್ತದೆ (ಶಿಕ್ಷದ. ೬೪೧).[ನಿಸರ್ಗ + ದತ್ತ]

**ನಿಸರ್ಗದುರ್ಗ** (ನಾ). ಪ್ರಕೃತಿ ನಿರ್ಮಿಸಿದ ಕೋಟೆ : ರತಿಪತಿಯ ಧಾರಾಗೃಹದಂತಿರ್ದ ಮಾಧವೀಲತೆಯ ಜೊಂಪಂಗಳೊಳಂ ಮನ್ಮಥ ನಿಸರ್ಗದುರ್ಗದಂತಿರ್ದ ಕೃತಕಗಿರಿಗಳೊಳಂ . . . ಸೊಗಯಿಕುಂ ತತ್ಪುರೋದ್ಯಾನಷಂಡಂ (ಮಲ್ಲಿಪು. ೨-೩೩). [ನಿಸರ್ಗ + ದುರ್ಗ]

**ನಿಸರ್ಗನಿಯಮ** (ನಾ). ಪ್ರಕೃತಿನಿಯಮ ; ಸ್ವತಃಸಿದ್ಧವಾದ ವಿಧಿ : ನಾವು ಮಾಡಿದ ತಪ್ಪಿಗೆ ಫಲ ಅನುಭವಿಸಲೇ ಬೇಕು. ಇದು ನಿಸರ್ಗನಿಯಮ (ಶಿಕ್ಷದ. ೩೧೪). [ನಿಸರ್ಗ + ನಿಯಮ]

**ನಿಸರ್ಗಪ್ರಿಯ** (ನಾ). ಪ್ರಕೃತಿಯನ್ನು ಪ್ರೀತಿಸುವವನು ; ನಿಸರ್ಗಪ್ರೇಮಿ : ಸೃಷ್ಟಿಯಲ್ಲಿ ಸೊಳ್ಳೆಯೆಂಬ ಪ್ರಾಣಿಗಳು ಉಂಟು. ಹೀಗೆ ಹೊರಗೆ ಒರಗಿದ ನಿಸರ್ಗಪ್ರಿಯರನ್ನೆ ಅವು ಹುಡುಕುತ್ತಿರುತ್ತವೆ. (ನಡೆದಾ. III, ೨೦೬೪). [ನಿಸರ್ಗ + ಪ್ರಿಯ]

**ನಿಸರ್ಗಪ್ರೇಮ** (ನಾ). ಪ್ರಕೃತಿಯ ಬಗೆಗೆ ಇರುವ ಒಲವು,–ಪ್ರೀತಿ : ಕವಿಯ ನಿಸರ್ಗಪ್ರೇಮದ ಉತ್ಕರ್ಷತೆಯನ್ನು ಈ ಕವನ ಸೂಚಿಸುತ್ತದೆ (ರೂಢಿ). [ನಿಸರ್ಗ + ಪ್ರೇಮ]

**ನಿಸರ್ಗಬಲ** (ನಾ). ಸ್ವಾಭಾವಿಕವಾಗಿರುವ ಶಕ್ತಿ ; ಸಹಜವಾದ ಶಕ್ತಿ : ಪ್ರಬಲಮೆನಿಕುಂ ಗ್ರಹಂ ಸ್ಥಾನಬಲಂ ಚೇಷ್ಟಾಬಲಂ ನಿಸರ್ಗಬಲಂ . . . ದೃಷ್ಟಿಬಲಮೆನಿಪ್ಪಾಱು ಬಲಮುಮಂ ಪಡೆದಾಗಳ್ (ಜಾತತಿ. ೨-೧೩). [ನಿಸರ್ಗ+ಬಲ$_3$]

**ನಿಸರ್ಗಭೀರು** (ನಾ). ಸ್ವಭಾವತಃ ಪುಕ್ಕಲುಸ್ವಭಾವವುಳ್ಳವನು ; ಭೀರುವಾದವನು : ಸತ್ಪುರುಷನಾಶ್ರಿತರಂ ನಿಸರ್ಗಭೀರು ಪ್ರಾಣಂಗಳಂ . . . ಮನಸ್ವಿ ಮಾನಮಂ ರಕ್ಷಿಸುವವೊಲ್ (ಪಂಚತಂ. ೭೦-೫). [ನಿಸರ್ಗ + ಭೀರು]

**ನಿಸರ್ಗಮನೋಹರ** (ನಾ). ಸಹಜ ಸುಂದರವಾದುದು ; ನೈಜ ಸೌಂದರ್ಯವನ್ನು ಹೊಂದಿದುದು : ಸೊಗಯಿಪ ಜವ್ವನಂ ನೆಱೆದ ರೂಪು ನಿಸರ್ಗಮನೋಹರಂ ಮುಗುಳ್ನಗೆ ಸವಿಳಾಸಮೋದಮೊಡವುಟ್ಟಿದುವು (ಶಾಂತಿಪು. ೯-೩೫). [ನಿಸರ್ಗ + ಮನೋಹರ]

**ನಿಸರ್ಗಮಿತ್ರ** (ನಾ). ಸಹಜ ಮಿತ್ರ,—ಸ್ನೇಹಿತ : ದಿನನಾಥಂಗೆ ಹಿಮಾಂಶು ಭೌಮಗುರುಗಳ್ . . . ಭೃಗುಜಂಗೆ ಸೌಮ್ಯ ರವಿಜರ್ ಮುಂದಂಗೆ ಶುಕ್ರೇಂದುನಂದನರಾರಯ್ಯೆ ನಿಸರ್ಗಮಿತ್ರರೆನಿಕ್ಕುಂ (ಜಾತತಿ. ೨-೧೪). [ನಿಸರ್ಗ + ಮಿತ್ರ]

**ನಿಸರ್ಗಮೂಢಾತ್ಮ** (ನಾ). ಸ್ವಭಾವದಿಂದ ದಡ್ಡನಾಗಿರುವವನು; ಹುಟ್ಟುದಡ್ಡ : ದಕ್ಷನೆಂಬ ನಿಸರ್ಗಮೂಢಾತ್ಮನು ವಿರೋಧಿಸಲಿದಿರೆ ನಿನಗೆ (ನಿಭಾಗ. ೪-೩-೪೭). [ನಿಸರ್ಗ + ಮೂಢಾತ್ಮ]

**ನಿಸರ್ಗರಾಗಿ** (ನಾ). ಸ್ವಾಭಾವಿಕವಾಗಿ ಅನುರಾಗವುಳ್ಳ ವ್ಯಕ್ತಿ : ನಿಸರ್ಗರಾಗಿಗಳಪ್ಪ ಪೆಂಡಿರ ಪರಿಣಾಮಮೆಲ್ಲಿವರಂ ನಡೆದಪ್ಪುದು (ಪಂರಾಮಾ. ೯-೧೪೮ ಪ). [ಸಂ. ನಿಸರ್ಗರಾಗಿನ್]

**ನಿಸರ್ಗವಂತಿಕೆ** (ನಾ). ನೈಸರ್ಗಿಕತೆ ; ಸಹಜತೆ ; ಸ್ವಾಭಾವಿಕತೆ: ಭರತೇಶವೈಭವವು . . . ನಿಸರ್ಗವಂತಿಕೆಯ ಮಹಾಕಾವ್ಯವಲ್ಲ, ಕಲಾವಂತಿಕೆಯ ಮಹಾಕಾವ್ಯ (ನವ್ಯಕಾ. ೯೭). [<ನಿಸರ್ಗ]

**ನಿಸರ್ಗವಾದ** (ನಾ). ಯಥಾರ್ಥ ವಾದ ; ಭೌತಪ್ರಪಂಚದೃಷ್ಟಿ : ಆರ್ಥಿಕ ಪ್ರಪಂಚದ ವ್ಯವಹಾರಗಳಲ್ಲಿ ಸ್ಮಿತ್ ನಿಸರ್ಗವಾದವನ್ನು (ನ್ಯಾಚುರಲಿಸಮ್) ನಂಬಿದವ (ಕವಿಕೋ. I, ೭೨೩). [ನಿಸರ್ಗ + ವಾದ$_3$]

**ನಿಸರ್ಗವಿಕ್ರಮ** (ನಾ). **೧.** ಸ್ವಾಭಾವಿಕ ಸಾಹಸ; ಶೌರ್ಯ. **೨.** = ನಿಸರ್ಗಶೂರ : ದುರ್ಗದ ಕಾವಲಿಗಿಕ್ಕಿಮನ್ನೆಯರ ನಿಸರ್ಗವಿಕ್ರಮ ನಾಬಲವ ನುರ್ಗೇಳೆ ಕೊಲ್ವೆನೆನುತ ಬಗೆದನು (ಕುರಾಸಾಂ. ೪೩-೫೬). [ನಿಸರ್ಗ + ವಿಕ್ರಮ]

**ನಿಸರ್ಗವಿಜ್ಞಾನ** (ನಾ). ಪ್ರಾಣಿವಿಜ್ಞಾನ ಮತ್ತು ಸಸ್ಯವಿಜ್ಞಾನ ಇವುಗಳಿಗೆ ಸಂಬಂಧಿಸಿದ ಜ್ಞಾನ ; ℙ ಇದು Natural Science ಎಂಬುದರ ಕನ್ನಡ ಅನುವಾದ ರೂಪ : ನಿಸರ್ಗತತ್ತ್ವವಾದಿಗಳು ಲೌಕಿಕಕ್ಕೇ ಹೆಚ್ಚಿನ ಸ್ಥಾನ ಕೊಟ್ಟರು . . . ಅವರ ತತ್ತ್ವದೃಷ್ಟಿಯಿಂದ ಶಿಕ್ಷಣರಂಗದಲ್ಲಿ ವಿಜ್ಞಾನಕ್ಕೆ ಹಾಗೂ ನಿಸರ್ಗವಿಜ್ಞಾನಕ್ಕೆ ಹೆಚ್ಚಿನ ಪುರಸ್ಕಾರ ದೊರೆಯಿತು (ಶಿಕ್ಷದ. ೨೯). [ನಿಸರ್ಗ + ವಿಜ್ಞಾನ]

**ನಿಸರ್ಗಶೂರ** (ನಾ). ಜನ್ಮತಃ ಶೂರ ; ವೈಗಲಿ ; ಸಹಜ ಪರಾಕ್ರಮಿ : ಧನುರ್ಧರನ ಶರವರ್ಷಂ ನವಪಯೋದಪ್ರಮೋದಬಿಂದು ವರ್ಷದಂತೆ ಕಳೆಯೆ ನಿಸರ್ಗಶೂರನುಂ ಕಟ್ಟಾಯಕಾಱನುಂ ಅಪ್ಪುದಱಿಂ ಪಾಪೇಭಕಂಠೀರವನಂತೆ ಮಾಣ್ದು ಮುನ್ನೆರನನವರ್ಗಿತ್ತು . . . ಮೆಱೆದಂ ಕೋದಂಡನೈಪುಣ್ಯಮಂ (ಶಾಂತಿಪು. ೪-೮ ಪ). [ನಿಸರ್ಗ + ಶೂರ]

**ನಿಸರ್ಗಸುಂದರ** (ನಾ). ಅಲಂಕಾರವಿಲ್ಲದೆಯೂ ಸುಂದರನಾಗಿರುವವನು; ಸಹಜಸೌಂದರ್ಯವನ್ನು ಹೊಂದಿದವನು ; ಸ್ಫುರದ್ರೂಪಿ : ತೀರ್ಥಕರ ಕುಮಾರಂಗೆ . . . ಪ್ರಸಾಧನ ಪ್ರಾರಂಭಂಗೆಯ್ಯೆ . . . ಅಲಂಕೃತನಾಗಿಯುಂ ನಿಸರ್ಗಸುಂದರನಪ್ಪುದಱಿಂದಮಲಂಕಾರಕ್ಕೆ ತಾನಲಂಕಾರಮಾದೊಡಂ (ಶಾಂತಿಪು. ೧೦-೫೮ ಪ). [ನಿಸರ್ಗ+ಸುಂದರ]

**ನಿಸರ್ಗಸುಭಗ** (ನಾ). **೧.** ಸ್ವಭಾವ ಸುಂದರವಾದುದು ; ಸಹಜ ರಮಣೀಯವಾದುದು ; ನೈಜ ಸೌಂದರ್ಯವನ್ನು ಹೊಂದಿದುದು : ಕಲಿಸಿದೊಡಂ ಬರ್ಕುಮೆ ಸಲ್ಲಲಿತಕವಿತ್ವಂ ನಿಸರ್ಗಸುಭಗಂ ರಮಣೀವಿಲಸಿತ ರತಿರಸರಸಿಕತೆ ತಲೆದೋರ್ಪುದು ತಾನೆ ಕಲಿಸಲೇಂ ಬಂದ

ಬಂದಪುದೇ (ರಾಜಶೇ. ೧–೩೦). **೨.** = ನಿಸರ್ಗಸುಂದರ : ದಿನ ದಿನಕ್ಕೇಱುಂಬೆಱೆಯಂತೆ ಕಳೆವೆರ್ಚುತೆ ಬಳೆಯುತಿರ್ಪ ನಿಸರ್ಗಸುಭಗರ್ ಪೆತ್ತಬ್ಬೆಗಂ . . . ಮತ್ತಮೆಲ್ಲರ್ಗಂ ಮುದ್ದು ಮುದ್ದಾದರ್(ರಾಮಾಶ್ವ. ೧೫೦–೨೪). [ನಿಸರ್ಗ + ಸುಭಗ]

**ನಿಸರ್ಗಸ್ನೇಹಿತೆ** (ನಾ). ಹುಟ್ಟನಿಂದಲೇ ಸ್ನೇಹವನ್ನು ಹೊಂದಿದವಳು : ನಿಮ್ಮಡಿಗಂ ಕೈಯ್ಯನೊಡ್ಡಿ ಪುರುಷಭೈಕ್ಷೆಯಂ ಬೇಡಿದೀಕೆಯುಮಂ ನಿಸರ್ಗಸ್ನೇಹಿತೆಯಾದ ಕಾರಣಮುಮನಿದನಱಿಯೆ ಬೆಸಸುವುದೆನೆ ಮೇಘನಿನಾದದಿಂ ಮೇಘರಥಾವನೀನಾಥನಿಂತೆಂದು ಪೇೞ್ದಂ (ಶಾಂತಿಪು. ೯–೮೩ ವ). [ನಿಸರ್ಗ + ಸ್ನೇಹಿತೆ]

**ನಿಸರ್ಗಾಧಿಕರಣ** (ನಾ). [ಜೈನ] ಅಜೀವಾಧಿಕರಣಾಸ್ರವಭೇದಗಳಲ್ಲಿ ಒಂದು ; ℙ ಆಸ್ರವಕ್ಕೆ ಜೀವ ಮತ್ತು ಅಜೀವ–ಇವೆರಡೂ ಅಧಿಕರಣ (ಆಧಾರ, ಆಶ್ರಯ) ಗಳಾಗುತ್ತವೆ. ಅಜೀವಾಧಿಕರಣಾಸ್ರವದಲ್ಲಿ ೧೧ ಭೇದಗಳಿವೆ. ಅವುಗಳ ವಿವರಣೆ ಹೀಗಿದೆ. ೧. ನಿವರ್ತನಾಧಿಕರಣ : (ಅ). ಶರೀರದಿಂದ ಕೆಟ್ಟ ಕೆಲಸಮಾಡುವುದು. (ಆ). ಆಯುಧಗಳಿಂದ ಹಿಂಸೆ ಮಾಡುವುದು. ೨. ನಿಕ್ಷೇಪಾಧಿಕರಣ : (ಅ). ಭಯ, ಆತುರ ಮೊದಲಾದ ಕಾರಣಗಳಿಂದ ಪುಸ್ತಕ ಮೊದಲಾದ ಉಪಕರಣಗಳನ್ನು ತಟ್ಟನೆ ಎಸೆಯುವುದು. (ಆ). ಅಂಥ ಕಾರಣವಿಲ್ಲದಿದ್ದರೂ ಅಲಕ್ಷ್ಯದಿಂದ ಎಸೆಯುವುದು. (ಇ). ದುಷ್ಟತನದಿಂದ ಇಲ್ಲವೆ ಎಚ್ಚರಗೇಡಿತನದಿಂದ ಉಪಕರಣಗಳನ್ನು ಇಡುವುದು. (ಈ). ಸ್ವಲ್ಪವೂ ನೋಡದೆ ಉಪಕರಣಗಳನ್ನು ಇಡುವುದು. ೩. ಸಂಯೋಗಾಧಿಕರಣ : (ಅ). ಉಪಕರಣಗಳನ್ನು ಬಿಸಿಲಿನಲ್ಲಿ ಕಾಯ್ದ ನವಿಲುಗರಿಯಿಂದ ಒರೆಸುವುದು ಇತ್ಯಾದಿ. (ಆ). ಅನ್ನಪಾನಗಳಲ್ಲಿ ಬೇರೆ ಬೇರೆ ವಿಧದ ಅನ್ನಪಾನಗಳನ್ನು ಬೆರಸುವುದು. ೪. ನಿಸರ್ಗಾಧಿಕರಣ : (ಅ). ಮನೋನಿಸರ್ಗಾಧಿಕರಣ (ಕೆಟ್ಟ ಕೆಲಸಗಳಲ್ಲಿ ಮನಸ್ಸನ್ನು ತೊಡಗಿಸುವುದು). (ಆ). ವಾಙ್ನಿಸರ್ಗಾಧಿಕರಣ (ಕೆಟ್ಟ ಮಾತುಗಳನ್ನು ಹೇಳುವುದು. (ಇ). ಕಾಯನಿಸರ್ಗಾಧಿಕರಣ (ಅಯೋಗ್ಯವಾದ ರೀತಿಯಲ್ಲಿ ಶರೀರದ ಅಂಗೋಪಾಂಗಗಳ ಚಲನವಲನ) : ನಿಸರ್ಗಾಧಿಕರಣ– ಇದರಲ್ಲಿ ಮನೋನಿಸರ್ಗ(ದುಷ್ಕೃತ್ಯಗಳಲ್ಲಿ ಮನಸ್ಸನ್ನು ತೊಡಗಿಸುವುದು), ವಾಗ್ನಿಸರ್ಗ (ಅಭದ್ರವಚನ), ಕಾಯನಿಸರ್ಗ (ಅಯೋಗ್ಯವಾಗಿ ಶರೀರ ಚಲನವಲನ) ಎಂಬ ಮೂರು ಪ್ರಕಾರಗಳು (ಜೈನಧ. ೬೫).

[ನಿಸರ್ಗ + ಅಧಿಕರಣ]

**ನಿಸರ್ಗೋಪಾಸನೆ** (ನಾ). ಪ್ರಕೃತಿಯನ್ನು ಪೂಜಿಸುವಿಕೆ ; ಪ್ರಕೃತಿಯಾರಾಧನೆ ; ಪ್ರಕೃತಿಪೂಜೆ : ನಿಸರ್ಗೋಪಾಸನೆಯ ಮಹತ್ವವನ್ನೂ ತನಗಿಂತ ಹಿಂದೆ ಹಸನಾದ ಬದುಕು ನಡೆಸಿ, ಅಮೂಲ್ಯವಾದ ಆಲೋಚನಾಪರಂಪರೆಯನ್ನು ಬಿಟ್ಟು ಹೋಗಿದ್ದ ಕವಿ ತತ್ವಜ್ಞಾನಿಗಳನ್ನು ಆರಾಧಿಸುವುದರಿಂದೊದಗುವ ಪರಮಪ್ರಯೋಜನವನ್ನೂ ಹಿಂದವನು ಮನಗಂಡಿದ್ದನು (ಪುನರು. ೫೯). [ನಿಸರ್ಗ + ಉಪಾಸನೆ]

**ನಿಸಳ ?** (ನಾ). (?) : ಅರಿಯರ ದಳವಾಯ ಕೂಚರಸನು ಎತ್ತಿ ಬಂದು ಎಣಿಕಲನುಯಿಱಿದು ಸೆಱೆ ಸೂಱೆಗೊಣ್ಡು ಹೋಹಲ್ಲಿ ಹಡಪದ ಮಲಯ್ಯನು ಒವೆ ನಿಸಳ ಕುದುರೆ ಸಿಂದ ಸಳುಗವ ಹಿಡಿವಲಿ ಕಂಟಾದ ಸೆಟಿಯ ಮಗ ಕಟ್ಟೆಯಪ್ಪನು ಆ ದಳಕೆ ಎದಿರಾಗಿ ಹೊದ್ದು ಹೋಗಿ ಕೊಂದು ಬಿದ್ದು ಸ್ವರ್ಗ್ಗವ ಸೂಱೆಗೊಣ್ಡು ಕವಿಳಾಸಕೆ ಸನ್ದನು (ಎಕ. XII, ಪಾವುಗ. ೪೮–೨ ; ಸು. 1285 ?) .

[ℙ ಇದು 'ನಿಸ್ಸಾಳ' ಎಂಬುದರ ಅಪಲಿಖಿತವಿರಬಹುದೆ ?]

**ನಿಸಾದಿ** (ನಾ). ಗಜಾರೋಹಿ ; ಮಾವುತ ; ಮಾವಟಿಗ : "ನಿಸಾದಿಗಳೆನಲ್ ಜೋದರ್ಕಳೊಳ್ ಮಾವತರ್" (ಕರ್ನಾನಿ. ೪೯).

[<ಸಂ. ನಿಷಾದಿನ್]

**ನಿಸಾನಿ** 'ನಿಶಾನಿ' ನೋ.

**ನಿಸಿ** 'ನಿಶಿ₁' ನೋ.

**ನಿಸಿತ** (ಗು). ಹರಿತವಾದ : ತೀಕ್ಷ್ಣವಾದ ; ಕ್ರೂರವಾದ : ಲಸಿತದಿವ್ಯೋನ್ನತಶರೀರಂ ನಿಸಿತಶೂಲಶ್ಯೂಕನಿಹತಿಗೆ ಕುಸಿಯದೆ (ಬಸಪು. ೩೯–೬೪). 'ನಿಸಿತವಿಷ', 'ನಿಸಿತಾಸ್ತ್ರ'ಪರಾ. [<ಸಂ. ನಿಶಿತ]

**ನಿಸಿತಕಟಾಕ್ಷ** (ನಾ). ತೀಕ್ಷ್ಣವಾದ ನೋಟ,–ದೃಷ್ಟಿ : ನಿಸಿತಕಟಾಕ್ಷಮೆಂಬ ಶರಮುಂ ನಖಮೆಂಬ ಕಠಾರಮುಂ . . . ತಳೆದ ದೇವಿಯ ನಂಗಜಚಕ್ರವರ್ತಿ ಪೂಜಿಸುವಂ (ವಾಧಪು. ೨–೬೧). [ನಿಸಿತ + ಕಟಾಕ್ಷ]

**ನಿಸಿತವಿಷ** (ನಾ). ತೀಕ್ಷ್ಣವಾದ ವಿಷ ; ಕ್ರೂರವಾದ ನಂಜು :- ಖಂಡಪರಶುಗೆ ನಿಸಿತವಿಷವನಖಂಡಸದ್ಭಕ್ತಿಯೊಳಲರ್ದು ಸಮರ್ಪಣಂಗೆಯ್ದು (ಬಸಪು. ೫೮–೬೭). [ನಿಸಿತ + ವಿಷ]

**ನಿಸಿತಾಸ್ತ್ರ** (ನಾ). ಹರಿತವಾದ ಅಸ್ತ್ರ ; ತೀಕ್ಷ್ಣವಾದ ಅಸ್ತ್ರ ; ಕ್ರೂರವಾದ ಆಯುಧ : ಧುರದೊಳ್ಗೋನುಗಭೂಪ ನಿಂನ ನಿಸಿತಾಸ್ತ್ರಾಘಾತದಿಂ ಸತ್ತ ಭೂಪರ್ (ಎಕ. VIII, ಸಾಗರ. ೧೦೯–೩೪ ; 1042).

[ನಿಸಿತ + ಅಸ್ತ್ರ]

**ನಿಸಿದಿ,** ನಿಶಿದಿ, ನಿಶಿದ್ದಿ, ನಿಶಿಧಿ₁, ನಿಶೀಧಿ, ನಿಶ್ಧಿ, ನಿಷಧಿ, ನಿಷಿದಿ, ನಿಷಿದ್ದಿ, ನಿಷಿದ್ಧಿ, ನಿಷಿಧಿ, ನಿಷೀಧಿ, ನಿಸದಿ, ನಿಸಿದ್ದಿ, ನಿಸಿದ್ಧಿ, ನಿಸಿಧಿ, ನಿಸೀಧಿ (ನಾ). **೧.** [ಜೈನ] (ಸಂನ್ಯಸನವಿಧಿಯಿಂದ ಮರಣಹೊಂದಿದವರ) ಸಮಾಧಿ : ಸ್ವಸ್ತಿಶ್ರೀಗುಣಭೂಷಿತಮಾದಿ ಉಳಾಡಗ್ದೇರಿಸಿದಾ ನಿಸಿದಿಗೆ ಸದ್ಧಮ್ಮಗುರು ಸಂತಾನಾನ್ ಸಂದ್ವಿಗಗಣ ತಾನಯಾನ್ ಗಿರಿತಲದಾ ಮೇಲತಿ××× ಸ್ಥಲಮಾನ್ ತೀರದಾಣಮಾ ಕೆಳಗೆ ನೆಲದಿ ಮಾನದಾ ಸದ್ಧಮ್ಮದಾಗೇಟು ಸಸಾನದಿಪತಾನ್ (ಎಕ. II, ೨೯–೧; ಸು.700); ಮಾವಣ್ಣನ ಸಿಷ್ಯರುಂ ಸನ್ಯಸನಗೆಯ್ದು ಮುಡಿಹಿದ ನಿಸಿದಿ (ಎಕ. IV, ಚಿಕ್ಕಮ. ೫೧–೮ ; 1117) ; ಇಂತು ಬಲವಂದು ಭಕ್ತಿಯಿಂ ನಿಂದು ನಿಸಿದಿಯೆಂದು ನಿವೇದಿತ ಚೈತ್ಯನಿವಾಸನುಮಾಗಿ ನಾನಾವಿಧಾರ್ಚನೆಗಳಿಂ ಪೂಜಿಸಿ ಪರಮಜಿನರಾಜನಂ ನುತಿಸಿ (ಶಾಂತೀಶ್ವ. ೨–೩೭ ವ). **೨.** ಸಮಾಧಿ ; ಗದ್ದುಗೆ : ಪೆಣವಸ್, ಅಲ್ಲಿ ಕಣ್ಗೆ ಮಱೆಯಾದತ್ತು ; ನಿಸಿದಿಯೊಳಗಲ್ಲ (ಅಂತಿಗೊ. ೧೨–೨೩೫). **ನಿಶಿದಿ : ೧.** ಮಂಗಳ ಮಹಾಶ್ರೀಯುವರಿಗೆ ನಿಶಿದಿಯ ಮಾಡಿಸಿದವರ ಕೋಟಿಯ ಮೇಘಚಂದ್ರದೇವರ ಶಿಷ್ಯರು (ಎಕ. III (R), ನಂಜನ. ೧೭೧–೧೭ ; 1371) ; ರವುದ್ರಿ ಸಂವತ್ಸರದ ಆಷಾಢ ಶುಲೂ ಸಿವನಹ ಸೆಟಿಯರ ××× ನಿಶಿದಿ (ಎಕ. XVI, ಗುಬ್ಬಿ. ೬೮–೩ ; ?) ; ಆಯೆರ ಮಾಚಣ . . . ಶ್ರೀಬಳರ ನಾಯ್ಮ್ಕತ್ತಿಗೆ × × × ನಿಲಿಸಿ ನಿಶಿದಿ ಚಯಿತ್ರ ಬಹುಳ ೧೦ (ಎಕ. VII, ಶಿವಮೊ. ೧೧೦–೮ ; ?). **ನಿಶಿದ್ದಿ : ೨.** ಶ್ರೀ ಸಂಗಿರಾಯ ವೊಡೆಯ ತಂನೊಸ ಬಾಂಧವ[ಮ]ಲ್ಲಿ ದೇವರ[ಸಗ್ಗ್ರನು] ಸ್ವಗ್ಗ್ರಸ್ಥನಾದಲ್ಲಿಬಟಕಳದೊಳಗೆ ಪಟ್ಟಣ ಸಮುದಾಯಮಂ ಮಾಡಿಸಿದ ನಿಶಿದ್ದಿ ಶಾ[ಸ]ನಕ್ಕೆ ಮಂಗಳಮಹಾಶ್ರೀ (ಕಇ. I, ೩೭–೧೮ ; 1408). **ನಿಶಿಧಿ₁ : ೧.** ಮಾಳವ್ವೆಯುಂ ಚೌಡಿಯಕ್ಕನುಮೆಂಬಿಬ್ಬರ ನಿಶಿಧಿ (ಎಕ. XII, ಗುಬ್ಬಿ. ೫–೧೬ ; ಸು. 1200) ; ಮಾಳವ್ವೆಯ ಮಗ ಬಾವಿಸೆಟ್ಟಿಯ ಮದವಳಿಗೆ ಬೂಚವ್ವೆಯ ನಿಶಿಧಿ (ಎಕ. XII, ಗುಬ್ಬಿ. ೬–೨೨ ; ಸು. 1200) ; ಮಾರಗಾವುಣ್ಡ ಸರ್ವ್ವ ನಿವ್ರಿ(ವ್ವಿ)[ತ್ತಿ]ಯಂ ಕೈಯಿಕೊಣ್ಡು ಸಮಾಧಿಯಿಂ ಮುಡಿಪಿ ಸ್ವಗ್ಗ[ರ್]ಪ್ರಾಪ್ತನಾದ ನಿಶಿಧಿಯ ಸ್ತಮ್ಭ (ಇಆ. XII, ೧೦೨–೮ ; 1267). **ನಿಶೀಧಿ : ೧.** ಐಚಿಸೆಟ್ಟಿಯವರ

ಮಗ ಯೆರಮ್ಬರಗೆನಾಡ ಸೆಟ್ಟಿಗುತ್ತ ರಾಮಸೆಟ್ಟಿಯವರ ನಿಶೀಧಿ (ಇಆ. VII, ೯೯–೨ ; 13ನೆಯ ಶತ). **ನಿಶ್ಧಿ :** ೧. ಶ್ರೀಜಯಕೀರ್ತ್ತಿ ದೇವರ ಗುಡ್ಡ ಕೇತಯ ನಿಶ್ಧಿ (ಎಕ. XI, ಚಿತ್ರದು. ೧೮–೨ ; ?). **ನಿಷಧಿ :** ೨. ಕಾಮಗವುಡವೂರ ಹುಯಲಲಿ ಪಲರನಿಱಿದು ತಾನುಂ ಸುರಲೋಕಗತನಾದಂ ಆತನ ತಂಮ ನಿಲಿಸಿದ ನಿಷಧಿಯ ಕಲ್ಲು (ಮೈಆರಿ. ೧೯೨೮, ೬೦–೯ ; ಸು. 1450). **ನಿಷಿದಿ :** ೧. ಭಟ್ಟಾರರ ನಿಷಿದಿ [ಪಾಠಾಂ. ನಿಸಿದಿಗೆ]ಯಂ ಬಂದಿಸಿ ಘೋಷಮೆಂದು ವಿಶಾಖಾಚಾರ್ಯರ್ . . . ಬಂದು ಭಟ್ಟಾರರ ನಿಷಿದಿ[ಪಾಠಾಂ. ನಿಸಿದಿಗೆ]ಯನೆಯ್ದಿದಾಗಳ್ (ವಡ್ಡಾರಾ. ೯೦–೧೭) ; ದೇವರಸರ ಹಿರಿಯ ಹೆಂಡತಿ ಸೋಮಾಯಿಯ ನಿಷಿದಿಯ ಕಲ್ಲು (ಎಕ. IV (R), ಚಾಮರಾ. ೩೮೯–೪ ; 1486). **ನಿಷಿದ್ದಿ :** ೧. ಚಂದ್ರಗುಪ್ತಮುನಿಯುಂ ಭಟ್ಟಾರರ ನಿಷಿದ್ದಿ [ಪಾಠಾಂ. ನಿಸಿದಿಗೆ]ಯಂ ಬಂದಿಸುತ್ತಮಾ ದೇವತೆ ಬೆಸಕೆಯ್ಯೆ ಚರಿಗೆ ಮಾಡಿ . . . ಇರ್ಪನ್ನೆಗಂ (ವಡ್ಡಾರಾ. ೯೦–೧೨). **ನಿಷಿದ್ಧಿ :** ೧. ಜಿನ ಭವನಮಂ ತ್ರಿಃಪ್ರದಕ್ಷಿಣಂಗೆಯ್ದು ನಿಷಿದ್ಧಿ[ಪಾಠಾಂ. ನಿಸಿದಿ]ಯೊಳಗಂ ಪೊಕ್ಕು . . . ಮುನಿವರರಂ ಬಂದಿಸಿ ಕುಳ್ಳಿರ್ದು (ಧರ್ಮಾಮೃ. ೫–೭೮); ಶ್ರೀಮನ್ನಯಕೀರ್ತ್ತಿಸಿದ್ಧಾಂತಚಕ್ರವರ್ತ್ತಿಗಳ್ಗೆ ಪರೋಕ್ಷವಿನೆಯಾರ್ತ್ಥವಾಗಿ ಮುಂಡಿಜಮುಮಂ ನಿಷಿದ್ಧಿಯುಮಂ . . . ಮಾಡಿಸಿದ ತದನನ್ತರ ಎಕ. II (R), ೪೫೭–೪೭ ; 1195) ; ಭದ್ರಬಾಹುಸ್ವಾಮಿಗಳು . . . ಬೆಟ್ಟದ ಕಿರುಗುಹೆಯಂ ನಿಷಿದ್ಧಿಯಿಂ ಪುಗುವಾಗಳೊಂದು ವಚನಮಾ ದುದು ನಿಮಗಿಲ್ಲಿಯೆ ನಿಷಿದ್ಧಿಯಕ್ಕುಂ (ಕವಿ. ೯೬ ರಾಜಾವಳೀಕಥೆ). ೩. (?) : ಸಂಗೀತವಾದ್ಯನೃತ್ಯಸಹಿತಂ ಬಸದಿಯಂ ಬಲಗೊಂಡು ಪಾದಪ್ರಕ್ಷಾಲನಾನಂತರಂ ನಿಷಿದ್ಧಿ [ಪಾಠಾಂ. ನಿಸ್ಸಹಿ]ಯೆಂದುಚ್ಚಾರಣಂ ಗೆಯ್ಯುತ್ತುಮೊಳಗಂ ಪೊಕ್ಕು . . . ಸಾಷ್ಟಾಂಗಪ್ರಣತನಾಗಿ (ಬಾಧಪು. ೫–೪೭ ವ). **ನಿಷಿಧಿ :** ೧. ಬೀಮಿಸೆಟ್ಟಿಯ ಹೆಂಡತಿ ಚಂದವೆಯ್ಯ ನಿಷಿಧಿ (ಎಕ. XII, ಪಾವುಗ. ೫೬–೪ ; ಸು. 1450 ?). **ನಿಷೀಧಿ :** ೧. ನಾಕಿಸೆಟ್ಟಿಯ ಮಗ ಪ××ಟ್ಟಣಸ್ವಾಮಿ ಪಾಯ[ಕ][ಣ್ಣ]ನ ನಿಷೀಧಿ (ಕಇಆ. ೭೧–೫–೬ ; ಸು. 13ನೆಯ ಶತ). **ನಿಸದಿ :** ೧. "ನಿಸದಿ—ನಿಷಧಿ = ಜೈನಸಮಾಧಿ" (ತದ್ಭಕೋ. ೨೨). **ನಿಸಿದ್ದಿ :** ೧. ಸಂಸ್ಕೃತದಲ್ಲಿ 'ನಿಷೀದಿಕಾ', ಪ್ರಾಕೃತದಲ್ಲಿ 'ನಿಸೀಹಿಯಾ' ಎಂಬ ರೂಪ ಗಳುಂಟು. (ಈಗಲೂ ಉತ್ತರಕರ್ಣಾಟಕದಲ್ಲಿ ನಿಸಿದ್ದಿ ಎಂದು ಕರೆಯು ತ್ತಾರೆ) (ಕಶಾಆ. ೯೭). **ನಿಸಿದ್ಧಿ :** ೧. ವಾಸುಪೂಜ್ಯಭಟ್ಟಾರರ ನಿಸಿದ್ಧಿಗೆ [ಪಾಠಾಂ. ನಿಷಿದ್ದಿಗೆ, ನಿಷಿಧಿಗೆ] ಸಂದ ತೀರ್ಥಸ್ಥಾನಮನಾದ ಮಾನುಂ ಶುದ್ಧಪರಿಣಾಮದಿಂದಂ ವಂದಿಸುತ್ತಿರ್ದ ಸೂರ್ಯಮಿತ್ರಾ ಚಾರ್ಯರ್ಗವಧಿಜ್ಞಾನಂ ಪುಟ್ಟಿತ್ತು (ವಡ್ಡಾರಾ. ೯–೧೨) ; ಶ್ರೀಕೊಪಣದ ಚಂದ್ರಸೇನದೇವರ ಗುಡ್ಡ ಗುರುಗಳ ಭಂಡ[ಪ್ಪ]ನ ನಿಸಿದ್ಧಿ (ಕಇಆ. ೭೧–೨–೪; ಸು. 13ನೆಯ ಶತ) ; ಎಲವಟ್ಟಿಯ ದಾಸೆಯನಾಯಕನ ನಿಸಿದ್ಧಿ ಯಪ್ಪ ಭೂಮಿಯಿದು (ಎಕ. VII, ಶಿಮೊ. ೫೮–೫ ; ?). **ನಿಸಿಧಿ :** ೧. ಶ್ರೀಮಲ್ಲಿಸೆಟ್ಟಿಯ ಮಗಳಾದ ರ× ಯಿಗಳ ನಿಸಿಧಿ (ಎಕ. II (R), ೩೫೮–೨ ; 13ನೆಯ ಶತ) ; ಶುಭಚಂದ್ರದೇವರ ಪ್ರಿಯಾಗ್ರಶಿಷ್ಯರುಮಪ್ಪ ಪ್ರಭಾಚಂದ್ರದೇವರ ನಿಸಿಧಿ (ಎಕ. IX, ಕೊಡಗು. ೫೬–೪ ; 1044 ?). **ನಿಸೀಧಿ :** ೧. ಪಾಯಕಣ್ಣನ ನಿಸೀಧಿ (ಕೊಪ್ಪಶಾ. ೪–೬ ; 1300).

[<ನಿಸಿದಿಗೆ]

**ನಿಸಿದಿಕಲ್ಲು** 'ನಿಸಿದಿಗಲ್ಲು' ನೋ.

**ನಿಸಿದಿಗಲ್ಲು,** ನಿಸಿದಿಕಲ್ಲು (ನಾ). [ಜೈನ] ಸಮಾಧಿಯ ಬಳಿ ನೆಟ್ಟ ಕಲ್ಲು,— ಸ್ಮಾರಕಶಿಲೆ : ಸಲ್ಲೇಖನವಿಧಿಯಿಂದ ಮುಡಿಪಿದವರ ಸ್ಮಾರಕಗಳಿಗೆ ನಿಸಿದಿಗಲ್ಲುಗಳೆನ್ನುವರು (ಸಾಹಿಸ. ೧೨) ; ಸನ್ಯಸನವಿಧಿ ಯಿಂದ ಮಡಿದವರ ಸ್ಮಾರಕವಾಗಿ . . . ಕೆಲವು ಸ್ಮಾರಕಗಳನ್ನು ನಿಲ್ಲಿಸು ತ್ತಿದ್ದರು. ಇವುಗಳನ್ನು 'ನಿಸಿದಿಗಲ್ಲು'ಗಳೆಂದು ಕರೆಯುತ್ತಾರೆ (ಕಶಾಆ. ೯೬). **ನಿಸಿದಿಕಲ್ಲು :** ಇದನ್ನು 'ಪ್ರಶಸ್ತಿಶಾಸನ'ವೆಂದು ಕರೆಯ ಬಹುದಾದರೆ ಅನೇಕ ನಿಸಿದಿಕಲ್ಲುಗಳನ್ನೂ ವೀರಗಲ್ಲು, ಮಾಸ್ತಿಗಲ್ಲು ಗಳನ್ನೂ ಅದೇ ಹೆಸರಿನಿಂದ ಕರೆಯಬೇಕಾಗುತ್ತದೆ (ಕಶಾಆ. ೨೯).

[ನಿಸಿದಿ + ಕಲ್ಲು (<ಕಲ್$_3$)]

**ನಿಸಿದಿಗೆ,** ನಿಶಿಧಿಗೆ, ನಿಶೀಧಿಕೆ, ನಿಶೀಧಿಗೆ, ನಿಷಿದಿಗೆ, ನಿಷಿಧಿಗೆ, ನಿಸದಿಗೆ, ನಿಸಿಧಿಗೆ, ನಿಸೀಧಿಕೆ, ನಿಸ್ತಿಕೆ, ನಿಸ್ತಿಗೆ (ನಾ). ೧. = ನಿಸಿದಿ ೧ : ಚಂದ್ರಗುಪ್ತಮುನಿಯುಂ ಭಟ್ಟಾರರ ನಿಸಿದಿಗೆ [ಪಾಠಾಂ. ಷಿದ್ದಿ]ಯಂ ಬಂದಿಸುತ್ತಂ (ವಡ್ಡಾರಾ. ೯೦–೧೨) ; ಅವರ ಶಿಷ್ಯರ್ ಪಟ್ಟದೇವಾ×××ಸಿ ಭಟಾರ ಕುಮಾ×××ಳ ಶಿಷ್ಯನ××× ಸಲೆ ಮುನಿರ್ವ್ವನೆ ಮಂಡಿ×××ಮುಮಮ್ಮ ನಿಸಿದಿಗೆ (ಎಕ. II, ೬೨–೭ ; ಸು. 900). ೨. = ನಿಸಿದಿಗಲ್ಲು : ಸಮಾಧಿಮರಣವನ್ನು ಹೊಂದಿದ ಜೈನಸನ್ಯಾಸಿಗಳ, ಜೈನಗೃಹಸ್ಥರ ಸ್ಮಾರಕವಾಗಿ ನಿಲ್ಲಿಸುವ ಕಲ್ಲುಗಳೇ "ನಿಸಿದಿಗೆ"ಗಳು (ಸಂಶೋತ. ೭೦ ಅಡಿಟ) ; ನಾಗದೇವನು ಕಮಠಪಾರ್ಶ್ವಬಸದಿಯ ನೃತ್ಯಶಾಲೆ, ಜಗತಿ, ನಯಕೀರ್ತಿಯ ನಿಸಿದಿಗೆ (೧೧೭೬), ನಾಗಸಮುದ್ರವೆಂಬ ಕೆರೆ (ಜಿಗಣೆಕಟ್ಟೆ) ಮಾಡಿಸಿದನು (ಹೊಯ್ಸಪಾ. ೨೧೪). ೩. = ನಿಸಿದಿ ೨ : ಏಕೆನ್ನ ನಿಸಿದಿಗೆಯ ಬಳಿ ಬಾಗಿ ಬಾಡಿ ನಿಂದಿಹಳೀ ನನ್ನರಸಿ ? (ಪಾರಸಿ. ೨೬–೫೮೦). **ನಿಶಿಧಿಗೆ :** ೨. ಶುಭಚಂದ್ರಸಿದ್ಧಾಂತದೇವರ್ಗ್ಗೆ ಪರೋಕ್ಷವಿನಯಕ್ಕೆ ನಿಶಿಧಿಗೆಯ ನಿಲಿಸಿ (ಎಕ. II (R), ೧೩೫–೧೩೯ ; 1123); ಹೆಗ್ಗಡಿತಿ ಬಾಗಣಬ್ಬೆಯುಂ ಪರೋಕ್ಷವಿನಯಂ ಕಾರಣಮಾಗಿ ನಿಶಿಧಿಗೆಯಂ ಮಾಡಿಸಿದರು (ಎಕ. II (R), ೮೧–೧೦೬ ; 12ನೆಯ ಶತ). **ನಿಶೀಧಿಕೆ :** ೨. ಶ್ರೀಮದ್ವಾದೀಭ ಸಿಂಹಸ್ಯಜಿತಸೇನಮಹಾಮುನೇಃ ಅಗ್ರಶಿಷ್ಯೇಣ ಕೃತಾಸೇಯಂ ನಿಶೀಧಿಕಾ (ಎಕ. VI, ಕೊಪ್ಪ. ೩–೨ ; ಸು. 1090 ?). **ನಿಶೀಧಿಗೆ :** ೧. ಬೋಧಿಸವೆ ಪೆಜಿವು ಜಿನಗೃಹಕ್ಕಾಧಿಕ್ಯಮದಿಲ್ಲೆನಿಪ್ಪುದಂ ಸನ್ಯಸನಾರಾಧನೆಯ ಜವದಿ ಸನ್ದ ನಿಶೀಧಿಗೆಯುಡ್ಡಣೆಗೆ ತಳಿಗೆ ಪಟ್ಟ ಮಿನಿತುಂ (ಸೌಇಇ. XI–i, ೫೨–೭೯; 1007). ೨. ನಿಜಗುರುಗೆ ನಿಶೀಧಿ ಗೆಯೆಂ ಮಾಂಕಬ್ಬೆಗಂತಿಯಮ್ಮಾಡಿಸಿದರ್ (ಎಕ. II (R), ೪೮೪–೪೩; 1119). **ನಿಷಿದಿಗೆ :** ೧. ಗುರುಗಳ ನಿಷಿದಿಗೆಯ ಪ್ರತಿಮೆಯ ಪೂಜೆಗೆ ಪುರುಷೋತ್ತಮದೇವನು ಕೊಟ್ಟದು (ಎಕ. III (R), ನಂಜನ. ೧೩೭–೪೮; 1351). **ನಿಷಿಧಿಗೆ :** ೧. ಕಟ್ಟಿಯಜಟ್ಟಿ ಸೆಟ[ಟ್ಟಿ]ಯ ಮಗ ಚನ್ದಯನ ನಿಷಿಧಿಗೆಯ ಕಲು[ಲ್ಲು] (ಇಆ. XII, ೧೦೧–೪; 12 ನೆಯ ಶತ). ೨. ಪರೋಕ್ಷವಿನೆಯಕ್ಕೆ ನಿಷಿಧಿಗೆಯುಂ ಶ್ರೀಮದ್ದಣ್ಣನಾಯಕ ಗಂಗ ರಾಜಂ ನಿಲಿಸಿ . . . ಮಹಾಪೂಜೆಗಳಂ ಮಾಡಿದರು (ಎಕ. II (R), ೧೫೭–೩೦ ; 1121). **ನಿಸದಿಗೆ :** ೨. ಕಲ್ನಾಟಿಸಿದ ವೀರರಾಡಿ ದಾಡುಂಬೊಲವು, ಮಾಸತಿಯ ನಿಸದಿಗೆಯ ಭೂಮಿ, ಪಾಳ್, ಪಡು, ಬರಡು (ಉಯ್ಯಾಲೆ. ೬೫–೧೫). **ನಿಸಿಧಿಗೆ :** ೧. ಶ್ರೀಪುಷ್ಪಣನ್ದಿನಿಸಿಧಿಗೆ (ಎಕ. II, ೮೫ ; ಸು. 750); ಸ್ವಸ್ತಿ ಶ್ರೀಮಹಾವೀರ XX ಅಬ್ದಿಟಿ ತಮ್ಮಡಿಗಳ ಸನ್ಯಸನದಿನಿತ ಮಜ್ಜಯಾ ನಿಸಿಧಿಗೆ (ಎಕ. II, ೧೫–೨; ಸು. 800) ; ಮಾಕಬ್ಬೆಗಂತಿಯ ಮಡಿಬದ ಬೀಚಗವುಡ ಪರೋಕ್ಷವಿನಯಂ ನಿಸಿಧಿಗೆಯ ಕಲ್ಲ ನಿಱಿಸಿದಂ (ಮೈಆರಿ. ೧೯೪೨ ; ೭೪–೯ : 1013) , ಅವರ ಶಿಷಿತ್ತಿಯರಪ್ಪ ಮಾದೇವಿಕಂತಿಯನ್ನಿಸಿಧಿಗೆಯ ಕಮ್ಬಮುಂ ನಿಱಿಸಿದ ಮಜ್ಞಳಂ (ಎಕ. XIV, ಮಂಡ್ಯ. ೧೫೧–೧೧ ; ?). ೨. ಅಷ್ಟೋಪ ವಾಸದೆ ಕಲ್ನೆಲೆಯ ದೇವರ್ ತಮ್ಮ ಗುರುಗಳೇಳಾಚಾರ್ಯ್ಯದೇವರ್ಗ್ಗೆ ಪರೋಕ್ಷವಿನಯ ನಿಸಿಧಿಗೆಯಂ ನಿಱಿಸಿದರ್ (ಎಕ. XIV, ಎಡತೊ.

೮೪-೨೨, ಸು. 919) ; ಶ್ರೀಮನ್ಮಹಾಪ್ರಧಾನದಂಡನಾಯಕ ಗಂಗರಾಜಂ ತಮ್ಮ ಗುರುಗಳ್ . . . ಶುಭಚಂದ್ರಸಿದ್ಧಾಂತದೇವರ್ಗ್ಗೆ ಪರೋಕ್ಷವಿನಯಕ್ಕೆ ನಿಸಿಧಿಗೆಯು ನಿಲಿಸಿ ಮಹಾಪೂಜೆಯುಂ ಮಾಡಿ ಮಹಾದಾನಮುಂ ಗೆಯ್ದರು (ಎಕ. II, ೧೧೭-೧೩೯; 1123). **ನಿಸೀಧಿಕೆ : ೧.** ಶ್ರೀ ಅತಿಶಯ ಪುಷ್ಪಣನ್ದಿಮುನಿ ಮುಕ್ತಿಯನೆಯ್ದಿದೊಡಾ ನಿಸೀಧಿಕಾ ಪ್ರತಿಬ[ದ್ಧ]ದೆ ಪವಿತ್ರಮಿದನಾನಗಲೆ[ನ್ದು]ವಮೆನ್ದು ನಿಶ್ಚಯಂ (ಎಕ. IV (R), ಕೊಳ್ಳೇಗಾಲ. ೯೨-೧ ; ?). **ನಿಸ್ತಿಕೆ : ೧.** ಕೇ[ಶ]ಪ್ಪನು ಸ್ವರ್ಗಸ್ತನಾದ ನಿಸ್ತಿಕೆಯ ಕಲ್ಲ ನಿಲಿಸಿದರು (ಸೌಇಇ. XV, ೬೬೬-೯; 1420). **ನಿಸ್ತಿಗೆ : ೧.** ಬಾಚಂಣಗಳ ನಿಸ್ತಿಗೆ (ಮೈಆರಿ. ೧೯೩೯, ೨-೩; 1472); ಆಕಿಯ ಮಂಗಿಸೆಟ್ಟಿಯ ಮಗ ಗುಂಮಿಸೆಠಿಯರ ನಿಸ್ತಿಗೆ (ಮೈಆರಿ. ೧೯೩೯, ೧-೩; 1483).

[<ಪ್ರಾ. ಣಿಸೀಹಿಆ, ಣಿಸೇಹಿಆ = ಶ್ಮಶಾನಭೂಮಿ]

**ನಿಸಿದ್ದಿ** 'ನಿಸಿದಿ' ನೋ.

**ನಿಸಿದ್ಧಿ** 'ನಿಸಿದಿ' ನೋ.

**ನಿಸಿಧಿ** 'ನಿಸಿದಿ' ನೋ.

**ನಿಸಿಧಿಗೆ** 'ನಿಸಿದಿಗೆ' ನೋ.

**ನಿಸಿವಗೆ** (ನಾ). ರಾತ್ರಿಯ ಶತ್ರು ; ಸೂರ್ಯ : "ತಾವರೆಗೆಳೆಯಂ . . . ಬಾನ್ಮಣಿ, ನಿಸಿವಗೆ, ಬಿಸುಗದಿರಂ, ತಾವರೆಗೈಯಂ, ಗರಂಗಳಾಣ್ಮಂ – ಈ ೧೧ ಸೂರ್ಯನ ಪೆಸರ್" (ಕಶಸಾ. ೪೮-೨೮).

[ನಿಸಿ (<ನಿಶಿ$_1$) + ಪಗೆ$_2$]

**ನಿಸಿವಗೆಯ** 'ನಿಶಿವಗೆಯ' ನೋ.

**ನಿಸೀಧಿ** 'ನಿಸಿದಿ' ನೋ.

**ನಿಸೀಧಿಕೆ** 'ನಿಸಿದಿಗೆ' ನೋ.

**ನಿಸು** (ನಾ). (?) : ಆ ವಿಶ್ವನಂದಿಮುನಿ ಸಂಭಾವಿತತತ್ತ್ವಂ ತದೀಯ ವಿರಸೋಕ್ತಿಗಳಿಂ ದೇವಂ ಪುದಿದಿರೆ ಮುನಿ ಸಂಭಾವಿಸಿ ಕಳೆದಂ ನಿಜಾಸುವಂ ನಿಸುವಿಂದಂ (ಪರ್ಥಪು. ೨-೪೮) ; ಒಸಯಿಸಿದಾತನ ವಸುವಂ ವಸುಮತಿಯುಮನೆಂದು ಪೊದವಿಪಳು ಬೆಸಯಿಸಲಾ ವಸು ವಸುಮತಿಯಸುನಿಸುಗಳನಸಮಜಸೆ ಕಾಳಿಕಾಂಬೆ ಕುಂದಿಸುತಿರ್ಪ್ಪಳು (ಶಾಸಪ. ೪೯, 1179).

[ ? ]

**ನಿಸುಟು** 'ನಿಸಟು' ನೋ.

**ನಿಸೂದನ** (ನಾ). ಕೊಲ್ಲುವಿಕೆ; ನಾಶಮಾಡುವಿಕೆ; ಸಂಹರಿಸುವಿಕೆ.

[ಸಂ.]

**ನಿಸೂರು** (ನಾ). ೧. ನಿಶ್ಚಿಂತೆ ; ನಿರ್ಯೋಚನೆ ; ಆರಾಮ : ದೊಡ್ಡ ಬಾಬು ಬಂದಿದ್ದರಿಂದ ಭೂತನಾಥನಿಗೂ ಸ್ವಲ್ಪ ನಿಸೂರೆನ್ನಿಸಿತು (ಸಾಹೇಬ್. ೫೯೨); ಇದು ನನಗೆ ಕಿಸಿಯದ ಕೆಲಸ ತಪ್ಪಿ ಹೋಗಲಿ, ಹತ್ತು ವರ್ಷ ಮುಂಚೆ ಸಾಯಬೇಕಾದರೆ ಅದೇ'ನಿಸೂರು' ಎಂದು ನಿಶ್ಚಯಿಸಿ ಸುಮ್ಮನಾಗಿ ಬಿಟ್ಟಿದ್ದೀನಿ (ಜಾಳಹೊ. ೫೦). **೨.** ಸ್ವಾತಂತ್ರ್ಯವನ್ನು ವಹಿಸಿಕೊಳ್ಳುವಿಕೆ ; ಸ್ವೈರವೃತ್ತಿ ; ಸ್ವಚ್ಛಂದ ವರ್ತನೆ : ಹೇಳದೆ ಕೇಳದೆ ಯಾವ ನಿಸೂರಿನಿಂದ ತೆಂಗಿನ ಕಾಯನ್ನು ಬಾಗಿನಕ್ಕೆಲ್ಲಾ ಇರಿಸಿದೆಯೆ ? (ಸೂಮುತಾ. ೮೨) ; ನೋಡಿದಿರಾ ಇವಳ ನಿಸೂರನ್ನ ? (ಕಾಮಿಕಾಂ. ೩೦). [<–ಮರಾ. ನಿಸೂರ್]

**ನಿಸೂರುಗಾರ** (ನಾ). ನಿರ್ದಾಕ್ಷಿಣ್ಯ ಸ್ವಭಾವದವನು ; ಅಡ್ಡಿ ಆತಂಕಗಳನ್ನು ಲೆಕ್ಕಿಸದವನು ; ನಿಶ್ಚಿಂತ : 'ನಿಸೂರುಗಾರಿಕೆ' ಪರಾ. [ನಿಸೂರು+–ಗಾರ (<–ಕಾಜಿ)]

**ನಿಸೂರುಗಾರಿಕೆ** (ನಾ). ನಿರ್ದಾಕ್ಷಿಣ್ಯ ಪ್ರವೃತ್ತಿ; ಅಡೆತಡೆಗಳನ್ನು ಲೆಕ್ಕಿಸದ ಸ್ವಭಾವ : ಮಗಳ ಸಂಕೋಚ ತುಂಬಿದ ಸುಕುಮಾರವಾದ ಹೃದಯ ಅವನಿಗೆ ಅರ್ಥವಾಗಲಿಲ್ಲ ; ಅವನ ದರ್ಪದ ನಿಸೂರುಗಾರಿಕೆ ಇವಳಿಗೂ ಸರಿದೋರಲಿಲ್ಲ (ಸಮಾಲೋ. ೯೦).

[ನಿಸೂರುಗಾರ+–ಇಕೆ]

**ನಿಸೂರುಮಾರ್ಗ** (ನಾ). ಸಲೀಸಾದ ಮಾರ್ಗ; ಅಡ್ಡಿ ಆತಂಕಗಳಿಲ್ಲದ ದಾರಿ : ನಂದೊಂದು ನಿಸೂರುಮಾರ್ಗ ಹೇಳ್ತೀನಿ, ಹಂಗೆ ಮಾಡಿದರೆ ಒಬ್ಬರಿಗೂ ತಂಟೆ ಇರೋದಿಲ್ಲ (ವೈದ್ಯವಿ. ೬೦).

[ನಿಸೂರು + ಮಾರ್ಗ]

**ನಿಸೃತ** (ಗು). ೧. ಸುರಿದ ; ಸ್ರವಿಸಿದ ; ಪ್ರವಹಿಸಿದ : ಚಂದಿರಮಣಿನಿಸೃತಾಂಭಃಪ್ಲವಂ ಪರ್ಜನೋಲಾಡುವ ದಿವ್ಯಸ್ತ್ರೀಸಮೂಹಂ ಸಿರಿಯ ನೆರವಿಯಂ ಪೋಲೆ ತಾನೊಂದು ದುಗ್ಧಾರ್ಣವಮೆಂಬೀ ಮಿಕ್ಕ ಮಾತಂ ಕಿಱಿದೆನಿಸುವುದಾ ಸಿಂಧುಶುಭ್ರಾಂಬುಶೋಭಂ (ಲೀಲಾವ. ೮-೪೯). (ನಾ). **೨.** [ನಾಟ್ಯ] ಹತ್ತುಬಗೆಯ ಜಂಘಾಭೇದಗಳಲ್ಲಿ ಒಂದು ; ℙ "ಜಂಘೆಯನ್ನು ಮುಂದಕ್ಕೆ ನೀಡುವುದು" (ಲಾಸ್ಯರಂ. ೨೬೪ ಗದ್ಯಾನುವಾದ) ; ಆವರ್ತಿತ, ನತ, ಉತ್ಕ್ಷಿಪ್ತ, ಉದ್ವಾಹಿತ, ಪರಿವರ್ತಿತ, ನಿಸೃತ, ಪರಾವೃತ್ತ, ತಿರಶ್ಚೀನ, ಬಹಿರ್ಗತ, ಕಂಪಿತ— ಈ ಹತ್ತು ಜಂಘಾಭೇದಂಗಳ್ (ಲಾಸ್ಯರಂ. ೨-೧೪೪ ವ). [ಸಂ.]

**ನಿಸೃಷ್ಟ** (ನಾ). ೧. ಕೊಟ್ಟುದು ; ದಾನ ; ಕೊಡುಗೆ. **೨.** ಬಿಟ್ಟುದು; ಹೊರಪಡಿಸಿದುದು : "ನಿಸೃಷ್ಟ–ಬಿಟ್ಟದ್ದು" (ಗಂಗಾಮು. ೧೪೭). **೩.** ಇಟ್ಟುದು ; ನ್ಯಾಸ : "ನ್ಯಸ್ತಂ, ನಿಸೃಷ್ಟಂ–೨ ಇರಿಸಲ್ಪಟ್ಟದು" (ಸಿದ್ಧಾಂತಿ. ೩೪೭). **೪.** ರಾಜದೂತ ; ರಾಜಪ್ರತಿನಿಧಿ: ಒಂದುದೆವಸವೋಲಗದೊಳೊರ್ವನಪೂರ್ವಂ ನಿಸೃಷ್ಟಂ. . .ಸರ್ವೋಪಾಯಪರಿಗೋಚರಂ ಚೇಚರಂ ಬಂದು (ಶಾಂತಿಪು. ೨-೧೪ ವ). ℙ ಈ ಪ್ರಯೋಗದಲ್ಲಿ ಬಳಕೆಯಾಗಿರುವ ಈ ರೂಪ 'ನಿಸೃಷ್ಟಾರ್ಥ'ದ ಸಂಕ್ಷಿಪ್ತರೂಪ. [ಸಂ.]

**ನಿಸೃಷ್ಟಾರ್ಥ** (ನಾ). ೧. ಒಬ್ಬ ರಾಜನು ಮತ್ತೊಬ್ಬ ರಾಜನ ಬಳಿಗೆ ರಾಜಕಾರ್ಯನಿಮಿತ್ತವಾಗಿ ಕಳುಹಿಸುವ ಪ್ರತಿನಿಧಿ ; ರಾಜದೂತ; ರಾಯಭಾರಿ; ℙ ಈ ದೂತರಲ್ಲಿ ಮೂರು ಹಂತದವರಿರುತ್ತಾರೆಂದು ಕೌಟಿಲ್ಯನ ಅರ್ಥಶಾಸ್ತ್ರದ ಮೊದಲನೆಯ ಅಧಿಕರಣದಲ್ಲಿ ಹೇಳಿದೆ. ೧. ನಿಸೃಷ್ಟಾರ್ಥ : ಇವನಿಗೆ ಹೆಚ್ಚು ಅಧಿಕಾರವೂ ಸ್ವಾತಂತ್ರ್ಯವೂ ಇರುತ್ತದೆ. ಮಂತ್ರಿಗೆ ಸಮಾನವಾದ ಸ್ಥಾನಮಾನವನ್ನು ಹೊಂದಿರುತ್ತಾನೆ (ಅಮಾತ್ಯ ಸಂಪದೋಪೇತಃ ನಿಸೃಷ್ಟಾರ್ಥಃ). ೨. ಪರಿಮಿತಾರ್ಥ : ಇವನ ಅಧಿಕಾರ ಪರಿಮಿತವಾಗಿರುತ್ತದೆ. ರಾಜನು ವಹಿಸಿರುವಷ್ಟು ಮಟ್ಟಿಗೆ ಸೀಮಿತವಾಗಿರುತ್ತದೆ. ನಿಸೃಷ್ಟಾರ್ಥನಿಗಿಂತ ಕಾಲು ಭಾಗದಷ್ಟು ಕಡಿಮೆ ಅಧಿಕಾರ ಇವನದು (ಪಾದಿಗುಣಹೀನಃ ಪರಿಮಿತಾರ್ಥಃ). ೩. ಶಾಸನಹರ : ಇವನ ಕೆಲಸವು ರಾಜಸಂದೇಶವನ್ನು ತಿಳಿಸುವುದು ಮಾತ್ರ (ಅರ್ಧಗುಣಹೀನಃ ಶಾಸನಹರಃ) : ನರಪತಿಗೆಬಿಗೆ ವಿಭು ನಿಸೃಷ್ಟಾರ್ಥನವಾಸನದೊಳ್ ಕುಳ್ಳಿರಿಮೆನೆ (ಶಾಂತಿಪು. ೩-೭೪) ; ವಿಯಚ್ಚರೇಶ್ವರಂ ಜಯವರ್ಮಜನೇಶ್ವರನಲ್ಲಿ ಗನ್ನವಾಗಾಗತನುಂ ನಿಸೃಷ್ಟಾರ್ಥನುಂ . . . ವಚನಚತುರನುಮಪ್ಪದ್ಧವನೆಂಬ ದೂತಮುಖ್ಯನನಟ್ಟಿದೊಡೆ (ಚಂದ್ರಪ್ರ. ೬-೧೪ ವ). **೨.** ಈಡೇರಿಸುವಂತಹುದು ; ಕಾರ್ಯಸಾಧಕವಾದುದು : ಕಯ್ಯಂ ಪಿಡಿದಾಂ ತಂದಿನಿಯನನೀ ಪಾಸೊಳ್ ತಂದೆಳದಳಿರಿಂದೆ ತೋರಣಂಗಟ್ಟುವೆಂ ಎಂದು ಕಿವಿವುಗೆ ನುಡಿದೊಡಂಗೊಂಡು ಪೋಪುದುಂ ದಕ್ಷಿಣನವಳ ದೂತೀಜಲ್ಪಂ ನಿ[ಶಾಂತಾಂ. ವಿ]ಸೃಷ್ಟಾರ್ಥಮಾದುದೆಂದುಮುಲ್ಲಿಂ ತಳರ್ದು (ಚಂದ್ರಪ್ರ. ೮-೯೧ ವ). **೩.** [ಕಾವ್ಯಮೀ] ನಾಯಕ ಮತ್ತು

ನಾಯಿಕೆಯರಿಗೆ ಪರಸ್ಪರ ಸಮಾಗಮವನ್ನು ಏರ್ಪಡಿಸುವ ಕಾರ್ಯಸಾಧಕರಲ್ಲಿ ಒಬ್ಬ ; ಮುಖ್ಯದೂತರಲ್ಲಿ ಒಬ್ಬ ; ☞ ಶೃಂಗಾರ ಸಹಾಯಕರಾದ ದೂತ-ದೂತಿಯರಲ್ಲಿ ಮೂರು ಬಗೆಯವರಿದ್ದಾರೆ. ೧. ನಿಸೃಷ್ಟಾರ್ಥ : ನಾಯಿಕಾ ನಾಯಕರ ಮನಸ್ಸಿನ ಇಂಗಿತವನ್ನು ಊಹಿಸಿ ತಿಳಿದು ತಾನೆ ಸಮರ್ಪಕವಾಗಿ ಉತ್ತರವನ್ನು ಕೊಡುತ್ತಾನೆ. ತಾನು ವಹಿಸಿಕೊಂಡ ಕಾರ್ಯವನ್ನು ಚೆನ್ನಾಗಿ ಸಾಧಿಸುತ್ತಾನೆ. ೨. ಮಿತಾರ್ಥಕ : ಇವನು ನಿಸೃಷ್ಟಾರ್ಥನಂತೆ ಸಂಪೂರ್ಣಸ್ವಾತಂತ್ರ್ಯವನ್ನು ವಹಿಸುವುದಿಲ್ಲ. ಆದರೂ ಮಿತವಾಗಿ ಮಾತನಾಡುತ್ತ ಕಾರ್ಯವನ್ನು ಸಾಧಿಸುತ್ತಾನೆ. ೩. ಸಂದೇಶಹಾರಕ : ಇವನು ಹೇಳಿ ಕಳುಹಿಸಿದ ಸಂದೇಶವನ್ನು ಮಾತ್ರ ಉಭಯತ್ರರಿಗೂ ತಿಳಿಸುತ್ತಾನಲ್ಲದೆ ಮತ್ತಾವ ಸ್ವಾತಂತ್ರ್ಯವನ್ನೂ ವಹಿಸುವುದಿಲ್ಲ. ಈ ಕಾರ್ಯಸಾಧಕರು ಹೆಂಗಸರೂ ಆಗಬಹುದು. [ಸಂ.]

**ನಿಸೃಷ್ಟಿ** (ನಾ). ಕೊಡುಗೆ; ದಾನ: 'ನಿಸೃಷ್ಟಿಲೇಖ' ಪರಾ. [ಸಂ.]

**ನಿಸೃಷ್ಟಿಲೇಖ** (ನಾ). (ದಾನ, ದತ್ತಿ ಮೊದಲಾದುವುಗಳನ್ನು ಕುರಿತ) ಅಪ್ಪಣೆಯ ಬರಹ ; ಪರವಾನಿಗೆ ಲೇಖ ; ದಾನಶಾಸನ: ಪರಿಹಾರಲೇಖಗಳು, ನಿಸೃಷ್ಟಿಲೇಖಗಳು (Writs of license), ಪ್ರಾವೃತ್ತಿಕ ಲೇಖಗಳು . . . ಇವು ಇನ್ನೂ ಕೆಲವು ಶಾಸನ ಪ್ರಭೇದಗಳಾಗಿವೆ (ಕಶಾಅ. ೪೫). [ನಿಸೃಷ್ಟಿ + ಲೇಖ]

**ನಿಸೆ** 'ನಿಶಿ₁' ನೋ.

**ನಿಸೆಕ** 'ನಿಸೇಕ' ನೋ.

**ನಿಸೇಕ,** ನಿಸೆಕ (ನಾ). ೧. ಚಿಮುಕಿಸುವಿಕೆ ; ಸಿಂಪಡಿಸುವಿಕೆ. ೨. ಫಲಶೋಭನ ; ಪ್ರಸ್ತ ; ಗರ್ಭಾಧಾನ: "ನಿಸೇಕ-ನಿಷೇಕ= ಗರ್ಭಾಧಾನ, ಸುರಿಯುವಿಕೆ" (ತದ್ಭ ಕೋ. ೨೨). ೩. (ಆಲಂ)ಸಾವು; ಅಳಿವು ; ನಾಶ ; ಅಂತ್ಯ : ಸೀತೆ ಕಡಂಗಿ ಕಾಯ್ದು ಕಡೆಗಣ್ಚಿದಳ ಪ್ಪೊಡೆ ಧಾತ್ರನಿಂ ತೊದಳ್ವಾತಿನೊಳೀನೊ ಪಾಂಡವರ ಕೆಯ್ಯೊಳ್ ನಿನ್ನ ನಿಸೇಕಮಾಗದೇ (ಪಂಪಭಾ. ೯-೪೯) ; ಅದಟನಳುರ್ಕೆಯಂ ನಿಜಾಸಿ ನಿನ್ನ ನಿಸೇಕದ ಪೊಟ್ಟು ತಪ್ಪಲೀಯದೆ ಪೊಜವಟ್ಟು ಬಾ ತಡೆಯದೀಗಳೆ (ಪಂಪಭಾ. ೧೩-೮೦). ೪. ಕೂಡುವಿಕೆ ; ಸೇರುವಿಕೆ ; ಹೊಂದುವಿಕೆ : ತನ್ನವಳ ಮಾನವನು ತಾನು ಕಾಪಿಡಲೆಂದು ಮಚ್ಚ ಮೇಲೆತ್ತಿದನು ; ಅರ್ಜುನನ ಮೈದುನಗೆ ರಕ್ತಾಭಿಷೇಕಮಾಯ್ತು—ಯಮನೊಡನೆ ನಿಸೇಕಮಾಯ್ತು (ಶಕಾರ. ೯೨). **ನಿಸೆಕ :** ೫. ಉಳಿದಿರುವ ಜೀವಮಾನ,—ಆಯುಷ್ಯಾವಧಿ : ನಿಸೆ[ಪಾಠಾಂ. ಸ]ಕಂಗಳ್ಗಿಱಿವನ್ನಮುತ್ತುಪ್ಪಲ್ತದಿನಾಯುಃಪ್ರಾಣಮಂ ಬೆನ್ನನೇಱಿಸಿಕೊಂಡೋಡುವ ಕಾಲಮೆಂಬೆರಲೆಯಂ ಬೆಂಬತ್ತಿ ಬೀಟ್ಟುಂದ ದೇಹಸಮೂಹಂಗಳೊಳಾವುದಂ ನೆನೆದು ಮೋಹಂಗೆಯ್ದನೇನೆಂದು ಭಾವಿಸಿದಂ ದೇಹದನಿತ್ಯಮಪ್ಪ ನಿಲವಂ ಸಾಹಿತ್ಯವಿದ್ಯಾಧರಂ (ಮಲ್ಲಿಪು. ೯-೭೬). ☞ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ. [<ಸಂ. ನಿಷೇಕ]

**ನಿಸೇವಣೆ** (ನಾ). ಉಪಭೋಗ ; ಸೇವಿಸುವಿಕೆ ; ಮೋಹ : ಭೂವಿಬುಧರನು ಕೊಲುವ . . . ಕನಕವನು ಕಳುವ ನಿಸೇವಣೆ[ಣೆ] ಗುರುಸ್ತ್ರೀಯರಲಿ ಕಾಮುಕನು ಸಂಗಿಸುವ ಭಾವಿಸದೆ ಪಾತಕಗಳಿವು ನಾಲ್ಕಾವ ಮರ್ತ್ಯರೊಳವರೊಡನೆ ಸಂಜೀವಿಸುವವರವೈವರತಿಪಾತಕಿಗಳು (ನಿಭಾಗ. ೫-೧೧-೧೦). [<ಸಂ. ನಿಷೇವಣ]

**ನಿಸೇವಿತ** (ಗು). ಪೂಜಿಸಲ್ಪಟ್ಟ : ಕಾಲಕರ್ಮವಿದೂರ ದುಸ್ತರ ಕಾಲ ಶಕ್ತಿನಿಸೇವಿತಾಂಘ್ರಿಯೆ ಕಾಲರೂಪನೆ ದೇವ ಶರಣಾಗೆಂದುದಮರಗಣ (ನಿಭಾಗ. ೪-೩-೩೪). [<ಸಂ. ನಿಷೇವಿತ]

**ನಿಸ್ಖಲಿತ** (ಗು). ಸ್ಖಾಲಿತ್ಯವಿಲ್ಲದ ; ದೋಷವಿಲ್ಲದ ; ಶುದ್ಧವಾದ : ವಾಯುವ್ಯಾಸ್ತ್ರದಲಿ ನಿಸ್ಖಲಿತ ಮೇಘವ್ರಜವನೆಚ್ಚನು ಪಾರ್ಥ ಸಹಿಲದಲಿ (ಕುವ್ಯಾಅ. ೨೦-೩೫) ; ಪವನಾಹಾರದಲಿ ನಿಸ್ಖಲಿತ ಶಿವಪದಭಕ್ತಿ ಸುಧೆಯಲಿ . . . ಸತ್ಪ್ರೋಜ್ಜ್ವಲಿತ ಚಿತ್ತದ ಸುಪ್ರಭಾವದ ಬಳವಿಗೆಯಲುತ್ಕ್ರೋಚ ವಾಯಿತು ತಪ ಧನಂಜಯನ (ಕುವ್ಯಾಅ. ೫-೪). [ಸಂ.]

**ನಿಸ್ತಂತು** (ಗು). ೧. ಸಂತಾನವಿಲ್ಲದ; ಮಕ್ಕಳಿಲ್ಲದ. (ನಾ). ೨. ತಂತುವಿಲ್ಲದಿರುವುದು ; ತಂತಿರಹಿತವಾದುದು : (ನಿಸ್ತಂತುವಾಗಿ ಕಳುಹಿಸಬಹುದಾದ) ವಿದ್ಯುತ್ತರಂಗಗಳು (Hertzian waves, ೨೦೪೭) ; ಅಂಚೆ, ತಂತಿ, ಟೆಲಿಫೋನ್ ಮತ್ತು ನಿಸ್ತಂತು (Wireless) ಸಂಪರ್ಕಮಾರ್ಗಗಳು ಅಂಚೆ ಮತ್ತು ತಂತಿ ಇಲಾಖೆಯ ಅಧೀನದಲ್ಲಿವೆ (ಶಿಲ್ಪನಾ. ೫೧೦) : ವಿಖ್ಯಾತರೂ ಮತ್ತು ಭೌತಶಾಸ್ತ್ರಜ್ಞರೂ ಆದ 'ಎ. ಎಸ್. ಪೊಪೋವ್' ಎಂಬುವರು "ನಿಸ್ತಂತುವಿನ ತಾರಾಯಂತ್ರ" (Wireless Telegraphy)ವನ್ನು ಸಂಶೋಧಿಸಲು ದುಡಿದಿದ್ದಾರೆ (ಸಸ್ಯಕ. ೧೧೧). ೩. ಬ್ರಹ್ಮಚಾರಿ. [ಸಂ.]

**ನಿಸ್ತಂದ್ರ** (ಗು). ೧. ಜಡನಲ್ಲದ ; ಸೋಮಾರಿಯಲ್ಲದ : ಕಾರ್ಯನಿರತನಾದ : ಸುರಗಿ ಚೌಡಯ್ಯಗಳು . . . ವರಲಿಂಗದೇವನುಣಲೊಲ್ಲದಿರೆಯೊಂದುದಿನ ಸುರಗಿಯಿಂದಿಱಿದುಕೊಳಲೀಶ ನಿಜದೋಱುತ್ತ ಪರಮಕೈಲಾಸಪುರಕೊಯ್ದನೆಂದೊರೆದನಾ ನಿಸ್ತಂದ್ರ ದೇಶಿಕೇಂದ್ರ (ಗುರುಚಾ. ೬-೬೪). (ನಾ). ೨. ಜಡನಲ್ಲದವನು ; ಪರಮಾತ್ಮ : ನಿಶ್ಶೂನ್ಯ ನಿರುತ ನಿತ್ಯಾನಂದ ನಿಸ್ತಂದ್ರ ನೀನೆನ್ನ ಪೊರೆ ಗುರುಕುಲೋತ್ತುಂಗ ಮುದವೆರಸಿ (ಕುಮಾವ್ಯ. ೨-೫೫). [ಸಂ.]

**ನಿಸ್ತಂಭ** (ಗು). ೧. ಕಂಭವಿಲ್ಲದ : ನೀಲದಲಿ ನಿಸ್ತಂಭ ತೋರಣ ತೇಲ್ದುದೆನೆ ಚಲಿಸಿತು ವಿಹಂಗಸಂಘಂ (ಪಕ್ಷಿಕಾ. ೭೭-೧೯). (ನಾ). ೨. ಕಂಭವಿಲ್ಲದುದು : ಅರಸುಗಳಾಲೋಚನಕಾಲದೊಳ್ ನಿಸ್ತಂಭಮುಂ ನಿರ್ಗವಾಕ್ಷಮುಂ ನಿಷ್ಟಿದ್ರಭಿತ್ತಿಯುಂ . . . ಅಪ್ಪ ಮಂತ್ರಶಾಲೆಯೊಳ್ ಮಂತ್ರಿಗಳುಂ ತಾನುಂ ನಿಶ್ಚಿಂತವಿಂದಾಲೋಚಿಸುವರ್ (ಪಂಚತಂ. ೨೦೪-೧೨). [ಸಂ.]

**ನಿಸ್ತಪ** (ನಾ). ತಪಸ್ಸನ್ನು ಮಾಡದವನು ; ತಪೋರಹಿತ : ಮಾಯ್ದು ಮಾಯಾತಪದೊಳ್ ಮಿಥ್ಯಾಪ್ರಪಂಚಪ್ರಬಳನೆನಿಸಿ ಸಂದಿರ್ದ ನಾನಿನ್ನೆಗಂ ನಿಸ್ತಪನೆಂದುಂ ಮಾರ್ಗಮಂ ಪೊರ್ದಿದೆನೆನಗೆ ಶರಣ್ ಧರ್ಮದಿಂದತ್ತ ಮತ್ತಿಲ್ಲ ಪುನರ್ದೀಕ್ಷಾಪ್ರಸಾದಂ (ಸುಕುಸೂ. ೩-೪೫). [ಸಂ.]

**ನಿಸ್ತಬ್ಧ** (ನಾ). ೧. ಚಲಿಸದೆ ಇರುವುದು ; ಅಚಲವಾದುದು : ಆ ಅಭ್ರಭೇದಿಯೂ ಉದಯರವಿರಶ್ಮಿಸಮುಜ್ಜ್ವಲವಾದ ತುಷಾರಕಿರೀಟವನ್ನು ಧರಿಸಿಯೂ ಇರುವ ಶೈಲಚಕ್ರವರ್ತಿಯು ನಾಲ್ಕುದಿಕ್ಕಿನಲ್ಲಿಯೂ ನಿಸ್ತಬ್ಧವಾಗಿರುವ ಗಿರಿಪರಿವಾರಕ್ಕಿಂತ ಎಷ್ಟು ಮೇಲೆ ತಲೆಯೆತ್ತಿ ನಿಂತಿದೆ (ಬಂಕಿಮ. XXI, ಕವಿಕಾಣಿಕೆ). ೨. ಚಲಿಸದೆ ಇರುವವನು ; ನಿಶ್ಚಲ ; ಅಚಲ : ನಿಶ್ಶಂಕೆಯೊಳು ನೆರೆವ ಹಕ್ಕಿಗಳ ತೆರದಿ ನಿಸ್ತಬ್ಧನೆನ್ನೆಡೆಗೆ ಬಹ ಭೀರುಭಾವಗಳ ಕೆಳೆಯ ನೋನೋಡೆಂದು ಸರಸಕೌತುಕದಿ (ಮಲೆದೇ. ೫೩-೩). [ಸಂ.]

**ನಿಸ್ತರಂಗ** (ಗು). ೧. ತರಂಗಗಳಿಲ್ಲದ ; ಅಲೆಗಳಿಲ್ಲದ ; ಪ್ರಶಾಂತವಾದ : ಒಳಗೆ ತಳತಳಿಪ ರತ್ನಂಗಳಿನೊಪ್ಪುವ ನಿಸ್ತರಂಗವಿಾಂಗಡಲೆಂಬಗ್ಗಳಿಕೆಗೆಡೆಯಾಗಿ ತೊಳಗುವ ಪಳಿಕಿನ ಮಾಣಿಕ್ಯಕೋಶಮುಂದಿರಮೆಸೆಗುಂ (ಚಂದ್ರಪು. ೧-೧೪೪) ; ಶೀತಕಾಲದಲ್ಲಿ ಪದ್ಮಾನದಿಯ ನಿಸ್ತರಂಗ ನೀಲಕಾಂತ ಜಲಸ್ರೋತ ಹಳದಿ ಹೊಳಪಿನ ಮರಳ ದಡದ ನಿಶ್ಶಬ್ದ ನಿರ್ಜನತೆಯ ನಡುವೆ ಕಾಣದಾಗುತ್ತದೆ (ನಿಬಂಧ. I, ೧೬೩).

(ನಾ). ೨. ತರಂಗಗಳಿಲ್ಲದುದು ; ಅಲೆಯಿಲ್ಲದುದು. ೩. (ಅಲಂ) ಶಾಂತವಾದುದು ; ನಿಶ್ಚಲವಾದುದು : ಚಂದಯ್ಯಗಳು . . . ಇಷ್ಟಲಿಂಗಮಂ ಧರಿಸಿಕೊಂಡು ಚಿತ್ತ ನಿಸ್ತರಂಗವನೈದಿ ಬಸವಣ್ಣ ಮೊದಲಾದ ಶರಣರ ಸಮ್ಯಜ್ಞಾನ ಎನಗಾಯಿತ್ತೆಂದು ಬಿನ್ನೈಸಿದ ಪ್ರಸ್ತಾವದ ವಚನ (ಶೂನ್ಯಸಂ. ೨೬೨-೪೯) ; ಚಿತ್ತವನ್ನು ಎಲ್ಲ ಕ್ರಿಯೆಯಿಂದ ಮುಕ್ತಗೊಳಿಸಿ ಅದನ್ನು ನಿಸ್ತರಂಗವನ್ನಾಗಿ ಮಾಡುವದರಲ್ಲಿ ಸಾಧ್ಯವಿದ್ದ ಎಲ್ಲ ಪ್ರಯತ್ನವನ್ನು ಇಷ್ಟರಲ್ಲಿ ಅವರು ಮಾಡಿದ್ದರು (ಮಹಾಯೋ. ೨೦೧). [ಸಂ.]

**ನಿಸ್ತರಂಗಿತ** (ಗು). ಅಲೆಯಿಲ್ಲದ ; ಪ್ರಶಾಂತವಾದ : ಮುಖಂ ಸುರ್ಕಳಿದು, ನಿಸ್ತರಂಗಿತ ಸರೋವರದಂತೆ, ಶಾಂತವಾದುದು (ಶ್ರೀರಾಮಾ. ೩೭೮-೧೧೧). [ಸಂ.]

**ನಿಸ್ತರಣ** (ನಾ). ೧. ಹೊರಬರುವಿಕೆ. ೨. ದಾಟುವಿಕೆ. ೩. ಪಾರಾಗುವಿಕೆ. ೪. ಹಂಚಿಕೆ ; ಯೋಜನೆ ; ಉಪಾಯ. ೫. ಕಾಲವನ್ನು ಕಳೆಯುವಿಕೆ ; ಅವಧಿಯನ್ನು ಪೂರೈಸುವುದು, —ಕೊನೆ ಮುಟ್ಟಿಸುವುದು. ೬. ನೆರವೇರಿಸುವಿಕೆ ; ಸಿದ್ಧಿ. [ಸಂ.]

**ನಿಸ್ತರಿಸು** (ಕ್ರಿ). ೧. ದಾಟಿಸು : ಮುಂದೊತ್ತೆ ಗೋದಾವರಿ ಭೂಪಂ ತೈಲಪಂ ನಿಸ್ತರಿಸು ಕಟಕಮಂ ಬೇಗಮಿನ್ನಬ್ಬ ನೀನೆಂದೆರೆಯಲ್ಸರ್ವಜ್ಞನಂ ಪೊತ್ತಗಿಯದೆ ನದಿಯಂ ಪೊಕ್ಕಡಾ ವಾರಿಪೂರಂ ಬಿರಿದತ್ತು (ಸಪುಪ.೧-೩೯). ೨. ಕಾಲವನ್ನು ಕಳೆ ; ಅವಧಿಯನ್ನು ಮುಗಿಸು. ೩. ತಾಳಿಕೊಳ್ಳು ; ತಡೆದುಕೊಳ್ಳು ; ಸಹಿಸು ; ಸೈರಿಸು : ಮಂಡೋದರಿ ಲಯಸಮಯದ ಚಂಡಿಕೆಯಂತೆ . . . ಕೈಗಳನ್ನೆತ್ತಿ ಪೊಯ್ಯುಲೆಟ್ಟಿದ್ದಾ ಸಮಯಕ್ಕೆ ತೆಕ್ಕನೆಡೆವೊಕ್ಕನರಿಂಜಯನಂಜನಾಸುತಂ ಅದರ್ಕೆ ನಿಸ್ತ[ಪಾಠಾಂ. ತ್ರ]ರಿಸದಾಕೆ ಸಭೆಯಿನೆಬ್ಬಿದ್ದು ರಾವಣನ ಕೆಲಕ್ಕೆ ಪೋದಳ್ (ಪಂರಾಮಾ. ೧೧-೧೦೭ ಪ) ; ಸರಸಿಜೋದ್ಭವನ ಪುಸಿಯಿಂ ಭೂಮಿ ಕರಗಿ ನಿಸ್ತರಿಸಲಾಜಿದೆ ಮಹಾಪ್ರಳಯಾರ್ಣವದೊಳು ಜರ್ಜ್ಜರಿತವಾಗುತ ಮಹಾತಳಕಿಳಿಯಲು (ಲಾಚಿಂ. ೫-೧); ಮಸ್ತಕ ಮೊದಲಾದ ದಿವ್ಯದೇಹವ ಹೊತ್ತು ನಿಸ್ತರಿಸಿದ ಪಾದಯುಗವ ಕುಸ್ತರಿಸುವರುಂಟೆ ಕುವರಿ (ಮೋಹತ. ೩೧-೪೧) ; ವಾರಣಗಳು . . . ಪಾಂಥಜನರನ್ನು ಹಿಂಸೆಗೈದ್ದರಿಂದಲು ಭವನೋಪದ್ರಗೊಳಿಸಿದ್ದರಿಂದ ಸಹ ಇಂತಪ್ಪ ಬಾಧೆಗಳಿಂದ ನಿಸ್ತರಿಸಲಾರವೆಂದು ಪ್ರಜೆಗಳು ಬಿಂನೈಸಲಾಗಿ (ಎಕ. XII, ಕೊಡಗು. ೨೫-೧೦; 1824). ೪. ನಿಭಾಯಿಸು ; ನಡಸಿಕೊಂಡು ಹೋಗು : ದೈತ್ಯದಾನವರುರವಣೆಯ ಯದುನಾಯಕರು ನಿಸ್ತರಿಸಲಜಿಯರು ಕೃಷ್ಣನಿಲ್ಲದೆ ಭೀತಿ ದ್ವಾರಕಿಗೆ (ಕುವ್ಯಾಸ. ೧೧-೨೭) ; ನನ್ನ ಅಪ್ಪರಿಷ್ಟರು ಆಗ್ರಹ ಮಾಡಿ ಈ ನೂತನಸಂಸಾರವನ್ನು ನನ್ನ ಕೊರಳಿಗೆ ಕಟ್ಟಿದರು ! ವಾರ್ಧಕ್ಯದಲ್ಲಿ ನಾನು ಇದನ್ನು ಹ್ಯಾಗೆ ನಿಸ್ತರಿಸಿಕೊಳ್ಳಬೇಕು ? (ಮೋಹಿನೀ. ೧೪). 'ನಿತ್ತರಿಸು' ಪರಾ. [ನಿಸ್ತರಣ+ – ಇಸು$_3$]

**ನಿಸ್ತರುಣನಿರ್ವ್ಯದ್ಧಾಂಗ** (ನಾ) ಪರಮಾತ್ಮ : ನಿರಘ ನಿರ್ಭವ ನಿರ್ವಿರಳ ನಿಸ್ತರು[ಪಾಠಾಂ.ರ]ಣ ನಿರ್ವೃದ್ಧಾಂಗ ನಿಜನಿರ್ವಾಣಯ ಚಿತ್ತೈಸು (ಬಸವು. ೬೧-೪೪). [ಸಂ.]

**ನಿಸ್ತರ್ಹಣ** (ನಾ). ಕೊಲ್ಲುವಿಕೆ; ನಾಶಮಾಡುವಿಕೆ: "ಪ್ರಮಾಪಣಂ . . . ನಿಗ್ರ್ರಂಥನಂ, ಅಪಾಸನಂ, ನಿಸ್ತರ್ಹಣಂ . . . ವಧಃ—ಈ ೩೦ ಕೊಲ್ಲುವದಕ್ಕೆ ಹೆಸರುಗಳು. ಸಂಹಾರ ಮಾಡುವಿಕೆ" (ಸಿದ್ಧಾಂತಿ.೨೭೨). [ಸಂ.]

**ನಿಸ್ತಲ** (ಗು). ೧. ಚಪ್ಪಟೆಯಲ್ಲದ ; ವರ್ತುಲವಾದ ; ಗೋಳಾಕಾರವಾದ. (ನಾ). ೨. ಗೋಳಾಕಾರವಾದುದು ; ವರ್ತುಲಾಕೃತಿ : "ನಿಸ್ತಲಂ, ವರ್ತುಳಂ, ವೃತ್ತಂ—ಈ ೩ ಬಟ್ಟಿತ್ತು" (ಹಲಾಯು. ೧೨೪-೬೮) ; "ವರ್ತುಲಂ ನಿಸ್ತಲಂ ವೃತ್ತಮೆನೆ ಬಟ್ಟಕ್ಕು" (ಮಂಗರಾ. ೧೩೨-೨೫). [ಸಂ.]

**ನಿಸ್ತಾರ** (ನಾ). ೧. ದಾಟುವುದು. ೨. ಪಾರಾಗುವುದು : ವಿಮೋಚನೆ ; ಬಚಾವು : ಯಮದಣ್ಣದ ಗರ್ಭದೊಳಗೆ ಹೊಕ್ಕು ಅವಿತಡಗಿದರೂ ನಮ್ಮ ಕಣ್ಣಯ್ಗಳ ನಿಳ್ಕಿನಿಂದ ನಿಮಗೆ ನಿಸ್ತಾರವಿಲ್ಲ (ಬಿಟ್ಟಅ. ೫೩-೪); ಬರುವನಗೋ ಅತ್ತ ಮಹಾಧೀರ ; ಬಂದು ಮರುಕವೆರೆವನಹುದು ಸತಿಗೆ, ನಿಸ್ತಾರ (ಅಹಲ್ಯೆ. ೬೯-೧೬) ; ಅಕ್ಬರಬಾದಶಹನ ರಾಜ್ಯದಲ್ಲಿ ಅವನ ಮಕ್ಕಳಾದರೂ, ಪರರ ಪ್ರಾಣವನ್ನು ನಷ್ಟಮಾಡುವುದಾದರೆ ಅವರಿಗೆ ನಿಸ್ತಾರವಿಲ್ಲ (ಕಪಾಕುಂ. ೭೭). ೩. ಸಾಧನೋಪಾಯ : ಧಾತ್ರೀನಾಥರ್ಕಳ ಚಿತ್ತವೃತ್ತಿಗಳನಿಚ್ಛಾಮಾತ್ರದಿಮ್ ಬಲ್ಲನೆವಿಶ್ವ ನಿಸ್ತಾರದ ಕುಂಜನಮ್ಬಿ ನೆಗಬ್ದಿಮ್ . . . ಮಲೆಯಾಳ ಶ್ರೀಕುಳೋಧಾರಕಮ್ (ಎಕ. V, ಅರಸೀ. ೧೦೨-೩೦ ; 1254) ; ಆ ಪೈಪೋಟಿಯಲ್ಲಿ ತೇರ್ಗಡೆಯಾದ ಹೊರತು ನಿಸ್ತಾರವಿಲ್ಲ (ಹಣಪ್ರ. ೧೯೮). ೪. ಮೋಕ್ಷ ; ಮುಕ್ತಿ. ೫. ಉದ್ಧಾರ : 'ಗೋತ್ರನಿಸ್ತಾರ' ಪರಾ. [ಸಂ.]

**ನಿಸ್ತಾರಕ** (ನಾ). ೧. ದಾಟುವಿಕೆ : ಕರುಣಿಸೈ ಮುನಿನಾಥ ಕರುಣಾಕರನ ಕೀರ್ತಿವರಾಮೃತವ ದುಸ್ತರಭವಾಬ್ಧಿಸಮಗ್ರನಿಸ್ತಾರಕವನೆನಗೊಲಿದು (ನಿಭಾಗ.೨-೨-೨). ೨. ದಾಟಿಸುವವನು; ದಡ ಸೇರಿಸುವವನು. ೩. ಮೋಕ್ಷವನ್ನು ಕೊಡಿಸುವವನು ; ಮುಕ್ತಿದಾಯಕ : ಭೂರಿಕಳಾವಿಬೋಧಿತ ಸುಧಾಕರರೂರ್ಜಿತಸಾಧುಸಂಘನಿಸ್ತಾರಕರ್. . . ಚಂದ್ರಕೀರ್ತಿಭಟ್ಟಾರಕರೆಂದು ಬಣ್ಣಿಪುದು ವಾರಿಧಿವೇಷ್ಟಿತ ಭೂರಿಭೂತಳಂ (ಸುಕುಮಾ. ೧-೨೨). ೪. ಉದ್ಧರಿಸುವವನು ; ಉದ್ಧಾರಕ : ಕ್ಷಿತಿಯಂ ನಯವಿಕ್ರಮದಿಂ ಪ್ರತಿಪಾಳಿಸಿ ಪಡೆದು ಗೋತ್ರನಿಸ್ತಾರಕನಂ ಸುತನಂ ಬಟಿಕ್ಕಮೆವಿಮ್ಮ ಸ್ಥಿತಿಯಂ ಪ್ರವ್ರಜಿತನಪ್ಪುದುಚಿತಂ ಮಗನೇ (ವರ್ಧಮಾ. ೨-೩೯) ; ಕೊಲಲೆಂದುಯ್ದ್ದ ನಿಶಾಚರಂ ಖಚರರಾಜಂಗುಯ್ದ್ದು ಕೊಟ್ಟಂ ಗಡಂ ಕುಲನಿ[ಪಾಠಾಂ.ವಿ]ಸ್ತಾರಕನೆನ್ನ ದಾರಕನಂ (ಪಂರಾಮಾ. ೬-೪೫) ; ಎಲ್ಲವನು ತನಗೆ ವಿದಿತವೆನೆ ವಿಸ್ತರಿಸಿ ಕಾರುಣ್ಯದಲಿ ಕರುಣಿಪುದಾರು ನೀವಲ್ಲದೆ ಮಹಾಬ್ಧಿ ನಿಮಗ್ನನಿಸ್ತಾರಕರದಾರೆಂದ (ನಿಭಾಗ. ೧೦-೧-೮). ೫. ಗೆಲ್ಲುವವನು ; ಜಯಿಸುವವನು : ಅನುಪಮರಣನಿಸ್ತಾರಕನನೂನಶಕ್ತ್ಯನ್ವಿತಂ ವಿಚಾರಕ್ಷಮನೆಂಬ ನೆಗಟ್ತೆಯಿಂದೆ ಬಲ್ಲಾಳನೃಪಾಳಂ ಕಾರ್ತ್ತಿಕೇಯನಂತೊಪ್ಪಿಪ್ಪಂ (ಎಕ. V, ಅರಸೀ. ೩೮-೧೬ ; ಸು. 1200). [ಸಂ.]

**ನಿಸ್ತಾರಿಸು** (ಕ್ರಿ). ೧. ದಾಟಿಸು ; ದಡ ಸೇರಿಸು. ೨. ರಕ್ಷಿಸು ; ಕಾಪಾಡು : ಬ್ರಹ್ಮಣರಂ ಕೊಂದ ಪತಕನಪ್ಪೊನ್ ಇದನಟಿಪ್ಪೊನ್ ಇದನ್ನಾದವನ್ನೆ ಎನೆತುಮನ್ನಿಸ್ತಾರಿಸಿದ ಪಲಮಕ್ಕು (ಎಕ. X (S), ಚಿಕ್ಕಬ. ೬೬-೨೭ ; ಸು. 850). [ನಿಸ್ತಾರಣ$_0$ + –ಇಸು$_3$]

**ನಿಸ್ತಿಕೆ** 'ನಿಸಿದಿಗೆ' ನೋ.

**ನಿಸ್ತಿಗೆ** 'ನಿಸಿದಿಗೆ' ನೋ.

**ನಿಸ್ತೀರ್ಣ** (ಗು). ದಾಟಿದ : ಈ ಮೇದಿನಿಯ ರಾಜ್ಯವಿದು ನಿಸ್ತೀರ್ಣೋದಕಾಹಿತಸೇತುವೆಂದನು ಡಿಬಿಕನಳವಳಿದು (ನಿಭಾಗ. ೧೦-೫೭-೬). [ಸಂ.]

**ನಿಸ್ತುಲ,** ನಿಸ್ತುಳ (ಗು). ಸರಿಸಾಟಿಯಿಲ್ಲದ ; ಅದ್ವಿತೀಯವಾದ; ಅಪ್ರತಿಮವಾದ: ತರುಣಮ್ಯಣಾಲಗರ್ಭರುಚಿವೆತ್ತ ರಘೂದ್ವಹದೇಹದೀಪ್ತಿ ಮಂಜರಿಯನುಪಾಶ್ರಯಂಬಡೆದು ನಿಸ್ತುಲಮೌಕ್ತಿಕಹಾರಯಷ್ಟಿ ಪೇರುರದೊಳದೇಂ ವಿರಾಜಿಸಿದುದೋ (ಪಂರಾಮಾ. ೧೨-೧೫) ;

ಜಿತತ್ರಿಪುರ ನಿಸ್ತುಲಮಹಾಮಹಿಮ ಭೂಮ ಸುರನಾಯಕ+ತನೂದ್ಭವ ವರಪ್ರದಾತಾ (ಕಿರೀಟೇ. ೫-೧); ಗುಣದೊಳ್ಸತ್ವಮೆ ನಿರ್ಮಲೋಜ್ವಲ ಸುಖಜ್ಞಾನೈಕದಂ ನಿಸ್ತುಲಂ ಕಣಿಯೇಂ ರಾಗಮಯಂ ರಜಂ ನಿಜಿಕೆ ಯಿಕುಂ ತತ್ಕರ್ಮಬಂಧಂಗಳಂ (ಮೈಸೂಮೆ. ೫-೧೬೧). **ನಿಸ್ತುಳ :** ತನ್ನ ಕೇಸಡಿಯ ಕೆಂಪಿನೊಳುಜ್ಜ್ವಲ ಚಿತ್ರಭಿತ್ತಿ ನಿಸ್ತುಳನಿಜವರ್ಣೌಕ್ತಿಕಾ ಭರಣ ದೀಧಿತಿಯಿಂ ತೆರೆಸುತ್ತಿದಂತೆ ಕಣ್ಗೊಳಿಸೆ ಉತಾಂಗಿ ಪೋಲ್ತಳಸಮಾ ಯುಧಮೋಹನಮಂತ್ರಶಕ್ತಿಯಂ (ಮಲ್ಲಿಪು. ೩-೯೭); ನಿರಂತ ನಿರ್ಭವ ನಿರಾಮಯ ನಿರ್ಗುಣ ನಿಸ್ತುಳ ಪ್ರಭಾವರಣ (ಶಬಶಂ. ೫-೨೪). [ಸಂ.]

**ನಿಸ್ತುಲಗಾಂಭೀರ್ಯ** (ನಾ). ೧. ಅಸಮಾನವಾದ ಗಾಂಭೀರ್ಯ ; ಅದ್ವಿತೀಯವಾದ ಗಂಭೀರತೆ. ೨. ಅನುಪಮ ವಾದ ಆಳವುಳ್ಳುದು. ೩. ಅಸಮಾನವಾದ ಗಾಂಭೀರ್ಯವುಳ್ಳ ವನು. ೨, ೩ : ವಿದ್ಯುದುದ್ಯಜ್ಜ್ವಲದಂ ವ್ಯಾಘ್ರಾಜಿನಂ ರಾಜಿಸೆ ಭೃತ ಭುವನಂ ಭೂರಿಸತ್ತ್ವಾಶ್ರಯಂ ನಿಸ್ತುಲಗಾಂಭೀರ್ಯಂ ಕರಂ ಕಣ್ಗೊಳಿಸಿ ದನಭವಾಕಾರಮುದ್ರಂ ಸಮುದ್ರಂ (ಶಬಶಂ. ೧-೩೦). [ನಿಸ್ತುಲ+ಗಾಂಭೀರ್ಯ]

**ನಿಸ್ತುಷ** (ಗು). ೧. ಹೊಟ್ಟು ಕಳೆದ,—ತೆಗೆದ. (ನಾ). ೨. ಹೊಟ್ಟು ಕಳೆದುದು ; ತುಷರಹಿತವಾದುದು. ೩. (ಆಲಂ) ನಿರ್ದೋಷತೆ ; ಪರಿಶುದ್ಧಿ : ಎರವು ಸಯುಮೆನಿಸಲಾರ್ಕುಮೆ ಪರ ಮಾತ್ಮಂ ದಿಟದಿನಾಗಲಱಿಗುಮೆ ಮನದೊಳ್ ಪರಿಭಾವಿಸಿ ನಿನ್ನೊಳ್ ನೀಂ ಸ್ಥಿರನಾಗು ಬಿಡನ್ಯವಸ್ತುವಂ ನಿಸ್ತುಷದಿಂ (ಉಸಾರ. ೩೨೯). ೪. ಪರಿಶುದ್ಧನಾದವನು ; ನಿಷ್ಕಳಂಕನಾದವನು : ವಿಷಧರ ಧರಾಧಿಪತಿ ವಿಷಧರಕಿರಣಮೌಳಿ ವಿಷಯವಿಹ್ವಲದೂರ ವಿಶದಾಮೃತವನು ನಿಸ್ತುಷ ನಾಗಿ ಕರುಣಿಸುವುದು (ಸಿದ್ಧರಾ. ೬-೪೦). [ಸಂ.]

**ನಿಸ್ತುಳ** 'ನಿಸ್ತುಲ' ನೋ.

**ನಿಸ್ತೂಕ** (ನಾ). ೧. ತೂಕವಿಲ್ಲದಿರುವುದು ; ಹಗುರವಾದುದು : ಮುಂ ಪದ್ಧಳಮುಷ್ಪದಳಗಳಿಂ ತೋರ್ಪುದೋರಂತದಂ ತಿಳಿ ಕಾಕಮತಿ ವಿಸ್ತೀರ್ಣ ನಿಸ್ತೂಕವಿರೆ ನಾಶವು (ರತ್ನಶಾ. ೪-೩). ೨. ತೂಕವಿಲ್ಲದ ವನು ; ದುರ್ಬಲನಾದವನು ; ಅಶಕ್ತ : ನಿಸ್ತೂಕನಾದವನು ಪುಸ್ತಕ ವನ್ನು ಎತ್ತಲಾರ (ಗಾದೆ). ೩. (ಆಲಂ) ಭಾರಿ ಮನುಷ್ಯ ; ದೊಡ್ಡ ವ್ಯಕ್ತಿ : ಆ ನಿಸ್ತೂಕಮನುಷ್ಯನಿಂದ ಈ ಕೆಲಸ ಸಾಧ್ಯವಾಗದೆ ಇದ್ದೀತೇ ? (ರೂಢಿ). [←ತುಳು. ನಿಸ್ತೂಕ]

**ನಿಸ್ತೃಣ** (ಗು). ೧. ಹುಲ್ಲಿಲ್ಲದ; ತೃಣವಿಲ್ಲದ. (ನಾ). ೨. ಹುಲ್ಲು ಇಲ್ಲದುದು : ಆತಪತಾಪದಿಂದವಿದು ನಿಸ್ತೃಣ ನಿರ್ಜಳ ನಿಷ್ಪ್ರವಾಳ ವಲ್ಲೀತರುವಾದುದೀಯೆಡೆಯೊಳಿನ್ನಿರವಾಗದು ಪೋಪುದುತ್ತಮಂ (ಜಗವಿ. ೩-೬೪). [ಸಂ.]

**ನಿಸ್ತೇಜ** (ನಾ). ೧. ಕಾಂತಿಹೀನವಾದುದು ; ಕಳೆಗುಂದಿದುದು ; ಮಂಕಾದುದು : ಮಸುಳೆ ದಿನಕರನ ತೇಜಃಪ್ರಸರಂ ನಭಮೆಣ್ಣೆ ದೊಡೆದ ಕನ್ನಡಿಯೊಲ್ ತಾಂ ಮಸಮಸನಾಗಿರ್ದುದು ದೂಳಿಸಂಚೆಯೊಳ್ ದೈನ್ಯ ಮೇನೊ ನಿಸ್ತೇಜದವೊಲ್ (ಮಲ್ಲಿಪು. ೭-೨೦) ; ಈಗ ಒಂದೆರಡು ಶತ ಮಾನಗಳಲ್ಲಿದ್ದ ಕಲೆಯ ಹಿನ್ನೆಲೆಯಿಂದ ನೋಡಿದಲ್ಲಿ ಇಂದಿನ ಕಲೆಯು ಸ್ವಲ್ಪ ನಿಸ್ತೇಜವೆನ್ನಿಸುತ್ತದೆ (ಭಾರದ. ೫೪೫). ೨. ಕಾಂತಿಹೀನ ನಾದವನು ; ನಿರುತ್ಸಾಹಿಯಾದವನು : ಶಾಲೆಗಳಿಂದಲೂ ಕಾಲೇಜು ಗಳಿಂದಲೂ ಉನ್ನತೋನ್ನತ ದರ್ಜೆಯಲ್ಲಿ ತೇರ್ಗಡೆಯಾಗಿ ಹೊರಬೀಳುತ್ತಿ ರುವ ನಮ್ಮ ಯುವಕರನೇಕರು ನಿಸ್ತೇಜರಾಗಿ ಕಾಣುತ್ತಾರೆ (ಶಿಕ್ಷಣ. ೩೮೨). [ಸಂ.]

**ನಿಸ್ತೇಜಂಬೆಱು** (ಕ್ರಿ). ಕಾಂತಿಹೀನವಾಗು ; ಕಳೆಗುಂದು ; ಮಂಕಾಗು : ತೇಜಂ ಪುದುವಿಲ್ಲೆನಿಸಿ ವಿರಾಜಿಸೆ ಪರರಾಜಮಂಡಲಂ ತನ್ನಿಂ ನಿಸ್ತೇಜಂಬೆತ್ತಿರೆ ಬೆಳಗಿದನೀ ಜಗಮಂ ಭಾನುವೆಂಬಿನಂ ಭಾನು ರಥಂ (ಪಂಪರಾಮಾ. ೨-೬೬). [ನಿಸ್ತೇಜ+ಪೆಱು₁]

**ನಿಸ್ತೇಜಿತ** (ನಾ). = ನಿಸ್ತೇಜ ೨ : ಹರಿದಾಸರು ಮಾತ್ರ ನಿಸ್ತೇಜಿತ ರಾಗಿದ್ದರು (ಕಾವೇರಿ. ೧೩೨). [ಸಂ.]

**ನಿಸ್ತೋಯ** (ಗು). ನೀರಿಲ್ಲದ ; ಒಣಗಿದ ; ಶುಷ್ಕವಾದ : ನಿಸ್ತೋಯಕಾಸಾರದೊಲ್ ರಿಕ್ತಮಾನಸಂ . . . ಕೋಸಲಧರಾವಲ್ಲಭಂ ಮಗನನಪ್ಪಲ್ಕೆಳಸಿ ಮೇಲೆಳ್ದುವಿರದೆ ಕುಸಿದನು ಧರೆಗೆ (ಶ್ರೀರಾಮಾ. ೯೧-೩೫೨). [ಸಂ.]

**ನಿಸ್ತ್ರಪ** (ಗು). ನಾಚಿಕೆಯಿಲ್ಲದ ; ಲಜ್ಜೆಯಿಲ್ಲದ. [ಸಂ.]

**ನಿಸ್ತ್ರಪಂ** (ಅ). ನಾಚಿಕೆಯಿಲ್ಲದೆ ; ಲಜ್ಜೆಯಿಲ್ಲದೆ ; ನಿಸ್ಸಂಕೋಚ ವಾಗಿ : ಕುಡುವೊಡೆ ನಿಸ್ತ್ರಪಂ ಕುಡುವುದೇಱಿಸಿದಂ ಬೆಸಕೋಲನೆಂದು ಪೇಟಿಲ್ ಕುಡುವುದೆ ಕನ್ನೆಯಂ ದ್ವಿಜಕುಲಂಗಿದು ವಿಶ್ವನರೇಂದ್ರವೃಂದ ದೊಳ್ ತೊಡರ್ದ ಪರಾಭವಂ ದ್ರುಪದನಂ ತಱಿದೊಟ್ಟಿದೆ (ಪಂಪಭಾ. ೩-೬೬). [ಸಂ.]

**ನಿಸ್ತ್ರಪೆ** (ನಾ). ನಾಚಿಕೆಗೆಟ್ಟವಳು ; ಲಜ್ಜೆಯಿಲ್ಲದವಳು : ನಿರ್ದಯೆಯುಂ ನಿಸ್ನೇಹೆಯುಂ ನಿಸ್ತ್ರಪೆಯುನಸುಖೆಯುಂ . . . ಪಾಪೆಯುಂ ನೀಂ ಬೆಸಗೊಳೆ ಫಲಮೇಂ ಪೇಟಿಲ್ (ಕಾದಂಪೂ. ೯೫೭). [ಸಂ. ನಿಸ್ತ್ರಪಾ]

**ನಿಸ್ತ್ರಾಣ** (ಗು). ತ್ರಾಣವಿಲ್ಲದ ; ಬಲವಿಲ್ಲದ: 'ನಿತ್ರಾಣ' ಪಠಾ. [ಸಂ.]

**ನಿಸ್ತ್ರಾಣಿ** (ನಾ). ತ್ರಾಣವಿಲ್ಲದವನು ; ಬಲವಿಲ್ಲದವನು; ಅಶಕ್ತ. [ಸಂ. ನಿಸ್ತ್ರಾಣಿನ್]

**ನಿಸ್ತ್ರಿಂಶ** (ಗು). ೧. ನಿರ್ದಯವಾದ ; ಕ್ರೂರಿಯಾದ. (ನಾ). ೨. ಮೂವತ್ತನ್ನು ಮೀರಿದ ಅಳತೆ ; ಮೂವತ್ತು ಬೆರಳುಗಳ ಪ್ರಮಾಣವನ್ನು ಮೀರಿದ ಅಳತೆ. ೩. ನಿರ್ದಯನಾದವನು : ಕ್ರೂರಿ ; ನಿಷ್ಕರುಣಿ : "ಕ್ರೂರನವನೆನಿಪನುಂ ನಿಸ್ತ್ರಿಂಶನೆನಿಸುಗುಂ" (ವಸ್ತುಕೋ. ೧೪೯-೧೨೫); ಉರಿದೆಂ ಬೆಂದೆನಿದೇನನಿಂತು ನೆಗಟ್ದ ನಿಸ್ತ್ರಿಂಶ ಪುಷ್ಪಾಸ್ತ್ರ ನಿಷ್ಠುರ ಪೇಟಿಲ್ ಪೊಲ್ಲದನೇನನಾಚರಿಸಿದಳ್ ನಿನ್ನೊಳ್ ಮಹಾಶ್ವೇತೆ (ಕಾದಂಪೂ. ೯೦೦); ಸಂಜೀವಕನಪ್ಪೊಡೆ ನೀಚನುಂ ನಿಸ್ತ್ರಿಂಶನುಮಪ್ಪಗಿರ್ದಂ (ಪಂಚತಂ. ೧೦೭-೩); ಸ್ತ್ರೀವಧಂಗೆಯ್ಯೆ ಮಾಣಹಹಿನ್ನೆತ್ತದಿರೀ ನಿಜಾನುಜೆಗೆ ನೀಂ ನಿಸ್ತ್ರಿಂಶ ನಿಸ್ತ್ರಿಂಶಮಂ (ಜಗವಿ. ೨-೪೯). ೪. ಕತ್ತಿ ; ಖಡ್ಗ : "ಅಸಿ ಖಡ್ಗಂ . . . ಕೃಪಾಣಾಹ್ವಂ ಮತ್ತಸಿ ನಿಸ್ತ್ರಿಂಶಂ ಕರವಾಲ ಸಾಯಕಂ ರಿಷ್ಟಿಮಂಡಲಾಗ್ರಂ ಖಳ್ಗಂ" (ವಸ್ತುಕೋ. ೪೪-೧೬); ಪರಭೂಪಾಳಸಮುದ್ರದೊಳ್ ನಿಜಕರ ಪ್ರೋತ್ಖಾತ ನಿಸ್ತ್ರಿಂಶ ಮಂದರಮಂ ಸಂಧಿಸಿ ವಿಕ್ರಮದುಜ್ಜಪಣೀಂದ್ರಾವೇಷ್ಟಿತ ಪ್ರಾನ್ತಮಂ ಭರದಿಂದಂ ಕಡೆದುಗ್ರವಂಶತಿಳಕಂ ಶ್ರೀಕಾನ್ತೆಯಂ ತನ್ನ ಪೇರುರದೊಳ್ ತಾಳ್ದಿ (ಎಕ. VIII, ನಗರ.೩೭-೭೨; 1147); ಸ್ತ್ರೀವಧಂ ಗೆಯ್ಯೆ ಮಾಣಹಹಿನ್ನೆತ್ತದಿರೀ ನಿಜಾನುಜೆಗೆ ನೀಂ ನಿಸ್ತ್ರಿಂಶ ನಿಸ್ತ್ರಿಂಶಮಂ (ಜಗವಿ. ೨-೪೯) ; ಧುರದೊಳ್ನಿನ್ನ ಕರಾಗ್ರದೊಳ್ನಿಮಿರ್ಪ ನಿಸ್ತ್ರಿಂಶಕ್ಕೆ ಮೈಗೊಟ್ಟು ಬಿದ್ದರಿಭೂಪಾಲಕರ ನಿರೀಕ್ಷಿಸಿ ಜಯಂತಂ ತಾಂ ಪಿತಾನ್ವೇಷಣಾತುರನಾದಂ (ಬೀಳವಂ. ೨-೨೮೩). [ಸಂ.]

**ನಿಸ್ತ್ರಿಂಶಕ** (ನಾ). ಕತ್ತಿ ; ಖಡ್ಗ : ಈ ನಿಶಿತ ನಿಸ್ತ್ರಿಂಶಕವು ತಾನೇ ನದಾರಿಗೆ ಹೋಗಲದಕಿಂದೇನು ನಮ್ಮಯ ಕೊಡುವ ಸಾಲವ ಕೊಟ್ಟು ಹೋಗೆಂದ (ತೊರರಾ. ೭-೨೪-೨೨). [ಸಂ.]

**ನಿಸ್ತ್ರಿಂಶಕರ್ಮ** (ನಾ). ನಿರ್ದಯವಾದ ಕಾರ್ಯ ; ಘಾತಕ ಕೃತ್ಯ : ಅರವಿಂದಂ ಕುರುವಿಂದನಂ ಕರೆದುತ್ಪನ್ನ ವಿಭಂಗಜ್ಞಾನದಿಂ ಮೃಗಂಗಳಿರ್ದೆಡೆಯನಱಿದು ನಿಷ್ಕರುಣನವರರುಣಜಲದೊಳೆನಗೆ ಲೀಲಾ ಸರೋವರಮಂ ನೀಡಿಲ್ಲದೆ ಮಾಡೆಂದು ಪೇೞೆಪ್ಪೊಡವನಾ ನಿಸ್ತ್ರಿಂಶಕರ್ಮಕ್ಕೆ ಕೊಕ್ಕರಿಸಿ (ಆಪಿಪು. ೨-೧೪ ವ) ; ಅರುಣಜಳದೊಳೆನಗೆ ಕ್ರೀಡಾಸರೋವರಮಂ ಮಾಡೆಂದು ಪೇೞೆ ನಿಸ್ತ್ರಿಂಶಕರ್ಮಕ್ಕೆ ಕೊಕ್ಕರಿಸಿ (ಚಾವುಂಪು. ೧೪). [ನಿಸ್ತ್ರಿಂಶ+ಕರ್ಮ]

**ನಿಸ್ತ್ರಿಂಶತೆ** (ನಾ). ಕ್ರೂರತನ ; ನಿರ್ದಯತೆ : ಒಡವುಟ್ಟಿದರಂ ಕೊಂದ ವರಡಗಂ ತಿಂದವರ ನೆತ್ತರಂ ಬೆಲಗಸೆಯೊಳ್ ಕುಡಿವೀ ನಿಸ್ತ್ರಿಂಶತೆಯಂ ಹಿಡಿಂಬಿಯಂ ಪೊರ್ದಿ ಕಲ್ತನಾಗನೆ ಭೀಮಂ (ಗದಾಯು. ೩-೨೮). [ಸಂ. ನಿಸ್ತ್ರಿಂಶತಾ]

**ನಿಸ್ತ್ರಿಂಶಭಾವ** (ನಾ). **೧.** =ನಿಸ್ತ್ರಿಂಶತೆ. **೨.** ಕ್ರೂರಸ್ವಭಾವವುಳ್ಳವನು ; ನಿರ್ದಯಿ ; ಕ್ರೂರಿ. **೩.** ಮೂವತ್ತು ಅಂಗುಲಕ್ಕಿಂತಲೂ ಹೆಚ್ಚು ಉದ್ದವಾಗಿರುವಿಕೆ. **೨, ೩ :** ಆ ಬಾಲಕರ್ ಬಾಲ್ಯದಿಂ ತೊಟ್ಟು . . . ಸುರಶರಾಸನದಂತೆ ನಿರ್ಗುಣರುಂ ತೀಕ್ಷ್ಣ ಕೌಕ್ಷೇಯದಂತೆ ನಿಸ್ತ್ರಿಂಶಭಾವರುಂ . . . ಎನಿಸಿ (ಸುಕುಮಾ. ೨-೫ ವ). [ನಿಸ್ತ್ರಿಂಶ+ಭಾವ$_2$]

**ನಿಸ್ತ್ರಿಂಶೆ** (ನಾ). ಕ್ರೂರತನವುಳ್ಳವಳು; ಕಠೋರಸ್ವಭಾವವುಳ್ಳವಳು; ನಿರ್ದಯೆ : ಕ್ರೂರೆಯುಂ ಬ್ರಾಹ್ಮಣಹನನಮಹಾಪಾಪಮುಂಗೆಯ್ದ ನಿಸ್ತ್ರಿಂಶೆಯುನೆನ್ನಂ ಪಾಪೆಯುಂ ನೀಂ ಬೆಸಗೊಳೆ ಫಲಮೇಂ(ಕಾದಂಪೂ. ೯೫೭). [ಸಂ. ನಿಸ್ತ್ರಿಂಶಾ]

**ನಿಸ್ತ್ರಿಗುಣ** (ನಾ). ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳೂ ಇಲ್ಲದವನು ; ತ್ರಿಗುಣಾತೀತ ; ನಿರ್ಗುಣ ; ಪರಮಾತ್ಮ : ನಿರುಪಮಾನ ನಿರಧಿಕ ನಿರ್ಭಯನಿರತ ನಿಷ್ಕಳ ನಿಸ್ತ್ರಿಗುಣ ನಿರ್ಮರಣ . . . ನಿಜನಿರ್ಮಾಯ ಚಿತ್ಸ್ವೈಸು (ಬಸಪು. ೬೧-೪೪). [ಸಂ.]

**ನಿಸ್ತ್ರೆ** (ನಾ). ಸ್ತ್ರೀ; ಹೆಂಗಸು : ನಿಸ್ತ್ರೆ ತನ್ನಯ ಕೆಲಸ ಕೋಣೆಯೊಳತ್ತ ನೋಡುತ್ತಿರಲು ಬಸವನು ಇತ್ತ ಕರಚರಣಾದಿ ಜಿಹ್ವೆಯ ತೊಳೆದು ಒಳಪೊಕ್ಕು (ಶರಲೀ. ೨೦೮-೯) ; ಹೂವಿನ ನೆಂಗ್ಯೋಳೆ ಜಾಲಹೂವಿನ ಜಡೆಯೋಳೆ ಅಂತರಗಟ್ಟಿ ನಿಸ್ತ್ರೇ ನಮ ಮ್ಯಾಲೆ ದಯವಿರಲೆ (ನಾಪದ. ೧೩೯) ; ಹತ್ತು ಕೊಪ್ಪರಿಗೆ ನೀರ ಉಕ್ಕ್ಯಾಕ್ಕಿ ಕಾಯ್ಸಿದರು ನಿಸ್ತ್ರೆ ಪುಷ್ಪಾಂಜಣಿ ಜಳಕಕ್ಕೆ . . . ಅಲ್ಲಿರ್ದ ನಿಸ್ತ್ರೇರಗ್ಗಣೆಯ ಎರೆದಾರೆ (ಜಾೀತೆ. ೧೦೦). [<ಸಂ. ಸ್ತ್ರೀ ?]

**ನಿಸ್ತ್ರೈಗುಣ್ಯ** (ನಾ). ಸತ್ವ, ರಜ, ತಮಗಳೆಂಬ ತ್ರಿಗುಣಾತೀತವಾದುದು ; ನಿರ್ಗುಣವಾದುದು. [ಸಂ.]

**ನಿಸ್ಥಲ** (ನಾ). [ವೀಶೈ] ಸ್ಥಲವಿಲ್ಲದುದು ; ಸ್ಥಲಗಳನ್ನು ಮೀರಿದುದು ; ಸ್ಥಲಾತೀತವಾದುದು : ನಿಸ್ಥಲವಸ್ಥಲವಿಡಲು ನಿರ್ಮಲಾತ್ಮಂಗೆ ಇಹವಿಲ್ಲ ಪರವಿಲ್ಲ ಆದಿ ಮಧ್ಯಾಂತ ನಿರಾಳಗುಹೇಶ್ವರನ ಅನುಭವಿಗೆ ಸರ್ವಾಂಗಲಿಂಗವು (ಅನಚಂ. ೧೩೧-೫೭). [<ಸಂ. ನಿಸ್ಸ್ಥಲ]

**ನಿಸ್ಥಲೆ** (ನಾ). [ವೀಶೈ] ಸ್ಥಲಗಳನ್ನು ಮೀರಿದವಳು ; ಸ್ಥಲಾತೀತಳಾದವಳು : ಶರಣ ಸತಿ ಲಿಂಗ ಪತಿಯೆಂಬ ಭಾವವ ನಾನಱಿಯೆ . . . ಷಟ್‌ಸ್ಥಲದಲ್ಲಿ ನಿಸ್ಥಲೆಯಾಗಿಪ್ಪೆ (ಮಹಾದೇ. ಬ. ೮೦-೨೦೧). [<ಸಂ. ನಿಸ್ಸ್ಥಲಾ]

**ನಿಸ್ಪಟ್‌ಗೇಗಿಡ** (ನಾ). ಒಂದು ಬಗೆಯ ಗಿಡ : ಕರೀ ಉಪ್ಪಿಗಿಡ, ನಿಸ್ಪಟ್‌ಗೇಗಿಡ, ಕರೀರ (ಮೈಟಿಗಿ. ೧೭-೩೦೩). [? + ಗಿಡ(<ಗಿಡು)]

**ನಿಸ್ಪತ್ತಿ** (ನಾ). ತೀರ್ಮಾನ : ಸಿದ್ಧಾಂತ : ನಿರ್ಣಯ : ಪೂರತಳವಾರ ಸೋಮಿನಾಯಿಕ ನಾಡ ತಳವಾರ ಜಾಬಿನಾಯಿಕನವರು ಆ ಕಳತನವನು ಬೇದಿಸಿ ನಿಜ ನಿಸ್ಪತ್ತಿಮಾಡಿ ಆ ಸತ್ಸಪನ ಮೇಲೆ ಹೊರಿಸಿ (ಎಕ. XI, ಮೊಳಕಾ. ೨೫-೯೭; 1665). [<ಸಂ. ನಿಷ್ಪತ್ತಿ]

**ನಿಸ್ಪೃಹ** (ನಾ). **೧.** ಆಸೆಗಳನ್ನು ಬಿಟ್ಟವನು ; ವಿರಕ್ತ; ವಿರಾಗಿ: ಅಸುಗೆಯ ನಾಗಕೇಸರದ ಬಲ್ಮುಗುಳಂ ಬಿರಿಯೊತ್ತಿ ತುಂಬಿ ಚುಂಬಿಸೆ ರಜದಿಂ ತೊವರ್ಚಿದ ಕೊರಳ್ ಸವಿಯಂ ತರೆ ಪಾಡಿ ಕೂಡಿಯುಂಜಿಸುವುವು ಪೊಕ್ಕ ನಿಸ್ಪೃಹನನೆಂಬ ಪೊಗಟ್ಟೆಗೆ ವಿಶ್ವನಂದಿ ಮಾಡಿಸಿದನದೊಂದು ನಂದನಮನಂಗಜಮಂಗಳಗೇಯಶೋಭೆಯಂ (ಶಾಂತಿಪು. ೭-೫೩) ; ಜಗನ್ಮಹನೀಯತ್ವಮನೆಯ್ದಿ ತಾಳ್ದಿದ ಮಹಾಪ್ರಖ್ಯಾತಿಯಂ ಕೇಳ್ದು ನಿಸ್ಪೃಹರುಂ ಬಣ್ಣಿ ಪರಲ್ತೆ ನಿನ್ನ ಗುಣಮಂ (ಅಜಿಪು. ೧೨-೧೨) ; ಏಕನಾತ್ಮನನಂತನಚಲನಶೋಕನದ್ವಯನಮಲನಭವನ ಲೋಕನಿಸ್ಪೃಹನಮಿತನಕ್ರಿಯನಹತನಭ್ರಮನು (ಕುವ್ಯಾಭೀ. ೩-೫೯). **೨.** ನಿರಾಪೇಕ್ಷ ; ಪರಮಾತ್ಮ : ನಿಸ್ಪೃಹ ನಿರ್ಮಮ ನಿರ್ವಿಕಲ್ಪ ನಿಷ್ಕ್ರಿಯ ನಿರಪೇಕ್ಷ ನಿನ್ನ ಚರಣಂ ಶರಣಕ್ಕೆಮಗಿಂ ಜಿನೇಶ್ವರಾ (ಸುಕುಮಾ. ೪-೪೮). [<ಸಂ. ನಿಸ್ಸ್ಪೃಹ]

**ನಿಸ್ಪೃಹಾತ್ಮಕ** (ನಾ). ಆಸಕ್ತಿಯಿಲ್ಲದವನು ; ಅನಾಸಕ್ತ : ನೆನೆಯದೆ ತಮ್ಮ ವತ್ಸಲತೆಯಂ ಪರಿಭಾವಿಸದೊಳ್ಪನಟ್ಟಿಜಂ ಮನದೊಳಣಂ ವಿಚಾರಿಸದೆ ನಿಸ್ಪೃಹಾತ್ಮಕನೆಂಬಳೀಕಭಕ್ತನುಂ . . . ನುಡಿಯೊಂದು ಮಾಟವೊಂದೆನಿಸಿದ ಮಾನವಂಗೆನಗೆ ದೇವಿ ಹಸಾದಮನೇಕೆ ಮಾಡಿದಳ್ (ಕಾದಂಉ. ೨೬೧). [<ಸಂ. ನಿಸ್ಸ್ಪೃಹಾತ್ಮಕ]

**ನಿಸ್ಪೃಹತೆ** (ನಾ). ಆಸೆಯಿಲ್ಲದಿರುವಿಕೆ ; ನಿರಾಸಕ್ತಿ ; ವೈರಾಗ್ಯ: ಪರಮನಿಶ್ಚಲಭಕ್ತಿ ಸಕಳೇಶ್ವರನ ಕೃಪೆಯಿಂದಲ್ಲದಹುದೇ ದೊರಕುವುದೆ ನಿಸ್ಪೃಹತೆ ಎನಗತಿಕರ್ಮಿಗಳಟಿಕಟ (ಬಸಪು. ೨೦-೨೬); ಶಿಷ್ಯನ ಸ್ವಾನುಭವ ನಿಸ್ಪೃಹತೆಗೆಯು ಕ್ವಚಿತ್ತಾನು ಶಿರದೂಗುತಲಿ (ಗಗಶಾ. ೨-೨೯) ; ಬಡತನಕ್ಕೆ ಆಮಂತ್ರಣ ಕೊಟ್ಟು ಕುಟೀರವಾಸಿಯಾದ ಮಹಮ್ಮದನ ನಿಸ್ಪೃಹತೆಯು ಎಷ್ಟು ಮಹತ್ತುವಾದುದೆಂಬುದನ್ನು ಹತ್ತು ಬಾಯಿಗಳಿಂದ ಹೊಗಳಿದರೂ ಸಾಲದು (ಪೈಗಂಬ. ೧೨೩). [<ಸಂ. ನಿಸ್ಸ್ಪೃಹತಾ]

**ನಿಸ್ಪೃಹಸ್ವಾಂತ** (ನಾ). ಆಸೆಯಿಲ್ಲದ ಮನಸ್ಸುಳ್ಳವನು ; ನಿರಾಸಕ್ತ : ಭೂಭುಜಂ . . . ಅಂತು ನಿಸ್ಪೃಹಸ್ವಾಂತನಾಗಿ ತಪೋವನಕ್ಕಂದೇ ಪೋಗಲೆಂದೆ ನಿಶ್ಚಯಿಸಿ (ಮಲ್ಲಿಪು. ೧೦-೨೪). [ನಿಸ್ಪೃಹ+ಸ್ವಾಂತ]

**ನಿಸ್ಪೃಹೆ** (ನಾ). **೧.** =ನಿಸ್ಪೃಹತೆ : ಎಹಗೆ ಸೈರಿಸಿ ನಿಂದರೋ ವ್ರಜಮಹಿಳೆಯರು ಕೃಷ್ಣಾಂಘ್ರಿವಿರಹದ ದಹನದಾಪಸ್ತಂಭಕೌಷಧದಾನ ಶೌಂಡರಿಗೆ ಅಹಹ ಕೊಡುವೆನು ನನ್ನನೆನುತುಮ್ಮಹದ ಮೊನೆ ಮುಱಿದವನಿಪತಿ ನಿಸ್ಪೃಹೆಯುಲಿದ್ದನು ರಾಜಕಾರ್ಯವಿಹಾರಲೀಲೆಗಳ (ಕುವ್ಯಾಅ. ೧೭-೩). **೨.** ಆಸಕ್ತಿಯನ್ನು ಕಳೆದುಕೊಂಡವಳು ; ವಿರಕ್ತೆ : ಅ ಕಮಲಲೋಚನೆಯ ಚಿತ್ತದ ಜೋಕೆಯನು ಹರಿಯಱಿದು ನಿಸ್ಪೃಹೆಯಿಾಕೆ ಹದುಳಿಸಲಱಿಯಳೆನುತ (ಅಕ್ರೂಚ. ೪-೮೧). [<ಸಂ. ನಿಸ್ಸ್ಪೃಹಾ]

**ನಿಸ್ಯೂತ** (ನಾ). ಹೆಣೆದುಕೊಂಡಿರುವುದು ; ಓತಪ್ರೋತವಾಗಿ ಸೇರಿಕೊಂಡಿರುವುದು : ಪ್ರಣವದೊಂದಾ ವರ್ಣ ಮೂಱಱ ಗುಣವಿಡಿದು ತೋಱುವ ಚರಾಚರವೆಣಿಸಬಾರದು ವಿಶ್ವದಲಿ ನಿಸ್ಯೂತವಾಗಿಹುದು (ಕುವ್ಯಾಉ. ೪-೧೭). [<ಸಂ. ನಿಷ್ಯೂತ]

**ನಿಸ್ರಾವ** (ನಾ). **೧.** ಹರಿಯುವಿಕೆ ; ಪ್ರವಹಿಸುವಿಕೆ. **೨.** ಅನ್ನದ ಕೆನೆ,—ಗಂಜಿ : "ಮಾಸರಃ, ಆಚಾಮಃ, ನಿಸ್ರಾವಃ— ೩ ಭಕ್ತಸಮುದ್ಭವೇ, ಮಂಡೇಬೋನದ ಕೆನೆ ಗಂಜಿ" (ಸಿದ್ಧಾಂತಿ. ೨೮೮). [ಸಂ.]

**ನಿಸ್ವ** (ನಾ). ಬಡವ ; ದರಿದ್ರ ; ನಿರ್ಧನ : ಇರೆ ಧಾತ್ರೀತನಯಂ ದಿನೇಶಗೃಹದೊಳ್ ಸ್ವಲ್ಪಾಂಗನಾಸೂನು ದುರ್ಗರತಂ ಕ್ಲೇಶಸಹಿಷ್ಣು ನಿಸ್ವನೆನಿಕುಂ (ಜಾತತಿ. ೧೭-೨೦). [<ಸಂ. ನಿಸ್ವ]

**ನಿಸ್ವತೆ** (ನಾ). ಬಡತನ ; ದಾರಿದ್ರ್ಯ : ರಾಜಗುಪ್ತನೆಂಬೊಂ . . . ಕೆಲವು ದೆವಸದಿಂ ತನ್ನ ನಿಸ್ವತೆ ಕಾರಣಮಾಗೆ ಸಮಾಧಿಗುಪ್ತ ಮುನೀಂದ್ರ ಪಾದಪದ್ಮೋಪಕಂಠದೊಳ್ ಪರಮದೀಕ್ಷಾವಿಲಕ್ಷಿತಾಕ್ಷೂಣಪ್ರಮೋದನಾಗಿ (ಶಾಂತಿಪು. ೯-೮೩ ಪ) ; ಸುತೆಯರ್ ಪುಟ್ಟುವರಂತಾಶ್ರಿತರೊಳ್ ಬಲ್ಲಿದರೊಳೊಂದುಗುಂ ವೈರಂ ನಿಸ್ವತೆ ಕೀರ್ತಿಹಾನಿ ಬಹುನಿದ್ರತೆ ದೊರೆಕೊಳ್ಗುಂ ನಿಶೇಶನವರೋಹಿಣಿಯೊಳ್ (ಜಾತತಿ. ೯-೨೦). [<ಸಂ. ನಿಸ್ವತಾ]

**ನಿಸ್ವನ** (ನಾ). ಶಬ್ದ ; ಧ್ವನಿ ; ಸ್ವನ : ಖರಖುರಟಂಕಪರಿಸ್ಖಲನಕಳಿತ ವಿಷಮ ಸಮರಭೇರೀನಿಸ್ವನ[ಪಾಠಾಂ. ಸ್ತುಳ, ಸ್ಥಳ]ಮುಂ (ಪಂಪಭಾ. ೧೩-೫೧ ಪ) ; ದೆಸೆಯೊಳ್ ಕೂಡಿರೆ ಪಟುಪಟಹನಿಸ್ವನಂ ಶುಭದಿನದೊಳ್ ನಾಡಾಡಿಗಳುಂಬಮೆನಲ್ ಮಾಡಿದನಂತಾತ್ಮಜಂಗೆ ಮದುವೆಯುಂ(ನೇಮಿಪು. ೪-೩೯) ; ಜಡಿವ ಖಡ್ಗದ . . . ರೌದ್ರರವಘಟಿಘಟಿತನಿಸ್ವನದ ಇಡಿದ ಧೂಳಿಯ ಧೂಮರಾಶಿಯ ಪಡೆ ವಿರಾಟನ ಮಗನ ಕಂಗಳಿಗೊಡನೊಡನೆ ದಾವಾಗ್ನಿಯಂತಿರೆ ತೋಱುತಿದಿರಿನಲಿ (ಕುಮಾವ್ಯಾ. ೬-೩) ; ಐರಾವತಂ ದೇವೇಂದ್ರನಂ ಪೊತ್ತು ದಿಕ್ಪಾಲಪುರಗಳಿಗೆ . . . ಮತ್ತೆ ತೆರಳುತಲ್ಲಿಂ ಮರಳಿ ಬರ್ಪುದಮರಾವತಿಗೆ ಸುರವಾದ್ಯನಿಸ್ವನಕೆ ಬಿಂಕದಿಂ ಬೀಗಿ (ಶ್ರೀರಾಮಾ. ೪೮-೫೪೭). [ಸಂ.]

**ನಿಸ್ವಾನ** (ನಾ). = ನಿಸ್ವನ : "ನಿನಾದಃ . . . ನಿಸ್ವಾನಃ, ನಿಸ್ವನಃ, ಆರವಃ, ಆರಾವಃ, ಸಂರಾವಃ, ವಿರಾವಃ—೧೭ ಧ್ವನಿಯ ಹೆಸರುಗಳು" (ಸಿದ್ಧಾಂತಿ. ೫೬). [ಸಂ.]

**ನಿಸ್ವಾರ್ಥ** (ಗು). ೧. ಸ್ವಾರ್ಥವಿಲ್ಲದ ; ಸ್ವಪ್ರಯೋಜನಾಪೇಕ್ಷೆಯಿಲ್ಲದ : ನಿನ್ನ ನಿಸ್ವಾರ್ಥ ವಿಚಾರದಲ್ಲಿ ಅರ್ಥವಾದರೂ ಏನಿದೆ? (ಹೇಮಂತ. ೧೬೪). (ನಾ). ೨. ಸ್ವಾರ್ಥವಿಲ್ಲದಿರುವಿಕೆ ; ನಿಷ್ಕಾಮತೆ : ತ್ಯಾಗಮೂಲವೂ ನಿಸ್ವಾರ್ಥಪರವೂ ಆದ ಪ್ರೇಮಕ್ಕೆ ನಳ ಸಂಕೇತವಾಗಿದ್ದಾನೆ (ನಳಚ. ೨೮ ಪೀಠಿಕೆ). [<ಸಂ. ನಿಸ್ವಾರ್ಥ]

**ನಿಸ್ವಾರ್ಥಿ** (ನಾ). ಸ್ವಾರ್ಥಿಯಲ್ಲದ ವ್ಯಕ್ತಿ; ಸ್ವಪ್ರಯೋಜನಾಪೇಕ್ಷೆಯಿಲ್ಲದ ವ್ಯಕ್ತಿ. [<ಸಂ. ನಿಸ್ವಾರ್ಥಿನ್]

**ನಿಸ್ವೇದ** (ನಾ). ಬೆವರಿಲ್ಲದಿರುವಿಕೆ ; ಬೆವರದಿರುವಿಕೆ : ಗೋಕ್ಷೀರ ಕ್ಷತಜತ್ವಮುಂ ನಿಸ್ವೇದಮುಂ ಸಮಚತುರಶ್ರಮಪ್ಪ ಸಂಸ್ಥಾನಸಂಹನನಮುಂ . . . ತನಗನುಸಂಗತಮಾಗೆ (ಶಾಂತಿಪು. ೧೦-೯೪ ಪ). [<ಸಂ. ನಿಸ್ವೇದ]

**ನಿಸ್ವೇದತ್ವ** (ನಾ). = ನಿಸ್ವೇದ : ನಿಸ್ವೇದತ್ವಮುಂ ನಿರ್ಮಳತ್ವಮುಂ . . . ಪ್ರಿಯಹಿತವಾದಿತ್ವಮುಮೆಂಬ ದಶವಿಧ ಸ್ವಭಾವಾತಿಶಯ ಸಮುತ್ಪನ್ನಮುಂ (ಚಾವುಂಪು. ೩೫). [<ಸಂ. ನಿಸ್ವೇದತ್ವ]

**ನಿಸ್ಸಂಕ** (ನಾ). ಶಂಕೆಯಿಲ್ಲದಿರುವುದು; ಸಂಶಯವಿಲ್ಲದಿರುವುದು: ನಿಶ್ಶಂಕ—ನಿಸ್ಸಂಕ, ನಿಶಾದಿ—ನಿಸಾದಿ (ಶಮದ. ೨೫೩ ಪ್ರಯೋ).

**ನಿಸ್ಸಂಕಪ್ರತಾಪ** = ನಿಸ್ಸಂಕಮಲ್ಲ : ನಿಸ್ಸಂಕಪ್ರತಾಪ ವೀರಬಲಾಳ ದೇವರು ದೋರಸಮುದ್ರದ ವೀಡಿನೊಳು ನಿಲೆ (ಎಕ. III (R), ನಂಜನ. ೧೫೬-೩ ; 1198) ; ಸ್ವಸ್ತಿಶ್ರೀ ಅಸಹಾಯಶೂರ ನಿಸ್ಸ[ಂಕಪ್ರ]ತಾಪ ಪೊಯ್ಸಳ ಶ್ರೀ ವೀರ ಬಲಾ[ಳ ದೇ]ವರ್ (ಎಕ. IV, ಚಾಮುರಾ. ೧೮೭-೧ ; 1207). **ನಿಸ್ಸಂಕ ಪ್ರತಾಪಚಕ್ರವರ್ತಿ** = ನಿರ್ಭೀತ ವೀರನಾದ ಚಕ್ರವರ್ತಿ ; ಒಂದು ಬಿರುದು : ಹೊಯ್ಸಳ ಭುಜಬಳ ನಿಸ್ಸಂಕಪ್ರತಾಪಚಕ್ರವರ್ತ್ತಿ ವೀರಬಲ್ಲಾಳ ದೇವರಸರು ××× ಪ್ರಿಥ್ವೀರಾಜ್ಯಂಗೆಯ್ಯುತ್ತವಿರೆ (ಎಕ. III (R), ನಂಜನ. ೧೩೮-೧೪ ; 1332).

**ನಿಸ್ಸಂಕಮಲ್ಲ** = ಶಂಕೆಯಿಲ್ಲದ ವೀರ : ನಿರ್ಭೀತ ; ಒಂದು ಬಿರುದು : ಶ್ರೀಮನ್ಮಹಾಮಂಡಳೇಸ್ವರಂ ಹರಿಸಿವರ ಸೂಲಂ ಗಂಡರ ದಾವಣಿ ನಿಗಳಂಕಮಲ್ಲ ಚಲದಂಕರಾಮ ನಿಸ್ಸಂಕಮಲ್ಲರುಮಪ್ಪ . . . ಬೊಮ್ಮದೇವರಸರುಂ (ಕಇ. IV, ೪೮-೩೮ ; 1247). **ನಿಸ್ಸಂಕ ಹೊಯಿಸಣ** = ನಿಶ್ಶಂಕನಾದ ಹೊಯ್ಸಳವಂಶದವನು ; ಒಂದು ಬಿರುದು : ಶ್ರೀಮತು ವಿಷ್ಣುವರ್ದ್ಧನ ಪ್ರತಾಪಚಕ್ರವರ್ತಿ ನಿಸ್ಸಂಕ ಹೊಯಿಸಣ ಶ್ರೀ ವೀರನಾರಸಿಂಹದೇವರಸರು ದೋರಸಮುದ್ರದ ನೆಲೆವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಿರೆ (ಎಕ. XVI, ಚಿಕ್ಕನಾ. ೫೮-೯ ; 1260). [<ಸಂ. ನಿಶ್ಶಂಕ]

**ನಿಸ್ಸಂಕಲ್ಪ** (ನಾ). ಯಾವ ಬಯಕೆಯೂ ಇಲ್ಲದವನು : ಆಶಾರಹಿತನಾದವನು ; ಪರಮಾತ್ಮ : ಶರಣು ನಿಸ್ಸಂಕಲ್ಪ ನಿತ್ಯಾನಂದ ನಿಗಮನುತ (ಗಗತಾ. ೧-೪೩). [ಸಂ.]

**ನಿಸ್ಸಂಕುಚಿತ** (ಗು). ಚಿಕ್ಕದಾಗದ ; ಸಂಕೋಚಗೊಳ್ಳದ ನಿರಹಂಕಾರಭಾವದಲ್ಲಿ ನಿಸ್ಸಂಕುಚಿತ ವಿಕಸಿತ ಸ್ವಭಾವದಲ್ಲಿ ಈ ಜೀವಿಯೇ ಸಮಷ್ಟಿರೂಪಿ (ಭಾರದ. ೧೧೩). [ಸಂ.]

**ನಿಸ್ಸಂಕೆ** (ನಾ). ೧. ನಿಶ್ಶಂಕೆ ; ಅಳುಕಿಲ್ಲದಿರುವಿಕೆ : ನಿರ್ಭೀತಿ. ೨. ಅವಜ್ಞೆ : "ನಿಸ್ಸಂಕೆ = ಅವಜ್ಞೆ" (ಶಮದ. ಸಂ. ೨). [<ಸಂ. ನಿಶ್ಶಂಕಾ]

**ನಿಸ್ಸಂಕೋಚ** (ನಾ). ಸಂಕೋಚವಿಲ್ಲದಿರುವಿಕೆ ; ಅಳುಕಿಲ್ಲದಿರುವಿಕೆ ; ಹಿಂಜರಿಯದಿರುವುದು : ಮಂಕಾಗಿದ್ದರೆ, ಅದನ್ನು ನಿಸ್ಸಂಕೋಚದಿಂದ ಹೇಳಿಕೊಳ್ಳುವುದು—ಅದೇ ನಿಜವಾದ ಮಂಕುತನದ ಲಕ್ಷಣವೆಂದು ಕೆಲವರ ಅಭಿಪ್ರಾಯ (ರಾಮರಾ. ೬೫) ; ಆಕೆ . . . ನಿಸ್ಸಂಕೋಚವಾಗಿ ಒಳಗಿನ ಅಡುಗೆಮನೆಯನ್ನು ಪ್ರವೇಶಿಸುತ್ತಿದ್ದಳು (ಮುಂಗಾಮು. ೭೬). [ಸಂ.]

**ನಿಸ್ಸಂಖ್ಯ** (ಗು). ಲೆಕ್ಕವಿಲ್ಲದ ; ಅಸಂಖ್ಯವಾದ : ನಿಸ್ಸಂಖ್ಯ ಶಂಖಪ್ರಪಟುಪಟಹಸತ್ಕಾಹಳಾ ಭೂರಿಭೇರೀಧ್ವನಿಯುಂ ಘೋರೆಂದು ತಾನೊರ್ಮೊದಲೊಳೆ ಪಿರಿದುಂ ಘೂರ್ಣಿಸಲ್ . . . ತಳರ್ದನಲ್ಲಿಂದಮಾ ಧರ್ಮನಾಥಂ (ಬಾಧಪು. ೧೨-೩೩). [ಸಂ.]

**ನಿಸ್ಸಂಗ** (ನಾ). ೧. ಒಡನಾಟ ಇಲ್ಲದಿರುವಿಕೆ ; ಬಂಧನಗಳನ್ನು ಬಿಟ್ಟಿರುವಿಕೆ ; ನಿರ್ಲಿಪ್ತತೆ : ಕಾಮಸಂಗ ನಿಸ್ಸಂಗವಾಗಿ ಇನ್ನಾವ ಸಂಗವನಱಿಯೆನಯ್ಯಾ (ಬಸವ. ೪೮೮) ; ಸಂಸಾರಿಯಲ್ಲದ ಸಂಗ ವೈರಾಗಿಯಲ್ಲದ ನಿಸ್ಸಂಗ ಇಂತೀ ಉಭಯಸಂಗದಿಂದ ಮಹತ್ತನೈದಿಪ್ಪನಾಗಿ . . . ನಿಮ್ಮ ಶರಣ ಕ್ಷೀಣನಲ್ಲ (ಚನ್ನಪ. ಕ. ೬೧೨-೧೩೭೨) ; ಮೊದಲ ಭೂಮಿ ಸುಖೇಚ್ಛೆಯೆರಡನೆಯದು ಸದಾತ್ಮವಿಚಾರ ಮೂಱನೆಯದು ಕಡಾ ನಿಸ್ಸಂಗ ನಾಲ್ಕದು ವಾಸನಾಕ್ಷಯವು (ಅಮೃತ. ೬-೬). ೨. ಎಲ್ಲ ಸಂಬಂಧವನ್ನು ಬಿಟ್ಟವನು ; ನಿರ್ಲಿಪ್ತನಾದವನು ; ವಿರಾಗಿ : ಅಂತು ನಿಸ್ಸಂಗನಂ ಸಂಗೀತಪ್ರಸಂಗದೊಳಮರಪುಂಗವನೋಲಗಿಸಿ ಮುನ್ನಮಾದಿದೇವಂಗೆ ಮಾಡಿದಂದದೊಳ್ ಮಂದರಾಚಲದೊಳಜಿತದೇವಂಗೆ ಜನ್ಮಾಭಿಷೇಕಕಲ್ಯಾಣಮುಂ ಮಾಡಿ (ಅಜಿಪು. ೫-೨೨ ಪ) ; ನಿಸ್ಸಂಗನಾದ ಆದಿನಾಥನೇ ಆ ಸೊಗಸಿಗೆ ಮನ ಸೋತು ನೋಡುತ್ತಿದ್ದನು (ಕಸಾಚಿ. ೨೪). [ಸಂ.]

**ನಿಸ್ಸಂಗತೆ** (ನಾ). = ನಿಸ್ಸಂಗತ್ವ : ಅದು ನಿಸ್ಸಂಗತೆಯಿಂದಲ್ಲದಾಗದದು ಜಾತರೂಪದಿಂದಲ್ಲದೆ ತೀರದು (ಶಾಂತಿಪು. ೭-೧೦೫). [ಸಂ. ನಿಸ್ಸಂಗತಾ]

**ನಿಸ್ಸಂಗತ್ವ** (ನಾ). ಯಾವ ಸಂಬಂಧವೂ ಇಲ್ಲದಿರುವಿಕೆ ; ನಿರ್ಲಿಪ್ತತೆ : ಮಾಡಿ ಮಾಟವನಱಿಯದ ಭಕ್ತ ಕೂಡಿ ಕೂಟವನಱಿಯದ

ಭಕ್ತ ಮಾಟ ಕೂಟವೆಂಬ ಕೋಟಲೆಯಳಿದು ನಿಸ್ಸಂಗತ್ವ ನಿರಾಭಾರಿ [ಪಾಠಾಂ. ನಿಸ್ಸಂಗ ನಿರಾಭಾರಿ] ನಿಸ್ಸೀಮ ನಿರ್ದೇಹಿ ನಿಜದಲ್ಲಿ ಅಡಗಿದ ನಿತ್ಯಮುಕ್ತನಯ್ಯ ಭಕ್ತನು (ಸಿದ್ಧೇಪ. ೨೦೫-೯೩೫) ; ಈ ಬಗೆಯ ನಿರ್ಮಲತ್ವ ಲಭಿಸುವುದು ನಿಸ್ಸಂಗತ್ವದಿಂದ (ಸೌಂದಸ. ೧೧೧). [ಸಂ.]

**ನಿಸ್ಸಂಗತ್ವಾತ್ಮಭಾವನೆ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಯೋಗ್ಯನಾದ ಶಿಷ್ಯನನ್ನು ಪರಿಗ್ರಹಿಸಿ ತನ್ನ ಕರ್ತವ್ಯಭಾರವನ್ನು ಆತನಿಗೆ ವಹಿಸಿ ತಾನು ನಿಸ್ಸಂಗನಾಗಿ ತನ್ನ ಆತ್ಮವು ಎಲ್ಲಾ ಬಗೆಯ ಪರಿಗ್ರಹದಿಂದಲೂ ಬಿಡುಗಡೆ ಹೊಂದಿದೆ ಎಂಬ ಭಾವನೆಯನ್ನು ಸಾಧಿಸುವುದು : ದ್ವಾದಶಾಂಗದೊಳ್ ಪೇೞ್ದ ಆಧಾನ ಪ್ರೀತಿ ಸುಪ್ರೀತಿ . . . ನಿಸ್ಸಂಗತ್ವಾತ್ಮಭಾವನಾಯೋಗನಿರ್ವಾಣಸಂಪ್ರಾಪ್ತಿ ಯೋಗನಿರ್ವಾಣ ಸಾಧನ . . . ಅಗ್ರನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿ ನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ). 'ದೀಕ್ಷೆ' ಪರಾ. [ಸಂ. ನಿಸ್ಸಂಗತ್ವಾತ್ಮಭಾವನಾ]

**ನಿಸ್ಸಂಗಪರಿಭಾವಕತ್ವ** (ನಾ). ನಿರ್ಲಿಪ್ತತೆಯಿಂದ ವಿಚಾರ ಮಾಡುವಿಕೆ : ಉಳಿದವರಿಗಿಂತ ಮಿಗಿಲಾದ ಈ 'ನಿಸ್ಸಂಗಪರಿಭಾವಕತ್ವ' ಶಕ್ತಿಯಿಂದ ಕಲೆಗಾರ ಚೆಲುವನ್ನು ಕಾಣುತ್ತಾನೆ (ಸೌಂದಸ. ೭).

[ನಿಸ್ಸಂಗ + ಪರಿಭಾವಕತ್ವ]

**ನಿಸ್ಸಂಗಪರಿಭಾವನೆ** (ನಾ). = ನಿಸ್ಸಂಗಪರಿಭಾವಕತ್ವ : ಕಲಾ ದೃಷ್ಟಿ ಎಂದರೆ ವಸ್ತುಗಳ ಚೆಲುವನ್ನು . . . ಒಂದು ರೀತಿಯ ನಿಸ್ಸಂಗ ಪರಿಭಾವನೆಯಿಂದ ಒಲಿಯುವುದು ಎಂದು ಅರ್ಥ (ಸೌಂದಸ. ೭).

[ನಿಸ್ಸಂಗ+ಪರಿಭಾವನೆ]

**ನಿಸ್ಸಂಗಿ** (ನಾ). ಯಾವ ಒಡನಾಟವೂ ಇಲ್ಲದವನು ; ನಿರ್ಲಿಪ್ತನಾದವನು ; ವಿರಕ್ತ : ಐವರ ಸಂಗದಿಂದ ಬಂದೆ ನೋಡಯ್ಯ . . . ಐವರೂ ತಮ್ಮ ತಮ್ಮ ಬಟ್ಟೆಯಲ್ಲಿ ಹೋದರು ನಾನೊಬ್ಬನೆ ನಿಸ್ಸಂಗಿಯಾಗಿ ಉಳಿದೆನಲ್ಲಾ (ಅಪಚಂ. ೪೯-೩೯೭) ; ಈಶ್ವರೇಶ್ವರನು ಜಂಗಮಾಕೃತಿಯಂ ಧರಿಸಿ ನಿಸ್ಸಂಗಿಯಾಗೆಯ್ತಂದು ಭಕ್ತಗೃಹಾಂಗಣದೊಳಾಡುತ್ತ (ಬಸಪು. ೨೭-೪೨) ; ಮಾಯವಿಲ್ಲದೆ ಸಂಗವ ಮಾಡಿ ನಿಸ್ಸಂಗಿಯಾದೆನು (ಸಿದ್ಧೇಪ. ೧೩೩-೩೯೩); ನಿರುಪಾಧಿ ನಿಸ್ಸಂಗಿ ನಿರ್ಮಲ ನಿರಾಭಾರಿ . . . ಪ್ರಭುಜಂಗಮದ ಪಾದಮಿರ್ಕೆನ್ನ ಹೃದಯದೊಳಗೆ (ವೀಶೈಪು. ೧-೧-೫).

[ಸಂ. ನಿಸ್ಸಂಗಿನ್]

**ನಿಸ್ಸಂಜ್ಞ** (ಗು). **೧.** ಪ್ರಜ್ಞೆ ಇಲ್ಲದಿರುವ ; ಪ್ರಜ್ಞಾಹೀನವಾದ: ನಂದಗೋಪನುಂ ಯಶೋದೆಯುಂ . . . ಚಂಡಾಹಿತುಂಡಖಂಡಿತ ಪುಂಡರೀಕಾಕ್ಷವದನವಿನ್ಯಸ್ತತರಳತಾರನೇತ್ರರುಂ ನಿಸ್ಸಂಜ್ಞ ತ್ರಿಸಂಜ್ಞಗಾತ್ರರುಮಾಗೆ (ಜಗವಿ. ೩-೯೫ ವ). (ನಾ). **೨.** ಪ್ರಜ್ಞೆ ಇಲ್ಲದ ವ್ಯಕ್ತಿ ; ಪ್ರಜ್ಞಾಶೂನ್ಯ. [ಸಂ.]

**ನಿಸ್ಸಂತತಿ** (ನಾ). = ನಿಸ್ಸಂತಾನ : ಮಕ್ಕಳಿಲ್ಲದಿರ್ದ್ದಡೆ ಮಗಳು ಮಗಳ ಮಕ್ಕಳು ದಾಯಾದ್ಯರುವಿಲ್ಲದೆ ನಿಸ್ಸನ್ತತಿಯಾದವ [ರೆ]ಲ್ಲವನರಸು ಕಾ[ಣಿಕೆ] . . . ಕುಡುವುದು (ಕಇಆ. ೨೬-೩೯-೪೧; 1110). [ಸಂ.]

**ನಿಸ್ಸಂತಾನ** (ನಾ). ಮಕ್ಕಳಿಲ್ಲದಿರುವುದು ; ವಂಶವೃದ್ಧಿಯಾಗದಿರುವುದು : ಆ ನರಾಧಿಪ ಬಿಜ್ಜಳನ ಸಂತಾನವೆಲ್ಲಂ ಕಡೆಗೆ ನಿಸ್ಸಂತಾನವಾಯಿತು (ಬಸಪು. ೬೧-೩೮) ; ಅವರ ಸಂತಾನ ನಿಸ್ಸಂತಾನ ಆಗಲಿ (ಜನಜೀ. ೧೫೧). [ಸಂ.]

**ನಿಸ್ಸಂತಾನಿ** (ನಾ). ಮಕ್ಕಳಿಲ್ಲದವನು ; ಸಂತಾನವಿಲ್ಲದವನು : ನಾರಾಯಣಶಾಸ್ತ್ರಿಯು ನಿಸ್ಸಂತಾನಿಯೆಂದೂ . . . ಹೇಳಿರುವರು (ಅಂಬಿಕೆ. ೪೯). [ಸಂ. ನಿಸ್ಸಂತಾನಿನ್]

**ನಿಸ್ಸಂದಿಗ್ಧ** (ಗು). **೧.** ಸಂಶಯವಿಲ್ಲದ ; ಅನುಮಾನವಿಲ್ಲದ : ನಿಶ್ಚಿತವಾದ : "ನಿಶ್ಚಯವಾದ, ನಿಶ್ಚಿತ, ದೃಢ, ನಿಸ್ಸಂದೇಹವಾದ, ನಿಸ್ಸಂಧಿಗ್ಧ . . . ಖಾತ್ರಿಯಾದ, ಗಟ್ಟಿಯಾದ, ತಪ್ಪದ" (Sure-ಇಂಕನಿ). (ನಾ). **೨.** ಸಂಶಯವಿಲ್ಲದಿರುವಿಕೆ ; ಖಚಿತತೆ : ಇಷ್ಟರಿಂದಲೇ ಆ ಎರಡು ಕೃತಿಗಳ ಪರಸ್ಪರ ಸಂಬಂಧ ನಿಸ್ಸಂದಿಗ್ಧವಾಗಿ ವ್ಯಕ್ತವಾಗುತ್ತದೆ (ನಳಚ. ೨೯ ಪೀಠಿಕೆ). **೩.** ಸಂಶಯವಿಲ್ಲದವನು ; ಅನುಮಾನವಿಲ್ಲದವನು ; ನಿರ್ದಿಷ್ಟಭಾವನೆಯುಳ್ಳವನು : ತನಗೇನಾಗಬೇಕೆಂಬುದರ ಬಗ್ಗೆ ಅನಿಶ್ಚಿತನಾಗಿದ್ದರೂ ಪರರಿಗೆ ತಾನೇನು ಮಾಡಬೇಕೆಂಬುದರ ಬಗ್ಗೆ ಅವನು ನಿಸ್ಸಂದಿಗ್ಧನಾಗಿದ್ದನು (ಪುನರು. ೨೯೮).

[ಸಂ.]

**ನಿಸ್ಸಂದೇಹ** (ನಾ). **೧.** ಸಂದೇಹವಿಲ್ಲದುದು ; ಅನುಮಾನವಿಲ್ಲದುದು ; ಖಚಿತವಾದುದು : ಇವರು ಪಾರ್ಥಿವರೊಳಗೆ ಕೇಳ್ ಪಾಂಡವರು ನಿಸ್ಸಂದೇಹವು (ಕುವ್ಯಾಆ. ೧೬-೨೫) ; ಕ್ರಿ.ಪೂ.ದ ಇತರ ಬ್ರಾಹ್ಮಣಗಳಲ್ಲಿ ಸಿಗುವ ನೀರ್, ಮೀನ ಎಂಬ ಎರಡು ಪದಗಳೂ ನಿಸ್ಸಂದೇಹವಾಗಿ ದ್ರಾವಿಡಪರಿವಾರಕ್ಕೆ ಸೇರಿದ ಪದಗಳೆಂದು ಪ್ರಾಜ್ಞರು ತಿಳಿಸಿದ್ದಾರೆ (ದ್ರಾವಿವಿ. ೩೫). **೨.** ಸಂದೇಹವಿಲ್ಲದ ವ್ಯಕ್ತಿ ; ನಿಸ್ಸಂದೇಹಿ : ಭವಿಭವಿ ಎಂಬ ಸಂದೇಹ ಕೀಲ ಕಳೆದು ನಿಸ್ಸಂದೇಹ ನಿರ್ಲೇಪಕನಾಗಿ ಇರಬಲ್ಲರೆ ಶೀಲಸಂಪನ್ನರೆಂಬೆ (ಸಿದ್ಧೇಪ. ೧೦೦-೩೦೯).

**ನಿಸ್ಸಂದೇಹಂ ಮಾಡು** = ಸಂಶಯವಿಲ್ಲದಂತೆ ಮಾಡು ; ಅನುಮಾನವಿಲ್ಲದ ಹಾಗೆ ಮಾಡು ; ನಿರ್ದಿಷ್ಟಪಡಿಸು : ವಸ್ತುವಂ ನಿಸ್ಸಂದೇಹಂ ಮಾಡಿ ಬೆಸಸೆ ತಿರ್ಯಗ್ಗಣಮುಂ ತಂದಱಿಗುಂ ದಲೆನಲ್ ಗಣಬೃಂದಂ ಪನ್ನೆರಡುಮಱಿದುದೊಂದಚ್ಚರಿಯೇ (ಶಾಂತಿಪು. ೧೨-೬).

**ನಿಸ್ಸಂದೇಹಮಾಗು** = ಸಂಶಯವಿಲ್ಲದಾಗು : ಪದಾರ್ಥಂಗಳೊಳ್ ತಮಗೆ ಸಂದೇಹಮಾಗೆ ಬಂದು ತೀರ್ಥಕರಕುಮಾರನಂ ಕಾಣಲೊಡಂ ನಿಸ್ಸಂದೇಹಮಾಗೆ (ಚಾವುಂಪು. ೩೮೬). [ಸಂ.]

**ನಿಸ್ಸಂದೇಹಿ** (ನಾ). ಸಂಶಯವಿಲ್ಲದವನು ; ಖಚಿತಭಾವನೆಯುಳ್ಳವನು : ಒಳಗೊಂದು ಅನಿಮಿಷಲಿಂಗವ ಕಂಡು ಎನ್ನ ಮನೋಪುಷ್ಪದಲ್ಲಿ ಪೂಜೆಯ ಮಾಡಿದಡೆ ನಾಚಿಕೆ ಮಾದು ನಿಸ್ಸಂದೇಹಿಯಾದೆನು ಗುಹೇಶ್ವರ (ಅಪಚಂ. ೯೪-೪೧೭); ಸಂದೇಹಿ ತಜ್ಜೀವ ದೇವ ನಿಸ್ಸಂದೇಹಿಯಾಗಿಹನಾವಗಂ ತಾನಿದು ನಿಮಿತ್ತಂ ಜೀವನುಂ ಶಿವನಲ್ಲ ಕೇಳಿರೆ (ಬಸಪು. ೫೧-೨೯). [ಸಂ. ನಿಸ್ಸಂದೇಹಿನ್]

**ನಿಸ್ಸಂಶಯ**(ನಾ).**೧.** = ನಿಸ್ಸಂದೇಹ ೧: ನಿಸ್ಸಂಶಯವಾಗಿ ಅದೊಂದು ಡಂಭಾಚಾರದ ಪ್ರದರ್ಶನ (ಹೇಮಂತ. ೩೩೩); ನಿಸ್ಸಂಶಯವಾದ ಜ್ಞಾನ, ಸ್ಥೈರ್ಯ, ಭಗವಂತನು ರಕ್ಷಿಸುವನೆಂಬ ಮಹಾವಿಶ್ವಾಸ – ಇವೇ ಮೊದಲಾದ ಯೋಗ್ಯತೆಗಳು ಬೇಕು (ಭಾರದ. ೨೬೪). **೨.** ಸಂದೇಹವಿಲ್ಲದ ವ್ಯಕ್ತಿ; ನಿಸ್ಸಂದೇಹಿ: ಸಮಸ್ತವಸ್ತುಸ್ಥಿತಿಯಂ ಬೆಸಗೊಂಡು ನಿಸ್ಸಂಶಯನಾಗಿ ಸಮವಸರಣಮಂಡಳದಿಂ ಪೊಱಮಟ್ಟು (ಚಾವುಂಪು. ೪೮).

[ಸಂ.]

**ನಿಸ್ಸಂಶಯಂ** (ಅ). ಸಂದೇಹವಿಲ್ಲದಂತೆ ; ಅನುಮಾನವಿಲ್ಲದ ಹಾಗೆ : ಅಪ್ರತಿಹತನಿಜಾಜ್ಞಾರೂಢ ತ್ರೈಲೋಕ್ಯಶೇಖರಂ ತನಗೆ ನಿಸ್ಸಂಶಯಮಾಗಿಯುಮಪ[ಮ]ವನಪ್ರತಿಕೂಲ ಪ್ರಿಯಹಿತವಾದಿಯುಪ್ಪದಱಿಸಂತೆಗೆಯ್ವೆನೆಂಬುದುಂ (ಶಾಂತಿಪು. ೧೦-೧೨೩ ವ). [ಸಂ.]

**ನಿಸ್ಸಂಸಾರ** (ನಾ). ಸಂಸಾರಕ್ಕೆ ಅಂಟಿಕೊಳ್ಳದಿರುವಿಕೆ ; ವೈರಾಗ್ಯ : ದ್ವೈತವ ಹೇಳುವ ಹಿರಿಯರೆಲ್ಲರು ದ್ವೈತಕ್ಕೊಳಗಾದರು ನಿಸ್ಸಂಸಾರವ ಹೇಳುವ ಹಿರಿಯರೆಲ್ಲರೂ ಸಂಸಾರದ ಸಾರವ ಚಪ್ಪರಿದು ಕೆಟ್ಟರು (ಮೋಳಿಮಾ. ೧೪-೫೧). [ಸಂ.]

**ನಿಸ್ಸತ್ತ್ವ** (ಗು). ೧. ಸತ್ತ್ವವಿಲ್ಲದ ; ಹುರುಳಿಲ್ಲದ : ಮುಂಜಾವಿನಿಂದ ಸಂಜೆಯವರೆಗೆ ಯಾಂತ್ರಿಕಪುರುಷರಂತೆ ಕಾಗದಗಳನ್ನು ಗೀಚಿ ಹೋಗುವ ನಿಸ್ಸತ್ತ್ವ ಜೀವಿಗಳೆಂದೆಣಿಸಿದವರಲ್ಲಿ ಮಾನವತೆಯೂ ಇದೆ (ಹೇಮಂತ. ೧೮೦). (ನಾ). ೨. ಸತ್ತ್ವವಿಲ್ಲದಿರುವಿಕೆ ; ಅಶಕ್ತಿ ; ದುರ್ಬಲತೆ : ದ್ರಾಕ್ಷಿಹಣ್ಣು, ಯಷ್ಟಿಮಧುಕ . . . ಕಷಾಯ ಕಾಯಿಸಿ ಸಕ್ಕರೆ ಮತ್ತು ಜೇನುತುಪ್ಪ ಬೆರಸಿ ಕೊಡಲು ವಾತಪಿತ್ತಜ್ವರ, ನಿಸ್ಸತ್ತ್ವ, ವಾಂತಿ . . . ಕಾಮಾಲೆ ಇವಿಷ್ಟು ರೋಗಗಳೂ ಪರಿಹಾರವಾಗುವುವು (ಸಕವೈ. ೯೪). ೩. ಸತ್ತ್ವವಿಲ್ಲದವನು ; ಶಕ್ತಿ ಇಲ್ಲದವನು ; ನಿರ್ಬಲ : ನಿಸ್ಸಾಣಧ್ವನಿ ತಂಬಟೆಸ್ಫುಟ ಢಡಂ ಢಂ ನಾದ ಭೀತಪ್ರ್ವಲನಿರ್ನಿಸ್ಸತ್ತ್ವನ್ವಿರ್ ಸುಟೋಡಿ ನಾಡ ನಗರೀ ಭಂಡಾರಮಂ ಪೆಂಡಿರಂ (ಎಕ. VIII, ಸಾಗರ. ೧೫-೨೭ ; 1218); ನಾವು ವಾನರರಡವಿಯಲಿ ಫಲಜೀವಿಗಳು ನಿಸ್ಸತ್ತ್ವರಿಲ್ಲಿಯ ಠಾವ ಬಿಡಲನ್ಯತ್ರ ಗಮನತ್ರಾಣವಿಲ್ಲೆಮಗೆ (ಕುಪ್ಯಾಅ. ೧೦-೨೩). ೪. ಸತ್ತ್ವವಿಲ್ಲದುದು ; ಸಾರವಿಲ್ಲದುದು ; ಹುರುಳಿಲ್ಲದುದು. [ಸಂ.]

**ನಿಸ್ಸತ್ತ್ವಗೊಳಿಸು** (ಕ್ರಿ). ಶಕ್ತಿಯಿಲ್ಲದಂತೆ ಮಾಡು ; ನಿರ್ಬಲಗೊಳಿಸು : ಆಗಾಗ್ಗೆ ಹೀರುವ ಮೊದಲು ಕೊಳ್ಳೆಯನ್ನು ನಿಸ್ಸತ್ತ್ವಗೊಳಿಸಿ (Paralyse) ಜೀರ್ಣಿಸುವ ದ್ರವವನ್ನು ಕೊಳ್ಳೆಯ ಶರೀರದೊಳಕ್ಕೆ ಪಂಪು ಮಾಡುತ್ತದೆ (ಕೀಟಬಿ. ೮೩).
[ನಿಸ್ಸತ್ತ್ವ + ಕೊಳ್$_1$ + -ಇಸು$_3$]

**ನಿಸ್ಸಪತ್ನ** (ಗು). ೧. ಶತ್ರುವಿಲ್ಲದ. (ನಾ). ೨. ಶತ್ರುಗಳಿಲ್ಲದಿರುವಿಕೆ : ನಿರ್ಭಯದ ನಿಗುರಿಸಿದ ಹರುಷದ ನಿಸ್ಸಪತ್ನದಿನಸುರಕುಲವಿದ್ದುದು ಸುನಿದ್ರಾಭರದ ಭಾರದಲಿ (ತೊರರಾ. ೬-೩೭-೧). ೩. ಶತ್ರುಗಳಿಲ್ಲದವನು ; ಹಗೆಯಿಲ್ಲದವನು : ನಿಸ್ಸಪತ್ನನಾಗಿ ಈ ಭೂಮಿಯನ್ನೆಲ್ಲ ಗೆದ್ದು ಆಳುವಂತೆ . . . ಕೀರ್ತಿಯನ್ನು ಸಂಪಾದಿಸಬೇಕು (ಮಹಾಣ. ೯೨). [ಸಂ.]

**ನಿಸ್ಸಮ** (ಗು). ಅಪ್ರತಿಮವಾದ ; ಅಸಮಾನವಾದ : ಇರ್ದಂ ಕೆಲದೊಳ್ ನಿಜಾನುಜರಿರಲ್ ಸದ್ವಾದ್ಯ ಸದ್ಗೇಯದೊಂದೊದವಿಂ ನಿಸ್ಸಮವೈಭವಂ ಕುರುಕುಳಕ್ಷ್ಮಾಪಾಳನೀತಂ (ನೇಮಿಪು. ೯-೯೩). [ಸಂ.]

**ನಿಸ್ಸರಡೆ** (ನಾ). [ಸಂಗೀತ] ಒಂದು ಬಗೆಯ ಸ್ವರವಿನ್ಯಾಸ (?) : ಗಾಂಧರ್ವಸರ್ವಜ್ಞನೆಂಬ ದಿವಿಜನಾಯಕಗಾಯಕಂ . . . ಗಮಕಂಗಾರವಂಬಡೆಯೆ ಗಹಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ ತನ್ನೆವಣೆ ನಿಸ್ಸರಡೆ ರಂಗರಕ್ತಿ ಬೇಗವಣೆತು ತರಹರಂ ಸುಠಿವಟ್ಟೆಜಿ ದಾಳವಾಳಂ ಪದಿರ್ಪೊಜೆ ಕೊಂಕು ಕವ್ಮಣೆ ಪೆಸರಂ ಛೆಡಂಗುವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೧೬-೬೭ ಪ). 'ಸರಳೆ' ಪರಾ. [ ? ]

**ನಿಸ್ಸರಣ** (ನಾ). ೧. ನಿರ್ಗಮನ ; ಹೊರಗೆ ಹೋಗುವಿಕೆ. ೨. ತಲೆಬಾಗಿಲ ಮುಂಭಾಗ ; ಅಂಗಳ : "ಪ್ರತೋಳೀಮುಖ ನಿಸ್ಸರಣಂ" (ಪಸ್ತುಕೋ. ೪೬-೭) ; "ಮುಖಂ, ನಿಸ್ಸರಣಂ—೨ ಮನೇ ತಲಬಾಗಿಲ ಮುಂದೇ ಇರುವ ಬೈಲು, ಅಂಗಳ" (ಸಿದ್ಧಾಂತಿ. ೩೦೪). [ಸಂ.]

**ನಿಸ್ಸಹ** (ಗು). ೧. ಸಹಿಸಲಾರದ ; ಅಸಹನೀಯವಾದ ; ತಡೆಯಲಾಗದ : ಸಮರಭರನಿರ್ಭರಭೀಮಸೇನಘನಗದಾಪ್ರಹರಣನಿಸ್ಸಹಮದವದನೇಕಮತ್ತಮಾತಂಗಪದನಖುರ್ವಿತೋರ್ವೀತಳಮುಂ (ಪಂಪಭಾ. ೧೩-೪೧ ಪ). (ನಾ). ೨. ಸಹಿಸಲಾರದವನು ; ಎದುರಿಸಲಾರದವನು. [ಸಂ.]

**ನಿಸ್ಸಹಣ** 'ನಿಸ್ಸಾಳ' ನೋ.

**ನಿಸ್ಸಹಾಯ** (ಗು). ೧. ನೆರವಿಲ್ಲದ; ಅಸಹಾಯಕವಾದ : ದಾರುಣ ಯಾತನೆಯ ಆ ನಿಸ್ಸಹಾಯ ಚೀತ್ಕಾರವನ್ನು ಕೇಳಿ ಶೀನಪ್ಪನ ಹೃದಯವನ್ನು ಹಿಂಡಿದಂತಾಯಿತು (ಅನಾಥೆ. ೧೨). ೨. ಇತರರ ನೆರವನ್ನು ಅಪೇಕ್ಷಿಸದ,–ನೆರವಿನ ಅಗತ್ಯವಿಲ್ಲದ: ಸಂಕ್ರಂದನ ನಂದನನ ನಿರರ್ಗಳ ನಿಸ್ಸಹಾಯಪರಾಕ್ರಮೋಕ್ತಿಗೇಳ್ದು ನೆರೆದ ಗಣಸಂದೋಹಮುಮಂದಾಶ್ಚರ್ಯಮಂ ತಾಳ್ದು ನಲವೆರ್ಚಿ ಪೊಗಳುತ್ತಿರೆ (ಶಬಶಂ. ೪-೬೫ ವ). (ನಾ). ೩. ಸಹಾಯವಿಲ್ಲದ ವ್ಯಕ್ತಿ ; ಅಸಹಾಯಕ : ತಾಯಿಮಗಳು ಇಬ್ಬರೂ ನಿಸ್ಸಹಾಯಕರಾಗಿ ಮೌನ ತಳೆದರು (ಮೂರುದಾ. ೧೩೦). ೪. ನೆರವಿನ ಅಗತ್ಯವಿಲ್ಲದವನು ; ಅಸಹಾಯಶೂರ ; ಏಕಾಂಗವೀರ : ನಿಶ್ಶಂಕನುಂ ನಿಸ್ಸಹಾಯನುಮಾಗಿ ನುಡಿದಮೋಘಜಿಹ್ವನ ಸ್ಥಿರತ್ವಕ್ಕೆ ಮೆಚ್ಚಿ (ಶಾಂತಿಪು. ೬-೨೫ ವ) ; ಅನ್ನಿಸ್ಸಹಾಯನೊಳೆನೆನಗಿನ್ನೇನೆಂದಂದು ನಂದನಾನಂದದಿಂ . . . ತುಜುಪಟ್ಟೆಯಲ್ಲಿ ಬಂದೊಸೆದಿರ್ದಂ (ನೇಮಿಪು. ೬-೧೨೩). [ಸಂ.]

**ನಿಸ್ಸಹಾಯಕ** (ಗು). ೧. = ನಿಸ್ಸಹಾಯ ೧ : ಜೀವನವೆಲ್ಲ ಪೂರ್ತಿಯಾಗಿ ಅದೇ ಒಂಟಿತನದಲ್ಲಿ, ಅದೇ ನಿಸ್ಸಹಾಯಕ ನಿರಾನಂದಸ್ಥಿತಿಯಲ್ಲೇ ಮುಂದುವರಿಯಬೇಕಾಗುವುದೆಂದು ಭಾವಿಸಿದೆ (ಕುಟುಂಸಾ. ೩).(ನಾ). ೨. = ನಿಸ್ಸಹಾಯ ೩ : ಹೊಸದಾಗಿ ಕಾಂಗ್ರೆಸ್ಸಿಗೆ ಸೇರಿದ್ದ ನಿಷ್ಠಾವಂತಜನರೂ ಸಹ ರಂಗನಾಥಮಿತ್ರಮಂಡಳಿಯವರ ಉಪಟಳವನ್ನು ತಡೆಯಲಾರದೆ ನಿಸ್ಸಹಾಯಕರಾಗಿ ಸುಮ್ಮನಿದ್ದರು (ಪಂಜಪಂ. ೧೮೦). [ಸಂ.]

**ನಿಸ್ಸಳ** 'ನಿಸ್ಸಾಳ' ನೋ.

**ನಿಸ್ಸಾಣ** 'ನಿಸ್ಸಾಳ' ನೋ.

**ನಿಸ್ಸಾಣಧ್ವನಿ** 'ನಿಸ್ಸಾಳಧ್ವನಿ' ನೋ.

**ನಿಸ್ಸಾರ** (ಗು). ೧. ಸಾರವಿಲ್ಲದ ; ಸತ್ತ್ವವಿಲ್ಲದ ; ನೀರಸವಾದ : 'ನಿಸ್ಸಾರಹೃದಯ' ಪರಾ. (ನಾ). ೨. ಸಾರವಿಲ್ಲದುದು ; ಸತ್ತ್ವವಿಲ್ಲದುದು ; ನೀರಸವಾದುದು : ಮಗಳಲ್ಲಿಗಟ್ಟಿದಳಿಟಿಕೆಯ ನಿಸ್ಸಾರಮಪ್ಪ ವಸ್ತುವನಾಗಳ್ (ನೇಮಿಪು. ೪-೬೧) ; ಆ ಪ್ರಸಾದಕ್ಕೆ ಶರಣೆಂದೆನಯ್ಯಾ ಅದು ಸಾರವೂ ಅಲ್ಲ ನಿಸ್ಸಾರವೂ ಅಲ್ಲಾ ಆ ಪ್ರಸಾದದಲ್ಲಿ ನಾನೇ ತದ್ಗತನಾದೆ ಕಾಣಾ (ಬಸವ. ೯೪೩); ಸರಸಿರುಹವದನೆಯರಂಗಕಳೆಗಳು ಶರಣರಿಗೆ ನಿಸ್ಸಾರವಲ್ಲದೆ ಸಾರತರವಹುದೆ (ಬಸಪು. ೪೦-೭೯). ೩. = ನಿಸ್ಸಾರರಸ: ಕಾರಣಾಂತರ್ಯಾಮಿ ಸ್ಥೂಲವತಾರ ವ್ಯಾಪ್ತಾಂಶಾದಿ ರೂಪಕ ಸಾರಶುಭಪ್ರವಿವಿಕ್ತಾನಂದ ಸ್ಥೂಲ ನಿಸ್ಸಾರ ಆರು ರಸಗಳನರ್ಪಿಸು (ಹಸಾರ. ೧೩-೨೭). [ಸಂ.]

**ನಿಸ್ಸಾರತೆ** (ನಾ). ಸಾರವಿಲ್ಲದಿರುವಿಕೆ ; ನೀರಸತೆ : ನಾವು . . . ನಮ್ಮ ಮಕ್ಕಳು, ಬೇಡನ್ನಿನ ಜೀವನದ ನಿಸ್ಸಾರತೆ–ಇವನ್ನು ಕುರಿತು ಆಡುತ್ತಿದ್ದೆವು (ಕುಟುಂಸಾ. ೧೪೪). [ಸಂ. ನಿಸ್ಸಾರತಾ]

**ನಿಸ್ಸಾರರಸ** (ನಾ). [ದ್ವೈತ] ದೈವಿಕವಾದ ಆರು ರಸಗಳಲ್ಲಿ ಒಂದು ; ◊ ೧. ಸಾರರಸ = ಸಾತ್ವಿಕ ಪದಾರ್ಥಗಳು. ಇವುಗಳನ್ನು ತ್ರಿಗುಣರೂಪ ಕಾರಣವಾದ ಭಗವದ್ರೂಪಕ್ಕೆ ಅರ್ಪಿಸಬೇಕು. ೨. ಶುಭರಸ = ಮಂಗಳಕರವಾದ ಪದಾರ್ಥಗಳು. ಇವುಗಳನ್ನು ಅಂತರ್ಯಾಮಿಯಾದ ಭಗವದ್ರೂಪಕ್ಕೆ ಅರ್ಪಿಸಬೇಕು. ೩. ಪ್ರವಿವಿಕ್ತರಸ = ಏಕಾಂತ ಸ್ಥಳ ; ಪುಣ್ಯಕರವಾದ ತೀರ್ಥಕ್ಷೇತ್ರ. ಇದನ್ನು ವಿರಾಡ್ರೂಪನಾದ ಪರಮಾತ್ಮನಿಗೆ ಅರ್ಪಿಸಬೇಕು. ೪. ಆನಂದರಸ = ನಾವು ಮಾಡುವ ಊಟ, ನಿದ್ರೆ ಮೊದಲಾದುವುಗಳಿಂದ ಉಂಟಾಗುವ ಆನಂದ. ಇದನ್ನು ರಾಮಕೃಷ್ಣಾದ್ಯವತಾರರೂಪನಾದ ಭಗವಂತನಿಗೆ ಅರ್ಪಣೆಮಾಡಬೇಕು. ೫. ಸ್ಥೂಲರಸ = ನಮ್ಮ ಸ್ಥೂಲದೃಷ್ಟಿಗೆ ಯಾವುದು ಸಾರವೆಂದು ಕಾಣುವುದೋ ಆ ಜಲ. ಇದನ್ನು

ವ್ಯಾಪ್ತರೂಪನಾದ ಪರಮಾತ್ಮನಿಗೆ ಅರ್ಪಿಸಬೇಕು. ೬. ನಿಸ್ಸಾರರಸ = ಹುಲ್ಲು, ಕಡ್ಡಿ ಮೊದಲಾದುವು. ಇದನ್ನು ಅಂಶ (ಪಶು, ಪಕ್ಷಿ, ಮೃಗಾದಿ)ರೂಪನಾದ ಭಗವಂತನಿಗೆ ಅರ್ಪಿಸಬೇಕು. ಹೀಗೆ ಷಡ್ರೂಪಿಯಾದ ಪರಮಾತ್ಮನಿಗೆ ಈ ಷಡ್ರಸಗಳನ್ನು ಅರ್ಪಿಸಿ ಕೃತಾರ್ಥನಾಗಬೇಕೆಂದು 'ಹರಿಕಥಾಮೃತಸಾರ'ದ ಟೀಕೆಯಲ್ಲಿ ವಿವರಿಸಲಾಗಿದೆ: ಭಗವದ್ರೂಪಗಳಲ್ಲಿ . . .ಆರು ವಿಧಗಳುಂಟು. ಇದರಂತೆ ರಸಗಳಲ್ಲಿಯೂ ಸಾರರಸ, ಶುಭರಸ, ಪ್ರವಿವಿಕ್ತರಸ, ಆನಂದರಸ, ಸ್ಥೂಲರಸ, ನಿಸ್ಸಾರರಸಗಳೆಂದು ಆರು ವಿಧಗಳುಂಟು (ಹಸಾರ. ೧೩-೨೭ ಟೀಕು). [ನಿಸ್ಸಾರ+ರಸ]

**ನಿಸ್ಸಾರಹೃದಯ** (ನಾ). ೧. ಸಾರವಿಲ್ಲದ ಮನಸ್ಸು ; ನೀರಸವಾದ ಅಂತರಂಗ. ೨. ಸಾರವಿಲ್ಲದ ಹೃದಯವುಳ್ಳವನು ; ಭಾವಾನುಕಂಪಗಳಿಲ್ಲದವನು ; ಕ್ರೂರಿ : ನಿಸ್ಸಾರಹೃದಯನು ಕಂಕನೀ ದುಷ್ಟಾತ್ಮ ಹೋಗು (ಕುವ್ಯಾವಿ. ೯-೧೬) ; ಮಾರಿಮುಖದವ ಕಠಿನಮನ ನಿಸ್ಸಾರಹೃದಯನು ಭೀಮನವನೊಳು ಹೋರಿದವರೇನಹರು (ಕುವ್ಯಾದ್ರೋ. ೧೩-೪೬). [ನಿಸ್ಸಾರ+ಹೃದಯ]

**ನಿಸ್ಸಾರಿ** (ನಾ). ಒಂದು ಬಗೆಯ ವೀಣೆ; ಸಾರಿ ಅಥವಾ ಮೆಟ್ಟಲುಗಳು ಇಲ್ಲದ ವೀಣೆ : ೧೨ನೇ ಶತಮಾನದ ಪೂರ್ವಾರ್ಧದವರೆಗೂ ವೀಣೆಗೆ ಮೆಟ್ಟಲುಗಳಿದ್ದುದು ಕಾಣಬರುವುದಿಲ್ಲ. ಈ ರೀತಿಯ ಮೆಟ್ಟಲು (Fret) ಇಲ್ಲದ ವೀಣೆಗೆ 'ನಿಸ್ಸಾರಿ' ವೀಣೆಯೆಂದು ಹೆಸರು (ಸಂಗೀಚಂ. ೩೧೧).

[ ? ]

**ನಿಸ್ಸಾಹಣ** 'ನಿಸ್ಸಾಳ' ನೋ.

**ನಿಸ್ಸಾಹಳ** 'ನಿಸ್ಸಾಳ' ನೋ.

**ನಿಸ್ಸಾಹಳಧ್ವನಿ** 'ನಿಸ್ಸಾಳಧ್ವನಿ' ನೋ.

**ನಿಸ್ಸಾಳ,** ನಿಸ್ಸಹಣ, ನಿಸ್ಸಳ, ನಿಸ್ಸಾಣ, ನಿಸ್ಸಾಹಣ, ನಿಸ್ಸಾಹಳ, ನಿಸ್ಸಾಳಯ, ನಿಸ್ಸಾಳೆ (ನಾ). ತಾಮ್ರದಿಂದ ರಚಿತವಾಗಿ ತಳಭಾಗ ಕಿರಿದಾಗಿ, ಮುಖಭಾಗ ವಿಸ್ತಾರವಾಗಿದ್ದು ಮಹಾಧ್ವನಿಯನ್ನುಂಟುಮಾಡುವ ಒಂದು ಬಗೆಯ ಚರ್ಮವಾದ್ಯ,—ರಣವಾದ್ಯ : "ಯಶಃ, ಪಟಹಃ, ಢಕ್ಕಾ—ಈ ೩ ನಿಸ್ಸಾಳದ ಪೆಸರು" (ನಾಚಿರಾ. ೯೬); ಪೊಯ್ವ ನಿಸ್ಸಾಳ ತಮ್ಮಟದ ಭೇರಿಗಳಲ್ಲಿ ಬಯ್ವ ಬಿರುದಿನ ಕಹಳೆ ತಿತ್ತಿರಿಗಳಲ್ಲಿ (ಇಹರ. ದೇ. ೩೭-೨೧) ; ಮೊಳಗಿದವು ನಿಸ್ಸಾಳ ಕೋಳಾಹಳಿಸಿದವು ಕಹಳೆಗಳು (ಕುವ್ಯಾದ್ರೋ. ೯-೨೭) ; ಡೋಲು ನಿಸ್ಸಾಳಗಳಬ್ಬರ ತುಂಬಿತಾಕಾಶಮಂಡಲವ (ಕಂನವಿ. ೧೪-೨) ; ಭೇರಿ ನಿಸ್ಸಾಳಗಳು ಭರದಿಂದ ಮೊಳಗಿದವು (ರಾಜಸೂ. ೨). **ನಿಸ್ಸಹಣ :** ಚಟುಲತರ ನಿಸ್ಸಹಣ ಭೇರೀ ಪಟಹಡಿಂಡಿಮಘೋಷ . . .ಅಳ್ಳಿರಿಯಲು ಜಗತ್ರಯವ (ಉತ್ತರಾ. ೧೪-೩೧). **ನಿಸ್ಸಳ :** ಪಟಹ ನಿಸ್ಸಳ ಭೇರಿ ಪಣಿಕಿ ಬಜಿಸಿಡಿಲಿನಂತಾಯ್ತು (ಕೌತಿರಾ. ೧೯-೧೧) ; ಮೊಳಗಿದವು ಭೇರಿಗಳು ಘನನಿಸ್ಸಳದೊಡನೆ ಕೋಸಲನೃಪಾಲನ ನಿಳಯದಲಿ (ನಿಭಾಗ. ೧೦-೬೪-೫೩). **ನಿಸ್ಸಾಣ :** ಮಾಜೂನ್ನ ಸಾಮಂತರಂ ತುರಗಂ ಬೆಳ್ಗೊಡೆಯಂದಳಂ ಚಮರಜಂ ನಿಸ್ಸಾಣಮುಂ ಪ್ರಾಣಮುಂ . . . ಕೊಂದನಶ್ರಮದೆ ಕೇಳ್ ಶ್ರೀಮಲ್ಲ ಸಂಗ್ರಾಮದೊಳ್ (ಎಕ. VI, ಕಡೂರು. ೩೫-೪೩ ; 1136) ; ವಾಜಿಪದ ಪ್ರೋದ್ಯಚ್ಛಟತ್ಕಾರದಿನನುಗತನಿಸ್ಸಾಣಭಾಂಕಾರದಿಂ ವಿಷ್ಟಪಮುಂ ಶಬ್ದಾತ್ಮಕಂ ಮಾಡಿದುದುಭಯಮಹೀಭೃಚ್ಚಮೂಚಕ್ರವಾಳಂ (ಚಂದ್ರಪು. ೧೦-೬೭) ; ಪಟಹ ನಿಸ್ಸಾಣ ತಮ್ಮಟ ಭೇರಿಗಳ ಸಮುತ್ಕಟನಾದಂ . . . ಪಟುಭಟರ ಬೊಬ್ಬೆಯಾರ್ಭಟೆಗಳೊಂದಾಗಿ ಸಂಘಟಿಸಿತೀ ಬ್ರಹ್ಮಾಂಡಘಟವಿಂದೊಡೆಯದಿರದೆನೆ (ಜೈಮಿಭಾ. ೪-೧೪). **ನಿಸ್ಸಾಹಣ :** ಮನ್ಮಥಂ ಸೇನೆಗಂ ಕೈವೀಸೆ ದನಿಮಾಡಿದವು ತುಂಬಿಯಂಬು ನಿಸ್ಸಾಹಣಂ ವಿನುತ ಕೋಕಿಲರಾವವೆಂಬ ಹೆಗ್ಗಾಳೆಗಳು ಬಿರಿದೆತ್ತಿ ಕರೆದವಲ್ಲಿ (ವೀಶೈಪು. ೨-೪-೧೭). **ನಿಸ್ಸಾಹಳ :** 'ನಿಸ್ಸಾಹಳಧ್ವನಿ' ಪರಾ. **ನಿಸ್ಸಾಳಯ :** ಸುಜಾಯಲಂಬರುಣಾಂಬುಗಳ ನದಿ ಹೊಜಮುಜಾಯೆ ದೊರೆಗಿಕ್ಕಿದರು ಬೊಬ್ಬಿಜಾದಿಜಾವ ದನಿ ಪಟ್ಟಿಸಿತು ನಿಸ್ಸಾಳಯದ[ಪಾಠಾಂ. ಹತಿ] ದನಿಯ (ಕುವ್ಯಾಅ. ೧೯-೧೨). **ನಿಸ್ಸಾಳೆ :** ಹೀಗಾಗಲು ಕಾರಣವನ್ನೂ ಅವನು ಯೋಚಿಸುತ್ತಿದ್ದ. ಕಾರಣ ಸುಲಭವಾಗಿಯೇ ಕಿವಿಯಲ್ಲಿ ನಿಸ್ಸಾಳೆಯಂತೆ ಮೊಳಗುತ್ತಿತ್ತು (ಭೀಮುಕಾ. ೧೭೦). [<ಪ್ರಾ. ಣಿಸ್ಸಾಣ./ತಮಿ. ನಿಚಾಳ : ತೆಲು. ನಿಸ್ಸಾಣ, ನಿಸ್ಸಾನ, ನಿಸ್ಸಾಹಣ]

**ನಿಸ್ಸಾಳಕೋಟಿ** (ನಾ). ನಿಸ್ಸಾಳವಾದ್ಯಗಳ ಸಮೂಹ : ಸಿಡಿಲಕುಡುಹುಗಳೆಂದ ಕಮಲಜ ಹೊಡೆಯಲಬುಜಭವಾಂಡಭೇರಿಯ ಕಡುದನಿಗಳೆನಲೊದಜಾದವು ನಿಸ್ಸಾಳಕೋಟಿಗಳು (ಕುವ್ಯಾದ್ರೋ. ೧-೪೭) ; ಸೂಳವಿಸಿದುವು ಲಗ್ಗೆಯಲಿ ನಿಸ್ಸಾಳಕೋಟಿಗಳದರ ರಭಸಕೆ ಕೇಳಲಾರದೆ ಕಿವುಡುಗೊಂಡುವು ಲೋಕ ಹದಿನಾಲ್ಕು (ಸುದಾಮ. ೩-೧). [ನಿಸ್ಸಾಳ+ಕೋಟಿ$_1$]

**ನಿಸ್ಸಾಳತತಿ** (ನಾ). = ನಿಸ್ಸಾಳಕೋಟಿ : ಮುಸಗಿದುದು ಬಹುವಾದ್ಯರವ ನಿಪ್ಪಸರದಲಿ ನಿಸ್ಸಾಳತತಿ ಗರ್ಜಿಸಿದವಾವರ್ಜಿಸುವವೋಲ್ ಘನಯಂತ್ರಭೇದಿಗಳ (ಕುವ್ಯಾಅ. ೧೪-೪) ; ಸೂಳವಿಸಿದವು ಲಗ್ಗೆಯಲಿ ನಿಸ್ಸಾಳತತಿ ಸಿಡಿಲೆಣಗಿತೆನಲು (ಕುವ್ಯಾದ್ರೋ. ೪-೫೨). [ನಿಸ್ಸಾಳ+ತತಿ$_2$]

**ನಿಸ್ಸಾಳಧ್ವನಿ,** ನಿಸ್ಸಾಣಧ್ವನಿ, ನಿಸ್ಸಾಹಳಧ್ವನಿ (ನಾ). ನಿಸ್ಸಾಳದ ಶಬ್ದ : ಸೀಗುರಿ ಚಾಮರಂ ರಾಗದಿಂ ಕುಣಿಯೆ ನಿಸ್ಸಾಳಧ್ವನಿ ದಿಕ್ತಟಕ್ಕೆ ಧೀಂಕಿಡೆ ಭೇರೀರವಂ ಬೊಮ್ಮಾಂಡವನಡರೆ (ನಂಬಿರ. ೧೪-೮೪). **ನಿಸ್ಸಾಣಧ್ವನಿ :** ನಿಸ್ಸಾಣಧ್ವನಿ ತಂಬಟಸ್ಫುಟ ಢಡಂ ಢಂ ನಾದಭೀತಪ್ರರ್ಲರ್ಪಿಸ್ತತ್ವರ್ವಿಸುಟೋಡಿ ನಾಡ ನಗರೀಭಂಡಾರಮಂ ಪೆಂಡಿರಂ (ಎಕ. VIII, ಸಾಗರ. ೧೫-೨೭ ; 1218). **ನಿಸ್ಸಾಹಳಧ್ವನಿ :** ತುಂಬಿಗಳ ದನಿಯೆಂಬ ನಿಸ್ಸಾಹಳಧ್ವನಿಕದಂಬ ದಾಂಥಳ ಥಳಂಥಳವೆಂಬ ರವದಲ್ಲಿ ತುಂಬಲಾಹಾಹ ಕೇಳ್ದಲ್ಲಿ ನೆರೆದುದು ಮದನಭೂಮಿಪನ ಸೇನೆಯಾಗ (ವೀಶೈಪು. ೨-೪-೧೨). [ನಿಸ್ಸಾಳ+ಧ್ವನಿ]

**ನಿಸ್ಸಾಳನಿಸ್ವನ** (ನಾ). = ನಿಸ್ಸಾಳಧ್ವನಿ : ನಿಸ್ಸಾಳನಿಸ್ವನದ ಘುಳುಘುಳಿಪ ಬೊಗ್ಗುಗಳ ರಿಪುಗಳ ಮುಳಿಯಿಸುವ ಕಹಳೆಗಳ ತುರಗಾವಳಿಯ ಗಜಬಬ್ಬರಣೆ ಮಿಗೆ ಕೈಕೊಂಡರತಿಬಳರು (ಕುವ್ಯಾಭೀ. ೪-೫೪).

[ನಿಸ್ಸಾಳ+ನಿಸ್ವನ]

**ನಿಸ್ಸಾಳಬಡಿಕ** (ನಾ). ನಿಸ್ಸಾಳವನ್ನು ಬಡಿಯುವವನು,—ಬಾರಿಸುವವನು : ವಂದಿಗಳ ನಿಸ್ಸಾಳಬಡಿಕರ ಮುಂದೆ ಹಡಪಿಗ ಚಾಹಿ ಸೂತರ ಸಂದಣಿಗಳೌಷಧಿಕ ಹಯಗಜಸಂವಿಧಾಯಕರು ನಿಂದುದು(ಕುವ್ಯಾಗ.೨-೨).

[ನಿಸ್ಸಾಳ+ಬಡಿಕ$_1$]

**ನಿಸ್ಸಾಳಯ** 'ನಿಸ್ಸಾಳ' ನೋ.

**ನಿಸ್ಸಾಳರವ** (ನಾ). = ನಿಸ್ಸಾಳಧ್ವನಿ : ಡಿಂಡಿಮರವಂಗಳಾನಕದ ರವಂ ಕರಡೆಗಳ ರವಂ ನಿಸ್ಸಾಳರವಂ ಭೇರೀರವಂ ಮೃದಂಗರವಂಗಳ್ (ಗಿರಿಕ. ೩-೬೦). [ನಿಸ್ಸಾಳ+ರವ]

**ನಿಸ್ಸಾಳಾರವ** (ನಾ). = ನಿಸ್ಸಾಳಧ್ವನಿ : ದಾರುಕನು ನಿಜರಥವನೆಸಗಲುದಾರಸಾತ್ಯಕಿ . . . ನಿಸ್ಸಾಳಾರವದ ಘಟ್ಟಣೆಯಲಿದಿರಾದನು ರಿಪುವ್ರಜಕೆ (ಕುವ್ಯಾದ್ರೋ. ೧೧-೪). [ನಿಸ್ಸಾಳ+ಆರವ]

**ನಿಸ್ಸಾಳೆ** 'ನಿಸ್ಸಾಳ' ನೋ.

**ನಿಸ್ಸೀಮ** (ಗು). ೧. ಎಲ್ಲೆಯಿಲ್ಲದ ; ಅಪರಿಮಿತವಾದ ; ಅನಂತವಾದ : ಭೂಮಿಪತಿ ಭುಲ್ಲವಿಸಿದನು ನಿಸ್ಸೀಮಸಂತೋಷದಲಿ (ಕುವ್ಯಾಅ. ೧-೧೦) ; ಶ್ರೀಮದಮಲಗುಣನಿಧಿಗೆ ನಿತ್ಯನಿಗೆ ನಿಸ್ಸೀಮ

ಕೃಪಾವಾರಿಧಿಗೆ ರಾಮಣೀಯಕರಾಶಿಗೆ ಪಶ್ಚಿಮರಂಗಧಾಮನಿಗಾನೆಜಿಗುವೆನು (ಹದಿಬ. ೧-೧) ; ಪರಿವಾರದಾ ಸಂಸಾರಭಾರಬಂಧನವಿಹುದೆ ದುರ್ದಮ್ಯ, ನಿಸ್ಸೀಮ, ವಿಶ್ವಸಂಚರಶಕ್ತಿಯುಕ್ತ, ಕವಿವೈನತೇಯನ ಮಹಾಪಕ್ಷವಿಸ್ಫಾಲನೆಗೆ ? (ಶ್ರೀರಾಮಾ. ೧೨೬-೨೫) ; ರೋಮರಂಧ್ರಗಳರಳೆ ಶತಕೋಟಿಕಣ್ಣುಗಳು ಆ ಮಹಾರ್ರೂಪ ಕಂಡಾ ಕಣಿಯನುಸಿರುವೆನು ಸಾಮಗಾನದ ಸರಿಯ ನಿಸ್ಸೀಮಛಂದದೊಳು (ಗಿರಿ. ೧೧-೧೯). 'ನಿಸ್ಸೀಮಕಲೆ', 'ನಿಸ್ಸೀಮಚೆಲುವ' ಪರಾ. **೨.** ಶೂರನಾದ ; ಪರಾಕ್ರಮಿಯಾದ : ಬಭ್ರುವಾಹನ ಸುವೇಗ ನಿಸ್ಸೀಮ ನೀಲಧ್ವಜ ಮರಾಳಧ್ವಜಾದಿಗಳ್ಪಡೆವೆರಸಿ ನಡೆದರೊಡನೆ (ಜೈಮಿಭಾ. ೨೭-೧). (ನಾ). **೩.** ಎಲ್ಲೆಯಿಲ್ಲದುದು ; ಪರಿಮಿತಿಯಿಲ್ಲದುದು ; ಅನಂತವಾದುದು : ಸಹಜನಿರಾಭಾರಿಗಳ ಮೇಳದಿಂದ ನಿಸ್ಸೀಮದ ನಿಭ್ರಾಂತಿನ ಸಂಗದಲ್ಲಿ ನಿರಾಶಾಪದವೆ ಅನುಕೂಲ ನಿಶ್ಶಬ್ದವೆ ಅನುಭಾವ (ಅವಚಂ. ೮೪-೩೭೪) ; ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ ನಿಸ್ಸೀಮವೆಂದರೂ ಶೂನ್ಯವಲ್ಲ (ನಸಪ್ಲ. ೧೩-೧). **೪.** ಅತ್ಯಧಿಕನಾದವನು ; ಸೀಮಾತೀತನಾದವನು : ತನುಮನಧನವ ಮಿಾಜಿ ಮಾತಾಡಬಲ್ಲರೆ ಆತ ನಿಸ್ಸೀಮನು ಆತ ನಿಜೈಕ್ಯನು (ಬಸಪ. ೨೧೬) ; ನೆರೆದ ನೆರವಿಯೆಲ್ಲಂ ಪರಿದು ಬಂದು ಸುತ್ತಿ ಮುತ್ತಿ ಬಂಡಿಯೊಳಿರ್ದ ನಿಸ್ಸೀಮನಂ ಕಂಡು . . . ಇದಾವ ಭಕ್ತಿಯ ಬೆಳೆಯೊ ಎಂದು ಕೊಂಡಾಡುತಿರೆ (ನಂಜಿರ. ೨-೩೧) ; ಪ್ರೇಮದಿಂ ಶ್ರೀಕುಡಿಯೊಳಿಹ ಕಲಿಕಾಮದೇವನು . . . ಭಕ್ತಿಯಲಿ ನಿಸ್ಸೀಮನಿಂತೆಂದ (ಬಸಪು. ೨೬-೫೬) ; ಸೀಮೆಯ ಮಿಾಜಿ ನಿಸ್ಸೀಮನಾದೆನು (ಸಿದ್ಧೇಪ. ೧೨೭-೩೮೦). **೫.** ಅತಿಶೂರ ; ಪರಾಕ್ರಮಿ : ಸಾಮದಲಿ ಸೊಗಸಿಲ್ಲ ನೀವ್ ನಿಸ್ಸೀಮರಾದೊಡೆ ಜೋಡಿಸುವುದುದ್ದಾಮಕುರುಭೂಮಿಯಲಿ ಕುಳವಣಿದವರ ಪತಿಕರಿಸಿ (ಕುವ್ಯಾಉ. ೧೧-೫). **೬.** ಅತ್ಯಂತ ಸಮರ್ಥ ವ್ಯಕ್ತಿ : ವ್ಯಾಸನ ಸಾವಿತ್ರಿ, ದಮಯಂತಿ, ದ್ರೌಪದಿ . . . ಇವರೆಲ್ಲ ಪತಿಗಾಗಿ ಸರ್ವಸ್ವವನ್ನು ತ್ಯಾಗಮಾಡುವ, ದುರ್ಭರದೀಕ್ಷೆಯಲ್ಲಿ, ದಾರುಣವಾದ ಯಾತನೆಯನ್ನು ನುಂಗಿ ಜಯಿಸುವ ಧೀರಯಾತ್ರೆಯಲ್ಲಿ ನಿಸ್ಸೀಮರು (ಧರ್ಮಸಾ. ೭೮) ; ಇಲ್ಲದ ಕಿರುಕುಳ ಕೊಡೋದರಲ್ಲಿ ಖೈದಿಗಳು ನಿಸ್ಸೀಮರು (ವೀರಯೋ. ೩೫). **೭.** ಎಲ್ಲಕ್ಕೂ ಆಚೆಗೆ ಇರುವವನು ; ಸರ್ವಾತೀತನಾದವನು ; ಪರಮಾತ್ಮ : ಹೊಲಬುದೋಱಿದಿಹ ನಿಸ್ಸೀಮನ ಹೊಲಬನಱಿದು ಕೂಡಿದಾತನೆ ಮೃಡನು (ದೇದಾಪ. ೧೦-೧೬) ; ನಿರತಿಶಯ ನಿಸ್ಸೀಮ ನಿಗಮೇತರ ಗಿರೀಶ್ವರ ನಿಃಪಿತ ನಿರುತ್ತರ ನಿರಾಮಯ ನಿರ್ವಿಕಾರಾಕಾರ ಚಿತ್ತೈಸು (ಬಸಪು. ೬೧-೪೩) ; ನಿಸ್ಸೀಮಂಗೆ ನಿರ್ವಿಕಲ್ಪಿತಂಗೆ ಕಲ್ಪಿತ ಉಂಟೇ (ಸಿದ್ಧೇಪ. ೧೬೭-೫೦೦) ; ನಿರುಪಮ ನಿರಾಳನು ನೋಡಾ ಲಿಂಗೈಕ್ಯನು ನಿಸ್ಸೀಮ ನಿರ್ಜಡನು ನೋಡಾ ಲಿಂಗೈಕ್ಯನು (ಅಖಂಡೇ. ೩೧೬-೫).

[ಸಂ.]

**ನಿಸ್ಸೀಮಕಲೆ** (ನಾ). ಅತ್ಯಂತ ಸಮರ್ಥವಾದ ಕಲೆ : ಜನಪದ ಕಾವ್ಯಕಲೆ . . . ವಸ್ತುವಿನ ಸಮಗ್ರಸೌಂದರ್ಯಕ್ಕಿಂತ, ವಿವರ ವಿವರವಾದ ಬಣ್ಣನೆಗಿಂತ ಆ ಕ್ಷಣದಲ್ಲಿ ಹೊಳೆದ ಅಂಶಸೌಂದರ್ಯವನ್ನು ಬಣ್ಣಿಸುವುದರಲ್ಲಿ ಇದು ನಿಸ್ಸೀಮಕಲೆ (ಸೌಂದಸ. ೨೬೫).

[ನಿಸ್ಸೀಮ+ಕಲೆ$_3$]

**ನಿಸ್ಸೀಮಚೆಲುವ** (ನಾ). ಅತಿಶಯವಾದ ಚೆಲುವನ್ನುಳ್ಳವನು ; ಅಪರಿಮಿತ ಸೌಂದರ್ಯವುಳ್ಳವನು : ಭವವಿಲ್ಲದ ಭಯವಿಲ್ಲದ ಚೆಲುವಂಗಾನೊಲಿದೆ ಕುಲಸೀಮೆಯಿಲ್ಲದ ನಿಸ್ಸೀಮಚೆಲುವಂಗಾನೊಲಿದೆ (ಮಹಾದೇ. ಬ. ೧೨೨-೨೮೩). [ನಿಸ್ಸೀಮ+ಚೆಲುವ$_1$ (<ಚೆಲ್ವ) ]

**ನಿಸ್ಸೀಮತನ** (ನಾ). ಎಲ್ಲೆಯಿಲ್ಲದಿರುವಿಕೆ ; ಎಲ್ಲ ಸೀಮೆಗಳನ್ನೂ ಮಿಾರಿ ನಿಂತಿರುವ ಸ್ಥಿತಿ : ರೋಮರೋಮದೊಳಖಿಲಭುವನಸ್ತೋಮ ನಲಿದಾಡುವುದು ಗಡ ನಿಸ್ಸೀಮತನ ಗಡ ನಾವು ವೈರಿಗಳೆಂದು ಕೋಪಿಸುವ ಈ ಮರುಳುತನವೆತ್ತಲೀ ರಣತಾಮಸಿಕೆ ತಾನೆತ್ತಣದು (ಕುವ್ಯಾಭೀ. ೬-೪೦) ; ವಿಷಯವನ್ನು ನಿರ್ದಾಕ್ಷಿಣ್ಯವಾಗಿ ವಿಮರ್ಶಿಸಿ ನೋಡುವ, ಒಟ್ಟಿನಲ್ಲಿ ಸತ್ಯಾಂಶವನ್ನು ಹುಡುಕುವ ನಿಸ್ಸೀಮತನವೂ ಅವರಲ್ಲಿ ಬೆಳೆಯಬೇಕು (ಶಿಕ್ಷದ. ೩೮೭). [ನಿಸ್ಸೀಮ+ -ತನ]

**ನಿಸ್ಸೀಮನಿರ್ವೇಗ** (ನಾ). ಅಪರಿಮಿತವಾದ ವೈರಾಗ್ಯ : ಮಾನವರೆಮ್ಮಂದಿಗರಾತ್ಮಜನ್ಮವದೇನೆಂದು ಜ್ಯೋತ್ಸ್ನೆಯಿಂ ಲೋಚನೋತ್ಸವಮಂ ತಾಳ್ದದೆ ಬಾಳ್ವಿ ಬಾಟಿ ಪಡೆಗುಂ ನಿಸ್ಸೀಮನಿರ್ವೇಗಮಂ (ಮಲ್ಲಿಪು. ೩-೧೦೬). [ನಿಸ್ಸೀಮ+ನಿರ್ವೇಗ]

**ನಿಸ್ಸೀಮಭಕ್ತಿ** (ನಾ). ಅತಿಶಯವಾದ ಭಕ್ತಿ ; ಅಪರಿಮಿತವಾದ ಭಕ್ತಿ : ನನ್ನ ಅಂತರ್ಲೋಕದಲ್ಲಿ ನನ್ನ ನವೋದಿತತಾರುಣ್ಯದ ನವೋನವಪ್ರೇಮ, ನಿಸ್ಸೀಮಭಕ್ತಿ, ಅಖಂಡವಿಶ್ವಾಸ ಇವುಗಳೊಂದಿಗೆ ಕುಳಿತಿದ್ದೇನೆ (ಇಪ್ಪಕ. ೨೧೧). [ನಿಸ್ಸೀಮ+ಭಕ್ತಿ]

**ನಿಸ್ಸೀಮಶೋಕ** (ನಾ). **೧.** ಅಪರಿಮಿತವಾದ ಶೋಕ ; ವಿಪರೀತವಾದ ದುಃಖ. **೨.** ಅತಿಯಾದ ಶೋಕವುಳ್ಳವನು ; ಅತ್ಯಂತ ದುಃಖಿಯಾದವನು : ಬಲದೇವಾಕೃತಿಯಂ ಸರಾಗನಮರಂ ನಿಷ್ಪ್ರಾಣಮಂ ವಿಕ್ರಿಯಾಬಲದಿಂ ನಿರ್ಮಿಸೆ ಕಂಡು ಲಕ್ಷ್ಮಣನದಂ ನಿಸ್ಸೀಮ ಶೋಕಂ ಭಯಾಕುಲಿತಂ . . . ಜೀವಂ ಪೋಗೆ ಬಿಟ್ಟಂ ಧರಾತಲದೊಳ್ (ಪಂರಾಮಾ. ೧೬-೪೯). [ನಿಸ್ಸೀಮ + ಶೋಕ]

**ನಿಸ್ಸೀಮೆ** (ನಾ). ಮೇರೆ ಇಲ್ಲದುದು ; ಎಲ್ಲೆಯನ್ನು ಮಿಾರಿದುದು ; ಸೀಮಾತೀತವಾದುದು : ಭಾವದಲ್ಲಿ ಭ್ರಮಿತರಾದವರ ಸೀಮೆಯೇನು ನಿಸ್ಸೀಮೆಯೇನು ವಚನದ ರಚನೆಯ ರಂಜನೆಯ ಲೀಲೆಯನಾಡುವರು ಗುಹೇಶ್ವರನಿಪ್ಪ ಗುಪ್ತವೆಂತೆಂದಱಿಯರು (ಅವಚಂ. ೧೮೯-೪೯೭) ; ಆಚಾರ ಅನಾಚಾರವಿಲ್ಲದಂದು ಸೀಮೆ ನಿಸ್ಸೀಮೆ ಇಲ್ಲದಂದು ಗಮನ ನಿರ್ಗಮನ ಇಲ್ಲದಂದು . . . ಇಹ ಪರ ಇಲ್ಲದಂದು ಪರಾಪರವಸ್ತು ನೀನೊಬ್ಬನೇ ಇದ್ದೆಯಯ್ಯಾ (ಸಿದ್ಧೇವ. ೭-೨೦).

[ಸಂ. ನಿಸ್ಸೀಮ]

**ನಿಸ್ಸ್ಪೃಹ** (ನಾ). ಆಸೆಯನ್ನು ಬಿಟ್ಟವನು ; ವಿರಕ್ತ ; ಸ್ವಾರ್ಥವಿಲ್ಲದವನು : ಯೋಗಸಿದ್ಧಿಯ ಬಯಸ ದಿವಿಜರ ಭೋಗವನು ತಾನೊಲ್ಲ ಸಕಲವದಾಗಿ ಕೆಡುವದಿದೆಂದು ನಿಸ್ಸ್ಪೃಹನಾಗಿ ನಿಮಿಷದಲಿ. . . ಸುಖೇಚ್ಛೆಯ ಯೋಗಿಯೆನಿಸುವನು (ಅಮೃತ. ೬-೯). [ಸಂ.]

**ನಿಸ್ಸ್ವಾರ್ಥ** (ಗು). **೧.** ಸ್ವಾರ್ಥವಿಲ್ಲದ; ಪ್ರತಿಫಲಾಪೇಕ್ಷೆಯಿಲ್ಲದ: "ಸ್ವಾರ್ಥತೆಯ ಒಲವಿಲ್ಲದ; ನಿಷ್ಪಕ್ಷಪಾತವಾದ; ನಿಸ್ಸ್ವಾರ್ಥ; ಅಸ್ವಾರ್ಥ; ಅನಾಸಕ್ತ ; ನಿಷ್ಕಾಮ" (Disinterested. ಇಂಕನಿ). (ನಾ). **೨.** ಸ್ವಾರ್ಥವಿಲ್ಲದಿರುವಿಕೆ ; ಸ್ವಪ್ರಯೋಜನಾಕಾಂಕ್ಷೆ ಇಲ್ಲದಿರುವಿಕೆ ; ನಿಷ್ಕಾಮತೆ. [ಸಂ.]

**ನಿಹಂಚಿತ** (ನಾ). [ನಾಟ್ಯ] ನೃತ್ಯದ ಒಂದು ಭಂಗಿ ; ℙ "ಭುಜವನ್ನು ಮೇಲಕ್ಕೆತ್ತಿ ಅದರ ಮೇಲೆ ತಲೆಯನ್ನಿರಿಸುವುದು. ವಿಲಾಸ, ಲಲಿತ, ಗರ್ವ, ಬಿಬ್ಬೋಕ, ಕಿಲಕಿಂಚಿತ, ಮೊಟ್ಟಾಯಿತ, ಕುಟ್ಟಮಿತ, ಮಾನ, ಸ್ತಂಭ, ಇವೇ ಮೊದಲಾದ ಪ್ರಣಯಚೇಷ್ಟೆಗಳನ್ನು ಸೂಚಿಸುವಾಗ" (ಲಾಸ್ಯರಂ. ೨೨೨ ಗದ್ಯಾನುವಾದ) : ಕೆಲದೊಳೊಂದಿನಿತು ಬಾಗಿದ ತಲೆಯಂಚಿತವೆಂಬ ನಾಮಮೆತ್ತಿದ ಭುಜದೊಳ್ ಸಲೆ ಕುಸಿದ ಕೊರಲುಮೊಪ್ಪುವ ತಲೆಯದು ಪೆಸರಾಯ್ತು ಕೇಳ್ ನಿಹಂಚಿತವೆಂದುಂ (ಲಾಸ್ಯರಂ. ೧-೮೩). [ಸಂ.]

**ನಿಹಟದಂಶು** (ನಾ). ಪ್ರಕಾಶಮಾನವಾದ ಕಾಂತಿ : ನಿಹಟದಂಶು ಜಾಳಜಟಳ ವಿವಿಧರತ್ನರಾಶಿಯುಂ ದಿಶಾಮುಖಪ್ರಕಾಶಿಯುಂ ಗಗನತಳ ಮನೆಯ್ದೆ ನೆಗೆವ ಶಶಿನಿಭಾಕಳಾಪಮುಂ ನಿರುಪಮಧೂಮಲೇಪಮುಂ ಕಂಡನಂತರಂ[ಗ]ವಿವಿಧವನಜವದನರಾಗದಿಂ (ಪರ್ವಪು. ೧೧-೫೮).
[ಸಂ.]

**ನಿಹತಾರ್ಥ** (ನಾ). ೧. [ಕಾವ್ಯಮೀ]ಪದದೋಷಗಳಲ್ಲಿ ಒಂದು ; "ನಿಹತಾರ್ಥ-ಪ್ರಸಿದ್ಧವಾದ ಅರ್ಥವನ್ನು ಬಿಟ್ಟು ಬೇರೆ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು" (ಕೈಪಿಡಿ. ೨೨೭). ೨. ಈ ದೋಷ ದಿಂದಕೂಡಿದ ಪದ ; ☞ ಒಂದು ಪದದ ಅರ್ಥಗಳಲ್ಲಿ ಒಂದು ಪ್ರಸಿದ್ಧಾರ್ಥವಾಗಿದ್ದು ಮತ್ತೊಂದು ಅಪ್ರಸಿದ್ಧಾರ್ಥವಾಗಿದ್ದರೆ, ಅಪ್ರಸಿದ್ಧಾರ್ಥದಲ್ಲಿ ಆ ಪದವನ್ನು ಪ್ರಯೋಗಿಸಬಾರದು. ಹಾಗೆ ಪ್ರಯೋಗಿಸಿದರೆ ಆ ಪದವು ನಿಹತಾರ್ಥತಾದೋಷಗ್ರಸ್ತವಾಗುತ್ತದೆ. ಇಂಥ ಪದಕ್ಕೆ ನಿಹತಾರ್ಥವೆಂದು ಹೆಸರು. [ಸಂ.]

**ನಿಹನನ** (ನಾ). ಕೊಲ್ಲುವುದು ; ಕೊಲೆ ; ವಧೆ : "ಪ್ರಮಾಪಣಂ, ನಿಬರ್ಹಣಂ . . . ನಿಸ್ತರ್ಹಣಂ, ನಿಹನನಂ . . . ವಧಃ—ಈ ೩೦ ಕೊಲ್ಲುವದಕ್ಕೆ ಹೆಸರುಗಳು" (ಸಿದ್ಧಾಂತಿ. ೨೭೨). [ಸಂ.]

**ನಿಹಾಕೆ** (ನಾ). ಹಲ್ಲಿಯ ಜಾತಿಗೆ ಸೇರಿದ ಒಂದು ಬಗೆಯ ದೊಡ್ಡ ಪ್ರಾಣಿ; ನೀರುಡು : "ನಿಹಾಕಾ, ಗೋಧಿಕಾ – ೨ ನೀರಲ್ಲಿರುವ ಉಡುವಿನ ಪೆಸರು, ಅಂದರೆ . . . ನೀರುಡಜಂತು" (ಸಿದ್ಧಾಂತಿ. ೮೩) ; ಸಾರಂಗ ನಿಹಾಕೆ ರೋಹಿತ ತರಕ್ಷು . . . ಮೃಗೇಂದ್ರಮುಖ್ಯ ಮೃಗ ಸಂಚಯದುಂಚಗಾಡಿಯಿಂ ಕಂಗೆಸೆದತ್ತು ತುಂಗಬಹುಶೃಂಗವಿರಾಜಿತ ವಿಂಧ್ಯಭೂಧರಂ (ಉದ್ಭಟ. ೨-೪೩). [ಸಂ. ನಿಹಾಕಾ]

**ನಿಹಾರ$_1$** (ನಾ). ಹೆಚ್ಚಾದ ಶಬ್ದ ; ಅಧಿಕವಾದ ಧ್ವನಿ : ಮುಱಿದ ಚೂಣಿಯ ಭಟರು ತಂದರು ಬಿಱುಸಿನರೆನೆಲೆಗಿದು ನಿಹಾರದೊಳಿಱಿದು ನೆಱೆ ಸೊಪ್ಪಾಗಿ ಸಾರಿತು ಸರಿದು ಹಿನ್ನೆಲೆಗೆ (ಕುಪ್ಯಾಅ. ೧೯-೧೨) ; ಮೇಲುದ್ದಿ ಕರವ ನಿಹಾರದಲಿ ಭೊಬ್ಬಿಱಿದು ಹಾಱಿದನಾರೆ ಸುರರನುಪಮಮಹಾ ಕೈಲಾಸಪರ್ವತಕೆ (ತೊರರಾ. ೬-೫-೨೮); ನಿಹಾರದಲಿ ಸಿಡಿದು ಬೊಬ್ಬಿಱಿ ದುಬ್ಬಿ ಕಂಗಳ ಕಿಡಿಯ ಕೋಪದಲಸುರಹಯ ನೆಲಕಡಿಮಗುಚಲೆಱಗಿದನು ವಾಲಿಜನುಗ್ರಮುಷ್ಟಿಯಲಿ (ತೊರರಾ. ೬-೩೦-೨೯).
[<ಸಂ. ನಿಹ್ರಾದ]

**ನಿಹಾರ$_2$** (ನಾ). ೧. ಮಂಜು; ಇಬ್ಬನಿ. ೨. ಮಬ್ಬು ; ಮಸುಕು : ಜಾಱಿದುಬ್ಬಿನ ಹೊತ್ತ ದುಗುಡದ ಮೋಱೆಗಳ ಮೋನದ ನಿ[ಪಾಠಾಂ. ದು]ಹಾರದ ದೂಱುಗಂಗಳ ದೇವನಿಕರವ ಕಂಡು (ಕುಪ್ಯಾಕ. ೬-೨೫). ೩. ಅಜ್ಞಾನ; ತಾಮಸಿಕೆ : ನಿಹಾರದ [ಪಾಠಾಂ. ವಿಘಾತಿಯ] ದಡಿಗದಾನವರೈದಿ ಕವಿದುದು ಕೆದಱಿ ಸುರ ಬಲವ (ಕುಪ್ಯಾಅ. ೧೨-೩೨). ೪. ಮಲಮೂತ್ರವಿಸರ್ಜನೆ : ಧರೆ ಯೊಳೆಲ್ಲವ ಸುಟ್ಟರುಂಟಲ್ಲಿ ಭಸ್ಮ ಕರ್ಪುರವ ಸುಟ್ಟರೆ ಭಸ್ಮವುಂಟೆ ನರತತಿ ಗಾಹಾರ ನಿಹಾರವುಂಟೆಮ್ಮ ಭರತೇಶಗಿಲ್ಲ ನಿಹಾರ (ಭರಚ. ೧-೨೪). 'ನೀಹಾರ' ಪರಾ. [ಸಂ.]

**ನಿಹಿಂಸನ** (ನಾ). = ನಿಹನನ : "ಪ್ರಮಾಪಣಂ, ನಿಬರ್ಹಣಂ . . . ನಿಹಿಂಸನಂ, ನಿರ್ವಾಪಣಂ . . . ವಧಃ – ಈ ೩೦ ಕೊಲ್ಲುವದಕ್ಕೆ ಹೆಸರುಗಳು" (ಸಿದ್ಧಾಂತಿ. ೨೭೨). [ಸಂ.]

**ನಿಹಿತ** (ಗು). ೧. ಇರಿಸಿದ ; ಇಟ್ಟ : ಮಹಾಶ್ವೇತೆಯುಂ ಚಂದ್ರಾಪೀಡಮುಖನಿಹಿತನಿಶ್ಚಲಸ್ತಬ್ಧದೃಷ್ಟಿಯಾಗಿ ಮರಣಸಮಾಸಾದಿತೆಯಾದಂತೆ ಮೂರ್ಛೆಗೆ ಸಂದಳ್ (ಕಾದಂಊ. ೫೭೮) ; ಮಾರುತಿಗಂ ಪಾಂಚಾಲೀಕುಂಚಿತಕೇಶಪಾಶಾಕೃಷ್ಟಿಪಾತಕಪ್ರಧಾನನಿಹಿತ ಹಿತನೆನಿಸಿದ ಫಣಿರಾಜಕೇತನಂಗಂ ಧರ್ಮನಂದನಾದಿಗಳಿರ್ದು ಧರ್ಮಯುದ್ಧಮನೆ ಸಮಕಟ್ಟಿದಾಗಳ್ (ಗದಾಯು. ೭-೬೨ವ) ; ಭರತಾಗಮಭವನನಿಹಿತಮಹನೀಯ ಮತಿಪ್ರದೀಪೆಯುಂ (ಎಕ. V, ಬೇಲೂರು. ೫೮-೩; 1177) : ಕುಂಭಿಕುಂಭಸ್ಥಳನಿಹಿತನಿಶಾತಾಂಕುಶಂ ಭೂಭುಜಂ (ಚಂದ್ರಪು. ೬-೯೯). ೨. ಸಂಗ್ರಹವಾದ ; ತುಂಬಿದ : ನಿಹಿತ[ಪಾಠಾಂ. ಯುತ, ಖಿಳ]ಭಕ್ತಿ ಮಹಾಮಹಿಮೆಯಿಂದೊಪ್ಪುತಿಪ್ಪಭಿರಾಮಪುರವೇ ರಾಜಧಾನಿಯೆನಲ್ಕೆ (ಬಸವು. ೧೯-೪). (ನಾ). ೩. ಇರಿಸಿದುದು ; ಇಟ್ಟುದು : "ಆಹಿತಂ, ನಿಹಿತಂ, ನ್ಯಸ್ತಂ, ಆರೋಪಿತಂ—ಈ ೪ ಇಱಿಸಲ್ಪಟ್ಟುದು" (ಹಲಾಯು. ೧೨೪-೬೨) ; ಈಚೆಯಡಿಯ ಬಿಟ್ಟು ಆಚೆಯಡಿಯ ಮೆಟ್ಟದೆ ನಿಹಿತದಡಿಯ ಮಡ ಮುಟ್ಟದೆ ಉಂಗುಷ್ಟ ಊಱದೆ ದಾಟಬೇಕು ಆತನಡಿಗೆ (ಮೋಳಿಸೂ. ೧೫೦-೫೬೮). ೪. ಒಳಗಿರುವುದು ; ಗರ್ಭೀಕೃತವಾದುದು : ಮಾತುಗಂಟತನದಿಂದ ವಸ್ತುಭಾವದ ನಿಹಿತವನಱಿಯದೆ ವಾಗ್ವಾದಕ್ಕೆ ಗೆಲ್ಲಸೋಲಕ್ಕೆ ಹೋರುವಲ್ಲಿ ಇಹಪರ ಉಭಯದಲ್ಲಿಗೆ ದುಃಖಿ (ಮೋಳಿಸೂ. ೧೩೮-೫೩೨). [ಸಂ.]

**ನಿಹಿತಾಚಾರ** (ನಾ). ಸರಿಯಾಗಿ ರೂಪಿಸಿದ ನಡವಳಿಕೆ ; ವ್ಯವಸ್ಥೆಗೊಳಿಸಿದ ಆಚಾರ : ಘಟದಲ್ಲಿ ವೈಭವ ಆತ್ಮನಲ್ಲಿ ನಿರೋಧ ಆಚಾರದಲ್ಲಿ ಕರ್ಕಶ ಇಂತೀ ನಿಹಿತಾಚಾರಂಗಳಲ್ಲಿ ನಿರತನಾಗಿ ಕಾಯದ ಕರ್ಮ ಜೀವದ ಭಾವ ಜ್ಞಾನದ ಒಳಗನಱಿಯಬೇಕು (ಮೋಳಿಸೂ. ೧೦-೩೭). [ನಿಹಿತ + ಆಚಾರ]

**ನಿಹೀನ** (ಗು). ೧. ಕೀಳಾದ ; ತುಚ್ಛವಾದ ; ಅಲ್ಪವಾದ. ೨. ಕೀಳುಕುಲದ. (ನಾ). ೩. ಅತ್ಯಂತ ಕ್ಷುಲ್ಲಕವಾದುದು ; ಬಲು ಕೀಳಾದುದು : ಇಂಥವರನ್ನು ಆಶ್ರಯಿಸಿದರೆ ತಮ್ಮ ಕೆಲಸವಾದೀತೆಂದು ನಂಬಿ ಅಂಥವರನ್ನು ಆಶ್ರಯಿಸಿ ಅವರ ಬಳಿ ನಿಹೀನವಾದ ಸೇವಾವೃತ್ತಿಯನ್ನು ಮಾಡುವರು (ರಾಜಾಮ. ೧೦೩). [ಸಂ.]

**ನಿಹ್ನವ** (ನಾ). ೧. (ಜ್ಞಾನವನ್ನು) ಮರೆಮಾಚುವುದು,—ಅಲ್ಲಗಳೆಯುವುದು ; ಅಪಹ್ನುತಿ. ೨. ಗುಟ್ಟು ; ರಹಸ್ಯ. ೩. ಅಪನಂಬಿಕೆ ; ಸಂಶಯ ; ಅವಿಶ್ವಾಸ : "ಅವಿಶ್ವಾಸ, ನಿಹ್ನವ" (ನಾಚಿರಾ. ೯). ೪. ಮೋಸ ; ವಂಚನೆ. ೫. ಪ್ರಾಯಶ್ಚಿತ್ತ. ೬. ಅಸತ್ಯ ; ಅಪಲಾಪ ; ಮೋಸಗೊಳಿಸುವ ಮಾತು : "ಅಪಲಾಪ, ನಿಹ್ನವ" (ನಾಚಿರಾ. ೯) ; "ಅಪಲಾಪಃ, ನಿಹ್ನವಃ—ಮೋಸಗೊಳಿಸುವ ಮಾತಿನ ಹೆಸರುಗಳು" (ಸಿದ್ಧಾಂತಿ. ೫೬). ೭. [ಜೈನ]ಪ್ರದೋಷ, ನಿಹ್ನವ, ಮಾತ್ಸರ್ಯ, ಅಂತರಾಯ, ಆಸಾದನ, ಉಪಘಾತಗಳೆಂಬ ಆರುಬಗೆಯ ಆಸ್ರವಗಳಲ್ಲಿ ಒಂದು ; ಯಾವುದಾದರೊಂದು ಕಾರಣದಿಂದ ತನಗೆ ಗೊತ್ತಿಲ್ಲವೆಂದು ಜ್ಞಾನವನ್ನು ಮರೆಮಾಚುವುದು : ನಿಹ್ನವ—ಮಱಸುಗೆಯುಂ (ತತ್ತ್ವಪ್ರ. ೨೫೯) ; ನಿಹ್ನವ (ನಾನರಿಯೆನೆಂದು ತನ್ನ ಜ್ಞಾನವನ್ನು ಮರೆಮಾಡಿಕೊಳ್ಳುವುದು) (ಜೈನಧ. ೬೫). ೮. ತಿಳಿವಳಿಕೆಯನ್ನು ಗೋಪ್ಯವಾಗಿಡುವವನು ; ಅಜ್ಞಾನಿಯ ಸೋಗು ಹಾಕುವವನು : ಭಗವಾನ್ ಮಹಾವೀರನ ಶಾಸನದಲ್ಲಿ ಆದ ನಿಹ್ನವರ (ವಿಷಯ ಗೊತ್ತಿದ್ದೂ ಇಲ್ಲವೆಂದು ಹೇಳುವವರು—ಜ್ಞಾನಿಗಳಾಗಿಯೂ ಅಜ್ಞಾನಿಯ ಸೋಗು ಹಾಕಿದವರು) ವರ್ಣನವು ಸ್ಥಾನಾಂಗದಲ್ಲಿದೆ (ಜೈನಪ. ೧೭೧). [ಸಂ.]

**ನಿಹ್ರಾದ** (ನಾ). ಶಬ್ದ ; ಧ್ವನಿ. [ಸಂ.]

**ನಿಳಯ** 'ನಿಲಯ' ನೋ.

**ನಿಳಯವೇದಿ** (ನಾ). ಮನೆಯ ಜಗಲಿ : ಸಮರಶ್ರಮವ ನಿವಿಹಕೆ ನಿಳಯವೇದಿಯಲಿದ್ದು ಕಳೆದುದು ಕೂಡೆ ಪರಿವಾರ (ಕುಪ್ಯಾಕ. ೫-೩).
[ನಿಳಯ (= ನಿಲಯ) + ವೇದಿ$_2$]

**ನಿಳಯೇಶ** (ನಾ). ೧. ಮನೆಯ ಒಡೆಯ. ೨. [ಜ್ಯೋತಿ] ರಾಶಿಯ ಅಧಿಪತಿ : ನಿಳಯುಂ ತನ್ನಿಳಯೇಶನಿಂದುವಿನಿತುಂ ವೀರ್ಯಾಢ್ಯ ಮಾದಂದು ತತ್ಫಲಮೆಲ್ಲಂ ದೊರೆಕೊಳ್ಗುಂ (ಜಾತತಿ. ೧೭–೧೩). [ನಿಳಯ (= ನಿಲಯ) + ಈಶ]

**ನಿಳಿ** (ನಾ). ಒಂದು ಬಗೆಯ ಜಲಚರ (?) : ಮುನ್ನ ಶರಧಿಯೊಳೊಬ್ಬ ನಿಳಿವರನುನ್ನತದ ವಿಸ್ತಾರ ಹುಬ್ಬಿನ ತನ್ನ ಮಧ್ಯದ ಯೋಜನಂಗಳು ಮೇಲೆ ಮುನ್ನೂಱು ಭಿನ್ನವಿಲ್ಲದೆ ನಿಳಿಯ ನುಂಗುವ ತನ್ನ ಪುಚ್ಛದ ಮಧ್ಯಯೋಜನದುನ್ನತಿಯು ತಾನಾದುದೈಯಱುನೂಱು ಯೋಜನವು (ಸಂಭಪ. ೪–೨೪). [ ? ]

**ನಿಳಿಂಪ** 'ನಿಲಿಂಪ' ನೋ.

**ನಿಳಿಂಪಕಾಂತೆ** (ನಾ). ದೇವತಾಸ್ತ್ರೀ ; ದೇವಾಂಗನೆ : ತುಂಬಿಗಳುಂ ನಭದಲ್ಲಿ ಮಂಡಳೀಕರಿಸಿ ನಿಳಿಂಪಕಾಂತೆಯರಿಗೆತ್ತಿದ ಹೀಲಿಯ ಚೆಲ್ವುವೆತ್ತ ಝುಲ್ಲರಿಗಳೆಂಬಿನಂ ಬಿಡದೆ ಬಂದುವು ಲೀಲೆಯನಂದು ಮಾಡುತುಂ (ಬಾಧಪು. ೬–೨೩); ಪೊಂಬರಿಯಣಂಗಳೊಳಾರತಿಯೆತ್ತಿ ಪಾಡಿದರ್ ವಿಳಸಿತ ಭಾರ್ಗವೀವಿಧಿವಧೂರತಿಮುಖ್ಯನಿಳಿಂಪಕಾಂತೆಯರ್ (ಶಬಶಂ. ೩–೨೨). [ನಿಳಿಂಪ (= ನಿಲಿಂಪ) + ಕಾಂತೆ]

**ನಿಳಿಂಪಕುಜ** (ನಾ). ಸ್ವರ್ಗಲೋಕದ ಮರ ; ಕಲ್ಪವೃಕ್ಷ : ಬೇಡಿದಡಲ್ಲದೀಯದು ನಿಳಿಂಪಕುಜಂ (ಎಕ. VII, ಶಿಕಾರಿ. ೧೪–೧೫; 1154). [ನಿಳಿಂಪ (= ನಿಲಿಂಪ)+ಕುಜ]

**ನಿಳಿಂಪಗಣ** (ನಾ). ದೇವತೆಗಳ ಸಮುದಾಯ : ತ್ರಿಗುಣಿಸಿ ಬಲವರ್ಪ ನಿಳಿಂಪಗಣಂ ಮಂದರಕುಭೃನ್ನಿತಂಬಸ್ಥಲದೊಳ್ ಸೊಗಯಿಸಿತು ಕನಕರುಚಿಯಿಂ ತ್ರಿಗುಣಕನತ್ಕನಕಘಟಿತ ಕಟಿಸೂತ್ರದವೋಲ್ (ಆಪಿಪು. ೪–೩೧). [ನಿಳಿಂಪ (= ನಿಲಿಂಪ) + ಗಣ]

**ನಿಳಿಂಪಚಕ್ರಿ** (ನಾ). ದೇವತೆಗಳ ಚಕ್ರವರ್ತಿ ; ಇಂದ್ರ : ಈಯುದೊಡೆ ಪಾರಿಜಾತಮನೀಯದಮೋಘಂ ಸಿತಾತಪತ್ರಪ್ರಕರಚ್ಛಾಯೆಯಿನಸ್ತ ಪ್ರಕರಚ್ಛಾಯೆಯನೀಗುಂ ನಿಳಿಂಪಚಕ್ರಿಗೆ ಶಾರ್ಙ್ಗಂ (ಜಗವಿ. ೧೩–೩೦). [ನಿಳಿಂಪ (= ನಿಲಿಂಪ) + ಚಕ್ರಿ]

**ನಿಳಿಂಪದಂಪತಿ** (ನಾ). ದೇವದಂಪತಿ : ಅನ್ಯೋನ್ಯಪ್ರೇಮಸಂಜಾತ ಸಂಪತ್ಪರಂಪರಾಪರಿಗತಮಾಗಿ ನಿಳಿಂಪದಂಪತಿಯನೆ ಪೋಲ್ವ ತದ್ದಂಪತಿಯಿಂದಂ ಪವಿತ್ರೀಭೂತವಾದ ಭೂತಳೋದ್ದೇಶದೊಳುತ್ಪದ್ಯಮಾನ ಭಾವಿತೀರ್ಥಕರಪುಣ್ಯದೂತಾಹೂತಂ ಪುರುಹೂತಂ ಬಂದು (ಆದಿಪು. ೬–೮೪ ವ) ; ಸಾರಸಹಂಸಕೋಕಿಳಕುಳಧ್ವಾನೋತ್ಕರಂ ಚೆಲ್ವನಾಯ್ತು ಕರಂ ಸ[ಕ್ತ] ನಿಳಿಂಪದಂಪತಿಗಳಿಂದಾ ನಂದನಂ ನಂದನಂ (ಪಂಪಭಾ. ೫–೮೦). [ನಿಳಿಂಪ (= ನಿಲಿಂಪ) + ದಂಪತಿ]

**ನಿಳಿಂಪನಗ** (ನಾ). ದೇವತೆಗಳ ಬೆಟ್ಟ ; ಮೇರುಪರ್ವತ : ಮನದೊಳ್ . . . ಸೆಡೆಯದೆ ನಿಳಿಂಪನಗನಿಭಧೈರ್ಯಂ ತನುವಿನ ಮೇಲಣ ಮೋಹಂ ತನಗಿಲ್ಲದೆ ತಳರದಿರ್ದನುನ್ನತಚಿತ್ತಂ (ಧರ್ಮಾಮೃ. ೧೨–೪೧). [ನಿಳಿಂಪ (= ನಿಲಿಂಪ) + ನಗ$_4$]

**ನಿಳಿಂಪನಾಥ** (ನಾ). = ನಿಳಿಂಪನಾಯಕ : ಉಪಹಸಿತಸನತ್ಕುಮಾರ ನಳಕೂಬರ ಮಕರಕೇತುಸೌಂದರ್ಯನುಂ ವಿನಿರ್ಜಿತ ನಿರವಶೇಷ ನಿಳಿಂಪನಾಥವಿಭವನುಂ (ಶಾಂತಿಪು. ೧–೭೧ ವ). [ನಿಳಿಂಪ (= ನಿಲಿಂಪ) + ನಾಥ]

**ನಿಳಿಂಪನಾಯಕ** (ನಾ) ದೇವತೆಗಳ ಒಡೆಯ ; ಇಂದ್ರ : ನಿಳಿಂಪನಾಯಕಂಗಾದುದಾಗಳಾಸನಕಂಪಂ (ಆಪಿಪು. ೩–೩) ; ದಶರಥಮಹೀನಾಯಕನುಚ್ಚೈಶ್ರವದಿನಿಱಿವ ನಿಳಿಂಪನಾಯಕನಂತೆ ವಾಹನದಿನಿಱಿದು (ಸಂರಾಮಾ. ೩–೮೯ ವ). [ನಿಳಿಂಪ (= ನಿಲಿಂಪ) + ನಾಯಕ]

**ನಿಳಿಂಪನಿವಹ** (ನಾ). = ನಿಳಿಂಪಗಣ : ನಿಳಿಂಪನಿವಹಸ್ತುತ ಜಯಜಯಧ್ವನಿಸ್ತನಿತಸಕಳದಿಗಂತರಾಳನುಂ (ಸುಕುಸೂ. ೮–೭೦ ವ). [ನಿಳಿಂಪ (= ನಿಲಿಂಪ) + ನಿವಹ]

**ನಿಳಿಂಪನಿಳಯ** 'ನಿಲಿಂಪನಿಲಯ' ನೋ.

**ನಿಳಿಂಪವಧು** (ನಾ). = ನಿಳಿಂಪಕಾಂತೆ : ನಿಳಿಂಪವಧೂವಕ್ತ್ರಸರೋಜಮಿತ್ರನೆನೆ ಚಿತ್ರೋದ್ಯತ್ತ್ವವೀಚಾರಸಾರವಿನೋದಂಗಳಿನಂದದೇಂ ನಲಿದನೋ ಕಲ್ಪಾಮರಂ ಕಲ್ಪದೊಳ್ (ಸುಕುಸೂ. ೯–೩೫). [ನಿಳಿಂಪ (= ನಿಲಿಂಪ)+ವಧು]

**ನಿಳಿಂಪವ್ರಜ** (ನಾ). = ನಿಳಿಂಪಗಣ : ನಾನಲಾ ದ್ರೌಪದಿಯ ಮದುವೆಯೊಳಾ ನರೇಂದ್ರರ ಗೆಲಿದವ ಬಳಿಕಾ ನಿಳಿಂಪವ್ರಜವ ಮುಱುದುರುಪಿದೆನು ಖಾಂಡವವ (ಕುವ್ಯಾಕ. ೧೭–೩೭). [ನಿಳಿಂಪ (= ನಿಲಿಂಪ)+ವ್ರಜ]

**ನಿಳಿಂಪೆ** (ನಾ). = ನಿಳಿಂಪಕಾಂತೆ : ಕಂಪಿನ ಜೊಂಪೆಯ ಹಿಡಿದ ನಿಳಿಂಪೆಯ ತೆರ ಬರುವೆಲರೆಸಳೇನನುಮ (ಹಂಸದ. ೧೬೯–೨). [ನಿಳಿಂಪ (= ನಿಲಿಂಪ)+–ಎ$_2$]

**ನಿಳಿಕೆ** (ನಾ). (?) : ಆವಾಕೆಯ ಬೆನ್ನಿನಲ್ಲಿ ಸುಳಿಯಿರಲು ಹೊಕ್ಕಳ ಮೇಲೆ ಸುಳಿಯಿರಲು . . . ಆಕೆಯು ನಿಳಿಕೆಯೆಂದರಿವುದು (ಸಾಮುಲ. ೨೭–೧೨). [ ? ]

**ನಿಳಿಲ್** (ನಾ). ಒಂದು ಅನುಕರಣ ಶಬ್ದ : ಬೀದಿವರಿದಾಱಿಗೊಂಡು ಸಿಕ್ಕಿದ ರೂಪಿನ ತಲೆಯೊಳ್ ನಿಳಿಲ್ ನಿಕ್ಕೆಂದು ತರ್ಗಿ ನುರ್ಗಿ ಕರ್ಬೆ ಕೊಡಹುವ ನಚ್ಚಿನ ಗೋವಂ ದನಿದೋಱಿ (ಗಿರಿಕ. ೨–೧೦೫ ವ); ಖಣಿಲೆಂಬ ಖಟಿಲೆಂಬ ನಿಳಿಲೆಂಬ ನೆರ್ಕೆಂಬ . . . ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟೆ (ಇಹರ. ದೇ. ೪೧–೨೧).

**ನಿಳಿನಿಳಿಲು** (ದ್ವಿರುಕ್ತಿ) : ನಿಳಿನಿಳಿಲು [ಪಾಠಾಂ. ನಿಳಿನಿಟಿಲು] ಭುಗಿಲೆಂಬ ಛಳಿಛಿಳಿಛಿಳಿಛಿಟಿಲು ಭೋರೆಂಬ ಖಣಿಖಟಿಖಳಿಲು ಖಳಿಲೆಂಬಂಬುಗಳ ದನಿ ತುಂಬಿತಂಬರವ (ಕುವ್ಯಾದ್ರೋ. ೧೪–೪). **ನಿಳಿನಿಟಲು** = ಒಂದು ಅನುಕರಣ ಶಬ್ದ : ಹುಂಕೃತಿ ಮಸಗೆ ಹೂಡಿದನಹಿಪನೆದೆ ನಿಳಿನಿಟಲೆ [ಪಾಠಾಂ. ನಿಳಿನಿಟಿಲೆ, ನಿಱುನಿಳಿಲೆ]ನಲು ಧನುವ (ತೊರರಾ. ೩–೬–೬). **ನಿಳಿಲ್ನಿಟಿಲ್** = ಒಂದು ಅನುಕರಣ ಶಬ್ದ : ಬೆರಸಿ ಪದಾತಿ ನೆಕ್ಕು ನೆರಿಲೆಂಬ ನಿಳಿಲ್ನಿಟ [ಪಾಠಾಂ. ನೆಳಿಲ್ ನೆಳಿ]ಲೆಂಬ . . . ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳ್ (ಗಿರಿಕ. ೬–೬೪).

**ನಿಳಿವಳಿ** (ನಾ). ಬೇಗ ಬೇಗ ಚಲಿಸುವಿಕೆ ; ಸಂಚಲತೆ ; ಚಂಚಲತೆ (?) : ಪನ್ನಗನ ಜಿಹ್ವೆಯ ನಿಳಿ[ಪಾಠಾಂ. ನಳಿ]ವಳಿಯಂತೆ ಚಮತ್ಕಾರದ ಅಸಿಯ ಗುಣವೊನೆಯಂತೆ . . . ಆತ್ಮನ ಉಚಿತವನಱಿತು ರಸ ಬೆಂಕಿಯಲ್ಲಿ ಬೆರೆದಂತಾಗಬೇಕು (ದಾಸೋಸಂ. ಕ. ೪೦೪–೯೫). [?./ತುಳು. ನೆಳಿ = ನಡುಗು]

**ನಿಳ್ಕು** 'ನೀಳ್ಕು' ನೋ.

**ನಿಳ್ಪ** (?) (ನಾ). (?) : ನಿಳ್ಪಂಗಳಿಂಗೊಡದೆ ತಲ್ಲಣಿಸಿ ನೃಪನನುಜರುಳ್ಪಂಗಳಿಂ ಸೂರಸೇನನುಂ ಪ್ರವರಸೇನಳ್ಪಂಕಕೊಡಗಿ ಸಿಂಹಧ್ವಜನ ಶಸ್ತ್ರಗಳ ಖಿಡಿದು ಮೂದಲಿಸಲಿಂತು (ಜಿನಮು. ೧೯–೩೨). [ ? ]

**ನಿಳ್ಪುಲಿ** (ನಾ). ಗಟ್ಟಿಯಾದ ಧ್ವನಿ ; ದೊಡ್ಡ ಧ್ವನಿ (?) : ಎಳೆ ಮುಕ್ಕಳ ಕಣ್ ಹೊಳಪಲಿ ಮೊಗದರಳಲಿ, ಕೈಚಪ್ಪಳೆ ನಿಳ್ಪುಲಿಯಲಿ (ನಿಮ್ಮದೃ. ೪). [<ನೀಳ್ + ಉಲಿ$_2$]

**ನಿಜತೆ**, ನಿರತೆ (ನಾ). ಸೊಬಗು ; ಮನೋಹರತೆ ; ಸುಭಗತೆ : "ದೇಸೆಯೆಂದುಂ, ಗಾಡಿಯೆಂದುಂ, ನಿಜತೆಯೆಂದುಂ ಸೊಬಗು"

(ಕಶಸಾ. ೬೬-೪೭೯) ; "ನಿಱಿತೆ ಗಾಡಿ ಸೊಬಗೆನಲ್ಕೆಸೆವ ಸುಭಗತೆಯಕ್ಕು" (ಕಬ್ಬಿಕೈ.೫೩). **ನಿರತೆ :** "ನಿರತೆಯೆನೆ ಸುಭಗತೆಯೆನಿಕ್ಕು" (ಕಶರ.೫೫); ಮೃದುಗೀತೆ ತಿಳಿನೀರ ನಿರತೆ ನೇಸರಿನ ಚೆಂಗದಿರ ಪೊಳೆಪಿನ ಚೆಲ್ವು ! (ಚಿತ್ರಸ್ಪ. ೪೬) ; ಏನೆನಲಿ ಮದುವೆಯಾಗುವರಿಬ್ಬರದು ನಿರತೆ (ಕಾಲೂರ. ೭೪-೧೩೫) ; "ಯೋಗ್ಯ" (ಕಾಲೂರ. ಅಡಿಟ) ; ಕೊನೆ ಮುಳ್ಗಳಂತಾಗೆ ಹಿಂದುಮುಂದುಗಳೆಲ್ಲ ಕೊನೆದು ಬಾಡಿದ ನಿರತೆಯಂ ಮಾಲಿಸುವಳು (ಕಾಲೂರ. ೧೧೪-೨೩೫) ; "ಆನಂದ, ಸುಭಗತೆ" (ಕಾಲೂರ. ಅಡಿಟ). 'ನೀಱಿತೆ' ಪರಾ. [<ನಿಱಿ$_2$ + -ತೆ$_3$]

**ನಿಱಿಸು$_1$** 'ನಿಱಿಸು$_1$' ನೋ.

**ನಿಱಿಸು$_2$** 'ನಿಱಿಸು$_2$' ನೋ.

**ನಿಱಿ$_1$** (ಕ್ರಿ). ೧. ಜೋಡಿಸು ; ಸೇರಿಸು ; ಕೂಡಿಸು : ಎಱಗುವ ಮಕುಟಂಗಳ್ ಚೋದ್ಯಮೆಂದತ್ತಮಿತ್ತಂ ನಿಱಿವ ಕರಯುಗಂಗಳ್ ಪೊಯ್ವ ದೇವಾನಕಂಗಳ್ . . . ಬೆಡಂಗಂ ಮೆಱೆಯೆ ದಿವಿಜವೃಂದಂ ತಂದುದಂದೊಂದು ಚೆಲ್ವಂ (ಆದಿಪು. ೭-೫೧). 'ಕೆಯ್ಮುಱಿ' ಪರಾ. ೨. ಅಂಕುಡೊಂಕಾಗು ; ಕೊಂಕುಕೊಂಕಾಗು : ನಿಱಿನಿಱಿದು ತೆಱೆಯಿಟ್ಟು ಕಿಱುಮುಟಿಲ ದಿಣ್ಣೆಯೊಳ್ ಪರಿವ ಬರಿವೊನಲೆಸೆದುವು (ಅನಂಪು. ೯-೧೬ ರಗಳೆ). ೩. ಮಡಿಕೆ ಬೀಳು ; ನಿರಿಗಟ್ಟು : ಮಿಱಿ ಮಿಱುನಾದ ಮೈ ಹೊಳಹಿಂದ ತೆರೆಗಟ್ಟಿ ನಿಱಿದೇಳ್ವ ಹೊಂಗಾಸೆಯಿಂದ . . . ಹೊಳೆವರು (ಭರಚ. ೧೩-೧೦೧). 'ನಿಱಿಗಾಸೆ' ಪರಾ.

[ದೇ. ॥ ತಮಿ. ನೆಱಿ]

**ನಿಱಿ$_2$, ನಿರಿ$_2$, ನೆರಿ$_2$, ನೆರೆ$_9$, ನೆಱಿ$_2$** (ನಾ). ೧. ಧೋತ್ರ, ಸೀರೆ ಮೊದಲಾದುವುಗಳನ್ನು ಉಡುವಾಗ ಪಾದಗಳ ಬಳಿಗೆ ಇಳಿಯುವಂತೆ ಓರಣವಾಗಿ ಜೋಡಿಸಿದ ಮಡಿಕೆ: ತಾಳದ ಲಯಮಂ ನಿಱಿ ನೀಳಾಳಕಹಾರದ ಪೊದಟ್ಟಿ ಮುತ್ತೆಂಬವು ಮುಮ್ಮೞಿಸಿ ಕೈಕೊಂಡುವು ಲುಳಿತಾಳಕಿ ಕೈಕೊಂಡಳೆಂಬುದೊಂದಚ್ಚರಿಯೋ (ಆದಿಪು. ೯-೨೪) ; ಬಿಗಿದೊಗೆದಪ್ಪಿ ತೋರ್ಪ ಕುಚಮಂಡಳಮಂ ರುಚಿರಾಂಚಳಂಗಳಿಂ ಬಿಗಿದಮರ್ವಂತಿಱುಂಕಿ ನಿಱಿಯಂ . . . ಒಪ್ಪಿದರಂದು ಕಾಂತೆಯರ್ (ಕಾದಂಪೂ. ೭೧) ; ತುಱುವಂ ಕಳಿಸುವ ಕೃಷ್ಣೆಯ ನಿಱಿಯಂ ಪಿಡಿದುರ್ಚವೇೞ್ವ ಕೊಳನಂ ಪಿಂದಂ ಪೆಱಗಾಗಿ ಪುಗುವ ದುರ್ನಯ ಮಱಿಪವೆ ಕೌರವನ ರಾಜ್ಯದಾಯದ [ಕುಂ]ದಂ (ಗದಾಯು. ೬-೧೦) ; ನಿನ್ನೊಡನೆ ನಾಂ ಬಪ್ಪೆನೆಂದೆನುತ ನಿಱಿಯ ಸೆಳೆದಪ್ಪಿ ಬಾಯ್ಬಿಡುವ ಸುತನ ಮುಂಡಾಡಿ (ಹಚಕಾ. ೧೦-೨೨) ; ನಿಱಿಯಂ ಬಲಗೈಯಿಂ ಪಿಡಿದು ವಾಮಕರದಿಂ ಪತಿಯ ಬಲಗೈಯ ಬೆರಳಂ ಪಿಡಿದು ನಡೆವ ಗಾಡಿ ರೂಢಿವಡೆಯೆ (ಧರ್ಮಪ. ೩-೬೮ ವ). ೨. ಮಡಿಕೆಯುಳ್ಳುದು ; ಮಡಿಕೆ ಹಾಕಿ ಉಡುವುದು ; (ನಿರಿ ಹಿಡಿದು ಉಟ್ಟ) ಸೀರೆ : ನಿಱಿ ಸೋಂಕಲು ಮುನಿಯಿಲ್ಲ (ಒಸವ. ೧೧೨) ; ನಿಱಿಯ ಸೆಱಂಗ ನೋಸರಿಸಿ . . . ಸುಣ್ಬೆರಲಂ ಮೊಲೆಗಿತ್ತು ಪೀರ್ದು ಕಣ್ದೆಱೆಯದ ಕಂದನೆಂದೆನಗೆ ಕಣ್ದೆಱೆಯಿಪ್ಪನೊ ಮಂದಹಾಸಮಂ (ಅರ್ಥನೇ. ೧-೧೦೦) ; ನಿಱಿಯ ಸೆಱಂಗನೆತ್ತಿ ನಿಜನೀವಿಯೊಳುಯ್ದು ತೊಡರ್ಚೆ . . . ಎಱೆ ನೂಂಕಿಯುಂ ನೆಱೆ ಮಣಿಕಂಕಣದ್ವಿತಯಮಂ ಕರಪಲ್ಲವದಿಂದೆ ಮಾಡಿದರ್ ಮೊಱೆವಿನಮೊಲ್ದು ಬಾಳವತಿಗಂದಭಿಷೇಕಮನಿಂತು ಕಾಂತೆಯರ್ (ಕುಸುಮಾ. ೬-೭೮) ; ಉಟ್ಟ ನಿಱಿ ದಾಂಟಿದಡೆ ಕಚ್ಚುವುದೆ (ಹಚಕಾ. ೪-೨೫) ; ಕೊಡಹಿ ಮೊಲೆಗಳ ಮೇಲುದಿನ ನಿಱಿಯ ಕೆಲರು ಹೂಗೊಂಚಲಿನ ತುಂಬಿಯ ಬಳಗವನು ಬೆಂಕೊಂಡರು (ಕುವ್ಯಾಅ. ೧೮-೪) ; ಧರೆಯ ಹೊಯ್ದರೆ ನುಂಗುವುದೆ ದೇವರ ನಿಲುಕೆ ಹತ್ತುವುದೆ ಕರತಳ ನಿಱಿಯ ದಾಂಟಲು ಕಚ್ಚುವುದೆ (ಜೀವಂಚ. ೧೭-೫೭). ೩. ಮಡಿಕೆ; ಮಡಿಸಿ ಹಾಕಿದ ಗಂಟು : ಮುಱಿಯೆ ಕುನಿಕಿಲನಟ್ಟ ಮೇಲಣ ನಿಱಿಯನೊಡನೊಡ ಸೀಳ್ದು . . . ಬಂಡಿಯಂ ಕುಸಿಕಿಱಿದು ಬರಲೀಸದಿರು (ಬಸಪು. ೫೬-೨೯). ೪. ಕ್ರಮ ; ಜೋಡಣೆ : (ಶ). ೫. ಸೊಬಗು ; ಅಂದ ; ಲಾವಣ್ಯ : ನಿಱಿನಿಱಿಗನ ನಿಱಿದಳಿರ ನಿಱಿಯನಱಿಯೆಂ ಪೊಗಟಲ್ (ಆದಿಪು. ೬-೯೮). 'ನಿಱಿದಳಿರ್', 'ನಿಱಿಮುಗಿಲ್' ಪರಾ. ೬. ಸಂಪ್ರದಾಯ ; ವ್ಯವಸ್ಥೆ ; ರೀತಿ : ನೇರ್ಮೆಯುನ್ ನೆನೆದು, ನಿಱಿಯುಮನ್, ಅಱಮುಮನ್ ಎತೆಯೊಕ್ಲೇಸ್ ಅಣ್ಣನನ್ ಮಣ್ ಮಾಡಿ ಕಿಟಿರ್ನೆಲದೆ ಕಟುಂದರೊಳ್ ಪುಗಿಸಿ ಮನ್ನಿಸಿದನೆಂಬರ್ (ಅಂತಿಗೊ. ೨-೧೯) ; ಬಲ್ಲೆನವನ ಗಡಸು ಗಾಱತನಮನಂತೆ ನಿಱಿಯುಮವನ ಕಯ್ಯ ಅಡಿಯ ಪಿಡಿಯೊಳಿರ್ಪುದನ್ (ಬದ್ಧಪ್ರ. ೧೨-೨೨೯). ೭. ಅಲೆ ; ತೆರೆ : 'ನಿಱಿಗೊಳ್' ಪರಾ. ೮. ಗುಂಗುರು ; ಸುರುಳಿ : 'ನಿಱಿಗುರುಳ್' ಪರಾ. **ನಿರಿ$_2$ :** ೧. "ನಿರಿ ಯುಗ್ಮ ನೀಪಿಯಕ್ಕು" (ನಾನಾರ. ೧೦೬) ; ಉತ್ತಮ ದುಕೂಲಮಂ ನಿರಿಯ ಪಸರಿಸಿವುಟ್ಟ ಚಿತ್ರಬಣ್ಣದ ರವಿಕೆ ಬಿಗಿದು (ನವಮೋ. ೧೦-೨೪) ; ಚಿಮ್ಮುತ ನಿರಿಯನು ಬನದಲಿ ಬಂದಳು ಬಿಂಕದ ಸಿಂಗಾರಿ (ಇಂಗೀತ. ೪೯-೧). ೬. ಅರಸಿಗಿದು ಗುಣ್ಪೆ ದಲ್ ಆ ಅಳ್ಕು ಉಸಿರ ನಡೆ ಪೆಣ್ಗೆ ಮೇಣಾ ನುಣ್ಪು ನಿರಿ ಗರ್ತಿಯಪ್ಪದೊಳ್ಗೆ (ಶ್ರೀರಾಮಾ. ೫೨೨-೫೯೩). **ನೆರಿ$_2$:** ೧. ವಿಮಲಾಂಗಿಯರು ಬಿಳಿದಾದ ಚೀನಾಂಬರಗಳಂ ನೆರಿಗಳಂ ಪಿಡಿಯುವರು (ಸೌಗಂಧಿ. ೭೯-೧೫) ; ಹಾಗೆಲ್ಲಾ ನೆರಿ ಚಿಮುಕಿಸಿಕೊಂಡು ಬೀದಿ ಬಾಗಿಲಿನಲ್ಲಿ ನಿಂತಿರಬಾರದು (ಅಷ್ಟಾಭೂ. ೧೬). ೫. ನೇರಿಯು ಅಸ್ಥಿರ ಎಂಬುದರ ಬದಲು, ಕವಿಯು ತಿಂಗಳಿನ ನೆರಿಯಂತೆ ಅಸ್ಥಿರ ಎನ್ನುತ್ತಾನೆ (ಕನ್ನನು. I, ೧೮೪). **ನೆರೆ$_9$ :** ೧. ಕಡುಬೆಡಗೆ ರುಡಿಯಿಂದ ನೆರೆಗಳನಡರಿ ಮುಂಗುರುಳ್ವಿಡಿದು ಪುಟ್ಟೆಂಚ್ಚಡರಿದಂತಾ ಪುಳಿನತಳದಿಂದ ಚಲಕಂತಾಯ್ತು (ಜಿರಾಮಾ. ೧೧೧-೨೨) ; ಸೀರೆ ಉಡಿಸಿ ಅದರ ನೆರೆಯನ್ನು ಕಾಲ ಬಳಿ ಚೆಲ್ಲಿದ್ದರೆ, ಅವಳಿನ್ನೂ ಕನ್ನೆ . . . ಎನ್ನುವುದಕ್ಕೆ ಯಾರಿಗೂ ಕೋರದು (ಮಲ್ಲಿ. ೧೦೦). **ನೆಱಿ$_2$ :** ೧. ನೆ[ಪಾಠಾಂ. ನಿ]ಱಿಯನೊಯ್ಯಾರಿಸುತ . . . ಬಂದಳು ರಾಮನಿದ್ದೆಡೆಗೆ (ತೊರೆರಾ. ೩-೪-೮) ; ನೆ[ಪಾಠಾಂ. ನಿ]ಱಿಯಂ ಮುಱಿದು ತಳುವದಂಗಣ ಕೆಯ್ದು ನಿಲುಕುಗಾಲೊಳ್ನಿಂದು (ಸಮ್ಯಕೌ. ೩-೧೨) ; ಸಣ್ಣಸಾಲಿಯ ಸೀರೆಯ ನೆಱಿಯಾ ಬಾಲಕಿಯೊರ್ವಳು ಬಹುಸಿಂಗಾರದ ಜಾಲವ ಬೀಸಿದಳ್ವಿಟಗೆ (ಕಂಸವಿ. ೨-೯೫).

**ನಿಱಿನಿಱಿ** (ದ್ವಿರುಕ್ತಿ): ನಿಱುನಿಱಿಯನಂತರಂತರಕ್ಕೈದು ಪೊನೆಯ ಮುಂಜೆಱಗೆಳೆಯೆ ಪುಲಿಯ ಚರ್ಮವನುಟ್ಟು . . . ಭಿಕ್ಷುವೇಷವ ತಾಳ್ದನಲ್ಲಿ ಪಟ್ಟು (ಭಿಕ್ಷಾಚ. ೧-೧೨) **ನಿಱಿನಿಱಿಗೊಳ್** = ೧. ಉಂಗುರುಂಗುರವಾಗು ; ಗುಂಗುರಾಗಿರು : ನಿಱಿನಿಱಿಗೊಂಡ ಗುಣಾರ್ಣವನ ತಲೆನವಿರ್ಗಳ್ ಲಾವಣ್ಯರಸಮನಿಡಿದಿಡಿದು ತೀವಿದ ಕಮಲಾಸನನ ಬೆರಲಚ್ಚುಗಳನ್ನವಾದುವು (ಪಂಪಭಾ.೨-೩೯ ವ). ೨. ಒಪ್ಪವಾಗು ; ಚೆಲುವಾಗು : ಬಸಂತರಾಜನ ಬರವಿಂಗೆ ಗುಡಿಗಟ್ಟಿದಂತೆ ಬಳ್ವಳ ಬಳೆದ ಮಿಳಿರ್ವ ಶೋಕೆಯ ತಳಿರ್ಗಳುಮಾತನ ಬರವಿಂಗೆ . . . ವನವನಿತೆ ಮೆಚ್ಚಿ ನೆಱೆಯೆ ಕೆಯ್ಗೆಯ್ದಂತೆ ನಿಱಿನಿಱಿಗೊಂಡು ಸೊಗಯಿಸುವ ನಿಱಿಗನ ನಿಱಿದಳಿರ ಗೊಂಚಲ್ಗಳುಂ (ಪಂಪಭಾ. ೨-೧೨ ವ) ; ನಿಱಿನಿಱಿಗೊಂಡ ಕೆಂದಳಿರ ಕೆಂದಳಿರ್ಗಳ್ ಪಱಿವನ್ನ ಮರ್ಚನಿಂ ಪೊಱಮಡುತಿರ್ಪ ಕೋರಕದ ಕೋರಕದೊಳ್ ನನೆ ಕೂಡಿಕೊಳ್ವಿನಂ ತುಱುಗಿ ಪೊದಟ್ಟ ಪೂಗೊನೆಯ ಬಂಬಲ ಬಲ್ಪೊಱೆಯಿಂದಮೇಂ ಬಟಿಲ್ವೊಱಗಿದುದೋ ಶುಕಸ್ತುತಿ ವಿನಮ್ರತೆವೆತ್ತವೋಲಾಮ್ರಭೂರುಹಂ (ಲೀಲಾವ. ೧೩-೩೮).

[<ನಿಱಿ$_1$. / ತಮಿ. ನೆಱಿ ; ತುಳು. ನೆರಿ ; ತೆಲು. ನೆಱಿ, ನೆರಿ. ಮರಾ. ನಿರೀ]

**ನಿಱಿಕೆ** (ನಾ). ಕ್ರಮಬದ್ಧವಾದ ಜೋಡಣೆ (?) : ಕಟ್ಟು ವರ್ಣಿಱಿಕೆಯ ನೀವಿಯೊಳಗೆ ಕೈಗಟ್ಟು ವರ್ಕಂಕಣಗಳನು ಕಟ್ಟುವರ್ಧವಿುಕ್ಕಲ್ಲ ವೆಲೆಯ ಮುಂಡಿಗೆಯನು ಕಟ್ಟು ಕುಟ್ಟೆಂಬುದಲ್ಲಿಲ್ಲ (ಮೋಹತ. ೨-೨೩).

[ನಿಱಿ$_2$ + -ಕೆ]

**ನಿಱಿಗ,** ನಿರಗೆ$_2$, ನಿರುಗೆ$_2$ (ನಾ). ಸಿಹಿಯಾದ ಮಾವು ; ಇನಿಮಾವು ; ಇಮ್ಮಾವು : "ನಿಱಿಗಂ = ಒಂದು ಮಾವು" (ಶಮದ. ಪರಿ.೨) ; "ನಿಱಿಗಮೆಂದಿಮ್ಮಾವು" (ಕಶಸಾ. ೫೪-೧೭೩) ; ಬಸಂತರಾಜನ . . . ಬರವಿಂಗೆ ವನವನಿತೆ ಮೆಚ್ಚಿ ನೆಱೆಯೆ ಕೆಯ್ಗೆಯ್ದಂತೆ ನಿಱಿನಿಱಿಗೊಂಡು ಸೊಗಯಿಸುವ ನಿಱಿಗನ ನಿಱಿದಳಿರ ಗೊಂಚಲ್ಗಳುಂ (ಪಂಪಭಾ. ೨-೧೨ವ) ; ಅರಸಂ ನಿಱಿಗನ ತಣ್ಣೆಳಲೊಳ್ ಕುಳಿತು . . . ರಂಜಿಸಿದಂ (ಉದ್ಭಟ. ೨-೧೦೪) ; ನಿಱಿಗದ ಮರಂಗಳೊಂದು ಪೊದೆಯಿಂ ಪುದಿದ ಬನಗಟ್ಟಲೆಯೆ ಕಾರ ಕರ್ಮುಗಿಲೊಡ್ಡಾಗೆ (ರಾಮಾಶ್ವ. ೫೪-೧೧). **ನಿರಗೆ$_2$** : "ನಿರಗೆಯೆನೆ ನಿರುಗೆಯೆನೆ ಮಾಕಂದಮಕ್ಕು" (ಕಶರ. ೫೫). **ನಿರುಗೆ$_2$** : ಮೇಲಿನ 'ನಿರಗೆ$_2$' ಉಲ್ಲೇಖದ ಪ್ರಯೋಗವನ್ನು ನೋಡಿ. [?]

**ನಿಱಿಗಂಡಯ್ಯ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಕಣ್ಣಪ್ಪಯ್ಯನ ಮಗ ಜಟಿಗರಱಿಪಕ ನಾಗಾರ್ಜುನಯ್ಯನು ನಿಱಿಗಣ್ಡಯ್ಯನು ಪೆರಿಯರ್ಯನ್ ಆಳ್ದರವ (ಮೈಆರಿ. ೧೯೨೩, ೧೭-೧ ; ?).

[ ? + ಅಯ್ಯ$_1$]

**ನಿಱಿಗಟ್ಟು** (ಕ್ರಿ). ಅಲೆಯಲೆಯಾಗು ; ಗೆರೆಗೆರೆಯಾಗಿರು (?) : ತೆರೆಗೊನೆಯೊಳ್ ತೆರಳ್ದು ನಿಱಿಗಟ್ಟಿದ ಕತ್ತುರಿಯೊಳ್ಗಿಸರ್ಕಮಲ್ವರಿಯೊಳುದಿರ್ಪುತಿರ್ಪ ಕುಸುಮದ್ಯುತಿಯೊಳ್ಪೊನಲೊಳ್ ಕಳಲ್ವ ಕಪ್ಪುರದ ಪುಳಿಲ್ ಪಗಿಲ್ತಲರ ಬಂಡಿನ ಸಣ್ಣ ಮಣಲ್ ಮನಕ್ಕೆ ಬಂದಿರೆ ಕೃತಕ ಪ್ರವಾಹಿನಿಯ ತಣ್ಮಳಲಂ ಬಿಡದಿರ್ಪ ನಲ್ಲಳಂ (ವರ್ಧಪು. ೪-೬೩).

[ನಿಱಿ$_2$ + ಕಟ್ಟು$_1$]

**ನಿಱಿಗಡ್ಡ** (ನಾ). ಒಪ್ಪವಾದ ಗಡ್ಡ ; ಓರಣವಾದ ಗಡ್ಡ : ನೂಱಾಳು ಸಹ ಪೊಳಗೆ ಬಂದು ಕಂಡರು ಅವನ ಏಱುಜವ್ವನವನಿದಿರೇಳ್ದ ರೋಮದ ಹೊಮ್ಮ ಕೋಱಿದಾಡೆಯೊಳೆಸೆವ ಹುರಿಮೀಸೆಗಳ ನಾಭಿಯೊಳಗೆಳಲ್ವ ನಿಱಿಗಡ್ಡದ ನೀಱತೆಯೊಳುಂ (ಪ್ರಭುಪು. ೭-೭೯).

[ನಿಱಿ$_2$ + ಗಡ್ಡ$_1$]

**ನಿಱಿಗರುಳ್,** ನಿಱಿಗರುಳು (ನಾ). ನಿರಿಗೆ ನಿರಿಗೆಯಾದ ಕರುಳು: ಸರಳ ಸೊಂಪಿನ ಸೋಹಿನಲಿ ನಿಱಿಗರುಳ ದಾವಣಿವಲೆಗಳಲಿ . . . ಅರಿಮೃಗವ್ರಾತವನು ಭೀಮ ಕಿರಾತ ಕೈಕೊಂಡ (ಕುವ್ಯಾದ್ರೋ. ೧೨-೩೧); ಕಂಡನು ದೂರದಲಿ ನಿಱಿಗರುಳ ಕಾಲ್ತೊಡಕುಗಳ . . . ಜಾಱುತ ಬೀಳುತೇಳುವನ (ಕುವ್ಯಾಗ. ೩-೮). **ನಿಱಿಗರುಳು** : ಹೊಟ್ಟೆಯ ನಿಱಿಗರುಳನೊಳಗಿಕ್ಕಿ ಹೊಲಿಸುವ ಮದ್ದುಗಳನಿಡಿವ . . . ತುರಗದ ವೈದ್ಯತತಿಯೆಚ್ಚಱಿಕೆಯಲಿ ಸಂತೈಸಿದರು ವಾಜಿಗಳ ವೇದನೆಯ(ಕುವ್ಯಾಭೀ. ೫-೩೯) ; ಸಿಡಿದ ತೊಡೆಗಳಿಂದ ನಿಱಿಗರುಳುಗಳಿಂದ ಜಡಿದುದು ರಣಭೂಮಿಯಾಗ (ಕಂಸವಿ. ೧೫-೬೨). [ನಿಱಿ$_2$ + ಕರುಳ್]

**ನಿಱಿಗರುಳು** 'ನಿಱಿಗರುಳ್' ನೋ.

**ನಿಱಿಗಳಚು** (ಕ್ರಿ). ನಿರಿಗೆ ಬಿಚ್ಚಿಕೊಳ್ಳು,—ಸಡಿಲವಾಗು : ನಿಱಿಗಳಚುವುದು ನಾಣೊಸರ್ವುದು ರೋಮಾಳಿ ತುಱುಗಿರ್ಪುದವಯವದೊಳಗೆ (ಮೋಹತ. ೧೮-೭೧).

[ನಿಱಿ$_2$ + ಕಳಚು(<ಕಟಿಲ್ಚು$_1$)]

**ನಿಱಿಗಳೆ** (ಕ್ರಿ). = ನಿಱಿಗಳಚು : ನೆಟ್ಟನೆ ನಿಱಿಗಳೆದುದು ಚಂದ್ರಗಾವಿಯ ಬಟ್ಟೆ ಪಾವುಡೆ ಸಹವಾಗಿ (ಮೋಹತ. ೧೬-೩೮).

[ನಿಱಿ$_2$ + ಕಳೆ$_1$]

**ನಿಱಿಗಾಸೆ** (ನಾ). ನಿರಿಗೆಯುಳ್ಳ ಕಚ್ಚೆ : ಕನಕಕಾಂತಿಯ ಪಸರಿಸುತಿಹ ನಿಱಿಗಾಸೆ ಮಿಸುಗುವ ಮಣಿಭೂಷಣದ ವನಿತೆಯರಧಿಕ ಸಂಭ್ರಮದೆ ಕೋಲಾಟದ ಜನಪನೋಲಗದೊಳಾಡಿದರು (ಕಂಸವಿ. ೮-೩೧) ; ದುಗುಲದೊಳ್ಳೆದಿದ ನಿಱಿಗಾಸೆಯಿಂದ ಐದಂಬನ ಮದದಾನೆಗಳಂದದೊಳ್ಳೆದಿದರ್ಜಲಕೇಳಿಗಾಗ (ಕಂಸವಿ. ೨೫-೧೧೮). 'ನಿಱಿಚಲ್ಲಣ' ಪರಾ.

[ನಿಱಿ$_2$ + ಕಾಸೆ$_1$]

**ನಿಱಿಗುರುಳ್,** ನಿಱಿಗುರುಳು, ನಿಱುಗುರುಳ್, ನೆರಿಗುರುಳು (ನಾ). ೧. ಒಪ್ಪವಾದ ಕುರುಳು ; ಓರಣವಾದ ಕೂದಲು : ನಿನ್ನ ವಿರಹದಿಂ ಪೊರಳುತಿರೆ ನಿಱಿಗುರುಳ್ಗಳ ಸಾಲು ಕೆದರ್ದುದು (ಚೆಬಪು. ೧೦-೬೪) ; ನಿಱಿಗುರುಳ್ಗಳ ನೇವರಿಸುತ . . . ಸಿರಿನೊಸಲೊಳು ಕಸ್ತುರಿಯ ತಿದ್ದುತ ಹೆಂಗಳರಸಿಯರೆಸೆದರರ್ತಿಯಲಿ (ಕಂಸವಿ. ೨೪-೪೬). ೨. ಗುಂಗುರುಕೂದಲು ; ಸುರುಳಿಕೂದಲು; ಕೊಂಕಿದ ಕುರುಳು : ದೇವಿಯ ನಿಱಿಗುರುಳೋಳಿಗೆ ಮುತ್ತಿನೆಸೆವ ಮಂಜರಿಯಂ ಬಿತ್ತರಿಸುವ ತೆಱದಿಂದೊತ್ತಿದನರಸಂ ಜೀರ್ಕೊಳವೆಯಿಂದೆ ಚಂದನಜಲಮಂ (ಕುಸುಮಾ. ೪-೧೩೭) ; ಆ ಕುವರನ ಸುತ್ತಿ ನಿಱಿಗುರುಳಿಂದು ಮುಖಿಯರು ಒಪ್ಪಿದರು (ಶ್ರೀಪಾಲ. ೬-೨೨) ; ಮಱಿದುಂಬಿ ಕಮ್ಮಲದೂರ್ಳಿಯೊಳ್ ಬಿದ್ದೆದ್ದು ಗಱಿ ಬೆಳರ್ವಣ್ಣವಾದಂತೆ ತುಱುಬೊಂದಾಕಾರವಳಿದು ಭಸ್ಮಾಂಕಿತ ನಿಱಿಗುರುಳ್ ಮೊಗವ ಮುಚ್ಚಿದುವು (ಮೋಹತ. ೮-೨೩). **ನಿಱಿಗುರುಳು** : ೨. ನಿಱಿಗುರುಳ ಬಾಲೆಯರ ಮುಂದೆ ತಿರುಗುತ್ತಿಪ್ಪ ಬಱುವಾಯ ಭುಂಜಕರುಗಳು ತಾವು ಅಱಿವುಳ್ಳವರೆಂದು ಬೀಗಿ ಬೆಱೆಯುತ್ತಿಪ್ಪರು (ಮೋಳಿಪಾ.೧೮೮-೭೯); ತುಂಬಿಗಳೊ ನಿಱಿಗುರುಳುಗಳೊ ಮಣಿಗಣವೊ ಸದನವೊ (ಕುವ್ಯಾಅ. ೧೩-೧೮) ; ನಿಱಿಗುರುಳಬಲೆ ನಿನ್ನಯ ದಿವ್ಯದೇಹವ ಬಱುನೆಲದೆಡೆಯಲ್ಲಿ ಹರಹಿ . . . ಹೊರಳ ಬೇಡ (ಮೋಹತ. ೩೩-೪೮) ; ಮಡಕಿಳಿದ ಕುರುಳ ನಿಱಿಗುರುಳ ಸುಕ್ಕುಂಗುರುಳ . . . ಕೋಮಲೆಯರೆಡೆವಿಡದೊದಗಿ ಬರುತಿರ್ದರು (ಚೆಬಪು.೩೭-೪೬). **ನಿಱುಗುರುಳ್**: ೨. ನಿಱು[ಪಾಠಾಂ. ಱಿ]ಗುರುಳ್ಗಳ ತುಂಬಿಗಳ ಪೊಳೆವ ಲೋಚನದ ಮಱಿಮಿನ . . . ಮೆಱೆವ ಮಧ್ಯದ ಮೃಣಾಳದ ಬಗೆಯ ಭೇದಮಂ ಕುಱುಪಿಡುವೊಡರಿದೆ ನಲ್ಸರಸಿಯೊಳ್ತರಳೆಯರ ಜಲಕೇಳಿ ಕಣ್ಗೆಸೆದುದು (ಜೈಮಿಭಾ. ೩೦-೬). **ನೆರಿಗುರುಳು** : ೨. ಪದದುಂಗುಟದ ತುದಿಯಿಂದ ಬರೆವುತಿಳೆಯ ನಿರೀಕ್ಷಿಸುತ ನೆರಿಗುರುಳನಂಗಕೆ ಪೊಡಿಸಿಕೊಳುತುತ್ತರಕೆ ಬದಲುತ್ತರವ ನೀಯದೆ ನಿಂದಳರೆಘಳಿಗೆ (ಅನಂರಾ. ೨-೧-೩೬).

**ನಿಱಿಗುರುಳಳ್** = ಗುಂಗುರು ಕೂದಲುಳ್ಳವಳು : ನಿಱಿಗುರುಳಳೆ ನಿಡಿಗಣ್ಣಳೆ ಕೆಂಬಾಯಿದೆಱೆಯಳೆ (ವರ್ಧಚ. ೩-೧೮).

[ನಿಱಿ$_2$ + ಕುರುಳ್$_1$]

**ನಿಱಿಗುರುಳು** 'ನಿಱಿಗುರುಳ್' ನೋ.

**ನಿಱಿಗೆ,** ನಿರಗೆ$_1$, ನಿರಿಗೆ, ನಿರುಗೆ$_1$, ನಿಱುಗೆ, ನೆರಿಗೆ, ನೆಱಿಗೆ (ನಾ). ೧. (ಸೀರೆ, ದೋತ್ರ ಮೊದಲಾದವುಗಳ) ಮಡಿಕೆ : ನಿಱಿಗೆಗಳ ಪಸರಿಸುತ ಉರದೊಱೆ ಸೆಱಗ ಹೊಱುತಿಹಳು ಹಾದರದ ನೆರಳು ಕಾಣಯ್ಯ (ಸರ್ವಜ್ಞ. ೧೮೩೮). ೨. ಪದರ ; ಮಡಿಕೆ : ಗಿರಿಪಾಱಿ ಭಾಗವಿಕ್ಕಿದ ನಿಱಿಗೆವೊಲಸುರೇಂದ್ರನಳ್ಕಿ ಬೆಳ್ಕುತಿರ್ಪರದಂಬರದ ನಿಱುಮುಗಿಲ ತೆರೆಗಳ ಪೊರೆಯೊಳಗಣ ನಿಜವಿಮಾನದೊಳಗಂ ಪೊಕ್ಕಂ (ಶಾಂತಿಪು. ೮-೫೨). ೩. ವಿನ್ಯಾಸ ; ರಚನೆ : ಹೊಗೆಯ

ಹೊದಱಿನ ನಿಱುಗೆಯಿಂದು ವಹ್ನಿಗೆ ಸುನಿಶ್ಚಯವೆಂಬವೊಲು ಮೇಲಗಿವ ಶೋಕಕೃಶಾನುವಿನ್ನೀ ಮನದ ಹೊಗೆಯೆಂದ (ಕುವ್ಯಾದ್ರೋ. ೬೨೩. ೮–೧೦ ಅಧಿಕಪದ್ಯ) ; ಅದು ವೇದಗಳನೆಯಾಜ್ಞೆಯನುಳ್ಳ ಸರ್ವತತ್ವದ ಸಮೂಹವನುಳ್ಳ ಬಹುಭುವನವೆಂದೆಂಬ ಸದನನಿರ್ಮಾಣಕ್ಕೆ ನಿಱುಗೆಗಂ ನಾಡೆ ಮೂಲಸ್ಥಂಭಯುಷ್ಟಿ (ವೀಶೈಪು. ೫–೩–೯); ಏತಱಿಂದು ಪೊಚ್ಚಱದ ಮಾತಿನೊಂದು ನಿಱುಗೆಯೊ ! (ರಾಮಾಶ್ವ. ೮೫–೨೬). **೪.** ರೀತಿ ; ಕ್ರಮ ; ಪದ್ಧತಿ : ಅಱುವತ್ತು ಮತ್ತೆ ತೊಂಬತ್ತಱುಕೆಯುದಯ್ವತ್ತು ಮತ್ತೆ ನಾಲ್ವತ್ತೆಕ್ಕುಂ ನೆಱೆಯೆಂಭತ್ತೆಪ್ಪ(ತ್ತುಂ)ತ್ತೆನೆ ನಿಱುಗೆಯ ಮೂವತ್ತುವಿಂ(ಮ)ವಱ ಘಟುಗೆಗಳಕ್ಕುಂ (ಖಮದ. ೩–೩೮) ; ಅಱುವ ಪರವಸ್ತುವೊಂದೇ ರೂಪು ಸದ್ಭಕ್ತಿವೆಱಗಿನಿಂದೆರಡಾಗಿ ಸಹಜದ ನಿರೀಕ್ಷಣೆಯ ನಿಱುಗೆಯಿಂದೊಂದಾದುದು (ಲಶಿಚಿಂ. ೫೪–೨೦) ; ಕಪಟದ ನಿಱುಗೆಯನು ಬಲ್ಲನೆ ಯುಧಿಷ್ಠಿರನು (ಕುವ್ಯಾಅ. ೧೬–೧೦). **೫.** ಇರುವಿಕೆ ; ನಡವಳಿಕೆ ; ವ್ಯವಹಾರ : ಧರಣಿಪನ ನಿಱುಗೆಯಲಿ ಕಂದನ ಮರಣವನು ನಿಶ್ಚಯಿಸಿ ಪ್ರಳಯದ ಹರನ ಕೋಪದ ಕೇಣಿಗೊಂಡನು ತನ್ನ ಚಿತ್ತದಲಿ (ಕುವ್ಯಾದ್ರೋ. ೮–೧೪) ; ನೇರ್ ನಿಱುಗೆ ದಱಿದೊಳಗೆ ಕಟ್ಟಳೆಯೆ ಪಲರನ್ ಕಾಪಿಟ್ಟು ಬರ್ದುಕಿಪುದು (ಅಂತಿಗೊ. ೩೧–೬೩೦). **೬.** ಪರಿಣಾಮ : ನಿತ್ಯಾನಂದಪದವಿಯ ನಿಱುಗೆಯನು ನಿಯಮಿಸಿದನಾ ಪ್ರಭುಲಿಂಗ ಭಕ್ತರಿಗೆ (ಪ್ರಭುಲೀ. ೨೦–೫) ; ಮೋಕ್ಷ ಶಾಸ್ತ್ರಾರ್ಥದ ನಿಱುಗೆಯನಾರ್ ಪೇಳ್ವರ್ (ಪಾಪ್ರಾಶ. ೪೩). **೭.** ಸೊಬಗು ; ಬೆಡಗು; ವಿಲಾಸ : ರೇಖೆಯ ನಿಱುಗೆ ಬಣ್ಣದ ಜಾತಿ ಭಾವದ ನೆಱವಣಿಗೆಯಿಂ ಬಲಿದ ನಿಪುಣತೆ ಕಣ್ಗೆ ಸೊಗಯಿಸಲು (ಕುಮುಂರಾ. ೩–೫೧) ; ಕಂಕಣಗಳ ಝಣತ್ಕಾರದಲಿ ಮಾಯಾಲಲನೆ ರಂಗಂಬೊಕ್ಕು ನಿಂದಳು ನಿಜದ ನಿಱುಗೆಯಲಿ (ಪ್ರಭುಲೀ. ೪–೫೪). **೮.** ಪ್ರದರ್ಶನ ; ಆಡಂಬರ : (ಕಿ). **೯.** "ಸಡಗರ ; ಡಂಭ" (ಪ್ರಭಣ್ಣ). **೧೦.** ನಿಲವು ; ಸ್ವರೂಪ : ಅಱುದಱುವಿನ ಕುಱುಹಿನಲ್ಲಿ ನಿಱುಗೆಯ ನಿಜದ ಕುಱುಹ ಕಂಡ ಮತ್ತೆ ಮಱೆದರೆಂಬುದಕ್ಕೆ ಸೂಚನೆ (ಮೋಳಿಮಾ. ೧೭೫–೬೬೨) ; ಅಱುವು ತಲೆಕೆಳಗಾಯ್ತು ಧೈರ್ಯದ ನಿಱುಗೆ ನಗೆಗೆಡೆಯಾಯ್ತು (ಕುವ್ಯಾವಿ. ೨–೧೨) ; ನೆಱೆ ನಿರಂತರ ನಿರ್ವಿಕಾರದ ನಿಱುಗೆಯಮಲಜ್ಞಾನವನು ಕಣ್ದೆಱಸುವಾ ಪ್ರಭುರಾಯನನು ಕಂಡಳು ಮಹಾದೇವಿ (ಪ್ರಭುಲೀ. ೧೭–೪); ನಿಜದ ನಿಱು[ಪಾಠಾಂ. ಱು]ಗೆಯ ಭಕ್ತಿಯಲಿ ಭೂಮಿಜೆಯ ಮೈದುನನಮಲಪದಪಂಕಜಕೆ ವಿನಮಿತನಾಗಿ ತಂದನು ರವಿಜನರಮನೆಗೆ (ತೊರರಾ. ೪–೬–೨೧). **೧೧.** "ಕ್ರಮಪಡಿಸುವಿಕೆ ; ತಿದ್ದುವಿಕೆ ; ಸರಿಪಡಿಸುವಿಕೆ" (ಪ್ರಭಣ್ಣ). **೧೨.** ಸ್ಥಾಪನೆ ; ಪ್ರತಿಷ್ಠೆ : ಸದಭಿಮತ ದೇವತಾನೀಕದ ನಿಱುಗೆಗೆ ನೆಗಟ್ದ ಮಾರ್ಗಶಿರಮುಂ ಮಾಘಂ ಮೊದಲಾದಱುದಿಂಗಳುಮಿಷ್ಟದಾಯಕಂ (ಲೋಕೋಪ. ೨–೪೯). **ನಿರಗೆ$_1$ : ೧.** ಕಟ್ಟೀಯ ನೆಳ್ಳೀಲಿ ಬುಟ್ಟಿಯ ಹೆಣೆಯೂನ ದಿಕ್ಕಿನ ಧೂಳ ಎದಿ ಮ್ಯಾಗ ಬಿದ್ದರ ನಿರಗಿಲ ಒರಸಿ ಇರುವೇನ (ಲೋಕಗೀ. ೧೫೭) ; ಹಾಲಗೋಳಿಯ ಮ್ಯಾಲ ನೀರಗೋಳಿಯ ತಂದ ನೀರಾಗ ನಿರಗೆ ಒದೆಯೂವ ಹೆಣ್ಣೀನ ಹ್ಯಾಂವಕ ತಂದ ಶಿವರಾಯ (ಕನ್ನಜಾ. ೧೦೬) ; ಒಂದ ಪಾಟುಣಗಿಳಿದಾಳ ಒಂದ ನಿರಗೆ ಉಚ್ಚ್ಯಾಳ (ಪುಲ್ಲಿಗೆ. ೩೬). **ನಿರಿಗೆ : ೧.** ಹೆಂಣಿನ ನಿರಿಗೆ ಗಂಡಿನ ತಲೆಗೆ (ಸಾಇಎ. ೧೯೨೯, ಉಡುಪಿ. ೪೮೭–೧೩ ; 1535) ; ನೀನುಟ್ಟ ಸೀರೆಯ ನಿರಿಗೆ ಕಳಚುವುದು . . . ಆಗ ನಾನು ಲಿಂಗೈಕ್ಯನಾದೆನೆಂದು ತಿಳಿ (ಶರಚ. ೩೫೫) ; ಹೆಣ್ಣುಮಕ್ಕಳು ದುಂಡಗೆ ನಿಂತು, ಬಲಗೈಯಿಂದ ಉಟ್ಟ ಸೀರೆಯ ನಿರಿಗೆಗಳನ್ನು ಎತ್ತರಿಸಿ ಹಿಡಿದು . . . ಆಡುವರು (ಕನ್ನಜಾ. ೩೯); ಉಟ್ಟದ್ದ ಕಚ್ಚೆಪಂಚೆಯ ನಿರಿಗೆಯನ್ನು ತಿರುಗಿಸಿ ಹೊಟ್ಟೆಯ ಸುತ್ತ, ಸೊಂಟದ ಸುತ್ತ ಕಟ್ಟಿರುತ್ತಿದ್ದ (ಸಾಹೇಬ್. ೧೬). **೧೩.** ಸುಕ್ಕು : ಗಂಡಕದ ಕಾಲುಗಳ ತೊಗಲಿಗೆ ದೊಡ್ಡದೊಡ್ಡ ನಿರಿಗೆಗಳಿರುತ್ತವೆ ; ಕೆಲವುಗಳಿಗೆ ಎಡರ್ಮ್ ಹೆಗಲ ಮೇಲೆ ಒಂದು ಸಣ್ಣ ನಿರಿಗೆ ಇರುತ್ತದೆ (ಪ್ರುಂಬಯಿ. ೫–೨೪೯). **ನಿರುಗೆ$_1$ : ೪.** ತರಹರಿಸಿದರು ಮುನ್ನಿನ ಸ್ವರೂಪದ ನಿರುಗೆಯನು ಕೈಕೊಂಡು ಪೇಳೌ ತರುಣಿಯೆನೆ ಮನ ನಲಿದು ಬಿನ್ನಹ ಮಾಡಿದಳು ತರಳೆ (ಉತ್ತಕ. ೩೪–೨೯). **೧೦.** ಪರಮಪೂರ್ಣಾಖಂಡತತ್ವದ ನಿರುಗೆ ನೀನಾಗೈ (ಗಗತಾ. ೨೨–೧೦೩). **೧೪.** ಕ್ರಮಬದ್ಧವಾದ ಜೋಡಣೆ, — ಜೋಡಿಕೆ : "ಣಿದ್ಯ, ಣೀದ್ಯ ಕುತ್ಸಾ, ಸನ್ನಿಕರ್ಷಣಯೋಃ, ಹಳಿತದೊಳಂ, ನಿರುಗೆಯೊಳಂ" (ಕಾಶಕ್ಯ. ೧೫೩). **೧೫.** ಸೇರುವಿಕೆ ; ಹೊಂದಾಣಿಕೆ : ಕೃಷ್ಣಶುಕ್ಲವೆಂಬ ಪಕ್ಷದ್ವಯಗಳ ನಿರುಗೆಯ ತಾಣವಿವರಗಳನ್ನು ಮನ್ಮಥ ಕ್ರೀಡಾಸಮೇತನಾದ ಪುರುಷನು ತಿಳಿದೆಸಗುವುದು (ಸಕವೈ. ೬೦). **೧೬.** ವಸ್ತುಸ್ಥಿತಿ ; ಇರವು : ಸಾರಿದೆನು ರಕ್ಕಸಿಯ ಕೊಲುತಿಹ ದೂರು ನಿರುಗೆಯುಯಿಸುತ (ಕರಿಕ. ೧೧೫–೧೧). **ನಿಱುಗೆ : ೩.** ಪ್ರಾಸದ ಛಂದದ ಅನ್ವಯದ ನಿಱುಗೆಯಿಂ ಶಬ್ದಂಗಳ್ ವ್ಯತ್ಯಯಮಾಗಿರ್ಪುವು (ಶಮದ. ಪೀಠಿಕೆ. ೬ ವೃತ್ತಿ). **೪.** ಪರೇತಕೃತ್ಯವ ಪರಮವೈದಿಕದ ನಿಱುಗೆಯಲಿ ಮಾಡಿಸಿದನಗ್ನಿಯಲೊಱಗಿತ್ತೈನೂಱರಸಿಯರು (ತೊರರಾ. ೨–೬–೬). **೭.** ಏನನೆಂಬೆನು . . . ಆ ನಿತಂಬಿನಿಯರ ಸುರೇಖಾಸ್ಥಾನಕದ ನಿಱುಗೆಯ ಸುಢಾಳದನೂನ ಸಮ್ಮೋಹನದ ತೂಕದ ಭಾವ ಭಂಗಿಗಳ (ಕುವ್ಯಾಅ. ೭–೯೨). **೧೦.** ನೆಲನಂ ನಿಱುಗೆಯಂ ನಡೆವೊಂದು ಪದಮುಮಂ . . . ಬಲ್ಮೆಗೆ ಬೆರಲೆತ್ತಿ ಪಚ್ಚೆಯಂ ನೆಲೆಗಳಂ ಕಿಡಲೀಯದೆ ಸಿಲೆಯ ಮೇಲಾದೊಡಂ ಶಕುನಮಂ ನಿಱಿಪಂತೆ ನಿಱಿಸುವೆಂಪಂದಿಯಂ ನೀ ಮೆಚ್ಚಲುಂ (ಪಂಪಭಾ. ೫–೪೬) ; ವಿವಿಧಪ್ರಭಾವೋತ್ಕರದ ನಿಱುಗೆಯ ತೋಱಿದನು (ಕುವ್ಯಾಅ. ೬–೬೮) ; ನಿನ್ನ ಮೂರ್ತಿಯ ನಿಱುಗೆಯಿದಿರಲಿ ಹರಣವಳಿವೆನು (ಕೌಶಿರಾ. ೮–೩೩) ; ಅಱುವರಾರೆಲೆ ದೇವ ನಿನ್ನೀ ನಿಱುಗೆಯನು ನಿಗಮಾಂತ್ಯವೇದ್ಯನನಱಿಸಿ ಯೋಗಾಧೀಶರಱುಯರು ಯೋಗನಿಷ್ಠೆಯಲಿ (ಸಿಭಾಗ. ೯–೭–೪೨). **೧೭.** ನಿರೂಪಣೆ ; ವಿವರಣೆ: ಸನ್ಯಾಸವಿಧಾಯಕಂಗಳಾದ ಶಾಸ್ತ್ರಂಗಳ ನಿಱುಗೆಯಂ ಕೇಳ್ಪೆ (ಭಾರಶಾಂ. ೧೨೮–೧೯). **೧೮.** ನಿಶ್ಚಯ; ದೃಢತೆ (?) : ನಿಱುಗೆಯಿಂ ಪಚ್ಚೆವೆಣ್ಬುಂಜೆಯೆನಿಸುಗುಂ (ಶಬ್ದಮಂ. ೭೪) ; ಬೋಧೆಯ ನಿಱುಗೆಯೆಂಬಸಿಯಿಂದ ಕಡಿದಜ್ಞಾನಪಾಶಗಳ ಪರಮನೇ ನೀನಾಗಿ ಶಾಸ್ತ್ರವ ತೋಱೆವುದು (ಸಿಭಾಗ. ೧೧–೧೯–೧೯). **೧೯.** (?) : ನಿಱು[ಪಾಠಾಂ. ಱು]ಗುಱೆಗಂಟವೇಟಮುಮರ್ದೊರ್ಪ್ಪಿರೆ ನಲ್ಲನೊಳೊಂದಿದ ಟ್ಯಱುಂ[ದುಱೆ] ಮಱಸಲ್ಕೆ ಪೋಗುತಿರೆ (ಬಂಹರಿ. ೩–೫೩). **ನೆರಿಗೆ : ೧.** ಜಡೆಯು ಅಲ್ಲಾಡುತ್ತಿರಲು ಚಂದಕಾವೀ ಸೀರೆಯ ನೆರಿಗೆಗಳು ಜೋಲಾಡುತ್ತಿರಲು (ಕೃಪಾವಿ. ೬೬); ಬಿತ್ತಾರಿ ನೆರಿಗೇ ಬಿಗಿದೂಡೆ ಸೈಯ್ಯ (ಹುಟ್ಟಹ. ೪೫). **೨.** ಅವನ ಬಾಯಿಯ ಎರಡೂ ಕಡೆ ಎರಡು ಗೆರೆಗಳು ಬಿದ್ದಿದ್ದವು, ನೆರಿಗೆಗಳಲ್ಲ. ಬಳಕೆಯಿಂದ ಬಿದ್ದ ಗೆರೆಗಳವು (ಮಹಾತ್ಮಾ. ೧೯). **ನೆಱುಗೆ : ೧೦.** ತಾನಿರದ ನೆಱುಗೆಯಲ್ಲಿ ಸಂದ ಮತ್ತೆ ಸಂದಣಿಗಾಱರ ಬಂದದ ಮಾತೇತಕ್ಕೆ ಇದು ವ್ರತಾಚಾರದ ನಿಂದ ನೆಱುಗೆ (ಏಲೇಶ್ವ. ೧೬೮). **೧೪.** ಅಱುವಿನ ಅಱಿಕೆ ಕುಱುಹಿನ ಪೂಜೆ ನೆಱುಗೆಯಾಗಬೇಕು (ಕಲ್ಯಾಶಾಂ. ೧೫). **೨೦.** ಸಂಬಂಧ ; ವಾವೆ (?) : ಮೊಱೆಧರ್ಮಕಂಜಿದೊಡರ್ಜುನ ಪಾಂಚಾಲಿಗೆಱೆಯನಾಗಿಹನೆ ಮೆಯ್ಮಱೆದು ನೆಱುಗೆಯಲ್ಲಿವನೆನ್ನ ಬಿಟ್ಟನೆಂಬೀ ನುಡಿ ನೆಱೆ ಜಾಣೆ ಭಾವಿಸಿ ನೋಡು (ಕುರಾಸಾಂ. ೬–೧೦೭). [ನಿಱು$_2$ + –ಗೆ. / ತುಳು. ನೆರಿಗೆ]

**ನಿಱುಗೆಗಾಣು,** ನಿಱುಗೆಗಾಣು (ಕ್ರಿ). ಸ್ಥಿತಿಯನ್ನು ತಿಳಿ ; ಇರುವಿಕೆಯನ್ನು ಕಾಣು : ಅಱುವಿನ ನಿಱುಗೆಗಾಣದ ಗಿರಿಯ ಕೋಡುಗಲ್ಲ

ಮೇಲೆ ತಲೆಯುಱಿ ತಪಸ್ಸು ಮಾಡಿದಡಿಲ್ಲ (ಅಪಚಂ. ೨೫೭-೧೧೭೧).

**ನಿಱುಗೆಗಾಣು :** ಕುಱುಹಳಿದು ನಿಱುಗೆಗಂಡು ಬೆಱಗುವಡೆದು ಹೃದಯಾಕಾಶದ ಬಟ್ಟ ಬಯಲೊಳಗೆ ಭರಿತವಾಗಿರ್ದ ಮಹಾಶರಣರ ತೋಱಿ ಬದುಕಿಸಾ (ಆದಪ. ೪೮-೧೩೮).

[ನಿಱಿಗೆ+ಕಾಣು(<ಕಾಣ್)]

**ನಿಱಿಗೆಗೆಯ್** (ಕ್ರಿ). ೧. "ಮಡಿಕೆಮಾಡು, ಜೋಡಿಸು" (ಪ್ರಭಣ್ಣ). ೨. ಕ್ರಮಪಡಿಸು ; ವ್ಯವಸ್ಥೆಮಾಡು : ನಿಱಿಗೆಗೆಯ್ದು ಸಂತಸಮಿರ್ಪಿನಂ (ಚಕವಿ. ೬-೨೬೨ ಪ).

[ನಿಱಿಗೆ+ಕೆಯ್$_1$]

**ನಿಱಿಗೆದಳೆ** (ಕ್ರಿ). ಸುರುಳಿಗೊಳ್ಳು ; ಗುಂಗುರಾಗು : ಮೆಲ್ನುಡಿಯ ಮೋಹನಾತ್ಮಕಿ . . . ದ್ವಿರೇಫರುಚಿವೊಲ್ನಿಱಿಗೆದಳೆದ ಚಿಕುರದ ಚೆನ್ನೆ (ನಂದಿಮಾ. ೭-೧೦). [ನಿಱಿಗೆ+ತಳೆ$_1$]

**ನಿಱಿಗೆವಡೆ** (ಕ್ರಿ). ೧. ಕ್ರಮವಾಗು ; ವ್ಯವಸ್ಥೆ ಹೊಂದು ; ನೇರವಾಗು : ಪರಮಪದಭಾವದಿಂ ನೂಲ್ದೆಗೆದಂತೆ ನಿಱಿಗೆವಡೆದ ಬಾಹ್ಯ ಸಾಮಗ್ರಿಯೊಳ್ ವ್ಯಗ್ರನಾಗಿ (ಅನಂಪು. ೯-೧೧೪ ಪ). ೨. ಸೊಬಗನ್ನು ಹೊಂದು ; ಅಂದವಡೆ ; ಚೆಲುವಾಗು : ಚೈತ್ಯಂಗಳ ಪೊಱಗಣಿಂ ನಿಱಿಗೆವಡೆದ ಶಾಖಾಸಹಸ್ರಂಗಳೊಳ್ ಮಂಗಳೋತ್ಸವಮನಪ್ಪುಕೆಯ್ದು (ಅನಂಪು. ೧೦-೨೩ ಪ). [ನಿಱಿಗೆ+ಪಡೆ$_1$]

**ನಿಱಿಗೊಳ್** (ಕ್ರಿ). ೧. ಪದರ ಪದರವಾಗು : ಕರಮೆಸೆದುದು ನಿಱಿಯಂಗಜಶಬರಂ ಸರಸವಿಟರ ನಿಡುಗಣ್ಮೀಂಗಳನುರು ಭರದಿಂ ಬೀಸಿ ತೆಗೆದ ಬಲೆ ನಿಱಿಗೊಂಡಂದಮನನುಕರಿಸಿ (ಜಯಕಾ. ೫-೫). ೨. ಸುಕ್ಕುಗಟ್ಟು ; ನಿರಿಗೆಯಾಗು ; ಮಡಿಕೆ ಬೀಳು : ಬಿಱಿದು ನಿಱಿಗೊಂಡ ಕುಚಂ ಸಱಿಗೊಂಡ ಪೆರ್ಬಸಿಱಿಂ ಬಿಟ್ಟಪುಗೆಟ್ಟ ತೋಳ್ ತೊಡೆ (ಸೂಕ್ತಿಸು. ೮-೩೮೪). ೩. ತೆರೆತೆರೆಯಾಗು ; ಅಲೆಅಲೆಯಾಗು : ಮೇದಿನಿ ಬೆಂಗೆ ಬಿಟ್ಟ ಮುಡಿಯಂತೆಸೆದಿರ್ಪುದು ಪುಷ್ಪಿತಂ ತಟೀಪಾದಪವೀಥಿ ಪಂತಿಗುರುಳಂತಿರೆ ಸಂಚಳ ವಿತಾನಸಂಚಯಂ ಪೊದುಱುಗಲ್ ತಡಂ ತೊಡರ್ದು ತೋರ್ಪವೊಲೊಪ್ಪಿರೆ ಕೊಂಕುವೆತ್ತ ಸೀತೋದೆ ಸಡಿಲ್ದು ನೀಳ್ದ ಶರದಿಂ ನಿಱಿಗೊಂಡು ಬಟಿಲ್ದ ಭಂಗಿಯಿಂ (ಅರ್ಥನೇ. ೧-೬೧) ; ನಿಱಿಗೊಂಡ ಶರದ್ಘನಾಳಿಯಿಂ ಪುದಿದನಿಳಾಧ್ವದೊಳ್ ಪೊಳೆಯುತಿರ್ದುದು ಚಂಡಮರೀಚಿಮಂಡಲಂ (ಜಗವಿ. ೪-೭೧). ೪. ಸುರುಳಿಗೊಳ್ಳು ; ಗುಂಗುರಾಗು : ಪೊದಟ್ಟಧರಮೊತ್ತದೆಯುಂ ನಿಱಿಗೊಂಡ ಚುಂಚು ಸೋರ್ಮುಡಿ . . . ಕರಮೆ ರಂಜಿಸೆ ಬಂದರಿಳೇಶ ಕಾಂತೆಯರ್ (ಕಾವ್ಯಾಪ. ೯೩೪) ; ನಿಱಿಗೊಳ್ವ ಸುನೀಲಕುಂತಳಂ ಗಾಡಿಯನೀವ ವಕ್ತ್ರಶಶಿ . . . ಬೆನ್ನೊಳಂದಾಡುವ ವೇಣಿ ತಾಂ ಸೊಗಸೆ ಸೌಂದರಿ ರಂಜಿಸಿದಳ್ (ಉದ್ಭಟ. ೬-೫೮). ೫. ಚೆಲುವಾಗು ; ಮನೋಹರತೆಯನ್ನು ಹೊಂದು ; ಅಂದವಾಗು : ಕಿಱಿನಿಱಿಯೊಳೆ ಕಿಱಿದೆಲೆಗಳ ತುಱುಗಿದ ಚೆಲ್ವೆಳಸಿ ಬಳಸಿ ವನವನಿತೆಯ ಕಣ್ಣುಱಿಯೆನೆ ನಿಱಿಗೊಂಡಿರೆ ನಿಱಿನಿಱಿಗನ ನಿಱಿದಳಿರ ನಿಱಿಯನಱಿಯೆಂ ಪೊಗೞಲ್ (ಆದಿಪು. ೬-೯೮) ; ನಿಱಿಗೊಂಡು ತಳಿರ್ಪುದವಿಲ್ಲ ಕೊಪ್ಪಿನೊಳ್ ಪೞಿಯಿಂಗೆಯಾಯ್ತು ಕಂತುಗೆನಲೇವುದೊ ಮಿಕ್ಕ ತಳಿರ್ವಿಯೋಗಿಯಂ ಕಳಕುಳವಾಗೆ ಮಾಱ್ಪಿಡೆಗಶೋಕೆಯ ಕೆಂದಳಿರೊಂದೆ ಸಾಲದೇ (ಮಲ್ಲಿಪು. ೫-೨೦) ; ಪೆಱಿದೊರೆ ನೊಸಲೊಳ್ ಮಿಱುಗುವ ಕಱಿಗೆಱಿ ತಾನೆಂಬ ನಂಬುಗೆಯನೆಸಗುವಿನಂ ನಿಱಿಗೊಂಡಲಸುವ ಪುರ್ಬಿಂ ಜಱಿದು (ಚಕವಿ. ೩-೬೧). [ನಿಱಿ$_2$+ಕೊಳ್$_1$]

**ನಿಱಿಚಲ್ಲಣ** (ನಾ). ನಿರಿಗೆಯುಳ್ಳ ಚಲ್ಲಣ : "ಚಂಡಾತಮೆನೆ ನಿಱಿಚಲ್ಲಣಂಗಳಕ್ಕುಂ" (ಮಂಗರಾ. ೧೦೧-೨೯). [ನಿಱಿ$_2$+ಚಲ್ಲಣ]

**ನಿಱಿದಪ್ಪು** (ಕ್ರಿ). ಕ್ರಮತಪ್ಪು ; ನೀತಿಯನ್ನು ಮೀರು : ನೀನಿರುಳ್ ನಿಱಿದಪ್ಪಿ ಪೋಗಯ್ : ಘೋರಕರ್ಮಮನ್ ಎಸಗೆ ಪೋಗಯ್ (ಅಶ್ವತ್ಥಾ. ೮-೧೬೪). [ನಿಱಿ$_2$+ತಪ್ಪು$_1$]

**ನಿಱಿದಲೆ** (ನಾ). ಗುಂಗುರುಕೂದಲುಳ್ಳ ತಲೆ; ಸುರುಳಿಗೂದಲುಳ್ಳ ತಲೆ : ಸಲೆ ಮಾಂಸಿ ನೆಲ್ಲಿ ನೀಲೋತ್ಪಲಕಂಜಂ ಕೋಷ್ಠಮೆಂಬಿವಂ ಕಟಿಯಿಂದಂ ತಲೆಯಂ ಪೂಸಲೊಡಂ ಪಱಿದಲೆ ನಿಱಿದಲೆಯಕ್ಕುಂ (ಲೋಕೋಪ. ೯-೫೨) ; ಆ ಮಹೀಪಾಲನ ಲೋಲಲೋಚನಂಗಳಾಕೆಯ . . . ನಿಱಿದಲೆಯೊಳ್ಕೈನಿಱಿದಾಡಿಯುಂ (ಮಲ್ಲಿಪು. ೩-೮೮) ; ಕಿಱುನೆಲೆ ನಿಱಿದಲೆ ಬೆಳರ್ವಾಯಿ ತುಱುಗೆಮೊಗಙ್ (ಕಞ. I, ೨೫-೫೦ ; 1186) ; ನಿಱಿದಲೆಯ ಚೊಲ್ಲೆಯದ ತುಂಬಿಯ ಮಱಿಗುರುಳ . . . ನಳಿತೋಳುಗಳ ನೀಱೆಯರ್ಕೈದಿತೊಗ್ಗಿನಲಿ (ಕುಮ್ಯಾಅ. ೧೩-೩೦).

[ನಿಱಿ$_2$+ತಲೆ$_1$]

**ನಿಱಿದಳಿರ್** (ನಾ). ಸೊಗಸಾದ ಚಿಗುರು ; ಮನೋಹರವಾದ ತಳಿರು : ನಿಱಿನಿಱಿಗನ ನಿಱಿದಳಿರ ನಿಱಿಯನಱಿಯೆಂ ಪೊಗೞಲ್ (ಆದಿಪು. ೬-೯೮) ; ಬಸಂತರಾಜನ . . . ಬರವಿಂಗೆ ವನವನಿತೆ ಮೆಚ್ಚಿ ನೆಱೆಯೆ ಕೆಯ್ಗೆಯ್ದಂತೆ ನಿಱಿನಿಱಿಗೊಂಡು ಸೊಗಯಿಸುವ ನಿಱಿಗನ ನಿಱಿದಳಿರ ಗೊಂಚಲ್ಗಳುಂ (ಪಂಪಭಾ. ೨-೧೨ ಪ) ; ಅರಲ್ದೊಂಗಲ ನಿಱಿದಳಿರೊಳಗೆ ಜಿನುಂಗುವ ಪೆಣ್ದುಂಬಿಗಳುಮಳುಂಬಂ ಬನದೊಳ್ (ಕಾವ್ಯಾಪ. ೨೫೦) ; ಪಸುರನಾಳ್ದಂಕುರದಿಂದೆಳದಳಿರಿಂ ನಿಱಿದಳಿರಿಂ ಸೆಳೆಗೊಂಬುಗಳೊಱಗೆ ತುಱುಗಿ ಬಂದುದು ಚೂತಂ (ಲೀಲಾಪ. ೯-೯೦) ; ಪೂತ ಚೂತದ ಕಿಱುಗೊಂಬಿನೊಳ್ ನಿಱಿದಳಿರ್ ಮೆಱೆದತ್ತು ಬಸಂತಮಾಸದೊಳ್ (ಅನಂಪು. ೬-೮೨). [ನಿಱಿ$_2$+ತಳಿರ್$_2$]

**ನಿಱಿದಳಿದೊಂಗಲ್** (ನಾ). ಅಂದವಾದ ಚಿಗುರುಗಳ ಗೊಂಚಲು ; ಸುಂದರವಾದ ತಳಿರುಗಳ ಗುಚ್ಛ : ನಿಱಿದಳಿದೊಂಗಲಂ ತಳೆದಶೋಕೆ (ಎಕ. XI, ದಾವಣ. ೩೫-೩೭ ; ಸು. 1160) ; ನಿಱಿದಳಿದೊಂಗಲಿಂದೆಸೆವಶೋಕವನಂ . . . ಒಪ್ಪುಗುಂ (ಚಂದ್ರಪು. ೧೫-೪೮) ; ನಿಱಿದಳಿದೊಂಗಲಂ ತೆಗೆಯೆ ಬಾರುಳಿಯಂ ದನಿಗೆಯ್ದಶೋಕೆಯೊಳ್ . . . ಗಾಳುವೆಣ್ಗಳೀಂ ಮೆಱೆದರೊ ಕೇಳಿಶೈಲಶಿಖರಾವಳಿಯೊಳ್ ಶಬರೀವಿಲಾಸಮುಂ (ಅನಂಪು. ೭-೧೭).

[ನಿಱಿದಳಿರ್+ತೊಂಗಲ್]

**ನಿಱಿದುಂಬಿ** (ನಾ). ಮನೋಹರವಾದ ತುಂಬಿ,—ಭ್ರಮರ : ಬಿರಿಮುಗುಳ ಪರಿಮಳಮನೆಡೆಸೂಱೆಗೊಳ್ವ ನಿಱಿದುಂಬಿಗಳ ಗಱಿಯ ಗಾಳಿಯನುಱೆ ಸೆಱೆವಿಡಿದುಂ (ಲೀಲಾಪ. ೩-೨೦ ಪ).

[ನಿಱಿ$_2$+ತುಂಬಿ$_1$]

**ನಿಱಿದುಪ್ಪುೞ್** (ನಾ). ಮನೋಹರವಾದ ತುಪ್ಪುಳು : ಅಂಚೆವಿಂಡಿನ ನಿಱಿದುಪ್ಪುೞೊಳ್ ನುಸುಳ್ದು . . . ತಣ್ಣನೆ ತಣ್ಣನೆ ಬಂದುದಂದು . . . ಮಾರುತಂ (ಶಬ್ದಾನು. ೩೯೪ ಪ್ರಯೋ).

[ನಿಱಿ$_2$+ತುಪ್ಪುೞ್]

**ನಿಱಿದುಱುಂಬು** (ನಾ). ಒಪ್ಪವಾದ ತುರುಬು : ನೂಲ ತೊಂಗಲ ತಲಾರದ ಮೆಲ್ಲುಲಿ ಪೆರ್ಚೆ ಮೆಲ್ಪು ಮತ್ತೊಱಗೆ ಕರಂಗಳಿಂ ನಿಱಿದುಱುಂಬೆದೆವಾದ್ಯದೊಳೊಂದಿ ನಿಂದು ಮುಂದೆಱಗಿ ಲಯಂಗಳೊಳ್ ತಗುಳಿ ನರ್ತಿಸಿದಾಕೆಯರೊಪ್ಪಿ ತೋಱಿದರ್ (?) (ಸೂಕ್ತಿಸು. ೧೩-೧೮).

[ನಿಱಿ$_2$+ತುಱುಂಬು$_2$]

**ನಿಱಿನಿಂಬೆ** (ನಾ). ಸೊಗಸಾದ ನಿಂಬೆಯ ಹಣ್ಣು : ಬಂದ ಮಹಾಸಾಹಸಿಗಂಗತ್ಯಾನಂದದಿ ನಿಱಿನಿಂಬೆಯ ತನಿವಣ್ಣಂ ತಂದು ಕುಡುವೆಂ (ಜಯಕಾ. ೭-೨೯). [ನಿಱಿ$_2$+ನಿಂಬೆ]

**ನಿಱಿನಿಱಿಗ** (ನಾ). ಸೊಗಸಾದ ಇಮ್ಮಾವು : ಕಿಱಿನಿಱಿಯೊಳೆ ಕಿಱಿದೆಲೆಗಳ ತುಱುಗಿದ ಚೆಲ್ವೆಳಸಿ ಬಳಸಿ ವನವನಿತೆಯ ಕಣ್ಣಱಿಯೆನೆ ನಿಱಿಗೊಂಡಿರೆ ನಿಱಿನಿಱಿಗನ ನಿಱಿದಳಿರ ನಿಱಿಯನಱಿಯೆಂ ಪೊಗೞಲ್ (ಆದಿಪು. ೬-೯೮). [ನಿಱಿ$_{2}$ + ನಿಱಿಗ]

**ನಿಱಿಮಱೆ** (ನಾ). ೧. ನೆರಿಗೆಯ ಮರೆ. ೨. ಸೀರೆಯ ಮರೆ ; ಸ್ತ್ರೀಯ ಆಶ್ರಯ (?) ಒಱೆಯುಗಿದ ಕೂರಸಿಯ ಮೊನೆಯಿಂದಱಿಸಿ ಯುಂಬುದೆ ಕ್ಷತ್ರಿಯರ ಗುಣ ನಿಱಿಮಱೆಯಲುಂಬುಣಿಸು ನಮಗಿದು ಧರ್ಮವಲ್ಲ (ಸಾಳ್ವಭಾ. ೧೬-೧). [ನಿಱಿ$_{2}$ + ಮಱೆ$_{2}$]

**ನಿಱಿಮುಗಿಲ್, ನಿರಿಮುಗಿಲು, ನಿಱಿಮುಗಿಲು** (ನಾ). ಪದರ ಪದರವಾಗಿ ಕೂಡಿಕೊಂಡ ಮೋಡಗಳ ಗುಂಪು, — ಸಮೂಹ : ಅಂಬರದ ನಿಱಿಮುಗಿಲ ತೆರೆಗಳ ಪೊರೆಯೊಳಗಣ ನಿಜವಿಮಾನದೊಳಗಂ ಪೊಕ್ಕಂ (ಶಾಂತಿಪು. ೮-೫೨); ಕಾರ ನಿಱಿಮುಗಿಲೊಡ್ಡಂ ನೆನೆಯಿಪುವವಳ ಬೞಲ್ಮುಡಿ ನೆನೆಯಿಪುದಚ್ಚರಿಯೆ ಸೋಗೆ ನವಿಲ ಬೆಡಂಗಂ (ಮಲ್ಲಿಪು. ೩-೮೪); ಕಡಲಂ ಸುರಾಸುರರ್ ಕಡೆವೆಡೆಯೊಳ್ ತೆರೆತೆರೆಗಳೊಳಗೆ ಪುಟ್ಟಿದ ಚೆಲ್ವಿಂಗೆಡೆಗೊಂಡು ನಿಱಿಮುಗಿಲ್ಗಳ ನಡುವೆ ಕರಂ ಮಿಱುಗಿದತ್ತು ಹಿಮಕರ ಬಿಂಬಂ (ಜಗವಿ. ೪-೭೩); ಬೆಳೆದಿರ್ದ ಬಳ್ಳಿಮಾಡಂಗಳೆ ದಾಂಗುಡಿವಿಟ್ಟುವೆನಿಸಿ ಕಟ್ಟಿದ ಗುಡಿಗಳ್ ಮಿಳಿರ್ದೆಸೆದುವು ನಭದೊಳ್ ಗೊಂದಳಿಸಿ ತೆಱಂಬೊಳೆವ ನಿಱಿಮುಗಿಲ್ಗಳ ಪುದುವಿಂ (ವರ್ಧಪು. ೫-೩೪). **ನಿರಿಮುಗಿಲು :** ಆಗಸದ ಮಧ್ಯದೊಳಗೆ ನಿ[ಪಾಠಾಂ. ಗಿ]ರಿಮುಗಿಲ ಬಳಗದಂತುರುನಿಬಿಡಕರವಾಗಿ ಬರುವ ರಕ್ಕಸರಂ . . . ಈಕ್ಷಿಸುತ ಲಕ್ಷ್ಮಣನೊಳಿಂತೆಂದಂ (ವೆಂಕಾರಾ. ೧-೧೩-೧೮). **ನಿಱಿಮುಗಿಲು :** ಆಟ್ಟಿ ಹೊಯ್ದುದು ನಿಱಿಮುಗಿಲನಱೆಯಟ್ಟಿ ಕೊಡಹಿತು ತಳಿತಮೇಘದ ಥಟ್ಟು ಮುಱಿದುದು ಬೀಸಿದವು ಬಿಱುಗಾಳಿ (ಕುಮ್ಯಾಕ. ೨೩-೩೫).

[ನಿಱಿ$_{2}$ + ಮುಗಿಲ್]

**ನಿಱಿಮುಗಿಲು** 'ನಿಱಿಮುಗಿಲ್' ನೋ.

**ನಿಱಿಯಿಂಗಲು** (ನಾ). ಒಂದು ಸ್ಥಳದ ಹೆಸರು (?) : ಕಗ್ಗಿಮುವತ್ತಱ ಸೀಮೆ×ಲ್ಲಿನ್ದ ಮೆಂದಡೆ ಹೊಂನ್ನೆದೆಱೆ ಆಳಗನ ಹಳ್ಳ ಎತ್ತುರುಳಿ ನರಿಗನ ಗಟ್ಟಿ ಮತ್ತರನಱೆ ನಿಱಿಯಿಂಗಲು ಎಱೆಯಮ×ಡಿಗರ ಪಳ್ಳ ಪೆಂಪುಳಿಯ ಕೆಱೆ (ಎಕ. VI, ತರೀಕೆ. ೬೭-೧೩ ; 888). [ ? ]

**ನಿಱಿಯುಡಿಗೆ** (ನಾ). ಅಂದವಾದ ಉಡುಗೆ : ಅಂದವೇಱಿದ ಗಡ್ಡದರ್ಭೆಗಳಿಂದ ನಿ[ಪಾಠಾಂ. ನೆ]ಱಿಯುಡಿಗೆಗಳ ನಾಟಕದಿಂದ ಮಟ್ಟಿಯ ಥಟ್ಟು ನೊಸಲಲಿ ದೇಶಿಪರಿ ಮೆಱೆಯೆ (ಕುಮ್ಯಾಆ. ೧೦-೨) ; ನಿಱಿಯುಡಿಗೆಯಲಿ ಮಲ್ಲಗಂಟಿನ ಸೆಱಗ ಮೋಹಿಸಿ ಬೆರಳ ದರ್ಭೆಯ ಹಱಿದು ಬಿಸುಟನು (ಕುಮ್ಯಾದ್ರೋ. ೯-೧೫); ಪರಿಪರಿಯ ನಿಱಿಯುಡಿಗೆಗಳ ನೂಪುರದ ತೊಡರಿನ ದೇಸಿ ಮಿಗೆ ಬಳಸಿರಲು ತರುಣಿಯ[ರಂದು] ಸತಿಯನು ಕಂಡುದಾ-ಹಂಸೆ (ನಳಚ. ೨-೩೧).

[ನಿಱಿ$_{2}$ + ಉಡಿಗೆ$_{1}$ (<ಉಡುಗೆ)]

**ನಿಱಿಯುಡಿದಾರ** (ನಾ). ಅಂದವಾದ ಡಾಬು ; ಸೊಗಸಾದ ಒಡ್ಯಾಣ : ನಿಱಿಯುಡಿದಾರ ನೇವುರ ವೀರಮುದ್ರಿಕೆ ಮೆಱೆಯೆ ನಡೆದಳೊಲವಿಂದ (ಕುರಾಸಾಂ. ೨೧-೩೬).

[ನಿಱಿ$_{2}$ + ಉಡಿದಾರ (<ಉಡೆದಾರ)]

**ನಿಱಿಲು$_{1}$** (ನಾ). ಒಂದು ಅನುಕರಣ ಶಬ್ದ : ನಿಱುನಿಱಿಲು ನಿಱಿಲೆನುತ ಹೆಮ್ಮರ ಮುಱಿದುದು (ಕುಮ್ಯಾಅ. ೧೧-೧೪ ಒಠಿಇ).

**ನಿರಿನಿಟಿಲು, ನಿಱಿನಿಟಿಲು, ನಿಱಿನಿಳಿಲು** = ಒಂದು ಅನುಕರಣ ಶಬ್ದ : ನಿರಿನಿಟಿಲು ನಿಟಿಲೆಂದು ಮುದಿಮೂಳೆ ಮುರಿಯುತಿದೆ (ಕೋಗಿಲೆ. ೪೧-೫); ಒರ್ವನ ಕಾಲ ಮುಱಿದಿಟ್ಟಿ ನಿಟ್ಟೆಲುಗಳನು ನಿಱಿನಿಟಿಲೆಂಬಂತೆ ಕಿತ್ತು ಮಸ್ತಕವನು ತಿಱಿಕಲ್ಲನಾಡಿ ಬೊಬ್ಬಿಱಿದ (ಮೋಹತ. ೧೨-೩೭); ಘುಮ್ಮ ಘುಲಿಲೆನೆ ನಿಱಿನಿಳಿಲುಗರೆದೊಱಲಿದವು ಫಲುಗುಣನ ಶರಜಾಲ (ಕುಮ್ಯಾದ್ರೋ. ೧೦-೧೯). **ನಿಱಿಲುನಿಟಿಲೆನ್** = ಮುರಿಯುವಂತೆ ಸದ್ದುಮಾಡು ; ಲಟಲಟವೆನ್ನು : ಮಂಡಿಯ ಪಡಿಯ ಪದಪದ್ಧತಿಗೆ ಫಣಿಪನ ಹೆಡೆ ನಿಱಿಲುನಿಟಿಲೆಂ[ಪಾಠಾಂ. ನಿಳಿಲುನಿಳಿಲೆಂ, ನಿಱಿಲುನಿಳಿಲೆಂ] ದುದೇನದ್ಭುತವೊ ರಣರಭಸ (ತೊರರಾ. ೪-೩-೮).

**ನಿಱಿಲು$_{2}$** (ನಾ). ಒಂದು ಬಗೆಯ ಮೀನು : ಹಿರಿಯ ಪಡುಸಕ್ಕರಿಗ ನಿಱಿಲು ಹಂದೆಗನಾನೆಮೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದುರು (ಹಚಕಾ. ೫-೪೫). [ ? ]

**ನಿಱಿವಸನ** (ನಾ). = ನಿಱಿಯುಡಿಗೆ : ನಿಲ್ಲುವ ನಿಱಿವಸನವ ಮೆಟ್ಟಿ ನಲಿದಾಡಿ . . . ಸೊಲ್ಲಿಸುವನು ತೊದಳ್ನುಡಿಯ (ಮೋಹತ. ೧೭-೬೯).

[ನಿಱಿ$_{2}$ + ವಸನ]

**ನಿಱಿವಿಡಿ, ನಿರಿವಿಡಿ, ನಿರಿಹಿಡಿ, ನೆರಿಪಿಡಿ, ನೆರಿಹಿಡಿ, ನೆಱಿವಿಡಿ** (ಕ್ರಿ). ೧. ನಿರಿಗೆ ಹಾಕು ; ನಿರಿಗೆ ಹೊಯ್ಯು : ಜಲದೇವತೆಗಳ್ ನಿಱಿವಿಡಿದುಡಲ್ ನಿಮಿರ್ಚಿದ ಕುಱುವಡಿಯ ತರಂಗದಂತೆ ಬಂಬಲ್ದೆರೆಗಳ್ . . . ಒಪ್ಪುಗುಂ(ಪಂಪಭಾ. ೫-೫೭); ಬಹುವಿಧದಿಂದಂ ನಿಱಿವಿಡಿದಹಿಕಂಬು[ಚು]ಕ ಸದೃಶಮಂ ದುಕೂಲಮನೊರ್ವಳ್ ಮಹಿಳೆಗುಡಲೆಂದು ನೀಡುವ ಸಹಚರಿ ವಸನಾಂಗಭೂರುಹಕ್ಕೆಣೆಯಾದಳ್ (ಸುಕುಮಾ. ೧೦-೧೮); ಪೊಸದುಗುಲಮಂ ನಿಱಿವಿಡಿದುಡಿಸಿಯುಂ (ಚಂದ್ರಪು. ೬-೬೩ ವ) ; ಪರಿವಿಡಿಯ ನಿಱಿವಿಡಿದು ನಾಭಿಯ ಸರಿಸದಲಿ ಪಸರಿಸುತ . . . ವಿರಚಿಸಿದಳುಡಿಗೆಯನು ಮಾಯಾತರುಣಿ (ಪ್ರಭುಲೀ. ೪-೨೧) ; ಕಟ್ಟಿದ ಪೊಂಬಟ್ಟೆಯ ವಿತಾನದ ಪರಿಸರದೊಳ್ನಿಱಿವಿಡಿದೆಳಲೆವಿಟ್ಟ ತಳಿರ್ವಟ್ಟೆಯ ಚಿತ್ರಾವಳಿಯ ಮೇಲ್ಕಟ್ಟಿನ ಲಂಬಣಂಗಳ . . . ಗಾಡಿವಡೆದ ಮಂಟಪದ ಮಧ್ಯದಲ್ಲಿ (ರಾಜಶೇ. ೮-೫ ವ). **೨. ನಿರಿಗೆಯನ್ನು ಹಿಡಿದುಕೊಳ್ಳು :** ತಾಯನಪ್ಪುತ್ತೆ ಮೊಲೆಗೆ ಲಲ್ಲೈಸಿ ನಿಱಿವಿಡಿದು ಮೊಗಮಂ ನೋಡುವ ತೊಗಾಡುವ ಮಗನ ಮುದ್ದುತನವಂ ಬಸವರಾಜಂ ಕಂಡು (ಬಸರ. ೧೦-೧೨೧); ನಾಣ್ಚೆ ಹೊಂಗುತೆ ಬಂದು ನಿಱಿವಿಡಿದು ಅಜ್ಜ ಅಜ್ಜಪ್ಪಪ್ಪ ಅಮ್ಮಮ್ಮೆಂಬುಜ್ಜುಗದ ಸುಕುಮಾರಕನ ಮಿಗೆ ಪಜ್ಜಳಿಪ ಮೊಗ ನೋಡಿ (ಸಾಳ್ವಭಾ. ೩-೧೪); ಕೈಗಳಿಂದಪ್ಪಿ ನಿಱಿವಿಡಿದು ಕುಣಿವಂ (ಏಕೋಪು. ೨-೬೧). **೩. ತೆರೆತೆರೆಯಾಗು ; ಅಲೆಅಲೆಯಾಗು :** ನಿಱಿವಿಡಿದು ನಿಮಿರ್ವ ಪೆರ್ದೆರೆಗಳಿಂ ನೆಗೆವ ತುಂತುಱುಗಳಿಂದೇಳ್ವ ಬೆಳ್ನೊರೆಗಳಿಂ . . . ಎಸೆದುದಬುಧಿ (ನಂದಿಮಾ. ೨-೪). **೪. ಗುಂಗುರಾಗು ; ಕೊಂಕು :** ಅಡಿಯನೂಡದೆ ಕೆಚ್ಚನಿಹ ಕೇಸಡಿಗಳೊತ್ತದೆ ನಿಱಿವಿಡಿದ ಕುರುಳು . . . ಪೊಡರ್ವ ಕಜ್ಜಳವೆಚ್ಚದಸಿತತೆವಡೆದ ದಿಟ್ಟಿಗಳೊಪ್ಪೆ ಅನಿಮಿಷಮಡದಿಯರು ಕೆಲಸಕ್ಕೆ ಬಂದರು (ಸಾಳ್ವಭಾ. ೩೨-೧೭). **ನಿರಿವಿಡಿ : ೧.** ನವಪರಿಯ ದಿವ್ಯದುಕೂಲವಂ ನಿರಿವಿಡಿದುವುಡಿಸಿ (ನವಮೋ. ೧೩-೪೫); ಪೊಸ ಮಿಸುನಿವಟ್ಟೆಯ ನಿರಿವಿಡಿದುಡಿಸಿಯುಂ (ದಮಸ್ವ. ೪-೧೩ ವ) ; ಮುಂಜೆರಗ ನಿರಿವಿಡಿದು ಪೆಗಲೆರಡ ಸುತ್ತಿ . . . ದೊಡ್ಡನಿಳ್ಳುಳಿಯ ಮದುಮಗನಾದ ನಂದು (ಕಾಲೂರ.೧೪೮-೩೨೪). **ನಿರಿಹಿಡಿ: ೨.** ನಿರಿಹಿಡಿದು, ನಡುವೇರಿ, ತೊದಳು ಮಾತನು ಬೀರಿ, ಕೊರಗ ನಗಿಸಲು ಬಲ್ಲ ಮಗುವಿಲ್ಲವೇನೋ ? (ಇಂಗೀತ.೬೨-೨೩). **ನೆರಿಪಿಡಿ : ೧.** ಕೆಲರು ರಾಜಕುಮಾರರು ನೆರಿಪಿಡಿದ ರುಮಾಲುಗಳಿಂ ಸುಮಾನದಿಂದ ಪಿಡಿದು (ಸೌಗಂಧಿ. ೨೧೩-೨೧). **ನೆರಿಹಿಡಿ: ೧.** ತನ್ನ ಹಳೆಯ ಬಟ್ಟೆಗಳನ್ನೆಲ್ಲಾ ಬದಲಾಯಿಸಿ ನೆರಿಹಿಡಿದಿದ್ದ ಒಂದು ಹೊಸ ಪಂಚೆಯನ್ನುಟ್ಟನು (ನಿಬಂಧ. II, ೧೦೮). **ನೆಱಿವಿಡಿ: ೧.** ನೆಱಿ[ಪಾಠಾಂ. ನಿಱೆ]ವಿಡಿದು ದಿವ್ಯಾಂಬರವನುಟ್ಟು (ನಿಭಾಗ. ೧೦-೭೨-೨೮). [ನಿಱಿ$_{2}$ + ಪಿಡಿ$_{1}$]

**ನಿಜಂವಿಣಿಲ್,** ನಿಜಂವಿಣಿಲು (ನಾ). ಅಂದವಾದ ಜಡೆ: ನಿಜಂವಿಣಿಲೆಸೆದುದಮೃತಮಧುರಾಧರೆಯಾ (ಲೀಲಾವ. ೭-೭೬); ಬೆಳರ್ವಣ್ಣಂಬಡೆದ ತುಟಿದಳಿರ್ಪರೆದಳಕಂ ವಿಳಿರ್ವ ನಿಜಂವಿಣಿಲುಮೆಸೆದುದು ತಳರ್ವಳಿವೆಣ್ಗಳ್ಗೆ ಕುಳಿರ್ವ ಕೊಳದಿಂದಾಗಳ್ (ರಾಜಶೇ. ೧೨-೧೧೧). **ನಿಜಂವಿಣಿಲು :** ಆ ಪೆಣ್ಣ ಚೆಲುವೆತ್ತ ನಿಜಂವಿಣಿಲೊಳು ನೋಟಕರಕ್ಷಿ ನಲಿದಾಡುತಿರ್ದುವು (ನಾಗಕು. ೧೨-೩೪). [ನಿಜಂ₂ + ಪಿಣಿಲ್₂]

**ನಿಜಂವಿಣಿಲು** 'ನಿಜಂವಿಣಿಲ್' ನೋ.

**ನಿಜಂವೊಗರ್** (ನಾ). ಅತಿಶಯವಾದ ಕಾಂತಿ; ಹೆಚ್ಚಾದ ಹೊಳಪು (?) : ನಿಜಂವೊಗರ ಕಚ್ಬೊಗೆಯು ಕಿಡಿಯಲಿ ನೆಜಿಕಿದ ವಂತ್ಯದ ಮೇಘವೆನೆ ಝಂಗರ್ಝಂಗಿಸಿತಮಳಾಸ್ತ್ರ (ಕುಮಾರವ್ಯಾಸ. ೯೯-೧೬). [ನಿಜಂ₂ + ಪೊಗರ್]

**ನಿಜಂಶ್ರಾವಕಿ** (ನಾ). [ಜೈನ] ನಿಯಮಾಚರಣೆಯುಳ್ಳ ಗೃಹಿಣಿ,—ಶ್ರಾವಕಿ : ಮತ್ತಮೇನುಮಿಲ್ಲದ ನಿಜಂಶ್ರಾವಕಿ ಕಂಡು (ಇಂತೆಂದಳ್) (ಧರ್ಮಾಮೃ. ೪-೧೧೭). [ನಿಜಂ₂ + ಶ್ರಾವಕಿ]

**ನಿಜಂಸು₁, ನಿರಿಸು, ನಿಜಿಸು₁, ನೆಜಿಕಿಸು (ಕ್ರಿ). ೧. ಇಡು; ಇರಿಸು:** ಮೊದಲೊಳ್ ಸಮಾಸಪದಮುಮನೊದವಿಸಿ ಪೇೞ್ದಜಿ ತುದಿಯೊಳ ಸಮಾಸಪದಾಸ್ಪದಮಾಗಿ ನಿಜಂಸೆ ಕಬ್ಬಿನ ತುದಿಯಂತಿರೆ ವಿರಸಮಕ್ಕುಂ (ಕವಿರಾ. ೨-೮೬); ಅತಿಬಳಖೇಚರೇಂದ್ರನಿವರಮ್ಮನುಮಾತನನೂರ್ಜಿತಾತ್ಮಸಂತತಿಯೊಳನಾಕುಳಂ ನಿಜಂಸಿ (ಆದಿಪು.೨-೨೧); ಅರಿಗಳನಾತ್ಮೀಯ ಪದಸ್ಫುರಿತ ನಖಚ್ಛಾಯೆಗಳೊಳ್ ನಿಜಂಸಿ ನಿಂದ ಗಂಡಂ ಹರಿಗಂ (ಪಂಪಭಾ. ೩-೧); ನವಶಶಿಕಳೆಗಳನಮೃತದ್ರವಂಗಳೊಳ್ ತೀವಿ ತೀವಿ ನಿಜಂಸಿದರ್ (ಶಾಂತಿಪು. ೧-೬೨); ವನನಿಧಿಯಂ ಕಡೆಯಲ್ಕಾ ಕನಕಾದ್ರಿಯನಾ ಜನಾರ್ದನಂ ನಿಜಂಸಿದವೋಲ್ (ನೇಮಿಪು. ೧-೫೮). **೨. ನೆಟ್ಟಗೆ ನಿಲ್ಲುವಂತೆ ಮಾಡು; ಸ್ಥಾಪಿಸು:** ಸಿಯಂಗೆಲ್ಲರ್ ಸೂಟ್ನರ ಪೊಳ್ಳನಿಜಂಸಿ ಪೊವಾಡಲ್ಲಿ ಳೆಗ × ನಿಸ × × × ದೆಕೊ × × × (ಎಕ. XVI, ತುಮಕೂ. ೮೮-೧೨; ಸು. 775); ಈ ಕಲ್ಲ ಪುಟಿಂದೆಗಾವುಣ್ಣ ತಮ್ಮ ಗುಜಿಕೆಯುಮ್ಮ ನಿಜಂಸಿದೊ (ಎಇ. XXI, ೩೫-೪; 883); ಪಟಿಯಿಗೆ ಬಿಟಿಕ್ದೊಡೆ ಬೀರದ ಪಟಿವಿಗೆಯಂ ನಿಜಿಸಲೆಂದೆ . . . ನರನ ಬಿಲ್ಲಗೊಣೆಯುಮನೆಣ್ಚಂ (ಪಂಪಭಾ. ೧೨-೨೦೯); ಜೋಗಿಮಯ್ಯಂ ಶಿವಪದಪಂಕಜಭ್ರಮರನೀಸ್ವರದಾಸಿ ಸಾಸನಮ ನಿ[ಜಂ]ಸಿದಂ (ಸೌಇಇ. XX, ೩೪-೩೪; 1058). 'ಕಲ್ನಿಜಂಸು' ಪರಾ. **೩. ಸ್ಥಿರಪಡಿಸು; ನೆಲೆಗೊಳಿಸು; ನಿಯಾಮಿಸು :** ಆ ಎಜಮ್ಮನುಂ ಅಯ್ವದಿಮ್ಬರುಂ ನಕರಮುಂ ಸೇಣಿಯುಂ ಬಟಿಸುವಿಟ್ಟು ಗೆಲ್ವಲ್ಲಿ ಮೂಲವ್ವೇಡಿಯಕ್ಕೆ ಒರ್ವಳ್ಳನೆಯ್ನಿಜಂಸಿದಂ (ಎಕ. VI, ಕಡೂರು. ೧೪೫-೭; ಸು. 750); ಕನ್ನಡದೊಳೊಲ್ದು ಪೂರ್ವಾಚಾರ್ಯರ್ದೇಸಿಯನೆ ನಿಜಂಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ (ಕವಿರಾ. ೧-೭೪); ನಂದನ ರಾಜ್ಯಸ್ಥಾನದೊಳ್ ಪೆಜನೊರ್ವನಂ ಚಂದ್ರಗುಪ್ತನೆಂಬೊನಂ ನಿಜಂಸಿದೊಡೆ (ವಡ್ಡಾರಾ. ೭೫-೯); ತನ್ನ ಕೀರ್ತಿಯಂ ನಿಜಂಸಿದಳ್ (ಎಕ. VII(S), ಶಿಕಾರಿ. ೩೬೪-೨೨; 902); ಇಂತೀ ತೆಜದಿಂ ನೆಗೞ್ದ ತನ್ನ ಕೀರ್ತಿಯಂನೀವಿಖ್ಯಾತವೃಷಭಾದ್ರಿಯೊಳ್ ಸುರಗೀತಯಶಂ ನಿಜಂಸಿದಂ ನೆಲಂ ನಿಲ್ವಿನೆಗಂ (ಆದಿಪು. ೧೩-೭೭); ಕಾಶ್ಯಪಂಗೆ ಮಗಧನಾಮಮನಿಟ್ಟು ಉಗ್ರವಂಶಲಲಾಮಂ ಮಾಡಿ . . . ಕಚ್ಛಮಹಾಕಚ್ಛಪ್ರಮುಖರಂ ಅಧಿರಾಜಪದವಿಯೊಳ್ ನಿಜಂಸಿ [ಪಾಠಾಂ. ನಿಲಿಸಿ] (ಚಾವುಂಪು. ೩೬); ಎಮಗಿರ್ಪುದು ಸೂಟಿಲ್ತೆಂದು ಮಕ್ಕಳಂ ನಿಜಂಸಿ ನೆಲೆಗಳೊಳ್ (ಸುಕುಮಾ. ೮-೫೫). **೪. ನಿಲ್ಲುವಂತೆ ಮಾಡು; ನಿಲ್ಲಿಸು :** ದಂತಿಯಂ ನಿಜಂಸಿ ಮರಲ್ದು ನೋಡುವುದುಂ (ಪಂಪಭಾ. ೪-೭೬); ಅನೇಕಾಯುಧಶರಭರಿತಂಗಳಪ್ಪ ರಥಂಗಳಂ ದ್ರೋಣಾಚಾರ್ಯರ ಪೆಜಗೆ ನಿಜಂಸಿ (ಪಂಪಭಾ. ೧೨-೨೦ ವ); ಸ್ಯಂದನಾಶ್ವಂಗಳನೊಂದೆ ದೊರೆಯೊಳ್ ಪರಿಯೆ ಪರಿಚೋದಿಸಿ ಬಾಣಪಾತಪ್ರಮಾಣದೊಳ್‌ನಿಜಂಸುವುದುಂ (ಶಾಂತಿಪು. ೪-೧೦ ವ). **೫. ತಡೆ; ನಿರೋಧಿಸು:** ತೊಜಿಕೆಯೊಳ್ಪೊಗುತ್ತಮಿರ್ದಂ ತಡಿಯ ಗಿಡುವನಾಶ್ರಯ್ಸೆ ಕಾಯಲ್ಕದೆತ್ತಾ ನಿಜಂಯದು ಪೋಗೆನ್ನದೆಂತುಂ ನಿಜಂ[ಪಾಠಾಂ. ಲಿ]ಸುಗುಂ (ಸಮಪ. ೭-೩೯); ಈವಗೆಯೊಳ್ ಕರಣಂಗಳ ಗಾವಳಿಯಂ ಕಳೆದು ನಿಜಂಸಿ ನೆಗಟಿಕೆ ವಿವೇಕಂ ಭಾವದೊಳಾಜಂ ಪಗೆಗಳ್ ತೀವದವೋಲ್ ದೊಡ್ಡದೇವನೋವಿದನೆಳೆಯಂ (ಚಿಕವಿ. ೩-೧೩). **೬. ರಚಿಸು; ನಿರ್ಮಿಸು; ಸಿದ್ಧಗೊಳಿಸು :** ಮರುದೇವಿಯೆಂಬಳಂಬರಚರನರಸುರಯಂವತಿರೂಪಸರ್ವಸ್ವಮನಾದರದೆ ಬಿದಿ ನೆಜಪಿ ಲಲನಾಸ್ವರೂಪದಿಂ ನಿಜಂಸಿತೆನ್ನದಿನ್ನೇವೋಗಟ್ಕೆಂ (ಆದಿಪು. ೬-೮೦); ವಿನುತಕ್ರಿಯಾತ್ಮಕಂಗಳು ಮೆನಿಸುವ ಸಂಸ್ಕೃತದ ಭಾವವಚನಂಗಳನಾಯ್ದು ನಿತರ್ಕಮಿಸುಪ್ರತ್ಯಯವನೆ ಪತ್ತಿಸಿ ನಿಜಂಸೆ ಬರ್ಕುಮಾ ಕೃಲ್ಲಿಂಗಂ (ಶಮದ. ೭೪). **೭. ಕೊಂಕಿಸು; ವಕ್ರಗೊಳಿಸು; ಗಂಟುಹಾಕು :** ಅಜಂಪಿದುದು ರೌದ್ರರಸಮಂ ನಿಜಂಸಿದ [ಪಾಠಾಂ. ಕಿರಿಪಿದ, ತಿಜಂಪಿದ] ಕುಡುಮುರ್ಪು ಕರ್ಚದೌಡುರ್ಚದ ಬಾಳ್. . . ಬಿಟ್ಟ ಕಣ್ಣಳಾರೋಹಕರಾ (ಗದಾಯು. ೪-೨೭). **೮. ನೆಡು; ನಾಟು :** ಪೂಜಂಸಿದ ಗಾಲಿಯೊಳಂ ನಿಜಂಸಿದ ಬಸಿಯೊಳಂ ಪೂಸಿದ ಡೆಂಕಣಿಯೊಳಂ . . . ಮೊನೆಯಂ ಪೂಣಿಸಿದ ಕೊಂತದೊಳಂ ಕೈಗೆಯ್ದು (ಅನಂಪು. ೧೧-೮೨ ವ). **೯. [ಜೈನ] ಚರಿಗೆಗಾಗಿ ನಿಲ್ಲಿಸು,—ತಡೆ; ಅನ್ನದಾನಕ್ಕಾಗಿ ನಿಲ್ಲಿಸಿಕೊಳ್ಳು :** ಅರಸಂ ಶಿವಗುಪ್ತಭಟ್ಟಾರಕರ್ಗಾಂ ಪಾರಣೆಯಂ ಮಾಡುವೆಂ ಪೆಜರಾರುಂ ನಿಜಂಸಲ್ ಸಲ್ಲೆಂದು ಪೊಟಿಲೊಳಗೆಲ್ಲಂ ಗೋಸನೆಯಂ ತೊಟಿಲ್ಚಿದೊಡೆ (ವಡ್ಡಾರಾ. ೭೪-೪); ಮಹಾನಗರಕ್ಕೆ ಚರಿಗೆವೋಗೆ ಕನಕವರ್ಣನಪ್ಪ ಸೌಂದರನೆಂಬರಸಂ ನಿಜಂಸೆ[ಪಾಠಾಂ. ನಿಲಿಸೆ] ನಿಂದು (ಚಾವುಂಪು. ೧೪೬); ದೇವಕಿ ಸರಾಗದಿದಿರೆೞ್ದು ಘವೇತಂಡ ಹರಿಶಿಶುಗಳಂ ಭೂಮಂಡಳವಂದ್ಯರ ನಸಿಂದ್ಯೆ ನಿಜಂಸಿದಳಾಗಳ್ (ನೇಮಿಪು. ೬-೫). **೧೦. (?)** ಸ್ವಸ್ತಿಶ್ರೀ ಅರಿಜುರ ಪನ್ನಿರ್ವ್ವರು ಮೂ× × ×ಯ್ಯನ್ತಲ ಮೊಜಮು ನಿಜಂಸಿದಾಕಾರೆಯರುಂ ಪೊರಳನ್ವಯರುಂ ಗುಣಸಾಗರ ತಮ್ಮಡಿಗಳ್ಗೆ ಕೊಟ್ಟ ಮ× (ಎಕ. IV, ಗುಂಡ್ಲುಪೇ. ೮೯-೧೪; ಸು. 750); ಕೆಳೆಯ ವಾಳೆಜಿಯಂ ನಿಜಂಸಿದ (ಎಇ. IX, ೨೦-೧೩; ಸು. 800). **ನಿರಿಸು : ೨.** ಮ[ತ್ತ]ರಾಟುಮಂ ಕೊಟ್ಟು ನಿರಿಸಿದಳೀ ಶಾ[ಸ]ನಗಂಭ (ಕಇಅ. ೮೨-೧೫-೮೭; 1117). **೩.** ಸಂಸ್ಕೃತ ಛಂದೋನಿಯಮದಲ್ಲಿಯ ಯತಿಯನ್ನು ವಿಾರಿ ಕನ್ನಡಕ್ಕೆ ವಿಶಿಷ್ಟವಾದ ಖಂಡಪ್ರಾಸವನ್ನು ಪೂರ್ವಾಚಾರ್ಯರು ನಿರಿಸಿದರಂತೆ (ಕಸಾಚ. ೫೯). **೧೧. ಗೊತ್ತುಪಡಿಸು; ಗೊತ್ತುಮಾಡು :** ಮಹಾರಾಜಂಗೆ ರಾಜಯೋಗ್ಯವಿದ್ಯಾಭ್ಯಾಸಂಗೆಯಿಸಲ್ಕೆ ನಿರವದ್ಯಪ್ರಜ್ಞಾಶಾಲಿಯಪ್ಪ ಮಾಲೀಸನೆಂಬಾಂಗ್ಲೇಯೋಪಾಧ್ಯಾಯನಂ ನಿರಿಸುವುದುಂ (ಮುರಾಚ. ೫-೩೯ ವ). **ನಿಜಿಸು₁ : ೨.** ಸಿಯವಲ್ಲವರಸ ಶ್ರೀಕಾಮ ನಿಜಿಸಿದನ್ (ಎಕ. IX, ಹೊಸಕೋ. ೨೧-೮; ಸು. 750). **ನೆಜಿಕಿಸು : ೨.** ಜೀಯ ಸನುತನ್ನು ಕಲ್ಲ ನೆಜಿಕಿಸಿದ (ಎಕ. VII, ಶಿಕಾರಿ. ೧೯೫-೭; 1007).

**ನಿಜಂಸಿಪಡು = ನೆಲೆಗೊಳ್ಳು; ಸ್ಥಾಪಿತವಾಗು :** ಅವನ್ ಅಯ್ಯನ ಪಟ್ಟದಲ್ ನಿಜಂಸಪಟ್ಟುದೆ ತಡಂ . . . ಬೇಜಿಕೆವೇಜಾ ದಿವಿಜರ್ಗೆ ಪಲವಗೆಯ ಪದವಿಗಳನೀಯಲ್ಕೆ ತೊಡಗಿದನ್ (ಬದ್ಧಪ್ರ. ೧೩-೨೭೦). [ನಿಜಂ₂ + -ಸು₁]

**ನಿಜಂಸು₂,** ನಿಜಿಸು₂ (ನಾ). ೧. ನಿಲ್ಲುವ ಒಂದು ರೀತಿ,—ಭಂಗಿ : ಗತಿ ಭಾವಂ ಚಾರಿ ಸೂತ್ರಂ ನಿಜಂಸಳವಿ ಬಳಂ ಕಾಣ್ಕೆ . . .

ಎನಿಪ ಭೃಗುಪ್ರೌಢಿಯಿಂ ಕೊಲ್ವನುಗ್ರಾಹಿತನಂ ಮಾಱಂಕವಂ ಮಾರ್ಮ್ಮಲೆದಡೆ ಚಲದಿಂದೆಕ್ಕಲಕ್ಷೋಣಿಪಾಳಂ (ಎಕ. VIII, ಸೊರಬ. ೧೪೦-೩೪ ; 1198 ; ಶಾಸಮಂ. ೧೨೯೭ ನೋ) ; "ಪೊರ್ದುಗೆ" (ಶಾಸಮಂ.೨೯೨ ಕೋಶ). **೨.** ತೋರಿಕೆ ; ಪ್ರದರ್ಶನ : ಮುಱುಕದಲಿ ಮಾಯಾವಿಲಾಸದ ನಿಱುಸುಗಳ ನೋಟದಲಿ . . . ಮಹಿಳಾಜನ ವಿರಾಜಿಸಿತು (ತೊರಠಾ. ೧-೫-೨೯). **೩.** ಸೊಗಸು : ಮೆಱೆದು ದಿದಿರಲಿ ನಿಖಿಳನದಿಗಳ ಮುಱುಕವನು ಮಸುಳಿಸುವ ಮಸಕದ ನಿಱುಸಿನಲಿ . . . ಫೇನಪಿಂಡದ ಗುಱುಬಿನಲಿ ಗಾಡಿಸಿತು ಗೋದಾವರಿ ಕಕುತ್ಸ್ಥಜನ (ತೊರಠಾ. ೩-೧-೪೭) ; ನಿರ್ಜರದ ನಿಱುಸು ನಿಡುಜಂರ್ಝಾಸಮೀರನ ಬಿಱುಸು ಬೇಸಱನಿತ್ತವು . . . ನವಮೇಘಕಾಲದಲಿ (ತೊರಠಾ. ೪-೬-೭). **ನಿಱಸು$_2$ : ೩.** ಭಾವಾನುಭಾವವಿಭಾವಂಗಳ್ ರಸಮನು ದ್ಭಾವಿಸೆ ನಿಂದ ನಿಱಸು ವಿಚಿತ್ರಶೋಭಾವಹಮಾಗೆ (ಮಲ್ಲಿಪು. ೧೩-೩೭) ; "ಸೊಬಗು" (ಮಲ್ಲಿಪು. ಕೋಶ). [<ನಿಱುಸು$_1$]

**ನಿಱುಸುಂಗಲ್ಲು** (ನಾ). (ಮೇರೆಯನ್ನು ಸೂಚಿಸುವುದಕ್ಕಾಗಿ) ನಿಲ್ಲಿಸಿದ ಕಲ್ಲು ; ಗಡಿಕಲ್ಲು ; ಸೀಮೆಯ ಕಲ್ಲು : ಅದಕ್ಕೆ ಸೀಮೆ ಮೂಡಲು ನಿಟ್ಟೂರ ಪಡುವಣ ಪೊಲದ ಮೇರೆಯ ನಿಱುಸುಂಗಲ್ಲು (ಸೌಇಇ. XX, ೭೪-೩೪ ; 1111). [ನಿಱುಸು$_1$ + ಕಲ್ಲು(<ಕಲ್$_3$)]

**ನಿಱುಸುಕೆಯ್** 'ನಿಱುಸುಗೆಯ್' ನೋ.

**ನಿಱುಸುಗೆ** (ನಾ). ಇರಿಸುವುದು ; ಸ್ಥಾಪನೆ. 'ಕಂಭನಿಱುಸುಗೆ' ಪರಾ. [ನಿಱುಸು$_1$ + -ಗೆ]

**ನಿಱುಸುಗೆಯ್,** ನಿಱುಸುಕೆಯ್ (ಕ್ರಿ). ಸಿದ್ಧ ಮಾಡಿಕೊಳ್ಳು ; ತಯಾರಾಗು : ಕಳಂಬೊಕ್ಕು ನಿಱುಸುಗೆ[ಪಾಠಾಂ. ಕೆ]ಯ್ದು . . . ಎಣ್ಬತ್ತನಾಲ್ಕು ಬಿನ್ನಣದೊಳಂ ಪಲತೆಱದ ಪಾತಂಗಳೊಳಂ ನೆಱೆದು (ಚಂದ್ರಪು. ೫-೭೭ ಪ). **ನಿಱುಸುಕೆಯ್ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ನಿಱುಸು$_2$ + ಕೆಯ್$_1$]

**ನಿಱುಂಗಲ್ಲು** "ನಿಱುಗಲ್" ನೋ.

**ನಿಱುಕಲ್ಲು** 'ನಿಱುಗಲ್' ನೋ.

**ನಿಱುಗಲ್,** ನಿಱುಂಗಲ್ಲು, ನಿಱುಕಲ್ಲು, ನಿಱುವುಂಗಲ್ (ನಾ). = ನಿಱುಸುಂಗಲ್ಲು : ಪಡುವಣ ಮೇರೆ ಆಲದ ಮರ ಮೂಡಣ ಮೇರೆ ನಿ[ಱು]ಗಲ್ಲೆ (ಕಇ. II, ೫-೫ ; 859) ; ಪಡುವ ನಿಱುಗಲ್ ಮೇರೆ (ಎಇ. VIII, ೨೦೧-೧೨ ; 865) ; ಮೂಱು ನಿಱುಗಲ್ಲನ್ನಿಱಿಸಿ ಕಲ್ಲೊಱ್ಬಿಯನ್ನಾಗೆ ಕಿಸುಕಾಡನೆತುಂ ಕೊಟ್ಟಿತ್ತು (ಎಕ. XII, ನಂಜನ. ೨೭೯-೯೪ ; 904). **ನಿಱುಂಗಲ್ಲು :** ಪಾರ್ತ್ಥದ ಮೇಳೆಯಲ್ಲಿ ನಿಱುಂಗಲ್ಲು (ಎಇ. XV, ೯೮-೨೨ ; 1074). **ನಿಱುಕಲ್ಲು :** ತೊಱೆಯು ಆಲರೆ ಮೇರೆ ದುವೆಟ್ಟಗೆ ನಿಱುಕಲ್ಲು ಕೊವಳ್ಳದಾ ಪೆರಿಯ ಎಲವು ಅಲ್ಲಿಂ ಕುಡಿತ್ತು (ಎಕ. II, ೩೫-೬ ; ಸು. 800). **ನಿಱುವುಂಗಲ್ :** ಅದರ್ಕ್ಕೆ ಮೂಡಲು ಹೊಲದ ಮೇರೆಯ ನಿಱುವುಂಗಲ್ಲೇ ಮೇರೆ (ಸೌಇಇ. XI-ii, ೧೪೨-೫ ; 1098). [<ನಿಱುಸು$_1$ + ಕಲ್$_3$]

**ನಿಱುಗುರುಳ್** 'ನಿಱುಗುರುಳ್' ನೋ.

**ನಿಱುಗೆ** 'ನಿಱುಗೆ' ನೋ.

**ನಿಱುಗೆಗಾಣ್** 'ನಿಱುಗೆಗಾಣು' ನೋ.

**ನಿಱುವಗಲು** (ನಾ). ಒಂದು ಊರಿನ ಹೆಸರು : ಪೊಱೆಯ ನಾಯಕ ಜೆಡಕೆದರ ಬಂದು ನಿಱುವಗಲ ಮುತ್ತಿದಲಿ (ಎಕ. XVI, ಚಿಕ್ಕನಾ. ೬೧-೩ ; ?). [ ? ]

**ನಿಱುವುಂಗಲ್** 'ನಿಱುಗಲ್' ನೋ.

**ನೀ** 'ನೀನ್' ನೋ.

**ನೀಂ** 'ನೀನ್' ನೋ.

**ನೀಂಟಾಡು** (ಕ್ರಿ). ಸೇವಕನಾಗು ( ? ) : ಬಂಟಪ್ಪುದು ತುರು ಗಾಯ್ವುದು ತೋಂಟವ ಮಾಡುವುದುಮಂತುಟಲ್ಲದೆ ಮತ್ತಾ ನೀಂಟಾಡಿ ಹೋಹುದಲ್ಲದೆ ನಂಟನ ಸಾರುವವನೆಗ್ಗ (ನೀತಿಸಾ. ೫೭೪).

[ ? / ತವಿ. ನೀಟ್ಟಾಳ್ = ಸೇವಕ]

**ನೀಂಟಿಸು$_1$** (ಕ್ರಿ). **೧.** ಚಾಚು ; ಮುಂದಕ್ಕೆ ನೀಡು : ಪುಲ್ಲೆಯ ಹಿಂಡನೊಂದು ಪುಲಿ ಗೆಂಟೆಱೊಳೊಯ್ಯನೆ ಕಂಡು . . . ತಲ್ಲಣದಿಂ ಕುನುಂಗಿ ನೆಱೆ ನೀಂಟಿಸಿ ನೀಳ್ದ ಕೊರಲ್ಗೆ ಪಾಯ್ದು ತಳ್ವಿಲ್ಲದೆ ನೆತ್ತರಂ ಪದೆದು ಪೀರ್ದೆಱೆದಿಕ್ಕಿದುದಿಕ್ಕೆದಾಣದೊಳ್ (ದಶಕು. ೨-೧೧೩); ಅಲ್ಲಲ್ಲಿ ನಿಂದುವು ಗೋವ್ಗಳು ಪುಚ್ಛವ ನೆಗಹಿ ನೀಂಟಿಸಿ ಅಚ್ಯುತನಾಕೃತಿ ನೋಡಲು (ಪುರಂದ. ೪-೧೬೩-೪). **೨.** "ಕುಪ್ಪಳಿಸು" (ಪ್ರಭಣ್ಣ). 'ನೀಟು$_1$' ಪರಾ. [<ನೀಟು$_1$ + -ಇಸು$_3$]

**ನೀಂಟಿಸು$_2$** (ಕ್ರಿ). ಎವೆಯಿಕ್ಕದೆ ನೋಡು ; ಒಂದೇ ಸಮನೆ ನೋಡು : ಲೀಲೆಯಿಂ ನೀಂಟಿಸುತ ಮತ್ತೆ ಸಂಭ್ರಮದಿ ಬಾಲೆಯರು ತಾ ಬಂದು ಶಾಸೆಯನಿಡಲು (ಯನಳ. ೫೫) ; ನಗುವಂ ನಿಷ್ಕಾರಣಂ ನೀಣ್ಟಿಸಿ ಪರಿಕಿಸುವಂ (ಸಂಸಪ. ೩೬-೫) ; (ಬಿರುದಿಟ್ಟಿಯಿಂದ ನೀಣ್ಟಿಸುತ್ತ,) (ಬಿಟ್ಟಅ. ೬೧-೧೫). 'ನಿಟ್ಟಿಸು' ಪರಾ. [<ನಿಟ್ಟಿಸು]

**ನೀಂಟು$_1$** (ಕ್ರಿ). **೧.** ಎಸೆ; "ಬಿಸುಡು" (ಚತುಸಿ. ೬.I, ೪೨): ಸುಗ್ಗಿಯಲರ ಬೆಂಕೆಯಲಿ ಎದೆಗುದಿಯ ಕಂಬಳಿಯ ನೀಂಟಿಶಂಕೆಯಲಿ (೧೪ವಿಂ. ೧೧೭-೬). **೨.** ನೀಗು ; ಕಳೆ; ಹೋಗಲಾಡಿಸು : ಉಂಟೆಂಬವರಲ್ಲಿ ಇಲ್ಲವೆನಲೇಕೆ ಇಲ್ಲವೆಂಬವರಲ್ಲಿ ಉಂಟೆಂದೆನಲೇಕೆ ಈ ಉಭಯದ ಕಂಟಕವ ನೀಂಟಿಯಲ್ಲದೆ ನಿಜವಿಲ್ಲ (ಮೋಳಿಸೂ. ೪೮-೧೯೯) ; ರಾಧೇಯನೆಂಬ ಸೂತಂ ಕಂಡನು ಆಸರನು ನೀಂಟಿ ಶಿಶುವನ್ನೋಡಿ ಮಿಸನುಗಳ ರಾಶಿಯಂ ಬಿಟ್ಟು ಸಂತೋಷದಿಂ ಬಾಲಕನ ಪೋಷಿಸುವೆನಿವನ ತನಗಿನ್ನು ಸುತನೆಂದು ಸಾಕಿದನು ಮನೆಗೆ ತಂದು (ತುರಂಗ. ೧೦-೧೩).

[ದೇ.॥ ತೆಲು. ನೆಟ್ಟು = ನೂಕು, ದೂಡು]

**ನೀಂಟು$_2$** (ಕ್ರಿ). ಕುಡಿ ; ಪಾನಮಾಡು (?) : ಸರಸಿಯೊಳಗೆಲ್ಲ ಕರಚರಣಂಗಳಂ ತೊಳೆದು . . . ಬಗಸಿಯಲ್ಲಿ ದ್ರೌಪದಿ ಸಹಿತ ನೀಂಟಿದರು (ತುರಂಗ. ೯೪-೧೨). [<ಈಂಟು]

**ನೀಂಟು$_3$** (ನಾ). ಬಾಯಾರಿಕೆ ; ಸೇದೆ : ಬ್ಯಾಂಟಿಗಾರರೆಲ್ಲಾ ತಾವೂ ನೀಂಟಿನಿಂದಾ ಬಳಲಿ ಬಂದೂ (ಯನಳ. ೭೩). [<ನೀಂಟು$_2$]

**ನೀಕರ** (ನಾ). **೧.** ತೊಲಗಿಸುವಿಕೆ ; ನಿವಾರಿಸುವಿಕೆ. **೨.** ತಿರಸ್ಕಾರ ; ಉಪೇಕ್ಷೆ. 'ನೀಕರಿಸು' ಪರಾ. **೩.** ತೊಲಗಿಸುವವನು ; ನಾಶಮಾಡುವವನು : ಆ ಕೊಮರಯ್ಯಂಗವನಿತಳಾಕಾಶವ್ಯಾಪ್ತ ಕೀರ್ತಿ ನಿಜಗುಣಮಣಿರತ್ನಾಕರನಜ್ಞಾನತಮೋನೀಕರನಭಿರಾಮ ದೇವರಾಯಂ ತನಯಂ (ಪಂಚಭಾ. ೧೪-೪೭). [<ಸಂ. ನೀಕಾರ]

**ನೀಕರಿಸು,** ನೀಳ್ಕರಿಸು$_2$, ನೀಟ್ಕರಿಸು$_2$, ನೇಕರಿಸು (ಕ್ರಿ). **೧.** ಕಡೆಗಣಿಸು ; ಉಪೇಕ್ಷಿಸು ; ತಿರಸ್ಕರಿಸು : ಪಾಪಪುಣ್ಯವಿಲ್ಲ ಎಂದು ನೀಕರಿಸಿ ನಡೆಯಬಹುದೆ ದಿವರಾತ್ರಿ ಉಳ್ಳನ್ನಕ್ಕ (ಡಬೊಸ್ಮ. ೨೩೫-೬೬); ಕುಂಟಣಿಯರ್ ಸೋಲ್ತ ಸವಿಗಂಡು ಬೇಟಕ್ಕೆ ಕಂಟಕರಾದೆವೆಂದು ನೀ[ಪಾಠಾಂ. ನಿರಾ]ಕರಿಸೆಯುಂ (ಅರ್ಧನೇ. ೫-೨ ವ) ; ಪಿನಾಕಿಭವನವನೊಬ್ಬ ಜೈನನು ಕೆರಹುಗಾಲ್ವೆರಸಿ ನೀಕರಿಸಿ ಹುಗಲೊಳಗೆ (ಬಸಪು. ೪೯-೮) ; ಮಲ್ಲಿಕಾರ್ಜುನನ ನೀಕರಿಸಿದವ ತಂದೆಯೋ (ಲಶಿಚಂ.೩೭-೬) ; ಮೊನೆಗಾತಿ ಮುಗುದೆ ಮುಸುಂಡಿಯಾಗಲಿ ನೆರೆವನೆಗರತಿಯ ನೀಕರಿಸದೆ . . . ಅನುವಱುತಾದರಿಸುವುದು (ಹದಿಬ. ೪-೩೭). **೨.** ಬಿಡಿಸು ; ನಿವಾರಿಸು : ಎನ್ನ ಭವಬಂಧನವ ನೀ[ಪಾಠಾಂ. ನಿಃ, ನಿ]ಕರಿಸಿದೆಯಾಗಿ

ಶಿವನೆ ಗತಿಮತಿಯೆಂದು ನಂಬಿದೆನಯ್ಯಾ (ಬಸವ. ೪೮೧). **ನೀಳ್ಕರಿಸು$_2$:** **೧.** ಕಂದರ್ಪನಂದವ ನೀಳ್ಕರಿಸುವ . . . ರಸಿಕರ ದೇವನಿರವಂ ವರ್ಣಿಸಲಸದೃಶಾತಿಶಯಮಾಗಿರ್ದುದು (ಹವಿಮ್ಮ.ರ. ೬-೧೯ ಪ); ಚೆಂದಳಿರಿನಂದವನು ನಿಂದಿಸುತ್ತಿರುವ ಪೊಂದಾವರೆಗಳ ಚೆಲ್ವನು ನೀಳ್ಕರಿಸುವ . . . ಇಂದಿರೆಯ ಮೆಲ್ಲಡಿಯ ಪೊಗಳಿದರು (ಕರ್ನಾಕ. ೨೩೦). **ನೀಟ್ಕರಿಸು$_2$:** **೧.** ಗಟ್ಟನೆ ಕೊಳೆ ಕಡುಗಂಪಿನೊಳಟ್ಟಿಮೆಗೊಳಗಪ್ಪೆವೆಂದು ಮಧುಪಂಗಳ್ ತಮ್ಮಟ್ಟನೆಯೆ ಚೌತಮಾಗಿರೆ ನೀ[ಪಾಠಾಂ. ನಿ]ಟ್ಕರಿಸಿದುವುಂತು ಚಂಪಕಕ್ಕೆಜಿಗದುವೇ (ಆದಿಪು. ೧೧-೧೧೫); ಮುಳಿಯಲ್ವೇಡೆನ್ನನೇ ನೀಟ್ಕರಿ[ಪಾಠಾಂ. ಲಿ]ಸದೆ ತಿಳಿಯೆಂದೆನ್ನನೇ ಬಾರನೇ ಮೇಣ್ ತಿಳಿಪಲ್ ಬೋಳ್ಕೆಸನೇ (ಸೂಕ್ತಿಸು. ೮-೩೭೦; ಅನಃಪು. ೮-೧೨ ಸೋ.); ಒರ್ಕುಡಿತೆ ನೀರ್ಗೆ ಪಱಿಪಟ್ಟಿರ್ಕೆಯು ಪಣ್ಣೆಲೆಯ ಮುಱಿಗೆ ದೇಸಿಗರಂ ದೇವರ್ಕಳ್ಗೊಡೆಯರ್ ಮಾಟ್ಪಾರೆ ನೀ[ಪಾಠಾಂ. ನಿ]ಟ್ಕರಿಸದೆ ನಿಮ್ಮ ದೊರೆಗೆ ಬೋಟಿಯರೊಳರೇ (ಶಮದ. ೨೪ ಪ್ರಯೋ); ಇವರ ನೇಹಮಂ ನೀಟ್ಕರಿಸಿಯವನನಿದಿರ್ಗೊಂಡುಪಚರಿಸಿಯೆರವಿಲ್ಲದೆ ಬೆರಸಿ ಬೇಟ್ಪ ಕಜ್ಜಮಂ ಸಾಧಿಸಿಕೊಂಬುದೇ ಜಾಣ್ಮೆ (ಚಿಕಪಂ. ೩೧-೧೮); ಬೇಡ,ನಲ್ಮಗುವೆ, ಆ ದೇವಶಯ್ಯೆಯನ್ ನೀಟ್ಕರಿಸದಿರು ನೀನ್ (ಬದ್ಧಪ್ರ. ೩೪-೭೪೧). **೩.** **ಬೆರೆತುಕೊಳ್ಳು ; ಸೇರಿ :** ಬೇರಂ ಬಿಟ್ಕೆಯುಮಂ ತಿಂದು ವನದೊಳಡಗಿರೆ ನೀವುಂ ನೀಟ್ಕರಿಸಿ ನಿಂದುವಿವಾಗಳ್ ಪೇಟ್ಕುಮ್ಮೈ ಸುವರೆ ಬಿರುದುಮಂ ಬೀರಮುಮಂ (ಗದಾಯು. ೬-೩೫). **ನೇಕರಿಸು:** ಸಾಕುಸಾಕಿನ್ನಿದಕೆ ಬೇರೊಂದು ಸುಖಮುಂಟೇ ನೇಕರಿಸಬಾರದಾತ್ಮಾನುಭವರತಿಯೇ (ಕೈಕಪ. ೯-೧೦ ಪಲ್ಲವಿ).

[ನೀಕರ+-ಇಸು$_3$]

**ನೀಕಾಶ** (ಗು). **೧.** **ಹೋಲುವ ; ಸಮಾನವಾದ. (ನಾ). ೨. ಹೋಲಿಕೆ ; ಸಾದೃಶ್ಯ :** ಎರಡುಂ ದೆಸೆಗಳೊಳಂ ಮನೋಜರಾಜದ್ರಾಜಧಾನೀನೀಕಾಶಮಪ್ಪುದ್ಯಾನಂಗಳೊಳ್ (ಶಾಂತಿಪು. ೧-೬೨ ಪ).

[ಸಂ.]

**ನೀಕ್ಷಿಸು** (ಕ್ರಿ). **೧.** **ನೋಡು ; ಈಕ್ಷಿಸು :** ನಿನ್ನ ಕರವನಜದಿಂದ ಮ್ಯಾರೆಯಿಲ್ಲದೆ ಸದಾ ಹೇಮವರುಷಧಾರೆ ಎಡೆಬಿಡದೆ ಸುರುವುತಿರೆ ನೀಕ್ಷಿಸಿ (ಮೋಕ್ಷಪಿ. ೮೫-೧); ಚಿನುಮಯವಾಗಿಪ್ಪ ವಿಜಯವಿಠ್ಠಲನ್ನ ಮನದಣಿಯ ನೀಕ್ಷಿಸುವಾಲೋಚನಿಯ ಮಾಡು ಬಿಡದೆ (ವಿಸಾಸು. ೨-೧); ಕೀಲಿಸಿದ ಪುಷ್ಪಕಕೆ ವಿಸ್ಮಯದಾಳಿ ಕೆಳಗೇಸಿಹುದೊಯಿಂದು ವಿಶಾಲದೊಳು ನೀಕ್ಷಿಸುತದೊಂದೆಡೆ . . . ಬಾಲಕಿಯು ನಿಂದಿರ್ದ ತೆರನನು ಕಂಡ ಪದ್ಮರಥ (ಜಿನಭಾ. ೫೦-೨೦). [<ಈಕ್ಷಿಸು]

**ನೀಗಾಡು** (ಕ್ರಿ). **೧.** **ಕಳೆದುಕೊಳ್ಳು ; ಇಲ್ಲದಂತೆ ಮಾಡಿಕೊಳ್ಳು :** ಹೊಜಗಣ ಮಲತ್ರಯಕ್ಕೆ ಒಳಗಣ ಅಱಿವ ನೀಗಾಡಲೇಕೆ (ವಚಸಂ. ೭೫-೮೪); ಕೊಟ್ಟ ಕುದುರೆಯನು ಮನಮುಟ್ಟಿ ನೋಡದೆ ನನ್ನೊಱಟ್ಟ ತನದಿಂದವಿಾ ವಂಚಕನನೊಳಗೆ ತಂದಿಟ್ಟು ಕುದುರೆಯನು ನೀಗಾಡಿ (ಸಮ್ಯಕೌ. ೧೧-೬೯); ಹದಿನಾಡವ ಮೈಸೂರ ಭೂಪರೊಳ್ ಕಲಹವನಿತ್ತು ಗಂಟಿಕ್ಕಿ ತಲೆಯ ನೀಗಾಡಿ ದೇಶವನೊಪ್ಪಿಸಿ ಕೊಟ್ಟು ಚಲಗೆಟ್ಟುದ ಕೇಳ್ದಱಿಯ (ಕಂಠವಿ. ೧೮-೧೩೧). **೨.** **ತಿರಸ್ಕರಿಸು ; ಕಡೆಗಣಿಸು; ಧಿಕ್ಕರಿಸು :** ಸಮರದ ಜಯವನವರಿಗೆ ಮಾಡಿ ನಮ್ಮಭಿಮತವ ನೀಗಾಡಿ ನಯುವ ನೀವೊಡ್ಡುವರೆ ನಿಮ್ಮನು ನಿಯಮಿಸುವರಾರುಂಟು (ಕುವ್ಯಾಭೀ. ೧-೨೪). **೩.** **ತೊರೆ ; ಬಿಡು ; ತ್ಯಜಿಸು :** ಏಣಿಗಳಿಗೆ ಕವೆಗೋಲುಗಳನು ಸಂದಾನಿಸಿ ಕೆಡೆ ನೂಕಲಾಗ ಗೋಣಡಿಯಲಿ ಬಿದ್ದು ತುರುಕರ ಮಾರ್ಬಲ ಪ್ರಾಣವ ನೀಗಾಡಿದುದು (ಕಂಠವಿ. ೧೪-೭೦); ಅಬಲೆಯಾದರೂ ಅಂಜದೆ . . . ತನ್ನ ಪ್ರಾಣಗಳನ್ನು ನೀಗಾಡಿ ಹಗೆಗಳಿಂದಲೂ ವಿಧವಿಧವಾಗಿ ಹೊಗಳಿಸಿಕೊಂಡು ವೀರಸ್ವರ್ಗವನ್ನು ಸೇರಿದಳು (ಕವಿಕ. ೪೩). **೪.** **ಪೋಲುಮಾಡು ; ಅಪವ್ಯಯ ಮಾಡು :** ಇದ್ದ ಆಸ್ತಿಯನ್ನೆಲ್ಲಾ ಅವನು ನೀಗಾಡಿ ಈಗ ದರಿದ್ರನಾಗಿದ್ದಾನೆ (ರೂಢಿ).

**ನೀಗಾಡಿಕೊಳ್ಳು = ಕಳೆದುಕೊಳ್ಳು :** ರಾಮವೆಸರಿಂದೆ ದಶರಥನರಸಿ ಗುದಿಸಿ ತಾಂ ಭೂಮಿಸುತೆಯಂ ಮದುವೆಯಾಗಿ ವನವಾಸದೊಳ್ ಕಾವಿನಿಯ ನೀಗಾಡಿಕೊಂಡು . . . ಮಹಾದುಃಖದಿಂ ಶರಧಿಯೊಳ್ ಬಿದ್ದಳಿದ ಕಥೆಯ ನೀಂ ಕೇಳ್ದಱಿಯೆಲಾ (ಚಿಬಪು. ೫೨-೨೯).

[ನೀಗು+ಆಡು$_1$]

**ನೀಗಿಸು** (ಕ್ರಿ). **೧.** **ನಾಶಮಾಡು ; ಧ್ವಂಸಮಾಡು :** ತಾಗಿ ಕಡಿದೊಟ್ಟಿದನು ಕೊಡಲಿಯ ಬಾಗಿನಲಿ ಬಹುಚಾತುರಂಗವ ನೀಗಿಸಿತು ನೆಱೆ ಕೇತುವೀರ್ಯನ ಕೊಂದ ನಿಮಿಷದಲಿ (ಸಂಭಪ. ೨೬-೬೮); ಮುಟ್ಟಿದ್ದೆಲ್ಲಾ 'ಬೂದಿ' ಮಾಡಿದಾ ಭಸ್ಮಾಸುರಾ ಅವನ ನೀಗಿಸಿ ಬಿಟ್ಟತ್ತಣ್ಣಾ ಮೋಹಿನಿ ಅವತಾರಾ (ಅರಳು. ೨೭೭-೮). **೨.** **ಕಳೆ ; ಬಿಡಿಸು :** ಈ ಮಹಾಸೃಷ್ಟಿಯ ಸೊಬಗಿನಲ್ಲಿ ಅಸಡ್ಡೆಯನ್ನುಂಟುಮಾಡಿ ಅದರ ಮೇಲಣ ಪ್ರೀತಿಯನ್ನು ನೀಗಿಸುವುದೋ (ಜ್ಯೋತಿರ್ವಿ. ೭೯); ತೊರೆಯನು ದಾಟಿಪ ಹರುಗೋಲು ಗಡ್ಡೆಯನೇರಿಸಿ ಕಷ್ಟವ ನೀಗಿಸಿ ಕರೆಯನು ಕಾಣಿಪ ಸಾಧನವು (ಕವಿಸೋ. ೫೯-೬). **೩.** **ಸಾಧ್ಯವಾಗು ; ಶಕ್ಯವಾಗು. ೪. ನಿಭಾಯಿಸು ; ಸಾಗಿಸಿಕೊಂಡು ಹೋಗು :** ಅಷ್ಟೆಲ್ಲ ಜಾನುವಾರುಗಳನ್ನು ಅವನೊಬ್ಬನಿಂದ ನೀಗಿಸಿಕೊಂಡು ಹೋಗಲಿಕ್ಕೆ ಆಗುವುದಿಲ್ಲ (ದಂಬನಾ. ೧೮); ಮನೆಯಲ್ಲಿ ಎಲ್ಲರೂ ನೀಗಿಸಿಕೊಂಡು ಹೋದರೆ ಎಲ್ಲವೂ ಸರಿಯಾಗುವುದು (ಕಮನೆ. ೩೯). [ನೀಗು+-ಇಸು$_3$]

**ನೀಗು** (ಕ್ರಿ). **೧.** **ಪರಿಹರಿಸಿಕೊಳ್ಳು ; ನಿವಾರಿಸಿಕೊಳ್ಳು ; ಹೋಗಲಾಡಿಸಿಕೊಳ್ಳು :** ಎನ್ನ ಸಹೋದರನೆಂತುಂ ಶ್ರಮಮುಂ ನೀಗಿ ಸುಖದಿಂ ತಣಿದೊನಕ್ಕುಂ (ಪಡ್ವಾರಾ. ೫೫-೧೬); ಅವಧರಿಸದೆ ನಿನ್ನೊಳ್ ಪಿರಿದವಿನಯಮುಮಂ ನೆಗಟ್ಟ ದೋಷಮುಮಂ ತಪದೊಳ್ ನೀಗುವೆಂ (ಆದಿಪು. ೧೪-೧೩೧); ತಲೆವೇಸಜಿನೆಂತು ನೀಗುವೆಂ (ಪಂಪಭಾ. ೪-೯೮); ಬಸವಂ ಜನ್ಮದುರಾಶೆಯಂ ಕಳೆದು ಕರ್ಮಾರಂಭವಂ ನೀಗಿ ಸಂತಸದಿಂದಂ ಪೊಱಮಟ್ಟ (ಬಸರ. ೩-೧); ಮನದಲ್ಲಿ ದೃಢವಿರಬೇಕು ಪಾಪಿಜನರ ಸಂಸರ್ಗವ ನೀಗಲು ಬೇಕು (ಪುರಂದ. ೧-೧೩೪-೧). **೨.** **ಕಳೆದುಕೊಳ್ಳು ; ನಾಶಮಾಡಿಕೊಳ್ಳು ; ನಷ್ಟಮಾಡಿಕೊಳ್ಳು :** ಪಾದರದೊಳ್ ಪುಟ್ಟಿ ಕಳವಿನೊಳ್ ಸತ್ತ ತಿಚಾರದರಸುತನಂ [ತನಮಂ] ವ್ಯಭಿಚಾರದೊಳ್ ನೀಗಿದೆ (ಅನಂಪು. ೧೧-೫೧ ಪ); ಸೈಂಧವನೊಡಲು ನೀಗಿತು ತಲೆಯನು (ಕುವ್ಯಾದ್ರೋ. ೧೪-೪೭); ಘನಗಿರಿಯಲ್ಲಿ ಸಂದರಸುಗೆಯ್ದಿನಮುಂದೆರದಿಮ್ಮ ರಾಜನಾತನ ತನುಜಾತಂ . . . ಚಾಮರಾಜನೊಳಿದಿರಾಗಿ ತನ್ನ ಗಜವಾಜಿ ಬಲಂಗಳ ನೀಗಿ ಸಾಗಿದಂ (ಚಿಕವಿ. ೨-೨೦); ವಿಚಾರವನ್ನು ನೀಗಿಕೊಂಡ ಬರೀ ವಯಸ್ಸಿಗಾಗಲಿ ಅನುಭವಕ್ಕಾಗಲಿ ಬೆಲೆ ಏನು (ದೂರಸ. ೧೬೮). **೩.** **ಬಿಡು ; ತೊರೆ ; ತ್ಯಜಿಸು :** "ನೀಗು-ತ್ಯಜನೇ" (ಶಮಧಾ); ಮದನಂ ದೇಹವ ನೀಗಿದಂ (ಸೋಮೇಶ. ೨೭); ಅಭಿಮಾನವಂ ನೀಗಿದೆ . . . ನಿನಗೆ ಅತಿಶಿವದ್ರೋಹವಾಯಿತ್ತು (ಬಸಪು. ೨೧-೪೭); ಕೌರವೇಂದ್ರನ ನೀಗಿದಳೆ ಜಯಲಕ್ಷ್ಮಿ (ಕುವ್ಯಾಗ. ೪-೨೧); ಎಳವಸಿಱಿಂ ತಾಳಿದ ಪೆಣ್ಗೆಳಿ ಕಾಯಜನುಪಹತಿಯಿಂದಸುವಂ ನೀಗುವುದು (ಜಯಕಾ. ೨-೩೪); ನೀಗಲ್ ಸಂಧ್ಯಾರಾಗರಜೋಗುಣಮುಮನಳುರ್ವ ತಮಮುಮಂ ದ್ವಿಜರಾಜಂ ಬೇಗದೆ ನಿರ್ಮಲವಿಷ್ಣುಪದಾಗಮದಿಂ ಪಡೆದ ಸತ್ತ್ವಮೆನಿಸಿತು ಜೊನ್ನಂ (ಚಿಕವಿ. ೬-೨೧). **೪.** **ನಿವಾರಿಸು ; ಪರಿಹರಿಸು; ಹೋಗಲಾಡಿಸು :** ಶಾಪಂಗೊಟ್ಟೊಡಾತನುಮದಂ ನೀಗಲ್ವೇಡಿ ರಾಜಗೃಹಕ್ಕೆ ವಂದು (ಪಡ್ವಾರಾ. ೧೫೮-೬); ಪರಿಭವವಮನಿದಂ ನೀಗು

ನೀಂ ಭೀಮಸೇನಾ (ಪಂಪಭಾ. ೮-೬೧); ಅನುಜನ ನೆತ್ತರನೀಂಟಿದವನ ನೆತ್ತರ ಜೀವಸಹಿತವೀಂಟದೆ ದುರ್ಯೋಧನನೆಂಬ ಪೆಸರ್ಗೆ ಮುಯ್ಯಾಂ ಪೆನೆ ದುಶ್ಶಾಸನನ ಬನ್ನಮಂ ನೀಗುವೆನೇ (ಗದಾಯು. ೫-೮); ಕಿಚ್ಚನಿಕ್ಕಿ ಜಲಮಂ ಮೇಣಕ್ಕೆ ಪಾಯ್ದಣ್ಕಿ ಸತ್ತೀ ದುಃಖಾಗ್ನಿಯನೋವೊ ನೀಗ ದಿರಲಿಂದೀ ಮಾಟಕ್ಕೆ ಮೇಣ್ಪಟ್ಟವೋ (ಧರ್ಮಾಮೃ. ೪-೮೨); ಬಸಿಱೊಳಿದು ತದ್ದುಃಖಮಂ ನೀಗಿ ಜೀವಿಸಿದರಸುರಾರಿಮುಖ್ಯಸುರರದಱನಜರಾಮರ ರೆನಿಸಿದರ್ (ಪದ್ಮರಾ. ೧೦-೨೨೭); ಘನಸಾರಮೃಗಮದಪಟೀರಸೀತಳ ಮಾಂತು ಮಿನುಗಿದಂ ಮಂದಮಾರುತ ಮಾರುತಿಯ ತಾಪಮಂ ನೀಗಿ ಸುಖಗೊಳಿಸಲು (ವೆಂಕಾಂ. ೫-೫-೨೫). **೫.** ಕೊನೆಗಾಣು ; ನಿವಾರಣೆಯಾಗು ; ಪರಿಹಾರವಾಗು : ನೀಗಿದುದೀಗಳೆಮ್ಮ ವನವಾಸ ಪರಿಶ್ರಮಂ (ಪಂಪಭಾ. ೭-೬೦); ನೀಗದಾಲೋಚನೆ ರೋಗೋಪದ್ರವ ದೊಳಮ್ಮ ಕೃಷ್ಣ ಎನಬಾರದೆ (ಪುರಂದ. ೧-೭೦-೬); ಮಾಡಿದ ತಪ್ಪನ್ನು ನೇರ್ಪಡಿಸಲು ಹದಿನೈದು ವರ್ಷಗಳು ಬೇಕಾದುವು. ಆದರೂ ಅದ ನಷ್ಟ ವೆಲ್ಲ ನೀಗಿಲ್ಲ (ಹಾಹುತ್ತ. ೧೦೮); ಈ ನಿಗ್ಗರ ಒಂದು ನೀಗಿ ಹೋಗಲಿ (ನಿಸರ್ಗ. ೧೬೫). **೬.** ತೀರಿಸು ; ಹಿಂದಿರುಗಿಸು : ಎಮಗೆ ಸಕಳ ರಾಜ್ಯಶ್ರೀಯುಂ ನಿನ್ನ ಬಲದಿಂದೆ ಸಾರ್ದುದು ನಿನ್ನುಪಕಾರಮನದೇತ ಱಿಂದೊಳ್ ನೀಗುವೆನೋ (ಪಂಪಭಾ. ೧೪-೩೭); ಅಖಿಳಶಾಸ್ತ್ರಾಗಮಮಂ ನಿಮ್ಮಿಂದಮಱಿದೆವದಱಿಂ ನಿಮ್ಮುಪಕಾರಮನದೇತಱಿಂ ನೀಗುವೆಮೋ (ಸುಕುಮಾ. ೨-೫೮); ಜಜ್ಞಾರ ಮಾಸಾಳುಗಳು ನಿಜದಾತಾರನವಸರ ಕೊಡಗಿ ಹಣವಿನ ಋಣನ ನೀಗಿದರು (ಕುಪ್ಪಾದ್ರೋ. ೧-೫೦). **೭.** ತೊಲಗು; ನಾಶವಾಗು ; ಹಾಳಾಗು : ಅವಧಿ ತಪ್ಪಿದುದಾಱನೆ ಪತ್ತುತಿಂಗಳಾದುವು ಬರಲಾತನಾಱದೊಡೆ ಸಾಯಲುಮಾಱನೆ ಸತ್ತು ನೀಗೆನೇ ಎಂದು ಪಂಬಲಿಸುತ್ತಿರ್ದಳ್ (ಆದಿಪು. ೧೨-೪೩); ಪಗೆ ನೀಗೆಯುಂ ಮುಳಿಸುಪೋಗೆಯುಮಾಯತಿ ಪೆರ್ಚೆಯುಂ ಜಗಂ ಪೊಗಱಿಯುಮಾಂತ ರಾತಿ ನೃಪರಂ ತವೆ ಕೊಲ್ವುದಹೀಂದ್ರಕೇತನಾ (ಪಂಪಭಾ. ೮-೮೮). **೮.** ಕೊಲ್ಲು ; ಸಂಹರಿಸು : ಹೋಗು ಪಾಂಡವರಾಯರಿಹ ವನಕಾಗಿ ನೀನವರೈವರನು ನೆಱೆ ನೀಗಿ ನೀನಾಹುತಿಯನಿಂದನುವಾಗಿ ಭಕ್ಷಿಪುದು (ಕುಪ್ಪಾಆ. ಓರಿಇ. ೨೫-೧೭); ಎಚ್ಚನವರವರೆಚ್ಚ ಬಾಣವ ಕೊಚ್ಚಿದನು ಕೋಲಳವಿಗೊಡ್ಡಿದ ನಿಚ್ಚಟರ ನೀಗಿದನು (ಕುಪ್ಪಾಕ. ೧೫-೨೨); ಬಾಗಿ ಲೊಳು ತಪಗೈವ ಬ್ರಹ್ಮನ ನೀಗಲೆಂದೇ ಬಂದ ಖಳರನು ತಾಗಿ ಯುದ್ಧವ ಮಾಡಿದನು ಭರದಿಂದ ಮುರವೈರಿ (ದೇವೀಪು. ೧-೭೫). **೯.** ತೆಗೆ ; ತೆಗೆದುಹಾಕು : ನಾಗವಲ್ಲಿಯ ಹಿಂದುಮುಂದನು ನೀಗಿ ಕಳೆಯದೆ ಚೂರ್ಣಪರ್ಣತ್ಯಾಗವಿಲ್ಲದೆ ದಂತಧಾವನಪರ್ಣವನು ಸವಿನು ಭೋಗಿಸು ವೊಡಮರೇಂದ್ರನಾಗಲಿ . . . ಅವನನು ನೀಗಿ ಕಳೆವಳು ಭಾಗ್ಯವಧು (ಕುಪ್ಪಾಉ. ೩-೫೯). **೧೦.** ಅಟ್ಟು ; ತೊಲಗಿಸು : ಲಲನೆ ತನ್ನೋಪ ನಿಂದಾದ ಬೇಸಱಂ ನಿಜಸಖಿಗೆ ಪೇಳುತಿರ್ದಳದೆಂತೆಂದೊಡೆ . . . ಪೋದೊಡೆ ಪೋಗನಿರ್ದೊಡಿರನೀ ಶನಿಯಂ ಸಖಿಯೆಂತು ನೀಗುವೆಂ (೧೨ಕ. ೪-೧೫೭); ವಿಚಾರಿಸದೆ ನೀಗುವರೆ ಮಾನವನು (ಬಸಪು. ೪೦-೪೮). **೧೧.** ಮುಕ್ತನಾಗು ; ಪಾರಾಗು : ಭವರೋಗವೈದ್ಯನಂ ಸಾರ್ದು ಬರ್ದುಕುವೆವೆಂದು ಭವಘೋರಶರಧಿಯಂ ದಾಂಟಿ ನೀಗುವೆವೆಂದು ನೆನೆವುತಿರಲ್ (ಸಾನಂಚ. ೪-೮೨). **೧೨.** ಸಾಧ್ಯವಾಗು ; ಶಕ್ಯ ವಾಗು : ಇವನಿಂದ ಈ ಕದನ ನೀಗೀತೋ ನೀಗದೋ ಎಂದು ಯೌವ ನಾಶ್ವ ತಾನೂ ಬಂದ (ಬಿದುರೆ. ೧೬); "ಶಾಂತಿನಿಕೇತನ" ನನಗೆ ನೀಗದ ಸಾಹಸವೆನ್ನುವಿರೇನು ? ಮಾನವಯತ್ನಕ್ಕೆ ನೀಗದ್ದು ಯಾವುದೂ ಇಲ್ಲ (ಹೇಮಂತ. ೩೦೪). **೧೩.** ನಿಭಾಯಿಸು ; ಸಂಭಾಳಿಸು ; ಸಾಗಿಸು: ನಮ್ಮ ಸಂಸಾರ ನಮಗೆ ನೀಗದಂತಾಗಿದೆ ! (ಪ್ರಣಸ. ೯); ನೀವುಗಳು . . . ಯಾರಾದರೂ ರಾಜರ ಸೇವೆಯಲ್ಲಿ ಸೇರಿ ಸಂಸಾರ ನೀಗಿಕೊಳ್ಳಿರಿ (ಶ್ರೀರಾಯ. ೧೬೦). **೧೪.** ಸಾಯು ; ಮರಣಹೊಂದು : ನೀಗು ವವನಿಗೆ ಭಾಗ ಸಿಕ್ಕಿದರೂ ಭೋಗಕ್ಕೆ ಬಾರದು (ಗಾದೆ); ನೀಗಿದರೂ ಬಡತನ ಬಿಡದು (ಗಾದೆ). **೧೫.** ನಾಶಗೊಳಿಸು ; ಧ್ವಂಸಮಾಡು; ಹಾಳುಮಾಡು : ಎಂದು ಕೊಟ್ಟೆಹೆನಿನ್ನು ಸಾಲವನೆಂದು ತಿದ್ದುವೆ ವಕ್ಕಟಕಟೀ ಸೌಂದರಿಯ ಭಂಡಾರವೆಲ್ಲವನಿಂತು ನೀಗಿದೆವು(ಬಸಪು.೪೨-೧೩); ಮಱುಗಿದಳು ಕೈಕಸೆಯು ಮಗನನು ಕರೆದು . . . ನಿನ್ನಯ ಮರುಳುತನ ದಲಿ ಪಡೆಯ ನೀಗದಿರೆಂದು ಹೇಳಿದಳು (ಕೌಶಿರಾ. ೨೩-೨೭); ಅವನು ಇದ್ದ ಆಸ್ತಿಯನ್ನೆಲ್ಲಾ ನೀಗಿದ (ರೂಢಿ). **೧೬.** ಬಿಚ್ಚು ; ಕಳಚು : ಪಿತ್ತವೇಱಿತೊ ಮಂತ್ರಿವುಟ್ಟ ತೊಟ್ಟುದ ನೀಗಿ ಸುತ್ತ ನೋಡುತ ನಿಂದ ನೆನಿಸಿ ಎತ್ತಿದ ಜಿನಬಿಂಬ ಸಿದ್ಧಬಿಂಬಕೆ ಹೊಸಮುತ್ತ ಚೆಲ್ಲಿದನು ಭಾವ ದೊಳು (ಭರಚ. ೧೩-೧೭೧). **೧೭.** (ಕಾಲಾವಧಿ ಮೊದಲಾದು ವನ್ನು) ಕಳೆ,—ದಾಟು : ಅಜ್ಞಾತವಾಸಕ್ಕೆ ಚಿಂತಿಪೊಡಿನ್ನನ್ನವು ತಾಣ ಮಿಲ್ಲದಱನುಂತಾರ್ಗಪ್ಪೊಡಂ ಮಿಕ್ಕ ರೂಪಪರಾವರ್ತದಿಂ ವಿರಾಟ ಪುರಮಂ ಪೊಕ್ಕಿರ್ದದಂ ನೀಗೆಮೋ (ಪಂಪಭಾ. ೮-೫೦); ನೀಗಿದರು ವನ ವಾಸವನು (ಕುಪ್ಪಾಉ. ೯-೨೮). **೧೮.** ಮರೆಯಾಗು ; ಕಾಣ ದಾಗು ; ಇಲ್ಲವಾಗು : ಆಗಳಿವನಧಿಕಾಕ್ಷಿ ಬಾಹುವು ನೀಗಿದೊಡನಿವನವ್ವೆ ಕಂಡು . . . ಅಭಯವನು ಬೇಡಿದಳು (ಕುಪ್ಪಾಸ. ೧೦-೩೫).

[**ದೇ.॥ ತಮಿ.** ನೀಕ್ಕು, ನೀಙ್ಕು ; **ಮಲ.** ನೀಕ್ಕು, ನೀನ್ನು ; **ಕೊಡ.** ನೀಂಗ್, ನೀಕ್ ; **ತೆಲು.** ನೀಗು, ಈಗು]

**ನೀಗ್ರೋ** (ನಾ). ಆಫ್ರಿಕಾಖಂಡದ ಒಂದು ಬುಡಕಟ್ಟು ಮತ್ತು ಆ ಬುಡಕಟ್ಟಿಗೆ ಸೇರಿದವನು : ನೀಗ್ರೋ ಅಥವ ಆಫ್ರಿಕದವರು . . . . ಆಫ್ರಿಕಾದಲ್ಲಿಯೂ, ಪೆಸಿಫಿಕ್‌ಸಾಗರದ ಕೆಲವು ದ್ವೀಪಗಳಲ್ಲಿಯೂ ವಾಸ ಮಾಡುತ್ತಾರೆ (ಭೂಗೋಳ. ೧೮) ; ಹೊಲೆಯರಲ್ಲಿ ಕೆಲವರು . . . ನೀಗ್ರೋ ಜನಗಳಂತೆ ನರ್ತನ ಮಾಡುತ್ತಿದ್ದರು (ಹುಟ್ಟಿಹ. ೬೪).

[←ಇಂ. Negro]

**ನೀಚ** (ಗು). ೧. ಕೆಳಗಡೆಯಲ್ಲಿರುವ ; ತಳಭಾಗದಲ್ಲಿರುವ ; ಕೆಳ ಮಟ್ಟದ : ಅತಿಶೀತವಲಯ, ಅತ್ಯುಷ್ಣವಲಯ, ಅತಿನೀಚಭೂಮಿ, ಅತಿ ಉನ್ನತಭೂಮಿ ಎಲ್ಲೆಲ್ಲೂ ಒಂದಲ್ಲ ಒಂದು ಜೀವಿಯ ವಾಸವನ್ನು ಕಾಣಬಹುದು (ಬಾಲಪ್ರ. III, ೧೨೦೫). **೨.** ಕುಳ್ಳಗಿರುವ ; ಗಿಡ್ಡ ನೆಯ. **೩.** (ಸಂಗೀತದಲ್ಲಿ) ಮಂದ್ರವಾದ ಧ್ವನಿಯ ; ತಗ್ಗಾದ ಧ್ವನಿಯ. **೪.** ಕೀಳಾದ ; ತುಚ್ಛವಾದ : ನೀಚಮಾನವರಿಗೆ ಸಿರಿ ಬಂದರೇನು ಈಚಲ ಮರ ದಟ್ಟ ನೆರಳಾದರೇನು (ಪುರಂದ. ಧಾ. ೫-೧೩೭ ಪಲ್ಲವಿ). **೫.** ದುಷ್ಟತನದಿಂದ ಕೂಡಿದ ; ಕೆಟ್ಟ. **೬.** ಮುಖ್ಯ ವಲ್ಲದ ; ಪ್ರಮುಖವಲ್ಲದ. (ನಾ). **೭.** ಕುಳ್ಳಾಗಿರುವುದು ; ಗಿಡ್ಡಾಗಿರುವುದು : "ನೀಚಮುವಾಗ್ರಂ ಖರ್ವಂ ಕುಬ್ಜಮಾನತಂ ತಾನದೆಂಬುದಕ್ಕುಂ ಹ್ರಸ್ವಂ" (ವಸ್ತುಕೋ. ೧೦೪-೩೭); ಪವನಂ ಪೆರ್ಚಿದ ಮಹಾವೃಕ್ಷಂಗಳಂ ಕೀೞ್ವುದಲ್ಲದೆ ಮೃದುವಪ್ಪ ತೃಣಂಗಳಂ ಕೀೞದು ಅದೆಂತೆನೆ ನೀಚಂಗಳಾಗಿ ತಲೆವಾಗಿರ್ಪ ಕಾರಣಂ (ಪಂಚತಂ. ೪೭-೧೦). **೮.** ಕೀಳಾದುದು ; ಕ್ಷುದ್ರವಾದುದು : ಆಚಾರವಿಹು ದೆಂದು ಲೋಚಗುಂಡಿಗೆವಿಡಿದು ಭೂಚರದಿ ಸತ್ತ ನವಿಲ ಗಱಿ ಪಿಡಿಯು ವುದು ನೀಚವಲ್ಲೇನು (ಸರ್ವಜ್ಞ. ೧೦೧೯) ; ಆ ಸಮದರ್ಶಿ ತಾಂ ಜನ್ಮ ಕುಲಧನಜಾತಿವರ್ಣಪ್ರಭೇದಮಂ ಗಣಿಸದೆಯೆ . . . ನೀಚೋಚ್ಚ ಭಿನ್ನಮಂ ಸ್ಪರ್ಧೆವೈರಂಗಳಂ ತೊಡೆದು(ಶ್ರೀರಾಮಾ. ೭-೧೮೨). **೯.** ಚಾಡಿ ಕೋರ ; ನಿಂದಕ : "ನೀಚಂ ಕ್ಷುದ್ರಂ ಪಿಶುನಂ ಸೂಚಕನೆಂದಱಿದು ಕೊಳ್ಗೆ ಕರ್ಣೇಜಪನಂ" (ವಸ್ತುಕೋ. ೧೦೦-೧೩) ; "ದುರ್ಜನಃ,

ಪಿಶುನಃ, ಕ್ಷುದ್ರಃ, ನೀಚಃ, ಕರ್ಣೇಜಪಃ, ಖಳಃ—ಈ ೬ ಪಿಸುಣಂ" (ಹಲಾಯು. ೫೭–೯೧). **೧೦.** ಕ್ಷುಲ್ಲಕ ವ್ಯಕ್ತಿ ; ಕ್ಷುದ್ರ ವ್ಯಕ್ತಿ ; ಅಧಮ : ಸತ್ತ್ವಾಧಿಕರುಂ ತಮ್ಮ ಪರಾಕ್ರಮಮನಧಿಕಬಲನೊಳಲ್ಲದೆ ನೀಚರಲ್ಲಿ ಮಾಡರ್ (ಪಂಚತಂ. ೪೭–೧೧). **೧೧.** ದುರುಳ; ದುಷ್ಟ : ನೀಚನ ಕೃತ್ಯವ ದ್ರೌಪದಿ ಬಂದು ಸೂಚಿಸಲು ನೀ ಕೋಪದಿ ಸರ್ವ ಕೀಚಕ ಮೊದಲವನನುಜರನೆಲ್ಲ ಹೀಚಿ ಬಿಸಾಡಿದ ಮಹಿಮನೆ (ಪುರಂದ. ೪–೩೮–೨) ; ನೀಚರ ಸಂಗ ಅಭಿಮಾನ ಭಂಗ (ಗಾದೆ). **೧೨.** ಒಂದು ಬಗೆಯ ಸುಗಂಧದ್ರವ್ಯ ; ಕಚೋರ : "ಪಟು–ನೀಚ, ಖಚೋರ್" (ಓಷಧಿ. ೯೨). **೧೩.** [ಜ್ಯೋತಿ] ನೀಚರಾಶಿ : ದಿನಪಾದಿಗಳುಬ್ಬ ಕ್ಕೇಟನೆಯ ಗೃಹಂ ನೀಚಮವರ್ಗೆ (ಜಾತತಿ. ೧–೪೨) ; ಸೂರ್ಯನಿಗೆ ತುಲಾ ನೀಚಸ್ಥಾನ (ಭಾಸ್ಕರ. ೫೩–೭). 'ಉಚ್ಚ' ಪರಾ. [ಸಂ.]

**ನೀಚಕಿ** (ನಾ). ೧. ತುದಿ ; ಅಗ್ರಭಾಗ. ೨. (ಎತ್ತಿನ) ಹಣೆ : "ನೀಚಕೀ, ಶಿರೋದೇಶಃ—ಈ ೨ ಹಣೆ" (ಹಲಾಯು. ೪೪–೧೧೨).
[ಸಂ. ನೀಚಕಿನ್]

**ನೀಚಕುಲ** (ನಾ). ಕೀಳಾದ ಕುಲ ; ಹೀನವಂಶ ; ಕೆಟ್ಟ ಸಂತತಿ : ಮಗಳೆ, ಸೀತಾದೇವಿ . . . ಲೋಕಶಂಕರಿಯಾಗು ; ಮೇಣ್ ಯಮಭಯಂಕರಿಯಾಗು ಲೋಕ ಮೂರಕೆ ಶೋಕವಾಗಿಹ ನಿಶಾಚರರ ನಿಷ್ಠುರ ನೀಚಕುಲಕೆ ! (ಶ್ರೀರಾಮಾ. ೧೯೩–೪೭೪). [ನೀಚ+ಕುಲ]

**ನೀಚಗುಣ** (ನಾ). ಕೆಟ್ಟತನ ; ದುಷ್ಟಬುದ್ಧಿ : ಆಚಾರವಿಲ್ಲದ ನಾಲಗೆ ನಿನ್ನ ನೀಚಗುಣವ [ಪಾಠಾಂ. ಬುದ್ಧಿಯ] ಬಿಡು ನಾಲಗೆ (ಪುರಂದ. ಧಾ. ೫–೭೬ ಪಲ್ಲವಿ) ; ಈ ಕೀಚಕನಲ್ಲಿ ನೀಚಗುಣಗಳು ಬಹಳವಾಗಿದ್ದವು (ನೀತಿಚಿಂ. IX, ೬). [ನೀಚ+ಗುಣ]

**ನೀಚಗೋತ್ರಕರ್ಮ** (ನಾ). [ಜೈನ] ಜೀವನಿಗೆ ಅಂಟಿಕೊಳ್ಳುವ ಎರಡು ಬಗೆಯ ಗೋತ್ರಕರ್ಮಗಳಲ್ಲಿ ಒಂದು ; ಹೀನಕುಲದಲ್ಲಿ ಹುಟ್ಟುವುದಕ್ಕೆ ಕಾರಣವಾದ ಕರ್ಮ : (೧೪೨) ಉಚ್ಚಗೋತ್ರ ಕರ್ಮ (೧೪೩) ನೀಚಗೋತ್ರಕರ್ಮ : ಇವೆರಡು ಗೋತ್ರಕರ್ಮಪ್ರಕೃತಿಗಳು. ಇವುಗಳ ಉದಯದಿಂದ ಉಚ್ಚ ಹಾಗು ನೀಚಕುಲಗಳಲ್ಲಿ ಜೀವದ ಜನ್ಮವಾಗುವುದು (ಜೈನಪ. ೨೭೬). 'ಉಚ್ಚಗೋತ್ರಕರ್ಮ' ಪರಾ.
[ಸಂ.]

**ನೀಚಜಾತಿ** (ನಾ). ೧. ಕೀಳುಜಾತಿ ; ಹೀನಕುಲ. ೨. ಕೀಳು ಜಾತಿಯಲ್ಲಿ ಹುಟ್ಟಿದವನು : ನೀಚಜಾತಿಗಳುಂ ಬಡವರುಂ ಸದ್ಧರ್ಮಮಂ ಕೈಕೊಂಡು ನೆಗಟ್ಟರ್ (ವಡ್ಡಾರಾ. ೮೭–೫). [ನೀಚ+ಜಾತಿ]

**ನೀಚತನ** (ನಾ). ೧. ಕೀಳುತನ ; ಅಲ್ಪತನ : "ನಿಕರ್ಷ=ನೀಚತನ" (ಗಂಗಾಪು. ೧೮೨) ; ಯಾವತ್ತೂ ಪ್ರಕಾರದ ಅಪರಾಧಗಳಿಗೆ ಪಾತ್ರರಾದ ನರಜೀವಿಗಳು ನಾವು ಒಬ್ಬರನ್ನೊಬ್ಬರು ಕ್ಷಮಿಸದೆ ಇರುವುದು ಕೇವಲ ನೀಚತನವು (ಮುಂಬಯಿ. ೪–೮೬). ೨. ಕೆಟ್ಟತನ ; ದುಷ್ಟತನ : ಅವನು ಈಚೀಚೆಗೆ ವಿಪರೀತ ನೀಚತನ ಮಾಡುತ್ತಾನೆ (ರೂಢಿ).
[ನೀಚ+ –ತನ]

**ನೀಚತೆ** (ನಾ). ೧. ಕೆಳಗಿರುವಿಕೆ ; ತಳಭಾಗದಲ್ಲಿರುವಿಕೆ. ೨. ಕೀಳುತನ ; ಅಲ್ಪತೆ : ವಸ್ತು (plot)ವಿನ ಅಸಂಭವನೀಯತೆಯಾಗಲೀ ಅಥವಾ ಪಾತ್ರದ ನೀಚತೆ(Depravity)ಯಾಗಲೀ ಅನಾವಶ್ಯಕವಾಗಿಯೂ ಮತ್ತು ಉಪಯೋಗವಾಗದೆಯೂ ಇದ್ದರೆ ಅವುಗಳಿಗೆ ಯಾವ ಬಗೆಯ ಸಮರ್ಥನೆಯೂ ಸಾಧ್ಯವಿಲ್ಲ (ಅರಿಕಾ. ೧೪೬). ೩. ಕೃಶತೆ ; ತೆಳುವು : ತನ್ನ ಮದಾಳಿನೀಳಕುಂತಳದೊಳ್ ಕುಟಿಲಸ್ವಭಾವಮಂ . . . ಪೂಗಣೆಯ ದೊಣೆಗೆ ಮೆಯ್ದೊಣೆಯೆನಿಪ ಕಿಱುದೊಣೆಯೊಳ್ ನೀಚತೆಯಂ ತಳೆದು (ನುಲ್ಲಿಪು. ೩–೫೪). [ಸಂ. ನೀಚತಾ]

**ನೀಚದೈವ** (ನಾ). ಕೀಳಾದ ದೈವ ; ಕ್ಷುದ್ರದೇವತೆ : ಲಜ್ಜೆಗೆಟ್ಟು ಕಿಱುಕುಳ ನೀಚದೈವಂಗಳ ಸಂಗ ಬೇಡವ್ಮ ಎಲ್ಲ ದೇವರೊಡೆಯ ಲಿಂಗದೇವನೆ ನಿನ್ನ ಮನದೈವ ಕುಲದೈವವವ್ಮ (ಮಹಾದೇ. ಬ. ೧೭೦–೩).
[ನೀಚ+ದೈವ]

**ನೀಚಪಂಥಿ** (ನಾ). ಕೆಟ್ಟಮಾರ್ಗದಲ್ಲಿ ಹೋಗುವವನು ; ದುಷ್ಟ: ಅಂತುಮಾ ನೀಚಪಂಥಿಗಳೆಲ್ಲರ್ ಒರ್ವರೊರ್ವರ ನೆರಂಬಡೆದು . . . ಬೀಡುಬಿಟ್ಟಹರಲ್ಲಿ (ಶ್ರೀರಾಮಾ. ೫೫೫–೯೩). [ನೀಚ+ಪಂಥಿ]

**ನೀಚಪಾತ್ರ** (ನಾ). (ನಾಟಕದಲ್ಲಿಯ) ಕೀಳುಪಾತ್ರ; ☞ ನಾಟಕವೇ ಮೊದಲಾದ ರೂಪಕಗಳಲ್ಲಿ ಬರುವ ದಾಸ, ದಾಸಿ, ಚೇಟ, ಚೇಟಿ, ದ್ವಾರಪಾಲಕ, ಉದ್ಯಾನಪಾಲಕ, ಬೆಸ್ತ ಮೊದಲಾದ ಅಪ್ರಧಾನಪಾತ್ರಗಳಿಗೆ ನೀಚಪಾತ್ರವೆಂದು ಹೆಸರು : ಕಡೆಯದಾಗಿ ಅತ್ಯಂತ ನೀಚಪಾತ್ರವೆನಿಸುವ ಮಂಥರೆಯನ್ನು ನೋಡೋಣ (ಭಾರದ. ೯೨). [ನೀಚ+ಪಾತ್ರ]

**ನೀಚಪ್ರವೃತ್ತಿ** (ನಾ). ಹೀನವರ್ತನೆ ; ಕೆಟ್ಟನಡತೆ ; ದುರಾಚಾರ : ಗೋವರ್ಧನನು ಮಲಗಿದಲ್ಲಿಯೇ ಕೇಳಿ, "ಎಲಾ ! ಪುನಃ ವಿಧವೆಯ ವಿವಾಹವೆ ? ಎಂತಹ ನೀಚಪ್ರವೃತ್ತಿ !" ಎಂದು ಮನಸಿನೊಳಗೇ ಎಂದುಕೊಂಡ (ಎರಸಿ. ೩೦). [ನೀಚ+ಪ್ರವೃತ್ತಿ]

**ನೀಚಬುದ್ಧಿ** (ನಾ). = ನೀಚಗುಣ : ಆಚಾರವಿಲ್ಲದ ನಾಲಿಗೆ ನಿನ್ನ ನೀಚಬುದ್ಧಿಯ [ಪಾಠಾಂ. ಗುಣವ] ಬಿಡು ನಾಲಿಗೆ (ಪುರಂದ. ೧–೧೮೩ ಪಲ್ಲವಿ). [ನೀಚ+ಬುದ್ಧಿ]

**ನೀಚಮಾರ್ಗ** (ನಾ). ಕೆಟ್ಟ ಮಾರ್ಗ ; ಹೀನವಾದ ನಡವಳಿಕೆ ; ಕೀಳುರೀತಿ : ಮಂದಮತಿಯೆ ನೀನನ್ಯರಲಿ ಬಯಸುವ ನೀಚಮಾರ್ಗವ ಬಿಟ್ಟು ಕಂದರ್ಪಜನಕನ ಕಿಂಕರನೆಂಬುವ ಕಲಸೋಗರ ಕಟ್ಟು (ಪುರಂದ. ಧಾ. ೨–೯೬–೧). [ನೀಚ+ಮಾರ್ಗ]

**ನೀಚರಾಶಿ** (ನಾ). [ಜ್ಯೋತಿ] ಸೂರ್ಯಾದಿಗ್ರಹಗಳಿಗೆ ಹೇಳಿರುವ ಅವುಗಳ ಉಚ್ಚರಾಶಿಯಿಂದ ಏಳನೆಯ ರಾಶಿ ; ☞ ಗ್ರಹಗಳ ಹಾಗೂ ಅವುಗಳ ಉಚ್ಚನೀಚರಾಶಿಗಳು ಕೆಳಗಿನಂತಿವೆ :

| ಗ್ರಹ | | ಉಚ್ಚರಾಶಿ | ನೀಚರಾಶಿ |
|---|---|---|---|
| ೧. | ರವಿ | ಮೇಷ | ತುಲಾ |
| ೨. | ಚಂದ್ರ | ವೃಷಭ | ವೃಶ್ಚಿಕ |
| ೩. | ಕುಜ | ಮಕರ | ಕರ್ಕಾಟಕ |
| ೪. | ಬುಧ | ಕನ್ಯಾ | ಮೀನ |
| ೫. | ಗುರು | ಕರ್ಕಾಟಕ | ಮಕರ |
| ೬. | ಶುಕ್ರ | ಮೀನ | ಕನ್ಯಾ |
| ೭. | ಶನಿ | ತುಲಾ | ಮೇಷ |
| ೮. | ರಾಹು | ವೃಷಭ | ವೃಶ್ಚಿಕ |
| ೯. | ಕೇತು | ವೃಶ್ಚಿಕ | ವೃಷಭ |

ಉಚ್ಚರಾಶಿಯಲ್ಲಿರುವ ಗ್ರಹವು ಶುಭವನ್ನೂ ನೀಚರಾಶಿಯಲ್ಲಿರುವ ಗ್ರಹವು ಅಶುಭವನ್ನೂ ಉಂಟುಮಾಡುತ್ತದೆ ಎಂದು ಜ್ಯೋತಿಶ್ಶಾಸ್ತ್ರದಲ್ಲಿ ಹೇಳಿದೆ : ಇರೆ ನೀಚದೊಳರ್ಥಮನಪಹರಿಸುಗುಮಾ ನೀಚರಾಶಿಯಿಂದಂ ಪೂರ್ವಾಪರದೊಳನುಪಾತದಿಂ ಪರಿಹರಿಸುಗು ಮಖಿಳಗ್ರಹಾ[ಯು] ಪಿಂಡಾಯುವಿನೊಳ್ (ಜಾತತಿ. ೮–೧೨) ; ಸೂರ್ಯಾದಿ ಗ್ರಹಗಳ ಉಚ್ಚರಾಶಿಗೆ ಏಳನೆಯದು ಆಯಾ ಗ್ರಹಗಳಿಗೆ ನೀಚರಾಶಿ (ಜಾತತಿ. ೧–೪೨ ಅಡಿಟ). [ನೀಚ+ರಾಶಿ]

**ನೀಚವಾಕ್ಯ** (ನಾ). ಕೆಟ್ಟ ಮಾತು ; ಬಯ್ಗುಳು ; ದೂಷಣೆ : ಕೂಗಿದನ್ ಪೆಸರಿಂ ಸುಮಂತ್ರನಂ ಪೇಳೆ ಬರಲಿಲ್ಲೆಂದು ಶಪಿಸಿದನ್

ಸರ್ವರಂ ನೀಚವಾಕ್ಯಂಗಳಿಂ ಬಾಯ್ಗೆ ಬಂದಂತೆವೋಲ್ (ಶ್ರೀರಾಮಾ. ೧೦೦-೧೭). [ನೀಚ + ವಾಕ್ಯ]

**ನೀಚವೃತ್ತಿ** (ನಾ). **೧.** ಕೆಟ್ಟ ನಡತೆ ; ದುರಾಚಾರ: ಛೀಛೀಛೀಛೀ ಕಂಡೆಯ ಮನವೆ ಇಂಥ ನೀಚವೃತ್ತಿಗಳನು ಬಿಡು ಕಂಡೆಯ ಮನವೆ (ಪುರಂದ. ಧಾ. ೫-೫ ಪಲ್ಲವಿ) ; ಯಾಚಿಸಲು ಕೈಯೊಡ್ಡುವಾಗಲೇ ನಾಚಿಕೆಯು ಮನುಜನನು ಬರೆವುದು ಗೋಚರಿಸದಡಗುವುವು ಗುಣಗಳು ನೀಚವೃತ್ತಿಗು ನೀಚತರವಿದು (ನೀಸಾರಾ. ೧೮೫). **೨.** ದೈನ್ಯವೃತ್ತಿ ; ದೀನಭಾವ : ಸಾಮಂತ ಮಹಾಸಾಮಂತರ್ಗೆ ಸ್ವಾಮಿಯಪ್ಪೀ ಪೃಥ್ವೀಶ್ವರಂ ಬಂದೆನ್ನುಮನರ್ಚಿಸಿ ಬಂದಿಸಿ ನೀಚವೃತ್ತಿಯಿಂ ಕಿಂಕುರ್ವಾಣಂಗೆಯ್ದಪ್ಪಂ (ಪದ್ಮಾರಾ. ೭೯-೨೧). [ನೀಚ + ವೃತ್ತಿ]

**ನೀಚವ್ಯವಹಾರ** (ನಾ). **೧.** ಕೆಟ್ಟ ಕೆಲಸ ; ದುರ್ವ್ಯಾಪಾರ : ಅವನದೆಲ್ಲ ಬರಿಯ ನೀಚವ್ಯವಹಾರವೇ (ರೂಢಿ). **೨.** ಹೀನಕೆಲಸವನ್ನು ಮಾಡುವವನು ; ಅಲ್ಪ : ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ . . . ಮಕರದೊಳಿರೆ ಮೂರ್ಖಂ ಖಳಂ ಲೋಭಿ ನೀಚವ್ಯವಹಾರಂ ಸ್ವಲ್ಪವಿತ್ತಂ ಪರವಿಭವಯುತಂ (ಜಾತತಿ. ೧೭-೧೭). [ನೀಚ + ವ್ಯವಹಾರ]

**ನೀಚವ್ಯಾಪಾರ** (ನಾ). = ನೀಚಪ್ರವೃತ್ತಿ : ನೀಚವ್ಯಾಪಾರದಲಿ ಗುಹ್ಯಾಲಂಪಟಾದಿಯಲಿ ಶೋಕ ಮೋಹಂಗಳಲಿ ಬಳಲಿ ವಿವೇಕಶೂನ್ಯತೆಯಾದವನಿಗೆಯು ಏಕನಾಥನ ಚಿಂತನತಿದುರ್ಲಭವು ತಿಳಿ (ಗಗತಾ. ೧೮-೩೪). [ನೀಚ + ವ್ಯಾಪಾರ]

**ನೀಚಾಟ** (ನಾ). = ನೀಚಪ್ರವೃತ್ತಿ : ಪೇಚಾಟದಲ್ಲಿ ಬಿದ್ದರೆ ನೀಚಾಟವೇ ಸರಿ (ಗಾದೆ). [ನೀಚ + ಆಟ]

**ನೀಚಾತ್ಮ** (ನಾ). ಹೀನವಾದ ಮನಸ್ಸುಳ್ಳವನು ; ದುರಾತ್ಮ ; ದುಷ್ಟ. [ನೀಚ + ಆತ್ಮ]

**ನೀಚಾಭಿಲಾಷಿ** (ನಾ). **೧.** ಕೀಳಾದುದನ್ನು ಬಯಸುವವನು. **೨.** [ಜ್ಯೋತಿ] ನೀಚಕ್ಷೇತ್ರವನ್ನು ಪ್ರವೇಶಿಸಲು ಪ್ರಯತ್ನಿಸುತ್ತಿರುವವನು ; ಉಚ್ಚರಾಶಿಯಿಂದ ಏಳನೆಯ ಸ್ಥಾನವನ್ನು ಪ್ರವೇಶಿಸಲು ಮುಂದಾಗುತ್ತಿರುವವನು ; ☞ ಗ್ರಹವು ತನ್ನ ನೀಚಕ್ಷೇತ್ರದಿಂದ ಹನ್ನೆರಡನೆಯ ರಾಶಿಯ ಕೊನೆಯ ನವಾಂಶದಲ್ಲಿದ್ದರೆ (ಅಂದರೆ ನೀಚರಾಶಿಯ ಹಿಂದಿನ ರಾಶಿಯ ಕೊನೆಯ ನವಾಂಶದಲ್ಲಿದ್ದರೆ) ಅದಕ್ಕೆ ನೀಚಾಭಿಲಾಷಿಯೆಂದು ಹೆಸರು : ಸ್ವಗೃಹಾತ್ಮ ನವಾಂಶಕ ಮಿತ್ರಗೃಹ ನಿಜೋಚ್ಚಂಗಳೊಳ್ ದಶಾಪತಿ ನಿಲೆ ಮಾಡುಗೆವೊಳ್ಪಂ ತದ್ವಿಪರೀತಗನುಂ ನೀಚಾಭಿಲಾಷಿಯುಂ ಪೊಲ್ಲಮೆಯುಂ (ಜಾತತಿ. ೯-೫). [ಸಂ. ನೀಚಾಭಿಲಾಷಿನ್]

**ನೀಚಾಸನ** (ನಾ). **೧.** ಕೆಳಗಿನ ಆಸನ. **೨.** ಕೆಳಗೆ ಕುಳಿತುಕೊಂಡಿರುವವನು ; ನೆಲದ ಮೇಲೆ ಕುಳಿತಿರುವವನು : ಬಸವರಾಜಂ . . . ಪನ್ನಿಚ್ಛಾಸಿರಮಕುಟವರ್ಧನಮಾಹೇಶ್ವರರ ನಡುವೆ ನೀಚಾಸನನಾಗಿ ಭಯಭಕ್ತಿಯಿಂದಿಪ್ಪಲ್ಲಿ (ಬಸರ. ೧೨-೩೯). [ನೀಚ + ಆಸನ]

**ನೀಚೈರ್ಗತ** (ಗು). **೧.** ಕೆಳಮುಖವಾಗಿ ಹೋದ,—ಚಲಿಸಿದ : ಅವ್ಯಯಸಮಾಸಕ್ಕೆ—ಅಂತರ್ಮುಖಿ, ಬಹಿರಂಗ, ಉಚ್ಚೈರ್ಧ್ಯಾನ, ನೀಚೈರ್ಗತ (ಶಮದ. ೮೧ ಪ್ರಯೋ). (ನಾ). **೨.** ಕುದುರೆಯ ನಡಗೆಗಳಲ್ಲಿ ಒಂದು ಪ್ರಕಾರ : ಆತಂ ಬೇಗಂ ಸುಶಿಕ್ಷಿತಮಪ್ಪ ಕುದಿರೆಯ ಬೆಂಗೆವಾಯ್ದೊಡೆ ಅದು ಲಂಘನ ವಲ್ಗನ ನೀಚೈರ್ಗತಾದಿಗಳೊಳಪ್ಪ ಕ್ರಿಯೆಗಳೊಡಂಬಡೆ ಬಲ್ಲರಚ್ಚರಿವಡೆ ಪರಿದೊಡೆ (ಜೀಸಂ. ೫೩-೩೦ ಪ). [ಸಂ.]

**ನೀಚೈರ್ಗೋತ್ರ** (ನಾ). = ನೀಚಗೋತ್ರಕರ್ಮ : ಗಂಧದ್ವಿಕಂ ಸ್ಪರ್ಶಾಷ್ಟಕಂ ಅಗುರುಲಘುಚತುಷ್ಕವಿಹಾಯೋಗತಿ ದ್ವಿಕಸ್ಥಿರಾಸ್ಥಿರ ಶುಭಾಶುಭಸುಸ್ವರದುಸ್ವರಸುಭಗದುರ್ಭಗ ಪ್ರತ್ಯೇಕ ಶರೀರಾಯುಶಸ್ಕೀರ್ತ್ಯನಾದೇಯನಿರ್ಮಾಣಪರ್ಯಾಪ್ತ ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆಪು. ೧೭-೪೯ ಪ) ; ಉಚ್ಚೈರ್ಗೋತ್ರ ನೀಚೈರ್ಗೋತ್ರ ಭೇದದಿಂ ದ್ವಿವಿಧಮಪ್ಪ ಗೋತ್ರಮುಮಂ (ಸುಕುಮಾ. ೩-೩೯ ಪ). 'ಉಚ್ಚೈರ್ಗೋತ್ರ' ಪರಾ. [ಸಂ.]

**ನೀಜಿಕಬ್ಬರಸಿ** (ನಾ). ಒಬ್ಬಾಕೆಯ ಹೆಸರು : ಪತಿಭಕ್ತಿಯೊಳೊಂದಿ ಸಜ್ಜನಿಕೆಗೆ ನೆಲೆಯಾದ ಮಾಂತನದ ಪೆಂಪು ಸಮಂತಳವಟ್ಟ ನೀಜಿಕಬ್ಬರಸಿಗೆ ಸಂದರುನ್ಧತಿ ಪೆಜಿರ್ದ್ಧೋರೆಯೆಂದಡೆ ದೋಸವಲ್ಲದೇ (ಸೌಇಇ. XX, ೧೮-೧೬ ; 980). [ ? + ಅರಸಿ]

**ನೀಟ$_1$** (ನಾ). **೧.** ಉದ್ದ ; ನೀಳ : "ನೀಳಮೆನಲ್ ನೀಟಂ" (ಭಾರಣ. ೪೦) ; ಇದು ಮಂತ್ರಿಯಟ್ಟಿದ ಕಾಣಿಕೆ . . . ಪಡೆದವಧರಿಸೆಂದು ಕೊಟ್ಟು ಮತ್ತೊಮ್ಮೆ ನೀಟದೊಳಡ್ಡಬಿದ್ದದ್ದನವನು (ಭರಚ. ೫೭-೧೬) ; ತಿಳಿಯೆ ಮಾನುಷಲೋಕದಿಂದಾ ಜವನೂರ ಬಳಿಗೈದುವ ಪೆರ್ಬಟ್ಟೆ ಉಳಿಯದೆಂಬತ್ತೆಂಟುಸಾಸಿರಗಾವುದದಳತೆಯ ನೀಟವೆನಿಪುದು (ಹರಿಬ್ರ. ೪-೧೯) ; ರಕ್ಕಸವಡೆ ಕಣ್ಗೆಟ್ಟು ಕಣ್ಮಾಯಮಾಗಲೊಡಂ ತಡೆಗೊಂಡ ನಡೆಮಾಡದೊಳ್ ಪಲ್ಗಳಿಡೆಯೆಡೆಯ ಕಲ್ಗಳಾಗೆ . . . ಜಿಹೊಬ್ಬೆಯ ನೀಟದ ತಳರ್ನಾಲಗೆ ಕೀಟಿಬಿಲಾಗೆ (ರಾಮಾಶ್ವ. ೧೧೧-೨೯) ; ತೊಟ್ಟಿನ ನೀಟ ಎರಡು ಮೂರಡಿ (ಹಸುಹೊ. ೩೩೪). **೨.** ನೀಡಿರುವುದು ; ಚಾಚಿರುವುದು : "ಆಂಭತಿ = ಕಾಲಂ ನೀಡಿಕೊಂಡಪಂ ; ಆಂಭಾ = ನೀಟಂ" (ಕಾಶಕ್ಯ. ೧೨). **೩.** ಎತ್ತರ : ಬೇಟೆಯಾಡುತ ಬೇಡರೀರ್ವರೈತಂದೊಂದು ನೀಟವಹ ಸ್ಥಳದಲ್ಲಿ ತರುಣಿರತ್ನವು ಬಹಳ ಕೋಟಲೆಯೊಳಳುತಲಿಹ ಪರಿಯನೆಲ್ಲವ ಕೇಳಿ (ಪ್ರಾಭರಾ. ೧೦-೩). (ಗು). **೪.** ಉದ್ದವಾದ ; ನೀಳವಾದ : ಈ ನೀಟ ಬಿದಿರುಗಳಿಗೆ ಬಿದಿರಿನ ಸಲಿಕೆಗಳನ್ನು ಅಡ್ಡಹೊಡೆದಿರುವರು (ಬಾಳಿಗಿ. ೩೯). 'ನೀಳ$_1$' ಪರಾ.

**ನೀಟಾಗಿಸು** = ಉದ್ದವಾಗಿ ಚಾಚು,—ನೀಡು : ಬಲಗಾಲನ್ನು ಮೂರಡಿ ಮುಂದಿಟ್ಟು ಮಂಡೆಯಲ್ಲಿ ಮಡಿಚಿ, ಎಡಗಾಲನ್ನು ಹಿಂದೆ ನೀಟಾಗಿಸಿ . . . ಹಾಗೂ ಬಲಗಾಲನ್ನು ಹಿಂದೆ ನೀಟಾಗಿಸಬೇಕು (ಬ್ರಹ್ಮಜೀ. ೨೩೭).

[ದೇ.॥ ತಮಿ. ನೀಟ್ಟ ; ಮಲ. ನೀಟ್ಟ, ನೀಡು ; ತುಳು. ನೀಟ, ನೀಟು]

**ನೀಟ$_2$** 'ನೀಟು$_2$' ನೋ.

**ನೀಟತಂತಿ** (ನಾ). ಚೊಕ್ಕಟವಾದ ತಂತಿ; ಸೊಗಸಾಗಿ ಅಳವಡಿಸಿದ ತಂತಿ : ನೋಟ ರಾಯನ ಮೇಲೆ ನೆನಹು ರಾಗದ ಮೇಲೆ ನೀಟ ತಂತಿಯ ಮೇಲೆ ಬೆರಳು (ಭರಚ. ೫-೫೪). [ನೀಟ$_2$(<ನೀಟು$_2$) + ತಂತಿ]

**ನೀಟಪಡಿಸು** (ಕ್ರಿ). ನೇರಗೊಳಿಸು ; ಸರಿಪಡಿಸು : ಹೊತ್ತಿನ ಕೊರತೆ, ಹಣದ ಕೊರತೆ . . . ಇವೆಲ್ಲವೂ ನೀಟಪಡಿಸಬಹುದಾದ ಡೊಂಕುಗಳು (ಹಸುಹೊ. ೧೧೯). [ನೀಟ$_2$(<ನೀಟು$_2$) + ಪಡಿಸು]

**ನೀಟಸಾಲು** (ನಾ). ಉದ್ದವಾದ ಸಾಲು,—ಪಂಕ್ತಿ : (ಶ).

[ನೀಟ$_1$ + ಸಾಲು$_2$(<ಸಾಲ್$_2$)]

**ನೀಟಾಳು** (ನಾ). ಸುಂದರವಾಗಿರುವವನು; ಚೆಲುವ : (ಜಾನಕೋ. ೧೧). [ನೀಟು$_2$ + ಆಳು$_3$(<ಆಳ್$_3$)]

**ನೀಟಿಸು** (ಕ್ರಿ). ( ? ) : ಹಿಂದುಗೊಂಡಡಗಿಯಾ ವರಜನಾಹುತಿಗೆ ಮುಂದೊಂದಿ ಸುಳಿಯಲು ಬಿಡುವನಲ್ಲೆಂದು ಕಣೆಯ ಸಮ್ಮಂಧಮಪಹರಗೈದು ತಾಟಿಸಿದ ನೀಟಿಸಿದ ಬಾರೆಂದು ಹೀರಲೆಂದು (ಜಿನಮು. ೨೭-೩೪). [ ? + -ಇಸು$_3$]

**ನೀಟು₁** 'ನೀಡು₁' ನೋ.

**ನೀಟು₂**, ನೀಟ್ಟು₂ (ನಾ). ೧. ನೇರ; ಕೊಂಕಿಲ್ಲದಿರುವುದು : ಕೋಟೆಯ ತೆನೆಯೆಡೆಗಂಡಿಯೊಳ್ ತಲೆಯಿಟ್ಟು ನೀಟಲಿ ನೋಡುವರುಗಳ . . . ಜೀವವ ದಾಟಿಸಿದರು ಯಮಪುರಿಗೆ (ಕಂಸವಿ. ೧೮-೭೭) ; ಊರಿಂದ ಊರಿಗೆ ಪೋಗುವದೆ ಲೀಲಿ ದಾರಿ ಒಕ್ಕರವಲ್ಲದೆ ನೀಟು ಉಂಟೆ (ಮೋಕ್ಷದೀ. ೨೪-೪) ; ಅಡಿನ ಕೋಡುಗಳು ಮೇಲುಗಡೆಗೆ ನೀಟಾಗಿರುತ್ತವೆ (ಮುಂಬಯಿ. ೫-೨೩) ; ಮನಸ್ಸನ್ನು ಹತ್ತಿರ ಸೆಳೆಯುವ ಆಕರ್ಷಕ ನಗೆ ! ನೀಟಾದ ಮೂಗು (ಆಲಹೂ. ೧೦). ೨. ಋಜುಮಾರ್ಗ ; ಸರಳತೆ ; ನಿಷ್ಕಾಪಟ್ಯ : ನೀಟಂಗೆಜಗದ ಜೈತಜಿಕಾಟಕನಂ ಕಡಿದು ಬಿಸುಡೆ ಚಿಕದೇವೇಂದ್ರಂ (ಅಪ್ರತಿ. ೬೧-೫೯) ; ಕೋಟಿಜನ್ಮವು ದೇವ ದ್ವಿಜರನು ಭಕ್ತಿಪೂರ್ವಕದಿ ವಿಾಟಿನಿಪ ಪೂಜೆಯಲಿ ಮೆಚ್ಚಿಸಿದಾಟವಿಕರುಗಳಿಂಗೆ ಫಲಿಪುದು ನೀಟನಲಿ ನಿಮ್ಮಂಘ್ರಿದರುಶನವು (ಕೋಗಯು. ೯-೬೯); ನೀಟಾಗಿ ನಡೆದರೆ ಕಾಟ ಬಾರದು (ಗಾದೆ). ೩. ಚೆಲುವು ; ಅಂದ ; ಸೊಗಸು : ನೀಟಾದ ಪೆಣ್ಣ ಸಿಂಗರಿಸಿಯತ್ಯಂತ ಕೈಮಾಟದ ಹೆಂಗಳ ಕರೆಸಿ (ಮೋಹತ. ೩೧-೪) ; ಕುಡಿತೆಗಂಗಳ ಗರುವೆಯರ್ ನೆಲಕ್ಕೆಲೆವ ನಿಡುಜಡೆಯ ನೀಟನ ನೀಱೆಯರ್ . . . ನಡೆತಂದರು (ಚಿಬವು. ೪೫-೩೩) ; ನೀಟಾದ ಹೆಣ್ಣು ತರಲೇಸು ಸುಜನರೊಡನಾಟವೇ ಲೇಸು (ಸರ್ವಜ್ಞ. ೭೨೦). ೪. ಚೆನ್ನು ; ಉತ್ತಮ : ತೋಟದ ಕಬ್ಬಿಂದ ಹೋಟೆಯ ಜೇನಿಂದ ನೀಟಾಗಿ ಕಱಿವ ಹಯನಿಂದ ಬಲ್ಲವಳ ಕೂಟವೇ ಲೇಸು (ಸರ್ವಜ್ಞ. ೧೭೦೦). ೫. ಚೊಕ್ಕತನ; ನಾಜೂಕು : ಹಾಟಕದ ಬೆತ್ತ ಕೋಟ ಸಾಟ ಇಲ್ಲದೆ ಪಿಡಿದು ನೀಟಾದ ಓಲಗದವರ ಕೂಟಗಳ ಮಧ್ಯದಲ್ಲಿ (ಪುರಂದ. ೧-೨೧೪-೨) ; ನೀಟನ ಮನೆ ತಂಗಿಲ್ವಾ ಸೊಳು ವಂಚನೆ ಕೂಟದ ಹೆಂಗಳೊಪ್ಪಿದರು (ಕಂಸವಿ. ೬-೧೨೪) ; ಕನ್ನಡಿಯೊಳ್ ಮೇರು ಕಾಣಬರುವಂತೆ ನಾಟಕರೂಪದಿಂ ನಾಲ್ವರರಿವಂತೆ ನೀಟಾಗಿ ರಚಿಸಿಪ್ಪುದೀ ಕೃತಿ (ಸೌಗಂಧಿ. ೫-೨). ೬. ರಕಾರ ; ರೇಫ : (೬). ೭. ವಿಲಾಸಿ (?) : ಪಾತಕಾಂಗದ ಬಜಾಯ ನೀಟುಗಳ್ ಚಾಟುಗಳ್ ನೀತಿಯಿಲ್ಲದ ಪರಮನೀಚುಗಳ್ ಕೋಚುಗಳ್ ಲೋಚುಗಳ್ ವಾಚಾಳರು . . . ಸತಿಯರು (ಪತಿಲ. ೨-೫೯).
(ಗು). ೮. ನೇರವಾದ; ನೆಟ್ಟಗಿರುವ : ಬಲಶಾಲಿಗಳಾದ ಆನೆಗಳ ಗುಂಪೊಂದು ಹೊರಟಿತು . . . ಉದ್ದನೆಯ ನೀಟು ತೂಗುದಿಮ್ಮಿಗಳೆರ ದನ್ನು ಅವು ಸೊಂಡಿಲುಗಳಲ್ಲಿ ಹಿಡಿದು ತಂದವು (ಶಾಂತಲಾ. ೨೩೧).

**ನೀಟ್₂** : ೧. ಒಬ್ಬ ಬಡಿಗನಿಂದ ಅವುದಾನೊಂದು ಗಳೆಯ ಹಾಸಿಕೊಂಡೋಯಿದು ಹೋಗಿ ಭೂಮಿಯಲ್ಲಿ ಹೂಡಿ ಹೊಡೆದರೆ ನೀಟವಾಗಿ ನಡೆದರೆ ಹೂಡುವರು (ವಚಸಂ. ೧೨೭-೧೦೭). ೩. ಆಟವಿಕರೊದಗಿದರು ಘನಶೃಂಗಾಟಕಾಖ್ಯವ್ಯೂಹವನು ರವಿಕೋಟಿಯಲಿ ಕಾಲೂಱಿ ಉದಯಾಚಲದ ಮಸ್ತಕವ ನೀಟದಲಿ ನಿಲೆ ರಥಗಜಾವಳಿ ಘೋಟಕವ್ರಜ ಪತ್ತಿಗಳ ಕಾಲಾಟವೆಸೆಯಲು ಹಂಸಡಿಬಿಕರು ರಚಿಸಿದರು ಬಲವ (ಸಭಾಗ. ೧೦-೫೫-೩೫). 'ನೀಟ್ಟು₃' ಪರಾ.

ನೀಟಾಗು = ನೇರವಾಗು ; ನೆಟ್ಟಗಾಗು : ಲೇಸಾಗಿ ನಾಯಿಬಾಲಕೆ ನಾರಾಯಣತೈಲಾ ಏಸು ಬಾರಿ ತೀಡಿದರೆ ನೀಟಾಗುವದೆ (ಪಾವಿಕೀ. ೮೧-೨) ; ಹಾಸುದಿಂಬನು ನೆವ್ಮಿ ನೀಟಾಗುತ್ತೆಲ್ಲರುಂ ಒರಗಿದರ್ (ಕಾಲೂರ. ೬೪-೧೧೦).

[ದೇ.॥ ತುಳು. ನೀಟೊ; ತೆಲು. ನೀಟು. /ಮರಾ. ನೀಟ್]

**ನೀಟ್ಟು₃** (ನಾ). ಅಚ್ಚುಕಟ್ಟು ; ಒಪ್ಪ ; ಓರಣ : ಕುಳಿತುಕೋ ಮತ್ತೆ, ಬೈತಲೆ ತೆಗೆದು ನೀಟಾಗಿ ಜಡೆಹಾಕಿಕೊಡುತ್ತೇನೆ (ನಿಶಲು. ೪) ; ಅವರ ಮನೆ ತುಂಬ ನೀಟಾಗಿದೆ (ರೂಢಿ). [←ಇಂ. Neat]

**ನೀಟುಗ** (ನಾ). ಚಾಚುವವನು ; ನೀಡುವವನು : "ಡವಕಃ, ಡವವಾನಃ, ಈ ೨ ನೀಟುಗಂ" (ಕಾಶಕ್ಯ. ೧೨೭).
[ನೀಟು₁(<ನೀಡು₁)+ -ಗ₂]

**ನೀಟುಗಾತಿ** (ನಾ). ೧. ಚೆಲುವೆ ; ಸುಂದರಿ : ನೀಟುಗಾತಿಯರೊಲುಮೆ ಬೂಟಕವೆಂದು ತಿಳಿಯಿರೊ (ಪುರಂದ. ೨-೧೬-೧) ; ಪೊಸ ತೊಂಡೆವಣ್ಣ ದುಟಿಯ ನೀಟುಗಾತಿ (ಚಂಪ್ರಸಾಂ. ೯-೫೯) ; ವಿಾಟುತಿಹ ಸಾರಂಗಿನಾದಕೆ ನೀಟುಗಾತಿವೆಣ್ಗಳು ನಾಟ ಮನವನು ನಿಲಿಸಿ ನೋಡುತಿಹ ಕೂಟದಿಂದಿಹರು (ಶರಲೀ. ೧೮೦-೭). ೨. ಚೊಕ್ಕಟವಾಗಿರುವವಳು ; ಶುಭ್ರವಾಗಿರುವವಳು : (೬). [ನೀಟು₂+-ಕಾತಿ₅]

**ನೀಟುಗಾರ** 'ನೀಟುಗಾಱ' ನೋ.

**ನೀಟುಗಾರಿಕೆ** 'ನೀಟುಗಾಱಿಕೆ' ನೋ.

**ನೀಟುಗಾಱ**, ನೀಟುಗಾರ (ನಾ). ಚೆಲುವ ; ಸುಂದರ : ನೀಟುಗಾಱನ ನೋಡುವ ನೋಟವೆ ರತಿಯೂಟದಾನಂದವನೆದೆಗೆ ನಾಟಗೊಳಿಸುತದೆ (ಚಂಪ್ರಸಾಂ. ೯-೭೦). 'ನೀಟುಗಾಱಿಕೆ' ಪರಾ. **ನೀಟುಗಾರ:** ವಾರೆನೋಟಗಳ ಯೇಟುಗಳು ನೀಟುಗಾರರ ಮನಸುಗಳಲ್ಲಿ ನಾಟುವಂತೆ ಮಾಡಿ (ಸೌಗಂಧಿ. ೧೯೧-೧) ; ನೀಟುಗಾರರನೆಲ್ಲ ನಾಡೆ ನಾಚಿಸುವಂಥ ಮಾಟ ಮಾಡುವ ಕಣ್ಣು (ಉಯ್ಯಾಲೆ. ೭೧-೯). 'ನೀಟುಗಾರಿಕೆ' ಪರಾ. [ನೀಟು₂+-ಗಾಱ(<-ಕಾಱ)]

**ನೀಟುಗಾಱಿಕೆ**, ನೀಟುಗಾರಿಕೆ (ನಾ). ಚೆಲುವು ; ಅಂದ ; ಸೊಗಸು: ಹರಿಗೆಯ ನಿಶ್ಚಯದ ನೀಟುಗಾಱಿಕೆಯ ನಿಶ್ಚಟದ . . . ಕನಕ ಮಣಿ ಖಚಿತಬೇಟಿಕದುಬ್ಬಟೆಯಬ್ಬರದ ಹರಿಗೆಕಾಱರ ಮೊತ್ತ ದೊತ್ತಿನುಭಯ ಪಾರ್ಶ್ವದೊಳಿಂಬುಗೊಂಡು (ಹವಿಾ್ಮರ. ೩-೩೩ ವ). **ನೀಟುಗಾರಿಕೆ :** ಅಂದಚಂದದ ನೀಟುಗಾರಿಕೆಯ ಕಾವ್ಯವು ನಮಗಪ್ಪು ಬೇಕಾಗಿಲ್ಲ (ಸಾಹಿವಿ. ೨೧). [ನೀಟುಗಾಱ+-ಇಕೆ]

**ನೀಟುತನ** (ನಾ). ಚೆಲುವು; ಸೊಗಸು ; ಅಂದ : ತಮ್ಮ ನೋವು-ದುಃಖ ಎಲ್ಲವನ್ನೂ ಮರೆತು . . . ನೀಟುತನ ಎಲ್ಲಿರುವದೆಂಬುದನ್ನು ಮೊದಲ ಬಾರಿ ಅರಿತುಕೊಂಡರು (ಷೋಡಶಿ. ೩೪).
[ನೀಟು₂+-ತನ]

**ನೀಟುದಾರಿ** (ನಾ). ನೇರವಾದ ದಾರಿ,—ಮಾರ್ಗ : ಆ ಊರಿಗೆ ನೀಟುದಾರಿಯಿದೆ (ರೂಢಿ). [ನೀಟು₂+ದಾರಿ]

**ನೀಟುದೋರು** (ಕ್ರಿ). ಸೌಂದರ್ಯವನ್ನು ಹೊಮ್ಮಿಸು ; ಚೆಲುವನ್ನು ಸೂಸು : ನೀಟುದೋರುತ ಮಿಕಾರಿಯರೊಲಿಸುತ ಚಾಟುಮಾತುಗಳಾಡಿ ನಗುತ (ಸೌಂದಕಾ. ೩-೧೦೧).
[ನೀಟು₂+ತೋರು(<ತೋಱು)]

**ನೀಡ** (ನಾ). ೧. ಹಕ್ಕಿಯ ವಾಸಸ್ಥಾನ; ಗೂಡು : "ಗೂಡು ನೀಡಂ ಕುಲಾಯಂ" (ವಸ್ತುಕೋ. ४೧-೧೧) ; ನಯನಾನಂದಂಗಳಪ್ಪ ಚಂದನಂಗಳೊಳಂ ಶುಕನಿಕರಾವೃತಂಗಳಪ್ಪ ಫಲಭರಿತ ದಾಡಿವಿಾಸೀಡಂಗಳೊಳಂ (ಕಾದಂಪೂ. ೬೫೫) ; ವಿಶ್ವಾಸಘಾತಂ ವನದ್ರುಮ ನೀಡದೊಳ್ . . . ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ) ; ಬಿರುದಿನ ಸಾಳ್ವನ ನೀಡವನುಱಿ ಗಿಳಿವಱಗಳು ತುಡುಕುವಂದದಲಿ ದುರಗಲಿ ಕಂಠೀರವೇಂದ್ರನ ದುರ್ಗವನಿರದೆ ಮುತ್ತಿತು ರಿಪುವಿತತಿ (ಕಂಸವಿ. ೧೪-೪೫) ; ಕಟ್ಟದಿರೊಳೊಂದು ಚಟಕೆ ನೀಡದೊಳಿರ್ದುಂ ಕಿಱುಮಱಿಯುಂ . . . ಅಲ್ಲಿಗೆಯ್ದುದಂ ನಟ್ಟಾಲಿಯೊಳಭೀಕ್ಷಿಸಿ (ರಾಮಾಶ್ವ. ೧೮-೧) ; ನೀಡದೊಳ್ ಬಳೆದು, ಕಾಡಿನಲಿ ಹಾರಾಡಿದಾ ಗರುಡಶಿಶು ಗರಿ ಬಲಿತ ಮೇಲಲ್ಲ ದೇಶಂಗಳಂ ಚರಿಸಿ ತಣಿವುದೆ ? (ಶ್ರೀರಾಮಾ. ४-९೧). ೨. ಆಶ್ರಯ ಸ್ಥಾನ ; ನೆಲೆ ; ಬೀಡು : ಗಂಧಿಳವಿಷಯದ ನಡುವೆ ತನ್ನಹೀವಿಳಾಸಿನಿ

ಮೇಲ್ಕೊಂಡ ದುಕೂಲಮುಮಂ ಅರ್ಹತ್ಪರಮೇಶ್ವರನ ವಿಶದಯಶಃಪುಂಜಮುಮನನುಕರಿಸಿ ವಿವಿಧವಿದಗ್ಧವಿದ್ಯಾಧರ ಜನಕ್ರೀಡಾನೀಡಂಗಳಾಗಿ (ಆದಿಪು. ೧-೬೨ ಪ); ಸುರತಸುಖದ ಬಳ್ಳವಳ್ಳಿಯೆನಿಪ ಬಳ್ಳಿಮಾಡದಿಂ ಮಹಾವಿನೋದನೀಡದಿಂ (ಪಂಪಭಾ. ೧-೫೮ ರಗಳೆ); ಪಿರಿದೊಂದೌತ್ಸುಕ್ಯದಿಂದಾಗಳಾ ವಿದಲತ್ ಪಂಕಜನೇತ್ರೆ ಮಾಡಿಸಿದಳ್ . . . ಚಿತ್ರಭಿತ್ತಿ ಪರಿಶೋಭಾನೀಡಮಂ ಮಾಡಮಂ (ಸುಕುಮಾ. ೧೦-೪೩). [ಸಂ.]

**ನೀಡಜ** (ನಾ). ಗೂಡಿನಲ್ಲಿ ಹುಟ್ಟಿದುದು ; ಪಕ್ಷಿ : "ಪತತ್ . . . ನೀಡಜಃ, ವಾಜೀ, ದ್ವಿಜಃ—ಈ ೨೬ ಹಕ್ಕಿ" (ಹಲಾಯು. ೪೦-೮೫); "ಶಕುನಿ ವಿಹಗಂ . . . ನೀಡ[ಪಾಠಾಂ.ಳ]ಜಮಂಡಜಂ ಶಕುನಂ ಶಕುಂತಂ ಶಕುಂತಿಯೆನೆ ಪಕ್ಷಿ" (ಮಂಗರಾ. ೫೦-೧). [ಸಂ.]

**ನೀಡಡಿ** (ನಾ). ೧. ಮುಂದಕ್ಕೆ ಚಾಚಿದ ಕಾಲು ; ಮುಂಚಾಚಿದ ಹೆಜ್ಜೆ : ಪಸರಂಬೆತ್ತೆಡೆಯಾದ ನೀಡಡಿ ಪೊದಳ್ದಾಕರ್ಣವಾಕುಂಚಿತಾಸ್ತ್ರಸಮೇತೋಚ್ಚಕರಾಗ್ರಂ . . . ತಾನಿಸಲೊಂದೊಂದು ಕುರಂಗಮಂ ಶಬರನಿಂತಿರ್ದಂ ಮಹಾರಣ್ಯದೊಳ್ (ಗಿರಿಕ. ೧-೪೯). ೨. ದಾಪುಗಾಲು; ದೊಡ್ಡ ಹೆಜ್ಜೆ : ತಿರುಕಾಳತ್ತಿ ಮಲೆಯ ತಪ್ಪಲೊಳಿಲ್ಲ ನೆರೆನೆರೆದು ನೋಳ್ಪ ಕಾರಣಿಕಮೃಗಮುಮನೆಲ್ಲ ಕಂಡು ನೀಡಡಿಯಿಟ್ಟು ಕುನಿದು (ಕಣ್ಣ.ರ. ದೇ. ೧೨೭-೨೩); ನೀಡಡಿಯಿಟ್ಟು ತಳ್ವಿ ಬಿಡದೆತ್ತಿ ಭುಜಾಗ್ರಮನೈದೆ ಲಕ್ಷ್ಯಮಂ ನೋಡಿ . . . ಶರಾಳಿಯಂ ಕಟಿಪದರಾಹವದೊಳ್ ಕಡುಬಿಲ್ಲ ಬಿತ್ತಿಗರ್ (ಉದ್ಭಟ. ೪-೬೮). [ನೀಡು$_2$+ಅಡಿ$_1$]

**ನೀಡಡಿಗೊಳ್** (ಕ್ರಿ). ಕಾಲನ್ನು ಮುಂಚಾಚು : ನೀಡಡಿಗೊಂಡು ನಿಂದು ಡೊಣೆಯಿಂ ಕಣೆಯಂ ತೆಗೆದಾರ್ದುಂ ಬಿಲ್ಲದಂ ಪೂಡಿ . . ., ಮೃಗವೃಂದಮನಿಕ್ಕಿದರಲ್ಲಿ ಭಿಲ್ಲಿಯರ್ (ಶಬಶಂ. ೩-೫೨). [ನೀಡಡಿ+ಕೊಳ್$_1$]

**ನೀಡಾಡು** (ಕ್ರಿ). ೧. ಚಾಚು ; ಮೇಲಕ್ಕೆ ಎತ್ತು : ಮಲ್ಲರೆಲ್ಲರು ಗಂಡು ಹೆಣ್ಣು ಒಂದಾಗಿ ಕಡದುಮ್ಮಾನದಿಂದ ಕೂದಲು ಕೆದರಿ ತೋಳ್ಗಳಂ ನೀಡಾಡಿ (ವೈಶಾಖ. ೭೯-೪೦೫). ೨. ಒಗೆ ; ಬಿಸಾಡು ; ಈಡಾಡು : ಹೆಮ್ಮೆಯಾಡಲು ಬೇಡಿ ಹೆಮ್ಮೆ ನೀಡಾಡುವುದು ಹೆಮ್ಮೆಯಿಂದಲಿ ನೀವು ಕೆಡಬೇಡಿರಯ್ಯ (ಪುರಂದ. ೧-೧೪೧ ಪಲ್ಲವಿ); ಕಾರೆ ಮುಳ್ಳುಗಳಿಂದ ಬೀರಿದ ಮಾರ್ಗವ ತೋರಿಸಿ ಕಡೆಸಾರಿ ನೀಡಾಡುವರು (ಸಾನಂಗ. ೧೬); ಒರ್ವಳ್ ಗಾಡಿಯ ಸಿಂಗಾಡಿಯ ಪುರ್ಬಿನ ಗರುವೆ ಮೊಲೆಯ ಚೊಲ್ಲೆಯಮಂ ನೀಡಾಡಿ . . . ಕೊಳನಂ ಪುಗುತಂದಳ್ (ರಾಮಾಶ್ವ. ೧೨೩-೧೮). 'ಈಡಾಡು' ಪರಾ. [ನೀಡು$_1$+ಆಡು$_1$]

**ನೀಡಿಕೆ** (ನಾ). ಪೂರೈಕೆ ; ಒದಗಿಸುವಿಕೆ : ಇಂಡಿಯದ ಆಮದುದಾರರು ಕೊಡುವ ರೂಪಾಯಿ ಮತ್ತು ಅಮೆರಿಕದ ಆಮದುದಾರರು ಕೊಡುವ ಡಾಲರು ಇವು ವಿನಿಮಯ ಮಾರುಕಟ್ಟೆಯ ವಿವಿಧ ಹಣಗಳ 'ನೀಡಿಕೆ' (Supply)ಗೆ ಸೇರುತ್ತದೆ . . . ಹೀಗೆ ವಿವಿಧ ಹಣಗಳ 'ನೀಡಿಕೆ — ಬೇಡಿಕೆ'ಗಳಿಗನುಸಾರವಾಗಿ ವಿನಿಮಯದರವು ನಿರ್ಣಯವಾಗುವುದು (ಅಂತಸಂ. ೫೮). [ನೀಡು$_1$+-ಇಕೆ]

**ನೀಡಿಸು** (ಕ್ರಿ). ೧. ಕೊಡುವಂತೆ ಮಾಡು ; ಕೊಡಿಸು : ಕಿರೀಟ ತನ್ನನಜಾಪುತ್ರೆ ಶಪಿಯಾದ್ರುಮದಲ್ಲಿಗಾತನಂ ನೀಡಿರದುಯ್ದು ನೀಡಿ [ಪಾಠಾಂ. ತೋಜಾ]ಸಿದನಾತ[ನಿ]ನಲ್ಲಿಯ ಕೈದುವೆಲ್ಲಮಂ (ಪಂಪಭಾ. ೬-೧೦೦); ಕಿರೀಟಿಯು ಕೈ[ಲಿ] ಸೈಂಧವನ ಶಿರವ ಕೆಡಹಿಸಿ ಅವನ ತಂದೆಯ ಕರತಲಕೆ ನೀಡಿಸಿದ (ಹರಿಸಾ. ೩೪). ೨. ಬಡಿಸುವಂತೆ ಮಾಡು ; ಊಟಕ್ಕೆ ಹಾಕಿಸು : ನಾನು ಸಕಲಪದಾರ್ಥನ [ಸ್ವೀಕರಿಸುವುದಕ್ಕೆ] ಮುನ್ನವೇ ಜಂಗಮಕ್ಕೆ ಮಿಷ್ಟಾನ್ನವ ನೀಡಿಸು [ಪಾಠಾಂ. ನೀಡು]ವೆ (ಮಹಾದೇ. ಬ. ೪೯-೨೧೫); ಹಸಿದನ್ನೆ ನೀನಾದಡಂ ವಂಚಿಸದಡಿಸಿ ನೀಡಿಸಿದಡಾರೋಗಿಸುವೆಂ (ಬಸವು. ೫೭-೩೫); ಪರಿಮಳಿಪ ರಾಜಾನ್ನ . . . ದುಗ್ಧ ಮುಂತಾದ ಭೋಜ್ಯಪರಿಕರವನುನುಜಿಕೆ ನೀಡಿಸಿದನಾ ಮಹಾಚರಕೊಲ್ದು ಚೆನ್ನಬಸವೇಶನಂದು (ಚೆಬಪು. ೫-೬೦).

**ನೀಡಿಸಿಕೊಳ್**=ಪಡೆದುಕೊಳ್ಳು ; ಈಸಿಕೊಳ್ಳು : ನೀಡಿಸಿಕೊಳ್ವ ಕೈಗಳುಮನಿತ್ತೆ ಸುರಾಳಿಗೆ ಕುಂಭಕೋಟಿಯಂ ನೀಡುತುಮಿರ್ಪ ಕೆಯ್ಗಳುಮನಿತ್ತೆ ಜಿನಂಗಭಿಷೇಕಶೋಭೆಯಂ ಮಾಡುವ ತನ್ನ ಕೆಯ್ಗಳುಮನಿತ್ತೆ ನಮಸ್ಕೃತಿಗಗ್ರಭಾಗದೊಳ್ ಕೂಡುತುಮಿರ್ಪ ಕೆಯ್ಗಳುಮನಿತ್ತೆ ವಿಚಿತ್ರಮೊ ಶಕ್ತಿ ಶಕ್ರನಾ (ಚಂದ್ರಪು. ೧೨-೧೩೩). [ನೀಡು$_1$+-ಇಸು$_3$]

**ನೀಡಿಜು** (ಕ್ರಿ). ವಿಶೇಷವಾಗಿ ಅಂತರಂಗವನ್ನು ಹೊಗು,—ಒಳಗನ್ನು ಪರೀಕ್ಷಿಸು: ಪವನನಿಸ್ವನಪರ್ಣರವ ಪ್ರಸ್ರವಣಧಾರಾಧ್ವಾನಖಗ ಮೃಗನಿವಹ ನಾಡೊಳು ನೀಡಿಜಿದು ಹುಡಿಕಿದರು ಜಾನಕಿಯ [ಪಾಠಾಂ. ನಿನದದಲಜಿಸಿ ನೋಡಿದರಿವರು ಜಾನಕಿಯ] (ತೊರರಾ. ೩-೧೧-೩೨). 'ಈಡಿಜು' ಪರಾ. [ನೀಡು$_2$+ಇಜು$_1$]

**ನೀಡು$_1$, ನಿಟ್ಟು$_1$, ನೀಟು$_1$** (ಕ್ರಿ). ೧. ಚಾಚು ; ಒಡ್ಡು : "ನೀಡು – ಪ್ರಸಾರಣೇ" (ಶಮಧಾ); ಕೈಯುಂ ಕಾಲ್ಗಳುಮನುಡುಗದೆ ನೀಡದೆ ಬಾಬ್ಬಿನ್ನೆಗಂ ಪಟ್ಟಿರ್ದು ಪಂಚನಮಸ್ಕಾರಮಂ ಮನದೊಳೋದುತ್ತಿರಿಮೆಂದು ಕಲ್ಪಿಸಿ (ವಡ್ಡಾರಾ. ೮೩-೧); ಕುಂಭಸಂಭವಂ . . . ದ್ರುಪದನಂ ತನ್ನ ಮಂಚದ ಕಾಲೊಳ್ ಕಟ್ಟಿವೇಟ್ಟು ತಲೆಯ ಮೇಲೆ ಕಾಲನ ವಷ್ಟಂಭದಿಂ ನೀಡಿ (ಪಂಪಭಾ. ೨-೬೨ ಪ); ತಾಳಮರಕ್ಕೆ ಕೈಯ ನೀಡಿ ಮೇಲೆ ನೋಡಿ ಗೋಣು ನೊಂದುದಯ್ಯ (ಬಸವ. ೨೩); ಕೈಯ ಬಟ್ಟಲ ಹಾಲಿಗಂ ತಾಂ ಕೈಯ ನೀಡುತ್ತಿ ಲೀಂಟಿ ಬಾಲಕಿ ಅಯ್ಯನಂ ಬಿಟ್ಟೋಡಲು (ಬಸವು. ೧೪-೩೨); ನೀಡಿ ಬರಿಕೈಗಳಲಿ ಸೆಳೆದೀಡಾಡಿದವು ಬಂಡಿಗಳನು . . . ಹಿಂದಣೊಡ್ಡನು ಝಾಡಿಸಿದವೀ ಕ್ಷೇಮಧೂರ್ತಿನೃಪಾಲನಾನೆಗಳು (ಕುವ್ಯಾಕ. ೨-೧೨); ಪದಾಬ್ಜಂಗಳಿಗೆ ತಲೆಯ ನೀಡಿದವನೇ ಸುಕೃತಿ ಸಮ್ಮುಖದೊಳೊಮ್ಮೆ ನುತಾಡಿದವನೇ ಶೈವಮಾರ್ಗಿ (ಚೆಬಪು. ೧-೨೨). ೨. ಕೊಡು ; ಈಯು : ಮಡಲ್ತು ಪೂತ ಲತೆಗಳ್ ಕಯ್ಗೆಯ್ದು [ಪೂ] ನೀಡಲ್ಕರ್ಘ್ಯಮನೀವಂತೆವೊಲಾದುದದ್ರಿ ಹರಿಗಂಗಿಷ್ಟಾರ್ಥ ಸಂಸಿದ್ಧಿಯಂ (ಪಂಪಭಾ. ೭-೭೭); ಕೊಡಬಲ್ಲಂಗೆ ದರಿದ್ರಮಂ . . . ಸುಕೃತಿಗಲ್ಪಾಯುಷ್ಯಮಂ ನೀಡುವಂ ಸುಡು ಪಾಪಿಷ್ಠನ ಜೊಮ್ಮನಂ (ಸೋಮೇಶ.೩೩); ಹೊನ್ನ ಬಟ್ಟಲು ತೀವಿ ಪಾಲಂ ಕಟಿದು ಮತ್ತೆಯು ಜೀವಿಸೆನುತಂ ನೀಡಿ ಶಿವೆ ಶಿವನಲ್ಲಿಗೆಯ್ದಿದಳು (ಬಸವು. ೫೦-೪); ಗುರುಸುತಾದಿ ಮಹಾಪ್ರಧಾನರು ದರುಶನವ ನೀಡಿದರು (ಕುವ್ಯಾಕ. ೨-೨೯). ನಲ್ಲರ ಶಿಬಿಗಾಗ ಪೂಮಾಲೆಗಳ ಸುತ್ತಿ . . . ಮಡಿವರ್ಗವ ನೀಡಿ ಚಲ್ಲವಾಡುತಲೊಪ್ಪಿದರು (ಕಂಸವಿ. ೨೫-೧೩೫); ಲೋಕಮಾನ್ಯ ಟಿಳಕರು 'ಗೀತಾರಹಸ್ಯ'ವೆಂಬ ಅದ್ಭುತಗ್ರಂಥವನ್ನು ವಿಶ್ವಸಾಹಿತ್ಯಕ್ಕೆ ನೀಡಿದ್ದಾರೆ (ಧರ್ಮಸಾ. ೧೨೮). ೩. (ಕಾಣಿಕೆ, ಉಡುಗೊರೆ ಮುಂತಾದುವನ್ನು) ಸಲ್ಲಿಸು ; ಅರ್ಪಿಸು ; ಸಮರ್ಪಿಸು : ದಿವ್ಯವಸ್ತ್ರಾಭರಣ ಕುಸುಮಗಂಧಂಗಳಂ ಚಕ್ರಿಗಾಗಳ್ ನೀಡಿತ್ತತ್ಯಂತರಾಗೋತ್ಥಿತಕರತಳದಿಂ ತದ್ವನಸ್ತ್ರೀಸಮೂಹಂ (ಆದಿಪು. ೧೧-೯೦); ಮಾರುತಸಖಂ ಪ್ರತ್ಯಕ್ಷಮಾಕಾರವಮಾಂತು ತದೀಯಾಧ್ವರಕುಂಡದೊಳ್ ನೆಗೆದು ನೀಡುತ್ತಿರ್ಪ ಸರ್ಪಿರ್ಮಯಾಹುತಿಯಂ ಕೈಕೊಳುತಿರ್ದನೀಕ್ಷಿಪ ನೃಪಂಗಾಶ್ಚರ್ಯಮಪ್ಪಂದದಿಂ (ಕುಸುಮಾ. ೪-೧೩೩); ನೃಪಪರಿವಾರವೆಲ್ಲವು ಬಂದು ಕಂಡುದು ಕಾಣಿಕೆಯ ನೀಡಿ (ಕುವ್ಯಾಭೀ. ೧-೩೨); ಸಾಟಿಗಾಣದೆ ಲಕ್ಷ್ಮಿ ಉರಸ್ಥಳವಾಗಿರೆ ಲೋಪ್ಟಕಾಸು ಎಂತು ಕಾಣಿಕೆ ನೀಡಲೊ (ಪುರಂದ. ೨-೬೭-೩). ೪. ದಾನಮಾಡು : ಪೊನ್ನ ಸಟ್ಟುಗಮಂ ತೀವಿ

ಭೈಕ್ಷಮಂ ಪಿಡಿಯೆಂದು ನೀಡಿದ ಕೈಯನಿತನೆ ಕಂಡು (ಪಡ್ಡಾರಾ. ೮೯-೮); ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ (ಬಸವ. ೨೩೩); ಬೇಡಿದವರಿಗೆ ಧರ್ಮಕ್ಕಿಲ್ಲ ಇದ್ದು ನೀಡದಿರಲು ನರಕಕೆ ನೂಕ್ವರಲ್ಲಿ (ಪುರಂದ. ೨-೩೯-೩); ಅಶ್ವಯಜ್ಞಂಗಳ ಸಹಸ್ರಕೋಟಿ ಮಾಡಿದ ಫಲವು ಒಬ್ಬ ಜಂಗಮಕ್ಕೆ ತುತ್ತು ಭಿಕ್ಷವ ನೀಡಿದ ಫಲಕ್ಕೆ ಸರಿಯಿಲ್ಲ ನೋಡಿರೋ (ಅಖಂಡೇ. ೫೯-೯); ಮಿಡುಕುವ ಮನಕ್ಕಿಂತ ನುಡಿಯುವ ತುಟಿಗಿಂತ ನೀಡುವ ಕೈ ಮೇಲು (ಇಂಚಾಪ. ೧೫೫-೬೧); ನೀಡದವನಲ್ಲಿ ಹೋಗಿ ಬೇಡಿಕೊಳ್ಳುವವ ಮೂಢನು (ಗಾದೆ). **೫.** ದಯಪಾಲಿಸು ; ಅನುಗ್ರಹಿಸು : ನೀಡಿದ ಕಯ್ಗೆ ನೀಡಿರದೆ ಬೇಡಿದ ಭೋಗಮನೇನಾದೊಡಂ ನೀಡುವ ಕಲ್ಪವೃಕ್ಷನಿಕರಂಗಳಿ ಭೋಗದಲಂಪನಾವಗಂ ಮಾಡೆ (ಆದಿಪು. ೫-೪೧); ವೃಷಭರಾಜಂ ಮುಖಮಂಡಲಮಂ ಬಸವನ ಮಸ್ತಕದೊಳಿಟ್ಟು . . . ನೇಹದಿಂ ನೋಡಿ ಕಾರುಣ್ಯಮಂ ನೀಡಿ (ಬಸರ. ೪-೯೪); ಸುರರಿಗಭಯವ ನೀಡ ಕಲಿತರು ಬೆಳೆವುತಿರ್ದರು ರಾಮ ಲಕ್ಷ್ಮಣರು (ಕೌಶರಾ. ೧-೭೭) ; ತಂದೆಯ ಕೋಪಕ್ಕೆ ಬಲಿಯಾಗುವ ಅನುಗ್ರಹವನ್ನು ನೀಡಿದೆ (ಹಾಹುತ್ತ. ೯೮). **೬.** ಆಹಾರವನ್ನು ಬಡಿಸು ; ಅನ್ನವಿಕ್ಕು : ಜಂಗಮಕ್ಕೆ ನೀಡಿ ಜಂಗಮ ಪ್ರಸಾದವ ಕೊಂಡರೆ ನಿನಗರ್ಪಿತ ಕಾಣಾ (ಬಸವ. ೭೭೬); ಮನೆಗಳಲ್ಲಿದ್ದ ಬೋನವ ತೋಡಿ ತನ್ನಿಯೆನಲ್ಕೆ ಪುನರಪಿ ನೀಡತೊಡಗಿದರೆಂಟುದೆಸೆಯಲಿ ಬಸವ ನೇಮಿಸಲು (ಪ್ರಭುಲೀ. ೨೩-೧೬) ; ಸದ್ಘೃತ ಪಳಿದ್ಯವನೆಸರುಗಳ ಮಿತಿಯಿಲ್ಲದಡಿಗೆ ಗಾರ್ತಿಯರು ನೀಡಲ್ಕೆಯಚ್ಯುತ ಹೆಂಗಳೊಡನೆ ಭುಂಜಿಸಿದ (ಮೋಹತ. ೧೪-೧೧); ಮೆಱೆವ ಸಣ್ಣಕ್ಕಿಯ ಪಾಯಸ . . . ಪಿರಿದು ಗೌಲೆಯ ಪಾಯಸಗಳ ತಂದಾಗ ಸರಸಿಜಾಕ್ಷಿಯರು ನೀಡಿದರು (ಕಂಸವಿ. ೮-೯೦). **೭.** ಹಬ್ಬು ; ಹರಡು : ಕಾಡುಗಿಚ್ಚಿದ್ದು . . . ಕಿಡಿ ಹೊಗೆ ಮಸಗಿ ನೀಡುವ ದಳ್ಳುರಿಗಳ ದಾವದಿಂ ವನ ಕೂಡೆ ಭೀಕರವ ಪುಟ್ಟಿಸಿತು (ಕಂಸವಿ. ೧೮-೪೬). **೮.** ಹಬ್ಬುವಂತೆ ಮಾಡು ; ಹರಡುವಂತೆ ಮಾಡು ; ಹಬ್ಬಿಸು : ತುಱುಂಬಿದ ತೋರ ಮಲ್ಲಿಗೆಯ ಮುಗುಳ ಕಂಪುಮಂ ತಳೆದ ಪುಡಿಗತ್ತುರಿಯ ಸೊವಡುಮಂ ಚಾಮರದ ಗಾಳಿ ದೆಸೆದೆಸೆಗೆ ನೀಡೆಯುಂ (ಮಲ್ಲಿಪು. ೮-೬). **೯.** ವಿಸ್ತಾರವಾಗು ; ದೊಡ್ಡದಾಗು : ಲಾಯ ನೀಡಿತು ಮುಂದೆ ರಾವುತ ಪಾಯಕರಿಗೆಡವಂಕ ಮಂತ್ರಿ ಪಸಾಯತರು ಕರ್ಣಾದಿಗಳಿಗೆಡೆಯಾಯ್ತು ಬಲವಂಕ (ಕುಮ್ಯಾಅ. ೧೮-೨) ; ಈದುದಾಸುರಬಾಣ ಘನಶಸ್ತ್ರೋದಧಿಯ ನೀಡಿತು [ಪಾಠಾಂ. ನಿಡಿದುದು, ನೆಂದೆನೆ] ಜಗತ್ರಯ ಕೈದುಗಳ ಕಾಲಾಟದಲಿ ಕವಿದಿಱುವ ರಕ್ಕಸರ ಬೀದಿವರಿಗಳಲಡಗೆಡೆದುದಿಂದ್ರಾದಿ ದೇವಕದಂಬ ಕಪಿಬಲ ಸಾಧಿಸಿತು ಕೈವಲ್ಯವನು ಕಮಲಾಕ್ಷನಿದಿರಿನಲಿ (ತೊರರಾ. ೬-೪೦-೩೮). **೧೦.** ತೋರಿಸು ; ಪ್ರದರ್ಶಿಸು : ರೂಪು ರೇಖೆ ರಸಂಬಡೆವ ನೃತ್ಯನಾಯಕಿಯರಿಂ ನವೀನಗತಿಯಂ ನೀಡುವ ನರ್ತಕರಿಂ (ಗಿರಿಕ. ೨-೧೦೫ ಪ). **೧೧.** ಚಚ್ಚು ; ಬಡಿ ; ತೀಡು : ನೀಡಿದು ಪ್ಪುರವೊಯ್ಲಿಂ ಪೊಡವಿಗೆ ಬೀೞ್ತರೆ ತಲೆ ಸೊರ್ಕಡಗದೆ ಕೆಲರಿಱಿದು ಬೀರ ಸಿರಿಯೊಳ್ ನೆರೆದರ್ (ಕಬ್ಬಿಕಾ. ೨೭೩). **ನಿಟ್ಟು₁ :** **೧.** ಯಾವನೊ ಒಬ್ಬ ರಾಜಾಧಿರಾಜನು ಅವನಂ ನೋಡಬೇಕೆಂದು ನೂರುಮಡಿಯಿರಾದ ಸಂಭ್ರಮದಿಂದ ಮುಂದೆ ಮುಂದೆ ನಿಂತಿರುವರ ಮೇಲೆಯೆಲ್ಲ ಹಿಂದೆ ನಿಂತಿರುವವರು ಮುನಿಸುಗೊಳುತ ಅಟ್ಟಣೆಗಳಲ್ಲಿ ಅಡಿಗಳನ್ನಿಟ್ಟು ನಿಟ್ಟಿ ನಿಟ್ಟಿ ಮೊಗಂಗಳಂ ಯತ್ತಿ ನೋಡುವರು (ಸೌಗಂಧಿ. ೨೦೩-೮). **ನೀಟು₁ :** **೧.** ಥಟಥಲಕು ಥಲಕೆಂಬ ಭುಜ ನೀಟ [ಪಾಠಾಂ. ಸಾಟ, ಸಾರ] ನಟಿಸಿ ಮೇಗೆತ್ತಿ ಕುಕ್ಕುಱಿಸಿ ನೆಲನಂ ಟೊಣೆದು . . . ಮೈದೆಗೆದು ನಿಂದ ನಿಚ್ಚಟಕಲಿಗಳ್ (ಸೋಮಚ. ೫-೧೬) ; ನಾನು ಅದರ ಒಂದು ತುದಿಯನ್ನು ಬಲವಾಗಿ ಹಿಡಿದುಕೊಂಡು ಇನ್ನೊಂದು ತುದಿಯನ್ನು ಮೇಲೇರಿ ಬರುವವರಿಗೆ ನೀಟುವುದೆಂದೂ . . . ಯೋಚಿಸಿ ಹಾಗೆಯೇ ಮಾಡಿದೆ (ಹಸುಹೊ. ೧೭೬).

**ನೀಡಿಕೊಳ್ಳು** = ಚಾಚಿಕೊಳ್ಳು : ಅತ್ತೆಯು ಕಾಲು ನೀಡಿಕೊಂಡು ಗಂಡನ ತಲೆಯ ಬಿಳಿಯ ಕೂದಲನ್ನು ತೆಗೆದುಹಾಕುತ್ತಿದ್ದಳು (ದೇವೀಚಾ. ೬).

[**ದೇ.॥ ತಮಿ. ಮಲ.** ನೀಟು, ನೀಟ್ಟು ; **ತುಳು.** ನೀಡು, ನೀಟು; **ಕೊಡ.** ನೀಟ್]

**ನೀಡು₂** (ನಾ). **೧.** ಉದ್ದ ; ನೀಳ : ನೀಡಗಲದ ಜವನಿಕೆ ತೊಲಗಿತು ಮತ್ತೆ ಷೋಡಶಪಾತ್ರದೋಱಿದುವು (ಭರಚ. ೧೩-೪೬). **೨.** ದೀರ್ಘಕಾಲ; ಬಹುಕಾಲ : ಮಧು ಮದ್ಯ ಮಾಂಸಂಗಳಂ ಭಕ್ಷಿಸಿ ನರಕ ತಿರಿಕ ಮನುಷ್ಯಭವಂಗಳೊಳಪ್ಪ ದುಃಖಂಗಳನಂತನಂತಕಾಲಮನುಭವಿಸಿ ನೀಡಱಿಂದೆತ್ತಾನುಮಲ್ಲದೆ ಮನುಷ್ಯಭವಮಂ ಪೆಱದು ಪೆತ್ತೊಡಮಿಂತಾಗಿ ಪುಟ್ಟುಗುಂ (ಪಡ್ಡಾರಾ. ೧೦-೧೭) ; ಅಂತು ಮೂರ್ಛಿತನಾಗಿ ನೀಡಱಿ ನೆಟ್ಟನೆತ್ತು ರಣಕ್ರೀಡಾಸಕ್ತಂ ಸರಕ್ತಲೋಚನನಿವಂ ನಾಡಾಡಿಯ ಕೈದುಗಳಿಂ ಕೂಡದು ಗೆಲಲೆಂದು ಚಕ್ರಿ ಚಕ್ರಮನಿಟ್ಟಂ (ಪಂರಾಮಾ. ೧೬-೧೫); ಮರದಿಂ ಪಣ್ ಪಱಿದಂದದು ಧರೆಯಂ ಮುಟ್ಟುವುದದೆನಿತು ನೀಡಱಿದಱಿಂತರದನಿತೆ ಪುಟ್ಟು ಮರಣಂ ದೊರೆಕೊಳ್ವೊಡೆ (ಜೀವಸಂ. ೧೦-೧೪) ; ಈಗಲೆದ್ದೋಡಿ ಹೋಗುವೆವೆನುತ್ತೀರ್ವರುಂ ಪೊಱಮಟ್ಟು ನೀಡಿಲ್ಲದೆಯ್ತಂದರ್ (ವೀಶೈಪು. ೪-೯-೨೧). **೩.** ಸಮಯ ; ಹೊತ್ತು ; ಕಾಲ ; ವೇಳೆ : ಮೃಗಧರಂಗೆ ನಿಶಾಸತೀ ವರಮಾಲೆ ಸೂಡುವ ನೀಡಱೊಳ್ [ಪಾಠಾಂ. ನೀಳದೊಳ್] ದಿಗಧಿಪಾಳಿ ಘನಾವಳೀನವಪಾಟ ಕರ್ಮವಿತಾನಮಂ ನೆಗಪಿದಂತೆ (ಅನಂಪು. ೭-೭೪). **೪.** ತಡ ; ಸಾವಕಾಶ : 'ನೀಡುಂಮಾಡು' ಪರಾ. **೫.** ದೂರವಾದುದು ; ದೂರ : ಆ ನಾಡು ದಿವಕ್ಕೆ ತೋಡು ಕುಸುಮೇಷುಗೆ ಬೀಡು . . . ಸುಖಾಮೃತಕ್ಕೆ ನೀಗೊರ್ಡು ತಮಕ್ಕೆ ನೀಡು (ಪುಷ್ಪಪು. ೯-೧೮). **೬.** ಆಧಿಕ್ಯ ; ಹೆಚ್ಚಳ : "ನೀಡೆನಲ್ ಪೆರ್ಚು" (ಕಶರ. ೫೫). **೭.** ವಿಸ್ತಾರ; ವ್ಯಾಪ್ತಿ : (ಕಿ). **೮.** ದಾನ; ಉಂಬಳಿ (?) : ಕನ್ನಳ್ಳಿಯ ರಾಜಿಗದೊಳ್ತ × × ಚ್ಚನ್ ಕವಿತ್ತೊರನ್ ಪಸುವಳಿ ಧನವೆಟ್ಟಿ ಕೊನ್ದು ಬಿಟ್ಟಾರ್ ಅವರ್ಗೆ ಕೊಟ್ಟೊದು ತಿಜಣೆಯೂರ ನೀಡು ಇದ ನಱಿವೊ× × (ಎಕ. XI (S), ಹೊಳಲ್ಕೆ. ೧೬೯-೪ ; ಸು. 800). (ಗು). **೯.** ಉದ್ದವಾದ; ದೀರ್ಘವಾದ : 'ನೀಡುಂದೋಳ್', 'ನೀಡುಂಪೊಟ್ಟು' ಪರಾ.

**ನೀಡಾಗು** = ತಡವಾಗು ; ವಿಳಂಬವಾಗು : ನೀಡಾಗದೆ ಮದನ ಶರಂ ನಾಡೆಯುಮಿರದೆಯ್ದಿ ಹರನ ಹತ್ತಿರೆ ಬೀಳುತ್ತೋಡಿ ಬರೆ ಕಂಡು ಕಾಮಂ ಹೂಡಿದನುಣ್ಮುಣ್ಮನುತ್ತೆ ಮೋಹನಶರಮಂ (ಗಿರಿಕ. ೮-೨೯) ; ಶಿವಾರ್ಚನೆಗರ್ಘ್ಯಜಲಂಗಳೀವ ನೀಡಾಗದೆ ಸಾಧನಂಗುಡುವ . . . ತಾಪಸೇಂದ್ರರ ಕುಮಾರಿಯರೊಪ್ಪುಗುಂ (ಶಬಶಂ. ೨-೬೪). **ನೀಡಿರದೆ** = ತಡ ಮಾಡದೆ ; ವಿಳಂಬ ಮಾಡದೆ : ನೀಡಿರದೀವುದೀ ನಿಜತನೂಜೆಯನೀ ವಧುಗಾದ ಪುತ್ರರೊಳ್ ಕೂಡುಗೆ ರಾಜ್ಯಲಕ್ಷ್ಮಿ (ಪಂಪಭಾ. ೧-೭೩) ; ಆಹಾರಾಚ್ಛಾದನಂಗಳಂ ನಿಮ್ಮ ಮೆಚ್ಚಿದೆಡೆಯೊಳ್ ಎಡೆಮಾಡಿಕೊಂಡು ನೀಡಿರದೋದಿಂ (ಸುಕುಮಾ. ೨-೫೫ ಪ) ; ನಾಡವರೆಲ್ಲಂ ನೆರೆದುಂ ನೀಡಿರದಟ್ಯತರ್ಮ ಭಕ್ತಿಪೂರ್ವಕದಿಂ ಕೊಂಡಾಡೆ ಗುರುವೆಂದು(ಧರ್ಮಾಸ್ಮೃ. ೪-೧೯೨) ; ಏಟೀಂ, ನೀಡಿರದೆ ತುಡಿಸು ಸಂಕಲೆಗಳನ್ (ಬದ್ಧಪ್ರ. ೩-೬೦). **ನೀಡಿಲ್ಲದೆ** = ನೀಡಿರದೆ : ವಜ್ರಕಾಂಡಮೆಂಬ ನಿಜವಿಜಯ ಕಾರ್ಮುಕಕ್ಕೆ ಸುರಕರಿಕರಾನುಕಾರಿಯಪ್ಪ ನಿಜಭುಜಾದಂಡಮಂ ನೀಡಿ

ನೀಡಿಲ್ಲದೇಱಿಸಿ ಸೀವಿ ಜೀವ್ರೊಡೆದಾಗಳ್ (ಆದಿಪು. ೧೨-೪೭ ವ) ; ಮುನಿಜನಕ್ಕಿಪ್ಪಿವಿಘ್ನಂಗಳಂ ದಾರುಣದೈತ್ಯರ್ ಮಾಡೆ ನೀಡಿಲ್ಲದೆ ಸಲೆ ಚಲದಾಟೆಂದು ಕೊಂದಿಕ್ಕದೊರ್ವಂ ಗುಣಮುಂಟೆಂದುಂಡು ಪಟ್ಟಿರ್ಪನನಣಮೆ ನಿರುದ್ಯೋಗಿಯುಂ ಭೂಪನೆಂಬರ್ (ಪಂಪಭಾ. ೪-೧೧).

[**ದೇ.॥ ತಮಿ.** ನೀಟ್ಟ್, ನೀಟ್ಟು ; **ಮಲ.** ನೀಟ್ಟ್; **ತುಳು.** ನೀಟ, ನೀಟು]

**ನೀಡು$_3$** 'ನೀಡುಂ' ನೋ.

**ನೀಡುಂ,** ನೀಡು$_3$ (ಅ). ೧. ಅಧಿಕವಾಗಿ ; ಹೆಚ್ಚಾಗಿ ; ವಿಶೇಷವಾಗಿ : "ನಾಡೆಯೆಡೆಯಾವಗಂ ನೆಱೆ ನೀಡುಂ ಕರಮಾದಮೆಯ್ದೆ ನೂಳದು ಪಿರಿದುಂ ನೀಡು . . . ಇವನ್ಯಯದೊಳಧಿಕಾರ್ಥಂ" (ಶಮದ. ೩೦೪) ; ವಿನಿಹಿತಸಮಸ್ತರಿಪುಕುಳನನಿಮಿಷಲೋಚನದೆ ನೋಡಿ ನೀಡುಂ ಪ್ರಿಯೆಯುಂ ವಿಸಿಮಿಾಳಿತಲೋಚನೆಯುಂ ಜನಪತಿ ನಿಜಬಾಹುಯುಗದಿನಾಶ್ಲೇಷಿಸಿದಂ (ಕವಿರಾ.೨-೭೪); ಲಾಕ್ಷದ್ರವಾದಿಕಾರಿತ ಮಾಯಾರುಣಜಲಪರಿಪೂರ್ಣವಾಪಿಯುಂ ಸಮೆಯಿಸಿದೊಡದಂ ಕಂಡು ರಾಗಿಸಿ ಪೊಕ್ಕು ನೀಡು ಮೋಲಾಡಿ (ಆದಿಪು. ೨-೧೪ ವ) ; ಸದ್ಭೃತ್ಯರ ಲಕ್ಷಣಂಗಳ್ ನಿನಗೆ ನೀಡುಮೊಳವು (ಪಂಚತಂ. ೪೩-೧) ; ನಡು ನೀಡುಂ ಪೊಂಗೆ ಮೇನೆಗೆಸೆದುದು ಗರ್ಭಂ (ಗಿರಿಕ. ೨-೩೮) ; ತನ್ನರುಣಜಲದಿಂ ವಿಶುದ್ಧಾಮೃತದೆ ಭಕ್ತಿಯಿನ್ನೀಡುಮಭಿಷವಂಗೆಯ್ವಿ (ಪದ್ಮರಾ. ೧೧-೬೧); ಪರೋಪಕಾರಾರ್ಥಂ ಫಲಂಗಳಂ ಪೊತ್ತು ಫಲಭಾರದಿಂ ಬಾಗಿ ಕೈಕೊಳ್ವುದೆಂದೆಮಗೀಯಲ್ ನೀಡುಂ ನೀಡಿ ನಿಲ್ತಂತಿರ್ಪುವು ಮರಂಗಳ್ (ರಾಮಾಶ್ವ. ೮-೧೬). ೨. ಬಹಳಕಾಲದ ವರೆಗೆ ; ದೀರ್ಘಕಾಲದ ತನಕ : ಈತನಂ ನೀಡು ಮಱಸಿ ಕಾಣದೆ ದೆಸೆಗೆಟ್ಟು ಬೇಸತ್ತು (ವಡ್ಡಾರಾ. ೧೭೯-೬); ಏಗೆಯ್ದುಂ ನೆನೆಯುಳು ನೋಡಳು ನುಡಿಗೇಗೊಳ್ಳಳು ಜಾನಕಿ ತನ್ನೆರ್ದೆಯುಂ ತಾಗುತ್ತಿರೆ ನೀಡುಂ ನೆನೆದಳು ರಾಮನನು (ಕುಮುರಾ. ೪-೨೯) ; ಕಟ್ಟೊಲ್ಮೆಯೊಳಿವೆಯುಲುಗದೆ ನೀಡುಂ ನಿಟ್ಟಿಪ ನೀಱಿನ ಬಗೆ ಬಾಸೆಯು ಪುಲ್ವಟ್ಟೆ ವಿಡಿದು ನಡೆಯುತ್ತಿರೆ (ಜಯಕಾ. ೪-೧೦). ೩. ಚೆನ್ನಾಗಿ ; ಸರಿಯಾಗಿ : ಮುನ್ನಂ ವಿಚಿತ್ರಚಿತ್ರವಿದ್ಯಾಕೌಶಲಮನತಿಕುತೂಹಲೋತ್ತಾರಿತಲೋಚನನಾಗಿ ನೀಡುಂ ಭಾವಿಸಿ ನೋಡಿ (ಆದಿಪು. ೪-೪ ವ); ಪಟಳಸಹಿತಪರಾರ್ಘ್ಯರತ್ನಾಭರಣಮಂ . . . ಕೊಳ್ವುದೆಂದು ನಿಜಕರಪಲ್ಲವದಿಂ ದೂತನ ಹಸ್ತಕಿಸಲಯಕ್ಕೆ ನೀಡುವುದುಮಾತನದಂ ಕೆಯ್ಕೊಂಡು ನೀಡುಂ ಭಾವಿಸಿ ನೋಡಿ (ಶಾಂತಿಪು. ೩-೭೧ ವ) ; ಕೊಳ್ ನಿನ್ನ ನಚ್ಚಿನ ಪಾಂಡವರ ತಲೆಗಳಿವೆಯೆಂದು ದುರ್ಯೋಧನನ ಮುಂದಿಕ್ಕಿದೊಡಾ ಮಹಾನುಭಾವನಾ ತಲೆಗಳಂ ನೀಡುಂ ಭಾವಿಸಿ ನೋಡಿ (ಗದಾಯು. ೯-೩೨ ವ) ; ಅಕ್ಷೂಣಲಕ್ಷಣಲಕ್ಷಿತಂಗಳಪ್ಪ ಪುತ್ರನಂಗಪ್ರತ್ಯಂಗಂಗಳಂ ನೀಡುಂ ಭಾವಿಸಿ ನೋಡಿ (ಚಂದ್ರಪು. ೩-೧೦೨ ವ) ; ಸರ್ವಮಂಗಳಾದೇವಿ ತನ್ನಂದನದೊಳ್ ನಡೆತಂದು ಕಾಸಾರತೀರದ ನುಣ್ಬಸಲೆಯನಲಂಕರಿಸಿ ನಿಂದು ನೀಡುಂ ನಿರೀಕ್ಷಿಪಾಗಳ್ (ರಾಜಶೇ. ೧೦-೬೧ ವ). ೪. ದೂರದವರೆಗೆ : ಲಲನಾಮಂಜೀರನಾದಕ್ಕೆಳಸುವ ಕಳಹಂಸಗಳಿಲ್ಲ ಕಂಡು ಬೆಂಬೆನ್ನೊಳೆ ನೀಡುಂ ಪೋಪ ಕಾಂತಾಭವನಹರಿಣಶಾಬಂಗಳೆತ್ತಂದು ಚಂದ್ರೋಪಳಭಿತ್ತಿಪ್ರಾಂತದೊಳ್ ಮಾರ್ಪೊಳೆಯಲ್ (ಕಾದಂಪೂ. ೩೫೮). **ನೀಡು$_3$ :** ೨. ಮಲರೊಳ್ ಸಾರ್ದವನ ಮೇಲಡಿಯ ಸೇರ್ದವರ್ ನೆಲದೊಳ್ ನೀಡು ಬಾಟ್ಟಿರ್ (ಕುಱಳ್. ೧-೧-೩). [<ನೀಡು$_2$]

**ನೀಡುಂಗಯ್** 'ನೀಡುಂಗೈ' ನೋ.

**ನೀಡುಂಗೈ,** ನೀಡುಂಗಯ್, ನೀಡುಗೈ (ನಾ). ೧. ಚಾಚಿದ ಕೈ ; ನೀಡಿದ ಕೈ : ಹೊಯ್ಸಳದೇವ ವಿಷ್ಣುವರ್ಧನನು ನಡೆದಾಗ . . . ಜನ ನೀಡುಂಗೈಗಳಿಂದ ವಂದಿಸಿತು (ಸವತಿ. ೨). **ನೀಡುಂಗಯ್ :** ೧. ಆಕೆಗೆ ಬಾಗಿ ಮುಗಿದ ನೀಡುಂಗಯ್ಗಳಿಂದ ವನ್ದಿಸುವರು (ಬೆಟ ಅ. ೧೨-೧೦). **ನೀಡುಗೈ :** ೨. ಈಯುವ ಕೈ ; ಕೊಡುಗೈ : ಗಂಡನ ಔದಾರ್ಯದ ನೀಡುಗೈ, ಹೇಗೆ ಸಾಲದ ಕೊಳ್ಳುಗೈಯಾಯಿತು ಎಂಬುದನ್ನು ಆಕೆ ಒಂದೊಂದಾಗಿ ನೆನೆದಳು (ಮುಗಿಯು. ೭೯೬).

[ನೀಡು$_1$+ಕೈ$_2$(<ಕೆಯ್$_2$)]

**ನೀಡುಂದೋಳ್** (ನಾ). ಉದ್ದವಾದ ತೋಳು ; ದೀರ್ಘಬಾಹು: ಮುಕ್ಕುಱುವಲ್ ಮುಂದವೊಗ ನೀಡುಂದೋಳಿಕ್ಕಲವಂ ಪೊದಮೆಯ್ಯೊಳೆಸೆವ ಪಲರಕ್ಕಸಿಯರ ತಂಡಂ ನಡೆತಂದುದು (ಜಯಕಾ. ೭-೨೭).

[ನೀಡು$_2$+ತೋಳ್]

**ನೀಡುಂಪೊಟ್ತು** (ನಾ). ಬಹಳ ಹೊತ್ತು; ದೀರ್ಘಕಾಲ : ಪುಷ್ಪಾಯುಧನ ಕೊಂದ ಕೊಳ್ಗೊಳ ಪೋಲ್ತು ಪೂಗೊಳದೊಳ್ ಸೌಜನ್ಯಕಂದಾಂಕುರನುಮಪ್ಪ ವಜ್ರಾಯುಧಂ ಪ್ರಮತ್ತನುಮೇಕರಸನುಮಾಗಿ ನೀಡುಂಪೊಟ್ತು ಜಳಕ್ರೀಡಾವಿನೋದದೊಳಿರೆ (ಶಾಂತಿಪು. [illegible]೭ ವ).

[ನೀಡು$_2$+ಪೊಟ್ತು]

**ನೀಡುಂಮಾಡು,** ನೀಡುಮಾಡು (ಕ್ರಿ). ೧. ತಡಮಾಡು ; ನಿಧಾನಿಸು : (ಕ). **ನೀಡುಮಾಡು :** ೨. ನೀಳವಾಗಿಸು ; ಎತ್ತರಿಸು : ಪೊಂದೇರನಳವಡಿಸಿ ತುರಗಂಗಳಂ ಪೂಡಿ ಸಿಂಧಮಂ ನೀಡು [ಪಾಠಾಂ. ನಿಡಿದು]ಮಾಡಿ . . . ಬಂದಡರ್ದಂ ಜಯರವದೊಳಾ ಸುಧನ್ವಂ (ಜೈಮಿಭಾ. ೧೨-೪). [ನೀಡು$_2$+ಮಾಡು$_1$]

**ನೀಡುಗೈ** 'ನೀಡುಂಗೈ' ನೋ.

**ನೀಡುನಾಲಗೆ** (ನಾ). ಉದ್ದವಾದ ನಾಲಗೆ ; ಚಾಚಿದ ನಾಲಗೆ : ಕೂಡಿದವು ಪುರ ಮೂಱು ನಿಮಿಷದೊಳೀಡಿಱಿದುದುರಿ . . . ಹೊಗೆಯ ಜೋಡಿಯ ನೀಡುನಾಲಗೆ ಪುರದ ಸುತ್ತಲು ಕೂಡೆ ವೇಢಯಮಾಯ್ತು (ಕುಮಾರ್ಯಕ. ೭-೪೦). [ನೀಡು$_2$+ನಾಲಗೆ]

**ನೀಡುಮಾಡು** 'ನೀಡುಂಮಾಡು' ನೋ.

**ನೀಡುಮೊನೆ** (ನಾ). ೧. ಚಾಚಿದ ತುದಿ,—ಅಗ್ರಭಾಗ : ಜಾಡಿಸುವ ಮಣಿಮಯದ ಗದೆಯಲಿ ತೋಡುವೊಯ್ಲಿನ ತುಡುಕುಗಾಯದ ನೀಡುಮೊನೆಗಳ ವಿಗಡನಿಕ್ಕಿದನದಟರಕ್ಕಸರ (ಕುಮಾರ್ಯಅ. ೧೦-೫೨). ೨. ಉದ್ದವಾದ ಅಲಗು,—ಧಾರೆ : ಜೋಡನೊಡೆದವಯವದ ರಕುತವ ತೋಡಿದವು ಕೂರಂಬು ಸಬಳದ ನೀಡುಮೊನೆ ನಿಱಿಗರುಳನೆಂಜಲಿಸಿದವು ಪಟುಭಟರ (ಕುಮಾರ್ಯಕ. ೧೦-೧೦). [ನೀಡು$_1$+ಮೊನೆ$_1$]

**ನೀಡೋದ್ಭವ**(ನಾ). = ನೀಡಜ: "ಖಗಃ, ವಿಹಂಗಃ...ನೀಡೋದ್ಭವಃ, ಗರುತ್ಮಾನ್, ಪಿತ್ಸನ್, ನಭಸಂಗಮಃ — ೨೭ ಸಾಮಾನ್ಯವಾಗಿ ನಾನಾ ಬಗೇ ಪಕ್ಷಿಗಳೆಲ್ಲಕ್ಕೂ ಹೆಸರುಗಳು" (ಸಿದ್ಧಾಂತಿ.೧೬೩). [ನೀಡ+ಉದ್ಭವ]

**ನೀತ** (ಗು). ೧. ಮಾರ್ಗದರ್ಶನ ಮಾಡಿದ; ಮುನ್ನಡೆಸಲ್ಪಟ್ಟ. ೨. ತಂದ ; ತರಲ್ಪಟ್ಟ. (ನಾ). ೩. ಸರಿಯಾದುದು ; ಯೋಗ್ಯವಾದುದು ; ವಿಹಿತವಾದುದು : ಈ ಸತಿಸುತರಿಗೆ ಹೊನ್ನೆಷ್ಟು ಪೇಳೆನೆ ಮಾತನಾಡಿದನು ಭೂಪಾಲ ದಾತ ನೀ ಪಾಲಿಸು ನಿನ್ನ ಚಿತ್ತದೊಳುಳ್ಳ ನೀತವಾಗಿಹ ಹೊಸ ಹೊನ್ನ (ಹರಿಸಾಂ. ೩-೧೧೨); ಅನುಚಿತ ಕಾರ್ಯಮನವನೊಡರಿಸೆ ಕಂಡು ನಿನಗಿದು ನೀತವಲ್ಲೆಂದು . . . ಬಿನ್ನವಿಪುದು (ಹದಿಬ. ೩-೨೯) ; ಉತ್ತಮಾಂಗವನೆತ್ತಿ ಮೊಗ ನೋಡುತ್ತ ಸರಸೋಕ್ತಿಗಳ ನುಡಿಯದೆ ಹೊತ್ತುಗಳೆವುದು ನೀತವೇ ಪೇಳು (ಅನಂರಾ. ೨-೧-೩೫). ೪. = ನೀತವಿಭೂತಿ : ಶ್ರೀತರುಣಿವಲ್ಲಭನ ಪರಮವಿಭೂತಿರೂಪವ ಕಂಡಕಂಡಲ್ಲೀ ತೆರದಿ ಚಿಂತಿಸುತ ಮನದಲಿ ನೋಡು ಸಂಭ್ರಮದಿ ನೀತ ಸಾಧಾರಣ ವಿಶೇಷ ಸಜಾತಿ . . . ಬಗೆಗಳನರಿತು ಬುಧರಿಂದ (ಹಸಾರ. ೫-೧). [**ಸಂ.**]

**ನೀತದೇಶ** (ನಾ). ಒಳ್ಳೆಯ ಮಾರ್ಗದರ್ಶನ ಹೊಂದಿದ ನಾಡು ; ಚೆನ್ನಾದ ಆಡಳಿತ ಹೊಂದಿರುವ ನಾಡು : ನೀತದೇಶದ ಮಧ್ಯೆ ನೀತಿಯ ಮನೆಯಿಹುದು ಪಾತಕರಿಗಹುದು ಸೆಜೆಮನೆಯುಂ ಅರಮನೆ ಪುನೀತರಿಗೆ (ಸರ್ವಜ್ಞ. ೧೨೩೬). [ನೀತ+ದೇಶ]

**ನೀತವಿಭೂತಿ** (ನಾ). [ದ್ವೈತ] ಹತ್ತುಬಗೆಯ ವಿಭೂತಿಗಳಲ್ಲಿ ಒಂದು ; ಭಗವಂತನಿಗೆ ಹೇಳಿರುವ ಈಶ್ವರತ್ವ ಧರ್ಮಗಳಲ್ಲಿ ಒಂದು ; ದೇವರ ವಿಶೇಷಸಾಮರ್ಥ್ಯಗಳಲ್ಲಿ ಒಂದು; ☞ ಗಂಡಕೀ ನದಿಯಲ್ಲಿ ಸ್ವಯಮುದ್ಭೂತವಾದ ಹಾಗೂ ಭಗವದ್ರೂಪವೇ ಎಂದು ಭಾವಿಸಲ್ಪಟ್ಟಿರುವ ಸಾಲಿಗ್ರಾಮಶಿಲೆಗೆ ಈ ಹೆಸರಿದೆ : ಈ ವಿಭೂತಿಗಳಲ್ಲಿ ೧೦ ವಿಧಗಳುಂಟು. ಸಾಮಾನ್ಯವಾಗಿ ಸ್ವಭಾವದಿಂದಲೂ ಸ್ವಯಂವ್ಯಕ್ತವಾಗಿ ಭಗವದ್ರೂಪಗಳೆಂದು ಪ್ರಸಿದ್ಧಿ ಪಡೆದ ಸಾಲಿಗ್ರಾಮಗಳು ನೀತವಿಭೂತಿಯೆಂದು ಹೇಳಬೇಕು (ಹಸಾರ. ೫-೧ ತಾತ್ಪರ್ಯ). [ಸಂ.]

**ನೀತಿ** (ನಾ). **೧.** ಒಯ್ಯುವಿಕೆ. **೨.** ಮಾರ್ಗದರ್ಶನ ; ಮುನ್ನಡೆಸುವಿಕೆ. **೩.** ಒಳ್ಳೆಯ ನಡತೆ ; ಸಚ್ಚಾರಿತ್ರ್ಯ ; ಶಿಷ್ಟಾಚಾರ : ಆದಱಿಂ ನೀತಿಯೆ ಸಾಧನಂ ಸಕಲಲೋಕಕ್ಕಾಗಬೇಕೆಂದು ಪೇೞ್ದ ಸೋಮಂ ಸುಜನರ್ಕಳೀ ಶತಕದೊಳ್ ತಪ್ಪಿರ್ದೊಡಂ ತಿದ್ದಿ ತೋರ್ಪುದು (ಸೋಮೇಶ. ೨); ನೀತಿಯನೊಕ್ಕು ವಿಜಾತಿಯ ಮಾತನೆ ಮನ್ನಿಪ ವಸಂತನೃಪನಿಂ ಕಿಡುಗುಂ ಜಾತಿಯ ಸಿರಿಯುೞಿದಿದ್ದು ಕುಜಾತ ಕುಲದ ಲಕ್ಷ್ಮಿ ಬಳೆವುದೇಂ ವಿಸ್ಮಯಮೇ (ಪಾರ್ಶ್ವಪು. ೯-೭೦); ನೀತಿಯೆ ರೂಪುಗೊಂಡ ತೆಜದಿಂ ನೆಲಸಿರ್ಪ ಮಹಾಪ್ರಧಾನರಿಂ . . . ಪ್ರಭೂತಮಾಂಧಾತನ ರಾಜ್ಯದಂತಿಳೆಗೆ ದಕ್ಷಿಣಚಕ್ರಿಯ ರಾಜ್ಯಮೊಪ್ಪುಗುಂ (ಸೂಕ್ತಿಸು. ೫-೨೧); ನೀತಿಯುಳ್ಳವನ ಮನೆದೀಪದಲ್ಲಿ ಜಾತಿಭೇದವೇನು? (ಗಾದೆ). **೪.** ಧರ್ಮ ; ನ್ಯಾಯ : ನೀತಿಯೆ ತಾಯೆ ಪೈತ್ರಿಕಮಾದೊಡಮಾಡಲಮೋಘಮೆನ್ನೊಳೀ ಮಾತಂ (ನೇಮಿಪು. ೭-೧೪೫) ; ನೀತಿ ಬಲಿದುದೊ ಶಾಂತಿ ರೂಪಾಯ್ತೊ . . . ಎಂಬ ಚಾತುರ್ಯದಿಂದಿರ್ದ ಮುನಿನಾಥನಂ ಕಂಡು (ಪಜಕಾ. ೫-೬೭) ; ಗೋಪವಾಹನ ಭಕ್ತಹಿಂಸೆಯನೀ ಪರಿಯೊಳೆಲೊ ಕೇಳುತಿರ್ದು ಪಾಪವೆನ್ನದೆ ಸುಮ್ಮನಿಹುದಿದು ನೀತಿಯೇ ನಿನಗೆ (ಬಸಪು. ೬೧-೧೮); ನೀತಿಯುಳಿ ನೀವಿನ್ನು ಪಾಲಿಸಿ ಭೂತಳವನುಱೆ ಕಳೆದ ಬಂಧುವ್ರಾತಕುದಕವನೀವುದು (ಕುವ್ಯಾಗ. ೧೧-೬೯); ಒರೆಗಲ್ಲಿನಂತೆ ವಿಧಿಯಿರಲು ನೀತಿಯ ಇರವು ಬೇಱೆಂದ (ಸರ್ವಜ್ಞ. ೧೧೮೬); ಸತತ ಬಿನದಮೇ ನಮ್ಮಯ ನೀತಿ ! (ಅಹಲ್ಯೆ. ೩-೭). **೫.** ಒಳ್ಳೆಯ ಉಪದೇಶ ; ಹಿತೋಕ್ತಿ : ಇನಿತು ನೀತಿಯ ಕೇಳಿ ಮನದಲಿ ನೆನೆಯನಕಟಾ ಪಾಪಿರಕ್ಕಸನೆನಿತು ಮೂರ್ಖನೊ.(ಕೌಶಿಂ. ೧೪-೨೪). **೬.** ರಾಜನೀತಿ ; ಅರ್ಥನೀತಿ ; ರಾಜ್ಯಾಡಳಿತ ತಂತ್ರ : ಸಾಮವೆಂಬುದು ರಾಜನೀತಿಗೆ ತಾ ಮನೋಹರರೂಪು . . . ಸಾಮ ತಪ್ಪಿದ ಬಳಿಕ ನೀತಿ ವಿರಾಮವಾಗದೆ ಬಿಡದು (ಕುವ್ಯಾಉ. ೯-೫). **೭.** ವಿವೇಕ ; ಸಾರಾಸಾರವಿಚಾರ ; ವಿವೇಚನೆ : ನೀವಿಂತತ್ಯಾತುರರುಂ ಕೋಪಾತುರರುಮಾಗಿ ನುಡಿವುದು ನೀತಿಯಲ್ಲ (ಪಂಚತಂ. ೨೮೯-೧೭); ಬಳೆಯಿಸುವುದು ನೀತಿಯೆ ವಿರೋಧಿಯಂ ವ್ಯಾಧಿಯುಮಂ (ಜಗವಿ. ೩-೨೨). **೮.** ತಂತ್ರ ; ಯುಕ್ತಿ. **೯.** ಕಾರ್ಯನೀತಿ ; ಧೋರಣೆ: ಪತ್ರಿಕೆಯ ನೀತಿಯನ್ನು ನಿಯಂತ್ರಣ ಮಾಡುವವ ಮುಖ್ಯಸಂಪಾದಕ (ಕವಿಕೋ. I, ೧೮೬).

ನೀತಿನಿಧಾನ = ರಾಜನೀತಿಗೆ ಆಶ್ರಯನಾದವನು ; ಒಂದು ಬಿರುದು : ತತ್ಪಾದಪದ್ಮೋಪಜೀವಿ ಸಮಧಿಗತಪಂಚಮಹಾಶಬ್ದಂ ಮಹಾಸಾಮನ್ತಾಧಿಪತಿ . . . ನೀತಿನಿಧಾನಂ (ಕೌಇಇ. XX, ೬೦-೬ ; 1088). ನೀತಿಪಾರಾಯಣ = ರಾಜ್ಯನೀತಿವಿಶಾರದ ; ರಾಜನೀತಿಜ್ಞ ; ಒಂದು ಬಿರುದು : ಸಮಧಿಗತಪಂಚಮಹಾಶಬ್ದ ಮಹಾಸಾಮಂತಾಧಿಪತಿ ಮಹಾಪ್ರಚಣ್ಡದಣ್ಡನಾಯಕಂ . . . ನೀತಿಪಾರಾಯಣಂ ಸ ರ್ಯ್ಯನಾರಾಯಣಂ (ಕೌಇಇ. XX, ೪೬-೩೩ ; 1072). [ಸಂ.]

**ನೀತಿಕಥೆ** (ನಾ). ಬಾಳಿಗೆ ಮಾರ್ಗದರ್ಶನವನ್ನು ನೀಡುವ ಕಥೆ ; ನೀತಿಯನ್ನು ಬೋಧಿಸುವ ಕಥೆ : ಈ ಕಥೆಗಳನ್ನು ಸ್ಪರ್ಧಿಸಿ ಅನೇಕ ನೀತಿಕಥಾಸಂಗ್ರಹಗಳು ಹುಟ್ಟಿದವು (ಸೀತಿಚಿಂ. II, ಅರಿಕೆ) ; ಮಕ್ಕಳಿಗೆ ನೀತಿಕಥೆಗಳನ್ನು ಓದಲು ಹೇಳಬೇಕು (ರೂಢಿ). [ನೀತಿ+ಕಥೆ]

**ನೀತಿಕಾಱ** (ನಾ). ನೀತಿಯಿಂದ ಕೂಡಿರುವವನು ; ಸಚ್ಚರಿತ್ರ : ನೀತಿಕಾಱನ ಮಾತದೇಕೆ ತಪ್ಪುಗುಂ (ಪಂಚತಂ. ೧೩೬-೧೨); ಸಿರಿಯ ಮದವೆಂಬಧಿಕತಾಮಸ ದೊರೆಕಿದಕ್ಷಿಗೆ ನೀತಿಕಾಱರ ಪರಮವಚನಾಂಜನದಿ ಪ್ರಜ್ವಲಿಸುವುದು ನಯವೆಂದ (ಕುವ್ಯಾಉ. ೯-೨). [ನೀತಿ + -ಕಾಱ]

**ನೀತಿಕೆ** (ನಾ). [ಛಂದ] ಪ್ರತಿಪಾದದಲ್ಲಿ ಹನ್ನೊಂದು ಅಕ್ಷರಗಳಿರುವ ಒಂದು ವರ್ಣವೃತ್ತ : ನೀತಿಕೆ-ನರರಲಗಂ (ಛಂದೋಂಬು. ೨-೧೨೮ ಅಡಿಟಿ). 'ಮಾಣಿಕ್ಯ' ಪರಾ. [ಸಂ. ನೀತಿಕಾ]

**ನೀತಿಕೋವಿದ** (ನಾ). ನೀತಿಯನ್ನು ಆಳವಾಗಿ ಅರಿತವನು ; ನೀತಿಜ್ಞ : ಆರು ಹಿತವರು ನೀತಿಕೋವಿದರಾರು ಸುಜನರು ಬಹುಪರಾಕ್ರಮರಾರವರ ಹೊಱಬೀಸಿ ಕಾಬುದು ನಿನ್ನ ಮತ (ಕುವ್ಯಾದ್ರೋ. ೧-೬); ಲೋಕಮಾನ್ಯಟಿಳಕರ ಗೀತಾರಹಸ್ಯದಲ್ಲಿ ಐರೋಪ್ಯ ನೀತಿಕೋವಿದರ ಅಭಿಪ್ರಾಯಗಳು ಬಂದಿವೆ (ಧರ್ಮಸಾ. ಪರಿ. ೧೪೪). [ನೀತಿ+ಕೋವಿದ]

**ನೀತಿಕ್ಷತಿ** (ನಾ). ನೀತಿಯ ನಾಶ ; ಧರ್ಮಕ್ಕೆ ಒದಗುವ ಹಾನಿ,— ಕೇಡು : ವಿತತಾಭಿಮಾನ ನೀತಿಕ್ಷತಿಗಂ ಶಿವಭಕ್ತಿಧರ್ಮ ನಿರ್ಮಳಕೀರ್ತಿಚ್ಯುತಿಗಧಟನಪ್ಪೊಡಂ ಭೂಪತಿಯುಳ್ಳಲ್ಲೇಳ್ಕುಂ (ರಾಜಶೇ. ೧೩-೨೨). [ನೀತಿ+ಕ್ಷತಿ]

**ನೀತಿಗಳೆ** (ಕ್ರಿ). ಧರ್ಮವನ್ನು ಕೆಡಿಸು ; ನ್ಯಾಯಮಾರ್ಗವನ್ನು ಬಿಡು : ರಾಜ್ಯಪದವಿಯಲ್ಲಿ ಸೋತ ಮನದವನಲ್ಲ ಭುವನಖ್ಯಾತನೆನಿ ಪೊಂದಾಶೆಯನು ದಿಟ ನೀತಿಗಳೆದರೆ ಬಳಿಕ ನಿಮ್ಮಯ ಮೊಮ್ಮನಲ್ಲೆಂದ (ಕುವ್ಯಾಭೀ. ೧೦-೩೨). [ನೀತಿ+ಕಳೆ$_1$]

**ನೀತಿಗಾಮಿ** (ನಾ). ನೀತಿಮಾರ್ಗದಲ್ಲಿ ನಡೆಯುವವನು : ಸ್ವಾಮಿಕಾರ್ಯವೆ ಮುಖ್ಯವಾಗಿ ನಡೆಯುವ ಮನುಜ ನೇಮಿಸಲು ನೂರರೊಳ ಗೋರ್ವನಾತನು ನೀತಿಗಾಮಿಯೆನ್ನಿಸಲವನ ಜನಪದಂ ನಂಬುವದು (ಕೃಷ್ಣವಿ. ೪-೨೫). [ಸಂ. ನೀತಿಗಾಮಿನ್]

**ನೀತಿಗೆಡಿಸು** (ಕ್ರಿ). **೧.** ಧರ್ಮಮಾರ್ಗವನ್ನು ತಪ್ಪಿಸು. **೨.** ನಡೆಗೆಡಿಸು ; ಸೋಲಿಸು : ಆತನನು ಗೆಲಿದನು ಸುನಾಭನ ನೀತಿಗೆಡಿಸಿ . . . ಮಹಾತಿಬಲನವನೊಡನೆ ಬಲುಹಾಯ್ತರ್ಜುನನ ಸಮರ (ಕುವ್ಯಾಸ. ೩-೧೮). [ನೀತಿಗೆಡು+-ಇಸು$_3$]

**ನೀತಿಗೆಡು** (ಕ್ರಿ). ಧರ್ಮಮಾರ್ಗವನ್ನು ಬಿಟ್ಟು ನಡೆ; ಅಪಮಾರ್ಗವನ್ನು ಹಿಡಿ ; ಶೀಲಗೆಡು : ದುರ್ಜನೋಪಗತೋದ್ದೇಶದೊಳಂ ಪಣ್ಯವರ್ಮವೀಧಿವ್ರಾತದೊಳ್ ಮಾವಗಂ(?)ತಗುಣಾತ್ಮರ್ ವಿನಯಪ್ರಹೀಣರವಿನೀತರ್ ನೀತಿಗೆಟ್ಟಾಡುವರ್ (ಸುಕುಮಾ. ೨-೭) ; ಸಲೆ ಮಾಯಾಮೋಹವಾಚ್ಛಾದಿಸೆ . . . ನೆಲೆಗೆಟ್ಟಂ ನೀತಿಗೆಟ್ಟಂ (ರಕ್ಷಾ.ಶ. ೫೩); ಅಂಧಕಾಸುರನು ನೀತಿಗೆಡೆ ಬಳಿಕವರ ರಾಜ್ಯದ ಭೂತಳದ ಸಪ್ತಾಂಗವೆಲ್ಲ ವನಾತನಾಳಿದ ಬಹಳದಿನ ವೃಷಪರ್ವನೆಂಬಸುರ (ಸಂಭಪ. ಪರಿ. ೨-೨) ;

ಗಗನಕೆದುರು ನಿಂತಿದೆ ತರು ಮಸಿಯ ಚಿತ್ರನಂದದಿ ಹೃದಯವಶದೆ ನೀತಿಗೆಟ್ಟು . . . ಅನಾಥೆಯಂದದಿ ! (ಅನಿಕೇ. ೧೪–೫).
[ನೀತಿ+ಕೆಡು$_1$]

**ನೀತಿಚಾಣಕ್ಯ** (ನಾ). ರಾಜ್ಯತಂತ್ರದಲ್ಲಿ ಚಾಣಕ್ಯನಂತಿರುವವನು ; ರಾಜ್ಯನೀತಿಯಲ್ಲಿ ಕುಶಲನಾದವನು : ಮಂತ್ರಿಮಾಣಿಕ್ಯ ನೀತಿಚಾಣಕ್ಯ ನಿಯೋಗಯೋಗಂಧರಂ . . . ಅಗಣಿತಪುಣ್ಯಗಾತ್ರನೆನಿಸಿದ ಸೋವಿದೇವದಣ್ಡಾಧೀಶ್ವರ (ಎಕ. VIII, ಸೊರಬ. ೨೭೬–೩೯ ; 1070). [ನೀತಿ+<ಚಾಣಕ್ಯ]

**ನೀತಿಜಡ** (ನಾ). ಧರ್ಮವನ್ನು ತಿಳಿಯದವನು : ಮಂದಬುದ್ಧಿಯ ನೀತಿಜಡನಾದ ವ್ಯಕ್ತಿಗೆ ಮಾತ್ರ ಮುಡಿಪಾದ ಸ್ಥಾನವದು (ಪುನರು. ೩೯೨).
[ನೀತಿ+ಜಡ]

**ನೀತಿಜ್ಞ** (ನಾ). ೧. ನಯನೀತಿಗಳನ್ನು ತಿಳಿದವನು ; ವ್ಯವಹಾರಕುಶಲ : ತನ್ನ ಕಾರಿಯಕಾರಣವನುಳಿದನ್ಯಥಾಚಿಂತೆಯನು ಮಾಡುವುದುನ್ನತಿಕೆ ತಾನಲ್ಲ ನೀತಿಜ್ಞರಿಗೆ ಭಾವಿಸಲು (ಕುಮಾ. ೩–೭). ೨. ರಾಜ್ಯತಂತ್ರನಿಪುಣ; ರಾಜ್ಯನೀತಿಯಲ್ಲಿ ಕುಶಲನಾದವನು : ನಿಮ್ಮ ನಿಮ್ಮೊಂದು ಚೇತನದೊಳ್ ಪುಟ್ಟಿದ ಕಾರ್ಯಬೀಜಮನದಂ ನೀತಿಜ್ಞರಿರ್ ಪೇಟಿರೇ (ಶಾಂತಿಪು. ೨–೩೦) ; ಈ ನಪುಂಸಕರುಗಳ ನಂಬಿದ ನಾನು ನೀತಿಜ್ಞನೆ (ಕುಮಾಭೀ. ೮–೬೭) ; ನೀತಿಜ್ಞಂ ನಿಜನಿತ್ಯತತ್ತ್ವನಿಪುಣಂ . . . ರಾಜೇಂದ್ರಚಕ್ರೇಶ್ವರಂ (ಹಮ್ಮಿರ. ೧–೨೭) ; ಬಾಹ್ಯವಾದ ಉಪಪ್ಲವ ಒದಗಿದಾಗ ಕೌಟಿಲ್ಯಾದಿ ನೀತಿಜ್ಞರು ರಾಜರಿಗೆ ಮಾರ್ಗದರ್ಶಿಗಳಾಗಿದ್ದಾರೆ (ಮುಕ್ತಾರ. ೧೦೬ ಪೀಠಿಕೆ). [ಸಂ.]

**ನೀತಿದಪ್ಪು** (ಕ್ರಿ). = ನೀತಿಗೆಡು : ವಿಘಾತಿಸಿತು ಸುಪ್ರೀತಗಿತ್ತ ಹಮಾತಿದಿಂದುವಿರದೆ ನುಡಿ ಪ್ರಖ್ಯಾತಮಾಗಿದು ನೀತಿದಪ್ಪಿದ ಪಾತಕದಿ ನೆರೆದೇತಜಿದು ಸುಖಮಾತುರದೊಳು ನಡೆದೆ (ಛಂದೋಂಬು. ೬. ೮೬).
[ನೀತಿ+ತಪ್ಪು$_1$]

**ನೀತಿದೂರ** (ನಾ). = ನೀತಿಬಾಹಿರ ೨ : ಆರಿಗೆ ದೂರುವೆನಾರೊಳು ಹೋರುವೆ ಭೂರಮಣನೆ ನೀತಿದೂರನೆಂದನಿಸೆ (ಶಾಕುಂತ. ೭೩ ಅಡಿಟ).
[ನೀತಿ+ದೂರ]

**ನೀತಿನಿಪುಣ** (ನಾ). = ನೀತಿಜ್ಞ ೧ : ನೀತಿನಿಪುಣ ಸುಜಾಣ ವಿತರಣವ್ರಾತ ಚೂಡಾರತ್ನ . . . ಭುವನಕೆ ದಾತಾರ ಮರ್ಘು ಭಾಪು ಭಾಪೆಂದಾತುರದಿ ಕೈಯೆತ್ತಿ ಪೊಗಳ್ದರು ನೃಪರು ಪಾಠಕರು (ನಾಗಷ. ೬–೮೧) ; ನಿಂದಿಸಲಿ ಮಗೆ ನೀತಿನಿಪುಣರು ಬಂದು ನೆಲಸಿಹ ಸಿರಿಯು ತೊಲಗಲಿ ಇಂದೆ ಮರಣವು ಬರಲಿ ಸುಜನರದೆಂದಿಗೂ ಸತ್ಯವನು ಮೀರರು (ನೀಸಾರಾ. ೩೨). [ನೀತಿ+ನಿಪುಣ]

**ನೀತಿನಿಪುಣತೆ** (ನಾ). ನಯನೀತಿಗಳನ್ನು ತಿಳಿದಿರುವಿಕೆ ; ವ್ಯವಹಾರಕೌಶಲ : ನೀತಿನಿಪುಣತೆಗಾದಿಗುರು ವಿಖ್ಯಾತಿ ವಿತರಣಶೀಲ (ನಾಗಷ. ೯–೮೭). [ನೀತಿ+ನಿಪುಣತೆ]

**ನೀತಿನಿಯಂತ್ರಣ** (ನಾ). ಧೋರಣೆಯನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ; ನಿಶ್ಚಿತವಾದ ನೀತಿಯನ್ನು ಪರಿಪಾಲಿಸುವುದು: ನೀತಿನಿಯಂತ್ರಣ ಅಂದರೆ ತನ್ನ ನಿಶ್ಚಿತನೀತಿಯನ್ನು ಆಚರಣೆಗೆ ತರುವ ರೀತಿ ಪತ್ರಿಕೆಯ ಇಡಿ ಜೀವನವನ್ನೆಲ್ಲ ಆವರಿಸಿರುತ್ತದೆ (ಕವಿಕೋ. I, ೧೮೬). [ನೀತಿ+ನಿಯಂತ್ರಣ]

**ನೀತಿಪಥ** (ನಾ). = ನೀತಿಮಾರ್ಗ ೧ : ಈತಂಗೆ ಸಚಿವಂ ಸುಬುದ್ಧಿಯೆಂಬವನೊರ್ವಂ . . . ನೀತಿಪಥಮಂ ಬಿಡದೆ . . . ಪರಿಜನಕೆ ಪದುಳಿಗನಾಗಿ ಭೂಪನಂ ಪೋಷಿಸುವನು (ಜೈಮಿಭಾ. ೧೭–೧೩).
[ನೀತಿ+ಪಥ]

**ನೀತಿಪಾಠ** (ನಾ). ನೀತಿಯನ್ನು ಬೋಧಿಸುವುದು ; ವ್ಯವಹಾರಕುಶಲತೆಯನ್ನು ಹೇಳಿಕೊಡುವುದು : ಹಿಂದಿನ ಕಾಲದಲ್ಲಿ ಶಾಲೆಗಳಲ್ಲಿ ನೀತಿಪಾಠವಿತ್ತು (ರೂಢಿ). [ನೀತಿ+ಪಾಠ$_2$]

**ನೀತಿಪೌಷ್ಕಲ್ಯ** (ನಾ). ಧರ್ಮದ ಆಧಿಕ್ಯ,—ಹೆಚ್ಚಳ : ವ್ಯಾವಹಾರಿಕವಾದ ನೀತಿಪೌಷ್ಕಲ್ಯಕ್ಕೂ ಆಧ್ಯಾತ್ಮಿಕವಾದ ತೃಪ್ತಿ—ಆನಂದಕ್ಕೂ ಈ ಜ್ಞಾನವೇ ಸಾಧಕ (ಮುಕ್ತಾರ. ೪ ಪೀಠಿಕೆ).
[ನೀತಿ+ಪೌಷ್ಕಲ್ಯ]

**ನೀತಿಬಾಹಿರ** (ನಾ). ೧. ನೀತಿಯಿಂದ ಹೊರತಾದುದು ; ಧರ್ಮದಿಂದ ದೂರವಾದುದು : ಈ ಕಳ್ಳರ ಜ್ಞಾನಸಂಗ್ರಹದ ರೀತಿ ನೀತಿಬಾಹಿರವಾಗಿರುತ್ತದೆ (ಗ್ರಂಥಾಲ. ೬೫) ; ನಾಚಿಕೆಗೇಡಿನ ಮತ್ತು ನೀತಿಬಾಹಿರವಾದ ಹುದ್ದೆಯಲ್ಲಿದ್ದ ಮಾತ್ರಕ್ಕೆ ಮಾಸ್ಲೆನಿಕೋವ್ ತಾನೊಬ್ಬ ಪ್ರಮುಖವ್ಯಕ್ತಿಯೆಂದು ತಿಳಿದುಕೊಂಡಿರಬೇಕೆಂದೂ . . . ನೆಕ್ಲ್ಯುದೋವ್ ಆಲೋಚಿಸಿದನು (ಪುನರು. ೨೫೩). ೨. ಧರ್ಮಮಾರ್ಗವನ್ನು ಬಿಟ್ಟು ನಡೆಯುವವನು ; ನೀತಿಗೆಟ್ಟವನು : ಆರು ಕುಹಕಿಗಳು . . . ನೀತಿಬಾಹಿರರಾರು ದುರ್ಬಲರವರು ನಿನ್ನರಮನೆಯ ಮಂತ್ರಿಗಳು (ಕುಮಾದ್ರೋ. ೧–೬) ; ನಾನೇನಾದರೂ ನೀತಿಬಾಹಿರನಾದ ರಾಕ್ಷಸನೆ ? (ಮಲಿನಾ. ೧೧). [ನೀತಿ+ಬಾಹಿರ]

**ನೀತಿಬಾಹಿರತೆ** (ನಾ). ನ್ಯಾಯಮಾರ್ಗದಿಂದ ದೂರವಾಗಿರುವಿಕೆ: ಗೋವಿಂದರಾಯರ ಧರ್ಮಬಾಹಿರತೆ – ನೀತಿಬಾಹಿರತೆಯನ್ನು ಶ್ರೀಗಳವರ ನಿದರ್ಶನಕ್ಕೆ ತರಬೇಕು (ಸಮುಜೀ. ೩೭). [ಸಂ. ನೀತಿಬಾಹಿರತಾ]

**ನೀತಿಬಾಹ್ಯ** (ನಾ). = ನೀತಿಬಾಹಿರ ೨ : ಆತಂ ನೀತಿಬಾಹ್ಯನಪ್ಪುದಱಿಂ ಪೂರ್ವಾಪರವಿಚಾರವಿಕಳನಾಗಿ . . . ಅನೇಕರ ವೃತ್ತಿಪ್ರಪತ್ತಿಗಳಂ ಕಳೆದುಕೊಂಡು (ಪಂಚತಂ. ೨೮–೧) ; ಪೂತ ಕುಂಭೀಪಾಕಕರ್ಹರು ಆತಗಳು . . . ನೀತಿಬಾಹ್ಯರು ದಿತಿಜರಱುವತ್ತಾಱುಕೋಟಿಗಳು (ಸಂಭಪ. ೫–೨೦). [ನೀತಿ+ಬಾಹ್ಯ$_1$]

**ನೀತಿಬೋಧಕ** (ಗು). ನೀತಿಯನ್ನು ಉಪದೇಶಿಸುವ,—ಕಲಿಸುವ: ಲೋಕದಲ್ಲಿ ಜನರು ಹೇಗೆ ಬಾಳಬೇಕೆಂಬ ವಿಷಯವಾಗಿ ಉತ್ಕೃಷ್ಟವಾದ ನೀತಿಬೋಧಕ ಪದ್ಯಗಳು ವೇಮನನ ಪದ್ಯಗಳು (ಭಾರದ. ೪೦೩).
[ನೀತಿ+ಬೋಧಕ]

**ನೀತಿಬೋಧೆ** (ನಾ). = ನೀತಿಪಾಠ : ಮಕ್ಕಳಿಗೆ ನೀತಿಬೋಧೆಯುಳ್ಳ ಕಥೆಗಳನ್ನು ಹೇಳಬೇಕು (ರೂಢಿ). [ನೀತಿ+ಬೋಧೆ]

**ನೀತಿಭಿಕ್ಷೆ** (ನಾ). ನ್ಯಾಯವನ್ನು ಯಾಚಿಸುವುದು,—ಬೇಡುವುದು : ಅಕಟಿಮ್ಮ ಧರ್ಮಶಾಸ್ತ್ರದಿ ಮರಣದಂಡಕೆಡೆಯಿರೆ, ಪರರ ಬಾಗಲಿಗೆ ನೀತಿಭಿಕ್ಷೆಗೆ ಬರುವವೇನಿಂತು ನಿಮ್ಮ ನೀತಿಯಿನೆಮ್ಮ ಧರ್ಮವಂ ಕಾಯೆಂದು (ಗೊಲ್ಗೊಥಾ. ೬–೧೬೬). [ನೀತಿ+ಭಿಕ್ಷೆ]

**ನೀತಿಭ್ರಷ್ಟ** (ಗು). ೧. ನೀತಿಗೆಟ್ಟ ; ಧರ್ಮದೂರವಾದ : ನೀತಿಭ್ರಷ್ಟ ಜೀವನದ ಮಂಜುಮರೆಯಲ್ಲಿ ಆ ನೆನಪುಗಳನ್ನೆಲ್ಲ ಮುಚ್ಚಿಟ್ಟು ಮನಸ್ಸನ್ನು ಹಗುರಗೊಳಿಸಲು ಪ್ರಯತ್ನಿಸಿದಳು (ಪುನರು. ೧೯೩). (ನಾ). ೨. = ನೀತಿಬಾಹಿರ ೨ : ಅವನೇ ಇಂದು ನೀತಿಭ್ರಷ್ಟನಾದ ಸ್ವಾಭಿಮಾನಿಯಾಗಿ ಸ್ವಾರ್ಥಸುಖವೇ ಜೀವನದ ಉಚ್ಚಾದರ್ಶವೆಂದು ತಿಳಿದುಕೊಂಡಿದ್ದನು (ಪುನರು. ೫೯). [ನೀತಿ+ಭ್ರಷ್ಟ]

**ನೀತಿಭ್ರಷ್ಟತೆ** (ನಾ). ೧. ದುರಾಚಾರ ; ಅನೀತಿ : ತಮ್ಮ ನೀತಿಭ್ರಷ್ಟತೆಯ ಬಗ್ಗೆ ಹೆಮ್ಮೆಪಟ್ಟುಕೊಳ್ಳುವ ವೇಶ್ಯೆಯರು . . . ಆ ಮಿತ್ರಮೇಳದ ಸದಸ್ಯವರ್ಗವೆಂದರೆ ಯಾರಿಗಾದರೂ ವಿಸ್ಮಯವಾಗದಿರದು (ಪುನರು. ೧೯೭). ೨. "ಭ್ರಷ್ಟಾಚಾರ ; ಲಂಚಗುಳಿತನ ; ನೀತಿಭ್ರಷ್ಟತೆ" (Corruption. ಪತ್ರಿನಿ. ೨೬). [ನೀತಿ+ಭ್ರಷ್ಟತೆ]

**ನೀತಿಮತ್ತೆ** (ನಾ). ನೀತಿಯುಕ್ತವಾದ ನಡವಳಿಕೆ; ಧರ್ಮ : ಇಂಥ ನಿಶ್ಚಲ ಬುದ್ಧಿಪ್ರಧಾನತೆಯು ಪರಿಣಾಮವಾಗಿ ವ್ಯಕ್ತಿತ್ವದ ಬುಡದಿಂದಲೇ ಅರಳಿ ಬಂದ ನೈಸರ್ಗಿಕನೀತಿಮತ್ತೆಯೊಂದು ಜಾರ್ಜಿಯ ವೈಶಿಷ್ಟ್ಯ (ಗಂಪೂಯು. ೭೭). [ಸಂ. ನೀತಿಮತ್ತಾ]

**ನೀತಿಮಾರ್ಗ** (ನಾ). ೧. ಒಳ್ಳೆಯ ನಡತೆ; ಸಚ್ಚಾರಿತ್ರ್ಯ : ಗೋತ್ರದಲಿ ಬ್ರಹ್ಮನೇ ಸೂತ್ರದಲಿ ಕೌಶಿಕನೆ . . . ಜ್ಯೋತಿಯಲಿ ಬೃಹಸ್ಪತಿಯೆ ನೀತಿಮಾರ್ಗದಲಿ ಸಹದೇವನೇ ನೀನು (ಕನಕ. ೧೪೦-೮). ೨. ಒಳ್ಳೆಯ ನಡತೆಯುಳ್ಳವನು ; ಸಚ್ಚಾರಿತ್ರ್ಯವಂತ : ಅನತಿಶಯ ನೀತಿಮಾರ್ಗನನೂನಕವಿತಾವಿಲಾಸನಂ ಭೂತಳದೊಳ್ ಮನುಗಂ ವ್ಯಾಸಂಗಂ ಮಿಗಿಲೆನಿಸಿದ ಕವಿತಾವಿಲಾಸನಂ ಪೊಗಟಿದರಾರ್ (ಪಂಚತಂ. ೬-೩). ೩. ಒಬ್ಬ ರಾಷ್ಟ್ರಕೂಟರಾಜನ ಬಿರುದು : ಶ್ರೀಮತ್ ನೀತಿಮಾರ್ಗ್ಗ ಪೆರ್ಮ್ಮನಡಿಗಳ ಪಟ್ಟಂಗಟ್ಟಿದ ಪ್ರಥಮವರಿಷ (ಎಕ. IV (R), ಚಾಮರಾ. ೨೫೬-೪ ; ಸು. 8ನೆಯ ಶತ) ; ನೀತಿಮಾರ್ಗ್ಗ ಪೆರ್ಮ್ಮ × × × ಡಿಗಳ ಕೊಙ್ಗುಣಿವರ್ಮ್ಮ ಧರ್ಮ್ಮರಾಜ ಶ್ರೀಮತ್ ಪೆರ್ಮ್ಮನ[ಡಿ]ಗಳ[ಪಟ್ಟಂಗಟ್ಟಿ]ದ ೯ನೆಯ ಸಂವತ್ಸರವಾದ × × × ಸಂವತ್ಸರದಲು (ಎಕ. III(R), ನಂಜನ. ೨೧೦-೨; 9ನೆಯ ಶತ); ಸ್ವಸ್ತಿಶ್ರೀ ನೀತಿಮಾರ್ಗ್ಗ ಕೊಙ್ಗುಣಿವರ್ಮ್ಮಧರ್ಮ್ಮಮಹಾರಾಜಾಧಿರಾಜ ಕೊವಳಾಲಪುರವರೇಸ್ವರ . . . ದಣ್ಣನಾಯಕನಾಗೆ ನೀ[ತಿ]ಮಾರ್ಗ್ಗನ ಸಿಸದೊಳ್ ಕಾದಿ (ಎಕ. XIV, ನಾಗಮಂ. ೧೩೭-೧ ; ಸು. 900).
[ನೀತಿ + ಮಾರ್ಗ]

**ನೀತಿಯುತ** (ಗು). ೧. ನೀತಿಯಿಂದ ಕೂಡಿದ ; ಧರ್ಮದಿಂದ ಕೂಡಿದ : ನೀತಿಯುತ ಕಲ್ಪನವ ಕೇಳಿಸು (ಮದೇವು. ೨೬-೨೬). (ನಾ). ೨. ಧರ್ಮದಿಂದ ಕೂಡಿದುದು : ನೀತಿಯುತಮಾಗಿಯುಂ ದಲ ನೀತಿಸಮನ್ವಿತಮುಮಾಯ್ತು ಸುಖಭಾಜನಕಂ ಭೂತಿಯುತಮಾಗಿಯುಂ ತದಭೂತಿಸಮನ್ವಿತಮುಮಾಯ್ತು ಧರ್ಮನ ರಾಜ್ಯಂ (ಜಾಥಪು. ೧೨-೧೭೨) ; ತಮ್ಮ ಸಂಸಿದ್ಧಿಗಳನ್ನು ನೀತಿಯುತವಾದ ಮಾರ್ಗದಲ್ಲಿ ಪ್ರಯೋಗಿಸುವ ಸ್ವಾತಂತ್ರ್ಯ ವಿಜ್ಞಾನಿಗಳಿಗಿಲ್ಲವಾಗಿದೆ (ಖುಕ್ಸ್ವರ. ೪೨ ಪೀಠಿಕೆ). ೩. = ನೀತಿವಂತ: ಮಾತಱಿವವರೊಳ್ ನೀತಿವಿದರಮಳಕವಿತಾನೀತಿಯುತರ್ಕೆಲರೆ ಪರಮಕವಿವೃಷಭರ್ಕಳ್ (ಕವಿರಾ. ೧-೧೭) ; ನೀತಿಯುತಂ ನಮ್ಮೊಳತಿಪ್ರೀತಿಯುತಂ (ಬಂಹರಿ. ೭-೨). [ನೀತಿ + ಯುತ]

**ನೀತಿಯುತೆ** (ನಾ). ಒಳ್ಳೆಯ ನಡವಳಿಕೆಯುಳ್ಳವಳು ; ಸುಶೀಲೆ : ಭೂತಳಕೆಲ್ಲಂ ಸಂದುದಿದೆತ್ತಂ ನೀತಿಯುತೇ ಮಂದಾನಿಲವೃತ್ತಂ (ಛಂದೋಂಬು. ೨-೧೦೮). [ಸಂ. ನೀತಿಯುತಾ]

**ನೀತಿವಂತ** (ನಾ). ಸನ್ಮಾರ್ಗದಲ್ಲಿ ನಡೆಯುವವನು ; ಸಜ್ಜನ : ನಿರುತಸುಖವನು ಪುಣ್ಯವನು ತಾನೆರಡ ಗಳಿಸುವ ನೀತಿವಂತನು (ಕೌರಾ. ೩೮-೧೨); ನೀತಿವಂತರು ಕೇಳಿರೆಲ್ಲ ನಮಗೀತನೆ ಗತಿಯಿನಾವ ಪುರಂದರವಿಠಲ (ಪುರಂದ. ಧಾ. ೨-೩೯-೩); ನೀತಿವಂತನು ಸೋತು ನಡೆವನು (ನೀಸಾರಾ. ೧೨) ; ಮಾತು ಮಾತಿಗೆ ತಪ್ಪುವವನು ನೀತಿವಂತನಲ್ಲ (ಗಾದೆ). [ಸಂ. ನೀತಿವತ್]

**ನೀತಿವಂತೆ** (ನಾ). ಸನ್ಮಾರ್ಗದಲ್ಲಿ ನಡೆಯುವವಳು ; ಸಚ್ಚಾರಿತ್ರ್ಯವುಳ್ಳವಳು : ಆಕೆ ನೀತಿವಂತೆಯಾಗಿ ಬಾಳಿದಳು (ರೂಢಿ).
[ನೀತಿವಂತ + -ಎ$_2$]

**ನೀತಿವಚನ** (ನಾ). ಉಪದೇಶದ ಮಾತು; ವಿವೇಕದ ನುಡಿ : ಮಾತನಾಡೆಂದೆನಲು ದೇವಿಯು ಮಾತನಾಡಿದಳಾ ಬಿಡಾಲಗೆ ನೀತಿವಚನವ ಕೇಳು ಶಪ್ತಿಹುದೆಂದಳಾ ದೇವಿ (ದೇವೀಮ. ೭-೧೮); ಯಾರು ಹೇಳದ ನೀತಿವಚನವನಾರಿಸುತ ರಚಿಸುವೆನು (ನೀಸಾರಾ. ೪). [ನೀತಿ + ವಚನ]

**ನೀತಿವರ್ಧನ** (ನಾ). ರಾಜನೀತಿಯ ಕ್ರಮವನ್ನು ಅನುಸರಿಸುವಿಕೆ,—ಪಾಲಿಸುವಿಕೆ : ಸುಮತಿಯ ವಚಕ್ಕೆ ಪದವಟ್ಟು ದಮಿತಾರಿ ನೀತಿವರ್ಧನನಿಮಿತ್ತಂ ಪ್ರೀತಿವರ್ಧನನೆಂಬ ದೂತಮುಖ್ಯನನಟ್ಟಿದೊಡೆ (ಶಾಂತಿಪು. ೩-೭೩ ವ). [ನೀತಿ + ವರ್ಧನ]

**ನೀತಿವಾಕ್ಯ** (ನಾ). = ನೀತಿವಚನ : ರಾಮನಿಂ ಧೀರರುಮಾರುಮಿಲ್ಲ ಸ್ತ್ರೀಹರಣದಿಂ ಪರಾಭವಮಾವುದುಮಿಲ್ಲ . . . ಎಂಬ ನೀತಿವಾಕ್ಯಮುಂಟು (ಪಂಚತಂ. ೨೦೯-೨೩). [ನೀತಿ + ವಾಕ್ಯ]

**ನೀತಿವಾದಿ** (ನಾ). ನೀತಿಯನ್ನು ಸಮರ್ಥಿಸುವವನು : ಸೌಂದರ್ಯ . . . ಉದಾತ್ತಭಾವಗಳನ್ನು ಪ್ರಚೋದಿಸಬೇಕೆಂದು ನೀತಿವಾದಿಗಳು ಹೇಳುತ್ತಾರೆ (ಸೌಂದಸ. ೭೪). [ಸಂ. ನೀತಿವಾದಿನ್]

**ನೀತಿವಿಡಿ** (ಕ್ರಿ). ರಾಜನೀತಿಯನ್ನು ಅನುಸರಿಸು: ನೀತಿವಿಡಿದರಸಂಗೆ ಬಹಳ ಖ್ಯಾತವದು ಜನರಾಗ ರಾಗವ್ರಾತದಿಂ ಧನ ಧನದಿ ಪರಿಕರ ಪರಿಕರದಿ ಜಯವು (ಕುಸ್ಯಾಸ. ೧-೪೮); ಒಡನೆ ಭೀಮನು ಧರ್ಮಜನ ವೈರಾಗ್ಯದ ನುಡಿಯನಾಲಿಸಿ ಕೋಪವೆರಸಿ ಸಿಡಿಮಿಡಿಗೊಳುತಳಲುತೆ ನೋವುತೆ ನೀತಿವಿಡಿದು ನಿಷ್ಠುರವನಾಡಿದನು (ಕರ್ಣಪ್ರ. ೧೧-೧). [ನೀತಿ + ಪಿಡಿ$_1$]

**ನೀತಿವಿದ** (ನಾ). ೧. = ನೀತಿವಂತ : ನೀತಿವಿದರಮಳಕವಿತಾನೀತಿಯುತರ್ಕೆಲರೆ ಪರಮಕವಿವೃಷಭರ್ಕಳ್ (ಕವಿರಾ. ೧-೧೭); ಇಂತಿವನೋದಿ ಪೇಳ್ವ ಮನುಜಾಳಿಯ ದುಃಖಚಯಂಗಳಿಂಗಿ ಮೇಣ್ ಸಂತರುವಾಗಿ ನೀತಿವಿದರಾಗಿ ನಿಗರ್ವಿಗಳಾಗಿ ಲೋಕದೊಳ್ ಸಂತತ ಪೂಜ್ಯರಾಗಿ ಸುಖದಿಂದಿರುತಿರ್ಪರ್ (ಕಜೀಕಂ. ೧೦೭). ೨. = ನೀತಿಜ್ಞ ೨ : ಚಂದ್ರಗುಪ್ತಂಗೆ ಸಮಸ್ತಧಾರಿಣಿಯನಿತ್ತು ನೆಗಟ್ತಿಯನಾಂತ ವಿಷ್ಣುಗುಪ್ತಂಗೆಣೆಯಾರೊ ನೀತಿವಿದರರ್ಣವವೇಷ್ಟಿತ ವಿಶ್ವಧಾತ್ರಿಯೊಳ್ (ಪಂಚತಂ. ೩-೧೨) ; ನೀತಿವಿದರ್ ನಿಮ್ಮಂದಿಗರೀ ತೆಱದಿಂ ನುಡಿವುದಪನಯಂ (ಪಾರ್ಶ್ವಪು. ೪-೪೬) ; ನೀತಿವಿದಂ . . . ಭೂತಳವಲ್ಲಭಂ ನಳನೃಪಂ ಸಲೆ ಮತ್ತ ತಿಯಾತನೆಂದು ಸಂಪ್ರೀತಿಯಿನಾಪ್ತರೊಳ್ ಮಿಗೆ ವಿಚಾರಿಪಳ್ (ನಳಚಂ. ೪೦) ; ನೀತಿವಿದನಲ್ಲದ ಕುಮಂತ್ರಿ ವಿನೀತಪರನಲ್ಲದ ಪುರೋಹಿತನೇತಕವರಿಂದಾವ ಪುರುಷಾರ್ಥಂಗಳೆಯ್ದುವುವು (ಕುಪ್ಯಾಲು. ೪-೮೩).
[ಸಂ. ನೀತಿವಿದ್]

**ನೀತಿವಿಭವ** (ನಾ). ನೀತಿಯ ಆಧಿಕ್ಯದಿಂದ ಕೂಡಿರುವವನು : ನೀತಿವಿಭವಂ . . . ಉತ್ತುಂಗಕಲಾವ್ರಾತಂ ಮೂರ್ತಿಯನಾಂತವೊಲಾ ತಪನಾನ್ವಯಸುಧಾಬ್ಧಿಚಂದ್ರಮನೆಸೆವಂ (ಉದ್ಭಟ. ೧೨-೭೧).
[ನೀತಿ + ವಿಭವ]

**ನೀತಿವಿರುದ್ಧ** (ನಾ). ಧರ್ಮವಿರುದ್ಧವಾದುದು ; ನೀತಿಬಾಹಿರವಾದುದು : ಪೂರ್ವಪುರುಷರಿಂದಾದ ಮಹಾಟವಿಯಂ ಬಿಡಲಾಗದೆಂದು ನೀತಿವಿರುದ್ಧಂಗಳಪ್ಪ ಮಾತುಗಳಂ ನುಡಿದೆಯಾದೊಡೆಯಿಂತೀಯವಸರಕ್ಕೆ ತಕ್ಕುದೊಂದು ಕಥೆಯುಂಟು (ಪಂಚತಂ. ೩೭-೧೭). [ನೀತಿ + ವಿರುದ್ಧ]

**ನೀತಿವಿಷಯಕ** (ಗು). ನೀತಿಗೆ ಸಂಬಂಧಿಸಿದ : ನಾವು ಸದ್ಗುರುಗಳ ನೀತಿವಿಷಯಕ ಕಾರ್ಯಗಳನ್ನು ವಿವರಿಸುವೆವು (ಪರಪ. ೭೧).
[ನೀತಿ + ವಿಷಯಕ]

**ನೀತಿವಿಹಾರಿ** (ನಾ). ನೀತಿಯಲ್ಲಿ ಸಂತೋಷಪಡುವವನು ; ನೀತಿವಂತ : ನೀತಿವಿಹಾರಿಗಳ್ ಸಕಲಧರ್ಮವಿಚಾರಿಗಳ್ . . . ಅರವಿಂದಶರೋಪಮರೂಪರೊಪ್ಪಿದರ್ (ದಿವ್ಯಚ. ೧-೫೫).
[ಸಂ. ನೀತಿವಿಹಾರಿನ್]

**ನೀತಿವಿಹೀನ** (ನಾ). ನೀತಿಯನ್ನು ಬಿಟ್ಟವನು ; ನೀತಿಬಾಹಿರ : ಶಿಷ್ಟಜನದೂರನೆ ವಿಚಾರಭ್ರಷ್ಟನೇ ಗರ್ವಿತನೆ ಸುಜನಾರಿಷ್ಟನೇ ತಾಮಸನೆ ನೀತಿವಿಹೀನನೇ ಖಳನೆ (ಬಸವು. ೪೫-೨೧). [ನೀತಿ + ವಿಹೀನ]

**ನೀತಿವಿಳಾಸ** (ನಾ). = ನೀತಿವಿಹಾರಿ : ನೀತಿವಿಳಾಸ ಕೇಳ್ ಪೆಗ ಲೊಳಾಂತ ಮದೀಶನ ಹಸ್ತಪಾದಮಂ ಘಾತಕನಾರ್ಪಿನಿಂ ಕಡಿದ ಪಾತಕ ನಿಲ್ಲಿಗೆ ಬಂದಂ (ದಶಕು. ೧೨-೯೪). [ನೀತಿ + ವಿಳಾಸ ( = ವಿಲಾಸ)]

**ನೀತಿಶಾಸ್ತ್ರ** (ನಾ). ೧. ಆಚಾರ, ನಡವಳಿಕೆ, ಲೋಕವ್ಯವಹಾರ, ಧಾರ್ಮಿಕವೃತ್ತಿ ಮೊದಲಾದುವುಗಳನ್ನು ತಿಳಿಸುವ ಶಾಸ್ತ್ರ : ಆತ್ಮಾರ್ಥಂ ಪೃಥಿವೀಂ ತ್ಯಜೇತ್–ತನ್ನ ನಿಮಿತ್ತವಾಗಿ ಭೂಮಿಯಂ ಬಿಡುವುದೆಂಬ ನೀತಿಶಾಸ್ತ್ರಮುಂಟು (ಪಂಚತಂ. ೩೯–೯); ಬಿಸುಟು ಕಳೆವುದು ನೀತಿಶಾಸ್ತ್ರವನುಸುರದಾಚಾರಿಯನ ವೇದಪ್ರಸರವಿಲ್ಲದ ಋಷಿಜನವ ರಕ್ಷಿಸದ ಭೂಭುಜನ (ಕುವ್ಯಾಉ. ೩–೪೬). ೨. ರಾಜ್ಯನೀತಿಯನ್ನು ಕುರಿತ ಶಾಸ್ತ್ರ ; ಆಡಳಿತಶಾಸ್ತ್ರ : ನೀತಿಶಾಸ್ತ್ರಂಗಳೊಡನನೇಕ ಶಾಸ್ತ್ರಂಗಳುಂ (ಆದಿಪು. ೧೫–೩ ಪ); ತತ್ಕಾರ್ಯವೃತ್ತಕಮಪ್ಪ ನಾಟ್ಯವಿದ್ಯೆಯುಮಂ ಯೋಗಕ್ಷೇಮಾಧೀನಮಪ್ಪ ನೀತಿಶಾಸ್ತ್ರಮುಮಂ . . . ತ್ರಿದಶವರ್ಗಕ್ಕುಪದೇಶಂಗೆಯ್ಯುತ್ತುಂ (ಶಾಂತಿಪು. ೧೦–೯೦ ಪ) ; ರಾಜಶಾಸ್ತ್ರವನ್ನು 'ನೃಪಶಾಸ್ತ್ರ' ಮತ್ತು ದಂಡನೀತಿ ಎಂದೂ 'ದಮ' ದಂಡವೆಂದೂ, ನೀತಿಶಾಸ್ತ್ರವೆಂದೂ ಕರೆದಿದ್ದಾರೆ (ಭಾರದ. ೩೭೦). [ನೀತಿ + ಶಾಸ್ತ್ರ]

**ನೀತಿಸಂದೇಶ** (ನಾ). ನೀತಿಯನ್ನು ಹೇಳುವ ಮಾತು; ಉಪದೇಶದ ಮಾತು : ರಾಮಾಯಣದ ನೀತಿಸಂದೇಶ ಪೃಥ್ವಿಯಲ್ಲಿ ಶಾಶ್ವತವಾಗಿ ನಿಲ್ಲುವ ಶಕ್ತಿಯುಳ್ಳದ್ದು (ಋಕ್ಸಾರ. ೧೦೪ ಪೀಠಿಕೆ). [ನೀತಿ+ಸಂದೇಶ]

**ನೀತಿಸಮ್ಮತ** (ನಾ). ಧರ್ಮಕ್ಕೆ ಅನುಸಾರವಾದುದು ; ನ್ಯಾಯಬದ್ಧವಾದುದು : ದುರಿಯೋಧನನನೀಕ್ಷಿಸುತಲಘುಭುಜಬಲ ಭಾನು ನಂದನನಳುಕದೀ ಮಾತುಗಳನೆಂದನು ನೀತಿಸಮ್ಮತವ (ಕುವ್ಯಾದ್ರೋ. ೨–೬೧) ; ನೀತಿಸಮ್ಮತದಿಂ ವಿವೇಕನಿಂತೆನೆ ಕೇಳ್ದು ಶಾತಕುಂಭಾಲಂಕೃತಾಸನವನಿಳಿದು ಹರ್ಷಾತಿಶಯದಿಂದೆ ಮದನಂ ಚಂದ್ರಹಾಸನನಿದಿರ್ಗೊಂಡು ಕಂಡು (ಜೈಮಿಭಾ. ೩೦–೪೮). [ನೀತಿ + ಸಮ್ಮತ]

**ನೀತಿಸೂತ್ರ** (ನಾ). ನಿರ್ದಿಷ್ಟವಾದ ನಡವಳಿಕೆಯ ನಿಯಮ : ಅವನ ವೈಯಕ್ತಿಕ ವಿಷಯದಲ್ಲಾಗಲೀ, ಆಡಳಿತಕ್ಷೇತ್ರದಲ್ಲಾಗಲೀ ಯಾವೊಂದು ನಿರ್ದಿಷ್ಟವಾದ ನೀತಿಸೂತ್ರವನ್ನವಲಂಬಿಸಿರಲಿಲ್ಲ (ಪುನರು. ೩೩೩). [ನೀತಿ + ಸೂತ್ರ]

**ನೀತಿಹೀನ** (ನಾ). = ನೀತಿವಿಹೀನ: ನೀತಿಹೀನನು ಜಾತಿಧರ್ಮಸಮೇತ ದೈವದ್ರೋಹಿಯೆಂಬುದು ಭೂತಳದೊಳೇ ನರಕ ಚಿತ್ರೈಸು (ಕುವ್ಯಾಉ. ೪–೪೧). [ನೀತಿ + ಹೀನ]

**ನೀಧ್ರ** (ನಾ). ಸೂರಿನ ಅಂಚು ; ಛಾವಣಿಯ ಕೊನೆ,—ತುದಿ ; ಸೂರುಕಟ್ಟು. 'ನೀವ್ರ' ಪರಾ. [ಸಂ.]

**ನೀನ್**, ನೀ, ನೀಂ, ನೀನು (ಸ). ಮಧ್ಯಮಪುರುಷ ಏಕವಚನ ಸರ್ವನಾಮ ; ಒಬ್ಬ ವ್ಯಕ್ತಿಯೊಂದಿಗೆ ಮಾತನಾಡುವಾಗ ಆ ವ್ಯಕ್ತಿಯನ್ನು ನಿರ್ದೇಶಿಸುವ ಮಾತು. ☞ ಕ್ರಮವಾಗಿ ಏಳು ವಿಭಕ್ತಿಗಳು : ನೀನ್, ನಿನ್ನಂ, ನಿನ್ನಿಂ, ನಿನಗೆ, ನಿನ್ನತ್ತಣಿಂ, ನಿನ್ನ, ನಿನ್ನೊಳ್ ; (ಬಹುವ) ನೀವರ್, ನಿಮ್ಮಂ, ನಿಮ್ಮಿಂ, ನಿಮಗೆ, ನಿಮ್ಮತ್ತಣಿಂ, ನಿಮ್ಮ, ನಿಮ್ಮೊಳ್ : ಕುಲಮುದ್ದ ನೀನೀ ಕಯ್ಯ ಪೊಕ್ಕು ಕಾದೆನ್ದು ಬೆಸಸೆ (ಎಕ. VIII, ಸೊರಬ. ೧೧–೬ ; ಸು. 800) ; ಕುಣಾಳನುಮನೆಂದಂ ಮಗನೆ ಬೇಡು ನೀನೆಂದೊಡಾತನುಂ ಕಾಕಿಣೀರತ್ನಮಂ ಬೇಡಿದೊಡೆ (ವಡ್ಡಾರಾ. ೭೫–೨೭); ನೀನಾರ್ಗೆ ನಿನ್ನಂ ಪಳಯಿಸುವವರಾರ್ಗೇಕೆ ಶೋಕಿಪ್ಪೆ (ಆದಿಪು. ೩–೫೫) ; ನೀನುಳ್ಳೊಡುಂಟು ರಾಜ್ಯಂ ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟೈ . . . ನೀನಿಲ್ಲದಿವೆಲ್ಲಮೊಳವೆ ಅಂಗಾಧಿಪತೀ (ಗದಾಯು. ೫–೨೦) ; ನೀನಿಲ್ಲದಿನಿಬರುಂ ಲಂಕಾನಗರಿಗೆ ಪೋಗಿ (ಪಂರಾಮಾ. ೧೧–೪೨) ; ನೀನಿತ್ತ ಜೀವಮಿದು ಧರಣೀನುತ ನೀನಿಲ್ಲದಂದು ಸಾವದು ಪುಸಿಯೇ (ಧರ್ಮಾಮೃ. ೧೨–೧೪೦) ; ಬದುಕು ಜಟಕಾಬಂಡಿ ವಿಧಿಯದರ ಸಾಹೇಬ ಕುದುರೆ ನೀನ್, ಅವನು ಪೇಳ್ದಂತೆ ಪಯಣಿಗರು (ಮಂಕುಕ. ೬೦೦). **ನೀ :** ಭಕ್ತಿದಾಯಕ ನೀ ಕರುಣಿಸು ಲಿಂಗತಂದೇ (ಬಸವ. ೪೮೩) ; ವೈರಿಯ ಕೈದುವನು ನೀ ಗೆಲಿದೆಯಿನ್ನುಳಿಕೆ ಕಾದುವವರಾವಲ್ಲ ಸಾರಥಿತನವೆ ಸಾಕೆಮಗೆ (ಕುವ್ಯಾಪ್ರೋ. ೩–೬೪) ; ನೀ ತಂದೆ ನಾ ಬಂದೆ ನೀ ಎನ್ನ ತಂದೆ (ಪುರಂದ. ೩–೨೦ ಪಲ್ಲವಿ) ; ನೀ ನಿಟ್ಟಿಸೆ ನಿನ್ನ ಸ್ಮರವೀರನುರವಣಿಸುತ ಬಾಧಿಸುವನು (ಕಂನವಿ. ೯–೪೮) ; ನೀ ಕಪಟಿಯಾದರೆ ನಿನಗೆಲ್ಲರೂ ಕಪಟಿಗಳೇ ! (ಗಾದೆ). **ನೀಂ :** ಅರಿನೃಪಬಲವಂ ಗೆಲ್ದುರುಪರಾಕ್ರಮಕ್ರಮದೆ ಶೌರ್ಯಮಂ ಪ್ರಕಟಿಸು ನೀಂ (ಕವಿರಾ. ೧–೮೨); ಕಾಷ್ಠಕೂಟಂ ತನ್ನ ಪೆಂಡತಿ ಜಯಘಂಟೆಯೆಂಬೊಳನಿಂತೆಂದು ಕಲ್ಪಿಸಿದನೀತಂಗೆ ನೀಂ ಬಸಿಱ್ ತೀವೆ ಬಡ್ಡಿಸದಿರ್ (ವಡ್ಡಾರಾ. ೭೭–೫) ; ತಳಿರೊಳ್ ನೀನೆ ಬೆಡಂಗನ್ನೈ ನನೆಗಳೊಳ್ ನೀಂ ನೀಜನ್ನೈ ಪುಷ್ಪಸಂಕುಳದೊಳ್ ನೀನೆ ವಿಳಾಸಿಯೈ ಮಿಡಿಗಳೊಳ್ ನೀಂ ಚೆಲ್ವನೈ ಪಣ್ತ ಪಣ್ಗಳಿನೋವೋ ಪೆಜತೇನೊ ನೀನೆ ಭುವನಕ್ಕಾರಾಧ್ಯನೈ (ಆದಿಪು. ೧೧–೯೬) ; ನೀಂ ಬಾಪೋಪಂ (ಪಂಪಭಾ. ೧–೭೦) ; ನೀಂ ಮುಟ್ಟಿಮಿರೆಂದಾ ಭಟ್ಟನಂ ಮುಟ್ಟುಗಿಡೆ ನುಡಿದ್ದುಂ ಮಾಣದೆ (ಪಂಚತಂ. ೧೮–೮) ; ಸಂಸಾರಕ್ಕೆ ಪೇಸೊಳ್ಪನರ್ಜಿಸು ನೀಂ ದರ್ಶನಶುದ್ಧನಾಗು (ಅರ್ಥಸೇ. ೧–೫). **ನೀನು :** ಅಂದಿಂಗೆಳೆಯ ನೀನು ಹಳೆಯ ನಾನು (ಬಸವ. ೨) ; ನೀನು ನೆರಹಿದ ಸುಕೃತಫಲವದನೇನ ಹೇಳುವೆನು (ಕುವ್ಯಾದ್ರೋ. ೪–೧) ; ಹಸುಮಗನೇ ನೀನು ಮೋಸದಿ ಬಂದು ನುಸುಳದೆ ತೆರಳು (ಪುರಂದ. ೩–೨೦೩–೧) ; ಅಂತಾಡದಿರು ನೀನು ಬೇಱೆ ನಾ ಬೇಱೆಯೇನು (ಭರತ. ೫೨–೧೪) ; ಮುದಿಪಿಟನಬಲೆಯ ಸಂದಿಸಿಯೊತ್ತೆಗೊಳ್ಳೆನಲು ತಂದೆ ನೀನೆನಗೆನೆ ನಿನಗೀಗ ಹಣಗಳ ತಂದೆಯೆಂದುಱೆ ನಗಿಸಿದನು (ಕಂನವಿ. ೨–೧೦೨) ; ನೀನು ನಾನು ಎಂಬ ಭೇದ ಜ್ಞಾನಿಗುಂಟೆ ? (ಗಾದೆ).

**ನೀಂ, ನೀಂಗಳ್, ನೀವರ್, ನೀವ್, ನೀವು, ನೀವುಗಳು** (ಬಹುವ) : ತಿಳಿ ತಾಂ ನೀನಾನೆಂಬರ್ಥಳಂಬಿಗಳ್ ಪ್ರಥಮ ಮಧ್ಯಮೋತ್ತಮ ಪುರುಷಂಗಳವೇಕವಚನಮೊರ್ಮನ ಬಳಕೆಗೆ ಬಹುವಚನಮೆಲ್ಲರಂ ಪೇಱ್ವೆಡೆಯೊಳ್ (ಶಮದ. ೨೨೪) ; ನೀಂ ಎಂಬುದರ್ಕೆ . . . ನೀಂ ಪೇೞ್ವಿರ್, ನೀಂ ಬಂದಿರ್ . . . ದೇವಾಸುರಮಂ ಕೇಳಿರೆ ನೀಂ ದೇವಾ (ಶಮದ. ೨೨೪ ಪ್ರಯೋ) ; ಆ ಸಿದ್ಧವಧು ಕಲಿಗಳಿರ ನೀಂಗಳಾರು . . . ಪೇಳಿರೀ ಯಾಗಹಯಮಾವ ಭೂಪನದೆಂದು ಬೆಸಗೊಳ್ವುದುಂ (ಶೇಷರಾ. ೧೫–೫೧) ; ನೀಮುಂ ಜಾತಿಜರಾಮರಣಂಗಳಿಂಬೆಮ್ಮ ಕುತ್ತಮಂ ಕಿಡಿಸಲಾರ್ಪೊಡೆ (ವಡ್ಡಾರಾ. ೬೯–೨೯) ; ಅಱಿಯಿರೆ ನೀಮು ಮಾಮುಮೊಡನೋದಿದೆವೆಂಬುದನಣ್ಣ (ಪಂಪಭಾ. ೨–೪೮) ; ನೀಂ ಬಾಪೋಪಮೆಂದಂಗೆ ಮೆಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ ಎಂಬುದುಂ (ಪಂಪಭಾ. ೧–೭೦) ; ದಿನಕರಕಾಂತಿಯುಮಂ ನೀನಿಂ ಪರಿಕಿಸಿ ನೋಡಿಮೆಂದು ಸೂರ್ಯನೊಡನೆ ಕಯ್ವಾಯ್ವು ಮಧ್ಯಸ್ಥರಲ್ಲಿಗೆ ಬರ್ಪಂತೆ ಪೊಳೆವ ಪೊಂಗಾಲಿಗಳಿಂದೊಪ್ಪುವ ರದಂಗಳಿಂ (ಧರ್ಮಾಮೃ. ೮–೧೯೬); ಗುರುವೆಮಗೆ ನೀವ್ ನಿಮಗೆ ನಾವ್ ಡಿಂಗರಿಗರು (ಕುವ್ಯಾದ್ರೋ. ೧೩–೯) ; ಪಡೆದಂ ಬ್ರಹ್ಮಂ ಜಗಮಂ ಪಡೆಯಲ್ ತಾನಾರ್ತನಿಲ್ಲ ಪೆಂಪಂ ನಿಮ್ಮಂ ಪಡೆದಲ್ತೆ ಪಡೆದನೆನಿಸಿದ ಕಡುಪೆಂಪಿನ ಪೊಱೆಗೆ ನೀವು ಮೊದಲಿಗರಾದಿರ್ (ಪಂಪಭಾ. ೬–೧೨) ; ಪರಮಣ್ಡಳಿಕರ್ಕ್ಳ ನಮ್ಮ ನೀವು ಈ ಯೋಳಿಗೆ ನಿಮ್ಮ ಪನ್ದಲೆಗಳಂ ಬರಲೀಯದೆ (ಎಕ. II, ೫೯–೮೮ ; 974) ; ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೇ ನೀವು ಕಾಣಿರೇ . . . ಚೆನ್ನಮಲ್ಲಿಕಾರ್ಜುನದೇವನೆಲ್ಲಿದ್ದಾನೆಂ

ಬುದಂ ಬಲ್ಲಡೆ ನೀವು ಹೇಳಿರೇ (ಮಹಾದೇ. ಬ. ೩೩–೭೩) ; ನಾವು ಭಂಡರು ಗರುವರಾಯರು ನೀವಲೇ ಭುವನದಲಿ ಬಾಹಿರರಾವು ನೀವತಿ ಚದುರರಾದಿರಲಾ ಮಹಾದೇವ (ಕುಮಾರ್ಯ.ಕ. ೯–೧೭) ; ನೀವು ದಯವಿಟ್ಟು ನನ್ನನ್ನು ಬಹುವಚನದಲ್ಲಿ ಮಾತಾಡಿಸಬಾರದು (ರಾಗಿಣಿ. ೧೬೩) ; ನೀವುಗಳು ನಿಮ್ಮ ನಿಮ್ಮ ಮನೆಗಳಿಗೆ ಹೋಗಿ ಸೇರಿಕೊಳ್ಳಿರಿ (ಶ್ರೀರಾಯ. ೧೭೦). ನಿನಗೆ ಮಾಡು =ಸ್ವಂತದ್ದನ್ನಾಗಿ ಮಾಡಿಕೊಳ್ಳು ; ಹೊಂದು ; ಪಡೆ : ಮುರಾರಿಯ ತಂಗೆಯನಪ್ಪು ಕೆಯ್ಯುಂ ಚಚ್ಚರಮೊಳ ಪೊಯ್ಯುದ್ದು ನೀಂ ನಿನಗೆ ಮಾಡುವುದು (ಪಂಪಭಾ. ೪–೩೪). ನಿಮ್ಮಡಿ= ೧. ನಿಮ್ಮ ಪಾದ,—ಅಡಿ : ದೇವಾ ನಿಮ್ಮಡಿಗೆಜಗಿದ ಮಡಿವಾಳ ಮಾಚಯ್ಯ ನಿಮ್ಮಡಿಯಾದ (ಬಸವ. ೬೦೬) ; ನಿಮ್ಮಡಿಗಳ ಕೆರ್ಪಂ ಪಿಡಿದವನ ಚರಣವಾರ ಮಕುಟದೊಳು ಬೀಳದು (ಬಸರ. ೬–೧೦೩). ೨. ಗೌರವಾರ್ಹರಾದವರನ್ನು ಸಂಬೋಧಿಸುವಾಗ ಬಳಸುವ ಮಾತು ; 'ತಾವು' ಎಂಬರ್ಥ : ಆಮುಂ ಪೋಗಲೊಲ್ಲೆವು ನಿಮ್ಮಡಿಗಳ್ಗೆ ವಿನಯಂಗೆಯ್ಯುತ್ತಮಿರ್ದಪ್ಪೆಂ (ವಡ್ಡಾರಾ. ೪೮–೨೫) ; ನಾವೆಲ್ಲ ಮೊಂದೆ ಗರುಡಿಯೊಳೋದಿದ ಮಾನಸರೆವೆಮ್ಮಂ ನಿಮ್ಮಡಿ ಕೆಮ್ಮನೆ ಬಚಲಿಸಲ್ವೇಡ (ಪಂಪಭಾ. ೯–೪೮ ಪ) ; ನಿಮ್ಮಡಿಯ ಪ್ರಸಾದದಿಂದೆನಗೆ ಮಹಾಪಾತಕಂ ಪಿಂಗಿ ಪೋದುದು (ಧರ್ಮಾಮೃ. ೨–೨೧೧) ; ಮಂಗಳಾತ್ಮಕ ಕೇಳು ನಿನ್ನಯ ಹಂಗನೊಲ್ಲೆನು ಮುಕುತಿಪಥದೊಳಭಂಗಪೆಂಡೆಯದಾಳಲ್ಯೆ ನಿಮ್ಮಡಿಯ ಸಿರಿನಾಮ (ಕುಮಾರ್ಯಭೀ. ೬–೪೪).

[ದೇ.॥ ತಮಿ. ಮಲ. ಕೊಡ. ಬ್ರಾಹೂಈ. ನೀ ; ಕೋತ. ತೊದ. ನಿ ; ತುಳು. ಈ ; ತೆಲು. ನೀವು, ಈವು ; ಕೊಲಾ. ನಾಯ್ಕಿ. ನೀವ್ ; ಪರ್ಜಿ. ಗಡಬ. ಈನ್ ; ಗೊಂಡಿ. ಈಮ್ಮಾ, ನಿಮಾ, ನಿಮೆ ; ಕುಇ. ಈನು ; ಕುವಿ. ನೀನು ; ಕುರುಖ್. ಮಲ್ತೊ. ಕೊಂಡ. ನೀನ್]

**ನೀನು** 'ನೀನ್' ನೋ.

**ನೀಪ** (ಗು). ೧. ಆಳವಾದ ; ತಗ್ಗಾದ ; ಕೆಳಗಿನ. (ನಾ). ೨. ಬೆಟ್ಟದ ಕೆಳಪ್ರದೇಶ ; ತಪ್ಪಲು ; ಸಾನು. ೩. ಕೇಸರಿಬಣ್ಣದ ಸುವಾಸನೆಯ ಹೂವುಗಳನ್ನು ಬಿಡುವ ಒಂದು ಬಗೆಯ ಮರ ; ಕಡಹ : "ಕದಂಬದ್ರುಮಮದು ನೀಪಂ" (ವಸ್ತುಕೋ. ೩೪–೯) ; ನೀಪಾರ್ಜುನಾವಳಿಗಳ್ ಪೂಗಳಿನೊಪ್ಪಿ ತೋಱಿ ಜಗಮಂ ಪರ್ವಿತ್ತು ಮೇಘಾಗಮಂ (ವರ್ಧಮಾ. ೯–೩೯) ; ಪಸುರ್ಗವಿಲನಾದ ನೀಪದ ಕುಸುಮಮುಮಂ ದೆಸೆಗೆ ಕಂಪನೆತ್ತುವ ಲೋಧ್ರಪ್ರಸವಮುಮಂ . . . ಮುಸುಱಿ ಮುತ್ತಿದುವಳಿಗಳ್ (ಪಂರಾಮಾ. ೭–೧೪೧). ೪. ಒಂದು ರಾಜ ವಂಶದ ಹೆಸರು : 'ನೀಪಕುಲ' ಪರಾ. [ಸಂ.]

**ನೀಪಕುಲ** (ನಾ). ಒಂದು ರಾಜವಂಶ ಮತ್ತು ಆ ವಂಶಕ್ಕೆ ಸೇರಿದವನ ಹೆಸರು : ನೀಪಕುಲನಾಗಿ ನೃಪತಿಲಕೋಪಮೆನೀತನನೆ ಸಾರ್ದು (ಶಾಂತಿಪು. ೫–೧೨೭). [ನೀಪ+ಕುಲ]

**ನೀಪಪ್ರಸವ** (ನಾ). ಕದಂಬಪುಷ್ಪ ; ಕಡಹದ ಹೂವು : ಇವು ಕಂಕೆಲ್ಲಿದಳತ್ತ ಸೂನಮಿವು ಮಲ್ಲೀಸ್ಮೇರಪುಷ್ಪಂ ಪೊದಟ್ಟುವು ನೀಪಪ್ರಸವಂ (ಚಂದ್ರಪ್ರ. ೨–೭೭). [ನೀಪ+ಪ್ರಸವ]

**ನೀಪವ್ರಜ** (ನಾ). ಕದಂಬವೃಕ್ಷಗಳ ಗುಂಪು,—ಸಮೂಹ : ಅಲ್ಲಲ್ಲಿ ಕರಂ ಖರ್ಜೂರವೃಂದಂ ಕ್ರಮುಕಸಮಿತಿ ನೀಪವ್ರಜಂ (ಪುಷ್ಪಪು. ೯–೧೫). [ನೀಪ+ವ್ರಜ]

**ನೀಮಾಚಾಮ** (ನಾ). ಅರ್ಧ ತೋಳಿನ ಅಂಗಿ : ತಲೆಗೆ ವಿಜಾತೀಯವಾಗಿ ಸುತ್ತಿದ ಹಸರುಪೇಟಾ, ಮೈಗೆ ತೊಟ್ಟ ಅಚ್ಚ ಬಿಳುಪಿನ ನೀಮಾಚಾಮ . . . ಇವುಗಳೆಲ್ಲಾ ಸಭೆಯ ಮನಸ್ಸನ್ನು ಆಕರ್ಷಣೆ ಮಾಡಿತು (ಮುಸುಗ. ೧೧). [←ಮರಾ. ನೀಮಜಾಮಾ]

**ನೀಮುಖಾ** (ನಾ). ಒಂದು ಬಗೆಯ ಸಸ್ಯ : ನೀಮುಖಾ, ಪರೇರಾಬೇರು, ಪದ್ಮಲಿ, ಪಾತ, ಕಾಡುಬಳ್ಳಿ (ಮೈಗಿ. ೨೧–೩೯೪). [ ? ]

**ನೀಮ್ರಾನ್** (ನಾ). ಬೆಳೆಯ ಅಂದಾಜು ; ಪಹಣಿ : (ಕೈಸ್‌ಗೆ. II, ೫೫೭) ; (ಮೈಗಜೆ. IV, ೭೮೧).

[←ಪಾರ. ನೀಮ್‌ತಾನ್, ನಿಮತಾನಾ ; ಮರಾ. ನಿಮತಾನಾ]

**ನೀಮ್ರಾನದಾರ** (ನಾ). ಮೋಜಣಿದಾರನ ಮೇಲಿನ ಅಧಿಕಾರಿ. [<ನೀಮ್ರಾನ್+-ದಾರ$_4$]

**ನೀಯತು** 'ನಿಯತ್ತು' ನೋ.

**ನೀರ್, ನೀರು$_1$** (ನಾ). ೧. ಜಲ ; ಉದಕ : "ಅಪಃ(ಪ್), ತೋಯಂ . . . ಜೀವನಂ, ಜೀವನೀಯಂ— ಈ ೨೬ ನೀರ್" (ಹಲಾಯು. ೧೧೭–೨೬) ; ಪರಪಕ್ಷಮುಳ್ಳಿನಂ ತನಗಿರವುಬ್ಬಸಮದಜಾನಟಾವುದದನೇಗೆಯ್ದುಂ ಪರೆದು ಪುಡಿಯೆಲ್ಲಮಂ ನೀರ್ನೆರೆದು ಕೆಸರ್ಮಾಡದನ್ನೆಗಂ ನೆಲಸುಗುಮೇ (ಕವಿರಾ. ೩–೧೫೧) ; ಮಿಾನಂಬುಟುವುಮಂ ನೀರಿಲ್ಲದ ಕೆಱೆಯ ನಡುವುಮಂ . . . ಕಂಡೆಂ (ವಡ್ಡಾರಾ. ೫೫–೨೬) ; ಒಂದರಣೆಯ ನೀರ ಬಯಂಗಿದ ವರಿಸ ಪೆತ್ತೊನ್ದಿ ಎರಡನೆಯ ವರಿಪಮೆಟಳವಿ . . . ಎಲ್ಲಿಟ್ಟುಟಿಲು ಸಳ್ಗಂ (ಎಕ. III, ಶ್ರೀರಂಗ. ೧೪೮–೧೫ ; 904 ?) ; ಮಾಱಾಂತ ಮಾರ್ಪಡೆಯೆಲ್ಲಮಂ ಜವನೊಕ್ಕಲಿಕ್ಕಿ ತನ್ನೊಳ್ ಪೋಗದೆ ಪೆಣೆದ ಬಾಹ್ಲೀಕ ಸೋಮದತ್ತ ಭೂರಿಶ್ರವರನಾನೆ ಮೆಟ್ಟಿದ ಕುಳುಂಪೆಯ ನೀರಂತೆ ದೆಸೆದೆಸೆಗೆ ಸೂಸುವನ್ನೆಗಂ (ಪಂಪಭಾ. ೧೧–೧೩೬ವ) ; ನೀರುಂ ಪುಳ್ಳಿಯುಂ ಕಿಚ್ಚುಮದಾರಯ್ವಂದಡುವ ಲಲನೆಯುಂ ಮಡಕೆಯುಂ ವಿಸ್ತಾರದೊಳೊಲೆಯುಮಿವೆಲ್ಲಮದೋರಂತೊಡಗೂಡೆ ಕೂಟಿನಡುವಂತೆ ವಲಂ (ಧರ್ಮಾಮೃ. ೫–೮೩) ; ಶಿವಪದಾಂಬುವನುತ್ತಮಾಂಗದಲಿ ತಳೆದು ಭವಿಗಳ ಕಾಲ ನೀರಂ ತಳಿದುಕೊಳುವರೆ (ಬಸಪು. ೬೦–೮) ; ನೀರಿಟಾಯದ ಗಂಟಲೊಳ್ ಕಡುಬಂ ತುಱುಕಿದಂತಾಯ್ತು (ರಾಮಾಶ್ವ. ೬–೮). ೨. ಕಡಲು ; ಸಮುದ್ರ : 'ನೀರಣುಗ' ಪರಾ. ೩. ಬೆವರು ; ಸ್ವೇದ : 'ನೀರಾಡು' ಪರಾ. ೪. ಸ್ನಾನ ; ವಿವಾಹ : 'ನಾಲ್ನೀರ್' ಪರಾ. ೫. ಶುಕ್ಲ ; ವೀರ್ಯ ; ರೇತಸ್ಸು : 'ನೀರ್ನಿಲ್' ಪರಾ. ೬. (ವಜ್ರ, ಮುತ್ತು, ರತ್ನ ಮುಂತಾದುವುಗಳಲ್ಲಿರುವ) ಕಾಂತಿ,—ಹೊಳಪು : ಆ ಪುಣ್ಯನದಿಯನೆಯ್ದೆವಂದು ತನ್ನ ಬಾಳ ನೀರಂತೆ ಕಟಂಗಿ ಕರ್ಗಿದ ನೀರಂ ನೋಡಿ (ಪಂಪಭಾ. ೫–೫೩ ವ) ; ಉಪ್ಪಿನ ನೀರಿಂಗೆ ಪುನರ್ನ್ನಾಮ ಬಪ್ಪುದಲ್ಲದೆ ಮುತ್ತಿನ ನೀರಿಂಗೆ ಪುನರ್ನಾಮವುಂಟೆ (ಚಬೊಮ್ಮ. ೨೩೪–೬೧). 'ನೀರೋಟ' ಪರಾ. **ನೀರು$_1$ :** ೧. ಎನಿಸು ಕಾಲ ಕಲ್ಲು ನೀರೊಳಗಿರ್ದರೇನು ನೆನೆದು ಮೃದುವಾಗಬಲ್ಲುದೇ (ಬಸವ. ೯೯) ; ಎನ್ನ ಪಂಚೇಂದ್ರಿಯಂಗಳೂ ಕಬ್ಬಿನ ಉಂಡ ನೀರಿನಂತೆ [ಪಾಠಾಂ. ಉರಿಯಂತೆ] ನಿಮ್ಮಲ್ಲಿ ಬೆರಸುಗೆ (ಮಹಾದೇ. ಬ. ೩೧–೬೬) ; ನರನ ಖಾತಿಗೆ ದ್ರೌಪದಿಯ ತೊತ್ತಿರುಗಳುಪಹಾಸ್ಯಕ್ಕೆ . . . ಭಾಜನವಾದೆನ್ಯೆ ಹರಹರ ಮಹಾದೇವ ಎನುತ ತುದಿವೆರಳಲಾಲಿಯ ನೀರ ಮಿಡಿದಳಲಿದನು ಕಲಿ ಭೀಮ (ಕುಮಾರ್ಯ.ಕ. ೧೨–೯) ; ಬರಬರಲು ತತ್ಕೋಸಲದ ರುಂಹರಿ ವಿರಾಜಿಸಿತಮಮ ಹರಹಿನ ಹರಿವ ಹೊಳೆಗಾಲುವೆಯ ಕೆಱೆಡುಂಬುಗಳ ನೀರುಗಳ ತೆರಳಿಕೆಯ (ತೊರರಾ. ೧–೯–೫) ; ರಾಮಚಂದ್ರ ಒಂದು ತೊಟ್ಟು ನೀರು ಕುಡಿಸಿದನು (ಕಳಹು. ೮೭) ; ನೀರು ಇದ್ದರೆ ಊರು, ನಾರಿ ಇದ್ದರೆ ಮನೆ (ಗಾದೆ). ೩. ಬಿಸಿಲಿನಲ್ಲಿ ಬಂದುದರಿಂದ ಅವನ ಮುಖದಲ್ಲಿ ನೀರಿಳಿಯುತ್ತಿದೆ (ರೂಢಿ). ೪. ಮಗುವಿಗೆ ಎಣ್ಣೆಯ ನೀರು ಹಾಕು (ರೂಢಿ). ೬. ಅವಳ ಓಲೆಯ ವಜ್ರಗಳಲ್ಲಿ ನೀರು ಚೆನ್ನಾಗಿದೆ (ರೂಢಿ).

೭. ಶಕ್ತಿ ; ಕಸುವು ; ಸಾಮರ್ಥ್ಯ : ಬಸವಂತಿಗೆ ಯಾಕೆಂದು ಕೇಳು ವುದು ತಮ್ಮ ನೀರಲ್ಲವೆಂದು ಸುಮ್ಮನಿದ್ದುಬಿಟ್ಟರು (ದೀಪಹ. II, ೧೪೮); ಒಮ್ಮೆ ಚೆನ್ನಾಗಿ ಏಟು ತಿನ್ನದವರೆಗೆ ನನ್ನ ನೀರು ನಿನಗೆ ಗೊತ್ತಾಗದು (ಚೀನಬಾ.೨೪೧) ; ಆ ಹುಡುಗಿ ಏನು ಮಾಡಿದರೂ ಸಿಟ್ಟು ಮಾಡುವ ನೀರು ಒಬ್ಬರಲ್ಲೂ ಇಲ್ಲ (ಮೂರುದಾ. ೧೫೫). ೮. ತೆಳ್ಳನೆಯದು ; ತುಂಬ ತಿಳಿಯಾದುದು : ಈವತ್ತಿನ ಸಾರು ತುಂಬಾ ನೀರು (ರೂಢಿ). ೯. ಒದ್ದೆ ; ಹಸಿ ; ತೇವ : “ನೀರು, ಈರು, ಇರ್ಪು, ರಸ, ಹಸಿ” (ಕಂನುಹು. ೮೭).

— ನೀರ ಕಂಡಿ = ಕೋಟೆಯೊಳಗೆ ಇರುವವರು ಹೊರಗಿನಿಂದ ನೀರುತರಲು ಹೋಗಲು ಉಚಿತವಾದ ಚಿಕ್ಕಬಾಗಿಲು ನೀರದಿಡ್ಡಿ: ಪುಗುವ ಪೊಱಮಡುವ ನೀರ ಕಂಡಿಯು ಕುದುರೆಗಂಡಿಯು ತೆಱಪು ಗಳುಮಂ ವಸುಷೇಣಂ ಬಳಸಿ ನೋಡುತ್ತುಂ ಬರ್ಪನ್ನಂ (ಅನಂಪು. ೧೧-೮೨ ಪ). ನೀರ ಕಡೆಗೆ ಹೋಗು = (ಮಲವಿಸರ್ಜನೆಗಾಗಿ) ನೀರಿರುವ ಜಾಗಕ್ಕೆ ಹೋಗು ; ಬಹಿರ್ದೆಸೆಗೆ ಹೋಗು : ಆ ಊರಿನಲ್ಲಿ ನೀರ ಕಡೆಗೆ ಹೋಗಲು ಬಹಳ ದೂರ ನಡೆಯಬೇಕು (ರೂಢಿ). ನೀರ ಕಾಳು = ನೀರಿನ ಹನಿ,—ಕಣ : ನನಗ ಅವರ ಮಾರೀ ನೋಡದ ನೀರ ಕಾಳು ಗಂಟಲದಾಗ ಇಳೀದ್ಹಾಂಗ ಆಗೇದ (ಗ್ರಾಮಾಯ. ೪೩೭). ನೀರ ಕೊಂಬು = ಭೇದಿ ; ವಿರೇಚನ : ನೀರ ಕೊಂಬಿಗೆ :—ನರಗುಂಜಿ ಸೊಪ್ಪು ತಂದು ನೀರ ಬಿಟ್ಟುಕೊಂಡು ತುಳಿದು ಸೊಲ್ಲಗೆ ರಸವ ತೆಗೆದು ಅದನ್ನು ಹಸುವಿನ ಮಜ್ಜಿಗೆ ಬೆರಸಿ ಕೊಳ್ಳೆ ನೀರ ಕೊಂಬಿನ ವ್ಯಾಧಿ ಮಾಣ್ಬುಂ (ವಿವೈವಿ. ೭೧) : ಮಲವಿಲ್ಲದೆ ನೊರೆಸಹಿತವಾಗಿ ಬರಿಯ ನೀರೇ ಪ್ರವಾಹಿಕವಾಗಿ ಸುರಿವುದೆ ನೀರ ಕೊಂಬೆನಿಸಿಕೊಂಬ ರೋಗವೆಂದರಿವುದು (ಸಕವೈ. ೩೫೯). ನೀರ ಗಂಟ = ನೀರ್ಗಂಟೆ : ತೋಟ ತಳವಾರ ನೀರ ಗಂಟ . . . ಆ ಮುದ್ರೆಕೋಲನ್ನು ತೆಗೆದುಕೊಂಡು ಹೋಗಿ ಮುದ್ರೆ ಹಾಕುವಂತೆ ನಿಬಂಧನೆ ಮಾಡಿದರು (ಚಾಮುವಂ. ೧೧೯) ; ತಳವಾರ ತ್ಯಾಂಪಣ್ಣ ಒಳ್ಳೆ ಸ್ವಾಮಿನಿಷ್ಠ ಸೇವಕನಾಗಿದ್ದಂತೆ, ದಕ್ಷನಾದ ನೀರ ಗಂಟಿಯೂ ಆಗಿದ್ದನು (ಊರುಕ. ೭೭). ನೀರ ಗಂಟು = ಪ್ಲೀಹರೋಗ; ಗಡ್ಡೆರೋಗ : ಪ್ಲೀಹ (ನೀರ ಗಂಟು) (ಮುಂಬಯಿ. ೬-೩೦೯). ನೀರಗಿಚ್ಚು = ನೀರ್ಗಿಚ್ಚು : ಕಾಡುಗಿಚ್ಚು ಎದ್ದರೆ ಅಡವಿಯೆ ಗುರಿಯಯ್ಯ ಕಡು ನೀರಗಿಚ್ಚೀಗೆ ಸಾಗರವೆ ಗುರಿಯಯ್ಯ (ಸಿದ್ಧಪು. ೨೨-೮೭). ನೀರಗಿಚ್ಚು ಅನ್ನ = ಗಿಂಜಲಾದ ಅನ್ನ ; ನೀರುನೀರಾದ ಅನ್ನ : ನಾನು ‘ನೀರಗಿಚ್ಚು ಅನ್ನ’ ಈ ಶಬ್ದ ಕೇಳಿದ್ದೆ. ಆದರೆ ‘ಗಂಜಿಯನ್ನ’ ಎಂದರೇನೆಂಬುದು ನನಗೆ ತಿಳಿಯದಾಯಿತು (ಸ್ಮೃತಿಚಿ. ೫೩). ನೀರ ಘಟ್ಟ = ನೀರು ತುಂಬಿದ ಕೊಡ (?) : ಆ [ಪ]ದದೊಳು ನೀರ ಘಟ್ಟಯುಂ ತಳದೊಳು ತಪ್ಪಾರ್ ಪತಿಹಿತೆಯುಸ್ಸರ್ತಿಯರ್ (ಕೊಲ್ಹಾಶಾ. ೧೭-೧೧ ; 1196). ನೀರ ಜಲ್ಲಿ = ನೀರು ಜಿನುಗುವಿಕೆ,—ಸುರಿಯುವಿಕೆ : “ಸ್ರೂಃ . . . ಸ್ರೋತವ್ಯಂ, ಸ್ರವಣೀಯಂ, ಈ ಲ ನೀರ ಜಲ್ಲಿ” (ಕಾಶಕ್ಕ. ೭೫). ನೀರ ಜೀಬಿ = ಕೋಟೆಯೊಳಕ್ಕೆ ನೀರನ್ನು ತರುವ ಹಾದಿ ; ದಿಡ್ಡಿಬಾಗಿಲು : ಶಾದುಲ್ಲಖಾನನ ಫೌಜುವೆರಸು ಸುಬೇದಾರ ಲಿಂಗಪ್ಪನಂ ಮಾಯಾವಿಗಳ ಸೀಮೆಯ ಮೇಲೆ ದಾಳಿವರಿಸಲಾತಂ ಪಟ್ಟಣದ ಕೋಂಟೆಯ ಸಮೀಪಮಂ ಸಾರ್ದು ನೀರ ಜಿ[ಜೀ]ಬಿಯುಂ ಕಟ್ಟಿಲವರ್ಗಳ್ ಭಯಸ್ಥರಾಗಿ (ಕೆಳನೃ. ೧೦-೭೧). ನೀರ ತಾವರೆ = ನೀರಿನಲ್ಲಿರುವ ಕಮಲ : ಲೋಕವಿಡಿದು ಲೋಕದ ಸಂಗದಿಂದಿಪ್ಪನು . . . ಹತ್ತಱಿಕೊಳಗೆ ಹನ್ನೊಂದಾಗಿ ನೀರ ತಾವರೆಯಂತಿಪ್ಪನು (ಪುರಾವೇ. ಬ. ೯೯-೨೩೦). ನೀರ ತೇರ್ = ನೀರ್ದೇರ್: “ಮುಗಿಲೆಂದು ನೀರ ತೇರೆಂದು ಘನಂ” (ಕವಿಕಂ. ೪೬) ; ಭೋಂಕನೆ ನೂಂಕಿ ಬರ್ಪ ಮಣಿಮಯಮಾದ ತೇರ್ಗಳಿಂದ್ರಚಾಪಂಬೆತ್ತ ನೀರ ತೇರ್ಗಳಿಳೆಗಿಳಿದು ತಳರ್ವಂತೆಯುಂ (ರಾಜಶೇ. ೧೩-೭೭ ಪ). ನೀರ ಥಳಿ = ನೀರಿನ ಚಳೆಯ,—ಸೇಚನ : ಅಂಟಿಸಿಕೊಂಡ ಎಲ್ಲ ನೀರನ್ನು ಗಾಳಿಯ ಚಪಲದಿಂದ ಬೀಳಿಸುವ ಗಿಡಗಳ ನೀರ ಥಳಿ (ಬಾಬಲ. ೧೧೪). ನೀರ ದಿಡ್ಡಿ = ನೀರ ಕಂಡಿ : ನೀರ ದಿಡ್ಡಿಯ ಚೋರಕಂಡಿಯ ತೆಱಪನು ಧೀರ ಕಾಣುತ ವಸುಷೇಣ (ಅನಂಚ. ೧೮-೩೭). ನೀರ ದೆವ್ವ = ನೀರಿನಲ್ಲಿ ವಾಸಿಸುವ ದೆವ್ವ : ತೂರುಗಾಳಿಗೆ ಕಡಲು ಕುದಿಯಿತು, ನೀರ ದೆವ್ವಗಳರಚಿಕೊಂಡುವು (ಇಂಗೀತ. ೬೭-೨). ನೀರ ದೆಸೆ = ನೀರಿರುವ ದಿಕ್ಕು : ಧರ್ಮಪುತ್ರಂ ನೀರಡಸಿ ಸಹದೇವನನೆಲ್ಲಿಯಾದೊಡಂ ನೀರಂ ಕೊಂಡು ಬೇಗಂ ಬಾಯೆಂದು ಪೇೞ್ವುದುಂ . . . ತೀಡುವ ಮಂದಾನಿಳನಿಂ ನೀರ ದೆಸೆಯನಱಿದು ಪೋಗೆವೋಗೆ (ಪಂಪಭಾ. ೮-೩೭ ಪ). ನೀರ ದೇವತೆ = ನೀರಿನ ಅಭಿಮಾನಿದೇವತೆ ; ಜಲದೇವತೆ : ಎಲ್ಲರಮ್ಮಗೆ ಕೋಣವೀವೆ ; ಬನದೇವತೆಗೆ, ನೀರ ದೇವತೆಗೆ ಕಳ್ಳೆರೆವೆ (ಹೆಬ್ಬೆರ. ೬-೮೨). ನೀರ ದೋಣಿ = ನೀರು ತುಂಬುವ ತೊಟ್ಟಿ : “ಅವಗಾಹಃ, ಜಲದ್ರೋಣೀ—ಈ ೨ ನೀರ ದೋಣಿ” (ಹಲಾಯು. ೧೨೪-೬೯). ನೀರ ನಡು = ನೀರಿನ ಮಧ್ಯದಲ್ಲಿರುವುದು ; ನಡುಗಡ್ಡೆ : “ನೀರ ನಡು ಕುಱುವಮೆನಿಸಿಕ್ಕುಂ” (ಮಂಗರಾ. ೧೨೩-೧೩). ನೀರ ನಿಲಯ = ನೀರಿಗೆ ಆಶ್ರಯವಾಗಿ ಇರುವವನು ; ವರುಣ : ಮಾರಜನಕಂ ವಿಪುಳಸಾರಸಭವಂ ದಿವಿಜವಾರವರನುಂ ದಹನನಾ ರವಿತನೂಜಂ ಧೀರದಿತಿಜಂ ವಿನುತನೀರ ನಿಲಯುಂ . . . ಸೇರಿ ನೆರೆದೊಪ್ಪಿರೆ (ರಾಜಶೇ.೧೪-೮೮). ನೀರ ನೆಱೆ = ೧. ನೀರನ್ನು ಸುರಿ,—ಹೊಯ್ಯು : ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರನೆಱೆದರೆ ಮೇಲೆ ಪಲ್ಲವಿಸಿತ್ತು ನೋಡಾ (ಬಸವ. ೪೨೦) ; ಗಿಡವೃಕ್ಷಂಗಳಿಗಾರು ನೀರನೆಱೆವರ್ ನಿತ್ಯಂ ಮಹಾರಣ್ಯದೊಳ್ (ಸೋಮೇಶ. ೩೪). ೨. ಹಾಳುಮಾಡು ; ನಾಶಗೊಳಿಸು : ಪೈಶೂನ್ಯೋಕ್ತಿಯಿಂ ದ್ರೋಹಮುಂ ಎಣಿಸುತ್ತೆಲ್ಲರ ಬಾೞ್ಗೆ ನೀರನೆಱೆ ದಾರುಂ ಕಾಣದೇ ಭಕ್ಷಿಪಾ ಗಣಕಂ ಹೆಗ್ಗಣಕಂ ಸಮಂ (ಸೋಮೇಶ. ೬೩). ನೀರ ಪಂಚೆ = ನೀರ್ಪಂಚೆ: ಹಗ್ಗದ ಮೇಲೆ ಅವರ ಉತ್ತರೀಯ, ನೀರ ಪಂಚೆ ಜೋತಾಡುತ್ತ ಇರುತ್ತಿದ್ದವು (ಇಪ್ಪಕ. ೩೦೮). ನೀರ ಪಡೆ = ನೀರಿನ ಮೇಲೆ ಸಂಚರಿಸುವ ಸೈನ್ಯ ; ನೌಕಾಪಡೆ : ನೆಲದ ಪಡೆ, ನೀರ ಪಡೆ, ಗಾಳಿಪಡೆಗಳ್—ಕೋಟಿಕೋಟಿಗಳ್ —ಸಿದ್ಧವಾಗಿಹವಿಂದು ಯುದ್ಧಲೀಲಾವಿಲಯಕಲೆಗೆ (ಶ್ರೀರಾಮಾ. ೫೫೭-೧೫೨). ನೀರ ಪೊಟ್ಟಣ = ಮೋಡ; ಮೇಘ; “ಕಾರ ಮುಗಿಲ್” (ಚತುನಿ. ೬. I, ೮೭). ನೀರ ಪೊೞೆ, ನೀರ ಹೊಳೆ = ನೀರಿಗೆ ಹೋಗುವ ದಾರಿ,—ಮಾರ್ಗ : ಮತ್ತೊಂದು ದಿವಸಂ ಬೆಸಕೆಯ್ವ ತೊೞ್ತಿ ನೀರಂ ತರಲ್ ಪೋದಲ್ಲಿ ನೀರ ಪೊೞೆಯೊಳಾಕೆಯ ಕೆಳದಿ ನಾಗಬ್ಬೆಯೆಂಬೊಳಾಕೆಯುಂ ಕಂಡಿಂತೆಂದು ಬೆಸಗೊಂಡಳ್ (ವಡ್ಡಾರಾ. ೪೪-೬) ; ನಾಗಲಾಂಬಿಕೆ. . . ಗರ್ಭಮಂ ತಳೆದಳ್ಗಡೇಂ ಚಿತ್ರಮೆಂದು ಮನೆಮನೆ ನೀರ ಹೊಳೆ ಬೀದಿಬೀದಿಯೊಳಗೀ ವಾರ್ತೆ ಪುರಜನದ ಕರ್ಣಂಗಳೊಳಗಿಡಿದುದು (ಚೆಬಪು. ೪-೧೬). ನೀರ ಬಟ್ಟೆ = ೧. ಕೆರೆ, ಕಟ್ಟೆಗಳಲ್ಲಿ ಹೆಚ್ಚಿನ ನೀರು ಹರಿದು ಹೋಗಲು ಮಾಡಿರುವ ದಾರಿ ; ಕೋಡಿ : “ಕೋಡಿಯೆನಲ್ ನೀರ ಬಟ್ಟೆ” (ಭಾರನಿ. ೫). ೨. ನೀರಿನ ದಾರಿ ; ಸಮುದ್ರಮಾರ್ಗ : ಆ ಮಗಧನ ಸಾಧಿಸಿ ನೀರ ಬಟ್ಟೆಯೊಳಾ ಮಹೀಪತಿ ತೇರ ನಡೆಸಿ (ಶ್ರೀಪಾಲ. ೧೩-೧೩೧). ನೀರ ಬಾಗಿಲು = ನೀರ ಕಂಡಿ (?) : ಅಂಗದಲ್ಲಿ ಲಿಂಗ ವೇಧಿಸಿ ಪ್ರಾಣಕ್ಕೆ ಸಂಬಂಧವ ಮಾಡಬೇಕೆಂದಲ್ಲಿ ಅಂಗಕ್ಕೂ ಪ್ರಾಣಕ್ಕೂ ಲಿಂಗ ವೇಧಿಸುವುದಕ್ಕೆ ಹಾದಿಯ ಹೊಲಬು ಅದಾವ ಠಾವಿನಲ್ಲಿ ವೇಧಿಸುವುದು ಹೇಳಯ್ಯಾ ಆ ಅಂಗ ನೀರ ಬಾಗಿಲ ನೆಲನೆ ಮಳೆಯ

ಸಪರಿನ ಹಾದಿಯು (ಪುಜೇಪ. ೨೬೯-೩). **ನೀರ ಬಿರಾಡ**=ನೀರಿನ ಮೇಲೆ ಹಾಕುವ ತೆರಿಗೆ : ಗ್ರಾಮಗಳ ನೀರ ಬಿರಾಡ ಅನುಪುಹಾರಿಕಾ ಯಿಾ ಮೊದಲಾದಯೇನುಂಟಾದನು ಸರ್ವ್ವಮಾನ್ಯವಾಗಿ ನಂಮ ತಂದೆ ನರಸಣನಾಯಕವೊಡೆಯರಿಗೂ ನಂಮ ತಾಯಿ ನಾಗಾಜಿಅಂಮನವರಿಗೂ . . . ಸಮರ್ಪಿಸಿದೆಉ (ಸೌಇಇ. IV, ೨೫೩-೭ ; 1513). **ನೀರ ಬೆರೆ**=ವ್ಯರ್ಥವಾಗು; ಹಾಳಾಗು: ಹರುಷದಿಂದಿರ್ದನೆನ್ನಯ ಮನೋಬಯಕೆ ಯಲ್ಲಿರದೈದಿ ನೀರ ಬೆರೆದುದೊಯೆಂದು ಪುತ್ರಶೋಕೆಗ್ಗಳಿಸಿ ರೋದಿಸುತಿರೆ (ನಪಮೋ.೧೧-೪೯). **ನೀರ ಬೇಂಟೆ**=ನೀರ್ವೇಂಟೆ : ರಾಜಪುತ್ರನಿಚಯಂ . . . ವನಾಂತದೊಳ್ ತೆರೆಯ ತೋಪಿನ ಸೋಹಿನ ನೀರ ಬೇಂಟೆ ಯುರ್ವರೆಗಳನೀಕ್ಷಿಸುತ್ತೆ ಬರೆ (ಅನಂಪು.೧೧-೪೦). **ನೀರ ಬೊಬ್ಬುಳಿಕೆ**=ನೀರುಗುಳ್ಳೆ ; ಬುದ್ಬುದ : ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟ ಕೊಟ್ಟು ಸುರಕ್ಷಿತವ ಮಾಡುವ ಭರವ ನೋಡಾ (ಬಸವ. ೧೬೨). **ನೀರ ಮನೆ**=ನೀರುಮನೆ; ಸ್ನಾನಗೃಹ : ಅಡಿಗೆಯ ಮನೆಯಿಂದಲೂ ಇತ್ತ ನೀರ ಮನೆಯಿಂದಲೂ ಹಿಂಬದಿಗೆ ಹೋಗಲು ಬಾಗಿಲುಗಳಿದ್ದುವು (ರಂಗಕ.೧೨೨). **ನೀರ ಮುರುಹು**=ನೀರಿನ ಸುಳಿ,—ಚಕ್ರ: "ಚಕ್ರಾಂದಿ ಯೆನೆ ನೀರ ಮುರುಹಕ್ಕು" (ಮಂಗರಾ. ೧೨೩-೧೩). **ನೀರ ಮುಳುಗು**=ನೀರಿನಲ್ಲಿ ಮುಳುಗುವಿಕೆ : "ಮುಂಡನಂ, ಮುಂಡನೀಯಂ, ಮುಂಡಿಃ, ಮುಂಡುಃ, ಮುಂಡ್ಯಂ, ಈ ೫ ನೀರ ಮುಳುಗು" (ಕಾಶಕ್ಕ. ೧೦೦). **ನೀರಲಿ ನೆರಹು**=ನೀರಲ್ಲಿ ಹಾಕು : ಸಕಲಶಾಸ್ತ್ರಶ್ರವಣ ವೇದಪ್ರಕರ ಧರ್ಮವಿಚಾರ ಪೌರಾಣಿಕಕಥಾಪ್ರಾಗಲ್ಭ್ಯವಿನಿತಜಿ ಸಾರ ಸಂಗತಿಯ ಅಕಟ ನೀರಲಿ ನೆರಹಿ ಪಶುಪಾಲಕನ ಪೂಜಾಸಾಧನಾರ್ಥ ಪ್ರಕಟನಾದೈ ಭೀಷ್ಮ ಮೂರ್ಖಾಧಮನು ನೀನು (ಕುವ್ಯಾಸ. ೮-೧೯). **ನೀರ ಲಿಪಿ**=ನೀರಕ್ಕರ ೧ : ಅತಿಶಾಂತಸತ್ಪುರುಷರಿಗೆಯಾವರಿಸಿದ ಕೋಪ ನೀರಲಿಪಿಯಿಂದ್ರಚಾಪಾದಂತೆ ತೋರೆಡಗುವವು (ನವಮೋ. ೯-೪೭). **ನೀರಲ್ಲಿ ಹಾಕು**=ಹಾಳು ಮಾಡು ; ವ್ಯರ್ಥಗೊಳಿಸು : ಅವನು ಅಷ್ಟು ದುಡ್ಡನ್ನೂ ನೀರಲ್ಲಿ ಹಾಕಿಬಿಟ್ಟ (ರೂಢಿ). **ನೀರವೆಣ್**="ನದಿ" (ಪ್ರಭಣ್ಣ). **ನೀರ ಸರದಿ**=ವ್ಯವಸಾಯಕ್ಕಾಗಿ ನೀರನ್ನು ಹಾಯಿಸುವ ಸರತಿ,—ಪಾಳಿ : ಹದಿನೈಯಿದು ಕೊಳಗ ದೇವದಾಯ ಮಾನ್ಯದ ಗದ್ದೆಯನೂ ಯಿಾ ಆರಭ್ಯವಾಗಿ ಪ್ರತಿವರುಷ ಪ್ರತಿಫಲದಲ್ಲೂ ನೀರ ಸರದಿಯಲಿ ಕೊಟ್ಟು ಬಹೆಉ (ಎಕ. XII, ಚಿಕ್ಕನಾ. ೨೨-೧೨೦ ; 1579). **ನೀರ ಹಾದಿ**= ಹಳ್ಳ ; ಕಾಲುವೆ (?) : ಕೇಶವದೇವರಿಗೆ ಅಮ್ರುತಪಡಿಗೆ ಸಲುವ ಗದ್ದೆ ಅಡ್ಡ ನೀರ ಹಾದಿಯ ಹಳುಗು ಜಕ್ಕ ಗಉಡನವರ ನಡುವಣ ಕೊಡಗಿಗೆ ಪಡುವಣ ದೆಸೆಯಲಿ (ಎಕ. XI, ಹೊಳಲ್ಕೆ. ೧೨೭-೧೮ ; 1387). **ನೀರಾಗು**=**೧.** ಕರಗು ; ದ್ರವರೂಪವಾಗು : ಮಳೆಗೆ ಬೆಲ್ಲ ತುಂಬ ನೀರಾಗಿ ಹೋಯಿತು (ರೂಢಿ). **೨.** ಮರುಕ ಗೊಳ್ಳು ; ಕನಿಕರಪಡು : ಮಗಳ ಕಣ್ಣೀರನ್ನು ಕಂಡೊಡನೆ ತಂದೆಯೂ ನೀರಾಗುತ್ತಿದ್ದ (ಒಡ್ಡಿಉ.೧೦೪). **೩.** ಮುಟ್ಟಾದವಳು ನಾಲ್ಕನೆಯ ದಿನ ಸ್ನಾನವನ್ನು ಮಾಡು : ಆಕೆಗೆ ಈವತ್ತು ನೀರಾಯಿತು (ರೂಢಿ). **ನೀರಿನ ಗಡಿಯಾರ**=ನೀರ್ಗಡಿಯಾರ : (Clepsydra. ಪಾರಿಸಿ. ೧೬). **ನೀರಿನಲ್ಲಿ ಹೋಮ ಮಾಡು**=ನೀರಿನಲ್ಲಿ ಹಾಕು ; ವ್ಯರ್ಥಮಾಡು : ನಾವು ಇದುವರೆಗೆ ಮಾಡಿದ್ದೆಲ್ಲಾ ನೀರಿನಲ್ಲಿ ಹೋಮ ಮಾಡಿದಂತಾಗಿದೆ (ಪಂಜಪಂ. ೧೬೩). **ನೀರಿನವ**=ನೀರನ್ನು ಹೊತ್ತು ತರುವವನು; ನೀರು ತರುವ ಆಳು: (ಕ). **ನೀರಿನವಳು**=ನೀರನ್ನು ಹೊತ್ತು ತರುವವಳು : (ಕ). **ನೀರು ನಿಡಿ** = ನೀರು ಮತ್ತು ಗಂಜಿ : ಅವರು . . . ಒಂದು ಪ್ರದೇಶಕ್ಕೆ ಬಂದರು; ಅಲ್ಲಿ ಗೆಡ್ಡೆಗೆಣಸು ಹಣ್ಣುಹಂಪಲು ನೀರು ನಿಡಿ ಏನೂ ಇರಲಿಲ್ಲ (ಪಚಭಾ. ೩೫). 'ನಿಡಿ₃' ಪರಾ. **ನೀರು ನೀರಾಗು**=ಕಸುವನ್ನು ಕಳೆದುಕೊಳ್ಳು ; ಸತ್ತ್ವ ಹೀನವಾಗು : ಈಚೆಗೆ ಇಂಗ್ಲಿಷ್ ವಿದ್ಯಾಭ್ಯಾಸ ನೀರುನೀರಾಗಿದೆ (ರೂಢಿ). **ನೀರು ಪಾಲಾಗು, ನೀರ ಪಾಲಾಗು**=ಹಾಳಾಗು ; ನಾಶ ವಾಗು : ಅವನು ಮಾಡಿದ ಕಾರ್ಯವೆಲ್ಲ ಕ್ಷಣದಲ್ಲಿ ನೀರುಪಾಲಾಯಿತು (ರೂಢಿ) ; ಅವನ ಅವಿವೇಕದಿಂದ ಮನೆಯ ಮರ್ಯಾದೆಯೆಲ್ಲ ನೀರ ಪಾಲಾಯಿತು (ರೂಢಿ). **ನೀರುಪಾಲು ಮಾಡು, ನೀರ ಪಾಲು ಮಾಡು**=ಹಾಳುಮಾಡು ; ನಾಶ ಪಡಿಸು : ನನ್ನ ಮಾನ ನೀರುಪಾಲು ಮಾಡಿದೆ ಚಂಪ (ಹೊಸಕ್ಷಿ. ೯೮) ; ಇಪ್ಪತ್ತೊಂದು ಶತಮಾನಗಳ ಕಾಲ ಯೂರೋಪಿ ನಲ್ಲಿ ಪ್ರಚಾರದಲ್ಲಿದ್ದ ಅರಿಸ್ಟಾಟಲಿನ ರಾಸಾಯನಿಕ ಊಹೆಗಳನ್ನು ನೀರ ಪಾಲು ಮಾಡಿದ ಮಹನೀಯ ಈತ (ಶಿಲ್ಪನಾ.೧೨೪). **ನೀರು ಸೋಕದ ವಸ್ತ್ರ**=ಟಾರು ಬಳಿದು ನೀರಿಳಿಯದಂತೆ ಮಾಡಿರುವ ಬಟ್ಟೆ ; ಟಾರ್ಪಾಲಿನ್ : ಲಾರಿಯ ಸಾಮಾನು ಹಾಕುವ ಭಾಗವನ್ನು ತೆರವು ಮಾಡಿ . . . ಪುನಃ ನೀರು ಸೋಕದ ವಸ್ತ್ರವನ್ನು ಮುಚ್ಚಿದರು (ರಕ್ತರೂ. ೫೯). **ನೀರು ಹಾಕು**= **೧.** (ಗಿಡ ಮುಂತಾದುವು ಗಳಿಗೆ) ನೀರನ್ನು ಹಾಕು ; ನೀರೆರೆ : ಬೇಸಗೆಯಲ್ಲಿ ಸರಿಯಾಗಿ ನೀರು ಹಾಕದಿದ್ದರೆ ಗಿಡಗಳು ಒಣಗಿ ಹೋಗುತ್ತವೆ(ರೂಢಿ). **೨.** (ಎಣ್ಣೆ ದು) ಸ್ನಾನ ಮಾಡಿಸು ; ಎರೆ : ಮಗುವಿಗೆ ನೀರು ಹಾಕಬೇಕು (ರೂಢಿ). **ನೀರೊಳದ್ದು, ನೀರಲದ್ದು**=**೧.** ನೀರಿನಲ್ಲಿ ಮುಳುಗು : ದ್ವಾರಾವತಿ ನೀರೊಳದ್ದುದು ಸುರಪುರ ಸೇರಿತು ಖಳರುಪಟಳಕೆ (ಕಂನವಿ. ೧೮-೫೭). **೨.** ನೀರಿನಲ್ಲಿ ಮುಳುಗಿಸು : ತಂದೆ ನೀನು ತಾಯಿ ನೀನು . . . ಕೂಡಲಸಂಗಮದೇವಾ ಹಾಲಲದ್ದು ನೀರಲದ್ದು (ಬಸವ. ೪೭೯). **೩.** ಹಾಳು ಮಾಡು ; ನಾಶಗೊಳಿಸು : ನಿಮ್ಮ ನಂಬಿ ಭಂಡಾರಮಂ ಕೊಟ್ಟಡೆನ್ನನಿಂತು ಕೆಡಿಸುವರೆ ಶಿವಭಕ್ತರ್ಗಿತ್ತು ರಾಜ್ಯಮಂ ನೀರೊಳದ್ದು ವರೆ (ಬಸರ. ೮-೧೧೬). **ನೀರೊಳಿಟ್ಟಕ್ಕರ**=**೧.** ನೀರಿನಲ್ಲಿ ಬರೆದ ಅಕ್ಷರ; ಜಲಲಿಪಿ. **೨.** ಕ್ಷಣಿಕವಾದುದು ; ಶಾಶ್ವತವಲ್ಲದುದು : ಕುವರಲಕ್ಕೆಯನಾಡಿದ ಮಾತು ಕಲ್ಲೊಳಿಟ್ಟಕ್ಕರದಂತೆ. . . ಪೆಜಿರ ಮಾತು ವಿಚಾರಿಸಿ ನೋಡೆ ನೀರೊಳಿಟ್ಟಕ್ಕರದಂತೆ (ಎಕ. V, ಬೇಲೂರು. ೧೧೨-೬೩. ಸು. 1220 ?). **ನೀರೊಳು ಕಲಕು**=**೧.** ನೀರಿನಲ್ಲಿ ಹಾಕು. **೨.** ಹಾಳುಮಾಡು ; ನಾಶಗೊಳಿಸು ; ವ್ಯರ್ಥಗೊಳಿಸು : ಎಲೆ ಸವಿಾರಕುಮಾರ ಸಂಪ್ರತಿಗೆಳಸಿದೈ ಕಲಿತನವ ನೀರೊಳು ಕಲಕಿದೈ (ಕುವ್ಯಾಉ. ೬-೧೯). **ನೀರ್ನಿಡಿಯ ನೇಮ**=ನೀರಾದ ಆಹಾರ ವನ್ನು ಮಾತ್ರ ಸ್ವೀಕರಿಸುವ ವ್ರತ,—ನಿಯಮ : ವ್ರತ ನೇಮ ಸಪ್ಪೆ ಒಜಿತೆ ಮುಂತಾದ ನೀರ್ವಿ[ರ್ನಿ]ಡಿಯ ನೇಮವಂ ತಾಳಿ ಅಂಗನೆಯರ ಸಂಗಸುಖವ ಮಚ್ಚಿ ಲಿಂಗವ ಕೊಂಡಾಡುವ ಬಾಯಲ್ಲಿ ಹೆಂಗಳ ಅಧರವಂ ಚುಂಬಿಸಿ ಲಿಂಗಜಂಗಮದ ಪ್ರಸಾದ ಹೋಯಿತ್ತು (ಸರ್ವಪ. ೧೮೩-೮೩೭). **ನೀರ್ಮಾಡು, ನೀರ ಮಾಡು**= **೧.** ನೀರನ್ನು ತೆಗೆ : ಮೇರುವಂ ಭರದಿಂದಂ ಪಿಡಿದೆತ್ತುವರ್ ಮಳ ಲೊಳಂ ನೀರ್ಮಾಡುವರ್ ಜೋಡೆಯರ್ (ಧರ್ಮಾಮೃ. ೩-೧೩೪). **೨.** ದ್ರವವನ್ನಾಗಿ ಮಾಡು : (ಕ). **೩.** ನಿಸ್ಸತ್ತ್ವಗೊಳಿಸು : ಅಂಧ ಕಾರವೆಂಬ ಗಹ್ವರದೊಳಗೆ ನಿದ್ರೆಯೆಂಬ ರಾಕ್ಷಸಿ ವೀರರ ನಿಗ್ರಹಿಸಿ ನೀರ ಮಾಡಿ . . . ನಿಚ್ಚನಿಚ್ಚ ಜೀವನಾಶ ಮಾಡುತ್ತಿದ್ದಾಳೆ(ಬಸಹೆ.೨೮-೭೭). ℙ ಇದರೊಂದಿಗೆ ಬೇರೆಬೇರೆ ಶಬ್ದಗಳು ಸೇರಿ ದಿನನಿತ್ಯದ ಬಳಕೆಯ ಅನೇಕ ನುಡಿಗಟ್ಟುಗಳು ಸಿದ್ಧವಾಗುತ್ತವೆ.

[**ದೇ.‖ ತಮಿ. ಮಲ. ತುಳು. ಪರ್ಜಿ. ಗಡಬ.** ನೀರ್ ; **ಕೊಡ.** ನೀರೀ ; **ತೆಲು. ಕುಇ.** ನೀರು ; **ಕೊಲಾ. ನಾಯ್ಕಿ.** ಈರ್ ; **ಬ್ರಾಹೂಈ.** ದೀರ್./ **ಸಂ.** ನೀರ]

**ನೀರ$_1$** 'ನೀಜಿ' ನೋ.

**ನೀರ$_2$** (ನಾ). ೧. ನೀರು ; ಜಲ : "ಅಪಃ(ಪ್), ತೋಯಂ . . . ನೀರಂ, ಭುವನಂ, ಅಮೃತಂ, ಜೀವನಂ, ಜೀವನೀಯಂ-ಈ ೨೬ ನೀರ್" (ಹಲಾಯು. ೧೦೭-೨೬) ; ರಂಗತ್ತುಂಗತರಂಗಭಂಗುರಲಸದ್ಗಂಗಾಜಳಂ . . . ಸಾರಯುಮುನಾನೀಳೋರ್ವಿನೀರಂ ಭುಜೋತ್ತುಂಗಂಗೀಗರಿಗಂಗೆ ಮಂಗಳಮಹಾಶ್ರೀಯಂ (ಪಂಪಭಾ. ೧೪-೩೧) ; ಸೂಂದಿಗೆಜಿಯ ನೀರತಟವೋಭ್ಯಾ(ಬ್ಯಾ)ರ್ಗದಿಂ (ಇಅ. XVIII, ೩೧೨-೨೦ ; ಸು. 11ನೆಯ ಶತ) ; ಉಗ್ರಕೇಸರಿಗಳಿತಕರಿಶಿರನಿರ್ಗತಾರುಣ ನೀರ[ಪಾಠಾಂ. ನಿಕರ]ದಲಿ ನೆನೆದು ಬಳಸಿ ಸೂಸುವ ನವ್ಯಮುಕ್ತಾವಳಿಯಲಿ (ಉತ್ತರಾ. ೧೧-೧೯). 'ನೀರ್' ಪರಾ. ೨. ಒಂದು ಬಗೆಯ ಮದ್ಯ,— ಸಾರಾಯಿ : ಬಗನಿಯ ಕಾಂಡವನ್ನು . . . ಕಡಿದಾಗ ಹೊಮ್ಮುವ ದ್ರವವೇ ನೀರ. ನೀರದಿಂದ ಸಕ್ಕರೆ, ಕಾಕಂಬಿ, ಇಲ್ಲವೆ ಹೆಂಡ (ಹಸಃಹೊ. ೨೬೯). 'ನೀರಾ' ಪರಾ [ಸಂ.]

**ನೀರ$_3$** (ನಾ). ನಿರ್ಣಯ ; ಇತ್ಯರ್ಥ : ನಿನ್ನ ಸಾರದಲ್ಲದೆ ಸಂಸಾರದ ಭೀತಿಪ್ರಾಸಾರವೆಂಬುದು ನೀರವಾಗದು ಕಾಣೊ (ಮೋಕ್ಷಪೀ. ೨೧-೫). [←ಮರಾ. ನೀರ]

**ನೀರಂಗಿ** (ನಾ). ಒಂದು ಬಗೆಯ ಸಸ್ಯ : ಸರ್ಣಕತ್ತಿ, ಸಂಕೇಶ್ವರಿ, ವಾತನಾರಾಯಣ, ಕೆಂಪುಕೆಂಜಗ, ನೀರಂಗಿ (ಮೈಡಗಿ. ೭೯-೫೬೩) ; ಸಣಕತ್ತಿ, ಸಂಕೇಶ್ವರಿ, ವಾತನಾರಾಯಣ, ನೀರಂಗಿ, ಕೆಂಪುಕೆಂಜಗ (ಸಸ್ಯನಿ. ೪೭). [ಸಂ. ನೀರಂಗೀ = ಅರಿಸಿನ]

**ನೀರಂಚು** (ನಾ). ದಡ ; ತೀರ : ಯಿಾ ಬಿಟ್ಟ ಕುಳಸ್ಥಳಂಗಳ ನೀರಂಚು ನೆಲನಜಿಕಲು ನಟ್ಟ ಕಲ್ಲು ತೆಗದಗಳು ಗಡಿಯಿಂದೊಳಗಾದ ಚತುಸ್ಸೀಮೆಗೆ ಬಂದ ಮಕ್ಕಿ ಹಕ್ಕಲು (ಎಕ. VIII, ಸಾಗರ. ೧೬೪-೪೭ ; 1491). [ನೀರ್ + ಅಂಚು$_2$]

**ನೀರಂಜನಿ** (ನಾ). ಒಂದು ಬಗೆಯ ಸಸ್ಯ : (ಮೈಡಗಿ. ೩೯-೭೭೪); (ಸಸ್ಯನಿ. ೬೪). [ ? ]

**ನೀರಂಜಿ** 'ನೀರುವಂಜಿ' ನೋ.

**ನೀರಂಜಿಸು** (ಕ್ರಿ). ಹೊಳಪನ್ನುಂಟುಮಾಡು ; ಒಪ್ಪ ಕೊಡು : ಹಾರಾದ್ಯಾಭರಣಂಗಳಿನಾ ರೂಪಾಶ್ಚರ್ಯಮಾಗೆ ಮಾಣಿಕಚಟ್ಟಂ ನೀರಂಜಿಸಿ[ಪಾಠಾಂ. ವಿರಂಚಿಸಿ] ದಳವಿಡಿದ ಮಹಾರತ್ನದ ದೊರೆಗೆವಂದುದಾ ಸ್ತ್ರೀರತ್ನಂ (ಆದಿಪು. ೪-೪೨) ; ಆ ರಮಣಿಯ ತನುಲತೆಯಿಂ ವಾರಿಕಣಪ್ರಚಯಮಂ ದುಕೂಲಾಂಚಲದಿಂ ವಾರಾಂಗನೆಯರ್ ತೊಡೆದರ್ ನೀರಂಜಿಸುವಂತೆ ಮಣಿಶಲಾಕೆಯನಾಗಳ್ (ಪಂರಾಮಾ. ೫-೪೧) ; ಬಗೆವುಗೆ ತೊಡೆದರ್ ಕುಡಿಮಿಂಚುಗಳಿಂ ನೀರಂಜಿಪಂತೆ ನೀರಜಮುಖಿಯರ್ ಘಿಗೆ ಕುಂಕುಮದಣ್ಪಿಂ ಸಂಪಗೆವಣ್ಣಂ ಮುಗುಳ್ದ ಮೆಯ್ಗಳೊಳ್ ಮಳಯಜಮಂ (ಲೀಲಾಪ. ೯-೮೧). [ಸಂ. ನೀರಂಜನ + -ಇಸು$_3$]

**ನೀರಂಡೆ** (ನಾ). ಜೀರ್ಕೊಳವೆ ; ಪಿಚಕಾರಿ : ವಾರಿಜಮುಖಿ ಚೆಲ್ಲುವೆನೆಂದೆತ್ತಿದ ನೀರಂಡೆಯ ನೀಲದ ರುಚಿಯುಂ ಲಲಿತಾರುಣಕರಪಲ್ಲವದ ಸುರಂಗುಂ ಸೂಸಲ್ (ಜಯಕಾ. ೧೧-೪೯). [ನೀರ್ + ಅಂಡೆ$_2$]

**ನೀರಂಧ್ರ** (ಗು). ೧. ರಂಧ್ರವಿಲ್ಲದ; ಎಡೆಯಿಲ್ಲದ. ೨. ಒತ್ತಾದ; ದಟ್ಟವಾದ : ಆಂಧ್ರೀನೀರಂಧ್ರಬಂಧುರಸ್ತನಹಾರನುದಾರಂ ಸರಸ್ವತೀಮಣಿಹಾರಂ (ಆದಿಪು. ೧-೩೨) ; ಪಡುವಣ ಕಡಲಿಂದೊಗೆದುದು ಬಡಬಾಗ್ನಿಯ ಪೊಗೆ ಪೊದಟ್ದು ಕಿಡಿವೆರಸೆನಲೇಂ ಕುಡಿಮಿಂಚುವೆರಸು ಗಗನಮನಡರ್ದುದೊ ನೀರಂಧ್ರನೀಲನೀರದನಿವಹಂ (ಪಂರಾಮಾ. ೭-೧೪೩) ; ನೀರಂ ನೀರಂಧ್ರಮೋಘಂ ಸುರಿಯೆ . . . ಕೆರಳಿಸಿದತ್ತೋವಿ ಕಾರಂ ವಿಕಾರಂ (ಅರ್ಥನೇ. ೮-೨). ೩. ಒರಟಾದ ; ನಾಜೂಕಲ್ಲದ. (ನಾ). ೪. ದಟ್ಟವಾದುದು : ಗಾಢವಾದುದು : ಅಂಧ್ರಕನಾಕಾಶಂ ನೀರಂಧ್ರಮೆನಲ್ ಸುರಿದು ಸರಲ ಸರಿಯಂ ಜವನೀತಂ ಧ್ರುವಮೆಂಬಿನಮಮರಪುರಂಧ್ರಿಯರಂ ವಿಜಯಿ ವಿಜಯಸಿಂಹಂಗಿತ್ತಂ (ಪಂರಾಮಾ. ೧೨-೧೨೬). [ಸಂ.]

**ನೀರಂಬಲಿ, ನೀರಂಬಿಲ** (ನಾ). ತಿಳಿಯಾಗಿರುವ ಗಂಜಿ ; ನೀರಾಗಿರುವ ಗಂಜಿ ; ತಿಳಿಗಂಜಿ : ಒಂದು ಮಾನ ಜೋಳದ ಪಿಟ್ಟಂ ನೀರಂಬಲಿಯಂ ಪ್ರತಿದಿನಂ ಕುಡುವುದು (ಕಗವಿ. ೯೧ ರಾಜಾವಳೀಕಥೆ). **ನೀರಂಬಿಲ** : ಬಿಸಿಲಕ್ಕಿಯಂ ತೊಳೆದು ನೀರಂಬಿಲದಯೆಸರನೊಸೆದುವೊಲೆ ಗೆತ್ತಿಯಕ್ಕಿಯ ಹಾಕಿ . . . ಪಲವು ಪರಿಮಳಗಳನಿಡುವುದು (ಸೂಪಶಾ. ೩-೩೭). [ನೀರ್ + ಅಂಬಲಿ$_1$]

**ನೀರಂಬಿಲ** 'ನೀರಂಬಲಿ' ನೋ.

**ನೀರಕಿಚ್ಚು** 'ನೀರಗಿಚ್ಚು' ನೋ.

**ನೀರಕೆಸವು** (ನಾ). ಒಂದು ಬಗೆಯ ಸಸ್ಯ : "ಆಲೂಪಂ-ನೀರಕೆಸವು" (ಓಷಧಿ. ೧೦). [<ನೀರ್ + ಕೆಸವು]

**ನೀರಕ್ಕರ** (ನಾ). ೧. ನೀರಿನ ಮೇಲೆ ಬರೆದ ಅಕ್ಷರ ; ಜಲಲಿಪಿ. ೨. (ಆಲಂ) ಸ್ಥಿರವಲ್ಲದುದು ; ಅಶಾಶ್ವತವಾದುದು : ಕನಕಂ ನೀರಕ್ಕರಂ ಪೆಂಡಿತಿ ಕನಸು . . . ಗೃಹವಚಿರವೆನಿಪ್ಪಿಂತಿವಂ ಬಿಟ್ಟು ನಿಮ್ಮಂ ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೩೧). [ನೀರ್ + ಅಕ್ಕರ$_2$]

**ನೀರಕ್ಕಿ** 'ನೀರ್ವಕ್ಕಿ' ನೋ.

**ನೀರಕ್ಕಿಅನ್ನ** (ನಾ). (ಕರಾ) ಊಟ ಮಾಡಿ ಮಿಗುವ ಅನ್ನವನ್ನು ಕೆಡದಂತೆ ನೀರಿನಲ್ಲಿ ಹಾಕಿದ್ದು, ಬಡಿಸುವಾಗ ನೀರನ್ನು ಹಿಂಡಿ ತೆಗೆಯುವ ಅನ್ನ : ಈ ದರಿದ್ರ ಮಳೆಗಾಳಿ ಬೀಸುವಾಗ ನೀರಕ್ಕಿ ಅನ್ನ ಬಾಯಿಗೆ ಹಾಕಿದರೆ, ಕರುಳು ಕತ್ತರಿಸಿ ಬಿದ್ದ ಹಾಗೆ ಆಗುತ್ತದೆ. ಸೆಕೆ ದಿನವಾದರೆ ನೀರಕ್ಕಿ ಅನ್ನ ತಂಪು ನಿಜ (ಮರಪ. ೨೮). [ನೀರ್ + ಅಕ್ಕಿ$_1$ + ಅನ್ನ$_3$]

**ನೀರಕ್ಷೀರ** (ನಾ). ೧. ನೀರು ಮತ್ತು ಹಾಲು : ನೀರಕ್ಷೀರದಂತೆ ಕೂಡಿದ ಭೇದವನಾರಿಗು ಹೇಳಲಿಲ್ಲ ಕೇಳಲಿಲ್ಲ (ಅಪಚಂ. ೨೨೭-೧೦೨೯) ; ನೀರಕ್ಷೀರಂಗಳನೊಂದೇ ರೀತಿಯೊಳಱಿವರಱಿಗೆ ಬೇರ್ಕೆಯ್ದುದಱಿರೊಳ್ ನೀರಸಮನುಟಿದು ಸಾರಮನಾರೈದುಱಿ ರಾಜಹಂಸನೊರ್ವನೆ ಸವಿಗುಂ (ಚಿಕವಿ. ೧-೪೬). ೨. (ನೀರು, ಹಾಲುಗಳಂತೆ) ಬೆರೆತುಕೊಂಡಿರುವಿಕೆ ; ಸಾಮರಸ್ಯ : ನೀರಕ್ಷೀರದಂತೆ ನೀಣಿಪ್ಪೆಯಾಗಿ ಆವುದು ಮುಂದು ಆವುದು ಹಿಂದು ಎಂದಱಿಯೆನು (ಮಹಾದೇ.ಬ. ೧೩-೧೧). [ನೀರ$_2$ + ಕ್ಷೀರ]

**ನೀರಕ್ಷೀರನ್ಯಾಯ** (ನಾ). ನೀರು ಮತ್ತು ಹಾಲುಗಳಂತೆ ಬೆರೆತುಕೊಂಡಿರುವ ರೀತಿ ; ಬೇರೆಬೇರೆ ಗುರುತು ಹಿಡಿಯಲಾಗದಂತೆ ಒಂದಾಗಿ ಸೇರಿಕೊಂಡಿರುವಿಕೆ ; ಒಂದು ಬಗೆಯ ಲೌಕಿಕ ನ್ಯಾಯ : 'ಕ್ಷೀರನೀರನ್ಯಾಯ' ಪರಾ. [ನೀರಕ್ಷೀರ + ನ್ಯಾಯ]

**ನೀರಕ್ಷೀರಪರೀಕ್ಷೆ** (ನಾ). ಬೆರೆತಿರುವ ನೀರು ಮತ್ತು ಹಾಲನ್ನು ಬೇರ್ಪಡಿಸಿ ಕಂಡುಹಿಡಿಯುವಿಕೆ : ನೀರಕ್ಷೀರಪರೀಕ್ಷಾಧೀರತೆಗಾನಲ್ಲದಿಲ್ಲೆನುತೆ ಮುಡಿಗಿಕ್ಕಿತ್ತಾ ರಾಜಹಂಸನೆನೆ ಖಗವಾರದೆ ಗಱಿಗೆದಱಿ ಜಱಿದ ಗಱಿ ನೆಱಿ ಮೆಱಿಗುಂ (ರಾಜಶೇ. ೨-೬೬). [ನೀರಕ್ಷೀರ + ಪರೀಕ್ಷೆ]

**ನೀರಗಸೆಬಾಗಿಲು** (ನಾ). ಹೊರಗಿನಿಂದ ಕೋಟೆಯ ಒಳಭಾಗಕ್ಕೆ ನೀರನ್ನು ತರುವುದಕ್ಕಾಗಿ ನಿರ್ಮಿಸಿದ ಬಾಗಿಲು ; ನೀರುಬಾಗಿಲು : ಅಗಸೆ-ನೀರಗಸೆಬಾಗಿಲುಗಳೂ ಸಂಪೂರ್ಣನಷ್ಟವಾಗಿ

ಹೋಗಿದ್ದು, ಈಗ ಅವುಗಳ ಗುರುತು ಕೂಡ ಉಳಿದಿಲ್ಲ (ಕರ್ಣಾಜ. ೩ ಮುಪ್ಪಾತು). 'ನೀರ್ಗಂಡಿ' ಪರಾ.
[ನೀರ್+ಅಗಸೆಬಾಗಿಲು (<ಅಗಸೆಬಾಗಿಲ್)]

**ನೀರಗಳು** (ನಾ). ಕೋಟೆಯ ಸುತ್ತಲೂ ಇರುವ ಕಂದಕ, – ಅಗಳು : ವಡಬಾಗ್ನಿಗಗಿದು ಕನಕಶೈಲವ ಶರಣ್ಬಡೆದುದು ಶರನಿಧಿಯೆನಲು ಕಡುರಯ್ಯಮಾಡುದಾ ಪೊಳಲ ಪೊಂಗೋಂಟೆಯನಡರ್ದು ಮೆಱೆವ ನೀರಗಳು (ಕುರಾಸಾಂ. ೩-೫೭); ಸಲೆ ತೀವಿ ತುಳುಕುವ ಜಲವ ಸಲೆ ಸೂತ್ರದಿಂ ಬಱಿಕೆಯ್ದು ಹೆಣನ ತೀವಿ ನೆಲಸವು ಮಾಡಿ ನೀರಗಳ (ನಾಗಕು. ೧೭-೩೪). [ನೀರ್+ಅಗುಳು$_3$ (<ಅಗುೞ್$_3$)]

**ನೀರಗಿಚ್ಚು, ನೀರಕಿಚ್ಚು** (ನಾ). ಒಂದು ಬಗೆಯ ಸಸ್ಯ : "ಬ್ರಹ್ಮಸೋಮಾ—ಚಿಕ್ಕಕಲ್ಲುರಿ, ನೀರಗಿಚ್ಚು" (ಓಷಧಿ. ೧೦೭). **ನೀರಕಿಚ್ಚು** : "ಕೇವುಕಿ ? —ಅಂಕೋಲೆ, ನೀರಕಿಚ್ಚು, ಬದ(ನೆ)ಣೆ ?" (ಓಷಧಿ. ೪೦).
[ ? ]

**ನೀರಗೋಣಿ** 'ನೀರುಗೋಳಿ' ನೋ.

**ನೀರಜ$_1$** (ಗು). ೧. ಧೂಳಿಲ್ಲದ; ಹುಡಿಯಿಲ್ಲದ. ೨. ಕಳಂಕರಹಿತವಾದ; ದೋಷರಹಿತವಾದ. ೩. ಮುಟ್ಟಾಗದಿರುವ. (ನಾ). ೪. ಧೂಳಿಲ್ಲದುದು : ನೀರಜಮಾದುದು ಮೇದಿನಿ (ಸಂರಾಪಾ. ೩-೧೧೧); ನೀರಜಮಾಯ್ತು ಕೂಡೆ ಕೊಳನಂತಿರುಪಪ್ಪಲವ ದೇಳ್ಗೆಯಾಯ್ತು ಮುಭ್ರೋರಗನಂದದಿಂ . . . ಕಂಜಾರಿಯ ಮಾಳ್ಕೆಯಿಂ ಕುಮುದವರ್ಧನಮಾಯ್ತು ರು ಮೇಘಕಾಲದೊಳ್ (ತ್ರಿಪುವಿ. ೮-೪೩). ೫. ದೋಷವಿಲ್ಲದುದು ; ಕಳಂಕರಹಿತವಾದುದು : ನೀರಜಮಾದುದು ಮೇದಿನಿ ನೀರಜಮಿತ[ಪಾಠಾಂ. ಮಿತ್ರ]ನ ಚರಿತ್ರಮೆಂದಱಿಪುವವೋಲ್ ನೀರಜಮಾದುದೀ ವಸುಧಾರಮಣಂ ಸ್ವಚ್ಛಹೃದಯನೆಂದಱಿಪುವವೋಲ್ (ಸಂರಾಪಾ. ೩-೧೧೦). ೬. ರಜೋಗುಣವಿಲ್ಲದುದು. ೪, ೬ : ಪರಮಪವಿತ್ರನಂತೆ ಧರೆ ನೀರಜಮಾದುದು (ಅನಂಪು. ೫-೩); ನೀರಜಮಾಯ್ತು ಭೂಮಿ ಸುಜನೋತ್ಕರದಂತೆ ಸರೋವರಂಗಳುಂ ಸಾರತೆವೆತ್ತು ಕೂಡೆ ತಿಳಿದಿರ್ದುವು ಲಾಲಿತಸನ್ಮನಂಗಳಂತೆ (ವಾಘಪು. ೭-೩೦). ೭. ರಜೋಗುಣವಿಲ್ಲದವನು ; ಪರಮಾತ್ಮ : ನೀರಜನ ಚಿನ್ಮಯನ ಜಿನಪನ ಚಾರುಕಥೆ ಸತ್ಕಥೆ . . . ಜಾರಚೋರವಿಟಾದಿ ಕಥೆಗಳು ಸಾರಕಥೆಗಳೆ (ಸಾಳ್ವಭಾ. ೧-೩೭). [ಸಂ. ನೀರಜಸ್]

**ನೀರಜ$_2$** (ಗು). ೧. ನೀರಿನಲ್ಲಿ ಹುಟ್ಟಿದ. (ನಾ). ೨. ಒಂದು ಬಗೆಯ ಮರ ; ಚಂಗಲಕೋಷ್ಠ ; "ಪುಷ್ಕರಮೂಲ" (ಪಂಡಿತ. ೨೪೪) : "ನೀರಜಮೆನಲು ಕೋಷ್ಠಮುಕ್ಕುಂ" (ಮಂಗರಾ. ೪೩-೪೧). ೩. ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : ನಾನಾನೀರಜರಜಃಪಿಂಜರಿತ ಜಲಜಲಾಶಯಂಗಳೊಳಂ ನೆಱೆದು (ಆಪಿಪು. ೬-೧೧೧ ಪ); ಸೀತಾಧುನಿ ರಂಜಿಕುಂ ನಿಭೃತನೀರಜಕೈರವ ಮಿಾನಜಾರವಂ (ಚಂದ್ರಪು. ೧-೮೨). ೪. ಮುತ್ತು ; ಮೌಕ್ತಿಕ. [ಸಂ.]

**ನೀರಜಜಾತ** (ನಾ). (ವಿಷ್ಣುವಿನ ನಾಭಿ)ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ : ನೀರಜಜಾತ ವಿಸ್ತರಿಸಿದಂಡಮುಮಂ ಮಣಿಮಾಲೆಯಾಗಿ ವಿಸ್ತಾರಿಸಿ ಹಸ್ತದಿಂ ಪಿಡಿದು ತನ್ನ ಸರಣ್ಬುಗುವರ್ಗೆ ಲೇಸುಮಂ ಪ್ರೇರಿಸಲೋಸುಗಂ ಜಪಿಸುತಿಪ್ಪಳಿರುಳ್ಪಗಲಾವಳೊರ್ವಳಾ ಭಾರತಿ ನಮ್ಮ ಜಿಹ್ವದಲನಾನಿಳದಿಂದಿರುತಿರ್ಕೆ ಸಂತತಂ (ಎಕ. XI, ದಾವಣ. ೫೯-೯; 1280). [ನೀರಜ$_2$+ಜಾತ]

**ನೀರಜನೇತ್ರ** (ನಾ). ಕಮಲದಂತೆ ಕಣ್ಣುಗಳುಳ್ಳವನು ; ವಿಷ್ಣು : ಸಕಲಸಾರಸರ್ವಸ್ವನೆನಿಪ್ಪ ನೀರಜನೇತ್ರನ ಲೀಲಾನುಷ್ಠಿತ ಬಾಲಕೇಳಿ ಬಣ್ಣಿ ಪರಳವೇ (ಜಗವಿ. ೩-೫೮). [ನೀರಜ$_2$+ನೇತ್ರ]

**ನೀರಜನೇತ್ರೆ** (ನಾ). ಕಮಲದಂತೆ ಕಣ್ಣುಗಳುಳ್ಳವಳು ; ಚೆಲುವೆ: ನೀರಜನೇತ್ರೆಗೆ ಪುಳಕಂ ಗಾರಿಗೆ ತಳ್ಪೊಯ್ಯೆ ಕೇಳ್ದು ತನ್ನಯ ಭವವುಂ (ಪುಣ್ಯಾಸ್ರ. ೧೨-೧೦). [ಸಂ. ನೀರಜನೇತ್ರಾ (ನೀರಜ+ನೇತ್ರ+-)]

**ನೀರಜಬಂಧು** (ನಾ). ಕಮಲದ ಸ್ನೇಹಿತ,—ಆಪ್ತ ; ಸೂರ್ಯ : ನೀರಜಬಂಧು ಗುಱಿಯಮ್ಮನೆ ರಸೆಗಜಾಂಡದಿಂದಿಱಿದನಾರನಱಿಯದೊ ರಾಗಂ (ಶಾಂತಿಪು. ೮-೬೧). [ನೀರಜ$_2$+ಬಂಧು]

**ನೀರಜಭವ** (ನಾ). = ನೀರಜಜಾತ : ತಾರಕಜಿನ್ನಾಗೇಶ್ವರ ನೀರಜಭವದಶಕರಱಿದು ನುತಿಸಲಶಕ್ಯಂ (ಹವಿಸ್ಕಾ. ೧-೨೮); ನೀರಜಭವನ ಮಾನಸಪುತ್ರ ನೀನಲ್ಲದಾರಾದೊಡೀ ಮಾತುಗಳ ಭಾರಾಂಕನಾಗಿಯೆನ್ನೊಡನೆ ಪೇಳ್ದೊಡೆ ಸೀಳಿ ತೋರಣಗಟ್ಟಿಪೆನು (ಮೋಹತ. ೧೨-೩೧). [ಸಂ.]

**ನೀರಜವನ** (ನಾ). ಕಮಲಗಳ ಸಮೂಹ,—ಗುಂಪು : ಮಾರಿಮಲಯಾನಿಲಂ ನವನೀರಜವನಮೆಂಬ ಕೆಂಡದೊಳ್ ದಂಡನಮಸ್ಕಾರಂ ಬಂದಪಂ (ಮುಕೋಚ. ೧-೩೮). [ನೀರಜ$_2$+ವನ]

**ನೀರಜಶರ** (ನಾ). ತಾವರೆಯನ್ನೇ ಬಾಣವಾಗುಳ್ಳವನು ; ಕಾಮ; ಮನ್ಮಥ : 'ನೀರಜಶರಾಹವ' ಪರಾ. [ನೀರಜ$_2$+ಶರ]

**ನೀರಜಶರಾಹವ** (ನಾ). ಮನ್ಮಥನ ಕಾಳಗ ; ರತಿಕ್ರೀಡೆ : ನೀರಜಶರಾಹವದೊಳೊದಗುವೊಡೆ ಕಡುಚದುರೆ ನೀ ರಣದೊಳಾಳ್ತನವನೆನ್ನೊಡನೆ ತೋಱುದೊಡೆ ನೀರಸವೆನಿಸದೆ ಪೇಳು (ಜೈಮಿಭಾ. ೧೬-೧೦).
[ನೀರಜಶರ+ಆಹವ]

**ನೀರಜಸಖ** (ನಾ). = ನೀರಜಬಂಧು. [ನೀರಜ$_2$+ಸಖ]

**ನೀರಜಸಮುದ್ಭವ** (ನಾ). = ನೀರಜಜಾತ : ಸತ್ವರಜಸ್ತಮೋಗುಣಾಧಾರತೆಯಿಂ ಜಗಸ್ಥಿತಿ ಸಮುದ್ಭವಸಂಹೃತಿಹೇತುವದ ನೀರೇರುಹನಾಭ ನೀರಜಸಮುದ್ಭವ ಶಂಕರರೀಗಭೀಷ್ಟಮಂ (ಕಇಅ. ೧-೨-೪ ; 1058).
[ನೀರಜ$_2$+ಸಮುದ್ಭವ]

**ನೀರಜಾಕ್ಷ** (ನಾ). = ನೀರಜನೇತ್ರ : ಸಿಂದೆಯಲಿ ನೊಂದೆನ್ನೆ ನೀರಜಾಕ್ಷ (ಪುರಂದ. ೧-೯೩-೧). [ಸಂ. (ನೀರಜ+ಅಕ್ಷಿ+-)]

**ನೀರಜಾಕ್ಷಿ** (ನಾ). = ನೀರಜನೇತ್ರೆ : ಅವನ ಕಾಣುತ ಹರ್ಷದಿಂ ಬ್ರಹ್ಮರಾಕ್ಷಸನು ಬಾಯ್ದೆಱೆದು ನುಂಗುವನಿತಕೆ ನೀರಜಾಕ್ಷಿ ತಾಂ ಪತಿಭಿಕ್ಷೆಯಂ ದೇಹಿ ಎಂದೊಡಱೆ (ಪ್ರೌಢರಾ. ೮-೪೮). [ಸಂ. ನೀರಜಾಕ್ಷೀ]

**ನೀರಜಾತ** (ನಾ). ನೀರಿನಲ್ಲಿ ಹುಟ್ಟಿದುದು ; ಕಮಲ : ನೀರಿನೊಂದು ನೀರಜಾತ ಬೆಳಕಿಗಾಗಿ ಕೆರಳಿತು ಈ ಕಿರಣಕರಳಿತು (ಗಂಗಾತ. ೧೫-೧೩). [ನೀರ್$_2$+ಜಾತ]

**ನೀರಜಾಲಯೆ** (ನಾ). ೧. ಕಮಲವೇ ಮನೆಯಾಗಿರುವವಳು ; ಲಕ್ಷ್ಮಿ : ನೀರಜಾಲಯೆ ತಾನಡಿಗಳನೊತ್ತಲು ಉದಾರದೇವರ ದೇವನೊಲುಮೆಯಿಂದ ಕಾರುಣ್ಯಸುಧೆಯನು ಸುರಿಯೆ ಭಕ್ತರ ಮೇಲೆ (ಪುರಂದ. ಭಾ. ೩-೧೩೫-೧). ೨. ಸರಸ್ವತಿ : ನೀರಜಾಲಯೆ ಬ್ರಹ್ಮಚಾರಿಣಿ ವಾರಿಜಾಸನೆಯೆನ್ನ ಜಿಹ್ವೆಯ ಸಾರಿ ಸಲೆ ಉದ್ಧರಿಸು ಕಾವ್ಯವ (ಬಜ್ಜಪು. ೧-೧೧).
[ಸಂ. ನೀರಜಾಲಯಾ (ನೀರಜ+ಆಲಯ+-)]

**ನೀರಜಾಸನ** (ನಾ). ಕಮಲಾಸನ ; ಬ್ರಹ್ಮ : ಅರನುಜ್ಞೆಯ ಶಿರದಿ ಧರಿಸಿಯೆ ನೀರಜಾಸನ ಜಗವ ಸೃಷ್ಟಿಪನಾರನುಜ್ಞೆಯನನುವಿಡಿದು ಹರಿಜಗವ ಪಾಲಿಸುವ (ಗಗತಾ. ೯-೧). [ನೀರಜ$_2$+ಆಸನ]

**ನೀರಟ್ಟು** (ನಾ). "ನೀರೋಟ ; ಪ್ರವಾಹ" (ಪ್ರಭಾಷ್ಣ) : ಬೆಟ್ಟನ ನೀರಟ್ಟನವೋಲಟ್ಟುಳಿಗಳ್ ಬೆಟ್ಟಿ ತಾದೊಡಂ ಮುನ್ನೆಲೆಯೊಳ್ ನೆಟ್ಟನೆ ನಡುಗದೆ ಕದಡದೆ ಕಟ್ಟದಟಂ ದೊಡ್ಡದೇವನೆಸೆದಂ (ಚಿಕವಿ. ೩-೧೮).
[ನೀರ್+ಅಟ್ಟು$_4$]

**ನೀರಡಕ** (ನಾ). ನೀರನ್ನು ಹೊತ್ತು ತರುವವನು ; ನೀರು ತುಂಬುವವನು : 'ನೀರಡಕಿ' ಪರಾ.

[ನೀರ್+ಅಡಕು$_1$ (<ಅಡುಕು) + -ಅ$_7$]

**ನೀರಡಕಿ** (ನಾ). ನೀರನ್ನು ಹೊತ್ತು ತರುವವಳು ; ನೀರು ತುಂಬುವ ದಾಸಿ : "ನೀರಡಿ[ಡ]ಕಿ[ಪಾಠಾಂ. ಕೆ] **ಪೋಟಿಯೆನಿಸಿಕ್ಕು**" (ಮಂಗರಾ. ೯೦-೪). [ನೀರಡಕ + -ಇ$_2$]

**ನೀರಡಕು** 'ನೀರಡುಕು' ನೋ.

**ನೀರಡಕೆ** 'ನೀರಟಿಕ್ಕೆ' ನೋ.

**ನೀರಡಸು,** ನೀರಡಿಸು (ಕ್ರಿ). ನೀರನ್ನು ಬಯಸು ; ಬಾಯಾರು ; ತೃಷೆಯಾಗು : ಧರ್ಮಪುತ್ರಂ ನೀರಡಸಿ ಸಹದೇವನನೆಲ್ಲಿಯಾದೊಡಂ ನೀರಂ ಕೊಂಡು ಬೇಗಂ ಬಾಯೆಂದು ಪೇಟ್ಟುದಂ (ಪಂಪಭಾ. ೮-೩೭ ವ) ; ಅಂಗೈಯೊಳಗಣ ಹಂಸೆ ಹಾಲನೊಲ್ಲದೆ ನೀರ ಕುಡಿಯಿತ್ತು ನೀರು ಬಾಯಾಱಿ ನೀರಡಸಿ ಅಱಿಕೆಗೊಂಡಿತ್ತು (ಆದಪ. ೩೯-೧೦೪) ; ನೀರಡಸಿರ್ದ ಹೊತ್ತಾ ಜ್ಯ ದೊರಕಿ ಫಲವೇನು (ಹಚಶಾ. ೭-೮) ; ತುರಗ ನೀರಡಸಿದರೆ ರಣದಲಿ ಸರಸಿಯುನು ತೋಡಿದನು (ಕುಪ್ಪಾದ್ರೋ. ೧೦-೪೩) ; ಸುರನದಿಯ ತೋಯಮಿರೆ ನೀರಡಸಿ ಹಿಮಜಲಕೆ ಪರಿವಂತೆ ನಿನ್ನ ದರ್ಶನಮಿರ್ದುಮಿಾ ಮಹಾಧ್ವರಕೆಳಸುವವನಲ್ಲ (ಜೈಮಿಭಾ. ೨೬-೭೬) ; ನೀರಡಸಿ ಬಂದ ಸೋದರಗೆ ನೀರನು ಕೊಡಲು ಮನು ಧರ್ಮಶಾಸ್ತ್ರವೆನಗೊರೆಯಬೇಕೇನು? (ಕೋಗಿಶಿ. ೨೪-೫). **ನೀರಡಿಸು :** ಪಿರಿದೊಂದು ಕಾಜಿನ ಬಟ್ಟಲೊಳ್ ಕವಿಮ್ಮತಪ್ಪ ನೀರಂ ತೀವಿ ಚಂದ್ರ ಬಿಂಬಮಂ ನೀರೊಳ್ ಕಾಣ್ಬಂತಿರೆ ಮಾಡಿಯರಸಿಯಂ ತೃಷ್ಣಾಭಿವೃದ್ಧಿ ಯಪ್ಪಾಹಾರಮನೂಡಿ ನೀರಡಿಸಿದೊಡೆ ಚಾಣಾಕ್ಯನಿಂತೆಂದಂ (ವಡ್ಡಾರಾ. ೧೮೬-೧೭) ; ಹಸಿದು ಎಕ್ಕೆಯ ಕಾಯ ಮೆಲಬಹುದೆ ನೀರಡಿಸಿ ವಿಷವ ನೀಂಟಬಹುದೆ (ಬಸಪ. ೧೨೦) ; ಅಸಗ ನೀರಡಿಸಿ ಸತ್ತಂತಾಯಿತ್ತು (ಮೋಳಿಮಾ. ೭೨-೨೮೫) ; ಉದಕದ ಬಾಣವಕ್ಕುಡಿಸೆ ಒಱತೆಯಾಱಿತು ವರುಣಶರ ಬಾಯಱಿತು ನೀರಡಿಸಿದುದು (ಕುಪ್ಪಾದ್ರೋ. ೧೯-೪೮) ; ಕವಿದು ಕಾಡಾನೆಗಳು ಮಡುವಿಗೆ ತವಕದಿಂ ನೀರಡಿಸಿ ಬಂದುದು ಗಿರಿ ಗಳಂದದಲಿ (ನಳಚ. ೫-೪೪) ; ನೀರಡಿಸಿ ಬಂದಿದ್ದ ಬಿಸಿಲಿನ ಹೊತ್ತಿಗೆ ಇಷ್ಟು ಮಜ್ಜಿಗೆ ಕೊಟ್ಟೆ (ಆಬೋಲೀ. ೩೬).

[ನೀರ್ + ಅಡಸು?./**ತೆಲು.** ಡಪ್ಪಿ, ದಪ್ಪಿ = ಬಾಯಾರಿಕೆ ; **ಕೊಲಾ.** ಅಡ್ಡ = ಬಾಯಾರು ; **ನಾಯ್ಕಿ.** ಅಡ್ = ಬಾಯಾರಿಕೆ ; **ಪರ್ಜಿ.** ಅಂಡ್ = ಹಸಿವಾಗು ಅಥವಾ ಬಾಯಾರು ; **ಕೋತ** ನೀರ್ ಅರ್ಪ್ = ಬಾಯಾರಿಕೆ ; **ತೊದ.** ಅಟ್ = ಬಾಯಾರು]

**ನೀರಡಿಕೆ** 'ನೀರಟಿಕ್ಕೆ' ನೋ.

**ನೀರಡಿಸು** 'ನೀರಡಸು' ನೋ.

**ನೀರಡುಕು,** ನೀರಡಕು (ಕ್ರಿ). ನೀರನ್ನು ತಂದು ತುಂಬು : ಸಂಗತ ಜಿನಧರ್ಮಮತಿಗೆ ನಾಂಗಳ್ ನಿನಗಱಿಯೆ ತೆಱಿಯೆ ಬಣ್ಣಿಸೆ ಮಾದಿತ್ಯಂಗೆ ಸೊಡರೆತ್ತುವೀ ಗಾಂಪಿಂಗಾಗರಮಾಗಿ ತೊಱಿಗೆ ನೀರಡುಕುವ ವೋಲ್ (ಅಜಿಪು. ೬-೭೯). **ನೀರಡಕು :** ನೀನೆಂದಂತು ತೊಱಿಗೆ ನೀರಡಕಲುಮಾದಿತ್ಯಂಗೆ ಸೊಡರಿಡಲುಮಿಂದ್ರಂಗೆ ದೇವಲೋಕಮಂ ಬಣ್ಣಿಸುವಂತೆಯುಂ ನಿನಗೇನೆಂದು ಕಜ್ಜಂಬೇಟ್ಟುದು (ಪಂಪಭಾ. ೯-೧೮ ವ) ; ತಿರುಕೊಳವಿನಾಚಿಯೆಂಬಂಗನೆ . . . ತಾಂ ನೀರಡಕುವ ಲಿಂಗವಂತರ ಮನೆಯ ಪೊಕ್ಕು (ಭಾಪಚಿಂ. ೮-೧೭) ; ಅಮಳ ಗಂಗಾಧರನೆ ಅಸಮ ಭಕ್ತರಿಗೆ ನೀರಡಕು (ನನವೋ. ೧೫-೨). [ನೀರ್ + ಅಡುಕು]

**ನೀರಣುಗ** (ನಾ). ಸಮುದ್ರದಲ್ಲಿ ಹುಟ್ಟಿದವನು ; ಚಂದ್ರ : "ಚಳಿಗದಿರ . . . ತಾರಗೆಯಾಣ್ಮ ನೀರಣುಗನು . . . ಬಿದುವೆನಲ್ ಚಂದ್ರನಾಮವು" (ಶಬ್ದಮಂ. ೧೬) ; "ನೀರಣುಗನೆನೆ ಚಂದ್ರನಭಿಧಾನ ಮಕ್ಕು" (ಕಶರ. ೫೬). 'ಕಡಲಣುಗ' ಪರಾ.

[ನೀರ್+ಅಣುಗ (<ಅಣುಂಗ) ]

**ನೀರತೃಣ** (ನಾ). ನೀರಿನಲ್ಲಿ ಬೆಳೆಯುವ ಒಂದು ಬಗೆಯ ಜೊಂಡು ಹುಲ್ಲು ; **ಅಪು** : "ಅಪಃ = ನೀರತೃಣಂ" (ಕಾಶಕ್ಯ. ೪೨).

[ನೀರ$_2$ + ತೃಣ]

**ನೀರತ್ತಿ** (ನಾ). ಒಂದು ಬಗೆಯ ಅತ್ತಿಮರ : ನೀರುವಾಟಿ, ನೀರತ್ತಿ (ಮೈಶಿಗಿ. ೩೬-೭೧೧). 'ಕಲ್ಲತ್ತಿ$_1$', 'ಕಾಡತ್ತಿ' ಪರಾ.

[ನೀರು$_1$ (<ನೀರ್) + ಅತ್ತಿ$_1$]

**ನೀರದ** (ನಾ). **೧.** ಮೋಡ ; ಮೇಘ ; ಮುಗಿಲು : ಶಾರದನೀರದ ನಿಕಾಶ ವಿಶಾಲಧವಳದುಕೂಲಾಂಬರವಿರಾಜಮಾನನುಂ (ಆದಿಪು. ೧೧-೧೦ ವ) ; ತೇರೊಡ್ಡು ಗಾಳಿಗೊಡ್ಡಿದ ನೀರದದೊಡ್ಡಿನವೊಲಾಗೆ (ಪಂರಾಮಾ. ೧೩-೭೩) ; ನೀರದಸ್ಥಾನದೊಳಿರ್ದ ಬೆಳ್ಮುಗಿಲ ಮಕ್ಕಳ ವೋಲ್ ನಿಜಪಾಂಡುದೇಹ ಸಂತಾನಕವಭ್ರದೊಳ್ ಮಿಱುಗೆ ಬಂದೆಱಗಿತ್ತು . . . ಮರಾಳಮಂಡಳಂ (ಜಗವಿ. ೪-೬೪) ; ತೀರದ ನೀರದಂ ನೆಗೆದು ಗರ್ಜಿಪುದೆಂದು ಪಯೋಧಿಕೇಳಿಯಂ ಸಾರಮರಾಳನೇನುಳಿದುದೇ (ರಾಜಶೇ. ೧೩-೧೯). **೨.** ಹಲ್ಲಿಲ್ಲದುದು ; ಬೋಡುಬಾಯಿ ಯುಳ್ಳುದು. **೧, ೨ :** ಎನ್ನ ಸಹಾಯದಿಂ ನೆರೆದು ತಾಳ್ದು ಘನತ್ವ ಮನಸ್ಮದೀಯ ಮಿತ್ರೋನ್ನತತೇಜಮಂ ತವಿಪನೆಂದನಿಲಂ ಮುಗಿಲಂ ಕನಲ್ದು ಪೊಯ್ದನ್ನೆಗಳಲ್ ಘನಧ್ವನಿ ಕಳಲ್ದುದಿರ್ದತ್ತು ಘನೋಪಳಾ ಚ್ಛದಂ ತನ್ನಿಜಮಲ್ಲದಿರ್ದೊಡಿಳೆಯಲ್ಲಿದು ನೀರದ ನಾಮಮಾಂಪುದೇ (ರಾಜಶೇ. ೮-೧೦೬). [**ಸಂ.**]

**ನೀರದಜಾಲ** (ನಾ). ಮೋಡಗಳ ಗುಂಪು,—ಸಮೂಹ : ಮೇಲನ ಱಿಯದ ನೃಪನ ಬಾಳಿಕೆ ಗಾಳಿಗೊಡ್ಡಿದ ಸೊಡರು ನೀರದಜಾಲದೊಡ್ಡಣೆ (ಕುಪ್ಪಾಸ. ೧-೫೧). [ನೀರದ + ಜಾಲ$_1$]

**ನೀರದಪಥ** (ನಾ). ಮೋಡಗಳ ಮಾರ್ಗ ; **ಆಕಾಶ** : ತ್ರಿದಶಾನಕ ಲಯದಿಂ ನೀರದಪಥದೊಳ್ ನಾರದಂಗೆ ತಾಂಡವದ ತಗುಳ್ಪೊದವಿದುದು (ಶಾಂತಿಪು. ೪-೫೭) ; ನೀರದಪಥದೊಳ್ . . . ನಾರದನೀಶ್ವರನ ಮುಂದೆ ನರ್ತಿಸುತಿರ್ದಂ (ತ್ರಿಪುವಿ. ೨೪-೩೮೭). [ನೀರದ + ಪಥ]

**ನೀರದಮಾರ್ಗ** (ನಾ). = ನೀರದಪಥ : ಬೆಳಗುಗಳೆಲ್ಲಮೊಂದುರುಳಿ ಯಾಗಿ ನಭಸ್ಥಳದಿಂದಮಿಾ ಮಹೀತಳಕಿೞಿತರ್ಪುದೆಂದು ಮನುಜಾಕೃತಿ ಯೆಂದು . . . ನೋಟಕರೆ ತಳವೆಳಗಾಗೆ ಸಾರೆವರೆ ನೀರದಮಾರ್ಗದಿನಂದು ನಾರದಂ (ಪಂಪಭಾ. ೬-೬) ; ದಶರಥಕ್ಷೋಣೀಶನಾಸ್ಥಾನಭೂಮಿಯನಾ ನೀರದಮಾರ್ಗದಿಂದಿೞಿದು ಸನ್ಮಾರ್ಗಕ್ಕೆ ಮೆಯ್ದಾರದಂ ನಯಮಂ ಸಾರದನಾವ ಕಾಳೆಗದೊಳಂ ಕಣ್ಣಾಱದಂ ನಾರದಂ (ಪಂರಾಮಾ. ೩-೧೮).

[ನೀರದ + ಮಾರ್ಗ]

**ನೀರದಮಾಲಿಕೆ** (ನಾ). = ನೀರದಜಾಲ : ನೀರದಮಾಲಿಕೆಯಿಂ ತೊಲಗಿದ ಶಶಿ ಕಾಲಿಕೆಯಿಂ ಬೇರ್ಪಟ್ಟ ಕನಕಮಿರ್ಪಂತಿರ್ದಂ (ಪಂರಾಮಾ. ೧೬-೮೧). [ನೀರದ + ಮಾಲಿಕೆ]

**ನೀರದರಥ** (ನಾ). ಮೋಡವನ್ನೇ ವಾಹನವಾಗುಳ್ಳವನು ; ಇಂದ್ರ : "ಪುರುಹೂತಂ ಮಘವಂ . . . ಶತಮನ್ಯು ನೀರದರಥಂ ಶಕ್ರಂ ವೃಷಂ ವಾಸವಂ" (ವಸ್ತುಕೋ. ೬-೩೩). [ನೀರದ + ರಥ]

**ನೀರದರವ** (ನಾ). **೧.** ಮೋಡಗಳ ಶಬ್ದ ; ಮೇಘನಿನದ ; ಗುಡುಗು. **೨.** ಒಂದು ಬಗೆಯ ಸೊಪ್ಪು ; ಚಿಲಕವರೆ : "ನೀರದರವಂ ತಂಡುಲೀಯಕಂ ಮುದಿಪ್ಪಮೆನೆ ಕಿಱುಕುಸಾಲೆಯುಕ್ಕುಂ" (ಮಂಗರಾ. ೪೨-೪೦). [ನೀರದ + ರವ]

**ನೀರದರುಚಿ** (ನಾ). ಮೋಡದ ಬಣ್ಣ ; ಶ್ಯಾಮಲ ವರ್ಣ : ನೀರದ ರುಚಿಯಂ ಪೋಲ್ವ ಶರೀರದ ವನಚರಿ ತನೂಳಲತೆವನೆಯೊಳ್ಪೊಕ್ಕು (ತ್ರಿಪುವಿ ೨೭-೩೯). [ನೀರದ+ರುಚಿ]

**ನೀರದಸಂಕುಳ** (ನಾ). = ನೀರದಜಾಲ : ನೀರದಸಂಕುಳಂ ನೆರೆದು ಬಂದು ಘನಾತುರದಿಂ ಪ್ರತೀಚಿಕಾ ನೀರಧಿನೀರನೀಂಟುವೆಡೆಯೊಳ್ ಬಡ ಬಾಗ್ನಿಯನೀಂಟಿ ಪೋಗಿ ತನ್ನೀರದವಾರ್ಗದೊಳ್ ಪಸರಿಸಿದರ್ದು (ಬಾಧಪು. ೨೭-೩೯). [ನೀರದ+ಸಂಕುಳ(=ಸಂಕುಲ)]

**ನೀರದಸ್ಥಿತಿ** (ನಾ). ೧. ಮೋಡಗಳ ಇರುವಿಕೆ,—ನೆಲಸುವಿಕೆ. ೨. ಹಲ್ಲಿಲ್ಲದಿರುವ ಸ್ಥಿತಿ,—ಇರವು. ೧, ೨ : ಗತಬಲನಾಗಿ ವಜ್ರ ಧರನಲ್ತು ವಯೋಧಿಕನಾಗಿ ತಾರ್ಕ್ಷ್ಯನಲ್ತು . . . ನೀರದಸ್ಥಿತಿಗವಕಾಶ ನಾಗಿ ಗಿರಿಯಲ್ತೆನೆ ವೃದ್ಧನಿದೇಂ ವಿರುದ್ಧನೋ (ಪುಷ್ಪಪು. ೧೩-೩೫). [ನೀರದ+ಸ್ಥಿತಿ]

**ನೀರದಾಧ್ವ** (ನಾ). = ನೀರದಪಥ : ಬಣಿತೆಯ ವಿಧಾವಂತ ಮಾವಂತ ಸಾವಂತಗಣದಿನೊಪ್ಪುವ ಸಭೆಗೆ ನಾರದಂ ನೀರದಾಧ್ವದಿನಿಳಿದು ನಡೆತಂದನು (ಚಿಬಪು. ೪೭-೧೫). [ನೀರದ+ಅಧ್ವ]

**ನೀರದಾವಳಿ** (ನಾ). = ನೀರದಜಾಲ : ಮುಸುಕಿದ ನೀರದಾವಳಿಗಳಂ ಕಿರಣಂಗಳೊಳೊತ್ತಿ ತೇಜಮರ್ವಿಸುವಿನಮಾಗಳೊರ್ವೊದಲೆ ಮೂಡುವ ಬಾಳದಿನೇಶಬಿಂಬದೊಂದೆಸಕದಿನಾ ದ್ವಿಜನ್ಮ ಸಭೆಯಂ ಪೊಱಮಟ್ಟೊಡೆ ಮಾಸಿದಂದಮುಂ ಪಸದನದಂತೆ . . . ಕಣ್ಗೆಸೆದು ತೋಱುದುದಾ ಕದನ ತ್ರಿಣೇತ್ರನಾ (ಪಂಪಭಾ. ೩-೬೧). [ನೀರದ+ಆವಳಿ$_1$(=ಆವಲಿ)]

**ನೀರದೋತ್ಪಳವರ್ಣ** (ನಾ). ಮೋಡದಂತೆ ಹಾಗು ಕನ್ನೈದಿಲೆ ಯಂತೆ ನೀಲವರ್ಣವಾದವನು : ನೀರದೋ[ಪಾಠಾಂ.ಜೋ]ತ್ಪಲ ವರ್ಣನಾಡಿದನಾಡಿದಂ . . .. ಸಂಸಾರನಾಟಕಸೂತ್ರಧಾರಿ ಮುರಾರಿ ಕೈಪಱಿಗಾಡಿದಂ (ಜಗವಿ. ೩-೫೩). [ನೀರದ+ಉತ್ಪಲ+ವರ್ಣ]

**ನೀರದೋಪಳ** (ನಾ). ಆಲಿಕಲ್ಲು; ಘನೋಪಲ : ನೀರದೋಪಳಮಂ ಪೂವಲಿ ತಳ್ತ ಕಾರ್ಮುಗಿಲನುದ್ಯದ್ಧೂಪಧೂಮಂ ನಿರಾಕುಳದಿಂ ಪೋಲ್ತು . . . ಕೇಕಿಸಂಕುಳಮಾಡಿತ್ತು ನಟೀಕದಂಬದೊಡವಂದಭ್ರಾಗಮ ಭ್ರಾಂತಿಯಿಂ (ಪುಷ್ಪಪು. ೪-೩೭). [ನೀರದ+ಉಪಳ(=ಉಪಲ)]

**ನೀರದೌಘ** (ನಾ). = ನೀರದಜಾಲ : ಎತ್ತೆತ್ತಲುಂ ಕಾಪ್ಪಿರಮಾದಂ ಕೊರ್ವೆ ಬಿರ್ದಂ ಕಱಿದುದು ಬಹಳಾಸಾರಮುಂ ನೀರದೌಘಂ (ಚಂದ್ರಪು. ೪-೪೧). [ನೀರದ+ಓಘ]

**ನೀರಧರ** (ನಾ). ನೀರನ್ನು ಹೊಂದಿರುವುದು ; ಮೋಡ : ಉತ್ಕಂಠ ವಿಯೋಗಿಸೀಜನತ್ವಪಾತ್ಯಕ್ಷ್ಣಾಂಗಸಂಸಂಗದಾಱುದುವಾದಂ ನವನೀಲ ನೀರಧರಮುಕ್ತವ್ಯಕ್ತವಾರ್ಬಿಂದುಗಳ್ (ಚಂದ್ರಪು. ೪-೪೦) ; ತಾರಕಾ ಸಿತನೀರಧರ ಕಸ್ತೂರಿಕಾಂಜನಸೂರತನಯಾ . . . ಘೋರಗರಳಾಹಾರ ಬಸವಕುಮಾರ ಶರಣಾಗು (ಬಸಪು. ೬೧-೮೫). [ಸಂ.]

**ನೀರಧಿ** (ನಾ). ಕಡಲು ; ಸಮುದ್ರ ; ಜಲಧಿ : ನೀರಧಿಯ ನೀರ್ಗೆ ಪೋಪಾ ಕಾರಮುಗಿಲ್ ಮರಳವೆಂದು ಶರದಭ್ರಂಗಳ್ ಸಾರ್ದಿರ್ದ ಗಗನ ಗಂಗೆಯ ನೀರನೆ ಕಱವಂತಿರೆಱಗಿದವು ಬೆಳ್ಸರಿಗಳ್ (ಜಗವಿ. ೪-೬೯) ; ಆ ನೀರಧಿಪರಿವೃತಭೂಮಧ್ಯದೊಳೇನೆಸೆದತ್ತೊ ಸುವರ್ಣನಗೇಂದ್ರಂ (ಉದ್ಭದೇ. ೨-೯). [ಸಂ.]

**ನೀರಪಾವಡಿ** (ನಾ). ಒಂದು ಬಗೆಯ ಸಸ್ಯ : "ಕಲಿರಂ—ನೀರಪಾವಡಿ" (ಓಷಧಿ. ೨೦). [<ನೀರ್+ಪಾವಡಿ ?]

**ನೀರಬಳ್ಳಿ** 'ನೀರುಬಳ್ಳಿ' ನೋ.

**ನೀರಬೊಮ್ಮಿ** (ನಾ). ಒಂದು ಬಗೆಯ ಸಸ್ಯ : ನೀರಬೊಮ್ಮಿ ಸೊಪ್ಪು, ನೀರಗೋಣಿಸೊಪ್ಪು, ಇವು ಎರಡು ಬಗೆಯನ್ನು ಪಿಟ್ಟೆನಿಕ್ಕಿ . . . ಆ ರಸದಲ್ಲಿ ಅರೆದು ಕದಡಿ ಕುಡಿಯಲು ಎರಡು ವೇಳೆ ಮೂಱು ವೇಳೆ ವಿರೇಕಮಕ್ಕುಂ (ವಿವೈವಿ. ೧೧೩). [<ನೀರ್+ಬೊಮ್ಮಿ]

**ನೀರರಣಿ** (ನಾ). ನೀರೊಡ್ಡು ; ಏರಿ ; ಕಟ್ಟೆ (?) : ಧಾರಾ ಪೂರ್ವಕಂ ಶ್ರೀಮದಗ್ರಹಾರಂ ಮುಗಳಿಯಲಿ ಬಿಟ್ಟ ವೃತ್ತಿಯ ಸೀಮಾ ಸಂಬಂಧಿ ಹಿರಿಯ ಕೆಱೆಯ ಕೆಳಗೆ ಗದ್ದೆ ಮಹ ××× ಭೂಮಿಯ ಕೆಲದ ಹಡುವಣ ನೀರರಣಿ (ಎಕ. V, ಹಾಸನ. ೧೩೦-೪೫ ; 1147 ?). [ನೀರ್+ ? ]

**ನೀರರುಹ** (ನಾ). ನೀರಲ್ಲಿ ಹುಟ್ಟಿದುದು ; ಜಲರುಹ ; ತಾವರೆ ; ಕಮಲ : ಕಾಮಂಗೆ ಮಜ್ಜನಕೆಂದೆತ್ತಿದ ಚಂದ್ರಕಾಂತಘಟದೊಳ್ ತಂದಟ್ಟಿಯಿಂ ಪುಷ್ಪವಾಸನೆಗೆಂದಿಕ್ಕಿದ ನೀಳನೀರರುಹಮಂ ಪೋಲ್ದತ್ತು ಕಟ್ಟಿಂದುವಾ (ಪಂಪಭಾ. ೪-೫೧) ; ನೀರರುಹಂಗಳನೊಲ್ಲದೆ ಚಂಚರೀಕ ತತಿ ಗಂಧಹಸ್ತಿಯೊಳ್ ನೆಲಸುವವೋಲ್ (ಶಾಂತಿಪು. ೫-೯೬) ; ನೀರ ರುಹಂ ಮಲಯರುಹಂ ಹಾರಂ ಕಲ್ಹಾರಮುಮಲವಾಃಪೂರಂ ಕರ್ಪೂರಂ ತಾಪಮನುಡುಗಿಪೊಡಾರಾಧಿಸುಗವನ ತೋಳ ತಳ್ಪಿನ ತಣ್ಪಂ (ಚಂದ್ರಪು. ೮-೪೯). [ಸಂ.]

**ನೀರಲ** 'ನೇಱಲ್' ನೋ.

**ನೀರಲಿ** 'ನೀರಿಲ್ಲಿ' ನೋ.

**ನೀರವ** (ಗು). ೧. ನಿಶ್ಶಬ್ದವಾದ ; ಮೌನದಿಂದ ಕೂಡಿದ : ನಗಂ ಶತಗುಹಾಧ್ವನಿಗಳಿಂ ಪ್ರತಿಘರ್ಜಿಪೋಲಂತೆ, ನೀರವಮಹಾರಣ್ಯಮನುರಣಿ ತಮಪ್ಪಂತೆ . . . ಘರ್ಜಿಸಿದುದಾ ಅದ್ವೈತಿ ತಾಂ ದ್ವೈತಿಯಪ್ಪಂತೆ (ಶ್ರೀರಾಮಾ. ೧೪೩-೪೮) ; ನಿಬಿಡನೀರವಕಾನನಾಂತರಂ ನಡುವಗಲ ಮಾರ್ತಾಂಡನುರವಣೆಯನಡಗಿಸುತೆ . . . ಮೆರೆದತ್ತು ಚಿತ್ರಗತವಾದಂತೆ ವೋಲ್ ನಿಶ್ಚಲಂ (ಚಿತ್ರಾಂಗ. ೩-೫೫). (ನಾ). ೨. = ನೀರವತೆ : ದಂಪತಿಗಳಿಬ್ಬರೂ ಸ್ವಲ್ಪ ಹೊತ್ತು ನೀರವವಾಗಿ ಸುಮ್ಮನಿದ್ದರು (ತುರಾಯಿ. ೬೨) ; ನೀರವದ ಇರುಳಿನಲ್ಲಿ, ಆಗೊಮ್ಮೆ ಈಗೊಮ್ಮೆ ಎಚ್ಚರಿಕೆಯ ಕೂಗು . . . ಹೋಷಿಯಾರ್ (ಆತ್ಮಾರ್ಪ. ೧). [ಸಂ.]

**ನೀರವಂಜಿ** 'ನೀರುವಂಜಿ' ನೋ.

**ನೀರವತೆ** (ನಾ). ನಿಶ್ಶಬ್ದವಾಗಿರುವಿಕೆ ; ಮೌನ : ನೀರವತೆಯೆ ಸಂಗೀತಂ ಬೊಬ್ಬಿರಿಯುವ ಮಂದೆಗಿಂ (ಅನಿಕೇ. ೧೪-೧೭). [ಸಂ. ನೀರವತಾ]

**ನೀರವತ್ತಿಗೆ** 'ನೀರ್ವತ್ತಿಗೆ' ನೋ.

**ನೀರವಲಕ್ಕಿ** (ನಾ). ನೀರಿನಲ್ಲಿ ನೆನೆಸಿದ ಅವಲಕ್ಕಿ : ಸರಸೋತಿಯು . . . ಆಕೆ ತಂದುಕೊಟ್ಟ ನೀರವಲಕ್ಕಿಗೆ ಉಪ್ಪಿನಕಾಯಿರಸವನ್ನು ಸೇರಿಸಿ, ಹೊಟ್ಟೆ ತುಂಬ ತಿಂದಳು (ಮರಮು. ೬೨). [ನೀರು$_1$(<ನೀರ್)+ಅವಲಕ್ಕಿ]

**ನೀರವಳ** (ನಾ). ಒಂದು ಬಗೆಯ ಗಿಡ ; ಜಾಪಾಳದ ಗಿಡ : ಮರ ಗಳು : ಹೆಸವ . . . ಚಡಲೆ, ನಾರವಳ್ಳಿ, ನೀರವಳ (ನಮ್ಮನು. ೨೩೬). [←ತಮಿ. ನೀರ್ವಳ]

**ನೀರವಾಳಿ** (ನಾ). ಒಂದು ಬಗೆಯ ಸಸ್ಯ : "ತೋಯಲಕ್ಷ್ಮೀ – ನೀರ ವಾಳಿ" (ಓಷಧಿ. ೭೩). [ ? ]

**ನೀರಸ** (ಗು). ೧. ರಸವಿಲ್ಲದ ; ಒಣಗಿದ ; ನಿರ್ದ್ರವವಾದ. ೨. ಸ್ವಾರಸ್ಯವಿಲ್ಲದ ; ನಿಸ್ಸಾರವಾದ ; ಸತ್ತ್ವರಹಿತವಾದ : ನೀರಸ ವಸ್ತುವನಿಕ್ಕಲ್ ಸಾರಾಮೃತಮಯಮೆನಿಪ್ಪ ರಸರಿದ್ಧಿಯನಾ ಸೂರಿವರಂ ತಳೆದಂ ಕೈಸಾರದು ನೋಟ್ಪರ್ಗೆ ಮತ್ತೆ ಪಸಿವುಂ ತೃಷೆಯುಂ (ಬಾಧಪು. ೧೬-೧೧೪). ೩. ದುರ್ಬಲವಾದ ; ಶಕ್ತಿಹೀನವಾದ. ೪. ರುಚಿ ಯಿಲ್ಲದ ; ಸವಿಯಿಂದ ಕೂಡಿರದ. (ನಾ). ೫. ಒಣಗಿದುದು ;

ನೀರಸವಾಗೆ ಬಳ್ಳಿ ಗಿಡು ಪೆರ್ಮರಗಳ್ . . . ಕರಯಂತ್ರನಾಳದಿಂ ಭೂರಸ ಮೆಲ್ಲಮಂ ತೆಗೆಯೆ ಭಾನು . . . ಬಂದುದು ಬೇಸಗೆಗಾಲಂ (ಪಂಪಾಮಾ. ೭-೮೫) ; ನೀರಸಮಾದೆಲೆಯಂ ಸಲೆ ಸೈರಿಸದಿವೆ ನೂಂಕಿ ಕಳೆದುವೆನೆ ಕಳಿಕೆಗಳುಂ ಕೋರಕದ ತುಱುಗಲುಂ ಸಹಕಾರದ ಕೊಂಬುಗಳೊಳೊಡದದೇಂ ಮೂಡಿದುವೋ (ಲೀಲಾಪ. ೯-೪೯); ರಾಹುವೆತ್ತಲು ಲಲಿತತಾರಾವ್ಯೂಹವೆತ್ತಲು ದಳ್ಳಿಸುವ ದವದಾಹವೆತ್ತಲು ನೀರಸದ ತೃಣರಾಶಿ ತಾನೆತ್ತ (ಕುಪ್ಪ್ಯಾದ್ರೋ. ೧೭-೨೪). **೬.** ಸ್ವಾರಸ್ಯವಿಲ್ಲದುದು ; ನಿಸ್ಸಾರವಾದುದು : ಪುದಿದ ತಱಗೆಲೆಗಳಂ ಕಂಡುದಱಿಂದಂ ಧಾನ್ಯಸಮಿತಿ ನೀರಸಮುಕ್ಕುಂ ತುದಿಯೊಳ್ ಮನುಜಪ್ರತತಿಗಮದೆ ದಲ್ ಭೋಗೋಪಭೋಗ ಕಾರಣಮುಕ್ಕುಂ (ಆದಿಪು. ೧೫-೪೩) ; ಪೋದೊಲವೆಯ್ದೆ ಮತ್ತೆ ಪೊಸತಾದುವು ನೀರಸವಾಗಿ ಗಡ್ಡೆಯಂಬೋದ ಮನಂ ಕೊನರ್ತುವು (ಚಂದ್ರಪು. ೭-೬೬) ; ಕಡುಚದುರೆ ನೀ ರಣದೊಳಾಳ್ತನವನೆನ್ನೊಡನೆ ತೋಱಿದೊಡೆ ನೀರಸವೆನಿಸದೆ ಪೇಳು (ಜೈಮಿಭಾ. ೧೬-೧೦); ನೀರಸವಾದ ಸತ್ವಹೀನವಾದ ಆಹಾರದಿಂದ ಒಬ್ಬ ಮನುಷ್ಯನಿಗೆ ಒಂದು ಜನಾಂಗಕ್ಕೆ ಆಗುವ ಹಾನಿ ಅಷ್ಟಿಷ್ಟಲ್ಲ (ಗೃಹವಿ. ೪೯) ; ವ್ಯಕ್ತಿಗಳ ಮನಸ್ಸಿನಲ್ಲಿ ಕಲಾಭಿರುಚಿಯಿಲ್ಲದಿದ್ದರೆ ಜೀವನ ನೀರಸವಾಗುತ್ತದೆ (ಶಿಕ್ಷದ. ೩೮೮). **೭.** ರಸವನ್ನರಿಯದವನು ; ಅರಸಿಕನಾದವನು : ನೀರಸನಪ್ಪ ತಾಪಸನ ತೋಟಿಯೊಳೋಪನದೃಶ್ಯಮಾಗೆ ಸಂಸಾರಮಸಾರಮಾದುದು (ಮಲ್ಲಿಪು. ೧೪-೫೦); ರಸಮುಂ ಭಾವಿಸದರ್ಥಮಂ ಬಗೆಯದಜ್ಞರ್ ಭಾವದೊಳ್ ರೂಢಿವೆತ್ತೆಸೆವಂ ತಾಳ್ದದ ಶಾಸ್ತ್ರದೊಳ್ ವಿಕಳರುದ್ಯತ್ಕಾವ್ಯದೊಳ್ ನೀರಸರ್ ಬೆಸೆದಿರ್ಪರ್ (ಸೂಕ್ತಿಸು. ೧-೬೪). **೮.** [ಕಾವ್ಯಮೀ] ಹದಿನೆಂಟು ಬಗೆಯ ಕಾವ್ಯದೋಷಗಳಲ್ಲಿ ಒಂದು ; ರಸವ್ಯಂಜಕ ಗುಣವಿಲ್ಲದಿರುವುದು ; ರಸಾಭಾವ : ಅಸದರ್ಥಂ ವಿಪರೀತಕಲ್ಪನೆಯುಭಯ್ಯಂ ದುಷ್ಕರಂ ಗ್ರಾಮ್ಯ ನೀರಸಮಪ್ರೌಢತೆಯಪ್ರತೀತಿವಚನಂ . . . ಎಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೧-೪೬ ಅ೩ಟ); ಅಸಮರ್ಥಮಪ್ರತೀತಂ ವಿಸಂಧಿ ವಿಪರೀತಕಲ್ಪನಂ ಕಷ್ಟಂ ನೀರಸವೆಂದು ದೋಷಮಿವು ಸಮನಿಸುಗುಂ ಪದದೊಳ್ ಪದಾಗಮಜ್ಞರಮತದಿಂ (ಕಾವ್ಯಾವ. ೪೩೫) ; ವೈರಿಪದವಪಶಬ್ದವು . . . ನೀರಸಂ ಶೈಥಿಲ್ಯವರ್ಣಂ ಕಾರಕವಿರಹಿತಂ ಕ್ರಿಯಾಳಂಕಾರಹೀನವೆನಿಪ್ಪ ಪೊಳ್ಳಂ ತೂಱಿ ಕಳೆದು (ಬಸವು. ೧-೧೮) ; ಹೀಗೆ ನಾವು ಒಪ್ಪುವುದೇ ಆದರೆ ರಸಕ್ಕೆ ಆಗರವಾಗಿರುವ ಮಹಾಕಾವ್ಯರಾಶಿಯನ್ನೇ ನೀರಸವೆಂದು ಕರೆದಂತಾಗುತ್ತದೆ (ಧ್ವನ್ಯಾಲೋ. ೬೭); ವ್ಯರ್ಥ ಆಡಂಬರದ, ಶುಷ್ಕ ನೀರಸದ ಶೈಲಿ ಮಕ್ಕಳಿಗೆ ಬೇಸರ ಹಿಡಿಸಿಬಿಡುತ್ತದೆ (ಶಿಕ್ಷದ. ೨೬೯). **೯.** [ಸಂಗೀತ] ಗಾಯನದ ಹದಿನೈದು ಸ್ವರದೋಷಗಳಲ್ಲಿ ಒಂದು ; ರಸಪ್ರಸರಣವಿಲ್ಲದಿರುವುದು : ಕಂಪಿತ . . . ನೀರಸ . . . ಕಾಕಸ್ವರ ತಾಳವಿಹೀನವೆಂಬ ಪದಿನೈದು ಸ್ವರದೂಷಣಂ ಪೊರ್ದದೆ (ವಿವೇಕ. ೧೯೦). [ಸಂ.]

**ನೀರಸಂಗೆಯ್** (ಕ್ರಿ). ಕಾಂತಿಹೀನವನ್ನಾಗಿ ಮಾಡು; ಕಳೆಗುಂದಿಸು : ಸುಲಿಪಲ್ ವಜ್ರಮಂ ಕದಪು ಕೈಪಿಡಿಯನೆಲೆ ನೀರಸಂಗೆಯ್ಯೆ ನಾಸಿಕಂ ಚಂಪಕಮನಾಶ್ರಿತಧ್ವಂಸಿಯೆನಿಸೆ (ಪದ್ಮರಾ. ೩-೨೯).
[ನೀರಸ+ಕೆಯ್$_1$]

**ನೀರಸತ್ವ** (ನಾ). ರಸವಿಲ್ಲದಿರುವಿಕೆ; ರಸಹೀನತೆ : ಕವಿಗೆ ವಿವಕ್ಷೆಯಿಲ್ಲದಿರುವಾಗಲೂ ಅರ್ಥದ ಸಾಮರ್ಥ್ಯದಿಂದಲೇ ಚಿತ್ರಕಾವ್ಯದಲ್ಲಿ ಕೂಡ ರಸಾದಿ ಪ್ರತೀತಿ ಬರಬಹುದು. ಆದರೆ ಅದು ಅತ್ಯಂತ ಸಣ್ಣ ಪ್ರಮಾಣದಲ್ಲಿರುತ್ತದೆ. ಈ ರೀತಿಯಿಂದಲೂ ಅದಕ್ಕೆ ನೀರಸತ್ವವನ್ನು ಕಲ್ಪಿಸುತ್ತೇವೆ (ಧ್ವನ್ಯಾಲೋ. ೨೨೭). [ಸಂ.]

**ನೀರಸಧ್ವನಿ** (ನಾ). ಶುಷ್ಕವಾದ ಧ್ವನಿ ; ಭಾವಹೀನವಾದ ಧ್ವನಿ : "ನಾನು ಕ್ಷಮಾಯಾಚನೆಗಾಗಿ ಬಂದಿದ್ದೇನೆ" ಎಂದವನು ಗಿಳಿಪಾಠವೊಪ್ಪಿಸುವಂತೆ ನೀರಸಧ್ವನಿಯಲ್ಲಿ ಗಟ್ಟಿಯಾಗಿ ನುಡಿದನು (ಪುನರು. ೧೯೧).
[ನೀರಸ+ಧ್ವನಿ]

**ನೀರಸನಿ,** ನೀರಸನ್ನಿ (ನಾ). ಒಂದು ಬಗೆಯ ಮರ ; ತಿಗಡೆ : "ಕುಟನ್ನಟಮೆನಲ್ ನೀ [ಪಾಠಾಂ. ಸೀ]ರಸನಿ" (ಮಂಗರಾ. ೪೨-೪೦) ; ನೀರಸನಿಯನೊಪ್ಪಿಕೊಂಡು ಕಱಿಯಿಂದೀಂಟಲ್ ಘೋರನೆ ತೂರ್ಯನ ವಿಷದ ನಿವಾರಣಮಕ್ಕುಂ (ಖಮದ. ೧೦-೬೬). **ನೀರಸನ್ನಿ :** "ಕಾರ್ಪಟಿಕಾ—ನೀರಸನ್ನಿ" (ಒಷಧಿ. ೩೧). [ ? ]

**ನೀರಸನ್ನಿ** 'ನೀರಸನಿ' ನೋ.

**ನೀರಸಿಂಬಿ** (ನಾ). ಒಂದು ಬಗೆಯ ಸಸ್ಯ : "ಕಾಕಲೋಡಃ—ನೀರಸಿಂಬಿಯ ಭೇದ" (ಒಷಧಿ. ೩೦). [<ನೀರ್+ಸಿಂಬಿ?]

**ನೀರಸೋಕ್ತಿ** (ನಾ). ಸಾರವಿಲ್ಲದ ಮಾತು ; ನಿಸ್ಸತ್ತ್ವವಾದ ಮಾತು ; ಒಣಮಾತು : ಪೊಸಮುತ್ತಿನ ಸಿಪ್ಪುಗಳಂತೆಸೆದಪುವೆಂಬವರ ನೀರಸೋಕ್ತಿಯ ಪುರುಳೇಂ ವಸುಧೆಗಿಱಿದಿಂದುಕಳೆಗಳ ಪೊಸ ಬೆಳಸೆನಿಪುವು ಪೊದಟ್ಟಿ ಬೆಳ್ಪಿಡಿದೆಲೆಗಳ್ (ಪುಷ್ಪಪು. ೨-೮೧). [ನೀರಸ+ಉಕ್ತಿ]

**ನೀರಹಬ್ಬೆ** 'ನೀರುಹಬ್ಬೆ' ನೋ.

**ನೀರಹಿಪ್ಪಲಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು : "ಶಾರದಿ—ನೀರಹಿಪ್ಪಲಿ" (ಗಂಗಾಮ. ೩೦೫) ; ಗೋಮೂತ್ರ, ಸೊಜ್ಜಿಗೆ, ದಂತಿ, ನೀರಹಿಪ್ಪಲಿಯ ಬೇರು, ಚಿತ್ರಮೂಲ, ಇವನ್ನರೆದು ಗುದಕ್ಕೆ ಪೂಸಲು ಮೂಲವ್ಯಾಧಿ ತೀರವದು (ವೈವಿ. ೮೨) ; ಗೋಮೂತ್ರ, ಸಜ್ಜಿಗೆ, ದಂತಿ, ನೀರಹಿಪ್ಪಲಿ ಬೇರು, ಚಿತ್ರಮೂಲ ಇವನರೆದು ಗುದಕ್ಕೆ ಪೂಸಲು ಮೂಲವ್ಯಾಧಿ ಹರ (ಸಕವೈ. ೨೯೩). [<ನೀರ್+ಹಿಪ್ಪಲಿ]

**ನೀರಳಗೆ** (ನಾ). ನೀರು ತುಂಬಿರುವ ಪಾತ್ರೆ,—ಗುಡಾಣ,—ದೊಡ್ಡ ಮಡಕೆ: ತಱುಪಿನೆಮ್ಮೆಯ ಹಾಲನಾಲ್ಕೊಂದೆನಿಸಿ ಕಾಸಿ ಕಿಱಿಯ ಸೊಜ್ಜಿಗೆಯನುಪ್ಪಿಕ್ಕಿಯದಱೊಳು ಕಲಸಿಯಱುಮೆಯಂ ಕಾಯ್ದ ನೀರಳಗೆಯೊಳು ಕಟ್ಟಿ (ಸೂಪಶಾ. ೧-೧೭). [ನೀರ್+ಅಳಗೆ$_1$]

**ನೀರಳ್ಕೆ** 'ನೀರಟ್ಕೆ' ನೋ.

**ನೀರಱಕೆ** (ನಾ). = ನೀರಟ್ಕೆ : ಅರೆವಸುರಾಯ್ತು ಹುಲ್ಲೆಸೆಯೆ ನಿಂದುವು ಕಾಯ್ ಪೊಡೆ ಕೊಯ್ಯಲಾಯ್ತು ಬಂಧುರತರ ಶಾಳಿ ನೀರಱಕೆ ತೊಟ್ಟನೆ ಮಾಣ್ದುದು ಚಂದನಕ್ಕೆ ಮೆಯ್ಯರಸಿದುದಂಗರೇಖೆ ಹೊಱಹಕ್ಕಿಗಳೋವರಿವಕ್ಕವಾವಗಂ ಶರದದ ಮಾತು ಪಿಂಗಿದುದು ಪೊಕ್ಕುದು ಮಾಗಿ ಮಹೀವಿಭಾಗದೊಳ್ (ಸೂಕ್ತಿಸು. ೧೦-೨೩೭) ; ಮೊಱೆಯ ಕೇಳುತ್ತೈತಂದು ವೀರೇಶ್ವರಂ ಮುಱಿದು ದೇವಾಸುರ ಮುನೀಶರಂ ನುಂಗಿ ನೀರಱಕೆಯಾಗಲು ವಾರಿಧಿಯ ಕುಡಿದು ಕೊಬ್ಬಿ ನಿದ್ದೆಯೊಳಿಪ್ಪ ದನುಜಕುಲದ ಎಱೆಯನಂ ನೋಡಿ (ವೀಶೈಪು. ೩-೮-೨೬) ; ತಳುವದ ನೀರಱಕೆಯನೆಸಗುತ ಬಂದು ತಲೆದೋಱಿತಂದು ಬೇಸಗೆಯು (ಚಂಪ್ರಸಾಂ. ೨೦-೩). 'ನೀರಟ್ಕೆ' ಪರಾ. [ನೀರ್+ಅಱಕೆ$_2$]

**ನೀರಟ್ಕೆ,** ನೀರಡಕೆ, ನೀರಡಿಕೆ, ನೀರಳ್ಕೆ (ನಾ). ಬಾಯಾರಿಕೆ ; ದಾಹ ; ತೃಷೆ : "ಉದನ್ಯಾ, ತರ್ಷಃ, ತೃಟ್, ತೃಷ್ಣಾ, ಪಿಪಾಸಾ —ಈ ೫ ನೀರಟ್ಕೆ" (ಚಲಾಯು. ೬೦-೨೦೮) ; ಭದ್ರಬಾಹುಭಟ್ಟಾರರ್ . . . ಪಲವು ದಿವಸದಿಂದಂ ಪಸಿವುಂ ನೀರಟ್ಕೆಯುಮಂ ಸೈರಿಸಿ (ವಡ್ಡಾರಾ. ೯೦-೯) ; ಆ ದಿವ್ಯವಚನಮನುಲ್ಲಂಘಿಸಿ ನೀರಟ್ಕೆ ಪೋಪಿನಂ ನೀರಂ ಕುಡಿದು (ಪಂಪಭಾ. ೮-೩೯ ವ) ; ನಟ್ಟಡವಿಯ ನಡುವೆ ಪಸಿವುಂ ನೀರಟ್ಕೆಯುಂ ತಿಣ್ಣಮಾಗೆ (ಧರ್ಮಾಮೃ. ೨-೧೯೧) ; ಬಿಸಿಲಿಂ ಬೆಂಡಾದವರ್ ತತ್ತೃಷೆಗೆ ಪರಿದು ನೀರಟ್ಕೆಯಿಂ ನೀರ್ಗೆ ಕೈಮುಟ್ಟುಸಿರಂ ನುಂಗಿರ್ದ

ನಾಸಾಪುಟಮರಳೆ . . . ಪಾಂಥರ್ ಕುಳಿರ್ವ ಸಲಿಲಮಂ ಪೀರ್ದು ತೇಗುತ್ತೆ ಪೋಪರ್ (ದಶಕು.೬-೭); ದಿನಲಕ್ಷ್ಮಿ ನಡೆಯೊಂದು ಸೇದೆಯಿಂ ಬಟಿಲ್ದು ಪಯಣಂಬರ್ಪ ತನ್ನಿನಿಯನ ನೀರಟ್ಟಿಗೆಂದೇಱತ್ತಿ ನೀಡಿದ ತಣ್ಣೀರ ಪೊಸ ಪೊಂಗಳಸಮಿದೆನೆ . . . ತೋರ್ಪ ತೆಂಗಿಂ (ರಾವಣಾಶ್ವ. ೫೩-೯). **ನೀರಡಕೆ :** ನೀರಡಕೆ ಪಿರಿದಾಗೆ ರ್‍ರೆಂಪಿಸೆ ನಿಡುಸುಯ್ಯೆ ಹಯಂ ಕರಂ ಜ್ವರಾರ್ತನೆನಿಕ್ಕುಂ(ಲೋಕೋಪ.೯-೨೩೪); ಹಸಿವು ನೀರಡ [ಪಾಠಾಂ. ಡಿ]ಕೆ ನಿದ್ರಾಲಸ್ಯವಾಗಿ ಸಂದಿಸಿ ಹೋಗಿ . . . ಹುಸಿಗೆ ಹೂಂ ಕೊಳಿಸುವೆಂ (ಹಚಕಾ. ೯-೧೮); ಹಸಿವು ನೀರಡಕೆ ಸಂತಾಪವ ನೆಱ ವಾರಿಸಿಕೊಂಡು ಬಲಗೂಡಿ ತೆರಳ್ದು (ಮೋಹತ. ೧೯-೬೦). **ನೀರಡಿಕೆ :** "ನೀರಡಿಕೆ ತರ್ಷಂ ಪಿಪಾಸಮೆನಿಸಿಕ್ಕುಂ" (ಮಂಗರಾ. ೭೦-೧೪); ಬಿಱು ಬಿಸಿಲುಂ ಸುಡುತಿರೆ ನೀರಡಿಕೆ ತಿಣ್ಣಮಾದತ್ತಾಗಳ್ (ಕಾಡಂಪೂ. ೧೯೬); ಮಾರ್ತಂಡಮರೀಚಿ ಸುತ್ತಿ ಮುತ್ತೆ . . . ಬೆನ್ನೊಣಗಿ ಚರ್ಮಂ ಹೊಪ್ಪಳಿಸಿ ಸೀಳ್ದು ಬಿಡೆ ನಾಡೆ ನೋಯಿಸಿ ನೀರಡಿಕೆ ನೆರೆದೊಳಗುಂದೋಱೆ (ಗಿರಿಕ. ೯-೨೭ ಪ); ನೀರಡಿಕೆಗೆ ಮರೀಚಿಕೆಯಿಂದ ತಣಿವಹುದೇ(ಕೌಶಿರಾ. ೩೮-೧೧); ಅಡಿಗಡಿಗೆ ಹಸಿವೌಕುವುದು ನೀರಡಿಕೆ ನಿರ್ಬಂಧಿಸಿತು . . . ಅವನಿಪನ (ತೊರರಾ. ೩-೮-೬೧); ನೀರಡಿಕೆಗೆಂದೆನುತೆ ಚಿಂತೆಗೊಳುತ ಅಂಬುಧಿಯ ಪೊರೆಗೈದಲೆಂದು ರವಿ ವೇಗದಿಂ ಸಂಭ್ರಮದೊಳೈದಿ ಪಶ್ಚಿಮ ಗಿರಿಯಂ ಸಾರುವನು (ವೆಂಕಾರಾ. ೫-೨-೧೬); ಹರಿಕುಲಿಶನು . . . ಹಣ್ಣು ಹಂಪಲುಗಳನ್ನು ತಿಂದು ಹಸಿವು ನೀರಡಿಕೆಗಳನ್ನು ಕಳೆದುಕೊಳ್ಳ ಬೇಕಾಗಿತ್ತು (ಮಣಿಸ. ೭೪). **ನೀರಳ್ಕೆ :** ಹಸಿವಿಲ್ಲದವಗೂಟವೇಕೆ ನೀರಳ್ಕೆಯು ಗಸಣಿಯಿಲ್ಲದರೆ[ಗೇ]ಕೆ ಪಾನ (ಭರಚ. ೬೬-೧೧೭). 'ನೀರಡಿಕೆ' ಪಠಾ. [<ನೀರಡಸು]

**ನೀರಟ್ಟಿಗೊಳ್** (ಕ್ರಿ). ಬಾಯಾರು ; ನೀರಡಸು : ಒಳಗಿರ್ದ ಭೋರೆಗಳನಿಬರುಂ ಕಡುಬಿಸಿಲೊಳ್ ಪರಿತಂದು ಪಸಿದಿರ್ದುದಱಿಂ ನೀರಟ್ಟಿಗೊಂಡು ಬಾವಿಯನಱಸಿ . . . ಪೋದರ್ (ಚಕವ೦. ೪೭-೧೧).

[ನೀರಟ್ಟೆ + ಕೊಳ್$_1$]

**ನೀರಾ** (ನಾ). ತಾಳೆ ಅಥವಾ ಈಚಲು ಮರದಿಂದ ತೆಗೆದು ಇನ್ನೂ ಹುಳಿ ಹಿಡಿಯದಿರುವ ರಸ : ಸೇಂದಿ ಕಂಟ್ರಾಕ್ಟು ಮಾಡುವಾಗ ಗೌಡರು ನಿಂಗನಿಗೆ ನೀರಾ ತರಿಸಿ ಹತ್ತು ದಿವಸ ಕುಡಿಸಿದರು (ನನ್ನೂರು. ೨೯೩); ತಾಳೆಮರದ . . . ಎಳೆಯ ಹೂಗೊಂಚಲನ್ನು ಕತ್ತರಿಸಿದಾಗ ಧಾರೆಧಾರೆಯಾಗಿ ಸುರಿಯುತ್ತದೆ 'ನೀರಾ' ; 'ನೀರಾ'ವಿನ ರಸಘಟ್ಟಯೇ 'ತಾಟಬೆಲ್ಲ'; ಹುಳಿಹಿಂಡಿದ 'ನೀರಾ' ವೇ ಕಳ್ಳು. 'ನೀರಾ' ಮೈಗೆ ಬಹಳ ಒಳ್ಳೆಯದಂತೆ (ಹಸುಹೊ. ೩೩೭). [ಸಂ. ನೀರ]

**ನೀರಾಂಜನ, ನೀಲಾಂಜನ$_1$** (ನಾ). ೧. ದೀಪ ; ನೀರಾಜನ : ವರ್ಧಮಾನದಿಂ ಸ್ವಸ್ತಿಕದಿಂತಾರಾಧಿಸೆ ವಿರಚಿಸಿದನಗಾರಾತಿ ನಿರಂಜನಂಗೆ ನೀರಾಂಜನಮಂ (ವರ್ಧಮಾ. ೧೨-೨೭); ಬೆಳೆಯ ನೀರಾಂಜನದ ಹಲಿಗೆ ೯ ಹಿರಿಯ ಆರತಿ ೮ . . . ಯಿಾ ಆರತಿ ನೀರಾಂಜನಕುಂ ದೀಪಾರಾಧನೆಗೂ ಸಮರ್ಪಿಸಿಸ್ತ ಹಸುವು ೨೦೦ (ಸೌಇಇ. IV, ೨೭೩-೪೦ ; 1513); ವಿಶ್ವೇಶ್ವರನೆದುರು ಗೋಪುರಾರತಿ ನಡೆದಾಗ ನೀರಾಂಜನಗಳ ಸಾಕ್ಷಿಯಾಗಿ ತನ್ನ ಯಾಚನೆಯನ್ನು ದೇವರೆದುರು ಇಟ್ಟು ಅಂಗಲಾಚಿದಳು (ಗಂಮಾಯಿ. ೨). ೨. ದೀಪವನ್ನು ಹಚ್ಚಿಡುವ ಸಾಧನ : ಹವೆ ತುಂಬಿದ ಕುಪ್ಪಿಯ ಬುಡದಲ್ಲಿ ಸ್ವಲ್ಪ ನೀರು ಇಟ್ಟು ಆ ನೀರೊಳಗೆ ಒಂದು ನೀರಾಂಜನವಿಟ್ಟು (ಮುಂಬಯಿ. ೬-೧೧). **ನೀಲಾಂಜನ$_1$ :** ೧. ಖಡ್ಡಿಬತ್ತಿಗಳ ನೀಲಾಂಜನವ ಸರ್ಪವೇಣಿಯರು ಸರಸೋಕ್ತಿಯಿಂ ಪಿಡಿದು ನಿಂದಿರ್ದರುಮದೇಪೇಳ್ವೆನು (ನವಮೋ. ೧೯-೨೮); ಅಚ್ಯುತ . . . ಚಾವಡಿಗೆ ಬಂದರೆ, ಅಲ್ಲಿ ನರಸಿಂಹಯ್ಯ ಮಲಗಿದ ಚಿತ್ರವಿಲ್ಲ. ಬದಲೊಂದು ನೀಲಾಂಜನ ಉರಿಯುತ್ತಿತ್ತು (ಮುಗಿಯ. ೩೩೧); ಕಣ್ಣು ನೀಲಾಂಜನ, ಕರಗಿಸಿದ ನಕ್ಷತ್ರ (ನೆಲಮು. ೫-೪). ೨. ಎಳ್ಳೆಣ್ಣೆ ಮೊದಲಾದ ಎಣ್ಣೆಗಳಿಂದ, ಹಣತೆ ಇಲ್ಲವೆ ಕಂಚಿನ ನೀಲಾಂಜನಗಳಲ್ಲಿ ದೀಪ ಉರಿಸುವ ರೂಢಿಯಿತ್ತು (ಬಾಲಪ್ರ. I, ೩೫೦); ಒಂದು ಸಣ್ಣ ಪೊಟ್ಟಣದಲ್ಲಿ ಕಲ್ಲುಸಕ್ಕರೆ ಚೂರುಗಳು, ಕರ್ಪೂರ, ಒಂದು ಸಣ್ಣ ನೀಲಾಂಜನ— ಇವೇ ಮೊದಲಾದ ಪದಾರ್ಥಗಳು (ಇಬಡು. ೧). [<ಸಂ. ನೀರಾಜನ]

**ನೀರಾಕರ** (ನಾ). ನೀರಿಗೆ ಆಶ್ರಯವಾಗಿರುವುದು ; ಕಡಲು ; ಸಮುದ್ರ : ಗಗನಮಂ ಮಾರ್ಪೊಯ್ಯೆ ಕಣ್ಗೊಪ್ಪಿ ತೋರ್ಪುದಿದುತ್ತೀಂ ಖಿದಸಂಖ್ಯಶಂಖಧವಳಂ ಗಂಭೀರನೀರಾಕರಂ (ಸಂಪಭಾ. ೪-೨೪); ಅಂತು ಗಂಭೀರನೀರಾಕರಮಿರ್ಪಂತಿರ್ದ ಕಮಲಾಕರಮಂ ನೋಟ್ಪಲ್ಲಿ (ಗದಾಯು. ೬-೧೧ ಪ); ವಾರಿಯೊಳಿರೆ ಪದ್ಮರಾಗಮುಬ್ಬಾ ಕರಮಾ ನೀರಾಕರ ಮೆನೆ ಕಣ್ಗೆಂ ರಾರಾಜಿಸಿದುದೊ ಸಿತಾಬ್ಜಮುಕ್ತಾಳಿಗಳಿಂ (ರಾಜಶೇ. ೧೨-೨೪). [ನೀರ$_2$ + ಆಕರ$_3$]

**ನೀರಾಗ** (ಗು). ೧. ಶಾಂತವಾದ ; ವಿರಕ್ತಿಭಾವದಿಂದ ಕೂಡಿದ : ಅಪಗತಕಾಲುಷ್ಯನೀರಾಗಲೋಚನನಂ ಭಕ್ತಿಭರಾನತರೋಲಗಿಸುತ್ತಿರ್ಪನ್ನೆಗಂ (ಶಾಂತಿಪು. ೬-೪೨ ಪ). (ನಾ). ೨. ಆಸಕ್ತಿಯಿಲ್ಲದಿರುವಿಕೆ ; ಪ್ರೀತಿಯಿಲ್ಲದಿರುವಿಕೆ ; ವಿರಕ್ತಿ : ತಾಳ್ದರಾರಿಸಿಯಂ ತನ್ನನಗಲ್ದೊಡಂ ನೆರೆದೊಡಂ ನೀರಾಗಮುಮಂ ರಾಗಮುಮಂ (ಪಂರಾಮಾ. ೭-೫). ೩. ವೈರಾಗ್ಯದಿಂದ ಕೂಡಿದವನು ; ವಿರಕ್ತ : ಆ ತಪಸ್ವಿಗಳ್ ನೀರಾಗರಾಗಿಯುಂ ಕಥಾರಸವಿಸ್ಮೃತಗುರೂಚಿತಪ್ರತಿಪತ್ತಿಗಳುಂ . . . ಪರವಶರುಮೆನಿಸಿ ಕಿಱದು ಬೇಗಮಿರ್ದಲ್ಲಿಂದಮೆಟ್ಟು (ಕಾದಂಬ. ೭೦೬); ನೀರಾಗರೆನಿಸಿ ದೆಮುಗಮುಕಾರಣದಿಂದೊಲವು ನಿನ್ನೊಳಾದತ್ತು (ಚಂದ್ರಪು. ೬-೧೧) [ಸಂ.]

**ನೀರಾಗಿ** (ನಾ). ರಾಗದಿಂದ ದೂರನಾದವನು ; ವಿರಾಗಿ; ವಿರಕ್ತ: ನೀವು ಸುಹೃದಯರಿಂದು ದುರ್ಜನರಾವು ನೀವ್ ನೀರಾಗಿಗಳು ರಾಗಾವಲಂಬರು [ಪಾಠಾಂ. ನೀವ್ ರಾಗಿಗಳು ಮೇಣ್ ರಾಗಾವಲಂಬರು] ನಾವಲೇ (ಕುವ್ಯಾಸ. ೧೩-೩೬). [ಸಂ. ನೀರಾಗಿನ್]

**ನೀರಾಜ** (ನಾ). ಆರತಿ : ವಿತತಗೋಸ್ಪರ್ಶಹಸ್ತಂ . . . ಉನ್ನತ ಸುಜನನೀರಾಜ [ಪಾಠಾಂ. ಸತಿನಿರಂಜನಾ] ಕಾಂತಿಮಯಕಾಯನಂದುಪ್ಪವಡಿಸಿದನರಸನು (ಹಚಕಾ. ೪-೫೪). [ಸಂ.]

**ನೀರಾಜನ** (ನಾ). ೧. (ದೇವರ ಮುಂದೆ) ಜ್ಯೋತಿಯನ್ನು ಎತ್ತುವುದು ; ಮಂಗಳಾರತಿಯನ್ನು ಮಾಡುವುದು : ಆ ಮಂಗಲ ಸವನಸಮಯಾನಂತರಂ ಜಾನಕಿ ನೀರಾಜನವಿರಾಜಮಾನೆ ಧಾರಾಣಿಳಯ ಜಲಯಂತ್ರಪುತ್ರಿಕೆಯಂತೆ . . . ಮೆಟ್ಟಿ ನಿಲ್ವುದುಂ (ಪಂರಾಮಾ. ೫-೪೦ ಪ); ಸ್ಫುರದ್ವರ್ಣಪೂರ್ಣಕನನ್ಮೂರ್ತಿಗೆ ವರ್ಣಪೂರವಿಳಸನ್ನೀರಾಜನಂ ಮಾಟ್ಕುಮೇ (ಪುಷ್ಪಪು. ೧೧-೪೩); ಬಳಿಕ್ಕಾ ರಸವಧಿಕವಾಗಿ ನೆಗ್ಗಳಿಪ ನೀರಾಜನಪ್ರಭೆ ಕುಗ್ಗಿ ಮುಸುಳಿಸಿತೋ ಮಱದು ನೀ ಮುಗ್ಗಿಸಿದೊ ಏಕಾರತಿಯನಯ್ಯಂಗೆ ಕೊಡುವಾಗ (ಬಸಪು. ೪೭-೧೬); ಬಹಳ ವರ್ತಿಗಳ ಕರ್ಪೂರನೀರಾಜನದ ಕಂಪಿನ . . . ಅಮಲತಾಂಬೂಲದ ಪರಿಕ್ರಮದ ಸೊಗಸಿನ ಕೃತೋಪಚಾರಂಗಳಿಂದಮರ್ಚಿಸಿದಳಭವನಂ ಕಾತ್ಯಾಯನಿ. (ಜೈಮಿಭಾ. ೧೫-೨೪). ೨. ಆರತಿಯನ್ನು ಬೆಳಗುವಾಗ ತಟ್ಟೆಯಲ್ಲಿಡುವ ದೀಪಾರತಿ ; ನೀಲಾಂಜನ : ಪರಿಪರಿಯ ಕರ್ಪೂರಸೊಡರ್ಗಳಿಂ ಧೂಪದಿಂ ಗುರುತರದ ನೀರಾಜನಂಗಳಿಂ . . . ತಾಂಬೂಲದಿಂ ಭೂಮಿಪಂ ಗಿರಿಜಾಧವನನರ್ಚಿಪನಿತಱೊಳಗೆ (ಚಿಬಪು. ೫೧-೨೨); "ಆರತಿ" (ಚಿಬಪು. ಕೋಶ); ನೀರಾಜನಂಗಳಂ ತಂದೋರಂತೆ ಸುವಾಸಿನೀಜನಂಗಳ್ ಜವದಿಂ ಚಾರುತರಮೆನಿಸಿ ಬೆಳಗಿ ನಿವಾರಿಸಿದರ್ ನೂತ್ನ ವಸ್ತ್ರಮುಮನೆಡಬಲಕಂ (ಹಾಲಾಸ್ಯ. ೧-೧೫-೫೧). [ಸಂ.]

**ನೀರಾಜನಂಗೆಯ್** (ಕ್ರಿ). ಆರತಿಯನ್ನು ಎತ್ತು ; ಮಂಗಳಾರತಿಯನ್ನು ಮಾಡು : ಆ ತ್ರಿಲೋಕತಿಲಕನ ಜನ್ಮೋತ್ಸವದೊಳ್ . . . ಕರ್ಮಭೂತಳೋಪಸರ್ಗವಿಧ್ವಂಸನನಿಮಿತ್ತಮಾಗಿ ನೀರಾಜನಂಗೆಯ್ವಂತೆ ತದ್ಧರಾನಲಂ ದಕ್ಷಿಣಾವರ್ತಮಾಗಿ ಪಜ್ಜಳಿಸೆ (ಆದಿಪು. ೭-೩೬ ಪ).
[ನೀರಾಜನ + ಕೆಯ್$_1$]

**ನೀರಾಜನವಿಧಿ** (ನಾ). ಆರತಿಯನ್ನೆತ್ತುವ ಕ್ರಿಯೆ ; ಆರತಿ ಬೆಳಗುವಿಕೆ : ಮೇರುನೃಪಂಗೆ ನಭಃಶ್ರೀ ನೀರಾಜನವಿಧಿಯನೊಸೆದು ಮಾಡ್ಪಂತೆಸೆದತ್ತು . . . ತಾರಾಚಕ್ರಂ (ಅಜಿಪು. ೨-೫) ; ನೀರಾಜನ ವಿಧಿಯಂ ವಿಸ್ತಾರದೆ ಮಾಡುವುದರಾತಿಸಂಕುಲಮಂ ಸಂಹಾರಿಸಲುಂ ವಿಜಯವನವಧಾರಿಸಲುಂ ನೃಪತಿ ಬಗೆವೊಡುದಿತೋದಿತಮಂ (ಅಶ್ವಶಾ. ೮-೧). [ನೀರಾಜನ + ವಿಧಿ]

**ನೀರಾಜಿ$_1$** 'ನಿರಾಜಿ' ನೋ.

**ನೀರಾಜಿ$_2$** (ನಾ). ನೀರೆ; ಚೆಲುವೆ (?) : ದಾವಾಣೀ ಮೆಟ್ಟಾಲಾ ಹಾಕರ್ಯೋ ನೀರಾಜೀ ನಿನ್ನ ಗಂಡಾನ ತಲೆಯಾ ಕಡಿದವ್ರೇ (ಹುಟ್ಟಿಹ. ೯೨) ; ಮಾಳಿಗೆ ಮೇಲೆ ಮಲಗಿರ್ವೊ ನೀರಾಜಿ ನಾದ್ನಿ ಬಂದವ್ಳೆ ಮುಖ ತೋರೆ (ಹಳ್ಳಿಪ. ೧೧೩). [ ? ]

**ನೀರಾಜಿತ** (ಗು). ಆರತಿ ಎತ್ತಿದ,—ಬೆಳಗಿದ : ಅರ್ಚಿತಸಮಸ್ತ ಶಸ್ತ್ರರ್ ನೀರಾಜಿತತುರಗರೊಪ್ಪಿದರ್ (ಪಂಪಭಾ. ೧೦-೩೭) ; ಆ ಪುರವಂ ತರುಣೀಕೇಕರಮರೀಚಿನೀರಾಜಿತಾಕ್ಷತಾಂಗಂ ಪೊಕ್ಕಂ (ಚಂದ್ರಪು. ೬-೪೨).
[ಸಂ.]

**ನೀರಾಜಿಶೀರೆ** 'ನಿರಾಜಿಸೀರೆ' ನೋ.

**ನೀರಾಜಿಸೀರೆ** 'ನಿರಾಜಿಸೀರೆ' ನೋ.

**ನೀರಾಜಿಸು** (ಕ್ರಿ). ಆರತಿಯನ್ನು ಬೆಳಗು,—ಎತ್ತು : "ನೀರಾಜಿಸು- ಆರಾತ್ರಿಕಕ್ರಿಯಾಯಾಂ" (ಶಮಧಾ) ; ರಾಜಿಪ ಮುಖಲಕ್ಷ್ಮಿಗೆ ನೀರಾಜಿಪ ಮಣಿಪಾತ್ರಯುಗಳಮೆನೆ ಸೊಗಯಿಸುಗುಂ . . . ಅವತಂಸ ಕರ್ಣಯುಗಂಗಳ್ (ಜಗವಿ. ೧೦-೩೯) ; ಪೂಜಿಸುವುದು ನಿಚ್ಚಂ ನೀರಾಜಿಸುವುದು ಪರ್ವದಂದು (ಅಶ್ವಶಾ. ೭-೭೨) ; ಉರು ಮಣಿಮಯ ಖಚಿತಾವತಂಸಂಗಳಿಂ ತರುಣಿಯ ಕರ್ಣಯುಗಂಗಳು ವರಮುಖಿ ಲಕ್ಷ್ಮಿಗೆ ನೀರಾಜಿಪ ಪಾತ್ರೆಯಿರವೆನೆ ಕಣ್ಗೆ ರಾಜಿಸಿದವು (ತ್ರಿಭುತಿ. ೭೨-೫೮) ; ಭಾನುಮತಿಯೆಂಬವಳ್ ಸಾರ ನೀರಾಜಮನೆತ್ತಿ ನೀರಾಜಿಸಿಯುಂ (ಪ್ರಪವಿ. ೯-೨೧ ಪ). [ನೀರಾಜನ + -ಇಸು$_3$]

**ನೀರಾಟ** (ನಾ). ನೀರಿನಲ್ಲಿ ಆಡುವ ಆಟ ; ಜಲಕೇಳಿ : "ನೀರಾಟಮೆಂದು ಜಲಕ್ರೀಡೆ" (ಕಶಸಾ. ೬೯-೫೬೦); ಅಂತು ಜಗುನೆಯ ಮಡುವಂ ತಮ್ಮರಸಿಯರ ನಿಕಟನಿತಂಬಬಿಂಬಂಗಳ ಘಟ್ಟಣೆಯೊಳ್ . . . ತಳ್ಳಂಕಗುಟ್ಟೆ ನೀರಾಟವಾಡುವಾಗಳ್ (ಪಂಪಭಾ. ೫-೬೨ ಪ) ; ವನಿತೆಯರ್ ನೀರಾಟದಿಂದಾದ ಕಣ್ಮಲರ್ಗೆಂಪಿಂದಧರೋಷ್ಠಪಲ್ಲವದ ಬೆಳ್ಪಿಂ ನಾಡೆ ಕಣ್ಗೊಪ್ಪಿದರ್ (ಜಗವಿ. ೧೪-೧೧೨) ; ಮರನಂ ಗಾಳಿಯ ಧೂಳಿಯಂ ರಜನಿಯಂ ನೀರಾಟಮಂ [ಪಾಠಾಂ. ಘೋರಾಜಿಯಂ] . . . ಕೊಂಡಾಡಿ ಬೆಂಡಾಗದೀ ಧರೆಯೊಳ್ (ಖಮದ. ೧-೬೩) ; ತೊಯ್ದರು ನೀರಾಟವನಾಡಿ ಸೊಬಗಾಂತು ಐದೆಯರುಗಳು ಸಂತಸದಿ (ಮೋಹತ. ೪-೫೯) ; ನೀರಾಟಕೆಳಸಿ ತೀರದೇಶದೊಳ್ ನಿಂದ ವಾರನಾರಿಯರ ನಿಡುಜಡೆಯ ಪಡಿನೆಳಲನೊಳಕೊಂಡು . . . ಪೌರನಿತಂಬಿನಿಯರ್ ಕರಘಟಿತಘಟಪಟಳಮಂ ಕಂಡು (ರಾಜಶೇ. ೨-೮ ವ) ; ಆನೆ ನೀರಾಟದಲಿ ಮೀನ ಕಂಡಂಜುವುದೆ ಹೀನ ಮಾನವರ ಬಿಜಯನುಡಿಗೆ ತತ್ವದ ಜ್ಞಾನಿಯಂಜುವನೆ (ಸರ್ವಜ್ಞ. ೩೭೩) ; ನೀರಾಟಕ್ಕೆ ಹೋಗಿ ಹೇರಾಟ ಕಳಕೊಂಡ (ಗಾದೆ). [ನೀರ್ + ಆಟ]

**ನೀರಾಟಗೊಳ್** (ಕ್ರಿ). = ನೀರಾಟವಾಡು : ಜಂಭಾರಿ ತನ್ನೈರಾವತ ನೀರಾಟಗೊಂಬುದ ನೋಡಬೇಕೆಂದು ಪೊಂಬಳ್ಳಿಗಂಟೆಯ ಬಲಿದಂತೆ ಸುರಚಾಪ ಸಂಭ್ರಮವಾಯ್ತು ಕಣ್ಮನಕೆ (ಮೋಹತ. ೪-೩೫).
[ನೀರಾಟ + ಕೊಳ್$_1$]

**ನೀರಾಟವಾಡು** (ಕ್ರಿ). ನೀರಿನಲ್ಲಿ ಆಟವಾಡು ; ಜಲಕೇಳಿಯಾಡು : ಕರಿಣೀಗಣಾನ್ವಿತಂ ವನಕರಿಪತಿ ನೀರಾಟವಾಡಲೊಯ್ಯನೆ ಬರ್ಪಂತಿರೆ ಗಜಗಮನದ ಸತಿಯರ್ ಬರೆ ಬಂದಂ ಜಲಧಿಗಲಸಗತಿಯಿಂ ಕೃಷ್ಣಂ (ಜಗವಿ. ೧೪-೮೯) ; ನೀರಾಟವಾಡಿ ಪೊಜಿಮಡುವೈರಾವತದಂತೆ ದಿವಿಜದೀರ್ಘಿಕೆಯಿಂ ಕಾಸಾರದಿನೇಂ ಪೊಜಿಮಟ್ಟನೊ ವಾರವಧೂಸಹಿತಮವನಿಪತಿದಿಗ್ನಾಗಂ (ಅನಂಪು. ೭-೫೦) ; ವಾರಿಗೆ ಹೆಂಗಳರು ನಾವು ನೀರಾಟವಾಡಲಿಕೆ ಪೋಗಿ . . . ಸರೋವರ ಧುಮುಕಿದೇವೆ (ಕನಕ. ೧೨೩-೪) ; ನೀರಾಟವಾಡುತ್ತಿರುವಾಗ ಹತ್ತು ಹುಡುಗರ ಹೆಗಲನ್ನು ಹಿಡಿದು ನೀರೊಳಗೆ ಅಮುಕಿಕೊಂಡಿದ್ದು ಅಸ್ಥಾವಸ್ಥೆಪಡಿಸಿಬಿಡುವನು (ವಚಭಾ. ೧೬). [ನೀರಾಟ + ಆಡು$_1$]

**ನೀರಾಡು** (ಕ್ರಿ). ೧. = ನೀರಾಟವಾಡು : ಅಸಂಖ್ಯಾತ ಯಾದವ ವಿಟವಿಟೀಜನಕ್ಕಂ ನೀರಾಡುವೊಡೆ ಸರೋವರಂ ನೆಱೆಯವು (ಜಗವಿ. ೧೪-೮೮ ಪ) ; ಈಸಾಡುತಿರ್ಪರಸುಮಕ್ಕಳ ಮೈಗುಂಕುಮದಿಂದ ಬೆರಸಿ ಹೊಂಬಣ್ಣದಿನೆಸೆದಿಹುದಾ ನದಿ ಸ್ಮರಗೆ ನೀರಾಡ ಸಮೆದವೊಲು (ಸೊಬಸೋ. ೧-೩೪) ; ನೆಟ್ಟನೆ ನೀರಾಡುವ ನೃಪಸುತರಳವಟ್ಟು ರಂಜಿಸುತಿರ್ದರಲ್ಲಿ (ಪ್ರಭಂಜ. ೨-೧೩೪) ; ಪ್ರೇಮದಿಂ ಬಂದು ನೀರಾಡುತಿಹ ಸಿರಿವಂತ ಕೋಮಲಾಂಗಿಯರ ಕುಚಯುಗದ ಕುಂಕುಮಸಾರ ಭೀಮರಥಿಯೊಳು ಕೂಡಿ (ಗುಭಚ. ೧-೨೨) ; ಬಂಡೆ ಬಂಡೆಯ ನಡುವಣನವರತ ಜಲಗದ್ಗದ ಶ್ರುತಿಗೆ ಉಪನಿಷತ್ತಿನ ಶ್ರುತಿಯ ಮಂತ್ರಘೋಷಂ ಬೆರಸಿ ನೀರಾಡಿದನ್ (ಶ್ರೀರಾಮಾ. ೧೫೦-೨೩೬). ೨. ನೀರು ಬರು ; ನೀರೂರು : ಪತಿಯ ಆ ಮಾತನ್ನು ಕೇಳಿದ ಚಂದ್ರಿಯ ಕಣ್ಣಲ್ಲಿ ನೀರಾಡಿತು (ನಿಶಿಉ. ೧೫೬). ೩. ಬೆವರು ಬರು ; ಬೆವರಿಡು : ನೀರಾಡುವ ಮೊಗ ನಿಡುಸುಯ್ವ ನಾಸಿಕ ತೇರೈಸುವ ತಳ್ಳಂಕ . . . ಒಪ್ಪಿತವಗಾ ನೀರಜಮುಖಿಯನು ಕಾಣುತವೆ (ಶ್ರೀಪಾಲ. ೪-೯೫). ೪. (ಕಾಂತಿಯು) ಹಬ್ಬು ; ಹರಡು ; ಹೊಮ್ಮು : ಲಾವಣ್ಯವೆಂದರೆ ಅಂಗಾಂಗದಲ್ಲಿ ನೀರಾಡುವ ಒಂದು ಬಗೆಯ ಬೆಳಕು (ಸೌಂದಸ. ೧೨೯). [ನೀರ್ + ಆಡು$_1$]

**ನೀರಾಣಿವರಿ** (ನಾ). ನೀರಿನ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಕಟ್ಟಗೇವರ್ತನೈ ಕರಣಿಕೇ ಜೋಡಿ ನೀರಾಣಿವರಿ ನಾಟ್ಟು ಕಣಕ್ಕು[ವ]ರಿ ಅಂಗಸಾಲೇವರಿ (ಎಇ. XVIII, ೧೪೩-೫೬ ; 1434). 'ನೀರುಣಿಸುಂಕ', 'ನೀರುವರಿ$_2$', 'ನೀರೋಣಿ' ಪರಾ.
[ನೀರಾಣಿ$_0$ + ವರಿ$_1$]

**ನೀರಾನ್** (ಕ್ರಿ). ನೀರನ್ನು ತೆಗೆದುಕೊಳ್ಳು : ಅಬುಜಾಕ್ಷಿಯರು ಕಳಧೌತಘಟದೊಳು ನೀರಾಂತು ಪೋಪರು ಪೊಳಲಧಿದೇವಿಯರಂತೆ (ಕಂನವಿ. ೨-೫೭). [ನೀರ್ + ಆನ್$_1$]

**ನೀರಾನೆ** (ನಾ). ಒಂದು ಬಗೆಯ ಜಲಚರ ಪ್ರಾಣಿ: ದೆಸೆದೆಸೆಗೀಡಾಡಿದ ಕರಿ ದೆಸೆಯಾನೆಗಳಬ್ಧಿಯೊಳಗೆ ನೀರಾನೆಗಳಾಗಸದೊಳಮಭ್ರಗಜಮೆನೆ ಪೊಸತಾಗಿರೆ ಭಿನ್ನಸೃಷ್ಟಿವಡೆದನೊ ಭೀಮಂ (ಗದಾಯು. ೩-೧೪) ; ನೀರಾನೆಯಿಂ ಕಂಬುವಿಂ ವರರತ್ನವ್ರಜದಿಂ ಪ್ರವಾಳಲತೆಯಿಂದೊಪ್ಪಿತ್ತು ನೀರಾಕರಂ (ಗಿರಿಕ. ೧-೪೭) ; ಸೊಂಡಿಲ ನೆಗಹಿ ಘೋರ್ಗರೆವ ನೀರಾನೆಯ ತಂಡ (ಮೋಹತ. ೬-೩೬) ; ತಾವರೆ ಮೊಗ ಮೀನ್ ಕಣ್ಣು ನೀರಾನೆ ಗಳ್ತೀವಿದ ನಡೆ ಸುಳಿನಾಭಿ . . . ಎನೆ ಭಾವಕಿ ಮೆಱೆದಳರ್ತಿಯಲಿ (ಕಂನವಿ. ೫-೪೭). [ನೀರ್ + ಆನೆ$_1$]

**ನೀರಾಮೆ** (ನಾ). ಒಂದು ಬಗೆಯ ಜಲಚರಪ್ರಾಣಿ ; ಆವೆ ; ಕೂರ್ಮ : (ಕ). [ನೀರು$_1$(<ನೀರ್) + ಆಮೆ$_1$]

**ನೀರಾಮೆಬಳ್ಳಿ** (ನಾ). ಒಂದು ಬಗೆಯ ಔಷಧಿಸಸ್ಯ : "ವಾರ್ಷಿಕಂ, ತ್ರಾಯಮಾಣಾ, ತ್ರಾಯಂತೀ, ಬಲಭದ್ರಿಕಾ — ೪ ನೀರಾಮೆಬಳ್ಳಿ" (ಸಿದ್ಧಾಂತಿ. ೧೪೬). [ನೀರಾಮೆ ? + ಬಳ್ಳಿ]

**ನೀರಾರಂಬ** (ನಾ). ನೀರಾವರಿಯ ಬೇಸಾಯ; ತರಿ ವ್ಯವಸಾಯ : ಕಾಡಾರಂಬ ನೀರಾರಂಬ ಸಕಲ (ಸ್ಥಲ) ಸುವರ್ಣಾದಾಯುಂಟಾದ ಅಷ್ಟಭೋಗತೇಜಸ್ಸಾಮ್ಯವನು ಸಮರ್ಪಿಸಿದೆವು (ಎಕ. IX, ಬೆಂಗಳೂ. ೩೦–೧೯ ; 1544) ; ಆ ಗ್ರಾಮಕೆ ಸಲುವ ಚತುಸೀಮೆವೊಳಗಾದ ಕಾಡಾರಂಬ ನೀರಾರಂಬಕೆ ಸಲುವ ಕೆಜಿ ಕುಂಟಿ ಕೊಣನು (ಎಕ. X (S), ಕೋಲಾರ. ೩೦೪–೧೪ ; ಸು. 17ನೆಯ ಶತ). [ನೀರ್ + ಆರಂಬ]

**ನೀರಾರಂಭ,** ನೀರುಆರಂಭ (ನಾ). = ನೀರಾರಂಬ : ಆ ದಂಡ್ನಾಯಕಪುರಕೆ ಸಲುವ ಚತುಃಸೀಮೆಯೊಳಗುಳ್ಳ ತೋಟ ತುಡಿಕೆ ಗದ್ದೆ ಬೆದ್ದಲು ಏತ ಏರಿಕಲು ನೀರಾರಂಭ ಕಾಡಾರಂಭ (ಎಕ. VII, ಶಿಮೊ. ೬೧–೨೭ ; 1431) ; ಆ ಚತುಸೀಮೆವೊಳಗಣ . . . ಕಾಡಾರಂಭ ನೀರಾರಂಭ ಕಾಣಿಕೆ ಬೇಡಿಗೆಯೇನುಂಟಾದ ಸರ್ವಸ್ವಾಮ್ಯವನು ಆಗು ಮಾಡಿ(ಮೈಆರಿ. ೧೯೪೬, ೨೯–೧೧ ; 1530); ಈ ಗ್ರಾಮಕೆ ಸಲುವ ಗೃಹಾರಾಮಕ್ಷೇತ್ರ ಗದ್ದೆ ಬೆದ್ದಲು ಕಾಡಾರಂಭ ನೀರಾರಂಭ (ಮೈಆರಿ. ೧೯೪೦, ೪೭–೧೭ ; 1669); ಯಿ ಗ್ರಾಮಕೆ ಕಾಡಾರಂಭ ನೀರಾರಂಭ (ಎಕ. XI, ಚಿತ್ರದು. ೩೧–೧೯ ; 1714 ?). **ನೀರುಆರಂಭ :** ತೋಟ ತುಡಿಕೆ ಕಾಡು ಆರಂಭ ನೀರುಆರಂಭ (ಎಕ. III (R), ಗುಂಡ್ಲುಪೇ. ೧೭೦–೧೦ ; 1607). [ನೀರ್ + ಆರಂಭ]

**ನೀರಾವರಿ** (ನಾ). **೧.** ನೀರಿನ ಸೌಲಭ್ಯ,—ಅನುಕೂಲ,—ಪೂರೈಕೆ: (ಮೈಗಜೆ. IV, ೭೪೧). (ಗು). **೨.** ತರಿ ವ್ಯವಸಾಯಕ್ಕೆ ತಕ್ಕುದಾದ; ನೀರು ಸಮೃದ್ಧಿಯಾಗಿರುವ: 'ನೀರಾವರಿ ಪ್ರದೇಶ' ಪರಾ. [<ನೀರ್ವರಿ]

**ನೀರಾವರಿಕೆ** (ನಾ). **೧.** = ನೀರಾವರಿ **೧** : (ಕ). **೨.** ನೀರು ಸಮೃದ್ಧಿಯಾಗಿರುವ ಪ್ರದೇಶ; ತರಿ ವ್ಯವಸಾಯಕ್ಕೆ ತಕ್ಕುದಾದ ಭೂಮಿ : (ಕ). [ನೀರಾವರಿ + –ಇಕೆ]

**ನೀರಾವರಿಪ್ರದೇಶ** (ನಾ). = ನೀರಾವರಿಕೆ **೨** : ನಮ್ಮ ದೇಶದಲ್ಲಿ ನೀರಾವರಿಪ್ರದೇಶಗಳು ಅಷ್ಟು ಹೆಚ್ಚಾಗಿಲ್ಲವಾದ್ದರಿಂದ ಖುಷ್ಕಿಪೈರುಗಳನ್ನೇ ಹೆಚ್ಚಾಗಿ ಬೆಳೆಯಬೇಕಾಗಿದೆ(ವ್ಯವಮು. ೫೩). [ನೀರಾವರಿ + ಪ್ರದೇಶ]

**ನೀರಾವರಿಬೆಳೆ** (ನಾ). ತರಿ ಜಮೀನಿನಲ್ಲಿ ಬೆಳೆಯುವ ಬೆಳೆ : ಭತ್ತ, ಕಬ್ಬು ಮುಂತಾದುವು ನೀರಾವರಿ ಬೆಳೆಗಳು (ರೂಢಿ). [ನೀರಾವರಿ + ಬೆಳೆ$_2$]

**ನೀರಾವರಿಭೂಮಿ** (ನಾ). = ನೀರಾವರಿಕೆ **೨** : "ವ್ರೈಹೇಯಂ, ಶಾಲೇಯಂ—ಈ ೨ನ್ನು ವ್ರೀಹಿಶಾಲ್ಯುದ್ಭವೋಚಿತಂ, ಭತ್ತ, ಕಳವೆ ಮುಂತಾದ್ದು ಬೆಳೆಯುವದಕ್ಕೆ ತಕ್ಕ ಗದ್ದೆ ಮೊದಲಾದ ನೀರಾವರೀ ಭೂಮಿಗೆ ಪೆಸರು" (ಸಿದ್ಧಾಂತಿ. ೨೭೫). [ನೀರಾವರಿ + ಭೂಮಿ]

**ನೀರಾವಳಿ** (ನಾ). ನೀರಿನ ಮೊತ್ತ ; ಜಲರಾಶಿ : ರಂಭಾಳಿಗಳ್ ತಮ್ಮ ನೀರಾವಳಿಯಂ ಪುಂಡ್ರೇಕ್ಷುವಾಟಾವಳಿಗೆ ಸುರಿಯೆ . . . ಚೆಲ್ವಾದುದು ಪುರಬಹಿರುದ್ಯಾನಕೇದಾರಜಾಳಂ (ರಸರ. ಪರಿ. I, ೧೧೯). [ನೀರ್$_2$ + ಆವಳಿ$_1$ (= ಆವಲಿ)]

**ನೀರಾಹಾರ** (ನಾ). ದ್ರವರೂಪದಲ್ಲಿರುವ ಆಹಾರ : ನೀರಾಹಾರ (Fluid diet) ಹೆಚ್ಚಿಗೆ ಜೀವಸತ್ವವಿರುವ ಮೆದುವಾದ ಆಹಾರವನ್ನು ಕೊಡಬೇಕು (ಕಲರೋ. ೨೫). [ನೀರು$_1$(<ನೀರ್) + ಆಹಾರ]

**ನೀರಾಹಿ** (ನಾ). ನೀರುಹಾವು ; ವಿಷವಿಲ್ಲದ ಹಾವು ; ಒಳ್ಳೆ : ಮಚ್ಛ ಮಕರಿಯ ಭೇಕ ಕರ್ಕಟಕ ನೀರಾಹಿ ಕಚ್ಛಪಂ ಮುಖ್ಯ ಜಲಚರಕೆಯಾಸ್ಪದಮಾಗಿ (ನವಮೋ. ೨–೬). [ನೀರ್$_2$ + ಅಹಿ]

**ನೀರಾಳಿ** (ನಾ). ನೀರನ್ನು ತರುವವಳು ; ದಾಸಿ : ಅರಸಿಯರಿಗಾಳಿಯರು ಭೂಸುರರಿರವಿಗೆತ್ತವರಲ್ಲಿ ನೀರನು ಹೊರಲು ಬೇಕಮ್ಮಾಜಿ ನೀರಾಳಿಯರಿಗಾಳಿಯರೇ ಇರುವರಲ್ಲರಭಳಿಗೆ ನಿನ್ನೊಳು ತೆರಳುವನು ನೋಡು (ಜಿನಭಾ. ೨೦–೬೭). [ನೀರು$_1$ (<ನೀರ್) + ಆಳ್$_4$ (= ಅಲ್$_4$)]

**ನೀರಿ** 'ನಿಋ$_2$' ನೋ.

**ನೀರಿಡು** (ಕ್ರಿ). ನೀರನ್ನು ಎರೆ,—ಹೊಯ್ಯು : ಚಮರೀರಾಜಿರಜಂಗಳಂ ಕಳೆಗುಮುದ್ಯದ್ದಂತಿ ನೀರಿಟ್ಟು ಸಂಭ್ರಮದಿಂ ಸಾರಣೆಗೆಯ್ವುದಲ್ಲಿ (ಶಬಶಂ. ೨–೭೨). [ನೀರ್ + ಇಡು$_1$]

**ನೀರಿಪ್ಪೆ,** ನೀರುಹಿಪ್ಪೆ (ನಾ). ಇಪ್ಪೆಯ ಮರದಲ್ಲಿ ಒಂದು ಬಗೆ ; "ಮಧೂಲಕ" (ನಾಚಿರಾ. ೩) : "ಮಧೂಳಿಕಾ–ಹೆಗ್ಗುರುಟಿಗೆ, ನೀರಿಪ್ಪೆ, ಮದ್ಯ, ಸಬ್ಬಸಿಗೆ" (ಓಷಧಿ. ೧೨೦). **ನೀರುಹಿಪ್ಪೆ :** "ಮಧೂಲಕಃ, ಜಲಜೀಅತ್ರ, ನೀರುಹಿಪ್ಪೆಮರ, ಪೀಲುಃ, ಗುಡಫಲಃ, ಸ್ರಂಸೀ, ಗೋನುಮರ, ಗೋಗಿನಾರು ಪ್ರಸಿದ್ಧ, ಗೋಣೀಮರವೆಂದು ಕೆಲವರನ್ನುವರು" (ಸಿದ್ಧಾಂತಿ. ೧೧೪). [ನೀರು$_1$ (<ನೀರ್) + ಇಪ್ಪೆ$_1$ (<ಇರ್ಪೆ)]

**ನೀರಿಲಿ** 'ನೀರಿಲ್ಲಿ' ನೋ.

**ನೀರಿಲ್ಲಿ,** ನೀರಲಿ, ನೀರಿಲಿ (ನಾ). ಒಂದು ಊರಿನ ಹೆಸರು : ನೀರಿಲ್ಲಿಯಾ ಸಿನ್ದೆಅಗಾಮಿಗಳುಂ ಮುಖವಾಗೆ ಎರಡುಂ ನಾಟಕ್ಕೆ ರಾಜಶ್ರಾವಿತವಾಗೆ ಪ್ರಸಾದಂಕೆಯ್ದಾರ್ (ಇಅ. XIX, ೧೪೫–೧೦ ; ಸು. 680). **ನೀರಲಿ :** ನೀರಲಿಯ ಮಹಾಜನಂಗಳುಂ . . . ಆನೆಬಾಳ ಪ್ರಜೆ ಪಿ(ಹಿ?)ಟ್ಟಸಕಾರರುಂ ಇನ್ತಿನರ ಸಮಕ್ಷದಲ್ಲಿ ಆನೆಬಾಳ (ಆಸೆ ಪೊಳಲ?) ಗೌಡಿಕೆಯ ವೃತ್ತಿಯ ಅಷ್ಟಭೋಗಕೆ ತೇಜಸಾಮ್ಯಸಹಿತವಾಗಿ ಬೊಮ್ಮಗೌಂಡನು ಪಡೆದನು (ಕಕುಲ. ೧೭–೧೧ ; 1050). **ನೀರಿಲಿ :** ಶ್ರೀಮದಗ್ರಹಾರಂ ನೀರಿಲಿಯ ಮಹಾಜನಂ ಮೂನೂರ್ವರ್ಗೆ ಬಳಿಯ ನಟ್ಟ ಬರಿಸಿ . . . ಬಿಟ್ಟರ್ (ಎಇ. XVI, ೬೭–೧೨ ; 1053). [ ? ]

**ನೀರಿಸ್‌ಹುಳು** (ನಾ). ನೀರಿನಲ್ಲಿ ವಾಸಿಸುವ ಒಂದು ಬಗೆಯ ಹುಳು : ನೀರಿಸ್‌ಹುಳುವು ಸಮುದ್ರದಲ್ಲಿ ಜೀವಿಸುವ ವಲಯವಂತ ಪ್ರಾಣಿ (ಪ್ರಾಣಿಶಾ. ೨೦೯). [ನೀರಿಸ್$_0$(P←ಇಂ. Nereis) + ಹುಳು (<ಪುಟು)]

**ನೀರಿಳಿ** 'ನೀರಿಟು' ನೋ.

**ನೀರಿಳಿಸು** 'ನೀರಿಟುಯಿಸು' ನೋ.

**ನೀರಿಜಗ** (ನಾ). ಒಂದು ಪ್ರದೇಶದ ಹೆಸರು (?) : ವಡಗಣ್ಣಾ ಸೀಮೆ ಪೆರಮಟಿ ಪಡುವಣ್ಣಾ ಸೀಮೆ ತಣ್ಣಳ್ಳಿಗಾರ ಪಾಟು ತೆಙ್ಕಣ್ಣಾ ಸೀಮೆ ನೆಯ್ದಿಲ್ಗೆಱೆಯಾ ಏಱು ಮೂಡಣ್ಣಾ ಸೀಮೆ ಇಡೆವೆಟ್ಟೆದಾ ವಡೆಗಣ್ಣಾ ನೀರಿಜಗ (ಎಇ. XXI, ೨೯–೧೪ ; ಸು. 8ನೆಯ ಶತ). [ ? ]

**ನೀರಿಟು,** ನೀರಿಳಿ (ಕ್ರಿ). **೧.** ಸ್ನಾನ ಮಾಡು ; ಮೀಯು. **೨.** ಸೂತಕಸ್ನಾನವನ್ನು ಮಾಡು ; ಸತ್ತವರಿಗಾಗಿ ಅಪರ ಕರ್ಮಗಳನ್ನು ಮಾಡಿದ ನಂತರ ಮೀಯು : ತನ್ನ ಮುನ್ನಿನ ಸ್ವಾಭಾವಿಕಮಪ್ಪ ರೂಪಂ ಕೈಕೊಂಡು ತಮ್ಮಣ್ಣನಂ ಸಂಸ್ಕರಿಸಿ ನೀರಿಟುದು (ವಡ್ಡಾರಾ. ೬೦–೧೭) ; ಸುತಶೋಕದ ಪೊಂಪುಟುಯೊಳ್ ಮೆಯ್ಯಱಿಯದೆ ನೀರಿಟುವಂತೆವೊಲಿಟುದನಪರಜಳಧಿಗೆ ದಿನಪಂ (ಸಂಪಭಾ. ೧೨–೨೨೦) ; ಮುನ್ನಂ ಪರಶುರಾಮನೀ ನೆಲದೊಳುಳ್ಳ ರಸುವಕ್ಕಳೆಲ್ಲರುಮನಿರ್ಪತ್ತೊಂದುಸೂಟ್ವರೆಗಂ ಪಿಳ್ಳೆಪೆಸರಿಲ್ಲದಂತು

ಕೊಂದವಂದಿರ ನೆತ್ತರೊಳ್ ತೀವಿ ತನ್ನ ತಾಯ್ಗೆ ನೀರಿಳಿಯಲುಂ ತಂದೆಗೆ ನೀರ್ಗುಡಲುಮೆಂದು ಮಾಡಿದ . . . ಪೆರ್ಮಡುಗಳೊಳಗೆ ಮೂಡಿ ಮುಳುಗ್ಯಾಡಿ (ಗದಾಯು. ೬-೨೮ ಪ) ; ಸತ್ತಿರ್ದ ಮಗನ ಪೆಣನಂ ಕಂಡು ಮಹಾದುಃಖಿತನಾಗಿ . . . ಮಱುದಿವಸಂ ಸಂಸ್ಕರಿಸಿ ನೀರಿಳಿದು ಲೌಕಿಕ ಕ್ರಿಯೆಯೆಲ್ಲಮಂ ನೆಱೆಯೆ ತೀರ್ಚೆ (ಧರ್ಮಾಮೃ. ೧೦-೧೯೨) ; ತುಳುಲಾಳ್ಮದ್ಗೋತ್ರಭವಂ ಕಳುದಂ ಕಲಿಸಿಂಹಚೂಡನೆಂದವಯುವ ದೊಂದಬಲಿಂದೆ ಕೆಂಪು ಮಿಗೆ ನೀರಿಳಿವಂತಿರೆ ಸೂರ್ಯನಪರಜಲನಿಧಿಗಿಳಿದಂ (ಅನಂಪು. ೧೧-೬೯) . ತದ್ವೃತ್ತಾಂತಮಂ ಬಿನ್ನವಿಸುವುದುಂ ಗಾಂಗೇಯಾದಿಗಳ್ ಪಿರಿದುಂ ದುಃಖಮನೆಯ್ದಿ ನೀರಿಳಿದರ್ (ಮಹಾನೇ. ೯-೫೭ ಪ). **ನೀರಿಳಿ :** **೧.** ಭಿಕ್ಷುಗಳನೊಡಗೂಡಿ ಬುದ್ಧಂ ಕಕುತ್ಥಾ ನದಿಯುನಯ್ದಿ ನೀರಿಳಿದು (ವೈಶಾಖ. ೭೩-೨೩೭). **೨.** ಚಂದ್ರಸೂರ್ಯರಿಬ್ಬರೂ ನೀರಿಳಿದರಲ್ಲಾ ವಾಯುದೇವ ವಿಮಾನವ ಹೊತ್ತ ವಾಸುದೇವ ತಲೆಗೊಳ್ಳಿಯನಿಱಿದ (ಅವಚಂ. ೧೯೧-೮೬೪) ; ಉರುತರೋಪಾಯವು ಫಲಿಸಿತೆಂದಿರೆ ಮನದಲುಬ್ಬಿದನು ನೀರಿಳಿದರು ಬಳಿಕ್ಕವರು (ಸಾಳ್ವಭಾ. ೩೫-೧೨).

**ನೀರಿಳಿಯದ ಬಟ್ಟೆ** = ಎಣ್ಣೆ, ಮೇಣ ಮೊದಲಾದುವುಗಳಿಂದ ಪರಿಷ್ಕರಿಸಿ ಒದ್ದೆಯಾಗದಂತೆ ಮಾಡಿದ ಬಟ್ಟೆ ; ಮೇಣಗಪ್ಪಡ : ನೀರಿಳಿಯದ ಬಟ್ಟೆ ತೊಟ್ಟು, ತಲೆಗೆ ಅಂಚಿಲ್ಲದ ಟೋಪಿಯನ್ನು ಧರಿಸಿದ್ದ ಅಗ್ರಫೇನಾ ಪೆತ್ರೋವ್ನಾಳ ಕಡೆಗೆ ತೋರ್‌ಬೆರಳು ನೀಡಿದಳು (ಪುನರು. ೪೫೯). **ನೀರಿಳಿದವನು** = ಸೂತಕದ ಸ್ನಾನವನ್ನು ಮಾಡಿದವನು : "ಅಪಸ್ನಾತ, ಮೃತಸ್ನಾತ = ನೀರಿಳಿದವನು" (ನಾಚಿರಾ. ೬).

[ನೀರ್ + ಇೞಿ]

**ನೀರಿಳಿಪು** (ಕ್ರಿ). ಸೂತಕಸ್ನಾನಮಾಡಿಸು ; ಮೈಲಿಗೆ ಕಳೆಯಲು ಸ್ನಾನ ಮಾಡಿಸು : ಮುನ್ನೆ ಪರಶುರಾಮನೀ ಲೋಕದೊಳುಳ್ಳರಸುಮಕ್ಕಳೆಲ್ಲರುಮನಿರ್ಪತ್ತೊಂದುಸೂಬ್ಬಿರಂ ಪೇಳೆ ಪೆಸರಿಲ್ಲದಂತೆ ಕೊಂದು . . . ಅವರ ನೆತ್ತರ ಧಾರೆಯೊಳ್ ತೀವಿ ತನ್ನ ತಾಯಂ ನೀರಿಳಿಪಲುಂ ತಾನುಂ ಮಿಂದು ತನ್ನ ತಂದೆಗೆ ನೀರ್ಗುಡಲುಮೆಂದು ಮಾಡಿದ ಶಮಂತಪಂಚಕಂಗಳೆಂಬಯ್ದು ಪೆರ್ಮಡುಗಳ ಕೆಲದೊಳೆಡೆಯಱಿದು ಬೀಡಂ ಬಿಡಿಸಿ (ಪಂಪಭಾ. ೯-೧೦೪ ಪ).

[ನೀರ್ + ಇೞಿಪು]

**ನೀರಿಳಿಯಿಸು, ನೀರಿಳಿಸು** (ಕ್ರಿ). = ನೀರಿಳಿಪು : ಅಱುವೆನ್ನರ ತರಳಕೆ ಮೆಯ್ವುಳಿಯಿಂ ಪಿಡಿದೊಯ್ಯನೆತ್ತಿ ಮೆಲ್ಲನೆ ತಡಿಗಾಗಿಳಿತಂದೀ ಕೊಳದೊಳ್ ನೀರಿಳಿಯಿಸೆ ನೀರಿಳಿದೆಂ (ಕಾದಂಪೂ. ೯೫೦). **ನೀರಿಳಿಸು :** ಬಾಯಿಬಡಿಕನಲಾ ವೃಥಾ ರಾಧೇಯ ಮದವೇಕಿನ್ನು ನಿನಗಹಿಸಾಯಕದ ಸಾವಿನಲಿ ನೀರಿಳಿಸುವೆನು ನೆತ್ತರಲಿ (ಕುಪ್ಯಾಕ. ೨೬-೭).

[ನೀರಿಳಿ + -ಇಸು$_3$]

**ನೀರಿಳಿವು** (ನಾ). ಜಲಪಾತ ; ನೀರ್ಬೀಳು : ಅನ್ತೆ ಬನ್ದು ಮೂಡಾಯಿನ್ಸ್ಬೀಟ್ಟನ್ದ ನೀರಿಳಿವೆ (ಪ್ರೈಆರಿ. ೧೯೩೬, ೫೩-೨೮ ; ಸು. 550) ; ಕೊಳ್ತಾಲೆಯುಳ್ ಕುಡಿತ್ತು ಎರಟ್ಟೆಪುಣುಸೆ ಎ ಮೂಡಾಯೊಡ್ಡೀಡಿ ನೀರಿಳಿವೆ ತಾಱಿ ಎ (ಎಕ. XVI, ಗುಬ್ಬಿ. ೭೫-೫೨ ; 733).

[ನೀರ್ + ಇೞಿವು]

**ನೀರಿಳಿಹ** (ನಾ). ಸತ್ತವರಿಗಾಗಿ ಮಾಡುವ ಸ್ನಾನ ; ಸೂತಕ ಸ್ನಾನ : "ಅಪಸ್ನಾನಂ, ಮೃತಸ್ನಾನಂ — ಈ ೨ ನೀರಿ[ಳಿ]ಹ" (ಹಲಾಯು. ೧೦೫-೧೭). [ನೀರ್ + ಇೞಿಹ]

**ನೀರೀಂಟು** (ಕ್ರಿ). ನೀರನ್ನು ಕುಡಿ, —ಪಾನಮಾಡು : ಕರಗಳ ನೀಡಿ ನೀರೀಂಟುವ ಪಥಿಕರು (ಅಬ್ಬಲೂ. ೩-೬೩). [ನೀರ್ + ಈಂಟು]

**ನೀರೀಸು$_1$** (ಕ್ರಿ). ನೀರಿನಲ್ಲಿ ಚಲಿಸು ; ಈಜು : "ಬಿಸ್ತ್ರಯತಿ = ನೀರೀಸಿದಪಂ" (ಕಾಶಕ್ಯ. ೨೬೦). [ನೀರ್ + ಈಸು$_1$]

**ನೀರೀಸು$_2$** (ನಾ). ನೀರಿನಲ್ಲಿ ಚಲಿಸುವಿಕೆ ; ಈಜುವಿಕೆ : "ಬಿಸ್ತ— ಜಲೋತ್ತರಣೀ, ನೀರೀಸಿನೊಳ್" (ಕಾಶಕ್ಯ. ೨೬೦). [ನೀರ್ + ಈಸು$_4$]

**ನೀರು$_1$** 'ನೀರ್' ನೋ.

**ನೀರು$_2$** 'ನೀಱು' ನೋ.

**ನೀರು ಆರಂಭ** 'ನೀರಾರಂಭ' ನೋ.

**ನೀರುಂಬಳಿ** (ನಾ). ಸಾರ್ವಜನಿಕ ಸೌಕರ್ಯಕ್ಕಾಗಿ ಕೆರೆ, ಬಾವಿ, ಕಾಲುವೆ ಮೊದಲಾದುವುಗಳನ್ನು ಕಟ್ಟಿಸಿದವರಿಗೆ ಸರ್ಕಾರವು ಕೊಟ್ಟ ಉಂಬಳಿ, —ಕೊಡುಗೆ : (೬). [ನೀರ್ + ಉಂಬಳಿ]

**ನೀರುಕಂದಾಯ** 'ನೀರುಗಂದಾಯ' ನೋ.

**ನೀರುಕಕ್ಕೆ** (ನಾ). ಒಂದು ಬಗೆಯ ಸಸ್ಯ : ನೀರುಜಪ್ಲೆ, ನೀರುಕಕ್ಕೆ (ವೈಶಿಗಿ. ೨೯-೫೫೩). [ನೀರು$_1$ (<ನೀರ್) + ಕಕ್ಕೆ]

**ನೀರುಕಟ್ಟು** (ಕ್ರಿ). **೧.** ನೀರು ನಿಲ್ಲುವಂತೆ ಮಾಡು ; ನೀರನ್ನು ನಿಲ್ಲಿಸು : ಚೌಕಮಾಳಗಳನ್ನು ಮಾಡಿ, ಅವುಗಳಲ್ಲಿ ಸಮುದ್ರ ಉಕ್ಕೇರಿದಾಗ ನೀರುಕಟ್ಟುತ್ತಾರೆ (ಮುಂಬಯಿ. ೪-೧೯೮) ; ಭೂಮಿಗೆ ನೀರು ಕಟ್ಟುವದರಲ್ಲಿ ಬಹು ಚಮತ್ಕಾರವನ್ನು ತೋರಿಸುತ್ತಾರೆ (ಭೂಗೋಳ. ೩೯). **೨.** ನೀರೂರು ; ನೀರು ಬರು : ಮನಶ್ಶಾಸ್ತ್ರವೇತ್ತರೂ ಚಿಕಿತ್ಸಕರೂ ಆದ ಅವರ ಕಣ್ಣುಗಳಲ್ಲಿ ನೀರುಕಟ್ಟಿತ್ತು (ಹೊಸಕ್ಷಿ. ೧). **೩.** ಸಸ್ಯದ ಮಡಿಗಳಿಗೆ ನೀರನ್ನು ಬಿಡು, —ಹಾಯಿಸು : (೬).

[ನೀರು$_1$ (<ನೀರ್) + ಕಟ್ಟು$_1$]

**ನೀರುಕಟ್ಟೆ** (ನಾ). ಒಂದು ಬಗೆಯ ಸಸ್ಯ : "ಕರ್ಕೋಟಃ — ಮಡುವಾಗಲು, ನೀರುಕಟ್ಟೆ" (ಓಷಧಿ. ೨೨).

[ನೀರು$_1$ (<ನೀರ್) + ಕಟ್ಟೆ ?]

**ನೀರುಕಣಿಗಲು** 'ನೀರುಗಣಿಗಲು' ನೋ.

**ನೀರುಕಣಿಗಿಲೆ** 'ನೀರುಗಣಿಗಲು' ನೋ.

**ನೀರುಕಾಗೆ** 'ನೀರ್ಗಾಗೆ' ನೋ.

**ನೀರುಕಾರು** (ನಾ). ಅಕ್ಕಸಾಲಿಗರು ಬಳಸುವ ಒಂದು ಬಗೆಯ ಇಕ್ಕುಳ : (೬). [←ತೆಲು. ನೀರುಕಾಱು]

**ನೀರುಕಾಲುವೆ** 'ನೀರ್ಗಾಲುವೆ' ನೋ.

**ನೀರುಕುಟಿಗ** 'ನೀರ್ಗುಟಿಗ' ನೋ.

**ನೀರುಕುಡಿ** 'ನೀರ್ಗುಡಿ' ನೋ.

**ನೀರುಕುಡಿಸು** 'ನೀರ್ಗುಡಿಸು$_1$' ನೋ.

**ನೀರುಕುದುರೆ** (ನಾ). ಒಂದು ಬಗೆಯ ಜಲಚರಪ್ರಾಣಿ : ನೀರುಕುದುರೆ, ನೀರಾನೆ, ನೀರುನಂಟಿ . . . ನೀರುಯಮ್ಮೆ ಮುಂತಾದ ಅನೇಕ ಜಾತಿಗಳುಂಟು (ಸಿದ್ಧಾಂತಿ. ೮೩).

[ನೀರು$_1$ (<ನೀರ್) + ಕುದುರೆ]

**ನೀರುಕೂಲಿ** (ನಾ). ನೀರಿನ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಯಿಾ ದೇವರಿಂಗೆ ನೀರುಕೂಲಿ ನಿಚಂಡಿ ಬೆಡುಗೆ . . . ಸರ್ವಮಾನ್ಯವಾಗಿ ಬಿಟ್ಟ ದತ್ತಿ (ಎಕ. IV (R), ಚಾಮರಾ. ೩-೧೪, 1279). [ನೀರು$_1$ (<ನೀರ್) + ಕೂಲಿ$_1$]

**ನೀರುಕೊಕ್ಕರೆ** (ನಾ). ನೀಳವಾದ ಕತ್ತುಳ್ಳ ಒಂದು ಬಗೆಯ ಜಲಪಕ್ಷಿ ; ಕ್ರೌಂಚಪಕ್ಷಿ : ಕ್ರುಙ್, ಕ್ರೌಂಚಃ— ೨ ಕೀಚಕ್ಕೆ, ನೀರುಕೋಳಿಗೂ ಹೆಸರಾಗುವದು, ನೀರುಕೊಕ್ಕರೆ" (ಸಿದ್ಧಾಂತಿ. ೧೫೯).

[ನೀರು$_1$ (<ನೀರ್) + ಕೊಕ್ಕರೆ$_1$]

**ನೀರುಕೊಡು** 'ನೀರ್ಗೊಡು' ನೋ.

**ನೀರುಕೋಟಲೆ** (ನಾ). (ಕರಾ) ಒಂದು ಬಗೆಯ ಸಿಡುಬು ರೋಗ : ಮಗುವಿನ ಮೈ ತುಂಬಾ ನೀರುಕೋಟಲೆ ಎದ್ದಿದೆ (ರೂಢಿ).
[ನೀರು$_1$ (<ನೀರ್) + ಕೋಟಲೆ]

**ನೀರುಕೋಳಿ** 'ನೀರುಗೋೞಿ' ನೋ.

**ನೀರುಗಂಗಾಳ** (ನಾ). ನೀರನ್ನು ತುಂಬಲು ಉಪಯೋಗಿಸುವ ಅಗಲವಾದ ದುಂಡನೆಯ ಲೋಹದ ಪಾತ್ರೆ : (ಕಿ).
[ನೀರು$_1$ (<ನೀರ್) + ಗಂಗಾಳ]

**ನೀರುಗಂಟಿ** 'ನೀರ್ಗಂಟಿ' ನೋ.

**ನೀರುಗಂಟಿಗ** (ನಾ). = ನೀರ್ಗಂಟಿ : (ಕಿ).
[ನೀರು$_1$ (<ನೀರ್) + ಕಂಟಿಗ]

**ನೀರುಗಂಡಿ** 'ನೀರ್ಗಂಡಿ' ನೋ.

**ನೀರುಗಂದಾಯ,** ನೀರುಕಂದಾಯ (ನಾ). ನೀರಿಗಾಗಿ ಸರ್ಕಾರಕ್ಕೆ ತೆರುವ ನಿಗದಿಯಾದ ಹಣ : (ಲೈಸ್‌ಗೆ. II, ೫೫೭). **ನೀರುಕಂದಾಯ :** (ಮೈಗೆಜೆ. IV, ೭೮೧).
[ನೀರು$_1$ (<ನೀರ್) + ಕಂದಾಯ]

**ನೀರುಗಣಿಗಲು,** ನೀರುಕಣಿಗಲು, ನೀರುಕಣಿಗಿಲೆ, ನೀರುಗಣಿಗಿಲ್, ನೀರುಗಣಿಗಿಲು, ನೀರ್ಗನಿಗಲು (ನಾ). ಒಂದು ಬಗೆಯ ಗಿಡ : ಹೊಳೆ, ಕೌವಮರ, ಧಾತ್ರೀಫಲ, ನೀರುಗಣಿಗಲು (ಮೈಔಗಿ. ೧೨-೨೦೦). **ನೀರುಕಣಿಗಲು :** ನೀರುಕಣಿಗಲು, ತಕ್ತರೋಹಿತ, ನೀರುಸಣ್ಣೆಸೊಪ್ಪು (ಮೈಔಗಿ. ೬೩-೧೨೯೧). **ನೀರುಕಣಿಗಿಲೆ :** ಆ ಹೊಳೆಯ ಮರಳಲ್ಲಿ ಕೆಲವು ನೀರುಕಣಿಗಿಲೆ ಗಿಡಗಳು ಬೆಳೆದಿದ್ದವು (ಕಿಂಕಥೆ. ೩೩). **ನೀರುಗಣಿಗಿಲ್ :** (ಕಿ). **ನೀರುಗಣಿಗಿಲು :** (ಕಿ). **ನೀರ್ಗನಿಗಲು :** ಹೊಳೆನಗೆ, ನೀರ್ಗನಿಗಲು (ಮೈಔಗಿ. ೪೪-೮೭೨).
[ನೀರು$_1$ (<ನೀರ್) + ಗಣಿಗಲು$_1$ (<ಕಣಗಿಲೆ$_1$)]

**ನೀರುಗಣಿಗಿಲ್** 'ನೀರುಗಣಿಗಲು' ನೋ.

**ನೀರುಗಣಿಗಿಲು** 'ನೀರುಗಣಿಗಲು' ನೋ.

**ನೀರುಗಣ್ಣೆ** 'ನೀರ್ಗಣ್ಣೆ' ನೋ.

**ನೀರುಗಣ್ಣು** (ನಾ). ೧. ನೀರು ತುಂಬಿರುವ ಕಣ್ಣು ; ನೀರೂರಿರುವ ಕಣ್ಣು : ಅರಿಗು ಜಿನಸಭೆಯೊಳು ಶೋಕ ಹುಟ್ಟಿದ ಕಾರಣ ತಾಳ್ದನಾ ನೃಪತಿ ನೀರುಗಣ್ಣೊಳು ಮೂರ್ಛೆವೋಗನೆ ತಾಯನ್ಯಧಾರಿಣಿಯೊಳು ದೀಕ್ಷೆಗೊಳಲು (ಭರಚ.೫೯-೫೦). ೨. ಒಂದು ಬಗೆಯ ನೇತ್ರರೋಗ : ಕಣ್ಣಿನಿಂದ ಯಾವಾಗಲೂ ನೀರು ಸೋರುವುದು : ಕಾವುಗಣ್ಣು, ಉಷ್ಣಗಣ್ಣು, ನೀರುಗಣ್ಣು, ಜಾರುಗಣ್ಣು, ಸಂಜೆಗಣ್ಣು (ಶುಕಸ. ೩೨೮). ೩. ನೀರು ಜಿನುಗುವ ಸ್ಥಳ ; ಒರತೆ : (ಕಿ).
[ನೀರು$_1$ (<ನೀರ್) + ಕಣ್ಣು (<ಕಣ್)]

**ನೀರುಗರಗ** (ನಾ). ಒಂದು ಬಗೆಯ ಗರುಗ : (ಕಿ).
[ನೀರು$_1$ (<ನೀರ್) + ಗರಗ (<ಗರುಗ)]

**ನೀರುಗಾಗೆ** 'ನೀರ್ಗಾಗೆ' ನೋ.

**ನೀರುಗಾಯಿ** 'ನೀರ್ಗಾಯ್' ನೋ.

**ನೀರುಗಾರಕ** (ನಾ). ಒಂದು ಬಗೆಯ ತೆರಿಗೆ ( ? ) : ಕಾಸತ್ತರಿಂದ ಗ ೧ ॥ ೦ ನೀರುಗಾರಕದಿಂದ ಗ ೧ ಅಂತು . . . ವಿವರ ಮಹಾಜನಂಗಳಿಗೆ . . . ಉತ್ಪತ್ತಿ (ಎಕ. VIII. ತೀರ್ಥಹ. ೭೦೪-೫೭ ; 1702).
[ ? ]

**ನೀರುಗಾಳಿ** (ನಾ). ನೀರಿನ ಮೇಲಿಂದ ಬೀಸಿ ಬರುವ (ತಂಪಾದ) ಗಾಳಿ : (ಕಿ). [ನೀರು$_1$ (<ನೀರ್) + ಗಾಳಿ$_1$]

**ನೀರುಗಿಚ್ಚು** 'ನೀರ್ಗಿಚ್ಚು' ನೋ.

**ನೀರುಗಿಳಿ** (ನಾ). ಒಂದು ಬಗೆಯ ಜಲಪಕ್ಷಿ : ಜಲಸಸ್ಯಗಳಿಂದಾವೃತವಾದ ಕೆರೆಗಳಲ್ಲಿ ನೀರುಗಿಳಿಗಳು ವಾಸಿಸುತ್ತವೆ (ಪಕ್ಷಿ. ೧೪೫).
[ನೀರು$_1$ (<ನೀರ್) + ಗಿಳಿ]

**ನೀರುಗು** (ಕ್ರಿ). ನೀರನ್ನು ಹೊರಚೆಲ್ಲು, –ಸ್ರವಿಸು ; ನೀರುಗುವ ಜಲಕಲಶಗಳನ್ನು ಎತ್ತಿಕೊಂಡು ಒಯ್ಯುತ್ತಿರುವಂತೆ ಇವರನ್ನು ಶಿಲ್ಪದಲ್ಲಿ ಕಂಡರಿಸಲಾಗಿದೆ (ಬದ್ಧಪ್ರ. Viii, ಪೀಠಿಕೆ).
[ನೀರು$_1$ (<ನೀರ್) + ಉಗು$_1$]

**ನೀರುಗುಂದ** 'ನೀರ್ಗುಂದ' ನೋ.

**ನೀರುಗುಡಿ** 'ನೀರ್ಗುಡಿ' ನೋ.

**ನೀರುಗುಳ್ಳೆ** 'ನೀರ್ಗುಳ್ಳೆ' ನೋ.

**ನೀರುಗುಳ್ಳೆಗಿಡ** (ನಾ). ಒಂದು ಬಗೆಯ ಗಿಡ : ನೀರುಗುಳ್ಳೆಗಿಡ, ಸೀತಾಶ್ರುಬೀಜ (ಮೈಔಗಿ. ೭೬-೧೫೬೬).
[ನೀರು$_1$ (<ನೀರ್) + ಗುಳ್ಳೆ ? + ಗಿಡ (<ಗಿಡು)]

**ನೀರುಗೇಡಿ** (ನಾ). ನೀರನ್ನು ಪಡೆಯಲಾರದವನು ; ನೀರು ದೊರೆಯದವನು : ಮೊಗಲರನ್ನು ದಿಕ್ಕುಪಾಲಾಗಿ ಚದರಿಸಿ ಅವರನ್ನು ಕೂಳುಗೇಡಿ ನೀರುಗೇಡಿಗಳನ್ನು ಮಾಡಿದನು (ಹಿಂಪುಸ. ೫೫).
[ನೀರುಗೇಡು + –ಇ$_3$]

**ನೀರುಗೇಡು** (ನಾ). ನೀರು ದೊರೆಯದೆ ಹೋಗುವಿಕೆ ; ನೀರಿನ ಅಭಾವ : 'ನೀರುಗೇಡಿ' ಪರಾ. [ನೀರು$_1$ (<ನೀರ್) + ಕೇಡು]

**ನೀರುಗೈ** (ನಾ). ನೀರಿನಿಂದ ಒದ್ದೆಯಾದ ಕೈ ; ತೇವದಿಂದ ಕೂಡಿದ ಕೈ : ಯುಧಿಷ್ಠಿರನು ನೀರುಗೈಯಿಂದ ಧೃತರಾಷ್ಟ್ರನ ಮೈಯೆಲ್ಲವನ್ನೂ ತಡವಿದನು (ನಚಭಾ. ೩೬೯).
[ನೀರು$_1$ (<ನೀರ್) + ಕೈ$_2$ (<ಕೆಯ್$_2$)]

**ನೀರುಗೋಡಗ** (ನಾ). ಒಂದು ಬಗೆಯ ಜಲಚರ ಪ್ರಾಣಿ ; ಮೊಸಳೆ : "ಶಿಂಶುಮಾರ ಎಂದು ಮೊಸಳೆ ; ನೀರುಗೋಡಗ ಎಂದೂ ಎಂಬರು" (ನಾಚಿರಾ. ಕಿ). [ನೀರು$_1$ (<ನೀರ್) + ಕೋಡಗ]

**ನೀರುಗೋಣಿ** 'ನೀರುಗೋಳಿ' ನೋ.

**ನೀರುಗೋಳಿ,** ನೀರಗೋಣಿ, ನೀರುಗೋಣಿ(ನಾ). ಒಂದು ಬಗೆಯ ಜಲಸಸ್ಯ ; "ಚಿವಿಲ್ಲಕಾ" (ಪಂಡಿತ. ೨೭೨) : (ಕಿ). **ನೀರಗೋಣಿ :** ನೀರಬೊಮ್ಮಿಸೊಪ್ಪು, ನೀರಗೋಣಿಸೊಪ್ಪು, ಇವು ಎರಡು ಬಗೆಯನ್ನು ಪಿಟ್ಟಿಸಿಕ್ಕಿ ಆ ರಸದಲ್ಲಿ ಜೀರಿಗೆ, ಹಿಪ್ಪಲಿ, ಕಟುಕರೋಹಿಣಿ, ಈ ಮೂಱನ್ನು ಅಱುವೆಯಲ್ಲಿ ಬೇಯಿಸಿ ಇಳುಹಿ ಅದಂ ಆ ರಸದಲ್ಲಿ ಅರೆದು ಕದಡಿ ಕುಡಿಯಲು ಎರಡು ವೇಳೆ ಮೂಱು ವೇಳೆ ವಿರೇಕಮಕ್ಕುಂ (ವಿವೈವಿ. ೧೧೩). **ನೀರುಗೋಣಿ :** (ಮೈಔಗಿ. ೪೫-೮೯೨).
[ನೀರು$_1$ (<ನೀರ್) + ಗೋಳಿ$_1$]

**ನೀರುಗೋೞಿ,** ನೀರುಕೋಳಿ, ನೀರ್ಕೋಳಿ, ನೀರ್ಗೋಳಿ (ನಾ). ಒಂದು ಬಗೆಯ ನೀರುಹಕ್ಕಿ ; ಮುಂಡುಮುಳುಕ : "ಪ್ಲವ ಎಂದು ಮುಂಡುಮುೞುಕ ; ನೀರುಗೋೞಿ ಎಂದೂ ಎಂಬರು" (ನಾಚಿರಾ. ಕಿ). **ನೀರುಕೋಳಿ :** ಈ ಅರ್ಕಪುಷ್ಕರಿಣಿಯಲ್ಲಿ ನೀರುಕೋಳಿಯಾಗಿ ಹುಟ್ಟಿದನು. ಇವನಿಗೆ ಪೂರ್ವಜನ್ಮಗಳ ಸ್ಮರಣೆಯಿರುವದು (ಅರ್ಕಮಾ. ೪೯) ; ನೀರುಕೋಳಿ ಸಂಗಡ ಆಡಿ ಹಾರುಕೋಳಿ ಕೆಟ್ಟಿತು(ಗಾದೆ). **ನೀರ್ಕೋಳಿ :** ಇಲ್ಲಿ ಕುಡುಂಬಳು, ಕೌಜಲು, ನೀರ್ಕೋಳಿ . . . ಡೇಗೆ, ಮತ್ತೊಂದು ಎಂದು ಸಾವಿರಜಾತಿಗಳಿವೆ (ಸ್ವಪ್ನಹೊ. ೧೨). **ನೀರ್ಗೋಳಿ :** "ಧಲಃ = ನೀರ್ಗೋಳಿ" (ಶಾಶಕ್ಯ. ೫೦).
[ನೀರು$_1$ (<ನೀರ್) + ಕೋೞಿ$_1$]

**ನೀರುಚಂಚಲಿ** 'ನೀರುಚೆಂಚಲಿ' ನೋ.

**ನೀರುಚೆಂಚಲಿ,** ನೀರುಚಂಚಲಿ (ನಾ). ಒಂದು ಬಗೆಯ ಜಲ ಸಸ್ಯ : "ವಿತುನ್ನಂ, ಸುನಿಷಣ್ಣಕಂ—೨ ನೀರುಚೆಂಚಲಿ, ಸುಲಿವಲ್ಲಿ" (ಸಿದ್ಧಾಂತಿ. ೧೪೬). **ನೀರುಚಂಚಲಿ :** (ಕ).

[ನೀರು$_1$(<ನೀರ್) + ಚೆಂಚಲಿ. / ತೆಲು. ನೀರುಚೆಂಚಲಿ]

**ನೀರುಜ** (ಗು). ರೋಗವಿಲ್ಲದ ; ಆರೋಗ್ಯವಾದ. [ಸಂ.]

**ನೀರುಜನ್ನಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : ಆ ಜ್ವರವು ಪ್ರಕೋಪಿಸಿದರೆ ನೀರುಜನ್ನಿಸೊಪ್ಪಂ ತಂದು ಆ ರಸಮಂ ಹಿಂಡಿ . . . ಒಂದಿಷ್ಟು ಕುಡಿಯಲು ಕೊಟ್ಟು ಮಿಕ್ಕದ್ದನ್ನು ಮೈಕೈಗೆ ಒತ್ತುವುದು (ವಿವೈವಿ. ೧೭). [ನೀರು$_1$(<ನೀರ್) + ಜನ್ನಿ? + ಸೊಪ್ಪು$_2$]

**ನೀರುಜಪ್ಲೆ** (ನಾ). ಒಂದು ಬಗೆಯ ಸಸ್ಯ : ನೀರುಜಪ್ಲೆ, ನೀರುಕಕ್ಕೆ (ಮೈಔಗಿ. ೫೯-೫೫೬). [ನೀರು$_1$(<ನೀರ್) + ಜಪ್ಲೆ ?]

**ನೀರುಡ** 'ನೀರುಡು' ನೋ.

**ನೀರುಡು,** ನೀರುಡ (ನಾ). ನೀರಿನಲ್ಲಿ ವಾಸಿಸುವ ಹಲ್ಲಿಜಾತಿಗೆ ಸೇರಿದ ಒಂದು ಪ್ರಾಣಿ : "ನಿಹಾಕೆ, ಗೋಧಿಕೆ" (ನಾಚಿರಾ. ೬) ; ನೀ[ಪಾಠಾಂ. ಸೀ]ರುಡುವಿನ ಕರಡಿಯ ಮಾರ್ಜಾರದ ವಾಯಸದ ದನಿಗ ಮತಿಕಷ್ಟಂಗಳ್ . . . ಕರ್ಣಶೂಲಮಂ ಪುಟ್ಟಿಸುಗುಂ (ವರ್ಧಪು. ೧೧-೪೦) ; ಮೊಸಳೆ ನೀರಾನೆ ನೀರ್ನಾವು ನೀರುಡುಗಳ ಸಮೂಹದಿಂದೆ . . . ಕಡಲ್ ಕಣ್ಗೆಸೆದುದು (ಚಿಬಪು. ೨-೩). **ನೀರುಡ :** "ನಿಹಾಕಾ, ಗೋಧಿಕಾ—ನೀರಲ್ಲಿರುವ ಉಡುವಿನ ಹೆಸರು . . . ಬೈಲು ಉಡದ ಹಾಗೆಯೇ ನೀರುಡ ಎಂಬುವ ಜಂತು" (ಸಿದ್ಧಾಂತಿ. ೭೪).

[ನೀರ್ + ಉಡು$_2$]

**ನೀರುಣ್** (ಕ್ರಿ). ನೀರನ್ನು ಕುಡಿ,—ಪಾನಮಾಡು : ಏಣಶಾಬತತಿ ನೀರುಣೆ ಕಣ್ಗೊಳಿಪಾಳವಾಳಮಂಡಳದಿನದೊಂದು ಮುಂದೆಸೆದು ತೋಱು ದುದಾಗಳಶೋಕಭೂರುಹಂ (ಕಾದಂಪೂ. ೨೨೭) ; ಏರಿ ನೀರುಣ್ಬೊಡೆ . . . ತಾಯ ಮೊಲೆವಾಲು ನಂಜಾಗಿ ಕೊಲುವಡೆ ಇನ್ನಾರಿಗೆ ದೂಱು ವೆನು (ವಸಪ. ೨೬) ; ಏರಿಯನೀಡಿಱುವೋಳಿಯೆ ನೀರುಣ್ಬ ಕನಲ್ವ ಪೋರ್ವ . . . ಗೋರಾಜಿಯ ಲೀಲೆ ಕಣ್ಗೆ ಪಡೆದುದು ಚೆಲ್ವಂ (ಚಂದ್ರಪು. ೨-೨೭) ; ನೀರುಣಲೆಂದು ಪೊಱಮಟ್ಟು . . . ಗಿಜ್ಜನೆಯ್ದುವ ಸೊರ್ಕಾನೆ ಗಳ ಕಾಲ ಸಂಕಲೆಯ ಗೋಸದೊಳಂ ಇಂದಿರನ ಪೊಂಬಿಲ ಸಿರಿಯ ಸಡ ಗರವಂ ಪಿಡಿಯುತಿರ್ಪುದು (ಕಬ್ಬಿಕಾ. ೪೪) ; ನಳಿನಂ ಶುಕ್ತಿಕೆ ತಳ್ತ ನೀರ್ವನಿಗಳೇ ನುಣ್ಮುತ್ತು ನೀರುಣ್ಬ ನಿಶ್ಚಳಮಾತಂಗಮೆ ತೀರನೀರದ ಮಹೇಂದ್ರಂ (ಶಬಶಂ. ೨-೫೫). [ನೀರ್ + ಉಣ್]

**ನೀರುಣಿಸು$_1$** (ಕ್ರಿ). ನೀರು ಕುಡಿಸು ; ನೀರೂಡು : ನೀರನ್ನು ಒದಗಿಸು : ಈ ಐದು ಪ್ರವಾಹಗಳು ಇನ್ನೂ ಹರಿಯುತ್ತಲಿವೆ. ಸಾಗ ರಾಂತ ಪೃಥ್ವಿಯನ್ನು ನೀರುಣಿಸಿ ಫಲವತ್ತಾಗಿ ಮಾಡುತ್ತಲಿವೆ (ವಿಚಾಪುಂ. ೮೦) ; ಬಿಸಿಲಲ್ಲಿ ಮರಗಳಿಗೆ ನೀರುಣಿಸುತ್ತಿದ್ದರಿ ; ಪಿತ್ಥ–ಗಿತ್ಥ ತಲೆಗೇರಿಲ್ಲ ತಾನೆ ? (ಮೂರುದಾ. ೩೭). [ನೀರು$_1$(<ನೀರ್) + ಉಣಿಸು$_1$]

**ನೀರುಣಿಸು$_2$** (ನಾ). ನೀರನ್ನು ಹಾಕುವಿಕೆ ; ನೀರೆರೆಯುವಿಕೆ : ಪರಿಪ ಕಾಲ್ವೆಗಳಿಂದ ಬಾಳೆವಿಾನ್ನೆಗೆದು ಬಂಧುರಪೂಗಮಂ ಮುಟ್ಟಿ ಅಲ್ಲಿರ್ದ ಪೊಂಬಾಳೆ ಬಿರಿದು ಮಕರಂದರಸಮಂ ಸೂಸಲದು ಪೊನಲ್ವರಿದು ನೀರುಣಿಸಾಗಲು (ಸೌಂದಪು. ೫-೯೨). [ನೀರ್ + ಉಣಿಸು$_2$]

**ನೀರುಣಿಸುಂಕ** (ನಾ). ನೀರಿನ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಇನ್ನೀ ಧರ್ಮಮಂ ಗೆಯ್ವೋಂ ನೀರುಣಿಸುಂಕಂ ಬಿಟ್ಟು ಮೊದಲಾ[ಗಿ] ಎಲ್ಲಮುಂ ಬಿಟ್ಟೋರ್ವರ್ (ಸೌಇಇ. XI-i, ೧೫-೫ ; 871). 'ನೀರಾಣಿವರಿ', 'ನೀರೋಣಿ' ಪರಾ.

[ನೀರುಣಿ ? + ಸುಂಕ$_1$]

**ನೀರುತರ್ಕಾರಿ** (ನಾ). ಮಿಾನು : ಕರಿಯನ ಅಭಿಪ್ರಾಯದಲ್ಲಿ ಮಿಾನು ಮಾಂಸಕ್ಕೆ ಸೇರಿದುದೇ ಅಲ್ಲ. ಅದು ಯಾರು ಬೇಕಾದರೂ ಉಪಯೋಗಿಸ ಬಹುದಾದ ನೀರುತರ್ಕಾರಿ (ಬಿಸ್ತಕ. ೮).

[ನೀರು$_1$(<ನೀರ್) + ತರ್ಕಾರಿ$_2$(<ತರಕಾರಿ)]

**ನೀರುತಾಪ** (ನಾ). ಉರಿಮೂತ್ರ (?) : ಯಷ್ಟಿಮಧುಕ, ದ್ರಾಕ್ಷೆ ಹಣ್ಣು, ಬೆಲ್ಲವತ್ತದ ಹಣ್ಣು ಈ ಮೂಱನ್ನು ಕಷಾಯವ ಕಾಸಿ ಕೊಟ್ಟರೆ ನೀರುತಾಪ ಬಿಡುವುದು (ವಿವೈವಿ. ೧೬೨).

[ನೀರು$_1$(<ನೀರ್) + ತಾಪ$_2$]

**ನೀರುತಿದಿ** 'ನೀರ್ದಿತ್ತಿ' ನೋ.

**ನೀರುತುಂಬು** 'ನೀರ್ದುಂಬು' ನೋ.

**ನೀರುತುಳಸಿಗಿಡ** (ನಾ). ತುಳಸಿಜಾತಿಗೆ ಸೇರಿದ ಒಂದು ಬಗೆಯ ಸಸ್ಯ : (ಕ).

[ನೀರು$_1$(<ನೀರ್) + ತುಳಸಿ(= ತುಲಸಿ) + ಗಿಡ(<ಗಿಡು)]

**ನೀರುತೊಟ್ಟಿ** (ನಾ). ನೀರನ್ನು ತುಂಬಿಡುವ ಬಾನಿ : ಮನೆಗಳಲ್ಲಿ ನೀರುತೊಟ್ಟಿ ಇಲ್ಲದಿದ್ದರೆ ತುಂಬ ತೊಂದರೆಯಾಗುತ್ತದೆ (ರೂಢಿ).

[ನೀರು$_1$(<ನೀರ್) + ತೊಟ್ಟಿ$_2$]

**ನೀರುದಂಟು** (ನಾ). ಒಂದು ಬಗೆಯ ಸಸ್ಯ : ನೀರುಹಾವುಗಿಡ, ನೀರುದಂಟು (ಮೈಔಗಿ. ೪೮-೯೫೦). [ನೀರು$_1$(<ನೀರ್) + ದಂಟು]

**ನೀರುದಗೆ** (ನಾ). ಬಾಯಾರಿಕೆ ; ದಾಹ : (ಕ).

[ನೀರು$_1$(<ನೀರ್) + ದಗೆ$_1$]

**ನೀರುದಲೆಯ** (ನಾ). ತಲೆಯಿಂದ ನೀರು ಒಸರುವ ಒಂದು ಬಗೆಯ ಬಿಳಿಯ ಇರುವೆ ; ಗೆದ್ದಲು ; ಗೊರಲೆ : ನೀರುದಲೆಯನ ಮನೆಯಲಿರುವನಯೇರಿದನ ಸತಿಯನುಜೆಯಪ್ಪನ ಸಾರಿ ಬದುಕಿದನ (ಮಡಿಕ್ಯಾ. V. ೧೧೬೭ ; ಬಸವೇಶ್ವರನ ಪಂಚಸ್ತೋತ್ರ).

[ನೀರು$_1$(<ನೀರ್) + ತಲೆ$_1$ + -ಅ$_7$]

**ನೀರುದಾರಿ** 'ನೀರ್ದಾರಿ' ನೋ.

**ನೀರುದಾಳಿ** (ನಾ). ಒಂದು ಬಗೆಯ ಸಸ್ಯ : "ಕೀಟಘ್ನಃ—ಗಂಧಕ, ನೀರುದಾಳಿ, ವಿಳಂಗ" (ಔಷಧಿ. ೩೪). [ನೀರು$_1$(<ನೀರ್) + ದಾಳಿ?]

**ನೀರುದುರೆ** (ನಾ). ಒಂದು ಬಗೆಯ ಸಸ್ಯ : ಉಱೀ, ಬೆಳುದುರೆ, ನೀರುದುರೆ (ಮೈಔಗಿ. ೩೨-೬೧೦). [ನೀರು$_1$(<ನೀರ್) + ಉದುರೆ$_2$]

**ನೀರುದೆಗೆ** 'ನೀರ್ದೆಗೆ' ನೋ.

**ನೀರುದೊಣೆ** 'ನೀರ್ದೊಣೆ' ನೋ.

**ನೀರುದೋಷ** (ನಾ). ನೀರಿನ ಕಲ್ಮಷದಿಂದುಂಟಾದ ಒಂದು ಬಗೆಯ ರೋಗ (?) : ನೆಲಾವರೆಯ ಸಮೂಲ . . . ಬೇಸಿಸೊಪ್ಪು, ಆ ಬೇರು, ಇವಂ ಚೂರ್ಣವಂ ಮಾಡಿ ಊಟವಾದ ಮೇಲೆ ರಾತ್ರಿಯಲ್ಲಿ ಕೊಂಬುದು. ಮಲಶುದ್ಧಿಯಹುದು. ನೀರುದೋಷ ಕೆಡುಗುಂ (ವಿವೈವಿ. ೧೪೭). [ನೀರು$_1$(<ನೀರ್) + ದೋಷ]

**ನೀರುನವಿಲು** (ನಾ). ನೀರಿನಲ್ಲಿ ವಾಸಿಸುವ ಒಂದು ಬಗೆಯ ಪಕ್ಷಿ : ನೀರುನವಿಲುಗಳು ನೋಡಲು ನೀರುಕಾಗೆಗಳಂತಿದ್ದರೂ ಅವು ಪ್ರತ್ಯೇಕ ಪಕ್ಷಿಕುಟುಂಬ (ಪಕ್ಷಿ. ೧೦೧).

[ನೀರು$_1$(<ನೀರ್) + ನವಿಲು(<ನವಿಲ್)]

**ನೀರುನಾಯಿ** (ನಾ). ನಾಯಿಯಂತೆ ಇರುವ ಒಂದು ಬಗೆಯ ಜಲಚರ ಪ್ರಾಣಿ : ಆ ಸದ್ದಿಗೋ ಏನೋ, ಎರಡು ನೀರುನಾಯಿಗಳು ಅವಸರದಿಂದ ಈಜಿ, ಹತ್ತಿರದ ಮುಂಡಕನ ಹಳುವನ್ನು ಹೊಕ್ಕುವು (ಸ್ವಪ್ನಹೊ. ೨೬). [ನೀರು$_1$(<ನೀರ್) + ನಾಯಿ(<ನಾಯ್)]

**ನೀರುನಿಲ್ಲು** 'ನೀರ್ನಿಲ್' ನೋ.

**ನೀರುನೆತ್ತಿ** (ನಾ). ಬಿದ್ದ ಮಳೆಯ ನೀರನ್ನು ಬೇರೆ ಬೇರೆ ನದಿ, ಸಮುದ್ರ ಮೊದಲಾದ ಪಾತ್ರಗಳಿಗೆ ಹರಿಯುವಂತೆ ಪ್ರತ್ಯೇಕಿಸುವ ನೆಲದ ಉಬ್ಬುಪ್ರದೇಶ; ಜಲವಿಭಾಜಕ ಸ್ಥಳ; ಇಳಿಮೋಡು : (ಕಿಸಂಗ್ಲಾ. ೧೩೧). [ನೀರು$_1$(<ನೀರ್) + ನೆತ್ತಿ]

**ನೀರುನೇರಳೆಗಿಡ** (ನಾ). ಒಂದು ಬಗೆಯ ನೇರಳೆ ಗಿಡ: ಸೀತಾರಾಮ ನೀರುನೇರಳೆಗಿಡದ ಕಡ್ಡಿಯೊಂದನ್ನು ಮುರಿದು ಹಲ್ಲಿಂದ ಕಚ್ಚಿ . . . ಹಲ್ಲುಜ್ಜುವ ವಿಧಾನ ಗೆಳೆಯನಿಗೆ ತೋರಿಸಿಕೊಟ್ಟ (ಚಿಗುಕ. ೭೦).
[ನೀರು$_1$(<ನೀರ್) + ನೇರಳೆ(<ನೇಱಲ್) + ಗಿಡ(<ಗಿಡು)]

**ನೀರುಪಕ್ಷಿ** (ನಾ). ನೀರಿನಲ್ಲಿ ವಾಸಿಸುವ ಹಕ್ಕಿ ; ಜಲಪಕ್ಷಿ : ನೀರುಪಕ್ಷಿಗಳು ಜಟಿಲವಾದ ಗೂಡು ಕಟ್ಟುವುದಿಲ್ಲ (ಪಕ್ಷಿ. ೪೮).
[ನೀರು$_1$(<ನೀರ್)+ಪಕ್ಷಿ]

**ನೀರುಪಲಸು,** ನೀರುಹಲಸು (ನಾ). ಒಂದು ಬಗೆಯ ಹಲಸಿನ ಮರ ಮತ್ತು ಅದರ ಕಾಯಿ : ಹಳೆಯಕ್ಕಿಗಚ್ಚಿನೊಳು ನೀರುಪಲಸಿನ ಕಾಯ ಕಳಿಯ ಬೇಯಿಸಿ ಬಸಿದು ಕದುಕಿಱಿದು . . . ತುಪ್ಪವನೆಱೆದು ಬೇಯಿಸಲು ಭಕ್ತಫಲನೀರಪನಸವುದಾಡುದು (ಸೂಪಶಾ. ೫-೫೮). **ನೀರುಹಲಸು:** "ನಿಚುಳಃ, ಅಂಬುಜಃ, ಇಜ್ಜಲಃ—೩ ಗನ್ನೇರಳೆಗಿಡದ ಹೆಸರುಗಳು. ಇದನ್ನು ನೀರುಹಲಸಿನ ಗಿಡವೆನ್ನುವರು" (ಸಿದ್ಧಾಂತಿ. ೧೨೫) ; ನೀರುಹಲಸಿನ ತೊಳೆ, ಹಲಸು . . . ಇವುಗಳನ್ನು ನೆರೆಹೊರೆಯವರಿಗೂ ಹಂಚಿ ಅದರ ಉಪಯೋಗಕ್ರಮವನ್ನೂ ಅವರಿಗೆ ತಿಳಿಸಿದರು (ಮಲೆಮಂ. ೯೫). [ನೀರು$_1$(<ನೀರ್)+ಪಲಸು]

**ನೀರುಪಾರಿವಪಕ್ಷಿ** (ನಾ). ಒಂದು ಬಗೆಯ ನೀರುಹಕ್ಕಿ : "ಜಲಕಪೋತಃ—ನೀರುಪಾರಿವಪಕ್ಷಿ" (ಓಷಧಿ. ೬೧).
[ನೀರು$_1$(<ನೀರ್) + ಪಾರಿವ$_1$ + ಪಕ್ಷಿ]

**ನೀರುಪುಚ್ಚಿಕಾಯಿ** (ನಾ). ಒಂದು ಬಗೆಯ ಕಾಯಿ (?) : ಬಲಗಡೆಗೆ ನಾಲ್ಕೈದು ನೀರುಪುಚ್ಚೀಕಾಯಿ ಗಿಡಗಳು (ದೆಯ್ಯಮು. ೧೨).
[ನೀರು$_1$(<ನೀರ್) + ಪುಚ್ಚಿ?+ಕಾಯಿ$_4$(<ಕಾಯ್$_4$)]

**ನೀರುಪುಳ್ಳಂಪುರಚಿಎಲೆಗಿಡ** (ನಾ). ಒಂದು ಬಗೆಯ ಸಸ್ಯ : ಚಕ್ಲೀತಾ ಸೊಪ್ಪು, ನೀರುಪುಳ್ಳಂಪುರಚಿ ಎಲೆಗಿಡ (ಮೈಔಗಿ. ೧೧-೧೯೭)
[ನೀರು$_1$(<ನೀರ್)+ಪುಳ್ಳಂಪುರಚಿ(<ಪುಳ್ಳು ಂಪುಣಿಸೆ) + ಎಲೆ$_1$ + ಗಿಡ(<ಗಿಡು)]

**ನೀರುಪ್ಪಿಗಿಡ** (ನಾ). ಒಂದು ಬಗೆಯ ಮುಳ್ಳುಗಿಡ ; ಇಕ್ಷುರ ; ಗೊಳಗೊಳಕೆ : ನೀರುಪ್ಪಿಗಿಡ, ಮುಳ್ಳುಅಂಕೋಲೆ, ಗೋರಿವಿಡಿ, ಕೊಳವಳಿಕೆ (ಮೈಔಗಿ. ೧೧-೧೯೭).
[ನೀರು$_1$(<ನೀರ್)+ಉಪ್ಪಿ + ಗಿಡ(<ಗಿಡು)]

**ನೀರುಪ್ಪು** (ನಾ). ೧. ನೀರಿನಿಂದ ತಯಾರಿಸಿದ ಉಪ್ಪು; ಕಡಲುಪ್ಪು ; ಅಡಿಗೆ ಉಪ್ಪು : ನಾರು ಬಲಿಯದ ಹೀರೆ ಎಳೆಗಾಯ್ಗಳಂ ತಂದು . . . ಕತ್ತರಿಸಿ ತುಪ್ಪ ನೀರುಪ್ಪು ನೀರುಳ್ಳಿ ಶುಂಠಿಗಳನಿಕ್ಕಿ (ಸೂಪಶಾ. ೫-೬). **೨.** ಉಪ್ಪು ಕದಡಿದ ನೀರು ; ಉಪ್ಪುನೀರು : ನೀರುಪ್ಪಿನಲಿ ಕಲಸಿದುವು ಲವಣೋದಕಿಯೆನಿಕ್ಕು (ಮಂಗರಾ. ೬೪-೩). **೩.** "ಉಪ್ಪಿನ ಕಾಯಿ" (ಸೀತಿಮಂ. ಟಿಪ್ಪಣಿ) : ಬಡತನದಿಂ . . . ಬಾಳ್ವಿಂ ಪರಗೃಹದಡುಗೂಳ್ ನೀರುಪ್ಪುಗಳ್ಗೆ ಲಯಮುಂ ಮಾಳ್ಪಿಂ (ಸೀತಿಮಂ. ೨-೩೬೦). 'ಕಲ್ಲುಪ್ಪು' ಪರಾ. [ನೀರ್+ಉಪ್ಪು$_1$]

**ನೀರುಬಲ್ಲೆ,** ನೀರುಬಿಲ್ಲೆ (ನಾ). ಒಂದು ಬಗೆಯ ರೋಗ (?) : ಇದ ಮೇಹಗಡಣ, ಜಲಗರ, ನೀರುಬಲ್ಲೆಯವರಿಗೆ ಮೂಱು ಹುಣಸೇಬೀಜದಷ್ಟು ಕೊಟ್ಟು ಮಧುರ ಆಹಾರವಿಕ್ಕಲು ಬಲ್ಲೆ ಮಲದೊಳಗೆ ಬೀಳುವುದು (ವೈವಿ. ೧೬೨). **ನೀರುಬಿಲ್ಲೆ :** ವಂಗದೇಶದಲ್ಲಿ ನೀರುಬಿಲ್ಲೆ, ಸಂಧಿವಾತ ಮತ್ತು ಕನ್ಯೆ ಇವಕ್ಕಾಗಿ ಸಹಸಾ ಹುಡುಕಬೇಕಾಗಿಯೇ ಇಲ್ಲ (ಇಪ್ಪಕ. ೪೨೯). [ನೀರು$_1$(<ನೀರ್)+ಬಲ್ಲೆ?]

**ನೀರುಬಳ್ಳಿ** (ನಾ). ಒಂದು ಬಗೆಯ ಸಸ್ಯ : "ಗುಲ್ಮಿನೀ—ಹರೇಣುಕ, ನೀರುಬಳ್ಳಿ" (ಓಷಧಿ. ೪೯). [ನೀರು$_1$(<ನೀರ್) + ಬಳ್ಳಿ]

**ನೀರುಬಳ್ಳೆ,** ನೀರಬಳ್ಳೆ (ನಾ). ಒಂದು ಬಗೆಯ ಗಿಡ : "ಕಪಿಲ್ಲೆಕರಃ—ನೀರುಬಳ್ಳೆ" (ಓಷಧಿ. ೨೭). **ನೀರಬಳ್ಳೆ :** "ಕಾಕನಾಳಃ—ನೀರಬಳ್ಳೆ" (ಓಷಧಿ. ೩೦). [ನೀರು$_1$(<ನೀರ್)+ಬಳ್ಳೆ$_1$]

**ನೀರುಬಿಡು** 'ನೀರ್ಬಿಡು' ನೋ.

**ನೀರುಬಿಲ್ಲೆ** 'ನೀರುಬಲ್ಲೆ' ನೋ.

**ನೀರುಬಿಳಿಗಡ್ಡೆಹಂಬು** (ನಾ). ಒಂದು ಬಗೆಯ ಬಳ್ಳಿ : ನೀರುಬಿಳಿಗಡ್ಡೆ ಹಂಬು, ಬಿಳೀಹಂಬು (ಮೈಔಗಿ. ೪೬-೯೧೪).
[ನೀರು$_1$(<ನೀರ್)+ಬಿಳಿಗಡ್ಡೆ$_0$+ಹಂಬು$_2$(<ಪರಪು$_2$)]

**ನೀರುಬೆಕ್ಕು** (ನಾ). ನೀರಿನಲ್ಲಿ ವಾಸಿಸುವ ಒಂದು ಬಗೆಯ ಪ್ರಾಣಿ : "ಉದ್ರಃ—ನೀರುಬೆಕ್ಕು" (ಸಿದ್ಧಾಂತಿ. ೭೪).
[ನೀರು$_1$(<ನೀರ್) + ಬೆಕ್ಕು]

**ನೀರುಬೆಟ್ಟೆಬಳ್ಳಿ** (ನಾ). ಒಂದು ಬಗೆಯ ಬಳ್ಳಿ : (ಮೈಔಗಿ. ೭೦-೧೪೩೮). [ನೀರು$_1$(<ನೀರ್)+ಬೆಟ್ಟೆ?+ಬಳ್ಳಿ]

**ನೀರುಬೆರಸು** 'ನೀರ್ವೆರಸು' ನೋ.

**ನೀರುಬೇಳ** (ನಾ). ಒಂದು ಬಗೆಯ ಗಿಡ : "ಕಾಂಚನಃ–ನೀರುಬೇಳ" (ಓಷಧಿ.೨೯). [ನೀರು$_1$(<ನೀರ್) + ಬೇಳ$_0$]

**ನೀರುಬೊಕ್ಕೆ** (ನಾ). ನೀರು ತುಂಬಿರುವ ಬಿಲ,—ಡೊಗರು : ಕುಳೀರಃ, ಕರ್ಕಟಃ—೨ ಏಡೀ ಪೆಸರುಗಳು. ಅಂವರೆ ನೀರುಬೊಕ್ಕೆಗಳಲ್ಲಿರುವ ಏಡೀಕಾಯಿ, ನಳ್ಳಿಗಳು (ಸಿದ್ಧಾಂತಿ. ೮೩).
[ನೀರು$_1$(<ನೀರ್)+ಬೊಕ್ಕೆ$_2$]

**ನೀರುಬೋಗಡಬಂಟೆ** (ನಾ). ಒಂದು ಬಗೆಯ ಗಿಡ : ನೀರುಬೋಗದ ಬಂಟ, ನೀರ್ವಾಡಮಲ್ಲಿ (ಮೈಔಗಿ. ೪೦-೭೮೫).
[ನೀರು$_1$(<ನೀರ್)+?]

**ನೀರುಬ್ಬರ** (ನಾ). ನೀರಿನ ಚಿಲುಮೆ,—ಬುಗ್ಗೆ ; ಒರತೆ : "ಉತ್ಸಃ, ಪ್ರಸ್ರವಣಂ—೨ ಬೆಟ್ಟದಲ್ಲಿ ಹುಟ್ಟುವ ನೀರುಬ್ಬರ, ಬೆಟ್ಟಚಿಲಮೆ, ಬೆಟ್ಟಜೌಗು" (ಸಿದ್ಧಾಂತಿ.೧೦೭). [ನೀರು$_1$(<ನೀರ್)+ಉಬ್ಬರ(<ಉರ್ವರ)]

**ನೀರುಬ್ಬು** (ನಾ). ನೀರಿನ ಏರಿಕೆ,—ಉಕ್ಕು : ಮೆಱೆದುದಿದಿರಲಿ ನಿಖಿಳನದಿಗಳ ಮುಂಱುಕವನು ಮುಸುಳಿಸುವ ಮುಸಕದ ನಿಱಸಿನಲಿ ನೀರುಬ್ಬುಗಳ ನಿರ್ಘೋಷದಬ್ಬರದ ಬಿಱುಬು ತೆರೆಗಳ . . . ಫೇನಪಿಂಡದ ಗುಱುಬಿನಲಿ ಗಾಡಿಸಿತು ಗೋದಾವರಿ ಕಕುತ್ಸ್ಥಜನ (ತೊರರಾ. ೩-೧-೪೭). [ನೀರು$_1$(<ನೀರ್)+ಉಬ್ಬು$_2$(<ಉರ್ಬು$_2$)]

**ನೀರುಬ್ರಹ್ಮಿ** (ನಾ). ಕೆರೆ ಮುಂತಾದುವುಗಳ ದಡದಲ್ಲಿ ಬೆಳೆಯುವ ಒಂದು ಬಗೆಯ ಸಸ್ಯ : (೬).
[ನೀರು$_1$(<ನೀರ್) + ಬ್ರಹ್ಮಿ$_1$]

**ನೀರುಬ್ರಾಹ್ಮಿ** (ನಾ). = ನೀರುಬ್ರಹ್ಮಿ : (ಮೈಔಗಿ. ೧೧-೧೪೯).
[ನೀರು$_1$(<ನೀರ್)+ಬ್ರಾಹ್ಮಿ]

**ನೀರುಮಂಜಿ** 'ನೀರುವಂಜಿ' ನೋ.

**ನೀರುಮಜ್ಜಿಗೆ** 'ನೀರ್ಮಜ್ಜಿಗೆ' ನೋ.

**ನೀರುಮಣ್ಣು** 'ನೀರ್ಮಣ್' ನೋ.

**ನೀರುಮತ್ತಿ** (ನಾ). ಒಂದು ಬಗೆಯ ನುತ್ತಿಮರ : "ಕಾಳಂದಿನೀ—ನೀರುಮತ್ತಿ" (ಓಷಧಿ. ೨೮).
[ನೀರು$_1$(<ನೀರ್) + ಮತ್ತಿ$_1$(<ಮಱ್ಱಿ$_2$)]

**ನೀರುವಮನೆ** 'ನೀರ್ವನೆ' ನೋ.

**ನೀರುವಮಳೆ** 'ನೀರ್ಮಳೆ' ನೋ.

**ನೀರುವಮಾವಿನ ಕಾಯಿ** (ನಾ). ಮಾವಿನಕಾಯಿಯಿಂದ ತಯಾರಿಸುವ ಒಂದು ಬಗೆಯ ಉಪ್ಪಿನ ಕಾಯಿ : ನೀರುಮಾವಿನ ಕಾಯಿ (ಮಿಡಿಉಪ್ಪಿನ ಕಾಯಿ), ನೀರುಹಲಸಿನ ತೊಳೆ . . . ಹಪ್ಪಳಗಳು, ಇವುಗಳನ್ನು ನೆರೆಹೊರೆಯವರಿಗೂ ಹಂಚಿ ಅದರ ಉಪಯೋಗಕ್ರಮವನ್ನೂ ಅವರಿಗೆ ತಿಳಿಸಿದರು (ಪುಳಿಸಂ. ೯೫).
[ನೀರು$_1$(<ನೀರ್) + ಮಾವಿನ ಕಾಯಿ]

**ನೀರುವಿಷಾ** 'ನೀರ್ವಿಷಾ' ನೋ.

**ನೀರುವಮುಟ್ಟು** 'ನೀರ್ಮುಟ್ಟು' ನೋ.

**ನೀರುವೊಗೆ** 'ನೀರ್ಮೊಗೆ' ನೋ.

**ನೀರುರುಳಿ** (ನಾ). ನೀರಿನ ಗುಳ್ಳೆ; ಬುದ್ಬುದ: ತೆರೆಯಿವು ನೀರ್ವಾವಿವು ಸಲಿಲದ ಸುದಕರಿಯಿವು ಜಲಗೊಳ್ವ ಮುಗಿಲಿವು ನೊರೆಯಿವು ಶಂಕಿವು ಮುತ್ತಿವು ಸಿಡಿದ ನೀರುರುಳಿಯೆಂದಱಿವರಿಗರಿದವು (ಶೂಬಸೋ. ೧೫-೩೧).
[ನೀರ್ + ಉರುಳಿ$_1$]

**ನೀರುಲಿ** (ನಾ). ನೀರಿನ ಶಬ್ದ,—ಮೊರೆತ : ಶಂಕರ ಜಟಾಜೂಟವಿಗಳಿತೆಯು, ನೀರುಲಿಯು ನೊರೆನಗೆಯು ಜಡೆವೊನಲ ತೆರೆನಡೆಯು . . . ಜಹ್ನುಜಾತೆಯುಂ ದರ್ಶಿಸಿದೊಡನೆ (ಶ್ರೀರಾಪ್ರಾ. ೯೭-೫೧೯).
[ನೀರ್ + ಉಲಿ$_2$]

**ನೀರುವಂಜಿ,** ನೀರಂಜಿ, ನೀರವಂಜಿ, ನೀರುಮಂಜಿ (ನಾ). ೧. ಒಂದು ಬಗೆಯ ಸೆಣಬಿನ ಗಿಡ : "ಅಂಬುಪ್ರಿಯ—ನೀರುವಂಜಿ" (ಅಕಾಸಿ. ೧-೧೬). **ನೀರಂಜಿ :** ೧. ನೀರವಂಜಿ, ನೀರಂಜಿ, ಹೊಳೆಬೋಸಿ (ಮೈಔಗಿ. ೬೭-೧೩೭೬) ; ಸೀತೆ, ಭಾವಿಯ ಬಳಿಯ ನೀರಂಜೀಪೊದೆಯ ಮರೆಯಲ್ಲಿ ನಿಂತಳು(ಅಪತಂ.೧೬೬). **೨.** ಒಂದು ಬಗೆಯ ಮರ: ಆಟಗಳಲ್ಲೆಲ್ಲ ಕಲಾತ್ಮಕವೂ ಜನಪ್ರಿಯವೂ ಆದುದೆಂದರೆ ಕೋಲಾಟವೇ ಆಗಿದೆ . . . ಕೋಲುಗಳನ್ನು ನೀರಂಜಿ ಮರದಿಂದ ಮಾಡಿರುತ್ತಾರೆ (ಕವಿಕೋ. I, ೭೧೬). **ನೀರವಂಜಿ :** ೧. ನೀರವಂಜಿ, ನೀರಂಜಿ, ಹೊಳೆಬೋಸಿ (ಮೈಔಗಿ. ೬೭-೧೩೭೬) ; ನೀರವಂಜಿ, ಸೊಂಟಿ, ಅರಿಸಿನ (ನಮ್ಮನು. ೨೩೮). **ನೀರುಮಂಜಿ :** ೧. "ನಾದೇಯಂ—ಸೈಂಧವ, ನೀಲಾಂಜನ, ನೀರುಮಂಜಿ" (ಓಷಧಿ. ೮೫).
[ನೀರು$_1$(<ನೀರ್) + ಮಂಜಿ$_2$]

**ನೀರುವಂಜಿನಾರು** (ನಾ). ನೀರುವಂಜಿ ಗಿಡದ ನಾರು,—ಹುರಿ : ಗಂಟುಭಾರಂಗಿ . . . ಕರ್ಕಾಟಕಶೃಂಗಿ, ನೀರುವಂಜಿನಾರು, ಅಮೃತಬಳ್ಳಿ ಇವನ್ನು ಬಿಸಿ ಮಾಡಬೇಕು (ಸಕವೈ. ಪರಿ. ೪೪೬).
[ನೀರುವಂಜಿ + ನಾರು$_3$(<ನಾರ್)]

**ನೀರುವಕ್ಕಿ** 'ನೀರ್ವಕ್ಕಿ' ನೋ.

**ನೀರುವಕ್ಕೆ** (ನಾ). ನೀರಿನ ಆಶ್ರಯಸ್ಥಾನ; ಜಲಾಶಯ (?) : ಆ ಹೊಸಗೆಱೆಯ ಬಡಗಣ ಕೋಡಿಯಿಂದಂ ಮೂಡ ಹೋದ ನೀರುವಕ್ಕೆಯಿಂದಂ ಅಯ್ಯನಕಟ್ಟದ ತಾಯ್ವಳ್ಳದಿಂದಂ ತೆಂಕಲಾದುದೆಲ್ಲವಿನಿತುಂ ಪರಮಂಗೆ ಸೀಮೆಯಾಗಿ ಬಿಟ್ಟ ದತ್ತಿ (ಎಕ. II, ೬೩-೪೬ ; 1118).
[ನೀರು$_1$(<ನೀರ್) + ಪಕ್ಕೆ$_1$(<ಪಱ್ಕೆ)]

**ನೀರುವಡೆ** (ನಾ). ನೀರಿನ ಮೇಲೆ ಹಾಕುವ ಒಂದು ಬಗೆಯ ತೆರಿಗೆ (?) : ಆ ಗ್ರಾಮುಕ್ಕೆ ವಳಿಯ ಶಾಸನವ ನೆಡಿಸಿ ಕೊಟ್ಟೆವಾಗಿ ನೀರುವಡೆ ಕಾಲುವಡೆ ಸ್ಥಾನಮಾನ್ಯ ಪೂರ್ವ್ವಮರಿಯಾದೆಯೆಂದು ಕೊಟ್ಟ ಶಿಲಾಶಾಸನ (ಎಕ. XIV, ಗುಂಡ್ಲುಪೇ. ೧೩೨-೧೮ ; 1540). 'ಕಾಲುವಡೆ' ಪರಾ. [ ? ]

**ನೀರುವರಿ$_1$** 'ನೀರ್ವರಿ' ನೋ.

**ನೀರುವರಿ$_2$** (ನಾ). ನೀರಿನ ಮೇಲಿನ ತೆರಿಗೆ,—ಸುಂಕ. 'ನೀರಾಣೆವರಿ' ಪರಾ. [ನೀರು$_1$(<ನೀರ್) + ವರಿ$_1$]

**ನೀರುವಲೆ** 'ನೀರ್ವಲೆ' ನೋ.

**ನೀರುವಳಿ** (ನಾ). ನೀರಾವರಿ ಇರುವ ಪ್ರದೇಶ (?) : ಹಲ್ದುಣಿಯ ಊರ ಮುಂದಣ ಬ್ರಹ್ಮದೇವನ ಕೆಱೆಯುಂ ಅಲ್ಲಿಂ ಬಡಗಣ ಹಳ್ಳದ ಕಾಲ್ವೆಯುಂ ಅಂತೆರಡಱ ನೀರುವಳಿಯಿಂ ಬೆಳೆವ ಭೂಮಿ ಏನಿತುಂಟನಿತುಮಂ ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಸೌಇಇ. IX-i, ೨೫೦-೫೫ ; 1148) ; ಹಾಸನದ ಸೀಮೆಯೊಳಗಣ ಸೆಟ್ಟಿಹಳ್ಳಿಗೆ ಸಲುವಂಥಾ ಚತುಸ್ಸೀಮೆಯೊಳಗಾದ ಗದ್ದೆ ಬೆದ್ದಲು ಕಟ್ಟೆ ಕಾಲುವೆ ಅಣೆ ಅಚ್ಚುಕಟ್ಟು ಹೊಲ ಮೇರೆ ನೀರುವಳಿ ಇವೆಲ್ಲಂ ಒಳಗಾಗಿ (ಎಕ. V, ಹಾಸನ. ೨-೧೭ ; 1563). [ನೀರು$_1$(<ನೀರ್) + ಬಳಿ$_3$(<ಬೞಿ$_3$)]

**ನೀರುವಱಗೋಲ್** (ನಾ). ನೀರನ್ನು ದಾಟುವ ಸಾಧನ; ದೋಣಿ; ಹರಿಗೋಲು : "ಅರಿತ್ರಮೆನೆ ನೀರುವಱಗೋಲಕ್ಕು [ಪಾಠಾಂ. ನೀರಹಱಗೋಲಕ್ಕು, ನೀರುವಜಗೋಲಕ್ಕು]" (ಮಂಗರಾ. ೧೨೩-೧೩). [ನೀರು$_1$(<ನೀರ್) + ಪಱಗೋಲ್ (<ಪಱುಗೋಲ್)]

**ನೀರುವಾಟೆ** (ನಾ). ಬಿದಿರಿನ ಜಾತಿಯ ಒಂದು ಗಿಡ : ಚಕ್ರಾಣಿಕೆ, ನೀರುವಾಟೆ (ಮೈಔಗಿ. ೫-೧೩೦). [ನೀರು$_1$ (<ನೀರ್) + ವಾಟೆ]

**ನೀರುವಾವು** 'ನೀರ್ವಾವು' ನೋ.

**ನೀರುವ್ಯಾಧಿ** (ನಾ). ನೀರಿನಿಂದ ಉಂಟಾಗುವ ಒಂದು ಬಗೆಯ ವ್ಯಾಧಿ (?) : ಕಾಡುನುಗ್ಗೆ ಅರಳಿಸಿಪ್ಪೆ . . . ಸೀಗೆರಸ, ಇವ ಮರ್ದಿಸಿ ಕೊಳ್ಳೆ ನೀರುವ್ಯಾಧಿ ಮಾಣ್ಗುಂ (ವಿವೈವಿ. ೧೭೭).
[ನೀರು$_1$ (<ನೀರ್) + ವ್ಯಾಧಿ]

**ನೀರುಸಂಬರೇಣುಎಲೆ** (ನಾ). ಒಂದು ಬಗೆಯ ಎಲೆ : ನೀರುಸಂಬರೇಣುಎಲೆಯನ್ನು ಬಿಸಿ ಮಾಡಿ ತೆಗೆದ ರಸ ೩ ದುಡ್ಡು ತೂಕ, ಹರಳೆಣ್ಣೆ ೨ ದುಡ್ಡು ತೂಕ . . . ಇವನ್ನರೆದು ಕುಡಿಯಲು ಮೂತ್ರಕೃಚ್ಛ್ರ ಪರಿಹಾರವಾಗುವುದು (ಸಕವೈ. ೫೧೫).
[ನೀರು$_1$ (<ನೀರ್) + ಸಂಬರೇಣು$_0$ + ಎಲೆ$_1$]

**ನೀರುಸಜ್ಜೆಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೈಔಗಿ. ೫-೭೬).
[ನೀರು$_1$ (<ನೀರ್) + ಸಜ್ಜೆ$_1$(<ಸೆಜ್ಜೆ$_1$) + ಹುಲ್ಲು (<ಪುಲ್)]

**ನೀರುಸಣ್ಣೆಸೊಪ್ಪು** (ನಾ). ಒಂದು ಬಗೆಯ ಸೊಪ್ಪು : ನೀರುಕಣಿಗಲು, ತಕ್ತರೋಹಿತ, ನೀರುಸಣ್ಣೆಸೊಪ್ಪು (ಮೈಔಗಿ. ೬೩-೧೨೯೧).
[ನೀರು$_1$ (<ನೀರ್) + ಸಣ್ಣೆ + ಸೊಪ್ಪು$_2$]

**ನೀರುಸಬ್ಬಸಿಗೆಹುಲ್ಲು** (ನಾ). ಒಂದು ಬಗೆಯ ಹುಲ್ಲು : ನೀರುಸಬ್ಬಸಿಗೆಹುಲ್ಲು, ಕಾಡುಸಬ್ಬಸಿಗೆಹುಲ್ಲು (ಮೈಔಗಿ. ೩೭-೬೩೩).
[ನೀರು$_1$(<ನೀರ್) + ಸಬ್ಬಸಿಗೆ + ಹುಲ್ಲು(<ಪುಲ್)]

**ನೀರುಸಲ್ಲೆ** (ನಾ). ಒಂದು ಬಗೆಯ ಸಸ್ಯ : ಬಾನಾವರ, ನೀರುಸಲ್ಲೆ, ಹನಕೆ (ಮೈಔಗಿ. ೩೯-೭೭೫). [ನೀರು$_1$ (<ನೀರ್) + ಸಲ್ಲೆ ?]

**ನೀರುಸಿರಿ** (ನಾ). ನೀರಿನಲ್ಲಿ ಉಸಿರಾಡುವ ಜೀವಿ ; ಜಲಚರ : ಬೀಸುತೆ ಪುರಿನೇಣ್ ಪೆಣೆದಾ ಬಲೆಯನ್ . . . ಪಿಡಿವನ್ ಬಯಲಾಕೂರುಸಿರಿಗಳನ್, ಮೇಣ್ ಕಡಲಾಟದ ನೀರುಸಿರಿಗಳನ್ (ಅಂತಿಗೊ. ೧೬-೩೨೪) ; ಕಡಲ ನೀರ್ಉಸಿರಿಗಳ್ಗೆರೆಯಾಗಿ ಎಸೆದು ಬಿಡು ಎನ್ನನ್ (ಬದ್ದಪ್ರ. ೩೦-೬೫೬). [ನೀರ್ + ಉಸಿರಿ]

**ನೀರುಸೀನಿನ ಗಿಡ** (ನಾ). ಒಂದು ಬಗೆಯ ಗಿಡ; "ಭಾಜೀ" (ಪಂಡಿತ. ೨೪೨): (ಕಿ). [ನೀರು$_1$ (<ನೀರ್) + ? + ಗಿಡ (<ಗಿಡು)]

**ನೀರುಸುಳಿ** 'ನೀರ್ಸುಳಿ' ನೋ.

**ನೀರುಹಂದಿ** (ನಾ). ಒಂದು ಬಗೆಯ ನೀರುಪ್ರಾಣಿ : "ಶಂಕುಃ— ನೀರುಹಂದಿ" (ಸಿದ್ಧಾಂತಿ. ೮೩).
[ನೀರು$_1$ (<ನೀರ್) + ಹಂದಿ (<ಪಂದಿ)]

**ನೀರುಹಂಬು** (ನಾ). = ನೀರುಹಬ್ಬೆ : ನಾದೇಯಿ, ನೀರುಹಬ್ಬೆ, ನೀರುಹಂಬು, ಪರಿವ್ಯಾಧ (ಸಸ್ಯನಿ. ೨೬).
[ನೀರು$_1$ (<ನೀರ್) + ಹಂಬು$_2$(<ಪರಪು$_2$)]

**ನೀರುಹಕ್ಕಿ** 'ನೀರ್ವಕ್ಕಿ' ನೋ.

**ನೀರುಹಚ್ಚೆ** (ನಾ). ಒಂದು ಬಗೆಯ ಬಿದಿರು : ವಿದುಲ=ನೀರುಹಚ್ಚೆ (ವಿವೈವಿ. ೫೯). 'ನೀರುಹಬ್ಬೆ' ಪರಾ.
[ನೀರು$_1$ (<ನೀರ್) + ಹಚ್ಚೆ$_2$]

**ನೀರುಹನಿ** 'ನೀರ್ವನಿ' ನೋ.

**ನೀರುಹಬ್ಬೆ,** ನೀರಹಬ್ಬೆ (ನಾ). ಬಿದಿರಿನ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ : "ಪರಿವ್ಯಾಧಃ, ವಿದುಲಃ, ನಾದೇಯಿ, ಅಂಬುವೇತಸಃ— ಳ ನೀರು ಹಬ್ಬೇಗಿಡ" (ಸಿದ್ಧಾಂತಿ. ೧೧೪); ನೀರುಹಬ್ಬೆಯನ್ನು ಹಾಲಿನೊಡನೆ ಅರೆದು ಕುಡಿಯಲು ಕಲ್ಲು ಬೀಳುವುದು (ಸಕವೈ. ಪರಿ. ೪೯೬); ಹಬ್ಬೆ, ನೀರುಹಬ್ಬೆ, ನುಗ್ಗೆ ಮೊದಲಾದ ಪುಷ್ಪಫಲಭರಿತವಾದ ವೃಕ್ಷಂಗಳು (ಕೃಪಾಅ. ೨೨೪). **ನೀರಹಬ್ಬೆ** : "ನಾರಂಗ—ನೀರಹಬ್ಬೆ, ಕೊಳವಳಿಕೆ, ನೀರುಮಂಜಿ" (ಔಷಧಿ. ೮೫); ಎಲೈ ಮಿತ್ರನೆ, ನೀರಹಬ್ಬೆಗಿಡ ಬಾಗಿರುವುದು ತನ್ನ ಪ್ರಭಾವದಿಂದಲೋ ಅಥವಾ ನದೀವೇಗದ ಪ್ರಭಾವದಿಂದಲೋ ? (ಶಾಕುಂತ. ೨೦-೨೪). 'ನೀರ್ಬೆತ್ತ' ಪರಾ. [ನೀರು$_1$ (<ನೀರ್) + ಹಬ್ಬೆ$_1$]

**ನೀರುಹಲಸು** 'ನೀರುಪಲಸು' ನೋ.

**ನೀರುಹಾದಿ** (ನಾ). ೧. "ತೊರೆ ; ನೀರುಹಾದಿ ; ನಾಲೆ ; ಕೊರಕಲು" (Nallah. ೫೦೫೧). ೨. (ಹಡಗು ಮುಂತಾದುವುಗಳು) ನೀರಿನ ಮೇಲೆ ಪ್ರಯಾಣ ಮಾಡುವ ಮಾರ್ಗ ; ಜಲಮಾರ್ಗ : ನೀರುಹಾದಿಯ ಪ್ರಯಾಣಕ್ಕೆ ವಾಯುಮಾರ್ಗಕ್ಕಿಂತ ಹೆಚ್ಚು ಕಾಲ ಬೇಕು (ರೂಢಿ). [ನೀರು$_1$(<ನೀರ್)+ಹಾದಿ(<ಪಾದಿ$_1$)]

**ನೀರುಹಾಯಿಸು** (ಕ್ರಿ). ನೀರು ಬಿಡು ; ನೀರನ್ನು ಹರಿಸು : ಈ ಕೆಲಸವನ್ನು ಹಿಂದೆ ಹೇಳಿದಂತೆ ನೀರುಹಾಯಿಸುವ ಪ್ರದೇಶಗಳಲ್ಲಿ ಮಾಡಬೇಕಾದದ್ದು ಅತ್ಯಾವಶ್ಯಕ (ವ್ಯವಸು. ೬೩); ಬುದ್ಧಿವಂತ ಮನುಷ್ಯ ಕಾಲುವೆ ತೋಡಿ, ಗದ್ದೆ ತೋಟಗಳಿಗೆ ನೀರುಹಾಯಿಸಿ ಗಿಡಮರಗಳನ್ನು ಬೆಳೆಯಿಸುತ್ತಾ ಬಂದ (ನನಪಿ. ೪).
[ನೀರು$_1$ (<ನೀರ್) + ಹಾಯಿಸು (<ಪಾಯಿಸು)]

**ನೀರುಹಾವು** 'ನೀರ್ವಾವು' ನೋ.

**ನೀರುಹಾವುಗಿಡ** (ನಾ.) ಒಂದು ಬಗೆಯ ಸಸ್ಯ : ನೀರುಹಾವುಗಿಡ, ನೀರುದಂಟು (ವೈಡಿಗಿ. ೪೮-೯೫೦).
[ನೀರುಹಾವು? + ಗಿಡ (<ಗಿಡು)]

**ನೀರುಹಿಪ್ಪೆ** 'ನೀರಿಪ್ಪೆ' ನೋ.

**ನೀರುಹೊಗೆ** (ನಾ). ನೀರಿನಿಂದ ಮೇಲೇಳುವ ಉಗಿ,—ಹಬೆ : (ಶಿ).
[ನೀರು$_1$ (<ನೀರ್) + ಹೊಗೆ$_2$ (<ಪೊಗೆ$_2$)]

**ನೀರುಳ್ಳಿ** (ನಾ). ಒಂದು ಬಗೆಯ ತರಕಾರಿಗೆಡ್ಡೆ ; ಈರುಳ್ಳಿ : "ಲತಾರ್ಕಃ, ದುದ್ರುಮಃ – ಅದು ನೀರುಳ್ಳಿ" (ನಾಚಿರಾ. ೧೧೨); ಬೆಲ್ಲದ ನೀರೆಜೆಕಿದಡೇನು ಬೇವು ಸಿಹಿಯಪ್ಪುದೆ ಕಸ್ತುರಿಯ ಲೇಪವಿತ್ತಡೇನು ನೀರುಳ್ಳಿ[ಳ್ಳಿ]ಯ ದುರ್ಗಂಧ ದೂರಪ್ಪುದೆ (ಚನ್ನಪ. ಕ. ೫೪-೧೧೭); ನೀರುಳ್ಳಿಯ ಗಡ್ಡೆಯಂ ಮನದೊಳಟ್ಟಿಯೊಳಾವಗಮೊಂದು ತಟಿಕ್ಕೆಯಂ ಚೆಲ್ಲಿಸಿ ಜಾಜಿಯಂ ಕಲಸಿ ಮೆಲ್ಲದ ಮಾನವನೇನ ಬಲ್ಲವಂ (ಸೂಕ್ತಿಸು. ೧೧-೯೩); ಅಂಬೆಹಳದಿ ಕಾರ್ಗೆಣಸು ನೀರುಳ್ಳಿ ಕೊತ್ತುಂಬರಿ ಕರಿಬೇವು ಸಹಿತ ಸಿಂಬಿ ಕೂಗಲಿ ಪಿಪ್ಪಲಗಾಯ ಕೊಯ್ದರು (ಮೋಹತ. ೪-೬೦); ತುಳಸಿ ಸಾನ್ನಿಧ್ಯದಲಿ ನೀರುಳ್ಳಿಯನು ಹಾಕೆ ಹೊಲಸು ಹೋಗ್ವುದೆ ಹಲವು ಕಾಲಿದ್ದರೆ (ವಿವಾಕ್ಯ. ೧೪-೩); ನೀರುಳ್ಳಿಯವನ ಸಂಗಡ ಹೋರಾಟಕ್ಕೆ ಹೋದರೆ ಮೋರೆಯೆಲ್ಲ ನಾರದೆ ? (ಗಾದೆ). 'ಈರುಳ್ಳಿ' ಪರಾ.
[ನೀರ್+ಉಳ್ಳಿ$_1$. /ತಮಿ. ತುಳು. ನೀರುಳ್ಳಿ ; ತೆಲು. ನೀರುಲ್ಲಿ]

**ನೀರುಳ್ಳಿಗೆಡ್ಡೆ** (ನಾ). = ನೀರುಳ್ಳಿ : ನೀರುಳ್ಳಿಗೆಡ್ಡೆ ಒಣರೊಟ್ಟಿ ತಕ್ಕೊಂಡು ಹಳದಡೆ ಬಾಯಿ ಬಿಡುತಾನೆ (ನಾಪದ. ೧೩೭).
[ನೀರುಳ್ಳಿ + ಗೆಡ್ಡೆ (<ಗಡ್ಡೆ)]

**ನೀರೂಟ** (ನಾ). = ನೀರುಣಿಸು$_2$ : ಉಬಿಯ ಬಾಯ್ಗೆ ಪೊರಸಿ ಕಾಸಿ ನೀರೂಟಮಂ ಎಣ್ಣೆಯಲ್ಲಾದೊಡಂ ಮಜ್ಜಿಗೆಯಲ್ಲಾದೊಡಂ ಕುಡಲ್ ಆ ಉಳಿ ವಜ್ರದಂತೆ ಬಲ್ಪಾಗಿರ್ಪುದು (ಲೋಕೋಪ. ೫-೪೦ ೬೫); ಪಜಿದುಗುವ ರಸಾಸಾರಮೆ ಕೊಳಗೊಂಡೆಂದುಂ ನೀರೂಟಕ್ಕೆಳಸ ವಲ್ಲಿ ಕರ್ವಿನ ಕೆಯ್ಗಳ್ (ಚಂದ್ರಪು. ೧-೯೬); ತಮ್ಮೊಳ್ ಪಳಂಚಲೆವೊಳ್ಗೊಂಚಲ ಕಾಯೊಳುರ್ಕುವೆಳನೀರಿಂದಂ ಬನಂಗಳ್ಗೆ ಗುಂದಲೆ ನೀರೂಟ ವಿಂದೇಕೆ ಕೆಮ್ಮನೆ ತೊಟಿಲ್ವುತ್ತಿರ್ಪರಿಂತೆನ್ನುನೆಂದುಲಿವಂತಿರ್ಪುವು ಜಾಟಣಂಗಳ್ (ಪರ್ಷಪು. ೧-೪೩); ಅಲ್ಲಿಂದೊಸರ್ವ ರಸದ ಸಾರಪ್ರವಾಹಂಗಳಿಂದಂ ಬೆಳೆಗುಂ ನೀರೂಟಮುಂ ಪಾರದೆ ಕಬಿವೆಗಳ ಕ್ಷೇತ್ರಮೆಲ್ಲಂ (ಜಾಥಪು. ೧-೬೯). [ನೀರ್+ಊಟ]

**ನೀರೂಡಿಸು** (ಕ್ರಿ). ನೀರನ್ನು ಕುಡಿಸು,—ಉಣಿಸು: ಲೀಲೆಗಾಲಯುಮಾದ ಪುರದ ಪೊಜಗೆ ಬೀಡಂ ಬಿಟ್ಟುದುರ್ ನೀಲಗಿರಿಹಸ್ತಿಯಂ ನೀರೂಡಿಸಲ್ ವ್ಯಾಳನೇಬಿ ಪೋಗಲ್ (ಪುಣ್ಯಾಸ್ರ. ೭-೬೦ ಪ); ಜವುಗುನೆಲಗಳಿಗೆ ನೀರೂಡಿಸಿದ ಅಸಂಖ್ಯನದೀಪ್ರತೀಕಗಳು (ಬದ್ಧಪ್ರ. viii ಪೀಠಿಕೆ).
[ನೀರೂಡು + –ಇಸು$_3$]

**ನೀರೂಡು** (ಕ್ರಿ). ೧. ನೀರು ಉಣಿಸು : ಆ ವಾಹಿನೀಪ್ರವಾಹಮೊಂದೊಂದೆಡೆಯೊಳಂದಂದಿಗೆ ಬಂದುಬಂದು ನೀರೂಡುವ ದೇವರಮಣೀವನಚರಕರೀಂದ್ರಕಟನಿಕಟನಿರ್ಯತ್ತಮಾಲಪಲ್ಲವರಸಾನುಕಾರಿ ದಾನಧಾರಾಪೂರದಿಂ . . . ಎಸೆವುದು (ಚಂದ್ರಪು. ೧-೫೪ ಪ); ಬನಮಂ ನೀರೂಡಿ ನಿಚ್ಚಂ ಬಳೆಯಿಸುವ ಬೆಸಂಬೆತ್ತುವೋ ಧಾರೆಯಿಂ ತಾಮೆನಲಾ ನೀರ್ಗಾಯ್ಗಳಿಂ ಭೋರ್ಗಜಿದುಗುವೆಳನೀರಂ (ಕುಸುಮಾ. ೧-೮೭); ನೀರೂಡಿ ನೆಜಿಕೆ ಸಲಹಿದರೆ ಶಾಲ್ಮಲಿವೃಕ್ಷ ಬೀಜುವುದುಂಟೆ ಸತ್ಫಲವ (ಮೋಹತ. ೪೧-೨೪). ೨. ನೀರನ್ನು ಹೀರಿಕೊಳ್ಳುವಂತೆ ಮಾಡು; ನೀರು ಕುಡಿಸು : ರವಿದುಗ್ಧಂ ಪಾರಿವದೆಚ್ಚವುಂದುರದ ವಿಷ್ಟಿ ತಗರಕೋಡಿನ ಮಷಿಯೆಂಬಿವನೊರಸಿ ಕಾಸಿ ನೀರೂಡುವುದುಳಿಯಂ ತೈಲತಕ್ರದೊಳ್ ಪವಿಯಕ್ಕುಂ (ಲೋಕೋಪ. ೫-೪೦); ನೀರೂಡುವಂತೆ ಮದನನ ಕೂರಸಿಯಂ ಚುಯ್ಯೆನುತ್ತೆ ಪೊಗೆ ಪಾಯ್ವಿನೆಗಂ ನೀರೇಜವನದೊಳರ್ದುವನೋರಂತಿರೆ ವಿರಹದಹನದಗ್ಧೆಯರವಳಂ (ಲೀಲಾವ. ೯-೧೩೨). ೩. ನೀರನ್ನು ಹೀರಿಕೊಳ್ಳು ; ನೀರುಣ್ಣು : ಕಾಸಿದ ಲೋಹ ಕಾವು ಹತ್ತಿ ಕನಲಿ ಕೆಂಗಲಿಸಿ . . . ಎರಕದಲ್ಲಿ ಹರಿದು ನೀರೂಡಿ ಘನೀಭೂತವಾಗಿ ಪ್ರತಿಮೆಯಾಗುವಂತೆ, ಹರಿಹರನ ಪ್ರತಿಭೆಯಿಂದ ಹರಿದು ಬಂದಿದೆ ಈ ಕಾವ್ಯ (ಭಾವಗೀ. ೧೪೫).
[ನೀರ್+ಊಡು$_1$]

**ನೀರೂಪ** (ಗು). ೧. ಆಕಾರವಿಲ್ಲದ ; ನಿರಾಕಾರವಾದ. ೨. ವಿದ್ರೂಪಗೊಂಡ ; ವಿಕಾರವಾದ. (ನಾ). ೩. ಆಕಾರವಿಲ್ಲದುದು ; ನಿರಾಕಾರವಾದುದು : ಆ ಮೋಡಗಳು ಪಾರವಿಲ್ಲದುದಕ್ಕೆ

ಪಾರವೀಯುತ್ತವೆ. ನೀರೂಪವನ್ನು ಸರೂಪವಾಗಿ ಮಾಡುತ್ತವೆ (ರಾಮಾಸಿ.೧೦೬). [ಸಂ.]

**ನೀರೂರು** (ಕ್ರಿ). ೧. ನೀರು ಸುರಿ,—ಜಿನುಗು : ಅವಳು ಸ್ವಲ್ಪ ದೂರಕ್ಕೆ ಸರಿದಿದ್ದಳು . . . ಕಣ್ಣು ಕುಣಿಕೆಗಳಲ್ಲಿ ನೀರೂರಿತ್ತು (ಪ್ರಣಸ.೩). **೨.** ತೇವವಾಗು ; ಒದ್ದೆಯಾಗು : ಚರ್ಮದ ಅತ್ಯಂತ ಹೊರಪದರ—ಎಪಿಕ್ಯೂಟಿಕಲ್. ೧—೨ ಮೈಕ್ರಾನ್ ದಪ್ಪ, ನೀರೂರು ವುದಿಲ್ಲ (ಕೀಟಜೀ. ೮). [ನೀರು$_1$(<ನೀರ್)+ಊರು$_2$(<ಊಱು$_2$)]

**ನೀರೂಳಿಗ** (ನಾ). ನೀರನ್ನು ಹೊತ್ತು ತರುವ ಕೆಲಸ : (ಕ). [ನೀರ್+ಊಳಿಗ (<ಊೞಿಗ) ]

**ನೀರೆ** 'ನೀಱೆ' ನೋ.

**ನೀರೆಡೆ** (ನಾ). ನೀರಿರುವ ಸ್ಥಳ,—ಜಾಗ ; ಜಲಾಶಯ : ಧುರದೊಳ್ ಸಿಲ್ಕಿ ಬಂದ ನಿಜವಲ್ಲಭರಂ ಬನದಲ್ಲಿ ಕಾಣುತಂ . . . ಮಿಗೆ ನೀರೆಡೆಯಂ ಬಲುಕಟ್ಟುಗಟ್ಟುವರ್ (ಮಲ್ಲಕಾ. ೫-೯೦). [ನೀರ್+ಎಡೆ$_3$]

**ನೀರೆತ್ತು** (ಕ್ರಿ). ನೀರು ಹಾಯಿಸು,—ಬಿಡು : ಮಱೆಯಿಲ್ಲದೆ ತೀವಿದ ಕೆಱೆಯಂತೆ ನೀರೆತ್ತದೆ ಫಲಮಾದ ತೋಟದಂತೆ (ಧರ್ಮಾಮೃ. ೮-೫೧). [ನೀರ್+ಎತ್ತು$_1$]

**ನೀರೆದೆ** (ನಾ). ನೀರಾದ ಹೃದಯ ; ಕರಗಿದ ಮನಸ್ಸು : ಚಿತ್ತ ಉಪರಮ ಹೊಂದುವಾಗಲೆ ಪಾಪ, ನೀರೆದೆ ನೊಂದಿತು (ಹಾಡುಪಾ. ೫೭-೪೮). [ನೀರು$_1$ (<ನೀರ್)+ಎದೆ (<ಎರ್ದೆ) ]

**ನೀರೆರಕಲು** 'ನೀರೆಜಕಲು' ನೋ.

**ನೀರೆರಚು** (ಕ್ರಿ). ೧. ನೀರನ್ನು ಚಿಮುಕಿಸು,—ಸಿಂಪಡಿಸು : ಲಕೋಟೆಯನ್ನು ಹರಿದ, ಹಿಂದೆಯೇ ಮೂರ್ಛೆಹೋದ ಆನಂದೋದ್ರೇಕದಿಂದ . . . ಹೊತ್ತು ತಂದು ಹಾಸಿಗೆಗೆ ಚೆಲ್ಲಿ ಮುಖಕ್ಕೆ ನೀರೆರಚಿದರು (ಹುಚ್ಚುಹು. ೧೭). **೨.** (ಆಲಂ) ಕುಗ್ಗಿಸು ; ಕಡಮೆ ಮಾಡು : ಸಿಟ್ಟು ಮೂಡುತ್ತಿದ್ದಂತೆಯೇ ಈ ಎಲ್ಲ ಆವಸರದ ಸಂಬಂಧಕ್ಕೆ ಕಾರಣವಾದ ಆ ಘಟನೆಯ ನೆನಪಿನಿಂದ ಹುಟ್ಟಿದ ಜಿಗುಪ್ಸೆ ಸಿಟ್ಟಿನ ಮೇಲೆ ನೀರೆರಚಿತು (ಮೂರುದಾ. ೨೨೪). [ನೀರು$_1$(<ನೀರ್)+ಎರಚು(<ಎಱಚು) ]

**ನೀರೆರೆ** 'ನೀರೆಱೆ' ನೋ.

**ನೀರೆಸರು** (ನಾ). ೧. ಒಂದು ಬಗೆಯ ಮೆಣಸಿನ ಸಾರು ; ಬೇಳೆಯನ್ನು ಬಳಸದೆ ಮಾಡುವ ಸಾರು ; ಗೊಡ್ಡುಸಾರು : (ಕ). **೨.** ಅಡುಗೆಗಾಗಿ ಕುದಿಯಲು ಇಟ್ಟ ನೀರು ; ಕುದಿನೀರು : "ನೀರೆಸರು—ಅಡಗಿಗೆ ಕುದಿ ಇಟ್ಟ ನೀರು" (ಜಾನಕೋ. ೧೨). [ನೀರು$_1$(<ನೀರ್)+ಎಸರು$_2$(<ಎಸರ್)]

**ನೀರೆಳೆ** (ಕ್ರಿ). ೧. ನೀರನ್ನು ಮೇಲಕ್ಕೆ ಸೆಳೆ; ನೀರು ಸೇದು. **೨.** (ಆಲಂ) ಹಾಳುಮಾಡು ; ನಾಶಗೊಳಿಸು : ಉತ್ತಮೋತ್ತಮರೊಕ್ಕಲಿಗೆ ನೀರೆಳೆವನಕಟಾ (ಅಮೃತ. ೨-೫೨). [ನೀರು$_1$(<ನೀರ್)+ಎಳೆ$_1$(<ಎೞೆ$_1$)]

**ನೀರೆಳ್ಳು** (ನಾ). ಎಳ್ಳು ಸಹಿತವಾದ ನೀರು ; ತಿಲೋದಕ : ನೀನಿನ್ನೆನಗೆ ಸತಿಯಲ್ಲ. ನಿನಗಾಂ ಪತಿಯುಮಲ್ಲ, ತರ್ಪಣಂ ಕೊಟ್ಟೆನಿದೊ ನೀರೆಳ್ಳು ಕೊಳ್ ! (ಶ್ರೀರಾಮಾ. ೯೪-೪೪೦). [ನೀರು$_1$(<ನೀರ್)+ಎಳ್ಳು (<ಎಳ್)]

**ನೀರೆಜಕಲು,** ನೀರೆರಕಲು, ನೀಱೆಜಕಲು (ನಾ). ನೀರಿನ ಸುರಿತ; ನೀರುಬೀಳು ; ಜಲಪಾತ : ಮೂಡಲು ನೆಯಿಂದಲೆಯ ಹುಲಿಯ ಮಾನಿಯ ಮಧ್ಯದ ನೀರೆಜಕಲ ಹೊಂನೆಯ ಮರನ ಒತ್ತಿನಲು ನಟ್ಟ ವಾಮನಮುದ್ರೆಯ ಕಲ್ಲು (ಎಕ. VIII, ತೀರ್ಥಹ. ೧೩೩-೧೭ ; 1404) ; ತೆಂಕಲುಂ ನೀರೆಜಕಲು ವೊಳಗಾಗಿ . . . ಪಡುವಲುಂ ನೀರೆಜಕಲು ವೊಳಗಾಗಿ (ಬೊಂಕಶಾ. ೧೯೪೦, ಕುಮಟ. ೧೧೩-೨೦ ; 1475). **ನೀರೆರಕಲು :** ಪಡುವಲು ಕಂಬಿವಾರು ಬಂದ ಹಾಗೆ ನೆಲನಂಚು ನೀರೆರಕಲಲಿ ನೆಟ ಲಿಂಗಮುದ್ರೆ ಕಲುಗಡಿ (ಎಕ. VIII, ತೀರ್ಥಹ. ೫೧-೩೬ ; 1630). △ **ನೀಱೆಜಕಲು :** ನೀಱೆಜಕಲು ಜಲಪಾಶಾಣ ನಿಧಿನಿಕ್ಷೇಪ ಸಹವಾಗಿ ಸರ್ವಮಾನ್ಯವಾಗಿ ಸುಖಂಬಾಳ್ವರು (ಪ್ರೈಆರಿ. ೧೯೩೧, ೬೪-೧೭ ; 1396). [ನೀರ್+ಎಜಕಲು]

**ನೀರೆಱೆ,** ನೀರೆರೆ (ಕ್ರಿ). ೧. ನೀರು ಸುರಿ ; ನೀರುಹಾಕು ; ನೀರು ಹನಿಸು : ಪುಣ್ಯಮೆಂದು ವಿಷವಲ್ಲಿಗೆ ನೀರೆಱೆವೆಗ್ಗನಂತೆ ಕೆಮ್ಮಗೆ ಸುಖಮೆಂದಸದ್ವಿಷಯಸೌಖ್ಯದೊಳಿಂತೆಜಿಗಲ್ಕೆ ತಕ್ಕುದೇ (ಕಾದಂಪೂ.೪೪೭) ; ಪೂಗಿಡುವೆಂಬ ಪೆಸರಿಂಗೆ ಕೊಳವಳ್ಳಿಯ ಗಿಡುಗಳಂ ನಟ್ಟು ನೀರೆಱೆದು ನಡೆಪೆ ಮಲ್ಲಿಗೆಯ ಪೂವಿನಂತಾಗಲರಿಯದು (ಧರ್ಮಾಮೃ. ೭-೭೯) ; ನೀರೆಱೆವಳ ವದನಂ ಕೈನೀರೋಳ್ಮಾರ್ಪೊಳೆಯಲಿಂದು ಸಿಕ್ಕಿದನೆನುತುಂ (ಉದ್ಭಟ. ೩-೩೧) ; ತೋಳ ನೆಗಹಿ ನೀರೆಱೆಯೆ ಗಳತೃಷ್ಣೆ ಪರಿದೊಡವಿರಾಂಟುವ ನೆವದಿಂ ಪೆಂಗಳ ಮುದ್ದುಮೊಗವ ನೋಡುವರು (ಸೋಹತ. ೨-೩೦) ; ಬೆಣ್ಣೆಗಳ್ಳನ ಕೊಬ್ಬಿದುದರದೊಳ್ಪೊಚ್ಚ ಪೊಸ ಸುಣ್ಣಮಂ ಪೊಯ್ದು ನೀರೆಱೆದಂತೆ ಮಾಡಿ (ಜೈಮಿಭಾ. ೭-೨೯) ; ದಾರಿದಾರಿಯೊಳಜಿವಟ್ಟಿಗೆಗಳೊಳಗೆ ನೀರೆಱೆವಬಲಾಜನದಾ ತೋರನೊಲೆಗಳಿಗೆಜಿಗಿದ ಪಾಂಥರ ದಿಟ್ಟಿ ತೋಱುದುವನಿಮಿಷತೆಯನು (ಕಂಸವಿ. ೨-೫೪). **೨.** ಅಭ್ಯಂಜನ ಸ್ನಾನ ಮಾಡಿಸು : ಎಣ್ಣೆಯನೂಡಿ ನೀರೆಱುದು ತೂಪಿಱುದು . . . ಪಾಲೆಱೆದೋವಿ ಚಿಣ್ಣನ ಪಕ್ಕೆಗೈದಿದಳು (ಸೋಹತ. ೪-೭೫) ; ತರಳರಿಗೆ ನೀರೆಱೆದು ಕಾಂಚನವರದುಕೂಲವನಿತ್ತು (ನಳಚ. ೮-೪೪). **ನೀರೆರೆ :** **೨.** ಆಕೆ ತನ್ನ ಎಳೆಯ ಮಗುವಿಗೆ ನೀರೆರೆಯುತ್ತಿದ್ದಾಳೆ (ರೂಢಿ). [ನೀರ್+ಎಱೆ$_1$]

**ನೀರೇಜ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : ನೀರೇಜಮಿಮ್ಮಾವು ಮಲ್ಲಿಗೆಯೆಂದಿಂತಿವನಟ್ಟುಱುಂದಮರ್ದಿನೊಳ್ ತಾನ ಜಿತ್ತಿಯಿಂ ತೊಯ್ದು ಮಲ್ಲಗೆ ಸಂದಂಗಜನೆಂಬಜಂ ಪಡೆದನಂತಾಕಾಂತಿಯಿಂ ಕಾಂತೆಯಂ (ಸಂಸಭಾ. ೪-೭೫) ; ಜರೆಯಿಂದಂ ಕೂಡಿ ಬೆಳ್ಪಂ ತಳೆಯೆ ತಲೆ ದಳದ್ರಕ್ತನೀರೇಜಮಂ ಪೋಲ್ತಿರೆ ಕಣ್ (ಕಾದಂಪೂ. ೩೬) ; ರತಿ ಮನ್ಮಥರ ಮಾತೆಯಂತೆ ಬಳೆದಳು ಕುವರಿ ಪಾರ್ಥಿವಕುಮಾರ ಕಂದರ್ಪರಾ ಕಣ್ಮೀನ್ಗಳಂ ಸೆಳೆಯುವ ಸರೋವರದ ಚಾರುನೀರೇಜದೋಲ್ (ಶ್ರೀರಾಮಾ. ೪೧-೩೭೦). [ಸಂ.]

**ನೀರೇಜಕುಟ್ಮಳ** (ನಾ). ತಾವರೆಯ ಮೊಗ್ಗು,—ಮುಗುಳು : "ಕೋಶಂ ನೀರೇಜಕುಟ್ಮಳಾಖ್ಯೆಯುಂ ಮಕ್ಕುಂ" (ವಸ್ತುಕೋ. ೧೩೪-೧೦೦). [ನೀರೇಜ+ಕುಟ್ಮಳ(=ಕುಟ್ಮಲ)]

**ನೀರೇಜಗರ್ಭ** (ನಾ). ತಾವರೆಯಲ್ಲಿ ಹುಟ್ಟಿದವನು ; ಬ್ರಹ್ಮ : ಅನಲಂ ರೂಪಿನ ಪಕ್ಷಪಾತದೊಳೆ ತಾನೆಟ್ಟಿಂದು ನೀರೇಜಗರ್ಭನ ಗೆಯ್ತಂ ಗಡಮುಪ್ರಮಾಣಮೆನುತಂ (ಕಾದಂಪೂ. ೪೬). [ನೀರೇಜ+ಗರ್ಭ]

**ನೀರೇಜಚ್ಛದ** (ನಾ). ತಾವರೆಯ ಎಲೆ ; ಕಮಲಪತ್ರ : ಸುಡುಗುಂ ಕಾಮಾಗ್ನಿ ತಾನೆಂದು ತನ್ನೀರೇಜಚ್ಛದಜೀವನಂ ಭಯದಿನಾಗಳ್ ಕಂಪಿಸಂಬೆತ್ತವೋಲ್ (ರಾಜಶೇ. ೭-೮೪). [ಸಂ.]

**ನೀರೇಜಜ** (ನಾ). = ನೀರೇಜಗರ್ಭ : 'ನೀರೇಜಜಾಂಡ' ಪರಾ. [ಸಂ.]

**ನೀರೇಜಜಾಂಡ** (ನಾ). ವಿಶ್ವ ; ಬ್ರಹ್ಮಾಂಡ : ಮಗನ ಮಾತನು ಸಲಿಸಬೇಕೆಂದೊಗುಮಿಗೆಯ ಹರುಷದಲಿ ವಹ್ನಿಯ ನೆಗಹಿದನು ನೀರೇಜಜಾಂಡ ಕಟಾಹಪರಿಯಂತ (ತೊರಂರಾ. ೫-೮-೫೯). [ನೀರೇಜಜ+ಅಂಡ$_2$]

**ನೀರೇಜಪರ್ಣ** (ನಾ). = ನೀರೇಜಚ್ಛದ : ನಸೆಮುಳಿಸಿಂ ಕಾಡ ಲೆಂದಾಕೆ ಪೊಕ್ಕಿರ್ದುದಿದಾ ನೀರೇಜಪರ್ಣೋತ್ಕರಮೆನುತೆ ಮೊದಲ್ಗೊಂಡು ದಂಭೋಜಸದ್ಮಾಂತದೊಳುದ್ಯತ್ಕ್ಷತುಚೇತಂ ತೊಟಲಲವಿರತಂ ಚಕ್ರ ವಾಕಂ ವರಾಕಂ (ಚಂದ್ರಪು. ೮-೧೦). [ನೀರೇಜ+ಪರ್ಣ]

**ನೀರೇಜಭವ** (ನಾ). = ನೀರೇಜಗರ್ಭ : ಭ್ರಮಿಸಿ ಮಗಳಂ ಹರಿಣ ರೂಪದಿ ರಮಿಸುವಾ ನೀರೇಜಭವನಂ ನಿಮಿಷದಲಿ ಹರಿಸಿದನತಿಮೃಗ ವ್ಯಾಧರುದ್ರನಲಾ (ಬಸವು. ೫೪-೪೮). [ಸಂ.]

**ನೀರೇಜವದನೆ** (ನಾ). ತಾವರೆಯಂತೆ ಮುಖವುಳ್ಳವಳು : ನೀರೇಜ ವದನೆ ತಿಱುದಳ್ ತೋರಿದ ಮಲ್ಲಿಗೆಯ ಮುಗುಳನಾಗಳ್ (ಲೀಲಾವ. ೧೩-೭೭). [ಸಂ. ನೀರೇಜವದನಾ (ನೀರೇಜ+ವದನ+-)]

**ನೀರೇಜವನ** (ನಾ). ತಾವರೆಯ ಕೊಳ ; ಕಮಲಸರೋವರ : ನೀರೂಡುವಂತೆ ಮದನನ ಕೂರಸಿಯಂ ಚುಯ್ಯೆನುತ್ತೆ ಪೊಗೆ ಪಾಯ್ವಿ ನೆಗಂ ನೀರೇಜವನದೊಳರ್ದುವನೋರಂತಿರೆ ವಿರಹದಹನದಗ್ಧಿಯರವಳಂ (ಲೀಲಾವ. ೯-೧೩೨). [ನೀರೇಜ+ವನ]

**ನೀರೇಜಾಂಬಕ** (ನಾ). ಕಮಲದಂತೆ ಕಣ್ಣುಳ್ಳವನು ; ವಿಷ್ಣು ; ಕೃಷ್ಣ : ನೀರೇಜಾಂಬಕನೊಲ್ದು ರಾಜಧರನಿಂದಂ ಸೂನುವಂ ಪೂರ್ವ ದೊಳ್ . . . ಪಡೆದಂ (ಹವಿಸ್ಮಾರ. ೨-೬).
[ನೀರೇಜ+ಅಂಬಕ]

**ನೀರೇಜಾತ** (ನಾ). ೧. ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ. ೨. ನೈದಿಲೆ : ಅತನುಶ್ರೀಕಾಮಿನೀದರ್ಪಣಮೆನಿಸುವ ತದ್ವಕ್ತ್ರಶೀತಾಂಶು ನೇತ್ರಾಸಿತ ನೀರೇಜಾತಯುಗ್ಮಕ್ಕಮೃತಸಲಿಲ ಸಂಸೇಕಮಂ ಮಾಡೆ (ಆದಿಪು. ೮-೨೩). [ಸಂ.]

**ನೀರೇಜಾನನೆ** (ನಾ). = ನೀರೇಜವದನೆ : ನೀರೇಜಾನನೆ ವಜ್ರಕುಮಾರ ಮುನೀಶ್ವರನ ಸಾರೆ ಖಚರೇಶ್ವರನಂ ಸಾರಮಿದೆನಿಸುವ ಸೂರ್ಯಾಕಾರ ಜಿನಸ್ನಾಪೆಯಂ ಸವಿಸ್ತರದಿಂದಂ ಬೇಡುವುದುಂ (ಧರ್ಮಾಮೃ. ೮-೨೩೩). [ಸಂ. ನೀರೇಜಾನನಾ (ನೀರೇಜ+ಆನನ+-)]

**ನೀರೇಜಾಸನ** (ನಾ). (ವಿಷ್ಣುವಿನ ನಾಭಿಯ) ಕಮಲವೇ ಆಸನ ವಾಗಿ ಉಳ್ಳವನು ; ಬ್ರಹ್ಮ : ನೀರೇಜಾಸನಸೂನು ದಕ್ಷನುಱಿ ಸದ್ಭಾಕ್ಯಾಯಣೀದೇವಿಯಂ . . . ಪಡೆದಂ (ಹವಿಸ್ಮಾರ. ೨-೬).
[ನೀರೇಜ+ಆಸನ]

**ನೀರೇಜಿನಿ** (ನಾ). ೧. ತಾವರೆಯ ಬಳ್ಳಿ. ೨. ತಾವರೆ; ಕಮಲ : ನೀರೇಜಿ[ಪಾಠಾಂ. ಜ]ನಿಯೊನಿತಲರ್ದೇಂ ಸಾರದೆ ಪೋದಂ ದಿನೇಶಂ (ಅರ್ಥನೇ. ೩-೨೭). [ಸಂ. ನೀರೇಜಿನೀ]

**ನೀರೇಜಿನೀಷಂಡ** (ನಾ). ಕಮಲಗಳ ಸಮೂಹ: ಸಿದ್ಧ ಹಿಂಸೋತ್ಕರ ಲೀಲಾರಮ್ಯದೊಳ್ ಸಂದಮೃತನಿಲಯ ನೀರೇಜಿನೀಷಂಡದೊಳ್ ಸೌಂದರಕೇಲೀಹಂಸನಾದಂ ಸುಕವಿಜನಮನೋಮಾನಸೋತ್ತಂಸಹಂಸಂ (ಆದಿಪು. ೧೬-೭೫). [ಸಂ.]

**ನೀರೇಭ** (ನಾ). = ನೀರಾನೆ : ಅದು ನೀರೇಭಕರಾಭಿಘಾತ ವಿಚಲ ದ್ವಾರಾಶಿಯೊಳ್ ಪೋಗಿ ಕೂಡಿದೊಡಾ ವಾರ್ಧಿಯ ಪೆಂಪುಮಾ ತೋಱಿ ಯೊಳಾಯ್ತು (ಆದಿಪು. ೧-೫೫) ; ನೀರೇಭ[ಪಾಠಾಂ. ನೀರಾನೆ]ನೆಗಳು ಪಾಠೀನ ಕಮಠ ಶಿಂಶುಮಾರ ಕರ್ಕಟ ಭಲ್ಲೂಕ ಘೋರಾಹಿ ಮೊದಲಾದ ದುಷ್ಟಜಂತುಗಳಿಂದ ವಾರಾಶಿ ಕಣ್ಗೆ ರಂಜಿಸಿತು (ಮೋಹತ. ೨-೫).
[ನೀರ್$_2$+ಇಭ]

**ನೀರೇರು** 'ನೀರೇಱು' ನೋ.

**ನೀರೇರುಹ** (ನಾ). = ನೀರೇಜ : ಆ ವಿನೀಳನೀರೇರುಹನೇತ್ರೆ ತತ್ಕನಕ ಮಾತ್ರದ ಬಿಣ್ಪನದೇಕೆ ಸೈರಿಪಳ್ (ಪಂಪಾಸ. ೩-೧೦೫). [ಸಂ.]

**ನೀರೇರುಹಗರ್ಭ** (ನಾ). = ನೀರೇಜಗರ್ಭ : ಸಂದ ನೀರೇರುಹ ಗರ್ಭ೯ಂಗಂ ಮಿಗಿಲಾ ದಾನದಿನಖಿಳಜನಪ್ರೀತಿಗಾ ಕಳ್ಪಧಾತ್ರೀರುಹದಿಂದ ಮೇಲು (ಸೌಇಇ. XX, ೧೧೨-೧೬ ; 1144 ?).
[ನೀರೇರುಹ+ಗರ್ಭ]

**ನೀರೇರುಹದಳ** (ನಾ). ತಾವರೆಯ ಎಸಳು, ಪಕಳೆ : ಶ್ರೀರಮಣೀ ಪ್ರಿಯನ ವಿಶಾಲೋರಸ್ಸ್ಥಳದಲ್ಲಿ ನಿಂದು . . . ನೀರೇರುಹದಳನಯನೆ ನಾಡೆ ಕಣ್ಗೆಸೆದಿರ್ದಳ್ (ಕಾದಂಪೂ. ೪೨).
[ನೀರೇರುಹ+ದಳ$_2$ (= ದಲ)]

**ನೀರೇರುಹನಾಭ** (ನಾ). ಹೊಕ್ಕುಳಲ್ಲಿ ಕಮಲವುಳ್ಳವನು; ವಿಷ್ಣು : ನೀರೇರುಹನಾಭ ನೀರಜಸಮುದ್ಭವ ಶಂಕರರೀಗಭೀಪ್ಸಮಂ (ಕಇಇ. ೧-೨-೩ ; 1058) ; ಅರಿಗಾರಿಲ್ಲ ಯಮುನಾರುಭಟಕೆ ಅಸುರಾರಿ ಮೈಮಱಿ ದಾಗ ನೀರೇರುಹನಾಭ (ಪುರಂದ. ಧಾ. ೨-೮೭-೨).
[ಸಂ. (ನೀರೇರುಹ+ನಾಭಿ+-)]

**ನೀರೇಶ** (ನಾ). ನೀರಿನ ಒಡೆಯ ; ವರುಣ : 'ನೀರೇಶದಿಕ್ಕು' ಪರಾ. [ನೀರ್$_2$+ಈಶ]

**ನೀರೇಶದಿಕ್ಕು** (ನಾ). ವರುಣನ ದಿಕ್ಕು ; ಪಶ್ಚಿಮ : ಮಿಾರಿದಲೆ ಅನಾಮಿಕ ಕನಿಷ್ಠಾಂಗುಟದಿಂದ ನೀರೇಶದಿಕ್ಕಿನಲ್ಲಿ ಸಾಧಿಸಿರೊ (ವಿದಾಕ್ಯ. ೫೨-೩). [ನೀರೇಶ+ದಿಕ್ಕು]

**ನೀರೇಱಿಸು** (ಕ್ರಿ). ಸಂತೋಷಪಡಿಸು; ಸುಖವನ್ನುಂಟುಮಾಡು; ಉತ್ಸಾಹಗೊಳಿಸು : ಏಱು[ಯೆ] ನಂದಿ[ಯನಾ] ಪೆಱಗೇಱಿದ ಗಿರಿ ಸುತೆಯ ಮೊಲೆಗಳಳ್ಳೇಱಿಂ ನೀರೇಱಿಸುತಿರೆ ಕರ್ಣಾರ್ಜುನರೇಱ ನೋಡಲ್ಕೆ ಭೂತನಾಥಂ ಬಂದಂ (ಪಂಪಭಾ. ೧೨-೧೩೯) ; ತನಯನೆನ ಗೆಂದು ಮನ್ನಿಸಿ ತನಗುರುಗಜ್ಜ[ಮೆನೆ] ಪಾಕಶಾಸನನರ್ಧಾಸನಮೇಱಿಸಿ ನೀರೇಱಿಸಿ ಮನುಜಂಗಂ ಮಾನ್ಯಪದವಿಯಂ ಮಾಡಿದನೇ (ಗದಾಯು. ೩-೪೦). [ನೀರೇಱು+-ಇಸು$_3$]

**ನೀರೇಱು,** ನೀರೇರು (ಕ್ರಿ). ೧. ನೀರು ತುಂಬು ; ನೀರಿನಿಂದ ಆವೃತವಾಗು ; ಜಲಮಯವಾಗು : ನಡುವೆನ್ನೊಡೆದಿರ್ಬಗಿಯಾಗಿ ಪೋಟ್ಟು ನೀರೇಱಿದ ನಾಳಿಪುಣ್ಣೊಡೆದು ಸೌಳೆನೆ ಸೀಳ್ದುದು ದೋಣಿ ಪೋಪಿನಂ (ಸುಕುಮಾ. ೫-೧೬) ; ಕರಣಂಗಳ್ ಕಳೆಯೇಱಿ ಲೋಚನ ಯುಗಂ ನೀರೇಱಿ . . . ತಲೆಗೇಱಿದುತ್ಸವದೆ ನಿಮ್ಮಂ ಪೂಜಿಸುತ್ತಾ ನುಮಾದರದಿಂದೀಕ್ಷಿಸುತಾಡುತಿರ್ಪುದೆನಗಿನ್ನೆಂದೋ ವಿರೂಪಾಕ್ಷನೇ (ಪಂಪಾಶ. ೧೮) ; ಆಲಿ ನೀರೇಱಿದವು ತಮ್ಮನ ಮೇಲೆ ತಳಿತುದು ಮೋಹ (ಕುಮಾವ್ಯಾ. ೨-೪೮) ; ಕಡಡಿದುದು ಧರೆ ಮೇಲೆಮೇಲೇಳುದಧಿ ನೂಕಿತು ನಾಕ ನೀರೇಱಿದುದು (ನಿಭಾಗ. ೮-೨೩-೩೫). ೨. ಹೊಳೆ ; ಕಾಂತಿ ಬೀರು ; ಪ್ರಕಾಶಿಸು : ಏಱಿಸದಿಕ್ಷುಶರಾಸನವೇಱಿಸಿದಪುದೀ ಗಳಂಗಭವನಿಂದೆನೆ ನೀರೇಱಿದ ಮಂಗಳವಸದನಮೇಱಿ ಮನಂಗೊಳಿಸ ಲಾರ್ತುದಾ ಕೋಮಳೆಯಾ (ಪುಷ್ಪಪು. ೮-೫೯). ೩. ಚಿಗುರು ; ಕೊನರು ; ಕುಡಿಯೊಡೆ : ವನಜಂಗಳ್ ದಳವೇಱಿ ಚೂತಲತೆಗಳ್ ನೀರೇಱಿ . . . ಬಂದುದು ವಸಂತಂ ಸಂತತೋತ್ಸಾಹದಿಂ (ಧರ್ಮಾಮೃ. ೧೩-೧೦). ೪. ಅರಳು ; ವಿಕಸಿಸು : ಪದವಿಟ್ಟಳ್ ನೆಯ್ದಿಲಿಂ ತಾವರೆಗೆ ಸಿರಿಲತಾಕೋರಕಗ್ರಂಥಿ ನೀರೇಱಿದುವು (ಮಲ್ಲಿಪು. ೫-೩) ; ಇನನುದಯಂಗೆಯ್ಯಲೊಡಂ ವನಜಂ ನೀರೇಱುವಂತೆ ತತ್ಕೋಮಳೆಯಾನನ ಕಮಳವರಳಲ್ (ದಶಕು. ೪-೧೨೫). ೫. ಸಂತೋಷಿಸು ; ಆನಂದ ಪಡು : ನೀಱೆಯರುನ್ನತಸ್ತನಭರಂಗಳ ಭಾರಮುವುಂಕಿ ಸೋಂಕೆ ನೀರೇ ಱಿದರೇಱಿದರ್ ಪೆಱವು ಪೀಠಮಂ . . . ನೀರೇಱಿದೆ ಸಿಂಹವಿಷ್ಟರಮ ನೇಱಿದೆ ನೀನೆ ವಲಂ ಜಿನೇಶ್ವರಾ (ಪಂಪಾಸ. ೫-೬) ; ಏಱಿಸಿಕೊಂಡು

ಹಸ್ತಿ ನಿಜಪುಸ್ತಕಮಂ ಬರೆ ಕಂಡು ಗುಂಡು ನೀರೇಱೆ . . . ಗಜೇಂದ್ರ ಮೆಯ್ದೆ ಪುಗುತಂದುದು ರಾಜಗೃಹಾಂತರಾಳಮಂ (ನೇಮಿಪು. ೨-೯೪); ಜನಮನಿತುಮುದ್ಧ ಸಿಂಹಾಸನಮಂ ತಚ್ಛಕ್ರಿಯೇಱೆ ನೀರೇಱಿದುದು (ಚಂದ್ರಪು. ೭-೨); ಬಡಿದೊಡೆ ನೀರೇಱುವನೊದೆದೊಡೆ ನಲಿವಂ ಪೊಯ್ದೊಡೊಂದುರೂಪಪ್ಪಂ ನಾಣ್ಗಿಡೆ ನುಡಿಯೆ ರಾಗಿಯಕ್ಕುಂ ಕಡು ಚಿಱಡಗನಬ್ಬೆ ಗಂಡರೊಳ್ ಕವಿಕಾಮಂ (ಶೃಂಗಾರ. ೩-೧೬). **ನೀರೇರು:** ೧. ಮರಿಸೌತೆ ಮುಸರಾಯ್ತು ಹೀರೆ ನೀರೇರಿದುದು ಹುರುಳಿ ಹೊಲಸಾದುದು (ಪಲಾಂಡು. ೨೩). [ನೀರ್ + ಏಱು$_1$(<ಏಱ್$_1$)]

**ನೀರೊಗು** (ಕ್ರಿ). ನೀರು ಸುರಿ,—ಒಸರು: ನರೆತ ಮಂಡೆಯು ನೀರೊಗುವ ಕಂಗಳು . . . ಪತ್ತಿದ ಗಲ್ಲದ ನೆಱೆ ವೃದ್ಧನಡಿಯಿಟ್ಟ ನೊಲಿದು (ಜೀಸಂಸಾಂ. ೧೬-೩೦); ದುಕ್ಕವಿನ್ನೆಂತುಟೊ ನೋಳ್ಪರ ಕಣ್ಣ ನೀರೊಕ್ಕುದದೇನ ಪೇಳುವೆನು (ಮೋಹತ. ೮-೨೪). [ನೀರ್+ಒಗು$_1$]

**ನೀರೊಟ್ಟೆಲ್,** ನೀರೊಟ್ಟೆಲು (ನಾ). ೧. ನೀರಿನ ಸಮೂಹ,—ರಾಶಿ. ೨. ಸಮುದ್ರ; ಕಡಲು: "ಮುನ್ನೀರ್, ನೀರೊಟ್ಟೆಲ್, ತೊಱೆಗಳಾಣ್ಮಂ, (ಕಡಲ್)—ಈ ೪ ಸಮುದ್ರಂ" (ಕಶಸಾ. ೫೩-೧೪೧). **ನೀರೊಟ್ಟೆಲು:** ೨. "ಮುನ್ನೀರ್ ನೀರೊಟ್ಟೆಲುಮೆಂದೆನ್ನುತ್ತುಂ ತೊಱೆಗಳಾಣ್ಮ ಕಡಲೆನೆಯುಂ . . . ಸಾಗರಮೆನಿಕುಂ" (ಕವಿಕಂ. ೮೯); ಆವವನ ಮನೆಯೆ ನೀರೊಟ್ಟೆಲಾವವನಣುಗನೀ ವಸುಧೆಯಲ್ಲಿ ಬಿಲ್ಲಾಳೆನಿಸಿ ಕೊಂಡನಿನ್ನಾವವನ ಸತಿ ಲೋಕದೈಶ್ವರ್ಯರೂಪೆ (ವೀಶೈಪು. ೪-೧೫-೧); ಸೂರ್ಯ ವಾರುವರಥಗೂಡಿ ಪಡುವೆಟ್ಟ ಶಿಖರದಿ ನೀರೊಟ್ಟೆಲೊಳು ಬಿದ್ದ ಮುದದಿ (ಮೋಹತ. ೧೪-೩); ಕಾರೊಡಲಿನ ರಂಗ ನಿನ್ನ ಕಂಡಲರಿಚ ನೀರೊಟ್ಟೆಲೊಂದುಪಟಳವ ದೂಱಿಲ್ಕೆ (ಶತಸಾಂ. ೧೩-೭೫); ಕೇಳಿರೈ ಕಪಿವೀರರೆಲ್ಲ ಮದ್ವಿಕ್ರಮವನೇಳುನೀರೊಟ್ಟೆಲಂ ನಿಮಿಷಾಂತರದಿ ದಾಂಟಿ ಕೋಳುಗೊಂಡಪೆ (ವೆಂಕಾರಾ. ೫-೧-೧೮). [ನೀರ್+ಒಟ್ಟೆಲ್]

**ನೀರೊಟ್ಟೆಲಾಣ್ಮ** (ನಾ). ಸಮುದ್ರರಾಜ; ವರುಣ: "ನೆಗಟ್ದೀರಂ, ಪಚ್ಚಿಮದೆಸೆಗೊಡೆಯಂ, ನೀರೊಟ್ಟೆಲಾಣ್ಮ—ಈ ೩ ವರುಣಂಗೆ ಪೆಸರ್" (ಕಶಸಾ. ೪೯-೩೭); "ನೀರೊಟ್ಟೆಲಾಣ್ಮನೆನೆ ವರುಣ ನಕ್ಕುಂ" (ಕಶರ. ೫೫). [ನೀರೊಟ್ಟೆಲ್+ಆಣ್ಮ (<ಆಳ್ಮ)]

**ನೀರೊಟ್ಟೆಲು** 'ನೀರೊಟ್ಟೆಲ್' ನೋ.

**ನೀರೊಡಲ** (ನಾ). ೧. ಒಡಲಲ್ಲಿ ನೀರುಳ್ಳುದು: ಮುಗಿಲಂತೆ ನೀರೊಡಲನುಮೆನಿಪ ತೇಂಗಾಯಿಂ . . . ಚೆಲ್ವಾದ ಕೇರಿಯಂಗಡಿಯಿಂ . . . ಪುರಂ ಕಣ್ಗೆಂಬಾದುದು (ರಾಮಾಶ್ವ. ೧೦೩-೧೬). ೨. ಮೋಡ. ೩. ವರುಣ.

**ನೀರೊಡಲ ನಿಡುಗೋಲ್** = ದೊಡ್ಡ ವರುಣಾಸ್ತ್ರ: ಫರಿತರ್ಪ ಕಿರ್ಚಿಂಗೋಲಂ ಚೆಚ್ಚರದೊಳೆ ತನ್ನೊಂದು ಬೆಚ್ಚ ಪೊಚ್ಚಪೊಸ ನೀರೊಡಲ ನಿಡುಗೋಲಿಂ ಕಾಲ್ದೊಳೆಯಿಸಿದಂ (ರಾಮಾಶ್ವ. ೯೨-೬). [ನೀರ್+ಒಡಲ್+ -ಅ$_7$]

**ನೀರೊಡೆ** (ಕ್ರಿ). ನೀರು ಒಸರು; ನೀರೂರು: ಎಷ್ಟೋ ದಿವಸದ ಮೇಲೆ ನನಗೆ ಪ್ರಿಯವಾದ ಭಕ್ಷ್ಯ ಸಿಕ್ಕಿತು; ನಾಲಗೆ ನೀರೊಡೆಯುತ್ತಿದೆ (ಪಚಭಾ. ೩೬); ಅವನ ಬಾಯಿಗೆ ನೀರೊಡೆಯಿತು (ಅಂಬಿಕೆ. ೧೦೦). [ನೀರು$_1$ (<ನೀರ್) + ಒಡೆ$_1$]

**ನೀರೊಡೆತ** (ನಾ). ನೀರಿನಲ್ಲಿರುವ ಘಟಕಗಳು ಬೇರೆಯಾಗುವಿಕೆ: ಅವುಗಳ ನೀರೊಡೆತ (ಹೈಡ್ರೊಲಿಸಿಸ್) ಇಲ್ಲವೆ ಆಮ್ಲಜನಕಗೂಡಿಕೆಯಿಂದ ಬರುವ ಉತ್ಪನ್ನಗಳೊಂದಿಗೆ ಬಣ್ಣದ ವಸ್ತುವಾಗಿಸುವ ಪತ್ತೆಕಾರಕಗಳಿಂದ . . . ಇರುವೆಡೆಗಳನ್ನು ತಿಳಿಯುವಿಕೆ (ಕವಿಕೋ. I, ೫೪). [ನೀರು$_1$ (<ನೀರ್)+ಒಡೆತ]

**ನೀರೊತಿಗೆ** 'ನೀರ್ವತ್ತಿಗೆ' ನೋ.

**ನೀರೊತ್ತಡ** (ನಾ). ನೀರಿನ ರಭಸ,— ವೇಗ: ನೀರೊತ್ತಡದ ನೀರೊತ್ತಿಗೆ ಯಂತ್ರ (Ram. ಇಂಕನಿ). [ನೀರು$_1$(<ನೀರ್)+ಒತ್ತಡ]

**ನೀರೊತ್ತು$_1$** (ಕ್ರಿ). ನೀರು ತುಂಬಿಕೊಳ್ಳು,— ಆವರಿಸು: ಹೊತ್ತಿ ಹೋಗೆವನುತಾಪದಲಿ ನೀರೊತ್ತಿದಂಬಕದಿಂದ ಬಿಡವಱಿಸುತ್ತ ಬಂದೆನು ಕರವತಿಗೆ ಜಲಸಹಿತ ತಾಂಡವನ (ತೊರರಾ. ೨-೫-೨೦). [ನೀರ್+ಒತ್ತು$_1$]

**ನೀರೊತ್ತು$_2$** (ನಾ). ೧. (ತೆರೆಯ) ಉಬ್ಬರ; ಭರತ: "ವೇಳಾ ಯೆಂಬುದು ನೀರೊತ್ತು" (ಹಲಾಯು. ೧೦೮-೩೨). ೨. ತೀರ; ದಡ; ಕರೆ: ಬಡಗಲು ಕಾನಿ ಮೂಡಲು ಸೇತುವಿಂಗೆ ಹೊಂಡದಾರಿ ತೆಂಕಲು ತುಡಿಕೆಯ ಮುನ್ನಣ ಬಟ್ಟೆ ನೀರೊತ್ತಿಂಗೆ ದೇವಣಭಟ್ಟರು ಕೊಟ್ಟ ಬೆದ್ದಲೆ (ಎಕ. V, ಹಾಸನ. ೧೧೬-೪೯; 1123); ಮೂಡಲಾ ಕೆಱೆಯ ನೀರೊತ್ತು ಗಡಿ ತೆಙ್ಕಲು ಮತ್ತವಾ ಕೆಱೆಯ ಕೋಡಿಗಡಿ ಹಡುವಲು ಹಿನ್ನಣ ಕೆಱೆಯ ನೀರೊತ್ತು ಗಡಿ (ಎಕ. XII, ಚಿಕ್ಕನಾ. ೨೧-೬೫; 1160); ನೀರೊತ್ತೊಳಗಾದ ಚತುಸ್ಸೀಮೆ (ಎಕ. II, ೩೩೪-೨೮; 1282). [ನೀರ್+ಒತ್ತು$_2$]

**ನೀರೊರತೆ** 'ನೀರೊಱತೆ' ನೋ.

**ನೀರೊಲೆ** (ನಾ). (ಸ್ನಾನಕ್ಕಾಗಿ) ನೀರು ಕಾಯಿಸಲು ಹೂಡಿದ ಒಲೆ: ನೀರೊಲೆಯ ಮೇಲೆ ಕಾಯ್ದ ನೀರೂ, ಇದ್ದಲಿಯೊಲೆಯ ಮೇಲೆ ಒಂದು ಚಹದ ಪಾತೇಲಿ ವಿರಾಜಿಸುತ್ತಿತ್ತು (ಅಪನಾ. ೨೬); ನೀರೊಲೆಗಿಡುವರು ಗಂಧದ ಮರವನೆ ಜನರು (ಇಂಚಾಪ. ೧೦೨-೧೦೦). [ನೀರು$_1$ (<ನೀರ್)+ಒಲೆ$_4$]

**ನೀರೊಳ್ಳೆ** (ನಾ). ವಿಷವಿಲ್ಲದ ಒಂದು ಬಗೆಯ ಹಾವು; ನೀರು ಹಾವು: ಗರುಡನು ನೀರೊಳ್ಳೆ . . . ಕೆಣಕಿದ ಪರಿಯೊಳೆನ್ನನು ಹರದ ನಣುಗನಿವ ಕೆರಳಿಸಿದಂ (ಜೀಸಂಚ. ೧೧-೩); ವಾಸುಗಿಯ ನೀರೊಳ್ಳೆ ತನ್ನ ನಿವಾಸದಲಿ ಜಱೆವುದು (ತೊರರಾ. ೫-೩-೫೬); ಕಂಡಿರೆ . . . ನೀರೊಳ್ಳೆ ಪುತ್ತಿನ ಪಾವಂ ನುಂಗಲಾಟಿಪೊಂದಂದಮಂ (ರಾಮಾಶ್ವ. ೧೫೭-೭). [ನೀರ್+ಒಳ್ಳೆ$_2$]

**ನೀರೊಱತೆ,** ನೀರೊರತೆ (ನಾ). ನೀರು ಜಿನುಗುವ ತಗ್ಗು,—ಕುಳಿ: ನೀರೊಱತೆಗಳ ನೆಲ ನವಘನೋದಕದುಬ್ಬು ನಿರ್ಜರದ ನಿಱಿಸು ನಿಡುಜಂರ್ಝಾಸವಿಸರನ ಬಿಱಿಸು ಬೇಸಱಿನಿತ್ತವು . . . ನವಮೇಘಕಾಲದಲಿ (ತೊರರಾ. ೪-೬-೭). **ನೀರೊರತೆ:** ನೀರೊರತೆಯಿಂದ ಗಿಡಗಳಿಗೆ ನೀರು ಹಾಯಿಸಬೇಕು (ರೂಢಿ). [ನೀರ್+ಒಱತೆ (<ಒಱಿಂತೆ)]

**ನೀರೊಱೆ** (ಕ್ರಿ). ನೀರು ಸ್ರವಿಸು,—ಜಿನುಗು,—ಹೊರಸೂಸು: ತೋಳ ಹಿಂಗಟ್ಟುಗಳ ಮೋಱೆಯ ಕಾಳಿಕೆಯ ಬಿಡುದಲೆಯ ನೀರೊಱೆ ವಾಲಿಗಳ ಕುರುಭೂಪನಿದ್ದನು ತಮ್ಮದಿರು ಸಹಿತ (ಕುಪ್ಯಾಅ. ೨೧-೧); ನೀರನುಗುಳುತೆಸೆದವು ಮುತ್ತುವಸರಗಳ್ ನೀರೊಱೆಯಲು ಬಾಯಿ ಜನದ (ಕುರಾಸಾಂ. ೩-೭೬). [ನೀರ್+ಒಱೆ$_1$]

**ನೀರೋಗ** (ನಾ). ೧. ರೋಗವಿಲ್ಲದಿರುವಿಕೆ; ಆರೋಗ್ಯ: "ನೀರೋಗ ಫಲ್ಗುವಾರ್ತಮುಮಕ್ಕುಂ" (ವಸ್ತುಕೋ. ೧೨೭-೫೫); ನಿಮ್ಮ ಮೆಯ್ಯ ಕುತ್ತುಂಗಳೆಲ್ಲಮನೇಟುದಿವಸದಿಂದೊಳಗೆ ಕಿಡಿಸಿ ನೀರೋಗಮಪ್ಪಂತಿರೆ ಮಾಡುವೆವು (ಪಡ್ವಾರಾ. ೬೯-೨೪). ೨. ರೋಗವಿಲ್ಲದಿರುವವನು; ಆರೋಗ್ಯವಾಗಿರುವವನು; ನಿರೋಗಿ: ಆಗಳ್ ಸ್ವಾಹಾಂಗನಾನಾಥಂ . . . ನೀರೋಗನಾಗಿ ಮಹಾನುರಾಗಂಬೆರಸು ಪರಸಿ ಪೋದಂ (ಪಂಪಭಾ. ೫-೧೦೪ ವ). [ಸಂ.]

**ನೀರೋಗತೆ** (ನಾ). = ನೀರೋಗ ೧ : ರಾಗದ್ವೇಷಮೆ ನಿಶ್ಚಯ ರೋಗಂ ರೋಗಪ್ರದಾಘತರುಬೀಜಂ ನೀರೋಗತೆಯುನೊಲ್ವಡವೆ ತನ ಗಾಗದವೊಲ್ ನೆಗಳ್ವಡವನೆ ಸದ್ಯೋವೈದ್ಯಂ (ಉಸಾರ. ೨೭೮). [ಸಂ. ನೀರೋಗತಾ]

**ನೀರೋಗಪತ್ರ** (ನಾ). ರೋಗವಾಗಲಿ, ರೋಗಸಂಪರ್ಕವಾಗಲಿ ಇಲ್ಲವೆಂದು ತಿಳಿಸುವ ಪತ್ರ : ಬಂದರಿಗೆ ಬಂದ ಒಂದು ಹಡಗನ್ನು ಅಂಟುರೋಗದ ಭಯದಿಂದ ಕೆಲವು ಕಾಲ ಸಂಪರ್ಕವಿಲ್ಲದಂತೆ ದೂರದಲ್ಲಿಟ್ಟಿದ್ದು ಆ ಗಡು ಮುಗಿದ ಮೇಲೆಯೊ ಅಥವಾ ಅಂಥ ಹಡಗು ನೀರೋಗಪತ್ರ ತೋರಿಸಿದ ಮೇಲೆಯೊ ಬಂದರಿನೊಡನೆ ಸಂಪರ್ಕ ಮಾಡಲು ಹಡಗಿಗೆ ಕೊಡುವ ಅನುಮತಿಪತ್ರ, ಪರವಾನೆ : ಸಂಸರ್ಗಾನುಮತಿಪತ್ರ (Pratique. ಇಂಕನಿ). [ನೀರೋಗ+ಪತ್ರ]

**ನೀರೋಗರ** (ನಾ). ಒಂದು ಬಗೆಯ ಅನ್ನ : ಸರಿನೀರು ಸರಿಮೊಸರು ಶುಂಠಿ ನೀರುಳ್ಳಿಗಳ ತುಱುವಲೇಲಕ್ಕಿ ತದುಕಿನ ಚಿಗುರ ಕಿಱುಗಟ್ಟು ವೆರಸಿ ನೀರೋಗರವ ಹಾಕಲದು ತ್ರೈಲೋಕ್ಯಪೂಜ್ಯ ತಕ್ರೋದನ (ಸೂಪಶಾ. ೩-೨೭). “ನೀರೊಳಗಿದ್ದ ಓಗರ” (ಸೂಪಶಾ. ಟೀಕೆ). [ನೀರ್+ಓಗರ]

**ನೀರೋಗಿ** (ನಾ). ರೋಗವಿಲ್ಲದಿರುವವನು ; ಆರೋಗ್ಯವಂತ ; ‘‘ಸಹ್ಯ, ಅರುಜ’’ (ನಾನಾರ. ೬. ೧೦೧). [ಸಂ. ನೀರೋಗಿನ್]

**ನೀರೋಟ** (ನಾ). ೧. ನೀರಿನ ನಡೆ,—ಹರಿವು : ನೀರೋಟದಿಂದ ನಡೆಯುವ ಪುರಾತನಕಾಲದ ಒಂದು ಗಡಿಯಾರ (Clepsydra. ಇಂಕನಿ). ೨. (ವಜ್ರ ಮುಂತಾದ) ರತ್ನಗಳಲ್ಲಿರುವ ಕಾಂತಿ,—ಪ್ರಕಾಶ : ಚೆನ್ನಾದ ನೀರೋಟದಿಂದ ಹೊಳೆಯುವ ಎಂಟುಮುಖದ ವೈಡೂರ್ಯಮಣಿಯಿದೆ (ಬುದ್ಧಪ. ೧೯೭) ; ಈ ಅಂಶವನ್ನು ವಜ್ರರತ್ನಾದಿಗಳಲ್ಲೂ ಪರೀಕ್ಷಕರು ತಿಳಿಯುವರು. ಲೌಕಿಕರು ಸಹ ಇದನ್ನು ನೀರೋಟವೆಂದು ಹೇಳುತ್ತಾರೆ (ಹಿಂದಸಾ. ೧೦೧) ; ತುಂಬ ಬೆಲೆ ಬಾಳುವ ವಜ್ರದೊಳಗೆ ಬಳುಕುತ್ತ ಬಳುಕುತ್ತ ಕಣ್ಮನಗಳನ್ನು ಸೆರೆಗೊಳ್ಳುವಂತೆ ತೋರುವ ನೀರೋಟದಂತಿರುವ ಕಣ್ಣಿನ ಕಾಂತಿ . . . ಇವುಗಳಿಂದ ಕೂಡಿದ್ದ ಆ ಬಾಲಕನನ್ನೇ ಸಭಿಕರೆಲ್ಲರೂ ದೃಷ್ಟಿಸಿ ನೋಡುತ್ತಿದ್ದರು (ತುರಾಯಿ. ೨೯). [ನೀರು$_1$ (<ನೀರ್)+ಓಟ. / ತಮಿ. ನೀರೋಟ್ಟಮ್]

**ನೀರೋಟೆ** (ನಾ). ಬಿದಿರಿನ ಜಾತಿಗೆ ಸೇರಿದ ಒಂದು ಬಗೆಯ ಜಲಸಸ್ಯ : ಸ್ಲೇಟನ್ನು ಒರೆಸಲು ನೀರೋಟೆ ಬೇರು . . . ಪೆಟ್ಲಿಗೆ ಗಜ ಒದಗಿಸುತ್ತಿದ್ದವರು ರಾಗಜ್ಞ (ಪ್ರಶ್ನೆ. ೮೭). [ನೀರು$_1$(<ನೀರ್)+ಓಟೆ$_1$]

**ನೀರೋಡು** (ಕ್ರಿ). ೧. ಇಂಗಿ ಹೋಗು ; ಒಣಗು ; ಪಸೆಯಾರು ; ನಿರ್ದ್ರವವಾಗು : ಚಾರುತರವಿಮಳವರೌಕ್ತಿಕಹಾರಾದಿ ಸಮಸ್ತರತ್ನರಾಶಿಗಳಿಂದಂ ನೀರೋಡಿದ ರತ್ನಾಕರವೋರನ್ನಮುದಾಯ್ತು ರನ್ನವಸರಂ ಪುರದೊಳ್ (ಗಿರಿಕ. ೨-೯೩) ; ಬಾಡಿದ ಬಹಿರ್ಮುಖಂ ನೀರೋಡಿದ ಬಾಯ್ ಪ್ರಕೃತಿ ವಿಕೃತಿಯಾದೊಡೆ ತುರಗಂ . . . ಓಡುವುದಾ ಜವನ ಭವನಮಂ ಮುಟ್ಟುವಿನಂ (ಅಶ್ವಶಾ. ೬-೪೨). ೨. ಬೆವರು ಹರಿ : ಸಿಡುಸುಯ್ ನೀರೋಡುವ ವದನಂ ನಸುನಡುಗುವ ಮೆಯ್ (ಜಯಕಾ. ೩-೧೪). ೩. ಕಾಂತಿಯನ್ನು ಕಳೆದುಕೊಳ್ಳು ; ಹೊಳಪನ್ನು ಕಳೆದುಕೊಳ್ಳು ; ಕಳೆಗುಂದು ; ಬಣ್ಣಗುಂದು ; ತಾರಕಾಳಿ ನೀರೋಡಿ ಕಱಲ್ದು ಬೀಟ್ಟಿ ಕಱಿವೂಗೆಣೆಯಾಗಿರೆ ತಣ್ಣನಪ್ಪೆಲರ್ ತೀಡೆ ತಪೋವನಂಬೊಲತಿಪಾವನಮಾಯ್ತು ನಭಂ ಪ್ರಭಾತದೊಳ್ (ಮಲ್ಲಿಪು. ೧೨-೧೫) ; ರವಿಕಿರಣಂ ನೀರೋಡುತ್ತಿವೆ ತಣ್ಪಂ ಬೀಱುತಿವೆ . . . ಮೇಘಂ ಹಿಂಡಿ ಹರಹಿದಂತಿವೆ ನಭದೊಳ್ (ಗಿರಿಕ. ೯-೬೨) ; ಕೊಱತೆ ನಿನಗಿಲ್ಲದೇಕೆಂದಱಿಯೆಂ ನೀರೋಡಿ ನಿನ್ನ ತನುವಿನ ಬಣ್ಣಂ ಬಱುಗೊಳದವೊಲಾಯ್ತು (ಯಶೋಚ. ೩-೬) ; ಬಾಡಿದುದೇಕೆ ನಿನ್ನ ತನುವಲ್ಲರಿಯಿಂದುಮುಖೀಂದು ನಾಡೆ ನೀರೋಡಿದುದೇಕೆ . . . ಪೇೞ ನೀನೆನಗೆ ನೀಳಸರೋಜವಿಲೋಲಲೋಚನೇ (ಪುಣ್ಯಾಸ್ರ. ೧-೬೩) ; ಒಂದು ಲಕ್ಷ ಮೇಲೊಡ್ಡ ಆಡೆನೆ ಶಿವಯೆನುತಾಡಿ ಗೆಲಲು ನೀರೋಡಿತು ಶಿವನ ಮುಖಾಬ್ಜ (ಭೈರವೇ. ೧-೩೫೩) ; ಕೆಲವು ನಿಮಿಷಗಳೊಳಗಾಗಿ ಅವನ ಮುಖ ನೀರೋಡಿತು (ಮಹಾಗ. ೩೨೮). ೪. ಉತ್ಸಾಹಗುಂದು ; ಉದಾಸೀನವಾಗು : ಹೇಡಿಗೊಳದೆ ಹೆದಱದೆ ನಿಜಮನ ನೀರೋಡದೆ ತಪವ ಮಾಡುವರು (ರಾಮವಿ. ೨೦-೧೨೮). [ನೀರ್+ಓಡು$_1$]

**ನೀರೋಣಿ** (ನಾ). ನೀರಾವರಿಯ ಮೇಲೆ ವಿಧಿಸುವ ಒಂದು ಬಗೆಯ ತೆರಿಗೆ (?) : ಈ ತೋಂಟಕೆ ಬಡಗಮಂ ಕರಿಯೋಣಿ ತೆಂಕಮಂ ಕರಿಯೋಣಿ ನೀರೋಣಿ ಘೈಸಾಸರ ಕೇಶವದೇವನ ನೂಱ ಮೂವತ್ತು ಮರಕ್ಕೆ ದೇ[ವ]ರ ತೋಂಟದ ಬಾವಿಯಲು ನೀರನೆತ್ತಿಯೂಡುವರು (ಸೌಇಇ. IX–I, ೨೬೭–೬೫ ; 1160) ; ಸುಂಕ ಸುವರ್ಣಾದಾಯ ಕಲ ಕೊಠಾರ ಕಾಲೋಣಿ ನೀರೋಣಿಯೇನುಂಟಾದ ಸಕಲಾಯ ಸ್ವಾಮ್ಯವನು . . . ಅನುಭವಿಸಿಕೊಂಡು (ಎಕ. III, ತಿರುನ. ೬೨–೧೬೬ ; 1622) ; ಈ ಗ್ರಾಮುಗಳಿಗೆ ಸಲುವ ಕಾಲೋಣಿ ನೀರೋಣಿ ಅಕ್ಷಿಣಿ ಆಗಾಮಿ ನಿಧಿ ನಿಕ್ಷೇಪ ಜಲಪಾಷಾಣ ಅಷ್ಟಭೋಗ ತೇಜಸ್ವಾಮ್ಯಗಳನು ನೀವು . . . ಅನುಭವಿಸಿಕೊಣ್ದು ಬಹಿರಿಯನ್ದು ಕೊಟ್ಟ ಭೂದಾನ ಧರ್ಮಶಾಸನ (ಎಕ. XIV, ಮೈಸೂರು. ೧೧೪–೬೩ ; 1665). ‘ನೀರಾಣಿವರಿ’, ‘ನೀರುಣಿಸುಂಕ’ ಪರಾ. [ನೀರ್+ ?]

**ನೀರ್ಕಟ್ಟೆ** (ನಾ). ನೀರಿಗೆ ಅಡ್ಡಲಾಗಿ ಕಟ್ಟುವ ಒಡ್ಡು ; ಅಣೆಕಟ್ಟು : ಸೇತುವೆ ಎಂದು ಕರೆಯುವ ಬದಲು ನೀರ್ಕಟ್ಟೆ ( Dam ) ಎಂದರೂ ಸಲ್ಲುವುದು (ಬಾಲಪ್ರ. I, ೧೭೨) ; ಒಂದು ನೀರ್ಕಟ್ಟೆಯಿಲ್ಲ, ಕಾಲುವೆಯಿಲ್ಲ (ಚಿಗುಕ. ೨೭). [ನೀರ್+ಕಟ್ಟೆ$_1$]

**ನೀರ್ಕಲ್** ‘ನೀರ್ಗಲ್’ ನೋ.

**ನೀರ್ಕಾಗೆ** ‘ನೀರ್ಗಾಗೆ’ ನೋ.

**ನೀರ್ಕಾಲ್** (ನಾ). ಕೆರೆ, ನದಿ ಮುಂತಾದುವುಗಳಿಂದ ಗದ್ದೆಗಳಿಗೆ ನೀರು ಹಾಯಿಸಲು ಮಾಡಿದ ನಾಲೆ ; ಕಾಲುವೆ : ಹಳ್ಳದ ನೀರ್ಕಾಲಿಂ ಕೆಳಗೆ ಸರ್ವನಮಸ್ಯವಾಗಿ ಕೊಟ್ಟ ತೋಂಟ ಕಾಲ ಮತ್ತರೊಂದು ಪ್ರಭುವಿಷ್ಣುದೇವ ಆ ನೀರ್ಕಾಲಿಂ ಬಡಗಲು ಸರ್ವನಮಸ್ಯವಾಗಿ ಕೊಟ್ಟ ಕರಿಯ ಕೆಯಿ ಘಳೆಯ ಮತ್ತರೊಂದು (ನಾಂದೇಡ್. ೩೧–೨೨ ; 1134). [ನೀರ್+ಕಾಲ್$_2$]

**ನೀರ್ಕುಟಿಕ**$_1$ (ನಾ). ನಾವೆಯನ್ನು ನಡೆಸುವವನು ; ಅಂಬಿಗ : “ನೀರ್ಕುಟಿಕನೆಂದು ಅಂಬಿಗಂ” (ಕಶಸಾ. ೬೧–೩೫೪) ; “ಅಂಬಿಗ ತಾಂ ನೀರ್ಕುಟಿಕಂ” (ಕವಿಕಂ. ೧೫೫). [ನೀರ್+ಕುಟಿಕ$_1$]

**ನೀರ್ಕುಟಿಕ**$_2$ ‘ನೀರ್ಗುಟಿಕ’ ನೋ.

**ನೀರ್ಕುಟಿಗ** ‘ನೀರ್ಗುಟಿಗ’ ನೋ.

**ನೀರ್ಕುಡಿ** ‘ನೀರ್ಗುಡಿ’ ನೋ.

**ನೀರ್ಕುಡಿಹ** (ನಾ). ನೀರನ್ನು ಕುಡಿಯುವಿಕೆ ; ಜಲಪಾನ : ಕಣ್ಗಳ್ ಚೆನ್ನಾಗಿ ತೋಱುಹ, ನೀರಂ ಕುಡಿವಾಗಳ್ ಮುಸುಡ ಅಟ್ಟ ನೀರ್ಕುಡಿಹ . . . ಈ ಲಕ್ಷಣಂಗಳನುಳ್ಳ ಕುದಿರೆ ಸಂಪೂರ್ಣಮಪ್ಪಾಯುಷ್ಯಮನುಳ್ಳುದು (ಲೋಕೋಪ. ೧೧–೭೫ ಟೀಕು). [ನೀರ್ಕುಡಿ(<ನೀರ್ಗುಡಿ)+-ಹ$_2$(<-ಪ$_2$)]

**ನೀರ್ಕುಳಿಗೊಳ್** ‘ನೀಳ್ಕುಳಿಗೊಳ್’ ನೋ.

**ನೀರ್ಕೋಳಿ** ‘ನೀರುಗೋೞಿ’ ನೋ.

**ನೀರ್ಗಂಜಿ** (ನಾ). ತಿಳಿಯಾದ ಗಂಜಿ,—ಅಂಬಲಿ : ಬರುತಿತ್ತು ಸಂಪತ್ತು ದಿನ ಸಂಜೆಗೆ ಈಗಿಲ್ಲಿ ದಿಕ್ಕಿಲ್ಲ ನೀರ್ಗಂಜಿಗೆ (ಗಂಗಾತ. ೫೬–೨).
[ನೀರ್ + ಗಂಜಿ$_1$]

**ನೀರ್ಗಂಟಿ,** ನೀರುಗಂಟಿ (ನಾ). ಕೆರೆ, ಕಾಲುವೆ, ಜಲಾಶಯ ಮುಂತಾದುವುಗಳಿಂದ ಗದ್ದೆಗಳಿಗೆ ನೀರು ಹಾಯಿಸಲು ಸರ್ಕಾರ ದಿಂದ ನೇಮಕನಾದವನು : "ಮಿವ್ವ = ನೀರ್ಗಂಟಿ" (ಕಾಶಕ್ಯ. ೫೪) ; ಆಂಧ್ರದೇಶಕ್ಕೆ ಹೋಗಿ ನೀರ್ಗಂಟಿಯೊಬ್ಬನಿಗೆ ಅನುಗ್ರಹಿಸಿ . . . ಗೂಳೂರುಮಠಕ್ಕೆ ಬಂದರು (ಶರಚ. ೬೧೬) ; ನೀರ್ಗಂಟಿ ಹೇಳಿದನು : "ಕೊಡುವೆವೆನ್ನುವ ವೇಳೆ ಮಿಂಚಿ ಹೋಯಿತು . . . ತನ್ನಿ ತನ್ನಿರಿ ಬೇಗ" (ನವರಾ. IV, ೨೪–೧೩). **ನೀರುಗಂಟಿ :** ಈ ಕಟ್ಟೇ ಕಾಲುವೇ ನೀರನ್ನು ಸರಾಗವಾಗಿ ತಂದು ಪೈರನ್ನು ಮಾಡಿಸುವದಕ್ಕೆ ಕಾಲುವೇ ಮಣೇಗಾರ ೧, ಶಾನುಭೋಗ ೧, ಕಾಲವೂಳಿಗ ೧, ನೀರುಗಂಟಿ ೧ . . . ಮುಂತಾದ ಜನಗಳನ್ನು ನೇಮಕ ಮಾಡಿಸಿದರು (ಚಾಮುಸಂ. ೧೧೭) ; ನೀರುಗಂಟಿ—ಕೆರೆ ಮತ್ತು ನಾಲಾಗಳಿಂದ ನೀರನ್ನು ಬಿಡುವವನು. ಇವನಿಗೆ ಕೆಲವು ಕಡೆ ಚಕ್ರನೆಂದು ಹೆಸರುಂಟು (ಗ್ರಾಮಾಕ. ೧).
[ನೀರ್ + ಕಂಟಿ$_2$]

**ನೀರ್ಗಂಡಿ,** ನೀರುಗಂಡಿ (ನಾ). **೧.** ಕೆರೆ, ಕಟ್ಟೆ ಮುಂತಾದುವು ಗಳಿಂದ ನೀರು ಹರಿದು ಹೋಗಲು ಮಾಡಿರುವ ಕಂಡಿ ; ತೂಬು: ನೀರ್ಗಂಡಿ, ಕೂರ್ಗಲಿ (ಶಬ್ದಾನು. ೯೨ ಪ್ರಯೋ). **ನೀರುಗಂಡಿ : ೧.** (ಹಡಗಿನ ಅಟ್ಟದಿಂದ ನೀರನ್ನು ಹೊರ ಸಾಗಿಸಲು ಪಕ್ಕದಲ್ಲಿ ಮಾಡಿರುವ) ಹಡಗಿನ ನೀರುಗಂಡಿ, ತೂಬುಗಂಡಿ ( Scupper. ಇಂಕನಿ). **೨.** = ನೀರ್ದಿಡ್ಡಿ : ಈ 'ನೀರುಗಂಡಿ' ಯನ್ನು 'ದಿಡ್ಡಿ'ಯೆಂಬ ಹೆಸರಿನಿಂದಲೂ ಕರೆಯುವರು. ಕೋಟೆಯೊಳಗಿನವರು ನೀರನ್ನು ತರಲಿಕ್ಕೆಂದು ರಚಿತ ವಾದ ತೀರ ಚಿಕ್ಕ ಬಾಗಿಲುಗಳಿವು (ಕರ್ನಾಜ. ೫೫).
[ನೀರ್ + ಕಂಡಿ$_1$]

**ನೀರ್ಗಂತುಕ** (ನಾ). ಜಲಕೇಳಿಯಲ್ಲಿ ಉಪಯೋಗಿಸುವ ಚೆಂಡು : ಜಳಯಂತ್ರದಿಂದ ಕೋಮಳೆಯೆಸೆಯೆ ಮತ್ತೊರ್ವ ನಳಿನಾಕ್ಷಿ ಪೊನ್ನಂಡೆ ಯಿಂದ ಕುಳಿರ್ವೊೀದಕದಿನಿಡೆ ಹೊಳದಿಟ್ಟನವಳ ಭೂತಳಪತಿ ನೀ [ಪಾಠಾಂ. ನಿ]ರ್ಗಂತುಕದೊಳು (ಭೈರಸೂ. I, ೨೮೦). [ನೀರ್ + ಕಂತುಕ]

**ನೀರ್ಗಂಪು** (ನಾ). ನೀರಿನ ಕಂಪು,—ವಾಸನೆ : ಮುಡಿದಲರ್ಗಂಪು ಮೈಗಂಪು ನೀರ್ಗಂಪು ಮೇಲ್ವಡಿವ ಮಂಜರಿ ಮುಡಿವಾಳ ನಿಡುರ್ಝಲ್ಲಿ ಗುಂಪಿಸ ಮಂಟಪದೊಳಗೊರ್ವ ಕಡುಚೆಲ್ವ ನೀಱೆ ನೀರೆಱೆದು (ಅಬ್ಬಲೂ. ೩–೬೪). [ನೀರ್ + ಕಂಪು]

**ನೀರ್ಗಡವ** 'ನೀರ್ಗಡವು' ನೋ.

**ನೀರ್ಗಡವು,** ನೀರ್ಗಡವ (ನಾ). ಒಂದು ಬಗೆಯ ಕದಂಬವೃಕ್ಷ: ನೀರ್ಗಡರಿ(ವಿ)ನ ಪೊದಱಿಂ ಪುತ್ತಿನ ಮೇಗೊಂಡುತ್ತರದೊಳ್ ಬಗೆದು ಮೂಗೆಯ್ಕೆಂ ಪಾಣ್ಣ ಗುಟಿರ್ ಬಾವಿಯಂ ಮೂಜಾಳ ಮಟ್ಟದೊಳ್ ನೀರ ಧಾರೆಗಳಕ್ಕುಂ (ಜಿಟ್ಟಮ. ೧೧-೫೫). **ನೀರ್ಗಡವ :** ಕೊಱೆದಿರ್ದ ಚರ್ಮವುಂ ಪೆರ್ಚಿದ ಪುಣ್ಗಳಂ ತೊಳೆದು ಕೊ(ತೊ)ಯ್ದು ಬಱಿಕ್ಕೆ ಜಲಾಶಯಂಗಳೊಳ್ ಪಚ್ಚನೆಯಪ್ಪ ನೀರ್ಗಡ(ಹು)ವಮಂ ಕರಿಮಾಡಿಡೆ ತದ್ವಿಷಾಪಹಂ (ಖಮದ. ೧೨–೫೭).
[ನೀರ್ + ಕಡವು$_2$ (< ಕಡಂಬ)]

**ನೀರ್ಗಡಿಯಾರ** (ನಾ). ನೀರು ಒಂದು ಪಾತ್ರೆಯಿಂದ ಇನ್ನೊಂದು ಪಾತ್ರೆಗೆ ಧಾರೆಯಾಗಿ ಹರಿಯುವುದರ ಮೂಲಕ ಕಾಲಮಾಪನ ಮಾಡುವ ಒಂದು ಸಾಧನ : "ನೀರೋಟದಿಂದ ನಡೆಯುವ ಪುರಾತನ ಕಾಲದ ಒಂದು ಗಡಿಯಾರ ; ನೀರ್ಗಡಿಯಾರ" (Clepsydra. ಇಂಕನಿ) ; ಈ ವೇಳಾಚಕ್ರಗಳಲ್ಲದೆ, ನೀರ್ಗಡಿಯಾರಗಳನ್ನೂ ಇಂಡಿಯಾದ ದೊಡ್ಡ ದೊಡ್ಡ ವಿಹಾರಗಳಲ್ಲಿ ಉಪಯೋಗಿಸುತ್ತಾರೆ (ಪ್ರವಾಇ. I, ೨೯೦).
[ನೀರ್ + ಗಡಿಯಾರ (< ಘಳಿಯಾರ)]

**ನೀರ್ಗಡೆ** (ಕ್ರಿ). ನೀರನ್ನು ಕಡೆ,—ಮಥಿಸು : ಎಣ್ಣೆಯಕ್ಕುಮೆಂದು ಮಣಲಂ ಪಿಟಿವೊಡಂ . . . ಬೆಣ್ಣೆಯಕ್ಕುಮೆಂದು ನೀರ್ಗಡೆವೊಡಮ ವಾಗದಂತೆವೊಲು (ಪಸಾರ. ೪೬೦). [ನೀರ್ + ಕಡೆ$_1$]

**ನೀರ್ಗಡ್ಡೆ** (ನಾ). ಹೆಪ್ಪುಗಟ್ಟಿದ ನೀರು ; ಮಂಜುಗಡ್ಡೆ : ಶೀತಲ ವಾಯ್ತೆನ್ನದೆ ನೀರ್ಗಡ್ಡೆಯಂತೆ (ಕಗದ್ಯ. ೧೪೦). [ನೀರ್ + ಗಡ್ಡೆ]

**ನೀರ್ಗಣಿವೆ** (ನಾ). ನೀರಿನಲ್ಲಿ ಉಂಟಾದ ತಗ್ಗು, —ಕಂದರ : ಹರೀಶ್ವರಂ ತಾನೆತ್ತ ಚಲಿಸಿದೊಡತ್ತಲಳ್ಕಿ ಸೆಡೆತುದು ಕಡಲ್ ನೀರ್ಗಣಿವೆಯಪ್ಪವೋಲ್ (ಶ್ರೀರಾಮಾ. ೪೨೯–೧೭೯).
[ನೀರ್ + ಕಣಿವೆ (< ಕಣುವೆ)]

**ನೀರ್ಗಣ್ಣೆ,** ನೀರುಗಣ್ಣೆ (ನಾ). **೧.** ನೀರಿನಿಂದ ಕೂಡಿದ ಕಣ್ಣುಳ್ಳ ವಳು : "ಹೇಳಿದೆನಲ್ಲ" ಎನ್ನುತ್ತ ನೀರ್ಗಣ್ಣೆಯಾದಳು (ಜೆಳುಮ. ೪೨). **ನೀರುಗಣ್ಣೆ : ೨.** ಯಾವಾಗಲೂ ಅಳುವವಳು ; ಅಳುಬುರುಕಿ : ನೀರುಗಣ್ಣೆ ಮುಂಡೆ ಊರು ಹಾಳು ಮಾಡಿದಳು (ಗಾದೆ).
[ನೀರ್ + ಕಣ್ಣು (< ಕಣ್) + –ಇ$_2$]

**ನೀರ್ಗನಿಗಲು** 'ನೀರುಗಣಿಗಲು' ನೋ.

**ನೀರ್ಗರುಳ** (ನಾ). ಮೃದುಸ್ವಭಾವದವನು ; ಕೋಮಲ ಸ್ವಭಾವದವನು : "ನೀ[ಪಾಠಾಂ. ನಿ]ರ್ಗರುಳಂ ಕೋಮಲನು" (ಭಾರನಿ. ೧೫). [ನೀರ್ + ಕರುಳ್ + –ಅ$_7$]

**ನೀರ್ಗರೆ** (ಕ್ರಿ). ನೀರನ್ನು ಸುರಿ,—ವರ್ಷಿಸು : ವಾರಿಜಾಕ್ಷನು ಸಕಲ ನಾರಿಯರ ಮ್ಯಾಲೆ ಕರವಾರಿಜಂಗಳಲಿ ನಿರ್ಭರದಿ ಚಲ್ಲಿದೊಡೆಯಾ ನೀರೆಯರು ಕೆರಳಿವೊಬ್ಬುಳಿಯಾಗಿ ನೀರ್ಗರೆದರಾ ಹರಿಗೆ ವಿವಹದಲ್ಲಿ (ನವಮೋ. ೧೨–೪೯). [ನೀರ್ + ಕರೆ$_2$ (< ಕಱೆ$_1$)]

**ನೀರ್ಗಲ್,** ನೀರ್ಕಲ್, ನೀರ್ಗಲ್ಲು (ನಾ). **೧.** ಘನೀಭೂತವಾದ ನೀರು ; ಮಂಜುಗಡ್ಡೆ : ನೀರಧಿ ಬ್ರಹ್ಮ, ನೀರ್ಗಲ್ ಜೀವವೆನು ತೊಂದು . . . ಮತವಿವರ (ಮಂಕುಕ. ೭೭೧). **೨.** ಅಂತಃಕಾಂತಿ ಯುಳ್ಳ ಕಲ್ಲು ; ರತ್ನ : ಬಲ್ಗೊಡದನ್ನವೀ ಮೊಲೆಯ ಬಿಣ್ಪೊದವಲ್ ಸುಕುಮಾರಿಯರ್ಗೆ ನೀರ್ಗಲ್ಗಳ ಹಾರದೊಂದು ಪೊಱೆಯೇಕೆನುತುಂ ಜಲದೇವಿ ಕೊಟ್ಟವೋಲ್ ಕಲ್ಗಳನಾವಗಂ ಬಲಿದು ಬೆಟ್ಟದುವಾಗದ ಬಿಂದು ಮೌಕ್ತಿಕಂ ವಲ್ಗದುರೋಜಮಂಡಲದೊಳೇಂ ತುಱುಗಿರ್ದುವೊ ಕಾಂತೆಯರ್ಕಳಾ (ಲೀಲಾವ. ೧೪–೧೫); "ಮುತ್ತು ?" (ಪ್ರಭಣ್ಣ). **೩.** ನೀರು ಸ್ರವಿಸುವ ಕಲ್ಲು ; ಚಂದ್ರಕಾಂತಶಿಲೆ : ಪಾಲ್ಗಡಲೊಳಪೊಕ್ಕ ಶಶಿ ಯಂತೆ ಪೊಕ್ಕು ನೀರ್ಗಲ್ಗಳ ರುಚಿ ಸರಸಿಯನು ಸಲ್ಗೆಯಸುರರೆಯ್ದಿ ಮಿಂದೆಯ್ದಿದನು ಕೂಟ ಸಾಲ್ಗಳ ಜಿನನ ಮಂದಿರವ (ಪರ್ಧಚ. ೯–೯೪). **ನೀರ್ಕಲ್ : ೪.** ನೀರಿನ ಮಧ್ಯದಲ್ಲಿರುವ ಕಲ್ಲು : ಅಱುಹು ವಾರ್ಭಟಕತ್ಯಧಿಕಭೀಕರದೊಳಂಬುಜ ಕೈರವಂಗಳ್ ಶರದೊಳಾಳಲ್ಕಳ್ಕಿ ನೀರ್ಕಲ್ವಿಡಿದು ವ್ರತತತಿಗಳ ನೆರವಿ ನೆಱೆ ಮೆಱೆದುಱುಗಲಿಂ ಪರಿಪರಿದಡರ್ದು ಪುವ್ವಿಡಿಯಲ್ (ಮದೇಪು. ೨–೨೯). **ನೀರ್ಗಲ್ಲು : ೧.** ಹಿಮವಿಲ್ಲದಾ ಋತುವಿನಲ್ಲಿ ಹಿಮ ಬಿದ್ದು, ಆಳದಗಲದ ಹೊಳೆಯ ನೀರೆಲ್ಲ ನೀರ್ಗಲ್ಲ ಗಡ್ಡೆಗಟ್ಟೆ (ಪಾರಸಿ. ೧೮–೪೨೧); ಅಲ್ಲಿಗೆ ಹೋಗಲು . . . ಪರ್ವತಶ್ರೇಣಿ ಯನ್ನು ದಾಟಬೇಕಾಗಿತ್ತು. ಈ ಪರ್ವತಶ್ರೇಣಿ ನೀರ್ಗಲ್ಲಿನಿಂದ ಆವೃತ ವಾಗಿತ್ತು (ಪ್ರವಾಇ. I, ೧೯೧).

ನೀರ್ಗಲ್ಲ ಹಾವುಗೆ = "ಹಿಮದಮೇಲೆ ನಡೆಯುವಾಗ ಕಾಲು ಹೂತು ಹೋಗದಂತೆ ಹಾಕಿಕೊಳ್ಳುವ, ಟೆನಿಸ್ ದಾಂಡಿನಾಕಾರದ

ಅಥವಾ ಜಾರುಮರದ ಜೋಡು ; ಮಂಜು ಜೋಡು ; ನೀರ್ಗಲ್ಲ ಹಾವುಗೆ" (Snow-shoes. ಇಂಕನ). [ನೀರ್ + ಕಲ್$_3$]

**ನೀರ್ಗಲ್ಲು** 'ನೀರ್ಗಲ್' ನೋ.

**ನೀರ್ಗಾಗೆ** ನೀರುಕಾಗೆ, ನೀರುಗಾಗೆ, ನೀರ್ಕಾಗೆ (ನಾ). ಒಂದು ಬಗೆಯ ನೀರುಹಕ್ಕಿ ; ಜಲಕಾಕ : "ಮದ್ಗು ಜಳಕಾಕಮೆನೆ ನೀರ್ಗಾಗೆ" (ಪಂಗರಾ. ೫೧-೫) ; ಇರ್ವರುಮಾ ಗೊರವರ್ ಕೇಳ್ವಂತಾಗಿ ನುಡಿದು ಅಲ್ಲಿಂ ತಳರ್ದು ಪೋಗಿ ಕೊಕ್ಕುಂ (ಕುಕ್ಕುಂ) ನೀರ್ಗಾಗೆಯುಮಾಗಿ ಬಂದವರ ಸವಿಾಪದ ನೀರ ತಡಿಯೊಳಿರ್ದು ಕೊಕ್ಕು (ಕುಕ್ಕುಂ) ನೀರ್ಗಾಗೆಯುಂ ಬೆಸಗೊಳ್ಗುಂ (ಜೀವಸಂ. ೧೬೩-೩೦ ಪ). **ನೀರುಕಾಗೆ** : "ಮದ್ಗುಃ ಎಂದರೆ ನೀರುಕಾಗೆ" (ನಾಚಿರಾ. ೧೧೫) ; ತಿಳಿದ ತಿಳಿಗೊಳದ ತಳಿತ ತಾವರೆಯುರಳ ತಂಡುಲದ ರುಚಿಯು ಕಳಹಂಸಿ ಬಲ್ಲುದಲ್ಲದೆ ಒಡನಿರ್ದ ನೀರುಕಾ [ಪಾಠಾಂ. ಗಾ]ಗೆ ತಾನೆತ್ತ ಬಲ್ಲುದೋ (ಆದಪ. ೮೨-೧೩೫) ; ಸಿಹಿ ವೆಗ್ಗಳವಾಗಿ ಆಹಾರವ ಕೊಂಡಿದ್ದರೆ ನಾಡಿಯು ನರ ತೋರವಾಗಿ ಕಪ್ಪೆಯು ನಡೆಯು ಹಾಗೆ ನಡೆಯುತ್ತಿಹುದು ಹುಳಿ ವೆಗ್ಗಳವಾಗಿ ಕೊಂಡಿದ್ದರೆ ಎಣ್ಣೆ ಪೂಸಿದ ಹಾಗೆಯೂ ನೀರುಕಾಗೆಯ ಹಾಗೆಯೂ ವೇಗ ಕೂಡಿ ನಡೆವದು (ವೈದ್ಯಸಾ. I, ೬). **ನೀರುಗಾಗೆ** : "ಜಲವಾಯಸ—ನೀರುಗಾಗೆ" (ಓಷಧಿ. ೬೧). **ನೀರ್ಕಾಗೆ** : "ರಕ್ಕಸನೊಳು . . . ನೀರ್ಕಾಗೆಯೊಳು ಶಕ್ತಿಯೊಳು ಮುಸಲಿಯೊಳು ಬಲವೆನಿಕ್ಕು" (ಪಂಗರಾ. ೧೪೭-೩೯).
[ನೀರ್ + ಕಾಗೆ]

**ನೀರ್ಗಾದಿಗೆ**, ನೀರ್ಗಾರಿಗೆ (ನಾ). (ಕೋಟೆಯ ಸುತ್ತಲೂ ಇರುವ) ನೀರಿನಿಂದ ತುಂಬಿರುವ ಕಂದಕ ; ಅಗಳು : ಜರಾಸಂಧಂಗಳ್ಕಿ ಮಧುರಾಪುರಮಂ ಬಿಸುಟ್ಟು ಪೋಗಿ ದ್ವಾರಾವತಿಯಂ ಸಮುದ್ರಮೆ ನೀರ್ಗಾದಿಗೆಯಾಗಿ ಮಾಡಿದಂ (ಪಂಪಭಾ. ೬-೨೬ ಪ) ; ಆ ಸಮಸ್ತಜನತಾಹ್ಲಾದಿಯಾದ ನೀರ್ಗಾದಿಗೆಯಿಂ ಮಸಕ್ಕೆವಪ್ಪೆರಡನೆಯ ಮೇದಿನೀಭಾಗದಿಂದತ್ತ . . . ಜಾಂಬೂನದವೇದಿಕಾಪರಿವೃತ್ತಿಯಿಂದ್ರಮೊಳಗೆ (ಪರ್ಧಮಾ. ೧೩-೪೧ ಪ) ; ಬಡಬಾನಲಂಗೆ ಸೆಡೆದಿಂಗಡಲೆ ಸರಣ್ಬೊಕ್ಕುದಮುರಶೈಲಮನೆಂಬೀ ಪಡೆಮಾತಂ ನೀರ್ಗಾದಿಗೆ ಪಡೆಯುತ್ತುಂ ಪೊನ್ನ ಕೋಂಟೆಯುಂ ಬಳಸಿರ್ಕುಂ (ಪಂರಾಮಾ. ೧-೧೧೩) ; ನೀರ್ಗಾದಿಗೆ ಕೋಟೆಯುಂದಮೊಗೆದಿರ್ದತ್ಯುತ್ಸವಂ ಮೇಘದೊಳ್ ತೋರೆಯೆಂಬಂತಿರೆ ಸನ್ನುತಂ ಕೃತಿ ಸುಧಾಕರ್ಮಂಗಳಿಂದುನ್ನತಂ (ಜಂಹರಿ. ೧-೨೨) ; ಪೊಂಗೋಂಟೆಯು ಪರಿವೃತಮಾಗಿ ನೀರ್ಗಾದಿಗೆ ಪೆಂಪಿಂಗಾಗರವಾಗಿ ಕಣ್ಗೆ ರಾಜಿಸುವುದು (ತ್ರಿಭುತಿ. ೨-೨೩). **ನೀರ್ಗಾರಿಗೆ** : ಆ ದೇವಿಯ ಪುರದಾಗ್ನೇಯದ ಕೋಣಲಿದ್ರೊರ್ಜಿತೆ ಕುಳಿಯು ತೆಂಕಣ ನೀರ್ಗ್ಗಾರಿಗೆಯೆ ಮೇರೆ (ಎಕ. VII, ಶಿಕಾರಿ. ೩೭೩-೨೯ ; 1046) ; ಸಮುದ್ರಮೇ ನೀರ್ಗ್ಗಾರಿಗೆಯಾಗೆ ವರುಣನೇ ಕರಗ[ಬಳ]ನಾಗೆ (ಸೌಇಇ. IX-i, ೧೩೯-೨೭ ; 1074).
[ನೀರ್ + ಕಾದಿಗೆ$_1$]

**ನೀರ್ಗಾಯ್**, ನೀರುಗಾಯಿ (ನಾ). ಎಳೆಯ ತೆಂಗಿನಕಾಯಿ ; ನೀರು ತುಂಬಿರುವ ತೆಂಗು ; ಸೀಯಾಳ ; ಎಳನೀರು : ವನದೇವತೆಯರಮೃತಸಾರವಾರಿಯುಂ ಪಚ್ಚೆವರಲ ಕರಗಂಗಳೊಳ್ ತೀವಿ ತೆಂಬೆಲರ ಪೊಯ್ಲಿನಿಂ ತಣ್ಪುವಡೆಯಲೆಂದು ನೆಱೆಪಿದಂತಿರ್ದ ನೀರ್ಗಾಯ ತುಱುಗಲಿಂದೆಱಗಿದ ನಾಳಿಕೇರಭೂರುಹಂಗಳುಂ (ಚಂದ್ರಪು. ೧-೧೦೫ ಪ) ; ಬನಮಂ ಹೀರೂಡಿ ನಿಚ್ಚಂ ಬಳೆಯಿಸುವ ಬೆಸಂಬೆತ್ತುವೋ ಧಾರೆಯಿಂ ತಾಮೆನಲಾ ನೀರ್ಗಾಯ್ಗಳಿಂ ಭೋರ್ಗರೆದುಗುವೆಳನೀರಂ ನವಾಮ್ರಾಳಿ ನಾನಾವನಿಜಾತಶ್ರೇಣಿಗೋರಂತೆಡೆವಿಡದತುಳಾವಾಳಖಾತಂಗಳಿಂ ತೀವಿ ನಿತಾಂತಂ ಸುತ್ತಿ ಪೂರಂಬರಿಪುದವಱೊಳೇ ನಾರಿಕೇಳಾಂಘ್ರಿಪಂಗಳ್ (ಕುಸುಮಾ. ೧-೪೭). **ನೀರುಗಾಯಿ** : ಫಾಲ್ಗುಣ ಚೈತ್ರಮಾಸಗಳಲ್ಲಿ ನೀರುಗಾಯಿ ಕೊಬ್ಬರಿ ಅಂತ ಕಚ್ಚಾಮಾಲು ಬರುತ್ತಿರುತ್ತದೆ (ಮುಂಬಸ್ಥ್ಯಾ. ೨೮೫). [ನೀರ್ + ಕಾಯ್$_4$]

**ನೀರ್ಗಾರಿಗೆ** 'ನೀರ್ಗಾದಿಗೆ' ನೋ.

**ನೀರ್ಗಾಲ** (ನಾ). ಮಳೆಗಾಲ; ವರ್ಷಾಕಾಲ: ನೀರ್ಗಾಲಮಂ ಪೂರೈಸಿ ಮಾಸ ಕಾರ್ತಿಕಕೆ ಪೊರಮಡುವೆಂದು ಬೀರರ್ಗೆ ನಾನೆ ತಡೆಗಟ್ಟಿಹೆನ್ (ಶ್ರೀರಾಮಾ. ೩೪೪-೧೨೧). [ನೀರ್ + ಕಾಲ]

**ನೀರ್ಗಾಲಿ** (ನಾ). "ನೀರಿನ ಒತ್ತಡದಿಂದ ತಾನು ತಿರುಗಿ ಯಂತ್ರವನ್ನು ನಡಸುವ ಗಾಲಿ : ಜಲಚಕ್ರ, ನೀರ್ಗಾಲಿ" (Water-wheel. ಇಂಕನ) : ಬೊಂಬುಗಳಿಂದ ಮಾಡಿದ ಗಾಲಿಯ ಪರಿಧಿಯಲ್ಲಿ (circumference) ಬಟ್ಟಲುಗಳಿರುವ ನೀರ್ಗಾಲಿಗಳನ್ನು ಎಷ್ಟೋ ಶತಮಾನಗಳ ಹಿಂದೆ ಈಜಿಪ್ಟ್ ಮತ್ತು ಅಸ್ಸಿರಿಯ ಚಕ್ರಾಧಿಪತ್ಯಗಳಲ್ಲಿ ಬಳಸುತ್ತಿದ್ದರು (ಶಿಲ್ಪಸಾ. ೧೯೫). [ನೀರ್ + ಗಾಲಿ]

**ನೀರ್ಗಾಲುವೆ**, ನೀರುಕಾಲುವೆ (ನಾ). ೧. ನೀರು ಹರಿದು ಹೋಗಲು ಮಾಡಿರುವ ತೋಡು ; ಹರಿ : ಈಚೆಗೆ ಜನಸಂಖ್ಯೆಯು ಹೆಚ್ಚಿದ ಹಾಗೂ ತಗ್ಗಿನ ಗದ್ದೆಗಳು ಸಾಗುವಳಿಗೆ ಬಂದ ಮೇಲೆ ನೀರ್ಗಾಲುವೆಗಳ ( Drains) ಏರ್ಪಾಡು ಒಂದು ಸಮಸ್ಯೆಯಾಗುತ್ತಿದೆ (ಶಿಲ್ಪಸಾ. ೩೭೧). **ನೀರುಕಾಲುವೆ** : ೨. ಪರ್ವತದ ಮೇಲಿನಿಂದ ಹರಿಯುವ ಝರಿ ; ನಿರ್ಝರ : "ನಿರ್ಝರಃ, ಝರಃ —೨ ವಾರಿಪ್ರವಾಹ—ಬೆಟ್ಟದಲ್ಲಿ ಹುಟ್ಟುವ ಜಲಪ್ರವಾಹವು, ಕಲ್ಲುಗುಡ್ಡಗಳಲ್ಲಿ ನೀರೂರಿ ಉಕ್ಕಿ ಮೇಲ್ಗಡೆಯಿಂದ ಜಾರಿಹರಿಯುತ್ತಿರುವ ನೀರುಕಾಲುವೆಗಳು (ಸಿದ್ಧಾಂತಿ.೧೦೭). [ನೀರ್ + ಕಾಲುವೆ(<ಕಾಲ್ವಾಯ್)]

**ನೀರ್ಗಿಚ್ಚು**, ನೀರುಗಿಚ್ಚು (ನಾ). ಸಮುದ್ರದ ಒಳಗೆ ಇರುವುದೆಂದು ನಂಬಲಾದ ಬೆಂಕಿ ; ಬಡಬಾಗ್ನಿ : ಎಚ್ಚನಾರಾತಿಭಟರನವರಸುಗಳನಚ್ಚರವೆಣ್ಗಳಿಗೊಲಿದು ವೆಚ್ಚನಿಕ್ಕಿದನಾ ಬಲಜಲಧಿಯ ನೀರ್ಗಿಚ್ಚಿನಂತುಱೆ ತವಿಸಿದನು (ಕುರಾಸಾಂ. ೪೬-೫) ; ಆ ಪ್ರಚೇತಸನೆನಿಪ್ಪುದೊಂದಾನೊಂದು ವೇಳೆ ಬೀಸುತ್ತ ವೃಕ್ಷಾತತಿಯ ನಾಶವನೆಯ್ದಿಸುತ್ತಿಹುದದಗ್ನಿವಿಶ್ರಿತವಾಗಿ ಗೃಹಂಗಳಂ ಸುಡುವುದದು ವಾರಿಸಿಧಿಗತನಪ್ಪ ವಾಡಬನೊಳೊಂದಿ ನೀರ್ಗಿಚ್ಚುಮಂ ಕೆಡಲೀಯದೊಪ್ಪಿರ್ಪುದು (ವೀಶೈಪು. ೪-೧೪-೨೯). **ನೀರುಗಿಚ್ಚು** : ಕಾಡಗಿಚ್ಚಿದ್ದರೆ ಅಡವಿಯೆ ಗುಱು ನೀರುಗಿಚ್ಚಿದ್ದರೆ ಸಮುದ್ರವೆ ಗುಱು ಒಡಲಗಿಚ್ಚಿದ್ದರೆ ಆ ತನುವೇ ಗುಱು . . . ನಿಮ್ಮ ಮಾಯೆಯ ಹೊಡಗಿಚ್ಚಿಂಗೆ ನಾನು ಗುಱಿಯಲ್ಲ ಕೇಳಾ (ಅಪಚಂ. ೨೧೪-೯೬೬). [ನೀರ್ + ಕಿಚ್ಚು]

**ನೀರ್ಗಿಚ್ಚುಗೊಳ್** (ಕ್ರಿ). ಬಡಬಾನಲದ ಬಾಧೆಗೆ ಒಳಗಾಗು ; ಔರ್ವಾಗ್ನಿಯಿಂದ ಸುಡು : ಮದನಮಹಾದಾಹದಿಂ ದೇಹಂ ಕರಂ ಕೊರಗಿ ಕಡುಬಡವಾಗಿ ನೀರ್ಗಿಚ್ಚುಗೊಂಡ ಕಮಲಿನಿಯಂತಿರ್ದ ಕಾಮಿನಿಯಂ ಕಂಡು ಮನಂಗಾಣಲಾಜದೇಕಾಂತಕೆ ಕರೆದು ತಮಾಳಿಕೆ ಕಳಾವತಿಗಿಂತೆಂದಳ್ (ಲೀಲಾವ. ೭-೮೩ ಪ). [ನೀರ್ಗಿಚ್ಚು + ಕೊಳ್$_1$]

**ನೀರ್ಗಿಱು** (ಕ್ರಿ). ನೀರೆಂದು ಭಾವಿಸು ; ಜಲವೆಂದು ಎಣಿಸು : ಏಕಾಕಿ ಸಾಮಾನ್ಯನೆಂದನಿತುಂ ರಾಜಸಮಾಜಮಾಜಿಗುಱಿದೆಯ್ತಂದತ್ತು ನೀರ್ಗೆತ್ತು ಬೆಳ್ತನದಿಂ ಕತ್ತರಿವಾಣಿಯಂ ಜಡಜನಂ ಕೈಗುತ್ತಲೇಟ್ಟಿರ್ಪೋಲ್ (ಪಂರಾಮಾ. ೩-೪೮). [ನೀರ್ + ಗಿಱು]

**ನೀರ್ಗುಂಕುಮ** (ನಾ). ನೀರಾಗಿರುವ ಕುಂಕುಮ : ತಡೆದು ಬಗೆನಲ್ಲನೀಕ್ಷಿಪ ಮಡದಿಯ ಕಟ್ಟಲಿಪ ಮೊಗಮುಮರುಣೇಕ್ಷಮುಂ ತೊಡೆದಂ ಜನಮುಂ ಮಱೆದಳವಡೆ ನೀರ್ಗುಂಕುಮಮನೆಚ್ಚಿಕೊಂಡಪೊಲೆಸೆಗುಂ (ಆರ್ಧನೇ. ೩-೧೧೦). [ನೀರ್ + ಕುಂಕುಮ]

**ನೀರ್ಗುಂಡಿ** 'ನಿರ್ಗುಡಿ' ನೋ.

**ನೀರ್ಗುಂದ,** ನಿರ್ಗುಂದ, ನೀರುಗುಂದ (ನಾ). ಒಂದು ಸ್ಥಳದ ಹೆಸರು : ಪ್ರಿಥಿವೀ ನೀರ್ಗ್ಗುನ್ದ ರಾಜಸ್ಯ ವಿಜ್ಞಾಪನಾಯಾ ಮಹಾರಾಜಾಧಿರಾಜಪರಮೇಶ್ವರ ಶ್ರೀಜಸಹಿತದೇವೇನ ನೀರ್ಗುನ್ದವಿಷಯಾನ್ತಃಪಾತಿ (ಎಕ. IV, ನಾಗಮಂ. ೮೫–೫೯; 776) ; ಶ್ರೀಮತ್××[ಮಾ]ರಮಾಳೆ ನೀರ್ಗುನ್ದದ ಸ×ಗೆ ರಣಂಕ×××ರವೆ[ಳೆ]ಕಾರಣ× (ಎಕ. IV, (R), ಹುಣಸೂ. ೩–೨ ; 4ನೆಯ ಶತ). **ನಿರ್ಗುಂದ :** ಶ್ರೀಪೃಥಿವೀವಲ್ಲಭಪರಮೇಶ್ವರ ಪಲ್ಲವದಿಯರನ್ನೊಟಂಬಳ್ಗೆಸಾಸಿರಮುನ್ನಿರ್ಗ್ಗುನ್ದನಾಡುಮೂನೂಱುಮನಾಳೆ (ಎಕ. XI, ಚಳ್ಳಕೆ. ೩೩–೩೪ ; ಸು. 815) ; ನೇತ್ರ ಶಿವಾಛಾರ್ಯ್ಯಾಭಿಧಾನಾಯ ನಿರ್ಗ್ಗುನ್ದವಿಷಯಾ ಸರ್ವ್ವಬಾಧಾಪರಿಯಾಯವರ್ (ಮೈ ಆರಿ. ೧೯೧೯, ೧೦–೬೫ ; 900); ಶ್ರೀಮತ್ಸತ್ಯವಾಕ್ಯಬೀರಪೆರ್ಮ್ಮಾನಡಿಯುಂ ಗೊಟ್ಟ ಕಲ್ನಾಟು ಬೆಳ್ಗಲಿಯ ನಿರ್ಗ್ಗುನ್ದ ಜಗ್ಗಿಯರಸರ್ಗ್ಗೆ ಕೊಟ್ಟರ್ (ಎಕ. V, ಅರಕ. ೬೧–೫ ; 920). **ನೀರುಗುಂದ :** ನೀರುಗುಂದನಾಡ ಹಾ×××ದ ಚೆಣ್ಣಮುಣ್ಣಿಯ ತೀರ್ತ್ಥದ ಶ್ರೀಮಹಾದೇವರ್ಗ್ಗೆ ಚಿಕ್ಕಸಾನ್ತಲದೇವಿಯರ್ಗ್ಗೆ ಪರೋಕ್ಷವಿನಯವಾಗಿ ಎಲಗುಂದದಲು ಬಿಟ್ಟ ವ್ರಿತ್ತಿ ಮೂಱು (ಎಕ. V, ಹಾಸನ. ೯೦–೨೨; 1135) ; ಶ್ರೀಮನ್ಮಹಾಗ್ರಹಾರ ನೀರುಗುಂದದ ಶ್ರೀಸ್ವಯಂಭು ಭೀಮೇಶ್ವರದೇವರ ನಂದಾದೀವಿಗೆಗಂ . . . ಬಿಟ್ಟ ಹಾಗವೊಂದು (ಸೌಇಇ. IX–i, ೨೯೩–೨೪ ; 1162). [ನೀರ್?+ಕುಂದ$_3$]

**ನೀರ್ಗುಟಿಕ,** ನೀರ್ಕುಟಿಕ$_2$ (ನಾ). = ನೀರ್ಗಂಟಿ : "ನೀರ್ಗುಟಿಕನೆನೆ ನೀರೆಱೆವನಕ್ಕು" (ಕಬ್ಬಿಕೈ. ೩೬) ; ಶೋಧಿಸಿ ಜಲವಂ ಪರರಿಂ ಚೋದಿತನಲ್ಲದೆ ನೃಪಾಲಸಮಯಂಗಳಂ ತಾ ಸಾಧಿಸಿ ನಿರ್ಮಲನಾಗಿಹ ಸಾಧುವು ನೀರ್ಗುಟಿಕನೆನಿಸುವಂ ಮಹಾಲಿಂಗಾ (ಪಂಚಶ. ೧೮–೯೪). **ನೀರ್ಕುಟಿಕ$_2$ :** (೬). [ನೀರ್+ಕುಟಿಕ$_2$]

**ನೀರ್ಗುಟಿಗ,** ನೀರುಕುಟಿಗ, ನೀರ್ಕುಟಿಗ (ನಾ). = ನೀರ್ಗಂಟಿ : "ನೀರ್ಗುಟಿಗನೆನೆ ನೀರನೆರೆಯುವವನು" (ಕಶಿರ. ೫೫). **ನೀರುಕುಟಿಗ :** ವೆಳ್ಳರು ನೀರುಕುಟಿಗರೆಂಬುದಕ್ಕಿಂತ, ಸಮಾಜವಿಕಾಸಕ್ರಮದ ಐತಿಹ್ಯದಂತೆ 'ವಿಳುದಿನ' (Butter) ವ್ಯವಹಾರಿಗಳೆಂದು ಗ್ರಹಿಸುವುದೇ ಹೆಚ್ಚು ತರ್ಕಶುದ್ಧವಾಗಿದೆಯೆಂದು ಹೇಳಬಹುದು (ಕರ್ಣಾಪೂ. ೫೪). **ನೀರ್ಕುಟಿಗ :** ಕುಟಿಗ ಪ್ರತ್ಯಯಕ್ಕೆ—ಕಲ್ಕುಟಿಗಂ, ನೀರ್ಕುಟಿಗಂ, ಮರಕುಟಿಗಂ (ಶಮುದ. ೨೦೧ ಪ್ರಯೋ). [ನೀರ್+ಕುಟಿಗ$_2$]

**ನೀರ್ಗುಟ್ಟು** (ನಾ). ಅಜೀರ್ಣ ಮೊದಲಾದುವುಗಳಿಂದ ಕರುಳಿನಲ್ಲಾಗುವ ನೋವು (?) : ಖುರವಿಟ್ಟು ಕೆರೆದು ಮತ್ತಾ ಹುಡೀ ಮರಳೊಳು ಪೊರಳಿ ನೀರ್ಗುಟ್ಟು ಕಿಡಲೊಡನೆ ಹರುಷದಿಂದಾ ನೀರ್ಗುಡಿವಾ ಜಾತ್ಯಶ್ವಗಳೆರವಾ ತೋಱಿಯೊಳೊಪ್ಪಿದುವು (ಪ್ರಭುಂಜ. ೨–೧೨೯).

[ನೀರ್+ಕುಟ್ಟು$_2$]

**ನೀರ್ಗುಡಿ,** ನೀರುಕುಡಿ, ನೀರುಗುಡಿ, ನೀರ್ಕುಡಿ (ಕ್ರಿ). ನೀರನ್ನು ಕುಡಿ,—ಈಂಟು : ವಿಂಧ್ಯಕನೆಂಬಂ ಬಂದು ದುರ್ಯೋಧನನನೆಲ್ಲಿಯುಮಱಸಿ ಕಾಣದೆ ವೈಶಂಪಾಯನಸರೋವರಕ್ಕೆ ನೀರ್ಗುಡಿಯಲೆಂದು ಪೋಗಿ (ಪಂಪಭಾ. ೧೩–೬೬ ವ) ; ಮರುಳಕ್ಕ ಕನಸಿನ ತೊಱೆಯೊಳ್ ನೀರ್ಗುಡಿದು ತಣಿವನಱಿಸಿದರೊಳರೇ (ಶಾಂತಿಪು. ೪–೯೪) ; ಅಗಹನದೊಳು ಬಿಱುಬಿಸಿಲ ಗಾಳಿಯಿಂ ಹಸಿದು ಮಱಿದುಣ್ಣನೇ ನೀರ್ಗುಡಿಯನೇ (ಸಿದ್ಧರಾ. ೨–೧೩); ನಾವು ಹಿಡಿತಂದದು ಮೊದಲು ನೀರ್ಗುಡಿಯಲೊಲ್ಲವು ಮೇಯಲೊಲ್ಲವಿವು (ಬಸಪು. ೬೦–೨೪) ; ಮೃಗವೇಂಟೆಕಾಱರು ಮಾಂಸಭಾರದಲಿ ಬರುತ ನೀರಡಿಸಿದರು ಕಂಡರು ಸರಸಿಯನು ನೀರ್ಗುಡಿಯಲೈತಂದು (ಕುಮ್ಮಾಗ. ೪–೪೨) ; ಶುದ್ಧಾಢಮನವಿಲ್ಲದೆ ಮಱಿದು ನೀರ್ಗುಡಿಯೆ . . . ಕಲಿಪುರುಷರಾಯನ ಸಂಧಿಸಿದ (ನಳಚ. ४–೨೧) ; ಎಳೆಹುಲ್ಲ ಸವಿದು ನೀರ್ಗುಡಿವ ತಾಪಸನನಂದಲರಂಬಿಗೆ ಗುಱಿಮಾಡಿ (ಕಂಸವಿ. ೯–೧೪೬). **ನೀರುಕುಡಿ :** ಎತ್ತುಗಳಿಗೆ ನೀರುಕುಡಿಯುವ ಆಸೆಯಾಗಿದೆ (ದೇಸಹಂ. ೭೪) ; ಆವೊತ್ತು ಹಳು ನುಗ್ಗಿ ಆಕರ ಆದಾಗ ನೀರು ಕುಡಿದಿದ್ದು (ಮಲೆಮ. ೨೫೪). **ನೀರುಗುಡಿ :** ಸರಸಿಯ ತೀರದಲಿ ಕೀಲಿಸಿದ ಮಗ್ಗುಲಲಿ ಯಮಳರೊಱಗಿರೆ ಕಂಡು ಮನದಲಿ ತನುವ ಹಿಡಿದನು ನೀರುಗುಡಿದೀ ಮಮತೆ ಮಿಗಲಾರ್ಕೈವೆನೆನುತಿಳಿದನು ಸರೋವರವ (ಕುಮ್ಮಾಅ. ೨೩–೨೩). **ನೀರ್ಕುಡಿ :** ಕುಡಿಯ ಭಗವಂತ ಎನಲು ಬುದ್ಧಂ ಪಾತ್ರವಿಸಕೊಂಡು ನೀರ್ಕುಡಿದು (ವೈಶಾಖ. ೬೯–೧೩೦). [ನೀರ್+ಕುಡಿ$_1$]

**ನೀರ್ಗುಡಿಸು$_1$,** ನೀರುಕುಡಿಸು (ಕ್ರಿ). ೧. ನೀರನ್ನು ಕುಡಿಯುವಂತೆ ಮಾಡು ; ನೀರನ್ನು ಕುಡಿಸು : ನಡೆದು ಪರಬಲಮಧ್ಯದಲಿ ನೀರ್ಗುಡಿಸಿ ಹರಿಯನು ಸಕಲಸುಭಟರ ಮಡುಹಿ ಫಲುಗುಣ ಗೆಲಿದ ನಗ್ಗದ ಕೌರವೇಶ್ವರನ (ಕುಮ್ಮಾದ್ರೋ. ೧೦ ಸೂಚನೆ) ; ನೀರಡಸಿದ ಕುದುರೆಗೆ ನೀರ್ಗುಡಿಸಲು ಸೂರಿಯನಂಬುಧಿಗಿಳಿದ (ಮೋಹತ. ೨೪–೪೦). **ನೀರುಕುಡಿಸು :** ೧. ಸಾಳೋ ನರಸಿಂಗರಾಯನು, ಕೂತುಕೊಳ್ಳುತ್ತಿದ್ದ ಖಾಸಾಆನೆಯನ್ನು ದುರ್ಗದ ತಪ್ಪಲಲ್ಲಿರುವ ತಿಮ್ಮಣ್ಣ ನಾಯಕನ ಕೆರೆಗೆ ನೀರುಕುಡಿಸಲು ಹಿಡಿತಂದರು (ಚಿತ್ರಸಾ. ೧೧). **೨. (ಆಲಂ)** ತೊಂದರೆಪಡಿಸು ; ಕಷ್ಟಕ್ಕೊಳಗು ಮಾಡು : ರೂಪಚಂದನು ನ್ಯಾಯಾಧೀಶನಿಗೂ ನೀರುಕುಡಿಸ ಬಲ್ಲ (ಜವಾನ್ನಾ. ೧೫).

[ನೀರ್+ಕುಡಿಸು$_1$ (<ಕುಡಿಯಿಸು)]

**ನೀರ್ಗುಡಿಸು$_2$** (ಕ್ರಿ). ಪಿತೃತರ್ಪಣವನ್ನು ಕೊಡಿಸು ; ತಿಲಾಂಜಲಿಯನ್ನು ಕೊಡುವಂತೆ ಮಾಡು : ದಮಿತಾರಿಯ ಭುಜಬಲವಿಕ್ರಮದಳವಿಗೆ ಮುಚ್ಚಿ ಮಚ್ಚುಗುಡಿಸುವವೊಲಸುಕ್ರಮದಿಂ ನೀರ್ಗುಡಿಸಿ ಯಥಾಕ್ರಮದಿಂ ಪದವಡಿಸಿ ಪಾರಲೌಕಿಕವಿಧಿಯಂ (ಶಾಂತಿಪು. ४–೫೪).

[ನೀರ್+ಕುಡಿಸು$_2$ (<ಕೊಡಿಸು)]

**ನೀರ್ಗುಡು** 'ನೀರ್ಗೊಡು' ನೋ.

**ನೀರ್ಗುತ್ತ** (ನಾ). ೧. ಜಲಸಂಬಂಧವಾದ ರೋಗ ; ಜಲೋದರ : ನೀರಂ ಪಂಡಿತಂ ದಿಟವಮಾದೊಡೆ ನೀರ್ಗುತ್ತಕ್ಕೆ ಮರ್ದನುಸಿರ್ (ರಾಮಾಶ್ವ. ೨–೮). **೨.** ವಾಂತಿ : ಪಾಶ್ಚಾತ್ಯವೈದ್ಯದಲ್ಲಿ ವಾಂತಿರೋಗ (ನೀರ್ಗುತ್ತ)ಕ್ಕೆ ಇನ್ನೂ ಸರಿಯಾದ ಮದ್ದು ತಯಾರಾಗಿಲ್ಲವೆಂಬುದನ್ನು ಅರಿತುಕೊಳ್ಳಬೇಕು (ಕನ್ನಇ. ೧೦೪). [ನೀರ್+ಕುತ್ತ]

**ನೀರ್ಗುಳ್ಳೆ,** ನೀರುಗುಳ್ಳೆ (ನಾ). ೧. ನೀರಿನ ಮೇಲಿನ ಗುಳ್ಳೆ ; ಬುದ್ಬುದ : ನೀರ್ಗುಳ್ಳೆ ಗಾಳೀಸೊಡರ್ ಪರಿವೃತ್ತಿರ್ಪ ಮರೀಚಿಕಾಜಲ ಜಲಾವರ್ತಾಕ್ಷರಂ ತೋಱುವೈಸಿರಿ ಪುಲ್ಲಗ್ರದ ತುಂತುಱು (ಸೋಮೇಶ. ೯೦) ; ನೆನೆಯಲನಿತ್ಯ ನೀರ್ಗುಳ್ಳೆಯಂತಿರುತಿಪ್ಪ ತನು ಮಲಭಾಂಡವಿದೇನು ಸುಖ (ಪುರಂದ. ೧–೪೬–೨). **೨.** ನೀರು ತುಂಬಿಕೊಂಡಿರುವ ಗುಳ್ಳೆ,—ಬೊಕ್ಕೆ : ಕೆಲವು ವೇಳೆ ನೀರ್ಗುಳ್ಳೆಯ ಒಳಗಡೆ ರಕ್ತ ಸೋರುವುದುಂಟು (ಕೆಲರೋ. ೫೪) ; ಕೆಂಪುಚುಕ್ಕೆಗಳು ಮೈಮೇಲೆ ಕಾಣಿಸಿಕೊಳ್ಳುತ್ತವೆ . . . ಕೆಲವೇ ಗಂಟೆಗಳಲ್ಲಿ ಅವು ನೀರ್ಗುಳ್ಳೆಯಾಗಿ ಮಾರ್ಪಡುತ್ತವೆ (ಕೆಲರೋ. ೬೬). **ನೀರುಗುಳ್ಳೆ :** ೧. ನೀರುಗುಳ್ಳೆಯಂತೆ ತೋಱಿ ಅಡಗುವ ಅನಿತ್ಯಶರೀರದ ಭೋಗವು ನಿತ್ಯವೆಂದು ನಚ್ಚಿ . . . ಸತ್ತು ಹೋಗದಿರಣ್ಣಾ (ಅಖಂಡೇ. ೬೨–೧೪).

[ನೀರ್+ಗುಳ್ಳೆ$_1$ (<ಗುರುಳೆ)]

**ನೀರ್ಗೆಂಪು** (ನಾ). ತಿಳಿಗೆಂಪು ಬಣ್ಣ ; ತಿಳಿಯಾದ ಕೆಂಬಣ್ಣ ; ನಸುಗೆಂಪು : ನೀರ್ಗೆಂಪುತುಟಿಯಲ್ಲಿ ಸಪ್ಪೆ – ನಗೆ ಹರವುತಿದೆ ಬತ್ತಿ ತೀರಿದ ಹಣತಿ ಹೊತ್ತಿದಂತೆ (ಗಂಗಾತ. ೬೧–೧೩). [ನೀರ್+ಕೆಂಪು$_1$]

**ನೀರ್ಗೆಡಹು** (ಕ್ರಿ). (ವೈರಿ ತೊಳೆಯಲು) ನೀರಿನಲ್ಲಿ ಬೀಳಿಸು,— ಉರುಳಿಸು : ಮಿತ್ರಮಾವುತ ಬೆನ್ನಟ್ಟಿ ನೀರ್ಗೆಡಹಿದ ಮತ್ತಗಜೇಂದ್ರ ಸೂಠಿಯಲಿ ಎತ್ತಲೆಂದಱಿಯದೆ ಪರಿದಾಡುವಂತೆ ಕರ್ಗತ್ತಲೆ ತೀವಿತುರ್ವಿಯಲಿ (ಮೋಹತ. ೧೮-೪). [ನೀರ್+ಕೆಡಹು(<ಕೆಡಪು) ]

**ನೀರ್ಗೆದರ್** (ಕ್ರಿ). ನೀರನ್ನು ಕಲಕು,—ಕೆದಕು : ಮದಗಜಗಳು ಹೊಕ್ಕು ನೀರ್ಗೆದರ್ದ ಕೆರೆ ಕೋಣಗಳು ಪೊರಳ್ದ ಮಡು . . . ನೋಡಿರೆ ನುತೆ (ನವಮೋ. ೧೬-೨೦).
[ನೀರ್+ಕೆದರ್$_0$(<ಕೆದಱ್$_1$)]

**ನೀರ್ಗೆರೆ** (ನಾ). ನೀರಿನಿಂದುಂಟಾದ ಗೆರೆ,—ರೇಖೆ,—ಜಾಡು : ಆರಯೆ ಸೂಚಿಕುಂ ಗಿಳಿಗಳಿರ್ಪಗಕೋಟರದಿಂ ಜಗುಳ್ದ ನೀವಾರಮುಂ . . . ನಾರುಡೆಯಂಚಿನಿಂದಿಳಿದ ನೀರ್ಗೆರೆಯಾಂತ ತಟಾಕಮಾರ್ಗಮುಂ (ಶಾಕುಂತ. ೬-೧೪). [ನೀರ್+ಗೆರೆ (<ಗೆಱೆ) ]

**ನೀರ್ಗೆಱೆ** (ನಾ). ನೀರಿನಿಂದ ತುಂಬಿರುವ ಕೆರೆ ; ತಟಾಕ : ನೀಲಾಬ್ಜ ತಾವರೆ ನೆರೆದ ನೀರ್ಗೆಱೆ ಗಂಧಶಾಲಿ ಜೋತೊಲೆದ ಗದ್ದೆಗಳು . . . ವಿರಾಜಿಪುದು (ಭರತ. ೭೫-೪೫). [ನೀರ್+ಕೆಱೆ]

**ನೀರ್ಗೊಡ** (ನಾ). ನೀರು ತುಂಬಿರುವ ಕೊಡ,—ಘಟ: ಮಟಿಯಂ ಬೆಸಗೊಳ್ವಾಗಳ್ ಮಟಿಯಾಕೃತಿ ಬೇಱೆ ತೋರ್ಪೊಡಂ ನೀರ್ಗೊಡನಂ ಘು(ಗ)ಳಿಘು(ಗ)ಳಿಸಿ ಸುರಿವೊಡಂ . . . ಮಟಿಯಕ್ಕುಂ (ಜಿಟ್ಟಪ. ೧-೪೦) ; ಕಿತ್ತಡಿ ನೀರ್ಗೊಡಮಂ ಕೈವತ್ತಿದನವರೇಳ್ಗೆಗೊಳಿಪ ಕಾರಣದಿಂದಂ ಮತ್ತಮವಂ ನೆಗೆದಂ ಬಾನ್ನುಗ್ಗತ್ತಮರರಗುವರರಂ ಕರುತ್ತಿಂತೆಂದಂ (ಸೌನಂದ. ೧-೨೮). [ನೀರ್+ಕೊಡ$_2$]

**ನೀರ್ಗೊಡು,** ನೀರುಕೊಡು, ನೀರ್ಗುಡು (ಕ್ರಿ). ೧. ಮಡಿದವರಿಗಾಗಿ ನೀರನ್ನು ತರ್ಪಣ ಮಾಡು,—ಕೊಡು : ತನಗೆ ತಾನೆ ನೀರ್ಗೊಟ್ಟಪನೆಂಬಂತೆ ಸುರಿವ ನಿರಂತರಾಶ್ರುಪೂರಮುಂ (ಕಾದಂಬ. ೫೬೭). **ನೀರುಕೊಡು :** ೨. (ಕೈ, ಕಾಲು ತೊಳೆಯಲು ಅಥವಾ ಕುಡಿಯಲು) ನೀರನ್ನು ಕೊಡು : ಮೊದಲು ರತ್ನಪುರಿ ಭಾವನನ್ನು ಕರೆದು ನೀರುಕೊಟ್ಟರು (ಚೆಂಗಾಳ್ವ. ೧೦೫) ; ತಾನೇ ನೀರು ಕೊಟ್ಟು ಬರುವುದಕ್ಕೆ ಈಗೇಕೋ ನಾಚಿಕೆ (ಬೆಳುಸು. ೭೦). **೩.** (ಕರಾ) ಸಮೂಲನಾಶ ಮಾಡು : ಅವನು ಚೆನ್ನಾಗಿ ನೀರುಕೊಟ್ಟ (ರೂಢಿ). **ನೀರ್ಗುಡು :** ೧. "ನಿವಾಪಃ, ಪಿತೃತರ್ಪಣಂ—ಈ ೨ ನೀರ್ಗುಡುವುದು" (ಹಲಾಯು. ೧೦೫-೧೭) ; ಮುನ್ನೆ ಪರಶುರಾಮನೀ ಲೋಕದೊಳುಳ್ಳರಸುಮಕ್ಕಳೆಲ್ಲರುಮನಿರ್ಪತ್ತೊಂದುಸೂಟ್ವಿರಂ ಪೇೞೆ ಪೆಸರಿಲ್ಲದಂತೆ ಕೊಂದು . . . ಅವರ ನೆತ್ತರ ಧಾರೆಯೊಳ್ ತೀವಿ ತನ್ನ ತಾಯುಂ ನೀರಿೞಿಪಲುಂ ತಾನುಂ ಮಿಂದು ತನ್ನ ತಂದೆಗೆ ನೀರ್ಗುಡಲುಮೆಂದು ಮಾಡಿದ ಶಮಂತಪಂಚಕಂಗಳೆಂಬಯ್ದು ಪೆರ್ಮಡುಗಳ ಕೆಲದೊಳೆಡೆಯಱಿದು ಬೀಡಂ ಬಿಡಿಸಿ (ಪಂಪಭಾ. ೯-೧೦೪ ವ) ; ತನ್ನ ತಾಯ್ಗೆ ನೀರಿೞಿಯಲುಂ ತಂದೆಗೆ ನೀರ್ಗುಡಲುಮೆಂದು ಮಾಡಿ (ಗದಾಯು. ೬-೨೮ ವ).
[ನೀರ್+ಕೊಡು$_1$]

**ನೀರ್ಗೊತ್ತು** (ನಾ). ನೀರಿರುವ ಸ್ಥಳ ; ನೀರಿನ ನೆಲೆ : ಮೆಱೆವುದಾ ಶಿವಪುರದ ನಂದನತಟಾಕಾದಿ ನೀರ್ಗೊತ್ತುಗಳು (ಸುದೇಪು. ೨೮-೬). [ನೀರ್+ಗೊತ್ತು]

**ನೀರ್ಗೊರೆವಟ್ಟೆ** (ನಾ). ಒಂದು ಪ್ರದೇಶದ ಹೆಸರು (?): ಉದಿಚಿದೆಸೆ ಕೆಱೆಯುನ್ನೀರ್ಗೊರೆವಟ್ಟೆ ಈಶಾನದೆಸೆ ಅರನೆಱು ಒಡಂ (ಎಕ. X (S), ಮುಳಬಾ. ೩೨೮-೫೨ ; ಸು. 650). [ ? ]

**ನೀರ್ಗೊಳ್** (ಕ್ರಿ). ೧. ನೀರನ್ನು ತೆಗೆದುಕೊಳ್ಳು ; ನೀರು ಕುಡಿ : ತಡಿಯೊಳ್ ನೀರ್ಗೊಂಬ ಕಾಡಾನೆಗಳಿಂ . . . ಮೇಲ್ವಾಯ್ವ ಮತ್ಸ್ಯಂಗಳಿಂ ಪೆಂಪಿಡಿದೊಪ್ಪಿತ್ತಲ್ಲಿ ಫೇನಸ್ಮಿತೆಯೆನಿಸುವ ಪೊಚ್ಚಂ ಪೊದಳ್ದೊಪ್ಪದಿಂದಂ (ರಾಜಶೇ. ೬-೨೩). **೨.** ನೀರಿನಿಂದ ಕೂಡಿರು,— ತುಂಬಿರು : ಕಂಡೆಯೋ ನೀನೆಲೆ ಸವಿಲೆ ನೀರ್ಗೊಂಡ ಮುಗಿಲಂದದ ಮುಕುಂದನಖಂಡಸುಖಮಯಮೂರ್ತಿಯನು (ನಿಭಾಗ. ೧೦-೧೦೨-೨೩).
[ನೀರ್+ಕೊಳ್$_1$]

**ನೀರ್ಗೋಡು** (ನಾ). ಹೆಚ್ಚಾದ ನೀರು ಹರಿದು ಹೋಗುವ ಭಾಗ ; ಕೋಡಿ : ಕೂಡೆ ಸಮಸ್ತವಸ್ತು ಶತಸಾರಸಮೃದ್ಧಿಯಿನೊಪ್ಪುತಿರ್ಪುದಾ ನಾಡು ದಿವಕ್ಕೆ ತೋಡು ಕುಸುಮೇಷುಗೆ ಬೀಡು ವೃಷದ್ವಿಪಕ್ಕೆ ತಾಯ್ನಾಡು ನಯಕ್ಕೆ ಪಾಡು ವಿಭವಕ್ಕಮದರ್ಗೂಡು ಸುಖಾಮೃತಕ್ಕೆ ನೀರ್ಗೋಡು ತಮಕ್ಕೆ ನೀಡು ನಯನಕ್ಕೆಳದಿಂಗಳ ಕಾಪಿವೆಂಬಿನಂ (ಪುಷ್ಪಪು. ೯-೧೮). [ನೀರ್+ಕೋಡು$_7$]

**ನೀರ್ಗೋಳಿ** 'ನೀರುಗೋೞಿ' ನೋ.

**ನೀರ್ಚೆಂಡು** (ನಾ) =ನೀರ್ಗಂತುಕ : ನೀರ್ಚೆಂಡಂ ಕಯ್ಕೊಂಡುಱೆ ಸಾರ್ಚಿಡೆ ಕಡು ನೊಂದು ಮೂರ್ಛೆಯಿಂದಿರೆಯೋರ್ವಳ್ (ಹಮ್ಮಿರ. ೪-೨೯). [ನೀರ್+ಚೆಂಡು (<ಸೆಂಡು)]

**ನೀರ್ಚೆಲ್ಲಾಟ** (ನಾ). ನೀರಿನಲ್ಲಿ ವಿನೋದವಾಡುವುದು; ನೀರಾಟ; ಜಲಕೇಳಿ : ನೀರ್ಚೆಲ್ಲಾಟಕ್ಕಗಿದುವಿದಿರ್ಚದೆ ಕಾಂತಾಳಿ ಕಡೆಗೆ ಸಾರ್ದುದು ಬೇಗಂ (ಹಮ್ಮಿರ. ೪-೨೯).
[ನೀರ್+ಚೆಲ್ಲಾಟ$_2$ (<ಚಲ್ಲಾಟ$_2$)]

**ನೀರ್ಜಾಡಿಸು** 'ನಿರ್ಧಾಟಿಸು' ನೋ.

**ನೀರ್ಜೊಂಪ** (ನಾ). ಕಾರಂಜಿಮನೆ ; ಜಲಗೃಹ ; ಧಾರಾಗೃಹ : ಅದು ನಿದಾಘಕ್ಕೆ ಪರಿಭವಸ್ಥಾನಮುಂ ಶೀತಕಾಲಕ್ಕೆ ಕೈದಾಣಮುಂ ಹಿಮಶೈಲಕ್ಕೆ ಸಹೋದರಮುಮೆನಿಸಿದ ನೀರ್ಜೊಂಪಮಂ ಪೊಕ್ಕು ಶಿಶಿರ ಶಿಲಾತಲದೊಳ್ಮೆಯ್ಯನಿಕ್ಕಿ (ಕಾದಂಬ. ೮೬೦). [ನೀರ್+ಜೊಂಪ$_1$]

**ನೀರ್ಡೊಳ್ಳು** (ನಾ). ಹೊಟ್ಟೆಯಲ್ಲಿ ನೀರು ತುಂಬಿಕೊಳ್ಳುವ ಒಂದು ಬಗೆಯ ರೋಗ ; ಜಲೋದರ : ಒಮ್ಮೊಮ್ಮೆ ಹೊಟ್ಟೆಯಲ್ಲಿ ನೀರು ತುಂಬಿಕೊಂಡು ನೀರ್ಡೊಳ್ಳು (ಅಸೈಟಿಸ್) ಆಗಲೂಬಹುದು (ಕವಿಕೋ. I, ೮೨೭). [ನೀರ್+ಡೊಳ್ಳು$_1$ (<ಟೊಳ್ಳು)]

**ನೀರ್ತರಿಸು** (ಕ್ರಿ). ನೀರನ್ನು ಹೊತ್ತು ತರುವಂತೆ ಮಾಡು ; ನೀರು ಹೊರುವ ಕೆಲಸ ಮಾಡಿಸು : ಸಿವುಡೆಯುರೆನಿಸಿದ ವೀರರ ಮೂಗಿಗೆ ಕವಡೆಯ ಕಟ್ಟಿ ನೀರ್ತರಿಸಿದವುಡೆ ಜೀಗಟೆ ಮಲಹರಿಯ ಜಾಡಿಸಿಕೊಂಬ ಪ್ರವುಡೆಯರಿರ್ದರಿಕ್ಕೆಲದಿ (ಮೋಹತ. ೨೦-೩೯).
[ನೀರ್+ತರಿಸು$_1$]

**ನೀರ್ತೆಗೆ** 'ನೀರ್ದೆಗೆ' ನೋ.

**ನೀರ್ತೋರಿಸು** (ಕ್ರಿ). (ಎತ್ತು ಮುಂತಾದುವುಗಳಿಗೆ) ನೀರನ್ನು ಕುಡಿಸು : ದನಕ್ಕೆ ನೀರ್ತೋರಿಸಬೇಕು (ರೂಢಿ).
[ನೀರ್+ತೋರಿಸು (<ತೋಱಿಸು)]

**ನೀರ್ದಂದಲ್** (ನಾ). ನೀರಿನ ಹನಿ ; ತುಂತುರು ; ಶೀಕರ : ಅವಗಾಹಂಗೈದು ಪೋದದ್ವಿಜಕರಿಗಳ ಕೈದುಂತುಱಿಂ ಕಾಯದಿಂದಂ ಕವಿದೆತ್ತಂ ಪೊಕ್ಕು ನೀರೊಳ್ ಬೆರಸಿ ಬಸಿವ ನೀರ್ದಂದಲಿಂ ಗಲ್ಲವುಣ್ಗಳ್ ಕವಿವನ್ನಂ ತಿಂಬ ಪೆರ್ದುಂಬಿಗಳನಿರಿಸುತುಂ ಕೊಲ್ಲದೀಡಾಡಿದುತ್ಕೈರವ ಕಂಜಪ್ರಾಯಪುಷ್ಪಪ್ರಕರದ ಪುದುವಿಂ ಮೆಲ್ಲಿತಾದತ್ತು ಮಾರ್ಗಂ (ಲೀಲಾವ. ೬-೬೦). [ನೀರ್+ತಂದಲ್]

**ನೀರ್ದಡಿ** (ನಾ). (ನದಿಯ) ದಡ ; ತೀರ : ನಡುಬಾನಂ ರವಿ ಪತ್ತೆ ಭೂಸುರವರಂ ಕಂಡೊಯ್ಯನಲ್ಲಿರ್ದ ನೀರ್ದಡಿಯಂ ಸಾರ್ದು ಕಡಂಗಿ ನಿತ್ಯವಿಧಿಯಂ ಮಾಡಲ್ಕೆ (ಶ್ರೀಮಹಾ. ೧೦-೫೯). [ನೀರ್+ತಡಿ$_2$]

**ನೀರ್ದಳಿ** (ಕ್ರಿ). ನೀರನ್ನು ಚಿಮುಕಿಸು,—ಸಿಂಪಡಿಸು : ಮಗಮಗಿಸುತ್ತುಮಿರ್ಪ ಮೃಗನಾಭಿಯ ನೀರ್ದಳಿವಲ್ಲಿ ಕಂಪನಾಳ್ದುಗುಬ್ಬಿಲರುತ್ತುಮಿರ್ಪ ಪದದೊಳ್ ಪದವಟ್ಟು ಪೊದಟ್ದು ತೋರಮಲ್ಲಿಗೆಯ ತುಱುಂಬು . . . ಒಪ್ಪಿರಲ್ (ಪಂಪಭಾ. ೭–೫೮) ; ಅರಸಿಯರ ತನು ಶ್ಯಾಮಕಾಗ್ರಂಗಳೊಳ್ ಸ್ನೇಹವಶಾನಂಗಾಗ್ನಿಯಂ ನೀರ್ದಳಿದು ನದಿಪುವಂತಾದನಂಭೋದಲೀಲಂ (ಶಾಂತಿಪು. ೮–೩೧) ; ಕೋಡಗದ ಕೆಯ್ಯ ಮಾಲೆಗೆ ಬಾಡಿರ್ದಪುದೆಂದು ಬಱದೆ ನೀರ್ದಳಿವಂದಂ (ಅನಂಪು. ೯–೨೨) ; ನಿಂದ ಠಾವಿಂಗೆ ನೀರ್ದಳಿವರಯ್ಯ ಕುಳಿತ ಠಾವಿಂಗೆ ಹೋಮವನಿಕ್ಕಿಸುವರಯ್ಯ (ಘನಪ. ೯–೨೨) ; ಜಳಕಣಕಲಿತದಳಂ ನೀರ್ದಳಿದಿಟ್ಟೆಲೆಯಾಗೆ ನಳಿನಿ ಕೆಲದಟ್ಟಗಳಿಟ್ಟೆಳೆನಿಸೆ ವಿಕಚಾಬ್ಜಂಗಳ್ಕೊಳನೆಸೆದುದು ರಾಜಹಂಸ ನೌತಣದೆಡೆವೋಲ್ (ರಾಜಶೇ. ೧೨–೨೨). [ನೀರ್+ತಳಿ$_1$]

**ನೀರ್ದಳಿಪ** (ನಾ). ನೀರನ್ನು ಚಿಮುಕಿಸುವಿಕೆ,—ಸಿಂಪಡಿಸುವಿಕೆ ; ನೀರಿನ ಚಳೆಯ : ಘನತರವಾದ ಕತ್ತುರಿಯ ನೀರ್ದಳಿಪಂ . . . ಮಾಲೆಗೊಂಡ ಮಣಿದೋರಣಮೆಂಬಿವು ಬೀದಿಬೀದಿಯೊಳ್ ಮನೆಮನೆಯೊಳ್ ವಿರಾಜಿಸೆ ವಿರಾಜಿಸುತಿರ್ದುದು ತತ್ಪುರಾಂತರಂ (ಜಗವಿ. ೯–೯೬) ; ತೊಳಪ ಪೊಸ ಕತ್ತುರಿಯ ನೀರ್ದಳಿಪಂ ಕಡೆಯಿಲ್ಲದೆಸೆವ ಮುತ್ತಿನ ಕಡೆ (ಕುಸುಮಾ. ೨–೯೬) ; ಗುಡಿಯಿಂ ತೋರಣದಿಂದ ನೀರ್ದಳಿಪದಿಂ ಮೇಲ್ಗಟ್ಟನಿಂ . . . ಚೆಲ್ವಾಯ್ತು ರಾಜಾಲಯಂ (ಪುಣ್ಯಾಸ್ರ. ೩–೪೬). [ನೀರ್+ತಳಿಪ]

**ನೀರ್ದಾಣ** (ನಾ). ನೀರಿರುವ ಸ್ಥಳ ; ಕೆರೆ, ಕೊಳ, ಜಲಾಶಯ ಮುಂತಾದುವು : ಬೀಡು ಬಿಡುವಿಂಬು ಕದಳಿ ತೆಂಗಿನ ತಾಣಂ ಜಾಣಿಂ ನೀರ್ದಾಣಮೆಂದೆಡೆಯಱಿದುಂ ಮಾಡಲ್ ಮಾಡಿಸಲ್ ಪಡೆಮೆಚ್ಚೆ ನೀಂ ಬಲ್ಲೆ (ಪಂಪಭಾ. ೫–೪೧) ; ವನಚರರೆಯ್ತಂದು ನಿಂದು ನೀರ್ದಾಣದೊಳೊಗ್ಗಿನ ಮರದ ಮಱಿಯೋರೆ ಮೆಲ್ಲನೆ ಬಂದತ್ತೊಂದು ಸೊರ್ಕಿದೆಕ್ಕಲನಾಗಳ್ (ಗಿರಿಕ. ೧–೯೯) ; ಹಂಸೆಗಳಾಡಿದವು ನೀರ್ದಾಣದೊಳು (ಸಾಳ್ವಭಾ. ೪–೨೬); ಅಂಬಂ ಬಿಡು ನೀರ್ದಾಣಂಗಳೊಳ್ ಸಿಲ್ . . . ಎಂಬಬ್ಬರಂ ಪರ್ಬಿತೆತ್ತಂ (ಶಬಶಂ. ೩–೪೯); ಒಮ್ಮೆ ಅವನು ವಿನಯವತಿಗಾಗಿ ನೀರ್ದಾಣವನ್ನು ಹುಡುಕುತ್ತ ಹೋಗಿ ಅವಳಿಂದ ಅಗಲಿ ವನವನ್ನು ಸೇರಿ ಕಷ್ಟವನ್ನು ಅನುಭವಿಸಿದನು (ತಪನಿ. ೫೫). [ನೀರ್+ತಾಣ]

**ನೀರ್ದಾರಿ,** ನೀರುದಾರಿ (ನಾ). ೧. ನೀರಿನ ಹರಿವು,—ಪ್ರವಾಹ : ಮಿಂಚಿನ ಬೆಳಕಿಗೆ ಮಿಂಚುತ ಹರಿದಾ ಕರ್ವೊನಲಿನ ನೀರ್ದಾರಿಯನು ನೋಡಿದನೆವೆಯಿಕ್ಕದೆ (ಅಗ್ನಿಹಂ. ೭೩–೭೨). **ನೀರುದಾರಿ : ೨.** ನೀರು ಹರಿಯಲು ಮಾಡಿರುವ ಮಾರ್ಗ,—ದಾರಿ : "ಭ್ರಮಾಃ, ಜಲನಿರ್ಗಮಾಃ–೨ ನೀರು ಹರಿಯುವುದಕ್ಕೆ ತಕ್ಕ ಹಾಗೆ ಕಟ್ಟಲ್ಪಟ್ಟ ತೂಬು, ಬಚ್ಚಲು, ಮೊಹರಿ, ನಾಲೆ, ಕೋಡಿ ಮುಂತಾದವುಗಳ ಹೆಸರುಗಳು . . . ಅಂದರೆ ನೀರು ಹರಿಯುವ ಹಾದಿ, ನೀರುದಾರಿ" (ಸಿದ್ಧಾಂತಿ.೬೯). **೩.** ಹಡಗು ಪ್ರಯಾಣ ಮಾಡುವ ಮಾರ್ಗ ; ಜಲಮಾರ್ಗ. **೪.** ಒಂದು ಬಗೆಯ ತೆರಿಗೆ : ನೀರುದಾರಿ ನಿಧಿ ನಿಕ್ಷೇಪ ಜಲ ಪಾ[ಷಾ]ಣ ಅಕ್ಷೀಣಿ ಆಗಾಮಿ ಸಿದ್ಧ ಸಾಧ್ಯ ಸಹಿತವಾಗಿ . . . ಧಾರಾಪೂರ್ವ್ವಕವಾ[ಗಿ] ಮುಲವ ಎಜದು ಕೊಟ್ಟರೂ (ಕಇ. I, ೫೩–೨೦ ; 1433) ; ಚತುಸ್ಸೀಮೆಗೆ ಬಂದ ಮಕ್ಕಿ ಹಕ್ಕಲು ಕಾನು ಕಾಡಾರಂಭ ನೀರುದಾರಿ ನಿಧಿ ನಿಕ್ಷೇಪ ಅಕ್ಷೀಣಿ ಆಗಾಮಿ ಸಿದ್ಧ ಸಾಧ್ಯ ಮುಂತಾದ ತೇಜಮಾನ್ಯಗಳನುಳ ಈ ಕುಳಸ್ಥಳಂಗಳ . . . ನಾಲು ಬಿಟ್ಟು ಕೊಟ್ಟ ಧರ್ಮ್ಮಶಾಸನದ ಪಟ್ಟೆ ಇಂತಪ್ಪುದು (ಎಕ. VIII, ಸಾಗರ. ೧೬೪–೪೮ ; 1491). [ನೀರ್+ದಾರಿ$_1$]

**ನೀರ್ದಾರೆ** (ನಾ). ನೀರಿನ ಸುರಿತ ; ಜಲಧಾರೆ : ನುಗ್ಗಿಬಂದು, ನೀರ್ದಾರೆಗಳ ಓಲೆಗೊಡೆಯನ್ನು ರತ್ನಗಂಬಳಕ್ಕಿಳಿಹಿ ಬಿಟ್ಟು ಉತ್ತರಿಗೆಯನ್ನು ಬಿಚ್ಚಿ ಕಾಲೊರಸಿಕೊಳ್ಳುತ್ತಿರುವನು (ಮಂತ್ರಶ. ೩೦–೧೯). [ನೀರ್+ದಾರೆ$_1$]

**ನೀರ್ದಿಗುರಿ** (ನಾ). ನೀರಿನ ಚಕ್ರ ; ಸುಳಿ ; ಜಲಾವರ್ತ : ಸುೞಿಗಳ್ ನೀರ್ದಿಗುರಿಯವೋಲ್ ಸುೞಿದುವು (ಪಂರಾಮಾ. ೧೨–೯೦) ; ಉಲ್ಲೋಲಕಲ್ಲೋಲವಾಗಿರುವ ನಡುಗಡಲಲ್ಲಿ ಬೆಟ್ಟದೆತ್ತರದ ಬಳವತ್ತರಂಗ ಸಂಘಕ್ಕೆ ಸಿಲ್ಕಿ, ಬಿರುಗಾಳಿಗೆ ನೀರ್ದಿಗುರಿಯಂತೆ ಘರ್ರನೆ ತಿರುತಿರುಗುತ್ತ (ಬೆಟ್ಟಅ. ೨೧೫–೨೩) ; ಘೂರ್ಣಿಸುವ ನೀರ್ದಿಗುರಿಗೊಳಗಾದ ಬಣಗು ತೃಣಕಣದಂತೆ (ಚಿತ್ರಾಂಗ. ೫೨–೧೪೨೩). [ನೀರ್+ತಿಗುರಿ]

**ನೀರ್ದಿಡ್ಡಿ** (ನಾ). ನೀರನ್ನು ಹೊರಗಿನಿಂದ ತರಲು ಜನರು ಹೋಗಿ ಬರುವುದಕ್ಕಾಗಿ, ಕೋಟೆಯಲ್ಲಿ ಮಾಡಿರುವ ಸಣ್ಣ ಬಾಗಿಲು : ಕೋಟೆಯ ಹೊರಗೆ ನೀರ್ದಿಡ್ಡಿಯ ಬಡಗಣ್ಗೆ ಹಿರಿಯಾಲದ ಮರದ ತೂರಲ್ಗೊಂಬಿನ ಇರುಂಬಿನೊಳಗೆ ಚುಂಚನ ಶವವು ಗೋಣಿಂದ ನೇಲುತ್ತಿದೆ (ಬೆಟ್ಟಅ. ೧೬೨–೧೦). [ನೀರ್+ದಿಡ್ಡಿ]

**ನೀರ್ದಿತ್ತಿ,** ನೀರುತಿದಿ (ನಾ). ೧. ನೀರನ್ನು ತುಂಬುವ ಚೀಲ : ಪದಪಿಂ ಕಟ್ಟಿರ್ದುಡಿದೊವಲೊದವಿದ ನೀರ್ದಿತ್ತಿ ಕಲ್ಲಿ ಸುತ್ತಿದ ಪುಲಿವಾಲದ ತಲೆಸುತ್ತುಗಳೆಸೆಯಲ್ಕ ಘಟೆಂದಂ ನೆರೆದು ಲುಬ್ಧಕರ್ ಬರುತಿರ್ದರ್ (ತ್ರಿಪುವಿ. ೨೭–೪೪). **ನೀರುತಿದಿ : ೨.** "ಕವಾಟವುಳ್ಳ ಪಾತ್ರೆಯನ್ನು ನೀರಿನಲ್ಲಿ ತಲೆಕೆಳಗಾಗಿ ಇಟ್ಟು ಅದನ್ನು ಏರಿಳಿಸುವುದರಿಂದ ಗಾಳಿಯನ್ನು ಒಳಸೇದುವಂತೆಯೂ ಹೊರದೂಡುವಂತೆಯೂ ಮಾಡಲಾಗುವ ಒಂದು ಬಗೆಯ ತಿದಿ : ನೀರುತಿದಿ" (Water-bellows. ಇಂಕನಿ). [ನೀರ್+ತಿತ್ತಿ(<ತಿದಿ)]

**ನೀರ್ದುಂಬು,** ನೀರುತುಂಬು (ಕ್ರಿ). ೧. ನೀರನ್ನು ತುಂಬು,—ಭರ್ತಿಮಾಡು : ಚೆಂಬೊನ್ನಂಡೆಯೊಳಂ ನೀರ್ದುಂಬಿಡೆಯರಸಂಗೆ ಸತಿಯರರಸಂ ನೀರಂ ತುಂಬಿ ಜಳಯಂತ್ರದಿಂದಿಡೆಯಂಬುಜಲೋಚನೆಯರಂಜಿಪೋದರ್ ಕಡೆಗಂ (ಹವಿಮ್ಮರ. ೪–೨೬). **೨.** ರಸದಿಂದ ಕೂಡಿರು ; ರಸಭರಿತವಾಗು : ಮಿಗೆ ಪಸುರಿಡಿಪ ಕಳಿಕೆ ತುಱುಗಿ ಕಾವನ ಕರ್ಣಿಗಳ ಮೂಡಿಗೆಗಳಂತಿರೆ ಬಿರಿದ ಪೊಂಬಾಳೆ ನೆಗಪಿ ಸೇರುವೆಗೆಯ್ದು ಬಾಳ್ಗೋಳ್ಗಳ ಬೀಱೆ ನೀರ್ದುಂಬಿಯುಳ್ಳರಲ್ದು . . . ಕೌಂಗೆಸೆದುದು (ಪದ್ಮರಾ. ೮–೩೪). **ನೀರುತುಂಬು : ೧.** ಮರುದಿವಸ ಅಭ್ಯಂಗ ಸ್ನಾನಕ್ಕಾಗಿ ನೀರುತುಂಬುವುದು . . . ಗೃಹಾಲಂಕಾರ ಇವೇ ಈ ದಿನದ ಕಾರ್ಯಗಳು (ಭಾಹಬ್ಬ. ೧೪೫). **೩.** ನೀರು ತುಂಬಿಕೊಳ್ಳು,—ಭರ್ತಿಯಾಗು : ದುಃಖದಿಂದ ಗೋವಿಂದರಾಯರ ಕಣ್ಣುಗಳಲ್ಲಿ ನೀರು ತುಂಬಿತು (ಬಾಳಿಗಿ. ೫೯).

**ನೀರುತುಂಬುವ ಹಬ್ಬ** =(ಮನೆಯವರೆಲ್ಲರು ಅಭ್ಯಂಜನ ಸ್ನಾನ ಮಾಡಲು) ನರಕಚತುರ್ದಶಿಯ ಹಿಂದಿನ ದಿನ ಹಂಡೆಗಳನ್ನು ಶುಭ್ರಗೊಳಿಸಿ, ಅಲಂಕರಿಸಿ, ನೀರನ್ನು ತುಂಬಿ ಆಚರಿಸುವ ಹಬ್ಬ : ನೀರು ತುಂಬುವ ಹಬ್ಬದ ದಿವಸ ಅಳಿಯ ಮಗಳು ಬಂದರು (ರೂಢಿ). [ನೀರ್+ತುಂಬು$_1$]

**ನೀರ್ದುಮುಕು** (ನಾ). ಜಲಪಾತ ; ತಡಸಲು : ನಡೆಯುತಿರಲಕ್ಕಟಾ ಕರಡಿ ಪುಲಿಗಳ ಕೂಗುಮೆಲರುಣಿಯ ಫಣಿಯ ಸುಯ್ ಕೇಳ್ದತ್ತು ನೀರ್ದುಮುಕುದನಿವೆರಸಿ (ಶ್ರೀರಾಸಾ. ೩೮೨–೪೯೨). 'ನೀರ್ಬೀಳ್' ಪರಾ. [ನೀರ್+ದುಮುಕು(<ದುಮ್ಮಿಕ್ಕು)]

**ನೀರ್ದುಳುಕು** (ಕ್ರಿ). ೧. (ಜಲಕ್ರೀಡೆಯಲ್ಲಿ)ನೀರನ್ನು ಎರಚು,—ಸಿಂಪಡಿಸು : ತಮ್ಮೊಳ್ ಸರಸಕಳವಟ್ಟ ಸಖಿಯರಂ ಸರಿಸಮಾಗೆನುತೆ ನೀರ್ದುಳುಕಿದರ್ ಪೊಳಕಿದರ್ ಮುಳುಕಿದರ್ ಕಲಕಿದರ್ ಕೊಳದೊಳ್

(ಚಿಒಪು. ೪೫-೫೪). ೨. ಅರ್ಘ್ಯವನ್ನು ಕೊಡು : ಸಬಳದೆ ಸಂಜೆ ವಾರಿಸಿದಪೆವೆಂದು ನಿಬಂಧದೆ ಕರ್ಚಿ ಕಾಲ್ಗಳಂ. ದಿವಸಕರಂಗೆ ನೀರ್ದುಳಿ [ಳು]ಕಿ (ಸಮಪ. ೧೪-೨೪). [ನೀರ್ + ತುಳುಕು (<ತುಳುಂಕು$_1$)]

**ನೀರ್ದೆಗೆ,** ನೀರುದೆಗೆ, ನೀರ್ತೆಗೆ (ಕ್ರಿ). ೧. (ಜೀರುಕೊಳವಿ ಮೊದಲಾದುವುಗಳಿಂದ) ನೀರನ್ನು ಮೇಲಕ್ಕೆ ತೆಗೆ,—ಸೆಳೆ : ತೊಳಗುವ ಪೊನ್ನ ಜೀರ್ಕೊಟಿವಿಯಗ್ರಮನೊಂದಿನಿತಟ್ಟಿ ಭಂಗಿ ಸಂಗಳಿಸಿರೆ ಮೇಲೆ ನೀರ್ದೆಗೆವ ಕೋಮಳೆ . . . ರತಿಯೆಂಬ ಡಂಬರಂ ಬಳೆವಿನ ಮೊಪ್ಪಿದಳ್ (ಚಂದ್ರಪು. ೭-೧೩೮). ೨. ನೀರಿಲ್ಲದಂತಾಗು ; ಬತ್ತು ; ಒಣಗು ; ಆರು : ಅವಳೀಸೆ ಕಾಯ್ದು ನೀರ್ದೆಗೆದ ಸರೋವರಂಗಳಿವು (ಚಂದ್ರಪು.೫-೧೩೩) ; ನೀರ್ದೆಗೆದು ಬೆಂಚೆಗಳೊಳ್ ಕೆಸಱಾಱಿ (ಕಬ್ಬಿಕಾ. ೫೩) ; ಉಬ್ಬರಿಸಿದುದು ಥಗೆ ಗೋನಾಳಿ ನೀರ್ದೆಗೆಯೆ ನುಡಿಯಲಾಱನು ಮಕ್ಕಳಿರ ನೀರಡಸಿದೆನು (ಕುಪ್ಯಾಭೀ. ೧೦-೨೪) ; ಇಳೆ ಕಾಯ್ಪೇಱಿದು ದಬ್ಧಿ ನೀರ್ದೆಗೆದುದು . . . ಅರಣ್ಯಂ ಬೆಂದುದಾ ಗ್ರೀಷ್ಮದೊಳ್ (ರಾಜಶೇ. ೫-೩೬). **ನೀರುದೆಗೆ :** ೨. ಭೂರಿಭಯತಾಪದಲಿ ತಾಳಿಗೆ ನೀರುದೆಗೆದುದು ತುಟಿಯೊಣಗಿ ಸುಕುಮಾರ ಕಣ್ಣವೆ ಕೀಯೆ ಕರದಲಿ ಮುಚ್ಚಿದನು ಮುಖವ (ಕುಪ್ಯಾವಿ. ೬-೯). **ನೀರ್ತೆಗೆ :** ೨. ಪರೆಯೆ ಮುಗಿಲ್ ಜಲಕ್ಕನಿರಲೆಣ್ದೆಸೆ ನೀರ್ತೆಗೆಯಲ್ಕೆ ಬೆಳ್ಮಳಲ್ದೆರೆಗಳನಪ್ಪು ಕೆಯ್ಮೆ ತೊಱೆ . . . ಬಂದುದತಿನಿರ್ಮಲನೀರದವಪ್ಪ ಶಾರದಂ(ಕಾದಂಬ. ೬೩೨). [ನೀರ್ + ತೆಗೆ$_1$]

**ನೀರ್ದೆರೆ** (ನಾ). ನೀರಿನ ಅಲೆ,—ತರಂಗ : ಮೆಯ್ಸಿರಿ ಕರೆಗಣ್ಮೆ ಪಾಯ್ವ ತಿಳಿನೀರ್ದೆರೆಯಂತಿರೆ ಶಾರ್ಙ್ಗಭೃತ್ಸುಧಾಸರಸಿಯೊಳಟ್ಟಿ ತೇಲ್ದು ತಣಿದಾಂ ಕಳೆವೆಂ ಭವದಾವತಾಪಮಂ (ಚಿಕವಿ. ೧-೪); ಆ ಖಳನು ವೊಂದು ವಿಸಿಖಮ ತೊಟ್ಟುಯೆಸೆಯೆ . . . ನೀರ್ದೆರೆಯನೆಚ್ಚಂತೆ ಶರ ನುಸುಳಿ ಪೋಗೆ (ನಪಮೋ. ೧೨-೭೪). [ನೀರ್ + ತೆರೆ$_4$]

**ನೀರ್ದೇರ್,** ನೀರ್ದ್ದೇರು (ನಾ). ಮೋಡ ; ಮುಗಿಲು : ನೀರ್ದೇರ್ [ಪಾಠಾಂ. ನೀರ ತೇರ್], ಮುಗಿಲ್—ಈ ೩ ಮೇಘಂ" (ಕಶಸಾ. ೪-೪೨) ; ನೀರ್ದೇರ್ ಗಾಳಿ ಮಳೆ ಸೋನೆ ಕಳಿವಲರ್ . . . ಪರ್ವತಂ ಮರುವಿವಾದಿಗಳೆಲ್ಲಮೂವಾವವಸ್ಥೆಗಳ್ಗೆಂತೆಂತು ಪಕ್ಕಾಗಿ (ಸಂಸಪ. ೨೯-೧೩೪). **ನೀರ್ದೇರು :** "ನೀರ್ದೇರೆನೆಲ್ ಮೇಘ" (ಕಶರ. ೫೬). [ನೀರ್ + ತೇರ್$_2$]

**ನೀರ್ದೇರು** 'ನೀರ್ದೇರ್ ನೋ.

**ನೀರ್ದೊಣೆ,** ನೀರುದೊಣೆ (ನಾ). ೧. ನೀರು ನಿಂತಿರುವ ಸ್ಥಳ. ೨. ನೀರಿನ ದೋಣಿ,—ಬಾನಿ : ಸುರಗಿರಿಯೆ ಮಜ್ಜನದ ಪೀಠವು ಸುರಪ ಮಜ್ಜನವಳ್ಳನಮೃತಾಂಬುಧಿಯೆ ನೀರ್ದೊಣೆಯು (ಸಾಳ್ವಭಾ. ೩೩-೬೩). ☞ 'ನೀರ್ದೋಣಿ' ಎಂಬುದರ ಅಪಲಿಖಿತವಿರ ಬಹುದು. **ನೀರುದೊಣೆ :** ೧. ಸಮುದ್ರದ ಇಳಿತ ಎಷ್ಟೆ ಕಡಿಮೆ ಯಾಗಿದ್ದರೂ ಹವಳದ ಕೊರಕಲುಗಳಲ್ಲಿ ಹೆಚ್ಚಿಯಿಂದ ಮೊಳಕಾಲಾಳದ ನೀರುದೊಣೆಗಳು ನಿಂತಿರುತ್ತವೆ (ಹಸುಹೊ. ೩೪೨). [ನೀರ್ + ದೊಣೆ$_1$]

**ನೀರ್ದೊಳೆ** (ಕ್ರಿ). ನೀರಿನಿಂದ ತೊಳೆ,—ಶುದ್ಧಮಾಡು : ನೀರಿಂ ತೊಳೆದಂ, ನೀರ್ದೊಳೆದಂ (ಶಬ್ದಾಸು. ೨೯೨ ಪ್ರಯೋ).[ನೀರ್ + ತೊಳೆ$_1$]

**ನೀರ್ದೊಱೆ** (ನಾ). ನೀರಿನ ಪ್ರವಾಹ : ಅಂತು ವಿಯಚ್ಚರರಾಜನಾ ದಂದಿನ ವಿದ್ಯಾದೇವತೆಗಳ್ ಬಯ್ತಿಟ್ಟಂಗೆ ಪುಟ್ಟಿ ಕೊಳಿಪ ನಿಧಿಗಳಂತೀ ಭವದೊಳ್ ಎನಗೆ ಬೆಸಕ್ಕೆ ನೀರ್ದೊಱೆಗಳಾಗಿ ಬಂದು ನಿಂದುವು (ಶಾಂತಿಪು. ೨-೬೫ ವ) ; ಪುಳಕದ ನೆವದಿಂದ ಪೊಣ್ಮುವ ಹರ್ಷದ ಬೆಳೆಗ್ಗೆಗೆ ನೀರೆಱೆವಂತೆ ತುಳುಕುವ ಸೊಗದಾಲಿ ನೀರ್ದೊಱೆಯನು ತಂದಿಳುಪುತವನ ಸಿಟ್ಟಿಪಳು (ಹದಿಬ. ೭-೪೪). [ನೀರ್ + ತೊಱೆ$_2$]

**ನೀರ್ದೋಣಿ** (ನಾ). ನೀರು ತುಂಬುವ ಅಗಲವಾದ ತೊಟ್ಟಿ,—ಕೊಪ್ಪರಿಗೆ : ಮಜ್ಜನಪ್ರದೇಶಕ್ಕೆ ಮಜ್ಜನೋಪಕರಣ ಸಂಪಾದನವ್ಯಗ್ರ ಪರಿಜನಂಬೆರಸು ಬಂದು ನೀರ್ದೋಣಿಯೊಳೋಲಾಡಿ ಮಜ್ಜನಪೀಠ ಮನಲಂಕರಿಸಿದಾಗಳ್ (ಕಾದಂಪೂ. ೭೦). [ನೀರ್ + ದೋಣಿ$_3$]

**ನೀರ್ದೋಱು** (ಕ್ರಿ). ತೊಳೆ ; ಪ್ರಕ್ಷಾಲಿಸು : ಮುಡಿಯಂ ಕಟ್ಟಳು ಮುದ್ದುಗೆಯ್ದು ಮೊಗಮಂ ನೀರ್ದೋಱಿಜಳ್ . . . ಕಾಮನಂಬಿಂಗೆ ಸಂದಡಿಯಾದಳ್ ಲಲಿತಾಂಗಿ (ಮಲ್ಲಿಕಾ. ೧೫-೪೭). [ನೀರ್ + ತೋಱು]

**ನೀರ್ನಡೆ** (ನಾ). ನೀರಿನ ಓಟ,—ಪ್ರವಾಹ : ಕಡಲ ನೀರ್ನಡೆಗೆ ನಿಲ್ಲಡಿ ಯಾಗಿ, ಮಾರುತಿಯ ನಿಃಶ್ರೇಯಕೊಂಡು ಮುನ್ನುಡಿಯಾಗಿ ಕುಳ್ತುದಲೆ ವನೆವಕ್ಕಿ (ಶ್ರೀರಾಮಾ. ೪೮೨-೨೧೨). [ನೀರ್ + ನಡೆ$_2$]

**ನೀರ್ನಳ** (ನಾ). ನಲ್ಲಿ ; ಕೊಳಾಯಿ : ಒಂದು ಕಿಟಕಿಯ ಬುಡದಲ್ಲಿಯೇ ನೀರ್ನಳದ ಕಟ್ಟೆ ಕಟ್ಟಿದ್ದರು (ಕಾಬರುಪೂ. ೨೩). [ನೀರ್ + ನಳ$_2$]

**ನೀರ್ನಿಲ್,** ನೀರುನಿಲ್ಲು (ಕ್ರಿ). ೧. (ಹಳ್ಳ, ಕೊಳ್ಳ ಮುಂತಾದ ಸ್ಥಳಗಳಲ್ಲಿ) ನೀರು ನಿಂತಿರು. ೨. ಗರ್ಭ ನಿಲ್ಲು ; ಗರ್ಭಧಾರಣೆ ಯಾಗು ; ಬಸಿರಾಗು : ಸೀತೆಗೆ ನೀರ್ನಿಂದು ದಿನಕ್ರಮದಿಂ ಬಸಿಱ್ ಬಳೆಯೆ . . . ಮನಕೆ ಪುದುವಯಕೆ ಪುದುಂಗೊಳೆ, ಸೀತೆ ಬಸಿಱು ಯಾದಳ್ (ರಾಮಾಶ್ವ. ೨೧-೬) ; ಅಂತು ಭಕ್ಷಿಸಿದ ಕೆಲದಿನಂಗಳ್ಗೆ ಪೆಣ್ಗೆ ನೀರ್ನಿಲ್ಲು, ಬಸಿರ್ಬಳೆದು . . . ಸುಪುತ್ರಂ ಪುಟ್ಟಿದಂ (ಅದ್ಭುತ. ೫-೮). **ನೀರುನಿಲ್ಲು :** ೧. ತ್ವಾಟದ ಹಳ್ಳದಾಗೆ ನೋಡಿಲ್ಲೇನು ನೀನು ನೀರು ನಿಂತಿರೋದನ್ನ? (ಪುಲಿಮ. ೪೭೦). ೨. ಅವಳಿಗೆ ನೀರು ನಿಂತದೆ ಕಣೋ, ಬೆಪ್ಪು ಹುಡುಗಾ ! (ಪುಲಿಮ. ೪೭೦). [ನೀರ್ + ನಿಲ್]

**ನೀರ್ನೆರಳು** (ನಾ). ಅಪರಕರ್ಮದ ಒಂದು ಭಾಗ ; ಹೆಣದ ಮೇಲೆ ನೀರು ಸುರಿಯುವುದು : ಅಮೃತಕೀರ್ತಿಯ ತಿರುಳು ಮೋಡ ಗಳ ನೀರ್ನೆರಳು ಮೃತನಿಗದು ಇದ್ದವರು ಕೊಟ್ಟೆ ಮಣ್ಣು (ಗವಿ. ೮೫-೨೦). [←-ತುಳು. ನೀರ್ನೆರಲ್]

**ನೀರ್ನೆಲ** (ನಾ). ನೀರಾವರಿಭೂಮಿ ; ತರಿಜಮೀನು ; ಗದ್ದೆ : ದೇವರ ನಿವೇದ್ಯಕ್ಕೆ ತಮ್ಮ ದಶವಂಧದ ಗಱ್ದೆಯೊಳಗೆ ನೀರ್ನೆಲಂ ಗಱ್ದೆ ಮತ್ತರು ೩ (ಕಇಅ. ೩-೮-೨೬೮ ; 1062) ; ಉಡಿಯುತ್ತುಂ ನಂದನಂ ಗಳಂ ನೀರ್ನೆಲನಂ ಕಿಡಿಸುತ್ತುಂ ಲಂಕೆಗವರ್ ಪಡೆದರ್ ನಿಶ್ಶಂಕರಳವಿ ಗಱಿದರ್ದೆವಱಿಲಂ (ಪಂರಾಮಾ. ೧೪-೮೯). [ನೀರ್ + ನೆಲ]

**ನೀರ್ನೆಲೆ** (ನಾ). ನೀರಿನ ಆಶ್ರಯ,—ಜಲಾಶಯ : ವನಿತೆಯ ಮೇಗಾಲ್ಗಳ ಪಾಸಟಿಯಂ ನಾಮೆಯ್ದುವೆವೆಂದು ಮನದೊಳ್ ಭಾವಿಸಿ ನೀರ್ನೆಲೆಯೊಳಗಾ ದಿನದಿ ತಪಂಗೆಯ್ವುವು ಕೂರ್ಮಂ ಮೇದಿನಿಯೊಳದಱು ನುತ್ತಮರ ಪದಂ ಬಯಸದ ಜೀವಿಗಳುಂಟೆ (ಜಯಕಾ. ೩-೨೮); ಉಟ್ಟುದು ತೊಟ್ಟುದೆಲ್ಲವನಾ ತಡಿಯೊಳಗಿಟ್ಟು ನೀರ್ನೆಲೆಯನು ಹೊಕ್ಕು ನೆಟ್ಟನೆ ನೀರಾಡುವ ನೃಪಸುತರು (ಪ್ರಭಂಜ. ೨-೧೩೦) ; ನೀರ್ನೆಲೆಗಳಂ ಸೂಚಿ ಸುತೆ ತೀಡಿದುದು ತಂಪುಗಾಳಿ (ಶ್ರೀರಾಮಾ. ೪೧೮-೪೨೭). [ನೀರ್ + ನೆಲೆ]

**ನೀರ್ನೆಲೆದಪ್ಪು** (ಕ್ರಿ). ಮುಳುಗು : "ಅಗುಟ್ದಂ = ನೀರ್ನೆಲೆ ದಪ್ಪಿದಂ (ಮುಟುಗಿದಂ)" (ಶಮದ. ಪರಿ. ೧). [ನೀರ್ + ನೆಲೆದಪ್ಪು]

**ನೀರ್ನೊಣ** (ನಾ). ನೀರಿರುವ ಸ್ಥಳದಲ್ಲಿ ವಾಸಿಸುವ ಒಂದು ಬಗೆಯ ನೊಣ : ರಣಹೇಡಿಗಳಾದವರ ಕಣ್ಮನಕೆ ನೀರ್ನೊಣ ಗರು ತ್ಮಂತನಂತಿಹುದು (ಮೋಹತ. ೧೨-೪೪). [ನೀರ್ + ನೊಣ(<ನೊಳವು)]

**ನೀರ್ಪಂಚೆ** (ನಾ). ಸ್ನಾನಮಾಡುವಾಗ ಅಥವಾ ಮಡಿಯಲ್ಲಿರು ವಾಗ ಉಟ್ಟುಕೊಳ್ಳುವ, ಜಾಳುಜಾಳಾಗಿರುವ ವಸ್ತ್ರ ; ಪಾಣಿ ಪಂಚೆ; ಮಡಿಪಂಚೆ : ಊಟಮಾಡುವಾಗ ಉಡುವ ನೀರ್ಪಂಚೆಯನ್ನು ಉಟ್ಟೇ ತನ್ನ ಆಫೀಸಿಗೆ ಹೋಗಬಹುದು (ಕಥಕ.೯೫). [ನೀರ್ + ಪಂಚೆ]

**ನೀರ್ಪಡಿಸು** (ಕ್ರಿ). ನೀರಿನಲ್ಲಿ ನೆನೆಹಾಕು, —ತೋಯಿಸು : ಬಂದಾಕೆ ನುಡಿಸೆ ಬಾಯ್ಬಿರಿವಂದದಿ ನೀರ್ಪಡಿಸಿದಕ್ಕಿ ತೀವಿರೆ ನುಡಿಯುಂ ಕುಂದಿರೆ (ಪ್ರಕ್ರಿಕಾವ್ಯ. ೧೬೪೫). [ನೀರ್+ಪಡು$_1$+ -ಇಸು$_3$]

**ನೀರ್ಪನಿ** 'ನೀರ್ವನಿ' ನೋ.

**ನೀರ್ಪಿರೀರೆ** (ನಾ). ಹೀರೆಯಲ್ಲಿ ಒಂದು ಬಗೆ: ಮೂಂಗಾಯರ್, ನೀರ್ಪಿರೀರೆ (ಭಾಷಾಭೂ. ೧೨೬ ವೃತ್ತಿ). [ನೀರ್ + ಪೀರೆ]

**ನೀರ್ಪೂವು** 'ನೀರ್ವೂ' ನೋ.

**ನೀರ್ಪೊಯ್** 'ನೀರ್ವೊಯ್ ನೋ.

**ನೀರ್ಬಟ್ಟೆ** 'ನೀರ್ವಟ್ಟೆ' ನೋ.

**ನೀರ್ಬಾವಿ** (ನಾ). ನೀರಿರುವ ಬಾವಿ : ಹಾರುವೆನೊ ನೀರ್ಬಾವಿ ಯೊಳಗೆ ? ಹೀರುವೆನೊ ಕಹಿವಿಷವನು ? (ಕಪು. ೧೯-೨೬).
[ನೀರ್ + ಬಾವಿ]

**ನೀರ್ಬಿಡು,** ನೀರುಬಿಡು (ಕ್ರಿ). **೧.** ನೀರು ಒಸರು, —ಜಿನುಗು : ತಾರಾಪತಿದ್ಯುತಿಗೆ ನೀರ್ಬಿಡುವಿಂದುರತ್ನಹಾರಂಬೊಲೊಪ್ಪುವ ಭುಜಂಗಳ ಕಂಠಕೀಯೆ ತೋರಲ್ಕೆ ಚಿತ್ರವ ಬೆಮರ್ತಿವೆ ಭೀತಿಯಿಂದ (ಉರಾಚ. ೨೫-೧೯). **ನೀರುಬಿಡು : ೧.** ಕಿರಾಣಿ ಮಾಲಿನ ಪೈಕಿ ಜವಳ ಹಿಡಿಯುವ ಅಂದರೆ ನೀರುಬಿಡುವ ಮಾಲು ಮಳೆಗಾಲದಲ್ಲಿ . . . ಕೆಡುತ್ತದೆ (ಮುಂಬವ್ಯಾ. ೨೬ ಪ್ರಸ್ತಾವನೆ) ; ಈ ಎಲ್ಲ ಭಿನ್ನರುಚಿಗಳಿಗೆ ನಾಲಗೆಯು ನೀರುಬಿಡು(ಕಡೆಯು)ವುದರಲ್ಲಿಯೇ ರಸರಹಸ್ಯವು ಅಡಗಿಕೊಂಡಿದೆ (ಸಾಹಿವಿ. ೯). **೨.** (ಕಾಲುವೆ ಮುಂತಾದುವುಗಳಿಂದ) ನೀರು ಹಾಯಿಸು : ಅವಕ್ಕೆ ಒಂದು ಗಂಟೆ ಹೊತ್ತಿಗೆ ಅಷ್ಟು ನೀರು ಬಿಡಿ. ನಿಂಬೆಗಿಡವೂ ಅವೂ ಬದುಕಿಕೊಳ್ಳುತ್ತವೆ (ಬಾಳಹೊ. ೨೪೧). **೩.** ಧಾರೆಯೆರೆ ; ನೀರು ಸುರಿ : ದಾನವನ್ನು ಕೊಟ್ಟು ನೀರು ಬಿಡೋಣ (ಗಂಗಾಮ. ೧೪೯). **೪.** (ಆಲಂ) ತರ್ಪಣವನ್ನು ಕೊಡು; ತಿಲಾಂಜಲಿಯನ್ನು ನೀಡು : (೩).

ನೀರು ಬಿಡುವ ಕಲ್ಲು = ಬೆಳುದಿಂಗಳಿಗೆ ನೀರು ಒಸರುವುದೆಂದು ಭಾವಿಸಲಾದ ಒಂದು ಬಗೆಯ ಕಲ್ಲು; ಚಂದ್ರಕಾಂತ : ಬಿದುಗಲ್ಲು —ಬೆಳುದಿಂಗಳಿಗೆ ನೀರು ಬಿಡುವ ಕಲ್ಲು (ಗಂಗಾಮ. ೨೩೪).
[ನೀರ್ + ಬಿಡು$_1$]

**ನೀರ್ಬೀೞ್,** ನೀರ್ಬೀೞ (ನಾ). ಜಲಪಾತ ; ಅಬ್ಬಿ ; ತಡಸಲು : ಮೆಲ್ಲಮೆಲ್ಲನೆ ತೇಲಿ, ಆಳದಲಿ ಮಲೆಯೆಡೆಯೊಳಲುಗದೆಯೆ ಅಲುಗಿ, ಕಡಿದು ಬಂಡೆಗೆ ಬಂದು, ನೆಗೆದು ಬೆಳ್ಳಂಗೆಡೆವ ನೀರ್‌ಬೀೞ ಬೆಳ್ಪು ! (ಕನ್ನಬಾ. ೧೬೫-೫). **ನೀರ್ಬೀೞ :** ಮುತ್ತುಗಳ್ ರಾಶಿ ಸುರಿವಂತೆ ನೀರ್ಬೀೞಗಳ್ ಬೆಳ್ಪಿಯೋಲ್ ಬೆಳ್ಳಂಗೆಡೆದು ಪರಿದವಲ್ಲಲ್ಲಿ (ಶ್ರೀರಾಮಾ. ೪೮೧-೨೦೧). [ನೀರ್ + ಬೀೞ್$_2$ (< ಬೀೞ್$_2$)]

**ನೀರ್ಬೀೞ** 'ನೀರ್ಬೀೞ್' ನೋ.

**ನೀರ್ಬೆಂಕೆ** (ನಾ). ದ್ರವರೂಪವಾದ ಬೆಂಕಿ ; ಲಾವಾರಸ : ಪ್ರೋಜ್ವಲಿಸಿದುದು ಕೋಪನಜ್ವಾಲೆ ಭೂಮಿಪಗೆ. ಪ್ರಾಣಾಗ್ನಿಪರ್ವತ ಜ್ವಾಲಾಮುಖಿಯ ಮುಖಂ ನೀರ್ಬೆಂಕೆಯಂ ಪೊನಲ್ಗರೆಯುತೋಕರಿಪಂತೆ (ಶ್ರೀರಾಮಾ. ೭೨-೪೮೮). [ನೀರ್ + ಬೆಂಕೆ]

**ನೀರ್ಬೆತ್ತ** (ನಾ). = ನೀರುಹಬ್ಬೆ : ಕೈಯ ಚಾಚಿ ತಡೆವಂತೆ ನಾಚಿ ನೀರ್ಬೆತ್ತ ಬಾಗಿ ಎಳೆದು ಹಿಡಿದರೇನವಳ ಮುಗಿಲ ಬಣ್ಣದಾ ಮಂಜುಸೀರೆ ಸೆಳೆದು ಒಯ್ಯೊ ನಿನ್ನ ಜೊತೆಗಿರಲಿ, ಮೇಘವೇ ಪಯಣ ಬೆಳೆಸುವಾಗ (ಮೇಘದೂ. ೧೧-೪೧). 'ಅಂಬುವೇತಸ' ಪರಾ.
[ನೀರ್+ಬೆತ್ತ]

**ನೀರ್ಮಗಳ್** (ನಾ). ಲಕ್ಷ್ಮಿ.

ನೀರ್ಮಗಳ ಗಂಡ = ಲಕ್ಷ್ಮಿಯ ಗಂಡ ; ನಾರಾಯಣ ; ವಿಷ್ಣು : ನೀರ್ಮಗಳ ಗಂಡನಂ ಪೆಂಡತಿಯೊಳಾಳ್ದ ಪನ್ನತಿಕೆಯಿಂ ಪರಿಜುವೆತ್ತ ಬಿಸುಗೊರಲ ರಕ್ಕಸು ಪೂಗುವರತತ್ತಿಯಂ (ಏಕೋಪು. ೩-೩).
[ನೀರ್+ ಮಗಳ್]

**ನೀರ್ಮಜ್ಜಿಗೆ,** ನೀರುಮಜ್ಜಿಗೆ (ನಾ). ನೀರು ಹೆಚ್ಚಾದ ಮಜ್ಜಿಗೆ : ರಸರಸಾಯನವ ಚಪ್ಪರಿದು ನೀರ್ಮಜ್ಜಿಗೆ ಹಸಗೆಯ್ದಿರಲೀಂಟಿದರು (ಮೋಹತ. ೩-೫೭) ; ಅತ್ತಿರಸ ಹುಗ್ಗಿಯನ್ನು ಮೆಚ್ಚಿ ಉಂಡ ಪಾನಕ ನೀರ್ಮಜ್ಜಿಗೆಗಳ ಸವಿದು ಬೇಗ (ವಾದಿಕೀ. ೪೦-೩) ; ಬಾಟಿಶ್ಮೊದಲ್, ನೀರ್ಮಜ್ಜಿಗೆ (ಶಬ್ದಸು. ೯೨ ಪ್ರಯೋ). **ನೀರುಮಜ್ಜಿಗೆ :** ಕ್ಷೀರ ಸಾಗರವ ಪೊಂದಿದವ ಮಥಿಸಿದ ನೀರುಮಜ್ಜಿಗೆ ಕಾಣನೆ (ಪುರಂದ. ೧-೫೫-೧) ; ಒಂದು ಲೋಟ ನೀರುಮಜ್ಜಿಗೆಯನ್ನೋ ನಿಂಬೆಹಣ್ಣಿನ ಪಾನಕವನ್ನೋ ಮಾಡಿಕೊಡು (ನಂಟರು. ೩೫) ; ಬೇಸಿಗೆಕಾಲದಲ್ಲಿ ಪಾನಕ, ನೀರುಮಜ್ಜಿಗೆ, ರಸಾಯನಗಳನ್ನು ನಾವು ನಮ್ಮ ಇಷ್ಟಮಿತ್ರರೊಡನೆ ಕಲೆತು ತಿಂದು ಕುಡಿಯಬೇಕೆಂಬ ಋತುಧರ್ಮಗಳು . . . ಹಿತವಾದ ಕರ್ತವ್ಯವೆಂದು ಹೇಳಬಹುದು (ನಕ್ಷತ್ರ. ೨) ; ಯಾರೂ ಇಲ್ಲದ ಊರಿಗೆ ಹೋಗಿ ನೀರುಮಜ್ಜಿಗೆ ಬಯಸಿದ ಹಾಗೆ (ಗಾದೆ). [ನೀರ್ + ಮಜ್ಜಿಗೆ]

**ನೀರ್ಮಡುದಾಣ** (ನಾ). (ನದಿ, ಹೊಳೆ ಮುಂತಾದುವುಗಳ) ಆಳವಾದ ನೀರಿರುವ ಪ್ರದೇಶ ; "ಹ್ರದ" (ಪ್ರಭಣ್ಣ) : ನೀರ್ಮಡುದಾಣಂ, ಕಾಳ್ಗಿಡುವೇಲಿ (ಶಬ್ದಾನು. ೮೭ ವ್ಯಾಖ್ಯಾ).
[ನೀರ್ + ಮಡು$_2$+ ತಾಣ]

**ನೀರ್ಮಣ್,** ನೀರುಮಣ್ಣು (ನಾ). ನೀರಾವರಿಯುಳ್ಳ ಭೂಮಿ ; ತರಿಜಮೀನು : ಅರೆಕೆಱೆಯ ಮೂಡಣ ಕಡೆಗೋಡಿನ ನೀರ್ಮಣ್ಣು ಮಣ್ಣಂಗಳಯ್ಗಳಂ (ಎಕ. V, ಅರಕ. ೨೪-೧೧ ; ಸು. 900); ಪನ್ನಿರ್ಮ್ಮತ್ತರ ಹೆಸುಮಾವಾಡಿಯ ಕೆಱೆಯ ಕಾಟಿ ಪದಿರ್ಮತ್ತನ್ನಿರ್ನೀರ್ಮ್ಮ(ಣ)ಣ್ಣು ಮನಿತ್ತರ್ (ಸೌಇಇ. IX–i, ೬೧-೩೨ ; 931) ; ಪನ್ನೆರಡುಂ ಗಱ್ದೆ ನೀರ್ಮಣ್ಣುಮಂ ಪದಿಂಬರ್ ದೇವಡಿತಿಯರ್ಗ್ಗಂ ತಮಗಂ ಮನೆಗಂ . . . ಧಾರೆಯನೆಱೆದು ಬಿಟ್ಟು ಕೊಟ್ಟರ್ (ಎಕ. IV(R), ಚಾಮುರಾ.೧೧೪–೧೩; ಸು. 10ನೆಯ ಶತ) ; ಅಱೆಯಕೆಱೆಯ ಕೆಳಗಣ ನೀರ್ಮ್ಮಣ್ಣುಳ್ಳ ಕುಂಬಾಱಗೆಱೆಯ ಕೆಳಗಣ ನೀರ್ಮಣ್ಣುಳ್ಳನಿತು ಗದ್ದೆಯುಮಂ . . . ಕೊಟ್ಟರು (ಸೌಇಇ. IX–i, ೨೪೫-೨೨ ; 1146). **ನೀರುಮಣ್ಣು :** ಆ ಕೆಱೆಯ ಕೆಳಗಣ ಬೆದ್ದಲೆ ನೀರುಮಣ್ಣು ಸಹಿತವಾಗಿ ಜಗತೇಶ್ವರದೇವರಿಗೆ ಕೊಟ್ಟ ದತ್ತಿ (ಎಕ. XI, ದಾವಣ. ೪-೨೨ ; 1143). [ನೀರ್ + ಮಣ್]

**ನೀರ್ಮನುಜ** (ನಾ). ನೀರಿನಲ್ಲಿ ವಾಸಿಸುವ ಮಾನವ : ಕೊಡೆ ಮೇಣಗಪ್ಪಡ ಗೊಂಗಡಿ ಬಹುರಮ್ಯವಡೆದಿರ್ದ ಸಕಲಾತಿದಳೆದು . . . ನೀರ್ಮನುಜರಂತೆಡೆಯಾಡುತಿರ್ದರೂರುಗರು (ಮೋಹತ. ೪-೪೧).
[ನೀರ್+ಮನುಜ]

**ನೀರ್ಮನುಷ್ಯ** (ನಾ). = ನೀರ್ಮನುಜ : ಜಲದೇವೀಜನಮೆಂಬಿನಂ ಸಕಳತದ್ದೇವೀಜನಂ ನುಱಿಗ್ದತ್ತೊಲವಿಂದಂ ನೆಱೆ ನೀರ್ಮನುಷ್ಯರವೊಲಾ ದೇವರ್ಕಳುಂ ತೇಂಕಿದರ್ (ಬಾಧಪು. ೮-೧೨೭). [ನೀರ್ + ಮನುಷ್ಯ]

**ನೀರ್ಮನ್ನೆಯ** (ನಾ). = ನೀರ್ನೆಲ : ಬೆ(ಂ)ಣ್ಣೆಯೂರ್ಪ್ಪಂನೆರಡಱ ಚಂಡರಸ ಮುಖ್ಯವಾ ಭೂಮಿಗಧೀಶ್ವರರೊಲವಿನಿಂದ ಲೋಕಾಭರಣ ಮುನೀಂದ್ರಂಗೆ ತೇಜಸಾಮ್ಯಮನಿತ್ತರು ಅಂತು ನೀರ್ಮ್ಮನ್ನೆಯಮುಂ ಸರ್ವನಮಶ್ಯಮುಮಾಗಿ ಬಿಟ್ಟರ್ (ಸೌಇಇ. IX-i, ೩೨೦-೯ ; 1194).
[ನೀರ್+ಮನ್ನೆಯ]

**ನೀರ್ಮಯ್** 'ನೀರ್ಮೆಯ್' ನೋ.

**ನೀರ್ಮಳೆ** 'ನೀರ್ಮಱೆ' ನೋ.

**ನೀರ್ಮಳೆಗಱೆ** (ಕ್ರಿ). ಧಾರಾಕಾರವಾಗಿ ಮಳೆ ಸುರಿ,—ವರ್ಷಿಸು: ಬಹುಕಾಲಮೆನಗೆ ನೀರ್ಮಳೆಗಱೆದ ಪುರುಷಾರ್ಥಕಹಹ ಮೃದ್ಬಿಂದುಗಳ ನೀಗ ಸುರಿದಪೆನೆಂದು ಮಹಿ ನಭಸ್ಥಳಕೂರ್ಧ್ವಮುಖಮಾಗಿ ಸೂಸುವ ರಜದ ಸೋನೆಯೆನೆ ದೂಳಿಡೆ . . . ವಿಂಧ್ಯಾದ್ರಿಯಂ ಫಲುಗುಣನ ಸೇನೆ ತುಳಿದಸಿಯುರೆದುದು (ಜೈಮಿಭಾ. ೧೦-೮).

[ನೀರ್ಮಳೆ (<ನೀರ್ಮೞೆ) + ಕಱೆ₁]

**ನೀರ್ಮೞೆ, ನೀರುಮಳೆ, ನೀರ್ಮಳೆ** (ನಾ). ಗದ್ದೆ, ಕೆರೆ, ಕಟ್ಟೆ ಮುಂತಾದುವುಗಳಿಗೆ ಸಾಕಷ್ಟು ನೀರೊದಗುವಂತೆ ಸುರಿಯುವ ಮಳೆ : ನೀರ್ಮೞೆ ಕೊಳ್ಗೆ ಪೆರ್ಚುಗಿಳೆಗಾಯುಂ ಶ್ರೀಯುಮಾರೋಗ್ಯಮುಂ (ಲೋಕೋಪ. ೧೨-೬೭). **ನೀರುಮಳೆ :** ನೀರುಮಳೆ ಬಂದು ಕೆರೆ ತುಂಬಿತು (ರೂಢಿ). **ನೀರ್ಮಳೆ :** 'ನೀರ್ಮಳೆಗಱೆ' ಪರಾ.

[ನೀರ್+ಮೞೆ]

**ನೀರ್ಮಾನಸ** 'ನೀರ್ವಾನಸ' ನೋ.

**ನೀರ್ಮಾನಿಸ** 'ನೀರ್ವಾನಸ' ನೋ.

**ನೀರ್ಮಾವು?** (ನಾ). **೧.** ಹೊಳೆಯುವ ಹಸಿರು ಬಣ್ಣದ ಮಾವು. **೨.** ಹಸಿರುಕಾಂತಿಯ ಮಾವಿನ ಬಣ್ಣದ ಸೀರೆ. **೧, ೨ :** ಅವರಿಸಿ ಬಳಸಿಯುಂ ಸಿರಿ ಭಾವನೆಯಿಂ ಬಿಗಿದು ತಳ್ತ ನೀರ್ಮಾವಂ ನೀರ್ಮಾವಂ ನಿಱಿವಿಡಿದಾ ನಗರೀವನಿತೆ ವಿಳಾಸದಿಂದಮುಟ್ಟಂತಿಕ್ಕುಂ (ಪರ್ಧಮಾ. ೧-೬೨). [ನೀರ್+ಮಾವು]

**ನೀರ್ಮಿ, ನೀರುಮಿ** (ಕ್ರಿ). ಸ್ನಾನಮಾಡು ; ಮಿಾಯು : ಬಾಡಬಂ ತಾನಲ್ಲಿ . . . ಮಾದರ ದೂಡಿಗನು ನೀರ್ಮಿಂದೆಡೆಯೊಳೆಡೆಯಾಡಿ ಬಿದ್ದನು ಎದ್ದನದೆ ಕೆಸಱಿಂ ತೊಳೆದುಕೊಂಡ (ಬಸವು. ೫೬-೫೪); ಎಳಲತೆಯೆಳಸಿ ಮಳೆಗೆ ಮೈಯೊಡ್ಡುವವೋಲ್ ನಾಲ್ಪಗಲಿನ ನೀರ್ಮಿಂದು (ಜಯುಕಾ. ೨-೪೯). **ನೀರುಮಿ :** ಅವಳು ತುಂಬುಬಸುರಿಯಾಗಿದ್ದು ಸಂಗಡಲೇ ನೀರುಮಿಂದು . . . ಗಂಡನ ಸಂಗಡ ಹೊರಟಳು (ಕಥಾಮಂ. IV, ೪೭). [ನೀರ್+ಮಿ]

**ನೀರ್ಮುಟ್ಟು, ನೀರುಮುಟ್ಟು** (ಕ್ರಿ). **೧.** ನೀರನ್ನು ತಾಕು,—ಸ್ಪರ್ಶಿಸು : ಆ ಜ್ವಾಲೆ ಬಳಿಕಲ್ಲಿ ನಿಂದು ಧಾರ್ಮಿಕರಿವರೊಳುಂಟೆ ತನ್ನನೆಂತಾದೊಡಂ ನೀರ್ಮುಟ್ಟದಂತೊಯ್ಯನಾ ತಡಿಗೆ ದಾಂಟಿಸುವ ಕೂರ್ಮೆಯುಳ್ಳವರೆಂದೊಡಲ್ಲಿರ್ದ ನಾವಿಕರ್ಕೇಳ್ದವಳ್ಗೆಂತೆಂದರು(ಜೈಮಿಭಾ. ೯-೨೫). **ನೀರುಮುಟ್ಟು : ೨.** ಮಲಮೂತ್ರಗಳನ್ನು ವಿಸರ್ಜಿಸಿದ ನಂತರ ನೀರಿನಿಂದ ಶುದ್ಧಮಾಡಿಕೊಳ್ಳು : (ಓ). **೩.** ಮಲಮೂತ್ರಗಳನ್ನು ವಿಸರ್ಜಿಸು : ಜೋಗಿಪುರದ ಹತ್ತಿರ ಹರಿಯುವ ಕೆರೆಯ ಕೋಡಿಕಾಲುವೆ ಬಳಿ ಸರಸರನೆ ನೀರುಮುಟ್ಟಿ, ಕಾಲೆಳೆದುಕೊಂಡು ಹೋಗಿ, ಜೋಗಿಪುರ ಬಿದ್ದ (ನನ್ನೂರು. ೨೦೧).

[ನೀರ್+ಮುಟ್ಟು₁]

**ನೀರ್ಮುಳುಗ** (ನಾ). ಒಂದು ಬಗೆಯ ನೀರುಹಕ್ಕಿ : ಕೋಗಿಲೆ ಕಾಮುರುಳಿ ಬೆಳ್ವಕ್ಕಿಯೆಲಗೋ ಹುಲ್ಲುಬಂದಿಗ ನಿಬ್ಬ ನೀರ್ಮುಳುಗ . . . ಕೆಂಡವಕ್ಕಿಗಳವಱೊಳೊಪ್ಪಿದವು (ಸಾಳ್ವಭಾ. ೫-೨೨).

[ನೀರ್ಮುಳುಗು + –ಅ₇]

**ನೀರ್ಮುಳುಗು** (ಕ್ರಿ). ನೀರಿನಲ್ಲಿ ಮುಳುಗು ಹಾಕು,—ಸ್ನಾನಮಾಡು : ಗೃಹಸರೋವರಚಕ್ರಂಗಳ್ಗೆ ಪಾಸೆಯೆಂಬಾಸೆಗೊಡುವ ಬಾಸೆದಳೆದು ನೀರ್ಮುಳುಗುವ ನಿತಂಬಿನಿಯರುಂ (ರಾಜಶೇ. ೨-೧೩೬ ವ) ; ನಿತ್ಯ ನೀರ್ಮುಳುಗುವನು ಹತ್ತಿದಡೆ ಸ್ವರ್ಗವನು ಎತ್ತಿ ಜನ್ಮವನು ಜಲದೊಳಿಪ್ಪಾ ಕಪ್ಪೆ ಹತ್ತವೇಕೆಂದ (ಸರ್ವಜ್ಞ. ೯೨೨).

[ನೀರ್+ಮುಳುಗು₁ (<ಮುಱುಂಗು)]

**ನೀರ್ಮುಳ್ಳಿ** (ನಾ). ಒಂದು ಬಗೆಯ ಸಸ್ಯ : ಕೊಳವಂಕೆ, ನೀರ್ಮುಳ್ಳಿ, ನೀರುಗೊಬ್ಬಿಗಿಡ (ಮೈಔಗಿ. ೧೦-೧೭೦).

[←ತಮಿ. ನೀರ್ಮುಳ್ಳಿ]

**ನೀರ್ಮೆಯ್, ನೀರ್ಮಯ್** (ನಾ). **೧.** ನೀರಿನ ಮೇಲುಭಾಗ : ಗಿರಣಿಕುಂಟೆಯಲ್ಲಿ ಮಿರುಗುತ್ತಿದ್ದ ನೀರ್ಮೆಯ್ಯ ಮೇಲೆ ಶಬ್ದ ಹರಡಿತು (ಪುನರು. ೨೭೪). **ನೀರ್ಮಯ್ : ೨.** ಕಾಂತಿಯುಕ್ತವಾದ ಶರೀರ : ಅಳಿಕುಂತಳದಂಚೆನಡೆ ತಾವರೆಮೊಗ್ಗೆಮೊಲೆಯ ನೀರ್ಮಯ್ಯ ಮಿಾಂಗಣ್ಣ ಲಲಿತೋತ್ಪಲಗಂಧಿಯರು ನೀರ ಹೊಕ್ಕರು ಕೊಳಕೆ ಪೂಗೊಳ ಬಂದಂತೆ (ಶ್ರೀಪಾಲ. ೫-೫೨). **೩.** ಪೊಳ್ಳುಮೈ ; ಬೊಜ್ಜುದೇಹ. [ನೀರ್+ಮೆಯ್₂]

**ನೀರ್ಮೊಗೆ, ನೀರುಮೊಗೆ** (ಕ್ರಿ). ನೀರನ್ನು ತೋಡು,—ತೆಗೆದು ಸುರಿ : ನಗಪತಿ ತಾನೆ ಜೈನಸವನೋತ್ಸವದೊಳ್ ಪಿರಿದಟ್ಟಿಯಿಂದೆ ನೀರ್ಮೊಗೆಯಲೊಡರ್ಚೆ ಪಂಚಮಪಯೋಧಿಗೆ ನೀಡಿದನಕ್ಕುಮೆಯ್ದೆ ದೋರ್ಯುಗಳಮನಿರ್ಕೆಲಕ್ಕಂ (ಚಂದ್ರಪ್ರ. ೧೨-೧೨೦) ; ಓರ್ವಳೊಡನೆ ನೀರ್ಮೊಗೆದವಳನಿಟ್ಟವರ ಸಂಶಯಮನುಡಿಗಿಸಿದಳೇಂ ಜಾಣೆಯೋ (ಪದ್ಮರಾ. ೮-೪೫) ; ಸಗ್ಗದಾಣ್ಮನ ವಜ್ರಹತಿಯಿಂದೆ ಸಾಗರಕೆ ಮುಗ್ಗುವ ಕುಲಾದ್ರಿಗಳ ಮಱಿಗಳ ಸಮೂಹಮೆನಲೊಗ್ಗಿನಿಂ ಪೆರ್ಗಡಲ ನೀರ್ಮೊಗೆಯಲಿಳಿದ ಕಾರ್ಮುಗಿಲ ಬಳಗಂಗಳೆನಲು (ಜೈಮಿಭಾ. ೩-೩೮). **ನೀರುಮೊಗೆ :** ಇತ್ತ ನೀರುಮೊಗೆಯಲು ಹೋದ ಅತ್ತಿಗೆ ನಾದಿನಿಯರು ಮರಳಿ ಬರುವಾಗ ಒಂದೂವರೆ ಜಾವವೇ ಸರಿದಿತ್ತು (ಪುರಮ. ೬೫) ; ನೀರುಮೊಗೆಯುವುದು, ನೆಟ್ಟಿ . . . ಮುಂತಾದ ಎಲ್ಲ ಕೆಲಸಗಳಲ್ಲೂ ಅವಳು ಪ್ರಾಯದವರೂ ನಾಚುವಂತೆ ಗೇಯುತ್ತಾಳೆ(ಅಸಾಥೆ.೨೧).

[ನೀರ್+ಮೊಗೆ₁]

**ನೀರ್ಮೊರೆ** (ನಾ). ನೀರಿನ ಅಬ್ಬರ,—ಆರ್ಭಟ : ಗುತ್ತಿ ಕತ್ತಲೆಯನ್ನು ನೋಡುತ್ತಾ, ಮಳೆಯ ಮತ್ತು ತೊರೆಯ ನೀರ್ಮೊರೆಯನ್ನೂ ಮರಗಳಲ್ಲಾಗುತ್ತಿದ್ದ ಗರ್ಜನೆಯನ್ನೂ ಆಲಿಸುತ್ತಾ . . . ನಿಂತನು (ಮಲೆಮ. ೫). [ನೀರ್+ಮೊರೆ₂ (<ಮೊಱೆ₂)]

**ನೀರ್ಲಕ್ಕಿ** (ನಾ). ಒಂದು ಬಗೆಯ ಲಕ್ಕಿಗಿಡ : ನೀರ್ಗುಂಡಿ, ನೋಚ್ಚಿ, ನೀರ್ಲಕ್ಕಿ (ಮೈಔಗಿ. ೭೮-೧೬೦೧). [ನೀರ್+ಲಕ್ಕಿ₁(<ಲೊಕ್ಕಿ₁)]

**ನೀರ್ವಕ್ಕಿ, ನೀರಕ್ಕಿ, ನೀರುವಕ್ಕಿ, ನೀರುಹಕ್ಕಿ** (ನಾ). ನೀರಿನಲ್ಲಿ ವಾಸಿಸುವ ಕೊಕ್ಕರೆ ಇತ್ಯಾದಿ ಪಕ್ಷಿ ; ಜಲಚರಪಕ್ಷಿ : ಬಿಸುಸುಯ್ಯುತ್ತಗಲ್ದಿರ್ದ ನೀರ್ವಕ್ಕಿಗಳಾಗಲ್ ಕೂಡಿ ತೋಡಾದುವು (ಆದಿಪು. ೧೨-೯) ; ಪೂಗೊಳನಂ ತಿಳಿಯಿಟ್ಟು ನೀರ್ವಕ್ಕಿಗಳಂ ನೆಲೆವರ್ಚಿಸುತ್ತುಂ (ಗಿರಿಕ. ೭-೪೨ ವ) ; ನೀರ್ವಕ್ಕಿಗಳಿಂಚರಕ್ಕೆ ಶಫರಪ್ರಕರಂ ನಯನಕ್ಕೆ . . . ತಕ್ಕಳಿನಾದೆಯರ್ ವಿಮಳಲೋಚನೆಯರ್ ಜಲಕೇಳಿಗೆಯ್ದಿದರ್ (ದಶಕು. ೧೧-೭೯) ; ಬಿಡದೆ ಬೆಂಡೆದ್ದೇಳ್ವ ತಲೆಗಳ ಗಡಣನೀರ್ವಕ್ಕಿಗಳ ಸರಸಿಯ ನಡುವೆ ನಲಿಸಲಿದಾಡುತಿರ್ದುದು ಭೀಮುವನದಂತಿ (ಕುಪ್ಯಾದ್ರೋ.೧೨-೨೩); ಎಸೆವ ನೀರ್ವಕ್ಕಿಗಳ ಸಂಗದಿಂ ಭೃಂಗದಿಂದಾ ಕೊಳಂ ಕಣ್ಗೆಸೆದುದು (ಜೈಮಿಭಾ. ೧೫-೯) ; ನೀರ್ವಕ್ಕಿಗಳ್ ಜಳಕೇಳಿಗೆ ಮೊಗಸಿದವು (ರಾಮಾಶ್ವ. ೩೧-೨೪) ; ಬಿರಿವ ನೀರ್ವೂಗಳೊಳ್ ಬಂಡುಣುವ ಪರಮೆ ಮೊರೆ ನೀರ್ವಕ್ಕಿಗಳ ಬೇಟದಿಂಚರದೊಡನೆ ಹೊಂಚಿ ನನ್ನನೇಳಿಪುದಲ್ತೆ ? (ಶ್ರೀರಾಮಾ. ೨೮೬-೪೬). **ನೀರಕ್ಕಿ :** ನೀರಕ್ಕಿಯೆಂದು ಚಾದಗೆವಕ್ಕಿ ನಾಲ್ಕೆರಡು ವಾರಿಕಣಮಂ ಬಯಸಿ ಮೇಘಕ್ಕೆ ಬಾಯ್ದಿಡಲು (ಸೌಂದಪು. ೧೧-೩೨). **ನೀರುವಕ್ಕಿ :** "ಕವಿಃ — ನೀರುವಕ್ಕಿ, ಗುಬ್ಬಿ" (ಒಷಧಿ. ೧೯). **ನೀರುಹಕ್ಕಿ :** "ಪುಷ್ಕರಾಹ್ವಃ, ಸಾರಸಃ—೨ ಸಾರಸಹಕ್ಕಿ ಹೆಸರು. ನೀರುಹಕ್ಕಿ, ಜಲಪಕ್ಷಿ" (ಸಿದ್ಧಾಂತಿ. ೧೬೦). [ನೀರ್+ಪಕ್ಕಿ]

**ನೀರ್ವಚ್ಚಲ್** (ನಾ). ನೀರಿನ ಕಾಲುವೆ,—ತೋಡು : ಪಡುವಣೇರಿ ಮೇರೆ ಬಡಗಲು ಹಳ್ಳದಿಂ ಪಡುವ ಮುಂದಾಗಿ ಪರಿದ ನೀರ್ವಚ್ಚಲೆ ಮೇರೆ (ಎಕ. VII, ಶಿಕಾರಿ. ೧೩೪-೫೨ ; 1194). [ನೀರ್ + ಬಚ್ಚಲ್]

**ನೀರ್ವಟಿಗ** (ನಾ). ಅಂಬಿಗ ; ನಾವಿಕ ; ಬೆಸ್ತ : ಕೊಲ್ಲಟಿಗಂ, ಗಟಿವಟಿಗಂ, ದೀವಟಿಗಂ, ನೀರ್ವಟಿಗಂ (ಶಬ್ದಾನು. ೪೪೧ ಪ್ರಯೋ).
[ನೀರ್ + < -ಅಟಿಗ]

**ನೀರ್ವಟ್ಟೆ, ನೀರ್ಬಟ್ಟೆ** (ನಾ). ನೀರಿನ ಮುಖಾಂತರ ಸಾಗುವ ದಾರಿ ; ಜಲಮಾರ್ಗ : ನೀರ್ವಟ್ಟೆಯೊಳ್ ನಡೆದು ಕಳಶಪುರ . . . ಬಬ್ಬರಾದಿ ದ್ವೀಪ ದಶಪೂರ್ವಾಪರ ಸಮುದ್ರೋಪಕಂಠದ ಪಟ್ಟಣಂಗಳಂ ಪೊಕ್ಕು (ಬಂಹರಿ. ೪-೧೩ ವ) ; ಕೆಲವು ದಿವಸಕ್ಕೆ ಬಂಧುದತ್ತಂ ನೀರ್ವಟ್ಟೆಯೊಳ್ಬರುತ್ತಂ. . . ಮುಂ ಪೋದ ಪೊಳೆಗೆ ಬಂದು(ಪುಣ್ಯಾಸ್ರ. ೮-೧೦ ವ) ; ಮರುದಧೀನದೆ ಚಮತ್ಕರಿಸಿ ನೀರ್ವಟ್ಟೆಯೊಳಗಿರದೆ ಚರಿಸುವ ಪಡಂಗುಗಳ ಗಡಣಮೊ . . . ಎನೆ ಚತುರ್ಬಲಮೆಯ್ದಿತು (ಪದ್ಮರಾ. ೬-೨೮) ; ಶ್ರೀಕಲ್ಯಾಣೀತೀರ್ಥದೊಳ್ಮಂ ಸುಚರಿತಂ ಸುರಸರಿತ್ಪೂರದೊಳೆಬ್ಬು ಪೊಱಮಟ್ಟ ನೀರ್ವಟ್ಟೆಯು ಬಾಯ್ವರೆಗಂ ಮುಟಿಂಗಿ ನೆಗಪಿ ನೀಡುವ ನೀರಾನೆಯು ಬಱಿಕೆಯ್ಯೊಳೆಸೆವ ಪೊಂದಂಬಿಗೆಯು ತೀರ್ಥಮನೆ ತರ್ಪುದೆಂದುಂ (ಚಿಕವಂ. ೧೦೮-೧೧). **ನೀರ್ಬಟ್ಟೆ :** ಮುನ್ನೀರ್, ತೀರ, ಕರೆ, ಎಲ್ಲೆ—ಮುಂತಾದುವು ಅವರು ನೀರ್ಬಟ್ಟೆಯನ್ನು ತಿಳಿದವರಾಗಿದ್ದರೆಂದೂ . . . ಸಾರುತ್ತದೆ (ಭಾಷಾಶಾ. ೨೫೬) ; ಘೋರ್ಗರೆವ ಮೌನ, ನೀರ್ಬಟ್ಟೆಯ ಸಿಡಿಸುವ ಕಿಡಿ ! (ಅಮೃತಂ. ೫೮-೮). [ನೀರ್ + ಬಟ್ಟೆ₁]

**ನೀರ್ವಡೆ** (ಕ್ರಿ). ನೀರನ್ನು ಪಡೆ,—ಹೊಂದು : ನೀರ್ವಡೆಯದ ಗಿಡುವಿನಂತೆ ಮುಖಂ ಬಾಡಿ (ಧರ್ಮಾಮೃ. ೩-೩೫). [ನೀರ್ + ಪಡೆ₁]

**ನೀರ್ವತ್ತಿಗೆ, ನೀರವತ್ತಿಗೆ, ನೀರೊತಿಗೆ** (ನಾ). ಒಂದು ಬಗೆಯ ಸಿಹಿ ಭಕ್ಷ್ಯ ; ಆವಿಯಲ್ಲಿ ಬೇಯಿಸಿದ ಹೋಳಿಗೆ : ಬಟ್ಟಗಳಸಿಗೆಗೆ ನೀರ್ವೊಯಿದು ಪಾವಡೆಯುಮಂ ಕಟ್ಟಿವೊಲೆಗೆತ್ತಿ ಲತೆಯಿಱಿದು ಹೊಸ ಹೋಳಿಗೆಯುಱಿಟ್ಟು ಬೇಯಿಸಲು ನೀರ್ವತ್ತಿಗೆಯು ಪೆಸರನಾಂತು ಸುಖತರ ಮಾಗಿರ್ಪುದು (ಸೂಪಶಾ. ೧-೧೯). **ನೀರವತ್ತಿಗೆ:** ನೀರವತ್ತಿಗೆ ತಱಗು ಕಡಬುಗಳೀರಿಗಳನೊಟ್ಟದರೆ ಕಾಣುತ ಭೋರನೊಂದೇ ತುತ್ತಿನಲಿ ಕಬಳಿಸಿದ ಗುರುರಾಯ (ಪ್ರಭುಲೀ. ೨೩-೧೮). **ನೀರೊತಿಗೆ :** ಸಣ್ಣಕ್ಕಿ ಬೋನ ಬೆಣ್ಣೆ ಕಾಸಿದ ತುಪ್ಪ ನುಣ್ಣನೆ ಕಡುಬು ನಿ [ನೀ] ರೊತಿಗೆ ಬಣ್ಣಬಣ್ಣದ ನಾನಾ ಅಡಿಗೆಯುಯಿಡೆಗಳ ಬಿನ್ನಣ (ದೇವಾಂಪು. ೫-೨೨೮).
[← ತೆಲು. ನೀರುವತ್ತಿಗ]

**ನೀರ್ವನಿ, ನೀರುಹನಿ, ನೀರ್ಪನಿ** (ನಾ). ನೀರಿನ ಹನಿ ; ಜಲಕಣ ; ಸೀಕರ : "ಸಲಿಲಬಿಂದುವೆ ನೀರ್ವನಿ" (ಕರ್ಣಾನಿ. ೫೭) ; ನೀರ್ವನಿಯಿಂ ಸುರಿವಂಬುದಾಳಿ ಮಂಡಳಿಸಿದ ಮೇಘಕಾಲಮೆನೆ ಕಣ್ಗೆಸೆದಂ ನೃಪರೂಪಚಂದ್ರಮಂ (ಕಾದಂಪೂ. ೫೪೧) : ಅಡರಿ ಕಟಾಕ್ಷಚಂದ್ರಿಕೆ ಪಳಂಚೆ ಗವಾಕ್ಷದ ಚಂದ್ರಕಾಂತದಿಂದುದುಗದೆ ಸೋರ್ವ ನೀರ್ವನಿಗಳ್ (ಮಲ್ಲಿಪು. ೨-೭೦) ; ಮಿನುಗುವ ನಿಟ್ಟೆಸಟಿಕೊಳ್ ನೀರ್ವನಿಗಳನೊಳಕೊಂಡು ತೋರ್ಪ ಕೆಂದಾವರೆಯಂ ನೆನೆಯಿಸಿದುದು . . . [illegible] ಮಲ್ಲಿಡಿಯ ವಳಾ (ಕಬ್ಬಿಕಾ. ೭೮) ; ಮಂಡೆಯೊಳಗಣ ಗಂಗೆ ಕೆದಱಿ ನೀರ್ವನಿತಲೆಗೆ ಸುಂಡಿಸಿದ ಮೌಕ್ತಿಕದ ಸೂಸಕಂ ಗಗನದೊಳು ಖಂಡಶಶಿಯೆಡೆಗೆ ನಕ್ಷತ್ರವಾಜಿಡೆಯೆಡೆಗೆ ಮಲ್ಲಿಗೆಯ ದಂಡೆ (ವೀಶ್ವಪು. ೫-೮-೧) ; ನಳಿನಂ ಶುಕ್ತಿಕೆ ತಳ್ತ ನೀರ್ವನಿಗಳೇ ಸುಮುತ್ತು . . . ಕಣ್ಗೊಳಿಪನ್ನಂ ಕಮಳಾಕರಂ ತಳೆದುದಾ ರತ್ನಾಕರಾಕಾರಮಂ (ತಟಕಂ.೨-೫೫). **ನೀರುಹನಿ :** ಬೆಳಗಿನ ಬಿಸಿಲಿಗೆ ಹುಲ್ಲಿನ ಮೇಲಿನ ನೀರುಹನಿ ಗಾಜಿನ ಮಣಿಯಂತೆ ಹೊಳೆಯುತ್ತಿತ್ತು (ಊಧಿ). **ನೀರ್ಪನಿ :** ಭಗಣದ ಲೆಕ್ಕಮಂ ಮುಟಿಯ ನೀರ್ಪ[ಪಾಠಾಂ. ರ್ವ]ನಿಯಂ . . . ಪವಣ್ಗಳಂ ಪವಣಿಸಲ್ ಬಗೆದರ್ಪನೆ ಗಾಂಪನಾಗನೇ (ಪಂಪಾಮಾ. ೧೩-೧೧). [ನೀರ್ + ಪನಿ₂]

**ನೀರ್ವನೆ, ನೀರುಮನೆ** (ನಾ). **೧.** ಸಮುದ್ರ ; ಕಡಲು : ಹೇಡಿ ದಾನವಶಿಸುವ ನೀರ್ವನೆಯೊಳಂ ಬಿಸುಟು ಕೇಡಿಲ್ಲ ತನಗೆಂದು ನಾರದನ ವೊಲಿದು ಕೊಂಡಾಡುತಂ ತತ್ಪುರಕೆ ಪೋದಂ(ನವಮೋ.೧೧-೫೨). **ನೀರುಮನೆ : ೨.** ಸ್ನಾನದ ಮನೆ ; ಬಚ್ಚಲುಮನೆ : ಪ್ರಭಾವತಿಯು ಎದ್ದು ನೀರುಮನೆಗೆ ಹೋಗಿ ಒಂದು ತಪ್ಪಲೆಯಲ್ಲಿ ಬಿಸಿನೀರು ತೆಗೆದುಕೊಂಡು ಮುಂದಿನ ಜಗುಲಿಯ ಮೇಲಕ್ಕೆ ಹೋದಳು (ಚಂಗಾಳ್ವ. ೭).
[ನೀರ್ + ಮನೆ]

**ನೀರ್ವನೆಯ** (ನಾ). (ಕ್ಷೀರ) ಸಮುದ್ರವೇ ನಿವಾಸವಾಗಿ ಉಳ್ಳವನು ; ವಿಷ್ಣು : "ನೀರ್ವನೆಯನೆನೆ ವಿಷ್ಣು" (ಕಶರ. ೫೩).
[ನೀರ್ವನೆ + -ಅ₇]

**ನೀರ್ವರಿ, ನೀರುವರಿ₁** (ನಾ). ನೀರು ಹರಿಯಲು ಮಾಡಿರುವ ನಾಲೆ ; ಕಾಲುವೆ ; ತೋಡು : ಯೀಪಟಂ ನೀರ್ವ್ವರಿಯೊಳ್ಪೊಳೆವ ಮಣ್ಣುಳ್ಳನಿತಱೊಳ ಮುತ್ತಲ್ಗೊರ್ಕಣ್ಣುಗಂ ಗೆಯ್ದು ಕೊಟ್ಟಂಗು (ಎಕ. VII, ಶಿಕಾರಿ. ೨೮೪-೬ ; 902) ; ಜಳಧಿಯುಮಂ ಲಕ್ಷ್ಮೀದಯಿತಂ ನೀರ್ವರಿಯಿಂದಾದಮೆ ಕಿಱಿದೆಂದು ಬಗೆದು ನೋಡಿದಂ (ಆದಿಪು.೧೨-೭೫); ಪಾಯಮ್ವಡ ದೆಸೆಯೊಳು ಗುರಿಯ ಪಳ್ಳಂ ಬಡಗಲಾ ಪಳ್ಳಮೆ ನೀರ್ವ್ವರಿಯಾಗೆ ಮೂಡಲೆರಡುಂ ಪಳ್ಳದ ಕೂಡಲೆ ಮೇರೆಯಾಗೆ (ಸೌಇಇ. XI-i, ೫೨-೫೭ ; ಸು. 1007) ; ಮೂಡಣ ಬಡಗಣ ಕೋಣೆಯೊಳ್ ಮೂಡಲ್ ಪೋಕ್ ಪಡುವಲಾಗೆ ನೀರ್ವರಿ ಶುಭಮಂ ಮಾಡುಗುಂ (ಲೋಕೋಪ. ೩-೧೭) ; ಒಕ್ಕಲ್ಗೆಱಕೆ ಜಲರಾಶಿಯೆನೆ ಪರಿವ ನೀರ್ವ್ವರಿ ಭಾಸುರಮೆನೆ ಬೆಳಗು ಗಂಧಶಾಳಿವನಂಗಳ್ (ಎಕ. VI, ಕಡೂರು. ೩೫-೨೮ ; 1136). **ನೀರುವರಿ₁ :** ಪಡುವಣಸೀಮೆ ರಾಮೇಶ್ವರದೇವರ ತೆಂಕ ನೀರುವರಿಯ ತಳವೃತ್ತಿಯ ಮೂಡಣ ಕಡೆಯೆ ಮೇರೆ (ಎಕ. VII, ಶಿಕಾರಿ. ೩೨೩-೨೩ ; 1046) ; ಆ ಕೆಱೆಯ ಕೆಳಗಣ ಗದ್ದೆ ಬೆದ್ದಲೆ ನೀರುವರಿ ನೀರುಮಣ್ಣು ಸಹಿತವಾಗಿ ಜಗತೀಶ್ವರದೇವರಿಗೆ ಕೊಟ್ಟ ದತ್ತಿ (ಎಕ.XI,ದಾವಣ. ೪-೨೨; 1143) ; ನಾಗರಸರು ಪೊಂದಿಂ ಪಡುವಲು ತೊಱೆಯ ಕೂಡಿದ ಹಳ್ಳ ನೀರುವರಿ ಎ ಮೇರೆಯಾಗಿ (ಎಇ. XXI, ೨-೬೮ ; 1260) ; ನಯಿರುತ್ಯದಲು ತಲೆವಿಡಿಗನ ಗುಂಡಿಯ ತುದಿಯ ನೀರುವರಿಯಲೂ ನಟ್ಟ ವಾಮನ ಮುದ್ರೆಯ ಕಲ್ಲು (ಎಕ. VIII, ತೀರ್ಥಹ. ೧೩೩-೧೯ ; 1404).
[ನೀರ್ + ಪರಿ₃]

**ನೀರ್ವಲೆ, ನೀರುವಲೆ** (ನಾ). ನೀರಿನಲ್ಲಿ ಹರಡುವ ಒಂದು ಬಗೆಯ ಬಲೆ,—ಜಾಲ : ಹಾಸುವಲೆ ನೀರ್ವಲೆ ಪೋಲ್ವಲೆ ಸೊರ್ಕುವಾರ್ದು ಪೆರ್ಬಲೆ ಬಿಡುವಾರು ಸೋವಲೆಯೆಂಬಿನಿತಂ . . . ಒಡ್ಡಿದರೆಯ್ದೆ ಪುಳಿಂದ ನಾಯಕರ್ (ಮಲ್ಲಿಶಾ. ೩-೨೫೬) ; ಇಟ್ಟ ಗದೆ ಪೆರ್ಬಲೆ ನೀರ್ವಲೆ ಬಿಲ್ಲಳಂಬು ಬೆಂಬತ್ತುವ ಸಾಳುವಂ ಗಿಡಗ[illegible]೧-೭೭). **ನೀರುವಲೆ:** [illegible] ನೀರುವಲೆ ಶಶಕವಲೆಯು (ರುಕ್ಮಾಂಗ. ೧೦-೧೯).
[ನೀರ್ + ಬಲೆ₂]

**ನೀರ್ವಸೆ** (ನಾ). (ಶೈತ್ಯೋಪಚಾರದ) ತಂಪಾದ ಹಾಸು ; ಶೀತಶಯ್ಯೆ : ನಿನ್ನಂ ಕಂಡು ಕಣ್ಸೋಲ್ತತಿಶಯ ಮದನಾಸ್ತ್ರಾಗ್ನಿ ಸಂತಾಪದಿಂ ಚಂದ್ರಿಕೆಯೊಳ್ × × × ನೀರ್ವಸೆಯೊಳೊಡಲನಳ್ಕಾಡುವ ವೋಲ್ ಮಾಡಿದ್ದೆ (ದಶಕು. ೮-೨೬೯). [ನೀರ್ + ಪಸೆ₂]

**ನೀರ್ವಾಡಮಲ್ಲಿ** (ನಾ). ಒಂದು ಬಗೆಯ ಸಸ್ಯ : ನೀರುರ್ಬೋಗದ ಬಂಟ, ನೀರ್ವಾಡಮಲ್ಲಿ (ಮೈಟಿಗಿ. ೪೦-೭೮೫).
[ನೀರ್+ವಾಡಮಲ್ಲಿ₀(P ← ತಮಿ. ವಾಟಾಮಲ್ಲಿ)]

**ನೀರ್ವಾನಸ,** ನೀರ್ಮಾನಸ, ನೀರ್ಮಾನಿಸ, ನೀರ್ವಾನಿಸ (ನಾ). ೧. = ನೀರ್ಮನುಜ : ಮಾನಸರೆಲ್ಲಂ ನೀರ್ವಾನಸರೆನಿಸೆಯುಂ (ಅಜಿಪು. ೪-೬೭ ವ) ; ನೀರ್ವಾನಸಂ ಮೆಲ್ದು ಬಿಸುಡೆ ಪಸರಿಸುವ ತೆರೆಗೊನೆಯೊಳ್ ತೇಂಕಿ ಬರ್ಪ ಜಳಮೃಣಾಳನಾಳಮಂ ಜಳವ್ಯಾಳಮೆಂದು ಕೆಲದ ಬಿಲದಿಂ ಪಿಡಿಯಲೆಂದು ಧೀಂಕಿಡುವ ವಿಷಾಪಹಾರ ಶಾಲೂರಜಾಲಂಗಳೊಳಂ (ಚಂದ್ರಪ್ರ. ೫-೪೦ ವ). **ನೀರ್ಮಾನಸ :** ೧. ನೀರ್ಮಾನಸರಂತೆ ನೀರೊಳ್ ನೆಲಸಿರ್ದುದಕವಾಸಿಗಳುಮಂ . . ನೋಡುತಿರ್ದ ರಾಜಕುಮಾರನಂ ಅಲ್ಲಿರ್ದುದೊಂದು ರಾಜಕೀರಂ ಕಂಡು(ಪಂಚತಂ. ೧೧೯-೧೨); ಅಮದ್ದಿನ ಬಲು ನೀರ್ಮಾನಸರ ನೆಜಿವಿನಿಂದಂಭೋನಿಧಿ ಬಳಸಿತ್ತು ಕಾಪಿನಂದದಿನಿಳೆಯಂ (ಕಇ. IV, ೧-೯ ; 1204). **ನೀರ್ಮಾನಿಸ :** ೧. ನಯನೋತ್ಸಾಹಮನಿತ್ತು ದೇಹರುಚಿಯಿಂದೆಯ್ತಂದನಾಕಾಶಗಂಗೆಯ ನೀರ್ಮಾನಿಸನೆಂಬಿನಂ . . . ನಾರದಂ (ಪಂರಾಮಾ. ೩-೧೮) ; ಪೊಸಗಾರ್ದ ತಂಗಲೆೊಳ್ಳ ಕೆಸುಸಮಾಧಿಯೊಳೊಂದಿ ಮರದ ಮೊದಲೊಳ್ ನೀರ್ಮಾನಿಸನಿರ್ಪತೆ ಬಗೆಸುಂದೆ ಸರ್ವಸಾಧುಗಳನಾ ನರೇಂದ್ರವಧುವರ್ಚಿಸಿದಳ್(ಮಲ್ಲಿಪು. ೪-೪೩). ೨. ಗಂಗಾದೇವಿಯ ಮಗ ; ಭೀಷ್ಮ . ೩. ನೀರಿನಲ್ಲಿ ನೆಲಸಿರುವವನು ; ವಿಷ್ಣು . ೨, ೩ : ನೀರ್ಮಾನಿಸಂ ನದೀಜಂ ನೀರ್ವಾನಿಸನಬ್ಧಿಶಯನನದು ಕಾರಣದಿಂ . . . ಭೀಷ್ಮರ ಸಹಧರ್ಮದ ಕೆಳೆಕೊಂಡು ಕೊನೆದುದೀ ಕೇಶವನಂ (ಜಗವಿ. ೧೭-೧೮). **ನೀರ್ವಾನಿಸ :** ೧. ಮಾನಸಿಕೆಯ ದೊರೆಗಿಡೆ ನೀರ್ವಾನಿಸ[ಪಾಠಾಂ. ನೀಂ ಮಾನಸ]ನೆನೆ ನೀರೊಳೆಲವೊ ನೀನುಂ ಮಿನೆಂಬೀ ನೆವದಿರ್ದ (ಪಂಪಭಾ. ೧೩-೭೯) ; ಅವರಂ ತವಿಸಲ್ ಬಱಸಂದು ನಿಂದು ವಂದಾನೃಪಸೂನುವಿಕ್ರಮಕೃಶಾನುವದಲ್ಲದೊಡೆಲ್ಲಿ ಬೇಱ ನೀರ್ವಾನಿಸರಾರೊ ಬಡವಾನಳನೆಂಬುದದೇನೋ ತೋಱರೇ (ಪುಷ್ಪಪು. ೫-೫೩)
[ನೀರ್ + ಮಾನಸ$_1$]

**ನೀರ್ವಾನಸೆ,** ನೀರ್ವಾನಿಸೆ (ನಾ). ೧. ನೀರಿನಲ್ಲಿ ವಾಸಿಸುವವಳು: ಪೆರ್ಚುಗೆಯ ಕಡುಹಿವದ ಕೋಡಿಂಗಗಿದು ಭಾಸ್ಕರಂ ತನ್ನ ನಚ್ಚಿನ ಕಮಲಿನಿಯಂ ನೀರ್ವಾನಸೆಯುಂ ಬಿಟ್ಟು ಕೈಗೆಟ್ಟು ದೆಸೆಗೆಟ್ಟು ತುರಿಪದಿನೋಡಿ (ರಾಮಾಶ್ವ. ೧೧೫-೯). ೨. ನೀರಿನಲ್ಲಿ ಹುಟ್ಟಿದವಳು ; ಲಕ್ಷ್ಮಿ : ನೀನುದಧಿಯೊಳೊರ್ವಳ್ನೀರ್ವಾನಸೆಯಂ ಪಡೆದ ಗರ್ವದಿಂದಾನುಂ ಲಕ್ಷ್ಮೀನಿಳಯನೆನೆಂದಿರ್ದಪೆಂ (ಗದಾಯು. ೭-೫೪) ; ನೀರ್ವಾನಸೆಯಂತೆ ವಿಜಯವಧು ನೆಲಸಿರ್ಪಳ್ (ಚಂದ್ರಪ್ರ. ೩-೨೦). ೩. ನೀರಿನ ನಿವಾಸಿಯೆಂದು ನಂಬಲಾದ ಮನುಷ್ಯವರ್ಗಕ್ಕೆ ಸೇರಿದ ಹೆಂಗಸು ; ಜಲಕನ್ಯೆ. **ನೀರ್ವಾನಿಸೆ :** ೧.ನೀರ್ಗಿಚ್ಚು, ಊರ್ವೇಲಿ, ನೀರ್ವಾನಿಸೆ, ಕಾರ್ಗಾಲ್ (ಶಮದ. ೬. ೧೨೪ ಪ್ರಯೋ). [ನೀರ್ವಾನಸ + -ಎ$_2$]

**ನೀರ್ವಾನಿಸ** 'ನೀರ್ವಾನಸ' ನೋ.

**ನೀರ್ವಾನಿಸೆ** 'ನೀರ್ವಾನಸೆ' ನೋ.

**ನೀರ್ವಾಯ್** (ಕ್ರಿ). ನೀರು ಹರಿ,—ಪ್ರವಹಿಸು : ಮೆಟ್ಟಲ್ಕೆ ಬಲ್ಪೊಂದೆಡೆಯಿಲ್ಲೆಂಬಂತೆ ಪಂಕಂ ಮಸಗೆ ನೆನೆದು ನೀರ್ವಾಯುತುಂ ನಾಡೆಯುಂ ಬೇರ್ಗೆಡೆದತ್ತಂ ಬೆಟ್ಟುಗಳ್ ಕುಕ್ಕುಱಸೆ (ಕುಸುಮಾ. ೬-೩೫). [ನೀರ್+ಪಾಯ್$_1$]

**ನೀರ್ವಾವು,** ನೀರುವಾವು, ನೀರುಹಾವು (ನಾ). = ನೀರೊಳ್ಳೆ : "ಅಲಗರ್ದಃ, ಜಳವ್ಯಾಳಃ—ಈ ೨ ನೀರ್ವಾವು" (ಹಲಾಯು. ೧೦೬-೨೧); ನೆನೆ ನಿನ್ನ ಮಹಿಮೆಯಂ ನೀನೆನಿತನಿದಂ ಕೊಂಡುಕೊನೆವೆ ನೀರ್ವಾವನಿದರ್ಶನಿತೇಕೆ ಮಾನುಷತ್ವಮನೆನಸುಂ ನಟಯಿಸುವೆ ಕೃಷ್ಣ (ಜಗವಿ. ೩-೯೯) ; ತೆರೆಯಿವು ನೀರ್ವಾವಿವು ಸಲಿಲದ ಮುದಕರಿಯಿವು (ಸೊಬಸೋ. ೧೫-೩೧) ; ಮೊಸಳೆ ನೀರಾನೆ ನೀರ್ವಾವು ನೀರುಡುಗಳ ಸಮೂಹದಿಂದೆ . . . ಕಡಲ್ ಕಣ್ಗೆಸೆದುದು (ಚೆಐಪು. ೨-೩). **ನೀರುವಾವು :** "ತೋಯಸರ್ಪ—ನೀರುವಾವು" (ಒಷಧಿ. ೭೩). **ನೀರುಹಾವು :** ನೀರುಹಾವಿನಿಂದ ವಿಷವೇರುವುದಿಲ್ಲ (ಗಾಧೆ). [ನೀರ್ + ಪಾವು$_1$]

**ನೀರ್ವಿಜ್ಜಣಿಗೆ** (ನಾ). ನೀರಿನಲ್ಲಿ ಅದ್ದಿದ ಬೀಸಣಿಗೆ : ತೆರೆಗಳ್ಮಲ್ಪಿಂದೆ ನೀರ್ವಿಜ್ಜಣಿಗೆಯ ತೆಱದಿಂ ಬೀಸೆ ಹಂಸದ್ವಯಂಗಳ್ ತರದಿಂ ಕಣ್ಗೆಯ್ಕೆ (ಕಾದಂಉ. ೧೪೮). [ನೀರ್ + ಬಿಜ್ಜಣಿಗೆ]

**ನೀರ್ವಿಡಿ** (ಕ್ರಿ). ನೀರನ್ನು ಹಿಡಿ,—ಹಿಡಿದುಕೊಳ್ಳು : ಬಗಸೆಗೈಗಳಲಿ ನೀರ್ವಿಡಿದು ಶ್ರೀರಂಗೇಶ ಸೊಗಸುಗಾತಿಯರ ಮೇಲಿಡಲು (ಕಂಸವಿ. ೨೫-೧೨೩) ; ಲಾಮಂಚದಮಳ ಚಪ್ಪರದಿ ಹೇಮಾಂಬುರುಹಮೊಗ್ಗೆ ಮೊಲೆಯರು ನೀರ್ವಿಡಿದಾ ಮಹಾಸ್ಥಲಗಳೊಪ್ಪಿದುವು (ನನಮೋ. ೨-೨೮). [ನೀರ್ + ಪಿಡಿ$_1$]

**ನೀರ್ವುಗಿಲು** (ನಾ). (ಕೊಲ್ಲಿಯಿಂದ) ನೀರು ಹೋಗುವ ಬಾಗಿಲು, —ದ್ವಾರ : ಪೆಗ್ಗೊಲ್ಲಿಯ ನೀರ್ವುಗಿಲು ಬಡಗಣ ದೆಸೆಯೊಳ್ ಅಂತೆ ಬರ ಪೇರೊಬ್ಬೆ (ಮೈಆರಿ. ೧೯೨೧, ೧೦-೧೮೪ ; 967). [ನೀರ್ + ಪುಗಿಲು$_2$(<ಪುಗಿಲ್$_1$)]

**ನೀರ್ವುಗಿಸು** 'ನೀರ್ವೊಗಿಸು' ನೋ.

**ನೀರ್ವುಗು** 'ನೀರ್ವೊಗು' ನೋ.

**ನೀರ್ವುಟ್ಟು** (ನಾ). ದೋಣಿಯನ್ನು ನಡೆಸುವ ಸಾಧನ ; ಹುಟ್ಟು: ನೀಲಾಬ್ಜಂ ನೀರ್ವುಟ್ಟೆನೆ ನೀಲಾಬ್ಧಮನಡರ್ದು ತಳರ್ವ ಬಿಜ್ಜೋದರ ಕಣ್ಗೋಲಮನಮರ್ಚಿದಳ್ ಪಱಗೋಲೊಳ್ ಪೋಪಂತೆ ಗಗನಮೆಂಬಂಬುಧಿಯೊಳ್ (ಶಬಶಂ. ೧-೪೩). [ನೀರ್+ಪುಟ್ಟು$_3$]

**ನೀರ್ವೂ,** ನೀರ್ಪೂವು, ನೀರ್ವೂವು (ನಾ). ನೀರಿನಲ್ಲಿ ಅರಳುವ ಹೂವು ; ತಾವರೆ, ನೈದಿಲೆ ಇತ್ಯಾದಿ : "ಕೆಸರ್ಮಲ್ಲಿಗೆ, ಸಿರಿಯ ಕರುಮಾಡಂ, ತಾಮರೆ, ನೀರ್ವೂ—ಈ ೪ ಕಮಲಕ್ಕೆ ಪೆಸರ್" (ಕಶಸಾ. ೮-೧೬೫) ; ಸೂಸಿ ಪಾಸಿಱದು ಬಣ್ಣವುರಂ ತೀವಿದಂತೆ ಬೆಡಂಗುವಡೆದ ಬಣ್ಣವಣ್ಣಿಗೆಯ ನೀರ್ವೂಗಳ ರಜಂಗಳುಮನೊಳದೊಂಡಿನ ಪಾಲ್ಗಳುಮಂ ಪೀರ್ದಿಂಗೊರಲ್ಗಳಾದ ನೀರ್ವಕ್ಕಿಗಳ ಸುಸಿಲಮುಸಕದಿಂಚರಂಗಳುಮಂ (ಕಾದಂಉ. ೫೨೬) ; ತರುಣ ಬಿಸಸದನಮಬ್ಜಾಕರ ಕರಿ ಮೇಗೊಟ್ಟುಕೊಂಡುದದು ನೀರ್ವೂವಂ ಸರಸಿರುಹಪತ್ರಕರ್ಣಂ ತರಂಗತರಮುಚ್ಛ್ಯಮಾನ ಶೀಕರನಿಕರಂ (ಅರ್ಧನೇ. ೫-೧೦೪) ; ಬೆಂಚೆಗಳೊಳರೆವಿರಿದ ನೀರ್ವೂಗಳ ಕಂಪಿಂಗೆ ಮಾಣದೆ ಮುಸುಱ ಮೊಱೆವ ಪೆಣ್ದುಂಬಿಗಳ ಚೆಲ್ವನೊಳಕೊಂಡಿರ್ಪುದು (ಕಬ್ಬಿಕಾ. ೧೮) ; ನೀರ್ವೂವಿಡಿದು ರೈಯೆನೆ ಮೆಱೆವ ನಾಲ್ದೆಸೆಯೊಳಿರ್ದರಗೆಱೆಯ ಸೊಬಗಿಂದ (ಸಾಳ್ವಭಾ. ೪-೨೯) ; ಸಾವರ್ಗೆ ನೋವವರ ಜಾಳಿಗೆವೊನ್ನಂ ಕವರ್ವೊಂದು ಬಗೆಯೊಳಾರಯ್ವ ನೆಂಟರ್ಗೆ ದೊರೆವಂದ ಬಂಡುಣಿಗಳ್ ನೀರ್ವೂಗಳಂ ಸೇವಿಸುತಿರ್ದುವು (ರಾಮಾಶ್ವ. ೮೩-೧೦). **ನೀರ್ಪೂವು:** "ಸಿರಿಯ ಕರುಮಾಡ ನೀರ್ಪೂ[ಪಾಠಾಂ. ವೂ]ವು ತಾವರೆ ಪೊಗಱ ಕೆಸರ್ಮಲ್ಲಿಗೆಯನಲ್ತಾವರೆಗೆ ಚಾರುತರಮಪ್ಪ ನಾಮಮಕ್ಕುಂ" (ಕಬ್ಬಿಕೈ. ೧೨). **ನೀರ್ವೂವು :** "ಸಿರಿಯ ಕರುಮಾಡಮುಂ ತಾವರೆ ನೀರ್ವೂವೆನ್ನುತಿರದೆ ಕೆಸರ್ಮಲ್ಲಿಗೆಯೆಂದುಱ ಪೇೞಲದು ಸರೋಜಂ" (ಕವಿಕಾ. ೯೪) ; ನೀರ್ವೂವುಗಳ ಸೌಸವದ ಕಯ್ಗಾಣ್ಕೆಯಂ ಸಲ್ಲೀಲೆಯಿಂ ಪಿಡಿದುಕೊಂಡು (ಪದ್ಮರಾ. ೮-೪೨). [ನೀರ್ + ಪೂ$_2$]

**ನೀರ್ವೂವು** 'ನೀರ್ವೂ' ನೋ.

**ನೀರ್ವೂವೊಕ್ಕುಳ** (ನಾ). ಹೊಕ್ಕುಳಲ್ಲಿ ಕಮಲವನ್ನುಳ್ಳವನು ; ಪದ್ಮನಾಭ ; ವಿಷ್ಣು : "ರಕ್ಕಸವಗೆಯುಂ . . . ನೀರ್ವೂ [ಪಾಠಾಂ. ತಾವರೆ] ವೊಕ್ಕುಳನಲರ್ಗಣ್ಣಂ ಹರಿಯಕ್ಕುಂ" (ಚತುನಿ. ೭). [ನೀರ್ವೂ + ಪೊಕ್ಕುಳ್ + -ಅ$_7$]

**ನೀರ್ವೆಣ್,** ನೀರ್ವೆಣ್ಣು (ನಾ). ೧. ನೀರಿನಲ್ಲಿ ವಾಸಿಸುವ ಹೆಣ್ಣು ; ಜಲಕನ್ಯೆ : ತೆಂಗಿನೆಳನೀರ ಕೂಡೆ ಕರೆಗಣ್ಣುವ ಕೊಳಂಗಳೊಳವೊಕ್ಕು ತಾವರೆಯ ಪಚ್ಚೆಲೆಯಂ ಮೆಯ್ಯೊಳಾಂತು ನುಣ್ಣಿತಪ್ಪೆಳವಿದಿರ ಬಣ್ಣಮಂ ತಳೆದ ನೀರ್ವೆಣ್ಣಂತಿರ್ಪಳ್ (ಕಬ್ಬಿಕಾ. ೩೧೫). ೨. "ಗಂಗಾದೇವಿ" (ಪ್ರಭಣ್ಣ). **ನೀರ್ವೆಣ್ಣು :** ೧. ಮುಗಿಲುಕಡಲಿನಲ್ಲಿ ನೀರ್ವೆಣ್ಣುಗಳೊಡನೆ ಚಲ್ಲಾಟವಾಡುತ್ತ ಅವನೂ ಹೊರಟ . . . ಪಡುವಲ ದಿಕ್ಕಿಗೆ ಮುಖನಾಗಿ (ಸುನಸಂ. ೨೬). [ನೀರ್+ಪೆಣ್]

**ನೀರ್ವೆಣ್ಣು** 'ನೀರ್ವೆಣ್' ನೋ.

**ನೀರ್ವೆರಸು,** ನೀರು ಬೆರಸು (ಕ್ರಿ). ೧. ನೀರು ಸೇರು ; ನೀರು ಕೂಡು : ಪಾಲಿಂಗೆ ಪಾಲ್ಕೆನೆಗಟ್ಟಿ ವೋ ನೀರ್ವೆರಸಿದವೊ ಆರೋಗಿಸುವ ಬುದ್ಧಿ ಹುಟ್ಟಿದೋ (ಬಸಪು. ೧೪-೯). **ನೀರು ಬೆರಸು :** ೨. ನೀರನ್ನು ಸೇರಿಸು,—ಮಿಶ್ರಮಾಡು : ಸ್ವಲ್ಪ ಭತ್ತವನ್ನು ತಂದು ಅದನ್ನು ಚೆನ್ನಾಗಿ ಕುಟ್ಟಿ ನೀರು ಬೆರಸಿ . . . ತಂದು ಅವಳ ಬಾಯಿಗೆ ಹಿಡಿದ (ಅನಾಥೆ. ೧೭). [ನೀರ್+ಬೆರಸು$_1$(<ಬೆರೆಯಿಸು)]

**ನೀರ್ವೆಳಸು** (ನಾ). ನೀರಿನಲ್ಲಿ ಬೆಳೆದುದು : ನೀರ್ವಾವು, ನೀರ್ವೆಳಸು (ಭಾಷಾಭೂ. ೩೧ ಉದಾ). [ನೀರ್+ಬೆಳಸು$_2$]

**ನೀರ್ವೇಂಟೆ** (ನಾ). ನೀರಿನಲ್ಲಿ ಆಡುವ ಬೇಟೆ ; ಮೀನು ಹಿಡಿಯುವುದು : 'ನೀರ್ವೇಂಟೆಗಾಜಿ' ಪರಾ. [ನೀರ್+ಬೇಂಟೆ]

**ನೀರ್ವೇಂಟೆಗಾಜ** (ನಾ). ನೀರಿನಲ್ಲಿ ಬೇಟೆಯಾಡುವವನು; ಮೀನುಗಾರ : ನೀರ್ವೇಂಟೆಗಾಜರ್ ಮೀನೇಡಿಯಾಮೆಗಳ್ ಮೊದಲಾದ ಜಲಚರ ಪ್ರಾಣಿಗಳಂ . . . ತಂದು ಮುಂದಿರಿಪುದುಂ (ಚಿಕಪಂ. ೬-೨೧). [ನೀರ್ವೇಂಟೆ+-ಕಾಜ]

**ನೀರ್ವೇಲಿ** (ನಾ). ನೀರಿನಿಂದ ಆದ ಬೇಲಿ,—ಆವರಣ : ಅಂಬುಧಿ ನೀರ್ವೇಲಿಯೆನಲು ಜಂಬೂದ್ವೀಪವನವೊಪ್ಪುಗುಂ (ಕಇ. IV, ೧-೧೧ ; 1204). [ನೀರ್+ಬೇಲಿ]

**ನೀರ್ವೇಜು** (ಕ್ರಿ). ನೀರನ್ನು ಹೇರಿಕೊಳ್ಳು,—ಹೊತ್ತುಕೊಳ್ಳು : ಅಗಲದ ಪರೋಪಕಾರದ ಬಗರಗೆ ನೀರ್ವೇಜು ಕೀಜು ನವಜಲದಂಗಳ್ ಗಗನಪಥಕ್ಕಡರ್ವಗ್ನಿಯ ಪೊಗೆಗಳ್ ನೆಗೆವಂತೆ ನೆಗೆದುವಂಬುಧಿಯಿಂದಂ (ಸೂಕ್ತಿಸು. ೨-೨೯). [ನೀರ್+ಪೇಜು$_1$]

**ನೀರ್ವೊಗಿಸು,** ನೀರ್ವುಗಿಸು (ಕ್ರಿ). ನೀರನ್ನು ಹೊಗುವಂತೆ ಮಾಡು,— ಪ್ರವೇಶಿಸುವಂತೆ ಮಾಡು : ಲಲಿತಕರತಲಮೊಂದಿ ಮೆಜಿಪ ನಳಿತೋಳರುಣಜಲವಾಂತೆಸೆವ ಬಿಸವಲ್ಲಿಯಂ ನೀರ್ವೊಗಿಸೆ (ಪದ್ಮರಾ. ೩-೨೯). **ನೀರ್ವುಗಿಸು :** ನಗೆಗಣ್ಣೈದಿಲನೈದೆ ನೀರ್ವುಗಿಸೆ . . . ವೇಣೀಭರಂ ಕಾಳಪನ್ನಗನಂ ಪುತ್ತುಡರ್ವಂತೆ ಮಾಡೆ ಮೆಜಿದಳ್ ಶರ್ವಾಣಿ ಸೌಂದರ್ಯದಿಂ (ರಾಜಶೇ.೧೪-೧೪೭). [ನೀರ್ವೊಗು+-ಇಸು$_3$]

**ನೀರ್ವೊಗು,** ನೀರ್ವುಗು (ಕ್ರಿ). ನೀರಿನಲ್ಲಿ ಪ್ರವೇಶಿಸು,–ಹೊಗು : ತುಳ್ಳುವ ನಲ್ಲಳ್ ನೀರ್ವೊಗಲಳ್ಕಿದವೋಲ್ [ಪಾಠಾಂ. ನೀರ್ವೊಯಲ್ ತೆಳುಕಿದವೋಲ್]ಮುಬಿಗೆ ಮುನ್ನ ಕಣ್ಬೇಟದವಳ್ ತುಳ್ಕಿದೆಡೆಗೆಯ್ದಿ ಚುಂಬಿಸಿ ತುಳ್ಕಾಡಿ ಮರುಳ್ದು ಮೂಡಿದಂ ಶಶನೊರ್ವಂ (ಸೂಕ್ತಿಸು. ೧೨-೬೬; ಅನಂಪು. ೭-೩೮ ನೋ) ; ಇತ್ತರಂಬಿಡಿದೊತ್ತರಿಸಿ ಬೆಳೆದ ನುರದುಜುಗಲ್ಲಿರದೆಜಗಿ ಮುಂಜುವ ಕರಿಕರಕ್ಕಂಜಿ ನೀರ್ವೊಕ್ಕು ನಡುಗುವಂತೆ ತೆರೆವೊಯ್ಲಿಂ ಕಂಪಿಪದಜಿ ಪಡಿನೆಳಲ್ ಪರಿರಂಜಿಸೆಯುಂ (ರಾಜಶೇ. ೬-೨೪ ವ). **ನೀರ್ವುಗು :** 'ನೀರ್ವುಗಿಸು' ಪರಾ. [ನೀರ್+ಪೊಗು]

**ನೀರ್ವೊಟ್ಟಣ** (ನಾ). ನೀರನ್ನುಳ್ಳುದು ; ಮೋಡ : ನೆರೆದ ನೀರ್ವೊಟ್ಟಣದೊಳ್ ಬೆಚ್ಚಂತಿರೆ ಮ್ಮೆವೆರ್ಚಿ ನಿಗುರ್ದದೊಂದು ನೀಲಪರ್ವತಂ (ರಾಮಾಶ್ವ. ೭೨-೧೪). [ನೀರ್+ಪೊಟ್ಟಣ(<ಪೊಟ್ಟಳ)]

**ನೀರ್ವೊನಲ್,** ನೀರ್ವೊನಲು (ನಾ). ನೀರಿನ ಪ್ರವಾಹ : ನೀರೋಟ : ಬರೆದ ವಿಚಿತ್ರಪತ್ರನಿಚಯಂ ನಿಜಲೋಚನಚಂದ್ರಿಕಾ ಪರಂಪರೆ ನಡೆನೆಟ್ಟು ನೋರ್ವ ಶಶಿಕಾಂತದ ಕೇರ್ಗಳ ನೀರ್ವೊನಲ್ಗಳಿಂ ಪರೆಯೆ (ಪಂಪರಾಮಾ. ೧-೧೧೭) ; ಭರದಿಂದ ಪರಿವ ನೀರ್ವೊನಲೆಳೆದು ಕೊಂಡೊಯ್ಯುತಿರಲು . . . ಕರುಣದಿಂ ಪೋಗಿ ಕೈದುಡುಕಿ ಪಿಡಿದೆತ್ತಿ (ಸೌಂದಪು. ೩-೩೬) ; ಧರೆಯೊಳ್ ನೀರ್ವೊನಲೆಲ್ಲಮಂ ಕಡಲ್ . . . ತಾಮೋಳಕೊಂಡು ಸಲ್ವ ತೆಜದಿಂ (ಚಿಕವಿ. ೨-೬). **ನೀರ್ವೊನಲು :** ಸೋನೆವಳೆ ಸುರಿವಂದು ನೀರ್ವೊನಲು ಹರಿವಂದು ಬಿಸಿಲುಮುಳಿಯಂದವನು ಕಾಣಬೇಕು (ಭಾವಜೀ. ೨೧-೪೦೩). [ನೀರ್+ಪೊನಲ್]

**ನೀರ್ವೊನಲು** 'ನೀರ್ವೊನಲ್' ನೋ.

**ನೀರ್ವೊಯ್,** ನೀರ್ವೊಯ್ (ಕ್ರಿ). ೧. ನೀರು ಸುರಿ,—ಹೊಯ್ಯು,—ಎರೆ : ಇದಿರಂ ಬಂದು ನಿಜಿಸಿ ಬಲಗೊಂಡು ಬಂದು ಭಟ್ಟಾರರ ಕಾಲಂ ಮಹಾದೇವಿ ನೀರ್ವೊಯ್ಯೆ ಅರಸಂ ತಾನೆ ಪ್ರಕ್ಷಾಳಿಸಿ (ವಡ್ಡಾರಾ. ೭೪-೯) ; ಮಟಿಕೆಗಾಲಮುಂಟೆಂದು ತಪ್ಪಿದ ಜೋಯಿಸಂ ಬಾವಿಯ ನೀರನೆಣಿಕಿ ನೀರ್ವೊಯ್ದನೆಂಬ ಕಥೆಯಂತೆ (ಪಂಚತಂ. ೧೨೭-೩); ಒಣಗಿದ ಭೂಜಕ್ಕೆ ನೀರ್ವೊಯ್ವುದುಂ ಕೋಟಲೆವಟ್ಟೀ ನಿಷ್ಫಲೋದ್ಯೋಗಮನೊಡರಿಪುದೇನೆಂಬುದುಂ (ಪಂರಾಮಾ. ೧೬-೫೫); ಶೈತ್ಯವಸ್ತುಗಳಿಂದೆ ಪಣ್ಣಿದುಪಚಾರಮಂ ಹೃದಯದೊಳ್ನೀರ್ವೊಯ್ದು ಸುಣ್ಣಮರಳ್ದಂತಾದುದೆಂದು ಕಾತರಿಸುವಳಬಲೆ ಕಾಮತಾಪದಿಂದೆ (ಜೈಮಿಭಾ. ೩೦-೩೫). ೨. (ಅಲೆ ಹೊಡೆದು) ನೀರು ನುಗ್ಗು : ವಾರ್ಧಿಯೊಳ್ ತದ್ವಹಿತ್ರಸ್ನೀರ್ವೊಯ್ದು ಮುಬುಂಗಲಾಂ ಬರ್ದುಕಿದೆಂ (ದಶಕು. ೪-೪೬). **ನೀರ್ವೊಯ್ :** ೧. ತಾತ ನಂದನದೊಳಾಂ ನೀರ್ವೊ[ಪಾಠಾಂ. ರ್ವೊ]ಯ್ದು ಬೆಳೆಯಿಸಿದ ಚೂತಲತೆ ಪೂತುದು (ಜೈಮಿಭಾ. ೨೯-೩೧). [ನೀರ್+ಪೊಯ್$_2$]

**ನೀರ್ವೊಯ್ಲು** (ನಾ). ನೀರಿನ ಹೊಡೆತ,—ಪೆಟ್ಟು : ಬಗಸೆಗೈಗಳಲಿ ನೀರ್ವಿಡಿದು ಶ್ರೀರಂಗೇಶ ಸೊಗಸುಗಾತಿಯರ ಮೇಲಿಡಲು ಒಗುವ ನೀರ್ವೊಯ್ಲು ಸೈರಿಸದೆ ಶ್ರೀಹರಿಯನು ಬಿಗಿಬಿಗಿದಪ್ಪಿದರಾಗ (ಕಂಸವಿ. ೨೫-೧೨೩). [ನೀರ್+ಪೊಯ್ಲು (<ಪೊಯಲ್)]

**ನೀರ್ವೊರೆ** 'ನೀರ್ವೊಜಿ' ನೋ.

**ನೀರ್ವೊರೆಗಳೆ** (ಕ್ರಿ). ನೀರಿನ ಭಾರವನ್ನು ಕಳೆದುಕೊಳ್ಳು : ಹಂತಿಗೊಂಡುದು ಗಗನನೀಲಿಮೆಯ ನುಣ್ಜಗಲಿಯೊಳ್ ನೀರ್ವೊರೆಗಳೆದ ಬೆಳ್ಳಿಯುಣ್ಣೆಯಾ ಮುಗಿಲ ಹಗುರಂ (ಶ್ರೀರಾಮಾ. ೨೨೮-೧೪). [ನೀರ್ವೊರೆ(<ನೀರ್ವೊಜಿ)+ಕಳೆ$_1$]

**ನೀರ್ವೊಳೆ** (ನಾ). ನೀರಿನಿಂದ ತುಂಬಿರುವ ಹೊಳೆ,—ನದಿ : ನಡೆವ ಸುವರ್ಣಪುತ್ರಿಕೆಯಿದೆಂದೆನೆ ನೀರ್ವೊಳೆಗೊರ್ವಳಿತ್ತಿಯಿಂದಡಿಯಿಡುವನ್ನೆಗಂ ಪ್ರಥದಿನೊಯ್ಯನೆ ಹಬ್ಬೆಯದೊಂದು ದಂಡಮುಂ ಪಿಡಿದಿದಿರ್ವರ್ಪನಂ ಪದೆದು ನಿಟ್ಟಿಸಿ ಮೆಯ್ಮರವಟ್ಟಳ್ (ರಸರ. ಪರಿ. ೧-೧೧೯). [ನೀರ್+ಪೊಳ್$_3$ (<ಪೊಟಿ)]

**ನೀರ್ವೊಜಿ,** ನೀರ್ವೊರೆ (ನಾ). ನೀರಿನ ಹೊರೆ,—ಭಾರ : ಎಡಗಯ್ಯಿಂ ನಸುಸೋಂಕಿ ನೀರ್ವೊಜಿಯ ಬಿಣ್ಪಿಂ ಬಿಟ್ಟ ಧಮ್ಮಿಲ್ಲಮಂ ಪಿಡಿದು . . . ನಿಂದಬಲೆಯರ್ ಕಣ್ಗೊಪ್ಪಿದರ್ (ಸೂಕ್ತಿಸು. ೧೨-೯೩). **ನೀರ್ವೊರೆ :** 'ನೀರ್ವೊರೆಗಳೆ' ಪರಾ. [ನೀರ್+ಪೊಜಿ]

**ನೀರ್ವೋಕುಳಿ** (ನಾ). ಉತ್ಸವಸಂದರ್ಭದಲ್ಲಿ ಒಬ್ಬರ ಮೇಲೊಬ್ಬರು ಎರಚಾಡುವ ಬಣ್ಣದ ನೀರು : ಬಿಳಿಯಲರ್ಗಣ್ಗಳ್ ಬೆಳ್ಪಂ ಲಲನಾಜನದಧರಮಣಿಗೆ ಕೊಟ್ಟದಜಿ ಪುದುಂಗೊಳಿಸಿದ ಕೆಂಪಂ ನೀರ್ವೋಕುಳಿಯೊಳ್ ಮಾಜಾಡಿಕೊಂಡ ತೆಜದಿಂ ತೋರ್ಕುಂ (ಕಾವ್ಯಾವ. ೬೧೪). [ನೀರ್+ಓಕುಳಿ]

**ನೀರ್ಸುೞಿ,** ನೀರುಸುಳಿ (ನಾ). ನೀರಿನಲ್ಲಿರುವ ಸುಳಿ ; ಜಲಾವರ್ತ : ಕಡಲಲೆವ ಪಡಗುಪಡೆ ನೀರ್ಸುೞಿಗೆ ಸಿಲ್ಕಿ ತಿರ್ರನೆ ತಿರುಗುತಿರ್ದ್ದೊಡಂ . . . ಸುೞಿಯೊಡನೆ ಮಲೆತು ಹೋರಾಟಮಂ ತೊಡಗುವೋಲಂತೆ (ಶ್ರೀರಾಮಾ. ೪೧೨-೨೩೮). **ನೀರುಸುಳಿ :** ಸಣ್ಣ ನೀರುಸುಳಿ ; ಜಲಾವರ್ತ (Eddy. ಇಂಕನಿ).

[ನೀರ್ + ಸುೞಿ$_2$(<ಸುೞ್$_2$)]

**ನೀರ್ಸೆಳವು** (ನಾ). ನೀರಿನ ಸೆಳವು,—ಎಳೆತ : ಎರಡು ಭೂಖಂಡಂಗಳನೆ ಕೂಡಿಸುವ ನೀರ್ಸೆಳವು (ಬದ್ಧಪ್ರ. ೪೨-೯೦೬). [ನೀರ್ + ಸೆಳವು]

**ನೀರ್ಸೆಱೆ** (ನಾ). ನೀರು ನಿಂತಿರುವ ಜಾಗ ; ಹಳ್ಳ, ಕೊಳ್ಳ ಮುಂತಾದುವು : ಅದಲ್ಲದೆಯುಲ್ಲಿಂ ಬೇಱೊಂದು ನೀರ್ಸೆಱೆಗೆಯ್ದಿದರ್ಬಱಿಯಂ (ಜಗವಿ. ೧೬-೮ ಪ). [ನೀರ್ + ಸೆಱೆ$_2$]

**ನೀಲ,** ನೀಳ$_2$ (ಗು). ೧. ಕಡುನೀಲಿ ಅಥವಾ ಕಪ್ಪುಬಣ್ಣದಿಂದ ಕೂಡಿದ : ನೀಲನವಮೇಘಮಂಡಲದಾಲೋಲತಟಿಲ್ಲತಾವಿತಾನದ ಸೊಬಗಂ ಸಾಲಿಡುತಿರ್ದುದು ಸತತಂ ಬಾಲೆಯ ಸೂಸಕದ ಜಾಳಿಯುದ ರುಚಿಜಾಳಂ (ನಳಚಂ. ೩೨೫) ; ನೀಲವಿಸ್ತರವಿರಲು ನಕ್ಷತ್ರಬಿಂದು ಸೊಗ (ಮಂಕುಕ. ೫೧) ; ದೃಷ್ಟಿತೃಷೆಗಮೃತಮಂ ಕರೆಯುತ್ತೆ ಕಂಗೊಳಿಸಿ ಬಂದುದಾ . . . ನೀಲಮಂಗಳಮನೋಹರ ದೇವವಿಗ್ರಹಂ ! (ಶ್ರೀರಾಮಾ. ೧೩೪-೨೫೩). (ನಾ). ೨. ಕಡುನೀಲಿ ಅಥವಾ ಕಪ್ಪುಬಣ್ಣ ; ಶ್ಯಾಮಲ ವರ್ಣ : "ಕೃಷ್ಣಃ, ನೀಲಃ . . . ಕಪ್ಪು ಬಣ್ಣದ ಹೆಸರುಗಳು" (ಸಿದ್ಧಾಂತಿ. ೪೮) ; ನೀಲದ ಬೆಳ್ಳಿಯ ಗಾಡಿಯುವಿಾ ಲಲಿತಾಂಗಿಯರ ಕಣ್ಗೆ ಪೋಲ್ತುಂ [ನಾಂ] ಕಣ್ಗೆಳಿದವಾಗಿರೆವೆಂದೆಳವಾಳೆಗಳೋಡಿದುವು ಬಾಲೆಯರ್ ಪುಗುವಾಗಳ್ (ಪಂಪಭಾ. ೫-೬೧). ೩. ಒಂದು ಬಗೆಯ ಸಸ್ಯ ಮತ್ತು ಅದರಿಂದ ತಯಾರಿಸುವ ನೀಲಿಬಣ್ಣದ ಪುಡಿ ; ನೀಲಿ : "ಕಾಕಹಾ—ಬೆಲ್ಲಗಣಿಕೆ, ಚೀಲ್ಯೆ[ತ] ?, ನೀಲ" (ಓಷಧಿ. ೩೦). ೪. ನವರತ್ನಗಳಲ್ಲಿ ಒಂದು ; ನೀಲಿಬಣ್ಣದ ರತ್ನ ; ಇಂದ್ರನೀಲ : "ಹರಿಕಾಂತಮಸಿತಾಶ್ಮವೆನೆ ನೀಲಮಕ್ಕು" (ಪುಂಗರಾ. ೩೧-೬) ; ನೀಲದ ಪೊಳೆವ ಪರಲ್ಗಳ ಕೀಲಣೆಯಿಂ ಜಲಕನಾದ ಜಲದೇವಿಯ ಪೊನ್ನೋಲೆಯೆನಿಸಿದುದು ಪತ್ರಕಪೋಲಗತಂ ಕನಕನಳಿನವೊಂದಳಿನಳಿನಂ (ಅರ್ಧನೇ. ೫-೧೦೭) ; ನೀಲದ ಪಚ್ಚೆಯ ಪವಳದ ಶಾಲೆಗಳ ಮರೀಚಿಯಂ ಪುರಂದರಧನುಗೆತ್ತಾಲೋಕಿಸಿ ನವನರ್ತನಲೀಲೆಯನೊಳಕೊಳ್ವವಲ್ಲಿ ಪುರದ ನವಿಲ್ಗಳ್ (ಗಿರಿಕ. ೨-೯೬) ; ನೀಲದ ಕಿರೀಟ ನಿನಗಿಡುವೆ (ಪುರಂದ. ೧-೮೨-೩) ; ನೀಲವೆಂಬ ರತ್ನದ ಕ್ರಯವೂ ಕಾಂತಿಯೂ ವಜ್ರಮಾಣಿಕಗಳಿಗಿಂತ ಕಡಿಮೆ (ಮುಂಬಯಿ. ೪-೧೭೦) ; ನೀಲ ಮಾರಿ ಓಲೆ ಮಾಡಿದರೂ ಸಾಲದ ಉಪದ್ರ ನಿಲ್ಲಲಿಲ್ಲ (ಗಾದೆ). 'ನವರತ್ನ' ಪರಾ. ೫. ಕುಬೇರನ ನವನಿಧಿಗಳಲ್ಲಿ ಒಂದು : ಕುಬೇರಂಗೆ . . . ಮಹಾಪದ್ಮ ಪದ್ಮ ಶಂಖ ಮಕರ ಕಚ್ಛಪ ಮುಕುಂದ ಕುಂದ ನೀಲ ವರವೆಂಬ ನವನಿಧಿಗಳಿಗಧಿಕಾರಮುಂಟಾಗಿ (ವಿವೇಕ. ೨೨೧). 'ನವನಿಧಿ' ಪರಾ. ೬. ರಾಮಾಯಣದ ಒಬ್ಬ ಕಪಿನಾಯಕನ ಹೆಸರು ; ಸುಗ್ರೀವನ ಸೇನಾಪತಿಗಳಲ್ಲಿ ಒಬ್ಬ : ಅಂತು ದಶಗ್ರೀವಂ . . . ನೀಲನ ನೀಲಲೋಹಿತದಿಂ ಭೂತಗಣಮಂ ತಣಿಪಲುಮುತ್ಕಂಠನಾಗಿ ನಿಜವರೂಥಮಂ ರಿಪುವರೂಥಿನಿಗೆ ಪರಿಯಿಸಲೊಡರಿಸುವುದುಂ (ಪಂರಾಮಾ. ೧೩-೧೩೩ ಪ) ; ಮೈಂದನ ಸದೆದ ನೀಲನ ತುಳಿದ (ಕೌಶಿಂ. ೨೫-೨೨) ; ತೋಳ ನೆಗಹಿನಲಟ್ಟಿ ಹೊಯ್ದುದು ನೀಲನನು ನೀಲಾದ್ರಿಯನು ದಂಭೋಳಿ ದಟ್ಟಿಸಿದಂತೆ (ತೊರರಾ. ೬-೩೨-೩೬) ; ತೊಲಗಿತಿನ್ನಾಪತ್ತು . . . ನಳ ನೀಲ ಜಾಂಬವ ಹನುಮರಾದಿಯರಾದೆಲ್ಲ ಮಿತ್ರರ್ಗೆ (ಶ್ರೀರಾಮಾ. ೨೯೨-೨೦೭). ೭. ನೀಲಿ ಬಣ್ಣದ ಒಂದು ಬಗೆಯ ಹಕ್ಕಿ : 'ನೀಲಕ್ಕಿ' ಪರಾ. ೮. ಆಕಾಶ ; ಗಗನ : ಅಲೆ ಕೆದರೆ ತರು ಬೆದರೆ ನೀಲದಿಂ ಧುಮ್ಮಿಕ್ಕಿ ಕೋಡಿಗೇರುತ ಗಾಳಿ ಮೊರೆವ ನಲವು (ಮಲೆದೇ. ೧೮-೫). 'ನೀಲಚುಂಬಿ' ಪರಾ. ೯. ಒಂದು ಬಗೆಯ ಕುದುರೆ : "ತುರಗವರ್ಣಂ ಬಿಳಿಯುದಾಗೆ ಕರ್ಕನೆನಿಕ್ಕು . . . ಕಿಱುವಿಳುಪುದೋಱೆ ನೀಲಂ" (ಪುಂಗರಾ. ೮೧-೧೪) ; ಜನ್ನನಂ ನೀಲನನಳಗನಂ ತನ್ನಿ . . . ವಾಹಕರಿರಾ ನೀವು (ಬಸಪು. ೫೯-೪೦) ; ಕಾರೆಳ್ಳನಕ್ಕಿಯಂ ಸಮಸಾರಿಕೆಯಿಂ ಬೆರೆಸಿದಂತೆ ಕರ್ಪುಂ ಬೆಳ್ಪುಂ ನೇರಿತ್ತಾಗಿರೆ ಬೆರಸಿ ತನೂರುಹಮೊರನೆತ್ತ ನೀಲನೆಂಬ ಪೆಸರಂ ಪಡೆಗುಂ (ಅಶ್ವಶಾ. ೨-೨೩) ; ನೀಲ ಜನ್ನ . . . ಸಾರುಗವೆಂದೆನಿಪಗ್ಗಳಿಕೆಯ ಹಯಮಂ ತುರಂಗಿಗಳ್ ಕೈಗೆಯ್ದರ್ (ತ್ರಿಷವಿ. ೨೪-೨೯೪). ೧೦. ಪಾಂಡವರ ಸೈನ್ಯದಲ್ಲಿದ್ದ ಒಬ್ಬನ ಹೆಸರು : ಕ್ಷತ್ರಧರ್ಮನು ನೀಲನು . . . ವಿಂಧ್ಯಗಿರಿಯ ಸುಹೋತ್ರರನ್ವಯದವರು ಪಾಂಡವಮಿತ್ರರೊದಗಿತು ಕೇಳು (ಕುಪ್ಯಾಉ. ೧೧-೨೬). ೧೧. [ಜೈನ] ಕುಲಪರ್ವತಗಳಲ್ಲಿ ಒಂದು ; ☞ ವಿದೇಹ ಮತ್ತು ರಮ್ಯಕ ಕ್ಷೇತ್ರಗಳ ಮೇರೆಯಲ್ಲಿರುವ ಈ ಪರ್ವತವು ನಾಲ್ಕುನೂರು ಯೋಜನ ಎತ್ತರವಾಗಿದೆ. ಇದರ ಬಣ್ಣವು ವೈಡೂರ್ಯದಂತೆ ಇದೆ: ಹಿಮವನ್ಮಹಾಹಿಮವನ್ನಿಷಧ ನೀಲ[ಪಾಠಾಂ. ೪] ರುಗ್ಮಿಶಿಖರಿಗಳೆಂಬ ವರ್ಷಧರಮಹೀಧರಂಗಳಿಂದಮಿನ್ನೂಱು ಕನಕಗಿರಿಗಳಿಂದಂ (ಆದಿಪು. ೧-೪೮ ಪ) ; ಹಿಮವಂತ, ಮಹಾಹಿಮವಂತ, ನಿಷಧ, ನೀಲ, ರುಕ್ಮಿ ಇವಕ್ಕೆ ಕುಲಪರ್ವತಗಳೆಂದೂ ಹೆಸರು (ಜೈನಧ. ೩೮). ೧೨. = ನೀಲಲೇಶ್ಯೆ : ಕೃಷ್ಣ ನೀಲ ಕಪೋತಲೇಶ್ಯಾನುಬಂಧ ರೌದ್ರಪರಿಣಾಮಪರಿಣತರುಂ . . . ಅಪ್ಪ ಮಹಾಪಾಪಿಜೀವಂಗಳ್ ಕಾಲುಮೇಲಾಗಿ ನೆಲಸಿದಂತರ್ಮುಹೂರ್ತಮಾತ್ರದೊಳಗೆ (ಸುಕುಮಾ. ೧೧-೪೧ ಪ) ; ಈ ನಿರೂಪಿತ ಲೇಶ್ಯಾಷಟ್ಕದಲ್ಲಿ . . . ಕೃಷ್ಣ ನೀಲ ಕಪೋತಾಭಿಧಾನಾಶುಭಲೇಶ್ಯಾತ್ರಯಮುಂ ನಿರೂಪಿಸೆ ಪಟ್ಟುದು (ತತ್ತ್ವಪ್ರ. ೨೨೦) ; ಲೇಶ್ಯೆಯಲ್ಲಿ ಕೃಷ್ಣ, ನೀಲ . . . ಶುಕ್ಲಗಳೆಂದು ಆರು ಪ್ರಕಾರಗಳಿವೆ (ಜೈನಪ. ೨೯೮). **ನೀಳ$_2$ :** ೪. ನೀಳದ ಕಂಠಿಕೆಯಂ ಶುಂಡಾಳಶಿರೋಮಣಿಗೆ ಕಟ್ಟಿದಂತಿರೆ ಚೆಲ್ವಂ ಪಾಳಿಸುತಿರ್ದುದು (ಪಾರ್ಶ್ವಪು. ೪-೧೨೧) ; ನೀಳದ ಕೋಕಿಳಾಂಗನೆಗೆ ಪಚ್ಚೆಯ ಪೆಣ್ಗಿಣಿದಿಂದುಕಾಂತದಾಲಾಲಿತಮಾರಳಾವಳಿಗೆ ಸೋಲ್ತಿರದೆಯ್ದುವುದಲ್ತೆ ಲೀಲೆಯಿಂ ಮೇಳಿಸಲೆಂದು ದೀವದ ಪಿಕಾಳಿ ಶುಕಾಳಿ ಮರಾಳಮಂಡಲಂ (ಶಾಂತೀಶ್ವ. ೯೩-೧೭೦). ೬. ಕಪಿಕುಲಸಮುದ್ಭೂತಂ ಸುಗ್ರೀವನಾಶನ ತಮ್ಮಂದಿರ್ನಳನುಂ ನೀಳನುಂ . . . ರಾಮಂಗೆ ಭೃತ್ಯರಾಗೆ (ಪುಣ್ಯಾಸ್ರ. ೧೧-೨೮ ಪ). ೯. ಬಿಳಿದಪ್ಪ ಬಣ್ಣದಾ ಹರಿಯೊಳೆ ಕರ್ಗಿದ ಬಾಲವಸಿ(ಶಿ)ತವಕ್ಷಂ ತುರಗಕ್ಕೊಳವಪ್ಪೊಡೆ ನೀಳ್ದ(ಳ)ನೆಂದಳವಡುಗುಂ ಪೆಸರದರ್ಕೆ (ಅಶ್ವಶಾ. ೨-೮). ೧೧. ಅಧಸ್ಥಳೋಪರಿಮತಳಸಮಾನವಿಸ್ತಾರಂಗಳುಮಪ್ಪ ಹಿಮವನ್ಮಹಾಹಿಮವನ್ನಿಷಧ ನೀಳ[ಪಾಠಾಂ. ಲ] ರುಗ್ಮಿ ಶಿಖರಿಗಳೆಂಬ ವರ್ಷಧರ ಮಹೀಧರಂಗಳಿಂದಂ . . . ಎಸೆದು (ಆದಿಪು. ೧-೪೮ ಪ) ; ನೀಳದ ಕೋಡುಂಗಲ್ಗಳ ಲೋಳದ್ಯುತಿ ಮುಸುಱೆ ಮುಸುಳೆ ಮೇಗಣಿನಿಂತಾರಾಳಿಯ ಹಾರಿಯ ಬಟ್ಟೆಗೆ ಶೈಳಂ ಬರತೊಲಗಿದಂತೆ ಕೆಲದೊಳ್ ತೋರ್ಕುಂ (ಲೀಲಾವ. ೯-೩೪).

**ನೀಲದ ಮಣಿ** = ನೀಲಿಯ ಬಣ್ಣದ ರತ್ನ ; ಇಂದ್ರನೀಲ : ನೀಲದ ಮಣಿಯೊಂದು ಮಾಣಿಕವ ನುಂಗಿದಡೆ ವಜ್ರ ಬಂದು ಅದು ಬೇಡವೆಂದುಗುಳಿಸಿತ್ತು (ಬಸವ. ಕ. ೧೩೭೮) ; ನೀಲದ ಮಣಿ ಪವಣಿಸಿದ ನೂಲಾದರೆ ನೀಲದ ಕ್ರಯ ಬಾಳೀತೇ ? (ಗಾದೆ).

**ನೀಲಮುತ್ತಿನೋಲೆ** = ನಡುವೆ ನೀಲಮಣಿಯನ್ನು ಅಳವಡಿಸಿದ

ಮುತ್ತಿನ ಓಲೆ : ಮೃಗಧರಬಿಂಬಂಗಳವೆರಡಗಲದೆ ಕೊಂಡೆಸೆಯುತಿರ್ದ ಪುವು ಸರಸಿಜದೊಂದಗಣಿತ ಕರ್ಕಶಮನೆನಲ್ ನಗಪುತ್ರಿಗೆ ನೀಲ ಮುತ್ತಿನೋಲೆಯುನಿತ್ತರ್ (ಗಿರಿಕ. ೧೦–೪೦). **[ಸಂ.]**

**ನೀಲಂ** (ನಾ). ಒಂದು ಬಗೆಯ ಮಾವಿನ ಮರ ಮತ್ತು ಅದರ ಹಣ್ಣು : ಮತ್ತೆ ಬೇಕಿದ್ದರೆ ಒಂದು ವಾರ ಬಿಟ್ಟು ನೀಲಂ ಜಾತಿಯ ಹಣ್ಣುಗಳನ್ನು ಕಳುಹಿಸುವುದಾಗಿ ಹೇಳು (ದೇಸಹಂ. ೧೪೬); ಇದು ನೀಲಂ . . . ಇದು ಗಿಳಿಮೂಗು. ಇದು ಬಹಳ ರುಚಿ (ಬಾಳಿಗಿ. ೧೪೦); ಬಂಗನ್‌ಪಲ್ಲಿ, ನೀಲಮ್, ಸಿಂಧೂರ್ ಜಾತಿಗಳು ಉದ್ಭವವಾದದ್ದು ಈ ನವಾಬರ ಆಶ್ರಯದಿಂದ (ಹಸುಹೊ. ೩೦೯).

[←ತಮಿ. ನೀಲನ್]

**ನೀಲಂಗು** (ನಾ). **೧.** ಹುಳು ; ಕೀಟ : "ಕೃಮಿಃ, ಕೀಟಃ, ನೀಲಂಗುಃ, ಫುಲ್ಲಕಃ—ಈ ೪ ಪು(ಹು)ಟು" (ಹಲಾಯು. ೧೦೫–೧೪). **೨.** ಒಂದು ಬಗೆಯ ನೊಣ. **೩.** ದೊಡ್ಡದಾದ ಕಪ್ಪುಬಣ್ಣದ ದುಂಬಿ. **೪.** ಹೂವು. **೫.** ನರಿ ; ಸೃಗಾಲ. **೬.** ಕಂಬಳಿಯಂಥ ರೋಮಗಳಿಂದ ಕೂಡಿದ ಒಂದು ಬಗೆಯ ಹುಳು ; ಕೋರಿಹುಳು : (ಕಿ). **೭.** (ಪ್ರಾಣಿಗಳಲ್ಲಿ ಉತ್ಪತ್ತಿಯಾಗುವ) ಒಂದು ಬಗೆಯ ಕ್ರಿಮಿ : (ಕಿ). **[ಸಂ.]**

**ನೀಲಕಂಠ** (ನಾ). **೧.** ಕಡುನೀಲಿ ಅಥವಾ ಕಪ್ಪುಬಣ್ಣದ ಕೊರಳು. **೨.** ನೀಲಿಬಣ್ಣದ ಕೊರಳುಳ್ಳುದು ; ನವಿಲು ; ಮಯೂರ : ನೀಲಕಂಠನೆ ಬಲಕೆ ಬಂದುದು (ಕುಮಾವ್ಯಾ. ೪–೩೪) ; ಅನಿಮಿಷಾರಣ್ಯಾಂತರಾಳದೊಳ್ . . . ಕಾಡ ಸೋಗೆಯು ಕುಳಂ ಸಾರ್ದು ನೀಲಕಂಠನಾಮಮಂ ಪಡೆದೆಡೆವಿಡಿದಡಸಿ ಕಡುಸೊಗಸಿಂದಿರ್ದವು (ಹವಿಮ್ಮಾರ. ೬–೪೫ ಪ) ; ನೀಲಕಂಠಾರೂಢನಾಗಿ ಸುರಗಣ ಸಹಿತೆ ಷಣ್ಮುಖಂ ನಡೆಗೊಂಡನು (ಚೆಬಪು. ೩೮–೨೨) ; ಬಲುತರದ ಬಿಸಿಲಿನಿಂದ ಪೆಡೆಗಾಯ್ದು ರನ್ನದುಪಟಳಕೆ ತಲೆಯಂ ಕೊಡಪುತಡಿಗಡಿಗೆ ನೀಲಕಂಠನ ಗರಿಯು ಮರೆಗೊಂಡು ಮಿಡುಕುತಿಹ ಕುಂಭೀನಸಂಗಳೆಡೆಯಾಟಮೇಂ ಚಿತ್ರತರಂ (ವೆಂಕಾರಾ. ೩–೬–೧೨). **೩.** ಗುಬ್ಬಿ ; ಚಟಕ : "ಕಲವಿಂಕಃ, ಚಟಕಃ, ಗೃಹಬಳಿಭುಕ್, ನೀಲಕಂಠಃ—ಈ ೪ ಗುಬ್ಬಿ(ಲು)"(ಹಲಾಯು.೪೧–೯೦). **೪.** ಒಂದು ಬಗೆಯ ಹಕ್ಕಿ ; ಲಾವುಗೆ. **೫.** ಹಾವು ; ಸರ್ಪ. **೬.** ಒಂದು ಬಗೆಯ ಹಾರುವ ಹುಳು ; ಮಿಡಿತೆ ; ಶಿವನ ಕುದುರೆ. **೭.** ಕಪ್ಪುಬಣ್ಣದ ಕೊರಳುಳ್ಳವನು ; ಶಿವ ; ಈಶ್ವರ ; ☞ ಸಮುದ್ರಮಂಥನಕಾಲದಲ್ಲಿ ಉತ್ಪನ್ನವಾದ ವಿಷವನ್ನು ಶಿವನು ನುಂಗಿ ಕೊರಳಲ್ಲಿ ಧರಿಸಿರುವುದರಿಂದ ಕಪ್ಪುಬಣ್ಣದ ಕೊರಳನ್ನು ಹೊಂದಿದನು : "ಭವನೀಶಂ ಶಂಭು . . . ನೀಲಕಂಠಂ ಶಿವನೀಶಾನಂ ತ್ರಿಣೇತ್ರಂ . . . ವಾಮದೇವಂ ವೃಷಾಂಕಂ" (ನಸ್ತುಕೋ. ೬–೧೩) ; ಕಾಲಕೂಟವನು ಪಾನ ಮಾಡಿದ ನೀಲಕಂಠನು ನೀನೆ (ಪುರಂದ. ೧–೧೮೬–೨) ; ನಿಷ್ಕಲ ನೀಲಕಂಠ . . . ಜಯಶಂಕರ ಸಿರ್ಜಡ ಶಾಂಭವೀಧವಾ (ಶಬಶಂ. ೫–೨೪). **೧, ೭ :** ಮದಜಳನೀಲ[ಪಾಠಾಂ. ಳ]ಕಂಠಕಳಿತಂ ವಿಷಮಾನಳಭೀಮಲೋಚನಂ ಪದನತದಾನವಾರಿ ಗಿರಿಶಂ ಗಿರಿಜಾತವಿನೂತಕೇಳಿ ಕಣ್ಗೊಳಿಪ ಶೋಭೆಯಂ ಕುಡುತಮಿರ್ಪುದು ನಾಗಶಿರೋವಿಭೂಷಣಂ ವಿದಿತಗಜಾಸುರೇಂದ್ರನೆನೆ ಮರ್ದಿಸಲುಗ್ರನಿಭೇಂದ್ರನಾದಪೋಲ್ (ಪಾರ್ಶ್ವಪು. ೪–೧೩೨). **೨, ೭ :** ಕಾತ್ಯಾಯನೀಕಾಯದಂತೆ ವಿಚಳಿತಖಡ್ಗಭಯಂಕರಮುಂ ವರುಣಚಂದನಪಲ್ಲವಾಳಂಕೃತಮುಂ ಸಂಧ್ಯಾಕಾಲದಂತೆ ನೃತ್ಯನ್ನೀಲಕಂಠಮುಂ ಪಲ್ಲವಾರುಣಿತಮುಂ (ಕಾದಂಪೂ. ೧೧೦) ; ಅದು ಸಮುಚಿತನೀಲಕಂಠವಿಳಾಸಮಾಗಿಯುಂ ವೀತಕೇತಕಮಲ್ಲು (ಚಂದ್ರಪು. ೪–೪೨ ಪ) ; ಮತ್ತಮಾ ಘನಸಮಯಂ . . . ಪ್ರದೋಷಕಾಲದಂತೆ ನೀಲಕಂಠತಾಂಡವಾಡಂಬರಮುಂ (ರಾಜಶೇ. ೮–೧೧೪ ಪ). **೮.** [ಛಂದ] ರುದ್ರಗಣದ ಹದಿನಾರು ಬಗೆಗಳಲ್ಲಿ ಒಂದು : – ᴗ – – ಹೀಗೆ ಪ್ರಸ್ತಾರವನ್ನು ಹೊಂದಿರುವುದು : ರುದ್ರಗಣಮೆಂತೆಂದೊಡೆ :— ೧. ಗಂಗಾಧೀಶಂ ೨. ಗಿರಿಜಾಕಾಂತಂ ೩. ನೀಲಕಂಠಂ . . . ೧೬. ಮದನರಿಪು(ಛಂದೋಂಬು. ೫–೨೪೦ ಪ). "ರುದ್ರನೊಳು ಗುಬ್ಬಿಯೊಳು ಕೇಕಿಯೊಳು ಗ್ರೀವದೊಳು ಕಾದ್ರವೇಯಂಗಳೊಳು ನೀಲಕಂಠಮೆನಿಕ್ಕು" (ಮಂಗರಾ. ೧೪೯–೪೮). **[ನೀಲ + ಕಂಠ]**

**ನೀಲಕಂಠಿ** (ನಾ). ಹದಿನಾರು ಬಗೆಯ ರೂಪಾಯಿ ನಾಣ್ಯಗಳಲ್ಲಿ ಒಂದು : ೯ ಪನಾಳೀ, ೧೦ ನೀಲಕಂಠೀ, ೧೧ ಭೂತಪದಿ . . . ಇವುಗಳಲ್ಲಿ ಪನಾಳಿ, ನೀಲಕಂಠಿ. ಇವೆರಡು ಬಹಳ ಕಡಿಮೇ ಬೆಲೆ ಬಾಳುವಂಥವು (ಕಥಾಗ. ೨೪೧). 'ಕಂಠೀರಾಯಿ' ಪರಾ. **[ ? ]**

**ನೀಲಕಂಧರ** (ನಾ). **೧.** ಕಪ್ಪು ಬಣ್ಣದ ಕೊರಳು. **೨.** ಕಪ್ಪು ಬಣ್ಣದ ಕೊರಳುಳ್ಳವನು ; ನೀಲಕಂಠ ; ಶಿವ : ಗರಲಗ್ರೀವ ಸಹೀಂದ್ರನಿಂದುಮೃಗಲಕ್ಷ್ಮಂ ಶಂಕರಂ ನೀಲಕಂಧರನೆಂದೇಳಿಸೆ ತನ್ನ ನಿರ್ಮಳಯಶಂ (ಪಂಪಾಪೂ. ೯–೨೦೧) ; ನೀಲಕಂಧರನಂ . . . ಗಿರಿಜಾವಲ್ಲಭನಂ ಮನೋಜಹರನಂ ಕಂಡಂ ವಿರೂಪಾಕ್ಷನಂ (ಪಂಪಾಶ. ೩೪) ; ಕರುಣಾನಿಧಿಯೆ ನೀಲಕಂಧರನೆ ಪ್ರಮಾಣಪತ್ರವ ಸಲಹು ಕರುಣದಿಂದ (ಸೌಂದಪು. ೧೨–೪೩). **೩.** ನವಿಲು ; ಮಯೂರ : ನೀಲಕಂಧರನ ನೆಗ್ಗಿಸಿದಂತೆ ನೀನೆನ್ನ ಮೇಲುರವಣಿಸೆಂದು ಬಸವ ಶೂಲದಂತೆಸೆವ ಕೊಂಬುಗಳಿಂದೆ ತಿವಿದುದು ಬಾಲಾಹಿಸೂದನನೆದೆಯ (ಮೋಹತ. ೩೮–೩೧).

[ನೀಲ + ಕಂಧರ]

**ನೀಲಕಜುಕೆ** (ನಾ). ಒಂದು ಬಗೆಯ ಹುಲ್ಲು : "ನೀಲೀ—ಕರಿಯ ತಿಗಡೆ, ವಜ್ರ, ಕಾಚಲವಣ, ಬಣ್ಣದ ಗೋರಟೆ, ನೀಲಕಜುಕೆ"(ಓಷಧಿ.೮೮).

[ನೀಲ + ಕಜುಕೆ<sub></sub>(< ಕಜುಂಕೆ)]

**ನೀಲಕಾಂಡಪಟ** (ನಾ). ನೀಲಿಬಣ್ಣದ ತೆರೆ,—ಪರದೆ : ಇದುತ್ಪಲಲಕ್ಷ್ಮಿಯ ಮಂಡನಕ್ಕೆ ಸುತ್ತಿದ ನವನೀಲಕಾಂಡಪಟಂ (ಚಂದ್ರಪು. ೮–೧೯). **[ನೀಲ + ಕಾಂಡಪಟ]**

**ನೀಲಕಾಂತಿ** (ನಾ). **೧.** ನೀಲಿಯ ಬಣ್ಣದ ಹೊಳಪು; ನೀಲವರ್ಣದ ಪ್ರಕಾಶ. **೨.** ಒಂದು ಬಗೆಯ ಗಿಡ ಮತ್ತು ಅದರ ಹೂವು : ನೀಲಕಾಂತಿಯಂಥ, ಅಂಗಿಗುಂಡಿಗಾತ್ರದ ಹೂವಿನ ಚಾಪೆಯೇ ಒಂದು ಕಡೆ ಹಾಸಿತ್ತು (ಅಪೂಪ. ೩೬). **[ನೀಲ + ಕಾಂತಿ]**

**ನೀಲಕಾಯ** (ನಾ). ಕಪ್ಪುಬಣ್ಣದ ಶರೀರವುಳ್ಳವನು : ಅವರು ಯಮದೂತರಂತೆ, ನೀಲಕಾಯರೂ ನೀಳಕಾಯರೂ ಆಗಿದ್ದರು (ನಾಗಕಾ. ೪). **[ನೀಲ + ಕಾಯ]**

**ನೀಲಕುಂತಲ,** ನೀಲಕುಂತಳ, ನೀಳಕುಂತಳ (ನಾ). ಕಪ್ಪುಬಣ್ಣದ ತಲೆಗೂದಲು : ನೀಳ ನೀಲಕುಂತಲವನ್ನು ಸುಂದರವಾಗಿ ಹೆಣೆದು . . . ಅಲಂಕರಿಸಿದರು (ಶಾಂತಲಾ. ೪೧). **ನೀಲಕುಂತಳ :** ನೀಲಕುಂತಳದೆ ನವಭೂಷಾರುಣಪ್ರಭೆಯು . . . ಮೌಕ್ತಿಕಚ್ಛವಿಯೆಸೆವ ಕಾಲುಗುರ್ಗದಿರ್ವೆಣ್ಣ ಲೊಪ್ಪಿದರು ನವರತ್ನಮಾಲೆಗಳ ಪಾಂಗಿನಿಂದ (ಭಾವಚಿಂ. ೫–೨೯) ; ನೀಲಕುಂತಳ ನಿಬಿಡಸ್ತನಗಳ . . . ಸದ್ಗುಣ ಶೀಲೆಯರು ಪರಲ್ಪ ಚಿತದಾರತಿ ಪಿಡಿದು ನಡೆತಹರು (ನಾಗಪ. ೭–೬೨). **ನೀಳಕುಂತಳ :** ಅಂತು ಕುಟಿಳನೀಳಕುಂತಳಕಳಾಪೆಯರ ಚತುರಭಾವಕ್ಕೆ ತಾಮುಂ ಸೋಲ್ತು (ಶಾಂತಿಪು. ೮–೩೦ ಪ) ; ಆಕೆ ತನ್ನ ಮದಾಳಿನೀಳಕುಂತಳದೊಳ್ ಕುಟಿಲಸ್ವಭಾವಮಂ . . . ತಳೆದು (ಮಲ್ಲಿಪು. ೩–೫೪). **[ನೀಲ + ಕುಂತಲ]**

**ನೀಲಕುಂತಲೆ,** ನೀಲಕುಂತಳೆ (ನಾ). ಕಪ್ಪುಬಣ್ಣದ ಕೂದಲುಳ್ಳವಳು : ನೀಲಕುಂತಲೆ ಕೇಳು (ಮೋಹತ. ೩೩-೪). **ನೀಲಕುಂತಳೆ:** ನೀಲವರ್ಣ ನೀನಾದರೆ ಆಕೆ ನೀಲಕುಂತಳೆ ತಾನಾದಳಯ್ಯ (ಕನಕ. ೧೫-೪); ಎಲೆಗೆ ರಾಮಾಭಿರಾಮೆ ; ಸುಗ್ರೀವೆ ; ನೀಲಕುಂತಳೆ (ರಾಮಾಶ್ವ. ೧೪೮-೧). [ಸಂ. ನೀಲಕುಂತಲಾ]

**ನೀಲಕುಂತಳ** 'ನೀಲಕುಂತಲ' ನೋ.

**ನೀಲಕುಂತಳೆ** 'ನೀಲಕುಂತಲೆ' ನೋ.

**ನೀಲಕ್ಕಿ** (ನಾ). ನೀಲಿಬಣ್ಣದ ಒಂದು ಬಗೆಯ ಪಕ್ಷಿ : ಹಾಲಕ್ಕಿ ನೀಲಕ್ಕಿ ನೀಲವರ್ಣದಕ್ಕಿ ಬೇಲೂರ ಗದ್ದೆ ಗೊನೆಬತ್ತದ ನೆಲ್ಲಕ್ಕಿ ಸೇರಾವೆ ನಮ್ಮ ಅರಮನೆಗೆ (ನಾಪದ. ೧೧೫). [ನೀಲ+ಹಕ್ಕಿ(<ಪಕ್ಕಿ)]

**ನೀಲಗಂಧಿ** (ನಾ). ೧. ಕಡುನೀಲಿಬಣ್ಣದ ಒಂದು ಬಗೆಯ ಹೂವು: ಮಲ್ಲಿಗೆಯೊಳ್ ಬೆಳ್ಪು, ನೀಲಗಂಧಿಯೊಳ್ ಕರ್ಪು ; ಇಂತೋರೊಂದು ಪೂಗಳೊಳೋರೊಂದು ಬಗೆಯ ಬಣ್ಣಮಂ ನೇರ್ಪಡಿಸಿದ ಗಾಂಪನಾವಂ ? (ರಾಮಾಶ್ವ. ೮-೫೯). ೨. ಪದ್ಮರಾಗದ ಒಂದು ಭೇದ ; ಸೌಗಂಧಿಕವೆಂಬ ರತ್ನ : ವಿದಿತ ಗದಾಂಗಂ ಮತ್ತದು ಸದಮಲತರ ನೀಲಗಂಧಿಯೆಂದಿರ್ಪುದಿಂ ಪದುಳದಿನಿರೆ (ಹಾಲಾಸ್ಯ. ೨-೧-೭೧).
[ಸಂ. ನೀಲಗಂಧಿನ್]

**ನೀಲಗಣ್ಣು** (ನಾ). ಒಂದು ಬಗೆಯ ನೇತ್ರರೋಗ : ಕುರುಟಗೆಯ ಬೇರಂ . . . ಹಸುವಿನ ತುಪ್ಪದಿಂದ ಹಚ್ಚಲು ಕಾಣು, ನೀಲಗಣ್ಣು ಮಾಣ್ಗುಂ (ವಿನ್ವೈವಿ. ೧೩೫). 'ತಿಮಿರರೋಗ' ಪರಾ.
[ನೀಲ+ಕಣ್ಣು(<ಕಣ್)]

**ನೀಲಗಳ,** ನೀಳಗಳ (ನಾ). ೧. ಕಪ್ಪುಬಣ್ಣದ ಕೊರಳು : ತೋಱಿದಂ ಶಿವಂ ನಿಜಸ್ವರೂಪಕಳೆಯೊಳಲ್ಲಿ ನೀಲಗಳದ ಹತ್ತುಭುಜದ ಪಂಚಮುಖದಸುಖವನಲ್ಲಿ (ನಮರ. ಡೇ. ೨೦೦-೧೦). ೨. ಕಪ್ಪುಬಣ್ಣದ ಕೊರಳನ್ನುಳ್ಳವನು ; ನೀಲಕಂಠ; ಶಿವ : ನಾಲಗೆಯುಂ ಕೊಯ್ದು ಚರ್ಚಿಸೆ ಲೀಲೆಗಳಿಂ ಮತ್ತೆ ಕೊನರಿಪಂ ಗಡ ಪಲರ್ಗಂ ನಾಲಗೆಯನಡಸಿ ಕೊಯ್ದೊಡೆ ನೀಲಗಳಂ ಕುಡಿದೆ ತಾನೆ ಬಕ್ಕುಮಿದೇನೋ (ಸಮಪು. ೯-೪೬); ವೇದಾಂತಾವಗಮ್ಯ ಮನೋರಥಪ್ರದ ನೀಲಗಳ ಬಿನ್ನಪವನವಧರಿಸು (ಬಸಪು. ೧-೬೬) ; ನೀಲಗಳ ಪಂಚಪರುಷವನಿತ್ತು ಪ್ರಮಥಗಣವೆರಸಿ ಬೀಳ್ಕೊಟ್ಟನಾಗ (ಪ್ರಾಭುರಾ. ೨-೩). **ನೀಳಗಳ:** ೩. ನವಿಲು ; ಮಯೂರ : ದೆಸೆ ಪಸುರೇಱಿ ಪಚ್ಚೆಯೊಳೆ ಮುಚ್ಚಿ ಮುಸುಂಕಿದ ಮಾಟಿಕ್ಕೆಯಾದುದಾಗಸಮಳಿನೀಳ ನೀಳಗಳಕಂಠತಮಾಳವಿನೀಳ ನೀರದಪ್ರಸರವಿಭಾಸಿಯಾದುದು (ಪಂಪಭಾ. ೭-೨೨). [ನೀಲ+ಗಳ$_2$(=ಗಲ)]

**ನೀಲಗಾರ**$_1$ 'ನೀಲಿಗಾಱ' ನೋ.

**ನೀಲಗಾರ**$_2$ (ನಾ). ಧಾರ್ಮಿಕ ವೃತ್ತಿಗಾಯಕರ ಒಂದು ಪಂಗಡಕ್ಕೆ ಸೇರಿದವನು : ತಮ್ಮ ಆರಾಧ್ಯದೈವವಾದ ಮಂಟೇಸ್ವಾಮಿಯ ಪವಾಡಗಳನ್ನು ಸ್ವಾರಸ್ಯವಾಗಿ ಬಣ್ಣಿಸುವ ಲೀಲೆಗಾರರಾದ ಇವರಿಗೆ ನೀಲಗಾರರೆಂದು ರೂಢಿಯ ಹೆಸರು ಬಂದಿದೆ (ಕಜಕ. ೧೦೨).
[<ಲೀಲೆ+-ಗಾರ(<-ಕಾಱ)]

**ನೀಲಗಿಡ** (ನಾ). ಒಂದು ಬಗೆಯ ಸಸ್ಯ ; ನೀಲಿಯ ಗಿಡ : (೬).
[ನೀಲ+ಗಿಡ(<ಗಿಡು)]

**ನೀಲಗಿರಿ,** ನೀಳಗಿರಿ (ನಾ). ೧. ಕಪ್ಪುಬಣ್ಣದ ಪರ್ವತ; ಕಪ್ಪನೆಯ ಬೆಟ್ಟ : ಅಯ್ವರುಮಂ ನೀಲಗಿರಿಗೊಡಗೊಂಡು ಪೋಗುತ್ತುಂ (ಪಂಪಭಾ. ೧೩-೪೮ ವ) ; ಭೂಮಿಯಾಕಾಶವ ಮೆಟ್ಟಿ ಕಾಮುಗಣಂಗಳ ಕೂಡೆ ಕಾದಿ ಗೆಲಲಱಿಯದೆ ನೀಲಗಿರಿಯ ಮೇಲೆ ನಿಂದು ಉಲಿವ ಉಯ್ಯಾಲೆಯನಾಡುತ್ತಿಪ್ಪರಯ್ಯ (ಅನಚಂ. ೧೧೭-೪೪೫) ; ನೀಲಗಿರಿಗಳನೆನ್ನಿ ಘನಮೇಘಾಳಿ ಸುರಿದವು ಮಳೆಯನು (ಕುಮ್ಯಾಕ. ೧೦-೧೬) ; ನೀಲಗಿರಿಯಿಂದಿಳಿವವೊಲು ಭೂಪಾಲ ಮದಕರಿಯಿಳಿದು (ನಾಗಪ. ೫-೧೦೪). ೨. ಕರ್ನಾಟಕದ ದಕ್ಷಿಣಕ್ಕಿರುವ ಒಂದು ಬೆಟ್ಟದ ಹೆಸರು : ಬೇಂಟೆಕಾಱ ನೀಲಗಿರಿ×××ಕರ ಕಾವು ಯಿಂಮುಡಿ××× ಶ್ರೀಮನುಮಹಾಪ್ರಧಾನಂ ಪೆರುಮಾಳದೇವದಂಡನಾಯಕಂ (ಎಕ. III (R), ಗುಂಡ್ಲು ಪೇ. ೩೪-೭ ; 1283) ; ನೀಲಗಿರಿಯಲ್ಲಿ ಬಹಳ ಕಡಿಮೆ ಸಂಖ್ಯೆಯಲ್ಲಿ ಇರುವ ಈ ತೊದವರು ಆಡುವ ಭಾಷೆಯೇ ದ್ರಾವಿಡ ಭಾಷಾಪರಿವಾರಕ್ಕೆ ಸೇರಿದ ತೊದ ಭಾಷೆ (ದ್ರಾವಿವಿ. ೧೫೫) ; ನೀಲಗಿರಿಯ ತೋಡರು ಹೊರಗಿನ ಜನರೊಡನೆ ಈಗೀಗ ಬೆರೆಯತೊಡಗಿರುವರು (ಬಾಲಪ್ರ. I, ೪೯೯). ೩. [ಜೈನ] ಕುಲಪರ್ವತಗಳಲ್ಲಿ ಒಂದು ; ನೀಲಾಚಲ : ನೀಲಗಿರಿಯಲ್ಲಿ ವೈಡೂರ್ಯಗಳು ತುಂಬಿವೆ . . . ಶಿಖರಿ ಪರ್ವತವು ಚಿನ್ನದಿಂದ ಆಗಿದೆ (ಜೈನಧ. ೩೪). **ನೀಳಗಿರಿ :** ೧. ನೀಳ [ಪಾಠಾಂ. ಲ]ಗಿರಿಗಳ ಮಱಗಳಂ ಪೋಳ್ದು ಬಿಸುಟಂತೆ (ಇಹರ. ಡೇ. ೪೨-೧೩). ೪. ಪಶ್ಚಿಮದಿಕ್ಕಿನ ಬೆಟ್ಟ ; ಅಸ್ತಾಚಲ : ದಿನಪಂ ವರಧರ್ಮರಾಜಜನಕಂ ಕರಕುಳಮಂ ತೆಗೆದು ನೀಳಗಿರಿಯಂ ಸಾರ್ದಂ (ಹಮ್ಮಿರ. ೩-೧೩).

ನೀಲಗಿರಿ ಉಧಾರಣ = ನೀಲಗಿರಿಯನ್ನು ರಕ್ಷಿಸಿದವನು; ಒಂದು ಬಿರುದು : ಮೂವರ ರಾಯರ ಗಂಡ ನೀಲಗಿರಿ ಉಧಾರಣ (ಎಕ. III, (R), ನಂಜನ. ೧೫೯-೪ ; 1504). **ನೀಲಗಿರಿ ಎಣ್ಣೆ** = ನೀಲಗಿರಿಯ ತಪ್ಪಲುಪ್ರದೇಶದಲ್ಲಿ ಹೆಚ್ಚಾಗಿ ಬೆಳೆಯುವ 'ಯೂಕಲಿಪ್ಟಸ್' ಎಂಬ ಒಂದು ಬಗೆಯ ಮರದ ಎಲೆಗಳಿಂದ ತಯಾರಿಸಿದ ತೈಲ : ಅವನು ಬರುತ್ತಲೂ ಅವನನ್ನು ಅಂಗಡಿಗೋಡಿಸಿ ನೀಲಗಿರಿ ಎಣ್ಣೆಯ ಸೀಸೆಯೊಂದನ್ನು ತರಿಸಿದೆ (ನಾಪೋಲೀ. ೧೭೧) ; ಕೈಕಾಲಿಗೆ ನೀಲಗಿರಿ ಎಣ್ಣೆ ತಿಕ್ಕಿ . . . ಮಾತಾಡುತ್ತ ಕುಳಿತರು (ಜಾಗಿನ. ೯೪). **ನೀಲಗಿರಿ ಗಿಡ** = ನೀಲಗಿರಿಯ ತಪ್ಪಲುಪ್ರದೇಶದಲ್ಲಿ ಹೆಚ್ಚಾಗಿ ಬೆಳೆಯುವ, 'ಯೂಕಲಿಪ್ಟಸ್' ಎಂಬ ಒಂದು ಬಗೆಯ ಸಸ್ಯ : ಚಹಾ, ಕಾಫಿ, ನೀಲಗಿರಿ ಗಿಡಗಳನ್ನು ನೆಟ್ಟು ಆ ಬೆಳೆಯಿಂದ ವರುವರುಷ ಹಣ ಶೇಖರಿಸಿ ಸಿರಿವಂತರಾಗುವವರಿಗೆ ಮಲೆನಾಡಿನಲ್ಲಿ ಕಡಿಮೆಯಿಲ್ಲ (ಮತ್ತುಮು. ೩೬). **ನೀಲಗಿರಿತೈಲ** = ನೀಲಗಿರಿ ಎಣ್ಣೆ : ನೀಲಗಿರಿತೈಲ (ಸೋಂಕು ನಿವಾರಕ) (Eucalyptus Oil. ಇಂಕನಿ); ಮೈ ಕೈ ನೋವಿಗೆ ನೀಲಗಿರಿತೈಲವನ್ನು ಉಜ್ಜಿದರೆ ನೋವು ಹೋಗುತ್ತದೆ (ರೂಢಿ). **ನೀಲಗಿರಿ ಸಾಧಕ** = ನೀಲಗಿರಿಯನ್ನು ಗೆದ್ದವನು ; ಒಂದು ಬಿರುದು : ಕೊಂಗವಾರಿ ಕೊಂಗದಿಶಾಪಟ್ಟ ನೀಲಗಿರಿಸಾಧಕ ಗಿರಿದುರ್ಗ್ಗಮಲ್ಲ ಜಲದುರ್ಗ್ಗಮಂಡಳಿಕ ಹೃದಯಶಲ್ಯ (ಎಕ. III, ಗುಂಡ್ಲು ಪೇ. ೪೦-೧೧ ; 1320).
[ನೀಲ+ಗಿರಿ$_1$]

**ನೀಲಗುರುಳ್** (ನಾ). = ನೀಲಕುಂತಲ : ಸುಕ್ಕುಂಗುರುಳ ನಿಡಿಗುರುಳ ಪೊಸ ನೀಲಗುರುಳ ಪೆಱೆನೊಸಲೊಳೆಡೆವಿಡಿದಲೆವ ಕುರುಳ ನುಣ್ಗುರುಳ ಕೋಮಲೆಯರೆಡೆವಿಡದೊದಗಿ ಬರುತಿರ್ದರು (ಚಿಬಪು. ೩೭-೪೬).
[ನೀಲ+ಕುರುಳ್$_1$]

**ನೀಲಗೋರಟೆ** (ನಾ). ನೀಲಿಬಣ್ಣದ ಹೂವುಗಳನ್ನು ಬಿಡುವ ಗೋರಟೆ ಗಿಡ ; ನೀಲಿಸ್ಫಟಿಕ : "ದಾಸೀ – ನೀಲಗೋರಟೆ, ದೊಡ್ಡ ಬಣ್ಣದ ಗೋರಟೆ" (ಓಷಧಿ. ೭೫). [ನೀಲ+ಗೋರಟೆ (<ಗೋರಂಟೆ)]

**ನೀಲಗ್ರೀವ** (ನಾ). ೧. ಕಪ್ಪುಬಣ್ಣದ ಕೊರಳು : ಅನಂತಕೋಟಿ ದರ್ಪಣಲಾವಣ್ಯದಿಂ ತ್ರಿಣೇತ್ರದಿಂ ನೀಲಗ್ರೀವದಿಂ . . . ಮಹೇಶ್ವರನೊಪ್ಪುತ್ತಿರಲಾಗಿ (ಭೈರಸೂ. I, ೧೭). ೨. ಕಪ್ಪುಬಣ್ಣದ ಕೊರಳುಳ್ಳವನು ; ನೀಲಕಂಠ ; ಶಿವ : "ಈಶಾನಃ, ಶಶಿಶೇಖರಃ . . .

ನೀಲಗ್ರೀವಃ, ವಹ್ನಿರೇತಾಃ . . . ನೀಲಲೋಹಿತಃ —ಈ ೪೫ ಮಹಾದೇವರ ಪೆಸರ್" (ಹಲಾಯು. ೩-೧೨) ; ನೀಲಗ್ರೀವ ಕಾಲಾಂತಕ . . . ವಿರೂಪಾಕ್ಷ ರಕ್ಷಿಪುದೆನ್ನಂ (ರಕ್ಷಾಶ. ೮೭); ಶಂಬರಾಂತಕಮದಾಡಂಬರಾಚಲನಿಶ್ಚಿತ ಶಂಬ ನೀಲಗ್ರೀವ ಜಯಯೆನುತ್ತೆಱಗಿದಂ ನಂಬಿ ಭಯಭಕ್ತಿಯಿಂದ (ಸೌಂದಪು. ೧೨-೪೨). [ನೀಲ+ಗ್ರೀವ]

**ನೀಲಚುಂಬಿ** (ಗು). ಆಕಾಶವನ್ನು ಮುಟ್ಟುವ ; ಗಗನಚುಂಬಿಯಾದ : ಕಲ್ಪನೆಗೆ ಕೆಚ್ಚಿರಲ್ ಕಟ್ಟಿ ಕಾಣಾ ನೀಲಚುಂಬಿ ಮಹೇಂದ್ರ ಕುತ್ಕೀಲಮಸ್ತಕದ ಶಕುನಿಶಿಲೆಗೇರ್ದು ನಿಂದಾ ವಿರಾಡ್ರೂಪದಾ ಭವ್ಯಚಿತ್ರ ವನಾಂಜನೇಯನಾ ! (ಶ್ರೀರಾಮಾ. ೪೦೪-೪೬). [ಸಂ. ನೀಲಚುಂಬಿನ್]

**ನೀಲಚೂಳಿಕೆ** (ನಾ). ನೀಲಿಯ ಬಣ್ಣದ ಶಿಖರ,—ಬೆಟ್ಟದತುದಿ : ಬಲವರುತಿರ್ಪ ಭಾನುಗೆ ತಮಃಪಟಳಂ ಸುಗಿದಭ್ರಮೇಖಳಾವಳಯಮನಾಸೆವಟ್ಟು ನೆಲಸಿರ್ದುದೊ ಪೇೞೆನೆ ಮಂದರಾಗ್ರದೊಳ್ ನೆಲಸಿದ ನೀಲಚೂಳಿಕೆ ಜಿನಾಗಮನಕ್ಕಿದೆ ನಮ್ಮ ಮುಂದೆ ಪೂವಲಿಗೆದಱುತ್ತು ಮಿರ್ದಪುದು ಮೆಯ್ವೆಳಗೆಂಬತಸೀಲತಾಂತಮಂ (ಮಲ್ಲಿಪು. ೧೨-೯೧).

[ನೀಲ+ಚೂಳಿಕೆ(=ಚೂಲಿಕೆ)]

**ನೀಲಚೇಲ,** ನೀಳಚೇಳ (ನಾ). = ನೀಲಪಟ ೧ : ದಿನನಾಥಂ ಪೆಱಪಿಂಗೆ . . . ಮೃಗಾಂಕನೊಳ್ ನೆರೆಯಲೆಂದಾಶಾವಧೂದೌತ್ಯವರ್ತನದಿಂದಂ ಗಗನಸ್ಥಳೀಕುಲಟೆ ಕೊಂಡಳ್ ನೀಲಚೇಲಾವಗುಂಠನಮಂ ತಾನೆನೆ ಪಟ್ಟಮಾಗಿರೆ ತಮಂ ತಳ್ತತ್ತು ದಿಕ್ಪ್ರಾಂತಮಂ (ಅನಂಪು. ೭-೭೩). **ನೀಳಚೇಳ :** ಅಭಿಮತ ರತೋತ್ಸುಕ ಸ್ವೈರಿಣೀಸಂತತಿಗತಂತುಮಯ ನೀಳಚೇಳಮುಮಕಲ್ಕಮಯ ಕಸ್ತೂರಿಕಾಪಂಕಮುಮುಗ್ರಾವಮಯ ಮಹಾನೀಲಮಣಿಭೂಷಣಮುಮೆನಿಸಿ . . . ತಮಮಶೇಷಭುವನೋದರ ಮನಾವಗಂ ತೀವೆ (ಪರ್ಶ್ವಪು. ೬-೨೯ ವ). [ನೀಲ+ಚೇಲ$_1$]

**ನೀಲತಂತ್ರ** (ನಾ). ಕಿರಣಾಗಮದ ಒಂಬತ್ತು ಪ್ರಕಾರಗಳಲ್ಲಿ ಒಂದು : ಗರುಡಾಗಮ ನೈರುತಾಗಮ ನೀಲತಂತ್ರ . . . ಕಾಲತಂತ್ರವೆಂದು ಕಿರಣಾಗಮದ ನವಭೇದಂಗಳು (ವಿವೇಕ. ೭೧). [ಸಂ.]

**ನೀಲತುತ್ತೆ** (ನಾ). ಒಂದು ಬಗೆಯ ಖನಿಜಲವಣ ; ಮೈಲುತುತ್ತ : ಜೋಳವನ್ನು ಕಾಡಿಗೆರೋಗದಿಂದ ಉಳಿಸಬೇಕಾದರೆ ಅದರ ಬೀಜಗಳನ್ನು ಕಾಪರ್‌ಸಲ್ಫೇಟ್ (ನೀಲತುತ್ತೆ) ದ್ರಾವಣದಿಂದ ತೊಳೆಯಬೇಕು (ನಿರಶಾ. ೧೭). [ನೀಲ+ತುತ್ತೆ(<ತುತ್ತ)]

**ನೀಲತುರಂಗ** (ನಾ). ಕಪ್ಪುಬಣ್ಣದ ಕುದುರೆ : ನೀಲತುರಂಗಮಾದೊಡಂ ಶ್ವೇತಾಶ್ವಮಾದೊಡಮಾ ವಾಜಿಯ ಕುಕ್ಷಿಯೊಳಾದೊಡಂ ವಕ್ಷದೊಳಾದೊಡಂ ಧವಳವರ್ಣಮಿರಲಾ ತೇಜಿ ವೈಜಯಕಮೆನಿಪುದು (ಹಾಲಾಸ್ಯ. ೪-೧೧-೧೦೩ ವ). [ನೀಲ+ತುರಂಗ$_1$]

**ನೀಲತುರಗ** (ನಾ). = ನೀಲತುರಂಗ : ನೀಲತುರಗವಿರಾಜಮಾನಳೆ ನೀಲವಸನೆಯೆ (ದೇವೀಮ. ೩-೧೮). [ನೀಲ+ತುರಗ]

**ನೀಲತೆ** (ನಾ). ನೀಲಿ ಅಥವಾ ಕಪ್ಪುಬಣ್ಣದಿಂದ ಕೂಡಿರುವಿಕೆ.

[ಸಂ. ನೀಲತಾ]

**ನೀಲಧಮ್ಮಿಲ್ಲ** (ನಾ). ಕಪ್ಪುಬಣ್ಣದ ತುರುಬು,—ಮುಡಿ : ಶ್ರೀಗಿರಿಸುತಾನೀಲಧಮ್ಮಿಲ್ಲ ಮಲ್ಲಿಕಾನಾಗಚಂಪಕಕೌಸುಮಾರಚಿತಮಾಲಿಕಾ ಪೂಗಧೂಳಿಮ ಧೂಳಿಪಂಕಿಲಿತವಾಮಾಂಸಶಿಖರಶೋಭಾಧುರೀಣಂ (ದುಃಪು. ೧೭-೧). [ನೀಲ+ಧಮ್ಮಿಲ್ಲ]

**ನೀಲಧಿ** (ನಾ). ೧. ನೀಲವರ್ಣಕ್ಕೆ ಆಶ್ರಯವಾದುದು ; ಆಕಾಶ : ನೀಲಧಿಯಲಿ ಶಶಿಯ ದೋಣಿ ಈಸುತಿತ್ತು ಮಂದಾನಿಲಂ ಮಂದಮಂದಂ ಬೀಸುತಿತ್ತು (ಅನಿಕೇ. ೪೩-೧). ೨. ನೀರಿಗೆ ಆಶ್ರಯವಾದುದು ; ಸಮುದ್ರ (?). [ಸಂ.]

**ನೀಲನಕ್ಷೆ** (ನಾ). ಯಾವುದಾದರೂ ಕಟ್ಟಡ, ಯಂತ್ರ ಇತ್ಯಾದಿಗಳ ನಿರ್ಮಾಣವನ್ನು ಕೈಗೊಳ್ಳುವ ಮೊದಲು ತಯಾರಿಸುವ ಮೊದಲ ನಕ್ಷೆ : ನೀಲಪ್ರತಿ, ನೀಲನಕ್ಷೆ (Blue Print. ಪತ್ರಿಸಿ. ೧೦).

[ನೀಲ+ನಕ್ಷೆ]

**ನೀಲನಾಗಿನಿ** (ನಾ). ನೀಲಿಬಣ್ಣದ ಹೆಣ್ಣುನಾಗರ ಹಾವು : ಕಾರ್ದ ವಿಷಮಂ ತಾನೆ ಮರೞೆ ಹೀರಲ್ಕೆಳಸಿ ಬೞೆ ಸಾರ್ವ ನೀಲನಾಗಿನಿಯಂತೆ ತನ್ನೆಡೆಗೆ ತಪಿಸುತೈತರುತಿರ್ದ ಭರತಜನನಿಯನಿರದೆ ನೋಂಕಿದನ್ (ಶ್ರೀರಾಮಾ. ೭೦-೪೪೬). [ನೀಲ+ನಾಗಿನಿ(<ನಾಗಿಣಿ)]

**ನೀಲನೀರಜ** (ನಾ). ನೀಲಿಯ ಬಣ್ಣದ ತಾವರೆ ; ಕನ್ನೈದಿಲೆ : ಬಾಯಬಿಡದಟ್ಟಿ ಮೆಟ್ಟಿಡುವ ಡಂಬಿಪ ರಂಡೆತನಕ್ಕೆ ಪೂಣ್ದಭಿಪ್ರಾಯಮೆ ಸಿಂಹನಂದೆಗಮನಿಂದಿತೆಗಂ ಮೃಗಕಂತಮಾದ ತತ್ಸಾಯಕಮುರ್ಚಿ ಪೋಗದೆ ಮೃಗೀಯುಗಳಂ ಮಡಿವಂತೆ ಸತ್ತರಾಘ್ರಾಯಿಸಿ ನೀಲನೀರಜಮಂ (ಶಾಂತಿಪು. ೬-೯೪) ; ಪಾಲ್ಗಡಲಂ ಪೋಲ್ತಿರೆ ತತ್ಸರಂ . . . ಮೇಲೆಡೆಗೊಂಡೊಪ್ಪುವ ನೀಲನೀರಜವನಂ ಸ್ವರ್ಣಾಂಬುಜೋದ್ಯದ್ರಜಂ . . . ಒಪ್ಪುಗುಂ (ರಾಜಶೇ. ೧೦-೬೬). [ನೀಲ+ನೀರಜ$_2$]

**ನೀಲನೀರದ** (ನಾ). ಕಪ್ಪುಬಣ್ಣದ ಮೋಡ ; ನೀಲಮೇಘ : ನೀಲನೀರದ ತನುಚ್ಛವಿ ಭಸ್ಮರಜೋವಿಲಿಪ್ತಮಂಜನಗಿರಿಯಂ ಶರಜ್ಜಳಧರಂ ಕವಿದಂತಿರೆ ಚೆಲ್ವನಾಳ್ದು (ಪಂಪಭಾ. ೭-೫೯) ; ಈ ಸ್ವಯಂಪ್ರಭೆಗೆ ಲುಲತ್ತಟತ್ಪ್ರಭೆಗೆ ಬಂಧುರಸಿಂಧುರನೀಲನೀರದಪ್ರಭನಭಯಂ ತ್ರಿಪೃಷ್ಠನುಱಿದರ್ ನಿಲೆ . . . ದೊರೆಯಾಗಲಾರ್ಕುಮೋ (ಶಾಂತಿಪು. ೫-೨೪) ; ತಾಂ ಮುಂತೆ ನಡೆಗೊಂಡನಡವಿಕೀಳ್ಪಟ್ಟೆಯೊಳಿಳಾತ್ಮಜಾವಲ್ಲಭಂ, ನೀಲನೀರದವಿಪುಲವಪುವಾಗಿ, ಭೀಷಣ ಧನುಷ್ಪಾಣಿಯಾಗಿ (ಶ್ರೀರಾಮಾ. ೧೨೭-೫೪). [ನೀಲ+ನೀರದ]

**ನೀಲಪಟ,** ನೀಳಪಟ (ನಾ). ೧. ಕಪ್ಪುಬಣ್ಣದ ಬಟ್ಟೆ ; ನೀಲಿಬಣ್ಣದ ವಸ್ತ್ರ : ರಸದ ಮಳಯಜದ ಘುಸೃಣದ ಕುಸುಮದ ಕಪ್ಪುರದ ಕನಿವ ಸೊವಡಿಂಗಳಿಗಳ್ ಮುಸುಱೆ ನವನೀಲಪಟಮಂ ಮುಸುಕಿದ ವ್ರೋಲಸತಿಯೊರ್ವಳಡಿಯಿಡುತಿರ್ದಳ್ (ಲೀಲಾವ. ೩-೧೨) ; ಪೊದೆದ ನವೀನ ನೀಲಪಟವಿಕ್ಕಿದ ಕತ್ತುರಿಯಣ್ಪು ತೊಟ್ಟ ನೀಲದ ತೊಡವೊಪ್ಪೆ . . . ಪರ್ವಿದ ತಮದುರ್ವಿನೊಳ್ ಸುಱಿದರುಪ್ಪುಟಚಾರೆಯರೆಂದು ಜಾರೆಯರ್ (ಜಗವಿ. ೧೬-೧೦೨) ; ನೀಲಪಟಾಂಚಿತ ಕಂಚುಕಬಾಲಾಬಾಹಾಲತಾಗ್ರದೊಳ್ಮೆಱೆದುದು ಪೂಮಾಲೆ ವಿದುಂತುದಮುಖದಿಂ ಸಾಲಿಟ್ಟಳಿವಿಂದು ವಮೃತಕಣಮಂಜರಿವೋಲ್ (ರಾಜಶೇ. ೨-೧೦೬). ೨. ಮನ್ಮಥನನ್ನು ಆರಾಧ್ಯದೇವತೆಯಾಗುಳ್ಳ ಒಂದು ತಾಂತ್ರಿಕ ಪಂಥದ ಹೆಸರು ಮತ್ತು ಆ ಪಂಥಕ್ಕೆ ಸೇರಿದ ವ್ಯಕ್ತಿ ; ☞ ಇವರನ್ನು ಕಾಶ್ಮೀರದಲ್ಲಿ 'ನೀಲಾಂಬರ'ರೆಂದು ಕರೆಯುತ್ತಾರೆ : ಅರ್ಹನ್ ಬುದ್ಧ ಚಾರ್ವಾಕ ಮೀಮಾಂಸಕ ನೀಲಪಟರೆಂಬವರು ಕಾಯದರುಶನಂಗಳಲ್ಲಿ ದೀಕ್ಷಿತರಾಗಿ . . . ನರಕಕ್ಕಿಳಿದು ಅಧಮರಾಗಿ ಹೋಗಿ ಎಂದು ಹೇಳಿತ್ತೆಯಾ ವೇದ (ಉರಿಪ. ಕ. ೧೩೨-೨೦೧) ; ಯೋಗಿ ಜೋಗಿ . . . ನೀಲಪಟರು ಸುಳಿವರು ಕ್ಷುಧೆ ಕಾರಣ (ಸಪಾಪ. ೬-೨೨) ; ಸ್ಮರಕಳಾತಾಪಸಂ ನೀಲಪಟನೆಂಬವಂ ಹರಿದು ಬಂದು. . . ಬಳಿಕಿಂತೆಂದನು (ಸಿದ್ಧರಾ. ೪-೫೯) ; ನೀಲಪಟನುದ್ಯನ್ನಿರೀಶ್ವರಾನೇಕೇಶ್ವರಾಲೋಲಪೌರಾಣಿಕ ಪ್ರಾತ್ಯಭಿಜ್ಞಾದ್ಯಶೇಷಸಮಯಗಳ ಗಡಣಂ ಲೀಲೆಯಿಂದೆನ್ನೊಳ್ ಸೆಣಸಿ ನಿಗ್ರಹಂಬೊತ್ತು ಸೋಲಮಂ ಪಡೆದೋಲಗಿಸುತಿರ್ಪರ್ (ಪದ್ಮರಾ. ೯-೧೭). **ನೀಳಪಟ :** ೧. ಚೌಕಮಂ ಕೀಱುತುಂ ತೆಗೆದಾಚ್ಛಾದಿಸೆ ಕೇಳ ನೀಳಪಟಮುಕ್ಕ್ಮಂ ಬಟ್ಟತಂ ಮಾಡಿ ಸುತ್ತುಗಳೆತ್ತಲ್ಕಸಿತಾತಪತ್ರಮೆನಲಕ್ಕುಂ (ಗಿರಿಕ. ೪-೭೬). [ನೀಲ+ಪಟ್ಟ$_2$]

**ನೀಲಪಟಕೇತು** (ನಾ). ಕಪ್ಪುಬಣ್ಣದ ಬಾವುಟ,—ಧ್ವಜ : ನೀಲಪಟಕೇತುವಂ ಗಗನಾಲಂಬಿಯನಂಬುಜಾಪ್ತನಿದು ರಾಹುವೆನುತ್ತಾ ಲೋಕಿಸಿ ಭಯಮುತ್ತು ವಿಶಾಲಾಭ್ರದೆ ದಕ್ಷಿಣೋತ್ತರಾಯಣನಾದಂ (ನೃಷವಿ. ೪-೭೭). [ನೀಲಪಟ+ಕೇತು]

**ನೀಲಪಟಚ್ಛದೆ** (ನಾ). ಕಪ್ಪುಬಣ್ಣದ ಬಟ್ಟೆಯನ್ನು ಹೊದೆದು ಕೊಂಡಿರುವವಳು : ನೀಲಪಟಚ್ಛದೆ ನಿಶೆಯೊಳ್ ಲೋಕೇಕ್ಷಣೆ ಗಗನ ಮಾರ್ಗದಿಂ ರಾವಣನಿರ್ದಾಲಯಮಂ . . . ಬಂದೊಳವೊಕ್ಕಳ್ (ಸಂರಾಮಾ. ೧೦-೮೯). [ಸಂ. ನೀಲಪಟಚ್ಛದಾ]

**ನೀಲಪಟಾಸ್ತರಣ** (ನಾ). ನೀಲಿಬಣ್ಣದ ಬಟ್ಟೆಯ ಹೊದಿಕೆ : ನೀಲಪಟಾಸ್ತರಣದ ಮೇಲಾ ಲಲಿತಾಭರಣವೊಪ್ಪಿ ತೋರ್ಪುದುದು ಶರತ್ಕಾಲದ ಗಗನ ತಾರಾಮಾಲೆಯನನುಕರಿಸಿ ದೇವದೇವನ ಸಭೆಯೊಳ್ (ಶಾಂತಿಪು. ೧೦-೧೭೩). [ನೀಲಪಟ+ಆಸ್ತರಣ]

**ನೀಲಪಿಟ** (ನಾ). [ಬೌದ್ಧ] ಚಾರಿತ್ರಿಕ ಘಟನೆಗಳು ಹಾಗೂ ರಾಜಶಾಸನಗಳನ್ನು ಒಳಗೊಂಡಿರುವ ದಾಖಲೆ ; ಬಖೈರು : ದೇಶದ ಆಗುಹೋಗುಗಳನ್ನು ಬರೆದಿಡಲು ಪ್ರತಿಪ್ರಾಂತದಲ್ಲಿಯೂ ಒಬ್ಬೊಬ್ಬರನ್ನು ನೇಮಿಸಿದ್ದಾರೆ. ಈ ದಾಖಲೆಗಳನ್ನು ನೀಲಪಿಟ ಎಂಬ ಸಾಮೂಹಿಕ ಹೆಸರಿನಿಂದ ಕರೆಯುತ್ತಾರೆ (ಪ್ರನಾಇ. 1, ೨೦೦). [ಸಂ.]

**ನೀಲಪುಷ್ಪ** (ನಾ). **೧.** ನೀಲವರ್ಣದ ಒಂದು ಬಗೆಯ ಸಸ್ಯ : "ಅಜಲಿ(ಲ?)ಕಾ—ನೀಲಪುಷ್ಪ" (ಔಷಧಿ. ೬). **೨.** ವಿಷ್ಣುಕ್ರಾಂತಿ ಗಿಡ : "ನೀಲಪುಷ್ಪ—ಕರಿಯ ಗೋರಟೆ, ವಿಷ್ಣುಕ್ರಾಂತಿ" (ಔಷಧಿ.೪೮). **೩.** ಮಾಚಿಪತ್ರೆ. [ಸಂ.]

**ನೀಲಪ್ರತಿ** (ನಾ). = ನೀಲನಕ್ಷೆ : ನೀಲಪ್ರತಿ, ನೀಲನಕ್ಷೆ (Blue Print. ಪತ್ರಿಸಿ. ೧೦). [ನೀಲ+ಪ್ರತಿ]

**ನೀಲಪ್ರಸ್ತರ** (ನಾ). ಕಪ್ಪುಬಣ್ಣದ ಶಿಲೆ ; ಕರಿಯ ಬಂಡೆಗಲ್ಲು : ವಿಸ್ತೀರ್ಣಮೆನಿಪ ನೀಲಪ್ರಸ್ತರದೊಳ್ ಮುನಿಪನಿರ್ದಂ (ಚಂದ್ರಪು. ೩-೨). [ನೀಲ+ಪ್ರಸ್ತರ]

**ನೀಲಬೆ** 'ನೀಲಬ್ಬೆ' ನೋ.

**ನೀಲಬೇರ** (ನಾ). ಕಪ್ಪುಬಣ್ಣದ ಕುದುರೆ : ನೀಲಾಂಬುರುಹ ತನುಚ್ಛವಿಯಾಗಲ್ ನೆಱೆ ಪರೆದಿರೆ ನೀಲಬೋ[ಬೇ]ರನಾ ಹಯುಧೀರಂ (ಅಶ್ವಶಾ. ೨-೧೪). ☞ "ಕುದುರೆಯ ನಾಮ ವಿಶೇಷಗಳು—೨೯ : ಕರ್ಕ, ಕುಕ್ಕುಟ, ನೀಳ, ಶ್ಯಾಮವರ್ಣ, ಚೀರ, ಇಂದ್ರಾಹ್ವ, ಬೊಲ್ಲ, ಕುಂಕುಮಬೇರ, ಉಜ್ಜಲಬೇರ, ಮಂಗಳಬೇರ, ನೀಲಬೇರ, ಕೈರ, ಕಾರಳಗ, ಕೇಸಳಗ, ಸಂಪಳಗ, ಬೋರಳಗ, ಮಂಗಳ, ಕೊಂಕಾಹ್ವ, ಶೋಭೆಯಟ್ಟ, ಅವಟ, ಕಪೋತ, ಕಾಮಾಂಕಿ, ನೀಲ, ಗಂಗವಾಣಿ, ಚಕ್ರವಾಕ, ಸಿಂಹಪೋತ, ಸಿದ್ಧಾರ್ಥ, ಉತ್ತಮ, ಪುನ್ನಾಹ ಇ., (ಅಶ್ವಶಾ)" (ಶ್ರೀತತ್ತ್ವ. ೧೨೨). [ನೀಲ+ಬೇರ$_3$]

**ನೀಲಬ್ಬೆ,** ನೀಲಬೆ (ನಾ). ಒಬ್ಬಾಕೆಯ ಹೆಸರು : ಪೆರ್ಮ್ಮಾಡಿಯ ಮನೆವಗತಿ ನೀಲಬ್ಬೆಯ ಮಗಂ ರಾಜಮ್ಮನ ಧರ್ಮ್ಮ (ಎಕ. III, ನಂಜನ. ೧೫೪-೨ ; 970). **ನೀಲಬೆ :** ಪೆರ್ಮ್ಮಾಡಿಯುಂ ನೀಲಬೆಯುಂ ನರಸಿಙ್ಗಯ್ಯನುಂ . . . ಇನ್ತಿವರಿಬ್ದು ಕೊಟ್ಟೋರ್ (ಎಕ. VI, ಚಿಕ್ಕಮ. ೩-೯ ; 899 ?). [ನೀಲ+ಅಬ್ಬೆ$_1$]

**ನೀಲಭದ್ರ** (ನಾ). ಹದಿನೇಳು ಕುಲಪರ್ವತಗಳಲ್ಲಿ ಒಂದು : ಶಂಖಕೂಟ . . . ಹೇಮಕೂಟ ನೀಲಭದ್ರ ಕೋಟಿಶೃಂಗ . . . ಎಂಬ ಹದಿನೇಳು ಕುಲಗೋತ್ರಂಗಳೇ ಪೂರ್ವೋಕ್ತ ಸುಪಾರ್ಶ್ವವೆಂಬ ಕೀಲಕ ಪರ್ವತಕ್ಕೆ ಬಡಗಣ ದಿಕ್ಕಿನಲ್ಲಿಹವು (ವಿವೇಕ. ೨೩೧). [ನೀಲ+ಭದ್ರ]

**ನೀಲಭದ್ರತಂತ್ರ** (ನಾ). ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಗಳಲ್ಲಿ ಒಂದು : ಸ್ಥಿರಸಂಹಿತೆ ಸ್ಥಾಣುಸಂಹಿತೆ ನೀಲಭದ್ರತಂತ್ರ ಶಿವಭದ್ರಾಗಮ . . . ದೇವೀಮತವೆಂದು ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಂಗಳ್ (ವಿವೇಕ. ೭೧). [ಸಂ.]

**ನೀಲಮಣಿ,** ನೀಳಮಣಿ (ನಾ). ನವರತ್ನಗಳಲ್ಲಿ ಒಂದು : ನೀಲವರ್ಣದ ರತ್ನ ; ಇಂದ್ರನೀಲ : ನೀಲಮಣಿರುಚಿರನಂ ವನಮಾಲಿಯುಂ . . . ಕಂಡಳ್ (ಜಗವಿ. ೧೧-೩೦) ; ನೀಲಮಣಿಮುಕ್ತಾಮಾಲ ನಿಮ್ಮನೇನೆಂದು ಕರೆಯಲಿ ಸುಗ್ರೀವಪಾಲ (ಪುರಂದ. ೪-೧೬೦-೪); ನೀಲಮಣಿರಚಿತಂಗಳೆನಿಪ ವಿಶಾಲಪಾದರಿ ಪಟ್ಟಸಾಲೆ(ನಾಗಷ. ೩೦-೫೨). **ನೀಳಮಣಿ:** ಸುಳಲಿತ ಕವಿಕೃತಿಗಮಳಿನನೆಳಸುವ ಪೋಲ್ ಮಲಿನನೆಳಸನತಿವಿಶದ ಹಿಮೋಪಳಮೊಸರ್ವೊಲಿಂದುಕರಾವಳಿಗೆ ತೃಣಗ್ರಾಹಿ ನೀಳಮಣಿಯೊಸರ್ದಪುದೇ (ಚಂದ್ರಪು. ೧-೯೫) ; ನೀಳಮಣಿಸ್ಥಲಿಯೊಳ್ ನೀಳಾಳಕಮಂ ನೆಟಿಲೊಳಿನಿಸು ಕಾಣದೆ ತಲೆಯಂ ಬಾಲಕಿಯರಂಟುತುಂ ನೃಪಬಾಳನನಾ ನಗದ ರತ್ನಗುಹೆಯೊಳ್ ನಗಿಪರ್ (ಪರ್ಶ್ವಪು. ೨-೨೧). [ನೀಲ+ಮಣಿ$_3$]

**ನೀಲಮಲ್ಲಿ** (ನಾ). ನೀಲಿಬಣ್ಣದ ಹೂವು ಬಿಡುವ ಒಂದು ಬಗೆಯ ಸಸ್ಯ : ಶಿವಮಲ್ಲಿ, ನೀಲಮಲ್ಲಿ, ಕೊಗ್ಗೆ (ಮೈಔಗಿ. ೫೫-೮೭೭). [ನೀಲ+ಮಲ್ಲಿ]

**ನೀಲಮಹೀಧರ** (ನಾ). ನೀಲವರ್ಣದ ಪರ್ವತ,—ಗಿರಿ : ನೀಲಮಹೀಧರಮುಱಿಕೈಕಾಲಂ ಮೇಣೊ[ಣ್ಣ]ಳೆದು ಸುಟುದುದೋಯೆನೆ ದೀರ್ಘಸ್ಥೂಲಸ್ವರೂಪದಿಂದಂ ಕಾಲನಿಭಂ ಬಂದಂ (ಉದ್ಭಟ. ೪-೬೫). [ನೀಲ+ಮಹೀಧರ]

**ನೀಲಮೇಘ** (ನಾ). ಕಪ್ಪುಮೋಡ ; ಕಾಳಮೇಘ : ನೀಲಮೇಘದ ಮಿಂಚುಗಳ ಕೋಟಿಪ್ರಭೆಯಿಂದ (ದೀಕ್ಷಾಬೋ. ಬ. ೩-೬೨೩) ; ಆ ಮಹಾಪ್ರಚಂಡೋಗ್ರಹೂಂಕಾರದಿಂ ಬಿಡದಖಿಳ ದಿಕ್ಕ ಬಧಿರತೆಯನೆಯ್ದುಸುತಿರ್ಪ ಬೆಡಗಿನಿಂ ನೀಲಮೇಘಾಂಜನಾಕಾರದಿಂದಂ . . . ವೀರಭದ್ರೇಶನೆಜಗಿಯಾರ್ಭಡಿಸಿ ಬಿನ್ನವಿಸುತಿರ್ದಂ (ವೀಶೈಪು. ೩-೫-೧೬); ನೀಲಮೇಘಂಗಳ ನಡುವೆ ಕಂಗೊಳಿಸುವ ಬಾಲಭಾಸ್ಕರನ ಕೀಳ್ಪಡಿಸಿ ಮಾಲಾಮಧ್ಯದ ಕೌಸ್ತುಭವೆಸೆದ ವಿಶಾಲವಕ್ಷವ ನಿಟ್ಟಿಸಿದಳು (ಮೋಹತ. ೨೯-೪೨). [ನೀಲ+ಮೇಘ]

**ನೀಲಮೇಘಶ್ಯಾಮ,** ನೀಳಮೇಘಶ್ಯಾಮ (ನಾ). **೧.** ಕಾಳಮೇಘದಂತೆ ಕಪ್ಪಾಗಿರುವವನು ; ಕೃಷ್ಣ : ಪೇಳಲಳವೆ . . . ನೀಲಮೇಘಶ್ಯಾಮ ನಿನ್ನ ಬಾಲಲೀಲೆಯಾಟವ (ಪುರಂದ. ಧಾ. ೪-೫೧ ಅನುಪಲ್ಲವಿ). **೨.** ರಾಮ : ನೀಸಂಜ್ಞೆಯಾದೆನಗೆ ಕಣಸಾದುದಾ ದರ್ಶನದಿ ಮೈದೋರ್ದುದೀ ಸರ್ವಲೋಕರನುಣೆಯತಾ ನೀಲಮೇಘಶ್ಯಾಮ ಮೂರ್ತಿ (ಶ್ರೀರಾಪೂ. ೪೪-೫೫೭). **ನೀಳಮೇಘಶ್ಯಾಮ :** ಸುರಪತಿ ಕನಲಿ ಖತಿಗೊಂಡು . . . ನೀಳಮೇಘಶ್ಯಾಮನಿಗೆ ಸಮಪಾಳಿಯೆನಿಸುವ ನಳನೃಪಗೆ ಯೆರಡೆಣೆಸುವುದೆ ಎಂದ (ನಳಚ. ೪-೧೧). [ನೀಲಮೇಘ+ಶ್ಯಾಮ]

**ನೀಲಮೇಘಶ್ಯಾಮಲ** (ನಾ). = ನೀಲಮೇಘಶ್ಯಾಮ **೧** : ಕಣ್ಣಾರೆ ಕಂಡೆನಚ್ಯುತನ . . . ನೀಲಮೇಘಶ್ಯಾಮಲನ (ಪುರಂದ. ೧-೮೩-೩) ; ನೀಲಮೇಘಶ್ಯಾಮಲನ ಲೀಲೆ ಪೊಸತೆಂದು ಸುರರುಲಿಯೆ ಸ್ವಸ್ವಾಲಕನ ರಥಾಗ್ರಕೆ ಸುಪರ್ಣಸ್ಕಂಧದಿಂದೆ ಮುರಹರನಿಳಿದನು (ಜೈಮಿಭಾ. ೧೩-೨೩). [ನೀಲಮೇಘ+ಶ್ಯಾಮಲ]

**ನೀಲರತ್ನ,** ನೀಳರತ್ನ (ನಾ). = ನೀಲಮಣಿ : "ನೀಲೋಪಲಃ—ನೀಲರತ್ನ"(ಔಷಧಿ.೪೮). **ನೀಳರತ್ನ :** ನೀಳರತ್ನದ ಘಟದಿರದೆ ಮುರಿದೇಳೆ

ದುಂಬಿಯ ಬಂಬಲನು ಮಿಗೆ ಕೋಳುಗೊಂಡುಜ್ಜಳಿಪ ಕಂಪಿನ ಧೂಪ ಧೂಮಂಗಳಿಂ (ಸಾಳ್ವಭಾ. ೩-೨೯). [ನೀಲ+ರತ್ನ]

**ನೀಲಲೇಶ್ಯೆ** (ನಾ). [ಜೈನ] ಕೃಷ್ಣ, ನೀಲ, ಕಪೋತ, ಪೀತ, ಪದ್ಮ ಮತ್ತು ಶುಕ್ಲಗಳೆಂಬ ಆರು ಲೇಶ್ಯೆಗಳಲ್ಲಿ ಒಂದು; ⊫ "ಆಲಸ್ಯ, ಬುದ್ಧಿಹೀನತೆ, ಅವಿವೇಕ, ವಿಷಯಲಂಪಟತೆ, ಅಭಿಮಾನ, ಕಪಟ, ಅತಿನಿದ್ರೆ, ಧನಧಾನ್ಯಗಳಲ್ಲಿ ತೀವ್ರಅಭಿಲಾಷೆ—ಇವು ನೀಲಲೇಶ್ಯೆಯ ಪರಿಣಾಮಗಳು" (ಆದಿಪು. ಕೋಶ): ಆರ್ತರೌದ್ರಬೀಭತ್ಸಕುತ್ಸಿತೋತ್ಪತ್ತಿಸ್ಥಾನಂಗಳೊಳ್ ಕೃಷ್ಣನೀಲಕಪೋತಲೇಶ್ಯಾ ಬಹ್ವಾರಂಭಪರಿಗ್ರಹತ್ವಾದ್ಯಶುಭಪರಿಣಾಮಂಗಳಿಂ ಜೀವಂ ನೆಲಸಿ (ಆದಿಪು. ೫-೮೩ ಪ); ನೀಲಲೇಶ್ಯಾಪರಿಣಾಮದ ಮಧ್ಯಮಾಂಶದಿಂ ಜೀವಂ ಪಂಕಪ್ರಭೆಯೆಂಬ ನಾಲ್ಕನೆಯ ನರಕದೊಳು ಪುಟ್ಟುಗುಂ (ಪಸಾರ. ೪೧೮); ಇದೇ ರೀತಿ ಮೂರು, ನಾಲ್ಕು, ಐದನೆಯ ನರಕಗಳಲ್ಲಿ ನೀಲಲೇಶ್ಯೆಯು ಆಗುವುದು (ಜೈನಪ. ೪೪೮). [ನೀಲ+ಲೇಶ್ಯೆ]

**ನೀಲಲೋಹಿತ** (ನಾ). ೧. ಕಪ್ಪು ಮತ್ತು ಕೆಂಪುಬಣ್ಣಗಳ ಮಿಶ್ರವರ್ಣ; ಕೆನ್ನೀಲಿ: ನೀಲಲೋಹಿತರೂಪದಿಂ ನಿನ್ನಂ ಬಟಿಸಲ್ವೆಂ (ಅದ್ಭುತ. ೫೪-೧೪). ೨. ಕಪ್ಪಾದ ರಕ್ತ; ಕನ್ನೆತ್ತರು: ನಳನ ಕೋಪಾನಲನಂ ಖಡ್ಗಧಾರಾಜಲದಿಂ ನಂದಿಸಲುಂ ನೀಲನ ನೀಲಲೋಹಿತದಿಂ ಭೂತಗಣಮಂ ತಣಿಪಲುಮುತ್ಕಂಠನಾಗಿ (ಪಂರಾಮಾ. ೧೩-೧೩೩ಪ). ೩. ಕಂಠದಲ್ಲಿ ನೀಲವರ್ಣವನ್ನೂ ಕೂದಲುಗಳಲ್ಲಿ ಕೆಂಬಣ್ಣವನ್ನೂ ಹೊಂದಿರುವವನು; ಶಿವ; ಈಶ್ವರ: "ಈಶಾನಃ, ಶಶಿಶೇಖರಃ . . . ನೀಲಲೋಹಿತಃ—ಈ ೪೫ ಮಹಾದೇವರ ಪೆಸರ್" (ಹಲಾಯು. ೪-೧೩); ಎಮ್ಮರಸಂ ಕಂಸದೇವಂ . . . ಈ ಪರಶುವಿಂ ಗಿರಿಶಬಂಧುವನೀ ಶೂಲದಿಂ ನೀಲಲೋಹಿತನಂ ಗೆಲ್ದನೆಂದು ಬೇಱೆವೇಱೆ ಪೆಸರ್ವೆಸರೊಳ್ ತೋಱುತ್ತುಂ (ಜಗವಿ. ೭-೨೮ ಪ); ಮೊದಲಲಂಬುಜಭವನನಾ ಮಧ್ಯದಲಿ ಮಧುಸೂದನನಾ ಬಲದುದಿಯಲಾಹ್ವಾನಿಸಿದ ನಗ್ಗದ ನೀಲಲೋಹಿತನ (ಕುವ್ಯಾಅ. ೧೫-೨೭); ನೀಲಲೋಹಿತನಿವಾಸಮೆನಿಪ್ಪಾ ಚೋಳದೇಶದೊಳಗೂರ್ಜಿತ ಸದ್ಭಕ್ತಾಳಿ ತನ್ನೊಳೊಲವಿಂದೆಸೆಯಲ್ ಸಲ್ಲೀಲೆಯೆಂಬ ಪುರಮಿರ್ದಪುದೊಲ್ಪಿಂ (ತ್ರಿಪುವಿ. ೪೪-೨). [ನೀಲ+ಲೋಹಿತ]

**ನೀಲಲೋಹಿತತಂತ್ರ** (ನಾ). ಅಂಶುಮಹಾಗಮದ ಹನ್ನೆರಡು ಭೇದಗಳಲ್ಲಿ ಒಂದು: ವಿದ್ಯಾಪುರಾಣ ಭಾಸ್ಕರಾಗಮ ನೀಲಲೋಹಿತತಂತ್ರ . . ಈಶಾನೋತ್ತರವೆಂದು ಅಂಶುಮಹಾಗಮದ ದ್ವಾದಶಭೇದಂಗಳು (ವಿವೇಕ. ೭೦). [ನೀಲಲೋಹಿತ+ತಂತ್ರ]

**ನೀಲವಣ್ಣ** (ನಾ). ೧. ನೀಲಿಯ ಬಣ್ಣ. ೨. ನೀಲಿಯ ಬಣ್ಣದ ದೇಹವುಳ್ಳವನು; ಕೃಷ್ಣ: ಆಲಿ ಮೀನುಗಳು ಪೊಳೆಯೆ ಕಾಂತಿಜಲಪೂರ್ಣಲೀಲೆಯ ವದನಸರದೊಳು ತೇಲಿ ತಡಿಗೆ ಬಂದ ಶೇವಾಲವೆನೆ ಪುರ್ಬು ನೀಲವಣ್ಣಗೆ ಸೊಗಸಾಯ್ತು (ನರ್ಧಚ. ೪-೬). [ನೀಲ+ಬಣ್ಣ]

**ನೀಲವರ್ಣ** (ನಾ). ೧. ನೀಲಿಯ ಬಣ್ಣ: ನೀಲವರ್ಣದ ಬಾಲಕೃಷ್ಣನೆ ತೋಳನ್ನಾಡೈ (ಪುರಂದ. ೩-೧೯೯ ಪಲ್ಲವಿ); ನೀಲವರ್ಣದ ಲೋಲಕಾಲನವರಿಗೆ ಶೂಲ (ಕನಕ. ೪೩-೩); ಹಾಲಕ್ಕಿ ನೀಲಕ್ಕಿ ನೀಲವರ್ಣದಕ್ಕಿ (ನಾಪದ. ೧೧೫); ನೀಲವರ್ಣದ ಕಾವೇರಿ 'ಜೀವನವೂ ಒಂದು ಕಲೆ' ಎಂಬ ಸಂದೇಶವನ್ನು ಬೀರುತ್ತ ಮುನ್ನಡೆದಿದ್ದಳು (ಕಲಾಜ್ಯೋ. ೨೨೨). ೨. = ನೀಲವಣ್ಣ ೨: ಕಾಲಿಗೆ ಗೆಜ್ಜೆ ಕಟ್ಟಿ ನೀಲವರ್ಣನ ಗುಣ ಆಲಾಪಿಸುತ್ತ (ಪುರಂದ. ೨-೪-೧); ನೀಲವರ್ಣ ನೀನಾದರೆ ಆಕೆ ನೀಲಕುಂತಳೆ ತಾನಾದಳಯ್ಯ (ಕನಕ. ೧೫-೪). [ನೀಲ+ವರ್ಣ]

**ನೀಲವಸನ** (ನಾ). ೧. ನೀಲಿಯ ಬಣ್ಣದ ವಸ್ತ್ರ. ೨. ನೀಲಿಯ ಬಣ್ಣದ ವಸ್ತ್ರವನ್ನು ಧರಿಸಿದವನು; ಬಲರಾಮ: ಹಲಮುಸಲಪಾಣಿ ಮಧುಪಾಟಲನೇತ್ರಂ . . . ನೀಲವಸನನಾ ಧವಳಾಂಗಂ . . . ತಾಳಲಕ್ಷ್ಮಂ ಬಂದಂ (ಗದಾಯು. ೭-೫೬). ೩. ಶನಿ. 'ನೀಲಾಂಬರ' ಪರಾ. [ನೀಲ+ವಸನ]

**ನೀಲವಿಲಾಸರಸ** (ನಾ). ಒಂದು ಬಗೆಯ ಔಷಧಿ: ನೀಲವಿಲಾಸರಸ: — ಜಾಯಿಕಾಯಿ, ಜಾಯಿಪತ್ರೆ, ಮದ್ದು ಇವಂ ಭಂಗಿಸೊಪ್ಪಿನ ರಸದಲ್ಲಿ ಮರ್ದಿಸಿ ಕಡಲೆ ಪ್ರಮಾಣದಲ್ಲಿ ಗುಳಿಗೆ. ಇದು ನೀಲವಿಲಾಸರಸ (ವಿಶ್ವವಿ. ೩೬). [?]

**ನೀಲವೃಕ್ಷ** (ನಾ). ಒಂದು ಬಗೆಯ ಮರ: "ನರಮು, ನಬಾಲ? —ಈ ಯೆರಡುಂ ನೀಲವೃಕ್ಷ" (ಓಷಧಿ. ೮೩). [ಸಂ.]

**ನೀಲವೇಣಿ** (ನಾ). ೧. ಕಪ್ಪುಬಣ್ಣದ ಕೂದಲು: ಈ ಬಾನೆಲ್ಲ ಭೈರವನ ಶೂನ್ಯಶಕ್ತಿಯ ನೀಲವೇಣಿ (ಪೀಪಸು. ೧೨-೬). ೨. ಕಪ್ಪು ಕುರುಳುಳ್ಳವಳು: ನೀಲವೇಣಿ ಎನ್ನ ಕೂಡೆ ನಿಲ್ಲಲಾಱೆಯೆ (ಪುರಂದ. ೪-೬೪-೪೨). [ನೀಲ+ವೇಣಿ]

**ನೀಲಶತಪತ್ರ** (ನಾ). ನೀಲಿಯ ಬಣ್ಣದ ತಾವರೆ; ಕನ್ನೈದಿಲೆ: ನೀಲೋತ್ಪಲ: ಗೋತ್ರಪುತ್ರೀನೇತ್ರ ನೀಲಶತಪತ್ರರಾತ್ರೀಶ (ಉದ್ಭದೇ. ೩-೩೭). [ನೀಲ+ಶತಪತ್ರ]

**ನೀಲಶೈಲ** (ನಾ). ಕಪ್ಪುಬಣ್ಣದ ಪರ್ವತ; ನೀಲಾಚಲ: ನೀಲಶೈಲಾವಳಿ ಕೈಕೊಂಡಭ್ರಮಂ ತಳ್ತರ್ದವೊಲರ್ದತ್ತೆತ್ತಲುಂ ಬಳ್ಳಿವಿಂಚಂ ತಳೆದಾಶಾಮಂಡಲಂ (ಜಗವಿ. ೪-೧೪); ನೀಲಶೈಲದ ಮೇಲೆ ಮಾರ್ಪೊಳೆದೊಪ್ಪುವರ್ಕನವೋಲ್ಮಹೀಪಾಲಕಾಗ್ರಣಿ ರನ್ನವಜ್ಜಮನಾಂತು . . . ತೆರಳ್ದಂ (ಉದ್ಭಟ. ೮-೫೨). [ನೀಲ+ಶೈಲ]

**ನೀಲಸರ** (ನಾ). ಇಂದ್ರನೀಲದ ಹಾರ,—ಸರ: ದುಷ್ಟಗ್ರಹಗಳ ಬಾಧೆಯನ್ನು ಪರಿಹರಿಸುವುದರಲ್ಲಿ ಚಮತ್ಕಾರವಾಗಿರುವುದೇ ನೀಲಸರದ ಗುಣಗಳು (ಸಕವೈ. ೩೮). [ನೀಲ+ಸರ$_3$]

**ನೀಲಸರೋಜ,** ನೀಳಸರೋಜ (ನಾ). = ನೀಲಶತಪತ್ರ: ನಯನಂ ನೀಲಸರೋಜಮಂ ಸೆಣಸುಗುಂ . . . ಮುಖಂ ಕಮಲಮಂ ಕೀಱಿಮ್ಮಾಡುಗುಂ (ಪಂರಾಮಾ. ೧-೯೫). **ನೀಳಸರೋಜ:** ನೀಳಸರೋಜವನಂಗಳಾಗಳುಳ್ಳನಿತುಮರಲ್ದವೋಲ್ ಪೊಳೆವ ಕಣ್ಣುಳುಮಟ್ಟಿಱೆ ನೀಯೆ (ಪಂಪಭಾ. ೮-೭); ಬಾಡಿದುದೇಕೆ ನಿನ್ನ ತನುವಲ್ಲರಿ . . . ಪೇಟ ನೀನೆನಗೆ ನೀಳಸರೋಜವಿಲೋಲಲೋಚನೇ (ಪುಣ್ಯಾಸ್ರ. ೧-೬೩). [ನೀಲ+ಸರೋಜ]

**ನೀಲಸರೋರುಹ** (ನಾ). = ನೀಲಶತಪತ್ರ: ನೀಲಸರೋರುಹಾರುಣಸರೋರುಹಪಾಂಡು ಸರೋರುಹಪ್ರಭಾಮಾಲೆಯನೀಟ್ಟು ಕೊಂಡದನೆ ಬೀಱುದುದೀತನಪಾಂಗವೆಂಬಿನಂ . . . ಲೋಲದಪಾಂಗಮಾಲೆಯಿನನಂಗಲತಾಂಗಿಯ ಮೇಲೆ ಸೂಸಿದಂ (ಜಗವಿ. ೧೦-೭೪). [ನೀಲ+ಸರೋರುಹ]

**ನೀಲಸರೋರುಹಾಕ್ಷಿ** (ನಾ). ನೀಲೋತ್ಪಲದಂತೆ ಕಣ್ಣುಗಳುಳ್ಳವಳು: ನೀಲಸರೋರುಹಾಕ್ಷಿ ಬರವಿಲ್ಲಿಗೆ ಕಾರಣಮಾವುದು (ಉದ್ಭಟ. ೭-೨೩). [ಸಂ. ನೀಲಸರೋರುಹಾಕ್ಷೀ]

**ನೀಲಸಿಂದ** (ನಾ). ಒಬ್ಬಾತನ ಹೆಸರು: ಬಾಲಾದಿತ್ಯರಾಳು ಶ್ರೀಮುಂಜ್ಜನೆಮ್ನೊಸ್ನಿನೀಲಸಿನ್ದ ಮನಸಿಜರಾಣಿಜುದು ಪಿಡಿದು ತಾನ್ಪೊನ್ನಿದಾನ್ (ಮೈಆರಿ. ೧೯೪೧, ೨-೨; ಸು. 8ನೆಯ ಶತ). [?]

**ನೀಲಾಂಗ** (ನಾ). ೧. ನೀಲಿಬಣ್ಣದ ಶರೀರವುಳ್ಳವನು; ಕೃಷ್ಣ: ಪಾಂಡವರಯ್ವರುಮನೊಡಂಗೊಂಡು ಸಕಲವನಚರಜಲಚರಕಂಜಕುಮುದೇಂದೀವರಮಾಳಾಸಿಳಯಮಪ್ಪ ನೀಳಾಚಳಕ್ಕೆ ನೀಲಾಂಗಂ ಪೋದಂ

(ಗದಾಯು. ೯–೧ ಪ) ; ನೀಲಾಂಗ ನಿನ್ನ ಮುತ್ತಿನರಳೆಲೆ ಕೀಲು ಮಾಗಾಯಿ ಹುಲಿಯುಗುರು ಕಂಡು ಸೋಲ್ವರೋ ನಿನಗೆ ಸೊಬಗಿಯರು (ಪುರಂದ. ೨–೧೦೦–೨) **೨.** ರಾಮ : ಆ ಲಕ್ಷ್ಮಣಾದಿಗಳ್ . . . ಆಲಿಂಗಿಸಿದ ಜಾಡ್ಯದಿಂದೆ ಜಡಿವವಯವದ ನೀಲಾಂಗನಂ ಕಂಡು ಕಾಲ್ಗೆಜಗಿ ನುಡಿಸಲಮ್ಮದೆ ಸುಮ್ಮನಿರುತಿರ್ದರು (ಜೈಮಿಭಾ. ೧೮–೪೮). **೩.** ಒಂದು ಬಗೆಯ ನೀರುಹಕ್ಕಿ ; ಸಾರಸ. [ನೀಲ+ಅಂಗ$_2$]

**ನೀಲಾಂಚಲ** (ನಾ). ಕರಿಯ ಸೆರಗು ; ಕಪ್ಪಾದ ಸೆರಗು : ಸಖಿ ಕಾದಂಬಿನಿ, ಹಠಾತ್ ನೀನು ಅದೆಲ್ಲಿಂದ ಬಂದು ನಿನ್ನ ನೀಲಾಂಚಲದ ಮುಸುಕಿಟ್ಟು ಚಂದ್ರನನ್ನು ಕದ್ದುಕೊಂಡು ಓಡಿಹೋಗುತ್ತಿರುವಿ (ಇಪ್ಪಕ. ೨೫೧). [ನೀಲ+ಅಂಚಲ]

**ನೀಲಾಂಜನ$_1$** 'ನೀರಾಂಜನ' ನೋ.

**ನೀಲಾಂಜನ$_2$** (ನಾ). ಒಂದು ಧಾತು ವಿಶೇಷ ; ಸೌವೀರಾಂಜನ : "ಕಪೋತಕಂ—ನೀಲಾಂಜನ" (ಓಷಧಿ. ೨೫) ; ನೇತ್ರರೋಗಕ್ಕೆ :— ಶಂಖ . . . ನೀಲಾಂಜನ, ಹಿಪ್ಪಲಿ, ಶುಂಠಿ, ಮೆಣಸು, ತಾಮ್ರ, ಇವೆಲ್ಲವಂ ಎರಡುತೂಕದ ಲೆಖ್ಖದಲ್ಲೂ ಮೂಱುದಿನ ಮರ್ದನೆಯ ಮಾಡಿ ಕೆಂಪಿನ ಅಗಸೆಯ ರಸವನು ಕೂಡಿ ಕೊಂಬುದು (ವೈವಿ. ೨೦೧) ; ಅರಗಿನ ಚೂರ್ಣ, ನೆಲ್ಲಿಚೆಟ್ಟು . . . ನೀಲಾಂಜನ ಇಷ್ಟನ್ನೂ ಸಮಾಂಶವಾಗಿ ಕೂಡಿ ಕಷಾಯವ ಮಾಡಿ ಸಕ್ಕರೆವೆರಸಿ ಕುಡಿಯಲು ಅಸ್ಥಿಸ್ರಾವ ಪರಿಹರ (ಸಕವೈ. ೨೦೪). [ಸಂ.]

**ನೀಲಾಂಜನವಲಗೆ** (ನಾ). ನೀಲಾಂಜನವನ್ನು ಹಚ್ಚಿಸಿಟ್ಟಿರುವ ಹಲಗೆ : ಹೊತ್ತಿದೇಕಾರತಿ ಪಂಚಾರತಿ ಕಡ್ಡಿಬತ್ತಿ ನೀಲಾಂಜನವಲಗೆ ಮತ್ತೆ ನಾನಾವಾದ್ಯರಭಸದಿಂ ಮೊಳಗಲುಯೆತ್ತಿದ ಮಹದಾರತಿಯ (ಮೋಹತ. ೨೨–೪೩). [ನೀಲಾಂಜನ$_1$ (<ನೀರಾಂಜನ) + ಪಲಗೆ]

**ನೀಲಾಂಬರ** (ನಾ). **೧.** ಕಪ್ಪುಬಣ್ಣದ ಬಟ್ಟೆ : ಕಂಬು ಲತಾಕಾಂತೆಗೆ ನೀಲಾಂಬರಕಂಚುಕಮಿದೆಂದು ಮಿಂದಿಂದುಲಸದ್ಬಿಂಬಕ್ಕೆ ಲಕ್ಷ್ಮಲಕ್ಷ್ಮಿದಲೆಂಬುದನೆನಿಸಿದುವಧೀಶಕೇಶಾವಳಿಗಳ್ (ಶಾಂತಿಪು. ೧೧–೧೦೬). **೨.** ನೀಲಿಯ ಬಣ್ಣದ ವಸ್ತ್ರವನ್ನು ಧರಿಸುವವನು ; ಬಲರಾಮ : "ಬಲದೇವಃ, ಬಲಭದ್ರಃ, ಮುಸಲೀ, ನೀಲಾಂಬರಃ . . . ಹಲಾಯುಧಃ —ಈ ೧೮ ಬಲದೇವನ ಪೆಸರ್" (ಹಲಾಯು. ೬–೨೯) ; ಗುರುಸುತನವೋಲಾಯು ನೀಲಾಂಬರನವೊಲು ಬಲ . . . ಮಾರುತಿಯವೊಲು ಗತಿ ಸಂವರಿಸುವುದು ಶಿವನೊಲಿದವರುಗಳಿಗಲ್ಲದಿಲ್ಲ (ಕುಮ್ಯಾಉ. ೪–೧೧೨); ನೀಲಾಂಬರಗೆ ಸತ್ರಾಜಿತಸುತೆಗೆ ಪೂಗೋಲ ವಂದನೆಗೆಯ್ದು ತನ್ನ ಲೋಲಾಕ್ಷಿಯೊಡನೆ ನಿಂದಿರಲಾಗಿ ಪರಮಾನುಕೂಲ ಶ್ರೀಕೃಷ್ಣ ನೋಡಿದನು (ಮೋಹತ. ೧೩–೫೧). **೩.** ನೀಲಿಯ ಬಣ್ಣದ ಒಂದು ಬಗೆಯ ಹೂವು; ನೀಲಿಸ್ಫಟಿಕ. **೪.** ನೀಲಿಬಣ್ಣನ ಆಕಾಶ; ನೀಲಾಕಾಶ : ಜಲಪುಂಜದಿಂ ಮಿಂಚಿನಿಂ ಸಾರಮೊಳಗಿಂದೆ ನೀಲಾಂಬರದೆ ವರ್ಷಮಯಧಾರೆಯಿಂದಿಂದ್ರಗೋಪಗಳಿಂ ಘನೋಪಲಗಳಿಂದೆ ಮುಂಗಾರ್ ಬಂದುದು (ಭಾಪಚಿಂ. ೬–೨) ; ಆ ಉನ್ಮತ್ತಪ್ರಕಾಶಮಯ ನೀಲಾಂಬರದ ತಲದಲ್ಲಿ . . . ಸಾಯಲು ಸಾಧ್ಯವಾದರೂ ಸಾಕು (ಇಪ್ಪಕ. ೩೫೩). **೫.** [ಜೈನ] ರಾಮ : ಜಾನಕಿಯಂ ನೀಲಾಂಬರ ನೀಕ್ಷಿಸಿ ವಿಜಯಸ್ತಂಬೇರಮದಿಂ ಸಮುತ್ಸುಕಂ ಧರೆಗಿೞಿದಂ (ಪಂರಾಮಾ. ೧೫–೪). [ನೀಲ+ಅಂಬರ]

**ನೀಲಾಂಬರಿ** (ನಾ). **೧.** [ಸಂಗೀತ] ಒಂದು ರಾಗದ ಹೆಸರು : ಕಾಂಭೋಜೀ, ಕನ್ನಡ . . . ನೀಲಾಂಬರೀ ಎಂಬ ಈ ರಾಗಗಳುಭಾಷಾಂಗ ಲಕ್ಷಣವನ್ನುಳ್ಳವುಗಳು (ಚತುಪ್ರ. ೧೩೦) ; ನೀಲಾಂಬರಿ : ೨೯ನೇ ಮೇಳಕರ್ತ, ಧೀರಶಂಕರಾಭರಣದಲ್ಲಿ ಜನ್ಯ . . . ಸಾಯಂಕಾಲದಲ್ಲಿ ಹಾಡಬೇಕಾದ ರಾಗ (ಸಂಗೀಚಂ. ೧೩೧). **೨.** (ಆಲಂ) ಬೇಸರದ ಧ್ವನಿ : ಹಿಂದಿದ್ದ ಗೀತೆಯೂ ಹಳೆಯ ಹಾಡೇ . . . ದಿನದ ನೀಲಾಂಬರಿಯ ಆಲಾಪ ಬೇರೆ (ಗರಿ. ೩೯–೬).

**ನೀಲಾಂಬರಿ ಹಾಡು** = ಬೇಸರ ಬರುವಂತೆ ದುಃಖದ ಮಾತಾಡು. [ಸಂ. ನೀಲಾಂಬರೀ]

**ನೀಲಾಂಬುಜ** (ನಾ). ಕನ್ನೈದಿಲೆ ; ನೀಲೋತ್ಪಲ : ನಿನ್ನಂ ಬಲವರ್ಪುವಿನ್ನದಱ ಮೇಲೆ ಭಯಾಕುಳ ಲೋಲನೇತ್ರ ನೀಲಾಂಬುಜ ಲಕ್ಷ್ಮಿಯಂ ಕೆಡಱಿ ಮಾಣವು ಕಾಣಗೆ ಮಾಯ್ದ ತುಂಬಿಗಳ್ (ಶಾಂತಿಪು. ೮–೮೭). [ನೀಲ+ಅಂಬುಜ]

**ನೀಲಾಂಬುಜನಾಳ** (ನಾ). ಕನ್ನೈದಿಲೆಯ ದಂಟು,- ದೇಟು : ಕಿವಿಯ ಪಾಲೆ ನೀಲಾಂಬುಜನಾಳಮನವಟಿಯ್ಸುಗುಂ (ಸುಕುಮಾ. ೫–೫೧ ರಗಳೆ). [ನೀಲಾಂಬುಜ + ನಾಳ$_1$ (= ನಾಲ$_1$)]

**ನೀಲಾಂಬುಜನ್ಮ** (ನಾ). = ನೀಲಾಂಬುಜ : "ನೀಲಾಂಬುಜನ್ಮ, ಇಂದೀವರಂ—೨ ಕನ್ನೈದಿಲೇ ಹೆಸರುಗಳು" (ಸಿದ್ಧಾಂತಿ. ೮೯). [ನೀಲ + ಅಂಬುಜನ್ಮ]

**ನೀಲಾಂಬುದ** (ನಾ). ಕಪ್ಪು ಮೋಡ ; ಕಾರ್ಮುಗಿಲು : ನೀಲಾಂಬುದಲೇಖೆಗಳೆನೆ ಶೈಲದ ಸಾನುವಿನೊಳೆಸೆದರತಿಚಪಲತಟಿನ್ಮಾಲಾ ಮಂಜರಿಯಂತೆ ವಿಲೋಲಾಕ್ಷಿಗಳಡರೆ ಪೊಳೆವಿನಂ ವನಚರಿಯರ್ (ಲೀಲಾಪ. ೮–೨೯) ; ಸಂದಣಿಸುವ ಜಡೆ ಬೆನ್ನಂ ಮುಂದಯಿಸಿ ಮುಸುಂಕುತಿಳಿಯೆ ನೀಲಾಂಬುದಮಂ ಪಿಂದಿಕ್ಕಿ ಮುಂದೆ ಬೆಳಗುತೆ ನಿಂದೆಳಮಿಂಚಿನವೊಲಗಜೆ ನೆಱೆ ಮೆಱೆದಿರ್ದಳ್ (ಗಿರಿಕ. ೯–೭). [ನೀಲ+ಅಂಬುದ]

**ನೀಲಾಂಬುರುಹ** (ನಾ). = ನೀಲಾಂಬುಜ : ತುರಗತನುಚ್ಛವಿ ನೀಲಾಂಬುರುಹಮನನುಕರಿಸಿ ತೋಱೆ ನೀಲಂ (ಅಶ್ವಶಾ. ೨–೧೪). [ನೀಲ + ಅಂಬುರುಹ]

**ನೀಲಾಂಭೋಧರ** (ನಾ). = ನೀಲಾಂಬುದ : 'ನೀಲಾಂಭೋಧರ ವರ್ಣ' ಪರಾ. [ಸಂ.]

**ನೀಲಾಂಭೋಧರವರ್ಣ** (ನಾ). ನೀಲಮೇಘದಂತೆ ಮೈಬಣ್ಣವುಳ್ಳವನು ; ಕೃಷ್ಣ : ಹೇಲಾನಿರ್ಹೃತಭೂಮಿಭಾರಮಖಿಲಂ ಕಾಲಂ ಸದುಜ್ಜೀವನಂ ನೀಲಾಂಭೋಧರವರ್ಣನೀತನ ಕರಾಂಭೋಜಂ ಮಹಾಲಂಬನಂ (ಪಸ್ತಪಂ. ೨–೧೧). [ನೀಲಾಂಭೋಧರ+ವರ್ಣ]

**ನೀಲಾಚಲ, ನೀಳಾಚಳ** (ನಾ). **೧.** ಕಪ್ಪುಬಣ್ಣದ ಬೆಟ್ಟ ; ನೀಲಗಿರಿ : "ಕರ್ಮೆಟ್ಟೆಂದು ನೀಲಾಚಲಂ" (ಕಶಸಾ. ೪–೪೭) ; ಅಂತು ಕುಲಿಶಾಭಿಘಾತದಿಂ ನೀಲಾಚಲಮೆ ಕೆಡೆವಂತೆ ಕೆಡೆದು (ಗದಾಯು. ೮–೨೬ ಪ) ; ನೀಲಾಚಲೇಂದ್ರ ಮಣಿಮಯಚೂಳಿಕೆಯೊಳ್ತೋರ್ಪ ಮೇಘಡಂಬರಮೆಂಬೀ ಲೀಲೆಯನೇಂ ಮೆಱೆದುದೊ ಭೂಪಾಲಂಗೆತ್ತಿರ್ದ ಮೇಘಡಂಬರಮಾಗಳ್ (ಮಲ್ಲಿಪು. ೫–೬೮) ; ಮುಗ್ಗುಲಿಕ್ಕಿರ್ದುದು ಮುನ್ನೀರು ನೀಲಾಚಲದಿಂ ಸಾರಂಗಟ್ಟಿದವೊಲಿರೆ ಬೞಿಲ್ದು ಲುಲಾಯಂ (ಯಶೋಚ. ೩–೬೬) ; ನೀಲಾಚಲನಿಕಾಯದ ಸೌಂದರಾಂಗದ ಕೌಸ್ತುಭ ಪ್ರಭೆಯಿಂದ ಕಾಂಚನರಥವನಿಳಿದನು ದಾನವಾರಾತಿ (ಕುಮ್ಯಾಉ. ೮–೫೭) ; ನೀಲಾಚಲನಿಚಯಂ ಸಲೆ ಸಾಲಿಟ್ಟೈದಿಹುದು ಕದನಕೆಂದಂಧತಮೋ ಜಾಲಮನಾಲೋಕಿಪ ಸುರಪಾಲನ ಮಕುಟಂಬೊಲೆಸೆದುದಾ ರವಿಬಿಂಬಂ (ರಾಜಶೇ. ೧೩–೧೩೩). **ನೀಳಾಚಳ : ೧.** ಎಳವಿಸಿಲೆಳಸಿದ ನೀಳಾಚಳ ಶಿಖರದೊಳಸಿತಮೇಘವೆಳಸಿದ ತುಹಿನಾಚಳಶಿಖರದೊಳೆಣೆಯೆನೆ ಹರಿಬಳರೆಸೆದರ್ ಪೀತನೀಲಪಟಪರಿಧಾನರ್ (ಜಗವಿ. ೬–೯). **೨.** [ಜೈನ] ನೀಲಿಯ ಬಣ್ಣದ ಒಂದು ಪರ್ವತದ ಹೆಸರು ; ⁋ ಇದು ರಮ್ಯಕವರ್ಷದ ಉತ್ತರಕ್ಕೆ ಲವಣಸಮುದ್ರದ ಈಚೆ ಇದೆ : ಬಡಗಣ

ತಡಿಯೊಳಮೇಱನೆಯೆಡೆಯಿಂದು ನೀಳಾಚಳ[ಪಾಠಾಂ. ನೀಲಾಚಲ]ಕ್ಕೆ ತೆಂಕಣದು ಬೆಡಂಗೊಡರಿಪ ವಕ್ಷಾರಾದ್ರಿಗೆ ಪಡುವಣದದು ಸುಜನ ನಿಳಯುಮುಪಗತವಿಳಯುಂ (ಆದಿಪು. ೧-೫೬) ; 'ಸಕಲವನಚರಜಲಚರಕಂಜ ಕುಮುದೇಂದೀವರಮಾಳಾನಿಳಯಮಪ್ಪ ನೀಳಾಚಳಕ್ಕೆ ನೀಲಾಂಗಂ ಪೋದಂ (ಗದಾಯು. ೯-೧ ವ). [ನೀಲ+ಅಚಲ]

**ನೀಲಾದ್ರಿ,** ನೀಳಾದ್ರಿ (ನಾ). ೧. = ನೀಲಾಚಲ ೧ : ಕಾಳಿಂದಿ ಯನವುರಾಪಗೆ ನೀಲಾದ್ರಿಯನಾ ಹರಾದ್ರಿ . . . ಪೋಲ್ತಿರೆ ಕಾಲದ ಮರ್ವುರ್ವಿ ಪರ್ವಿತರ್ವೀತಳಮಂ (ಪುಷ್ಪಪು. ೮-೧೦೦) ; ನೀಲಾದ್ರಿಯ ಮಣಿಯೆರಡಂ . . . ಬಿಜ್ಜೋಲು ಮಹಿಪನ ಕಾಳೆಗಗಳು ಸೊಗಸು ತಿರ್ಪುವಾ ಬೀದಿಗಳೊಳ್ (ಮಲ್ಲಕಾ. ೪-೭೦೩). **ನೀಳಾದ್ರಿ : ೨.** ಕರ್ನಾಟಕದ ದಕ್ಷಿಣಕ್ಕಿರುವ ಒಂದು ಬೆಟ್ಟ ; ನೀಲಗಿರಿ : ನೀಳಾದ್ರಿ ಪಡಿಯ ಘಟ್ಟಂ ಏಳುಂ ಮಲೆ ಕಂಚಿ ತುಳ್ವ ರಾಜೇಂದ್ರಪುರಂ ಕೋಳಾಲ ಬಯಲುನಾಡನಾಳಾಪದಿ ಕೊಂಡ ವಿಷ್ಣುವರ್ದ್ಧನದೇವಂ (ಎಕ. XVI, ಚಿಕ್ಕನಾ. ೬೨-೧೦ ; 1242). [ನೀಲ+ಅದ್ರಿ]

**ನೀಲಾಬ್ಜ,** ನೀಳಾಬ್ಜ (ನಾ). = ನೀಲಾಂಬುಜ : ಕಯ್ಯಲ್ಲಿ ಪಿಡಿದಿರ್ದ ನೀಲಾಬ್ಜವೊಪ್ಪುತಿರೆ (ಮೆಜಿರ. ದೇ. ೬೨-೨೪) ; ನೀಲಾಬ್ಜ ತಾವರೆ ನೆರೆದ ನೀರ್ಗೆಜಿ . . . ವಿರಾಜಿಪುದು (ಭರಚ. ೭೫-೪೫) ; ನೀಲಾಬ್ಜಂ ನೀರ್ವುಟ್ಟಿನೆ ನೀಲಾಬ್ದಮನಡರ್ದು ತಳರ್ದ ಬಿಜ್ಜೋದರಿ ಕಣ್ಣೋಲಮನ ಮರ್ಚಿದಳ್ ಪಱಿಗೋಲೊಳ್ ಪೋಪಂತೆ ಗಗನಮೆಂಬಂಬುಧಿಯೊಳ್ (ಶಬಶಂ. ೧-೪೩). **ನೀಳಾಬ್ಜ :** 'ನೀಳಾಬ್ಜವನ' ಪರಾ. [ನೀಲ+ಅಬ್ಜ]

**ನೀಲಾಬ್ದ** (ನಾ). = ನೀಲಮೇಘ : ನೀಲಾಬ್ಜಂ ನೀರ್ವುಟ್ಟಿನೆ ನೀಲಾಬ್ದ ಮನಡರ್ದು ತಳರ್ದ ಬಿಜ್ಜೋದರಿ ಕಣ್ಣೋಲಮನಮರ್ಚಿದಳ್ ಪಱಿ ಗೋಲೊಳ್ ಪೋಪಂತೆ ಗಗನಮೆಂಬಂಬುಧಿಯೊಳ್ (ಶಬಶಂ. ೧-೪೩). [ನೀಲ+ಅಬ್ದ]

**ನೀಲಾಭ್ರ,** ನೀಳಾಭ್ರ (ನಾ). = ನೀಲಮೇಘ : ನೀಲಾಭ್ರಾಗ್ರದ ಚಂದ್ರಸಂಭವಮಯೂಖಾನೀಕಮತುಳ್ಳಸಚ್ಛ್ರೀಲಾವಣ್ಯಮನೀಯುತುಂ ಪರಿವವೊಲ್ದಂತಾವಳಾರೂಢಭೂಪಾಲಂಗಿಕ್ಕುವ ಚಾಮರದ್ವಿತಯುಂ . . . ಲೋಲತ್ವಂಬಡೆದಿರ್ದುವು (ಉದ್ಭಟ. ೨-೩೧). **ನೀಳಾಭ್ರ :** ನೀಳಾಭ್ರ ಮನಂಭಃಕಣಜಾಳದೆ ಬಾಸಣಿಸುವಂತೆ ಶಶಿಮುಖಿಯರ್ ಸಲ್ಲೀಳೆಯೊಳಚಳತನೂಜೆಗೆ ಬಾಳೆಗೆ ಸೂಸಕಮನಿಕ್ಕಿದರ್ ಮುದದಿಂದಂ (ಗಿರಿಕ. ೧೦-೪೩). [ನೀಲ+ಅಭ್ರ]

**ನೀಲಾಮ್ಲ** (ನಾ). ಒಂದು ಬಗೆಯ ಸಸ್ಯ ; ನೀಲಿ ಹೂ ಬಿಡುವ ಗೋರಂಟೆ : "ನೀಲಪಿಟಾಂಡೀ ? — ನೀಲಾಮ್ಲ, ತಿಲಕೇಸಿಕ" (ಓಷಧಿ. ೮೯). [ಸಂ. ನೀಲಾಮ್ಲಾ]

**ನೀಲಾಲಕ,** ನೀಲಾಳಕ, ನೀಳಾಳಕ (ನಾ). = ನೀಲಕುಂತಲ : ನೀಲಾಲಕಪ್ರಚಯಂ ಸೂಸಿ ಲತಾಂಗಲೇಖೆ ಬೆಮರಂ ತಾಳ್ದಿರ್ದು ಚೀನಾಂ ಚಲಂ ಕುಚದೊತ್ತಿಂ ನಸು ಜೋಲ್ದು ಕಣ್ಗೆಸೆಯೆ ಬಂದರ್ . . . ಕಾಂತೆಯರ್ (ಜಗವಿ. ೧೪-೮೫). 'ನೀಲಾಲಕಿ' ಪರಾ. **ನೀಲಾಳಕ :** ನೊಸಲೊಳ್ ನೀಳ್ದಿರ್ದ ನೀಲಾಳಕಂ ಪಿಸುಣಾಡಿತ್ತಸಮಾಸ್ತ್ರನಸ್ತ್ರಹತಿಯಂ ತತ್ಕಾಮಿನೀರೂಪಕಂ (ಲೀಲಾವ. ೪-೧೪೩) ; ಭೃಂಗಕುಲನೀಲಾಳಕಂಗಳ ನಭಂಗಳ ಬೆಳಂಗಿಸುವ ಮಧುರವಚನಂಗಳರುಣಪ್ರವಾಳಂಗಳ ನಖಂಗಳ ಲತಾಂಗಿಯರೆನಿಪ್ಪ ಪಣ್ಯಾಂಗನಾಜನವೆಸೆದುದು (ಹಚಕಾ. ೪-೪೦) ; ನೀಲಾಳಕಬದ್ಧ ಧಮ್ಮಿಲ್ಲಶೋಭಿತೆ ನೀಲೋತ್ಪಲದಳನೇತ್ರೆ . . . ನೀಲಾಂಜಲಿಯನಿಕ್ಕಿದಳು (ಮೋಹತ. ೨೧-೧೬). **ನೀಳಾಳಕ :** ಮೊಗಮಂ ತಾವರೆಗೆತ್ತು ಕಣ್ಮಲರ್ಗಳಂ ನೀಲೋತ್ಪಲಂಗೆತ್ತು . . . ತನ್ಮೃಗಶಾಬಾಕ್ಷಿಯನಿಂತು ಮನ್ಮಥವನಶ್ರೀಗೆತ್ತು ಭೃಂಗಂಗಳೋಲಗಿಸುತಿರ್ದಪುವೆಂಬಿನಂ ಸೊಗಯಿಕುಂ ನೀಳಾಳಕಂ ಕಾಂತೆಯಾ (ಸುಕುಮಾ. ೯-೯೦) ; ಕಾಳಿಮ ಜಲಕಣಂಗಳಂತೆ ನೊಸಲೊಳು ಕುಣಿವ ನೀಳಾಳಕಂಗಳು (ಬಸರ. ೨-೨೨). [ನೀಲ+ಅಲಕ]

**ನೀಲಾಲಕಿ,** ನೀಲಾಳಕಿ, ನೀಳಾಳಕಿ (ನಾ). = ನೀಲಕುಂತಲೆ : ಮತ್ತೇಭವಿಕ್ರೀಡಿತಂ ಪೆಸರಾಯ್ತೆಂತಿದು ನಾಗವರ್ಮ ಕವಿಯಿಂ ವ್ಯಾಲೋಲ ನೀಲಾಲಕೀ [ಪಾಠಾಂ. ನೀಳಾಳಕೀ] (ಛಂದೋಂಬು. ೨-೧೬೫). **ನೀಲಾಳಕಿ :** ಬಾಳದೊಳೆಸೆವ ಮುತ್ತಿನ ಬೊಟ್ಟ ತಳೆದಿಹ ನೀಲಾಳಕಿಯರೊಪ್ಪಿದರು (ಕಂಸವಿ. ೬-೧೦೩). **ನೀಳಾಳಕಿ :** ನೀಳಾಳಕಿಯ ಬಂಧುಗಳನೀ ಬರಹೇಳು (ತಿಮ್ಮಸ್ತ್ರೀ. ೨-೧). [ಸಂ. ನೀಲಾಲಕೀ]

**ನೀಲಾಲಿ** (ನಾ). ಕಪ್ಪುಬಣ್ಣದ ಕಣ್ಣು : ಅವಳ ಹಾಲುಗಲ್ಲ ಕರಿಯ ಮುಂಗುರುಳು . . . ಚೈತನ್ಯ ತುಂಬಿದ ಆ ನೀಲಾಲಿಗಳು ಎಲ್ಲವೂ ಅವಳ ಸೌಂದರ್ಯಸುಧೆಯನ್ನು ಹೆಚ್ಚಿಸಿದ್ದವು (ಹಾಡುಹು. ೫). [ನೀಲ+ಆಲಿ$_2$]

**ನೀಲಾಲು** (ನಾ). ಗೆಡ್ಡೆಗಳಿಂದ ಕೂಡಿದ ಒಂದು ಬಗೆಯ ಗಿಡ : "ಕೃಷ್ಣಾಲು—ನೀಲಾಲು" (ಓಷಧಿ. ೩೮). [ಸಂ.]

**ನೀಲಾವಳಿ** (ನಾ). ನೀಲಿಬಣ್ಣದ ರೇಷ್ಮೆವಸ್ತ್ರ : ನೀಲಾವಳಿಯ ನುಟ್ಟು ಮಿಂದ್ರನೀಲಪತ್ರಂಗಳಂ ತೊಟ್ಟು . . . ವಸುದೇವಂ ಬರುತಿರೆ (ಬಂಹರಿ. ೧-೪೨ ವ). [ನೀಲ+<ಪಟ್ಟಿ$_5$]

**ನೀಲಾಶ್ಮ,** ನೀಳಾಶ್ಮ (ನಾ). =ನೀಲಮಣಿಗಿರಿಕ. ೧-೬೭ ನೀಳಾಶ್ಮ: ವಾನೇಚರ ಸ್ತ್ರೀಭ್ರಮುಮನತುಳನೀಳಾಶ್ಮಪಾಂಚಾಳಿಕಾದರ್ಶನದೊಳ್ ತಾಳುತ್ತು ಮೆತ್ತಂ ಸುಱಿವುದು ಮಹಿಭೃದ್ಗೇಹದೇಣೀಸಮೂಹಂ (ಚಂದ್ರಪು. ೧-೧೪೭). [ನೀಲ+ಅಶ್ಮ]

**ನೀಲಾಳಕ** 'ನೀಲಾಲಕ' ನೋ.

**ನೀಲಾಳಕಿ** 'ನೀಲಾಲಕಿ' ನೋ.

**ನೀಲಾಳಕೆ,** ನೀಳಾಳಕೆ (ನಾ). = ನೀಲಕುಂತಲೆ : ನೀಲಾಳಕೆಯರಾಗ ನಡೆತಂದು ಕೈಮುಗಿದು ಪ್ರಮಿಳೆಯಂಬರಸಾಗಿಹ ಸ್ತ್ರೀಶಿರೋ ಮಣಿಗೆ ಸಂಭ್ರಮದೊಳಿಂತೆಂದರು (ಜೈಮಿಭಾ. ೧೬-೧). **ನೀಳಾಳಕೆ :** ಆ ನರಸಿಂಹಮಹೀಶಮನೋಸಯನಪ್ರಿಯೆ ವಿಳೋಳ ನೀಳಾಳಕೆ ಚಂದ್ರಾನನೆ ಜಾಕವ್ವೆ ದಲಾ ಜಾನಕಿಗಗ್ಗಳಮೆ ಕುಲದೊಳಂ ಶೀಲದೊಳಂ (ಪಂಪಭಾ. ೧-೩೯). [ಸಂ. ನೀಲಾಲಕಾ]

**ನೀಲಿ,** ನೀಳಿ (ನಾ). ೧. (ನೀಲಿಬಣ್ಣವನ್ನು ಉತ್ಪಾದಿಸಲು ಸಹಾಯಕವಾದ) ಒಂದು ಬಗೆಯ ಸಸ್ಯ : "ನೀಲಿ, ಕಾಲಾ . . . ದೋಲಾ, ನೀಲಿನೀ – ಈ ೧೧ ನೀಲಿಯ ಗಿಡ" (ನಾಚಿರಾ. ೧೦೯) ; ಅಳೆಯೊಳ್ ಕುಡಿಯಿಸು ನೀಲಿಯ ದಳಮಂ . . . ಕಾಮಳೆ ದಿವಸತ್ರಯ ದಿನಗ್ಗಳಂ ನಿಂದಪುದೇ (ಲೋಕೋಪ. ೯-೧೨) ; ಸರಲೆಯಿಂ ಹಾಲೆಯಿಂ ಹೀಲೆಯಿಂ ನೀಲಿಯಿಂ ತೊರಲೆಯಿಂ ಹೊಂಗೆಯಿಂ . . . ಕಾಡೆಸೆದುದು (ಸಂದಿಮಾ. ೧೩-೧೨) ; ಹಿಂದುಸ್ಥಾನವು ಜಗತ್ತಿನ ನೀಲಿ (Indigo) ಯನ್ನು ಮುಖ್ಯವಾಗಿ ಬೆಳೆಯುತ್ತಿತ್ತು (ಬಾಲಪ್ರ. III, ೧೨೫೮). ೨. ಈ ಸಸ್ಯದ ಎಲೆಯಿಂದ ತಯಾರಿಸುವ ನೀಲಿಬಣ್ಣದ ಪುಡಿ : ನೀರಿಗೆ ಗಂಜಿ ಮತ್ತು ನೀಲಿಯನ್ನು ಬೇಕಾದ ಪ್ರಮಾಣದಲ್ಲಿ ಬೆರಸಿ ಬಟ್ಟೆ ಗಳನ್ನು ಅದ್ದಿ ಹಿಂಡಬೇಕು (ಗೃಹವಿ. ೯೨). ೩. ಶ್ಯಾಮಲ ವರ್ಣ ; ಕಪ್ಪುಬಣ್ಣ : ನೀಲಿಯ ರಸದೊಳ್ ಕರಡಿಯ ತೋಲಂ ತೊಯ್ದಟ್ಟಿದ ಮಸಿಯೊಳದಱಿಕೊಳ್ ಪುದಿದತ್ತು (ಕಾವ್ಯಾನ. ೭೩೫) ; ನಿನದತ್ಸಂಧ್ಯಾನಕಂ ನಿಗ್ಗವಣೆಯ ಪಱಿ ಪೂರ್ವಾಚಲಂ ತುಂಗರಂಗಂ ತನಗಾದತ್ತೆಂಬಿನಂ ನೀಲಿಯ ಜವನಿಕೆವೊಲ್ ಪಿಂಗೆ ಸಂಧ್ಯಾತಮಂ (ಚಂದ್ರಪು. ೮-೩೦). ೪. ನೀಲಿವರ್ಣ : ಮೇಲೆ ಸುತ್ತಲೆತ್ತೆತ್ತಲುಂ ಕಣ್ ಸೊಗಸಿದುದು

ಅಚಂಚಲಮಂಬರದ ನೀಲಿ, ಕೆಳಗೆ ದೂರದಿ ನೀರಧಿಯ ಚಂಚಲಾಂಚಲ ಮೃದುಲ ನೀಲಿ (ಶ್ರೀರಾಮಾ. ೪೦೮-೧೫೨); ಇಲ್ಲಿ ಕೆಂಪು; ಅಲ್ಲಿ ಹಳದಿ; ಹಸುರ್ಪು, ಪಚ್ಚೆ, ನೀಲಿ ; ಹೊಸತೆ ಬಂತೊ ತಾಯ ಹರಕೆ ಹೂವ ರೂಪ ತಾಳಿ (ಅನಿಕೇ. ೨೦-೧೧). **೫.** ಆಕಾಶ ; ಗಗನ : ಮಲ್ಲಿಗೆಯ ಬಿಳಿ ಮೈಯ ಹಕ್ಕಿ . . . ನೀಲಿಯ ಮೇಲೆ ಕಾಣಿಸಿತು ಚುಕ್ಕಿ (ಶಿಲಾಲ. ೬೦-೫). **೬.** ನೀಲವರ್ಣದ ಹೂವು ಬಿಡುವ ಒಂದು ಬಗೆಯ ಗೋರಟೆ ಗಿಡ ; ನೀಲಿಸ್ಫಟಿಕ : "ನೀಲಿ, ಝಂಟೀ, ಬಾಣಃ—ಈ ೩ ಕರಿಯ ಗೋರಂಟೆ" (ಹಲಾಯು. ೩೪-೫೨) ; "ಝಂಟೀ—ನೀಲೀ" (ಓಷಧಿ. ೬೪). **೭.** ಒಂದು ಬಗೆಯ ಕರಿಯ ನೊಣ. **೮.** ಒಂದು ಬಗೆಯ ರೋಗ. **ನೀಳಿ : ೪.** ನೀಳಿಯಾಗಸವನೆರ್ದೆಯಲ್ಲಿ ರನ್ನಗನ್ನಡಿಯಂತೆ ತೊಟ್ಟ ವನದೇವತಾಹೃದಯಲೋಚನಮೆನಲ್ ಮೆರೆವ ವಿಸ್ತಾರದಾ ಸ್ಫಟಿಕನಿರ್ಮಲಸರೋವರಸುಭಗತೀರದಲಿ ಶೋಭಿಸಿದುದಾ ಮುನಿನಿಕೇತನಂ (ಶ್ರೀರಾಮಾ. ೩೪-೧೮೦).

**ನೀಲವ್ವ** = ದುರ್ಗಿ ; ಕಾಳಿ : (ಜ). **ನೀಲಿ ಕೆಟ್ಟ ಮಾತು** = ಅಸಂಭಾವ್ಯವಾದ ಮಾತು; ನಂಬಲು ಯೋಗ್ಯವಲ್ಲದ ಮಾತು: ಬೇರೊಬ್ಬನನ್ನು ಲಗ್ನವಾಗಿ ಹತ್ತೆಂಟು ಮಕ್ಕಳನ್ನು ಹಡೆದವಳು, ತನ್ನ ಚೊಚ್ಚಿಲ ಮಗನನ್ನು ಈ ಮನೆತನದ ಉತ್ತರಾಧಿಕಾರಿಯನ್ನಾಗಿ ಮಾಡುವದು ನೀಲಿ ಕೆಟ್ಟ ಮಾತು ಎಂದು ಅವರ ಅಭಿಪ್ರಾಯ (ಗ್ರಾಮಾಯ. ೧೦೧). **ನೀಲಿ ಕೆಟ್ಟ ಸುದ್ದಿ** = ನೀಲಿ ಕೆಟ್ಟ ಮಾತು : ಇಂದು ಅವಳಲ್ಲಾದ ಪರಿವರ್ತನೆ ಕಂಡು ಅದ್ಭುತ ಪವಾಡವೆನ್ನಿಸೀತು. 'ನೀಲಿ ಕೆಟ್ಟ ಸುದ್ದಿ' ಎನ್ನಿಸೀತು (ಬನಸಿ. ೪೯) ; ನೀಲಿ ಕೆಟ್ಟ ಸುದ್ದಿಯಂತೆ ಇದೊಂದೇನೋ ಚಮತ್ಕಾರವಾಗಿ ನನಗೆ ತೋರುತ್ತದೆ (ಪಸಶೀ. ೧೨೭). **ನೀಲಿಮೆಯ್ಯವಂ** = ನೀಲವರ್ಣದ ಶರೀರವುಳ್ಳವನು ; ರಾಮ : ಬಿಳಿಮೈಯ್ಯನೆಳ್ಚತ್ತು ಹೊರಗೆ ಹೋಗಿರೆ, ನೀಲಿಮೆಯ್ಯವಂ ಕನವರಿಸಿದನ್ (ಶ್ರೀರಾಮಾ. ೨೭೩-೨೬೫). **ನೀಲಿಹಾಕು** = **೧.** (ಬಟ್ಟೆಗೆ ಹೊಳಪು ಬರಲು) ನೀಲಿಯ ಗಿಡದಿಂದ ತಯಾರಿಸಿದ ಪುಡಿಯನ್ನು ಹಾಕು : ಉಬ್ಬೆಗೆ ಹಾಕುವ ಒಂದು ಪಾತ್ರೆ . . . ನೀಲಿಹಾಕುವ ಸಣ್ಣ ಚೀಲಗಳು (ಗೃಹವಿ. ೮೫). **೨.** ಮೋಸಮಾಡು ; ವಂಚಿಸು : ನಿಮ್ಮ ಮುತ್ತಾತನ ತಲೆಗೆ 'ನೀಲಿಹಾಕಿ' ಶಾಂತಪ್ಪನಾಯಕನ ಮುತ್ತಜ್ಜ ಹೊಲ ಮನೆಗಳನ್ನೂ ಪಿಂಚಣಿಯನ್ನೂ ತನ್ನ ಹೆಸರಿಗೆ ಮಾಡಿಕೊಂಡನಂತೆ (ಬೆಳುಮ. ೧೧೫). [ಸಂ.]

**ನೀಲಿಕ** (ನಾ). **೧.** ನೀಲಿಗಿಡ. **೨.** ಕರಿಯ ಗೋರಟೆಗಿಡ ; ನೀಲಿಸ್ಫಟಿಕ : "ನೀಲಿಕಂ ಗೋರಟೆಯೆನಿಕ್ಕು" (ಮಂಗರಾ. ೩೭-೨೧).
[ಸಂ. ನೀಲಿಕಾ]

**ನೀಲಿಕೆ**, ನೀಳಿಕೆ$_2$ (ನಾ). **೧.** ನೀಲಿ ಗಿಡ. **೨.** ಒಂದು ಬಗೆಯ ಸಸ್ಯ ; ಕರಿಯ ಲಕ್ಕಿ ಗಿಡ : "ಶೇಫಾಲಿಕಾ, ಸುವಹಾ, ನೀಲಿಕಾ, ನೀರ್ಗುಂಡೀ—ಕರೀ ಹುವ್ವುಗಳುಳ್ಳ ಲಕ್ಕಿಲಿ, ಕರೀಲಕ್ಕಿಲಿ" (ಸಿದ್ಧಾಂತಿ. ೧೨೮). **೩.** ಕಣ್ಣಿನ ಒಂದು ರೋಗ. **ನೀಳಿಕೆ$_2$ : ೪.** ಶ್ಯಾಮಲ ವರ್ಣ : ರಾಜಹಂಸಗಮನಂ ವಿಮಾನಾಂಬಕಂ ನೀಳಿಕಾವಿಸರತ್ಕುಂತಳ ಮೊಪ್ಪೆ ಕಂನೆಗೆಜಿಯಂ ಚಟ್ಟಿಂ ಧನಂಗೊಟ್ಟು ಕಟ್ಟಿಸಿ ಚಟ್ಟೀಶ್ವರ ಸದ್ವರಂಗೆ ಫಳಿಸಲ್ ಹಸ್ತೋದಕಂ ಮಾಡಿದಂ (ಎಕ. V, ಬೇಲೂರು. ೧೯೩-೧೦೭ ; 1161). **೫.** ಒಂದು ಬಗೆಯ ಜಲಸಸ್ಯ ; ಹಾವಸೆ : "ಶೈವಾಳಂ, ಶೈವಳಂ, ಜಳಶೂಕಂ, ನೀಳಿಕಾ—ಈ ೪ ಪಾವಸೆ" (ಹಲಾಯು. ೧೧೩-೬೧). [ಸಂ. ನೀಲಿಕಾ]

**ನೀಲಿಗಂಧ** (ನಾ). ಒಂದು ಬಗೆಯ ಬಟ್ಟೆ : "ದಸರಿಗಬ್ಬುಳ ನೀಲಿಗಂಧ[ಪಾಠಾಂ. ಗಂಧನೀಲಿ]ಸಂಧ್ಯಾರಾಗ ಕುಸುಮಿಯಾವಂಚೆ ದೋಟಿಯ ನಾಗವಟ್ಟೆ ಫುಲ್ಲಿ ಸುವರ್ಣಪಟಿ ಮದವಿ ಮಂಜಿಷ್ಠೆ ದೇವಾಂಗವೆಂದು ಪಟಭೇದಮುಕ್ಕುಂ" (ಮಂಗರಾ. ೧೦೧-೨೮). [ ? ]

**ನೀಲಿಗಟ್ಟು** (ಕ್ರಿ). **೧.** (ದೇಹದ ಮೇಲೆ) ಪೆಟ್ಟಿನಿಂದ ನೀಲಿಯ ಕಲೆಯುಂಟಾಗು : ಮೈಗೆ ಪೆಟ್ಟು ಸ್ವಲ್ಪ ತಗುಲಿದರೆ ಮೈಯ ಒಳ ಭಾಗದಲ್ಲಿ ರಕ್ತಸ್ರಾವವಾಗಿ ಅಲ್ಲಲ್ಲಿ ನೀಲಿಗಟ್ಟಿಕೊಳ್ಳುತ್ತದೆ (ಗೃಹವಿ. ೧೮೯). **೨.** ಶ್ಯಾಮಲ ವರ್ಣವನ್ನು ಹೊಂದು : ನೇರಿಳೆ ಚಿಗುರನು ಕಿವಿಗಿಟ್ಟು ಬೇಸಾಯದೊಡೆಯನ ಮಗಳಲೆವಂದು ಓರೆಗಣ್ಣೊಳು ನೋಡುತಿರುವ ಆ ಶ್ಯಾಮೆಯ ಮುಖಕಾಂತಿ ನೀಲಿಗಟ್ಟುವುದು (ಗಾಥಾಸ. ೪೫-೮೦). [ನೀಲಿ + ಕಟ್ಟು$_1$]

**ನೀಲಿಗಣ್**, ನೀಲಿಗಣ್ಣು (ನಾ). **೧.** ನೀಲಿಬಣ್ಣದ ಗುಡ್ಡೆ ಇರುವ ಕಣ್ಣು : (ಜ). **೨.** = ನೀಲಗಣ್ಣು : ಆಲಿ ನೊಂದುದೋ ಕಣ್ಣ ಬೇನೆಯೋ . . . ನೀಲಿಗಣ್ಣೋ ಮಾಜಿವೆಯೊ ಕಣ್ಣುಟಿಲವ್ರೊ ಅರಿಯೋ (ಬಸವು. ೧೮-೬೬). **ನೀಲಿಗಣ್ಣು : ೧.** ಚೆಂಗೂದಲ, ಮಿರುಮಿರುಗುವ ನೀಲಿಗಣ್ಣುಗಳ ಸುಂದರ ಪ್ರೈದಿಯೊಬ್ಬಳು ಅವನೊಡನೆ ಮಾತನಾಡುತ್ತಿದ್ದಳು (ಪುನರು. ೧೮೯). **೨.** ಅಳಿಗಣ್ಣೊ ಪರೆಗಣ್ಣೊ ಪೊಸ ನೀಲಿಗಣ್ಣೊ ಮೈಲಿಗೆಗಣ್ಣೊ ಸುರಿವ ನೀರೊಂದಿದರಿಗಣ್ಣೊ (ಕುಮಾಪು. ೪-೨೪೨). [ನೀಲಿ + ಕಣ್]

**ನೀಲಿಗಣ್ಣು** 'ನೀಲಿಗಣ್' ನೋ.

**ನೀಲಿಗಪ್ಪಡ** (ನಾ). ಕಡುನೀಲಿಬಣ್ಣದ ವಸ್ತ್ರ,—ಬಟ್ಟೆ : (ಜ).
[ನೀಲಿ+ಕಪ್ಪಡ]

**ನೀಲಿಗವಾರ್ತೆ** (ನಾ). ನೀಲಿ ಕೆಟ್ಟ ಮಾತು ; ಸುಳ್ಳು ಸುದ್ದಿ : ಶೀಲಶೀಲವೆಂಬ ನಿ(ೀ?)ಲಿಗ [ಪಾಠಾಂ. ನಿಲಗಾಜಿರ, ನಿಲಗ, ನಿಲೆಗೆ, ನೀವೀಗ]ವಾರ್ತೆಯ ಬೇಳುವೆ ಬಾಲರಾಳಿಯಂತೆ ಆಳಿಗೊಂಡಿತ್ತು (ಅಪಚಂ. ೭೪-೩೨೭), "ನಿಲಿಗವಾರ್ತೆ : (= ನೀಲಿ ಕವರ್ತೆ) ಮೋಸ ಮತ್ತು ಸುಲಿಗೆ" (ಅವಚಂ. ಕೋಶ). [ ? ]

**ನೀಲಿಗಾಜು**, ನೀಲಗಾರ$_1$ (ನಾ). **೧.** ನೀಲಿಬಣ್ಣವನ್ನು ತಯಾರಿಸುವವನು : (ಜ). **೨.** ನೀಲಿಬಣ್ಣವನ್ನು ಹಾಕುವವನು ; ಬಣ್ಣಗಾರ : ಕರಸಣ್ಣಗಳ ನೆಯ್ವ ಜೇಡರಂ ಲಾಡರಂ ಪರಿಮಳದ ಪೂವಿನಾ ಮಾಲೆಗಾಜಿರ ನೀಲಿಗಾಜಿರಾ ಪಸರಮೆಸೆಗುಂ (ಗುರುಚಾ.೧-೩೪). **ನೀಲಗಾರ$_1$ : ೨.** ನೀಲಗಾರರು—ಇವರು ಲಿಂಗವಂತರಾದ್ದರಿಂದ ಇವರ ಆಹಾರ, ಆಚಾರ, ವ್ಯವಹಾರಗಳೆಲ್ಲ ಲಿಂಗವಂತರವೇ ಇರುತ್ತವೆ. ನೂಲಿಗೆ ನೀಲಿಯ ಬಣ್ಣ ಕೊಡುವದೇ ಇವರ ಮುಖ್ಯ ಹೋರೆಯು (ಕಭಾಗೆ. ೧೫೫) ; ಯಾತಕ್ಕೆ ನೀ ಯಾಸ ಹಾಕೋಲ್ಲ ಅಂದರೆ ಮಾದ ಆಂದ, ನಾ ನೀಲಗಾರ (ಚೆಲುವು. ೩೬). [ನೀಲಿ+-ಕಾಱ]

**ನೀಲಿಗಿಡ** 'ನೀಲಿಯ ಗಿಡು' ನೋ.

**ನೀಲಿನಿ** (ನಾ). ಒಂದು ಬಗೆಯ ಸಸ್ಯ ; ನೀಲಿಯ ಗಿಡ : "ನೀಲೀ, ಕಾಲಾ . . . ದೋಲಾ, ನೀಲಿನೀ – ೧೧ ನೀಲಿನಿ ಗಿಡ" (ನಾಚಿರಾ.೧೦೯).
[ಸಂ. ನೀಲಿನೀ]

**ನೀಲಿಬಣ್ಣ** (ನಾ). **೧.** ಒಂದು ಬಗೆಯ ಬಣ್ಣ ; ನೀಲವರ್ಣ: ಬಿಳಿಯದಾಗಿದ್ದ ಬೀಜ ಮಾತ್ರ ನೀಲಿಬಣ್ಣಕ್ಕೆ ತಿರುಗುತ್ತದೆ (ಹಸುಹೊ. ೩೦೩) ; ಈ ನೀಲಿಬಣ್ಣದ ನೀರಿನಲ್ಲಿ ಜಾಲಾಡಿ ಹಿಂಡಿದ ಬಟ್ಟೆಗಳನ್ನು ಅದ್ದಿ ಮತ್ತೆ ಹಿಂಡಿ ಒಣಗಿಹಾಕಿದರೆ ಅವುಗಳಿಗೆ ಒಳ್ಳೆಯ ಬಣ್ಣ ಬರುತ್ತದೆ (ಗೃಹವಿ.೮೭). **೨.** ನೀಲಿಯ ರಂಗಿನ ಪುಡಿ : ಮೊದಲು ರಾತ್ಲಿಗೆ ೧೨ ರೂಪಾಯಿಯಷ್ಟು ವಿಕ್ರಯ ಬೆಲೆ ಬರುತ್ತಿದ್ದ ನೀಲಿಬಣ್ಣವು ಈಗ ಬರೇ ಎಂಟಾಣೆಗೆ ವಿಕ್ರಯವಾಗುತ್ತಿದೆ (ಬಾಲಪ್ರ. III, ೧೨೫೩).
[ನೀಲಿ + ಬಣ್ಣ]

**ನೀಲಿಮರ** (ನಾ). ಒಂದು ಬಗೆಯ ಮರ : ತಾರೆಮರ ನೀಲಿಮರ ಕಂಚುವಾಳದ ಮರ ಯಿಾ ಮರಗಳು ಭಯಂಕರಗಳಾದ್ದರಿಂದ ಉದ್ಯಾನಗಳಲ್ಲಿ ಹಾಕಬಾರದು (ಸೌಗಂಧಿ. ೪೨೭-೧೧) ; ಗೊಬ್ರನೇರಳೆ, ನೀಲಿಮರ (ಮೈಡಿಗಿ. ೧೩-೨೨೪). [ನೀಲಿ+ಮರ$_1$]

**ನೀಲಿಮಾತು** (ನಾ). (ಅಲಂ) ಸುಳ್ಳುಮಾತು ; ಹುಸಿನುಡಿ : ನೀಲಿ ಮಾತು ನಿಜವಲ್ಲ (ಗಾದೆ). [ನೀಲಿ+ಮಾತು$_1$]

**ನೀಲಿಮೆ** (ನಾ). ನೀಲಿಬಣ್ಣ ; ನೀಲವರ್ಣ : ನೆಲವ ಕವಿವೀ ಬಾನ ನೀಲಿಮೆಯು ತಲದಿ ಸೃಷ್ಟಿಯೆಲ್ಲವ ತುಂಬಿ ಹಸರಿಸುವ ನಿಸ್ಸೀಮ ಸದ್ಭಾವ ಕೇಂದ್ರದೊಳು ವಿಶ್ರಾಂತನಂತೆ (ಮಲೆದೇ. ೫೨-೪) ; ನಡುರಾತ್ರಿ ತಾರಾ ಖಚಿತ ನೀಲಿಮೆಯನುಟ್ಟು ನಿಂದತ್ತು. ನೀರವಂ (ಶ್ರೀರಾಮಾ.೧೦೩-೮೩).
[ಸಂ. ನೀಲಿಮನ್]

**ನೀಲಿಯ ಗಿಡ,** ನೀಲಿಗಿಡ (ನಾ). ೧. (ನೀಲಿಯ ಬಣ್ಣವನ್ನು ಉತ್ಪಾದಿಸಲು ಸಹಾಯಕವಾದ) ಒಂದು ಬಗೆಯ ಸಸ್ಯ. **೨.** ಒಂದು ಬಗೆಯ ಸಸ್ಯ : "ಅಶ್ವಕರ್ಣಃ—ಕರತಾಟಿ, ಮತ್ತಿ, ಕುದುರೆ, ನೀಲಿಯ ಗಿಡು" (ಓಷಧಿ. ೫). **ನೀಲಿಗಿಡ : ೧.** "ನೀಲೀ . . . ನೀಲಿನೀ-೧೧ ನೀಲೀಗಿಡದ ಹೆಸರುಗಳು" (ಸಿದ್ಧಾಂತಿ. ೧೩೩) ; ೧೮೯೭ರಲ್ಲಿ ನಮ್ಮ ದೇಶದಲ್ಲಿ ಒಂದು ಮಿಲಿಯ ಎಕ್ರೆ ಜಮೀನುಗಳಲ್ಲಿ ನೀಲಿ ಗಿಡಗಳನ್ನು ಬೆಳೆಯುತ್ತಿದ್ದರು (ಬಾಲಪ್ರ. III, ೧೨೫೩).[<ನೀಲಿ+ಗಿಡು]

**ನೀಲಿವಾರ್ತೆ** (ನಾ). (ಅಲಂ) ಸುಳ್ಳು ಸುದ್ದಿ,—ವದಂತಿ : (ಕ).
[ನೀಲಿ + ವಾರ್ತೆ]

**ನೀಲಿಸಮಾಚಾರ** (ನಾ). = ನೀಲಿವಾರ್ತೆ : ಈ ಹಯಾತ, ಬಸಪ್ಪ, ಇವರ ಗುಂಪಿನವರೆಲ್ಲರು ಸೇರಿ . . . ಒಂದು ನೀಲೀಸಮಾಚಾರವನ್ನು ಹುಟ್ಟಿಸಿದರು (ಮುಸುಗ. ೯೬). [ನೀಲಿ + ಸಮಾಚಾರ]

**ನೀಲಿಸೊಪ್ಪು** (ನಾ). ನೀಲಿಗಿಡದ ಸೊಪ್ಪು, —ಎಲೆ : ಬೆಲ್ಲಗಣಿಕೆಯ ಸೊಪ್ಪು, ನೀಲಿಸೊಪ್ಪು . . . ಯಷ್ಟಿಮಧುಕ, ಇವಿಷ್ಟನು ಸಮಾಂಶವಾಗಿ ಕೂಡಿಸಿ ತುಪ್ಪದಲ್ಲಿ ಹಾಕಿ ಕಾಸಿ ಆ ತುಪ್ಪವ ತೊಡೆಯಲು ಬೆಂದ ಹುಣ್ಣು ಮಾಣುವುದು (ವೈದ್ಯಸಾ. II, ೧೬೦). [ನೀಲಿ + ಸೊಪ್ಪು$_2$]

**ನೀಲಿಸ್ಫಟಿಕ** (ನಾ). ನೀಲಿಬಣ್ಣದ ಹೂವು ಬಿಡುವ ಒಂದು ಬಗೆಯ ಸಸ್ಯ ; ನೀಲಾಂಬರ. [ನೀಲಿ + ಸ್ಫಟಿಕ]

**ನೀಲೀಪಟ** (ನಾ). = ನೀಲಪಟ ೧ : ನೀಲೀಪಟಮಂ ದೆಸೆವೆಣ್ಗೀಲ್ವೈಸೆ ನಿಜಾಂಗಕಾಂತಿ ಕೌಸ್ತುಭರುಚಿ ತಳ್ತಾಲಿಂಗಿಸೆ ಮುನಿಯಂ ವನಮಾಲಿ ಕನತ್ಪೀತವಸನನೊಸೆದಿದಿರೆಟ್ದಂ (ಜಗವಿ. ೧೦-೧೧). [ಸಂ.]

**ನೀಲೀರಾಗ** (ನಾ). ೧. ನೀಲಿಬಣ್ಣ : 'ನೀಲೀರಾಗತೆ' ಪರಾ. **೨.** ಸ್ಥಿರವಾದ ಪ್ರೀತಿ ; ಗಾಢವಾದ ಅನುರಾಗ ; ℙ ವಿಪ್ರಲಂಭ ಶೃಂಗಾರದಲ್ಲಿ ಪೂರ್ವರಾಗ, ಮಾನ, ಪ್ರವಾಸ, ಕರುಣ ಎಂಬ ನಾಲ್ಕು ಬಗೆಗಳಿವೆ. ಪೂರ್ವರಾಗವೆಂದರೆ ಕೇಳಿಯೋ ನೋಡಿಯೋ ಪರಸ್ಪರ ಅನುರಕ್ತರಾದ ಸ್ತ್ರೀಪುರುಷರು ಸಮಾಗಮಕ್ಕೆ ಮೊದಲು ಅನುಭವಿಸುವ ದಶಾವಿಶೇಷ ; ವಿರಹಾವಸ್ಥೆ. ಪೂರ್ವರಾಗದಲ್ಲಿ ನೀಲೀರಾಗ, ಕುಸುಂಭರಾಗ, ಮಂಜಿಷ್ಠಾರಾಗವೆಂದು ಮೂರು ವಿಧಗಳಿವೆ. ನೀಲೀರಾಗ : ಪ್ರೇಮವು ಅತಿಶಯವಾಗಿ ಪ್ರಕಾಶವಾಗುವುದೂ ಇಲ್ಲ, ಅಳಿಸಿ ಹೋಗುವುದೂ ಇಲ್ಲ. ಸೀತಾರಾಮರ ಪ್ರಣಯದಂತೆ ಹೃದಯದಲ್ಲಿ ಸ್ಥಿರವಾಗಿ ನೆಲಸಿರುತ್ತದೆ. ಕುಸುಂಭರಾಗ: ಮೊದಲು ಪ್ರೇಮವು ಅತಿಯಾಗಿದ್ದು ಕ್ರಮೇಣ ಅಳಿಸಿ ಹೋಗಿ ಬಿಡುತ್ತದೆ. ಮಂಜಿಷ್ಠಾರಾಗ : ಪ್ರೀತಿಯು ಮೊದಲಿನಿಂದ ಕೊನೆಯವರೆಗೂ ಅತಿಶಯವಾಗಿಯೇ ಇರುತ್ತದೆ : ಕದಡಿದ ಸಲಿಲಂ ತಿಳಿವಂದದೆ ತನ್ನಿಂ ತಾನೆ ತಿಳಿದ ದಶವದನಂಗಾದುದು ವೈರಾಗ್ಯಂ ಸೀತೆಯೊಳುದಾತ್ತನೊಳ್ ಪುಟ್ಟಿದಲ್ತೆ ನೀಲೀರಾಗಂ (ಪಂರಾಮಾ. ೧೪-೧೧೨). **೩.** ಅಚಲವಾದ ಪ್ರೀತಿಯುಳ್ಳವನು : "ಸ್ಥಿರವಾಗಿ ಸ್ನೇಹ ಮಾಳ್ಪವನಂ ನೀಲೀರಾಗನೆಂಬುದು" (ಹಲಾಯು. ೬೧-೨೧೯). [ಸಂ.]

**ನೀಲೀರಾಗತೆ** (ನಾ). ನೀಲಿಬಣ್ಣವಾಗುವಿಕೆ : ನೀಲೀರಾಗತೆಯಂ ಹರಿನೀಲಚ್ಛವಿ ಪಡೆಯೆ ಹರಿಗಮೈರಾವತಶುಂಡಾಳಕ್ಕಂ ಬಳಸಿದ ವಿಬುಧಾಳಿಗಮಿಂದ್ರಾಣಿಗಂ ಜಿನಾರ್ಭಕನೆಸೆದಂ (ಪಾರ್ಶ್ವಪು. ೧೪-೩೩).
[ಸಂ. ನೀಲೀರಾಗತಾ]

**ನೀಲೆ** (ನಾ). ೧. ನೀಲಿಬಣ್ಣದ ನೊಣ. ೨. ನೀಲಿಗಿಡ. **೩.** ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು : ಸತ್ಯಭಾಮೆಯು ನೀಲೆ[ಪಾಠಾಂ. ನೀಳಾ] ಭದ್ರೆ ಕಾಳಿಂದಿಯು ಮಿತ್ರವಿಂದೆಯು (ಪುರಂದ. ೪-೩೬-೪). [ಸಂ. ನೀಲಾ]

**ನೀಲೋತ್ಪಲ,** ನೀಳೋತ್ಪಳ (ನಾ). ನೀಲಿಯ ಬಣ್ಣದ ತಾವರೆ ; ಕನ್ನೈದಿಲೆ: "ಕರ್ನೈದಿಲೆನಿಸಿಕ್ಕು ಕಪ್ಪೇಱುರ್ದ ನೈದಿಲೆಗೆ ನೀಲೋತ್ಪಲಂ ಕುಮುದಮೆಂಬಾಭಿಧಾನಮಕ್ಕುಂ" (ಮಂಗರಾ. ೧೨೪-೧೭) ; ನೀಲೋತ್ಪಲಾಬ್ಜಾಕರಾಳಿ ಮನಂಗೊಳ್ವುದು (ಆದಿಪು. ೫-೨೯) ; ಮೊಗಮಂ ತಾವರೆಗೆತ್ತು ಕಣ್ಮಲರ್ಗಳಂ ನೀಲೋತ್ಪಲಂಗೆತ್ತು . . . ಭೃಂಗಂಗಳೋಲಗಿಸುತ್ತಿರ್ದಪುವೆಂಬಿನಂ ಸೊಗಯಿಕುಂ ನೀಳಾಳಕಂ ಕಾಂತೆಯಾ (ಸುಕುಮಾ. ೯-೯೦) ; ಪದಂ ಚಾರುಕಾಂಚನವರ್ಣಂ ಸ್ಫಟಿಕಾಶ್ಮವರ್ಣಮುದರಂ ಮಾಣಿಕ್ಯವರ್ಣಂ ಕೊರಲ್ ಘನನೀಲೋತ್ಪಲವರ್ಣವಾಸ್ಯಮೆಸೆದತ್ತು (ಜಗವಿ. ೧-೫೧) ; ಮೈತುಂಬಿ ಚೆಂದಳಿರ ಕೋಮಳತೆವೆತ್ತೆಸೆದಿರ್ದ ನೀಲೋತ್ಪಲನಿಭಾಂಗನಂ ಕುಲದೀಪಚಂದ್ರನಂ . . . ಆಲಿಂಗಿಸುತೆ (ಶ್ರೀರಾಮಾ.೧೭-೪೪೮). **ನೀಳೋತ್ಪಳ:** "ನೀಳೋತ್ಪಳಂ, ಕುವಳಯಂ—ಈ ೨ ಕರ್ನೆಯ್ದಿಲ್" (ಹಲಾಯು. ೧೧೨-೫೯) ; ಅಂತಃಪುರಕಾಂತೆಯರ ನಗೆಮೊಗದ ನಗೆಗಣ್ಗಳ ಬೆಡಂಗನೆ ಕಿಱುನಗೆ ನಗುವಂತೆ ಮೆಲ್ಲಮೆಲ್ಲನುಳ್ಳಲರ್ವ ಮಹೋತ್ಪಳ ನೀಳೋತ್ಪಳಂಗಳುಂ (ಆದಿಪು. ೧೧-೫ ಪ).
[ನೀಲ+ಉತ್ಪಲ]

**ನೀಲೋತ್ಪಲದಳ,** ನೀಳೋತ್ಪಳದಳ (ನಾ). ಕನ್ನೈದಿಲೆಯ ದಳ,— ಎಸಳು : ನಂದಗೋಪಂ ನಂದನಮುಖಾರವಿಂದಾವಲೋಕನೋತ್ಸುಕಂ ಗೋಕುಲಕೆ ಪೋಗಿ ನೀಲೋತ್ಪಲದಳಶ್ಯಾಮನಪ್ಪ ತಾಮರಸನೇತ್ರನಂ ನೋಡಿ (ಜಗವಿ. ೩-೨೩ ಪ) ; ನೀಲೋತ್ಪಲದಳನೇತ್ರೆ . . . ನೀಲಾಂಜಲಿಯುನಿಕ್ಕಿದಳು (ಮೋಹತ. ೨೧-೧೬). **ನೀಳೋತ್ಪಳದಳ :** ಅಳಿಕುಳರುಚಿಯುಂ ನೀಳೋತ್ಪಳದಳಮುಂ ಚಂದ್ರಬಿಂಬಮುಂ ಪೊಂಗಳಸಂಗಳ ಚೆಲ್ವನಿಭಗತಿಯನೀಳ್ಕೊಳಿಗೊಣ್ಡುದು ರೂಪು ರೂಪವಿದ್ಯಾಧರಿಯ (ಸೌಇಇ. XX, ೪೯-೩೨ ; ಸು. 1076 ?).
[ನೀಲೋತ್ಪಲ + ದಳ$_2$ (=ದಲ)]

**ನೀಲೋತ್ಪಲಸಖ** (ನಾ). ಕನ್ನೈದಿಲೆಯ ಸ್ನೇಹಿತ ; ಚಂದ್ರ : ಪುಳಕತತಿ ತಾಗುವದೊ ನೀಲೋತ್ಪಲ [ಪಾಠಾಂ. ಬಾಲೋತ್ಪಳ] ಸಖಾಂಕ ಕಪರ್ದಿಗೆನುತ ವಿಚಲಿತಮಪ್ಪ ನಿಜಾತ್ಮದಿಂದಾಲಿಂಗಿಸುವ ಪರಿಯೊ (ಬಸವು. ೩೫-೨೪). [ನೀಲೋತ್ಪಲ + ಸಖ]

**ನೀವ** (ನಾ). ಒಂದು ಬಗೆಯ ಮರ : ಸಿರಿತಾಳೆಯಿಂಗುಳದ ನೆಲ್ಲಿಯ ನೀವ[ಪಾಠಾಂ. ನಿಂಬ]ದ ಸೋಲೆಯಾಲದಿಂ . . . ಕಾರಿರುಳೋಳಿ ಕೊಂಬುಗೊಂಡುದೆನೆ ಕಱಂಗಿ ಕಟ್ಟಲಿಸುತಿರ್ದುದು ಕಾನನವೆತ್ತ ನೋಟಿಪ್ಪಡಂ (ಲೀಲಾವ. ೬-೨೬). [ಸಂ.]

**ನೀವರಣ** (ನಾ). ಅಡ್ಡಿ ; ತಡೆ ; ℙ ಇದು ಐದು ಬಗೆ : "ಅಭಿದ್ಯೆ, ವ್ಯಾಪಾದಪ್ರದೋಷ, ಸ್ತ್ಯಾನಮಿದ್ಧಗಳು, ಔದ್ಧತ್ಯಕೌಕೃತ್ಯ,

ವಿಚಿಕಿತ್ಸೆ (ಮೂಪಾಸೂ. ೨೮)." (ಶ್ರೀಪತ್ಸ. ೨೪೨) : ಕಾಮ ಚ್ಛಂದ, ವ್ಯಾಪಾದ, ಸ್ತ್ಯಾನಮಿದ್ಧ, ಔದ್ಧೃತ್ಯಕೌಕೃತ್ಯ, ವಿಚಿಕಿತ್ಸೆ ಎಂಬ ಐದು ನೀವರಣಗಳಿಗೆ 'ಜರಡಿ'ಯೆಂಬುದು ಸಂಜ್ಞೆ (ಬುದ್ಧಪ. ೭೩).
[←**ಪಾಲಿ.** ನೀವರಣ./**ಸಂ.** ನಿವಾರಣ]

**ನೀವಳಿ** 'ನಿವಾಳಿ' ನೋ.

**ನೀವಳಿಗರೆ** (ಕ್ರಿ). ದೃಷ್ಟಿದೋಷಪರಿಹಾರಕ್ಕಾಗಿ ಇಳಿತೆಗೆದ ವಸ್ತುವನ್ನು ಎರಚು, —ಚೆಲ್ಲು : ಹೊರೆಹೊರೆಯು ದಿವ್ಯಾಂಬರವ ವಿಸ್ತರದೊಳಾಂತಾ ವಾರಣಾಸಿಯ ಪುರಕೆ ನಡೆಬರದೇನುವೈಸಿರಿ ಅರಸರೊಂದಾಗಿ ಪರಯುಧಿಷ್ಠಿರನಂಘ್ರಿಗಳ ಕಾತುರದಿನೀಕ್ಷಿಸಲೆಂದು ನೀವಳಿಗರೆದು ಚೆಲ್ಲಿದರ್ವೈದಿಯಿಂದಿರೊಳಗಮಲವಸ್ತ್ರಗಳ (ಜಿನಭಾ. ೧೩-೧೯).
[ನೀವಳಿ (<ನಿವಾಳಿ) + ಕರೆ$_2$ (<ಕಱೆ$_1$)]

**ನೀವಳಿವಟ್ಟೆ** 'ನಿವಳಿವಟ್ಟ' ನೋ.

**ನೀವಳಿವಟ್ಟಂಗೆಯ್** (ಕ್ರಿ). ಸಂಪೂರ್ಣನಾಶಮಾಡು; ನಿರ್ನಾಮಗೊಳಿಸು : ದೇವ ಅನೇಕದೇಶಂಗಳಂ ನೀವಳಿವಟ್ಟಂಗೆಯ್ವುತ್ತುಂ ನೀಳಗಿರಿಪೆಸರ ವ್ಯಾಳಗಜಂ ಬಂದು ನಮ್ಮ ಪೊಱವೊಟಲ ಪರಿಸರದ ಸರೋಜಷಂಡದೊಳ್ ನೀರಾಟಮನಾಡುತ್ತಿರ್ದಪುದು (ಪುಣ್ಯಾಸ್ರ. ೭-೫೦ ಪ).
[ನೀವಳಿವಟ್ಟ (<ನಿವಳಿವಟ್ಟ) + ಕೆಯ್$_1$]

**ನೀವಾಕ** (ನಾ). ೧. ಬರಗಾಲದಲ್ಲಿ ಧಾನ್ಯಗಳಿಗೆ ಇರುವ ಅಧಿಕವಾದ ಬೇಡಿಕೆ ; ಧಾನ್ಯದ ಕೊರತೆಯ ನಿಮಿತ್ತ ಕೊಳ್ಳುವವರ ಪೈಪೋಟಿ : "ನೀವಾಕ-ಧಾನ್ಯಾದಿಗಳ ಅರ್ಘಮಂ ಪಾರ್ವುದು; ಮೇಣು ಧಾನ್ಯವ ಪೊಯಿವುದಱ ಹೆಸರು" (ನಾಚಿರಾ. ೬). ೨. ಬರ ; ಕ್ಷಾಮ ; ದುರ್ಭಿಕ್ಷ. [**ಸಂ.**]

**ನೀವಾರ** (ನಾ). ತನ್ನಿಂದ ತಾನೆ ಬೆಳೆಯುವ ಒಂದು ಬಗೆಯ **ಕಾಡುನೆಲ್ಲು ; ಕಾಡಿನಲ್ಲಿ** ಬೆಳೆಯುವ ಬತ್ತ ; **ಕಾಡುನವಣೆ** : ಱಂತು ಕೊಂಡ ಪದವಱಿಗಳೊಳ್ ಕಳಮಷಷ್ಟಿಕಾವ್ರೀಹಿಯುಪಯಾವನಾಳಗೋಧೂಮಕಂಗುಸ್ಯಾಮಾಕಕೋದ್ರವನೀವಾರ . . . ಜೀರಕಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ (ಆದಿಪು. ೬-೭೨ ಪ) ; ನೀವಾರಪಾಕದಿ ವಿನುತ ವಾನಪ್ರಸ್ಥರಿಗೆ ಸಚ್ಚರಿತವಹುದು (ತಿಮ್ಮಶಾಂ. ೨-೩೦) ; ನೀವಾರದ ಹಿಟ್ಟಿನ ಲಿಂಗವು ಸರ್ವಾರಿಷ್ಟವನ್ನು ಪರಿಹರಿಸುವುದು (ಸೌಗಂಧಿ. ೩೯೩-೪) ; ಒಂದು ನವಿಲು ಅಲ್ಲಿಗೆ ಹೋದರೆ ಅದಕ್ಕೆ ನೀವಾರಧಾನ್ಯವನ್ನು ಹಾಕುವವರು ಅಲ್ಲಿಲ್ಲ (ಕೊನಷ್ಟೈ . ೯೮). [**ಸಂ.**]

**ನೀವಾರಬಲಿ** (ನಾ). ಕಾಡುಬತ್ತದ ಅನ್ನದಿಂದ ರಚಿಸಿದ ಬಲಿ : ದ್ವಾರದ ಬಳಿಯಲ್ಲಿ ಮೊದಲೆ ನೀಸಿರಿಸಿದ ನೀವಾರಬಲಿಯಂ ವಿಲೋಕಿಸಿ ಮಿಾರುವ ಮನದಳಲನೆಂತು ತಡೆವೆಂ (ಶಾಕುಂತ. ೫೮-೯೯).
[ನೀವಾರ + ಬಲಿ$_3$]

**ನೀವಾಳಿ** 'ನಿವಾಳಿ' ನೋ.

**ನೀವಾಳಿತೆಗೆ** 'ನಿವಾಳಿದೆಗೆ' ನೋ.

**ನೀವಾಳಿಯೆತ್ತು** 'ನಿವಾಳಿಯೆತ್ತು' ನೋ.

**ನೀವಾಳಿಸು** 'ನಿವಾಳಿಸು' ನೋ.

**ನೀವಿ** (ನಾ). ೧. ಸೀರೆಯನ್ನು ಉಡುವಾಗ ನಿರಿಗೆಗಳನ್ನು ಸಿಕ್ಕಿಸಲು ಹಾಕುವ ಗಂಟು ; ಬಾಳೆಕಾಯಿ ; ಕಣಯ : "ನೀವೀ, ಉಚ್ಚಯಃ—ಈ ೨ ಕಣಯುಂ" (ಹಲಾಯು. ೯೦-೩೯೩) ; ನೀವಿಯುನೆಡಗಯ್ಯಿಂದಮೆ ಸಾವಗಿಸುತ್ತತುಳಸಾಧ್ವಸಂ ಬೆರಸೆಱಿಪ್ಪ ದೇವಿಯುನೇಱಿದಿರೆನುತುಂ ಭೂವರನೆಟ್ಟಿಂದು ಪೊರ್ದಿ ತಾಂ ಕುಳ್ಳಿರ್ದಂ (ಕುಸುಮಾ. ೫-೫೯) ; ಬಿಡದೊಯ್ಯನೆ ನೀವಿಯಂ ತೆಱಂದಿರಿಪುತುಮಲ್ಲಿ ತೀಡುವುದು ಕಾಮುಕನಂದದೆ ಪೌರಮಾರುತಂ (ಶಾಂತೀಶ್ವ. ೧-೧೩೨) ; ಕಟ್ಟುವರ್ ನಿಱುಕೆಯ ನೀವಿಯೊಳಗೆ ಕೈಗಟ್ಟುವರ್ ಕಂಕಣಗಳನು (ಮೋಹತ.೭-೨೩); ನೀವಿಯುನೊತ್ತುವ ಪುಷ್ಪಪುತ್ರಿಕಾವಿರಚನೆಗೆಯ್ವ ನೀಱೆಯರದೇನೆಸೆದಿರ್ದರೊ ಮಂಟಪಾಗ್ರದೊಳ್ (ರಾಜಶೇ. ೮-೭); ಸೀರೆಯ ನೀವಿಯ ಬಿಚ್ಚಲೆಂದಿನಿಯುನು ತಡವರಿಸುವುದನು ಕಂಡೆ (ಗಾಥಾಸ. ೮೮-೫೧). ೨. ಮೂಲಧನ : ಬಂಡವಾಳ: "ನೀವೀ, ಪರಿಪಣಂ, ಮೂಲಧನಂ—ಈ ೩ ಬಂಡವಾಳದ ವಡಿವೆ" (ಸಿದ್ಧಾಂತಿ. ೨೯೭). ೩. ಜೂಜಿನಲ್ಲಿ ಒಡ್ಡುವ ವಸ್ತು; ಪಣ : "ನೀವೀ . . . ಪಂದ್ಯಕಟ್ಟಿಕೊಂಡ ವಡಿವೆ" (ಸಿದ್ಧಾಂತಿ.೪೨೨). ೪. ಸೊಂಟಕ್ಕೆ ಸುತ್ತಿಕೊಳ್ಳುವ ಬಟ್ಟೆ : ಸಾಧಾರಣವಾಗಿ ಅಧೀವಾಸ ಮತ್ತು ನೀವಿಗಳೆಂಬ ಎರಡು ವಸ್ತ್ರಗಳನ್ನೇ ಸೊಂಟಕ್ಕೊಂದನ್ನೂ ಹೆಗಲಿಗೊಂದನ್ನೂ ಉಪಯೋಗಿಸುತ್ತಿದ್ದರು (ಭಾಇಪ್ರ. ೪೪). [**ಸಂ.** ನೀವೀ]

**ನೀವಿಬಂಧ** (ನಾ). ಕಣಯದ ಗಂಟು : ಉರ್ವೀತಳಮಂ ಜೂದಾಡಿ ಗೆಲ್ದಂದಿನ ನಿಜಕಬರೀನೀವಿಬಂಧಂಗಳಂ ದೋರ್ವಳದಿಂದಂ ತಮ್ಮನಿಂದಂ ತೆಗೆಯಿಸಿ ನಡೆದಾ ನೀಚನಾ ದ್ರೋಹನ . . . ಆ ಪಾತಕನಿರವನಿದಂ ನೋಡು ಪಂಕೇಜವಕ್ತ್ರೇ (ಗದಾಯು. ೮-೪೫). [ನೀವಿ + ಬಂಧ]

**ನೀವೀಬಂಧ** (ನಾ). = ನೀವಿಬಂಧ : ಶಿಥಿಲನೀವೀಬಂಧಮಂ ಕಾಂಚಿಯೊಳ್ ತೆಗೆಯುತ್ತುಂ . . . ಬಾಲೆ ಮೆಱೆದಳ್ ಲೀಲಾಪದನ್ಯಾಸಮಂ (ಪಂರಾಮಾ. ೫-೪೨). [**ಸಂ.**]

**ನೀವೀಬಂಧನ** (ನಾ). = ನೀವಿಬಂಧ : ಅಲಕೋತ್ಸಾರಿತಕೇಶಸಂಯಮನನೀವೀಬಂಧನಾವಿಷ್ಕೃತಸ್ಖಲಿತಂ . . . ಸ್ವಕೀಯಭವನವ್ಯಾಪಾರಚಿಂತಾಂತರಂಗಳನೆಲ್ಲಂ ಮಱೆದಿಂತು ಕೂಡೆ ನೆರೆದತ್ತಿತ್ತಂ ಪುರಸ್ತ್ರೀಜನಂ (ಆದಿಪು. ೪-೬೦). [**ಸಂ.**]

**ನೀವೀಭರ** (ನಾ). = ನೀವಿಬಂಧ : ಜೋಲ್ದಿರ್ದ ಬಂಬಲ್ಮುಡಿ ಶಿಥಿಲತೆವೆತ್ತಿರ್ದ ನೀವೀಭರಂ ಕಣ್ಗೊಳಿಪನ್ನಂ ಲೀಲೆಯಿಂದುಪ್ಪವಡಿಸಿದಳ್ ಹೃದ್ಯಾಂಗಿ (ಜಗವಿ. ೨-೭೮) ; ರತಿರಾಗಂಬೆತ್ತು ಕಾಂತಂ ತೆಗೆದು ಬಿಗಿದು ತಳ್ಕೈಸೆ ನೀವೀಭರಂ ಜಾಱೆ (ರಾಜಶೇ. ೮-೮೪). [**ಸಂ.**]

**ನೀವು** (ಕ್ರಿ). ೧. (ಮೃದುವಾಗಿ) ಸವರು,—ತೀಡು,—ನೇವರಿಸು: ಆಗಳ್ ಪರಸೈನ್ಯಭೈರವಂ. . . ಮಹಾಪ್ರಚಂಡಗಾಂಡೀವಮಂ ಕೊಂಡೇಱಿಸಿ ನೀವಿ ಜೇವೊಡೆದು (ಪಂಪಭಾ. ೧೦-೬೪ ಪ) ; ಪಾವು ಕೊಳೆ ಕರ್ಣಮಲಮಂ ತೀವುಗೆ ಮೇಣ್ ಕೊಯ್ದು ಕಳೆಗೆ ಪಿಂಡುಗೆ ರಕ್ತಸ್ರಾವಂ ಮಾಡುಗೆ ಚುರ್ಚುಗೆ ನೀವುಗೆ ವಿಷಹರಣಮಲ್ತೆ ತಾತ್ಕಾಲಿಕದೊಳ್ (ಲೋಕೋಪ. ೧೦-೧೩) ; ಕರ್ವುವಿಲ್ಲನೆಡಗೆಯ್ಯೊಳ್ ಮಂಡಿತಮೆನೆ ಪಿಡಿದಾಹಾ ರತಿಪತಿ ನಾರಿಯುನೋವಿ ನೀವಿ ಜೇವೊಡೆವಾಗಳ್(ಗಿರಿಕ.೮-೨೨); ಮನಸಿಜಾರಾತಿ ಒಯ್ಯನೆ ಬಂದವನಿಯೊಳು ನಿಪತಿತಪ್ರಸವಜಾತವಾಸನನಾಗೆ ಕುಳ್ಳಿರ್ದಾತು ಬಿಡೆ ನಿಡುಸುಯಿಲುಗಳು ತಾ ಬೀತೆಡೆಯ ನೀವುತ್ತ ನಂಬಿಯ ಮೊಗವನೀಕ್ಷಿಸುತ (ಬಸಪು. ೨೬-೪೨) ; ನಿಡುಬಿಲ್ಲ ರಥದ ಮೇಲೂಱಿ . . . ಹೆದೆಯ ಎಡಗೈಯೊಳೇಱಿಸಿ ನೀವಿ ಜೇವಡೆದನು ಸಿಡಿಲ ವೀಣೆಯ ಮುಟ್ಟಿದಂತೆ (ಭರಚ. ೨೪-೩೨) ; ಅವಳ ಹೆಗಲ ಮೇಲೆ ಕೈಯಿಟ್ಟು ಮೆದುವಾಗಿ ನೀವಿದೆ (ಮಾರ್ಗದ. ೯೧). ೨. ಒರಸು ; ತೆಗೆದು ಹಾಕು : ಹಣೆಯ ಮೇಲಿನ ಬೆವರುಹನಿಗಳನ್ನು ನೀವಿಕೊಳ್ಳುತ್ತಾ ಆದಿನಾಥನೆಂದ (ಆಶ್ರಮ. ೯). ೩. ನಾಟು ; ನೆಡು : ಒದೆದು ರಥವನು ಸೂತರಿಳಿದೋಡಿದರು ಚಾಪವನಿಳುಹಿ ಸಮರಥರೆದೆಯ ನೀವಿತು (ಕುಮಾರವ್ಯಾಸ. ೧-೧೩). [**ದೇ.॥ ತಮಿ.** ನೀವು ; **ಕೊತ.** ನಿವ್]

**ನೀವ್ರ** (ನಾ). ೧. ಛಾವಣಿಯ ಮುಂಚಾಚಿಕೊಂಡಿರುವ ಭಾಗ ; ಮುಂಜೂರು: "ನೀವ್ರಂ, ವಳೀಕಂ (ಪಟಲಾಂತಂ)—ಈ ೨ ಸೂ(ಜು)ರು" (ಹಲಾಯು. ೫೧-೧೪೮). ೨. ಛಾವಣಿ ; ಸೂರು : (೬). [**ಸಂ.**]

**ನೀಶಾರ** (ನಾ). **೧.** ಹೊದಿಕೆ ; ಹಚ್ಚಡ ; ದುಪ್ಪಟಿ. **೨.** ಸೊಳ್ಳೆ ಪರದೆ. **೩.** ಡೇರೆಯಲ್ಲಿರುವ ಬಟ್ಟೆಯ ಗೋಡೆ; ಕನಾತು. **[ಸಂ.]**

**ನೀಸರ** (ನಾ). ಕೋಟೆಯ ಹೆಬ್ಬಾಗಿಲು ; ಹುಲಿಮುಖ : "ನೀಸರ [ಪಾಠಾಂ. ನಿಸ್ಸರೆ]ವೆನಲು ಹುಲಿಮುಖಂ" (ಮಂಗರಾ. ೫೭-೪).
[<ಸಂ. ನಿಃಸರ]

**ನೀಸು** (ಕ್ರಿ). **೧.** ನೀರಿನ ಮೇಲೆ ಚಲಿಸು ; ಈಜು ; ಈಸು : ಈ ಸಂಸಾರದ ಬುಡದಲ್ಲಿ ನಾನಾವಿಕಾರತ್ರಯದ ಗುಣದಲ್ಲಿ ನೀರಿನೊಳಗಿರ್ದು ನೀಸುವನಂತೆ ಬಂಧಮೋಕ್ಷಕರ್ಮಂಗಳಲ್ಲಿ ದ್ವಂದಿತನಲ್ಲದೆ ನಿಂದ ನಿಜೈಕ್ಯಂಗೆ ಹಿಂದು ಮುಂದೆಂಬ ಬಂಧವಿಲ್ಲ (ಸರ್ವಪ. ೫೭-೨೯೮); ವಳಿರೇಖೆ ವಡೆದ ಬಡನಡು ತೊಲೆಯೆನೆ ಕುಚಜಘನಭಾರಮಂ ಕರತಲದೊಳ್ ನಿಲ್ಲಿಸಿ ಲತಾಂಗಿಗೆ ನೀಸಲ್ ಕಲಿಪ ವಿಟಂ ತೂಗುವಂಗಜಂಗೆಣೆಯಾದಂ (ಅನಂಪು. ೭-೩೯) ; ಆ ತುಂಬುವೊಳೆಗೆ ಇದಿರಾಗಿ ನೀ[ಪಾಠಾಂ. ಈ]ಸುವರುಂಟೆ (ಸಮ್ಯಕೌ. ೨-೭೦) ; ಮಱಿಯಾನೆಗಳು ನೀರಿನಾಟಕೆ ನಡೆವಂತೆ ತೊಱೆಗೆಯ್ದಿ ತಿಳಿನೀರ ಹೊಕ್ಕು ನೆಱೆ ನೀಸಿ ತೇಲಿ . . . ದುಡುಮ್ಮಿಱಿದಾಡಿ ಲೀಲೆ ಮಾಡಿದರು (ಭರಚ. ೬೩-೭೨). **೨.** ನಿರ್ವಹಿಸು; ನಿಭಾಯಿಸು: ದಾಸೋಹವೆಂಬ ಸೇವೆಯ ಬಿಟ್ಟು ನೀಸಲಾಱದೆ ಕೈಲಾಸವೆಂಬ ಆಸೆ ಬೇಡ (ವಚಸಂ. ೧೭೫-೧೩೯) ; ಗಬ್ಬವಂದೆಗಳ್ಕಲಿಗಳ ಹೊಱಿಗೆಯ ಹೊತ್ತು ನೀಸುವರೆ (ಕುರಾಸಾಂ. ೪೩-೧೬) ; ಈ ಸಕಲ ಜಗದ ಸೃಷ್ಟಿ ಸ್ಥಿತಿ ಪ್ರಳಯಂಗಳೈಸು ನನ್ನಾಧೀನವೀ ಭಾರಮಂ ಪೊತ್ತು ನೀಸುವವನಾನಲ್ಲದಾರುಂಟು (ಚಬವು. ೧೮-೩) ; ಇಂತು ಮಹಾರಾಜಂ ಸಾಮ್ರಾಜ್ಯಸುಖಾನುಭವದೊಳಿರೆ ಯುವರಾಜನುಂ ದಿಗ್ವಿಜಯಪ್ರಜಾಪಾಲನ ವ್ಯಾಪಾರಂಗಳವನಾಯಾಸದಿಂ ಪೊತ್ತು ನೀಸುತ್ತೆ (ಚಳವಿ. ೫-೯೭) ; ಬೆಳೆಯುವ ನಾಲ್ಕುಕಾಳು ರಾಗಿಯಲ್ಲಿ ರೈತರು ಹೇಗೊ ಸಂಸಾರ ನೀಸಿಕೊಂಡು ಹೋಗುತ್ತಾರೆ (ಬೈಸರ್ವೆ. ೧೭). **೩.** ಅನುಭವಿಸು ; ಅನುಭೋಗಿಸು : ಬಂದುದ ನೀಸದಿರ್ದಡೆ ಪೂರ್ವಕರ್ಮವು ತಿಂದಲ್ಲದೆ ಬಿಡದು (ಹರಿಸಾಂ. ೪೦-೧೦೦) ; ಬಾಳನ್ನು ಕಷ್ಟವೋ ನಿಷ್ಠುರವೋ—ನೀಸುವುದು ತಪ್ಪುತ್ತದೆಯೇ ? (ರಾಮೂನಿ. ೭೮) ; ಒಂದು ಬಂಗಾ ನೀಸ್ಲಿಲ್ಲ, ಒಂದು ಬಡ್ತನಾ ನೀಸ್ಲಿಲ್ಲ (ಹುಟ್ಟಿಹ. ೧೬೧). **೪.** ತೃಪ್ತಿಪಡಿಸು ; ತಣಿಸು : (?). 'ಈಸು$_1$' ಪರಾ.

**[ದೇ.॥ ತಮಿ. ಮಲ.** ನೀನ್ತು ; **ತುಳು.** ನೀಂದು ; **ಕೋತ.** ನೀಂಜ್]

**ನೀಹಾರ** (ನಾ). **೧.** ಮಂಜು ; ಹಿಮ : "ಪ್ರಾಲೇಯಃ, ಅವಶ್ಯಾಯಃ . . . ಮಿಹಿಕಾ, ನೀಹಾರಃ—ಈ ೮ ಮಂಜು" (ಹಲಾಯು. ೧೦೭-೨೮) ; ನೀಹಾರಪ್ರಸ್ಪರ್ಧಿ ಚಂಚಚ್ಚಮರಜಕಲಹಂಸಾಸ್ಪದಂ ಚೆಲ್ವನಿತ್ತತ್ತೋರಂತಂಭೋದಮಾರ್ಗದ ತಿಳಿದ ಕೊಳದವೋಲ್ದೇವಸಂದೋಹದಿಂದಂ (ಆದಿಪು. ೧೦-೧೯) ; ತರಳತರತರಂಗಾವರ್ತಗರ್ತನೀಹಾರಶೀಕರದ ನಿಕರಂ . . . ತಿಮಿತಿಮಿಂಗಿಳೋತ್ಕರಜಳೂಕವ್ಯಾಳಕೋಳಾಹಳಧ್ವಾನವೆರಸಿ ಜಲನಿಧಿ ಮೆಱೆದುದು (ಹಚಳಾ. ೧-೩೩) ; ಮಂದಾಕಿನೀಕ್ಷೀರವಾರಾಕರಪಟೀರಶಾರದನೀರದಹಾರನೀಹಾರ . . . ಗೌರ ಧಿಕ್ಕಾರಕೀರ್ತಿಪ್ರಭಾಪೂರ (ಪದ್ಮರಾ. ೧-೫) ; ಸಗುಣಮಯನೀಹಾರದಲಿ ಮುಳುಗಿ ಮಿಂಚುವೆಳಗಿನ ಬಳಕೆಯಲಿ ಮನಮುಂಚಿ ಮೈಗೊಂಡಳಲು ವಾತುಮವಂಚಕರು ನೀವ್ ಪಶುಗಳೆಂದರೆ ಖೇದವೇಕೆ (ಕುಪ್ಪಾಕ. ೬-೨೭) ; ಪ್ರಕೃತಿಪ್ರಿಯಂ ನೋಡಿದನು ಸೃಷ್ಟಿಯ ಅಭಾವವನೆ ಚಿತ್ರಿಸಿದವೋಲ್ ನೀಹಾರರಚಿತಮಾ ಹೇಮಂತಮಂಜುಕಲೆಯಂ ! (ಶ್ರೀರಾಮಾ. ೯೮-೧೨೪). **೨.** ಮಲಮೂತ್ರಗಳ ವಿಸರ್ಜನೆ : ಚತುರ್ದಿನಕಾಲೈಕವಾರ ಬದರೀಫಲಮಾತ್ರಾಹಾರರುಂ ವಿಗತನೀಹಾರರುಂ . . . ಅಪ್ಪರ್ (ತತ್ತ್ವಪ್ರ. ೧೪೦) ; ಆ ಭೋಗಭೂಮಿಯೊಳ್ ಪಾತ್ರತ್ರಿತಯದಾನಫಲಂಗಳಿಂದೇಕದ್ವಿತ್ರಿಪಲ್ಯೋಪಮಾಯುಷ್ಯರುಮೇಕ ದ್ವಿತ್ರಿದಿವಸಾಂತರಿತಾಮಳಕಾಕ್ಷಬದರಮಾತ್ರಾಹಾರರುಂ ವ್ಯಪಗತನೀಹಾರರುಂ . . . ದಂಪತಿಸ್ವರೂಪದಿಂ ಪುಟ್ಟಿ (ಚಂದ್ರಪು. ೩-೩೬ ವ). **[ಸಂ.]**

**ನೀಹಾರಕ** (ನಾ). ಆಕಾಶದಲ್ಲಿಯ ಕಾಂತಿಮಯವಾದ ಪ್ರದೇಶ ; ಜ್ಯೋತಿಃಪಟಲ : ಆಂಡ್ರೋಮಿಡದ Bದ ಮೇಲೆ ಸಣ್ಣದೊಂದು ನಕ್ಷತ್ರದ ಸಮೀಪದಲ್ಲಿ ಪ್ರಕಾಶವುಳ್ಳುದಾಗಿ ಬೆಳ್ಪೇರಿ ಮಂಕಾಗಿರುವ ಬಾಲವೊಂದು ಗೋಚರವಾಗುತ್ತದೆ. ಇದೇ ಜ್ಯೋತಿಶ್ಶಾಸ್ತ್ರದಲ್ಲಿ ಮೊಟ್ಟಮೊದಲು ಉಕ್ತವಾಗಿರುವ ಆಂಡ್ರೋಮಿಡದ ದೀರ್ಘಚತುಷ್ಕೋಣದ ನೀಹಾರಕ (Nebula) (ಜ್ಯೋತಿವಿ. ೩೧) ; ನೀಹಾರಕದಲ್ಲಿ ಸೂರ್ಯನೊಡನೆ ನಕ್ಷತ್ರಗಳೂ ಚಲಿಸುವಾಗ ನಕ್ಷತ್ರಗಳ ನಡುವೆ ಇರುವ ಅನಿಲ – ದೂಳಿನ ಅಗಾಧಮೇಘಗಳ ಮೂಲಕ ನಕ್ಷತ್ರಗಳು ಹಾಯುತ್ತವೆ (ಭೂಹುಟ್ಟು. ೫೩). **[ಸಂ.]**

**ನೀಹಾರಕರ** (ನಾ). (ಮಂಜಿನಂತೆ) ತಂಪಾದ ಕಿರಣಗಳುಳ್ಳವನು; ಚಂದ್ರ : ನೀಹಾರಕರನಲಪಿ ಪಟಿಕ್ಕೆಗೆ ಸಾರಲೊಡಂ ಮಗುೞೆ ಮರ್ಬುಪರ್ಬಿತ್ತಾಗಳ್ (ಲೀಲಾವ. ೩-೯) : ಕಾರಿರುಳ ತರಳತಾರಗೆಗೋರಗೆಯೆನೆ ಕುರುಳೊಳೆಸೆಯೆ ಮಲ್ಲಿಗೆ ಮಿಗೆ ನೀಹಾರಕರವದನೆ ಮದನಾಕಾರಮನೋರಮಣನಂಕದೊಳ್ ಕುಳ್ಳಿರ್ದಳ್ (ರಾಜಶೇ. ೪-೧೬) ; ರಾಹು ತೊರೆದೊಡನೆ ಶಶಿಯಂ ರೋಹಿಣಿ ಬಳಿವೊರ್ದಿದಂತೆ . . . ನೀಹಾರಕರಾಸ್ಯೆ ಸೇರ್ದೆಯೆನ್ನಯ ಬಳಿಯಂ (ಶಾಕುಂತ. ೧೦೯-೧೮೫).
[ನೀಹಾರ + ಕರ$_3$]

**ನೀಹಾರಕಾಲ** (ನಾ). ಹಿಮಗಾಲ ; ಚಳಿಗಾಲ : ಅನುದಿನ ಫಲಾಹಾರನೇಮದಿಂ ತನುವ ದಂಡನೆಗೈವ ಸುಕುಮಾರ ನೀಹಾರಕಾಲದೊಳಗೆಂತಿರ್ದನೊ (ವೆಂಕಾರಾ. ೩-೮-೧೩). [ನೀಹಾರ + ಕಾಲ]

**ನೀಹಾರಾಗ** (ನಾ). ಹಿಮದಿಂದ ಕೂಡಿರುವ ಪರ್ವತ ; ಹಿಮಾಲಯ : ಭಾರವಂ ನೆಲಕಂ ಪಿಂಗಿಸಿ ಕೀರ್ತಿಯಿಂದಿಱಿಸಿ ನೀಹಾರಾಗಮುಂ ರಾಗಮುಂ ಸಲೆ ಮಾಡ್ಕುಂ ನಮಗಚ್ಯುತಂ (ಜಗವಿ. ೧೫-೧೬).
[ನೀಹಾರ + ಅಗ$_2$]

**ನೀಹಾರಿ** (ನಾ). (?) : ನೀಹಾರಿಯಾಗಿ ಪಾಂಡಿತ್ಯದಿಂ ನಯವಾಗಿ ಬೇಹುನುಡಿಯುಳ್ಳಾತನೇ ಗುಣಜ್ಞಂ ಕಣಾ (ವೀಶೈಪು. ೪-೨೩-೨೩). "ಕಾಂತಿವಂತ" (ವೀಶೈಪು. ಟೀಕೆ). [ ? ]

**ನೀಹಾರಿಕೆ** (ನಾ). = ನೀಹಾರಕ : ಚಂದ್ರ ನಕ್ಷತ್ರ ನೀಹಾರಿಕಾರಜೋಮೇಘದಗ್ನಿಮಂಡಲವೊ (ಶ್ರೀರಾಮಾ. ೩೯೯-೧೦೦೩) ; ಅಣುವಿನಲ್ಲಿರುವ ಅಗಾಧವಾದ ಶಕ್ತಿಯ ಸಂಶೋಧನೆಯಾಗಲೀ ಗ್ರಹ ನಕ್ಷತ್ರ ನೀಹಾರಿಕೆಗಳ ದೂರ, ಗಾತ್ರಗಳ ಅಳತೆ ತೂಕಗಳ ನಿರ್ಣಾಯಕ ಚರ್ಚೆಗಳಾಗಲೀ ಸಾಹಿತಿಯ ಸೃಷ್ಟಿಪ್ರತಿಭೆಗೆ ಪೂರಕವಾಗುವುದಿಲ್ಲ (ಸುವರ್ಣ. ೨೦೨) ; ಈಚೆಗೆ ರೇಡಿಯೋವಿನಂತೆ ಟೆಲಿವಿಷನ್ ಕಾರ್ಯಕ್ರಮವೂ ಪ್ರಚಾರಕ್ಕೆ ಬರುತ್ತಿದೆ . . . ಗ್ರಹ ತಾರೆ ನೀಹಾರಿಕೆಗಳ ದೃಶ್ಯಗಳನ್ನೂ ಈ ಮೂಲಕ ಪಡೆದುಕೊಳ್ಳುವ ಸಾಹಸ ಆರಂಭವಾಗಿದೆ (ಶಿಕ್ಷದ. ೫೯) ; ಬರುಗಣ್ಣಿಗೆ ಕಾಣದೆ ಯಂತ್ರದೃಷ್ಟಿಗೆ ಮಾತ್ರ ಗೋಚರವಾಗಿರುವ ತಾರೆ ನೀಹಾರಿಕೆಗಳಲ್ಲಿ ಭಯಂಕರ ಅನಲ ವಿಪ್ಲವಗಳಾಗುತ್ತಿರುತ್ತವೆ (ಕಾನೂರು. ೧೩೭). **[ಸಂ.** ನೀಹಾರಿಕಾ]

**ನೀಳ್**, ನೀಳು (ಕ್ರಿ). **೧.** ಉದ್ದವಾಗು ; ನಿಡಿದಾಗು ; ನೀಳವಾಗು : "ನೀಳ್ — ಪ್ರಸಾರಣೇ (ಉದ್ದವಾಗು)" (ಶಮಧಾ) ; ವದನಕ್ಕೆಮ್ಮ ತಳಕ್ಕೆ ನೀಳ್ದ ನಗೆಗಣ್ಗಂ ತಾಂ ಗಡಂ ತನ್ನ ನೀಳ್ದ ದಳಂಗಳ್ ಗಡ ಪೋಲ್ವೆಯೆಂಬ ಸೆಣಸಿಂ ಮಿಕ್ಕೇವದಿಂದಿಕ್ಕಿ ಮೆಟ್ಟಿದರೀ ಕಾಂತೆಯರೀ ಸರೋರುಹದಲವ್ರಾತಂಗಳಂತಪ್ಪದೆಂಬುದನೆಂಬನ್ನೆಗಮೇಂ

ಬೆಡಂಗೆಸೆದುದೋ ದೇವಾಂಗನಾನರ್ತನಂ (ಆದಿಪು. ೭-೫೫) ; ನೀಳ್ದಿರ್ದ ಸೆಱಂಗು ಚಿತ್ರಿಸಿದ ಹಂಸಾನೀಕದಿಂ ಚೆಲ್ವನಾಳ್ದಿರೆ (ಕಾದಂಪೂ. ೨೮) ; ದಾಂಗುಡಿಯಿಟ್ಟು ಬಾಸೆ ನೀಳ್ದೆಸೆದುದು (ಪಂಚತಂ. ೧೨೪-೧೧) ; ಭೃಂಗಾವಳಿ ಸುಯ್ಗೆ ಸಾರ್ವ ತೆಱದಿಂ ಸುಕರ್ಣಂಗುರುಳ್ಮಾಲೆ ನೀಳ್ದುವು (ಮಲ್ಲಿಪು. ೪-೯೮) ; ನನೆಯುಂಬಿನ ಪೊದೆಯುಂ ಪೂವಿನ ಗೊಂಚಲ್ ನೀಳ್ದ ಕರ್ವುವಿಲ್ಲಂ ಸೆಳೆಗೊಂಬನುಕರಿಸೆ ಬಾಲಚೂತಂ ನೆನೆಯಿಸಿದುದು ಚಿತ್ತಭವನ ಕೇಳೀವನಂ (ಚಂದ್ರಪು. ೭-೪೪) ; ಬೆಳೆದು ಕವಲಿಱಿದು ನೀಳ್ದ ಪ್ರವಾಳಜಾಳದಂತೆ ಬೆಂಬಳಿವಿಡಿದಿಳಿದ ಕೆಂಜೆಡೆಗಳಿಂ . . . ಒಪ್ಪಿ (ಬಸರ. ೪-೧೦). **೨. ಚಾಚು ; ನೀಡು :** ತಳಿರ್ಗಳ ತೊಂಗಲಿಂದಮಲರೋಳಿಗಳಲ್ಲುಗುವಂತೆ ಕೆಂದಳಂಗಳಿನುದಿರ್ವಕ್ಕಿಗಳ್ ನಿವಿರ್ದ ದಾಂಗುಡಿಯಂತಿರೆ ನೀಳ್ದ ತೋಳ್ಗಳುಚ್ಚಲದಲಿ ಗಾನದಂತೆ ಮಣಿಕಂಕಣನಾದಮೊಱಲ್ಚೆ ಸೇಸೆಯುಂ ತಳಿದರನಂಗಜಂಗಮಲತಾಂಗಿಯರೆಂದು ರಾಗದಿಂ (ಆದಿಪು. ೪-೫೯) ; ಬಿತ್ತರದಿಂದನ್ಯರ ಸಂಪತ್ತಿನ ವಸಿತೆಯರ ನೀಳ್ದ ನಿಡಿದೋಳ್ ಕಿಱಿಯಂದೆತ್ತಿದ ತೋಳೆಂದಿರ್ಪಂ (ಧರ್ಮಾಮೃ. ೧೩-೧೮೪) ; ಕುಸುಮರಜದ ಕೆಂಪಂ ತಾಳ್ದಿ ನೀಳ್ದೇಱಿಯಂ ಲಂಘಿಸುವ ತೆರೆಯ ಜಿಹ್ವಾಡಂಬರಂ ಪೊಣ್ಮೆ . . . ರಾಕ್ಷಸಿಯ ತೆಱೆದ ಬಾಯುಂತಿರ್ದುದಾ ಪದ್ಮಸದ್ಮಂ (ಚಂದ್ರಪು. ೫-೪೧) ; ನಿವಿರ್ದಂಗಂ ನೀಳ್ದ ಮುಂಗಾಲುಡುಗಿ ನಡೆವ ಪಿಂಗಾಲ್ (ಗಿರಿಕ. ೧-೯೫) ; ನೀಳ್ದ ಕುಸುಮಮಂಜರಿ ದಂತವಳವಟ್ಟದರ್ಕೆಱಗುವಳಿಮಾಲೆ ಬರಿಕಯ್ಮವಱ ಝಂಕೃತಿಯೆ ಬೃಂಹಿತಂ (ಪದ್ಮರಾ. ೮-೩೦). **೩. ವ್ಯಾಪಿಸು ; ಹಬ್ಬು :** ಮಱೆಗೆವಂದರಂ ಕಾಯದೆ ನೀಳ್ದೊದವಿದ ಜಸಮನುಪಾರ್ಜಿಸಧಮನದೇತರ್ಕೆ ಬಾರ್ತೆ ಜೀವನ್ಮೃತಕಂ (ಆದಿಪು. ೧೨-೯೭) ; ನೀಳ್ದು ಪೊಣ್ಮುತ್ತುದಯಸಮಯದೊಳ್ ಶೋಣಸೂರ್ಯಾಂಶುಜಾಲಂ (ಕಾದಂಪೂ. ೧೪೨) ; ಉದಧಿಯನೆಯ್ದಿ ದಿಗ್ಗಜಮನೆಯ್ದಿ ಕುಲಾದ್ರಿಯನೆಯ್ದಿ ನೀಳ್ದು ನಿಲ್ವುದು ಜಸಮಿತ್ತಗಿತ್ತ ಧನಮೇನದು ನಿಲ್ವುದೆ (ಗದಾಯು. ೧-೩೫); ನಿಸಿತಾಸ್ತ್ರಘಾತದಿಂ ಸತ್ತ ಭೂಪರ ಪೆಂಡಿರ್ ಬಿಸುಸುಯ್ಯೆ ನೀಳ್ವ ಶಿಖಿತಂನಂ ಮುಟ್ಟೆ (ಎಕ. VIII, ಸಾಗರ. ೧೦೯-೩೫ ; 1042) ; ತಾರಕಾಪಥಂ ಸ್ಫುಟಯಿಸಿದತ್ತೋ ಪೇೞ್ನಿಸಿ ಮಾರ್ದನಿ ನೀಳ್ದುದು ದಿಕ್ತಟಂಗಳೊಳ್ (ಪರ್ಶಪು. ೩-೪೩) ; ಕೋಪಂ ನಾಡೆಯುಮೊತ್ತರಿಸಿ ನೀಳ್ದು ನಿಟಿಲೇಕ್ಷಣದೊಳ್ ಕೂಡೆ ಬಳೆಬಳೆದು . . . ಕುದಿದಾಗಳ್ (ಗಿರಿಕ. ೮-೪೬). **೪. ದೀರ್ಘವಾಗು :** ಕಾರಕಮಂ ಕ್ರಿಯೆಯುಮನಱಿದೋರಂತಿರೆ ಮುಂ ತಗುಳ್ಚಿ ಮುಕ್ತಕಪದದೊಳ್ ಸಾರಂ ಸಮಾಸಪದದುಚ್ಚಾರಣೆಯಂ ನೀಳ್ದು ನಿಲೆ ತಗುಳ್ಚುಗೆ ಕೃತಿಯೊಳ್ (ಕವಿರಾ. ೨-೮೭). **೫. ಮಹತ್ವವನ್ನು ಪಡೆ; ಘನತೆಯನ್ನು ಪಡೆ :** ನೀಳ್ದ ಗೂಢಾರ್ಥವೊಂದುಂಟು ಅಳ್ದನ ಕೂಡೆ ಯೋಚಿಸ ಬಂದೆಂ (ಭರತೇ. ೧೦-೯೬). **೬. ಉದ್ದಮಾಡು ; ಎಳೆ :** ಅದಟನಿಂ ನೀಳ್ವನಾ ಶೇಷನಂ ತಾಂ ಹೆಡೆಯಿಂ ಬಾಳಂಬರಂ (ಎಕ. VIII, ಸೊರಬ. ೧೩೮-೩೧ ; ಸು. 1145). **೭. ಮುನ್ನುಗ್ಗು ; ಮುಂಬರಿ :** ನೀಳ್ದೊದವಿದರುನ್ನತಮೂರ್ತಿಗಳೊದವಿ ಗದಾಯುದ್ಧದೆ ಭೀಮ ಭುಜಗಧ್ವಜರುಂ (ಗದಾಯು. ೮-೬) ; ಗಾಂಪಿನೊಳನ್ಯಪುಷ್ಪದೊಳು ಮೇಳಿಸಿ ನೀಳ್ದುದಿದೇಕೆ ಕಂಪಿನೊಳ್ ಪೊಂಪುೞಿವೋಗುತಿರ್ದಮಳವಕ್ತ್ರಸರೋಜಮೆ ಸಾಲ್ಗುಂ (ಧರ್ಮಾಮೃ. ೭-೨೦೧). **೮. ಬಹಳವಾಗು ; ಹೆಚ್ಚಾಗು :** ಸುಂದರನಂದನಕ್ಕುಳುರೆ ಮುಂ ತನ್ನರ್ಚಿಗಳ್ ಬಂದು ಮೊಕ್ಕಳಮೆತ್ತಂ ಸುರಿಯುತ್ತುಮಿರ್ಪ ರಸಮಂ ಮುಂ ಪೀರ್ದುಕೊಂಡಂ ಮನಂಗೊಳೆ ಸಪ್ತಾರ್ಚಿ ಪೊದೞ್ದು ನೀಳ್ದೊಸಗೆಯಿಂದಾಪೋಶನಂಗೊಳ್ವವೋಲ್ (ಪಂಪಭಾ. ೫-೮೭) ; ಅಕ್ಷಿಪುಟಾಂತರದಿಂದಮೇಕೆ ಪೇೞ್ ಪಸರಿಸಿ ನೀಳ್ದು ಪೊಣ್ಮಿದುವು ಕಣ್ಬನಿಗಳ್ (ಕಾದಂಪೂ. ೩೩೧) ; ನೀಳ್ದುರಿಯೆ ಮೇಣ್ ಗೃಹತೋರಣ ಕೇತು ದೇವತಾವಸಥಮದಗ್ನಿಯಿಲ್ಲದುರಿಯುತ್ತಿರೆ . . . ಮುಂಪಱಿದಿಂಗಳಿಗಕ್ಕುಮಾಹವಂ (ಲೋಕೋಪ. ೪-೪೫) ; ಕೂಡುವ ನಲ್ಲರ ನೀಳ್ದ ಸೇದೆಯಂ ಸೆಳೆದೆಲರಲ್ಲಿ ತೀಡುವುದು ಮೆಲ್ಲನೆ (ಕಬ್ಬಿಕಾ. ೩೩). **೯. ನೀಡು ; ಕೊಡು :** "ನೀಳ್ತನೆನಲಿತ್ತವಂ" (ಸಂಜೀಪ. ೨೫) ; ನೀಳ್ದಂ ಮೂವತ್ತುಕಾಲಂ ಪವಣಿಸಿದುಲಿಯಾ ಗೆಜ್ಜೆಯಂ ಕಾಲ್ಗೆ ನಿನ್ನ ಜೀಯೆನ್ನೀ ಕಾಣ್ಕೆದಾಳ್ತಿಯೆ ! (ಗೀವಿಂ. vii, ಸಮರ್ಪಣ). **೧೦. ಮೇಲಾಗು ; ಔನ್ನತ್ಯವನ್ನು ಪಡೆ:** ಎನಗಾಳ್ದಂ ತಾನೆ ನೀಳ್ದಂ ಕರಿಪತಿತನುವಂ ನೀಳ್ದನಿಂತೊಪ್ಪೆ ಬಾಳ್ದಂ (ಪಂಪಾಶ. ೮೦) ; ನೆಗೆದಯ್ ಲೋಕದ ನೀಳ್ದ ತುತ್ತತುದಿಯಂ ನೀಂ (ಶಮದ. ೬. ೨೨೯). **ನೀಳು : ೭.** ದಿಗ್ಗಜವರ್ತ್ಮ x x x ಕಟ್ಟಲು ಕೆತ್ತಿದುತ್ತುಂಗಹಸ್ತವನಾಂತನ್ಯಬಳಕ್ಕೆದೋರ್ಪ್ಪ ನೆವದಿಂ ಕೋದಣ್ಡದತ್ತಣ್ಗೆ ನೀಳುವ ನೀನಟಾಯೆ ಗಗನಾತ್ಮಕರ×ಂ ಸಂಗ್ರಾಮರಂಗಾಗ್ರದೊಳು (ಎಕ. VII, ಶಿವಮೊ. ೫೭-೫೧ ; 1115).

**ನೀಳ್ದಸಳ್** = ಉದ್ದವಾದ ದಳ,—ಪಕಳೆ : ನಱುಗಂಪಡರಿದ ನೀಳ್ದಸಳ್ಗಳಿನೊಪ್ಪುವ ಸಂಪಗೆಯಿಂದುದ್ಭಟನರ್ಚಿಸಿದಂ (ಉದ್ಭದೇ. ೬-೧೪). **ನೀಳ್ದೊಡಲ್** = ನಿಡಿದಾದ ದೇಹ, —ಶರೀರ : ನಡೆಮಿಡುಕದ ಚಮರದ ನೀಳ್ದೊಡಲೆತ್ತಿದ ಕಿವಿಯ ತಮ್ಮ ಪದರಜಮುಂ ಪಾಯ್ದೊಡೆ ಸಿಲ್ಕದಶ್ವಗಳ್ ಧೀಂಕಿಡುವುವು ತನ್ಮೃಗಜವಾಸಹಿಷ್ಣುಗಳೆಂಬೋಲ್ (ಶಾಕುಂತ. ೪-೮). **ನೀಳ್ದೊರಗು** = ಮೈಚಾಚಿ ಮಲಗು : ಸುಖಾಸನದ ಮೂಡಾವೆಗಳಲ್ಲಿ ಸಿಂಗಾರಮ್ಮನು ನೀಳ್ದೊರಗಿರುವಳು (ಬೆಟ್ಟಅ. ೧೦-೧).

[**ದೇ.॥ ತಮಿ.** ನೀಳ್, ನೀಳಿ ; **ಮಲ.** ನೀಳು ; **ತೊದ.** ನೀಳ್ ; **ತೆಲು.** ನೀಲುಗು ]

**ನೀಳ$_1$** (ನಾ). **೧.** ಉದ್ದವಾಗಿರುವಿಕೆ ; ನಿಡಿದು ; ದೀರ್ಘತೆ : "ದೀರ್ಘಮಾಯತಂ ನೀಳಕ್ಕೆ ಪೆಸರೆನಿಕ್ಕುಂ" (ಮಂಗರಾ. ೧೩೨-೨೪) ; ತೋಳ ನೀಳದ ಕೆಂದಳಿರಿಂದಂ ಸಂದಣಿಸಿರ್ದ ಮದಾಳಿಯಿಂದೋಳದಿಂ ಮಳಯಾನಿಳಲೀಲಾಂದೋಳದಿನೊಪ್ಪೆ ಮನೋಭವಂ (ಆದಿಪು. ೩-೩೦) ; ಲವಣಜಳಧಿ ಬಳಸಿದಂತೆ ಬಳಸಿದಗಟ ನೀಳದಿಂದುದಗ್ರಕನಕಶಾಳದಿಂ (ಪಂಪಭಾ. ೧-೫೮ ರಗಳೆ) ; ನಾಲ್ವತ್ತೆಣ್ಗಾವುದದ ನೀಳದ ಮೂವತ್ತಾಱು ಗಾವುದದಗಲದ ಬೀಡಂ ಬಿಡಿಸಿ (ಚಾವುಂಪು. ೪೧); ತದ್ದ್ವೈತ್ಯಾಧಮಂ ನೀಳದಿಂ ಬಿರಿದಂ ಭೂತಗಣಕ್ಕಮುಂಡಜಗಣಕ್ಕಂ ಪಚ್ಚುಕೊಟ್ಟಂದದಿಂ (ಜಗವಿ. ೫-೪೬) ; ಅಂದು ಮೊದಲಾಗಿ ನೀಳದ ಬೊಟ್ಟು ಸಲ್ಲಲ್ಲಿ ಅಂದು ಮೊದಲಾಗಿ ವೃಷ್ಣವರೆಂಬರಿಲ್ಲಲ್ಲಿ (ಇಱಿ?ತ. ದೇ. ೧೧೦-೨೩) ; ರಸನೆ ನೀಳಕ್ಕೆ ಸೀಳ್ವುದು ನುಡಿದಡಿಂತಹ ಭಾಷೆಯಂ (ಬಸಪು. ೩೫-೪೯). **೨. ವಿಸ್ತಾರ; ಹರವು:** ಮೂವತ್ತು ಕಂಣ ನೀಳದ ನಿವೇಶನಂ (ಹೈಅಸಿ. ೭-೩೯ ; 1056). **೩. ಎತ್ತರ ; ಔನ್ನತ್ಯ :** ಮುಗಿಲಂ ಮುಟ್ಟಿದುದಱ ನೀಳಮುಂ ಮಕ್ಕಳ್ಪೆತ್ತಳ ಮದುವೆಯಂ . . . ಬೆಸಗೊಂಬವನ ಬೆಳ್ತನದಂತೆ (ಧರ್ಮಾಮೃ. ೨-೧೩೩). **೪. ನೇರ (?) :** ಹಗಱುಗಳನಿಕ್ಕಿ ಬಿಗಿದಡೆ ನಾಯ ಬಾಲವದು ಬಳಕ ನೀಳಕೆ ಸಸಿನವಹುದೆ (ಬಸಪು. ೬೦-೪೮). **೫. (?) :** ಹತ್ತು ನೀಳ ಹದಿನಯ್ದು ಕೆಯಿ (ಜೊಂಕಶಾ. ೧೯೩೯, ಹಾನಗಲ್. ೧೧೪-೫೩; ?).

**ನೀಳದು** = ಉದ್ದವಾದುದು ; ನಿಡಿದಾದುದು : ನೀಳದರ ನೆರಳೂ ಬೋಳಿಯ ಮಾತೂ ಗಾಳಿಯ ಹಾಗೆ (ಗಾದೆ) ; ನೀಳದರ ಮೇಲೆ ನಿಂತರೆ ಗಾಳಿಗೇನು ? (ಗಾದೆ).

[**ದೇ.॥ ತಮಿ. ಮಲ. ಕೊಡ.** ನೀಳ]

**ನೀಳ$_2$** 'ನೀಲ' ನೋ.

**ನೀಳಂಬಿಸು** (ಕ್ರಿ). ನಿಡಿದಾಗಿಸು ; ಬೆಳೆಸು ; ದೀರ್ಘಗೊಳಿಸು : ಬಿಚ್ಚನೆ ಬಿಟ್ಟು ಕಣ್ಣನೆರಡುಂ ನೀಳಂಬಿಸುತ್ತೊಳ್ದುಡಂಬರದೊಳ್ ನಿಂದು ಗಜಪ್ರಿಯಾಂಬರಚರರ್ ಜೀಯಯ್ಯ ಭಾಪ್ಪೆಂದು ಜೀಂಕರಿಪನ್ನಂ ವನದಂತಿ ಪೋರ್ವುದು (ಶಾಂತಿಪು. ೨-೧೧೦). [<ನೀಳ+-ಇಸು$_3$]

**ನೀಳಕಾಯ** (ನಾ). ೧. ದೊಡ್ಡ ದೇಹ ; ಮಹಾಕಾಯ. ೨. ದೊಡ್ಡ ಶರೀರವುಳ್ಳವನು ; ಮಹಾದೇಹವುಳ್ಳವನು ; ಅವರು ಯಮದೂತರಂತೆ, ನೀಲಕಾಯರೂ, ನೀಳಕಾಯರೂ ಆಗಿದ್ದರು (ನಾಗಶಾ. ೪). [ನೀಳ$_1$ + ಕಾಯ]

**ನೀಳಕುಂತಳ** 'ನೀಲಕುಂತಲ' ನೋ.

**ನೀಳಕುರ್ಚಿ** (ನಾ). ಒರಗಿ ಕುಳಿತುಕೊಳ್ಳಲು ಅನುಕೂಲವಾದ ಉದ್ದ ಕುರ್ಚಿ ; ಆರಾಮಕುರ್ಚಿ : ನನ್ನ ಆ ಎರಡು ನೀಳಕುರ್ಚಿ ಮತ್ತು ಜೋಂಡ ಇವುಗಳ ವಿಷಯವನ್ನು ಒಂದೊಂದು ಸಲ ಜ್ಞಾಪಿಸಿಕೊಳ್ಳುತ್ತೇನೆ (ನಿಬಂಧ. II, ೧೩೭). [ನೀಳ$_1$ + ಕುರ್ಚಿ$_1$]

**ನೀಳಕೆಯ್** (ನಾ). ಉದ್ದವಾದ ಕೈ : ತೂಲಿ ಇದ ಕೋ ಎನುತ ಹಾಯ್ಕಲು ಮೇಲೆ ಬೀಳದ ಹಾಂಗೆ ಲಿಂಗವು ನೀಳಕೆಯ್[ಪಾಠಾಂ. ಕೈ]ಗಳನೆತ್ತಿ ಕಲ್ಲಂ ತೊಲಗಿಸುತ (ಬಸವು. ೫೦-೬೫). [ನೀಳ$_1$ + ಕೆಯ್$_2$]

**ನೀಳಗಳ** 'ನೀಲಗಳ' ನೋ.

**ನೀಳಗಿರಿ** 'ನೀಲಗಿರಿ' ನೋ.

**ನೀಳಘನಾಘನ** (ನಾ). ಕಪ್ಪುಮೋಡ ; ನೀಲಮೇಘ : ಪ್ರಭವಂ ನೀಳಘನಾಘನಂ ಸಮುಪಸ್ಥಿತ್ಯುರ್ವೀತಳಂ ಮಿಂಚೆ ಸಪ್ರಭರೈತೋರಣಮಾಲಿಕಲ್ ಸುರಿವ ಮಂದಾರಪ್ರಸೂನಂಗಳಾಗಭಿರಾಜನ್ನವಮೇಘಕಾಲಮೆನೆ ಬಂದಂ ದೇವದೇವಂ . . . ಕಱೆಯುತುಂ ಧರ್ಮಾಮೃತಾಸಾರಮಂ (ಚಂದ್ರಪು.೭-೫) ; ನೀಳಘನಾಘನಪ್ರತತಿಯಂ ನೆಱೆ ಪೊತ್ತಿರೆ ಮೆಯ್ಯ ಕಪ್ಪು . . . ಕಾರ್ಗಾಲದ ಮಾಟಿಕ್ಕೆಯಿಂದೆ ಶಬರಂ ನಡೆತಂದಿದಿರಾಗಿ ತಾಗಿದಂ (ಪುಣ್ಯಾಸ್ರ. ೫-೪೨). [ನೀಳ$_2$(=ನೀಲ) + ಘನಾಘನ]

**ನೀಳಚೇಳ** 'ನೀಲಚೇಲ' ನೋ.

**ನೀಳತೋಳ್**, ನೀಳತೋಳು (ನಾ). ಉದ್ದವಾದ ತೋಳು ; ದೀರ್ಘ ಬಾಹು : ತಂದೆಯೆನ್ನದೆ ಕಡುಮುಳಿದು ತನ್ನ ನೀಳತೋಳಲ[ಪಾಠಾಂ. ಳೋಳ]ಮರ್ದು ನಿಮಿರ್ದ ಕರಾಳಪರಶುವನೆತ್ತಿ ಲಿಂಗವನಾಳಿಗೊಂಡವನಡಿಗಳಂ ಕಡಿಖಂಡವಂ ಮಾಡಿ (ಬಸವು. ೫೮-೨೫). **ನೀಳತೋಳು :** ಅವನು . . . ಸಿಕ್ಕಲ್ಲಿ ನೀಳತೋಳು ಚಾಚುತ್ತಾನೆ (ದೀಪಹ. II, ೨೨೨). [ನೀಳ$_1$ + ತೋಳ್]

**ನೀಳತೋಳು** 'ನೀಳತೋಳ್' ನೋ.

**ನೀಳನಗ** (ನಾ). ಕಪ್ಪುಬಣ್ಣದ ಬೆಟ್ಟ : ಶರದಭ್ರಂಗಳ್ತಱಿಸ್ತಾವರಿಸಿರ್ದುವು ನೀಳನಗಮನೆನೆ ಮದಜಳನಿರ್ಝರವಾರಣದಿಂ ಸೊದೆವಟಿಇದರಮನೆಯುಂ ಬಳಸಿದಾನೆಸಾಲೆಗಳೆಸೆಗುಂ (ಮಲ್ಲಿಪು. ೨-೬೫) ; ನೀಳನಗಮೆನಿಸಿ ಕಾಂಚನಶೈಳಂ ಮೊದಲಲ್ಲಿ ಜಿನತನುಪ್ರಭೆಯಿಂದಂ ಕೈಳಾಸಮೆನಿಸಿತೊದವಿದ ಪಾಲಿಂ ಜಿನಜನನಸವನಮೇನಚ್ಚರಿಯೋ (ಪಾರ್ಶ್ವಪು. ೧೪-೮೩). [ನೀಳ$_2$ (=ನೀಲ) + ನಗ$_4$]

**ನೀಳನಾಲಗೆ,** ನೀಳನಾಲಿಗೆ (ನಾ). ಉದ್ದವಾದ ನಾಲಿಗೆ ; ಚಾಚಿದ ನಾಲಿಗೆ : ನೀಳನಾಲ[ಪಾಠಾಂ. ಲಿ]ಗೆಯಿಂದ ಮಾಲಿಯ ಮೇಲೆ ತಿರುಹುತ್ತೊರೆದೊರೆದು ಶಿವನಾಳು ನೋಡುವನು (ಬಸವು. ೧೮-೬೦). **ನೀಳನಾಲಿಗೆ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ನೀಳ$_1$ + ನಾಲಗೆ]

**ನೀಳನಾಲಿಗೆ** 'ನೀಳನಾಲಗೆ' ನೋ.

**ನೀಳನೀರೇಜ** (ನಾ). ನೀಲೋತ್ಪಲ ; ಕನ್ನೈದಿಲೆ : ರಾಜಿಸುತಿರ್ದುವಂದರುಣಪಂಕಜಪಾಂಡುಪಯೋಜನೀಳನೀರೇಜಕದಂಬಕಂಗಳ ಪೊದಟ್ಟುಲಿವಂಚೆಯ ಮತ್ತಷಟ್ಪದೀರಾಜಿಯ ವರ್ಣಸಂಕರತೆಯಿಂದೆ ಕೊಳಂಗಳನಂಗರಾಜನೀ ರಾಜಸ ಲೀಲೆಗೆಂದು ರತಿ ತೀವಿದ ಬಣ್ಣವುರಂಗಳಂದದಿಂ (ಜಗವಿ. ೪-೭೫). [ನೀಳ$_2$(=ನೀಲ) + ನೀರೇಜ]

**ನೀಳಪಟ** 'ನೀಲಪಟ' ನೋ.

**ನೀಳಪಯಣ** (ನಾ). ದೀರ್ಘವಾದ ಪ್ರಯಾಣ : ಅಚ್ಚರಿಯ ಬಚ್ಚಿಟ್ಟು ಹುಡುಕ ಹಚ್ಚಿದೆ ಬಾಳ ನೀಳಪಯಣದ ಹಾದಿ (ನೆಲಮು. ೬೬-೧೦). [ನೀಳ$_1$ + ಪಯಣ]

**ನೀಳಬೊಟ್ಟು** (ನಾ). ಉದ್ದವಾದ ನಾಮ ; ಊರ್ಧ್ವಪುಂಡ್ರ : ದ್ವಿಜರೊಮ್ಮೆ ಮಱೆದು ನೀಳಬೊಟ್ಟನಿಟ್ಟರಾದಡೆ ಅದಱ ಪರಿಯಲೇ ಅಸಿಯ ಗರಗಸವ ಮಾಡಿ ಸೀಳುವರೆಂದುದು ನೋಡಾ (ಸರ್ವಪ. ೨೧೦-೯೪೬) ; ಕೇಳಿಯೊಳು ದ್ವಿಜನೊಮ್ಮೆ ನೀಳಬೊಟ್ಟಂ ಮಱೆದು ತಾಳಿದೊಡೆ ಮುಂದೆ ಯಮದೂತರಲ್ಲಿ ಹೋಳಿ ಕಳೆವರ್ತನುವ (ಸಾನಂಚ. ೨-೧೫೧). [ನೀಳ$_1$ + ಬೊಟ್ಟು$_1$]

**ನೀಳಮಣಿ** 'ನೀಲಮಣಿ' ನೋ.

**ನೀಳಮಾರು** (ನಾ). ದೊಡ್ಡ ಮಾರಿನ ಅಳತೆ: ತೆಂಕಣ ನಿಟ್ಟು ೧ಕ್ಕೆ ೩೦೭ ನೀಳಮಾರೂ ೪೬೨ ತೆನೆಗಳೂ ××× ಈ ಮೇರೆಗೆ ಅಳತೆಮಾಡಿ ತ್ರಿನಯನೇಶ್ವರಸ್ವಾಮಿ ದೇವಸ್ಥಾನವನ್ನು ಒಳಕ್ಕೆ ಸೇರಿಸಿಕೊಂಡು ಕಾಮಗಾರಿ ಆಗುವಷ್ಟರಲ್ಲಿಯೇ ಚಾಮರಾಜ ಒಡೆಯರವರಿಗೆ ಪಟ್ಟವಾಯಿತು (ಚಾಮವಂ. ೮೮). [ನೀಳ$_1$ + ಮಾರು$_3$(<ಮಾರ್)]

**ನೀಳಮೇಘಶ್ಯಾಮ** 'ನೀಲಮೇಘಶ್ಯಾಮ' ನೋ.

**ನೀಳರತ್ನ** 'ನೀಲರತ್ನ' ನೋ.

**ನೀಳಲ್** (ನಾ). ಒಂದು ಬಗೆಯ ಹೂವು (?) : ನೀಳಲ ಕಂಪನೊಟ್ಟಿ ನಳಿನಂಗಳನಳ್ಳಿಸಿ ಬೆಳ್ಳುಗಿಲ್ಗಳಂ ತೂಳಮನೆತ್ತುವಂತೆಟಿಇದು . . . ತೀಡಿದುದು ಮೂಡಣ ಗಾಳಿ ಹಿಮಪ್ರದೇಶದೊಳ್ (ಲೀಲಾವ. ೯-೨). [?]

**ನೀಳಲೆ** (ನಾ). ನೇರವಾಗಿ ಹೋಗುವ (ಶಬ್ದದ) ತರಂಗ,—ಅಲೆ: ಅಲೆಗೆ ಕಾರಣವಾದ ಸ್ಪಂದನವು ಯಾವ ದಿಕ್ಕಿನ ಕಡೆಗೆ ಆಗುವುದೊ ಅಲೆಯ ಪ್ರಸಾರವೂ ಅದೇ ದಿಕ್ಕಿಗೆ ಆದರೆ ಅಂತಹ ಅಲೆಗಳನ್ನು ನೀಳಲೆ (Longitudanal wave)ಗಳೆಂದೂ . . . ಕರೆಯುತ್ತಾರೆ (ಭೌತವಿ. ೧೩೩). [ನೀಳ$_1$ + ಅಲೆ$_3$]

**ನೀಳಸರೋಜ** 'ನೀಲಸರೋಜ' ನೋ.

**ನೀಳಸರೋಜಮಾಳೆ** (ನಾ). ಕನ್ನೈದಿಲೆಗಳ ಹಾರ ; ನೀಲೋತ್ಪಲಗಳ ಮಾಲೆ : ಜರ್ವಿದ ಕಡೆಗಣ್ಣ ಜವ್ವಗಳೊ ಮೋದಿದ ನೀಳ[ಪಾಠಾಂ. ಲ]ಸರೋಜಮಾಳೆ[ಪಾಠಾಂ. ಲೆ]ಯಿಂದುದಿರ್ದ ಮದಂಗದೊಳ್ ತೊಡರ್ದು ತೋರ್ಪ ದಳಂಗಳೊ ಪೇಟಿಇಮಾಪುದೆಂಬುದನೆನೆ ಕಾದಿ ಮೋದಿದ ವಿನ್ನಾಣಮದಿಲ್ಲಿ ದಲಿಲ್ಲ ನಲ್ಲಳಾ (ಆದಿಪು. ೪-೧೦). [ನೀಳಸರೋಜ (=ನೀಲಸರೋಜ) + ಮಾಳೆ$_1$ (=ಮಾಲೆ)]

**ನೀಳಾಗ** (ನಾ). ಕಪ್ಪುಬಣ್ಣದ ಬೆಟ್ಟ : 'ನೀಳಾಗಾಗ್ರ' ಪರಾ. [ನೀಳ$_2$ (= ನೀಲ) + ಅಗ$_2$]

**ನೀಳಾಗಾಗ್ರ** (ನಾ). ಕಪ್ಪುಬಣ್ಣದ ಬೆಟ್ಟದ ತುದಿ : ಬರ್ಹಿತಾಂ ನೀಳಾಗಾಗ್ರದೆ ನರ್ತಿಪಂತಿರೆ (ವಸ್ತುಪಂ.೩-೨೦). [ನೀಳಾಗ + ಅಗ್ರ$_1$]

**ನೀಳಾಚಳ** 'ನೀಲಾಚಲ' ನೋ.

**ನೀಳಾಚಳಚೂಳಿಕೆ** (ನಾ). = ನೀಳಾಗಾಗ್ರ : ಇದು ಮೇಲ್ಕೊಂಡ ದುಕೂಲಚೇಲಮೆನೆ ತದ್ಭೂಮಧ್ಯಮಾಂತೊಪ್ಪುತಿರ್ಪುದು ನೀಳಾಚಳ

ಚೂಳಿಕಾವರಸರಃಸಂಜಾತೆಯಂ ಕಂಜಕೌಮುದಸೌಗಂಧ್ಯ ಸಮೇತೆಯಂ . . . ಸೀತೆಯಂ (ಪುಷ್ಪಪು. ೨-೭).
[ನೀಳಾಚಳ ( = ನೀಲಾಚಲ) + ಚೂಳಿಕೆ ( = ಚೂಲಿಕೆ)]

**ನೀಳಾದ್ರಿ** 'ನೀಲಾದ್ರಿ' ನೋ.

**ನೀಳಾಬ್ಜ** 'ನೀಲಾಬ್ಜ' ನೋ.

**ನೀಳಾಬ್ಜವನ** (ನಾ). ಕನ್ನೈದಿಲೆಗಳ ಗುಂಪು ; ನೀಲೋತ್ಪಲಗಳ ಸಮೂಹ : ಮುಕುಳಭಾವದೊಳಿನಿಸಂ ಪೊರೆದುದು ನೀಳಾಬ್ಜವನಂ ನೆರೆದುದು ಚಕ್ರಾಹ್ವಯದ್ವಯಂ ದಿನಮುಖದೊಳ್ (ಚಂದ್ರಪು.೮-೧೦೦).
[ನೀಳಾಬ್ಜ ( = ನೀಲಾಬ್ಜ) + ವನ]

**ನೀಳಾಭ್ರ** 'ನೀಲಾಭ್ರ' ನೋ.

**ನೀಳಾಭ್ರಜಾಳ** (ನಾ). ನೀಲಮೇಘಗಳ ಸಮೂಹ,—ಗುಂಪು : ನೀಲಾಚಲಂಗಳ್ಕುಲಪರಿಭವಮಂ ಪಿಂಗಿಸಲ್ಕಾಕಲೋಕಾಧಿಪನೊಳ್ಮೇಲೆತ್ತಿ ಕಾದಲ್ನೆರೆದುವೊ ವಡವಾಭೀತಿಯಿಂ ಮೇಣ್ಮರಣ್ಬೊಕ್ಕಪುದೋ ನೀರಾಕರಂ ವ್ಯೋಮ(ಮ)ನೆನೆ ನೆಗೆದತ್ತಂದು ನೀಳಾಭ್ರಜಾಳಂ (ಮಲ್ಲಿಪು. ೮-೮೨) ; ನೀಳಾಭ್ರಜಾಳವೊರ್ಮೆಯೆ ಮೇಳಿಸಿ ಕಱಿಯಲ್ಕೆ (ಪುಣ್ಯಾಸ್ರ. ೧೦-೧೩). [ನೀಳಾಭ್ರ ( = ನೀಲಾಭ್ರ) + ಜಾಳ$_2$ ( = ಜಾಲ$_1$)]

**ನೀಳಾಶ್ಮ** 'ನೀಲಾಶ್ಮ' ನೋ.

**ನೀಳಾಳಕ** 'ನೀಲಾಲಕ' ನೋ.

**ನೀಳಾಳಕಿ** 'ನೀಲಾಲಕಿ' ನೋ.

**ನೀಳಾಳಕೆ** 'ನೀಲಾಳಕೆ' ನೋ.

**ನೀಳಿ** 'ನೀಲಿ' ನೋ.

**ನೀಳಿಕೆ**$_1$ (ನಾ). ಉದ್ದವಾಗಿರುವಿಕೆ ; ದೀರ್ಘತೆ : ಶೇಷಕಾಯದ ನಿಡಿದ ನಿ[ನೀ]ಳಿಕೆಯ ದೀರ್ಘತರಬಾಸೆವಾಲಂ ಮಿಳ್ಳಿರೆ . . . ಮೋಗಣ್ಣ ಜಿಗಿದು ಪಕ್ಷಂಗಳಿಂದಪ್ಪಳಿಸಿದಂ (ರಾಘವ. ೧೪-೧೦).
[ನೀಳ್ + - ಇಕೆ]

**ನೀಳಿಕೆ**$_2$ 'ನೀಲಿಕೆ' ನೋ.

**ನೀಳಿತು** (ನಾ). ಉದ್ದವಾದುದು ; ದೀರ್ಘವಾದುದು : "ದೀರ್ಘಂ, ಆಯತಂ—ಈ ೨ ನೀಳಿತು[ಪಾಠಾಂ. ನಿಳ್ಳಿತು (ನಿಡಿದು ?)]" (ಹಲಾಯು. ೧೨೪-೬೬). [< ನೀಳ್]

**ನೀಳು** 'ನೀಳ್' ನೋ.

**ನೀಳೇಕ್ಷು** (ನಾ). ಕಪ್ಪುಬಣ್ಣದ ಕಬ್ಬು ; ಕರಿಯ ಕಬ್ಬು : ನನೆಯಂಬಂ ನನೆಮಾಡಿ ಚಾಪಲತೆಯಂ ನೀಳೇಕ್ಷುಗಳ್ಗಿತ್ತು ಕೇತನಮಂ ಖ್ಯಾತಿಯೊಳಿಕ್ಕಿ ತೋಂಟಗವೆಸಂಗೆಯ್ದಂಗಜಂ (ಅನಂಪು. ೧೦-೨೨).
[ನೀಳ$_2$ ( = ನೀಲ) + ಇಕ್ಷು]

**ನೀಳೋತ್ಪಳ** 'ನೀಲೋತ್ಪಲ' ನೋ.

**ನೀಳೋತ್ಪಳದಳ** 'ನೀಲೋತ್ಪಲದಳ' ನೋ.

**ನೀಳೋರ್ಮಿ** (ನಾ). ಕರಿಯ ಬಣ್ಣದ ಅಲೆ : ಗೋದಾವರೀಸಂಗತೋ್ಯ[ರ್ಜಿ]ತ ವಾರಿಸಾರಯಮುನಾನೀಳೋರ್ಮಿ ನೀರಂ ಭುಜೋತ್ತುಂಗಂಗೀಗರಿಗಂಗೆ ಮಂಗಳ ಮಹಾಶ್ರೀಯಂ ಜಯಶ್ರೀಯುಮಂ (ಪಂಪಭಾ. ೧೪-೩೧). [ನೀಳ$_2$ ( = ನೀಲ) + ಊರ್ಮಿ$_2$]

**ನೀಳ್ಕರಿಸು**$_1$ 'ನೀಟ್ಕರಿಸು' ನೋ.

**ನೀಳ್ಕರಿಸು**$_2$ 'ನೀಕರಿಸು' ನೋ.

**ನೀಳ್ಕು,** ನಿಲಕು, ನಿಲಿಕು, ನಿಲುಕು$_1$, ನಿಲ್ಕು, ನಿಳ್ಕು (ಕ್ರಿ). ೧. ಕೈ ಚಾಚಿ ಹಿಡಿ ; ಎಟುಕಿಸಿಕೊಳ್ಳು : ನಿಡುದೋಳ್ ನೀಳ್ದುವು ನೀಳ್ಕಲುದ್ಧೃತ ಸಿತಚ್ಛತ್ರಂಗಳಂ (ಮಲ್ಲಿಪು. ೪-೧೩೯) : ನನೆಗೊಂಬಂ ನೀಳ್ಕಿ ಚಂದ್ರಾತಪಮೆ ಪುದಿದುದೆಂಬನ್ನೆಗಂ ನೋಡಿ ಚಂದ್ರಾನನೆ ಪೂವಂ ಲೀಲೆಯಿಂದಂ ತಿಱಿಯೆ (ಮಲ್ಲಿಪು. ೬-೭೬) ; ಸ್ವರ್ಗಫಲಮಂ ಸ್ವಕೀಯ ಭುಜಾಗ್ರದಿ ನೀಳ್ಕಿ ತಳೆದುಕೊಂಡಪನೀತಂ ನಿಗ್ರಹದಿಂದೆನೆ ಗಹನಾಂತರ್ಗತನೆಸೆದಿರ್ದನೂರ್ಧ್ವಬಾಹುವೊಳೊರ್ವಂ (ಮಲ್ಲಕಾ. ೩-೯೮). ೨. ದೊರಕು ; ಸಿಗು ; ಹಿಡಿತಕ್ಕೆ ಬರು ; ಸಾಧ್ಯವಾಗು : ಕೋಣೆಯೊಳ್ಪಟ್ಟ ನೇಲ್ವ ನೆಲವಿನೊಳ್ಪೊಸರ್ಗಂದಲಂ ಕಂಡು ಕಡೆಗೋಲ್ಗಂ ನೆಗಪಿ ಕುಟುಕುವಿನಂ ನೀಳ್ಕದಿರೆ (ಚಿಕಸಂ. ೬೯-೧೧). **ನಿಲಕು :** ೨. ನಾಲಿಗೆಗೆ ನಿಲಕದ ಹಾಗಿದ್ದರೆ (ಮುಂಬಯಿ. ೩-೩೧). ೩. (ಆಲಂ)ನೆನಪಿನ ಹಿಡಿತಕ್ಕೆ ಸಿಗು ; ಸ್ಮರಣೆಯಾಗು ; ಗೊತ್ತಾಗು ; ಅರಿವಾಗು : ಉಪನಿಷದ್ವಾಕ್ಯಗಳಿಂದೆ ಲಪನಚತುಷ್ಟಯ ನುತಿ ಮಾಡಲಱಿಯ ಮಜ್ಜಪ ಕೀರ್ತನೆ ನಿಲಕುವುದೆ (ಸೋಹತ. ೪೧-೬೦). **ನಿಲಿಕು :** ೩. ಕಾಯದಿಂದ ಕಂಡಹೆನೆಂದಡೆ ಬ್ರಹ್ಮನ ಹಂಗು . . . ಕಾಬ ಕಾಬಲ್ಲಿ ಕಂಡಹೆನೆಂದಡೆ ನಾಡೆಲ್ಲರ ಹಂಗು ಇವನೆಲ್ಲವನಲ್ಲಾ ಎಂದು ನಿಲಿಕಿ ನೋಡಿ ಕಂಡ (ಅಂಬಿವ. ಕ. ೩೮೧-೧). ೪. ಸೇರು ; ತಲಪು : ಜಲನಿಧಿಯಂ ಪಾಯ್ದೊರ್ವನೆ ನಿಲಿಕಿ[ಪಾಠಾಂ. ನಿ] ದಶಾನನನ ಪೊಟಲನಾ ಲಂಕೆಯನಾಕುಲಮಿಲ್ಲದಿಱಿದ (ಮ) ನಿಂದಂ (ಕವಿರಾ. ೩-೧೯೦). **ನಿಲುಕು**$_1$ **:** ೧. ಅಲರಿದಂಬುಜವೆಂದು ವದನಕೆ ನಿಲುಕಿ ತುಂಬಿಗಳೆಂದು ಕುರುಳಿಂಗಳುಕಿ ಕೈಗಳ ತೆಱಿದರತಿ ಮುಗದೆಯರು ಖಚರಿಯರು (ಕುಮ್ಯಾಆ. ೧೧-೨೮) ; ನಿಲುಕಿ ಪೂಗೊಯ್ವ ಲಲಿತಾಂಗಿಯರ ಬಟ್ಟ ಬಲ್ಮೊಲೆಗಳಂ ಪೊಱಲಾಱದಸಿಯ ಸೆಳೆನಡುವಿದು (ಜೈಮಿಭಾ. ೮-೧೯). ೨. ಕುಂಜರನು ಕೈಯಿಕ್ಕೆ ನಿಲುಕದೆ ಕಂಜವನವು (ಕುವ್ಯಾ ಆ. ೨೨-೩೨) ; ತಾಯ್ತಂದೆಗಳ . . . ಕಾಶಿಯೊಳಿಳುಹುವದೆ ಸಂಕಲ್ಪವದು ತಾ ನಿಲುಕದಾದುದು (ತೊರರಾ. ೨-೫-೧೬) ; ನನ್ನ ಅನುಭವಕ್ಕೂ ಅರಿವಿಗೂ ನಿಲುಕಿದ ಒಂದೆರಡನ್ನು ಮಾತ್ರ ನಿಮಗೆ ತಿಳಿಸಬಹುದು (ಪೇಕನ್ಸ್. ೭೯) : ಯಾವ ಪ್ರಕಾರದ ದೋಷಗಳಿಗೂ ನಿಲುಕದಂಥ ಪರಮೇಶ್ವರನು (ಮುಂಬಯಿ. ೪-೮೯). ೩. ಅಷ್ಟತನುವಿನೊಳಗೆ ಹುದುಗಿರ್ಪಲಿಂಗವ ನಿಲುಕಿ ನೋಡಿಯೆ ಕಂಡನಂಬಿಗ ಚೌಡಯ್ಯ (ವಚಸಂ. ೪-೭) ; ಸಿದ್ಧರ ಬಗೆಯೊಳು ನಿಲುಕದವನೆ ಜಯ (ಜಯರ. ೮-೨೧) ನೆನಹು ನಿಲುಕದ ಸುಖದ ಸುಗ್ಗಿಯಂ ಸವಿದನೀಶನ ಕುಮಾರಂ (ಸಿದ್ಧರಾ.೨-೧೭) ; ಜನನ ಜರಾಮರಣಂಗಳೆಂಬ ಪೆಸರಿಂದ ಘನತರವಹ ಮೂಱು ಪುರವು . . . ನೆನಹಿಗೆ ನಿಲುಕದಂತಿಹುದು (ತ್ರಿಪುಸಾಂ. ೩೬) ; ಒಡಹುಟ್ಟಿದನ ವೇದನೆಯ ನಿಲುಕಿ ಕಂಡನು ಶಲ್ಯನನುಜನು ಹಿಳುಕುಹಿಳುಕಿನ ಮೇಲೆ ಸಂಧಿಸಿ ಮುಳಿದೆಸುತ ತಾಗಿದನು ಖತಿಯಲಿ ಪಾರ್ಥನಂದನನ (ಕುಮ್ಯಾದ್ರೋ. ೫-೩೩). ೪. ಕಳಿವರಿದು ಹಿಮಗಿರಿಯ ಮೂಲೆಗೆ ನಿಲುಕಿ ಸಕಲ ಮ್ಲೇಚ್ಛ ಭೂಪಾವಳಿಯ ಭಂಗಿಸಿ ಹೇಱಿಸಿದನೊಂಟೆಗಳಲಾ ಧನವ (ಕುಮ್ಯಾಸ. ೬-೭). ೫. ಮುಟ್ಟು ; ತಗುಲು ; ತಾಗು ; ಘರ್ಷಿಸು : ಹಾವಿನಂತಿರೆ ನಿಲುಕಿದರು ಸೂಕಳನವೊಲು ಕೋಡೆತ್ತಿ ಹಾಯ್ಕಿದರು . . . ಕಡಿತಲೆ ಗಾಜಿರುಭಯದಲಿ (ಕುವ್ಯಾಭೀ. ೪-೩೫) ; ತಳರ್ದನಲ್ಲಿಂ ಮೇಲೆ ಮುನಿಪದ ನಳಿನಕಾನತನಾಗಿ ಸೇನಾಜಲನಿಧಿಯ ನಿರ್ಘೋಷ ನಿಲುಕಲಜಾಂಡ ಮಂಡಲವ (ತೊರರಾ. ೨-೬-೧೬) ; ಸುಳಿಸುಳಿದು ಸುಮನೋರಜಂಗಳು ನಿಲುಕಿ ಗಗನಾಂಗಣಕೆ ಪರಿಮಂಡಲಿಸಿ ಪವನಾವೇಶದಲಿ ಭೃಂಗಾನುಗತವಾಗಿ ತೊಳಲುತಿರಲು (ನಿಭಾಗ. ೧೦-೭೦-೨೨) ; ಗಹನವಾದ ಸಮಸ್ಯೆಗಳು ಸಾಧಾರಣವಾದ ಬುದ್ಧಿಶಕ್ತಿಯನ್ನು ನಿಲುಕುವುದಿಲ್ಲ (ಯೋಘಪು.೪೨). ೬. ಚಾಚು ; ನೀಡು : ಬಲಿದ ಮೌನಕೆ ನಿಲುಕಿ ಮುಂದಕೆ ನಿಲುಕಿ ಮೇಲಣ ಮುಖದ ಸಾವಿರದಳದ ತಾವರೆ ತಾನಧೋಮುಖವಾಗಿ ಮಿಂಚುತಿರೆ (ಬಸಪು. ೩-೧೦) : ಮುಂದಕೆ ನಿಲುಕಿ ಹೊಯ್ದನು ಗಗನ ಘುಮ್ಮಿಡೆ ಕಲಿ ವಿಭೀಷಣನ (ತೊರರಾ. ೬-೧೪-೨೫). ೭. ಮೈ ಚಾಚಿ ನಿಲ್ಲು ; ಮೆಟ್ಟುಂಗಾಲಿನಲ್ಲಿ ನಿಲ್ಲು ; ತುದಿಗಾಲೂರಿ ನಿಲ್ಲು : ಪ್ರೃಢಭಕ್ತರ್ಯ

ವರು ತಟಾಕದೇರಿಯ ಮೇಲೆ ನಡೆತರಲು ದೂರದಿಂ ಕಂಡು ದಿಟ್ಟಿಸಿ ನಿಲು[ಪಾಠಾಂ. ಲಿ]ಕಿ ನೋಡಿದಂ ಕಣ್ಮುಚ್ಚದೆ (ಸೋಮಚ. ೨-೮೫) ; ಬೆಬ್ಬನೆ ಬೆಱಿವುತಂ ತಲೆವಾಗಿಸುತ ನಿಲುಕುತ್ತ ಘರ್ರನೆ ತೇಗುತೊಲೆವುತ್ತ . . . ಮುಂಡುಗಾಜನು ದಸರಿದೇವನ ಬಳಿವಿಡಿದು ಸಾರ್ದು (ಬಸವು. ೩೨-೧೬). **೮.** ಎದುರು ನೋಡು ; ಕಾಯು ; ನಿರೀಕ್ಷಿಸು : ಇಂದಿಗೆಂದಣಿಗೆಯ್ವ ತವಕಿಗರಿಗೆಲ್ಲ ಮೇಣ್ ನಾಳೆಯಂ ನಿಲುಕಿ ನಿಟ್ಟಿಪರಿಗೆಲ್ಲ ಕೂಗುತಿದೆ ಕತ್ತಲೆಯ ಕಾವಲಿನ ಕೋಳಿ (ಗಳವಿಂ. ೧೯-೧೬). **೯.** ದೊರಕಿಸಿಕೊಳ್ಳು ; ಸಾಧಿಸಿಕೊಳ್ಳು : ನೀ ನಿಲುಕಲಳವೇ ಕರ್ಣ ಜಯವತಿ ಸುಲಭವೇ ನಿನ್ನಂದದವರಿಗೆ ಪಾರ್ಥ ಹೇಳು (ಕುಮ್ಯಾಕ. ೧೬-೧೯). **೧೦.** ತೊಡಗು ; ಉಪಕ್ರಮಿಸು : ಅಲಘುಬಲ ನೀನೆಂದು ಬಗೆದಿಹೆ ನಿನ್ನ ಚಿತ್ತದಲಿ ತಿಳಿವಡರಿದಾದುದು ಸಿಯುದ್ಧಕೆ ನಿಲುಕುವುದು ಬೆಱಗಲ್ಲವೇ (ತೊರರಾ. ೬-೬-೫೩). **೧೧.** "ಕಾಣಿಸು ; ಗೋಚರವಾಗು" (ಪ್ರಭಣ್ಣ.). **ನಿಲ್ಕು : ೨.** ಸಾತ್ವಿಕ ಶಿವಭಕ್ತಿಗಲ್ಲದಭವಂ ಸಮಂತು ಸಿಲ್ಕಂ ನಿಲ್ಕಂ (ಗಿರಿಕ. ೫-೪೯) ; ಇದೆ ಹರ್ಯಜೇಂದ್ರಾದಿಗಳ್ಗೆ ನಿಲ್ಕದ ವಸ್ತು (ಪದ್ಮರಾ. ೧೨-೪೮). **೬.** ಮೃದುತಳಕಾಂತಿಯಿಂ ಮಿಳಿರ್ವ ಪೂಗುಡಿ ಕೆಂದಳಿರ್ದೊಂಗಲಂತೆ ತೋಱಿದೊಡದನೊಲ್ಲದೊಳ್ದಳಿರ್ ನಿಲ್ಕಿ[ಪಾಠಾಂ. ಳ್ಕಿ]ದೊಡಂತಲಗೊಂಚಲಂತೆ ತೋಱಿದೊಡೆ ನಖಾಂಶುವಿಂದದುಮನೊಲ್ಲದೆ ಮಾಮರನಲ್ಲಿದೊಂದು ಮಾಯದ ಮರನೆಂದು ಸಾರ್ದಳತಿಮುಗ್ಧೆ ಕುಜಾಂತರಮಂ ವನಾಂತದೊಳ್ (ಚಂದ್ರಪು. ೭-೧೦೭). **ನಿಳ್ಕು : ೧.** "ನಿಳ್ಕು—ಉಪರಿಸ್ಪರ್ಶನೇ (ನಿಲುಕಿಸಿಕೊಳ್ಳು)" (ಶಮಧಾ); ನಿಜಪದಾಂಗುಷ್ಠಾಗ್ರದಿಂ ನಿಂದು ಕಣ್ಗಳ್ ಪೊಳೆಯೆ ಮಿಳಿರ್ವ ಕೊಂಬಂ ನಿಳ್ಕಿ ಪೂಗೊಯ್ದಳೊರ್ವಳ್ (ಕಾವ್ಯಾವ. ೬೧೧) ; ನಡು ಬಳ್ವಳ ಬಳ್ಕೆ ನಿಳ್ಕಲಾಱದೆ ತಳಿರಂ ತುಡುಕುವ ಕೆಳದಿಯ ಕಚಮಂ ಪಿಡಿದೆತ್ತಿದಳೊರ್ವಳಬಲೆ ಸಂಭ್ರಮದಿಂದಂ (ಲೀಲಾವ.೧೩-೭೪); ಮುನಿದು ವಜ್ರವೀರಂ ಘನಪೀಠದಿನೆೞ್ದು ವಜ್ರನಿರ್ಘೋಷದವೋಲನಯಪರಂ ಪೊಳೆವಸಿಮಿಂಚ ನಿಳಿಸಿ ಪೊಯ್ಯಲ್ಕೆ ನಿ[ಪಾಠಾಂ. ನೀ]ಳ್ಕಿದಂ ನೃಪಚರನಂ(ಪಾರ್ಶ್ವಪು. ೨-೮೧). **೨.** ನಿಳ್ಕುವರಲ್ಗೊಳಲ್ಕಿವಱಿಳಪ್ಪುದೆನಿಪ್ಪ ಮರಲ್ದ ಪೂಮರಂಗಳ್ಕೆಲವಿರ್ದೊಡಂ ಕೆಲದೊಳೊಲ್ಲದೆ ನಲ್ಲಳನುಚ್ಚ ಶಾಖೆಗಾಗಳ್ಕರದುಯ್ದನೊರ್ವಂ (ಚಂದ್ರಪು. ೭-೧೦೧). **೩.** ನೆನೆವೊಡೆ ನಿಳ್ಕದೀಕ್ಷಿಪೊಡೆ ಸಿಲ್ಕದ . . . ದಿವ್ಯಲಿಂಗಮಂ ಘನತರಭಕ್ತಿಯಿಂ ನೆನೆದಭೀಕ್ಷಿಸಿ (ವೃಷವಿ. ೨೩-೨೬) ; ಎತ್ತಿದ ಭುಜದಿಂ ನಿಮಿರ್ದ ದೇಹದಿಂ ನಿ[ಪಾಠಾಂ. ನೀ]ಳ್ಕದ ಚಿತ್ಪದಮಂ ಮುಟ್ಟುವೆನೆಂದೋವದೆ ನಿಮಿರ್ದೋರಂತೆ ನಿಂದ ಮಾಳ್ಕೆಯೊಳೆಸೆದಂ (ಶಬಶಂ. ೨-೮೦) ; ಹೆತ್ತಮ್ಮಯ್ಯನವರಿಗೀ ಓಲೆಯ ಸಂಚು ನಿಳ್ಕದಂತೆ ಗುಟ್ಟಾಗಿ ಒಪ್ಪಿಸಬೇಕೆಂದೂ, ನೀನು ಎಚ್ಚರಿಸಲಿಲ್ಲವೆ ? (ಬಿಟ್ಟಅ. ೧೫-೧೭). **೬.** ತೊಳಗುವ ಮಾಳವೀಮುಖಸರೋರುಹಕಾಂತಿಗೆ ಸೋಲ್ತ ಚಂದ್ರಮಂಡಳದ ಕಳಂಕಮಂ ಕಳೆದಪಳ್ನಗರೀಲಲಿತಾಂಗಿ ನಿಳ್ಕಿ ತೋಳ್ಗಳಿನೆನೆ ಕೂಡೆ ಕಣ್ಗೊಳಿಸಿ ತೋರ್ಪುವು . . . ಕೇತನಾಳಿಗಳ್ (ಕಾದಂಪೂ. ೩೦೩) ; ಮಾಕಾಳಿಯಡುತರ್ಪ ನಿಳ್ಕುವಳು ನಾಲಗೆಯಂ (ಎಕ. IV, ಹುಣಸೂ. ೧೩೭-೧೮ ; 1162) ; ಈ ಭಾನುಬಿಂಬವಂ ಲೀಲಾಭಸ್ತ್ರಿಕೆಯೆಂದು ಪೊಯ್ವವೊಲ್ ನಿಳ್ಕುವ ಹಸ್ತಾಭೋಗದಿನೆಸೆದತ್ತ ಚಲಾಭಂ ತಾನೆನಿಪ ಕುವಲಯಾಪೀಡೇಭಂ (ಜಗವಿ. ೬-೪೯) ; ತಡಿಯೊಳ್ನಿಂದು ನಿಳ್ಕಿ ನೀಡಿದ ಮದಗಜದ ಕರದ ಮಾರ್ಪೊಳಪು ನಿಜಸ್ವಚ್ಛತೆಯಿಂ . . . ಕಮನೀಯಮಾಗಿಯುಂ (ರಾಜಶೇ. ೬-೨೪ ಪ). **೭.** ತನ್ನನೆ ನಿಳ್ಕಿ ನೋಟ್ಪರ ಕಣ್ಗೆ ಕಣ್ಬೊಳೆವು ತನ್ನಯ ಮೆಯ್ಯ ಬೆಳ್ಪಿನೊಳಟ್ಟು ನಿಂದೊಡೆ ವಾಳೆವಿಣ್ ಪೊಳೆಯೆ ಧಾತ್ರಿಗೆ ವರ್ಪ ಗಂಗೆವೊಲೊಪ್ಪಿದಂ ಮುನಿಪುಂಗವಂ (ಪಂಪಭಾ. ೬-೭). **೧೨.** ನೀಳವಾಗು ; ಉದ್ದವಾಗು ; ಚಾಚಿಕೊಳ್ಳು : ಎನಸುಂ ಮುಂದೆ ನಖಾಂಶು ನಿಳ್ಕೆ ನೃಪಹಸ್ತಾನ್ವೇಷಣಂಗೆಯ್ವವೊಲ್ (ಕಾದಂಬು. ೫೯). **೧೩.** ಮೀರು ; ಅತಿಕ್ರಮಿಸು : ಅರ್ಕಾಶ್ವಂಗಳಂ ನಿ[ಪಾಠಾಂ. ನೀ]ಳ್ಕೆ ಕೊಪ್ಪರದಿಂ ಪಾಯ್ವಳವಿಂದೆ ಕೇಶಿ ಪರಿತಂದಂ ಕಂಸನಾದೇಶದಿಂ (ಜಗವಿ. ೫-೪೪) **೧೪.** (ದ್ವಂದ್ವಯುದ್ಧದಲ್ಲಿ) ಹಿಡಿದುಕೊಳ್ಳು : ಎಡದಡಿಯಂ ಪುಗಿಸುವ ಬಲದಡಿಯಂ ಪೊಱಗಿಡುವ ದಂಡೆಯಂ ನಿ[ಳ್ಕು]ವ ಕೈನಡುಗದೆ ಗದೆಯಂ ಬೀಸುವ ಬೆಡಂಗು ರಂಜಿಸಿತು ಭೀಮದುರ್ಯೋಧನರಾ (ಗದಾಯು. ೮-೮). [<ನೀಳ್]

**ನೀಳ್ಕುಳಿಗೊಳ್,** ನಿಕ್ಕುಳಿಗೊಳ್, ನೀಕ್ಕುಳಿಗೊಳ್ (ಕ್ರಿ). **೧.** ವಶಪಡಿಸಿಕೊಳ್ಳು : ವೀರಬಲ್ಲಾಳನರಾತಿಮಂಡಳಮಂ ನೀಳ್ಕುಳಿಗೊಳ್ವುದು (ಸೌಇಎ. ೧೯೨೯, ನವಲಗುಂದ. ೧೯೩-೩೦ ; 1707). **೨.** ಸೆಳೆಯಲ್ಪಡು ; ಆಕರ್ಷಿತವಾಗು : ದೇವಿಯಂ ಬಲವಂದು ಲಕ್ಷ್ಮಣಂ ನಮಿಸಿ ಬಳಿಕ ಬೀಳ್ಕೊಂಡು ನಡೆಯಲ್ಕೆ ಹಿಂದುಹಿಂದಕೆ ಮನಂ ನೀಳ್ಕು[ಪಾಠಾಂ. ಳ್ಕೊ]ಳಿಗೊಳಲ್ಕೆಂದುಮಗಲದಣ್ಣನ ಕಡೆಗೆ ದೂಳ್ಕಾಯದೊಳ್ಪತ್ತಿ ಪೊರಳ್ವ ಸೀತೆಯ ಕಡೆಗೆ ತೂಗುಯ್ಯಲೆವೊಲಾದನು (ಜೈಮಿಭಾ. ೧೯-೨೯). **ನಿಕ್ಕುಳಿಗೊಳ್ : ೧.** ಸುರಲೋಕಸಂಪದಪ ನೆಱಿ ನಿಮಿರ್ದು ನಿಕ್ಕುಳಿಗೊಂಡುದು (ಕೊಟ್ಟೂಬ. ೭-೨೫) ; ಪೆಂಡವಾಸದ ಮಾತು ನಿಕ್ಕುಳಿಗೊಂಡುದಾತನ ಮನವ (ಶಂಕದಾ.೨-೧೪). **ನೀಕ್ಕುಳಿಗೊಳ್ : ೧.** ಕುಂದು ಕಳಂಕ ಪೊರ್ದದ ಪೂರ್ಣಚಂದ್ರನೆಯ್ತಂದು ನಿಂದಂತೆ ರಾಜಿಸುವ ಕಂದರ್ಪರೂಪನ ಗಾಡಿ ನೀಕ್ಕುಳಿಗೊಂಡುದಂದು ಸೌಗಂಧಿಸುತೆಯರ (ನಾಗಕು. ೬-೫೧).

[<ಈಟ್ಕುಳಿಗೊಳ್]

**ನೀಳ್ಕೆಯ್ಸು** (ಕ್ರಿ). **೧.** ಉದ್ದಮಾಡು ; ನೀಳವಾಗಿಸು : (ಶ). **೨.** ತಡಮಾಡು : ಅಳ್ಕಿ ಪುಳಿಂದಂ ಕಾಣುತೆ ತಳ್ಕೈಸಿಯೆಕೊಂಡು ಶುನಕನೆರಡುಂ ಕಡಿಯಂ ಕಾಳ್ಕಿರ್ಚ ತಗುಳ್ದ ತೆಱದಿಂ ನೀಳ್ಕೆಯ್ಸ[ಪಾಠಾಂ. ನಿಳ್ಕೈಸ, ನಿಳ್ಕಳಿಸ, ನಿಳ್ಕರಿಸ]ದೆ ನೊಂದು ಬೆಂದು ಬಳಲುತ್ತಿಂದಂ (ಗಿರಿಕ. ೧-೧೦೬). [ನೀಳ್ + ಕೆಯ್ಸು]

**ನೀಳ್ಕೊಂಬು** (ನಾ). ಉದ್ದವಾದ ಕೊಂಬೆ; ನಿಡಿದಾದ ಟೊಂಗೆ : ತಾಳೆಹೂ ಗರುವಲಿಯ ಬೆನ್ನಟ್ಟಿ ಚುಚ್ಚುವುದು ನೀಳ್ಕೊಂಬಿನಿಂ ಮಾವು ಹೂ ಮುಡಿಯುತಿಹುದು (ಕಾಲೂರ.೧೧೩-೨೩೪). [ನೀಳ್+ಕೊಂಬು$_1$]

**ನೀಳ್ಕೊಳಿ** (ನಾ). (ಆಲಂ) ಕ್ಷೋಭೆ : ಬಂದೊಬ್ಬನುಸುರಿದಂ ನೀಳ್ಕೊಳಿಯ ಪೊಸನುಡಿಯ ಕಾಳು ಕೊರಗರ್ಗೆ (ಕಾಲೂರ. ೧೦೭-೨೧೮).

[<ಈಟ್ಕುಳಿ?]

**ನೀಳ್ಗತೆ** (ನಾ). ದೀರ್ಘವಾದ ಕಥೆ ; ನೀಳವಾದ ಕತೆ : ಒಂದು ಪೌರಾಣಿಕ ದೃಶ್ಯವನ್ನು, ಐತಿಹಾಸಿಕ ನೀಳ್ಗತೆಯಾಗಿ ಪರಿವರ್ತಿಸಿ . . . ವಾಚಕರನ್ನು 'ಬೆಪ್ಪು'ಗೊಳಿಸಿದ . . . ಸಾಹಸವು ನಿಜವಾಗಿಯೂ ನವ್ಯವಾಗಿದೆ (ರೂಪಸಂ. ೧೮). [ನೀಳ್ + ಕತೆ]

**ನೀಳ್ಗಬ್ಬ** (ನಾ). ದೀರ್ಘವಾದ ಕಾವ್ಯ ; ನೀಳವಾದ ಕವಿತೆ : ಈ ನೀಳ್ಗಬ್ಬದ ರಸ ತಾನೆಂಥದೊ ರಸಿಕಜನಕೆ ತುಷ್ಟಿಯ ತರುವಂಥದೊ ? (ಅಹಲ್ಯೆ. iii, ಅರ್ಪಣೆ). [ನೀಳ್ + ಕಬ್ಬ$_1$]

**ನೀಳ್ಗವನ** (ನಾ). = ನೀಳ್ಗಬ್ಬ : ಶ್ರೀಯುವರಂಸಿದ ಚಿನ್ನದ ಪದಕವು ನನ್ನ ನೀಳ್ಗವನಕೆ ಬಂತು (ಇಂಚಾಪ. ೨೯-೩೨) ; Waste Land ಎಂಬ ನೀಳ್ಗವನದ ಪ್ರಕಾಶನವು ಆಂಗ್ಲಕಾವ್ಯದಲ್ಲಿ ಒಂದು ಹಿರಿಯ ಕ್ರಾಂತಿಯನ್ನೇ ಹೂಡಿತು (ನವ್ಯಕಾ. ೨೭). [ನೀಳ್ + ಕವನ]

**ನೀಳ್ಗವಿತೆ** (ನಾ). = ನೀಳ್ಗಬ್ಬ : ಈ ನೀಳ್ಗವಿತೆಯಲ್ಲಿ ಮಲೆನಾಡಿನ ಹಳ್ಳಿಯ ಕುಟುಂಬದ ಎರಡು ತಲೆಮಾರಿನ ಜೀವನಚಿತ್ರವೊಂದು ಅಡಕ

ವಾಗಿದೆ (ಕಾಲೂರ. ಮುನ್ನುಡಿ) ; ಭಾವಗೀತ, ಅಷ್ಟಷಟ್ಪದಿ, ನೀಳ್ಗವಿತೆ . . . ಎಲ್ಲವೂ ಇಂದು ಕನ್ನಡದಲ್ಲಿ ನೆಲೆಗೊಂಡಿವೆ (ನವ್ಯಕಾ. ೨೪).

[ನೀಳ್ + ಕವಿತೆ]

**ನೀಳ್ಗೈ** (ನಾ). ೧. ಉದ್ದವಾದ ಕೈ. ೨. ದೊಡ್ಡ ಭಾರಗಳನ್ನು ಎತ್ತಿ, ಬೇಕಾದ ಕಡೆಗೆ ತಿರುಗಿಸುವ ದೊಡ್ಡ ಯಂತ್ರ ; ಎತ್ತು ಯಂತ್ರ : ಆ ಊರಿನ ಸುತ್ತುಮುತ್ತಲಿನ ಅನೇಕ ಗುಡ್ಡಗಳ ತುದಿಯಲ್ಲಿ ನಿಲ್ಲಿಸಿದ ಕೊತ್ತಳಗಳು, ನೀಳ್ಗೈ (Crane) ಮೊದಲಾದುವನ್ನು ಕಂಡು ಅವು ಕಲ್ಲಿದ್ದಲಿನ ಗಣಿಗಳಿರಬೇಕೆಂಬ ನೆನಪೂ ಆಯಿತು (ಅಪೂಸ. ೧೦೬) ; ಇವನ್ನು ನದಿಯಲ್ಲಿ ನಿಲ್ಲಿಸಿ, ಮೇಲಿಂದ ನೀಳ್ಗೈಗಳ (Cranes) ಬಲದಿಂದ, ಬಲವಾದ ಕೊಡತಿಯನ್ನು ಇಳಿಸಿ, ಸ್ತಂಭವನ್ನು ಹೊಡೆಯುವರು (ಬಾಲಪ್ರ. I, ೧೬೫). [ನೀಳ್ + ಕೈ$_2$(< ಕೆಯ್$_2$)]

**ನೀಳ್ಜಟೆ** (ನಾ). ಉದ್ದವಾದ ಜಟೆ : ನೀಳ್ಜಟೆಯು ನೀಳುಗಡ್ಡದ ಪಟ್ಟೆ ದರಿದ್ರ ಗೊರವ (ತುಂಗಭ. ೮೧). [ನೀಳ್ + ಜಟೆ]

**ನೀಳ್ದನಿ** (ನಾ). ದೀರ್ಘವಾದ ಸ್ವರ,—ಧ್ವನಿ : ಹಾಡಿನ ನುಣ್ದನಿಯತ್ತ, ಗೋಳಿನ ನೀಳ್ದನಿಯಿತ್ತ (ಪಾಂಚಜ. ೬೭-೧೪); ಕಿವಿಗೆ ಬಂದುದು ಗೋಳು ನೀಳ್ದನಿ (ಶ್ರೀರಾಪೂ. ೧೦೩-೧೦೧). [ನೀಳ್ + ದನಿ$_1$]

**ನೀಳ್ತೋಳು** (ನಾ). ಉದ್ದವಾದ ತೋಳು : ಅವಳ ಬೆಳ್ಳನೆಯ ನೀಳ್ತೋಳುಗಳು . . . ಚಂಚಲವಾದ ತುಟಿ ಮೂಗುಗಳು—ಪ್ರತಿಯೊಂದೂ ಸುಂದರವಾಗಿದ್ದುವು (ಪುನರು. ೨೩೮).

[ನೀಳ್ + ತೋಳು(< ತೋಳ್)]

**ನೀಳ್ಪು** (ನಾ). ೧. ಉದ್ದ ; ದೀರ್ಘತೆ ; ನೀಳ : ನೀಳ್ಪಂ ಬೆಳ್ಪುಮಂ ತಾಳ್ದು . . . ಶೌಚಾಂಜನೇಯನ ಕಣ್ಗಳೆಂಬರಲಂಬುಗಳ್ ಗಣಿಕಾಜನಂಗಳೆರ್ದೆಯಂ ನಟ್ಟು ಕೆಂಕಮಾದಂತಾದುವು (ಪಂಪಭಾ. ೨-೩೯ ಗ) ; ಅದ್ರಿಯ ತಲೆಯೊಳಿಟ್ಟ ವಾರಾಸಿಯ ಕೆಯ್ಯೆನೆ ರಯ್ಯಮಾದುದಾ ನದಿ ನೀಳ್ಪಿಂ (ಅರ್ಥನೇ. ೨-೬೪) ; ಕೆಂದಳಿರ ಪಕ್ಕರಕ್ಕೆಗಳಂದಂಬಡೆದೆಸೆವ ಪಲ್ಲಣಂಗಳ ಸೊಂಪುಂ ಸಂದಿಸೆ ನೀಳ್ಪಿಂ ನಡೆದುದು ಸುಂದರಗಿಳಿಯೆಂಬ ಕುದುರೆಗಳ ದಟಿವೆತ್ತಂ (ಕಬ್ಬಿಕಾ. ೨೧೨) ; ಇದು ಚಿತ್ರಂ ಮೃದುಪಾದ ಪಲ್ಲವದ ಮೆಲ್ಪುಂ ನೋಟಿಪ್ಪುದೀ ಕೇಶಪಾಶದ ನೀಳ್ಪುಂ (ಸೂಕ್ತಿಸು. ೮-೩೮೭). ೨. ಔನ್ನತ್ಯ ; ಎತ್ತರ : ನೀಳ್ಪಿಂದಮೆತ್ತಂ ಮುಗಿಲಂ ಪೊತ್ತಿರ್ಪ ಕೂಟಪ್ರಕರಂ (ಚಂದ್ರಪು.೩-೮೨); ಆಗಸಮನಣೆಪ ಕೋಡುಂಗಲ್ಲಿಂ ನೀಳ್ಪಂ ತಳೆದಾ ಬೆಟ್ಟದ ತಾಟ್ಪುಡಿದ ಬನಂಗಳಲ್ಲಿ ಬೀಡಂ ಬಿಟ್ಟಂ (ಕಬ್ಬಿಕಾ. ೨೩೭). ೩. ವಿಸ್ತಾರ : ಹರವು : ಎಡೆಬಿಡದೆ ದುಃಖಿಂಗಳೊತ್ತುತಿರೆ ಬಾಟ ನೀಳ್ಪನ್ ಬಯಸಿ ತಾಳ್ವನ್ ಅಂಜುಕುಳಿ (ಅಶ್ವತ್ಥಾ. ೩-೨). [ನೀಳ್ + -ಪು$_2$]

**ನೀಳ್ಪುಪಡೆ** (ಕ್ರಿ). ಉದ್ದವಾಗು; ನೀಳವಾಗು ; ದೀರ್ಘವಾಗು : ಬೆಳ್ಪಿಲ್ಲದ ಬಣ್ಣಂಗಳೊಳೊಳ್ಪಳವಟ್ಟರೆಯಪಾನದಿಂ ಸ್ರುವ(ಸ್ತುವೆ)ವರೆಗಂ ನೀಳ್ಪುಪಡೆದೆಸೆದು ತೋಱಿಯುಮೊಳ್ಪಂ ಶುಭಪ್ರೋಥಜಾತಮೆನೆ ಪೆಸರ್ವಡೆಗುಂ (ಅಶ್ವಶಾ. ೩-೨). [ನೀಳ್ಪು + ಪಡೆ$_1$]

**ನೀಳ್ಪುವೆಱು** (ಕ್ರಿ). ೧. ಉದ್ದವಾಗು ; ದೀರ್ಘವಾಗು : ಸಿಱುದಲೆ ನೀಳ್ಪುವೆತ್ತ ನಗೆಗಣ್ ಬೆಳರ್ಗೆಂಪಿನ ಸೊಂಪನಾಳ್ದ ಬಾಯ್ದೆಱೆ (ಶಬ್ದ. ೬೫ ಪ್ರಯೋ). ೨. ಎತ್ತರವಾಗು : ಉನ್ನತವಾಗು : ನೀಳ್ಪುವೆತ್ತ ಪೂವಿನ ಪೊಸ ಟೆಕ್ಕೆಯಂ ಮಿಳಿರೆ . . . ನಡೆತಂದುವಂದು ಪೊಸಮಾವೆಸಿಪುಗ್ಗಡದಗ್ಗದಾನೆಗಳ್ (ಕಬ್ಬಿಕಾ. ೨೧೧). [ನೀಳ್ಪು + ಪೆಱು$_1$]

**ನೀಳ್ಪೊಳ್ತು** (ನಾ). ಬಹಳ ಹೊತ್ತು : ದೀರ್ಘಕಾಲ : ನಂಜಿದರ್ ನೀಳ್ಪೊಳ್ತು ಮಿಡುಕದಿರೆ ಸತ್ತುದಂ (ಕಾಲೂರ. ೮೭-೧೬೭).

[ನೀಳ್ + ಪೊಳ್ತು(< ಪೊೞ್ತು)]

**ನೀಳ್ಮುಪ್ಪು** (ನಾ). ದೀರ್ಘವಾದ ಮುಪ್ಪು : ಬಹುಕಾಲ ಮುಪ್ಪಾಗಿರುವಿಕೆ : ಇದ ಕೇಳೆ ಬದುಕಿದೆವೇ ! ನೀಳ್ಮುಪ್ಪನೆಯ್ದಿದೆವೇ! ಅಳಿ, ಪಾರಸಿಕರೆ, ಅಳಿ ! ಕಣ್ಣೀರ ಸುರಿಸಿ ! (ಪಾರಸಿ.೧೨-೨೬೮).

[ನೀಳ್ + ಮುಪ್ಪು]

**ನೀಱ್** (ಕ್ರಿ). ತಿನ್ನು ; ಮೆಲ್ಲು : ಸಿಂಸದ ಮಾಲೆಯೆಂದೆಸೆವ ದಾಡಿಮಬೀಜಸಮಾಜವೆಂದು ಸೌಂದರ ಬಿಸಕಾಂಡವೆಂದು ನಲವಿಂದಳಿಯುಂ ಗಿಳಿಯುಂ ಮರಾಳಮುಂ ಪಱಿಮಱಿಯಾಡಿ ವಾಸಿಸದೆ ಪೀರದೆ ನೀಱದೆ ಮಾಣ್ದ ಪಚ್ಚೆಯೊಳ್ವರಲ ತೊಳಪ್ಪ ಮಾಣಿಕದ ಮುತ್ತಿನ ಲಂಬಣವಿಲ್ಲದೆಲ್ಲಿಯುಂ (ಚಂದ್ರಪು. ೬-೪೮).

[ℙ ಇದು ‘ತೀಱು’ ಎಂಬುದರ ಅಪಲಿಖಿತವಿರಬಹುದೆ?]

**ನೀಱ, ನೀರ$_1$** (ನಾ). ೧. ಸುಂದರ ; ಚೆಲುವ ; ಸೊಬಗ : “ನೀಱರೊಳ್ ಗಾಡಿಕಾಱರ್” (ಕಣಾ೯ನಿ. ೪೦) ; ತಳಿರೊಳ್ ನೀನೆ ಬೆಡಂಗನೈ ನನೆಗಳೊಳ್ ನೀಂ ನೀಱ [ಪಾಠಾಂ. ಚೆಲ್ವ]ನೈ ಪುಷ್ಪಸಂಕುಳದೊಳ್ ನೀನೆ ವಿಲಾಸಿಯೈ (ಆದಿಪು. ೧೧-೯೬) ; ಪೂಱೆವೂಮಂ ನಗಪ ಸೊಗಯಿಕುಂ ನೀಱರೊಳ್ ಪುಷ್ಪಚಾಪಂ ಗುಱಿಯೇಸಂ ತೋಱಲಂಬುಂ ಪೊದೆಗೆಡಱದವೋಲ್ ಪುಷ್ಪಲಾವೀಕದಂಬಂ (ಪಂಚಾಪೂ. ೧-೧೨೦) ; ನೀಱರ್ ಪಲರಲಘುಭುಜರ್ ಭೂಪಪುತ್ರರ್ಕಳೆಲ್ಲಂ ಸನ್ಮಾತರ್ ಕೂಡೆ ಬಂದೊಂದಿರೆ (ನೇಮಿಪು. ೫-೨) ; ಕಾಳರಕ್ಕಸಿ ಬರುತ ನೀಱ[ಪಾಠಾಂ. ಧೀರ]ನಂ ಸುಕುಮಾರನಂ ಪುಷ್ಪನಂ . . . ಸಿದ್ಧರಾಮಯ್ಯನಂ ದೂರದಿಂ ಕಂಡಳು (ಸಿದ್ಧರಾ. ೬-೧) ; ಚತುರಂ ನೀಱನುದಾರನುಜ್ಜ್ವಲಯಶಂ ಸೌಭಾಗ್ಯಸಂಪನ್ನನೂರ್ಜಿತಪುಣ್ಯೋದಯನೀ ಜನಾರ್ದನಂ (ಅನಂಪು. ೧-೫೧). ೨. ಹಿತಕರನಾದವನು ; ಪ್ರಿಯ : ಇನಿಯ : ಕಣ್ಣಪ್ಪಗೆ ನೀಱನೆ ಕರುಣಿಪುದು ಹಂಪೆಯ ವಿರೂಪಾಕ್ಷಾ (ಕನ್ನ.ರ. ವೇ. ೧೫೧-೮) ; ಅಳುಪಿ ನಭೋವಧು ನಿಟ್ಟಿಸಿ ಘಳಿಲನೆ ತತ್ಕಾಲಮೆಂಬ ನೀಱನನಲರ್ಗಣ್ಗಳ ಕಾಂತಿ ಸೂಸಿತಂದೆನಲಳವಟ್ಟುದು ಮುಗಿಲೊಳಮರ್ದ ಮಿಂಚಿನ ಗೊಂಚಲ್ (ಉದ್ಭಟ. ೯-೧೩೬) ; ನೀಱನ ಚೆಲ್ವೊರೆದ ಸವಿದುಟಿಯ ನೊಲವಿಂ ಬರೆ ಪೀರ್ದುವು ನೋಡುವಿಚ್ಛೆಗಾರ್ತಿಯ ಕಣ್ಗಳ್ (ಕಬ್ಬಿಕಾ. ೩೨೯) ; ನೀಱನ ಕಲೆಯ ಬಿನ್ನಾಣಕೆ ತಡೆಯದೆ ನೀಱೆ ಮೈಗೊಡುವ ಲೀಲೆಯೊಳು ಪಱಿದ ಗಜ ತೊಡೆಸನ್ನೆಯಿಂದಾ ರಾಯ ತೋಱಿದತ್ತೊದಗಿ ಸಾಗಿದುದು (ಭರತೇ. ೩೬-೭೧). ೩. ವೀರ; ಧೀರ : ‘ನೀಱತನ’ ನೋಡಿ. **ನೀರ$_1$** : ೧. ತುಂಬಿಯೆನೆ ತಾವು ಹೀರುವುವು ಹೂವು, ಆ ನೀರೆ ನೀರನಾಗಿ ಕನಸಾಗಿ ನಿದ್ದೆ ತನ್ನಲ್ಲಿ ತಾನು ತನ್ನನ್ನೆ ಮಾರದಾಗಿ (ಮುಖಾಹು. ೧೮). ೨. ನೀರರು ಪರಸ್ಪರರ ತಿರುಳು ನೆರಳು (ಸೂರ್ಯಪಾ. ೨೫-೨). ‘ನಿಱು$_2$’ ನೋಡಿ.

[ದೇ.॥ ತಮಿ. ನೀರ್ಮೈ = ಸೌಂದರ್ಯ]

**ನೀಱತನ** (ನಾ). ೧. “ಸೌಂದರ್ಯ ; ಸೌಭಾಗ್ಯ ; ಚೆಲುವಿಕೆ” (ಪ್ರಭಣ್ಣ). ೨. ಶೌರ್ಯ ; ಪರಾಕ್ರಮ : ಹಾಱಲೂದಿದನಹಿತರಾಯನ ನೀಱತನವನು (ಕುವ್ಯಾಕ. ೧೪-೧) : ಮಾಱದೆ ಸತ್ಕ್ರಿಯೆಯೆಸಿ ತುಂಟನಿತುಂ ನೀಱತನದೆ ಸಮೆದುರುತರ ಸುಕೃತವ ಸೂಱೆಗೊಳುತ್ತೆ ಯಶಃಪೂರಿತದಿಕ್ತಟನುದ್ಭಟನೆಸೆವಂ (ಉದ್ಭದೇ. ೧೫-೩೯).

[ನೀಱ + -ತನ]

**ನೀಱತೆ** (ನಾ). ಸೌಂದರ್ಯ ; ಚೆಲುವು ; “ಸೊಬಗು” (ಚತುನಿ.ಕ. 1, ೭೭) : ನೂಱಾಳು ಸಹ ಪೊಳೆಗೆ ಬಂದು ಕಂಡರು ಅವನ ಏಱುಜವ್ವನವಂ . . . ನಾಭಿಯೊಳಗೆಳಲ್ವ ನಿಱುಗಡ್ಡದ ನೀಱತೆಯೊಳುಂ ಭುಜದೊಳೊಲೆವ ತುಱುಬಂ (ಪ್ರಭುಪು. ೭-೭೯).

[ನೀಱ + -ತೆ$_3$]

**ನೀಱಲು** ‘ನೇಱಲ್’ ನೋ.

**ನೀಱು**, ನೀರು$_2$ (ನಾ). ೧. ಪುಡಿ ; ಧೂಳು : (೬). ೨. ವಿಭೂತಿ; ಭಸ್ಮ : ‘ತಿರುನೀಱು’ ಪರಾ. ೩. (?) : ಎರಡುಂ ಮೊಱಡಿಯೆಡೆ XX ಸರಿಷು ಅಲ್ಲಿಂ ಪಡುವಣ ನೀಱುವುಂ (ಎಕ. VII, ಶಿಮೊ. ೬೪-೧೦೨ ; 1112 ?). **ನೀರು$_2$** : ‘ತಿರುನೀರು’ ಪರಾ.
[ದೇ.॥ **ತಮಿ. ಮಲ.** ನೀಱು ; **ತೆಲು.** ನೀಱು, ನೀರು, ನಿಗುರು, ನಿಗುಱು, ನಿವುರು, ನಿವುಱು ; **ಪರ್ಜಿ.** ನೀಡ್ ; **ಗೊಂಡಿ.** ನೀರ್]

**ನೀಱೆ**, ನೀರೆ (ನಾ). ೧. ಸುಂದರಿ ; ಚೆಲುವೆ : ನೆಲೆಮಾಡಂಗಳ ನೇಱಿದ ನೀಱೆಯರಲಕ್ತಕರಾಗರಂಜಿತಪದಪಲ್ಲವಂಗಳಿನವನಿತಳಮೆಲ್ಲಂ ಪಲ್ಲವಿಸಿದಂತೆಯುಂ (ಕಾದಂಪೂ. ೪೭೮) ; ಏಱಿ ಮಣಿವೆಸದ ಸಿವಿಗೆಯ ನೇಱಿಸಿ ಕುಡುವಿಲ್ಲನೊಡನೆ ಬರೆ ಕಂದರ್ಪಂ ನೀಱೆ ಮುಗಿಲ್ದೊರೆಯೊಳ್ ಮೆಯ್ದೋಱುವ ಶಶಿಕಳೆಯ ಗಾಡಿಯುಂ ಗೆಲೆವಂದಳ್ (ಪಂರಾಮಾ. ೩-೪೦) ; ನೀಱೆಯರ ನಿಡಿಯ ಕಡೆಗಣ್ಣೞಿಂದೆರ್ದೆ ಬಿರಿಯೆ (ಲೀಲಾವ. ೪-೪೬) ; ನಗೆಗಣ್ಣಳ ನಲ್ಲೆಗೆ ನಾಸಿಕದ ನೀಱೆಗೆ ಬೆಳರ್ವಾಯ ಭಾಗ್ಯ ನಿಧಿಗೆ . . . ರುದ್ರಾಣಿಗೆ ರಕ್ಷಣಾರ್ಥಂ ತಂದೆ ನಿಯಾಮಿಸಿ ಕೊಟ್ಟ ದಂಡಿಗೆಯ ಧವಳಛತ್ರದ ಅಂಗರಕ್ಷಕರ . . . ಷೋಡಶಸಹಸ್ರ ವಿಳಾಸಿನಿಯರ್ವೆರಸು ನಡೆತಂದು (ಗಿರಿಕ. ೩-೯೧ ವ); ಕುಂಚಿತಾಳಕದ ಚಂಚಲಾಕ್ಷಿ ನಿಡುಜಡೆಯ ನೀಱೆ (ಉದ್ಭಟ. ೫-೫೩ ವ). ೨. ಪ್ರಿಯತಮೆ ; ನಲ್ಲೆ ; ಪ್ರೇಯಸಿ : ಬೇಱೂರ್ಗೆ ಪೋದ ನಲ್ಲರ ನೆನೆದು ದೂಱುವ ನೀಱೆಯರ ಗಡಣದಿಂ (ಕಬ್ಬಕಾ. ೫೪). ೩. ಹೆಂಡತಿ ; ಪತ್ನಿ : ನಲ್ಲಳಂ ವಂಚಿಸಿ ಪೋಪ ಬಗೆಯಂ ನೆನೆದು ನೀ[ಱೆಗೆ] ಕೂರ್ಪನಂತೆ ನುಡಿದಾ ಖಚರಂ ವಿಮಾನಮನೇಱಿ ಪುರಮಂ ಪೊಱಮಟ್ಟು (ಧರ್ಮಾಮೃ. ೩-೩೮) ; ಆ ನೀಱೆಗೂಡಿ ನಡೆತಂದೊಳಪೊಕ್ಕಲಂಪಿಂ ತಾನೊಲ್ದು ಪೂಜಿಸಿದನಾ ಹರನಂ ನೃಪಾಲಂ (ಉದ್ಭಟ. ೧೨-೧೦೫) ; ಮೂಱುಲೋಕದ ಗಂಡನೀತನ ಮಾಱಲಹುದೇ ದೇವಿ ದಿವಿಜರ ನೀಱೆಯರು ಬಯಸುವರು (ತೊರರಾ. ೫-೩-೩೬), ತೋಱಿದನು ತದ್ವನದ ಸಿರಿಯನು ನೀ[ಱೆ]ಗೆ (ಶಿಭಾಗ. ೧೦-೭೦-೨೧). **ನೀರೆ**: ೧. ಸಂತಸಗೊಂಡು ಸುಖವನನುಭವಿಸು ನೀರೆ (ವೆಂಕಾರಾ. ೫-೯-೭) ; ಒಂದು ದಿನ ನೀರೆ ನುಡಿದಳು (ತುರಂಗ. ೩-೩೪) ; ತಾರೆ, ಕೊಡಗಿನುಡುಗೆಯ ಸೀರೆ ಸಿಂಗರಿಸಿದಾ ನೀರೆ . . . ಬೆಸಗೊಂಡಳೇರ್ವೆಸನದಾಗುವೋಗಂ (ಶ್ರೀರಾಮಾ. ೩೦೮-೧೯೯) ; ಗಲ್ಲಕೆ ಕೈ ಬೆರಳೊಂದನು ನೀನೂರೆಗೊಟ್ಟೇಕೆ ನಿಂತೆಯೆ ನೀರೆ (ಇಂಚಾಪ. ೮೫-೧೫). [ನೀಱೆ + -ಎ$_2$]

**ನೀಱೆತನ** (ನಾ). ಹೆಣ್ಣಿನ ಸ್ವಭಾವ,— ಸ್ಥಿತಿ : ಮಾಱಿಯಾಕೆಯ ನೀಱೆತನವ ವಿಚಾರಿಸದೆ ಪತಿಕರಿಪೆಯಾದೊಡೆ ನೀಱೆಯನು ನೀ ಯಜ್ಞಕಾಲಕೆ ಕರೆದು ಪಿಂಡವನು ಹಾಱಿಸುವುದೈ (ಸಂಭಪ. ೩-೭). [ನೀಱೆ + -ತನ]

△ **ನೀಱೆಱಕಲು** ‘ನೀರೆಱಕಲು’ ನೋ.

△ **ನೀೞ್ಕರಿಸು$_1$**, ನೀಳ್ಕರಿಸು$_1$ (ಕ್ರಿ). ೧. ತಡಮಾಡು; ನಿಧಾನಿಸು: ಪದಸ್ಖಳನಮಾದುದಂಚೆಗಿದಿರೊಳ್ಪಿಕಂ ವಕ್ರಮಂ ತೊದಳ್ನುಡಿದುದು . . . ಈ ದುರ್ಣಯಂ ಪೊದೞ್ದೂಡಮವರ್ಕೆ ನೀೞ್ಕರಿ[ಪಾಠಾಂ. ನಿರ್ಕಲಿ]ಸದುರ್ಕೆ ಬಂದಂ ಸ್ಮರಂ (ಮಲ್ಲಿಪು. ೧೪-೩೯) ; ಕಾೞ್ಕಿಚ್ಚು ತಗುಳೆ ತಮ್ಮೊಳ್ ಕೋೞ್ಕುಟ್ಟ ವನದ್ವಿಪೇಂದ್ರಚಯಮತಿಭಯದಿಂ ನೀೞ್ಕರಿ[ಪಾಠಾಂ. ಕಿೞ್ಕಲಿ]ಸಿ ನಿಲ್ಲದೆನಸುಂ ನಾೞ್ಕಿಡೆಪೋಪಂತೆ ಪೋಪುದೀ ನಗತಟದಿಂ (ಕಾವ್ಯಾಪ. ೨೯೮) ; ಸಮುಚಿತಧನಮಂ ನೀೞ್ಕರಿಸದಿತ್ತು ಚರನಂ ಬೀೞ್ಕೊಡೆ (ಅನಂಪು. ೧೩-೫೨). ೨. ಉದ್ದಮಾಡು ; ನೀಳವಾಗಿಸು : “ನೀಡುಕರಿಸಿದುದರ್ಕೆ ನೀೞ್ಕರಿಸಿತೆಂಬುದದು ಬಲ್ಮೆಗೆಯ್ದುದಱ ನಾಮಂ” (ಸಂಜೀವ.೨೨); ನಿಶಿತೋದಗ್ರಧಾರಾಗ್ರ ಶಸ್ತ್ರಚ್ಛಲಜಿಹ್ವಾಯುಗ್ಮಮಂ ನೀೞ್ಕರಿಸಿದನಿತೆ ನೀಡುತ್ತುಮಿಂತಿರ್ಪುದಾಜ್ಞಾಬಲವದ್ವಿಶ್ವಂಭರೋರ್ವೀಶ್ವರಕರಕಲಿತೋಗ್ರಾಸಿ ಕಾಲೋರಗೇಂದ್ರಂ (ಕುಸುಮಾ. ೩-೧೬) ; ಡಕಾರಕ್ಕಾದೇಶಮಾದ ೞಕಕ್ಕೆ ಪ್ರಯೋಗಂ—ಕಾಡುಕಿಚ್ಚು = ಕಾೞ್ಕಿಚ್ಚು . . . ನೀಡುಕರಿಸಿದಂ = ನೀೞ್ಕರಿಸಿದಂ (ಶಮದ. ೧೯ ಪ್ರಯೋ). ೩. ನೀಡುವಂತೆ ಮಾಡು ; ಹರಿಯ ಬಿಡುವಂತೆ ಮಾಡು : ಆಗಳಾಗಳ್ ಮೊೞಗುವ ಭೇರಿಯೊಂದು ಬಿಱುಸರಂ ಕಾರಗುಡುಗಂ ಪುಟ್ಟಿಸೆ ತುಂಬುಗೊಳನೊಳಂಬುಗೊಂಡ ಮುದ್ದುಂಚೆಗಳ್ಗೆ ಜಲಕ್ರೀಡೆಗೆ ಮನಮಂ ನೀೞ್ಕರಿಸುವ ದೇಗುಲಂಗಳಿಂ . . . ಊರು ಚೆಲ್ವಾಗೆ (ರಾಮಾಶ್ವ. ೧೦೨-೧೬). ೪. ವ್ಯಾಪಿಸು ; ಹಬ್ಬು ; ವೃದ್ಧಿಯಾಗು : ಇನ್ನೆಬರಂ ಕೊನೆವರಿದು ನೀೞ್ಕರಿಸಿದ ಬೞಿಯ ಬೞಿಯಿನಾಗಳ್ ತನ್ನೊಳ್ ತಡೆದುದೆಂಬೊಂದು ಬಾಗುಳ ಪೆೞಸಿನಗವಟ್ಟಾಗಳುಮಿನಾ ಕತದೊಳೆ ಬಗೆಗೆಟ್ಟರ್ಪ ರಾಯನೋಲಗಕೊರ್ಮೆ ಜಾಬಾಲಿಮುನಿಪಂ ಬಿಜಯಂಗೈದಂ (ರಾಮಾಶ್ವ. ೧೦೪-೧೯). **ನೀಳ್ಕರಿಸು$_1$** : ೧. ನೀಳ್ಕರಿಸದೆ ಜಾನಿಸಿ ಪೂಜಿಸುತೀ ಮಾಳ್ಕೆಯಿನಾದಂ ನಡುವಗಲಂಬರಮೆರ್ದೆಯುಂ ಕೈದಣಿಯೆ (ಉದ್ಭದೇ. ೩-೫೫). ೫. ಚಾಚು ; ನೀಡು : ಧರೆಯ ಮೇಲುಂಗುಟಾಗ್ರಮನೂಱಿ ನೀಳ್ಕರಿಸಿ ಕರಯುಗವ ಶಂಕರನ ಹೃದಯದೊಳು ನೆಲೆಗೊಳಿಸಿ ಪರಮಕಾಷ್ಠೆಯನೆಯ್ದಿ ತಪವನಾಚರಿಸುತಿರಲ್(ರಾಘಚ. ೧೧-೨೧). ೬. ಸಡಿಲಗೊಳಿಸು; ಶಿಥಿಲಗೊಳಿಸು : ಪದದೊಂದಂಗುಷ್ಠದಗ್ರಂ ನೆಲಸಿ ನೆಲದೊಳೊಂದಂಘ್ರಿಯಂ ಕೊಂಕಿಸುತ್ತಿತ್ತು ಮರಾಶಾಪಾಶಮಂ ನೀಳ್ಕರಿಸಿ ನಿಜಭುಜದ್ವಂದ್ವಮಂ ನೀಡಿ . . . ಯೋಗಾನ್ವಿತರ್ ಕಣ್ಗೆವಂದರ್ (ಶಬಶಂ. ೨-೭೧). ೭. ಹೆಚ್ಚಾಗು ; ಅಧಿಕವಾಗು : ವಿನಯಂ ತುಳ್ಕೆ ನೀಳ್ಕರಿಪ ಭಕ್ತಿಯಿಂ ನೋಡುತಿರೆ (ಕೊಟ್ಟೂಬ. ೧೬-೧೬). [<ನೀಡು$_2$ + -ಇಸು$_3$]

**ನೀೞ್ಕರಿಸು$_2$** ‘ನೀಕರಿಸು’ ನೋ.

**ನೀೞ್ದಾತ** (?). (?) : ಗಮನಮಂ ನೋರ್ಬ್ಬಂನ್ತೆ ವಿಲ್ವೊೞ್ಚ × × × ನೀೞ್ದಾತನೆಂದೀಯಾ (ಸೌಇಇ. XI-i, ೧೨-೨೧; 864). [ ? ]

△ **ನೀೞ್ಮುಡಿ** (ನಾ). ಉದ್ದವಾದ ಕೂದಲು ; ನೀಳವಾದ ಮುಡಿ: ಇರದೊಱೆವಾಲಿನೀರ್ವೊನಲಿನೞ್ಗಿಪರಗ್ಗಲಿಪಾಸ್ಯಶೋಷಮಂ ಜರಿದು ಪೊದೞ್ದ ನೀೞ್ಮುಡಿಯ ಪೆರ್ಮುಸುಕಿಂ ಬಿಸಿಲಾರ್ಪನಾಱಿಪರ್ (ಅಪ್ರತಿ. ೬೯-೭೩). [<ನೀಡು$_2$+ಮುಡಿ$_3$]

**ನುಂಗಣೆ** (ನಾ). ನುಂಗುವಿಕೆ ; ಕಬಳಿಸುವುದು: ದೇವರು ಕೊಟ್ಟದ್ದು ನುಂಗಣೆ ಮನುಷ್ಯರು ಕೊಟ್ಟದ್ದು ಹಂಗಣೆ (ಗಾದೆ).
[ನುಂಗು$_1$ + -ಅಣೆ$_4$]

**ನುಂಗಿ** (ನಾ). ೧. ನುಂಗುವವನು ; ಕಬಳಿಸುವವನು : ಉಚ್ಚಿಯ ಬಚ್ಚಲ ಕೊಚ್ಚೆಯ ತಾವು ಪೂಜಿಸುವ ನಿಶ್ಚಯರಿಗೆ ಮಱೆ ಮಾಡುವ ಮೆಚ್ಚು ನುಂಗಿಗೇಕೆ ನಿಶ್ಚಯದ ಅಱಿವು (ಸಗಬೊ. ಕ. ೬೨೪-೭). ೨. ನುಂಗುವಂಥದು ; ಕಬಳಿಸುವಂಥದು : ರಣವೀತಿಹೋತ್ರನುಗಿಗಳೊ ಭರ್ಗನ ನೆಱೆ ಪಣೆಗಣ್ಣಿನುರಿಯ ಸಂಗಿಗಳೊ ಸೆಣಸುವಭಟರ ನುಂಗಿಗಳೆನ್ನಲೆಸೆದುವು ಗಣನೆಯಿಲ್ಲದ ಪಿರಂಗಿಗಳು (ಕಂಸವಿ. ೬-೧೬).
[ನುಂಗು$_1$ + -ಇ$_3$]

**ನುಂಗಿಸು** (ಕ್ರಿ). ನುಂಗುವಂತೆ ಮಾಡು; ಕಬಳಿಸುವಂತೆ ಮಾಡು: ನಿನ್ನಂ ಕೊಂದನ ಬಸಿಱಿಂ ನಿನ್ನಂ ತೆಗೆಯದೆಯುಮವನ ಕರುಳಂ ಪರ್ದಿಂ ಮುನ್ನುಂಗಿಸಿ ನೋಡದೆಯುಂ ಮುನ್ನಮೆ ಯುವರಾಜ ನಿನ್ನನಾಂ ನೋಡಿದೆನೇ (ಪಂಪಭಾ. ೧೩-೫೭) ; ಶಿಂಗನಿಗೆ ಇನ್ನೊಂದೆರಡು ಮಾತ್ರೆಗಳನ್ನು ನುಂಗಿಸಿ ಅವನು ಬಿಡದಿಯಲ್ಲಿಯೇ ಉಳಿಯುವಂತೆ ಒಪ್ಪಿಸಿದೆ (ಹಸುಹೊ. ೨೦). [ನುಂಗು$_1$ + -ಇಸು$_3$]

**ನುಂಗು**$_1$ (ಕ್ರಿ). ೧. ಆಹಾರ, ಪಾನೀಯ ಮುಂತಾದುವುಗಳನ್ನು ಗಂಟಲೊಳಗೆ ಇಳಿಸು ; ಕಬಳಿಸು : "ನುಂಗು—ಗಲನೇ" (ಶಸುಧಾ); ಆತನ ಮಹಾದೇವಿ ಮಂದೆಯೆಂಬೊಳಾಕೆಗೆ ಗರ್ಭವಾಗಿ ಚಂದ್ರನಂ ನುಂಗುವ ಬಯಕೆಯಾಗಿ ಬಡವಾದೊಡೆ (ಪಡ್ಡಾರಾ. ೧೮೬-೯) ; ತೋರ ಮಲ್ಲಿಗೆಯು ತುಱುಂಬು ರಾಹು ತವೆ ನುಂಗಿದ ಚಂದ್ರನನೊಯ್ಯನೊಯ್ಯ ನಂದುಗುಟ್ಟುವೊಲೊಪ್ಪಿರಲ್ ಬಲದೊಳುರ್ವಿಸಿ ದೇಸಿಗೆ ದೇಸಿಯಾಡಿದಳ್ (ಪಂಪಭಾ. ೭-೮೭) ; ಪೆಱರ್ಗೀ ಬಯಕೆಗಳಂ ತಾನಱಿಪಿದೊಡಂ ತೀರ ದೆಂದು ಕಾಮಿನಿ ಮನದೊಳ್ ಮಱುಗಿ ಬಿಸಿದಪ್ಪ ತುಪ್ಪಮನಱಿಯದೆ ಶಿಶು ನುಂಗಿದಂತೆ ಚಿಂತಿಸಿ ಮನದೊಳ್ (ಧರ್ಮಾಮೃ. ೮-೧೦) ; ಆಕಾಶ ದಲಾಡುವ ಹದ್ದನೊಂದು ಸರ್ಪ ನುಂಗಿತ್ತ ಕಂಡೆ (ಆದಪ. ೩೫-೧೦೦) ; ನಂಬಿ ನಂಬೀ ಕಂದ ಮೊಸಳೆ ನುಂಗಿತೆ (ನಂಬಿರ. ೧೭-೧೫೭) ; ಕೊಂದ ಹೆಣನಂ ಕಾಣೆವಾತಂ ತಿಂದನೋ ವಿಧಿ ನುಂಗಿದುದೊ ಅದಱಿಂದವಱಿ ಯೆವು (ಬಸಪು. ೨೧-೧೭) ; ಆರ ದೀಪನ ಚೂರ್ಣಬಲದಲಿ ವೀರರುದ್ರನು ಜಗವ ನುಂಗುವನೋರೆಗೆಡೆಯದಿರಂಬ ಸುರಿ ಸುರಿ (ಕುಪ್ರಾದ್ರೋ. ೧೦-೫೨) ; ಬಾಳೆಗಳಂ ತಿಮಿ ನುಂಗೆ ನುಂಗಿದಾಗಳೆ ತಿಮಿಯಂ ತಿಮಿಂಗಿಳ ನಡಂಗುವಿನಂ ತವೆ ನುಂಗೆ ತತ್ತಿಮಿಂಗಿಳನುಮನಾ ತಿಮಿಂಗಿಳಗಿಳಂಗಳೆ ನುಂಗಿದುವು (ಕಾವ್ಯಸಾ. ೭೬). ೨. ಒಳಗೆ ಸೇರಿಸಿಕೊಳ್ಳು ; ಅಡಗಿಸಿಕೊಳ್ಳು : ನೆಗಪಿ ವರೂಥಮಂ ವಸುಧೆ ನುಂಗಿದುದಂ ಸಮಪಾದದಾಸನಂ ಬಗೆಗೊಳೆ ತನ್ನ ಮುಂ ತೆಗೆದ ದಕ್ಷಿಣಮುಷ್ಟಿಯೆ ಕರ್ಣಮೂಲದೊಳ್ ಸೊಗಯಿಸೆ ಪಾಟಿಯಂ ನೆಱಪದಾಳ್ದನ ಕಜ್ಜಮ ನೊಕ್ಕು ಸತ್ತರಂ ನಗುವವೊಲಿರ್ದನಂಗಪತಿ ನೆಮ್ಮಿ ನಿಜೋನ್ನತಕೇತು ದಂಡಮಂ (ಗದಾಯು. ೫-೧೨) ; ನಿಂದ ನೆಲ ನುಂಗುವಡೆ . . . ಬದುಕ ಬಹುದೇ (ತೊರರಾ. ೨-೩-೬). ೩. ತಿನ್ನು ; ಸೇವಿಸು : ಧರೆ ಬೀಜಂಗಳ ನುಂಗೆ . . . ಹರ ಕೊಲ್ಲಲ್ ಪರ ಕಾಯ್ವನೇ (ಸೋಮೇಶ. ೨೯) ; ಲಿಂಗವಿರಹಿತನಾಗಿ ಏನುವನು ನುಂಗಬಾರದು (ಸಾಹಿಜೀ. ೧೨೬). ೪. ಸಂಪೂರ್ಣವಾಗಿ ನಾಶಪಡಿಸು,– ಹಾಳುಮಾಡು,– ಇಲ್ಲದಂತೆ ಮಾಡು : ಈ ಜಗತ್ತ್ರಯಮನೊರ್ಮೆಯೆ ನುಂಗುವ ಕಾಲರೂಪಮಂ ತೋಱಿದಂ (ಪಂಪಭಾ. ೯-೬೦) ; ನೆಲನಂ ನುಂಗಲುಮಂಬುಧಿಜಲಮಂ ತವೆ ತುಳ್ಕಲುಂ ಕುಲಾಚಲಕುಲಮಂ ನೆಲೆಯಿಂ ಕಿಟಿಲುಂ ತಾರಾವಲಿಯು ನುದಿರ್ಚಲುಮೊಡರ್ಚಿದಂ ಚಕ್ರಧರಂ (ಕಾವ್ಯಾಪ. ೧೦೮) ; ಹರಿಯು ನುಂಗಿತ್ತು ಮಾಯೆ ಅಜನ ನುಂಗಿತ್ತು ಮಾಯೆ . . . ಎನ್ನ ಮಾಯುವ ಮಾಣಿಸಾ ಕರುಣಿ (ಮಹಾದೇ. ಕ. ೫-೬). ೫. ಕೊಲ್ಲು ; ಸಾಯಿಸು; ಸಂಹರಿಸು : ಕರಿಯಂ ನುಂಗಿ ಕಳಿಂಗನಂ ನೊಣೆದ ದರ್ಪಕ್ಕೊಂದು ಗೊಳ್ ಮತ್ಸಹೋದರರಂ ಕೋಪದೆ ತಿಂದುದರ್ಕೆರಡುಗೊಳ್ . . . ಎಂದು ಮಚ್ಚರದಿಂದೋವದೆ ಪೊಯ್ದನೆತ್ತಿ ಗದೆಯಂ ದುರ್ಯೋಧನಂ ಭೀಮನಂ (ಗದಾಯು. ೮-೧೮) ; ಮಾಱಾಂತವರ ನುಂಗದೆ ಮಾಣ್ದ ನಾದರೆ ದಿವಿಜಪತಿತನೂಜಂಗೆ ತಾ ಜನಿಸಿದವನಲ್ಲ (ಕುಪ್ರಾದ್ರೋ. ೪-೩೯) ; ನುಂಗದೆ ಉಗುಳಿದ ಮೃತ್ಯು, ಬಸವಂತಿಯನ್ನು ಶ್ಯಾಮರಾಯನಿಗೆ ಮಾಸಲು ಬಿಟ್ಟಿತ್ತು (ಮೀಪಹ. II, ೧೪೫). ೬. ಮುಸುಕು ; ಮುಚ್ಚು ; ಕಾಣದಂತೆ ಮಾಡು : ರಾಯರಿಬ್ಬರ ಮನದ ತಿಮಿರದ ತಾಯಿಮನೆಯೆಂಬವೊಲು ತಾ ಪೂರಾಯದಲಿ ನುಂಗಿದುದು ಕತ್ತಲೆ ನಿಮಿಷದಲಿ ಜಗವ (ಕುವ್ಯಾಕ. ೪-೩೯). ೭. (ದುಃಖ, ಕೋಪ ಮುಂತಾದ ಭಾವಗಳನ್ನು ) ಅದುಮಿಡು ; ಹತ್ತಿಕ್ಕು ; ತಡೆದು ಕೊಳ್ಳು : ನಿಮ್ಮ ಸ್ವಭಾವವು ಬಹಳ ಸಿಟ್ಟಿನದಿದ್ದರೆ, ಕೈಲಾದ ಮಟ್ಟಿಗೆ ಆ ಸಿಟ್ಟು ನುಂಗುವುದಕ್ಕೆ ಯತ್ನಮಾಡಿರಿ (ಮುಂಬಯಿ. ೪-೧೬) ; ಪಾಂಡೂ ಆದನ್ನು ರಾಚಪ್ಪನ ಕಿವಿಯಲ್ಲಿ ಉಸಿರಿದ್ದ. ರಾಚಪ್ಪ ಅದನ್ನೂ ನುಂಗಿದ್ದ (ಮೀಪಹ. II, ೧೪೦). ೮. (ಆಲಂ) (ಪರರ ಸ್ವತ್ತು, ಹಣ ಮುಂತಾದುವುಗಳನ್ನು ) ಎತ್ತಿ ಹಾಕು ; ಲಪಟಾಯಿಸು ; ತಿಂದು ಹಾಕು : ಆತನಿಗೆ ನಂಬಿಕೆ ಮೇಲೆ ದುಡ್ಡು ಕೊಟ್ಟರೆ ಪೂರ್ತಿ ಹಣವನ್ನು ನುಂಗಿಬಿಟ್ಟ (ರೂಢಿ).

**ನುಂಗಲಾರದ ಗುಳಿಗೆ** = ಸಹಿಸಲಾಗದುದು : ಯಾವ ಸಮಾಜ ವನ್ನು ತಾನು ಗೌರವಿಸುವುದಿಲ್ಲವೊ ಅಂಥ ಸಮಾಜದ ಜನರಿಂದ ಸಹಾಯ ಯಾಚನೆ ಮಾಡುವುದೆಂದರೆ ಅವನಿಗೆ ನುಂಗಲಾರದ ಗುಳಿಗೆಯಾಗಿತ್ತು (ಪುನರು. ೩೩). **ನುಂಗಲಾರದ ತುತ್ತು** = ೧. ನಿಭಾಯಿಸಲು ಆಗದ ಮಾತು ಅಥವಾ ಕಾರ್ಯ : ಭಾಗೀರಥಿಗೆ ಕಮಲವ್ವನ ಮಾತು ಗಳು ನುಂಗಲಾರದ ತುತ್ತಾದವು (ಭಾರಥಿ. ೧೭). ೨. ಅರ್ಥಮಾಡಿ ಕೊಳ್ಳಲು ಕಷ್ಟವಾದುದು : ಕುಮುದಾ ಅವನಿಗೆ ನುಂಗಲಾರದ ತುತ್ತಾದಳು (ರೂಪಸ. ೧೪೪). **ನುಂಗಿಕೊಳು, ನುಂಗಿಕೊಳ್ಳು** = ೧. ಎತ್ತಿಹಾಕು ; ಲಪಟಾಯಿಸು : ಎಮ್ಮ ಭಕ್ತರು ಕೊಟ್ಟ ಪಾತ್ರೆಯಂ ಪಿಡಿತಂದು ತಮ್ಮ ವಶದೊಳು ಕೊಟ್ಟು . . . ಇರಿಸಲ್ಕದಂ ಕೊಂಡು ಮೌನದಿಂದಿರ್ದಪರು ಹಿರಿಯರೀ ಪಾತ್ರೆಯಂ ನುಂಗಿಕೊಂಡಿರ್ದಪರು (ತಿರುರ. ದೇ. ೧೬-೬) ; ಕೊಟ್ಟ ಸಾಲವ ನುಂಗಿಕೊಳಲೆಣಿಪರು (ಪುರಂದ. ೧-೨೮-೨). ೨. ಕಬಳಿಸು ; ನುಂಗು : ಏನೇ ! ನುಂಗಿಕೊಳ್ಳುವ ಹಾಗೆ ದುರುಗುಟ್ಟುತ್ತಿರುವೆ ! (ಮಂತ್ರಶ. ೫೫-೧೬). ೩. ಹತ್ತಿಕ್ಕು; ಅದುಮಿಡು : ತಂದೆಯ ಸಾವಿನ ಘೋರಸಂಕಟವನು ನುಂಗಿ ಕೊಂಡೆನು ಹೇಗೊ ಒತ್ತಿ (ಇಂಚಾಪ. ೨೩-೩) ; ನುಂಗಿಕೊಂಡ ಸಂಕಟ ಬೆಂಕಿಗಿಂತ ಹೆಚ್ಚು (ಪಚಭಾ. ೧೨೧) ; ಇಬ್ಬರೂ ರೋಷವನ್ನು ನುಂಗಿ ಕೊಂಡು ಸುಮ್ಮನಿದ್ದರು (ಒಡೆಕ. ೨೨). **ನುಂಗಿ ನೀರ ಹಿಡಿ** = ನಾಶ ಮಾಡು ; ಹಾಳುಗೆಡವು : ನನ್ನ ಮಾತು ಕೇಳಿ ಒಂದು ಜೀವಾ ಹೊಡದದ್ದ ಸಾಕು. ಇನ್ನೊಂದು ಜೀವಾ ದಾದಾನದು ; ಅದನ್ನೂ ಒಂದು ನುಂಗಿ ನೀರ ಹಿಡಿದರ ದೇವರ ಮುಂದ ಏನ ಜವಾಬ ಕೊಡೂದೈತಿ ? (ಗ್ರಾಮಾಯ. ೧೩೧). **ನುಂಗಿ ನೀರ್ಗುಡಿ, ನುಂಗಿ ನೀರು ಕುಡಿ** = ೧. ಸಂಪೂರ್ಣವಾಗಿ ನುಂಗಿಬಿಡು : ಬಿಸು ಗದಿರನ ನುಂಗಿ ನೀರ್ಗುಡಿದಖಿಳರಾಕ್ಷಸಿಯ ಮಸ್ತಕದ ಬೈತಲೆಯ ಅಸಿಯ ಚಂದ್ರಾಂಕಿತವೆಂಬಂತೆ ಸಂಜೆಗೆಂಪೆಸೆದುದು (ಮೋಹತ. ೨೭-೨೨). ೨. ಸಂಪೂರ್ಣ ಹಾಳುಮಾಡು : ಕೆಂಗಿಡಿಗಱೆಯುತ್ತೆ ಪರಿತಂದು ಮದನನ ನುಂಗಿ ನೀರ್ಗುಡಿದುದು (ಮೋಹತ. ೩೮-೨೦) ; ಮೊಗಲ ಸಾಮ್ರಾಜ್ಯವನ್ನು ಅವರು ಎಂದೋ ಕಬಳಿಸಿಕೊಂಡಿದ್ದಾರಲ್ಲದೆ ಪೇಶ್ವೆ ಯರ ರಾಜ್ಯಗಳನ್ನು ನುಂಗಿ ನೀರು ಕುಡಿದಿದ್ದರು (ಪ್ರಬಂಧ. ೫೪). **ನುಂಗಿ ನೊಣೆ** = ಸಂಪೂರ್ಣವಾಗಿ ಹಾಳುಮಾಡು: ನಾಳೆಯೊ ನಾಡಿದೊ ಕಾಲನ ಧಾಟಿಯುವಂ ನುಂಗಿ ನೊಣೆಗುಗುಂ ಶರಣಾರೆಂದಾಳೋಚಂ ಗೆಯ್ಯದೆ ದಿಟಬಾಟೆಂದುಱಿ ಬೆಱಿತು ಬೀಗುವರ್ಗೇಗೆಯ್ವೆಂ (ಶಬ್ದಾನು. ೪೬೪ ವ್ಯಾಖ್ಯಾ).

[**ದೇ.**॥ **ತಮಿ.** ನುಙ್ಙು, ನೊಣ್ಙು ; **ತುಳು.** ನಿಂಗು ; **ಕೋತ.** ನುಂಗ್ ; **ತೊದ.** ನುಗ್ ; **ಮಲ್ತೊ.** ನುಂಗೆ]

**ನುಂಗು**$_2$ (ನಾ). ಆವರಣ ; ಮುಸುಕು : ನೇರಗುರಿಯನರಸಿ ಕಂಡ ರದ ನೋಡುವೆನು ಇಲ್ಲದಿರೆ ಕಳ್ತಲೆಯ ನುಂಗಿನೊಳಗಾಂ ಸೇರಿ ಅಳಿಸಿ ಪೋಗುವೆನು (ವಿಸೀಗೀ. ೧೯-೨೦).

[<ನುಂಗು$_1$]

**ನುಂಗು**$_3$ (ನಾ). ೧. ತಾಳೆಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಕಾಯಿ. ೨. ತಾಳೆ ಕಾಯಿಯೊಳಗಿರುವ ಎಳೆಯ ಕೊಬ್ಬರಿ : ಕಾಯಿ ಹೆಚ್ಚುಕಡಿಮೆ ದುಂಡು . . . ಚಿಪ್ಪಿನೊಳಗಡೆ

ಎಳನೀರು, ಎಳಕೊಬರಿ;ಎಂದರೆ 'ನುಂಗು', 'ತಾಟನುಂಗು' (ಹಸುಹೊ. ೩೩೫). [ದೇ.॥ ತಮಿ. ನುಙ್ಙು ; ಮಲ. ನೊಙ್ಙು ; ತೆಲು. ನುಂಗು]

**ನುಂಗುಂಗಣ್ಣು** (ನಾ). ಕಬಳಿಸುವಂತೆ ನೋಡುವ ನೋಟ ; ಬಿರುನೋಟ : ಏನೇ ! ನುಂಗಿಕೊಳ್ಳುವ ಹಾಗೆ ದುರುಗುಟ್ಟುತ್ತಿರುವೆ . . . ನುಂಗುಂಗಣ್ಣು ಮೆಳ್ಳವ್ವೆ ! (ಮಂತ್ರಶ. ೫೫-೧೭).
[ನುಂಗು$_1$+ಕಣ್ಣು (<ಕಣ್)]

**ನುಂಗುರುಳು** 'ನುಣ್ಗುರುಳ್' ನೋ.

**ನುಂಗುಹ** (ನಾ). ಕಬಳಿಸುವುದು ; ನುಂಗುವಿಕೆ : "ಗೀರ್ಣಃ, ಗಿರಿಃ—೨ ನುಂಗುವಿಕೆ" (ಸಿದ್ಧಾಂತಿ. ೩೫೪) ; ಇದು ಬಾಯೊಳಗಣ ಹುಣ್ಣು ಹೇವರಿಸಿದ ಮತ್ತೆ ಇನ್ನಾವ ಠಾವಿನಲ್ಲಿ ನುಂಗುಹ (ಸಕಪ. ಬಾಬೊಪ್ಪು. ೫೫೯-೨೬ [ನುಂಗು$_1$+ –ಹ$_2$ (< –ಪ$_2$)]

**ನುಂಗೊರಳ್** 'ನುಣ್ಗೊರಲ್' ನೋ.

**ನುಂಗೊಲೆವಡಿಸು** (ಕ್ರಿ). (?) : ತಿಳಿವಿಪ್ಪಲವಾಗಿರೆ ಗೋಜಳದೊಳ್ ಭಾವಿಸಿದ ವಾಕುಚಿಯ ಬೀಜಮುಮಿಪ್ಪಳವಾಗಿರೆ ತಿಂದೊಡೆ ನುಂಗೊಲೆ ವಡಿ(ರಿ)ಸುವ ತುಱು ಕೆಱಂಕಿನೆಸಕಂ ಮಾಣ್ಗುಂ (ಲೋಕೋಪ.೯-೧೧೨).
[ನುಂಗೊಲೆ? +ಪಡಿಸು]

**ನುಂಚರ** 'ನುಣ್ಚರ' ನೋ.

**ನುಂಪಡರ್** 'ನುಣ್ಪಡರ್' ನೋ.

**ನುಂಪಿಡಿ** 'ನುಣ್ಪಿಡಿ' ನೋ.

**ನುಂಪಿಸು** (ಕ್ರಿ). ಸೊಗಸುಗೊಳಿಸು ; ಮನೋಹರವಾಗುವಂತೆ ಮಾಡು : ಸಂಪಗೆಯೊಳು ಮುಡಿವಾಳ ಬೆರೆದ ಕಂಪ[ವು] ನುಂಪಿಸೆ ಮನಕುತ್ಸಹವ ಸೊಂಪಾದವಿಸಿಯಯಳಾಲಿಂಗನ ಸವಿಯಂತೆ ಇಂಪುದೋಱು ವುದು ಕೇಳ್ವರಿಗೆ (ಅಬ್ಬಲೂ. ೧-೧೪). [ನುಂಪು(<ನುಣ್ಪು)+ –ಇಸು$_3$]

**ನುಂಪು** 'ನುಣ್ಪು' ನೋ.

**ನುಂಪುದೊಡೆ** (ನಾ). ನುಣುಪಾದ ತೊಡೆ ; ನಯವಾದ ತೊಡೆ : ನುಂಪುದೊಡೆ ಬಾಳೆಗಳ್ ಪೊಕ್ಕುಳೇ ಕೊಳಂಗಳ್ . . . ತೋರ ಸೋರ್ಮುಡಿ ನವಿಲ್ಗಳಾಗಲಾ ಸತಿಯರೆಂದೆಂಬ ಚೆಲ್ವಿಡಿದ ಜಂಗಮವನಂ ಸ್ಥಾವರವನಕ್ಕೈದುವಂತೆ ವನಮಂ ಪೊಕ್ಕರು (ಚೆಬಪು. ೪೫-೩೪).
[ನುಂಪು(<ನುಣ್ಪು)+ತೊಡೆ$_2$]

**ನುಂಪುವಣೆ** (ನಾ). ನುಣುಪಾದ ಹಣೆ ; ಚೆಲುವಾದ ನೊಸಲು : ಕೆಂಪೇಱುವರಳ್ಗಣ್ಣ ಕಡೆಪರೆದ ಕುರುಳಾಂತ ನುಂಪುವಣೆ ಮುಸುಳ್ದ ತಿಲಕಂ . . . ಕೆದಱುದ ನಿಱುಯ ಸುರತಾಂತೆಯರ್ ದೇವಕಾಂತೆಯರ್ ಬರುತಿರ್ದರು (ಚೆಬಪು. ೧೯-೨೫). 'ನುಣ್ಬಣೆ' ಪರಾ.
[ನುಂಪು (<ನುಣ್ಪು)+ಪಣೆ$_1$]

**ನುಂಬೆರಲ್** 'ನುಣ್ಬೆರಲ್' ನೋ.

**ನುಂಬೆಳಗು** 'ನುಣ್ಬೆಳಗು' ನೋ.

**ನುಕಸಾನಿ** 'ಲುಕ್ಸಾನು' ನೋ.

**ನುಕಸಾನು** 'ಲುಕ್ಸಾನು' ನೋ.

**ನುಕ್ಸಾನು** 'ಲುಕ್ಸಾನು' ನೋ.

**ನುಗಿಸು** 'ನೂಂಕಿಸು' ನೋ.

**ನುಗುತೆ** (ನಾ). ಹೊಗುವಿಕೆ ; ಪ್ರವೇಶ : 'ನುಗುತೆಗಂಡಿ' ಪರಾ.
[<ನುಗುಳ್+–ತೆ$_2$]

**ನುಗುತೆಗಂಡಿ** (ನಾ). ಹೊಗುವ ಕಂಡಿ ; ಪ್ರವೇಶಿಸುವ ಕಂಡಿ : ಒಗುವ ನೆತ್ತರ ಸುರಿವ ಬಾಣದ ನುಗುತೆಗಂಡಿಯ ಮೆಯ್ಯ ಭೀಮನ ಬೆಗಡು ಮೊಳೆತುದು ಗುರುತನೂಭವನೆಚ್ಚ ನನಿಲಜನ (ಕುವ್ಯಾಕ. ೩-೨೪). 'ನುಗುಳುಗಂಡಿ' ಪರಾ. [ನುಗುತೆ+ಕಂಡಿ$_1$]

**ನುಗುನಾಡು** (ನಾ). ಒಂದು ಪ್ರದೇಶದ ಹೆಸರು ; ▷ ಈಗಿನ ಮೈಸೂರುಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನ ನುಗು ನದಿ ಹರಿಯುವ ಪ್ರದೇಶ : ಶ್ರೀಮದೆಱೆಪ್ಪೆರಸರ್ ನುಗುನಾಡು ನವಲೆನಾಡುಮೂನಾಳುತ್ತಮಿರೆ (ಎಕ. IV, ಹೆಗ್ಗಡ. ೧೦೩-೫ ; ಸು. 910) ; ಕುಡಿಯರಾಭರಣಂ ನುಗುನಾಡ ರಾಮನೆನ್ನಡೆ ಕಲಿಕಾಲ ಕರ್ಣ್ಣ (ಎಕ. IV, ಹೆಗ್ಗಡ. ೧೮-೭ ; 1057). [ ? +ನಾಡು]

**ನುಗುಳ್,** ನುಗುಳು, ನುಗುಱ್ (ಕ್ರಿ). ೧. ಪ್ರವೇಶಿಸು ; ಹೊಗು : "ನುಗುಳ್— ದ್ವಾರಪ್ರವೇಶೇ" (ಶಮಧಾ) ; ಅಂತು ಸೊಗಯಿಸುವ ವನವೇದಿಕೆಯ ನಾನಾಮಣಿಮಯಮಯೂಖಮಾಲಾವಿರಾಜಿ ತೋತ್ತುಂಗತೋರಣದ್ವಾರದಿಂದಂ ನುಗುಳ್ದು ವನವೀಥಿವಿಡಿದು ಬಂದು (ಆದಿಪು. ೧೩-೧೧ ಪ) ; ಮಕರತೋರಣಮಂ ನುಗುಳ್ದು ಪೋಗಿ . . . ಕರುಮಾಡದ ಬಾಗಿಲನೆಯ್ದಿವಂದು (ಶಾಂತಿಪು. ೩-೧೯ ಪ) ; ಸೊಗಯಿಪ ತಳಿರ್ದೋರಣಮಂ ನುಗುಳುತ್ತುಂ ಪಲರ ಪರಕೆಯಂ ಕೈಕೊಳುತುಂ . . . ಎಯ್ದಿದಂ ನನೆಗಣೆಯುಂ (ಕಬ್ಬಿಕಾ. ೧೪೪). ೨. ಇಕ್ಕಟ್ಟಾದ ಪ್ರದೇಶದಲ್ಲಿ ನುಸುಳು,—ತೂರು : ಸಂತಸದೆ ಮೈಮಱೆದು ಕೂಡೆ ಕುಣಿವಜ್ಜರಿಂ ಅಂತವರ ಕಾಲೆಡೆಗಳೊಳ್ ನುಗುಳ್ವ ಗುಜ್ಜರಿಂ . . . ಕರವೆ ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಜಿಪು. ೪-೧೭ ೭೫). ೩. ನುಣುಚಿಕೊಳ್ಳು ; ತಪ್ಪಿಸಿಕೊಳ್ಳು : ಘನಸ್ನೂಸ ನೊಳಬಗೆಯ ಉದ್ದೆಸಮನೆಂತುಂ ತಪ್ಪಿಸುತೆ ನುಗುಳಲ್ ಧಾರಿಯೆನಗಾವು ದಿನ್ ? (ಬದ್ಧಪ್ರ. ೪೭-೧೦೪೦). **ನುಗುಳು :** ೧. ಮಣಿಮಾಡ ಕುರುಜು ಪತಾಕೆ ವಿಚಿತ್ರತೋರಣಗಳ ನುಗುಳುತೆಯ್ತಂದು (ಭರಚ. ೩೯-೨೭). △**ನುಗುಱ್ :** ೧. ಆರೊವ್ವರಿದರ್ಕ್ಕೆ ವಕ್ರಂ ಬನ್ದಳಿದು ನಡೆಯಿಸೆಮೆನ್ನಡೆ ಸಿರಿವಾಗಿಲಲೆನಿಸೆಟ್ಟು ನುಗುಱ್ದು ಪೋದವನಿತುಮನಳಿದ ಮಹಾಪಾತಕನಕ್ಕುಂ (ಸೌಇಇ. XI-i, ೭೫-೨೫ ; 1042). 'ನುಸುಳ್$_1$' ಪರಾ. [ದೇ.॥ ತಮಿ. ನುಟುವು, ನುಟ್ಯೆ ; ಮಲ. ನುಱಿಯು, ನೂಳು ; ತುಳು. ನೂರು]

**ನುಗುಳಿಸು** (ಕ್ರಿ). ತೂರಿಸು ; ನುಸುಳುವಂತೆ ಮಾಡು : ನಿನ್ನ ಸೊಮ್ಮಿನ ಟೀಕಾ ಟಿಪ್ಪಣಗಳನ್ನು ನುಗುಳಿಸಿ ಭಾರಮಾಡಿ ಕ್ಲಿಷ್ಟತೆಗೆ ಕೆಡಹದೆ, ತಕ್ಕ ತೆರದಲ್ಲಿ ಶ್ರುತಪಡಿಸಿಕೊಳ್ಳುತ್ತಿರುವುದು ಅರಿವಾಯ್ತೆ ? (ಬಿಟ್ಟಅ. ೭೭-೧೯). [ನುಗುಳ್+–ಇಸು$_3$]

**ನುಗುಳು** 'ನುಗುಳ್' ನೋ.

**ನುಗುಳುಗಂಡಿ** (ನಾ). = ನುಗುತೆಗಂಡಿ : ಹೊಗಿಸಬೇಡಾರುವನು ಕರ್ಣಾದಿಗಳು ಮೊದಲಾಗೆಂದು ಪಡ್ಡಿಯ ನುಗುಳುಗಂಡಿಯ ಕಾಹ ಕೊಟ್ಟನು ತನ್ನ ಬೇಹವರ (ಕುವ್ಯಾಅ. ೨೧-೧೭) ; ತೆಗಸಬೇಹುದು ತರಣಿಬಿಂಬವ ತಗುಳ್ವ ತಿಮಿರವ ನಿಮ್ಮ ಹಂಗಿನ ನುಗುಳು[ಪಾಠಾಂ. ಳ] ಗಂಡಿಯ ನುಸುಳುದಲೆಗನೆ ಮರಳಿ ನೀವು (ಕುವ್ಯಾಕ. ೧೯-೧೭).
[ನುಗುಳು(<ನುಗುಳ್)+ಕಂಡಿ$_1$]

**ನುಗುಳ್ಚು** (ಕ್ರಿ). = ನುಗುಳ್ ೨ : "ನುಗುಳ್ಚು—ಸೂಕ್ಷ್ಮದ್ವಾರ ಪ್ರವೇಶೇ" (ಶಮಧಾ). [ನುಗುಳ್+–ಚು$_1$]

△**ನುಗುಱ್** 'ನುಗುಳ್' ನೋ.

**ನುಗ್ಗಡಿ** (ನಾ). ಚೂರು ; ಛಿದ್ರ ; ತುಂಡು : 'ನುಚ್ಚುನುಗ್ಗಡಿ' ಪರಾ. [ನುಗ್ಗು$_4$(<ನುಜುಂಗು$_2$)+ಕಡಿ$_3$]

**ನುಗ್ಗರಿ** (ಕ್ರಿ). ಚೂರುಚೂರಾಗಿ ಮಾಡು ; ನಾಶಮಾಡು ; ಪುಡಿಮಾಡು : ಭರದಿ ರಥದ ಚಕ್ರಗೊಂಡು ತಿರುಹುತಿನಜಗೆರಗಿ ಬೊಬ್ಬಿರಿದು ರಥ ತುರಂಗ ನುಗ್ಗರಿದ ನಿಮಿಷದೀ (ಅಭಿಕಾ. ೧೫).
[ನುಗ್ಗು$_4$ (<ನುಜುಂಗು$_2$)+ಅರಿ$_1$]

**ನುಗ್ಗರಿ** (ಕ್ರಿ). ನಾಶಗೊಳಿಸು ; ಛಿದ್ರಮಾಡು ; ಹಾಳುಮಾಡು : ಇಪ್ಪತ್ತೊಂದು 'ಅಱುಕೆಗಾಳೆಗ'ಗಳಲ್ಲಿ ವಿರೋಧಿರಾಜವಂಶಗಳನ್ನು ನುಗ್ಗರಿದವನೆಂದರೆ ಪರಶುರಾಮನು (ನಾಡೋಜ. ೧೫೯).

[ನುಗ್ಗು$_4$(<ನುಱುಗು$_2$)+ಅರಿ$_1$]

**ನುಗ್ಗಾಟ** (ನಾ). ಗುಂಪಿನ ಗೊಂದಲದಲ್ಲಿ ನೂಕುತ್ತಾ ಮುಂದೆ ಸರಿಯುವಿಕೆ ; ನೂಕುನುಗ್ಗಲು : ಗುಂಪಿನ ನುಗ್ಗಾಟದಿಂದ ಅವರ ಕರ್ಣಪಲ್ಲವಗಳು ಜಾರುತ್ತಿದ್ದವು (ಬಾಣಅ. ೧೨).

[ನುಗ್ಗು$_1$(<ನುರ್ಗು$_1$)+ಆಟ]

**ನುಗ್ಗಿ** 'ನುಗ್ಗೆ' ನೋ.

**ನುಗ್ಗಿಸು** (ಕ್ರಿ). ಬಲವಂತದಿಂದ ಒಳಹೊಗಿಸು ; ಬಲಾತ್ಕಾರದಿಂದ ನುಗ್ಗುವಂತೆ ಮಾಡು : ಬಸ್ಸಿನಲ್ಲಿ ಕಾಲೂರುವುದಕ್ಕೆ ಸ್ಥಳವಿಲ್ಲದಿದ್ದರೂ ಕಂಡಕ್ಟರು ಒಂದೇ ಸಮನೆ ಜನರನ್ನು ಬಸ್ಸಿನೊಳಕ್ಕೆ ನುಗ್ಗಿಸಿದ (ರೂಢಿ). [ನುಗ್ಗು$_1$ (<ನುರ್ಗು$_1$)+-ಇಸು$_3$]

**ನುಗ್ಗಿಳೆ** (ನಾ). ಒಂದು ಬಗೆಯ ಮರ : ಪೂಗ ತ್ಯಾಗ ಹೇರಳೆ ಹೊಂಗೆ ನುಗ್ಗಿಳಂ ಗನ್ನೇರಳೆ (ಸಿದ್ಧಕಾ. ೬-೧೭).

[ ℙ ಇದು 'ಗುಗ್ಗಿಳ'ಎಂಬುದರ ಅಪಲಿಖಿತವಿರಬಹುದೆ ? ]

**ನುಗ್ಗು$_1$** 'ನುರ್ಗು$_1$' ನೋ.

**ನುಗ್ಗು$_2$** 'ನುಱುಕು' ನೋ.

**ನುಗ್ಗು$_3$** (ನಾ). ನೂಕಾಟ ; ನೂಕುನುಗ್ಗಲು : ನುಗ್ಗಿನಲೆಡೆಗುಡದೆ ನಿಂದು ಮೊನೆಗೊಡಿರನುವಿಂ ಹಿಗ್ಗಿ ಪೆಱಸಾರದಿರಿ (ಹವಿಸ್ಮಾರ. ೩-೩೯).

[<ನುರ್ಗು$_1$]

**ನುಗ್ಗು$_4$** 'ನುಱುಗು$_2$' ನೋ.

**ನುಗ್ಗುಗಲ್** (ನಾ). ಚೂರುಚೂರಾದ ಕಲ್ಲು : ಗುಗ್ಗುರಿಗಲ್ಗುಂಡುಗಲ್ಲು ಮೊರಡಿ ಬೆಟ್ಟ ನುಗ್ಗುಗಲ್ಗುದುರೆಗಲ್ಲುಗಳ ಮೊಗ್ಗರದೊಳ್ಕಾಲಾಡಬಾರದು ಬಲುದುರ್ಗವದಿಳೆಗಸುರೇಂದ್ರ (ಕುರಾಸಾಂ. ೨೦-೯೬).

[ನುಗ್ಗು$_4$(<ನುಱುಗು$_2$) + ಕಲ್$_3$]

**ನುಗ್ಗುಗುಟ್ಟು** 'ನುರ್ಗುಗುಟ್ಟು' ನೋ.

**ನುಗ್ಗುಗೆಯ್**, ನುಗ್ಗುಗೈ (ಕ್ರಿ). ೧. ಪುಡಿಮಾಡು ; ಚೂರುಮಾಡು : ಬಿಳಿಯ ಸೊಜ್ಜಿಗೆಯೊಳಂಗರವಳಿಗೆಯಂ ಮಾಡಿ ಬಳಿಕ ಬೇಯಿಸಿ ನುಗ್ಗುಗೆಯ್ದು ಕರ್ಪುರವುಡಿಯ ತಳಿದು ದೀಪದ್ರಾಕ್ಷಿ ಖರ್ಜೂರವಣ್ಣು ಕೆನೆದುಪ್ಪ ಸಕ್ಕರೆಯನಿಕ್ಕಿ ತುಳಿದು ರೊಟ್ಟಿಯ ಮಾಡಿ (ಸೂಪಶಾ. ೧-೧೫). **ನುಗ್ಗುಗೈ : ೨.** ಧ್ವಂಸಮಾಡು ; ನಾಶಗೊಳಿಸು : ಸಗರಸುತರೆಲ್ಲರುಂ ಬಗಿದೀ ಮಹೀತಳವ ಮೊಗವ ಕಂಡವರುಗಳ ನುಗ್ಗುಗೈದಪರ್ (ವೆಂಕಾರಾ. ೧-೧೪-೫೮).

[ನುಗ್ಗು$_4$(<ನುಱುಗು$_2$)+ಕೆಯ್$_1$]

**ನುಗ್ಗುಗೈ** 'ನುಗ್ಗುಗೆಯ್' ನೋ.

**ನುಗ್ಗುನುರಿ** 'ನುರ್ಗುನುಱಿ' ನೋ.

**ನುಗ್ಗುನುಸಿ** (ನಾ). ಜರ್ಝರಿತವಾದುದು ; ಜೀರ್ಣವಾದುದು ; ಚೂರುಚೂರು ; ಪುಡಿಪುಡಿ : ನೊಸಲ ಸೀಸಕ ನುಗ್ಗುನುಸಿ ಬಂಧಿಸಿದ ಸರಪಣಿ ಹಿಳಿದವರಿಬಲದೆಸಕ ನಿಂದುದು ಪಾರ್ಥನೆಚ್ಚನು ವೈರಿಮೋಹರವ (ಕುಪ್ಯಾದ್ರೋ. ೧೦-೩).

ನುಗ್ಗುನುಸಿ ಮಾಡು = ಜರ್ಝರಿತಗೊಳಿಸು: ಧ್ವಂಸ ಮಾಡು; ನಾಶಗೊಳಿಸು : ಮುಗ್ಗಿ ಬೀಳುವ ಪಾಯದಳವನು ನುಗ್ಗುನುಸಿ ಮಾಡಿದನು ರಕುತದ ಸುಗ್ಗಿಯಾದುದು ಶಾಕಿನಿಯರಿಗೆ ಕಳನ ಚೌಕದಲಿ (ಕುಪ್ಯಾಭೀ. ೮-೪೬) ; ಹೊದಱ ಹೊರೆಳಿಸಿ ನುಗ್ಗುನುಸಿ ಮಾಡಿದ ನಶೋಕಾವನದ ಘನಸಂಪದದ ಸೊಗಸಿನ ವಿವಿಧ ಗುಲ್ಮಲತಾವಿತಾನಕವ (ತೊರರಾ. ೫-೪-೪). **ನುಗ್ಗುನುಸಿಯಾಗು** = ಅಜಿಗಿಜಿಯಾಗು ; ನಾಶವಾಗು ; ಹಾಳಾಗು : ಮುರಿದು ಮಂದರಗಿರಿ ಪಯೋಧಿಯ ತೆರೆಗಳನು ತುಳಿವಂತೆ ರಿಪುಮೋಹರವನರೆದುದು ನುಗ್ಗುನುಸಿಯಾಯ್ತಖಿಳ ತಳತಂತ್ರ (ಕುಪ್ಯಾದ್ರೋ. ೩-೧೮) ; ಬಸವಳಿದಳ್ಳೆ ವೊಯ್ದೆಯಾಱು ಮೈ ನುಗ್ಗುನುಸಿಯಾಗಿ ಜಡರು ಕೂಡುವರು (ಭರಚ. ೧೦-೧೨೬) ; ನಿಗ್ಗವ ದೋಳಿಡಿಱುಯೆ ಕುಲಪರ್ವತಂಗಳುಂ ನುಗ್ಗುನುಸಿಯಪ್ಪುವು (ಜೆಬಪು. ೨೮-೧೦). [ನುಗ್ಗು$_1$(<ನುಱುಗು$_2$)+ನುಸಿ$_2$]

**ನುಗ್ಗುನುಱಿ** 'ನುರ್ಗುನುಱಿ' ನೋ.

**ನುಗ್ಗುನೆರೆ** (ನಾ). ನುಗ್ಗಿ ಬರುವ ಮಹಾಪೂರ ; ಹುಚ್ಚು ಪ್ರವಾಹ : ಅವುದಾ ಪಡೆ ಸೆಣಸಿ ಕೆಡದೆ ಅಣೆಕಟ್ಟನೊಡ್ಡುವುದು ತಂದು ? ಆ ನುಗ್ಗುನೆರೆಗಿದಿರ್ ನಿಂದು (ಪಾರಸಿ. ೬-೧೨೭).

[ನುಗ್ಗು$_1$(<ನುರ್ಗು$_1$) + ನೆರೆ$_6$(<ನೆಱೆ$_2$))

**ನುಗ್ಗುಮೊನೆ**(ನಾ). ಯುದ್ಧ ಅಥವಾ ಆಕ್ರಮಣದಲ್ಲಿ ಮುಂದಾಗಿ ನುಗ್ಗಲು ನೇಮಕವಾದ ಸೈನ್ಯ ; ಮುಂಚೂಣಿಯ ದಳ : "ಆಕ್ರಮಣದ ಮುಮ್ಮೊನೆ, ನುಗ್ಗುಮೊನೆ" (Spearhead. ಇಂಕನಿ).

[ನುಗ್ಗು$_1$(<ನುರ್ಗು$_1$) + ಮೊನೆ$_2$]

**ನುಗ್ಗುವೊಯ್** (ಕ್ರಿ) ಪುಡಿಯಾಗುವಂತೆ ಬಡಿ ; ಹುಡಿಗುಟ್ಟು ; ಧ್ವಂಸಗೊಳಿಸು : ದ್ವೀಪಾಂತರಕೆಯಿಲ್ಲಿಂ ಪೋಗಿಯಾ ರಥನೂಪುರಚಕ್ರವಾಳವನು ವ್ಯಾಪಿಸಿದಾ ವಜ್ರಖರ್ಪರವನು ಕೋಪಾಟೋಪದಿಂದ ನುಗ್ಗುವೊಯ್ದು (ನೇವಿ:ಸಂ. ೨೬-೪೬).[ನುಗ್ಗು$_4$(<ನುಱುಗು$_2$)+ಪೊಯ್$_1$]

**ನುಗ್ಗೆ**, ನುಗ್ಗಿ, ನುರ್ಗೆ (ನಾ). ಟೊಳ್ಳಾದ ಕಾಂಡವನ್ನುಳ್ಳ, ಸಣ್ಣಗೆ ಉದ್ದವಾಗಿ ಬೆಳೆಯುವ ಒಂದು ಬಗೆಯ ಗಿಡ; ℙ ಇದರ ಸೊಪ್ಪು ಮತ್ತು ಕಾಯಿಗಳನ್ನು ತರಕಾರಿಯಾಗಿ ಬಳಸುತ್ತಾರೆ : ಸಮನಿಸೆ ವಕುಳದ ಬೇರಿಂದವರ್ಕೆ ಮೇಣ್ ಗುಂಜೆ ನುಗ್ಗೆಯಜ್ಜುಗೆಯೆಂಬಿಂತಿವಱಿಂದವರ್ಕೆ ಬೇವಿನ ತೊವಱಿಂ ತೆಗಪಿದೊಡೆ ಕೈಪೆಗೆಟ್ಟನಿದಕ್ಕುಂ (ಲೋಕೋಪ. ೮-೨೫) ; ಎಲವಂ ಪಾದರಿ ಹಾಲೆ ನುಗ್ಗೆ ಸಿರಿಸಂ (ಸೂಕ್ತಿಸು. ೩-೨೩) ; ಪ್ರಳಯಗಾಳಿಯ ತೆಱದಿ ತೆಂಗನು . . . ಎಳೆಯ ನೇಱಿಳೆ ನುಗ್ಗೆ ಮಾವನು ಕೋಪದಿಂದುಡಿದ (ಕಾಶಿರಾ. ೧೧-೧೮) ; ಸೋರೆ ಬಸಲೆ ನುಗ್ಗೆ[ಪಾಠಾಂ.ಗ್ಗಿ]ಕುಯಿಕೀರೆ ನಱುವಲು ಹಱುಹೆ ಮೊದಲಾದ ಹಸುರು ಸೊಪ್ಪ . . . ಉಳ್ಕರಿಸಿ (ಸೂಪಶಾ. ೪-೩೩) ; ಮಂದರಗಿರಿಯನೆತ್ತುವಡೆ ನುಗ್ಗೆಯ ದೊಣ್ಣೆಯಿಂದ ಮೀಂಟಿಡಡೇಳುವುದೆ (ಮೋಹತ. ೭೯-೩೪). **ನುಗ್ಗಿ :** "ನುಗ್ಗಿಯೆನೆ ಶಿಗ್ರುವಕ್ಕುಂ'' (ಮಂಗರಾ. ೩೬-೧೭) ; ಸವನಾಗಿ ನುಗ್ಗಿ ಬಱೆ ಸಾಸಿವೆ ಮೂಲಗೆ ಕರಿಯ ಬನ್ನಿ ಎಂಬಿವಿನಿತಱ ಬೀಜವನಾವ ತಕ್ರದಿಂದರೆದು ವಿಲೇಪಂಗೆಯ್ಯೆ ಕಳೆಗುಮವು ಗಂಟುಗಳಂ (ಲೋಕೋಪ. ೯-೧೨೭) ; ನುಗ್ಗಿಯುಳ್ಳಿಯೆಂಬಿವನೆಂತುಂ ಮೆಲಲಾಗದೆಂದು ಪೇೞ್ವ ಮಳಿನಾತ್ಮರ ಮಾತುಗೇಳಲಾಗದು ಚದುರಂ (ಸಮಪ. ೧೪-೧೪೪) ; ನುಗ್ಗಿಯ ಬನಕ್ಕೆ ಗುಬ್ಬಿ ಕೋಗಿಲೆಯೆಂಬಂತೆ (ಧರ್ಮಾಮೃ. ೭-೨೨೯) ; ಇರೆ ಮುಳ್ಳುಸೌತೆ ನುಗ್ಗಿಯ ವರ ಬೀಜಂ ಸೈಂಧವಾನ್ವಿತಂ ಮೇಣ್ ಕೊತ್ತುಂಬರಿ ತಕ್ರಂ ಕುಡೆ ಗೋಧಿಯ ಗರಳಕ್ಕುಪವಿಷಮಿದಲ್ತೆ (ಖಮದ. ೨-೧೬೧) ; ತುಲಸಿಯ ನುಗ್ಗಿಯ ತಗ್ಗಿಯ ಬೆಳೆದಾವುಡಲದಗೆಯ . . . ಸೇಕಂಗೆಯ್ಯೆ ಪತ್ರಸೇಕಂ ದಿವ್ಯಂ (ಅಶ್ವಶಾ. ೧೦-೨೧). △ **ನುರ್ಗೆ** : "ಮೋಚಕಃ = ನುರ್ಗೆಯುಂ, ಬಿಟ್ಟಸುಂ" (ಕಾಶಕ್ಯ. ೨೧೩).

**ನುಗ್ಗೆಕಾಯಿ, ನುಗ್ಗಿಕಾಯಿ** = ನುಗ್ಗೆಯ ಗಿಡದ ಕಾಯಿ : ಮುಗ್ಗಿ ಬಾರದವನಿಗೆ ನುಗ್ಗೇಕಾಯಿ ಮದ್ದೇ? (ಗಾದೆ); ನಮ್ಮ ಮನ್ಯಾಗ ನುಗ್ಗಿಕಾಯಿ ಕಾರಬೇಳಿ ಮಾಡೇನಿ (ಜೆನ್ನುಹಿಂ. ೭೨). **ನುಗ್ಗೆಗಿಡ, ನುಗ್ಗಿ**

ಗಿಡ = ನುಗ್ಗೆಯ ಗಿಡ : "ಮಧುಶಿಗ್ರುಃ, ಅಸ್ರಕ್ತಃ– ಕೆಂಪುಹುವ್ವುಗಳುಳ್ಳ ನುಗ್ಗೇಗಿಡದ ಹೆಸರು" (ಸಿದ್ಧಾಂತಿ. ೧೧೯); "ಮಧುಶಿಗ್ರು— ನುಗ್ಗೀಗಿಡ" (ಗಂಗಾಮ. ೨೪೯). **ನುಗ್ಗೆಮರ** = ನುಗ್ಗೆಗಿಡ : "ಶೋಭಾಂಜನಃ, ಶಿಗ್ರುಃ, ತೀಕ್ಷ್ಣಗಂಧಕಃ, ಅಕ್ಷೀಬಃ, ಮೋಚಕಃ—ಜ ನುಗ್ಗೆಮರದ ಹೆಸರು" (ಸಿದ್ಧಾಂತಿ. ೧೧೮); ನುಗ್ಗೇಮರ, ಮೋಚಕಮರ (ಮೈಔಗಿ. ೫೫–೧೯೮). **ನುಗ್ಗೆಸೊಪ್ಪು, ನುಗ್ಗಿ ಸೊಪ್ಪು** = ನುಗ್ಗೆಯ ಎಲೆ : ನುಗ್ಗೆಸೊಪ್ಪಿನ ರಸದಲ್ಲಿ ಮೆಣಸ ಚೆನ್ನಾಗಿ ಸಣ್ಣನಾಗಿ ಅರೆದು ಮಂಡೆಗೆ ಲೇಪಿಸಲು ಮಂಡೆನೋವು ಶಮನವಹುದು (ವೈದ್ಯಸಾ. II, ೧೪೦); ಮೇಲೆ ಕಸಕಸಿಯಗಸಿ ನುಗ್ಗಿಸೊಪ್ಪುಗಳನ್ನು . . . ಬಿಟ್ಟನಾ ಗುರುವರಂ (ಮಹಾವಿ. ೧೧–೩೫).

[ದೇ.॥ ತುಳು. ನುರ್ಗೆ, ನುರಿಗೆ]

**ನುಗ್ಗೇಳು** (ಕ್ರಿ). ೧. ಚೂರಾಗು ; ಪುಡಿಯಾಗು ; ಹಾಳಾಗು : ಬಿದ್ದುದು ಬಾಣ ಕುಂಭಾಂಡವರೂಥ ನುಗ್ಗೆದ್ದುದು ಪ್ರತಿರಥವಡರ ಕದ್ದೊಯ್ದುದೆ ಖಳರಾಯ ತ್ರಿಶೂಲದಿ ಹೆದ್ದೈವವ ಹೇಱಿದನು (ಮೋಹತ. ೪೦–೭೫). ೨. (ಅಲಂ) ಸೋಲು ; ಪರಾಭವಗೊಳ್ಳು : ತಡೆಯದೆ ತಳತಂತ್ರ ನುಗ್ಗೆದ್ದೊಡೆ ಕಟ್ಟಕಡೆಯಲ್ಲಿ ದೊರೆ ಸಿಕ್ಕಬೇಕು (ಮೋಹತ. ೯–೨೬). [ನುಗ್ಗು$_4$(<ನುಱುಗು$_2$) + ಏಳು$_1$(<ಏೞ್$_1$)]

**ನುಗ್ಗೊತ್ತು** 'ನುರ್ಗೊತ್ತು' ನೋ.

**ನುಚ್ಚಕ್ಕಿ** (ನಾ). ತುಂಡಾದ ಅಕ್ಕಿ; ಕಡಿಯಕ್ಕಿ; ಅಕ್ಕಿಯ ನುಚ್ಚು : ನುಚ್ಚಕ್ಕಿ ಮೊಳೆಯ ಬಲ್ಲುದೆ ಸತ್ತ ಮರ ಎಳಕಬಲ್ಲುದೆ (ಸಿದ್ಧೇಸ. ೧೩೬–೪೦೩); ಅಚ್ಚಕ್ಕಿ ಇದ್ದಾಗ ನುಚ್ಚಕ್ಕಿ ಹಂಗೇನು ? (ಹಳ್ಳಿಯ.೯೬).

[ನುಚ್ಚು + ಅಕ್ಕಿ$_1$]

**ನುಚ್ಚಕ್ಕಿವಲ್** (ನಾ). ಅಕ್ಕಿಯ ನುಚ್ಚಿನಂತಿರುವ ಚಿಕ್ಕಹಲ್ಲು : 'ನುಚ್ಚಕ್ಕಿವಲ್ಲ' ಪರಾ. [ನುಚ್ಚಕ್ಕಿ + ಪಲ್]

**ನುಚ್ಚಕ್ಕಿವಲ್ಲ** (ನಾ). ಅಕ್ಕಿಯ ನುಚ್ಚಿನಂತಿರುವ ಚಿಕ್ಕ ಚಿಕ್ಕ ಹಲ್ಲುಳ್ಳವನು : ಕುಸಿಗೊರಲಂ, ನುಚ್ಚಕ್ಕಿವಲ್ಲಂ, ಕೆಂದಲೆಯಂ (ಭಾಷಾಭೂ. ೧೩೧ ಉದಾ). [ನುಚ್ಚಕ್ಕಿವಲ್ + –ಅ$_7$]

**ನುಚ್ಚು**, ನುರ್ಚು (ನಾ). ೧. ಪುಡಿ ; ಚೂರು ; ಕಡಿ : ಮುಗುಳು ವಾಳೆಯ ಹೊಡೆಯ ನುಚ್ಚಾ[ಪಾಠಾಂ. ನೂಚಾ]ಗಿ ಕತ್ತರಿಸಿ ಪೊಗರು ಹೋಹಂತೆ ಸಣ್ಣದ ನೀರಿನಿಂ ಕುದಿಸಿ ತೆಗೆದು ನೀರಂ ಹಿಂಡಿ (ಸೂಪಶಾ. ೪–೬೦). ೨. ಅಕ್ಕಿ, ಜೋಳ ಮುಂತಾದ ಧಾನ್ಯಗಳ ಕಡಿ,— ಒಡಕಲು : "ಕಣಃ, ಕ್ಷುದ್ರತಂಡುಳಃ—ಈ ೨ ನುಚ್ಚು" (ಹಲಾಯು. ೯೫–೪೨೪); ಪಕ್ಕಿಗಳಲ್ಲಿ ತಿಂದುಳಿದ ನೆಲ್ಲಳ ನುಚ್ಚುಗಳಂ ಫಲಂಗಳಂ ಪಕ್ಕದೊಳಿರ್ದ ಗೂಡುಗಳಿನಾಯ್ದೆ ನಗಿಕ್ಕುವನಟ್ಟಿಱಿಂದೆ ತಾಂ (ಕಾದಂಪೂ. ೧೩೬); ವೇದಶಾಸ್ತ್ರಾಗಮ ಪುರಾಣಂಗಳೆಂಬುವ ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿಭೋ (ಮಹಾದೇ. ಬ. ೪೬–೧೦೭); ಇಚ್ಛೆಯನು ಅಱುದಿತ್ತ ನುಚ್ಚೊಂದು ಮಾಣಿಕವು ಇಚ್ಛೆಯದು ತೀರ್ದ ಬಳಿಕಿತ್ತ ಮಾಣಿಕವು ನುಚ್ಚಿಗೂ ಕಷ್ಟ (ಸರ್ವಜ್ಞ. ೬೩೯); ಕಿಚ್ಚು ನುಂಗುವವ ನುಚ್ಚು ಬಿಟ್ಟಾನೇ ? (ಗಾದೆ). ೩. ಜೋಳ, ಗೋಧಿ ಮುಂತಾದ ಧಾನ್ಯಗಳ ತರಿಯಿಂದ ಮಾಡುವ ಗಟ್ಟಿ ಅಂಬಲಿ; ದೊಗ್ಗ : "ನುಚ್ಚು—ಹುಳ್ಳಂಬಲಿ, ಚೂರು" (ಜಾನಕೋ. ೧೨); ಹಳ್ಳಿಯಲ್ಲಿ ಅನೇಕ ಮಂದಿ ನುಚ್ಚು ತಿಂದು ಕೆಲಸಕ್ಕೆ ಹೋಗುತ್ತಾರೆ (ರೂಢಿ). △ **ನುರ್ಚು** : ೧. ಒದೆಯಿಪುದಿವನುತ್ತಮಾಂಗಮಂ ನುರ್ಚಪ್ಪಂತೆ (ದಶಕು. ೯–೨೩). ೩. ಸುಖಿಂ ಸಲೆ ಮೊಗ್ಗಾದುದೆ ಭಾವಿಪೊಡೆಲೆಗಳ ನುರ್ಚಂಗೆ ಕೊಳ್ವ ತುಂಬೆಯ ಬಾಡೇ (ಧರ್ಮಾಮೃ. ೬–೧೭೧). ೪. ಅಲ್ಪನಾದವನು ; ತುಚ್ಛ ವ್ಯಕ್ತಿ : ಸಿಕ್ಕಿದಳಲಾ ಬಹಳಕಾಲಕಿಂದಿನ ದಿನಂ ರಕ್ಕಸರ ಜಯಲಕ್ಷ್ಮಿ ಕವಿವ ನುಚ್ಚುಗಳ ಪೊಯ್ ವಿಕ್ಕು ಕವಿಕವಿಯೆನುತೆ ಸುರಬಲದ ನಾಯಕರ್ ತಾವಾಗ ಕೂಡೆ ಮಸಗಿ (ಚೆಬಪು. ೪೪–೪೨).

[ದೇ.॥ಮಲ. ನುಚ್ಚು, ನೊಚ್ಚು ; ತುಳು. ನೊಚ್ಚು ; ಕೊಡ. ನುಚ್ಚಿ ; ಕೋತ ನುಚ್ ; ತೊದ. ನೂಚ್ ; ತೆಲು. ನೂಕ]

**ನುಚ್ಚುಗ** (ನಾ). ಅಲ್ಪ ; ನಾಡಾಡಿ : ನುಚ್ಚುಗರ ಸದೆಬಡಿದ ಗರ್ವ (ದೇವೀಮ. ೩–೨೭). [ನುಚ್ಚು + –ಗ$_2$]

**ನುಚ್ಚುಗಳ್ಳ** (ನಾ). ಅಲ್ಪನಾದ ಕಳ್ಳ ; ಕ್ಷುದ್ರನಾದ ಕಳ್ಳ : "ನುಚ್ಚುಗಳ್ಳ–ಕಿರುಕಳ್ಳ, ತುಡುಗ" (ಜಾನಕೋ. ೧೨).

[ನುಚ್ಚು + ಕಳ್ಳ$_1$]

**ನುಚ್ಚುಗುಟ್ಟು** (ಕ್ರಿ). ಹುಡಿಗುಟ್ಟು ; ನುಗ್ಗುಮಾಡು ; ನಾಶಗೊಳಿಸು : ಮದಮಂ ಮುಱಿದು ಮತ್ಸರಮಂ ನುಚ್ಚುಗುಟ್ಟಿ ತಾಪತ್ರಯಕ್ಕೆ ತೆಱಹುಗೊಡದೆ ಹೃದಯಕಮಳಮನೆಡೆಮಾಡಿ (ಮಳಿರ.ಹ. ೧೨೨–೨೨); ಮಚ್ಚರಿಸಿ ಬಂದವರ ಗಂಟಲ ನುಚ್ಚುಗುಟ್ಟುತ ಖಳರ ನೆಲ್ಲರ ಕೊಚ್ಚಿಯೊಂದೆಡೆ ಸಿಕ್ಕಿ ತಳದಲಿ ಬಡಿದು ಜೀವಿಗಳ ನುಚ್ಚಿನಂದದ ಲಾಯ್ತು ತುಳಿಯಲು (ಸಂಭಪ. ೮–೧೧೨); ಮಹಾಮೋಹಾಸುರನ ಮುಸುಡಾ ನುಚ್ಚುಗುಟ್ಟಿದೆ (ಸಾಳ್ವಭಾ. ೩–೫). [ನುಚ್ಚು + ಕುಟ್ಟು$_1$]

**ನುಚ್ಚುಗೂಳು** 'ನುಚ್ಚುಗೂೞ್' ನೋ.

**ನುಚ್ಚುಗೂೞ್**, ನುಚ್ಚುಗೂಳು (ನಾ). ಜೋಳ, ಗೋಧಿ ಮುಂತಾದುವುಗಳ ತರಿಯಿಂದ ಮಾಡಿದ ಗಟ್ಟಿಯಾದ ಅಂಬಲಿ; ದೊಗ್ಗ : ಕಟಿಪೆಯ ಕೂೞುಮಂ ತಿಳಿದುಪ್ಪುಮುಮಂ ಬಿಸುಟ್ಟು ನುಚ್ಚುಗೂೞುಮನೆಣ್ಣೆಯುಮನುಣ್ಬನುಮಂ ಬಾೞೆಯ ಪಣ್ಣುಮಂ ಖಂಡಶರ್ಕರೆಯುಮಂ ಬಿಸುಟು ಎೞೆಯ ಮಣ್ಣಂ ಮೆಲ್ವನುಂ . . . ಮರುಳರಲ್ಲದೆ ಚತುರರಲ್ಲರ್ (ಧರ್ಮಾಮೃ. ೧೧–೧೦೦). **ನುಚ್ಚುಗೂಳು** : ನುಚ್ಚುಗೂಳುಣ ಹೊಲ್ಲ ಜುಚ್ಚುಕರ ನೆರೆ ಹೊಲ್ಲ (ಸರ್ವಜ್ಞ. ೧೯೦೨).

[ನುಚ್ಚು + ಕೂೞ್$_1$]

**ನುಚ್ಚುಗೋಣಿ** 'ನುಚ್ಚುಗೋಳಿ' ನೋ.

**ನುಚ್ಚುಗೋಳಿ**, ನುಚ್ಚುಗೋಣಿ (ನಾ). ಒಂದು ಬಗೆಯ ಗೋಣಿ ಸೊಪ್ಪು : (ಕ). **ನುಚ್ಚುಗೋಣಿ** : (ಕ).

[ನುಚ್ಚು + ಗೋಳಿ$_1$]

**ನುಚ್ಚುದಱಿ** (ಕ್ರಿ). ಚೂರು ಚೂರಾಗಿ ಕತ್ತರಿಸು,—ತುಂಡರಿಸು : ತನುವಂ ತಟ್ಟುಱಿದೆತ್ತಿ ಕುತ್ತಿ ಕಡಿಖಂಡಂಗೆಯ್ದು ಪೊಯ್ದುರ್ಚಿ ತೊಟ್ಟನೆ ನಿಟ್ಟೆಲ್ಲಳನೊಟ್ಟಿ ನುಚ್ಚುದಱಿವುತ್ತುಂ ಚೆಂದದಿಂ ದಂಡಿಪರ್ (ಶಾಂತೀಶ್ವ. ೯–೯೦). [ನುಚ್ಚು + ತಱಿ$_1$]

**ನುಚ್ಚುನುಗ್ಗಡಿ** (ನಾ). ಚೂರುಚೂರು ; ಪುಡಿಪುಡಿ : ಮುಚ್ಚು ಮರೆಯೇಕಿನ್ನು ಪ್ರಾಣವು ಕೊಚ್ಚಿಬಿಡುವನುಯಸ್ಸುತ ರಾಮನು ನುಚ್ಚು ನುಗ್ಗಡಿ ಮಾಡಿ ಬಿಟ್ಟನು ಅಚ್ಯುತನ ಕರುಣದಲಿ (ಬಾಣಾಕ. ೨೨).

[ನುಚ್ಚು + ನುಗ್ಗಡಿ]

**ನುಚ್ಚುನುರಿ** 'ನುಚ್ಚುನುಱು' ನೋ.

**ನುಚ್ಚುನುಱು**, ನುಚ್ಚುನುರಿ, ನುರ್ಚುನುರಿ, ನುರ್ಚುನುಱು (ನಾ). ೧. ಚೂರುಚೂರು ; ತುಂಡುತುಂಡು ; ಪುಡಿಪುಡಿ : ಆತ್ಮೀಯ ವಿದ್ಯಾಗರ್ವಪರ್ವತಮವರ ವಚೋವಜ್ರನಿರ್ಘಾತದಿಂ ನುಚ್ಚು ನುಱುಯಾಗಿ ಪೋದೊಡೆ (ಆದಿಪು. ೩–೭೫ ವ); ಅಚ್ಚು ಮುಱಿದ ಭಂಡಿಯಂತೆ ನುಚ್ಚುನುಱುಯಾಗೆ ಬಿರ್ದುದಂ ಮಾಂಸಾಹಾರಿಗಳ್ ಕಂಡು (ಪಂಚತಂ. ೧೫೮–೩); ಬಲ್ಲಿದರಂ ಕಲ್ಲಂ ತಾಗಿದ ಪುಳ್ಳಿಯಂತೆ ನುಚ್ಚು ನುಱು ಮಾಡಿ (ಧರ್ಮಾಮೃ. ೭–೯೫); ತೇರ್ಗಳ ಗೊಂದಣಂ ಮುಱಿದು

ಮೆಟ್ಟಿದ ಕೊಂಬುಡಿದಂತೆ ಬೇಗದಿಂ ನೆರ್ಗನೆ ಬಿಱ್ದು ನುಚ್ಚುನುಱಿಯಾಗೆ (ಕಬ್ಬಿಕಾ. ೨೭೯) ; ಬಲುಮೆ ಮಿಗೆ ಜಿನಬಸದಿಗಳ ಮೇಲಳವಡಿಪ ಶಿಖರಂಗಳಂ . . . ನುಚ್ಚುನುಱು ಮಾಡಿ (ಬಸವು. ೫೧-೭೨) ; ಕೊಚ್ಚಿದರು ನುಗ್ಗಿದರು ಕೊಯ್ದರು ನುಚ್ಚುನುಱು ಮಾಡಿದರು ಹರಿಬಕೆ ಹೆಚ್ಚಿ ಹೊಗುವವನೀಶನನುಜರ ಮನ್ನಣೆಯ ಭಟರ (ಕುವ್ಯಾಅ. ೧೯-೪೬). ೨. ಅಲ್ಪವಾದುದು ; ಕ್ಷುದ್ರವಾದುದು ; ತುಚ್ಛವಾದುದು : ಬೀಳಹೊಯ್ ಹೊಯ್ ನಾಯ್ಗಳಂ ನುಚ್ಚುನುಱುಗಳ ಜಾಳಿಸಿದ ಹಂಕಾರಮೇ ಸುರರ ಗಂಟಲಂ ಸೀಳೆನುತೆ ತಾರಕಾಕ್ಷಂ ತನ್ನ ಸೇನೆಯಂ ಕೈವೀಸಿ ಮುಂಬರಿಯಲು (ಚೆಬಪು. ೪೪-೩೧). **ನುಚ್ಚುನುರಿ :** ೧. ರಾಯ್ಗೊಳ್ಳುದ್ರೇ ಹೋಗಿ ಹೂವ್ವಿಂ ತೋಟವಾ ನುಗ್ಗಿ ಹೂವೆಲ್ಲಾ ನುಚ್ಚೂನುರಿಯಾದೋ (ಹುಟ್ಟಿಹ. ೧೭೮) ; ಇವನೊಬ್ಬ ಧನವಂತ : ಕಳ್ಳನವ ಬಲವಂತ ಕೊಳುವನೆಲ್ಲವ ನುಚ್ಚುನುರಿಯಿರಿಸಿ ತನುವ (ಪಯಣ. ೬೦-೭೧) ; ಆ ಗಂಗೀ ಕೈಯಾಗ ನಾ ಸಿಕ್ಕೆ ಅಂದರ ನನ್ನ ನುಚ್ಚುನುರಿ ಮಾಡತಾಳ (ಗಂಪಾಯಿ. ೨೦೫). **ನುಚ್ಚುನುರಿ : ೧.** ಭೂಕಂಪ ಕಾಲದೊಳ್ ಶಿಬಿರದೌನ್ನತ್ಯದಿಂ ಕಣಿವೆ ಕಿಬ್ಬಿಗುರುಳ್ದು ಬೀಳ್ವ ಪೆರ್ಬಂಡೆ ತಾಂ ತಳ್ಪಲ್ಗಿಡು ಮರಂಗಳಂ ನುಚ್ಚುನುರಿಗೆಯ್ದು ನುರ್ಗಿ ಬರ್ಪಂತೆ ವೋಲ್ ಬಂದಳ್ . . . ತಾಟಕೆ (ಶ್ರೀರಾಮಾ. ೩೪-೧೬೨). **ನುಚ್ಚುನುಱು :** ೧. ತತ್ಪಣಿರಾಜಕೇತನನ ವಿಕಟಲಲಾಟಶಿಲಾಪಟ್ಟಮುಂ ತನ್ನ ಗದಾದಂಡದಿಂ ನುಚ್ಚುನುಱು ಮಾಡಲುಂ (ಗದಾಯು. ೬-೧೬ ಪ).

[ನುಚ್ಚು + ನುಱು$_2$]

**ನುಚ್ಚುನೂರು** 'ನುಚ್ಚುನೂಱು' ನೋ.

**ನುಚ್ಚುನೂರ್ಗೆಯ್** (ಕ್ರಿ). ಚೂರುಚೂರಾಗಿಸು ; ಪುಡಿಪುಡಿ ಮಾಡು : ನುಚ್ಚುನೂರ್ಗೆಯ್ವರಶ್ವಧ್ವಜವನೊರ್ಮೊರ್ಮೆ ಪೆಚ್ಚುವರ್ ಗಾಯುಗಾಯಕೆ ರಣಾವೇಶದಿಂ ನಿಚ್ಚಟದ ಕಲಿಗಳೆಚ್ಚಾಡಿದರ್ ಹರಿ ಜಲಂಧರರಂದು ಸಂಗರದೊಳು (ಚೆಬಪು. ೨೫-೧೯).[<ನುಚ್ಚುನೂಱು + ಕೆಯ್$_1$]

**ನುಚ್ಚುನೂಱು, ನುಚ್ಚುನೂರು, ನುಚ್ಚುನೂಱು** (ನಾ). ಚೂರುಚೂರು ; ಪುಡಿಪುಡಿ : ಗದಾಘಾತದಿಂದೂರುಯುಗ್ಮಂ ಮುಱಿದೆತ್ತಂ ನುಚ್ಚುನೂಱಾಗಿರೆ ಕೆಡೆದನಿಳಾಭಾಗದೊಳ್ ಧಾರ್ತರಾಷ್ಟ್ರಂ (ಪಂಪಭಾ. ೧೩-೯೬) ; ಮದನಾಗ್ನಿಜ್ವಾಲೆಯಿಂ ಮುಗ್ಗಿದುದೊ . . . ನಿಶ್ವಾಸಂಗಳಿಂ ಪಾಱಿದುದೊ ಕುಸುಮಬಾಣಂಗಳಿಂ ನುಚ್ಚುನೂಱಾದುದೊ . . . ಪೇೞಿಮೆಂಬಂದದೆ ಲಜ್ಜಾಮಗ್ನಗೇನುಂ ನುಡಿ ಪೊಱಮಡದಾಯ್ತು (ಕಾದಂಬ. ೨೯೧); ಸಂನ್ಯಸನಮಂ ಕೈಕೊಂಡ ಮಹಾಪುರುಷನ ಕರ್ಮಂ . . . ವಜ್ರಂ ತಾಗಿದ ಗಿರಿಯಂತೆ ನುಚ್ಚುನೂಱಕ್ಕುಂ (ಧರ್ಮಾಮೃ.೧೪-೧೦೨) ; ಅಚ್ಚುಡಿದು ಕೀಲ್ಮುಱಿದು . . . ನುಚ್ಚು[ಪಾಠಾಂ. ನುಚ್ಚ, ನುಚ್ಚಂ] ನೂಱಿಂ ಮಾಡೆ (ಇಹರ. ದೇ. ೪೩-೨) ; ತದ್ವಚೋವಜ್ರಘಾತದಿಂ ಸ್ವಾತ್ಮೀಯವಿದ್ಯಾಮಿದಮಹೀಧರಂ ನುಚ್ಚುನೂಱಾಗಿ ಭಂಗಿತರಾಗಿ (ಮಹಾಸೇ. ೮-೮ ಪ) ; ಬಚ್ಚೆವೋಗದ ರಾಮಬಾಣಂಗಳಂ ನಡುವೆ ನುಚ್ಚುನೂಱಾಗೆ ಕತ್ತರಿಸಿ (ಜೈಮಿಭಾ. ೨೧-೩೪). **ನುಚ್ಚುನೂರು :** ಸುನಂದಳ ಭವಿಷ್ಯ ನುಚ್ಚುನೂರಾಗಿತ್ತು (ದೂಜಿಟ್ಟ. ೫೯) ; ಕೆಳಗುರುಳಿ ಪ್ರಪಾತದಲ್ಲಿ ನುಚ್ಚುನೂರಾಗಬೇಕಿತ್ತು ಅವರ (ಸಿಡಿಲು. ೮೬). **ನುಚ್ಚುನೂಱು :** ಬಳಿಯ ಪೇಱನಾನೆ ಮೆಟ್ಟಿದಂತೆ ನುಚ್ಚುನೂಱಪ್ಪಿನಮವುಂಕಿ ಪಿಡಿದಡಸಿ [ಯಂ]ಗುರ್ವು ಪರ್ವೆ ಬೀಸಿ ಗುಣಣೆಯ ಕಂಭಂಗಳೊಳಂ ಕೇರ್ಗಳೊಳಮಾಸ್ಫೋಟಿಸಿ ತಾಟಿಸಿದಾಗಳ್ (ಪಂಪಭಾ. ೮-೭೬ ಪ) ; ಕಪಟ ವಟು [ಪಟು] ಮನೋಗರ್ವಪರ್ವತಂ ನುರ್ಗಿ ನುಚ್ಚುನೂಱಾದುದು . . . ನೆರೆದ ವಿದ್ವದಾಸ್ಥಾಯಿಕೆಯೊಳ್(ಶಾಂತಿಪು. ೮-೧೪೮) ; ವರ ಪಂಚಾಚಾರ ಚಂಚತ್ಕುಳಿಸದೆ ಮದನೋದ್ಯತ್ಪ್ರತಾಪೋಚ್ಚಧಾತ್ರೀಧರಮುಂ ಮುಂ ನುಚ್ಚು(ನೂ)ಱಪ್ಪಿನಮೊಡೆಗು (ಪ್ರಭುಪು. ೧-೩).

**ನುಚ್ಚುಂನೂಱಾಗು** - ತುಂಡು ತುಂಡಾಗು ; ಚೂರು ಚೂರಾಗು: ಪಿಡಿದು ಹಿಂಗಾಲಂ ಪಿಡಿದ ಹಲಗೆ ನುಚ್ಚುಂ ನೂಱಾಗಲ್ಕಡುಪಿಂದಪ್ಪಳಿಸಿ . . . ಹಿಣಿಲಗರುಳನುರ್ಚಿದನು (ಕುಮುರಾ. ೮-೫೧).

[ನುಚ್ಚು + ನೂಱು$_2$]

**ನುಚ್ಚುಬಡಿ** (ಕ್ರಿ). = ನುಚ್ಚುಗುಟ್ಟು : ದಂಡದಿಂದೆಸೆವ ಪಲ್ಗಳ ನುಚ್ಚುಬಡಿದೆಲುವ ಖಂಡಿಸುತ ನರವ ತೆಗೆಯಲ್ಕೊಡಂ ಸ್ತುತಿಸುತಿಹ ಮಾಯೆಗಂ ಮಚ್ಚಿ (ಗುರುಚಾ. ೨-೧೫). [ನುಚ್ಚು + ಬಡಿ$_1$]

**ನುಚ್ಚುಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ ಗಿಡ ಮತ್ತು ಅದರ ಹೂವು : ನುಚ್ಚುಮಲ್ಲಿಗೆ ಮಿಠಾಯಿಹೂ ಮೊದಲಾದ ಹೂವುಗಳ ಆಳವಾದ ಬಟ್ಟಲಿಗೆ ಕೈಹಾಕಲು ನೀಳವಾದ ಸೊಂಡಿಲುಳ್ಳ ಹುಳುಗಳೇ ಬೇಕಾಗುವುವು (ಜಾಲಪ್ರ. I, ೪೨೪).

[ನುಚ್ಚು$_1$ + ಮಲ್ಲಿಗೆ]

**ನುಚ್ಚುಮಣಲ್** (ನಾ). ಸಣ್ಣ ಕಣಗಳಿಂದ ಕೂಡಿದ ಮರಳು : ಬಿಸಿಲಂ ಬೆನ್ನೊಳಿಕ್ಕಿ ನೀರ್ನೆಱಲನಱಿಸಿ ಗುಗ್ಗರಿಗಲ್ಲಮರಿವರಲ ತಱುಮೊರಬಿನ ನುಚ್ಚುಮಣಲ ನೀರಱಿದು ಪರಿದು ದಿಂಟಿಯ ದರಿಯ ಕುಱಿಯ ಕುತ್ತುಱ ಕುಱುವಳ್ಳಮಂ ಕಂಡಡಱ ಬಱಿವಿಡಿದು . . . ನಡೆವಾಗಳ್ (ಲೀಲಾವ. ೬-೪೨ ಪ). [ನುಚ್ಚು + ಮಣಲ್]

**ನುಜುಗು** (ಗು). ಅಲ್ಪವಾದ ; ಕ್ಷುಲ್ಲಕವಾದ ; ಸಾಮಾನ್ಯವಾದ: ಗೊಜಗುಟ್ಟುತ್ತಿದ್ದು ಬಿದ್ದಿಳೆಗೆ ಪೊರೆಯಪ್ಪ ಕಡುನುಜುಗುಮನದಜ್ಞಾನಿಜನರೆಲ್ಲ ಪಿರಿಯರೆ (ಮಿವೇಪು. ೩೦-೨೦) ; ನುಜುಗು ನುಸಿಗಳನಾರು ಬಲ್ಲರು (ಅಂಬಿಕಾ. ೧೭ ಪೀಠಿಕಾಸಂಧಿ). [ ? ]

**ನುಜ್ಜು** 'ನಜ್ಜು$_2$' ನೋ.

**ನುಡಿ$_1$** (ಕ್ರಿ). ೧. ಮಾತನಾಡು ; ಹೇಳು ; ಉಚ್ಚರಿಸು : "ನುಡಿ—ವಚನೇ" (ಶಮಧಾ) ; ಪಿತೃಕಳತ್ರಮಿತ್ರಜನಮಂ ಕಾಯ್ವಾನ್ಯತಾಟ್ದಪ್ಪೊಡೀ ನುಡಿಯಲ್ವೆಟ್ಟುಮೋ (ಎಕ. III, ಮೈಸೂರು. ೬-೧೦ ; ಸು. 750) ; ಪದನಱಿದು ನುಡಿಯಲುಂ ನುಡಿದುದನಱಿದಾರಯಲುಮಾರ್ಪರಾ ನಾಡವರ್ಗಳ್ ಚದುರರ್ ನಿಜದಿಂ (ಕವಿರಾ. ೧-೩೮) ; ವಿದುರನೆಂಬೀ ತೊೞ್ಪುಟ್ಟಿಯ ಮನೆಯ ಕೂೞ್ ನುಱಯಿಸೆ ನುಡಿದೈ (ಪಂಪಭಾ. ೯-೫೮) ; ಶುಕ ಶಾರಿಕಾದಿ ವಿಹಗಪ್ರಕರಂ ಮುಂ ಕೇಳ್ದ ವಚನಮಂ ನುಡಿವುದು ಕೌತುಕಮಲ್ಲದೀಗಳುಂ ಕೌತುಕಮಿಂತಿಂತೇಕೆ ದೇವ ನೀನಱಿಯದುದೇ (ಕಾದಂಪೂ. ೬೪) ; ಆ ಸಮ್ಯಗ್ದರ್ಶನಮಿಲ್ಲದೆ ನಿರಂತರಸ್ಥಾಯಿಯಪ್ಪ ಮುಕ್ತಿಶ್ರೀಯಂ ಪಡೆವೆನೆಂಬಾತಂ . . . ನಾಲಗೆಯಿಲ್ಲದೆ ನುಡಿವೆನೆಂಬ ಪಱುಗೋಲಿಲ್ಲದೆ ತೊಱೆಯಂ ಪಾಯ್ವೆನೆಂಬ ಪಚ್ಚ ಪಸಿಯೆಗ್ಗನಂ ಪೋಲ್ಕುಂ (ಧರ್ಮಾಮೃ. ೧-೬೭) ; ನುಡಿದರೆ ಮುತ್ತಿನ ಹಾರದಂತಿರಬೇಕು ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು (ಬಸವ. ೮೦೨) ; ಕುರುಪತಿ ಕಾಳೆಗದೊಳಸ್ತಮಿಸಿದನೆ ನುಡಿಯಂಜಬೇಡೆಂದ (ಕುವ್ಯಾಕ. ೧-೧೧). ೨. ಜಪಮಾಡು ; ಧ್ಯಾನಿಸು : ಪತಿತಪಾವನ ನಮ್ಮ ರತಿಪತಿಜನಕನ ಸತತವು ನುಡಿ ಕಂಡ್ಯ ನಾಲಿಗೆ (ಪುರಂದ. ೧-೧೮೩-೧). ೩. ಶಕುನ ಹೇಳು ; ಭವಿಷ್ಯ ನುಡಿ : ಜಯವದೆ ಜಯವದೆ ಈ ಮನೆತನಕೆ ಬಹಳ ಜಯವದೆ ಹಕ್ಕಿ ನುಡಿಯಿತಣ್ಣ (ಪುರಂದ. ೧-೧೮೧-೧); ಶುಭ ನುಡಿಯೆ ಶಕುನದ ಹಕ್ಕಿ (ನಾದಲೀ. ೩-೨). ೪. (ವಾದ್ಯಗಳು) ಧ್ವನಿ ಹೊರಡಿಸು,—ನಾದ ಹೊಮ್ಮಿಸು,—ದನಿಮಾಡು: ವೀಣೆ . . . ಕೈಲಾಸವೀಣೆ ಮೊದಲಾದ ತಂತಿ ಕಟ್ಟಿ ನುಡಿವ ವಾದ್ಯವನಱಿವುದು ಪ್ರಸಾದಲಿಂಗದಲ್ಲಿಯ ಗುರುಲಿಂಗ (ಶಿವತ. ೬-೧೨) ; ಸುರರು

ಹೂಮಳೆಗಱೆದರಾಗಳು ನೆರೆದು ನುಡಿದವು ದೇವದುಂದುಭಿ (ಪ್ರಭುಲಿೀ. ೬-೨೫) ; ಕೋಣ ಬಲ್ಲುದೆ ವೀಣೆ ನುಡಿಯುವ ಸುನಾದವನು (ಪುರಂದ. ೨-೪೪-೧). **೫.** ಹೀಯಾಳಿಸು ; ಅವಹೇಳನ ಮಾಡು ; ತಿರಸ್ಕರಿಸಿ ಮಾತನಾಡು ; ತೆಗಳು : ನೀನ್ನುಡಿದು ಬರ್ದುಕಿದ್ಪೆ ಪೆಱರ್ನ್ನುಡಿದೊಳ್ ನುಡಿದು ಕರ್ಣನಂ ಬರ್ದುಕುವರೇ (ಪಂಪಭಾ. ೧೩-೨೭). **೬.** ವರ್ಣಿಸು ; ಬಣ್ಣಿಸು ; ಬಣ್ಣನೆಮಾಡು : ಕಿಚ್ಚಂ ಪೊಕ್ಕುದನೀ ಜಗಮುಚ್ಚರಿಪಟ್ಟದನೆ ನುಡಿಯುತಿಪ್ಪುದು ನಿಚ್ಚ[೦](ಇಆ. XX, ೭೦-೧೯೪; ಸು. 9ನೆಯ ಶತ) : ಜಡರೇಂ ನುಡಿವರೊ ಗುಣಭದ್ರದೇವರುಂ ದೇವರುಮಂ (ಚಾವುಂಪು. ೨) : ಕಡಲುವರಿವರುಣಾಂಬುಜಲಧಿಗೆ ಬಿಡಿಸಿದವು ಬಿಂಕವನು ಶಿವಶಿವ ನುಡಿವ ಕವಿ ಯಾರಿನ್ನು ಪಾರ್ಥಕುಮಾರನಾಹವವ (ಕುಮ್ಯಾದ್ರೋ. ೬-೬). **೭.** ಭಾಷೆ ನೀಡು ; ಮಾತು ಕೊಡು ; ಪ್ರತಿಜ್ಞೆಮಾಡು : ನರಸಿವನು ಮುಗಿಸಿದಿರುಗಾಣದೆ ಹಿರಿದನೇಱಿಸಿ ನುಡಿದನಿದ ಪತಿಕರಿಸಬೇಹುದು ನಿನ್ನ ಕರುಣವೆ ಹರಣವೆಮಗೆ (ಕುಮ್ಯಾದ್ರೋ. ೯-೩೧). **೮.** ಆಕ್ಷೇಪಿಸು ; ಗದರಿಸು : ಜಱಿವರಯ್ಯಾ ನುಡಿವರಯ್ಯಾ ಕೂಡಲಸಂಗನ ಶರಣರೊಡೆಯರಾಗಿ (ಬಸವ. ೩೩೫) ; ನಡೆವರಯ್ಯಾ ಒಡೆಯರು ತನುಮನಧನದ ಮೇಲೆ ನುಡಿವರಯ್ಯಾ ಒಂದು ನಿಮಿಷ ಬಾರದಿರ್ದೊಡೆ ಜಱಿವರಯ್ಯಾ ಒಡೆಯರು ಮನ ಬಂದ ಪರಿಯಲಿ (ಬಸವ. ೩೩೯).

**ನುಡಿದಂತೆ ಗಂಡ** = ಕೊಟ್ಟ ಮಾತನ್ನು ಉಳಿಸಿಕೊಳ್ಳುವವನು; ಒಂದು ಬಿರುದು : ಸಿನ್ದಕುಳಕಮಳಮಾರ್ತ್ತಣ್ಡಂ ನುಡಿದನ್ತೆ ಗಣ್ಡಂ (ಸೌಇಇ. XI-i, ೯೭-೧೮ ; 1062) ; ನುಡಿವಳಿಯನ್ತೆ ನಡೆವಳಿಯೆನಿಸಿದಂ ನುಡಿದನ್ತೆ ಗಣ್ಡಂ ಗುಣಗಳ್ಳ (ಎಕ. VII, ಶಿಕಾರಿ. ೧೨೯-೩೯ ; 1071). **ನುಡಿದು ತಪ್ಪು** = ಕೊಟ್ಟ ಮಾತನ್ನು ಉಳಿಸಿಕೊಳ್ಳದಿರು ; ವಚನಭಂಗಮಾಡು : ಷಡ್ಗುಣಾಳಂಕಾರಂ . . . ನುಡಿದು ತಪ್ಪದಂ ಶ್ರೀಮತ್[ಕೇ]×[ಕ]ಜ್ಜಂ (ಸೌಇಇ. XI-i, ೨೨-೭ ; 897) ; ಆ ಬ್ರಹ್ಮರಾಕ್ಷಸನಿವಳ ಮಾತಂ ನಂಬಿ ನಂಬುಗೆಯಂ ಕೊಂಡು ಬೆಂಬಱಿಯನೆ ತಗುಳ್ದು ಪೋಪೆಂ ನುಡಿದು ತಪ್ಪಿದೊಡೆ ಪಿಡಿದು ನುಂಗಲಱಿಯದೊನಲ್ಲೆನೆಂದು ರೂಪುಗರೆದು ಪೆಱಪೆಱಗನೆ ಬರುತಿರ್ದಂ (ಸುಕುಮಾ. ೭-೧೭ ಪ) ; ನುಡಿದು ತಪ್ಪದ ಭಾಷೆ ಬಸವನ ನುಡಿ ಶಿಲಾಶಾಸನವು (ಬಸವು. ೩೭-೨೫).

[**ದೇ.**॥ **ತಮಿ. ಮಲ.** ನೊಟ ; **ತುಳು.** ನುಡಿ ; **ತೆಲು.** ನುಡುಗು, ನೊಡುಗು]

**ನುಡಿ$_2$** (ನಾ). **೧.** ಮಾತು ; ಸೊಲ್ಲು : ನುಡಿಯಂ ಛಂದದೊಳೊಂದಿರೆ ತೊಡರ್ಚಲಱಿವಾತನಾತನಿಂದಂ ಜಾಣಂ (ಕವಿರಾ. ೧-೧೬) ; ನುಡಿಯಂ ಕಿತ್ತಯ್ಯಂಗಳ್ ಕೇಳ್ದು (ಪಡ್ಮಾರಾ. ೭೯-೨೦) ; ಅಳ್ಳಿರ್ದ ನೊಂದು ಕುಂದುಗುಂ ನುಡಿ ತಡವಕ್ಕುಂ (ಆದಿಪು. ೧೨-೪೧) ; ನುಡಿ ಸುರಾಚಳದಿಂನ್ನುಚಳಂ ಪರಾಕ್ರಮಂ ಖರಕರತೇಜದಿಂ ಬಿಸಿದು (ಎಕ. II, ೧೩೩-೨೭ ; 982) ; ನಡೆ ಚೆನ್ನ ನುಡಿ ಚೆನ್ನ ಎಲ್ಲಿ ನೋಡಿದಡೆ ಚೆನ್ನ (ಬಸವ. ೭೯೪) ; ನುಡಿ ಕಿಱಿದು ನಡೆ ಪಿರಿದು ನೋಡೆನ್ನ ಭಕ್ತಂಗೆ (ಅರಿರ. ವೇ. ೧೭೬-೧೩) ; ನಿಜಮನೋವೃತ್ತಿಗಳೊಳಗೆ ನುಡಿ ಮುಳುಗಿ ತೇನಿದು ಚಿತ್ರವಾಯ್ತು (ಕುಮ್ಯಾಆ. ೮-೫೦) ; ಮಾಯೆ ತನ್ನಂತೆ ನಡೆಯ ಕಲಿಸಿದಳಂಚೆವಿಂಡಿಗೆ ನುಡಿಯ ಕಲಿಸಿದಳರಗಿಳಿಗೆ (ಪ್ರಭುಲಿೀ. ೩-೩೨) ; ಪೊಡೆಯೆಂಬ ನುಡಿ ಶಾಲಿಯ ಬೆಳೆಯೊಳು ಕೊಂಕು ಬಡಕೆಂಬ ನುಡಿಯಾನಾಡ ಮಡದಿಯರವಯವಗಳೊಳಲ್ಲದೆ ಬಿಱುನುಡಿಯಿಲ್ಲವೇನ ಬಣ್ಣಿಸುವೆ (ಕಂನವಿ. ೨-೧೪) ; ಮಲೆಯ ನಾಡಿನಡವಿಯಲ್ಲಿ ಕವಿಯೊರ್ವನೆ ನಡೆಯುವಲ್ಲಿ ನುಡಿಯೆ ಸೆರೆಮನೆ (ಅನಿಕೇ. ೪೨-೪). **೨.** ಪ್ರಸಿದ್ಧವಾದ ಮಾತು ; ಹೇಳಿಕೆ : ಕಾವ್ಯಂ ಕಲ್ಪಾಂತರಸ್ಥಾಯಿಯೆನಿಪ ನುಡಿ ಸತ್ಯಂ ಕವೀಶಾಧಿಪತ್ಯಂ (ಗಿುಕ. ೧-೧೬). **೩.** ಗಾದೆ ; ನಾಣ್ನುಡಿ : ಮನಕತದಿಂದೊಂದೊರ್ವರನಿನಿಸನಗಲ್ದಿರ್ದಿರಿನಿಸೆ ನಿಮಗಂ ತಮಗಂ ಮುನಿಸುಂಟೆ ಕಾಯ್ದ ಬೆನ್ನೀರ್ ಮನೆ ಸುಡದೆಂಬೊಂದು ನುಡಿಯವೋಲ್ ಕುರುರಾಜಾ (ಪಂಪಭಾ. ೯-೩೮) ; ವಸುಧೆಯೊಳು ಪೊಡಮಡಲು ದೇಗುಲಂಬಿರ್ದ ನುಡಿ ಪಸರಿಸುವ ನಾಡ ಗಾದೆಯು ತೆಱದಿ (ಸಿದ್ಧರಾ. ೧-೨೭). **೪.** ಭಾಷೆ ; ಪ್ರತಿಜ್ಞೆ : ಎನ್ನ ನುಡಿ ಟಾಕಡಾಢಣವೆನ್ನಂ ಬೆಸಸುವುದು ರಾಜಸೂಯಂ ಬೇಳಲ್ (ಪಂಪಭಾ. ೬-೨೬) ; ಇವನ ಕೊಂದರೆ ತಂದೆ ಮಿಗೆ ಮೆಚ್ಚುವನೊ ಮುನಿವನೊ ತನ್ನ ನುಡಿ ಸಂಭವಿಸದೆಂಬನೊ ಭೀಮಸೇನನ ಭಾಷೆಗಂಜುವೆನು (ಕುಮ್ಯಾದ್ರೋ. ೫-೪೯) ; ಸಿಂಧುಜಂ ಶೌಚದೊಳ್ ಕರ್ಣಂ ತಪ್ಪಿಲ್ಲೆಂದೆನಿಪ ನುಡಿಯೊಳ್ . . . ಎಸೆದಂ ಭೂಮಿಕಂದರ್ಪನೆಂದುಂ (ಛಂದೋಂಬು. ೧-೨೪). **೫.** ಶಬ್ದ ; ಪದ : 'ನುಡಿಗಟ್ಟು' ನೋ. **೬.** ಮಾತಿನ ಜಾಣ್ಮೆ ; ವಾಕ್ಪಟುತ್ವ : ನುಡಿಯುಳ್ಳವರೆಲ್ಲಂ ಮಂತ್ರಿಗಳೇ ಬಂಟರಾದವರೆಲ್ಲಂ ನಾಯಕರೇ ಕಾದುವರೆಲ್ಲಂ ವೀರರೇ (ಧರ್ಮಾಮೃ. ೫-೨೩೯) ; ನಾಲಿಗೆಯ ವೀರರು ನೀವು ಮೂಢರು ನಾವು ನುಡಿಗಳಲಿ (ಕುಮ್ಯಾಕ. ೧೦-೪೫). **೭.** ನಿಂದೆ ; ದೂಷಣೆ ; ಚುಚ್ಚುಮಾತು : ಶೋಕವಿಮ್ಮಡಿಸಿತ್ತು ಚಿತ್ತವ್ಯಾಕುಳತೆಯಾ ಸತಿಯ ನುಡಿಗಳನೇಕ ಸಾಣೆಯ ಸರಳು ಮುಱಿದವು ನೃಪನ ಹೃದಯದಲಿ (ಕುಮ್ಯಾದ್ರೋ. ೭-೧೮). **೮.** ಆಜ್ಞೆ ; ಅಪ್ಪಣೆ : ಕೋಪಶಿಖಿತಿಮಿರಾಕ್ಷನಾ ಜಮದಗ್ನಿಮುನಿಪನ ನುಡಿಯನನುಕರಿಸಿ ರಕ್ಷಿಸಿದೆ ರೇಣುಕೆಯನು (ಕುಮ್ಯಾಸ. ೧೪-೧೧೪). **೯.** ಭವಿಷ್ಯವಚನ : 'ನುಡಿಯಾಡು' ನೋ. **೧೦.** [ಸಂಗೀತ] ಹಾಡಿನ ಒಂದು ಭಾಗ,—ಘಟಕ : ಈ ನುಡಿಯಲ್ಲಿ . . . ದ್ರೌಪದಿಯ ವಸ್ತ್ರಾಪಹರಣದ ಪ್ರಸಂಗದ ವಿವರಣೆ ಇದೆ (ಪುರಂದ. ಧಾ. ೩-೩೨೧ ಪರಿ) ; ಮೊದಲ "ನುಡಿ"ಯನ್ನು ನೋಡಿದರೆ . . . ಪದ್ಯಗಣವೆಂದೇ ಅದನ್ನು ಗಣಿಸಬೇಕು (ಸಮಾಲೋ. ೨೧೬).

**ನುಡಿಕೊಳ್** = ಮಾತನಾಡಿಕೊಳ್ಳು : ಲೋಕದವರೆಲ್ಲರುಂ ಕರ್ಣನುಂ ಸೂತಪುತ್ರನೆಂದುಂ ರಾಧಾಕುಮಾರನೆಂದುಂ ನುಡಿಕೊಳುತಿರ್ಪರು (ಭಾರಶಾಂ. ೧-೪).

[<ನುಡಿ$_1$./**ತಮಿ.** ನೊಟ ; **ತುಳು.** ನುಡಿ ; **ತೆಲು.** ನುಡಿ, ನೊಡಿ]

**ನುಡಿಕಂಪು** (ನಾ). ಮಾತಿನ ಮಾಧುರ್ಯ ; ನುಡಿಯ ಸವಿ : ಒಡವೆಯ ಒಡಲೆಲ್ಲ ಸವಿರೂಪು ನುಡಿಕಂಪು ಮುಟ್ಟುತಟ್ಟನೊಳಿದೆ ಭೂಭುವನ (ಮುಕ್ತಕಂ. ೨-೧೩). [ನುಡಿ$_2$ + ಕಂಪು]

**ನುಡಿಕಟ್ಟು** 'ನುಡಿಗಟ್ಟು' ನೋ.

**ನುಡಿಕಾರ** (ನಾ). [ಸಂಗೀತ] ಗೇಯಾಭಿವ್ಯಕ್ತಿಯನ್ನುಂಟುಮಾಡುವುದು ; ಗೇಯವಸ್ತುವನ್ನು ಕಂಠದಿಂದ ಹೊರಸೂಸುವ ಕೌಶಲ,—ಸಾಮರ್ಥ್ಯ; ಪಲುಕು: ಕರ್ನಾಟಕಪದ್ಧತಿಯಲ್ಲಿನ ಸ್ಥೂಲವಾದ ನುಡಿಕಾರಗಳನ್ನು ಕೂಡ ಇಷ್ಟು ಸುಲಭವಾಗಿ ಹಿಡಿಯಲಾರೆವು (ಗಾನಕ. ೫೪). [?./**ತೆಲು.** ನುಡಿಕಾರ = ಮಾತು, ಮಾತಿನ ಚಮತ್ಕಾರ]

**ನುಡಿಕಾತಿ** (ನಾ). ಮಾತುಗಾತಿ ; ವಾಕ್ಚತುರೆ : ನಗೆಕಾತಿ, ನುಡಿಕಾತಿ, ಬಗೆಕಾತಿ (ಶಬ್ದಾನು. ೨೦೧ ಪ್ರಯೋ).

[ನುಡಿಕಾಱ (<ನುಡಿಗಾಱ)+-ತಿ$_1$(<-ಇತ್ತಿ)]

**ನುಡಿಕಾಱ** 'ನುಡಿಗಾಱ' ನೋ.

**ನುಡಿಕೆ** (ನಾ). = ನುಡಿಕಾರ : ಅಪರೂಪ ಶೈಲಿ, ದ್ರುತಕಾಲದ ವಿಸ್ಮಯಕರ ಮಿಂಚಿನ ವೇಗದ ನುಡಿಕೆಗಳು (ಬಿರ್ಕಾ) ಇವೆಲ್ಲ, ಆಚಾರ್ಯರ ಗಾಯನ ಕೇಳಿದವರಿಗೇ ಅನುಭವವೇ ಹೊರತು ವರ್ಣನೆಗೆ ಎಟುಕುವುದಿಲ್ಲ (ಸಂಗೀಚಂ. ೨೭೮). [ನುಡಿ$_1$ + -ಕೆ]

**ನುಡಿಕೊಡು** 'ನುಡಿಗೊಡು' ನೋ.

**ನುಡಿಗ** (ನಾ). ೧. ಜ್ಯೋತಿಷ್ಯ; ಜೋಯಿಸ: ನಡೆವಣಿಗ ಗೋಳಾಯ್ತು ಸೂಳಾಯ್ತುಡಪವಳ ಬಳಿಗಾಜಿ ಕಮ್ಮಜಿ ನುಡಿಗ ಕುಂಬಜಿ ಕಂಚುಗಾಜಿರ ಕೇರಿ ಮೆಜೆದಿಹವು (ಸಾಳ್ವಭಾ. ೨-೮). ೨. ವಾಗ್ಮಿ; ವಾಕ್ಪಟು. [ನುಡಿ$_2$+-ಗ$_2$]

**ನುಡಿಗಟ್ಟು**, ನುಡಿಕಟ್ಟು (ನಾ). ೧. ಒಂದು ಭಾಷೆಯಲ್ಲಿ ಕೇವಲ ಶಾಬ್ದಿಕ ಘಟಕಗಳಿಂದ ಹೊರಡುವ ಅರ್ಥಕ್ಕಿಂತ ಬೇರೆಯಾದ ಅರ್ಥವನ್ನುಳ್ಳ ಹಾಗೂ ಜನರೂಢಿಯಲ್ಲಿ ವಿಶೇಷಾರ್ಥವುಳ್ಳ ಪದರಚನೆ,—ಪದಪುಂಜ: ಪ್ರಕಟಿಸಿದೆ ನೀನ್ನೆ ಹಿಕಾಮುಷ್ಕಿಕದ ನಡು ಪರುಶವಿಸಿದೊಖ್ಖಾಣಿಕೆಯ ಸೇತುವೊಲಿದರ ನುಡಿಗಟ್ಟಿನ ಸಗಾಢಿಕೆಯ (೧೪ವಿಂ. ೯೭-೮); ಹಿರಿಯ ಹುಡುಗ ಜನಸಾಮಾನ್ಯದಲ್ಲಿ ಬಳಕೆಯಲ್ಲಿದ್ದ ನುಡಿಗಟ್ಟನ್ನು ಬಳಸಿದನು (ಪುನರ. ೨೮೧); ನುಡಿಗಟ್ಟು ಭಾಷೆಯನ್ನು ಸೋಕಿದ ಎಲ್ಲ ಕಲ್ಪನೆಯ ಹರಹಿನ ಪದರೂಪದ ಚಿತ್ರ (ನಮ್ಮನು. ೪೮). **ನುಡಿಕಟ್ಟು**: ೧. ತನಗೆ ಪರಿಚಿತವಾದ ಕೆಲವೇ ಕ್ರಿಯಾಪದಗಳನ್ನು ಪ್ರತ್ಯಯಗಳನ್ನು ಜೋಡಿಸಿ ಹಲವು ನುಡಿಕಟ್ಟು(Idioms) ಗಳನ್ನು ಮಾಡಲು ಸಾಧ್ಯವಿದೆ (ಬಾಲಪ್ರ. III, ೧೩೧೨). ೨. ವಾದ್ಯದಲ್ಲಿಯ ತಾಳಕ್ಕನುಸಾರವಾದ ನುಡಿತ,—ವಾದನ: ಯಕ್ಷಗಾನದವರು ವಾದ್ಯದ ವಿಚಾರದಲ್ಲಿ ವಿಶೇಷ ಕೃಷಿಮಾಡಿದವರು. ಅವರು ಬಳಸುವ ಮದ್ದಳೆಯ ನುಡಿಕಟ್ಟುಗಳು (ಬಡ್ತಿಗೆ) ತುಂಬ ವಿಸ್ತಾರವಾದುವು (ಯಕ್ಷಬ. ೯೧).

**ನುಡಿಗಟ್ಟನಾಟ**=ಅಕ್ಷರದ ಗುರುತುಳ್ಳ ಚೀಟಿಗಳನ್ನಾಯ್ದು ಶಬ್ದಗಳನ್ನು ಜೋಡಿಸಿ ಆಡುವ ಒಂದು ಬಗೆಯ ಆಟ: ನುಡಿಗಟ್ಟನಾಟದಕ್ಕರಚೀಟಿಯೊಟ್ಟನಲಿ ತಡಕಿ ನಾನಾಯ್ದಾಯ್ದು ನುಡಿ ಜೋಡಿ ಪಂತೆ ಬಿಡಿಜೀವ ಸಂಗಾತಿಜೀವಗಳನರಸಿ ತಾಂ ಪಡೆದಂದು ಪೂರ್ಣವದು (ಮಂಕುತ. ೧೮೭). [ನುಡಿ$_2$+ಕಟ್ಟು$_2$]

**ನುಡಿಗಡಣ**, ನುಡಿಗಡಣೆ (ನಾ). ಮಾತುಗಳ ಸಮೂಹ; ಉಕ್ತಿಗಳ ಸಂಚಯ: ಕಡುದರ್ಪವೇಜಾದ ಒಡಲೆಂಬ ಬಂಡಿಗೆ ಮೃಡಶರಣರ ನುಡಿ ಗಡಣವೇ ಕಡೆಗೀಲು ಕಾಣಾ (ದೇವಾವ.೧-೨); ತೆಜಹಿಲ್ಲ ತೆಜಹಿಲ್ಲವಯ್ಯಾ ನುಡಿಗಡಣಕ್ಕೆ (ಅಖಂಡೇ. ೩೩೮-೫೦); ನುಡಿಯಲ್ಲಿ ಭಕ್ತಿಯು ನಡೆಯಿಲ್ಲದಿದ್ದರೆ ಕಡೆಮುಟ್ಟದು ಶಿವನೊಲಿವುದು ಸಟೆಯ ನುಡಿಗಡಣವೇಕೆ (ಸಿದ್ಧವು. ೨೩-೬೬). **ನುಡಿಗಡಣೆ**: ಕೂಡಲಸಂಗನ ಶರಣರ ನುಡಿಗಡಣೆ ಎಲ್ಲಕ್ಕೂ ಅಧಿಕ (ಬಸವ. ೬೧೨); ನುಡಿಗಡಣೆ ತತ್ತ್ವವಿಚಾರ ಭಾಷೆಗಳುಲಿವು ತೂರ್ಯತ್ರಯದ ಘೋಷಣವು (ಬಸವು. ೪-೫೪). [ನುಡಿ$_2$+ಗಡಣ$_2$]

**ನುಡಿಗಡಣೆ** 'ನುಡಿಗಡಣ' ನೋ.

**ನುಡಿಗಣ್ಣು** (ನಾ). ಹೇಳಬೇಕಾದುದನ್ನು ಸೂಚಿಸುವ ಕಣ್ಣು: ಕಪ್ಪಾಗಿ, ಆಳದಲಿ ಹೊಳಪಿಡುವ ನಿನ್ನ ನುಡಿಗಣ್ಣು, ನಾ ಕಂಡ ಮಿಕ್ಕಾವ ಕಣ್ಣನೂ ಮರೆಮಾಡಿ, ಮುಂದೆ ನಿಲುವುವು ಬಂದು, ನಡುವಿರುಳ ಹೊತ್ತು (ಇಂಗೀತ. ೫೬-೧೪). [ನುಡಿ$_2$+ಕಣ್ಣು (<ಕಣ್)]

**ನುಡಿಗಬ್ಬ** (ನಾ). ಗದ್ಯಕಾವ್ಯ; ವಚನಕಾವ್ಯ: ಪುಸಿಯನೇವೊಟ್ಟುಂಗಪುಸಿರೆಂ. ಈವಗೆಯ ನುಡಿಗಬ್ಬಂ ಮುಂತಿಲ್ಲ ಪಿಂತಿಲ್ಲಮೆಂದಾಯ್ತು (ರಾಮಾಶ್ವ. ೧೬೪-೨೪). 'ಓದುಗಬ್ಬ' ಪರಾ. [ನುಡಿ$_2$+ಕಬ್ಬ$_1$]

**ನುಡಿಗಲ್**, ನುಡಿಗಲಿ (ಕ್ರಿ). ಮಾತನ್ನು ಕಲಿ,—ಅಭ್ಯಾಸಮಾಡು: ಬಿಡು ಮಿಥ್ಯಾತ್ವಮನಂಜದೆ ಪಿಡಿ ಸಮ್ಯಕ್ತ್ವಮನುದಾರಚಿತ್ತದಿನೆಂಬೀ ನುಡಿಯುನೆ ನುಡಿದು ಮನಂಬಿಡೆ ನುಡಿಗಲ್ತಂ ಸುಕವಿನಿಕರ ಪಿಕವಮಾಕಂದಂ (ಧರ್ಮಾಮೃ. ೭-೧೪); ಗಿಳಿಯೊಡನೋದಿಯೋದಿ ನುಡಿಗಲ್ತು ಮದಾಲಸರಾಜಹಂಸಮಂಡಳಿಯೊಡನಾಡಿಯಾಡಿ ನಡೆಗಲ್ತು . . . ಬಾಲಭಾವದೊಳೆ ಬಾಲಕಿಯರ್ ಬಳೆವರ್ (ಕಾವ್ಯಾವ. ೨೯೦); ವೃದ್ಧ ದೂಷಕರ ಬಾಯ್ಗಳಂ ಮುದ್ರಿಸುವ ಚೆಲ್ವ ನುಡಿಯೊಡನೆ ನುಡಿಗಲ್ತು (ಪದ್ಮರಾ. ೪-೩೩). **ನುಡಿಗಲಿ**: ಅಲ್ಲಿಗಲ್ಲಿಗೆ ನುಡಿಗಲಿತ ಮಗನಲ್ಲದೇನು ವನಜಾಯಲಾ ನೀನಿಲ್ಲಿ ಒಜಿತೆಯನಗಿದೊಡಲ್ಲದೆ ಮುನಿಸು ತಿಳಿಯಲ್ಕೆ ಬಲ್ಲನಯ್ಯನು (ಬಸವು. ೪೭-೨೧); ಒಯ್ಯನೆ ನುಡಿಗಲಿಯಲೆಂದು ಬಂದು ಪುರುಳಿಗಳನಾಳಿಯರಿಂದೆ ತೊಲಗಿಸುತ್ತೆ (ಚೆಬಪು. ೭-೧೪). [ನುಡಿ$_2$+ಕಲ್$_1$]

**ನುಡಿಗಲಿ** 'ನುಡಿಗಲ್' ನೋ.

**ನುಡಿಗಲಿಸು** (ಕ್ರಿ). ಮಾತನ್ನು ಕಲಿಸು; ಮಾತನಾಡಲು ಅಭ್ಯಾಸ ಮಾಡಿಸು: ಕಿಜುಗೂಸುಗಳಂ ನುಡಿಗಲಿಸಿದಂ ತೊದಲ್ನುಡಿ ಪಡೆವಿನೆಗಂ ಪಿತ್ರಯುಂಗೆಕೆ ಕರ್ಣಾಮೃತಮಂ (ಪಂಚಾಮೃ. ೧-೭೯); ನುಡಿಗಲಿಸಿ ಮಾಣ್ದದೇ ಕನ್ನಡವಕ್ಕಿಯನಿಸಲನಂಗನಂ ಕಲಿಸಿದುದೆಂದೊಡೆ ಬಿರಯಿಗೆ ಮುನ್ನಿನ ಭವದಿಡುವಗೆ ಚೂತಾಂಕುರಂ ವಿಷಾಂಕುರಮೆ ವಲಂ (ಪುಲ್ಲಪು. ೬-೨೮). [ನುಡಿಗಲ್+-ಇಸು$_3$]

**ನುಡಿಗಾಜ**, ನುಡಿಕಾಜ (ನಾ). ಮಾತುಗಾರ; ಮಾತಿನಲ್ಲಿ ಜಾಣ; ವಾಕ್ಪಟು: ಗರವಟಿಗರ ಕೋಲ್ಲಾಯ್ತರ ನುಡಿಗಾಜರ ಮಾಸ್ವಾರರ ಸಂದಣಿ ಸಲೆ ಸೊಗಯಿಸಿತು (ಜಯಕಾ.೧೨-೧೯); ಕಟ್ಟಣಕದ ನುಡಿಗಾಜ! ಅಡಿಗಡಿಗೇಂ ಜಜುಚುವಯ್ (ರಾಮಾಶ್ವ. ೯-೨೮). **ನುಡಿಕಾಜ**: ಜಡಿವ ಪಡಿಯಜರ ಸೊಗಯಿಪ ನುಡಿಕಾಜರ ಮೇಳದರಸುಗಳ ಮೆಲ್ಲನೆ ಕೈಗುಡುವ ಸೊಬಗೆಯರ ನೆರವಿಗಳೊಡನೆಟ್ಟಂ(ಕಬ್ಬಿಕಾ.೯೦); ನುಡಿಕಾಜಂ, ಆಟಕಾಜಂ ಮೋಸಕಾಜಂ, ಮುಂಡಕಾಜಂ (ಶಬ್ದಾನು. ೪೨೩ ಪ್ರಯೋ). [ನುಡಿ$_2$+-ಕಾಜ]

**ನುಡಿಗಾಜಿಕೆ** (ನಾ). ಮಾತುಗಾರಿಕೆ; ವಾಕ್ಚಾತುರ್ಯ: ನರನ ನುಡಿಗಾಜಿಕೆಗೆ ವರ್ಮವ ಧರಿಸಿ ತನ್ನರಸಿಯುಳ ನೋಡುತ ಹನನು ಸಂತಸವಡಗಿ ಸತಿಯೋ ಕೇಳಿದ್ಯೆಯೆನಲು (ಕೃಷ್ಣಾಕಾ. ೨೫-೨೮). [ನುಡಿಗಾಜ+-ಇಕೆ]

**ನುಡಿಗುಂದು** (ಕ್ರಿ). ಮಾತು ಅಡಗು; ಮೌನವಾಗು: ಬಿಡು ನಿಜಮನ್ನುಬಾಷ್ಪಭರಮಂ ನುಡಿಗುಂದುತಮಿಂತು ದುಃಖಮಾಂತೊಡೆ ಕಡೆಗೋಡಿಪೋಗದೆ ಪೊನಲ್ ಪುಗುತರ್ಪ ತಟಾಕದಂದದಿಂದೊಡೆದಪುದಲ್ತೆ ನಿನ್ನ ಸುಮಕೋಮಲಮಪ್ಪೆರ್ದೆ ತಂದೆಯು ತಾಯು ಬಾಟಿಕ್ಕೆಯಿಂ (ಕಾದಂಉ. ೫೮೫). [ನುಡಿ$_2$+ಕುಂದು$_1$]

**ನುಡಿಗುಡು** 'ನುಡಿಗೊಡು' ನೋ.

**ನುಡಿಗೆಡಿಸು** (ಕ್ರಿ). ಮಾತಿಗೆ ತಪ್ಪು: ಲಂಚಗಾಜನಂತೆ ನುಡಿಗೆಡಿಸದೆ ಏಕಚಿತ್ತದಿಂ ಕೇಳ್ವರಪ್ಪೊಡೆ ಪೇಟ್ದಪೆಂ (ಧರ್ಮಾಮೃ. ೧-೮೩). [ನುಡಿಗೆಡು+-ಇಸು$_3$]

**ನುಡಿಗೆಡು** (ಕ್ರಿ). ೧. ಮಾತು ಬಾರದಂತಾಗು; ಮಾತಾಡಲು ಅಸಮರ್ಥವಾಗು: ಥಗೆವಡೆದೊಡಲೊಳು ಸ್ಫೋಟಿಕವೆದ್ದು ನಾಲಗೆ ನುಡಿಗೆಟ್ಟುವೆ ಜೀಯ (ಮೋಹತ. ೯-೧೪). ೨. ಮಾತಿಗೆ ಅತೀತವಾಗು; ನುಡಿಗೆ ಮೀರು: ತಾ ನಡೆವಡೆ ನಡೆಗೆಟ್ಟ ನಡೆಯ ನಡೆಯಬೇಕು, ತಾ ನುಡಿವಡೆ ನುಡಿಗೆಟ್ಟ ನುಡಿಯ ನುಡಿಯಬೇಕು (ಅಪಷಂ. ೯೯-೪೪೮). [ನುಡಿ$_2$+ಕೆಡು$_1$]

**ನುಡಿಗೇಡು** (ನಾ). ೧. ಪರಿಣಾಮವಾಗದಿರುವ ಮಾತು; ವ್ಯರ್ಥವಾದ ಮಾತು: (೬). ೨. ಮಾತಿಗೆ ತಪ್ಪುವಿಕೆ; ವಚನಭ್ರಷ್ಟತೆ: 'ನುಡಿಗೇಡುಗ' ಪರಾ. [ನುಡಿ$_2$+ಕೇಡು]

**ನುಡಿಗೇಡುಗ** (ನಾ). ಮಾತಿಗೆ ತಪ್ಪುವವನು ; ವಚನಭ್ರಷ್ಟ : ನುಡಿದ ನುಡಿಗೇಡುಗನ ವಿಪ್ರರ ಮಡುಹಿದಾತನನಮಳಗುರುವಿನ ಮಡದಿಯರಿಗಳುಪಿದನ . . . ವಿಪ್ರರ ಜಡಿದು ನುಡಿದನ ಗತಿಗಳಾಗಲಿ ರಣದೊಳೋಡಿದರೆ (ಕುಮಾ್ಯದ್ರೋ. ೨-೮). [ನುಡಿಗೇಡು+-ಗ$_2$]

**ನುಡಿಗೇಳ್, ನುಡಿಗೇಳು** (ಕ್ರಿ). ೧. ಮಾತನ್ನು ಕೇಳು,— ಆಲಿಸು : ಇನಿಯನ ಚೆಲ್ವನೀಕ್ಷಿಪ ಸೊಕಂ ನುಡಿಗೇಳ್ವಳಿಪಂ ನಿಮಿರ್ಚದು (ಚಂದ್ರಪ್ರ. ೮-೮೨). **ನುಡಿಗೇಳು :** ೨. ಧ್ವನಿ ಕೇಳು : ಆವಗಮೊಡನಾಡಿಯುಂ ನುಡಿಗೇಳಿಯುಂ ಬಿನಯುಂಗೆಯ್ದುಂ ಬೇಟ್ಪಿದನಿತ್ತುಂ ಮನ್ನಿಪರುನ್ನತಿಗೆ ಮಿತಿ ಯಾವುದು (ಚಿಕಸಂ. ೬೮-೧೩). ನೊಂದೆನಾ ನುಡಿಗೇಳುತವೆ ಪೂರ್ಣೇಂದುಮುಖಿ ಕೇಳ ತಾಂಡವನ ತಾಯ್ ತಂದೆಗಳ ದನಿದೋಜದಿಳುಹಿದೆನಿಳೆಗೆ ಮರದಿಂದ (ತೊರರಾ. ೨-೫-೨೨).

[ನುಡಿ$_2$+ಕೇಳ್]

**ನುಡಿಗೇಳು** 'ನುಡಿಗೇಳ್' ನೋ.

**ನುಡಿಗೊಡು**, ನುಡಿಕೊಡು, ನುಡಿಗುಡು (ಕ್ರಿ). ೧. ಮಾತಿನ ರೂಪಕೊಡು ; ಮಾತಿನಲ್ಲಿ ತಿಳಿಸು ; ಅಭಿವ್ಯಕ್ತಿಪಡಿಸು. ೨. ಮಾತುಕೊಡು ; ಭಾಷೆ ನೀಡು ; ವಚನ ಕೊಡು : (೬). **ನುಡಿಕೊಡು :** ೧. ಮನಸ್ಸಿನಲ್ಲಿ ಮೊರೆಯುತ್ತಿದ್ದ ಚಿಂತೆಗೆ ನುಡಿಕೊಡಲಾರದೆ ದಾಸರು ಏನೋ ಮೂಕಸಂಕಟಪಡುವವರಂತೆ ಸುಮ್ಮನೆ ನಿಂತುಕೊಂಡರು (ರೂಪಸ. ೧೮). **ನುಡಿಗುಡು :** ೨. ನುಡಿಗುಡದನಿಶಂ ಸುಮ್ಮನೆ ಕೊಡುವ ಮಹಾದಾನಿಯಂತಿರಲಲರೇಜದೆ ಸೊಂಪಿಡಿದಿನಿವಣ್ಣಳ ನೆಲ್ಲರ್ಗೆಡೆವಿಡಿದೀವುತ್ತ ಮೊಪ್ಪುಗುಂ ಪನಸಕುಜಂ (ಉದ್ಭಟ. ೯-೨೦).

[ನುಡಿ$_2$ + ಕೊಡು$_1$]

**ನುಡಿಜಾಣ** (ನಾ). ಮಾತನಾಡುವುದರಲ್ಲಿ ನಿಪುಣ ; ವಾಕ್ಪಟು : "ನುಡಿಜಾಣನಂ ಸುಮುಖನೆಂಬುದು" (ಹಲಾಯು. ೬೧-೨೧೯) ; ಸೊಬಗಿಯ ಗಾಂಪಿನಂತೆ ನುಡಿಜಾಣನ ಮೋನದಂತೆ ಬಲ್ಲಿದನ ನೋಟದಂತೆ (ಧರ್ಮಾಮೃ. ೮-೯೪) ; ನುಡಿಜಾಣ ನಡೆಜಾಣ ನೆಱೆಜಾಣ . . . ಎನ್ನಂತರಂಗದೊಳಿರು ಜಾಣರೊಡೆಯ ಚಿದಂಬರಪುರುಷಾ (ಭರಚ. ೭-೭೬); ಈ ಲಿಂಗಾರ್ಪಿತ ಸಕೀಲವನಱಿಯದೆ ಬಱಿದೆ ಪ್ರಸಾದಿಗಳೆಂದು ನುಡಿವ ನುಡಿಜಾಣರ ಕಂಡು ನಾಚಿದೆನಯ್ಯಾ (ಅಖಂಡೇ. ೧೭೩-೪೭).

[ನುಡಿ$_2$+ಜಾಣ]

**ನುಡಿಜಾಣೆ** (ನಾ). ಮಾತನಾಡುವುದರಲ್ಲಿ ನಿಪುಣೆ : ಆಡುವ ಮುಗ್ಧ ಬಾಳಕಿಯರುಂ ನುಡಿಜಾಣೆಯರಾದರೀಗಳಿಂಪೋಡದ ನಿನ್ನ ಮಾತುಗಳ ನಾಡಿಯೆ ಕೇಳಿಸಲೆ (ವರ್ಧಪು. ೪-೩೭). [ನುಡಿ$_1$+ಜಾಣೆ]

**ನುಡಿಜಾಣ್ಮೆ** (ನಾ). ಮಾತಿನ ಚಾತುರ್ಯ,—ಜಾಣತನ : ವಾಕ್ಚಾತುರ್ಯ: ನುಡಿಜಾಣ್ಮೆಯಲ್ಲ ನೂತನಪುರುಷನ ಕಂಡು ಕಡುಗುವುದಲ್ಲ ನಿನ್ನಾಣೆ ಕಡುಗಾಡಿಕಾಱನವನ ಚೆಲ್ವು ಕೈಸೆಱೆವಿಡಿದುದೆನ್ನಂತರಂಗವನು (ಕುರಾಸಾಂ. ೨೩-೨೧) ; ನುಡಿಜಾಣ್ಮೆ ನಡೆಜಾಣ್ಮೆ ನನಗೊ ದೇವರಿಗೊ ಸಂಗಡದ ಭೂಪರು ಪೇಳಲಿ (ಭರಚ. ೩೯-೧೦೭) ; ನುಡಿಜಾಣ್ಮೆಯಿಂದೆ ಜಯಮುಂ ಪಡೆವಳವಂತಿರ್ಕೆ ದೃಷ್ಟಮುಂ ತೋರ್ಪುಥಟುಳ್ಳೊಡೆ ಕೋಱು ಗೆಲ್ವುದು (ವೃಷವಿ. ೩೭-೬೧). [ನುಡಿ$_1$ + ಜಾಣ್ಮೆ]

**ನುಡಿತ** (ನಾ). ೧. ಅಭಿವ್ಯಕ್ತಿ ; ಹೇಳುವಿಕೆ ; ನುಡಿಯುವಿಕೆ : ಹೊರಗೊಳಗಣ ನುಡಿತದಲ್ಲಿ ಮಿಂಚೂ ಇದೆ (ಚಿತ್ರಸ್ಮೃ. ೧ ಮುನ್ನುಡಿ). ೨. (ವಾದ್ಯಗಳ) ಧ್ವನಿ ; ವಾದನಧ್ವನಿ : ಎರಡು ಕೋಲುಗಳಿಂದ ಬಡಿದು ಬಾರಿಸುವ ಚಂಡೆಯು ಇನ್ನಷ್ಟು ಏರಿನ ಧ್ವನಿಯಲ್ಲಿದ್ದು, ಅದರ ನುಡಿತ ಗಾವುದ ದೂರಕ್ಕೆ ಕೇಳಿಸಬಲ್ಲುದು (ಯಕ್ಷಬ. ೯೧).

[ನುಡಿ$_1$+-ತ$_2$]

**ನುಡಿತಟ್ಟೆ** (ನಾ). ಸಂಗೀತ, ಭಾಷಣ ಮೊದಲಾದುವುಗಳ ಧ್ವನಿ ಸಂಗ್ರಹವಾಗಿರುವ ತಟ್ಟೆ ; ಗ್ರಾಮಫೋನ್ ರೆಕಾರ್ಡ್ : ನಾಟಕ ವಾರಂಭವಾಗುವ ಮೊದಲು ಹಲವು ಚಿತ್ರಗೀತೆಗಳ ನುಡಿತಟ್ಟೆಗಳನ್ನು ಹಾಕಿದ್ದರು (ಅಲಹೂ. ೧೨೯). [ನುಡಿ$_2$ + ತಟ್ಟೆ]

**ನುಡಿತೆ** (ನಾ). ಮಾತು ; ಸೊಲ್ಲು : ಹಿಡಿತೆ ಬಿಡಿತೆಯ ಹೆಚ್ಚು ಕುಂದಿನ ನಡತೆ ನುಡಿತೆಯ ಸ್ಥೂಲ ಸೂಕ್ಷ್ಮದ . . . ಸುಖದಡರುಯಡರಿನಲೇಕತೆಯಲೆಡೆಗೊಡುವ ಸಹಜಸಮುಷ್ಟಿಕೆಯನುಸುರುವೆನು (ಗಗತಾ. ೧೭-೬).

[ನುಡಿ$_1$+-ತೆ$_2$]

**ನುಡಿದಪ್ಪು$_1$** (ಕ್ರಿ). ಮಾತಿಗೆ ತಪ್ಪು ; ವಚನಭಂಗಮಾಡು : ಆಡಿ ನುಡಿದಪ್ಪುವ ರಾಯರ ಗಂಡನಾಹವೋದ್ದಂಡರ ಗಂಡನೆಂಬ ಬಲವುಂ ಬಿರುದಂ ಚಿಕದೇವರಾಯನೊಳ್ ಮಂಡಿತಮಲ್ತೆ (ಅಪ್ರತಿ. ೮-೧೮).

[ನುಡಿ$_2$ + ತಪ್ಪು$_1$]

**ನುಡಿದಪ್ಪು$_2$** (ನಾ). ಮಾತಿಗೆ ತಪ್ಪುವುದು ; ವಚನಭಂಗ : ನುಡಿದಪ್ಪಿಗೆ ತಂದೆ ತಾನೇ ಕೊರಲ್ಗೊಯಿಸಿದಪನೆಂದು ನೀಂ ನೊಂದೊಡೆ (ಭಾವಚಿಂ. ೯-೧೫). [ನುಡಿ$_2$ + ತಪ್ಪು$_2$]

**ನುಡಿದೂಸಱು** (ನಾ). ತೆಗಳಿಕೆಯ ಮಾತು ; ತಿರಸ್ಕಾರದ ನುಡಿ ; ನಿಂದೆ : ಪೊಡೆಯರಲನಂಗನೆಯ ಮನೆಯ ಸತಿಯೆನಲಾಳ್ವ ನುಡಿದೂಸಱಂಗಳ್ಕದಾ ರಮಾಕಾಂತೆಯೊಡನೆಡೆವಿಡದೆ ಪಗಲೆ ಪಳ್ಳಿಯೊಳಿರ್ಪನು (ಭಾವಚಿಂ. ೩-೪೭). [ನುಡಿ$_2$ + ದೂಸಱು]

**ನುಡಿದೊಡು** (ಕ್ರಿ). ಪ್ರತಿಜ್ಞೆಮಾಡು ; ಭಾಷೆತೊಡು : ಅರಿಗನು ಪುತ್ರಮರಣಕಾರಣನಾದ ಜಯದ್ರಥನನ್ನು ಮುಡುಹುವೆನೆಂದು ನುಡಿದೊಡುವುದು (ನಾಡೋಜ. ೨೦೫). [ನುಡಿ$_2$ + ತೊಡು$_1$]

**ನುಡಿನಲ್ಮೆ** (ನಾ). ಪ್ರೀತಿಯ ಮಾತು ; ನಲ್ನುಡಿ : ಇದು ನುಡಿನಲ್ಮೆಯೆಂಬುದುತ್ತರವಾಕ್ಯಂ ಪೆಜರ ಮನಕ್ಕೆ ನೋವಂ ಪುಟ್ಟಿಸದ ನುಡಿಹಂ ನಲ್ಮೆಯೆಂಬುದು ತಾತ್ಪರ್ಯಂ (ನೀತಿಪಾ. ೨೬-೫೬).

[ನುಡಿ$_2$ + ನಲ್ಮೆ]

**ನುಡಿನಿಱಂಗೆ** (ನಾ). ಮಾತಿನ ಕ್ರಮ ; ಮಾತಿನ ಹೊಂದಾಣಿಕೆ : ನುಡಿನಿಱಂಗೆಯುಂ ಬೆದಂಕಿ ಪಾರ್ಥದಂತುಂ, ಇರ್ದಂತೆ ಬಣ್ಣಿಪೊಂದು ಜಾಣ್ಮೆ ದೊರೆಕೊಳ್ವಂತುಂ . . . ಬಣ್ಣಿಪೆಂ (ರಾಮಾಶ್ವ. ೮೮-೧).

[ನುಡಿ$_2$ + ನಿಱುಗೆ]

**ನುಡಿಬಿನ್ನಣ** (ನಾ). ಮಾತಿನ ಜಾಣ್ಮೆ,—ಚಾತುರ್ಯ : ಎಲೆ ರಾಘವ, ನುಡಿಬಿನ್ನಣಂ ಸಾಲ್ಗುಂ ಪಿಡಿ ಎನ್ನೀ ಕೋಯಂಡಮಂ (ಅದ್ಭುತ. ೩೨-೨೪). [ನುಡಿ$_2$ + ಬಿನ್ನಣ (<ಬಿನ್ನಾಣ)]

**ನುಡಿಮೇಳ** (ನಾ). (ಹಾಡಿಗೆ ಹೊಂದಿಕೊಳ್ಳುವಂತೆ) ನುಡಿಸುವ ಕೊಳಲು, ನಾಗಸ್ವರ ಮುಂತಾದ ವಾದ್ಯ : ಊದಿ ಬಾಱಿಸುವ ನುಡಿಮೇಳ ಮೊದಲಾದುದೇ ಸುಷಿರವೆನಿಸುವದು (ವಿವೇಕ. ೨೫೨).

[ನುಡಿ$_2$ + ಮೇಳ (= ಮೇಲ)]

**ನುಡಿಯಾಟ** (ನಾ). ಮಾತನಾಡುವಿಕೆ : "ಒಣರನ್", "ಒಣರ್ದೊನ್" ಪಿಡಿದು ನುಡಿಯಾಟವಿರೆ : ಗೆಯ್ಮೆಯನ್ ಗೆಯ್ದೊರನ್ ತೋಱಿದೊಡೆ, ಕೇಡನ್ ಆಱಿಲಾಭಮೆಸಗಿದಪುದೆಂಬುದನ್ ನುಡಿವೆ (ಅಂತಿಗೊ. ೧೫-೩೦೧). [ನುಡಿ$_2$ + ಆಟ]

**ನುಡಿಯಾಡು** (ಕ್ರಿ). ಭವಿಷ್ಯ ಹೇಳು: ಪಲರ್ಕೆ ಸಂದೆಯದೆ ಪಿಥಿಯಸನ ಡೆಲ್ಫಿಗಂ, ಡೊಡೋನದ ನುಡಿಯಾಡುವೋಕಮರಕ್ಕಂ, ಅಟ್ಟಿದನ್ ದೂತರನ್ (ಬದ್ಧಪ್ರ. ೩೫-೭೪೯). [ನುಡಿ$_2$ + ಆಡು$_1$]

**ನುಡಿಯಿಸು, ನುಡಿಸು** (ಕ್ರಿ). ೧. ಮಾತನಾಡುವಂತೆ ಮಾಡು ; ಹೇಳಿಸು : ವಿದುರನೆಂಬೀ ತೊಟ್ಟುಟ್ಟಿಯ ಮನೆಯ ಕೂಟಿ ನುಡಿಯಿಸೆ

ನುಡಿದೈ (ಪಂಪಭಾ. ೯-೫೮) ; ಲೋಕಪಾಲನಿರುಳ್ ತೂಂಕಡಿಸುವಾಗಳ್ ವಕುಳ ಮಾಲೆಯೆಂಬ ಗೊಜ್ಜೆ ಯಿಂದೆ ನುಡಿಯಿಸಿ[ಪಾಠಾಂ. ನುಡಿಸಿ]ದೊಡ ರಸನದಂ ಸ್ವಪ್ನಮೆಂದೇ ಬಗೆದು (ಚಾವುಂಪು. ೬೦) ; ಆ ಮನೋಹರಾಲಾಪೆಯ ಪ್ರಿಯಾಲಾಪಮೆ ನುಡಿಯಿಸಿದಪ್ಪುದು (ಕಾದಂಬ. ೪೦೪) ; ಮಡಿದೀ ದುಶ್ಶಾಸನನೇಂ ನುಡಿಯಿಸುವನೊ ಕುರುನರೇಂದ್ರ ದುರ್ಮರ್ಷಣನೇಂ ನುಡಿಯಿಸುವನೊ (ಗದಾಯು. ೩-೮೧). **೨. ಮಾತಾಡಿಸು:** ನುಡಿಯಿಸಿದೊಡೆ ಮತ್ತಿನಿಯಳ್ನುಡಿಯದೆ ಮಱುಮಾತನಶ್ರುವಿಹಿತ ವಿಲೋಕಂ ಜಡಚರಿತಕುಮುದದಳಮೆನೆ ಕಡೆಗಣ್ಣಿಂ ನೋಡಿದಳ್ ವಯಸ್ಯೆಯ ಮುಖಮಂ (ಅನಂಪು. ೧೨-೬೧). **೩. ವಾದ್ಯವನ್ನು ಬಾರಿಸು ;** ನಾದ ಹೊರಡಿಸು : ಗದೆ ಬೀಸುವಂತಲ್ತು ಭೀಮ, ಬಿಲ್ವೆಸನ್ ನುಡಿಯಿಸಲ್ ಬಲ್ಲಂಗೆ ಬಿಲ್ಲೊಂದು, ಮೇಣ್ ಬೀಣೆಯೊಂದು(ಅಶ್ವತ್ಥಾ. ೮೩೫).

**ನುಡಿಸು :** ೨. ನುಡಿಸಿದನೆನ್ನಂ ನಲ್ಲಂ ಬಿಡಿಸಿದನೆನ್ನಂತರಂಗದನುತಾಪಮಂ (ಕವಿರಾ. ೩-೨೩೫) ; ಮನುಷ್ಯಂ ಪೊದಲಾಗಿ ನುಡಿವುದರಿಂದೆಂದೊಡೆ ಮರನಂ ನುಡಿಸುವುದು ಪರಮುಗಹನಂ (ಪಂಚತಂ. ೧೭೨-೧೩) ; ಗರ ಹೊಡೆದವರ ನುಡಿಸಬಹುದು ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯಾ (ಬಸಪ. ೧೩೨) ; ಜಡನಂ . . . ಅನಿಷ್ಟಂ ಮಾಪ್ಪನಂ ನೋಡಿಯುಂ ನುಡಿಸಲ್ ಸುಜನರೊಲ್ವರೇ (ಸೋಪೋಶ. ೧೯) ; ಮುಟ್ಟಬಾರದು ನೋಡಬಾರದು ನುಡಿಸಲರಿದು ಪಿಡಿದು ಬಿಟ್ಟಡೆ ತುಪ್ಪದ ಕೊಡನ ಮೇಲಲ್ಲದೆ ಬೀಳಂ (ನಂಬಿರ. ೬-೫೦) ; ನುಡಿಸೆ ತಲೆವಾಗಿದನು ಲಜ್ಜೆಯ ಝಡಿತೆಯಲಿ (ಕುಪ್ಯಾಅ. ೮-೫೧). **೩.** ದುರಪದವನೊಗ್ಯನೆ ಮಿಡಿಸು ಲಿಂಗಾದೇವಿ ಕೊಳಲಂ ನುಡಿಸು ಚಂಗಳೆ ತಾಳಧರಿ ನೀನಾಗು ಭೋಗಾಯಿ (ಬಸಪು. ೧೨-೪೨) ; ನುಡಿಸು ನಿಸ್ಸಾಳವನು ಕರೆ ಹೊಂಗೊಡನ ಹಿಡಿದೈತರಲಿ ನಾರಿಯರೆಡಬಲನು ತೆಜಹಾಗಲಿಕ್ಕಲಿ ಸಿಂಹವಿಷ್ಟರವ (ಕುಪ್ಯಾದ್ರೋ. ೧-೩೭) ; ಮಣಿಖಚಿತ ಕಾನಕದ ದಂಡಿಗೆಯ ನುಡಿಸುತ್ತ ಪೊಸತಾನಮಾನ ಗಂಧರ್ವಕಿನ್ನರಸತೀಸಂಕುಳದ ಗಾನವಂ ಕೇಳ್ಪಡಿಸಲು (ಸೌಂದಪು. ೮-೪) ; ನಾಲಗೆ ಕುಡುಹು ಶರೀರವೆ ವಾದ್ಯ ನಿರಾಳಾತ್ಮನೇ ವಾದ್ಯಕಾಱ ತಾಳಿ ನುಡಿಸುತಿರ್ದು ಬಿಟ್ಟು ಹೋದರೆ ದೇಹ ಡೋಳಿನಂದದೊಳು ಬಿದ್ದಿಹುದು (ಭರಚ. ೧-೧೧೩) ; ವೀಣೆಯಿಂ ಗಾನವಂ ನುಡಿಸುವಂದದೊಳೆನ್ನ ವಾಣಿಯಿಂ ಕವಿತೆಯಂ ಪೇಳಿಸಿದಂ (ಜೈಮಿಭಾ. ೧-೮) ; ವೀಣೆಯಲ್ಲಿ ತಾನ ನುಡಿಸಲು ಸುವ್ಯವಸ್ಥೆ ಮಾಡಿದರು . . . ದೊಡ್ಡಸುಬ್ಬಣ್ಣನವರು (ಸಂಗೀಚಂ. ೯೦). **೪.** ಬಿಲ್ಲಿನ ತಿರುವನ್ನು ಮಿಾಟಿ ಧ್ವನಿಮಾಡು ; ಟೇಂಕಾರಮಾಡು : ಸಾಯಲಂಜುವಡಿಳುಹು ಧನುವನು ನೋಯಿಸೆನು ನುಡಿಸಿದಡೆ ಕೌರವರಾಯನಾಣೆ ನೃಪಾಲ ಕೇಳೆನುತೆಚ್ಚನಾ ಕರ್ಣ (ಕುಪ್ಯಾಕ. ೧೧-೪೭). [ನುಡಿ$_2$ + -ಇಸು$_3$]

**ನುಡಿಯುಡುಗು** (ಕ್ರಿ). ಮಾತು ಬಾರದಂತಾಗು ; ಸೊಲ್ಲು ಉಡುಗು : ಹರಿಮುಖಸುರರ್ ಭೀತಿಯಿಂ ನುಡಿಯುಡುಗಿ ಧೂಮಕರನನೀಕ್ಷಿಸೆ (ಪದ್ಮರಾ. ೧೦-೨೨೧). [ನುಡಿ$_2$ + ಉಡುಗು$_1$]

**ನುಡಿಲಿಂಗ** (ನಾ). [ವೀಶೈ] ಮಾತನಾಡುವ ದೇವರು ; ಜಂಗಮ : ಲಿಂಗದಲ್ಲಿ ದಿಟವನಱಸುವರೆ ಜಂಗಮವ ನೆಱೆ ನಂಬುವುದು ನಡೆಲಿಂಗ ನುಡಿಲಿಂಗ ಮುಖಲಿಂಗವೆಂದೇ ನಂಬೋ (ಬಸಪ. ೪೨೭).
[ನುಡಿ$_1$ + ಲಿಂಗ]

**ನುಡಿವಕ್ಕಿ** (ನಾ). ಮಾತನಾಡುವ ಪಕ್ಷಿ ; ಗಿಳಿ : ನುಡಿವಕ್ಕಿ ರನ್ನನೀ ಬಾರೆಂದವ ಮೈದಡವಿ ದಾಡಿಮ ತನಿವಣ್ಣ ಕುಡುಕಿತ್ತು ಮುಂಗೈಯ್ಯಲಿ ಕುಳ್ಳಿರಿಸಿಕೊಂಡೊಡನುಸುರಿದನಿಂತೆಂದು (ಜೀಪಂಸಾಂ. ೧೨-೫೫) ; ನಡೆವಕ್ಕಿಯ ನಲ್ಮೆಯ ಪೊಣರ್ವಕ್ಕಿಯ ನುಡಿವಕ್ಕಿಯ ಬೆಳುದಿಂಗಳಹಕ್ಕಿಯ ನಿಡುಗಣ್ಣಱವಕ್ಕಿಯ ಬಳಗಂ ಬಳಸಿದುದಾ ನೃಪಸತಿಯ (ಜಯಕಾ. ೨-೧೮) ; ನಡೆವಕ್ಕಿ ನುಡಿವಕ್ಕಿ ಕೊಳರ್ವಕ್ಕಿ ಪೊಣರ್ವಕ್ಕಿ ಪಡಿಯಱವಕ್ಕಿ ಕೇಳಿಸುವ ಗೆಡೆವಕ್ಕಿ . . . ಬನದೊಳಿರುತಿಹವು (ಕುರಾಸಾಂ. ೨-೩೧) ; ಮೈವಾಗಿ ಕೆಲಕೊಲೆದ ಕಱವಣ್ಣಂ ಕೊಕ್ಕಿಂ ಕುರ್ಕಿ ಸೀಯೆನೆ ಸವಿವ ನುಡಿವಕ್ಕಿಗೊಂದಣದಿಂ . . . ಬನಂ ಮನಂಗೊಂಡುದು (ರಾಪೂಶ್ವ. ೫೪-೮). [ನುಡಿ$_1$ + ಪಕ್ಕಿ$_1$]

**ನುಡಿವಡೆ** (ಕ್ರಿ). **೧.** ಸ್ವರ ಹೊರಡಿಸು ; ಶಬ್ದಮಾಡಲು ಶಕ್ತಿ ಹೊಂದು : ಕಾಕಾಲಯದೊಳಗೊಡಲಂ ಪೊರೆದುಂ ಮೆಯ್ಯಸಿವಣ್ಣಮನಾಂತನವರತಂ ನುಡಿವಡೆಯದೆ ಪಿಕಮಿರ್ದುವು ಧರೆಯೊಳು (ಜಯಕಾ. ೩-೫೪). **೨.** ಮಾತಿನ ರೂಪವನ್ನು ಪಡೆ : ತೊಳೆದ ಬಗೆಯಿಂದೆದ್ದು ನುಡಿವಡೆದು ಬರೆಹದಿಂ (ಕಾಲೂರ. ೧೯೨-೪೩೭). [ನುಡಿ$_2$ + ಪಡೆ$_1$]

**ನುಡಿವಲ್ಮೆ** (ನಾ). ಮಾತಿನ ಶಕ್ತಿ,—ಪ್ರೌಢಿಮೆ; ವಾಕ್ಚಾತುರ್ಯ: ಜಡಜನಮುಮೆಲ್ಲವೋದಂ ತಡೆಯದೆ ಕಲ್ಗುಂ ಗುರೂಪದೇಶ ಕ್ರಮದಿಂ ನುಡಿವಲ್ಮೆಯಲ್ತದೇಂ ಕಲ್ತೊಡನೋದುವುದಲ್ತೆ ಗಿಳಿಗಳುಂ ಪುರುಳಿಗಳುಂ (ಕವಿರಾ. ೧-೧೦). [ನುಡಿ$_2$ + ಬಲ್ಮೆ]

**ನುಡಿವಳಿ** (ನಾ). **೧.** ಹೇಳುವಿಕೆ; ಮಾತನಾಡುವಿಕೆ ; ಅಭಿವ್ಯಕ್ತಿಗೊಳಿಸುವಿಕೆ. **೨.** ಮಾತನಾಡುವ ಕ್ರಮ ; ಮಾತಿನ ರೀತಿ,—ಧಾಟಿ : ಗಿಳಿಯುಂ ಸೋವೆಳೆಯಳ ನುಡಿವಳಿಯಿಂದೆ ವಿಕಾಸಮಾದ ಛಾಯೆದ್ದಱಿಗಂಡಂದೆಳಸುತ್ತಿರ್ಪುವು ದಾಡಿಮಫಳಬೀಜಂಗೆತ್ತು ದಂತಕುಳಮಂ ಗಿಳಿಗಳ್ (ಗಿರಕ. ೨-೧೭) ; ಸಂದೇಹಕ್ಕೆ ಎಳ್ಳಷ್ಟೂ ಇಂಬು ಹೊರೆಯದಂತೆ ತಮ್ಮ ನುಡಿವಳಿ, ನಡೆವಳಿಯನ್ನಿಡುವುದು ಅವರ ಕರ್ತವ್ಯವಾಗಿದೆ (ಪುಕ್ಷಪ್ರ. ೭೫) ; ಹಳೆಯ ನುಡಿವಳಿ—ಹೊಸ ನಡೆವಳಿಗಳನ್ನು ಬೆಸೆದು ಹೊಸಬಗೆಯಲ್ಲಿ ಚೆಲುವನ್ನು ಕಂಡು ಸೊಂಪನ್ನು ಉಂಡು ಕಾಲೂರ ಚೆಲುವೆಯನ್ನು ಬರೆದೆನು (ಕಾಲೂರ. ೪ ಬರೆದವನ ನಾಲ್ಕು ಮಾತು). **೩.** ಪ್ರತಿಜ್ಞೆ; ಭಾಷೆ ; ವಾಗ್ದಾನ ; ಕೊಟ್ಟ ಮಾತು : ಗಾಂಗೇಯಂ. . .ತನ್ನ ನುಡಿದ ನುಡಿವಳಿಯೆಂಬ ಪ್ರಾಸಾದಕ್ಕಧಿಷ್ಠಾನಂಗಟ್ಟುವಂತೆ ಚಿತ್ರಾಂಗದಂಗೆ ಪಟ್ಟಮಂ ಕಟ್ಟಿ (ಪಂಪಭಾ. ೧-೭೨ ಪ); ಮುನ್ನ ಮನುಷ್ಯಗತಿಯೊಳ್ಪುಟ್ಟದರಂ ಮತ್ತಿನವರ್ ಪ್ರತಿಬೋಧಿಸುವುದೆಂದು ಕೃತಪ್ರತಿಜ್ಞರುಮಾದರಿಂದನಱದು ನುಡಿವಳಿಗೆ ತಕ್ಕಂದದೊಳ್ ನೆಗಟ್ಟಿದುದು (ಚಾವುಂಪು. ೨೦೧) ; ನೀಂ ನಿನ್ನ ನುಡಿದ ನುಡಿವಳಿಯಂ ನೆಱಪಿದೆ ನಿನ್ನ ನನ್ನಿ ನಿನ್ನಯ ಮೆಯ್ಯೊಳ್ ಸನ್ನಿದಮಾದುದು ಪೋಗು (ಸುಕುಮಾ. ೭-೨೬) ; ನುಡಿವಾ ತತ್ವದ ಮಾತಂ ಬಿಡಲಾವ್ × × ಏನುವಂ ನುಡಿವಳಿಯನ್ತೆ ನಡೆವಳಿಯೆನಿಸಿದಂ ನುಡಿದನ್ತೆ ಗಣ್ಡಂ ಗುಣಗಳ್ (ಎಕ. VII, ಶಿಕಾರಿ. ೧೯೯-೩೯ ; 1071); ನುಡಿದ ನುಡಿವಳಿ ಸಂದುದೇ ನಿಮ್ಮಡಿಗಳಿಗೆ (ಕುಪ್ಯಾದ್ರೋ. ೧೩-೬೨) ; ನಾವಿರ್ಾರ್ವರೊಳಗೆ ಮುನ್ನ ಮಾನವಗತಿಗೆ ಬಂದವರ್ಗೆ ಈ ನಾಕದೊಳಗಿರ್ದವರು ಬೋಧಿಸುವುದೆಂಬೀ ನುಡಿವಳಿಯುಂಟಪ್ಪುದು (ಶಾಂತೀಚ. ೩-೮೪) ; ಕರ್ಣನು ತಾನು ಕುಂತಿಗೆ ನುಡಿದ ನುಡಿವಳಿಯನ್ನು ನೆನೆದು ಪುರಿಗಣೆಯ ದೊಣೆಗೆ ಕೈಯಿಡದೆ ರೌದ್ರಶರದ ದೊಣೆಗೆ ಕೈನೀಡಿದನು (ಭಾಮಣಿ. ೩೨). 'ನಡೆವಳಿ$_1$' ಪರಾ.
[ನುಡಿ$_1$ + -ವಳಿ$_1$]

**ನುಡಿವಳಿಕಾಱ** (ನಾ). ಒಳ್ಳೆಯ ಮಾತುಗಾರ; ವಾಕ್ಪಟು : ಕಾಱಕ್ಕೆ—ನಡೆವಳಿಕಾಱಂ, ನುಡಿವಳಿಕಾಱಂ . . . ಬಗೆಕಾಱಂ (ಶಮದ. ೧೯೯ ಪ್ರಯೋ). [ನುಡಿವಳಿ + -ಕಾಱ]

**ನುಡಿವಳಿಕೆ** (ನಾ). ಮಾತಿನ ರೀತಿ,—ಕ್ರಮ : ಕೃತಿಯು ಏನಾದರೂ ನುಡಿವಳಿಕೆ ; ಚಾರಿತ್ರ್ಯವು ನಡೆವಳಿಕೆ. ನುಡಿವಳಿಕೆಯು ಅತ್ಯುಚ್ಚವಾಗಿ ನಡೆವಳಿಕೆಯು ಅದರ ಕನ್ನಡಿಯಂತಿದ್ದರೆ, ಆ ಮನುಷ್ಯನು ಸಾಧುವೆಂದೆನಿಸಿಕೊಳ್ಳುವನು (ಸಾಹಿಸಂ. ೨). [ನುಡಿವಳಿ + -ಕೆ]

**ನುಡಿವಳ್ಳ** 'ನುಡಿವಾಳ' ನೋ.

**ನುಡಿವಟಿ ?** (ನಾ). (?): ನಂಬಿದರನೋವದೆ ಛಿದ್ರಿಪ ಕಳ್ವ ಕಳ್ಳರೊಳ್ ನುಡಿ[ಪಾಠಾಂ. ಕುಡಿ, ಗುಡಿ]ವಟಿಯಾದನೆಂದು ನವನಾರಕರಂ ಪರಿದೆಯ್ದೆ ನಾರಕರ್ (ಅಜಿಪು. ೧೧-೧೦). [ ? ]

**ನುಡಿವಾಳ**, ನುಡಿವಳ್ಳ (ನಾ). ವಾಚಾಳಿ; ಮಾತುಗಾರ : "ವಕ್ತಾ . . . ವಾದೀ, ವಾವದೂಕಃ–ಈ ೬ ನುಡಿವಾಳಂ" (ಕಾಶಕ್ಯ. ೧೯೧). **ನುಡಿವಳ್ಳ :** "ರಪ್ತಾ =ನುಡಿವಳ್ಳಂ" (ಕಾಶಕ್ಯ. ೨೮).

[ನುಡಿ$_2$ + –ವಾಳ$_3$(< – ವಳ)]

**ನುಡಿವೆಣ್**, ನುಡಿವೆಣ್ಣು (ನಾ). ಮಾತಿನ ಅಧಿದೇವತೆ ; ಶಬ್ದದ ಒಡತಿ ; ಸರಸ್ವತಿ : "ನುಡಿವೆಣ್, ಬಾಸೆವೆಣ್, ಸೊಲ್ವೆಣ್, ಮಾತೆಱಿಯಳ್, ಸಾರದೆ, ಸರಸ್ವತಿ—ಈ ೬ ಸರಸ್ವತಿಗೆ ಪೆಸರ್" (ಕಶಸಾ. ೪೮–೧೬) ; ಆ ನುಡಿವೆಣ್ಣನಾಂತ ನಾಲ್ಮೊಗಮಿರದಚ್ಚದಾವರೆಯ ಚೆಂದಮನಂದೊಳಕೆಯ್ಕೊ ಬಂದು ನೆಟ್ಟಗೆ ಬಲವಕ್ಕದೊಳ್ ನೆಲಸಿ ಕಣ್ಗೆಸೆದಂ ಬಿದಿ ನಿಂದು ನೋಟ್ಟಿರಾ (ಕಜ್ಜಿಕಾ.೧೬೪) ; ಮೃಡನಂ ಮೊರಡಿಯುಣುಗೆ ನಾಲ್ಮೊಗನಂ ನುಡಿವೆಣ್ಣಂಬುರುಹೋದರನಂ ಸವಿಗಡಲ ಕುವರಿ . . . ಕಯ್ವಿಡಿದಂದದಿ ನೃಪತಿಯ ತೋಳ್ಪಾಳಂ ಪಿಡಿದು (ಜಯಕಾ. ೨–೧೦) ; ನುಡಿವೆಣ್ಣಂ ವಿಧಿ ಬೊಮ್ಮನಂ ಸರಸಿಜಂ ತತ್ಕಂಜಮುಂ ವಿಷ್ಣು ತಾನೊಡಲೊಳ್ವಿಷ್ಣುವನಬ್ಧಿ ತಾಳ್ದುಮದಱಿಂ ತಾಂ ಶ್ರೇಷ್ಠವೆಂದಾಡೆ (ಹವಿಮ್ಮರ. ೫–೪೯); ಕನ್ನಡದ ನುಡಿವೆಣ್ಗೆ ಭರ್ತೃಮಂದಿರವಾಗಿ (ಶ್ರೀರಾಪ.೫೩–೯೭). **ನುಡಿವೆಣ್ಣು :** "ನುಡಿವೆಣ್ಣು ಸರಸತಿಯುಂ ಸಾರದೆಯೆಂಬಿವರವಿಂದಭವನರಸಿಗಕ್ಕುಂ" (ಶಬ್ದಮಂ.೯); ನುಡಿವೆಣ್ಣು ಮೆಯ್ದೋಱುವಂತಿದೆ ಕಾವ್ಯಜ್ಞ ನುಡಿ ನಿನ್ನ ಚತುರ ನಲ್ನುಡಿಯು (ಪರ್ಥಚ. ೮–೨) ; ಇದು ರತಿಯ ನೂಪುರದ ಸುಣ್ಚರ ಇದುವೆ ನುಡಿವೆಣ್ಣಂಚೆಯಿಂಚರ (ಸಾಳ್ವಭಾ.೧೮–೩೫). **ನುಡಿವೆಣ್ಣೆನಿಯ** = ನುಡಿವೆಣ್ಣಾಳ್ಮ : "ಅಂಚೆದೇರಂ, ನುಡಿವೆಣ್ಣೆನಿಯಂ . . . ತಾವರೆವಸೆಯುಂ–ಈ ೮ ಬ್ರಹ್ಮಂಗೆ ಪೆಸರ್" (ಕಶಸಾ. ೪೮–೧೫). [ನುಡಿ$_2$+ಪೆಣ್]

**ನುಡಿವೆಣ**(ನಾ). ಮಾತನಾಡುತ್ತಿದ್ದರೂ ಹೆಣದಂತಿರುವವನು ; ಬಾಳ್ವೆಣ ; ಜೀವಚ್ಛವ : ನಡೆವೆಣನ ನುಡಿವೆಣನ ಸಂಸಾರವೇನವನ (ಬಸಪ. ೧೫೭) ; ಪತಿತರು, ಪಾಪಾತ್ಮರೆಂಬ ನಂಬಿಕೆಯಿಂದ ನಿರ್ವೀಣ್ಯರಾಗಿ, 'ನಡೆವೆಣ ನುಡಿವೆಣ'ಗಳಾಗಿ ಹೋಗಿದ್ದ ಜನತೆಗೆ . . . ಶರಣರ ಅಭಯವಾಣಿ . . . ದಿವ್ಯಧ್ವನಿಯಾಗಿ ಕೇಳಿಸಿತು (ಶರಚ.ii,ಮುಮ್ಮಾತು).

[ನುಡಿ$_1$+ಪೆಣ]

**ನುಡಿವೆಣ್ಣಾಣ್ಮ** 'ನುಡಿವೆಣ್ಣಾಳ್ಮ' ನೋ.

**ನುಡಿವೆಣ್ಣಾಳ್ಮ**, ನುಡಿವೆಣ್ಣಾಣ್ಮ (ನಾ). ಸರಸ್ವತಿಯ ಗಂಡ ; ಬ್ರಹ್ಮ : "ಪೊಂಬಸಿಱಿಂ ನುಡಿವೆಣ್ಣಾಳ್ಮಂ[ಪಾಠಾಂ. ಣ್ಮಂ]ಬೊಮ್ಮಂ . . . ಬಿದಿ ನಾಲ್ಮೊಗನೆನಲಜಂ" (ಚತುನಿ. ೫). **ನುಡಿವೆಣ್ಣಾಣ್ಮ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ನುಡಿವೆಣ್ + ಆಳ್ಮ]

**ನುಡಿವೆಣ್ಣು** 'ನುಡಿವೆಣ್' ನೋ.

**ನುಡಿವೆಣ್ಣೆಱೆಯ** (ನಾ). = ನುಡಿವೆಣ್ಣಾಳ್ಮ : "ಅರಲಿಜ ನಾಲ್ಮೊಗ ನುಡಿವೆಣ್ಣೆಱೆಯಂ ಪೊಂಬಸಿಱನಂಚೆದೇರಂ . . . ಬೇದಬಿಜ್ಜೆಗನುಮೆನೆ ಧಾತ್ರಂ" (ಕವಿಕಂ. ೨೯) ; ಬಣ್ಣಿಪೊಡಸದಳವಾ ನುಡಿವೆಣ್ಣೆಱೆಯಂಗೆನಿಪ ಲಂಪಿನೇಱಿಗೆಯನಾಂತಕ್ಷುಣ್ಣ ಪ್ರಭನನಿಶಂ ಮುಕ್ಕಣ್ಣ ವಿರೂಪಾಕ್ಷ ನಾಲಯಂ ರಂಜಿಸುಗುಂ (ಉದ್ಭಟ. ೪–೬). [ನುಡಿವೆಣ್+ಎಱೆಯ]

**ನುಡಿವೇಟ** (ನಾ). ಮಾತನ್ನು ಕೇಳಿದ ಮಾತ್ರದಿಂದಲೇ ಉಂಟಾಗುವ ಮೋಹ : ರಾಮನನು ಆ ಯುವತಿ . . . ಕಿವಿವೇಟ ಕಣ್ಬೇಟ ನುಡಿವೇಟ ಮೂಱಱ ಸವಿ ತಲೆಗೇಱೆ ನೋಡಿದಳು(ಕುರಾಸಾಂ.೩೨–೮೨). 'ಚಕ್ಷೂರಾಗ' ಹೋ. [ನುಡಿ$_2$ + ಬೇಟ$_1$(<ಬೇಂಟ)]

**ನುಡಿಸಲ್ಗೆ** (ನಾ). ಮಾತಿನಲ್ಲಿ ತೋರುವ ಸದರ,—ಸಲುಗೆ : ಬಗೆವುಗುವ ನೇರನುಡಿಗಳಲೆ, ಕೆಳೆಯ ಕೆಳೆಯರೊಳ್ ನುಡಿಸಲ್ಗೆ ಸಲ್ವಂತೆ ನುಡಿದಪೆನ್ (ಬದ್ಧಪ್ರ. ೩೨–೬೪೯). [ನುಡಿ$_2$ + ಸಲ್ಗೆ]

**ನುಡಿಸು** 'ನುಡಿಯಿಸು' ನೋ.

**ನುಡಿಸುಹ** (ನಾ). ಮಾತನಾಡುವಿಕೆ ; ಹೇಳುವಿಕೆ : "ಆಭಾಷಣಂ, ಆಲಾಪಃ—ನುಡಿಸುಹ" (ನಾಚಿರಾ. ೬).

[ನುಡಿಸು(<ನುಡಿಯಿಸು) + –ಹ$_2$(< –ಪ$_2$)]

**ನುಡಿಹ** (ನಾ). ೧. ಮಾತನಾಡಿಸುವಿಕೆ. ೨. ನುಡಿಯುವಿಕೆ : "ಮಿಥ್ಯಾಭಿಶಂಸನಂ, ಅಭಿಶಾಪಃ—ಇಲ್ಲದ ಹೊಲ್ಲಹಂ ಮೇಲಿಕ್ಕಿ ನುಡಿಹ" (ನಾಚಿರಾ. ೬) : ಪೆಱರ ಮನಕ್ಕೆ ನೋವಂ ಪುಟ್ಟಿಸದ ನುಡಿಹಂ ನಲ್ಕೆ ಎಂಬುದು ತಾತ್ಪರ್ಯಂ (ನೀತಿಸಾ. ೨೬–೫೬).

[ನುಡಿ$_1$ + –ಹ$_2$(< –ಪ$_2$)]

**ನುಡಿಹೀನ** (ನಾ). ಸರಿಯಾಗಿ ಮಾತನಾಡಲು ತಿಳಿಯದಿರುವವನು ; ಮಾತಿನ ಕೊರತೆಯುಳ್ಳ ವ್ಯಕ್ತಿ : ಉಡೆಹೀನ ಮೂಡಲು ನುಡಿಹೀನ ಬಡಗಲು ಕಡುಕೋಪದವರು ಪಡುವಲೊಳು ತೆಂಕಲಲಿ ಸಡಗರದಲಿಹರು (ಸರ್ವಜ್ಞ. ೧೬೧೫). [ನುಡಿ$_2$ + ಹೀನ]

**ನುಣ್**–(ಸಪೂರೂ) 'ನುಣ್ಣಿತು' ಎಂಬ ಗುಣವಾಚಕಕ್ಕೆ ಸಮಾಸ ಪದಗಳಲ್ಲಿ ಬರುವ ಆದೇಶರೂಪ. [<ನುಣ್ಣಿತು]

**ನುಣಾಮರ** (ನಾ). ಒಂದು ಬಗೆಯ ಮರ : ಮಡ್ಡೀಹಂಬು, ಪೊಪ್ಪೀಳಿಮರ, ನುಣಾಮರ (ಮೈಡಿಗಿ. ೫೫–೧೧೯೭).

[ನುಣಾ$_0$ (P← ತಮಿ. ನುಣಾ) + ಮರ$_1$]

**ನುಣಿಚು** 'ನುಣ್ಚು' ನೋ.

**ನುಣುಚು**$_1$ 'ನುಣ್ಚು' ನೋ.

**ನುಣುಚು**$_2$ (ನಾ). ಜಾರಿಕೆ ; ತೇಲಿಕೆ ; ಹಾರಿಕೆ : ಏನಾದರೂ ಬೇಕಾಗಿತ್ತೇ . . . ಎಂದು ಅವನು ಪ್ರಶ್ನಿಸಿದಾಗ, ಅವಳು ಸಿಗ್ಗಾಳಿಯಾಗಿ ನುಣುಚುನುಣುಚಾಗಿ ಉತ್ತರ ಕೊಟ್ಟಳು (ಪುನರು. ೪೯೭).

[<ನುಣುಚು$_1$]

**ನುಣುಪು** 'ನುಣ್ಪು' ನೋ.

**ನುಣುಪುಗೊಳಿಸು** (ಕ್ರಿ). ಕಾಂತಿಗೊಳಿಸು ; ಹೊಳೆಯುವಂತೆ ಮಾಡು : ಅಮೃತಸಾಗರಸದೃಶವಾದ ತಪಸ್ತೇಜದಿಂದ ಕಾಡುಗಳನ್ನೇ ದಂತಮಯವಾಗಿ ಧವಳಿಸುವ, ತಾರಾಚಳವನ್ನೇ ನುಣುಪುಗೊಳಿಸುವ ಈ ಅತ್ಯುತ್ತಮ ದಿವ್ಯಾಕಾರೆ (ಸೌಂದಸ. ೨೧೯).

[ನುಣುಪು (<ನುಣ್ಪು) + ಕೊಳ್$_1$ + –ಇಸು$_3$]

**ನುಣ್ಕದಪು** 'ನುಣ್ಗದಪು' ನೋ.

**ನುಣ್ಗಂಟು** (ನಾ). ಸೊಬಗಿನ ಸಿರಿತನ ; ಸೌಂದರ್ಯದ ಶ್ರೀಮಂತಿಕೆ : ಕಡುಸೋವದಿಯಾದಪೆ ನಿನ್ನ ಮೆಯ್ಯ ನುಣ್ಗಂಟೊಡವುಟ್ಟಿ ಮಟ್ಟಮಿರೆ ಮೀಱುವರಾರೊ ಮನೋಜನಾಜ್ಞೆಯಂ (ಮಲ್ಲಿಪು. ೭–೬೪). [ನುಣ್ (<ನುಣ್ಣಿತು) + ಗಂಟು]

**ನುಣ್ಣಟಿಕ** (ನಾ). ತೀಕ್ಷ್ಣವಾದ ವ್ಯಂಗ್ಯ, — ಕಟಕಿ : ಪಲವುಂ ಸಿರೋಥಂಗಳಂ ದೂಡೆ ನಿಂದು ಸತಿಯರ್ ನೊಂದು ನುಣ್ಣಟಿಕಿಗಳನಾಡೆ (ಸಂಚಿರ. ೧೫–೯೦) ; ದಿಟ ಶುದ್ಧನಂತೇ ನುಣ್ಣಟಿಕಿಗಮ್ಮದೆಯೊಮ್ಮೆ ತುಟಿ ಮಿಡುಕದಿರಲದನಱಿದು (ಭೈರವೇ. ೨–೧೧೦) ; ಅರಸಂ ಪೋಗದಿರೆಂದು ನುಣ್ಣಟಿಕಿಯಾಡುತ್ತಿರ್ಪಂ (ಪ್ರಷವಿ. ೩೭–೧೩).

[ನುಣ್ (<ನುಣ್ಣಿತು) + ಕಟಕಿ]

**ನುಣ್ಣದಪು**, ನುಣ್ಣದಪು (ನಾ). ಕಾಂತಿಮಯವಾದ ಕಪೋಲ ; ಥಳಥಳಿಸುವ ಕೆನ್ನೆ : ಚಟುಲ ಲೋಚನದ ನುಣ್ಣದಪುಗಳ ಥಳಥಳಿಪ ನಿಟಿಲ ತಟದಂಗನೆಯರೀಳ್ತಂದರು (ಸೌಂದಪು. ೧೩-೫೧) ; ಅಪರಂಜಿದಗಡುಗಳ ದೊರೆಯಾದುವು ನುಣ್ಣದಪುಗಳಾ ಶ್ಯಾಮೆಗೆಯಭಿನವರಮೆಗೆ (ಜಯಕಾ. ೩-೪೩) ; ತೊಳಪ ನಾಸಿಕದ ನುಣ್ಣದಪುಗಳ ಪೊಳೆವ ಕಂಗಳ . . . ಮೋಹನದ ಚೆಲ್ವಿನೊಬ್ಬುಳಿಯೆನಿಪ ರಾಘವನ ಸಿರಿಮೊಗವನೆಂತು ನೋಡದೆ ಮಾಣ್ಬೆನಕಟ (ಜೈಮಿಭಾ. ೧೯-೨೧) ; ನುಣ್ಣದಪಂ ಪಳಂಚಲೆಯೆ ಕುಂಡಳಮುಂಡಳಮಾನನಾಂಬುಜಂ ತಣ್ಣದಿರಂಗೆ ಸೋಲಮನೊಡರ್ಚೆ (ರಾಜಶೇ. ೧೩-೬೧) ; ಎಳೆಯ ತಳಿರು ಹೊಳೆವ ತಳಿರು ನುಣ್ಣದಪನು ಚುಂಬಿಸೆ (ಕವಿಸೋ. ೨೩-೧೦). **ನುಣ್ಣದಪು :** ಮೆರೆವ ನಗು ಮೊಗದ ಬಗೆ, ಪೊಳೆವ ಕಣ್, ನುಣ್ಣದಪು, ಚೆಲ್ವ ಪಣೆ, ಇವೆಲ್ಲಮಂ ನೋಡಿ . . . ಹಿಗ್ಗಿ (ಚಂದ್ರಸ. ೧೭-೨೧).

[ನುಣ್ (<ನುಣ್ಣಿತು) + ಕದಪು (<ಕದಂಪು)]

**ನುಣ್ಣದಿರ್** (ನಾ). ೧. ಉಜ್ವಲವಾದ ಕಿರಣ : ಒಯ್ಯನೆ ಚಾಮರಾಂಗನೆಯ ಕಯ್ಯೊಳ್ಕೊಟ್ಟ ನಾತ್ಮೋತ್ತರೀಯದುಕೂಲಾಂಚಲ ಸೂಕ್ಷ್ಮ ಸೂತ್ರನಿವರವ್ರಾತಂಗಳಿಂ ಕೂಡೆ ನುಣ್ಣದಿರ್ಗಳ್ ಸೂಸುವ ಶೇಷಮೆಂಬಮುಳತಾರೋದಾರಮಂ ಹಾರಮಂ (ಕಾದಂಉ. ೧೯೪) ; ೨. ಮನೋಹರವಾದ ಹೊಳಪು ; ಆಪ್ಯಾಯಮಾನವಾದ ಕಾಂತಿ : ಮುತ್ತುಂ ಪಚ್ಚೆವರಲ್ಗಳುಂ ಕುಳಿಸಮುಂ ಮುಂತಾಗಿ ಕುಂದಿಲ್ಲದೊಂಬತ್ತುರನ್ನದ ನುಣ್ಣದಿರ್ ನೆಗೆದು ನೀಳ್ದೊಂದೊಂದರೊಳ್ ಕೂಡಿ (ಕಬ್ಬಿಕಾ. ೩೬) ; ಕಾರಮಿಂಚಂ ನಿವಾರಿಸುವ ನುಣ್ಣದಿರ ತುಱುಗೆವೆಗಣ್ಣ ಹಂಸಗತಿಯಳಿವ ನಡೆಯ ಕನ್ನೆಯರು . . . ಬಂದರು (ಸೌಂದಪು. ೭-೪೯); ಅಂಭೋಜಕುಟ್ಮಳವಕ್ಷೋರುಹದಗ್ರಪ್ರಭಾಳ್ದುದೆಳೆಗರ್ಪಂ ನುಣ್ಣದಿರ್ಗೆಹದೊಳ್ಕೆಳೆಗೊಂಡತ್ತು ತನೂದರಂ ಬಳೆದುದಾ ತನ್ವಂಗಿಗಾ ಗರ್ಭದೊಳ್ (ರಾಜಶೇ. ೪-೩೧). [ನುಣ್(<ನುಣ್ಣಿತು) + ಕದಿರ್$_2$]

**ನುಣ್ಗಲ್** (ನಾ). ೧. ನಯವಾದ ಕಲ್ಲು. ೨. ಹೊಳಪುಳ್ಳ ಕಲ್ಲು. 'ನುಣ್ಗಲ್ಗಟ್ಟು' ಪರಾ. [ನುಣ್ (<ನುಣ್ಣಿತು) + ಕಲ್$_3$]

**ನುಣ್ಗಲೆ** (ನಾ). ಸೌಂದರ್ಯವನ್ನುಂಟು ಮಾಡುವಂಥ ಕಲೆ ; ಅಂದವಾದ ಗುರುತು,—ಚಿಹ್ನೆ : ಸಲೆ ನಿಲೆ ವೇಳೆಯೆನ್ದು ಭಯದಿಂ ಕಡಿದಂಗುಳಿ ಮೆಲ್ದ ಬಾಯ ತಂಬುಲವೆಳಕೊಣ್ದುಮಣ್ಣ ಮಡಗೂಳುರದಂಕುಸವಾಗಿ ಕೊಯ್ದ ನುಣ್ಗಲೆಯಿವು ಕಾಗು (ಎಕ. XI, ದಾವಣ. ೪೨-೩೦ ; ಸು. 1162). 'ಲೂನವಕ್ಷ' ಹೋ.

[ನುಣ್ (<ನುಣ್ಣಿತು) + ಕಲೆ$_2$]

**ನುಣ್ಗಲ್ಗಟ್ಟು** (ನಾ). ನುಣುಪಾದ ಕಲ್ಲಿನ ರಚನೆ : ಗಗನದೊಳ್ ಪಚ್ಚೆಯ ನುಣ್ಗಲ್ಗಟ್ಟಿನ ಜಗಲಿವೊಲಿರೆ ಕಾಲ್ಗಟ್ಟೆಯ ಮಡಿಗಳೆಸೆದು ಪೋರೊಂದೆಡೆಯೊಳ್ (ಮಲ್ಲಿಪು. ೨-೧೭). [ನುಣ್ಗಲ್ + ಕಟ್ಟು$_2$]

**ನುಣ್ಗಲ್ಲ** (ನಾ). ನುಣುಪಾದ ಕೆನ್ನೆ,—ಕಪೋಲ : ಕುಟಿಲಾಳಕಿಯರ ನುಣ್ಗಲ್ಲ ತೊಂಡೆವಣ್ದುಟಿಯ ಕರ್ದುಕಿ ಮೆಯ್ನುವಿರ ಸುಟಿಯಿಂದ ಗುಡಿಗಟ್ಟಸುವ ವೂಗಿಯ ಹಿಮ ವಿಟನಂತೆ ಕಣ್ಗೆ ರಂಜಿಸಿತು (ಮೋಹತ. ೪-೪೫) ; ತಲ್ಲಣಿಸಿ ತಿಂಗಳರಗಿಳಿ ಪೂಸರಲ್ಕೆಬ್ಬುವಿಲ್ಲಾಬಿಡಿಗಳೊಳ್ದಳಿರ್ಗಳಿಂದೆಡೆಸಿ ನುಣ್ಗಲ್ಲದೊಳ್ಕೈಯಿಟ್ಟು ಬೆಜಗಾಗಿ ಚಿಂತಿಸುವ ತೆಜದೊಳವಳಿರುತಿರ್ದಳು (ಜೈಮಿಭಾ. ೩-೩೭).

[ನುಣ್ (<ನುಣ್ಣಿತು) + ಗಲ್ಲ$_1$]

**ನುಣ್ಗಱಿ** (ನಾ). ೧. ಮೃದುವಾದ ರೆಕ್ಕೆ ; ನುಣುಪಾದ ರೆಕ್ಕೆ : ನುಣ್ಗಱಿ[ಪಾಠಾಂ. ಜೊಮ್ಮಲೆ]ಗಳ್ ಮಿನುಗಲ್ಕೆ ವಿದ್ರುಮಾಂಕುರದವೊಲೊಪ್ಪೆ ಚಂಚುಪುಟಮೊಯ್ಯನೆ ಬಂದುದು (ಕಾದಂಉ. ೬೦) ; ಜಳಜದಳಪೀಠದೊಳ್ ನಲ್ಲಳ ನುಣ್ಗಱ ಸೋಂಕೆ ಸೋಂಕಿ ಕುಳ್ಳಿರ್ದಳಿನೀ ಕಳಗೀತರವಮುನಾಲಿಪ ವಿಳಾಸಮಂ ನೆನೆದೊನಲ್ದುದ್ಯೊಂದು ರಥಾಂಗಂ (ಚಂದ್ರಪು. ೮-೯) ; ಪಕ್ಕಿಗಳ ನುಣ್ಗಱ ಸೀದುದರಣ್ಯದಲ್ಲಿ ಸಂಗಡಿಸಿದ ರುಕ್ಷರೋಮತತಿ ಬೆಂದುದು ಬೇಸಗೆಯುಗ್ರಮೆಂತುಟೋ (ರಾಜಶೇ. ೫-೪೬). ೨. ಕೋಮಲವಾದ ಪುಕ್ಕ ; ಎಳೆಯ ಗರಿ : ಎಜಗಿದ ಮಱಿಗಿಳಿಗಳ ನುಣ್ಗಱುದುಱುಗಲ ಪೊಳಪಿನಿಂ ಮೃಗಾವಳಿಗೆನಸುಂ ಮಿಱುಗುವ ಪೊಸಪಸುರ್ವುಲ್ಲೆಂಬೆಱಕಮನೊದವಿಸುವುವಲ್ಲಿ ಕಟಿವೆಯ ಕೆಯ್ಗಳ್ (ಕುಸುಮಾ. ೨-೪೦). [ನುಣ್ (<ನುಣ್ಣಿತು) + ಗಱಿ]

**ನುಣ್ಗಱೆ** (ನಾ). ಅಂದವಾದ ಗುರುತು,—ಚಿಹ್ನೆ ; ಮನೋಹರವಾದ ಕಲೆ : ಬಾಲೆಯ . . . ಲಲಾಟದೊಳ್ ಮೃಗಮದಬಿಂದುವಂ ಪೆಱೆಗೆ ನುಣ್ಗಱೆಯಂ ಪಡೆವಂತೆ ತಿರ್ದಿದರ್ (ಪಂಪರಾಮಾ. ೫-೪೩) ; ತೆಗೆಯೆ ಚಕೋರಿ ಕರ್ಚೆ ಶಶಿಮುಂಡಲದಿಂದಮ ಕಿಟ್ಟು ಬಿಟ್ಟ ರಶ್ಮಿಗಳೆಡೆಯಂತೆ ತೋಱುದುದು ನುಣ್ಗಱೆಯಾ ಕೆಡೆದುನ್ನಯುಖಮಾಲೆಗಳನೆ ಚಂದ್ರಮಂಗೆ ಕುಡಲೆತ್ತಿದವೋಲೆಸೆದಿರ್ದರ್ . . . ಮಾಲೆಗಾರ್ತಿಯರ್ (ಲೀಲಾವ. ೨-೨೭) ; ಮಿಱುಗುವ ವಿದ್ರುಮಾಧರದ ಮಧ್ಯದೊಳಾಯತ ವೃತ್ತವಾದ ನುಣ್ಗಱೆಯಿದು ಮನ್ಮನಕ್ಕೆ ಪಡೆದಪ್ಪುದು . . . ಪೋಲ್ವೆಯಂ (ಚಂದ್ರಪು. ೮-೫೭) ; ನುಣ್ಗಱೆಯಿಲ್ಲದ ವಿಧುವಿಂ ತಣ್ಣದಿರೊಗೆವಂತೆ ವಿಮಳಮುಖಮಂಡಳದಿ ಕಣ್ಗೊಳಿಸೆ ದಂತಕಾಂತಿ (ಶಾಂತೀಶ್ವ. ೨-೫೩). [ನುಣ್(<ನುಣ್ಣಿತು) + ಕಱೆ$_2$]

**ನುಣ್ಗಾಡಿ** (ನಾ). ಮನೋಹರವಾದ ಸೌಂದರ್ಯ,—ಚೆಲುವು : ಬಿಣ್ಗೆಚ್ಚಲಿಕ್ಕಿ ಕೊಡವಾಲ್ಗಱೆಯದಾವಿಲ್ಲ ನುಣ್ಗಾಡಿ[ಪಾಠಾಂ. ಣ್ಣಾಡು] ವೆತ್ತಿರದ ಪಶುಪಕ್ಷಿಮೃಗವಿಲ್ಲ ಕಣ್ಗೊಳಿಪ ರಾಮರಾಜ್ಯದೊಳ್ (ಜೈಮಿಭಾ. ೧೮-೧೩). [ನುಣ್(<ನುಣ್ಣಿತು) + ಗಾಡಿ$_1$]

**ನುಣ್ಗಾರೆ** (ನಾ). ನಯಗೊಳಿಸಿದ ಗಾರೆ ; ನಯಗಾರೆ : ಹಂಪೆಯ ಕಮಲಮಹಲನ್ನು ನುಣ್ಗಾರೆಯಿಂದ ನಯಗೊಳಿಸಿದ್ದಾರೆ (ರೂಢಿ).

[ನುಣ್(<ನುಣ್ಣಿತು) + ಗಾರೆ$_1$]

**ನುಣ್ಗುರುಳ್**, ನುಂಗುರುಳು, ನುಣ್ಗುರುಳು (ನಾ). ೧. ಮೃದುವಾದ ಮುಂಗುರುಳು ; ಕೋಮಲವಾದ ಸುರುಳಿಗೂದಲು : ನಡೆಗಲೊಳಂಚೆ ನುಣ್ಗುರುಳೊಳಾಱಿಡಿ ತೋಳ್ಗಳೊಳ್ಳಿಗೊಂಬು ಸೋರ್ಮುಡಿಗಳೊಳ್ಪಿದೆ ಸೋಗೆ . . . ದೊರೆಕೊಂಡುವೆನುತ್ತೆ ಕಾಯ್ದುದಾಟುಡುವೊಲಾ ಬನಕ್ಕೆ ನಡೆತಂದುದು ಪೆಂಡಿರ ತಂಡಮೇಱಿಗ್ಗಿಯಿಂ (ಕಬ್ಬಿಕಾ. ೯೨) ; ನುಣ್ಗುರುಳ ನೀಱಿಗೆ ಬೆಡಂಗಮರ್ದೆಸೆವ ತುಂಬುದಣ್ಣದಿರನಂದದ ಮೊಗದ ಚೆಲ್ವಿಗೆ . . . ಗರ್ಭಚಿಹ್ನವಂಕುರಿಸಿದುದು (ಪದ್ಮರಾ. ೨-೩೮) ; ಅಂಬುಜಂ ತುಂಬಿಗಳ ಬಂಬಲಂ ಮೈದಡಪುವಂತೆ ನುಣ್ಗುರುಳ್ಗಳಂ ನೆಳಲುವ ಕರಾಬ್ಜರ ಕಂಗೊಳಿಸೆ ತೋರ್ಪ ಗಂಧರ್ವಸುಂದರಿಯರಿಂ (ರಾಜಶೇ. ೧-೧೩೫ ವ). ೨. ಕಾಂತಿಯುತವಾದ ಕೂದಲು; ಹೊಳಪಿನಿಂದ ಕೂಡಿರುವ ಕೂದಲು : ನುಣ್ಗುರುಳ ಪೊಳೆವ ಕರ್ಪುಂ ಕಣ್ಗಗ್ಗಳವಾದ ಮೆಯ್ಯ ಬೆಳಗೆಸೆವಿನೆಗಂ ಪೆಣ್ಗಂಡು ರಾಜ್ಯಲಕ್ಷ್ಮಿಯ ಕಣ್ಗಳ ದೊರೆಯಾಗಿ ಸಮನೆ ಬಳೆವಿನಂ (ಯಶೋಚ. ೪-೪೧). **ನುಂಗುರುಳು :** ೧. ತನ್ನ ಕಂಠದ ಮಾಲೆಯಂ ಪಱಿದು ನುಂಗುರುಳ ಗನ್ನದಿಂ ಕೆದಱಿ ಚೆಳ್ಳುಗುರುಗಳಿಂ ಸ್ಥೂಲಕುಚಕುನ್ನತದ ಹತಿಗಳಂ ಮಾಡುತ್ತ (ಚತುಪು. ೨-೭-೮೨). **ನುಣ್ಗುರುಳು :** ೧. ತರುಣಿಮ ತಮಾಲದೆಳದಳಿರಂತೆ ನೀಳ್ದ ನುಣ್ಗುರುಳು ಸಿಂಗರಿಸಿದೇ ಸೀಮೆಯೆಂದೆನಿಪ ಪೇರುರವೊಪ್ಪೆ ಶಾರ್ದೂಲವರೆಯ ಸೌಂದರಗೆ (ಸೌಂದಪು. ೧೪-೫) ; ನುಣ್ಗುರುಳ ತಳತ ನೀಲದ ಕುರುಳವರಾ ಕುವರಿಯ ಬಳಿವಿಡಿದೈದಿತೊಗ್ಗಿನಲಿ (ಮೋಹತ. ೨೪-೧೧). [ನುಣ್(<ನುಣ್ಣಿತು) + ಕುರುಳ್$_1$]

**ನುಣ್ಗುರುಳು** 'ನುಣ್ಗುರುಳ್' ನೋ.

**ನುಣ್ಗೂದಲು** (ನಾ). ಮೃದುವಾದ ಕೂದಲು ; ಕೋಮಲವಾದ ನವಿರು : ದಟ್ಟವಾಗಿ ಬೆಳೆದು ಕತ್ತರಿಸಿದ್ದ ನುಣ್ಗೂದಲು ಸಂಸ್ಕಾರವಿಹೀನ ವಾಗಿ ನೇತಾಡುತ್ತಿತ್ತು (ಪುನರು. ೧೪೩).
[ನುಣ್(<ನುಣ್ಣಿತು) + ಕೂದಲು(<ಕೂಂದಲ್)]

**ನುಣ್ಗೆಂಪು** (ನಾ). ಹೊಳಪುಳ್ಳ ಕೆಂಪು ; ಕಾಂತಿಯುತವಾದ ರಕ್ತ ವರ್ಣ : ಮುಟುಗದು ಗಡಿನ್ನುಮೆನುತಂ ಮುಳಿಸಿಂ ಕಾಮಿನಿಯರೀಕ್ಷಿಸು ತ್ತಿರೆ ನುಣ್ಗೆಂಪೆಳಸಿದುದೆನೆ ಬಿಂಬಂ ಕೆಂಪೆಳಸಿರ್ದುದು ಚಕ್ರವಾಕ ಚಕ್ರೇ ಶ್ವರನಾ (ಕಾದಂಬ. ೧೩೮). [ನುಣ್(<ನುಣ್ಣಿತು) + ಕೆಂಪು$_1$]

**ನುಣ್ಗೊದಳ್** (ನಾ). (ಮಕ್ಕಳ) ಇಂಪಾದ ತೊದಲು ಮಾತು ; ಮಧುರವಾದ ತೊದಲ್ನುಡಿ: ಈಕ್ಷಿಸಿ ಮಕ್ಕಳ ಮುದ್ದುಗೆಯ್ತದೊಳ್ಪಂ ಬಿಡದಪ್ಪಿ ಕೋಮಲತರಾಂಗಮನಾಲಿಸಿ ನುಣ್ಗೊ[ಪಾಠಾಂ.ಣ್ದೊ]ದಳ್ ಪೊದಟ್ದೊಂಬಿನಿವಾತನಟ್ಟುಱುಳಿ ವಾಸಿಸಿ ನೆತ್ತಿಯಂ. . .ತಣಿವೆಯ್ದುವರೇಂ ಕೃತಾರ್ಥರೋ (ಚಂದ್ರಪ್ರ. ೩-೪೪).
[ನುಣ್(<ನುಣ್ಣಿತು) + ಕೊದಳ್$_2$(<ಕೊದಲು$_2$)]

**ನುಣ್ಗೊನರ್** (ನಾ). ಕೋಮಲವಾದ ಚಿಗುರು ; ಮೃದುವಾದ ಕುಡಿ : ತೀವಿದ ನುಣ್ಗೊನರ್ ಕಿಱುಗೊನರ್ ನಸುಬಲ್ಗೊನರೆಂಬಿವೇಟಿಗೆ ವೆತ್ತು (ಜಗವಿ. ೧೪-೨೬). [ನುಣ್(<ನುಣ್ಣಿತು)+ಕೊನರ್$_2$]

**ನುಣ್ಗೊನೆ** (ನಾ). ಮೃದುವಾದ ತುದಿ; ಸೂಕ್ಷ್ಮವಾದ ಕೊನೆ; ನವುರಾದ ಅಗ್ರಭಾಗ : ಕೇಸರದ ನುಣ್ಗೊ[ಪಾಠಾಂ. ಣ್ಗೊ]ನೆ ಸೂಸೆ ಮರಲ್ದು ಚೆಲ್ವಿನೊಳ್ ಗಡಣಿಸಿದತ್ತು ಮುಂಬಗಲೊಳಂಬುರುಹಂ ಸರಸೀ ಸಮೂಹದೊಳ್ (ಚಂದ್ರಪ್ರ. ೮-೧೦೩).
[ನುಣ್(<ನುಣ್ಣಿತು)+ಕೊನೆ$_2$]

**ನುಣ್ಗೊರಲ್**, ನುಂಗೊರಳ್, ನುಣ್ಗೊರಲು, ನುಣ್ಗೊರಳ್, ನುಣ್ಗೊರಳು (ನಾ). ೧. ಸುಂದರವಾದ ಕೊರಳು ; ಅಂದವಾದ ಕುತ್ತಿಗೆ : ಮೆಲ್ಲುಲಿ ನುಣ್ಗೊರಲೊಳುಣ್ಮಲಿಂಚರಂಗೆಯ್ವುತಿರ್ಪಲರ್ವಕ್ಕಿ ವಳಗದಿಂ . . . ಕೊಳಂಗಳ್ ಮೆಱೆದುವು (ಪದ್ಮರಾ. ೮-೩೯) ; ಸುಲಲಿ ತಾಂಗಿಯರ ನುಣ್ಗೊರಲ ಕಂಠಿಕೆಯಂತೆ . . . ಒಪ್ಪಿದನು ಸದ್ವಿಪ್ರಕುಲ ರತ್ನದೀಪಂ (ಚಂಪ್ರಸಾಂ. ೫-೧೨೩) ; ಥಳಥಳಿಪ ನುಣ್ಗೊರಲ ನಳಿ ತೋಳ್ಗಳ . . . ಸುಳಿಗುರುಳ್ಗಳ ಪೆಣ್ಗಳಿರ್ದರಂದರಸಿನೊಡ್ಡೋಲಗದೊಳು (ಚೆಬಪು. ೭-೧೨) ; ನುಂಗೆ ನುಣ್ಗೊರಲುಂ ಜಿಹ್ವೆಯುಮಾ ವಿಷಾಗ್ನಿಯುರಿ ಯಿಂದೇನಾದುದೋ ಕುಕ್ಷಿಯೊಳ್ಪರದಿಂ ಪೊಕ್ಕು ಮಡಲ್ತೆನಿತ್ತೆ ಸಗಿತೋ ಸಂತಾಪವಂ ದೇವನಾ (ವೃಷವಿ.೮-೨೫ ಪ) ೨. ಮಧುರವಾದ ಕಂಠ; ಇಂಪಾದ ಧ್ವನಿ,—ಶಾರೀರ : ಕಡುಸೊಕ್ಕಿ ನುಣ್ಗೊರಲಿನಿಂಚರಂ ಪೊಱಪೊಣ್ಮೆ ಸುಳಿವ ಮಱಿದುಂಬಿಯ ವಿಲಾಸದಂತೆ . . . ರಸಿಕರ್ಗೆ ನಲವೀವುದೀ ದಿವ್ಯಕಾವ್ಯಂ (ಸೌಂದಪು. ೧-೧೬) ; ಪರಿವ ಪಸುಳೆಗಿಳಿಗಳ ನುಣ್ಗೊರಲಿಂ ಪಱಗುಟ್ಟುವ ಪರಪುಟ್ಟದ ಪಾಡುವ ಪಱಿಮೆವಱಿಯ (ಜಯಕಾ. ೧-೪೬). **ನುಂಗೊರಳ್ :** ೧. ನುಂಗೊ[ಪಾಠಾಂ.ಣ್ಗೊ]ರಳ ಕೌಸ್ತುಭದ ರುಚಿರಾಪಾಂಗಲಕ್ಷ್ಮಿಯ ಸುಸ್ಮಿತಾಧರಮಂಗಳಾನನ ಕಮಲವನು ನೆನೆವುದು ಮನೋಮಯನ (ಶಿಭಾಗ. ೪-೧೩-೩೧ ); ತಾಂಬೂಲರಸವಾ ನುಂಗುವಾಗಿದಿರಿಗೆ ತೋಱುವುದರಸನ ನುಂಗೊರಳೇನ ಬಣ್ಣಿಪೆನು (ಭರಚ.೬-೫೫). **ನುಣ್ಗೊರಲು:** ೨. ಹೊರೆಯು ಮಧುರದ ಷಡ್ಜ ಪಂಚಮದೆರಡು ತಂತಿಯನಾರಯಿದು ನುಣ್ಗೊರಲು ಬೆರಲೊಂದಾ ದುದೆನೆ ಬಾಜಿಸಿದಳಾ ಚದುರೆ (ಸಾಳ್ವಭಾ. ೧೮-೭). **ನುಣ್ಗೊರಳ್ :** ೧. ಲಲಿತ ಸ್ಮೇರವದನದ ನುಣ್ಗೊರಳ ಪೀವರಪಯೋಧರದ . . . ಭೂರಿ ಭೂಷಣದಮರಿಯರು ಮೆಱೆದಿರ್ದುದೊಂದೆಸೆಯು (ತೊರರಾ. ೫-೨-೭೧).
೨. ಪಿರಿದುಂ ನುಣ್ಗೊರಳಿಂದಮೊಂದೆಱೆಳನೇಕಚ್ಛಂದಮಂ ತೋಱೆ ಬಂಧುರರಾಗಂಗಳನುನ್ನತಪ್ರಮದದಿಂದಾಳಾಪನಂಗೆಯ್ದು ನಿರ್ಜರ ಸೀಮಂತಿನಿ ಯೊರ್ವಳ್ . . . . ನೆಱೆ ಪಾಡಿ ಮೆಚ್ಚಿಸಿದಳಾ ಭೂಪಾಳನರ್ಧಾಂಗಿಯಂ (ಬಾಧಪು. ೬-೮೭). **ನುಣ್ಗೊರಳು :** ೧. ಥಳಥಳಿಸುವ ಶಂಖದಂತೆ ನಳಿನಾಕ್ಷಿಯ ನುಣ್ಗೊರಳು ನೋಳ್ಪರ ಕಣ್ಗೆ ಸುಲಲಿತೋತ್ಸವವಿತ್ತುದು (ಕಂಸವಿ. ೯-೩೧). [ನುಣ್(<ನುಣ್ಣಿತು) + ಕೊರಳ್(< ಕೊರಲ್)]

**ನುಣ್ಗೊರಲ** (ನಾ). ಸುಂದರವಾದ ಕೊರಳುಳ್ಳವನು : ಮಂಡಳಿ ಸುವ ಕಂಠಸರದ ನುಣ್ಗೊರಲನ ಕಂಡಾಕ್ಷಣ ಸೋತರೊಲಿದು (ಮೋಹತ. ೧೮-೬೩). [ನುಣ್ಗೊರಲ್ + – ಅ$_7$]

**ನುಣ್ಗೊರಲು** 'ನುಣ್ಗೊರಲ್' ನೋ.

**ನುಣ್ಗೊರಳ್** 'ನುಣ್ಗೊರಲ್' ನೋ.

**ನುಣ್ಗೊರಳು** 'ನುಣ್ಗೊರಲ್' ನೋ.

**ನುಣ್ಚರ**, ನುಂಚರ, ನುಣ್ಸರ (ನಾ). ೧. ಮೆಲ್ಲುಲಿ; ಇನಿ ದನಿ ; ಇಂಚರ : ಎಡೆಯಾಡುವೆಳವೆಂಡಿರ ನೂಪುರದ ನುಣ್ಚರ ಕ್ಕೆಳಸಿ ಪರಿವ ವಲ್ಲಭಹಂಸನಂ ಮೃಣಾಳಲತೆಯ ಸಂಕೊಲೆಯೊಳಿಕ್ಕು (ಕಾದಂಬ. ೨೫) ; ನೆರಪೆ ತುಂಬಿಗಳನಾತ್ಮಮುಖೋದ್ಭೃತ್ಪರಿಮಳಂ ಕಮಳಬಂಧುರಗಂಧಂ ಪರಪೆ ಕೇಕಿಗಳ ತಾಂಡವಮಂ ನುಣ್ಚರದ ತಿಣ್ಪು ಘನಘೋಷಗಭೀರಂ (ಕಾವ್ಯಾಪ. ೭೪) ; ನುಣ್ಚರದೆ ಮಿಂಚಂ ಸೀಳ್ದವೋಲ್ಪೊಣ್ಮೆ ಕಾಕಳಿಯೊಳ್ಪಾಡಿದ ಸೀಯನಪ್ಪ ರಸಗೇಯಂ ಚತ್ತಮಂ ತಾಗೆ (ಲೀಲಾಪ. ೩-೬೧); ತುಂಬಿಗಳ ನುಣ್ಚ[ಪಾಠಾಂ. ಣ್ಸ]ರದಿಂ ಕರೆವಂತಿರ್ದ ಪೂದೋಂಟಂಗಳಿಂ (ನಂಬಿರ. ೧೨-೨೯) ; ಕಿವಿಗಿನಿ ದಪ್ಪಂತಿರೆ ಕರೆವ ಕೋಗಿಲೆಯ ನುಣ್ಚರದಿಂದಂ ಬಿರಿಯಿಗಳ್ಗೆ ಮಾಡುವು ದಟಿಲಂ (ಕಬ್ಬಿಕಾ. ೩೧) ; ಅಬಲೆ . . . ಪುಷ್ಪಮಾಲೆಯಂ ನಿಬಿಡ ಕರಾಗ್ರದಿಂ ಪಿಡಿದಿರಲ್ ಮಱಿದುಂಬಿಯ ಬಂಬಲುಜ್ಜ್ವಲಸ್ತಬಕನಿಭಕ್ಕೆ ಬಂದೆಱಗಿ ಝೇಂಕರಿಸಲ್ ಮೆಱೆದತ್ತು ನುಣ್ಚರಂ (ನಳಚಂ. ೩೭೪). **ನುಂಚರ :** ೨. ಕಾಲಂದುಗೆಯ ಧ್ವನಿ : "ನುಂಚರಮೆಂದು ನೂಪುರರವಂ" (ಕರ್ಣಾನಿ ೩೧). **ನುಣ್ಸರ :** ೧. ನುಣ್ಚರಂ, ನುಣ್ಸರಂ (ಶಬ್ದಾನು. ೯೩ ಪ್ರಯೋ). [ನುಣ್(<ನುಣ್ಣಿತು) + ಸರ$_3$]

**ನುಣ್ಚು**, ನುಣಿಚು, ನುಣುಚು$_1$ (ಕ್ರಿ). ೧. ಜಾರು ; ಜಗುಳು ; ಕಳಚಿಕೊಳ್ಳು : "ನುಣ್ಚು—ಅಪಸರಣೇ" (ಶಮುಧಾ) ; "ನುಣ್ಚೆಂದುಂ, ಜಗುಳೆಂದುಂ ಜಾಱುವುದು" (ಕಶಸಾ. ೬೯-೫೭೦) ; ಕಾಲಿಂ ನವಮಣಿ ಮಯಮಂಜೀರಕಂ ನುಣ್ಚುತಂ ತೀವಿ ನಿಜಪ್ರದ್ಯೋತದಿಂ ಪಶ್ಚಿಮಶಿಖರಿ ಶಿರೋಭಾಗದೊಳ್ಪೋಟ್ದುದೆಂಬಂತಿನಬಿಂಬಂ ರಂಜಿಸಿತ್ತಸ್ತಮಯಸಮಯ ದೊಳ್ (ಕಾದಂಪೂ. ೫೦೭) ; ಅತನುಬಾಣದ ಪೊಗರಂ ನುಣ್ಪುಗರೊಳ ಟಿಸಿ ನೋಡಿದ ಕಣ್ನುಣ್ಚುಗುಮೆನಿಪ ನುಣ್ಪಿನಿಂದೇಂ ಸೊಗಯಿಸುವುವೊ ಬಾಹುಮೂಲಮಾ ಕಾಮಿನಿಯಾ (ಮಲ್ಲಿಪು. ೩-೬೮). ೨. ತಪ್ಪಿಸಿ ಕೊಳ್ಳು ; ನುಸುಳಿಕೊಳ್ಳು : ಪೊಸೆದು ಪೊಳ್ವ ಸಾಹಸಿತನಕೆ ಬೆರಸಿದ ಮಲ್ಲನನೊರಸಿಬಿಡುವ ಲವಣಿಸಾರದೊಳ್ ನುಣ್ಚುವ ಮಲ್ಲನನೌಂಕಿ ಪಿಡಿದು (ಗಿರಿಕ. ೨-೧೦೫ ಪ) ; ಅಯ್ಯೊ ಪಾಪಿಯೇ, ಪರಮನೀಚರನ್ ನುಣ್ಚೆ ಪೋಗವಿಟ್ಟೆಕಟ ! (ಅಶ್ವತ್ಥಾ. ೧೫-೩೧೩). **ನುಣಿಚು:** (ಕ). **ನುಣುಚು$_1$ :** (ಕ).

ನುಣಿಚಿಕೊಳ್ಳು, ನುಣುಚಿಕೊಳ್ಳು = ತಪ್ಪಿಸಿಕೊಳ್ಳು ; ನುಸುಳಿ ಕೊಳ್ಳು : ನೀವು ಅವರಿಂದ ನುಣಿಚಿಕೊಳ್ಳಲಾಗಲಿಲ್ಲ, ಅಲ್ಲವೆ ? (ಪುನರು. ೨೪) ; ಸೋದರರ ಮೇಲೆ ಜವಾಬ್ದಾರಿಯನ್ನು ಹೊರಿಸಿ, ತಾನು ನುಣುಚಿಕೊಳ್ಳುವ ಉಪಾಯವನ್ನು ಹುಡುಕುತ್ತಾನ (ಮನೋನಂ. ೨೪೩).

**ನುಣ್ಣಗಲಿ** (ನಾ). ಅಂದವಾದ ವೇದಿಕೆ,—ಕಟ್ಟೆ ; ನಯವಾದ ಜಗಲಿ : ಪಗಲನುದಂಶುವಿಂದುಗುಟ್ಟಿ ದೀವಿಗೆ ತೆಳ್ಪಳಿಕಿಂದಮಾದ ನುಣ್ಣಗಲಿಯೊಳಾಯ್ತು ಮೆಲ್ಪೆನಿಪ ಪಾಸಲರ್ವಟ್ಟಿಯ ತಾಣಂ (ಚಂದ್ರಪು. ೮-೬೧). [ನುಣ್(<ನುಣ್ಣಿತು)+ಜಗಲಿ]

**ನುಣ್ಣಗೆ** (ಅ). ೧. ನಯವಾಗಿ ; ಕೋಮಲವಾಗಿ ; ಮೃದುವಾಗಿ : ನುಣ್ಣಗೆ ಬಣ್ಣಗೆ ನುಡಿವ ಅಣ್ಣಗಳೆಲ್ಲರು ಕಣ್ಣುಕಾಣದೆ ಕಾಡ ಬಿದ್ದರು ನಿಜಗುರುಸ್ವತಂತ್ರಸಿದ್ಧಲಿಂಗೇಶ್ವರಾ ನಿಮ್ಮನಱಯದ ಅಂಧಕರೆಲ್ಲರು (ವಚರ. ೫೯-೨೪೩). ೨. ಅಂದವಾಗಿ ; ಚೆನ್ನಾಗಿ : ದೂರದ ಬೆಟ್ಟ ನುಣ್ಣಗೆ (ಗಾದೆ). ೩. ಜಿನುಗಾಗಿ ; ಸಣ್ಣಾಗಿ : ರಾಗಿ ನುಣ್ಣಗೆ ಬೀಸು (ರೂಢಿ). ೪. ಸಂಪೂರ್ಣವಾಗಿ ; ಪೂರ್ತಿಯಾಗಿ ; ನಿಶ್ಶೇಷವಾಗಿ : ಬಗೆದೀಡಾಡೆ ದುರಂತದುಃಖತತಿಗಳ್ ಬೆನ್ನಟ್ಟಿ ದುರ್ಮೋಹಮತ್ಸ್ಯಗಣಂಗಳ್ ಕಡಿದಿಕ್ಕೆ ಲೋಭಮಕರಾನೀಕಂಗಳಾಟಂದು ನುಣ್ಣಗೆ ನುಂಗುತ್ತಿರೆ ಮಾರರಾಗಶಿಶುಮಾರಂಗಳ್ ಮಹೋಗ್ರಂಗಳೆನ್ನೆಗಮೋರಂತೆ ತೊಟಲ್ದೆನಿಂ ತಿರಿಯಲಾಱೆಂ (ಆದಿಪು. ೯-೬೦) ; ಇದ್ದ ಆಸ್ತಿಯನ್ನೆಲ್ಲಾ ಅವನು ನುಣ್ಣಗೆ ಮುಗಿಸಿದ (ರೂಢಿ).

**ನುಣ್ಣಗೆ ಮಾಡು** = ೧. ನುಣುಪಾಗಿಸು ; ನಯಗೊಳಿಸು : ನೆಲಕ್ಕೆ ಹಾಕಿದ ಗಾರೆಯನ್ನು ನುಣ್ಣಗೆ ಮಾಡುವುದರಿಂದ ಹೊಳಪುಂಟಾಗುವುದು (ರೂಢಿ). ೨. ನಾಶ ಮಾಡು ; ಹಾಳು ಮಾಡು : ಅಪ್ಪ ಕೂಡಿಟ್ಟ ಹಣವನ್ನೆಲ್ಲಾ ಮಗ ನುಣ್ಣಗೆ ಮಾಡಿದ (ರೂಢಿ).

[ನುಣ್(<ನುಣ್ಣಿತು)+ -ಅಗೆ$_3$]

**ನುಣ್ಣದಲೆ** (ನಾ). ನುಣ್ಣಗಾದ ತಲೆ; ಬೋಳಿಸಿದ ತಲೆ : ವ್ಯರ್ಥದಿ ನುಣ್ಣದಲೆಗಳ ಮಾಡಿ ಲೋಕವ ಚರಿಸಲೇಕಿನ್ನು (ಸುಜ್ಞಾ.ಚಂ. ೧-೨೯). [<ನುಣ್ಣಿತು+ತಲೆ$_1$]

**ನುಣ್ಣನೆ** (ಅ). ೧. ಚೆನ್ನಾಗಿ ; ಅಂದವಾಗಿ ; ಸುಂದರವಾಗಿ : ತಮಾಲತರುಗಳುಮಂ ಪೊಸವಿಸಿಲ ಪೊಳಪಿನಿಂ ನುಣ್ಣನುಜ್ಜ್ವಳಿಪ ರನ್ನದೆಳವೆಳಗಿನ ಬಳಗದಿಂ ಬಣ್ಣಿಸಿ (ಕಾದಂಉ. ೫೨೬) ; ಸಣ್ಣ ನಡು ಬಳೆಯೆ ತ್ರಿವಳಿಗಳಡಗೆ ತೆಳ್ಳಾಸೆ ನುಣ್ಣನೆ ಪೊಗರ್ವಡೆಯೆ (ಜೈಮಿಭಾ. ೧೮-೩೪). ೨. ನಿಶ್ಶೇಷವಾಗಿ ; ಸಂಪೂರ್ಣವಾಗಿ ; ಪೂರ್ತಿಯಾಗಿ : ಕೆಲರಂ ನುಣ್ಣನೆ ನೊಣೆದಂ ಕೆಲರಂ ಪಿಡಿದಡಸಿ ನುಂಗಿದಂ (ಗದಾಯು. ೩-೯) ; ನುಣ್ಣನೆ ನೊಣೆವುದು ಮಾಂಸಮನುಣ್ಣದವಂ ದಿವಮನೆಯ್ದುನೆಯ್ದನೆನುತ್ತಂ ಪಣ್ಣಂ ಕಲಸುವರಾನಂ ಬಣ್ಣಿಸಿ ತಾಂ ಪೇಟ್ವುದೆಲ್ಲಿಯುಂ ಸ್ಮೃತಿಕಾಜರ್ (ಸಮುಪ. ೧೪-೧೪೧) ; ಉಗ್ರಫಣೆ ಮುಳಿಸಿಂದಂ ಮಡಿಪಿದೊಡೆತ್ತಿದನಂ ಕೂಗಿಡೆ ನುಣ್ಣನೆ ನೊಣೆದೊಡಾವ ಧರ್ಮಂ ಮುನಿಪಾ (ಧರ್ಮಾಮೃ. ೧೨-೧೧೦) ; ಜಗಜಟ್ಟಿ ಹಾಯ್ಕೊಂಡು ನುಣ್ಣನೆ ಚಿಟ್ಟುಮುಱಯಾಟದಲಿ ಸದೆದನು ಮತ್ತೆ ಕೌರವನ (ಸಂಭಪ. ೧೭-೫೯) ; ನುಣ್ಣವಿಲ್ಲ ಭಾಗವತರೆ ನುಣ್ಣನೆ ಗೋಡೆಯ ನಿನ್ನೆ ತೊಡೆದು ಬಿಟ್ಟೆ (ಪುರಂದ. ೨-೮೪ ಪಲ್ಲವಿ). ೩. ಸಭ್ಯವಾಗಿ ; ಸಾಧುವಾಗಿ : ಮಹಾ ಮಾಯಾವಿಯ ತುಡುಗುಗೊಂಡ ತೊಟ್ಟಿನಂತೆ . . . ನಿಮ್ಮ ಮಱವೊಕ್ಕು ನುಣ್ಣನಿರ್ದಪಂ (ಧರ್ಮಾಮೃ. ೬-೧೧೫).

**ನುಣ್ಣನಾಗು** = ೧. ನಯವಾಗು ; ನುಣುಪಾಗು : ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ ಪೂಣ್ದು ಪೇಟ್ದ ಬೆಳ್ಗಳ ಕೃತಿಬಂಧಮುಂ ಬರೆ[ಪ]ಕಾಜರ ಕೈಗಳ ಕೇಡು ನುಣ್ಣನಪ್ಪಳಕದ ಕೇಡು ಪೇಱಸಿದೊಡರ್ಥದ ಕೇಡು (ಪಂಪಭಾ. ೧-೧೨). ೨. ಇಂಪಾಗಿರು ; ಮಧುರವಾಗಿರು : ನೆಗೆದ ಮುಗಿಲ್ಗಳುಂ ಸುರಿವ ಪೆರ್ಮಳೆಯುಂ ಮಿಗೆ ನುಣ್ಣನಪ್ಪ ಕೇಕಿಗಳ ಸರಂಗಳುಂ ಪೊಳೆವ ಮಿಂಚುಗಳುಂ . . . ಪಥಿಕಾಂಗನಾಜನಮನಂಜಿಸುವಂತಿರೆ (ಕವಿರಾ. ೧-೧೨೪). ೩. ಸೂಕ್ಷ್ಮವಾಗಿರು : ಊಹೆ ಮಿಕ್ಕ ಯುಕ್ತಿಯಿನ್ ನುಣ್ಣನಪ್ಪ ಜಾಣ್ಮೆಯಿನ್ ಕೆಡಕಿಗೊರ್ಕಿ ನಡೆದಪನ್ ನಲ್ಮೆಗೊರ್ಕಿ ನಡೆದಪನ್ (ಅಂತಿಗೊ. ೧೭-೩೫೦).

[ನುಣ್(<ನುಣ್ಣಿತು)+ -ಅನ್$_1$]

**ನುಣ್ಣನೆಯ** (ಗು). ೧. ನಯವಾದ; ಜಿನುಗಾದ : ಆ ನುಣ್ಣನೆಯ ಹಿಟ್ಟನಂಗಯ್ಯ ಸಂದಟ್ಟದೊಳು ತಣ್ಣನಱಿದು ಮಡಗಿಯೆಮ್ಮೆಯ ಬೆಣ್ಣೆಯಂ ಕಾಸಿ ಬೇಯಿಸೆ ಸಮುದ್ರಫೇನ (ಸೂಪಶಾ. ೧-೨೩). ೨. ನುಣುಪಾದ : ನುಣ್ಣನೆಯ ಶಿಲೆಯೊಳಗೆ ಬಣ್ಣಿಸುತ ಬರೆದ ಪಟದೊಳಗೆ ಇರುವಾತ ತನ್ನೊಳಗೆ ಇರನೆ (ಸರ್ವಜ್ಞ. ೩೩೪). ೩. ಮಧುರವಾದ ; ಇನಿದಾದ ; ಹಿತವಾದ : ಕೊಡುವುದುಂ ಕೊಂಬುದುಂ ಸಿರಿವಂತ ಭಕ್ತರೊಳು ನುಡಿವುದುಂ ನುಣ್ಣನೆಯ ಮಾತನಾ ಭಕ್ತರೊಳು (ಅಸೀರ. ದೇ. ೯೨-೬) ; ನುಣ್ಣನೆಯ ಸಣ್ಣ ದನಿ ಗೀತಮಂ ಹಾಡಿತ್ತು (ಕವಿಸೋ. ೨೦-೨೩). [ನುಣ್(<ನುಣ್ಣಿತು)+-ಅನೆಯ$_2$]

**ನುಣ್ಣಮಾತು** (ನಾ). ನಯವಾದ ಮಾತು ; ಮೃದುವಾದ ಮಾತು : ಸೂಕ್ಷ್ಮ ನೀ, ದಿನಬಳಕೆ ನುಣ್ಣಮಾತಿದು ತೋರ ಅರಿದಿದಕೆ ನಲುಗಿಸದೆ ನಿನ್ನ ಹಿಡಿಯೆ (ಮಲೆದೇ. ೪೩-೩). [<ನುಣ್ಣಿತು+ಮಾತು$_1$]

**ನುಣ್ಣವಿರ್** (ನಾ). ಮೃದುವಾದ ತುಪ್ಪುಳು: ಅನಿತುಂ ಪೋತಂಗಳಂ ವೀಕ್ಷಿಸುತೆಜಕೆಗಳಂ ಮೆಲ್ಲನುರ್ಚುತ್ತೆ ನಿಂದೊಯ್ಯನೆ ಸಾರ್ದ್ರತ್ರೋಟಯಿಂದಂ ತೊಡೆದು ಗಱಗಳಂ ನುಣ್ಣವಿರ್ [ಪಾಠಾಂ.ನುಣ್ಪಿ]ರ್ದಿರ್ಚಿ ಮೆಯ್ಯಂ ತೊನೆದು . . . ಕುಕ್ಕುಟಂ ಕೂಗಿತಾಗಳ್ (ಪದ್ಯಸಾ. II, ೬೯೫ ; ಶಾಂತೀಶ್ವ. ೧೧-೯೬ ನೋ).

[ನುಣ್(<ನುಣ್ಣಿತು)+ನವಿರ್]

**ನುಣ್ಣಿತು, ನುಣ್ಣಿತ್ತು** (ನಾ). ೧. ಮೃದುವಾದುದು; ಕೋಮಲವಾದುದು : ನತಮುಂ ಮಾಂಸಳಮುಂ ನುಣ್ಣಿತುಮಾಗಿರೆ ತೋರ್ಪ ನುಗ್ಗುಲದು ಶುಭದಂ ಬೆನ್ನತಿರುಜುವಾಗೆ ಶುಭಂ (ಲೋಕೋಪ. ೧೧-೯) ; ಕೊಳಂಗಳೊಳಪೊಕ್ಕು ತಾವರೆಯ ಪಚ್ಚೆಲೆಯಂ ಮೆಯ್ಯೊಳಾಂತು ನುಣ್ಣಿತಪ್ಪ[ಪಾಠಾಂ.ನುಣ್ಣನಪ್ಪ]ಳವಿದಿರ ಬಣ್ಣಮುಂ ತಳೆದ ನೀರ್ವೆಣ್ಣಂತಿರ್ಪಳ್ (ಕಬ್ಬಿಗಾ. ೩೧೫). (ಗು). ೨. ಕಾಂತಿಯುತವಾದ ; ಹೊಳಪಿನಿಂದ ಕೂಡಿದ : 'ನುಣ್ಗದಪು' 'ನುಣ್ಗೆಂಪು' ಪರಾ. ೩. ಕೋಮಲವಾದ ; ಮೃದುವಾದ : 'ನುಣ್ಗದಪು' ಪರಾ. ೪. ಅಂದವಾದ ; ಚೆಲುವಾದ : 'ನುಣ್ಗದಿರ್' ಪರಾ. ೫. ನಯವಾದ ; ನುಣುಪಾದ : 'ನುಣ್ಗಲ್ಲ' ಪರಾ. ೬. ಇಂಪಾದ ; ಮಧುರವಾದ: 'ನುಣ್ಗೊದಳ್' ಪರಾ. ೭. ಹಿತವಾದ; ಪ್ರಿಯವಾದ: 'ನುಣ್ಬೆಸ' ಪರಾ. ೮. ಅಧಿಕವಾದ ; ಅತಿಶಯವಾದ : 'ನುಣ್ಮಿಂಚು' ಪರಾ. ೯. ತೀಕ್ಷ್ಣವಾದ; ಚುರುಕಾದ : 'ನುಣ್ಗಟಕಿ' ಪರಾ. **ನುಣ್ಣಿತ್ತು : ೧.** ಬೆಟ್ಟಿತು, ಬೆಟ್ಟಿತ್ತು . . . ನುಣ್ಣಿತ್ತು ; ತಣ್ಣಿತ್ತು ; ಬಿಣ್ಣಿತ್ತು (ಶಮದ. ೭೭ ಪ್ರಯೋ).

**ನುಣ್ಣಿತಂ ಮಾಡು** = ಮೃದುವಾಗಿಸು ; ನಯಗೊಳಿಸು : ಹಪ್ಪಳದಂತೆ ಲತೆಯಿಱದು ಬೆಣ್ಣೆಯಂ ಬೆರಸಿ ಅಕ್ಕಿಯ ಹಿಟ್ಟನವಱಿರದು ಮೈಯೊಳಗೆ ತಡಹಿಕೊಂಡು ನುಣ್ಣಿತಂ ಮಾಡಿ (ಸೂಪಶಾ.೧-೪೫).

**ನುಣ್ಣಿತಂಪೇಟ್** = ನಯವಾಗಿ (ವಂಚಕತನದ) ಮಾತನಾಡು; ಸೋಗಿನ ಮಾತು ಹೇಳು : ಪೆರ್ಜೋಡೆಯಂತೆ ನುಣ್ಣಿತಂಪೇಟ್ದು ವಣುಗಾಳಂತೆ ದಾಯಂಬಡೆದು[೦] ಮೇಳದಂಕದಂತೆ ಸುಟಱಯಱದು[೦] (ಪಂಪಭಾ. ೬-೭೨ ವ).

[ದೇ.॥ ತಮಿ. ನುಣ್ ; ಮಲ. ನುಣ್ಮ ; ತುಳು. ನೊಣ್ಣ ; ತೆಲು. ನುನ್]

**ನುಣ್ಣಿತ್ತು** 'ನುಣ್ಣಿತು' ನೋ.

**ನುಣ್ಣಿರ್** (ಕ್ರಿ). ನಯವಾಗಿರು; ನುಣುಪಿನಿಂದ ಕೂಡಿರು: ನುಣ್ಣಿಹ ಕದಪುಗಳೊಳು ನೊಸಲೊಳು ಕಪ್ಪ ಬಿನ್ನಣಮೆನಲೊಂದಿಸಿದರು (ಅಂಜಚ. ೪-೪೨). [ನುಣ್(<ನುಣ್ಣಿತು)+ಇರ್$_1$]

**ನುಣ್ಣಿಸು** (ಕ್ರಿ). ೧. ನಯಗೊಳಿಸು; ನುಣುಪುಮಾಡು: ನೆರೆದು ಕುತರ್ಕದಿಂದರೆದು ಸಣ್ಣಿಸಿ ನುಣ್ಣಿಸಿಯಂತದಿಂದು ಪೋದರ ಕೃತಿಯೊಳ್ ತನ್ನಕೃತಿ ಪೊಲ್ಲದಿದೆಣ್ಣೆಗೆ ಬೆಣ್ಣೆ ಸಣ್ಣವೆಂಬರ ನುಡಿ ಬೇಡ (ಗಿರಿಕ. ೧-೧೯). ೨. ಅಂದಗೊಳಿಸು; ಸುಂದರಗೊಳಿಸು; ಸೊಗಸುಂಟುಮಾಡು: ಸರ್ವದಿಶಾಧಿನಾಥರನಿತುಂ ದಿಕ್ಕಾಮಿನೀವಕ್ತ್ರಮಂಡಳಮಂ ನುಣ್ಣಿಸುವರ್ (ಅನಂಪು. ೧೪-೩೫); ಖಿಡುಗಮುಖದಲಿ ಕಾಬುದಲ್ಲದೆ ನುಡಿಯ ನುಣ್ಣಿಸಲೇನು ಕಾರಣ (ಪ್ರಭುಲೀ. ೧೯-೩೩). ೩. ಕಾಂತಿಗೊಳಿಸು; ಹೊಳಪುಂಟುಮಾಡು: ದೇಹಾಂಶುಗಳ ಬಳಗದ್ಧಿಂ ತಾರಾಚಳಮನಸದಳಂ ನುಣ್ಣಿಪಂತೋರ್ವಳತ್ಯುತ್ತಮ ದಿವ್ಯಾಕಾರೆ ಕುಳ್ಳಿರ್ದತನುಹರನನಾರಾಧಿಸುತ್ತಿರ್ದಳ್ (ಕಾದಂಪೂ. ೬೫೯); ಬಿಸಿಲಂ ಲಾವಣ್ಯದಿಂ ನುಣ್ಣಪಡರೆ ಬೆಳಗುತುಂ ನೀಳ್ದಪಾಂಗಂಗಳಿಂ ನುಣ್ಣಿಸುತುಂ ದಿಕ್ಕಾಮಿನೀಸಂಕುಳಮನ ಮಳಹಾಸಪ್ರಭಾಪೂರದಿಂ ಪುಟ್ಟಿಸುತುಂ ತಳ್ತಚ್ಚವೆಳ್ದಿಂಗಳನವಯವಶೃಂಗಾರವಾರಾಶಿಯೊಳ್ ತೇಂಕಿಸುತುಂ ವಕ್ತ್ರೇಂದುವಂ ಬಂದುದು ನೆರೆದಿದಿರಂ ವಾರನಾರೀಕದಂಬಂ (ಲೀಲಾವ.೧೨-೯); ಮಿಸುನಿಯ ಕಾಂತಿಯಂ ಬಳಿದು ನುಣ್ಣಿಸಿದಂದದ ಸಣ್ಣ ತುಪ್ಪುಳಿಂತಸಿಯ ಕೊರಲ್ ಚಳಲ್ಲುಳಿತ ಕರ್ಣಯುಗಂ (ಶಾಂತೀಶ್ವ. ೫-೧೫೨); ಸಿಂಗರಕ್ಕೆ ಮನವೆಳಸಿ ನುಣ್ಣಿಸುವಂತೆ ರಸಮಚಿತ ಮೊಗಮಂ ಬೀತ ಕಾಮುಮಂ ಹಸಗೆಯ್ವೆನೆಂಬ ಮನದುಜ್ಜುಗದ ಲೋಲೆಯರ್ ಮೆಚ್ಚಿದರ್ (ಚಿಬಪು. ೧೦-೬೫); ನಿನ್ನ ಭಾಂಡವ ಮುರಿದು, ಬಗೆಬಗೆಯ ಬಣ್ಣಗಳ ನುಣ್ಣಿಸಿದ ಬಣ್ಣಿಸಿದ ಕನಸುಗಳ ಚೆಲ್ಲಿತ್ತ (ನಲ್ಕಿ. ೫೩-೨೪). ೪. ಲೇಪಿಸು; ಹಚ್ಚು; ಬಳಿ: ಕಣ್ಣಿಗಿಕ್ಕೊಡನೆ ಕಮ್ಮೆಣ್ಣೆಯಳಕದಿಂ ನುಣ್ಣಿಸು ಲಲಿತಕಜ್ಜಳವಾ ಬಣ್ಣಿಸಿ ಸವಿದಿನಿಸವಣ್ಣ ನೋಡೆನ್ನಾಣೆ ಹೆಣ್ಣೆಯೆಂದಳು ವಿರಹದಲಿ (ಭೈರವೇ. ೨-೧೧೭). ೫. ಸೋಕಿಸು; ತಗುಲಿಸು: ನುಣ್ಣಿಸೆ ಪರುಷವ ಲೋಹಕೆ ಚಿನ್ನವು (ಪಂಚತ. ೩೪-೯೫). ೬. ಮಸೆ; ಹರಿತಗೊಳಿಸು: ಉಣ್ಣದರೊರೊಳಗಣ ದೇವಿಯರಂ ನುಣ್ಣಿಸಿದಸಿಧಾರಾಪೂರ್ವಕದಿಂ ತಿಣ್ಣನೆ ಕೈಗೂಡಿಸಿ ಭೂತಮುಮಂ ಬಿರ್ದುವೊಲೆಯ್ದಿಸುವೆಂ (ಜಯಕಾ. ೬-೯). ೭. ಹದಗೊಳಿಸು; ಪಕ್ವಗೊಳಿಸು: ಸಹಜವಾಗಿ ಜಂಗಮಸ್ವೀಕಾರವುಂಟಾಗುವಂತೆ ಅಡಿಗಡಿಗೂ ಮನಸ್ಸನ್ನು ಅರೆದು ನುಣ್ಣಿಸಿದರು (ಭಕ್ತಿಬ. ೩೪). ೮. ಅರೆ; ಸಣ್ಣಿಸು; ನುರಿಸು: ಕಾರ ಸರಿಯಾಗಿ ನುಣ್ಣಿಸು (ರೂಢಿ). [ನುಣ್(<ನುಣ್ಣಿತು)+-ಇಸು$_3$]

**ನುಣ್ಣುಡಿ** (ನಾ). ನಯವಾದ ಮಾತು; ಸವಿಯಾದ ಮಾತು: ನಸೆಯನೆಸಗುವ ಪಲವುಂ ನುಣ್ಣುಡಿ ಪಸರಿಸೆ ಮನದಿಂ ಜಾಣ್ಣುಡಿಗೊಳೆ ತೊಡರ್ದರಿನಿಯಕೂಟದೊಳಿನಿಯರ್ (ಚಂದ್ರಪು. ೮-೬೯); ರಾಗಮನೀವ ನುಣ್ಣುಡಿಗಳಿಂ ವನಪಾಲಕನಕ್ಕಕಂ ವಸಂತಾಗಮಮಂ ಸಮಂತಜಾಯೆ ಬಿನ್ನವಿಸುತ್ತಿರೆ (ಕುಸುಮಾ. ೫-೪೬); ಒಳ್ಪಿದರವರಂತಿರಲಿ ನುಣ್ಣುಡಿಗಳ ಕಳ್ಳರಿಗಾನೆಜಿಗುವೆನು (ಕುರಾಸಾಂ. ೧೪-೫೨); ಅರಗಿಳಿವಿಂಡು ತೊಂಡುಗೆಡೆವಂತಿರೆ ನುಣ್ಣುಡಿ ಸೋಗೆ ಸಾಗಿ ಸ್ವೈರವಿವಪೊಲೊಪ್ಪೆ ಸೋರ್ಮುಡಿ . . . ಬಂದಳದೊಂದು ಬಿಂಕದಿಂ (ರಾಜಶೇ. ೭-೧೬). [ನುಣ್(<ನುಣ್ಣಿತು)+ನುಡಿ$_2$]

**ನುಣ್ಣೆಸಳ್** (ನಾ). ಕೋಮಲವಾದ ದಳ; ಮೃದುವಾದ ರೇಕು, —ಪಕಳೆ: ಕೇತಕಿಯ ಸಣ್ಣನಪ್ಪ ನುಣ್ಣೆಸಳ ಕರ್ಣಪತ್ರಮನಿಕ್ಕಿ (ಗಿರಿಕ. ೫-೭೬ ವ); ಈ ಹೊಸಕುಸುಮವಲ್ಲಿಯದೆನುತ್ತರಸಂ . . . ಒಳಗಣ ಪರಿಮಳದ ತೆನೆಯ ಮಗ್ಗುಲೊಳೊಗ್ಗಿಬೆಳೆದ ಸಣ್ಣಮ[ನ]ಪ್ಪ ನುಣ್ಣೆಸಳನೊಂದಂ ತೆಗೆದು ಬಸವರಾಜನ ಕೈಯೊಳು ಕುಡೆ (ಬಸರ. ೬-೭೦); ಜೆಡೆಯೆಡೆಯೊಂತ ಕೇತಕಿಯ ನುಣ್ಣೆಸಳಾಗೆ ಶಶಾಂಕರೇಖೆ (ವೃಷವಿ. ೧೪-೨೯). [ನುಣ್(<ನುಣ್ಣಿತು)+ಎಸಳ್(<ಎಸಳ್)]

**ನುಣ್ಣೊಸಲ್**, ನುಣ್ಣೊಸಲು (ನಾ). =ನುಂಪುವಣೆ: ಸುಲಿಪಲ್ಗೆಂಬ ಪಳಂಚೊಲೊಪ್ಪುವಧರಂ ಭೃಂಗಾಳಕಂ ನುಣ್ಣೊಸಲ್ತಿಲಪುಷ್ಪೋಪಮ ನಾಸಿಕಂ . . . ಪದಾಬ್ಜಂ ಮಂಜುಳಂ ಕಾಂತೆಯಾ (ರಾಜಶೇ. ೩-೧೬).
**ನುಣ್ಣೊಸಲು**: ಭಲರೆ ಭಾಪುರೆ ಕಲಿಗಳ ನುಣ್ಣೊಸಲಿನ ತಿಲಕ ಸಾಹಸವಿಕ್ರಮಾರ್ಕ (ಕಂನವಿ. ೧೯-೭೭). [ನುಣ್(<ನುಣ್ಣಿತು)+ನೊಸಲ್]

**ನುಣ್ಣೊಸಲು** 'ನುಣ್ಣೊಸಲ್' ನೋ.

**ನುಣ್ದನಿ** (ನಾ). =ನುಣ್ಚರ ೧: ಪೂಗಣೆ ಕರ್ವುವಿಲ್ ಮಿಳಿರ್ವ ಮಿಂಗುಡಿ ಮಲ್ಲಿಗೆ ಮಾವು ತೆಂಬೆರಲ್ ಕೋಗಿಲೆ ಜೊನ್ನಮಿಂದೊಳದ ನುಣ್ದನಿ ಸುಗ್ಗಿಯೆನಿಪ್ಪವೆಲ್ಲಮೊಂದಾಗಿಯೆ ದರ್ಪಕಂಗೆ ಸಮನಿಪ್ಪ ಜಗಜ್ಜಯದರ್ಪಮಂ ಸಮಂತಾಗಿಸಲೊಂದೆ ಸಾಲ್ಗುಮೆನಿಸಿತ್ತು ಕುಮಾರಕೃತ ಪ್ರಸಾಧನಂ (ಚಂದ್ರಪು. ೬-೬೩); ಇಂಚರಂ ಕರಂ ಬಗೆಗೊಳಿಸಿರ್ದ ಕೋಗಿಲೆಯ ನುಣ್ದನಿಯಾಗೆ ಜಗಜ್ಜಯಕ್ಕೆ ತಾಂ ಮಿಗೆ ನೆರವೆಂಬನಾ ಸತಿಯ ಜವ್ವನಮೆಂಬ ವಸಂತಮಂ ಸ್ಮರಂ (ಪರ್ವಪು. ೧-೪೬); ನೇವುರದ ನುಣ್ದನಿಯ ಕಾಂಚಿಯ ಕೇವಣದ ಕಿಂಕಿಣಿಯ ರಭಸದ . . . ಡೊಳ್ಳಾಸ ಕಾತಿಯರಾ ವಿಬುಧಪತಿಯೋಲಗವ ಹೊಕ್ಕರು ನವಾಯಿಯಲಿ (ಕುವ್ಯಾಆ. ೭-೯೦); ಹಾಡಿನ ನುಣ್ದನಿಯತ್ತ, ಗೋಳಿನ ನೀಳ್ದನಿಯಿತ್ತ (ಪಾಂಚಜ. ೬೭-೧೩). [ನುಣ್(<ನುಣ್ಣಿತು)+ದನಿ$_1$]

**ನುಣ್ದನಿವಿಡು** (ಕ್ರಿ). ಮಧುರವಾದ ಸ್ವರವನ್ನು ಹೊರಸೂಸು, —ಹೊಮ್ಮಿಸು: ಕಾಂಚಿ ನುಣ್ದನಿವಿಡೆ ನೂಪುರಂ ಪೊಡರೆ ನೀವಿ ಜಗುಟ್ತಿರೆ ನೀಟ್ಟಿ ಕಣ್ಮಲರ್ ತನಿವೆಳಗಂ ಕಡಲ್ವರಿಸೆ . . . ತಳರ್ದತ್ತು ವಿಲಾಸಿನೀ ಜನಂ (ಕುಸುಮಾ. ೫-೯೯). [ನುಣ್ದನಿ+ಬಿಡು$_1$]

**ನುಣ್ದಳಿರ್** (ನಾ). ಕೋಮಲವಾದ ತಳಿರು; ಎಳೆಯ ಚಿಗುರು; ಮೃದುವಾದ ತಳಿರು: ಕನರ್ಗೊನರೆಲ್ಲಿಯಲ್ಲಿ ಮಿಳಿರ್ದಾಡುವ ನುಣ್ದಳಿರೆಲ್ಲಿಯಲ್ಲಿ . . . ಪಣ್ಗೊನೆಗಳವೆಲ್ಲಿಯಲ್ಲಿಯೆನೆ ಸೋಲಿಸುಗುಂ ಬಿಡದಾವನಂ ಬನಂ (ಕಬ್ಬಿಕಾ. ೩೨). [ನುಣ್(<ನುಣ್ಣಿತು)+ತಳಿರ್$_2$]

**ನುಣ್ದುಟಿ** (ನಾ). ಮೃದುವಾದ ತುಟಿ; ಕೋಮಲವಾದ ಅಧರ: ನಗೆಮೊಗದೊಳ್ ತೆಱಿಂಬೊಳೆದು ನುಣ್ದುಟಿಯೊಳ್ ಮೊಗಮಿಕ್ಕಿ ಗಲ್ಲದೊಳ್ ಜಗುಟ್ದು. . .ಮಾರ್ಪೊಳೆದುಪಾಕೆಯ ಡಾಳಮುನಾಂತ ದಿಟ್ಟಿಗಳ್ (ಕಬ್ಬಿಕಾ. ೩೩೦). [ನುಣ್(<ನುಣ್ಣಿತು)+ತುಟಿ]

**ನುಣ್ದುಱುಬು** (ನಾ). ಅಂದವಾದ ಮುಡಿ; ಸುಂದರವಾದ ತುರುಬು: ಆ ಕೋಮಲೆಗಂದಮಾದುದು ನುಣ್ದುಱುಬು (ಶ್ರೀಪಾಲ. ೧೦-೪೧); ನುಣ್ದುಱುಬು ಪೆಱೆನೊಸಲ್ ನಿಡುಗಣ್ದೆಸೆಯ ನೋಟಮೆಸೆಯೆ . . . ಪೆಣ್ದೇವತೆಯಂತೆ ಬಂದಳರಮನೆಯಿಂದಂ (ಚಿಕವಿ. ೪-೩೪). [ನುಣ್(<ನುಣ್ಣಿತು)+ತುಱುಬು$_2$(<ತುಱುಂಬು$_2$)]

**ನುಣ್ದೊಡೆ** (ನಾ). ೧. ನಯವಾದ ತೊಡೆ; ನುಣುಪಾದ ತೊಡೆ: ನುಣ್ದೊಡೆಯ ಚೆಲ್ವಂ ನೋಡಲೆಂದು ಸಿಡಿಮಿಡಿವರ್ಪ ಕಾತರವಿಟರ ಕಣ್ಗೆ ಪಾರಣೆಯಂ ಮಾಡಿಸಿಯುಂ (ಚಂದ್ರಪು. ೮-೪ ವ); ಮಿಸುಗುವ ತಮ್ಮ ನುಣ್ದೊಡೆಗಳುಜ್ವಲಮಜ್ಜನಪೀಠವಾಗಿ ರಾಜಿಸೆ (ಕುಸುಮಾ. ೬-೭೯); ಕರ್ವಾಳೆಯನೇಳಿಪ ನುಣ್ದೊಡೆಯ ಇರುಳ ತಿರುಳ ಬಣ್ಣದ ತನುವಿನ ಕತ್ತುರಿಗಂಪಿನ ಕಾಳ್ಬೇಡಿತಿ ನಡೆತಂದು (ಜಯಕಾ. ೨-೨೧); ನುಣ್ದೊಡೆ ಕದಕ್ಕದಿಸುತ್ತಿರೆ ಬಂದು ನಿಂದು ಪೆಣ್ಗಡಣಮದಲ್ಲಿ ಪಾಱಿಪುದು ಕೈರವ ದಿಂದಿಡುತಂ ಶುಕಾಳಿಯಂ (ವೃಷವಿ. ೪-೧೯). ೨. ಅಂದವಾದ ತೊಡೆ:

ಸೊಬಗುರನ್ನೆಯ ತನ್ನ ನುಣ್ಗೊಡೆಯೊಳಗಿಟ್ಟುಕೊಂಡು ಕಂದರ್ಪಸುತ ತೆರಳಿದ (ಮೋಹತ. ೪೧-೩೫). [ನುಣ್(<ನುಣ್ಣಿತು)+ತೊಡೆ$_2$]

**ನುಣ್ಗೊಡದಳ್** (ನಾ). = ನುಣ್ಗೊದಳ್ : ಈಕ್ಷಿಸಿ ಮಕ್ಕಳ ಮುದ್ದುಗೆಯ್ತದೊಳ್ಪಂ ಬಿಡದಪ್ಪಿ ಕೋಮಲತರಾಂಗಮನಾಲಿಸಿ ನುಣ್ಗೊ[ಪಾಠಾಂ. ಣ್ಗೊ]ದಳ್ ಪೊದಟ್ದ್ದಂಬಿನಿವಾತನಟ್ಟಿಱಿಯೊಳ್ ವಾಸಿಸಿ ನೆತ್ತಿಯಂ (ಚಂದ್ರಪು. ೩-೪೪) ; ಚಿಲಿಪಿಲಿಗುಟ್ಟಿ ನುಣ್ಗೊದಳ್ಗಳಿಂ ಕಿವಿಗಿಂಪನೊಡರ್ಚೆ ಗೆಜ್ಜೆಗಳ್ ಘಲಿಕೆನಿಪಂತಿರೆಯ್ದಿ (ದಶಕು. ೧-೫೬).
[ನುಣ್(<ನುಣ್ಣಿತು)+ತೊದಳ್$_2$]

**ನುಣ್ದೋಳ್, ನುಣ್ದೋಳು** (ನಾ). ಮೃದುವಾದ ತೋಳು ; ಕೋಮಲವಾದ ಬಾಹು : ನುಣ್ದೋಳ ಕಾಂತಿ ಕರತಳದ ಕಾಂತಿ ತಾಂ ತೊಳಪುರಸ್ಥಲದ ಕಾಂತಿ . . . ಉಗುರ್ವೆರಲ ಕಾಂತಿಗಳ್ ತಿಂತಿಣಿಸಿ ಘನಕಾಂತಿಮಯವಾಗಿ ಕಣ್ಗೆಂ ಬೆಡಂಗಾದನೋ (ಪದ್ಮರಾ. ೩-೩) ; ಕುಲದೀಪಚಂದ್ರನಂ . . . ಮುದ್ದಿಸುತೆ . . . ಬೆಣ್ಣೆನುಣ್ದೋಳ್ಗಳಂ ತನ್ನ ನಳಿದೋಳ್ಗಳಿಂ ಮುಟ್ಟಿ ಸೋಂಕಿಗೆ ಸೊಗಸುವಳು ತಾಯಿ (ಶ್ರೀರಾಮಾ. ೧೬-೪೫೨). **ನುಣ್ದೋಳು :** ಸೂಡಿರ್ದ ನುಣ್ದೋಳ ಮಣಿಗಂಡ ಮಾತ್ರದಿ ಕೋಡಿದುವೆದೆಯ ಪೂಸರಳು (ಮೋಹತ. ೨೮-೧೧). [ನುಣ್(<ನುಣ್ಣಿತು)+ತೋಳ್]

**ನುಣ್ದೋಳು** 'ನುಣ್ದೋಳ್' ನೋ.

**ನುಣ್ಪಡರ್,** ನುಂಪಡರ್ (ಕ್ರಿ). ೧. ನುಣುಪಾಗು ; ಕೋಮಲತೆಯನ್ನು ಹೊಂದು : ಬರೆ ತೆಗೆದೀಂಟೆ ನುಣ್ಪಡರೆ ಪೊಣ್ಮಿದ ಬಾಯ್ದ ಕದಪಂ ಕದಂಪಿನಿಂದೊರಸೆ (ವರ್ಧಪು. ೬-೫೦). **೨.** ಸುಂದರವಾಗಿರು; ಅಂದವಾಗಿರು : ಕಿವಿಯಂ ಜಕ್ಕುಲಿಪಂತೆ ನುಣ್ಪಡರ್ದ ಶಬ್ದಂ ಶಬ್ದಸಂದರ್ಭದೊಳ್ ಸವಿಯಂ ಮುಂದಿಡುವರ್ಥಂ (ಚಂದ್ರಪು. ೧-೫೧). **ನುಂಪಡರ್ :** ೧. ನುಂಪಡರ್ದ ಮಾಂದಳಿರಡಿಯ ನವಕನಕಕಳಶಮಂ ಪೋಲ್ವ ಬಟ್ಟಬಲ್ಮೊಲೆಯ ಪವಳದ ಬಳ್ಳಿಯಂ ಪಳಿವ ಸಿರಿಯ ಚೆಂದುಟಿಯ . . . ಹೆಂಪಿನೊಳೊರ್ವ ಕೆಂಪಿ ನಡೆತರುತಿರ್ದಳು (ಭಿಕ್ಷಾಚ. ೩-೨೪).
[ನುಣ್ಪು+ಅಡರ್]

**ನುಣ್ಪಡಸು** (ಕ್ರಿ). ೧. ಹೊಳಪಿನಿಂದ ಕೂಡಿರು ; ಕಾಂತಿಯುಕ್ತವಾಗಿರು : ಮಡ ಚೆಲ್ವ ಮೃದುಪಾದಾಂಗುಳಿ ಜಾನು ಜಂಘೆ ನುಣ್ಪಡಸಿದ ಕರಿಕುಂಭಜಘನ ಬಡನಡು . . . ಉಡುರಾಜಮುಖವು ಪದ್ಮಿನಿಗೆ (ಮೋಹತ. ೧೮-೩೮). **೨.** ಅಂದವಾಗಿರು. [ನುಣ್ಪು+ಅಡಸು]

**ನುಣ್ಪಿಕ್ಕು** (ಕ್ರಿ). ನಯಗೊಳಿಸು ; ಸುಂದರವಾಗಿ ಕಾಣುವಂತೆ ಮಾಡು : ಎಳಮುತ್ತಿನ ಕಾಂತಿಯಿಂದೆ ನುಣ್ಪಿಕ್ಕಿದವೊಲೆ (ಕವಿಚ. II, ೧೬ ಚಂದ್ರಪ್ರಭಸ್ತುತಿ). [ನುಣ್ಪು+ಇಕ್ಕು]

**ನುಣ್ಪಿಡಿ, ನುಂಪಿಡಿ** (ಕ್ರಿ). ೧. ನುಣುಪಾಗು ; ಸ್ನಿಗ್ಧವಾಗು : ಆರಯೆ ಸೂಚಿಕಂ . . . ಇಂಗುದೀಫಲವಿಭೇದದೆ ನುಣ್ಪಿಡಿದಿರ್ಪ ಕಲ್ಗಳುಂ ತೇರಿನ ಶಬ್ದಮಂ ಸಹಿಸಿ ನಂಬುಗೆಯಿಂ ಸುಳಿವೇಣಬೃಂದಮುಂ (ಶಾಕುಂತ. ೬-೧೪). **ನುಂಪಿಡಿ : ೨.** ಕಾಂತಿಮಯವಾಗು : ತನು ಸೊಂಪಡರ್ದು ನುಂಪಿಡಿದು ಕಂಪೊಗೆಯೆ . . . ಜೌವನದೇಳ್ಗೆಯಿಂದೆಸೆವ ವಿಷಯೆ ನಿಜತಾತನ ಸವಿಾಪಕ್ಕೆತರುತಿರ್ದಳು(ಜೈಮಿಭಾ. ೨೯-೨೮). [ನುಣ್ಪು+ಇಡಿ$_2$]

**ನುಣ್ಪಿಡು,** ನುಂಪಿಡು (ಕ್ರಿ). ೧. ಹೊಳೆಯುವಂತೆ ಮಾಡು : ಹೊಳಪುಗೊಡು : ತನ್ನ ದಿಟ್ಟವೆಳಗಿಂ ನುಣ್ಪಿಟ್ಟು ಕೊಟ್ಟಳ್ ಘನಸ್ತನಭಾರಾವನತಾಂಗಿ ವಿಸ್ಮಯಪದವ್ಯಾಹಾರಮಂ ಹಾರಮಂ (ಮಲ್ಲಿಪು. ೮-೧೧೮). **ನುಂಪಿಡು : ೨.** ನಯವಾಗಿ ಹೊಂದಿಸು : ದಿಟ್ಟಿಯರದೆಂತೊ ನವಕುಂಕುಮವನೀಗ ನುಂಪಿಟ್ಟರಲ್ಲದೆ ಪೋದ ಮಧ್ಯದೊಳದೆಂತು ನಿಲಿಸಿದರೊ ದಿವ್ಯಾಂಬರವನು (ಜೈಮಿಭಾ. ೩೧-೬). [ನುಣ್ಪು+ಇಡು$_1$]

**ನುಣ್ಪು,** ನುಂಪು, ನುಣುಪು (ನಾ). ೧. ನಯವಾದುದು ; ಒರಟಲ್ಲದುದು : ಅರ ನೆಗಟ್ತೆಯುಂ ಬಲಮುಂ . . . ದೂರದೊಳಿರ್ದು ನೋಡೆ ಸೊಗಯಿಪ್ಪುದು ಬೆಟ್ಟದ ನುಣ್ಪಿನಂತೆ (ಕಾವ್ಯಸಾ. ೪೩೫). **೨.** ಮೃದುತ್ವ ; ಕೋಮಲತೆ ; ಮಾರ್ದವ : ಬೇಱದೊಂದು ಕಡುಗಾಡಿಯ ಸನ್ನಿಧಿ ಬೇಱದೊಂದು ನುಣ್ಪಿನ ಕಣಿ ಬೇಱದೊಂದು ಪೊಸಗಂಪಿನ ಪೊಂಪುೞಿ (ಶಾಂತಿಪು. ೮-೭೯) ; ನುಣ್ಪು ನಯಗಳಂ ಕಂಡರಿಯುವವನೊಳಗು ಹೊರಗುಗಳ್ (ಶ್ರೀರಾಮಾ. ೫೬೨-೨೬೬). **೩.** ಕಾಂತಿ ; ಹೊಳಪು : ಗಲ್ಲಂ ನುಣ್ಪು ಕೈಮಿಕ್ಕು ಕನ್ನಡಿಯಂ ಪೋಲ್ತಿರೆ (ಕಬ್ಬಿಕಾ. ೯೩). **೪.** ಅಂದ ; ಚೆಂದ ; ಚೆಲುವು : ಅಸುಕೆಯ ಕೆಂಪು, ಪಾದರಿಯ ಕಂಪು ಪಯೋಜಲಸತ್ಸರೋವರಪ್ರಸರದ ತಣ್ಪು ಸಂಪಗೆಯ ನುಣ್ಪು . . . ಸುತ್ತಲುಂ (ಸುಕುಮಾ. ೯-೪೮) ; ನೆಳಲ ತಣ್ಪಿಂದಂಕುರದ ಸೊಂಪಿಂ ಪಲ್ಲವದ ನುಣ್ಪಿಂ (ಗಿರಿಕ. ೨-೭೧ ಪ) ; ಲತಾಂಗಿಯ ಜಠರವದು ದಿನದಿನಕೆ ನುಣ್ಪಿಂ ಪೆಂಪುಮಿಂಪುಂ ಕೊನರ್ದು (ಬಸವು. ೩-೪). **೫.** ಜಾರಿಕೆ ; ಜಾರುವ ಗುಣ : ಮಿಕ್ಕಕ್ಷೆಗಳೊಳೀ ಶನಗಜೆಯ ದೇಹಕಾಂತಿಯ ನಿರೀಕ್ಷಿಸಲ್ ತನುನುಣ್ಪಿನೊಳ್ ನಿಲದೆ ಜಗುಳ್ದು ಪದಕಮಲಂಗಳೊಳ್ ನಿಂದುವೊ . . . ಎನಲ್ ಗಿರಿಸುತೆಯ ಪದನಖದ ಚೆಲ್ವೆಸೆದುದು (ಚೆಬಪು. ೩೬-೧೨). **೬.** ಸವಿ ; ಮಾಧುರ್ಯ : ಮಕ್ಕಳ ತೊದಲುನುಡಿಯ ನುಣ್ಪಿನಂತೆ ಮನಕ್ಕೆ ಬಂದಿದೆ ನುಡಿ ನಿನ್ನ (ಕುರಾಸಶಂ. ೧-೫೮) ; ಪುಗೆ ಮಾಂದ್ಯದೊಳೊಳ್ದೊಡೆ ನುಡಿ ಕಡುನುಣ್ಪನಾನೆ ರಾಗದೊಳ್ ಮನಂ ಕಡೆಗಣ್ತೊಡರ್ದಿರೆ ಜವ್ವನಮುಡಿಯಿಟ್ಟುದು (ರಾಜಶೇ. ೪-೮೦). **೭.** ಹೊಳಪುಂಟುಮಾಡುವ ಲೇಪನ ವಸ್ತು ; ಅಣ್ಪು : ನರೆಗೂದಲ್ಗಿಕ್ಕಿ ನುಣ್ಪಂ ಮುಡಿಯನಳವಡಲ್ಸೆಕ್ಕಿ ಬತ್ತಿರ್ದ ವಕ್ತ್ರಾಂಬುರುಹಂ ಮಿಂಚಾಗಲಿರ್ಪಂ ತೊಡೆದು (ದಶಕು. ೮-೧೯೧). **ನುಂಪು : ೧.** ಹೊಸಕಿಚ್ಚಂ ಹೊಸೆದು ಖಂಡವಂ ಬಿಡಿಸಿ ಕೆಂಪುಳ್ಳ ನುಂಪುಳ್ಳ ಸೊಂಪುಳ್ಳ ಖಂಡಮಂ ಕಾಸುತಂ (ಕಣ್ಣರ. ದೇ. ೧೩೧-೬) ; ಹಾವುಮೆಕ್ಕೆಯ ಹಣ್ಣು ನುಂಪು[ಪಾಠಾಂ.ಣ್ಪು] ಆಗಿದ್ದರೇನು ಕಹಿ ಬೆರೆದ ಕಾರಣ ಪ್ರಯೋಜನಕಾರಿಯಾದುದಿಲ್ಲ (ಸಿದ್ಧೇಪ. ೧೦೪-೩೨೫) ; ಎಳಲತೆಯನುಂಪು [ಪಾಠಾಂ. ಣ್ಪು]ಗಳ ನವಪರಿಮಳದ ಪವನನ ಸೊಂಪುಗಳ ವೆಗ್ಗಳಿಕೆ ಝುಳಪಿಸಿ ಹೊಯ್ದು ಸೆಳೆದುದು ಜನದ ಕಣ್ಮನವ (ಕುಪ್ಯಾಅ. ೫-೮). **೪.** ಕಬ್ಬಿನ ಬಿಲ್ಲು ಜೇವೊಡೆದಂತೆ ಪಾಡಿದರೊಬ್ಬೊಬ್ಬರಿಂಪು ನುಂಪಿನೊಳು (ಭರತಚ. ೧೩-೨೯) ; ಎಳದಳಿರ ಕೆಂಪು ಪೂಗಳ ಕಂಪು ಕೋಕಿಲಂಗಳ ಸರದ ನುಂಪು . . . ಸಂಗಳಿಸಿತೆಲ್ಲೆಲ್ಲಿಯುಂ (ಚೆಬಪು. ೪೫-೧೫). **೭.** ಕಸ್ತೂರಿಕಾಸುಕುಂಕುಮವಾದಿಯಾಗಿಹ ಸಮಸ್ತಪರಿಮಳದ ನುಂ[ಪಾಠಾಂ. ನೂ]ಪಿಟ್ಟು ಮುಖಕಮಲವಿನ್ಯಸ್ತ ಕರ್ಪೂರತಾಂಬೂಲಶೋಭಿತರಾಗಿ (ಚೆಬಪು. ೨೫-೨೯). **ನುಣುಪು : ೧.** ನಾಲಿಗೆಗೆ ನುಣುಪಿಲ್ಲ ಹಾಲಿಗಿಂ ಬಿಳುಪಿಲ್ಲ ಕಾಲನಿಂದಧಿಕ ಅರಿಯಿಲ್ಲ ದೈವವದು ಶೂಲಿಯಿಂದಿಲ್ಲ (ಸರ್ವಜ್ಞ. ೨೩೬). **೬.** ಸಂಸ್ಕೃತ, ದ್ರಾವಿಡ ಭಾಷೆಗಳ ನಯ ನುಣುಪುಗಳನ್ನು ವೆಗ್ಗಳಿಸಿರಬಹುದು (ದ್ರಾವಿವಿ. ೧೫ ಹಿನ್ನೆಲೆ). **೮.** (ಆಲಂ) ಮೋಸ ; ವಂಚನೆ. 'ನುಣ್ಪುಮಾಡು' ಪರಾ.

ನುಣುಪಾಗು, ನುಂಪಾಗು = ನಯವಾಗು ; ಒರಟಾಗಿಲ್ಲದಿರು : ಈ ಭಾಗದ ಮೇಲೆ ದಪ್ಪವಾದ, ದುಂಡಾದ, ನುಣುಪಾದ . . . ಬೋದಿಕೆಯಿರುತ್ತದೆ (ನೊಳಂಬ. ೧೧೫) ; ಆ ದ್ವಾರರಕ್ಷಿಣಿಯ ಕಿವಿಯ ದಂತಪತ್ರಗಳು ಅವಳ ನುಣುಪಾದ ಕೆನ್ನೆಗೆ ಮೆರುಗುಗೊಟ್ಟಿದ್ದವು (ಬಾಣಅ. ೩೫) ; ಅಮೃತದೊಳಗಿರ್ದ ಸರ್ಪನ ತನುವಿನಂತೆ ಇರ್ದೆನಯ್ಯಾ ಹೊಜಿಗೆ ನುಂಪಾ[ಪಾಠಾಂ. ಣ್ಪಾ]ಗಿ (ಬಸವ.ಕ. ೩೮೦). **ನುಣ್ಪಂ ಮಾಡು,**

**ನುಣುಪು ಮಾಡು, ನುಣ್ಪು ಮಾಡು** = ೧. ನಯಗೊಳಿಸು ; ನುಣ್ಣಗಾಗಿಸು : ಎಣ್ಣೆ ನುಣ್ಪಂ ಮಾಡುವಂತೆ ಕಳ್ಳಿ ಮಾಡುಗುಮೆ (ಧರ್ಮಾಮೃ. ೧೧-೧೮೮) ; ನೆಲಕ್ಕೆ ಹಾಕಿದ ಗಾರೆಯನ್ನು ಚೆನ್ನಾಗಿ ನುಣುಪು ಮಾಡಬೇಕು (ರೂಢಿ) ; ಕಲ್ಲಂ ನುಣ್ಪುಮಾಡದೆ ಚಿತ್ರಂ ಬರೆವ ಪೊನ್ನನಾಭರಣಂ ಮಾಡದೆ ತುಡುವ (ಧರ್ಮಾಮೃ. ೧೨-೨೪). ೨. ಮೋಸಗೊಳಿಸು ; ವಂಚಿಸು : ಅವನು ತೆಗೆದುಕೊಂಡ ಹಣವನ್ನು ಕೊಡದೆ ನುಣುಪು ಮಾಡಿಬಿಟ್ಟ (ರೂಢಿ). **ನುಣ್ಪುಮೆಗಿಱು ?** = (?) : ಶ್ರೀಮತಿಯುಂ . . . ಆತ್ಮೀಯಘನಜಘನದ ನುಣ್ಪಿನೊಳ್ ನುಣ್ಪುಮೆ [ಪಾಠಾಂ. ನುಣ್ಪಿನೊಳ್ ನುಣ್ಪುಗುಮೆ, ನುಣ್ಪಿನೊಳ್ ಗುಣ್ಪುಮೆ, ಮಣ್ಪಿನೊಣೆ ನುಣ್ಪುಗುಮೆ]ಗೆತ್ತು ಝುಣಝುಣಾಯಮಾನ ಮಣಿಕಿಂಕಣೀ ವಿರಾಜಿತ ಕನಕಕಾಂಚೀ ಕಳಾಪಮನನಂಗರಾಗರಸಪ್ರವಾಹಕ್ಕೆ ಕಟ್ಟೆಗಟ್ಟುವಂತೆ ಕಟ್ಟಿ (ಆದಿಪು. ೪-೪೧ ವ).

[**ದೇ.**‖ **ತಮಿ.** ನುಣ್ಪು ; **ಮಲ.** ನುಣ್ಮ ; **ತುಳು.** ನೊಣ್ಣ ; **ತೆಲು.** ನುಂಪು, ನುನುಪು, ನುನ್ಪು]

**ನುಣ್ಪುವಡು** (ಕ್ರಿ). ನಯವಾಗು ; ನುಣುಪಾಗು : ನುಣ್ಪುವಟ್ಟು ತೋಱುಂ ಜಿಗಿದುಟ್ಟ ಪುಲಿದೊವಲೊಳಂ ತಕ್ಕನಿಂ ಮಿಕ್ಕು ಪೋದರ್ದಾನೆರಕ್ಕಸನ ಸಮ್ಮದ ಮೇಲ್ವೊದಿಕೆಯೊಳಂ ಚೆಲ್ವನಾಂತು (ಕಬ್ಬಿಗಕಾ. ೧೬೭). [ನುಣ್ಪು + ಪಡು$_1$]

**ನುಣ್ಪುವಡೆ** (ಕ್ರಿ). ನುಣುಪನ್ನು ಹೊಂದು ; ನಯವಾಗಿರು : ನುಣ್ಪುವಡೆದೂರುದ್ವಯದ ಮೃದುತಳದ ಮಂದಗಮನದ ಮುದ್ದುನುಡಿಯ ಕೋಮಲಾಂಗದ ವಿದ್ಯಾಧರವಾರನಾರೀ ಕದಂಬಂ ಕಾಮದೇವನ ರಾಜ್ಯಕ್ಕೆ ನಾವು ಮೊದಲಿಗರೆಂಬಂತೆ . . . ಎಸೆದು (ಧರ್ಮಾಮೃ. ೮-೧೯೬). [ನುಣ್ಪು + ಪಡೆ$_1$]

**ನುಣ್ಪುವೆಱು** (ಕ್ರಿ). ೧. ನಯವಾಗಿರು ; ನುಣುಪಾಗಿರು : ಪೊಸ ಮುತ್ತಿನ ಸುತ್ತಿನ ಧರ್ಮಸೂತ್ರಮುಂ ನುಣ್ಪುವೆತ್ತ ಮಳಯಜದಣ್ಪಂ . . . ಒಪ್ಪಿರೆ (ಸುಕುಮಾ. ೧೦-೯೮). ೨. ಮನೋಹರವಾಗಿರು ; ಸೊಗಸಿನಿಂದ ಕೂಡಿರು : ನುಣ್ಪುವೆತ್ತು ಸೋಲಿಪ ಚೆಲ್ವಿಂ ಬಾರಿಸಿ ಸೊಬಗಿಂಗೆತ್ತಿದ ತೋರಣಗಂಬಂಬೊಲಿರ್ದುವಾಕೆಯ ತೊಡೆಗಳ್ (ಕಬ್ಬಿಗಕಾ. ೭೫) ; ದೊರೆವೆಣ್ಣ ಹೊಂಬಾಳೆದೊಡೆ ಸೊಂಪು ನುಣ್ಪುವೆತ್ತಿರೆ (ಪೊನ್ನಹತ. ೨೪-೪೦). ೩. ಇಂಪಾಗಿರು ; ಮಧುರವಾಗಿರು : ಅಲ್ಲಿ ಗೇಯದ ದನಿ ನುಣ್ಪುವೆತ್ತೆಸೆಯುತಿರ್ದಪುದೀಗಳೆ ಪೋಗಿ ನೋೞ್ಪೆನಾಂ (ಕಾದಂಪೂ. ೬೫೩). [ನುಣ್ಪು + ಪೆಱು$_1$]

**ನುಣ್ಪೆಸೆ** (ಕ್ರಿ). ಮನೋಹರವಾಗಿರು; ಶೋಭಿಸು; ಕಂಗೊಳಿಸು: [ಇದಂ]ಗೆಲಲ್ಬಗೆವ ತುಂಬಿಗಳ ಧ್ವನಿಯಿಂ ಕುಕಿಲ್ವ ಕೋಗಿಲೆ ನನೆದೋಱು ನುಣ್ಪೆಸೆವ ಮಾಮರಂ . . . ಪುಗಿಲೊಳೇನೆಸೆದತ್ತೊ ಬಸಂತಮಾಸದೊಳ್ (ಸಂಪಭಾ. ೨-೧೨) ; ಮಹಾಲಂಕೃತಿವೆತ್ತು ನುಣ್ಪೆಸೆವ ಕುಂಭಗಳಂದವೊ ವಜ್ರದಂಡವೋ ಶಂಕೆಗಳುಂಬಮಾಯ್ತು ರಥವಭ್ಯುದಯಾವಸಥಂ ಮನೋರಥಂ (ನಳಚಂ. ೬೭೮). [ನುಣ್ಪು + ಎಸೆ$_2$]

**ನುಣ್ಪೇಳು** (ಕ್ರಿ). ನುಣುಪಾಗು ; ನುಣ್ಣಗಾಗು : ಕಾಳುಮೂಲನ ಮಂಡೆಯಂ ನುಣ್ಪೇಳೆ ಬೋಳಿಸಿ ಮೂಹುರಿಗಳಲಿ ನೇಳವಿಸಿದುಡಿದಾರವಂ ಬಂಧಿಸಿ (ಬಸವು. ೩೮-೧೪).

[ನುಣ್ಪು + ಏಳು$_1$ (<ಏೞ್$_1$)]

**ನುಣ್ಪೇಱು** (ಕ್ರಿ). ನುಣುಪು ಅಧಿಕವಾಗು : ಪಿಡಿನಡು ತೋರವಾಯಿತು ತೊಡೆ ನುಣ್ಪೇಱು ಅಡಿಯಿಟ್ಟು ನಡೆವುತ ಸುಯ್ಯು ಮಿಡದಿಗೆ ನವಮಾಸ ತುಂಬಿತು (ಅಬ್ಬಲೂ. ೨-೩೬).

[ನುಣ್ಪು + ಏಱು$_1$ (<ಏಜ್$_1$)]

**ನುಣ್ಬಣೆ** (ನಾ). = ನುಂಪುವಣೆ : ನುಣ್ಬಣೆಯೊಳೆಸೆವ ಸಿರಿವಣ್ಪಳಗುಗಳಿಂದೆ ಪೂತು ಪೊದಟ್ಟ ಬೆಳ್ದಾವರೆಗಳಂ . . . ಬಗೆಗೊಳಿಸಿದರ್ (ಚಿಕಸಂ. ೧೦೬-೬) ; ನುಣ್ಬಣೆ ಮೆಲ್ಲದಪು ಮರಲ್ಗಣ್ (ಚಿಕವಿ. ೬-೨೧೫).

[ನುಣ್(<ನುಣ್ಣಿತು) + ಪಣೆ$_2$]

**ನುಣ್ಬದ** (ನಾ). ಸುರತ ದ್ರವ: ಉಗುರ್ಗಳನೊಳದೊಡೆಯೊಳು ನಾಂಟಪುಗೆ ನುಣ್ಬದನೊಯ್ಯಗೆ ನಾಣ್ದಾಣದೊಳಗನಲೆವುದು ಕೇತನದಿಂ ಪಂ (ಜನವ. ೮-೨೨). [ನುಣ್(<ನುಣ್ಣಿತು) + ಪದ$_1$]

**ನುಣ್ಬನಿ** (ನಾ). ಮನೋಹರವಾದ ಹನಿ ; ಅಂದವಾದ (ನೀರಿನ) ಬಿಂದು : ಕಱಿದುವು ಕಾಳಿಮಮಂ . . . ಬಱಿಕಂ ಕಱಿದುವು ನುಣ್ಬನಿಯನೊಗೆದ ಮುಗಿಲೆಳಗಾರೊಳ್ (ಚಂದ್ರಪು. ೪-೩೮).

[ನುಣ್ (< ನುಣ್ಣಿತು) + ಪನಿ$_2$]

**ನುಣ್ಬನಿದಂದಲ್** (ನಾ). ಅಂದವಾದ ಹನಿಗಳ ಸೋನೆ: ಕುಚಾಗ್ರಂಗಳಿಂ ನುಣ್ಬನಿದಂದಲ್ ಸೋರೆ. ಸಿಂದಿರ್ದುದು ಹಿಮವೃತಕಾಯಂ ವರಸ್ತ್ರೀಸಿಕಾಯಂ (ಕುಸುಮಾ. ೫-೧೫೮). [ನುಣ್ಬನಿ + ತಂದಲ್]

**ನುಣ್ಬರಲ್** (ನಾ). ಅಂದವಾದ ಹರಳು,— ರತ್ನ : ಪೊಸತಪ್ಪ ಮಾಣಿಕದ ನುಣ್ಬರಲಂ [ಪಾಠಾಂ. ನುಣ್ಚರಲಂ, ನುಣ್ಚಲರಂ, ನುಣ್ಚರಲಂ] ಮಧು ಮನ್ಮಥಂಗೆ ಬಣ್ಣಿಸಿ ಸಮೆದಂತೆ ತೋಱುವುದು ಪೂಗಳೊಳೇಂ ಸುರಹೊನ್ನೆ ಚೆನ್ನನೋ (ಆದಿಪು. ೧೧-೧೧೨) ; ಬಾಂದೊಱೆ, ನುಣ್ಬರಲ್, ತಣ್ಬುಟಿಲ್ (ಭಾಷಾಭೂ. ೨೮ ಉದಾ).

[ನುಣ್ (<ನುಣ್ಣಿತು) + ಪರಲ್]

**ನುಣ್ಬವರಿ** (ನಾ). ಕೆನ್ನೆಯ ಮೇಲಿನ ಸುಂದರವಾದ ಕೂದಲು ; ಅಂದವಾದ ಪನ್ನೆ : ಕಪ್ಪಿನ ರೇಖೆಯು ತೆಗೆದಂತೆ ತೋಱುವ ತುಪ್ಪುಳುಮಾಸೆ ನುಣ್ಬವರಿ ಉಪ್ಪರಜವ್ವನೆಯರು ಕಂಡು ಸೋಲ್ತು ಬಂದಪ್ಪುವೊಲೆಸೆದನಾ ಮದನ (ಭರತ. ೪೭-೬೭).

[ನುಣ್ (<ನುಣ್ಣಿತು) + ಬವರಿ$_4$]

**ನುಣ್ಬಸಲೆ** (ನಾ). ಮನೋಹರವಾದ ಹುಲ್ಲುಗಾವಲು; ಅಂದವಾದ ಹುಲ್ಲು ಮೈದಾನ : ಬಳಸಿಯೆ ನೋಡುತಿರ್ದ ಹರಿಣಂಗಳ ಕಂಗಳ ಕಾಂತಿಯಿಂದೆ ಕಣ್ಗೊಳಿಪಳೆವುಲ್ಲ ನುಣ್ಬಸಲೆಯಂ ಪುಗುವಂದದೆ . . . ಪೊಕ್ಕಪುದಿಂತಿದೆ ಪಾವು ಪೀಲಿಗಣ್ಗಳ ಪರಭಾಗದಿಂದೆಸೆದು ತೋಱುವ ಸೋಗೆಯ ತಳ್ತ ಸೋಗೆಯಂ (ಕಾದಂಪೂ. ೨೫೮) ; ಅದೊಂದು ವಟವಿಟಪಿಚ್ಛಾಯಾಚ್ಛಾದಿತಮಪ್ಪ ತಣ್ಬುಟಿಲ ನುಣ್ಬಸಲೆಯೊಳ್ವಿಶ್ರಮಿಸಿ ಪಥಶ್ರಮಮನಾಱಿಸುತ್ತುಂ (ಪಂಪರಾಮಾ. ೭-೩೧ ವ) ; ಪಸರಿಸಿದ ಬಯಲ್ಕಡು ಪಾವಸೆಗೊಂಡಿರೆ ಗಡಣದಾಡುವೆಳವೆಂಡಿರ್ ನುಣ್ಬಸಲೆಯೆಗೆತ್ತೆಯ್ತರೆ (ಲೀಲಾವ. ೫-೪೬) ; ನಸೆಮುಸಪೊಂದೆ ನುಣ್ಬಸಲೆಯೊಳ್ಸುಸಿಲಾಂತೆಸೆವೇಣನಂ ವಿಲಂಬಿಸದಿಸಲೆಂದು ಬಂದನ ಪುಳಿಂದನ ವಕ್ಷಮನುದ್ಧಮಾಸ್ತ್ರದಿಂದಿಸೆ (ರಾಜಶೇ. ೫-೧೦೫) ; ಅಲ್ಲಲ್ಲಿ ನೆರೆ ಕಣ್ಗೊಳಿಪ್ಪ ನುಣ್ಬಸಲೆಯೊಳ್ಮಲಗಿರ್ಪ ಹರಿಣಂಗಳಿಂದೆ ಸಾತ್ವಿಕರಪ್ಪ ಮುನಿಗಳಿಂದಾಶ್ರಮುವದೇನೊಪ್ಪಿತೋ (ಶೀಷರಾ. ೮-೬).

[ನುಣ್ (< ನುಣ್ಣಿತು) + ಪಸಲೆ]

**ನುಣ್ಬಸೆ$_1$** (ನಾ). ಅಂದವಾದ ಹಸೆಮಣೆ ; ಮನೋಹರವಾದ ಪೀಠ : ತೆರೆಯ ಸೆಳೆಮಂಚದೊಳ್ ಬಿತ್ತರಿಸಿದ ಗಳಿತಾಬ್ಜದಳದ ನುಣ್ಬಸೆಯೊಳ್ ಬೆಳ್ನೊರೆಯ ತೆರೆಸುತ್ತಿನೊಳ್ ಪ್ರಿಯೆಗಿರದೊಳ್ಪನೆ ಬಯಸಿ ಕೋಕನಾಯ್ತು ಸಶೋಕಂ (ಚಂದ್ರಪು. ೮-೮).

[ನುಣ್ (<ನುಣ್ಣಿತು) + ಪಸೆ$_2$]

**ನುಣ್ಬಸೆ$_2$** (ನಾ). ಮೃದುವಾದ ಮಜ್ಜೆ : ಪುಸಿಯೆಂದಾದನದಿರ್ಪ ತಪ್ಪಿಸಿ ಸರಲ್ಮತ್ತೊಂದು ತಾಂ ಪೋಗೆ ನುಣ್ಬಸೆಯಂ ಮುಟ್ಟದೆ ಸುತ್ತ

ಮೊಂದು ಕಣೆ ಕಲ್ಲಂ ತಾಗಿದಂತಾಗೆ ಕೊಂಡಸಿಯಂಬೊಂದೆನೆ ದಡ್ಡುವಿರ್ದ ಹೃದಯಂ ಜಾಳಾಂದರಂಬೋಪಿನಂ ಬೆಸೆದೆಚ್ಚಂ ಕಡುದೇಸೆವೆಂಡಿರನಿದೇಂ ಕಾಮಂ ಛಲಗ್ರಾಹಿಯೋ (ಅರ್ಥನೇ. ೪-೧೪೬).

[ನುಣ್ (<ನುಣ್ಣಿತು) + ಬಸೆ$_3$]

**ನುಣ್ಪಳುಕು** (ನಾ). ನಯವಾದ ಸ್ಫಟಿಕ ; ನುಣುಪಾದ ಸ್ಫಟಿಕ: ರತಿದೇವಿಯ ಕೇಳಿಗಿಟ್ಟ ನುಣ್ಪಳುಕಿನ ಬಟ್ಟವಂಜರದ ಕೋಗಿಲೆಯಂ ಗೆಲೆವಂದುದು . . . ಅಮರೇಂದ್ರ ವಧೂ ಮುಖಪತ್ರವಿಭ್ರಮಂ (ಲೀಲಾಪ. ೨-೧೧) ; ಇಂತೊಪ್ಪುವ ಮಂಡಪದೊಳಗೆಸೆವ ಭವಂತಿಯ ನುಣ್ಪಳುಕಿನ ವೇದಿಕೆಯೊಳು ಕಾಂತಕನಕಸಿಂಹಾಸನದುಪರಿಮದೊಳಗೆ . . . ಕುಳ್ಳಿರಿಸಿದಂ (ಜಯಕಾ. ೪-೫೨).

[ನುಣ್(<ನುಣ್ಣಿತು) + ಪಳುಕು(<ಪಟಿಕ)]

**ನುಣ್ಬಳೆ** (ನಾ). ನುಣುಪಾದ ಕೈಬಳೆ: ಗಲಕೆನೆ ಕೈಯ ನುಣ್ಬಳೆ ಪುಳಿಂದಿಯರಂದದೆ ನಿಂದು ಸೂವಿಯುಜ್ವಲರವವೊಪ್ಪಿರಲ್ ಚಳಿಸಿದರ್ ಬಿದಿರಕ್ಕಿಯನಲ್ಲಿ ರಾಗದಿಂ (ರಾಜಶೇ. ೫-೧೧೦).

[ನುಣ್ (<ನುಣ್ಣಿತು) + ಬಳೆ$_2$]

**ನುಣ್ಬಿತ್ತು** (ನಾ). ನಯವಾದ ಬೀಜ : ಅಂಬುಜಾಕ್ಷಿಯರ ದಂತಚ್ಛವಿ ನಮ್ಮಯ ನುಣ್ಬಿತ್ತಿನೊಳಗಿದೆಯೆನುತ ಇಂಬಿಲ್ಲ ಪಲ್ಗಿರಿದುಸಿರುವವೋಲ್ಫಲಿಸಿ ದಾಳಿಂಬದ ಮರಗಳೊಪ್ಪಿಹುವು (ಕಂಸವಿ. ೫-೮೧).

[ನುಣ್ (<ನುಣ್ಣಿತು) + ಬಿತ್ತು$_2$ (<ಬಿಟ್ಟು)]

**ನುಣ್ಬುರುಳ್** (ನಾ). ಮನೋಹರವಾದ ಅರ್ಥ,—ಸತ್ತ್ವ : ಇದು ರಾಯನ ನಾಟ್ಯಕೋಳಿರ್ಕೆ ನಿಚ್ಚಮುಂ ದೇಸೆಯ ಗೊತ್ತುಜಾಣ್ಣುಡಿಯ ತಾಯ್ವನೆ ನುಣ್ಬುರುಳೀಟಕ್ಕಿಯೆಂಬಿನಂ (ಕಬ್ಬಿಕಾ. ೩೪೮).

[ನುಣ್ (<ನುಣ್ಣಿತು) + ಪುರುಳ್$_2$]

**ನುಣ್ಬುಳಿಲ್** (ನಾ). ನಯವಾದ ಮರಳು ; ಜಿನುಗಾದ ಉಸುಕು: ನುಣ್ಬುಳಿಲಮರ್ದೊಟ್ಟಿಲಲ್ಲೆಡಪಿ ಮೆಲ್ಲನೆ ಪಾಯ್ವುದು ಮಂದಮಾರುತಂ (ವೃಷವಿ. ೪-೫೩).

[ನುಣ್ (<ನುಣ್ಣಿತು) + ಪುಳಿಲ್ (<ಪುಟಿಲ್$_2$)]

**ನುಣ್ಬುಟಿಲ್** (ನಾ). ಅಂದವಾದ ಉಪವನ,—ತೋಟ : ನುಣ್ಬುಟಿಲೊಳಗದಿರ್ಮುತ್ತೆ ಪವಣ್ಬಡೆ ಕಟ್ಟಲಿಸಿ ಬೆಳೆದು ಬಳಸಿರ್ದೊಡದಂ ತಣ್ಬೆಳಗನೀಯೆ ಬೆಳತಿಗೆಗಣ್ಬೆಳಗೊಳಪೊಕ್ಕು ಚಪಳೆ ಕಳಿಕೆಯನಾಯ್ದಳ್ (ಚಂದ್ರಪ್ರ. ೭-೧೦೫). [ನುಣ್ (<ನುಣ್ಣಿತು)+ಪುಟಿಲ್$_1$]

**ನುಣ್ಬೆರಲ್,** ನುಂಬೆರಲ್, ನುಣ್ಬೆರಳ್ (ನಾ). ಮೃದುವಾದ ಬೆರಳು ; ಕೋಮಲವಾದ ಬೆರಳು : ಪಾಲ್ಗೊಳಿಸಿದ ನುಣ್ಬೆರಲಂ ಮೊಲೆಗೆತ್ತು ಪೀರ್ದು ಕಣ್ದೆರೆಯುದ ಕಂದನೆಂದೆನಗೆ ಕಣ್ದೆರೆಯಿಪ್ಪನೊ ಮಂದಹಾಸವಮುಂ (ಅರ್ಥನೇ. ೧-೧೦೦) ; ಪಂಚಶರವಂ ಪಳಿವ ನುಣ್ಬೆರಲ ವಿಸ್ತರಂ ಪಂಚಮುಖಪರಿಚಾರಕರ ತೆಜಿದೊಳಿರೆ (ಕಾರಿರ. ದೇ. ೨೮೯-೧೬). **ನುಂಬೆರಲ್ :** ಪಾದದ್ವಂದ್ವಂ ತಳಿರ್ ನುಂಬೆರಲ್ಗಳೆ ಕೊನರ್ಗಳ್ (ಪಾಪ್ರಾಶ. ೧). **ನುಣ್ಬೆರಳ್ :** ಉಂಗುರವೇ . . . ನೀರೆಯ ನುಣ್ಬೆರಳೆಡೆಯನು ಸೇರಿ ಪುಣ್ಯದಿ ಜಾರುತೆಂತು ಮುಳುಗಿದೆ ನೀಂ ನೀರೊಳಕ್ಕಟಾ (ಶಾಕುಂತ. ೮೬ ಅಡಿಟಿ).

[ನುಣ್ (<ನುಣ್ಣಿತು) + ಬೆರಲ್]

**ನುಣ್ಬೆರಳ್** 'ನುಣ್ಬೆರಲ್' ನೋ.

**ನುಣ್ಬೆಸ** (ನಾ). ನಯಗೆಲಸ ; ಕುಸುರಿಗೆಲಸ : ಮೊಕ್ಕಳಮೆನೆ ಬಸಿಜಿರ್ದಿಂದೊಕ್ಕ ಕರುಳ್ ತೊಡೆಯೊಳಾವಗಂ ತೊಡರ್ದನಸುಂ ಮಿಕ್ಕುವು ಬಿರುದರ ಬಿರುದಿಂಗಿಕ್ಕಿದ ನುಣ್ಬೆಸದ ಮಿಸುಪ ತೊಡೆ ಸಂಕಲೆಯಂ (ಚಂದ್ರಪ್ರ. ೧೦-೭೪). [ನುಣ್(<ನುಣ್ಣಿತು) + ಬೆಸ$_1$]

**ನುಣ್ಬೆಳಂತಿಗೆ** (ನಾ). ಕಾಂತಿಯುತವಾದ ಬಿಳಿಯ ಬಣ್ಣ ; ಅಚ್ಚಬಿಳುಪು : ಎಸೆವ ನುಣ್ಬೆಳಂತಿಗೆ ಮಟಲ ತಣ್ಬುಟಿಲೊಳ್ ಮದವಣಿಗತನದ ದೇಸೆಯಿಂ ವಿಲಾಸಂಬಡೆದ ಬಾಲಸಹಕಾರನಂದನಂ ವನಪಾಲಂ . . . ತೋಱಿ (ಅನಂಪು. ೭-೭ ವ).

[ನುಣ್(<ನುಣ್ಣಿತು) + ಬೆಳಂತಿಗೆ(<ಬೆಳತಿಗೆ)]

**ನುಣ್ಬೆಳಗು,** ನುಂಬೆಳಗು (ನಾ). ೧. ನಯವಾದ ಬೆಳಕು : ಸೌಮ್ಯವಾದ ಕಾಂತಿ: ಒಸರ್ದಪುದಿದಲ್ತೆ ಚಂದನರಸಮೆನೆ ಮಿಂಚುಗುರ ಮಿಸುಪ ನುಣ್ಬೆಳಗೆನಸುಂ ಪಸರಿಸೆ (ಕಾದಂಪೂ. ೯೧೬) ; ನುಣ್ಬೆಳಗಂ ಕಱಿವ ಪೊಂಬಾಳೆಯ ಪತ್ರಂಗಳನಿಂಬಿನಿಂ ಪಾಸುತ್ತುಂ (ಗಿರಿಕ. ೫-೬೭ವ); ಬೆಳ್ವಸದನದ ನುಣ್ಬೆಳಗಿಂದುಟ್ಟ ದುಕೂಲಚೇಲದ ಧಾವಲ್ಯಂ ಚತುರ್ಗುಣಮಾಗಿಂತು ಚೆಲ್ವುವೆತ್ತು (ಬಾಧಪು. ೬-೧೧೦ ವ). ೨. ಉಜ್ವಲವಾದ ಬೆಳಕು : ಎಣ್ಣೆ ಬತ್ತಿಯನೇಱು ನುಣ್ಬೆಳಗನೀವಂತೆ ಸಣ್ಣಾಗಿ ಸುಟ್ಟು ಬೆಳಗೀವ ಶಿವಯೋಗಿ ಸಣ್ಣಾತನೇನು (ಸರ್ವಜ್ಞ. ೫೫೫). **ನುಂಬೆಳಗು :** ೧. ರತ್ನಾವಳಿಯ ನುಂಬೆ[ಪಾಠಾಂ. ನುಣ್ಬೆ]ಳಗಿನಲಿ ಹಂಸೆಯ ತುಳಿಯ ಮೇಲ್ವಾಸಿನಲಿ ಪವಡಿಸುವೀಕೆ . . . ಈ ಕಲುನೆಲದೊಳೊಱಗಿದಳು (ಕುಪ್ಯಾಅ. ೯-೩೦).

[ನುಣ್(<ನುಣ್ಣಿತು) + ಬೆಳಗು$_2$]

**ನುಣ್ಬೊಗರ್**(ನಾ). ೧. = ನುಣ್ಬೆಳಗು: ೧. ಪೊಗರ್ವಟ್ಟ ನತನುಬಾಣದ ಪೊಗರಂ ನುಣ್ಬೊಗರೊಳಿಱಿಸಿ ನೋಡಿದ ಕಣ್ಣುಣ್ಣುಗುವೆನಿಪ ನುಣ್ಪಿನಿಂದೇಂ ಸೊಗಯಿಸುವುವೊ ಬಾಹುಮೂಲಮಾ ಕಾಮಿನಿಯಾ (ಪಲ್ಲಿಪು. ೩-೬೮); ಕಲಶಮನೆತ್ತಿ ನೀರ್ಕೆಱಿವ ಕಾಂತೆಯ ತೋಳ ತೆರಳ್ಕೆ ಮೇಲುದಂ ತೊಲಗಿಸೆ ನೋಡಿ ನುಣ್ಬೊಗರನೀಂಬ ಕುಚದ್ವಯಮೂಲಮಂ ಸಮುಜ್ಜ್ವಲಭುಜಮೂಲಮಂ ನೆಱಿಯೆ ಕಂಡು (ಚಂದ್ರಪ್ರ. ೧-೯೮) ; ತೆಳ್ಗದಪಿನ ನುಣ್ಬೊಗರುಗುವ ಚಾರು ಚುಬುಕದ ಮಗಳಂ ನಡೆನೋಡಿ ನಲಿದನಾ ಭೀಮನೃಪಂ (ದಮಸ್ವ. ೧-೩೯). ೨. ಉಜ್ವಲವಾದ ಹೊಳಪು : ಕೂರ್ವಾಳ ತೊಳಪ್ಪ ನುಣ್ಬೊಗರದೆತ್ತಂ ಪರ್ವಿ ಕಾರ್ಮಿಂಚಿನಂತಿರೆ ಬಿಲ್ಲಾಳ್ಗಳ ಬಲ್ಸರಂ ದೆಸೆಗಳಂ ತಳ್ಪೊಯ್ಯೆ (ಕಬ್ಬಿಕಾ. ೨೫೨) ; ನುಣ್ಬೊಗರನೇ ಮಿಂಚೆಂದು ಸೊಗಯಿಸುವ ಪೂಗಳಿಂದೆ ಉಗುವ ಮಕರಂದಬಿಂದುಗಳನೇ ಮಳೆಗಳೆಂದೊಗೆದ ಸಂತಸದೊಳಾವಗಮ್ಮೈದೆ ಕುಣಿವ ಸೋಗೆಗಳ ಬಳಗಂಗಳಂ ಮಗನೆ ಕಂಡೈ (ಜೈಮಿಭಾ. ೩-೨೫).

[ನುಣ್(<ನುಣ್ಣಿತು) + ಪೊಗರ್$_2$]

**ನುಣ್ಬೊಗರಿ** (ನಾ). ಅಂದವಾದ ಬುಗುರಿಯಾಕಾರದ ಶಿಲ್ಪ ರಚನೆ : ನಸುಬಾಗಿ ಕೊಂಬಿನೊಳ್ ಪೊಳೆವೆಳಗಾಯ ನುಣ್ಬೊಗರಿಯಿಂ ಸುಟಿತರ್ಪಲರಿಂದೆ ಬಿಟ್ಟ ಪೂಗಳ ಪುಡಿಯಿಂ ಕರಂ ಸೊಗಯಿಪೋಲಗಸಾಲೆಯೊಳಿರ್ದರೊಪ್ಪದಿಂ (ಕಬ್ಬಿಕಾ. ೧೨೬) ; ಕರ್ಣಿಕಾರದ ಪಲಗೆಗಟ್ಟ ನೆಡೆಯೆಡೆಯೊಳಳವಟ್ಟ ಎಸಳ್ಗಳಂ ನೆಗಪಿ ಕೀಲಿಸಿದ ಪೊಂದಾವರೆಯ ಮೊಗ್ಗೆಗಳ ನುಣ್ಬೊಗರಿಗಳಿಂ . . . ರಂಜಿಸಿ (ರಾಜಶೇ. ೧೨-೩೧ ವ).

[ನುಣ್(<ನುಣ್ಣಿತು) + ಬೊಗರಿ]

**ನುಣ್ಬೊದೆ** (ಕ್ರಿ). ಚೆಲುವಾಗು; ಅಂದವಾಗು : ಪದೆದು ತೊಂಗಲ್ ತೊಂಬೆ . . . ನುಣ್ಬೊ[ಪಾಠಾಂ. ಜೊ್ಬ]ದೆದ ಜೊಂಪಂ ತೊಂಗೆ ಗುಚ್ಛಮೆಂದಿರದೊಪ್ಪಿ ಪದೆದ ನಾಮಂ (ಕಬ್ಬಿಕೈ. ೧೯).

[ನುಣ್(<ನುಣ್ಣಿತು) + ಪೊದೆ$_1$]

**ನುಣ್ಮಡ** (ನಾ). ನುಣುಪಾದ ಹಿಮ್ಮಡಿ,—ಪಾದದ ಹಿಂಭಾಗ : ಕೆಂಪಪ್ಪ ನುಣ್ಮಡಮುಂ ವಾಮಪದಪ್ರಗುಲ್ಫದೆಡೆಯೊಳ್ ಸೈತಿಟ್ಟು . . . ನಿದ್ರಾಂಗಿ ಕಣ್ಗೊಪ್ಪಿದಳ್ (ದಶಕು. ೮-೨೯೩) ; ಅಡಗಿದ ಪರಡು ನುಣ್ಮಡ ಸಣ್ಣಬೆರಳೊಪ್ಪವಡೆದ ಪಾವುಗೆವಜ್ಜೆ ನೃಪಗೆ ಕಡುಪಿನುಗುರ್ಗಳು ಪದತಳ

ಗಳೊಳು ತೊಟ್ಟಿಡುವಂತೆ ಕೆಂಪು ರಂಜಿಸಿತು (ಭರತ. ೬–೬೯); ದುರುಳ ಕಾಮನ ಕನಕಕಂತುಕಾಯುಗಳುಮಂ ನೆರೆ ಪೋಲ್ವ ನುಣ್ಮಡಂ ಪಪ್ಪು ತಿರಲು (ನವಮೋ. ೨೩–೧೯). [ನುಣ್(<ನುಣ್ಣಿತು)+ಮಡ$_1$]

**ನುಣ್ಮಣಲ್,** ನುಣ್ಮರಲ್, ನುಣ್ಮಳಲ್ (ನಾ). = ನುಣ್ಬುಳಿಲ್ : ವೈತರಣಿಯ ಪಿರಿಯ ದರಿಯುಂ ಮೆಟ್ಟಿ ನುಣ್ಮಣಲಂ ಮಣಲ್ದಿಂಟಿಗೆತ್ತ ದೞ ಪರಿತಪ್ತಲೋಹರಜಸ್ಸಿಕತಿಳತಳದೊಳ್ ಮೆಯ್ಯನೀಡಾಡುವುದುಂ (ಶಾಂತಿಪು. ೭–೯೧ ವ); ತಿಳಿಗೊಳದ ತಡಿಯ ತಣ್ಬುಟಿಲ ನುಣ್ಮಣಲೊಳ ತನುಗುರು ರತಿಯನೋದಿಸುವ ಶುದ್ಧಾಕ್ಷರಂಗಳೆಸಿಪ ಶುಕ ಪಿಕ ಚಕೋರ . . . ಕುರವಕಸಂಕುಳಚರಣಸಂಚರಣದಿಂ ಪಳಚ್ಚನೆಸೆವ ಪಜ್ಜೆಗಳುಮಳುಂಬ ಮೆನಿಸುಗುಂ (ಪುಷ್ಪ. ೨–೩೯ ವ); ಸಲೆ ನೆಲಸಿರ್ದ ನುಣ್ಮಣಲ ಲಿಂಗ ದೊಳಂ ಶಬರಾಂಗದೊಳ್ ಸಮುಜ್ಜ್ವಲನರವಕ್ತ್ರಸಂಭವಮನಾ ಸ್ತವಮುಂ ಪಳಿಯಂ ಕಪರ್ದಿ . . . ಕೇಳ್ದು (ಶಬಶಂ. ೪–೧೦೭). **ನುಣ್ಮರಲ್ :** ನುಣ್ಮರ[ಪಾಠಾಂ. ಣ]ಲಿಂದೆ ಮಾಡಿ ಶಿವಲಿಂಗಮನರ್ಚಿಸಿ ಧೇನುವೃಂದಮಂ ಜಾಣ್ಗೆಗೆ ತಂದು ಪಾಲ್ಗಳಿಯೆ ಕಂಡೊಡೆಯುತ್ತಿರೆ (ರಾಜಶೇ. ೩–೧೦೨). **ನುಣ್ಮಳಲ್ :** ತುಂಗಶೃಂಗದುತ್ತುಂಗದ ತಿಂತಿಣಿಯಾಗಿ ಪೆಣೆದ ಲತೆ ಗಾವಣಗಳ ನುಣ್ಮಳಲ ಜಗತಿಯೆರಡುಂ ಕೆಲದೊಳ್ (ಶಾಂತಿಪು. ೯–೭೮); ಅಲ್ಲಲ್ಲಿಗೆ ಮುತ್ತಿನ ಪುಡಿಯ ನುಣ್ಮಳಲ್ಗಳಾಲವಾಲಂಗಳಿಂ ಕೂಡಿರ್ದೆಡೆವಿಡದೆ ಸುರಿವ ತೋರವನಿಗಳಿಂ (ಕಾದಂಬ. ೨೧೬); ಬರುಂಟೆದೊಡೆ ಬಿಸಿಯ ನುಗುಟ್ಟಿ ಕಪ್ಪುರದ ನುಣ್ಮಳಲ ಜಗಲಿಯುಂ (ವರ್ಧಪು. ೫–೬೩ ವ); ತನುವಿನಲ್ಲಿ ಪುಳಕಂ ಸಾಲ್ಗೊಂಡುಣ್ಮುತ್ತಿರೆ ಗಿರಿಪತಿಸುತೆ ನುಣ್ಮಳಲಿಂ ದಿವ್ಯಲಿಂಗಮುಂ ವಿರಚಿಸುವಳ್ (ಗಿರಿಜ. ೩–೯೩); ತಿಳಿದುಪ್ಪವೆಱೆದಾಗ ಚಿನ್ನದ ರಸದೊಂದು ಹೊಳೆ ಹರಿವಂತೆ ಶೋಭಿಸಿತು ಬಲುಹೆಱೆದುಪ್ಪ ಬಹಾಗ ಪಾಲ್ಗಡಲ ನುಣ್ಮಳಲಳಿವಂತೆ ರಂಜಿಸಿತು (ಭರತ. ೧೬–೮೦).

[ನುಣ್(<ನುಣ್ಣಿತು)+ಮಣಲ್]

**ನುಣ್ಮಣಿ** (ನಾ). ೧. ಹೊಳಪುಳ್ಳ ಮಣಿ; ಸರದಲ್ಲಿ ಪೋಣಿಸುವ ಗುಂಡಾದ ಗಾಜು ಮೊದಲಾದುವುಗಳ ಮಣಿ : ಬಿಗಿದ ಬೆಳ್ಳಿಯ ನುಣ್ಮಣಿಯಂತೆವೊಲ್ಬುಗಣನೊಪ್ಪಿರೆ ಕಾಲವನೇಚರಂ ಜಗದ ಲೋಚನ ವಿಮಾನಕೆ ಬೀಸಿದ ನೆಗಳ್ದ ಕರ್ಬುಲೆವೋಲ್ತುಮೊಪ್ಪುಗುಂ (ರಾಜಶೇ. ೧೧–೨೩). ೨. ಉಜ್ವಲವಾದ ರತ್ನ : ಸಾಂಧ್ಯರುಚಿವಲ್ಕಲಭಾಸುರ ನಭ್ರಜಾನಕೀಪತಿ ತಳೆದಿರ್ಪ ಬೈತಲೆಯ ನುಣ್ಮಣಿಯಂತೆಸೆದತ್ತು ಚಂದ್ರಮಂ (ಚಿಕವಿ. ೬–೧೯). [ನುಣ್(<ನುಣ್ಣಿತು)+ಮಣಿ$_3$]

**ನುಣ್ಮಯ್** 'ನುಣ್ಮೆಯ್' ನೋ.

**ನುಣ್ಮರಲ್** 'ನುಣ್ಮಣಲ್' ನೋ.

**ನುಣ್ಮಸೆ** (ನಾ). ಹೊಳೆಯುವ ಚೂಪು,—ಹರಿತ,—ತೀಕ್ಷ್ಣತೆ : ಬಸವಟಾವಂಗದಿಂ ಬಸಿವ ಘರ್ಮಜಲಂಗಳಿನಾಱಿ ಪಲ್ಲ ನುಣ್ಮಸೆ ಮಿಗೆ ಪತ್ತೆ ಜರ್ಜರಿತಮಾಗಿ ಬೆಳರ್ತಧರೋಷ್ಠದಿಂ ರತಿವ್ಯಸನಮುಹಾಹಿ ನುಂಗಿ ಯುಗುಟ್ವಂತೆವೊಲಿರ್ದ ನಿವಿಾಲಿತಾಕ್ಷಿಯುಂ . . . ಕಂಡು (ಲೀಲಾವ. ೧೩–೩೬). [ನುಣ್(<ನುಣ್ಣಿತು)+ಮಸೆ$_2$]

**ನುಣ್ಮಳಲ್** 'ನುಣ್ಮಣಲ್' ನೋ.

**ನುಣ್ಮಾತು** (ನಾ). = ನುಣ್ಣುಡಿ : ಮಱುಗಿಳಿಯುಂ ಮಱಸುವ ನುಣ್ಮಾತಿನ ಕಿಱುದಳಿರಂ ಗೆಲ್ವಧರದ . . . ನೃಪತನುಜೆಯು ತರುಣಿವು ಮೊಪ್ಪಿದುದು (ಜಯಶಾ. ೩–೨೨); ನಲ್ಮೆಗಾರ್ತಿಯ ನುಣ್ಮಾತಂ ಕೇಳ್ದು ಹರ್ಷಂದಾಳ್ದು (ರಾಜಶೇ. ೧೧–೧೫೭ ವ). 'ನುಣ್ಣಮಾತು' ಪರಾ.

[ನುಣ್(<ನುಣ್ಣಿತು)+ಮಾತು$_1$]

**ನುಣ್ಮಾಲೆ** (ನಾ). ಮನೋಹರವಾದ ಹಾರ : ಇದು ಮಾಣಿಕ್ಯದ ಮಾಲೆಯೋ ರುಚಿರ ಮುಕ್ತಾಮಾಲೆಯೋ ನೀಲರತ್ನದ ನುಣ್ಮಾಲೆಯೊ ಪೇಟಿನಲ್ಲಿ . . . ಮಣಿಪ್ರದ್ಯೋತಿ ತೀರ್ಸಿ ಪರ್ವಿದ ಸೌಗಂಧಿಕ ಮಾಲೆಯುಂ ಧರಿಸಿದಳ್ ತನ್ವಂಗಿ ಹಸ್ತಾಗ್ರದೊಳ್ (ನಳಚಂ. ೩೭೨).

[ನುಣ್(<ನುಣ್ಣಿತು)+ಮಾಲೆ]

**ನುಣ್ಮಿಂಚು** (ನಾ). ಮನೋಹರವಾದ ಕಾಂತಿ; ಅಂದವಾದ ಹೊಳಪು : ಕರ್ಪಿರಲಿ, ಕೂರ್ಪಿರಲಿ ನಿನ್ನ ಬೆಳ್ಪನು ಹೇಳು—ಕೊರಸಿಯ ಮಿಂಚು, ಕಾರಮಿಂಚು, ಪೆಣ್ಮಣಿಗಳಾ ಕಣ್ಣ ನುಣ್ಮಿಂಚು, ಅರಿದರಾ ಕೂರ್‌ನೋಟ ಮಿಂಚು (ಹೊಂಗಳು. ೧೬–೩).

[ನುಣ್(<ನುಣ್ಣಿತು)+ಮಿಂಚು$_3$]

**ನುಣ್ಮೀಸೆ** (ನಾ). ಸೊಗಸಾದ ಮೀಸೆ; ಅಂದವಾದ ಮೀಸೆ : ನಸು ದೋಱುತ್ತಿರ್ದ ನುಣ್ಮೀಸೆಗಳುಮತಿಮೃದುಸ್ನಿಗ್ಧಕೇಶಂಗಳುಂ ಕಣ್ಗೆಸೆ ಯಲ್ . . . ಬಂದನೊರ್ವಂ ಕುಮಾರಂ (ಕಾದಂಬ. ೫೪೭).

[ನುಣ್(<ನುಣ್ಣಿತು)+ಮೀಸೆ]

**ನುಣ್ಮುಡಿ** (ನಾ). ಅಂದವಾದ ಕೇಶಪಾಶ,—ಧಮ್ಮಿಲ್ಲ : ನುಣ್ಮುಡಿ ಬಿಣ್ಪಾದುದು ಮೆಲ್ಲೆರ್ದೆಯೊಳ್ ನಾಣ್ಗೊಳೆತುದು ಮೂಡಿದುವುರದೊಳ್ ಮೊಲೆ ಪೆಣ್ಮಣಿಕಕೆ ಮನೋಹರವಡೆದೇಱುಂಜೌವನದೊಳಗೆ (ಜಯಶಾ. ೩–೨೫). [ನುಣ್(<ನುಣ್ಣಿತು)+ಮುಡಿ$_3$]

**ನುಣ್ಮುತ್ತು** (ನಾ). ಸುಂದರವಾದ ಮುತ್ತು; ಸೊಗಸಾದ ಮುತ್ತು : ತರದಿಂದುಣ್ಮುವ ಕಣ್ಣ ನೀರ್ವನಿಗಳಂ ಕೈಕೊಂಡು ನುಣ್ಮುತ್ತಿ ನೊರ್ಚರಮುಂ ಪೆರ್ಮೊಲೆ ಚುನ್ನವಾಡೆ (ಕಬ್ಬಿಗಕಾ. ೬೯); ತರಳಂಗೊಪ್ಪಿ ರ್ದುದೊಳ್ಮಾಣಿಕದರಳೆಲೆ ನೀಲಂಗಳಿಂ ತಳ್ತ ಕರ್ಣಾಭರಣಂ ನುಣ್ಮುತ್ತಿನೇಕಾ ವಳಿ ಮಿಸುಪ ಹರಿದ್ರತ್ನಮೊಂದಿರ್ದ ಮುಂಗೈಸರಂ (ರಾಜಶೇ. ೪–೭೧).

[ನುಣ್(<ನುಣ್ಣಿತು)+ಮುತ್ತು$_3$]

**ನುಣ್ಮೆಯ್,** ನುಣ್ಮಯ್ (ನಾ). ಕೋಮಲವಾದ ದೇಹ; ಸುಕುಮಾರ ಶರೀರ : ನೀರ ಚಿಮ್ಮುರಿಯ ಸುತ್ತಿದ ಸಿರಿಮುಡಿಗೆ ಮಂದಾರ ಮಾಲೆಯ ಸುತ್ತಿ ಹಣೆಗೆ ರಾರಾಜಿಪ ತಿಲಕವನಿಟ್ಟು ಗಂಧವ ಪೂರಯಿಸಿ ದನು ನುಣ್ಮೆಯ್ಗೆ (ಮೋಹತ.೧೨–೪೬). **ನುಣ್ಮಯ್ :** ನಿಡುಬೊತ್ತಿನ ಬಿಸಿಲೊಳು ನುಣ್ಮಯ್ಯನು ನಡಸಿ ಪತ್ತಿದ ಜಡತೆಯನು ಕಡೆವಗಲಿನ ತಂಪು ವರ ಮೆಯ್ಯೊಱಗಿರ್ದಡಗಿಸಿದನು ಭೂಪಾಲ (ಶ್ರೀಪಾಲ. ೪–೬೧); ನುಣ್ಮಯ್ಯನಮರ್ದಪ್ಪಿ ಕೂಡಲಿಂದ್ರಿಯ ಪೊಱಪೊಣ್ಮೆತೆಂಬುದದಾವ ಚದುರು (ಭರತ. ೧೦–೧೧೦).

[ನುಣ್ (<ನುಣ್ಣಿತು) + ಮೆಯ್$_2$]

**ನುಣ್ಮೊಗ** (ನಾ). ಅಂದವಾದ ಮುಖ; ಸುಂದರವಾದ ಮುಖ : ನುಣ್ಮೊಗವಿಂರದಚ್ಚದಾವರೆಯ ಮೆಯ್ಸಿರಿಯಂ ಪಿಡಿದೆತ್ತೆ ನೀಳ್ದ ಸೆಳ್ಳುಗುರ್ಗಳ ಬೆಳ್ಪು ಕೇದಗೆಯ ಕುತ್ತೆಸಱಿೞೀಯನೆತ್ತೆ (ಕಬ್ಬಿಗಕಾ. ೪೦); ಜನಸುತೆ ನುಣ್ಮೊಗದೊಳೆದು . . . ಎದ್ದಳಾಗ (ಶ್ರೀಪಾಲ. ೨–೨೨); ಕಣ್ಮಲರ್ಕಾತರಿಸೆ ಮುಡಿ ಪೂಗಳಂ ಸೂಸೆ ನುಣ್ಮೊಗಂ ಬೇಱೊಂದು ಪರಿಯಾಗೆ ನುಡಿ ದೈನ್ಯಮುಣ್ಮೆ ಹೀನಸ್ವರದೊಳೆಸೆಯೆ (ಜೈಮಿಭಾ. ೧೧–೧೯); ಗಗನಸರೋಜಮಿಲ್ಲೆನಿಪ ವಾಕ್ಯಮನಿಲ್ಲೆನಿಸಂತೆ ನುಣ್ಮೊಗಂ ಬಗೆಗೊಳೆ (ರಾಜಶೇ. ೧೧–೧೮೯).

[ನುಣ್(<ನುಣ್ಣಿತು)+ಮೊಗ]

**ನುಣ್ಮೊಲೆ** (ನಾ). ನುಣುಪಾದ ಸ್ತನ : ಪವನವೇಗವ ಕೀಳ್ಪಡಿಸಿ ದೂಪಾಳಿಪ ಜವಗಾತಿಯ ಜನ್ಮೊಳಿರ್ದು ಕುವರ ಕಂಗೆಟ್ಟು ಬಿದ್ದಪೆನೆಂದು ತಕ್ಕೆಗೊಂಡವಳ ನುಣ್ಮೊಲೆಯ ಬಲ್ಪಿಡಿದ (ಮೋಹತ.೩೧–೨೭); ನುಣ್ಮೊಲೆಯ ನೆಲೆಮೊಲೆಯ ಬಲ್ಮೊಲೆಯ ಹೊಳೆಹೊಳೆವ ಕಣ್ಮಲರ ಸನ್ನೆಗಳ . . . ವೈಸಿಕದೊಳುಣ್ಮುವ ಗುಣಂಗಳ ಮಹಾಪ್ರೌಢವನಿತೆಯರ್ ಕಣ್ಗೆಸೆದರ್ (ಚಿಬಪು. ೧೦–೨೧); ಜಡಿವುತ್ತಿರೆ ನುಣ್ಮೊಲೆಯುಂ ಮುಡಿಯುಂ

ಪೊಡರುತ್ತಿರೆ ಪೂರ್ಣಘನಂ ಜಘನಂ . . . . . . . . ಪೊಡೆದಲ್ ಪಿಡಿದಲ್ ಪುಟಿಟೆಂಡನವಳ್ (ರಾಜಶೇ. ೧೧-೧೮೫).

[ನುಣ್(<ನುಣ್ಣಿತು)+ಪೊಲೆ₁]

**ನುಣ್ಗೊಲೆವೆಱು** (ಕ್ರಿ). ನುಣುಪಾದ ಮೊಲೆಗಳನ್ನು ಪಡೆದಿರು,—ಹೊಂದಿರು : ತೋರ ನುಣ್ಗೊಲೆವೆತ್ತ ಹೆಂಡಿರು ರತ್ನಭಂಡಾರ ನಾನಾ ವಸ್ತು ಪೆಱಗೆ ಸಾರಲೊಪ್ಪುವುದು ಯೌವನ ಕೂಡೆ ಲೋಕೋಪಕಾರವೆ ಕೈವಲ್ಯವಹುದು (ಮೋಹತ. ೫-೫೬). [ನುಣ್ಗೊಲೆ+ಪೆಱು₁]

**ನುಣ್ಸರ** 'ನುಣ್ಚರ' ನೋ.

**ನುತ** (ಗು). ೧. ಕೊಂಡಾಡಿದ ; ಹೊಗಳಿದ : ನುತ ಸಮ್ಯಕ್ತ್ವಗುಣವ್ರತಸ್ಥಿತಿಸಮುತ್ಪೀಭಾವನಂ ಪ್ರೋಷಧವ್ರತಮೆಂದುಂ ಪಸಿಯೊಂದುಮಂ ಪಱಿಯೆನೆಂಬೀ ಪೂಣ್ಕೆ ಮಾಡೆಂ (ಆದಿಪು. ೬-೧೨) ; ನುತ ಭವ್ಯಾಸೀಕ ನೀಳಾಂಬುರುಹಮಲರೆ ಮಿಥ್ಯಾತ್ವಸೂರ್ಯರ್ಗಂಶು ಕುಂದಲ್ (ಧರ್ಮಾಮೃ. ೧-೪). ೨. ಶ್ರೇಷ್ಠವಾದ ; ಪ್ರಸಿದ್ಧವಾದ : ನುತ ಶಬ್ದಾಲಂಕಾರದೊಳತಿಶಯವಿಾ ಕನ್ನಡಕ್ಕೆ ಸತತಂ ಪ್ರಾಸಂ ಕೃತಕೃತ್ಯಮಲ್ಲವಲ್ಲಭಮತದಿಂ (ಕವಿರಾ. ೨-೩೦) ; ನುತ ಜಂಬೂದ್ವೀಪದಿಂದಂ ವಿಭುಗಳೆ ನಭದಿಂ ಬಂದು ಪೊಕ್ಕಿಲ್ಲಿ. ಧೈರ್ಯಚ್ಯುತಿಯಿಂ ಕೊಂಡೋಡಿ ಪೋದರ್ (ನೇಮಿಪು. ೧೦-೧೦೬). (ನಾ). ೩. ಕೊಂಡಾಟ ; ಹೊಗಳಿಕೆ ; ಸ್ತುತಿ.

[ಸಂ.]

**ನುತಗುಣ** (ನಾ). ೧. ಶ್ರೇಷ್ಠವಾದ ಸ್ವಭಾವ,—ಗುಣ : ನುತ ಗುಣಸಾಗರರ್ ದಯದಮಾಕರರಪ್ರತಿಮ ಪ್ರಬುದ್ಧರನ್ವಿತಶುಭಭಾವ ಶುದ್ಧರ್ . . . ಎಂದು ಧರೆ ಭೋರ್ಗರೆದೆಯ್ದೆ ಸಮಂತು ಬಣ್ಣಿಕುಂ . . . ಮಲಧಾರಿದೇವರಂ (ನೇಮಿಪು. ೧-೧೨). ೨. ಶ್ರೇಷ್ಠವಾದ ಗುಣಗಳಿಂದ ಕೂಡಿದವನು : ನುತಗುಣನ ಬಿರುದಾವಳಿಯ ಸಂಗತಿಯನಭಿವರ್ಣಿಸುವ ಸಮಯೋಚಿತದ ಮನ್ನಣೆವಡೆದು ಮೆಱೆದುದು ಭಟ್ಟಸಂದೋಹ (ಕುಮಾವ್ಯಾಉ. ೮-೫೯) ; ಸತಿಯಾದ ಶಕುಂತಳೆಯುಂ ನುತಗುಣನೆಂದೆನಿಪ ಪುತ್ರನುಂ ನೀನುಂ ಭೂಪತಿ ಪುಣ್ಯದೆ ಕೂಡಿದುದನ್ವಿತಮಾದಂತಾಯ್ತು ಭಕ್ತಿವಿತ್ತಂ ವಿಧಿಯುಂ (ಶಾಕುಂತ. ೧೧೩-೯೨).

[ನುತ+ಗುಣ]

**ನುತಿ** (ನಾ). ೧. ಕೊಂಡಾಟ ; ಸ್ತುತಿ ; ಸ್ತೋತ್ರ ; ಹೊಗಳಿಕೆ : "ಅರ್ಥವಾದಃ, ಪ್ರಶಂಸಾ, ಸ್ತೋತ್ರಂ, ಈಡಾ, ಸ್ತುತಿಃ, ನುತಿಃ, ವಿಕತ್ಥನಂ, ಸ್ತವಃ, ಶ್ಲಾಘಾ, ವರ್ಣನಂ(ನಾ)—ಈ ೧೦ ಸ್ತುತಿಯ ನಾಮಂಗ" (ಹಲಾಯು. ೨೪-೧೪೪) ; ನುತಿಯಿಂ ನತಿಯಿಂ ಪೂಜಾತತಿಯಿಂ ಭಜಿಯಿಸಿ (ಅನಂಪು. ೧೦-೯೨) ; ಅಗೊ ಮರಳಿ ಬಂತು ಮಳೆ, ನಮ್ಮ ನುತಿಗು ಖತಿಗೂ ತಾನು ಹೊರತೆಂಬ ಪರಿಗೆ ಹನಿಯೆರಚಿ (ಹಂಸದ. ೧೬೭). ೨. ಪೂಜೆ. ೩. ಮನ್ನಣೆ ; ಗೌರವ. ೪. ಪ್ರಸಿದ್ಧಿ ; ಕೀರ್ತಿ: 'ನುತಿವಡೆ' ಪರಾ. [ಸಂ.]

**ನುತಿಗೆಯ್,** ನುತಿಗೈ (ಕ್ರಿ). ಕೊಂಡಾಡು ; ಸ್ತುತಿಸು ; ಹೊಗಳು ; ಸ್ತೋತ್ರ ಮಾಡು : ಪರಸಿದರದಿರ್ಗೊಂಡರಲಂಕರಿಸಿದರಾದರಿಸಿದರ್ ಕರಂ ನುತಿಗೆಯ್ದರ್ (ಗಿರಿಕ. ೪-೬೨) ; ಚರಣದೊಳ್ಪೆಳ್ದು ನುತಿಗೆಯ್ದು ತನ್ನುನಿಪಂಗೆ ಸರಸಿಜಾಕ್ಷಂ ಶಿಷ್ಯನಾಗಿರಲ್ ಕ್ಷೀರಾಬ್ಧಿಯಂ ಪಡೆದದೇಂ ಬರ್ದುಕನೇ (ಪದ್ಮರಾ. ೧೧-೬೨) ; ಉರಿವ ಭಾಸ್ಕರಕೋಟಿ ತೇಜದೆ ಪೊಜಸುತ್ತಿ ಪರಿವ ಚಕ್ರವ ನುತಿಗೆಯ್ದು (ಮೋಹತ. ೩೧-೧೫) ; ಬಳಿಕನಲಸೂಕ್ತಂಗಳಿಂದೆ ನುತಿಗೆಯ್ದು [ಪಾಠಾಂ. ಗೈದು] ಭೂತಳಕೊಂದಿ ಸಾಷ್ಟಾಂಗದಿಂದೆಱಗಿ ಶಿಂದು (ಜೈಮಿಭಾ. ೮-೪೨). **ನುತಿಗೈ :** ಈ ಪರಿಯ ನುತಿಗೈದು ಧ್ಯಾನಾನಾಲಾಪದಿಂ ಹೃತ್ಪದ್ಮದಲಿ ಚಿದ್ದೀಪಮೂರ್ತಿಯ ಸೆರೆವಿಡಿದು (ಗಗತಾ. ೧೭-೬೫) ; ಅಖಂಡಾನಂದವಿಗ್ರಹನ ನಿಟ್ಟಿಸುತ ನುತಿಗೈದು ಸಂತಸದೊಳು (ವೆಂಕಾರಾ. ೫-೩-೧೮) ; ಸ್ವರಜನಕನು ನುತಿಗೈದ ಚೆಲುವರಾಯ ಬರಬೇಕೆಮ್ಮೆಡೆಗೆ ನೀ (ಕರ್ನಾಕ. ೨೨೭).

[ನುತಿ+ಕೆಯ್₁]

**ನುತಿಗೈ** 'ನುತಿಗೆಯ್' ನೋ.

**ನುತಿಗೊಡು** (ಕ್ರಿ). ಕೊಂಡಾಡು ; ಸ್ತುತಿಸು ; ಹೊಗಳು : ತನ್ನ ಮಂದಿರಕೀಗ ಚೆನ್ನಿಗನು ಬರುತಿಹನು ! ನನ್ನಿ ಇದು, ಬಾ ನೀರೆ, ನುತಿಗೊಡುವ ಬಾ (ಮಾಂದಳಿ. ೭೧-೩). [ನುತಿ+ಕೊಡು₁]

**ನುತಿಯಿಸು** 'ನುತಿಸು' ನೋ.

**ನುತಿವಡೆ** (ಕ್ರಿ). ಪ್ರಸಿದ್ಧವಾಗು ; ಪ್ರಖ್ಯಾತಿಹೊಂದು : ನುತಿವಡೆದೀ ಕ್ಷೇತ್ರದೊಳಾ ಶಿತಿಕಂಠಾರ್ಪಿತಸುಧೂಪ ವರಗಂಧಘ್ರಾಣಿತರ್ಮೈದವ್ರೈತರಣಿಯ ತತದುರ್ಗಂಧವನೆ ವಾಸಿಸರ್ ಜನನಾಥಾ (ಉದ್ಭಟ. ೩-೭೧) ; ನುತಿವಡೆದ ಪದಿನೆಂಟುವರ್ಣನೆಗಳಿಂ ಸಮಾಶ್ರಿತನವರಸಾದ್ಯಲಂಕಾರಂಗಳಿಂ ವಿಬುಧತತಿ ಬಣ್ಣಿಪಂತುಸಿರ್ದೆನೀ ಕಾವ್ಯಮುತಿಸೇವ್ಯಮಾದುದೆಂಬೊಲ್ ಸುಜನರು (ಚಿಬಪು. ೧-೩೬). [ನುತಿ+ಪಡೆ₁]

**ನುತಿವಾದ** (ನಾ). ಸ್ತುತಿಯ ಮಾತು ; ಸ್ತೋತ್ರ : ನುತಿವಾದ ಪರಿವಾದದಲಿ . . . ದ್ವಾದಶಾತ್ಮನ ಭಜಿಸಿದರೆ ಭಕ್ಷ್ಯಾದಿ ಬಹುವಿಧದನ್ನ ಸಿದ್ಧಿಪುದು (ಕುಮಾವ್ಯಾಅ. ೧-೭). [ನುತಿ+ವಾದ₂]

**ನುತಿವೆಱು** (ಕ್ರಿ). ೧. ಕೊಂಡಾಡಲ್ಪಡು ; ಹೊಗಳಿಕೆ ಹೊಂದು ; ಸ್ತುತಿಯನ್ನು ಪಡೆ : ಮಾಚಯ್ಯ ಪ್ರೇಮವೆಸೆಯಲು ಬಸವನಂ ಸನ್ನಾವಿ ಕಿನ್ನರಶರಣನಂ ಸುಕ್ಷೇಮದಿಂ ಜೀವಂತರಂ ಮಾಡಿದನು ನುತಿವೆತ್ತು (ಬಸಪು. ೩೬-೪೪). ೨. ಹೆಸರಾಗು ; ಪ್ರಸಿದ್ಧವಾಗು : ಕ್ಷಿತಿವಧು ತಾಳ್ದಲಂಕೃತಿಯಿದೆಂದೆನಿಸಿರ್ಪುದು . . . ದತ್ತನಿರ್ಜರಸ್ಥಿತಿ ನುತಿವೆತ್ತ ಧರ್ಮವತಿಯೆಂಬ ಪುರಂ ವಿತತಪ್ರಭಾವದಿಂ (ರಾಜಶೇ.೨-೩೨).

[ನುತಿ+ಪೆಱು₁]

**ನುತಿಸು,** ನುತಿಯಿಸು (ಕ್ರಿ). ಹೊಗಳು ; ಕೊಂಡಾಡು ; ಕೀರ್ತಿಸು ; ಸ್ತುತಿಸು : ಆಗಮಪುರಾಣಾರ್ಥವಿಹಿತವಿಭಾಗಸೂಕ್ತಿಗಳಿಂದೆ ಮಂಜುಳರಾಗರಸಪೊಸರ್ದೆಸೆಯೆಲನುರಾಗಿಸಿ ನುತಿಸುತಿರಲು (ಬಸಪು. ೪-೫೭) ; ಆ ಮುನಿಕುಲಂ ಭೀತಿಯಿಂ ನುತಿಸೆ ನಿಜರೂಪಮಂ ತೋಱಿ ಪರಿಪೂತ ಸುಜ್ಞಾನಮಂ ಕೊಟ್ಟವರ ಪೊರೆದನು (ಪದ್ಮರಾ. ೧೧-೨೨) ; ಕರಿಮುಖನ ಷಣ್ಮುಖನ ಚರಣಕ್ಕೆಱಗಿ ನುತಿಸುತ್ತಿರಲು ಪಾರ್ಥನ ಪರಮ ಭಕ್ತಿಗೆ ಮೆಚ್ಚಿ ತೆಗೆದಪ್ಪಿದರು ಕರುಣದಲಿ (ಕುಮಾವ್ಯಾಅ. ೬-೧೦೭) ; ಶಿವಗೃಹಕೆ ತಾ ಬರಲು ಬಲ್ಪಿಂ ಕದವು ಸೇರಿಸಿರೆ ನಂಬಿ ಪೊಱಗಿರ್ದೀಶನಂ ನುತಿಸಿದ (ಸೌಂದಪು.೧೪-೫೫); ರಥಕುರುಜುಗಳೊಳಗೆಸೆವ ಪಟಗಳು. . . ನುತಿಸಲೋಲಗಸಿರಿ ಕೈನೀಡಿ ನಿರ್ಜರತತಿಯ ಕರೆವೊಲೊಪ್ಪಿದುವು (ಕಂಸವಿ. ೨೦-೨೦). **ನುತಿಯಿಸು :** ನುತಿಯಿಪ ವಡ್ಡಾಚಾರ್ಯ್ಯಬ್ರತಿಪತಿಯೆ ನೇಮಿದೇವರಿಂದಮೆ ಪೂಜ್ಯ (ಎಕ. VII, ಶಿಮೊ. ೬೪-೮೦ ; 1112 ?) ; ಅವರುಗಳನ್ನು ನುತಿಯಿಸಿ ಕುಂದುಹೆಚ್ಚನು ನೀವು ಕಾಣ್ಬುದು ಮುಂದ ರೋದರ (ಸಂಭಪ. ೭-೧೦) ; ಉಜ್ವಳಮುಕ್ತಿಯೇ ಮೂರ್ತಿವೆತ್ತು ಸಾರ್ದತ್ತೆನ್ನ ಪಲವುಜನ್ಮಂ ಸಫಲಮಾದುದೆಂದಮರೇಂದ್ರನಭವನಂ ನುತಿಯಿಸಿದನು (ಚಿಬಪು. ೨೦-೬). [ನುತಿ+ – ಇಸು₃]

**ನುತ್ತ** (ಗು). ೧. ಹೊರದೂಡಿದ ; ತಳ್ಳಿದ. (ನಾ). ೨. ಹೊರದೂಡಿದುದು ; ತಳ್ಳಿದುದು : "ನುತ್ತಂ ನುನ್ನಂ" (ವಸ್ತುಕೋ. ೧೦೪-೪೦); "ನುತ್ತಃ, ನುನ್ನಃ, ಅಸ್ತಃ, ನಿಷ್ಠ್ಯೂತಃ, ವಿದ್ಧಃ, ಕ್ಷಿಪ್ತಃ, ಈರಿತಃ—೭ ನೂಕಲ್ಪಟ್ಟದ್ದು, ತಳ್ಳಲ್ಪಟ್ಟದ್ದು"(ಸಿದ್ಧಾಂತಿ. ೩೪೬). [ಸಂ.]

**ನುನುನ್ನಿಗಿಡ** (ನಾ). ಒಂದು ಬಗೆಯ ಸಸ್ಯ : (ಮೈಡಿಗಿ. ೪೮-೯೬೧).

[ನುನುನ್ನಿ₀+ಗಿಡ(<ಗಿಡು)]

**ನುನ್ನ** (ನಾ). ೧. = ನುತ್ತ ೨ : "ನುನ್ನಂ, ಕ್ಷಿಪ್ತಂ—ಈ ೨ ನೂಕಲ್ಪಟ್ಟುದು" (ಹಲಾಯು. ೧೨೬–೮೨). ೨. [ಗಣಿತ] ಕಳೆಯುವುದು; ವ್ಯವಕಲನ : "ರಜತಂ, ರಜಿತಂ, ಉವಿತಂ, ತ್ಯಜಂ, ನುನ್ನಂ, ವಿವರಣಂ, ವಿಶೋಧ್ಯಂ, ಶೋಧ್ಯಂ, ತ್ಯಜಿಸು, ಕಳೆ ಇಂತಿನಿತುಂ ಕಳೆವುದಕ್ಕೆ ಪೆಸರು" (ವ್ಯವಹಾ. ೧೧–೨೧). [ಸಂ.]

**ನುನ್ನಿತ** (ಗು). ಕಳೆದುಹೋದ : ಮೋಹನೆ ಗೌರಿ ಕನ್ಯಾವಯಸ್ಸ ನುಳಿದು ನುನ್ನಿತವಯೋತರುಣಕಾಲವಾಕೆಯ ರೂಪಿಗಿನ್ನಾಗಲೀ ಕರಿರದಿಹ ಳಿಂದು (ಜಿನಮು. ೪೨–೬). [<ಸಂ. ನುನ್ನ ?]

**ನುರಿ**$_1$ 'ನುಱಿ$_1$' ನೋ.

**ನುರಿ**$_2$ 'ನುಱಿ$_2$' ನೋ.

**ನುರಿಗ** (ನಾ). ಒಂದು ಬಗೆಯ ಗಿಡ : "ಛಿನ್ನಪತ್ರಾ–ನುರಿಗನ ಕಾಯಿ" (ಓಷಧಿ. ೫೯). [ ? ]

**ನುರಿನುಗ್ಗು** (ಕ್ರಿ). ಚೂರುಚೂರಾಗು ; ಛಿದ್ರಛಿದ್ರವಾಗು ; ನುಚ್ಚುನೂರಾಗು : ನುರಿನುಗ್ಗಿ ಜರ್ಜರಿತಮಾಗಿರ್ದುದೈ ಮುನಿವರ ನಿಶಾಕರನ ಪುಣ್ಯಾಶ್ರಮಂ ! ಪೊರಗೆ ಪೋಗಿರ್ದವಂ ಬರ್ದುಕಿದಂ ಋಷಿ (ಶ್ರೀರಾಮಾ. ೩೮೮–೭೧೫).

[ನುರಿ$_2$(<ನುಱಿ$_2$) + ನುಗ್ಗು(<ನುಟ್ಟು)]

**ನುರಿವಡೆ** (ಕ್ರಿ). ಚೂರುಚೂರಾಗು ; ಕಣಕಣವಾಗು ; ತುಂತುರಾಗು : ಗಿರಿಶಿಖರವಾದ ಹಣೆಯಲ್ಲೊಸರುವ ಬೆವರ ಬಿಂದುಗಳೊಳಗೆ ಕೆಲವು ಹಾಗೆ ಕೆನ್ನೆಗಳತ್ತ ಜಾರಿದರೆ, ಕೆಲವು ಹೀಗೆ ಮೂಗಿನ ಇಕ್ಕಡೆಗಳಲ್ಲಿಳಿದು ಬಿಸುಸುಯ್ಲಿನ ಸೂಂಕಾರದಿಂದ ನುರಿವಡೆದು ಹಾರುತ್ತಿದ್ದವು (ವೀರಬಂ. ೬೬). [ನುರಿ$_2$(<ನುಱಿ$_2$)+ಪಡೆ$_1$]

**ನುರಿಸು** (ಕ್ರಿ). ೧. ಚೂರುಮಾಡು ; ಹುಡಿಗುಟ್ಟು ; ಪುಡಿ ಮಾಡು : (ಕ). ೨. ಪಳಗಿಸು : ಅಂಚೆ, ಬಾನುಲಿ, ತಂತಿ ಇಡಿ ಪ್ರಪಂಚದ ಹಂತಿನುರಿಸಿ ಹೊಂದಿಸಿ—ಕೊಳಲಿ ನವಜೀವನ (ನೆಲಮು. ೨೧–೮). ೩. ಮನನ ಮಾಡು : ಹರಿ ನಂಬಿದವರನು ರಕ್ಷಿಸುವನೆಂಬ ವಾಕ್ಯವನು ಮನದಿ ನುರಿಸುತ. ಅರ್ಚಕರು ಮುಂದೆ ಹೆಜ್ಜೆ ಇಡೆ (ನವರಾ. V, ೬೪–೪). ೪. ಅಗಿ ; ಜಗಿ : ಕುದುರೆಗಳು ಮೊದಲು ದವಡೆಗಳಿಂದ ನುರಿಸಿ, ಆಮೇಲೆ ನುಂಗುತ್ತವೆ (ಮುಂಬಯಿ. ೩–೩೭) ; ಆಹಾರದ ಎಷ್ಟೋ ಭಾಗವು ನುರಿಸುವಾಗಲೇ ಅರಗಿಹೋಗುವುದು (ಗೋಗ್ರಾಸ. ೪೧) ; ನರಹರಿಗೆ ಅವರ ಮಾತುಗಳನ್ನು ಕೇಳಿ ಬೇಸರ ಬಂದಿತು . . . ಎದ್ದು ಹೋಗುವ ಹಾಗಿರಲಿಲ್ಲ. ಮುನ್ನೋಡಿ ಎಲೆಯಲ್ಲಿದ್ದುದನ್ನು ನುರಿಸುತ್ತ ಕುಳಿತಿದ್ದನು (ಸಮಜೀ. ೧೬೦).

ನುರಿಸಿಕೊಳ್ಳು = ಮೆಲಕು ಹಾಕು; ಮನನ ಮಾಡು : ಮಾಮಿಗೆ ಆಡಿ ತೋರಿಸಬೇಕಾದ ಬಿರುನುಡಿಗಳನ್ನು ಮನಮನದೊಳಗೆ ನುರಿಸಿಕೊಂಡು ಅವನ್ನು ಗಟ್ಟಿಮಾಡಿಕೊಳ್ಳಹತ್ತಿದನು (ಇಷ್ಟಕ. ೨೬೫).

[ನುರಿ$_2$(<ನುಱಿ$_2$)+–ಇಸು$_3$]

**ನುರುಕು** 'ನುಱುಕು' ನೋ.

**ನುರುಗು** 'ನುಱುಕು' ನೋ.

**ನುರುಜು, ನೊರಜು**$_2$ (ನಾ). ನುಣುಪಾದ ಸಣ್ಣಸಣ್ಣ ಕಲ್ಲಿನ ಚೂರು : 'ನುರುಜುಗಲ್ಲು' ಪರಾ. **ನೊರಜು**$_2$ **:** ಮುಳ್ಳು ಮಣ್ಣು ನೊರಜಿನ ನಡುವೆ ಇಕೊ ಹೊಚ್ಚ ಹೊಸ ಹೊನ್ನಕ್ಷತ್ರ (ಚಿಲುವು. ೫–೩). [ದೇ.॥ ತೆಲು. ನಜುಜು = ಸಣ್ಣದು]

**ನುರುಜುಕಲ್ಲು** 'ನುರುಜುಗಲ್ಲು' ನೋ.

**ನುರುಜುಗಲ್ಲು,** ನುರುಜುಕಲ್ಲು, ನೊರಜುಗಲ್ಲು (ನಾ). = ನುರುಜು : ಎತ್ತಿನ ಬಂಡಿಯ ಸಾಲು ಕೀಗುಟ್ಟುತ್ತ, ರಸ್ತೆಯ ನುರುಜುಗಲ್ಲನ್ನು 'ಕರಕರ' ಎಂದು ತಿಕ್ಕಿ ಪುಡಿಮಾಡುತ್ತ . . . ಹೋಯಿತು (ರಂಗನಾ. ೪) ; ನುರುಜುಗಲ್ಲಿನ ಮೇಲೆ ನಡೆಯುವುದಕ್ಕೂ ಜೋಡಿನೊಳಗೆ ನುರುಜುಗಲ್ಲು ಹಾಕಿಕೊಂಡು ನಡೆಯುವುದಕ್ಕೂ ಯಾವ ವ್ಯತ್ಯಾಸ ವಿರುತ್ತದೆಯೋ ಹಾಗೆ (ನಿಬಂಧ. II, ೧೮೫). **ನುರುಜುಕಲ್ಲು :** ಆ ಬಳಿಕ ಕೆಂಪುನುರುಜುಕಲ್ಲುಗಳು ಯಿರುವವು (ಸೌಗಂಧಿ. ೪೩೧–೨೧). **ನೊರಜುಗಲ್ಲು:** ಈ ಮಧ್ಯಾಹ್ನದಲ್ಲಿ ಕಾಯ್ದು ನೆಲದ ಮೇಲೆ ಸುಡುವ ಮರಳಿನ ಮೇಲೆ ಕಠಿಣವಾದ ನೊರಜುಗಲ್ಲು ಮರಳುಗಳನ್ನು ಕಾಲಿನಿಂದ ತುಳಿಯುತ್ತ ಬಂದರೆ ಕಾಲು ಗಾಯವಾಗಿ ನೋಯುವುದು (ಬುದ್ಧಪ. ಮಿಲಿಂದ. ೩೫) ; ನೊರಜುಗಲ್ಲಿನಲ್ಲಿ ನೂರಕ್ಕೆ ಮೂವತ್ತಾರರಷ್ಟು ರಂಧ್ರಗಳಿರುತ್ತವೆ (ಕವಿಕೋ. I, ೭೬). [ನುರುಜು + ಕಲ್ಲು (<ಕಲ್$_3$)]

**ನುರುಟುವಲ್** (ನಾ). ವಿಕಾರವಾದ ಹಲ್ಲು ; ಮುರುಟಿಕೊಂಡಿರುವ ಹಲ್ಲು : ನೊರಜುಗಣ್ಣಿನ ನಳಿದ ಮೂಗಿನೆಳಲುವ ತುಟಿಯ ನು[ಪಾಠಾಂ. ಕು]ರುಟುವಲ್ಲಿನ . . . ನಾಱುವ ಬಾಯ ನೊರೆ ಸೂಸುತಿರ್ದಳ್ (ಹಚಕಾ. ೮–೨೮ ; ಸೋಮನಿತ. ೨–೫೮ ನೋ).

[ನುರುಟು$_0$ (P←ತುಳು. ನುರುಂಟು) + ಪಲ್]

**ನುರುಹು** (ಕ್ರಿ). ಪುಡಿಮಾಡು ; ನರುಕು ; ನುಣ್ಣಗೆ ಮಾಡು : ಪ್ರತಿದಿನವೂ ಒಂದೊಂದು ಗುಳಿಗೆಯನ್ನು ನುರುಹಿ ಹಸುವಿನ ಬೆಣ್ಣೆ ಮತ್ತು ಸಕ್ಕರೆಯಲ್ಲಿ ಮಿಶ್ರಮಾಡಿಕೊಡಲು ದಾಹಜ್ವರ ಗುಣವಾಗುವುದು (ಸಕವೈ. ೮೬). [<ನುರಿ$_2$ + –ಹು$_1$(<–ಪು$_1$)]

**ನುರ್ಗಾಡು** (ಕ್ರಿ). ಛಿದ್ರಗೊಳಿಸು ; ಚೂರುಮಾಡು : ಒರ್ವ ನೂರುಗಳನೆನ್ನ ಗದಾಶನಿಘಾತದಿಂದೆ ನುರ್ಗಾಡುವೆನೆಂದು ಲೋಕ ಮಱಿಯುತ್ತಿರೆ ಪೂಣ್ದೆನಗಂತೆ ಸಂತಸಂ ಮಾಡದೆ (ಪಂಪಭಾ. ೯–೨೪).

[ನುರ್ಗು$_3$ (<ನುಱುಗು$_2$) + ಆಡು$_1$]

**ನುರ್ಗಿಸು** 'ನುಱುಕಿಸು' ನೋ.

**ನುರ್ಗು$_1$,** ನುಗ್ಗು$_1$ (ಕ್ರಿ). ೧. ಇಕ್ಕಟ್ಟಿನಲ್ಲಿ ಒತ್ತರದಿಂದ ಮುಂದೆ ಸರಿ ; ಒತ್ತರಿಸು ; ನೂಕಿ ನಡೆ : "ಇಟ್ಟೆಡೆಯ ಗಮನಂಗಳೊಳ್ ನುರ್ಗು" (ಶಬ್ದಮಂ. ೮೫) ; ತನಗಾಂತಧಿಕೋಗ್ರವಿರೋಧಿಸಾಧನಂ ವೞಿಕೆ ಬಳ್ಳಿ ನುರ್ಗಿ ಪಲರಂ ತವೆ ಕೊಂದು (ಎಕ. VIII, ಸೊರಬ. ೧೮೪–೮ ; 1033 ?) ; ನೆರವಿಯುಮುರವಣಿಸಿ ಪಾಯ್ದು ಬೀದಿವರಿದಾಱಿಗೊಂಡು ಸಿಕ್ಕಿದ ರೂಪಿನ ತಲೆಯೊಳ್ ನಿಳಿಲ್ಸಿಕ್ಕೊಂಡು ತರ್ಗಿ ನುರ್ಗಿ [ಪಾಠಾಂ. ಕುರ್ಗಿ] ಕಟ್ಟಿ ಕೊಡಹುವ . . . ಸುಕಳಾಶ್ವಮಂ ಬೇಗದಿಂ ಬೆಂಗೆವಾಯ್ದು ರಾಘವೆಯೊಳೌಂಕಿ ವಾಘೆಯೊಳ್ ನಿಲಿಸಿ (೧೧೪೩. ೨–೧೦೬ ಪ) ; ಎಲ್ಲರ ಧೈರ್ಯಮಂ ಮೊಲೆಯ ಬಿಣ್ಪಂ ನುರ್ಗಿ ನೂಂಕಲ್ಕೆ ಧೀಂಕಿಡುವಂತಾಡಿದಳುಯ್ಯಲಂ ತರುಣಿ ತಂದಳ್ ಕಾಮನಿಂ ಹುಯ್ಯಲಂ (ಅನಂಪು. ೮–೬). **ನುಗ್ಗು$_1$ :** ೧. ನಾಲ್ಕುಕೋಟಿ ಘಟಾಕಟದಂಬವು ನೂಕಿ ನುಗ್ಗುವ ಪಾಯಿದಳ ಹದಿನಾಕುಕೋಟಿಗಳು (ಸಂಭಪ. ೧೩–೨೨); ನೋಡಲಗ್ನಿಯೊಳಡಗಿ ನುಗ್ಗಿದುದು ಸುತ್ತಲುಂ ಮಾಡಿದುದು ಕರ್ಕಶವನಮರ ಸುಭಟಾಳಿ(ಚಿಬಪು. ೪೨–೩೧) ; ನಡೆ ಮುಂದೆ ನಡೆ ಮುಂದೆ, ನುಗ್ಗಿ ನಡೆ, ಮುಂದೆ ! (ಪಾಂಚಜ. ೫–೨) ; ಕಾಲವಾಹಿನಿಯಲ್ಲಿ ಸಿಕ್ಕಿ . . . ಮೇಲ್ಮೇಲೆ ವಿಷವೀಚಿಮಾಲೆಗಳು ನುಗ್ಗುತ್ತ ಬರುತಿಹವು ಕೊಚ್ಚುತಿಹವು (ಕವಿಸೋ. ೩೭–೩). ೨. ಹೊಗು ; ಪ್ರವೇಶಮಾಡು : "ನುಗ್ಗು–ಒಳಹೊಗು, ಪ್ರವೇಶಿಸು" (ಜಾನಕೋ. ೧೨) , ಅವರ ಮನೆಯ ಬಾಗಿಲನ್ನು ನುಗ್ಗುವಾಗಲೇ . . . ಅವರ ಮಗಳು ಸರಸ್ವತಿಯು ಕಾಣಿಸಿಕೊಂಡಳು (ಮರಪು. ೫೭೫) ; ಮಹಾಪುರುಷನು ಕಾರ್ಯಕ್ಷೇತ್ರಕ್ಕೆ ನುಗ್ಗಿದನು (ಕೃಮಹ. ೪೯). [ದೇ.॥ತಮಿ. ನುಱುವು, ನುಱೈ ; ಮಲ. ನೂಱು, ನೂಳು, ನೊೞ್ಕ; ಕೊಡ. ನುಗ್ಗ್]

**ನುರ್ಗು**$_2$ 'ನುಙುಕು' ನೋ.
**ನುರ್ಗು**$_3$ 'ನುಙುಗು$_2$' ನೋ.
**ನುರ್ಗುಗುಟ್ಟು,** ನುಗ್ಗುಗುಟ್ಟು (ಕ್ರಿ). ಹುಡಿಗುಟ್ಟು; ಪುಡಿ ಮಾಡು; ಧ್ವಂಸಗೊಳಿಸು : ಜಲಧಿಯೊಳಿರ್ದಡೀಂಟಿ ಕುಲಶೈಲದೊಳಿರ್ದಡೆ ನುರ್ಗು[ಪಾಠಾಂ. ಗ್ಗು]ಗುಟ್ಟಿ . . . ವಿರೋಧಿಯುಷ್ಣ ರುಧಿರಾಂಬುವಿನಿಂ ಸುತೆ ನಿನ್ನ ಕೇಶಮಂ ತೊಳೆಯದೊಡೆನ್ನ ಚಕ್ರವಿದು ಚಕ್ರಮೆ ಕೋವರಚಕ್ರಮಲ್ಲದೇ (ಮಹಾಸೇ. ೬-೯೯). **ನುಗ್ಗುಗುಟ್ಟು :** ಅದಟ ಪಡಿಯನು ಸಂದ ಪರಾಕ್ರಮಿಯಾ ದಂಡಾಧಿಪ ನಂದಿಟ್ಟು ನುಗ್ಗುಗುಟ್ಟಿದನು (ಶ್ರೀಪಾಲ. ೧೩-೧೭೧); ವಿಕ್ರಮಯುತ ಸೇನಾಧಿನಾಯಕನಾ . . . ಮ್ಲೇಚ್ಛನೃಪರ ಪರಾಕ್ರಮವನು ನುಗ್ಗುಗುಟ್ಟಿ (ಶ್ರೀಪಾಲ. ೧೩-೧೭೬). [ನುರ್ಗು$_3$(<ನುಙುಗು$_2$) + ಕುಟ್ಟು$_1$]
**ನುರ್ಗುನುಱು,** ನುಗ್ಗುನುರಿ, ನುಗ್ಗುನುಱು (ನಾ). ಚೂರು ಚೂರು; ನುಚ್ಚುನೂರು; ನಜ್ಜುಗುಜ್ಜು; ಪುಡಿಪುಡಿ : ಕುರುಕುಲಮಹೀಪಾಲ ಬೃಹದೂರುಶೈಲದ್ವಂದ್ವಂಗಳಂ ತನ್ನ ಗದಾದಂಡವಜ್ರದಂಡದಿಂ ನುರ್ಗು[ಪಾಠಾಂ. ರ್ಚು]ನುಱು ಮಾಡಲುಂ (ಗದಾಯು. ೬-೧೬ ಪ); ತೇರ ತೆಕ್ಕೆಗಳ್ ಕಲ್ಲ ಗಾಣದ ಕಣೆಯ ಬಾಯ್ಗೆ ಬಿಟ್ಟ ಕಳಿಕೆಯ ಚೆಂಡಿನಂತೆ ನುರ್ಗುನುಱುಯಾಗಿರ್ದುವು (ಅನಂಪು. ೧೪-೭ ಪ); ಶಾವಲೆಯಂ ಬರೆಸೆಳೆದೊಳಅಟ್ಟೆ ನುರ್ಗುನುಱುಯಪ್ಪಿನಂ . . . ತನ್ನೆರಡುಂ ನಿಡುದೋಳ್ಗಳಿನಮರ್ದು ಬಿಗಿದು ತಳ್ಕೈಸಿಯುಂ (ರಾಮಾಶ್ವ. ೬೦-೨೨). **ನುಗ್ಗುನುರಿ :** ಪವನಸೂನಿ . . . ದನುಜನ ಮಹೋರಸ್ಥಳವ ಗುದ್ದಿದನು ನುಗ್ಗುನುರಿಯಾಗಿ ಬಿದ್ದನಸುರನು ನೆಲಕೆ (ಅನಂರಾ. ೬-೯-೩೧). **ನುಗ್ಗುನುಱು :** ದಬ್ಬಳಮಂ ಬೆರಲ್ಗಳೊಳಡಂಗುವಿನಂ ನಡೆಪೊಯ್ದು ಮೂಳೆಯಂ ದಬ್ಬುಕದಿಂದೆ ನುಗ್ಗುನುಱುಯಪ್ಪಿನೆಗಂ ಬಿಡೆ ಬೀಸಿ ಪೊಯ್ದು (ಸುಕುಮಾ. ೭-೬); ಅಪ್ಪಿದರೆ ಅಸ್ಥಿಗಳು ನುಗ್ಗುನುಱು[ಪಾಠಾಂ. ರಿ]ಯಾಗಬೇಕು (ಮಹಾದೇ .ಬ. ೧೪೭-೩೩೬); ಹಲಾಯುಧ ಮನ್ಮಥಾದಿಗಳು ಬಗ್ಗಿ ಕವಿವ ಕಠೋರದೈತ್ಯರ ನುಗ್ಗುನುಱು ಮಾಡಿದರು (ಕುಮಾ್ಯಅ. ೨-೨೪); ಕಗ್ಗಲ್ಲ ಮೊರಡಿಯನಾ ಕೊಂಬಿನಿಂ ನುಗ್ಗುನುಱುಮಾಡುತಿರದೆಯ್ದಿತಾ ಭದ್ರಹಸ್ತಿ (ನೇಮಿಸಂ. ೯-೮).
[ನುರ್ಗು$_3$ (<ನುಙುಗು$_2$) + ನುಱು$_2$]
**ನುರ್ಗುನೂಂಕು** (ನಾ). ನುಚ್ಚುನೂರು; ನಾಶ : ಮಾರ್ಗಣೆಗಳಂ ಕಡಿದುಂ ಕಟ್ಟಳವಿಯ ಹರಿಬಂ ನುರ್ಗುನೂಂಕಪ್ಪಿನೆಗಂ ತನಗಂ ತೇರ್ಗಂ ಕಾಪಿಟ್ಟು (ರಾಮಾಶ್ವ. ೧೧೨-೪). [ನುರ್ಗು$_1$ + ನೂಂಕು$_2$]
△ **ನುರ್ಗೆ** 'ನುಗ್ಗೆ' ನೋ.
**ನುರ್ಗೊತ್ತು,** ನುಗ್ಗೊತ್ತು (ಕ್ರಿ). ೧. ಬಲವಾಗಿ ಅದುಮು; ನುಗ್ಗಾಗುವಂತೆ ಹಿಸುಕು, — ಒತ್ತು : ಕುರುರಾಜಾನುಜರಂ ಪ್ರಭಂಜನಸುತಂ ಕೊಂದಿಕ್ಕುಗುಂ ಕೌರವೇಶ್ವರನೂರುದ್ವಯಮಂ ಗದಾಪರಿಘದಿಂ ನುರ್ಗೊತ್ತುಗುಂ (ಗದಾಯು. ೫-೫೪); ನರನಂ ಗೆಲುವಂದು ವನೇಚರನಾದಂ ರಜತಗಿರಿಯನೆತ್ತಿದ ಲಂಕೇಶ್ವರನಂ ನುರ್ಗೊತ್ತಿದನೆಂದು ರಾಗದಿಂ ಪೊಗಟಲಾಗದಾಪ್ಪನನಱಿವರ್ (ಸಮಪ. ೮-೫೧); ಸಿಡಿಲಂ ನುರ್ಗೊತ್ತುವಂ ಭೈರವನ ಮಸಕಮಂ ಬಗ್ಗಿಪಂ . . . ವೀರ ಸಾಮಂತ ಸಿಂದನ್ (ಎಕ. XIV, ನಾಗಮಂ. ೧೪೦-೩೪; ಸು. 1224); ಕಡಲೊಳ್ ನೇಸಱುನಟ್ಟಲುಂ ಪೊಡವಿಯಂ ನುರ್ಗೊತ್ತಲುಂ ಕೊಂಕಿ ಘೀಟುಡಿ ತಟ್ಟುಂ ದೆಸೆಯಾನೆಯಂ ಮುಱಿಯಲುಂ . . . ಬಗೆದನಾಗಳ್ ದಪ್ಪದಿಂ ದಪ್ಪಗಂ (ಕಬ್ಬಿಗಕಾ. ೧೫೨); ಘನಮಹತ್ವವೆನಿಪ್ಪ ಗದೆಯಿಂದ ನತ ಪರವಾದಿಗಳೆನಿಪ ಗರ್ಜನೆಯ ಮೃಗಸಂದೋಹಮಂ ಬೆಂಬತ್ತಿ ನುರ್ಗೊತ್ತಿ (ಬಸವು. ೩೪-೩೫). ೨. ನಿಗ್ರಹಿಸು; ದಮನ ಮಾಡು: ದುರ್ವ್ಯಸನವಮಂ ನುರ್ಗೊತ್ತಿ ರಾಗಾದಿಯಂ ಸದೆದು . . . ಚಿತ್ತವಮಂ ಸಾರ್ಚುಗುಮಲ್ತೆ ನಿನ್ನ ವಚನಂ ಪ್ರತ್ಯಕ್ಷಭಾಳೇಕ್ಷಣಾ (ವೃಷವಿ. ೨೭-೧೬).
**ನುಗ್ಗೊತ್ತು :** ೧. ತುರಗವನು ಸಿಂಧವನು ಮಾರ್ಗಣವೆರಡಱಿಲಿ ನುಗ್ಗೊತ್ತೆ ರಥದಿಂ ಧರಣಿಗಿಳಿದನು ಕರ್ಣ (ಕುಮಾ್ಯದ್ರೋ. ೧೩-೩೬); ಗಾಢಭುಜದಲಿ ತಳಹತಿಯಲಂಘ್ರಿಯಲಿ ನುಗ್ಗೊತ್ತಿದನು ನಂದನವ (ತೊರರಾ. ೫-೪-೩); ಹತ್ತಸರವ ಹಱುದಳು ನೂಪುರವ ನುಗ್ಗೊತ್ತಿದಳಡಿದೊಡವುಗಳ ಅತ್ತಿತ್ತ ಕೆದಱಿದಳು (ಕುಣಾಸಾಂ. ೩೩-೮೫). ೩. ಬಲವಾದ ಒತ್ತಡಕ್ಕೆ ಒಳಗಾಗು : ಬತ್ತಿದುದು ಸಾಗರವ್ರಾತ ಮಹಿಪನ ಕೊರಲ್ ಕುತ್ತಿದುದು ಕೂರ್ಮ ಖರ್ಪರವಿರದೆ ಬೇಗ ನುಗ್ಗೊತ್ತಿದುದು(ಚಿಬವು.೨೩-೩೦).[ನುರ್ಗು$_3$(<ನುಙುಗು$_2$)+ಒತ್ತು$_1$]
△ **ನುರ್ಚು** 'ನುಚ್ಚು' ನೋ.
**ನುರ್ಚುನುರಿ** 'ನುಚ್ಚುನುಱು' ನೋ.
**ನುರ್ಚುನುಱು** 'ನುಚ್ಚುನುಱು' ನೋ.
**ನುರ್ಚುನೂಱು** 'ನುಚ್ಚುನೂಱು' ನೋ.
**ನುಲಿ**$_1$ (ಕ್ರಿ). ೧. (ಹುರಿ, ಹಗ್ಗ ಮೊದಲಾದುವುಗಳನ್ನು) ಹೊಸೆ : ಆತ ಹಗ್ಗ ನುಲಿಯುತ್ತಾ ಇದ್ದ (ರೂಢಿ). ೨. ತಿರಿಚು; ನುಲಿಚು; ತಿರುಗಿಸು : ಅರಸಂ ಕಂಡು ಕಡುಮುಳಿಪದಱ ಗೋಂಕೆಯಂ ನುಲಿದು ಕೊಂದನಾ [ಪಾಠಾಂ. ಗೋಣಂ ಮುಱಿದೊಡಾ] ಗಿಳಿಯುಂ ಸತ್ತಾ ಪೊಟಿಲ ಬಹಿರುದ್ಯಾನವನದೊಳ್ ವ್ಯಂತರದೇವನಾಗಿ ಪುಟ್ಟಿತು (ವಡ್ಡಾರಾ. ೧೯೯-೧); ಕುಲಜಂ ಪಶುವಿನ ಗೋಣಂ ನುಲಿದುಂ ತಿಂದಮರಪಥಕೆ ತಾಂ ಗಡ ಸಲ್ವಂ (ಸಮಪ. ೧೧-೧೦೩); ಬೆನ್ನನೊಯ್ಯನೆ ನುಲಿದುಕೊಳುತಾತಂ ನಿಗುರೆ ಕೈವೆರಳುಗಳು ತಲೆಯಂ ನಿಲಿಸಿಯಳ್ಳೆಗಳದಿರೆ (ಬಸವು. ೪೭-೫೪); ನಾಚಿಕೆಗೂಡಿ ಮೆಯ್ಯುರಿವುದಱಿಂದ ಮನ್ಮಥನು ಶರೀರವನು ನುಲಿದು ಹಿಂಡುವಂತೆ . . . ಚಂದ್ರಾಪೀಡನಿಗಭಿಮುಖವಾಗಿ ದೃಷ್ಟಿಗಳಿಂದೆಳೆಯಿಸಿಕೊಂಡಂತೆ ಎದ್ದು ನಿಂತಳು (ವಚಕಾ. ೮೫). ೩. ತಿರಿಚಿಕೊಳ್ಳು : ಮಲಹರನ . . . ಹೊಳೆವ ಮೋಱುಯು ಬೆಱತು ಕೊರಳುಂ ನುಲಿದು ಬಿಗಿಯಿತ್ತು.(ಬಸವು.೧೭-೨); ಬಲದ ಪದಘಟ್ಟಣೆಗೆ ಹೆಮ್ಮರ ನುಲಿದು ಬಿದ್ದುವು ಸಾಲ ಪೂಗಾವಳಿ ಕಪಿತ್ಥ . . . ಜಂಬೀರಾದಿಗಳು ನುಗ್ಗಾಯ್ತು ನಿಮಿಷದಲಿ (ಕುಮಾ್ಯಅ. ೧೪-೩೬); ಸದಾ ಮಂಜಿನ ಹೊರೆಯನ್ನು ಹೊತ್ತು ಕಷ್ಟದಿಂದ ನುಲಿದುಕೊಳ್ಳುತ್ತಿದ್ದ ನೀಲಿಯ ಹೂವುಗಳು ಹತ್ತುಹತ್ತಾಗಿ ಕಾಣಿಸಿಕೊಂಡವು (ಯೋಧಪು. ೪೮). ೪. (ಸುಲಭಪ್ರಸವಕ್ಕಾಗಿ ಹೆರಿಗೆಯ ಸಮಯದಲ್ಲಿ ಮಗುವನ್ನು) ತಿರುಗಿಸು : ಸೂಲಿಸುವ ಬಗ್ಗಿಸುವ ನೋಯಿಸುವ ನುಲಿವ . . . ಬಾಲೆಯರ ಹಂಗಿಲ್ಲ (ಸಿದ್ಧರಾ. ೧-೫೫). ೫. (ಕರುಳು) ಹಿಂಡಿದಂತಾಗು; ಬಹುವಾಗಿ ನೋಯು : ಕರುಳು ನುಲಿದರೆ ದುಃಖ ಆಗುತ್ತದೆಯಪ್ಪ ! (ಮಹಾಗ.೩೨). 'ಹೊಟ್ಟೆ ನುಲಿ$_1$' ಪರಾ. ೬. (ದೇಹವನ್ನು) ಕೊಂಕಿಸು; ಒಯ್ಯಾರ ತೋರು : ಈಗ ನೋಡಳು, ನಾಚಿ ನುಲಿವಳು, ನಾನು ನೋಡಲು ಮುನಿವಳು (ಇಂಗೀತ. ೪೩-೭). 'ನೂಲ್$_1$' ಪರಾ.
**ನುಲಿನುಲಿ** (ದ್ವಿರುಕ್ತಿ) : ಬಾಲವಂ ನುಲಿನುಲಿದುಕೊಳುತಾಭೀಳಭೂತ್ಯತಿ ಪೊಣ್ಮೆ ಮೋಱಿವುತ್ತೇಳುತ ವಿಜೃಂಭಿಸುವ ತತ್ ಘಟಸರ್ಪನಂ ನೋಡಿ (ಬಸವು. ೫೧-೫೯).
[ದೇ.॥ ತುಳು. ನುಪ್ಪು; ತೆಲು. ನುಲಿಂಚು, ನುಲಿಯು, ನುಲುಚು, ನುಲುಪು, ನುಲಮು, ನುಲ್ಚು, ನುಲ್ಪು]
**ನುಲಿ**$_2$ (ನಾ). ೧. (ಹೊಸೆದು ಮಾಡಿದ) ಹುರಿ; ಹುರಿ ಹಾಕಿದ ನೂಲು; ದಾರ : ಆ ಗಿರೀಂದ್ರಕಂದರದೊಳ್ ತಪಂಗೆಯ್ಯು

ತಪೋಧನರ ತಪಂಗಳೆಲ್ಲವಾತನ ತಪೋಮಯಶಿಖಿಗಳಿಂ ಬೆಂದು ಬೆಂದ ನುಲಿಯಂತೆತರ್ಕಂ ಮುಟ್ಟಲ್ಲದೆ ಮುಟ್ಟುಗಿಡೆ (ಪಂಪಭಾ. ೭-೮೦ ವ) ; ಬಜುಗೊಡನೆಣ್ಣೆ ಪಟ್ಟು ನುಲಿ ನೇಣ್ ಬಡಿಕೋಲ್ . . . ವಿಮುಕ್ತಕೇಶಿಯಿಂದಿರೊಳ್ ಬರೆ ಕಾಣಲುಮಾಗದು . . . ಆಗದು ಪೋಗಲೆತ್ತಲುಂ (ಲೋಕೋಪ. ೧೨-೧೦) ; ಕೆಂಡದ ಶವದಂತೆ . . . ಬೆಂದ ನುಲಿಯಂತೆ ಮತ್ತೆ ಹಿಂದಣ ಹಂಗುಂಟೆ (ಮಹಾದೇ. ಬ. ೭೩-೧೪೨); ಬೇಗದಿಂದೆ ಉರಿದಾಕ್ಷಣದೊಳ್ ಬೆಂದ ನುಲಿಯಂತೆ ಮದನಂ ನಿಂದಿರೆ ಕಂಡಭವನೆಯ್ದಿ ಮುಳಿದಂ ತುಳಿದಂ (೧೨ಕ. ೮-೫೨) ; ಹಲವೆಲುವಿನೆಕ್ಕೆಗಳ ಬಿಗಿದು ಬೀವಂ ನೆಯ್ದು ನುಲಿಯ ಹಂದೊಗಲ ಹಾಸಿನೊಳು ಮಂಚಂ ಜಡಿಯೆ (ಹಚಕಾ. ೧೧-೩೧) ; ಎಟ್ಟು = ಗೂಟಿ . . . ಊಕೆಯ ನುಲಿ (ಶಮದ. ಪರಿ. ೧) ; ಬಿಂದುವನು ಬಲಿದಾತ ವಂದ್ಯನಹ ಜಗಕೆಲ್ಲ ಬೆಂದ ನುಲಿಯಂತೆ ಆದಾತ ಜಗದೊಳಗೆ ಇಂದುಧರನಕ್ಕು (ಸರ್ವಜ್ಞ. ೪೧೨). **೨.** (ಕರುಳಿನಲ್ಲಿ) ಉಂಟಾಗುವ ಹಿಂಡುವಂತಹ ನೋವು,—ಯಾತನೆ: 'ಹೊಟ್ಟೆನುಲಿ$_2$' ಪರಾ. **೩.** ಒಂದೊಂದು ಹಿಡಿಗೆ ಸರಿಯಾಗುವಂತೆ ಕಂತೆಯಾಗಿ ಮಾಡಿದ ಬತ್ತದ ಪೈರು ; "ನಾಟೆ ಹಾಕಿದ ಬತ್ತದ ಪೈರಿನ ಮೊರಡು" (ಹುಲಿಹಾ. ಕೋಶ) : ಪೂವಯ್ಯ ನುಲಿಗಳನ್ನು ಕೊಯ್ಯಲೆಂದು ಬಲಗೈಯಲ್ಲಿದ್ದ ಕುಡುಗೋಲನ್ನು ಚಾಚಿದ (ಹುಲಿಹಾ. ೧೮೮). [<ನುಲಿ$_1$./ **ತೆಲು.** ನುಲಿ]

**ನುಲಿಕೆ** (ನಾ). **೧.** = ನುಲಿ$_2$ ೧ : "ನುಲಿಕೆ = ಹುರಿ" (ಚತುನಿ. ೬. I, ೬೬); ಇಷ್ಟು ಸಂಭ್ರಮಗಳ ನಿಟ್ಟಿಸಿ ನಾಗಯ್ಯ ಕಟ್ಟಗೆಯೆನಲಿಹ ತೆಜದಿ ಸುಟ್ಟ ನುಲಿಕೆಯಂತೆ ಬಿಟ್ಟ ಮರೀಚಿಯ ಕಟ್ಟದ ತೆರೆಯಂದದಲಿ (ಕರಚಾ. ೩-೨೫) ; ಗಾಳಿಪಟ ಏರಿದಾಗ . . . ಬಳಿಯಲ್ಲಿಯೇ ನೋಡುತ್ತ ಕುಳಿತ ತಂದೆ ಈ ರಂಜಕದೃಶ್ಯ ನೋಡಲಾಗದೆ, ತನ್ನ ವಯಸ್ಸಿನ ಗಾಂಭೀರ್ಯ ಬದಿಗಿರಿಸಿ ಕಣಕ್ಕಿಳಿದು ಪಟ ಏರಿಸುವ ನುಲಿಕೆ ಬಿಡುವ. ಅದು ಗಗನಕ್ಕೇರಿದಾಗ ಮಗರಾಜನ ಕೈಯಲ್ಲಿ ಕೊಡುವ (ಸುತ್ತಮು. ೬೮). **೨.** ತಿರುಚಿಕೊಂಡಿರುವಿಕೆ : ಎರಳೆಯ ಕೊಂಬಿನ ನುಲಿಕೆಯ ಬಳಸಿನಲ್ಲಿ ಅಜುಹಿರಿಯರೆಲ್ಲರು ಬಳಸಿ ಆಡುತ್ತೈ ಥಾರೆ (ಅಜಿಮಾ. ಕ. ೧೪೦-೧೩೩) ; ಕೆಲವು ಎಳೆಗಳಿಗೆ ಎಡಭಾಗದ ನುಲಿಕೆಗಳು, ಇನ್ನು ಕೆಲವು ಎಳೆಗಳಿಗೆ ಬಲಭಾಗದ ನುಲಿಕೆಗಳು ಇರುತ್ತವೆ (ಗೃಹವಿ. ೭೨). [ನುಲಿ$_2$ + –ಕೆ./ **ತೆಲು.** ನುಲಕ, ನುಲ್ಕ]

**ನುಲಿಗ** (ನಾ). ಒಂದು ಬಗೆಯ ಔಷಧಿಸಸ್ಯ : "ರಜತವಲ್ಲೀ–ನುಲಿಗನ ಕಾಯಿ" (ಒಷಧಿ. ೧೩೬) ; ಎಳೆಯ ಮಕ್ಕಳ ಒಗೆದ ಬಟ್ಟೆಗಳನ್ನು ಹಿಂಡಿದರೆ ಅವುಗಳು ಮೈಕೈ ನುಲಿಯುವುದರಿಂದ, ಹಾಗೆ ನುಲಿಯದೆ ಇರಲಿ ಎಂದು ನುಲಿಗನ ಕಾಯನ್ನು ತೊಟ್ಟಲಿಗೆ ಕಟ್ಟುತ್ತಾರೆ (ರೂಢಿ). [ ? ]

**ನುಲಿಗಡಗ** (ನಾ). (ಹುರಿ ಹಾಕಿದ) ನುಲಿಯಂತೆ ಆಕಾರವುಳ್ಳ ಒಂದು ಬಗೆಯ ಕಡಗ : ಥಳಥಳಿಸುವ ರತ್ನದೈರಗಡಗ ದಿವ್ಯ ನುಲಿಗಡಗ ಗಳಾಮಲಕದ ತೊಳಪ ಕಡಗ ಹಲಸಿನಕಾಯಿಗಡಗಗಳೆಳೆವೆಣ್ಗಳೆಸೆದರರ್ತಿಯಲಿ (ಕಂನವಿ. ೨೪-೩೮). [ನುಲಿ$_2$ + ಕಡಗ$_1$]

**ನುಲಿಗಪ್ಪ** (ನಾ). = ನುಲಿಗೆಕಪ್ಪ : ನುಲಿಗಪ್ಪಗಳ ಅನುಕರಣೆ ಇಂದಿನ ನವೀನವಾದರಿಯ ಆಭರಣಗಳಲ್ಲೂ ಕಂಡುಬರುತ್ತದೆ (ರೂಢಿ). [ನುಲಿ$_1$ + ಕಪ್ಪ$_2$]

**ನುಲಿಗೆ** (ನಾ). = ನುಲಿಕೆ ೨ : 'ನುಲಿಗೆಕಪ್ಪ' ಪರಾ.

**ನುಲಿಗೆ ಮಾಡು** = ತಿರುಚು ; ನುಲಿ: ರೈತರು ಸಂಜೆ ಬಿಡುವಾದಾಗ ಹುರಿ ನುಲಿಗೆ ಮಾಡಿ ಹಗ್ಗ ತಯಾರಿಸುತ್ತಾರೆ (ರೂಢಿ). [ನುಲಿ$_2$ + –ಗೆ]

**ನುಲಿಗೆಕಪ್ಪ** (ನಾ). ಅಲಂಕಾರಕ್ಕಾಗಿ ಕೈಯಲ್ಲಿ ಧರಿಸುವ ಚಿನ್ನದ ಅಥವಾ ಬೆಳ್ಳಿಯ ಎಳೆಗಳನ್ನು ನುಲಿದು ಮಾಡಿದ ಕಪ್ಪ,—ಹಸ್ತಕಡಗ : ಆ ಊರ ಪಟೇಲ ನುಲಿಗೆಕಪ್ಪ ಹಾಕಿದ್ದಾನೆ (ರೂಢಿ). [ನುಲಿಗೆ + ಕಪ್ಪ$_2$]

**ನುಲಿಗೊಳ್ಳು** (ಕ್ರಿ). ತಿರುಚಿಕೊಳ್ಳು ; ಸುತ್ತಿಕೊಳ್ಳು : ಮಲ್ಲಿಗೆಯ ಜಡೆಕುಚ್ಚುಗಳು ಅಲ್ಲಾಡುವಂತೆ ಹಾರಂಗಳು ನುಲಿಗೊಳ್ಳುವಂತೆ (ಸೌಗಂಧಿ. ೨೨೪-೪). [ನುಲಿ$_1$ + ಕೊಳ್ಳು$_1$(<ಕೊಳ್$_1$)]

**ನುಲಿಚು** (ಕ್ರಿ). **೧.** ತಿರುಚು ; ಹಿಂಡು : ವಾತ್ಸಲ್ಯದ ವಾರಿಧಾರೆಯ ಕೊರತೆಯಲ್ಲಿ ತನ್ನ ಕಂದಮ್ಮ ನೀರಿಲ್ಲದ ಬಳ್ಳಿಯಂತೆ ಬಾಡಬಹುದು . . . ಕರುಳನ್ನು ನುಲಿಚಿದಷ್ಟು ಸಂಕಟವಾಗುತ್ತಿದೆ (ನಡೆದಾ. II, ೯೩೧). **೨.** (ಆಲಂ) ಹಿಂಸೆಗೊಳಗು ಮಾಡು : ಅವರು ನಮ್ಮನ್ನು ಸಿಕ್ಕಾಬಟ್ಟೆ ನುಲಿಚಿಬಿಡುತ್ತಾರೆ (ಪುನರು. ೩೦೨). [ನುಲಿ$_1$ + –ಚು$_1$]

**ನುಲಿತ** (ನಾ). **೧.** ಹಿಂಡುವಿಕೆ ; ತಿರುಚುವಿಕೆ : ಹೊಟ್ಟೆಯ ನುಲಿತ ಸ್ವಲ್ಪ ಸ್ವಲ್ಪ ಕಾಣಿಸ್ತಾ ಇದೆ (ರೂಢಿ). **೨.** ಜೋಡಿಸುವಿಕೆ ; ಹೆಣೆದುಕೊಳ್ಳುವಿಕೆ (?) : ಎದೆಯ ಏರಿಳಿತಕೆ ಕೈಬಳೆಗಳುಲಿತಕೆ ಬೆರಳುಗಳ ನುಲಿತಕೆ ನಗು ನನ್ನ ನಲ್ಲೆ (ನಡೆಬಂ. ೨೯-೨೦). [ನುಲಿ$_1$ + –ತ$_2$]

**ನುಲಿಪಯ್ಯ** (ನಾ). ಒಬ್ಬಾತನ ಹೆಸರು: ಶ್ರೀಮದಿಜುವ ನೊಬವ್ಯಾಧಿರಾಜನ್ ನುಲಿಪಯ್ಯನ ಬೆಸದೊಳ್ (ಎಕ. X, ಬೌರಿಂಗ್. ೪-೧ ; ಸು. 950). [ ? + ಅಯ್ಯ$_1$]

**ನುಲಿಮಂಚ** (ನಾ). ಹುರಿಗಳಿಂದ ಹೆಣೆದ ಮಂಚ ; ಹೊರಸು: (೬). [ನುಲಿ$_2$ + ಮಂಚ]

**ನುಲಿವು** (ನಾ). **೧.** (ನಾಟ್ಯದಲ್ಲಿ ಮೈಯನ್ನು) ಬಳುಕಿಸುವಿಕೆ : ಆ ಹೆಣ್ಣಿನ ಕುಣಿತ ಅಮೋಘವಾದದ್ದು. ಮೈಯ ನುಲಿವು . . . ಮುಖದ ಮಾಟ–ಎಲ್ಲವೂ ಒಂದೊಂದು ಕವನದಂತೆ ಸ್ಫುಟವಾಗಿ ಅರ್ಥವಾಗಿ ಜನ ಕುಣಿತದ ಸಾರ್ಥಕ್ಯವನ್ನು ಕಂಡರು (ಸಪತಿ. ೫). **೨.** (ಆಲಂ) ಸಂಕಟ ; ಯಾತನೆ : ಎದೆಗೆ ಕಬ್ಬಿಣದ ಕೀಲು ಜಡಿಯುವಾಗ ಅವನ ಮೊಗದಲ್ಲಿ ನೋವಿನ ನುಲಿವು ಮೂಡಿಯೇ ಇರಬೇಕು ಎನಿಸುತ್ತದೆ (ಬದ್ಧಪ್ರ. XXXIX, ನಾಟಕದ ಸಮಸ್ಯೆ). [ನುಲಿ$_1$ + –ವು]

**ನುಲಿಸು** (ಕ್ರಿ). ತಿರುಚಿಕೊಳ್ಳುವಂತೆ ಮಾಡು ; ಸುತ್ತಿಕೊಳ್ಳುವಂತೆ ಮಾಡು : (೬). [ನುಲಿ$_1$ + –ಇಸು$_3$]

**ನುಲುವಾಲೆ** 'ನೂಲುವಾಲೆ' ನೋ.

**ನುಲುಹು** (ನಾ). ತಿರುಚಿಕೊಂಡಿರುವಿಕೆ : ಎರಳೆ ಸತ್ತು ಕೋಡಳಿದು ಕೊಂಬಿನ ನುಲುಹು ನೇರಿತವಾಗಿ (ಅಜಿಮಾ. ೧೪೦-೧೩೩). [<ನುಲಿ$_1$ + –ಹು$_2$(< –ವು$_2$)]

**ನುಶಿ** 'ನುಸಿ$_2$' ನೋ.

**ನುಸಿ$_1$** (ಕ್ರಿ). **೧.** ನುಣುಚು ; ನುಸುಳು ; ತೂರು : ಮಿಸುಕಿದೊಡಣು ಪರಮಾಣು ಮಾತ್ರವ ತುಂಡಿಸುತಿದೆ ದೃಷ್ಟಿಗಭೇದ್ಯ ನುಸಿದು ಪೋಪೊಡೆ ಶಕ್ಯವಲ್ಲೆಂದು ತನ್ನೊಳು ಬಿಸುಸುಯ್ದಳಾ ಚಿತ್ರಲೇಖೆ (ಮೋಹತ. ೨೯-೨೯) ; ಕಾಡಿನಲಿ ನುಸಿಯುತ್ತ, ಕಲ್ಲಿನಲಿ ಮೊರೆಯುತ್ತ, ಮರಳಿನಲಿ ಸುಳಿಸುಳಿದು ಸರಿಯ ದುಮುಕಿ . . . ಕಣ್ಣುಗಳ ಬೆರಗಾಗಿ ಹರಿವ ಹೊನಲು (ಹೊಂಗಳು. ೫-೧೧) ; ಅವರು ಒಳಕ್ಕೆ ಬಂದರೆ ನೀನು ನುಸಿದುಕೊಂಡು ಹೊರಕ್ಕೆ ಓಡಿ ಗ್ರಾಮಸ್ಥರನ್ನು ಎಬ್ಬಿಸು (ನಡೆದಾ. II, ೮೬೦) ; ಇರುವೆ ನುಸಿಯಲು ಸಹಾ ಸ್ಥಳವಿಲ್ಲ (ನಾಡಿಗೇ. ೨೧೦) ; ಒಬ್ಬ ಚಾಪೆ ಕೆಳಗೆ ನುಸಿದರೆ ಇನ್ನೊಬ್ಬ ರಂಗೋಲೆ ಕೆಳಗೆ ನುಸಿದ (ಗಾದೆ). **೨.** ತಿರುಚು ; ಹಿಂಸಿಸು ; ಹಿಸುಕು : ಜೀವದ ಹಸುವ ಹದಿನೆಂಟು ಜಾತಿಯ ಮಂಚದಡಿಯಲ್ಲಿ ನುಸಿದು ಗೋದಾನ ಮುಖದಲ್ಲಿ ಕೊಂಡು

ಹೋಹರನೇ ಬ್ರಾಹ್ಮಣರ ಮಾಡಿದರು (ಉರಿಹ. ೧೭೭–೨೪೦). 'ನುಸುಳ್$_1$' ಪರಾ.

**ನುಸಿ$_2$,** ನುಶಿ (ನಾ). **೧.** ಅಜಿಗಿಜಿಯಾಗಿರುವಿಕೆ ; ನುಗ್ಗಾಗಿರುವಿಕೆ ; ಜಜ್ಜಿ ಹೋಗಿರುವಿಕೆ : (ಕ). **೨.** ಹುಡಿ ; ಪುಡಿ : ಶಿವಭಕ್ತನಾಗಿ ತನ್ನ ಹಿಡಿದಹೆನೆಂದು ಹೋದಡೆ ನುಗ್ಗು ಮಾಡುವ ನುಸಿಯ ಮಾಡುವ (ಬಸವ. ೬೮೫). **೩.** ಬಟ್ಟೆ, ಕಾಗದ ಮುಂತಾದುವುಗಳನ್ನು ಹಾಳುಮಾಡುವ ಒಂದು ಬಗೆಯ ಸಣ್ಣ ಹುಳು : ಉಲ್ಲನ್ ಬಟ್ಟೆಗಳು ಬೇಗ ಮುದುರುವುದಿಲ್ಲ. ಇವಕ್ಕೆ ನುಸಿಯೂ ಬೇಗ ಹಿಡಿಯುವುದಿಲ್ಲ (ಗೃಹವಿ. ೬೯). **೪.** ಕಾಳು–ಕಡಿಗಳನ್ನು ನಾಶಮಾಡುವ ಒಂದು ಬಗೆಯ ಹುಳು ; ಓಟೆ ಹುಳು : ಮೂಲೆಕಸದಲ್ಲೆ ಹೊರಳಲಹುದು ಹುಳು–ಸೊಳ್ಳೆ–ನೊರಜು–ನುಸಿಯು (ಅರಳು. ೩೪೩–೬). **೫.** ದೀಪದ ಹುಳು ; ಪತಂಗ : ನುಸಿಗಳುರಿಜಾಳಿಗೆಯೊಡನೆ ರೆಘೂಂಪಿಸುವುದುಚಿತವೆ ಕರ್ಣ ಪಾರ್ಥನ ಘಸಣಿಯೇಕೈ ನಿನಗೆ (ಕುಪ್ಯಾಕ. ೯–೬). **೬.** ಸೊಳ್ಳೆ : ಬ್ಯಾಗ ಬ್ಯಾಗ ಸಡೀರಿ. ಈ ನುಸಿ ಕಾಟ ಬ್ಯಾರೆ (ಮಲಿಮ. ೭೩) ; ಅಲ್ಲಿ ತಗಣೆಗಳೂ ನುಸಿಗಳೂ ತುಂಬಿಕೊಂಡಿರುತ್ತಿದ್ದವು (ಮಹಾತ್ಮಾ. ೩೪) ; ಹೊಲಕ್ಕೆ ಹೋದರೆ ಹುಲಿಯ ಕಾಟ, ಮನೆಗೆ ಬಂದರೆ ನುಸಿಯ ಕಾಟ (ಗಾದೆ). 'ನುಸಿಬಲೆ' ಪರಾ. **೭.** ಹಾರಾಡುತ್ತಾ ಕಣ್ಣು, ಕಿವಿ ಮುಂತಾದುವುಗಳನ್ನು ಮುತ್ತುವ ಸಾಸಿವೆ ಆಕಾರದ ಕೀಟ ; ಗುಂಗುರು : ನುಸಿಗ್ಯಾಕೆ ಕಸಕಸೆ ಪಾಯಸ? (ಗಾದೆ). **೮.** (ಆಲಂ) ಅಲ್ಪ ; ಕ್ಷುದ್ರ ; ಕ್ಷುಲ್ಲಕ : ನುಸಿಗಳೆನ್ನೆವು ನೀವು ಜಗಸಾಹಸಿಕರ್ಕೈ ಕಾಲಾಳು ಜೋಧ ಪ್ರಸರದೆಸುಗೆಗೆ ಹೆದಱುವೆವು (ಕುಪ್ಯಾಕ. ೧೯–೧೦) ; ಶಶಿವದನೆಗಭಿನಮಿಸಿ ದಿವಿಜಪ್ರಸರದಲಿ ಮರನೆಂಬರೆನ್ನನು ನುಸಿಗಳಿನ್ನಾರೆನ್ನ ಮರನೆಂಬವರು ಪಾಮರರು (ಅಂಬಿಕಾ. ೪೫–೨೫) ; ಬಸವಳಿದು ರಥದೊಳಗೆ ಕೆಡೆದನು ಬಿಸರುಹಾಕ್ಷನ ಕೂಡೆ ಕೊಂಬುದೆ ನುಸಿಗಳಿಗೆ ರಣವೆಂದು ಗುಹಿಲಿಕ್ಕಿತು ಸುರಸ್ತೋಮ (ಕೋಗಯು. ೨೨–೫೬) ; ಎಲ್ಲ ಆಟ ಅವನದು ಹಸಿಯೆ ನುಸಿಯೆ ನನ್ನ ಬದುಕು ಶುದ್ಧ ಸ್ವಯಂಭವನದು (ಅರಳು. ೧೯೨–೬). **ನುಶಿ : ೭.** ಪ್ರತಿಕೀಟಕ್ಕೂ ಒಂದು ಜೊತೆ ಕುಡಿಮೀಶೆ, ತಲೆಯ ಎರಡನೆ ಭಾಗದ (Segment) ಅನುಬಂಧ. ಅದಿಲ್ಲದ ಜೇಡ, ನುಶಿ, ಉಣ್ಣೆ, ಚೇಳು ಮತ್ತು ಎರಡು ಜೊತೆ ಕುಡಿಮೀಶೆಗಳುಳ್ಳ ಶೀಗಡಿ, ಏಡಿಗಳಿಂದ ಬೇರ್ಪಡಿಸಬಹುದು (ಕೀಟಬಿ. ೧೪) ; ಈ ಒಂದೇ ಕಾಗದದಿಂದ ಶ್ಯಾಮರಾಯನನ್ನು ನುಶಿಯಂತೆ ಒರೆಸಿ ಒಗೆಯಬಲ್ಲೆನೆಂಬ ಹಮಹಮಿಕೆ ಬಂದಿತು (ದೀಪಹ. II, ೩೦೦).

**ನುಸಿ ಹಿಡಿ**=(ಬಟ್ಟೆಗೆ) ನುಸಿ ಹತ್ತು : ನೈಲಾನ್ ಬಟ್ಟೆಗಳು . . . ಜಿರಳೆ ಮತ್ತು ಹುಳುಗಳು ಇವನ್ನು ತಿನ್ನುವುದಿಲ್ಲ. ಇದಕ್ಕೆ ನುಸಿ ಹಿಡಿಯುವುದೂ ಇಲ್ಲ (ಗೃಹವಿ. ೭೨) ; ಜೀನಿ, ನಿನ್ನ ಬದುಕು ನುಸಿ ಹಿಡಿಯಿತು (ರೂಢಿ).

[<ನುಸಿ$_1$./ತೆಲು. ನುಸಿ, ನುಸುಮು]

**ನುಸಿಗುಳಿಗೆ** (ನಾ). ಬಟ್ಟೆಯು ಹಾಳಾಗದಂತೆ, ಜಿರಲೆ ಮೊದಲಾದುವುಗಳನ್ನು ನಿವಾರಿಸಲು ಉಪಯೋಗಿಸುವ ಒಂದು ಬಗೆಯ ಔಷಧದ ಗುಳಿಗೆ,—ಉಂಡೆ : ಬೀರುವಿನಲ್ಲಿ ನುಸಿಗುಳಿಗೆಗಳನ್ನು ಹಾಕದೆ ಇರುವುದರಿಂದ ಜಿರಲೆಗಳು ಹೆಚ್ಚಾಗಿವೆ (ರೂಢಿ).

[ನುಸಿ$_2$+ಗುಳಿಗೆ$_1$]

**ನುಸಿಗೆಲಸ** (ನಾ). ಸಣ್ಣಪುಟ್ಟ ಕೆಲಸ (?) : ಬಿಸಿಗೆಲಸದಲ್ಲಯ್ಯ ಕಕ್ಕಯ್ಯ ಬಂಕಯ್ಯ ನುಸಿಗೆಲಸದಮಲಯ್ಯ ಧಾರಯ್ಯ ಭೋಗಯ್ಯ (ಲಿಂಗಪು. ೨೪–೩೨). [ನುಸಿ$_2$ + ಕೆಲಸ]

**ನುಸಿಗೊಳ್** (ಕ್ರಿ). ಕೀಳೆಂದು ಭಾವಿಸು ; ತಿರಸ್ಕರಿಸು ; ಕಡೆಗಣಿಸು : ಎಸೆವ ಶಿವನಿಳಯಮಂ ಮಾಡುವಡೆ ನೆಲನ ಶೋಧಿಸಬೇಹುದೀಯೆಡೆಯನಗೆಯೆನಲು ಮನದೊಳಗೆ ನುಸಿಗೊಳುತುದಾಸೀನದಿಂ ಗುದ್ದಲಿಯನೆತ್ತಿ ಮಿಂಟುತೆ ಪೊಡೆಯೆ ಮುಂದೆ (ಸಿದ್ಧರಾ. ೩–೪೨).

**ನುಸಿನುಸಿಗೊಳ್, ನುಸುನುಸುಗೊಳ್** (ದ್ವಿರುಕ್ತಿ) : ಶಿವಂಗೆ ಜನನಿ ಜನಕರುಂಟಾದೊಡೆ ಪೇಳಿರೆಯೆಂದು ಕೇಳೆ ನುಡಿಯಲ್ ಗತಿಯಂ ಕಾಣದೆ ನುಸಿನುಸಿಗೊಂಬ ಸಮಯದೊಳ್ (ಹಮ್ಮಿರ. ೭–೨೬ ಪ) ; ಗೌರಿ ನುಸಿನುಸಿಗೊಳುತಯಿಂತಾ ಪೋರತನ ನಾನಱಿಯೆ ಬೇಕೆಂದಾರಪನಂ ತಡವಿ ಬೆನ್ನಿಗೆ ತರಿಸುವುದು ಗುಣವೆ (ದೇವಪು. ೮–೧೨೫) ; ಧನವಿಲ್ಲ ಶಿವಗೇಹವನು ಮಾಳ್ಪಡೆಂದು ತನ್ನನದೊಳು ನುಸುನು[ಪಾಠಾಂ. ನ]ಸುಗೊಂಡು ಜಿನುಗುವ ಬೊಮ್ಮಣ್ಣನನುವರಿದಿತ್ತನು ಕನಕರಾಶಿಯ ಸಿದ್ಧರಾಮಾ (ಭೈರವೇ. ೨–೧೯೩). [ನುಸಿ$_2$+ಕೊಳ್$_1$]

**ನುಸಿಬಲೆ** (ನಾ). ಸೊಳ್ಳೆ ಪರದೆ : ಎಡಭಾಗದಲ್ಲಿ ಬೆಳ್ಳಿಯ ಕಾಲುಗಳ ಅಂದವಾದ ಮಂಚ ನುಸಿಬಲೆಯೊಂದಿಗಿದೆ (ಪ್ರಕಾಶ. ೧೯).

[ನುಸಿ$_2$+ಬಲೆ$_2$]

**ನುಸಿಸು** (ಕ್ರಿ). ಹೊಗಿಸು ; ನುಸುಳಿಸು ; ಪ್ರವೇಶಿಸುವಂತೆ ಮಾಡು : ಅನೇಕಕ್ಷೋಣಿ ಹತಿಸಲವನಟ್ಟೆ ಮುಟ್ಟೆ ಯಸಕಮುಪಹರಿಸುವಂತೆಸೆದವನ ದೆಸೆಗೆಡಿಸಿ ನುಸಿಸಿದರ್ ನಿಜಬೀಡನಾ ರಾತ್ರಿ (ಜಿನಮು. ೩೪–೨೩). [ನುಸಿ$_1$ +–ಇಸು$_3$]

**ನುಸುಕು** 'ನುಸುಗು' ನೋ.

**ನುಸುಕುವ್ಯಾಪಾರ** (ನಾ). ಕಳ್ಳತನದಿಂದ ಸುಂಕ ಕೊಡದೆ ಸಾಮಾನುಗಳನ್ನು ಆಮದು, ರಫ್ತು ಮಾಡುವ ವ್ಯಾಪಾರ ; (ಸುಂಕದವರ) ಕಣ್ಣುತಪ್ಪಿಸಿ ಮಾಡುವ ವ್ಯಾಪಾರ ; ಕಳ್ಳಸಾಗಾಣಿಕೆ : "ನಿಷಿದ್ಧ ವ್ಯಾಪಾರ ; (ನಿಷಿದ್ಧ ಪದಾರ್ಥಗಳನ್ನು) ಕಳ್ಳತನದಿಂದ (ಸುಂಕ ಕೊಡದೆ) ನುಗ್ಗಿಸುವುದು ; ಕಳ್ಳತನದಿಂದ (ಸುಂಕ ಕೊಡದೆ) ಆಮದು ರಫ್ತುಮಾಡಿದ ಸಾಮಾನು : ನುಸುಕು ವ್ಯಾಪಾರ ; ಕಳ್ಳವ್ಯಾಪಾರ" (Contraband. ಇಂಕನಿ).

[ನುಸುಕು(<ನುಸುಗು) + ವ್ಯಾಪಾರ]

**ನುಸುಕುವ್ಯಾಪಾರಿ** (ನಾ). (ಸುಂಕದವರ ಕಣ್ಣು ತಪ್ಪಿಸಿ) ಕಳ್ಳ ವ್ಯಾಪಾರ ಮಾಡುವವನು ; ಸುಂಕಗಳ್ಳ ; ಕಳ್ಳಸಾಗಣೆದಾರ : "ಕಳ್ಳತನದಿಂದ (ಸುಂಕ ಕೊಡದೆ) ಸಾಮಾನು ನುಗ್ಗಿಸುವವನು: ನುಸುಕು ವ್ಯಾಪಾರಿ" (Contrabandist. ಇಂಕನಿ).

[ನುಸುಕು(<ನುಸುಗು) + ವ್ಯಾಪಾರಿ]

**ನುಸುಗು,** ನುಸುಕು (ಕ್ರಿ). = ನುಸಿ$_1$ **೧ :** ರತ್ನಪ್ರಾಯರಾದ ಸ್ತ್ರೀಯರ ಪರಿವಾರದಿ ಎಳಸಿ ಬರಲು ಆವಾರದಿ ಬಳಸಿ ನಿಲಲು ಬಳ್ಳಿವೆಳಗಿನಂತೆ ಕೋಟೆಯೊಳಗಿನಿಂದ ನುಸುಗುವೆ ಅವರ ಬಳ್ಳಿಯೊಳಗೆ ನಿಂತು ಮಿನುಗುನಗೆಯ ನೆಸಗುವೆ (ಪಯಣ. ೯–೧೩). 'ನುಸುಳ್$_1$' ಪರಾ. **ನುಸುಕು :** 'ನುಸುಕುವ್ಯಾಪಾರ' ಪರಾ. [**ದೇ.**‖ **ತೆಲು.** ನುಸುಗು]

**ನುಸುಲುಮಣ್ಣು** (ನಾ). (ನದಿಯ ಪ್ರವಾಹದಲ್ಲಿ) ಜಾರಿಕೊಂಡು ಬಂದ ನುಣುಪಾದ ಮಣ್ಣು : ಮೂಲಂಗಿ . . . ಚೆನ್ನಾಗಿ ಗೊಬ್ಬರ ಹಾಕಿದ ನುಸುಲುಮಣ್ಣು ಇದಕ್ಕೆ ಒಳ್ಳೆಯದು (ಅಡುಸಾ. ೧೨೭). [<ನುಸುಳ್$_1$ + ಮಣ್ಣು(<ಮಣ್)]

**ನುಸುಳ್$_1$,** ನುಸುಳು$_1$ (ಕ್ರಿ). ತೂರಿಬರು ; ಕಂಡಿ ಮೊದಲಾದುವುಗಳಲ್ಲಿ ಮೆತ್ತಗೆ ಒಳಸೇರು ; ನುಸಿ ; ನುಣುಚು : "ನುಸುಳ್–ದ್ವಾರಪ್ರವೇಶೇ"(ಶಮಧಾ); ಸಮುದ್ರದ ತಡಿಯೊಳುದಕಮಂತ್ರದ ಬಲದಿಂ ನುಸುಳ್ದೊಡೆ ಜಳನಿಧಿಯಂ ಕರುಣಿಸಿ ಕೊಟ್ಟರ್ ಧನಮನಂಜಿ ಕೊಟ್ಟರೆ

ದಿವಿಜರ್ (ಆದಿಪು. ೧೪-೬೮) ; ನಸುದೆಱೆಯುತ್ತಮಿರ್ದ ಪೊಸಮುತ್ತಿನ ಸಿಂಪಿನ ಸಂಪುಟಂಗಳಿಂ ನುಸುಳ್ದು ಸುಪಾಣಿಯಾಗಿ ಪೊಱಪೊಣ್ಮುವ ಮುತ್ತಿನ ಮಾಲೆಯಂದದಿಂ ಮಿಸುಗಿ ನಿರಂಜನಂಗಳೆನಿಪಕ್ಷಿಪುಟಾಂತರದಿಂದಂ (ಕಾದಂಪೂ. ೩೩೧) ; ಇನಶಶಿರಶ್ಮಿಯಂ ನುಸುಳಲೀಯದ ನಾಗಲತಾವಿತಾನ ನಂದನತಮಮಂ ಘನಾಗಮಮಿದೆಂದಿರುಳೆಂದು ಕನಲ್ವ ಹಂಸೆ ನರ್ತ್ತನ ಮನೊಡರ್ಚುತಿರ್ಪ್ಪ ನವಿಲ್ (ಸೌಇಇ. IX-i, ೨೬೭-೨೪ ; 1160) ; ಅಂತು ಗಾಳಿಗಂ ನುಸುಳಲ್ಬಾರದಂದದಿಂ ಸಂದಣಿಸಿ ಮುತ್ತಿ ಕೋಂಟೆಯಂ (ಪುಷ್ಪಪು. ೩-೧೨೭ ಪ) ; ಅಸಮಲೋಚನ ಈಗಳಾರೋಗಿಸಿದಡಲ್ಲದೆ ನಿಮ್ಮಡಿಗಳಂ ನುಸುಳಲೀಯೆನು (ಬಸಪು. ೨೪-೬೫). **ನುಸುಳು$_1$ :** ಸ್ಥೂಲಕ್ಕೆ ಸೂಕ್ಷ್ಮವಾಗಿ ಸೂಕ್ಷ್ಮಕ್ಕೆ ಸ್ಥೂಲವಾಗಿ ಆ ಕಲ್ಲಿಯ ದ್ವಾರದಲ್ಲಿ ಅಲ್ಲಿಯೇ ನುಸುಳುತ್ತ ಕಲ್ಲಿಗೆ ಹೊಱಗಾಗುತ್ತ . . . ಭಾವವಿರಹಿತನಾದೆಯಲ್ಲಾ (ಸರ್ವಸ. ೫೯-೩೧೨) ; ತಾಗಿದವು ನಾಲ್ಕಂಬು ದೇಹದ ಬೇಗಡೆಯಲೆಂಟೆಂಬು ನುಸುಳಿದವಾಗ ಹದಿನಾಱಂಬು ಹರಿದವು ಮತ್ತೆ ಬಳಿಸಲಿಸಿ (ಕುವ್ಯಾಕ. ೪-೧೫) ; ಎಸೆವಾಳು ಕುದುರೆ ಗಜಗಳ ಮೋಹರದಣ್ಣಿ ನುಸುಳಲಾಱದೆ ಪವಮಾನ ಹಸಗೆಟ್ಟು ಮಂದಗತಿಯನೈದಿದನು (ಕಂಸವಿ. ೧೭-೨೯) ; ಇತ್ತ ಇಲಿಯೂ ತನ್ನ ಹೋರಿನೊಳಗೆ ನುಸುಳಿತು (ಮುಂಬಯಿ. ೪-೮೭). 'ನುಗುಳ್' ಪರಾ.

[ದೇ.॥ ತೆಲು. ನುಸಲು, ನುಸುಲು; ಕುರುಖ್. ನುರ್ನಾ, ನುಲುಗ್ನಾ]

**ನುಸುಳ್$_2$,** ನುಸುಳು$_2$, ನೂಳ್$_2$, ನೂಳು (ನಾ). ೧. ಇಕ್ಕಟ್ಟಾದ ಸಂದಿನಲ್ಲಿ ತೂರುವಿಕೆ ; ಇರುಕುಸ್ಥಳದಲ್ಲಿ ಪ್ರವೇಶಿಸುವಿಕೆ ; ನುಣುಚಿಕೊಳ್ಳುವಿಕೆ : ಪುಷ್ಕರಣದೊಳ್ ಕೆಂದಳಂ ಕೆಂದಳಿರಂತೆ ತೊಳಗೆ ದೀರ್ಘಾಂಗುಳಿಯಿಂ ಪಿಡಿದು ಗರುಡನೊಪ್ಪಮಂ ಗಾಳಿಯ ನುಸುಳುಮಂ ಕೈಕೊಂಡು ಕೊಂಡಾಡಿ (ಅರ್ಥನೇ. ೫-೧೧೩ ಪ). ೨. ಕಪಟ; ವಂಚನೆ; ಸುಳ್ಳು ; ಪೋಸ; ಕೃತ್ರಿಮ: ಪುಸಿ ನುಸುಳ್ ಗನ್ನಗತಕಂ ಕಳವು ಕೊಲೆ ಕೇಡು ಕಿಸುರುಂ ಕೃತಘ್ನಭಾವಂ ನಿಂದೆ ಮಾಯೆ ದುರ್ವ್ಯಸನಂ . . . ಇವು ಪೆರ್ಚೆ (ಚೆಬಪು. ೩-೧೧) ; ಪುಸಿ ನುಸುಳೊಡ್ಡಣೆ . . . ಸಂದಣಿ ಪಳಿಜಗಳಂಗಳಿಕ್ಕೆ ನುಡಿ ಗಣಿಕೆಯರಾ (ವೃಷವಿ. ೨೮-೭೩). ೩. ತಪ್ಪಿಸಿಕೊಂಡು ಹೋಗುವುದು ; ಜಾರಿಕೊಂಡು ಹೋಗುವುದು : ನುಸುಳು ನೆಲೆ ಡಿಳ್ಳಾಯ್ತು ಪೈಸರ ಬೆಸುಗೆ ಬಿಗುಹುಳು ಕೊತ್ತುಕಲೆಗಳ ರಸದ ಪಸರವನಱಿಯಬಾರದು ವಿಗಡ ವಿಟರುಗಳ (ಕುವ್ಯಾಅ. ೧೫-೨೫). ೪. ಕತ್ತಿಕಾಳಗದ ಒಂದು ವರಸೆ: ಪಗೆ ಕೆಯ್ಪುಗೆ ಕೆಯ್ಯುಸುರಿ ನುಸುಳೆಂಬ ಕೇಣದ ಕುಸುರಿಯನಱಿದಿಱಿದು ಮೆಱೆದು ನೆಱೆದುಱಿದರೆಬರ್ (ಪಂಪಭಾ.೧೦-೮೧). ೫. [ಕಾವ್ಯವಿಾ] ಹೇಳಿಕೆಯಲ್ಲಿಯ ಏಳು ಪ್ರಭೇದಗಳಲ್ಲಿ ಒಂದು ; ಉದ್ದಿಷ್ಟವಾದ ಅರ್ಥವು ನೇರವಾಗಿ ಗೊತ್ತಾಗದಂತೆ ಅಡಗಿಸಿ ಹೇಳುವುದು : ಭಾವೆಯಂ ನುಸುಳುಮಪ್ಪಷ್ಟಾಕ್ಷರಮುಮಾವರ್ಣವ್ಯತ್ಯಯಮಂ ಬಿಂದುಚ್ಯುತಿಯಂ ಭಾವಿಸಿದೊರ್ನುಡಿಯಂ ವರ್ಣಚ್ಯುತಮಂ ಕೇವಳಮುವಱಿ ಭೇದಮಂ ಸುಸಮುಸ್ತಕಮಂ (ಕವಿರಾ. ೨-೧೪೨) ; ನುಸುಳೊರ್ನುಡಿ ಭಾಮೆ ಮುನಕ್ಕೆಸೆವಪ್ಪಷ್ಟಾರ್ಥಮುಂಬಿವು ನಾಮಾಂತರಿತಂ ಕುಸುರಿಯ ನುಡಿಯೆಂಬಿವು ಭಾವಿಸೆ ಪೇಳಿಕೆಗಳೊಳೆ ಪೇಟ್ಟ ಭೇದಮುವಕ್ಕುಂ (ಕಾವ್ಯಾವ. ೫೯೪). **ನುಸುಳು$_2$ :** ೨. "ನುಸುಳೆನಲು ಪುಸಿಯುಂ" (ಕಶರ. ೫೬) ; ಪಿಸುಣತನ ಪರನಿಂದೆ ಗರ್ವತೆ ನುಸುಳು ಹಿಂಸೆ ವಿಷಾದ ಮದ ಕರ್ಕಶವಚನಮಿವು ಮಗನೆ ದೋಷಾಕರಗಳವನಿಯಲಿ(ಜೀವಂಚ. ೫-೪೮). ೫. ತಿರಿವುದದೊಂದು ಚಕ್ರದೊಳೆ ನಿಂದು ದಿವಾಕರನೆ ಮುತ್ತಱಿದು ಕಳೆವೊಡಂತದನಾವೆಡೆಯಿಂದರಮೆಯಾಗಿ ನೆಲಸಿ ಕೆಲಕಾಲದಿಂ ಪೊರೆದಿರದಟಿಿದ ಬಟಿಕ ತಾ ನೆಲದೊಳ್ —. (ನುಸುಳು) (ಕವಿರಾ. ೨-೧೪೪). **ನೂಳ್$_2$ :** ೨. "ಕಟುಕಂ ತೊದಳ್ ನೂ[ಪಾಠಾಂ. ನುಸು]ಳೆಂದು ನೆಱೆ ಪುಸಿಯೆನಲ್ಕನೃತಮಕ್ಕು" (ಕಬ್ಬಿಕೈ. ೫೯) ; ನೆಱೆ ತನ್ನ ದೇಹವನಿಱಿದೊಡೋರ್ಮೆಯುಂ ಕೆಡದೆ ಮೆಱೆವ ಸೈರಣೆ ನೂಳದಿಲ್ಲದಿಹ ಮಾತು ಸಲೆ ಕಱೆ ಪೊರ್ದದಿರ್ಪ ಸತ್ಕೀರ್ತಿ ತಾನೆಡೆಗೊಂಡೊಡಾತನೇ ನಿತ್ಯಮುಕ್ತಂ (ಸಿದ್ಧೇಪು. ೨೨-೧೭೯). **ನೂಳು :** ೨. "ನೂಳು—ಸುಳ್ಳು" (ಜಾನಕೋ. ೧೨).

[<ನುಸುಳ್$_1$]

**ನುಸುಳಿಸು** (ಕ್ರಿ). ೧. ಸೇರಿಸು ; ನುಗ್ಗಿಸು ; ಜಾರಿಸು ; ಪ್ರವೇಶಿಸುವಂತೆ ಮಾಡು : ಸಂಭಾಷಣೆಯಲ್ಲಿ ರಾವಣ ವಿಷಯವನ್ನು ನುಸುಳಿಸಿ, ರಾವಣನು ಬ್ರಹ್ಮನ ಮರಿಮಗನೆಂದು ಕೇಳಿ ಬ್ರಹ್ಮಘಾತಮಾಡಿದ್ದಕ್ಕಾಗಿ ರಾಮನು ಮೂರ್ಛೆಹೊಂದಿದನೆಂದು ಬಣ್ಣಿಸಿದೆ (ತಪನಿ. ೧೮೫). ೨. ದಾಟು ; ಪಾರಾಗು ; ನುಣುಚು : ಮಾಯೆಯ ಬಲೆಯ ನುಸುಳಿಸಿದಲ್ಲದೆ ನಿಮ್ಮ ನೆಲೆಯ ಕಾಣಬಾರದು ಬಸವಪ್ರಿಯ ಕೂಡಲಚೆನ್ನಬಸವಣ್ಣಾ (ವಚಸಂ. ೫೭-೧೨).

[ನುಸುಳು$_1$ (<ನುಸುಳ್$_1$) + -ಇಸು$_3$]

**ನುಸುಳು$_1$** 'ನುಸುಳ್$_1$' ನೋ.

**ನುಸುಳು$_2$** 'ನುಸುಳ್$_2$' ನೋ.

**ನುಸುಳುಗಂಡಿ** 'ನುಸುಳ್ಗಂಡಿ' ನೋ.

**ನುಸುಳುದಲೆಗ** (ನಾ). ತಲೆಮರೆಸಿಕೊಂಡು ಹೋಗುವವನು ; ತಲೆತಪ್ಪಿಸಿ ಓಡುವವನು : ತೆಗಸಬೇಹುದು ತರಣಿಬಿಂಬವ ತಗುಳ್ವ ತಿಮಿರವ ನಿಮ್ಮ ಹರಿಗಿನ ನುಗುಳಗಂಡಿಯ ನುಸುಳುದಲೆಗನೆ ಮರಳಿ ನೀವೆಂದ (ಕುವ್ಯಾಕ. ೧೯-೧೭).

[ನುಸುಳು$_1$(<ನುಸುಳ್$_1$) + ತಲೆ$_1$ + -ಗ$_2$]

**ನುಸುಳ್ಗಂಡಿ,** ನುಸುಳುಗಂಡಿ (ನಾ). ತಪ್ಪಿಸಿಕೊಂಡು ಹೋಗುವ ದಾರಿ ; ಜಾರುಗಂಡಿ ; ಕಳ್ಳಗಂಡಿ : ರಕ್ಕಸರ ಭಯಕಂಜಿ ಬಾಲದಲಿಕ್ಕಿರಲು ಕೋಟೆಯನು ಮರುತಜ ದಿಕ್ಕನೊಡೆದುಚ್ಚಳಿಸಿ ಬೆಳೆದಿರೆ ವಜ್ರರೋಮಗಳು ಚಿಕ್ಕ ನುಸುಳ್ಗಂಡಿಯನು ಮಾಡಿಯೆ ರಕ್ಕಸರಿಗಸದಳದ ಕಾವಲನಿಕ್ಕಿ ವಾನರಭಟರ ಕಾಯ್ದಿರುತಿರ್ದ ಹನುಮಂತ (ಕಾತಿರಾ. ೩೯-೩೦). **ನುಸುಳುಗಂಡಿ :** ತಲ್ಲಣಿಸಿದರು ನಾಯಕರು ಮುಸುಡ ತಿರುಹುತ ಮಕುಟವರ್ಧನರುಸುರಲಮ್ಮದೆ ಸಿಕ್ಕಿ ಭೂಪನ ನುಸುಳುಗಂಡಿಯ ನೋಡುತಿರ್ದರು ಕೂಡೆ ತಮತಮಗೆ (ಕುವ್ಯಾದ್ರೋ. ೬-೪೭) ; ತಳಿಯ ಮಱೆಯೊಳಿರ್ದು ನುಸುಳುಗಂಡಿಯೊಳಾಗ ಮುಳಿದು ಕಗ್ಗೊಲೆಗೈದುವರ ತಲೆಯನರಿದು (ಕಂಸವಿ. ೧೮-೭೭) ; ಹೆಸರ ಬೆಸಗೊಂಡಂಜಿ ನಮ್ಮನು ಹುಸಿಗರನ ಮಾಡುವರೆ ಮಾತಿನ ನುಸುಳುಗಂಡಿಗೆ ನುಸುಳುವರೆ ನಾವರೆಯೆಂದವರು (ಕೊಲ್ಲಾಚ. ೧೫೦).

[ನುಸುಳು$_1$ (<ನುಸುಳ್$_1$ ) + ಕಂಡಿ$_1$]

**ನುಸುಳ್ಮಾವಣಿಗೆ** (ನಾ). (?) : ಎಸಳ್ + ವಳಿ, ಎಸಳ್ವಳಿ, ಎಸಳ್ವ್ವಳಿ. ಏವಂ ನುಸುಳ್ವಾಗಿಲ್, ನುಸುಳ್ವ್ವಾಗಿಲ್ . . . ನುಸುಳ್ಮಾವಣಿಗೆ (ಶಬ್ದಾನು. ೭೨ ಪ್ರಯೋ).

[ನುಸುಳ್$_1$ + ಮಾವಣಿಗೆ ?]

**ನುಸುಳ್ವಾಗಿಲ್** (ನಾ). ನುಸುಳಿ ಹೋಗಲು ಉಪಯೋಗಿಸುವ ಬಾಗಿಲು ; ತಪ್ಪಿಸಿಕೊಂಡು ಹೋಗುವ ಬಾಗಿಲು : ಎಸಳ್ + ವಳಿ, ಎಸಳ್ವಳಿ, ಎಸಳ್ವ್ವಳಿ. ಏವಂ ನುಸುಳ್ವಾಗಿಲ್, ನುಸುಳ್ವ್ವಾಗಿಲ್ . . . ನುಸುಳ್ಮಾವಣಿಗೆ (ಶಬ್ದಾನು. ೭೨ ಪ್ರಯೋ).

[ನುಸುಳ್$_1$ + ಬಾಗಿಲ್]

**ನುಳಿ** (ನಾ). ಕಂಡಿ ; ಸಂದು ; ಇಕ್ಕಟ್ಟಾದ ಹಾದಿ (?) : ದರಿಯುಮಂ ಕುಮ್ಮರಿಯುಮಂ ಮೊರಡುಮಂ ಕೊರಡುಮಂ ನುಳಿಯುಮಂ

ಕುಳಿಯುಮಂ ಮೞೆಯುಮಂ ನಾನಲುಮಂ ಬಾನಲುಮಂ . . . ಕಳೆದು ಪೋಗಿ (ಲೀಲಾವ. ೬-೧೬ ವ). [←ತಮಿ. ನುಱುಕ್ಕು]

**ನುಳ್ಗು** 'ನುಱುಂಕು' ನೋ.

**ನುಱು**$_1$, ನುರಿ$_1$ (ಕ್ರಿ). **೧.** ಪುಡಿಪುಡಿಯಾಗು ; ಚೂರಾಗು ; ನುಗ್ಗಾಗು ; ಛಿದ್ರಛಿದ್ರವಾಗು : "ನುಱು—ಸಂಚೂರ್ಣೇ" (ಶಮಧಾ) ; ರಾಗವೆತ್ತು ವರೊಮ್ಮೆ ಶಬರಿಯರ್ಬೇಗ ಕೂಸೊಜಿಗೆ ನುಱುಯ ಲಕ್ಕಿ (ಸೊಬಸೋ. ೧೪-೬೫). **೨.** ಪುಡಿಮಾಡು ; ನುಗ್ಗಾಗಿಸು : ಇಱುಯಲ್ಕೆನ್ನನ್ ನುಱುಯಲ್ಕೆನ್ನನ್ . . . ಸಗ್ಗದ ಪೊಸದೊರೆ ಪುಡು ಕಿರ್ಪನ್ ತಾನ್ (ಬದ್ಧಪ್ರ್ಯ೭-೧೨೧). **ನುರಿ$_1$**:**೧.** ನನ್ನ ಹಲ್ಲಿಗೆ ಗೋಟಡಿಕೆ ನುರಿಯೋದಿಲ್ಲ (ರೂಢಿ). **೨.** "ಕಡಿ, ಕಚ್ಚು, ನುರಿ, ಹರಿ, ಹೋಳು, ಜಬಡು, ಜಜ್ಜು, ಕುಟ್ಟು" (ಕಂನುಹು.೮೦); ಸಿಟ್ಟಿನಿಂದ ಯಾರನ್ನೋ ಕತ್ತು ನುಲಿಯುವಂತೆ ಕಡುಬು ನುರಿಯತೊಡಗಿದನು(ಮಲೆಮ. ೨೦). **೩.** ಪಳಗು; ಅನುಭವ ಪಡೆ: ಸಾಹಿತ್ಯದ ಎಲ್ಲ ವಿಭಾಗಗಳಲ್ಲಿಯೂ ಇವರ ಕೈ ನುರಿತಿದೆ (ಮಧುನ. ೧) ; ಲೋಕದ ಕಣ್ಣಿಗೆ ನೀ ಮಣ್ಣನೆರಚುವೆ ಪೊಳ್ಳಮೆಯೊಳು ನುರಿತಿರುವೆ (ಇಂಚಾಪ. ೪೪-೧೦) ; ಅರಿತು ನುರಿತ ಪಂಡಿತರು ವಿದ್ಯಾರ್ಥಿ ತಂಡಗಳಿಗೆ ಸಾಹಿತ್ಯವನ್ನೂ, ಗಣಿತವನ್ನೂ ಕಲಿಸುತ್ತಿದ್ದರು (ದಭಾಇ.೮೨). **೪.** ನುಣುಪಾಗು ; ಹೊಳಪಾಗು ; ನಯವಾಗು : ಒಂದಿಚ್ಚೆ ಕುಟ್ಟುವಾಗ ಒಬ್ಬಣ್ಣ ನುಣುಬಂದ ಒಬ್ಬೀಗೆ ಒಬ್ಬೆ ನುರಿಯವು . . . ಎಬ್ಬಿಸೊ ನಿನ್ನ ಮಡದಿಯ (ನಾಪದ. ೪೯). **೫.** ಉಜ್ಜು ; ಹೊಸಕು ; ಕಿವುಚು : ಅವನು ಬೀಡಿಯನ್ನು ನೆಲಕ್ಕೆ ನುರಿದು ಆರಿಸಿದ (ಪ್ರಶ್ನೆ. ೧೧೭).

[ದೇ. ॥ ತಮಿ. ನೂಱು, ನೂಱು, ನೆರಿ ; ಮಲ. ನುಱುಙ್ಙು, ನೆರಿಯ್ಕು ; ತುಳು. ನುರಿ ; ತೆಲು. ನುಱುಮು, ನೂಱು, ನೆರುಮು]

**ನುಱು**$_2$, ನುರಿ$_2$ (ನಾ). ಚೂರು ; ಪುಡಿ : ಆ ಸಗ್ಗಮನೆನ್ನೀ ಸಱು ದಲೆಯಿಂ ಪೊತ್ತಂಬುಜಜನ್ಮಾಂಡದ ಪೊಱಗಡೆಗಾಗಿ ನುಱುಯಪ್ಪಂದದಿ ಹಾಕದೊಡೆನಗೇತಱ ದೊಡ್ಡಿತ್ತೆನುತುಂ ಬೆಳೆವಂದದಿನುಱು ಮುಟ್ಟಿದುದಾ ನಿರ್ಜರಲೋಕಮನಾ ವಿಸುನಿಯ ಬೆಟ್ಟು (ಜಯಕಾ. ೧-೩೩). **ನುರಿ$_2$**: 'ನುರಿನುಳ್ಗು', 'ನುರಿವಡೆ' ಪರಾ. [<ನುಱು$_1$]

**ನುಱುಕಿಸು,** ನುರ್ಗಿಸು, ನುಱುಗಿಸು (ಕ್ರಿ). **೧.** ಸಣ್ಣಗಾಗುವಂತೆ ಪುಡಿಮಾಡು : ವಡೆಯು ಬೇಯಿಸಿಕೊಂಡು ಚೆನ್ನಾಗಿ ನುಱುಕಿ [ಪಾಠಾಂ. ಗಿ]ಸಿದ ಪುಡಿಯುಮಂ ತುಪ್ಪದೊಳು ಹುರಿದು ಹಾಲೊಡಸಿ ನಿಂದೊಡವೆರಸಿ ನೀರುಳ್ಳಿ ಶುಂಠಿಯುಂ ಹಾಕಿ ಹೆಱಿದುಪ್ಪದೊಳು ಕಲಸಿ ಕೊಂಡು (ಸೂಪಶಾ. ೧-೬೭). **ನುರ್ಗಿಸು : ೨.** ಪುಡಿಮಾಡಿಸು ; ಚೂರುಗೊಳಿಸು: ಆಳಿನಿಸುವರ್ಥಪತಿಯ ನಿಜಾಲಯಮಂ ತದ್ಗಜೇಂದ್ರನಿಂ ನುರ್ಗಿಸಿ ಸಲ್ಲೀಲೆಯಿನಲ್ಲಿಂ ತಳರ್ದು ವಿಶಾಲಮೆನಿಪ್ಪೊಂದು ಚೆಲ್ವ ಕುಜವಂ ಕಂಡೆಂ (ದಶಕು. ೮-೧೩೨). **ನುಱುಗಿಸು : ೧.** ಹಪ್ಪಳವ ನೊತ್ತಿ ನುಱು [ಪಾಠಾಂ. ನುಱು]ಗಿಸಿ ಹಾಕಿಯೊಂದಕ್ಕೆ ಹುರಿಯಕ್ಕಿ ಹುರಿಗಡಲೆಗಳ ಹುಡಿಯನು ಪೊತ್ತರಿಸಿ (ಸೂಪಶಾ. ೩-೧೭).

[ನುಱುಂಕು + -ಇಸು$_3$]

**ನುಱುಂಕು,** ನುಗ್ಗು$_2$, ನುರುಕು, ನುರುಗು, ನುರ್ಗು$_2$, ನುಳ್ಗು, ನುಱುಗ್ಗು, ನುಟ್ಗು (ಕ್ರಿ). **೧.** ಪುಡಿಮಾಡು ; ಚೂರು ಮಾಡು ; ಹುಡಿಗುಟ್ಟು : ಕಡಿವ ಕೊಚ್ಚುವ ಕೊಱಿವ ನು[ಪಾಠಾಂ. ಕು]ಱುಕುವ ಸುಡುವ ತಾಳಿಸಿ ತಿಂಬ ತೇಗುವ ಕುಡಿವ ಹಾಡುವ ಹಾರವಿ ಸುವಸುರೆಯರ . . . ಕಂಡು ಹೇಸುತ ಹನುಮ ಹೊಱವಂಟ (ತೊರರಾ. ೫-೨-೩೭). **೨.** ಕ್ಷೀಣವಾಗು ; (ಬೆಳವಣಿಗೆ) ಕಡಿಮೆಯಾಗು : "ನುಱುಕು—ವೃದ್ಧಿಹೀನೇ (ಬೆಳವಣಿಗೆ ಕಡಿಮೆಯಾಗು)" (ಶಮಧಾ). **ನುಗ್ಗು$_2$ : ೩.** ಪುಡಿಯಾಗು ; ಚೂರಾಗು; ಅಜಿಗಿಜಿಯಾಗು : ಹೆಗಲೆಲುವುಗಳೆಲ್ಲಂ ನುಗ್ಗೆ[ಪಾಠಾಂ. ನೆರೆ ತಗ್ಗೆ] ಕೆಲವು ಪಾಸಂ ಪತ್ತಿ ಕೆಲವು ಪಾರಣೆಯಾಗೆ ಬಲವಳಿದು ಡೆಂಡಣಿಸಿ ಹೆಜ್ಜ ಹುಣ್ಣಂತಾಗೆ (ಓಹಿರ. ಹ. ೨೧೪-೨೦) ; ಒದೆದಡದು ಹಱುಹಂಚೆನಲು ನುಗ್ಗಿದುದು ರಥವುಂ(ಸಾಳ್ವಭಾ. ೨೧-೪೪). **ನುರುಕು : ೧.** "ನುರುಕು =ಸಣ್ಣ ಮಾಡು" (ಜಾನಕೋ. ೧೨) ; ಕಂಗಾಣದಾದ ಅಂಥ ಅವಸ್ಥೆಯ ಕನವರಿಕೆ ಚುರುಕನ್ನೆಲ್ಲ ನುರುಕಾಗಿಸುವುದೆಂಬುದನ್ನು ಈಗಲೂ ಕಾಣಬಹುದು (ನಾಜೋಜ. ೩೭೪). **ನುರುಗು : ೪.** ಪಳಗು ; ಅನುಭವಗೊಳ್ಳು : ಕನ್ನಡದ ಸೇವೆಯಲಿ ನುರುಗಿ ಹಣ್ಣಾದವರೆ, ಹಿರಿಯ ಕನ್ನಡ ಧೀರರೆ (ಕನ್ನಬಾ. ೯೪-೪) ; ನಾನು ಕಷ್ಟದಲ್ಲಿ ನುರುಗಿದವಳು, ಅರಿಯದ ಹುಡುಗಿಯಲ್ಲ (ಪಚಭಾ. ೩೫೫). **ನುರ್ಗು$_2$ : ೧.** ಅದಿರದೆ ವೀರವೈರಿಭಟರಂ ಘಟಕೋಟಿಗೆ ಪಾಟಗಂಡು ನುರ್ಗಿದ ಪಿರಿದಪ್ಪ ಕಲ್ಲ ಕಡುಗಂಬವನೊಂದೆ ಕರಾಗ್ರದಿಂದಮೆತ್ತಿದ ಕಪಿಕತ್ಥಮಂ ಘನಕಪಿತ್ಥಮನಾ ಬನದೊಳ್ ಕಡಂಗಿ ಕಿಟ್ಟಿದಟೆದು ಪೋದುದೇ (ಪರ್ವಪು. ೩-೧೫) ; ಸಿಡಿಲಂ ನುರ್ಗುವ ಶೇಷನಂ ಪೊಸೆವ ದಿಙ್ನಾಗಂಗಳಂ ಪೊಯ್ಯುದ್ಧಿಳಿಲಿಡಿವೇಳುಂ ಕಡಲಂ ತುಳುಂಕುವ . . . ಗಣಗಳ್ ಬಂದರಾನಂದದಿಂ (ಗಿರಿಕ. ೧೦-೭೪). **೩.** ತನ್ನಿಚ್ಚ ಶರಾಳಿಗಳ್ ವಿಲಯಕಾಲೋಲ್ಕಂಗಳಂ ತಾಗಿದಾಗಡೆ ತತ್ಪೂತರಥಾಶ್ವಕೇತನಶರವ್ರಾತಂಗಳುಂ ನುರ್ಗಿ ಕಣ್ಗೆಡೆ ಬೆನ್ನಟ್ಟಿದನಂತು ನಮ್ಮ ಹರಿಗಂ ಗಂಡಂ ಪೆಱರ್ ಗಂಡರೇ (ಪಂಪಭಾ. ೧೧-೧೩) ; ಕರಿ ಪೊಣರ್ದೆಕ್ಕಲಂ ಮಲೆತು ಪೆರ್ಬುಲಿ ಪಾಯ್ದುಗಿಯಲ್ಕೆ ಡೋಣೆವಿದರ್ಪರದ ಪಿಸುಟ್ಟು ಪೆರ್ಮೊಡೆಯ ನುರ್ಗಿದ ದಂಡೆಯ ಭಂಗಿ ರೌದ್ರಮಾಗಿರೆ (ಜಗವಿ. ೧೬-೨೧) ; ಅವನಿನುಗ್ರಕರ್ಮವಿಪಿನಂ ನೆಱ ನುರ್ಗಿದುದು (ಪರ್ವಪು. ೧೦-೩೭) ; ಮನವನ್ನೆಂ ದುರ್ವಿಕಾರಕ್ಕೆಳೆದವುದು ಮನಂ ಮಾನಮಂ ನುರ್ಗಿಪತ್ತು (ರಕ್ಷಾಶ. ೧೨). **೫.** ಅದುಮು ; ಒತ್ತು ; ಘರ್ಷಿಸು : ಮದಗಜವೆರಡಱ ಬಾಲದ ಮೊದಲಂ ಪಿಡಿದೆತ್ತಿಯೊತ್ತಿ ನುರ್ಗುತ್ತಿರೆಯಾಸ್ಯದಿನುಗುವ ರಕ್ತಮುಂರಿಯೆನೆ ತಿದಿಯೊತ್ತುವ ಕಮ್ಮಱಂಬೊಲಿರ್ದಂ ಭೀಮಂ (ಭಾಷಾಭೂ. ೧೪೭ ಉದಾ). **೬.** ನಿಗ್ರಹಿಸು ; ದಮನ ಮಾಡು : ಸೀಳ್ದಸಿತ ಜಟಾಳಿ ನುರ್ಗಿದ ಬಹಿರ್ವಿಷಯಸ್ಥಿತಿ ಸೂತ್ರಮೂರ್ತಿ ನೇರ್ಪೆಸೆದಿರೆ . . . ತನ್ನುನಿಗೆ ವಂದಿಸಿದಂ ಮಗಧಕ್ಷಿತೀಶ್ವರಂ (ದಶಕು. ೨-೬೩). **ನುಳ್ಗು : ೩.** ನುಳ್ಗದ ಪಲ್ಗಳಿಂದೊಡೆದ ಮಂಡೆಗಳಿಂ . . . ತೋರ್ಪ ಬಾಸುಳ್ಗಳಿನೆಯ್ದೆ ಬಂದೆಱಗಿ ಕೀರ್ತಿಸುತಿರ್ದುದು ದೇವಸಂಕುಳಂ (ವೀರವಿ. ೧೨-೧೧೦) ; ದುರ್ಜನರ ಕೊರ್ಬಂ ನುಳ್ಗಿ ಸಂತೋಷಪದಾಯತಿಗೆಯ್ವಂ (ವಿಷ್ಣುಪು. ೫-೨-೮೨). **ನುಱುಗು$_1$ : ೨.** ಮುಗ್ಗದ ಮುಗಿಯದ ಬಾಡದ ನುಱುಗದ ಸುರುಂಟದ ಪೂವೆ ಪೂಬನದೊಳಳುಂಬಂ (ರಾಮಾಶ್ವ. ೫೩-೨೫). **೭.** ನಯವಾಗು ; ಹೊಂದಿಕೊಳ್ಳು ; ಹದವಾಗು : ನೆಱ ಸಣ್ಣಗೋದುಮೆಯ ಹಿಟ್ಟ ಸಿಹಿವಾಲೊಳಗೆ ನುಱುಗುವಂದದಿ ಕಲಸಿ ಹೆಟ್ಟಿಟ್ಟು ತೋರದೊಳು ಕೊಱಿದ ಕರಟಕೆ ತುಂಬಿಪೊಜೆಯದೊಲು ತುಪ್ಪದೊಳಗಡಲು ಚಿಲುಮುರಿಯಾದುದು (ಸೂಪಶಾ. ೧-೩೩) ; ತಱುಪಿನೆಮ್ಮೆಯ ಹಾಲ ನಾಲ್ಕೊಂದೆನಿಸಿ ಕಾಸಿ ನೆಱ ಸಣ್ಣನಾದಕ್ಕೆ ಹಿಟ್ಟನಿನಿಸಂ ಹೊಯ್ದು ನುಱುಗು [ಪಾಠಾಂ.ನರುಗು ಮರುಬ]ವಪ್ಪಂತೆ ಹಿಟ್ಟಂ ತೊಳಸಿಯುಂಡಲಿಗೆವದನಾಗಲಿಳುಹಿಕೊಂಡು ಕಿಱುಬಟ್ಟ ಮಾಡಿ(ಸೂಪಶಾ.೧-೫೪).

△ **ನುಟ್ಗು : ೩.** "ನುಟ್ಗು (ನುಳ್ಗು)—ಸಂಚೂರ್ಣೇ" (ಶಮಧಾ); ಇಳೆ ಮೊಳಗಿತ್ತೊ ಭಾನುರಥಮುರ್ವಿಗೆ ಬಿಟ್ಟುದೊ ಶೇಷಕಂಠಕಂಡಳ ಕಠಿನಾಸ್ಥಿ ನುಟ್ಗುದುದೊ (ಪಂರಾಮಾ. ೧೩-೩೫). 'ನಱುಂಕು', 'ನೊರಕು' ಪರಾ.

ನುಗ್ಗುನುಸಿಯಾಗು = ಚೂರುಚೂರಾಗು : ಧರಣಿ ತಳ್ಳದೇ ಶೇಷಂ ಸುರುಳ್ವನೇ ಕಮಠಪಂ ನುಗ್ಗುನುಸಿಯಾಗದುಳಿವನೆ ಶಿವಮಹಾತ್ಮೆ ಬಣ್ಣಿಸಲಾರ ವಶಂ (ಚೆಬಪು. ೨೯–೩೩).

[ದ್ರಾ.॥ ತಮಿ. ನುಜುಙ್ಕು, ನುಜುಕು, ನುಕ್ಕು ; ಮಲ. ನುಜುಙ್ಙು ; ತುಳು. ನುರಿಯು, ನುಕ್ಕು, ನುರಿಪು, ನುರ್ಪು, ನುರ್ಕ್, ನುಲಿ ; ತೆಲು. ನುಲಿಯು, ನುಜುವು]

**ನುಜುಗಿಸು** 'ನುಜುಕಿಸು' ನೋ.

**ನುಜುಗು₁** 'ನುಜುಕು' ನೋ.

**ನುಜುಗು₂**, ನುಗ್ಗು₄, ನುರ್ಗು₃ (ನಾ). ೧. ನುಚ್ಚು ; ಪುಡಿ : ನೀಡುತಿರ್ದರು ಗಂಜಿಯಂಬಲಿ ತೌಡು ನುಜುಗವಲಕ್ಕಿಗಚ್ಚನು (ಪ್ರಭುಲೀ. ೨೩–೩೯). **ನುಗ್ಗು₄** : ೧. 'ನುಗ್ಗುಗೆಯ್', 'ನುಗ್ಗುವೊಯ್' ಪರಾ. ೨. ಬಡವು ; ತ್ರಾಣವಿಲ್ಲದುದು : ಗಂಡ ಹೆಂಡಿರ ನಡುವೆ ಕೂಸು ನುಗ್ಗು (ಸಾಹಿವಿ. ೯೫). ೩. ಅಲ್ಪ ; ಕ್ಷುದ್ರ : ಪಾದೋದಕ ವೆಂಬುದ ಬಲ್ಲನಾಗಿ ಬ್ರಹ್ಮನ ಲಿಪಿಯೊಳಗೆ ಸಿಲುಕ ವಿಷ್ಣುವಿನಲ್ಲಿ ಕಟ್ಟು ವೊಡೆಯ ರುದ್ರನ ಶೂಲದಲ್ಲಿ ಭಂಗಿತಕೊಳ್ಳ ಇಂತೀ ಅಗ್ಗಳೆಯಂಗೆ ಜಗದ ನುಗ್ಗುಗಳು ಸರಿಯೆಂದರೆ ಸಿಗ್ಗಾಗದಿಪ್ಪರೆ (ಮೋಳಿಪು. ೧೬೫–೬೧೭) ; ಅಗ್ಗಿಸಿದೊಡೆ ದಿಟವೆಂದೆಗ್ಗಜಾಯದನಗ್ಗದ ಹೆಗ್ಗರು ನುಗ್ಗುಗಳಂ ಬಗ್ಗಿಸಿ (ವೀರೇಚ. ೨–೨೭) ; ದೇವದಾನವಭಟರು ನುಗ್ಗೆಂದಾವು ಬಗೆದಿಹೆವುಳಿದ ಮರ್ತ್ಯರು ನೀವು ತಾವೇಸಜ ಸಮರ್ಥರು ಕರ್ಣ ಗಳಹದಿರು (ಕುಪ್ಪಾದ್ರೋ. ೧೩–೨೩). ೪.(ಉಕ)ಬೆರಣಿ. **ನುರ್ಗು₃** : ೧. 'ನುರ್ಗುಗುಟ್ಟು', 'ನುರ್ಗುನುಜು' ಪರಾ. ೫. ಪುಡಿಯಾದುದು ; ಚೂರಾದುದು : ಕಾಮುಕರಂ ಕರಮುಡಂಗಿ ನುರ್ಗಪ್ಪಿನೆಗಂ ಕಾಮದನಡಂಗೆ ವೊಯ್ದಂ (ಶಮುದ. ೨೪೬ ಪ್ರಯೋ).

ನುಗ್ಗಾಗು = ೧. ಚೂರುಚೂರಾಗು ; ಪುಡಿಯಾಗು : ತನ್ನ ಬಲವೆಲ್ಲಂ ಕಲ್ಲ ಮೇಲೆ ಬಿರ್ದ ಕಾಜಿನ ಪೇಟಿನಂತೆ ನುಗ್ಗಪ್ಪುದುಂ ಮುನಿದು ಸಮುದ್ರಬಾಣಮಂ ಬಿಡುವುದುಂ (ಧರ್ಮಾಮೃ. ೮–೧೨೪) ; ಹಡಗು ಜಲಧಿಯೊಳೋಡಿ ಗಿರಿಗಳನೆಡಹಿ ನುಗ್ಗಾದಂತೆ ಸುಭಟರ ಗಡಣ ಗಜವನು ತಾಗಿ ತಾಗಿ ವಿಘಾತಿಯಲಿ ನೊಂದು (ಕುಪ್ಪಾದ್ರೋ. ३–೨೮) ; ನರಸಿಂಹನ ಕಾಲ್ದುಳಿಯೆಸಕದೊಳಗೆ ಹಿರಣ್ಯಕನ ಅಸಮವರ್ಬಲ ನುಗ್ಗಾದಂತೆ ತುರುಕರು ದೆಸೆಗೆಟ್ಟುರುಳಿದರಾಗ (ಕಂಸವಿ. ೧೫–೫೬). ೨. ಕಂದು ; ಕುಂದು ; ನಿರ್ವಿಣ್ಣವಾಗು ; ನಿತ್ರಾಣವಾಗು : ನೊಂದೆನೈ ನುಗ್ಗಾದೆನೈ ಗೋವಿಂದ ಕೃಪೆ ಮಾಡಕಟೆನುತ ಪೂರ್ಣೇಂದು ಮುಖಿ ಹಲುಬಿದಳು ಬಲುತೆಜಿದಿಂದಲಚ್ಯುತನ (ಕುಪ್ಪಾಸ. ೧೪–೧೨೯) ; ಮುಂದೆ ನಮಗಿನ್ನೇನು ಗತಿ ನಾವ್ ನೊಂದೆವೈ ನುಗ್ಗಾದೆವೈ (ತೊರರಾ. ೪–೫–೧೫) ; ಪ್ರಜೆಗಳು ಅಸಹ್ಯವಾದ ಕರಗಳ ಭಾರದಿಂದ ನುಗ್ಗಾಗಿದ್ದರು (ಇಂಗ್ಲಂಡ. ೨೮) ; ಇಗ್ಗೆಲಸ ಮಾಡಿ ನುಗ್ಗಾದೆ ಮಗಳೆ (ಗಾದೆ). ನುಗ್ಗುನುಚ್ಚುಮಾಡು = ಹುಡಿಗುಟ್ಟು ; ಛಿನ್ನವಿಚ್ಛಿನ್ನಗೊಳಿಸು : ಉಗ್ರಬಾಹುವು ಬಾರವಾಶಿಯಾದ ಶಲ್ಯವಂ ಚಂದ್ರದ್ಯುಮ್ನನ ಮೇಲೆ ಪ್ರಯೋಗಿಸಲು ಅದಂ ಮತ್ತೊಂದು ಗದೆಯಿಂದ ನುಗ್ಗುನುಚ್ಚು ಮಾಡಿ (ಸೌಗಂಧಿ. ೨೫೬–೪). ನುಗ್ಗು ಮಾಡು = ನಿರ್ವಿಣ್ಣಗೊಳಿಸು; ನಿಸ್ಸತ್ವಗೊಳಿಸು: ಶಿವಭಕ್ತನಾಗಿ ತನ್ನ ಹಿಡಿದಹೆನೆಂದು ಹೋದರೆ ನುಗ್ಗುಮಾಡುವ ನುಸಿಯ ಮಾಡುವ . . . ಕೂಡಲಸಂಗಮದೇವರ ನೆಟ್ಟಿ ನಂಬಿದನಾದರೆ ಕಡೆಗೆ ತನ್ನಂತೆ ಮಾಡುವ (ಬಸವ. ೬೪೫) ; ಅಗ್ಗಳೆಯೆಳೆತನದಿ ನಿಜದ ಹಗ್ಗದಿಂದ ಬಿಗಿದು ಕಟ್ಟಿ ನೆಗ್ಗಿ ನೆಗ್ಗಿ ಮಜವೆ ಜಡವೆ ನುಗ್ಗುಮಾಡಿ ಓಡಿಸುವೆನು (ಶಿಸಗೀ. ೧೫೬–೭೬೪); ಮ್ಲೇಚ್ಛರಾಕ್ಷಸಕೋಟಿಯೈವತ್ತು ಜನಿಸಿದುದು . . . ಗಾಧಿಯ ತನುಜಸೈನ್ಯವ ನುಗ್ಗುಮಾಡಿದರವರು ಕ್ಷಣದೊಳಗೆ (ಸಂಭಪಸ. ೨೪–೭೧) ; ವೈಕುಂಠಪತಿಯೆಂಬ ವಜ್ರವನು ತಕ್ಕೊಂಡು ನೂಕುವ ಯಮಭಟರ ನುಗ್ಗುಮಾಡಲುಬಹುದು (ಪುರಂದ. ३–೧೦೪–೨). ನುಗ್ಗು ಹಾಕು = ಬೆರಣಿಯನ್ನು ಒಟ್ಟು : ಅಂತ್ಯಸಂಸ್ಕಾರಕ್ಕಾಗಿ ನುಗ್ಗುಹಾಕಿದ್ದರು (ರೂಢಿ).

[<ನುಜುಕು./ತಮಿ. ನುಕ್ಕು, ನೂಕು, ನೂಗು ; ತೆಲು. ನುಗ್ಗು, ನುರ್ಗು, ನುಜುಗು]

△ **ನುಟ್ಟು** 'ನುಜುಕು' ನೋ.

**ನೂಂಕಿಸು**, ನುಗಿಸು, ನೂಕಿಸು, ನೂಗಿಸು (ಕ್ರಿ). ೧. ತಳ್ಳಿಸು ; ದಬ್ಬಿಸು ; ತಳ್ಳುವಂತೆ ಮಾಡು : ಪಿಡಿದೊತ್ತಿ ಜೀವಮಲ್ಲಾಡೆ ತೊಡಂಕಿ ನೂಂಕಿಸೆನೆ ಮೇರುನಗಕ್ಕೆಳದುಯ್ದು ಮೇಗಣಿಂ ಕೂಡಿ ಸಮಂತುರುಳ್ಚಿಸೆನೆ ಪನ್ನಗಸಂಕುಳದಿಂ ಭಯಂಕರಂ ಮಾಡಿ ತಗುಳ್ಚಿ ಬೆರ್ಚಿಸೆನೆ ಲೋಕಮನುರ್ವಿಸಲೆನ್ನ ವಿದ್ಯೆಯಿಂ (ಧರ್ಮಾಮೃ. ೯–೧೮೦) ; ಜಿನಬಸದಿಗಳ ಮೇಲಳವಡಿಪ ಶಿಖರಂಗಳಂ ಭೂತಳಕಿಳಿಯ ನೂಂಕಿಸುತ ವೆಲ್ಲಂ ನುಚ್ಚುನುಜು ಮಾಡಿ (ಬಸಪು. ೫೧–೭೨) ; ನಾರದ ವಚ ತಪ್ಪಲಜು ಯದು ಕನ್ಯಾಚೋರ ಸಿಕ್ಕಿದನೆಂದೆನುತೆ ದ್ವಾರಕವಾಟವ ನೂಂಕಿಸಲ್ಕರಿಸಿದ ಹೇರಾಸೆಗಳ ವಂಗಡವ (ಮೋಹತ. ३४–೫). **ನುಗಿಸು** : ೨. ರಭಸವಾಗಿ ತಳ್ಳು,—ನೂಕು : ಬಾಗಿಲನ್ನು ನುಗಿಸಿದಳು (ಅಪಜಾ. ೨೮). **ನೂಕಿಸು** : ೧. ಐತಹ ನಾರಿಯರ ರತುನಾರತಿಯ ತಳಿಗೆಗಳ ನೂಕಿಸುತ ಸಾರಿ ಕೈಗೊಡುವದಟರನು ಕಣ್ಣೋರೆಯಲಿ ಕೋಪಿಸುತ ತನ್ನಯ ತೇರನಿಳಿದನು ಪಾರ್ಥನು (ಕುಪ್ಪಾದ್ರೋ. ೮–೧೨) ; ಮಂಚದ ಮೇಲಿಂದ ನನ್ನ ನೂಕಿಸುತ್ತಾ (ಮುಂಬಯಿ. ೫–೪೯) ; ನೂಕಿಸಿಕೊಂಡು ಹೋಗೋದಕ್ಕಿಂತ ಮೇಕೆ ಕಾಯೋದು ಲೇಸು (ಗಾದೆ). **ನೂಗಿಸು** : ೨. ಆ ಮುವ್ವರು ಒಂದು ದೋಣಿಯನ್ನು ನೀರೊಳಗೆ ನೂಗಿಸಿ (ಮುಂಬಯಿ. ೫–೧೫೬).

ನುಗಿಸಿ ಕೊಡು = ರಭಸವಾಗಿ ತಳ್ಳು,—ದಬ್ಬು : ಆಕೆ ಕೆರಳಿ ಅವನನ್ನು ನುಗಿಸಿ ಕೊಟ್ಟಳು. ಅನಂತನ ತಲೆ ಗೋಡೆಗೆ ಬಡಿಯಿತು (ನಿಸರ್ಗ. ೨೫). ನೂಕಿಸಿ ಬಿಡು, ನುಗಿಸಿ ಬಿಡು = ನುಗಿಸಿ ಕೊಡು : (ಶ್ರೀರಂಗಪಟ್ಟಣದ ನಿಯೋಗಿಗಳನ್ನು ಕಂಡು) ಈಯಿವರ್ಗಳನ್ನು ಕೋಟೆಯ ಹೊರಗಣ್ಗೆ ನೂಕಿಸಿ ಬಿಡಿ (ಸುಗುಗಂ. ೫೪–೧೨) ; ಟೆಳಕರು ಆ ಕತ್ತಲೆಯಲ್ಲಿ ನನ್ನನ್ನು ನುಗಿಸಿ ಬಿಟ್ಟರು (ಸ್ಮೃತಿಚಿ. ೬೯).

[ನೂಂಕು₁ + – ಇಸು₃]

**ನೂಂಕು₁**, ನೂಕು₁, ನೂಗು (ಕ್ರಿ). ೧. ದಬ್ಬು ; ತಳ್ಳು ; ದೂಡು : "ನೂಂಕು — ಪ್ರೇರಣೇ" (ಶಮುಧಾ) ; ಚಾಣಾಕ್ಯನೆಂಬ ಭಟ್ಟನಂ ನಂದಂ ಪರಿಭವಿಸಿ ನೂಂಕಿಯಟ್ಟೆ ಕಳೆಯಿಸಿದೊಡೆ (ವಡ್ಡಾರಾ. ೭೫–೭) ; ದ್ರುಪದಂ . . . ಐಂ ದ್ರೋಣನೆಂಬನೇಂ ಪಾರ್ವನೆ ಪೇಟೆಂ ತೆನಗೆ ಕೆಳೆಯನೇ ನೂಂಕಂತಪ್ಪನನಜಿಯೆನೆಂದು ಸಭೆಯೊಳ್ ನುಡಿದಂ (ಪಂಪಭಾ. ೨–೪೭) ; ಜಡಿದು ಕರದಿಂ ಪೋಪೋ ಪೋಗೆಂದು ನೂಂಕುವ ಬೇಡರಿಂ (ಧರ್ಮಾಮೃ. ೨–೨೩೦) ; ಕಡೆಗಣಿಸಿ ನೂಂಕು ಚೀ ಲಜ್ಜೆಗೆಟ್ಟೆ ಚ್ಛಿಯಂ ಎನುತೆ ಸಖಿಯರು ನೆರೆದು ಪೆಟ್ಟಿಗೆಗಳುಮನೊಡೆದು (ನಂಬಿರ. ೧೫–೭೭) ; ಹರನ ಮುನ್ನಿನ ಪೂಜೆಯಂ ಬಲುಗೆರಹುಗಾಲಲಿ ನೂಂಕಿ ವದನಾಂಬುರುಹದೊಳು ತುಂಬಿರ್ದುದಕದಿಂ ಮಜ್ಜನಕ್ಕೆಚಿದು (ಬಸಪು. ೧೮–೩೨) ; ಕುತ್ತಡಸು ಬಯ್ದು ಪೊಯ್ದು ನೂಂಕುತೌಂಕು ಸೀಳ್ ತಡೆಯೆನುತ್ತೆ ಕಡಿದಾಡಿದರ್ (ಚೆಬಪು. ೨೪–೭). ೨. (ಸಮಯವನ್ನು) ಕಳೆ ; ವ್ಯಯಿಸು : ಓವದೆ ಪೊಡವಿಯೆಜಿಯನಣುಗಿನ ಸುಕುಮಾರಂ ಸಡಗರದಿಂ ಸಲೆ ಸಂಪದದೊಳ್ ದಿನಮಂ ನೂಂಕುತ್ತಿಹನು (ಜಯಚಾ. ೨–೭೭) ; ಬಂದಪ್ಪರಾಣ್ಮನಾದೇಶಮಂ ತಂದಪ್ಪರೆಂದು

ಪಗಲಿರುಳುಗಳನೆಲ್ಲರೊಳೆ ನೂಂಕುತಿರ್ದುತ್ತಿಂತೆ ಮೆಲ್ಲನೊಳಪೊಕ್ಕತಿಥಿ ಕಿರಣಪ್ರಥಮದೂತನಂ ಕಾಣುತ (ಶ್ರೀರಾಮಾ. ೮೨೭-೪೬); ಅಳಲಿಂ ರಾತ್ರಿಯ ನೂಂಕುವಂ ಪೊರಳುತುಂ ಶಯ್ಯಾಂತದೊಳ್ಚ್ಚರಿಂ . . . ನೃಪಂ (ಶಾಕುಂತ. ೮೧-೧೩೬). **೩.** ನುಗ್ಗಿಸು; ರಭಸದಿಂದ ಮುಂದೆ ಹೋಗುವಂತೆ ಮಾಡು: ಕಟ್ಟದಿರೊಳೆ ನೂಂಕಿದಾನೆಗಳ ಕೋಡುಗಳಂ ಬಳೆವೋಗೆ ಪೊಯ್ದಂ (ಪಂಪಭಾ.೧೦-೪೧); ತಂತಮ್ಮೇಱು ದಾನೆಗಳಂ ನೂಂಕಿ ಚಕ್ರಾಚಕ್ರಿಯುಂ ಖಟ್ವಾಖಟ್ವಿಯುಮಾಗೆಯುಂ ಪೆಣೆದಿಱುವ ಪದದೊಳ್ (ಶಾಂತಿಪು. ೬-೮೨ ಪ); ನಿಜರಥವ ಆ ಪರಬಲಕಾಗಿ ನೂಂಕಿ ನಿಂದನು ದಿವಿಜಾಪಹಾರಕನದಟಿಂದ (ಅಂಜಚ. ೬-೧೨೧). **೪.** ಆಕ್ರಮಣ ಮಾಡು; ಮೇಲೆ ಬೀಳು; ನುಗ್ಗು: ಒಡ್ಡಂ ಪುಣ್ಬಡುವಿನಮಿಟ್ಟು ಸನ್ನು ಸವಕಟ್ಟೆಱುದಲ್ಲಿಗೆ ನೂಂಕಿ ಬೀರಮುಚ್ಚಟಱುವಿನಮಾಮೆ ತಳ್ತಿಱುದು ಗೆಲ್ದವರಾತಿಯನೆಮ್ಮ ಪೊಚ್ಚಱು ನುಡಿವಟ್ಟುಗಣ್ಣರಂ ನಗುವುದೊಟ್ಟಜೆ ಮಾವನ ಗನ್ಧಹಸ್ತಿಯುಂ (ಎಕ. II, ೧೩೪-೫೧; ಸು. 982); ಎಡೆವಿಡದೆ ನೂಂಕಿ ಗಜಘಟೆ ನಡೆಯಲ್ಕೇಲೆಸೆದುವಾಂತ ಬೆಳ್ಗೊಡೆಗಳ್ (ಕಾದಂಪೂ. ೬೦೦); ನಿಲಲುಂ ನೂಂಕಲುಮಱಿಯಂ ಗೆಲಲುಂ ಪೆಱರೊಳರೆ ಕರ್ಣನಲ್ಲದೆ ಕರ್ಣಂ ತಲೆನಾಯಕನಾರುಮವಂ ನಿಲೆ ನಿಲ್ವನೊಂಕೆ ನೂಂಕುವರ್ಗೆಲೆ ಗೆಲ್ವರ್ (ಗದಾಯು. ೩-೬೪); ಕರ್ಮವೆಂಬ ಅಂಕದೊಡನೆ ತೊಡರಿದೆ ಬಿನ್ನಪವನವಧಾರು ನಿಮ್ಮಾಳಿನ ಭಾಷೆಯ ಕಡೆಗಳಕ್ಕೆ ನೂಂಕುವೆ ಕೆಡಹುವೆನಂಕವ (ಬಸವ. ೬೯೯); ಮಾಗಧಪ್ರಮುಖ ನಿಖಿಲ ನರಪಾಲಕರ್ ನೂಂಕೆ ಸಂಕರ್ಷಣಂಗೆ ಸಮರವತಿಭರವಾದುದಂ ಕಂಡು (ಜಗವಿ. ೭-೭೦ ಪ). **೫.** ತ್ಯಜಿಸು; ಈಡಾಡು: ಮಿಡಿದನಿತು ಬೇಗದಿಂದಱುವೊಡಲನಿದಂ ಪೋಗೆ ನೂಂಕಿ ಚೆಲ್ವಪ್ಪೊಡಲಂ ಪಡೆದಪೆಯಾಗಳೆ ಬಲ್ವಿಡಿವಿಡಿದು ಶರಣ್ಬುಗು ಜಿನೇಂದ್ರಪದಸರಸಿಜಮಂ (ಆದಿಪು. ೨-೫೮). **೬.** ಗುಡಿಸು; ಉಡುಗು: ಹರಿದಶ್ವಂ ಬಂದಪಂ ವಾಹಳಿಗೆನುತರುಣಂ ವ್ಯೋಮವಿಸ್ತೀರ್ಣರಂಗಾಂತರವೀಧೀಚ್ಛನ್ನತಾರಾಸ್ಫಟಿಕಶಕಲಮಂ ನೂಂಕುತಂ ಚಾರುಚಾಮೀಕರಯಂತ್ರವ್ರಾತದಿಂ ಕುಂಕುಮಘನರಸಮಂ ಸಿಂಪಿಸುತಿರ್ದನೆಂಬಂತಿರೆ (ಕಾದಂಪೂ. ೧೪೧). **೭.** (ಶ್ರಮ, ಆಯಾಸ ಮುಂತಾದುವನ್ನು) ಪರಿಹರಿಸಿಕೊಳ್ಳು; ನೀಗಿಕೊಳ್ಳು; ಶಮನಮಾಡಿಕೊಳ್ಳು: ಪಸಿವಂ ಬಿಟ್ಟು ದಶಾರ್ತಿಯಂ ತೊಱೆದು ದೇಹಾಯಾಸಮಂ ನೂಂಕಿ ಬಲ್ಬಿಸಿಲಂ ನೋಡದೆ ವನ್ಯದಂತಿಮಹಿಷವ್ಯಾಘ್ರಾದಿ ನಾನಾಮೃಗಪ್ರಸರಕ್ಕಳ್ಕದೆ . . . ಎಸೆದನೀಶಂಗೋಹಿಲಂ (ಉದ್ಭಟ. ೧೧-೯೨); ಗಗನೇಚರಿಯರ್ ಶ್ರಮಮಂ ಮಿಗೆ ನೂಂಕಲ್ ನಿಲ್ವುದರ್ಕಿವೆಮ್ಮಯ್ಯ ತಾವುಗಳೆಂದು ಕುಱುಪುಗೊಂಡಾ ಬಗೆಗಿಟ್ಟಂತೆಸೆವುವಿದಱ ಕೋಂಟೆಯ ತೆನೆಗಳ್ (ದಶಕು. ೧-೩೪). **೮.** ಸರಿಸು; ಓರೆ ಮಾಡು; ಹಿಂದಕ್ಕೆ ತಳ್ಳು: ಪೆಱನೊಸಲೊಳ್ ಕಱೆಯ ಪಾಂಗಿನಿಂದಲೆವ ಮುಂಗುರುಳಂ ನೂಂಕೊತ್ತುವೊಂದು ನೆವದಿಂ ಕೋಳ ಮೊದಲಂ ತೋರ್ಪಡಿಸಿಯುಂ (ರಾಮಾಶ್ವ. ೫೯-೧೨). **೯.** ಅಂಗಸಾಧನೆಯ ಸಾಮು, ದಂಡೆ ಮುಂತಾದುವನ್ನು ಮಾಡು: ಬಾಲಾಭ್ಯಾಸಿ ದಂಡೆಯ ನೂಂಕುವಂತಂಬೆಗಾಲಿಕ್ಕತೊಡಗಿದನೊಲಿದು (ಮೋಹತ. ೧೭-೭೧). **೧೦.** ಮಿಡಿ; ಮೀಟು; ಬಾಜಿಸು: ತಾಂ ಮೆಲ್ಲನೆ ವಾಮದೋರ್ಲತೆಯನೆತ್ತಿ ಬೆರಲ್ಗಳನಿಟ್ಟು ತಂತಿಯಂ ನಿಲ್ಲದೆ ನೂಂಕುತೊಂದಿನಿಸು ಗೋಣನೊಱಂಗಿಸಿ ನೋಡುತೋಪನಂ ವಲ್ಲಕಿಯೊಪ್ಪುವಿಂಚರಮನ್ನೆದೆ ನೆಗಟ್ಟುದಳೊರ್ಮಳೊಲ್ಮೆಯಿಂ (ಉದ್ಭಟ. ೧೦-೪೭). **೧೧.** (ಭಾವನೆಗಳನ್ನು) ಒತ್ತು; ಅದುಮು; ನಿಗ್ರಹಿಸು: ಉದ್ಗತಾನಂದಮಂ ನೂಂಕಿ ನೆನೆದುಬ್ಬುವಂ ಶಿವಪೂಜೆಯೊಳಗೆ (ಬಸರ. ೩-೧೫೦).

**೧೨.** ತಿವಿ; ಚುಚ್ಚು: ಮಡದಲಿ ನೂಂಕೆ ವಾಜಿ ಗರುಡಂಗಮದಿರ್ಮಡಿ ವಾಯುವಿಂಗೆ ಮೂರ್ಮಡಿಯೆನಿಪ್ಪೊಂದು ತನ್ನ ಜವದಿಂ ಪರಿಯಲ್ಕೆ ಮುಹೂರ್ತಮಾತ್ರದೊಳ್ಗಡ ಪದಿನೈದು ಯೋಜನಮನೊರ್ವನೆ ಸಂಧಿಸಿ ಪೋದನಂದು (ಕಾದಂಪೂ. ೬೨೧); ಕರವಾಳ್ಗಳಂ ಜಡಿದು ನೂಂಕುವರ್ ತಾಂಕುವರ್ (ಚಿಬಪು. ೫೦-೨೫). **೧೩.** ಮುಂದುವರಿ; ಸಾಗು; ನಡೆ: ಗೋತ್ರನಾಮವ ಬೆಸಗೊಂಡರೆ ಮಾತು ನೂಂ[ಪಾಠಾಂ. ನೂ]ಕದೆ ಸುಮ್ಮನಿದ್ದಿರಿದೇನಯ್ಯಾ (ಬಸವ. ೭೪೪). **೧೪.** [ಗಣಿತ] ಗುಣಿಸು; ಗುಣಾಕಾರ ಮಾಡು: ತಿವಿ, ಪೊಯ್, ಪೆರ್ಚಿಸು, ನೂಂಕು . . . ಬೆಳೆಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೧೧-೮). **ನೂಕು₁:** **೧.** ಹಗಹದಲ್ಲಿ ಬಿದ್ದವರ ಮೇಲೆ ಒರಳ ನೂ[ಪಾಠಾಂ. ನೂಂ]ಕುವರೆ (ಬಸವ. ೩೧೬); ಲೋಕದ ಹಂಗನೆ ಹಱಿದು ಬೇಕು ಬೇಡೆಂಬುದನೆ ನೂಕಿ ತಾ ಸುವಿವೇಕಿಯಾದಲ್ಲದೆ ಜ್ಯೋತಿಯ ಬೆಳಗ ಕಾಣಬಾರದು (ವಚಸಂ. ೪೧೨-೭೭); ಮನದ ಕತ್ತಲೆ ಗುರುವರನ ವಾಕ್ಕಿನಲಿ ತೊಲಗುವವೋಲು ತುಂಬಿಯ, ತನತನಗೆ ನೂಕಿದವು ವಿಕಸಿತ ಕೈರವಾದಿಗಳು (ಕುವ್ಯಾದ್ರೋ. ೧೭-೧೬); ಐದುವರ್ಷದ ಹಸುಳೆ ವನವೆತ್ತ ತಪವೆತ್ತ ಬೈದು ಮಲತಾಯಿಯುಡವಿಗೆ ನೂಕಲು (ಪುರಂದ. ೨-೬೦-೧); ಮಿಸಾಟುವೆಣ್ಣುಗಳ ಕುಂತಳ ತಮವೆಂದು ಸಿಡುಜಡೆವಿಡಿದು ಶ್ರೀಕಾಂತ ನೀರೊಳಗೆ ನೂಕಿದನು (ಮೋಹತ. ೧೪-೫೬); ಪಾತಕವ ನೂಕುವಡೆ ಸೂತಕ ಕಳೆಯುವಡೆ ಭೂತೇಶನೊಲುಮೆ ಪಡೆಯುವಡೆ ಹಸಿದರಿಗೆ ಕಾತರಿಸದಿಕ್ಕು (ಸರ್ವಜ್ಞ. ೬೪೯). **೨.** ಭಾನುಮತಿ ಬರೆ ಮುರಿದ ಮುಸುಕಿನ ಮೌನಿ ನೂಕಿದನಿರುಳನುದಯದನೂನಮಂಗಳ ಪಟಹ ಶಂಖಧ್ವನಿಯ ಮಾಣಿಸಿದ (ಕುವ್ಯಾಸ. ೧೨-೩); ತನುವ ತುಂಬಿತು ತಾಪ ತಾಪದ ಘನತೆಯಲಿ ಗರುವಾಯಿಗೆಟ್ಟನು ನೆನೆದು ನಯನಜಲಂಗಳಲಿ ನೂಕಿದನು ಯಾಮಿನಿಯ (ತೊರರಾ. ೨-೨-೮); ಆಕೆಯುಳ್ಳಿಯ ಸಲಿಸಿ ಶಿಶುತೆಯ ನೂಕಿ ಸಿತಪಕ್ಷದೊಳು ಬೆಳೆವ ಸುಧಾಕರನವೊಲು ಕಳೆಗಳೊಡವೆಳೆಯುಲು ಬೆಳೆವನಾತಾ (ಸಾಳ್ವಭಾ. ೪-೩). **೪.** ಇತ್ತ ರತ್ನಗ್ರೀವಾದ್ಯ ವಶಿಷ್ಟ ಖಚರರೊಡನರ್ಣವನಿನದದಿನಾರ್ದು ನೆರೆದು ನೂಕಿದರಾಗಳ್ (ಶಾಂತಿಪು. ೪-೨೬); ಮನಸಿಜನ ದಳ ನೂಕಿತೇಳೇಳೆನುತ ಚೆಲ್ಲಿತು ಮುನಿನಿಕರ (ಕುವ್ಯಾಅ. ೧೮-೧೫); ಅಗಣಿತದ ಪೆಟ್ಟಗೆಯ ಹೊಱೆಯಾಳುಗಳ ಸಂದಣಿ ನೂಕಿದುದು (ತೊರರಾ. ೧-೧೬-೧೦); ಎಲೆಲೆ ಕವಿಕವಿಯೆನುತವನ ಬಲಂ ಕಂಡು ಸಂಕಲೆಗಡಿದ ಮುಗಿಲಂತಿವನ ಮೇಲೆ ಕೈದುಗಳ ಮಳೆಗಱೆಯುತಿಟ್ಟಣಿಸಿ ನೂಕಲನುಸಾಲ್ವಂ ಕನಲ್ದು (ಜೈಮಿಭಾ. ೧೨-೪೦). **೫.** ಎಲ್ಲಿ ನೂಕುವೆನೀ ತನುವ . . . ತಮಗಿಲ್ಲಿ ಕಡೆಯಾಯ್ತಡವಿಯೊಳಗೆಂದೆನುತ ಹಲುಬಿದನು (ಕುವ್ಯಾಅ. ಓರಿಇ. ೨೬-೩೫). **೧೩.** ನೂಕಿಕೊಂದೇ ವಾಘೆಯಲಿ ರಥ ನಾಕುಸಾವಿರ ಬಲುಗುದುರೆ ಹದಿನಾಕುಸಾವಿರ ನೂಱುಕರಿಘಟೆ ಲಕ್ಕ ಪಾಯ್ದಳ ಜೋಕೆ ಜವಗೆಡೆಮುಱಿವಡೆದು ಬಲದೊಕೆವಾಳರು ಸರಿಯೆ ಸೋಲದ ನೂಕುನೂಕಾಯಿತ್ತು ಕೌರವರಾಯಸೇನೆಯಲಿ (ಕುವ್ಯಾಕ. ೨-೯); ಸತ್ತ್ವಗುಂದಿದ ಸಮರ ನೂಕದು (ಕೌಶಿರಾ. ೨೬-೪೨). **೧೫.** ಮುಂದುವರಿಸು; ನುಗ್ಗಿಸು; ಸಾಗಿಸು: ಕಿರಣ ತೋಮರ ದಕ್ಷಿಣೋರುಸ್ಫುರಣ ತಿಮಿರ ಮೃಗೀಕದಂಬಕ ತರಣಿ ನೂಕಿದನುದಯಶೈಲಕೆ ರತುನಮಯರಥವ (ಕುವ್ಯಾಕ. ೮-೧೫); ಆಗ ಭೀಮನು ತನ್ನ ರಥವನ್ನು ನೂಕಿ ಕರ್ಣನನ್ನು ನೋಡಿ (ಕೃಪಾಕ. ೭೭). **೧೬.** ಲಭಿಸು; ಸಂಭವಿಸು; ಉಂಟಾಗು; ಪ್ರಾಪ್ತವಾಗು: ಚಾಪವೀತನ ಕೈಯಲಿರಲಿನ್ನಾ ಪಿನಾಕಿಗೆ ಗೆಲವು ನೂಕದು [ಪಾಠಾಂ. ಘಟಿಸದು] (ಕುವ್ಯಾದ್ರೋ. ೬-೨೯); ನೂಕಲರಿಯದು ಜಯವು ನಮಗೆ ಹರಿ

ಶಂಖರವ ಲೋಕಪಾಲಕರೆದೆಯು ಸೀಳುತಿದೆ (ತುರಂಗ. ೫೫-೨೪). **೧೭.** ತುಂಬು ; ಆಗು : ಪತಿಯುಳಿವಂದಿನ ಅಕಾಲಕೊದವಿರ್ದ ಮೂಱು ತಿಂಗಳ ಗರ್ಭ ನೂಕಿತ್ತು (ಭಾವಚಿಂ. ೮-೩೬). **೧೮.** ಸಾಧ್ಯವಾಗು ; ಸಮರ್ಥವಾಗು ; ಶಕ್ಯವಾಗು : ಸಾಕ್ಷಿಕೊಳ್ಳೈ ಕೃಷ್ಣ ನೋಡಲು ನೂಕದೆನ್ನೆವೆ ಸೀವುತಿವೆ ಕರುಣಾಕರನೆ ಕೈಗಾವುದೈ ಕೃಪೆಮಾಡಬೇಕೆಂದ (ಕುವ್ಯಾಭೀ. ೩-೭೫); ಈ ಕುದುರೆಯನವನೇಱಿದಿರ್ದೊಡೆ ಮತ್ತೆ ನೂಕದ ವನ ಕೈಯೊಳಗೆ ಈ ಕದನವ ಜಯಿಸುವುದು (ಕುರಾಸಾಂ. ೩೮-೭೯); ಸಾಕೆಲೆ ಕಿರಾತ ನಿನ್ನಯ ಬಲ್ಮೆಯಿಮ್ಮೊಡನೆ ನೂಕುವದೆ (ಚೆಬಪು. ೫೩-೪೧) ; ಆ ಕುದುರೆ . . . ಲೋಕಮಂ ದಣಿಸುತೈತರಲಖಿಳ ದೆಸೆಯೊಳದನಾಕೆವಾಳರ್ತಡೆಯೆ ಬಿಡಿಸಬೇಕನಿಬರಿಂ ನೂಕದೊಡೆ ಕರ್ತೃ ತಾನಾದೊಡಂ ಪೋಗಿ ನಡೆಸುವುದು ಬಳಿಕಾ ಹಯವನು (ಜೈಮಿಭಾ. ೨-೨೯). **೧೯.** ಚಿಮ್ಮು ; ಹೊರಹೊಮ್ಮು ; ಹೊರಸೂಸು : ಹಱಿದು ದಿಮ್ಮೈಸಿ ಜೋಡು ನೆತ್ತರಿನೊಱತೆ ನೂಕಿತು ಭದ್ರಪೀಠದ ಹೊಱಗು ನನೆದುದು (ಕುವ್ಯಾಕ. ೨೪-೬). **೨೦.** ಕೆಡಹು ; ಬೀಳಿಸು : ಸೂತನ ತಲೆಯನೆರಡಱಲಿ ನೂಕಿ ಧನುವನು ಮೂಱು ಬಾಣದಲೌಕಿ ಖಂಡಿಸಿ ಹೋಗು ಹೋಗಿನ್ನಾಕೆವಾಳರನಱಸಿ ತಾ ಎನುತೈದಿದನು ದ್ರೋಣ (ಕುವ್ಯಾದ್ರೋ. ೨-೪೨). **೨೧.** ನೆಗವು ; ಎತ್ತು : ಆನಿರಲು ಹೆಕ್ಕಳವೇಕೆ ಹೋಹೋಯೆನುತ ಹೊತ್ತನು ನೂಕಿ ಹೆಗಲೆರಡಱಲಿ ಕುಂತಿಯ ಧರ್ಮನಂದನನ (ಕುವ್ಯಾಆ. ೯-೩). **೨೨.** ದೂರಮಾಡು ; ಕಡೆಗಣಿಸು ; ಉಪೇಕ್ಷೆಮಾಡು ; ತಿರಸ್ಕರಿಸು : ಒದೆದು ಕಳೆ ಭವವ ಸದ್ಗುರುಚರಣಕೃಪೆಯಿಂದ ಏಕೆ ಮಱೆವೆಮಾತುಗಳು ಸಾಕಿನ್ನು ಸದ್ಗುರುವೆ ನೂಕಬೇಡಿನ್ನೆನ್ನ ಸ್ವೀಕರಿಸು ಮದ್ಗುರುವೆ (ದೀಕ್ಷಾಬೋ. ೧೪-೩೧೪) ; ಏಕೆ ದುರಾತ್ಮರ ಮಾತಂ ನೂಕುವೆ ನಾಂ ಕಂಡ ಬುದ್ಧಿಯಂ ಕಾಣ್ಬೆಂ ನಿರ್ವ್ಯಾಕುಲದಿಂದಿರುಳೆಂದಾ ಕಾಂತೆಯಮಾತ್ಮವಚನಮಂ ಮನ್ನಿಸಿದಳ್ (ದಶಕು. ೨-೩೫). **ನೂಗು :** **೧.** 'ನೂಗಿಸು' ಪರಾ. **೨.** ಮುಂಜಾವ ತೊಟ್ಟು ಇರು ಹಂಗು ಬಿಟ್ಟು ಬರಿ ಹಾಂಗ ಕೂಗತದೋ ತಲಿಕಾವಿನೊಳಗ ಇವ್ವಾವಿನೊಳಗ ಬಿಸಿಗಾಲ ನೂಗತದೋ (ಗಂಗಾತ. ೮೮-೧೪) . **೪.** ಊರ್ಧ್ವಗತಿಯಲೇ ಮನೋರಥವು ಸಹ ಅಪಾರ್ಥವೆ ನಿಸದೆ ನೂಗಲಿ (ಅರಳು. ೩೦೧-೧). **೨೩.** ಸಹಿಸು ; ತಾಳು : ನೂಗುತೊಂದೇ ದುಃಖ ತೂಗುತೊಂದೇ ಸುಖವ . . . ಸಾಗೋಣ ಕೂಡಿ ಕೂಡಿ (ಉಯ್ಯಾಲೆ. ೭೮-೧೪). 'ನೂಗಿಸು' ಪರಾ.

**ನೂಕುನೂಕು, ನೂನೂಗು** (ದ್ವಿರುಕ್ತಿ) : ಕುಣಿವ ತೊಡರಿನ ಪೆಂಡೆಯದ ಡೊಂಕಣಿಯ ಬಿರುದರ ನೂಕುನೂಕೆನೆ ಹಿಣಿಲ ಬಾವುಲಿಗಾಱಿರಾವೆಡೆ. . . ನೂಕುವದೆಂದು ಸಾರಿದರು (ಕುವ್ಯಾಭೀ.೪-೩೯); ಜಡಜಡವನೆಳದಾಡಿ ಮನಮನವ ತಾಗಿಸುತ ಕರ್ಮದೊಡ್ಡಿನೊಳಿಹವ ನೂನೂಗುತಿರುವ ಜೀಯ ನಿಮ್ಮ ಹಸಾದರೆಂಬರುರವಣಿಯೊಳಗೆ (ಮಲಿದೇ. ೪೭-೨).

**ನೂಕಲಾಟ** = ನೂಕು ; ನುಗ್ಗಾಟ ; ನುಗ್ಗಲು : **ಭಾಸ್ಕರರಾಯ** ಗಾಡಿಯ ನೂಕಲಾಟದಲ್ಲಿಯೂ ನುಗ್ಗಿ ಒಳ್ಳೆಯ ಸ್ಥಾನವೊಂದನ್ನಾಕ್ರಮಿಸಿ ಕುಳಿತುಕೊಂಡ (ಕಸುನೆ. ೪೧). **ನೂಕುತಾಕು** = ನೂಕಲಾಟ ; ನೂಕಾಟ : ಆಕಾಶವ ನೋಡುವುದಕ್ಕೆ ನೂಕುತಾಕೆ (ವಿಲೀಕ್ಷ. ೪೦) ; ಈ ಕಥೆಗಾವುದು ಮೊದಲೆನೆ ತೆರೆಗಳ ನೂಕುತಾಕಿಂದ ರತ್ನಗಳ ಆಕರದಿಂದ ನಾನಾ ಜಲಚರಗಳಿಂದಾ ಕಡಲಿರದೊಪ್ಪುತಿಹುದು (ಕುರಾಸಾಂ. ೨-೧) ; ಲೋಕದ ಮುಂದಣ್ಣ ಸೋಲವೆಂದನು ನೂಕುತಾಕಾಯ್ತು ಚಕ್ರಕೆನ್ನಿಂದ (ಭರತ. ೫೧-೧೪೪) ; ಮೆಯ್ಗೊಳ್ಳವಿರುಮ್ಮಾಗಿ ಪೊಱಮಡುವವರುಮೋರೋರ್ವರಿಂದಿರ್ದುವ ನೂಕುತಾಕಂ ನಿರವಿಸಿ ಕಿಱಿದುಂ ಪೊಱ್ತು ನಿಂದು (ಚಿಕಸಂ. ೧೨೧-೨೧). **ನೂಕುತಾಕುಗೊಳು** = ಗೊಂದಲಗೊಳ್ಳು ; ಗಡಿಬಿಡಿಹೊಂದು : ಮಾತಿನ ಪಸರದ ವ್ಯವಹಾರದೊಳಗೆ ಸಿಕ್ಕಿ ನೂಕುತಾಕುಗೊಳುತಿಪ್ಪವಂಗೆ ಮೋಹದ ಮಾತೇಕೆ (ವತಸಂ. ೩೫೦-೯೪). **ನೂಕುನುಗ್ಗಲು** = **೧.** ನೂಕುತಾಕು : ಆ ನೂಕುನುಗ್ಗಲಲಿ ಹುಯಿಲಿನಲಿ ಮೊದಲಾರು ಸತ್ತರ್ ಅವನದೇ ಪುಣ್ಯಂ (ಪಾರಸಿ. ೧೯-೪೨೭) ; ನೂಕುನುಗ್ಗಲೇಕೆ ? ನಿದಾನವಾಗಿ ಒಬ್ಬರ ಹಿಂದೊಬ್ಬರು ಹತ್ತಿದರೆ ಆಗದೆ ? (ಸಿಡಿಲು. ೧೯). **೨.** ಗುಂಪು ; ಸಮೂಹ : ನೂಕುನುಗ್ಗಲು ಹಿಂದಿನಿಂದ ಒಂದೇ ಸಮನಾಗಿ ಏರಿಬರುತ್ತಿತ್ತು (ಆಲಹೂ. ೧೪). **ನೂಕುನುಗ್ಗು** = ನೂಕುನುಗ್ಗಲು **೧** : ನೂಕುನುಗ್ಗಿನಲ್ಲಿ ಮಾತನಾಡಬಾರದು, ನಾಚಿಸುವವರ ಮನೇಬಾಗಲು ತುಳಿಯಬಾರದು (ಗಾದೆ).

[ದೇ. ॥ ತಮಿ. ನೂಕ್ಕು, ನೂಕ್ಕಿ ; ತುಳು. ತೆಲು. ನೂಕು ; ಕೊಡ. ಕೋಲಾ ನೂಕ್, ನೂಕಿ]

**ನೂಂಕು₂, ನೂಕು₂** (ನಾ). **೧.** ನೂಕುವಿಕೆ; ತಳ್ಳುವಿಕೆ: 'ನೂಂಕುದಱು' ಪರಾ. **೨.** ಗೊಂದಲ ; ಗಜಿಬಿಜಿ. **ನೂಕು₂ : ೧.** ಗೆದ್ದಲು ತಿಂದ ಮರಬೀಳುವುದಕ್ಕೆ ಬೇಕಾದ ನೂಕಿನಂತೆ ಗಂಡನ ಸಾವು ಒದಗಿ ಅವರನ್ನೂ ಕೊಂಚಕಾಲದಲ್ಲಿಯೇ ಕಣ್ಣುಮುಚ್ಚಿಸಿ ಕರೆದೊಯ್ದಿತು (ಬಾಳಹೂ. ೧೯೧). **೩.** ಮುಂಚಾಚಿದ ಕಟ್ಟಡದ ರಚನೆ ; ಚಜ್ಜ (?) : ಆ ಛತ್ರವು ಹನ್ನೆರಡು ಕಂಭದ ತೊಟ್ಟಿಯಾಗಿದ್ದಿತು, ನಾಲ್ಕು ಕಡೆಯೂ ನೂಕು (ಚಂಗಾಳ್ವ. ೩೧೪).

**ನೂಕುನೂಕಾಗು** = ಗೊಂದಲವಾಗು : ನಾಕು ಕಡೆಯಲಿ ಕವಿದು ದಳವಿಗೆ ನೂಕುನೂಕಾಯಿತ್ತು ನರನವ್ಯಾಕುಳತೆಯಲಿ ಸವಱತೊಡಗಿದನ ಹಿತಬಲವನವ (ಕುವ್ಯಾದ್ರೋ. ೧೦-೨). [<ನೂಂಕು₁]

**ನೂಂಕುದಳಿ** 'ನೂಂಕುದಱು' ನೋ.

**ನೂಂಕುದಱು,** ನೂಂಕುದಳಿ (ನಾ). (ಕೋಟೆಕಾಳಗದಲ್ಲಿ ಬಳಸುತ್ತಿದ್ದ) ತಳ್ಳುವ ಮರದ ದಿಮ್ಮಿ,—ತೊಲೆ: ಕಡಸಿರಗೆಯ್ದು ನೂಂಕುದಱುಯಿಕ್ಕುವ ಬಲ್ಲಿಸಿ ಭೀತಿಯಂ ಮನಕ್ಕೊಡರಿಸೆ ಲಗ್ಗೆಯೊಟ್ಟಿಳದೊಳ್ಬೆಳವಾದುದು ಕೋಂಟೆಗಾಳೆಗಂ (ಚಂದ್ರಪು.೫-೧೦೫). **ನೂಂಕುದಳಿ :** ಕೋಟೆಯನ್ನೇರಿ ಬರುತ್ತಿರುವ ಶತ್ರುಸೈನಿಕರನ್ನು ಈ 'ನೂಂಕುದಳಿ' ಗಳಿಂದ ನೂಕುತ್ತಿದ್ದರು (ಕರ್ನಾಜ. ೫೮).

[ನೂಂಕು₁+ತಱು]

**ನೂಂಕುಹ** (ನಾ). ನೂಕುವಿಕೆ ; ತಳ್ಳುವಿಕೆ : ವಿಪರೀತಂ . . . ನೂಂಕುಹಂ ಕೃಪೆಹೀನಂ ಅಭಿಹಾರಮುಕ್ಕುಂ (ನಾನಾರ. ೧೫೨).

[ನೂಂಕು₁+-ಹ₂(<-ಪ₂)]

**ನೂಕಡ್ಡೆ** (ನಾ). (ಕರಾ) ಒತ್ತು ಸೇವಿಗೆ : "ಬಂದ ನಂಟರಿಗೆ ನೂಕಡ್ಡೆಯೇ" ಎಂದಳು. ನೂಕಡ್ಡೆ ಎಂಬುದು ತುಳುವಿನಲ್ಲಿ ಸೇವಿಗೆಗೆ ಹೆಸರು (ಮುಗಿಯು. ೧೫೭). [<ನೂಂಕು₁]

**ನೂಕರಿಸು** (ಕ್ರಿ). ನೂಕು ; ತಳ್ಳು ; ದಬ್ಬು : ಕಾಲ್ಬಲಗಳಂ ನೂಕರಿಸಿ ತುಳಿತುಳಿದು ಕೊಂದುದೈ ಚತುರಂಗ ಬಲಗಳಂ ಸುಪ್ರತೀಕ (ತುರಂಗ. ೪೯-೩೮). [<ನೂಂಕು₁+-ಇಸು₃]

**ನೂಕಾಟ** (ನಾ). ನೂಕುನುಗ್ಗು : ಅವರ ನೂಕಾಟದಲ್ಲಿ ನನಗೆ ಉಸಿರು ಸಿಕ್ಕಿದಂತಾಯಿತು (ಆಲಹೂ. ೧೩). [<ನೂಕಾಡು]

**ನೂಕಾಡು** (ಕ್ರಿ). **೧.** ನೂಕು ನುಗ್ಗಿನಲ್ಲಿ ತೊಳಲು. **೨.** ನುಗ್ಗಾಡು : ಬೇಕಾದ ಬಗೆಯ ದಂಡು ನೂಕಾಡಿ ನುಗ್ಗಿ ಬಂದು ಬೇಕಾದುದಾದರೇನು ಸಾಕಾಗದಾಗ ತಾನು (ಗಂಗಾತ. ೧೮-೬) ; ಜನ ತಂತಿಬಲೆಯ ಎರಡು ಕಡೆಯೂ ನೂಕಾಡುತ್ತಿದ್ದರು (ಪುನರು. ೧೮೮). **೩.** ತಳ್ಳಿ ಹಿಂಸೆಪಡಿಸು.

ನೂಕುನೂಕಾಡು (ದ್ವಿರುಕ್ತಿ) : ನೂಕುನೂಕಾಡುವ ವಿಪತ್ತಿನ ವೈಕೃತಿಗೆ ನಾನೊಬ್ಬನೇ ದಿಟವಾಳ್ವೆವಾಳನೆ ಶಿವಶಿವಾಯೆಂದರಸ ಬಿಸುಸುಯ್ದು (ಕುಸ್ತ್ಯಾ.ಅ. ೨೨-೪೭). [ನೂಕು$_1$(<ನೂಂಕು$_1$)+ಆಡು$_1$]

**ನೂಕಿಸು** 'ನೂಂಕಿಸು' ನೋ.

**ನೂಕು$_1$** 'ನೂಂಕು$_1$' ನೋ.

**ನೂಕು$_2$** 'ನೂಂಕು$_2$' ನೋ.

**ನೂಕುತೆರೆ** 'ನೂಕುದೆರೆ' ನೋ.

**ನೂಕುದೆರೆ,** ನೂಕುತೆರೆ (ನಾ). ದಬ್ಬಿಕೊಂಡು ಬರುವ ತೆರೆ; ತಳ್ಳುವ ಅಲೆ; ಏರಿಬರುವ ತರಂಗ: ಬೀಸಿದರು ಬಿಜುಗಾಳಿಯಾಗಿ ಮಹಾಸಮುದ್ರದ ನೂಕುದೆ[ಪಾಠಾಂ. ತೆ]ರೆಯಲಿ ಬೀಸಲುಸಿದರು ಹರಿದರ ವಸಿಯಲಗ್ನಿರೂಪಾಗಿ (ಕುಸ್ತ್ಯಾ.ಅ. ೧೨-೪೯). **ನೂಕುತೆರೆ:** ಪ್ರಳಯ ಜಲಧಿಯ ನೂಕುತೆರೆಗಳ ಲಹರಿಯೋ ಸಿಲುವಾತನಾರಿದಕೆ (ಕುಸ್ತ್ಯಾದ್ರೋ. ೧೦-೨). [ನೂಕು$_1$(<ನೂಂಕು$_1$)+ತೆರೆ$_4$]

**ನೂಕುಧಾರೆ** (ನಾ). ನುಗ್ಗಿಬರುವ ಪ್ರವಾಹ; ಏರಿ ಬರುವ ಪ್ರವಾಹ: ಗಾಳಿಯೆತ್ತಲು ಘಾಡಿಸುವ ಮೇಘಾಳಿಯೆತ್ತಲು ವೈರಿ ಸೇನೆಯು ನಾಳೆಗಡಿತದ ನೊರೆಯ ರಕುತದ ನೂಕುಧಾರೆಗಳ ಏಳಿಗೆಯಲಾ ಛತ್ರಚಮರೀಜಾಳ ನನೆದವು (ಕುಸ್ತ್ಯಾಕ. ೧೦-೨೩).

[ನೂಕು$_1$(<ನೂಂಕು$_1$)+ಧಾರೆ]

**ನೂಕುಬಂಡಿ** (ನಾ). ತಳ್ಳುಗಾಡಿ; ರಿಕ್ಷಾಗಾಡಿ: ನೂಕುಬಂಡಿಯಲ್ಲಿ ಒಬ್ಬ ಆಂಗ್ಲರಮಣಿ, ಕುದುರೆಯ ಮೇಲೆ ಕೆಲವು ಆಂಗ್ಲಪುರುಷಗಣ, ವಾಯುಸೇವನೆಗೆಂದು ಹೊರಹೊರಟಿದ್ದಾರೆ (ಇಪ್ಪಕ. ೧೯೭).

[ನೂಕು$_1$(<ನೂಂಕು$_1$)+ಬಂಡಿ$_1$]

**ನೂಗಿಸು** 'ನೂಂಕಿಸು' ನೋ.

**ನೂಗು** 'ನೂಂಕು$_1$' ನೋ.

**ನೂಡನುಳೂರ್** (ನಾ). ಒಂದು ಊರಿನ ಹೆಸರು: ನೂಡನುಳೂರೊಳ್ ಕಾದಿದನ್ದು ಅಯ್ನಾರ್ವ್ವರಿಗಾಗಿ ರಾಜಪೊಷಣವರ್ ಕಾದಿ ಸತ್ತು ಸಗದೊಳ್ ಇಟ್ದಿರ್ಮ್ (ಪ್ರೈಅಶಿ. ೧೯೨೩, ೩೩-೩; ?). [?+ಊರ್]

**ನೂತ$_1$** 'ನೂಲ್$_1$' ಪರಾ.

**ನೂತ$_2$** (ಗು). ಹೊಗಳಿಸಿಕೊಂಡ; ಕೀರ್ತಿಸಿಕೊಂಡ; ಸ್ತುತಿಸಿಕೊಂಡ: ಅವನೀನೂತಯಶಂ ಯಶೋಧವಳಿತಾಶಾಮಂಡಳಂ ಮಂಡಳಾಗ್ರವಿಲೂನಾರಿಬಲಂ ... ಶ್ರೀಮಚ್ಚಮೂವಲ್ಲಭಂ(ಎಕ. VI, ಚಿಕ್ಕಮ. ೧೬೧-೬೬ ; 1137); ತಾಳಸ್ಥೂಳಕರಂ ... ದಾನಾರ್ದ್ರಗಂಡಸ್ಥಳಂ ಲೀಳಾಯಾನನುದಗ್ರ ಪಲ್ಲವನದೇಂ ತಾನಾಯ್ತೊ ನೂತಕ್ಷಮಾಶೀಳಂ ಕೇಸರಿಗಂ ನಿರೀಕ್ಷಣಸುಖ ಶ್ರೀಪಂಜರಂಕುಂಜರಂ (ಅರ್ಧನೇ. ೫-೯೦). 'ವಿನೂತ' ಪರಾ. [ಸಂ.]

**ನೂತನ** (ಗು). ೧. ಹೊಸ; ಅಭಿನವ; ನವೀನ: ನೂತನಮಣಿಭೂಷಣ ಬಾಲಾತಪಸಿತಮಣಿಮರೀಚಿ ಚಂದ್ರಾತಪಪಿಷ್ಟಾತಕಪರಾಗಪಿಂಜರಿತಾತಪಮಯಮಾದುದಾ ಧರಾಧಿಪಭವನಂ (ಆಪು. ೭-೧೧೫); ಬುಧರಿರ್ದು ನೋಟ್ಟಿಪುದು ಪುರಾತನನೂತನ ಕಾವ್ಯರೇಖೆಯಂ (ಗದಾಯು. ೧-೪೭); ಹೆಜ್ಜೆ ಹೆಜ್ಜೆಗೂ ಕ್ರಾಂತಿಕಾರರಲ್ಲಿ ನೂತನ ಉತ್ಸಾಹ, ಆಶಾಭಾವನೆ ಬೆಳೆಯಲಾರಂಭಿಸಿತು (ಆತ್ಮಾರ್ಪ. ೧೪೩). ೨. ಎಳೆಯ. ೩. ತಾಜಾ. (ನಾ). ೪. ಹೊಸದು; ನವೀನವಾದುದು: "ನವ್ಯಂ, ನವಂ, ನವೀನಂ, ನೂತನಂ, ಅಭಿನವಂ, ನೂತ್ನಂ—ಈ ೬ ಪೊ(ಹೊ)ಸತು" (ಹಲಾಯು. ೧೧೪-೨೬); ನೂತನವಾದುದಕ್ಕೆ ಸೋತವನು ನಾತದ ವಸ್ತುವಿಗೆ ಸೋತಾನೇ? (ಗಾದೆ). ೫. ಅಪೂರ್ವವಾದುದು; ಸುಂದರವಾದುದು: ಇದು ಪೊಸರೀತಿ ... ಲೇಸಿದು ರಸಸ್ಥಿತಿ ನೂತ್ನಮಿದದಲ್ತೆ ನೂತನಂ ಪದರಚನಾವಿಲಾಸಮಿದು ಕಬ್ಬಮಪೂರ್ವಮಿದೆಂದು ... ಕೀರ್ತಿಸೆ ಬಿವಿಂರ್ಜವೆನೀ ಸುಭಗಪ್ರಬಂಧಮಂ (ಶಬಶಂ. ೧-೨೬). ೬. ಈಚಿನವನು; ನವೀನ: ನೂತನರುಂ ಪುರಾತನರು ಮುಪ್ಪ ಮಹಾಕವಿಗಳ್ನವಿತ್ವ ವಿಖ್ಯಾತಿಗೆ ... ಕೈ ಮಿಗೆ ಪೇಟ್ದಪೆನೀ ಪ್ರಬಂಧಮಂ (ಪುಲ್ಲಿಪು. ೧-೫೧). ೭. ನೂತನ ಕಾಲದ ಶರಣ: ವರ ಪುರಾತನ ಪುಣ್ಯಚರಿತೆಯಂ ನೆನೆದು ವಿಸ್ತರಿಸುವೆಂ ಧರೆಯ ನೂತನರ ಚಾರಿತ್ರಮಂ (ಲಶಿಚಿಂ. ೩೪ ಸೂಚನೆ). [ಸಂ.]

**ನೂತನಂಬಡೆ,** ನೂತನವಡೆ(ಕ್ರಿ).೧. ಹೊಸತನವನ್ನು ಹೊಂದು; ನವೀನತೆಯನ್ನು ಪಡೆ. ೨. ಸೊಗಸಾಗು; ಚೆಲುವಾಗು; ಅಂದವಾಗು: ಪಿಡಿದ ಲೀಲಾಬ್ಜಂ ನೂತನಂಬಡೆಯೆ (ಗಿರಿಕ. ೨-೧೦೫ ಪ).

**ನೂತನವಡೆ:** ೨. ಆನೆಯ ಶಾಲೆ ಹಯಾವಳಿಗಳ ಲಾಯ ಜೀನಶಾಲೆಗಳಲ್ಲಲ್ಲಿಪಿನೆಂಬೆ ನೂತನವಡೆದಿಹುವುಚಿ ನೋಳ್ಪ ಮಾನಿಸರುಗಳ ಕಣ್ಮನಕೆ (ಕಂಸವಿ. ೨-೬೮). [ನೂತನ+ಪಡೆ$_1$]

**ನೂತನಮಾರ್ಗ** (ನಾ). ಹೊಸ ರೀತಿ,—ದಾರಿ: ಈ ತೆಜದಿಂದರ್ಥಾಲಂಕೃತಿಯೋತು ವಿಭೇದಮನಾದಮೆಲ್ಲಮಂ ನೂತನಮಾರ್ಗಮೆಸೆಯೆ ಪೇಟ್ದಂ ಖ್ಯಾತಯಶಂ ಕವಿತಾಗುಣೋದಯಂ (ಕಾವ್ಯಾವ. ೭೭೮).

[ನೂತನ+ಮಾರ್ಗ]

**ನೂತನವಡೆ** 'ನೂತನಂಬಡೆ' ನೋ.

**ನೂತನಶಕ್ತಿ** (ನಾ). ನವೀನ ಶಕ್ತಿ,—ಸಾಮರ್ಥ್ಯ: ಯಾವುದೋ ಅಪೂರ್ವ ನೂತನಶಕ್ತಿಯೊಂದು ಅವನನ್ನು ಅವಳೆಡೆಗೆ ಸೆಳೆಯುತ್ತಿತ್ತು (ಪುನರು. ೧೯೫). [ನೂತನ+ಶಕ್ತಿ]

**ನೂತನೆ** (ನಾ). ಹರೆಯದವಳು; ಯೌವ್ವನೆ; ಜವ್ವನೆ: ಎಸೆವುಡಿಗೆಯು ಪೊಸಚೆಲ್ವೆಗೆ ಸುಜ್ಜೊಡೆಯ ನೂತನೆಗೆ ... ಸೇವಳದ ನಾಯಕಿಗೆ (ಗಿರಿಕ. ೩-೯೧ ಪ). [ಸಂ. ನೂತನಾ]

**ನೂತಿ$_1$** (ನಾ). ನೂಲಿನ ಅಳತೆಯ ಒಂದು ಪ್ರಮಾಣ: ಸಣ್ಣಿಸಿ ನೂತು ಬಣ್ಣಿಸಿ ಹುಯ್ದು ಒಪ್ಪೆಂದರುವೆಗೆ ಅಪ್ಪಿಗೆ ಹಚ್ಚಿ ಇಪ್ಪತ್ತು ಮಳಕೆರಡು ನೂತೀನೇ ನೂತು ಮಳಕೊಂದು ದುಡ್ಡು ಕಲ್ಲುಗಳನೇ ತರಿಸಿ ನಾಲಕು ಮಂದಿ ಜಾಡರನೇ ಕರಸಿ (ನಾಪದ. ೧೪೧).

[<ನೂಲ್$_2$]

**ನೂತಿ$_2$** 'ಲೂತಿ' ನೋ.

**ನೂತಿಗಣ್ಣು** (ನಾ). ನೂತಿಹುಣ್ಣು ಇರುವ ಕಣ್ಣು: (ಕಿ). 'ಕಣ್ಣುನೂತಿ' ಪರಾ.

[ನೂತಿ$_2$ (<ಲೂತಿ) + ಕಣ್ಣು (<ಕಣ್)]

**ನೂತಿವ್ರಣ** (ನಾ). ನೂತಿಯ ಹುಣ್ಣು: ಗೋರೋಜನವನ್ನು ಧರಿಸಿದಲ್ಲಿ ... ಕಿಂಚಿತ್ ಭೇದಿಕರವಾಗಿ ನೂತಿವ್ರಣ ಸಕಲವನ್ನೂ ಹೋಗಲಾಡಿಸುವುದು (ಸಕವೈ. ೪೨). [ನೂತಿ$_2$ (<ಲೂತಿ)+ವ್ರಣ]

**ನೂತಿಹುಣ್ಣು** (ನಾ). = ನೂತಿವ್ರಣ: ನೂತಿಹುಣ್ಣಿಗೆ:—ಬಾಳೆ ಹೂವು, ಹುರುಳಿ, ಗೇರಹರಳು ಇವೆಲ್ಲಟ್ಟು ಇಳುಹಿ, ಗೇರಹರಳು ಮೆಲಲು ನೂತಿ ಮಾಣ್ಗುಂ (ವಿಸ್ತೈವಿ. ೬೩).

[ನೂತಿ$_2$ (<ಲೂತಿ) + ಹುಣ್ಣು (<ಪುಣ್)]

**ನೂತು** 'ನೂಲ್$_1$' ಪರಾ.

**ನೂತೆ** (ನಾ). ೧. ಹೊಗಳಿಕೆಗೆ ಪಾತ್ರಳಾದವಳು; ಸ್ತುತ್ಯಳಾದವಳು. ೨. ಪ್ರಸಿದ್ಧಳಾದವಳು: ಆತನ ವಧು ತಾಂ ಶ್ರೀಮತಿ ನೂತೆ[ಪಾಠಾಂ. ನೂತ] ಯಶೋನ್ವಿತೆಯಾಕೆಗಾ ದಿವಿಜೆ ತನೂದ್ಭೂತೆಯೆನಿಸಿರ್ದಳೀ ವಧು ಮಾತೇಂ ಮಾದೇವಿಯಾಗಿ ಪದ್ಮಾವತಿಯುಂ (ನೇಮಿಪು. ೧೪-೩೫). [ನೂತ$_2$+-ಎ$_2$]

**ನೂತ್ನ** (ಗು). ೧. = ನೂತನ ೧: ನಿಯತಂ ಚತುರನುಯೋಗ ಪ್ರಯೋಗ ಪೂರ್ವಾನುಯೋಗ ಸಾಗರವೀಚೀಚಯದಿಂ, ಪೊಜಪೊಣ್ಮಿದುದತಿಶಯ ಸುಕಥಾನೂತ್ನರತ್ನರಶ್ಮಿಕಳಾಪಂ (ಸುಕುಮಾ. ೧-೬೩) ; ನೂತ್ನರತ್ನಾಭರಣಂಗಳಿಂ ಶೃಂಗಾರಂಗೆಯ್ದು ಪರಿವೇಷ್ಟಿಸಿರ್ದಂಗನಾಜನಂಗಳಿಂ . . . ನೆಗಟುತ್ತುಮಿರೆಯಿರೆ (ಜಗವಿ. ೨-೩೯ ಪ) ; ನೂತ್ನ ಶಶಿಕಾಂತನಿರ್ಮಳರತ್ನಚ್ಛವಿಸಹಜವಸನಭೂಷಣಮಾಳಂ . . . ಮಹಿಮನೆಸೆದನಂದಹಮಿಂದ್ರಂ (ಪಾರ್ಶ್ವಪು.೧೨-೯೨) ; ನರನ ಪ್ರಾಕ್ತನಕೆ ನೂತನಸತ್ತ್ವ ಬೆರೆತು ಪರಿವುದೀ ವಿಶ್ವಜೀವನಲಹರಿಯನವರತ ಚಿರಪ್ರತ್ನನೂತ್ನ ಜಗ (ಪಂಕುಕ. ೧೨೯). ೨. ಸುಂದರವಾದ ; ಸೊಗಸಾದ ; ಚೆಲುವಾದ : ಆ ರಮಣೀಯ ದೇವಾಯತನನೂತ್ನಸ್ತಂಭವಂ ನೆಮ್ಮಿ ನಿಂದಿರ್ದು ತದಂಗನಾಗೀತಾವಸಾನಸಮಯಮಂ ಪಾರುತ್ತಮಿರ್ಪುದುಂ (ಕಾದಂಪೂ. ೬೮೬). (ನಾ). ೩. ಹೊಸದು ; ನೂತನವಾದುದು : "ನವ್ಯಂ, ನವಂ, ನವೀನಂ, ನೂತನಂ, ಅಭಿನವಂ, ನೂತ್ನಂ—ಈ ೬ ಪೊ(ಹೊ)ಸತು" (ಹಲಾಯು. ೧೧೪-೨೬). ೪. ಸುಂದರವಾದ ವಸ್ತು ; ಮನೋಹರವಾದ ವಸ್ತು : ಶ್ರೀಜಾನಕೀಶಿರೋರತ್ನಮಂ ಸಂಪತ್ಸುಮಾಜಗಳ ಕೈಗೈವ ಯತ್ನಮಂ ಶುಭವಿಭವರಾಜಿಗಳನೊಲಿದೀವ ನೂತ್ನಮಂ ತಂದಿತ್ತ ಮಾರುತಿಯ ನೋಡಿ (ವೆಂಕಾರಾ. ೫-೧-೧). [ಸಂ.]

**ನೂತ್ನಾಗಾರ** (ನಾ). ಹೊಸ ಮನೆ : ಕೆಂಪಿನ ಪೂವನೆಣ್ಣೆದಲೆ ನೂತ್ನಾಗಾರಮಂ ದೈತ್ಯರಂ ಕನಸೊಳ್ ಕಾಣಲು ಬಾರದ್ಯೆ (ಸೋಮೇಶ. ೭೦).
[ನೂತ್ನ + ಆಗಾರ]

**ನೂನ$_1$**, ನೂನು (ನಾ). ೧. ಕೊರತೆ ; ಅಭಾವ ; ನ್ಯೂನತೆ : ಪಟಿಯ ಸೀರೆಯಂತೆ ಗುಣದೊಳ್ ನೂನವಾಗದೆ ಕಾಗೆಯಂತೆ ಪೆಜರ್ಗೆ ಪೀಡೆಯಂ ಮಾಡದೆ (ಧರ್ಮಾಮೃ. ೫-೯೯) ; ಯತ್ವಲೋಪಕ್ಕೆ— ಅಮಾವಾಸ್ಯಾ—ಅಮಾಸೆ, ಅವಸೆ . . . ನ್ಯೂನ-ನೂನ (ಶಮದ. ೨೮೧ ಪ್ರಯೋ) ; ಆ ನದಿಗೆ ಬಲವಂದು ಬ್ರಹ್ಮಜ್ಞಾನಮುನಿಕೋಟಿಗಳು ನಿತ್ಯಸ್ನಾನ ಸಂಧ್ಯಾವಂದನಾನುಷ್ಠಾನವಿಧಿಗಳನೂ ನೂನವಿಲ್ಲದೆ ರಚಿಸಿ . . . ಜಪಿಸುತಲಿಹರು (ಅನಂರಾ. ೧-೩-೧೭). ೨. ತುಚ್ಛವಾದುದು ; ಹೀನವಾದುದು : ಕಾಯವೆಂಬ ಕದಳಿಯನೆ ಹೊಕ್ಕು ನೂನ ಕದಳಿಯ ದಾಂಟಿ ಜೀವ ಪರಮರ ನೆಲೆಯನಜಿದು ಜನನ ಮರಣವ ಗೆದ್ದು ಭವವ ದಾಂಟಿದಲ್ಲದೆ ಘನವ ಕಾಣಬಾರದೆಂದರು (ಲಿಂಗಪ. ೬೨-೫೦). ೩. ಭಂಗ ; ಭಗ್ನತೆ : 'ನೂನಿಸು' ಪರಾ. **ನೂನು :** ೪. ವಿಕಲತೆ; ವಿಕಾರ : ಅವಯವಂಗಳು ನೂನು ಕೂನಿಲ್ಲದೆ ಬರೆಗಳ ಹಾಕದೆ ಇರುವಂತಹ ಗೋವ ತಂದು (ಚನ್ನಪ. ೪. ೭೨-೧೬೩). [<ಸಂ. ನ್ಯೂನ]

**ನೂನ$_2$** (ನಾ). ದಿಟ ; ಸತ್ಯ ; ನಿಜ : ನೂನವಿದು ಪ್ರಾಣಾದಿ ಪಂಚಕ ಮಾನನಿಧಿ ಪವಮಾನತತ್ತ್ವದ ಸಾರದಿಂದಾಯ್ತು (ಅಮೃತ. ೪-೨೦) ; ನಾನು ನಾನೇ ನಾನೆನುತ್ತೆ ಕಿರಿಕೊಡದ ನೀರ್ ಗಾನಗೆಯ್ವುದು ಹೆಮ್ಮೆಯಿಂ ಕಡಲ ಮರೆತು ನೂನದಿಂದೆಲ್ಲವೆಸುವಬ್ಧಿಯೊಳಗದನಿರಿಸೆ ಮೌನವದು ಮಣ್ಮರಗಿ (ಪಂಕುಕ. ೯೦೧). [<ಸಂ. ನೂನಂ]

**ನೂನಂ** (ಅ). ೧. ನಿಶ್ಚಯವಾಗಿ ; ನಿಜವಾಗಿ ; ಖಂಡಿತವಾಗಿ : ಆನುಂ ಪೊಱಮಡಲಾಱೆಂ ನೂನಂ ಮನವಿಕ್ಕಿ ಪಸಿದು ಸಾಯದೆ ನೀಮೆತ್ತಾನುಂ ಪಡೆವೊಡೆ . . . ಅಱಿಸಿ ತಿನ್ನಿಮೆನಗಂ ತನ್ನಿಂ (ಪಂಚತಂ. ೧೪೧-೯) ; ನೂನಂ ಹಸಿವು ನೀಗಿತೇನುಂಟು ಸಂದೇಹಮಾನಂದಮಾಯ್ತೆಂದು ನಲಿದನಾ ಯತಿವರನುಂ(ದುರಪು.೧೯-೧೫). ೨. ಬಹುಶಃ; ಪ್ರಾಯಶಃ. [ಸಂ.]

**ನೂನಿಸು** (ಕ್ರಿ). ಮುರಿ ; ಭಗ್ನವಾಗು : ಆ ನರೇಂದ್ರಾಟೋಪವಾದಿ ಚುಂಬನದಿ ಪಲ್ಮೊನಿಸಲ್ ಭೋಗವಾರಾತಾರು ಕೊಲುವರೆಂಬಾ ನುಡಿ ಭಯಂಕರಕೆ ಬಿಡೆವುಯೆನುತೊತ್ತಿಬಹರಿಂಗಸ್ತ್ರದಾನಿಸಿದರು (ಜಿನಮು. ೧೫-೨೧). [ನೂನ$_1$+-ಇಸು$_3$]

**ನೂನು** 'ನೂನ$_1$' ನೋ.

**ನೂಪುರ** (ನಾ). ೧. (ಗೆಜ್ಜೆಗಳುಳ್ಳ) ಕಾಲಿನ ಆಭರಣ ; ಕಾಲ್ಗಡಗ ; ಕಾಲಂದುಗೆ : "ತುಲಾಕೋಟಿಃ, ನೂಪುರಃ—ಈ ೨ ಗೆಜ್ಜೆ" (ಹಲಾಯು. ೯೨-೪೦೭) ; ವರಹಂಸಕದಂಬಕಮದು ಶರದಂಬುದಮಲ್ತು ಮುಖರ ನೂಪುರಸಂವಾದಿರವಂ ನೆಗಟ್ದಪ್ಪುದು (ಕವಿಾ. ೩-೧೦೩) ; ಸುರಾಸುರೇಂದ್ರವೃಂದವಂದಿತಪಾದಂಗೆ ಮೃದುಪದಂಗಳೊಳ್ ಕಲರವರಣಿತ ಮಣಿನೂಪುರಂಗಳಂ ತುಡಿಸಿ (ಆದಿಪು. ೭-೧೦೬ ಪ); ಅನಲಂ ರೂಪಿನ ಪಕ್ಷಪಾತದೊಳೆ ತಾನೇಟ್ಟೆಂದು ನೀರೇಜಗರ್ಭನ ಗೆಯ್ತಂ ಗಡಮು ಪ್ರಮಾಣಮೆನುತಂ ತಜ್ಜಾತಿ ಸಂಶೋಧನಕ್ಕನುರಾಗಂಬೆರಸಾದಮುಪ್ಪಿದನೊ ಪೇಟೀಗಳೆಂತೆಂಬಂದದಿಂದೆನಸುಂ ನೂಪುರರತ್ನಕಾಂತಿ ತನುವಂ ಪರ್ವಿತ್ತು ತನ್ವಂಗಿಯಾ (ಕಾದಂಪೂ. ೪೬); ಪುಷ್ಕರಿಣಿಯಿಂ ಸರೋವರದಿಂ ಕೌತುಕಮನವರ್ಕಾಂಡಕರ್ಕೌತುಕ ಮಂಗಳಪುರಮನುರ್ವರಾನೂಪುರಮಂ (ಪಂರಾಮಾ. ೩-೩೪) ; ಸೀತೆಯ ಕಿವಿಗೆ ಕೇಳಿಸಿತ್ತೊಂದು ಕಿಂಕಿಣಿ ಕನಕನೂಪುರದ ! (ಶ್ರೀರಾಮಾ.೩೩೫-೧೦೮). ೨. [ನಾಟ್ಯ] ನೃತ್ಯದಲ್ಲಿ ಒಂದು ಭಂಗಿ; "ಕಾಲುಗಳನ್ನು ಸ್ವಸ್ತಿಕದಂತೆ ನಿಲ್ಲಿಸಿ, ಪಾದಗಳನ್ನು ಮುಂಗಾಲು ಮತ್ತು ಹಿಮ್ಮಡಿಗಳಲ್ಲಿ ರೇಚಿತ ಮಾಡುವುದು" (ಲಾಸ್ಯರಂ. ೩೨೧ ಗದ್ಯಾನುವಾದ) : ಪದಮೊಂದಂ ಕುಂಚಿತಮಂ ಪುದಿದುಂ ಪಿಂತಣ್ಗೆ ನಿಮಿರ್ದು ಹಿಮ್ಮಡದಿಂದಂ ಒದವಿ ತಾಗಲ್ಕೆ ತ್ರಿಕಮುಮನದನಗ್ರದ ತಲದೆ ತಟ್ಟೆ ನೂಪುರಮೆನಿಕುಂ (ಲಾಸ್ಯರಂ. ೬-೪೭). [ಸಂ.]

**ನೂಪುರಕ್ವಣಿತ** (ನಾ). ಕಾಲುಕಡಗದ ಶಬ್ದ ; ಅಂದುಗೆಯ ನಾದ : ಅಲ್ಲಿ ಕೆಲರ್ ನಿಜಚರಣಮಣಿನೂಪುರಕ್ವಣಿತಮಂ ಪೆಣ್ಣಂಚೆಯಿಾಂಚರಮೆ ಗೆತ್ತೆಳಸುವ ರಾಜಹಂಸನಂ ಕಂಡು ಕನಲ್ದು (ಮಲ್ಲಿಪು. ೩-೩೪). [ನೂಪುರ+ಕ್ವಣಿತ]

**ನೂಪುರಝೋಂಕೃತ** (ನಾ). = ನೂಪುರಕ್ವಣಿತ : ನೂಪುರಝೋಂಕೃತಮೆಸೆಯಲ್ ಚಾಪಳಕರಲೋಚನಾಂಶು ನಿಮಿರುತ್ತಿರಲ್ (ತ್ರಿಷವಿ. ೧೧-೧೯). [ನೂಪುರ + ಝೋಂಕೃತ]

**ನೂಪುರರಣಿತ** (ನಾ). = ನೂಪುರಕ್ವಣಿತ : ಪಳಂಚುವ ರತ್ನಮಾಲೆಗಳೊಳಮಡಿಯಿಡುವ ರಮಣಿಯರ ನೂಪುರರಣಿತಕ್ಕೆಳಸಿ ಬರ್ಪ ಅಂಚೆವಿಂಡಿನಿಂಚರದೊಳಮುಲ್ಲಸಿತಮಾದ ಕಾಂಚೀಕ್ರೇಂಕಾರಕ್ಯುತ್ಕಂಠಂಗಳಾದ ಸಾರಸಂಗಳ ಕೂಜಿತಂಗಳೊಳಂ (ಕಾದಂಪೂ. ೬೭).
[ನೂಪುರ+ರಣಿತ]

**ನೂಪುರರವ** (ನಾ). = ನೂಪುರಕ್ವಣಿತ : ಸೀತಾರಾಮಲಕ್ಷ್ಮಣರ್ ವೃದ್ಧನಂ ಪರ್ಯಂಕಕೆತ್ತಿ ಸಂತೈಸುತಿರೆ, ವರ್ಧಿಸಿತೊ ನೂಪುರರವಂವೆರಸಿ ಸ್ತ್ರೀಜನಾಕ್ರಂದನಂ (ಶ್ರೀರಾಮಾ. ೯೧-೩೫೮).
[ನೂಪುರ+ರವ$_1$]

**ನೂಪುರಾರವ** (ನಾ). = ನೂಪುರಕ್ವಣಿತ : ಅವತಂಸೋತ್ಪಲತಾಡನಂ ಕನಕಕಾಂಚೀಬಂಧನಂ ನೂಪುರಾರವಝಂಕಾರಿತ ಚಾರುವಾಮಚರಣಾಘಾತಂ . . . ಚಕ್ರಿಗಿತ್ತುವಲಂಪಂ ಪ್ರಣಯಪ್ರಕೋಪಸುರತಪ್ರಾರಂಭದೊಳ್ ಕಾಂತೆಯಾ (ಆದಿಪು. ೧೨-೪೭). [ನೂಪುರ + ಆರವ]

**ನೂಪುರೋಲ್ಲಪನ** (ನಾ). = ನೂಪುರಕ್ವಣಿತ : ನೃಪಲೀಲಾಪರಿಷನ್ನಿಕೇತನಪುರೋಭಾಗಕ್ಕೆ ಸಾರ್ತಂದಳ್ . . . ನೂಪುರೋಲ್ಲಪನವ್ಯಾಜದಿ ನಾಗಳೇಸುವೆಸನಂ ಕಾಮಂಗೆ ಪೇಟ್ವಂದದಿಂ (ಚಂದ್ರಪು. ೫-೧೧೪).
[ಸಂ.]

**ನೂರಡಿ** (ನಾ). ೧. ನೂರು ಅಡಿ. ೨. ಶತಪಥ.

**ನೂರಡಿ ಮಾಡು** = ಶತಪಥ ಹಾಕು : ವನಮಾಲಿಯು ಬಹಳ ರಾತ್ರಿಯ ವರೆಗೆ ಹೊರಬಂಕದಲ್ಲಿ ಅದೆಷ್ಟೋ ಬಾರಿ ನೂರಡಿ ಮಾಡಿಮಾಡಿ ತನ್ನ ಕೋಣೆಯ ಮನೆ ಹೊಕ್ಕನು (ಇಪ್ಪಕ. ೪೧೦).
[ನೂರು (<ನೂಱು$_2$) + ಅಡಿ$_1$]

**ನೂರು** 'ನೂಱು$_2$' ನೋ.

**ನೂರುಕಾಲ** 'ನೂರ್ಕಾಲ' ನೋ.

**ನೂರುಮುಡಿ** 'ನೂರ್ಮುಡಿ' ನೋ.

**ನೂರೆರ್ದೆ** (ನಾ). ೧. ನೂರು ಎದೆ. ೨. (ಅಲಂ) ಅತಿಶಯವಾದ ಧೈರ್ಯ,—ಕೆಚ್ಚು : ಅಂದಿನ ಆ ಸುಳ್ಳಾಲೆಯೋಲೆಗೆ ಮಹಾಸನ್ನಿಧಾನದ ಶ್ರೀಹಸ್ತದ ಮುದ್ರೆಯನ್ನೇ ಕಯ್ಬರೆದಂಕಿಸುವಂತೆ ನಡೆಯಿಸಿದ ನೂರೆರ್ದೆಯ ವಂಚನೆಯ ದ್ರೋಹದ ಸಿದ್ಧಿಯು (ಬೆಟ್ಟಅ. ೧೬೧-೧೬).
[ನೂರು (<ನೂಱು$_2$)+ಎರ್ದೆ]

**ನೂರೆಲೆ** 'ನೂಱೆಲೆ' ನೋ.

**ನೂರೆಲೆಗೆಣಸು** (ನಾ). ಒಂದು ಬಗೆಯ ಗೆಣಸು : ತೂನಗೆಣಸು, ಮುಡಿಗೆಣಸು, ನೂರೆಲೆಗೆಣಸು, ತುಣಗೆಣಸು, ದಂಡಾಲು (ಮೈಜಗ. ೩೧-೫೯೨). [ನೂರು (<ನೂಱು$_2$)+ಎಲೆ$_1$ + ಗೆಣಸು (<ಗೆಟಿಸು)]

**ನೂರ್ಕಡಿ** (ನಾ). ನೂರು ತುಂಡು ; ನೂರು ಚೂರು ; ಅನೇಕಾನೇಕ ಚೂರು : ಜಿತೇಂದ್ರಿಯರ ಯರ್ದೆಗೆ ಲಗ್ಗೆಯಂ ತಾಗಿ ನೂರ್ಕಡಿಗಳನ್ನೂ ಮಾಳ್ಪಾ ದುರುಳ ಕಾಮನ ಕನಕ ಕಂತುಕಾಯುಗಳಮಂ ನೆರೆ ಪೋಲ್ವ ನುಣ್ಮಡಂ ಮಪ್ಪುತಿರಲು (ನಪಮೋ. ೨೩-೧೮).
[<ನೂಱು$_2$+ಕಡಿ$_3$]

**ನೂರ್ಕಳ** (ನಾ). ಒಂದು ಬಗೆಯ ಮರ : ನೂರ್ಕಳ (ಚಾರ).— ಮಧ್ಯಮ ಆಕಾರದ ವೃಕ್ಷ. ಕಟ್ಟಿಗೆಯೊಳಗಿನ ಗಂಡು ಗಟ್ಟಿ ಇರುತ್ತದೆ . . . ಫಲವು ಕರಿ ಛಾಯೆಯ ಅಂಜೀರೀ ಬಣ್ಣದ್ದಾಗಿ ರುಚಿಯುಳ್ಳದ್ದಿರುತ್ತದೆ (ಕಭಾಗ. ೪೨). [ ? ]

**ನೂರ್ಕಾಲ,** ನೂರುಕಾಲ (ನಾ). ಬಹಳ ಕಾಲ ; ಅನೇಕ ವರುಷ : ಹೊಸರಕ್ತದವರು ಹೆಮ್ಮೆಯಿಂದ ಘೋಷಿಸಿದರು—ಬಾಳು ಶಾಂತವ್ವ ನೂರ್ಕಾಲ ಉಘೇ ! ಉಘೇ ! (ಸಪತಿ. ೫). **ನೂರುಕಾಲ:** ನೂರುಕಾಲ ಬಾಳು ಮಗು (ರೂಢಿ).
[<ನೂಱು$_2$ + ಕಾಲ]

**ನೂಚ್ಛಾಸಿರ** 'ನೂರ್ಛಾಸಿರ' ನೋ.

**ನೂರ್ಛಾಸಿರ,** ನೂಚ್ಛಾಸಿರ (ನಾ). ನೂರು ಸಾವಿರ ; ಒಂದು ಲಕ್ಷ : ನೂಱ ನೂರ್ಛಾಸಿರಮಂ ವಿಗುರ್ವಿಸಿ ವಿಮಾನದ ಯಾನದ ವಾಹನಂಗಳಗ್ರೇಸರಸದ್ವಿಮಾನಮುಮನರ್ಚನೆಯೊಳ್ ದೊರೆಕೊಂಡ ಚೆಲ್ವುಮಂ ಅವಗಯಿಸಿ (ಶಾಂತಿಪು. ೧೦-೨) ; ಅಂತ್ಯಲೋಪಕ್ಕೆ — ನೂರ್ಮುಡಿ, ನೂರ್ಮಾತು, ನೂರ್ಛಾಸಿರಂ, ಸಾಸಿರ್ಮುಡಿ, ಸಾಸಿರ್ವರ್ (ಶಮುದ. ೧೯೧ ಪ್ರಯೋ). **ನೂಚ್ಛಾಸಿರ:** ತನಗೆಡೆವಿಡದತಿಚಪಲಂ ಮನಮದು ನೋಡೊಂದೆ ನೂಱು ನೂಚ್ಛಾಸಿರಮಾಯ್ತೆನೆ ಬಿಡದೆ ಪಿಡಿದು ನೃಪರಂ ಕನಲ್ಚಿ ತನ್ನಿಚ್ಛೆಗೆಯ್ವುದೊಂದಚ್ಚರಿಯೇ (ಕಾದಂಪೂ. ೫೯) ; ಸಂಖ್ಯೆಗೆ— ಇಚ್ಛಾಸಿರಂ, ಎಣ್ಛಾಸಿರಂ, ನೂಚ್ಛಾಸಿರಂ, ಪದಿನೆಣ್ಛಾಸಿರಂ (ಶಮುದ. ೧೪ ಪ್ರಯೋ). [<ನೂಱು$_2$+ಸಾಸಿರ]

**ನೂರ್ಮುಡಿ,** ನೂರುಮುಡಿ, ನೂಱುಮುಡಿ (ನಾ). ನೂರರಷ್ಟು ; ನೂರು ಪಟ್ಟು : ಗಂಡಗಾಡಿ ನೂರ್ಮುಡಿ ಮಿಗಿಲಾದುದಾ ರಥಮನೇಱಿಲೊಡಂ ಪಡೆಮೆಚ್ಚೆ ಗಂಡನಾ (ಪಂಪಭಾ. ೮-೧೦೧); ಸಿರಿ ಪರುಸ ಕಲ್ಪತರು ಸುರಧೇನುಗಳು ಬಂದ ಹರುಷದಿಂ ನೂರ್ಮುಡಿಯೆನಿಪ್ಪ ಸಂತಸದಿಂದ . . . ನಲಿದು ಬೆಸಸುವುದು (ತಿರುಶ. ದೇ. ೧೧-೮) ; ಮದಗಜಗಮನೆಯರಡಿಯಿಟ್ಟು ನೂರ್ಮುಡಿ ಮದನನ ನೋಡಿದರೊಸೆದು (ಭರಚ. ೨೧-೭೫) ; ಸಿಡುತೋಳ ಬಲ ನೂರ್ಮುಡಿಯಪ್ಪುದು ನುಡಿ ತಾಯೆ, ನಿನ್ನಯ ನುಡಿಬಲದಿ (ವಿಸೀಗೀ. ೫೧-೫). **ನೂರುಮುಡಿ :** ಅವನಿಯೊಳು ದಶಕಂಠ ಮೊದಲಾದವರುಗಳ ವಿಕ್ರಮಕೆ ನೂರುಮುಡಿಯುಹನು ಕೇಳ್ಕೆ ಶುಂಭದಾನವನೆಂದನಾ ಮುನಿಪ (ದೇವೀಪು. ೫-೨೦) ; ನಾನೀ ಪೊಳ್ತು ತೊರೆವ ರಾಜ್ಯಕೆ ನೂರುಮುಡಿ ಶಾಶ್ವತದ ಸಿರಿಯ ಸಾಮ್ರಾಜ್ಯಮಹುದೆನಗೆ (ಶ್ರೀರಾಮಾ. ೮೧-೯೫). **ನೂಱುಮುಡಿ :** ಸೀತೆಗೆ ಜಾಹ್ನವಿಗೆ ರವಿಸತಿಗೆ ನೂಱುಮುಡಿ . . . ಗಂಗಾಯಿ (ಬಸಪು. ೪-೩೦) ; ತೋಱಿದನು ತಾ ಬಳಿಕವಗೆ ಹದಿನಾಱು ಬಣ್ಣದ ಪುಟದ ಚಿನ್ನಕೆ ನೂಱುಮುಡಿಯೆನೆ ಹೊಳೆಹೊಳೆವ ಹೊಮ್ಮಱಿಯ ರೂಪಕವ (ತೊರರಾ. ೩-೮-೧೪); ಮುಂದೊರ್ವ ವೀರಶೈವಾಚಾರ್ಯನೀ ಧರೆಗೆ ಬಂದಿದಕೆ ನೂಱುಮುಡಿಯಾಗಿ ಬೆಳಗಂ ತೋರ್ಪನೆಂದು ಸೂಚಿಸುವಂದದಿಂದುದಯಶೈಲಾಗ್ರದೊಳ್ ದಿನಪನುದಯಿಸಿದನು (ಚೆಬಪು. ೪-೭).

**ನೂರ್ಮುಡಿ ಅಯ್ಯ ಹರಸಂ** = ಒಂದು ಬಿರುದು (?) : ಬಿನ್ನವುರಂ ೧೨ಱ ಕೊಳಗಣ ಕುಳುವನೂರುಂ ನಿಟ್ಟಾರವೆಯನಂತೆರಡೂವನೆ ಖಚಾಯೆಲೆ ಕುಡುವ ನೂರ್ಮುಡಿ ಅಯ್ಯ ಹರಸಂ ಬಮ್ಮಿಸೆಟ್ಟಿಗೆಗೊಟ್ಟ ಶಾಸನದ ಪೊಲದ ಸೀಮೆ (ಎಕ. XI, ದಾವಣ. ೧೯-೧೨ ; 1043). **ನೂರ್ಮುಡಿ ತೈಲ** = ರನ್ನನ ಪೋಷಕನಾಗಿದ್ದ ಕಲ್ಯಾಣ ಚಾಲುಕ್ಯವಂಶದ ಸ್ಥಾಪಕನಾದ ತೈಲಪಚಕ್ರವರ್ತಿಯ ಒಂದು ಬಿರುದು ; ☞ ತೈಲಪನ ಪರಾಕ್ರಮದ ನೂರರಷ್ಟು ಶೌರ್ಯವುಳ್ಳವನು ಎಂಬರ್ಥದ ಒಂದು ಬಿರುದು (?) : ನೂರ್ಮುಡಿ ತೈಲನ ಪಡೆವಳ ತೈಲಪನ ಜನನಿಗೆಣೆ ಪೆಱರೊಳರೇ (ಅಜಿಪು. ೧-೫೧) ; ಆ ಸತ್ಯಾಶ್ರಯ ಕುಳದೊಳೊಳಸುದತೀಶಂ ಪ್ರತಾಪಿ ನೂರ್ಮ್ಮುಡಿತೈಲಂ ವಾಸದ ವಿಭವಂ . . . ಸಕಳಧಾತ್ರಿಯನಾಳ್ದಂ (ಇಆ. V, ೧೫-೧೧ ; 1019).
[<ನೂಱು$_2$+ಮುಡಿ$_3$]

**ನೂರ್ಮುಡಿಸು** (ಕ್ರಿ). ೧. ನೂರು ಪಟ್ಟು ಹೆಚ್ಚಾಗು : ರುಕ್ಮಿಣಿಗದೊರ್ವಳ್ ಕಟ್ಟಿದಳ್ ರತ್ನನೂಪುರಮಂ ತತ್ಪದಕಾಂತಿ ನೂರ್ಮುಡಿಪಿನಂ ಮಂಜೀರಕಾಕಾಂತಿಯಿಂ (ಜಗವಿ. ೧೦-೧೧೦) ; ಪನ್ನೀರು . . . ಬೀಸಣಿಗೆ ಮುಂತಾದ ಸನ್ನಾಹದೊಳು ಸತಿಪುರುಷರಿದ್ದರು ಮೈಗೆ ಮುನ್ನಿನ ಕಾಂತಿ ನೂರ್ಮುಡಿಸೆ (ಭರಚ. ೧೦-೧೩೨) ; ಸಸ್ಯ ಮೃಗಪಕ್ಷಿಗಳ್ ಸಂತಸದಿ ಪೆರ್ಚಿದುವು; ಇರ್ಮುಡಿಸಿ ಮೂರ್ಮುಡಿಸಿ ನೂರ್ಮುಡಿಸಿದುದು ಪೈರುಪಚ್ಚೆ (ಚಂದ್ರಸ. ೫೯-೨೩). ೨. ನೂರುಪಾಲು ಹೆಚ್ಚಿಸು ; ನೂರರಷ್ಟು ಅಧಿಕಗೊಳಿಸು ; ನೂರುಪಟ್ಟು ಹೆಚ್ಚು ಮಾಡು : ಆ ಭುವನ ನಾಭಿಯೆನಿಸಿದ ನಾಭಿಮಹೀಭುಜಭುಜಾಂತರಾಳಂ ಲಕ್ಷ್ಮೀವ್ಯಾಭಾಸಿ ಮತ್ತಮತಿಶಯಶೋಭೆಯನಾ ಕಾಂತೆಯಿರವಿನೊಳ್ ನೂರ್ಮುಡಿಕುಂ (ಆದಿಪು. ೬-೮೭) ; ನೇತ್ರ ನೀಲೋತ್ಪಲದ ನೆಬಿಲಬಂಬಲ್ಗಳಿಂ ನೆಯ್ದಿಲಂ ನೂರ್ಮುಡಿಸುತ್ತುಂ . . . ಪೊಕ್ಕುದಬ್ಜಾಕರಮನೊಲವಿನಿಂ ಕಾಂತಕಾಂತಾಕದಂಬಂ (ಲೀಲಾಪ. ೧೩-೧೧೬); ವೈಶ್ರವಣಂ ನಿರ್ಮಿಪ ರೈವೃಷ್ಟಿಯೊಳಾದ ಪೆರ್ಮೆಯಂ ನೂರ್ಮುಡಿಪಂತಾ ವರ ದಿವಿಜಸ್ತ್ರೀರತ್ನಾವಳಿ ದಿವದಿಂದಮಿೞಿದುದಿಳೆಗುಜ್ಜ್ವಲಿತಂ (ಪರ್ಶಪು. ೧೩-೫೧).
[ನೂರ್ಮುಡಿ+ – ಇಸು$_3$]

**ನೂರ್ಮಾತು** (ನಾ). ಹೆಚ್ಚುಮಾತು ; ಬಹಳ ಮಾತು : ಅಂತ್ಯಲೋಪಕ್ಕೆ—ನೂರ್ಮುಡಿ, ನೂರ್ಮಾತು, ನೂರ್ಛಾಸಿರಂ (ಶಮುದ. ೧೯೧ ಪ್ರಯೋ). [<ನೂಱು$_2$+ಮಾತು$_1$]

**ನೂರ್ಮೆ** (ನಾ). ನೂರು ಸಲ ; ನೂರು ಬಾರಿ : "ನೂರ್ಮೆಯೆನಲ್ ಶತವಾರ ನಾಮದೊಳ್" (ಕರ್ಣಾನಿ. ೮೫) ; ಈ ಮುನಿಪುಂಗವರೊಂದು

ಮಾರ್ಗಮಂ ಕರಮತಿಭಕ್ತಿಯಿಂ ನಿಲದೆಯುಂಬುದು ನೂರ್ಮೆಯುಮಂತೆ ಸಾವ್ರೊಡಂ ಪರಿಹರಿಸಲ್ಕೆವೇಟ್ಕುಮಳಿಪಿಲ್ಲದೆ ನೋಡ ಸಮಸ್ತ ವಸ್ತುವಂ (ಧರ್ಮಾಮೃ. ೪-೯೨) ; ನೂರ್ಮೆ ಪಶು ಕಱಿವುದಂ ತಾನೊರ್ಮೆಯೆ ಕಱಿವೆರ್ಮೆಯಲ್ಲದಬಱಯೆರ್ಮೆಗಳೀಯೆರ್ಮೆಗಳೊಳಗಿಲ್ಲೆನಿಸಿರ್ದೆರ್ಮೆಯ ಪಿಂಡುಗಳಿನೊಪ್ಪುಗುಂ ಕೆಲವೆಡೆಯೊಳ್ (ಕಾವ್ಯಾವ. ೩೫೦) ; ನಿನ್ನ ಹೆಸರಂ ಕೊಂಡು ನಿಂದೆನಿದೊ ಸಿಡಿಗುಂಡು ನೂರ್ಮೆ ಮಾರ್ಮೊರಸೆ ಕಾರ್ಮೊಳಗನುರ್ವರೆಯಿಂ (ಗಿಳಿವಿಂ. ೭೦-೩). [<ನೂಱು$_2$+-ಮೆ$_2$]

**ನೂಲ್$_1$**, ನೂಲು$_1$ (ಕ್ರಿ).- ನೂತ$_1$ (ಭೂತಕೃ) ; ನೂತು (ಭೂತನ್ಯೂ) ; ಎಳೆತೆಗೆ ; ದಾರತೆಗೆ : "ನೂಲ್—ತಂತುಕರಣೇ (ನೂಲು) ತಂತುಮಾತ್ರೇ ಚ" (ಶಮುಧಾ) ; ನೂತ ನೂಲೆಟೆಯಲ್ಲಿ ಸಿಚಯಂಗಳಲ್ಲಿ ತಂತುವದು (ಮಂಗರಾ. ೧೫೪-೬೬). **ನೂಲು$_1$ :** ಎಣಿಸಿಕೊಂಡೇಳ್ಳಂಜಿಯ ನೂತರೆ ಮಣಿಯದ ಸಾಲವು ತೀರೀತೇ (ಪುರಂದ. ೧-೧೫೭-೩) ; ನೂತಳದಾವ ಸುಜಾಣೆಯೊಳ್ಳೆದೆ ಪುರಾತನದಾವ ಕೋವಿದನೊ ಶ್ವೇತವಸ್ತ್ರವ ತೊಳೆದಸಗನದಾರೆಂದು ಭೂತೇಶ ಬಲ್ಲ ನಾನಱಿಯೆ (ಮೋಹತ. ೨೬-೩೦) ; ನೂತುದೆಲ್ಲಾ ಹಂಜಿಯಾಯ್ತು ? ಅಕಟಾ ಕಂದ ಸೋತೆ ನಿನ್ನಲಿ (ಹಬ್ಬಿರ. ೫-೬೯) ; ಅಜ್ಜಿ ನೂತದ್ದೆಲ್ಲಾ ಅಜ್ಜನ ಉಡಿದಾರಕ್ಕೇ ಸರಿ (ಗಾದೆ).

[ದೇ.॥ ತಮಿ. ನೂಲ್, ; ಮಲ. ನೂಲ್ಕ ;
ತುಳು. ನೂಪು, ನುಪ್ಪು ; ಕುಯಿ. ನೋಲ್ಪ]

**ನೂಲ್$_2$**, ನೂಲು$_2$ (ನಾ). ೧. ಎಳೆ ; ಸೂತ್ರ ; ತಂತು ; ದಾರ : "ನೂಲ್—ತಂತುಕರಣೇ (ನೂಲು) ತಂತುಮಾತ್ರೇ ಚ" (ಶಮುಧಾ) ; ಬಿಳಿಯ ತಾವರೆಯೆಳಗಾವಿನಸಿಯ ನೂಲೊಳ್ ಕೋದ ತೋರಮಲ್ಲಿಗೆಯ ಬಿರಿಮುಗುಳ ಸರಿಗೆಯುಮಂ ಕಪ್ಪುರವಳುಕಿನ ಲಂಬಣಮುಮಂ ತೊಟ್ಟು (ಪಂಪಭಾ. ೫-೬ ಪ) ; ವಜ್ರಾಯುಧನ ದಿಕ್ಕರಿಕರಾಕಾರಬಾಹುಪರಿಘಯುಗಳಮಂ ತಾಮರೆಯ ನೂಲೊಳಾನೆಗಟ್ಟುವಂತೆ ಕಟ್ಟಿ (ಶಾಂತಿಪು. ೮-೪೯ ಪ) ; ಪಾಲ್ ಕೆಚ್ಚಲೊಳ್ ತಣಿವು ಊಟದೊಳ್ ಸೀರೆ ನೂಲೊಳ್ . . . ಪುಟ್ಟುವಂತೆ . . . ಮಹಾವ್ರತಂಗಳುಂ ಜಿನಮತದೊಳ್ ಪುಟ್ಟುಗುಮಲ್ಲದೆ ಪೆಱವು ಕುಮತಂಗಳೊಳ್ ಪುಟ್ಟವು (ಧರ್ಮಾಮೃ. ೮-೮೩) ; ಆ ಮನೆಯವರು ಪೂಗಟ್ಟುವಂದವಂ ನೋಡಿ ತಾನುಮೊಂದು ನೂಲಂ ಕೊಂಡು ನಾನಾವಿಧ ಚಿತ್ರಬಂಧದ ಮಾಲೆಯಂ ಸಮೆವ ಹಸ್ತಕೌಶಲ್ಯಮಂ ಕಂಡು (ಜೀವಸಂ. ೨೦೪-೪೬ ಪ). ೨. ಒಡ್ಯಾಣ ; ಡಾಬು ; ಉಡೆನೂಲು ; ಕಟಿಸೂತ್ರ : ಉಡೆ ಜೋಲಲ್ ನೂಲ್ ಸಡಿಲಲ್ ಮುಡಿ ಪಱಿಯಲ್ ಹಾರಲತೆಯನಕ್ಷಾವಳಿಯಂ ಪಿಡಿವಂತೆ ಪಿಡಿದು ತುರಿಪದೆ ನಡೆತಂದಳ್ ಕಾಮಯೋಗಿನೀವಿಭ್ರಮದಿಂ (ಕಾದಂಪೂ. ೪೮೦) ; ಸ[ರಿ]ಗೆಗೆ ಸೇತಮಾಲೆಗೆ ಬೆಡಂಗಿನ ಕನ್ನವುರಕ್ಕೆ ನೂಲ್ಗೆ ನೂಪುರನಿಕರಕ್ಕೆ ತೋಳ್ವಲೆಗೆ ಮಲ್ಲಿಗೆಗಿಂತವು ತಕ್ಕವೆಂದು ಸೌಂದರಿಯ[ರ್] . . . ಆಯ್ದುದಂಕುರ[ಕು]ಮುದಪ್ರಸೂನಫಲಪಲ್ಲವಸಂತತಿಯಂ ವನಾಂತದೊಳ್ (ವರ್ಧಮಾ. ೮-೬೯). ೩. ಬಡಗಿಗಳು ಮರವನ್ನು ಕೊಯ್ಯುವಾಗ ಬಣ್ಣ ಬಳಿದ ದಾರದಿಂದ ಹಾಕಿಕೊಳ್ಳುವ ಗುರುತು : ಕರಗಸಿಗರೊಂದು ಭಾಗಂಬರಂ ಸೀಳ್ದು ನೂಲ ತಲೆಯೊಳ್ ಕೀಲಂ ಬೆಟ್ಟಿರ್ದ ಮರನಂ ಕಂಡದಱ ಮೇಲೆ ಕುಳ್ಳಿರ್ದು (ಪಂಚತಂ. ೩೦-೫). **ನೂಲು$_2$:** ೧. ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸುತ್ತಿ ಸಾವ ತೆಱನಂತೆ (ಮಹಾದೇ. ಬ. ೧೫-೧೭) ; ಪರಿವಿಡಿಗಳಿಂ ತನ್ನ ನೂಲಿಂ ತೆರೆಯವೊಲು ಮೇಲ್ವಟ್ಟನಂದದಿ ಪರಿವೃತೋನ್ನತವೃಕ್ಷಗುಲ್ಮಲತಾತೃಣಂಗಳಲಿ ಹುರಿಗೊಳಿಸಿ (ಬಸವು. ೧೮-೩೮) ; ರಸರೂಪಗಂಧ . . . ನೂಲಿನೊಳು ಸಾಧುಜನದೊಳು ಸಲಿಲದೊಳೆಸೆವ ಬಿಲ್ದಿರುವಿನೊಳು-ಮುಖ್ಯದೊಳು ಶೌರ್ಯದೊಳು ಪರಮನೊಳು ಗುಣಮೆನಿಕ್ಕುಂ (ಮಂಗರಾ. ೧೪೭-೩೭) ; ಕಲಹವಿಲ್ಲದೆ ನೂಲಿನೆಳೆಯಲಿ ತಲೆಯನರಿವ ವಿರೋಧಿರಾಯರನಳುಕಿಸುವ . . . ಮಂತ್ರಿಗಳು ಮೆಱೆದರು ವಾಮಭಾಗದಲಿ (ಕುಮಾವ್ಯಾಉ. ೮-೩೫) ; ಹಾಸಾದ ಮಿಂಚಿನಂದ ಬೀಸಿದ್ದ ಸೆರಗಿನಿಂದ ಸೆಳೆದಂತೆ ಎರಡು ನೂಲು ಉಳಿದಾವ ನಾಕು ಸಾಲು (ಗಂಗಾತ. ೨೧-೩) ; ತಾಯಿಯಂತೆ ಮಗಳು, ನೂಲಿನಂತೆ ಸೀರೆ (ಗಾದೆ). ೪. ಒಂದು ಅಳತೆಯ ಪ್ರಮಾಣ : ಇದರ ಎತ್ತರವನ್ನು ಒಂದು ನೂಲು ಕಡಿಮೆ ಮಾಡು (ರೂಢಿ). ೫. ಬಟ್ಟೆ ; ವಸ್ತ್ರ : ನಾಣ ಮಱೆಯ ನೂಲು ಸಡಿಲೆ ನಾಚುವರು ನೋಡಾ ಗಂಡು ಹೆಣ್ಣೆಂಬ ಜಾತಿ (ಮಹಾದೇ. ಬ. ೭೪-೧೮೪) ; ನಾಣ ಮಱೆಯ ನಾಚಿಕೆ ಒಂದು ನೂಲ ಮಱೆಯಲಡಗಿತ್ತು (ಅಪಚಂ. ೭೪-೩೩೦). ೬. ನೂಲಿನ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಮಗ್ಗತೆಱೆ ಹೊಗೆದೆಱೆ ಲವಣ ಪಞ್ಚಕಾರುಕಕಳು ಕೈಬಣ್ಣ ನೂಲು ಕಬ್ಬುನ ದಳವಿಂಡಿ ಹೆನೆಯಕುಳ ಮುಖ್ಯವಾದ ಸರ್ವ್ವ ಆಯವನೂ ಆ ಚೂಡನಾಥದೇವರಿಗೆ ಸರ್ಬ್ಬಮಾನ್ಯಂ ಮಾಡಿ ದಾರಾಪೂರ್ವ್ವಕವಾಗಿ ಬಿಟ್ಟು ಧಾರೆಯನೆಱೆದೆವು (ಎಕ. IX, ಚನ್ನಪ. ೬೬-೧೪ ; 1288).

**ನೂಲ ಕಂಕಣ** = ನೂಲಿನ ಎಳೆಯಿಂದ ಮಾಡಿದ ಕಂಕಣ : "ಕಂಕಣಂ, ಹಸ್ತಸೂತ್ರಂ, ಪ್ರತಿಸರಂ—ಈ ೩ ನೂಲ ಕಂಕಣಂ" (ಹಲಾಯು. ೯೨-೪೦೪). **ನೂಲ ಕುಕ್ಕಡಿ** = ರಾಟೆಯಲ್ಲಿ ನೂತು ಕದಿರಿಗೆ ಸುತ್ತಿದ ನೂಲಿನೆಳೆಯ ಉಂಡೆ : "ಕಂಡಿಕಾ = ನೂಲ ಕುಕ್ಕಡಿ" (ಕಾಶಕೃ. ೧೨೧). **ನೂಲ ತೊಂಗಲ್** = ಗೆಜ್ಜೆಗಳುಳ್ಳ ನಡುಕಟ್ಟು ; ಕಟಿಸೂತ್ರ : "ನೂಲ ತೊಂಗಲೆಂದು ಕಟಿಸೂತ್ರಂ" (ಕಶಸಾ. ೨೦-೪೧೪) ; ಒದವಿದ ನೂಲ ತೊಂಗಲುಲಿಯಿಲ್ಲದೆ ಪೀನ ನಿತಂಬಮಾರಮಿಲ್ಲದೆ ಕುಚಮಂಡಳಂ ಪಲವುಮಂದದ ಚಂದದ ಚಿನ್ನಪೂಗಳಿಲ್ಲದೆ ಲುಳಿತಾಳಕಂ ಕ್ವಣಿತ ನೂಪುರಮಿಲ್ಲದೆ ಪಾದಪದ್ಮವೊಪ್ಪಿದಪುದು. ನೋಡ ರೂಪಿನಿತು ಚೇಸಱೊಳಂ ಸೊಗಯಿಪ್ಪುದೀಕೆಯಾ (ಆದಿಪು. ೩-೪೮). **ನೂಲ ತೊಡವು** = ನೂಲಿನ ಆಭರಣ : ರತ್ನದ ತೊಡವಿನ ನೂಲ ತೊಡವಿನ ಸೊಡರಿನ ಕಾಟ್ಟಿಚ್ಚಿನ ರಕ್ಷೆಯಂತರಿದುಮೇಳಿದಮುಮಕ್ಕುಂ (ಧರ್ಮಾಮೃ. ೧೧-೧೫೮). **ನೂಲ ತೋಡಾಗು** = ದಾರದೆಳೆಗಳು ಹಾಸುಹೊಕ್ಕಾಗಿ ಹೊಂದಿಕೊಳ್ಳುವಂತೆ ಹೊಂದಿಕೊಳ್ಳು : ಮುನ್ನ ನೂಲ ತೋಡಾಗದೆ ಕೆಟ್ಟು ಪೋದವರನಿಂ ಮಗುಟ್ದುಂ ನಿಱಿಪಂತು ಬೆಳ್ಳನೇ (ಪಂಪಭಾ. ೯-೪೬) ; "ನೂಲ ತೋಡಾಗದೆ = ಹರಿದ ನೂಲಿನಂತೆ ತಿರುಗಿ ಸೇರದೆ" (ಪಂಪಪಿ. ೩೧೮). **ನೂಲ ನೆಯ್ಗೆ** = ನೂಲನ್ನು ನೇಯುವಿಕೆ : ಊತ ಸ್ಯೂತ ಇವು ನೂಲ ನೆಯ್ಗೆಯಲ್ಲಿಯೂ ಹೊಲಿಗೆಯಲ್ಲಿಯೂ ವರ್ತಿಸುಗು (ನಾಚಿರಾ. ೬) ; ಊಯಿಾ — ತಂತುಸಂತಾನೇ, ನೂಲ ನೆಯ್ಗೆಯೊಳ್" (ಕಾಶಕೃ. ೧೧೦). **ನೂಲ ಪರ್ಬ, ನೂಲ ಹಬ್ಬ** = ಶ್ರಾವಣಮಾಸದಲ್ಲಿ ಬರುವ ಒಂದು ಉತ್ಸವ; ☞"ಪಟಗಾರರು ರೇಷ್ಮೆನೂಲಿನಲ್ಲಿ ಏಳು, ಒಂಬತ್ತರಂತೆ ಮೆಣಸಿನ ಕಾಳುಗಳನ್ನು ಕಟ್ಟಿ ಕೊಟ್ಟಿರುತ್ತಾರೆ. ಹೋಮ ಹವನಾದಿಗಳ ಬಳಿಕ ಅದನ್ನು ಜನಿವಾರದ ಹಾಗೆ ದೇವಿಗೆ ಏರಿಸಬೇಕು. ನೂಲ ಹಬ್ಬವನ್ನು 'ಕಕ್ಕೆ ಹುಣ್ಣಿಮೆ' ಎಂದೂ ಕರೆಯುವುದುಂಟು" (ಗ್ರಾಮಜ್ಯೋತಿ. ೧೫) : ಆಯನ ಮಗಂ ರುದ್ರಿಮಯ್ಯಂ ದೇವರ ನೂಲ ಪರ್ಬ್ಬಕ್ಕೆ ಕೊಟ್ಟ ಗದ್ಯಾಣ ೧ (ಕಇ. II, ೯-೨೧ ; 1075) ; ಆಷಾಢಮಾಸದ ನೂಲ ಪರ್ಬ್ಬದ ಪುಷ್ಪಾರ ಗಡುಗೆಯ ದಕ್ಷಿಣೆಗೂಡಿ (ಎಕ. VI, ಕಡೂರು. ೪೯-೫೭; 1291); ಮೂಗುಳ ಭತ್ತ ನೂಲ ಹಬ್ಬಕ್ಕೆ ಮನೆಯಲೊಂದು ಕಳಿಹು (ಎಕ. V, ಹಾಸನ. ೬೬-೪೬; ಸು. 1170 ?) ;

ಮಾಡಳೆ ಮಗಳು ಕರ್ಣಾವತಂಸವನೊತ್ತೆಯಿಟ್ಟಾ ನೂಲ ಹಬ್ಬವನು (ಬಸಪು. ೪೨-೧೧). **ನೂಲ ಪರ್ವ** = ನೂಲ ಪರ್ಬ : ಆಶಾಢ ಶುದ್ಧ ಏಕಾದಶಿ ಬುಧವಾರದ ನೂಲ ಪರ್ವ್ವದಲು (ಮೈಆರಿ. ೧೯೩೪, ೧-೪೪; 1174). **ನೂಲ ರಕ್ಕೆವಣಿ** = ನೂಲಿನ ರಕ್ಷಾಮಣಿ : ರೋಚನದಿಂ ರಂಜಿಪ ನೂಲ ರಕ್ಕೆವಣಿಗಳ್ ಚೆಲ್ವಾಗೆ . . . ಮಱಿಲ್ದೆಸೆವ ತೂಗುಂದೊಟ್ಟಿಲೊಳ್ ಪಟ್ಟೆ ಪುತ್ರನ ವಕ್ತ್ರೇಂದುವನಂಜನಾಂಕಿತಮನಾ ನಿನ್ನೆಂದು ಪೇೞ್ ಕಾಣ್ಬೆನೋ (ಕಾದಂಪೂ. ೩೫೫). **ನೂಲ ವರ್ತಿ** = ಅರಳೆಯ ನೂಲನ್ನು ಹೊಸೆದು ಮಾಡಿದ ಬತ್ತಿ; ದಾರದ ಬತ್ತಿ: ಬಳ್ಳಿಯ ಮಾಟವುಳ್ಳ ಸಮರಾಕಾಂತ ವರ್ತುಲಮಪ್ಪಯೆಣ್ಣೆ ವುಳ್ಳವದಾವು ದಂತದೊಂದುಂಟಲಾ ಪಾತ್ರವದಜಲ್ಲಿಯತ್ಯಂತವೆನೆ ನೂಲ ವರ್ತಿಯೊಳು ಸಾಗಿಸೆ ಪಟ್ಟುದೆಂಬುದೀ ಪರಿಯದಾಗಿ (ವೀಶೈ ಪು.೫-೨೦-೨೬). **ನೂಲ ಸೀರೆ** = ನೂಲಿನ ಸೀರೆ ; ಹತ್ತಿ ಸೀರೆ : "ಕಾರ್ಪಾಸ, ಬಾದರಂ-ಈ ೨ ನೂಲ ಸೀರೆ" (ನಾಚಿರಾ. ೧೨೩). **ನೂಲ ಸುತ್ತು** = ನೂಲನ್ನು ವರ್ತುಲಾ ಕಾರವಾಗಿ ಸೇರಿಸು: ರಕ್ಷೆಗೆ ಪಂಚವರ್ಣದ ನೂಲ ಸುತ್ತುವ ಮಂತ್ರಮಂ . . . ಬೇಱಿಬೇಱಿ ವಿವರಿಸಿ ದೇವೇಂದ್ರಮುನೀಂದ್ರರು ಪೇೞ್ದಪರು (ಬಾಲಚಿ. ೧೨೪-೧೦). **ನೂಲ ಸೆಜ್ಜೆ** = ಹತ್ತಿಯಿಂದ ಮಾಡಿದ ಹಾಸಿಗೆ : ಎಡೆಗೊಟ್ಟು ದೇವಸಮಿತಿಗೆ ಬಿಡದನಿಲತ್ರಿತಯವೃತ್ತಿಯಿಂದೆ ತ್ರಿಜಗಂ ಕಡೆದೋಱಿದಿರ್ಪ ಗಗನದ ನಡುವಿರ್ಪುದು ನೂಲ ಸೆಜ್ಜೆಯಂ ನೇಱಿದವೋಲ್ (ಪಾರ್ಶ್ವಪು. ೧-೯೮). **ನೂಲ ಹದಿಕೆ** = ನೂಲಿನ ಮೇಲೆ ಹಾಕುವ ತೆರಿಗೆ : ವಣಖಾಣನಿಬನ್ಧಿ ನೂಲ ಹದಿಕೆ ಅಡಕೆಯ ಸುಂಕ (ಎಕ. VI, ತರೀಕೆ. ೨೦-೨೯; 1185). **ನೂಲ ಹರಿಗೆ** = ಹುರಿ ಯಿಂದ ಮಾಡಿದ ಗುರಾಣಿ : ನೂಲ ಹರಿಗೆಯ ಹೆಗಲ ಬಾರಿಯ ತೋಳ ತೋರಿಯ ಲೌಡಿಗಳ . . . ಭಲದಂಕರಾವುತರೊತ್ತಿ ನೂಕಿದರು (ಕುಮ್ಮಾಭೀ. ೮-೫೬) ; ಭರದಿನಾಲಗಳ ತಿಟ್ಟೆಗೆ ಬಂದು ನಿಂದು ಬದ್ಧರದ ಮಱಿಯೊಳ್ನೂಲ ಹರಿಗೆಯಂ ಹಿಡಿದು (ಸಮ್ಯಕೌ. ೮-೩೧) ; ಕೇಡೆಯ ನೂಲ ಹರಿಗೆ ತರಕಸ ಸಿಂಗಾಡಿಗಳನು ಹಾಯ್ಕಿ ಬೇಗ ಪಾಡಳಿದಿಳಿಯ ಬಿದ್ದರು ಕಾಲವರು (ಕುರಾಸಾಂ. ೩೯-೨೫). **ನೂಲ ಹುಣ್ಣಿಮೆ** = ಶ್ರಾವಣಮಾಸದಲ್ಲಿ ಬರುವ ಹುಣ್ಣಿಮೆಯ ಹಬ್ಬ ; ನೂಲ ಹಬ್ಬ: ನಿನಗೆ ಇನ್ನು ನಾಳಿನ ನೂಲ ಹುಣ್ಣಿಮೆಗೆ ೧೬ ತುಂಬತದೆ (ಸಂಪಿಗೆ. ೧೪). [<ನೂಲ್₁. / ತಮಿ. ಮಲ. ಕೋತ. ಕೋಲಾ. ಗೊಂಡಿ. ಪರ್ಜಿ. ನೂಲ್ ; ತುಳು. ತೆಲು. ನೂಲು ; ಕುಣ. ನೂಡು ; ಕುವಿ. ಲೂಲೂ, ಲೋಲು]

**ನೂಲಿಗ** (ನಾ). ೧. ವಿಷವಿಲ್ಲದ, ನೂಲಿನಂತಿರುವ ಹಸಿರು ಬಣ್ಣದ ಹಾವು; "ಹಸರುಹಾವು" (ಜಾನಕೋ. ೧೨). 'ಹಸರು ನೂಲಿಗ' ಪರಾ. ೨. ಒಂದು ಬಗೆಯ ವಿಷಸಸ್ಯ : (ಕ).

[<ನೂಲ್₂]

**ನೂಲಿಸು** (ಕ್ರಿ). ನೂಲುವಂತೆ ಮಾಡು : ಸತಿಯ ಕೈಯಿಂ ನೂಲಿಸಿ ನೂತ ನೂಲಂ ಮಾಱಿ ಸತಿ ಬೀಯಮಂ ತರಲು ಪೋತು ಲಿಂಗಾರ್ಪಣವ ಮಾಡಿಕೊಂಡಿರುತಿರಲು (ಗುರುಚಾ. ೧೪-೨). [ನೂಲ್₁ + -ಇಸು₃]

**ನೂಲು₁** 'ನೂಲ್₁' ನೋ.

**ನೂಲು₂** 'ನೂಲ್₂' ನೋ.

**ನೂಲುಂಡೆ** (ನಾ). ದಾರದ ಉಂಡೆ ; ನೂಲಿನ ಉಂಡೆ : ತಲೆಯು ನವಿ[ವಿ]ರುಚ್ಚುತಿರೆ ಮೇಣ್ಣಲೆ ನೂಲುಂಡೆಯನೆ ಸುತ್ತುವಂತಿರೆ ಕೈಗಳ್ ಕೆಲಕೆಲ್ಲಂ ಪೊಡವಡುತಿರೆ (ಕಲ್ಯಾಕಾ. ೨-೧) ; ಕಿಱುನಾಯ್ಗಳ ಬಾಯ್ಗಳಿಂದೆ ನೂಲುಂಡೆಯನಿಟ್ಟವೋಲ್ ಮಿಡುಕುತುಮಂ ಪರಿದಾಡಿದುದೊಂದು ಪೆರ್ಮೊಲಂ (ಸೂಕ್ತಿಸು. ೩-೧೨೧) ; ಬೆಣ್ಣೆಯ ಬೆರಸಿದ ಹಿಟ್ಟುಮಂ ತೊಡೆದು ನೂಲುಂಡೆಯಂದದಿ ಸುತ್ತಿ ಸಟ್ಟಿಯೊಳಗೊತ್ತಿ ಪೇಣಿಯ ಮಾಡಿ (ಸೂಪಶಾ. ೧-೫೦). [ನೂಲ್₂ + ಉಂಡೆ]

**ನೂಲುಕಂಡಿಕೆ** (ನಾ). ಲಾಳಿಯಲ್ಲಿ ಸೇರಿಸುವ ದಾರದ ಉಂಡೆ : ವೇಮಾ, ವಾಯದಂಡಃ – ೨ ನೂಲುಕಂಡಿಕೆಯನಿರಿಸಿ ನೇಯುವ ಕೊಳವಿಯ ಪೆಸರು (ಸಿದ್ಧಾಂತಿ. ೩೧೪).

[ನೂಲು₂ (< ನೂಲ್₂) + ಕಂಡಿಕೆ₁]

**ನೂಲುಗಟ್ಟು** 'ನೂಲ್ಗಟ್ಟು' ನೋ.

**ನೂಲುಗುಂಡು** (ನಾ). ದಾರದ ತುದಿಗೆ ಕಟ್ಟಿ ತೂಗುಬಿಟ್ಟ ಕಲ್ಲು,—ಗುಂಡು; ನೂಲುಮಟ್ಟ : ಅವನ ಕೈಯಲ್ಲಿ ನೂಲುಗುಂಡು (Plumbline) ಎಂಬೊಂದು ಸಾಧನವಿದೆ (ಬಾಲಪ್ರ. III, ೧೩೬೮).

[ನೂಲು₂ (<ನೂಲ್₂) + ಗುಂಡು]

**ನೂಲುಬಟ್ಟೆ** (ನಾ). ನೂಲಿನೆಳೆಯಿಂದ ತಯಾರಿಸಿದ ಬಟ್ಟೆ : ಹತ್ತಿಬಟ್ಟೆ : "ಫಾಲಂ, ಕಾರ್ಪಾಸಂ, ಬಾದರಂ— ೩ ನೂಲು ಬಟ್ಟೆ" (ಸಿದ್ಧಾಂತಿ. ೨೦೨). [ನೂಲು₂ (<ನೂಲ್₂) + ಬಟ್ಟೆ₂]

**ನೂಲುಮಟ್ಟ** (ನಾ). = ನೂಲುಗುಂಡು : ನನ್ನ ಅಳತೆಗಳನ್ನು ತೆಗೆದುಕೊಳ್ಳಲು . . . ಮೊಣಕಾಲೂರಿ ನಾನು ಕೂತೆ. ನನ್ನ ಕುತ್ತಿಗೆಯ ವರೆಗೆ ಏಣಿಗಳನ್ನು ನಿಲ್ಲಿಸಿದರು. ಆ ಏಣಿಯನ್ನು ಒಬ್ಬ ಹತ್ತಿದ. ನನ್ನ ಕೊರಳಿನಿಂದ ನೂಲುಮಟ್ಟವನ್ನು ಇಳಿಬಿಟ್ಟ ಗುಂಡು ನೆಲ ತಾಕುವವರೆಗೆ. ಆ ನೂಲಿನ ಉದ್ದ ಸರಿಯಾಗಿ ನನ್ನ ಅಂಗಿಯ ಉದ್ದ (ಗಲಿಪ್ರ. ೭೫).

[ನೂಲು₂ (<ನೂಲ್₂) + ಮಟ್ಟ₁]

**ನೂಲುಮದುವೆ** (ನಾ). (ಕರಾ) ಮುಂಜಿ ; ಉಪನಯನ : ಮಂಗಳೂರಲ್ಲಿ ನಮ್ಮ ಮನೆಯಲ್ಲಿ ತಮ್ಮನ ನೂಲುಮದುವೆಗೆ ಸವಿಾಪಿಸಿದೆ (ಕಂನಾಸಾ. ೧). [ನೂಲು₂ (<ನೂಲ್₂) + ಮದುವೆ]

**ನೂಲುಯಂತ್ರ** (ನಾ). ದಾರ ನೂಲುವ ಒಂದು ಉಪಕರಣ : "ದಾರ ಮಾಡುವ ಅಥವಾ ದಾರ ನೂಲುವ ಯಂತ್ರ : ನೂಲುಯಂತ್ರ" (Filatory. ಇಂಕನಿ). [ನೂಲು₂ (<ನೂಲ್₂) + ಯಂತ್ರ]

**ನೂಲುವಸ್ತ್ರ** (ನಾ). ಹತ್ತಿಯ ಬಟ್ಟೆ ; ನೂಲಿನ ಬಟ್ಟೆ : "ಕಾರ್ಪಾಸ ಮೆನಲು ನೂಲುವಸ್ತ್ರಂ" (ಮಂಗರಾ. ೧೦೧-೭೨).

[ನೂಲು₂(<ನೂಲ್₂) + ವಸ್ತ್ರ]

**ನೂಲುವಾಲೆ,** ನುಲುವಾಲೆ (ನಾ). ಒಂದು ಬಗೆಯ ಔಷಧಿ ಸಸ್ಯ : "ಶೃಂಗಿರೀಟ — ನೂಲುವಾಲೆ" (ಒಷಧಿ. ೧೭೦). **ನುಲುವಾಲೆ :** "ಮಧುಕರಃ — ನುಲುವಾಲೆ, ತುಂಬಿ, ಮಾವು, ಕರ್ಪೂರಬೆಂಡೆ" (ಒಷಧಿ. ೧೨೦). [ನೂಲು₀ + ಪಾಲೆ₂]

**ನೂಲುವೊಯ್** 'ನೂಲ್ವೊಯ್' ನೋ.

**ನೂಲೆಗೆಣಸು** (ನಾ). ಒಂದು ಬಗೆಯ ಗೆಣಸು ; ಕಾಡು ಗೆಣಸು (?) : ಭೂಮಿ ಹುಣ್ಣಿಮೆ ಹಬ್ಬದಲ್ಲಿ ನೂಲೆಗೆಣಸು, ಉಗನಿ ಕಾಯಿ, ಬೆರಕೆಸೊಪ್ಪು ಇತ್ಯಾದಿಗಳನ್ನು ಸಂಗ್ರಹಿಸುವಾಗಲೋ ಬಗನಿ ಕಟ್ಟಲು ಸರಿಯಾದ ಮರಗಳನ್ನು ಹುಡುಕುವುದಕ್ಕಾಗಿಯೊ . . . ಗುತ್ತಿಗೆ ಸಹ್ಯಾದ್ರಿಯ ಆ ಅರಣ್ಯಪ್ರದೇಶ ಸುಪರಿಚಿತವಾದದ್ದೆ ಆಗಿತ್ತು (ಮಲೆಮ. ೫೭೬). [ನೂಲೆ₀ + ಗೆಣಸು (<ಗೆಣಸು)]

**ನೂಲೆಳಿ** 'ನೂಲೆಟಿ' ನೋ.

**ನೂಲೆಳಿಗ** (ನಾ). ಒಂದು ಪಕ್ಷಿಯ ಹೆಸರು : ಕೋಗಿಲೆ ಚಾದಗೆ ಪೋದಗೆ ಮೂಗಿಲಿ ಕೌಂಗಂಚೆ ಕೊಂಚೆ ನೂಲೆಳಿಗಂ [ಪಾಠಾಂ. ನೂಲೆಳಗ, ಮೂಲೆಗಳಿಗ] ಹಂಗಾಗೆ ಪೊಣರ್ವಕ್ಕಿ ಪಿಂಗುರಿ ಗೂಗೆ ಮುಕುಂದ ಬಳಾಹಕ ಲಾವುಗೆ ಶೇನಂ (ಸೂಕ್ತಿಸು. ೩-೧೪೪) ; (ಶಾಬ್ದಸಾ. ೧೦೪೪ ಶೂದ್ರಕ ನೋ). [?]

**ನೂಲೆಟಿಕೆ,** ನೂಲೆಳೆ (ನಾ). ೧. ದಾರದ ಎಳೆ ; ನೂಲಿನ ತಂತು : "ಎಟಿಕೆ = ನೂಲೆಟಿಕೆ" (ಶಬ್ದ. ಪರಿ. ೧); "ನೂತ ನೂಲೆಟಿಕೆಯಲ್ಲಿ ನಿಜಯಂಗಳಲ್ಲಿ ತಂತುವದು" (ಮಂಗರಾ. ೧೫೪-೬೬). **ನೂಲೆಳೆ : ೨.** ವ್ರತದಲ್ಲಿ ಕಟ್ಟಿಕೊಳ್ಳುವ ದಾರ : ಸಾಸಿರ ನೋಂಪಿಯು ನೋಂತು ನೂಲೆಳೆಯ ಹಱಿದಂತಾಯಿತ್ತು ಭಾವದಲ್ಲಿ ಬಲ್ಲಿಕೆ ಇಲ್ಲ ಜ್ಞಾನದಲ್ಲಿ ಶುದ್ಧವಿಲ್ಲ (ಮೋಳಿಸೂ. ೫೫-೨೨೯). [ನೂಲ್₂ + ಎಳೆ₂(<ಎಟಿಕೆ₂)]

**ನೂಲೇಣಿ** (ನಾ). ನೂಲಿನ ಏಣಿ; ಹಗ್ಗದಿಂದ ಹೆಣೆದ ನಿಚ್ಚಣಿಕೆ : ಬೇಟೆಗನುಕೂಲವಾದ . . . ನೆಲಗೂಡು ಮದ್ದುಗುಂಡು ನೂಲೇಣಿ ಮೊದಲಾದ ಸಾಧನಂಗಳ್ (ಸೌಗಂಧಿ. ೫೦-೧೮) ; ಉಗ್ರಾಣಗಳಲ್ಲಿ ನೂಲೇಣಿ . . . ಬಾಣ ಬತ್ತಳಿಕೆಗಳ ಎಲ್ಲ ವಿವರವನ್ನು ಬಿಡಿಬಿಡಿಯಾಗಿ ನೋಡುವನು (ಸಪತಿ. ४೮) ; ಕತ್ತಲಲ್ಲಿ ಕೋಟೆಯಿಂದ ನೂಲೇಣಿಯ ಮಾರ್ಗವಾಗಿ ಹೊರಕ್ಕೆ ಇಳಿಸಿಕೊಟ್ಟರು (ಭಾರವೀ. ೩೫).
[ನೂಲ್₂ + ಏಣಿ₁]

**ನೂಲ್ಗಟ್ಟು,** ನೂಲುಗಟ್ಟು (ಕ್ರಿ). ೧. ನೂಲಿನಿಂದ ಕಟ್ಟು ; ಹಗ್ಗದಿಂದ ಬಿಗಿ : ನೂಲ್ಗಟ್ಟಿ ಪೊಯ್ದು ಪೊಸಗುಡಿಸಲ್ಗಳ್ತವೆ ನಟ್ಟ ಗಟಿಕೆಗಳಿರಿಸಿದದೋಳ್ಗಳ್ ಕಾಲ್ಗಟ್ಟಿ ಮೇವ ಕಟಿತ್ತಿಯ ಸಾಲ್ಗಳಿರಲ್ಕೀಡೆಸೆದುದು ಕೊಲ್ಲಟಿಜನರಾ (ಉದ್ಭಟ. ೫-೧೦೧). **ನೂಲುಗಟ್ಟು : ೨.** (ಆಲಂ) ಹರಡು ; ವ್ಯಾಪಿಸು : ನನ್ನ ಆ ಮಾತು ಒಬ್ಬನ ಕಿವಿಗೆ ಬಿತ್ತು. ಕಿವಿಯಿಂದ ಕಿವಿಗದು ನೂಲುಗಟ್ಟಿತು (ನಡೆದಾ. I, ४४೦).
[ನೂಲ್₂ + ಕಟ್ಟು₁]

**ನೂಲ್ಗೊಳ್ಳು** (ಕ್ರಿ). ಹೊಂದಿಕೊಳ್ಳು ; ಸೇರಿಕೊಳ್ಳು ; ನೆಯ್ದುಕೊಳ್ಳು : ಕುವರನು 'ತೊಟ್ಟಿಲಿಗ'ನಾಗಿ 'ಇಂದ್ರೇಂದ್ರನ ತೋಳಿ ತೊಟ್ಟಿಲಾಗಿರೆ ಬಳೆದು'ದು ಎಂಬ ಹೇಳಿಕೆಗಳೆಲ್ಲವೂ ನೂಲ್ಗೊಳ್ಳುತ್ತಿವೆ (ನಾಡೋಜ. ४८). [ನೂಲ್₂ + ಕೊಳ್ಳು₁(<ಕೊಳ್₁)]

**ನೂಲ್ತೊಂಗಲ್** (ನಾ). (ಗೆಜ್ಜೆಗಳುಳ್ಳ) ನಡುಕಟ್ಟು ; ಕಟಿಸೂತ್ರ : "ನೂಲ್ತೊಂಗಲ್ ಕಟಸೂತ್ರ" (ಕವಿಕಂ. ೧೭೯).
[ನೂಲ್₂ + ತೊಂಗಲ್]

**ನೂಲ್ದೆಗೆ** (ಕ್ರಿ). ೧. ಅರಳೆ ಮೊದಲಾದುವುಗಳಿಂದ ಎಳೆಯನ್ನು ತೆಗೆ,—ದಾರವನ್ನು ತೆಗೆ. ೨. (ಗೆರೆಯೆಳೆದಂತೆ) ಸಾಲಾಗು ; ಸಾಲುಗಟ್ಟು : ದೇವರ ದಂಡಧಾರರೆರಡುಂ ಪಕ್ಷಂಗಳೊಳ್ ಸಾರೆ ನೂಲ್ದೆಗೆದಂತಿಂದ್ರಗಿರೀಂದ್ರಮೆಯ್ದುವಿನೆಗಂ ಪೋಯ್ತಾಗಳಿಂದ್ರದ್ವಿಪಂ (ಶಾಂತಿಪು. ೧೦-೨೪) ; ತರದೆ ಪಾಱಿದುವು ಬೆಳ್ವಕ್ಕಿ ನೂಲ್ದೆಗೆದಂತೆ (ಅನಂಪು. ೯-೧೬ ೮ಗ೪). ೩. ಗೆರೆಯೆಳೆ ; ಬರೆ ; ರೇಖಿಸು ; ರೂಪುಕೊಡು : ಪಾರ್ಶ್ವಂಗಳಿಂ ನೂಲ್ದೆಗೆದತ್ತೆಂಬಂತೆ ಪಾ[ಶ್ಚಾತ್ಯದೆ] ಸವಡಿಸಿತೆಂಬಂತಿರುದ್ದಿ ರ್ವದಿಂ ಪರ್ವುಗೆವೆತ್ತಂತಂಗಕಾಂತಿಪ್ರಕರದೆ ಪಸರಿಪ್ಪಂತೆ . . . ಅತಿಜವಮಿದಿರೊಳ್ಪೆಂಡುದಿಂದ್ರಾಯುಧಾಶ್ವಂ (ಕಾದಂಪೂ. ४೫೬). ४. ಅವಿಚ್ಛಿನ್ನವಾಗು ; ಅಖಂಡವಾಗು (?) : ಅಂತಕ್ಷೀಣಯೋಗಲಕ್ಷಿತಮಪ್ಪ ಸಮರುಜುಸಂಸ್ಥಾನಕ್ಕೆ ಪರಮಪದಭಾವದಿಂ ನೂಲ್ದೆಗೆದಂತೆ ನಿಜಱಿಗೆವಡೆದ ಬಾಹ್ಯಸಾಮಗ್ರಿಯೊಳ್ ವ್ಯಗ್ರನಾಗಿ (ಅನಂಪು. ೯-೧೧೪ ವ). [ನೂಲ್₂ + ತೆಗೆ₁]

**ನೂಲ್ಪಾಸ** (ನಾ). ನೂಲಿನಿಂದ ಮಾಡಿದ ಕಟ್ಟು,—ಬಂಧನ : ತಳದಿಂದವುಂಕಿ ತೊಡೆದುದ್ದಳಿಕೆಯ ನೂಲ್ಪಾಸಮೆಸೆಯೆ ಝೇಂಕಾರಮನಿತ್ತಳವಡೆ ಬಾಜಿಸೆ ಶಶಿಮಂಡಳಮುಗುಟ್ಟುವರ್ದೆನಿಸಿದತ್ತು ಢಕ್ಕಾನಿನದಂ (ಮಲ್ಲಿಪು. ೮-೨೯). [ನೂಲ್₂ + ಪಾಸ₁]

**ನೂಲ್ವೊಯ್,** ನೂಲುವೊಯ್ (ಕ್ರಿ). = ನೂಲ್ದೆಗೆ ೩ : ಒಡ್ಡಿನ ಮುಂತು ಪಿಂತು ಕೆಲನಂ ತಿರ್ದುತ್ತೆ ತಮ್ಮಿರ್ಬರುಂ ಮುರಜಂ ಬಾಯ್ತರೆ ದೇವಸೇನೆ ನಡೆದತ್ತೋರಂತೆ ನೂಲ್ವೊಯ್ದವೋಲ್ (ಅನಂಪು. ೫-४४). **ನೂಲುವೊಯ್ :** ಚಿರಂತನ ಚಿತ್ರಕರನಪ್ಪ ಚೀರಘಟ್ಟ ಶಂಖವಿಟ್ಟ ಬಟ್ಟಗೆವಲಗೆಯುಂ . . . ವಿಶಾಲಪಟ್ಟದ ಮೇಲೆ ನೂಲುವೊಯ್ದು ತಿಟ್ಟವಿಟ್ಟಜ್ಜೆಗೆಯ್ದು ರುಜಾಸ್ಥಾನಕದ ಸಮವರಿಜಿನ ನಂದಕ್ಕೆ ಪಡಿಚಂದವಾಗಿ (ಪುಷ್ಪಪು. ೧४-೨೯ ವ). [ನೂಲ್₂ + ಪೊಯ್₂]

**ನೂಲ್ಸೋನೆ** (ನಾ). ದಾರದ ಎಳೆಯಂತೆ ಬೀಳುವ ಮಳೆಯ ಹನಿ, ಸೋನೆ : ಕುಳ್ಳಿರ್ದ ಮಳೆಗಾಲಮೆದ್ದು ನಿಂತುದು ತುದಿಯ ಕಾಲಿನಲಿ ನೂಲ್ಸೋನೆಯಾ ತೆರೆವುರೆಯನೆತ್ತಲ್ಕೆ (ಶ್ರೀರಾಮಾ. ३४೫-೧३೯).
[ನೂಲ್₂ + ಸೋನೆ₁]

**ನೂಸು** (ನಾ). (?) : ಅಂತು ಪುಣ್ಯಭಾಜನಂಗೆ ನೂಸೆ[ಪಾಠಾಂ. ಕೆ] ಪಾಸೆಂಬಂತೆ . . . ಅಜಿತಂಜಯಭೂಪಾಲಂಗಮಾತನರಸಿ ವಸುಮತಿಗಂ ಯುಗಂಧರನೆಂಬ ಪೂರ್ವಪುಣ್ಯನಾಮುಮಂ ತಾಳ್ದಿ (ಆದಿಪು. ३-೭೯ ವ) ; ಮನೆಯಿಂದಂ ಮನೆಗೆಂದು ಪೋಪ ತೆಱದಿಂ ಮೇಣ್ ನೂಸೆ ಪಾಸೆಂಬ ಮಾತಿನ ಪಾಂಗಿಂದನಿತುಂ ಯುಗಂ ತಳರ್ದು (ಆದಿಪು. ೫-೭೦) ; ಉಪಚ್ಛದಾಚ್ಛಾದ್ಯತಳದೊಳನವದ್ಯದೊಳಗ್ಗ ಪಿತನಿರೆ ಪಾಸಿನೊಳ್ ನೂಸೆ ಪಾಸುಕೃತಿಗೆಂದು ದಿವಿಜರುಲಿದರ್ ತಮ್ಮೊಳ್ (ಶಾಂತಿಪು. ೭-೧३).
[ ? ]

**ನೂಳ್**₁ (ಕ್ರಿ). ಹುಡಿಮಾಡು ; ಪುಡಿಮಾಡು : ಏಡಾಧಿನಾಥನೇಳ್ತರುತ್ತಿರಲಿತ್ತಲೊರ್ವ ಮಾಸಾಳ್ವಗಳ್ಕೈದೀವಿಗೆಯೊಳಜಿಸಿ ನೆಲನಂ ನೂಳ್ದು ತೂಱು ಕೇಱು ಕಾದುವ ಭಟರಂ ಕಾಣೆನೆನುತ್ತೆ (ತ್ರಿಪುವಿ. ೨३-೧೦ ವ).
[ ? ]

**ನೂಳ್**₂ 'ನುಸುಳ್₂' ನೋ.

**ನೂಳ** (ನಾ). ೧. ಸುಳ್ಳುಗಾರ ; ಸುಳ್ಳು ಹೇಳುವವನು ; ಹುಸಿಗಾರ : "ನೂಳ=ಹುಸಿಗ" (ಚತುನಿ. ೬. I, ೫೮) ; ಸಿಂದಿದರ್ ಬಗೆಯುಳಿರ ನೂಳರಂ ಜರೆದು (ಕಾಲೂರ. ೧೧४-೨೩೬). ೨. ಸುಳ್ಳು ; ಹುಸಿ : ಗುರುಕಾರ್ಯನಿರ್ವಾಹ ಸದ್ಗುಣಸಮೂಹಬಂಧುರಮಪ್ಪ ನಿನ್ನದೃಷ್ಟಪ್ರತ್ಯಯಂ ನೂಳಮಾದುದೀ ಜಗವಱಿಯಲು (ಅರಾಚ. ೨-४-४೭). [ನೂಳ್₂(<ನುಸುಳ್₂) + -ಅ₇]

**ನೂಳದು**₁ (ನಾ). ಅಧಿಕ್ಯ ; ಅತಿಶಯವಾದುದು : "ನೂಳದು = ಪಿರಿದು" (ಶಬ್ದ. ಪರಿ. ೨) ; "ಉಬ್ಬರಂ, ಉಬ್ಬಟೆ . . . ನೂಳದು, ವಿಱಾಂಟು, ಒಟ್ಟಜೆ, ಪೆರ್ಚುಗೆ — ಈ ೧೯ ಅತಿಶಯಂ" (ಕಶಸಾ. ೫೭-೨३४) ; ನೂಳದದೊಂದು ದಂದುಗಳ್ಕೆ ಕೆಯ್ಗುಮರ್ದ ಚಿಂತಾಮಣಿಯನೊತ್ತೆಯಿಟ್ಟು ಬಾಟ್ಸಿ ಕೈನೆಯು ಕೈಮೆಗೊಳಗಾದೆನಕ್ಕಟ ! (ರಾಮಾಶ್ವ. ೬೮-४).

**ನೂಳದು**₂, ನೂಟಿದುಂ (ಅ). ಅಧಿಕವಾಗಿ ; ಅತಿಶಯವಾಗಿ : ಅಬ್ಧಿಯೊಳ್ತಾಮರಸಪ್ರಿಯಂಗೆ ಮುಳುಗಿರ್ಪುದೆ ನೂಳದು ಲೇಸೆನಿಸಿಕ್ಕುಂ (ಪಂರಾಚ. ೧೦೫-೨೯). △ **ನೂಟದುಂ :** ಕರ್ಪುರದ ಮಾವಿನರನೇಱಲ ಕಂಚೀಳೆಯ ಪಲಸಿನ ಮರದಿಂ ನೂಟದುಮೆಸೆದಿರ್ಕುಮದಱ ಬಹಿರುದ್ಯಾನಂ (ಕಾವ್ಯಾಸ. ३३೦). [<ನೂಳದು₁]

**ನೂಳು** 'ನುಸುಳ್₂' ನೋ.

**ನೂಳೆಯೆ** (?). (?) : ಅಳಗೆ ಮನೆಯೊಳ್ ದೇ(ದಿ)ವಸಮು(ನೋ) ನೂಳೆಯೆ ನಿಂದಿರಿಸಿ ಕಡೆಯಂನೆಣಿಸುತೆ ಬಾಸಾಲೀಲೆಯೊಳೆ ನೀರನೊಕ್ಕೊಡೆಗಾಲಯ ಮೇಲಿ(ಲ)ನಿತೆ ಸಮಯದೊಳ್ ಮಟಿಕೆಯಕ್ಕುಂ ? (ಜಟ್ಟಪ. ३-५).
[ ? ]

**ನೂಱು**₁ (ಕ್ರಿ). (?) : ಪುಗಿಲಂ ಪೋಗಂ ಬಾರಿಯಂ ಸನ್ನೆಯಂ ನೂಱುವಮರ್ಜುನ ನಿಲ್ವೆಡೆಯಂ ಬಗೆಯಂ ತೆಗೆಯನಲ್ಲಾಟಮಂ ಕಾಟಮಂ

ನೋವುದಂ ಸಾವುದನೆಲ್ಲಂದದಿಂ ಬಗೆದಾಗಳರಸರೊಳೆಲ್ಲ ಕೇಳ್ ನೀಂ ಬಲ್ಲೆ ಬೇಂಟೆಕಾಱರೊಳೆಲ್ಲವಾನೆ ಬಲ್ಲೆಂ (ಪಂಪಭಾ. ೫-೪೩). [ ? ]

**ನೂಱು$_2$,** ನೂರು (ನಾ). **೧.** ಒಂದು ಸಂಖ್ಯಾವಾಚಕ; ಹತ್ತನ್ನು ಹತ್ತರಿಂದ ಗುಣಿಸಿದರೆ ಬರುವ ಲಬ್ಧ; ಶತಕ : ಕುದಿಕುದಿದತ್ತಣಿಂ ಕುದುರೆ ನೂಱುಕೋಟಿ ಬಲದಾನೆ ಪತ್ತು ತಾಗಿದುವೆನೆ ದೋಷಮಾ ಪಿರಿದು ಸಂಖ್ಯೆಯೊಳೇಕ ಬಹುತ್ವ ಸಂಗದಿಂ (ಕವಿರಾ. ೧-೧೨೦); ಯಮುನಾನದಿಯ ತೆಂಕಣ ದೆಸೆಯೊಳ್ ನೂಱು ಯೋಜನದಗಲದೊಳಮನಿತೆ ನೀಳದೊಳಂ ನೆಱೆದು (ಪಂಪಭಾ. ೫-೭೯ ವ); ತುಡೆ ನೂಱಸೆ ಸಾಸಿರಮಾ ಪಡೆಯಂ ಕೊಳೆ ಲಕ್ಕಲೆಕ್ಕಮಾಗುರ್ಚಿದುವು . . . ಕಡುಪಿಂದಿಸೆ ವಿಬುಧವನಜವನಕಳಹಂಸಂ (ಶಾಂತಿಪು. ೪-೨೭); ತನಗೆಡವಿಡದತಿಚಪಲಂ ಮನಮದು ನೋಡೊಂದೆ ನೂಱು ನೂಚ್ಛ್ವಾಸಿರಮಾಯ್ತೆನೆ ಬಿಡದೆ ಪಿಡಿದು ನೃಪರಂ ಕನಲ್ಚಿ ತನ್ನಿಚ್ಚೆಗೊಯ್ವುದೊಂದಚ್ಚರಿಯೇ (ಕಾದಂಪೂ. ೫೫೯); ದುರ್ಜನಂಗೆ ನೂಱು ಲೇಸಂ ಮಾಡಿದೊಡಂ ಕಿಡುವುದು ಅಱಿಯದವನ ಮುಂದೆ ನೂಱು ಸುಭಾಷಿತವನೋದಿದೊಡಂ ಕೆಡುವುದು (ಪಂಚತಂ. ೧೩೭-೧); ಸಾಸಿರಂ ಪರದೊಳಿರೆ ಪತ್ತರ್ಕೆ ಪಯಿನ್ನೆಂದು ಆದೇಶಂ; ನೂಱರ್ಕಂ ಮತ್ತಂ ಸಾಸಿರಕ್ಕಂ ಕಿಱಿದೆಡೆಯೊಳ್ ಅಂತ್ಯಲೋಪಮಕ್ಕುಂ (ಶಮದ. ೧೯೧ ವೃತ್ತಿ); ನೂಱು ರಥದಲಿ ಸರಳ ಹೊದೆ ಮೂನೂಱು ಪರಿಚಾರರು ಸಹಿತ ಮೈದೋಱಿ ನಿಂದನು ಭೀಮನೊಬ್ಬನೆ ತಱುಬಿ ಕುರುಬಲವ (ಕುವ್ಯಾಕ. ೧೫-೩). **೨.** ಅನೇಕ; ಬಹಳ : ನೂಱನೋದಿ ಏವೆನಯ್ಯ ನಮ್ಮ ಕೂಡಲಸಂಗಮದೇವರ ಮನಮುಟ್ಟಿ ನೆನೆಯದನ್ನಕ್ಕ (ಬಸವ. ೪೭೫); ಅಚ್ಚುಡಿದು ಕೀಲ್ಮುಱಿದು ಬಿಚ್ಚಿ ಬೇಱಾಗಿರಲು ನುಚ್ಚ ನೂಱಂ ಮಾಡೆ ಶೂಲಿ ಮೆಚ್ಚುತ್ತಿರಲು (ಇಹರ. ದೇ. ೪೩-೨). **ನೂರು : ೧.** ನಾಲಯ್ವರಲ್ಲದೆ ನೂರೊಕುವರರೊವ್ವಿಗೆ ಕೆರಳಿ ಕೊರಚಾಡಲ್ (ಹಚ್ಚರ.೧೪-೧೦೧); ನೂರು ಬಂದಾಗ ಹತ್ತು ವರೆಯೇಕೆ ಕೊಡಬಾರದು ? (ಅನ್ನಾಪ. ೪೫); ಸಾವಿರ ಹಾರಿ ಹೋಯಿತು, ನೂರು ಬೆರಸಿ ಬಂತು (ಗಾದೆ).

**ನೂರಾಗು** = ಅನೇಕವಾಗು ; ಬಹಳವಾಗು : ನೀರೊಳೀತನ ತಮ್ಮನಿಣುಕಿ ನೋಡುವನು, ಸಾರೆ, ಬಾ ಎಂದು ತನ್ನೆಡೆಗೆ ಕರೆಯುವನು ಸಾರಿದರೆ–ನೂರಾಗಿ ಹರಿದೋಡುತಿಹನು ಸೇರಿದರೆ–ಸೆರೆವಿಡಿದು ಮರಳಿ ಪೋಗೊಡನು (ಕಎಪು. ೧೧-೬). **ನೂರಾಡು** = ನೂರು ಹೇಳು : ನೂರಾಡಿ ಏನು ಫಲವು ತಾರಾಡುವಾಗ ಒಲವು ಕಿವಿಗಿಳಿದು ಬರಲು ಹಾಡು ಸವಿಗಾಗ ಯಾವುದೀಡು (ಗಂಗಾತ. ೨೦-೧). **ನೂರು ಹೇಳು** = ಬೇಕಾದಷ್ಟು ಹೇಳು ; ಬಹಳವಾಗಿ ಹೇಳು : ಅವರು ನೂರು ಹೇಳಿದರೂ ಹೆತ್ತ ತಂದೆ-ತಾಯಿ (ಸುಬ್ಬಣ್ಣ. ೩೪). **ನೂರೊಂದು ಸ್ಥಳ** = ವೀರಶೈವ ಷಟ್ಸ್ಥಲಗಳಲ್ಲಿಯ ಒಟ್ಟು ಉಪಭಾಗಗಳು; ಏಕೋತ್ತರಶತಸ್ಥಲ; ☞ ವೀರಶೈವ ಷಟ್ಸ್ಥಲಗಳಲ್ಲಿ (ಅಂಗಸ್ಥಲ ಮತ್ತು ಲಿಂಗಸ್ಥಲ ಎರಡರಲ್ಲಿಯೂ ಷಟ್ಸ್ಥಲಗಳುಂಟು) ಪ್ರತಿಯೊಂದು ಸ್ಥಲದಲ್ಲಿಯೂ ಉಪಭಾಗಗಳನ್ನು ಗುರುತಿಸುತ್ತಾರೆ. ಇವುಗಳಲ್ಲಿ ಅಂಗಸ್ಥಲಗಳು ೪೪ ಮತ್ತು ಲಿಂಗಸ್ಥಲಗಳು ೫೭. ಹೀಗೆ ಒಟ್ಟು ನೂರೊಂದು ಸ್ಥಲಗಳಿವೆ. **೧.** ಅಂಗಸ್ಥಲಗಳು – ೪೪. (೧). ಭಕ್ತಸ್ಥಲ-೧೫ : ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರಹೇಯಸ್ಥಲ, ದೀಕ್ಷಾಲಕ್ಷಣ ಗುರುಕಾರುಣ್ಯಸ್ಥಲ, ಲಿಂಗಧಾರಣಸ್ಥಲ, ವಿಭೂತಿಸ್ಥಲ, ರುದ್ರಾಕ್ಷಧಾರಣಸ್ಥಲ, ಪಂಚಾಕ್ಷರೀ ಜಪಸ್ಥಲ, ಭಕ್ತಮಾರ್ಗಸ್ಥಲ, ಗುರುಲಿಂಗಾರ್ಚನ ಸರೂಪೋಭಯ ಸ್ಥಲ, ಜಂಗಮಾರ್ಚನ ಲಕ್ಷಣ ತ್ರಿವಿಧ ಸಂಪತ್ತಿಸ್ಥಲ, ಚತುರ್ವಿಧಸಾರಾಯಸ್ಥಲ, ಉಪಾಧಿಮಾಟಸ್ಥಲ, ನಿರುಪಾಧಿಮಾಟಸ್ಥಲ, ಸಹಜಮಾಟಸ್ಥಲ. (೨). ಮಾಹೇಶ್ವರ ಸ್ಥಲ-೯ : ಮಾಹೇಶ್ವರ ಪ್ರಶಂಸಾಸ್ಥಲ, ಲಿಂಗನಿಷ್ಠಾಸ್ಥಲ, ಪೂರ್ವಾಶ್ರಯನಿರಸನಸ್ಥಲ, ಅದ್ವೈತನಿರಸನಸ್ಥಲ, ಆಹ್ವಾನ ನಿರಸನಸ್ಥಲ, ಅಷ್ಟಮೂರ್ತಿ ನಿರಸನಸ್ಥಲ, ಸರ್ವಗತ್ವ ನಿರಸನ ಸ್ಥಲ, ಶಿವಜಗನ್ಮಯಸ್ಥಲ, ಭಕ್ತದೇಹಿಕಲಿಂಗಸ್ಥಲ. (೩). ಪ್ರಸಾದಿಸ್ಥಲ-೭ : ಪ್ರಾಸಾದಿಸ್ಥಲ, ಗುರುಮಾಹಾತ್ಮ್ಯಸ್ಥಲ, ಲಿಂಗಮಾಹಾತ್ಮ್ಯಸ್ಥಲ, ಜಂಗಮಮಾಹಾತ್ಮ್ಯಸ್ಥಲ, ಭಕ್ತ ಮಾಹಾತ್ಮ್ಯಸ್ಥಲ, ಶರಣಮಾಹಾತ್ಮ್ಯಸ್ಥಲ, ಪ್ರಸಾದ ಮಾಹಾತ್ಮ್ಯಸ್ಥಲ. (೪). ಪ್ರಾಣಲಿಂಗಿಸ್ಥಲ-೫ : ಪ್ರಾಣಲಿಂಗಿಸ್ಥಲ, ಪ್ರಾಣಲಿಂಗಾರ್ಚನಸ್ಥಲ, ಶಿವಯೋಗಸಮಾಧಿಸ್ಥಲ, ಲಿಂಗನಿಜಸ್ಥಲ, ಅಂಗಲಿಂಗಸ್ಥಲ. (೫). ಶರಣಸ್ಥಲ-೪ : ಶರಣಸ್ಥಲ, ತಾಮಸನಿರಸನಸ್ಥಲ, ನಿರ್ದೇಶಸ್ಥಲ, ಶೀಲಸಂಪಾದನಸ್ಥಲ. (೬). ಐಕ್ಯಸ್ಥಲ-೪ : ಐಕ್ಯಸ್ಥಲ, ಆಚಾರಸಂಪತ್ತಿಸ್ಥಲ, ಏಕಭಾಜನಸ್ಥಲ, ಸಹಭೋಜನಸ್ಥಲ. **೨.** ಲಿಂಗಸ್ಥಲಗಳು – ೫೭. (೧). ಭಕ್ತಸ್ಥಲ-೯ : ದೀಕ್ಷಾಗುರುಸ್ಥಲ, ಶಿಕ್ಷಾಗುರುಸ್ಥಲ, ಜ್ಞಾನಗುರುಸ್ಥಲ, ಕ್ರಿಯಾಲಿಂಗಸ್ಥಲ, ಭಾವಲಿಂಗಸ್ಥಲ, ಜ್ಞಾನಲಿಂಗಸ್ಥಲ, ಸ್ವಯಸ್ಥಲ, ಚರಸ್ಥಲ, ಪರಸ್ಥಲ. (೨). ಮಾಹೇಶ್ವರಸ್ಥಲ-೯ : ಕ್ರಿಯಾಗಮಸ್ಥಲ, ಭಾವಾಗಮಸ್ಥಲ, ಜ್ಞಾನಾಗಮಸ್ಥಲ, ಸಕಾಯಸ್ಥಲ, ಅಕಾಯಸ್ಥಲ, ಪರಕಾಯಸ್ಥಲ, ಧರ್ಮಾಚಾರಸ್ಥಲ, ಭಾವಾಚಾರಸ್ಥಲ, ಜ್ಞಾನಾಚಾರಸ್ಥಲ. (೩). ಪ್ರಸಾದಿಸ್ಥಲ-೯ : ಕಾಯಾನುಗ್ರಹಸ್ಥಲ, ಇಂದ್ರಿಯಾನುಗ್ರಹಸ್ಥಲ, ಪ್ರಾಣಾನುಗ್ರಹಸ್ಥಲ, ಕಾಯಾರ್ಪಿತಸ್ಥಲ, ಕರಣಾರ್ಪಿತಸ್ಥಲ, ಭಾವಾರ್ಪಿತಸ್ಥಲ, ಶಿಷ್ಯಸ್ಥಲ, ಶುಶ್ರೂಷುಸ್ಥಲ, ಸೇವ್ಯಸ್ಥಲ. (೪). ಪ್ರಾಣಲಿಂಗಿಸ್ಥಲ-೯ : ಆತ್ಮಸ್ಥಲ, ಅಂತರಾತ್ಮಸ್ಥಲ, ಪರಮಾತ್ಮಸ್ಥಲ, ನಿರ್ದೇಹಾಗಮಸ್ಥಲ, ನಿರ್ಭಾವಾಗಮಸ್ಥಲ, ನಷ್ಟಾಗಮಸ್ಥಲ, ಆದಿಪ್ರಸಾದಸ್ಥಲ, ಅಂತ್ಯಪ್ರಸಾದಸ್ಥಲ, ಸೇವ್ಯಪ್ರಸಾದಸ್ಥಲ. (೫). ಶರಣಸ್ಥಲ-೧೨ : ದೀಕ್ಷಾಪಾದೋದಕಸ್ಥಲ, ಶಿಕ್ಷಾಪಾದೋದಕಸ್ಥಲ, ಜ್ಞಾನಪಾದೋದಕಸ್ಥಲ, ಕ್ರಿಯಾನಿಷ್ಪತ್ತಿಸ್ಥಲ, ಭಾವನಿಷ್ಪತ್ತಿಸ್ಥಲ, ಜ್ಞಾನನಿಷ್ಪತ್ತಿಸ್ಥಲ, ಪಿಂಡಾಕಾಶಸ್ಥಲ, ಬಿಂದ್ವಾಕಾಶಸ್ಥಲ, ಮಹಾಕಾಶಸ್ಥಲ, ಕ್ರಿಯಾಪ್ರಕಾಶನಸ್ಥಲ, ಭಾವಪ್ರಕಾಶನಸ್ಥಲ, ಜ್ಞಾನಪ್ರಕಾಶನಸ್ಥಲ. (೬). ಐಕ್ಯಸ್ಥಲ-೯ : ಸ್ವೀಕೃತ ಪ್ರಸಾದೈಕ್ಯಸ್ಥಲ, ಶಿಷ್ಟೋದನಸ್ಥಲ, ಚರಾಚರಲಯಸ್ಥಲ, ಭಾಂಡಸ್ಥಲ, ಭಾಜನಸ್ಥಲ, ಲಿಂಗಲೇಪಸ್ಥಲ, ಸ್ವಪರಾಜ್ಞಾಸ್ಥಲ, ಭಾವಾಭಾವಲಯಸ್ಥಲ, ಜ್ಞಾನಶೂನ್ಯಸ್ಥಲ : ಈ ಶಾಸ್ತ್ರಕ್ಕೆ ವೀರಶೈವಧರ್ಮನಿಷ್ಠನಾದ, ಮುಮುಕ್ಷುವಾದ ಭಕ್ತನೇ ಅಧಿಕಾರಿ . . . ೧೦೧ ಸ್ಥಳಗಳ ಜ್ಞಾನವೇ ವಿಷಯ (ಭಾತತ್ತ್ವ. ೬೭೦). **ನೂರ್ವರ್, ನೂರ್ಬರ್** = ನೂರು ಮಂದಿ ; ನೂರುಜನ : ಇಱ್ಪೊನ್ವೊ(ರ್ವ)ರುಂ ಮಹಾಜನದ ಕಾಲಂ ಕರ್ಚ್ಚಿ (ಎಕ. XII, ೨೧೯-೨೦; 814); ಒದವುಗೆ ನಿನ್ನ ಸಂತತಿಗೆ ನೂರ್ವರುದಗ್ರಸುತರ್ಕಳೊಂದೆ ಗರ್ಭದೊಳೆನೆ ಕೆಮ್ಮನಿಂತು ಪೊಸೆದಿಕ್ಕಿದೆ (ಪಂಪಭಾ. ೧-೧೩೧); ಕವಿಸೂನುಗೆ ನೂರ್ಬ್ಬರು ಬ್ಯಾಸಂಗೆ ನೂರ್ಬ್ಬರು ಮನುವಿಂಗೆಣೆ ನಾಲ್ಕು ನೂರ್ಬ್ಬರಾದ×ಳವೆ ನಾಗವಾವಿಯ[ವ]ರು (ಕಇಅ. ೧೧-೪-೩೪ ; ಸು. 1093); ಶಿವೆಯುಗೇರಿಯ ನೂರ್ಬ್ಬರಿಗೆ (ಎಕ. XVIII, ೧೬೨-೩೭ ; 1184). **ನೂಱಾಱು, ನೂರಾರು** = ಬಹಳ; ಅನೇಕ ; ಹಲವಾರು : ಬಾಲಕರು ನೂಱಾಱು ಮೆಱೆದರು (ಕುವ್ಯಾಸ. ೬-೧) ;

ಗುಱಿಯ ತಾಗದ ಕೋಲ ನೂಱ್ಱಱಿಸಿದೇನು ಬಱಿದಿಗೆ ಭಕ್ತಿ ಭಜಿಸಿದೊಡೆ ಅದು ತಾನು ಇರಲಱಿಯದಯ್ಯ (ಸರ್ವಜ್ಞ. ೨೫೬) ; ಧನಿಕನೌಷಧಗಳು ನೂರಾರು ತೆರನವು ದುಡಿಮೆಯೆ ಬಡವನೌಷಧವು (ಇಂಚಾಪ. ೧೯೨-೪೬).
**ನೂಱುಕಾಲ ಮಂಟಪ**=ನೂರು ಕಂಬಗಳುಳ್ಳ ಮಂಟಪ: ಶ್ರೀ ಕೃಷ್ಣರಾಯ ಮಹಾ[ರಾಯ]ರೂ ಶ್ರೀವೀರಶ್ರೀವಿಠಲದೇವರಿಗೆ ಕಟ್ಟಿಸ್ತ ನೂಱುಕಾಲಮಂಟಪ (ಸೌಇಇ. IX–ii, ೫೦೨-೯ ; 1516). **ನೂಱು ಯಜನದ ಜಾಣ**=ನೂರು ಯಜ್ಞಗಳನ್ನು ಮಾಡಿದವನು; ಶತಕ್ರತು ; ಇಂದ್ರ : ತೋಱುದುದು ಜರೆ ನಮಗೆ ನಾವಿನ್ನೇಱಲುಳ್ಳವರಮರನಗರದ ನೂಱುಯಜನದ [ಪಾಠಾಂ. ನೂಱುಯಜ್ಞದ, ನೂಱುಜನ್ನದ, ದೂಱು ಗಾಱನ]ಜಾಣನೋಲಗದಮಳವಿಷ್ಟರವ (ತೊರರಾ.೨-೧-೬). **ನೂಱೆಂಟು, ನೂರೆಂಟು**=೧. ನೂರರ ಮೇಲೆ ಎಂಟು; ನೂರು ಮತ್ತು ಎಂಟರ ಮೊತ್ತ : ಸಾಲಾಮ್ಬಾಲ ತಪೋಗ್ರದಿನ್ತು ನಡದೊಂ ನೂಱೆಣ್ಬ ಸಂವತ್ಸರಂ (ಎಕ. II, ೨೨-೨ ; ಸು. 700) ; ಭರತಾಗಮದೊಳ್ ಮೂವತ್ತೆರಡನೆ ನೆಗಟ್ದಂಗಹಾರಮುಂ ನೂಱೆಂಟುಂ ಕರಣಮುಮನವಳ ಪವಳೆಯ ಪರಿಚಾರಿಕೆಯಱುಗುಮಾಳೆಗವು ತೊಡರ್ಪಡೆಯೆ (ಆದಿಪು. ೨೯). **೨.** ಅನೇಕ ; ಬಹಳ : ಮಕ್ಕಳಿಲ್ಲದಿದ್ದರೆ ಇಲ್ಲ ಎಂಬದು ಚಿಂತೆ, ಇದ್ದರೆ ಹೀಗೆ ನೂರೆಂಟು ಚಿಂತೆ (ಹೊಸಕ್ಷಿ. ೧೮).
[**ದೇ.॥ ತಮಿ. ಮಲ.** ನೂಱು ; **ತುಳು.** ನೂದು ;
**ತೆಲು.** ನೂಱು, ನೂರು]
**ನೂಱುವಡಿ** ‘ನೂರ್ವಡಿ’ ನೋ.
**ನೂಱೆಲೆ,** ನೂರೆಲೆ (ನಾ). ೧. ನೂರು (ವೀಳೆಯದ) ಎಲೆ : ಅರವಾನೆಣ್ಣೆ ಹೇಱುಂಗೆ ನೂಱೆಲೆ ಹೊಱೆಯ ×× ತು ಹಸುಬೆಗೆ ಅಡಿಕೆ ೨ ಭತ್ತಕೆ ಸೋಡಿಗೆ ಭತ ಯಿಂತೀ ಧರ್ಮವಂ ಪ್ರತಿಪಾಳಿಸಿದವರಿಗೆ (ಎಕ. VII, ಹೊನ್ನಾಳಿ. ೧೦೮-೫೬ ; 1203). **೨.** ನೂರು ದಳಗಳುಳ್ಳುದು ; ಶತಪತ್ರ ; ತಾವರೆ : ‘ನೂಱೆಲೆಗಣ್ಣ’, ‘ನೂಱೆಲೆಗೆಳೆಯ’ ಪರಾ. **ನೂರೆಲೆ: ೨.** “ನೂರೆಲೆ-ಕಮಲ” (ಗಂಗಾಮು. ೧೯೦). [ನೂಱು$_2$ + ಎಲೆ$_1$]
**ನೂಱೆಲೆಗಣ್ಣ** (ನಾ). ಕಮಲದಂತೆ ಕಣ್ಣುಳ್ಳವನು ; ಕೃಷ್ಣ : ಮಿಾಱಬಾರದು ಪ್ರಾಪ್ತಿವಶವನೆಂದಳಿಗೆ ಮಾಱುತ್ತರಗೊಟ್ಟು ನಗುತ ನೂಱೆಲೆಗಣ್ಣ ರುಕ್ಮಿಣಿಗೊಡರ್ಚಿದ ಹೊಗರೇಱುವ ಗರ್ಭೋತ್ಸವವ (ಮೋಹತ. ೪-೬೬). [ನೂಱೆಲೆ + ಕಣ್ + -ಅ$_7$]
**ನೂಱೆಲೆಗೆಳೆಯ** (ನಾ). ಕಮಲದ ಮಿತ್ರ ; ಸೂರ್ಯ : ನೂಱೆಲೆಗೆಳೆಯನುಗ್ರಕೋಪದಿಂದುರಿಯನುಗುಳದೆ ಮಾಣನೆಂಬಂತಿರೆ (ಜೈಮಿಭಾ. ೩-೪೧). [ನೂಱೆಲೆ + ಗೆಳೆಯ (<ಕೆಳೆಯ)]
**ನೂಱೆಲೆಪಗೆಯ** (ನಾ). ಕಮಲದ ಶತ್ರು ; ಚಂದ್ರ : (ಕ). ‘ನೂಱೆಲೆಗೆಳೆಯ’ ಪರಾ. [ನೂಱೆಲೆ + ಪಗೆಯ]
△**ನೂಬದುಂ** ‘ನೂಳದು$_2$’ ನೋ.
**ನೃಕ್ಷೇತ್ರ** (ನಾ). ಮನುಷ್ಯರು ವಾಸಿಸುವ ಸ್ಥಳ : ಪುದ್ಗಲಸಂಪ್ರಭೇದದಲು ಸರ್ವಾವಧಿಜ್ಞಾನಾಂತಿಮಭಾಗಮನೆ ಕೈಕೊಂಡು ನೃಕ್ಷೇತ್ರ ವಿಷಯದಿಂ ಪರಮನಃಸ್ಥಿತಾರ್ಥಗ್ರಹಣಧಾರಣಸಮರ್ಥ ಮನಃಪರಿವಿದ್ಯಾ ಮಂತ್ರಮಹಿತಗುಣದಿಂ ನೆಱೆದು (ಸುಕುಮಾ. ೮-೪ ವ). [**ಸಂ.**]
**ನೃಗತಿ** (ನಾ). [ಜೈನ] ಚತುರ್ಗತಿಗಳಲ್ಲಿ ಒಂದಾದ ಮನುಷ್ಯಗತಿ; ಮನುಷ್ಯಾವಸ್ಥೆ : ಮಳಲೊಂದನಲ್ಲಿ ಕುಱುಪಂ ಮಾಡಿಟ್ಟು ಚೈರಂತನ ಕ್ರಮದಿಂದಾ ಮಣಲೆಲ್ಲಮುಂ ಮಗುಳೆ ಪಾರಾವಾರದೊಳ್ ಪೊಯ್ದು ಮತ್ತಮದಂ ಸೋದಿಸಿ ಕಾಣ್ಬವೊಲ್ ನೃಗತಿ ನೋಡಲ್ ನಾಡೆಯುಂ ದುರ್ಲಭಂ (ಸುಕುಮಾ. ೫-೩೩). [**ಸಂ.**]
**ನೃಜಿತ** (ನಾ). ಮನುಷ್ಯನನ್ನು ಗೆದ್ದವನು : ವಿಶ್ವಜಿತನು ಧನುಜಿತನು ಸರ್ವಜಿತನು ಸುತ್ರಾಮಜಿತನು ನೃಜಿತನು . . . ಕೂಡಲಸಂಗಯ್ಯನು (ಬಸವ. ೯೫೪). [**ಸಂ.** ನೃಜಿತ್]
**ನೃತ** (ನಾ). ಸತ್ಯ ; ನಿಜ : ನೃತವಾಕ್ಯಾಂಬುಧಿ ಶೌರ್ಯ ಸದ್ಗುಣಿ . . . ಸುಮನೋಜಾತನೆಂದೊಲ ಮಿಂದಂದರೆ ಬಂದು ದೇಶ ಶರದೋಪಶ್ಚಂದ್ರನಂ ಚಂದ್ರನಂ (ಮದತಿ. ೧-೪೫) ; ಪರಹಿತವೃತ್ತಿಯೊಳ್ ಸಿಬಿ ಪರಾರ್ತ್ಥದೊಳಾ ರವಿನಂದನಂ ನೃತಾದರತೆಗೆ ಧರ್ಮ್ಮನಂದನನೆ (ಎಕ. VII, ಶಿಕಾರಿ. ೧೧೯-೨೨ ; 1181).
**ನೃತ ಮಾಡು** = ನಿಜವನ್ನಾಗಿ ಮಾಡು ; ಸತ್ಯವನ್ನಾಗಿ ಮಾಡು : ಪತಿತಪಾವನರಂಗ ವಿಜಯವಿಠ್ಠಲರೇಯ ನೃತ ಮಾಡು ವೇಗ ಈ ಕೃತಿಯ ಸಿದ್ಧನೆನಿಸಿ (ಮೋಕ್ಷದೀ. ೩-೫).
[☞ ‘ಅನೃತ’ ಎಂಬುದು ನಿಷೇಧಾರ್ಥಕವೆಂದು ತಪ್ಪಾಗಿ ಭಾವಿಸಿ, ಅದರಿಂದ ಮಾಡಿಕೊಂಡ ಪದ]
**ನೃತ್ತ** (ನಾ). ೧. [ನಾಟ್ಯ] ತಾಳಲಯಾಶ್ರಿತವಾಗಿ ಅಂಗ, ಪ್ರತ್ಯಂಗಗಳ ವಿಕ್ಷೇಪಮಾತ್ರದಿಂದ ಸೌಂದರ್ಯಭಾವವನ್ನು ವ್ಯಕ್ತಪಡಿಸುವ ಕುಣಿತ ; ☞ ಇದರಲ್ಲಿ ವಾಗರ್ಥವಾಗಲಿ, ಶೋಕ ವೀರಾದಿ ನವರಸಗಳ ಪ್ರತೀತಿಯಾಗಲಿ ಇರುವುದಿಲ್ಲ. ಇಂದಿನ ಭರತನಾಟ್ಯದ ಅಲರಿಪು, ಜತಿಸ್ವರಗಳು ಇದಕ್ಕೆ ಉದಾಹರಣೆ : ವಾರನಾರೀರಮಣೀಯನೃತ್ತಮುಮುರುತ್ತಿರೆ ಸಂದ ವಿರಾಟನಂದು ಕೆಯ್ನೀರೆಱೆದೀಯೆ ಗೆಯ್ದರಭಿಮನ್ಯುಗಮುತ್ತರೆಗಂ ವಿವಾಹಮಂ (ಪಂಪಭಾ. ೯-೯) ; ಎಲ್ಲಿತ್ತೊ ಗೀತವಾದ್ಯಂ ಸಲ್ಲಲಿತ ವಧೂಜನ ಪ್ರವೃತ್ತಂ ನೃತ್ತಂ (ಗದಾಯು. ೫-೪೩) ; ಎಸೆವ ಜಿನೇಂದ್ರಬಿಂಬಮನಳುಂಬಮಿದೆಂಬಿನಮಟ್ತಿಯಿಂ ಪ್ರತಿಷ್ಠಿಸಿ ನೆಱೆದೆಂಟುಮರ್ಚನೆಗಳಿಂ ರಸವೃತ್ತಿಯ ನೃತ್ತಮುಂ ಪ್ರವರ್ತಿಸಿ ಮಗುೞ್ದು ಪ್ರಕಾರದಿನನುಷ್ಠಿಸಿದಂ ವಿವಸಾಷ್ಟಕಂಬರಂ (ಚಂದ್ರಪು. ೪-೬೯) ; ತಾಂಡವ ನಾಟ್ಯ ನೃತ್ತ ಲಾಸ್ಯ ಗುಂಡಿಲ ಪೆಕ್ಕಣ ಲಚ್ಚಲ ಅಪರಿಪಾತ್ರ ಸುಪಾತ್ರ . . . ಸರ್ವತೋಭದ್ರವೆಂಬ ದಶವಿಧಪಾತ್ರಂಗಳಂ ಬೀಱು (ವಿವೇಕ. ೨೩೯) ; ಅಭಿನಯಮಿಲ್ಲದೆಯಾಂಗಿಕವಿಭವದೆ ಕೈಕಾಲನೆಯ್ದೆ ನೀಡಲ್ ನೃತ್ತಂ (ಲಾಸ್ಯರಂ.೧-೬೩); “ಭಾವಾಭಿನಯವಿಲ್ಲದೆ ಕೈ ಕಾಲುಗಳನ್ನು ಆಡಿಸುವುದೇ ನೃತ್ತ” (ಲಾಸ್ಯರಂ. ೨೧೯ ಗದ್ಯಾನುವಾದ) ; ಇದಲ್ಲದೆ ಭಾವಾಶ್ರಯವಾದ ‘ನೃತ್ಯ’ಕ್ಕೆ ಮಾರ್ಗವೆಂದೂ ತಾಲಲಯಾಶ್ರಯವಾದ ‘ನೃತ್ತ’ಕ್ಕೆ ದೇಶಿ (ದೇಸಿ)ಯೆಂದೂ ಹೆಸರಿರುವಂತೆ ದಶರೂಪಕದಿಂದ ತಿಳಿಯಬರುತ್ತದೆ (ಕೈಪಿಡಿ. ೨೨೩). **೨.** ನಾಟ್ಯ ಮಾಡುವವಳು ; ನರ್ತಕಿ : ಅವಿನಾಶ ಚಂದ್ರದಾಸರು ತಮ್ಮ . . . ಗ್ರಂಥದಲ್ಲಿ, “ನಾಟ್ಯಗಾತಿಗೆ ನೃತ್ತ ಎಂಬ ಹೆಸರಿತ್ತು, ಈ ಹೆಸರು ಬಹುಶಃ ವೃತ್ತಿಯನ್ನು ಅವಲಂಬಿಸಿದ್ದವರಿಗೆ ಅನ್ವಯಿಸಿರಬಹುದು” ಎಂದಿದ್ದಾರೆ (ಭಾರದ. ೫೫೦). [**ಸಂ.**]
**ನೃತ್ತಹಸ್ತ** (ನಾ). [ನಾಟ್ಯ] ನೃತ್ಯದ ಆಂಗಿಕಾಭಿನಯದಲ್ಲಿ ಕೈಗಳ ವಿನ್ಯಾಸ ; ಚತುರಸ್ರ, ಲಲಿತ ಮೊದಲಾದ ಮೂವತ್ತು ಭೇದಗಳುಳ್ಳ ಅಂಗ : ಚತುರಸ್ರ, ಉದ್ವೃತ್ತ, ತಲಮುಖ . . . ವಲಿತ, ಲಲಿತ – ಈ ಮೂವತ್ತು ನೃತ್ತಹಸ್ತಂಗಳ್ (ಲಾಸ್ಯರಂ. ೨-೪೪ ವ); ನೃತ್ತಹಸ್ತವೂ ಒಂದು ಚಲನೆಯೂ ಕೂಡಿದರೆ ‘ಕರಣ’ವಾಗುತ್ತದೆ (ಅಭಾನೃ. ೩೦). [ನೃತ್ತ + ಹಸ್ತ]
**ನೃತ್ಯ** (ನಾ). [ನಾಟ್ಯ] ಅಂಗ ಪ್ರತ್ಯಂಗ ವಿಕ್ಷೇಪ ಸಹಿತವಾಗಿ, ವಾಗರ್ಥದ ಮೂಲಕ ಶೋಕ ವೀರಾದಿ ನವರಸಗಳನ್ನು ಪ್ರತಿಪಾದಿಸುವುದು ; ☞ ನೃತ್ತದಲ್ಲಿ ಸೌಂದರ್ಯಭಾವವು ಶುದ್ಧ, ಪ್ರಧಾನ. ನೃತ್ಯದಲ್ಲಿದು ಪರೋಕ್ಷ, ಗೌಣ : ನೃತ್ಯಂ, ತಾಂಡವಂ,

ಲಾಸ್ಯಂ–ಈ ೩ ನಾಟ್ಯಮೆಂಬುದು" (ಹಲಾಯು. ೧೬–೯೩); ತ್ರಿದಶಗಣಾಧಿನಾಯಕನ ಪರ್ವಿದ ತೋಳ್ದುಜುಗಲ್ದ ಳೊಳ್ ಪಳಂಚದೆ ಗಗನಂಬರಂ ನೆಗೆದು ಸೂಸದೆ ಬಾಹುಪರಿಭ್ರಮುಂಗಳೊಳ್ ಬೆದಱದೆ ಶಕ್ರನೃತ್ಯದೊಳೊಡಂಬಡೆ ನರ್ತಿಸುವಲ್ಲಿ ಜತ್ತವಟ್ಟದ ಮಣಿಯಂತದೇಂ ಪದುಳಮಾದುದೊ ದಿವ್ಯವಧೂಕದಂಬಕಂ (ಆದಿಪು. ೭–೧೨೫); ನೃತ್ಯದ ಗೀತದ ವಾದ್ಯದ ಬಿತ್ತರಮಂ ಮೊದಲೆ ಮನದೊಳವಗಾಹಿಸುತುಂ . . . ಕೇಳಿಸಿದನೀಶನಂ ತಾಳಧರಂ (ವಿರೂಪಾ. ೭೭); ಬಱಯಾಂಗಿಕದಭಿನಯದಿಂ ನೆಱೆಭಾವಂಗಳನೆತೋರ್ಪುದೇ, ನೃತ್ಯಾಖ್ಯಂ (ಲಾಸ್ಯರಂ. ೧–೬೨); ಕರುಣದಿಂದ ನರ್ತಿಸುವಾಗ ನಟನತಾಂಡವ, ನೃತ್ಯದುತ್ಕಟ . . . ಗುಂಡಾಳವ ನಟಸಿ ಪಾತ್ರವಾಡಿದನು (ಭೈರಸೂ. ೨೫೬). [ಸಂ.]

**ನೃತ್ಯಕಲೆ** (ನಾ). ನರ್ತನಕಲೆ; ನಾಟ್ಯ: ಚಂದ್ರನು ಬುಧನ (ಮಿಥುನ ಕನ್ಯಾ)ನವಾಂಶಗಳಲ್ಲಿರುವಾಗ ಸೂರ್ಯ ನೋಡಿದರೆ ಜಾತಕನು ನೃತ್ಯಕಲೆಯಲ್ಲಿ ನಿಪುಣನೂ . . . ಶನಿ ನೋಡಿದರೆ ಶಿಲ್ಪನಿಪುಣನೂ ಆಗುತ್ತಾನೆ (ಜಾತತಿ. ೨೦–೧೯ಅಡಿಟಿ): ಮದನ್‌ಲಾಲ್ ಜೋಶಿಯು ನೃತ್ಯಕಲೆಯ ಮೇಲಿನ ತನ್ನ ಅಭಿಮಾನವನ್ನು ಮಾತುಗಳಿಂದ ವ್ಯಕ್ತಪಡಿಸಿದ (ಮೊಪಮ. ೧೭೭); ಕಲೆಗಳಲ್ಲೆಲ್ಲ ನೃತ್ಯಕಲೆಯು ಅತ್ಯುನ್ನತವಾದ . . . ಅತಿ ಸುಂದರವಾದ ಕಲೆ (ಅಭಾನ್ಯ. ೧).
[ನೃತ್ಯ + ಕಲೆ$_3$]

**ನೃತ್ಯಗಾತಿ** (ನಾ). ನಾಟ್ಯ ಮಾಡುವವಳು; ನರ್ತಕಿ: ಮೂರನೆಯ ವಿಧದ ಕಂಭಗಳಲ್ಲಿ . . . ನೃತ್ಯಗಾರರ, ನೃತ್ಯಗಾತಿಯರ, ವಾದ್ಯಗಾರರ ಚಿತ್ರಗಳು ಇತ್ಯಾದಿ ಕೆತ್ತನೆ ಇರುತ್ತವೆ (ಸೊಳಂಬ. ೧೧೫).
[ನೃತ್ಯಗಾರ+–ತಿ$_1$(<–ಇತ್ತಿ)]

**ನೃತ್ಯಗಾರ** (ನಾ). ನಾಟ್ಯ ಮಾಡುವವನು; ನರ್ತಕ: ಉತ್ತಮ ಮತ್ತು ಪ್ರಸಿದ್ಧ ನೃತ್ಯಗಾರರು ಕಲೆಯನ್ನು ಚೆನ್ನಾಗಿ ಹೇಳಿಕೊಡಬಲ್ಲರು ಎಂಬ ಭಾವನೆಯು ತೀರಾ ತಪ್ಪು (ಅಭಾನ್ಯ. ೮).
[ನೃತ್ಯ+–ಗಾರ(<–ಕಾಱ)]

**ನೃತ್ಯಗೀತೆ** (ನಾ). ನರ್ತಿಸುವಾಗ ಹೇಳುವ ಹಾಡು: ನೃತ್ಯಗೀತೆಗಳನ್ನೂ ಅಭಿನಯಗೀತೆಗಳನ್ನೂ ಹೇಳಿಸಿ ಸಣ್ಣ ಸಂವಾದದ ನಾಟಕಗಳನ್ನು ಆಡಿಸಬೇಕು (ಶಿಕ್ಷದ. ೧೦೮). [ನೃತ್ಯ + ಗೀತೆ]

**ನೃತ್ಯಗೃಹ** (ನಾ). ನಾಟ್ಯಮಾಡುವ ಮನೆ; ನೃತ್ಯಶಾಲೆ: ನಾಟ್ಯವಿದರ್ ತಾಂಗೆಯ್ಯುಮೇಱು ನೃತ್ಯಗೃಹಮಂ ಚಕ್ರೇಶ್ವರೋದ್ದಾಮ ರೂಪವಿಲೋಕಾಮೃತತೃಪ್ತಲೋಚನಮನಸ್ಸಂಕಲ್ಪ ಸಂಭೋಗ ಸಂಭವ ಘರ್ಮಾಂಬುಗಳಿಂದಮಿರ್ಮಡಿಸಿದಳ್ ನೃತ್ಯಶ್ರಮಸ್ವೇದಮಂ (ಆದಿಪು. ೧೧–೧೯); ಮಧುಲಕ್ಷ್ಮೀ ನೃತ್ಯಗೃಹಂ ಮಧುವ್ರತಸ್ತ್ರೀನಿಕಾಯಮಾಧ್ವೀಕ ಗೃಹಂ ಮಧುಮಿತ್ರ ಜಗಜ್ಜೈತ್ರಾಯುಧಗೃಹಮೆನೆ ವಿಕಚವಿಚಕಿಳಂ ಸೊಗಯಿಸುಗುಂ (ಚಂದ್ರಪು. ೭–೫೦); ನೃತ್ಯಗೃಹಂಗಳ್ ಕುಳನಗಮತ್ಯುನ್ನತಿವಡೆಯಲೆಂದು ಯವನೋನ್ನತನಂ ಸ್ತುತ್ಯನನೊಸೆದೋಲಗಿಪ ವೊಲತ್ಯಾಯತಿವಡೆದು ಸುತ್ತಿ ಸೊಗಯಿಸುತಿರ್ಕುಂ (ಪಾರ್ಶ್ವಪು. ೧೬–೫೮).
[ನೃತ್ಯ+ಗೃಹ]

**ನೃತ್ಯಜ್ಞ** (ನಾ). ನಾಟ್ಯವನ್ನು ಬಲ್ಲವನು: ಮತಿವಂತಂ ಪರಚಿತ್ತಕಾಂಕ್ಷಿ ಬ[ಲುಮೆಲ್ವಂ] ಗೀತ ನೃತ್ಯಜ್ಞನುನ್ನತನಾಸಂ . . . ನೃಯುಗ್ಮೋದ್ಭವಂ (ಜಾತತಿ. ೧೭–೩). [ಸಂ.]

**ನೃತ್ಯತಂಡ** (ನಾ). ನರ್ತಕರ ಸಮೂಹ; ನಾಟ್ಯದವರ ಗುಂಪು: ಅವನನ್ನು ನೋಡಲೋಸುಗ ಕೊಂಕಣ ಮತ್ತು ಕರ್ನಾಟಕದಿಂದ ಹೆಂಗಸರೂ ಗಂಡಸರೂ ಇರುವ ನೃತ್ಯತಂಡದವರು ಬಂದರಂತೆ (ದ್ರಾವಿವಿ. ೬೨). [ನೃತ್ಯ + ತಂಡ]

**ನೃತ್ಯನಾಟಕ** (ನಾ). ಮಾತಿಲ್ಲದೆ ಕೇವಲ ನರ್ತನದ ಮೂಲಕವೇ ಅಭಿನಯಿಸುವ ನಾಟಕ; ☞ ಮಾತಿಲ್ಲದೆ ಮೂಕಾಭಿನಯದಿಂದ ನಾಟ್ಯದ ಮೂಲಕ ವೇಷಭೂಷಣಗಳೊಂದಿಗೆ ಅಭಿನಯಿಸುವ ನಾಟಕ. ಇದು ಯೂರೋಪಿನಲ್ಲಿ ಪ್ರಸಿದ್ಧಿ ಹೊಂದಿದ 'ಬ್ಯಾಲೆ' ನೃತ್ಯವನ್ನು ಹೋಲುತ್ತದೆ: ಒಮ್ಮೆ ಸೂಲಮಂಗಲಂದಲ್ಲಿ ಅವರು "ಪ್ರಹ್ಲಾದ ಚರಿತ್ರಂ" ನೃತ್ಯನಾಟಕಕ್ಕೆ ಹೋಗಿದ್ದರು (ಸಂಗೀತ. ೯೧); ಇನ್ನೂ ಅನೇಕ ನೃತ್ಯನಾಟಕಗಳನ್ನು ನಾಟ್ಯಾಚಾರ್ಯರು ವಿರಚಿಸಿದ್ದಲ್ಲಿ ಭರತನಾಟ್ಯದಲ್ಲಿ ಹೊಸಹೆಜ್ಜೆಯನ್ನಿಟ್ಟಂತಾಗುವುದು (ಅಭಾನ್ಯ. ೬೧).
[ನೃತ್ಯ+ನಾಟಕ]

**ನೃತ್ಯಭಂಗಿ** (ನಾ). ನಾಟ್ಯದ ರೀತಿ; ಕುಣಿತದ ನಿಲುವು: ಈ ಪ್ರತಿಯೊಂದು ನೃತ್ಯಭಂಗಿ, ಸಂಗೀತವಾದ್ಯಗಳನ್ನು ಸೂಕ್ಷ್ಮವಾಗಿ ವಿಮರ್ಶಿಸಬೇಕಾಗಿದೆ (ಹೊಯ್ಸಳಾ. ೨೮): ಶಾಸ್ತ್ರೀಯ ನೃತ್ಯಭಂಗಿಗಳನ್ನು ಕೆತ್ತಿದ ಶಿಲ್ಪಿಗಳು ನೃತ್ಯದಲ್ಲಿ ಪಾಂಡಿತ್ಯವನ್ನು ಹೊಂದಿದ್ದರೆಂದು ಗೊತ್ತಾಗುತ್ತದೆ (ಅಭಾನ್ಯ. ೨೧). [ನೃತ್ಯ+ಭಂಗಿ$_2$]

**ನೃತ್ಯಮಂಡಲಿ** (ನಾ). ನರ್ತನ ಮಾಡುವವರ ಗುಂಪು; ನರ್ತಕರ ತಂಡ: ಲಲಿತಕಲಾ ಅಕಾಡಮಿಯು ನೃತ್ಯಮಂಡಲಿಯೊಂದನ್ನು ಹೊರದೇಶಕ್ಕೆ ಕಳಿಸಿತು (ರೂಢಿ). [ನೃತ್ಯ+ಮಂಡಲಿ$_1$]

**ನೃತ್ಯಮಂದಿರ** (ನಾ). = ನೃತ್ಯಗೃಹ: ನಿಮ್ಮ ನೃತ್ಯಮಂದಿರದ ದಾಸಿಯಾಗಿ ನಿಮ್ಮ ಸೇವೆ ಸಲ್ಲಿಸುತ್ತೇನೆ (ಮೊಪಮ. ೩೦೨); ಸಂಜೆ ಭೋಜನಾನಂತರ ಹೊರದೇಶದಿಂದ ಬಂದಿದ್ದ ಕೀಸ್‌ವೆಟ್ಟರ್‌ನ ಉಪದೇಶ ಕೇಳುವ ಸಲುವಾಗಿ ವಿಶಾಲ ನೃತ್ಯಮಂದಿರದಲ್ಲಿ ಜನ ಬಂದು ನೆರೆಯುತ್ತಿದ್ದರು (ಪುನರು. ೩೪೫). [ನೃತ್ಯ+ಮಂದಿರ$_2$]

**ನೃತ್ಯರಸ** (ನಾ). ನರ್ತನದಿಂದುಂಟಾಗುವ ಆನಂದ: ಗೀತವಾದ್ಯಂ ನೃತ್ಯರಸದೊಳೋಲಾಡುತುಂ ನೂತನೋದ್ಗತ ನರ್ತನಕ್ಕೆ ಮುಯ್ಯಾನುತುಂ ಕೊಡೆ ಹೀಲಿದಳೆಯಣುಕುಗಳ ನಡುವೆ ಮೆಱೆವುತುಂ (ನಂಬಿರ. ೩–೬೧).
[ನೃತ್ಯ+ರಸ]

**ನೃತ್ಯಲೀಲೆ** (ನಾ). ನರ್ತನದ ವಿಲಾಸ: ಅಂತು ಗಗನರಂಗದೊಳ್ ನೃತ್ಯಲೀಲೆಯಂ ಮೆಱೆದು ವಾಸವಪಿವಾಸಕ್ಕಭಿಮುಖಿಯಾಗಿ ಪೋದಳ್ (ಜಗವಿ. ೩–೧೬ ಪ). [ನೃತ್ಯ + ಲೀಲೆ]

**ನೃತ್ಯವಿದ್ಯೆ** (ನಾ). = ನೃತ್ಯಕಲೆ: ಚರಣನಿತಂಬಗ್ರೀವಾಕರಶಾಖಾಜನಿತ ರೇಚಕಂ ನಯನಮನೋಹರವಾಗೆ ನೃತ್ಯವಿದ್ಯೆಯೆ ಪರಿಜಂ ಕೈಕೊಂಡುದೆಂಬಿನಂ ಸೊಗಯಿಸಿದಳ್ (ಮಲ್ಲಿಪು. ೮–೩೬). [ನೃತ್ಯ + ವಿದ್ಯೆ]

**ನೃತ್ಯಾಂಗ** (ನಾ). ನಾಟ್ಯದ ಭಾಗ; ನರ್ತನಕ್ಕೆ ಸೇರಿದುದು: ಅಂಗನಾಕುಸುಮಸುಕುಮಾರಾಂಗಸಮುಚಿತಮುಮಪ್ಪ ಲಾಸ್ಯಮನಚ್ಚರಸೆಯರಾದಿ ಸಂಧ್ಯಂಗಗತ ನೃತ್ಯಾಂಗರಸಭಾವಾಭಿನಯಂಗಳನಿಂದ್ರಂ ಶ್ರೀದೇವಂಗೆ ನೋಡಿಕೊಳ್ಳೆಂಬಂತೆ ಪರಿಸ್ಫುಟಂ ಮಾಡಿ (ಶಾಂತಿಪು. ೭–೩೨ ಪ).
[ನೃತ್ಯ+ಅಂಗ$_2$]

**ನೃಪ** (ನಾ). ಪ್ರಜೆಗಳನ್ನು ಕಾಪಾಡುವವನು; ಜನರನ್ನು ರಕ್ಷಿಸುವವನು; ಅರಸ; ದೊರೆ; ರಾಜ: "ರಾಜಾ, ರಾಜನ್ಯಃ, ರಾಟ್, ಪ್ರಜಾಪತಿಃ, ಕ್ಷತ್ರಿಯಃ, ನೃಪಃ, ಕ್ಷತ್ರಂ . . . ಲೋಕಪಾಲಃ – ಈ ೧೨ ಅರಸು" (ಹಲಾಯು. ೬೯–೨೬೭); ನರಪತಿ ಬಂದನಾ ನೃಪನನಟ್ಟಿಯೆ ಕಾಣ್ಬುದು (ಕವಿಾ. ೧–೧೧೫); ಆ ನೃಪರೊಳಾರಾ ಪಾಂಡುರಾಜಂಬರಂ (ಪಂಪಭಾ. ೧–೧೧೦); ನೃಪರಂ ಚಕ್ರಿಪದಾಂಬುಜಕ್ಕೆಜಗವೇಟ್ದೀ ರತ್ನಮಿಾ ಹೇಮಮಿಾ ದ್ವಿಪಮಿಾ ತುಂಗತುರಂಗಮಂಗಳೆವರಿತ್ತರ್ಥಂಗಳೆಂದೆಂದು (ಶಾಂತಿಪು. ೧೧–೪೪); ನೃಪಂ ಸಿನ್ನಂ ಪಿಡಿದುಯ್ಯೆ ಭಾನುಮತಿಯಂ ಸಂತೈಸಿ ಚಿತ್ರಾಂಗದಂಗುಪಯೋಗಾಸ್ತ್ರಮನೆಚ್ಚು ಕೊಡೆ ನಭದಿಂ

ಗಾಂಡೀವಿ ತರ್ಪಾಗಳ್ (ಗದಾಯು. ೨-೩೪) ; ಕಾಳಗದ ಮುಖವಾವು ದೆಂದಜಿಯದ ಹಂದೆನೃಪಂಗೆ (ಬಸವ.೭೦೫) ; ನೃಪನೆನ್ನಂ ಬಗೆದಿರ್ಕುಮೋ ಕರುಣದಿಂ ಕೈಸಾರ್ಗುಮೋ ಪೇಟು ಮೆಂದುಪತಾಪಂ ಮಿಗೆ ಸುಯ್ದು . . . ಶಂಕಿಪಳಂ ಮೆಲ್ಲನೆ ಸಾರ್ದು ಸಾರ್ದು ಸಖಿಯರ್ ಪೊಂಬಾಟಿಯಂ ಬೀಸುವರ್ (ನಳಚಂ. ೧೪೯). [ಸಂ.]

**ನೃಪಕಾಂತೆ** (ನಾ). ರಾಜನ ಹೆಂಡತಿ ; ರಾಣಿ ; ಅರಸಿ : ನೃಪ ಕಾಂತೆಯು ಕೆಲದೊಳ್ ಶೋಭಿಪ ಸುತನಂ ರೂಪವಿಜಿತಕಮಲಾಸುತನಂ ಈಕ್ಷಿಸುತಿರ್ದಂ (ಕುಸುಮಾ. ೬-೯೧). [ನೃಪ+ಕಾಂತೆ]

**ನೃಪಕುಮಾರ** (ನಾ). ರಾಜಕುಮಾರ ; ರಾಜಪುತ್ರ : ನೋಡಿದಂ ನೃಪಕುಮಾರರನುತ್ಸವದಿಂದ ಬಾಹುಕಂ (ನಳಚಂ. ೭೧೬) ; ಎಲೆ ಯುಧಿ ಷ್ಠಿರ ನೃಪಕುಮಾರ ಪ್ರಳಯದಾಪತ್ತಾಯ್ತು ಭೀಮನ ನಲವಿಗೋಣೆಯು ವಾಯ್ತು . . . ದ್ರೌಪದಿ ಸುಭದ್ರಾಲಲನೆಯರಿಗನುಚಿತವು ಘಟಿಸಿತೆ ಎಂದನಾ ಮುನಿಪ (ಕುಮ್ಯಾದ್ರೋ. ೬-೨೨). [ನೃಪ+ಕುಮಾರ]

**ನೃಪಕುಲ,** ನೃಪಕುಳ (ನಾ). ಅರಸುಕುಲ ; ರಾಜಕುಲ : ಬವಣಿ ಯೇಕೆ ಹಿಮಾಂಶುಕುಲಸಂಭವನು ಸುಜನಾಧಾರ ನೃಪಕುಲನಿವಹದೊಳು ವಿಖ್ಯಾತ . . . ಇನ್ನಾ ಭುವನಪತಿಗೆಣೆ ಯಾರು ಲೋಕದೊಳೆಂದ ನಮರೇಂದ್ರ (ನಳಚ. ೪-೧೨). **ನೃಪಕುಳ :** ಅಳವಡೆ ಭುಜದೊಳ್ ಮೃಗಮದತಿಳಕದವೋಲ್ ಸಕಲಧರಣಿ ಯತೌವನ ಭೂಷಾವಳಿಯನೆ ತಿರ್ದನನಾ ನೃಪಕುಳಶೇಖರನಮೃತಮತಿಯು ಮುಖದರ್ಪಣದೊಳ್ (ಯಶೋಚ. ೨-೧೭). [ನೃಪ+ಕುಲ]

**ನೃಪಕುಳ** 'ನೃಪಕುಲ' ನೋ.

**ನೃಪಗೃಹ** (ನಾ). ಅರಮನೆ ; ರಾಜನ ವಾಸಸ್ಥಾನ : ಇದು ಬನ ಮಿದು ನೃಪಗೃಹವೆಂಬುದವೋಘಂ (ಜಗವಿ. ೨-೩೬). [ನೃಪ+ಗೃಹ]

**ನೃಪಗೇಹ** (ನಾ). = ನೃಪಗೃಹ : ಶಿರಾಕುಳ ಕವಿರಾಜಹಂಸಸುಭಗಂ ನಭಮಂ ನೃಪಗೇಹಮಂ ಸಮಂ ತಿಳಿಪುಗುಮಲ್ಲಿ ಮಂದಪವನೋಚ್ಚಳ ಶೀಕರಮಂಬುಜಾಕರಂ (ಪುಷ್ಪಪು. ೨-೫೨). [ನೃಪ+ಗೇಹ]

**ನೃಪತಿ** (ನಾ). = ನೃಪ: "ನೃಪತಿ ರಾಟ್ ರಾಜಂ ನರಾಮರಂ ಪಾರ್ಥಿವಂ ಕುಪತಿ ಮೂರ್ಧಾಭಿಷಿಕ್ತಂ ಕ್ಷತ್ರಿಯಂ ಪ್ರಜಾಧಿಪನೆನಲ್ಕರಸಕ್ಕು" (ಮಂಗರಾ. ೭೪-೧) ; ನೃಪತೀ ಪರೋಪಕಾರೀ . . . ರಿಪುವರ್ಗ ಮನಲೆದು ಗೆಲ್ವೆಯಾಗಾಹವದೊಳ್ (ಕವಿರಾ. ೨-೨೪) ; ನೃಪತಿ ಪತಿವ್ರತೆ ಬಂದಿರ್ದಪಳರಮನೆಯೆಸೆವ ಬಾಗಿಲೊಳ್ (ದಶಕು. ೧೨-೯೩) ; ನೃಪತಿಗೆ ಸಹಾಯವನಗ್ನಿ ಮಾಡುವನು (ಕುವ್ಯಾಸ. ೫-೧೬) ; ನೃಪತಿಯಾ ಭಾವ ಮಹಿಮಾಜ್ಯೋತಿ ಸಂಚರಿಸಿದುದು ಮಿಂಚಿ ಪಟ್ಟಮಹಿಷಿಯರೆರ್ದೆ ಗಳೊಳ್ (ತ್ರೀರಾಮಾ. ೧೨-೩೧೨). [ಸಂ.]

**ನೃಪತಿನಿಕೇತ** (ನಾ). = ನೃಪಗೃಹ : "ನೃಪತಿನಿಕೇತಸ್ಥಾನಕಮುಪ ಕಾರ್ಯಮುಮಂತದಕ್ಕುಂ" (ವಸ್ತುಕೋ. ೪೮-೧೭). [ನೃಪತಿ+ನಿಕೇತ]

**ನೃಪತಿಲಕ,** ನೃಪತಿಳಕ (ನಾ). ರಾಜಶ್ರೇಷ್ಠ : ಬಲದ ಗದ್ದುಗೆಗಳಲಿ ಭಟರಗ್ಗಳೆಯ ರವಿಸುತ ನದಿಯ ಮಗ ನೃಪತಿಲಕ ದುಶ್ಶಾಸನ ಕೃಪ ದ್ರೋಣಾದಿ ನಾಯಕರು . . . ಗಜಗಲಿಸಿದರು ಮಾಣಿಕ್ಯಮಯಭೂಷಣ ವಿಳಾಸದಲಿ (ಕುವ್ಯಾಉ. ೮-೩೦). **ನೃಪತಿಳಕ :** ಅಂಬರತಟಕ್ಕೆ ಖಗ ಕುಲವಂಬರವಂ ಕೊಂಡು ಪಾಱಲೀಕ್ಷಿಸುತಿರ್ದಂ ಕಂಬುಗ್ರೀವಂ ನೋಯಲ್ ಕಂಬು ಗ್ರೀಷ್ಮಕ್ಕೆ ಸುಗಿವವೋಲ್ ನೃಪತಿಳಕಂ (ನಳಚ.೬.೨೪) [ನೃಪ+ತಿಲಕ]

**ನೃಪತಿಸನಾಭಿ** (ನಾ). ರಾಜನಿಗೆ ಸಮೀಪದ ಸಂಬಂಧಿ ; ದಾಯಾದಿ : ನೃಪನ ನರಪಾಲತನಯನ ನೃಪವಧುವರ್ನೆರೆದು ಸುಖದಿನಿರೆ ಕೈಕೊಂಡತ್ತ ಪರಿಮಿತರಾಗಮೆರ್ದೆಯಂ ನೃಪತಿಸನಾಭಿಗಳ ಬಂಧುಜನದಾ ಕೆಳೆಯಾ (ಕವಿರಾ. ೨-೨೨). [ನೃಪತಿ+ಸನಾಭಿ]

**ನೃಪತಿಳಕ** 'ನೃಪತಿಲಕ' ನೋ.

**ನೃಪತುಂಗ** (ನಾ). ೧. = ನೃಪತಿಲಕ : (೬). ೨. ರಾಷ್ಟ್ರಕೂಟ ಅಮೋಘವರ್ಷನೆಂಬ ರಾಜನ ಹೆಸರು : ಶ್ರೀ ತಳ್ಕುರದೊಳ್ ಕೌಸ್ತುಭಜಾತದ್ಯುತಿ ಬಳಸಿ ಕಾಂಡಪಟದಂತಿರೆ ಸಂಪ್ರೀತಿಯಿನಾಪನನ ಗಲಳ್ ನೀತಿನಿರಂತರನುದಾರನಾ ನೃಪತುಂಗಂ (ಕವಿರಾ. ೧-೧). [ನೃಪ+ತುಂಗ$_2$]

**ನೃಪಧರ್ಮ** (ನಾ). ಅರಸನು ಅನುಸರಿಸಬೇಕಾದ ಧರ್ಮ ; ರಾಜ ಧರ್ಮ : ಕಪಟದ್ಯೂತವಿದು ನೃಪಧರ್ಮವೇ (ಕುವ್ಯಾಗ. ೫-೧೨) ; ಶಪಥವ ಗೈದುದನಪಲಾಪಿಸುವುದಿದು ನೃಪಧರ್ಮವೇನೋ ನರೇಂದ್ರಾ ಕೃಪಾಕರ ಗುಣಸಾಂದ್ರ (ಶಾಕುಂತ. ೬೪ ಅಡಿಪದ್ಯ). [ನೃಪ+ಧರ್ಮ]

**ನೃಪನಂದನ** (ನಾ). = ನೃಪಕುಮಾರ : ನೃಪನಾ ನೃಪನಂದನನಾ ನೃಪವಧುವರ್ ನೆರೆದು ಸುಖದೊಳಿರೆ ಕೈಕೊಂಡತ್ತಪರಿಮಿತರಾಗ ಮೆರ್ದೆಯಂ ನೃಪಬಾಂಧವರಾ ಸುಮಿತ್ರರಾ ಪರಿಜನ(ದಾ) (ಕವಿರಾ. ೨-೨೧). [ನೃಪ+ನಂದನ]

**ನೃಪನಂದನೆ** (ನಾ). ಅರಸನ ಮಗಳು ; ರಾಜಪುತ್ರಿ : ನೃಪನಂದನೆ ತನಗುದಯಿಸಿದ ಪುತ್ರನಂ ರುದ್ರಭೂಮಿಯೊಳ್ ಬಿಸುಟು ಬರಲ್ (ದಶಕು. ೯-೪೩). [ನೃಪ+ನಂದನೆ]

**ನೃಪನೀತಿ** (ನಾ). = ನೃಪಧರ್ಮ : ನುಡಿದೆರಡನಾಡದಿರು ಕಾರ್ಯವ ಬಿಡದಿರು . . . ಅನುಜಾತ್ಮಜರೊಳಿಗ್ಗೊಡೆಯದಿರು ನೃಪನೀತಿಯಿದು ಭೂಪಾಲ ಕೇಳೆಂದ (ಕುವ್ಯಾಸ. ೧-೪೭) ; ಅಡಸಿದಾಪತ್ತಿನಲಿ ಹಗೆಯನು ಕೆಡಹುವುದೆ ನೃಪನೀತಿ (ಕೌತಿರಾ. ೩೬-೬೪) ; ನೃಪನೀತಿ ತಪ್ಪದಂತಿರೆ ವಿಪುಳವಹಶ್ರೀ ಪೊದಳ್ದು ಸಾರ್ದಂತಿರೆ ನಿನ್ನುಪಮೆಯೊಳುಸುರುವುದೆನ ಲವನಿಪಂಗೆ (ತ್ರಿಪುವಿ.೨೪-೨೪೧); ಅರಿಭಯಂಕರಶತ್ರುಗಳ ಸಂಹರಿಸುವುದು ನೃಪನೀತಿ ನಿನಗಿದು ತರವೆ ಬಿಡು ಪರಹಿಂಸೆ ದೋಷವಿದೆಂದುದಾ ಪಕ್ಷಿ (ನಳಚ. ೨-೧೪). [ನೃಪ+ನೀತಿ$_1$]

**ನೃಪನೀತಿವಿದ** (ನಾ). ರಾಜಧರ್ಮದಲ್ಲಿ ನಿಷ್ಣಾತ ; ರಾಜನೀತಿ ಚತುರ : ಆತನನಾರಾಧಿಸಿ ನೃಪನೀತಿವಿದರ್ ಖೇಚರಾವನೀಚರರಾತ್ಮ ಖ್ಯಾತಿಶ್ರೀಯಂ ಕಾದಭಿಜಾತ ನೃಪಾನ್ವಯರನೆನಿಬರಂ ಪೆಸರ್ಗೊಳ್ವೆಂ (ಶಾಂತಿಪು. ೩-೮೭). [ಸಂ. ನೃಪನೀತಿವಿದ್]

**ನೃಪನೀತಿಶಾಸ್ತ್ರ** (ನಾ). ರಾಜಧರ್ಮವನ್ನು ತಿಳಿಸುವ ವಿದ್ಯೆ; ರಾಜ ನೀತಿ : ನೃಪನೀತಿಶಾಸ್ತ್ರಮಂ ನೀನಪೂರ್ವಮಂ ನುಡಿಯೆ ನುಡಿಯೆ ಮತ್ತದನನುವರ್ಣಿಪನ ನುಡಿಗಳ್ . . . ನಿನ್ನ ನುಡಿಗೆ ಸಮನಾದಪುದೇ (ಶಾಂತಿಪು. ೨-೩೬). [ನೃಪನೀತಿ+ಶಾಸ್ತ್ರ]

**ನೃಪಪತಿ** (ನಾ). ರಾಜರುಗಳ ಒಡೆಯ ; ಚಕ್ರವರ್ತಿ ; ಸಾರ್ವ ಭೌಮ : ನೃಪಪತಿಯುಉಕ್ತಮಿದಂ ನೀಂ [ಪಾಠಾಂ. ಉಪಪತ್ತಿಯುಕ್ತ ಮಿದನಿಂ] ನೃಪ ಕೆಯ್ಕೊಳ್ಳಿನ್ನ ತಂದೆಯೆಂದುದಂ (ಗದಾಯು. ೪-೮). [ನೃಪ+ಪತಿ$_2$]

**ನೃಪಪದ** (ನಾ). ೧. ಅರಸನ ಪಾದ ; ರಾಜನ ಚರಣ : ನಮಗೆ ಭಾರಿಯ ಭಾಗ್ಯಲಕ್ಷ್ಮಿಯ ಮಮತೆಯಾಯ್ತಿನ್ನೇನು ನೃಪಪದಕಮಲದಲಿ ಬೀಳುವೆವು ನಡೆನಡೆ ಧನ್ಯರಹೆವೆಂದ (ಕುವ್ಯಾವಿ. ೧೧-೧೪). ೨. ರಾಜ ಪದವಿ. [ನೃಪ+ಪದ$_2$]

**ನೃಪಪೀಠ** (ನಾ). ರಾಜನ ಆಸನ; ಸಿಂಹಾಸನ : ಉದಯದಲಿ ನಾವಿನಿಬರಾತನ ಸದನದಲಿ ನೃಪಪೀಠವನು ಗರ್ವದಲಿ ನೆಮ್ಮುವೆವಾತ ನಮ್ಮಲಿ ಖೋಡಿಯನು ಹಿಡಿಯೆ (ಕುವ್ಯಾವಿ. ೯-೪೧). [ನೃಪ+ಪೀಠ]

**ನೃಪಪುತ್ರಿ** (ನಾ). = ನೃಪನಂದನೆ : ನೃಪಪುತ್ರಿ ಶೂರಸೇನಾಧಿಪ ನಿದಿರೊಳ್ ರಥಿನಿ ನಿಲ್ವುದುಂ ಚತುರಕಳಾಲಪನೆ ನೃಪೇಶ್ವರವರ್ಣನನಿಪುಣೆ ಪತಿಂವರೆಯಂ ಮುಂದೆ ನಿಂದಿಂತೆಂದಳ್ (ಶಾಂತಿಪು. ೫-೧೨೬). [ನೃಪ+ಪುತ್ರಿ]

**ನೃಪಪ್ರತಿಮಗುಣ** (ನಾ). ರಾಜನಿಗೆ ಸಮಾನವಾದ ಗುಣವುಳ್ಳವನು : ತಾರೇಶಂ ನಿಲೆ ಮೇಷದೊಳಾರಂ ಮೊದಲಾಗೆ ಷಡ್ಗ್ರಹಂ ನೋಡೆ ನೃಪಂ ಸೂರಿ ನೃಪಪ್ರತಿಮಗುಣಂ ಚೋರಂ ನಿರ್ಧನನೆನಿಕ್ಕುಮಾತಂ ಕ್ರಮದಿಂ (ಜಾತತಿ. ೨೦-೧). [ನೃಪ+ಪ್ರತಿಮ+ಗುಣ]

**ನೃಪಬಾಧೆ** (ನಾ). ಅರಸನ ಹಿಂಸೆ ; ರಾಜನ ಉಪದ್ರವ : ನೃಪಬಾಧೆ ಕಳ್ಳರಿಂದಾದ ಪುಯ್ಯಲ್ ಅಗ್ನಿಪ್ರಕೋಪಮುಬ್ಬರದಿಂದಪ್ಪುಪಸರ್ಗಮೆನಿಪ ವಾರ್ತಾಪ್ರಪಂಚಮಾದಲ್ಲಿ ಕೇಳಬೇಡೋಸಬಿಯಂ (ಲೋಕೋಪ. ೧೨-೫೨). [ನೃಪ+ ಬಾಧೆ]

**ನೃಪಭವನ** (ನಾ). = ನೃಪಗೃಹ : ಜನಿತೋತ್ಸವಯುಗಲವ್ಯಗ್ರನಾಕನರಲೋಕಸಕಲಜನಕಳಕಳದಿಂದೆನಿತಾನುಂ ವಿಭವದಿನಿಂತು ನಾಡೆಯುಂ ರಯ್ಯಮಾದುದಾ ನೃಪಭವನಂ (ಆದಿಪು. ೯-೬೨); ಅರಿಭಯಂಕರ ಭೀಮಸೇನನ ನಿರುಪಮಾಲಯವೆಡದ ಕಡೆಯಲಿ ಸರಿಸದಲಿ ಸೂತ್ರಿಸಿತು ಸಹದೇವಂಗೆ ನೃಪಭವನ (ಕುಪ್ಯಾಉ. ೧೧-೪೫) [ನೃಪ+ಭವನ]

**ನೃಪಭಾಗ** (ನಾ). ಅರಸನಿಗೆ ಸಲ್ಲಬೇಕಾದ ಹುಟ್ಟುವಳಿಯ ಭಾಗ ; ಭೂಕಂದಾಯ ; ನೆಲದೆರಿಗೆ : ಕಿರಣಂಗಳೊಳು ನೃಪಭಾಗದೊಳು ಜಲದೊಳಂಬುಜದೊಳನಿಲದೊಳು ಕೈಗಳೊಳು ಕರಮೆನಿಕ್ಕುಂ (ಮಂಗರಾ. ೧೪೮-೪೩). [ನೃಪ+ಭಾಗ]

**ನೃಪಮಂಡಲ,** ನೃಪಮಂಡಳ (ನಾ). [ರಾಜ್ಯಶಾ] (ನೆರೆಹೊರೆಯ) ರಾಜರ ಸಮೂಹ: ಪಡೆಯಬಿಯಲಾದೊಡ[ರಿ]ಯಂ ಕಿಡಿಸುಗುಮಂತಃಕಳಂಕ ನೃಪಮಂಡಲ [ಪಾಠಾಂ. ಳ]ಮಂ ತಡೆಯದೆ ತಮಸ್ಸ್ವಭಾವಂ ಕಿಡಿಸುವವೋಲಬಿದು ರಾಹು ಶಶಿಮಂಡಲಮಂ (ಕವಿರಾ. ೩-೧೪೭). **ನೃಪಮಂಡಳ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ℙ ವಿಜಿಗೀಷು, ಅರಿ, ಮಧ್ಯಮ ಮತ್ತು ಉದಾಸೀನ ಎಂಬ ನಾಲ್ಕು ಬಗೆಯ ರಾಜರಿದ್ದು, ಪ್ರತಿಯೊಬ್ಬರಿಗೂ ಮಿತ್ರ ಹಾಗೂ ಮಿತ್ರಮಿತ್ರ ಎಂಬ ಅರಸರಿರುವುದರಿಂದ ಈ ಮಂಡಲಗಳು ಹನ್ನೆರಡಾಗುತ್ತವೆ. [ನೃಪ+ಮಂಡಲ]

**ನೃಪಮಂಡಳ** 'ನೃಪಮಂಡಲ' ನೋ.

**ನೃಪಮಂದಿರ** (ನಾ). = ನೃಪಗೃಹ : ಬಂದು ವೇದವ್ಯಾಸಮುನಿ ನೃಪಮಂದಿರವ ಹೊಗಲೆದ್ದು ಪದದಲಿ ಸಂದಣಿಸಿ ಚಾಚಿದನು ಮಕುಟವನವನಿಪಾಲಕನು (ಕುಪ್ಯಾದ್ರೋ. ೭-೨೧). [ನೃಪ+ಮಂದಿರ]

**ನೃಪಮುಕುರ** (ನಾ). = ನೃಪತಿಲಕ : ಅಕಟ ಕಪಟದ್ಯೂತದಲಿ ನೃಪಮುಕುರನುನ್ನತಿ ಮುಬಿದುದೇ ಕೌಳಿಕದಲೀ ಕೌರವರು ಕೊಂಡರೆ ಧರ್ಮಜನ ನೆಲನ ಅಕುಟಿಲರಿಗೇಕಿದು ನಿರಾಬಾಧಕರಿಗೇಕಿದು ಸಕಲ ಸುಜನಪ್ರಕರವಂದ್ಯರಿಗೇಕೆನುತ್ತಸುರಾರಿ ಚಿಂತಿಸಿದ (ಕುಪ್ಯಾಅ. ೨-೩). [ನೃಪ+ಮುಕುರ]

**ನೃಪಯೂಥ** (ನಾ). ರಾಜರ ಗುಂಪು ; ಅರಸರ ಸಮೂಹ : ಚೆಲ್ಲಿತೀ ನೃಪಯೂಥ ಜಾಜಿಲಿ ಜಳ್ಳುಗಳು ಜಲಜಾಕ್ಷನ ಪ್ರತಿಮಲ್ಲ ತಾನೇ ಸಾಲದೇ ಹಾರುವೆನೆ ಕೆಲಬಲನ . . . ಎಂದನಾ ಚೈದ್ಯ (ಕುಪ್ಯಾಸ. ೧೦-೬೬). [ನೃಪ+ಯೂಥ]

**ನೃಪಲಕ್ಷ್ಮ** (ನಾ). ರಾಜನ ಚಿಹ್ನೆಯಾದ ಶ್ವೇತಛತ್ರ : "ನೃಪಲಕ್ಷ್ಮ—೧. ರಾಜರಿಗೆ ಮಾತ್ರ ಸಲ್ಲ ತಕ್ಕ ಚಿಹ್ನೆ" (ಸಿದ್ಧಾಂತಿ. ೨೪೫). [ನೃಪ+ಲಕ್ಷ್ಮ]

**ನೃಪಲಕ್ಷ್ಮಿ** (ನಾ). ರಾಜ್ಯಭಾರ ಮಾಡುವ ಪದವಿ,—ಅಧಿಕಾರ, — ಐಶ್ವರ್ಯ : "ಅರಸು ನೃಪಲಕ್ಷ್ಮಿ ತಾನಾಧಿರಾಜ್ಯಮೆನಿಕುಂ" (ಪಸ್ತುಕೋ. ೬೨-೬೧). [ನೃಪ+ಲಕ್ಷ್ಮಿ]

**ನೃಪವಂದ್ಯ** (ನಾ). ಅರಸನಿಂದ ನಮಸ್ಕಾರ ಮಾಡಿಸಿಕೊಂಡವನು ; ರಾಜಪೂಜಿತ : ನೃಪವಂದ್ಯಂ ವಾಗ್ವಧೂವಲ್ಲಭನಮಳಯಶಂ ನಿರ್ಮಳಂ ಕಿಲ್ಬಿಷೈಕದ್ವಿಪಪಂಚಾಸ್ಯಂ . . . ಒಸೆದಂ ಖ್ಯಾತತ್ರೈವಿದ್ಯಚಕ್ರಾಧಿಪಪಾದಾಂಭೋಜಭೃಂಗಂ ಸುಕವಿಜನಮನಃಪದ್ಮಿನೀರಾಜಹಂಸಂ (ಧರ್ಮಾಮೃ. ೫-೨೫೯). [ನೃಪ+ವಂದ್ಯ]

**ನೃಪವಧು** (ನಾ). = ನೃಪಕಾಂತೆ : ನೃಪನ ನರಪಾಲತನಯನ ನೃಪವಧುವರ್ ನೆರೆದು ಸುಖದೊಳಿರೆ (ಕವಿಾಾ. ೨-೨೨). [ನೃಪ+ವಧು]

**ನೃಪವರ** (ನಾ). ರಾಜಶ್ರೇಷ್ಠ : ಮೃದುಪದಪಾತದಿಂದಸುಕೆಯಂ ತಳಿರ್ವೇಬಿಸಿ ಕೇಕರಾಂಶುಪಾತದಿನಲರ್ಗೊಂಚಲಂ ತಿಳಕಮಂ ತಳೆವಂತಿರೆ ಮಾಡಿ ಪರ್ಬಿ ಕೊರ್ಬಿದ ಕುಚದೊತ್ತಿನಿಂ ಕುರವಕಕ್ಕೆ ನವಾಂಕುರಮಂ ನಿಮಿರ್ಚಿ ಬೀಬಿದುದಬಳಾಜನಂ ನೃಪವರಂಗೆ ಮನೋಜಮಹೇಂದ್ರಜಾಳಮಂ (ಮಲ್ಲಿಪು. ೬-೫೩) ; ನೃಪವರನುದ್ಭಟೋರ್ವಿಪನ ಧಾಳಿಗೆ ಕೆಟ್ಟಹಿತಾಂಗನಾಜನಂ ವಿಪಿನಮನಂದು ಪೊಕ್ಕು (ಉದ್ಭಟ. ೧-೯೩) ; ಶತಾನೀಕರು ಶತಾಯುಧರೆನಿಪ ನೃಪವರರು ತುರಗ ಗಜರಥ ಪಾಯದಳಸಾಗರದ ಸೌರಂಭದಲಿ ನಿಜ ಸಂವರಣೆಯನು ತೋಬಿದರು ತಮ್ಮಕ್ಷೋಹಿಣೀದಳವ (ಕುಪ್ಯಾಉ. ೧೧-೨೩). [ನೃಪ+ವರ$_2$]

**ನೃಪವಿದ್ಯೆ** (ನಾ). ಆನ್ವೀಕ್ಷಕೀ, ತ್ರಯೀ, ವಾರ್ತಾ ಮತ್ತು ದಂಡನೀತಿ ಎಂಬ ನಾಲ್ಕು ರಾಜವಿದ್ಯೆಗಳು : ನಾಲ್ಕುಂ ನೃಪವಿದ್ಯೆಯೊಂದು ಬಲದಿಂ ಪಂಚಾಂಗಮಂತ್ರಂ ಮನಂಬುಗೆ ಬೇಬಿಕೊಂಡೆಡೆಗಾಣದುದ್ಧತರಿಪುಶ್ರೀಕಾಂತೆ ತನ್ನಂ ಶರಣ್ಬುಗೆ ಪೊಕ್ಕಂ (ಶಾಂತಿಪು. ೨-೨೮) ; ನ್ಯಾಯಾಗಮ ನೃಪವಿದ್ಯಾಮ್ನಾಯಕಲಾಕಾಮತಂತ್ರ ವಿಷಯವಿರೋಧಪ್ರಾಯಂ ಶಾಸ್ತ್ರವಿರುದ್ಧಂ ಶ್ರೇಯಮದಂತೆಲ್ಲಿಯಾನುಮುಕ್ತಿಕ್ರಮದಿಂ (ಕಾವ್ಯಾಪ. ೪೭೬). [ನೃಪ+ವಿದ್ಯೆ]

**ನೃಪವೃಷಭ** (ನಾ). ರಾಜಶ್ರೇಷ್ಠ : ಅಪರಾಗಂ ಮುನಿಪತಿವೋಲಪಗತಗುಣನಾಗಿಯುಂ ನಿಜಾಯತದೋಷಂ ವಿಪುಳಯಶೋಧನಲೋಭಂ ನೃಪವೃಷಭನರಾತಿನಿಕರತರುದವದಹನಂ (ಕವಿಾಾ. ೩-೧೫೮). [ನೃಪ+ವೃಷಭ]

**ನೃಪಶಾಸ್ತ್ರ** (ನಾ). = ನೃಪನೀತಿಶಾಸ್ತ್ರ: ರಾಜಶಾಸ್ತ್ರವನ್ನು 'ನೃಪಶಾಸ್ತ್ರ' ಮತ್ತು ದಂಡನೀತಿ ಎಂದೂ 'ದಮ' ದಂಡವೆಂದೂ, ನೀತಿಶಾಸ್ತ್ರವೆಂದೂ ಕರೆದಿದ್ದಾರೆ (ಭಾರದ. ೩೭೦). [ನೃಪ+ಶಾಸ್ತ್ರ]

**ನೃಪಶಾಸ್ತ್ರಜ್ಞತೆ** (ನಾ). ರಾಜನೀತಿಶಾಸ್ತ್ರವನ್ನು ತಿಳಿದಿರುವಿಕೆ : ನೃಪಶಾಸ್ತ್ರಜ್ಞತೆಗಿಲ್ಲಿ ಮಲ್ಲಪನೊಳಶ್ವೇಭಾಗಮಕ್ಕಿಲ್ಲಿ ಮಲ್ಲಪನೊಳ್ ಶೂರತೆಗಿಲ್ಲಿ. . . ಮಲ್ಲಪನೊಳ್ ನೋಟಿಪ್ಪೊಡೆ ಕಾಣಲಾಗದು ಸಮಾನಂ ಮಾನವಾನೀಕಮಂ (ಅಜಿಪು. ೧-೨೭). [ಸಂ. ನೃಪಶಾಸ್ತ್ರಜ್ಞತಾ]

**ನೃಪಸಂಪದ** (ನಾ). ಅರಸನ ಸಂಪತ್ತು ; ರಾಜನ ಐಶ್ವರ್ಯ : ಶವದ ಸಿಂಗಾರದಂದದೊಳೆನಗೆ, ಮಕ್ಕಳಿಲ್ಲದ ದೊರೆಗೆ, ನೃಪಸಂಪದಂ (ಶ್ರೀರಾಮಾ. ೯-೨೨೮). [ನೃಪ+ಸಂಪದ]

**ನೃಪಸತಿ** (ನಾ). = ನೃಪಕಾಂತೆ : "ಭಟ್ಟನಿಯರ್ ನೃಪಸತಿಯರ್" (ಪಸ್ತುಕೋ. ೬೦-೪೯) ; ನೃಪಸತಿಯ ಕೆಲದ ಚಮರರುಹಪಾಣಿಪಲ್ಲವೆ ಲತಾಂಗಿ ಗೆಲೆವಂದಳ್ ದುಗ್ಧಪಯೋಧಿಮಥನದೊಳ್ ಫೇನಪಟಳಮಂ ಪಿಡಿದು ನೆಗೆವ ಲಕ್ಷ್ಮೀವಧುವಂ (ಮಲ್ಲಿಪು. ೧೧-೯೦) ; ನೃಪಸತಿಯಂ ಗರ್ಭದಯಿಸಿದರ್ ತಪನಪ್ರತಿಮಪ್ರತಾಪರಭಿನವಪಾಠೀನಪತಾಕರಿಂದ್ರಸೇನನುಮುಪೇಂದ್ರಸೇನನುಮೆನಿಪ್ಪ ಪೆಸರೆಸೆವಿರ್ವರ್ (ಶಾಂತೀಶ್ವ. ೬-೨೮). [ನೃಪ+ಸತಿ$_1$]

**ನೃಪಸದನ** (ನಾ). = ನೃಪಗೃಹ : ಇದು ಬಸವಿುದು ನೃಪಗೃಹ ಮೆಂಬುದಮೋಘಂ ಸ್ಪರ್ಶನಾನುಮಿತಮುಪ್ಪುದುಷಟ್ಪದಕುಕಪಿಕಾಳಿಗೆನೆ ನೃಪಸದನಂ ಸೊಗಯಿಪುದು ಚಿತ್ರಮಣಿಶಬಲತೆಯಿಂ (ಜಗವಿ. ೨-೩೬). [ನೃಪ+ಸದನ]

**ನೃಪಸಭ** (ನಾ). ಅನೇಕ ರಾಜರುಗಳ ಕೂಟ,—ಸಭೆ : ದಾಸೀಸಭಂ ನೃಪಸಭಂ ರಕ್ಷಸ್ಸಭಮಿಮಾದಿಶಃ (ಸಿದ್ಧಾಂತಿ. ೪೫೩). [ಸಂ.]

**ನೃಪಸಭೆ** (ನಾ). ೧. ರಾಜನ ಒಡ್ಡೋಲಗ ; ರಾಜಾಸ್ಥಾನ : ಚತುರಚತುರಾನನರು ತರ್ಕಶ್ರುತಿಸಮಸ್ತಕಳಾಸ್ವತಂತ್ರರು ನುತಗುಣರು ನೃಪಸಭೆಯೊಳೆಸೆದರು (ಕುವ್ಯಾಉ. ೮-೩೧). ೨. = ನೃಪಸಭ: ಬಂದಳಾ ದಮಯಂತಿ ನೃಪಸಭೆಗಂದು ಹೊಕ್ಕಳು ಕೆಳದಿಯರು ಮುಂದದಿಂದ ತೋರಿದರಲ್ಲಿಯಿವರಿವರೆಂದು ವಿವರಿಸುತ (ನಳಚ. ೩-೫೮). [ನೃಪ+ಸಭೆ]

**ನೃಪಸಿಂಹ** (ನಾ). ರಾಜಶ್ರೇಷ್ಠ : ಮದಮುಣಮಿಲ್ಲ ದಾನಗುಣದಿಂ ನೆಗಟ್ದಂ ನೃಪಸಿಂಹನಾಗಿಯುಂ ವಿದಿತ ವಿಶುದ್ಧ ಭದ್ರಗುಣಂ (ಗದಾಯು. ೧-೧೦). [ನೃಪ+ಸಿಂಹ]

**ನೃಪಸುತ** (ನಾ). = ನೃಪಕುಮಾರ : ತೊಳಗುವ ರತ್ನಾಭರಣಂಗಳ ರುಚಿ ನಿಜರೋಮಕಾಂತಿಯೊಳ್ ತಳ್ತು ತೆಱಂಬೊಳೆಯಲ್ಕೆಂದ್ರಾಯುಧಮೇಂ ಪೊಳೆದುದೊ ನೃಪಸುತನ ಮುಂದೆ ತೆಗೆದು ಬರುತ್ತಂ (ಕಾದಂಪೂ. ೫೯೮) ; ನೃಪಸುತನಂ ನೋಡಲೆಯ್ತಂದಳೊರ್ವಳ್ (ಪುಷ್ಪಪು. ೫-೨೮). [ನೃಪ + ಸುತ]

**ನೃಪಸೂನು** (ನಾ). = ನೃಪಕುಮಾರ: ಅಂಬೆ ಭೀಷ್ಮನ ಬೈದು ಕಂಬನಿದುಂಬಿ ಹೋದಳು ತಪಕೆ ಬಳಿಕೀಯಂಬಿಕೆಯನಂಬಾಲೆಯನು ರಮಿಸಿದನು ನೃಪಸೂನು (ಕುವ್ಯಾಆ. ೨-೩೮). [ನೃಪ + ಸೂನು]

**ನೃಪಸೇನೆ** (ನಾ). ಅರಸನ ಸೈನ್ಯ ; ರಾಜನ ದಂಡು : "ನೃಪಸೇನೆಯೊಳಂ ದಂಡಂ" (ವಸ್ತುಕೋ. ೧೩೮-೧೨೦). [ನೃಪ+ಸೇನೆ]

**ನೃಪಸೇವೆ** (ನಾ). ಅರಸನ ಸೇವೆ; ರಾಜನ ಕೈಂಕರ್ಯ : ನೃ [ಪಾಠಾಂ. ತ] ಪಸೇವಾಯಾತಪೃಥ್ವೀಪತಿಸುತವೃತತೂರ್ಯಪ್ರಣಾದಂ ಪಯಃಪಾನಪರವ್ಯಾಯಾತಗಂಧದ್ವಿಪಗಣಘನಘಂಟಾಪ್ರಘೋಷಂ . . . ಕರಂ ರಂಜಿಸೆ ಬಗೆಗೊಳಿಕುಂ ತತ್ಪುರೀರಾಜಮಾರ್ಗಂ (ರಾಜಶೇ. ೨-೧೧೨). [ನೃಪ + ಸೇವೆ₁]

**ನೃಪಾಲ,** ನೃಪಾಳ (ನಾ). = ನೃಪ : ಅದು ಪಿರಿಯ ಸಿರಿಯ ಬಾಟಿಸ್ಕೊದಲದು ಚಾಗದ ಭೋಗದಾಗರಂ ಸಕಲಸುಖಕ್ಕದು ಜನ್ಮಭೂಮಿಯೆನಿಸಿದುದದನಾಳ್ವಂ ಮಾರಿದತ್ತನೆಂಬ ನೃಪಾಲಂ (ಯಶೋಚ. ೧-೩೩) ; ತಜ್ಞನಪಂ . . . ಅನಘ ಬಸವನ ಮುಖವನೀಕ್ಷಿಸೆ ಮನದೊಳನುರಾಗಿಸುತ ನಲಿದೊಯ್ಯನೆ ನಗುತ ಭಂಡಾರಿಯಿಂತೆಂದಂ ನೃಪಾಲಂಗೆ (ಬಸವು. ೨೧-೪೬) ; ಈ ಸಮಸ್ತ ನೃಪಾಲಜನವಾರಾಸಿ ಮೇರೆಯನೊದೆವುತಿದೆ ನಿಮಗೇಸು ಭಾರವಿದೆಂದು ಬಿನ್ನವಿಸಿದನು ಭೀಷ್ಮಂಗೆ (ಕುವ್ಯಾಸ. ೧೦-೬) ; ಹರಕೆಗಳ ಕೈಕೊಳುತ ಸತಿ ಬಂದರಮನೆಯ ಹೊಕ್ಕಳು ನೃಪಾಲನ ಚರಣಕಮಲಕೆ ನಮಿಸಿ ಪಡೆದಳು ಪತಿಯ ಚಿತ್ತವನು (ನಳಚ. ೯-೬೩). **ನೃಪಾಳ :** ಹಸ್ತ್ಯಶ್ವರಥಪದಾತಿಸಮಸ್ತಯುತಂ ನಡೆದು ನಳನೃಪಾಳಂ ರಿಪುವಂ ಶಾಸ್ತಿಯನೈದಿಸಿ ದಿಗ್ವಿಜಯಸ್ತಂಭಮನೆಂಟುದಿಕ್ಕಿನೊಳ್ ನಿಱಿಸಿಟ್ಟಂ (ನಳಚಂ. ೨೨). [ಸಂ.]

**ನೃಪಾಲಕ,** ನೃಪಾಳಕ (ನಾ). = ನೃಪ : ಗರ್ವಿತನೃಪಾಲಕಾಧಮದುರ್ವಿಳಸನಜನಿತ ಭೂರಿಭಾರದೊಳೆನಸುಂ ನಿರ್ವಿಣ್ಣೆಯಾಗಿ ಭೂವಧು ಗೀರ್ವಾಣಾವೃತ ವಿರಿಂಚಿಸಭೆಯಂ ಪೊಕ್ಕಳ್ (ಜಗವಿ. ೧-೨೭) ; ನೃಪಾಲಕಂ ಕಾಮಿನಿಗೂಡಿ ನಾಡೆ ತೋರ್ಪಪಾರರಾಗಾವಿಲನಾಗಿರಲ್ಸಮಂತುಪೇಂದ್ರನಂ ಪೊರ್ದುವ ತಾರ್ಕ್ಷ್ಯನಂತೆ ರಂಜಿಪಾ ಶುಕಂ ಪೊರ್ದಿದುದುರ್ವಿಪಾಲನಂ (ಉದ್ಭಟ. ೭-೧೧೫); ಮೇಘನೃಪಾಲಕನ ಡಂಗುರವೊ ಮೊಳಗುವ ಸಿಡಿಲಿನಬ್ಬರವೊ . . . ಬೀಳ್ವ ತಾರಾಮಾಲೆಗಳೊ ಜೀಮೂತಲತೆ ಲಂಬಿಸಿದುದಂಬರವ (ಕುವ್ಯಾಆ. ೧೯-೧೯). **ನೃಪಾಳಕ :** ಹರಡೆ ಹೋದಗೆ ಚಾದಗೆ ಹಂಗನಿಟ್ಟೆ ಬೆಳ್ಳಕ್ಕಿಗಳಿಂ ಮನಂಗೊಳಿಪರಣ್ಯವನೆಯ್ದಿದನಾ ನೃಪಾಳಕಂ (ನಳಚಂ. ೫೨೧). [ಸಂ.]

**ನೃಪಾಲಯ** (ನಾ). = ನೃಪಗೃಹ : ನೃಪಾಲಯಾಂತರ್ಗತ ಕಕ್ಷೆ ಕೋಷ್ಠಂ (ವಸ್ತುಕೋ. ೪೭-೧೪). [ನೃಪ + ಆಲಯ]

**ನೃಪಾವಸಥ** (ನಾ). = ನೃಪಗೃಹ : ವಾಜಿಯಂ ಧಾರಾಪಂಚಕದೊಳ್ ವಿಚಿತ್ರಲಯದಿಂ ತಾಮೇಱಿ ಬರ್ಪೀ ಮಹಾಧೀರರ್ ಕಾಲ್ನಡೆಯೊಳ್ ನೃಪಾವಸಥದಿಂ ಬರ್ಪಂದಮಾವಂದಮೋ (ಪಂರಾಪೂ. ೬-೧೮೦). [ನೃಪ + ಅವಸಥ]

**ನೃಪಾಸನ** (ನಾ). = ನೃಪಪೀಠ : "ನೃಪಾಸನಂ, ಭದ್ರಾಸನಂ—ರಾಜರು ಕುಳಿತುಕೊಳ್ಳುವ ಆಸನದ ಹೆಸರು" (ಸಿದ್ಧಾಂತಿ. ೨೪೫). [ನೃಪ + ಆಸನ]

**ನೃಪಾಳ** 'ನೃಪಾಲ' ನೋ.

**ನೃಪಾಳಕ** 'ನೃಪಾಲಕ' ನೋ.

**ನೃಪೇಂದ್ರ** (ನಾ). = ನೃಪತಿಲಕ : ಬಂದು ಮಣಿಮಕುಟನಸವಸದಿಂದಂ ಚಕ್ರಿಯ ಪೊದಟ್ದ ತೇಜಕ್ಕೆ ಮಸುಳ್ದಂದೆಱಗಿ ಮುಂದೆ ನಿಲ್ವುದುಮೊಂದ ಮಯುವದಿಂದೆ ಸಾರೆ ಕರೆದು ನೃಪೇಂದ್ರಂ (ಆದಿಪು. ೧೩-೧೪) ; ಪರಸಿರೆ ಪರಸಿರೆ ನೃಪೇಂದ್ರನಂ ನೀವು (ಯಶೋಚ. ೧-೫೯). [ಸಂ.]

**ನೃಯುಗ್ಮ** (ನಾ). ೧. ಸ್ತ್ರೀಪುರುಷರ ಜೋಡಿ ; ಮಾನವ ಜೋಡಿ. ೨. [ಜ್ಯೋತಿ] ಮಿಥುನರಾಶಿ : ಕವಚಧರಂ ಶೂರಂ . . . ವಿಹಗಪಾಸ್ಯಂ ನೃಯುಗ್ಮಮಧ್ಯತ್ರ್ಯಂಶಂ (ಜಾತಕಿ. ೧೯-೮). [ಸಂ.]

**ನೃವಾಹನ** (ನಾ). ಮನುಷ್ಯರನ್ನೇ ವಾಹನವಾಗಿಸಿಕೊಂಡವನು ; ನರವಾಹನ ; ಕುಬೇರ : "ಯಕ್ಷಂ ಮನುಷ್ಯಧರ್ಮಂ ನೃವಾಹನ ಧನಾಧ್ಯಕ್ಷನುತ್ತರದಿಗ್ವರಂ . . . ರಾಕ್ಷಸ ದ್ವಿಪನೆನೆ ಕುಬೇರನೆನಿಸಿಕ್ಕು" (ಮಂಗರಾ. ೧೬-೧೫). [ಸಂ.]

**ನೃಶಂಸ** (ನಾ). ಕೆಡುಕ ; ಕೇಡಿಗ ; ನೀಚ ; ಕ್ರೂರಿ : "ನೃಶಂಸಃ, ಕ್ರೂರಕರ್ಮಕೃತ್—ಈ ೨ ಹೊಲ್ಲೆ ಹಗೆಯ್ವವಂ" (ಹಲಾಯು.೬೧-೨೧೭); ಜೀವರಾಶಿಗಳನೋವದೆ ಘಾತಿಸಿದ್ಯೆ ನೃ[ಶಂಸ] ಬಾರ್ಬಲೆ ಬಡಿಗಾಳ ಮಂಬು . . . ಪಿರಿದೆಂದು ಮೂದಲಿಸಿ ಬಂದಿಱುವರ್ ಕುಱುಪಿಂದೆ ನಾರಕರ್ (ವರ್ಧಮಾ. ೫-೨೯) ; ಇರದೆ ನಿಜಬಲನಾಶನವ ಸಂಗರದ ಕಲಿತನಗಳನು ಕೇಳ್ದಾಯಿರುಳು ಕಂಸಂಗಾಯ್ತು ಜಾಗರವಾ ನೃಶಂಸಂಗೆ (ಸಿಭಾಗ. ೧೦-೩೮-೧). [ಸಂ.]

**ನೃಶಂಸತೆ** (ನಾ). ಕ್ರೌರ್ಯ ; ನೀಚತನ : ಹಿಂಸೆಗೊಡಬಡೆ ನಾನು ನಿನಗೆ ನೃಶಂಸತೆಯಲಘುವಪ್ಪುದೆಂದಳಪಾಂಸುಲೋತ್ತಮೆ ಜನವ ಬಾಧಿಪ ದುಷ್ಟಸರ್ಪವನು ಧ್ವಂಸಿಸುವೆನೆಂದಾ ಪುಳಿಂದೋತ್ತಂಸಂಗೆಂದಳು (ತಿಮ್ಮಆ. ೧-೧೦). [ಸಂ. ನೃಶಂಸತಾ]

**ನೃಸಿಂಹ** (ನಾ). ಮನುಷ್ಯ ಮತ್ತು ಸಿಂಹದ ಆಕಾರವನ್ನು ಹೊಂದಿದ ವಿಷ್ಣುವಿನ ನಾಲ್ಕನೆಯ ಅವತಾರದ ಸ್ವರೂಪ ; ನರಸಿಂಹ : ವಾಸುದೇವಾಯ ನಮೋ ವಾಸುಕಿಶಯನಾಯ . . . ಭೂಸುರಪ್ರಿಯ ಭಜಕಪೋಷಕನೆ ರಕ್ಷಿಪುದು ಕೇಶವ ನೃಸಿಂಹರೊಲಿದು (ಕನಕ. ೯೦ ಪಲ್ಲವಿ) ; ದೈತ್ಯ ಹಿರಣ್ಯಕಶ್ಯಪನೊಡಲು ಬಗಿಬಗಿದು . . . ಆತನ ಕರುಳ ಮಾಲೆಯ ಯಡದ ಕೈಯಲಿ ಪಿಡಿದು ಕಂಠಕೆ ತೊಡರು ಮಾಡ್ದ ನೃಸಿಂಹ ನಾಲ್ಕನೆ ಅವತರಣವೆಂದ (ಗಗತಾ. ೧೯-೨೮). [ಸಂ.]

**ನೃಸೇನ** (ನಾ). ಕಾಲಾಳಿನ ಸೈನ್ಯ ; ಪದಾತಿದಳ : ಷಷ್ಠ್ಯಂತವು ಪೂರ್ವಪದವಾಗಿವುಳ್ಳ ಸೇನಾ ಛಾಯಾ ಶಾಲಾ ಸುರಾ ಶಬ್ದಂಗಳು ಸ್ನ, ಸ್ಯುಃ ಆಗೋದು, ನೃಸೇನಮಿತ್ಯಾದಿಗಳು (ಸಿದ್ಧಾಂತಿ. ೪೫೪). [ಸಂ. ನೃಸೇನಾ]

**ನೃಹರಿ** (ನಾ). = ನೃಸಿಂಹ : ಆ ಮತ್ಸ್ಯನಾ ಕೂರ್ಮನಾ ವರಾಹಂ ನೃಹರಿ ವಾಮನಂ . . . ಕೃಷ್ಣನೆಂದಾತನವತಾರ ಹತ್ತೆನಿಕ್ಕುಂ (ಮಂಗರಾ. ೬–೧೯). [ಸಂ.]

**ನೆಇಗಾರ** 'ನೆಯ್ಗೆಕಾಱ' ನೋ.

**ನೆಂಗಿಯೂರ್** (ನಾ). ಒಂದು ಸ್ಥಳದ ಹೆಸರು : ಕಿಱುವಳ್ಳಿ ಬಾಳ ಪುರು ಇತ್ಯೇತೇಶಾಂ ಗ್ರಾಮಾಣಾಂ ಮಧ್ಯೇ ನೆಙ್ಗಿಯೂರ್ನ್ನಡ್ಡಿವಳ್ಳಿ ಸಹಿತಸ್ಸುಳ್ಳಿಯೂರ್ನ್ನಾಮ ಗ್ರಾಮೋದತ್ತಃ (ಎಕ. X, ಕೋಲಾರ. ೬೩–೬೮; 754). [ನೆಂಗಿ? + ಊರ್]

**ನೆಂಚು** 'ನಂಜು$_1$' ನೋ.

**ನೆಂಜು** 'ನಂಜು$_1$' ನೋ.

**ನೆಂಟ** 'ನಂಟ' ನೋ.

**ನೆಂಟತನ** 'ನಂಟತನ' ನೋ.

**ನೆಂಟಸ್ತ** 'ನಂಟಸ್ತ' ನೋ.

**ನೆಂಟಸ್ತನ** 'ನಂಟಸ್ತನ' ನೋ.

**ನೆಂಟಸ್ತಿಕೆ** 'ನಂಟಸ್ತಿಕೆ' ನೋ.

**ನೆಂಟಸ್ಥ** (ನಾ). ನಂಟ ; ಬಂಧು : 'ನೆಂಟಸ್ಥಿಕೆ' ಪರಾ. [<ನೆಂಟು + –ಸ್ಥ]

**ನೆಂಟಸ್ಥಿಕೆ** (ನಾ). ನಂಟತನ ; ಬಂಧುತ್ವ : ಈ ಹೊಸ ನೆಂಟಸ್ಥಿಕೆಯಿಂದ ಎರಡು ಮನೆತನಗಳಲ್ಲಿಯೂ ಅನ್ಯೋನ್ಯತೆ ಬೆಳೆಯಿತು (ಗಂಗಾಳ. ೨). [ನೆಂಟಸ್ಥ + –ಇಕೆ]

**ನೆಂಟಿತಿ** 'ನಂಟಿತಿ' ನೋ.

**ನೆಂಟಿತ್ತಿ** 'ನಂಟಿತಿ' ನೋ.

**ನೆಂಟು** 'ನಂಟು$_2$' ನೋ.

**ನೆಂಟುತನ** 'ನಂಟುತನ' ನೋ.

**ನೆಂತರುಗೊಡಗಿ** 'ನೆತ್ತರುಗೊಡಗೆ' ನೋ.

**ನೆಂಪು** 'ನೆನಪು' ನೋ.

**ನೆಕುಂಡ,** ನೆಕುಂಡಿ, ನೆಕ್ಕೊಂಡಿ (ನಾ). ಒಂದು ಸ್ಥಳದ ಹೆಸರು : ಸ್ವಸ್ತಿಶ್ರೀ ನೆಕುಣ್ಡರಾ ವಾಜಪೇಯಾಜಿಯಾ ಮಗನ್ ಜನ್ನನ್ಕೊಟ್ಟದು ಸಲೆ ಆಚನ್ದ್ರತಾರಕಂ (ಎಕ. VII, ಶಿಕಾರಿ. ೪೫b–೪೯ ; ಸು. 890 ?). **ನೆಕುಂಡಿ :** ರಾಮಯರಸರ್ ನೆಕುಣ್ಡಿ ಆಳೆ (ಮೈಆರಿ. ೧೯೧೭, ೧೨–೩ ; 7ನೆಯ ಶತ). **ನೆಕ್ಕೊಂಡಿ :** ಆದಿವಾರದಂದು ನೆಕ್ಕೊಂಡಿಯ ಶ್ರೀರಾಮೇಶ್ವರದೇವರ್ಗೆ . . . ಬಿಟ್ಟರು (ತೆಲಂಶಾ. ೩೩–೨೪ ; 1154 ?). [ ? ]

**ನೆಕುಂಡಿ** 'ನೆಕುಂಡ' ನೋ.

**ನೆಕುಂದೆ** 'ನೆಕ್ಕುಂದಿ' ನೋ.

**ನೆಕ್ಕನೆ** (ಅ). ಇದ್ದಕ್ಕಿದ್ದಂತೆ ; ಥಟ್ಟನೆ ; ಕೂಡಲೆ : ಮುಸಿದೆರ ಡಂಬಿನೊಳ್ ರಥಮುಮಂ ಪದವಿಲ್ಲುಮನೆಯ್ದೆ ಪಾರ್ದು ನೆಕ್ಕನೆ ಕಡಿದು (ಪಂಪಭಾ. ೧೧–೧೯) ; ಚೆಕ್ಕನೆ ಸಾವುದುಮಂ ಸಿರಿ ನೆಕ್ಕನೆ ಕಿಡುವುದುಮನ ಱಿದು ಕಂಡುಂ ಕೇಳ್ದುಂ ಸೊಕ್ಕುವರುಕ್ಕುವರಂಜದೆ ಯ[ದ]ಕ್ಕುಂದಲೆ ವಾಯ್ವುರನ್ನಿರೆನಗಿದು ಚೋದ್ಯಂ (ಧರ್ಮಾಮೃ. ೭–೧೬೩) ; ಭುವನೈಕ ಮಲ್ಲಂ ಮೋಹಮಲ್ಲನನೆಕ್ಕತುಳದಿಂದಕ್ಕುಳಿಸದೆ ಡೊಕ್ಕರಿಗೊಂಡು ನೆಕ್ಕ [ಪಾಠಾಂ. ಟ್ಟ]ನೆ ಮುಱಿದಿಕ್ಕಿ (ಪಾರ್ಶ್ವಪು. ೧೬–೧೦ ವ). [ನೆಕ್ಕು$_3$ + –ಅನೆ$_1$]

**ನೆಕ್ಕರೆ,** ನೆಕ್ಕೊರ, ನೆರ್ಕೊರೆ (ನಾ). ಒಂದು ಬಗೆಯ ಕುರುಚಲು ಗಿಡ : ಪಿಲ (ಹಲಸು) . . . ಪೇರಳೆ, ಗೋಳಿ, ನೆಲ್ಲಿ, ನೆಕ್ಕರೆ, ತಾಳಿ (ತುಳುನಾ. ೧೫೩). 'ದೊಡ್ಡ ನೆಕ್ಕರೆ' ಪರಾ. **ನೆಕ್ಕೊರ :** ಲಲಿತ ಲತಾಂಗಿಯ ವರಜಂಘಾಯುಗಲಂಗಳ ಭಂಗಿಯನಱಿಯೆಂ ಪೊಗೞಲ್ ನೆಕ್ಕೊರವಟ್ಟೆಯು ತೆಱನೇನಲ್ಲದೆ ಬಣ್ಣಿಪ ಬಟ್ಟೆಯನಂಭೋಜಾನನೆಯೂರು ಯುಗಂಗಳ್ (ಸುಕುಮಾ. ೫–೫೧ ರಗಳೆ). **ನೆರ್ಕೊರೆ :** ಮನಸಿಜನೊಲ್ದು ತನ್ನ ಬಿನದಕ್ಕೆಡೆಯಾಡುವ ಪೂಗೊಳಂಗಳೊತ್ತಿನೊಳೊಗೆದಿರ್ದ ನೆರ್ಕೊರೆಯ ನುಣ್ಪೊಡೆಯಂಬಿನವೇಟಿಗೆವೆತ್ತು ಕಣ್ಗ ನುನಯವಾಗಿ ನೆಪ್ಪುವಡೆದುಜ್ಜ್ವಲ ಕಾಂತಿಯಿನೊಳ್ಪುವೆತ್ತ ತದ್ವನಿತೆಯ ಜಂಗೆಗಳ್ ವಿಟರ ಚಿತ್ತದ ಶಂಕುಗಳಲ್ತೆ ಸಂತತಂ (ನಳಚಂ. ೩.೩೭).

[ದೇ.॥ ತುಳು. ನೆಕ್ಕರ್, ನೆಕ್ಕಾರ್ ; ತೆಲು. ನೆಕ್ಕರ]

**ನೆಕ್ಕಿ** 'ಲೊಕ್ಕಿ$_1$' ನೋ.

**ನೆಕ್ಕಿಲು** 'ನೆರ್ಗಿಲ್' ನೋ.

**ನೆಕ್ಕಿಸು** 'ನಕ್ಕಿಸು' ನೋ.

**ನೆಕ್ಕು$_1$** 'ನಕ್ಕು$_1$' ನೋ.

**ನೆಕ್ಕು$_2$** 'ನೞುಂಕು' ನೋ.

**ನೆಕ್ಕು$_3$** (ನಾ). ಒಂದು ಅನುಕರಣ ಶಬ್ದ : ಅಂಬುಗಳೆಱಗಿ ರೋಮ ರೋಮಕ್ಕೆ ನೆಳಿಲ್ ನೆಕ್ಕು ಚಳಿಲ್ ಚಕ್ಕು ದೊಗಲ್ ದೊಕ್ಕನೆ ನಾಂಟದುವರಾತಿಭಟರವಯವಮಂ (ಜಗವಿ. ೭–೮೧) ; ಚೆಕ್ಕನೈತಂದು ಘುಡುಘುಡಿಸುತೂರಂ ಪೊಕ್ಕು ನೆಕ್ಕು ನೆರಸಿಟಲು ಖಣಿಖಟಲೆನಲು ಹೊಡೆದು (ವೀಶೈಪು. ೩–೪–೨೩).

**ನೆಕ್ಕು ನೆರಿಲ್** = ಒಂದು ಅನುಕರಣ ಶಬ್ದ : ನೆಕ್ಕು ನೆರಿಲೆಂಬ ನಿಳಿಲ್ನಿಟಿಲೆಂಬ . . . ಗರಿಗರಿಲೆಂಬ ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳ್ (ಗಿರಿಕ. ೬–೬೮). **ನೆಕ್ಕು ನೆಳಿಲ್** = ಒಂದು ಅನುಕರಣ ಶಬ್ದ : ಖಂಡೆಯದ ದನಿಯೊಡನೆ ನೆಕ್ಕು ನೆಳಿಲೆನೆ ವಾದ್ಯರಭಸದಿಂದುಱುಬಿದರ್ ಮಕ್ಕಳಾಟಿಕೆಯಾಯ್ತು ಖಳಭಟರ ಕಾಳೆಗಂ (ಚೆಬಪು. ೪೪–೪೨).

**ನೆಕ್ಕು$_4$** (ನಾ). ತಿವಿತ ; ನೂಕುವಿಕೆ : 'ಕಿಱುನೆಕ್ಕು' ಪರಾ. [ ? ]

**ನೆಕ್ಕುಂದಿ,** ನೆಕುಂದೆ (ನಾ). ಒಂದು ಸ್ಥಳದ ಹೆಸರು : ಕುನ್ದಯ್ಯಂ ನೆಕ್ಕುನ್ದಿ ನಾಡಾಳೆ (ಎಕ. X, ಚಿಂತಾಮ. ೩೬–೩ ; ಸು. 885 ?) ; ಶ್ರೀ ಮಹಾವಲಿವಾಣರಸರ್ ಪ್ರಿಥಿವೀರಾಜ್ಯಂಗೆಯೆ ಬಾಣರಸರುಮರ್ ಮಹಾಜ[ನ]ರುಮರ್ ಕಾದುತ್ತಿರೆ ನೆಕ್ಕುನ್ದಿ ನಾಡನಿಱಿಯಿಮೆನ್ದು ಅಟ್ಟೆ (ಎಕ. X, ಕೋಲಾರ. ೨೦೦–೬ ; ಸು. 908 ?) ; ಕಾಯ್ವರನಾಡ ನೆಕ್ಕುನ್ದಿ ನಾಡ ಊರಾಳಿಯ ದೇವ ಭೋಗ ××× ಎಲ್ಲ ಸಲ್ವುದು (ಎಕ. IX, ಹೊಸಕೋ. ೩೭–೧೩ ; ಸು. 950). **ನೆಕುಂದೆ :** ನಂಮ ಕಾಕತ್ತಿಯ ಸೀಮೆಯ ಸ್ತಳ ನೆಕುಂದೆಯ ಚತುಸ್ಸೀಮೆಯ ಗದ್ದೆ (ಎಕ.X, ಚಿಂತಾಮ. ೪೦–೩ ; 1423). [ ? + ಕುಂದಿ$_2$ (<ಕುಂದ$_3$)]

**ನೆಕ್ಕೊಂಡಿ** 'ನೆಕುಂಡ' ನೋ.

**ನೆಕ್ಕೊರ** 'ನೆಕ್ಕರೆ' ನೋ.

**ನೆಗಂಪು** 'ನೆಗಪು$_1$' ನೋ.

**ನೆಗಚು** (ಕ್ರಿ). ೧. ಹಾರುವಂತೆ ಮಾಡು ; ಜಿಗಿಸು : ನೆಗಚಿ ಹೋದುದು ಮಗಚಿ ಬಂದೀತೇ ? (ಗಾದೆ). ೨. "ಜಾಡಿಸು ; ಸರಿಪಡಿಸು" (ಜಾನಕೋ. ೧೨). [ನೆಗೆ + –ಚು$_1$]

**ನೆಗಡಿ** (ನಾ). ೧. ಶೀತಬಾಧೆಯಿಂದ ಮೂಗಿಗೆ ಉಂಟಾಗುವ ಉಪದ್ರವ ; ಪೀನಸ : "ಕಫಃ, ಶ್ಲೇಷ್ಮಾ, ಪ್ರತಿಶ್ಯಾಯಃ, ಪೀನಸಃ— ಈ ೪ ನೆಗಡಿ" (ಹಲಾಯು. ೯೯–೪೫೧) ; ಸರಸತಿಗಾದತ್ತು ನೆಗಡಿ ಹರಿಣಧರಂಗಾದುದಾಗಳೇ ಕ್ಷಯರೋಗಂ (ವೀರವಿ. ೮–೧೫) ; ಮೂಗಿರುವ

ತನಕ ನೆಗಡಿ ತಪ್ಪುವ ಹಾಗಿಲ್ಲ ! (ನಂಟರು. ೪೦) ; ಅವಳಿಗಾಗಲಿ ಆಕೆಗಾಗಲಿ ರಾಮಾಶ್ವಮೇಧ ಮುಗಿವವರೆಗೆ ನೆಗಡಿ ಹಾಯುಲಿಲ್ಲವೆಂದರೆ ನಾನು ನಂಬಲಾರೆ (ದೇಕನ್ಯೆ. ೯೯) ; ನೆಗಡಿಯಂಥ ಜಡ್ಡು ಇಲ್ಲ, ಬುಗುಡಿಯಂಥ ಒಡವೆ ಇಲ್ಲ (ಗಾದೆ). ೨. ಸಿಂಬಳ ; ಗೊಣ್ಣೆ : ವಿಪರೀತ ನೆಗಡಿಯಾದಾಗ ಮಗುವನ್ನು ಜೋರಲಾಗಿ ಮಲಗಿಸಿದರೆ ಮೂಗಿನಿಂದ ನೆಗಡಿ ಸುರಿದು ನೆಗಡಿ ಸ್ವಲ್ಪ ಶಮನವಾಗಬಹುದು (ಗೃಹವಿ. ೧೪೭).

[ದೇ.॥ ತುಳು. ನೆಗಡೆ, ನೆಗಡಿ, ನಿಗಡಿ, ನಿಗಡೆ]

**ನೆಗಪು₁, ನೆಗಂಪು, ನೆಗಪ್ಪು, ನೆಗವು, ನೆಗಹು₁ (ಕ್ರಿ).** **೧.** ಮೇಲಕ್ಕೆ ಎತ್ತು ; ಎತ್ತಿ ಹಿಡಿ : "ಉದಂಚಿತಮದೂರ್ಧ್ವಮುತ್ಕ್ಷಿಪ್ತಮೆನೆ ನೆಗಪಿದುದು" (ಮಂಗರಾ. ೧೩೨-೨೭) ; ನೆಗಪಿ ವರೂಥಮಂ ವಸುಧೆ ನುಂಗಿದುದಂ ಸಮುಪಾದಶೋಭೆಯುಂ . . . ಸೊಗಯಿಸೆ ಪಾಟಿಯುಂ ನೆಜಪದಾಳ್ದನ ಕಜ್ಜಮನೊಕ್ಕು ಸತ್ತರಂ ನಗುವವೊಲಿರ್ದನಂಗಪತಿ ನೆಮ್ಮಿ ನಿಜೋನ್ನತಕೇತುದಂಡಮಂ (ಗದಾಯು. ೫-೧೦) ; ಅಟ್ಟಿಯಿಂ ನೆಗಪಿದನೊಂದೆ ಹಸ್ತದೊಳೆ ಕೋಟಿಕನಾಮದ ಶೈಳಮಂ (ಪರ್ಧಪು. ೩-೪೭) ; ವೃದ್ಧಮಾಹೇಶ್ವರನಂ . . . ಮೆಲ್ಲನೆ ನೆಗಪಿ ನಿಂದಿರಿಸಲ್ (ಸಂಬರ. ೬-೪೪) ; ಧರಣಿಯೊಳು ತಲೆಯೂಱಿ ಮೇಲಕೆ ಚರಣಯುಗಮಂ ನೆಗಪಿ (ಬಸವು. ೨-೧೩) ; ಕಾಲ್ಪಿಡಿದಿದ್ದ ದೇವಿಯನ್ನು ಕೈಗಳಿಂದ ಮೇಲಕ್ಕೆ ನೆಗಪಿ (ಶಾಂತಲಾ. ೧೭೧). **೨.** ನೀಡು ; ಚಾಚು : ಮೊಗಸಿದಪುದೆತ್ತಲುಂ ಬಿಗಿದೊಗೆದ ಕುಚಾಭೋಗವೆಂದು ಚುಬುಕಮನಾದಂ ನೆಗಪಿದಪುವೆಂಬಿನಂ ತಳ್ತೊಗೆದುವು ಘನಕುಚೆಯ ರುಚಿರಹಾರಕರಂಗಳ್ (ಕಾದಂಉ. ೧೨) ; ಕಯ್ಯಂ ಹುಲ್ಲಂ ನೆಗಪಿ[ಪಾಠಾಂ. ಹಿಡಿದು] ದೆಸೆದೆಸೆಗೆ ಸಿವದಿಡುತೆ (ತಿರುರ. ದೇ. ೧೪-೧೩) ; ಮಂಗಳತೂರ್ಯಕೋಟಿ ಮೊಟಗುತ್ತಿರೆ . . . ಪೊಂಗಳಸಂಗಳಂ ನೆಗಪಿ ಸಪ್ರಣವೋಚ್ಚರಣಾನನಾಂಬುಜರ್ ಬೀರ್ಷರಿವ ಪುಣ್ಯವಿಟಪಿಗೆ ನೀರ್ವೊಯ್ವಂತ ನಘಜಿನನ ಮಸ್ತಕದೊಳ್ ಪೊಯ್ದರ್ . . . ಪಯೋಧಾರೆಗಳಂ (ಪುಷ್ಪಪು. ೧೧-೩) ; ಪೊಡೆಯುತ್ತುಂ ಗಿರಿಶೃಂಗಮಂ ನೆಗ[ಪಾಠಾಂ. ಗೆ]ಪುತುಂ ವ್ಯೋಮಕ್ಕೆ . . . ತೀಡಿದುದೊಂದು ಘೋರಪವನಂ ಚಿತ್ರಾವಹಂ ನಾಡೆಯುಂ (ದಶಕು. ೫-೭೧). **೩.** ಚಾಚಿಕೊಳ್ಳು ; ಮೇಲಕ್ಕೆ ಏರು : ಬಿರಿದ ಪೊಂಬಾಳೆ ನೆಗಪಿ ಸೇರುವೆಗೆಯ್ದು ಬಾಳ್ಗಳೀಳ್ಗೆಯ ಬೀಱಿ (ಪದ್ಮರಾ. ೮-೩೪) ; ಅದೆ ಶಕ್ರಹಸ್ತವಜ್ರಾಯುಧಂ ನೆಗಪಿ ಕಿಡಿಗೆದಱುತಿದೆ ವಹ್ನಿ ಪಿಡಿದುಗ್ರ ಖಡ್ಗಂ ಕರದೊಳೊದಱುತಿದೆ . . . ಸಲಹು ಸಲಹೆಂದು ಮೊಱೆಯಿಟ್ಟರಾ ದೈತ್ಯರುಂ (ಚೆಬಪು. ೨೧-೨೫). **೪.** ಎತ್ತಿಕೊಳ್ಳು ; ಹಿಡಿ ; ಗ್ರಹಿಸು : ಮಾಣಿಕಮೆಂದು ಕೆಂಡವಂ ನೆಗಪುವ ಪುಣ್ಯಮೆಂದು ವಿಷವಲ್ಲಿಗೆ ನೀರೆಱೆವೆಗ್ಗನಂತೆ ಕೆಮ್ಮಗೆ ಸುಖಮೆಂದಸದ್ವಿಷಯಸೌಖ್ಯದೊಳಿಂತೆಜಗಲ್ಕೆ ತಕ್ಕುದೇ (ಕಾದಂಪೂ. ೪೪೭) ; ಖಳನಪ್ಪಂಗಾರವೇಗಂ ಬೃಹದ್ವಳನಂತಾ ವಸುದೇವನಂ ನೆಗಪಿಕೊಂಡೊಯ್ದಂ ನಭೋಭಾಗದಿಂ (ನೇಮಿಪು. ೪-೬) ; ಆ ಶಚಿ ಮಾಯಾನಿದ್ರೆಯನಾ ಶಶಧರವದನೆಗಿತ್ತು ಬಲಗೆಲದೊಳ್ ಮಾಯಾಶಿಶುವಸಿರಿಸಿ ಪಾಣಿಕುಶೇಶಯುಯುಗದಿಂದೆ ನೆಗಪಿದಳ್ ಜಿನಶಿಶುವಂ (ಪರ್ಧಪು.೧೩-೯೫). **೫.** ಚಿಮ್ಮಿಸು ; ಹೊಮ್ಮಿಸು ; ಸೂಸು : ಅಮರ್ದಪ್ಪಿಕೊಂಡು ತತ್ತನುಜೆಯಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ (ಆದಿಪು. ೪-೫೬) ; ವಿಶ್ವಳೆಯರಗಲ್ಕೆಯೊಳ್ ನೆಗಪಿದರ್ ವಸಮಲ್ಲದ ಬಾಷ್ಪವಾರಿಯಂ (ಅಜಿಪು. ೬-೧೧೧) ; ಮಹಾಸತಿಯರ ರಥದಿಂದಿಳಿಪಿ ಮನ್ನುಗದ್ಗದಕಂಠನಾಗಿ ಕಣ್ಣೀರ್ಗಳಂ ನೆಗಪುವುದುಂ (ಪಂಪರಾಮಾ. ೧೫-೭೫ ವ) ; ತತ್ಕುಮಾರಕಂ ನೆಗಪಿದನಶ್ರುಬಿಂದುಗಳನೊಂದಿದ ಮೌಕ್ತಿಕಜಾಳಮೆಂಬಿನಂ (ನೇಮಿಪು. ೧-೯೨). **೬.** ಉಂಟು ಮಾಡು ; ಹುಟ್ಟಿಸು : ನೆಗಪುತ್ತುಂ ಬೆಮರಂ ವಿಯೋಗಿಜನದೊಳ್ ಕಾಂತಾಮುಖಾಂಭೋಜಮಂ ನಗಿಸುತ್ತುಂ . . . ಇರುಳೊಳೇಂ ಪರ್ಬಿತ್ತೊ ಚಂದ್ರಾತಪಂ (ಲೀಲಾವ. ೨-೧೪). **೭.** ಎಬ್ಬಿಸು ; ಹಾರಿಸು : ಬಿಱುಗಾಳಿ ಬೀಸಿತ್ತು ವನದ ತಱಗೆಲೆ ಹೊಳ್ಳು ಧೂಳಿಯಂ ನೆಗಪಿತ್ತು (ಅರಿರ.ದೇ. ೧೭೬-೮). **೮. (ಆಲಂ)** ಬಹಿರಂಗ ಪಡಿಸು ; ಪ್ರಕಟಿಸು ; ಸ್ಫುಟಗೊಳಿಸು : ನವಮಂಜರಿಯಂ ಪೆತ್ತೀ ನವಮಾಳಿಕಾಲತೆ ಲತಾಕೋಮಳೆಯ ಕುಮಾರಿಯಂ ಪಡೆವ ಬಗೆಯು ಬಯಕೆಯನೆಲ್ಲರ್ಗಂ ನೆಗಪಿತೋಱುದುದು (ಲೀಲಾವ. ೭-೩೪ ವ) ; ಶ್ರೀಮದ್ವೈಷ್ಣವಪದದುದ್ದಾಮತೆಯಂ ನೆಗಪುತಮ್ಯುತಕಲೆಯಂ ವಿಬುಧಸ್ತೋಮಕ್ಕವಿಾಯುತುಂ ಶ್ರೀರಾಮಾನುಜನೆನೆ ವಿರಾಜಿಕುಂ ದ್ವಿಜರಾಜಂ (ಚಿಕವಿ. ೧-೭೨). **೯.** ಕಾಪಾಡು ; ರಕ್ಷಿಸು : ಭೂಸತಿಯಂ ಶ್ರೀಧರನೆತ್ತಿ . . . ಸಂತವಿಸಿದಂತಾರ್ತಾವನೋದ್ಯುಕ್ತನೀ ಕ್ಷಿತಿಪಾಲಂ ಕವಿಕನ್ಯೆಯಂ ನೆಗಪುತುಂ ಸೌಕರ್ಯಮಂ ತಾಳ್ದಿದಂ (ಚಿಕವಿ. ೧-೪೭). **೧೦.** ಎತ್ತಿ ಹಾಕು ; ಕದ್ದೊಯ್ಯು ; ಅಪಹರಿಸು : ರಾಗದಿಂದವಿಾ ರತ್ನಮಣಿಗಳ್ ನೆಗಪಿದೆನಪ್ಪೊಡೆ ಪೋಗಲ್ಬಾರದು (ಧರ್ಮಾಮೃ. ೬-೫೪). **೧೧.** ಪ್ರಚೋದನೆ ಮಾಡು ; ಪ್ರಚೋದಿಸು : ರಕ್ಕಸನೊಳಿಱಿವ ಕಾಯ್ಪಿನ ತಕ್ಕಂ ನೆಗಪಲ್ಕೆ ದೇವ ಕಂಡೆಂ ನಿಮ್ಮಂ (ಅನಂಪು. ೧೩-೬೯). **ನೆಗಂಪು:** **೧.** ಮಾರ್ತಾಂಡ ಚಂಡರೋಚಿಯನಿಱಿಸಲೆತ್ತಿ ಪೊತ್ತಿಸಿದ ದೀವಿಗೆಗಳೆನಿಸಿ ಮಿಸುಪ ಖದ್ಯೋತಜಾತಮಂ ನೆಗಂಪಿ[ಪಾಠಾಂ. ನೆಗಪಿ]ಯುಂ (ವರ್ಧಪು. ೬-೩೨ ವ). **ನೆಗಪ್ಪು : ೨.** ಎತ್ತಿದ ಗುಡಿ ಪೊತ್ತ ಕನ್ನಡಿ ನೆಗಪ್ಪಿದ ಪೊಂಗಳಸಂಗಳೊಪ್ಪೆ ಬಂದುದು ಸುರಸೌಂದರೀನಿವಹಂ (ಅನಂಪು. ೧೪-೭೦). **೪.** ಮಾಡದ ಕಂಭಮಂ ಮಲಗಿನೊಳ್ಪರಿಪಾಯ್ದು ನೆಲಕ್ಕೆ ಬಾಳನಲ್ಲಾಡೆ ನೆಗಪ್ಪಿಕೊಂಡು ತೊಡೆಗಾ ನರಸಿಂಹನಪುಂಕಿ (ಅರ್ಧನೇ. ೮-೧೧೭). **ನೆಗವು : ೧.** ಯಾರಂತ ಎತ್ತಲಿ ಯಾರಂತ ಹೊರಿಸಲಿ ಯಾರಂತ ಕೊಡವ ನೆಗವಲಿ (ಗರತಿ. ೭೦) ; ಅಂಬಿಗರ ಸಿಂಗಣ್ಣನು ಒಂದು ದೊಡ್ಡ ಕಲ್ಲನ್ನು ನೆಗವಿಕೊಂಡು ದಿಗ್ಗನೆ ಎದ್ದನು (ರಂಗರೋ. ೧೨) ; ವಿಗಡ ಹನುಮಂತ ಅದನ್ನು ಕಂಡು ಹೆಬ್ಬೆಟ್ಟವನ್ನು ಕಿತ್ತು ನೆಗವಿ ತಂದು ಅರ್ಭಕನ ಮೇಲೆ ಇಟ್ಟ (ಬಿದುರಿ. ೨೧೮). **೧೦.** ಈ ಶ್ಯಾನಭೋಗ ಐವತ್ತು ರೂಪಾಯಿ ನೆಗವಿ ಕುಂತಾ (ಗ್ರಾಮಾಯ. ೨೮೫) ; ಯಾವದೋ ಬ್ಯಾಂಕಿನಾಗಿಂದ ಆ ರೊಕ್ಕಾ ನೆಗವಿ ನುಂಗಿ ಹಾಕಿಬಿಟ್ಟ (ಗಂಪಾಯ. ೧೭). **ನೆಗಹು₁ : ೧.** ಎಲ್ಲರು ಮೈ ಸಾಗಿಸಲು ಪಾದವ ಹಿಡಿಯೆ ತಲೆಗಳ ಹಿಡಿದು ಕೈಗಳಲ್ಲಿ ನೆಗಹುತ್ತಿರಲು (ಚನ್ನಪ. ಕ. ೫೮೫-೧೩೦೬) ; ತೃಣವ ತುಡುಕಿ ನೆಗಹಿದ ಕಯ್ಯ ನಿಷ್ಕಾರಣಂ ನೃಪತಿ ಹೊಡೆದನು (ಹಚರಾ. ೭-೨೭) ; ಶಿಳೆಯೊಳಡತ್ತುರ್ಷ ಪೊಯ್ಕೆ ಶಿಳೆಯಿಂ ನೆಗಹಲ್ಕತಿಚಿತ್ರಮಾದುದಾ ಶಿಳೆಕೊನೆಯಲ್ಲಿ ನೀಲ್ವ ಪುಲಿಯೆತ್ತಿದ ಸಿಂದಮೆನಲ್ಕೆ (ಎಕ. XI, ಚಿತ್ರದು. ೧-೫ ; 1310 ?) ; ಇಂದುಧರನಿಂತೆಂದನಂಘ್ರಿಗೆ ಬಿದ್ದವನ ನೆಗಹಿ (ಸಿಭಾಗ. ೯-೪-೧೩) ; ನಗಜಾವರಶತ್ರು ಗರುಡಿಯೊಳ್ ಬಾಹುಮೂಲಗಳ ಸತ್ರಾಣಿಸಲೆನುತೆ ನೆಗಹುವ ಹೊಸ ಹೊನ್ನ ವಜ್ರಮುಷ್ಟಿಗಳಂತೆ ಜಘನದ ತಳಗಳೊಪ್ಪಿದುವು (ಮೋಹತ. ೨೩-೧೭). **೨.** ಎತ್ತಿ ನೆಗಹಿದ ತೊಳಪ ಮುತ್ತಿನ ಸತ್ತಿಗೆಯ ಸಡಗರದ ಸರಿಸದೆ . . . ಸಗಾನದ ತೆತ್ತಿಗರ ಸಂಭ್ರಮದಲಂದಣವೇಱಿದಳು ಮಾಯೆ (ಪ್ರಭುಲೀ. ೪-೨೫) ; ನಸುನಗೆ ನಱುನಾಣು ನೆಲೆವೊಲೆ ನಳಿತೋಳು ಮಿಸುಪ ಕಣ್ಣೆಗ[ಪಾಠಾಂ. ಸ]ಹಿದ ಕಳಸ ಪೊಸ ದೇಸಿವಡೆಯೆ ನೀರೆಱೆವ ನೀಱೆಯರು ಕಣ್ಗೆಸೆದಿಹರಲ್ಲಿ ಪಥಿಕರ (ಕುರಾಸಾಂ. ೨-೪೨). **೪.** ಕೆಡೆವ ಮಡಕೆಯ ನೆತ್ತಿ ಬಸವಾ ಎನಲು ಹರವಿಯನತ್ತ ಕಯ್ಯಂ ನೀಡಿ ಬೀಳದ ಮುನ್ನ ನೆಗಹಿದನು (ಬಸಪು. ೧೦-೬) ; ಕಪಾಲಪಾತ್ರೆಯನರೆ ನೆಗಹಿ ಕೊಂಕಿನಲಿ

ಕುಡಿಸರು ಮುಕ್ತಕೇಶಿಯರು (ಕುಪ್ಪಾಭೀ. ೫-೩೨) ; ತಿರುವನು ನೆಗಹಿ ಬೆರಳಿನಲೇಱುಸಿದನುದ್ದಂಡಕಾರ್ಮುಕವ . . . ರಘುಪತಿ (ತೊರರಾ. ೬-೯-೧೫) ; ಕರುಣಿ ಕಾಣುತ ನೆಗಹಿಕೊಂಡನು ಸಾವ ಶಿಶುಮೃಗವ (ಣಿಭಾಗ. ೫-೮-೩೦). **೧೨.** ಮೇಲೇರು ; ಎದ್ದು ನಿಲ್ಲು ; ಏಳು : ಹೊಳೆವ ಹೇಮದ ರಥಕೆ ಹೂಡಿದ ತಿಲಕಗುದುರೆಯ ನೆಗಹಿ ನಿಗುರುವ ಕಳಶಸಿಂಧದ ದ್ರೋಣ ಹೊಕ್ಕನು ಕಾಳೆಗದ ಕಳನ (ಕುಪ್ಪಾದ್ರೋ. ೨-೨೦). **೧೩.** ಎದ್ದು ಕಾಣು,—ತೋರು : ನೆಗಹಿದವು ಕೈದೀವಿಗೆಯ ಸಾಲುಗಳು ಹೊಂದಂಡಿಗೆಯ ದೂವಾರಿಗಳು ವೆಂಠಣಿಸಿದರು (ಕುಪ್ಪಾದ್ರೋ. ೮-೫೫) ; ಉಪ್ಪರದ ಗುಡಿ ನೆಗಹಿದವು ನಗರಾಂತರದಲಿ (ತೊರರಾ. ೧-೭-೫೬) ; ಅಗಣಿತ ಕನಕದಂಡದ ಪಲ್ಲವಛತ್ರ ನೆಗಹಿರೆ (ಮೋಹತ. ೧೫-೩೦). **೧೪.** ಮೇಲಕ್ಕೆ ಎದ್ದು ನಿಲ್ಲುವ ಹಾಗೆ ಮಾಡು ; ಎಬ್ಬಿಸು ; ಎತ್ತಿ ನಿಲ್ಲಿಸು : ಆನೆ ಕೆಸಱೊಳಗದ್ದಿ ಬಿದ್ದೊಡೆ ತಾನೆ ತನ್ನಯ ಭುಜಬಲದ ಸುಯಿಂದಾನದಿಂದೊಡನೇಳ್ವುದಲ್ಲದೆ ಯಾರು ನೆಗಹುವರು (ಪ್ರಭುಲೀ. ೧೩-೬೬). **೧೫.** ಮೇಲಕ್ಕೇಳುವಂತೆ ಮಾಟು ; (ಮಾಟಿ) ಎಬ್ಬಿಸು : ಕುತ್ತಿ ಹಿಂಗುವ ಭಟರ ದಾಡೆಯೊಳೊತ್ತಿ ನೆಗಹಿದಡೊಡಗುವ ರಕುತಕೆ ಮುತ್ತಿ ಬಾಯ್ಗಳನೊಡ್ಡಿ ಕುಡಿದುದು ಶಾಕಿನೀನಿವಹ (ಕುಪ್ಪಾಭೀ. ೪-೭೯).

**ನೆಗವಿ ಹಾಕು** = ಎತ್ತಿಹಾಕು ; ಮೋಸಮಾಡು : ಆದರೆ ನನಗೆ ತಿಳಿಯದಂತೆ ಒಂದು ಪೈಯನ್ನಾದರೂ ಯಾರರ ನೆಗವಿ ಹಾಕಿಯಾರೇನು ! (ಕುಂಹಿಂ. ೧೬೬) ; ಉದ್ದರಿಯಾಗಿ ಹಾಲು — ಮೊಸರು ಕೊಟ್ಟ ಗವಳಿಗನು, ಉಪಾಯಾಂತರದಿಂದ ಬಳಿಜೋಡನ್ನು ನೆಗವಿ ಹಾಕಿದನು (ಗುರುಪ್ರ. ೮) ; ನಿಶ್ಚಯವಾಗಿಯೂ ಅವನೇ ನೆಗವಿ ಹಾಕಿದ್ದಾನೆ (ಕಾಳರಾ. ೩೬).

[ನೆಗ್$_1$ + – ಪು$_1$. /ತಮಿ. ನಿವಪ್ಪು = ಎತ್ತರ, ಔನ್ನತ್ಯ ; ತುಳು. ನಿಗಪು, ನೆಗಪು, ನೆಗಿಪು ; **ಕೋಲಾ. ನಾಯ್ಕಿ.** ನೆಗಪ್]

**ನೆಗಪು$_2$**, ನೆಗಹು$_2$ (ನಾ). **೧.** ಮೇಲಕ್ಕೆತ್ತುವುದು ; ಎತ್ತುವಿಕೆ : ಶಬ್ದಾತಿತವೇಗದಲ್ಲಿ ಚಲಿಸುವ ರೆಕ್ಕೆಯಲ್ಲುಂಟಾಗುವ ನೆಗಪು (ಲಿಫ್ಟ್) ರೆಕ್ಕೆಯ ಮೈಮೇಲೆ ಗಾಳಿಯ ಪರಿಚಲನೆಯ ದೆಸೆಯಿಂದ ಉಂಟಾಗುತ್ತದೆ (ಕವಿಕೋ. I, ೨೫೩). **ನೆಗಹು$_2$ : ೧.** ಧರಣಿಯಳತೆಯ ಹರಿಯ ನೆಗಹಿನ ಚರಣದಗ್ರದೊಳಿಳಿವ ಘನನಿರ್ಝರದವೊಲು ಮದಧಾರೆ ಮೆಱೆದುದು ಕರಿಕಪೋಲದಲಿ (ಕುಪ್ಪಾದ್ರೋ. ೩-೮) ; ತೋಳ ನೆಗಹಿನಲಟ್ಟಿ ಹೊಯ್ದುದು ನೀಲನನು ನೀಲಾದ್ರಿಯನು ದಂಭೋಳಿ ಪಟ್ಟಿಸಿದಂತೆ ನೊಂದನು ಹೊಯ್ಲ್ಲಲಿಭಪತಿಯ (ತೊರರಾ. ೬-೩೨-೩೫). **೨.** ಉಬ್ಬು ; ಉತ್ಸಾಹ ; ಸಡಗರ ; ಹಿಗ್ಗು : ನಟ್ಟ ನೋಟದ ನೆಗ್ಗಿದುತ್ಸವದ ಹೂಳಿದೂಹೆಯ ಹಿಳಿದ ನೆಗಹಿನ ಹೇಳಲಂದಿದೆನೆ ಹುದಿದ ಭಾವದಲಾಲಿಸಿದನಸುರಾರಿ ದೂತವ್ರಜದ ಬಿನ್ನಪವ (ಕುಪ್ಪಾಅ. ೨-೨). **೩.** ಎತ್ತರ : ನಗವದಿಪ್ಪತ್ತೈದು ಗಾವುದದುದ್ದವಾ ನಗದ ಕಿಬ್ಬಸಿಱುನ ಕದದ ನೆಗಹೆಂಟುಗಾವುದ ಪನ್ನೆರಳ್ಗಾವುದದಗಲವಾಗಿರೆ ನಿಟ್ಟಿಸಿದನು (ಭರಚ. ೨೯-೫೭). **೪.** ಘನತೆ ; ಹಿರಿಮೆ ; ಶ್ರೇಷ್ಠತೆ : ಉರ್ವಿಗತಿಶಯ ಸುಲಭ ಸುಗುಣನ ಸಾರ್ವಭೌಮನ ನೆಗಹು ತಿಳುಹೆ ಸುಪರ್ವಸತಿಯರು ವಹಿಸಿಕೊಂಡರು ನರ ವಿಭೀಷಣನ (ಉತ್ತಕ. ೮-೪೭). **೫.** ಯುದ್ಧದಲ್ಲಿ ಒಂದು ವರಸೆ ; (ದೇಹಕ್ಕೆ ಅಪಾಯವಾಗದಂತೆ) ಚಿಮ್ಮುವಿಕೆ : ಜಗದೊಳಾವಭ್ಯಾಸಿಯೋ ತಾಳಿಗೆಯ ತಲ್ಲಣದೊಳಗೆ ನೆಗಹಿನ ಸುಗನ ಸಾಹಸನರರೆ ಮುರುಹು ಭಾಪೆಂದುದುಭಯ ಬಲ (ಕುಪ್ಪಾದ್ರೋ. ೧೩-೧೪).

[<ನೆಗಪು$_1$]

**ನೆಗಪ್ಪು** 'ನೆಗಪು$_1$' ನೋ.

**ನೆಗರ್ತಿ** 'ನೆಗಟಿತ್ತಿ' ನೋ.

**ನೆಗರ್ತೆ** 'ನೆಗಟಿತ್ತೆ' ನೋ.

**ನೆಗರ್ತೆವಡೆ** 'ನೆಗಟಿತ್ತವಡೆ' ನೋ.

**ನೆಗರ್ತೆವೆಱು** 'ನೆಗಟಿತ್ತವೆಱು' ನೋ.

**ನೆಗರ್ದ** 'ನೆಗಟ್$_1$' ಪರಾ.

**ನೆಗರ್ಪು** 'ನೆಗಟ್ಪು' ನೋ.

**ನೆಗಲ** (ನಾ). (?) : ಮೃಗದ ಕೇಳಿಗೆ ಹೋಹ ಠಾವಿಗೆ ನಗಿಸುತಿಹ ತಾಸೊಗಸಿನಾಟಿಕೆ ಪಗಲೆಯಿರುಳೇ ಹೋಗಿ ಬಾಹ ಗೋಪಾಗಿಯಿರುತಿಪ್ಪ ಬಗೆಯುಲವರಿಗೆ ಅಂಗಸಂಗವು ಪುಗದೆ ಮೋಹವು ನೆಗಲವಾದುದು ಜಗದೊಳಗೆಯೆ ಅಭ್ಯಾಸಿಕೊಂಬರು ರಾಯ ಕೇಳೆಂದಾ (ಕಕ್ಕೋಕ. ೮-೭).

[ ? ]

**ನೆಗವು** 'ನೆಗಪು$_1$' ನೋ.

**ನೆಗಹು$_1$** 'ನೆಗಪು$_1$' ನೋ.

**ನೆಗಹು$_2$** 'ನೆಗಪು$_2$' ನೋ.

**ನೆಗಹುಗೈ** (ನಾ). ಮೇಲಕ್ಕೆತ್ತಿದ ಕೈ ; ಎತ್ತಿದ ಹಸ್ತ : ಖಳರು ನೆರೆದುದು ಜಡಿವ ಖಡ್ಗದ ನೆಗಹುಗೈಗಳಲಿ (ಅಂಬಿಕಾ. ೧೯-೩೩).

[ನೆಗಹು$_1$ (<ನೆಗಪು$_1$) + ಕೈ$_2$ (<ಕೆಯ್$_2$)]

**ನೆಗಹುಥಾಣೆ** (ನಾ). ಎತ್ತಿ ಹಿಡಿದ ಗದೆ ; ಮೇಲಕ್ಕೆತ್ತಿರುವ ಥಾಣೆ : ದೈತ್ಯರ ನೆರವಿಯುಂದಿಸಿತು ಕೋಟಿಸಂಖ್ಯೆಯು ನೆಗಹುಥಾಣೆಯಲಿ (ಅಂಬಿಕಾ. ೪೨-೩೬). [ನೆಗಹು$_1$ (<ನೆಗಪು$_1$)+ಥಾಣೆ$_1$]

**ನೆಗಹುಹತ್ತ** (ನಾ). = ನೆಗಹುಗೈ : ಮುದದುಬ್ಬುಗೊಬ್ಬಿನ ಶೂಲಸಬಳದ ನೆಗಹುಹತ್ತ ಕರಾಳರಕ್ಕಸರಮವು ನಡೆದುದು ನಡುಗಲಬುಜಭವ (ಅಂಬಿಕಾ. ೮-೫೩). [ನೆಗಹು$_1$(<ನೆಗಪು$_1$)+ಹತ್ತ$_2$]

**ನೆಗಳ್$_1$** 'ನೆಗಟ್$_1$' ನೋ.

**ನೆಗಳ್$_2$** 'ನೆಗಟ್$_3$' ನೋ.

**ನೆಗಳಿಕೆ** 'ನೆಗಟಿಕ್ಕೆ' ನೋ.

**ನೆಗಳಿಚು** 'ನೆಗಟ್ಚು' ನೋ.

**ನೆಗಳಿಸು** 'ನೆಗಟಿಸು' ನೋ.

**ನೆಗಳು$_1$** 'ನೆಗಟು$_1$' ನೋ.

**ನೆಗಳು$_2$** 'ನೆಗಟು$_3$' ನೋ.

**ನೆಗಳೆ** 'ನೆಗಟ್$_3$' ನೋ.

**ನೆಗಳ್ಚಿಸು** (ಕ್ರಿ). **೧.** ಮಾಡಿಸು ; ಆಗುವಂತೆ ಮಾಡು : ಎನ್ನಜ್ಞತೆಯಿನೆಸಗಿದೆಲ್ಲವಂ ಕ್ಷಮಿಸಿ ಮೇಣೆನ್ನಿತ್ತಲೆನ್ನಯ ಮನವನಹಂಕಾರಯುತಮಂ ನೆಗಳ್ಚಿಸದೆ . . . ಭೃತ್ಯನೆಂದು ಪೊರೆ (ಪದ್ಮರಾ. ೧೧-೭೮) ; ಚದುರ ದಕ್ಷಿಣನಾಯಕಂ ಪೊರೆಯೊಳಿರ್ದ ಸಖಿಯಧರಮಂ ಚುಂಬಿಸುತೆ ಸೀತ್ಕೃತಂಗೇಳದಂದದೊಳವಳ ವಲಯರವಮಂ ನೆಗಳ್ಚಿಸಿದನೆತ್ತಿದ ಚಂದ್ರಶಾಲೆಯೊಳಗೆ (ಚಿಬಪು. ೧೦-೨೭). **೨.** ಕಟ್ಟಿಸು ; ನಿರ್ಮಿಸು : ನೀನೊಂದು ಕೆಱೆಯಂ ನೆಗಳ್ಚಿಸುವುದು (ಪದ್ಮರಾ. ೫-೩೯).

[ನೆಗಳ್ಚು(<ನೆಗಟ್ಚು) + –ಇಸು$_3$]

**ನೆಗಳ್ಚು** 'ನೆಗಟ್ಚು' ನೋ.

**ನೆಗಳ್ತೆ** 'ನೆಗಟಿತ್ತೆ' ನೋ.

**ನೆಗಳ್ತೆವಡೆ** 'ನೆಗಟಿತ್ತವಡೆ' ನೋ.

**ನೆಗಳ್ತೆವೆಱು** 'ನೆಗಟಿತ್ತವೆಱು' ನೋ.

**ನೆಗಳ್ದೇರ** 'ನೆಗಟಿದ್ದೇರ' ನೋ.

**ನೆಗಳ್ವಾಯಿ** (ನಾ). **೧.** ಮೊಸಳೆಯ ಬಾಯಿ. **೨.** ಮೊಸಳೆಯ ಬಾಯಿಯಂತಹ ಅಲಂಕರಣ ; ಮಕರತೋರಣ : ಚಾಮಾಕರ

ಲಾಂಛನಲಾಂಛಿತಮಾದ ನೆಗಳ್ವಾಯಿಗಳಿಂ ವಿರಾಜಿಸುತ್ತಿರ್ಪ ಪೊಸಪಲ್ಲಕ್ಕಿಯಿಕ್ಕಿ ನಿಜನಿವಾಸಕ್ಕೆ ಕಳುಪಿ (ಕಳನ್ಯ. ೧-೯೪).

[ನೆಗಳ್$_2$(<ನೆಗೞ್$_3$)+ಬಾಯಿ$_1$(<ಬಾಯ್)]

**ನೆಗೞ್**$_1$, **ನೆಗಳ್**$_1$, **ನೆಗಳು**$_1$ (ಕ್ರಿ). ನೆಗರ್ದ (ಭೂತಕೃ). ೧. ಇರು ; ನೆಲಸು : ಪಾೞಿಯ ಬಟ್ಟೆದಪ್ಪಿ ಮುಂ ನೆಗೞ್ದೆಡೆಯಿಲ್ಲ ಪೋಗು ಜಯಮಕ್ಕೆ ಶುಭಂ ನಿಮಗಕ್ಕೆ ಮಂಗಳಂ (ಪಂಪಭಾ. ೭-೨೧); ಘನಪಥದೊಳಿಲ್ಲ ದೆಸೆಯೊಳಮೆನಿತಾನುಂ ತೆಱದ ರೂಪಮಂ ತಳೆದುಲ್ಲಾಶನಿವಿದ್ಯುತ್ತಾರಾವಿಷ್ಣುನಾಮದಿಂದುಟ್ಟುಮಯ್ದು ತೆಱದೊಳ್ ನೆಗೞ್ಗುಂ (ಲೋಕೋಪ. ೪-೧೮). ೨. ತೊಡಗು ; ಕೈಗೊಳ್ಳು : ಸಂದ ಚಕ್ರಿಗಳೆಸಕಂ ದೇವ ನಿನಗೆಸಕಮದಱೊಳೆ ದೇವರ್ ನೆಗೞಲ್ಕೆವೇೞ್ಕುಂ (ಆದಿಪು. ೧೨-೭೩); ಶ್ರೀವರ್ಮಂ ಯುಗಂಧರತೀರ್ಥಂಕರರ ಪಕ್ಕದೆ . . . ಜಿನರೂಪಮಂ ಕೈಕೊಂಡು ಸರ್ವತೋಭದ್ರಸಿಂಹವಿಕ್ರೀಡಿತಮೆಂಬ ತಪದೊಳ್ ನೆಗೞ್ದು (ಚಾವುಂಪು. ೨೦) ; ಕರಗುವ ಮುಗಿಲಂ ಕೆನ್ನೆಯ ನರೆಯಂ ಕಂಡನಿತಱಂ ಕೆಲರ್ ಪರಮತಪೋಭರದೊಳ್ ಭರದೊಳ್ ನೆಗೞಲ್[ಪಾಠಾಂ. ೞ್ವರ್]ಗುರುಬಂಧುಪ್ರಿಯವಿಯೋಗಮಂ ಕಂಡು ಕೆಲರ್ (ಅಜಿಪು. ೨-೮೪) ; ಪನ್ನಿರ್ತೆಱದ ತಪದೊಳುತ್ತರೋತ್ತರಂ ನೆಗೞ್ದು . . . ತ್ರಿಲೋಕಶಿಖರಿಶೇಖರನಾದಂ (ಧರ್ಮಾಮೃ. ೨-೨೩೮) ; ಆಗಳಾನ್ ನೆಲಮುಗಿಲ ಮಕ್ಕಳಾ ದೈತ್ಯರನ್ ನಲ್ನುಡಿದು ನಡಪಲ್ಕೆ ನೆಗೞ್ದೆನ್ (ಬದ್ಧಪ್ರ. ೧೨-೨೪೮). ೩. ಮಾಡು ; ಆಚರಿಸು : "ನೆಗೞ್–ಉದ್ಯೋಗ, ಖ್ಯಾತಯೋಃ, ನಕ್ರೇ ಚ (ಮೊಸಳೆ)" (ಶಮಧಾ); ಅವರಾ ರೂಪಿನೊಳದಂ ನೆಗೞಲಂಜಿ ವಲ್ಕಲವಸನರುಂ . . . ಪರಿವ್ರಾಜಕರುಮಾಗಿ ತಮಗೆ ತಾವೇ ವನಪ್ರವೇಶಮಂ ಮಾಡಿ (ಆದಿಪು. ೯-೯೩ ಪ); ಆವ ಕಾರ್ಯಮುಮಂ ವಿಚಾರಪೂರ್ವಕಮಲ್ಲದೆ ನೆಗೞಲಾಗದೆಂಬುದನಱಿಪುವುದು ಪರೀಕ್ಷೆಯೆಂಬುದು (ಪಂಚತಂ. ೨೧-೧); ಮಿತ್ರವರ್ಗಮೇನೆಂದೊಡಮೆಂದುದಂ ನೆಗೞುದುದ್ಧತಿಯಿಂದಮವಂದಿರುರ್ಕಿ ದಕ್ಕುಂದಲೆವಾಯ್ವರ್ (ಸುಕುಮಾ. ೨-೮) ; ಪಿರಿಯರ್ ಮುಂ ನೆಗೞ್ದುದದಿಂ ನೆಗೞವೇೞ್ಕುಂ ತತ್ಪರಂಗೆಂಬರೆಲ್ಲರುಂ (ಸಮಪ. ೧೦-೧೭೦) ; ಅಮ್ಮಱಿದೊರ್ಮೆಯುಂ ನಿನಗೆಯಪ್ರಿಯಮಂ ನೆಗೞೆಂ (ಚಂದ್ರಪು. ೩-೭೨). ೪. ನಡೆದುಕೊಳ್ಳು ; ವ್ಯವಹರಿಸು ; ವರ್ತಿಸು : ಮಿಗೆ ಪೞವರೆನ್ನನೆನ್ನದೆ ಪೊಗೞ್ವರ್ ನೆರೆದೆಲ್ಲರೆನ್ನನೆನ್ನದೆ ತನ್ನೊಳ್ ಬಗೆದುಭಯಲೋಕಹಿತದೊಳ್ ನೆಗೞ್ಗೆ ಜನಂ ಪೞಗೆ ಪೊಗೞ್ಗೆ ತನಗೇನದಱೊಳ್ (ಕವಿರಾ. ೩-೧೭೯) ; ಜನಕಜೆಯನ್ತೆ ಪತಿಂಗೆ ನೆಗೞ್ದು ಶೀಲದಿಂ (ಎಕ. XIV, ಎಡತೊ. ೩೧-೩ ; ಸು. 900) ; ನಿನ್ನಳವಿಗಳವನಱಿಯದೆ ನೆಗೞ್ದೈ (ಪಂಪಭಾ. ೬-೫೨) ; ಅರಸನನಾಂ ಕಂಡಱಿಯೆಂ ಪರಿಚಯಮಿಲ್ಲೆನ್ನೊಳೆಂದು ಮಿಗೆ ತಾಂ ನಾಣ್ಚುತ್ತಿರದಿಂವೆನ್ನೊಳದೆಂತಂತಿರೆ ನೀಂ ನೆಗೞ್ವುದು ನಿರಂತರಂ ಕಮಲಮುಖೀ (ಕಾದಂಬ. ೪೨) ; ತನ್ನೊಂದು ದುರ್ನಯದಿಂದಂ ನೆಗೞ್ದೆಯ್ದಿ [ಪಾಠಾಂ. ೞ್ದೀಕೆ] ಕೆಟ್ಟನಧಿಕಂ ದುರ್ಬುದ್ಧಿ ದುರ್ಯೋಧನಂ (ಪಂಚತಂ. ೧೭-೨) ; ಪೊಲೆಯರ ತೆಱದಿಂ ನೆಗೞ್ದುಂ ಕುಲನಾಶನಕ್ಕೆ ತನುಜನಾದಡೆ ಸಾಲ್ಗುಂ (ಸಮಪ. ೫-೧೦೧). ೫. ಉಂಟಾಗು ; ಮೈದಳೆ ; ಸಂಭವಿಸು ; ಮೂಡು : ಪರಮಾಲಂಕಾರೋಚಿತ ವಿರಚನೆಗಳ್ ನೆಗೞ್ಗುಮಾರ ವದನೋದರದೊಳ್ ನೆರಮಕ್ಕಾ ಪರಮಕವೀಶ್ವರರೆಮಗೀ ಕೃತಿಯೊಳಕೃತಕಾಚಾರಪರರ್ (ಕವಿರಾ. ೧-೪) ; ನೆಗೞ್ ನಿಜಪ್ರತಿಬಿಂಬಂ ನೆಗೞ್ದರಸುಗಳುರದೊಳೆಸೆವ ಹಾರಮಣಿದ್ಯೋತಿಗಳೊಳವರೆರ್ದೆಯನಲ್ಲಿಂ ಪುಗುವುದನನುಕರಿಸಿ ರಂಗದೊಳ್ ಸೊಗಯಿಸಿದಳ್ (ಆದಿಪು. ೯-೨೨) ; ಶಂಖರವಂ ನಿನ್ನೆಂದಂತೆ ನಿರುತಮೆಂಬೊಂದಂದದಿನೊಡನೊಡನೆ ನೆಗೞ್ ಪೊಗೞ್ ಜಗಂಗಳ್ (ಶಾಂತಿಪು. ೩-೧೧೧) ; ಜಾಡ್ಯ ವ್ಯವಹಾರಂ ಪಿಂಗಿ ತವಿಮ್ಮಿಂ ನೆಗೞ್ ಸುಖಮಯಂ ಸೃಷ್ಟಿ (ಮಲ್ಲಿಪು. ೧-೨೩) ; ನೆಗೞ್ದು ಪೊಲ್ಲಮೆಗೆ ತದೀಯಾಂಬುಜಪದಮಂ ತನ್ನ ಶಿರೋಂಬುಜದಿಂದರ್ಚಿಸಲ್ ಪರಿಚ್ಛೇದಿಸಿದಂ (ಯಶೋಚ. ೪-೫೩) ; ಯುಗಳಾರ್ಥದ ಬಹುವಚನಕ್ಕೊಗೆತಂದಾವಿಷ್ಟಲಿಂಗದೆಡೆಗೇಕತ್ವಂ ನೆಗೞ್ಗುಂ (ಶಮದ. ೧೪೪). ೬. ಬಳಕೆಯಲ್ಲಿರು; ಚಾಲ್ತಿಗೆ ಬರು: ಮೃಗಪಶುಶಕುನಿಗಣಂಗಳೊಳಗಣಿತ ನಿಜಜಾತಿಜನಿತಭಾಷೆಗಳೆಂದುಂ ನೆಗೞ್ದಂತಿರೆ ನರರೊಳಮಪ್ರಗಲ್ಭ ವಚನಪ್ರವೃತ್ತಿ ನೆಗೞ್ಗುಂ ಸಹಜಂ (ಕವಿರಾ. ೧-೭). ೭. ಪ್ರಾಪ್ತವಾಗು ; ಲಭಿಸು : ನೆಗೞ್ದ್ದೊಂದು ತುತ್ತಿನುಣಿಸಿನೊಳಗುೞಿದೊಂದಪ್ಪಿ ನೆಗವಿೞಿಪಿ ತತ್ಕ್ರಮದಿಂದಾವಗವೇಱ ಪೆರಡನೆಯ ತಪವೊಗೆದುದು (ಶಾಂತೀಶ್ವ. ೧೩-೯೫). ೮. ತಯಾರುಮಾಡು ; ಸಿದ್ಧಮಾಡು : (ಕಿ). ೯. ಲೋಕೋತ್ತರವಾಗು : ನೆಗೞ್ದೈರಾವತದಂತಿಗಾಡುದು ಮೊಗಂ ಮೂವತ್ತೆರೞ್ (ಆದಿಪು. ೭-೫೩). ೧೦. ಹೆಸರುವಾಸಿಯಾಗು ; ಪ್ರಸಿದ್ಧಿ ಪಡೆ ; ಕೀರ್ತಿಹೊಂದು ; ವಿಖ್ಯಾತವಾಗು : "ನೆಗೞ್—ಉದ್ಯೋಗ, ಖ್ಯಾತಯೋಃ, ನಕ್ರೇ ಚ (ಮೊಸಳೆ)" (ಶಮಧಾ) ; ಮಾಸರ ಜಕ್ಕಯ್ಯನೀಶ್ವರಗತಿಬಕ್ತ ××× ನೊಳಗೆ ನೆಗೞ್ದ ದೇಗುಲ (ಎಕ. VIII, ನಗರ. ೬೨-೫ ; ಸು. 800) ; ನೆಗೞ್ದರ್ದ ಕನ್ನಡಂಗಳೊಳ ಗಣಿತಗುಣವಿದಿತ ಸಂಸ್ಕೃತೋಕ್ತಕ್ರಮಮಂ ಬಗೆದು (ಕವಿರಾ. ೧-೫೭); ನಿನ್ನ ಕಲ್ತ ವಿದ್ಯೆಯುಂ ಪಂಡಿತಿಕ್ಕೆಯುಮನಾ ಪೊೞಲೊಳ್ ನೆಗೞ್ಚ ನೆಗೞ್ದ ಪಂಡಿತರ್ಕಳೊಡನೆ ವಾದಂಗೆಯ್ದುವರಂ ಗೆಲ್ದು . . . ಬಂದೊಡೆ (ವಡ್ಡಾರಾ. ೭೪-೧೪) ; ನೆಗೞ್ದರಿಗನ ಸಾಹಸಮೊರ್ಮೆಗೊರ್ಮೆ ಕೆಲದವರ ಮಾತಿನೊಳ್ ತನ್ನ ಮನಂ[ಬು]ಗೆ . . . ತಲೆಗರೆದಿರ್ಪಂ (ಪಂಪಭಾ. ೭-೪೩) ; ನೆಗೞ್ದುದು ರಾಮಾಯಣಮುಂ ನೆಗೞ್ದುದು ಭಾರತಮುಮಾ ಮಹಾಕವಿಗಳಿನಾ [ನೆಗೞ್ದರ್ ವ್ಯಾಸರ್ ವಾಲ್ಮೀ]ಕಿಗಳೆನೆ ನೆಗೞ್ದುಭಯಕವಿಗಳೆ ಮಗಭಿವಂದ್ಯರ್ (ಗದಾಯು. ೧-೮) ; ವಿಷ್ಣುಗಗ್ರಸತಿಯೆನೆ ನೆಗೞ್ದಳ್ (ಎಕ. VII, ಶಿಮೊ. ೬೪-೧೮ ; 1112 ?) ; ನೆಗೞ್ದರ್ದಾದಿತ್ಯನಾಯಕ[ಂ] ನುದಾತ್ತರತ್ನನಾಯಕನೆಸೆದಂ (ಕಇಅ. ೭೫-೧೨-೩೪ ; 1170). **ನೆಗಳ್**$_1$: ೩. ಒಂದೊಂದಷ್ಟೋಪವಾಸದಿಂ ಕಾಯೋತ್ಸರ್ಗಂ ದಲೆನೆ ನೆಗಳ್ದು (ಎಕ. II, ೬೯-೧೬ ; 1100) ; ಸೊಂಪಗ್ಗಳಿಸೆ ಸಮ್ಮದವಡಸಿ ಪರಿಣಯಮಂ ನೆಗಳ್ದು ಸಮಾಪ್ತಿಯಂ ಮಾಡಿ (ಬಸವು. ೩೨-೩೯) ; ಶಿವಪೂಜೆಯಂ ನೆಗಳ್ವ . . . ತಾಪಸರ್ ಮೆಱೆದರ್ (ಪದ್ಮರಾ. ೧೩-೩೨) ; ಕೌರವರು ಬಹಳಾವಮಾನವನೆಮಗೆ ನೆಗಳಿದರು (ಕುವ್ಯಾಭೀ. ೨-೨೪) ; ಅಕಟಾ ನೆಗಳಲಹುದೇ ಪುರುಷಸಂಗವನೆಂದಳಾ ಜನನಿ(ಪ್ರಭುಲೀ. ೫-೫೬); ಬೆಸಸಿದ ಕಜ್ಜಮಂ ನೆಗಳದುತ್ತರವಿತ್ತಪನೆಂದು ನಿನ್ನ ಮಾನಸದೊಳಧೀಶ ನೀಂ ಬಗೆಯದಿರ್ (ರಾಜಶೇ. ೧೩-೪) ; ಘನಮುಹಿಮನನಲ್ಲಿಂದಲೇಳಿಸಲೊಂದನುವ ನೆಗಳ್ದರೇವೇಳ್ಕೆ (ಕಂಸವಿ. ೫-೧೪). ೫. ಮಧ್ಯಂದಿನ ಸಮಯೋದಿತ ಡಿಂಡಿಮಧ್ವಾನಂ ನೆಗಳೆ ಪೇರೋಲಗಮಂ ಪರೆಯುವೇಳ್ದಲ್ಲರಂ ಕಳುಪಿ . . . ತನ್ನ ಮಹಮನೆಗೆ ಬಪ್ಪಲ್ಲಿ (ಬಸರ. ೬-೩೬) ; ಭುರ್ ಭುಗಿಲೆಂಬಿನಂ ನೆಗಳ್ದ ನೇತ್ರಜ್ವಾಲೆಯಿಂ ತೊಟ್ಟೆನೋವದೆ ಸುಟ್ಟಂ ಮದನಾರಿ (ಪಂಪಾಶ. ೪೦) ; ಪರಮಶಿವನಿಷ್ಠಂ ವಸಿಷ್ಠನತಿಕರುಣದಿಂದರರೆ ವಿಶ್ವಾಮಿತ್ರಭೂಪನಂ ಬ್ರಹ್ಮರ್ಷಿವರನೆನಲ್ ನೆಗಳ್ದುದಿಲ್ಲಾ (ಪದ್ಮರಾ. ೪-೫೧) ; ಈ ನೆಗಳಿದುತ್ಪಾತಶಾಂತಿವಿಧಾನವೇನೆನೆ ಕೃಷ್ಣಚೇಷ್ಟೆಯೆ ಹಾನಿವೃದ್ಧಿವಿನಾಶವಭ್ಯುದಯ ಪ್ರಪಂಚದಲಿ (ಕುವ್ಯಾಸ. ೧೦-೭೪) ; ಅನಿಲಂ ಮುಗಿಲಂ ಕನಲ್ದು ಪೊಯ್ದನ್ನೆಗಳಲ್ ಘನಧ್ವನಿ (ರಾಜಶೇ. ೮-೧೧೬) ; ಆ ಮರುತ್ತಂಗೆ ಸಂತೋಷಂ ನೆಗಳ್ದುದು (ಜೈಮಿಭಾ. ೫-೪೫). ೭. ಮಿಗೆ ಗುರೋರಧಿಗತಂ ಜ್ಞಾನಂಯೆನುತಿದೆ ತೊಟ್ಟುಗೆ ವಾಯುತಂತ್ರಂ ಸ ಏವ ಸರ್ವಯೆನುತ್ತೆ ನೆಗಳ್ದ ಕಾರಣ

ಮೆಸುತ್ತಿದೆ ಸೂತಗೀತಿ ಪಲವೇಂ ಗುರುವೆ ಸೇವ್ಯನೆಂತುಂ (ಪದ್ಮರಾ. ೧೧-೧೦೩). **೧೦.** ತಂನಾಜ್ಞೆ ತಂನ ತೇಜಂ ತಂನುಂನತಿ ನೆಗಳೆ . . . ಪೆರ್ಮಾಡಿರಾಯನೆಸೆದಂ ಜಗದೊಳ್ (ಸೌಇಇ. XI–ii, ೧೧೯-೮ ; 948) ; ನೆಗಳ್ದಾಹವಮಲ್ಲಾವನಿಪನ ಭುಜಯುಗಳಮೆನಿಸಿದರ್ . . . ನಾಗವರ್ಮ್ಮನುಂ ಮಾಧವನುಂ (ನಾಂದೇಹ್. ೩-೬ ; 1047) ; ವಿಷ್ಣು ವರ್ಧನಭೂಪಂ ನೆಗಳ್ದಂ ಧರಾವಳೆಯುದೊಳ್ (ಎಕ. II, ೧೪೩-೧೬ ; 1131) ; ಶಿವಸೌಖ್ಯಂ ನಂಬಿಯಣ್ಣಂ ಶಿಶುವೆನೆ ನೆಗಳ್ದಂ ಶ್ರೀವಿರೂಪಾಕ್ಷ ಕಂದಂ (ನಂಬಿರ. ೨ ಸೂಚನೆ) ; ನೆಗಳ್ದ ದೇಶೀಗಣವಿಜಯಕೀರ್ತಿಗಳ ತನುಜರ ಜಾತರೂಪರ . . .ಪದಯುಗಕೆ ಭಕ್ತಿಯೊಳೆಱಪೆನು (ಸಾಳ್ವಭಾ. ೧-೨೦) ; ದುರ್ಧರ ಗ್ರೀಷ್ಮರಾಜನ ನೆಗಳ್ದ ಚತುರಂಗಮೆನಲು ರವಿಯ ಕಡುಗಾಯ್ಪುಗಳ್ತೀರ್ರೈಸಲು (ಜೈಮಿಭಾ. ೧೫-೪). **೧೧.** ರಚಿಸು ; ಕಟ್ಟು ; ನಿರ್ಮಾಣ ಮಾಡು : ಸಾರತರ ಬಸವರಾಜೀಯುಮಂ ನೆಗಳ್ದ ಪಾಲ್ಕುಱಿಕೆ ಸೋಮೇಶ್ವರಂಗೆ ವಂದಿಸಿದಪೆಂ (ಪದ್ಮರಾ. ೧-೧೨) ; ರಗಳೆಯ ಕವಿಯೆಂದು ತೆಗಳೆ ವಾದಿಗಳೆಲ್ಲ ಸೊಗಸೊಗುವಂತೆ ವಸ್ತುಕವ ನೆಗಳಿದ ಹಂಪೆಯ ಹರಿಯಣ್ಣನ ಪದಯುಗಳಕೆಱಗುವೆನಳ್ತಿಯೊಳು (ಕುಂಾಸಾಂ. ೧-೩೪) ; ಪಳಿಯಲ್ ಬಲ್ಲಂ ನೆಗಳಲ್ ಖಳನೇಂ ಬಲ್ಲನೆ ನವೀನಕಾವ್ಯಮನಿಳೆಯೊಳ್ (ರಾಜಶೇ.೧-೪೮). **೧೨. ಉಂಟುಮಾಡು; ಒದಗಿಸು :** ಚತುಸ್ಸಮುದ್ರಾಂತಮಾಗೆನಗೆ ಕೀರ್ತಿಪ್ರತಾಪಂಗಳಂ ನೆಗಳುತೀ ಘನಭಾರಮಂ ಆಂತೆಮ್ಮನುಂಟುಮಾಡೆಂದು . . . ದಂಡೇಶ ಪಟ್ಟಮಂ ಕಟ್ಟೆ (ಪದ್ಮರಾ.೪-೧೦). **೧೩. ತೋರಿಸು; ನಿರ್ದೇಶಿಸು :** ಮತ್ತೆ ಪಾದದೊಳ್ನೆಗಳ್ದುದಂ ತಲೆಯಲ್ಲಿ ಪೊತ್ತು ಮಾಳ್ಪ ವಿಪುಲ ಸದ್ಭೃತ್ಯಂ (ಪದ್ಮರಾ. ೧೧-೬೬). **ನೆಗಳು$_{1}$ : ೩.** ನಿಮಗೆ ಗಂಗಾಸುತನ ಬಲವಾಹ ವವನೀತನ ನೇಮದಲಿ ನೆಗಳುವುದು ನೀತಿಯಿದು (ಕುಮ್ಯಾಭೀ. ೧-೧೪) ; ಪಗಲಾಣ್ಮ ನಡನಡುಗಿದ ಹುತಾಶನ ಬೇಱಿ ನೆಗಳಿದಪ್ರತಿನಿಶ . . . ಹಿಮದುಪಟಳಕೆ (ಮೋಹತ. ೪-೪೬) ; ಖಗದ ಮಱಿಗಳು ಮಾತೆಯ ಮೇಲೆ ಪ್ರೀತಿಯ ನೆಗಳುವ ಭಾವವ ಕಂಡು (ಕಂಸವಿ. ೪-೪೮) ; **ರೋಗಂಗಳಿಗೆ** ತಕ್ಕ ಚಿಕಿತ್ಸೆಯ ನೆಗಳಲೊಡನಾರೋಗ್ಯಕರಮಾಗಿರ್ಪುದು (ಸಕವೈ.೭). **೫.** ಶ್ರೀವಿವಾಹದ ಸರ್ವಸಂಭ್ರಮಂ ನೆಗಳುತಿರೆ ದೇವನಣುಗಂ ನಂಬಿಯಣ್ಣನಂದೊಪ್ಪುತಿರೆ (ನಂಬಿರ. ೫-೧) ; ಅಭ್ರದಿ ಧೂಮಕೇತುಗಳು ನೆಗಳಿದುವು (ಕುಮ್ಯಾಸ. ೧೫-೪೧); ಕಾಂತೆ ನೋಡಿನ್ನು ಮುಂದೆ ನೆಗಳುವ ನಾಟಕವ (ಸೌಂದಪು. ೪-೬೮). **೧೦.** ಕುಲಸತಿಯರ ಧರ್ಮ ಕೊನೆಱೆ ನೇಹವ ನೆಲೆಗಾಣಿಸಿ ನೆಗಳುವುದು (ಹವಿಬ.೩-೧೦). **೧೪.** ಪ್ರಸಿದ್ಧಗೊಳಿಸು ; ವಿಖ್ಯಾತವಾಗುವಂತೆ ಮಾಡು : ಬಗೆವೊಡೀ ಪರಿ ಭಕ್ತಿ . . . ಪೊಸತೆನುತೆ ಜಗದೊಳಗೆ ನೆಗಳಿ ನಿರ್ವಂಚನೆಯ ಭಕ್ತಿಯ ಮೊಗದು ಗಣತಿಂತಿಣಿಗಳಿರ್ದರು . . . ನಿರ್ಮಳಭಾವಶುದ್ಧಿಯಲಿ(ಪ್ರಭುಲೀ. ೯-೩೦). **೧೫.** ಎತ್ತು; ನೀಡು : ಕರವ ನೆಟ್ಟನೇ ಊರ್ಧ್ವಕ್ಕೆ ನೆಗಳಿ ಸಮುಖದಿ ನಿಂದು ಭಟ್ಟನಾಯಕರು ಶತ್ರುಗಳಿದೆಯು ಬಿಚ್ಚು ಪೋಲ್ ಪೊಗಳುತಿರ್ದರು ವಲವಿನಿಂ (ನಪಮೋ.೨೭-೪೬). **೧೬.** ಕಳೆ (?): ಸೋಂಕುಸೋಂಕಿನಲಿ, ಮುತ್ತು ಮುತ್ತಿನಲಿ ನೆಗಳಿದ ದಿವಗಳನು, ಇಲ್ಲಿ ನೋಡು ಎದೆಯಲ್ಲಿ (ಭಾರಂಗ. ೪೬-೨).

**ನೆಗೞ್ ನುಡಿ** = ಪ್ರಕಟವಾಗಿ ನುಡಿ ; ಪ್ರತಿಜ್ಞೆ ಮಾಡು ; ಶಪಥ ಮಾಡು : ಕಾದುವೆನೆಂದು ನೆಗೞ್ ನುಡಿದ ನುಡಿಯುಮಂ ಪಿಡಿದ ಚಲಮುಮಂ ಬಗೆದು (ಪಂಪಭಾ. ೧೦-೨೬ವ). **ನೆಗೞ್ ಪಡು** = **ಆಚರಿಸಲ್ಪಡು** ; ಮಾಡಲ್ಪಡು : ಚರಮದೇಹಧಾರಿಗಳಿಂದಂ ನೆಗೞ್ **ಪಟ್ಟುದನೊಳ್ಪು** ತಪ್ಪ ಮೋಕ್ಷಮಾರ್ಗಮಂ **ಪೊರ್ದಿಯುಂ** (ವಡ್ಡಾರಾ. ೮೭-೧೩). [**ದೇ.॥ ತಮಿ.** ನಿಕೞ್, ನಿಕಳ್ ; **ತೆಲು.** ನೆಗಡು, ನೆವಡು]

**ನೆಗೞ್$_{2}$** (ನಾ). ಕೀರ್ತಿ ; ಪ್ರಸಿದ್ಧಿ : "ನೆಗೞ್ = ಪ್ರಸಿದ್ಧಿ ; ಚರಿತ್ರಂ ; ಜಲಗ್ರಾಹಂ" (ಶಮದ. ಪರಿ. ೧).

[<ನೆಗೞ್$_{1}$]

**ನೆಗೞ್$_{3}$**, ನೆಗಳ್$_{2}$, ನೆಗಳು$_{2}$, ನೆಗಳೆ (ನಾ). ಒಂದು ಬಗೆಯ ಜಲಚರ; ಮೊಸಳೆ; ನಕ್ರ: ಗಂಗೆಯುಂ ಮಾಯಲ್ಪೋಗಿ ಮಾವಲ್ಲಿ ನೆಗೞ್ ಪಿಡಿದೊಡೆ (ವಡ್ಡಾರಾ.೧೫-೨೧); ನೀರೊಳಗೆ ತನ್ನನಡಸಿದ ನೆಗೞಿಂ ಬಾಯಬಾಯ್ವಿನಮಿಸಿಯುಂ (ಪಂಪಭಾ. ೨-೬೦) ; ಅವೆರಡರ್ಕಂ ನೇಹಮಾಗೆಯಾ ನೆಗೞ್ ತನ್ನ ಮನೆಯಂ ಮಱೆದಲ್ಲಿಯೆ ಸಂತಸಮಿರುತ್ತಿರೆ (ಪಂಚತಂ. ೨೭೭-೨೨) ; ಗಂಗೆಯುಂ ಮಾವಾ[ಗ]ಳ್ ನೆಗೞ್ ಬಂದು ಕಾಲಂ ಪಿಡಿದೊಡೆ (ಸುಕುಮಾ. ೭-೧೬ ವ) ; ಬೆಟ್ಟದಡಿಯಲ್ಲಿರ್ದ ನಿಧಿಯಂತೆ ನೆಗೞುಳ್ಳ ಮಡುವಿನೊಳಿರ್ದ ನಿಕ್ಷೇಪದಂತೆ (ಧರ್ಮಾಮೃ. ೧೩-೧೮೫) ; ನೀರ್ಗುಡಿವೆಡೆಯೊಳ್ ಪೊಳೆವ ತಮ್ಮ ನೆೞಲಂ ಮಾರ್ಪಡೆಯೆಗೆತ್ತು ಎಡೆಮಡಗದೆ ಕಡುಪಿನಿಂ ಪಾಯ್ದು ಬಾಯ್ತೆಱೆದಟ್ಟಿ ನೆಗೞ ಮೊಗದೊಳಿರ್ದಡಂಗುವ ಶಾರ್ದೂಲಸಂದೋಹಂಗಳೊಳಂ (ಚಂದ್ರಪ್ರ. ೫-೪೦ ವ). **ನೆಗಳ್$_{2}$ :** ಜಲನಿಧಿಯ ಮಣಿಗಳ ನೆಗಳ ಭಯಕಂಜಿ **ತಳೆಯುದಿಹರೆ** (ಜೀವಂಚ. ೧-೨೪) ; ನೆಗಳ ಕೊರಳೋ ಹಸಿದ ಹುಲಿಗಳ **ಮೊಗವೊ** (ಕೌಶಿರಾ. ೧-೨೧) ; ನೆಗಳಾನೆ ಮಾನ್ನಳನೊಳಕೊಂಡು ಬಂದು ಪೇರಗಳಾಡುದಬ್ಧಿ ದ್ವಾರಕೆಗೆ (ಮೋಹತ. ೩-೫) ; ಪಡುವಣಂಬುಧಿಯೊಳ್ ಮುಳುಂಗಿದಿನನಂ ನೆಗಳ್ವಿಡಿದು ನುಂಗುಗೆ (ಚಿಬಪು. ೯-೧೧) ; ಗಂಧರ್ವನಂದು ಬಲು ಗರ್ವಿಸೆ ನೆಗಳಾಗೆಂದು ಸುರಪತಿ ಮುಳಿದು ಶಾಪವನಿತ್ತನವಗೆ (ಕಂಸವಿ. ೨೩-೧೦). **ನೆಗಳು$_{2}$ :** "ಶಿಂಶುಮಾರಃ–ನೆಗಳು" (ಸಿದ್ಧಾಂತಿ. ೮೨) ; ತೊಱೆಯೊಳಗಣ ನೆಗಳು ಹಱುಗೋಲ ನುಂಗಿದಡೆ ಗತಿಯಿಲ್ಲ (ಅಪಚಂ. ೮೦-೩೬೦) ; ಪಾತ್ರೆಯಂ ಏನೀ ಪೆಟ್ಟಿಗೆ ತಿಂದಿತೇ ನೆಗಳು ನುಂಗಿತೇ (ತಿರುರ.ದೇ. ೧೩-೯) ; ರಾಜಮರಾಳಮಿಥುನವೆಡೆಯಾಡುವ ರಾಜಾಂಗಣ ನೆಗಳುಗಳು ರಾಜಿಪ ತಾಣವೆಂದೆನಿಸುವ ಸರಸಿಯ ರಾಜತನುಜ ನೋಡಿ ಕಂಡಂ (ಅಂಜಚ. ೭-೧೨೭) ; ಬಳಿಯುಲಬುಧಿಯ ನೆಗಳುಗಳು ಮಾನುಗಳು ನೀರಾನೆಗಳು ಮೊಸಳೆಗಳು ಬೆಗಡುಗೊಂಡೋಡಿದವು (ತೊರರಾ. ೪-೧೨-೩೫) ; ನೆಗಳು ಮಾನ ಕಮಠ ತಂಡತಂಡದೆ ಜಲಚರ ತುಂಬಿ ಕಣ್ಗೆ ಶ್ರೀಖಂಡವಾಗಿರ್ದಳು ಗಂಗೆ (ಮೋಹತ. ೬-೩೬). **ನೆಗಳೆ :** ನೀನು ವರುಣತೀರ್ಥವಾಗಿರಲು ನೆಗಳೆ (ಮೊಸಳೆ) ನಿನ್ನಲ್ಲಿಗೆ ಬರುವುದು ನ್ಯಾಯವಿತ್ತು ; ಈ ಯಮವಾಹನರೇಕೆ ಮೊದಲು ಬಂದರು ? (ಮೈಲಿಮಾ. ೬) ; ಅವರು ಅಲ್ಲಿಗೆ ಹೋಗುವಾಗ ಹಲವಾರು ನೀಗ್ರೋ ಗುಲಾಮರು ನೆಗಳೆಗಳ ಬೇಟೆಯ ಸಿದ್ಧತೆಯಲ್ಲಿದ್ದರು (ಮಾರ್ಟಿನ. ೫೫) ; ಆನೆಗಳಷ್ಟು ದೊಡ್ಡ ನೆಗಳೆಗಳನ್ನು ಯಾರಾದರೂ ನೋಡಿರಬಹುದೋ ? (ಮುಂಬಯಿ. ೬-೨೫೯) ; ನೆಗಳೆ ಹಾರಿದರೆ ಮುಗಿಲು ಮುಟ್ಟೀತೇ ? (ಗಾದೆ).

**ನೆಗಳ ವಾಹನ** = ಮೊಸಳೆಯನ್ನು ವಾಹನವನ್ನಾಗಿ ಉಳ್ಳವನು ; ವರುಣ : ನೆಗಳ ವಾಹನನಿತ್ತ ಮಂತ್ರೋಪದೇಶವದು (ತುರಂಗ. ೫೪-೫೧). **ನೆಗಳ ಸುಂಡಿಲು, ನೆಗಳ ಸೊಂಡಿಲು** = ಮೊಸಳೆಯ ಬಾಯಿಯ ಆಕಾರದ ರೀತಿಯ ಒಂದು ಬಗೆಯ ಅಲಂಕಾರ ; ಮಕರ ತೋರಣ : ಪೊಗಳಲದಾರ ಜಿಹ್ವೆಗೆ ಸಾಧ್ಯ ಮಣಿಹರ್ಮ್ಯಯುಗಳಪಕ್ಷದ ಮುಂಬಿನಲಿ ನೆಗಳ ಸುಂಡಿಲ ತೋರಣ ಗುಡಿ ಬಲು ಕುರುಜುಗಳ ಹೊಂಗೆಲಸದುನ್ನತಿಯ (ಮೋಹತ. ೪೨-೨೫) ; ನೆಗಳ ಸೊಂಡಿಲ ಚಿನ್ನದಣಸಿನ ಪಲ್ಲಕ್ಕಿ . . . ಮುಂತಾದ ವಸ್ತುಗಳನಿತ್ತನು ಕೃಷ್ಣ ಮಗಗೆ (ಮೋಹತ. ೧೫-೨೦)..

[**ದೇ.॥ ತುಳು.** ನೆಗಳ್, ನೆಗರ್, ನಿಗಳ್; **ತೆಲು.** ನೆಗಡು]

**ನೆಗೞಿಸು,** ನೆಗಳಿಸು (ಕ್ರಿ). ೧. ಮಾಡಿಸು ; ಆಗಿಸು : ಮಜ್ಜನ ಭೋಜನಭೂಷಣಂಗಳೆಂಬಿವುಮಂ ಪ್ರಾರ್ಥನೆಗೆಯ್ದು ದೇವ ನಿಚ್ಚಮು ಮನುವಿಸಿ ನೆಗೞ್ವುದು ಪರಿಜನಂ ಮಾನಿನಿಯಾ (ಕಾದಂಪೂ. ೩೪೩) ; ಅನಲಂ ಕಾನನಮಂ ಕಱುತ್ತಡಿಗಿಡಲ್ ಸುಟ್ಟುಂ ಬೞಿಕ್ಕಲ್ಲಿ ನೂತನ ಬೀಜಾಂಕುರವೃದ್ಧಿಯಂ ನೆಗೞ್ಪಂ (ಪುಷ್ಪಪು. ೫-೫೨). ೨. ಆಚರಣೆಗೆ ತೊಡಗಿಸು ; ಆಚರಿಸುವಂತೆ ಮಾಡು : ಅಲಸರಪ್ಪವರ್ ತಮ್ಮ ಮೆಯ್ಯ ಸುಖಕ್ಕೆ ಪಾಪಹೇತುಗಳಪ್ಪ ಕುಧರ್ಮಮಂ ಪೇೞ್ದು ಪೆಱರಂ ಮರುಳ್ಮಾಡಿ ಧರ್ಮಮೆಂದು ನೆಗೞಿಸುವರ್ (ಧರ್ಮಾಮೃ ೪-೩೪). ೩. ಕಾಣುವಂತೆ ಮಾಡು ; ತೋರಿಸು : ಇವಳೊಳ್ ನಿನ್ನ ವಿಜೃಂಭಣವೃತ್ತಿಗಳನ್ನೆಗೞಿಸಿ ಬೆದಱಿಸುವುದಿದೆತ್ತಣ ಬಿನದಂ (ಚಕವಿ. ೬-೨೩೬). ೪. ಪ್ರಸಿದ್ಧಿಪಡಿಸು ; ಹೊಗಳು ; ಕೀರ್ತಿಸು : ಬಿಜ್ಜೆಯ ಬಳದಿಂ ಕವಿಗಳ್ನಿಟ್ಟನೆ ನೆಗೞಿಸೆಯುವನೆ ಗಡಾ ದೇವನೆನಿಸಿ ಜಸಮಂ ಪಡೆಗುಂ (ಚಕವಿ. ೧-೨೨). ೫. ಅಭಿವೃದ್ಧಿ ಮಾಡು ; ಏಳಿಗೆಯಾಗುವಂತೆ ಮಾಡು : ನೆಗೞಿಸೆಮ್ಮ ದೊರೆತನದಿರವಂ (ಚಕವಿ. ೪-೧೬೭). **ನೆಗಳಿಸು :** ೪. ನಿರ್ಮಲಸತಿಯರ ಧರ್ಮವ ಕೃತಿಯಾಗಿ ನಿರ್ಮಿಸಿ ನೆಗಳಿಪೆ[ಪಾಠಾಂ. ಕೇಳಿಪೆ]ನಿಂದು (ಹದಿಬ. ೧-೮). ೫. ಪೊಗಳಿಸಲು ನೆಗಳಿಸಲು ರೂಢಿಸಲು ನಿಜಕೀರ್ತಿಯಂ . . . ಇಳೆಗೆ ಬಂದ ಮಹಾಮಹಿಮ (ಬಸವು. ೩೬-೪೨). ೬. ವರ್ತಿಸು ; ನಡೆದುಕೊಳ್ಳು : ಅವರು ರಕ್ಕಸರಾಗಿ ಜನಿಸಿದರವನಿಯೊಳು ನೆಗಳಿಸಿ ನಡದರು ದಿವಿಜದಲ್ಲಣರಾಗಿ (ಉತ್ತ.ಕ. ೫-೭). [ನೆಗೞ್$_1$ + -ಇಸು$_3$]

**ನೆಗೞ್ಕೆ,** ನೆಗಳಿಕೆ (ನಾ). ೧. ನಡೆದುದು ; ವಿದ್ಯಮಾನ ; ಸಂಗತಿ: ನಿನ್ನನ್ ನೆಗೞ್ಕೆಯಿನ್ ಪೊಱಗಿಟ್ಟು ಸುತ್ತುಗಾಪಿಡುವರ್ (ಅಂತಿಗೊ. ೧೧-೨೨೩). ೨. ನಡವಳಿಕೆ ; ಇರಸರಿಕೆ ; ವರ್ತನೆ : ಇಂತಾಗೆ ನಲ್ಲುವರಿಯ ನೆಗೞ್ಕೆಯಂ ಕರಮೊಲ್ದು ಬಂದಾ ಮುನಿಯಂ ಪೊಗೞ್ದು ಪಾಡಿದಂ (ರಾಮಾಶ್ವ. ೭೦-೬). **ನೆಗಳಿಕೆ :** ೩. ಪ್ರಸಿದ್ಧಿ ; ಖ್ಯಾತಿ : ಹರಿ ದನುಜದಲ್ಲಣನೆನಿಪ್ಪ ನೆಗಳಿಕೆಯನಾಂತಂ (ಲಶಿಚಂ. ೧೮-೩೨) ; ಅರರೆ ಜಂಗಮಗಿರಿಯೊ ಜವನುಬ್ಬರದ ಜಾತ್ರೆಯೊ ವಿಲಯವಹ್ನಿಯ ನೆರವಿಯೋ ನೆಗಳಿಕೆಯ ಬಲವೋ ಕಾಲಭೈರವನ (ತೊರರಾ. ೪-೭-೮). ೪. ಹಿರಿಮೆ ; ಹಿರಿತನ : ಪೊಗಳಲಾರೆನು ನಿನ್ನ ಚರಿತೆಯ ನೆಗಳಿಕೆಯಯೆನಗೆಂತು ಗೋಚರಿಸಿದೆ ಮಹಾದೇವ (ಕೃಕರ್ಣಾ. ೧-೨೯). ೫. ಕೈಚಳಕ ; ಮಾಟ : ಗಗನಕುಸುಮದಂತೆ ಶುಕ್ತಿರಜತದಂತೆ ಮಿಗೆಯಾತ್ಮನಂತಿಂದ್ರಜಾಲದ ನೆಗಳಿಕೆಯೆಂತೆಂದು (ಪರಬೋ. ೪-೯-೮). [ನೆಗೞ್$_1$ + -ಕೆ]

**ನೆಗೞ್ಚು,** ನೆಗಳಿಚು, ನೆಗಳ್ಚು (ಕ್ರಿ). ೧. ತೊಡಗು ; ಕೈಗೊಳ್ಳು ; ನಡೆಸು : ಒಲವಿಂ ನೆಟ್ಟನುಪವಲ್ಲಭನೊಳಳವಟ್ಟಂಗಜಕೇಳಿಯಂ ನೆಗೞ್ಚಿದಳೊರ್ವಳ್ (ಉದ್ಭಟ. ೧೦-೧೧೧). ೨. ಮಾಡು ; ನೆರವೇರಿಸು : ಮಹಾದಾನಮಂ ನೆಗೞ್ಚಿಯುಂ ಅನೇಕರತ್ನಪ್ರತಿಮೆಗಳಂ ಮಾಡಿಸಿಯುಂ (ಅಜಿಪು. ೯-೩ ವ) ; ಸೌಂದರವತಿಗೆ ಶಿಶಿರೋಪಚಾರಮನಗಲದೆ ನೆಗೞ್ಚುತುಂ (ಉದ್ಭಟ. ೭-೬೪ ವ). ೩. ಮಾಡಿಸು : ಉತ್ಸವಮಂ ನೆಗೞ್ಚಿದಂ (ಕಾದಂಪೂ. ೪೨೯). ೪. ನಡೆದುಕೊಳ್ಳು ; ವರ್ತಿಸು ; ವ್ಯವಹರಿಸು : ಅಂತು ಪಾಂಡುರಾಜನಧಿಕತೇಜನುಮವನತವೈರಿಭೂಭೃತ್ಸಮಾಜನುಮಾಗಿ ನೆಗೞ್ಚುತಿ[ಪಾಠಾಂ. ೞುತ್ತಿ]ರ್ದು (ಪಂಪಭಾ. ೧-೧೧೦ ವ) ; ಮತ್ತೊರ್ವಳ್ ತಾನೊಲ್ದುಮೊಲ್ಲದಂತವನೊಳ್ ನೆಗೞ್ಚುವ ಮಗಳಣಕಕ್ಕೆ ತಲೆ ಕಣಕಣಿಸೆ (ಚಂದ್ರಪು. ೮-೬೨ ವ). ೫. ಉಂಟುಮಾಡು ; ಒದಗಿಸು : ಆನಿಂದರಿವೆಂ ವಿರೋಧಿಗಳಮಂಗಳಮಂ ನೆಗೞ್ಚುವೆಂ (ಜಗವಿ. ೧೭-೩೩) ; ಕುದುರೆಯ ತಟ್ಟುಗಳ್ ನೆರೆದ ಬಲ್ದೆರೆಯಂ. . .ಪೊಸತೇರ್ ಪಡಗಂ ನೆಗೞ್ಚೆ ಪೆರ್ಚಿದ ಕಡಲೆಂಬಿನಂ ಮಸಗಿ ಬಂದುದು ಪೆರ್ಬಡೆ ಕರ್ಬುವಿಲ್ಲನಾ (ಕಬ್ಬಿಕಾ. ೨೦೭) ; ಭೂನಾಥ ನೀನುಮೊಲವಿಂದಾ ನೆರವಿಯೊಳಱಿಯದಂತು ಬಂದಿರ್ಪುದು ಮತ್ತಾ ನಾಗಳೇನನೆಸಗುವೆನೇನತಿಶಯಮಂ ನೆಗೞ್ಚುವೆಂ ನೀ ಕಾಣ್ಬೈ (ದಶಕು. ೬-೧೨೭) ; ಪುರುಡಿಂ ಮೆಯ್ಗಣ್ಣಂ ಕೀೞ್ಬಗೆಯಿಂ ತಪೋವಿಘ್ನಮಂ ನೆಗೞ್ಚಲೆಂದು ತಱಿಸಂದು (ರಾಮಾಶ್ವ. ೫೫-೨೦). ೬. ಹೊರಹೊಮ್ಮಿಸು : ಪಸರಿಸಿದಾ ಬಗೆ ಮನದೊಳ್ ಪೊಸತಾಗೆ ನೆಗೞ್ಚಲಱಿಯನಾ ರಚನೆಯೊಳೇಂ ಬಸನಂ (ಕವಿರಾ. ೧-೧೨) ; ಭೀಮಂ ಭೀಮನಾದಮಂ ನೆಗೞ್ಚಿ (ಗದಾಯು. ೬-೩೪ ವ) ; ನೆಗೞ್ಚಿ ಕಂಠದುಲುಪಂ ಕೀರಾಳಿಯೇ (ಉದ್ಭಟ. ೭-೬೩) ; ಮಹೋತ್ಸವದೆ ಕೋಗಿಲೆವೆಣ್ ಗೞಿಪಂ ನೆಗೞ್ಚುವಂತನುವಿಪ ಸೊರ್ಕಿನಿಂ ಪಿಕನಿನಾದೆ ಪೆಱಳ್ ಗೞಿಪಂ ನೆಗೞ್ಚಿದಳ್ (ಕಾವ್ಯಸಾ. ೯೬೪). ೭. ಹೊಡೆಯಿಸು ; ಹೊಯ್ಯಿಸು : ಇತ್ತ ಧರ್ಮಪುತ್ರನುಂ . . . ಸೌಭದ್ರಪ್ರಮುಖನಾಯಕರ್ವೆರಸು ರಣಪಟಹಂಗಳಂ ನೆಗೞ್ಚಿ (ಪಂಪಭಾ. ೧೦-೧೧೩ ವ). ೮. ಪ್ರಸಿದ್ಧಿಯಾಗುವಂತೆ ಮಾಡು ; ಪ್ರಖ್ಯಾತಿಗೊಳಿಸು ; ವಿಖ್ಯಾತಿಪಡಿಸು ; ಪ್ರಕಟಿಸು : "ನೆಗೞ್ಚು—ವಿಖ್ಯಾತೌ, ಉದ್ಯೋಗೇ ಚ" (ಶಮಧಾ) ; ನಿನ್ನ ಕಲ್ತ ವಿದ್ಯೆಯಂ ಪಂಡಿತಿಕ್ಕೆಯುಮನಾ ಪೊೞಲೊಳ್ ನೆಗೞ್ಚಿ ನೆಗೞ್ದ ಪಂಡಿತರ್ಕಳೊಡನೆ ವಾದಂಗೆಯ್ದವರಂ ಗೆಲ್ದು . . . ಬಂದೊಡೆ (ವಡ್ಡಾರಾ. ೭೪-೧೪) ; ಧರಾಮರರೀ ಬ್ರಾಹ್ಮಣರೆಂದುಕೊಂಡು ಕೊನೆದಾ ಷಟ್ಖಂಡಭೂಮಂಡಲೇಶ್ವರನೋರಂತೆ ನೆಗೞ್ಚೆ ಕೂಡೆ ನೆಗೞ್ದತ್ತಿತ್ತಂ ದ್ವಿಜನಾಮ್ನಾನ್ವಯಂ (ಆದಿಪು. ೧೫-೨೦) ; ನೆಗೞ್ದುದಿರ್ತ್ತಮಜ್ಜೈನಮಾರ್ಗರುಚಿಯಿಂ ಚಾರಿತ್ರ್ಯಸಂಸಿದ್ಧಿಯೊಳ್ ನೆಗೞ್ದಶಿಷ್ಯರುಮಂ ನೆಗೞ್ಚಿ ವರದಕ್ಕಾಚಾರ್ಯರೆಂಬೀ ಪೆಸರ್ ಜಗತೀವ್ಯಾಪಕಮಾಗೆ (ಅಜಿಪು. ೧-೩); ತನಗಿಲ್ಲದಂತುಟಂ ತಾನೆ ನೆಗೞ್ಚುವ ಪರಗುಣಂಗಳಂ ಮುಚ್ಚುವ . . . ನೀಚನೊಳ್ ನೀಚಗೋತ್ರದಾಸ್ರವಮಕ್ಕುಂ (ಸುಕುಮಾ. ೮-೨೩). **ನೆಗಳಿಚು :** ೫. ಮದಕರಿಯುಪದ್ರವ ನೆಗಳಿಚಲು ತಪ್ಪಿಪುದೆ ಮರಿಹುಲ್ಲೆ (ಕೋಗಯ. ೮-೧೫). **ನೆಗಳ್ಚು :** ೨. ಕನಸಿದೊಳ್ಳಿತಲ್ಲೆಂದಕೆ ಶಾಂತಿಯಂ ಮುನಿವರ ವಸಿಷ್ಠಂ ನೆಗಳ್ಚಿದಂ (ಜೈಮಿಭಾ. ೧೮-೪೧) ; ತೊಡರ್ಚಿದ ಕುಸುಮಮಾಲಿಕೆಗಳ ನೆಗಳ್ಚಿ [ಪಾಠಾಂ. ನೆಗಳಿ ನೆಲೆಗೊಳಿಸ]ದ ಚಿತ್ರಪುತ್ರಿಕೆಗಳ (ರಾಜಶೇ. ೮-೫ ವ) ; "ಕಟ್ಟು ; ರಚಿಸು ; ರಚನೆ ಮಾಡು" (ಪ್ರಭಣ್ಣ). ೮. ಕೆಂದಳಿರದು ಮಾಂದಳಿರೆನೆ ಸಂದಣಿಸಿದ ಪಣ್ಗಳಿಗಳೆನೆ ತಾನುಂ ಮಾಕಂದಮೆನಿಸಲ್ನೆಗಳ್ಚಿದ ಚಂದಮನಾಂತಂತೆ ನೇಱಲಲ್ಲೆಸೆದಿರ್ಕುಂ (ರಾಜಶೇ. ೨-೪೬). ೯. ಪೂರೈಸು ; ಈಡೇರಿಸು: ವಸುಧೆಯೊಳಿಷ್ಟಾರ್ಥವಂ ತವೆ ನೆಗಳ್ಚುವನ ಬಹುವಿಧದ ಧರ್ಮಂಗಳಂ ರಚಿಸುವನ ಮನೆಯೊಳಿಂದಿರೆ ಬಿಡದೆ ನೆಲಸಿರ್ಪಳು (ಜೈಮಿಭಾ. ೫-೬೭). [ನೆಗೞ್$_1$ + -ಚು$_1$]

**ನೆಗೞ್ತೆ,** ನೆಗರ್ತಿ, ನೆಗರ್ತೆ, ನೆಗಳ್ತೆ (ನಾ). ೧. ಇರವು ; ಸ್ಥಿತಿ ; ರೀತಿ : ಅರಸಿಯ ನೆಗೞ್ತೆ ನೋಡಲ್ಪಿರಿದುಂ ವಿಸ್ಮಯಮನಾಗಿಪುದು (ಕಾದಂಪೂ. ೩೪೨) ; ಬಾರದ ಭವಂ ಬಂದ ಜೀವನ ನೆಗೞ್ತೆಯಂ ಪ್ರತ್ಯಕ್ಷಮಾಗಿ ನುಡಿದುದರ್ಕೆ ಕೊಕ್ಕರಿಸಿ (ಅಜಿಪು. ೨-೧೧೨ ವ) ; ಕರತಲ ಕಾಂತಿಯಿಂ ವದನಚಂದ್ರಮನೊಳ್ ನವಸಾಂಧ್ಯರಾಗಮಂ . . . ಸರಳತರೋಷ್ಣನಿಶ್ವಸಿತಮಾರುತನಿಂದೆ ನಿಜೋತ್ತರೀಯದೊಳ್ ತರಳತೆಯಂ ನಿಯೋಜಿಪ ನೆಗೞ್ತೆಗೆ ಕಾರಣಮೇನೊ (ಚಂದ್ರಪು. ೩-೫೪) ; ಪಣ್ಣಿಲ್ಲದ ಮರನ ಬಾೞ್ತೆ ತಣ್ಣೀರೊಸರ್ ಕುಂದಿದ ಕೊಳನ ನೆಗೞ್ತೆ . . . ಸಂದ ಜಗದ ತೊೞ್ತಿಹಕ್ಕೆಡೆಗುಡದೇಂ ಪೋಕುಂ ? (ರಾಮಾಶ್ವ. ೧೦೪-೨೫). ೨. ಕ್ರಿಯೆ ; ಕಾರ್ಯ ; ಕೃತ್ಯ: "ಆಚಾರಾಧಿಕ್ರಮಃ,

ಕ್ರಿಯಾ—ಈ ೨ ನೆಗೞ್ತೆ" (ಹಲಾಯು. ೧೨೯-೯೮) ; ತನ್ನ ಮುನ್ನಿನ ಮಲಯಸುಂದರನಪ್ಪ ಭವದ ನೆಗೞ್ತೆಗಳೆಲ್ಲಮಂ . . . ನೋಡುತ್ತಂ ಪಾಡುತ್ತಂ (ಪದ್ಮಾರಾ. ೩೯-೧೪) ; ಅಱಿವು ನೆಗೞ್ತೆಯೆಂಬುಭಯ **ಕಾಂಡಮೆ ಮುಕ್ತಿಪಥಕ್ಕೆ ಹೇತುವೆಂದಱಿವುವರನ್ಯರ್** (ಅಜಿಪು. ೧-೯) ; **ಪೊತ್ತುಂಗೆಲಸಂಗೊಳ್ವ** ನೆಗೞ್ತೆಗಳಂ ನೆಗೞಲೆಂತುಮಱಿಯರ್ ಜೈನರ್ (ಸಮಪ. ೫-೧೦) ; ದೆಸೆಯಂತುವರಂ ನಿಜಕೀರ್ತಿಯಂ ನಿವಿರ್ಚಿದನೆನೆ ವಜ್ರಬಾಹುವ ನೆಗೞ್ತೆ ಪೊಗೞ್ತೆಗಳುಂಬಮಾಗದೇ(ಪಂರಾಮಾ. ೨-೨೬); ಇಂದ್ರಂ ಸೈರಿಸದೆ ನಿಮ್ಮಮ್ಮ ನೆಗೞ್ತೆಯ ಫಲಮನವಧಾರಿಸಿ ಮೆಂದೇಳಿಸಿ ನುಡಿಯೆ (ಧರ್ಮಾಮೃ. ೨-೨೧೭). **೩.** ನಡತೆ ; ಚಾರಿತ್ರ್ಯ : "ನೆಗೞ್ತೆಯೆಂದು ಪ್ರಸಿದ್ಧಿಯುಂ ಚರಿತ್ರಮುಮಕ್ಕುಂ" (ಶಮದ. ನ. ೩೩ ಪ್ರಯೋ) ; "ನೆಗೞ್ತೆಯೆನಲ್ ಚರಿತ್ರದೊಳ್" (ಕರ್ಣಾನಿ. ೭೪) ; ಕಿಟ್ಟಿ **ಕರೆವಾಳ್ಗಮೆನಗಂ** ವಿಟ್ಟುವಿನಂತಿರ್ದ ಮಾರಿಗಂ ಬೆದಱದೆ ನಿಂದಟ್ಟಿಯನೆ ನುಡಿವರಿವರ ನೆಗೞ್ತೆ ಕರಂ ಪಿರಿದು ಧೀರರಕಟ ಕುಮಾರರ್ (ಯಶೋಚ. ೧-೬೧). **೪.** ಪೂರೈಕೆ ; ನೆರವೇರಿಸುವುದು : (ಶಿ). **೫.** ಅಭ್ಯಾಸ ; ರೂಢಿ : (ಶಿ). **೬.** ಕಾಂತಿ ; ಪ್ರಕಾಶ ; ಶೋಭೆ : 'ನೆಗೞ್ತೆವಡೆ', 'ನೆಗೞ್ತೆವೆಱು' ಪರಾ. **೭.** ಕೀರ್ತಿ ; ಖ್ಯಾತಿ ; ಪ್ರಸಿದ್ಧಿ : "ನೆಗೞ್ತೆಯೆಂದು ಪ್ರಸಿದ್ಧಿಯುಂ ಚರಿತ್ರಮುಮಕ್ಕುಂ" (ಶಮದ. ನ. ೩೩ ಪ್ರಯೋ) ; ನುಡಿಗೆಲ್ಲಂ ಸಲ್ಲದ ಕನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀಗಡಿನ ನೆಗೞ್ತೆಯ ಕಬ್ಬದೊಳೊಡಂಬ(ಡಂ ಮಾ)ಡಿದರ್ ಪುರಾತನಕವಿಗಳ್ (ಕವಿರಾ.೧-೩೩); ನೀರಿಲ್ಲದ ಕೆಱೆಯ ನಡುವಂ ಕಂಡುದಱಿಂ ತೀರ್ಥಂಕರಚಕ್ರವರ್ತಿಗಳ ಪುಟ್ಟಿದ ಮಧ್ಯದೇಶದೊಳ್ ಧರ್ಮದ ನೆಗೞ್ತೆಯಾಗದು (ಪದ್ಮಾರಾ. ೮೬-೨೦) ; ಶ್ರೀಗೆ ನೆಗೞ್ತೆಗೆ ವೀರಶ್ರೀಗಾಗರಮಪ್ಪೆನೆಂಬ ಕಳಕಳ ವಿಜಯೋದ್ಯೋಗದೊಳೆ ನೆಗೞ್ವೆನೆಂಬುದ್ಯೋಗಿಗೆ ಮಲೆವನ್ಯನೃಪತಿ ಮಂಡಳಮೊಳವೇ (ಪಂಪಭಾ. ೯-೧) ; ಇಂತು ನೆಗೞ್ತೆಗಂ ಪೊಗೞ್ತೆಗಮುಳುಂಬಮಾದ ಸುವ್ರತಾಮಹಾದೇವಿ (ಬಾಧಪು. ೨-೬೭ ಪ). **ನೆಗರ್ತಿ: ೭.** ಆದ ನೆಗರ್ತಿಯೊಳಗ್ಗಳಮಾದುದು ಸಂಪತ್ತಿ ಸತ್ಯಮಾದುದು ನುಡಿ (ಕಇ. V, ೧೪-೨೧ ; 1099). **ನೆಗರ್ತೆ: ೭.** ನೆಗೞ್ತೆಯುಗುಂಸೆದೆಣೆ ವಡೆಸಿ ದಲ್ (ಎಕ. II, ೧೧೧-೧ ; ಸು. 700) ; ಪೊಗೞ್ತೆಗಂ ನೆಗರ್ತೆಗಂ ನೆಲೆಯಾಗಿ ಕಾದಿ (ಎಕ. VIII, ಸೊರಬ. ೪೪೫-೮ ; 975 ?) ; ಚನ್ದಣನ್ದಿ ಸಿದ್ಧಾನ್ತಮುನೀಶ್ವರಗುರುಗಳೆಂಬ ನೆಗರ್ತೆಯ ದಾವಣನ್ದಿಸಿದ್ಧಾನ್ತ ಮುನೀಶ್ವರರ್ (ಸೌಇಇ. XI-i, ೧೧೧-೨೦ ; 1071) ; ಅಂತು ನೆಗರ್ತೆಗಂ ಪೊಗರ್ತೆಗಂ ನೆಲೆಯಾದ . . . ಮಹಾಪ್ರಚಣ್ಡದಣ್ಡನಾಯಕಂ (ಮೈಆರಿ. ೧೯೨೯, ೬೫-೪೯; 1081); ಪುಣ್ಯೋದಯದೊಳ್ ಪ್ರದ್ಯುಮ್ನ ಕುಮಾರಂಗೆ ಸಕಳವಿದ್ಯಾಸಂಯೋಗಮುಂ ಜನಾನುರಾಗಮುಮಾಗಿ ರೂಪಿನ ಪೊಗರ್ತೆಯುಂ ಸಹಜದ ನೆಗರ್ತೆಯುಮಂ ಕೇಳ್ದು (ಬಂಹರಿ. ೮-೫೨ ಪ). **ನೆಗಳ್ತೆ : ೭.** "ನೆಗಳ್ತೆಯೆನಲುಂ ಖ್ಯಾತಿಯಕ್ಕು" (ಕಶರ. ೧೨೬) ; ಮನುಚರಿತಂ ಪೊಗಳ್ತೆಯ ನೆಗಳ್ತೆಯ ರೂಢಿಯ ಮಲ್ಲಿದೇವ ಭೂಪನೆ ತನಗಾಳ್ದನೀಶ್ವರನೆ ನಂಬಿದ ದೈವ್ವವೆನಿಪ್ಪನಾವನೋ ವರಮಂತ್ರಿ ಬಮ್ಮಣನಾಮಣನ್ (ಸೌಇಇ. IX-i, ೨೭೦-೩೫ ; 1169) ; ಇನ್ತು ಪೊಗಳ್ತೆಗಂ ನೆಗಳ್ತೆಗಂ ನೆಲೆಯಾದ ಸಾಮನ್ತ ಕಾಮಯ್ಯನಾಯಕರ್ (ಎಕ. XI, ಚಿತ್ರದು. ೩೬-೩೫ ; 1199) ; ಶರಧಿ ಪರಿರಚನೆವಡೆದುದು ನೆಗಳ್ತೆಯಿಂ ಭುವನದುರ್ಗಾವೃತದಗಳುವೆನಲು (ನಂದಿಮಾ. ೨-೯) ; ಕುಲದ ನೆಗಳ್ತೆಯುಮಂ ನೀಂ ಕಲುಷಿತಮಂ ಮಾಡಲೆನ್ನುಮಂ ಕೆಡಪಲ್ಕೇಳಸುವೆ ಕೂಲಂಕಷ ಶೈವಲಿನಿಯ ಪೋಲ್ ತಿಳಿದ ಜಲಮುಮಂ ತಟಜಮುಮಂ (ಶಾಕುಂತ. ೬೮-೧೨೧). [ನೆಗೞ್$_1$ + -ತೆ$_2$]

**ನೆಗೞ್ತೆಗಿಡಿಸು** (ಕ್ರಿ). ಖ್ಯಾತಿಯನ್ನು ಕುಂದಿಸು ; ಹೀನಗೊಳಿಸು : ಆ ಕಳದ ಕೆಲದೊಳ್ ಸಾರಿಯಂ ಕೋಲೊಡ್ಡಿ ಗೆಲ್ವ ನಿಗಳನ ನೆಗೞ್ತೆಗಿಡಿಪ ಭೃಗುವಂ ನಗುವ ಬೇತಾಳನಂ ಬೇಡೆನಿಪ ತಕ್ಕು ಮಿಕ್ಕುವರೆ ಕಲ್ತ ಬಿನ್ನಣಿಗಳಿರ್ದು (ಪುಷ್ಪಪು. ೨-೬೦ ಪ).
[ನೆಗೞ್ತೆ + ಕಿಡಿಸು(< ಕೆಡಿಸು$_1$)]

**ನೆಗೞ್ತೆಗೆಯ್** (ಕ್ರಿ). ಉಂಟುಮಾಡು ; ರಚಿಸು : ನಸುನೀಳ್ದು ಮಿಸುಪ ನಾಸಾವಂಶಂ ನಯನಾಮೃತಜಲಧಿಗಳೆರಡುಮೊಡವೆರೆಯದಂತೆಡೆಯೊಳಿಟ್ಟ ಪೊಂಗಟ್ಟೆಯ ನೆಲೆಯಂ ನೆಗೞ್ತೆಗೆಯ್ಯುತ್ತಿದೆ (ಚಿಕಪಂ. ೮೨-೧೯). [ನೆಗೞ್ತೆ + ಕೆಯ್$_1$]

**ನೆಗೞ್ತೆವಡೆ,** ನೆಗರ್ತೆವಡೆ, ನೆಗಳ್ತೆವಡೆ (ಕ್ರಿ). ೧. ಪ್ರಕಟವಾಗು; ಸ್ಪಷ್ಟವಾಗು : ಕುಡವೇಟ್ವಿನ ಕುಡುವನ ಕುಡೆ ಪಡೆವನ ಪೆಂಪೇಂ ನೆಗೞ್ತೆವಡೆಗುಮೊ (ಪಂಪಭಾ. ೬-೪೯) ; ಇನ್ತು ನೆಗೞ್ತೆವಡೆದ ಶೌಚರಸ ರಾಳ್ಕೆಯಲು (ಸೌಇಇ. XI-i, ೧೮೧-೨೩ ; 1068) ; ಅಗಣಿತಮೆನಿಸುವ ಗುಣನಿಂ ನೆಗೞ್ತೆವಡೆದಿರ್ದ ಶಾಸ್ತ್ರತರ್ಕಾಗಮದಿಂ ಜಗತೀವಳಯಂ ಬಣ್ಣಿಸೆ ನೆಗೞ್ದರ್ ತ್ರೈವಿದ್ಯಮೇಘಚಂದ್ರಮುನೀಂದ್ರರ್ (ಧರ್ಮಾಮೃ. ೧-೩೪). **೨.** ಪ್ರಸಿದ್ಧವಾಗು ; ಕೀರ್ತಿಯನ್ನು ತಳೆ ; ವಿಖ್ಯಾತಿಯನ್ನು ಹೊಂದು : ತನ್ನ ಜಸದೆಸಕದಿಂ ನೆಗೞ್ತೆವಡೆದ ಸಾರ್ವಭೌಮ ರಾಘವನಂ ಕೈವಿಡಿದು ಪಟ್ಟದರಸಿಯಾಗಿಯುಂ . . . ಬಾೞ್ದನಗೀಗಳಿಂತೊಂದು ವಿಧಿ ಬಗೆದುದೇ ! (ರಾಮಾಶ್ವ. ೩೯-೨೩). **೩.** ಕಾಂತಿಯಿಂದಿರು ; ಅಲಂಕಾರವಾಗಿರು ; ಶೋಭಾಯಮಾನವಾಗಿರು : ಬಿಂಕದಿಂ ಬಲಗೆಲದೊಳ್ ನೆಗೞ್ತೆವಡೆದಿರ್ಪರಸಂಚೆಯ ಪಿಂಡು . . . ಒಪ್ಪೆ ಬಗೆಗೋಲಗಮೊಪ್ಪಿದುದಂದು ಕಾವನಾ (ಕಬ್ಬಿಕಾ. ೧೨೮). **ನೆಗರ್ತೆವಡೆ : ೨.** ಚಿತ್ರಕವಿತಾವಿಸ್ತೀರ್ಣಸನ್ದರ್ಭಗರ್ಭನಿರುದ್ಧೋನ್ನತಿಯಿಂ ನೆಗರ್ತೆವಡೆದ ತ್ರೈವಿದ್ಯಗೋವರ್ಧನರ್ (ಸೌಇಇ. XI-i, ೭೮-೨೯ ; 1045); ಇನ್ತು ನೆಗರ್ತೆವಡೆದಂ ಶ್ರೀಮದ್ದಣ್ಡನಾಯಕ ವಾಸುದೇವಯ್ಯಂ ಗಳ (ಸೌಇಇ. XI-i, ೧೦೧-೧೯ ; 1068) ; ನ್ಯಾ(ಜ್ಞಾ)ನಶಕ್ತಿಬ್ರ(ವ್ರ)ತೀಂದ್ರಂ ತಾನೆಯ್ದೆ ನೆಗರ್ತೆವಡೆದನಿವಱಿಂ ಜಗದೊಳ್ (ಇಆ. XIII, ೯೩-೨೫ ; 1084). **೩.** ಇನ್ತು ನಿಜಗೋತ್ರಶಿಖಾಮಣಿಯಾ ದ್ವಿಜವಂಶಭೂಷಣ[ರುಮೆ]ನಿಸಿ ನೆಗರ್ತೆ[ವಡೆದು] (ಸೌಇಇ. XX, ೭೪-೧೬ ; 1112). **ನೆಗಳ್ತೆವಡೆ : ೨.** ಜಗಜಂಪಿನ ಸತ್ತಿಗೆಯ ಪಲ ಬಿರುದುಗಳ್ನೆಗಳ್ತೆವಡೆಯೆ (ರಾಜಶೇ. ೬-೧೧ ಪ). [ನೆಗೞ್ತೆ + ಪಡೆ$_1$]

**ನೆಗೞ್ತೆವೆಱು,** ನೆಗರ್ತೆವೆಱು, ನೆಗಳ್ತೆವೆಱು (ಕ್ರಿ). **೧.** = ನೆಗೞ್ತೆವಡೆ ೨ : ಈತನ ವಂಶದೊಳೀ ಪೊೞಲೊಳ್ ನೆಗೞ್ತೆವೆತ್ತಂ ದಂಡಿತಾರಾತಿಮಂಡಳಂ ದಂಡಕನೆಂಬಂ(ಆದಿಪು. ೨-೧೪ ಪ) ; ಅಪ್ಸರಸಿಯೊಳುದಿಸಿದ ಗೌರಿಗಂ ಗಂಧರ್ವಲೋಕಾಧಿಪತಿಯಪ್ಪ ಹಂಸಂಗಂ ಮಗಳಾಗಿ ಮಹಾಶ್ವೇತೆಯೆಂಬ ಪೆಸರಿಂ ನೆಗೞ್ತೆವೆತ್ತಳ್ (ಕಾದಂಪೂ. ೭೯೪); ಉನ್ನತಗಂಗಮಂಡಲೇಶ್ವರಮಕುಟಾರ್ಚಿತಂ ಭುವನದಿಂ ತಮಗೆಂಬ ನೆಗೞ್ತೆವೆತ್ತಲಂಕರಿಸಿ (ಅಜಿಪು. ೧-೭). **೨.** ಕಾಂತಿಯುತವಾಗಿರು ; ಶೋಭಿಸು ; ಸೊಗಸಾಗಿರು : ಪೊಗೞ್ ಜನಂ ಝುಂಝುವೇಗಗೆ ತಾನಂತೊಂದು ಕೋಟಿ ದೀನಾರಮನಾ ಮೃಗನಯನೆ ಕೊಟ್ಟು ಕೊಂಡಳ್ ನೆಗೞ್ತೆವೆತ್ತಿರ್ದ ರತ್ನಮಯಕಂಬಳಮಂ (ಸುಕುಮಾ. ೧೦-೧೧೮); ಶ್ರುತದಗ್ಗಳಿಕ್ಕೆ ತಪದುನ್ನತಿಕ್ಕೆ ತನ್ನೊಳೆ ನೆಗೞ್ತೆವೆತ್ತಿರೆ ಭೂವಿಶ್ರುತನೆನೆ . . . ಗೆಲೆವಂದಂ (ಪಂರಾಮಾ. ೨-೫೧). **ನೆಗರ್ತೆವೆಱು : ೧.** ನೆಗರ್ತೆವೆತ್ತೀ ಜಂಬೂದ್ವೀಪದ ನಟ್ಟನಡುವೆ . . . ನಿಂದುದು ಸೌಂದರ ಮಂದರಾಚಳಂ (ನರ್ಧಮಾ. ೧-೩೭ ಪ) ; ಗಂಗವಾಡಿ ನಾಡೊಳಗೆ ನೆಗರ್ತೆವೆತ್ತೆಸೆವ ಮಣ್ಣಲಿ (ಎಕ. VII, ಶಿಮೊ. ೯೭-೪೩ ; 1113) ;

ಶ್ರೀರೂಪು ಸೌಜನ್ಯದೊಳ್ಪಲರುಂ ಮೆಚ್ಚೆ ನೆಗರ್ತೆವೆತ್ತು ಪಿರಿಯಂ ತಾನಾದನ್ (ಸೌಇಇ. IX–i, ೨೦೦–೧೨ ; 1121). **ನೆಗಳ್ತೆವೆಱು :** ೧. ನೆಗಳ್ತೆವೆತ್ತ ನಿಜವಾಮಕರಕಲಿತಪ್ರಚಂಡಕೋದಂಡ ಕೋಟಿಯೊಳ್ ಮಂಜುಸಿಂಜಿನಿಯನಮರ್ಚಿ (ಶಬಶಂ. ೪–೧೭ ವ).

[ನೆಗೞ್ತೆ + ಪೆಱು$_1$]

**ನೆಗೞ್ದೇರ,** ನೆಗಳ್ದೇರ (ನಾ). ಮೊಸಳೆಯನ್ನು ವಾಹನವನ್ನಾಗಿ ಉಳ್ಳವನು ; ವರುಣ : "ನೆಗೞ್ದೇರಂ, ಪಚ್ಚಿಮದೆಸೆಗೊಡೆಯಂ, ನೀರೊಟ್ಟೆಲಾಣ್ಮಂ–ಈ ೩ ವರುಣಂಗೆ ಪೆಸರ್" (ಕಶಸಾ. ೪೯–೩೭) ; "ಪಚ್ಚಿಮದ ದೆಶೆಗೊಡೆಯ ಮುನ್ನೀರೆಱೆಯ ನೀರೊಟ್ಟೆಲಾಣ್ಮಂ ನೆಗೞ್ದೇರನೆನೆ ವರುಣನು" (ಕಬ್ಬೆಕ್ಕೆ. ೧೪). **ನೆಗಳ್ದೇರ :** "ನೆಗಳ್ದೇರನೆಂದೆನೆ ವರುಣನಕ್ಕು" (ಕಶರ. ೫೬). [ನೆಗೞ್$_3$ + ತೇರ್$_2$ + –ಅ$_7$]

**ನೆಗೞ್ಪು,** ನೆಗರ್ಪು (ನಾ). ೧. ನಡವಳಿಕೆ ; ವರ್ತನೆ : ಅಂತೆ ಕಿಱುಕುಳ ವ್ಯಂತರಂಗಳ ಪೊಲ್ಲಗ್ರಹಂಗಳ ಶೈವಾದಿಗಳ ನೆಗೞ್ಪೆ ಪ್ರಮಾಣಮಲ್ಲದು (ಧರ್ಮಾಮೃ. ೯–೧೦೧). **ನೆಗರ್ಪು :** ೨. ಕೀರ್ತಿ ; ಖ್ಯಾತಿ ; ಪ್ರಸಿದ್ಧಿ : ಶ್ರೀ ಬಿಟ್ಟಿಗಂ ವೌಳಿಕೋಸಿಗರಾಣ್ಮ ನೆಗರ್ಪ್ಪಿನಣುವಂ ಜಿಡ್ಡೂರಾಳ್ಗೆ (ಮೈಆರಿ. ೧೯೨೯, ೭೮–೬ ; 964).

[ನೆಗೞ್$_1$ + –ಪು$_2$]

**ನೆಗಿಲು** 'ನೇರ್ಗಿಲ್' ನೋ.

**ನೆಗೆ$_1$** (ಕ್ರಿ). ೧. ಮೇಲಕ್ಕೇಳು ; ಮೇಲಕ್ಕೆ ಬರು : ಕೋಟೆಯ ಚೆಲ್ವು ಪೊಗೞಲರಿದೆನಿಸಿರೆ ನೆಗೆದುದು ನಭಮನೆಯ್ದೆ ಮಿಳಿರ್ವ ಪತಾಕಾವಳಿ (ಪಂಪಭಾ. ೪–೧೦) ; ಸುರರೆಲ್ಲಂ ಬಡಗಲು ನೆರೆದಿರೆಯಾ ದೆಸೆ ಕುಸಿದು ತೆಂಕ ನೆಗೆದೊಡಗಸ್ತ್ಯಂ ಪರಿದತ್ತಲ್ ನಿಲೆ ವಿಶ್ವಂಭರಿ ಸಮತಳಮಾದುದೆಂಬರಿಳೆ ಕುಸಿದಪುದೆ (ಸಮುಪ. ೧೦–೧೧೪) ; ಹರಿ ನೆಗಹಿದಡೆ ನೆಗೆದ ಮಂದರದಾ ಬಲುಹೆನಿತು (ಬಸಪು. ೧೯–೨೬) ; ರಕುತದ ಕಡಲೊಳಗೆ ಬೆಂಡೆದ್ದು ನೆಗೆದುದು ಕೋಟಿ ಪಾಯದಳ (ಕುವ್ಯಾದ್ರೋ. ೬–೪೮) ; ತೀರದ ನೀರದಂ ನೆಗೆದು ಗರ್ಜಿಪುದೆಂದು ಪಯೋಧಿಕೇಳಿಯಂ ಸಾರಮರಾಳನೇನುಳಿದುದೇ (ರಾಜಶೇ. ೧೩–೧೯). ೨. ಹಾರು ; ಜಿಗಿ ; ಎಗರು : "ನೆಗೆ—ಉತ್ಪ್ಲವನೇ" (ಶಮಧಾ) ; ಖೇಚರನುಂ . . . ಸಿಂಹಲಂಘನದಿಂ ಮೇಗೆ ನೆಗೆದು ವಜ್ರಸಮಾನಮಪ್ಪ ಕೈಯಿಂದಂ ಕುಮಾರನಾತನ ತೆಗಲೆಯಂ ತಿವಿದೊಡೆ (ಪದ್ಮಾರಾ. ೫೯–೨೮) ; ಅಂಬರಂಬರಂ ನೆಗೆದ ಧೂಳಿಯೊಳ್ ದೆಸೆಯಱಿಯದೆಯುಂ . . . ಚಾತುರ್ವಲಂಗಳ್ ಮೊದಲ ಸಮಕಟ್ಟುಗೆಟ್ಟು (ಪಂಪಭಾ. ೧೦–೭೦ ವ) ; ಕುರುರಾಜಂ ವಿದ್ಯಾಧರಕರಣದೆ ನೆಗೆದಂಬರಕ್ಕೆ ಗದೆಯಂ ಕ್ರಮದಿಂ ತಿರುಪೆ ಧರಾಚಕ್ರಂ ಕೋವರಚಕ್ರಂ ತಿರಿವ ತೆಱದೆ ತಿರಿದತ್ತೆನಸುಂ (ಗದಾಯು. ೮–೨೪) ; ಕೊರಳುದ್ದಕ್ಕೆ ಹೂಳಿಸಿಕೊಂಡು ಮುಗಿಲುದ್ದಕ್ಕೆ ನೆಗೆದಹೆನೆಂಬವನ ಹಾಂಗೆ ಶಿವನ ಜೋಕೆಯನಱಿಯದೆ ಮಾತನಾಡುವ ಮಾತೆಲ್ಲವು ಮಾತಿನ ಮಾಲೆಯಲ್ಲದೆ ಅಲ್ಲಿ ನಿಜವಿಲ್ಲ (ವಚಸಂ. ೩೫೦–೯೮) ; ನೋಡಿದ ಮೃಗಂಬೆರಸಿ ನೆಗೆದನಾಕಾಶಕ್ಕೆ (ಚಂಡೀರ. ದೇ. ೨೫೧–೨೪) ; ಪಕ್ಕಿಗಳು ಗಗನಕ್ಕೆ ನೆಗೆದವು (ಬಸಪು. ೧೨–೪೮) ; ಮೇಲೆ ನೆಗೆದೊತ್ತರಿಸಿ ನಡೆವ ಮುತ್ತಿನ ಸತ್ತಿಗೆಗಳಿಂ ಚಂದ್ರಭುವನಮವತರಿಸಿದಂತೆಯುಂ (ರಾಜಶೇ. ೧೩–೭೭ ವ). ೩. ವೇಗವಾಗಿ ಮುನ್ನುಗ್ಗು : ಬಟ್ಟೆ ಬರೆ ಹಾಕಿಕೊಂಡರೆ ಕಾಲವಿಳಂಬವಾದೀತೆಂದು ಥಟ್ಟನೆ ನಗ್ನತೆಯಲ್ಲೇ ಕಳ್ಳರ ಹಿಂದೆ ನೆಗೆದನು (ಕಾವ್ಯಸ. ೬). ೪. ಸೆಟೆದು ನಿಲ್ಲು; ನಿಮಿರು ; ನಿಗುರು : ಆ ದ್ವಿಜಕುಮಾರನೆಡೆವಿಡದೆ ನಟ್ಟುಡಿದ ನನೆಯಂಬಿನ ಮೊನೆಗಳಂತೆ ನೆಗೆದ ಕಂಟಕನಿಕಾಯಮುಮಂ (ಕಾದಂಉ. ೫೬೫) ; [ಪೆಗಲೆಲ್ಲಂ ಬೆಂದು] ತೋಳ ಮೊದಲಂ ಕಿರ್ಚಳುರ್ವಾಗಳ್ ನರವುಗಳ್ ತೆಗೆದು. ತೋಳ್ ತನಗೆ ತಾನೆ ನೆಗೆವುದುಂ (ಧರ್ಮಾಮೃ. ೧೨–೪೧ ವ) ; ಅನುವಿಸುವ ಕಂಪನದ ಭರದಿನಖಿಳಾವಯವಮೊರ್ಮೊದಲೆ ಚೆಚ್ಚರಮೆಚ್ಚಿಱುವ ತೆಱದೆ ಮೆಯ್ನವಿರ್ಗಳಾವಗಂ ನೆಗೆಯೆಯುಂ (ಪರ್ಧಪು. ೬–೨ ವ) ; ಪಸರಿಸಿ ಪರ್ಬಿದ ನೀಡಡಿ ಕುಸಿದಂಗಂ ನೀಳ್ದ ದಂಡೆ ನೆಗೆದ ಭುಜಾಗ್ರಂ ಕುಸುಮಶರಾಕುಂಚಿತಕರಮೆಸೆದಿರ್ದುವು ದೃಷ್ಟಿಮುಷ್ಟಿ ಶರಸಂಧಾನಂ (ಗಿರಿಕ. ೮–೨೪) ; ಕೆಂಗಣ್ಣುಗಳ ಮುಪ್ಪುರಿಗೊಂಡ ಹುಬ್ಬುಗಳ ನೆಗೆದ ರೋಮಾವಳಿಯ . . . ರಕ್ಕಸರನೀಕ್ಷಿಸಿ ನುಡಿದನಸುರೇಂದ್ರ (ತೊರರಾ. ೬–೧೩–೬). ೫. ಎತ್ತರವಾಗು ; ಉನ್ನತವಾಗು : ಈಂಟುಜಳಧಿಯೆನಿಪಗಟ ನೀಳ್ಪಿನಿಂ ನೆಗೆದು ಸೊಗಯಿಸುವ ಕೋಂಟೆಯೊಳ್ಪಿನಿಂ (ಪಂಪಭಾ. ೩–೨೨) ; ಅರಿದಿಱಿದರ್ ಪೆಣಬಣಂಬೆಗಳ್ ನೆಗೆವಿನೆಗಂ (ಪಂಪಭಾ. ೧೦–೮೨) ; ಶಿವನಾಗಮವೆ ನೆಗೆದ ಬಿರುದಿನಟ್ಟಣೆಯುದಕೆ (ತಿರುರ. ದೇ. ೨–೨೩) ; ಪುಣ್ಯಪುಂಜದ ಸಿರಿಗಳಿವೆನಿಸುವುವು ನೆಗೆದ ಜಿನಭವನಂಗಳ್ (ಅನಂಪು. ೧–೧೦೩). ೬. ಮೇಲಕ್ಕೆತ್ತು ; ಎತ್ತಿಹಿಡಿ ; ಎತ್ತರಿಸು : ಕುಸಿದ ತಲೆಯನು ನೆಗೆದು ನಲ್ಲಳೆ ಹೇಳು ಹೇಳೆಂದ (ಸಾಳ್ವಭಾ. ೧೯–೪೪). ೭. ಮೂಡು ; ಕಾಣಿಸಿಕೊಳ್ಳು ; ತಲೆದೋರು ; ಉಂಟಾಗು ; ಹುಟ್ಟು : ನೆಗೆದ ಮುಗಿಲ್ಗಳುಂ ಸುರಿವ ಪೆರ್ಮೞೆಯುಂ ಮಿಗೆ ನುಣ್ಣನಪ್ಪ ಕೇಕಿಗಳ ಸರಂಗಳುಂ . . . ತೋಱೆ ಸುತ್ತಲುಂ (ಕವಿರಾ. ೧–೧೨೪) ; ಸುಭದ್ರೆಯೆಂಬ ಕನ್ನೆ ಕೆಮ್ಮುಗಿಲ ತೆರೆಯ ಪೊರೆಯೊಳ್ ನೆಗೆದು ಪೊಱಮಡುವ ವಿದ್ಯಾಧರಿಯಂತೆ . . . ಬಾಗಿಲೊಳ್ ನಿಂದು (ಪಂಪಭಾ. ೪–೩೯ ವ) ; ತರದಿಂ ರಂಗತ್ತರಂಗಂ ನೆಗೆಯಲೆಸೆವ ಗಂಗಾಪ್ರವಾಹಂಬೊಲಿರ್ದಂ (ಕಾದಂಪೂ. ೨೩೮) ; ಸರಿ ಸುರಿಯೆ ಮಿಂಚು ಮಿಳ್ಳಿಸೆ ಸುರಚಾಪಂ ನೆಗೆಯೆ (ಪಂರಾಮಾ. ೧–೮೧) ; ಮಾಣದೆ ಕಡುನೋವಿಂ ಕಣ್ಗಾಣದೆ ಬಾಷ್ಪಾಂಬು ನೆಗೆಯೆ (ಧರ್ಮಾಮೃ. ೩–೨೪೫) ; ನುತ ರೋಮಾಂಚಂಗಳೇಳಲ್ ಬೆಮರ್ವನಿ ನೆಗೆಯಲ್ (ರಕ್ಷಾಶ. ೬೫) ; ನೆಗೆದವು ಪುಳಕಂ ಬಾಷ್ಪಾಂಬುಗಳೊಗೆದವು (ಪಾರ್ಶ್ವಪು. ೧೬–೯೫) ; ನೆಗೆದ ಬುಗುಟಿದೆ ಹಣೆಯಲಿ (ಕುವ್ಯಾಸ. ೧೨–೩೦) ; ಮೃಗನಯನೆಗೊಂದು ದಿನ ಮೊಗದೊಳು ನೆಗೆದುದೊಪ್ಪುವ ಮೊಡವೆ (ಸಾಳ್ವಭಾ. ೩–೩೩). ೮. ಆವರಿಸು ; ಹಬ್ಬು ; ವ್ಯಾಪಿಸು ; ಪಸರಿಸು : ಪೊಗೆ ಪೆರ್ಚಿ ನೆಗೆದ ಕಾೞ್ಕಿರ್ಚುಮಂ (ಪದ್ಮಾರಾ. ೮೫–೨೭) ; ಮಯನೆಂಬ ದಾನವ ವಿಶ್ವಕರ್ಮಂ ನೆಗೆದುರಿವುರಿಮಾಲೆಗಳಂ ಗದೆಯೊಳ್ ಬೀಸುತ್ತುಂ ಪೊಱಮಡೆ (ಪಂಪಭಾ. ೫–೯೭ ವ) ; ಮಂದೈಸಿ ನೆಗೆವಗರು ಧೂಪಧೂಮದೊಳಮೆಸೆವಾಸ್ಥಾನಮಂಟಪದೊಳ್ (ಕಾದಂಪೂ. ೭೯) ; ದಿವಕ್ಕೆ ಪೋಪ ಬಟ್ಟೆಗೆ ಸೋಪಾನಂಗಟ್ಟಿದಂತೆ ತೆಱತೆಱದಿಂ ನೆಗೆದೊಗೆವ ಪೊಗೆಯಂ ಕಂಡು (ಪಂಚತಂ. ೧೧೬–೬) ; ಮನೆಮನೆದಪ್ಪದೆ ನೆಗೆದುದು ತನಿಗಿರ್ಚಿನೆ ದಹನವಿದ್ಯೆಯಿಂ ಸುಟ್ಟಂ ಪಾವನಿ ಲಂಕೆಯಂ (ಪಂರಾಮಾ. ೧೧–೧೪೪) ; ನೆಗೆದ ಕಾಂಗಿನ ಸಾಲಸಂದಣಿಯೊಳ್ ನಿಱಿಗಱಿಗಂಪನಾಡಿಯುಂ (ಕಬ್ಬಿಕಾ. ೫೪). ೯. ಬೀರು ; ಚೆಲ್ಲು ; ಸೂಸು : ಪೊತ್ತಲರ್ಗಂಪಂ ನೆಗೆದುಱೆ ತಣ್ಣೆಲರ ದಿನಿಸು ತೀಡಿತ್ತಾಗಳ್ (ಕಾದಂಉ. ೧೬೪). 'ನೆಸೆ$_1$' ಪರಾ.

**ನೆಗೆನೆಗೆ** (ದ್ವಿರುಕ್ತಿ) : ಪರಿಪರಿಯ ದಿವ್ಯವಸ್ತ್ರಂಗಳುಂ ತೆಗೆದು ಪಿಡಿದು ಶರಣರ ಮೈಯೊಳು ಬುರಬುರನೆ ನೆಗೆನೆಗೆದೇಳ್ವ ಪುಳಕದ ಸಾಲ್ಗೆ ದೃಷ್ಟಿಯಾದಪುದೆಂದು . . . ಪೊದೆಯಿಸಿ (ಬಸರ. ೮–೧೪) ; ಹೆಗಲನೇಱಿಸಿಕೊಂಡು ಮೆಲ್ಲನೆ ನೆಗೆನೆಗೆದು ನಡೆವುತ್ತ ನಿಮ್ಮೋಲಗಕೆ ಬಂದು (ಬಸಪು. ೪೭–೪೧). **ನೆಗೆಕೊಳ್ಳು, ನೆಗೆಗೊಳ್** = ೧. ಎತ್ತಿಕೊಳ್ಳು : ಹಬ್ಬಿದ ಹಳುವದಲಿ ಬಿದ್ದಿರ್ದ ಮಂಗಿಯ ಕಂಡು ನೆಗೆಕೊಂಡು ತಳುವದಲ್ಲಿಂ ಮಗುಳ್ದು ಬರುತಾ ಬಳಿಯಲಾ ಮುನಿವರರ ಚರಣಂಗಳ ಕೆಲದಲಿಳಿಪಿದನು ಮಂಗಿಯ ಶವವನಾ ಭಟನು (ಸಾಳ್ವಭಾ. ೨೦–೪೦). ೨. ಹೊಂದಿ

ಕೊಳ್ಳು ; ಅಳವಡು (?) : ವಿಲಸಿತವುಪ್ಪಲಂಕರಣಶಾಸ್ತ್ರದವೋಲ್ ದೆಸೆಗಳ್ ಪ್ರಸನ್ನಮಂ ತಳೆದು ಪೊದಟ್ಟಿದ್ದವಾ ರುಚಕಭೂಷೆಯವೋಲ್ ನೆಗೆಗೊಂಡು ಕಂಠದೊಳ್ ಪೊಳೆವ ಪಯಃಪ್ರವಾಹಮಯಮಾಯ್ತು ನದೀತತಿ ಸತ್ಕವೀಂದ್ರನುಜ್ಜ್ವಳಕವಿತಾಳಿವೋಲ್ ಮೃದುಪದನ್ಯಸನೋಚಿತಮಾಯ್ತು ಳಾತಳಂ (ಕುಸುಮಾ. ೬-೪೪). **ನೆಗೆದಾಟ** = ಹಾರಾಟ : ಖಗರಾಜ ಕಡುವೇಗದೆ ಪೋಗಿ ದೈತ್ಯರ ನೆಗೆದಾಟವ ಬಿಡಿಸೆನಲು ಗಗನದೊಳಡರಿ ಗಟ್ಟ್ಯವೆಜಕೆಯಲಿ ಬೀಳಲೊಗೆದನು ಧರಣಿಯ ತಲಕೆ (ಮೋಹತ. ೪೦-೭೪). **ನೆಗೆದಾಡು** = ಹಾರಾಡು ; ಕುಣಿದಾಡು : ನನೆಗಣೆಯನ ಮೆಯ್ವೆಳಗೆಂಬಿನಿಗೊಳದೊಳ್ ಮೊದಲೆ ಮೀಳ್ದುರ್ ನೆಗೆದಾಡಿದುವಂದೆನಸುಂ ಕಡು ನೀಟಿಯ ಚೆಲ್ವೆನೆ ತೊಳಗುವ ಕಣ್ಗಳೆಂಬ ಪೊಸಮೀಂಬೊಣರ್ಗಳ್ (ಕಬ್ಬಿಕಾ. ೩೩೧) ; ಶಿವ ನೀನಾದ ಕಾರಣದಿಂದೆ ಬಂದಾಹವದೊಳು ಬೊಬ್ಬಿಕ್ಕಬಹುದು . . . ಎಂದಚ್ಯುತ ಕವಲಂಬೊಳೆಚ್ಚು ಬೊಬ್ಬಿಱಿದ ಹರಿ ನೀನಾದ ಕಾರಣದಿಂದ ಸಮರ ತಾತ್ಪರಿಯದಿ ನೆಗೆದಾಡಬಹುದು ತುರಿಯದೆ ಕೈದ ಕೊಳ್ಳೆನುತಲೀಶ್ವರ ಮುಂದುವರಿದೆಚ್ಚನಾಗ ಬಾಣದಲಿ (ಮೋಹತ. ೩೯-೨೬). **ನೆಗೆದು ಬಿದ್ದು ಹೋಗು** = ನೆಗೆದು ಬೀಳು ೧ : ನಿನ್ನ ಮನೆ ಹಾಳಾಗ, ನಿನ್ನ ಮಕ್ಕಳು ನೆಗೆದು ಬಿದ್ದು ಹೋಗ ಎಂದು ಬಾಯಿಗೆ ಬಂದ ಹಾಗೆ ಆ ಮುದುಕಿ ಬಯ್ಯುತ್ತಿದ್ದಳು (ರೂಢಿ). **ನೆಗೆದು ಬೀಳು** = **೧**. ಸಾಯು ; ಮರಣಹೊಂದು : ವಿಷವನ್ನು ಬೆರಸಿದ ಅನ್ನವನ್ನು ತಿಂದು ಇಲಿಗಳೆಲ್ಲಾ ನೆಗೆದು ಬಿದ್ದವು (ರೂಢಿ). **೨**. ಬಹಳ ಪ್ರಯತ್ನಿಸು,—ಕಷ್ಟ ಪಡು : ನೀನು ಕಾಲೇಜನ್ನು ಬಿಟ್ಟುದರಿಂದ ಈ ಸ್ಥಾನ ನನ್ನದಾಯಿತು. ನಾನು ನೆಗೆದು ಬಿದ್ದಿದ್ದರೂ ನಿನ್ನನ್ನು ಮೀರಿಸಲು ಆಗುತ್ತಿರಲಿಲ್ಲ (ನಿರಾತೆ. ೬೭). **ನೆಗೆದು ಹೋಗು** = ಜಿಗಿಯುತ್ತ ಹೋಗು : ಅರಮನೆಯ ಹುಲ್ಲೆಕರುವೂ . . . ಯಾರೂ ಮಾತಾಡಿಸಲಿಲ್ಲವೆಂದು ನೆಗೆದು ಹೋಯಿತು (ಪುಟ್ಟರ. ೧೨). **ನೆಗೆದೇಳು** = ಪುಟಿದು ಮೇಲೇಳು : ಒಡನೆಯೆ ಅವಳು ನೆಗೆದೆದ್ದು . . . ಹೊರಟು ಹೋಗುವಂತೆ ಒತ್ತಾಯಪಡಿಸಿದಳು (ಪುನರು. ೮೦). **ನೆಗೆದೋಡು** = ನೆಗೆಯುತ್ತ ಓಡು ; ಚಿಮ್ಮು : ದೊಡ್ಡನಂ ಕಂಡೊಡನೆ ನೆಗೆದೋಡಿ ಮರೆಯಾಯ್ತು (ಕಾಲೂರ. ೮೨-೧೫೫).

[**ದೇ.**॥ **ತಮಿ.** ನಿವ; **ಮಲ.** ನಿಕ ; **ತುಳು.** ನೆಗಿ ; **ತೆಲು.** ನೆಗಯು, ನೆವಯು ; **ಕೋಲಾ. ನಾಯ್ಕಿ.** ನೆಗಯ್]

**ನೆಗೆ$_2$** (ನಾ). ಹಾರುವುದು ; ಜಿಗಿತ; ನೆಗೆತ : ನನ್ನ ಬೆನ್ನೇರಿಯುಂ ಪೆಣ್ಗೆ ಸಾಧ್ಯಮೆ ಕಡಲ ನೆಗೆ? (ಶ್ರೀರಾಮಾ. ೫೨೨-೫೯೪).

[<ನೆಗೆ$_1$]

**ನೆಗೆಣ್ಣೆ** 'ನಗೆವೆಣ್' ನೋ.

**ನೆಗೆಣ್ಣು** 'ನಗೆವೆಣ್' ನೋ.

**ನೆಗೆತ** (ನಾ). ಜಿಗಿಯುವಿಕೆ ; ಹಾರುವಿಕೆ ; ಎಗರುವಿಕೆ : "ಶಕ್, ಶಶಿಃ, ಶಶುಃ, ಶಶಿತಂ, ಶಾಸ್ಯಂ, ಈ ೫ ನೆಗೆತಂ" (ಕಾಶಕ್ಯ. ೬೪).

[ನೆಗೆ$_1$+–ತ$_2$]

**ನೆಗೆತರ್** (ಕ್ರಿ). **೧**. ಹಾರಿ ಬರು ; ಹಾರು : ಅಗಲಲಸಹ್ಯಮೆಂದು ಪೆಱಗೀ ಬಱಿಸಲ್ವಳಿ ಮುಂದೆ ಬಂದಳೀ ತಗೆವೊಡೆ ಚಿತ್ತದುತ್ಕಲಿಕೆಯಿಂ ನಭಕೀ ನೆಗೆತಂದಳ್ (ಕಾದಂಉ. ೧೮೧) ; ಎಳಸಿ ನೆಗೆತಂದು ಮಿಕ್ಕಗ್ಗಳಿಸುತುಮಿರ್ದಂತಿರಪ್ಪ ಮಧುರರಸಂ ವೆಗ್ಗಳಿಸೆ ಲವಲವಿಸುತುಂ ಪಣ್ಗಳೊಳಳ್ದುದದೊಂದು ರಾಜಶುಕನತಿಭರದಿಂ (ಗಿರಿಕ. ೨-೪೦) ; ಹಾದಿಗೆಟ್ಟು ತೊಟ್ಟಗೆ ನೆಗೆತರ್ಪ [ಪಾಠಾಂ. ನಡೆತರ್ಪ] ಸುಣ್ಣದಿರೊ (ಕಬ್ಬಿಕಾ. ೩೦೬) ; ಬಳೆದು ನೆಗೆತಂದು ದಾಂಥಳ ಧಳಂಧಳಧ್ವನಿಯಂಳುರ್ಕೆಗೊಳೆ ಶಬ್ದಗುಣಂ ತಿಳಿವೊಡದಕಾಯ್ತು ಗಗನಸ್ಥಳಿಗಲ್ಲದೊಡಲ್ಲಿ ಶಬ್ದಮೇಂ ಸಮನಿಕುಮೇ (ರಾಜಶೇ. ೬-೪೪). **೨**. ಮೇಲಕ್ಕೆತ್ತು : ಆ ಖಡುಗವನು ನೆಗೆತಂದು ಗಂಡನ ಕೊರಳ ಹೊಯ್ಯಲು (ಸಾಳ್ವಭಾ. ೨೦-೪೬). **೩**. ಮೂಡು ; ಹುಟ್ಟು ; ಉಂಟಾಗು : ಬೆಳ್ಪು ನೆಗೆತಂದುದಯಾದ್ರಿಯ ಸೆಜ್ಜರಕ್ಕೆ ಪಕ್ಕಗೆ ಬರುತಿರ್ಪ ದೇವಗಜದಂಗಮರೀಚಿಯ ಭಂಗಿವೆತ್ತಿರಲ್ ಬಗೆಗೊಳಿಸಿತ್ತು ಚಂದನರಸಂದೊಡೆದಂದದೆ ಪೂರ್ವ ದಿಙ್ಮುಖಂ (ಜಗವಿ. ೧೬-೧೦೩). [ನೆಗೆ$_1$+ತರ್]

**ನೆಗೆಯಿಸು** (ಕ್ರಿ). ನಿಮಿರಿಸು ; ಮೂಡಿಸು : ಸೊಗಯಿಪ ಮುಗ್ಧಾವಲೋಕನಪ್ರಭೆಯಿಂ ತಾಂ ನೆಗೆಯಿಸುವಂ ಪುಳಕಶ್ರೇಣಿಗಳಂ ಪಿತೃಮಾತೃಗಾತ್ರದೊಳ್ ನೃಪಪುತ್ರಂ (ಕುಸುಮಾ. ೬-೧೪೪).

[ನೆಗೆ$_1$+–ಇಸು$_3$]

**ನೆಗೆಲು** (ನಾ). (?) : ಆ ದೇವರುಗಳ ಅಮ್ರುತಪಡಿ ನೆಗೆಲು ದಿ ೧ ಕಂಕೊ ೨ ಲೆಕದತಿ ೧ (ಎಕ. VI, ಕಡೂರು. ೪೯-೫೩ ; 1291). [ ? ]

**ನೆಗೆವಕ್ಕಿ** (ನಾ). ಹಾರುವ ಹಕ್ಕಿ ; ಮೇಲಕ್ಕೆ ಚಿಮ್ಮುವ ಪಕ್ಷಿ : ನೆಗೆವಕ್ಕಿಯ ಬಾಣದಿ ಹಾರುವ ತಾಣದಿ ಕಾಲ ಬುಡಕೆ ನಾ ಕೆಳಗಿಸುವೆ (ಹೆಬ್ಬೆರ. ೧-೧೨). [ನೆಗೆ$_1$+ಪಕ್ಕಿ]

**ನೆಗೆವರಿ** (ಕ್ರಿ). ಚಿಮ್ಮುತ್ತ ಹರಿ ; ಜಿಗಿಯುತ್ತ ಪ್ರವಹಿಸು : ಎಲಗಣಲಿಯಿನ್ದೆ ತೆಂಕಲು ಜಲರುಹಸುತಲಲನೆ ವರದ ತೀರ್ಥಂ ನದಿ ತಾಂ ಜಳಘುದ್ರಿತ ತುಂಗಭದ್ರೆಯೊಳೊಲವಿನೊಳಾ ಕೆಳದಿಯೊಳು ನೆಗಂ ನೆಗೆವರಿದಳ್ (ಮೈಆರಿ. ೧೯೩೮, ೮೫-೮ ; 1085). [ನೆಗೆ$_1$+ಪರಿ$_2$]

**ನೆಗೆವಾವು** (ನಾ). ಜಿಗಿಯುವ ಸರ್ಪ ; ಎಗರುವ ಹಾವು : ಶರಚ್ಛಶಾಂಕರುಚಿಯೊಳ್ ಸೆಣಸಲೆಳಸಿ ನೆಗೆವಾವೆನಿಸಿ ರಂಜಿಪ ಧವಳಚಾಮರಮಂ ಬಿಂಕದಿಂ ಕೊಂಕಿ ನಿಂದು ಸೂಳಱಿದು ತೋಳ್ಗಳಂ ನೆಗಪಿ ಡಾಳಿಪ ಗಾಯತ್ರ್ಯಾದಿ ಪರಮಶಕ್ತಿಯರಿಂ (ಶಬಶಂ. ೧-೭೯ ವ). [ನೆಗೆ$_1$+ಪಾವು$_1$]

**ನೆಗೆವೆಣ್ಣೆ** 'ನಗೆವೆಣ್' ನೋ.

**ನೆಗೆಹ** (ನಾ). ಮೇಲಕ್ಕೆತ್ತುವುದು : "ನೆಗೆಹ– ಉನ್ನಾಯ,ಉನ್ನಯ" (ನಾಚಿರಾ. ೬). [ನೆಗೆ$_1$+–ಹ$_2$(<–ಪ$_2$)]

**ನೆಗೆಹೆಣ್ಣು** 'ನಗೆವೆಣ್' ನೋ.

**ನೆಗೆಹೆಣ್ಣೆ** 'ನಗೆವೆಣ್' ನೋ.

**ನೆಗೆಳ್ಳು** 'ನಗೆಯೆಳ್ಳು' ನೋ.

**ನೆಗ್ಗಲಿ** 'ನೆರ್ಗಿಲ್' ನೋ.

**ನೆಗ್ಗಲಿಮುಳ್ಳು** 'ನೆಗ್ಗಿಲುಮುಳ್ಳು' ನೋ.

**ನೆಗ್ಗಲು** 'ನೆರ್ಗಿಲ್' ನೋ.

**ನೆಗ್ಗಲುಮುಳ್ಳು** 'ನೆಗ್ಗಿಲುಮುಳ್ಳು' ನೋ.

**ನೆಗ್ಗಲೆ** 'ನೆರ್ಗಿಲ್' ನೋ.

**ನೆಗ್ಗಿಲ್** 'ನೆರ್ಗಿಲ್' ನೋ.

**ನೆಗ್ಗಿಲು** 'ನೆರ್ಗಿಲ್' ನೋ.

**ನೆಗ್ಗಿಲುಮುಳ್ಳು**, ನೆಗ್ಗಲಿಮುಳ್ಳು, ನೆಗ್ಗಲುಮುಳ್ಳು (ನಾ). = ನೆರ್ಗಿಲ್ : ಕಾಲ ತುಂಬ ನೆಗ್ಗಿಲುಮುಳ್ಳು ನಟ್ಟಿವೆ (ರೂಢಿ). **ನೆಗ್ಗಲಿಮುಳ್ಳು** : ನೆಗ್ಗಲಿಮುಳ್ಳು, (**ಗೋಖುರು**) (ಮುಂಬವ್ಯಾ. ೧೨೫). **ನೆಗ್ಗಲುಮುಳ್ಳು** : ಇಬ್ಬಂದಿಕಾರ ಜವರಾಯ್ನ ಮಗ್ಗಲಿಗೆ ನೆಗ್ಗಲುಮುಳ್ಳು ಸುರಿಯಾಲಿ (ಹಳ್ಳಿಯ. ೧೨೩).

[ನೆಗ್ಗಿಲು (<ನೆರ್ಗಿಲ್)+ಮುಳ್ಳು(<ಮುಳ್)]

**ನೆಗ್ಗಿಲ್ಗಾಡು** (ನಾ). ನೆಗ್ಗಿಲು ಮುಳ್ಳುಗಳಿಂದ ತುಂಬಿದ **ಕಾಡು** : ಕಿಸುಗಾಡುಮಂ ನೆಗ್ಗಿಲ್ಗಾಡುಮಂ ನಿಡುವುಲ್ಲುಮಂ ಮಣಲುಮಂ . . . ಬಳ್ಳಿಯುಮಂ ಕಳ್ಳಿಯುಮಂ ಕಳೆದು ಪೋಗಿ (ಲೀಲಾವ. ೬-೧೬ ವ).

[ನೆಗ್ಗಿಲ್ (<ನೆರ್ಗಿಲ್)+ಕಾಡು$_2$]

**ನೆಗ್ಗಿಸು,** ನಗ್ಗಿಸು (ಕ್ರಿ). ೧. ತಗ್ಗು ಬೀಳಿಸು ; ಹಳ್ಳ ಬೀಳುವಂತೆ ಮಾಡು : ಮದಗಜ ನೀಲಾದ್ರಿನಿಚಯದ ಪರಿತಪ್ಪ ಪದಘಾತ ನೆಲನ ನೆಗ್ಗಿಸಿತು (ಮೋಹತ. ೪೦-೧೦). ೨. ಬಗ್ಗಿಸು ; ಸೋಲಿಸು : ನೀಲಕಂಧರನ ನೆಗ್ಗಿಸಿದಂತೆ ನೀನೆನ್ನ ಮೇಲುರವಣಿಸೆಂದು ಬಸವ ಶೂಲದಂತೆಸೆವ ಕೊಂಬುಗಳಿಂದೆ ತಿವಿದುದು ಬಾಲಾಹಿಸೂದನನೆದೆಯ (ಮೋಹತ. ೩೪-೩೧). ೩. ನಾಶಮಾಡು; ಇಲ್ಲವಾಗಿಸು : ಪ್ರಕಟಿತವಾಗಿರ್ದ ಖಗನಿಚಯವ ಕುಮಾರಕ ಬೇಂಟೆಯೊಳಗೆ ನೆಗ್ಗಿಸಿದ (ಮೋಹತ. ೧೯-೪೨). ೪. ಬೆರಳನ್ನು ಬಗ್ಗಿಸಿ ಶಬ್ದವನ್ನುಂಟು ಮಾಡು ; ನೆಟಿಗೆ ತೆಗೆ : ಕೊರಲೊಳು ಗದ್ಗದ ಸುರಿವ ಕಣ್ಬನಿ ಕೆಯ್ಯ ಬೆರಲ ನೆಗ್ಗಿಸುವ ಸಂಪಗೆಯ ಅರಳಂಡ ಪೆಣ್ದುಂಬಿಯುಂದದಿನಿಯ ಪೂಸರಲನ ತಂದು ತೋಱಿದಳು (ಮೋಹತ. ೧೨-೨೨). **ನಗ್ಗಿಸು :** ೨. ಮುಂತೆಯ್ದುವ ಉಳಿಯಿಂ ಘೀಳಿರಿನಲುಗುವ ಡಮರುವ ನಗ್ಗಿಸಿ ಕೊಡಹುವ [ವಿಾಱಿದ] ಸಾಹಸದ ಮೇಲೇಱುವ ಬಗೆ ಮಿಗೆ . . . ಕರಿಘಟೆ ನೆರೆದುವು ಬಲದೊಳಗೆ (ವೀರೇಚ. ೨-೨೪). [ನೆಗ್ಗು$_1$ (<ನಱುಂಕು) + -ಇಸು$_3$]

**ನೆಗ್ಗು$_1$** 'ನಱುಂಕು' ನೋ.

**ನೆಗ್ಗು$_2$,** ನಗ್ಗು$_2$ (ನಾ). ಪೆಟ್ಟು ಬೀಳುವಿಕೆಯಿಂದ ಪಾತ್ರೆಗಳಲ್ಲಿ ಉಂಟಾಗುವ ತಗ್ಗು : (ಓ). **ನಗ್ಗು$_2$ :** 'ನಗ್ಗೆತ್ತಿಸು' ಪರಾ.

**ನಗ್ಗುಬೀಳು** = ಜಜ್ಜಿಹೋಗು ; ತಗ್ಗಾಗು ; ತಗ್ಗು ಬೀಳು : (ಓ). [<ನಱುಂಕು]

**ನೆಗ್ಗು$_3$** (ನಾ). ಒಂದು ಅನುಕರಣ ಶಬ್ದ : ನಿಱುನಿಟಿಲು ನೆಗ್ಗೆಂಬ ಧ್ವನಿಗೆಚ್ಚೆತ್ತು ಕಾವರಲ ಮಱೆದು ಕಳವಳಿಸುತ್ತ ಬೆಚ್ಚುತ್ತ . . . ಹರಿತರಲು (ಕೌಶಿರಾ. ೧೧-೨೧).

**ನೆಗ್ಗೊತ್ತು** 'ನೆಗ್ಗೊತ್ತು' ನೋ.

**ನೆಚ್ಚಾರ್ಪು** (ನಾ). ನಂಬಬಹುದಾದ ಸಾಹಸ; ವಿಶ್ವಸನೀಯವಾದ ಪರಾಕ್ರಮ (?) : ನಿನ್ನ ಕಲಿಗಳ ಕೂರ್ಪು, ಕೆಚ್ಚೆದೆಯ ಕಟ್ಟಾಳ ಕೂರ್ಪು, ನೆಚ್ಚಾರ್ಪು (ಹೊಂಗಳು. ೧೫-೨೦).

[ನೆಚ್ಚು$_2$ (<ನಚ್ಚು$_2$) + ಆರ್ಪು$_1$]

**ನೆಚ್ಚಿಕೆ** 'ನಚ್ಚಿಕೆ' ನೋ.

**ನೆಚ್ಚಿಗೆ** 'ನಚ್ಚುಗೆ' ನೋ.

**ನೆಚ್ಚಿಸು** 'ನಚ್ಚಿಸು$_1$' ನೋ.

**ನೆಚ್ಚು$_1$** 'ನಚ್ಚು$_1$' ನೋ.

**ನೆಚ್ಚು$_2$** 'ನಚ್ಚು$_2$' ನೋ.

**ನೆಚ್ಚುಕಡ್ಡಿ** (ನಾ). ಒಂದು ಬಗೆಯ ಸಸ್ಯ : ಕರಿನೆಕ್ಕಿ, ಕರಿಲಕ್ಕಿ, ನೆಚ್ಚುಕಡ್ಡಿ (ಮೈಔಗಿ. ೪೮-೫೪). [ನೆಚ್ಚು? + ಕಡ್ಡಿ]

**ನೆಚ್ಚುಗೆ** 'ನಚ್ಚುಗೆ' ನೋ.

**ನೆಚ್ಚುಗೆಡು** 'ನಚ್ಚುಗೆಡು' ನೋ.

**ನೆಚ್ಚುಮೆಚ್ಚು** 'ನಚ್ಚುಮೆಚ್ಚು' ನೋ.

**ನೆಜರಿಡು** 'ನದರಿಡು' ನೋ.

**ನೆಜರು** 'ನಜರು' ನೋ.

**ನೆಟ್,** ನೆಟ್ಟ$_2$ (ಸಪೂರೂ). 'ನಿಡಿದು' ಎಂಬ ನಾಮವಾಚಕಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ. 'ನೆಟ್ಟಗೆ', 'ನೆಟ್ಟನೆ', 'ನೆಟ್ಟೆಲುವು' ಪರಾ. **ನೆಟ್ಟ$_2$ :** 'ನೆಟ್ಟಗರುಳು' ಪರಾ.

[<ನಿಡಿದು$_1$]

**ನೆಟಂದಿಱು** (ಕ್ರಿ). ಆಯಾಸ ಹೊಂದು ; ಬಳಲು : "ನೆಟಂದಿಱಿದು ದೆಂದು ದಣಿದುದು (?)" (ಕಶಸಾ. ೭೦-೬೦೦) ; "ನೆಱೆ ದಣಿದುದೆನಲು ನೆಟಂ[ಪಾಠಾಂ. ನೆಟ್ಟಂ]ದಿಱಿದುದು" (ಕವಿಕಂ.೨೪೧). [? + ತಿಱು]

**ನೆಟಕೆ** 'ನೆಟ್ಟಿಕೆ' ನೋ.

**ನೆಟಕೆ ಮುರಿ** 'ನೆಟ್ಟಿಗೆ ಮುರಿ' ನೋ.

**ನೆಟಗೆ** 'ನೆಟ್ಟಿಕೆ' ನೋ.

**ನೆಟಗೆ ತೆಗೆ,** ನಟಕೆ ತೆಗೆ, ನೆಟಗೆ ತೆಗೆ (ಕ್ರಿ). ೧. ನೆಟ್ಟಿಗೆಯನ್ನು ತೆಗೆ ; ನೆಟ್ಟಿಗೆ ಮುರಿ : ಕೈಬೆರಳುಗಳನ್ನು ಮುರಿದುಕೊಳ್ಳುತ್ತ ನೆಟಗೆ ತೆಗೆಯಲಾರಂಭಿಸಿದಳು (ಕುಮಾಸಾಂ.೧೪೨). **ನಟಕೆ ತೆಗೆ :** ೨. ದೃಷ್ಟಿಯನ್ನು ತೆಗೆ : ಮಗುವಿಗೆ ನಟಕೆ ತೆಗೆದರು (ರೂಢಿ). **ನೆಟಗೆ ತೆಗೆ :** ೧. ಅವನು ಆಯಾಸದಿಂದ ನೆಟಗೆ ತೆಗೆಯುತ್ತ ಎದ್ದು ನಿಂತ (ರೂಢಿ).

[ನೆಟಗೆ (<ನೆಟ್ಟಿಕೆ) + ತೆಗೆ$_1$]

**ನೆಟಿಕೆ** 'ನೆಟ್ಟಿಕೆ' ನೋ.

**ನೆಟಿಕೆ ಮುರಿ** 'ನೆಟ್ಟಿಗೆ ಮುರಿ' ನೋ.

**ನೆಟಿಗೆ** 'ನೆಟ್ಟಿಕೆ' ನೋ.

**ನೆಟಿಗೆ ತೆಗೆ** 'ನೆಟಗೆ ತೆಗೆ' ನೋ.

**ನೆಟಿಗೆ ಮುರಿ** 'ನೆಟ್ಟಿಗೆ ಮುರಿ' ನೋ.

**ನೆಟಿಸು** 'ನಡಿಸು$_2$' ನೋ.

**ನೆಟುಕು** 'ನೆಟ್ಟಿಕೆ' ನೋ.

**ನೆಟ್ಟ$_1$** 'ನಡು$_1$' ಪರಾ.

**ನೆಟ್ಟ$_2$** 'ನೆಟ್' ನೋ.

**ನೆಟ್ಟ$_3$** (ಅ). ಉದ್ದವಾಗಿ ; ನೀಳವಾಗಿ : ಪಂಚಾಗ್ನಿಮಧ್ಯದೊಳ್ನಿಂದು ನೆಟ್ಟನೆಗಪಿ ಬಾಹುಗಳ ಘನಪರಂಜ್ಯೋತಿಯಂ ಮನದ ಕೊನೆಯಲ್ಲಿ ತಾಳ್ದು (ಕುಮಾವ್ಯ. ೧-೪೦). [<ನೆಟ್ಟನೆ]

**ನೆಟ್ಟಗರುಳು** (ನಾ). ದೊಡ್ಡ ಕರುಳು : ಹಿಂದುಗಡೆಯ (ಬೆನ್ನ ಕಡೆಯ) ಕೊಳವೆ ನೆಟ್ಟಗರುಳಾಗಿ (ರೆಕ್ಟಮ್), ಮೇಲ್ಮುಖದ ಇನ್ನೊಂದು ಕುಳಿಯನ್ನು (ಗುದ) ಕೂಡಿಕೊಂಡು ಕ್ಲಾಕ್ಸಿಕ್ಸ್‌ನ ಸದ್ಯ ಮುಂದುಗಡೆ ಕೊನೆಗೊಳ್ಳುವುದು (ಕವಿಕೋ. I, ೧೪).

[ನೆಟ್ಟ$_2$ (<ನಿಡಿದು$_1$) + ಕರುಳು (<ಕರುಳ್)]

**ನೆಟ್ಟಗೆ** (ಅ). ೧. ಉದ್ದವಾಗಿ; ನೀಳವಾಗಿ : ಹೊಗೆಯೊಳಗೆ ಹೋಗಬೇಕಾದರೆ ಬಾಗಿಕೊಂಡು ಹೋಗಬೇಕು ; ಹಾಗೇ ನೆಟ್ಟಗೆ ಹೋಗಬಾರದು (ಮುಂಬಯಿ. ೪-೬೧). ೨. ಅಣಿಯಾಗಿ ; ಸುವ್ಯವಸ್ಥಿತವಾಗಿ : ಸಂಜೆ ಹೊತ್ತಿಗೆ ಕಾರ್ಯಕ್ರಮ ನಡೆಯುವ ಅಂಗಳವನ್ನು ನೆಟ್ಟಗೆ ಇಟ್ಟಿರಬೇಕು (ರೂಢಿ). ೩. ಚೆನ್ನಾಗಿ : ಕನಕಪ್ರಾಕಾರದ ಬಾಗಿಲ್ವಾಡಂಗಳೊಳಂ . . . ಚತುರ್ವಿಂಶತಿಹಸ್ತತಿಮಾವಿರಾಜಮಾನ ಹೇಮದಾಮವಿಳಂಬಿತ ಮಣಿಘಂಟಾಸಮನ್ವಿತವಂದನಮಾಲೆಗಳೊಳಂ . . . ತನ್ನ ಮಕುಟಶಿಖರಮನವು ನೆಟ್ಟಗೆ ತಾಗುವಂತು ಮಾಗಿರೆ ಜಗದಧಿಪನುದಾತ್ತಭಕ್ತಿಯಿಂ ಮಾಡಿಸಿದಂ (ಆದಿಪು. ೧೬-೩೪) ; ನೆಟ್ಟಗೆ ಗುರುಪಾದವ ಮುಟ್ಟ ಭವಗೆಟ್ಟನು (ದೇದಾವ. ೧೧-೧೪). ೪. ಸರಿಯಾಗಿ ; ಸಮರ್ಪಕವಾಗಿ : ನಿಮ್ಮ ಪ್ರಕೃತಿ ಹೇಗಿದೆ . . . ನೆಟ್ಟಗಿದ್ದೇನೆ (ಕೊತಶಾ. ೨) ; ಒಂದ ಸಾಮಾನು ನೆಟ್ಟಗ ನೋಡಿ ತರುವಂತಿಲ್ಲ ಬಿಡುವಂತಿಲ್ಲ (ಅಶೋಕ. ೧) ; ನೋಟ ನೆಟ್ಟಗಿದ್ದರೆ ಕಾಟ ಹ್ಯಾಗೆ ಬಂದೀತು ? (ಗಾದೆ). ೫. ಅಂದವಾಗಿ : ಪರೀಕ್ಷೆಯಲ್ಲಿ ಅಕ್ಷರ ನೆಟ್ಟಗೆ ಬರೆದು ಬಾ (ರೂಢಿ). ೬. ಸ್ಪಷ್ಟವಾಗಿ ; ಸ್ಫುಟವಾಗಿ ; ವ್ಯಕ್ತವಾಗಿ ; ತೊಡಕಿಲ್ಲದೆ : ನೆಗಟ್ದಾ ನಪುಂಸಕ್ಕೈಕೋಕ್ತಿಗೆ ಕೆಲರಿತುವಿತುವತ್ತು ವೆಂದುಸಿರ್ವರ್ ನೆಟ್ಟಗೆ ಪುಗಿಸುವರಂತೇಕೋಕ್ತಿಗೆ ತಾಂ ಸ್ತ್ರೀವಿಷಯಮಾಗಳಂತಸ್ಥಿತಿಯಂ (ಶಮದ. ೨೨೬). ೭. ಪೂರ್ಣವಾಗಿ : ಮೃಗದೊಳವರಮುಮನರಸನ ಬಗೆಯುಮನಱಿದಲಸದೆಳಸಲೋಲಗಿಸಲ್ ನೆಟ್ಟಗೆ ಬಲ್ಲನುಳ್ಕೊಡವನಲ್ತೆ ಗುಣಾರ್ಣವ ಬೇಂಟೆಕಾಱ

ನೋಲಗಕಾಱಂ (ಪಂಪಭಾ. ೫-೪೨) ; ನರಂಗೆ ದುರ್ಗಮಂ ಸುಗಮುಮಿ ದೊಂದೆ ಪಂಚಶತಚಾಪಮಿತಂ ತನು ಪುಬ್ಬಕೋಟಿ ನೆಟ್ಟಗೆ ಪರಮಾಯು ಪುಟ್ಟಿದವರ್ಗೆಂಬ ಕಥಾಕಥನಂ ವಿದೇಹದೊಳ್ (ಮಲ್ಲಿಪು. ೨-೫). **೮. ತಕ್ಷಣ ; ಕೂಡಲೇ :** ನೆಟ್ಟಯ ಪೇೞಿಕ್ಕೆಯಿನೊಯ್ಯನೆ ನೆಟ್ಟಗೆ ವೈಡೂರ್ಯರತ್ನಮುಂ ತರ್ಪನನೆಟ್ಟಿಟ್ಟಿ ಖಳನೆಂದು ಕಲ್ಲಿಂದಿಟ್ಟು ಕುಕಿಲ್ದಾರ್ದು ಬಱಿದೆ ನೋಡ ತಳಾಜಂ ಕೊಂಡಂ ಮುನ್ನ (ಧರ್ಮಾಮೃ. ೬-೧೨೫) ; ಬಗೆಗೊಗೆದಳ್ತಿಯಂ ಸಲಿಸವೇಳ್ವುದು ಬೇಡೆನವೇಡ ತಂದೆ ನೆಟ್ಟಗೆ ಮುಳಿದಪ್ಪನೆಂದೆಣಿಸದಿರ್ (ರಾಜಶೇ. ೧೩-೨೬). **೯. ಸರಳವಾಗಿ ; ನೇರವಾಗಿ ; ಋಜುಮಾರ್ಗದಲ್ಲಿ:** ಋಜುಃ, ಅಜಿಂಹಃ, ಪ್ರಗುಣಃ — ೩ ನೆಟ್ಟಗಿರುವುದರ ಪೆಸರು (ಸಿದ್ಧಾಂತಿ. ೩೪೨). **೧೦. ನಿರಾತಂಕವಾಗಿ ; ಸಹಜವಾಗಿ :** ಭಯಪಡದೆ ನಡೆದುದನ್ನು ನಡೆದ ಹಾಗೆ ನೆಟ್ಟಗೆ ಹೇಳು (ರೂಢಿ). **೧೧. ಸತ್ಯವಾಗಿ ; ನಿಸ್ಸಂದೇಹವಾಗಿ.**

**ನೆಟ್ಟಗಾಗು**=**೧. ನೀಳವಾಗು ; ನೇರವಾಗು :** ಒಂಟೆಯ ಕತ್ತು ನೆಟ್ಟಗಾಯಿತ್ತು (ವಚಸಂ. ೪೧೨-೭೯). **೨. ಸರಿಯಾಗು ; ಒಳಿತಾಗು ; ಲೇಸಾಗು :** ಹಾಗಾದರೆ ನೆಟ್ಟಗಾಯಿತು (ಮುಂಬಯಿ. ೪-೧೭೮) ; ಇನ್ನು ಮಾತ್ರ ನನ್ನ ಗತಿಯು ನೆಟ್ಟಗಾಗುವುದಿಲ್ಲ (ಮಂಜುಕ. ೩೧). **೩. (ರೋಗದಿಂದ) ಗುಣ ಹೊಂದು ; ವಾಸಿಯಾಗು :** ಶ್ರೀಕಾಂತ ನೆಟ್ಟಗಾಗುವ, ನೆಟ್ಟಗಾಗಲೇಬೇಕು, ಎಂಬ ದೃಢವಿಶ್ವಾಸ ಕೊನೆಯವರೆಗೂ ಇತ್ತು (ಮುಕ್ತಿ. ೯). **ನೆಟ್ಟಗಿರು**=**ಸರಿಯಾಗಿರು:** ನಿನಗೆ ತಲೆ ನೆಟ್ಟಗಿದೆಯೋ ಇಲ್ಲವೋ (ಪಂಜಪಂ. ೨೧೬). **ನೆಟ್ಟಗೆ ಮಾತಾಡು**=**ಕ್ರಮವರಿತು ಮಾತನಾಡು :** ನೆಟ್ಟಗೆ ಮಾತಾಡಲೂ ಬರುವುದಿಲ್ಲ. ವಾದ ಬೇರೆ ಮಾಡುತ್ತೀಯಾ ? (ರೂಢಿ). [ನೆಟ್(<ನಿಡಿದು$_1$)+-ಅಗೆ$_3$]

**ನೆಟ್ಟನೆ** (ಅ). **೧. ನೇರವಾಗಿ :** ನೀಂ ಮೊನ್ನಿನ ಶೂನ್ಯವಚನಮಂ ನುಡಿಯದೆ ನೆಟ್ಟನೆ ಬರ್ಪುದು (ಧರ್ಮಾಮೃ. ೫-೨೨೮) ; ಹೃದಯಂಗಮಂ ನೆಟ್ಟನೆ ಪುನಂಬುಗುವ ನುಡಿಯುಕ್ಕು (ಮಂಗರಾ. ೨೬-೨) ; ನೀಡಿದಾ ಕೈಯಲ್ಲಿ ಮುನ್ನಂ ನೀಡಿದಂದದಿ ನೀಡು ನೆಟ್ಟನೆ (ಬಸವು. ೨೪-೮೨) ; ನೆಟ್ಟನಲ್ಲಿಂದಿಳಿದು ಬಂದನು ಪಟ್ಟಣಕೆ (ಸಂಭಪ. ೧೦-೧೪) ; ಭಾವೆಯರು . . . ನೆಟ್ಟನೆ ಸ್ಮರಸಿರ್ದ ನಂದನದೆಡೆಗೆ ಸಾಲಿಟ್ಟುದನೇಕ ಸಂಭ್ರಮದಿ (ಮೋಹತ. ೫-೨೯). **೨. ಸರಿಯಾಗಿ :** ಮತ್ತುಱಿಯಲಾಗದು ನೆಟ್ಟನೆ ಪೂಣ್ದುದಂ ಪುಸಿವರಾಗಿರದೆ ಮಾನಸರ್ (ಕವಿರಾ. ೧-೧೩೫) ; ಸುಳಿದಡೆ ನೆಟ್ಟನೆ ಜಂಗಮವಾಗಿ ಸುಳಿಯಬೇಕು ನಿಂದರೆ ನೆಟ್ಟನೆ ಭಕ್ತನಾಗಿ ನಿಲಬೇಕು (ಅವಚಂ. ೭೬-೩೩೯). **೩. ಚೆನ್ನಾಗಿ :** ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನಮಾನಟ್ಟು ಬಡಿಸು (ಕವಿರಾ. ೨-೧೪೭) ; ಪಸರಿಸಿದುದು [ಕೀ]ರ್ತಿ ನೆಟ್ಟನನುಪಮ ಕವಿಯ (ಎಕ. X, ೧೫೧-೨೮ ; 915) ; ಜಿನರ ಪ್ರತಿಮೆಗಳಂ ನೆಟ್ಟನೆ ಪೊಸ್ನಂ ಮಾಡಿ . . . ಪೂಜಿಸುತುಂ (ಧರ್ಮಾಮೃ. ೧೦-೨೭) ; ಮಾಡಿಸಿದಂ ಜಿನರಾಜಗೇಹಮಂ ನೆಟ್ಟನೆ ಪೊಯ್ಸಳೇಸನನೆ ಬಣ್ಣಿಪರಾರ್ (ಎಕ. II, ೧೪೩-೧೨ ; 1131) ; ಮಹಾಭಟರ ಕಟೀತಟಂಗಳೊಳ್ ಕಟ್ಟ ನೆಟ್ಟನೆ ಮಿಱುಗುವೋಱೆಗಳಿಂ ಪೊಜಗಣ್ಗೆ ತಾಮೆ ಬಿಗಿದು ಪಾಱಿ ಋಣಋಣತ್ಕೃತಿಗೆಯ್ವ ಖಳ್ಗಧೇನುಗಳ್ (ಪಾರ್ಶ್ವಪು. ೮-೪೦ ವ). **೪. ಸ್ಪಷ್ಟವಾಗಿ ; ಸ್ಫುಟವಾಗಿ :** ನೆಟ್ಟನೆ ವಿಷಮೊಳ್ಗೆಗುಳ್ದೊಡಮುದೊಳ್ಗೆಯೆ ಕಾಳಿಯ ನಾಗನಾಗದು (ಪಂಪಭಾ. ೧೨-೪೧) ; ನೆಟ್ಟನಾತನೆ ಮುಂ ತಾಸಿಸಿತೊಂಡವಸ್ಥೆಗೊಳಗಾಗಲ್ ಕಾಮನಂ ಬಿಟ್ಟು ಮತ್ತೆ ನಗಾರ್ ಬಂಧುಗಳ್ (ಕಾಮಂಪೂ. ೮೬೬) ; ರಾಜಸೂಯಮುಖಮಂ ತಡವಿಲ್ಲದೆ ಬೇಳ್ದ ಜೀರಮಂ ನೆಟ್ಟನೆ ಸೀನೆ ಕಂಡಿಱಿಸಲಕ್ಕುಮೆ ಗಾಂಡಿನಿಯಂ ಸುಯೋಧನಾ (ಗದಾಯು. ೨-೩೭). **೫. ಪೂರ್ತಿಯಾಗಿ ; ಸಂಪೂರ್ಣವಾಗಿ ; ಸಮಗ್ರವಾಗಿ :** ಕಟ್ಟದ ಪಟ್ಟಮೆ ಸರವಿಗೆ ನೆಟ್ಟನೆ ದೊರೆ ಪಿಡಿದ ಬಿಲ್ಲೆ ದಂಟಂಗೆಣೆ (ಪಂಪಭಾ. ೧೦-೧೭) ; ಈ ಸನ್ಮೂರ್ತಿಗಾರ್ನೆಟ್ಟನಾಳ್ತನದೊಳ್ ಸಿಲ್ಲದರ್ (ಕಾದಂಉ. ೧೧೦) ; ನೆಟ್ಟನೆ ಮನದೊಳ್ ಭಾವಿಪೊಡಸಾರಮಿಾ ಸಂಸಾರಂ (ಅಜಿಪು. ೨-೬೬) ; ಇನಿತುಮನೋರಂತಿರೆ ನೆಟ್ಟನೆ ತಾಳ್ದಿದ ನರನ ಸುಖಮನೇ ವೊಗಟ್ಟುದೊ (ಧರ್ಮಾಮೃ. ೧-೮೩) ; ನೆಟ್ಟನೆ ನಿಮ್ಮ ಮನ ಮುಟ್ಟಿ ಪೂಜಿಸಿ ಭವಗೆಟ್ಟೆ ನಾನು ಚನ್ನಮಲ್ಲಿಕಾರ್ಜುನ (ಮಹಾದೇ. ಬ. ೧೨೮-೨೪೧) ; ನೆಟ್ಟನೀಶಾಚಾರವಂ ಮುಂದಿಟ್ಟು ಬೆಳೆಯಿಪ ಭಾಷೆ (ಬಸವು. ೬-೭). **೬. ಕೂಡಲೆ ; ತಕ್ಷಣ ; ಒಮ್ಮೆಲೆ :** ಮಗನೆ ನೀಂ ಪಗೆಯಂ ತಱಿದೊಟ್ಟು ನೆಟ್ಟನೆನ್ನದೆ ಬಗೆಗೆಟ್ಟು ತಾಯಿಗರುಳಿಂ ಮಗುಟ್ದಿಂ ಪುದುವಾಟ್ಟಿದೆಂಬಿರೇ (ಪಂಪಭಾ. ೧೧-೫೦) ; ಅನುವರ ಕಹಿತಂ ಬಂದಿರೆ ಪೆರ್ಗಡೆತನಮುಟ್ಟುವನರಾತಿ ಬೆನ್ನಟ್ಟೆ ನೆಟ್ಟನೋಡುವ ನಕ್ಕುಂ (ಶಾಂತಿಪು. ೩-೯೩) ; ಇನಸುತನಿರವಂ ದುಶ್ಶಾಸನನಿರವಂ ಕಂಡುಮೆನ್ನಸುವಿದು ನೆಟ್ಟನೆ ಪೋದುದಿಲ್ಲ (ಗದಾಯು. ೫-೨೮) ; ನೆಟ್ಟನೆ ಸೀನೆತ್ತಿಕೊಂಡ ಕಳ್ಳಂ ಬಾಯಂ ಸುಟ್ಟೋಡಿದನೆಂಬಂತಿರೆ ದುಷ್ಟಾ ನೀಂ ಮಿಾಱಿ ನೆಗಟ್ದಿಯೆನ್ನಾಣೆಯುಮಂ (ಧರ್ಮಾಮೃ. ೨-೯೫). **೭. ನಿಜವಾಗಿ ; ದಿಟವಾಗಿ ; ನಿಸ್ಸಂದೇಹವಾಗಿ ; ನಿಸ್ಸಂಶಯವಾಗಿ :** ಉಸಿರದೆ ನಿಲ್ವ ಕಾರಣಮದಾವುದೋ ನೆಟ್ಟನೆ ನಾಳೆ ಕಾಳೆಗಂ (ಪಂಪಭಾ. ೧೦-೩೨) ; ನೆಟ್ಟನೆ ಚಂದ್ರನೊಳ್ಪಿಸುಪು ಪುಟ್ಟದವೊಲ್ ನೃಪರೂಪಚಂದ್ರನೊಳ್ ಪುಟ್ಟದುಮಂತು (ಕಾದಂಉ. ೪೭೯) ; ಕತ್ತೆ ಬತ್ತಲೆ ಇದ್ದಡೆ ನೆಟ್ಟನೆ ನಿರ್ವಾಣಿಯೆ (ಮೋಳಿಮಾ. ೨೩-೯೦); ಬೆಟ್ಟದ ಮುನಿಯಂ ನೆನೆದೊಡೆ ಮುಟ್ಟವು ರಾಕ್ಷಸಪಿಶಾಚವಿಷಮಾಹಿಗಳುಂ ನೆಟ್ಟನೆ (ನೇಮಿಪು. ೧-೧೭) ; ಕರ್ಣ ನಾವಿಂದಱಿದೆವು ನೀ ನೆಟ್ಟನೋಲೆಯ ಕಾಱನೆಂಬುದನು (ಕುಮ್ವ್ಯಾಕ. ೧೧-೨೩). **೮. ನಿಷ್ಪಂದವಾಗಿ ; ಅಲುಗಾಡದೆ :** ಸೈಂಧವನು ಸೈಂಧವಶಿಲೆಯವೊಲಿರೆ ಶಲ್ಯ ಶಲ್ಯದ ತೆಱದಿ ನೆಟ್ಟನಿರೆ (ಸಾಳ್ವಭಾ. ೩೦-೬೩). **೯. ಕಣ್ಣೆದುರಿಗೆ ;ನೇರದಲ್ಲಿ :** ಹಣ ಬಂಗಾರ ವಸ್ತ್ರ ಕಪ್ಪಡ ಬಟ್ಟೆಯಲ್ಲಿ ನೆಟ್ಟನೆ ಬಿದ್ದಿರಲು ಕಂಡು ಕಾತರಿಸಿ ಎತ್ತದ ಭಾಷೆ (ಆದಪ. ೨೧-೫೨). [ನೆಟ್ (<ನಿಡಿದು$_1$)+-ಅನೆ$_1$]

**ನೆಟ್ಟಲಿಂಗಮರ** (ನಾ). ಒಂದು ಬಗೆಯ ಮರ : ಸಣ್ಣ ಹೆಸ್ಸರೆ, ನೆಟ್ಟಲಿಂಗಮರ (ಮೈಪಗಿ. ೬೩-೧೨೮೩). [?+ಮರ$_1$]

**ನೆಟ್ಟಿ$_1$**, ನಟ್ಟು$_2$, ನೆಟ್ಟಿ$_1$ (ನಾ). (ಬೆರಳುಗಳ) ಕೀಲನ್ನು ಮಡಿಸಿ ತೆಗೆಯುವ ಲಟಿಕೆ : ಮುಗಿಲ ದನಿಯಂ ಕೇಳ್ದ ಮುದಿಹಂಸೆಯಂತೆಯಾ ಮಗನ ದನಿಯಂ ಕೇಳಿ ಕೈಯ ನೆಟ್ಟಿ[ಪಾಠಾಂ. ನೆಟಿಕೆ]ಯ ಮುರಿದು ಮಿಗೆ ಬೆದಱುತೇವೆನೆಂದೆನುತ ಪಾಣ್ಬನನೊಂದು ಗೊಂದಿಯೊಳಗಿರಿಸಿ (ಸಮ್ಯಕೌ. ೨-೭೪) ; ಕೆಟ್ಟೆವೆನುತ ಕೈಯ ನೆಟ್ಟಿಯ [ಪಾಠಾಂ. ನೆಟ್ಟಗೆ, ನೆಟ್ಟಿಯ] ನೆಗ್ಗಿ (ರಾಮವಿ. ೧೬-೮೮) ; ದೃಷ್ಟಿಯ ಮಂತ್ರಿಸುತ ಕಪ್ಪಿಡುತ ನೆಟ್ಟಿಯ ಮುರಿದು ತೂಪಿಱಿದೊಡನೆ ತೊಟ್ಟಲೊಳಿಟ್ಟು ಶಿಶುವನು ತೂಗುತಿಹರು (ಪ್ರಹ್ಲಾಚ. ೮-೩೮). **ನಟ್ಟು$_2$ :** 'ನಟ್ಟುಮುರಿ' ಪರಾ. **ನೆಟ್ಟಿ$_1$ :** ನೆಟ್ಟನಾ ಅಯ್ಯಗಳ ಕೈಯಂ ಮುಟ್ಟಿ . . . ನೆಟ್ಟಿಯಂ [ಪಾಠಾಂ.ನೆಟ್ಟನೇ] ತೆಗೆವುತ್ತ (ಬಸವು. ೩೮-೫೦) ; ತೊಟ್ಟಿಲ ಮಕ್ಕಳ ಮೊಗವ ನಿಟ್ಟಿಸದತ್ತಿತ್ತ ಪರಿದಾಡಿದರು ಕಯ್ಯ ನೆಟ್ಟಿಯೊತ್ತುತ ಕಾಮುಕಿಯರು (ಕುರಾಸಾಂ. ೪೫-೨೪) ; ಕಟ್ಟಿದ ಹರಸಿ ಕಾಣಿಕೆ ಕುಲದೈವಕ್ಕೆ ಇಟ್ಟಳು ಫಣೆಗೆ ಭಸಿತವ ಕೆಟ್ಟಿಸಿದೇನು ಕಾರಣವೆಂದು ಕರಗಳ ನೆಟ್ಟಿಯ ಮುರಿದು ಕೇಳಿದಳು (ಮಾದೇಸಾಂ. ೨-೧೬).

[**ದೇ.** ‖ **ತಮಿ.** ನೆಟ್ಟಿ, ನೆಟ್ಟೈ, ನೊಟಿ ; **ಮಲ.** ನೊಟಿ, ನೊಟ್ಟಿ ; **ತುಳು.** ನೆಟ್ಟಿ]

**ನೆಟ್ಟಿ$_2$** (ನಾ). ಒಳಗಿನ ತಿರುಳು ; ಸಾರ (?) : ಬೀಜದ ನೆಟ್ಟಿ [ಪಾಠಾಂ. **ಟ್ಟ**]ಕರಗಿದರಕಟ ಬಳಿಕದು ಹುಟ್ಟಲರಿವುದೆ (ನಿಭಾಗ. ೨-೧-೪೯) ; ನೆಟ್ಟಿ[ಪಾಠಾಂ. **ಟ್ಟ**]ಕರಗಿದ ಬೀಜ ಮಣ್ಣೊಳಗಿಟ್ಟಡದು ಮುನ್ನಿನವೊಲಂಕುರ ಹುಟ್ಟಲರಿವುದೆ (ನಿಭಾಗ. ೫-೪-೨೫).

[←ತಮಿ. ನೆಟ್ಟಿ ?]

**ನೆಟ್ಟಿಕೆ,** ನಟಕು$_1$, ನಟಿಕೆ, ನಟಿಗೆ$_1$, ನಟುಕು, ನೆಟಕೆ, ನೆಟಗೆ, ನೆಟಿಕೆ, ನೆಟಿಗೆ, ನೆಟುಕು, ನೆಟ್ಟಗೆ, ಲಟಕಿ, ಲಟಕು, ಲಟಕ್ಕು, ಲಟಿಕಿ, ಲಟಿಕೆ, ಲಟಿಗೆ, ಲಿಟಿಗೆ (ನಾ). ೧. =ನೆಟ್ಟಿ$_1$ : ಇವನ ಮನೆ ಬಟ್ಟೆ ಬಯಲಾಗ ಈಗಲೆ ಹುಟ್ಟಬೇಕೆ ಈ ಚಂದ್ರನೆಂದು ನೆಟ್ಟಿಕೆಗಳಂ ಮುರಿಯುತ (ಸೌಗಂಧಿ. ೧೮೭-೨). **ನಟಕು$_1$ :** (ಕ). **ನಟಿಕೆ : ೧.** ಇನ್ನೆನಗೆ ಬನ್ನವಪ್ಪುದೆನುತ್ತೆ ಕೈವೆರಲ ನಟಿಕೆಗಳಂ ಮುರಿದುಕೊಳುತುಂ (ಸಿದ್ಧೇಪು. ೧೫-೭೨) ; ಸಗ್ಗವೆಣ್ಣೆಂಬ ಮಾತಿಗೆ ಕಾಯ್ದು ನಟಿಕೆಯಂ ನೆಗ್ಗಿ (ಚೆಬಪು.೧೯-೨೭). **ನಟಿಗೆ$_1$ :** (ಕ). **ನಟುಕು :** (ಕ). **ನೆಟಕೆ : ೧.** 'ನೆಟಕೆ ಮುರಿ' ಪರಾ. **ನೆಟಗೆ : ೧.** 'ನೆಟಗೆ ತೆಗೆ' ಪರಾ. **ನೆಟಿಕೆ : ೧.** ಇಕ್ಕಿದಳು ನೆಟಿಕೆಯನು ಕಡು ಮುಳಿಸಿಂದ ದ್ರೌಪದಿಯು (ಜಿನಭಾ. ೫೦-೪೨) ; ಕಾಲ ಬೆರಳುಗಳು ನೆಟಿಕೆಗಾಗಿ ಹಾತೊರೆಯುತ್ತಿವೆ (ಅನ್ನಪೂ. ೨೦) ; ತುಳಸಾಬಾಯಿ ನೆಟಿಕೆಗಳನ್ನು ಮುರಿಯುತ್ತ . . . ಹೇಳಿದಳು (ಪುಹಾಗ. ೨೪೮). **ನೆಟಿಗೆ: ೧.** ವಿಟಪುರುಷರನು ನೋಡಿ ನಟಕುಗಳ ತೋರುತಲಿ ನೆಟಿಗೆಯನು ಮುರಿಯುತಲಿ ಚಟುಲೆ ನೋಡುತಿರೆ (ಹಮಚ. ೨೪೫) ; ಕೈಗಳ ನೆಟಿಗೆಯನು ಮುರಿಮುರಿವ ಕಾರಣ (ಕರಿಕ. ೪೮-೫). **ನೆಟುಕು : ೧.** ಕಂಜಾಕ್ಷಿ ಕಳಸವಕ್ಷಜೆಯರೀ ಪಾಪಿ ಶಶಿಗೇನು ತ್ವರಿತತಳವೆಂದು ಹಳಿವುತಂ ಚಲಿತ ನೆಟುಕುಗಳಿಂದ ಹೊರಟರೇಕಾಂತವಗಲಿ (ಜಿನಸು. ೪೯-೨೩). **ನೆಟ್ಟಗೆ : ೧.** ಕಡೆಯಂ ಕಾಣದೆ ಇರುವ ಕಾಡಿನೊಳ್ ಕರುಣವಿಲ್ಲದ ಕಠಿನಚಿತ್ತನಾದ ಕಮಲಸಂಭವನೆ ನೀನು ಯಿಾ ಪರಿ ನಮ್ಮ ನಾಲ್ವರಂ ಪಾಡು ಪಡಿಸಬಹುದೇ ಯಂದು ಕೈಗಳಂ ಸಾಚಿಬೆಟ್ಟುಗಳಿಂದ ನೆಟ್ಟಗೆಗಳಂ ಸಿಟ್ಟುತ (ಸೌಗಂಧಿ. ೫೦೪-೧೭); ನಂಟರಾದ ಮುದುಕಿಯರು ಬಂದು ಶಿಶುವಂ ತೂಪಿರಿದು ನೆಟ್ಟಗೆಯಂ ಮುರಿದು ಹರಸಿ ಹೋಗಲು (ಕೃಷ್ಣಕ. ೧-೮೬). **ಲಟಕಿ : ೧.** 'ಲಟಕಿ ಮುರಿ' ಪರಾ. **ಲಟಕು : ೧.** 'ಲಟಕು ಮುರಿ' ಪರಾ. **ಲಟಕ್ಕು : ೧.** "ಲಟಕ್ಕು=ಬೆರಳು ಮುರಿಯುವ ಸಪ್ಪಳ" (ಜಾನಕೋ. ೪೨). **ಲಟಿಕಿ : ೨.** ಕೈಯ ಹೆಬ್ಬೆರಳು ಮತ್ತು ನಡುಬೆರಳುಗಳನ್ನು ಸೇರಿಸಿ ಮಿಡಿದು ಶಬ್ದ ಮಾಡುವಿಕೆ ; ಚಿಟಿಕೆ : 'ಲಟಿಕಿ ಹೊಡೆ' ಪರಾ. **ಲಟಿಕೆ : ೧.** 'ಲಟಿಕೆ ಮುರಿ' ಪರಾ. **ಲಟಿಗೆ: ೨.** 'ಲಟಿಗೆ ಹೊಡೆ' ಪರಾ. **ಲಿಟಿಗೆ : ೧.** ನಂನರಿಯೆಂದು ಲಿಟಿಗೆಗಳು ಬಂದು (ತತ್ವಾನಿ. ೮೩-೨).

[ದೇ.॥ ತುಳು. ನಟುಕು ; ತೆಲು. ನೆಟಿಕ, ನೆಟ್ಟಿಕ]

**ನೆಟ್ಟಗೆ** 'ನೆಟ್ಟಿಕೆ' ನೋ.

**ನೆಟ್ಟಗೆ ಮುರಿ,** ನಟಿಕೆ ಮುರಿ, ನೆಟಕೆ ಮುರಿ, ನೆಟಿಕೆ ಮುರಿ, ನೆಟಿಗೆ ಮುರಿ, ಲಟಕಿ ಮುರಿ, ಲಟಕು ಮುರಿ, ಲಟಿಕೆ ಮುರಿ, ಲಟಿಗೆ ಮುರಿ (ಕ್ರಿ). ೧. (ದೃಷ್ಟಿ ತೆಗೆಯಲು) ಕೈ ಬೆರಳುಗಳ ಕೀಲನ್ನು ತನ್ನ ತಲೆಯ ಎರಡೂ ಕಡೆಗಳಲ್ಲಿ ಮಡಿಸಿ ಹತ್ತಿಕ್ಕಿ ಶಬ್ದ ಮಾಡು ; (ದೃಷ್ಟಿ ನಿವಾರಣೆಗಾಗಿ) ಬೆರಳುಗಳನ್ನು ಮಡಿಸಿ ನೆಟ್ಟಗೆ ಬರಿಸು : ಎಲ್ಲರೂ ಮಗುವನ್ನು ನೋಡಿ ದೃಷ್ಟಿ ತೆಗೆದು ನೆಟ್ಟಗೆ ಮುರಿದು ಹೋದರು(ಮನೋಸಂ.೧೫೨) ; ಮಗನಿಗೆ ದೃಷ್ಟಿ ತಾಗದಿರಲೆಂದು ಕಿಟ್ಟಿಯ ತಾಯಿ ನೆಟ್ಟಗೆ ಮುರಿದರು (ಗಳಜೀ. ೬೭). **ನಟಿಕೆಮುರಿ : ೧.** ಕಳಾವಿಳಾಸಿನಿವೆಣ್ಗಳು . . . ಬಳಿ ಸಂದು ಕರದ ಬೆರಳ್ಗಳ ನಟಿಕೆಮುರು ಕೊಳುತ (ನಪವೊ. ೬-೫೫) ; ಹಿರಣ್ಯಧನು ಕಣ್ಣೀರನ್ನು ತಡಕೊಂಡು ನೆಲದಲ್ಲಿ ನಟಿಕೆ ಮುರಕೊಳ್ಳುವನು(ಹೆಪ್ಪಿರ. ೨೦-೭). **೨.** ಶಾಪಹಾಕು; ಕೆಡುಕನ್ನು ಬಯಸು ; "ಚಟಿಕುಮುರಿ ; ಶಪಿಸು"(ಜಾನಕೋ.೬). **ನೆಟಕೆ ಮುರಿ : ೧.** ಸುಂದರಮ್ಮ . . . ಮಗಳ ಕೆನ್ನೆ ಸವರಿ ನೆಟಿಕೆ ಮುರಿದರು (ದೂಜಿಟ್ಟ. ೨೪). **ನೆಟಿಕೆಮುರಿ : ೧.** ಕೆನ್ನೆ ಸವರಿ ತಲೆಯ ಪಕ್ಕದಲ್ಲಿ ನೆಟಿಕೆಮುರಿಯುವಳು (ಮಲ್ಲಿ. ೧೧). **೨.** ಹೆಣ್ಣಲ್ಲ ರಾಕ್ಷಸಿ ಅಂತ ನೆಟಿಕೆಮುರೀತಾರೆ ಹೆಂಗಸರು (ನಶಿದಾ. II, ೧೦೫೭). **ನೆಟಿಗೆಮುರಿ : ೩.** ಬೆರಳುಗಳ ಕೀಲನ್ನು ಮಡಿಸು,—ಶಬ್ದ ಮಾಡು ; ಎಲುಬುಗಳನ್ನು ಬಾಗಿಸಿ ನೆಟಿಗೆ ತೆಗೆದು ಆಯಾಸ ಪರಿಹಾರ ಮಾಡಿಕೊಳ್ಳು : ಮಲಗಿದ 'ಅಡ್ಡ'ದ ಹೆಂಗಸರೆಲ್ಲ ದಡಬಡನೆ ಎದ್ದು ನೀಳವಾಗಿ ಆಕಳಿಸಿ, ಕೈ–ಮೈಗಳ ನೆಟಿಗೆ ಮುರಿದರು(ಚಗುಬ. ೮೩). **ಲಟಕಿ ಮುರಿ : ೧.** ಸ್ಯಾಸಿಯಿಟ್ಟು, ತಮ್ಮನ್ ದೃಷ್ಟಿ ಲಟಕಿ ಮುರೀತಿದ್ ಕೈನಾ ಮುರಿದಿಟ್ಟೆಲ್ಲೋ ಯಪ್ಪಾ ! (ಬಾಗಿನ. ೧೮). **ಲಟಕು ಮುರಿ : ೧.** ನನ್ನ ಗಲ್ಲ ಹಿಡಿದು ಮುದ್ದಾಡಿ ತಲೆಗೆ ಲಟಕು ಮುರಿದಳು (ಮೇದಿಮ. ೪೧) ; ಅವಳನ್ನು ನೋಡಿದ ಭಾಗ್ಯಮ್ಮನವರು ಸಂತೋಷಚಿತ್ತರಾಗಿ 'ನಿನ್ನ ಕೈ ಹಿಡಿಯುವವನು ಭಾಗ್ಯವಂತನೇ ಸರಿ' ಎಂದು ಲಟಕು ಮುರಿದು ಪ್ರೀತಿಯ ಹೊಳೆ ಹರಿಸಿದರು (ರಂಗರೋ.೨೧೦); ಜಾನಕಿಯ ಮಾತನ್ನು ಕೇಳಿ ಅವಳು ಪ್ರೀತಿಯ ಲಟಕು ಮುರಿದು ಗದ್ಗದಿತಳಾದಳು (ಮುತ್ತೈದೆ. ೮). **೨.** ಮಲತಾಯಿ ಮುಂದ ಮರಿಗುದರಿ ಏರಿದರ ಮನದಾಗ ಲಟಕ ಮುರಿದಾಳ (ಜನಗೀ. ೬೩) ; ತಾಯವ್ವನು ಅವಳಿಗೆ ಶಪಿಸುತ್ತ ಲಟಕು ಮುರಿದಳು (ಕನಕ. ೬೭). **ಲಟಿಕೆ ಮುರಿ : ೧.** ಸುಂದರಮ್ಮ . . . ಮಗುವಿನ ಮುಂಗುರುಳನ್ನೂ ಎರಡೂ ಕೈಗಳಿಂದ ನೇವರಿಸಿ, ತನ್ನ ತಲೆಯ ಬದಿಗೊಯ್ದು ಲಟಿಕೆ ಮುರಿದು ಸರಕ್ಕನೆ ಅಡಿಗೆಮನೆಯೊಳಕ್ಕೆ ಹೋದಳು (ಬನಶಂ. ೧೦೧). **ಲಟಿಗೆ ಮುರಿ : ೨.** ಹಾರವನ ಹೆಸರು ಹೇಳಿದರೆ ಎಲ್ಲರೂ ಲಟಿಗೆ ಮುರಿಯುವರೇ (ನಾಡಿಗೇ. ೮). [ನೆಟ್ಟಗೆ(<ನೆಟ್ಟಿಕೆ) + ಮುರಿ$_1$]

**ನೆಟ್ಟಿದೆಗೆ** (ಕ್ರಿ). ಮೈ ಕೈ ನೋವಾದಾಗ ಕೀಲುಗಳನ್ನು ಎಣ್ಣೆಯಿಂದುಜ್ಜಿ ನೋವು ಇಳಿಯುವಂತೆ ಮಾಡು ; ಎಲುಬುಗಳನ್ನು ನೀವು : ಜಟ್ಟಿಗಳೆಯ್ದಿ ನೋಡಿದರು ನಾವೊಯ್ಯನೆ ನೆಟ್ಟಿದೆಗೆವೆವೆಂದರೊಡನೆ (ಭರಚ. ೪೯-೯೭). [ನೆಟ್ಟಿ$_1$ + ತೆಗೆ$_1$]

**ನೆಟ್ಟಿ ಮುರಿ, ನಟ್ಟು ಮುರಿ** (ಕ್ರಿ). ೧. ನೆಟ್ಟಿಗೆಯನ್ನು ಮುರಿ, —ತೆಗೆ ; ಶಪಿಸು : ಅಳುತ ಬಾಯ್ಬಾಯ ಬಿಡುತ ನೆಟ್ಟಿ ಮುರಿವುತ ನಿಳಯುವ ಪೊಕ್ಕಡಗಿದರು (ಜ್ಞಾನಚ. ೧೪-೩೨). **ನಟ್ಟು ಮುರಿ : ೨.** ದೃಷ್ಟಿತೆಗೆ : ಪೊರೆಯಲಿ ನಿನ್ನನೀಶ್ವರಂ . . . ಇದೊ ನಟ್ಟು ಮುರ ಕೊಳುವೆ (ಹಪ್ಪಿರ. ೨೦-೬). [ನೆಟ್ಟಿ$_1$ + ಮುರಿ$_1$]

**ನೆಟ್ಟು$_1$** 'ನಡು$_1$' ನೋ.

**ನೆಟ್ಟು$_2$** 'ನಡು$_1$' ಪರಾ.

**ನೆಟ್ಟು$_3$** (ನಾ). (ಹುರಿ, ಹಗ್ಗ, ಕೂದಲು ಮೊದಲಾದುವುಗಳಿಂದ ಮಾಡಿದ) ಬಲೆ ; ಜಾಲ : ಚೆಂಡು, ಬ್ಯಾಟು, ನೆಟ್ಟುಗಳನ್ನು ಹಿಡಿದು ಆಟಕ್ಕೆ ಹೊರಟನು (ರೂಢಿ). [←ಇಂ. Net]

**ನೆಟ್ಟೂರು** (ನಾ). ಒಂದು ಊರಿನ ಹೆಸರು : ದೇವಯ್ಯನಳಿಯ ಎಜಿಾಗಾರಿ ಸತ್ತೊಡೆ ಆತನ ಮಗಂ ಬೀಚಂಗಂ ಕಲ್ಯಜಿಾನಾಡ ನೆಟ್ಟೂರ ಕಲ್ನಟುಗೊಟ್ಟರ್ (ಎಕ. V, ಚನ್ನರಾ. ೨೬೨-೨೧ ; 971).

[ನೆಟ್ಟು ?+ಊರು$_3$(<ಊರ್)]

**ನೆಟ್ಟೆ$_1$** 'ನೆಟ್ಟಿ$_1$' ನೋ.

**ನೆಟ್ಟೆ$_2$** 'ನಾಟಿ$_1$' ನೋ.

**ನೆಟ್ಟೈರೆ** (ಕ್ರಿ). ನೇರವಾಗಿಬೇಡು ; ನಿಸ್ಸಂಕೋಚವಾಗಿ ಯಾಚಿಸು (?): ನರಸಿಂಹಾಕಾರದಿಂ ದಾನವಪತಿಯುರಮಂ ಸೀಳ್ದನನ್ನುಮ್ಮ ರುದ್ರಂ ಬೆರಸಾ ಕೈಳಾಸಮಂ ತೂಗಿದನಳವಳತಾರ್ತ್ತ್ರಿಯಿಂ ಚರ್ಮ್ಮಮಂ ನೆಟ್ಟೈರೆದಿನ್ದ್ರಂಗಿತ್ತಂ (ಎಕ. VII, ಶಿಕಾರಿ. ೧೨೪-೮ ; 1077). [ನೆಟ್ಟು$_2$(<ನಿಡಿದು$_1$)+ಎರೆ$_2$]

**ನೆಟ್ಟೆಲು** 'ನೆಟ್ಟೆಲುವು' ನೋ.

**ನೆಟ್ಟೆಲುವು, ನೆಟ್ಟೆಲು** (ನಾ). ನೆಟ್ಟನೆಯ ಎಲುಬು ; ಬೆನ್ನು ಮೂಳೆ ; ಬೆನ್ನೆಲುಬು : ಪಶ್ಚಿಮ ಪದ್ಮಾಸನದಲ್ಲಿ ಕುಳಿತು ನೆಟ್ಟೆಲುವ ಮುರಿದು ತುಟಿ ಮಿಡುಕದೆ ಅಟ್ಟೆಯಾಡಿತ್ತಲ್ಲಾ (ಬಸವ. ೮೧೪) ; ಬಲಿ ಹರಣ ಕಾರಣಕವತರಿಸಿ ಬೆಳೆದವನ ನೆಟ್ಟೆಲುವಿನಂದದಿ ಬೆಳುಗುದುಗೆಯಂ ಬಲದ ಕರದಲಿ ಪಿಡಿದು ತಿರುಪುತ್ತ (ಬಸಪು. ೨೯-೪) ; ಈಡಾಡುವೆಂ ಕುಲಗಿರಿಪ್ರಜವ . . . ನಿಂದಕರ ತಱಿದೊಟ್ಟಿ ನೆಟ್ಟೆಲುವ ಮುಱಿವೆ (ಲಶಿಚಿಂ. ೧೮-೨೨) ; ಆ ಮತ್ಸ್ಯಮಂ ಕೊಂದು ನೆಟ್ಟೆಲುವನುಱಿ ತಾ ಪಿಡಿಯೆ (ಚೆಬಪು. ೫೨-೨೫). **ನೆಟ್ಟೆಲು :** ನೆಟ್ಟೆಲುಗಳಂ ಮುಱಿದು ಮೆಟ್ಟೆಯಿಕ್ಕಡಿಯಾಗಿ ತಟ್ಟುಗಳ ಸೀಳ್ದು ಉರುಹಿ ಕೊಲುವಾಗ ಲುಂಡುಟ್ಟ ಸತಿ ಸುತರು ಬಿಡಿಸುವರೊ (ಗುರುಬೋ. ೫೯-೬) ; ನಿಡುನರ ಹಱಿದು ಬೆನ್ನೀರ್ಗಳು ಹರಿದು ಬಿರಿದು ನೆಟ್ಟೆಲು ಮೈಮಱಿದಾಗ ರಿಪುಬಲ ಹೊರಳಿದುದೇನೆಂಬೆನದನು (ಕಂನವಿ. ೧೪-೮೭). 'ನಿಟ್ಟೆಲ್ವು', 'ನಿಟ್ಟೆಲುವು' ಪರಾ. [ನೆಟ್(<ನಿಡಿದು$_1$)+ಎಲುವು$_2$(<ಎಲ್ವು)]

**ನೆಡಳೆ** (ನಾ). (?) : ಕಾಡಾರಂಬ ನೀರಾರಂಬಕೆ ಸಲುವ ಕೆಱಿ ಕುಂಟೆ ಕೊಣನು ಅಚಿ ಅಡುಕಟು ದರೆ ನೆಡಳೆ ಸಕಳಾ ಒತ್ತಾಯ ಸಕಳ ನದಾಯ ಪಾಬಕೂಪ ತಟಾಕ (ಎಕ. X (S), ಕೋಲಾರ. ೩೦೪-೧೫ ; 17ನೆಯ ಶತ). [?]

**ನೆಡಿಸು** 'ನಡಿಸು$_2$' ನೋ.

**ನೆಡು** 'ನಡು$_1$' ನೋ.

**ನೆಡುಗಣ್ಣು** 'ನಡುಗಣ್ಣು' ನೋ.

**ನೆಡುಗುರಿ** (ನಾ). ನಿಶ್ಚಿತವಾದ ಗುರಿ : ಕೋಲ ಕಡೆಗಣ್ಣು ಕೊನೆ ನೆಡು ಗುರಿಯ ನೋಡುವು ಹುರುಪೆದ್ದು ಕುಣಿಯುವುದು (ನಡೆದಾ. I, ೪೪೧) ; ಆದರೆ ಅವನು ಹುಟ್ಟಿ ಬೆಳೆದ, ಬೆಳೆದು ಬಾಯ್ದೆರೆದ ನಾಡಾವುದೆಂಬುದರ ನೆಡುಗುರಿ ಇನ್ನೂ ಸರಿಯಾಗಿ ಕಂಗೋಳಿಸಲಿಲ್ಲವೆಂದೇ ಹೇಳಬೇಕು (ನಾಡೋಜ. ೧೫). [ನೆಡು (<ನಡು$_1$)+ಗುರಿ$_1$(<ಕುಱು$_2$)]

**ನೆಡುಗೆ** 'ನಡಿಗೆ$_2$' ನೋ.

**ನೆಡುತೋಪು** (ನಾ). "ನೆಟ್ಟ, ಬೆಳೆಯುವ, ಮರಗಳ ದೊಡ್ಡ ತೋಪು ; ನೆಡುತೋಪು, ಕಾನು" (Plantation. ಇಂಕಕ). [ನೆಡು(<ನಡು$_1$)+ತೋಪು$_1$]

**ನೆಡುಬಗೆ** (ನಾ). ಸ್ಥಿರವಾದ ಮನಸ್ಸು ; ಚಂಚಲವಾಗದ ಚಿತ್ತ : ಸೌಂದರ್ಯ ಶೃಂಗಾರರಸ ಸ್ತ್ರೀವ್ಯಕ್ತಿಗಳಿಗೆ ಪ್ರಾಧಾನ್ಯವಿರುವ ವಾಙ್ಮಯಾದಿ ಗಳನ್ನವಗಾಹಿಸುವಲ್ಲಿ ವಾಚಕರು ನೆಡುಬಗೆಯಿಂದಿರಬೇಕು (ನಾಡೋಜ. ೩೮೩). [ನೆಡು(<ನಡು$_1$)+ಬಗೆ$_3$]

**ನೆಡುಬೊಱಿ** (ನಾ). ಒಂದು ಸ್ಥಳದ ಹೆಸರು : ಶ್ರೀ ನೆಡುಬೊಱಿಯ ಪಾನಪಭಟಾರನ್ಕೋನ್ನು ಮುಡಿಪ್ಪಿ ದಾರ್ (ಎಕ. II, ೯-೧ ; ಸು.700). [?]

**ನೆಡುಮೊಱಿಡಿ** (ನಾ). ಒಂದು ಗುಡ್ಡದ ಹೆಸರು : ಅನ್ತೆ ಮೂಡ ನೋಡಿ ಪರಿದ ಪೇರೊಱಿ ನೆಡುಮೊಱಿಡಿಯಯ್ಯಾಗಿ ಮೊಱಿಡಿಯ ಮೇಗಿಟ್ಟು ಪೇರಾಲೆ ಈಶಾನಂಗೆ ಸೀಮೆ ನೆಡುಮೊಱಿಡಿಯಾ ಪುಣಸೆ ಪುಗರಿಯಾ ಎಡೆಯೆ ಬೀಟ್ಟನ್ದ ಪಳ್ಳಮೆ (ಎಕ. IX (S), ಬೆಂಗಳೂ. ೧೫೧-೪೭ ; 474). [ನೆಡು? + ಮೊಱಿಡಿ(<ಮೊರಡಿ)]

**ನೆಡೆ** 'ನಡೆ$_1$' ನೋ.

**ನೆಣ** (ನಾ). ೧. ಎಲುಬಿನ ಮಧ್ಯದ ಪೊಳ್ಳು ಭಾಗದಲ್ಲಿರುವ ಒಂದು ಬಗೆಯ ಜಿಗುಟು ಪದಾರ್ಥ; ಕೊಬ್ಬು ; ಮೇದಸ್ಸು ; ಚರ್ಬಿ : "ವಪಾ, ಮೇದಃ, ವಸಾ—ಈ ೩ ನೆಣಂ" (ಹಲಾಯು. ೧೦೪-೧೩) ; ನೆಣದ ಪಳ್ಳಂಗಳಂ ಪಾಯ್ದುಂ ನೆತ್ತರ ತೊಱಿಗಳಂ ಬಂಚಿಸಿಯುಂ (ಪಂಪಭಾ. ೧೩-೫೩ ವ) ; ನೆತ್ತರ ತೊಱಿಯುಂ ನೆಣದ ಪಳ್ಳಂಗಳುಂ ಪೆಣದ ಬಣಂಬೆಗಳುಂ ಕೋಟಿಕ್ಕೂಡುಳ ಕೋಟಿಸಱುಮುಗುರ್ವುವಡೆಯೆ (ಪಂರಾಮಾ.೧೩-೫೪ವ); ನೆಣದ ಕೊಳ ರಕ್ತದ ಹುತ್ತು . . . ಶುಕ್ಲದ ಕೋಶ ಎಲುವಿನ ಬಲುಹಿಂದಿಪ್ಪುದೀ ಕಾಯ (ಅದವ. ೧೫-೩೪) ; ತಣಿವನ್ನಂ ರುಧಿರಾಂಬುವಂ ಪದಪಿನಿಂದೀಂಟುತ್ತುಮುಲ್ಲೊಕ್ಕ ಮೆಲ್ನೆಣನಂ ಗಟ್ಟನೆ ನುಂಗಿ (ಕುಸುಮಾ. ೧೧-೯೩) ; ರಿಪುಭಟನೊಡಲ ಹೊಳ್ಳಿಸಿ ನೆಣನನು ಣ ಲಿಕ್ಕುವೆನು ದೈತ್ಯರಿಗೆ (ಕುವ್ಯಾದ್ರೋ. ೨-೩೩) ; ಕಡ್ಡಿ ಕೊರೆದು ಬದಿ ಯಲ್ಲಿದ್ದ ನೆಣ ಬಳಿದ ದೀಪವನ್ನು ಹಚ್ಚುತ್ತಾನೆ (ಚೀನಬಾ. ೫). ೨. ಶಕ್ತಿ ; ಬಲ : ಎಷ್ಟು ಕೆಲಸ ಮಾಡಿದರೂ ಸ್ವಲ್ಪವೂ ಮೈ ಘಾಸಿ ಯಾಗದಿದ್ದ ತಾರುಣ್ಯದ ನೆಣ ಈಗೆಲ್ಲಿ ಬರಬೇಕು? (ರೂಢಿ). ೩. (ಆಲಂ) ಜಂಬ ; ಸೊಕ್ಕು : ಅವನ ನೆಣವನ್ನು ಕರಗಿಸದಿದ್ದರೆ ನಾನ್ಯಾಕಿರಬೇಕು ? (ರೂಢಿ). ೪. (?) : ಅಣ್ಣಾವು ಪುಣ್ಯಾವು ಪುಣ್ಯದ ನೆಣಗಳು ಹೆಚ್ಚಾವು (ಎಬಕಾ. ೧೩೫-೨೩).

[ದೇ.॥ ತಮಿ. ಮಲ. ನಿಣ=ಹೆಪ್ಪುಗಟ್ಟಿದ ರಕ್ತ ; ಕೊಡ. ನಣಿ ; ತುಳು. ನಿನ]

**ನೆಣಗೊಬ್ಬು** (ನಾ). ೧. ದೇಹದಾರ್ಢ್ಯ; ಅಂಗಸೌಷ್ಠವ: ಕೊಬ್ಬಿದ ಭುಜಯುಗಳದಿ ವೀರರಸದಿಂದುಬ್ಬಿದ ನಿಡುದೋಳ್ಗಳೆಡೆಯ ಪರ್ಬಿದ ಕಾಂತಿ ತಾಣಗಳೆನೆ ನೆಣಗೊಬ್ಬಿಲಿ ಗರುವನೊಪ್ಪಿದನು (ಮೋಹತ. ೩೩-೫೭). ೨. (ಆಲಂ) ಅತಿಯಾದ ಹೆಮ್ಮೆ,—ಕೊಬ್ಬು,—ಸೊಕ್ಕು : ಆರೊಡನೆ ಕಾದುವೆನು . . . ಎಂದು ಕುಮಾರ ನೆಣಗೊಬ್ಬಿನಲಿ ನುಡಿ ದನು ಹೆಂಗಳೆದಿರಿನಲಿ (ಕುವ್ಯಾವಿ. ೫-೨೦) ; ಅಬ್ಬರಿಸಿದುದು ವೀರರಸ ರಣದುಬ್ಬರದ ರೌದ್ರಾದ್ಭುತದ ನೆಣಗೊಬ್ಬಿನಲಿ (ತೊರರಾ. ೬-೪೫-೬೭). [ನೆಣ+ಕೊಬ್ಬು$_2$(<ಕೊರ್ವು$_2$)]

**ನೆಣವಸೆ** (ನಾ). ಮೇದಸ್ಸು ; ಕೊಬ್ಬು : ಕಾಲೊಳ್ತೊಡರ್ದ ತೊರಳೆ ಗಳ ಮೈನವಿರ್ ಸಾಲೊಳ್ಪೊರೆದ ನೆಣವಸೆಗಳ ಮೇಲುಮೊಗದ ನೆತ್ತರ ದಾಡೆ ಯೊಳು ಸಿಕ್ಕಿ ಜೋಲುವ ಕರುಳ್ದೊಂಗಲೆಸೆದವು (ಸೂಬಸೋ.೧೨-೧೦) ; ದುಱುದುಱಿಪ ತಲೆಮಿದುಳ ದಂಡೆಯ ಹಱಿಗರುಳ ನೆಣವಸೆಯ ಮೂಳೆಯ ಮುಱಿಕುಗಳ ಕಡಿಖಂಡಮಯವಾಯ್ತಖಿಳ ಚತುರಂಗ (ಕುವ್ಯಾದ್ರೋ. ೧೮-೩೩) ; ನೆತ್ತರಿನ ನೆಣವಸೆಯ ಮಾಂಸದ ಕುತ್ತರಿನ ಕ್ರಿಮಿ ಕೀವು ಕಿಸುಕುಳದೊತ್ತುಯಲು ಮಲ ಮೂತ್ರದುದುಭವಜನ್ಮ ಭೂಮಿಯಿದು (ಸಿಭಾಗ. ೭-೧೪-೧೨) ; ಮಾಂಸ ಬಲಿವುದು ನೆಣವಸೆಗಳು ಬಲಿವುವು (ಅಶ್ವಟೀ. ೪೬-೬). [ನೆಣ+ಬಸೆ$_3$]

**ನೆಣವಸೆಗೆಸಱು** (ನಾ). ಕೊಬ್ಬಿನ ರಾಡಿ ; ಮೇದಸ್ಸಿನ ಕೆಸರು : ಕಡಿವಡೆದ ಹಕ್ಕರಿಕೆ ಚಿಂಚೆಯ ತಡಿಗಳಲಿ ಕುಳ್ಳಿರ್ದು ಮೊಣಕಾಲ್ಗಡಿಯ ಗಾಢವ್ರಣದ ನೆಣವಸೆಗೆಸಱ ಬಳಬಳಿದು . . . ಮುಂದೆ ಹೆಜ್ಜೆಯನಿಡುತ ಪೈಸರವೋಗಿ (ಕುವ್ಯಾಗ. ೩-೧೩). [ನೆಣವಸೆ+ಕೆಸಱು (<ಕೆಸಱ್)]

**ನೆಣವುಳಿ** (ನಾ). (?) : ಕಿಱುನೆಲ್ಲಿಯುವ್ವು ನೆಣವುಳಿ ತೊಱಿನಾಯಱ್ ಸತ್ತೆಡೆಯ ಮಣ್ ಶುಕಾಸ್ಯಂ ಮದ್ಯಂ ಮುಱಿದೊಂಡೆಯೆಂಬಿವಂ ಪೆಸರ ಱಿಯದ ಬಾಹುಗಳೊಳೊರಸೆ ಪೊಱಿಸಿ(ಸು)ಗೆ ಪೋಕುಂ (ಲೋಕೋಪ. ೯-೨೦೨). [?]

**ನೆತರುಕೊಡಗೆ** 'ನೆತ್ತರುಗೊಡಗೆ' ನೋ.

**ನೆತಸೆ** (ನಾ). ಒಂದು ಊರಿನ ಹೆಸರು(?): ತಪ್ಪಿದನ್ನು ಬ್ರಾಹ್ಮಣರ್ಗ್ಗಂ ಪಶುಗಳ್ಗಂ ತಪ್ಪಿದ ಪಾತಕವಕ್ಕುಂ ನೆತಸೆ ಕಲ್ನಾಟು (ಎಕ. VIII, ಸೊರಬ. ೪೭೭–೨೩ ; 991). [?]

**ನೆತ್ತ**$_{1}$, ಲತ್ತ, ಲೆತ್ತ (ನಾ). ೧. ಪಗಡೆಯಾಟದ ಹಾಸಂಗಿ ; ದಾಳ : ಅರಸ ಕೇಳೀ ವಿಪ್ರನತಿಭಾಸುರಸುತೇಜದೊಳೆಸೆವ ನೆತ್ತವನೆರಡ ಕಾಣಿಕೆಗೊಟ್ಟನು (ನಳಚ. ೪–೨೬) ; ವಿರಾಟರಾಯನು . . . ಕೋಪಿಸಿ ಕೊಂಡು . . . ನೆತ್ತದಿಂದ ಅತನ ಬಲಹಣೆಯ ಮೇಲೆ ಬಡಿದು (ಕೃಷಾವಿ. ೧೧೭). ೨. ಪಗಡೆಕಾಯಿ : ನಾನು ಆಡುವ ನೆತ್ತದ ಸಾಲೆ ಅತಿಕ್ರಮಿಸಿ ಹೋದುದು. ನೆತ್ತ ಮನೆಯ ಬಿಟ್ಟು ಈ ಮನೆಯಲ್ಲಿಯೇ ನಿಂತು ಇದೆ (ಬತ್ತೀಸ. ೭೯). ೩. ಪಗಡೆಯಾಟ; ಅಕ್ಷಕ್ರೀಡೆ : ಸೆಱೆಯುಂ ಮೇಱುಂ ನೆತ್ತಮಾಡುವರೊಳ್ (ಎಇ. XIII, ೩೩೨–೪೪ ; 929) ; ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾಡು ತ್ತಿರೆ ಲಂಬಣಂ ಪಱಿಯೆ ಮುತ್ತಿನ ಕೇಡನೆ ನೋಡಿ ನೋಡಿ ಬಳ್ಕುತ್ತಿರೆ (ಪಂಪಭಾ. ೯–೬೯); ಕನ್ಯಕೆಯರೊಡನೆ ನೆತ್ತದೊಳಂ ವೀಣಾವಾದ್ಯದೊಳಂ ಸ್ವರಸಂದೋಹವಿವಾದದೊಳಂ ... ಕ್ರೀಡಿಸುತ್ತಮಿರ್ದು (ಕಾದಂಬ. ೯೪); ಚದುರಂಗದ ನೆತ್ತದ ಗೌರವದ ಗೊಟ್ಟಗುಟಿಯಂ ಮುಟ್ಟಂ ಮನೆಯೊಳ್ ಪದೆದಿರಿಸುಗೆ (ಮದತಿ. ೧೦–೩೦) ; ನೆತ್ತದಲಿ ಭಕ್ತಂಗೆ ಹಿರಿದಹ ವಿತ್ತಮಂ ಸೋಲ್ತು (ಬಸವು. ೪೪–೬೧) ; ನೀವು ಚಿತ್ತವಿಸಿದೊಡೆ ನೆತ್ತದೊಳಾವು ಸೋಲಿಸಿ ಕೊಡುವೆವವರನು (ಕುಮ್ಯಾಸ. ೧೨–೬೦). ೪. ಪಗಡೆ ಮುಂತಾದ ಆಟಗಳಲ್ಲಿ ಬೀಳುವ ಗರ : ನೆತ್ತಗಳು ನಳನಿಗೆ ವಿರೋಧ ವಾಗಿಯೇ ಬೀಳುತ್ತಿದ್ದದ್ದನ್ನು ನೋಡಿ ದಮಯಂತಿಯು ಹೆದರಿ (ಪಚಭಾ. ೧೩೨). **ಲತ್ತ :** ೧. ಇದರಸ್ತಿ ಲತ್ತ ಪಗಡೆಯು ಚರ್ಮ ಹಾಸಂಗಿಯು ಮಾಡಿ (ತುರಂಗ. ೧೨–೪೯). ೩. ಇಂದುಮುಖಿ ಸತ್ಯ ಭಾಮೆಯು ಕೂಡೆ ಲತ್ತವಂ ಚಂದದಿಂದಾಡುತ್ತಿರೆ (ತುರಂಗ. ೨೪–೪೦). ೪. ನೆನೆದುದೆ ಲತ್ತ ಬೀಳಬೇಕೆಂದಿವರ ಬೇಡಿದನು ವರಗಳಂ (ತುರಂಗ. ೧೨–೫೦). **ಲೆತ್ತ :** ೧. ನೀನು ಲೆತ್ತಗಳನ್ನು ಒಗೆದು ಆಟವನ್ನು ಆರಂಭಿಸು (ಮಭಾರ. ೮೯) ; ನಾನು ಲೆತ್ತಗಳನ್ನು ಚೆಲ್ಲುತ್ತೇನೆ (ನಲದ. ೬೫) ; ಲೆತ್ತ ಹಾಕಲಿಕ್ಕೆ ಹೋದರೆ ಬೋಕಿ ಬಿತ್ತು (ಗಾದೆ). ೩. ಲೆತ್ತ ದೊಳ್ ಪಿರಿದಾಂ ಸೋಲ್ತೆನೊ (ಉದ್ಭಟ. ೧೧–೨೪) ; ಉಭಯರಾಯರು ಸೇರಿ ಮುಂದದಿ ಲೆತ್ತವನಾಡಿ ಸಭೆಯೊಳು ಧರ್ಮಜ ಸತಿಯ ಸೋಲೆ (ಪುರಂದ.೧–೧೭೨–೧) ; ಆಡುವ ಪಗಡೆ ಲೆತ್ತ ಚದುರಂಗಂಗಳಂ ಬಿಸುಟ್ಟು (ಚೆಬವು. ೧೯–೨೮) ; ದಾಯಿಗನ ಪುನರಪಿ ಲೆತ್ತದಲಿ ಗೆಲಿದೊಡನೆ ರಾಜ್ಯಂಗೈದನೊಲವಿನಲಿ (ಅಂಬಿಕಾ. ೪೮ ಸೂಚನೆ).

**ನೆತ್ತದ ಚಾರಿ, ನೆತ್ತದ ಸಾರಿ = ನೆತ್ತಸಾರಿ :** ಆಗಳೊರ್ವಳ್ ನೆತ್ತದ ಚಾರಿಯಂ ಕೊಂಡು ಬಂದು (ಬಂಹರಿ. ೩–೭೦ ಪ); ನೆತ್ತದ ಸಾರಿ ಯಂತೆ ಮೊಲೆ ಮೂಡಲೊಡಂ ಗುಣವೇಱು ಲಜ್ಜೆ ನಾಣ್ ಪತ್ತುವು ಗಾಳು ಗಣ್ಬರಿದುವಾಸೆಯ ಪಾಸಗೆಯಂತೆ (ಅನಂಪು. ೮–೧೫). **ನೆತ್ತದ ಹಲಗೆ, ಲೆತ್ತದ ಹಲಗೆ = ನೆತ್ತವಲಗೆ :** ತರುಣಿಯ ಮಿಳಿತ ಕೋಮಳ ನೀಲಕಚಭರವೊಪ್ಪಿ ಪಸರಿಸುಗು ನಳಿನಮುಖಿಗಂಗಜನ ನೆತ್ತದ ಹಲಗೆಯಿಂದಂ ಬಾಗುವೆತ್ತುದು ಚೆಲುವು ಮಿಗೆ ಬಲದೇವಪುತ್ರಿಯ ಬೆನ್ನಿನುನ್ನತಿಗೆ (ಬಸವು. ೪–೨೯) ; ಹಿಟ್ಟು ಅಕ್ಕಿಯ ಹಿಡಿದು ಲೆತ್ತದ ಹಲಗೆಯ ಹಿಡಿದು ಹೆತ್ತವ್ವ ನಿನ್ನಲ್ಲಿಗೆ ಬರುವೆನು (ಕನ್ನಜಾ. ೩೨೪). **ನೆತ್ತದ ಹಾಸಂಗಿ = ನೆತ್ತಸಾರಿ :** "ದ್ಯೂತ ನೆ[ಪಾಠಾಂ. ಲೆ]ತ್ತದ ಹಾಸಂಗಿ ಪಲಂಕೆ ಶಾರಿ ವರವೈಶೀಕಂಗಳಾಕರ್ಷಕಮಕ್ಕು" (ನಾನಾರ. ೧೩೫) ; ನೆತ್ತದ ಹಾಸಂಗಿ ಎತ್ತ ಬಿದ್ದರು ದಾಯ (ಸರ್ವಜ್ಞ. ೪೦೭).

**ನೆತ್ತದಾಟ = ಪಗಡೆಯ ಆಟ :** ನೆತ್ತದಾಟವನುಡುಗಿ ನಿನಗನಿಮಿತ್ತ ಹಾಸ್ಯವದೇಕೆ ಸಂಭವಿಸಿತ್ತು ಸಂಶಯವಾದುದೆನಗೆ ಮದೀಶ ಜಗದೀಶ (ಬಸವು. ೪೩–೧೨); ಅರಿನೃಪರ ಪಡಲ್ವಡಿಸುವ ಪರಿಯುಕ್ಕುವೊ ನೆತ್ತದಾಟ ಮಕ್ಕುಮೊ (ವೃಷವಿ. ೨೯–೧೮೬) ; ದುರ್ಯೋಧನನು ಚಿಂತಿಸುತ್ತಿರಲು ಶಕುನಿ ನೆತ್ತದಾಟಕ್ಕೆ ಧರ್ಮರಾಜನನ್ನು ಕರಸುವ ಸಲಹೆಯನ್ನು ಕೊಡುವನು (ತವನಿ. ೬೪). **ನೆತ್ತವಾಡು, ಲೆತ್ತವಾಡು = ಪಗಡೆಯಾಟ ವಾಡು:** ಧರ್ಮರಾಯನನ್ನು ನೆತ್ತವಾಡುವುದಕ್ಕೆ ಕರೆಯಿಸಿದರೆ ಅವನನ್ನು ಸೋಲಿಸಿ ಅವನ ದೇಶಕೋಶಗಳೆಲ್ಲವನ್ನೂ ಗೆದ್ದು ಕೊಡುವೆನೆಂದು . . . ಪ್ರೋತ್ಸಾಹಪಡಿಸಿದನು (ಭೀಷ್ಮಚ. ೧೧೩) ; ಉದ್ಭಟನಂದು ಕರಂ ಲೆತ್ತ ವಾಡುತುಂ ರಂಜಿಸಿದಂ (ಉದ್ಭಟ. ೧೧–೧೧); ಕೊಲ್ಲೆಂಬ ನುಡಿ ಲೆತ್ತ ವಾಡುವೆಡೆಯೊಳ್ . . . ಅಳಿಯಾಸೆ ಎಣಿಸಲ್ಕೆ ಕುಸುಮತರುಗಳೊಳಲ್ಲ ದಿಲ್ಲವಾ ಜನಪದದೊಳು (ಚೆಬವು. ೬–೪೩) ; ವರುಣನು ದೇವರಾಜನ ಮನೆಗೆ ಹೋಗಿ, ಲೆತ್ತವಾಡುವದರಲ್ಲಿ ಮಗ್ನನಾಗುತ್ತಿದ್ದನು (ದೇಪಅ. ೧). **ಲೆತ್ತದ ಪಾಸಿ = ಲೆತ್ತದ ಗರ :** ಇಂದು ಲೆತ್ತದ ಪಾಸಿಯೇ ತಿರುವು ಮುರುವಾಗಿ ಬಿಟ್ಟಿತು ; ಪರಿಣಾಮವನ್ನು ಸಂವರಿಸಿಕೊಳ್ಳುವುದೇ ಸಾಧ್ಯ ವಿಲ್ಲ (ಪ್ರೇಮಾಶ್ರ. ೨೬೧). [**ದೇ. ‖ ತೆಲು.** ನೆತ್ತ]

**ನೆತ್ತ**$_{2}$ (ನಾ). ಕಣ್ಣು ; ನೇತ್ರ ; ನಯನ : ನೇತ್ರ–ನೆತ್ತ; ನಿದ್ರಾ–ನಿದ್ದೆ (ಶಮದ. ೨೬೧ ಪ್ರಯೋ). [<**ಸಂ.** ನೇತ್ರ]

**ನೆತ್ತಕ** (ನಾ). ನೆತ್ತವಾಡುವವನು : ಕುಳ್ಳಿರ್ದರಂದೋಳಿಗಳಿಂ ದಂಡಾಧಿಪರ್ ಮಾಂಡಳಿಕರ್ . . . ನೆತ್ತಕರ್ ವಾಸಕಾಱರ್ ನಗೆಕಾಱರ್ (ಅನಂಪು. ೨–೨೬). [ನೆತ್ತ$_{1}$+–ಕ$_{3}$]

**ನೆತ್ತಕಾರ** 'ನೆತ್ತಗಾಱ' ನೋ.

**ನೆತ್ತಕಾಱ** 'ನೆತ್ತಗಾಱ' ನೋ.

**ನೆತ್ತಗಾರ** 'ನೆತ್ತಗಾಱ' ನೋ.

**ನೆತ್ತಗಾಱ, ನೆತ್ತಕಾರ, ನೆತ್ತಕಾಱ, ನೆತ್ತಗಾರ** (ನಾ). ಲೆತ್ತವಾಡು ವವನು : ನೆತ್ತಗಾಱರ ಚದುರಂಗಕಾಱರೊರೆಗಾಱರ ಬಾಜಿಪ ಬೀಣೆ ಗಾಱರಾಗರಮೆನೆ ಪೆಂಪು ಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್ (ಕಬ್ಬಕಾ. ೪೨) ; ಸಾರಿಯಂ ಕೆದಱುವ ನೆತ್ತಗಾಱರ ವಿನೋದಮನೀಕ್ಷಿಸು ತಿರ್ದಂ (ದಶಕು. ೮–೮೯). **ನೆತ್ತಕಾರ :** ಅಕ್ಷದ್ಯೂತದ ಸಾಧನೋಪ ಕರಣಗಳನ್ನು ಆಸ್ಥಾನದ ನೆತ್ತಕಾರರು ಸುವಿಧಾನದಿಂದ ಪಾಳಿಗೊಳಿಸು ತಿದ್ದು ಪೆರಸಾರುವರು (ಮಂತ್ರಶ. ೧೬೩–೫). **ನೆತ್ತಕಾಱ :** ಭಂಗ ವಿಲ್ಲದ ನೆತ್ತಕಾಱನೊಯ್ದತ್ತ ಹಾಸಂಗಿಯೊಳ್ಸರಿವ ಕಾಯಂತೆ ಅಂಗವರಿದು ತೆಗೆದಂತೆ ನಾಲ್ದೆಸೆಗೆ ತುರಂಗ ಮೈಗೊಟ್ಟು ಹಾಱಿದುದು (ಭರಚ. ೩೦–೬೩). **ನೆತ್ತಗಾರ :** ತಂತಮ್ಮ ಆಟಗಳಲ್ಲಿ ಆಗಳೇ ನಿರತರಾಗಿರುವ ನೆತ್ತಗಾರರೂ ಇತರ ದ್ಯೂತಾಜೀವರೂ ಐಹಿಕವನ್ನೇ ಮರೆತು ಕಳೆದಿರು ವರು (ಬಿಟ್ಟಅ. ೮೨–೯). [ನೆತ್ತ$_{1}$ +–ಕಾಱ]

**ನೆತ್ತಗೆ** (ನಾ). = ನೆತ್ತಕ (?) : ಅವರು ಸಮಯದ್ರೋಹರು ರಾಜ ದ್ರೋಹರು ಬಣಂಜಿಗ ಪಗೆಯರು ನೆತ್ತಗೆಯರು ಕೊಲೆ ಕವತ್ತೆಗೊಡೆ ಯರು (ಎಕ. II, ೩೩೩–೨೪ ; 1206 ?). [?]

**ನೆತ್ತಗೊಡಗೆ** 'ನೆತ್ತರುಗೊಡಗೆ' ನೋ.

**ನೆತ್ತಪಡಿ** 'ನೆತ್ತರ್ಪಡಿ' ನೋ.

**ನೆತ್ತರ್, ನೆತ್ತರ, ನೆತ್ತರು** (ನಾ). ಮನುಷ್ಯ ಮತ್ತು ಪ್ರಾಣಿಗಳ ನರನಾಡಿಗಳಲ್ಲಿ ಹರಿಯುವ, ತ್ರಾಣವನ್ನು ಕೊಡುವ ಕೆಂಪು ದ್ರವ ; ರಕ್ತ ; ಕೆನ್ನೀರು : "ನೆತ್ತರಾಕ್ಷತಜಮಸೃಕ್ ಲೋಹಿತಂ ರುಧಿರವಸ್ರಮೆನೆ ರಕ್ತಮಕ್ಕುಂ" (ಮಂಗರಾ. ೧೧೬–೩) ; ತನ್ನ ಕಾಲಂ ದರ್ಭಾಂಕುರಂ ನೆತ್ತರ್ವರೆ ಕೊಂಡೊಡೆ (ಪದ್ಮಾರಾ. ೧೮೪–೧) ;

ಭೋಂಕೆನೋಗೆತರ್ಪ ಮಹೋರಗನೆಯ್ದೆ ಪಲ್ಗಳದೋಡೆ ಕಿಡಿವೀಟಿಕೆ ನೆತ್ತರೊಜಿಕೆದುರ್ಜಗೆ ಕೊಂಡುದು ತತ್ತಪಸ್ವಿಯಂ (ಆದಿಪು. ೨-೪೦) ; ಪೆರ್ಬಂದಿಗಳ್ ನೆತ್ತರುಂ ಬಸಿವುತ್ತಿರ್ಪುದು (ಕಾದಂಪೂ. ೧೫೭) ; ಕುರುನಂದನರಂ ಕೊಂದೆಂ ಕುರುಶಾಬಾನುಜನ ನೆತ್ತರಂ ಕುಡಿದೆಂ (ಗದಾಯು. ೧-೬೯); ನೆತ್ತರನೆ ಕಾಱು ಕೆಡೆದರ್ ನೆಲದೊಳ್ (ಧರ್ಮಾಮೃ. ೩-೨೦೩) ; ನೆತ್ತರಿಂ ನೆಣದಿನೆಳ್ಗರುಳಿಂದಮೆ ಭೂತಕೋಟಿಯುಂ ತಣಿಪ ನೆಗಟೆತ್ತಿಯುಂ ಪಡೆದ × × × (ಎಕ. VIII, ಸಾಗರ. ೧೦೮-೨೧ ; 1631). **ನೆತ್ತರ :** "ನೆತ್ತರದಲ್ಲಿಯುಂ, ನೀರಲ್ಲಿಯುಂ, ಕೀಲಾಲಮೆಂಬುದು" (ಹಲಾಯು.೧೩೪-೪೧); ಹರಿಯದ ಗುಂಗಿನಲ್ಲಿ ಕಾದ ನೆತ್ತರದ ಹರಿದಾಟದಲ್ಲಿ ಮಾನವನು ತನ್ನನ್ನು ತಾನೆ ಮರೆಯುವನು (ಕನ್ನಜಾ. ೯೧). **ನೆತ್ತರು :** "ಕ್ಷತಜಂ, ಲೋಹಿತಂ . . . ರಕ್ತಂ—ಈ ೭ ನೆತ್ತರು" (ಹಲಾಯು. ೧೦೪-೧೦) ; ಅರಿದ ಹಾರುವನೊಬ್ಬನು ಅರಿದ ತಲೆಯ ಹಿಡಿದುಕೊಂಡು ಅಧ್ಯಾತ್ಮವಿಕಾರದ ನೆತ್ತರ ಕುಡಿದನು ನೋಡಾ (ಅವಚಂ. ೯-೩೩) ; ನೂಕಿ ಕೊಯ್ಗೊರಳುಗಳ ಮುಂಡದ ಮೂಕಿನಲಿ ನೆಗೆದೊಗುವ ನೆತ್ತರು ನಾಕವನು ನಾದಿದುದೆನಲು ಸವಱದನು ಪರಬಲವ (ಕುಮಾವ್ಯದ್ರೋ.೬-೪೪); ದೈತ್ಯಗೆ ಪೆಟ್ಟನಿಕ್ಕಿದ ಮೂಗಿನೊಳ್ ನೆತ್ತರು ಸುರಿಯೆ (ಮೋಹತ. ೪೦-೬೧) ; ಎಲ್ಲರೂ ಜಿಗಣೆಗಳೆ ನನ್ನ ನೆತ್ತರಿಗೆ ! (ಕೋಗಿಲೆ. ೧೫-೪).

**ನೆತ್ತರ ಕರಣೆ**=ಉಂಡೆಯಾದ ರಕ್ತ ; ಗಟ್ಟಿಯಾದ ರಕ್ತ ; ರಕ್ತದ ಗರಣೆ : ನೆತ್ತರ ಕರಣೆ ನೀರೊಳು ಬಿದ್ದುದನು ಕಂಡತ್ತರು ದಿಗ್ವನಿತೆಯರು (ಮೋಹತ. ೧೧-೨೯). **ನೆತ್ತರ ಕೊಡಿಗೆ**=ನೆತ್ತರುಗೊಡಗೆ : ದಳವಾಯಿ ಸೋಣಯಗೌಡರಿಗೆ ಕೊಟ್ಟ ನೆತ್ತರ ಕೊಡಿಗೆ (ಎಕ. X, ಕೋಲಾರ. ೧೬೫-೮ ; 1630). **ನೆತ್ತರ ಗೂಳು**=ರಕ್ತದಲ್ಲಿ ಕಲಸಿದ ಅನ್ನ,—ಆಹಾರ : ನೆತ್ತರಗೂಳನುಂಬವೊಲಖಿಳರಾಜ್ಯದ ಮೇಲೆ ಸೊಗಸುವ ಸಿರಿಯನೊಲ್ಲೆನು(ಕುಮಾವ್ಯಭೀ.೩-೪೨). **ನೆತ್ತರ ತೃಷೆ**= ರಕ್ತದ ದಾಹ : ಇವರ ನೆತ್ತರ ತೃಷೆಗೆ ನಿರ್ದೋಷಿ ಈತನನ್ನೀಯುವುದೆ ನಿಶ್ಚಯಂ (ಗೊಲ್ಗೊಥಾ. ೮-೨೧೨). **ನೆತ್ತರು ಮಾಡು**=ರಕ್ತವನ್ನು ಚೆಲ್ಲು ; ರಕ್ತಸಿಕ್ತಗೊಳಿಸು : ಮೂಡುವನು ರವಿ ಮೂಡುವನು ಕತ್ತಲೊಡನೆ ಜಗಳಾಡುವನು ; ಮೂಡಣರಂಗಸ್ಥಳದಲಿ ನೆತ್ತರು ಮಾಡುವನು ಕುಣಿದಾಡುವನು (ಕಏಪು. ೫-೧).

[**ದೇ.॥ ತಮಿ.** ನೆಯ್‌ತ್ತೋರ್ ; **ತುಳು.** ನೆತ್ತೆರ್ ; **ಕೊಡ.** ನೆತ್ತರು ; **ತೆಲು.** ನೆತ್ತುರು, ನೆತ್ರು ; **ಕೋಲಾ.** ನೆತುರ್ ; **ನಾಯ್ಕಿ.** ನೆತ್ತುರ್ ; **ಪರ್ಜಿ.** ನೆತಿರ್ ; ನೆತ್ರೊ ; **ಗಡಬ.** ನೆತ್ತೂರ್ ; **ಗೊಂಡಿ.** ನತ್ತುರ್, ನೆತುರ್, ನೆತ್ತುರ್ ; **ಕುವಿ.** ನೆತೊರಿ ; **ಕೋತ.** ನೆತ್ರ್]

**ನೆತ್ತರ** 'ನೆತ್ತರ್' ನೋ.

**ನೆತ್ತರು** 'ನೆತ್ತರ್' ನೋ.

**ನೆತ್ತರುಕಾರು** 'ನೆತ್ತರುಕಾಱು' ನೋ.

**ನೆತ್ತರುಕಾಱು,** ನೆತ್ತರುಕಾರು (ಕ್ರಿ). ರಕ್ತವನು ಕಕ್ಕು,—ಕಾರು : ಕೆರಳಿ ಕಪಿ ಮೇಲೆಱಗೆ ನೆತ್ತರು ಕಾಱು ಖಳ ಬಿದ್ದ (ತೊರಿರಾ. ೨೬-೨೯). **ನೆತ್ತರುಕಾರು :** ಬೀಳಲಿ ಮೈ ನೆತ್ತರು ಕಾರಿ (ಕೋಗಿಲೆ. ೩೩-೧).

[ನೆತ್ತರು(<ನೆತ್ತರ್)+ಕಾಱು$_1$(<ಕಾಱ್)]

**ನೆತ್ತರುಕುರು** (ನಾ). ಊದಿ ರಕ್ತ ತುಂಬಿಕೊಂಡಿರುವ ಒಂದು ಬಗೆಯ ಕುರು ; ರಕ್ತಕುರು : ನೆತ್ತರುಕುರುವಿನ ನೋವು ಸಲ್ಲ, ಮಂತ್ರ ಮಾಡುವವರ ಸೋಗು ಸಲ್ಲ (ಗಾದೆ).

[ನೆತ್ತರು(<ನೆತ್ತರ್)+ಕುರು$_1$]

**ನೆತ್ತರುಕೊಡಗೆ** 'ನೆತ್ತರುಗೊಡಗೆ' ನೋ.

**ನೆತ್ತರುಕೊಡಿಗೆ** 'ನೆತ್ತರುಗೊಡಗೆ' ನೋ.

**ನೆತ್ತರುಕೊಡೆಗೆ** 'ನೆತ್ತರುಗೊಡಗೆ' ನೋ.

**ನೆತ್ತರುಗಯ್** 'ನೆತ್ತರುಗೆಯ್' ನೋ.

**ನೆತ್ತರುಗುಡಿಹಿ,** ನೆತ್ತರುಗುಡುಹಿ (ನಾ). ರಕ್ತವನ್ನು ಕುಡಿಯುವವನು ; ನೆತ್ತರನ್ನು ಹೀರುವವನು ; ರಾಕ್ಷಸ : ಅಡಿಗಡಿಗೆ ಮಾನಿಸರ ಸೊಗಡವಗಡಿಸುತಿದೆ ಬರಹೇಳು ನೆತ್ತರುಗುಡಿ[ಪಾಠಾಂ.ಡು]ಹಿಗ್ಯೆನೆಯರಿಲ್ಲಿ ಶಾಕಿನಿಡಾಕಿನೀನಿಕರ (ಕುಮಾವ್ಯಅ. ೧-೨೬). **ನೆತ್ತರುಗುಡುಹಿ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ನೆತ್ತರು(<ನೆತ್ತರ್)+ಕುಡಿಹಿ]

**ನೆತ್ತರುಗುಡುಹಿ** 'ನೆತ್ತರುಗುಡಿಹಿ' ನೋ.

**ನೆತ್ತರುಗುಡುಹಿತನ** (ನಾ). ರಕ್ತವನ್ನು ಕುಡಿಯುವ ಸ್ವಭಾವ ; ಕ್ರೌರ್ಯ : ಛಡ ವಿಕಾರವೆ ನೋಡು ನೆತ್ತರುಗುಡುಹಿತನವೇ ನಮ್ಮೊಡನೆ . . . ಕುಡಿದ ರಕುತದ ಜಿಗುಳೆ ನೀ ನಿನ್ನೊಡಲ ನಿಗುಚುವೆ (ಕುಮಾವ್ಯಕ. ೨೦-೪). [ನೆತ್ತರುಗುಡುಹಿ(<ನೆತ್ತರುಗುಡಿಹಿ)+-ತನ]

**ನೆತ್ತರುಗೆಇ** 'ನೆತ್ತರುಗೆಯ್' ನೋ.

**ನೆತ್ತರುಗೆಯ್,** ನೆತ್ತರುಗಯ್, ನೆತ್ತರುಗೆಇ (ನಾ). =ನೆತ್ತರುಗೊಡಗೆ : ದಾಮನಾಯಕನ ಬೀರಗಲ್ಲಿ×××ನೆತ್ತರುಗೆಯ ಮಂಗಳ ಮಹಾಶ್ರೀ (ಸೌಇಇ. XX, ೨೨೨-೯ ; 1287). **ನೆತ್ತರುಗಯ್ :** ನೆತ್ತರುಗಯ್ಯ ಬಣಜಿಗಗೊಟ್ಟದಕ್ಕೆ ನನ್ನಿಕಂಬದ ಮುಂದೆ ಹಸುಂಬೆಯ ನಿಕ್ಕಿದಡಂ (ಎಕ. XI, ದಾವಣ. ೧೦೫-೪೫ ; 1218). **ನೆತ್ತರುಗೆಇ :** ತೆಂಕಣ ಕೋಡಿಯ ಹಿಂದೆ ಗಜ್ಜನ ಗಳೆಯಲು ಕಂಬ ೧೫ಸು ನೆತ್ತರುಗೆಇಯಾಗಿ ಕಲ್ಲ ನಟ್ಟು ಕೊಟ್ಟರು (ಎಕ. VII, ಚನ್ನಗಿ. ೫೫-೮; 1279).

[ನೆತ್ತರು(<ನೆತ್ತರ್)+ಕೆಯ್$_4$]

**ನೆತ್ತರುಗೊಡಗಿ** 'ನೆತ್ತರುಗೊಡಗೆ' ನೋ.

**ನೆತ್ತರುಗೊಡಗೆ,** ನೆಂತರುಗೊಡಗಿ, ನೆತರುಕೊಡಗೆ, ನೆತ್ತಗೊಡಗೆ, ನೆತ್ತರುಕೊಡಗೆ, ನೆತ್ತರುಕೊಡಿಗೆ, ನೆತ್ತರುಕೊಡೆಗೆ, ನೆತ್ತರುಗೊಡಗಿ (ನಾ). ಯುದ್ಧದಲ್ಲಿ ಕಾದಿ ಮಡಿದವನ ಕುಟುಂಬಕ್ಕೆ ದಾನವಾಗಿ ಕೊಡುವ ಭೂಮಿ ; ರಕ್ತಕೊಡಿಗೆ : ಹಿರಿಯ ಹೊಲದಲಿ ಸಮುದಿಕವಾಗಿ ನೆತ್ತರುಗೊಡಗೆ ಬಿಟ್ಟ ಮಣ್ಣು ೫೦೦ (ಎಕ. III(R), ನಂಜನ. ೨೬೫-೧೮ ; 1180) ; ಮಾಳಬೋವನ ತಮ್ಮ ಮಲ್ಲಯನಾಯಕ ಬಿದ್ದಲಿ ನೆತ್ತರುಗೊಡಗೆ (ಎಕ. VII, ಹೊನ್ನಾಳಿ. ೧೧೧-೫ ; 1185). **ನೆಂತರುಗೊಡಗಿ :** ಮುಂಮಡಿ ಚಿಕಪಗೌಡರಯ್ಯನವರು ಕೋಗಗೌಡಗೆ ಕೊಟ್ಟ ನೆನ್ತರುಗೊಡಗಿ ಮಾನ್ಯದ ಹೊಲ (ಮೈಆರಿ. ೧೯೨೯, ೯೯-೪ ; 1553 ?). **ನೆತರುಕೊಡಗೆ :** ಬಯಿಚಪಗಉಡನು ತಿಂಮಣಗೆ ಕೊಟ್ಟ ನೆತರುಕೊಡಗೆ (ಎಕ. X(S), ಕೋಲಾರ. ೩೦೭-೪; ಸು. 16ನೆಯ ಶತ). **ನೆತ್ತಗೊಡಗೆ :** ಅಶೇಷಮಹಾಜನಂ ಮೆಚ್ಚಿ ನೆತ್ತಗೊಡಗೆಯೆಂದಾತನ ಮಗಂ .ಮಾಕೆಯನಾಯಕಜಿಗ್ಗೆ ಹಾದ ಕೆಯ್ಯುಮಂ ಹತ್ತು ಕೆಯ್ಯ ಮನೆಯುಮಂ ಸರ್ವ್ವಬಾಧಾಪರಿಹಾರವಾಗಲಾಚಂದ್ರಾರ್ಕ್ಕತಾರಂಬರಂ ಸಲುವಂತಾಗಿ ಕೊಟ್ಟರು (ಎಕ. VIII, ಸೊರಬ. ೨೫೧-೧೬ ; 1177). **ನೆತ್ತರುಕೊಡಗೆ :** ಅರಿವತ್ತಲು ಗದ್ದೆಯಂ ನೆತ್ತರುಕೊಡಗೆಯಾಗಿ ಬಿಟ್ಟಂ (ಮೈಆರಿ. ೧೯೩೦, ೬೬-೨೧ ; 1194) ; ಆ ಊರ ನಾವಿದ ಮಂಚೆ ಕಾದಿ ಬಿದ್ದಲ್ಲಿ ಒಳಕುಪ್ಪೆಹಳ್ಳಿ ನೆತ್ತರುಕೊಡಗೆ ಕಂಬ ೧೦೦ (ಎಕ. IV (R), ಚಾಮರಾ. ೨೫೨-೧೦ ; 1380). **ನೆತ್ತರುಕೊಡಿಗೆ :** ಈ ಕಾನನು ನೆತ್ತರುಕೊಡಿಗೆಯಾಗಿ ಕೊಟ್ಟನು (ಮೈಆರಿ. ೧೯೨೩, ೮೮-೪ ; ?). **ನೆತ್ತರುಕೊಡೆಗೆ :** ಕೋಲ್ಲುಮ್ಮಸೆಯ ಬಯಲೊಳಗೆ ನೆತ್ತರುಕೊಡೆಗೆಯಯಾತನ ಪೀಳಿಗೆಗೆ ಕೊಟ್ಟ (ಎಕ. VIII, ಸೊರಬ. ೯೮-೧೦ ; 1196). **ನೆತ್ತರುಗೊಡಗಿ :** ಕರಡಿಕೆಱೆಯ ಪೆರುಮಗಉಡನ ಮಗ ನಾಗೆಯ

ನಾಯ್ಕಂಗೆ ಕೊಟ್ಟ ನೆತ್ತರುಗೊಡಗಿಯ ಕ್ರಮವೆಂತೆಂದಡೆ (ಎಕ. XI, ಹಿರಿಯೂ. ೧೬–೬ ; 1205).

[ನೆತ್ತರು(<ನೆತ್ತರ್) + ಕೊಡಗೆ(<ಕೊಡಂಗೆಯ್$_2$)]

**ನೆತ್ತರುಣಿಗ** (ನಾ). =ನೆತ್ತರುಗುಡಿಹಿ : ಕಾಮುಗ ವಿಮಾನಂ . . . ಸಮರಶೂರರೆನಿಪ ನೆತ್ತರುಣಿಗರ ವೀರಭಟರನದು ಪಲಬರಂ ಪೊತ್ತು ಬಿಡದೆತ್ತೆತ್ತಲುಂ ಗಗನಮಾರ್ಗದೊಳೆನಿತ್ತು ದೂರಕ್ಕಾದೊಡಂ ಜವದೊಳೈದುವುದು (ಶೀಷರಾ. ೧೪–೨೦). [ನೆತ್ತರ್ + -ಉಣಿಗ]

**ನೆತ್ತರುನಂಜು** (ನಾ). "(ಕೀವು ಕಟ್ಟಿ ರಕ್ತಕ್ಕೆ ಬೆರೆಯುವುದರಿಂದಾಗುವ) ನೆತ್ತರು ನಂಜು" (Pyaemia. ಇಂಕನಿ).

[ನೆತ್ತರು(<ನೆತ್ತರ್) + ನಂಜು$_2$]

**ನೆತ್ತರುಮಾನ್ಯ** (ನಾ). = ನೆತ್ತರುಗೊಡಗೆ : (೬).

[ನೆತ್ತರು(<ನೆತ್ತರ್) + ಮಾನ್ಯ]

**ನೆತ್ತರುವಱಿ** (ನಾ). ಒಂದು ಬಗೆಯ ತೆರಿಗೆ (?) : ನೆತ್ತರುವಱಿಯ ಪೊಲವದದೊನ್ತಲವರನ್ನಿದ್ದೊಡನಟಿದೊನ್ಪಂಚಮಹಾಪಾತಕನಕ್ಕುಂ (ಎಕ. III (R), ಹೆಗ್ಗಡ. ೧೧೨–೮ ; ಸು. 9ನೆಯ ಶತ).

[ನೆತ್ತರು(<ನೆತ್ತರ್) + ವಱಿ$_0$(<ವರಿ$_1$)]

**ನೆತ್ತರೂರು** (ಕ್ರಿ). ರಕ್ತ ಸುರಿ,—ಜಿನುಗು : ಅಹಹ ವಿಶ್ವಾಸಘಾತವೊ ! ಕಣ್ಣಿನಲಿ ನೆತ್ತರೂರದೀ ನಿರ್ದಯವೊ ! ಕುರಿಗೆ ತೋಳನ ಮುತ್ತೋ ! ಅಹಹ ಕೇದಗೆ ನಗೆಯೊ ! (ಹಬ್ಬರ. ೩೨–೧೩೮).

[ನೆತ್ತರ್ + ಊರು$_2$(<ಊಱು$_2$)]

**ನೆತ್ತರೊಗೊಡೆ** (ನಾ). =ನೆತ್ತರುಗೊಡಗೆ : [ಗೊ]ಣ್ಡಿಕ್ಕೆ ಕಪ್ಪಡಮಾ[ನೆ]ಲ್ಲಕ[ಜ್ಞ]××ನಮೆಸ್ಯ ನೆತ್ತರೊಗೊಡೆ[ಬಾ]ಟಿ ಮಱುವಕ್ಕ (ಸೌಇಇ. XI–i, ೧೦–೯ ; 864). [<ನೆತ್ತರ್+ಕೊಡೆ$_3$]

**ನೆತ್ತರೊಡೆ** (ಕ್ರಿ). ರಕ್ತ ಚಿಮ್ಮು : ನೆತ್ತರೊಡೆದುದು ಹುಲಿಯ ಕೂರುಗುರ್ಗೀರಿದುವು (ಕಾಲೂರ. ೯೬–೧೯೦).

[ನೆತ್ತರು(<ನೆತ್ತರ್) + ಒಡೆ$_1$]

**ನೆತ್ತರೊಸರು** (ಕ್ರಿ). ರಕ್ತ ಸೋರು : ನೋಡಿಲ್ಲಿ ನೆತ್ತರೊಸರುವ ಗಾಯ (ಚಂದ್ರಸ. ೨೯–೧೬).

[ನೆತ್ತರು (<ನೆತ್ತರ್)+ಒಸರು$_1$(<ಒಸರ್$_1$)]

**ನೆತ್ತರ್ಗಾಯ** (ನಾ). ರಕ್ತ ಸುರಿಯುವ ಗಾಯ; ನೆತ್ತರನ್ನು ಹರಿಸುವ ಪೆಟ್ಟು : ನಮ್ಮ ಅಸಮಾಧಾನ ಕೋಪ ನಿರಾಶೆಗಳ ತೀಕ್ಷ್ಣ ಸಂಕಟದಿಂದ ಏರ್ಪಟ್ಟ ಹೃದಯಮಣ್ಡಲದ ನೆತ್ತರ್ಗಾಯಗಳನ್ನು ಮುಳುಕಿಸಿ ಗುಣವಾಗಿಸಿಕೊಂಡು—ನರಕಕ್ಕೆ ದುಧುಮ್ಮನೆ ಧುಮ್ಮಿಕ್ಕಿಬಿಡೋಣ (ಬಿಟ್ಟಅ. ೯೭–೧೮). [ನೆತ್ತರ್ + ಗಾಯ]

**ನೆತ್ತರ್ಗೆಂಪು** (ನಾ). ರಕ್ತದಂತಹ ಕೆಂಪು ಬಣ್ಣ ; ರಕ್ತವರ್ಣ : ದಿಗಂತದಲಿ ಚೈತ್ರರವಿ ಮುಗಿಲ ನೆತ್ತರ್ಗೆಂಪಿನಲಿ ಮುಳುಗುವೋಲಂತೆ (ಶ್ರೀರಾಮಾ. ೧೪–೩೯೯) ; ಕಾಳೆಗದ ದಿನದ ಸಂಜೆಗೀ ನೆತ್ತರ್ಗೆಂಪು ಸಹಜವಲ್ತೆ ? (ಚಂದ್ರಸ. ೪೮–೧೨). [ನೆತ್ತರ್+ಕೆಂಪು$_1$]

**ನೆತ್ತರ್ಪಟ್ಟಿ** (ನಾ). =ನೆತ್ತರುಗೊಡಗೆ : ಪಾರ್ವರೊದೊಳ್ ಸತ್ತಾನ್ ಪೆರಾಣ್ಕೋವನ್ ಕಣ್ಡುಕದಾವೆದೆ ಕಟಿನಿ ನೆತ್ತರ್ಪಟ್ಟಿ (ಎಕ. X (S), ಶ್ರೀನಿವಾ. ೧೧೬–೭ ; ಸು. 700). [ನೆತ್ತರ್ + ಪಟ್ಟಿ$_3$]

**ನೆತ್ತರ್ಪಡಿ,** ನೆತ್ತಪಡಿ (ನಾ). =ನೆತ್ತರುಗೊಡಗೆ : ಅಗವೆಸಲ್ಪಟ್ಟದು ನೆತ್ತರ್ಪಡಿ (ಎಕ. X, ಶ್ರೀನಿವಾ. ೧೬–೭ ; ?). **ನೆತ್ತಪಡಿ :** ಮುಂದು ವೂರಾ ತೊಱುಕೊಳ್ವಲ್ಲಿ ವಿಟಿರ್ದ್ದೀರ್ ಪೆರಾಣ್ಕೋವರ್ ಅವಂಗೆ ಪದಿತೂಪು ಕಟಿನಿ ನೆತ್ತಪಡಿ (ಎಕ. X, ಶ್ರೀನಿವಾ. ೨೦–೮ ; ಸು. 750).

[ನೆತ್ತರ್ + ಪಡಿ$_1$]

**ನೆತ್ತವಲಗೆ** (ನಾ). ಪಗಡೆ ಆಡಲು ಉಪಯೋಗಿಸುವ ಹಲಗೆ,—ಹಾಸು : ಆಕೆಯ ಪರಿಚಾರಿಕೆಯರ್ ನೆತ್ತವಲಗೆಯಂ ತಂದು ಮುಂದಿಟ್ಟು (ನೇಮಿಪು. ೪–೫೨ ವ) ; ಪಾಸಂಗಿಗಳನಾ ಬಿಸಜಲೋಚನೆ ನೆತ್ತವಲಗೆಯ ಮೇಲೆಯಂತಿರಿಸಿ (ಬಸಪು. ೪೩–೧೧) ; ತೊತ್ತೆ ಬಾ . . . ನೆತ್ತವಲಗೆಯ ವೈಸಿಕದ ಮದ್ದುಗಳ ಭರಣಿಗಳ ಹೊತ್ತುಕೊಳ್ಳೇಳು. . .ಎಂಬೊತ್ತುವಲ್ಲಿನ ಸಬುದವೆಸೆದುದು ಸೂಳೆಗೇರಿಯಲಿ (ತೊರರಾ. ೫–೮–೭೭) ; ಮಡದಿಯ ಮಮತೆಯಾಳಿಯರು ಕಡುವೇಗದಿಂ ನೆತ್ತವಲಗೆಯನೀರ್ವರ ನಡುವೆ ತಂದು ಮಡಗಿದರು (ನೇಮಿಸಂ. ೧೦–೭೭) ; ಆಯ್ಕೆಗೊಂಡ ಶಾರಿಕೆಗಳನ್ನೆತ್ತಿ ನೆತ್ತವಲಗೆಯ ಮೇಗಿರಿಸಿ (ಮಂತ್ರಶ. ೧೬೩–೧೯).

[ನೆತ್ತ$_1$ + ಪಲಗೆ./ತಮಿ. ನೆತ್ತಪ್ಪಲಕೈ]

**ನೆತ್ತಸಾರಿ** (ನಾ). ನೆತ್ತದಾಟದಲ್ಲಿ ಉಪಯೋಗಿಸುವ ಕಾಯಿ ; ಪಗಡೆಯಾಟದ ಕಾಯಿ ; ಲೆತ್ತದ ಕಾಯಿ : ಹಲವು ಮಾತಿನಲೇನು ಭೂಪತಿ ಕೆಲಕೆ ಸಿಲುಕಿದನವದಿರೊಡ್ಡಿದ ಬಲೆಗೆ ಬಂದನು ನೆತ್ತಸಾರಿಯ ಗುಱಿಯ ಗದ್ದುಗೆಗೆ (ಕುಮ್ಯಾಸ. ೧೩–೪೫). [ನೆತ್ತ$_1$ + ಸಾರಿ$_4$]

**ನೆತ್ತಿ** (ನಾ). ೧. ತಲೆಯ ಮಧ್ಯಭಾಗ ; ನಡುದಲೆ : ಕೀಱು ನೆತ್ತಿಯೊಳ್ ಬಾಳಂ ನಿರ್ನೆರಮೂಱು ಚಲದಿನೆಱಗಿಸಲಿರೆ ಭರತಂಗೆಱಗುವೆಱಕ ಮಂಜಮೆಯಲ್ತೇ (ಆದಿಪು. ೧೪–೭೫) ; ನೆತ್ತಿಯೊಡೆದು ಸುರಿವ ಬಿಸುನೆತ್ತರ್ಧಾರೆಯುಮಂ ಕಂಡದಿಂಡೆಯುಮಂ ಕಂಡು (ಪಂಚತಂ. ೭೨–೧೪); ನೆತ್ತಿಯಲ್ಲಿ ಆಲಗ ತಿರುಹುವಂತಪ್ಪ ವೇದನೆಯಹುದೆನಗೆ (ಬಸವ. ೩೦೩) ; ಮುತ್ತಿನ ತೋರಣಂ ಗಜದ ನೆತ್ತಿಯ ಮುತ್ತುಗಳೆಲ್ಲ ಪಲ್ಗಳೊಳ್ ಪತ್ತಿದ ಪೋಲ್ವೆಯಂ ಪಡೆವ ಗೋಪುರ ಪಂಚಕಮಾಸ್ಯಮಾಗೆ ಮೈವೆತ್ತಿರೆ(ಅರ್ಧನೇ. ೧–೩೭) ; ಈ ಶಿಶುವಂ ನೆಲದ ಮೇಲೆ ಪಟ್ಟಿರಿಸಲ್ ನಿಮ್ಮಾರ್ವರ್ಗಂ ಪಚ್ಚಿಕೊಡುವೆನೆಂದುಂ ನಂಜನೆಂಜಲಿಪ ಸುರಗಿಯಂ ಕಿತ್ತು ಕೂಸಿನ ನೆತ್ತಿಯ ಮೇಲಡ್ಡವಿಡುವುದುಂ (ಪುಣ್ಯಾಸ್ರ. ೩–೩೭ ವ) ; ಇದು ಎನ್ನ ಮಸ್ತಕದ ನೆತ್ತಿಯಾದೊಡೆ ಕರ್ಕಶಂ ಮಾಡುತ್ತಿಹುದೆ ಜಂಗಮದ ಕೈಗೆ (ಬಸಪು. ೩೮–೩೫) ; ನಿಲುಕಿ ನೆತ್ತಿಯನೊಡೆದು ನಿಡುಪಚ್ಚಳಕೆ ಹಾಯ್ದವು ಬಾಣ (ಕುಮ್ಯಾದ್ರೋ. ೩–೭೪); ನೆತ್ತಿಯ ಕೊಱೆದು ನಾಲಿಗೆಯ ಹಱಿವಾಗ ಚಿತ್ತಜನಯ್ಯನ ನೆನೆಗೊಡದಲೆ ಮನ (ಪುರಂದ. ೧–೧೪೨–೩) ; ಗಾಣಗಿತ್ತಿ ಆಯ್ಯೋ ಅಂದರೆ ನೆತ್ತಿ ತಣ್ಣಗಾದೀತೇ ? (ಗಾದೆ). ೨. ತಲೆ; ಮಸ್ತಕ: "ಉತ್ತಮಾಂಗಂ ಶಿರಂ ಕಂ ಮೌಳಿ ಮಸ್ತಕಂ ನೆತ್ತಿ" (ಮಂಗರಾ.೯೩–೧); ಗಂಡರ ನೆತ್ತಿಯೊಳೊತ್ತಿ ಬಾಳನಿನ್ನೂಱುಗುಮೆಂದೊಡೇಂ ಪಿರಿದೊ ತೇಜದ ಪಳ್ಳುರಿ ಪಾಂಡುರಾಜನಾ (ಪಂಪಭಾ. ೧–೧೦೯) ; ನಿನಗಾಯಬ್ಬೆಯೊಡೆಯಳೆಂಬುದಂ ಪೇಟ್ದುದುಮದಂ ಕೇಳ್ದು ತೊಟ್ಟನೆ ನೆತ್ತಿಯಂ ಸಿಡಿಲ್ವೊಡೆದಂತಾಗೆ (ಕಾದಂಉ. ೭೪೧) ; ಎತ್ತಿ ಜಿನಶಿಶುವನಾಗಳ್ ನೆತ್ತಿಯ ಮೇಲಿಟ್ಟು (ಅಜಿಪು. ೪–೧೪) ; ವಿರಾಱು ಮದಾಜ್ಞೆಯಂ ಗಿರಿಯನೇಱುದ ನಿನ್ನಯ ನೆತ್ತಿಗೀಗಳಿಂತೇಱಿಸಿ ಜೀವಮಂ ಜವನ ಲೆಕ್ಕದೊಳೇಱಿಸಿ ಮತ್ತೆ ನಿನ್ನನಾನೇಱಿಪೆನೆನ್ನ ತೋಳ್ಗೆ ಬಱಿಯಂ ನೆಱೆ ಗೆಲ್ಲಮಂ (ಚಂದ್ರಪು. ೫–೭೪) ; ಕಣ್ಣೊಂದಱೊಳಿಕ್ಕಿದ ಬೆಳ್ಗವಡಿಕೆ ಕಣ್ಣಂ ಮೆಳ್ಳಿಸಿ ನೆತ್ತಿಯ ಚೆಂಡಿಕೆ (ಭೃಂಗೀರ. ಹ. ೪೭೨–೨೨). ೩. ಹಣೆ ; ನೊಸಲು ; ಲಲಾಟ : ಸುಭದ್ರೆಯಪ್ಪ ವ್ಯಂತರದೇವತೆ . . . ಪರ್ದಿನ ರೂಪಂ ಕೈಕೊಂಡು ಬಂದು ನೆತ್ತಿಯ ಮೇಗಿರ್ದು ಕಣ್ಗಳಂ ತೋಡಿ ತಿನೆ (ಪಡ್ಮಾರಾ. ೧೬೮–೫) ; ಈಗಳೇ ತಪಕ್ಕಮ್ಮ ಮನಂದರಲ್ ನಿಮಗೆ ಸಲ್ಲದೊಡಂಬಡಿಮೆಂದು ಕಾಲ್ಗಳಂ ತಮ್ಮಯ ನೆತ್ತಿಯೊಳ್ ನಿಱಿಸಿ ಮಾಕರ್ೊಳೆ (ಆದಿಪು. ೪–೬೮) ; ವನರುಹವಿಷ್ಟರಂ ರುಚಿರರೇಚಕಪೂರಕಕುಂಭಕ ಕ್ರಿಯಾಮನನಿರೆ ನೆತ್ತಿಯೊಳ್ದರನಿಮೀಲಿತದೃಷ್ಟಿ ನಿವಿಷ್ಟಮಾಗೆ (ಗದಾಯು. ೬–೧೫) ; ತಿಗುಳಗೆ ತುತ್ತಿಗೆ ತತ್ವಾರವಾದರೂ ನೆತ್ತಿ ತುಂಬಾ ನಾಮಕ್ಕೆ

ಕಡಿಮೆ ಇಲ್ಲ (ಗಾದೆ). **೪.** ಮೇಲುಭಾಗ ; ಮೇಲ್ಭಾಗ : ನೆತ್ತಿಯೊಳ್ ಪಾಱುವ ಗಿಳಿವಿಂಡು ಪಚ್ಚೆಯ ಸತ್ತಿಗೆಯಂತೆ ಮಂಡಲಿಸೆ (ಮೋಹತ. ೨-೪೫) ; ಪಗಲ್ ನೆತ್ತಿಯೊಳಿರ್ಪುದಿನ್ನುಂ (ಶ್ರೀರಾಪಟ್ಟಾ. ೬೪೮-೧೫೬) ; ಗ್ಯಾಸ್ ಫೈರಿನ ನೆತ್ತಿಗೆ, ಮರದ ಹಲಗೆಯ ಮೇಲಿದ್ದ ಸೌಂದರ್ಯವರ್ಧಕ ಸಾಮಗ್ರಿಗಳ ಸಾಲು (ಹೊಸಕ್ಷಿ. ೨೭೦). **೫.** ತುದಿ; ಶಿಖರ: ನೆತ್ತಿಯಗ್ರದ ತೋರಗುಂಡುರುಳುತ್ತಲಿರ್ದವು ಜಲಧಿಯಡಿಮಳಲೆತ್ತುತಿರ್ದುದು ಗುಮ್ಮಿಱಿದು ಗುಡಿಯಿಱಿದು ಗುಳ್ಳೆಗಳು (ತೊರರಾ. ೪-೧೨-೨೪) ; ನೆಗೆಕುದುರೆವೋಲ್ ಮಲೆಯ ನೆತ್ತಿಮೇಲ್ ಬಳೆದಳ್ (ಅಂತಿಗೊ. ೪೪-೯೦೯) ; ಸಾಲೆಯ ಗುಡ್ಡದ ನೆತ್ತಿಯಲ್ಲಿ . . . ಆ ಕಲ್ಲುಬಂಡೆಯ ಮರೆಗೆ ಕುಳಿತು (ಮೂರುದಾ. ೧೯೬).

**ನೆತ್ತಿಕಣ್ಣಾಗು**=ಸೊಕ್ಕಿಗೇಳು; ಗರ್ವ ಬರು: ಸತ್ಯದ ಬಿತ್ತು ಹುರಿದುದು ಪಟ್ಟಗಟ್ಟಿದುದಾ ಕೃತಘ್ನತೆಗೆ ನೆತ್ತಿಕಣ್ಣಾಯ್ತು ಧಮುತೆಗೆ(ಕುವ್ಯಾಅ. ೨೧-೬೯). **ನೆತ್ತಿಗೇಱು, ನೆತ್ತಿಗೇರು**=**೧.** ಮೇಲಕ್ಕೆ ಸಿಕ್ಕಿಕೊಳ್ಳು,-ನೆಡು : ಕಿವಿಗಳೆಳ(ಬ)ಲ್ದು ತೂಱುವೊಡೆ ಮೆಯ್ಬಿಗಿದಪ್ಪೊಡೆ ದಿಟ್ಟ ನೆತ್ತಿಗೇಱುವೊಡೆ . . . ಎಚ್ಚುಗೆ ಪಟ್ಟಸೂ [ತ್ರಭಸ್ಮ]ವನೆರೆದು (ಲೋಕೋಪ. ೯-೨೦೯). **೨.** ನೆತ್ತಿಯನ್ನು ತಿವಿದು ಹೊರಬರು : ಶಿವನ ನಿಳಯದೊಳಗೆ ಮೂತ್ರ ಮಲವನೆಸಪ ಪಾಪಿಗಲ್ಲಿ . . . ಕೂರ್ಪುವೆತ್ತ ಧಾರೆತೋರ ಹಾರೆಗಾಸಿ ಗುದದೊಳಿಟ್ಟು ತನುಗಳೆಲುಗಳೊಡೆದು ನೆತ್ತಿಗೇಱೆ ಮೂಡೆ ಕುಟ್ಟಿ ಹೆಟ್ಟಿ ಮರ್ಮದಲ್ಲಿ ಲೋಹಜಾದಿ ರಸವನೆಱೆದು ಸುಡುವರೆಯ್ದೆ (ಸಾನಂಜ. ೬-೧೪ ರಗಳೆ). **೩.** ತುತ್ತು, ಗುಟುಕು ಮುಂತಾದುವು ನೆತ್ತಿಗೆ ಹತ್ತು : ತೊರೆದ ನುಣ್ಮೊಲೆಯನೀಂಟುತೆ ಪೆಸರ್ಗಾಯದ ಬೆರಲೊಳು ಮೊಲೆದೊಟ್ಟಿ ಪಿಡಿದು ಮರುಳ್ದಣೆ ನೆತ್ತಿಗೇಱಲಿಕುಸಿರೂದುತೆ ತರಳಾಕ್ಷಿ ಬೆಚ್ಚುವಳು (ಮೋಹತ. ೧೭-೬೬). **೪.** ಹೆಚ್ಚಾಗು ; ಅಧಿಕವಾಗು ; ಮಿತಿಮೀರು : ಇವನ ಗ್ರಹಂ ಸೋಂಕಿತೋ ಭೂತಚೇಷ್ಟೆಯೋ ಯಿವನ ಶೈವವೆ ನೆತ್ತಿಗೇಱಿತೆನೆ ಶಿವವರ ಚರಣಾಂಬುಜಕ್ಕೆ ಶರಣು (ಲತಿಚಿಂ. ೩೩-೧೧); ಇದುವೆ ತಾನ್ ಬಂದವನ್ಕಳ್ ನೆತ್ತಿಗೇಱಿದೊನ್ (ಅಂತಿಗೊ. ೭-೧೧೯) ; ನೆತ್ತಿಗೇರಿದ ಮದ ಇಳಿಸುತ್ತೇನೆ (ಮೂರುದಾ.೧೪೮) ; ನನಗಂತೂ ಪಿತ್ತ ನೆತ್ತಿಗೇರಿ ಬಿಡುತ್ತದೆ (ಸುಮಸಂ. ೧೪). **ನೆತ್ತಿ ಬೀಳು**=(ಮಕ್ಕಳ) ನೆತ್ತಿಯ ಬಾಯಿ ಒಳಕ್ಕೆ ಹೋಗು : ನೆತ್ತಿ ಬಿದ್ದಿಹಿತೆಂದಿರುಳು ಹಗಲೆತ್ತಲಂಜುತ್ತುರದೊಳುದರದೊಳೊತ್ತಿಕೊಂಬಳು (ಬಸವು. ೧೫-೧೨). **ನೆತ್ತಿಯ ಬತ್ತಿ**=ದೇವರಿಗೆ ಬಲಿಕೊಟ್ಟ ಪ್ರಾಣಿಯ ತಲೆಯ ಮೇಲೆ ಹಚ್ಚಿ ಇಡುವ (ದೀಪದ)ಬತ್ತಿ:ಉದ್ಧತರ ನೆತ್ತಿಯ ಬತ್ತಿವೊಲಾಯ್ತು ತೀಬ್ರರುಗ್ಮಂಡಳಮಂ ದಿಟಂ ಮಿಗುವ ತೇಜದ ದಳ್ಳುರಿ (ಎಕ. V, ಅರಸೀ. ೧೨೭-೨೫ ; 1185). **ನೆತ್ತಿಯಲ್ಲಿ ಕಾಣು**=ತಲೆಯಲ್ಲಿ ಕಾಣು ; ಮೆದುಳಲ್ಲಿ ಕಾಣು : ಅದನ್ನು ನೆತ್ತಿಯಲ್ಲಿ ಕಾಣಬೇಕೆಂಬುದನ್ನಷ್ಟೇ ಇಲ್ಲಿ ಅರುಹುವೆವು (ಪರಪ. ೨೧೦). **ನೆತ್ತಿಯ ಹಿಡಿ**=ನೆತ್ತಿಗೇಱು **೪** : ಕಡು ಪರಾಕ್ರಮಪಿತ್ತ ನೆತ್ತಿಯ ಹಿಡಿದು ನೀ ಗಳಹಿದರೆ ನಿನ್ನೀ . . . ಛತ್ರಧಾರಿಗಳು ಒಡೆಯ ನೀನೆಂದಂಜಿ ನಿರುತವ ನುಡಿಯಲಮ್ಮರು (ಕುವ್ಯಾಕ.೯-೧೧). **ನೆತ್ತಿಯ ಹೆಱೆಯವ**=ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಶಿವ : ನೀನು ನೆತ್ತಿಯ ಹೆಱೆಯವನೊ ಮೇಣ್ ಬೊಮ್ಮನೋ (ತೊರರಾ. ೬-೨೩-೬). **ನೆತ್ತಿಯೊಳಾನ್**=**೧.** ತಲೆಯ ಮೇಲಿಟ್ಟುಕೊಳ್ಳು : ನಲಿವು ಹಿಂಗಿದ ತಾಯ ಕಂಗಳ ಜಲವ ಸೆಱಗಿನೊಳೊರಸಿದನು ಪದತಳವ ನೆತ್ತಿಯೊಳಾಂತು (ಕುವ್ಯಾದ್ರೋ. ಒರಿಇ. ಪರಿ.೨೭೮). **೨.** ಗೌರವಿಸು ; ಶಿರಸಾ ವಹಿಸು ; ಪಾಲಿಸು : ತಾಮುಮಾಮುಂ ಮೊಡನಿರ್ಪಂ ಬರ್ಪುದೆಂಬೀ ಶಾಸನಮಂ ನೆತ್ತಿಯೊಳಾಂತು ಬನ್ನಿಮೆಱಗಿಂ ಚಕ್ರೇಶಪಾದಾಬ್ಜದೊಳ್ (ಆದಿಪು. ೧೪-೩೧). **ನೆತ್ತಿಯೊಳ್ತಳೆ**=ನೆತ್ತಿಯೊಳಾನ್ **೧** : ಮುಳಿಸಿಂದೀಕ್ಷಿಸೆ ಸಾರ್ದುವೆಮ್ಮ ಧನಮುಂ ದೇಶಂಗಳುಂ ನಿನ್ನನಗ್ಗಳಮಿನ್ನೆಮ್ಮಯ ಜೀವಮೆಂದಸಿಲತೋದ್ಯತ್ಪತ್ರಮಂ ನೆತ್ತಿಯೊಳ್ತಳೆದಾವೈರಿಗಳಂಬುದಿಮ್ಮಮನೆ ಪೊಕ್ಕಂದುದ್ಧಕಾಕ್ಷೇಯಕೋಜ್ವಳಧಾರಾಜಳದಲ್ಲಿ ಮುಬ್ಬುವುದು ನಿಚ್ಚಂ ತದ್ಧರಾಧೀಶನಾ (ಪಾರ್ಶ್ವಪು. ೨-೬). **ನೆತ್ತಿಯೊಳ್ಪೊಱು, ನೆತ್ತಿಯಲ್ಲಿ ಹೊರು**=ಶಿರಸಾವಹಿಸು ; ಪಾಲಿಸು : ಗುರ್ವಾಜ್ಞೆಯಂ ಮಿಱಿದತ್ಯಾದರದಿಂದಂ ನೆತ್ತಿಯೊಳ್ ಪೊತ್ತು (ರಕ್ಷಾಶ.೭೫) ; ನಿಮ್ಮಯಾಜ್ಞೆಯಂ ನೆತ್ತಿಯೊಳ್ಪೊತ್ತಾಚರಿಸುವ ಭೃತ್ಯನನೆನ್ನನಾರಯ್ಯುತಿರಿಂ (ಪದ್ಮರಾ. ೩-೭೭) ; ಅವನು 'ಹಸಾದ' ವೆಂದು ರಾಜಾಜ್ಞೆಯನ್ನು ನೆತ್ತಿಯಲ್ಲಿ ಹೊತ್ತುಕೊಂಡ (ಹಾಹುತ್ತ. ೪೫). [**ದೇ.॥ ತಮಿ.** ನೆಱ್ಱಿ ; **ಮಲ.** ನೆತ್ತಿ, ನೆಱು ; **ಕೋತ.** ನೆಚ್ ; **ತುಳು. ಕೊಡ. ತೆಲು. ಕೋಲಾ.ನಾಯ್ಕಿ.** ನೆತ್ತಿ ; **ಗೊಂಡಿ.** ನೇಚ್ ; **ಮಲ್ತೊ.** ನೆಪೆ]

**ನೆತ್ತಿಗ** (ನಾ). ಜೂಜುಕೋರ : (ಕ).

**ನೆತ್ತಿಗರ ಪಿಸ, ನೆತ್ತಿಗರ ಹಿಸ**=ಜೂಜಿನ ಮನೆಯನ್ನು ನಡೆಸುವಾತ : "ದ್ಯೂತಕಾರಕ" (ನಾಚಿರಾ. ಕ). [ನೆತ್ತ$_1$ +–ಇಗ]

**ನೆತ್ತಿಗಣ್** (ನಾ). ಹಣೆಯಲ್ಲಿ ಇರುವ ಕಣ್ಣು : 'ನೆತ್ತಿಗಣ್ಣು' ಪರಾ.

**ನೆತ್ತಿಗಣ್ಣವ**=ನೆತ್ತಿಗಣ್ಣ : ಮೂಜಗಕೆ ಕೇಡಂ ಮಾಡುವಾ ನೆತ್ತಿಗಣ್ಣವನೊಳ್ ಕಾದುವ ಬಲ್ಪು ಮೊಗ್ಗೆಗರನಿಂದಾರಯ್ದು ಮೇಲೆತ್ತುವೆಂ (ಕಬ್ಬಿಕಾ. ೧೫೮). [ನೆತ್ತಿ + ಕಣ್]

**ನೆತ್ತಿಗಣ್ಣ** (ನಾ). ಹಣೆಯಲ್ಲಿ ಕಣ್ಣುಳ್ಳವನು ; ಶಿವ : "ಎಲುಗೈಯ ಬೂದಿಮಯ್ಯಂ ಬೆಳರ್ಮಣ್ಣಂ ನೆತ್ತಿಗಣ್ಣನೆನುತುಂ ಜತ್ತುಗದಲೆಯನೆನೆ ಸತ್ಯವೀಂದ್ರರ್ ಸಲೆ ಪೇಟ್ವರ್ ಸ್ಮರಹರಂಗೆ ನಾಮವಿದೆನುತಂ" ಕವಿಕಂ. ೧೮). [ನೆತ್ತಿಗಣ್ +–ಅ$_7$]

**ನೆತ್ತಿಗನ್ನಡಿ** (ನಾ). "ನೆತ್ತಿಯಲ್ಲಿ ಕಟ್ಟಿಕೊಳ್ಳುವ ಕನ್ನಡಿ"(ಕಣ್ಣ.ರ. ಕೋಶ) : ಮೊಗದೊಳೊಪ್ಪುವ ವಿಭೂತಿಯು ತುಂಬಿ ನೊಸಲೆಸೆಯೆ ನೆಗಹಿ ಕಟ್ಟಿದ ನೆತ್ತಿಗನ್ನಡಿ ಕರಂ ಹೊಳೆಯೆ (ಕಣ್ಣ.ರ. ದೇ. ೧೨೭-೧೪).
[ನೆತ್ತಿ + ಕನ್ನಡಿ$_1$]

**ನೆತ್ತಿಗೂದಲು** (ನಾ). ಮುಂಗೂದಲು : ನೀವೇನೊತ್ತಿನೊಳೆ ಬೇಡುವರೆ ಕುರುಳನು ಬಾಯ[ಚಿ]ಕೊಳ್ಳೆಂದು ನೆತ್ತಿಗೂದಲನರಿದವರ ಕೈಗಿತ್ತು ಕಳುಹಲು (ಸಾಳ್ವಭಾ. ೩೦-೪೯).
[ನೆತ್ತಿ+ಕೂದಲು (<ಕೂಂದಲ್)]

**ನೆತ್ತಿಗೋಡು** (ನಾ). ತಲೆಯ ಮೇಲಿನ ಕೊಂಬು : ನೆತ್ತಿಗೋಡೆರಡುಳ್ಳವರನೊಂದು ಕೋಡವರ ಕತ್ತೆ ಮೊಗ ಕುದುರೆಮೊಗದವರ ದೇಶಂಗಳಂ ಕಂಡನಾ ಕಲಿ ಪಾರ್ಥನು (ಜೈಮಿಭಾ. ೧೬-೨೦). [ನೆತ್ತಿ+ಕೋಡು$_5$]

**ನೆತ್ತಿಬಾಯಿ** (ನಾ). ಎಳೆಯ ಮಗುವಿನ ನೆತ್ತಿಯಲ್ಲಿ ಇನ್ನೂ ತುಂಬಿಕೊಳ್ಳದೆ ಇರುವ ಮೂಳೆ ; ನೆತ್ತಿಮೂಳೆ : ಮಗುವಿನ ನೆತ್ತಿಬಾಯಿ ಕೂಡಿಲ್ಲ (ರೂಢಿ). [ನೆತ್ತಿ+ಬಾಯಿ$_1$(<ಬಾಯ್)]

**ನೆತ್ತಿಮುತ್ತು** (ನಾ). (ಆನೆಯ) ಕುಂಭಸ್ಥಳದಲ್ಲಿರುವ ಮುತ್ತು : ನೆತ್ತಿಮುತ್ತೊಡಗೂಡಿರೆ ಸುಗಿದಗಿದು ಬಿಳ್ದದಾ ಗಜಮಿಳಿಯೊಳ್ (ಶಬಶಂ. ೩-೫೮). [ನೆತ್ತಿ + ಮುತ್ತು$_5$]

**ನೆತ್ತಿಮುಸುಕು** (ನಾ). ತಲೆಗೆ ಹಾಕಿಕೊಳ್ಳುವ ಮುಸುಕು : ನೆತ್ತಿಮುಸುಕಿನ ಕೈಯ ಗಲ್ಲದ ಕುತ್ತದಲೆ ನೆಟ್ಟಾಲಿಗಳ ಚಲಚಿತ್ತರಿದ್ದುದು ಸಕಲನಾಯಕವಾಡಿ ದುಗುಡದಲಿ (ಕುವ್ಯಾದ್ರೋ. ೪-೪).
[ನೆತ್ತಿ + ಮುಸುಕು$_2$ (<ಮುಸುಂಕು$_2$)]

**ನೆತ್ತಿಮೂಳೆ** (ನಾ). (ಮಗುವಿನ) ಎಳೆಯ ನೆತ್ತಿ ; ಅಳ್ಳೆತ್ತಿ : ಮಕ್ಕಳಿಗೆ ಮೂರುವರ್ಷವಾದರೂ ನೆತ್ತಿಮೂಳೆ ಕೂಡಿಕೊಳ್ಳುವುದಿಲ್ಲ (ಗೃಹವಿ. ೩೦). [ನೆತ್ತಿ + ಮೂಳೆ]

**ನೆತ್ತಿಮೋಡ** (ನಾ). ಆಕಾಶದ ಮಧ್ಯದ ಮುಗಿಲು,—ಮೋಡ : ನೆತ್ತಿಮೋಡವನೆತ್ತಿ ಸಿಮಿರಿದಡವಿಯ ಮಲೆಯ ತಾಯನಿತ್ತು ಬೆಟ್ಟ ಬೆಟ್ಟಕೆ ಕಟ್ಟಿ ಜೋಗುಳದ ತೊಟ್ಟಿಲನು ತೂಗಿದತ್ತು ! (ಅನಿಕೇ. ೫೩-೩). [ನೆತ್ತಿ + ಮೋಡ$_1$]

**ನೆತ್ತಿಯೆಡೆ** (ನಾ). ತಲೆಯ ಪ್ರದೇಶ ; ಶಿರೋಭಾಗ : ಕೋಲ್ಗಾರೊಳ್ ಸುರಿವಾಲಿವರಲ್ಲಳವೊಲ್ ನೆತ್ತಿಯೆಡೆಯ ಮುತ್ತುಗಳೆತ್ತಂಗಲ್ಗಲನೆ ಸುರಿಯೆ ಜೋದರ್ ಬಲ್ಗಡೆಯಿಂದೆಚ್ಚರದಟನಿಂದಾನೆಗಳಂ (ಕಬ್ಬಿಸಾ. ೨೮೨). [ನೆತ್ತಿ + ಎಡೆ$_3$]

**ನೆತ್ತಿಯೊತ್ತು** (ಕ್ರಿ). ತಲೆಗೆ ಬಾಧೆಯಾಗು; ತಲೆನೋವುಂಟಾಗು: ಮೃತ್ತಿಕೆಯ ನೆಜಿಕಿ ಪೊತ್ತ ಭಾರದಿ ನೆತ್ತಿಯೊ[ಪಾಠಾಂ. ವೊ]ತ್ತಿದಡಳುಕಿ ನೀ ಬೇಸತ್ತೆ ಡೆಯೊಳ್ (ಬಸವು. ೧೮-೫೧). [ನೆತ್ತಿ + ಒತ್ತು$_1$]

**ನೆತ್ತಿವಂದ** (ನಾ). ಹಣೆಗೆ ಧರಿಸುವ ಪಟ್ಟಿ,—ಭೂಷಣ ; ಶಿರೋಬಂಧ ; ಶಿರೋಭೂಷಣ : ಬಂದುಗೆಯಲರಿನಂದಂಬೆತ್ತದಿರ್ಮೂರ್ತಿಯ ನೆತ್ತಿವಂದಂಗಳುಮಂ . ... ನಿಜನಿಜಾಂಗರುಚಿಗೊಡಂಬಡುವ ಪೂಡೊಡವಂ ತಾನುಮಗ್ರಜನುಮೆಸೆಯೆ ಪಸದನಂಗೆಯ್ದು (ಜಗವಿ. ೬-೧೬ ಪ). [ನೆತ್ತಿ + ಬಂದ$_1$]

**ನೆತ್ತಿವಟ್ಟಿಗೆ** (ನಾ). ಚಕ್ರದ ಸುತ್ತುಪಟ್ಟಿ,— ಅಂಚು,— ಧಾರೆ : "ಚಕ್ರಧಾರಾ, ಪ್ರಧೀಃ, ನೇಮಿಃ—ಈ ೩ ನೆತ್ತಿವಟ್ಟಿಗೆ" (ಹಲಾಯು. ೭೩-೨೯೩). [ನೆತ್ತಿ + ಪಟ್ಟಿಗೆ]

**ನೆತ್ತಿವಣಿ** (ನಾ). (ಹಾವಿನ) ತಲೆಯಲ್ಲಿರುವ ಮಣಿ,—ರತ್ನ : ಜಳಕೇಳಿಗೈವ ಪನ್ನಗವಿಳಾಸಿನೀಜನದ ನೆತ್ತಿವಣಿಗಳವೆತ್ತಂ ತೊಳಗಿರೆ (ವೃಷವಿ. ೪-೭೦). [ನೆತ್ತಿ + ಮಣಿ$_3$]

**ನೆತ್ತಿವತ್ತು,** ನೆತ್ತಿಹತ್ತು (ಕ್ರಿ). ೧. ತಲೆಗೇರು; ಹೆಚ್ಚಾಗು : ತಪದುಬ್ಬೆಗದುದ್ಭ್ರಮೆ ನೆತ್ತಿವತ್ತೆ ಸೈತಿರದೆ ಮರುಳ್ಗನಂದಳೆದಿರ್ದಿರ್ಚದ ನೆನ್ನವೊಲಜ್ಞನಾವನೋ (ಶಬಶಂ. ೪-೧೧೧). **ನೆತ್ತಿಹತ್ತು : ೨.** ತುತ್ತು, ಗುಟುಕು ಮುಂತಾದುವುಗಳಿಂದ ಶ್ವಾಸನಾಳದಲ್ಲಿ ಅಡ್ಡಿಯುಂಟಾಗಿ, ಉಸಿರಾಟ ಕಷ್ಟವಾಗಿ ಕೆಮ್ಮು ಬರು : ಊಟ ಮಾಡುವಾಗ ತುಂಬಾ ನಕ್ಕಿದ್ದರಿಂದ ನೆತ್ತಿಹತ್ತಿತು (ರೂಢಿ). [ನೆತ್ತಿ + ಪತ್ತು$_1$]

**ನೆತ್ತಿವರಿಗೆ** (ನಾ). ಒಂದು ಬಗೆಯ ಗುರಾಣಿ : ನೆತ್ತಿವರಿಗೆಯುಲಡರುವರು[ರ]ವರ ಮೇಲೆತ್ತುಗಲ್ಗಳ ಹಾಕಿ ತಲೆಗಳನೆತ್ತದಂಡದಿ ಲೋಹರಸಗಳನೆರೆವರೆಡೆವಿಡದೆ (ನಾಗಷ. ೧೭-೩೬). 'ತಲೆವರಿಗೆ' ಪರಾ. [ನೆತ್ತಿ + ಪರಿಗೆ]

**ನೆತ್ತಿಹತ್ತು** 'ನೆತ್ತಿವತ್ತು' ನೋ.

**ನೆತ್ತಿಹೊಯ್** (ಕ್ರಿ). ತಲೆಯನ್ನು ಹೊಡೆ : ಶತ್ರು ತಾ ಸುತ್ತಮುತ್ತಿ ಬರೆ ಕತ್ತಿಯಿಂ ನೆತ್ತಿಹೊಯ್ಯೆಂದ (ಸರ್ವಜ್ಞ. ೭೧೮). [ನೆತ್ತಿ + ಹೊಯ್$_1$ (< ಪೊಯ್$_1$)]

**ನೆದರಿಡು** 'ನದರಿಡು' ನೋ.

**ನೆದರು** 'ನಜರು' ನೋ.

**ನೆದರೊಡೆ** (ಕ್ರಿ). ದೃಷ್ಟಿತಾಗು ; ದೃಷ್ಟಿಯಾಗು ; ಕಣ್ಣೆಂಜಲಾಗು : ಬಿತ್ತುಗೆಯಾದ ಮೇಲೆ ಆ ಹೊಲದಲ್ಲಿ ನೆದರೊಡೆಯುವಂತಹ ಬೆಳೆ ಬಂತು (ಕನ್ನಜಾ. ೨೦). [ನೆದರು(< ನಜರು) + ಒಡೆ$_1$]

**ನೆನ** (ನಾ). ಸತ್ಯ ; ನನಸು : ನೆನದೊಳಂ ಕನದೊಳಂ ಮನನಿಸುವೆ ನೀನಲ್ಲದಿನಿತು ತಿಳಿಸೆಳೆಯೊ ನಿನ್ನಯ ಗಾನಕೆ ? (೧೫೪ಮಿಂ.೮-೧೦೦). 'ನೆನಸು$_3$' ಪರಾ. [ ? ]

**ನೆನಕೆ, ನೆನಿಕೆ, ನೆನೆಕೆ** (ನಾ). **೧.** ನೆನಪು ; ಜ್ಞಾಪಕ ; ಸ್ಮರಣೆ : ಒಂದಾನೊಂದು ಚಿತ್ರವನ್ನು ನೋಡುತ್ತ ಯೋಚಿಸುತ್ತಿದ್ದಂತೆ ಆ ನೆನಕೆಯಲ್ಲಿಯೇ ಕಲ್ಪನೆಯ ಬಳ್ಳಿ ಹುಟ್ಟಿ ಹಬ್ಬುತ್ತ . . . ಕಾದಂಬರಿಯಾಯಿತು (ಹೇಮಂತ. ೩ ಮುಮ್ಮಾತು). **೨.** ಯೋಚನೆ ; ಚಿಂತನೆ : "ಇನ್ನೂ ಪ್ರಯತ್ನ ಸಫಲವಾಗಬೇಕು" ಎಂಬ ನೆನಕೆಯಲ್ಲಿ ಹೊಸಮುನಿಯಲ್ಲಿಯೂ ಅಷ್ಟು ಮಾರ್ಪಾಟಾಗಲಿಲ್ಲ(ಅಪನಾ. ೨೩೬). **೩.** ಕೃತಜ್ಞತಾಪೂರ್ವಕವಾದ ಸ್ಮರಣೆ ; ಗೌರವಸೂಚನೆ : ಎಲ್ಲರಿಗೂ ನನ್ನ ಅಂತಃಕರಣಪೂರ್ವಕ ನೆನಕೆಗಳು (ದ್ರಾವಿವಿ. xii, ಮೊದಲ ಮಾತು); ಅವರಿಗೆ ನಾನು ನೆನಕೆಗಳನ್ನು ಸಲ್ಲಿಸುತ್ತೇನೆ (ಶಾಸಮಾ. iv, ಅರಿಕೆ). **ನೆನಿಕೆ : ೩.** ಬಾಳ ಭಾಂಡಾರದಲಿ ಮೂರು ರತ್ನಗಳುಂಟು. 'ನೆನಿಕೆ, ನಯು, ನಂಬಿಕೆ'ಗಳೆಂದು ಉಸಿರು (ಕಲ್ಲೋಲ. ೭-೮). **ನೆನೆಕೆ : ೧.** ಪ್ರವಹಿಸಲಿ ವಾತ್ಸಲ್ಯ ಮೈತ್ರ್ಯಗಳ ನೆನೆಕೆಯಿಂ ನೆನೆದೆನ್ನ ಮನವಾ ಕರುಣೆ ತವರಿನೆಡೆಗೆ (ಮಲೆದೇ. ೨೧-೭). [ನೆನೆ$_1$ + -ಕೆ]

**ನೆನಗಡಲೆ** 'ನೆನೆಗಡಲೆ' ನೋ.

**ನೆನದಕ್ಕಿರಡ್ಡಿಗಿಡ** (ನಾ). ಒಂದು ಬಗೆಯ ಸಸ್ಯ ; ಅಕ್ಕಿಹೆಡೆ ; ದುಗ್ಧಿಕೆ : "ಕ್ಷೀರಾವೀ, ದುಗ್ಧಿಕಾ—೨ ಅಕ್ಕಿಹೆಡೆಯ ಗಿಡದ ಹೆಸರುಗಳು . . . ನೆನದಕ್ಕಿರಡ್ಡಿಗಿಡ, ಹಾಲುಘುಂಟಾಮಣಿಗಿಡವೆನ್ನುವರು" (ಸಿದ್ಧಾಂತಿ. ೧೩೪). [ ? + ಗಿಡ (< ಗಿಡು)]

**ನೆನಪಿಡು** (ಕ್ರಿ). ಜ್ಞಾಪಕದಲ್ಲಿಟ್ಟುಕೊಳ್ಳು ; ನೆನೆ; ಗಮನದಲ್ಲಿಡು : ಈಗ ತಾವು ಹೇಳಿದ್ದು ಒಳ್ಳೆ ನೆನಪಿಡ ತಕ್ಕ ಮಾತು (ಮುಂಬಯಿ. ೪-೯೧). [ನೆನಪು + ಇಡು$_1$]

**ನೆನಪಿಸು** (ಕ್ರಿ). ನೆನಪು ಮಾಡು ; ಜ್ಞಾಪಕಕ್ಕೆ ತರು ; ಸ್ಮರಣೆಗೆ ತರು : ಬಾಧ್ಯೋಗ ಋಷಿಗಳು . . . ನಚಿಕೇತನನ್ನು ಅವರಲ್ಲಿಗೆ ಶಿಷ್ಯನಾಗಿ ವೇದಾಧ್ಯಯನಕ್ಕೆ ಕಳಿಸಬೇಕಾದ ಮಾತನ್ನು ಅವರಿಗೆ ನೆನಪಿಸಿದರು (ಬಿತಂಬಾ. ೧೦೮); ನೀವು ನೆನಪಿಸದೆ ಇದ್ದಿದ್ದರೆ ನಾನು ಅಲ್ಲಿಗೆ ಬರುತ್ತಲೇ ಇರಲಿಲ್ಲ (ರೂಢಿ). [ನೆನಪು + -ಇಸು$_3$]

**ನೆನಪು, ನೆಂಪು, ನೆನಹು, ನೆಪ್ಪು$_1$** (ನಾ). **೧.** ನೆನಕೆ ; ಜ್ಞಾಪಕ ; ಸ್ಮರಣೆ : ನೆನಪದೊ[ಪಿನೊ]ಳಂ ಕನಸಿನೊಳಂ ಮನಸಿನೊಳವೂದವೆ ಸನ್ನಿದವಾದ ವಲ್ಲಭಾಗಮನದೊಳ್ ಬಳೆದ ರತಿಕಲಹನಿರ್ಭರಮನೆ ದಿಟಂ ಮಾಡಿ (ವರ್ಧಪು. ೪-೬೧ ಪ) ; ದೇವಿ ನಿನ್ನ ನೆನಪಂ ಕಾತ್ಯಾಯನೀದೇವಿ ಮಾಬ್ಬುದನೇಂ ಮಾಣ್ಬಳೇ (ಕುಸುಮಾ. ೧೨-೧೬೫) ; ನೆನೆದ ನೆನಪು ತವೆ ಕೂಡಿದಂತಾದುದು ವರದಯೆನ್ನಿದ್ದ ವೇಷಕೆ ತಕ್ಕಶನವಾಯ್ತು (ಬಸವು. ೪೩-೭೨) ; ದಿವಿಜರೊಳಾರ ನೆನಪುಂಟವರ ನೆನೆ ಸಾಕು (ಕುವ್ಯಾಅ. ೧೪-೨೮) ; ನೆನಪಿಲ್ಲದ ಕೆಲಸ ಹಣಕಿದರೆ ಆದೀತೇ ? (ಗಾದೆ). **ನೆಂಪು : ೨.** ಗುರುತು : ಕೆಂಪು ಮೂಗಿನ ಪಕ್ಷಿ ತಂಪಿನೊಳಿರುವುದು ನೆಂಪು ಬಲ್ಲವರು ಪೇಳಿ (ಕನಕ. ೨೨೮ ಪಲ್ಲವಿ) ; ಕೆಂಪು ಮನಡಳಚಿತ್ತಮದನನ ಗುಂಪು ಮಂದಿರ ಗುಣದಿ ಮಧ್ಯಮೆ ನೆಂಪು ತಿಳಿಯ್ಕೆ ಸತಿಯು ಪೈತೃಪ್ರಕೃತಿ ನೋಡೆಂದ (ಕಕ್ಕೋಕ. ೭-೫೬). **ನೆನಹು : ೧.** ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ ನೆನಹಿಂಗೆ ಅಜಾವಾಗಿ ಕಾಡಿತ್ತು ಮಾಯೆ (ಮಹಾದೇ. ಬ. ೧೭-೨೬) ; ಮೇನೆಯುಂ ಗಿರಿರಾಜನುಂ ಕಣ್ ತೀವಿ ನೋಡಿ ಮೆಯ್ದೀವಿಯುಪ್ಪಿ ಮನಂ ತೀವಿ ನೆನ [ಪಾಠಾಂ. ನೆ]ಹಿನೊಳಿಟ್ಟು ಶಶಿಕಲೆಯಂ ಸಲಹುವಂತೆ . . . ಪಾರ್ವತಿಯಂ ಸಲಹುತ್ತುಮಿರೆಯಿರೆ (ಗಿರಿಕ. ೩-೧೧೯ ಪ) ; ಮತ್ತೆಯುಂ ನೆನೆವ ತಾನು ತನ್ನಯ ನೆನಹು

ಚಿತ್ತದೊಳೇನ ನೆನೆಯಲು ತೋಱುವರ್ಥವು ತಾನದಲ್ಲಿಯೆ ಅಡಗಿಕೊಂಡಿರಲು (ಬಸಪು. ೩೫-೨೦) ; ಮನದ ಮುದದಕ್ಕಱಿನ ವಿಷಯಂದ ನೆನಹು ನೆಗ್ಗಿತು (ತೊರರಾ. ೩-೪-೨೪). **೩.** ಧ್ಯಾನ ; ಚಿಂತನೆ : ನಚನದಲ್ಲಿ ನಾಮಾಮೃತ ತುಂಬಿ ಮನದಲ್ಲಿ ನಿಮ್ಮ ನೆನಹು ತುಂಬಿ (ಬಸವ. ೪೯೧) ; ನೆನಹು ನಿಲುಕದ ಸುಖದ ಸುಗ್ಗಿಯಂ ಸವಿದನೀಶನ ಕುಮಾರಂ (ಸಿದ್ಧರಾ. ೨-೧೭) ; ಪಾವನಶಿವನ ನೆನಹನುಳ್ಳುದಕ್ಕೆಂದು ಸದ್ಭಾವದಿಂದೊಲ್ದು ಶಿವಸಂಕಲ್ಪನಾಮದಿಂದೋವೊ ರಂಜಿಸುವುಪನಿಷತ್ತು ಸಾಱುತಿದೆ ಸಾಂಬನೇ ಸರ್ವಜನಕನೆಂದು (ಪದ್ಮರಾ. ೧೦-೯೯) ; ನೆನಹಿಂ ನಿರೀಕ್ಷೆಯಿಂದನುದಿವಸಂ ಸಮರ್ಚಿಸುವುದತ್ಯಧಿಕಂ (ಶತಕ. ೩೯) ; ಚಿತ್ತ ಸಂಚಲವಾಗಿ ನೆನಹಿನ ನೇಮ ನೆಲೆಗೆಡಲು (ಪ್ರಭುಲೀ. ೩-೧೫) ; ಎನ್ನ ನೆನಹಿನೊಳು ಶಿವರೂಪು ಹೊಳೆವುತಿದೆ (ಚಿಬಪು. ೪-೬). **೪.** ಚಿತ್ತ ; ಮನಸ್ಸು : ಆವಳೋ ನೆನಹಿನಲಿ ಸುಳಿದಳು (ಕುಪ್ಯಾಅ. ೧೯-೨೪) ; ರಾಜ್ಯದೊಳಿರ್ದು ಯುಕ್ತಿ ಸಂಧಾನದೊಳಗೆ ನಿನ್ನ ನೆನಹು (ಭರಚ. ೨-೪೨) ; ನೆನಹಿಂಗೆ ಮುಂಚುವ ಪದನ್ಯಾಸಮುಂ ಕಲಿತು ನಡೆವ ಜಾರೆಯರ ಚದುರೆಸೆದಿರ್ದುದು (ಜೈಮಿಭಾ. ೨೬-೧೦) ; ಲಿಂಗದೊಳು ನೆನಹನಿರಿಸಿ ಸತ್ಯದಿ ನಿಲಲು ಲಿಂಗ ನೀನಪ್ಪೆ (ಸರ್ವಜ್ಞ. ೧೫೧). **೫.** ವಿಚಾರ ; ಆಲೋಚನೆ : ಮನಸಿಜನೆಂಬ ವನವು ಬಳಸಿಹುದಾ ದನುಜೇಶ್ವರನ ಪುರಗಳ ನೆನಹಿಗೆ ನಿಲುಕದ ಕರ್ಮಭೂರುಹವಾವನದೊಳು ಬಳಸಿರುತಿಹವು [ಪಾಠಾಂ. ಹವಣಿಸಬಾರದನಂತಾನುಬಂಧಿಯೆಂಬವು ವನದ ಕಮಲಷಂಡಗಳು] (ತ್ರಿಪುಸಾಂ. ೪-೩೮) ; ಸರ್ವಾತ್ಮನು ಮಹೇಶ್ವರನೆನಿಪನೀತನ ನೆನಹನೀತನ ನಿಜವನಱಿವ ಮಹಾತ್ಮನಾರೆಂದ (ಕುಪ್ಯಾಸ. ೯-೩) ; ಲೋಕದಲಿ ದುಷ್ಟರ ನೆನಹದೊಂದಾಗಿಹುದವರ ಮಾತಿನಲಿ ಬೇಱೊಂದವರು ಮಾಡುವ ಕೃತ್ಯ ತಾನೊಂದು (ಜೀಪಂಚ. ೪-೫೩) ; ಮನಕೆ ಬಂದುದು ತನ್ನ ಚಿತ್ತದ ನೆನಹಿನನುಬಂಧತೆಗೆ ಮಾತದು ಕೊನೆವೆರಳನುಪ್ಪರಿಸಿ ಕೊಂಡಾಡಿದನು ವಾಲಿಜನ (ತೊಕರಾ. ೪-೧೨-೧೧). **೬.** ಸ್ಮೃತಿ ; ಎಚ್ಚರ ; ಬಾಹ್ಯಜ್ಞಾನ : ‘ನೆನಹಳಿ’ ಪರಾ.

**ನೆಪ್ಪು**$_1$ : **೧.** ವಸ್ತುವಿಪ್ಪ ಭೇದವ ಬಲ್ಲೆನೆಂದರೆ ಪರ್ಣದೊಳಗಿಪ್ಪ ಪಚ್ಚೆಯಂತೆ . . . ಅದು ನೆಪ್ಪಿಗೆ ಬಾರದು (ಮೋಳಿಸೂ. ೬-೧೦) ; ಒಪ್ಪಿಡಿಯೆಂದು ಬಣ್ಣಿಪ ಕವಿಗಳ ಮೇಲೆ ತಪ್ಪ ಹೊಱಿಸಿ ನೋಡಿದರೆ ನೆಪ್ಪಿನಂತಿಹ ನಡುವಿನ ನೀಱೆಯರು ಮುಂದೊಪ್ಪಿಹರಾ ನರಪತಿಯ (ಕುರಾಸಾಂ. ೨೫-೭೯) ; ಅಪ್ಪುವ ನಳಿತೋಳ್ಗಳೆಲ್ಲಿ . . . ಬೆಳ್ಪುವಡೆದ ಸೆಳ್ಳುಗುರ್ಗಳ ತೋಱೆಂದು ನೆಪ್ಪಿನೊಳ್ ಬೆದಕಿ ನೋಡಿದಳು (ಮೋಹತ. ೮-೧೪) ; ನೆಪ್ಪಿರಲಿ ನಿಮ್ಮಂಘ್ರಿಗೆ ತಪ್ಪ ಕೂಡಿಸಿದವಂ (ಪರಶು. ೩೬-೨೮) ; ಬರುವುದೇನೆ ನೆಪ್ಪಿಗೆ ನಾವು ಬಿದ್ದ ಟೊಪ್ಪಿಗೆ (ಗಂಗಾತ. ೨೫-೧) ; ನಮ್ಮ ನೆಪ್ಪ ಹ್ಯಾಂಗ ಉಳಿದೀತ ತಂಗಿ (ಕೆರೆಹಾ. ೫). **೨.** ಲಿಂಗಕ್ಕೆ ಬಡಿಸಬಲ್ಲಡೆ ಬಾಯ ನೆಪ್ಪ ಕಾಣೆ (ಮೋಳಿಸೂ. ೧೬೫-೯೧೫) ; ಸರ್ಪನಾ ದಾರೀಲಿ ಸಂಜೀನು ನಾ ಬಳಸಿ ನೆಪ್ಪಿಲ್ದ ಮಲೆಗೆ ಬರಬಹುದೆ ಏಳುಮಲೆ ನೆಪ್ಪು ತೋಯ್ರ್ದವು ಹುಲಿ ಕರಡಿ (ಹಳ್ಳಿಬಾ. ೧೬). **೭.** ಲಕ್ಷ್ಯ ; ಗಮನ : ಒಪ್ಪಿರುವರು ಐದುಮಂದಿ ಪ್ರಧಾನಿಗಳು ನೆಪ್ಪಿನಿಂದ ನೋಡೆಲಾ (ಗುರುಬ. ೫೨-೮).

ನೆನಪಾಗಿ = ಕ್ರಮ ತಪ್ಪದೆ ; ಕ್ರಮವಾಗಿ : ಯಿಾ ದ್ರವ್ಯಕ್ಕೆ ಯಿದೇ ಕ್ರಯ ನೆನಪಾಗಿ ಸಲುಉದು (ಮೈಆರಿ. ೧೯೩೫, ೩೨-೩೨ ; 15ನೆಯ ಶತ). **ನೆನಪಾಗು, ನೆನಹಾಗು, ನೆಪ್ಪಾಗು** = ಜ್ಞಾಪಕಕ್ಕೆ ಬರು; ಸ್ಮರಣೆಯುಂಟಾಗು : ಇಲಿಯನ್ನು ಏಕೆ ಕೊಲ್ಲಬೇಕೆಂಬುದಕ್ಕೆ ಇನ್ನಷ್ಟು ಕಾರಣಗಳು ನೆನಪಾಗಿರುವುದರಿಂದ ಹೇಳಿ ಬಿಡುತ್ತೇನೆ (ದೇಕನ್ನೆ. ೪೪) ; ಕಡಲೆಯನ್ನು ತಿನ್ನಲಿಕ್ಕೆ ಬಂದಾಕ್ಷಣವೇ ಅದನ್ನು ಹಿಡಿದು ಕೊಂಡಿದ್ದು ಅವನಿಗೆ ನೆನಪಾಯಿತು (ಮುಂಬಯಿ. ೪-೮೦) ; ಯಾಕೆ ಬಾಯಿಸಾಹೇಬರಿಗೆ ಇಷ್ಟು ಲಗೂನ ಮನೀ ನೆನಪಾತು (ದಾಸಹು. ೪೭); ಎನಗೆ ನಿಮ್ಮ ನೆನಹಾದಾಗಲೇ ಉದಯ (ಬಸವ. ೪೯೯) ; ಧೃತರಾಷ್ಟ್ರಂಗೆ ಮಕ್ಕಳ ಮೇಲೆ ನೆನ [ಪಾಠಾಂ. ನೆ]ಹಾಯ್ತು ಧಿಕಶೋಕೋದ್ರೇಕ ಪಲ್ಲವಿಸೆ (ಕುಪ್ಯಾಭೀ. ೧-೫೪) ; ಆಟದಾಗಿನ ಪದಾ ನೆಪ್ಪಾದವೇನು ಆ ಮನಿ ಕತಿ ಕೇಳಿದರ ? (ಆಮನಿ. ೪). **ನೆನಪಿನ ಪತ್ರ** = ಜ್ಞಾಪಕಕ್ಕೆ ತರಲು ಸಹಾಯಕವಾದ ಪತ್ರ ; ಜ್ಞಾಪನಪತ್ರ : ಸರ್ಕಾರದ ಇಲಾಖಾ ಮುಖ್ಯರಿಂದ ಕಚೇರಿಗೆ ಬಂದ ನೆನಪಿನ ಪತ್ರಕ್ಕೆ ಜರೂರಾಗಿ ಪ್ರತ್ಯುತ್ತರವನ್ನು ನೀಡಲಾಯಿತು (ರೂಢಿ). **ನೆನಪು ಮಾಡಿಕೊಳ್ಳು** = ಜ್ಞಾಪಿಸಿಕೊಳ್ಳು ; ಸ್ಮರಿಸು : ಅವರ ನೆನಪು ಮಾಡಿಕೊಂಡು ನನ್ನ ಮನೆಯವಳು ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ (ಹುಚ್ಚುಹು. ೯೩). **ನೆನಹಿನೊಸಗೆ** = ನೆನವೊಸಗೆ : ಆ ನೆನಹಿನೊಸಗೆಗಳ ನಿಧಿಗೊಳುತ್ತ, ಗುಡಿಯೆ, ನಿಂತೆ ನನ್ನ ಮಾನಸ ನಿನ್ನ ಶ್ಯಾಮಸುಂದರಗರ್ಭದೊಳಗವನು ತಡತಡಕಿ ತೀರದಂತೆ (ಮಲೆದೇ. ೧೦-೯). **ನೆನಹುಗೊಡು** = ವಿಚಾರವನ್ನು ತಿಳಿಸು ; ತಿಳಿವಳಿಕೆ ನೀಡು : ಪಟ್ಟಣವನು ವಿಚಿತ್ರದಿ ರಚಿಸಿ ಕೊಡುವಡೆ ವಿಶ್ವಕರ್ಮನಿಗೆ ನೆನಹುಗೊಡಲಮರಾದ್ರಿಗುತ್ತರವೆನಿಸುವಲಕಾಪುರವ ಕಾವಿಸಿ ಧನದನಿಗೆ ಪಾಲಿಸಲು ವೈಭವದಿಂದಲಿರುತಿರ್ದ (ಅನಂರಾ. ೧-೭-೨೮). **ನೆಪ್ಪು ಹಾರು** = ಜ್ಞಾಪಕವಿಲ್ಲದಾಗು ; ಮರೆತು ಹೋಗು : ನನಗೂ ನೆಪ್ಪು ಹಾರ್ತು ನೋಡ್ರಿ ! (ಹೊಸಂಸಾ. ೧೩೫).

[ನೆನೆ$_1$ + -ಪು$_2$. / ತಮಿ. ನಿನೈಪ್ಪು ; **ತುಳು.** ನೆನೆಪು; **ತೊದ.** ನೆನ್ಪ್]

**ನೆನಪುಗ** (ನಾ). ಜ್ಞಾಪಕ ಮಾಡಿಕೊಳ್ಳುವವನು; ಸ್ಮರಿಸುವವನು: "ಚನಃ, ಚನಕಃ, ಚನ್– ಈ ೩ ನೆನಪುಗಂ" (ಶಾಶಕ್ಯ. ೧೪೧).

[ನೆನಪು + -ಗ$_2$]

**ನೆನವರಿಕೆ,** ನನವರಿಕೆ (ನಾ). **೧.** ಜ್ಞಾಪಕಕ್ಕೆ ಬರುವುದು ; ನೆನಪುಂಟಾಗುವುದು ; ಸ್ಮರಣೆ : ಎಲ್ಲಿ ನೋಡಿದ್ದೆನೋ ನೆನವರಿಕೆ ಯಿಲ್ಲ (ಕೋಹಿನೂ. ೪೦) ; ಅದೇ ಪ್ರಸಂಗದಲ್ಲಿ ಉಡುಪಿಯ ಕೃಷ್ಣರಾಯನ ನೆನವರಿಕೆಯೂ ಬರುತ್ತದೆ (ಯಕ್ಷಬ. ೧೬೬). **ನನವರಿಕೆ : ೨.** ಉತ್ಕಟವಾದ ಧ್ಯಾನ,—ಹಂಬಲು : ಹುಡುಗ—ಪ್ರಾಯದ ಹುಚ್ಚು ಕನವರಿಕೆ ನನವರಿಕೆಗಳ ಕಂಡೆನು (ಸಖೀಗೀ. ೪೨-೮೫೪). ‘ಕನವರಿಕೆ’ ಪರಾ. [ನೆನವರಿಸು + -ಕೆ]

**ನೆನವರಿಸು** (ಕ್ರಿ). ಜ್ಞಾಪಿಸಿಕೊಳ್ಳು ; ನೆನೆ ; ಸ್ಮರಿಸು : ಆತನು ತನ್ನನ್ನು ಎಚ್ಚರಿಸಿದುದನ್ನೂ ನೆನವರಿಸಿ ಪಿಲಾತನಿಗೆ ಎದೆ ಕುಸಿದು (ಗೊಲ್ಗೊಥಾ. viii, ಮುನ್ನುಡಿ). [ನೆನವು + ಬರಿಸು$_1$ (< ವರಿಸು$_1$)]

**ನೆನವಿ** (ನಾ). ನೆನಪು ; ಜ್ಞಾಪಕ ; ಸ್ಮರಣೆ : ಸಾವಿರವರ್ಷಕ್ಕೊಮ್ಮೆ ಆಹಾರವೆ[ದ] ನೆನವಿಯಕ್ಕುಂ (ತಸೂವ್ಯ. ೧೮೬) ; ಇಂದ್ರಿಯ ವಿಷಯಂಗಳ ನೆನವಿಯುಂ ತೋಱುವುದುಂ (ತತ್ತ್ವಪ್ರ. ೨೭೦) ; ಅಂತು ಪಲಕಾಲಮೇನಾನುಮಂ ಮಾಡಿ ಮಱೆದವಂಗೆ ನೆನವಿ ಪುಟ್ಟುವಂತೆ ಪುಟ್ಟಿದ ಭವಪ್ರತ್ಯಯಜ್ಞಾನಪ್ರಭಾವದಿಂದಂ (ಚಂದ್ರಪು. ೪-೬೫ ಪ).

[ನೆನೆ$_1$ + -ವಿ$_1$]

**ನೆನವೀ** (ಕ್ರಿ). ಜ್ಞಾಪಿಸು ; ನೆನಪಿಗೆ ಬರುವಂತೆ ಮಾಡು : ಎನಗವಳಂ ನೀಂ ನೆನವಿತ್ತೇಂ ಮಗುಳ್ದು, ಚಿತ್ರಗತೆಯಂ ಗೈದೈ (ಶಾಕುಂತ. ೯೧-೧೫೨). [ನೆನವು + ಈ$_2$]

**ನೆನವು,** ನೆನೆವು (ನಾ). **೧.** ನೆನಪು ; ಜ್ಞಾಪಕ ; ಸ್ಮರಣೆ : ಲೀಲೆಯೋಯದು ಮೇಣು ಕೃಷ್ಣನ ಬಾಲಕೇಳಿಯ ನೆನವೋ [ಪಾಠಾಂ. ನೆನಹೊ] ಬೊಮ್ಮದ ಕೌಳಿಕದ ಕಣುಮಾಯೆಯೋ (ಕುಪ್ಯಾಅ. ೨೦-೭) ; ರಂಗದ ಮೇಲೆ ಪ್ರದರ್ಶಿತನಾದ ನಾಯಕನನ್ನು ನಾವು ನೆನವಿನಿಂದ ಗುರುತಿಸುವ ಪ್ರಕ್ರಿಯೆಯನ್ನು ವರ್ಗೀಕರಿಸಲಾಗುವುದಿಲ್ಲ ಎಂದು ಹೇಳುವುದು

ತಾನೆ ಹೇಗೆ? (ತತ್ವಪ್ರಾ. ೫೧೮) ; ಒತ್ತಡವೆ ಅವನಿಗೆ ತನ್ನ ಹುಟ್ಟೂರು ನೆನವಿಗೆ ಬಂತು (ಕಪಾಕುಂ. ೨೬). **೨. ಧ್ಯಾನ ; ಭಾವನೆ :** ಎನಗೆ ಸುತ ಸುಜನವತ್ಸಲ ನೆನವಿಗೆ ಗೋಚರನೆಯಾಗಿ ಪೋಗದೆ ಮತ್ತೆಂದಿನ ತೆಜದೆ ನಯನಗೋಚರನೆನಿಪ್ಪುದಂ ಪೇಟ ಪುಣ್ಯತರವಾಸರಮುಂ (ಚಂದ್ರಪು. ೫-೧೬). **ನೆನೆವು : ೧.** ಅನುಭವಕ್ಕೆ ಬಾಯಿ ಇಲ್ಲ ; ಅದರೆ ನೆನೆವು ಮಾತಾಳಿ (ಸಾಹಿವಿ. ೧೪೨) ; ಕವಿ ಕವಿ ಎಂದು ನನ್ನನ್ನು ಕರೆವುದೇಕೆ, ಮತ್ತೆ ಮತ್ತೆ ನೆನೆವು ಬೇಕೆ (ಚಿತ್ರಸ್ಯ. ೬).

[ನೆನೆ₁ +-ವು./ತಮಿ. ನಿನೈವು ; ಮಲ. ನಿನವು]

**ನೆನವೊಸಗೆ** (ನಾ). ನೆನಪಿನ ಆನಂದ,—ಉಲ್ಲಾಸ : ಒಂದು ನಗೆ ಒಂದು ನುಡಿ ಒಂದು ಚಲನದಿ ಹೊಳೆದು ಅವುದೋ ನೆನವೊಸಗೆ ಮರಳುವುದು ಮರೆಗೆ (ಮಲೆದೇ. ೧೦-೮). [ನೆನವು + ಒಸಗೆ]

**ನೆನಸು₁** 'ನೆನೆಯಿಸು' ನೋ.

**ನೆನಸು₂** 'ನನೆಸು' ನೋ.

**ನೆನಸು₃** 'ನನಸು' ನೋ.

**ನೆನಹ** (ನಾ). **೧.** ಜ್ಞಾಪಕ ; ನೆನಪು ; ಸ್ಮರಣೆ : ನಿಮ್ಮ ನೆನಹವಿಲ್ಲದೆ ನಿರ್ಭಾಗ್ಯನಾದೆ ಎನಗೆ ನೀ ಕರುಣಿಸಾ (ಬಸವ. ೨೫೭) ; ಭವನ ನೆನಹಲ್ಲದೆಯು ಬೇಜೆಚಿ ನೆನಹವು[ಪಾಠಾಂ. ನೆನೆವುದು]ನಿಲ್ಲ(ಮೆಜಿರ. ದೇ. ೭೦-೧೦). **೨.** (ಸಂಸಾರದ) ಚಿಂತೆ ; ಯೋಚನೆ : ನೆನಹನೆಲ್ಲವ ಬಿಟ್ಟು ಕಣ್ಮುಚ್ಚಿ ನೋಳ್ಪಾಗ ಜಿನನಾಥ ತೋಜುವನೊಳಗೆ (ಭರಚ. ೨-೬೯).

[ನೆನೆ₁+-ಹ₂ (<-ಪ₂)]

**ನೆನಹಳಿ** (ಕ್ರಿ). ಎಚ್ಚರ ಇಲ್ಲವಾಗು ; ವೈಮರೆ : ಒಡಲು ಜೊಂಪಿಸಿ ಶಿರಂ ಭಾರೈಸಿ ನೆನಹಳಿದು ನುಡಿವ ನುಡಿಗಳು ಮೆಲ್ಲನಾಗಿ ಇಂದ್ರಿಯ ವ್ಯಾಪ್ತಿ ಮನದೊಳಡಗಲು (ಸೋಮಚ. ೧-೮೦).

[ನೆನಹು (<ನೆನಪು) + ಅಳಿ₁(<ಅಟಿ₁)]

**ನೆನಹು** 'ನೆನಪು' ನೋ.

**ನೆನಹುಗೆಡು** (ಕ್ರಿ). ಇಹದ ಅಥವಾ ಹೊರಗಿನ ಪ್ರವೃತ್ತಿಯಿಲ್ಲವಾಗು : ಪ್ರಾಣ ಲಿಂಗವಾಗಿ ನವನಾಳದ ಸುಳುಹನಜಿಯದು ಮನ ಲಿಂಗವಾಗಿ ನೆನಹುಗೆಟ್ಟಿತ್ತು (ಅವಚಂ. ೨೪೯-೧೦೮೫).

[ನೆನಹು(<ನೆನಪು) + ಕೆಡು₁]

**ನೆನಹುಡುಗು** (ಕ್ರಿ). ಜ್ಞಾಪಕಶಕ್ತಿ ಕುಂಠಿತವಾಗು ; ಸ್ಮರಣೆ ಇಲ್ಲದಾಗು : ಮನಂಬಿರ್ದು ನೆನಹುಡು[ಪಾಠಾಂ. ಡಿ]ಗಿ ನಡೆಗೆಟ್ಟು ಕಂಪಿಸಿ ನಸುಬೆಮರ್ತು (ನಂಚಿರ. ೧೨-೫೨).

[ನೆನಹು(<ನೆನಪು)+ಉಡುಗು₁]

**ನೆನೆ₁** (ಕ್ರಿ). **೧.** ಜ್ಞಾಪಿಸಿಕೊಳ್ಳು ; ನೆನೆದುಕೊಳ್ಳು ; ಸ್ಮರಿಸು : "ನೆನೆ-ಸ್ಮರಣೇ"(ಶಮಧಾ) ; ಪೂಣ್ದ ಪ್ರತಿಜ್ಞೆಯಂ ನೆನೆವೆಯೊ ನೆನೆಯೆಯೊ ಎನೆ (ಪಡ್ಮಾರಾ. ೧೨೫-೭) ; ನೆನೆಯದಿರಣ್ಣ ಭಾರತದೊಳಿಂ ಪೆಜರಾರುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ (ಪಂಪಭಾ. ೧೨-೨೧೭); ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯ (ಮಹಾದೇ. ಬ. ೧೩೮-೩೧೩) ; ನೆನೆದರು ಮನೆಯ ರಾಣಿಯರ (ಕುಪ್ಪಾಭೀ. ೮-೬೧). **೨.** ಯೋಚನೆ ಮಾಡು ; ವಿಚಾರಿಸು ; ಆಲೋಚಿಸು ; ಚಿಂತಿಸು : ಅದಾನಟಿಪೋರೂ ಅಟಿಕಿವಲ್ಪಟಿಟ್ಟದೋರ್ ×× ಮನದೆ ನೆನೆವೋರುಂ . . . ಪಞ್ಚಮಹಾಪಾತಕ ಸಂಯುಕ್ತರಪ್ಪೊರ್ (ಎಕ. VI, ಕೊಪ್ಪ. ೩೮-೯ ; ಸು. 675 ?) ; ಪುನರುಕ್ತಮೆಂಬುದಕ್ಕುಂ ನೆನೆಯದೆ ಪೂರ್ವೋದಿತಾರ್ಥಪದಪದ್ಧತಿಗೊಂದಿನಿಸುಂ ವಿಶೇಷಮಿಲ್ಲದೆ ಜನಿಯಿಸಿದ ಪದಾರ್ಥಂ (ಕವಿರಾ. ೧-೮೪) ; ಚೇಟಕಿಯನೆರೆದಿರ್ದರೆಂಬಿದಂ ನೆನೆ (ಕಾದಂಬ. ೭೬) ; ನೆನೆದೊಡಾಶ್ಚರ್ಯಮಲ್ತೆ ಸಂಸ್ಕೃತಿಚಕ್ರಂ (ಸುಕುಮಾ. ೫-೧೯); ನೆನೆಯಂಬಂ ಬಗೆಯೊಳ್ ನೆನೆಯುತ್ತಿರ್ಪನ್ನೆಗಂ (ಕಬ್ಬಿಕಾ. ೮೭) ; ಗಣನೆಗೇರಲಿಕೆಂತು ಜನ ತಪಿಸಿ ತೊಳಲುವುದು ನೆನೆಯದಾತ್ಮದ ಸುಖವ (ಮಂಕುಕ. ೯೫೩). **೩.** ಧ್ಯಾನಮಾಡು ; ಧ್ಯಾನಿಸು ; ಚಿಂತನೆ ಮಾಡು : ಉಟಿಂದುದಂ ಬಿಸುಟ್ಟೊಂದನೆ ನೆನೆವುದು (ಅಜಿಪು.೮-೨೮ ಪ); ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ . . . ಎನಗೆ ನಮ್ಮ ಕೂಡಲಸಂಗಮದೇವರ ನೆನೆವುದೆ ಚಿಂತೆ (ಬಸವ.೩೬೪) ; ಕರುಣಿ ಕರುಣಿಸಿ ರಕ್ಷಿಸೆಲೆ ದೇವ . . . ನಿಮ್ಮುವಂ ನೆನೆಯಲಜಿಯದತಿ ಕಷ್ಟನಂ (ವಾಗೀರ. ದೇ. ೨೬೨-೧೮) ; ಮಲುಹಣನು . . . ಪರಶಿವನಂ ನೆನೆವ ಯೋಗೀಂದ್ರನಂದದಿ ತನ್ನನಂಗನೆ ಮುನ್ನೊಲಿಸಿ ನೋಳ್ಪೊಲುಮೆಯಂ ನೆನೆವ (ಬಸವು. ೪೨-೩೦) ; ಶಿವಮಂತ್ರವಂ ನೆನೆವುತವನ ನೆತ್ತಿಗೆ ಕರವನಿಡೆ (ಪದ್ಮರಾ. ೨-೩೦) ; ಪಾಂಡವರು . . . ಲಕ್ಷ್ಮೀಲೋಲನಂಘ್ರಿಯ ನೆನೆವುತಿದ್ದರು ವೀರನರಯಣನ (ಕುಪ್ಪಾಅ. ೨೧-೭೧). **೪.** ತಿಳಿ ; ಗ್ರಹಿಸು ; ಅರಿತುಕೊಳ್ಳು : ನೆನೆದು ವಿಚಾರಿಸಿ ನಿಶ್ಚಯಮನತುಳೋಪಾಯಕೋವಿದಂ ಸ್ಥಿತಿಕರ್ತಂ ವನಜಾಕ್ಷಂ . . . ಶಕ್ರನೊಡನಿಂತೆಂದಂ (ಗಿರಿಕ. ೬-೮೦). **೫.** ಉದ್ದೇಶಿಸು; ಸಂಕಲ್ಪಿಸು : "ಸಂಕಲ್ಪವೆಂದರೆ ನೆನೆವುದಕ್ಕುಂ" (ಮಂಗರಾ. ೧೩೪-೩೪) ; ವೈರವ ಬೆಳಸಿ ಬಂದರು ಧರೆಯ ಭಾಗವ ಬೇಡಿ ಕದನವ ನೆನೆದರೆಮ್ಮೊಡನೆ (ಕುಪ್ಪಾಭೀ.೧-೧೯) ; ಇಷ್ಟು ನೀ ಕೀರ್ತಿಸಲಾತನ ಮೇಲೊಂದು ಕಷ್ಟವ ನೆನೆದು ಪೂಸರಳವೃಷ್ಟಿಯ ತೋಜುವೆ (ಮೋಹತ. ೬-೧೧). **೬.** ಮನಸ್ಸಿಗೆ ತಂದುಕೊಳ್ಳು ; ಗಮನಿಸು ; ಲಕ್ಷ್ಯಕೊಡು : ನೀನ್ನಿನ್ನ ಸಾವನದನೆನಸುನ್ನೆಯದೆ ನೆರೆವೆನೆಂಬ ಬಗೆಯೊಳ್ ಬಂದೈ (ಪಂಪಭಾ. ೨-೨೧) ; ಧೃತರಾಷ್ಟ್ರನಂದನಂ ಮುನ್ನಗೆಯ್ದ ಧರ್ಮಮಂ ನೆನೆ[ಪಾಠಾಂ. ಬಗೆ]ಯದೆ ಕುಲಕ್ರಮಯುಕ್ತಮಪ್ಪ ನಿರ್ಮಲ ಕ್ಷತ್ರಧರ್ಮಮನೆ ಬಗೆದು ಧರ್ಮನಂದನನಿಂತೆಂದಂ (ಗದಾಯು. ೭-೮ ಪ) ; ಎನಿತು ಜನರು ಬಂದರೇನು ಎನಿತು ಜನರು ಹೋದರೇನು ನೆನೆದರಿಲ್ಲ ಕುರುಡನಿರವ ಮನದ ರಂಗದಿ (ಕವಿಸೋ. ೪೦-೧೫). **೭.** ಕಲ್ಪಿಸು ; ಭಾವಿಸು ; ಊಹಿಸು : ನೆಲನ ಸವೆಸಿತು ನೇಸಱನ ಕಂಗಳನು ಕದುಕಿತು ನೆನೆಯಬಾರದು ನಳಿನಭವ ಹರನಾದನೆನಲುಚ್ಚಳಿಸೆ ಪದಧೂಳಿ (ಕುಪ್ಪಾಭೀ. ೧-೪೮) . **೮.** ಬಯಸು ; ಇಚ್ಛಿಸು : ಎನಿತುಂ ಕಾಯ್ದುಂ ಬೆನ್ನೀರ್ ಮನೆ ಸುಡದೆಂಬಂತೆ ನಿನಗವರ್ ನಿಲೆ ಕಾಯ್ದುಂ ಮನದೊಳ್ ಪೊಲ್ಲದನೆಂತುಂ ನೆನೆಯರ್ (ಕಾವ್ಯಾವ. ೨೩೫) ; ನಾನೊಂದು ನೆನೆದೊಡೆ ತಾನೊಂದು ನೆನೆವುದು ನಾನಿತ್ತಲೆಳೆದೊಡೆ ತಾನತ್ತಲೆಳೆವುದು . . . ಮಾಯೆ (ಬಸವ. ೧೪) ; ನೆನೆದಂತೆ ಕಾರ್ಯಮದು ನೆಟ್ಟನೆ ಸಂಗಳಿಸುವುದು ಪೂರ್ವಪುಣ್ಯದ ಪಾಂಗೆಂದೆನುತಮೊಡರಿಸಿದನಾಗಳ್ ತನಯನ ಪರಿಣಯನಮಂ ಕ್ಷಿತಿಪಿಷ್ಟನೃಪಾಳಂ (ಶಾಂತೀಶ್ವ. ೫-೧೧). **೯.** "ಮರುಗು, ಮಿಡುಕು, ನೆನೆ" (ಕಂನುಹು. ೪೯).

**ನೆನೆನೆನೆ** (ದ್ವಿರುಕ್ತಿ) : ನೆನೆನೆನೆದು ಪೆಜರ ಮಾತುಗಳನೆ ನೆಗಟ್ದಾರೆ ಕೃತಿಯೊಳಿಡುವವಂ ನಗದ ಗುಹಾಧ್ವನಿಯವೊಲನರ್ಥವಚನಂ ತನಗಾಗಿಸಲಜಿಯನುಚಿತವಾಕ್ಚತುರತೆಯಂ (ಕವಿರಾ. ೧-೧೪) ; ಗದ್ಗದಕಂಠೆಯರ್ . . . ಪೋದ ನಿಜವಲ್ಲಭನಂ ನೆನೆನೆನೆದು (ಅಜಿಪು. ೬-೧೧೨ ಪ) ; ಕಣ್ಗಳನರೆದೆಜಿವುದು ನೆನೆನೆನೆದು ಕಾಂತೆಯಂ ಕಳಹಂಸಂ (ಗಿರಿಕ. ೨-೫೮) ; ಆ ವನಜನಯನನೆಯ ರತಿಕಳಾಭಾವನಭವಸೌಖ್ಯಂಗಳಂ ತಾನಾವಗಂ ನೆನೆನೆನೆದು ವಿರಹದೊಳಿರಲು (ಬಸವು. ೪೨-೨೭) ; ಅನಿಲಜನ ಘಾತಕ್ಕುಪಾಯವ ನೆನೆನೆನೆದು ಮನಗುಂದಿ ಕೌರವಜನಪ ಕಂಡನು ಮತ್ತೆ ವಿಷಗಳನಿಕ್ಕಬೇಕೆನುತ (ಸಂಭಪ. ೧೭-೫೨) ; ನೆನೆನೆನೆದು ಗಹನವನು . . . ಮಣಿಮಣಿದು ಕೈಮುಗಿಯೊ (ಮಂಕುಕ. ೯೧೪).

**[ದೇ.॥ ತಮಿ. ನಿನೈ ; ಮಲ. ನಿನ, ನಿನೆ ; ಕೊಡ. ನೆನ]**

**ನೆನೆ$_2$** 'ನನೆ$_1$' ನೋ.

**ನೆನೆಕೆ** 'ನೆನಕೆ' ನೋ.

**ನೆನೆಗಟ್ಟು** (ನಾ). ವಿಚಾರಸರಣಿ ; ಆಲೋಚನೆ ; ತರ್ಕ : ಈಗ ನಮ್ಮ ಜನ ಈ ಹೆಸರುಗಳಲ್ಲಿ ಅನೇಕವನ್ನು ಬಿಟ್ಟಿದ್ದಾರೆ. ಉಳಿದಲ್ಲಿ ಹೇಗೆ ಹಾಗೆ ಇಲ್ಲಿಯೂ ನೆನೆಗಟ್ಟು ಬೇರೆಯಾಗಿ ನುಡಿಕಟ್ಟು ಬೇರೆಯಾಗಿದೆ (ನಮ್ಮನು. ೨೧೪). [ನೆನೆ$_1$ + ಕಟ್ಟು$_2$]

**ನೆನೆಗಡಲೆ,** ನೆನಗಡಲೆ (ನಾ). ನೆನೆ ಹಾಕಿದ ಕಡಲೆ : ಪರಿಪರಿಯ ಫಲವಸ್ತು ತರಿಸುತ ಸುರಿದು ನೆನೆಗಡಲೆಗಳ ರಾಶಿಯ (ಸಂಭಪ. ೨೦-೨೧). **ನೆನಗಡಲೆ :** ನೆನಗಡಲೆ ಚಿಗುಳಿ ತಂಬಿಟ್ಟು . . . ಮೊದಲಾದ ವಸ್ತುಗಳಂ (ಸೌಗಂಧಿ. ೪೩-೧೯) ; ಚಿಗುಳಿ ತಂಬಿಟ್ಟು ಕಬ್ಬು ನೆನಗಡಲೆ ಬೆಲ್ಲದಿಂ (ಲಿಂಗಪು. ೨೦-೧೬) ; ನೆನಗಡಲೆ ಒಲ್ಲೆನೆಂದು ಮುಂದೆ ಹೊರಟನು (ಸಿದ್ಧಪು. ೫-೪೧) ; ಹೆಬ್ಬಕಲಲ್ಲಿರುವೊ ಕಬ್ಬಲ್ಲ ಬೆನವಗೆ ಕಬ್ಬಿನ ಜಲ್ಲೆ ನೆನಗಡಲೆ ಸಲಿಸುವೆ (ನಾಪದ. ೮). [ನೆನೆ$_1$ + ಕಡಲೆ]

**ನೆನೆಗುದಿ** 'ನನೆಗುದಿ' ನೋ.

**ನೆನೆಯಕ್ಕಿ$_1$** 'ನನೆಯಕ್ಕಿ' ನೋ.

**ನೆನೆಯಕ್ಕಿ$_2$** (ನಾ). ಒಂದು ಬಗೆಯ ಔಷಧೀ ಸಸ್ಯ : ನೆನೆಯಕ್ಕಿ ಬೇರನರೆದು, ಬಿಸಿನೀರಲ್ಲಿ ಕಲಸಿ ಕುಡಿಯ ಕೊಡೆ ಸೂತಕವಿಲ್ಲದ ಸ್ತ್ರೀ ಸೂತಕವಾಗುವಳು (ವೈದ್ಯಸಾ. II, ೪೩) ; ನೆನೆಯಕ್ಕಿ ಸಮೂಲಗಿಡವನ್ನು ಕುಟ್ಟಿ ಕಷಾಯ ಕಾಯಿಸಿ ಶೋಧಿಸಿ ಇದರಲ್ಲಿ ಗುಗ್ಗುಳು ಚೂರ್ಣ ಗ॥ ತೂಕ ಸಕ್ಕರೆ ಹಾಕಿ ಸೇವಿಸಲು ರಕ್ತಮೂಲ ನಿಲ್ಲುವುದು (ಸಕವೈ. ಪರಿ. ೪೬೬). [ ? ]

**ನೆನೆಯಿಕ್ಕು** 'ನನೆಯಿಕ್ಕು' ನೋ.

**ನೆನೆಯಿಡು** (ಕ್ರಿ). = ನೆನೆಹಾಕು : ಮುಲ್ಲಂಗಿಗಡ್ಡೆಯನ್ನು ಸಣ್ಣಗೆ ಪಚ್ಚಡಿಯಂತೆ ಹೋಳು ಮಾಡಿ . . . ಆ ಪಾಕದಲ್ಲೇ ನೆನೆಯಿಟ್ಟಿದ್ದು (ಸಕವೈ. ಪರಿ. ೪೯೬). [ನೆನೆ$_2$ (<ನನೆ$_1$) + ಇಡು$_1$]

**ನೆನೆಯಿಸು,** ನೆನಸು$_1$, ನೆನೆಸು$_1$ (ಕ್ರಿ). ೧. ಜ್ಞಾಪಕಕ್ಕೆ ತರು ; ಸ್ಮರಣೆ ಉಂಟಾಗುವಂತೆ ಮಾಡು; ಜ್ಞಾಪಿಸು : ಜಿನಸವನಾಂಬುವಿನೊಳ್ ಭೋಂಕೆನೆ ಚಂದ್ರಂ ತೇಂಕಿ ವೃದ್ಧಹಂಸನನಿನಿಸಂ ನೆನೆಯಿಸಿ. . . ಸಿತವನರುಹಲಕ್ಷ್ಮಿಯುಮನಿನಿಸು ತನಗೊಳಕೊಂಡಂ (ಆದಿಪು. ೭-೯೯) ; ಕನಕಾಚಲಮೆಂಬ ಕನತ್ಕನಕಾಬ್ಜದ ಕರ್ಣಿಕಾಗ್ರದೊಳ್ ಪಾಯ್ವಳಿಯಂ ನೆನೆಯಿಸಿ ಕಣ್ಗೊಪ್ಪುವುದಿಂದ್ರನೀಲಮಣಿರುಚಿಯಿಂನೆಸೆವ ಚೂಳಿಕೆ ನಭದೊಳ್ (ಅಜಿಪು. ೧೧-೨೬); ಮದನಕುಂಭಿಕುಂಭಸ್ಥಳಮಂ ನೆನೆಯಿಸುವುದಸಿಯಳ ಲಘುನಿತಂಬಂ (ಮಲ್ಲಿಪು. ೩-೬೧) ; ಕೆಂದಾವರೆಯಂ ನೆನೆಯಿಸಿದುದು . . . ನಿಡಿಯ ಮೆಲ್ಲಡಿಯವಳಾ (ಕಬ್ಬಿಕಾ. ೭೪) ; ಸತಿಯತಿಕಾರ್ಶ್ಯಂದಳೆದೊಪ್ಪಿದಳು . . . ಸಿತಪಕ್ಷಂ ತೀರಿದ ನಿರ್ಮಲ ಶಶಿಬಿಂಬದ ಭಂಗಿಯುಮಂ ನೆನೆಯಿಸುತ (ಜಯಕಾ. ೪-೩೨). ೨. ತಿಳಿಸಿಕೊಡು ; ವಿವರಿಸು ; ವಿಶದಪಡಿಸು ; ಗಮನಕ್ಕೆ ತರು : ಅನುಚಿತಕಾರ್ಯಮನವನೊಡರಿಸೆ ಕಂಡು ನಿನಗಿದು ನೀತವಲ್ಲೆಂದು ನೆನೆಯಿಪೆನಲ್ಲದೆ ನೇಮಿಪುದಿಲ್ಲೆಂದು ವಿನಯವೆರಸಿ ಬಿನ್ನವಿಪುದು (ಹವಿಬ. ೩-೨೯).

**ನೆನಸು$_1$ :** ೧. ವಿಧಿಬದ್ಧ ಸರ್ಕಾರವಾದುದರಿಂದ ಗತವೈಭವವನ್ನು ನೆನಸಿತು (ಭಾರದ. ೩೭೩). ೩. ನೆನಪು ಮಾಡಿಕೊಳ್ಳು ; ಜ್ಞಾಪಿಸಿಕೊಳ್ಳು ; ಸ್ಮರಣೆಗೆ ತಂದುಕೊಳ್ಳು : ನೆನಸಿಕೋ ನೀಲಕಂಠನ ವಧೂಟಿಯ ಮಾತ (ಮೋಹತ. ೨೭-೫೫) ; ನಾವು ಅವರ ಉಪಕಾರವನ್ನು ಯಾವಾಗಲೂ ನೆನಸಬೇಕು (ಮುಂಬಯಿ. ೨-೪೦). ೪. ಧ್ಯಾನಿಸು ; ಚಿಂತನೆಮಾಡು : ಹರಿ ನೆನಸಿದೊಡೆ ಬಾರನೆ (ಜೈಮಿಭಾ. ೨-೩೫) ; ಓರ್ವ ಮುನಿಪುಂಗವನು ಮನದೊಳಪೂರ್ವಮಹಿಮನ ಚರಣಕಮಲವ ನೆನಸುತಿರಲು (ಅರ್ಜಾವಿ. ೩೧-೨). ೫. ಊಹಿಸು ; ಕಲ್ಪಿಸು ; ಭಾವಿಸು : ಒಂದು ಮನೆಯನ್ನು ನೋಡಿದರೆ ತತ್ಕಾಲದಲ್ಲಿ ಮನುಷ್ಯರು ಕಾಣದೆ ಇದ್ದಾಗ್ಯೂ ಅದು ಮನುಷ್ಯರು ಕಟ್ಟಿದ್ದಲ್ಲವೆಂದು ಎಂದಾದರೂ ನೆನಸುವನೋ ? (ಮುಂಬಯಿ. ೪-೫೯). ೬. ಬಯಸು ; ಇಚ್ಛಿಸು ; ಕೋರು : ನೀ ನೆನಸಿ[ಪಾಠಾಂ. ನೀನೆಳಸಿ]ದಿಷ್ಟಾರ್ಥಫಲ ಸಿದ್ಧಿಸಿದುದಿನ್ನೇನು (ನಳಚ. ೨-೪೫). **ನೆನೆಸು$_1$ :** ೩. ಅಮ್ಮ, ಅಪ್ಪ ನನ್ನ ನೆನೆಸಿಕೊಳ್ತಾಲೇ ಇರಲಿಲ್ಲವೆ ? (ರಂಗನಾ. ೭೩) ; ತನ್ನ ನೆನೆವನೇ ತಾನೆ ನೆನೆಸಿ ಒಳವೊಳಗೆ ನಿದ್ರಿಸಿರಲು (ಸೂರ್ಯಪಾ. ೭೪-೧೨).

**ನೆನೆಸಿ ಕೊಡು, ನೆನಸಿ ಕೊಡು** = ನೆನಪು ಮಾಡು ; ಜ್ಞಾಪಿಸು : ನೆನೆಸಿ ಕೊಡುವನು ಹಗೆಗೆ ಮರ್ಮವನನುಜನೀತನ ಕೊಲುವೆನೆನುತವೆ ತನಗೆ ಮಯನಿತ್ತುಗ್ರ ಶಕ್ತಿಯ ಕೊಂಡು ತಿರುವಿಟ್ಟ (ಕೌಶಿರಾ. ೨೨-೩೪) ; ನಿಮ್ಮ ಕಾರ್ಯಕ್ರಮವನ್ನು ನೆನೆಸಿಕೊಡುವ ಸಲುವಾಗಿ ಈ ಪತ್ರ ಬರೆಯುತ್ತಿದ್ದೇನೆ (ಪುನರು. ೧೬) ; ಹರಿಶ್ಚಂದ್ರಭೂಭುಜನ ಮನೆಗೀಗಳಿಂತು ನೀ ಹೋಗಿ ಕೌಶಿಕನು ನೆಟ್ಟನೆ ನಿನ್ನನಂತಿಂತು ಕೆಡಿಸಿದಪನೀನಾವ ಪರಿಯಲೆಚ್ಚತ್ತಿರೆಂದು ನೆನಸಿ ಕೊಡು ಹೋಗು (ಹಚಕಾ. ೨-೨೯).

**ನೆನೆಸಿಕೊಳ್ಳು** = ಜ್ಞಾಪಿಸಿಕೊಳ್ಳು ; ಸ್ಮರಣೆಗೆ ತಂದುಕೊಳ್ಳು : ಅದೆಲ್ಲ ನೆನಸಿಕೊಂಡರೆ, ಏನು ಪ್ರಯೋಜನ ? (ರಾಯಕ. ೬೫) ; ಬೋಳಿ ತುರುಬ ನೆನಸಿಕೊಂಡ ಹಾಗೆ (ಗಾದೆ) ; ಹಿಂದಿನದೆಲ್ಲ ನೆನಸಿಕೊಂಡು ಹಿತ್ತಲಲ್ಲಿ ಅತ್ತರಂತೆ (ಗಾದೆ). [ನೆನೆ$_1$ + -ಇಸು$_3$]

**ನೆನೆವು** 'ನೆನವು' ನೋ.

**ನೆನೆಸು$_1$** 'ನೆನೆಯಿಸು' ನೋ.

**ನೆನೆಸು$_2$** 'ನನೆಸು$_1$' ನೋ.

**ನೆನೆಹಾಕು** (ಕ್ರಿ). (ನೀರಿನಲ್ಲಿ) ನೆನೆಸಿಡು : ಕಂಚಿನ ಪಾತ್ರೆಯಲ್ಲಿ ದಾಳಿಂಬೀಹಣ್ಣಿನ ರಸವಂ ಹಿಂಡಿ ಏಳು ದಿನ ಆ ಕೆಂಪುರತ್ನವಂ ನೆನೆಹಾಕಲು (ಸೌಗಂಧಿ. ೩೬೭-೨೪) ; ಸಾಮಾನು ನೆನೆಹಾಕಿದ್ದೂ ಹಾಕಿದ್ದೆ (ರೂಪಸಂ. ೧೭) ; ಭತ್ತವನ್ನು ನೀರಿನಲ್ಲಿ ನೆನೆಹಾಕಿ, ಅನಂತರ ಬೇಯಿಸಿ ಒಣಗಿಸುತ್ತಾರೆ (ಅಡುಸೌ. ೭೪) ; ಅರೆಕಲ್ಲು ನೆನೆಹಾಕಿದಂತೆ (ಗಾದೆ).
[ನೆನೆ$_2$(<ನನೆ$_1$) + ಹಾಕು(<ಪಾಯ್ಚು$_1$)]

**ನೆನ್ನೆ** 'ನಿನ್ನೆ' ನೋ.

**ನೆಪ** 'ನೆವ' ನೋ.

**ನೆಪಗೆಯ್** (ಕ್ರಿ). ಕಾರಣವನ್ನಾಗಿ ಮಾಡಿಕೊಳ್ಳು ; ನೆವ ಹೂಡು: ಕಪಿರಾಜನು ದ್ಯೋಗ ಶಾಖಾಮೃಗಂಗಳುಂ ವಿಪುಳಭೂಮಿಯ ಚದುರಿಸಿದುರುವೇಗ ಸಾಗರಮ[ವ] ನೆಪಗೆಯ್ಯದಾಂ ದಾಂಟಬಂದು ನಗರಿಯ ಪೊಕ್ಕು ತೊಳಲ್ದ ಮುಖ್ಯಶ್ರಮಗಳು ವಿಫಲವಾದುವು (ವೆಂಕಾರಾ. ೫-೫-೯). [ನೆಪ(<ನೆವ) + ಕೆಯ್$_1$]

**ನೆಪತೆಗೆ** 'ನೆವತೆಗೆ' ನೋ.

**ನೆಪವೊಡ್ಡು** (ಕ್ರಿ). ತೋರಿಕೆಯ ಕಾರಣವನ್ನು ಕೊಡು ; ನೆವ ಹೇಳು : ತಾನು ಕೂಡಲೆ ಮನೆಗೆ ಹೋಗಬೇಕೆಂದು ನೆಪವೊಡ್ಡಿ, ಅವನು ಬೀಳ್ಕೊಳ್ಳಲನುವಾದನು (ಪುನರು. ೧೨೬). [ನೆಪ(<ನೆವ) + ಒಡ್ಡು$_1$]

**ನೆಪಹೇಳು** 'ನೆವಹೇಳು' ನೋ.

**ನೆಪ್ತಿ** (ನಾ). ಜ್ಞಾಪಕ ; ನೆನಪು ; ಸ್ಮರಣೆ : ಆ ಪದಗೋಳು ನೆಪ್ತೀಗೆ ಬಂದು ಹಿಂಗೇ ಹಾರೋಗಲಾ ಅಂತದೇ ಜೀವ (ಕೂಲಿ. ೮). 'ಗೆಪ್ತಿ' ಪರಾ. [<ಸಂ. ಜ್ಞಪ್ತಿ]

**ನೆಪ್ಪು$_1$** 'ನೆನಪು' ನೋ.

**ನೆಪ್ಪು$_2$** (ನಾ). ಪ್ರದೇಶ ; ತಾಣ : ತೊಪ್ಪತೊಪ್ಪನೆ ಪಿರಿಯ ಕಲ್ಲೊಳು ತಪ್ಪಲಿಡುತಂ ಸೋಹುತಂ ಪರಿತಪ್ಪ ಕೆಲವಾಡುಗಳನಾ ಬೊಬ್ಬುಲಿಯ

ಮರನಿಪ್ಪ ನೆಪ್ಪಿಗಾತನು ಹೊಡೆದದಱ ಕಾಯ್ಸೊಪ್ಪು ವಂ ತಱಿವುತ (ಬಸವು. ೨೦-೧೪) ; ಉಪ್ಪು ನೀರಂ ದಿನಂಪ್ರತಿ ಪಾಕತನದಿಂದ ತಪ್ಪದೇ ಹೀರಿದಾ ತಲೆಬಿಗುಡು ಗಗನದೊಳಗೊಪ್ಪ ದಿಂ ಪರಿವ ದೇವಾಪಗೆಯ ಮಧು ರತರ ವಾರಿಯ ಹೀರಿ ಹೀರಿ ಚಪ್ಪರಿಸಿದಲ್ಲದೇ ಹೋಗದೆಂದೆನುತುಮಾ ನೆಪ್ಪಿಂಗೆ ತದ್ವನಧಿಯಿಂದ ವಡಬಾಗ್ನಿಯೇ ಉಪ್ಪರಿಸಿ ನೆಗೆವಂತೆ ಉಷ್ಣ ಕಿರಣಂ ಮೂಡಿ ನೆಗೆದುದಂಬರತಳಕ್ಕೆ (ಸಮ್ಯಕೌ. ೧೨-೯).

[←ತೆಲು. ನೆಪ್ಪು]

**ನೆಪ್ಪು$_3$** 'ನೇರ್ಪು$_1$' ನೋ.

**ನೆಪ್ಪು$_4$** 'ನೇರ್ಪು$_2$' ನೋ.

**ನೆಪ್ಪು$_5$** (ನಾ). ಕೋಪ ; ಸಿಟ್ಟು : 'ನೆಪ್ಪುಗೊಳ್$_2$' ಪರಾ.

[←ತಮಿ. ನೆರುಪ್ಪು]

**ನೆಪ್ಪು$_6$** (ನಾ). ನೀರಿನ ಅಡ್ಡಗಟ್ಟೆ (?) : ತಪ್ಪಲಿನಲ್ಲಿ ನೆಪ್ಪ ನೋಡುತ್ತ ಹೋಗುತ್ತಿರಲಾಗಿ ಮುಂದೆವೊಂದು ಕಟ್ಟೆ ಕಟ್ಟಿದುದ ಕಂಡೆ (ಪೂರಿವ. ೨೧೫-೬) ; ಕುಲಚರಿಯನೆಂಬ ಭಕ್ತನ ಕಂಗಳಱತಿರಲು ಪೊಳೆಯು ತೀರದಿ ಲಿಂಗವಿರಿಸಿ ಗಂಟಂ ಬಲಿದು ನುಲಿಯ ಜಲದೆಡೆಗೆ ನೆಪ್ಪಂ ಕಟ್ಟಿ[ಟ್ಟ] ಯಗ್ಗಣಿಯ ತಂದು ಮಜ್ಜನಕೆಱೆಯಲು (ಗುರುಚಾ. ೫-೬೪). [ ? ]

**ನೆಪ್ಪುಗ** (ನಾ). ಜ್ಞಾಪಕದಲ್ಲಿಟ್ಟುಕೊಳ್ಳುವವನು : "ವನಃ, ವನಕಃ, ವನನ್, ಈ ೩ ನೆಪ್ಪುಗಂ" (ಕಾಶಕ್ಯ. ೧೪೧).

[ನೆಪ್ಪು$_1$(<ನೆನಪು)+-ಗ$_2$]

**ನೆಪ್ಪುಗಾತಿ** (ನಾ). ಅಂದಗಾತಿ ; ಒನಪುಗಾತಿ ; ಬೆಡಗುಗಾತಿ : ಅಪ್ಪಿದರಪ್ಪುವಳುಗುರಿಟ್ಟರುಗುರಿಕ್ಕಿ ಉಪ್ಪರಿಸುವಳೊಡಱುವಳು ನೆಪ್ಪು ಗಾತಿಯು ನೇಮಗಾಱನು ಹೊಕ್ಕರು ಮುಪ್ಪಿಡೆ ಸಾದನೆಗಂದು (ಭರಚ. ೧೧-೪೯). [ನೆಪ್ಪು$_4$ (<ನೇರ್ಪು$_2$) + -ಕಾತಿ$_5$]

**ನೆಪ್ಪುಗೊಳ್$_1$** 'ನೇರ್ಪುಗೊಳ್$_1$' ನೋ.

**ನೆಪ್ಪುಗೊಳ್$_2$** (ಕ್ರಿ). ಸಿಟ್ಟುಗೊಳ್ಳು ; ಕೋಪಿಸು : ತೆಪ್ಪಗೆ ಕುಳ್ಳಿರ್ದೈ ದೋಷವಿಲ್ಲೆಂದರೆ ಒಪ್ಪದೆ ನಿಂದಿರ್ದರವರು ಅಪ್ಪಾಜಿಯಾಣೆ ಕುಳ್ಳಿರಿ ಯೆಂದ ಕುವರನ ನೆಪ್ಪುಗೊಂಡವರು ನೋಡಿದರು (ಭರಚ. ೨೭-೬೯).

[ನೆಪ್ಪು$_5$ + ಕೊಳ್$_1$]

**ನೆಪ್ಪುದೋಱು** (ಕ್ರಿ). ಅಂದವನ್ನು ತೋರು ; ಚೆಲುವಾಗಿ ಕಾಣು : ತುಪ್ಪುಳುಮೀಸೆ ರೇಖೆಗೆ ಬಂದುದಿಲ್ಲ ಮೈದಪ್ಪ ಸಂಪೂರ್ಣ ವಾಯ್ತಿಲ್ಲ ನೆಪ್ಪುದೋಱಿತು ಪ್ರಾಯ ನೆರೆವರಿನ್ನಿವರೆನುತಿಪ್ಪನಿತಱೊ ಳಿಂತುಟಾಯ್ತು (ಭರಚ. ೭೧-೨೭).

[ನೆಪ್ಪು$_4$(<ನೇರ್ಪು$_2$) + ತೋಱು]

**ನೆಪ್ಪುವಡೆ** 'ನೇರ್ಪುವಡೆ' ನೋ.

**ನೆಬ್ಬ** (ನಾ). (?) : ಉಬ್ಬಸಗೈವರನ್ನುಬ್ಬಸರೊಳಗಿಂದ ತೆಗೆದು ಊರ್ಭಿ ಯೊಳಗೆ ಇಟ್ಟು ಪಾಲಿಪನಂತೆ ನೆಬ್ಬವು ತೆರದಂತೆ ಸಂಸ್ಕೃತಿ ಕಾಣೆ ನೀನು ಗಬ್ಬಿನಲ್ಲಿ ಕೆಟ್ಟು ಪೋಗದಿರು (ವಿಸಾಸು. ೮೮-೧). [ ? ]

**ನೆಮರು** 'ನವುಲು$_2$' ನೋ.

**ನೆಮಲ**(?) (ನಾ). ಒಂದು ಸ್ಥಳದ ಹೆಸರು (?) : ಪೆರಮೆಣ್ಡ ಮಗಂ ಮೊದಯಸ್ಸ ನೆಮಲದ ತೊರೆಗೊಳ್ಳುಳ್ಳಿಱಿದು (ಎಕ. X, ಚಿಂತಾಮ. ೧೧೯-೨ ; ಸು. 1000). [ ? ]

**ನೆಮಟಿ** (?). (?) : ಮುಗುಟಿ, ನೆಮಟಿ, ತೆಮಟಿ (ಶಬ್ದಾನು. ೧೪೦ ಪ್ರಯೋ). [?]

**ನೆಮ್ಮದಿ** (ನಾ). ಸಮಾಧಾನ ; ಶಾಂತಿ ; ನಿಶ್ಚಿಂತೆ : ಆಯೆಡೆ ನೆಮ್ಮದಿಯೊಳುರುಳಾಡುವುದದ ನೀನೆಮ್ಮೊಡನರುಹು (ಜಿನಭಾ. ೨೦-೫೦); ನಾವು ನೆಮ್ಮದಿಯಾಗಿ ನಿದ್ದೆ ಹೋಗಬಹುದು (ಜ್ಯೋತಿರ್ವಿ. ೧೭೩) ; ನೀವೆಲ್ಲರೂ ನೆಮ್ಮದಿಯಿಂದ ಊರಿಗೆ ಹೋಗಿ ಬನ್ನಿ ! (ಪ್ರತಾಪ. ೬೪) ; ನೆಮ್ಮದಿ ಇದ್ದಿದ್ದರೆ ಯಾವ ಹುಡುಗಿ ಗಂಡನ ಮನೆಯನ್ನು ಬಿಟ್ಟು ಬರುತ್ತಾಳೆ ಹೇಳಿ ? (ಪದ್ಮಸ. ೨೨೨) ; ಕಣ್ಣಿಗೆ ನಿದ್ದೆಗೆ ಜಗಳವಾಗುವು ದುಂಟೆ ಆದರೆ ನೆಮ್ಮದಿಯುಂಟೆ (ಇಂಚಾಪ. ೨೩೪-೫೬).

[ದೇ.॥ ತಮಿ. ನಿಮ್ಮತಿ ; ತೆಲು. ನೆಮ್ಮದಿ]

**ನೆಮ್ಮದಿಗ** (ನಾ). "ನೆಮ್ಮದಿವಂತ ; ಪ್ರಾಮಾಣಿಕ ; ಬಲ್ಲಿದ" (ಜಾನಕೋ. ೧೨). [ನೆಮ್ಮದಿ+-ಗ$_2$]

**ನೆಮ್ಮದಿಪರ** (ನಾ). ಬದುಕಿಗೆ ಬವಣೆ ಪಡಬೇಕಾಗಿರದವನು ; ಹೊಟ್ಟೆಬಟ್ಟೆಗೆ ಸಾಕಾಗಿ ಹಣ ಮಿಗುವಂತಿರುವವನು ; ಸುಖಿ ; ಸ್ಥಿತಿವಂತ ; ಶ್ರೀಮಂತ : ಒಂದೂರಿಗೆ ಒಬ್ಬೊಬ್ಬರು ನೆಮ್ಮದಿಪರರು, ಕಡಿಮೆಯವರೆಲ್ಲರೂ ಬಡವರು (ಕಥಾಮಂ. IV, ೬೧).

[ನೆಮ್ಮದಿ + ಪರ$_2$]

**ನೆಮ್ಮದಿವಂತ** (ನಾ). =ನೆಮ್ಮದಿಪರ : ತರುವಾಯ ಮುಖ್ಯಾಧಿ ಕಾರಿಗಳನ್ನೂ ನೆಮ್ಮದಿವಂತರಾದ ಪ್ರಜೆಗಳನ್ನೂ ಕರೆಕಳುಹಿಸಿ ನಯಭಯ ಗಳಿಂದ ಅವರಿಂದ ನಜರಾಣೆಯನ್ನು ತೆಗೆದುಕೊಂಡು ಹಣವನ್ನು ಕೂಡಿಸಿ ದನು (ಒಡೆಕ. ೭೨). [ನೆಮ್ಮದಿ+-ವಂತ]

**ನೆಮ್ಮದಿವಡೆ** (ಕ್ರಿ). ಸಮಾಧಾನ ಹೊಂದು ; ನಿರಾಳವಾಗು : ನೆಂಟರಿಷ್ಟರ ಕಂಡು ನೆಮ್ಮದಿವಡೆದರು (ಇಂಚಾಪ. ೧೬-೭೦).

[ನೆಮ್ಮದಿ+ಪಡೆ$_1$]

**ನೆಮ್ಮದಿವೆರು** (ಕ್ರಿ). =ನೆಮ್ಮದಿವಡೆ : ನೆಮ್ಮದಿವೆತ್ತು ವಿಶ್ರಮಂದಳೆಗೆ ಮದೀಯ ಚಾಪಮಿದುವುಂ ಶಿಥಿಲೀಕೃತರಜ್ಜುಬಂಧನಂ (ಶಾಕುಂತ. ೨೩-೪೧). [ನೆಮ್ಮದಿ + ಪೆರು$_1$(<ಪೆಱು$_1$)]

**ನೆಮ್ಮಿ**, ನೇಹಿ (ನಾ). ೧. ಚಕ್ರದ ಸುತ್ತುಪಟ್ಟೆ,—ಅಂಚುಪಟ್ಟೆ : "ನೆಮ್ಮಿ—ನೇಮಿ = ಹಳಿ" (ತದ್ಭಕೋ. ೨೩). ೨. ಒಂದು ಬಗೆಯ ಮರ ; ಹುಲಿಗಿಲಮರ ; ಹೊಂಗೆಮರ : "ತಿನಿಶಃ, ಸ್ಯಂದನಃ, ನೇಮಿಃ, ರಥದ್ರುಃ, ಅತಿಮುಕ್ತಕಃ, ವಂಜುಳಃ, ಚಿತ್ರಕೃತ್–೭ ಹುಲಿಗೇ ಮರದ ಪೆಸರುಗಳು. ಹುಲಿಗಲಿ ನೆಮ್ಮಿ, ಹೊಂಗೆ" (ಸಿದ್ಧಾಂಶಿ. ೧೧೭).
**ನೇಹಿ :** ೨. "ನೇಹಿ (ನೆಮ್ಮಿ)— ನೇಮಿ = ಒಂದು ಮರ" (ತದ್ಭಕೋ. ೨೩) ; ಕಲ್‌ಮುತ್ತುಗ, ಕಲ್‌ಹೊನ್ನೆ, ಕರಿಹೊನ್ನೆ, ನೇಹಿ (ಮೈಡಿಗಿ. ೫೯-೧೧೭೫). [<ಸಂ. ನೇಮಿ]

**ನೆಮ್ಮಿಗೆ** 'ನೆಮರ್ಗೆ' ನೋ.

**ನೆಮ್ಮಿಸು** 'ನೆರ್ಮಿಸು' ನೋ.

**ನೆಮ್ಮು$_1$** 'ನೆಮರ್$_1$' ನೋ.

**ನೆಮ್ಮು$_2$** 'ನೆಮರ್$_2$' ನೋ.

**ನೆಮ್ಮುಗೆ** 'ನೆಮರ್ಗೆ' ನೋ.

**ನೆಮ್ಮುಗೆಗೊಳ್** (ಕ್ರಿ). ಶಾಂತಿ ಹೊಂದು ; ಸಮಾಧಾನವನ್ನು ಪಡೆ ; ನೆಮ್ಮದಿಗೊಳ್ಳು : ಮನಂ ನೆಮ್ಮುಗೆಗೊಂಡು ನೆಲೆನಿಲ್ವಿನಂ ತೀರ್ಥಾಟನಂಬೋಗಲೆಣಿಪೆಂ (ರಾಮಾಶ್ವ. ೭೫-೧೦).

[ನೆಮ್ಮುಗೆ(<ನೆಮರ್ಗೆ)+ಕೊಳ್$_1$]

**ನೆಮ್ಮುಗೆವಿಡಿ** (ಕ್ರಿ). ನಂಬಿಕೆಯಿಡು ; ವಿಶ್ವಾಸವಿಡು ; ನಂಬು ; ನೆಚ್ಚು : ಇದು ಕಾರಣ ನೆಮ್ಮುಗೆವಿಡಿದು ಮಾಡುವ ಭಕ್ತಂಗೆ ಇದೆ ಮಾಟವಯ್ಯ (ಆದವ. ೧೨-೨೨) ; ನೆಮ್ಮುಗೆವಿಡಿದು ನಿಮ್ಮ ಬಸವಣ್ಣನ ಪ್ರಸಾದವ ಕೊಂಡಿತ್ತು (ಮಡಿಮಾ. ೬೫-೯೫).

[ನೆಮ್ಮುಗೆ(<ನೆಮರ್ಗೆ) + ಪಿಡಿ$_1$]

**ನೆಯ್$_1$**, ನೆಯಿ$_1$, ನೆಯ್ಯು, ನೇ, ನೇಯ್, ನೇಯು (ಕ್ರಿ). ನೆಯಿದ, ನೆಯ್ದ, ನೇತ (ಭೂತಕೃ). ನೆಯ್ದು, ನೇದು

(ಭೂತನ್ಯೂ). ೧. ನೂಲನ್ನು ಮಗ್ಗದಲ್ಲಿ ಹಾಸುಹೊಕ್ಕಾಗಿ ಅಳವಡಿಸಿ ಬಟ್ಟೆಯನ್ನು ತಯಾರಿಸು : "ನೆಯ್—ವಸ್ತ್ರಕ್ರಿಯಾಯಾಂ, ಘೃತೇ ಚ" (ಶಮಧಾ); ಎಳದೆನಿಸಿರ್ದ ಪಾವಸೆಯ ತಣ್ಣೆಟಿಕಿಯಿಂದಮೆ ನೆಯ್ದ ಸೀರೆ (ಕಾದಂಬ. ೪೫೫) ; ದೇವರ ನಂದಾದೀವಿಗೆಗೆ ಬಿಟ್ಟ ಗಾಣ ವೆರಡು ಹಳವಿಗೆಯಂ ನೆಯ್ವ ಮನೆಯೊಂದು ಹೇಱೆನಲು ಎಲೆ ೧೦೦ (ಎಕ. XI, ಚಳ್ಳಕೆ. ೨೧–೩೭ ; 1087) ; ಈ ಸೀರೆಯ ನೆಯ್ದವ ನಾನೋ ನೀನೋ (ದೇದಾವ. ೭೦–೧೪೭) ; ಇಂಗದಿರಿಂದೆ ನೆಯ್ದುದೆನಲಪ್ಪ ದುಕೂಲದ ಕಮ್ಮನಪ್ಪ ಬೆಳ್ದಿಂಗಳೆನಲ್ಕೆ . . . ಮಲ್ಲಿಗೆಯ ಕಾಂತಿ ಮುಸುಂಕೆ (ವರ್ಧಪು. ೬–೪೯) ; ಅಂಬರದ ನಡುವೆ ಬಹುತರದಿಂ ನೆಯ್ದಂಬರದೊಳ್ ಕೆಯ್ಗೊಳಿಸಿದ ಚುಂಬಿತರತ್ನಂಗಳಂತೆ ತಾರಗೆ ಮೆಱೆಗುಂ (ಗಿರಿಕ. ೪–೯೧); ಈರಾಜೀವತ್ಸರಂಗಳು ಜಾಣ್ಮೆಯುಲಿ ನೆಯ್ದ ಮಡಗಿ ದುತ್ತಮವಸ್ತ್ರಮಂ ಪ್ರಿಯವಡರಿ ಬೇಡಿದಡೊಬ್ಬ ತಪಸಿಗೆ ಕೊಡನೆ ಜೇಡರ ದಾಸಂ (ಬಸವು. ೧೧–೩೬). ೨. ಹೆಣೆ ; ಜೋಡಿಸು : ಕುಸುಮಾಸ್ತ್ರ ವಸ್ತ್ರಂಗಳಂ ಮೆಯ್ಯೊಳ್ ನೆಯ್ದೋರಂತೋಱೆಯರ್ ತೊಡೆದಂಗಾನು ಲೇಪನದ ಸೌರಭ್ಯಮಂ ತೆರಳ್ಚಿ (ಕುಸುಮಾ. ೪–೨೯ ಪ). ೩. ರಚಿಸು ; ನಿರ್ಮಿಸು : ಬೈದರಿಂದ್ರನನಿಂದುಮೌಳಿಗೆ ನೆಯ್ದ ರಥ ನುಗ್ಗಾಯ್ತು ನಾಳವ ಕೊಯ್ದರೋ ಹುಗ್ಗಿಗರೆನುತೊಱಲಿದುದು ಸುರಸ್ತೋಮ (ಕುವ್ಯಾಕ. ೭–೨೫) ; ನಾನು ಬಾಹ್ಯವಿಷಯಪ್ರಪಂಚವನ್ನು ನೆಯ್ದು ಅಲ್ಲಿ ಸಿಕ್ಕು ಪಾರಾಗಲರಿಯದೆ ಒದ್ದಾಡಿಕೊಂಡಿರುವುದೇ ಸುಖ ಶಾಂತಿ ಎಂದಿರುವ ಮನ (ಮೋಳಿಮಾ. ೧೨೨ ಪ್ರಸ್ತಾವನೆ). ೪. ಹೊಂದಿಕೊಳ್ಳು ; ಹೆಣೆದುಕೊಳ್ಳು ; ದಟ್ಟವಾಗಿ ಬೆರೆ,— ಕೂಡು : ಕಿಱುಬಿದಿರುಗಳ ಕಂಟಕಿಗಳು ನೆಯ್ದುಕೊಂಡಿಱುಹೆಗೆ ದಾರಿಯ ಕೊಡದೆ . . . ಮುಸುಕಿ ಹವು (ಕಂಸವಿ. ೧೮–೪೫). **ನೆಯಿ**$_1$ : ೧. ನಾರು ನೂಲು ಕ್ರಿಮಿಜ ರೋಮಂಗಳಿಂದೆ ನೆಯಿದ[ಪಾಠಾಂ. ನೆಯ್ದಾ, ನೈದಾ] ಆ ಸೀರೆ ನಾಲ್ಕು ತೆಱನಕ್ಕು (ಪುಂಗರಾ. ೧೦೦–೨೭). **ನೆಯ್ಯು** : ೧. ನೆಯ್ಯುವವನಿಗೆ ಲಾಳಿ ನಗಕ್ಕೆ ಗಾಳಿ (ಗಾದೆ). **ನೇ** : ೧. ಒಂದೇ ಮಗ್ಗದಲಿ ನೇತ ಕವಿತೆ ಶಬಲಾಂಶುಕವನುಡುತ ಕವಿಗತಿಸುಖವ ನೀಡು (ಗಿಳಿವಿಂ. ೨೩–೬೯). ೪. ವೇದಪುರುಷನ ವಿಗ್ರಹದಲಿ ವಿಭೇದವಿಲ್ಲದೆ ಬಿಸಜಸಂಭವನಾದಿಯಾದ ಸಮಸ್ತದೇವರು ನೆಲೆವನೆಗಳಾಗಿ ನೇದುಕೊಂಡಿಹರು (ಕುವ್ಯಾಖು. ೪–೬೪) . ೫. ವ್ಯಾಪಿಸು ; ಹರಡು : ಮೆರೆವ ಹೊಂಬಿಸಿಲ್ಕೆಸಿಲಿಂ ತೊಡವುಗಳ ಸಮರೆ ತೆರೆದ ಹೊಲಮಂ ನೇದು ಮನೆಯೊಸಗೆಯಂತೆ ನರುಗಂಪು ತುಂಬಿ ತೆನೆ ಬಾಗೆ ಬಂದಂ ದೊಡ್ಡ ಮರಿಯಾನೆ ಬೆಳ್ಳಿಹೊರೆ ತರುವುದೆಂಬಂತೆ (ಕಾಲೂರ. ೭೨–೧೩೦). **ನೇಯ್** : ೧. ವಪತೇ = ನೇಯ್ದಪಂ (ಕಾಶಕ್ಕ. ೧೬೦); ಸಂತೆ ಹೊತ್ತಿಗೆ ಮೂರುಮೊಳ ನೇಯ್ದ ಹಾಗೆ (ಗಾದೆ). **ನೇಯು** : ೧. ಮುಂಬಯಿ . . . ಮೊದಲಾದ ಪಟ್ಟಣಗಳಲ್ಲಿ ಕೆಲವರು ಶ್ರೀಮಂತರಾದ ವರ್ತಕರು ಇಂಗ್ಲೆಂಡಿನಿಂದ ನೂಲುವ, ನೇಯುವ ಯಂತ್ರಗಳನ್ನು ತರಿಸಿ ಕಾರಖಾನೆಗಳನ್ನೂ ಹಾಕಿರುತ್ತಾರೆ (ಮುಂಬಯಿ. ೪–೨೯) ; ಹಬ್ಬಿರುವ ಹಳೆಮಾಟ ಹೊಸ ಹೊಸೆಯ ನೇಯುವುದು ಇಬ್ಬೆಳಕಿನಿಂ ತೊಳಗಿ ಪಡೆದುಡೆಯ ಗೆಲುವಂ (ಕಾಲೂರ. ೭೦–೧೨೫) ; ಅವಸರಕ್ಕೆ ಮೂರು ಮೊಳ ನೇಯಬೇಡ (ಗಾದೆ). ೩. ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ (ನಾದಲೀ. ೮೪–೯); ಈ ಪ್ರತಿಮೆಗಳನ್ನು ನೇಯುವಾಗ . . . ನಮ್ಮ ಮನಸ್ಸಿನಲ್ಲಿ ಹೇಗೆ ಅವು ಕೂಡುವುವೋ ಹಾಗೆಯೇ ಜೋಡಿಸುತ್ತಾನೆ (ಚಂಡಿಮ. ೩ ಮುನ್ನುಡಿ) ; ಪದಗಳನ್ನು ಗೀತರೂಪವಾಗಿ ನೇಯುವುದು, ಅವುಗಳ ಓಟವೇ ನೃತ್ಯದ ಸಂತೋಷ ಗಳನ್ನು ನೀಡುವಂತೆ ಮಾಡುವುದು ಇವು ಮುಖ್ಯ (ಭಾವಗೀ. ೪೯); ಇದೆಲ್ಲವನ್ನು ಸೂಕ್ಷ್ಮವಾಗಿ ಅವಲೋಕಿಸಿ, ತನಿಖಿಸಿ ನಾನು ನನ್ನ ಜಾಡನ್ನು ನಿಷಾಂತವಾಗಿ ನೇಯತೊಡಗಿದೆ (ದೀಪಹ. II, ೨೮).

[ದೇ.॥ ತಮಿ. ಮಲ. ಕೊಡ. ನೆಯ್ ; ತುಳು. ನೆಯ್, ನೆಯಿ ; ತೆಲು. ನೇಯು ; ಕುವಿ. ನೆಹ್ನಾಯ್]

**ನೆಯ್**$_2$, ನೆಯ್ಯಿ$_2$, ನೈ$_2$ (ನಾ)· ೧. ತುಪ್ಪ ; ಆಜ್ಯ : "ನೆಯ್—ವಸ್ತ್ರಕ್ರಿಯಾಯಾಂ, ಘೃತೇ ಚ" (ಶಮಧಾ); "ನೆಯ್ಯೆಂದಾಜ್ಯಂ" (ಕಶಸಾ. ೭–೧೩೭); ನಾಯ್ಗೆ ನೆಯ್ಯಕ್ಕುಗುಮೇ (ಸಮಪ. ೪–೩೯); ಗರಗರನಾದುದು ಕೂಟೀಕ ನೆಯ್ ಸುರಯಿಯ ಕಂಪಾಯ್ತು ಸಟ್ಟುಗಕ್ಕಂ ಮೊಸರ್ಗಂ ಪಿರಿದುಂ ಪೋರ್ಕುಳಿಯಾದುದು ಕರವಿನಿದಾಯ್ತು ಱಕೆ ಹೊದಕನಲ್ಲದೆ ಹೊರಕಂ (ಸೂಕ್ತಿ ಸು. ೧೧–೯೦); ಪಿರಿದುರಿದ ಕಿಚ್ಚಿಂಗೆ ನೆಯ್ಯನೆಱೆ ವಂದದಿಂ ಪರಿಪರಿಯ ನಿಷ್ಠುರದ ಮಾತುಗಳ ನುಡಿವ (ಜ್ಞಾನಚಂ. ೧–೯೬) ; ಕಿಚ್ಚು ನೀರಿಂದ ನಂದುವುದದು ನೆಯ್ಯಿಂದ ಹೆಚ್ಚುವುದು (ಭರತೇ. ೬೫–೪೦) ; ಘಟ್ಟಿಗೊಂಡ ತಿಳಿನೆಯ್ಯಂತೆ (ರಾಜಶೇ. ೩–೮೫). ೨. ಜೇನುತುಪ್ಪ : ಪುದಿದಡವಿಯ ಕಟ್ಟಿಲೆ ಸೂಲಧೊಳಿಕ್ಕಿದೊಡಿಱಿದು ಸೋರ್ವ ತಿಂಗಳ ಪೆಣದಂದದನಿರ್ದುರ್ದುರ್ವಿ ಕೆಱಗುರ್ಕಿದ ನೆಯ್ಯಿಂ ಜೇನ ಪುಟ್ಟ ಪೆರ್ಮರ ಗಾಡೊಳ್ (ಲೀಲಾವ. ೬–೨೬) ; ಜೇನ್‌ಹುಟ್ಟಯಿನೊಯ್ಯನೆ ನೆಯ್ಯೊಸ ರುವವೊಲ್ (ಉದ್ಭದೇ. ೬–೯). ೩. ಎಣ್ಣೆ ; ತೈಲ : ಸೌಂದರಗೆ ಸಮಂತು ನೆಯ್ಯನೊಸೆದೇಱಿಸಿದರ್ ಕುಲಕಾಮಿನೀಜನಂ (ಶಾಂತೀಶ್ವ. ೪–೨೨೦) ; 'ನೆಯ್' ಎಂಬುದಕ್ಕೆ 'ತೈಲ' ಎಂಬ ಅರ್ಥವಿತ್ತು (ಸಂಶೋಧ. ೮೮). **ನೆಯಿ**$_2$ : ೪. ಜಿಡ್ಡು : ನೆಯಿ ಹತ್ತದ ನಾಲಿಗೆಯಂತೆ ಹುಡಿಹತ್ತದ ಗಾಳಿಯಂತೆ . . . ಇರ್ದನಯ್ಯಾ (ವಚಸಂ. ೪೭೮–೧೪೬). **ನೈ**$_2$ : ೧. ಕೈ ಮುಟ್ಟದ ಗತಿಯಂತೆ ನೈ[ಪಾಠಾಂ. ನೆಯಿ] ಮುಟ್ಟದ ನಾಲಿಗೆಯಂತೆ ಪವನ ಮುಟ್ಟದ ಪರ್ಣದಂತೆ ಭಾವಭ್ರಮೆಯೊಳಗಿದ್ದೂ ಇಲ್ಲದ ಶರಣನ ಇರವು ಸದಾಶಿವಮೂರ್ತಿಲಿಂಗದ ಅಂಗವು ತಾನೆ (ಅಱಿಮಾ. ಕ. ೧೫೫–೬೧೧ ; ಗಣಭಾ. ೧೨೧–೪ ನೋ).

**ನೆಯ್ಯನಿಳುಹು**=**ನೆಯ್ಯಿಳಿಸು** : ಮಂಗಲವಾಗು ನೀನಜಿತಸೇನಂಗೆನು ತಂಗನೆಯರು ನೆಯ್ಯನಿಳುಹಿ ಉಂಗುರುಡುಕೆಗಳ ಮಾಡಿದರಭಿನವಮಂಗಲ ದೇವಿಗೆ ಮುದದಿ (ಚಂಪ್ರಸಾಂ. ೧೨–೧೪೦). **ನೆಯ್ಯನೇಱಿಸು** = **ನೆಯ್ಯೇಱಿಸು** : ಲಗ್ನಸುಮುಹೂರ್ತದಲ್ಲಿ ಲಲನೆಯರ್ ಗಿರಿಜೆಗಕ್ಷತೆ ಯಿಟ್ಟು ಶೋಭಾನದುಲುಹಿನಿಂ ನೆಯ್ಯನೆಱಿಸಲಿತ್ತ ಪರಶಿವಂ ಚಲಿಸಲನು ವಾದನು (ಲಶಚಿಂ. ೧೫–೧೯) ; ಲಲನೆ ನಿನ್ನೆರ್ದೆವಾಗಿದಲರೆಂಬಿವೆಂದಂಘ್ರಿ ಗಳಿಗೆಱಗಿಸಿ ಸಂತಗೆಯ್ವಂತೆ ಎಳೆಯಳಡಿಗೆ ನೆಯ್ಯನೇಱಿಸಿದರು ಚೆಲ್ವ ಕೆಳದಿಯರು . . . ಇನಿಯನ ಮನಕನುರಾಗವನೀವ ವನಿತೆಯ ಪೋಮರ್ಮಲಗಳೆಂದು ಘನಕುಚೆಯರು ಸರದಿಂ ಮುಟ್ಟ ತೋರ್ಪಂತೆ ವಿನಯದೆ ನೆಯ್ಯನೇಱಿಸಿದರು ಮುದದೆ ಮಸ್ತಕದೊಳು ನೆಯ್ಯನೇಱಿ ಸಿದರಬ್ಜವದನೆಗೆ ಕೆಳದಿಯರು (ತ್ರಿಭುತಿ. ೨೨–೩೧).

[ದೇ.॥ ತಮಿ. ಮಲ. ಕೊಡ. ಕೊಲಾ. ನಾಯ್ಕಿ. ಪರ್ಜಿ. ನೆಯ್ ; ತುಳು. ನೆಯಿ ; ತೆಲು. ನೆಯಿ, ನೆಯ್ಯಿ, ನೇಯಿ ; ಗದಬ. ನೆಯ್, ನೆಯ್ಯು ; ಗೊಂಡಿ. ನೀ ; ಕುಇ. ನೀಜು ; ಕುವಿ. ನೀಯು ; ಕುರುಖ್. ನೇತ ; ಕೋತ. ನಯ್ ; ತೊದ. ನಿಯ್]

**ನೆಯಕಾರ** 'ನೆಯ್ಕಾರ' ನೋ.

**ನೆಯಕಿ** 'ನೆಯ್ಗೆ' ನೋ.

**ನೆಯಿ**$_1$ 'ನೆಯ್$_1$' ನೋ.

**ನೆಯಿ**$_2$ 'ನೆಯ್$_2$' ನೋ.

**ನೆಯಿಕಾರ** 'ನೆಯ್ಕಾರ' ನೋ.

**ನೆಯಿಗೆ** 'ನೆಯ್ಗೆ' ನೋ.

**ನೆಯಿಂದ** 'ನೆಯ್$_1$' ಪರಾ.

**ನೆಯಿದಲೆ** 'ನೆಯ್ದಿಲ್' ನೋ.

**ನೆಯಿದಿಲು** 'ನೆಯ್ದಿಲ್' ನೋ.

**ನೆಯಿದೊಡೆ** (ಕ್ರಿ). ಎಣ್ಣೆ ಹಚ್ಚು; ತೈಲವನ್ನು ಲೇಪಿಸು : ನೆರೆದು ಬಂದಾ ಗೋಪಿಯರು ತಾಂ ಸ್ಮರನ ತಂದೆಯನೆತ್ತಿಕೊಳುವತಿಹರುಷದಲಿ ನೆಯಿದೊಡೆವ ಮೈದೊಳೆದ್ಯೆದೆ ತೂಪಿಜುವ ಮುದ್ದಿಪ ಪಾಡಿ ತೂಗಿಪ ನಲಿವಿನಿಂದಿಹರು (ಸಾಳ್ವಭಾ. ೨೧-೨೬). [ನೆಯಿ$_2$(< ನೆಯ್$_2$)+ತೊಡೆ$_1$]

**ನೆಯ್ಕಾರ**, ನೆಇಗಾರ, ನೆಯಕಾರ, ನೆಯಿಕಾರ, ನೇಕಾರ, ನೇಗಾರ (ನಾ). ನೇಯ್ಗೆ ಕೆಲಸ ಮಾಡುವವನು ; ನೇಯುವವನು : 'ನೆಯ್ಕಾರಿಕೆ' ಪರಾ. **ನೆಇಗಾರ :** ಸುಗುಟೂರ ××× ೦ಕ ನಾಡಿನ ಹವಳದ ನೆಇಗಾರ ಸೆಟಿಗಳಿಗೆ ಹಾಕಿಸ್ತ ಶಿಲಾಶಾಸನ (ಎಕ. X (S), ಕೋಲಾರ. ೨೭೮-೪ ; 1573). **ನೆಯಕಾರ :** ಅವರ ಪರಿಚಯವನ್ನು ನೆಯಕಾರರಿಗೆ ಮಾಡಿಕೊಟ್ಟರು (ಇಂಗ್ಲಇ. ೧೧). **ನೆಯಿಕಾರ :** "ಕುವಿಂದ—ಜೇಡ, ನೆಯಿಕಾರ" (ಗಂಗಾಪು. ೯೧). **ನೇಕಾರ :** "ಜಾಡ, ನೇಕಾರ, ಹಟಗಾರ, ದೇವಾಂಗ" (ಕಂನುಹು. ೮೪) ; ಶಿಕ್ಷಣ ಪಡೆದ ನೇಕಾರರು . . . ಪರಿಶ್ರಮ ಪಡೆದಿದ್ದರು (ಕ್ರಿಯಾಶಿ. ೯೪) ; ಬಾಳುವೆ ನಡೆಯಬೇಕಾದರೆ ಕುಂಬಾರ, ಹಡಪಿಗ, ಮಡಿವಾಳ, ನೇಕಾರ ಮೊದಲಾದವರೂ ಬೇಕು (ಕನ್ನಜಾ. ೪೪). **ನೇಗಾರ :** ನೇಗಾರ, ಚಮ್ಮಾರ, ಬಡಗಿ, ನಾಯಿಂದ ಇವರುಗಳು ತಮ್ಮ ತಮ್ಮ ಕಸುಬು ಗಳಿಂದಲೇ ಜೀವನಾಧಾರಕ್ಕೆ ಬೇಕಾಗುವಷ್ಟು ದವಸಧಾನ್ಯ ಪಡೆಯು ತ್ತಿದ್ದರು (ಕಳಹು. ೯೩). [ನೆಯ್$_1$ + -ಕಾರ(< -ಕಾಱ)]

**ನೆಯ್ಕಾರಿಕೆ** (ನಾ). ನೇಯುವ ಕೆಲಸ ; ನೇಯ್ಗೆ : ಪ್ರಾಚೀನಕಾಲದಲ್ಲಿ ನೆಯ್ಕಾರಿಕೆಯ ಸಲುವಾಗಿ ಪ್ರಸಿದ್ಧವಾದ ಸ್ಥಾನವೆಂದರೆ ಪೈಠಣ (ಕರ್ಣಾಪೂ. ೭೫). [ನೆಯ್ಕಾರ+ -ಇಕೆ]

**ನೆಯ್ಕುಳು** (ನಾ). ತುಪ್ಪದೊಡನೆ ಬೆರಸಿದ ಅನ್ನ; ತುಪ್ಪದ ಅನ್ನ: ನೆಯ್‌ಕೂಳು, ಕಡುಂಬುಟ್ಟು ಮತ್ತು ಪಾಯಸಗಳನ್ನು ಮಾಡಿದ್ದರು (ನಡೆದಾ. II, ೧೧೩೨) ; ಕಡುಂಬುಟ್ಟು ಕೋಳಿಕರಿ ನೆಯ್‌ಕೂಳುಗಳ ಬಿದರ್ೂಟದಿಂದ ಅವನು ಬಾಯ ಸವಿಯನ್ನು ತಣಿಸಿಕೊಂಡ (ಹುಲಿಹಾ. ೧೪೬). [ನೆಯ್$_2$ + ಕೂಳು$_2$(< ಕೂೞ್$_1$)]

**ನೆಯ್ಗಡಲೆ** (ನಾ). ಎಣ್ಣೆಯಿರುವ ಕಡಲೆ ; ನೆಲಗಡಲೆ ; ಕಡಲೆ ಕಾಯಿ; ಸೇಂಗಾ: ನೆಯ್ಗಡಲೆಯಂ ಮೆಲುತುಂ (ಕುಸುಮಾ.೧೧-೧೫೯). [ನೆಯ್$_2$ + ಕಡಲೆ]

**ನೆಯ್ಗೆ**, ನೆಯಕಿ, ನೆಯಿಗೆ, ನೇಗೆ, ನೇಯಿಗೆ (ನಾ). **೧.** ಬಟ್ಟೆ ನೇಯುವುದು; ನೇಕಾರನ ಕೆಲಸ: "ನೆಯ್ಗೆ ಮಧ್ಯನಾರಿಯೊಳಗೂಕೆ ಶಬ್ದಂ" (ಶಬ್ದಮಂ. ೭೯) ; ಊತ, ಸ್ಯೂತ = ಇವು ನೂಲ ನೆಯ್ಗೆ ಯಲ್ಲಿಯೂ ಹೊಲಿಗೆಯಲ್ಲಿಯೂ ವರ್ತಿಸುಗು (ನಾಚಿರಾ. ೬). **೨.** ಹೂಟೆ; ಸಂಚು ; ತಂತ್ರ : ದೈವದೂರರು ಧರ್ಮಹೀನರು ನೆಯ್ವ ನೆಯ್ಗೆಗಳೆನುತ ವಿಂಗೆ ಬಿಸುಸುಯ್ವುತಿರ್ದರು ಕರ್ಣ ಕೃಪ ಗುರುನಂದನಾದಿಗಳು (ಕುಪ್ಯಾದ್ರೋ. ೧೪-೪೬). **೩.** ಎಣಿಕೆ ; ವಿಚಾರ ; ಆಲೋಚನೆ : ಬಿಡಿಸಿದಧರದ್ವಯ ವಿಷಾದದ ತಡಿಯ ಚಿತ್ತದ ನೆಯ್ಗೆ ಬೇಱಕೊಂದೆಡೆ ಯಲಿದ್ದುದು (ಕುಪ್ಯಾಅ. ೨೧-೧೩). **ನೆಯಕಿ : ೧.** ವಸ್ತ್ರವು . . . ಇಂಥಾ ತರದ ದಪ್ಪ ನೆಯಕಿ ಉಳ್ಳದ್ದಿರಬೇಕು (ಮುಂಬಪ್ಯಾ. ೪೦). **ನೆಯಿಗೆ :** (೬). **ನೇಗೆ : ೧.** ಋಗ್ವೇದದಲ್ಲಿ ನೇಗೆಯ ಕಲೆಯ ವಿಷಯ ವಾಗಿ ಬಹು ಸೊಗಸಾದ ದೃಷ್ಟಾಂತಗಳು ಕಂಡುಬರುತ್ತವೆ (ಬಾಡಿಶಾ.೧೦). **ನೇಯಿಗೆ : ೧.** ನೇಯಿಗೇ ಕೆಲಸವು ಎಲ್ಲಾ ಕಡೆಗಳಲ್ಲಿಯೂ ನಡೆಯುತ್ತದೆ (ಭೂಗೋಳ. ೩೯) ; ನೇಯಿಗೆಯಾದರೂ ನಯವಿದ್ದರೆ ನಾಣ್ಯ ಸಿಕ್ಕೀತು (ಗಾದೆ).

**ನೆಯಿಗೆಯವ, ನೇಯಿಗೆಯವ** = ನೇಯುವ ಕೆಲಸ ಮಾಡುವ ವನು ; ನೇಕಾರ : ಇನ್ನೊಂದು ಸಣ್ಣ ಮನೆಯಲ್ಲಿ ಮೊದಲಿನಿಂದಲೂ ಯಾರೋ ಒಬ್ಬ ನೆಯಿಗೆಯವರ ಮಗ್ಗ ನಡೆದುಕೊಂಡು ಬಂದಿತ್ತು (ಸಾಹೇಬ್. ೫) ; "ತಂತುವಾಯಃ, ಕುವಿಂದಃ—೨ ನೇಯಿಗೆಯವನ ಹೆಸರು" (ಸಿದ್ಧಾಂತಿ. ೩೧೦) ; ನೇಯಿಗೆಯವನಿಗೆ ಯಾಕೆ ಕೋತೀಮರಿ ? (ಗಾದೆ). **ನೆಯಿಗೆ ಹುಳ** = ಜೇಡರ ಹುಳು; ಊರ್ಣನಾಭ : "ಊತಾ, ತಂತುವಾಯಃ, ಊರ್ಣನಾಭಃ, ಮರ್ಕಟಕಃ, ಜಾಡಹುಳು, ಸಾಲೇಹುಳ . . . ನೆಯಿಗೇಹುಳ" (ಸಿದ್ಧಾಂತಿ.೧೫೭). [ನೆಯ್$_1$ + -ಗೆ]

**ನೆಯ್ಗಕಾಱ** (ನಾ). = ನೆಯ್ಕಾರ : ತುಹಿನಕರಂ ಮಿಥುನದೊಳಿರೆ ಮಹಿಜಾದಿಗಳೀಕ್ಷಿಪಂದು ಲೋಹಾಜೀವ್ಯಂ ಮಹಿನಾಥಂ ವಿಬುಧಂ [ಭಯ]ರಹಿತಮನಂ ನೆಯ್ಗೆಕಾಱನಧನನೆನಿಕ್ಕುಂ (ಜಾತತಿ. ೨೦-೩). [ನೆಯ್ಗೆ + -ಕಾಱ]

**ನೆಯ್ಗೊಳ್** (ಕ್ರಿ). ಹೆಣೆದುಕೊಳ್ಳು ; ಒಂದಕ್ಕೊಂದು ಸೇರಿ ಕೊಳ್ಳು : ಗುಲ್ಮಮುಲಪಮಾ ವೀರುಧಂ ಸ್ತಂಬಮೆನೆ ನೆಯ್ಗೆಗೊಂಡಿರ್ದ ಹೊದಱನಿಸಿಕ್ಕು (ಮಂಗರಾ. ೩೩-೬). [ನೆಯ್ಗೆ + ಕೊಳ್$_1$]

**ನೆಯ್ದ** 'ನೆಯ್$_1$' ಪರಾ.

**ನೆಯ್ದಿಲ್**, ನೆಯಿದಲೆ, ನೆಯಿದಿಲು, ನೆಯ್ದಿಲು, ನೆಯ್ದಲೆ, ನೈದಿಲ್, ನೈದಿಲು, ನೈದಿಲೆ (ನಾ). ನೀರಿನಲ್ಲಿ ಬೆಳೆಯುವ ಒಂದು ಬಗೆಯ ಹೂವು ; ಕುಮುದ; ಉತ್ಪಲ : "ಇಂದೀವರಂ, ಉತ್ಪಲಂ ಈ ೩ ನೆಯ್ದಿಲ್" (ಹಲಾಯು. ೧೧೨-೫೯); ನೆಯ್ದಲ ಕಾವಂ ತುದಿಗೆಯ್ದೆ ಸೀಳ್ವ ತೆಱದಿಂ ಸೀಳ್ದಂ ಜರಾಸಂಧನಂ (ಪಂಪಭಾ. ೬-೨೭); ನೆಯ್ದಿಲೊಳ್ಗು ಗುಳಿನ ಮಾಲೆಯೆಂದಸಿಯನಪ್ಪುವ . . . ಎಗ್ಗನಂತೆ (ಕಾದಂಪೂ. ೮೪೭) ; ದಿಟ್ಟೆ ನೆಯ್ದಿಲ ಪೊಸವಾಸಿಗದೊಳೆಣೆಯೆನೆ (ಶಾಂತಿಪು. ೫-೧೫೮) ; ತಿಳಿಗೊಳಂ ಪೆಣ್ಣಂಚೆಯಿಂ ಬೆಂಚೆ ನೆಯ್ದಿಲ ಪೂವಿಂ . . . ಒಪ್ಪೆ (ಮಲ್ಲಿಪು. ೨-೧೫) ; ಗಿರಿಜೆ ಶಶಿವದನೆ ಕೊಳನಂ ಭರದಿಂ ಪುಗೆ ನೆಯ್ದಿಲೆಯ್ದಿದುವು ವಿಕಸನಮಂ (ಗಿರಿಕ. ೪-೨೧). **ನೆಯಿದಲೆ :** ಪದುಮ ಪಂಜಳ (ಪಜ್ಜಳ)ವರ್ಣ ನೆಯಿದಲೆ (ನೈದಿಲೆ)ಯಾಗಿರ್ದಳವ್ವೆ (ಸರ್ವಪ.೬೯-೩೭೪). **ನೆಯಿದಿಲು:** ತೊಳಪ ಕಂಬೆಳಗಿನಿಂದ ನೆಯಿದಿಲ[ಪಾಠಾಂ. ನೈದಿಲ] ಬಳಗ ವನು ಸಾಲಿಡುತ (ಸಾಳ್ವಭಾ. ೩೨-೧೬). **ನೆಯ್ದಿಲು :** "ಇಂದೀವರಂ— ನೆಯ್ದಿಲು, ಶುಂಠಿ, ಕರಿಯ ಕೋಷ್ಠ"(ಓಷಧಿ.೧೪); "ಚಂದ್ರಕಾಂಬುಜಂ— ನೆಯ್ದಿಲು, ಬಿಳಿಯ ನೆಯ್ದಿಲು" (ಓಷಧಿ. ೫೫). **ನೆಯ್ದಲೆ :** "ಉತ್ಪಲಂ ಇಂದೀವರಾಖ್ಯಮೆನೆ ನೆಯ್ದ[ಪಾಠಾಂ. ನೈದ]ಲೆಗೆ ನಾಮ ಮಕ್ಕುಂ" (ಮಂಗರಾ. ೧೨೪-೧೬) ; ಪೋಗಲಾಱದೆ ನೆಯ್ದಲೆ ಮುಂದೆ ಮುಚ್ಚಿತು ಮೊಗಾಯ್ತು ಜೊನ್ನವಕ್ಕಿಗಳು (ಮೋಹತ. ೧೮-೧೦೬) ; ತಳಿರಡಿಗೆ . . . ನೆಯ್ದ[ಪಾಠಾಂ. ನೈದ]ಲೆ ಕಣ್ಗೆ ಬಾಳೆ ತೊಡೆಗೆ . . . ಗಿಳಿಗಳಿಂಚರಕೆ ಸೋಲ್ದವಯವಂಗಳೊಳ್ನೆಲಸಿದುವು (ಜೈಮಿಭಾ. ೩೦-೪) ; ನೆಯ್ದ[ಪಾಠಾಂ. ನೈದ]ಲೆ ಪಗಲ್ಮುಗಿಯದು ಬೆಳ್ದಿಂಗಳೆಂದು ಭಾವಿಸಿ ಹಿಮಮಂ (ರಾಜಶೇ. ೯-೯). **ನೈದಿಲ್ :** "ಉತ್ಪಲಃ—ಕೋಷ್ಠ, ಲಾಮಂಚ, ನೈದಿಲ್, ಸುಗಂಧಿ, ಮಾಗಳಿ" (ಓಷಧಿ. ೧೫) ; ಕಣ್ಗಳೋ ದೊರೆವೆತ್ತೊಪ್ಪುವ ನೈದಿಲೋ (ಕಬ್ಬಿಕಾ. ೩೭೯) ; ನೈದಿಲ ತಾವರೆಯ ಮಿತ್ರರಿಗೆ ಮಂಡೆಯೊಳಿಟ್ಟೆನಂಜುಳಿಯ (ಕುಪ್ಯಾಸ. ೧೫-೨೮); ಪದ್ಮಮಂ ವಿಂಗೆ ತೋಱದಲ್ಲಿ ಲಕ್ಷ್ಮಿ ನಿಲೆ ನೈದಿಲೊಳ್ (ರಾಜಶೇ. ೯-೪). **ನೈದಿಲು :** "ಜಾತ್ಯುತ್ಪಲಂ – ನೈದಿಲು" (ಓಷಧಿ. ೬೨) ; ನಳಿನದಳದೊಳಗಡಗಿದವು ನೈದಿಲುಗಳಲಿ ತನಿಮೊರೆವ ತುಂಬಿಯ ಕಳರವಕೆ ಬೆಚ್ಚಿದುವು. . .ಜಕ್ಕವಕ್ಕಿ ಗಳು (ಕುಪ್ಯಾದ್ರೋ. ೧೭-೧೫) ; ಸೀದವಾ ಮಗ್ಗುಲಿನ ಮೈಯಲಿ ನೈದಿಲಿನ ತಾವರೆಯ ಕದಳಿಯ ನಾದಿಕೆಯ ನಾಳಂಗಳುರಿನೊರೆಗುದಿಯ

ಸಬುದದಲಿ (ತೊರರಾ. ೩-೧೧-೪೭) ; ಚೆಂಗಣೆಗಿಲು ನೈದಿಲು ಹೊಂದಾವರೆ ಪೊಂಗಿದ ಸರಸಿಗಳಿಂದ ಮಂಗಳಮಯವೆನಿಪುದ್ಯಾನ ಕಣ್ಗೆ ಬೆಡಂಗಾಗಿ ರಾಜಿಸುತಿಹುದು (ಕಂನವಿ. ೨-೪೯). **ನೈದಿಲೆ :** ಬಲು ಬಿಸಿಲೊಳುಱಿನೊಂದ ನೈದಿಲೆಗಳಿಗೆ ಚಂದ್ರಿಕೆ . . . ಭವಗೋಟಲೆಯು ಜೀವಿಗೆ ಸುಪ್ರಬೋಧದ ಸುಳುವಿನಂತಿರೆ ಪಾರ್ಥ ಮೈದೋಱಿದನು ನಿಜಬಲಕೆ (ಕುವ್ಯಾದ್ರೋ. ೩-೪೬).

**ನೆಯ್ದಿಲ ಗಡ್ಡೆ, ನೈದಿಲ ಗೆಡ್ಡೆ** = ನೈದಿಲೆ ಬೇರಿನಲ್ಲಿರುವ ಗಡ್ಡೆ : "ಶಾಲೂಕ–ನೆಯ್ದಿಲ ಗಡ್ಡೆ" (ನಾಚಿರಾ. ೬) ; "ಸೋತ್ಪಲ = ನೈದಿಲ ಗೆಡ್ಡೆ" (ಬಾಹಟೀ. ೨-೨-೬೦ ಪ). **ನೆಯ್ದಿಲಗಣ್ಣಯ್ಯ (?)** = ಕೃಷ್ಣ : ಉಱಿಮೆಱಿವ ಪೆಣ್ಮಣಿಕಗಡಣವನಿತ್ತ ನೆಯ್ದಿಲಗಣ್ಣಯ್ಯ ರತಿಮನೋಭವಗೆ (ಮೋಹತ. ೧೫-೨೧). **ನೆಯ್ದಿಲ ತಕ್ಕ** = ನೈದಿಲೆ ಹೂವಿನ ಗೆಳೆಯ,—ಪ್ರಿಯ ; ಚಂದ್ರ : ನೆಯ್ದಿಲ ತಕ್ಕನುದಯಗಿರಿಶಿಖರಮನೇಱಲ್ ಪಿರಿದುಂ ಸೊಗಸಿದುದು (ಜಯಕಾ. ೧೧-೫೯). **ನೆಯ್ದಿಲ ನನೆಗಾಱ** = ನೆಯ್ದಿಲ ತಕ್ಕ : ಶರಧಿಯು ಬೆಳೆಗಾಱ ನೆಯ್ದಿಲ ನನೆಗಾಱ ವಿರಹದುಬ್ಬಟೆಗಾಱ . . . ಚಂದಿರನುದಿಸಿದ (ಪರ್ಣಚ. ೮-೩). **ನೆಯ್ದಿಲ ನಲ್ಲ** = ನೆಯ್ದಿಲತಕ್ಕ : "ನೆಯ್ದಿಲ ನಲ್ಲಂ . . . ಇರುಳೆಱೆಯನಪ್ಪಂ" (ಚತುನಿ. ೨೧೧). 'ನೆಯ್ದಿಲ್ನಲ್ಲ' ಪರಾ. **ನೆಯ್ದಿಲ ಬಣ್ಣ** = ನೈದಿಲೆ ಹೂವಿನ ಬಣ್ಣ ; ಕಪ್ಪು : "ಶ್ಯೇನಿಯೆಂಬುದು ನೆಯ್ದಿಲ ಬಣ್ಣಂ [ಪಾಠಾಂ. ನೈದಲ ವರ್ಣ]" (ಹಲಾಯು. ೧೨೨-೫೩). **ನೆಯ್ದಿಲ ಮಯ್ದುನ** = ನೆಯ್ದಿಲ ತಕ್ಕ : (೬). **ನೈದಿಲರಸ** = ನೈದಿಲೆಯ ಒಡೆಯ ; ಚಂದ್ರ : ಕರಯುಗಳತಳದಲಿ ಪಾದದಲಿ ಪದ್ಮಂಗಳೆಡದಲಿ ಮತ್ತೆ ನೊಸಲಿನಲಿ ನೈದಿಲರಸನ ಚಿಹ್ನವಿವು ತಾನೈದಿಹವು (ತೊರರಾ. ೫-೩-೯೦). **ನೈದಿಲ ಸಖ** = ನೆಯ್ದಿಲ ತಕ್ಕ : ವಿರಹಿಗಳಯ್ಯ ನೈದಿಲ ಸಖನುಡುರಾಜ ಸರಸಿಜರಿಪು ಮೃಗಧರನೆ ತರುಣಿ ರೋಹಿಣಿಯ ಚಂದ್ರನೆ ನಲ್ಲ ಬಾ ಎಂದು ಕರೆದು ಚಕೋರನುಲಿದವು (ನಿಜಸಾಂ. ೩-೬).

[ದೇ.॥ ತಮಿ. ಮಲ. ನೆಯ್ತಲ್ ; ತುಳು. ನೈದಿಲೆ]

**ನೆಯ್ದಿಲು** 'ನೆಯ್ದಿಲ್' ನೋ.

**ನೆಯ್ದಿಲೆ** 'ನೆಯ್ದಿಲ್' ನೋ.

**ನೆಯ್ದಿಲೆಗೋಲ್, ನೈದಿಲೆಗೋಲ್** (ನಾ). ನೈದಿಲೆಯ ಹೂವಿನ ಬಾಣ ; ಮನ್ಮಥನ ಬಾಣ : ಗಂಡಲರ್ಮೆಕ್ಕೆ ತಿಱುವಾಂತ ಕುಸುಮ ಕೋದಂಡವನೆಡಗೆಯ್ಯೊಳಾಂತು ಚಂಡವಿಕ್ರಮ ನೆಯ್ದಿಲೆಗೋಲ ತಿರುಹುತ ಕಂಡನು ಕುಳಿತಿರ್ದ ಶಿವನ (ಮೋಹತ. ೭-೫೨). **ನೈದಿಲೆಗೋಲ್ :** ಗೊಲೆಗೊಳಿಸಿದ ಪುಷ್ಪಚಾಪ ಸರೋಜ ನೈದಿಲೆಗೋಲ್ಗಳ ಕುಸುಕಿಱಿದು (ಮೋಹತ. ೭-೨೩). [ನೆಯ್ದಿಲೆ (<ನೆಯ್ದಿಲ್)+ಕೋಲ್$_1$]

**ನೆಯ್ದಿಲ್ಗೆಳೆಯ** (ನಾ). ನೈದಿಲೆ ಹೂವಿನ ಗೆಳೆಯ ; ಚಂದ್ರ : "ಜೊನ್ನೊಡಲಂ, ಸವಿಗಡಲಣುಗಂ . . . ನೆಯ್ದಿಲ್ಗೆಳೆಯಂ . . . ತಿಂಗಳ್ – ಈ ೨೦ ಚಂದ್ರನ ಪೆಸರ್" (ಕಶಸಾ. ೪೮-೨೩) ; "ನೆಯ್ದಿಲ್ಗೆಳೆಯಂ ವಿಧು ಬೆಳ್ಗದಿರಂ" (ಕರ್ಣಾನಿ. ೩೯) ; "ಎರಳೆಗುಱುಪಂ ಚಂದ ನೆಯ್ದಿ[ಪಾಠಾಂ.ನೈದಿ]ಲ್ಗೆಳೆಯಂ . . . ಬಿದುವೆನಲ್ ಚಂದ್ರನಾಮವು" (ಶಬ್ದಮಂ. ೧೭). [ನೆಯ್ದಿಲ್+ಕೆಳೆಯ]

**ನೆಯ್ದಿಲ್ಗೆಱೆ** (ನಾ). ಒಂದು ಕೆರೆಯ ಹೆಸರು : ತೆಙ್ಕಣ್ಣಾ ಸೀಮೆ ನೆಯ್ದಿಲ್ಗೆಱೆಯಾ ಏಱಿ (ಎಇ. XXI, ೨೯-೧೩ ; ಸು. 8ನೆಯ ಶತ). [ನೆಯ್ದಿಲ್+ಕೆಱೆ]

**ನೆಯ್ದಿಲ್ಗೊಳ, ನೈದಿಲ್ಗೊಳ** (ನಾ). ನೈದಿಲೆ ಹೂವುಗಳಿಂದ ತುಂಬಿದ ಕೊಳ ; ಕುಮುದಸರೋವರ : "ಕುಮುದ್ವತೀ, ಕುಮುದಿನೀ, ಕೈರವಣೀ—ಈ ೩ ನೆಯ್ದಿ[ಪಾಠಾಂ.ಯ್ದ]ಲ್ಗೊಳಂ" (ಹಲಾಯು. ೧೧೩-೬೧) ; ನೆಯ್ದಿಲ್ಗೊಳನಲರ್ದತ್ತೆನೆ ಕಣ್ಗಳ ಬಳಗಮಾಗಳಿಂದ್ರಂ ಬಂದಂ (ಪಂಪಭಾ. ೧-೧೩೮) ; ವಿರಹವಿಹ್ವಲತೆಯಿಂ . . . ನೆಯ್ದಿಲ್ಗೊಳಂಗಳೊಳೋಲಾಡಿಯುಂ (ಕಾದಂಪೂ. ೮೯೪) ; ಶೀತಾಂಶು ತೀವಿದ ನೆಯ್ದಿಲ್ಗೊಳನಲ್ಲದಿಲ್ಲೆನೆ ಬನಂ ಚಿತ್ತೋತ್ಸವಾಲಂಬನಂ (ಮಲ್ಲಿಪು. ೨-೭೭) ; ನೆಯ್ದಿಲ್ಗೊಳಂಗಳೆಡೆಯೊಳ್ ಕಾಯ್ದೋವದೆ ಪೋರ್ವ ಪಲವು ಸೀರ್ವಕ್ಕಿಗಳಿಂದೆಯ್ದಿಱ್ಪವ ಸೀರ್ಪನಿಯೊಳ್ ತೊಯ್ದಯ್ಯನೆ ಗಾಳಿ ಕೂಡೆ ತೀಡುತ್ತಿರ್ಕುಂ (ಕಬ್ಬಿಕಾ. ೨೪). **ನೈದಿಲ್ಗೊಳ :** "ಕೈರವಣಿ ಕುಮುದಿನಿಯೆನಲ್ಕೆ ನೈದಿಲ್ಗೊಳಂ" (ಮಂಗರಾ. ೧೨೪-೧೭).

[ನೆಯ್ದಿಲ್ + ಕೊಳ$_2$]

**ನೆಯ್ದಿಲ್ನಲ್ಲ** (ನಾ). "ಚಂದ್ರ" (ಚತುನಿ. ೬. I, ೧೦೭).

[ನೆಯ್ದಿಲ್+ನಲ್ಲ$_1$]

**ನೆಯ್ದಿಲ್ಪಗೆಯ** 'ನೆಯ್ದಿಲ್ವಗೆಯ' ನೋ.

**ನೆಯ್ದಿಲ್ವಗೆಯ, ನೆಯ್ದಿಲ್ಪಗೆಯ** (ನಾ). ನೈದಿಲೆ ಹೂವಿನ ಶತ್ರು ; "ಸೂರ್ಯ, ರವಿ" (ಪ್ರಭಣ್ಣ). **ನೆಯ್ದಿಲ್ಪಗೆಯ :** "ನೆಯ್ದಿಲ್ಪಗೆಯಂ ರವಿ ಕೆಂಗದಿರಂ" (ಕರ್ಣಾನಿ. ೩೯).

[ನೆಯ್ದಿಲ್+ಪಗೆ$_2$+–ಅ$_7$]

**ನೆಯ್ದು** 'ನೆಯ್$_1$' ಪರಾ.

**ನೆಯ್ಯಿಳಿಸು** (ಕ್ರಿ). ಮದುವೆಯ ಶಾಸ್ತ್ರಗಳೆಲ್ಲ ಮುಗಿದ ನಂತರ ಮುತ್ತೈದೆಯರು ಹಾಲು ತುಪ್ಪದಲ್ಲಿ ಅದ್ದಿದ ಅಂಬಿನ ಕೋಲನ್ನು ಮದುಮಗಳಿಗೆ ತಲೆಯಿಂದ ಆರಂಭಿಸಿ ಕಾಲಿನ ವರೆಗೂ ಮುಟ್ಟಿಸುವ (ಸಂಪ್ರದಾಯದ) ಶಾಸ್ತ್ರವನ್ನು ಮಾಡು : ಒಂದಿಬ್ಬರು ಮುತ್ತೈದೆಯರು ಬೇಗನೆ ಬನ್ನಿ. ನೆಯ್ಯಿಳಿಸೋ ಶಾಸ್ತ್ರವನ್ನು ಮುಗಿಸೋಣ (ರೂಢಿ). 'ನೆಯ್ಯೇಱಿಸು' ಪರಾ.

[ನೆಯ್$_2$+ಇಳಿಸು(<ಇೞಿಸು)]

**ನೆಯ್ಯು** 'ನೆಯ್$_1$' ನೋ.

**ನೆಯ್ಯೆಱೆ** (ಕ್ರಿ). ತುಪ್ಪವನ್ನು ಸುರಿ,—ಎರೆ ; ಆಜ್ಯವನ್ನು ಹೊಯ್ಯು : ಉರಿಗಿಚ್ಚಿಗೆ ನೆಯ್ಯೆಱೆಯೆ ಕೆದರ್ವಂತೆ ಕೋಪಂ ಕೆದಱಿ (ಅದ್ಭುತ. ೧೫-೫). [ನೆಯ್$_2$+ಎಱೆ$_1$]

**ನೆಯ್ಯೇಱಿಸು, ನೈಯೇಱಿಸು** (ಕ್ರಿ). ಮದುವೆಯ ಅಂಗವಾಗಿ ಮುತ್ತೈದೆಯರು ಹಾಲು ತುಪ್ಪದಲ್ಲಿ ಅದ್ದಿದ ಅಂಬಿನ ಕೋಲನ್ನು ಮದುಮಗಳಿಗೆ ಕಾಲಿನಿಂದ ಆರಂಭಿಸಿ ನೆತ್ತಿಯ ವರೆಗೂ ಮುಟ್ಟಿಸುವ (ಸಂಪ್ರದಾಯದ) ಶಾಸ್ತ್ರವನ್ನು ಮಾಡು : ಅಲರಂಬಿಂ ತಲೆಯೊಳ್ ಕೆಯ್ಯಿಡುವಂತೆವೊಲಲರಂಬಿಂದಬ್ಜಮುಖಿಗೆ ನೆಯ್ಯೇಱಿಸಿದರ್ (ಲೀಲಾವ. ೧೨-೫೧) ; ಸುಮನಃಶರವಿವು ಕನ್ಯಾಭಿಮಾನದಾಜ್ಞೆಗೆ ಪಳಂಚಲಣ್ಮದೆ ಸುತ್ತುಂ ಭ್ರಮಿಯಿಸಿದವುವೆನೆ ಸತಿಯರ್ ಕುಮಾರಿಗರ್ಚಿಸಿದ ಶರದ ನೆಯ್ಯೇಱಿಸಿದರ್ (ಪರ್ಣಪು. ೭-೫) ; ಚಂದನ ರಸಂ ತೀವಿರ್ದ ನಳಿನಪತ್ರದ ಘಳಿಗೆವಟ್ಟಲ ಮುಂದಿರ್ದ ವಸಂತನಂ ನೋಡುತುಂ ನನೆಯಂಬಿಂ ನೆಯ್ಯೇ [ಪಾಠಾಂ. ನೆಯಿಯೇ, ನೆಯ್ಯೇ, ನೇ] ಱಿಸುವ ರತಿಗೆ ಮುಯ್ಯಾನುತುಂ (ನಂಬಿರ. ೧೦-೬೯) ; ಕನ್ನೆಯಂ ಪೆರ್ಮಂಡಿರ್ಬಂದು ನೆಯ್ಯೇಱಿಸಿ ಸೇಸೆಯಿಟ್ಟು ಮಿಸಿಸಿ ದುಕೂಲವನ್ನುಡಿಸಿ ಕಯ್ಗೆಯ್ದಿರ್ದಾಗಳ್ (ಬಂಹರಿ. ೧೧-೧೩ ಪ); ಪಾಡಿ ಪರಸುತ್ತ ನೆಯ್ಯೇಱಿಸಿ ಪತಿವ್ರತಾಪಟ್ಟಗಟ್ಟುತ್ತ ಮದುವಳಿಗೆ ಪೆಸರಿಡುತಿರಲ್ಕೆ (ಸಂಗಿರಾ. ೬-೩೪). **ನೈಯೇಱಿಸು :** ಚೆನ್ನೆಯರೊಲಿದು ನೈಯೇಱಿಸಿದರು ರಾಜಕನ್ನೆಗೆ ನನೆಯಂಬಿನಿಂದ (ಚಂಪ್ರಸಾಂ. ೧೨-೭೬) ; ಸಡಗರದಿಂದಡಿ ತೊಡೆ ಮೊಲೆ ಮುಂಗಯ್ ಮುಡುಹು ಮಡಗಳೆಡೆಗಳೊಳು ಬಿಡದೆ ನೈಯೇಱಿಸಿದರು ಕಬ್ಬುವಿಲ್ಲಿಗೆ ಒಡನಲರಂಬೇಱುಪಂತೆ (ಚಂಪ್ರಸಾಂ. ೧೨-೭೭).

'ನೆಯ್ಯಿಳಿಸು' ಪರಾ. ☞ ಇಲ್ಲಿರುವ ಪ್ರಯೋಗಗಳಲ್ಲಿ ಈ ಸಂಪ್ರದಾಯದ ಶಾಸ್ತ್ರವನ್ನು ಮದುಮಗಳಿಗೆ ಮಾತ್ರ ಮಾಡುವುದನ್ನು ಕಾಣಬಹುದಾದರೆ, ಕೆಲವೆಡೆಗಳಲ್ಲಿ ಈ ಶಾಸ್ತ್ರವನ್ನು ಹಂದರದ ಕಂಬಕ್ಕೂ, ಮದುಮಕ್ಕಳಿಗೂ ಮಾಡುವುದನ್ನು ಕಾಣಬಹುದು. ಉದಾಹರಣೆಗೆ : "ತುಪ್ಪದ ಕೊಡಕ ಇಪ್ಪತು ಕೀಲಿ ಕರುಪಿ ಅಪ್ಪಯ್ಯ ಹಿಡಿವ ಸರಳಂಬ ತಕ್ಕೊಂಡು ಬಂಧು ಬಳಗೆಲ್ಲ ನಯನೇರೂನು ಬನ್ನಿರೆ, ಕಂಚಿನ ಬಟ್ಟಲದಾಗ ಮಿಂಚೆಣ್ಣೆ ತಕ್ಕೊಂಡು ಕೆಂಚೆರ್ಯೆವರು ಕೈ ವಿಡಿದು ಹಂದರದ ಹಾಲುಗಂಬಕ ನಯನೇರೂನು ಬನ್ನಿರೆ, ಬೆಳ್ಳಿ ಬಟ್ಟಲದಾಗ ಒಳ್ಳೆಣ್ಣೆ ತಕ್ಕೊಂಡು ನಲ್ಲೇರ್ಯೆವರು ಕೈವಿಡಿದು ಮಂಟಪದ ಮದುಮಕ್ಕಳಿಗೆ ನಯನೇರೂನು ಬನ್ನಿರೆ" (ಲೋಕಗೀ. ೪೨).

[ನೆಯ್$_2$ + ಏೞಿಸು]

**ನೆಯ್ಪೊಯ್** (ಕ್ರಿ). = ನೆಯ್ಯೆಱೆ : ನೆಗೆದುರಿವ ತಲೆಯ ಕಿಚ್ಚಿನೊಳೊಗು ಮಿಗೆ ನೆಯ್ಪೊಯ್ದು ತೆಱದೆ ಪೊಣ್ಮಿದ ಮುನಿಸಿಂ ಭುಗಿಲಸುರಿದೆಬ್ಬಿಂ (ಕಬ್ಬಿಕಾ. ೧೫೧). [ನೆಯ್$_2$+ಪೊಯ್$_2$]

**ನೆಯ್ಸು**, ನೇಯಿಸು (ಕ್ರಿ). ನೇಯುವಂತೆ ಮಾಡು : (ಶ). **ನೇಯಿಸು :** ಮನೆ ಮನೆಯಲ್ಲೂ ರಾಟೆಗಳಿಂದ ನೂಲು ತೆಗೆದು ಮಗ್ಗಕ್ಕೆ ಕೊಟ್ಟು ನೇಯಿಸಿಕೊಳ್ಳುವರು (ಕಳಹು. ೯೩).

[ನೆಯ್$_1$ + -ಸು$_1$]

**ನೆರ$_1$** 'ನೆಱ$_1$' ನೋ.

**ನೆರ$_2$**, ನೆರವು$_1$, ನೆಱವು$_2$ (ನಾ). **೧.** ಸಹಾಯ; ಬೆಂಬಲ; ಒತ್ತಾಸೆ: ನೆರಮಕ್ಕು ಪರಮ ಕವೀಶ್ವರರೆಮಗೀ ಕೃತಿಯೊಳಕೃತಕಾಚಾರಪರರ್ (ಕವಿರಾ. ೧-೪); ವಿರಹಿಗಳಂ ತೆರಳ್ಚಿ ತುಱುವಲ್ಲಿಗೆ ನೀಂ ನೆರಮಯ್ಯೊಳಕ್ಕೆ ನೀಂ ಬರೆ ಭುವನಂಗಳೊಳ್ ನೆಗಟ್ದುದೀ ಮಧುಮಾಸಮುಂ (ಆದಿಪು. ೧೧-೧೦೦ ಅಡಿಪದ್ಯ); ಇಱಿವೊಡೆ ನೆರವೊಳೆಮಿನಿಬರುಮಿಱಿ (ಪಂಪಭಾ. ೧೩-೨೩); ಇಂತಾರುಮಂ ಬಗೆಯದೆ ನೆರಮಂ ಪಾರದೆ ಪೋಗಿ ಪರಮ ಪ್ರೀತಿಯಿಂ ಹರನಾಲಯದೊಳ್ ಗಿರಿಜಾತೆಯಿರ್ಪುದುಂ (ಗಿರಿಕ. ೩-೯೧ ಪ). **೨.** ಆಸರೆ ; ಆಧಾರ : ಅರಿಗನ ಬಟ್ಟನಂಬುಗಳ ಬಲ್ಸರಿ ಸೋಂಕುಗು ಮೇಱಿಮೆನ್ನ ತೋಳ್ನೆರಮೆನಗೆನ್ನ ಬಿಲ್ಲೆ ನೆರಮೆಂದು ವರೂಥತುರಂಗಮಂಗಳಂ ತುರಿಪದೆ ತಾನೆ ಚೋದಿಸುತುಂ (ಪಂಪಭಾ. ೧೨-೨೦೬); ಜ್ಞಾನ ದೃಷ್ಟಿಯ ನೆರವೊ ಪೊಱನೋಟವೋವುದೆಂದು ಮುರಿದು ನೋಟ್ಟನೆನೆ ತುಱುಗೆಮೆಯರೆದೆಱೆದ ಕಣ್ಣೊಚ್ಚತವಾಗೆ (ರಾಮಾಶ್ವ. ೪೦-೨೦). **೩.** ಚಮತ್ಕಾರ ; ಜಾಣ್ಮೆ (?) : ಗದೆಯಿಂದಂ ಪೊಯ್ಯುಳಂ ಬಿಂಬಿಪ ನೆರ[ಪಾಠಾಂ. ವ]ವೆಸೆಯಲ್ (ಜಗವಿ. ೭-೯೩). **ನೆರವು$_1$ : ೧.** ದೇವ ಬೆಂಬಲಂ ಮನಸಿಜನೀಗಳಾಱು ಋತುವುಂ ನೆರವೆಂದೊಡೆ ಸೋಲದಿರ್ಪರಾರ್ (ಪಂಪಭಾ. ೭-೮೧); ನೆರವಾರೆನಗಿರ್ದಪರೆತ್ತವೋಪೆನೊರ್ಬರುಮೆನಗಾಸೆಯಿಲ್ಲ (ಕಾದಂಪೂ. ೯೦೨); ನೆರವೆನಗಕ್ಕುಮಿಾ ಸತಿಗೆ ಪುಟ್ಟಿದ ಬಾಳಕಂ (ಮಲ್ಲಿಪು. ೪-೮೯); ಶರಭಮಿದಿರ್ಚೆ ಸಾರ್ಚೆ ಗೆಲಲುಂ ಕೊಲಲುಂ ನೆರವಿಲ್ಲದಿರ್ದೊಡಂ ಹರಿ . . . ಇರದಿದಿರಾಗಿ ಸತ್ತು ಜಸಮಂ ಗೆಡೆಗೊಂಡುದು (ಪುಷ್ಪಪು. ೫-೭೮); ಬಂದು ಸಮುಸಪ್ತಕರ ದೂತರು . . . ನಂದಗೋಪನ ಮಗನ ಬಿಡು ನೆರವಿಂಗೆ ಕರೆ ಹರನ ಎಂದವಗಡಿಸಿ ಹಿಡಿದರು ಫಲುಗುಣನ ಸೆಱಗ (ಕುಮಾರವ್ಯಾಸಭಾ. ೪-೨೩); ಬೆಳೆಯಿಸಬಹುದು ನೀನೀ ನೀರ ನೆರವೊಳು ನಲುಮೆಯ ಗಿಡಬಳ್ಳಿಗಳನು (ಇಂಚಾಪ. ೮೪-೮೭). **೨.** ನೆರವಿಲ್ಲದಿರೆ ನಿಲುತ ಕೂಡಿದೊಡಾಗ ನಡೆಯುತ್ತ ಮೆಲ್ಲನೀತಂ ಬರಲು (ಸಿದ್ಧರಾ. ೨-೫೩); ಗುರುವೆಂದು ವಿನಯಗೂಡಿರ್ಪುದಿನಿಯನೊಳು ನೆರವೆಂದು ನೆಱೆ ನಂಬುವುದು (ಹಬಿಬ. ೩-೪೦). **೪.** ಹಾಲು ಹೆಪ್ಪಾಗಲು ಸಹಾಯವಾಗುವ ವಸ್ತು. 'ನೆರವು ಹಾಕು' ಪರಾ. △ **ನೆಱವು$_2$ : ೧.** ಧರೆಗೆಲ್ಲಂ ತನ್ನ ಬಾಹಾಬಳದ ನೆಱವು. . .ತನ್ನೂರ್ಜ್ಜಿತ ಖ್ಯಾತಿಯೊಳ್ಪಚ್ಚರಿಯಾಗುತ್ತಿರ್ಪಿನಂ ರಂಜಿಸಿ (ಎಕ. VII, ಶಿಕಾ. ೧೨೪-೧೬ ; 1077).

**ನೆರಮಾಗು, ನೆರವಾಗು** = ಸಹಾಯವಾಗು ; ಬೆಂಬಲ ನೀಡು : ಭೂಭುಜನ ದೋರ್ದಂಡಕ್ಕೆ ಪುಣ್ಯೋದಯಂ ನೆರಮಕ್ಕೆ (ಆದಿಪು. ೧೨-೧೨೫); ಆಂ ನೆರಮಪ್ಪೆನುಗ್ರ ಕಿನ್ನರಸುರದನುಜೋರಗರ ಕದನಮೇಂ ನಿನಗರಿದೇ (ಪಂಪಭಾ. ೫-೮೪); ಒಡನೆ ನಡೆಪಿದ ನಾಲ್ವರ್ ನೆರಮಾಗಿ ಪೋದರಂತಕಪುರಕ್ಕೆ (ಅಜಿಪು. ೨-೧೦೪); ಎನಗೆ ನೆರಮಾದುದಿದೆಂದಾಗಳೆರ್ದೆಗೊಂಡನಾ ಶರದಾಗಮಮಂ ಪ್ರಭುಗುಣಾಬ್ಧಿ ನೀ ಕಳಹಂಸಂ (ಪುಷ್ಪಪು. ೫-೧); ಆಳ್ ಕುಡಿಗೆ ನೆರಮಾದೆ ನಾನ್ ; ನನಗೆ ನಾನ್ ನೆರಮಾಗದಾದೆನ್ (ಬದ್ಧಪ್ರ. ೧೬-೩೧೩); ಇನ್ನಿರೆನೆನ್ದು ಸಿಙ್ಗದನ್ತಿರೆ ಹರಿ ಬೀರಲಕ್ಷ್ಮಿ ನೆರವಾಗಿರೆ (ಎಕ. III, ಮಂಡ್ಯ. ೪೧-೧೮ ; 950); ಬಲವಂತರ್ ನೆರವಾಗಲ್ . . . ತಾಂ ಬಲುಭಾಗ್ಯಂ ದೊರೆಗಪ್ಪುದ್ಯೆ (ಸೋಮೇಶ. ೫೬); ತೊಡಗಿದೆನೀ ಮಹಾಕೃತಿಯನೆನಗೆ ನೆರವಾಗಿ ನಡೆಸುಗೆ (ಹಚಕಾ. ೧-೧೪); ತನಗೆ ಭರ್ಗನು ಪಡಿಯನಿಕ್ಕುವ ಧನಕೆ ನೆರವಾಗು (ಬಸಪು. ೨೯-೩೦); ಕಾಡುವರೆ ನಮ್ಮುತ್ಸವಕೆ ನೆರವಾದವರು (ಕುವ್ಯಾಸ. ೧೦-೭); ತೆರೆ ನಿಂತಾ ಮೇಲೇನ್ಕೆ ಕಡಲಲಿ ನೆರವಾಗುವುದೇ ಮಿಾಯಲಿಕೆ ? (ಕಎಪು. ೪೯).

**ನೆರ$_3$** 'ನೆರಂ' ನೋ.

**ನೆರಂ,** ನೆರ$_3$ (ಅ). **೧.** ಜೊತೆಗೆ ; (ನಂಜಿಕೊಳ್ಳಲು) ಸಹಾಯಕವಾಗಿ : ಎಮ್ಮ ಮಾವಂ ಬೈಕಂದಿರಿದು ತಂದ ಕೂಟಿಗೆ ನೆರ[ಪಾಠಾಂ. ನೀರ, ನೆರೆ]ಮೆಣ್ಣೆಯನಕ್ಕುಪ್ಪನಕ್ಕೆ ಕಟಿಯನಕ್ಕೆಂದಪ್ಪೊಡಮಿಕ್ಕಿಯುಮೆಱೆಯಿಸಿಯುಮಱಿಯಂ (ವಡ್ಡಾರಾ. ೪-೧೪). **೨.** ಚೆನ್ನಾಗಿ : ಪಡೆದುದಯಿಸಲೆಂದುಂ ಕಾಲದೊಳಲ್ಲದುದಾರತೇಜನರ್ಕನುಮಲ್ಲಂ ಸದುದಿತಗುಣನದಱಿಂ ನಯವಿದನಪ್ಪಂ ಕಾಲಮಂ ನೆರಂ ತೋರ್ಕೆ ನೃಪಂ (ಕವಿರಾ. ೩-೧೪೬). **ನೆರ$_3$ : ೨.** ಅರಿಊಪ್ಪರ್ನಿರ್ವ್ವರು ಕೂಡಲೂರು ಇನೆತ್ತುಮೂರ್ ನೆರ ಸಾಸನಮಾಗೆ ಕುದಿಯ್ಯೆ (ಎಕ. IV, ಗುಂಡ್ಲು ಪೇ. ೮೮-೬ ; 750). [< ನೆರ$_2$]

**ನೆರಂಗೆಯ್** (ಕ್ರಿ). ಸಹಾಯ ಮಾಡು; ಬೆಂಬಲ ನೀಡು : ಅಂಗದತನಿಸೊಬಗಿಂಗೆ ನೆರಂಗೆಯೆ ಪೊಸವಸದನಂಗಳಾವಗಮೊಳ್ಪಿಂ ಸಿಂಗರವಡೆ ಪೆಣ್ಮಣಿಯೆ ಪದಂಗೊಳಿಸೊಳ್ಗೊಂಡರೆರ್ದೆಯ ಪೊಸ ಪೊಸ ಸೊಗಸಿಂ (ಚಿಕವಿ. ೬-೮೩); ಸಿಂಗರಕಿನಿಯನ ದಿಟ್ಟಿ ನೆರಂಗೆಯೆ ತಾಂ ಪೊಣ್ಮಿ ಪೊಣ್ಮಿ ಪೊಂಗಿತ್ತಾಗಳ್ (ಚಿಕವಿ. ೬-೨೫೧). [ನೆರ$_2$+ಕೆಯ್$_1$]

**ನೆರಂಬಡೆ** (ಕ್ರಿ). **೧.** ಸಹಾಯವಾಗಿ ಪಡೆದುಕೊಳ್ಳು ; ಬೆಂಬಲವನ್ನು ಹೊಂದು : ನಿಮಿರ್ವ ಕಾಡಿಗೆಗುಡಿಗಳ . . . ವಿಜಯಕಟಕ ಸಮದಗಜಸಾಮಜಂಗಳ ಕರ್ಪುಗಳೆಲ್ಲಮಂ ನೆರಂಬಡೆದು ಬಳೆದ ತಮೋಮದೇಭದ ಘಟೆಯೊಡ್ಡು (ಆದಿಪು. ೧೨-೪ ಪ); ಆನುಂ ಬಂದಪ್ಪೆನೆಂದೊಡಾ ಪಾರ್ವಂ ನೆರಂಬಡೆದೆನೆಂದು ಕರಮೊಳ್ಪಿತ್ತೆಂದು ಬನ್ನಿಮೆಂದು (ಪಂಚತಂ. ೨೨೮-೨೦); ಬಲ ನಾರಾಯಣರಂ ನೆರಂಬಡೆದು ನಿಮ್ಮೊಳ್ ಕಾದುವುದ್ಯೋಗದಿಂ ಪಲವುಂ ದ್ವೀಪದ ಖೇಚರರ್ ನೆರೆದು (ಪಂರಾಮಾ. ೧೨-೪೯). **೨.** ಅಂಗೀಕರಿಸು ; ಒಪ್ಪು ; ಸಮ್ಮತಿಸು : ಸೂರ್ಯರ್ಜನುಂ ಋಕ್ಷಜನುಂ ನಿನ್ನಾಜ್ಞೆಯಂ ನೆರಂಬಡೆದು ಪಾತಾಳಲಂಕೆಯಿಂದೆತ್ತಿ ಪೋಗಿ (ಪಂರಾಮಾ. ೧೦-೧೬೦ ಪ).

[ನೆರ$_2$ + ಪಡೆ$_1$]

**ನೆರಂಬರ್,** ನೆರವರ್, ನೆರವು ಬರು (ಕ್ರಿ). ಸಹಾಯಕ್ಕೆ ಬರು ; ನೆರವು ನೀಡು : ಕಣ್ಪೊಲದೊಳ್ ಸುಱುವ ಕಾಲಾಯಸ ಕಾಲಪುರುಷನಂ

ಕಾಳೆಗಕ್ಕೆ ಜವಂ ನೆರಂಬಂದಪ್ಪನೆಂದುಂ . . . ಉತ್ಪಾತಂಗಳ ನೇನುಮಂ ಬಗೆಯದೆ ಕೋಪಮನೆ ಬಗೆದು (ಪಂರಾಪೂ. ೧೪-೧೨೮ ಪ) ; ಇಂತವರೆಲ್ಲರುಂ ನೆರಂಬರೆ ನಿನಗಾಂತು ನಿಲ್ ನಿನಗೆ ತೋಱುವೆನೆನ್ನ ಭುಜ ಪ್ರತಾಪಮುಮಂ (ಜಗವಿ. ೭-೨೬) ; ಅಲಂಘ್ಯಲಜ್ಜಾ ಮರ್ಯಾದೆಗೆ ನೆರಂಬರ್ಪಂತೆ ಬಂದೊರ್ವ ಪಡಿಯಱಂ ಪೊಡವಟ್ಟು (ಪರ್ಶ ಪು. ೪-೮೭ ಪ). **ನೆರವರ್ :** ಆಗಳ್ ವಾಲ್ಮೀಕಿ ತಾನವಿತಾನವಿನಿದಂ ಕಱಿಯೆ . . . ಪಲವುಂ ಬಗೆಯ ರಾಗಂಗಳೊಳ್ ಬಾಜಿಪ ಬಾಣಿಯ ಬೀಣೆಯಿಂಚರಕೆ ನೆರವರ್ಪೊಂದು ಭಂಗಿಯಿಂ ಬಾಲಕರಿಂ ರಾಮಾಯಣಮನೊಪ್ಪಿಸಿದಂ (ರಾಮಾಶ್ವ. ೧೬೨-೩೦). **ನೆರವು ಬರು :** ಮನದಂಧತೆಗೆ ಕತ್ತಲೆ ನೆರವು ಬರೆಯಾಲೋಚನೆಗೆ ಬೇಹವರ ಮಂತ್ರಿಗಳ ಬರಿಸಿ ನೃಪನಿರುಳೋಲಗವ ನಿತ್ತು (ನಿಭಾಗ. ೧೦-೩೮-೨). [ನೆರ್$_2$ + ಬರ್(<ವರ್)]

**ನೆರಂಬಾರ್** (ಕ್ರಿ). ಸಹಾಯವನ್ನು ಬಯಸು ; ನೆರವನ್ನು ನಿರೀಕ್ಷಿಸು : ಸಾರಥಿಯಪ್ಪೊಡಪ್ಪನೆನಗೀತನೆ ಪೋ ಪೆಱರೇವರಿಂ ನೆರಂಬಾರೆನೆನುತ್ತೆ (ಪಂಪಭಾ. ೮-೯೮) ; ಭುಜಾದಂಡಂ ಗದಾದಂಡಮೆಂಬೆರಡುಂ ಸಂಜಯ ಮಜ್ಜ ಯಕ್ಕೆ ನೆರವಿಂ ಮತ್ತಾರ್ನೆರಂಬಾರ್ಪೆನೇ [ಪಾಠಾಂ. ಕ್ಕೊದವಿರಲ್ ಮತ್ತನ್ಯರಂ ಪಾರ್ವೆನೇ] (ಗದಾಯು. ೩-೪೭); ವಿಭವಾರ್ಥಂ ಸೈನ್ಯಮಂ ಪಾಲಿಸುವುದು ಸಮರಕ್ಕೀಂ ನೆರಂಬಾರ್ಪುದೇ ವೀರಭಟಂ (ಜಗವಿ. ೧೩-೭೮). [ನೆರ್$_2$+ಪಾರ್$_1$]

**ನೆರಂಬಿಡಿ** (ಕ್ರಿ). ಆಶ್ರಯಿಸು ; ಆಧಾರವನ್ನಾಗಿ ಹಿಡಿ ; ಅವಲಂಬಿಸು : ದೋಷಾದಿಗಳಂ ನೆರಂಬಿಡಿದವಂ ಮತ್ತೀಕೆ ಕೈವಾರ್ದಪಂ (ಚಂದ್ರಪು. ೨-೩೩). [ನೆರ್$_2$+ಪಿಡಿ$_1$]

**ನೆರಂಬೆಱು** (ಕ್ರಿ). ಸಹಾಯವನ್ನು ಪಡೆ ; ನೆರವನ್ನು ಹೊಂದು : ಇನಿಸಂ ಪೋಲೆ ಸಮಸ್ತಜಾತಿಗಳ ರೂಪಂ ಚಿತ್ರಿಸಲ್ ವಿಶ್ವಕರ್ಮನ ಮಾಂಡವ್ಯನ ಚೀರಘಟ್ಟಯಳವಲ್ಲೆಂದಟ್ಟಿಱಿಂ ಚಿನ್ನಪೂವಿನ ಚೆಂಬೊನ್ನ ಮಯೂಖಲೇಖೆಗಳನಂತಾ ಚಿತ್ರನಿರ್ವಾಹರೇಖೆ ನೆರಂಬೆತ್ತಿರೆ ನೋಡಿ ನೋಡಿ ತಲೆದೂಗಿತ್ತಂಗನಾಸಂಕುಲಂ (ಜಗವಿ. ೧೭-೧೧೭).

[ನೆರ್$_2$ + ಪೆಱು$_1$]

**ನೆರಂಬೇಟು** (ಕ್ರಿ). ಸಹಾಯಕ್ಕಾಗಿ ನೇಮಿಸು ; ಬೆಂಬಲಿಸುವಂತೆ ಅಪ್ಪಣೆ ಮಾಡು : ರಥಮಂ ಸಮಕಟ್ಟಿ ನಾಲ್ಕುಲಕ್ಕಬಲಮಂ ನೆರಂಬೇಟ್ಟು ಕಳಿಪಿದನಾಗಳ್ (ಪಂಪಭಾ. ೨-೯೨ ಪ) ; ವಾರಿಷೇಣನೆಂಬ ಮಗನಂ ಕುಮಾರಂಗೆ ನೆರಂಬೇ[ಪಾಠಾಂ. ಪೇ]ಟ್ಟೀತನಂ ಬಂಧುಗಳನೆಯ್ದಿಸೆಂದು ಕಳಿಪೆ (ಚಾವುಂಪು. ೭೬) ; ನಡೆಗಟ್ಟಿಗಳನಿರ್ಬರ್ಗಮೋಜಲ್ ಕೊಟ್ಟು ಪಿರಿದಾಳಂ ನೆರಂಬೇಟ್ಟು ಕಿಱಿದಂತರಂ ಕಳಿಪುತ್ತುಂ ಬಂದು (ಸುಕುಮಾ. ೨-೫೯ ಪ). [ನೆರ್$_2$+ಪೇಟ್]

**ನೆರಕು** 'ನರಕು' ನೋ.

**ನೆರಕೆ$_1$, ನೆರಿಕೆ, ನೆರೆಕೆ** (ನಾ). ೧. (ತೆಂಗಿನ ಗರಿ, ಜೋಳದ ದಂಟು, ಬಿದಿರುಕಡ್ಡಿ ಮುಂತಾದುವುಗಳಿಂದ ಹೆಣೆದು ಮಾಡಿದ) ಮರೆ; ತಟ್ಟಿ; ತಡಿಕೆ : ತೊಳೆದು ಕಂಡಿಹೆನೆಂದಡೆ ಅಂಗಡವನಲ್ಲ ಹೊದಿಸಿ ಕಂಡಿಹೆನೆಂದಡೆ ಮಂಡೆಯವನಲ್ಲ ಮಾತಾಡಿಸಿ ಕಂಡಿಹೆನೆಂದಡೆ ಬಾಯವನಲ್ಲ ಇವರು ಮೂವರು ನೆರಕೆಯೊಳಗಾಗಿದ್ದಡೆ ನೆರಕೆಯ ಹೊಱಗಿದ್ದು ಬಱಿಕಾಯನಾಗಿದ್ದೆಯಲ್ಲಾ (ಮೋಳಿಪ್ರಾ. ೧೬೧-೬೦೨) ; ತಳಿರ ನೆರಕೆಗಳ ಮುಱಿದೋಡುತಂ (ಸಾಸೂರ. ೭೯-೧೯) ; ಲಾಮುಚದ ನೆರಕೆ ಗಱಿವೂವುಗಳ ಹೊದಕೆ (ಪದ್ಮರಾ. ೮-೮) ; ಬರಕೆ ಬುತ್ತಿಯು ಹೊಲ್ಲ ನೆರಕೆಯು ಮನೆ ಹೊಲ್ಲ (ಸರ್ವಜ್ಞ. ೧೧೫೮) ; ಅರಕಲಗೂಡು ಪೇಟಿಯವಳೆ ನೆರಕೆಯ ಮನೆಯವಳೆ ಸರಕೆಂದರೆ ಕದವ ತೆರೆಯುವಳೆ (ಬೈಸರ್ವೆ. ೧೩೨). ೨. ತೆರೆ : ಪರದೆ : ಉಟ್ಟುಡಿಗೆ ಬಳಸಿದ ನೆರಕೆ ತೊಡೆಯೆ ಕಂಬವಳವಟ್ಟು ಕಟ್ಟು ಸಡಿಲ್ಚಿ ಮೆಱೆವ ಮುಗಿ ಮೇಲ್ವೊದಕೆ ಬಟ್ಟವೊಲೆ ಕಲಶಂಗಳಾ ಕಾಂತಿರಸವೆ ತಿಳಿಸೀರಾಗಲು . . . ಅತನುವಱವಟ್ಟಗೆಯೊಯೆಂಬವೊಲ್ ಪ್ರಪಾಕಾಂತಾಜನಂ (ಪದ್ಮರಾ.೮-೧೧). ೩. ಬೀಡು; ನಿವಾಸ: ನರಕ ಬೇಱನ್ನೇಕೆ ತನುವೇ ನರಕವಿದೆಲಾ ಯೆಲುವು ತೊಗಲಿನ ನೆರಕೆ (ನಿಭಾಗ. ೧೦-೮೭-೩೭) ; ಕಾಳಿಜದೇಳ್ಗೆ ಪೊಲಸಿನ ಶೇಷ ನರವಿನ ನೆರಕೆ . . . ಪುಳುಗಳ ಪುತ್ತು ದಿನದಿನ ನಾಶಮಪ್ಪ ಖಿಕಾರಕಾಯಂ (ಶಂಕದಾ. ೩-೩೬). ೪. "ತಟ್ಟಿಯ ಗುಡಿಸಲು" (ಜಾನಕೋ. ೧೨) : ಆ ತಂಟೆ ಮಾರಿ ಬಡ್ಡೀಮಗನ ಜಗ್ಲೀ ಮೇಲೆ ನೆರಕೆ ಯಾಕೆ ಕಟ್ಕೊಂಡಿದ್ದ (ಹುಟ್ಟಿಪ. ೧೪೩): ೫. ಊರೆ ; ಆಸರೆ; ಆಧಾರ ; ಆಶ್ರಯ : ಬಡತನ ಹಸಿವೆಯ ಗಾಳಿ ಬೀಸುತ್ತಿದ್ದರೂ ಕುಡಿವರಿಯುವ ಬಳ್ಳಿಗೆ ನೆರಕೆಯಾಗಿದ್ದಳು (ಕಕೆಂಡ. ೭೯). **ನೆರಿಕೆ :** ೧. ಹರಿಕೆಯಿಲ್ಲದ ದಾನ ನೆರಿಕೆಯಿಲ್ಲದ ಮನೆಯು (ಸರ್ವಜ್ಞ. ೧೭೫). ೨. ತಟ್ಟಿ, ತೆರೆ, ನೆರಿಕೆ; ಪರದೆ; ಜವನಿಕೆ (Screen. ಇಂಕನಿ). ೪. ನೆರಿಕೆಯ ಸೂರಿನೊಳಗಿಂದ ಬೆಳಗಿನ ತಂಗಾಳಿ ಬಂದು ತಗುಲಿತು (ಅಶೋಕ. ೧೯೫). ೫. ಕರಿಕಾಲಚೋಳರಸ ಹರುಸ ಬಿತ್ತಿಗೆ ಮಾಡಿ ಎರಕ ಹೊಯ್ದಿದ್ದ ಶಿವಭಕ್ತ ನಾಡೊಳಗೆ ನೆರಿಕೆ ತನಗೆಂದು ಚೆನ್ನಯ್ಯ (ಕನ್ನಜಾ. ೩೧೪). **ನೆರೆಕೆ :** ೧. ನೆರೆಕೆಯುಂದದಿ ಇಡಿಗಡಿದು ಸುರಂಗವ ಕೊರೆದರು ಸುತ್ತ ನೂರಾರ (ಬಿಜ್ಜರಾ. ೧೨-೬೧).

[←ತಮಿ. ನಿರೈಚ್ಚಲ್]

**ನೆರಕೆ$_2$** (ನಾ). ಒಂದು ಬಗೆಯ ಬಾಣ (?) : ನೆಱೆದು ನಿರ್ವಾಯಂ ನರುವಾಯಂ ಮುಮ್ಮೊನೆ ನೆರ[ಪಾಠಾಂ. ರಿ]ಕೆ ನಾರಾಚಂ ತಗರ್ತಲೆಯಂ ನೆಱನರಿ[ವ] ಕ[ಣೆ] ಗೆಲೆಯಂಬು ಕಕ್ಕಂಬು ಕೆಲ್ಲಂಬು ಮೊನೆಯಂಬು [ತೀವೆ ಕಣ್ಣಂ] (ಪಂಪಭಾ. ೧೩-೩೯). [ ? ]

**ನೆರಕೆಗಟ್ಟು** (ಕ್ರಿ). ತಡಿಕೆಯನ್ನು ಕಟ್ಟು : ದೆಸೆಯೊಳು ನೆರಕೆಗಟ್ಟಿದಂತೆವೊಲು ಮೇಲಾಗಸದೊಳು ಪಂದಲಿಟ್ಟಂತೆ ಮುಸುಕಲು ಶರವಲ್ಲಿ ನೋಡುವರಿಗುಬ್ಬಸವ ಮಾಡಿದುದಾ ಸಮರ (ನೇಮಿಸಂ. ೨೭-೪೦).

[ನೆರಕೆ$_1$+ಕಟ್ಟು$_1$]

**ನೆರಡಿ** 'ನರಡು$_2$' ನೋ.

**ನೆರಡು** (ನಾ). (?) : ಎರಡೆಂಬನ್ನಕ್ಕರ ನೆ(ವೆ?)ರಡಾಯಿತ್ತು ಕರಡಿ ತೊಡರಿದೆ ನೋಡಾ ಎರಡನೊಂದೆಂದು ತಿಳಿಯಲು ನೆರಡು ಮಾಯಿತ್ತು ಕರಡಿ ಬಿಟ್ಟೋಡಿತ್ತು ನೋಡಾ (ಸಿದ್ಧೇಪ. ೧೦೬-೩೩೧). [ ? ]

**ನೆರತೆ** 'ನೆಱತೆ' ನೋ.

**ನೆರಪು, ನೆರಹು$_1$, ನೆರೆಪು** (ಕ್ರಿ). ೧. ಕೂಡಿಸು ; ಸೇರಿಸು : ಎಂಟನೆಯ ದಿವಸದ[ನ್ದು] ಪ್ರಜಾಪರಿವಾರಮಂ ನೆರಪಿ (ಸೌಇಇ. XI-i, ೬೪-೨೫ ; 1028) ; ಪರಿವಾರವಧೂಜನವಳಕಜಾಳದಿನಳಿಮಾಳೆಯಂ ನೆರಪುವಂತೆ (ಮಲ್ಲಿಪು. ೪-೭೨ ಪ) ; ಉದಾರತಾರಾಸಮೂಹಮಂ ಚಂದ್ರನೊಳ್ ನೆರಪುವಂತೆ (ಪುಷ್ಪಪು. ೧೨-೧೦೬ ಪ) ; ಸರಸಮೃದುಮಧುರೋಪಮೆಗಳಂಕುರಿಸೆ ವಸ್ತುಕ ವರ್ಣಕಂಗಳ ನೆರಪಿ . . . ರಚಿಸುವೆಂ ಕೃತಿಯ (ಒಸಪು. ೧-೧೧) ; ನೆಲೆಗೆಡಿಸುತ ನೆಲದುರ್ಗವ ನೆರಪುತ ಜಲದೊಳು ಜಲದುರ್ಗವನು ಸಲೆ ಗೋಳಿಡಿಸುತ ಗಿರಿದುರ್ಗಗಳನಾ ಲಲನೆ ನಡೆದಳು ಬಲ್ಮೆಯೊಳು (ಕುರಾಸಾಂ. ೪೧-೭೪). ೨. (ವಿವಾಹಸಂಬಂಧದಿಂದ) ಕೂಡಿಸು ; ಜೊತೆಗೂಡಿಸು ; ಜೊತೆ ಸೇರಿಸು : ಈ ನಿಜ ತನೂಜೆಯನುತ್ಸವಮಂಗಳಾನಕಧ್ವನಿ ದೆಸೆಯಂ ಪಳಂಚಲೆವಿನಂ ನೆರಪೀಗಳೆ ವಜ್ರಜಂಘನೊಳ್ (ಆಪಿಪು. ೪-೨೬) ; ಕುಮಾರನಂ ತಂದು ನಿನ್ನೊಳ್ನೆರಪುವೆನೆಂದು ಸಂತೈಸಿ (ಚಾವುಂಪು. ೭೫). ೩. ಸಂಗ್ರಹಿಸು ; ಶೇಖರಿಸು ; ಕಲೆಹಾಕು : "ನೆರೆಪು (ನೆರಪು)—ಸಂಗ್ರಹೇ" (ಶಮಧಾ) ; ಧನಮಂ ನೆರಪದೆ ವಿದ್ಯಾಧನಮಂ ಮಾಡದೆ ತಗುಳ್ದು ನೆಗಟದೆ ತಪದೊಳ್

ಮನುಜತ್ವಮಫಲಮಾಯ್ತು (ಕವಿರಾ. ೩-೧೦೨) ; ಕಿತ್ತ್ರಯ್ಯಂಗಳ ನಿಂದೆಮಗೆ ಕಾರುಣ್ಯಂಗೆಯ್ವುದಾವು ನಿಱಿಸಿ ಪಾನಿಗಟ್ಟಿ ಪುಣ್ಯಮಂ ನೆರಪಿ ಕೊಳ್ವೆಮೆಂದೊಡೆ (ಪದ್ಮಾರಾ. ೭೯-೧೯) ; ಸೌಂದರಿಯರ ಗಾಡಿಗಳೊಳ ಗೊಂದೊಂದನೆ ನೆರಪಿ[ಪಾಠಾಂ. ಪಡೆದು]ಮಾಡಿದಂ ಬಿದಿಯೆನೆ . . . ಸೌಂದರಿ ಸೌಂದರಿಯೆ ಪೆಸರೊಳಂ ರೂಪಿನೊಳಂ (ಆದಿಪು. ೨-೩೬) ; ಪಲವು ಭವಂಗಳೊಳ್ನೆರಪಿದೆನ್ನಯ ಪಾಪಮೊ (ಕಾದಂಪೂ. ೯೨೧) ; ರಾಜ್ಯಾಭಿಷೇಕಯೋಗ್ಯಂಗಳಪ್ಪ ನಾನಾಪ್ರಕಾರಮಂಗಳದ್ರವ್ಯಂಗಳಂ ನೆರಪಿ ಕೌಶಿಕವಿಹಂಗಮಕ್ಕೆ ಪಟ್ಟಂಗಟ್ಟಲಿರ್ದವಸರದೊಳ್ (ಪಂಚತಂ. ೨೨೪-೮) ; ಚಿಂತಾಸಮುತ್ಸೇಕದಿಂದಪ್ಪುದೆ ಪುತ್ರೋತ್ಪತ್ತಿ ಮುನ್ನಂ ನೆರಪಿದ ಸುಕೃತಂ ಪಕ್ವಮಾದಲ್ಲದೆ (ಪುಷ್ಪಪು. ೩-೧೦೧). **೪. ಗಳಿಸು ; ಸಂಪಾದಿಸು :** ಮಲ್ಲಪಯ್ಯನುದಾತ್ತಯಶೋನಿಧಿ ಪುನ್ನಮಯ್ಯನುಂ ತಾಮುಪಕಾರಮಂ ನೆರಪಿದರ್ ಜಗದೊಳ್ ಜಿನಚಂದ್ರದೇವರಾ (ಶಾಂತಿಪು. ೧-೫೧). **೫. ಹೊಂದಿಸು ; ಹೊಂದಾಣಿಕೆ ಮಾಡು :** ಸ್ಯೂಸ ನಿಷ್ಪಕ್ಕೆ ಎನ್ನಿಷ್ಟಮನ್ ನೆರಪುವುದೆ ಎಸಿತೊ ಒಳ್ಳಿತ್ತಾಗಿ ನೇರ್ಪಾಗಿ ಕಂಡತ್ತು (ಬದ್ಧಪ್ರ. ೧೩-೨೬೦). **೬. ರಾಶಿ ಹಾಕು :** ಕನಕವ ಸೇವಿಸಿದವ ಮಣ್ಣುಮಸಿಯನು ಕನಕವೆನುತ ನೆರಪಿದೊಡೆ . . . ಜನರದ ಸ್ವೀಕರಿಸುವರೆ (ನಾಗಕು.೧-೬೫). **೭. ಸಂದಣಿಸು ; ಗುಂಪುಗೂಡು; ನೆರೆ :** ಗಜಾರೋಹಕರ್ ಪಸದನಂಬಡೆದೇಱಿ ಮಾಱಿ ನೆರಪಿದಾಗಳ್ (ರಾಜಶೇ.೧೩-೬೫ ಪ). **೮. ಉಂಟುಮಾಡು ; ಆಗಿಸು :** ಅರುಣಾಂಶುಗಳಿಂ ಪಶ್ಚಿಮಗಿರಿಕೂಟಮನರ್ಕಪೂರ್ವಪಲ್ಲವಚಯದಿಂ ನೆರಪಿಪಡು ನೇಸಱ್ ಸೆದುದು ಶರಸಿಧಿನಾಥಂಗೆ ಪಿಡಿದ ಮಾಣಿಕಗೊಡೆವೋಲ್ (ಜಗವಿ. ೪-೧೧೧) ; ಅಜಿನಂ ಪೆರ್ಚಿಸುವಱಿವಂ ನೆರಪುವ . . . ನಿಮ್ಮಯ ದರ್ಶನಕಱಿದೆಂ ಕಾರಣಮನೆನ್ನ ಪುಣ್ಯಮೆ ಪೆಱತೇಂ (ಚಂದ್ರಪು.೩-೭೩) ; ನೆರೆದುದು ವಿರಹಿಮನಸ್ತೃಣ ಶರಣದೊಳಂಗೋದ್ಭವಾಗ್ನಿಯುಂ ನೆರಪುತ್ತುಂ ನೆರೆದಭ್ರಂ ಕೊರ್ವಿದುದಚ್ಚರಿಯುಂ ಚಾದಗೆಯ ಗರ್ಭಮಂ ಕೊರ್ಬಿಸುತುಂ (ಕುಸುಮಾ. ೬-೧೨) ; ಮಂದಹಾಸದ ಕಾಂತಿ ವಜ್ರರುಚಿಯುಂ ನೆರಪೆ (ಪುಷ್ಪಪು. ೯-೫೮ ರಗಳೆ). **ನೆರಹು$_1$ : ೧.** ಊರ ಮಹಾಜನವೆಲ್ಲ ಮನೋರಂತಿರೆ ನೆರಹಿ ತಂಗು (ಮೈಆರಿ. ೧೯೨೭, ೩೪-೬ ; 11ನೆಯ ಶತ); ಮಹಾಪ್ರಮಥಗಣಂಗಳಂ ತಂದು ನೆರಹಿದಾತ ನಮ್ಮ ಬಸವಯ್ಯನು (ಸೀಲಪ. ೬-೯) ; ಮಱುದಿನವಾಳುಕುದುರೆಯ ನೆರಹಿ ಧರಣೀಪಾಲ ಸುಮುಹೂರ್ತದಲಿ ಹೊಯ್ಸಿದನಂದು ಹೊಱಗುಡಿಯ(ಕುಮ್ಯಾಭೀ.೧-೪೩); ವೇದವ್ಯಾಸನಖಿಳನಿರ್ಜರರು ಮನುಮುನಿಗಳಂ ನೆರಹಿ (ಸೌಂದಪು. ೬-೩) ; ಅರಸನಂಘ್ರಿಸರೋಜಸೇವೆಗೆ ನೆರಹಿದೆನು ಶರನಿಧಿಪರೀತ ಸಮಸ್ತಕಪಿಬಲವ (ತೊರರಾ. ೪-೬-೨೭). **೨.** ನೇಹವೆಂಬ ಕುಂಟಣಿ ಚೆನ್ನಮಲ್ಲಿಕಾರ್ಜುನನ ನೆರಹದಿರ್ದಡೆ ನಾನೇವೆ ಸಖಿಯೆ (ಮಹಾದೇ.ಬ ೧೪೦-೩೧೮). **೩.** ನಿಧನವಲ್ಲದೆ ಧನವ ನೆರಹುವ ಹದನ ನೀನೇ ಕಾಂಬೆ (ಕುಮ್ಯಾಸ. ೨-೭೩) ; ಭೂತಳದ ಮೇಲಾ ವಿರಂಚಿಯು ತಾತ ಹುಟ್ಟಿದ ಮಾಡಿ ನೆರಹಿದ ಪುಣ್ಯಫಲದಿಂದ (ಸಂಭಪ. ೨೬-೮). **೪.** ಹೊರೆಯ ಲಱಿಯೆನು . . . ಅದಱೊಳಗೊಬ್ಬನುದರಕೆ ನೆರಹಲಾಱೆನು ಕೂಳ ನೆಂದಳು ಕುಂತಿ ನಸುನಗುತ (ಕುಮ್ಯಾಆ. ೧೦-೧೫). **೬.** ಕಂಚುಗಾಱನ ಬಿಡಾರದಂದದಿ ಕಂಚು ಹಿತ್ತಾಳೆ ಪ್ರತಿಮೆಯ ನೆರಹಿ (ಪುರಂದ. ೨-೨೫-೨) ; ತರಹೇಳು ಹೆಡಗೆ ಹೆಡಗೆಯೊಳು ಹೊಸ ಹೊನ್ನ ಇರಲಯ್ಯ ನಿನ್ನ ಮೇಲೆಂದು ನೆರಹಿ ಬೇಕಾದರೆ ತರಿಸಿಕೊಂಬೆವು ಎಂದು ಹರರೂಪ ಪೊಱಮಟ್ಟನಾಗ (ಹರಿಸಾಂ. ೧-೫೧). **೭.** ಹರಸಿ ಮಾಡುವುದು ಹರಕೆಯ ದಂಡ ನೆರಹಿ ಮಾಡುವುದು ಡಂಭಿನ ಭಕ್ತಿ (ಬಸವ. ೨೨೪) ; "ಜನರನ್ನು ಕೂಡಿಸು" (ಬಸವ. ಕೋಶ) ; ಶಿವಭಕ್ತ ವೀಧಿಗಳು ನಿಂದು . . . ನೆರಹಿತ್ತು ತೆಱಹಿಲ್ಲೆನಿಸಿ ಪುರದೊಳಗೆ (ಅಸೀರ. ವೇ. ೮೪-೮). **೯. ಕೂಡು ; ಮದುವೆಯಾಗು ; ವಿವಾಹವಾಗು :** ಮಡದಿಯರ ನೆರಹಿದರೇನು ಒಡವೆಯ ಗಳಿಸಿದರೇನು ಶಿವನೇ ನಿಮ್ಮನಱಿಯದ ಮನುಜನ ಒಡಲೆಂಬುದು ಹೊಲೆಜೋಗಿಯ ಕೈಯ ಒಡೆದ ಸೋರೆಯಂತೆ ಕಾಣಾ (ವಚಸಂ. ೩೧೮-೯೨). **೧೦. ಬೆರಸು :** ಕಣ್ಣೆಸಲ್ಲಿ ನೋಡಿ ಮಣ್ಣಿನಲಿ ನೆರಹಿ ಉಣ್ಣದೆ ಹೋಗದಿರಾ (ಬಸವ. ೨೦೧). **೧೧. ಪಡೆ ; ಹೊಂದು (?) :** ಕುರಪ ನೀನೇ ಕಳುಹದಿರ್ದೊಡೆ ಪರಮಮುನಿ ದೂರ್ವಾಸರಲಿ ನೀ ನೆರಹಿದಂದವ ಮಾಡುವೆನು (ಸಂಭಪ. ೨೦-೫೯).

**ನೆರೆಪು : ೧.** ಕಂಪಿನ ಕಣಿ ತುಂಬಿಯಂ ನೆರೆಪುತಿರ್ದುದು ಮಲ್ಲಿಗೆ ಚೈತ್ರಮಾಸದೊಳ್ (ಜಗವಿ. ೧೪-೩೩). **೨.** ಅತಿಜಿತೇಂದ್ರಿಯರಸಂಗನೆಯರೊಳ್ ನೆರೆಪುತಂ (ಚೆಬಪು. ೩೫-೧೬). **೩.** "ನೆರೆಪು (ನೆರಪು) ಸಂಗ್ರಹೇ" (ಶಮಧಾ) ; ಮುನ್ನಿನ ಭವದೊಳ್ ಪುಣ್ಯಮನಾನ್ನೆರೆ[ಪಾಠಾಂ. ರ]ಪಿದೆನದಱ ಫಲಮನುಂಡಪೆನದಱಿಂದಿನ್ನಪ್ಪ ಭವಕೆ ನೆರಪುವೆನೆನ್ನದ ನರಪತಿಗೆ ನರಕಪತನಂ ಪಿರಿವೇ (ಅಜಿಪು. ೨-೧೦೬) ; ತರದ ಬೊಮ್ಮಾಂಡವಂ ನೆರೆ[ಪಾಠಾಂ. ರ]ಪುವಲ್ಲಿಯ ಪುಣ್ಯ ಉರುಪುವಲ್ಲಿಯ ಪಾಪವೆಲ್ಲಿ ತೋಱ್ಸಿ (ಸಾನಂಚ.೨-೨೮). **೬.** ವನದೇವತೆಯರಮೃತಸಾರ ವಾರಿಯಂ ಪಚ್ಚೆವರಲ ಕರಗಂಗಳೊಳ್ ತೀವಿ ತೆಂಬೆಲರ ಪೊಯ್ಲಿನಿಂ ತಣ್ಪುವಡೆಯಲೆಂದು ನೆರೆಪಿದಂತಿರ್ದ ನೀರ್ಗಾಯ ತುಱುಗಲಿಂದೆಱಗಿದ ನಾಳಿಕೇರಭೂರುಹಂಗಳುಂ (ಚಂದ್ರಪು. ೧-೧೦೫ ವ). **೮.** ದೇವಿ ನಿಜಪದ ನಖೇಂದುಕರಾವಳಿಯಿಂ ತೀವಿ ವನಸರೋವರಮಂ ರಾಜೀವಕ್ಕಿತ್ತು ವಿಕಾಸಮನಾವಗಮಿಂ ನೆರೆಪು ಪಗೆಯನೀ ನಗೆವೊಗದಿಂ (ಚಂದ್ರಪು. ೭-೭೩).

[ನೆರೆ$_1$ +–ಪು$_1$]

**ನೆರಮನೆ** 'ನೆರೆಮನೆ' ನೋ.

**ನೆರಮಂಬಳೆ** (ನಾ). ಒಂದು ಬಗೆಯ ಸಸ್ಯ : ಆದಿರಾಜ, ಹೊಳೆ ತುಂಬೆ, ನೆವಾರ್ಳ, ಮವಲಂಗಮರ, ಹೊಳೆನೆಕ್ಕಿ, ನೆರಮಂಬಳೆ, ತುಡೆ ಮದಿರಂಗಿ, ಹೊಡ್ಡೆಲೆನಗೆ (ಮೈಡಿಗಿ. ೨೫-೪೬೬). 'ನೆವಾರ್ಳ' ಪರಾ.

[ ? ]

**ನೆರವಣಿಗೆ$_1$** (ನಾ). **೧. ಗುಂಪು; ಸಮೂಹ :** ಸುಭಟರ ನೆರವಣಿಗೆ ನಿಪ್ಪಸರದಲಿ ಮುಸುಕಿತು ಧನಂಜಯನ (ಕುಮ್ಯಾಶ. ೨-೫೫). **೨. ಹೊಂದಾಣಿಕೆ; ಸೇರುವೆ; ಕೂಟ :** ಹಿರಿಯ ನೀ ಧರ್ಮಜಗೆ ನೀನೆಲೆ ನಿರುತ ಕಾರಣ ಪ್ರಕೃತಿ ಪುರುಷರ ನೆರವಣಿಗೆ ಹರಿಸಿರಿಯನಿಬ್ಬರನುಳಿದು ಭೂಗಣಕೆ ಮರುತನಾತ್ಮಜ ನಿನಗೆ ಸರಿಯಾ ಧರೆಯ ಜೀವರೊಳಾರು (ಸಂಭಪ. ೨೨-೨೯). **೩. ಗಳಿಕೆ ; ಸಂಪಾದನೆ :** ಅಱಿದಯುವರಿಗೆ ಆತ್ಮವಿದ್ಯೆಯನಱಿವುವದಱಿಂದಧಿಕಪುಣ್ಯದ ನೆರವಣಿಗೆ ಬೇಱಾವುದು (ಸಿಭಾಗ.. ೭-೧-೨). [ನೆರೆ$_1$ +–ವಣಿಗೆ].

**ನೆರವಣಿಗೆ$_2$** 'ನೆಱವಣಿಗೆ' ನೋ.

**ನೆರವಣಿಗೆ$_3$** (ನಾ). **ಸಹಾಯ ; ಬೆಂಬಲ : ನೆರವು :** ಉಷ್ಣಕ್ಕೆ ಶೈತ್ಯ ನೆರವಣಿಗೆಯಾದಂತೆ (ಸರ್ವಪ. ೨೦-೯೫). [ನೆರ$_2$ +–ವಣಿಗೆ]

**ನೆರವಣಿಗೆಗೊಳಿಸು** (ಕ್ರಿ). **ಪೂರ್ಣಗೊಳಿಸು; ಮುಗಿಸು :** ಸ್ನಾನಾದಿ ನಿತ್ಯಕರ್ಮಾನುಷ್ಠಾನ ತಿರುವಾರಾಧನಂಗಳಂ ನೆರವಣಿಗೆಗೊಳಿಸಿ (ಚಿಕಪಂ. ೭೩-೪). [ನೆರವಣಿಗೆ$_2$(<ನೆಱವಣಿಗೆ)+ಕೊಳ್$_1$ +–ಇಸು$_3$]

**ನೆರವರ್** 'ನೆರಂಬರ್' ನೋ.

**ನೆರವಲ್$_3$, ನಿರವಲ್, ನೆರವಲ್$_2$, ನೆರವಲು** (ನಾ). [ಸಂಗೀತ] "ರಾಗ ಭಾವ ಪೂರಿತವಾಗಿ ಮಾಡಿದ ಸಾಹಿತ್ಯ ಸಂಗೀತ ವಿಸ್ತರಣೆಯೇ ನಿಜವಾಗಿ 'ವಿನ್ಯಾಸ' ಅಥವಾ 'ನೆರವಲ್' ಎನಿಸಿಕೊಳ್ಳುತ್ತದೆ" (ಸಂಗೀಚಿ. ೯೩) : ಕೆಲವು ಪಲ್ಲವಿಗಳಿಗೆ ಸಂಗತಿಗಳೂ

ಇರುವುದುಂಟು. ಅವನ್ನು ನೆರವಲ್‌ಗೆ ಮುಂಚೆಯೇ ಹಾಡಬೇಕು (ಸಂಗೀಚಂ. ೯೩). **ನಿರವಲ್ :** ಈ ರೀತಿಯ ಸಮಯಸ್ಫೂರ್ತ ಸಂಗೀತಕ್ಕೆ ಐದು ಅಂಗಗಳಿವೆ. ಆಲಾಪನೆ, ತಾನ, ಪಲ್ಲವಿ, ನಿರವಲ್ ಮತ್ತು ಸ್ವರ (ಸಂಗೀತ. ೧). **ನೆರವಲ**$_2$ **:** ಸತತ ಅಭ್ಯಾಸದಿಂದ ಪಲಕು ಗಳು, ನೆರವಲಗಳು ಲೀಲಾಜಾಲವಾಗಿ ನುಡಿಯುತ್ತಿದ್ದವು (ನಟಸಾ. ೫೯). **ನೆರವಲು :** ಅವರ ಹಾಡುಗಳನ್ನು ನಮ್ಮ ಕಚ್ಚೇರಿಗಳಲ್ಲಿ ಸ್ವಲ್ಪ 'ನೆರವಲು' ಮಾಡಿ, ನಾಲಕ್ಕಾವರ್ತಿ ಸ್ವರಗಳನ್ನು ಬೆಳೆಸಿ ಹಾಡಿ ಹಾಡಿಸಿ ನೋಡಬಾರದೆ ? (ಗಾನಕ. ೧೦೮) ; ರಾಗಾಲಾಪನೆ, ನೆರವಲು, ಸ್ವರಕಲ್ಪನೆ ಮತ್ತು ತಾನ ಎಂಬ ಹೆಸರುಗಳಲ್ಲಿ . . . ಸೃಷ್ಟಿಸುವ ಅಂಶಗಳನ್ನು ಒಳಗೊಂಡುದು ಆಧುನಿಕ ಕರ್ಣಾಟಕಸಂಗೀತವೆನ್ನಬಹುದು (ಕವಿಕೋ. I, ೭೮೭). [ ? ]

**ನೆರವಲ**$_1$ (ನಾ). ಸಹಾಯಕಸೈನ್ಯ,—ದಳ : ಪಾರದೆ ಕೈದುವ ಬಲಮಂ ಪಾರದೆ ನೆರವಲಮನೊಂದೆ ತೋಳ್ವಲದಿಂ ಸಂಹಾರಿಸಿದಂ ಮಾರ್ಬಲಮಂ ವಾರಿಜನಾಭಂಗೆ ಸಂಗರಕ್ಕಿದಿರುಂಟೇ (ಪಂರಾಮಾ. ೪–೬೫). [ನೆರ$_2$+ಬಲ$_3$]

**ನೆರವಲ**$_2$ 'ನೆರವಲ್' ನೋ.

**ನೆರವಲು** "ನೆರವಲ್' ನೋ.

**ನೆರವಾನ್** (ಕ್ರಿ). ಸಹಾಯವನ್ನು ನೀಡು : ಆತಂಗೆ ನೆರವಾಂತ ನಾಲ್ಕುಮುಪಾಯದಂತೆ ನಾಲ್ಕುಂ ಪುರುಷಾರ್ಥದಂತೆ ಮೈಗೊಂಡು ಪುಟ್ಟಿದ ನಾಲ್ವರ್ ಕುವರರೊಳ್ ಪಿರಿಯ ರಾಮಂಗೆ ಪಟ್ಟಾಭಿಷೇಕ ಮಾಯ್ತು (ರಾಮಾಶ್ವ. ೭–೧೨). [ನೆರವು$_2$(<ನೆರ$_2$) + ಆನ್$_1$]

**ನೆರವಾನಿಸ** (ನಾ). "ಸಹಾಯಕ ಪುರುಷ" (ಪ್ರಭಣ್ಣ) : ನರಗಟ್ಟು, ನೆರವಾನಿಸಂ, ಬರವಟ್ಟ (ಶಬ್ದಾನು. ೩೩೨ ಪ್ರಯೋ).
[ನೆರ$_2$ + ಮಾನಿಸ$_1$(<ಮಾನುಸ)]

**ನೆರವಿ,** ನೆರಹಿ, ನೆರೆವಿ (ನಾ). **೧.** ಗುಂಪು; ಸಮೂಹ ; ಸಮುದಾಯ: "ಬಂಬಲ್, ತುಱುಗಲ್, ವಂಗಡಂ . . . ನೆರವಿ, ಬಳಗಂ . . . ಗೊಂದಣಿ(ಉಂದಲ್)—ಈ ४೦ ಸಮೂಹಂ" (ಕಶಸಾ.೫೬–೨೨೨); ಇತ್ತ ಇರುಳಿನೋಲಗದೊಳ್ ನೆರೆದಿರ್ದ ನೆರವಿಯೊಳ್ (ಪಡ್ಡಾರಾ. ೮೨–೪); ಭೀಮಸೇನನಾ ನೆರೆದ ನೆರವಿಗಿಂತೆಂದಂ (ಪಂಪಭಾ. ೧೨–೧೬೦ಪ); ನೆರೆದ ನೆರವಿಯೆಲ್ಲಂ ತಮ್ಮೊಳಿಂತೆಂದರ್ (ಧರ್ಮಾಮೃ. ೬–೧೨೪); ರಸಪೂರಮತಿಗಭೀರಂ ಕಾವ್ಯಂ ನೀರಸರಜಾವಂತೇನಿದು ತಾರೆಲೆಯೋ ಬೀದಿವಾಡೆ ನೆರವಿಯ ತುಮುಳಕೇ (೧ರಿಕ.೧–೩೦) ; ವಿಹಗವಿತತಿಯ ನೆರವಿ ಗಳಲೊಪ್ಪುವ ಮಹಾಕಾನನವ ಪ್ರಭು ಕಂಡ(ಪ್ರಭುಲಿೀ.೨೦–೧೭); ಗರುಡರ ಸಮುದಾಯಮುಂ ಮಯೂರರ ನೆರವಿ . . . ರಾಗದಿಂದೀಶನೋಲಗಕೆ ಬರುತಿರ್ದುದು (ಚಬಪು.೨–೧೬) ; ನದಿಗಳೊಳ್ ಸುರಗಂಗೆ ತಾರೆಗಳೊಳಂ ರೋಹಿಣಿಯು ತೀರ್ಥನೆರವಿಯೊಳ್ ಮಣಿಕರ್ಣಿಕೆಯವೊಲಾ ಸತಿಯ ರೊಳ್ಶರ್ವಾಣಿ ಶೋಭಿಸಿದಳು (ನಂದಿಮಾ. ೭–೯). **೨.** ರಾಶಿ; ಮೊತ್ತ : ನರವಿನ ನೆರವಿಯೊಳ್ಗೊಟಲ್ದು ನೋಡಿಯುಂ (ಗದಾಯು. ೬–೨೮ ಪ) ; ಮುರಿಮುರಿದು ಕಬ್ಬೊಗೆಯ ಹೊದಱಿನ ಹೊರಳಿ ಹರೆದುದು ಸೂಸುಗಿಡಿ ಗಳ ನೆರವಿ ನಸಿದುದು (ಕುಪ್ಯಾದ್ರೋ. ೧೯–೫೦) ; ಪರುಷವಿಲ್ಲದ ಭೂಮಿ ಮುತ್ತಿನ ನೆರವಿಯಿಲ್ಲದ ಮಣಲು ಹೊಂದಾವರೆಗಳಿಲ್ಲದ ತಿಳಿಗೊಳಂಗಳವಿಲ್ಲ ಮತ್ತಲ್ಲಿ (ಸಾಳ್ವಭಾ. ೧–೫೮) ; ಶರಧಿಮಥನದೊಳ್ ನೊರೆಗಳ ನೆರವಿಯು ನಿರದಾಂತು ಪರಿವ ತೆರೆಗಳ ಸಿರಿಯಂ ಧರಿಸಿ ಪರಿದುದು ತುರಂಗೋತ್ಕರ ಮಾನನಫೇನಖಂಡಷಂಡದಿನಾಗಳ್ (ರಾಜಶೇ. ೬–೫೯) ; ಪೊಳೆಯುತಿಹ ಬಿದಿರುಗಳ ನೆರವಿಯೆಂಬ ಕೊಳಲಿಂದೆ ಮಾರುತನು . . . ತುತಿಸುತಿರಲು (ಕವಿಕಾ. ೧–೮). **೩.** ದಟ್ಟಣೆ ; ದಟ್ಟೈಸುವಿಕೆ: ಸುರನದೀ ತೀರದಲು ರಾತ್ರಿಯ ನೆರವಿಯಲು ವಿಸ್ತರಿಸಿ ಪಾಂಡವರರಸಗಱುಹಿದನಂದು ಕಥೆಯ ಸಹಸ್ರಬಾಹುವಿನ (ಸಂಭಪ. ೨೫–೬೪). **೪.** ಆಧಿಕ್ಯ ; ಅತಿಶಯತೆ : ವಿನಯಸಂಪನ್ನತಾವಿನಯದ ನೆರವಿಯುಂ (ತತ್ತ್ವಪ್ರ. ೨೬೫). **೫.** ಬೀಗರೂಟ : ಬೀಗರು ಮಾಡಿದ ನೆರವಿ ಭರ್ಜರಿಯಾಗಿತ್ತು (ರೂಢಿ). **ನೆರಹಿ : ೧.** ಸಂತೆಯ ನೆರಹಿಯಲ್ಲಿ ಅಭಿಮಾನದ ಮಾತ ಮಾಱಬಹುದೆ (ಶೂನ್ಯಸಂ. ೧೧೧–೭೯) ; ಅರಸ ಕೇಳ್ಳೆ ಬೇಂಟೆಗಾಱರು ಕರೆಯ ಬಂದರು ಮೃಗನಿಕಾಯದ ನೆರಹಿ[ಪಾಠಾಂ.ವಿ]ಗಳ ನೆಲೆಗೋಳಿಸಿ ಪಾಂಡುನೃಪಾಲ ನೋಲಗಕೆ (ಕುಪ್ಯಾಆ. ४–೧೧). **ನೆರವಿ : ೧.** ತರುಣ ಹರಿಣಾಕ್ಷಿ ಬಿಂಕಂಬೆರಸೊರ್ವಳ್ನೋಡ ಗಳಿಗೆಗೋರಡಿಯಂ ವಿಸ್ತರದಿಂದಿಡುತುಂ ಬಂದಳ್ ನೆರವಿಯ ನೋಟಕರ ಮನಮನಲ್ಲಾಡಿಸುತುಂ (ಧರ್ಮಾಮೃ. ೭–೧೮೮).
[ನೆರೆ$_1$ + -ವಿ$_1$]

**ನೆರವಿಗ**$_1$ (ನಾ). ಸಹಾಯ ಮಾಡುವವನು ; ಸಹಾಯಕ : "ಸಹಾಯಕ ; ನೆರವಿಗ ; ಸಹಕಾರಿ" (Accessary. ಇಂಕನಿ); ಅರಸಂ ನೇಹಿಗನೊಲ್ಮೆಗಂ ನೆರವಿಗಂ ಕಾವಂ ಹಿತಂ ತೆತ್ತಿಗಂ (ಅಪ್ರತಿ. ೧४–೮೩); ನೆರವಿಗನು ಮೇಣ್ ರಕ್ಷಕನು ನೀನೊರ್ವನೆಯೆ (ಮೂರುನಾ. ೧೦೮) ; ಅವರಿಗೆ ನೆರವಿಗನಾಗಿ ನಾನು ಕೆಲಸ ಮಾಡುತ್ತಿದ್ದೆ (ಕಂನಾಸಾ. ೧೩೦) ; ತೋಳ್ನಿಗಹಿ ನೆರವಿಗರ ಕರೆಯುತಳುತಿತ್ತು (ಕಾಲೂರ. ೧೩೯–೩೦೧).
[ನೆರವು$_2$(<ನೆರ$_2$) + -ಇಗ]

**ನೆರವಿಗ**$_2$ (ನಾ). ಗುಂಪಿನಲ್ಲಿರುವವನು ; ಸಮೂಹದಲ್ಲಿ ಸೇರಿ ದವನು : ಇಕ್ಕೆಲದ ನೆರವಿಗರು ಕೆಲಬಲಕೊಕ್ಕು ಸರಿದರು (ತೊರರಾ. ೨–೩–೧೦) ; ಏನಿದಚ್ಚರಿಯೆಂದು ನೆರವಿಗರ್ಬಳಿಕ ಸುಮ್ಮಾನದೆ ಮೇಗ ನಿಟ್ಟಿಸುತ ಮಾನಿಸಿಯಾಸ್ಯೇಂದುಮಂಡಲವನು ಕಂಡಾನಂದವಿಡಿದು ನುಡಿ ದರು (ಕಂಸವಿ. ೯–೮೯) ; ಆ ನೆರವಿಗರ ಸಂತೆಯನ್ನು ಚೆದುರಿಸಲು ಸೈನ್ಯವು ಪ್ರಯತ್ನಿಸಿದುದು ಸಾರ್ಥಕವಾಗಲಿಲ್ಲ (ವಿಗಡ. ೮–೧೧).
[ನೆರವಿ+-ಗ$_2$]

**ನೆರವಿದೊಳಸು** (ನಾ). ತುಮುಲ ; ಗೊಂದಲ ; ಕ್ಷೋಭೆ : ತುರಗ ಗಜಘಟೆ ಬೀದಿವರಿದವು ನೆರವಿದೊಳಸಿನ ಮನ್ನೆಯರ ಸೆಣಸಿದರು ಶೂಳದಲಿ (ಕುಪ್ಯಾದ್ರೋ. ೭–೭).
[ನೆರವಿ+ತೊಳಸು$_4$(<ತೊಟಸು$_2$)]

**ನೆರವಿವಡೆ** (ಕ್ರಿ). ಸಮೂಹಕ್ಕೆಲ್ಲ ತಿಳಿ ; ಸರ್ವಶ್ರುತವಾಗು ; ಖ್ಯಾತಿಹೊಂದು ; ಪ್ರಸಿದ್ಧವಾಗು : ಮೂಱುಲೋಕಮುಂ ಕರ್ಣಾ ರ್ಜುನರ ಯುದ್ಧಮಂ ನೋಡಲ್ ನೆರೆದಲ್ಲಿ ನೆರವಿವಡೆದೆನ್ನ ಪ್ರತಿಜ್ಞೆಯಂ ನೆಱಪಲಿಂದವಸರಂಬಡೆದೆನೆಂದು . . . ಪವನತನಯಂ ಬದ್ಧವಪುವಾಗಿ ದುರ್ಯೋಧನಾನುಜರಂ ಪೆಸರ್ವೆಸರೊಳೆ ಕರೆದು ಮೂದಲಿಸಿದೊಡೆ (ಪಂಪಭಾ. ೧೨–೧೪೪ ಪ). [ನೆರವಿ + ಪಡೆ$_1$]

**ನೆರವೀ,** ನೆರವೀಯು (ಕ್ರಿ). ಬೆಂಬಲ ನೀಡು ; ಸಹಾಯಮಾಡು: ಪರಮನಾ ರೂಪದಲಿ ನೆರವೀಯಲಱಿಯದೆ ನರನಾಗಿ ಬಂದು ವರವೀವ ಗುರುವಿಂಗೆ ಸರಿಯಾರ ಕಾಣೆ (ಸರ್ವಜ್ಞ. ४೯) ; ಬೆಂಗೊಂಡು ಬಾಳ್ವೆ ಯೊಳ್ ಹೊರಲಾರದಿಹ ಹೊರೆಗೆ ತಂಗಿ ತಲೆಗೊಟ್ಟು ನೀ ನೆರವಿತ್ತೆಯೆನಗೆ (ಕಾಲೂರ. ೧೭೮–४೦೨) ; ಆ ಪರ ಊರೊಳು ತಂದೆಯ ಗೆಳೆಯರು . . . ಓದಿಗೆ ನೆರವಿತ್ತರವರು (ಇಂಚಾಪ. ೨೦–೮೮). **ನೆರವೀಯು :** ಬ್ಯಾಂಕಿಗೆ ಪೇಟೆಯ ವಿಚಾರದಲ್ಲಿ ನೆರವೀಯುವ ಬುದ್ಧಿ ಇದೆ ಎಂಬುದು ಅರ್ಥ (ಹಣಪ್ರ. ೧೮೬). [ನೆರವು$_1$(<ನೆರ$_2$) + ಈ$_2$]

**ನೆರವೀಯು** 'ನೆರವೀ' ನೋ.

**ನೆರವು**$_1$ 'ನೆರ$_2$' ನೋ.

**ನೆರವು**$_2$ 'ನೆಱವು$_1$' ನೋ.

**ನೆರವುಟ್ಟು** (ಕ್ರಿ). ಸಹಾಯವೊದಗು ; ಬೆಂಬಲವುಂಟಾಗು : ಪುಟ್ಟಿದನಾಕೆಗೆ ಮಗನೊಡವುಟ್ಟಿ ಮಹಾಭಾಗಧೇಯಲಕ್ಷಣನಿಕರಂ ಪುಟ್ಟಿ ಧರಾಭಾರಕೆ ನೆರ[ರ್ಪು]ಟ್ಟಿದುದೆಮಗೆಂಬ ನಲವು ದಿಗ್ದಂತಿಗಳೊಳ್ (ಚಂದ್ರಪ. ೩-೯೩). [ನೆರ್$_2$ + ಪುಟ್ಟು$_1$]

**ನೆರವುತಪ್ಪು** (ಕ್ರಿ). ಆಶ್ರಯ ತಪ್ಪಿಹೋಗು ; ಆಸರೆ ಇಲ್ಲವಾಗು: ಕೂಳ ಭಣಗಿಗೆ ನೆರವುತಪ್ಪಿದುದೆಂಬ ನಾಣ್ಣುಡಿಯಾಯಿತು (ಬಸವು. ೫೭-೧೩). [ನೆರವು$_1$ (<ನೆರ್$_2$) + ತಪ್ಪು$_1$]

**ನೆರವುನೀಡು** (ಕ್ರಿ). ಸಹಾಯಮಾಡು ; ಬೆಂಬಲಕೊಡು : ಹೀಗೆ ಭಕ್ತರು ಲೋಕಸಂಗ್ರಹಕಾರ್ಯದಲ್ಲಿ ತುಂಬ ನೆರವುನೀಡಿದ್ದಾರೆ (ಧರ್ಮಸಾ. ೧೫೧). [ನೆರವು$_1$(<ನೆರ್$_2$) + ನೀಡು$_1$]

**ನೆರವುಬರು** 'ನೆರಂಬರ್' ನೋ.

**ನೆರವುಸಂಬಳ** (ನಾ). ಸಹಾಯಕ್ಕೆ ಬರುವ ಬುತ್ತಿ,-ಪಾಥೇಯ,-ಊಟದ ಸಾಮಗ್ರಿ : ಹರಿಗುಣಶ್ರವಣಾನುಕೀರ್ತನ ಚರಣಸೇವೆಗಳೆಂಬ ನಂಬಿದ ನೆರವುಸಂಬಳದಿಂದ ದುಸ್ತರಮಾರ್ಗವನು ಕಳೆದು (ಶಿಭಾಗ. ೪-೧೫-೯) ; ಹರಿಪರಾಯಣರೆಂದೊಡವರನು ನೆರವುಸಂಬಳ ಸಹಿತ ಮನ್ನಿಸಿ ಪರತರಾತ್ಮಾನಂದಪದವೆಂಬೂರ ಹೊಗಿಸುವಳು (ಶಿಭಾಗ. ೫-೮-೨೫).
[ನೆರವು$_1$(<ನೆರ್$_2$)+ಸಂಬಳ$_2$(=ಸಂಬಲ)]

**ನೆರವುಹಾಕು** (ಕ್ರಿ). ಹೆಪ್ಪುಹಾಕು : ಹಾಲಿನಲ್ಲಿ ಬೆಣ್ಣೆಯಿರುವುದು ರಹಸ್ಯ. ಈ ರಹಸ್ಯವನ್ನು ಮೊತ್ತಮೊದಲು ತಿಳಿದುದು 'ಸಂಶೋಧನ'. ಆ ಬೆಣ್ಣೆಯನ್ನು ಪಡೆಯುವುದಕ್ಕಾಗಿ ಮೊದಲು ಮಾಡಿದ ಕ್ರಿಯೆಗಳು (ನೆರವು ಹಾಕಿ ಮೊಸರು ಮಾಡಿ ಕಡೆಗೋಲಿನಿಂದ ಕಡೆದುದು)ಸಂಶೋಧನ ಕಾರ್ಯ (ಸಂಶೋಧ. ೧೪೫).
[ನೆರವು$_1$(<ನೆರ್$_2$)+ಹಾಕು(<ಪಾಯ್ಯು$_1$)]

**ನೆರವೇರಿಸು** (ಕ್ರಿ). ೧. ಈಡೇರಿಸು ; ಪೂರ್ಣಮಾಡು : ನೀನೂ ಭೂಷಣನ ಮದುವೆಗೊಪ್ಪಿ ಶುಭಕಾರ್ಯ ನೆರವೇರಿಸಬಾರದೇ ? (ಕಂಕಕೂ. ೪೧) ; ಹಿರಿಯ ರಾಜಕುಮಾರನಾದ ತಿರುಮಲದೇವರಿಗಿನ್ನೂ ಆರು ವರ್ಷಗಳಾಗಿದ್ದಾಗಲೇ ರಾಯನು ಆತನಿಗೆ ಪಟ್ಟಾಭಿಷೇಕಮಹೋತ್ಸವವನ್ನು ನೆರವೇರಿಸಿ ಬಿಟ್ಟನು (ಕೃದೇಸ. ೧೪). ೨. ಪಾಲಿಸು ; ಶಿರಸಾವಹಿಸು : ರಾಜನ ಆಜ್ಞೆಯನ್ನು ನೆರವೇರಿಸಲು ಇಬ್ಬರು ಸಿಕ್ಕಿದರು (ಪ್ರಪಾಇ. II, ೧೯೪). [ನೆರವೇರು + -ಇಸು$_3$]

**ನೆರವೇರು** (ಕ್ರಿ). (ಕೆಲಸ, ಯೋಚನೆ ಮುಂತಾದುವು) ಈಡೇರು; ಪೂರ್ಣವಾಗು : ಕೃತಿಯು ನೆರವೇರಲೋಸುಗ ಪ್ರತಿದಿನದಲ್ಲಿ ರಾಜನುತಿಗೈಯ್ಯೆ ವೆಂಕಟರಮಣಶರ್ಮಂ (ಸೌಪಲ. ೧-೩) ; ಸದುದ್ದೇಶವು ನೆರವೇರಲು ಇದೊಂದೇ ಮಾರ್ಗ (ಪ್ರೈಮಹ. ೧೪೪) ; ಇದು ನೆರವೇರದ ಯೋಚನೆ (ಪ್ಯಾಸಪಿ. ೧೪೩) ; ಎಲ್ಲರ ಆಸೆಗಳೂ ನೆರವೇರಲು ಅವಕಾಶವಾಗುತ್ತದೆ (ಹಣಪ್ರ. ೧೧).
[ನೆರವು$_2$(<ನೆಱವು$_1$)+ಏರು$_1$(<ಏಱ್$_1$)]

**ನೆರಸು** 'ನೆರೆಯಿಸು' ನೋ.

**ನೆರಹಿ** 'ನೆರವಿ' ನೋ.

**ನೆರಹಿಸು** (ಕ್ರಿ). ಗುಂಪುಗೂಡಿಸು ; ಒಟ್ಟುಮಾಡು : ಹೊಳಲ ಪರಿವಾರಕೆ ಸಾಱಿಸು ಕೆಲಬಲದ ರಾಯರಿಗೆ ದೂತರ ಕಳುಹಿ ನೆರಹಿಸು ಕಾದಿಸೆಂದನು ಕೌರವರ ರಾಯ (ಕುಪ್ಯಾಭೀ. ೧-೮).
[ನೆರಹು$_1$(<ನೆರಪು)+-ಇಸು$_3$]

**ನೆರಹು**$_1$ 'ನೆರಪು' ನೋ.

**ನೆರಹು**$_2$ (ನಾ). ಗುಂಪು ; ಸಮೂಹ ; ಸಮುದಾಯ : 'ನೆರಹುಗೂಡು' ಪರಾ. [<ನೆರಪು]

**ನೆರಹುಗೂಡು** (ಕ್ರಿ). ಗುಂಪಿನಲ್ಲಿ ಸೇರು ; ಜನಸಮುದಾಯದಲ್ಲಿ ಬೆರೆ : ನೆರಹುಗೂ[ಪಾಠಾಂ. ಗು]ಡದೆ ಏಕಾಂತದೊಳಗಿರಬೇಕು ನೆರಹಬೇಕಮಲಗುಣ ಪರವಸ್ತುಗಳನು (ಶಿಪಗೀ. ೧೪೩-೭೩೧ ; ಮಹಾದೇ. ೫. ೯೫-೨೨೨ ನೋ). [ನೆರಹು$_2$ + ಕೂಡು$_1$]

**ನೆರಳ್**$_1$ 'ನರಲ್$_1$' ನೋ.

**ನೆರಳ್**$_2$ 'ನೆಟಿಲ್$_1$' ನೋ.

**ನೆರಳು**$_1$ 'ನರಲ್$_1$' ನೋ.

**ನೆರಳು**$_2$ 'ನೆಟಿಲ್$_1$' ನೋ.

**ನೆರಳು**$_3$ (ನಾ). ಒಂದು ಬಗೆಯ ಸಸ್ಯ : "ಛರ್ಧಿಘ್ನ—ನೆರಳು (ನೇಱಿಲ್ ?)" (ಓಷಧಿ. ೫೮). [ ? ]

**ನೆರಳುಕೊಡು** (ಕ್ರಿ). ಆಶ್ರಯ ಕೊಡು ; ಆಸರೆ ನೀಡು : ನೆತ್ತರಿಳಿದರೂ ಏನಾತು, ನೆರಳು ಕೊಟ್ಟವರ ಮನಿ ನಡಸಾಕ ಬ್ಯಾಡ? (ಹೊಸಂಸಾ. ೧೪೮). [ನೆರಳು$_2$(<ನೆಟಿಲ್$_1$) + ಕೊಡು$_1$]

**ನೆರಳುನಾಟಕ** (ನಾ). ಪರದೆಯ ಮೇಲೆ ನೆರಳುಗಳು ಬೀಳುವಂತೆ ಮಾಡಿ, ನಟರು ಪರದೆಯ ಹಿಂದೆ ನಡೆಸುವ ಆಟ ; ಛಾಯಾನಾಟಕ ; ನಾಟಕದಲ್ಲಿ ಒಂದು ಪ್ರಯೋಗ : ಈ ಎರಡು ಮಹಾಕಾವ್ಯಗಳು ಅಲ್ಲಿಯ ನಾಟಕ, ನೃತ್ಯ, ನೆರಳುನಾಟಕ ಮತ್ತು ಬೊಂಬೆಯಾಟಗಳಿಗೆ ಕಥಾವಸ್ತುಗಳನ್ನು ಒದಗಿಸಿ ಕೊಟ್ಟಿವೆ (ಕಪಪು. ೬-೮೪).
[ನೆರಳು$_2$(<ನೆಟಿಲ್$_1$) + ನಾಟಕ]

**ನೆರಳುನೀಡು** (ಕ್ರಿ). ನೆರಳು ಕೊಡು ; ಆಶ್ರಯ ನೀಡು : ಕಾಲಕಾಲಕ್ಕೆ ಭಾರತೀಯ ಸಂಸ್ಕೃತಿ ಬೆಳೆದು ಮಹಾವಟವೃಕ್ಷವಾಗಿ ನೆರಳು ನೀಡಿ ನಿಂತಿರುವ ಕಥೆ ಈ ಪುರಾಣಗಳಿಂದ ಚೆನ್ನಾಗಿ ತಿಳಿದುಬರುತ್ತದೆ (ಭಾರದ. ೧೩೨). [ನೆರಳು$_2$(<ನೆಟಿಲ್$_1$) + ನೀಡು$_1$]

**ನೆರಳುಹಾಕು** (ಕ್ರಿ). ನೆರಳು ಬೀಳಿಸು : ಉಲ್ಕಾಪಾತದ ಜ್ವಾಲೆಯಂತೆ ಹೊಳೆಯುತ್ತಿದ್ದ ಆದರ ಹೊಳಪಿಗೆ ಮರಗಳೆಲ್ಲ ನೆರಳು ಹಾಕುತ್ತಿದ್ದವಂತೆ (ಯೋಧಪು. ೫೫). [ನೆರಳು$_2$(<ನೆಟಿಲ್$_1$) + ಹಾಕು(<ಪಾಯ್ಯು$_1$)]

**ನೆರಿ** 'ನಿಱು$_2$' ನೋ.

**ನೆರಿಕೆ** 'ನೆರಕೆ$_1$' ನೋ.

**ನೆರಿಕೆಮನೆ** (ನಾ). ತಡಿಕೆಗಳಿಂದ ಮಾಡಿದ ಮನೆ : ಆರಕಲ್ಲೂಡ್ಪೇಟ್ಯವಳೆ ನೆರಿಕೇಮನೆಯುವ್ವೇ (ಹಳ್ಳಿಯ. ೫೬).
[ನೆರಿಕೆ(<ನೆರಕೆ$_1$) + ಮನೆ]

**ನೆರಿಗಂಟು** (ನಾ). ನಿರಿಗೆಯ ಗಂಟು : ಉಟ್ಟಿರುವ ಸೀರೆಯ ನೆರಿಗಂಟು ಮಲಯಮಾರುತ ಪ್ರೇರಣೆಯಿಂದ ಸಡಿಲಿ ಭೂಮಿಯಲ್ಲಿ ಬೀಳಲು (ಕೃಪಾಳ. ೧೫೬). [ನೆರಿ(<ನಿಱು$_2$) + ಗಂಟು]

**ನೆರಿಗುರುಳು** 'ನಿಱುಗುರುಳ್' ನೋ.

**ನೆರಿಗೆ** 'ನಿಱುಗೆ' ನೋ.

**ನೆರಿಗೆಗಟ್ಟು** 'ನಿರಿಗೆಗಟ್ಟು' ನೋ.

**ನೆರಿಗೆಬೀಳು** (ಕ್ರಿ). ನಿರಿಗೆಬೀಳು ; ನಿರಿಗೆಗಟ್ಟು : ನಿನ್ನ ಮುಖವೆಲ್ಲಾ ನೆರಿಗೆಬಿದ್ದು ಹೋಯಿತು (ಹಳ್ಳಹಾ. ೧೦೮) ; ಅವನ ಕಂದುಬಣ್ಣದ ಮೋರೆ ಸುಕ್ಕುಗಟ್ಟಿತ್ತು, ಆದರೆ ನೆರಿಗೆಬಿದ್ದಿರಲಿಲ್ಲ (ಮಹಾತ್ಮಾ. ೫).
[ನೆರಿಗೆ(<ನಿಱುಗೆ) + ಬೀಳು$_1$(<ಬೀೞ್$_1$)]

**ನೆರಿಪಿಡಿ** 'ನಿಱುವಿಡಿ' ನೋ.

**ನೆರಿಲ್** (ನಾ). ಒಂದು ಅನುಕರಣ ಶಬ್ದ : ಕಟವಾಯ್ಗೆ ಕೈಯನಿಟ್ಟರದೆರಳ್ ಸೀಳಾಗಿ ನಿಟೆ ನೆರಿಲ್ ನಿಟಿಲೆನಲ್ ನಿಟ್ಟಿಲುವನುಜೆ ಮುಱಿದು (ಚಿಬಪು. ೨೧-೬).

**ನೆರಿಹಿಡಿ** 'ನಿಱುವಿಡಿ' ನೋ.

**ನೆರೂರ್** (ನಾ). ಒಂದು ಊರಿನ ಹೆಸರು : ನೆರೂರ್ನ್ನಾಮಾಗ್ರಾಮ ಸ್ಸಭೋಗಸ್ಸರ್ವ್ವಬಾಧ(ಧಾ)ಪರಿಹಾರೋದತ್ತಃ (ಇಆ. IX, ೧೨೪-೩೪ ; 700). [? + ಊರ್]

**ನೆರೆ$_1$** (ಕ್ರಿ). ೧. ಸೇರು; ಜೊತೆಗೂಡು : "ನೆರೆ—ಸಂಯೋಗೇ (ಸೇರು), ಪಾರ್ಶ್ವೇ ಚ" (ಶಮಧಾ) ; ಅರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರಿಂ ಮಗುಟ್ದು ಂ ಬಿಜುತೋಡಿ ಬೇಡರೊಳ್ ನೆರೆದಿರಲಲ್ಲದೊಡ್ಡಯಿಸಿ ರಾಜ್ಯ ದೊಳೇಂ ನೆರೆಯಲ್ಕೆ ತೀರ್ಗುಮೋ (ಪಂಪಭಾ. ೮-೮೫) ; ತ್ರಿಭುವನ ತಿಲಕನ ಮನಮಂ ದಿವಿಜೆಯರೆ ನೆರೆದು ಗೆಂಟಾಗಿಸಿದರ್ (ಅಜಿಪು.೬-೧೦೨); ಸಕಲವಸ್ತುಗಳುಂ ತೆರಳ್ದು ನಿರ್ಭಾಗ್ಯರಂ ಬಿಟ್ಟು ಪುಣ್ಯಾಧಿಕರೊಳ್ ನೆರೆಗುಂ (ಧರ್ಮಾಮೃ. ೬-೧೨೮) ; ಹರಸೀವ ಕಾಲಕ್ಕೆ ಸಿರಿಯು ಬೆನ್ನಲ್ಲಿ ಬರ್ಕು . . . ನೆರೆಯುದ ವಸ್ತು ನೆರೆವುದು ನೋಡಯ್ಯಾ (ಬಸವ.೧೬೯) ; ಸದ್ಗುಣಸ್ತೋಮವೆಲ್ಲಂ ನೆರೆದು ರೂಪಾದುದೆನಿಸುವ ಮಹಾಮಹಿಮ ಹಂಪೆಯ ಹರೀಶ್ವರನ ಮೂರ್ತಿ ನೆಲಸಿರ್ಕೆನ್ನ ಚಿತ್ತದೊಳಗೆ (ಹಚಶಾ. ೧-೧೨). ೨. ಕೂಡು ; ಸಂಭೋಗಿಸು : "ಪಾರ್ಶ್ವ ಸಮ್ಮೇಳನ ಸುರತಗಳೊಳ್-ನೆರೆ" (ಶಬ್ದಮಂ. ೧೦೩) ; ಸ್ವರ್ಗಲೋಕದ ಸುರಾಂಗನೆ ಯರೊಳ್ನೆರೆದೊ (ಎಕ. XI, ಚಳ್ಳಕೆ. ೮-೫ ; ಸು. 810 ?) ; ನೃಪನಂದನನಾ ನೃಪವಧುವರ್ನೆರೆದು ಸುಖದೊಳಿರೆ (ಕವಿಸಾ. ೨-೨೧) ; ಆವುಪಾಯ ದೊಳಾದೊಡಂ ನೆರೆದಲ್ಲದಿನ್ನಿರೆನೀಕೆಯೊಳ್ (ಪಂಪಭಾ. ೮-೬೩) ; ಋತು ಕಾಲಪ್ರಾಪ್ತೆಯಾಗಿರ್ದ ಸರ್ವದೈತೆಯೊಳ್ ನೆರೆದು (ಚಾವುಂಪು. ೮೦) ; ಚಂದ್ರಾಪೀಡನೊಳ್ನೆರೆವ ಪುಣ್ಯಮೆನಗಿಲ್ಲ (ಕಾದಂಬ. ೪೪೮) ; ಕೂಸುಳ್ಳ ಸೂಳೆ ಧನದಾಸೆಗೆ ಒತ್ತೆಯ ಕೊಂಡರೆ ಕೂಸಿಂಗಲ್ಲ ಬೊಜಗಂಗಲ್ಲ ಕೂಸನೊಮ್ಮೆ ಸಂತಯ್ಸುವಳು ಬೊಜಗನನೊಮ್ಮೆ ನೆರೆವಳು ಧನದಾಸೆ ಬಿಡದು (ಬಸವ. ೧೦೧) ; ಮೈಮಱೆದು ಗುರುಸತಿಯನು ನೆರೆದೊಡೆ (ಹಚಶಾ. ಪರಿ. ೨೧೧). ೩. ಗುಂಪು ಸೇರು ; ಒಟ್ಟುಗೂಡು : ಮಹಾರಜರಾ ಸಮಸ್ತವಲಮುಂ ನೆರೆದುವನ್ನು (ಎಕ. X (S), ಚಿಂತಾಮ. ೧೬೯-೪ ; ಸು. 800) ; ಮತ್ತಿತ್ತ ಇರುಳಿನೋಲಗದೊಳ್ ನೆರೆದಿರ್ದ ನೆರವಿಯೊಳರಸನುಂ ಮಹಾದೇವಿಯುಂ ಕಿತ್ತಯ್ಯಂಗಳ ತಪಮುಂ ಗುಣಮುಮಂ ಪೊಗೞುತ್ತೆ (ವಡ್ಡಾರಾ. ೮೨-೪) ; ವರದತ್ತಂ ಮೊದಲಾಗೆ ಧರಣೀಶರವರ್ಗೆಲ್ಲಂ ಸುರಲೋಕಂ ಸುವಿಧಿಯೊಡನಾದುದಂತುಟೆ ನೆರೆದ ರನಿತೀ ಸುರಲೋಕಂ (ಆದಿಪು. ೬-೧೩) ; ನೆರೆದಿರ್ದನರ್ಭಕರೊಳ್ ಕುತೂಹಲಯುತನಿರ್ಪೋಡಲ್ ಗದಾಯುದ್ಧಮಂ (ಗದಾಯು. ೭-೬೭) ; ಗೌರಿಯ ನೋನುವ ಬನ್ನಿರೇ ಚಿಕ್ಕಮಕ್ಕಳೆಲ್ಲರೂ ನೆರೆದು (ಬಸವ. ೮೨) ; ನವಾಂಭೋಜದಿಜುಂಬಿನೊಳ್ ನೆರೆದುದೋರಂತಾ ರಥಾಂಗವ್ರಜಂ (ಕುಸುಮಾ. ೪-೭೪) ; ಸುರಪರಿವಾರ ನೆರೆದುದನೆಣಿಸಲಳವೇ ಕೋಟಜಿಹ್ವೆಯಲಿ (ಕುವ್ಯಾಅ. ೧೨-೧೧). ೪. ಗುಂಪುಗೂಡಿಸು ; ಒಟ್ಟುಗೂಡಿಸು : ಕರೆದು ನೆರೆಯುರ್ ಬೆದರ್ದು ಕೆದರ್ದವನ್ನು ಪಡೆಯಾಳ್ಗಳಂ (ತ್ರೀರಾಮಾ. ೬೪೧-೩೧೧). ೫. ಸೇರಿಹೋಗು ; ಬೆರೆತು ಹೋಗು; ಐಕ್ಯವಾಗು : ಬಲವೆಲ್ಲ ನೀರಲಿ ನೆರೆದುದೋ ಮಾರ್ಬಲದ ವೀರರು ಹರಿದುದೋ ಹವಣಿಲ್ಲ ದಂತಿಯ ಸಮರಸೌರಂಭ (ಕುವ್ಯಾದ್ರೋ.೩-೧೭) ; ಸಂಸಾರಕಾಗಳೆ ಬೆಚ್ಚಿ ವೈರಾಗ್ಯದಲಿ ನೆರೆದನು ಮೋಕ್ಷರಥನ್ನ ಪತಿ (ಸಾಳ್ವಭಾ. ೨೦-೭೬). ೬. ಉಂಟಾಗು ; ಪ್ರಾಪ್ತವಾಗು : ನೆರೆಯುದ ನರಕಾಯುಷ್ಯಮಂ ನೆರೆವುವನೆಂಬಂತೆ ಮುಳಿದು ಘೂರ್ಣಮಾನಲೋಹಿತ ಲೋಚನಂ ದಶನನಿಪೀಡಿತ ದಶನವಸನನಸಿಥೇನುವಂ ಕಿಱುತ್ತು (ಆದಿಪು. ೨-೧೪ ಪ) ; ನೆರೆವತಿತೃಷ್ಣೆಯಿಂ ಹೃದಯಮುಮಂ . . . ಕರಸರೋರುಹದೊಳ್ ಕದಪಂ ಲಲಾಟದೊಳ್ ಪಱಿದ ಕುರುಳ್ಗಳಂ ವಿರಹವಿಹ್ವಲೆಯಾಗಿ ಲತಾಂಗಿ ತಾಳ್ದುವಳ್ (ಕಾದಂಬ. ೩೩೩) ; ಹರಿದುದು ಚಿಂತೆ ಸಂತಸವಾಯ್ತು ರೋಮಾಂಚ ನೆರೆದುದಾಗಳೆ ದೇಹ ತುಂಬಿ (ಭರಚ. ೩-೫೬) ; ನುಡಿ ಬೇಸಱಂ ಬೆರೆಯೆ, ನಡೆಗಲಸು ನೆರೆಯೆ . . . ಸೀತೆ ಬಸಿಱಾದಳ್ (ರಾಮಾಶ್ವ. ೨೧-೯). ೭. ಹರಡು ; ವ್ಯಾಪಿಸು : ನಂಬಿರುವ ಸುಚರಿತರ ತೊರೆಯೆಯೆಂಬಾ ಕೀರ್ತಿ ಎಂದಿನಂತೆಯೆ ನೆರೆದು ಪೂಜ್ಯವಾಗುವುದು (ವಿಸೀಗೀ. ೨೩-೧೨). ೮. ನಡೆದುಕೊಳ್ಳು ; ವರ್ತಿಸು : ಮಂತ್ರಿಯುಂ ನೃಪತಿಯುಂ ಬಗೆಗೊಂಡನುಕೂಲವೃತ್ತಿಯೊಳ್ ನೆರೆದಿರೆ ಕೂಡುಗುಂ ನಿಖಿಳರಾಜ್ಯವಿಭೂತಿಗಳಾವ ಕಾಲಮುಂ (ಪಂಚತಂ. ೯೩-೨೨). ೯. (?) : ಪಾರ್ವತಿಯನೂನಮಾಗೆ ತೊಟ್ಟ ನವರತ್ನಖಚಿತದಿವ್ಯಾಭರಣಮಂ ನೆರೆವಂತೆ [ಪಾಠಾಂ. ಮೆಱೆಯೆ] ನಿಱಿ ವಿಡಿದುಟ್ಟ ದೇವಾಂಗವಸ್ತ್ರಾಪಶಾಖೆಯುಂ ತುಱುಂಬಿ ವಿಱುಪ ಪರಿಮಳ ಮನುಗುಟ್ಟ ಮಂದಾರಕುಸುಮದಾಮಂಗಳಿಂ (ಧರ್ಮಪ. ೩-೬೮ ವ).

**ನೆರೆನೆರೆ** (ದ್ವಿರುಕ್ತಿ) : ಪೊಡೆಯೆ ನೆರೆನೆರೆಯೆಂದು ನೆರೆದುದಾತನ ಕುಲಂ ಕಡುಶೋಕದಿಂ ಪುರಸ್ತ್ರೀಪುರುಷಸಂಕುಳಂ (ಇಱಾರ.ದೇ.೧೦೪-೧೮); ಜನಕದಂಬವಾ ಪೂಮಳೆಗೆ ಜನನಕ್ಕೆ ಶಿಶುಗೆ ಚೋದ್ಯಂಬಟ್ಟರಲ್ಲಲ್ಲಿ ತನತನಗೆ ಹರಿಹರಿದು ನೆರೆನೆರೆದು ನುಡಿನುಡಿದರು (ಸಿದ್ಧರಾ. ೨-೮) ; ಗಜಾರೋಹಣ ಧುರೀಣರಾದಾ ಧೋರಣರ್ನೆರೆನೆರೆದು ಪರಿಪರಿದು (ರಾಜಶೇ. ೬-೧೧ ವ).

**ನೆರೆವೊಡೆ ಗಂಡ, ನೆರವೊಡೆ ಗಂಡ, ನೆರೆಯೊಡೆ ಗಂಡ** = ಶತ್ರುಸೈನ್ಯವೆಲ್ಲ ಒಟ್ಟುಗೂಡಿ ಬಂದಾಗ ಹೆದರದೆ ಹೋರಾಡುವ ಶೂರ,— ಪರಾಕ್ರಮಿ ; ಒಂದು ಬಿರುದು : ವಿಬುಧಜನವನಜವನಪಾರ್ತ್ತಣ್ಡ ನೆರೆವೊಡೆ ಗಣ್ಡ ನವ್ಮ್ಮದಾನದುಖಭಯತಟರಾಜಹಂಸ (ಕಇ. IV, ೭೬-೯ ; 1060) ; [ಸಂಗ್ರಾ]ಮರಾಮಂ ಭುಜಬಳಭೀಮಂ ನೆರವೊಡೆ[ಗಣ್ಡಂ]ವ್ಯೆರಿಭೇರುಣ್ಡಂ ನಿಗಳಂಕಮಲ್ಲಂ (ನಾಂದೇಡ್. ೮-೧೩ ; 1070) ; ಪರಬಳ ಸಾಧಕಂ ನೆರೆಯೊಡೆ ಗಂಡ ಇಮ್ಮ × × × ಕಟಕದ [ಸೋ]ವಣ ದಣ್ಡ ನಾಯಕರ ಮಹಿಮೆಯೆನ್ತೆಂದಡೆ (ಸೌಇಇ. IX-i, ೩೧೭-೧೨; 1223).

**ನೆರೆವೊಡೆ ಬಂಟ** = ನೆರೆವೊಡೆ ಗಂಡ : ಸಮಧಿಗತಪಞ್ಚಮಹಾಶಬ್ದ ಮಹಾಸಾಮನ್ತಂ . . . ನೆರೆವೊಡೆ ಬಣ್ಟಂ ಗಿರಿದುರ್ಗ್ಗಮಲ್ಲ ಕೊಂಕಣ ಭಯಂಕರಂ ನಾಮಾದಿ ಸಮಸ್ತಪ್ರಸಸ್ತಿಸಹಿತಂ (ಸೌಇಇ. XI-i, ೪೭-೭ ; 995).

[ದೇ.॥ ತಮಿ. ನಿರೈ, ನಿರ, ನೆರುಙ್ಕು ; ತುಳು. ನೆರೆ, ನೆರಿ]

**ನೆರೆ$_2$** (ಕ್ರಿ). ೧. ಸುತ್ತು ; ತಿರುಗು ; ಚಲಿಸು : (ಕಿ). ೨. ದಿಗ್ಭ್ರಮೆಗೊಳ್ಳು ; ತಬ್ಬಿಬ್ಬಾಗು : (ಕಿ). ೩. ಆತುರ ಪಡು ; ಉತ್ಸಾಹ ವನ್ನು ಹೊಂದು : (ಕಿ). [ ? ]

**ನೆರೆ$_3$** 'ನೆಱೆ$_1$' ನೋ.

**ನೆರೆ$_4$** 'ನರೆ$_1$' ನೋ.

**ನೆರೆ$_5$** (ನಾ). ೧. ಪಕ್ಕ ; ಪಾರ್ಶ್ವ ; ಮಗ್ಗುಲು : "ನೆರೆ—ಸಂಯೋಗೇ (ಸೇರು) ಪಾರ್ಶ್ವೇ ಚ" (ಶಮಧಾ) ; ಅರೆಭಕ್ತರಾದವರ ನೆರೆ ಬೇಡ ಹೊರೆ ಬೇಡ (ಬಸವ. ೧೩೩) ; ನೆರೆಯ ಹೊರೆಯ ದುರ್ಗಂಗಳನಿಳಿಸಿ ತನ್ನಂ ಮಱೆವುದು (ಎಇ. XIV, ೨೭೧-೨೦ ; 1173) ; ಕೇರಿಯೊಳಾದೊಡಂ ನೆರೆಯೆಂಬುದಂ . . . ಸೈರಿಸಂ (ಕಬ್ಬಿಕಾ. ೧೪೮) ; ಪಾರಿಜಾತಂ ನೆರೆಯೊಳಿರುತಿರೆ ಭೂರುಹಂಗಳ ನೆಳಲನರ್ಥಿಸಿ ಸಾರಿದನವೊಲು (ಬಸವು. ೬೦-೪೬) ; ಎಲೆ ಖಳ ಮಾರಮಥನನ ನೆರೆಯ ಹೊಕ್ಕರು ಬಿಡುವನೇ ನಿನ್ನ (ಕೌತಿರಾ. ೩೬-೭೧) ; ನೆರೆಯ ಕಟ್ಟಾಳೊಬ್ಬನೊಳ್ಮೆಯಿಂ ಬಳಿವಿಡಿಯೆ (ಕಾಲೂರ. ೮೫-೧೬೨). ೨. ಸಮೀಪ ; ಹತ್ತಿರ : ಅಂಗಲಾಚುತ್ತವನ ತಾಯ್ತಂದೆಗಳ್ ನೆರೆಯ ಸಂಗಡಿಗ ಬಂಧುಬಳಗಂಗಳಳುತಿರೆ (ಚಬಪು. ೬-೩೦) ; ಹುಡುಕುವ ಕೊಪ್ಪರಿಗೆ ಕಣ್ಣಿನ ನೆರೆಗೆ ಖಣಿಲನೆನ್ದೊಲಾದುದು ಗೆಲವು ! (ಹಬ್ಬಿರ. ೨೦-೯೪).

**೩.** ನೆರೆಹೊರೆ ; ಅಕ್ಕಪಕ್ಕದ ಮನೆಯವರು : ಮನ್ನೆಯಂಗಾಜಿದೆ ತಳಾಜಿಂಗೆ ನೆರೆಗಾಜಿದೆ ಮಗಂಗೆ ಮುನಿವರೆಂಬ ನಾಟ್ನುಡಿಯಂತೆ (ಧರ್ಮಾಮೃ. ೭-೧೯೯); ನೆರೆಯಲ್ಲದು ಪೊರೆಯಲ್ಲದು ಗೊರವನನೆಲೆ ಮಗವು ಪೋಲ್ತುದೆಂಬೀ ನುಡಿಯಂತಿರೆ (ಧರ್ಮಾಮೃ. ೮-೧೧). **೪.** ಸಹವಾಸ; ಸಂಬಂಧ : ನೆರೆ ಹೊಲ್ಲ ದುರಾಚಾರಿಗಳ ನೆರೆ ಹೊಲ್ಲ ಜಾರ ಚೋರಕರ (ಅಖಂಡೇ. ೧೨೮-೯೩); ಇಬ್ಬರಿಗೂ ನೆರೆ ತಪ್ಪುವಂತಿತ್ತು (ಕಪ್ಪುಹು. ೨೧). **೫.** ಜೊತೆಗಾರ ; ಸಹಾಯಕ: ಹೊರೆ ಭಾರವಾಗಿದೆಯೆ ? ನೆರೆಯ ಕರೆದವನ ಕೈಗಡನು ನೀಡು (ಪಾಂಚಜ. ೪೨-೧೫). **೬.** ಆಧಾರ ; ಅವಲಂಬನೆ ; ಸಹಾಯ : ಆತನನು ನೀವಾವ ಪರಿಯಲಿ ನಿಮ್ಮ ಕುಲಗುರುವ ನೀತಿಯಲಿ ನೆರೆ ಮಾಡಿಕೊಂಬುವುದು (ಸಂಭಪ. ೨೭-೪); ತಾನೇ ರನ್ನ ಪಂಪರನ್ನು ಹಿಡಿದರೆ, ಅಡಿಗಡಿಗೆ ಕಿಟ್ಟೆಲಿನ ನೆರೆ, ನೋಟಗಳಿಲ್ಲದೆ ದಾರಿಗಾಣುತ್ತಿರಲಿಲ್ಲ (ಮುಗಿಯು. ೧೩೬). **೭.** ಸುರುಳಿ ; ಕಟ್ಟು : ಎರಡು ಮೂರು ಬಗೆಯ ಎಲೆಗಳನ್ನು ಒಟ್ಟಿಗೆ ಮಡಿಸಿ, ನಾರಿನಿಂದ ನೂರಾರು ಸುರುಳಿಗಳನ್ನು ಕಟ್ಟುತ್ತಾರೆ. ಈ ಸುರುಳಿಗಳಿಗೆ ನೆರೆಗಳೆಂದು ಹೆಸರು . . . ಮನೆಯ ಕಂಬಗಳಿಗೆ, ಬಾಗಿಲುಗಳಿಗೆ, ಕಣಜಗಳಿಗೆ, ದನದ ಕೊಟ್ಟಿಗೆಗೆ ತೆನೆಗಳನ್ನು ಚುಚ್ಚಿದ ನೆರೆಗಳನ್ನು ಕಟ್ಟುತ್ತಾರೆ (ಕಪಪು. ೪-೭೪).

**ನೆರೆಕರೆ, ನೆರೆಕೆರೆ** = ಅಕ್ಕಪಕ್ಕದ ಜನ ; ನೆರೆಹೊರೆ : ನೆರೆಕರೆಯ ಶಬರರೊಡನೆಮಗೆ ಜಗಳಗಳಿಲ್ಲ (ಹಪ್ಪರ. ೧೭-೨); ಈರ ನೆರೆಕರೆಯವರ ಹಾಡು ಕೇಳಿ ತಟ್ಟನೆದ್ದ (ಮುಂಗಾಮು. ೭೪); ದಯಾವಿದನು ಯುದ್ಧ ಮಾಡಿ ನೆರೆಕರೆಯ ದೇಶದ ಜನರನ್ನು ಗೋಳಾಡಿಸುತ್ತಿದ್ದನು (ಮಜಿಸ್ವ.೯೩); ರಾಮಣ್ಣಯ್ಯ ಖುದ್ದು ಹಾಲು ತರಲು ನೆರೆಕೆರೆಗೆ ಓಡಿದ (ಸರಸ. ೨೯). **ನೆರೆಕೂಟ** = ರತಿಕ್ರೀಡೆ ; ಸಂಭೋಗ : ಮೋಳವಿಲ್ಲದ ಊಟ ಬಾಲೆಯರ ನೆರೆಕೂಟ ಕಾಳಮ್ಮ ಹಸುರ ತೊಟ್ಟಿದು ತಾ ಕೀಳಿನ ಕೂಳ ಮೆದ್ದಂತೆ (ಸರ್ವಜ್ಞ. ೧೮೦೨). **ನೆರೆನೆಲನ್** = ಪಕ್ಕದ ಊರಿನವನು ; ನೆರೆ ನಾಡಿನವನು : ನೆರೆನೆಲನ್, ಅರೇಸ್‌ದೇವನಲ್ಲಿ ತಾನ್ ಕಂಡನ್, ಫೀನೆಯಿಯಸ್ ಮಕ್ಕಳಿರ್ವರ ಕಣ್ಣ ಕುರುಡನ್ (ಅಂತಿಗೊ. ೪೩-೯೬). **ನೆರೆಯರ್, ನೆರೆಯವರು** (ಬಹುವ) : ನೆರೆಯರ್ಗೆ ತೊಟ್ಟಪ್ಪೊರ್ ಕೊರ್ಬಿ ನಡೆಯಲ್ಕೆ ಸರ್ಬಯಲ್ತು (ಅಂತಿಗೊ. ೨೨-೪೬೦); ನಮಗಾಗಲಿ, ಯಜಮಾನರಿಗಾಗಲಿ, ನೆರೆಯವರಿಗಾಗಲಿ . . . ಕೆಲಸದ ಫಲವಾಗಿ ಹಣ ಬಂದರೆ ಆಯಿತು (ಹಣಪ್ರ. ೧೧). **ನೆರೆಯವ** = ಜೊತೆಯಲ್ಲಿರುವವನು : ಘನವಹ ಸೀಮೆಯು ಖಿಳನಿಗೆ ಕೊಟ್ಟು ಸೀಮವಳಿದು ನೆರೆಯವನಿತ್ತ ಕುಣಿಗಿಲ ಸೀಮೆಗೈದಿದನೇವೇಳ್ವೆ (ಕಂನವಿ. ೧೧-೬೨); ಮೆಚ್ಚಿದಂ ನೆರೆಯವಂ ಗುರಿವೆತ್ತುದಂ (ಕಾಲೂರ. ೮೭-೧೬೯). **ನೆರೆವೆಂಡಿರ್** = ಅಕ್ಕಪಕ್ಕದ ಹೆಂಗಸರು ; "ಇತರ ಸ್ತ್ರೀಯರು" (ಪ್ರಭಣ್ಣ) : ನೆರೆವೆಂಡಿರ ಸುಖಗೋಷ್ಠಿಗಳ್ ನಾರಿಯರೊಳ್ ಮೊದಲಿಕ್ಕುಗುಂ (ರಾಮಾಶ್ವ. ೧೭-೨೮). **ನೆರೆ ಹೊರಡು** = ನೆರೆಯವರನ್ನೆಲ್ಲ ಕರೆದುಕೊಂಡು ವಧುವಿನ ಮನೆಗೆ ದಿಬ್ಬಣ ಹೊರಡು,- ಮೆರವಣಿಗೆ ಹೊರಡು : ದೇವರ ಪೂಜೆಗೂ ಗಂಡು ನೆರೆ ಹೊರಟಾಗ ಹಾಕುವುದಕ್ಕೂ ಹೆಣ್ಣು ಗಂಡಿಗೆ ಗಂಡು ಹೆಣ್ಣಿಗೆ ಧಾರೆಯ ವೇಳೆ ಸಮನ್‌ಮಾಲೆ ಹಾಕುವುದಕ್ಕೂ ಇವೇ ಹೂವು ನನ್ನೂರಿನಲ್ಲಿ. ಆದರೆ ಹೂವಿನಲ್ಲಿ ಪರಿಮಳವಿಲ್ಲ (ನನ್ನೂರು. ೧೨). [<ನೆರೆ$_1$]

**ನೆರೆ$_6$** 'ನೆಱೆ$^3_2$' ನೋ.

**ನೆರೆ$_7$** 'ನೆಱೆ$^3_3$' ನೋ.

**ನೆರೆ$_8$** 'ನರೆ$_2$' ನೋ.

**ನೆರೆ$_9$** 'ನಿಱಾ$_2$' ನೋ.

**ನೆರೆಕಾಲುವೆ** (ನಾ). ಉಕ್ಕಿ ಬರುವ ಪ್ರವಾಹದ ನೀರನ್ನು ಉಪಯೋಗಿಸಿಕೊಳ್ಳಲು, ನದಿಯ ದಡಗಳಲ್ಲಿ ತೋಡಿದ ಕಾಲುವೆ : ನೆರೆಕಾಲುವೆಗಳು (Inundation Canals).—ಸಿಂಧುಪ್ರಾಂತ ಇತರ ಕೆಲವು ಪ್ರದೇಶಗಳಲ್ಲಿ ನದಿಯ ದಡಗಳಿಂದ ಕಾಲುವೆ ತೆಗೆಯುವುದುಂಟು. ಪ್ರವಾಹಕಾಲದಲ್ಲಿ ನದಿಯ ನೀರು ಹೆಚ್ಚಿ ಈ ಕಾಲುವೆಗಳಿಗೆ ಉರುಳುತ್ತದೆ . . . ಈ ನೆರೆಕಾಲುವೆಗಳು ಅಷ್ಟು ಪ್ರಯೋಜನಕಾರಿಗಳಲ್ಲ (ಭೂವಿಪ. ೨೮೪). [ನೆರೆ$_6$(<ನೆಱೆ$^3_2$) + ಕಾಲುವೆ(<ಕಾಲ್ವಾಯ್)]

**ನೆರೆಕೆ** 'ನರಕ್ಕೆ$_1$' ನೋ.

**ನೆರೆಕೋಲು** (ನಾ). "ಕಣದಲ್ಲಿ ಬತ್ತ ಮುಂತಾದ ಹುಲ್ಲನ್ನು ಎತ್ತಿಹಾಕಲು ಅಥವಾ ರೇಕೆ ಮಾಡಲು ಅನುಕೂಲವಾದ, ಕೊಕ್ಕೆಯುಳ್ಳ, ಒಂದಾಳುದ್ದದ ಬಿದಿರಿನ ಕೋಲು" (ನನ್ನೂರು. ಕೋಶ) : ಕೂರಿಗೆ, ಹಲುಬೆ, ನೆರೆಕೋಲು, ಗುನಿದೊಣ್ಣೆ . . . ಕತ್ತಿ — ಇವುಗಳನ್ನು ತೊಳೆದು ಬಾಗಿಲ ಬಳಿ ಇಟ್ಟು ಪೂಜಿಸುತ್ತಾರೆ (ನನ್ನೂರು. ೩೬). 'ಮೆರೆಕೋಲು' ಪರಾ.

[ನೆರೆ? + ಕೋಲು$_1$(<ಕೋಲ್$_1$)]

**ನೆರೆಗೆಂಪು** (ನಾ). ಹೆಚ್ಚಾದ ಕೆಂಪುಬಣ್ಣ ; ಅಧಿಕವಾದ ಅರುಣವರ್ಣ : ಹರೆಯ ಚಿಗುರಡಗಿ ನೆತ್ತರದ ನೆರೆಗೆಂಪು ಹಳಸುತಿದೆ ಭರದಲ್ಲೆ (ಉಯ್ಯಾಲೆ. ೧೨-೪). [ನೆರೆ$_6$(<ನೆಱೆ$^3_2$) + ಕೆಂಪು$_1$]

**ನೆರೆಗೆಯ್** (ನಾ). ಮಗ್ಗುಲಲ್ಲಿರುವ ಹೊಲ ; ಪಕ್ಕದ ಗದ್ದೆ : ನೆರೆಮನೆಯವರಂ ಪಾವಂ ಪಿಡಿಯಿಮೆಂಬಂತೆ ನೆರೆಗೆಯ್ಯವರಂ ಬಿತ್ತಿಕೊಡಿಮೆಂಬಂತೆ (ಧರ್ಮಾಮೃ. ೭-೯೭). [ನೆರೆ$_5$ + ಕೆಯ್$_4$]

**ನೆರೆಗೊಂಚಲ್** (ನಾ). ತುಂಬಿದ ಹೂಗೊಂಚಲು : ಬಿಡಿವೂಗಳು, ಕಮ್ಮಲರ ನೆರೆಗೊಂಚಲ್ಗಳು, ಮನೋಹರಪುಷ್ಪಗಳ ಎಳ್ಕಸರ . . . ಮೊದಲಾದ ಪೂದೊಡವುಗಳು (ಜಿಟ್ಟಅ. ೮೨-೧೦).

[ನೆರೆ$_6$(<ನೆಱೆ$^3_2$) + ಗೊಂಚಲ್]

**ನೆರೆಗೊಳು** 'ನೆಱೆಗೊಳು' ನೋ.

**ನೆರೆತ** (ನಾ). ತುಂಬಿರುವಿಕೆ; ಪೂರ್ಣತೆ : ಪರಿಪೂರ್ಣ ಸುಖಸತ್ತ್ವ ಸಾಗರದ ತೆರೆಗಳ್ . . . ತೆರೆಯು ನೆರೆತದ ಕುರುಹೊ (ಮಂಕುಕ.೨೧೯).

[ನೆರೆ$_6$(<ನೆಱೆ$^3_2$) + -ತ$_2$]

**ನೆರೆತರ್** (ಕ್ರಿ). ಗುಂಪುಗೂಡು ; ಸಂದಣಿಸು : ಉನ್ನತಮಸ್ತಕಸ್ಥಳ ದೊಳಂಬುಗಳಟ್ಟುಡಿದಿರ್ದೊಡತ್ತಮಿತ್ತನ್ನೆರೆ ತಂದು ಬಲ್ಲಡಿಗರಿಟ್ಟುಟಿ ನೊಳ್ ಕಿಟಿಕಿ ನೊಂದೆನೆನ್ನದೆ(ಪಂಪಭಾ.೧೧-೩); ಭಾವನಭೌಮ ಜ್ಯೋತಿಷ ವೈಮಾನಿಕಾಮರರ್ನೆರೆತಂದರ್ (ಸುಕುಮಾ. ೮-೭೪); ಪುರದಂಗನೆಯರ್ ನೆರೆತಂದು ಬಾಹುವಲ್ಲರಿ ಕುಡೆ ದೇಸೆಯಂ ತ್ರಿಭುವನಪ್ರಭುಗಿಕ್ಕಿದರೊಲ್ದು ಸೇಸೆಯಂ (ಜಗವಿ. ೧೫-೬೯); ಝುಳಕವನುಲೇಪನ ವಿಭೂಷಣ ವಿಳಸದಮೃತಾಹಾರ ಮೊದಲಹ ಹಲವು ಸೇವೆಗೆ ಯೋಜಿಸಲು ನೆರೆತಂದುದೋ ರಂತೆ (ಸಾಳ್ವಭಾ. ೩೨-೧೫). [ನೆರೆ$_1$ + ತರ್]

**ನೆರೆದಲೆ** 'ನರೆದಲೆ' ನೋ.

**ನೆರೆನಂಬು** 'ನೆಱೆನಂಬು' ನೋ.

**ನೆರೆನಾಡು** (ನಾ). ಪಕ್ಕದಲ್ಲಿರುವ ಪ್ರಾಂತ : ಕ್ರೈಸ್ತಕೃತಿಯೊಂದರಲ್ಲಿ ಸಿಲೋನಿನ ನೆರೆನಾಡುಗಳನ್ನು ಕುರಿತು ಹೇಳುತ್ತಾ 'ಮಲೆ' ಎಂಬ ಪ್ರದೇಶವನ್ನು ಹೆಸರಿಸಿ ಅಲ್ಲಿಂದ ಮೆಣಸು ಹೊರಗಡೆಗೆ ಹೋಗುತ್ತಿತ್ತೆಂದು ಹೇಳಿದೆ (ದ್ರಾವಿ. ೧೨೦). [ನೆರೆ$_5$ + ನಾಡು]

**ನೆರೆನೀರು** (ನಾ). ಮಹಾಪೂರದ ನೀರು : ಮದುವೆಯ ಚಪ್ಪರ, ನೆರೆನೀರು ತುಂಬಿದ ಗದ್ದೆಯಂತಾಯಿತು (ಮರಮು. ೨೬೩).

[ನೆರೆ$_6$(<ನೆಱೆ$^3_2$) + ನೀರು$_1$(<ನೀರ್)]

**ನೆರೆಪಳ್ಳಿ,** ನೆರೆಹಳ್ಳಿ (ನಾ). ಪಾರ್ಶ್ವದಲ್ಲಿರುವ ಗ್ರಾಮ ; ಪಕ್ಕದ ಹಳ್ಳಿ : ಈ ಕೇರಿಯಂ ಬಿಟ್ಟು ಸೂಳೆಯರೆಲ್ಲಂ ನೆರೆಪಳ್ಳಿವೋದರಿವಳೀ ಮಾಧುರ್ಯಮಿನ್ನೆಂತುಟೋ (ಲೀಲಾವ. ೨-೮೦). **ನೆರೆಹಳ್ಳಿ :** ನಮ್ಮೂರಿನ ಸಮಾರಂಭಕ್ಕೆ ನೆರೆಹಳ್ಳಿ ಜನರೆಲ್ಲಾ ಬಂದಿದ್ದರು (ರೂಢಿ). [ನೆರೆ$_{5}$ + ಪಳ್ಳಿ$_{1}$]

**ನೆರೆಪು** 'ನೆರಪು' ನೋ.

**ನೆರೆಪೊನಲ್** 'ನೆರೆವೊನಲ್' ನೋ.

**ನೆರೆಬೆಳ್ಳಕ್ಕಿ** (ನಾ). ಒಂದು ಬಗೆಯ ಬೆಳ್ಳಕ್ಕಿ : ಹಗಲೆಲ್ಲ ಏಡಿ ಮೀನುಗಳನ್ನು ತಿನ್ನಲು ಅಲ್ಲಲ್ಲಿ ಗುಂಪುಕುಳ್ಳಿರುತ್ತಿದ್ದ ಬೆಳ್ಳಕ್ಕಿ ಮತ್ತೆ ನೆರೆಬೆಳ್ಳಕ್ಕಿಗಳಲ್ಲಿ . . . ಕೆಲವು ಮಾತ್ರವೆ ಬೇಟೆಯಲ್ಲಿ ತೊಡಗಿದ್ದವು (ಮಲೆಮ. ೭೫೨). [ನೆರೆ$_{0}$ + ಬೆಳ್ಳಕ್ಕಿ(<ಬೆಳ್ವಕ್ಕಿ)]

**ನೆರೆಮನೆ** 'ನೆರೆವನೆ' ನೋ.

**ನೆರೆಮಾತು** 'ನೆರೆವಾತು' ನೋ.

**ನೆರೆಯಂಗಡಿ** (ನಾ). ಪಕ್ಕದ ಅಂಗಡಿ ; ಪಾರ್ಶ್ವದಲ್ಲಿರುವ ಅಂಗಡಿ : ಕಳಕಳವಿದೇನೆಂದು ನೆರೆಯಂಗಡಿಯ ಮುಂದಣಂಗಡಿಯ ಪರದರಂ ಕಂಡು ಬೆಸಗೊಳ್ವ ಬಚ್ಚಬಜಾಯೆಗ್ಗರುಮಂ (ಗದಾಯು. ೯-೩೪ ವ). [ನೆರೆ$_{5}$ + ಅಂಗಡಿ(<ಅಂಗಾಡಿ)]

**ನೆರೆಯಿರ್** (ಕ್ರಿ). ಬೆಂಬಲವಾಗಿರು; ಆಧಾರವಾಗಿರು; ಸಹಾಯಕವಾಗಿರು : ಜೀಯ ! ಮೂಜಗಮಂ ಕಾವ ನೀಂ ನೆರೆಯಿರ್ದು ತಿರೆಯಂ ಪೊರೆವಂದು ಲೋಗರ್ಗೆ ಸೊಗಕ್ಕೆ ಕುಂದೆ ! (ರಾಮಾಶ್ವ. ೨೩-೨೯). [ನೆರೆ$_{5}$ + ಇರ್$_{1}$]

**ನೆರೆಯಿಸು,** ನೆರಸು, ನೆರೆಸು (ಕ್ರಿ). ೧. ಗುಂಪುಗೂಡಿಸು ; ಸೇರಿಸು ; ಒಟ್ಟಾಗಿಸು : ಹೃತ್ಕುಹರದೊಳಗವಿತ ಸದ್ಭಾವಪುಂಜಗಳ ಜಾಗರದಿ ನೆರೆಯಿಸುವ ಸೂಕ್ತಿಯೊಸಗೆ (ಮಲೆದೇ. ೩೮-೪) ; ಬಳಿಕ ಕಂಪಿಲನು ಓಲಗವನ್ನು ನೆರೆಯಿಸಿ . . . ಆತನ ಊರಿಗೆ ಬೀಳ್ಕೊಟ್ಟನು (ಕುಮಾರಾಂ. ೪೩). ೨. ರತಿಕ್ರೀಡೆಯಲ್ಲಿ ತೊಡಗಿಸು : ಇನಿಯರನೆಂದುಂ ನೆರೆಯಿಪ ಬಿನದಮೆ ತನ್ನಿಚ್ಚೆಯಾಗೆ (ಕಬ್ಬಿಕಾ. ೧೨೦). ೩. ಸಂಗ್ರಹಿಸು ; ಶೇಖರಿಸು : ನಾಲ್ನಾವುದದಳತೆಯೊಳ್ ಯಾಗಶಾಲೆಯಂ ನೇರ್ಪಡಿಸಿ ಕುಂಬೆಯಂ ಬಲಿದು . . . ವೇದಿಯಂ ಸಮಕಟ್ಟಿ ತಗುವೆಡೆಯೊಳ್ ಕೊಂಡಮಂ ಪಣ್ಣಿ ಯಾಗಂಗಳಂ ನೆರೆಯಿಸುತಿರ್ದರ್ (ರಾಮಾಶ್ವ. ೧೬-೬). ೪. ಉಂಟುಮಾಡು ; ಆಗಿಸು : ಮನಕ್ಕೆ ಕೋಪಮಂ ನೆರೆಯಿಸಬೇಡ ಪೋಗೆನುತವಳ್ ನಗೆಯಿಂ ಕೊಂಡಿಚಾಡಿ ಕಾಡಿದಳ್ (ರಸರ. ೩-೧೪೯). **ನೆರಸು :** ೧. ಮೋಹರವ ಮೇಳೈಸಿದನು ನಿರ್ವಾಹವನು ನಿಶ್ಚೈಸಿದನು . . . ನೆರಸಿದನು ಬಹಳಾಕ್ಷೋಹಿಣೀಬಲವ (ಕುಮಾವ್ಯಾವಿ. ೪-೨೬) ; ಹಿರಿವುದೆಂದೀ ಸಂತೆ ಬಲ್ಲರಾರು ನೆರಸಿದನಲ್ಲದೆ ? (೧೯ವಿಂ. ೫೪-೪). **ನೆರೆಸು :** ೨. ಅಬ್ಬಾನನೆಯರ್ ಕೇಳೊಲ್ಲದ ವಿಟರಂ ಕಡುಲೀಲೆಯಿನವರೊಡನೆ ನೆರೆಸುವಂ ದೂತಿಂದಂ (ಧರ್ಮಾಮೃ. ೨-೪೦). [ನೆರೆ$_{1}$ + -ಇಸು$_{3}$]

**ನೆರೆಯೂರ್,** ನೆರೆಯೂರು (ನಾ). ಪಕ್ಕದ ಊರು ; ಪಾರ್ಶ್ವದಲ್ಲಿರುವ ಗ್ರಾಮ : ಆಂ ನೆರೆಯೂರ್ಗೆ ಪೋಗಿ ಬಂದಪೆಂ (ಪಂಚತಂ. ೧೫೪-೭) ; ಆ ಶಿವದೇವನೊಂದುದಿನಂ ದೇವಕಾರ್ಯನಿಮಿತ್ತಂ ಗೃಹಿಣಿವೆರಸಿ ನೆರೆಯೂರ್ಗೆ ತೆರಳಲುಜ್ಜುಗಿಸಿ (ವೃಷವಿ. ೯-೬೯ ವ) ; ಹುಡುಕಿ ನೆರೆಯೂರ್ಗಳಂ ದೊರೆಯದಾಯಿತ್ತಾವೂರೆಗೆ ಬಾಳ್,ಬಳಿಯೊಳಿಲ್ಲ (ಕಾಲೂರ. ೩೫-೩೬). **ನೆರೆಯೂರು :** ದೇವಕಾರ್ಯಕೆ ನೆರೆದು ನೆರೆಯೂರಿಂಗೆ ಪೋಪಂತೆ (ಬಸವು. ೪೪-೭೨) ; ಆರೊಡನೆ ಕಾದುವೆನು ಕೆಲಬರು ಹಾರುವರು ಕೆಲರಂತಕನ ನೆರೆಯೂರವರು (ಕುಮಾವ್ಯಾವಿ. ೫-೨೦). [ನೆರೆ$_{5}$ + ಊರ್]

**ನೆರೆಯೂರು** 'ನೆರೆಯೂರ್' ನೋ.

**ನೆರೆರಾಜ** (ನಾ). ಪಕ್ಕದ ದೇಶದ ಅರಸ,— ದೊರೆ : ಮಧ್ಯ ಹಿಂದೂಸ್ಥಾನದಲ್ಲಿ ಕದಂಬರ ನೆರೆರಾಜರಾಗಿದ್ದ ವಾಕಾಟಕರು ಬೌದ್ಧ ವಿಹಾರಗಳನ್ನು ನಿರ್ಮಿಸಿದರೆಂದು ಮೊದಲೇ ಹೇಳಿದ್ದೇವೆ (ಕರ್ಣಾಅ. ೫). [ನೆರೆ$_{5}$ + ರಾಜ]

**ನೆರೆರಾಜ್ಯ** (ನಾ). ಪಕ್ಕದ ರಾಜ್ಯ,—ದೇಶ : ಈತನು ಗಂಗರ ಮೇಲಲ್ಲದೆ, ತನ್ನ ನೆರೆರಾಜ್ಯದವರಾದ ಚೋಳರ ಮೇಲೆಯೂ ಸಹ ದಂಡಯಾತ್ರೆ ನಡೆಸಿದನು (ನೊಳಂಬ. ೫೧). [ನೆರೆ$_{5}$ + ರಾಜ್ಯ]

**ನೆರೆವನೆ,** ನೆರಮನೆ, ನೆರೆಮನೆ (ನಾ). ಪಕ್ಕದ ಮನೆ ; ಮಗ್ಗುಲ ಮನೆ : ನೆರೆವನೆಯಾತನೆನ್ನೊಡನುದಾರಗುಣಕ್ಕೆ ಜಸಕ್ಕೆ ನಾಡೆ ಮಚ್ಚರಿಸುತುಮಿರ್ಪಂ (ಧರ್ಮಾಮೃ. ೪-೧೧೨). **ನೆರಮನೆ :** ವೃಥಾ ನೆರಮನೆಗಳ್ತು ಕಣ್ಣಿಡುವರೇಂ ಮರುಳ್ಗೊಂಡರೊ (ಪಂಪಾಶ. ೭೩) ; ಇರಲಿರಲು ಮಾಸಾಂತರದಲಾ ನೆರ[ಪಾಠಾಂ. ರೆ]ಮನೆಯ ಶೋಕಾರ್ತರವದಬ್ಬರವ ಕೇಳಿದು . . . ಏನು ದುಃಖೋತ್ಕರುಷವಾಕಸ್ಮಿಕವದೆಂದಳು ಕುಂತಿ (ಕುಮಾವ್ಯಾಆ. ೧೦-೮) ; ಗೃಹಕೃತ್ಯಮಂ ಬಿಟ್ಟು ನೆರ[ಪಾಠಾಂ. ರೆ]ಮನೆ ತವರ್ಮನೆಯೊಳಿಹಳು (ಜೈಮಿಭಾ. ೫-೫೭) ; ನೆರಮನೆ ಹೋಳಿಗೆಗೆ ತುಪ್ಪ ಕಾಯಿಸಿದ ಹಾಗೆ (ಗಾದೆ). **ನೆರೆಮನೆ :** ಅದಭ್ಯುದಯ ಸುಖನಿಳಯಮದು ಮೋಕ್ಷದ ನೆರೆಮನೆ (ಆದಿಪು. ೬-೩೬) ; ನೆರೆಮನೆಯ ನಾವಿದನ ಪೆಂಡತಿಯಪ್ಪ ದೂದವಿ . . . ಪರಿತಂದು (ಪಂಚತಂ. ೭೫-೨) ; ನೆರೆಮನೆಯವರಂ ಪಾವಂ ಪಿಡಿಯಿಮೆಂಬಂತೆ (ಧರ್ಮಾಮೃ. ೯-೯೭) ; ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ ಕೂಡಲಸಂಗಮದೇವ (ಬಸವ. ೧೨೪) ; ವೃದ್ಧವೇಶ್ಯಾಂಗನೆ ತನ್ನ ನೆರೆಮನೆಯ ಬಾಲಮುಗ್ಧೆಯ ಸೊಬಗಂ ಕಂಡು ಅಸೂಯೆಗೊಂಡು ತನ್ನೊಳಿಂತೆಂದಳ್ (೧೦ಕ. ೪-೧೫೫ ವ) ; ನೆರೆಮನೆಗಳ ಭಾಗ್ಯವ ನೋಡಿ ತರಹರಿಸುತ ಅಸೂಯೆಯಿಂದ ಹರಿಯ ಸ್ಮರಣೆಗೆ ವಿಮುಖನಾದೆ (ಪುರಂದ. ಧಾ. ೨-೨೫-೨). [ನೆರೆ$_{5}$ + ಮನೆ]

**ನೆರೆವರಿ** (ನಾ). ಒಂದು ಬಗೆಯ ತೆರಿಗೆ : ನೆರೆವರಿ ಮರಾಡ ಕಡ ಮಸವರಿ . . . ಹಸ್ತಾಂತರ ಸಂಜಾಯಿತ ನಿಲಗಳ ಪರಿವಿಡಿಯಂ ನಿಲಿಸಿ ಸೀಮೆಯಂ ರಕ್ಷಿಸಿದಂ (ಕೆಳನೃ. ೭-೪೯). [ನೆರೆ? + ವರಿ$_{1}$]

**ನೆರೆವಾತು,** ನೆರೆಮಾತು (ನಾ). ೧. ಶೃಂಗಾರದ ಮಾತು ; ಪ್ರಣಯದ ನುಡಿ (?) : ಗರತಿಯರೆದೆವಾತು, ನೆರೆವಾತುಗಳ ಬೆರೆತು ಲಾವಣಿಯಲಂಕಾರದಲಿ ಹೊಂದಿದೆ (ಸಖೀಗೀ. ೪೫-೯೨೧). **ನೆರೆಮಾತು :** ೨. ಅಕ್ಕಪಕ್ಕದವರ ಮಾತು ; ಚಾಡಿಮಾತು : ಕುರುಡನ ಕೋಲು ಕಳ ಹೊಲ್ಲ ದೊರೆಗಳಿಗೆ ನೆರೆಮಾತು ಹೊಲ್ಲ (ಸರ್ವಜ್ಞ. ೭೨೪). [ನೆರೆ$_{5}$ + ಮಾತು$_{1}$]

**ನೆರೆವಾೞ್** (ಕ್ರಿ). ಜೊತೆಯಲ್ಲಿ ಬಾಳು,—ಬದುಕು : ಹಯಮಂ ಬಿಟ್ಟು ಕಪ್ಪಮಂ ಕೊಟ್ಟು ನೆರೆವಾೞ್ವುದು ಕರಮೊಳ್ಳಿತ್ತು (ರಾಮಾಶ್ವ ೧೪೨-೧೮). [ನೆರೆ$_{5}$ + ಬಾೞ್$_{1}$]

**ನೆರೆವಿ** 'ನೆರವಿ' ನೋ.

**ನೆರೆವೀಡು** (ನಾ). = ನೆರೆವನೆ : ಪಡಿಮೊಗದ ನೆರೆವೀಡ ನಡುಜವ್ವನದ ಕೆಳದಿಯೊರ್ವಳಂ ಸನ್ನೆಯಿಂ . . . ಎಂದುಂ ನಿನ್ನ ತೋಳೆಡೆಯೊಳೊಪ್ಪವಂಗದಂ ತೋರ್ಕುಮಿಲ್ಲಮಿಂದೇನೆನೆ (ರಾಮಾಶ್ವ. ೫೦-೧೬). [ನೆರೆ$_{5}$ + ಬೀಡು$_{2}$]

**ನೆರೆವೀದಿ** (ನಾ). ಪಕ್ಕದ ರಸ್ತೆ ; ಮಗ್ಗುಲು ಬೀದಿ : ಕಬ್ಬಿಗರ ಬಲ್ಲಹಂ ಮುಂದ್ದಣನರಮನೆಯಿಂ ಪೊಱಮಟ್ಟು ನೆರೆವೀದಿವಿಡಿದು ಪೊರೆವೀಡಿಂಗೈತರ್ಪುದಂ (ರಾಮಾಶ್ವ. ೪-೭). [ನೆರೆ$_{5}$ + ಬೀದಿ]

**ನೆರೆವೆರೆ** 'ನೆಱೆವೆಱೆ' ನೋ.

**ನೆರೆವೊನಲ್,** ನೆರೆಪೊನಲ್ (ನಾ). ಪ್ರವಾಹ ಬಂದ ಹೊಳೆ; ಮಹಾಪೂರದ ಹೊಳೆ : ನೆರೆವೊನಲ್ಗಾಂಕೆಗೊಂಡದರ ಬೇಗಕೆ ಕುಸಿದು ಹಿಸಿದು ಬೀಳುತ್ತೊಯ್ಯನಿಯೆ ಹಿರಿದುಹಿಂದಕ್ಕೆ ಸರಿವ ಪುಸಿಯೆರೆವಣ್ಣ ನೊರ್ವೊಳೆಯ ದಡದಂತೆ (ಶ್ರೀರಾಮಾ. ೫೯೭-೩೪೯). **ನೆರೆಪೊನಲ್ :** ನೆರೆಪೊನಲ ಸೆಳೆತಕ್ಕೆ ತಲೆವಾಗಿ ಬಳ್ಕುವ ಮರಂಗಳ್(ಅಂತಿಗೊ. ೫೩-೬೬೦).

[ನೆರೆ$_6$(<ನೆಱೆ$_2$)+ಪೊನಲ್]

**ನೆರೆಸು** 'ನೆರೆಯಿಸು' ನೋ.

**ನೆರೆಹ** (ನಾ). ಸೇರುವಿಕೆ ; ಕೂಡುವಿಕೆ (?) : ಸಾಧಕನವನೊಬ್ಬ ನೇತ್ರವಟ್ಟೆಯನ್ನುಟ್ಟು ಕೊಂಡು ಸೂತ್ರಧಾರಿಯನಱಸುತ್ತ ಬಂದನಯ್ಯಾ ಕರೆಯಿರ್ದೈ ಕರೆದು ತೋಱಿಸಿರ್ದೈ ತಱಹಕ್ಕೆ ನೆರೆಹಕ್ಕೆ ಹೊಱಗಾದನು (ಸರ್ವಪ. ೨೮-೧೩೩).       [ನೆರೆ$_1$+-ಹ$_2$(<-ಪ$_2$)]

**ನೆರೆಹಳ್ಳಿ** 'ನೆರೆಪಳ್ಳಿ' ನೋ.

**ನೆರೆಹಾವಳಿ** (ನಾ). ಮಹಾಪೂರದಿಂದ ಉಂಟಾಗುವ ಉಪದ್ರವ : ಇನ್ನು ನೆರೆಹಾವಳಿ . . . ಇಡಿಯ ಅಸ್ಸಾಮು ನೀರಲ್ಲಿ ಕೊಚ್ಚಿಕೊಂಡು ಹೋದೀತೋ ಏನೋ ಎನ್ನುವ ಭಯದ ಸೂಚನೆ ಇತ್ತು (ತೇವೋಡ.೭೧).

[ನೆರೆ$_6$(<ನೆಱೆ$_2$) + ಹಾವಳಿ]

**ನೆರೆಹೊರಕೆ** (ನಾ). ಅಕ್ಕಪಕ್ಕದ ಜನ; ನೆರೆಹೊರೆ : ಅಲ್ಲಿ ನೆರೆ ಹೊರಕೆ ಚನ್ನಾಗಿಲ್ಲವಾದ್ದರಿಂದ ಮನೆ ಮಾಡಲು ಇಷ್ಟವಾಗಲಿಲ್ಲ (ರೂಢಿ).

[ನೆರೆಹೊರೆ+-ಕೆ]

**ನೆರೆಹೊರೆ** (ನಾ). ೧. ಅಕ್ಕಪಕ್ಕ ; ಸಮೀಪ : ಗುರುಸ್ವಾಮಿ ನಿಮ್ಮ ನೆರೆಹೊರೆ ಸರಿಸಮೀಪ ಗ್ರಾಮದಲ್ಲಿರಲು (ವಚಸಂ. ೩೧೫-೭೯ ಅಂಬಿಪ) ; ನೆರೆಹೊ[ಪಾಠಾಂ. ಪೊ]ರೆಯ ಸಿರಿವಂತರ ಮನೆಗೆ ಪರಿಯಿಡಲ್ಕಡಹಡಿಸಿ ಮಿಡುಕುತಿರ್ಪ ಮಿಂಡರ ತಂಡಂಗಳುಮಂ (ವರ್ಧಪು.೯-೫೬ ಪ) ; ನೆಱೆದು ನೆರೆಹೊರೆಯ ಕೆಲದ ಕೇರಿಯ ಸಕ್ಕಜದ ಮಕ್ಕಳೊಡನೊಕ್ಕಲಿಕ್ಕಿ ನಲಿ ನಲಿದು ನರ್ತಿಸುತ್ತಿರಲ್ (ನಂಬಿರ. ೨-೧೩) ; ಪಂಚಮಹಾಪಾತಕರ ನೆರೆಹೊರೆಯ ಸಂಗದಲ್ಲಿರ್ದವರಿಗೆ ಅನಂತಕಾಲ ಮಾಡಿದ ಪುಣ್ಯವು ಕೆಟ್ಟು ಮುಂದೆ ಪಾಪವು ಬೆಂಬತ್ತಿ ಕಾಡುವುದಯ್ಯ (ಅಖಂಡೇ. ೧೨೮-೯೨). ೨. ಅಕ್ಕಪಕ್ಕದ ಜನ: ನೆರೆಹೊರೆ ನೋಡಿ ನಗುವರಲ್ಲ (ಪುರಂದ. ೧-೧೮೨-೫) ; ನೆರೆಹೊರೆಯಱಿಯದಂತೆ ಪತಿಯಂ ಮಱಸಿ ಮನೆಯವರ ನೆಲ್ಲರಂ ಟೊಣೆದು ಮದನಕೇಳಿಗೆ ಸಂದು (ಜೈಮಿಭಾ. ೫-೫೯) ; ರಕ್ಕಸನು ಮನೆಯವರ ಕಂಡರೆ ಕರ್ಕಶನು ನೆರೆಹೊರೆಗೆ (ಅಮೃತ.೨-೫೨) ; ಅವರವರ ಪುಣ್ಯದಿಂದ ನೆರೆಹೊರೆಯು ಬದುಕಿದರೆ ನೀನೇಕೆ ವ್ಯಸನಪಡುವೆ ? (ಬತ್ತೀಸ. ೧೨೪).

**ನೆರೆಹೊರೆಯವರು**=ಅಕ್ಕಪಕ್ಕದಲ್ಲಿ ವಾಸಿಸುವವರು : ದಲ್ಲಾಳಿ ತನದಿಂ ಲಂಡಪುಂಡರೊಳ್ ಮುಂದೆ ನೋಡದೆಯಾಡಿ ಕೊಟ್ಟು ಕೊಂಡವರು ನೆರೆಹೊರೆಯವರು ನಗುವ ತೆಱದಿ (ಸಮ್ಯಕೌ. ೧೦-೩) ; ಪೂರ್ವಸಮುದ್ರದ ಹತ್ತಿರ ಪಿಠಾಪುರದ ಮೇಲ್ಭಾಗದಲ್ಲಿ ಕಳಿಂಗರೂ ಅವರ ಪಶ್ಚಿಮದಿಕ್ಕಿನ ನೆರೆಹೊರೆಯವರಾಗಿ ಕೋಸಲರೂ ರಾಜ್ಯವಾಳುತ್ತಿದ್ದರು(ಕರ್ಣಾಅ.೪೪).

[ನೆರೆ$_5$ + ಹೊರೆ$_4$(<ಪೊರೆ$_4$)]

**ನೆರೆಹೊಳೆ** (ನಾ).=ನೆರೆವೊನಲ್ : ಹಲವು ಕೆರೆಯಂತೆ, ತೊರೆ ಯಂತೆ ನೆರೆಹೊಳೆಯಂತೆ ಮಲಿನವನು ಲಲಿತವನು ತೋರಿ ಮೆರೆದು (ಕಎಪು. ೩೧-೪).       [ನೆರೆ$_6$(<ನೆಱೆ$_2$) + ಹೊಳೆ$_3$(<ಪೊೞೆ)]

**ನೆರ್ಕನೆ** (ಅ). ಒಂದು ಅನುಕರಣಾವ್ಯಯ : ಪೂಡಿ ಪರಿವ ಪದ ದೊಳ್ ಪೊಚ್ಚಪೊಸತೆನಿಪಚ್ಚುಗಳ್ ನಿರ್ನಿಮಿತ್ತಂ ನೆರ್ಕೆ[ರ್ಕ]. [ಪಾಠಾಂ. ನೇರ್ಕ] ನುಡಿಯೆ (ವರ್ಧಪು. ೮-೪೦ ಪ).

**ನೆರ್ಕನೆರ್ಕನೆ** (ದ್ವಿರುಕ್ತಿ) : ಬಱ ಕೆಂಬಲ್ಮೊಳೆಯಂ ನೆರ್ಕನೆರ್ಕನೆ ಬೇಕ್ಕೆಯ್ದು (ಎಕ. VI, ತರೀಕೆ. ೪೫-೨೭ ; 1196).

[ನೆರ್ಕು +-ಅನೆ$_1$]

**ನೆರ್ಕಳ** (ನಾ). ಒಂದು ಬಗೆಯ ಮರ : ನೆರ್ಕಳ (ಭೇಡಸ)—ಮಧ್ಯಮ ಆಕಾರದ್ದು, ಸರುವುಗಳಲ್ಲಿ ಬೆಳೆಯುವದು. ಕಟ್ಟಿಗೆ ಇಮಾರತಿಗೂ ಗಳೆಯ ಸಾಮಾನಿಗೂ ಬರುತ್ತದೆ (ಕಭಾಗ. ೪೨).   [ ? ]

**ನೆರ್ಕು** (ನಾ). ಒಂದು ಅನುಕರಣ ಶಬ್ದ : ಖಣಿಲೆಂಬ ಖಟಿಲೆಂಬ ನಿಳಿಲೆಂಬ ನೆರ್ಕೆಂಬ . . . ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟೆ (ಇಹರ. ದೇ. ೪೧-೨೧).

**ನೆರ್ಕೊರೆ** 'ನೆಕ್ಕರೆ' ನೋ.

**ನೆರ್ಗನೆ** (ಅ). ಒಂದು ಅನುಕರಣಾವ್ಯಯ : ತೇರ್ಗಳ ಗೊಂದಣಂ ಮುಱಿದು ಮೆಟ್ಟಿದ ಕೊಂಬುಡಿದಂತೆ ಬೇಗದಿಂ ನೆರ್ಗನೆ ಬಿಱ್ದು ನುಚ್ಚು ನುಱಿಯಾಗೆ (ಕಬ್ಬಿಕಾ. ೨೭೮).   [ನೆರ್ಗು$_0$+-ಅನೆ$_1$]

**ನೆರ್ಗಿಲ್,** ನೆಕ್ಕಿಲು, ನೆಗಿಲು, ನೆಗ್ಗಲಿ, ನೆಗ್ಗಲು, ನೆಗ್ಗಲೆ, ನೆಗ್ಗಿಲ್, ನೆಗ್ಗಿಲು (ನಾ). (ನೆಲದ ಮೇಲೆ ಹಬ್ಬುವ) ಒಂದು ಬಗೆಯ ಮುಳ್ಳಿನ ಗಿಡ ಮತ್ತು ಅದರ ಮುಳ್ಳು :ಬದಣೆಗುಪ್ಪೆಯ ಮುಟ್ಟಗಿಯ ಕೊಳೆಯನೂರ ಧಾಸನೂರ ತೃಸನ್ಥಿಯ ನೆರ್ಗಿಲ ಗುಂಬೆ ನಿಡುವೆಳುಱ್ಗ (ಎಕ. I, ೧-೨೮ ; 466). **ನೆಕ್ಕಿಲು :** ನೆಕ್ಕಿಲು, ತುಳಸಿ. ದೊಡ್ಡಪತ್ರಿ, ಪಚ್ಚೇತೆನೆ (ನಮ್ಮನು. ೨೩೮). **ನೆಗಿಲು :** ಭೂತಾಣೆ, ನೆಗಿಲು, ಕೊಮ ರಕ(ನಮ್ಮನು.೨೩೮). **ನೆಗ್ಗಲಿ:** 'ನೆಗ್ಗಲಿಮುಳ್ಳು' ಪರಾ. **ನೆಗ್ಗಲು:** 'ಆನೆನೆಗ್ಗಲು', 'ನೆಗ್ಗಲುಮುಳ್ಳು' ಪರಾ. **ನೆಗ್ಗಲೆ :** ಮುಳ್ಳಿನ ಹಾಸಿಗೆ ಹಾಸಿದಂತೆ ನೆಗ್ಗಲೆ ಬಳ್ಳಿಗಳು ಹಬ್ಬಿದ್ದವು (ಮೇದಿಪು. ೧೧೮). **ನೆಗ್ಗಿಲ್ :** "ತ್ರಿಕಂಟಕಂ ಗೋಕ್ಷುರಕಂ ದಂಷ್ಟ್ರಿಯೆನೆ ನೆಗ್ಗಿಲಕ್ಕುಂ" (ಮಂಗರಾ. ೩೭-೨೮) ; ವಿಷ್ಣುಕ್ರಾಂತಿಯೆಲೆಯಂ ಮೇಣ್ ನೆಗ್ಗಿಲ ಬೇರ ನರೆದು ಪಾಲೊಳ್ ಸಲೆ ಕುಡಿವಂ ಸಂಕ್ಷಯಕ್ಕೆ ಪಡೆಗುಂ ಕ್ಷಯಮಂ (ಲೋಕೋಪ. ೯-೩೮)) ; ತುಱುವೆಯ ನೆಗ್ಗಿಲ ಪೂಗಳ ತುಱುಪಟ್ಟೆಯ ಪೊಱಗೆ ತುಱುಗಿ ಕರಮೆಸೆದಿರ್ಕುಂ (ಲೀಲಾವ. ೫-೯೯) ; ನೆಗ್ಗಿಲ್ ತಗಚೆ ನಿದಿಗ್ಧಿಕೆ ತಗ್ಗಿಯಪಾಮಾರ್ಗದೊಡನೆ ಬೆರಸಿದುದಂ ತಾಂ . ಕೊಗ್ಗಿ ಕುಮಾರಿಗಳಂ ಕುಡಿಸೊಗ್ಗಿಸಿದಂಬಿಲದೆ ಬೇದುಗಟ್ಟು ವಿಷಘ್ನಂ (ಖಮದ. ೧೬-೭೪) ; ನೆಗ್ಗಿಲ ಬೇರ ತಂದು ಕರಿಆಡಿನ ಹ್ಯಾಲಿನಲ್ಲಿ ಬೇಯಿಸಿ . . . ೧೨ ದಿವಸ ಕುಡಿದರೆ ವೀರ್ಯವೃದ್ಧಿ (ಕಾಮಶಾ. ೧೦-೨೫೪). **ನೆಗ್ಗಿಲು:** "ಗೋಕ್ಷುರಃ, ಸ್ಥಳಶೃಂಗಾಟಃ, ಶ್ವದಂಷ್ಟ್ರಾ, ತ್ರಿಕಂಟಕಃ—ಈ ೪ ನೆಗ್ಗಿಲು" (ಹಲಾಯು. ೩೩-೪೮) ; ಕೊಡೆಸಿಗದತಿಗುಡಿನೊಡನಾಸಡಿ ನೆಗ್ಗಿಲು ಯಷ್ಟಿಮಧುಕ ಪರ್ಪಟಕಂಗಳ್ (ಕಲ್ಯಾಕಾ. ೫-೯) ; ಆಲ ವಂಬಟೆ ತಗ್ಗಿ ನೆಗ್ಗಿಲು [ಪಾಠಾಂ. ತುಗ್ಗಿಲು, ತುಂಬುರ, ತೊಬರ, ತದಿ ಗಿಲು]ಬೇಲ ಬೊಬ್ಬುಲಿ . . . ಇವ ನೋಡಬಲೆ (ತೊರರಾ.೩-೧-೨೮) ; ನೆಲಬೇವು . . . ನೆಗ್ಗಿಲು, ಮೂರೆಲೆಹೊನ್ನೆ, ಶುಂಠಿ ಇವುಗಳ ಕಷಾಯವಿಕ್ಕಿ ಸೇವಿಸಿದರೆ ವಾತಜ್ವರಂ ಕೆಡುಗುಂ (ಸಕವೈ. ೬೫).

[ದೇ.॥ ತಮಿ. ನೆರುಞ್ಜಿ, ನೆರುಞ್ಜಿಲ್ ; ಮಲ. ನೆರುನ್ನಿಲ್; ತುಳು. ನೇಗಿಲ್]

**ನೆರ್ಗು** 'ನಱುಂಕು' ನೋ.

**ನೆಗೊರ್ತು,** ನೆಗ್ಗೊತ್ತು (ಕ್ರಿ). ೧. ಪುಡಿಪುಡಿ ಮಾಡು; ಚೂರು ಮಾಡು ; ಒಡೆ : ಆ ಕನ್ನೆ ಪಿಡಿದ ಕನ್ನಡಿಯಂ ನೆಗೊರ್ತಿದಳ ದನೇನೆಂಬೆಂ (ಜಯಕಾ. ೧೪-೭೦). **ನೆಗ್ಗೊತ್ತು :** ೧. ವಿಭೂತಿಯ ಗಟ್ಟಿಗೆಯನು ನೆಗ್ಗೊತ್ತಿ ಸರ್ವಾಂಗದಲಿ ಧೂಳಿಸಿದ (ಕುಮ್ಯಾಕ. ೭-೧೧) ; ಉಲಿವ ಬಳೆಗಳೊಳೆರಡೆರಡ ತಾನುಳುಹಿ ನೆಗ್ಗೊತ್ತಿದಳು ಮಿಕ್ಕವ

(ನಿಭಾಗ.೧೧-೧೬-೧೩). ೨. ಜಜ್ಜಿ ಹೋಗುವಂತೆ ಒತ್ತು,- ಹಿಸುಕು: ಬಳಿಯು ನೆಗ್ಗೊತ್ತಿದನು ಕೌರವಬಲದ ಗಂಟಲ ಬಳಿಯು ಮುಚುವ ವೋಲ್ (ಕುವ್ಯಾವಿ. ೬-೪೯) ; ಖಳಕಂಸ ಬಂದು ಕೂಸನು ನೋಡಿ ಯಿಾಕೆಯು ತಂದವನ ದೆಸೆಯಿಂದ ಬಾಧೆಯು ಬಂದಪುದು ತನಗೆಂದಳಿಕಿ ನೆಗ್ಗೊತ್ತಿದನು ಮೂಗ (ಸಾಳ್ವಭಾ. ೨೧-೩೦); ಹೇರಾನೆಯ ತಲೆಯುಡಗ ಭಕ್ಷಿಸುವ ಕಂಠೀರವನೊಡಲ ನೆಗ್ಗೊತ್ತಿ ಘೋರಾಕೃತಿವೆತ್ತು ಹಿರಿತಿಂಬ ಶರಭ ಹೂಂಕಾರದಿಂದಿದಿರ್ವಂದುದಾಗ (ಮೋಹತ. ೧೯-೩೪) ; ಪಸುಗಳ ಜೀವಮಂ ನೆಗ್ಗೊತ್ತಿ ಮೂಗಂ ಕೊರೆದು (ಭಾರಶಾಂ. ೨೫). ೩. ನಜ್ಜು ಗುಜ್ಜಾಗು ; ಜಜ್ಜಿ ಹೋಗು : ಪೆರ್ಗಡೆಯು ತೆಕ್ಕೊಂಡು ಹುತ್ತವ ಹೊಕ್ಕರೆ ಬಿಡೆನೆಂದು ತಲೆ ನೆಗ್ಗೊತ್ತಲಪ್ಪಳಿಸುತಿಕ್ಕಿದನು (ಮೋಹತ. ೩೮-೬೧). ೪. ನಾಶ ಮಾಡು ; ಇಲ್ಲವಾಗಿಸು : ಉರವಣಿಸು ವಿಂದ್ರಿಯವ್ಯಾಘ್ರದೆಸುಜನ ಮದವನಿರದೆ ನೆಗ್ಗೊತ್ತಿಯಜ್ಞಾನಾಂಧ ಕಾಸುರನ ಉರವ ತೊತ್ತಳದುಳಿದು ಗೆಲುವ ನವನಾಟ್ಯಾಭಿರಂಗ ನಿನಗಾನು ಸರಿಯೆ (ಲಕಿಚಿಂ. ೨೯-೩೪); ಸುಷೇಣ ಗೌತಮರುರವಣೆಯ ನೆಗ್ಗೊತ್ತಿ ಹಾಯ್ದನು ಮತ್ತೆ ಸೈವರಿದು (ಕುವ್ಯಾಕ. ೧೪-೨೭) ; ಕೌರವ ಬಕ ಹಿಡಿಂಬ ಕೀಚಕರೆಂಬ ದುರುಳಸಂತತಿ ನೆಗ್ಗೊತ್ತಿ ಘೋರಪಾತಕಿ ದುಶ್ಯಾಸನನ ರಕುತವ ಹೀರಿ ಮುದದಿ ಮುರವೈರಿಯ ಭಜಿಸಿದ ಗುರು (ಪುರಂದ. ೧-೨೦೭-೨) ; ಈತನ ಗರ್ವವ ನೆಗ್ಗೊತ್ತಿ ಭಸ್ಮೀಭೂತನ ಶಿವನೆಸಗಿದನು (ಮೋಹತ. ೨೯-೫೨).

[ನೆಗ್ಗು್ರ(<ನಜುಂಕು)+ಒತ್ತು$_1$]

**ನೆಪುರ್** (ನಾ). (?) : ಇಪುರ್ಂ ತೋಪುರ್ಂ ಕೆಪುರ್ಂ ನೆಪುರ್ಂ . . . ಮೆಯ್ಗಪುರ್ಂ ಮೊದಲಾಗಿ ರೇಫಸಂಯೋಗಂಗಳ್ (ಶಮದ. ೩೯).

**ನೆಪುರ್ನೆಪುರ್** (ದ್ವಿರುಕ್ತಿ) : ಕಾಯಾನುರೂಪಮಳವಿಯೊಳಾಯತಮದು ತೆಳ್ಪಿತೆನೆ ಬಹಿರ್ಮುಖಮುಚಿತಂ ಬಾಯೊಳಗೆ ನೆಪುರ್ನೆಪುರ್ಂ ತೋಯಜಸುರಭಿಗಂಧಮುಳ್ಳೊಡೆ ಪೂಜ್ಯಂ (ಅಶ್ವಶಾ. ೧-೧೯). [ ? ]

**ನೆವರ್** (ನಾ). ಆಸರೆ ; ಆಧಾರ ; ಆಶ್ರಯ : ಧರ್ಮಮಮರೇಂದ್ರ ಗತಿಯುಧರ್ಮಮಧೋಗತಿಯುನೆಸಗುವೆಸಕದೋಳೀಗುಂ ಧರ್ಮಾಧರ್ಮ ಪ್ರಕ್ರಿಯೆಗಳೆ ನೆವರ್ಂ ಜೀವಕ್ಕೆ ಮನುಜಗತಿಯೊಳ್ ಮಾಟ್ಕುಂ (ಆದಿಪು. ೫-೭೮) ; ಇನಿತುಂ ಪೆರ್ವೆಗೆ ನೆವರ್ಾವಾಗಿ ನೆಗದ್ದಿರ್ದಾ ಸೋಮದಂಡಾಧಿನಾಥಂ (ಎಇ. XIII, ೩೦೬-೬೪ ; 1125).

[<ನೆವರ್$_2$]

**ನೆವಿರ್ಸು, ನೆಮ್ಮಿಸು** (ಕ್ರಿ). ೧. ಒರಗಿಸು; ಆನಿಸು : ಕುಂಕುಮದ ಬಿಂಕಂ ಬೆಳ್ಪಿಯ ಬೆಟ್ಟದ ತೋಳ ಮೊದಲೊಳ್ ನೆ[ಪಾಠಾಂ. ನಿ]ವಿರ್ಸಿದ ಕೆಮ್ಮುಗಿಲಿನ ಪೆರ್ಮೆಯಂ ಪಡೆಯೆ (ಅನಂಪು. ೨-೨೬ ವ).

**ನೆಮ್ಮಿಸು :** ೧. ದೆಸೆಗೆಟ್ಟುದ್ವಾಪ್ಪದಿಂದಂ ತರಳಿಕೆ ಪಿಡಿದೆಂತಾನು ವಾತ್ಮಾಂಗಮಂ ನೆಮ್ಮಿಸೆ (ಕಾದಂಉ. ೫೪೨); ತನ್ನಂ ನೆಮ್ಮಿಸಿಕೊಂಡಿರ್ದ ದಯಿತ ಸಾಮಂತನೊಳಿಂತೆಂದಂ (ಅನಂಪು. ೧೨-೬೩ ವ) ; ನಿನ್ನಯ ಸುದ್ದಿ ಹೊಱಗೆ ಹೊಮ್ಮಿದೊಡಿತರಾದಿಗಳೇಳಿಪರೆಂದು ನೆಮ್ಮಿಸಿಕೊಂಡಳಂಗದಲಿ (ಮೋಹತ. ೨೭-೫೭). ೨. ಸಿಲುಕಿಸು ; ತೊಡಗಿಸು : ಏಕೆ ವಿಧಿ ತನ್ನನು ವಿಕರ್ಮವಿಪಾಕದಲಿ ನೆಮ್ಮಿಸಿದೆನು (ನಿಭಾಗ. ೪-೫-೫೯). ೩. ಒಪ್ಪಿಸು ; ವಹಿಸಿಕೊಡು : ನಮ್ಮ ಭರಭಾರವನು ಹಿಂದಾಳ್ ನೆಮ್ಮಿಸಿದೆವೀತನಲಿ (ತೊರರಾ. ೩-೧೨-೫). [ನೆವರ್$_1$+-ಇಸು$_3$]

**ನೆವರ್$_1$, ನೆಮ್ಮು$_1$** (ಕ್ರಿ). ೧. ಒರಗು ; ಆತುಕೊಳ್ಳು : ಕಣ್ಗೆಸೆದೊಪ್ಪಿದಳೊರ್ವಳೋಪನಂ ನೆವಿರ್ದ ಬಾಳೆ ಕತ್ತುರಿಯ ನೀರ್ದಳಿದುತ್ಪಳ ಮಾಳೆಯಂದಮಂ (ಶಾಂತಿಪು. ೮-೧೦೪) ; ಮೇಳದವಳಂ ಸತಿ ನಿರ್ಭರ ಗರ್ಭಭಾರದಿಂ ನೆವಿರ್ ನಿಮಿರ್ಚಿರ್ವವಳ್ ಪುರುಳಿಯೊಳ್ಪರಿಹಾಸವಚೋವಿಳಾಸಮಂ (ಮಲ್ಲಿಪು. ೪-೧೧೦) ; ತಾನಾದಿದಿಕ್ಕುಂಜರ ನಿಬಿಡ ದ್ರಿಢ ಸ್ಕಂಧಮಂ ನೆವಿರ್ (ಎಕ. IV, ನಾಗಮಂ. ೨೯-೧೧ ; 1218); ಮನದನ್ನನಂ ಸಮ್ಮದಂ ಮಿಗೆ ನೆವಿರ್ ಕುಳ್ಳಿರ್ದ ಶಶಿಕಾಂತದೊಡ್ಡುಂಗಲ್ಲೊಳ್ ತನ್ನ ಪಡಿನೆಳಲಂ ಕಂಡು(ಶಬಶಂ.೩-೩೫ ವ). ೨. ಆಶ್ರಯಿಸು; ಅವಲಂಬಿಸು: ಶಚಿ ಪೂತಚೂತಮಂ ನೆವಿರ್ದಶೋಕವಲ್ಲರಿಯ ಪಲ್ಲವಮೊಂದನೆ ಕೊಯ್ದು (ಪಂಪಭಾ. ೫-೮೨) ; ಕಲಿಕಾಲಧರ್ಮತನಯಂ . . . ಎಂದು ಪಲರುಂ ನೆವರ್ವರಾಯುಗನಿದೇಂ ಕೃತಾರ್ತ್ಥನೋ ಜಗದೊಳ್ (ಸಾಇಇ. XI-i, ೬೫-೩೧ ; 1028); ಪೆರ್ಮರನನಡರ್ದ ವನಲತೆ . . . ವಿಂಧ್ಯಾಚಲಮಂ ನೆವಿರ್ದ ನರ್ಮದೆಯೆನಿಸಿದಳೊರ್ಮೆಯೆ ವನಚರನನಪ್ಪಿ ವನಚರಿಯೊರ್ವಳ್ (ಕಾವ್ಯಾವ. ೨೧೭) ; ಆ ಕುಱುಹು ಉಭಯವ ನೆಮ್ಮಿ ನಿಂದುದು ಭಕ್ತಿಸ್ಥಲ ಆ ಭಕ್ತಿ ತ್ರಿವಿಧವ ನೆಮ್ಮಿ ನಿಂದುದು ಮಾಹೇಶ್ವರಸ್ಥಲ (ಮೋಳಮಾ. ೧೪೧-೫೪೦); ಬಿಡಾಲವ್ರತದ ಬಾಡಬರ್ಕಳ್ ದುರದ್ವೈತಮಂ ನೆವಿರ್ ಸರಿಮಾಡುವರಾ ಶಂಭುಗುಳಿದವರತ್ಯಜ್ಞರೆಂಗುಮಾ ಸೂತಿಗೀತಿ (ಪದ್ಮರಾ. ೧೧-೯). ೩. ನಟ್ಟು ನಿಲ್ಲು ; ನಾಟಿರು ; ನಟ್ಟಿರು : ನಯದಿಂದಂ ಬರೆದಂತೆಯುಂ ಕಡೆದು ತಂದಿಟ್ಟಂತೆಯುಂ . . . ಉತ್ಪಾದಿಸಿದಂತೆಯುಂ ನಿಱಿಸಿ ಕಾಲ್ಗೋದಂತೆಯುಂ ನೆವಿರ್ದಂತೆಯುಮಿರ್ಕುಂ ಜಿನಬಾಲರೂಪಮೆರ್ದೆಯೊಳ್ ಮುಂ ಕಂಡಗಲ್ದಿರ್ದರಾ (ಶಾಂತಿಪು. ೧೦-೮೫). ೪. ಆವರಿಸು ; ಆಕ್ರಮಿಸು ; ಕವಿ ; ಮುಸುಕು : ಕರ್ಮಜಮೆಂದು ರೋಗಜಮುಮೆಂದೆರಡುಂ ತೆಱದಿಂ ಶರೀರಿಯಂ ನೆವಿರ್ದ ಕುತ್ತಮೊತ್ತಿದೊಡೆ (ಪದ್ಯಸಾ. II, ೮೨೮). **ನೆಮ್ಮು$_1$ :** ೧. "ನೆಮ್ಮು—ಪೃಷ್ಠಸ್ಥಾಪನೇ (ಒರಗು)" (ಶಮಧಾ); ಪುಳಿನದ ಲೋಹಾಸನಂಗಳೊಳ್ ನೆಮ್ಮಿರ್ದುಂ[ಪಾಠಾಂ. ಕುಳ್ಳಿರ್ದುಂ]ಚಳದಳಕೆಯುರರೆ ಬರದೇಂ ಕಳೆದರೋ ಶರದಾತಪಪ್ರಭೂತಶ್ರಮಮಂ (ಆದಿಪು. ೧೧-೭೪) ; ಚಾರುಚಾಮಿಾಕರಮೃಗೇಂದ್ರಾಸನದ ಕೆಲದ ಮತ್ತವಾರಣಮಂ ನೆಮ್ಮಿ ನಿಶ್ಚೀತನನಪರಾಜಿತಮಹಾಮಹೀಶನಿರೆ (ಶಾಂತಿಪು. ೨-೨೩ ವ) ; ಪೊಳೆಯುತ್ತಿರ್ಪ ಮಹಾವರಾಹವದನೋದ್ಯದ್ದಂಷ್ಟ್ರಮಂ ನೆಮ್ಮಿ ನಿಂದಳೋ ಭೂಕಾಂತೆಯೆನಲ್ಕೆ (ಕಾದಂಪೂ. ೧೦೧೩) ; ಪೊಡರ್ವುತ್ತುಂಗಸ್ತನಂ . . . ಕಂಪಿಸುವ ತನು ರತಿಶ್ರಾಂತಿಯಿಂದಂ ಬೆಡಂಗಂ ಕುಡೆ ನೆಮ್ಮಿರ್ದೋಪನಂ ಮೆಯ್ಪುಮರ ನೆವದೊಳಂದಾಱುತ್ತಿರ್ದಳೊರ್ವಳ್ (ಜಗವಿ. ೧೬-೧೨೪) ; ಆರ್ಪಿಂ ಭಿತ್ತಿಗಳಂ ನೆಮ್ಮಿರ್ಪಳ್ ನಿಂದಗಜೆ ಬಾಲ್ಯಮಂ ನಟಿಯಿಸುತಂ (ಗಿರಿಕ. ೩-೭೩). ೨. ಬ್ರಹ್ಮವಿತ್ತುಗಳು ಬ್ರಹ್ಮತತ್ತ್ವವಡೆದು . . . ನೆಮ್ಮುವರು ವಿಷ್ಣುವನು (ಬಸವ. ೩೮೩) ; ತಮ್ಮ ಸಂಕಟಕಿವರು ವಿನಯವ ನೆಮ್ಮಿ ಬಿನ್ನಹ ಮಾಡುತಿರ್ದೊಡೆ (ಕುವ್ಯಾಅ. ೨೦-೧೨) ; ಅನೀತಿಯಿಂ ಪರಮತವ ನೆಮ್ಮಿ ನರಕಕ್ಕಿಳಿವ ಪಾತಕರನಲ್ಲದೆಲ್ಲಿಯು ಕಾಣೆ ಶಿವಭಕ್ತರುಗಳ ಪರಿಭಾವಿಸಿದೊಡೆ (ಸಿದ್ಧೇಪು. ೧-೫೧) ; ಭವತ್ಪದಮಂ ನೆಮ್ಮಿದೆವೆಮ್ಮನೊಡನೆ ರಕ್ಷಿಸು ವರದಾ (ಹಸ್ತಿಮಾ. ೭-೨೮) ; ನಿರ್ಮಮದ ಸದ್ವಿವೇಕದ ದೀಪಕಿಂತ ನೀಂ ನೆಮ್ಮಲಿನ್ನೇನಿಹುದೋ ? (ಮಂಕುಕ.೫೫೫). ೩. ನಿಮ್ಮ ತಂದೆಯು ಬಾಣವಹಿತನ ನೆ[ಪಾಠಾಂ. ಹ]ಮ್ಮಿದವು . . . ನೆಲೆಗೆಡಿಸಿದವು ನಿಮಿಷದಲಿ ನಿರ್ಜರರ (ತೊರರಾ. ೬-೨೫-೧೦) ; ಕಾಮ್ಯ ಫಲಾಭಿಲಾಷರಿಗೆ ಬ್ರಹ್ಮವಿದ್ಯಾಭ್ಯಾಸದಲಿ ಮನ ನೆಮ್ಮದು (ಅಮೃತ. ೧-೪೪) ; ಸ್ತ್ರೀಯರೊಳು ಮನ ನೆಮ್ಮಿಹುದು ಸುಖವಲ್ಲೆನುತ ಮನ ನಿಮ್ಮಳದಿ ಹೇಳಿದನು (ಸಾಳ್ವಭಾ. ೨೦-೪೯); ಚಿತ್ತವಂ ನೆಮ್ಮಿದಾತಂಕದಿಂ ಚರನೊರ್ವನಂ ಕರೆದು . . . ಬಸವನಂ ಕರೆದು ತಾರೆನಲು (ಚೆಬಪು. ೭-೨೫). ೪. ನೀವಿಂದುಗ್ರ ಪಾತಿವ್ರತೆಯರೊಳಗಗ್ಗಳರು ನಿಮ್ಮನು ನೆಮ್ಮದಪಕೀರ್ತಿ (ತೊರರಾ. ೨-೨-೪೪) ; ತಮ್ಮ ಬಾ ಶತ್ರುಘ್ನ ನಮ್ಮನು ನೆಮ್ಮಿತಧಿಕ ವಿಪತ್ತು . . . ಎಂದು ರೋಷಾವೇಶಮನನಾಷ

(ತೊರರಾ. ೪-೯-೧೩). ೫. ಹಿಂಬಾಲಿಸು ; ಅನುಸರಿಸು : ಫಲುಗುಣಂ ಬರುವ ಗಡ ವಾಜಿಯನ್ನೆಮ್ಮಿ ದೇಶಂಗಳಂ ಚರಿಸಿ (ತುರಂಗ. ೮೨-೧೩). **೬.** ಹಿಡಿದಿರು ; ಹೊತ್ತಿರು : ಕಂಕುಳಲಿ ಕೊಡವೊಂದ ನೆಮ್ಮಿ . . . ಕುಡಿವ ನೀರನು ತರುವಂದು (ನನ್ನಪ. ೧೯-೨). **೭.** ಹರಡು ; ವ್ಯಾಪಿಸು : ಛದಿಪರ್ಯಂತಂ ನೆಮ್ಮಿರ್ಪುದು ತಾನದು ಮತ್ತವಾರಣಂ (ವಸ್ತುಕೋ. ೪೭-೧೫). **೮.** ತಗುಲು ; ಮುಟ್ಟು ; ಸೋಕು : ಕಮ್ಮೆಯನ ಚೇಳಿನ ಹೊಮ್ಮೆರಡು ಒಂದಯ್ಯ ನೆಮ್ಮಿದರೆ ಚೇಳು ಹೊಡೆದಿಹುದು ಕಮ್ಮೆ ತಾ ನೆಮ್ಮದೆ ಹೊಡೆವ (ಸರ್ವಜ್ಞ. ೧೦೦೯). [<ನೆರ್$_2$ ?]

**ನೆಮರ್$_2$, ನೆಮ್ಮು$_2$** (ನಾ). **೧.** ಅವಲಂಬನ ; ಆಸರೆ ; ಆಧಾರ ; ಆಶ್ರಯ : ಧರ್ಮಾರ್ಥಕಾಮಮೆಂಬಿವು ಧರ್ಮಾರ್ಥಿಜನಕ್ಕೆ ನೆಱೆದ ನೆಮರ್ಪಂತವಱೊಳ್ ಧರ್ಮಂ ಪ್ರಧಾನಂ(ಆದಿಪು. ೧೦-೫೦) ; ಕುಳ್ಳಿರ್ದೆಡೆಯೊಳಡಸಿ ನೆಮರಾಗುತುಂ . . . ಅಂದವನೀಶಂಗಾಸೆಯಾದಂ ಪ್ರಿಯಸಚಿವಸುತಂ (ಲೀಲಾವ. ೬-೪೨) ; ದಿಗಧೀಶರ್ ಪರಿವಾರವಾಹನವಧೂನದ್ಧಾಯುಧರ್ ವಂದು ಪೆರ್ಮೆಗೆ ನೆ[ಪಾಠಾಂ. ನಿ]ಮರ್ಗೆ (ಅನಂಪು. ೫-೧೨) ; ಎವಗಾವಾವ ಭವಂಗಳೊಳ್ ಬಿಡದೆ ನೆಮರ್ಗಿರ್ಕೆ . . . ಜಿನಧರ್ಮನಲ್ಪಕಲ್ಪಾಂಘ್ರಿಪಂ (ಶಾಂತೀಶ್ವ. ೧-೯). **೨.** (?) : ಧರ್ಮಾನುರಾಗದೊಳ್ ಧರ್ಮಸುತನೆನಿಸಿದಂ ನೆಮರ್ಪಂ ಬುಧಂಗಹಿಮಕರನಂತಿ[ರ್ದೆ]ನಿಸಿದಂ ಗುರುಸೇವೆಗಿಡದುದಱನಮರಪತಿಯೆನಿಸಿದಂ (ಸೌಇಇ. IX-i, ೧೧೭-೩೦ ; ಸು. 1055). **ನೆಮ್ಮು$_2$ : ೧.** ನೀರೊಳಗೊಂದು ನೆಳಲು ಸುಳಿಯಿತ್ತಲ್ಲಾ ನೆಳಲೊಳಗೊಂದು ಹೊಳೆವ ಶಬ್ದವು ಅದು ನೆಮ್ಮಲ್ಲ ಸೊಮ್ಮಲ್ಲ ಅಮ್ಮಿದರಾಯಿತ್ತು ನೆಮ್ಮಿದರಳಿಯಿತ್ತು (ಸರ್ವವ. ೨೬-೧೧೪) ; ಬಾಲಕರ ಮರಣವನು ಕೇಳುತ ಕಳುಡೆಯ ನೆಮ್ಮಿನಲಿ ಚಿಮ್ಮಿದನುಗುರಲಶ್ರುಗಳ [ಪಾಠಾಂ. ಮೇಲುಮಲಗಿನಲಶ್ರುಜಲವನು ಮಿಡಿದನುಗುರಿನಲಿ, ಕವುಳುಡೆಯ ನೆಮ್ಮಿಥನು ಮಿಡಿದನು ಬೆರಳಲಶ್ರುಗಳ, ಕೇಳುತಲ್ಲಿ ನೆಮ್ಮಿನಲ್ಲಿ ಚಿಮ್ಮಿದನುಗುರಲಶ್ರುಗಳ] (ತೊರರಾ. ೬-೪೦-೩) ; ಎನಿತೊಂದು ನಾಡುಗಳನಾಳಿದುದು ಸೂಸ . . . ಆತನಾಳಿಕೆಯಲ್ಲಿ ನೆಮ್ಮದಿಗೆ ನೆಮ್ಮಾಗಿ, ಬಾಳಿದೆವು ಮೈತ್ರಿಯಲಿ ಬೆಸೆದು ಹೆಮ್ಮೆಗಿಲಾಗಿ (ಪಾರಸಿ. ೩೩-೭೫೮). **೩.** "ದಿಂಬು, ಒರಗು" (ಪ್ರಭಣ್ಣ). [<ನೆಮರ್$_1$]

**ನೆಮರ್ಗಂಭ** (ನಾ). ಒರಗಿಕೊಳ್ಳುವ ಕಂಭ : ಬರೆದು ನಿಜನಾಮಮಂ ನೃಪವರನಾ ಲಿಖಿತಪ್ರಯುಕ್ತಬಾಣದಿನಿಸೆ ಚಚ್ಚರಮೆಯ್ದೆನಟ್ಟುದಣಮಚ್ಚರಿವಡೆ ಮಾಗಧನ ನೆಮರ್ಗಂಭಮನಾಗಳ್ (ಶಾಂತೀಶ್ವ ೧೫-೧೧೫). [ನೆಮರ್$_1$ + ಕಂಭ]

**ನೆಮರ್ಗೆ, ನೆಮ್ಮಿಗೆ, ನೆಮ್ಮುಗೆ** (ನಾ). **೧.** ನಂಬಿಕೆ ; ನೆಚ್ಚು ; ಭರವಸೆ : ಆ ಮಹಾಸಭೆಯಲ್ಲಿ ಗೌರವವು ವಿಶ್ವಾಸವು ನೆಮರ್ಗೆಯುಡರ್ಪು ಬಳೆದಂತೆಲ್ಲ (ಮಂತ್ರಶ. ೧೫೪-೧೨). **ನೆಮ್ಮಿಗೆ: ೨.** ಆಧಾರ ; ಆಶ್ರಯ ; ಆಸರೆ : ವಿಶ್ವಾಳಿಗೇ ನೆಮ್ಮಿಗೆಯುದಾದನಂ ನೂತನಾಧಾರನಂ . . . ನಮಿಸುವೆಂ (ವೀಶ್ವಪು. ೬-೧-೩೨) ; ಕರ್ಮವಿರಹಿತನೆನಿಮ್ಮ ಶ್ರೀಪಾದವ ನೆಮ್ಮಿಗೆಯನು ನೆಱೆ ನಂಬಿ ಉಮ್ಮಳದಲಿ ಕೃತಿವರ್ಣಿಪೆ (ಕರಚಾ. ೫-೩). **ನೆಮ್ಮುಗೆ: ೧.** "ನೆಮ್ಮುಗೆ ನಂಬಿಕೆ" (ಕಶರ. ೫೬) ; ಅಱವಲ್ಲಿಯೆ ನೆಮ್ಮುಗೆ ಒಡಗೂಡಬೇಕು (ಅಪಚಂ. ೨೬೯-೧೨೩೪) ; ಧರ್ಮಮಯವಹ ಶ್ವೇತದ್ವೀಪನ ನೆಮ್ಮುಗೆಯನುಳ್ಳವನ ನೆನೆದರೆ . . . ಅಹುದು ನೂರ್ಮಡಿಯೆಂಬ ಘನಮಹಿಮೆ (ಶಿಭಾಗ. ೧೧-೨೨-೧೪) ; ಸೊಮ್ಮುಗಳ ಸೌಭಾಗ್ಯ ಸಂಪದ ನೆಮ್ಮುಗೆಯು ವೈಶ್ರವಣ ಶಿವನಿಗೆ ಸಮ್ಮತದ ಸಖನೆನಿಪ ಸುತನಹನೆನುತಲಜತಳವ (ಉತ್ತಕ. ೪-೧೦) ; ಬಾಳು ಬಲ್ಮೊಗಸಮ್ಮ ನೆಮ್ಮುಗೆಯು ನಾಡಿನೊಳಗೆ (ಇಂಗೀತ. ೮೯-೮) ; ಪ್ರಜಾವಳಿಯ ಮಹಾಸಮ್ಮತದ ನೆಮ್ಮುಗೆಯು ರಕ್ಷೆಗೆ ಸಲ್ವಂತೆ . . . ಈ ಮಹಾಸಭೆಯು ಆಚರಿಸಿಕೊಳ್ಳಬೇಕಾಗಿದೆ (ಮಂತ್ರಶ. ೭೩-೮). **೨.** "ಆಂಕೆಯುಮಡರ್ಪೆಂದು ನೆಮ್ಮುಗೆಗೆ ನಾಮಮಕ್ಕುಂ" (ಕಬ್ಬಿಕೈ. ೭೩) ; ಅಂಗದ ಕುಱುಹಿನ ನೆಮ್ಮುಗೆಯುಪ್ಪ ಲಿಂಗವು . . . ಭವಪಾಶವ ಗೆಲ್ಲುವುದು (ಮೋಳಿಮಾ. ೫೭-೨೩೬) ; ಚರ್ಮದಂಡದ ನೆಮ್ಮುಗೆಯಿಲ್ಲದೆ ದನಿದೋಱುವನುಮಾನಂ ಪೊರ್ದದೆ ಮಡಸನ್ನೆ ಮನದೊಳಂಕುರಿಸುವಲ್ಲಿಂ ಮುನ್ನಂ ಪರಿದು (ಗಿರಿಕ. ೬-೫೫ಪ) ; ಜಿನಧರ್ಮವಂ ನೆಮ್ಮುಗೆಯ ಮಾಡಿಕೊಂಡು (ಸೌಂದಪು. ೧೩-೬) ; ಮೇಣಾವ ಶಶಿವಂಶಾವಳಿಯ ನೆಮ್ಮುಗೆಯು ನೆಗಳಿದೆ ತತ್ತ ಕಾಳೆಗಕೆ (ಕುಪ್ಯಾಭೀ. ೩-೩೪) , ನೆಯ್ದಿಲೆಗೆ ನೇಸಱನ ನೆಮ್ಮುಗೆಯಾದ ತೆಱನಲಿ (ಪ್ರಭುಲೀ. ೭-೭೧) ; ಹರಿಯ ನೆಮ್ಮುಗೆ ಕಮಲಜನ [ಪಾಠಾಂ. ಹರಿ ಹಿರಿಯನೆನಗೆ ಕಮಲಜ] ಸಹಾಯಂ ದಿಶಾವರರೊತ್ತು (ಚೆಬಪು. ೩೦-೩೩) ; ಯುವತಿಯ ಸರಸಕಟಾಕ್ಷದ ನೆಮ್ಮುಗೆಗಳು ಇಲ್ಲ (ಬಿದುರಿ. ೮೮). **೧,೨ :** ನೇಮಿಯ ನೆಮ್ಮುಗೆಯಿಲ್ಲದೊಡೀ ಮತ್ತಿನ ಕವಿಮನೋರಥಂ ನಡೆದಪುದೇ (ಧರ್ಮನಾ. ೧-೩೯). **೩.** ನೆಮ್ಮದಿ ; ಸಮಾಧಾನ ; ಶಾಂತಿ: 'ನೆಮ್ಮುಗೆಗೊಳ್' ಪರಾ. **೪.** ನಂಬಿಕೊಂಡಿರುವ ಆಧಾರ ; ತತ್ವಾಧಾರ (?) : ಬಿಜ್ಜಳೋರ್ವೀತಳೇಂದ್ರ ಕೇಳ್ ನಿಮ್ಮ ಬಂಟಂಗಾದೊಡೇಳಬೇಡವೆ ಬಸವ ತಾನೇಳ ನೀವೇಳಲು ನೆಮ್ಮುಗೆಯುದಾವ ಬಲುಹಾಡಿಸಾಡದೊಡೆ ತಾನೆಮ್ಮ ಪಾದಕ್ಕೆ ನಮಿಸಲಿ (ಲಶಚಿಂ. ೩೩-೧೨). [ನೆಮರ್$_1$ + -ಗೆ]

**ನೆಮಾಳ** 'ನೇಪಾಲ$_1$' ನೋ.

**ನೆಲ್, ನೆಲ್ಲು** (ನಾ). **೧.** ಒಂದು ಬಗೆಯ ಧಾನ್ಯ; ಬತ್ತ : "[illegible] ಸ್ತಂಬಕರಿಃ—ಈ ೨ ನೆಲ್" (ಹಲಾಯು. ೯೫-೪೨೫) ; ಪನ್ನಿ[illegible] ವೆದೆ ನೆಲ್ಮಣ್ಣೆನ್ದನ್ದು ಪಾಱನ್ದನ್ದು ಅತಿಮುರ ಪಡೆದನು ([illegible] ೧೩೭-೮ ; 454) ; ಇಲ್ಲಿಗಿದು ತಕ್ಕುದಿಲ್ಲಿಗೆ ಪೊಲ್ಲದಿದೆಂದಱಿದು ಸಮಱಬಲ್ಲಂತೆಲ್ಲಂ ನೆಲ್ಲುಂ ಮೊಸರುಂಗುಡಿದಂತಲ್ಲದೆ ತಲ್ಲಣಿಸದಲಸದಿಡು ಮೃದುಪದಮಂ (ಕವಿರಾ. ೨-೪) ; ಪಕ್ಕಿಗಳಲ್ಲಿ ತಿಂದುಬಿಡದ ನೆಲ್ಗಳ ನುಚ್ಚುಗಳಂ ಫಲಂಗಳಂ ಪಕ್ಕದೊಳಿರ್ದ ಗೂಡುಗಳಿನಾಯ್ದೆನಗಿಕ್ಕುವನಟ್ಟಿಱಿಂದೆ ತಾಂ (ಕಾದಂಪೂ. ೧೩೬) ; ಕೆಸಱೊಳ್ ನೆಲ್ ಬೆಳೆಗುಮಲ್ಲದೆ ಜೋಳಂ ಬೆಳೆಯಲರಿಯದು (ಧರ್ಮಾಮೃ. ೧೧-೧೯೦) ; ಅಲ್ಲಿ ಬಿಳಿದಪ್ಪ ನೆಲ್ ಬರಲುಮಾಧೀಶಂಗೆ ಅಲ್ಲಿ ಬಂದೋಗರದ ನೆಲ್ಲೆಲ್ಲವೀಶಂಗೆ (ಆರಿರ.ದೇ. ೧೬೨-೧೩) ; ನೆಲ್ಲುಂ ಕೌಂಗುಂ ಮಾವುಂ ಮಲ್ಲಿಗೆಯುಂ ಬೆಳೆವುವಲ್ಲಿ ಕರ್ಬಿನ ರಸದಿಂ (ಸೂಕ್ತಿಸು. ೪-೫೧). **೨.** ಎಂಟು ಎಳ್ಳಿನಷ್ಟು ಪ್ರಮಾಣ : ಕರಿತಿಲದ ಕಾಱಗಂದು ನೆಲ್ (ವ್ಯವಹಾ. I, ೭-೩ ಅನುಬಂಧ) ; ಕರಿಸಾಸಿವೆಯಾಗಲೊಂದು ನೆಲ್ಲೆನಿಸಿರ್ಕುಂ (ವ್ಯವಹಾ. I, ೮-೧೭ಅನುಬಂಧ). **ನೆಲ್ಲು: ೧.** "ಶಾಲಿ ವ್ರೀಹಿ ಸ್ತಂಬಕರಿಯೆನಲು ನೆಲ್ಲು" (ಮಂಗರಾ. ೧೧೦-೪); ಪುಣಿಸೂರ್ಪ್ಪೊಲ ನೆಲ್ಲು ಪಾಣ್ಡಿಯುಮಳೆವದು (ಮೈಆರಿ. ೧೯೩೦, ೩೬-೮ ; ಸು. 800) ; ದೇವರ್ಗೆ . . . ನೆಲ್ಲುವುಪ್ಪು ಯೆಳ್ಳು ಕಡಲೆ ತೊಗರಿಯಾದಿಯಾಗಿ ಸಲುವುದು (ಎಕ. VIII, ಸೊರಬ. ೩೨೮-೬೧ ; 1159) ; ತಿರುನಾಳ್ಗೆ ನೆಲ್ಲಿಲ್ಲ ಪರವೆ ಮುನಿದಪಳಯ್ಯ (ನಂಬಿರ. ೧೧-೪೫) ; ಮೇಲುಪಾಯವದಿಲ್ಲದಿರೆ ಕುಡುಗೋಲನೊಂದುವನಳವಡಿಸಿ ಕೈಕೂಲಿಯಂ ರಾಜನದ ನೆಲ್ಲಿಂಗೆಂದೊಡಂಬಡಿಸಿ ಲೀಲೆಯಿಂ ಮಾಡುತ್ತ ಹಿಡಿದ ಸುಶೀಲವಂ ನಡೆಸಲ್ಕೆ (ಬಸಪು. ೨೭-೧೬) ; ನೆಲ್ಲು ಮೊಸರು ಕಲಸಿದ ಹಾಗೆ (ಗಾದೆ).

**ನೆಲ್ಲ ಕುಟಿ** = (?) : ಶ್ರೀಮತ್ಪೆರ್ಮ್ಮನಡಿಗಳ್ಪೃಥುವೀರಾಜ್ಯಂಗೆಯ್ಯುತ್ತಿರೆ ತೊಮ್ಬತ್ತೇೞು ಸಸಬ್ಬದ್ದಿಪಿವರೆಮ್ಮೊಬ್ಬಿಕ್ಕೆ ನೆಲ್ಲ ಕುಟಣಲಾಗ್ಯೆ ದೆನ್ದು ಬಿಟ್ಟ ದತ್ತಿ (ಎಕ. XIV, ಮಳವ. ೭೮-೮ ; ಸು. 860) . **ನೆಲ್ಲ ಗರ್ದೆ, ನೆಲ್ಲ ಗದ್ದೆ** = ನೆಲ್ಲುಗದ್ದೆ : ಪಲವು ಪರಿಯಿಂ ನೆಲ್ಲ ಗರ್ದೆಗಳೊಪ್ಪಿದುವು (ಪದ್ಮರಾ. ೮-೧೨) ; ಪಸುರೇಱ ಪಾಲ್ಪಿಡಿದು ಎಸಳದಿಂ ತಲೆವಾಗಿ

ಬೆಳೆದಿರ್ದವಾ ನೆಲ್ಲ ಗರ್ದೆಯಾ ದೇಶದೊಳಗೆ (ಸಿದ್ಧೇಪು. ೨-೪) ; "ನೆಲ್ಲ ಗದ್ದೆ ವ್ರೈಹೇಯವೆಂಬುದು" (ಹಲಾಯು. ೨೭-೭). **ನೆಲ್ಲನಿತು** = ಬತ್ತದ ಕಾಳಿನಷ್ಟು : ತಿರುವೊಳೆ ಕೋಲನಿಟ್ಟು ತೆಗೆಯಲ್ಕದು ನೆಲ್ಲ ನಿತೆಯ್ದೆ ಜಾಱಲಾ ಹರಿಣನನೆಚ್ಚೊಡುರ್ಚಿ ನೆಲದೊಳ್ ಮೊನೆದೋರ್ಪುದು ಚೋದ್ಯವು (ಮಲ್ಲಕಾ. ೩-೨೦೯). **ನೆಲ್ಲ ಪುಲ್, ನೆಲ್ಲ ಹುಲ್ಲು** = ಬತ್ತದ ಹುಲ್ಲು : ಸಾರತರಮಪ್ಪ ಪನಸೋರ್ವೀರುಹಮಂ ಕೂಡೆ ನೆಲ್ಲ ಪುಲ್ಲಿಂದ ಮಲಂಕಾರಮನೆ ಮಾಡಿ ಕಟ್ಟುಗೆ ಬೇರಿಂ ಕಾಯ್ಗುಂ (ಲೋಕೋಪ. ೬-೩೧); "ಬಿಳಿಯ ಹುಲ್ಲು" (ಲೋಕೋಪ. ೬-೩೧ ಅಡಿಟಿ) ; ದನಗಳು ನೆಲ್ಲ ಹುಲ್ಲನ್ನು ಹೆಚ್ಚಾಗಿ ತಿನ್ನುತ್ತವೆ (ರೂಢಿ). **ನೆಲ್ಲ ಮಡಿ** = ನೆಲ್ಲುಗದ್ದೆಯ ಒಂದು ಚೌಕವಾದ ಭಾಗ ; ನೆಲ್ಲುಪಾತಿ : ನಿವೇದ್ಯಕ್ಕೆ ನೆಲ್ಲ ಮಡಿ ಎರಡು ಕೆಱೆಗೆ ಮಡಿ ಎರಡು (ಸೌಇಇ. IX-i, ೬೦-೧೫ ; 931) ; ಗೊಲ್ಲವೆಣ್ಣುಗಳು ಕಡುಗಾಡಿಯಿಂ ಬಂದು ನೋಡುತಿಹರು ನೆಲ್ಲ ಮಡಿಗಳಿಗಿಳಿವ ಗಿಳಿಗಳ (ಕುರಾಸಾಂ. ೨-೩೬). **ನೆಲ್ಲ ಮಣ್** = ಬತ್ತ ಬೆಳೆಯುವ ಜಮೀನು (?) : ಆತನ ಬೆಳವಡಿಚ ಅಲ್ಲಿಗಂ ಕೀಟ್ಗಿಣ್ಣೊಯಾಗಿ ಸ×××ಪ್ತನಾದ ಆತಂಗಂ ನಡಮಣ್ಣೆ ಪನ್ನಿರ್ಮತ್ತರ್ನೆಲ್ಲ ಮಣ್ಣೆ ಖ×××ವಕ ಸೂಳೆವಳ್ಳ××ಱು (ಎಕ. XI, ದಾವಣ. ೧೧೯-೮; 930). **ನೆಲ್ಲ ಹೆಡಿಗೆ** = ೧. ಬತ್ತದ ಗೂಡೆ,—ಬುಟ್ಟಿ. ೨. (?) : ತಲೆ ಹುಱುತ ನಾಯ ಸುಡು ಗಾವಿಲ ಬಟ್ಟೆಯ ಚಿಕ್ಕಣಿಕೆ ಬೆಳ್ಗತ್ತೆಯ ನಾಣಿಲಿ ನೆಲ್ಲ ಹೆಡಿಗೆ ಸಡಿ ಫಡ ಚೆಲುವಱಿಯದ ಕುಡದ ಕಾಮದೇವನದೇವಂ ? (ಸೂಕ್ತಿಸು. ೮-೪೨೩).

[**ದೇ.॥ ತಮಿ. ಮಲ. ಕೋತ. ನೆಲ್; ಕೊಡ. ನೆಲ್ಲಿ ; ತೊದ. ನೆಸ್**]

**ನೆಲ** (ನಾ). ೧. ಭೂಪ್ರದೇಶ ; ಭೂಮಿ ; ಭೂತಳ : "ಸ್ಥಿರೆ ಧಾರಿಣಿ ಧಾತ್ರಿ ಮೇದಿನಿ . . . ಭೂಮಿ ಭೂ ಗೋತ್ರೆ ನೆಲಂ" (ವಸ್ತುಕೋ. ೨೬-೧) ; ನೆಲನುಂ ವೆಳಗೆ ಪಾರ್ವ್ವರುಂ ಪ್ರಜೆಯುಂ ತಣಿಗೆ (ಇಆ. XIX, ೧೪೫-೧೮ ; 680) ; ಪಚ್ಚು ಪರಿಕಲಿಸಿ ಬೆನ್ನಂ ಮುಚ್ಚಿರೆ ಮುಡಿ ಕಳ್ವಬೆಳ್ವಿವಟ್ಟಲ್ ಬಾಯೊಳ್ ಬೆಚ್ಚಂತಿರೆ ಸತಿ ಶಶಿಯಂ ಕಚ್ಚಿ ನೆಲಕ್ಕಿೞಿದ ರಾಹುವಂ ನೆಱೆ ಪೋಲ್ತಳ್ (ಕಾವ್ಯಸಾ.೯೬೬ ಶೂದ್ರಕ); ತಿರಿವುದದೊಂದು ಚಕ್ರದೊಳೆ ನಿಂದು ದಿವಾಕರನೆ ಮತ್ತ[ರಿ]ದು ಕಳೆವೊಡಂತದನಾವೆಡೆಯಿಂ ವರಮೆಯಾಗಿ ನೆಲಸಿ ಕೆಲಕಾಲದಿಂ ಪೊರೆದಿರದಱಿದ ಬಱಿಕ ತಾ ನೆಲದೊಳ್ (ಕವಿರಾ. ೨-೧೪೬) ; ಸಮದಗಜಘಟಾಟೋಪಂ ಬೆರಸು ನೆಲನದಿರೆವಂದು ತಾಗಿದ ಕಕ್ಕಲನ ತಮ್ಮನಪ್ಪ ಬಪ್ಪುವನಂಕಕಾಱನಂ (ಪಂಪಭಾ. ೯-೫೨ ವ); ನೆಲದ ಮಱೆಯ ನಿಧಾನದಂತೆ . . . ಭಾವದ ಮಱೆಯ ಬ್ರಹ್ಮವಾಗಿಪ್ಪ ಚೆನ್ನಮಲ್ಲಿಕಾರ್ಜುನನ ನಿಲವನಾರೂ ಅಱಿಯಬಾರದು (ಮಹಾದೇ. ಬ. ೯-೨) ; ಮರುದಿನ ಮಧ್ಯಾಹ್ನ ಅಂಗಡಿಯಿಂದ ಹಿಂತಿರುಗಿದಾಗ ನೆಲಕ್ಕೆ ಕಾಲು ತಾಗಿಸುವ ಸ್ಥಿತಿಯಲ್ಲೇ ಇರಲಿಲ್ಲ ಶಾನಭಾಗರು ! (ಮೂರುದಾ. ೧೨೨). ೨. ಮಣ್ಣು : ನೆಲದ ಬೊಂಬೆಯ ಮಾಡಿ ಜಲದ ಬಣ್ಣವನುಡಿಸಿ . . . ಆಡಿಸುವ ಯಂತ್ರವಾಹಕನಾರೋ (ಅಪಚಂ. ೫-೧೬). ೩. ಕೃಷಿಯ ಭೂಮಿ ; ಜಮೀನು : ಶಾಳಿಗಳಂ ಬೆಳೆವ ನೆಲನೆ ಪೊಲನಾ ನೆಲದೊಳ್ (ಪುಷ್ಪಪು. ೨-೧೪) : ತನ್ನ ಪಾಲಿನ ನೆಲಂ ಬಿಸಿಲೊಳಾರಲ್ ತೇದು ತನ್ನುಡೆಯ ಬೆನ್ನೊಡಲ ತೊಳೆವವನ ಗೇದು (ಕಾಲೂರ. ೨೯-೨೧). ೪. ಸ್ಥಳ ; ಜಾಗ ; ಪ್ರದೇಶ : ನೊಕ್ಕಜ ಒಡೆ ಆಗ್ಗದೀಕಡ××× ಕೊಟ್ಟ ನೆಲ (ಎಕ. III, ಮೈಸೂರು. ೨೫-೨ ಹಿಂಭಾಗ: ಸು. 750) ; ಮಂದರಾಚಲದಧೋಭಾಗದ ಚಿತ್ತೆಯೆಂಬ ನೆಲದಿಂ ಕೆಟಗೆ . . . ನಾಗಾದಿ ನವವಿಧ ಭವನವಾಸಿಕನಿವಾಸಮಿರ್ದಪುದು (ಅಜಿಪು. ೧೧-೬ ವ) ; ಧರೆಗೊಡೆಯ ಚಕ್ರೇಶಂ ತಿರಿವನೆ ಬಲಿಯಲ್ಲಿ ಬೇಡಿ ಮೂಱಡಿ ನೆಲನಂ (ಸುಮಪ. ೮-೧೪೪) ; ನಾಚುವರೆ ಮೊಱೆಯಿಲ್ಲ ತೊಲಗುವರೆ ನೆಲನಿಲ್ಲ (ಬಸವ. ೯೧೨) ; ಮಹಾರಥರಾಜಿ ಕದನದ ನೆಲನ ಬಿಡೆ ಖತಿಗೊಂಡು . . . ರಿಪುವನು ತಱುಬಿದನು ಕರ್ಣ (ಕುಮಾವ್ಯದ್ರೋ. ೫-೨೭) ; ಬಳಿಕ ನೆಲ ಶೋಧಿಸಿತು ಸವನಸ್ಥಳಕೆ ಸುಮುಹೂರ್ತದಲಿ . . . ನಿಳಯಂಗಳು ನಿರ್ಮಿಸಿದವು (ತೊರರಾ.೧-೭-೧೧) ; ಮತ್ತೆ ನಾಲ್ಕು ವರುಷಗಳಲ್ಲಿ ಉಳಿದ ನೆಲವೂ ವಾಸಿಸುವ ಮನೆಯೂ ಸಾಹುಕಾರನ ವಶವಾದವು (ರಂಗರೋ. ೧೦೧) : ೫. (ಕಟ್ಟಡಗಳ) ಸಮ ಮಾಡಿದ ನೆಲ ; ನೆಲಗಟ್ಟು : ದೇಗುಲಕ್ಕೆ ನೆಲನ ಕಟ್ಟಸಿಕೊಟ್ಟ ಪದ[ಙ್ಗ]ಲಿಗಂ ಒನ್ದು (ಸೌಇಇ. XI-i, ೩೫-೮ ; 933) ; ನೆಲ ಒರಸಲು ಜೀರೆಯೋ ಬಟ್ಟೆಯನ್ನಿಟ್ಟಿರಬೇಕು (ಅಡುಸೌ. ೪೭). ೬. ನಾಡು ; ರಾಜ್ಯ ; ದೇಶ : "ನೆಲನೆನೆ ರಾಜ್ಯಂ" (ಚತುನಿ. ೬೬) ; ನೆಲನಂ ಪ್ರತಿಪಾಲಿಸಿ ಧರ್ಮಸೂನು ಸುಖಮಿರ್ದಂ (ಪಂಪಭಾ. ೪-೧೦) : ಕೇಯೂರಮಂ ತಳೆವಂದದಿಂ ಪೃಥುಳಭುಜದಿಂ ಪೃಥ್ವೀಶಂ ತಾಳ್ದಿದಂ ನೆಲನೆಲ್ಲಮಂ (ಕಾದಂಪೂ. ೧೭) ; ನೆಲಕಿಱುವೆನೆಂದು ಬಗೆದಿರೆ ಚಲಕಿಱುವೆಂ ಪಾಂಡುಸುತರೊಳೀ ನೆಲನಿದು ಪಾಟಿಸ್ನಲನೆನಗೆ (ಗದಾಯು. ೫-೪೭) ; ದೇವಮಾತೃಕವೆಸರೆನ್ನದಾ ನೆಲದ ಕೆಯ್ವೊಲನಂ ಪೆಱತೇನನೆಂಬುದೋ (ಮಲ್ಲಿಪು. ೨-೧೬); ಪಾಳೆಯಕೆ ಮರಳಿಚು ರಥವನಿನ್ನೆಲ್ಲಿಯದು ನೆಲ ನೆಱೆ ಕುದಿವ ಕುರುಡನ ಮಕ್ಕಳೀ ಕೊಳಲಿ (ಕುಮಾವ್ಯಕ. ೧೪-೫) ; ವಂಚಕರ ಸಂಚಿನಿಂದೆ ಭರತಂಗೀ ನೆಲಂ ಪಳುವಾಯ್ತೆ ? (ಶ್ರೀರಾಪು. ೬೧-೨೦೧). ೭. ಲೋಕದ ಜನ; ಪ್ರಪಂಚ : ದಿಟದಿಂ ಮಾನಸರಱಿಯರೆ ಬಾಸುಗಿ ತಾನಱಿಯನೆ ಮತ್ತಮಱಿಯದೇ ನೆಲನನಿತುಂ (ಕಬ್ಬಿಕಾ. ೧೮೭). ೮. "ಕುಂಬಾರರು ತಿಗರಿಯ ಮೇಲಿಂದ ಕೊಯ್ದಿಟ್ಟು ತಟ್ಟಿ ಸಮ ಮಾಡದೆ ಇರುವ ಪಾತ್ರೆ" (ಪ್ರಭಣ್ಣ). ೯. ಒಂದು ಗೊತ್ತಾದ ಭೂಭಾಗ ; ಸಣ್ಣ ಭೂಪ್ರದೇಶ ; "ಅಲ್ಪ ವಸುಧೆ" (ಭಾರನಿ. ೪೮. ಕಿ).

**ನೆಲಕಿಕ್ಕು, ನೆಲಕ್ಕಿಕ್ಕು** = ೧. ನೆಲಕ್ಕೆ ಕೆಡಹು ; ನೆಲಸಮ ಮಾಡು ; ಮಣ್ಣುಗೂಡಿಸು : ಜಾಂಬವನಂ ಪಿಂಬಗಲಾದಿತ್ಯನಂತೆ ತೇಜಂಗಿಡಿಸಿ ಹನುಮನನುಮಾನಂ ಮಾಡದೆ ನೆಲಕಿಕ್ಕಿ (ಧರ್ಮಾಮೃ. ೭-೯೫) ; ನೆಲಕಿಕ್ಕುಗುಮಾತಂ ದೋರ್ವಲದೃಪ್ತನಮೋಘಮುಱಿದೆ ನಿಮ್ಮಯ್ಯನುಮಂ ಚಲದಿಂ ನಿನ್ನೆಱೆಯನುಮಂ (ನೇಮಿಪು. ೬-೮) ; ತೊಟ್ಟಲಂತೆಸೆದಿರ್ದ ಶಕಟನ ನೆಲಕಿಕ್ಕಿ ಮೆಟ್ಟಿದ ಪಾದವೆಚ್ಚಱಿಕೆ (ಮೋಹತ. ೧೪-೨೦). ೨. ನೆಲದ ಮೇಲೆ ಇಡು; ನೆಲಕ್ಕೆ ಇಳಿಸು : ಬಾಹುಬಲಿ ಭರತನಂ ದೃಷ್ಟಿಯುದ್ಧ ಜಳಯುದ್ಧದೊಳು ಗೆಲ್ದು . . . ಭರತನಂ ಪಿಡಿದೆತ್ತಿ ನೆಲಕ್ಕಿಕ್ಕುವುದುಂ ಭರತಂ ಸಿಗ್ಗಾಗಿ ಚಕ್ರರತ್ನಮಂ ಬೆಸಸಿದೊಡೆ (ಚಾವುಂಪು. ೪೯). ೩. ನಾಶಮಾಡು : ಮುನ್ನಾರಾರ ಬಲ್ಪಂ ನೆಲೆಗಿಡಿಸವಿವಾರಾರ ತಕ್ಕಂ ನೆಲಕ್ಕಿಕ್ಕವು (ಕಬ್ಬಿಕಾ. ೩೦೩). **ನೆಲಕಿಡು** = ನೆಲಕಿಕ್ಕು ೨ : ಕರಿಯ ಭತ್ತಮನುಗುರಿಂ ಚಿವುಂಟಿ ನೆಲಕಿಡೆ (ದಿವ್ಯಚ. ೩-೩೦ ವ). **ನೆಲಗಣ್ಣ** = "ಜಗಚ್ಚಕ್ಷು ; ರವಿ" (ಪ್ರಭಣ್ಣ). **ನೆಲದ ಪಡೆ** = ಭೂಸೈನ್ಯ : ನೆಲದ ಪಡೆ, ನೀರ ಪಡೆ, ಗಾಳಿಪಡೆಗಳ್—ಕೋಟಿ ಕೋಟಿಗಳ್—ಸಿದ್ಧವಾಗಿಹವಿಂದು ಯುದ್ಧಲೀಲಾವಿಲಯಕಲೆಗೆ (ಶ್ರೀರಾಪು. ೫೫೭-೧೫೧). **ನೆಲದಮರ್ದುಣಿಸು** = **ನೆಲನಮರ್ದುಣಿ** : "ನೆಲದಮರ್ದುಣಿಸುಗಳೆಂದುಂ, ನೆಲನಮರ್ದುಣಿಗಳೆಂದುಂ ವಿಪ್ರರ್ಗೆ ಪೆಸರ್" (ಕಶಸಾ. ೬೦-೩೩೩). **ನೆಲದರಸ** = ಭೂಮಿಯ ಒಡೆಯ ; ಭೂಪತಿ ; ಅರಸ ; ದೊರೆ : ನೆಲದರಸರಿರ್ವರ ಸಿರಿಗಳೊಂದುಗೂಡಿದೊಡೆ (ಶ್ರೀರಾಪು. ೫೧-೬೩೯) ; ಶಿವಶರಣರನ್ನು ಮರೆತುಬಿಟ್ಟು ನಾಲ್ಕು ದಿನದ ನೆಲದರಸನನ್ನು ಭಜಿಸಿ ಪೂಜಿಸಿ ಪ್ರದಕ್ಷಿಣೆ ಮಾಡಿ ಹಾಡಿ ಹೊಗಳಲೆ ? (ತುಂಗಭ. ೬). **ನೆಲದವ್ವ** = ಭೂಮಿತಾಯಿ : ನಾವು

ನೆಲದವ್ವನ ಮಕ್ಕಳು (ಹಾಹುತ್ತ. ೭೮). **ನೆಲದ ಹಾದರಿ** = ಒಂದು ಬಗೆಯ ಪಾದರಿಗಿಡ ಮತ್ತು ಅದರ ಹೂವು : "ಕುಂಭಿ-ದಂತಿ, ಕರಿಯ ಸಿವನ್ನಿ, ಕಿಱಿಯ ಗುಳ್ಳ, ನೆಲದ ಹಾದರಿ . . . ಹೆಗ್ಗುಳ್ಳ" (ಒಷಧಿ. ೩೪). **ನೆಲದಱಿಕೆ, ನೆಲದರಿಕೆ** = ಲೋಕದಲ್ಲೆಲ್ಲಾ ಹರಡಿದ ಖ್ಯಾತಿ,—ಪ್ರಸಿದ್ಧಿ ; ಜಗದ್ವಿಖ್ಯಾತಿ : ನೆಲದಱಿಕೆಯ ಬಿದಿಯಂ ಪೊಡೆಯಲರನಸಿಂಡಿರನನದಟರಂ ತವಸಿಗಳಂ ನೆಲೆ ನಟ್ಟು ನೋಯಿಸಿದುದಿನ್ನಲರಂಬಿನ ಮೊನೆಗೆ ನಿಲ್ವನೇ ಬಡಗೊರವಂ (ಕಬ್ಬಿಕಾ. ೧೫೭) ; ಕೃಷ್ಣದೇವನ ಕುಲದ ನೆಲದರಿಕೆಯಾಳಿಕೆಯ ಹೆಮ್ಮೆಯಿಂದಾಳು (ಹೊಂಗಳು. ೧೩-೭). **ನೆಲದಾಣ್ಮ** = ನೆಲದರಸ : ಬಱಿದೆ ಕಾಳಗಕೆ ಬಲಸಹಿತ ಬಂದೆ ನೀನಿನಿತುಱುಬೆಗೆಱಗುವರೆ ನೆಲದಾಣ್ಮರಕಟ ನಿನಗೆ [ಪಾಠಾಂ. ಬಂದೆಮ್ಮೊಡನೆ ಕೆಣಕಿ ರಣದೊಳಗೆ ಕುದುರೆಯಂ ಬೇಡಲೇಕೆ] (ಜೈಮಿಭಾ. ೨೭-೩೯) ; ನಿಮ್ಮ ವಂಶದ ನೆಲದಾಣ್ಮರು . . . ಬಲ್ಬಲಯುತರಾಗಿ ರಂಜಿಪರು (ಕಂಸವಿ. ೧೮-೧೨೫). **ನೆಲದುಬ್ಬು** = ಭೂಮಿಯ ಎತ್ತರದ ಭಾಗ ; ಪರ್ವತ ; ಬೆಟ್ಟ : ನೆಲದುಬ್ಬಿನೀ ಮಲೆಯ ತಲೆಯ ಗುಡಿಮೊನೆಯಿಂದ – ನೆಲವ ಕವಿವೀ ಬಾನ ಸೀಲಿಮೆಯ ತಲದಿ (ಮಲೆದೇ. ೫೨-೩). **ನೆಲದೆಱೆಯ, ನೆಲದೆರೆಯ** = ನೆಲದರಸ : ಒಲವಿಂದೋಲಗಿಸುವೆನೀ ನೆಲದೆಱೆಯನನೆಂದು ಬರ್ಪವೋಲ್ ಬಗ್ಗಿಪ ಕೋಗಿಲೆಯ ತೊದಳ್ನುಡಿ ಬಿರಯಿಯನಲೆಯುತ್ತಿರೆ ಬಿಡದೆ ಬಂದುದಂದು ವಸಂತಂ (ಕಬ್ಬಿಕಾ. ೫೨) ; ನೆಲದೆ[ಪಾಠಾಂ. ನೆ]ಱೆಯನ ಮೆಯ್ಯುರಿಯಂ . . . ಕೆಲಬರ್ ಮಂತ್ರಂಗಳಿಂದೆ ಮಾಣಿಪೆವೆಂದರ್ (ತ್ರಿಪುವಿ. ೩೩-೩೫) ; ಹುಯುಮಂ ಬಿಟ್ಟು ನೆಲದೆಱೆಯ ಧರ್ಮಸುತನಂ ಕಂಡು ಬದುಕುವುದು ಲೇಸೆಂದು ನರನೆಚ್ಚನು (ಜೈಮಿಭಾ. ೧೪-೯) ; ನೆಲದೆರೆಯ ವುತ್ರಾನಪಾದನಾತ್ಮಜ ಭರ್ತಗೊಲಿದಿತ್ತ ಭೂಮಿಯದರಿಂದ ಭರತಾಖ್ಯಖಂಡ ಮೆನಿಸುತ್ತಲಿಹುದು (ನಾಮೋ. ೨-೧೮); ನೆಲದೆರೆಯ ಜನಕರಾಜನ ಹೃದಯದಿಂಗಿತಕೆ ಮನವೊಪ್ಪಿ ಸೌಮಿತ್ರಿಯಯೂರ್ಮಿಳೆಯನೊಪ್ಪಿದಂ (ಶ್ರೀರಾಮಾ. ೫೧-೯೨೮). **ನೆಲದೊಡಲು** = ಭೂಮಿಯ ಒಳಭಾಗ : ಬೇರು ನೆಲದೊಡಲಿಗೂ ಬಿಟ್ಟಿರುತ್ತದೆ (ನೆಲಮು. VII, ನಾಲ್ಕು ಮಾತು). **ನೆಲದೊಡೆಯ, ನೆಲನೊಡೆಯ** = ೧. ಭೂದೇವಿಯ ಪತಿ ; ವಿಷ್ಣು : "ನೆಲದೊಡೆಯನೆಂದೆನಲ್ ನಾರಾಯಣಂ" (ಕಶರ. ೫೬) ; ತೇರಣೆಗೆ ನೆಲದೊಡೆಯನಾಯ್ದು ಹೂವೆನೆ ಬೆಳ್ಳಿ ಸಾರಿದಳ್ ಪೆರ್ವೊಗರ ಕಡಲೊಡಲ ಪೊರ್ದಿ (ಕಾಲೂರ. ೧೭೮-೪೦೩) ; ಜಗದೊಡೆಯಂ ನೆಲನೊಡೆಯಂ (ಶಸುದ. ೨೦೬ ಪ್ರಯೋ). **೨.** = ನೆಲದರಸ : ಒಡನೆ ಕಳುಹುತ ಬಂದನಾ ನೆಲದೊಡೆಯನನುಜರು ಸಹಿತ (ಕುಪ್ಯಾದ್ರೋ. ೪-೫೩) ; ನೆಲನೊಡೆಯನಾಪ್ತಗರು ಬಗೆದರು ಸ್ವಾಮಿದ್ರೋಹಿಕೆಯ (ಕುಪ್ಯಾದ್ರೋ. ೧೦-೭). **ನೆಲನಂ ಬರೆ, ನೆಲನ ಬರೆ** = (ಭಯ, ನಾಚಿಕೆ, ಸೋಲು ಮುಂತಾದುವನ್ನು ಸೂಚಿಸುವಂತೆ) ಕಾಲ ಬೆರಳಿನಿಂದ ನೆಲವನ್ನು ಗೀರು : ಅವರ್ಗಳ್ ತಲೆಯಂ ಬಾಗಿ ಮಱುಮಾತುಗುಡದೆ ಕಣ್ಣ ನೀರಂ ತೀವಿ ನೆಲನಂ ಬರೆಯುತ್ತಿರೆ (ಪಡ್ನಾರಾ. ೨-೨೨) ; ಕೆಳದಿಯ ನುಡಿಗೆ ಪೆಱತೇನುಮನೆನಲಱಿಯದೆ ತಲೆಯಂ ಬಾಗಿ ನೆಲನಂ ಬರೆಯುತ್ತುಂ (ಪಂಪಭಾ. ೪-೬೪ ವ) ; ತಲೆಯಂ ಬಾಗಿ ನೆಲನಂ ಬರೆಯುತ್ತಿರ್ದ ದವನಕನ ಕೃತಕವೇಷಮಂ ಕಂಡು (ಪಂಚತಂ. ೯೨-೨) ; ಗೋತ್ರನಾಮವ ಬೆಸಗೊಂಡರೆ . . . ತಲೆಯ ಕುತ್ತಿ ನೆಲನ ಬರೆಯುತ್ತಿದ್ದಿರಿದೇನಯ್ಯಾ (ಬಸವ. ೭೪೪) ; ಮುಂದನಱಿಯದ ಮತಿಗೆಟ್ಟ ಮರುಳುಮನವೇ ಕಾಲ ಕಾಮರ ಗೆಲುವ ಉಪಾಯವಾವುದೆಂದು ತಲೆಯೂಱಿ ನೆಲನ ಬರೆವುತಿಪ್ಪೆ (ಘನವ. ೧೫-೧೩). **ನೆಲನ ಜೇನ್ಗೊಡ** = ಎರೆಭೂಮಿಯ ಬೀಡಿನೊಳಗೆ ಕಟ್ಟಿದ ಜೇನುಹುಟ್ಟು : ಹೆಗ್ಗರಡಿಗಳು ಕಿತ್ತೊದರಿದ ನೆಲನ ಜೇನ್ಗೊಡನು ನೋಡೆಂದುದು ಕಿರಾತಚಯ (ಅನಂತಾ. ೩-೩-೧೩). **ನೆಲನಡಿ** = ಭೂಮಿಯ ಕೆಳಭಾಗ ; ಪಾತಾಳ : ಆಟಕ್ಕೆ, ನೆಲನಡಿಯ ಆಟಕ್ಕೆ, ಬಿತ್ತರದ ಅಡಿನೆಲದ ಆಟಕ್ಕೆ ಎನ್ನನ್ ... ತೂಳ್ದು ಎಸೆದಿರ್ದೊಡೋವೋ (ಬದ್ಧಪ್ರ. ೧೦-೧೯೧). **ನೆಲನನುಗ್ಗಡಿಸು, ನೆಲನುಗ್ಗಡಿಸು** = ಗೌರವಸ್ಥರನ್ನು ಕರೆದುಕೊಂಡು ಹೋಗುವಾಗ ದಾರಿ ಬಿಡಿಸಿ ಕೊಡು,—ದಾರಿ ತೋರಿಸುತ್ತಾ ಹೋಗು,— ಪಾದಾವಧಾನವನ್ನು ಹೇಳು : ದುಕೂಲಂಗಳಂ ಪಿಡಿದು ನೆಲನನುಗ್ಗಡಿಪ ಕೇಯೂರಕನು ಮೊಡವರೆ (ಕಾದಂಬ. ೧೦೫) ; ನೆಲನನುಗ್ಗಡಿಸೆ ಉಘೇ ಚಾಂಗುಭಲಾ ಎಂದು (ಬಸವ. ೫೯೫) ; ನೆಲನುಗ್ಗಡಿಪ ಪಡಿಯಱತಿಯರಂ ನಿವಾರಿಸಿ ದಪ್ಪಳಿನಿಸಿಯುಂ (ಕಾದಂಬ. ೩೬). **ನೆಲನನೊಡಂಬಡು** = ನೆಲದ ಮೇಲೆ ಬೀಳು ; ಮೂರ್ಛೆ ಹೊಂದು : ಕಟ್ವಾಳ್ಗಳೆನಿಪ ರಕ್ಕಸರೊಟ್ಟಜೆಗೆಟ್ಟಲೆ ಸಗ್ಗಿಗರ್ ನೆಲನನೊಡಂಬಟ್ಟರೆ ಕಾಳೆಗದೆಡೆಯೊಳ್ (ಕಬ್ಬಿಕಾ. ೩೦೮). **ನೆಲನ ಮಗಳ್** = ಭೂಮಿಯ ಮಗಳು; "ಅವನಿಜೆ, ಸೀತೆ" (ಪ್ರಭಣ್ಣ). **ನೆಲನಮರ್ದುಣಿ** = ಬ್ರಾಹ್ಮಣ ; ಭೂಸುರ : "ನೆಲದಮರ್ದುಣಿಸುಗಳೆಂದುಂ, ನೆಲನಮರ್ದುಣಿಗಳೆಂದುಂ ವಿಪ್ರರ್ಗೆ ಪೆಸರ್" (ಕಶಸಾ. ೬೦-೩೩೩) ; "ತಳೆದಿರ್ಪರಾ ದ್ವಿಜರ್ ನೆಲನಮರ್ದುಣಿ [ಪಾಠಾಂ. ನೆಲದಮರ್ದುಣಿ. ನೆಲನಮರ್ದುಣಿಸಿ]ವೆಸರಂ" (ಕಬ್ಬಿಕೈ. ೩೩). **ನೆಲನಮರ್ದುಣಿಸಿ** = ನೆಲನಮರ್ದುಣಿ : "ತಳೆದಿರ್ಪರಾ ದ್ವಿಜರ್ ನೆಲನಮರ್ದುಣಿಸಿ [ಪಾಠಾಂ. ನೆಲದಮರ್ದುಣಿ, ನೆಲನಮರ್ದುಣಿ]ವೆಸರಂ" (ಕಬ್ಬಿಕೈ. ೩೩) ; "ನೆಲನಮರ್ದುಣಿಸಿಗಳೆನ್ನಲ್ ಸಲೆ ವಿಪ್ರರ್" (ಕವಿಕಂ. ೧೫೦). **ನೆಲನಾಳ್ದ** = ನೆಲದರಸ : ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಿಲಿವರಯ್ಯಾ ನೆಲನಾಳ್ದನ ಹೆಣನೆಂದರೆ ಒಂದಡಕೆಗೆ ಕೊಂಬವರಿಲ್ಲ ನೋಡಯ್ಯಾ (ಬಸವ. ೧೫೮). **ನೆಲನುಂ ನೇಸಱುಂ ಕಾಣದಂತೆ** = "ಅತಿರಹಸ್ಯವಾಗಿ, ಅತಿಸುಖವಾಗಿ ಉಪಹತಿಯಿಲ್ಲದೆ" (ಪ್ರಭಣ್ಣ) : ನೆಲನುಂ ನೇಸಱುಂ ಕಾ[ಪಾಠಾಂ. ಗಾ]ಣದಂತು ಮನೆಯೊಳಗೆ ಬಳೆಯುತ್ತುಮಿರ್ದಿಭ್ಯಕೇತುಕುಮಾರಂ (ಅರ್ಧನೇ. ೩-೯೪ ವ). **ನೆಲನುಗ್ಗಡಣೆಕಾಱ** = ಪಾದಾವಧಾನವನ್ನು ಹೇಳುವವನು : ಬಿಡದೆ ಕೈವಾರಿಸುವ ನೆಲನುಗ್ಗಡಣೆಕಾಱರ [ಪಾಠಾಂ. ವಾದ್ಯದ ಭರಕೆ ನೆಲ ಘೀಳಿಡಲು ರಾಯರ] ಮೊತ್ತಗಳು ಮುಂಗುಡಿಯಲೊಪ್ಪಿರೆ ನಡೆದನಿದಿರನು ಬಸವದಂಡೇಶ (ಪ್ರಭುಲೀ. ೨೨-೧೭). **ನೆಲಮಕ್ಕಳ್** = ಒಕ್ಕಲ ಮಕ್ಕಳು; ರೈತರು : ಸ್ವಸ್ತಿಶ್ರೀ ಪೆಮ್ಮಡಿಯ ಬೆಸದೊಳ್ಮಹಾದೇವಿಯ ತಮೂನಿನ್ದರ ಪರಿವರಿತರೆ ನೆಲಮಕ್ಕಳ್ನೆಲದ ಸನ್ದು × ತಲೆಯಸನ್ದುವ ಮೆಟ್ಟಲಗದೆನ್ದು (ಎಕ. XVI, ಮದ್ದಗಿ. ೧೩೩-೭ ; ?). **ನೆಲವ ಗೀರು** = ನೆಲನಂ ಬರೆ : ಮೇಣರ್ಜುನಂ ತಲೆವಾಗಿ ನೆಲವ ಗೀರುತ ನಿರುತ್ತರನಾದ (ಹಬ್ಬಿರ. ೧೦-೭). **ನೆಲವನ್ನು ಕೆರೆ** = ನೆಲನಂ ಬರೆ : ದುರ್ಯೋಧನನು ಆನೆಯ ಸೊಂಡಲಂತಿದ್ದ ತನ್ನ ತೊಡೆಯನ್ನು ತಟ್ಟಿ ಮುಗುಳುನಗುತ್ತ ತನ್ನ ಹೆಜ್ಜೆಯಿಂದ ನೆಲವನ್ನು ಕೆರೆಯುತ್ತಿದ್ದನು (ಪಚಭಾ. ೧೧೫). **ನೆಲಸಮಾನ ಮಾಡಿಸು** = ಭೂಮಿಯ ಮಟ್ಟಕ್ಕೆ ಮಾಡು ; ನಾಶಗೊಳಿಸು : ಪಟ್ಟದೊಳಗಿನ ಮನೆಗಳನ್ನೂ ಮೇಲುಪ್ಪರಿಗೆಗಳನ್ನೂ ಗುಡಿಗಳನ್ನೂ ಕೆಡವಿಸಿ, ನೆಲಸಮಾನ ಮಾಡಿಸಿದನು (ಮುಂಬಯಿ. ೫-೪೫).

[**ದೇ.**॥ **ತಮಿ. ಮಲ.** ನಿಲ ; **ತುಳು. ಕೊಡ. ತೆಲು.** ನೆಲ ; **ಪರ್ಜಿ.** ನೆನ್ದಿಲ್, ನೇದಿಲ್ ; **ಕೋತ.** ನೆಲ್]

**ನೆಲಅಣಬೆ** (ನಾ). ಒಂದು ಬಗೆಯ ನಾಯಿಕೊಡೆ : ಈಶ್ವರಂ ನೆಲ ಅಣಬೆ ಚಿತ್ರಮೂಲ . . . ಇವ ಸಮಾನಂಗೊಂಡು (ಪಾತಾಚಿ. ೧೩-೧).

[ನೆಲ + ಅಣಬೆ(<ಆಳಂಬೆ)]

**ನೆಲಕಂಚಿ** (ನಾ). ಒಂದು ಬಗೆಯ ಸಸ್ಯ : "ನೆಲಕಂಚಿ, ನೆಲಹೆಂಳಿ, ನೆಲನಾರಂಗಿ" (ಸಸ್ಯನಿ. ೯೫). [ನೆಲ + ಕಂಚಿ$_1$./ತುಳು. ನೆಲಕಂಚಿ]

**ನೆಲಕಚ್ಚು** (ಕ್ರಿ). ಭೂಮಿಯನ್ನು ಹಿಡಿ ; ನೆಲಕ್ಕೆ ಅಂಟಿಕೊಂಡಿರು: ಹೊಳೆಗೆ ಬಿದ್ದ ಅವನ ಹೆಣ ನೆಲ ಕಚ್ಚಿದೆ. ಮೇಲೆ ಬರಲು ಎರಡು ದಿನ ವಾದರೂ ಬೇಕು (ರೂಢಿ). [ನೆಲ+ಕಚ್ಚು$_1$(<ಕರ್ಚು$_1$)]

**ನೆಲಕಟ್ಟು** 'ನೆಲಗಟ್ಟು' ನೋ.

**ನೆಲಕಡಲೆ** 'ನೆಲಗಡಲೆ' ನೋ.

**ನೆಲಕರ** (ನಾ). ಭೂಮಿಯ ಮೇಲೆ ಹಾಕುವ ತೆರಿಗೆ ; ಭೂ ಕಂದಾಯ: ಆ ಊರುಗಳ ನೆಲಕರ ಮರವಳಿಗಳನ್ನು ಬಿಟ್ಟಿದ್ದು ಹಾಗಿರಲಿ, ಬೆಳಸನ್ನು ಕಳೆದುಕೊಂಡ ಮಂದಿಯ ಹೊಟ್ಟೆಯನ್ನೂ ತುಂಬಿಕೊಡ ಬೇಕಾಯಿತು (ಸಪತಿ. ೬೩). [ನೆಲ + ಕರ$_3$]

**ನೆಲಕಲ** (ನಾ). ಜಿಪುಣ ; ಲೋಭಿ ; ಕೃಪಣ : "ನೆಲಕಲಂ ಲೋಭಿ" (ಕರ್ಣಾನಿ. ೬೨) ; ನೆಲಕಲನೆಂದು ಲೋಭಿ (ಶಮದ. ೧೬ ಪ್ರಯೋ) ; ನೆಲದಾಳಿಗಳ ರಾಯಕುವರಿಗೊಲಿದು ನೆಲಕಲನೆನಿಸದೆ ನೆಲದೊಲವಿತ್ತು (ಕೈವಲ್ಯ. ೧-೨೬-೧) ; ಶಿಲೆಯೊಳು ಮೃದುನೆಲಕಲನೊಳು ತ್ಯಾಗ . . . ಪರಮಾರ್ಥದಱಿವು ಗಾಂಪನೊಳುಂಟೆ (ಮೋಳಿಪ. ೫-೧೨೨) ; ತಾನು ಮುಣದ ಪೆಜಿವರ್ಗವಿಪಾಯದ ನೆಲಕಲನ ಮಜಿಕಿಯ ಮುಚ್ಚಿನ ಭಂಡಾರ ದೊಳಗಣೊಂದು ಪಾಟಿಕ್ಕೀಡಿಂ ಪುರುಳ್ ಕುಂದುವಂತಿರೆ (ರಾಮಾಶ್ವ. ೮೩-೫). [ ? ]

**ನೆಲಕುಳಿ** (ನಾ). ಕುಟ್ಟುವುದಕ್ಕೆ ಅಥವಾ ರುಬ್ಬುವುದಕ್ಕೆ (ನೆಲ ದಲ್ಲಿ) ಮಾಡಿರುವ ಗುಳಿ ; ಒರಳು : ಮೂವರು ಮೂರು ಒನಕೆ ಗಳನ್ನೆತ್ತಿ ಅನುಕ್ರಮವಾಗಿ ನೆಲಕುಳಿಗೆ (ಒರಲಿಗೆ) ಗುರಿ ತಪ್ಪದೆ ಕುಟ್ಟು ವಾಗ (ಸಂಶೋಧ. ೧೪೬).

[ನೆಲ + ಕುಳಿ$_1$(<ಕುೞಿ$_1$)./ತುಳು. ನೆಲಕ್ಕುಳಿ, ನೆಲಕ್ಕುರಿ]

**ನೆಲಕೊಳವಳಿಕೆ** (ನಾ). ಒಂದು ಬಗೆಯ ಮುಳ್ಳುಗಿಡ : ತಾವರೆ ಎಲೆ, ನೆಲಕೊಳವಳಿಕೆ, ಅಶ್ವಗಂಧಿಗೆಡ್ಡೆ . . . ಕಷಾಯವಿಕ್ಕಿ ಕೊಡಲು ಛಳಿ ನಿಲ್ಲುವುದು (ಸಕವೈ. ೭೫). [ನೆಲ + ಕೊಳವಳಿಕೆ(<ಕೊಳಗುಳಿಕೆ)]

**ನೆಲಕೋಟೆ** 'ನೆಲಗೋಂಟೆ' ನೋ.

**ನೆಲಗಂದಾಯ** (ನಾ). = ನೆಲಕರ : ನೆಲಗಂದಾಯವನ್ನು ಹೆಚ್ಚಿಸಿದ್ದಲ್ಲದೆ ಅನೇಕ ತೆರಿಗೆಗಳನ್ನು ಹೊಸದಾಗಿ ಗೊತ್ತುಮಾಡಿದರು (ಒಡೆಕ. ೪೩).

[ನೆಲ + ಕಂದಾಯ]

**ನೆಲಗಂಪು** (ನಾ). ಮಣ್ಣಿನ ವಾಸನೆ: ಮಣ್ ತೊಯ್ದು, ಕಮ್ಮನೆ ಸೊಗಸಿ ತೀಡಿದುದು ನೆಲಗಂಪು ನಲ್ (ಶ್ರೀರಾಮಾ. ೩೪೧-೩೫).

[ನೆಲ+ಕಂಪು]

**ನೆಲಗಚ್ಚು** (ನಾ). = ನೆಲಗಟ್ಟು ೧ : ಕಾಜಿನ ಕಂಬ ನೆಲಗಚ್ಚ ಮನಿಯಾಗ . . . ಮಸಿಗ್ಯಾನ (ಲೋಕಗೀ. ೧೭೬). [ನೆಲ + ಗಚ್ಚು$_2$]

**ನೆಲಗಟ್ಟಿಸು** (ಕ್ರಿ). ನೆಲಗಟ್ಟನ್ನು ಮಾಡು, —ರಚಿಸು : ಗಟ್ಟಿಸಿ ಸಿಂಧುರದೊಳ್ ನೆಲಗಟ್ಟಿಸಿ ಚೆಂಬೊನ್ನ ನೆಲೆಯ ಚೌಪಳಿಗೆಗಳೊಳ್ ಕಟ್ಟಿಸಿ ಪಟಿಯಿಗೆಗಳನಳವಟ್ಟಿರೆ ಬಿಯಮಲ್ಲಿ ಮೊಟಿಗೆ ಪಲವುಂ ಪಱಿಗಳ್ (ಪಂಪಭಾ. ೨-೬೬) ; ನವರುಧಿರಜಳಚಳ[ತ್ಸೇಚನ]ದೊಳ್ ಘಟ್ಟಿಸಿ ಸಿಂಧುರದೊಳ್ ನೆಲಗಟ್ಟಿಸಿದಂತಿರ್ದ ರಂಗಭೂಮಿಯೊಳೆರಡುಂ ಪಡೆಯ ನಾಯಕರ್ ಬಿಲ್ಲಾಳಿಗಂಗಾದುವಾಗಳ್ (ಪಂಪಭಾ. ೧೦-೭೦ ಪ) ; "ನೆಲಗಟ್ಟಿಸಿ ದಂತಿರ್ದ = ನೆಲಕ್ಕೆ ಹಾಸಿದಂತಿದ್ದ" (ಪಂಪಪೀ. ೩೬೪).

[ನೆಲಗಟ್ಟು + -ಇಸು$_3$]

**ನೆಲಗಟ್ಟು**, ನೆಲಕಟ್ಟು (ನಾ). ೧. (ಕಟ್ಟಡಗಳ) ಸಮ ಮಾಡಿದ ನೆಲ. ೨. ಪಚ್ಚೆ, ರತ್ನ ಮುಂತಾದುವುಗಳನ್ನು ಕುಂದಣಿಸಿದ ನೆಲ, —ಕುಟ್ಟಿಮ : "ಕುಟ್ಟಿಮಮಂ, ಬದ್ಧಭೂಮಿಕಂ—ಈ ೨ ನೆಲಗಟ್ಟು" (ಹಲಾಯು. ೪೯-೧೯೯) ; ಪಚ್ಚೆಯ ನೆಲಗಟ್ಟಿನೊಳಂ ರಾಜಾವರ್ತದ ಕಂಬದೊಳಂ (ಪಂಪಭಾ. ೩-೭೪ ಪ) ; ಪನಿಪುಲ್ ಪಚ್ಚೆಯ ನೆಲಗಟ್ಟಿನ ಮುತ್ತಿನ ರಂಗವಲಿಯ ತೆಜಿನಂ ಮನದೊಳ್ ಜನಿಯಿಸೆ (ಶಾಂತಿಪು. ೮-೧೧೨) ; ಪಚ್ಚೆಯ ನೆಲಗಟ್ಟು ಕನಕದ ತೋರಣ ವಜ್ರದ ಕಂಭ ಪವಳದ ಚಪ್ಪರವಿಕ್ಕಿ ಮದುವೆಯ ಮಾಡಿದರು (ಮಹಾದೇ. ಬ. ೩೫-೭೬) ; ನೆಲಗಟ್ಟ ಕಟ್ಟಿಸಿ ಕನಕ ನವನವರತ್ನಮಯ ಶಿವಭವನವನಂ ರಚಿಸಿ (ಬಸವು. ೫೩-೨೯) ; ಧೂಳಿಪಟವಾಯಿತು ಹಿರಣ್ಯಪುರಾಲಯದ ನೆಲ[ಪಾಠಾಂ. ಲೆ]ಗಟ್ಟು (ಕುಮ್ಯಾಅ. ೧೩-೪೮) ; ಅವನು ಸ್ಫಟಿಕಶಿಲೆಯಿಂದ ಮಾಡಿದ್ದ ನೆಲಗಟ್ಟನ್ನು ನೀರೆಂದು ಭ್ರಮಿಸಿ ತಾನು ಉಟ್ಟಿದ್ದ ಬಟ್ಟೆಯನ್ನು ಮುದುರಿಕೊಂಡನು (ಪಚಭಾ. ೪೯). ೨. ತಳಹದಿ ; ಅಸ್ತಿವಾರ ; ಬುನಾದಿ : ಶೌರ್ಯಮಾರ್ತಂಡದೇವರ ದೇಗುಲದ ನೆಲಗಟ್ಟಿನ ನೈರುತ್ಯದ ಮೂಡಲ್ಸೇತುಕೋಟೆವರಂ ಮೇರೆಯಾಗೆ (ಎಕ. VIII, ಸಾಗರ. ೧೦೮-೪೨ ; 1631) ; ಕೋಪವೆಂಬುದು ತಾನು ಪಾಪದ ನೆಲ ಗಟ್ಟು (ಸರ್ವಜ್ಞ. ೪೭೯) ; ಮಾನವನ ದೇಹರಚನೆಯಲ್ಲೇ ಈ ವ್ಯಾಧಿಗೆ ಭದ್ರವಾದ ನೆಲಗಟ್ಟು ದೊರೆತಿದೆ (ಸಂಟರು. ೪೦); ಭೂಲೋಕದ ನೆಲಗಟ್ಟ ನಲ್ಲಿ ನಿಂತು ಸಕಲಲೋಕಗಳನ್ನಳೆಯುವ ವಾಮನಶಕ್ತಿಯಲ್ಲಿ . . . ಪ್ರಾಚೀನಗ್ರೀಕರಿಗೆ ಅಪಾರ ಗೌರವವಿತ್ತು (ನಂಜುಂಡ. ೧೩೬). ೩. ಭೂಮಿಯ ಗುಣ : ನಮ್ಮೂರ ತಿಪ್ಪಶೆಟ್ಟಿ ತೋಟದ್ದು ನೆಲಗಟ್ಟು ಯೆಂದು ಕಾಣುತ್ತೆ. ನಮ್ಮೂರಿನಲ್ಲಿ ಇನ್ನೂ ಅನೇಕರು ಬದನೆ ಹಾಕಿದ್ದಾರೆ. ಇಷ್ಟು ರುಚಿ ಯಾವುದೂ ಇಲ್ಲ (ಚೆಂಗಾಳ್ವ. ೨೧) ; ಆ ಅನ್ನ ಊಟ ಮಾಡುವಾಗ್ಯೆ ಹಾಲಿನ ರುಚಿಯೂ ನೆಲಗಟ್ಟಿನ ಮೇಲಿದೆಯೆಂಬು ದನ್ನು ಚರ್ಚೆ ಮಾಡಿದರು (ಚೆಂಗಾಳ್ವ. ೨೧). **ನೆಲಕಟ್ಟು** : ೧. ಮೇಲುಕಟ್ಟಿನ ಝಲ್ಲಿಗಳು ನೆಲಕಟ್ಟಿನ ನೀಲರತ್ನದೊಳು ಮಾರ್ಪೊಳೆಯೆ (ಭರಚ. ೧೨-೧೬) ; ಕಿಟಕಿಯ ನೆಲಕಟ್ಟಿನ ಮೇಲೆ ಚಾಕುವಿನಿಂದ ಕತ್ತರಿಸಿಟ್ಟಿದ್ದ ಕಾಗದದ ಹಾಳೆಗಳನ್ನು ಹಾರಿಸುತ್ತಿದ್ದ ವಸಂತಮಾರುತ . . . ಇವೆಲ್ಲ ಏಕಕಾಲದಲ್ಲಿ ನೆಕ್ಲುದೋವ್‌ನಿಗೆ ನೆನಪಾದುವು (ಪುನರು. ೨೭೪). [ನೆಲ+ಕಟ್ಟು$_2$]

**ನೆಲಗಡಚ** (ನಾ). ಒಂದು ಬಗೆಯ ಔಷಧಿ ಸಸ್ಯ : "ಅನಂತಾಃ— ನರುವಲು, ಕಜುಕೆ, ಗೋರಟೆ, ನೆಲಗಡಚ . . . ಸುಗಂಧಿ" (ಒಷಧಿ. ೪).

[ ? ]

**ನೆಲಗಡಲೆ**, ನೆಲಕಡಲೆ (ನಾ). ಕಡಲೆಕಾಯಿ ; ಶೇಂಗಾ : ರೈತರು ನೆಲಗಡಲೆ, ಗೆಣಸು, ಈರುಳ್ಳಿ, ಬೆಳ್ಳುಳ್ಳಿ ಮುಂತಾದ ಕೀಳುಪೈರನ್ನು ಹಾಕಿ ಭರತನ ಬಳಿಗೆ ಬಂದು . . . ಎಂದರು (ಹುಟ್ಟಹ. ೧೬೨); ನೆಲಗಡಲೆ ಅಥವಾ ಕಡಲೆಕಾಯಿ—ಈಚೀಚೆಗೆ ಇದರ ವ್ಯವಸಾಯವು ಹೆಚ್ಚಾಗು ತ್ತಿದೆ (ವ್ಯವಸು. ೪೨); ನಮ್ಮ ಪ್ರದೇಶದಲ್ಲಿ ಬೆಳೆಯುವಷ್ಟು ನೆಲಗಡಲೆಯು ಜಗತ್ತಿನ ಇನ್ನಾವ ದೇಶದಲ್ಲಿಯೂ ಬೆಳೆಯುವುದಿಲ್ಲ (ಸಸ್ಯಶಾ. ೧೩೧). **ನೆಲಕಡಲೆ** : "ಕಲಾಯಃ, ಸತೀನಕಃ, ಹರೇಣುಃ, ಖಂಡಿಕಃ—೪ ಬಟ್ಟ ಗಡಲೆಯ ಹೆಸರುಗಳು, ನೆಲಕಡಲೆ" (ಸಿದ್ಧಾಂತಿ. ೨೭೪).

**ನೆಲಗಡಲೆಕಾಯಿ** = **ನೆಲಗಡಲೆ** : ನೆಲಗಡಲೆಕಾಯಿ, ಕಡಲೆಕಾಯಿ (ಮೈಡಿಗಿ. ೮-೧೩೨). [ನೆಲ + ಕಡಲೆ. /ತುಳು. ನೆಲಕಡಲೆ]

**ನೆಲಗಡವ**, ನೆಲಗಡವು (ನಾ). ಒಂದು ಬಗೆಯ ಔಷಧಿ ಸಸ್ಯ : "ಭೃಂಗಪ್ರಿಯಃ — ನೆಲಗಡವ" (ಒಷಧಿ. ೧೧೩). **ನೆಲಗಡವು** : ಕುಲಹಲಃ – ಬೋಟಿತಜ . . . ನೆಲಗಡವು" (ಒಷಧಿ. ೩೬).

[ನೆಲ + ಕಡವ$_1$(<ಕಡಂಬ)]

**ನೆಲಗಡವು** 'ನೆಲಗಡವ' ನೋ.

**ನೆಲಗತ** (ನಾ). ೧. ಬಿದ್ದು ಹೋದುದು ; ಭೂಗತವಾದುದು : ಅಂಕನಾಥದೇವರ ದೇವಾಲ್ಯಉ ನೆಲಗತವಾಗಿಯಿರಲಾಗಿ ಜೀರ್ಣ್ನುದ್ಧಾರವಾಗಿ ಗರ್ಬ್ಬಗ್ರುಹ ಸುಖನಾಸಿ ರಂಗಮಂಟಪ ಸಿಖರ ಮೊದಲಾಗಿ ಕಟಿಸಿ ಸಂಪ್ರೋಕ್ಷಣೆಯ ಮಾಡ್ಸಿ (ಎಕ. IX(S), ಚನ್ನಪ. ೨೯೯–೩೨ ; 1387). ೨. ನಾಶ ; ಹಾಳು : ನೇಮ ನೆಲಗತವಾಯಿತ್ತು ಸೀಮೆ ಸಿಸ್ಸೀಮೆಯಾಯಿತ್ತು ನೋಡಾ (ಸಿದ್ಧೇಪ. ೨೯೯) ; ನೆಗ್ಗಿ ನೆಲಗತವಾಯ್ತು ವನನಿಚಯ (ತೊರರಾ. ೪–೯–೯). 'ಭೂಗತ' ಪರಾ. [ನೆಲ+ಗತ$_2$]

**ನೆಲಗನ್ನ** (ನಾ). ನೆಲದಲ್ಲಿ ಕೊರೆದ ಕನ್ನ,—ತೋಡಿದ ಚೋರಗಂಡಿ : ನೆಲಗನ್ನವಂ ಬಲುಗೋಡೆಗನ್ನವನು ತೋಡಿ ವ್ಯನೆಯೊಳ ಪೊಕ್ಕು (ಬಸವು. ೩೧–೫) ; ನೆಲಗನ್ನ ಗೋಡೆಗನ್ನ ಅಗುಳಿಗನ್ನವನಗಿದು ಮನೆಯ ಪೊಕ್ಕು ನೋಡುವಲ್ಲಿ (ಭೈರಸೂ. ೩೫೦) ; ನೆಲಗನ್ನಂ ಗೋಡೆಗನ್ನಂ ಮಿಸುಗುವ ಗುಳಿಗನ್ನಂ ದೃಢದ್ವಾರಬಂಧಸ್ಥಲದೊಳ್ಕನ್ನಂ ದಲಿಂತೆಂಬನಜಿತೊಳದಕೆ ತಕ್ಕಂದದಿಂ ಕನ್ನಮಂ ತೋಡಿ (ವೃಷವಿ. ೨೦–೮). [ನೆಲ+ಕನ್ನ$_1$]

**ನೆಲಗಪ್ಪು** (ನಾ). ಮೃಗಗಳನ್ನು ಹಿಡಿಯಲು ನೆಲದಲ್ಲಿ ತೋಡಿ ಮುಚ್ಚಿಟ್ಟ ಹಳ್ಳ,—ಕುಳಿ : ಬಲೆ ಕಾಲ್ಕಣ್ಣಿ . . . ನೆಲಗಪ್ಪುಗಳಿಂದ ಮೃಗಗಳ ಹರಣವ ತೊಲಗಿಸುವರು ಬೇಡರಲ್ಲಿ (ರಾಮವಿ. ೧೫–೬೪). [ನೆಲ+ಕಪ್ಪು$_3$]

**ನೆಲಗರ್ನಾಲು** (ನಾ). ಒಂದು ಬಗೆಯ ಪಟಾಕಿ : ಬಿರುಸು, ಗರ್ನಾಲು, ನೆಲಗರ್ನಾಲುಗಳೆಂದು ಸಮರಸೂಚನೆಯೇ ಆಯಿತು . . . ಎಷ್ಟೆಷ್ಟು ಬಗೆಯ ಸುಡುಮದ್ದುಗಳಿವೆಯೋ ಅಷ್ಟೆಲ್ಲವೂ ಧ್ವಂಸವಾದುವು (ಮರಮ. ೨೬೫). [ನೆಲ+ಗರ್ನಾಲು]

**ನೆಲಗವಿ** (ನಾ). ನೆಲದಲ್ಲಿ ಅಗೆದ ಗುಹೆ,—ಗವಿ : "ಗರ್ತಂ=ನೆಲಗವಿ" (ಕಾಶಕ್ಯ. ೨೧೬). [ನೆಲ+ಗವಿ$_1$]

**ನೆಲಗಾಡು** (ನಾ). ಬೆಟ್ಟದ ತಪ್ಪಲಲ್ಲಿರುವ ಮೈದಾನಪ್ರದೇಶ : ಕುಲಶಿಖರಿಯ ತುತ್ತತುದಿಯೊಳುದಯಿಸಿ ನೆಲಗಾಡಂ ಪತ್ತಿ ಪರಿವ ರಕ್ತೋದವೆಸರ ನದಿಯಂದಮನನುಕರಿಸಿ (ಜಯಕಾ. ೭–೨೨) ; ಆ ತೆಲುಂಗರಾಯನು . . . ಬೀಡಿಕೆಯಿಂದ ಬಹು ದೂರಕ್ಕೆ ಹೋಗಿ, ನಿರ್ಜನವಾಗಿರುವ ನೆಲಗಾಡಿನಲ್ಲಿ, ಮಂತಣಗೊಳ್ಳುವುದು ಬಳಕೆ (ಮಂತ್ರಶ. ೪೨–೨೬). [ನೆಲ+ಕಾಡು$_2$]

**ನೆಲಗಾಣು** (ಕ್ರಿ). ದಾರಿ ಕಾಣು ; ಮಾರ್ಗ ಕಂಡುಬರು (?) : ಕಂಗೆಟ್ಟ ದೊಡ್ಡನೆಲ್ಲಿಯೊ ಹೊಳಲ ಸುತ್ತಾಡಿ . . . ಬಂದಿರಲ್ ತಾಯ್ಯಿರ್ಗೆ ಮುಂಗಡೆಯ ಬಾಳ್ವೊರಿಗೆ ನೆಲಗಾಣುತಿಹುದು (ಕಾಲೂರ. ೧೮೭–೪೨೬). [ನೆಲ+ಕಾಣು(<ಕಾಣ್)]

**ನೆಲಗಾಳಿ** (ನಾ). "ನೆಲದ ಕಡೆಯಿಂದ ಸಮುದ್ರದ ಕಡೆಗೆ ಬೀಸುವ ಗಾಳಿ" (Land - breeze. ಇಂಕನಿ) : ನೇಣುಗಳ ನೆಲಗಾಳಿ ಕುಲುಕಿತ್ತು, ಹಡಗು ತಲೆಕೆಳಕಾಯಿತು (ಇಂಗೀತ. ೨೪–೯). [ನೆಲ+ಗಾಳಿ$_1$]

**ನೆಲಗಿರುಬ** (ನಾ) (ವಿಷವುಳ್ಳ)ಒಂದು ಬಗೆಯ ಕೀಟ ; ಷಡ್ಬಿಂದು : ಷಡ್ಬಿಂದು ಎಂಬ ಹುಳು ಕಚ್ಚಿದರೆ ಎಕ್ಕೆಯ ಹಾಲನ್ನು ಕಚ್ಚಿದ ಗಾಯಕ್ಕೆ ಇಕ್ಕಿಸುವುದು. ಷಡ್ಬಿಂದು ಎಂದರೆ ನೆಲಗಿರುಬ ಎಂಬರು (ವೈದ್ಯಸಾ. II, ೨೧೩). [ನೆಲ+ಕಿರುಬ(<ಕಿಱುಬ$_1$)]

**ನೆಲಗುಂಬಳ** (ನಾ). ಒಂದು ಬಗೆಯ ಕುಂಬಳ : "ವಿದಾರೀ—ನೆಲಗುಂಬಳ, ಬಳ್ಳಿಸುಂಡೆ, ಮೂಱಿಲೆಹೊನ್ನೆ" (ಓಷಧಿ. ೧೫೩) ; ನೆಗ್ಗಿಲು ನೆಲಗುಂಬಳ ಭದ್ರಮುಸ್ತೆ (ಸಾಳ್ವಸಾ. ೧೧) ; ಗರಿಕೆಯ ರಸ, ನೆಲಗುಂಬಳದ ರಸ, ಕಬ್ಬಿನ ಹಾಲು, ಆಷಾಡಿಗೆಡ್ಡೆರಸ ಇವಿಷ್ಟು ಪ್ರತ್ಯೇಕ ಒಂದು ಬಳ್ಳ . . . ಪ್ರತಿದಿನವೂ ಪ್ರಾತಃಕಾಲದಲ್ಲಿ ಶರೀರಬಲಾನುಗುಣವಾಗಿ ಮಾತ್ರೆ ಅರಿತು ಕೊಡಲು ರಕ್ತಪಿತ್ತಹರ (ವೈದ್ಯಸಾ. I, ೧೪೦) ; ನೆಲಗುಂಬಳವು ವಾತಪಿತ್ತನಾಶಕ (ಅಷ್ಟಾಂಗ. ೧೩೬–೮೫). 'ಬೂದುಗುಂಬಳ' ಪರಾ. [ನೆಲ+ಕುಂಬಳ./ತುಳು. ನೆಲಕುಂಬುಡ]

**ನೆಲಗುಡುಗು** (ನಾ). ಭೂಮಿಯೊಳಗಿಂದ ಬಂದ ಮೊಳಗು : ಗಂಡನ ಕಡೆಗೆ ತಿರುಗಿ, ಸಿಡುಕುಮೋರೆಯ ಮಾಡಿ, ನೆಲಗುಡುಗಿನಂತಾಡಿದಳ್ (ಶ್ರೀರಾಮಾ. ೧೫೫–೯೯). [ನೆಲ+ಗುಡುಗು$_2$]

**ನೆಲಗುಡ್ಡಗೆಣಸು** (ನಾ). ಒಂದು ಬಗೆಯ ಗಡ್ಡೆ : ಭೂಮಿಚಕ್ರಗಡ್ಡೆ, ಭುಜಗುಂಬಳ, ನೆಲಗುಡ್ಡಗೆಣಸು (ಮೈಔಗಿ. ೪೬–೯೧೨). [ನೆಲ+ಗುಡ್ಡಗೆಣಸು]

**ನೆಲಗುಣ** (ನಾ). ಭೂಮಿಯ ಗುಣ,—ಸತ್ವ : ಒಂದೇ ಶಿವಗಂಗಾಮೂಲದಲ್ಲಿ ಸಂಭವಿಸಿ ನೆಲಗುಣದ ಪ್ರಭಾವದಿಂದ ಸ್ವಲ್ಪದೂರ ಬೇರೆ ಬೇರೆ ದಾರಿಗಳಲ್ಲಿ ಸಂಚರಿಸಿ (ತುಂಗಭ. ೧೨೫). [ನೆಲ+ಗುಣ]

**ನೆಲಗುಮ್ಮ$_1$** (ನಾ). ೧. ನೆಲದೊಳಗೆ ಮುಚ್ಚಿಕೊಂಡಿರುವ ಒಂದು ಬಗೆಯ (ಕಾಲ್ಪನಿಕ) ಭೂತ : ನೆಲಗುಮ್ಮ ಕೂಡಿಕೊಂಡು ಒಂದು ಮೇಳದಲ್ಲಿ ಒದರಿದಂತೆ ಒಳಗಿನಿಂದ ಅಪಸ್ವರಾಲಾಪ (ಹುಚ್ಚಾಟ. ೨೦). ೨. ಒಂದು ಬಗೆಯ ಪಕ್ಷಿ : (ಕ). [ನೆಲ+ಗುಮ್ಮ$_1$]

**ನೆಲಗುಮ್ಮ$_2$,ನೆಲಗುಮ್ಮೆ**(ನಾ).೧. ಕೋಟೆಯನ್ನು ಆಕ್ರಮಿಸಲು ಉಪಯೋಗಿಸುತ್ತಿದ್ದ ಒಂದು ಬಗೆಯ ಯಂತ್ರ : ನೆಲಕೆ ಬಾಗಿಸಿದ ಪಲವರಿಯ ಡೆಂಕಣಿ . . . ಕಾಸುವಂಬಲಿ ಸಾರವಾರಿ ನೆಲಗುಮ್ಮ (ಸಮ್ಯಕೌ. ೮–೨೪) ; ಅಗಳಾಳ್ವೇರಿ ಕೋಟೆಕೊತ್ತಳ ನೆಲದಿಡ್ಡಿ ಮುಗಿಲಟ್ಟಳೆ ನೆಲಗುಮ್ಮ (ಕುರಾಪಾಸಾಂ. ೩೭–೫೧) ; ನಡೆಚಪ್ಪರ ವೇಣಿ ಭದ್ರಿಕೆ ನೆಲಗುಮ್ಮ ಬೆಡಗಿನ ಮಕರಬಿಬ್ಬಿಗಳು (ನಾಗಕು. ೧೭–೨೧) ; ಡಗ್ಗೆ ನೆಲಗುಮ್ಮಗಳ ತರಹೇಳು (ಪ್ರಹ್ಲಾಚ. ೫–೪೧). ೨. "ನೆಲವನ್ನು ತಟ್ಟುವ ಮಣೆ ಮುಂತಾದವು" (ಪ್ರಭಣ್ಣ). **ನೆಲಗುಮ್ಮೆ :** ೩. ಒಂದು ಬಗೆಯ ಪಟಾಕಿ : ನೆಲಕ್ಕೆ ಅಪ್ಪಳಿಸಿ ಗರ್ಜಿಸುವ 'ನೆಲಗುಮ್ಮೆ' ಹೆಡೆ ಬಿಚ್ಚಿದ ಹಾವಿನ ಮರಿಯಂತಹ ತಾಳೆಮಡಲಿನ 'ಧಡಲ್ಯಾಜೀ' (ಮೂರುದಾ. ೨೧೬). [ನೆಲ+ಗುಮ್ಮ$_2$]

**ನೆಲಗುಮ್ಮೆ** 'ನೆಲಗುಮ್ಮ$_2$' ನೋ.

**ನೆಲಗುಳ್ಳ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ ; ಗುಳ್ಳದ ಬದನೆಕಾಯಿ : "ನಿಧಿಗ್ಧಿಕಾ, ಕಂಟಕಾರಿಕಾ, ವ್ಯಾಘ್ರೀ—ಈ ೩ ನೆಲಗುಳ್ಳಂ" (ಹಲಾಯು. ೧೧೧–೪೬೫) ; ನೆಲಗುಳ್ಳಂ ಬಿಳಿಯ ಗಣಂ . . . ಶುಂಠಿಗಳಾವಗಂ ಕ್ಷಯುಕ್ಕಿವು ಪಥ್ಯಂ (ಕಲ್ಯಾಕಾ. ೬–೩) ; ನೆಗ್ಗಿಲ ಬೇರು, ನೆಲಗುಳ್ಳದ ಬೇರು, ಭತ್ತದ ಅರಳು ಈ ಮೂಱನು . . . ಕಷಾಯವೆತ್ತಿ (ವೈದ್ಯಸಾ. II, ೧೪೧). [ನೆಲ+ಗುಳ್ಳ]

**ನೆಲಗೂಡು** (ನಾ). ಬೇಟೆಯಲ್ಲಿ ಉಪಯೋಗಿಸುವ ಒಂದು ಬಗೆಯ ಬೋನು : ಬ್ಯಾಟೆಗನುಕೂಲವಪ್ಪ ಹೆಬ್ಬಲೆ ಕಿರುಬಲೆ ಬಿರಸು ಬಾಣ ಬೋನು ಶಿಡಿಭಂಡಿ ನೆಲಗೂಡು ಮದ್ದು ಗುಂಡು ನೂಲೇಣಿ . . . ಮೊದಲಾದ ಸಾಧನಂಗಳ್ (ಸೌಗಂಧಿ. ೫೦–೧೪). [ನೆಲ+ಗೂಡು]

**ನೆಲಗೂಲಿ** (ನಾ). ಶವವನ್ನು ಸುಡುವ ಜಾಗಕ್ಕೆ ಕೊಡಬೇಕಾದ ತೆರಿಗೆ ; ಮಸಣದೆರೆ : ಹರಿಶ್ಚಂದ್ರನು . . . ಇಲ್ಲಿ ಶವವನ್ನು ಸುಡುವುದಕ್ಕೋಸ್ಕರ ಒಂದು ಹಣ ನೆಲಗೂಲಿಯನ್ನು ಕೊಡು ಎಂದು ಗರ್ಜಿಸಿದನು (ನೀತಿಚಿಂ. XI, ೨೯). 'ನೆಲದೆಱೆ' ಪರಾ. [ನೆಲ+ಕೂಲಿ$_1$]

**ನೆಲಗೆಡು** (ಕ್ರಿ). ಆಧಾರವಿಲ್ಲದಾಗು ; ನೆಲೆಗೆಡು : ವಿಶಾಖನಂದನುಂ ತನ್ನ ರಾಜ್ಯಮುಂ ದಾಯಿಗರೆಱೆದುಕೊಳೆ ನೆಲಗೆಟ್ಟು ಪೆಱರ ಬೆಸದೊಳೋಲೆಯನಡುಕುತ್ತು ಮಾ ಪುರಕ್ಕೆ ಬಂದು (ಚಾವುಂಪು. ೧೬೦). [ನೆಲ+ಕೆಡು$_1$]

**ನೆಲಗೆದರು** (ಕ್ರಿ). (ಉಗುರುಗಳಿಂದ) ನೆಲವನ್ನು ಕೆದಕು,—ಕೆರೆ: ಭಲ್ಲುಕಂಗಳು ಪೋಗಿ ನೆಲಗೆದಱಿ ಕಂದಮೂಲಾದಿಗಳ ತಂದಪವು (ನಪಮೋ. ೬-೧೧). [ನೆಲ+ಕೆದರು(<ಕೆದಱ್$_1$)]

**ನೆಲಗೊಟ್ಟೆ** (ನಾ). ಒಂದು ಬಗೆಯ ಔಷಧಿ ಸಸ್ಯ : ನೆಲಗೊಟ್ಟೆ[ಟ್ಟೆ]ಯೆನಿಪ್ಪುವಂ ಮೊಲಗಿವಿಕ್ಷ್ವಾರಣ್ಯಕಂ ಜೀರಕಂ ವಿಲಸನ್ಮೂಲಮುನಿಂತಿವೆಲ್ಲಮು ಸಮಂ ಕೂಡಿಟ್ಟು ತದ್ಯೋಗಮಂ (ಖಸುಧ. ೧೬-೫೯). [ದೇ.॥ ತಮಿ. ನಿಲಕ್ಕೊಟ್ಟೈ]

**ನೆಲಗೋಂಟೆ, ನೆಲಕೋಟೆ, ನೆಲಗೋಟೆ** (ನಾ). ಕೋಟೆಯ ತಳ,—ಕೆಳಭಾಗ : ಮಿಂಗೆ ಗಿರಿದುರ್ಗದ ನೆಲಗೋಂಟೆಗೆ ಸವೆಯೆ ಬಳಿಕ್ಕೆ ಸುರಂಗಂಗಳನೆರಡಂ ಬಗೆದೆರಡಱ ಮಧ್ಯದೊಳೊಂದಗೆದೊಳಪೊಕ್ಕಳಿದು ತಱಿದು ಕೆಡಪಿದರೆಂದರ್ (ಹವಿಶ್ಕಾರ. ೩-೨೭). **ನೆಲಕೋಟೆ :** ಬೆಳಗಾಂವಿ, ಧಾರವಾಡ, ಬೆಂಗಳೂರು, ತೊರಗಲ್ಲು, ವಿಜಯನಗರ ಇವೆಲ್ಲ ಪಳುಗೋಂಟೆಗಳೆ; ಆದರೆ ಇದ್ದ ಪಳುವೆಲ್ಲ ಹಾಳಾಗಿಹೋದುದರಿಂದ, ಅವು ಬಯಲುಗೋಟೆಗಳಾಗಿ ಬರಿಯೆ 'ನೆಲಕೋಟೆ' ಎಂದು ಹೆಸರನ್ನು ಪಡೆದಿವೆ(ಕರ್ನಾಜ.೪). **ನೆಲಗೋಟೆ:** ಸಾಹಸಭೀಮ [ನೆಲ]ಗೋಟೆಮಲ್ಲಂ ಕೊಣ್ಣೆಯ ತಳಪ್ರಹಾರಿಯಿಡುವರಾದಿತ್ಯ[ಂ] (ಸೌಇಇ. XI-i, ೬೦-೧೨; 1024). [ನೆಲ+ಕೋಂಟೆ]

**ನೆಲಗೋಟೆ** 'ನೆಲಗೋಂಟೆ' ನೋ.

**ನೆಲಗೋಣೆ** (ನಾ). ಒಂದು ಬಗೆಯ ಗೋಣಿಸೊಪ್ಪು : ನೆಲಗೋಣಿ [ಪಾಠಾಂ.ಗೊನ್ನಿ, ಗೊಳ್ಳಿ] ಪು(ಹು)ಣಿಸೆ ಪಾಪಟಿ . . . ಎಂಬಿವಱಿಲೆಯಂ ಕಟುಯೊಳುಱಿ ಕಾಸಿ ಕಟ್ಟೆಲ್ ತೊಲಗುಗುಮೊಡಱಿಸುವ ಮುಳ್ಳ ವಿಷಮೆನಿತನಿತುಂ (ಖಮುದ. ೨-೨೧೧). [ನೆಲ+ಗೋಣಿ$_1$(<ಗೋಳಿ$_1$)]

**ನೆಲಗೋರಟೆ** (ನಾ). ಒಂದು ಬಗೆಯ ಸ್ಫಟಿಕದ ಗಿಡ : "ಭೂಮಿಕುರುವಕಂ—ನೆಲಗೋರಟೆ" (ಓಷಧಿ. ೧೧೩). [ನೆಲ+ಗೋರಟೆ(<ಗೋರಂಟೆ)]

**ನೆಲಚಳುಸೊಪ್ಪು** (ನಾ). ಒಂದು ಬಗೆಯ ಔಷಧಿ ಸಸ್ಯ : ನೆಲಚಳುಸೊಪ್ಪು, ಸಣ್ಣಗುಂಡುಹುಲ್ಲು (ಮೈಔಗಿ. ೭-೧೧೨). [ನೆಲ+ಚಳು? + ಸೊಪ್ಪು$_2$]

**ನೆಲತಗಸಿ** (ನಾ). ಒಂದು ಬಗೆಯ ತಗಚೆಗಿಡ : (ಮೈಔಗಿ. ೧೯-೩೩೭). [ನೆಲ+ತಗಸಿ(<ತಗಚೆ)]

**ನೆಲತರ** (ನಾ). ನಿರಂತರ (?) : ಅಷ್ಟಾಹ್ನಿಕದ ಧರ್ಮ್ಮವನು ಶ್ರೀಸಿತಾಳಮಳಿಗೆಯ ಸಮಸ್ತರು ನೆಲತರವಾಗಿ ನಡಸಿ ಕೊಡಲುಳ್ಳವರುಯೆಂದು ಬರಸಿ ಕೊಟ್ಟ ಶಾಸನ (ಎಕ. XIV, ಶ್ರೀರಂಗ. ೧೮೧-೯; 1666). [?]

**ನೆಲತಾಟಿ** 'ನೆಲದಾಟಿ' ನೋ.

**ನೆಲತಾಯ್** 'ನೆಲದಾಯ್' ನೋ.

**ನೆಲತಾಯಿ** 'ನೆಲದಾಯ್' ನೋ.

**ನೆಲತಾವರೆ** 'ನೆಲದಾವರೆ' ನೋ.

**ನೆಲತಾಳಿ** 'ನೆಲದಾಳಿ' ನೋ.

**ನೆಲತಾಳೆ** 'ನೆಲದಾಟಿ' ನೋ.

**ನೆಲತೆಂಗು** 'ನೆಲದೆಂಗು' ನೋ.

**ನೆಲತೆರ** 'ನೆಲದೆಱ' ನೋ.

**ನೆಲದಳ** (ನಾ). ಭೂಮಿಯ ಕೆಳಭಾಗ; ಭೂಮಿಯ ತಳ; ಪಾತಾಳ : ನೆಲದಳಕೀಳದಹಿರಾಜನ ತಲೆವಣಿಯಂ . . . ಕಣ್ಬೊಲನಾಗರ ಸುರಮಣಿಯಂ ಸಲೆ ಪಳಿಕ್ಕೆದೆಸೆಗುಮಲ್ಲಿ ಗುಣಮಣಿವಸರಂ (ವೃಷವಿ. ೪-೮೨). **ನೆಲದಳದರು** = ಪಾತಾಳಲೋಕದಲ್ಲಿರುವವರು ; ನಾಗರು : ದೆಸೆಯಾಣ್ಮರು ಸಗ್ಗದರು ನೆಲದಳದರು ಸಸಿನೇಸಱಿರಸುಗಳ್ ಜತಿಗಳು ಮುಸುಕಿಹುದಾಗಳೆನ್ನಯ ಮಣಿವಾಗಿಲ ಜಸಗಂಪ ಸಮಯಂಗಾಣದೆ ಕೀಳ (ಸೊಬಸೋ. ೧೨-೩೩). [ನೆಲ+ತಳ(=ತಲ)]

**ನೆಲದಳೆ** (ಕ್ರಿ). ಭೂಮಿಯನ್ನು ತಳೆ,—ಧರಿಸು.
**ನೆಲದಳೆದ** = ಭೂಮಿಯನ್ನು ಹೊತ್ತಿರುವಂಥದು ; ಪರ್ವತ. **ನೆಲದಳೆದನಣುಗಿಯಾಣ್ಮ** = ಪರ್ವತರಾಜಪುತ್ರಿಯ ಪತಿ ; ಗಿರಿಜಾವಲ್ಲಭ ; ಈಶ್ವರ : ನೆಲದಳೆದನಣುಗಿಯಾಣ್ಮಂ ಸಿದ್ಧನಂಜೇಶ ರಕ್ಷಿಸುಗೆ ಬಿಡದೆಮ್ಮನು (ರಾಷಚ. ೧-೪); ಶ್ರೀನೆಲದಳೆದನಣುಗಿಯಾಣ್ಮನು ನೋಡಿ ಸಂತಸದಿ ಪೊಲಿದು ಮನ್ನಿಸಿ (ನಪಮೋ. ೨೦-೨೩). **ನೆಲದಳೆದವಿಲ್ಲ** = (ಮೇರು) ಪರ್ವತವನ್ನು ಬಿಲ್ಲಾಗಿ ಉಳ್ಳವನು ; ಈಶ್ವರ : ನೆಲದಳೆದವಿಲ್ಲ ಪುಷ್ಪಂಬನೊಡಲುರಿಕ . . . ಪೊರೆಗೆಮ್ಮನು (ನಪಮೋ. ೩೨-೧). [ನೆಲ+ತಳೆ$_1$]

**ನೆಲದಾಯ್, ನೆಲತಾಯ್, ನೆಲತಾಯಿ, ನೆಲದಾಯಿ** (ನಾ). ಭೂಮಿತಾಯಿ ; ಭೂಮಾತೆ : ತಾನೋರ್ಮಳಾದೊಡಂ ಪಲಪೆಸರನುಳ್ಳವಳ್ ಅದಱಿಂದೆ ನೆಲದಾಯೆಂದೊಡಂ ಎನ್ನಿಂ(ಬದ್ಧಪ್ರ.೧೩-೨೫೫). **ನೆಲತಾಯ್ :** ನೆಲತಾಯ ಹೂಹಣ್ಣ ತಳಿರ ತಟ್ಟೆಯಿದಲ್ತೆ (ಕಾಲೂರ. ೩೪-೩೩). **ನೆಲತಾಯಿ :** ನನ್ನನ್ನು ಸಾಕಿ ಬೆಳೆಸಿದ ಕೋಟೆಹಾಳಿನ ನೆಲತಾಯಿಯ ತೊಡೆಯ ಮೇಲೆ ಬೀಳಬೇಕು (ಬೆಳುಮ. ೧೫೪); ಮೂಡುಪಡುಕಡಲುಗಳ ದಡಗಳ ವರೆಗೆ ಈ ಪರ್ವತಶ್ರೇಣಿಯು ನೀಡಿದ್ದು, ಮಧ್ಯದಲ್ಲಿರುವ ನೆಲತಾಯ ಅಲಂಕಾರವೋ ಎಂಬಂತೆ ಮನೋಹರವಾಗಿರುವುದು (ನಾಗಕಾ. ೩). **ನೆಲದಾಯಿ :** ತುಂಬಿತು ತಾಯಿಯ ಒಲವು, ನೆಲದಾಯಿಯ ಹಿರಿಚೆಲುವು (ಚಿಂತನ. ೨೫-೧೬) ; ತಾಯಿ ಇದ್ದಷ್ಟೇ ಆತ್ಮೀಯಳು ನೆಲದಾಯಿ (ವಿಚಾಮಂ. ೯೩); ಅದೇ ನೆಲದಾಯಿಯ ಆಶ್ರಯದಲ್ಲಿ ಅವರು ಮಲಗುತ್ತಿದ್ದರು (ಸಮಜೀ. ೨೫೩). [ನೆಲ+ತಾಯ್]

**ನೆಲದಾಯಿ** 'ನೆಲದಾಯ್' ನೋ.

**ನೆಲದಾರು** (ನಾ). ಒಂದು ಬಗೆಯ ಸಸ್ಯ : "ಚಾರುದಾಲುः—ಆಲ, ನೆಲದಾರು" (ಓಷಧಿ. ೫೬). [ನೆಲ+ದಾರು$_2$]

**ನೆಲದಾವಣಿ**(ನಾ). (?) : ಮಣಿಮಕುಟದಿಳೆಗೊಯ್ಲ ನೆಲದಾವಣಿಯೊ ಗಗನಾರ್ಣವದ ವಾಡಬಗಣವೊ ಕೌತುಕವೆನಿಸಲೆಚ್ಚಾಡಿದರು ಬಿಲ್ಲವರು (ಕುವ್ಯಾಭೀ. ೪-೧೬). [ನೆಲ್+ದಾವಣಿ?]

**ನೆಲದಾವರೆ, ನೆಲತಾವರೆ** (ನಾ). ಒಂದು ಬಗೆಯ ಸಸ್ಯ ; ಸ್ಥಳಪದ್ಮಿನಿ: "ನೆಲದಾವರೆ—ಅವ್ಯಥೆ, ಅತಿಚರೆ, ಪದ್ಮಚಾರಿಣೀ" (ನಾಚಿರಾ.೬); "ಗಂಧಮೂಲಿ—ನೆಲದಾವರೆ, ಖಚೋರ, ಪ್ರಿಯಂಗು" (ಓಷಧಿ. ೪೬). **ನೆಲತಾವರೆ :** (ಮೈಔಗಿ. ೪೨-೮೨೩). [ನೆಲ + ತಾವರೆ (<ತಾಮರೆ). ತಮಿ. ನಿಲತ್ತಾಮರೈ ; ತೆಲು. ನೆಲತಾಮರ]

**ನೆಲದಾಳ, ನೆಳದಾಳ** (ನಾ). = ನೆಲದಾಟಿ : ನೆಲದಾಳಗೆಡ್ಡೆ ಗಿಣಿಮೂಗಿ . . . ಇವಂ ಸಮಾನಂಗೊಂಡು ಚೂರ್ಣವಂ ಮಾಡಿ (ವಿವೈವಿ. ೯೯) ; ಬಾಳೆ ನೆಲದಾಳ ಕದ್ದಾಳ ಪುಷ್ಪವಿವು ಯೋಗ್ಯ ಶಿವಗೆ (ಗುರುಚಾ. ೬-೧೬). ಕೇದಿಗೆಬೀಳಿನ ರಸದಲ್ಲಿ ನೆಲದಾಳವನ್ನರೆದು ಕುಡಿಯೆ ದಾಹಜ್ವರ ಪರಿಹಾರವಾಗುವುದು(ಸಕವೈ.೭೭). **ನೆಳದಾಳ :** ನೆಳದಾಳ:—ನೆಲದಾಳಕಲ್ಪಮಂ ಪೇಳ್ವೆ (ವಿವೈವಿ. ೫). [ನೆಲ+ತಾಳ$_2$(=ತಾಲ)]

**ನೆಲದಾಳಿ, ನೆಲತಾಳಿ** (ನಾ). = ನೆಲದಾಟಿ : "ಕಾಂತ-ಹರೇಣುಕ, ದೊಡ್ಡಯಾಲಕ್ಕಿ, ನೆಲದಾಳಿ . . . ಹತ್ತಿ" (ಓಷಧಿ. ೨೮); ನೆಲದಾಳಿ

ಯೂಷಾಧಿಯಂಜವೋದ ನೆಗ್ಗಿಲು ನೆಲಗುಂಬಳ ಭದ್ರಮುಸ್ತೆ (ಸಾಳ್ವಸಾಂ. ೧೧) ; ನೆಲದಾಳಿ ಕಿರುಗೊರಟೆಗೆ ಬೀಜಮೆಣಸು ಇವನ್ನು ಸಮಾನಗೊಂಡು ಚೂರ್ಣಿಸಿ ಬೆಣ್ಣೆಯಲ್ಲಿ ಕಲಸಿ . . . ಲೇಪನಂಗೈಯೆ ಶುಕ್ಲಸ್ತಂಭ (ಕಾಮಶಾ. ೧೬-೨೭೧). **ನೆಲತಾಳಿ :** "ನೆಲತಾಳಿ = ನೆಲದಾಳಿಗಡ್ಡೆ, ಮುಸಲಿ, ತಾಲಮೂಲಿಕೆ" (ಪ್ರಭಣ್ಣ.). [ನೆಲ + ತಾಳಿ$_2$(= ತಾಲಿ$_3$)]

**ನೆಲದಾಳು** 'ನೆಲದಾಟೞ್' ನೋ.

**ನೆಲದಾಳಿ** 'ನೆಲದಾಟೞ್' ನೋ.

**ನೆಲದಾಟೞ್,** ನೆಲತಾಟ, ನೆಲತಾಳಿ, ನೆಲದಾಳು, ನೆಲದಾಳಿ (ನಾ). (ತಾಳೆಯ ವರ್ಗದ) ಒಂದು ಬಗೆಯ ಔಷಧಿ ಸಸ್ಯ ; ತಾಲಮೂಲಿಕೆ : "ನೆಲದಾಟೞ್ — ತಾಲಮೂಲಿಕೆ, ಮುಸಲಿ" (ನಾಚಿರಾ. ೬.), ನೆಲದಾಟಿನರೆದು ಪಾಲೊಳ್ ಕಲಸಿ . . . ಧಾನ್ಯದೊಳ್ ಕರ್ಣಲೇಪನಂಗೆಯ್ಯೆ ಕರ್ಣವರ್ಧನಮಕ್ಕುಂ (ಲೋಕೋಪ. ೯-೬೭). **ನೆಲತಾಟ :** "ಮುಸಲೀ, ತಾಲಮೂಲಿಕಾ–೨ ನೆಲತಾಟ[ಪಾಠಾಂ. ಕಾಟ, ತಾಟ]ಹೆಸರು" (ಸಿದ್ಧಾಂತಿ. ೧೩೯). **ನೆಲತಾಳಿ :** "ಮುಸಲೀ, ತಾಲಮೂಲಿಕಾ–೨ ನೆಲತಾಟ ಹೆಸರು. ನೆಲತಾಳಿಗೆಡ್ಡೆಯೆನ್ನುವರು" (ಸಿದ್ಧಾಂತಿ. ೧೩೯) ; ನೆಲತೆಂಗು, ನೆಲತಾಳಿ (ಮೈಔಗಿ. ೨೬-೪೯೫). **ನೆಲದಾಳು :** "ಮುಸಲೀ, ತಾಳಮೂಲಿಕಾ ಈ ೨ ನೆಲದಾಳು" (ನಾಚಿರಾ. ೧೧೦) ; "ಭೂತಾಳಿ–ನೆಲದಾಳು, ನೆಲಹಾದರಿ" (ಓಷಧಿ. ೧೧೨); ನೆಲದಾಳುಗೆಡ್ಡೆಯನಾದರೂ ಕಟುಕರೋಹಿಣಿಯನಾದರೂ ಚೂರ್ಣಿಸಿ ಜೇನುತುಪ್ಪದಲ್ಲಿ ಕಲಸಿ ಕೊಡಿಸಲು ಸಕಲ ಸ್ಥಾವರ ವಿಷಗಳು ಪರಿಹರವಹವು (ವೈದ್ಯಸಾ. II, ೨೨೪). **ನೆಲದಾಳಿ :** "ಗೋದಾಪದೀ— ಹಂಸಪದಿ, ನೆಲದಾಳಿ" (ಓಷಧಿ. ೫೧) ; ನೆಲದಾಳಿಗೆಡ್ಡೆಯಂ ನೀರಿಂದ ಅರೆದು ಪಾನ, ನಸ್ಯ, ಲೇಪನಗಳ ಮಾಡಿಸಲು ಹಂದಿಯ ವಿಷ ಪರಿಹರವಹುದು (ವೈದ್ಯಸಾ. II, ೨೧೬) ; ನೆಲದಾಳಿಯ ಗೆಡ್ಡೆಯನ್ನರೆದು ಜೇನುತುಪ್ಪದಲ್ಲಿ ಕಲಸಿ ಕೊಡಲು ವಾತಜ್ವರಂ ಮಾಣ್ಗುಂ (ಸಕವೈ. ೬೪).
[ದೇ.॥ ತೆಲು. ನೆಲತಾಡಿ]

**ನೆಲದಿಟ್ಟಿ** (ನಾ). ಭೂಮಿಯ ಕಡೆ ತಿರುಗಿಸಿದ ದೃಷ್ಟಿ ; ತಗ್ಗಿಸಿದ ನೋಟ : ಅಶ್ರುಮಲಿನಾಸ್ಯನಾತನುಂ ನೆಲದಿಟ್ಟಿಯಾಗಿ . . . ಎನಲ್ (ಶ್ರೀರಾಪೂ. ೩೧೪-೩೪೬). [ನೆಲ+ದಿಟ್ಟಿ]

**ನೆಲದಿಡ್ಡಿ** (ನಾ). ಭೂಮಿಯಲ್ಲಿ ತೋಡಿರುವ (ರಹಸ್ಯವಾದ) ಸುರಂಗಮಾರ್ಗ : ಮತ್ತಲ್ಲಿ ಕೊಱೆದ ನೆಲದಿಡ್ಡಿಯಂ ತೆಗೆತೆಗೆಯೆನುತ್ತ ಪೊಱಮಟ್ಟು (ಸಮ್ಯಕೌ. ೮-೩೬) ; ಅಗಳಾಳ್ವರಿ ಕೋಟೆ ಕೊತ್ತಳ ನೆಲದಿಡ್ಡಿ[ಪಾಠಾಂ. ವಿಡಿ] . . . ಪಲ ಪುಲಿಮೊಗಗಳನನುಮಾಡಿಸಿದನು (ಕುರಾಸಾಂ. ೩೭-೫೧). [ನೆಲ+ದಿಡ್ಡಿ]

**ನೆಲದುರುವೆ** (ನಾ). ಒಂದು ಬಗೆಯ ಸಸ್ಯ : "ಷಾಣಾ–ನೆಲದುರುವೆ" (ಓಷಧಿ. ೧೭೩) ; ನೆಲದುರುವೆ ಸೊಪ್ಪನು ಹುಳಿಮಜ್ಜಿಗೆಯಲ್ಲಿ ತೆಗೆದುಕೊಳ್ಳಲು ಉರಿಮೂತ್ರಂ ಮಾಣ್ಗುಂ (ಸಕವೈ. ೩೯೪).
[ನೆಲ + ತುರುವೆ$_2$(< ತುಱುವೆ)]

**ನೆಲದುರ್ಗ** (ನಾ). ನೆಲದ ಮೇಲೆ ಕಟ್ಟಿದ ಕೋಟೆ : ನೆಲೆಗೆಡಿಸುತ ನೆಲದುರ್ಗವ ನೆರಪುತ ಜಲದೊಳು ಜಲದುರ್ಗವನು . . . ನಡೆದಳು ಬಲ್ಮೆಯೊಳು (ಕುರಾಸಾಂ. ೪೧-೭೪) ; ನಗರವೇ ನೆಲದುರ್ಗ ಬಳಸಿಯು ಸೊಗಪ ನದಿ ಜಲದುರ್ಗಂ (ನಾಗಪ. ೨-೩೦).
[ನೆಲ + ದುರ್ಗ]

**ನೆಲದೆಂಗು,** ನೆಲತೆಂಗು (ನಾ). ಒಂದು ಬಗೆಯ ಸಸ್ಯ : ಸಿದ್ಧಿವಾರದ ದಿನ ನೆಲದೆಂಗ ತಂದು ಕತ್ತರಿಸಿ ನೆಳಲಲ್ಲಿ ಒಣಗಿಸಿ . . . ಸೇವಿಸೆ ಶ್ಲೇಷ್ಮಜ್ವರ ಗುಣವಾಗುವುದು (ಸಕವೈ. ೮೧). **ನೆಲತೆಂಗು :** ಸಿದ್ಧಿವಾರದ ದಿವಸ ನೆಲತೆಂಗ ತಂದು . . . ಸೇವಿಸೆ ಶ್ಲೇಷ್ಮಪ್ರಕೋಪಂ ಮಾಣ್ಗುಂ (ಸಕವೈ. ೧೫೦) ; ನೆಲತೆಂಗು, ನೆಲತಾಳಿ (ಮೈಔಗಿ. ೨೬-೧೯೬).
[ನೆಲ + ತೆಂಗು$_3$]

**ನೆಲದೆಱೆ,** ನೆಲತೆರ (ನಾ). ೧. ಶವವನ್ನು ಸುಡುವ ಜಾಗಕ್ಕೆ ಕೊಡಬೇಕಾದ ತೆರಿಗೆ ; ಶ್ಮಶಾನದ ಸುಂಕ : ಸುಡುಗಾಡಿನಧಿಕಾರ ಮುದ್ರೆ ಕಟ್ಟಾಣೆ ಚಾವಡಿ ಹೆಣನ ತಲೆಯಕ್ಕಿ ನೆಲದೆಱೆಯ ಹಾಗ ಶವದುಡಿಗೆ ಯೆನಗಾಯ್ತು (ಹಚಕಾ. ೧೧-೩೮). **ನೆಲತೆರ :** ೨. ಭೂಮಿಯ ಮೇಲೆ ಹಾಕುವ ಸುಂಕ ; ಭೂಕಂದಾಯ : ಕಮ್ಮಡಹಳ್ಳಿ ಎಂಬ ಗ್ರಾಮದಲ್ಲಿ ವರ್ಷ ೧ಕ್ಕೆ ೭೯॥೩ ನೆಲತೆರವನ್ನೂ ೮೦ ವರಹ ಕೈಸಂಬಳವನ್ನೂ . . . ತಂದುಕೊಡುವದಾಗಿ ಹೇಳಿರುತ್ತಾನೆ (ಮಹಾಪಂ. I, ೫೮). [ನೆಲ+ತೆಱೆ$_3$]

**ನೆಲದೊಂಡೆ** (ನಾ). ಒಂದು ಬಗೆಯ ಸಸ್ಯ : "ದಿವ್ಯತುಂಬೀ—ನೆಲದೊಂಡೆ" (ಓಷಧಿ. ೭೫). [ನೆಲ + ತೊಂಡೆ$_1$]

**ನೆಲದೊಟ್ಟೆ** (ನಾ). ಒಂದು ಬಗೆಯ ಔಷಧಿ ಸಸ್ಯ : ನೆಲಮಾವುಂ ನೆಲದೊಟ್ಟೆ ತೊಟ್ಟೆ . . . ಇಂತಿವೆಲ್ಲಮು ಸಮಂ ಕೂಡಿಟ್ಟು ತದ್ಯೋಗಮಂ (ಖಪುದ. ೧೬-೫೯). [ನೆಲ + ತೊಟ್ಟೆ$_4$]

**ನೆಲಧಾರೆ** (ನಾ). ಒಂದು ಬಗೆಯ ಮರ : ನೆಲಧಾರೆ (ಘದಗುಸ)— ಎತ್ತರವಾಗಿ ಬೆಳಿಯುವದು, ಬಹುಶೋಭೆಯುಳ್ಳದ್ದು. ಬೆಲೆಯುಳ್ಳ ಇಮಾರತಿಯ ಕಟ್ಟಿಗೆಯು (ಕಭಾಗೆ. ೪೩). [ ? ]

**ನೆಲಧೊರೆ** (ನಾ). ಅರಸ ; ಭೂಪತಿ : ಪ್ರೇಮದಿಂ ನೆಲಧೊರೆಗಳಂ ಕೂಡಿಕೊಂಡು ಸುತ್ರಾಮವಂದಿತಗೆ ಕಾಣಿಕೆಯನಿತ್ತೆಱಗಿ ಸುಮ್ಮಾನದಿಂದಿರಲು (ತುರಂಗ. ೭೫-೨೮). [ನೆಲ + ಧೊರೆ(< ದೊರೆ$_3$)]

**ನೆಲನಡುಗು** (ನಾ). ನೆಲದ ಅದುರುವಿಕೆ ; ಭೂಕಂಪ : ನೆಲನಡುಗೊ ? ಬಾನ್ನುಡುಗೊ ? ಕೇಳದೊ ಮಹಾಸ್ವನಂ ಮೊಳಗುತಿದೆ, ದೂರದ ಸಮುದ್ರಘೋಷಮೆನಲ್ಕೆ (ಶ್ರೀರಾಪೂ. ೧೫೭-೩೪).
[ನೆಲ+ನಡುಗು$_2$]

**ನೆಲನಳ್ಳಿ** (ನಾ). "ಕಡಲಲ್ಲಿ ಹುಟ್ಟಿ ನೆಲದ ಮೇಲೆ ಜೀವಿಸುವ ನಳ್ಳಿ" (Land-crab. ಇಂಕನಿ). [ನೆಲ+ನಳ್ಳಿ$_1$]

**ನೆಲನಾರಂಗಿ**(ನಾ). ಒಂದು ಬಗೆಯ ಈಳೆ : ನೆಲಹೆರಿಳೆ, ನೆಲನಾರಂಗಿ (ಮೈಔಗಿ. ೫೬-೧೧೨೧). [ನೆಲ + ನಾರಂಗಿ]

**ನೆಲನೆಕ್ಕರೆ** (ನಾ). ಒಂದು ಬಗೆಯ ಸಸ್ಯ : (ಮೈಔಗಿ. ೫೭-೧೧೫೩).
[ನೆಲ+ನೆಕ್ಕರೆ./ತುಳು. ನೆಲನೆಕ್ಕರೆ]

**ನೆಲನೆಲ್ಲಿ** (ನಾ). ಒಂದು ಬಗೆಯ ಸಸ್ಯ ; ಕಿರುನೆಲ್ಲಿ : (ಮೈಔಗಿ. ೬೧-೧೨೩೮) ; "ಅಜ್ಝಟಿ = ನೆಲನೆಲ್ಲಿಯ ಗಿಡ" (ಗಂಗಾಪು. ೫).
[ನೆಲ+ನೆಲ್ಲಿ. / ತಮಿ. ನಿಲನೆಲ್ಲಿ ; ತುಳು. ನೆಲನೆಲ್ಲಿ]

**ನೆಲನೇರಳೆ** 'ನೆಲನೇಱಿಲ್' ನೋ.

**ನೆಲನೇಱಿಲ್,** ನೆಲನೇರಳೆ, ನೆಲನೇಱಿಲು (ನಾ). ಒಂದು ಬಗೆಯ ನೇರಳೆ; ನಾಯಿನೇರಳೆ; ಭೂಮಿಜಂಬುಕೆ : "ಪಿಕಭಕ್ಷ್ಯಾ— ನೆಲನೇಱಿಲ್" (ಓಷಧಿ. ೯೮). **ನೆಲನೇರಳೆ :** "ನಾದೇಯೀ, ಭೂಮಿಜಂಬುಕಾ–೨ ನೆಲನೇರಳೇ ಹೆಸರುಗಳು. ನಾಯಿನೇರಳೇ ಹೆಸರುಗಳು" (ಸಿದ್ಧಾಂತಿ. ೪೩೩). **ನೆಲನೇಱಿಲು :** "ಕಾಷ್ಠಜಂಬು–ನೆಲನೇಱಿಲು" (ಓಷಧಿ. ೬೦). [ನೆಲ + ನೇಱಿಲ್]

**ನೆಲನೇಱಿಲು** 'ನೆಲನೇಱಿಲ್' ನೋ.

**ನೆಲಪಡು** (ಕ್ರಿ). (ಸೋತು) ನೆಲ ಹಿಡಿ : ನೆಲಕ್ಕೆ ಮುಖ ಕೊಟ್ಟು ಮಲಗಿ, ನೆಲಪಟ್ಟನಂತೆ ಬಲವಾಗಿ ನೆಲವನ್ನು ಕೈಯಿಂದ ಕಚ್ಚಿಹಿಡಿದ (ಭೀಮುಕಾ. ೭೦) ; ಈ ಕಾಳಿನ ಹಿಟ್ಟಲೇ ಮಾಡಿದ ರೊಟ್ಟೀ ತುಣುಕು

ತಿಂದು ಮಕ್ಕಳೆಲ್ಲಾ ಹಿಂದಕ ಮುಂದಕ ಮಾಡಿಕೊಂಡು ನೆಲಪಟ್ಟೆ ಬಿದ್ದಾವರಿ (ಗ್ರಾಮಾಯ. ೧೪೮). [ನೆಲ+ಪಡು$_1$]

**ನೆಲಪತಿ** (ನಾ). =ನೆಲಧೊರೆ : ನೆಲಪತಿ ಬಳಿಯೊಳು ನೀನಿರು ಜಲಫಲಗಳ ತಂದು ಕೊಡುವೆ ನಿನಗೆಲೆ ಪುತ್ರ (ಹಮಜ. ೬೦). [ನೆಲ+ಪತಿ$_2$]

**ನೆಲಪು**, ನೆಲಹು, ನೆಲುಹು (ನಾ). ಪಾತ್ರೆ, ಆಯುಧ ಮುಂತಾದುವುಗಳನ್ನಿಡುವುದಕ್ಕಾಗಿ ಹಗ್ಗ, ತಂತಿ, ಬಿದಿರು ಮುಂತಾದುವುಗಳಿಂದ ಹೆಣೆದು, ನೇತುಬಿಡುವ ಸಾಧನ ; **ನೆಲು :** ಆಲದ ಕೊಂಬಿನೊಳ್ ನೂಱೊಂದು ಕಾಲ ನೆಲಪಂ ಕಟ್ಟಿ ನೆಲಪಿನ ಕೆಟಿಗೆ ಸುರಗಿ ಮೊದಲಾಗೆ ಮೂವತ್ತೆರಡಾಯುಧಮಂ ಮಹೋತ್ಸವಂಬೆರಸಿನಿತುಂ ನಿಲಿಪಿ (ಧರ್ಮಾಮೃ. ೨-೧೨೭) ; ಮನವಿಕ್ಕಿ ಹೆಪ್ಪನಿಟ್ಟು ನೆಲಪಿನೊಳ್ [ಪಾಠಾಂ. ಪೆಪ್ಪನೆಱೆದು, ಹೆಪ್ಪನಿಟ್ಟು ನಿಲವಿನೊಳ್]ಬಯ್ತಿಟ್ಟು (ಜೀವಸಂ. ೨೧೮-೧೧). **ನೆಲಹು :** "ಕಾಚಂ, ಶಿಕ್ಯಂ–ಈ ೨ ನೆಲಹು" (ಹಲಾಯು. ೧೨೫-೬೩) ; ನೆಲಹಿನ ಮೊಸರಂತೆ ಬೆನ್ನೇಱಿದ ಮಗುವಿನಂತೆ(ಧರ್ಮಾಮೃ. ೮-೧೪೭ ಅಡಿಪದ್ಯ) ; ಹಾಲ ಹರವಿಯ ಬಿಗಿದು ನೆಯ್ದಿಲಂ ಬಿಸಿಮಾಡು ನೆಲಹಿನಲಿ ಸಂತವಿಡಿಸು (ಹಚಕಾ. ೪-೪೯); ಕರಿದಂತಕ್ಕಂತ್ರವುಂ ಮೇಳಿಸಿ ನೆಲಹುಗಳಂ ಕಟ್ಟಿ ತಂದೊಡ್ಡಿ ಮಾಂಸೋತ್ಕರಮಂ ಪೊತ್ತು . . . ನಡೆದರಾ ಕಾಡೊಳ್ ಬೇಡರಾ[ಗಳ್] (ಕುಸುಮಾ. ೧೪-೫೨) ; ಎಲೆ ಗೋಪಿ ನಿನ್ನ ಮಗನ ದೆಸೆಯಿಂದ . . . ನೆಲಹಿನ ಬೆಣ್ಣೆಯುಳಿಯದು (ನೇಮಿಷ್ಣಂ. ೧೫-೯೩). **ನೆಲುಹು :** ಮನಕೆ ಬಂದಡೆ ತುಪ್ಪವದೆ ನೆಲು[ಪಾಠಾಂ. ಲ]ಹಿನ ಗಡಿಗೆಯುಲಿ ಮಡಗಿ ಬೇಕಾದನಿತನಾದಡೆ ತಂದಪೆಂ (ಬಸವು. ೧೪-೧೧) ; ನೆಲು[ಪಾಠಾಂ. ಲ]ಹುಗಳಲಿರಿಸಿದರೆ ಕೈಗಳು ನಿಲುಕದಿರ್ದರೆ . . . ಕೆಳೆಯರ ಹೆಗಲನೇಱಿ ದುರಂತವಿಕ್ರಮರು ಕಳೆದು ಕೊಂಬರು ಹಾಲು ಬೆಣ್ಣೆಗಳ (ನಿಭಾಗ. ೧೦-೮-೨೬) ; ಬಿಸಿಯ ಹಾಲನು ಬೆಣ್ಣೆ ಸಹವೀಂಟಿದನು ನೆಲು[ಪಾಠಾಂ. ಲ]ಹುಗಳ ಮೊಸರನುಂಡನು (ಸಾಳ್ವಭಾ. ೨೧-೪೯). 'ನೆಲುವು' ಪರಾ. [ನೆಲು+-ಪು$_2$]

**ನೆಲಬದರಿ** (ನಾ). ಒಂದು ಬಗೆಯ ಸಸ್ಯ : "ಲಘುಬದರೀ–ನೆಲಬದರಿ" (ಓಷಧಿ. ೧೪೨). [ನೆಲ+ಬದರಿ]

**ನೆಲಬರೆ** (ಕ್ರಿ). (ಭಯ, ನಾಚಿಕೆ ಮುಂತಾದುವನ್ನು ಸೂಚಿಸುವಂತೆ) ಕಾಲ ಬೆರಳಿಂದ ನೆಲವನ್ನು ಗೀರು : ಮಿಹಿರ ತಲೆವಾಗಿ ನೆಲಬರೆಯುತ್ತಾ ಜಹಾಂಗೀರನೆದುರು ಬದಿಯಲ್ಲಿ ಸರಿದು ನಿಂತಳು (ನೂರಜ. ೨೫). [ನೆಲ+ಬರೆ$_1$]

**ನೆಲಬಲ** 'ನೆಲವಲ' ನೋ.

**ನೆಲಬಲಿಕೆ** (ನಾ). (ರಾಜ್ಯದ) ಹಿರಿಮೆ,—ಮೇಲ್ಮೆ : ಜಲಧಿ ಬಳಸಿದಗಳಾಗೆ ತ್ರಿಕೂಟಾಚಲವ ಬಳಸಿ ವಜ್ರಪರಿಖೆ ನೆಲಸಿರಲಾ ಪಟ್ಟಣದ ನೆಲಬಲಿಕೆಯನೊಲಿದು ಪೇಳುವ ಕವಿ ಯಾರು (ರಾಮವಿ. ೧೧-೨೬). [ನೆಲ+ಬಲಿಕೆ(<ಬಲ್ಮೆ)]

**ನೆಲಬಾಗೆ** (ನಾ). ಒಂದು ಬಗೆಯ ಸಸ್ಯ : ನೆಲಬಾಗೆಬೇರು, ಚಿತ್ರಮೂಲ, ಕೋಳಿಕುಟುಮನ ಗೆಡ್ಡೆ ಇವಿಷ್ಟನ್ನೂ ನಿಂಬೇಹುಳಿಯ ರಸದಿಂದ ಅರೆದು ಲೇಪಿಸಲು ತ್ವಗ್ಗತವಾದ ಕುಷ್ಠ, ವಿಸ್ಫೋಟಕಗಳು ಪರಿಹರವಹವು (ವೈದ್ಯಸಾ. II, ೩೯೩). [ನೆಲ+ಬಾಗೆ$_1$]

**ನೆಲಬಾದಾಮಿಹುಲ್ಲು** (ನಾ). ಒಂದು ಬಗೆಯ ಸಸ್ಯ : (ಮೈಪಗಿ. ೨೮-೫೩೧). [ನೆಲ+ಬಾದಾಮಿ$_2$+ಹುಲ್ಲು(<ಪುಲ್)]

**ನೆಲಬಾವಿ** (ನಾ). (ಕಟ್ಟೆ ಇಲ್ಲದ) ನೆಲಕ್ಕೆ ಸಮವಾಗಿರುವ ಬಾವಿ; ನೆಲದ ಮಟ್ಟಕ್ಕಿರುವ ಬಾವಿ : ಮಳೆ ಬಂದು ನೆಲವೆಲ್ಲ ಒದ್ದೆಯಿದ್ದುದರಿಂದ ನೆಲಬಾವಿಯಲ್ಲಿ ನೀರು ಸೇದಲು ಕಷ್ಟವಾಯಿತು (ರೂಢಿ). [ನೆಲ+ಬಾವಿ]

**ನೆಲಬಾಳ್** (ನಾ). ಭೂಮಿಯ ಮೇಲಿನ ಬದುಕು,—ಜೀವನ : ತಲೆಯೊಂದೆ ಬೇರ್ಪಡಿಸೆವೀ ಸಾವು ಬಿಡ್ಪೊರೆಯು ನೆಲಬಾಳನಟ್ಟಿರುವ ಕಟ್ಟಲ್ತೆ ನೋಡೆ (ಕಾಲೂರ. ೧೮೧-೪೦೯). [ನೆಲ+ಬಾಳ್$_2$(<ಬಾೞ್$_2$)]

**ನೆಲಬಿದರಹುಲ್ಲು** (ನಾ). ಒಂದು ಬಗೆಯ ಸಸ್ಯ : (ಮೈಪಗಿ. ೯-೧೫೮). [<ನೆಲಬಿದರು$_0$+ಹುಲ್ಲು(<ಪುಲ್)]

**ನೆಲಬುರುಕಿ** (ನಾ). ನೆಲದ ಮೇಲೆ ತೆವಳುವಂತಹುದು : ನೆಲಬುರುಕಿ ಮಹಾಶಯನಿಗೆ ನಿದ್ದೆ ನಮಗಿಂತ ಹೆಚ್ಚಾದರೂ ಅವನು ಮುಂಚಿತವಾಗಿ ಮಲಗುವುದರಿಂದ ಮುನ್ನವೆ ಎದ್ದು ಬಿಡುತ್ತಾನೆ (ಗಾಳಿಪ.೧೬೦). [ನೆಲ+-ಪುರುಕಿ]

**ನೆಲಬೇವು** (ನಾ). ೧. ಒಂದು ಬಗೆಯ ಮೂಲಿಕೆ ; ಚಿರಾಯಿತ : "ಕಿರಾತತಿಕ್ತಃ, ಭೂನಿಂಬಃ, ಅನಾರ್ಯತಿಕ್ತಃ, ಈ ೩ ನೆಲಬೇವು" (ನಾಚಿರಾ. ೧೧೧) ; "ಪನ್ನಂಗಿಯೆನೆ ನೆಲಬೇವು" (ಮಂಗರಾ. ೪೪-೪೫) ; ನೆಲಬೇವು ಚಿತ್ರಕಂ ಪಿಪ್ಪಲಿ ನಾಗರಮೆಂಬಿವಿನಿತುಮಂ ಕುದಿಯಿಸು ತಜ್ಜಲಮಂ ಬಿಸಿಬಿಸಿಯೆನೆ ಕುಡಿಯಲೊಡಂ ಶ್ಲೇಷ್ಮರೋಗ ಶಮನಮದಕ್ಕುಂ (ಲೋಕೋಪ. ೯-೧೯) ; ಬಳ್ಳಿದುಱುಚೆ ನೆಲಬೇವು ಮುಸ್ತೆ ಪರ್ಪಾಟಕದಿಂ ಕುದಿದಿಳುಪಿ ಕಟುಕರೋಹಿಣಿಯದಱೊಳಗಿರೆ ಕೆಡಿಕುಮಲ್ತೆ ಪಿತ್ತಜ್ವರಮಂ (ಕಲ್ಯಾಕಾ. ೩-೩೨) ; ಜೀರಿಗೆ, ಕೊತ್ತುಂಬರಿ, . . . ಬೇವು, ನೆಲಬೇವು, ಕಟುಕರೋಹಿಣಿ—ಇವುಗಳನ್ನು ಬಿಸಿನೀರಿನಿಂದರೆದು ಕೊಡಲು ವಾತಜ್ವರಂ ಮಾಣ್ಗುಂ (ಸಕವೈ. ೬೩). ೨. ಒಂದು ಬಗೆಯ ಸಸ್ಯ ; ಹೊನ್ನೆಗನ್ನೆ : "ಸ್ತನಪಯೋಗಂಧಿಯೆನೆ ನೆಲಬೇವು" (ಮಂಗರಾ. ೪೦-೩೩).

[ನೆಲ+ಬೇವು$_1$. / ತಮಿ. ನಿಲವೇಮ್ಬು ; ಮಲ. ನಿಲವೇಪ್ಪ ; ತುಳು. ನೆಲಬೇವು ; ತೆಲು. ನೆಲವೇಮು]

**ನೆಲಬೈರಿಗೆ** (ನಾ). ನೆಲವನ್ನು ಕೊರೆಯುವ ಬೈರಿಗೆ : ಭೂಮಿಯಲ್ಲಿ ಕಂಡಿ ಕೊರೆಯುವುದಕ್ಕಾಗಿ ಉದ್ದ ಬೆಳಸಿಕೊಂಡು ಹೋಗುತ್ತ ಉಪಯೋಗಿಸುವ ಸಾಧನ: ನೆಲಬೈರಿಗೆ (Auger. ಇಂಕನಿ). [ನೆಲ+ಬೈರಿಗೆ]

**ನೆಲಮಗಳ್**, ನೆಲಮಗಳು (ನಾ). ಭೂಮಿಯ ಮಗಳು ; ಸೀತೆ : ಮುನಿಯ ಸತಿ ನೆಲಮಗಳನುಪಚರಿಸಿದಳ್ (ಶ್ರೀರಾಮಾ. ೧೩೬-೩೧೭). **ನೆಲಮಗಳು :** ನೆಲಮಗಳ ರೂಪಿನ ಕಲಿ ಮನೋಭವ ಬಂದ (ಕಾಶಿಂಗ. ೨-೧೩). [ನೆಲ+ಮಗಳ್]

**ನೆಲಮಗಳು** 'ನೆಲಮಗಳ್' ನೋ.

**ನೆಲಮನೆ** 'ನೆಲವನೆ' ನೋ.

**ನೆಲಮರೆ** (ನಾ). ಭೂಮಿಯಲ್ಲಿ ಬಚ್ಚಿಟ್ಟಿದ್ದು ; ನೆಲದಲ್ಲಿ ಅವಿತಿಟ್ಟಿದ್ದು : ಚಿನ್ನ ಬೆಳ್ಳಿ ಇದ್ದದ್ದನ್ನು ನೆಲಮರೆ ಮಾಡಿಕೊಂಡು ಇದ್ದಾರೆ (ರಾಜೇಂದ್ರ. ೧೬೪). [ನೆಲ+ಮರೆ$_2$(<ಮಱೆ$_2$)]

**ನೆಲಮುಹಡಿ** (ನಾ). ನೆಲಮಾಳಿಗೆ; ನೆಲಮನೆ : ನಾನೀಗ ಮಲಗಿರುವ ಹಾಸಿಗೆಯ ಕೆಳಗೊಂದು ಹಲಿಗೆಯಿದೆ . . . ಅದರ ಕೆಳಗೊಂದು ನೆಲಮುಹಡಿಯಿದೆ (ದೇವೀಚಾ. ೩೫). [ನೆಲ+ಮುಹಡಿ]

**ನೆಲಮಾಗಳಿ**, **ನೆಲಮಾಗುಳಿ** (ನಾ). ಒಂದು ಬಗೆಯ ಸಸ್ಯ : ವೀಳಯದ ಎಲೆ . . . ನೆಲಮಾಗಳಿಯ ಸೊಪ್ಪು . . . ಈ ಸೊಪ್ಪುಗಳ ಪ್ರತ್ಯೇಕ ರಸಗಳನು ಜೇನುತುಪ್ಪ ಬೆರಸಿ ಕಣ್ಣಿಗೆಚ್ಚಲು ಹೊಸತಾದ ಕಣ್ಣ ಬೇನೆ ಶಮನವಹುದು (ವೈದ್ಯಸಾ. II, ೭೮) ; **ನೆಲಮಾಗುಳಿ:** ನೆಲಮಾಗುಳಿ, ನೆಲ್ಲಿಚಟ್ಟು . . . ಭದ್ರಮುಸ್ತೆ ಇವಿಷ್ಟನೂ ಪ್ರತ್ಯೇಕ ಎರಡು ವರಹ ತೂಕ ಒಂದು ಬಳ್ಳ ನೀರಲ್ಲಿ ಕಷಾಯವೆತ್ತಿ (ವೈದ್ಯಸಾ. I, ೩೬೩) ;

ಗುಳ್ಳ, ನೆಲಗುಳ್ಳ . . . ನೆಲಮಾಗುಳಿ, ಕಬ್ಬು . . . ಕೆಂಪಿನ ನೆಗ್ಗಿಲು ಇವು ಪ್ರತ್ಯೇಕ ೩ ಹಲವಂ ತುಳಿದು (ಸಕವೈ. ೩೮೨). [ನೆಲ+ಮಾಗಳಿ$_1$]

**ನೆಲವಮಾಗಳಿಚೋರ** (ನಾ). ಒಂದು ಬಗೆಯ ಸಸ್ಯ : ಬಿಳೀ ಹೂಲಿ, ಕೊರೆ, ಸಣ್ಣ ಹೂಲಿ, ನೆಲಮಾಗಳಿಚೋರ (ಮೈಔಗಿ. ೩೭-೭೪೫). [ನೆಲಮಾಗಳಿ+ಚೋರ ?]

**ನೆಲವಮಾಗಳಿಬೇರು** (ನಾ). =ನೆಲವಮಾಗಳಿ : ಮಾಗಳಿಗೆಣಸು, ನೆಲ ಮಾಗಳಿಬೇರು, ಅರಿಸಿನ . . . ಇವಿಷ್ಟನೂ ಪ್ರತ್ಯೇಕ ನಾಲ್ಕು ವರಹ ತೂಕವ ಸೇವಿಸಲು (ವೈದ್ಯಸಾ.II, ೫೩). [ನೆಲಮಾಗಳಿ+ಬೇರು(<ಬೇರ್)]

**ನೆಲವಮಾಗುಳಿ** 'ನೆಲವಮಾಗಳಿ' ನೋ.

**ನೆಲವಮಾಟ** (ನಾ). ಕೆಲವು ನಿರ್ದಿಷ್ಟವಸ್ತುಗಳನ್ನು ನೆಲದಲ್ಲಿ ಹೂಳಿ ಮಾಡುವ ಮಾಟ,—ಮಂತ್ರ : ಸೇರಿದ ಕೆಲವು ಹಿರಿಯರು ಇದು ನೆಲಮಾಟವೆಂದರೆ . . . ಇನ್ನು ಕೆಲವರು ಇದು ಪಿಶಾಚಿಯ ಬಾಧೆ ಯೆಂದೂ ಹೇಳತೊಡಗಿದರು (ಕಾಲೂರ. ೧೪ ಕಥಾಸಾರ). [ನೆಲ+ಮಾಟ$_1$]

**ನೆಲವಮಾರ್ಗ** (ನಾ). ೧. ಭೂಮಿಯ ಮೇಲಿನ ದಾರಿ ; ರಸ್ತೆ. ೨. ಭೂಮಿಯೊಳಗೆ ತೋಡಿರುವ ರಹಸ್ಯ ದಾರಿ; ಸುರಂಗ ಮಾರ್ಗ: ಕೋಟೆಯೆಂದೊಡನೆ ಇಂದಿನ ಬಹು ಜನರ ಕಣ್ಣೆದುರು ಬಂದು ನಿಲ್ಲುವುದೇದರೆ ಕೋಟೆಯ ಸುತ್ತು ಗೋಡೆ . . . ಬಹಳವಾದರೆ ನೆಲಮಾರ್ಗ (ಕರ್ನಾಜ. ೪). [ನೆಲ+ಮಾರ್ಗ]

**ನೆಲವಮಾವು** (ನಾ). ಒಂದು ಬಗೆಯ ಔಷಧಿ ಸಸ್ಯ : ನೆಲಮಾವು ನೆಲ ದೊಟ್ಟೆ ತೊಟ್ಟೆ . . . ಇಂತಿವೆಲ್ಲಮು ಸಮಂ ಕೂಡಿಟ್ಟು (ಖಮುದ. ೧೬-೫೯). [ನೆಲ+ಮಾವು]

**ನೆಲವಮಾಳಿಗೆ** 'ನೆಲವಾಳಿಗೆ' ನೋ.

**ನೆಲವಮಿಂಡ** (ನಾ). (?) : ಎಳಮೆಯೊಳೆನ್ನ ಮೆಯ್ಸಿರಿಯಿನೊಳ್ಕೊಗ ದೋಜೆಯಿನೋರೆನೋಟದೊಳ್ಪೊಳಪಿನೆಳಲ್ದು ಬದ್ದಿ ನೆಲಮಿಂಡರೊಳಾ ಬಟಿಕೊರ್ವ ಗಂಡನಂ ತಳೆದು (ಚಿಕವಿ. ೬-೨೮೩). [ ? ]

**ನೆಲವಮುಂಗುಹುಲ್ಲು** (ನಾ). ಒಂದು ಬಗೆಯ ಸಸ್ಯ : (ಮೈಔಗಿ. ೪೬-೯೨೧). [ನೆಲ+ಮುಂಗು$_2$+ಹುಲ್ಲು(<ಪುಲ್)]

**ನೆಲವಮುಕ್ಕ**, ನೆಲಮುಕ್ಕು (ನಾ). ೧. ಒಂದು ಬಗೆಯ ಹಾವು : ಬರಸಿಡಿಲ ಬಳಗದಂತೆ . . . ನೆಲಮುಕ್ಕನ ತೆಕ್ಕೆಯಂತೆ ಖಿತ್ತುವಿನ ಮೊತ್ತದಂತಿರ್ದಸಂಖ್ಯಾತ ದೈತ್ಯನಾಯಕರ ಮಾಯಾಪ್ರಯೋಗಮಂ ಪ್ರತಿಹತಂ ಮಾಡಿ ಗೆಲ್ವುದು (ಜಗವಿ. ೧೫-೧೫ ಪ) ; ಅಲ್ಲಿ ನೆಲಮುಕ್ಕನೆನಿ ಸುವ ಪಾವು ನೋಡಮ್ಮ (ಸಾನಂಚ. ೪-೧೩೪ ರಗಳೆ). 'ಮಣ್ಣುಮುಕ್ಕ' ಪರಾ. ೨. ಪಿಶಾಚಿ ; ದೆವ್ವ : ಗಾಳಿಗರುಂ ನೆಲಮುಕ್ಕ ಜಕ್ಕಿಯುಂ ಬರ್ಮನುಮೆಂದು ಜೀವವಧೆಗೆಯ್ದೊಡೆ ಕುತ್ತದ ದುಃಖದಿಂದೆ ಸಾಸಿರ್ಮಡಿ ದುಃಖಮಂ ಪಡೆವ ನಾರಕದುಃಖಮುನೆಯ್ದುದಿರ್ಪರೇ (ಪದ್ಯಸಾ. II, ೭೨೮ ; ಶಾಸ್ತ್ರಟೀ. ೨೪-೩ ನೋ). **ನೆಲಮುಕ್ಕು : ೨.** ಅಂತು ಬೆಸನಂ ಬೇಡಿಕೊಂಡು ಬೀಟಿಕ್ಕೊಂಡು ನೆಲಮುಕ್ಕನಂತೆ ನಭಕ್ಕೆ ನೆಗೆದು (ಪಂರಾಸೂ. ೯-೧೨೩ ಪ) ; ಇರೆಯಿರೆ ಪಾವೆ ಕಾಲಗತಿಯಿಂ ನೆಲಮುಕ್ಕನಿ ಪಂದದಿಂ ಹಿಮಂ ಬರೆಬರೆ ಬೆರ್ಚಿನಿಂ ಶಿಶಿರಮಾಗಿ ನಿಮಿರ್ಚಿದುದು (ಪುಷ್ಪವೃ. ೬-೪೮) ; ಬಿನುಗೊಂಡು ನೆಲಮುಕ್ಕು ಕಾಡುತಿಹುದೆನುತಂ (ಕಾಲೂರ. ೧೫೪-೩೩೯). 'ನೆಲಗುಮ್ಮ$_1$' ಪರಾ. [ನೆಲ+ಮುಕ್ಕ$_1$]

**ನೆಲವಮುಕ್ಕು** 'ನೆಲಮುಕ್ಕ' ನೋ.

**ನೆಲವಮುಚ್ಚಳ** (ನಾ). ಒಂದು ಬಗೆಯ ಸಸ್ಯ : ನೆಲಮುಚ್ಚಳ, ನಾರುಂಬೇಳೆಸೊಪ್ಪು (ಮೈಔಗಿ. ೪೧-೪೮೯). [ನೆಲ+ಮುಚ್ಚಳ ?]

**ನೆಲವಮುಚ್ಚಿಲು** (ನಾ). ಒಂದು ಬಗೆಯ ಔಷಧಿ ಸಸ್ಯ : ನೆಲ ಮುಚ್ಚಿಲು, ಹಸ್ತಿಪಾದ, ಹಕ್ಕರಿಕೆ, ಆನೆಕಾಲುಗಿಡ, ನಾಯಿನಾಲಗೆ ಗಿಡ (ಮೈಔಗಿ. ೩೩-೬೪೧). [ನೆಲ+ಮುಚ್ಚಿಲು./ತುಳು. ನೆಲಮುಚ್ಚಿಲ್]

**ನೆಲವಮುಟ್ಟು** (ಕ್ರಿ). ಭೂಮಿಯನ್ನು ಸೋಕು ; ನೆಲವನ್ನು ಸ್ಪರ್ಶಿಸು : ಕಣೆ ಪಂಜರದೊಳ್ ಎಜಗಿ ಭೀಷ್ಮನ್ ಪಿಟ್ಟಂತೆ ನೆಲ ಮುಟ್ಟದೆ ಬಿಟಿಕ್ದಾ ೀನಾನ್ (ಎಕ. VIII, ಸೊರಬ. ೧೦-೮ ; ಸು. 800); ತಿಂತಿಣಿಯಾಗೆ ನಟ್ಟ ಕಣೆಯೊಳ್ ನೆಲಮುಟ್ಟದೆ ಮೆಯ್ಯೊಳತ್ತಮಿತ್ತಂ ತೆಜದಿರ್ದ ಪುಣ್ಣಳೆಸೆವಕ್ಕರದಂತಿರೆ ನೋಡಿ ಕಲ್ಲಿನೆಂಬಂತೆವೊಲಿರ್ದನಟ್ಟ ವಣೆ ಕೋಲ್ಗಳ ಮೇಲೆಸೆದಿರ್ದ ವೀರಸಿದ್ಧಾಂತದ ಶಾಸನಂ ಬರೆದ ಪೊತ್ತಗೆ ಯಂತಮರಾಪಗಾತ್ಮಜಂ (ಪಂಪಭಾ. ೧೧-೪೬) ; ಧೈರ್ಯನಿಧಿ ಕೊಂಡ ಕುಂದಾಚಾರ್ಯರ ಚರಣಂಗಳೊಳೆದು ನೆಲಮುಟ್ಟದ ತಾತ್ಪರ್ಯಮನ ಜಾದಂ (ಅರ್ಥನೀ. ೧-೧೪) ; ಕಯ್ಯೊಂಬೆಯುಂ ತೂಗೆ ನೆಲಮುಟ್ಟ ಕುಂಬಿಟ್ಟು (ಕಾಲೂರ. ೧೨೦-೨೫೧) ; ಇಬ್ಬರೂ ನೆಲಮುಟ್ಟ ಅಡ್ಡ ಬಿದ್ದರು (ನಡೆದಾ. I, ೪೩೭). [ನೆಲ+ಮುಟ್ಟು$_1$]

**ನೆಲವಮುಟ್ಟುಗೂರ್** (ನಾ). ಒಂದು ಊರಿನ ಹೆಸರು : ಆಗ್ನೇಯ ದೆಸೆ ಪುಲ್ಲಾಯಟಿ ದಕ್ಷಿಣದೆಸೆ ತಳ ಅಣ್ಣಾಯ್ ನೈರಿತ್ತಿದೆಸೆ ನೆಲಮುಟ್ಟು ಗೂರ್ (ಎಕ. X (S), ಮುಳಬಾ. ೩೨೮-೫೧ ; ಸು. 650). [ನೆಲ+ಮುಟ್ಟುಗ ?+ಊರ್]

**ನೆಲವಮುಳ್ಳಿಹಣ್ಣು** (ನಾ). "ಮೇಲ್ಭಾಗದಲ್ಲಿ ಹಳದಿ ಬೀಜಗಳು ತುಂಬಿರುವ, ಕೆಂಬಣ್ಣದ ಒಂದು ಬಗೆಯ ತಿರುಳು ಹಣ್ಣು (ಬಿಡುವ, ಬಳ್ಳಿಗವಲುಗಳುಳ್ಳ, ಬಹು ವರ್ಷ ಇರುವ ಸಸ್ಯ) : ನೆಲಮುಳ್ಳಿ ಹಣ್ಣು" (Straw berry. ಇಂಕನಿ). [ನೆಲ+ಮುಳ್ಳಿ ?+ಹಣ್ಣು$_3$ (<ಪಣ್$_3$)]

**ನೆಲವಮುಟ್ಟುಗೂರ್** (ನಾ). ಒಂದು ಊರಿನ ಹೆಸರು : ನೆಲ ಮುಟ್ಟುಗೂರ್ ಪ್ರತೀಚೀ ದೆಸೆ ಪೆದ್ದಾಣಯೆ (ಮೈಆರಿ. ೧೯೧೭, ೯-೫೧ ; ?). 'ನೆಲಮುಟ್ಟುಗೂರ್' ಪರಾ. [ನೆಲ+ಮುಟ್ಟುಗ+ಊರ್]

**ನೆಲವಮೂಗಿ** (ನಾ). ಒಂದು ಬಗೆಯ ಸಸ್ಯ : "ವಿಷಾಣೀ – ಔಷಧಿ, ಚೇಳುವಾಲಿ, ನೆಲಮೂಗಿ" (ಔಷಧಿ. ೧೫೫). [ನೆಲ+ಮೂಗಿ ?]

**ನೆಲವಮೆಟ್ಟು$_1$** (ಕ್ರಿ). ಭೂಮಿಯನ್ನು ತುಳಿ,—ಮೆಟ್ಟು : ಹಲವು ಸನುತಲದೆ ವಹಿಸುತಲೆ ಪ್ರಪಾತದಲೆ ಇಳಿದು ನೆಲಮೆಟ್ಟಿ ಭೈರವನ ತೆರ ಮೊರೆದು (ಕವಿಪು. ೩೧-೨). [ನೆಲ+ಮೆಟ್ಟು$_1$]

**ನೆಲವಮೆಟ್ಟು$_2$** (ನಾ). ಕುದುರೆಗಳ ಮೇಲೆ ಹಾಕುವ ತೆರಿಗೆ (?) : ನೆಲಮೆಟ್ಟಿನ ಛಾಯೆಯ ನಾಯಕನಿಂ ದೇವರ್ಗ್ಗೆ ಸ್ಥಳದ ನಾಲ್ಕುಂ ಕುದುರೆಯ ನೆಲಮೆಟ್ಟಂ ಬಿಟ್ಟಂ (ಎಇ. XV, ೩೨೨-೬೭ ; 1172) ; ಬಡಗಣಿಂ ಬಂದ ಕುದುರೆಗೆ ನೆಲಮೆಟ್ಟು ಹಾಗವೊಂದು (ಎಇ. XIII, ೨೧-೫೧ ; 1204). [ನೆಲ+ಮೆಟ್ಟು ?]

**ನೆಲಯಿಪ್ಪೆ** (ನಾ). ಒಂದು ಬಗೆಯ ಹಿಪ್ಪೆ : "ಭೂಪೀಲುಃ – ನೆಲ ಯಿಪ್ಪೆ" (ಔಷಧಿ. ೧೧೨). [ನೆಲ+ಇಪ್ಪೆ$_1$ (<ಇರ್ಪೆ)]

**ನೆಲರುದ್ರಾಕ್ಷಿಹೂ** (ನಾ). ಒಂದು ಬಗೆಯ ರುದ್ರಾಕ್ಷಿಹೂವು : ಕೆಂಪುಗೊಂಡೆ, ನೆಲರುದ್ರಾಕ್ಷಿಹೂ (ಮೈಔಗಿ. ೪೦-೭೮೬). [ನೆಲ+ರುದ್ರಾಕ್ಷಿ+ಹೂ$_2$ (<ಪೂ$_2$)]

**ನೆಲವ** (ನಾ). ಒಂದು ಬಗೆಯ ಸಸ್ಯ : ಸಮುದ್ರಸೋಗೆಬೀಜ ಉಮ್ಮತ್ತದ ಬೀಜ ನೆಲವದ ಹಗಿನು . . . ಇವಂ ಸಮಾನಂಗೊಂಡು ಭಂಗಿಯ ಸೊಪ್ಪಿನ ರಸದಿಂದ ಲೇಸಾಗಿ ಮರ್ದಿಸಿ (ಕಾಮಶಾ. ೧-೨೬೫). 'ಎಲವ' ಪರಾ. [ ? ]

**ನೆಲವಕ್ಕೆ** 'ನೆಲವಟಿಕ್ಕೆ' ನೋ.

**ನೆಲವಟ್ಟ** (ನಾ). ನೆಲದ ಮಟ್ಟ,–ಪಾತಳಿ: ಘಟಸ್ಥಾವರದೊಳಗನೊಡೆದು ಕೆಚ್ಚನ ಹೊಱಿಯ ಕಡೆಗಾಣಿಸಿ ಮಕ್ಕಾದ ಹೊಱಗಣ ಹೊಱಿಯ ತಿಗುಡಂ ಕೆತ್ತಿ ಕಂಬವ ಶುದ್ಧೈಸಿ ನೆಲವಟ್ಟಕ್ಕೆ ಚದುರಸವನಿಂಬುಗೊಳಿಸಿ . . . ಕಂಬ ಎರವಿಲ್ಲದೆ ನಿಂದ ಮತ್ತೆ (ಸರ್ಪಪ. ೧೯೯-೬೧೭). [ನೆಲ+ಮಟ್ಟ$_1$]

**ನೆಲವಣ್ಣ** (ನಾ). ನೆಲಸಮ ; ನಾಶ: ಹತ್ತು ತಲೆಯ ರಾವಣನ ಒಂದೆ ಅಂಬಿನಲಿ ಮಡುಹಿದ ಛಲದಿಂದ ಲಂಕಾದ್ವೀಪವ ನೆಲ [ಪಾಠಾಂ. ನೆಲೆ]ವಣ್ಣ ಮಾಡಿದ (ಬಸವ. ೬೨೪) ; ಹೊಲೆಯ ಹೋಗೆಲೊ ನಿನ್ನ ಮನೆಗೇ ವಂಶ ನೆಲವಣ್ಣವಾಗುವದು ಕಡೆಗೆ ನಿನ್ನ ತಲೆಯುನರಿಯದೆ ಬಿಡರು (ಪಾಂಡಚ. ೨೮-೩). [ನೆಲ+ಬಣ್ಣ]

**ನೆಲವತ್ತಿ**$_1$ (ನಾ). ಒಂದು ಬಗೆಯ ಹತ್ತಿ : ನೆಲವತ್ತಿ ಕದಳಿಯ ರಸ ದಿಂದ ಸೇವಿಸೆ ಬಹುಮೂತ್ರ ಕಿಡುಗುಂ (ಸಾಳ್ವಸಾಂ. ೨೧).
[ನೆಲ+ಪತ್ತಿ$_1$ (<ಪಱ್ತಿ)]

**ನೆಲವತ್ತಿ**$_2$ 'ನೆಲ್ಲವತ್ತಿ' ನೋ.

**ನೆಲವತ್ತಿಗ** (ನಾ). ಭೂಮಿಯ ಸಾಗುವಳಿದಾರ : ಬಾಹುಬಲವಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು ನೆಲಬಲವಿಲ್ಲದ ನೆಲವತ್ತಿಗನಂತೆ ಕಟ್ಟು ಕಟಲ್ದು (ಶಾಂತಿಪು. ೪-೩೦ ಪ). [ನೆಲ+ಪತ್ತಿಗ$_2$]

**ನೆಲವನೆ, ನೆಲಮನೆ** (ನಾ). ೧. ನೆಲದ ಅಡಿಯಲ್ಲಿ ಮಾಡಿದ ಮನೆ ; ನೆಲದ ಮಟ್ಟಕ್ಕಿಂತಲೂ ಕೆಳಗಿರುವ ಮನೆಯ ಭಾಗ : ಆ ಗ್ರೀಯವರ ನೆಲವನೆಯಂಪ್ಪ ಸಿಸ್ತನೆಯ ಗಾರ್ಗಸಿಯ ಬಯಲ್ಗಳನ್ ಸೇರ್ವಿನಂ . . . ನಡೆದು ಪೋಗು (ಬದ್ಧಪ್ರ. ೪೨-೯೧೧). **ನೆಲಮನೆ:** ೧. ಅನಿಬರುಮಂ ನೆಲಮನೆಯೊಳಿಕ್ಕಿ ಮಲ್ಲಲ್ ಪುಗುವಣಿತು ಬಾಗಿಲಂ ಮಾಡಿ (ಪಡ್ಡಾರಾ. ೧೮೨-೯) ; ಶರೀರದ ನೆಲಮನೆಯಲ್ಲಿದ್ದು ನೆರೆವಸ್ತುವನಱಿವುದಕ್ಕೆ ಕುಱುವಾವುದು (ಮೋಳಿಮಾ. ೫೩-೨೨೦) ; ನೆಲಮನೆಯೊಳೋಪಳೊಡನಯ್ಕಾಲ ದೆವಸಂ ಸುಖದಿನಿರ್ಪೆಯಂಗಜ ತಪದಿಂದೊಲೆದೊರ್ವೆಯೆ ಬಯಲೆಡೆಗಳೊಳಲಸದೆ ನೀಂಬೇಟ್ದು ವಾಸದೊಳ್ ಸೈರಿಸುವಾ (ಬಂಹರಿ. ೧೪-೧೪) ; ಮುಕ್ತಾದೇವಿಯ ಕೈಹಿಡಿದು . . . ಅವಳನ್ನು ನೆಲಮನೆಯಲ್ಲಿಳಿಸಿದ ಕಾಪಾಲಿ (ಅಶ್ರಮ. ೫೩). ೨. "(ಮು. ಬಂಡೆಯಲ್ಲಿ ಕೊರೆದು ಮಾಡಿದ, ಕಲ್ಲಿನಿಂದ ಅಥವಾ ಇಟ್ಟಿಗೆಯಿಂದ ಕಟ್ಟಿ ಮಾಡಿದ) ಸಮಾಧಿ ಗುಹೆ; ಗೋರಿ; ಹೆಣ ಹೂಳುವ ಗುಹೆ, ನೆಲಮನೆ"(Sepulchre. ಇಂಕನ್ನ). ೩. ನೆಲಮಾಳಿಗೆಯ ಬಂದಿಖಾನೆ : (+). [ನೆಲ+ಮನೆ]

**ನೆಲವರ**$_1$ 'ನಿಲವರ' ನೋ.

**ನೆಲವರ**$_2$ (ನಾ). ಮರಣ ಸ್ಥಳ; ಮರಣ ಭೂಮಿ : ಆಗಳಗುರ್ವು ಮದ್ಭುತಮುಮಾಗೆ ನೆಲೆಯಿಂ ತಳರ್ದು ನೆಲವರದೆಡೆಗೆ ಕಾಲೊಯ್ವುದೆಂಬ ಮಾತಂ ನನ್ನಿಮಾಟ್ಪಂತೆ ಪೌದನಪುರಕ್ಕಾಸನ್ನಮಾಗೆ ಬಂದು (ವರ್ಧಮಾ. ೪-೩ ಪ) ; ಉದಯನವಾಂಶಕ ಪತಿ ಯಾವುದೊಂದು ಮಂದಿರದೊಳಿರ್ದನಾ ಗೃಹಸಂಬಂಧದ ಭೂಮಿಯೊಳಾತಂ ಸಾಯದಿರಂ ಮಿಗುವನ್ನರೊಳರೆ ನೆಲವರದೆಡೆಯಂ (ಜಾತತಿ. ೨೩-೨೨) ; "ಗೊತ್ತಾದ ಭೂಮಿ ; ಸಾಯುವ ನೆಲ" (ಜಾತತಿ. ಕೋಶ). [?]

**ನೆಲವರ್ತಿ** 'ನೆಲ್ಲವತ್ತಿ' ನೋ.

**ನೆಲವಲ, ನೆಲಬಲ** (ನಾ). ೧. ದೊಡ್ಡ ಸೈನ್ಯ ; ಮಹಾಬಲ (?): ನೆಲವಲನೆನೆನ್ನದಲ್ಲದಿದು ಪೆರ್ಬಲವೆಂದೆ ದೋಃಪ್ರತಾಪದಿಂ ಗಿಲಿಗಿಲಿಗಂಬವಾಡಿಸುವನಾಹವದೊಳ್ ಕಲಿ ಬಿಟ್ಟದೇವನ್ (ಎಕ. XII, ಚಿಕ್ಕನಾ. ೪೩-೧೭ ; 1171) ; ನೆಲವಲ ; ಪೆರ್ವಲ ; ಭುಜಬಲ (ಶಮದ. ೨೯೮ ಪ್ರಯೋ). **ನೆಲಬಲ :** ೨. (?) : ಬಾಹುಬಲವಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು ನೆಲಬಲವಿಲ್ಲದ ನೆಲವತ್ತಿಗನಂತೆ ಕಟ್ಟು ಕಟಲ್ದು (ಶಾಂತಿಪು. ೪-೩೦ ಪ). [ನೆಲ+ಬಲ$_3$]

**ನೆಲವಳಿ** (ನಾ). ಒಂದು ಬಗೆಯ ತೆರಿಗೆ,—ಸುಂಕ ; ಭೂಕಂದಾಯ: ಭಂಡಿಯ ಬತ್ತದ ಸುಂಕ ಉಪ್ಪರ ನೆಲವಳಿ ಅನುಪು ಆಳು ಆರ [ಕಾ]ಣಿಕೆ ಕಡಾಯಉ . . . ಇಂತಿಷ್ಟಉ . . . ಬರದು ಕೊಟೆಉ (ಸೌಇಇ. IX–ii, ೪೩೮-೧೫ ; 1417). [ನೆಲ+ಬಳಿ$_7$ (=ಬಲಿ$_2$)]

**ನೆಲವಟಿಕ್ಕೆ, ನೆಲವಕ್ಕೆ** (ನಾ). ೧. ನೆಲದ ಮೇಲೆ ಮಲಗುವುದು ; ಭೂಶಯನ : ಪಂಚಶಯ್ಯೆಯೊಳಗೊಱಗುವಿಂಬದುವೆತ್ತ ಹಾ ಪರಲ ಮೊನೆಯೊತ್ತೆ ನೆಲವಟಿಕ್ಕೆ(ಕ್ಕೆ)ಯಿರವೆತ್ತ (ಜೀವಸಂ. ೧೨೦-೧೪). **ನೆಲವಕ್ಕೆ :** ೨. [ಜೈನ] ಮುನಿಗಳು ಆಚರಿಸಬೇಕಾದ ಇಪ್ಪತ್ತೆಂಟು ಮೂಲಗುಣಗಳಲ್ಲಿ ಒಂದು ; ನೆಲದ ಮೇಲೆ ಮಲಗುವುದು ; ☞ "ಗುಣ–೨೮ : ಪಂಚಾಣುವ್ರತಗಳು, ಪಂಚಸಮಿತಿ, ಪಂಚೇಂದ್ರಿಯಸಂಯಮ, ಷಡಾವಶ್ಯಕಗಳು, ಸ್ನಾನಾಭಾವ, ಭೂಮಿಶಯನ, ನಗ್ನತ್ವ, ಕೇಶೋತ್ಪಾಟನ, ಏಕಾಶನ, ದಂತಧಾವನಾಭಾವ, ಸ್ಥಿತಾಶನ" (ಶ್ರೀವತ್ಸ. ೧೫೧) : ಲೋಚಮಂ ಪುಡದುದಂ ಮಿಾಯದುದಂ ನೆಲವಕ್ಕೆಯಂ ಹಲ್ಲಂ ಸುಲಿಯದುದಂ . . . ಎಂದಿಪ್ಪತ್ತೆಂಟು ಮೂಲಗುಣಂ (ಶಾಸ್ತ್ರಟೀ. ೭೨-೧) ; ನೆಲವಕ್ಕೆ ಮೊದಲಾದ ಮೂಲಗುಣಗಳು ವೆಗ್ಗಳಿಸಿದುತ್ತರಗುಣನಿಚಯ ಹಲವಿವು ಧ್ಯಾನಕೆ ಹೊಱಸಹಕಾರಿಗಳೆಲೆ ಭವ್ಯರಿರ ಕೇಳಿರೆಂದ (ಭರಚ. ೭೦-೮೬).
[ನೆಲ+ಪಟಿಕ್ಕೆ]

**ನೆಲವಾಸು** 'ನೆಲೆವಾಸು' ನೋ.

**ನೆಲವಾಳ್** 'ನೆಲೆವಾೞ್' ನೋ.

**ನೆಲವಾಳಿಗೆ, ನೆಲಮಾಳಿಗೆ** (ನಾ). ೧. =ನೆಲಮನೆ : ಎಸಱ ಪಸೆಗಳೊಳಂ ಪಳುಕಿನ ನೆಲವಾಳಿಗೆಗಳೊಳಂ ಧಾರಾಗೃಹಂಗಳೊಳಂ ಜಲಮಂಟಪಂಗಳೊಳಮೆಂತುಮಾ ಸಂತಾಪಮಂ ಸಂತಯಿಸಲಾಱದೆ(ಕಾದಂಉ. ೭೭೩) ; ತನ್ನ ನೆಲವಾಳಿಗೆ [ಪಾಠಾಂ. ನೆಲಮನೆ]ಯೊಳಿರ್ದ ಪೊನ್ನೆಟ್ಟಂ ತೋಱಿದೊಡವರ್ ಬೆಕ್ಕಸಮಾಗಿರ್ದಿಂತೆಂದರ್ (ಜೀವಸಂ. ೧೪೯-೩೧ ವ); ರಾತ್ರಿಯೊಳಾಂ ಕನ್ನವನಿಕ್ಕಿ ಪೋಗುತಿರ್ಪಲ್ಲಿ ವಿಳಾಸದೆ ಕಂಡೆನೊಂದು ನೆಲವಾಳಿಗೆಯಂ (ದಶಕು. ೯-೧೯೯); ಈ ಅರಮನೆಗೇ ನೆಲವಾಳಿಗೆಗಳ್ಗೆ ಏರಿ ಬಂದಿರುವ ಮಧುಮದ್ಯಭಾಣ್ಡಗಳೂ . . . ಉಬ್ಬಿ ವಿಜೃಂಭಿಸುತ್ತಿರುವಾಗ (ಬಿಟ್ಟಅ. ೨೧-೧೦). **ನೆಲಮಾಳಿಗೆ :** ೧. ಎಱ್ತನ ರೂಪನಱಿಯಲಾಱದಿರ್ಕುಮೆಂದು ಪಿರಿದಪ್ಪ ಪೊನ್ನೆಟ್ಟಂ ಮಾಡಿ ನೆಲಮಾಳಿಗೆಯೊಳ್ ಬಯ್ತಿಟ್ಟು (ಜೀವಸಂ. ೧೪೮-೩೦ ವ) ; ಕೊಲಿಸು ರಾಮನನೆಂದು ಬಲಿದು ಮಂತ್ರಿಗೆ ಪೇಳಲವನು ನೆಲಮಾಳಿಗೆಯೊಳಿಟ್ಟವನ ಕೊಲಿಸಿದೆನೆಂದು ನೆಲೆ ಮಾಡಲಾ ಸುದ್ದಿಯನು ಕೇಳಿ (ಕುರಾಸಾಂ. ೧-೮೮) ; ಹಲರಱಿಯದ ನೆಲಮಾಳಿಗೆಯೊಳಗೊಬ್ಬ ಬೆಳಗಿದ ದೀವಿಗೆಯಂತೆ ಕಲಿಲಾರಿ ಬಲ್ಲ ತಾ ಬಲ್ಲನನ್ಯರು ಕಾಣರೊಳಗಿದ್ದುದಾತ್ಮ ಪ್ರಕಾಶ (ಭರಚ. ೭೨-೪೧) ; ಮಂದಾರಮಾಲೆಯಿರುವ ಬಳಿಯು ತಿಳಿಯಲಿಲ್ಲ ಯಾವ ನೆಲಮಾಳಿಗೆಗಳಲ್ಲಿ ಬಚ್ಚಿಟ್ಟುಯಿರುವನೊ (ಸೌಗಂಧಿ. ೪೫೨-೧) ; ಹಣತೆಯ ಕುಡಿ ಬೆಳಗುವುದಲ್ತೆ ಸೂರ್ಯನು ಬೆಳಗದ ನೆಲಮಾಳಿಗೆಯನು (ಇಂಚಾಪ. ೧೩೮-೮೦). ೨. ಕಣಜ ; ಹಗೇವು : "ಗರ್ತಃ . . . ನೆಲಮಾಳಿಗೆ ಅಥವಾ ಹಗೇವಿನ ಹೆಸರು" (ಸಿದ್ಧಾಂತಿ. ೭೧).
[ನೆಲ+ಮಾಳಿಗೆ. / ತಮಿ. ನಿಲಮಾಳಿಕೈ]

**ನೆಲವಾಳು** 'ನೆಲೆವಾೞ್' ನೋ.

**ನೆಲವಿಡಿ, ನೆಲಹಿಡಿ** (ಕ್ರಿ). ೧. ಭೂಮಿಗೆ ಅಂಟಿಕೊಂಡಿರು,— ಹೊಂದಿಕೊಂಡಿರು : ನೆಲವಿಡಿದು ಹಮ್ಮುದಂಬೋದವನ ಕಡಲಳಿಯೆ

ನೊಲವಿಂದ ಕಾಯಲೆಂದಾರಯ್ದು ರೊದಗಿ (ಕಾಲೂರ. ೯೯–೧೯೭) ; ತಲೆ ಕೆಗಲ ಕೈಗಳಂ ತಿಕ್ಕಿ ಸುಯಿಲೆಳೆದು ನೆಲವಿಡಿದು ಕುಳಿತೊಡನೆ ನಾಡೆ ಬಂದಿತು ನೋಡೆ (ಕಾಲೂರ. ೧೦೨–೨೦೬). **ನೆಲಹಿಡಿ : ೨.** ತಳ ಸೇರು ; ನಾಶವಾಗು : ಮನುಷ್ಯನು ಆಶೆಯೆಂಬ ಪ್ರವಾಹದೊಳಕ್ಕೆ ಸಿಕ್ಕಿ ಕೊಚ್ಚಿಕೊಂಡು ಹೋಗಬಾರದು. ಹಾಗೆ ಹೋದರೆ ಅವನು ಎಲ್ಲಿ ಹೂದರೂ ಸುಳಿಗೆ ಸಿಕ್ಕಿ ಗುಟುಕುನೀರು ಕುಡಿದು ನೆಲಾ ಹಿಡಿಯುವುದೇ ಸರಿ (ನೀಗಟ್ಟು. ೧೧೭). **೩.** ಹಾಸಿಗೆ ಹಿಡಿ : ಕ್ರಮವಾಗಿ ಜ್ವರವು ಹೆಚ್ಚಾಯಿತು—ಕಡೆಗೆ ನೆಲ ಹಿಡಿದು ಮಲಗಿದಳು (ದೇವೀಚಾ. ೨೭) ; ತುಳಸಿ ಗಾಯ ಹೊಂದಿ ಅಶಕ್ತನಾಗಿ ನೆಲ ಹಿಡಿಯದಿದ್ದರೆ ಆತನು ಲಾರಿ ಯವರಿಗೆ ಏನಾದರೂ ಮಾಡುತ್ತಿದ್ದ. ಆದರೆ ಅವನು ನೆಲ ಹಿಡಿದ (ಜವಿಾನ್ದಾ. ೪೫). **೪.** (ಆಲಂ) ಕುಗ್ಗು ; ಕುಸಿ ; ನಿರ್ವಿಣ್ಣ ವಾಗು : ಸಾಲದ ಹೊರೆಯಿಂದ ನೆಲ ಹಿಡಿದಿದ್ದರು (ಶ್ರೀಮಾಶ್ರ. ೨೪೪) ; ಅಪೀಲು ಮಾಡಲು ಹಣವಿಲ್ಲ ಎಂದು ನೆಲಹಿಡಿದರೂ ತಾವೇ ವೆಚ್ಚ ಮಾಡಿ ಅಪೀಲು ಮಾಡಿದರು (ಮನೆಜೆ. ೯). [ನೆಲ+ಪಿಡಿ$_1$]

**ನೆಲವೀಡು** 'ನೆಲೆವೀಡು' ನೋ.

**ನೆಲವು** 'ನೆಲುವು' ನೋ.

**ನೆಲವುಟ್ಟು** (ನಾ). ಭೂಮಿಯ ಮೇಲೆ ಜನನವಾದುದು : ಇನ್ನೊರ್ವನನ್ ನೋಡಿರ್ದಪೆನ್ . . . ಆ ಬಿತ್ತರದ ಸ್ಕೈಲೀಷಿಯದ ಗವಿಗಳಾ ನೆಲವುಟ್ಟು ನೆಲಸಿಗನನುಗ್ರನನ್, ಘೋರ ಶತಶಿರದ ಟೈಫೊನನ್ (ಬದ್ಧಸ್ತ್ರ. ೨೦–೪೦೪). [ನೆಲ+ಪುಟ್ಟು$_2$]

**ನೆಲವುತ್ತು** (ನಾ). ಭೂಮಿಯೊಳಗಿರುವ ಹುತ್ತ : ನೆಲವುತ್ತಿನೊಳ್ ಪೊನಲು ಪುಗೆ ಪಾವು ಪೊಱಮಟ್ಟು ಪೆಡೆಗಳಂ ಕೊಡೆಗಳಂತೆತ್ತಿದುವು ಕಡೆಸಟ್ಟು (ಅನಂಪು. ೯–೧೬ ರಗಳೆ). [ನೆಲ+ಪುತ್ತು$_1$]

**ನೆಲವುವಿಡಿ** (ಕ್ರಿ). ನೆಲುವಿನಲ್ಲಿ ಒಂದರ ಮೇಲೊಂದಿರು : ಅಡಕಿಲ ಮಡಕೆಗಳೆಂಟುಂ ಬೆಡಂಗು ನಿಲೆ ನೆಲವುವಿಡಿದು ನಿಲ್ವಂತೆಂಟುಂ ಪೊಡವಿ ಗಳಂ ತಾಳ್ದಿದುವೋಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ (ಶಾಂತಿಪು. ೧೨–೫೧). [ನೆಲವು (<ನೆಲುವು)+ಪಿಡಿ$_1$]

**ನೆಲವೆಂಬು** (ನಾ). ಒಂದು ಬಗೆಯ ಸಸ್ಯ : ಬಿರಟು, ಪಾದರು, ನೆಲವೆಂಬು, ಗಂಟುಕಾಲು, ಕೆರೇಹಿಪ್ಪಲಿ (ನಮ್ಮನು.೨೩೪). 'ನೆಲಬೇವು' ಪರಾ. [←ತಮಿ. ನಿಲವೇಮ್ಬು]

**ನೆಲವೆಣ್,** ನೆಲವೆಣ್ಣು (ನಾ). ಭೂದೇವಿ ; ಭೂಮಿ : ತಳೆದಳೊ ಪತಿಯಂ ನೆಲವೆಣ್ ಬಳೆದನುರಾಗದೊಳೆ ಹೃದಯದಿಂದೆಂಬಿನೆಗಂ ಥಳ ಥಳಿಪ ರತ್ನಕುಟ್ಟಿಮತಳದೊಳ್ ಪೊಳೆದತ್ತು ರೂಪು ಭೂಪೋತ್ತಮನಾ (ಕಾದಂಪೂ. ೩೩) ; ಅಳಿಮಾಳೆ ಬಳಸಿದೀ ಪೂವಲಿಯುಲರ್ಗಳ್ಗುರುಳ ಚಿನ್ನ ಪೂವಿನ ಚೆಲ್ವಂ ನೆಲವೆಣ್ಗೆ ಪಡೆದಿದೇಂ ಕಣ್ಮಲರನಲರ್ಚಿದುವೊ ಮಣಿ ಮಯಾಂಗಣತಳದೊಳ್ (ವರ್ಧಪು. ೫–೫) ; ನೆಲವೆಣ್ಣಂ ಚತುರಂಬುರಾಶಿ ರಶನಾಳಂಕಾರೆಯಂ ವಿಕ್ರಮಾತುಲಸೌಂದರ್ಯದಿನಿಂತು ಕೂರಿಸಿ ನಿಜ ಚ್ಛತ್ರಾಮಳಚ್ಛಾಯೆಯೊಳ್ ನಿಲಿಸಿಟ್ಟಂ ಸತತಂ ಸಮಗ್ರವಿಭವಂ ವಿಶ್ವಂ ಭರೋರ್ವೀಶ್ವರಂ (ಕುಸುಮಾ. ೩–೩) ; ನೆಲವೆಣ್ಣ ಗಿರಿನಿತಂಬಸ್ಥಲಮದು (ರಾಜಶೇ. ೬–೨೪). **ನೆಲವೆಣ್ಣು :** ರತ್ನಾಕರ ನೆಲವೆಣ್ಣಿನುಡೆಯ ಮೇಖಲೆಯೆಂದದೆ ಪರಿವೇಷ್ಟಿಸಿರ್ದುದನೇಕಸಂಭ್ರಮವನೇನೆಂಬೆ (ಮೋಹತ. ೨–೪) ; ನಲ್ಮೆಯಿಂ ನೆಲವೆಣ್ಣು ನೀಡುವಳ್ ಕಣ್ಮುಚ್ಚಿ ನಿಲ್ಲದಾ ಕೈವುರುಳ್, ಹೊಳಲ ಬಾಯಲ್ಲಿ (ಕಾಲೂರ.೨೭–೧೭). 'ನೆಲವೆಣ್ಮಗಳ್' ಪರಾ. [ನೆಲ+ಪೆಣ್]

**ನೆಲವೆಣ್ಣು** 'ನೆಲವೆಣ್' ನೋ.

**ನೆಲವೆಣ್ಣುಮಗಳ್** 'ನೆಲವೆಣ್ಮಗಳ್' ನೋ.

**ನೆಲವೆಣ್ಮಗಳ್,** ನೆಲವೆಣ್ಣುಮಗಳ್ (ನಾ). ಭೂಮಿಯ ಮಗಳು; ಅವನಿಜೆ ; ಸೀತೆ : ಲಕ್ಷ್ಮಣಾಗ್ರಜನವಂ ನೆಲವೆಣ್ಮಗಳಿಗಿನಿಯನಯ್ ! (ಶ್ರೀರಾಮಾ. ೨೭೨–೨೩೩). **ನೆಲವೆಣ್ಣುಮಗಳ್ :** ನೆಲವೆಣ್ಣು [ಪಾಠಾಂ. ಣ್ಣ]ಮಗಳಿರುತಿರ್ದ ರಾಜಮಂದಿರಕ್ಕೈದಿ ಕಣ್ಣೊಳೀಕ್ಷಿಸದೆ ತಲೆ ವಾಗಿ ದೂರದೊಳೆ ನಿಂದಾ ಸೀತೆಗಿಂತೆಂದನು (ಜೈಮಿಭಾ. ೧೪–೬೦). [ನೆಲವೆಣ್+ಮಗಳ್]

**ನೆಲವೊಡಿಗೆ** (ನಾ). ಒಂದು ಗ್ರಾಮದ ಹೆಸರು : ಭೈಮರಥೀನದೀ ಪಶ್ಚಿಮೇ ತೀರೇ ನೆಲವೊಡಿಗೆ ನಾಮಗ್ರಾಮಮುಮ್ (ಮೈಅರಿ. ೧೯೦೯, ೨–೧೪ ; 749). [ನೆಲ+ ?]

**ನೆಲವೊರೆಗ** (ನಾ). ಲೋಕವನ್ನು ಪಾಲಿಸುವವನು ; ಭೂಮಿ ಯನ್ನು ರಕ್ಷಿಸುವವನು ; ರಾಜ : ಪಲಗಣ್ಣಂ ಪಾಱುಂಬಳೆ ಗೈಯಂ ನೆಲವೊರೆಗಂ ಬೆಂತರಬಲ್ಲಹನುಜ್ಜಲಿಸುವ ಜೋಯಿಸರಾಣ್ಮಂ ವಿಂಗದರಸಂ ಮೊದಲಾಗಿ ಸಲೆ ಸೊಗಯಿಸುವ ಶತೇಂದ್ರರ್ . . . ಜಿನಪನ ಗಂಧಕುಟಿಯೊಳೆಡೆಗಿಱಿದಿಹುದು (ಜಯಕಾ. ೧೬–೩೯). [ನೆಲ+ಪೊರೆ$_3$+–ಗ$_2$]

**ನೆಲವೊಱೆ** (ನಾ). ಭೂಮಿಯ ಹೊರೆ; ಭೂಭಾರ : ನೆಲವೊ [ಪಾಠಾಂ. ಪೊ]ಱೆಯಂ ತಾಂ ತಳೆದಿದಮ್ಮಲಸತೆಯುಂ ಕಳೆದು ಪೊಱೆ ದುದೀ ಗಿರಿಯೆಂದಾ ನೆಲದಳದ ಕರಿಗಳೀಳ್ತಂದಲಸದೆ ಸೇವಿಪವೊಲದಱೊಳಾನೆ ಗಳೆಸೆಗುಂ (ರಾಜಶೇ. ೫–೬೪). [ನೆಲ+ಪೊಱೆ]

**ನೆಲಸಂಪಗೆ,** ನೆಲಸಂಪಿಗೆ (ನಾ). ಒಂದು ಬಗೆಯ ಸಂಪಿಗೆ ಗಿಡ ಮತ್ತು ಅದರ ಹೂವು : ನೆಲಸಂಪಗೆಪೂ ವಿಲಸಿತಮಾಯ್ತು ಮನು ಪುಷ್ಪವಾಟಿಯೊಳಾಗಳ್ (ಹಾಲಾಸ್ಯ. ೧–೪–೯೦). **ನೆಲಸಂಪಿಗೆ :** ಮರಸಂಪಿಗೆಯನು ನೋಡಿಹ ಜನಗಳು ನೆಲಸಂಪಿಗೆಯನು ಕಂಡಿಹರೇ ? (ದುಂಬಿನಾ. ೪೪–೨) ; ಸುಗಂಧರಾಜ, ನೆಲಸಂಪಿಗೆ, ಸಂಧ್ಯಾರಾಗ (ಮೈಔಗಿ. ೬೩–೧೨೪೨).
[ನೆಲ + ಸಂಪಗೆ. / ತಮಿ. ನಿಲಚ್ಚಮ್ಪಙ್ಗ ; ತುಳು. ನೆಲಸಂಪಯಿ ; ತೆಲು. ನೆಲಸಂಪೆಗ]

**ನೆಲಸಂಪಿಗೆ** 'ನೆಲಸಂಪಗೆ' ನೋ.

**ನೆಲಸಕ್ರೆಗಡ್ಡೆ** (ನಾ). ಒಂದು ಬಗೆಯ ಗಡ್ಡೆ : (ಮೈಔಗಿ. ೫೨–೧೦೩೫). [ನೆಲ+ಸಕ್ರೆ(<ಸಕ್ಕರೆ)+ಗಡ್ಡೆ]

**ನೆಲಸಣ** (ನಾ). ಸ್ಥಳ; ನಿವೇಶನ : ವರ್ಷಕ್ಕೆ ಮರದಲೊಂದಡಕೆ ಎಲೆಯ ಸುಂಕ ಮನೆಯ ನೆಲಸಣಂ ಮೂಡಣ ಪೆಬಾಗಿಲಿಂ ಪೊಱಗು ತೆಂಕ ಸೇತುವಿನ ಬಡಗಣ ಕೋಡಿಂ ಮೂಡ ದೇವಾಲಯಂ (ಎಕ. VII, ಶಿಕಾರಿ. ೨೦–೧೬; 1032) ; ಅಱುನೂಱು ಬಳ್ಳಿಯ ಕೋಂಟೆ ಪನ್ನೆರಡು ಮನೆಯ ನೆಲಸಣವೆತ್ತು ಗಾಣ ೧ ಕೈಗಾಣ ೧ (ಸೌಇಇ. IX–i, ೧೦೭–೧೫; 1050); ಮಾರಸಿಂಗಗಾವುಣ್ಡಂ ದೇವಗ್ಗೆ ಬಿಟ್ಟ ನೆಲಸಣ (ಸೌಇಇ. XI–ii, ೧೪೯–೩೫ ; 1100) ; ಹಿರಿಯ ಕೆಱೆಯ ಕೆಳಗೆ ತೋಂಟ ಕಂಮ್ಮ ೧೨ ಮನೆಯ ನೆಲಸಣಂ ೧೨ ಆ ನಲ್ಲಿಗನ ಗಾಣ ೧ (ಎಕ. VII, ಶಿವಮೊ. ೫೭–೬೯ ; 1115). [ನೆಲ+ ?]

**ನೆಲಸಮ** (ನಾ). ಭೂಮಿಯ ಮಟ್ಟ; ನೆಲದ ಸಮತಳ : ನೆಲಸಮ ಕೆಡವಿಸಬೇಕಂತೆ ! ಎಷ್ಟು ಹಿಂದಿನಿಂದ ಬಂದ ಮನೆ ! (ಯೋಧಪು. ೨೭).
**ನೆಲಸಮ ಮಾಡು** = ಭೂಮಿಯ ಮಟ್ಟ ಮಾಡು ; ನಾಶ ಗೊಳಿಸು : ನೆಲಸಮ ಮಾಡಿ ಕತ್ತಲೆಗೂಡನು ಜಗಳವ ಬೆಳಸುವ ಭೇದದ ಬೀಡನು (ಕವಿಸೋ. ೧೪–೧೩) ; ಈ ಬಾರಿ ಶ್ರೀರಂಗಪಟ್ಟಣ ವನ್ನು ನೆಲಸಮ ಮಾಡದೆ ಬಿಡುವುದಿಲ್ಲವೆಂದು ಹೇಳುತ್ತಾರೆ (ದಾಲತ್. ೩೭೩). [ನೆಲ+ಸಮ$_3$]

**ನೆಲಸರಿ** (ನಾ). ೧. ಭೂಮಿಯ ಮಟ್ಟ. ೨. (ಆಲಂ) ನಾಶ; ನಿರ್ನಾಮ: ಬಲವಿಂದೆ ಬಂದುದದ್ರಿ ಪುಡಿಯಪ್ಪಿನಮುಗ್ರದರಣ್ಯಮೆಲ್ಲಮುಂ ನೆಲಸರಿಯಪ್ಪಿನಂ ಘನತರಂಗಿಣಿ ಪಂಕಿಳಮಾಗುತಿರ್ಪಿನಂ (ರಾಜಶೇ. ೬-೩೪). [ನೆಲ+ಸರಿ$_5$]

**ನೆಲಸರಿಸ** (ನಾ). = ನೆಲಸರಿ ೨ : ಬಸದಿಗಳ ನೆಲಸರಿಸವಪ್ಪಂತೆ ಕಿತ್ತು ಪಾಳ್ಮಾಡಿ (ಪಾಸೋಪು. ೪-೧೧೭). [ನೆಲ+ಸರಿಸ$_1$]

**ನೆಲಸಿಂದ** (ನಾ). ಒಂದು ಬಗೆಯ ಔಷಧಿ ಸಸ್ಯ: ನೆಲ ಸಿಂಧ[ದ], ಸಿಹಿಹಾಲೆಯ ಬೇರು, ಕಿಱುಕಳ್ಳಂಗಡಲೆ, ಚಟ್ಟಾಮುಟ್ಟ, ಇಷ್ಟನೂ ಪ್ರತ್ಯೇಕ ಹತ್ತುಹಲಗಳ ಚೆನ್ನಾಗಿ ಒಣಗಿಸಿ, ಜಜ್ಜುಗುಟ್ಟಿ (ವೈದ್ಯಸಾ. I, ೪೧೫). [ನೆಲ+ಸಿಂದ$_0$]

**ನೆಲಸಿಗ** (ನಾ). ನೆಲಸಿದವನು; ನೆಲೆ ನಿಂತವನು: ಇನ್ನೊರ್ವನನ್ ನೋಡಿರ್ದಪೆನ್ . . . ಆ ಬಿತ್ತರದ ಸ್ಫಟಿಕಶಿಯದ ಗವಿಗಳಾ ನೆಲವುಟ್ಟು ನೆಲಸಿಗನನುಗ್ರನನ್, ಘೋರ ಶತಶಿರದ ಟೈಫೊನನ್ (ಬದ್ಧಪ್ರ. ೨೦-೪೦೮). [ನೆಲಸು$_1$+-ಇಗ]

**ನೆಲಸಿವಚೆಳ್ಳಿ** (ನಾ). ಒಂದು ಬಗೆಯ ಸಸ್ಯ: "ಭೂಚುಂಕ್ರಃ—ನೆಲಸಿವಚೆಳ್ಳಿ" (ಔಷಧಿ. ೧೧೨). [ನೆಲ+ಸಿವಚೆಳ್ಳಿ]

**ನೆಲಸು$_1$, ನೆಲೆಸು** (ಕ್ರಿ). ೧. ನೆಲೆ ನಿಲ್ಲು; ನೆಲೆಯೂರು; ನೆಲೆಗೊಳ್ಳು: ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಮೆಂದೆ ಪಟಿಗನ್ನಡಮಂ ಪೊಲಗೆಡಿಸಿ ನುಡಿವರಾಗಮಬಲಹೀನರ್ (ಕವಿರಾ. ೧-೪೮); ತುಂಗಭದ್ರನೆಂಬೊಂ . . . ಧನಶ್ರೀಯೆಂಬ ಮಹಾದೇವಿಯ ಗರ್ಭದೊಳ್ ನೆಲಸಿದಂ (ವಡ್ಡಾರಾ. ೧೫೭-೧೨); ನಿನ್ನ ಲೀಲಾಲಸದೃಷ್ಟಿಪಾತಮೆರ್ದೆಯೊಳ್ ನೆಲಸಿರ್ದುವು (ಆದಿಪು. ೩-೨೩); ಪವನಂಗೆ ಪುಟ್ಟಿದಂ ರಾಘವನನುಗಾಳ್ ತ್ರಿಣಯನಾಂಶಮೆನಿಪಣುವಂ ಪಾಂಡವಕೇತುದಂಡದೊಳ್ನೆಲಸುವುದಾವಗ್ಗಳಿಕೆ ಕಪಿಗೆ ಚಪಲತೆ ಸಹಜಂ (ಗದಾಯು. ३-೪೧); ಶ್ರೀ ನೆಲಸೆ ವಕ್ಷದೊಳ್ ವಾಕ್‌ಶ್ರೀ ನೆಲಸೆ ನಿಜಪ್ರಸನ್ನಮುಖದೊಳ್ ವಿಜಯಶ್ರೀ ನೆಲಸೆ ಭುಜದೊಳೊಪ್ಪಿದನಾ ನರಪಂ ಸರಸಚತುರಕವಿಕುಲತಿಳಕಂ (ಬಾಧಪು. ೨-೧). ೨. (ಕಾಯಂ ಆಗಿ) ವಾಸಿಸು; ವಾಸ ಮಾಡು: ಪೆಸರೊಳ್ ಲಕ್ಷ್ಮಿಯೆನಿನ್ನೆಗಂ ನೆಲಸಿ ತಾಂ ದುರ್ಯೋಧನೋರಸ್ಸ್ಥಳಾವಸಥಂ ದ್ರೋಣನದೀಜ ಕರ್ಣಭುಜವೀರ್ಯಾವೇಷ್ಟಿತಂ ಮಾಡೆ ಸಂತಸದಿರ್ದಂ (ಪಂಪಭಾ. ೧೩-೧೦೦); ರ[ಟ್ಟ ತಿಳ]ಕಂ ಶ್ರೀಮಾನ್ಯಖೇಟದೊಳ್ನೆಲಸಿರ್ದ್ದಂ (ಸೌಇಇ. XI-i, ೪೧-೬; 969); ಮಲೆದ ಮೂತ್ರಕುಲದ ನಡುವೆ ಕಲಸಿ ನೆಲಸಿ ತೊಲಗದಿರ್ದು ಕೆಲಬಲಂಗಳಱಿಯದಧಮಕೂಪದಲ್ಲಿ ತಾಪಿಸಿರ್ದು (ಹಂಪಿರ. ಹ. ೫೧೧-೨೩); ಈ ಕೋಲರು ಕೇವಲ ಭಾರತದ ಪೂರ್ವದಿಕ್ಕಿನಲ್ಲಿ ಮಾತ್ರ ನೆಲಸಿದಂತೆ ತೋರುತ್ತದೆ (ದ್ರಾವಿ. ೩೧). ೩. ತಂಗು; ಬಿಡಾರ ಹೂಡು; ಬೀಡು ಬಿಡು: ಜಿನೇಂದ್ರದತ್ತಸೆಟ್ಟಿ . . . ಜಿನಕಥಾಳಾಪದೊಳಂ ನೇಸರ್ಪಟ್ಟು ನೇಸರ್ಮೂಡುವಿನ ಮಲ್ಲಿಯೆ ನೆಲಸಿರ್ಪಂ (ಧರ್ಮಾಮೃ. ೬-೧೯); ನೆಲಸಿರ್ದ ಪಕ್ಕಿವಿಂಡುಗಳುಲಿದೆಬ್ಬಿ ವಿಭಾತಸಮಯದೊಳ್ ಪೋಗಲೊಡಂ (ಪುಷ್ಪಪು. ೧೨-೨). ೪. ಸ್ಥಿರವಾಗಿ ನಿಲ್ಲು; ದೃಢವಾಗಿ ನಿಲ್ಲು: ಜಲದದ ನೆಟಿಲುಂ ಪರಮಂ ವಿಲಾಸಮುಂ ಬೆಳಗುವುದಿತವಿದ್ಯುಲ್ಲತೆಯುಂ ನೆಲಸವು ಚಲಂಗಳಾದಂ ವಿಲಾಸಿನೀಜನದ ನಲ್ಮೆಯುಂ ಸಂಗಮುಮುಂ (ಕವಿರಾ. ३-೯೭); ಅಹಿತರಂ ಗೆಲ್ದು ಜಯಶ್ರೀಗೆ ಭುಜಶಿಖರಮಂ ನೆಲೆಯಾಗಿಸಿ ನೀಂ ನೆಲಸು ನೇಸಱುಳ್ಳಿನಮುಂಗಾ (ಪಂಪಭಾ. ೨-೧); ನಾಕಲೋಕಸುಖಮಂ ಕೈಕೊಂಡಲೋ ದೈವವೀ ರಮಣೀರತ್ನದ ಮೇಲೆ ಮೇಣ್ ನೆಲಸಿತೋ . . . ಎನುತ್ತೆ ಪದಪಿಂದಾನಾಕೆಯಂ ನೋಡಿದಂ (ಕಾದಂಪೂ. ೮೦೪). ೫. ಇರುವಂತೆ ಮಾಡು; ನೆಲೆಗೊಳಿಸು: ಪಟ್ಟೆಯ ಸೀರೆ ನೆರಿಯೋಳೆ, ಗಂಟಲಿಗೆ ಅಕ್ಷರವ ನೆಲಸವ್ವ, ನಾಲಿಗೆಗೆ ಅಕ್ಷರವ ನೆಲಸವ್ವ, ಗುಟ್ಟಿನಲಿ ಮತಿಯ ನೆಲಸವ್ವ (ಹಳ್ಳಿಬಾ. ೧೦). ೬. ಮೂಡು; ಕಂಡುಬರು; ಕಾಣಿಸು: ಬಾಳದಿನೇಶಬಿಂಬದ ನೆಟಿಲ್ ಜಲದೊಳ್ ನೆಲಸಿತ್ತೊ ಮೇಣ್ ಫಣೀಂದ್ರಾಳಿಯುದಿಂದಮುರ್ಚಿದ ಫಣಾಮಣಿ ಮಂಗಳರಶ್ಮಿಯೋ (ಪಂಪಭಾ. ೧-೯೬). **ನೆಲಸು:** ೧. ಬಳಕಲಾ ಗ್ರಾಮದೊಳು ನೆಲೆ[ಪಾಠಾಂ.ಲ]ಸಿರ್ದ ಶಿವಲಿಂಗದೊಳಗೆ ಕಾರುಣ್ಯದಿಂದ ಪ್ರತ್ಯಕ್ಷವಾಗಿ (ಸೌಂದಪು. ೫-೫೨); ಆಗೊಂದು ಈಗೊಂದು ಬೀಳುತ್ತಿದ್ದ ಎಲೆ ಚಕ್ಕಂದವಾಡದೆ ಚಕ್ಕಳದ ಹಾಗೆ ನೆಲದ ಮೇಲೆ ನೆಲಸುತ್ತಿತ್ತು (ಹೊಸಕ್ತಿ. ೨೭೧); ರೋಗದ ಗತಿ, ರೋಗವನ್ನು ಗುರುತಿಸಿದ ಘಟ್ಟ . . . ಇವುಗಳ ಮೇಲೆ ರೋಗಿಯ ಭವಿಷ್ಯ ನೆಲೆಸಿರುತ್ತದೆ (ಕಲರೋ. ೨೩). ೩. ಹಯಮುಂ ಹಿಡಿದೊತ್ತಿ ತಂದು ಮುಳ್ಳುಂದದ ಬೀಡನೊ × × × ಮುತ್ತವದಿಂ ನೆಲೆಸಿದ್ದು ಸೊಭನ (ಸೌಇಇ. XI-i, ೫೦-೯; 1005). ೬. ದಿನಕೃನ್ಮಂಡಲಮುರ್ವಿಯೊಳ್ ನೆಲೆಸಿತೋ ಮೇಣ್ದೇವಸಂದೋಹವಿಮಾನಿಯಂ ಪೊಂಗಳಿಸೊಲ್ದು ಪೂಜಿಸಿದರೋ . . . ಪೇಟಿಕೆಂಬತಿಭ್ರಾಂತಿಯಂ ಪುಟ್ಟಿಸಿ ತೊಳತೊಳಗುವ ಬಾಲಾರ್ಕನಂತಪ್ಪ ಶಿಶುವಂ ಕಂಡು (ಧರ್ಮಾಮೃ. ೮-೧೦೪).

**ನೆಲಸಿ ನಿಲ್** = ಸ್ಥಿರವಾಗಿ ನಿಲ್ಲು; ನೆಲೆಗೊಳ್ಳು: ಕ್ಷತ್ರಂ ತೇಜೋಗುಣಮಾ ಕ್ಷತ್ರಿಯರೊಳ್ ನೆಲಸಿ ನಿಂದುದು (ಪಂಪಭಾ. ೧-೨೧); ಪಲವು ಕಾಲದಿಂ ಮೇಲೆ ಸಂಸಾರಸುಖಕ್ಕಲಸಿ ತಪೋವನದೊಳ್ ನೆಲಸಿ ನಿಲುತ್ತುಂ (ಪಂಚತಂ. ೬೦-೯); ಅಭಿನವಶ್ರೀಶೈಲವನೆ ಮಾಡಿ ಕಪಿಲಸಿದ್ಧಮಲ್ಲಿಕಾರ್ಜುನನೇ ನೆಲಸಿ ನಿಂದು (ಎಇ. XXIII, ೩೦-೯; 1265). [ನೆಲೆ+-ಸು$_1$]

**ನೆಲಸು$_2$** (ನಾ). ೧. ಬೀಡು; ಬಿಡಾರ: ಶಾತವಾಹನ ಪ್ರಭುಗಳ ಕಡೆಗಾಲದ ವೇಳೆಗೆ ಭಾರತೀಯರ ದೂರದ ನೆಲಸುಗಳು ಪೂರ್ವದಿಕ್ಕಿನಲ್ಲಿ ಪೀತಸಮುದ್ರದವರೆಗೂ ವೃದ್ಧಿಗೊಂಡಿದ್ದವು (ಭಾಇಪ್ರ. ೧೯೩); ಜೇನುಹುಳುಗಳು ತಮ್ಮ ನೆಲಸಿನ ಹುಳುಗಳನ್ನು ಗುರ್ತಿಸಲು ಮತ್ತು ಗೂಡನ್ನು ನಿರ್ದೇಶಿಸಲು ಗುರ್ತಿನ ವಾಸನೆ ವಸ್ತುಗಳನ್ನು ಸ್ರವಿಸುತ್ತವೆ (ಕೀಟಬಿ. ೪೩). ೨. ನೆಲೆ: ಹಣಕಾಸು . . . ಬ್ಯಾಂಕು ವ್ಯವಹಾರ ಮುಂತಾದವಕ್ಕೆ ಸಂಬಂಧಿಸಿದ ಸಮಸ್ಯೆ ವಿಚಾರಗಳು ದಿನಬೆಳಗೆದ್ದರೆ ಏಳುತ್ತಿರುವ ಈ ಕಾಲದಲ್ಲಿ ವಿಷಯದ ನೆಲಸು ಯಾವುದು? (ಹಣಪ್ರ. XII, ಅ೦೪). [<ನೆಲಸು$_1$]

**ನೆಲಸುಗೆ** (ನಾ). ಇರುವಿಕೆ; ಸ್ಥಿತಿ: "ಸ್ಥಿತಿ—ನೆಲಸುಗೆಯುಂ" (ತಸೂವ್ಯ. ೯). [ನೆಲಸು$_1$+-ಗೆ]

**ನೆಲಸುನಾಡು** (ನಾ). ವಲಸೆ ಹೊರಟವರು ಸ್ಥಾಪಿಸಿಕೊಂಡ ಸ್ವತಂತ್ರವಾದ ನಾಡು,—ಬೀಡುದಾಣ: ಶಿಕ್ಷೆ ವಿಧಿಸಲ್ಪಟ್ಟ ಅಪರಾಧಿಗಳ ನೆಲಸುನಾಡಾದಾಗಲೇ ಇಲ್ಲಿ ಭೂವ್ಯವಸಾಯ ಪ್ರಾರಂಭವಾಯಿತು (ಕವಿಕೋ. I, ೭೩); ಬ್ರಿಟನ್ ದೇಶದಲ್ಲಿಯೂ ಅದರ ನೆಲಸುನಾಡುಗಳಲ್ಲಿಯೂ ಅಲ್ಲಲ್ಲಿಯ ಪ್ರಜೆಗಳು ಎಂಥಾ . . . ಸ್ವರಾಜ್ಯವನ್ನು ಪಡೆದಿದ್ದಾರೋ ಅಂಥಾ ವ್ಯವಸ್ಥೆಯೇ ನಮಗೆ ನಮ್ಮ ದೇಶದಲ್ಲಿ ಬೇಕಾದದ್ದು (ರಾಜ್ಯಶಾ. ೨೧). [ನೆಲಸು$_1$+ನಾಡು]

**ನೆಲಸುಹಕ್ಕು** (ನಾ). ವಾಸ ಮಾಡುವ ಸ್ವಾಮ್ಯ; ನೆಲಸುವ ಅಧಿಕಾರ: ಯುದ್ಧದ ಬಂದಿಗಳನ್ನೂ ನೆಲಸುಹಕ್ಕಿಲ್ಲದ ವಿದೇಶೀಯರನ್ನೂ ನಿರ್ಬಂಧದಲ್ಲಿಡುವ ಪಾಳೆಯ (Internment camp. ಇಂಕನಿ). [ನೆಲಸು$_1$+ಹಕ್ಕು$_2$]

**ನೆಲಸೆಣಬು** (ನಾ). ಒಂದು ಬಗೆಯ ಸೆಣಬು: ಎಳ್ಳು, ನೆಲಸೆಣಬು ಬಿಳಿಗಾರ ಮಣಿಶಿಲಾ ಜಾಜಿಯೆಲೆ ರಸದಲ್ಲಿ ಕೋಷ್ಟ ಇವೆಲ್ಲವಂ ಅರೆದು

ಲಿಂಗಲೇಪನ ಏಳುದಿನ ಪರ್ಯಂತ ಮಾಡಲು ಲಿಂಗ ಉತ್ಥಾಪಿಸುವದು (ಕಾಮಶಾ. ೨೭೪). [ನೆಲ+ಸೆಣಬು(<ಸಣಬು)]

**ನೆಲಹಲಸು** (ನಾ). ಒಂದು ಬಗೆಯ ಹಲಸು : ಹಲಸು ಚಿಟ್ಟಿಲಸು ರುದ್ರಾಕ್ಷಹಲಸು ನೆಲಹಲಸು ಬಕ್ಕೆವಲಸು ನೇರಿಳೆ . . . ಮೊದಲಾದ ರಸ್ಯಸುಖಾರ್ಹ ಸಾರ್ವರ್ತುಕವಾದ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೨೬). [ನೆಲ+ಹಲಸು(<ಪಲಸು)]

**ನೆಲಹಾಗ** (ನಾ). ಶವಸಂಸ್ಕಾರ ಮಾಡುವ ಸ್ಥಳಕ್ಕೆ ತೆರಬೇಕಾದ ಹಾಗ ; ಶ್ಮಶಾನದ ಸುಂಕ : ಇಟ್ಟಣಿಸಿದ ಸಭೆಯೊಳಗೆ ಕೊಟ್ಟನೆನ್ನೊಡೆಯನು ವೀರಬಾಹುಕನೆಂದು ಹುಟ್ಟಿದ ನೆಲಹಾಗ ಸೆರಗ ಎಂದು ಕೂಗುತ (ಹರಿಸಾಂ. ೪-೧೪) ; ಚಂದ್ರಮತಿ ಅರ್ಧರಾತ್ರಿಯಲ್ಲಿ ಅಜಿಸಿಕೊಂಡು ಹೋಗಿ ಹೆಣನಂ ಕಂಡು ಸುಡುವುದಕ್ಕೆ ತರಲು ಹರಿಶ್ಚಂದ್ರನು ನೆಲ ಹಾಗವಂ[ಪಾಠಾಂ. ನೆಲನ ಹಾಗವ] ತಾರೆನಲು (ಭೈರಸೂ. ೬೧) ; ನೆಲ ಹಾಗ ಪಣೆಯಕ್ಕಿಯಿಲ್ಲದಿರೆ ಸುಡಲೀಸೆ (ತುರಂಗ. ೩೨-೩೧).
[ನೆಲ+ಹಾಗ(<ಪಾಗ₁)]

**ನೆಲಹಾದರಿ** (ನಾ). ಒಂದು ಬಗೆಯ ಪಾದರಿಗಿಡ : "ಭೂ ಪಾದರಿ—ನೆಲಹಾದರಿ" (ಓಷಧಿ. ೧೧೩); "ರಕ್ತಪುಷ್ಪಿಕಾ—ನೆಲಹಾದರಿ, ಶಂಖಪುಷ್ಪಿ" (ಓಷಧಿ. ೧೩೫). [ನೆಲ+ಹಾದರಿ(<ಪಾದರಿ₂)]

**ನೆಲಹಾದಿ** (ನಾ). ಭೂಮಿಯ ಮೇಲಿನ ದಾರಿ ; ಭೂಮಾರ್ಗ : (ಮುಂಬಯಿ. ಕಿ. ೪-೧೬೦). [ನೆಲ+ಹಾದಿ(<ಪಾದಿ₁)]

**ನೆಲಹಾಸು** (ನಾ). (ನೀರಿನ ಧಾರೆಯನ್ನು ತಡೆಗಟ್ಟಲು ಮತ್ತು ತಳವು ಕೊಚ್ಚಿಹೋಗದಂತೆ ತಡೆಯಲು) ಕಲ್ಲು ಇತ್ಯಾದಿಗಳನ್ನು ನೆಲಕ್ಕೆ ಹರಡಿ ರಚಿಸುವ ದಿಬ್ಬ,—ಜಗಲಿ : ಕೋಡಿಯ ಮೇಲೆ ಉರುಳಿದ ನೀರು ಕೋಡಿಹಳ್ಳದ ತಳವನ್ನು ಕೊರೆಯದ ಹಾಗೆ ನೆಲ ಹಾಸುಗಳಿಂದ ಭದ್ರಪಡಿಸಬೇಕು. ಈ ನೆಲಹಾಸನ್ನು ಕಾಡುಕಲ್ಲಿನಿಂದ ಮಟ್ಟವಾಗಿ ಇಲ್ಲವೆ ಇಳಿಜಾರಾಗಿ ಕಟ್ಟಬಹುದು (ಶಿಲ್ಪನಾ. ೩೭೪) ; ಮರಳಿನ ತಳಪಾಯದ ಮೇಲೆ ನಿಂತಿರುವ ಅಣೆಕಟ್ಟುಗಳು ಮೂರು ಬಗೆಯಾಗಿವೆ. ೧. ಅಣೆಕಟ್ಟಿನ ಮೇಲಿನಿಂದ ನೀರು ನೇರವಾಗಿ ಮಟ್ಟವಾದ ಕಲ್ಲುಗಾರೆಯ ನೆಲಹಾಸಿನ ಮೇಲೆ ದುಮುಕುವುದು . . . ೩. ನೆಲ ಹಾಸು (ಏಪ್ರಾನ್) ಇಳಿಜಾರಾಗಿ ಕಲ್ಲುಗುಂಡುಗಳಿಂದ ತುಂಬಿರುವುದು (ಕವಿಕೋ. I, ೨೪೦). [ನೆಲ+ಹಾಸು₃(<ಪಾಸು₂)]

**ನೆಲಹಿಡಿ** 'ನೆಲವಿಡಿ' ನೋ.

**ನೆಲಹಿಪ್ಪಲಿ** (ನಾ). ಒಂದು ಬಗೆಯ ಹಿಪ್ಪಲಿ : ಕೆರೆಹಿಪ್ಪಲಿ, ಗಜ ಹಿಪ್ಪಲಿ, ನೆಲಹಿಪ್ಪಲಿ (ವೈಧಿಗಿ. ೫೧-೧೦೧೩). [ನೆಲ+ಹಿಪ್ಪಲಿ]

**ನೆಲಹು** 'ನೆಲವು' ನೋ.

**ನೆಲಹೊನ್ನೆ** (ನಾ). ಒಂದು ಬಗೆಯ ಹೊನ್ನೆ : ಉರಿಮವೇಳ್ಳು, ಚಿತ್ರಮೂಲ . . . ನೆಲಹೊನ್ನೆ, ಶುಂಠಿ ಇವಂ ಕಷಾಯವಿಟ್ಟು ಕೊಡಲು ದೋಷಜ್ವರಂ ಗುಣಮಕ್ಕುಂ (ಸಕವೈ. ೧೦೬).
[ನೆಲ+ಹೊನ್ನೆ(<ಪೊನ್ನೆ)]

**ನೆಲಾವರಿಕೆ** (ನಾ). ಒಂದು ಬಗೆಯ ಆವರಿಕೆ ಗಿಡ : ಒಂದು ಮಾನ ನೀರು ಒಂದು ಮಾನ ಹಾಲು ಸಹ ಕೂಡಿಸಿ ನೆಲಾವರಿಕೆ ಎಲೆಯನ್ನು ಅರೆದು ಕದಡಿ . . . ಸೇವಿಸಿದರೆ ಶೀತಜ್ವರ ಪರಿಹಾರವಾಗುವುದು (ಸಕವೈ. ೬೪); ಆವರಿಕೆ (ತಂಗಡಿ) ಜಾತಿಯ ಸಸ್ಯ; ನೆಲಾವರಿಕೆ ; ಸೋನಾಮುಖಿ. (ವಿರೇಚಕವಾಗಿ ಉಪಯೋಗಿಸುವ) ಇದರ ಒಣಗಿದ ಎಲೆಗಳು (Senna. ಇಂಕನಿ). [ನೆಲ+ಆವರಿಕೆ]

**ನೆಲಾವರೆ**(ನಾ). = ನೆಲಾವರಿಕೆ: "ತಾಪಸಾಹಾರಃ—ನೀವಾರ,ನೆಲಾವರೆ" (ಓಷಧಿ. ೬೭) ; ತರ್ದುಗಳಟಿಗುಂ ಬಜಬಟೆಯೊಳುರ್ದಿ ನೆಲಾವರೆಯ ಬೇರನಾಮುಳಕಮುಮಂ ಬರ್ದಿಲಿಮಿಂಚಿಯ ರಸದೊಳ್ . . . ಪೂಸೆ (ಶಮದ. ೨೬೧ ಪ್ರಯೋ) ; ಗರ್ದುಗು ನೆಲಾವರೆ ತುಂಬೆಯೊಳೊದವಿದ ಪತ್ರಂಗಳಂ ಗಡಂ ದೊರಕಿದುದಂ ಪದೆಪಿಂ ನಸ್ಯದೊಳಂದೀವುದು ಮರಿಚಂಗೂಡಿ ನಿರ್ವಿಷಾಖ್ಯಮುದಕ್ಕುಂ (ಶಮದ. ೭-೫೭) ; ಮಕ್ಕಳ ಕೋವೆಗೆ . . . ನೆಲಾವರೆಬೇರಂ ಹಾಲಲ್ಲಿ ಅರೆದು ಕುಡಿಯೆ ಮಾಣ್ಗುಂ (ವಿನ್ವೈವಿ. ೧೦೪). [ನೆಲ+ಆವರೆ./ತಮಿ. ನಿಲಾವಿರೈ]

**ನೆಲಿಂಗಳ** (ನಾ). ಒಂದು ಬಗೆಯ ಇಂಗುದಿ ಗಿಡ : ಈ ರೋಗಕ್ಕೆ . . . ನೆಲಿಂಗಳ, ಬಜೆ, ಬಾಳದ ಬೇರು ಮೊದಲಾದ ಔಷಧಗಳೂ ಹಿತಕರವಾಗಿವೆ (ಗೃಹವೈ. ೫೦). [ನೆಲ+ಇಂಗಳ₂]

**ನೆಲು** (ನಾ). = ನೆಲವು : ನೆಲು ಹರಿದು ಬೆಕ್ಕಿನ ಮುಂದೆ ಬಿದ್ದ ಹಾಗೆ (ಗಾದೆ). [<ನೇಲ್ ?]

**ನೆಲುವು,** ನಿಲುವು₃, ನೆಲವು (ನಾ). ೧. ಪಾತ್ರೆಗಳನ್ನು ಇಡುವುದಕ್ಕೆ ತೊಲೆಯಿಂದ ಇಳಿಬಿಡುವ ಹಗ್ಗದ ಜಾಳಿಗೆ; ನೆಲಹು: ಮೊಸರಕಡೆದು ಬೆಣ್ಣೆಯ ನೆಲುವಿನ ಮೇಲಿಕ್ಕಿ ಶಿಶುವಿಗೆ ನಾ ಮೊಲೆಯ ಕೊಡುತಿರಲು (ಮಹಾದೇ. ಬ. ೧೨೭-೨೮೭) ; ಮಾವಿನ ಮರದ ಕೊನೆ ಕೊಳದ ಮೇಲೆ ಬಂದಿರುವುದು. ಅದಕ್ಕೆ ಒಂದು ನೆಲುವು ಕಟ್ಟಿ ಇರುವುದು (ಬತ್ತೀಸ. ೩೨) ; ತುಪ್ಪಕ್ಕೆ ನೆಲುವೀವೆ ಮಕ್ಕಳಾಡೋರೆ ಗಿಲಿಕೀವೆ (ಕಂದಕೊ. ೨೦೦). **ನಿಲುವು₃ :** ೧. ಶಾಮ . . . ಒಂದೊಂದು ಬಗೆಯ ಉಪ್ಪಿನಕಾಯಿಗೆ ಒಂದೊಂದು ನಿಲುವನ್ನು ಕಟ್ಟಿದ್ದ (ಶಿವರಾ. ೬೩). **ನೆಲವು :** ೧. ನೆಲವಿಗೆ ನಿಲುಕಲಜೀಯದವ ಭಾನುಬಿಂಬವನುಗಿವಗಡ (ತೊರರಾ. ೬-೧೪-೩೩) ; ನೆಲವಿನೊಳಿಹ ಬೆಣ್ಣೆಯನು ತುಡುಕುತೆ ತನ್ನು ಕೆಳೆಯರಿಗಿತ್ತು (ಕೃಷ್ಣಗೋ. ೧೨-೫) ; ನೆಲವಿನ ಹಾಲ ಹರವಿಯ ಬೊಗ್ಗಿಸಿದೆ (ಚಿದಾವ. ೭೪-೧೪). ೨. "ಒಂದು ವಸ್ತುವನ್ನು ತೂಗ ಕಟ್ಟಲು ಆಧಾರವಾಗಿರುವ ಉಂಗುರ, ಬಳೆ, ಮೊ. ; ತೂಗುಂಗುರ ; ತೂಗುಬಳೆ" (Hanger. ಇಂಕನಿ).
[ನೆಲು+-ವು]

**ನೆಲುಹು** 'ನೆಲವು' ನೋ.

**ನೆಲೆ₁,** ನಿಲೆ₁ (ನಾ). ೧. ಆಶ್ರಯ ; ಆಧಾರ : "ಇಕ್ಕೆ, ಇಂಬು, ಗೊತ್ತು, ನೆಲೆ . . . ಆಗರಂ—ಈ ೧೫ ಆಶ್ರಯಕ್ಕೆ ಪೆಸರ್" (ಕಕಸಾ. ೫೯-೨೯೦) ; ಸುಖಕ್ಕೆ ನೆಲೆಯೆನಿಸಿರ್ಪಂ (ಕಾದಂಬ. ೫೨೦) ; ನೆಲೆಯೌವನಲಕ್ಷ್ಮಿಗೆ ನೆಲೆ ಚಿತ್ತಭವಂಗೆ ನೃಪನ ಕಣ್ಗಂ ಮನಕ್ಕಂ ನೆಲೆ ತಾರ ಹಾರಶೋಭೆಗೆ ನೆಲೆಯೆನೆ ನೆಲೆಮೊಲೆಗಳೆನಿಕುಮುಬಲೆಯ ಮೊಲೆಗಳ್ (ಅಜಿಪು. ೨-೩೨) ; ಪರಮಸುಖಕ್ಕೆ ತಾನೆ ನೆಲೆಯಂ ಬಿಡದಾತ್ಮವಿಭೂತಿ ಸೂಚಿಸುತ್ತಿರೆ (ಸಮಪ. ೩-೯೯) ; ತಳಿರ ತಾಣಂ ಕುಸುಮಕುಲದ ನೆಲೆ . . . ನವಿಲ ನಂದನವೆನಿಪ್ಪ ಕೇಳೀವನಕ್ಕೆಯ್ತಂದನು (ಹಚಕಾ. ೩-೨೬); ಆಲದ ನೆಲೆಯೊಳಿದ್ದೆನ್ನಿರವಳಿದು ನಿಃಫಲವೆನಿಸಿತಲ್ಲಾ ಪ್ರಳಾಪಿಸದೆಂತು ಸೈರಿಸುವೆ (ಬಸವು. ೫೭-೧೫) ; ಮುಂದದ ನೆಲೆ ಶುಭದಿಕ್ಕೆ ಸೊಗಸಿನ ಸದನ . . . ಮನೋರಥದುದಯಗಿರಿ ಹಿಂದೀಸುದಿನವಮರಾವತೀನಗರ (ಕುಪ್ರಾಅ. ೧೨-೪). ೨. ವಾಸಸ್ಥಾನ ; ವಾಸಸ್ಥಳ ; ನಿವಾಸ ; ಆವಾಸ : ಕುಸುಮದಳಸುಕುಮಾರರ್ ತಳರ್ದು ನೆಲೆಯಿಂದಮಾಗಳ್ ಕೊಳದಿಂ ಪೊಜಮಟ್ಟ ಹಂಸಗಳ್ಗೆಣೆಯಾದರ್ (ಪಂಪಭಾ. ೨-೯೭) ; ಶ್ರೀರಮಣಿಗೆ ನೆಲೆ ತನ್ನಯ ಪೇರುರಮಂ ಮಾಟಿಪ್ಪೆನೆಂಬ ಬಗೆ ಮಿಗೆ ಸಮರ ಪ್ರಾರಂಭದೆ ಪೂಣ್ದಿರ್ದಂ ಕೌರವಕುಲವಿಲಯಕೇತು ಸಾಹಸಭೀಮಂ (ಗದಾಯು. ೮-೧) ; ನೆಲೆಗೆ ಪೋಗಿ ಮಕ್ಕಳೊಳಂ ಪೆಂಡಿರೊಳಮೊಡಗೂಡಿ ಸುಖದಿಂ ಚರಿಯಿಸುವೆಂ (ಧರ್ಮಾಮೃ. ೧-೧೩೧) ; ನೆಲೆಯೊಳ್ ಸೇರಲು ಪೋರುಗೈದು ಸತಿ ತಾಂ ಪೋಗಟ್ಟುವಳ್ . . . ತೊಲಗಿರಲ್ ಲಕ್ಷ್ಮೀ

**ಕಟಾಕ್ಷೇಕ್ಷಣಂ** (ಸೋಮೇಶ. ೫೧); ಖಗವಿತಾನಂ ಕೋಟರಂಗಳ ನೆಲೆಗೆ ಸೇರಿದವು (ಬಸವು. ೧೧-೪೭). **೩.** ಮನೆಯ ಒಂದು ಭಾಗ; ಒಳಮನೆ; ಕಕ್ಷಾಂತರ: "ಕಕ್ಷಾಂತರಂ, ಪ್ರಕೋಷ್ಠಂ—ಈ ೨ ನೆಲೆ" (ಹಲಾಯು. ೫.೧-೧೪೯). **೪.** ಉಪ್ಪರಿಗೆಯ ಒಂದು ಭಾಗ; ಅಂತಸ್ತು; ಮಹಡಿ: ಚಂಡವೇಗಂ ಕರುಮಾಡದ ಮೇಗಣ ನೆಲೆಯೊಳಿರ್ದು ನೋಂಟಕ್ಕೆ ಗೆಂಟುವೋಗೆ (ವಡ್ಡಾರಾ. ೧೨೧-೭); ಸುಭದ್ರೆಯೆಂಬ ಕನ್ನೆ . . . ತನ್ನ ಚೆಂಬೊನ್ನ ಕನ್ನೆಮಾಡದ ಮೇಗಣ ನೆಲೆಯ ಚೌಪಳಿಗೆಯ ಬಾಗಿಲೊಳ್ ನಿಂದು (ಪಂಪಭಾ. ೪-೩೯ ವ); ಏಳು ನೆಲೆಯ ಕರುಮಾಡದುಪ್ಪರಿಗೆಯೊಳಗೆ . . . ಮೇಲಿಪ್ಪ ಕಳಸವ ಕಂಡವರಾರನು ಕಾಣೆ (ಆದಪ. ೨೭-೬೬); ಅಡಕಿಲ್ಗೊಂಡೊಪ್ಪುವೇೞುಂ ನೆಲೆಗಳ ಮಣಿಮಾಡಂಗಳಿಂದಂ ವಿಚಿತ್ರಂಬಡೆದಿರ್ದು . . . ಕೌತುಕಕ್ಕಂದೆಡೆಯಾಯ್ತ್ತೆಯುದ್ಧೃ ರಾಜಾಲಯಂ (ಬಾಧಪು. ೧-೧೫೪); ಹಲವು ನೆಲೆ ಚೆಲುವಿಕೆಗೆ ಸಲೆ ಹೊಂಗಲಶ ಲೋಕಕೆ ವಿಲಸ ಹೇಮದ ಕೆಲಸ ಗತಿಯಲಿ ಚೆಲುವೆನಿಸಿದುಪ್ಪರಿಗೆ ನೋಳ್ಪರಿಗೆ ಹೊಳಹಿನಲಿ ಥಳಥಳಿಸುತಿಹುದು (ಕುವ್ಯಾಅ. ೭-೩೨). **೫.** ಜಾಗ; ಸ್ಥಳ; ಸ್ಥಾನ: "ನೆಲೆ ತಾಣ" (ಕವಿಕಂ. ೧೩೫); ಕಡುಗೋಟೆಲೆಯಿಂ ಮೆಯ್ಯ್ ಪೊಱಮಡೆ ಕಟಾಯೊಳ್ ಕರ್ಚಿ ಕರಿಯ ಕಾಕೆಯ ರಸಮಂ ತೊಡೆದೊತ್ತುಗಲ್ಲದೊಡಮುತ್ತರಣೆಯ ರಸದಿಂದೆ ತನ್ನ ನೆಲೆಗದು ಪೋಕುಂ (ಲೋಕೋಪ. ೯-೧೯೪); ಹುಟ್ಟಿದ ನೆಲೆಯ ತೃಷ್ಣೆ ಬಿಡದವರಿಗೆ ಲಿಂಗಾನುಭಾವದ ಮಾತೇಕೋ (ಅವಚಂ. ೫೪-೨೩೦); ಆವುದು ನೆಲೆ ನಿನ್ನಯ ಪೆಸರಾವುದು ನೀಂ ಬಂದ ಕಜ್ಜವೇನೆಂದು ತದುರ್ವೀವರನಂ ಬೆಸಗೊಳಲ್ (ಉದ್ಭಟ. ೩-೫೧); ಸಂಸ್ಕೃತಶಬ್ದನಿಯುಕ್ತ ಲಕಾರದ ನೆಲೆಗೆ ನಿಂದು ಸರಿಯಾಗಿ ಸಲ್ವುದಂ ಕ್ಷಳನೆಂಬರ್ (ಶಮದ. ೧೬); ವೀರರಿದ್ದೇಗುವರು ದೈವದ ಕೂರುಮೆಯ ನೆಲೆ ಬೇಱೆ ನಮಗೊಲಿದಾರು ಮಾಡುವುದೇನು (ಕುವ್ಯಾದ್ರೋ. ೨-೪). **೬.** ಭೂಮಿ; ಲೋಕ: "ಕ್ಷೋಣಿಃ = ನೆಲೆ" (ಕಾಶಕ್ರ. ೩೫); ನೆಲೆಗೆ ಪಂಚಮಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ (ಕುವ್ಯಾಅ. ೧-೧೩). **೭.** ಸಂಸಾರ: ನೆಲೆಗಂಜಿ ತೊಱೆದವರೊಳೆಲ್ಲಂ ಕೊಲೆಗಂಜಿ ಕೊಲ್ಲಮೆಯನ್ ನೆನೆವನ್ ತಲೆ (ಕುಱಳ್. ೧-೩೩-೫). **೮.** ಗುಟ್ಟು; ರಹಸ್ಯ: ಶೀಲ ಶೀಲ ಎಂತೆಂಬಿರಯ್ಯ ಶೀಲದ ನೆಲೆಯ ಬಲ್ಲಡೆ ಹೇಳಿರೋ (ಮಹಾದೇ. ಬ. ೪೭-೧೧೦); ಮಗನೆ ಕೇಳ್ ನಿನ್ನ ಮಾನಸದಳಲ್ಪ್ರಾಣಲಿಂಗದ ನೆಲೆಯನಱಿದಲ್ಲದಳಿಯದು (ಪದ್ಮರಾ. ೧೨-೨೯); ಶುಕ್ರ ನಿಲಿಸಿ ತನ್ನಯ ಮನೆಯಲವರಿಗೆ ಕಲಿಸಿದನು ಸಂಜೀವನೌಷಧ ನೆಲೆಯಂ (ಸಂಭಪ. ೫-೭೯); ಸಲಹಿದನು ಜನಕಕ್ಷಿತೀಶನು ನೆಲದೊಳುದಿಸಿದ ಮಗಳನೆಂದೇ ಹಲಬರಾಡುವರದಱಿನಿಂ ನಿಜತನಯಳಲ್ಲೆಂದು ಉಲುಕುವುದು ಚಿತ್ತದಲಿ ಜನನದ ನೆಲೆಯನಱುಹಿದಡೊಪ್ಪುಗೊಂಬುದಕಲಸಿಕೆಯದೇನಿದ್ದುದೆಂದನು ಮುನಿ ವಿದೇಹಂಗೆ (ತೊರರಾ. ೧-೧೬-೨೬); ಆತುಮನ ಬಣ್ಣವನು ಮಾತಿನಾಗಾಧವನು ಜಾತಿಯ ನೆಲೆಯನಱಿದು ತಾ ಪರಮನಾದಾತನೇ ಯೋಗಿ (ಸರ್ವಜ್ಞ. ೩೫೪). **೯.** ಆಳ; ಮರ್ಮ: ಪೞಗೋಲ್ಗಳನಿಕ್ಕಿ ಪಾಯಿಸಲ್ ನೆಲೆಯೆಂದು ನೋಡಲೊಳಪೊಕ್ಕು ಧುಡುಮ್ಮಱಿದಾಡಲೀಸಲಗ್ಗಲಿಸದಲಂಪಿನಿಂ ಬಗೆದುದಂದು ಜನಂ ಘನಚಂದ್ರಿಕಾಂಬುವಂ (ಅಜಿಪು. ೬-೪೫); ಅನುಭಾವ ನೆಲೆಗೊಂಡಲ್ಲದೆ ಜ್ಞಾನ ಸುಜ್ಞಾನದ ನೆಲೆಯ ಕಾಣಬಾರದು (ವಚಸಂ. ೪-೬); ಕಳವಿನಲಿ ಕುದಿವಂಗೆ ದೈವದ ನೆಲೆಯನಱಿಯದವಂಗೆ ದಿಟವಿದು ತಿಳಿಯಬಾರದು ನಿದ್ರೆ (ಕುವ್ಯಾಉ. ೩-೩); ಅವಳು ಕೊಟ್ಟ . . . ಉಪಮೆಯಿಂದ ಅವಳ ನಿಲುವು, ಒಲವು, ನೆಲೆ ಹೊಳೆಯಲು ಅವಕಾಶ ಹಿಡಿಯಲಿಲ್ಲ (ದೀಪಹ. II, ೧೭೭); ಹೆಂಗಸಿನ ನೆಲೆ ತಿಳಿಯದು ಎನಿಸಿತವನಿಗೆ (ಗಂಗಾಸಾ. ೧೦೩). **೧೦.** ತಳ; ಬುಡ: ನೆಲೆ[ಪಾಠಾಂ. ರೆ]ಯಿಲ್ಲ ಸಂಸಾರವಿಳಿದಂತೆ ಬಾವಿಯೊಳು ಸಿಲುಕಿ ಸಿಲುಕಿ ಭ್ರಮಿತನಾದೆ (ಪುರಂದ. ೧-೧೫೯-೧). 'ನೆಲೆಗಳೆ' ಪರಾ. **೧೧.** ನಿಜ; ಸತ್ಯ; ದಿಟ: ಜಲದೊಳಗಿದ್ದ ಕಿಚ್ಚು ಜಲವ ಸುಡದೆ ಜಲವು ತಾನಾಗಿದ್ದಿತ್ತು ನೋಡಾ ನೆಲೆಯನಱಿದು ನೋಡಿಹೆನೆಂದಡೆ ಅದು ಜಲವು ತಾನಲ್ಲ (ಅವಚಂ. ೧-೩); ನೆಲೆಯನಱಿಯದವ ಕೊಲಿಸು ರಾಮನನೆಂದು ಬಲಿದು ಮಂತ್ರಿಗೆ ಹೇಳಲು (ಕುರಾಸಾಂ. ೧-೮೮); ಕುಲವರ್ಧನೆ ಹೇಳಿದ ಮಾತು ನೆಲೆಯೆ? (ವಚಕಾ. ೬). **೧೨.** ಅಚಲತೆ; ದೃಢತೆ; ಸ್ಥಿರತೆ: ನೆಲೆ ಸೋಮಸೂರ್ಯವೀಥಿಗಳಿಲ್ಲವಾ ಪುರಕೆ (ತಿರುರ.ದೇ. ೩-೨); ಅಕ್ಕಟಾಯಿದೇನಂ ನೆಗಳ್ದನೋ ಉಲಿಯಲೆರ್ದೆ ನಡುಗುತಿದೆಯೆಂಬರ್ ಕೆಲಂಬರಿದೆ ನೆಲೆಗೆ ನಿಲ್ವುದೆ ಎಂಬುವರ್ ಕೆಲಬರ್ (ಪದ್ಮರಾ. ೧೧-೧೭೦); ಉಯ್ಯಾಲೆಯ ಮಣೆ ನೆಲೆಗೆ ನಿಂದಂತೆ ಆದೆನಯ್ಯ (ಘನಪ. ೫೩-೪೫); ಮುಂದೆ ಭೂಲೋಕದೊಳ್ ವೀರಶೈವಂ ನೆಲೆಗೆ ನಿಂದಪುದು (ಚೆಬಪು. ೩-೨೭). **೧೩.** ನಿಶ್ಚಯ; ನಿರ್ಧಾರ; ನಿಃಸಂಶಯ: ವರದನಾಗೆಮ್ಮೆಡೆಗೆ ಸೋಮೇಶ್ವರನವಶ್ಯಂ ಬಪ್ಪುದದು ನೆಲೆ ಪರಿಕಿಸುವಡೆಂತೆನಲು ನಂಬಿಸ ಬಂದನೇ (ಬಸವು. ೫೩-೧೯); ನೆಲೆ ಇಲ್ಲದವರ ಮಾತು ಹೊಲೆಗಿಂತ ಹೆಚ್ಚು (ಗಾದೆ). **೧೪.** ಶಾಶ್ವತವಾಗಿರುವಿಕೆ; ನಿತ್ಯತ್ವ: ಅನೇಕ ಮುಖದಿನೊಗೆದು ನೆಲೆಯಿಲ್ಲದಳಿವ ಕಾಲವೆ ದೈವವೆಂಬನುಜ್ವಲಕಾಲವಾದಿ (ಪದ್ಮರಾ. ೧೧-೧೯೮); ನೆಲೆ ಇಲ್ಲದ ಕಾಯ ಎಲುವಿನ ಹಂದರ . . . ಹೊಲಸು ತೊಗಲ ಮೆಚ್ಚಿ ಕೆಡಬೇಡಿರೊ (ಪುರಂದ. ೨-೧೦-೨); ಪರಪುರುಷಾರ್ಥ ಕೆಳಸುವಂ ನೆಲದ ಮೇಲಣ ಬಾಳ್ಕೆಯಂ ನಿಜಶರೀರಮಂ ನೆಲೆಯೆಂದು ನೋಡುವನೆ (ಜೈಮಿಭಾ. ೨೬-೪೧). **೧೫.** ಎತ್ತರ; ಔನ್ನತ್ಯ: ಪಂಚಧನುಶ್ಶತಂ ಪವಣ್ ನೆಲೆ ನರರ್ಗೆಂದೊಡಿನ್ನಿವರೆ ಬಣ್ಣಿಸಲಾನಱಿಯೆಂ ವಿದೇಹಮಂ (ಆದಿಪು. ೧-೫೨); ಕರಮೆಸೆದಪುವಿದಱ ನೆಲೆಯ ಚೈತ್ಯಗೃಹಂಗಳ್ (ಆದಿಪು. ೨-೩೨). **೧೬.** ನಿಲ್ಲುವ ರೀತಿ,—ವಿನ್ಯಾಸ: ಕೊನೆ ಸೆಳ್ಪುಗುರ್ಗಳ್ ಕುಡಿ ತೋಳ್ ನಯಂ ನಯಂ ನೆಲೆನೆಲೆ ಭಂಗಿ ಭಂಗಿ ಪದವಣ್ ಬೆಳರ್ವಾಯ್ ಪೆಱತಲ್ಲಿದೆಂತೊ ಕೋಮಲಲತೆ ಪೇೞಿಮೆನ್ನಿನಿಯಳಂ ಮಱೆಗೊಂಡುದೊ (ಪಂಪಭಾ. ೫-೧೨). **೧೭.** ಸ್ಥಿತಿ; ಗತಿ: ನೆಲೆಯುಂ ಗಾಡಿಯುಮಳವಡೆ ಲಲನೆ ಪೆಱಳ್ ದಿವ್ಯಮಾಲೆಯಂ ಮುಡಿಯಿಸೆ (ಜಗವಿ. ೧೦-೧೨೭); ಆ ಪರಾಪರವಸ್ತುವಿನ ನಿಜರೂಪು ನಾಮದ ಗಾಢತರ ಮಹಿಮಾಪಯೋಧಿಯ ನೆಲೆಯನಱಿವವರಾರು ಲೋಕದಲಿ (ತೊರರಾ. ೧-೨-೮). **೧೮.** ಮಟ್ಟ; ದರ್ಜೆ: ಪದ್ಮನಿಧಿಯಿಂ ತಂದ ಸೂತ್ರದೊಳವರವರ ನೆಲೆಗಳನಱಿವಂತೇಕಸೂತ್ರಮಾದಿಯಾಗೇಕಾದಶಸೂತ್ರಮಂತಮಪ್ಪ ಯಜ್ಞೋಪವೀತಮನವರ್ಗೆ ಮಾಡಿ (ಚಾವುಂಪು. ೫೨); ಮಾತನಾಡುವಾಗ ತಂತಮ್ಮ ನೆಲೆ ನೋಡಿ ಮಾತನಾಡಬೇಕು (ಕುರುಕಾ. ೧೧೯). **೧೯.** ಧೋರಣೆ; ನಿಲುವು: ಧರೆಯಲಧರ್ಮಶೀಲರ ತಲೆಯ ಚೆಂಡಾಡುವೆವು ಧರ್ಮವನೊಲಿದು ಕೊಂಡಾಡುವೆವು ಶಿಕ್ಷಾರಕ್ಷಣವ್ಯಸನ ನೆಲೆ ನಮಗೆ (ಕುವ್ಯಾಸ. ೨-೭೩). **೨೦.** ಅವಸ್ಥೆ; ಹಂತ: ಕಾಲ್ಗಾಪು ಕಾಲ್ಗಾಪಿನೊಳ್ ಜೋದರ್ ಜೋದರೊಳಾನೆಯಾನೆಯೊಳಗುರ್ವಪ್ಪನ್ನೆಗಂ ಕಾದೆ ಕಣ್ಗಾದಂ ಚೆಲ್ವೆಸೆದತ್ತು ಮೂಱುನೆಲೆಯಿಂ ಮಾದ್ಯದ್ವಜೇಂದ್ರಾಹವಂ (ಪಂಪಭಾ. ೧೦-೯೩); ಶಲ್ಯತ್ರಯವಿರಹಿತನೆರಡನೆಯ ನೆಲೆಯುವಂ ತಾಂ ವ್ರತಿಕಂ (ಸುಕುಮಾ. ೬-೨೭); ಮೂಱುನೆಲೆಯಲಿ ನಿಂದು ನಾಲ್ಕನು ಬಳಸಿ . . . ಮಾಯಾಗುಪ್ತನಾಗಿ ಮುಕುಂದ ತೋಱುವನು (ಕುವ್ಯಾಸ. ೯-೨೧). **೨೧.** ಕಾರಣ; ನಿಮಿತ್ತ: ಎಲೆ ತರಳ! ನಿನ್ನ ಬಿಂಕದ ನೆಲೆಯೇಂ? (ರಾಮಾಶ್ವ. ೧೫೬-೧೬). **೨೨.** ಗುರಿ; ಉದ್ದೇಶ·

ಹಲವು ಕಾಲ ಧಾವತಿಗೊಂಡು ಒಟ್ಟದ ಹಿದಿರೆಯುಂ ಒಂದು ಮಿಡುಕುಜಿಲ್ಲಿ ಬೇವಂತೆ ಸಲೆ ನೆಲೆ ಸನ್ನಿಹಿತನಾಗಿರ್ಪ ಶರಣನ ಭಕ್ತಿ ಬಂದನಾಯತದಿಂದೆ ಕೆಡುವುದು (ಬಸಪು. ೨೧೩); ಲಜ್ಜೆಗೆ ನೆಲೆಯ ಮಾಡಿದೆ ಹೂಡಿದೈ ದುರಿಯಶವನೆನಗೆ (ಕುಪ್ಪಾಭೀ. ೬-೩೯). **೨೩.** ಸರಿಯಾದ ಮಾರ್ಗ,—ಕ್ರಮ: ಕಳುಹು ಲಲನಾಜನವನಾ ಮುನಿಕುಲಲಲಾಮನ ಬಳಿಗೆ ಸಖಿಯರ ಬಲೆಗೆ ಸಿಲುಕದರಾರು ತ್ರ್ಯಮ್ಬಕರುತಿಗಳೊಳಗಾಗಿ ನೆಲೆಯಿದೀಗ (ತೊರರಾ. ೧-೫-೨೫). **೨೪.** ನಿಧಿ: ಜಾಲಗಾಜಿನ ಡೋಣಿಯಂತೆ ಬಳಸುವ ಹುಟ್ಟನಂತೆ ಬೈಚಟ್ಟ ನೆಲೆಯಂತೆ ಇದ್ದಡೇನು ಭೋಗಿಸಲರಿಯವಾಗಿ (ಮೋಳಮಾ. ೩೦-೧೨೪). (ಗು). **೨೫.** ಅಸ್ಪಷ್ಟವಾದ. **೨೬.** ಪೂರ್ಣವಾದ; ಅಧಿಕವಾದ: 'ನೆಲೆಜವ್ವನ' ಪರಾ.

**ನಿಲೆ₁** : **೧೨.** 'ಕಲ್ಲಿಲೆ' ಪರಾ. **೧೭.** 'ಶಿವನಿಲೆ' ಪರಾ.

**ನೆಲೆನೆಲೆ** (ದ್ವಿರುಕ್ತಿ): ಮರಕತದ ನೆಲಗಟ್ಟುಗಳ ಹಿಮಕಿರಣಕಾಂತದ ನೆಲೆನೆಲೆಯ ಬಂಧುರದ ಘನಸೋಪಾನಗಳ . . . ಕೃತಕಾದ್ರಿಗಳಲೊಪ್ಪಿದುದಾ ಪುರೋದ್ಯಾನ (ತೊರರಾ. ೧-೯-೧೪); ನೆಲೆನೆಲೆಯೊಳು ಮಣಿಮಂಚದಿಂದೊಪ್ಪುವ ನೆಲೆವಾಡದೊಳು (ಕುರಾಸಾಂ. ೨೭-೬೩); ಕಳೆಗಧಿನಾಥಚಂದ್ರನ ನೋಡ ಪೋಪಂತೆ ನೆಲೆನೆಲೆಗಡರ್ದಳಾ ಕುವರಿ (ಮೋಹತ. ೨೭-೩೦); ವಿಯಚ್ಚರಾಂಗಣಕಡರ್ದ ವಜ್ರವೈಡೂರ್ಯಮಾಣಿಕ್ಯದೊಳ್ ನೆಲೆನೆಲೆಗಳ ಅಚ್ಚಮುತ್ತಿನ ಗುದಿಗಳಿಂ (ಚಬಪು. ೫-೩); ಅವಳಂಗಚ್ಛವಿಯು ನೆಲೆನೆಲೆಗಳೊಳು ಪ್ರಜ್ವಲಿಸೆ (ನಪಮೋ. ೨೪-೨೪); ಬಯಲಾಟವು ನೆರೆದಲ್ಲಿ—ನೆಲೆನೆಲೆ ಏರುವ ಹೊಳಲು (ಉಯ್ಯಾಲೆ. ೬೬-೧೨). **ನೆಲೆ ಮಾಡು**=ತಂಗುವ ಜಾಗವನ್ನಾಗಿ ಮಾಡಿಕೊಳ್ಳು; ಆಶ್ರಯಿಸು: ಆ ಮಹೀಪಾಲನ ಲೋಲಲೋಚನಂಗಳಾಕೆಯ . . . ನೆಲೆಮೊಲೆಯಂ ನೆಲೆ ಮಾಡಿಯುಂ ಬಾಯ್ದೆರೆಗೆ ತೆರೆದೆಂತುಂ . . . ಮನದೊಳುತ್ಸುಕತೆಯಂ ತನುಲತೆಯೊಳ್ಪುಳಕಾಂಕುರಮನೊದವಿಸುತ್ತುಮಿರೆ (ಮಲ್ಲಿಪು. ೩-೮೭ ಪ); ಮರಳಿ ಕಾಮ್ಯಕವನದ ದಳಮಂದಿರವನೇ ನೆಲೆಮಾಡಿದೆವು (ಕುಪ್ಪಾಅ. ೧೪-೧೩). **೨.** ಸ್ಥಿರಗೊಳಿಸು; ದೃಢಪಡಿಸು; ಗಟ್ಟಿಮಾಡು: ನೆಲಮಾಳಿಗೆಯೊಳಿಟ್ಟವನ ಕೊಲಿಸಿದೆನೆಂದು ನೆಲೆ ಮಾಡಲಾ ಸುದ್ದಿಯನು (ಕುರಾಸಾಂ. ೧-೮೪). **೩.** ಅವಕಾಶ ಮಾಡು: ಆತನ ಪಡೆಗೆ ನಡೆಯಲೆಡೆಮಾಡಿದಂತೆ ಬಳ್ಳಳಾದ ದೆಸೆಗಳುಮಾತನ ವಿಜಯಸೈನ್ಯಕ್ಕೆ ತಡೆಯದೆ ಪಾಯಲ್ಕೆವೇಟ್ಟು ಮೆಂಬಂತೆ ನೆಲೆ ಮಾಡಿದ[ಪಾಠಾಂ. ನೆಲೆಯಾದ] ಮಹಾನದೀನದಂಗಳುಂ (ಆದಿಪು. ೧೧-೫ ಪ). **ನೆಲೆಯ ಮಾಡ**=ಅಂತಸ್ತುಗಳಿಂದ ಕೂಡಿರುವ ಸೌಧ; ನೆಲೆಮಾಡ; ನೆಲೆಯುಪ್ಪರಿಗೆ: ಪಿರಿದೊಂದು ಪೊಟಲುಂ ಧವಳಾರಂಗಳುಂ ನೆಲೆಯ ಮಾಡಂಗಳುಂ . . . ಮಾನಸರ ಬರುವುಮಂ ಪೋಗುಮಂ ಕಂಡು (ವಡ್ಡಾರಾ. ೪೯-೨೦). **ನೆಲೆಯ ಹೊನ್**=(ಶಾಶ್ವತವಾದ) ಹಣದ ಕೊಡುಗೆ: ಸ್ವಸ್ತಿಶ್ರೀ ವೀರಬಲ್ಲಾಳದೇವರಸರು ಕೊಟ್ಟ ನೆಲೆಯ ಹೊಂನಿಂಗೆ ಅಚಳಪ್ರಕಾಶಸ್ವಾಮಿಗಳು ವರದನರಸಿಂಹದೇವರ್ಗ್ಗೆ ಹಿರಿಯೂರ ಹಳ್ಳಿ ಪ್ರಾಪ್ತಿ ಸಹಿತವಾಗಿ ಕೊಂಡು ಕೊಟ್ಟ ಯೆರಡು ವೃತ್ತಿಯ ಸ್ಥಳವನು (ಮೈಅರಿ. ೧೯೪೦, ೩-೩೦; 1215). **ನೆಲೆಯಾಗಿಸು**=ಆಶ್ರಯವನ್ನಾಗಿ ಮಾಡು; ಆಧಾರವಾಗಿಸು: ಅಹಿತರಂ ಗೆಲ್ವ ಜಯಶ್ರೀಗೆ ಭುಜಶಿಖರಮಂ ನೆಲೆಯಾಗಿಸಿ ನೀಂ ನೆಲಸು ನೇಸಱುಳ್ಳಿನಮರಿಗಾ (ಪಂಪಭಾ. ೨-೧). **ನೆಲೆಯಾಗು**=**೧.** ಆಧಾರವಾಗು; ಆಶ್ರಯವಾಗು: ವೀರಲಕ್ಷ್ಮಿಗೆ ನೆಲೆಯಾಗು ಪೋಗೆನೆ ನೃಪಂ ಪೊಡೆವಟ್ಟು ಮನೋನುರಾಗದಿಂ (ಪಂಪಭಾ. ೧೧-೩೨); ತದ್ವಿರೋಧಿಗಳನವುಂಕಿ ಮೆಟ್ಟಿ ಸೆಱೆಯಿಟ್ಟವಲೇಪಮೊ ಪೇಱೆಮೆಂಬ ಶಂಕೆಗೆ ನೆಲೆಯಾದುದಂಬರಚರೇಶ್ವರನಿರ್ದ ಮೃಗೇಂದ್ರವಿಷ್ಟರಂ (ಶಾಂತಿಪು. ೩-೪೧); ಜಸಕ್ಕೆ ನೆಲೆಯಾದಂ ನಾಚಿದಣ್ಣಾಧಿಪಂ(ಎಇ.XXVIII, ೩೪-೨೬; 1082); ಎನ್ನಂತೆ ರತ್ನವಿತತಿಗೆ ತಾನ್ನೆಲೆಯಾಯ್ತೆಂಬ ಸಮುಗುಣಪ್ರಣಯದಿನಾ ಮುನ್ನೀರ್ ಬಂದಪ್ಪಿದುದೆನೆ ತನ್ನಗರಮನಮಲಪರಿಖೆ ಬಳಸಿದುದೆತ್ತಂ (ಚಂದ್ರಪು. ೧-೧೧೫). **೨.** ವಾಸಸ್ಥಾನವಾಗು; ನಿವಾಸವಾಗು: ಸಿರಿಗೆ ನೆಲೆಯಾದ ಪೊಂದಾವರೆಯ ಮುಗುಳ್ಕೆಲ್ಲ ಮೆಲ್ಲನಲರ್ದಪುವು (ಮಲ್ಲಿಪು. ೪-೧೩೩). **೩.** ನೆಲೆ ನಿಲ್ಲು; ನೆಲಸು: ಆರ್ಯೆಯರುಮಲ್ಲಿಗೆ ವರ್ಪುದುಂ ಅಲ್ಲಿ ನೆಲೆಯಾಗಿರ್ಪ ಕುಬೇರಕಾಂತನ ಭಾರ್ಯೆ ಪ್ರಿಯದತ್ತೆ ಬಂದು (ಚಾವುಂಪು. ೬೬); ನಿಖಿಲಜಙ್ಗಮಂಗಳಿಂ ನೆಲೆಯಾಗಿ ನಿಂದಘಟಚಯಂ ಪರಿಗುಂ (ಪದ್ಮರಾ. ೧೨-೨೫); ಕಾಮೋದ್ರೇಕದಿಂ ವೀರ್ಯಸ್ಖಲನಮಾಗೆ ಮುಂದದು ಶರಸ್ತಂಭದಲ್ಲಿ ನೆಲೆಯಾಗಿ ಮುದದಿಂದಿರಲು (ತುರಂಗ. ೧೧-೧೧). **೪.** ಶಾಶ್ವತವಾಗು; ಸ್ಥಿರವಾಗು: ಮುರಮಥನ ಬಿನ್ನಹವು ರವಿ ತಾನಿರದೆ ಪಡುವಲು ಸಾರ್ದ ಸೈಂಧವನಿರವು ನೆಲೆಯಾಗ[ದು]ದು ಮಹಾದೇವೆನುತ ರಥವಿಳಿದು (ಕುಪ್ಪಾದ್ರೋ. ಪರಿ. ೨೯೫); ಪಲರಾಯಭಾರದಿರವಂ ಪಲವಗಲಿಂ ಕಂಡು ಕೇಳ್ದು ತಿರ್ದಿಪೊದಟ್ಟೀ ಪಲರುಂ ನಿರ್ಣಯವಿಟ್ಟುದೆ ನೆಲೆಯಾದೊಡಮಾನುಮೊಂದು ಬಿನ್ನತಿಗೆಯ್ವೆಂ (ಚಿಕವಿ. ೫-೬೩); ಶ್ರೀಗೋಪಾಳದೇವರ ಅಮೃತಪಡಿ ದೀಪೋತ್ಸವ ಚೈತ್ರಪವಿತ್ರ ಒಳಗಾದ ಪಂಚಪರ್ಬಕೆ ವರ್ಷಂಪ್ರತಿ ಎಂದೆಂದೂ ನೆಲೆಯಾಗಿ ಕೊಡುವರು (ಎಕ. XVI, ಚಿಕ್ಕನಾ. ೭೧-೨೪; ?). **೫.** ಒಪ್ಪಿಸಲ್ಪಡು; ವಹಿಸಲ್ಪಡು: ನಿಯತ ದಧಿ ಘೃತ ದುಗ್ಧ ಗುಡ ಸಂಚಯಕೆ ಸಂಬಾರಾದಿ ರಸನಿರ್ಣಯಕೆ ಕಟ್ಟಧಿಕಾರ ಸಿದ್ಧಾರ್ಥಂಗೆ ನೆಲೆಯಾಯ್ತು (ತೊರರಾ. ೧-೭-೨೬).

[ದೇ.॥ ತಮಿ. ನಿಲೈ; ಮಲ. ನಿಲ; ತುಳು. ನೆಲೆ, ನಿಲೆ; ಕೊಡ. ನೆಲೆ]

**ನೆಲೆ₂** (ಅ). ಚೆನ್ನಾಗಿ: ನೆಲೆ ಕಾಲ್ಗೊಳ್ಳವಘಾತಿಸಂಕುಲರಥಾಂಗಂ ಪೋಯ್ತು ಮುಂ ಘಾತಿಗಟ್ಟಲೆ (ಅನಂಪು. ೧೪-೪೯). [<ನೆಲೆ₁]

**ನೆಲೆಕಟ್ಟು** 'ನೆಲೆಗಟ್ಟು' ನೋ.

**ನೆಲೆಕೊಳ್** 'ನೆಲೆಗೊಳ್' ನೋ.

**ನೆಲೆಗಂಡು** (ನಾ). ಬಹಳ ಪೌರುಷವುಳ್ಳವನು,—ಗಂಡಸುತನವುಳ್ಳವನು,—ಪುರುಷತ್ವವುಳ್ಳವನು: ಕಲಸಲೊಡಮೊಲ್ದು ನಲವಿಂ ನಲಿನಲಿಯಿಸಿ ನಜ್ಜುನಜ್ಜುಗೆಯ್ದಾ ಸೊಗದೊಳ್ ಬೆಲೆವೆಣ್ಣನಮನೆ ಬಿಡಿಸುವ ನೆಲೆಗಂಡನೆ ನೆಗಟಿರ್ದ್ದಡವನೆ ಗಡ ಕಂದರ್ಪಂ (ಚಿಕವಿ. ೬-೧೩೨).

[ನೆಲೆ₁+ಗಂಡು]

**ನೆಲೆಗಟ್ಟು**, ನೆಲೆಕಟ್ಟು (ನಾ). **೧.** ಸಮಮಾಡಿದ ನೆಲ; ಕುಟ್ಟಿಮ: ಶರಣಂಗೆ ಕಳಸದ ಮೇಲೆ ನೆಲೆಗಟ್ಟೆಂಬುದೇನೊ (ಅವಚಂ. ೧೩೧-೫೩೪); ಪಳುಕಿಂದ ನಯುವಡೆದ ನೆಲೆಗಟ್ಟು ಶಶಿಕಾಂತದಳವಟ್ಟಭಿತ್ತಿ (ಹಚಕಾ. ೪-೬); ಮಣಿಮಯದ ನೆಲೆಗಟ್ಟುಗಳ ರಚನೆಗಳ . . . ಪನ್ನೀರ ಚಳೆಯದೊಳೆಸೆದುದಾ ಪುರವು (ಜೀವಂಚ. ೭-೨೨); ನೀಲರತ್ನಂಗಳಿಂ ನೆಲೆಗಟ್ಟು ಪಳಿಕುಗಳ ಸಾಲೆಸೆವ ಭಿತ್ತಿಗಳ್ ವಜ್ರದೊಳ್ಗಂಬಂಗಳ್ (ಚಬಪು. ೫-೪೮). **೨.** ತಳಹದಿ; ಬುನಾದಿ; ಅಡಿಪಾಯ: ಕೋಪವೆಂಬುದು ಪಾಪದ ನೆಲೆ[ಪಾಠಾಂ. ಲ]ಗಟ್ಟು (ಸರ್ವಜ್ಞ. ೪೭೯); ಪಸರಿಸಿಹ ಪಂಚತತ್ವಂಗಳುಂ ನೆಲೆಗಟ್ಟು (ಏಕೋಪು. ೨-೨೫); ಯಾವ ದೇಶ ಕಾಲ ಮತಗಳಿಗೂ ನೀತಿಯೇ ನೆಲೆಗಟ್ಟು (ಜಗದಾ. ೭೦); ಜಾತಿ ವರ್ಣ ನೆಲೆಗಟ್ಟನ್ನು ಸಡಿಲಿಸಿ, ಜಾತ್ಯತೀತವಾದ ಮತಧರ್ಮಗಳನ್ನು ಬೆಳೆಸಿದ್ದು ದಕ್ಷಿಣಭಾರತಸಂಸ್ಕೃತಿಯ ವೈಶಿಷ್ಟ್ಯಗಳಲ್ಲಿ ಒಂದಾಗಿದೆ (ಭಾರದ. ೩೯೪). **ನೆಲೆಕಟ್ಟು: ೧.** ಸಾದಿನ ಸಾರಣೆಯ ನೆಲೆಕಟ್ಟುಗಳ ಕರ್ಪೂರರಧೂಳಿಯ . . . ಪರಿಮಳ ಭಾರದಲಿ ಬಿಜಿಗಾಳಿ ಕುಸಿದುದು (ಕುಪ್ಪಾಅ. ೧೨-೧೦); ಪಳಿಕಿನ ಪಟ್ಟಿಗೆ ನೀಲದ ನೆಲೆಕ[ಪಾಠಾಂ. ಗ]ಟ್ಟ

. . . ಕಣ್ಣೊಳಿಸಲೆಸೆದುದಾ ನಿಳೆಯು (ಕುರಾಸಾಂ. ೩-೯೩); ಪಳುಕುಗಳ ನೆಲೆಕಟ್ಟು[ಪಾಠಾಂ ಲಗಟ್ಟು] ಮರಕತಂಗಳ ಜಗಲಿ ಪೊಳೆವ ನೀಲದ ಭಿತ್ತಿ (ಜೈಮಿಭಾ. ೧೭-೨೩); ನೆಲೆಕಟ್ಟುಗಳೊಳ್ ನಿಲಿಸಿದ ಪಚ್ಚೆಯ ಕಂಭಸಾಲು (ಸೌಗಂಧಿ. ೪-೪). [ನೆಲೆ$_1$ + ಕಟ್ಟು$_2$]

**ನೆಲೆಗಳೆ** (ಕ್ರಿ). ಬುಡಸಮೇತ ತೆಗೆದುಹಾಕು,—ನಿವಾರಿಸು; ನಿರ್ಮೂಲ ಮಾಡು : ಅನುಪಮಲಿಂಗವೆ ನೆನಹಿಂಗೇಕೆ ಬಾರೆ ತನು ಮನ ಶುದ್ಧವಿಲ್ಲವೆಂದು ಅನುವಿನಲ್ಲಿ ನಿಲ್ಲೆಯಾ ಎನ್ನ ಪಾತಕದ ಪುಂಜವ ನೆಲೆಗಳೆಯಯ್ಯಾ (ಮೋಳಿಮಾ. ೧೪-೫೨); ಅಱುಸ್ಥಲವನಱಿತು ಮೂಱುಸ್ಥಲವ ಮುಟ್ಟಿ . . . ನೂಱೊಂದಱಲ್ಲಿ ಸಂಗವ ಮಾಡಿ ಬೇಱೆ ನೆಲೆ[ಪಾಠಾಂ. ನತಿ, ನೆತ್ತಿ, ನೇತಿ]ಗಳೆದು ನಿಂದಲ್ಲಿ ಕಾಯ ಜೀವದ ಬಂಧ ಅದೇತಱಿಂದ ನಿಂದಿತ್ತೆಂದಱು ನಿನ್ನ ನೀನೆ (ಕೋಲಶಾಂ. ೧೧). [ನೆಲೆ$_1$ + ಕಳೆ$_1$]

**ನೆಲೆಗಾಣ್**, ನೆಲೆಗಾಣು (ಕ್ರಿ). ೧. ತಳವನ್ನು ಕಾಣು; ಬುಡವನ್ನು ಕಾಣು : ಅಗಾಧ=ನೆಲೆಗಾಣಬಾರದುದು (ನಾಚಿರಾ. ೬). **೨.** ಆಳವನ್ನು ತಿಳಿ; ಮರ್ಮವನ್ನು ಅರಿತುಕೊಳ್ಳು; ಮಹಿಮೆಯನ್ನು ಕಂಡುಕೊಳ್ಳು : ನೆಲೆಗಾಂಬನ್ನಕ್ಕಂ ತೊಱೆಯ ಅಂಜಿಕೆಯೈಸೆ ನೆಲೆಗಂಡ ಬಳಿಕ ತೊಱೆ ಬಱಿದೊಱೆಯಲ್ಲದೆ ಅಂಜಿಕೆಯಿಲ್ಲ (ಅಪಚಂ. ಕ. ೪೬೨-೧೨೫೧); ಪಿರಿಯ ಜ್ಞಾನಿಗಳು ಭಜನೆಯ ಮಾಳ್ಪರು ಬಕುತಿಯಿಂದಲಿ ಚತುರ್ಭುಜ ನಿನ್ನ ನೆಲೆಗಂಡುದಿಲ್ಲ (ಮೋಹತ. ೧೩-೬೦); ನೆಲೆಗಾಣದ ನಿನ್ನೀ ಮೈಮೆಯಂ ಬಣ್ಣಿಸಲಾವಂ ಸಾಲ್ವನೆಂದು ಗುಣಸ್ತವನಂಗೆಯ್ದಳ್ (ರಾಮಾಶ್ವ. ೩೧-೫). **೩.** ಸ್ಥಿತಿಯನ್ನು ಅರಿತುಕೊಳ್ಳು : ಮಾತಿರ್ದೊಡಂ ಮೂಕರಪ್ಪರು ಕಾಲಿರ್ದೊಡೆ ಕುಂಟರಪ್ಪರಿಂತೆ ಕಾಲಂ ಪೂರ್ವಪುಣ್ಯಂಗಳಿಂ ಸಿರಿವಂತರ್ ನೆಲೆಗಾಣರ್ಪ (ಸೋಮೇಶ. ೫೩). **೪.** (?) : ಎನ್ನ ಮುನಿಸಿಂಗಾಂ ಕಾದುವೆಂ ಪೇಸಿದೆಂ ನೆಲೆಗಂಡಂತೆ ನೆಲಕ್ಕೆ ಗೆಲ್ದೊಡ ಮದಂ ಚೀ ಮತ್ತಮಾನಾಳ್ವೆನೇ (ಪಂಪಭಾ. ೧೩-೧೭); "ಸ್ಥಿರತೆಯನ್ನು ತಿಳಿ" (ಪಂಪದೀ. ೫೧೫); ಜ್ವಲನಜಟಿ ಮುಕ್ತಿಲಲನಾಭಿಲಾಷದಿಂ ದೀಕ್ಷೆಗೊಂಡುದಂ ಕೇಳ್ದು ವಿನಿಶ್ಚಳಮಾನಸಂ ಪ್ರಜಾಪತಿ ನೆಲಕ್ಕೆ ನೆಲೆಗಂಡನಂತೆ ಬೀಸಿ ಬಿಸುಟ್ಟಂ (ವರ್ಧಮಾ. ೪-೧೦೨). **ನೆಲೆಗಾಣು :** **೨.** ಈ ವಿಶ್ವಾಸಘಾತ ಅವನ ಮನಸ್ಸಿಗೆ ಆಘಾತ ಕೊಟ್ಟಿದೆ. ಇದರಿಂದಾಗಿ ಅವನಿಗೆ ಮನೆಯಿಂದ ನೆಲೆಗಾಣದ ಶೂನ್ಯದಲ್ಲಿ ಹೆಜ್ಜೆ ಹಾಕಿದಂತೆ ತೋರಹತ್ತಿದೆ (ಇಪ್ಪಕ. ೨೬೨). 'ನೆಲೆಯಱಿ' ಪರ್ಯಾ. [ನೆಲೆ$_1$ + ಕಾಣ್]

**ನೆಲೆಗಾಣಿಸು** (ಕ್ರಿ). ೧. ಇರುವ ಸ್ಥಳವನ್ನು ತೋರಿಸು : ನೆಲೆಗಾಣಿಸದೆ ಶಂಬರದೈತ್ಯ ಕರ್ಗತ್ತಲೆಯಾಗಿ ಕುವರನ ತುಡುಕೆ ಸಲೆ ಭಾಸ್ಕರರೂಪ ತಾಳ್ದಿ ಮನ್ಮಥ ಮೆಟ್ಟಿ ತಲೆಯ ಕಡಿದನು (ಮೋಹತ. ೧೨-೮೨). **೨.** ಅಂತರ್ಯವನ್ನು ತೋರು,—ಕಾಣಿಸು : ದಿವ್ಯಸಿದ್ಧಿಯ ನೆಲೆಗಾಣಿಪ ದೇವನ ದಿವ್ಯಧ್ವನಿಯ ಪಾಡಿದರು (ಭರಚ. ೧-೯೭). **೩.** ಸ್ಥಿರವಾಗಿರಿಸು : ಕುಲಸತಿಯರ ಧರ್ಮ ಕೊನರಿಡೆ ನೇಹವ ನೆಲೆಗಾಣಿಸಿ ನೆಗಳುವುದು (ಹದಿಬ. ೩-೧೦). [ನೆಲೆಗಾಣ್ + -ಇಸು$_3$]

**ನೆಲೆಗಾಣು** 'ನೆಲೆಗಾಣ್' ನೋ.

**ನೆಲೆಗಿಡಿಸು** 'ನೆಲೆಗೆಡಿಸು' ನೋ.

**ನೆಲೆಗಿಡು** 'ನೆಲೆಗೆಡು' ನೋ.

**ನೆಲೆಗುಂದು** (ಕ್ರಿ). ನೆಲೆಯಿಲ್ಲದಂತಾಗು; ಆಶ್ರಯಹೀನವಾಗು : ಪೋದುದಸೂಯೆ. . . ಸಲೆ ಕೆಟ್ಟುದಪಮೃತ್ಯು ಜ್ವಲಿಸಿದುದು ಭಯಬಿತ್ತು ನೆಲೆಗುಂದಿದಳ್ ಮಾರಿ ತೊಲಗಿತಘಚಯ (ಚಿಬಪು. ೪-೩೫). [ನೆಲೆ$_1$ + ಕುಂದು$_1$]

**ನೆಲೆಗೂರ್** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀ ಸತ್ಯವಾಕ್ಯ ಪೆರ್ಮ್ಮಾನಡಿಗಳ ಪೃಥುವೀರಾಜ್ಯಂಗೆಯೆ ಬೂತರಸ ತೊಱೆಕಾರಟ್ಟಿಯ ಪಡಿಯುಳೆಯು ನೆಲೆಗೂರು ಮೊಗಪೆ ಅಳೆಯುಮ ಬಿಚ್ಚೆ (ಎಕ. IV, ಗುಂಡ್ಲುಪೇ. ೯೪-೫; ಸು. 890). [? + ಊರ್]

**ನೆಲೆಗೆಡಿಸು**, ನೆಲೆಗಿಡಿಸು (ಕ್ರಿ). ಸ್ಥಿತಿ ಕೆಡುವಂತೆ ಮಾಡು; ನೆಲೆಗೆಡುವಂತೆ ಮಾಡು : ತದುದ್ಯಾನಂ . . . ಉನ್ಮಾದವಿಷಯಮುಂ ವಿಮೋಹವಿಷಯಮುಮಾಗಿ ನಿಜಮಾನಸಾಂತರಾಳಮಂ ಭೋಂಕನೆ ಕಲಂಕಿ ನೆಲೆಗೆ[ಪಾಠಾಂ. ಗಿ]ಡಿಸೆ (ವರ್ಧಪು. ೬-೨೩ ಪ); ಇಂದ್ರನನು ನೆಲೆಗೆಡಿಸಿಯೈರಾವತವ ಧರೆಗಿಳುಹಿ ನೋನಿಸದಿರ್ದನಾದೊಡೆ ಇಳೆಯ ವಲ್ಲಭ ಧರ್ಮರಾಯನ ಪಾದದಾಣೆ (ಸಂಭಪ. ೨೦-೪೭); ಹರಿಯ ನೆಲೆಗೆಡಿಸಿದನು ಪರಮೇಶ್ವರನ ಭಿಕ್ಷವನೆತ್ತಿಸಿದ ಸರಸಿರುಹಭವ ತಾ ಶಿರವ ಹೋಗಾಡಿದನು ಪೂರ್ವದಲಿ (ನಳಚ. ೯-೯); ರಿಪುಸೈನ್ಯಕಾನನವನು ನೆಗ್ಗಿದರ್ನೆಲೆಗೆಡಿಸಿ ಬಿಱುಗಾಳಿಯಂತೆ (ಜೈಮಿಭಾ. ೮-೩೨); ಬೀಗಿಸುಗ್ಗಿಯ ಬಿಸಿಲ್ ನೆಲೆಗೆಡಿಸೆ ನೆಳಲಂ (ಕಾಲೂರ. ೧೩೬-೨೯೨). **ನೆಲೆಗಿಡಿಸು :** ಗೋಮೂತ್ರ ಮಂಡಲಮುಮಾಕಾಶಂ ಪೇಱವಿತಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲಂ (ಶಾಂತಿಪು. ೩-೨೩ ಪ); ವಿರೋಧಿವಂಶಾವಳಿಯಂ ನೆಲೆಗಿಡಿಸಿ ನಿನ್ನ ತೇಜೋಜ್ವಲನಂ ತಳ್ತಟ್ಟುಕೊಳ್ಗೆ ವಿಕ್ರಮತುಂಗಾ (ಕಾವ್ಯಾಪ. ೭೭೫); ಇವು ಮುನ್ನಾರಾರ ಬಲ್ಪಂ ನೆಲೆಗಿಡಿಸವು (ಕಬ್ಬಕಾ. ೩೦೬). [ನೆಲೆಗೆಡು + -ಇಸು$_3$]

**ನೆಲೆಗೆಡು**, ನೆಲೆಗಿಡು (ಕ್ರಿ). ೧. ನೆಲೆತಪ್ಪು; ಆಶ್ರಯವಿಲ್ಲದಾಗು; ನೆಲೆಯಿಲ್ಲದಾಗು; ನಿರಾಶ್ರಿತವಾಗು : ವಿಶಾಖನಂದನುಂ ತನ್ನ ರಾಜ್ಯಮಂ ದಾಯಿಗರೆಱೆದುಕೊಳೆ ನೆಲೆಗೆಟ್ಟು ಪೆಜರ ಬೆಸದೊಳೋಲೆಯ ನಡುಕುತ್ತುಮಾ ಪುರಕ್ಕೆ ಬಂದು (ಚಾವುಂಪು. ೧೪೧); ಗೋಮಹಿಷೀ ಕರೇಣುತುರಗೋಷ್ಟ್ರಕುಲಕ್ಕವಳಾಗೆ ಪೊಂದುಗುಂ ತಾಮಱಿದಿಂಗಳಿಂಗೆ ನೆಲೆಗೆಟ್ಟುಟಾಗುಂ (ಲೋಕೋಪ. ೪-೬೭); ಸಕಲರಾಜ್ಯಮಂ ಹೋಗಾಡಿ ಕಡೆಗಧಿಕಋಣಿಯಾಗಿ ನೆಲೆಗೆಟ್ಟು . . . ಜಗಕೆ ನಗೆಗೆಡೆಯಾದ ಪಾತಕ ಹರಿಶ್ಚಂದ್ರನವನನೇನೆಂದು ನೆನೆದಪೆ (ಹಚಕಾ. ೧೨-೪೩); ಶಿವತತ್ತ್ವಮುದು ಬೇರ್ವರೆಯಲಜ್ಞಾನಕೂಪ ನೆಲೆಗೆಟ್ಟುದೆನೆ ನಾಭಿ ನಿಮ್ನವನುಳಿದುದು (ಚಿಬಪು. ೪-೧೩). **೨.** ಸ್ಥಿರತೆಯನ್ನು ಕಳೆದುಕೊಳ್ಳು; ಅಸ್ಥಿರವಾಗು; ಚಂಚಲವಾಗು : ಪೊಲೆಬೂತಿನಂತೆ ಕಿಡೆ ನುಡಿಯದೆ ಪಾದರಸದಂತೆ ನೆಲೆಗೆಟ್ಟು ಪರಿಯದೆ (ಧರ್ಮಾಮೃ. ೧೧-೩೭). **೩.** ನೆಲೆಯನ್ನು ಮೀರು; ಕಟ್ಟಳೆಯನ್ನು ಅತಿಕ್ರಮಿಸು; ಅತೀತವಾಗು : ಕುಲದೊಳಗಿದ್ದು ಕುಲವ ಬೆರಸದೆ ನೆಲೆಗೆಟ್ಟು ನಿಂದುದನಾರು ಬಲ್ಲರು (ಅಪಚಂ. ೧-೩). **೪.** ಮೇರೆ ಮೀರು; ಹತೋಟಿ ಮೀರು : ಮಿಕ್ಕು ಮಾಸುವ ಬೆಳಗು ಕೆಂಪಡರ್ದ ಮುಗಿಲು ತಲೆಯಿಕ್ಕುವಬುಜಂ ನಗುವ ಕುಮುದ ನೆಲೆಗೆಡುವಬುಧಿ ತೆಕ್ಕೆಯಿಂದಗಲ್ವ ಚಕ್ರಂ (ಸೋಬುಚ. ೨-೧೦). **ನೆಲೆಗಿಡು :** ೧. ಆತಂಗೆ ಸರಸೆಯೆಂಬಳ್ ಪಾತಕಿ ಕುಲವನಿತೆಯೆನಿಸಿ ಕಯನೆಂಬ ಮಹಾಪಾತಕನೊಳ್ ಪುದುವಾಳ್ದಳ್ ಜಾತಿಯ ನೀತಿಯ ನೆಗಟಿತ್ತ ನೆಲೆಗಿಡುವಿನೆಗಂ (ಪಂರಾಪೂ. ೬-೩೩); "ಅಸ್ಥಿರವಾಗು" (ಪ್ರಭಣ್ಣ). [ನೆಲೆ$_1$ + ಕೆಡು$_1$]

**ನೆಲೆಗೆಯ್** (ಕ್ರಿ). ನಿರ್ಧಾರ ಮಾಡು; ಖಚಿತಗೊಳಿಸು : ನಿಡುಮಯಣಂ ಇರ್ಕೆ ರಾಘವಂ ಪೇೞ್ವಂ ಅಲ್ಲದೊಡೆ ತಾಂ ತಮಗೆ ನೆಲೆಗೆಯ್ವರ್ (ರಾಮಾಶ್ವ. ೨೭-೩೦). [ನೆಲೆ$_1$ + ಕೆಯ್$_1$]

**ನೆಲೆಗೊಡು** (ಕ್ರಿ). ಮರ್ಮವನ್ನು ತಿಳಿಯಲು ಅವಕಾಶ ಮಾಡಿಕೊಡು : ತಿಳಿಯೆ ಶಬ್ದ ಸ್ಪರ್ಶ ರೂಪಂಗಳಿಗೆ ರಸ ಗಂಧಂಗಳಿಗೆ ತಾ ಬಳಕೆಯಿಲ್ಲದ ಕತದಿನಿಂದ್ರಿಯಸಮಿತಿ ಹೊದ್ದದಡೆ ನೆಲೆಗೊಡದು ಪರತತ್ವ

ಸತ್ಕೋಜ್ವಲವನಂತಜ್ಞಾನವೆಂದಿಂತಲಘುಮಹಿಮೆಯನುಳ್ಳಧಿಕಬ್ರಹ್ಮವಱು (ತಿಮ್ಮಶಾಂ. ೬-೫). [ನೆಲೆ$_1$+ಕೊಡು$_1$]

**ನೆಲೆಗೊಳ್, ನೆಲೆಕೊಳ್, ನೆಲೆಗೊಳು, ನೆಲೆಗೊಳ್ಳು** (ಕ್ರಿ). ೧. ನೆಲೆ ನಿಲ್ಲು; ನೆಲಸು : ಲಲಾಟಾಗ್ರದೊಳ್ ನೆಲೆಗೊಂಡೊಪ್ಪುವ ವೀರಪಟ್ಟಂ (ಕಾವ್ಯಸಾ.೫೨೫ ಶೂದ್ರಕ) ; ಚಿರಂದೇವಿ ಸರಸ್ವತಿ ಹಂಸೀಭಾವದೆ ನೆಲೆಗೊಳ್ಗೆ ಕೊರ್ತು ಮನ್ಮಾನಸದೊಳ್ (ಕವಿರಾ. ೧-೩) ; ಅರಿನರಪಾಲಮೌಳಿಮಣಿಯೊಳ್ ನೆಲೆಗೊಂಡುದು ಶಂಖಚಕ್ರಚಾಮರಹಳಚಿಹ್ನಚಿಹ್ನಿತ ಪದಾಕೃತಿ (ಪಂಪಭಾ. ೬-೨೯) ; ಸ್ವಯಂಪ್ರಕಾಶವೆ ಶಿವನಾದ ಕಾರಣ ಆ ಮಹಾಪ್ರಕಾಶವೆ ನೇತ್ರಂಗಳೊಳಗೆ ನೆಲೆಗೊಂಡು ಸಕಲಪದಾರ್ಥಂಗಳ ಕಾಣಿಸಿ ತೋರ್ಪ ದೆಸೆಯಿಂ ನೇತ್ರಕ್ಕೆ ಶಿವಲಿಂಗವಾಗಬೇಕಾಯಿತ್ತು (ಆದವ. ೮-೧೩) ; ಶಿವಭಕ್ತಿ ನೆಲೆಗೊಳ್ವ ಸಮಸುಖಸಹಾಯಮಂ ನೆನೆದು ತನ್ನೊಳಗೊಳಗೆ ತಿಳಿದಂ ಶಿವಧ್ಯಾನಿ (ಬಸರ. ೫-೮). ೨. ಸ್ಥಾಪಿತಗೊಳ್ಳು ; ಸ್ಥಾಪನೆಯಾಗು : ಜಳನಿಧಿಯನೊಳಪೊಕ್ಕು ನೆಲೆಗೊಂಡುದಲ್ಲಿ ರಥಮವಿಚಳದಿಂ ನೆಲದಲ್ಲಿ ನಿಲ್ವವೊಲ್ (ಶಾಂತೀಶ್ವ. ೧೫-೧೧೪) ; ಬ್ರಹ್ಮೇಶ್ವರನು ನೆಲೆಗೊಂಡಿದ್ದನಲ್ಲಾ ಪೀಠಮಧ್ಯದಲಿ (ಬಸಪು.೫೪-೭೬); ನೆಲೆಗೊಂಡನಲ್ತೆ ಮಲಿನಾಪಹಾರಿ ನಿಶ್ಚಲ ಸತ್ಯಪಂ . . . ನಿಲಯಾಂತರಾಳದೊಳ್ (ಹಾಲಾಸ್ಯ.೩-೨-೨೯). ೩. ತಳವೂರು; ಬೇರು ಬಿಡು : ನಾಟುವಂಟುಗಳು ನಾಲ್ಕೆಂಟು ದಿವಸದಲ್ಲೆ ನೆಲೆಗೊಂಬುವವು (ಗಾದೆ). ೪. ಸ್ಥಿರವಾಗು ; ದೃಢವಾಗು : ಭಾವಶುದ್ಧವಿಲ್ಲದವಂಗೆ ಭಕ್ತಿ ನೆಲೆಗೊಳ್ಳದು (ಬಸವ. ೬೫೮) ; ಅನುಭಾವ ನೆಲೆಗೊಂಡಲ್ಲದೆ ಅಂಗಲಿಂಗದ ಹೊಲಬನಱಿಯಬಾರದು (ವಚಸಂ. ೪-೬) ; ನೆಲೆಗೊಳ್ಳದು ಚಿತ್ತ ಮಗನೆ ನೀನಿದಿರ್ವಂದು ತಲೆದೋಱಿಸು (ನೋಹತ. ೪-೮೧). ೫. ಸ್ಥಿತಿಯನ್ನು ಪಡೆ ; ರೂಪುಗೊಳ್ಳು ; ರೂಪುದಾಳು ; ಮೈದಾಳು : ಯುಗ ಜುಗ ಮಿಗಿಲೆನಿಸಿದ ಹದಿನಾಲ್ಕುಭುವನ ನೆಲೆಗೊಳ್ಳದಂದು ನಿಜವನಱಿದಿಹೆನೆಂಬ ತ್ರಿಜಗಾಧಿಪತಿಗಳಿಲ್ಲದಂದು ತೋಱುವ ಬೀಱುವ ಭಾವದಲ್ಲಿ ಭರಿತ ಅಗಮ್ಯ ಗುಹೇಶ್ವರಲಿಂಗವು (ಅಪಚಂ.೨-೭) ; ಜಾಂಬವನ ರೂಪಿಂದ ತೋಱಿದನಬುಜಭವನು ಪುರಂದರನು ನೆಲೆಗೊಂಡನಂಗದನಂಗಶೋಭೆಯಲಿ (ತೊರರಾ. ೧-೮-೬೭). ೬. ಉಂಟಾಗು ; ಒದಗು ; ಸಂಭವಿಸು : ದಾಹಂ ನೆಲೆಗೊಂಡರೋಚಕಮುಮಿರೆ ನಿಲಲಾಱದೊಡಾಮಜನಿತಮೆಂದಾ ಜ್ವರಮಂ (ಕಲ್ಯಾಕಾ. ೩-೧೪) ; ಇಂತು ತೀವಿದ ಗರ್ಭದಿಂ ಭಾವಭರಿತ ಪರಮಹರ್ಷಂ ನೆಲೆಗೊಂಡು ನಿಂದು (ಗಿರಿಕ. ೩-೩೯ ವ) ; ಅರಸುತನ ರಾಮಂಗೆ ನೆಲೆಗೊಳಲರಸಿ ಕೇಳೌ ನಿನ್ನ ಮಗನೇನರಸನೋ ಮೇಣ್ಪರಸನೋ ಸಾಮ್ರಾಜ್ಯಸೌಂದರಿಗೆ (ತೊರರಾ. ೨-೧-೨೬) ; ಬೆಲೆವೆಣ್ಣ ಬಲು ರಸಿಕರು ಭಾವಿಸರಾಕೆಗಳಿಜಸ ನೆಲೆಗೊಂಬುದಲೆ ಚಿತ್ತೈಸು (ಕಂಸವಿ. ೯-೧೫೮). **ನೆಲೆಕೊಳ್ :** ೧. ಶ್ರೀಸ್ವಸ್ತಿ ತನಗೆ ಮೃತ್ಯು ವರವಾನಱಿದೆ ಪೆರ್ಮಾಣವಂಶದೊನ್ . . . ಸುರ××ಗ ಗತಿಯುಳ್ನಲೆ ಕೊಣ್ಡನ್ (ಎಕ. II, ೯೯-೪ ; ಸು. 700). **ನೆಲೆಗೊಳು :** ೨. ತನುವಿನ ಕೊಱತೆಗೆ ಸುಳಿಸುಳಿದು . . . ಗುಹೇಶ್ವರನೆಂಬ ಲಿಂಗ ಮನದಲ್ಲಿ ನೆಲೆಗೊಳ[ಪಾಠಾಂ. ಳ್ಳ]ದಾಗಿ (ಅಪಚಂ. ೧೧೬-೫೨೬). **ನೆಲೆಗೊಳ್ಳು:** ೧. ಇದರಿಂದ ದೇಶದಲ್ಲಿ ಅಶಾಂತಿ ತಲೆದೋರಿ ಅಥರ್ವ ನೆಲೆಗೊಳ್ಳುತ್ತದೆ (ಪ್ರತಾಪ. ೯೧); ಆ ಬೋಧೆ . . . ಎದೆಯಲ್ಲಿ ನೆಲೆಗೊಂಡಿದ್ದ ಸ್ವಾಭಾವಿಕವಾದೆಣಿಕೆಯನ್ನಲುಗಿಸಿತು (ನಾಹೋಜ. ೩೬೮). ೩. ಗೌತಮಮಹಾಮುನಿಯ ಕಾಲದಲ್ಲಿಯೂ . . . ಈಗ ಇಪ್ಪತ್ತನೆಯ ಶತಮಾನದಲ್ಲಿ ಭಾರತಭೂಮಿಯಲ್ಲಿ ನೆಲೆಗೊಂಡಿರುವ ಬ್ರಿಟಿಷರ ಪ್ರಭುತ್ವದಲ್ಲಿಯೂ ಅದೇ ನಕ್ಷತ್ರಗಳೇ ಬೆಳಗುತ್ತಿರುವುವು (ಜ್ಯೋತಿರ್ವಿ. ೩). ೪. ಮುಂದಣ ಹಜ್ಜೆಯಳಿದಲ್ಲದೆ ಒಂದು ಪಾದ ನೆಲೆಗೊಳ್ಳದು (ಅಪಚಂ. ೧೦೫-೪೭೫). ೬. ನರಕದಲ್ಲಿ ಬೀಳುವ ಕರ್ಮಿಗಳಿಗೆ ಕೂಡಲಸಂಗನ ಶರಣರನುಭಾವ ನೆಲೆಗೊಳ್ಳದು (ಬಸವ. ೮೫೮) ; ಕಷ್ಟ ದುಃಖ ನೆಲೆಗೊಂಡಿತ್ತೆಂದು ತನ್ನಿಷ್ಟಲಿಂಗಪೂಜೆಯನಗಲಿಸಿ ಬಿಟ್ಟಯ ಮಾಡಬಹುದೇನಯ್ಯ (ವಚಸಂ. ೩೧೪-೭೭) ; ಇಂತೀ ತ್ರಿವಿಧ ಸಂಪತ್ತು ನೆಲೆಗೊಂಡ ಸದ್ಭಕ್ತಂಗೆ ನಮೋನಮಃ ಎಂಬೆನಯ್ಯ (ಅಖಂಡೇ. ೮೬-೮೭). ೭. ಸೇರಿಕೊಳ್ಳು ; ಕೂಡಿಕೊಳ್ಳು ; ಜೊತೆಯಾಗು : ತನ್ನವರೊಡನೆ ನೆಲೆಗೊಂಡು ಮಹಮ್ಮದನನ್ನು ತೊಂದರೆಪಡಿಸತೊಡಗಿದನು(ಪೈಮಹ.೬೮).

[ನೆಲೆ$_1$+ಕೊಳ್$_1$]

**ನೆಲೆಗೊಳಿಸು** (ಕ್ರಿ). ೧. ನೆಲಸುವಂತೆ ಮಾಡು ; ನೆಲೆ ನಿಲ್ಲುವಂತೆ ಮಾಡು : ಅಂತಾ ಗರ್ಭೇಶ್ವರಿಯರಾ ಪುರುಪರಮೇಶ್ವರನ ಮನಸ್ಸರೋವರದೊಳ್ ತಮ್ಮ ಪಾದಪದ್ಮಂಗಳಂ ನೆಲೆಗೊಳಿಸಿಯುಂ (ಆದಿಪು. ೮-೨೪ ವ); ಆಚಾರವೇ ಲಿಂಗವೆಂದಱುಹಿದನಯ್ಯ ಬಸವಣ್ಣನು ಪ್ರಾಣದಲ್ಲಿ ಅಱಿವ ನೆಲೆಗೊಳಿಸಿದ[ಪಾಠಾಂ. ಎನ್ನ ಪ್ರಾಣದಲ್ಲಿ ಅಱುಹ ತೋಱಿದನಯ್ಯ ಬಸವಣ್ಣನು](ಮಹಾದೇ. ಬ. ೬೧-೧೫೧) ; ಮದೀಯ ಪದಪಂಕರುಹಮುಂ ತನ್ನಾತ್ಮದೊಳ್ ನೆಲೆಗೊಳಿಸಿ ಭಕ್ತಿಯಲಿ (ಬಸಪು.೨-೧೧); ಮಾತೃ ಪಿತೃಗಳು ಶತ್ರುಭಾವವನಾಂತು ನಿಜಸಂತಾನದಲಿ ಸಂಪ್ರೀತಿಯನು ನೆಲೆಗೊಳಿಸಿ ಸರ್ವಜ್ಞಾಧಿಕಾರದಲಿ ಖ್ಯಾತರನು ಮಾಡದಡೆ . . . ಯೋಗ್ಯರಹರೇ (ಕುಮ್ಯಾಉ. ೩-೨೦) ; ಸತಿ ಸುತರ ಪಿತೃ ಮಾತೃಗಳ ಸಂಗತರ ಸದ್ವಂಶಾಭಿಮಾನವನತಿಗಳೆಸಿ [ಪಾಠಾಂ. ಗಮಿಸಿ] ಮಕರಧ್ವಜನ ಮಾಯೆಯಲಿ ನೆಲೆಗೊಳಿಸಿ . . . ಚಪಳೆಯರು ಮೋಹಿಸಿತು (ತೊರರಾ. ೧-೫-೨೮). ೨. ಇರಿಸು ; ನಿಲ್ಲಿಸು : ಕೊಳುಗುಳವನಾರೈದು ಬಾಯೆನೆ ನಿಲುವುದನು ಚಿತವರ್ಜುನನ ನೆಲೆಗೊಳಿಸಿ ಬಹೆನೆಂದಾಯುಧವ ಕೊಂಡಡರಿದನು ರಥವ (ಕುಮ್ಯಾದ್ರೋ. ೧೧-೩) ; ನಿಟಲಾಕ್ಷ ಭೀತಸ್ಥನಾಗಿ ಕುಟಿಲವರ್ಜಿತ ನಿಡುಜಡೆಯೊಳಗಾಕಾಶತಟಿನಿಯ ನೆಲೆಗೊಳಿಸಿದನು (ನೋಹತ. ೧೯-೪೭). ೩. ಅಳವಡಿಸು ; ಹೊಂದಿಸು : ನೆಲೆವಾಡದೊಳು ನೀನೆನ್ನ ನೆಲೆಮೊಲೆಗಳಿಗೆ ಮಕರಿಕಾಪತ್ರವ ನೆಲೆಗೊಳಿಸಂಗಜರೂಪ (ಕುರಾಸಾಂ. ೨೬-೭೩) ; ತಲೆವಳಸಿ ನೆಲೆಗೊಳಿಸಿದ ಮಾಣಿಕ್ಯದ ತಲೆಮಾಲೆಯ ಪರಿಸರದೊಳೆಳಲೆವಿಟ್ಟ ಕನಕದರಳೆಲೆಮಾಲೆಯ . . . ವಿಳಾಸಮುಳವಡೆ (ರಾಜಶೇ. ೬-೧೧ ವ).

[ನೆಲೆಗೊಳ್ + -ಇಸು$_3$]

**ನೆಲೆಗೊಳು** 'ನೆಲೆಗೊಳ್' ನೋ.

**ನೆಲೆಗೊಳ್ಳು** 'ನೆಲೆಗೊಳ್' ನೋ.

**ನೆಲೆಗೋಟೆ** (ನಾ). ಸ್ಥಿರವಾದ ಕೋಟೆ,—ದುರ್ಗ : ಅಗ್ಗಿ ತಗ್ಗದ ನೆಲೆಗೋಟೆ ಧೂಳಿಪಟವಾಗದ ದುರ್ಗ್ಗಕುಲಮ್ (ಎಇ. V, ೧೬-೧೧ ; 1142). [ನೆಲೆ$_1$+ಕೋಟೆ$_1$(<ಕೋಂಟೆ)]

**ನೆಲೆಜವ್ವನ** (ನಾ). ತುಂಬುಜವ್ವನ; ಪೂರ್ಣಯೌವನ: ಎಲೆಲೆ ಕಲಾವತಿಗೀ ಪರಿ ನೆಲೆಜವ್ವನಮೊದವಿತಮಮ (ಚಕವಿ. ೬-೧೧೧).

[ನೆಲೆ$_1$+ಜವ್ವನ]

**ನೆಲೆತಪ್ಪು** 'ನೆಲೆದಪ್ಪು' ನೋ.

**ನೆಲೆದಪ್ಪಿಸು** (ಕ್ರಿ). ೧. ಆಧಾರವಿಲ್ಲದಂತಾಗಿಸು ; ಆಶ್ರಯವಿಲ್ಲದಂತೆ ಮಾಡು : ತನ್ನ ಆಳದ ಒಳನೋವಿನ ನವಿರುಗೂಡಿದ ನುಡಿಯ ಬರೆಹಗಳನ್ನೆಲ್ಲ ಹೀಗೆ ನೆಲೆದಪ್ಪಿಸಿ ಬಿಟ್ಟದ್ದಕ್ಕೆ ಅಮಲನು ಮನಮನದೊಳಗೆ ಚಾರುಲತೆಯ ಮೇಲೆ ಸಿಡಿಮಿಡಿಗೊಂಡನು (ಇಪ್ಪಕ. ೨೪೧). ೨. ಗುರಿ ತಪ್ಪಿಸು ; ದಿಕ್ಕು ತೋಚದಂತೆ ಮಾಡು: ಇಂತಿದು ಕಟಾ! ಸೋದರರಂ ಸೊಮ್ಮಗಿಡಿಸಿದುದು, ಅಗಸ್ತ್ಯನಂ ನೆಲೆದಪ್ಪಿಸಿದುದು ; ಸಾಜಮಲ್ತೇ ಪತಿಪತ್ನಿಗಳೊಳ್ ವಿಯೋಗ ದುಃಖಂ ! (ರಾಮಾಶ್ವ. ೪೬-೧೯). [ನೆಲೆದಪ್ಪು + -ಇಸು$_3$]

**ನೆಲೆದಪ್ಪು**, ನೆಲೆತಪ್ಪು (ಕ್ರಿ). ೧. ಆಶ್ರಯವಿಲ್ಲದಂತಾಗು ; ಸ್ಥಾನಭ್ರಷ್ಟವಾಗು ; ನಿರಾಧಾರವಾಗು : ವಿಪತ್ತು ಬಂದಡಸಿದಾಗಳೆ ತಗ್ಗಿಸವೇೞ್ಕುಮೆಂದು ನೆಟ್ಟಗೆ ನೆಲೆದಪ್ಪಿರಲ್ ಬಿಡದೆ ಮುತ್ತಿದ ತುಂಬಿಯ ಬಂಬಲೆಂಬಿನಂ ಸೊಗಯಿಸುವಿಂಪುಗಂಪನಮರ್ದಪ್ಪಿ ಮನಂಗೊಳಿಪಚ್ಚ ಪೊಚ್ಚ ಸಂಪಗೆಯರಲಂ ತುಱುಂಬಿದ ತುಱುಂಬೆಸೆದಿರ್ದುದು ತದ್ವಧೂಟಿಯಾ (ಉದ್ಭಟ. ೯-೭೪) ; ಮೇಲುಜಗವೇಳೋಡಿದವು ಧ್ರುವನಾಲಯಕೆ ನೆಲೆದಪ್ಪಿದುದು ಗ್ರಹಮಾಲೆ (ಕುವ್ಯಾದ್ರೋ. ೧೯-೧೯). ೨. ಮೇರೆ ಮೀರು ; ಉಕ್ಕೇರು : ಹಗೆಗೆ ಕಾಲ್ಸೊಳೆಯಾದ ವೀರರಸಾಬ್ಧಿ ನೆಲೆದಪ್ಪಿತ್ತು ನಿಮಿಷದಲಿ (ಕುವ್ಯಾಶ. ೧-೨೫). ೩. ಸ್ಥಿತಿ ಕೆಡು: ತುಸು ಗಾಳಿ ತಾಕುತ್ತಲೇ ಅವನು ಸೀತು ಕೆಮ್ಮಿ ನೆಲೆದಪ್ಪಿದಂತೆ ಮಾಡುತ್ತಾನೆ (ಇಪ್ಪಕ. ೪೧೩). ೪. ಹಾಳಾಗು ; ದುರ್ದೆಶೆಗೆ ಬರು : ನೆಲೆದಪ್ಪಿದಡೆಗೆ ಮತಿ ಸಂಚಲಿಸಿರ್ದಡೆಗನ್ಯದೇಶವಾದೆಡೆಗೆ ಖಳರ್ ಮುಳಿದೆಡೆಗೆ ಬುದ್ಧಿ ವೇಟಲ್ ಕುಲವಧುವೇ ಕಾರಣಂ (ದಶಕು.೧೨-೧೬೧). **ನೆಲೆತಪ್ಪು :** ೧. ಶಕುಂತಲೆ ತನ್ನಿಂದ ಧಿಕ್ಕಾರ ಹೊಂದಿ . . . ನೆಲೆತಪ್ಪಿ ನಿಂತಾಗ, ಅವಳು ತನ್ನ ಕಡೆಗೆ ಬೀರಿದ ಬಾಷ್ಪಾಕುಲವಾದ ದೃಷ್ಟಿ ಈಗ ವಿಷದ ಮುಳ್ಳಿನಂತೆ ಅವನನ್ನು ದಹಿಸತೊಡಗಿತು (ಕಾವ್ಯಸ. ೫೦). [ನೆಲೆ$_1$ + ತಪ್ಪು$_1$]

**ನೆಲೆದಾಣ** (ನಾ). ಆಶ್ರಯಸ್ಥಾನ ; ಆಕರ : ಬೆಲೆವೆಣ್ಗಳಾಡುಂಬೊಲ ಬೆಸವೆಣ್ಗಳ ನೆಲೆದಾಣ ಬಿಡುವೆಣ್ಣುಗಳ ನಿಳಯವೆನಿಸಿ ಮೆಱೆದಿಹುದಾ ದುರ್ಗದ ಕಲಕಲರವ ರಾಜವೀಥಿ (ಕುರಾಸಾಂ. ೪-೧೧೬); ಕಾಣುತೀಶನ ಮೂರ್ತಿಯಂ ಮಹಾಸತಿಯರಿರ್ದದಾಣಮಲರ್ಗಣೆಗೆ ನೆಲೆದಾಣಮಾದುವು (ಚಿಬಪು. ೨೦-೧೯). [ನೆಲೆ$_1$ + ತಾಣ]

**ನೆಲೆದೀಪ** (ನಾ). (ಪೂಜೆಯನ್ನು ಹೊಂದುವ) ಒಂದೇ ಸ್ಥಳದಲ್ಲಿ ಸ್ಥಿರವಾಗಿ ಉರಿಯುವಂತೆ ಇಟ್ಟಿರುವ ದೀಪ; ನಂದಾದೀಪ: (ಶಿ). [ನೆಲೆ$_1$+ದೀಪ$_2$]

**ನೆಲೆದೀವಿಗೆ** (ನಾ). = ನೆಲೆದೀಪ : (ಶಿ). [ನೆಲೆ$_1$+ದೀವಿಗೆ]

**ನೆಲೆದೆಗೆ** (ಕ್ರಿ). ಸ್ಥಳವನ್ನು ಬಿಡು ; ಜಾಗ ಬಿಟ್ಟು ಕದಲು : ನೆಲೆದೆಗೆದು ನಮ್ಮವರ ನೃಪನರನೆಲೆಗೆ ಸೇರದೆ ಸರಿಯೆ ಕಂಡನು ನಳಿನಮಿತ್ರನ ಮೊಮ್ಮ ತಡೆದನು ಭೀಮನುರವಣೆಯ (ಕುವ್ಯಾಕ. ೧೯-೧೦೦). [ನೆಲೆ$_1$ + ತೆಗೆ$_1$]

**ನೆಲೆದೇಗುಲ** (ನಾ). ಸ್ಥಿರವಾದ ಆಲಯ : ಪಲರಂ ರಕ್ಷಿಸಿ ಮತ್ತಂ ಪಲವಂ ನಡೆದೇಗುಲಂಗಳಂ ಮಾಡಿಸಿದಂ ನೆಲನೆಲ್ಲಮಱಿಯೆ ಚಟ್ಟಂ ನೆಲೆದೇಗುಲಮುಮನಿದೊಂದನೊಲ್ದೆತ್ತಿಸಿದಂ (ಎಕ. V, ಬೇಲೂರು. ೧೯೩-೯೪ ; 1160). [ನೆಲೆ$_1$ + ದೇಗುಲ]

**ನೆಲೆದೊಡಿಗೆ** (ನಾ). ಯಾವಾಗಲೂ ಧರಿಸುವ ಆಭರಣ : ಪುಲಿದೊವಲುಡುಗೆಯ ಹಾವಿನ ನೆಲೆದೊಡಿಗೆಯ ನೊಸಲ ಕಣ್ಣ ಖಟ್ವಾಂಗದ ಪಂದಲೆಗಳ ಮಾಲೆಯ ಶೂಲದ ಕಲಿಗಂಜದೆ ಮನವನೆಂತು ಮಾಡಿದೆ ಮುಗ್ಧೇ (ಗಿರಿಕ. ೯-೧೧೪). [ನೆಲೆ$_1$ + ತೊಡಿಗೆ(<ತೊಡುಗೆ)]

**ನೆಲೆದೊಳ್ತು**(ನಾ). ಯಾವಾಗಲೂ ಇರುವ ಸೇವಕ; ಜೀತದಾಳು. **ನೆಲೆದೊಳ್ತಿರ್** (ಬಹುವ): ನಲಿನಲಿದು ಬಂದು ಗಿರಿಪತಿಯೊಲವಿಂದಂ ಗಿರಿಜೆ ಸಹಿತವುಂ ನಾವೆಲ್ಲವುಂ ನೆಲೆದೊಳ್ತಿರ್ ಬಳಿದೊಳ್ತಿರ್ ಸಲೆದೊಳ್ತಿರ್ ಶಿಮುಗೆನುತ್ತೆ ಧಾರೆಯನೆಱೆದಂ (ಗಿರಿಕ. ೧೦-೯೫). [ನೆಲೆ$_1$+ತೊಳ್ತು (<ತೊೞ್ತು)]

**ನೆಲೆದೋಱು** (ಕ್ರಿ). ೧. ಸ್ಥಳವನ್ನು ತೋರಿಸು : ಮುಕ್ತಿಗಿದು ನೆಲೆದೋಱುವುದು ಹರಿಭಕ್ತರಿದನಾಲಿಪುದು (ಹರಿಸಾ. ೧೮). ೨. ಕಾಣಿಸಿಕೊಳ್ಳು ; ತಲೆದೋರು : ಇಂತು ನಿಟ್ಟಿಸಿದರಸಂಗೆ ಅಲುಗದ ತುಱುಗೆವೆನಟ್ಟಿಡೆದೊಲಗದ ಕಡುನೇಹ ದಿಟ್ಟಿ ಬಟ್ಟಾಡುವ ನೀರ್ ತಳೆಯೋಱುವ ಸಂತಸದಿಂ ನೆಲೆದೋಱಿದುವಂದು ನಂದನಾಲೋಕನದೊಳ್ (ಚಿಕವಿ. ೪-೬೭). [ನೆಲೆ$_1$ + ತೋಱು]

**ನೆಲೆನಿಲ್**, ನೆಲೆನಿಲ್ಲು (ಕ್ರಿ). ಸ್ಥಿರವಾಗಿ ನಿಲ್ಲು ; ನೆಲಸು : ಒಲಿದಿನಿಯನ ನಲ್ಪಗೆಯ ನೆನಹಿನೊಳು ನೆಳೆನಿಂದು ನೇಮುಗೊಳುವಳು (ಹದಿಬ. ೭-೮) ; ಮನಂ ನೆಮ್ಮುಗೆಗೊಂಡು ನೆಲೆನಿಲ್ವಿನಂ ತೀರ್ಥಾಟನಂಬೋಗಲೆಣಿಸಂ (ರಾಮಾಶ್ವ. ೭೫-೧೦). **ನೆಲೆನಿಲ್ಲು :** ನಮ್ಮ ಪೂರ್ವಿಕರಂದು ನೆಲೆನಿಂದರೈತಂದು ಆ ದೇವರರ್ಚಕರಾಗಿ (ಇಂಚಾಪ.೫-೧೨) ; ರಾಜಾಜಿಗೆ ಮದರಾಸು ಬೊಂಬಾಯಿ ಕಲಕತ್ತಗಳಂತಹ ವಿಶಾಲ ನಗರಗಳಲ್ಲಿ ನೆಲೆನಿಲ್ಲುವ ಆತುರವಾಯಿತು (ರಾಜವ. ೬೭). [ನೆಲೆ$_1$+ನಿಲ್]

**ನೆಲೆನಿಲ್ಲು** 'ನೆಲೆನಿಲ್' ನೋ.

**ನೆಲೆನೋಡು** (ಕ್ರಿ). ಸ್ಥಳವನ್ನು ನೋಡು : ಬಿಗಿ ಪುಗು ಬಿಟ್ಟು ಕೂಡು ಜಡಿ ಬಗ್ಗಿಸು ಪೊಯ್ನೆಲೆನೋಡು ಸಾಯೆ ಸಾರ್ದುಗಿ ಕೊಳೆ ನೂಂಕು ಸಾರ್ಚು . . . ತೆಗೆ ತೊಂಗಲನಿಂಬೆನೆ ನೂಂಕು ಯುದ್ಧಮಂ (ಕಾವ್ಯಾವ. ೪೦೬). [ನೆಲೆ$_1$ + ನೋಡು]

**ನೆಲೆಬಾೞ್$_1$** (ಕ್ರಿ). ಚೆನ್ನಾಗಿ ಬದುಕು : ನೆಲೆಬಾೞ್ಗೆ, ನೆಲೆಬಾೞ್ಗಳ್, ನೆಲೆಬಾೞ್ದಂ, ನೆಲೆಬಾೞ್ದಪಂ, ನೆಲೆಬಾೞ್ವಂ, ನೆಲೆಬಾೞ್ಗುಂ (ಶಬ್ದಾನು. ೭೪ ಪ್ರಯೋ). [ನೆಲೆ$_2$ + ಬಾೞ್$_1$]

**ನೆಲೆಬಾೞ್$_2$** (ನಾ). ಸ್ಥಿರವಾದ ಜೀವನ,—ಬದುಕು : ನೆಲೆಬಾೞ್ಗೆ, ನೆಲೆಬಾೞ್ಗಳ್, ನೆಲೆಬಾೞ್ದಂ, ನೆಲೆಬಾೞ್ದಪಂ, ನೆಲೆಬಾೞ್ವಂ, ನೆಲೆಬಾೞ್ಗುಂ (ಶಬ್ದಾನು. ೭೪ ಪ್ರಯೋ). [ನೆಲೆ$_1$+ಬಾೞ್$_2$]

**ನೆಲೆಬಿಂಬ** (ನಾ). ಶಾಶ್ವತವಾದ ಬಿಂಬ (?) : ಹೊಳೆಯ ಸುಳಿಯಲ್ಲಿ ಸಿಕ್ಕಿದ ಹುಲ್ಲು ಬಳಸುವದಲ್ಲದೆ ಅಳಿವುದಿಲ್ಲ ಮುಳುಗುವದಿಲ್ಲ ಭವಸಾಗರದಲ್ಲಿ ಸಿಕ್ಕಿದ ಚಿತ್ತು ತೆಱಪಿಂಗೊಡಲಿಲ್ಲ ಜಲಪಾಷಾಣದಂತೆ ನೆಲೆಬಿಂಬದಂತೆ ಈ ಸುಲಲಿತ ಬಲುಗೈಯ್ಯರಿಲ್ಲದ ಲಿಂಗೈಕ್ಯವು ನಿಃಕಳಂಕ ಮಲ್ಲಿಕಾರ್ಜುನಾ (ಮೋಳಿಮಾ. ೧೩೧-೫೦೭). [ನೆಲೆ$_1$+ಬಿಂಬ]

**ನೆಲೆಬೀಡು** 'ನೆಲೆವೀಡು' ನೋ.

**ನೆಲೆಬೀಳು** (ಕ್ರಿ). ರಚ್ಚೆಹಿಡಿ ; ಚಂಡಿಹಿಡಿ: ಹುಡುಗ ಅತ್ತು — ಅತ್ತು — ಅತ್ತು ನೆಲೆ ಬಿದ್ದ. ಅತ್ತೆ ಅವನಿಗೆ ಅಂಗಾರ ಹಚ್ಚಿದಳು ; ಧೂಪ ಹಾಕಿದಳು. ಆದರೂ ಅವನ ಅಳು ನಿಲ್ಲಲಿಲ್ಲ (ಸ್ಮೃತಿಚಿ. ೧೦೬). [ನೆಲೆ ?+ಬೀಳು$_1$(<ಬೀೞ್$_1$)]

**ನೆಲೆಬೆಲೆ** 'ನೆಲೆವೆಲೆ' ನೋ.

**ನೆಲೆಮನೆ** 'ನೆಲೆವನೆ' ನೋ.

**ನೆಲೆಮಾಡ** 'ನೆಲೆವಾಡ' ನೋ.

**ನೆಲೆಮುರಿ** (ಕ್ರಿ). ಆಶ್ರಯ ತಪ್ಪಿಹೋಗು ; ಆಧಾರವಿಲ್ಲವಾಗು : ಬಿಟ್ಟಿ ಬಟ್ಟಿಲು ಕೈಯಲ್ಲಿ ತಕ್ಕೊಂಡು ಮೆಟ್ಟಿಲೇರುವಷ್ಟರಲ್ಲಿ, ನೀರಿನ ಪ್ರವಾಹವು ಬಂದು ನೆಲೆಮುರಿಯಿತು. ಭಾಗೀರಥಿ ಕೆರೆಗೆ ಆಹುತಿಯಾದಳು (ಕಪವು. ೭-೨೪). [ನೆಲೆ$_1$+ಮುರಿ$_2$(<ಮುಱಿ$_1$)]

**ನೆಲೆಮೂಡು** (ಕ್ರಿ). ನೆಲಸು ; ಸ್ಥಾಪಿತವಾಗು ; ಭದ್ರವಾಗು : ತಾಯಿಯ ಮನೋಭಾವ ಸಹೃದಯತೆ ಇವು ಮಗನಲ್ಲಿಯೂ ಮಗನ ಗುಣಗಳು ತಾಯಿಯಲ್ಲಿಯೂ ನೆಲೆಮೂಡಿ ಅವರ ಸಂಸಾರ ಜೇನಿನಲ್ಲಿ ಸಕ್ಕರೆ ಬೆರಸಿದಂತಿತ್ತು (ಕೊನೆಭೇ. ೨೦) [ನೆಲೆ$_1$+ಮೂಡು$_1$]

**ನೆಲೆವೊಲೆ** (ನಾ). ಉನ್ನತವಾದ ಸ್ತನ; ಬಲ್ಮೊಲೆ : ಅಲಘುನಿತಂಬದ ಪೊಯ್ಲೊಳ್ ನೆಲೆಮೊಲೆಯುಳ್ಳೆಱೆನೊಳ್ ತರಂಗಂಗಳ್ ತೂಳ್ದಲಱುಗುಮವಳ್ಳೆಱೆನೊಳಲಱುಗುಮೆರ್ದೆ ತೆರೆಗಳಳಱು ತೂಳ್ವುದು

ಪಿರಿದೇ (ಆದಿಪು. ೧೧-೧೪೨) ; ಅಭೀಷೇಕಕ್ಕೆ ಬಂದಿಱಿದ ಪುಳಿಂದರಾಜ ಸುಂದರಿಯರ ನೆಲೆವೊಲೆಯ ಸಿರಿಕಂಡದಣ್ಪಿನಿಂ ಪೊರೆದು ಬೆಳರ್ಪನಾಂತ ತೆರೆಗಳೊಳಂ (ಕಾದಂಪೂ. ೧೧೭) ; ನೆಲೆವೊಲೆ ಹಾರಮುಂ ಕೆಲಕೆ ನೂಂಕಿದುದು (ಪ್ರರ್ಧಪು. ೯-೩೦) ; ವಕ್ಷಃಶ್ರೀ ನೆಲೆವೊಲೆಗೆ ತಿಲಕವಿಕ್ಕೆ ಮುಖಂ ಲಾವಣ್ಯದ ಚಿಬ್ಬುವೊಯ್ಕೆ . . . ಸುಮುಹೂರ್ತದೊಳು ಸುಪುತ್ರನುದ್ಭವಿಸೆ (ಬಸರ. ೧೦-೧೦೦). [ನೆಲೆ$_1$+ಮೊಲೆ$_1$]

**ನೆಲೆಯರಿ** 'ನೆಲೆಯಱಿ' ನೋ.

**ನೆಲೆಯಱಿ,** ನೆಲೆಯರಿ (ಕ್ರಿ).**೧.** ಆಳವನ್ನು ತಿಳಿ ; ಮರ್ಮವನ್ನು ಅರಿತುಕೊಳ್ಳು ; ಒಳಗನ್ನು ತಿಳಿ : ಬಲಮುಱಿಯದಾತನ ಕಾಳೆಗಮುಂ ನೆಲೆಯಱಿಯದೆ ತೊಱೆಯಂ ಪಾಯ್ವನುಂ . . . ತುದಿಯೊಳ್ ಮಹಾದುಃಖಮನೆಯ್ದುವರಲ್ಲದೆ ಸುಖಮನೆಯ್ದುವರಲ್ಲರಿಂತು (ಧರ್ಮಾಮೃ. ೧೧-೪೨ ಅಡಿಟ) ; ಭರತವನೋದುತುಂ ಮತ್ತುಳಿದ ಕಲಾಳಿಗಳ ನೆಲೆಯಱಿದುಸುರುತುಂ (ಪದ್ಮರಾ.೯-೩೪) ; ತತ್ತ್ವದ ನೆಲೆಯಱಿತಾಮಾರ್ಗದಿಂದತ್ತಲಿತ್ತಲ್ ಪೊಳೆದತ್ತಂ ಪೋಗದಂತಿರ್ಕುಳಿಸುತೆ ಬುಧರಂ ತರ್ಕಿಕುಂ ಚಿಕ್ಕದೇವಂ (ಚಿಕವಿ. ೪-೧೦೦). **ನೆಲೆಯರಿ : ೨.** ಸ್ಥಳವನ್ನು ತಿಳಿದುಕೊಳ್ಳು ; ಜಾಗವನ್ನು ಕಂಡುಕೊಳ್ಳು : ಪೊದರ್ಪೊಕ್ಕು ಪುಲಿವುದುಗಿ ಕುಳಿತು . . . ಕೆಂಡ್ಗಣ್ಗಳಂ ಬಿಡುತ್ತಿರೆ ಶಬರರುಂ ನೆಲೆಯರಿದು ಮುತ್ತಿ ಬಾಲಂಗಳಿಂದೊತ್ತಲು (ನಪಮೋ.೧೬-೨೮).

[ನೆಲೆ$_1$+ಅಱಿ]

**ನೆಲೆಯಾಂದೆ** (ನಾ). ಕದಲದೆ ನೆಲೆಯಾಗಿರುವ ಗೂಬೆ; ಸ್ಥಿರವಾಗಿ ಒಂದೇ ಎಡೆಯಲ್ಲಿರುವ ಗೂಗೆ: ಎಲೆ ದೇವರೆ ಪುತ್ತುಂ ಬತ್ತಲೆಯುಂ ಬಱಿದಿಲ್ಲರೆಂಬರದು ಕಾರಣದಿಂ ನೆಲೆಯಾಂದೆಯ ನಚ್ಚಿದ ಪೋಲೆಲೆ[ಪಾಠಾಂ. ನೆಲೆಯಾಂದೆಗನಚ್ಚಿಯ ಪೋಲೆಲೆ, ನೆಲೆಯಾಂದೆಯುಮನರ್ಚಿಸಿದೆಲೆ] ಮಿಡುಕದೆ ನೆನೆಯುತಿರ್ದಿರೇನಂ ಮನದೊಳ್ (ಯಶೋಚ. ೪-೧೫). [ನೆಲೆ$_1$+ಆಂದೆ]

**ನೆಲೆಯಾಸೆ** (ನಾ). ದೃಢವಾದ ಬಯಕೆ : ಮೋಡ ಮುತ್ತುವ ಜಡೆಗೆ ಜಾಹ್ನವಿಯೆ ಜಾರಿ ಬರೆ ಪಕ್ಕೆಳವೆರೆ ಸೆಕ್ಕಿ ಕಣ್ ಸವಿಯ ಕೊಳುತ ಮೆರೆವಿದರ ದರ್ಶನವೆ ದುಡುಕಿಸುವುದೆನ್ನೆದೆಯ ನಡೆಯ ಮನುಜಗಿದು ನೆಲೆಯಾಸೆಯೋ ಕಟ್ಟಕಡೆಯ ? (ಮಲೆದೇ. ೧೨-೧೦). [ನೆಲೆ$_1$+ಆಸೆ$_1$]

**ನೆಲೆಯುಪ್ಪರಿಗೆ** (ನಾ). ಅಂತಸ್ತುಗಳಿಂದ ಕೂಡಿರುವ ಮನೆ ; ಮಹಡಿ ಮನೆ ; ಕರುಮಾಡ : ಮೇಗಣ ನೆಲೆಯುಪ್ಪರಿಗೆಯ ಕಳಕಳರವಮಂ ಕೇಳ್ದು (ಬಾಧಪು. ೨-೬೮ ಪ) ; ದ್ರೋಣನಿದಿರಾಗಿ ಧರಣಿಪನ ಸತ್ಕರಿಸಿ ನೆಲೆಯುಪ್ಪರಿಗೆಗೊಯ್ದನು (ಕುಪ್ರಾದ್ರೋ. ೮-೫೬) ; ನಿಡಿಯ ಬಾಲವ ಬೀಸಿ ಬೀದಿಗಳೆಡಬಲದ ನೆಲೆಯುಪ್ಪರಿಗೆಗಳನಡಿಮುಗುಚುತ್ತೈತಂದನನಿಲಜನಂಜಲಖಿಳಜನ (ತೊರರಾ. ೫-೭-೧೪) ; ಮತಿಗೆಡಿಪ ಬೆಲೆವೆಣ್ಗಳೊಪ್ಪಿವ ರತುನಗಳ ನೆಲೆಯುಪ್ಪರಿಗೆ ತರತರದಿ ಮೆಱೆದಿಹುದು (ಸಾಳ್ವಭಾ. ೨-೧೦). [ನೆಲೆ$_1$+ಉಪ್ಪರಿಗೆ]

**ನೆಲೆಯೂರು$_1$** (ಕ್ರಿ). ಸ್ಥಿರವಾಗಿ ನಿಲ್ಲು ; ನೆಲೆಯಾಗಿ ನಿಲ್ಲು ; ನೆಲಸು : ಆಗ ಸ್ವಾಮಿಗಳು ತಾವು ಅನುಸರಿಸಿದ ಮಾರ್ಗವೇ ಯೋಗ್ಯ . . . ಎಂದು ಕೂಗಾಡಿ ಹಳ್ಳಿಯ ಹಿರಿ-ಕಿರಿಯರಲ್ಲಿ ನೆಲೆಯೂರಿ ಬಿಡುತ್ತಿದ್ದರು (ಜಯಂತ. ೧೧). [ನೆಲೆ$_2$+ಊರು$_1$(<ಊಱು$_1$)]

**ನೆಲೆಯೂರು$_2$** (ನಾ). ನೆಲಸಿರುವ ಸ್ಥಳ ; ವಾಸಸ್ಥಾನ : ತಂಮ ನೆಲೆಯೂರು ಸಿಂದಂಗೆಱೆಯ ಬಸದಿಗೆ . . . ಧಾರಾಪೂರ್ವ್ವಕಂ ಹಡೆದು ಬಿಟ್ಟ ಸವಗೋನಹಳ್ಳಿಯ ಸೀಮಾಸಮ್ಬಂಧಂ ಎಂತೆಂದಡೆ (ಎಕ. VI, ಚಿಕ್ಕಮ. ೧೬೧-೩೧ ; 1137) ; ಆ ಸೋಮಯಾಜಿಯ ನೆಲೆಯೂರು 'ವೆಂಗಿಪಱು' (ನಾಡೋಜ. ೬೪). [ನೆಲೆ$_1$+ಊರು$_3$(<ಊರ್)]

**ನೆಲೆವಂತ** (ನಾ). **೧.** ನೆಲೆಯುಳ್ಳವನು ; ಆಧಾರವಿರುವವನು : "ಸೂದಃ = ನೆಲೆವಂತಂ" (ಕಾಶಕ್ಯ. ೨೭೫). **೨.** ಆಧಾರ ನೀಡುವವನು ; ಆಶ್ರಯದಾತ : ಎಲೆ ಕುವರಿ ನಿನ್ನ . . . ಚತುರತೆಗೆ ಬೇಟಕ್ಕೆ ಕೂಟಕ್ಕೆ ನೆಲೆವಂತ ಕಲೆವಂತನು . . . ಸುಳಿದಪನು ಸ್ವಪ್ನದೊಳು (ನಪಮೋ. ೨೪-೯೩). [ನೆಲೆ$_1$+-ವಂತ]

**ನೆಲೆವಟ್ಟಣ** (ನಾ). ಮೂಲಸ್ಥಾನ ; ಸ್ವಂತ ಊರು : ಅಂದು ನೆಲೆ[ಪಾಠಾಂ.ರೆ, ಲ]ವಟ್ಟಣಕ್ಕೆ ಬರೆ ನಡುವಿರುಳು ನಡೆತಂದು ಊರ ಹೊಱಗಣ ಮಸಣವಟ್ಟಗೆಯೊಳಿರಲು (ನಂಬಿರ. ೭-೫೪).

[ನೆಲೆ$_1$+ಪಟ್ಟಣ]

**ನೆಲೆವಟ್ಟಿಗ** (ನಾ). ಮನುಷ್ಯ ; ಭೂಚರ : ನೆಲದೊಳಗಾ ನೆಲಹೇಸುವಂದದಿನಾ ನೆಲೆವಟ್ಟಿಗರು ಬೊಬ್ಬಿಱಿದು ತಲೆ ಮುಂಡ ಕರುಳು ನೆತ್ತರು ಜೋರೆಯೇಳ್ವಂತಲೆಸದೆ ಕಾದಿ ಮಡಿದರು (ನೇಮಿಸಂ. ೩೧-೧೨).

[ನೆಲೆ$_1$+ಬಟ್ಟಿಗ]

**ನೆಲೆವಡಲಗೆ,** ನೆಲೆವಡಲಿಗೆ (ನಾ).(ಸಸ್ಯಗಳನ್ನು ಬೆಳೆಯುವ) ಅಗಲವಾದ ಬಾಯುಳ್ಳ ಹರಿವಾಣ,—ಪಡಲಿಗೆ: ಜಾಗದ ನೆಲೆವಡಲಗೆಗಳ ಜಾಗಂಗಳ ಪಸುರ್ಗಳಿಸೆಯೆ ರತ್ನದ ಕೇರ್ಗಳ್ ಜಾಗಂಬೊಯ್ದಂತಿರೆ ಪರಭಾಗಂಬಡೆದುವು ವಿವಾಹಗೇಹಾಂತರದೊಳ್ (ಆದಿಪು. ೪-೩೧) ; ನೆಲೆವಡಲ [ಪಾಠಾಂ. ಲಿ]ಗೆಗಳ ಜಾಗಂ ಪಲವಾಗಿರೆ ತನ್ನ ನೆಗೆವ ಪಸುರ್ಗದಿರಿಂದಂ ಪೊಲಗಿಡಿಸಿದುದಮರರ ಕಣ್ಮಲರಂ ಜಿನಸವನಭವನಹರಿತಸ್ತಂಭಂ (ಮಲ್ಲಿಪು. ೧೨-೧೦೭). **ನೆಲೆವಡಲಿಗೆ :** ನೆಲೆವಡಲಿಗೆಗಳ ಜಾಗದ ಕೆಲದೊಳ್ ಮೊಸರಣ್ಕೆ ಪತ್ತಿ ಸಂಗಡಮೆಸೆಗುಂ ಫಲಮಕ್ಷತ ಕಮಲಾಕ್ಷತ ಮಲರಚ್ಚಂಗಱುಕೆ ಮಂಗಳದ್ರವ್ಯಂಗಳ್ (ಅಜಿಪು. ೪-೪೦); ಅಗೆ ಮೂಡುವಂದದಿಂ ತೆರ್ಕೆಗೊಂಡು ಕಿಱುಮೊನೆಯ ಸಲೆಗಳಿಡಿಕಿಱಿದಿರೆ ನೆಟ್ಟಗೆ ಪಾಪದಗೆಯ ನೆಲೆವಡಲಿ[ಪಾಠಾಂ. ಲ]ಗೆಗಳೆನಿಸುವುವು ನರಕಬಿಲಪಟಲಂಗಳ್ (ವರ್ಧಪು. ೧೧-೩). [ನೆಲೆ$_1$+ಪಡಲಗೆ]

**ನೆಲೆವಡಲಿಗೆ** 'ನೆಲೆವಡಲಗೆ' ನೋ.

**ನೆಲೆವಡಿಸು** (ಕ್ರಿ). **೧.** ನೆಲೆನಿಲ್ಲುವಂತೆ ಮಾಡು; ಸ್ಥಿರವಾಗಿರಿಸು: ಆ ವೇದಶಾಸ್ತ್ರಾದಿಗಳಿಗಿಂತಲೂ ಹೆಚ್ಚಾಗಿ ಕಾವ್ಯವೇ ಆತ್ಮಸಮತಾ ಸಂಸ್ಕೃತಿಯನ್ನು ಹರಡಿಸಿ ನೆಲೆವಡಿಸಿತು (ನಾಡೋಜ. ೨). **೨.** ನಿರ್ಮಾಣ ಮಾಡು : ಮಾಮರದ ತಣ್ಣೆಳಲೆಡೆಯೊಳು ಕಡುವಹಿಲದಿಂದ ಶೀತಾಳ ಚಪ್ಪರವ ನೆಲೆವಡಿಸಿ ಪುಡಿಗಪ್ಪುರದ ತೆಳುಮಳಲ ಹರಹಿ ಹಚ್ಚಡಿಸಿ ಸುಳಿವಾಳೆಯೆಲೆಗಳನವಱ ಮೇಲೆ ಮಲಗಿಸಿ ಹಿಮಾಂಬುವ ತಳಿದರು (ಸೌಂದಪು. ೮-೨೨). [ನೆಲೆವಡೆ+-ಇಸು$_3$]

**ನೆಲೆವಡೆ** (ಕ್ರಿ). **೧.** ಆಧಾರ ಪಡೆ ; ಆಶ್ರಯ ಹೊಂದು : ಪಂಚಮುಖದ ಪವಿ ಫಣಿ ಪರಶು ಪಾಶಾಂಕುಶಂ ಖಡ್ಗ ಶೂಲವಭಯಾಹುತವಹಂ ಘಂಟೆ ನೆಲೆವಡೆದ ದಶಭುಜದ ಸನ್ನುತಮೂರ್ತಿ ಸಲಹುಗೆಮ್ಮನು (ಸೌಂದಪು. ೧-೨) ; ತನ್ನನಱಿಸಿ ತೊಳಲ್ವ ಕಾದಲನಂ ಕಾದಲ್ಮೆಯಿಂ ಕಾಡಲೆಳಸಿ ಘಳಿಲನೆ ಬೀಳಲ್ವಿಡಿದಡರ್ದು ನಿಡುಗೊಂಬಿನೆಲೆದುಱುಗಲ ಪೊದಱ ಪೊರೆಯೊಳ್ ಮೆಯ್ಗರೆದಿರ್ದ ಗಂಧರ್ವಸೌಂದರಿ ನೆಲೆವಡೆದಕ್ಷೀಣರೂಪಯಕ್ಷಿಣಿಯಂತೆಸೆಯೆ ಮಿಸುಪ ವಟವಿಟಪಿಯಿಂ(ಶಬಶಂ. ೩-೩೫ ಪ). **೨.** ನೆಲಸು ; ನೆಲೆನಿಲ್ಲು : ಗಂಗೆಯೇ ದಕ್ಷಿಣಕ್ಕೆ ಬಂದು ನೆಲೆವಡೆದಿದ್ದಂತೆ ಕೆರೆ ಜಲಸಮೃದ್ಧವಾಗಿತ್ತು (ನೊಳಂಬ. ೮೮). **೩.** ಬಳಕೆಗೆ ಬರು; ರೂಢವಾಗು : ಸಲೆ ಯಜುರಂಗದಿಂದಭಿನಯಂಗಳನುನ್ನತ ಋಗ್ಮುಖಾಯದಿಂ ನೆಲೆವಡೆದಿರ್ಪ ಶಬ್ದತತಿಯಂ . . . ಕೂಡಿ ಮಿಗೆ ಪುಟ್ಟಿಸಿದಂ ಬಿದಿ ನಾಟ್ಯವೇದಮಂ (ಲಾಸ್ಯರಂ. ೧-೮) ; ಹೊಸಬಗೆಯಲ್ಲಿ ರೀತಿ-ರಸಾದಿಗಳಿಂದ ಬೆರೆದು ಧರ್ಮವನ್ನು ಬೋಧಿಸುವ

ಕಾವ್ಯವು, ಆದಿಕವಿ ಎನ್ನಿಸಿದ ವಾಲ್ಮೀಕಿಯಿಂದ ತಲೆದೋರಿ ನೆಲೆವಡೆದುದು (ನಾಡೋಜ.೩೫೬); ಅಪ್ರಧಾನಕರ್ತೃಕವು ಸತಿಸಪ್ತಮಿಯೆ ಮೊದಲಾದವು ಗಳ ಮುಖಾಂತರವಾಗಿ ವಾಕ್ಯದೊಡನೆ ಸಂದುಗೂಡಿ ನೆಲೆವಡೆಯಬೇಕು (ಕನ್ನ.ಇ. ೧೭೪). [ನೆಲೆ$_1$ + ಪಡೆ$_1$]

**ನೆಲೆವತ್ತು** (ಕ್ರಿ). ನೆಲಸಮವಾಗು ; ನೆಲಹತ್ತು : ಬತ್ತೆ ತೊಱೆ ಬೆಟ್ಟುಗಳ್ ನೆಲೆವತ್ತೆ . . . ನಡೆದತ್ತಾಗಳ್ ಸಗರಚಕ್ರವರ್ತಿಯ ಕಟಕಂ (ಅಜಿಪು. ೯-೧೬). [ನೆಲೆ$_1$ + ಪತ್ತು$_1$]

**ನೆಲೆವನೆ,** ನೆಲೆಮನೆ (ನಾ). ೧. ಅನೇಕ ಅಂತಸ್ತುಗಳನ್ನುಳ್ಳ ಮನೆ; ಮಹಡಿಮನೆ ; ಕರುಮಾಡ : "ಕರುಮಾಡಂ ನೆಲೆವನೆಯುಪ್ಪರಿಗೆ ಯುಮೆನೆ ಸೌಧ" (ಕವಿಕಂ. ೧೪೪) ; ತೊಳಗುವ ಕರುಮಾಡಂ ನೊರೆ ಬಳಸಿದ ಪೊಂಗೋಂಟೆ ಮೇರೆ ನೆಲೆವನೆ ಪೊಗಯಿಪ್ಪೊಳಗಣ ಬೆಟ್ಟುಗಳೆನೆ ಬಗೆಗೊಳಿಪುದು ಮುನ್ನೀರ ತೆಜದಿನಾ ಪೊಟಲೆಂದುಂ (ಕಬ್ಬಿಕಾ. ೨೮) ; ನೆಲೆವನೆಯ ಮಾಡದಲಿ . . . ಪವಡಿಸುವೀಕೆಯಿಂದೀಗ ಹಳುವ ದಲಿ ಘೋರಾಂಧಕಾರದ ಮಳೆಯೊಳೊಬ್ಬಳೆ ನಡೆದು ನೆನೆದೀ ಕಲು ನೆಲದೊಳೊಜಗಿದಳೆನುತ ಮಱುಗಿದನು ಧರಣೀಶ (ಕುವ್ಯಾಅ. ೯-೩೦) ; ಸೀತೆಯೊರ್ಮೆ ಕನ್ನೆವಾಡದ ನೆಲೆವನೆಯ ಮೊಗಸಾಲೆಯೊಳ್ ತೂಗುಂ ಮಂಚಮನೇಱೆ ಚೆಲ್ಲದಿಂ ಕುಳ್ಳಿರ್ದು (ರಾಮಾಶ್ವ. ೧೭-೨೯). ೨. ಸ್ಥಿರ ವಾದ ಆಶ್ರಯಸ್ಥಾನ; ನೆಲೆವೀಡು : ಅನುಭಾವವೇ ಭಕ್ತಿಗೆ ನೆಲೆವನೆ (ದೇದಾವ. ೨೩-೪೦) ; ನಿಷ್ಕಾಮಿ ನೀಂ ಕಾಮದ ನೆಲೆವನೆಯಾಂ ತಂದೆ ನೀಂ ಪುತ್ರ ನಾಂ (ರಕ್ಷಾಶ. ೪೬) ; ಸರ್ವತೀರ್ಥಂಗಳ ನಿವಾಸಂ ಸರ್ವ ದೇವರ್ಷಿಗಳ ನೆಲೆವನೆ . . . ಶ್ರೀಪರ್ವತೇಂದ್ರಂ (ಬಸಪು. ೧೯-೨೫) ; ವೇದಪುರುಷನ ವಿಗ್ರಹದಲಿ ವಿಭೇದವಿಲ್ಲದೆ ಬಿಸಜಸಂಭವನಾದಿಯಾದ ಸಮಸ್ತದೇವರು ನೆಲೆವನೆಗಳಾಗಿ ನೇದುಕೊಂಡಿಹರು (ಕುವ್ಯಾಉ. ೪-೬೪) ; ಸೌಗಂಧಮಂದಾನಿಲನ ನೆಲೆವನೆಯೊ ಕುಸುಮಬಾಣನ ಬೀಡೊ ಸುರವನ ವೆಸೆವ ಜನ್ಮನಿವಾಸವೆನೆ ವನವೆಸೆದುದು (ತೊರರಾ.೫-೩-೧೫). **ನೆಲೆಮನೆ:** ೧. "ಕರುಮಾಡಮೆಂದುಂ ನೆಲೆಮನೆಯೆಂದುಂ ಉಪ್ಪರಿಗೆ" (ಕಶಸಾ. ೫೯-೩೦೪) ; ಧೂಪಧೂಮದ ಪರಿಮಳಮಯಮುಪ್ಪ ನೆಲೆಮನೆಯ ಮೇಗೇಕಾಗ್ರಮನಃಪರಿಗ್ರಹೆಯಾಗಿ (ಶಾಂತಿಪು. ೮-೪೯ ಪ). ೨. ಅತುಳ ಭಕ್ತಿಗೆ . . . ಗಾಢವ್ರತಕೆ ನೆಲೆಮ[ಪಾಠಾಂ. ವ]ನೆಯಾಗೆಸೆವ ಮೋಳಿಗೆಯ ಮಾರಂಗೆ ಕ್ಷಿತಿಯೊಳೆಣೆಯಹ ಭಕ್ತರಿಲ್ಲ (ಬಸಪು. ೩೦-೨೨); ಇನ್ನವರ ಬಾಳಿಕೆಗಡವಿಯೇ ನೆಲೆಮನೆಯದಲ್ಲದೆ ಪಾಂಡುಪುತ್ರರಿಗೆ ಪೊಡವಿಯೊಡೆತನ ಸಲ್ಲದು (ಕುವ್ಯಾಆ. ೮-೨೩) ; ಅಂತೂ ಇಂತೂ ಸಮಾಜದ ಮಹಾ ಜನವೇ ಧರ್ಮಕ್ಕೆ ನೆಲೆಮನೆಯೆಂದು ಹೇಳಿದ ಹಾಗಾಯಿತು (ರಾಜ್ಯಾಂಗ. ೪೨). [ನೆಲೆ$_1$ + ಮನೆ]

**ನೆಲೆವರು** (ಕ್ರಿ). ನೆಲೆಯಾಗು; ಆಧಾರವಾಗು : ನೂತನ ವಸ್ತ್ರಾ ಭರಣವೆರಸು ಕೊಟ್ಟೆ ಸೋತ ನೃಪರ ವಸ್ತುಗಳ ಖ್ಯಾತಿಗೆ ನೆಲೆವಂದು ಬೀಳ್ಕೊಟ್ಟೆನವರ ಸಂಗೀತಸುಧಾಬ್ಧಿಚಂದ್ರಮನು (ನಾಗಕು. ೯-೧೩೭). [ನೆಲೆ$_1$+ಬರು$_1$(<ವರ್)]

**ನೆಲೆವಟ್ಟೆ** (ನಾ). ದಾರಿಯಲ್ಲಿರುವುದು ; ಹಾದಿಯಲ್ಲಿರುವುದು : ಎಸೆವಲತಗೆಯಿಂ ಪೊರೆದ ಮೆಲ್ಲಡಿಯ ನಡೆಯ ಬೆಡಂಗಿನೊಂದು ಭಾವದಿಂ ನೆಲೆವಟ್ಟೆಯ ಕಲ್ಗಳ್ಗೆ ರಾಗಮನೊಡರ್ಚಿಯುಂ (ರಾಮಾಶ್ವ. ೫೯-೯). [ನೆಲೆ$_1$ + ಬಟ್ಟೆ$_3$]

**ನೆಲೆವಾಗಿಲ್** (ನಾ). ಅಗಸೆಬಾಗಿಲು ; ಹೆಬ್ಬಾಗಿಲು : ಚಲವಿಡಿದು ಪಗೆವೊಱಲ್ಗಳ ನೆಲೆವಾಗಿಲನುಡಿಯದುಱಯನಿವನೆಂಬಳ್ಕಿಂ ತೊಲಗಿ ಕದಂಗಳನಾ ಬಲ್ಪೊಲವಿಂದೀ ಕುವರನೆರ್ದೆಯ ನೆಮ್ಮಿದುದು ದಿಟಂ (ಚಿಕವಿ. ೪-೧೫೯). [ನೆಲೆ$_1$ + ಬಾಗಿಲ್]

**ನೆಲೆವಾಡ,** ನೆಲೆಮಾಡ (ನಾ). ೧. = ನೆಲೆಯುಪ್ಪರಿಗೆ : "ನೆಲೆ ವಾಡಂ ಕರುಮಾಡಮುಪ್ಪರಿಗೆಯೊಳ್" (ಕರ್ಣಾನಿ. ೯೪) ; ಎಳೆವೆಂಡಿ ರ್ನೆಲೆವಾಡದೊಳೆಳಸಿರೆ ನಡೆ ನೋಡಿ (ಕಾದಂಪೂ. ೩೦೪) ; ಪಾದರಿಯ ನೆಲೆವಾಡಂಗಳೊಳಂ ದವನದ ದಾವಣಂಗಳೊಳಂ . . . ಸೊಂಪುವಡೆದ ಕಂಪಿನ ಪೊಟಲೆಂಬ ಬೀಡು ಬಗೆಗೊಳಿಸುತಿರ್ಪುದು (ಕಬ್ಬಿಕಾ. ೧೧೮) ; ಇಂದುಕಾಂತದ ಪುತ್ತಳಿಗಳಿಂದ ಸಮೆದ ಕಂಭಗಳಿಂ ಕುಂದಣದಿಂ ಥಳಥಳಿ ಸುವ ಕಳಸಗಳಿಂದೆಸೆದವು ನೆಲೆವಾಡ (ಜೀವಂಸಾಂ. ೧-೪೨) ; ನೋಡು ತಿರ್ದರು ಪುರಜನರು ನೆಲೆವಾ[ಪಾಠಾಂ. ಮಾ]ಡದುಪ್ಪರಿಗೆಯಲಿ (ನಳಚ. ೯-೬೧). ೨. ವಾಸಸ್ಥಳ; ನಿವಾಸ : ಸಪ್ತಮಣಿಕಳಶಂಗಳಂ ತಳೆದ ಗೋಪುರದ ಶಿಖರದಿಂದೊಪ್ಪುತಾ ವನಲಕ್ಷ್ಮಿಯ ನೆಲೆವಾಡದಂತೆ ಕಣ್ಗೊಳಿ ಸುವಾ ದೇವತಾನಿಲಯಮಂ ಕಂಡು (ಶೀಷರಾ. ೭-೧೮). ೩. ಒಂದರ ಮೇಲೊಂದು ಖಾನೆಗಳಿರುವ ಕಪಾಟು ; ಅಲಮಾರು : ಪುಸ್ತಕ ಗಳನ್ನು ನೆಲೆವಾಡ (ಕಪಾಟು)ದಲ್ಲಿಟ್ಟು ಬೇಗಬೇಗನೆ ತಾಯಿಯ ಬಳಿಗೆ ಹೋದಳು (ಸಂಚಿತ್ರ. ೪೩). **ನೆಲೆಮಾಡ :** ೧. ನೆಲೆಮಾಡಂಗಳೊ ಳೋಳಿವಟ್ಟ ಗುಡಿಗಳ್ ಗಂಧಾಂಬುವಿಂದಾದ ಪೂವಲಿಯಿಂ ಚೆಲ್ವೆಸೆದಿರ್ದ ಬೀದಿಗಳ್ (ಅವಿಪು. ೭-೧೧೩) ; ನೆಲೆಮಾಡಂಗಳನೇಱಿದ ನೀಱೆಯ ರಲಕ್ತಕರಾಗರಂಜಿತಪದಪಲ್ಲವಂಗಳಿನವನಿತಳಮೆಲ್ಲಂ ಪಲ್ಲವಿಸಿದಂತೆಯುಂ (ಕಾದಂಪೂ. ೪೭೮) ; ರಾಜಕೀರವಿಲ್ಲದ ನೆಲೆಮಾಡಮಿಲ್ಲದ . . . ಸೂಳೆ ವನೆಯಿಲ್ಲದವಿಲ್ಲವು ಸೂಳೆಗೇರಿಯೊಳ್ (ಮಲ್ಲಿಪು. ೨-೫೭) ; ಇಟ್ಟಣಿಸಿದ ಲರ್ಗಳೆಸೆದಿರೆ ಕಟ್ಟುವದ್ದಮನಾಂತು ಮಿಸುಪ ಕೊಸಗಿನ ಚೆಲ್ವೆಂ ಪುಟ್ಟಿಸಿ ದುದೊ ಪೊಸಸಿರಿಗೆಱವಟ್ಟನೆ ಪೂಗಣೆಯನಿರ್ಪ ನೆಲೆಮಾಡದವೋಲ್ (ಕಬ್ಬಿಕಾ. ೧೦೭) ; ನೆಲೆಮಾಡಂಗಳ ಚೂಳಿಕಾಗ್ರಮನಡರ್ದೇಱರ್ದ ಕಾಂತಾಸ್ಯಮಂಡಳಮಂ ನೋಡಿ (ಬಾಹುಪು. ೧-೧೫೯). ೨. ಕಾಯವಿಲ್ಲದೆ ಪುಷ್ಪಕವ ಕಂಡ ನಮ್ಮ ಬಸವಯ್ಯನು ನಮ್ಮ ಬಸವಯ್ಯನ ನೆಲೆಮಾಡ ಕರುಮಾಡವಾಯಿತ್ತು (ಸೀಲವ. ೧೯-೫೭) ; ವಿಚಕಿಲಕುರುವಕವಕುಳ ಪ್ರಚಯದೆ ಮಂಡವಿಗೆ ಚಂಪೆಯಿಂ ನೆಲೆಮಾಡಂ ರಚಿಯಿಸೆ ನೆಲಸಿದರಿವರಾ ರುಚಕಾದ್ರಿಯ ಮೂಡಣೆಂಟು ಶಿಖರದ ವನದೊಳ್ (ಅನಂಪು. ೪-೭೫). [ನೆಲೆ$_1$ + ಮಾಡ$_2$]

**ನೆಲೆವಾತು** (ನಾ). ನಿಶ್ಚಯವಾದ ಮಾತು; ಖಾತರಿಯಾದ ನುಡಿ; ದೃಢವಾದ ಮಾತು : ಬಳಿಕ ಬರಿಸಿ ಕುದುರೆಯ ಸಾದಗಾಱನ ಬೆಲೆಯೇನೀ ವಾಜಿಗೆನಲು ಬಲುಮೆಯನುಳಿದು ಪುಸಿಯನಿಳಿಕೆಯ್ದಂತು ನೆಲೆವಾತ ನುಡಿದ ಸಚಿವಗೆ (ಕುರಾಸಾಂ. ೯-೧೦೭). [ನೆಲೆ$_1$+ಮಾತು$_1$]

**ನೆಲೆವಾಸು,** ನೆಲವಾಸು (ನಾ). ಉನ್ನತವಾದ ಹಾಸು : ಪುದಿದು ಪಳಚ್ಚನಪ್ಪ ಬೆಳರ್ದಿಂಗಳೊಳಂಗಣದಲ್ಲಿ ತೀವಿ ಪಾಸಿದ ನೆಲೆವಾಸಿನೊಳ್ ಮಲಗಿ (ಕಾವ್ಯಸಾ. ೨೩೪-೫ ಕಲಾವಿಲಾಸವರ್ಣನೆ). **ನೆಲವಾಸು :** ನೆಲವಾಸಿಂ ನೆಲದತ್ತ ಬೀಟ್ಪಳವಿಗಂ ಕೂಸಂಜುಗುಂ (ಜೀವಸಂ. ೧೧೧-೧೮); ನೆಲವಾಸು ತಂಬುಲಂ . . . ಸುಪ್ಪತಿಗೆ ಧವಳಾರಂ ಕೆಲದ ಸಿಗಳಿಗೆಯಿ ನಿಂಬಿಂ ಸಲೆ ಸವಿಪೊಡೆ ಮಾಗಿ ಗೀಗಿಯೇಗೆಯ್ದುಪುದೋ (ಸೂಕ್ತಿಸು. ೧೦-೨೫೯) ; ಬಾಸಿಗದ ನೊಸಲಿನಲಿ ಮೆಱೆವ ಮಹೀಶರೈವರು ಮಂಟಪದ ನೆಲವಾಸಿನಲಿ ಕುಳ್ಳಿರ್ದರನುಪಮ ರಾಜತೇಜದಲಿ (ಕುವ್ಯಾಆ.೧೬-೨೯) ; ಝುಡಿತೆಯಲಿ ನೆಲವಾಸಿನಲಿ ಸೈಗೆಡೆದು ಸುಯ್ಯುತ ಶೂನ್ಯಹರುಷದ ತೊಡಕಿನಲಿ ತಾಂಬೂಲವನು ತೊಱೆದಿರ್ದಳಾ ಕೈಕೆ (ತೊರರಾ.೨-೧-೪೧) ; ಕುಳ್ಳಿರಿಮೆಂದು ನೆಲವಾಸಿನೊಳೆಲ್ಲರುಂ ಮಂಡಿಸುವುದುಂ (ಚಿಕವಿ. ೬-೧೮೬ ಪ). [ನೆಲೆ$_1$+ಪಾಸು$_2$]

**ನೆಲೆವಾಳ್** 'ನೆಲೆವಾೞ್' ನೋ.

**ನೆಲೆವಾಳಿಗ** (ನಾ). ಸ್ಥಿರಾಸ್ತಿಯುಳ್ಳವನು ; ಜಮೀನುದಾರ : ಎಲೆ ದೇವನೆ ನೀನು ಪೂರ್ವದ ಭವದಲ್ಲಿ ವಿಲಸಿತ ಸಾಲಿಗ್ರಾಮದೊಳು ನೆಲೆವಾಳಿಗನಾಗಿ ಶಿವಶರ್ಮವೆಸರಾಂತು ಬಲುವಿಪ್ರನಾಗಿರುತಿರಲು (ಜ್ಞಾನಚ. ೩೬-೧೦). [ನೆಲೆವಾಳ್ (<ನೆಲೆವಾೞ್)+-ಇಗ]

**ನೆಲೆವಾಳ್ತಿ** 'ನೆಲೆವಾೞ್ತಿ' ನೋ.

**ನೆಲೆವಾೞ್, ನೆಲೆವಾಳ್, ನೆಲವಾಳು, ನೆಲವಾಳ್** (ನಾ). (ಜಮೀನು ಮುಂತಾದ) ಸ್ಥಿರಸ್ವತ್ತು ; ಸ್ಥಿರಾಸ್ತಿ : ಮಗನಂ ಕೊಂದು ಗಂಡುದೋಱುವ ನೆಲೆವಾೞಂ ಮಾೞಿ ಸೂಳೆಗೆಯ್ವ . . . ಕಟ್ಟಿಗ್ಗರಂತೆ (ಧರ್ಮಾಮೃ. ೯-೧೬೨) ; ನೆಲೆವಾೞೀವ. [ಪಾಠಾಂ. ನೆಲ ವೊಳ್ಳೀವ, ನೆಲೆವಾಳ್ಳೀವ] ಧನಂ ಸುವರ್ಣನಿಕರಂ ರತ್ನವ್ರಜಂ ಧಾನ್ಯ ಸಂಕುಲಂ . . . ಪಲವುಂ ಬಂಧಪರಿಗ್ರಹಾಗ್ರಹವಿನಿರ್ಮುಕ್ತಂಗೆ ಚಾರಿತ್ರ ದೋರ್ವಲಯುಕ್ತಂಗೆ ದುರಷ್ಟಕರ್ಮರಿಪುಗಳ್ ತೂಳ್ದೋಡದೇಂ ನಿಲ್ವುವೇ (ಜೀವಸಂ. ೧೬೩-೨೧). **ನೆಲವಾಳ್:** ತಲೆವೋಪಡವೆತ್ತಾನುಂ ನೆಲ ವಾಳ್ವೋಪಡವವೋಪುವೀ ಧರ್ಮ್ಮ××× ಲೊಂ ××× ಯನೊಡೆದಡ ಕೆಯಂ ಬೇಡಲಾಗದು (ಕೊಲ್ಹಾ.ಶಾ. ೩-೪೫ ; 1079 ; ಎಇ.XV,೨೯-೪೫ ; 1110 ನೋ). **ನೆಲವಾಳು :** ಊರನೆನ್ನದೆನ್ದು ಮೂಱುವರಿಪದುಣ್ಬಳಿಯ ಪೋಗ ತೊಟ್ಟುದೀಱುತಮಿರ್ಪುದಂ ಕಣ್ದು ನೆಲವಾಳು ಪಾಕಂಬೋಪಲ್ಲಿ ಮೂವರಲೋರ್ವ್ವರ್ ಸತ್ತಡಲ್ಲದೆ ಭೂಮಿ ನಿಲ್ಲದೆನ್ದು (ಸೌಇಇ. IX-i, ೧೨೩-೧೮ ; 1059). **ನೆಲೆವಾಳ್ :** 'ನೆಲೆವಾಳಿಗ' ಪರಾ.

**ನೆಲವಾೞ ಸಾಮ್ಯ** = ಸ್ಥಿರಾಸ್ತಿಯ ಮೇಲಿರುವ ಹಕ್ಕು,—ಅಧಿಕಾರ : ಲೋಕಾಯ್ತವೊೞಿೞೊಳದ ನೆಲವಾೞ ಸಾಮ್ಯಮುಮವರ್ . . . ಸರ್ಬ್ಬಬಾಧಪರಿಹಾರಮ್ ದೇವಭೋಗಮ್ ಮಾಡಿ ಕೊಟ್ಟನ್ (ಎಕ. XI, ಹೊಳಲ್ಕೆ. ೨೩-೪೧ ; 968). [ನೆಲೆ$_1$+ಬಾೞ್$_2$]

**ನೆಲೆವಾೞ್ತಿ, ನೆಲೆವಾಳ್ತಿ** (ನಾ). ೧. = ನೆಲೆವಾೞ್ : ತನ್ನೋಳೆರ್ಪ ನಿತ್ಯಮುಕ್ತರ ನೆಲೆವಾೞ್ತಿಯೊಳಱಿವಡುತ್ತುಂ . . . ರೂಪೞಿದಿರ್ಪ ಬದ್ಧಾತ್ಮವರ್ಗದ ದುರ್ಗತಿಯಂ ಕಳೆಯಲೆಂದು ಸರ್ಗಂಗೆಯ್ಮೆಳೆಸಿ (ಚಿಕವಿ. ೧-೬೦). ೨. ಶಾಶ್ವತವಾದ ನಿವಾಸ,—ವಾಸಸ್ಥಾನ : ಈ ಜಗಮನಿತುಮನಿವಳ್ ಪೊಟ್ಟುಗಳೆವ ಬಿನದದಾಟದ ಪುರುಳೆನಿಸಿಯುಂ ಪರಮಪದಮನಿವಳ ನೆಲೆವಾೞ್ತಿಯರಮನೆಯೆನಿಸಿಯುಂ (ಚಿಕವಂ. ೧೧೫-೧೦). **ನೆಲೆವಾಳ್ತಿ :** ೨. ನಮಗೆಂದಾಯ್ದು ಏರ್ಪಡಿಸಿ ಸಜ್ಜುಗೊಳಿಸಿರುವ ನೆಲೆವಾಳ್ತಿಯ ಭವನವನ್ನು . . . ತಿದ್ದಿ ಒಪ್ಪಿ ಮುದ್ರಿಸಿ, ನಿಮ್ಮನ್ನು ಬಳಿಯಟ್ಟ, ಎಷ್ಟು ವಿನಾಡಿಗಳಾಗಿರಬಹುದು, ಸಾಧ್ಯವಿಲ್ಲ ಮಹಾಶಯ ? (ಮಂತ್ರಶ. ೧೬೨-೧೧). [ನೆಲೆವಾೞ್+-ತಿ$_3$]

**ನೆಲೆವಿಡಿ** (ಕ್ರಿ). ೧. ಸ್ಥಿರಗೊಳಿಸು ; ಸ್ಥಿರೀಕರಿಸು ; ಗಟ್ಟಿಯಾಗಿ ಹಿಡಿ : ಮನೋಭವಾಗ್ನಿ ವಿಧುವಿಂ ಮಧುವಿಂ ವಧುವಿಂಗೆ ಪೆರ್ಚಿ ತಣ್ಣಲೆವ ಕೊಳಕ್ಕೆ ವಂದಮುಳಿನಂ ಪುಳಿನಂ ನಳಿನಂ ನಿಜಾರ್ತಿಯಂ ನೆಲೆವಿಡಿ [ಪಾಠಾಂ. ಗೆಲೆಪಡೆ]ಯಲ್ ಬೞಿಕ್ಕವಳಟಲ್ದು ಬಟಲ್ದು ತೊಟಲ್ದು ಜಾನಿಪಳ್ (ಜಗವಿ. ೧೧-೨೩) ; ಛಲವಿಡಿದೊಂದನೆಳಸಿ ಚಾರಿವರಿಯದೆ ನೆಲೆವಿಡಿದೊಂದಱೊಳಿರದೆ ನೆಲೆನಿಂದ ನೀರ ತೆಪ್ಪದವೋಲು ತೆಗೆದೆಡೆಗಲೆಗೊಳದನುಸರಿಸುವುದು (ಹವಿಬ. ೩-೩೬). ೨. ಆಶ್ರಯಿಸು ; ಅವಲಂಬಿಸು (?) : ಪಲಬಗೆಯ ಯೋಗಂಗಳಲಿ ತಾಂ ನೆಲೆವಿಡಿದ ಮಾತಂಗಶೈಲದೊಳೊಲುಮೆಯಿಂ ಜನಿಸಿದಳು ದಾಕ್ಷಾಯಿಣಿ ಗಿರೀಂದ್ರನಿಗೆ (ಅನಂರಾ. ೧-೧೯-೩). [ನೆಲೆ$_1$ + ಪಿಡಿ$_1$]

**ನೆಲೆವೀಡು, ನೆಲವೀಡು, ನೆಲೆಬೀಡು** (ನಾ). ೧. ವಾಸಸ್ಥಳ ; ನೆಲೆಮನೆ: ನೆಲೆವೀಡಂ ಬೀಡು ಮಾಡಲ್ ಪಲವು ದಿವಸಮುಂ ಬೇಟ್ಪುದು (ಆದಿಪು. ೧೩-೨೦) ; ನೆಲೆವೀಡು ರತಿಗೆ . . . ವಿಯೋಗಿಗೆ ಸಂಕಲೆವೀಡು ವಸಂತದಂತಿಗುಪವನಗರವನಂ (ಚಂದ್ರಪು. ೧-೧೧೩) ; ಭಾರತಿಯ ನೆಲೆ ವೀಡು ಮಂಗಳಂಗಳ ನಿಜಾಗಾರ ಲಕ್ಷ್ಮಿಯ ರಾಜಧಾನಿಯೆನಲೊಪ್ಪುವುದು ಚಾರುತರ ಲಾಳದೇಶಂ (ಹಚಕಾ. ೧-೩೪) ; ಯೋಗಿಗಳ ನೆಲೆವೀಡು ಬೊಮ್ಮದ ಸಾಗರವು . . . ಮೂಲೋಕದರ್ಪಣವಾಗಿ ದುಗ್ಧೋದಧಿಯೊಳೆಸೆವದು ಶ್ರೀಗಧೀಶನ ನಗರ (ಕುವ್ಯಾಅ. ೭-೫೨) ; ಸೊಬಗಿನ ಶೃಂಗಾರ ಸಾರದ ನೆಲೆವೀಡುಗಳು ಇವು (ಶಾಂತಲಾ. ೧೩೩). 'ನೆಲೆವೀಡುಗೊಳಿಸು' ಪರಾ. ೨. (ರಾಜನ) ಹಂಗಾಮಿಯಾದ ಬೀಡು,—ಬಿಡಾರ ; ತಾತ್ಕಾಲಿಕವಾದ ರಾಜಧಾನಿ : ಚಾಲುಕ್ಯಾಭರಣ ಶ್ರೀಮಜ್ಜಗದೇಕಮಲ್ಲದೇವರ್ ಪೊಟ್ಟಿಗನೂರ ನೆಲೆವೀಡಿನೊಳ್ ರಾಜ್ಯಂಗೆಯ್ಯುತ್ತಮಿಬ್ದು (ಮೈಆರಿ. ೧೯೨೯, ೬೫-೪ ; 1024 ?) ; ರಾಜಧಾನಿ ಬಳ್ಳಿಗಾವೆಯ ನೆಲೆವೀಡಿನೊಳ್ . . . ಬಸದಿಗೆ ಪೂಜಾನಿಮಿತ್ತದಿಂ . . . ಕೊಟ್ಟ ಗಟಿಕ್ಕಿ ಮತ್ತರಯ್ದು (ಎಕ. VII, ಶಿಕಾರಿ. ೧೨೦-೧೨ ; 1048) ; ಪ್ರತಾಪಹೊಯ್ಸಳವೀರಬಲ್ಲಾಳದೇವರು . . . ದೋರಸಮುದ್ರದ ನೆಲೆವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತುಮಿರೆ (ಮೈಆರಿ. ೧೯೨೮, ೧೫-೭; 1200). ೩. ರಾಜ್ಯದ ಮುಖ್ಯಪಟ್ಟಣ; ರಾಜಧಾನಿ : ಪೂಗಣೆಯಂಗೆ ಸಾಪವನಿತ್ತುದಂ ಬಸಂತನಿಂ ನೆಲೆವೀಡಿನೊಳಿರ್ದಿಚ್ಛೆಗಾರ್ತಿ ಕೇಳ್ದು ಮುಚ್ಚೆವೋಗಿ (ಕಬ್ಬಕಾ. ೩೧೨) ; ರಾಜಧಾನಿಯನ್ನು 'ನೆಲೆವೀಡು'ಎಂದು ಕರೆಯುತ್ತಿದ್ದರು (ಕಶಾಅ. ೩೨೫).

**ನೆಲವೀಡು :** ೨. ವಿಷ್ಣುವರ್ಧನ ಶ್ರೀನಾರಸಿಂಘದೇವರು ದುಷ್ಟನಿಗ್ರಹ ಶಿಷ್ಟಪ್ರತಿಪಾಳನಂ ಮಾಡಿ ದೋರಸಮುದ್ರದ ನೆಲವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ (ಎಕ. XII, ತುಮಕೂ. ೯-೮ ; 1151) ; ಹೊಯ್ಸಳವೀರಬಲ್ಲಾಳದೇವರು . . . ದೋರಸಮುದ್ರದ ನೆಲವೀಡಿನೊಳ್ಸುಖಸಂಕಥಾವಿನೋದದಿಂ ರಾಜ್ಯಂಗೆಯುತ್ತಮಿರೆ (ಎಕ. XIV, ಗುಂಡ್ಲು ಪೇ. ೨೭-೬ ; 1196) ; ವೀರಬಲ್ಲಾಳದೇವಂ . . . ಅಂತು ಸುಖಸಂಕಥಾವಿನೋದದಿಂ ದೋರಸಮುದ್ರದ ನೆಲವೀಡಿನೊಳು ರಾಜ್ಯಂಗೆಯುತ್ತಮಿರೆ (ಎಕ. VII, ಶಿವಮೊ. ೫-೧೧ ; 1218). **ನೆಲೆಬೀಡು :** ೧. ಸ್ಥಳಿಕಸಂಸ್ಥಾನಗಳು ಕರ್ನಾಟಕದ . . . ಪರಂಪರೆಗಳ ಪ್ರತೀಕಗಳಾಗಿ, ನೆಲೆಬೀಡುಗಳಾಗಿ, ಉಳಿದು ಬೆಳೆಯಲು ಹೆಚ್ಚಿನ ಅವಕಾಶಗಳು ಒದಗಿ ಬಂದವು (ನೊಳಂಬ. ೬೦).

**ನೆಲೆವೀಡಾಗು** = ವಾಸಸ್ಥಳವಾಗು ; ನಿವಾಸವಾಗು : ಊರೂರ ಕಾಲ್ವಳ್ಳಿಗಳ್ ನೆಲೆಮಾಡಂಗಳಿನೊಪ್ಪೆ ಬೇಱಿ ನೆಲೆವೀಡಾಯ್ತಂಗಜಂಗಾ ನೆಲಂ (ಮಲ್ಲಿಪು. ೨-೧೫) ; ಅಲ್ಲಿಯ ಬನಂ . . . ಸೊಂಪನೊಳಕೊಂಡ ತಾವರೆಗೊಳಂಗಳೊಳಂ ಬಸಂತಂಗೆ ನೆಲೆವೀಡಾಗಿರ್ದುದು (ಕಬ್ಬಕಾ. ೩೦). [ನೆಲೆ$_1$ + ಬೀಡು$_2$]

**ನೆಲೆವೀಡುಗೊಳಿಸು** (ಕ್ರಿ). ವಾಸಸ್ಥಳವಾಗಿ ಮಾಡು : ಈ ಶೈಲಕೆರಡುಗಾವುದ ತೆಂಕಣರಮ್ಯದೇಶವ ನೆಲೆವೀಡುಗೊಳಿಸಿ ಈ ಶೂರರು ನೆಲಸಿದರದಱಿಂದೆ ಮಹೀಶೂರಪುರವೆನಿಸಿದುದು (ಹದಿಬ. ೧-೭). [ನೆಲೆವೀಡು + ಕೊಳ್$_1$ + -ಇಸು$_3$]

**ನೆಲೆವೆಣ್** (ನಾ). (?) : ನೆಲಕೆ ಬಿದ್ದೊಂದು ಪುಷ್ಪದ ಫಲಕೆಯಿನಿತಾಯ್ತು ಹಲವು ಪುಷ್ಪವ ತಂದು ಷೋಡಶುಪಚಾರದಿಂದೊಲಿದು ಶಿವ ಪೂಜೆಯಂ ಮಾಡಿದರೆಯೆನ್ನಂತೆ ಕೋಟರಂಭೆಯರು ನಿನಗೆ ನೆಲೆ[ಪಾಠಾಂ. ನೆಲ]ವೆಂಡಿರಾಗರೇ (ಗುಭಚ. ೨-೧೩). [ ? ]

**ನೆಲೆವೆರ್ಚಿಸು** (ಕ್ರಿ). ೧. ಉಕ್ಕೇರಿಸು ; ವೃದ್ಧಿಗೊಳಿಸು : ಅಂತು ಕಾಮದುಘಾಗರಸಸಾಗರಮಂ ನೆಲೆವೆರ್ಚಿಸುವ ಶರಚ್ಛರದಾಗ್ರಾತಪದೊಳ್ . . . ನಾಗರಿಕರಮನರಮನೆಜನಂಗಳ್ ಕೌಮುದೀಮಹೋತ್ಸವೋತ್ಸುಕರಾಗಿ ನೆರೆದು (ಆದಿಪು. ೧೨-೧೧ ವ) ; ಕೆಲದೊಳೆ ಕಿಟ್ಟು ಸಾರ್ಚದ ಕೃಪಾಣದ

ಕರ್ಪು ನಿಜಾಂಗನಾಂಗದಗ್ಗಲಿಪ ಬೆಳರ್ಪು ಬಾಲಕನ ಕೋಮಲದೇಹದ ಕೆಂಪು ನಾಡೆಯುಂ ನಲವನಿಳಾಧಿಪಂಗೆ ನೆಲೆವೆರ್ಚಿಸಿದತ್ತು ಗೃಹಾಧಿದೇವತಾವಿಲಸದಪಾಂಗದೊಳ್ ನೆರೆದು ಮೂದೆಬಿದೊಪ್ಪುವ ಬಣ್ಣದಂದದಿಂ (ಚಂದ್ರಪು. ೩–೧೦೨) ; ಅಂತಖಿಳ ಕಾಮುಕನಿಕಾಯಮವಿರಳಸುಖಾವಗಾಹದೊಳ್ ನಾಡೆ ತೇಂಕಾಡಿ ತಣಿವಿನವುನಂಗಜಳನಿಧಿಯುಂ ನೆಲೆವೆರ್ಚಿಸಿ ನಿರತಿಶಯಕೌಮುದೀಪೂರಮುಸದಳಂ ಬಳೆದು ಬೆಳಗುತಿರ್ಪಿನಂ (ವರ್ಧಪು. ೬–೫೨ ವ). ೨. ಸಂತೋಷಪಡಿಸು ; ಉಬ್ಬಿಸು : ಪೂಗೊಳನಂ ತಿಳಿಯಿಟ್ಟು ನೀರ್ವಕ್ಕಿಗಳಂ ನೆಲೆವೆರ್ಚಿಸುತ್ತುಂ ರವಿಕಿರಣಂಗಳಂ ಪುಟವಿಟ್ಟು ರಥಾಂಗಮುಂ ನಲವೇಱಿಸುತ್ತುಂ (ಗಿರಿಕ. ೭–೪೨ ವ).

[ನೆಲೆವೆರ್ಚು$_{1}$ + –ಇಸು$_{3}$]

**ನೆಲೆವೆರ್ಚು$_{1}$** (ಕ್ರಿ). ೧. ಅಭಿವೃದ್ಧಿಯಾಗು ; ವರ್ಧಿಸು ; ಹೆಚ್ಚಾಗು : ಪೆರ್ಚುಗೆ ಭರತಕುಲಂ ನೆಲೆವೆರ್ಚುಗೆ ನಿಮ್ಮೆರಡು ತಂಡ ಮೊದವಿದ ನಣ್ಪುಂ (ಪಂಪಭಾ. ೧೩–೬೭) ; ಲಲನೆಯ ನುಡಿಯಿಂ ಹರ್ಷಂ ನೆಲೆವೆರ್ಚೆ ಸುಧಾಂಶುಲೇಖೆಯೆಳವೆಳಗಿಂದಂ ನೆಲೆವೆರ್ಚುವ ಪಾಲ್ಗಡಲಂ ಗೆಲೆವಂದು ನೃಪಗುಣಾಶ್ರಯಂ ವೈಶ್ರವಣಂ (ಮಲ್ಲಿಪು. ೪–೮೮) ; ಸ್ತ್ರೀರತ್ನಾರ್ಥಂ ನೃಪತಿಸಭಾರತ್ನಾಕರಮನಾಂ ಕಲಂಕಿದೆನದಱಿಂ ವೈರಂ ನೆಲೆವೆರ್ಚುಗುಮರಿವೀರರೊಳಂ ಸ್ತ್ರೀಜವೈರಮೇಂ ಕೇವಲಮೇ (ಜಗವಿ. ೯–೨೧) ; ನವಾಂಬುಕೇಳಿಯುಂ ವಿರಚಿಸುವಂತೆ ಡೊಕ್ಕರಿಗಳಿಂ ಮೊಗೆದೊರ್ಬರೊಳೊರ್ಬರಾಗಳಚ್ಚರಿ ನೆಲೆವೆರ್ಚೆ ಪೊಯ್ದರೊಲವಿಂ ವಿಜಯಾವತಿಯುಂ ನರೇಂದ್ರನುಂ (ಕುಸುಮಾ. ೫–೧೩೫) ; ಗಲ್ಲದ ಸೊರ್ಕುನೀರ ಪೊನಲಿಂ ನೆಲೆವೆರ್ಚೆ ಕಡಲ್ ತುಳುಂಕೆ . . . ಬಂದುವು ಬಿಂಕದಿನಂಕದಾನೆಗಳ್ (ಕಬ್ಬಿಕಾ. ೨೦೩). ೨. ಉಬ್ಬು ; ಉಕ್ಕು : ಉದಯಿಸೆ ಚಂದ್ರಂ ನೆಲೆವೆರ್ಚಿದರ್ಣವಂ ಘೂರ್ಣಿಪಂತೆ ಘೋರೆಂದೋರಂದದೆ ಭುವನಮ್ಮೆದೆ ಘೂರ್ಣಿಸಿದುದದೆತ್ತಂ ರಾಜಪುತ್ರಜನನೋತ್ಸವದೊಳ್ (ಕಾದಂಪೂ. ೪೧೧) ; ತೆರೆಗೈಯಿಂ ತುಡುಕುತ್ತುಮೊಳ್ದೊಡೆಯುಂ . . . ವಕ್ಷೋಜಮಂ ನಿಟ್ಟು ನೇವರಿಸುತ್ತುಂ ನೆಲೆವೆರ್ಚೆ ಕಾಮುಕನವೋಲ್ ನೀರೇಱುತಿರ್ದತ್ತು ತತ್ತರುಣೀಸಂಕುಳಮೆಲ್ಲಮಾಗಳೊಳಗಾಯ್ತೆಂಬಂತೆ ಪದ್ಮಾಕರಂ (ಚಂದ್ರಪು. ೭–೧೨೬) ; ಇಂದುರುಚಿ ಸೋಂಕಿದಿಂಗಡಲಂದದೆ ನೆಲೆವೆರ್ಚಿದತ್ತು ಪರಿಜನವತುಳಾನಂದದಿನಿಳೇಶಮದನಂ ಬಂದಂ ತಾನೆಂಬ ವಾರ್ತೆಯಿಂದಾ ಪದದೊಳ್ (ಕುಸುಮಾ. ೧೫–೯೯). ೩. ಉತ್ಸಾಹಿಸು; ಸಂತೋಷ ಪಡು : ನೆಲೆವೆರ್ಚುವ ಪೆಣ್ಗಳ ಕರತಲದಿಂ ಕರತಲಕೆ ಬರ್ಪ ಬಾಲಕನಾಗಳ್ಗಲೆವಂದಂ ಕೆಂದಾವರೆಯಲರಿಂದಲರ್ಗೆಯ್ದೆ ತಳರ್ವ ಹಂಸಾರ್ಭಕನಂ (ರಾಜಶೇ. ೪–೬೯). [ನೆಲೆ$_{1}$ + ಪೆರ್ಚು$_{1}$]

**ನೆಲೆವೆರ್ಚು$_{2}$** (ನಾ). ಆಧಿಕ್ಯ ; ಹೆಚ್ಚಳ : ಮೃದುಪದಬಂಧಮುಂ ಬಗೆಯ ಭಾವದ ಮೆಯ್ಸಿರಿಯುಂ ರಸಪ್ರವಾಹದ ನೆಲೆವೆರ್ಚನಿಂಬಱಿದು ಭಾವಿಸಿ ಭಾವಿಸಿ ಮೆಚ್ಚಿ ಮೆಚ್ಚಿ ಪೊಣ್ಮಿದ ಪುಲಕಂಗಳಿಂ ಅನುರಾಗಮುಂ ಪಡೆವ ಸಜ್ಜನಸಂಸ್ತವಮೊಂದೆ ಸಾಲದೇ (ಪಂರಾಮಾ. ೧–೨೯) ; ಮದನವಿರೋಧಿ ಬಾರ ದುರಿತಾಂತಕ ಬಾರ . . . ಪುಣ್ಯದ ನೆಲೆವೆರ್ಚೆ ಬಾರ (ಪಂಪಾಶ. ೧೭). [<ನೆಲೆವೆರ್ಚು$_{1}$]

**ನೆಲೆವೆಲೆ, ನೆಲೆಬೆಲೆ** (ನಾ). ನಿಶ್ಚಿತವಾದ ಬೆಲೆ ; ಖಚಿತವಾದ ಮೌಲ್ಯ : ನೆಲೆವೆಲೆವೇಟಾ ಪೊಂಬರಣಿಗಳೆರಡರ್ಕಂ (ಚಿಕವಿ. ೬–೫೦). **ನೆಲೆಬೆಲೆ :** ಅಂತೂ ಎಲ್ಲರು ಆನಂದದಾಯಕ ಶಕ್ತಿಯ ಉತ್ಕರ್ಷಾಪಕರ್ಷಕ ಗುಣಪ್ರಮಾಣದಿಂದ ಕಾವ್ಯದ ರಸದ ನೆಲೆಬೆಲೆ ಗೊತ್ತುಮಾಡುವರು ಎಂದಂತಾಯಿತು (ಸಾಹಿವಿ. ೧೨) ; ಕನ್ನಡಸಾಹಿತ್ಯವನ್ನು ಈ ಕಣ್ಣಿನಿಂದ ನೋಡಿ ಇಂದು ಆದರ ನೆಲೆಬೆಲೆಯನ್ನು ಅರಿತುಕೊಳ್ಳಬೇಕಾಗಿದೆ (ತವಣಿ. ೨೭). [ನೆಲೆ$_{1}$ + ಬೆಲೆ$_{2}$]

**ನೆಲೆವೆಲೆಗೊಳಿಸು** (ಕ್ರಿ). ಖಚಿತವಾದ ಬೆಲೆಯನ್ನು ಕಟ್ಟು ; ಸರಿಯಾದ ಮೌಲ್ಯವನ್ನು ನಿರ್ಧರಿಸು : ಮಣಿಯುಂ ಗಾಜುಮನೆಣೆಗೊಂಡೆಣಿಸುಗೆ ಕಾಲುರಿಚರದಱನೇನೂಣಯಮೇ ಗುಣಮುಂ ದೋಷಮನಱಿತು ವಿಪಣಿಯೊಳದೇನೊರ್ವನಿರನೆ ನೆಲೆವೆಲೆಗೊಳಿಪಂ ? (ಚಿಕವಿ. ೧–೪೫). [ನೆಲೆವೆಲೆ + ಕೊಳ್$_{1}$ + –ಇಸು$_{3}$]

**ನೆಲೆವೆಱು** (ಕ್ರಿ). ೧. ಸ್ಥಾಪಿತವಾಗು ; ನೆಲೆಯೂರು ; ನೆಲೆನಿಲ್ಲು; ನೆಲಸು : ಆ ಮಾತುಗಳ್ ನೆಲೆವೆತ್ತಾ ಯತಿಪಂಗೆ ಚಿತ್ತದೊಳಿರಲ್ ಪುಟ್ಟಿತ್ತು ಕೋಪಾನಳಂ (ನೇಮಿಪು. ೫–೧೦೪) ; ಎಲೆ ತಮ್ಮ ಗಿಳಿಯ ಚಪಳತೆ ನೆಲೆವೆತ್ತುದು ನಿನ್ನೊಳಿನ್ನೆಗಂ ನಿನಗಿನಿತುಂ ಕಲಿಸಿದ ಕೋವಿದನಾವೊಂ ಜಲಕ್ಕನಱಿಪು (ವರ್ಧಪು. ೧೬–೧೧). ೨. ಉನ್ನತ ಸ್ಥಾನವನ್ನು ಪಡೆ; ಪ್ರಸಿದ್ಧಿಯನ್ನು ಹೊಂದು : ನೆಲೆವೆತ್ತ ಮುತ್ತರಿಂ ಮಿಗೆ ನೆಲೆವತ್ತಂ ಚಾಮರಾಜನೆಳಗಟಿಲೆಯವೋಲ್ (ಚಿಕವಿ. ೨–೬೩). ೩. ಎಡೆಬಿಡದಿರು ; ಸತತವಾಗು ; ನಿರಂತರವಾಗು : ಜಲಮಯಮಿಳೆಯೆಲ್ಲಂ ಪ್ರಜ್ವಲಿತ ತಟಿನ್ಮಾಲಿಕಾಮಯಂ ದೆಸೆಯೆಲ್ಲಂ ಜಲದಮಯಮಭ್ರಮೆಲ್ಲಂ ನೆಲೆವೆತ್ತಿರೆ ಬಿಡದೆ ಕಟ್ಟಿ ಕಱಿದುವು ಮುಗಿಲ್ಗಳ್ (ವೃಷವಿ. ೧೪–೨೭).

[ನೆಲೆ$_{1}$ + ಪೆಱು$_{1}$]

**ನೆಲೆವೊಗು** (ಕ್ರಿ). ಮನೆಗೆ ಹೋಗು ; ವಾಸಸ್ಥಾನವನ್ನು ಸೇರು, —ತಲುಪು : ನೆಲೆವೊ[ಪಾಠಾಂ. ಯೊ]ಕ್ಕನಂತಾತನತ್ತಲಿತ್ತಂ ಸಿದ್ಧತಿಲಕನುಱೆ . . . ಒಡನಾಡಿಗಳುವೆರಸಿ ನಡೆಯಲು ಮುಂದೆ (ಸಿದ್ಧರಾ. ೨–೧೫).

[ನೆಲೆ$_{1}$ + ಪೊಗು$_{1}$]

**ನೆಲೆವೊಟ್ಟು** (ನಾ). ಚೆಲುವಾದ ತಿಲಕ : ಪುರ್ಬೆಂಬ ಕಬ್ಬಿನ ಬಿಲ್ಲಿಂ ಬದರ್ುಂಕಿದ ಮದನನಲರಂಬೆಂಬಿನಮಿಂಬಾಗಿರ್ದ ನೆಲೆವೊಟ್ಟುಂ ನೆಲೆವೊಟ್ಟ ನೊಳೊಟ್ಟೈಸಿ ಪಳಂಚಲೆವ ಕುರುಳೋಳಿಯುಂ . . . ತೋರಮಲ್ಲಿಗೆಯ ಮುಱಿಯುಮೆಸೆಯೆ (ಆದಿಪು. ೪–೪೧ ವ) ; "ಎತ್ತರವಾದ ರಾಶಿ" (ಆದಿಪು. ಕೋಶ). [ನೆಲೆ$_{1}$ + ಬೊಟ್ಟು$_{1}$]

**ನೆಲೆಸಿಕಿ** (ನಾ). ಕಟ್ಟಿದ ಶಿಖೆ (?) : ಬಲಗಡೆಗಾಗಿ ಬಾಗಿ ಬಿಗಿವಟ್ಟುಱೆ ಬಟ್ಟತೆಂಬಿನಂ ಮಲರ ಸರಂಗಳೊತ್ತರಿಸೆ ಸುತ್ತಿರೆ ಪತ್ತಿದಂದದಿಂ ನೆಲೆಸಿಕಿಯಚ್ಚ ಪೊಂದುಗುಲದಿಂ ಪೊಗರೇಱಿ ಮತ್ತದೇಂ ಬೆಲೆವಡೆದತ್ತೊ ಚಿತ್ತಭವನಂದದ ಬಂದಿಗಾಱನಾ (ಚಿಕವಿ. ೫–೭). [ನೆಲೆ$_{1}$ + ಸಿಕಿ$_{2}$(<ಸಿಕೆ$_{1}$)]

**ನೆಲೆಸು** 'ನೆಲಸು$_{1}$' ನೋ.

**ನೆಲೆಸೊಗ** (ನಾ). ಹೆಚ್ಚಾದ ಸುಖ ; ಅತಿಶಯವಾದ ಆನಂದ ; ತನಿಸುಖ: ನೆಲೆಸೊಗವಾಂಪರಿಂದು ಚಿಕದೇವನ ವೀಣೆಯ ಸುಚ್ಚರಂಗಳಿಂ (ಚಿಕವಿ. ೪–೧೧೯). [ನೆಲೆ$_{1}$ + ಸೊಗ]

**ನೆಲೆಸೊಡರ್** (ನಾ). ಸ್ಥಿರವಾದ ಕಾಂತಿಯುಳ್ಳ ದೀಪ : ಇಡಿದಡರೆ ಕೊಂಡ ಕುಸುಕಱಿ ಕಡುಗಟ್ಟಿಲೆ ತಲೆಯನೆತ್ತದೊತ್ತರಿಸದಣಂ ಸೊಡರದೆಲೆ ಮಿಡುಕದಿರೆ ನೆಲೆಸೊಡರ್ಗಳನಾ ಜ್ಯೋತಿರಂಗತರು ಕುಡುತಿರ್ಕುಂ (ಶಾಂತಿಪು. ೬–೧೧೮). [ನೆಲೆ$_{1}$ + ಸೊಡರ್]

**ನೆಲೆಹತ್ತು** (ಕ್ರಿ). ೧. ನೆಲಸಿದ ಸ್ಥಳ ಗೊತ್ತಾಗು,—ಪತ್ತೆಯಾಗು: ನೀನು ಏನಾದೆಯೋ ಎಂದು ಎಷ್ಟೆಲ್ಲ ಸಂಕಟ ಪಟ್ಟೆ, ಊರೆಲ್ಲಾ ಹುಡುಕಿದೆ, ನೆಲೆ ಹತ್ತದೆ ಸುಮ್ಮನಾದೆ (ಹೊಸಕ್ರಿ. ೪೧). ೨. ಆಳ ಗೊತ್ತಾಗು ; ಮರ್ಮ ತಿಳಿದು ಬರು : ತನ್ನ ವಾಕ್ಯವನ್ನು ವೇದಮಂತ್ರದಂತೆ ಮನ್ನಿಸುತ್ತ ಬಂದ ಮಗನ ಈ ವೃತ್ತಿಯು ತಿಳಿಯದಾಯಿತು. ಎಷ್ಟು ವಿಚಾರಿಸಿದರೂ ನೆಲೆ ಹತ್ತಲಿಲ್ಲ (ಜಯಂತ. ೪).

[ನೆಲೆ$_{1}$ + ಹತ್ತು$_{1}$(<ಪತ್ತು$_{1}$)]

**ನೆಲೆಹೊಲ** (ನಾ). ನೆಲಸಿರುವ ಸ್ಥಳ ; ವಾಸಿಸುವ ಜಾಗ : ಹಲವು ಗಿರಿಗಳ ತಪ್ಪಲಲ್ಲಿ ಮಲೆಯ ಮಂದಿರಗಳಲ್ಲಿ ಬಳಸಿ ಬಳಸಿ ಮೇದು ಮತ್ತೆ

[illegible]

**ನೆಲ್ಲಜವಳ್ಳಿ** (ನಾ). ಒಂದು ಊರಿನ ಹೆಸರು : ರವಿಚನ್ದ್ರಯ್ಯ ನೆಲ್ಲಜವಳ್ಳಿಯೊಳ್ಕಸವದಿತ್ಕರ್ಕ್ಕಳಂ ಪ್ರತಿಷ್ಠೆಗೆಯ್ದರ್ (ಎಕ. VIII, ತೀರ್ಥಹ. ೨೭-೯ ; 929). [?+ಪಳ್ಳಿ$_1$]

**ನೆಲ್ಲಡಕು** (ಕ್ರಿ). ಬತ್ತವನ್ನು ಪೇರಿಸು : ಪೊಂಗುಣಿ ತಿರುನಾಳ್ಗಂ ನೆಲ್ಲಡ[ಪಾಠಾಂ.ಡು]ಕುವ ಹಿಂಗದೆ ಪೊನ್ನಾಂಬಲಕಂದೆಯ್ದುವ ಹರನಲ್ಲಿಗೆ ನೆಜೆ ಬಿಟ್ಟಿಗಳಾದವು ತಿರುನಾಳ್ಪೋವರ ತುಷ್ಟಿಗಳಾದವು (ತಿರುನಾ.ದೇ. ೨೧೭-೨೧). [ನೆಲ್+ಅಡಕು$_1$(<ಅಡುಕು)]

**ನೆಲ್ಲರಳು** (ನಾ). ಬತ್ತದ ಅರಳು ; ಲಾಜೆ : ಆಲಸಂದೆಯ ಗುಗ್ಗುರಿ ನೆಲ್ಲರಳು ಕಬ್ಬಿನ ರಸ ಜೇನುತುಪ್ಪ . . . ಅಷ್ಟವಿಧಾರ್ಚನೆವೆರಸು ಆ ಮನೆಗೆ ಮೂಡಲಾಗಿ ಮೂಡುಸಂಜೆ ಸಂಜೆಯೊಳು ತಾಂಬೂಲ ವಸ್ತ್ರ ಕಾಣಿಕೆಯಿಂ ಮಂತ್ರಸಮನ್ವಿತವಾಗಿ ಮೂಡುದಿನ ಬಲಿಯಂ ಕೊಡಲು (ಬಾಲಚಿ. ೧೩೨-೨) ; ಅಸನ ವದನಂ ಫಣಿಯ ನಿವಾಸದ ನೆಲ್ಲರಳ ಬೆಲ್ಲವತ್ತದರಿಷ್ಟಭಾಸದ ಮಧುವಿನ ಪಲಸಿನ ವಾಸದ ನಿಶ್ವಾಸಮೆನೆ ಹಯಂಗಳುಂ ಶುಭದಂ (ಅಶ್ವವೈ. ೩-೧೯) ; ಬಾಯಿ ತಿಳಗಳಲ್ಲಿ ಹುತ್ತದ ಮಣ್ಣಿನ ನೆಲ್ಲರಳಿನ ಬೆಲ್ಲವತ್ತದ ಹಣ್ಣಿನ ಜೇನುತುಪ್ಪದ ಹಲಸಿನ ಹಣ್ಣಿನ ಪರಿಮಳಗಳಸುಳ್ಳ ಕುದುರೆಯುನಾಳೆ ಮಹಾವುತ್ತಮ (ಅಶ್ವವೈ. ೩-೧೯ ಟೀಕು). [ನೆಲ್+ಅರಳು$_3$(<ಅರಲ್$_3$)]

**ನೆಲ್ಲವತ್ತಿ, ನೆಲವತ್ತಿ$_2$, ನೆಲವರ್ತಿ, ನೇಲವತ್ತಿ, ನೇಲುವತ್ತಿ** (ನಾ). ೧. ಒಂದು ಊರಿನ ಹೆಸರು ; ☞ ಈಗಿನ ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ನ್ಯಾಮತಿ: ತನಗೆ ಪರಹಿತಮೆ ಹಿತಮೆಂದನು ಮಾನಿಸಿ ನೊಕ್ಕನೊಲ್ದು ಮಾಡಿಸೆ ವಿಶ್ವಾವನಿಯೊಳಗೆ ನೆಲ್ಲವತ್ತಿಯ ಜಿನ ಭವನಂ ರಿತುವಿಮಾನಮಂ ಪೋಲ್ತಿರ್ಕುಂ (ಎಕ. VII, ಶಿವಮೊ. ೧೦-೪೮; 1085?). **ನೆಲವತ್ತಿ$_2$** : ೧. ದಿವ್ಯಾಹಾರಮನಾಕಂಠಪ್ರಮಾಣಂಬರೆಗಂ ತಣಿಯುಂಡು ಬಟುಕ್ಕೆ ಕರ್ಪೂರಸಮ್ಮಿಶ್ರಮಪ್ಪ ನೆಲವತ್ತಿಯಡಕೆಯ ಪೋಟ್ಗಳುಮಂ ಕೈತೀವಿದೆಲೆಯುಮಂ ಬ್ರಹ್ಮಯ್ಯಂಗೆ ಕೊಟ್ಟು (ಪದ್ಮಾರಾ. ೭೮-೨೩) ; ಶ್ರೀಮದಗ್ರಹಾರಂ ನೆಲವತ್ತಿಯ ತುಱುವಂ ಬೆಳಗವತ್ತಿಯ ದೇಸೆಯಂ ಕೊಂಡು ಪೋದಲ್ಲಿ (ಎಕ. VII, ಹೊನ್ನಾ. ೬೫-೨ ; 1125). **ನೆಲವರ್ತಿ** : ೨. ನೆಲ್ಲವತ್ತಿಪ್ರದೇಶದಲ್ಲಿ ಬೆಳೆಯುವ ಅಡಕೆ (?) : ಊರೊಡೆಯು ಪ್ರಮುಖ ಸಾಸಿರ್ವರ್ಮ್ಮಹಾಜನಂಗಳ್ ಐ(ಐ)ಕಮತ್ಯವಾಗಿದ್ದು ನೆಲವರ್ತಿಗೆ ಸಾಸಿರಕ್ಕೆ ಪನ್ನೊಂದ ಡಕೆಯ ಸೊಜ್ಜಮುಮಂ . . . ಬಿಟ್ಟರ್ (ಎಇ. XVIII, ೧೯೨-೩೩ ; 1224). **ನೇಲವತ್ತಿ** : ೧. ಅಡಸಿದ ಪಾರಿಜಾತಕದ ಕಪ್ಪುರವಳ್ಳಿಯ ನೇಲವತ್ತಿಯಾಯ್ದಡಕೆಯ ಭೀಮಸೇನಿಕದ ತಂಬುಲದಿಂ (ಶಾಂತಿಪು. ೧೦-೬೫). **ನೇಲುವತ್ತಿ** : ೧. ಕಾಮವಿಕಾರೋತ್ಕರ್ಷಸಮಾಕರ್ಷಣ ನಿಮಿತ್ತಂ ಮಾಡಿದೌಷಧದ ಘುಟಿಕಾಪೇಟಿಕಂಗಳಿಂಬಂತಿರ್ದ ಕರ್ಪೂರ ತೈಲದಿಂ ಘೋಳಿಸಿದ ನೇ[ಪಾಠಾಂ. ಮೇ]ಲುವತ್ತಿಯಾದಡಕೆಯ ಭಾಗಂ ಗಳಿಂದಂ (ಬಾಧಪು. ೬-೧೧೮ ಪ).

[?./ತೆಲು. ನೆಲವತ್ತಿ, ನೆಲವತಿ=ಅಡಕೆಯ ಹೋಳು]

**ನೆಲ್ಲವರೆ** (ನಾ). ಅವರೆಯಲ್ಲಿ ಒಂದು ಬಗೆ : ಬದನೆ ಪಡವಲ . . . ನೆಲ್ಲವರೆ . . . ಮೊದಲಾದ ವ್ಯಜನ (ಸೌಗಂಧಿ. ೩೭-೧೮) ; ನೆಲ್ಲವರೆ, ಗಿಣ್ಣು ನೆಲ್ಲವರೆ (ಮೈಗಿ. ೧೦-೧೭೮). [ನೆಲ್+ಅವರೆ$_1$]

**ನೆಲ್ಲಾನೆ** (ನಾ). ಒಂದು ಬಗೆಯ ಸಸ್ಯ : (ಮೈಗಿ. ೫೭-೧೧೨೪). [ನೆಲ್+ಆನೆ?]

**ನೆಲ್ಲಿ** (ನಾ). ೧. ಹುಳಿಯಾದ ಕಾಯಿ ಬಿಡುವ ಒಂದು ಬಗೆಯ ಮರ ಮತ್ತು ಅದರ ಕಾಯಿ ; ಆಮಲಕ : "ಧಾತ್ರೀ, ಆಮಳಕೀ, ಶಿವಾ—ಈ ೩ ನೆಲ್ಲಿ" (ಹಲಾಯು.೧೧೧-೪೭೪) ; ಕ್ರಿಯೆಯಿಂ ನೆಲ್ಲಿಯುಮಂ

ದಂತಿಯುಮಂ ರಜನಿಯುಮನರೆದು ಪೂಸಿದೊಡೆ . . . ಭಗಂಧರಂ ಪ್ರಶಮಿಸುಗುಂ (ಲೋಕೋಪ. ೯-೧೫೯); ಅರನೇಱಿಲ್ ತಾಱಿ ತುಂಬುರ್ ತದುಕಳಿಲೆಲವಂ ನೆಲ್ಲಿ . . . ಬ್ರಹ್ಮವೃಕ್ಷಂ ಕಱಿಕೆ ತಱಿಯ ದಿಂದೊಪ್ಪುತಿರ್ದತ್ತರಣ್ಯಂ (ಗಿರಿಕ. ೧-೭೨); ನಾರಿಕೇಳವೆ ಕೇಳು ನಾರಿಯ ಸಾರಬೋಧೆಯನಾದರಿಸದವಿಚಾರಿಯಾದೆನು ನೆಲ್ಲಿಯೇ ಇನ್ನೆಲ್ಲಿ ಯದು ಬದುಕು (ಬಸವು. ೪೫-೩೯); ನೆಲ್ಲಿ ನೇಱಿಲು ನಗರೆ ಕಡಸಿಗೆ ಕಲ್ಲರಳಿ ಕರ್ಪೂರ ಕದಳಿಗಳಿಲ್ಲಿ ನೋಡಿವೆ ಭೂಮಿಸುತೆ ಭೂಜಾತಸಂತತಿಯ (ತೊರರಾ. ೩-೧-೨೯). **೨.** ಕೆಲವು ಅಂಕಿತನಾಮಗಳ ಕೊನೆಯಲ್ಲಿ ಸೇರಿ ಬರುವ ಶಬ್ದ : ಆ ಗಣಪಂಣಗಳು ಆ ಪಾದಮೂಲಿ ವಿಷ್ಣುನೆಲ್ಲಿ ನಾರಣನೆಲ್ಲಿ ಕೇಶವನೆಲ್ಲಿ ಯಿವರುಗಳ ಕೈಯ್ಯಲ್ಲಿ ಅರ್ಧಪರಿಚ್ಛೇದವಾಗಿ ಮೂಳಿಯ ಹಣ ಸಹಿತವಾಗಿ ಕೊಟ್ಟು ಮೂಲಪರಿಚ್ಛೇದವಾಗಿ ಧಾರಾ ಪೂರ್ವಕವಾಗಿ ಕೊಂಡ ಕ್ಷೇತ್ರದ ವಿವರ (ಸೌಇಇ. IX-ii, ೪೨೬-೧೧ ; 1402).

**ನೆಲ್ಲಿಯ ಕಾಯ್, ನೆಲ್ಲಿಯ ಕಾಯಿ** = ನೆಲ್ಲಿಕಾಯ್ : "ವೃತ್ತ ಫಲಾ-ಬದನೆ, ವಿಜಾನಿಕೆ, ನೆಲ್ಲಿಯ ಕಾಯ್" (ಓಷಧಿ. ೧೫೭); ತೋರ ನೆಲ್ಲಿಯ ಕಾಯಿಂ ಪಿರಿಯವಪ್ಪ ಮುತ್ತಿನ ಬ್ರಹ್ಮಸೂತ್ರಮನೆಚಲಿಕ್ಕಿ (ಪಂಪಭಾ. ೧೨-೧೦೮ ಪ); ನಾಲ್ವತ್ತೊಂಬತ್ತು ದಿನಕ್ಕೆ ಯವ್ವನಮನಪ್ಪು ಕೆಯ್ದು ನೆಲ್ಲಿಯ ಕಾಯ ಪ್ರಮಾಣದಿನಾಂತರಿತಾಹಾರಮಂ ಉಱದು ದೆಲ್ಲಂ ಪಿಂದಣ ಪರಿ (ಪುಣ್ಯಾಸ್ರ. ೧೦-೭ ಪ); ಕಡು ಸಣ್ಣನಂ ಮಾಡಿ ಕೊಂಡ ನೆಲ್ಲಿಯ ಕಾಯ . . . ತುಪ್ಪದೊಳು ಹುರಿದು (ಸೂಪಶಾ. ೬-೧೪); ಬೆಟ್ಟದ ನೆಲ್ಲಿಯ ಕಾಯಿ ಸಮುದ್ರದೊಳಗಣ ಉಪ್ಪು ಎತ್ತಣಿಂ ದೆತ್ತ ಸಂಬಂಧವಯ್ಯ (ಅವಚಂ. ೧೫-೫೯); ಆ ಗೃಹಸ್ಥನಿಗೆ ನೆಲ್ಲಿಯ ಕಾಯಿಯೆಂದರೆ ಆಶೆ (ಕಸರಿ. ೨೯). **ನೆಲ್ಲಿಯ ಮರ** = ನೆಲ್ಲಿಕಾಯಿಯ ಮರ : "ತಿಷ್ಯಫಲಾ, ಆಮಲಕೀ, ಅಮೃತಾ, ವಯಸ್ಥಾ-ಈ ೪ ನೆಲ್ಲಿಯ ಮರ" (ನಾಚಿರಾ. ೧೦೮); ನೆಲ್ಲಿಯ ಮರಂಗಳೋಳಿಗಳಲ್ಲಿ ಕರಂ ತೋರ್ಪ ತೋರಗಾಯ್ಗಳ ಮೊತ್ತಂ . . . ಕಣ್ಗೆವುತಿರ್ಪುದತಿಶಯಸುಖಮಂ (ಬಾಧಪು. ೧೦-೮೫); ಅಲ್ಲಿಂ ತೆಂಕಲು ಹೊಳೆಯ ದಡದ ಮೇಲಣ ಅಸಿಯ ನೆಲ್ಲಿಯ ಮರನ ಒತ್ತಿನಲಿ (ಎಕ. VIII, ತೀರ್ಥಹ. ೧೯೦-೩೨ ; 1407). **ನೆಲ್ಲಿಯ ಸೆಟ್ಟು** = ನೆಲ್ಲಿಚಟ್ಟು : ಅಣಿಲೆಯ ಕಾಯ್, ತಾಱಿಯ ಕಾಯ್, ನೆಲ್ಲಿಯ ಸೆಟ್ಟು ಈ ಮೂಱುಮನರೆದು ಕುಡಿವುದು (ಲೋಕೋಪ. ೯-೧೩೬ ಟೀಕೆ). **ನೆಲ್ಲಿಹಿಂಡಿ** = ನೆಲ್ಲಿಕಾಯಿಯಿಂದ ಮಾಡುವ ಚಟ್ಟಿಣಿ :(ಶ).

[**ದೇ.॥ ತಮಿ. ಮಲ. ತುಳು. ತೆಲು.** ನೆಲ್ಲಿ ; **ಕೊಡ.** ನೆಲ್ಲಿಕೆ ; **ಪರ್ಜಿ.** ನೆಲ್ಲ ; **ಗೊಂಡಿ.** ನೆಲ್ಲಿ, ನಲ್ಲೀ ; **ಕುಇ.** ನೆಡಿ ; **ಕುವಿ.** ಲೆಲ್ಲಿ]

**ನೆಲ್ಲಿಕಾಯ್, ನೆಲ್ಲಿಕಾಯಿ** (ನಾ). ನೆಲ್ಲಿ ಗಿಡದಲ್ಲಿ ಬಿಡುವ ಫಲ : ಗಟ್ಟದುಪ್ಪು ಬೆಟ್ಟದ ನೆಲ್ಲಿಕಾಯ್ಗೆ ಸುಪ್ರಯೋಗಿಸಿದಂತೆ ಸುಗು ಣಾನಿರುದ್ಧಗೆ ಕಪ್ಪುರಗಂಧಿ ಸೇರಿದಳು (ಮೋಹತ. ೪೧-೪೫). **ನೆಲ್ಲಿಕಾಯಿ :** "ಧಾತ್ರೀಫಲಂ-ನೆಲ್ಲಿಕಾಯಿ" (ಓಷಧಿ. ೮೧); ಪಚ್ಚೆತುತ್ಥ, ತಾರೆಕಾಯ ಬೀಜದ ತಿರುಳು, ನೆಲ್ಲಿಕಾಯ ಬೀಜದ ತಿರುಳು, ಇವಿಷ್ಟನು . . . ಕಣ್ಣಿಗೆಚ್ಚಲು ಅತ್ಯಂತ ನೋವು ಸಹಿತವಾಗಿದ್ದ ಕಣ್ಣಿನಲ್ಲಿ ನೀರು ಸುರಿವುದು ಶಮನವಹುದು (ವೈದ್ಯಸಾ. II, ೭೯); ನೆಲ್ಲಿಕಾಯಿ 'ಸಿ' ಜೀವಾತು ಬಹಳ ಪ್ರಮಾಣದಲ್ಲಿರುವ ವಸ್ತು (ಅಡುಸೌ. ೬೪).

**ನೆಲ್ಲಿಕಾಯಿ ತಾಟ** = ನೆಲ್ಲಿಕಾಯಿಗಳನ್ನು ಒಣಗಿಸಿ ಮಾಡಿದ ಚಟ್ಟು : ಕಹಿಪಡುವಲು, ಅಳಲೇಕಾಯಿ ತಾಟ, ನೆಲ್ಲೀಕಾಯಿ ತಾಟ . . . ಇವುಗಳ ಕಷಾಯದಲ್ಲಿ ಶುದ್ಧ ಗುಗ್ಗಳ ೧ ಚವಲಿಯ ತೂಕ ಹಾಕಿ ಕುಡಿಸಬೇಕು (ಗೃಹವೈ. ೭೨). [ನೆಲ್ಲಿ + ಕಾಯ್$_4$]

**ನೆಲ್ಲಿಕಾಯಿ** 'ನೆಲ್ಲಿಕಾಯ್' ನೋ.

**ನೆಲ್ಲಿಕಾಯಿಸರ** (ನಾ). (ನೆಲ್ಲಿಯ ಕಾಯಿಯ ಆಕಾರದಲ್ಲಿರುವ) ಚಿನ್ನದ ಗುಂಡುಗಳಿಂದ ಮಾಡಿದ ಸರ : ಕಂಠಭೂಷಣಗಳು . . . ನೆಲ್ಲಿಕಾಯಿ ಸರ, ಗೋದಿ ಸರ, ಜೋಳದ ಸರ, ಮಾವಿನಕಾಯಿ ಸರ, ಮಲ್ಲಿಗೆ ಮೊಗ್ಗಿನ ಮಾಲೆ ಪದಕ ಇತ್ಯಾದಿ (ಕವಿಕೋ. I, ೮೨೧).

[ನೆಲ್ಲಿಕಾಯಿ(<ನೆಲ್ಲಿಕಾಯ್) + ಸರ$_3$]

**ನೆಲ್ಲಿಗುಂಡಿ** (ನಾ). ಒಂದು ಊರಿನ ಹೆಸರು : ಶ್ರೀಪೃಥಿವೀವಲ್ಲಭ ಪರಮೇಸ್ವರ ಪಲ್ಲವಾಧಿರಾಜಂ . . . ಗಂಗವೂರ ಮೂವತ್ತು ನೆಲ್ಲಿಗುಣ್ಡಿ ಪನ್ನೆರಡುಮನಾಳುತ್ತು ×× (ಎಕ. XI, ಚಳ್ಳಕೆ. ೩೪-೧೪ ; ಸು.815).

[ ? ]

**ನೆಲ್ಲಿಗೆಱೆ** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀ ಮಇನ್ದಂ ನೊಟಿಮ್ಬನ್ ಗಙ್ಗಱುಸಸಿರಮುಂ ಆಳೆ ನೆಲ್ಲಿಗೆಱೆಯ ತುಱುಗೊಣ್ಡಲ್ಲಿ ತುಱುವನಿಕ್ಕಿಸಿರೊಸಗರಲಯನ್ ಪೊಸಮೆಣ್ಡಿ ಸಗಮೇಱಿದನ್ (ಎಕ. IX (S), ಹೊಸಕೋ. ೯-೭ ; 875); ತಮ್ಮಣ್ಣನ ಕಲ್ಲ ನೆಲ್ಲಿಗೆಱೆಯಲಿ ಕಲ ನಿಗ್ರ್ಗನ್ದಸೆಟ್ಟಿ ನಿಱಿಸಿದನ್ (ಎಕ. X, ಚಿಂತಾಮ. ೧೧೮-೧೨ ; 1010); ನೆಲ್ಲಿಗೆಱೆಯ ಕೆಱೆಗಂ ಕೊಟ್ಟ ಪೊಂ ಅಯ್ವತ್ತು ಏಱು ಗದ್ಯಾಣಂ (ಎಕ. IX, ಹೊಸಕೋ. ೧೦-೧೦ ; 1023).

[ನೆಲ್ಲಿ + ಕೆಱೆ]

**ನೆಲ್ಲಿಚಟ್ಟು, ನೆಲ್ಲಿಚೆಟ್ಟು** (ನಾ). ಬೀಜ ತೆಗೆದು ಒಣಗಿಸಿಟ್ಟ ನೆಲ್ಲಿಯ ಕಾಯಿ : ನೆಲ್ಲಿಚಟ್ಟು :- ಇದಂ ಮೊಸರಲ್ಲಿ ಅರೆದು ತೆಗೆದು ಕೊಳ್ಳೆ ಹೊಟ್ಟೆ ಹರಿಯುವುದು ನಿಲ್ಲುವುದು (ವಿನೈವಿ. ೫); ನೆಲ್ಲಿಚಟ್ಟು, ತಾರೇಕಾಯಿ, ಕಳ್ಳಂಗಡಲೆ ಬೇರು . . . ಕಷಾಯವ ಕಾಸಿ ಕೊಡಿಸಲು ಸಕಲವಾದ ರುಗ್ಗಾದ್ಯಹಸನ್ನಿಪಾತ ಶಮನವಹುದು (ವೈದ್ಯಸಾ. I, ೭೦); ಕೊತ್ತುಂಬರಿ, ಕೊಡಸಿಗೆ ಬೇರು . . . ನೆಲ್ಲಿಚಟ್ಟು, ಬೇವಿನ ಕಡ್ಡಿ ಇವು ಗಳನ್ನು ಸಮದಿಂ ಕಷಾಯ ಕಾಯಿಸಿ ಕೊಡಲು ವಾತಜ್ವರಂ ಮಾಣ್ಗುಂ (ಸಕವೈ. ೬೫). **ನೆಲ್ಲಿಚೆಟ್ಟು :** ಜೇನುತುಪ್ಪ, ಯಷ್ಟಿಮಧುಕ . . . ನೆಲ್ಲಿಚೆಟ್ಟು, ಕರ್ಪೂರದರಿಸಿನ, ಹಿಪ್ಪಲಿ, ಲೋಧ್ರ, ಭದ್ರಮುಸ್ತೆ, ಜೀರಿಗೆ ಇವುಗಳನ್ನೆಲ್ಲಾ ಸಮಭಾಗವಾಗಿ ಚೂರ್ಣಿಸಿ (ಸಕವೈ. ೭೮).

[ನೆಲ್ಲಿ + ಚಟ್ಟು$_1$(<ಚಟ್ಟೆ$_1$). / **ತಮಿ.** ನೆಲ್ಲಿಚ್ಚಾನ್ತು ; **ತುಳು.** ನೆಲ್ಲಿಚಟ್ಟ್]

**ನೆಲ್ಲಿಚೆಟ್ಟು** 'ನೆಲ್ಲಿಚಟ್ಟು' ನೋ.

**ನೆಲ್ಲಿಸರ** (ನಾ). = ನೆಲ್ಲಿಕಾಯಿಸರ : ಹರಳು ಕೆಚ್ಚಿದ ಪಟ್ಟಿ ಸರಗಿ ಪುತ್ಥಳಿ ನೆಲ್ಲಿಸರ ಚಿಂತಾಕ ಕಿರಿಪಿಲ್ಲಿ ಸುರಳಿ ಸಹಿತವಾಗಿ ಪರಿಪರಿ ವಸ್ತುವ ಧರಿಸಿಕೊಂಡಿಹರು (ಜನಗೀ. ೪೪). [ನೆಲ್ಲಿ + ಸರ$_3$]

**ನೆಲ್ಲು** 'ನೆಲ್' ನೋ.

**ನೆಲ್ಲುಗದ್ದೆ** (ನಾ). ಬತ್ತದ ಗದ್ದೆ ; ನೆಲ್ಲು ಬೆಳೆಯುವ ಭೂಮಿ : "ವಪ್ರಂ, ಕೇದಾರ, ಕ್ಷೇತ್ರಂ—೩ ಕ್ಷೇತ್ರದ ಹೆಸರು, ನೆಲ್ಲುಗದ್ದೆ" (ಸಿದ್ಧಾಂತಿ. ೨೭೭). [ನೆಲ್ಲು(<ನೆಲ್) + ಗದ್ದೆ(<ಗಟ್ಟೆ)]

**ನೆಲ್ಲುಗೆಯ್** (ನಾ). = ನೆಲ್ಲುಗದ್ದೆ : ಶ್ರೀಮತ್(ದ್)ಬಾಪ್ಪುವರಸ (ಸರ್) . . . ನನ್ದಿಕೇಸ(ಶ್ವ)ರಮು(ಮೂ) ನೆಲ್ಲುಗೆಯುವಂ ಕೊಟ್ಟ[ರು] (ಇಆ. X, ೧೦೪-೧೦ ; 934). [ನೆಲ್ಲು(<ನೆಲ್) + ಕೆಯ್$_4$]

**ನೆಲ್ಲುಮಡಿ** (ನಾ). = ನೆಲ್ಲುಗದ್ದೆ : ಪಾಮರಿಯರೂ . . . ನಡೆ ತಡಬಡಿಸುತ ನೆಲ್ಲು ಮಡಿಗಳಿಗೆ ಇಳಿವ ಗಿಳಿಗಳನ್ನು ಸೋವುವ ಗೊಲ್ಲವೆಣ್ಣು ಗಳೂ ಪಾಂಥರ ಬಗೆಯನ್ನು ತಲೆಕೆಳಗು ಮಾಡುತ್ತಾರೆ (ನಂಜುಂಡ.೧೨೫).

[ನೆಲ್ಲು(<ನೆಲ್) + ಮಡಿ$_5$]

**ನೆಲ್ಲುಸುಲಿ** (ಕ್ರಿ). ನೆಲ್ಲನ್ನು ಒಡೆ ; ಬತ್ತ ಒಡೆದು ಅಕ್ಕಿ ಮಾಡು : ನೆಲ್ಲು ಸುಲಿಯಲು . . . ಬೀಸುವ ಕಲ್ಲು (ನನ್ನಜೊ. ೩೯).

[ನೆಲ್ಲು(<ನೆಲ್) + ಸುಲಿ$_1$]

**ನೆಲ್ಲುಹೊಟ್ಟು** (ನಾ). ಬತ್ತದ ಹೊಟ್ಟು : ನೆಲ್ಲುಹೊಟ್ಟನಲ್ಲಿ ಮಾಡಿದ ಲಿಂಗವು ಮಾರಣಕರವು (ಸೌಗಂಧಿ. ೩೯೨-೩೨).
[ನೆಲ್ಲು(<ನೆಲ್)+ಹೊಟ್ಟು$_2$ (<ಪೊಟ್ಟು)]

**ನೆಲ್ಲೂರು** (ನಾ). ಒಂದು ಊರಿನ ಹೆಸರು : ನೆಲ್ಲೂರ ಮಲೆಯರ ಕೆಱೆಯಮನ ಮಗ ಅಮ್ಮಣಗಾವುಣ್ಡನುಂ . . . ದೇಗುಲಮಂ ಮಾಡಿಸಿ ಸಾಸನಮಂನ್ನಿಱಿಸಿದಂ (ಎಕ. VIII, ಸೊರಬ. ೪೭೧-೯ ; 1012).
[ನೆಲ್ ?+ಊರು$_3$(<ಊರ್)]

**ನೆಲ್ಲೆ** 'ನೆಲ್ಲ' ನೋ.

**ನೆಲ್ಲೊಗೆ** (ಕ್ರಿ). ಬತ್ತ ಉತ್ಪತ್ತಿಯಾಗು,—ಹುಟ್ಟು : ಬಿದಿರು ಸದ್ವಂಶವಾಗಿದ್ದರೂ ಅದರಲ್ಲಿ ಅರುವತ್ತು ವರ್ಷಕ್ಕೊಮ್ಮೆ ಮಾತ್ರ ಬತ್ತವಾಗುವುದು. ಹಾಗೆಯೇ ಮಹಾಉದಯವೂ ಕೂಡ ಸುವಂಶದ ಪ್ರತಿಭಾ ಪರಿಪಾಕದ ಪರಮಾವಧಿಯೆನ್ನಬಹುದು. ಅದರಿಂದಲೇ ನೆಲ್ಲೊಗೆದ ಮೇಲೆ ಆ ಬಿದಿರ ಕಟ್ಟೆಯೇ ಹೋಗುವಂತೆ, ಆ ಮಹಾಕವಿಗಳ ಅನಂತರದಲ್ಲಿ ವಂಶವು ನಿಸ್ಸಂತತಿಯಾಗುತ್ತದೆ (ಕನ್ನಇ. ೬೫). [ನೆಲ್+ಒಗೆ$_1$]

**ನೆಲ್ಲೊಗರ** (ನಾ). ಬತ್ತದ ಅಕ್ಕಿಯಿಂದ ತಯಾರಿಸಿದ ಅನ್ನ ; ನೆಲ್ಲಕ್ಕಿ ಅನ್ನ : ನೆಲ್ಲೊಗರ ಕೆನೆಮೊಸರ್ವಾಳಿಯಲ್ಲವನಲ್ಲವೆ ಸವಿಸವಿದಾನಂದಿಸು (ಮದೇವು. ೨೬-೧೧); ಬೆಲ್ಲ ಗೆಣಸುಗಳುಂಟು ಅಲ್ಲಲ್ಲಿ ನೀರುಂಟು ನೆಲ್ಲೊಗರುಂಟು ನೆಳಲುಂಟು ಕೆಱೆಕುಂಟೆ ಎಲ್ಲೆಲ್ಲು ಉಂಟು (ಸರ್ವಜ್ಞ. ೧೬೨೫). [ನೆಲ್+ಒಗರ]

**ನೆವ, ನೆಪ** (ನಾ). **೧.** ಕಾರಣ ; ಹೇತು ; ನಿಮಿತ್ತ : ಪಱಿಗೆ ಮೇಣ್ ಪೊಗಟೆ ಮೇಣ್ ನೆವಮಿಲ್ಲದೊಡಿಂತು ಕೈಗಱಿಯೆ ಬಗ್ಗಿಸುಗೆ ಮೇಣವರೆಲ್ಲರುಮಂತುಮಾನುಱಿವೆನಲ್ಲೆನೆಸಿತಾದೊಡಮೆಂಬುದು ಚಲ್ವಪಾಂಗಱಿಯ[ದ]ಂತಿದನಿಂತಿರೆ ಪೇೞ್ಗೆ ವಿಕಲ್ಪಮಂ (ಕವಿರಾ. ೧-೧೩೬) ; ಆಕೆಯ ಗರ್ಭದೊಳ್ ಪಾಪಕರ್ಮರ್ಜೀವಂ ನೆಲಸಿದೊಡೇನುಂ ನೆವಮಿಲ್ಲದೆ ಕಸವರಮೆಲ್ಲಂ ಕೆಟ್ಟತ್ತು (ವಡ್ಡಾರಾ. ೭೬-೧೧) ; ನೆಗೞ್ತೆ ಮಾಸೆ ನಣ್ಪಿನ ನೆವದಿಂದೆ ಪಾಂಡವರನೊಳವೊಕ್ಕೊಡೆ ನೀಮೆ ಪೇಸಿರೇ (ಪಂಪಭಾ. ೯-೬೮) ; ಒಳಗಣುಪತಾಪೋಪಶಮನಕೆ ಮಲಯರುಹ ಕರ್ಪೂರದ ಶೀತಳ ಸಲಿಲದಿಂ ನನೆದಿದಱ ನೆವವಿರುಳಿನಿತು ಕಣ್ಮುಚ್ಚೆ (ಬಸವು. ೩-೧೮) ; ಆಸೆ ಬುರುಕಿಗೊಂದು ಕೂಸಿನ ನೆವ (ಗಾದೆ). 'ಪಿಳ್ಳೆನೆವ' ಪರಾ. **೨.** ಉದ್ದೇಶಪೂರ್ವಕವಾದ ನಟನೆ,—ಸೋಗು ; ತೋರಿಕೆಯ ಕಾರಣ—,ಸಬೂಬು : ಬೇಂಟೆಯ ನೆವದಿಂ ಬಂದು ದ್ವೈತವನದ ಕೆಲದ ನಂದನವನದೊಳ್ ಪಾಂಡವರ್ಗೆ ಸಮಿಾಪಮಾಗೆ ಬೀಡಂ ಬಿಟ್ಟು (ಪಂಪಭಾ. ೭-೩೨ ವ) ; ಜಪಮೆಣಿಸುವ ನೆವ[ಪಾಠಾಂ. ಪ]ದಿಂದಂ ನೃಪ ತದ್ಗುಣಗಣಮನೀಗಳೆಣಿಸುತ್ತಿರ್ಪಂ (ಕಾದಂಪೂ. ೯೫೬) ; ಅನುಜೆಯನಿತ್ತು ನರಂಗೆ . . . ತಾನಾತನ ರಥಮನೆಸಗಿ ಧರ್ಮಜನನುಜನ ನೆವದಿಂದಮರಸುಗೆಯ್ವಂ ಕೃಷ್ಣಂ (ಗದಾಯು. ೩-೪೨) ; ಹೋಮದ ನೆವ [ಪಾಠಾಂ. ನೇಮ]ದಲ್ಲಿ ಹೋತನ ತಿಂಬ ಅನಾಮಿಕರೊಡನಾಡಿ ಗೆಲುವುದೇನು (ಬಸವ. ೫೭೮) ; ರಾಯ ಕುರುಪತಿ . . . ವಿಪಿನಕೆ ಘೋಷಯಾತ್ರೆಯ ನೆವದಲೈತಂದ (ಕುಮ್ವಾಅ. ೧೬ ಸೂಚನೆ). **೩.** ಕಪಟ ; ಮೋಸ; ವಂಚನೆ: "ಕೈತವಂ, ಕಪಟಂ ... ವ್ಯಪದೇಶಃ–ಈ ೧೦ ನೆವಂ" (ಹಲಾಯು. ೧೧೭–೨೮); ಹಿಂದೆ ಜಂಗಮವೇಷಮಂ ನೆವದಿಂದೆ ಧರಿಸಿದ್ದುದನಱಿದು ಸಿಗ್ಗೊಂದಿ (ಬಸವು. ೩೯-೧೯) ; ನೆವದ ನೆಲೆವೀಡು ಕುಹಕದ ಕೊಟಾರಂ ಪೊಸಬಗೆಯ ಚದುರ ಚಾವಡಿ . . . ಎನಿಪ ವೇಶ್ಯಾಶ್ರಯಂ ಮನೋವಿಸ್ಮಯಂ ಸ್ಮರಪ್ರಿಯಂ ಚೆಲ್ವಾದುದು (ಚೆಬವು. ೧೧-೯) ; ಎನ್ನೊಳು ನೆವಮಿನಿತಿಲ್ಲದೆಱಕಗೂಡಿ ಮನ್ನಿಸಿ ನುಡಿದಳಿಂತೆಂದು (ಹರಿಬ. ೧-೨೮). **೪.** ಉಪಾಯ ; ಯುಕ್ತಿ ; ಹಂಚಿಕೆ : ಈ ನೆವದಿಂದಂ ನಮ್ಮಂ ತಾನಾರಯ್ಯಲ್ಕೆ ಬಗೆವನಲ್ಲದೊಡೊಳವೊಕ್ಕಾನೃಪನ ಮಂತ್ರಿ ಮಂತ್ರ ವಿಧಾನದಿನಯ್ಯಲ್ಕೆ ನಮ್ಮನೊಡರಿಪನಕ್ಕುಂ (ಶಾಂತಿಪು.೨-೩೪); ಎನಗಂ ಕೃತ್ಯವಿಲ್ಲದಿರ್ದೊಡಂ . . . ವಿನಾನುಮೊಂದು ನೆವಂ ಮಾಡಿ ಮಹೋತ್ಕಟತ್ವದೆ ದಿಟಂ ಬಂದೆಂ (ಕಾದಂಪೂ. ೮೬೨) ; ಅಲ್ಲಿ ಪಲವು ಮತ್ಸ್ಯಂಗಳಿರ್ಪುದುಮೊಂದು ಬಕಂ ಕಂಡು ತಾನೊಂದು ನೆವದಿಂದಾ ಮಿಾನ್ಗಳಂ ತಿಂದು ಕಾಲಮಂ ಕಳೆವೆನೆಂದು ತಪೋರೂಪಮಂ ಕೈಕೊಂಡು (ಪಂಚತಂ. ೫೩-೬) ; ತರಳನಿವನದ್ವೈತಕಲೆಯಲಿ ಪರಿಣತನು ತಾನಲ್ಲ ನೆವದಿಂ ನರನ ಬೋಧಿಸಬೇಕೆನುತ ನುಡಿಸಿದನು ಫಲುಗುಣನ (ಕುಮ್ವಾಭೀ. ೩-೩೨). **೫.** ದೋಷಾರೋಪಣೆ; (ಸುಳ್ಳಾಗಿ) ತಪ್ಪು ಹೊರಿಸುವುದು : ಅಂತು ಲಬ್ಧೋಪಾಯೆಯಪ್ಪ ವಣಿಗೀಶಜಾಯೆ ಚಂದನೆಯನೇನಾನುಮೊಂದು ಪೊಲ್ಲಮೆಯನಿಲ್ಲದುದನುದ್ಭವಿಸಿ ನೆವದಿಂ ಶೃಂಖಳಾಬಂಧನೆಯಂ ಮಾಡಿ (ವರ್ಧಪು. ೧೫-೫೮ ವ). **೬.** ಹೋಲಿಕೆ; ಸಾಮ್ಯ : ದರಹಾಸವಿಭಾಸಿತವಕ್ತ್ರಶೋಭೆಯ ನೆವದಿಂದೆ ಚಂದ್ರನಳಯಂ ತಳೆದತ್ತನಿಶಂ ದ್ವಿರೂಪಮಂ (ಚಂದ್ರಪು. ೨-೧೫). **೭.** ವಿಧ; ರೀತಿ ; ಕ್ರಮ : ಅಸುಹೃತ್ಕರಿಯಂ ಹಲಿ ದಳಿಯಿಸುವಂದುಚ್ಚಳಿಸಿ ಪುದಿದ ನೆತ್ತರ ಕೆಂಪಾಗಸದೊಳ್ ತೋಱುವುದಿನ್ನುಂ ಕಿಸುಸಂಜೆಯ ನೆವದೆ ದಿನದ ರಾತ್ರಿಯ ಪುಗಿಲೊಳ್ (ಜಗವಿ. ೮-೪೪) ; ಸಟೆಗಳಿಂ ದಿಟಗಳಿಂದಾವನೊಳಗಾದೊಡಂ ಅಟಮಟದೊಳಾವ ನೆವದಿಂದಲಾರಾದೊಡಂ ಆವ ಪರಿಯಲಿ ಭಜಿಸಲೀವನಮಳತ್ವಮಂ (ದೀಕ್ಷಾಬೋ. ೧೧-೨೪); ತಿರುಗಿ ಜಂಗಮವತ್ತ ಹೋದನು ಮರಳಿ ಕಾಣೆವು ನಾವವರನೀ ಪರಿಯ ನೆವವಂತಾಗಲಾವುದಲಾ ಅದೆಂತೆನಲು (ಬಸವು. ೩೫-೪೮) ; ನಾವೀಯವನಿಯೊಡೆತನವುಳಿದು ರಾಜಮಹಿತ್ವಮಂ ವಹಿಸೀ ನೆವದಿ ಚರಿಸುವೆವಿಲ್ಲಿ (ಅನಂರಾ. ೩-೩೯). **೮.** ವ್ಯಾಜ; ರೂಪಾಂತರ; ರೂಪವ್ಯತ್ಯಾಸ: ನಗೆಯೆಂಬ ನೆವದೆ ಬೆಳಗೀ ಮೊಗಮೆಂಬೀ ನೆವದೆ ತಿಂಗಳೊಳಗೆಸೆದಾದಂ ಸೊಗಯಿಸಿ ತೋರ್ಕುಂ ಲೋಚನಯುಗಮೆಂಬೀ ನೆವದೆ ಲಕ್ಷ್ಮಮೆನೆ ತದ್ವ್ಯಾಜಂ (ಕವಿರಾ. ೩-೨೬); ತೊಳಗುವ ಪಾರಿಜಾತದಲರ್ಗೊಂಚಲಿನೊಪ್ಪುವ ಕರ್ಣಪೂರಮಂ ಕಳೆದೊಡ ಮಲ್ಲಿ ಸಂಗಮಿಸಿ ಪೋಗದ ಕಂಪನುಣಲ್ಕೆ ಕರ್ಣದತ್ತೆಳಸಿ ಜಿನುಂಗುತಿರ್ಪ ನೆವದಿಂ ಸ್ಮರಮಂತ್ರಮನೋದುವಂತೆ ಕಣ್ಗೊಳಿಪಳಿಸಂಕುಳಂ ನೆನೆಯಿಸಿತ್ತ ಸಿತೋತ್ಪಳಕರ್ಣಪೂರಮಂ (ಕಾದಂಪೂ. ೮೩೩); ಜಳದಾಧ್ವಂ ಸ್ವರ್ಧುನೀ ಫೇನದ ನೆವದೆ ಪೆಱುತ್ತಿರ್ದುದೋ ತಾನದಭ್ರಾಮಳಶುಭ್ರಜ್ಯೋತಿಯಂ (ಕುಸುಮಾ. ೪-೫೨) ; ಒಂದು ವಸ್ತುರೂಪಮನಪಲಪಿಸುವುದೆನೆ ವ್ಯಾಜ್ಯಂ ನೆವಂ ಎಂಬಿವು ಮುಂತಾದ ಪದಂಗಳಿಂ ಪೇೞಿಯದು ಕೈತವಾಪಹ್ನುತಿಯೆನಿಪುದು (ಅಪ್ರತಿ. ೪೯-೩೪). **ನೆಪ : ೧.** ನಿನ್ನ ನೆಪದಿ ಮನದಲೊಂದು ಕಿಚ್ಚು ಉರಿಯುತಿರುವುದು (ಕವಿಸೋ.೨೯-೫). **೨.** ಮೋದಕ ನೇವೇದ್ಯವನದೆಗೈಯೆ ನೆಪವೇನಂ ಪೇಳಲಿ ನಾನರಿಯೆ (ಗಣೇಶ. ೩-೫೬); ಅದೆಲ್ಲಾ ಬರೀ ನೆಪ. ಬೇರೆ ಯಾರಿಗೂ ಕೇಳಿಸದ ಹಾಗೆ ಮೆಲ್ಲನೆ ಹೇಳಿಕೊಡಬೇಕು (ಶಾಲಿಮ. ೧೯). **೮.** ಸುದತಿಯರ ಮೃದುಪದಾಲಕ್ತಕರಸವಿಸರಮಂ ತಳಿರ ಬೆಳಗೆಂಬ ನೆಪ[ಪಾಠಾಂ.ವ]ದಿಂ ಮುಗುಱುಗುಟ್ಟಂತೆ ಕೆಂಕಮಾದ ಕಂಕೆಲ್ಲೀವಲ್ಲರಿಗಳುಂ (ಚಂದ್ರಪು. ೧-೧೦೫ ವ).

**ನೆವನೆವ** (ದ್ವಿರುಕ್ತಿ) : ಇಡಿದಡರೆ ಕಾಯ್ತು ಚೂತವುನಡಸಿ ಸಿಡಿಲ್ ಪೊಯ್ದುದೆನಿಸೆ ನೆವನೆವದಿಂದೆನ್ನೊಡವುಟ್ಟಿದರುಂ ತಂದೆಯುಮಡಗಿರ್ದರ್ ಖಳಕೃತಾಂತದಂತಾಂತರದೊಳ್ (ಆದಿಪು. ೩-೩೪) ; ತವಿಸುತಿರೆ ತಪದೊಳೊಡಲಂ ನೆವನೆವದಿಂ ಶಾಂತಿ ಮಾಡೆ ಬೇತಾಳಂ ಮೂಡುವ ತೆಱದಿನಂತರಾಯಂ ಸಮನಿಸುಗುಂ ಪುಣ್ಯಹೀನನಪ್ಪಂಗೆಂತುಂ (ಸಮಪ. ೪-೪೧) ಧರ್ಮಮನೇಳಿಸಿ ಬಿಟ್ಟೊಡೆ ಕರ್ಮದಿ ನೆವನೆವದಿನಡಸುಗುಂ ಕಡುದುಃಖಂ (ಧರ್ಮಾಮೃ. ೬-೧೩೬). **ನೆಪಮಾತ್ರ**=ಹೆಸರಿಗೆ ಮಾತ್ರ ; ನಿಮಿತ್ತ

ಗೋಮುಖಿಯು ನೋಂಪಿಯೆನಿಪ್ಪ ನೆವವಿಟ್ಟು . . . ನಂದನನಾ ಪಹಿಲದಲಿ ಕರಸಿ ಬಂದೆಐಗಿದನು ಹರುಷದಲಿ (ಸಾಳ್ವಭಾ. ೨೨-೩). **೩.** ಸಂಚು ಹೂಡು ; ಉಪಾಯ ಮಾಡು : ನಾನಾದೇಶಿಗಳುಮಪ್ಪ ವ್ಯವಹಾರಿಗಳುಮಂ ನೆವವಿಟ್ಟು ಕವರ್ದುಕೊಂಡು ಸಮಸ್ತ ವಸ್ತುವಾಹನಂಗಳಂ ತನ್ನೊಡನಾಡಿಗಳಪ್ಪ ಭಂಡಮುಂಡಲಿಗೆ ಸೂಱೆಗೊಟ್ಟು (ಪಂಚತಂ. ೨೮-೧೩). **ನೆವಮಿಡು : ೪.** ಹೊಂಚು ಹಾಕು : ಜಗದ ಮೃಗಮೆಲ್ಲಮಂ ಜವನೆ ನೆವಮಿಟ್ಟು ನುಂಗಲುಂ ನೊಣೆಯಲುಂ ಪುಟ್ಟಿದಂತಪ್ಪ ಮಹಾದ್ಭುತಮನಭೂತಪೂರ್ವಮಂ ರುದ್ರನ ಭದ್ರವೃಷಭನನಿನಿಸನುಕರಿಸುವುದುಮಂ ಕಂಡೆಂ (ಪಂಚತಂ. ೪೬-೧೧). **೫.** ದೋಷಾರೋಪಣೆ ಮಾಡು; ಅಪವಾದ ಹೊರಿಸು : ಭದ್ರಂಗೆ ಕುಡಲ್ವೇಡಿರ್ದ ಕೂಸನೆನಗೆ ಮದುವೆಯಾಗೆಂಬುದುಮಂ ಭದ್ರನುಂ ನಂದಂಗೆಂದು ಬಳೆದ ಕೂಸೆನಗೆ ಮೊಱೆಯಲ್ಲಲೆಂದಿರ್ದರುಮೋರೋರ್ವರ ಮೇಲೆ ನೆವವಿಟ್ಟು ಮಾಣ್ಬುದುಂ (ಸುಕುಮಾ. ೭-೩೨ ಪ). [ನೆವ + ಇಡು$_1$]

**ನೆವಹೇಳು,** ನೆಪಹೇಳು (ಕ್ರಿ). ತೋರಿಕೆಯ ಕಾರಣವನ್ನು ಹೇಳು ; ಸಬೂಬು ಕೊಡು : ಇಂದಿವನು ನೆವಹೇಳಿ ಹೋದೊಡಾನುಳಿದಿರೆನು ನೊಂದು ಬಳಲಿದೆನೆನಿತೊ ಸೈಸೆನಿನ್ನು (ವಿಜಯೀ. ೨೭-೧೯) ; 'ಮನೆಯಲ್ಲಿಯೇ ಬೇಕಾದ ಪುಸ್ತಕಗಳೂ ಪತ್ರಿಕೆಗಳೂ ಸಿಗುವವಲ್ಲ !' ಎಂದು ನೆವಹೇಳುವನು (ದಾಸಹು. ೭೩). **ನೆಪಹೇಳು :** ರಮೇಶ ಅಲ್ಲಿಯೇ ಸುತ್ತಾಡಿ ಬರುವೆನೆಂದು ನೆಪಹೇಳಿ ಹೊರಟ (ನಡೆದಾ. II,೯೬೭). [ನೆವ + ಹೇಳು(<ಪೇೞ್)]

**ನೆವೇಸಣ** 'ನಿವೇಶಣ' ನೋ.

**ನೆಶ್ಯ** 'ನಶ್ಯ$_1$' ನೋ.

**ನೆಸ ?** (ನಾ). (?) : ಆಯಾಮಂ ಪದಿನೆಂಟು ಬಟ್ಟು ನೆಸವುಂ ತಾನಿರ್ಪಿನಂ ತೋರಮುಂ ಬೀಯುಂದಟ್ಟಿದ ರೋಮವಿಲ್ಲದ ನರಂ ಕಾಣಲ್ಕಿನಿತಿಲ್ಲದಾ [ಸ್ತ್ರೀ]ಯಂ ಕೈವಿಡಿವಂಗೆ ಮಾಳ್ಪಿರ್ದವರಂ ಗೂಢಾಸ್ಥಿಪರ್ವಂಗಳಾ ಗೇಯಂಗಳ್ ಸಿರಿಯುಂ ನವಿರ್ ನೆಗೆಯದಾ ತೋಳ್ಗಳ್ ಸುಖಂಗಳ್ ವಲಂ (ಹಾಲಾಸ್ಯ. ೧-೧೩-೨೩) ; "ಕಾಂತಿ" (ಹಾಲಾಸ್ಯ. ಕೋಶ). [?]

**ನೆಸಣ** 'ನಿವೇಶಣ' ನೋ.

**ನೆಸರೆ** (ನಾ). ಒಂದು ಬಗೆಯ ಮರ : ಪಿಚುಮಂದ ನೆಸರೆ ಬಲುಕುಣಿಕೆ ಪಾದರಿ ಹಾಲೆ ತೇಗುಗಳ ವಿಸರ ನಾನಾವೃಕ್ಷಜಾತಿಯಿಂದೆಸೆವ ಘೋರಾರಣ್ಯ ಕಣ್ಗೆಸೆದುದು (ಸಿಂಗಿರಾ. ೩೦-೯). [?]

**ನೆಸಲು** (ನಾ). ಸಲಿಗೆ ; ಸದರ : ನೆಸಲು ಕೊಟ್ಟ ನಾಯಿ ನೊಸಲು ನೆಕ್ಕಿದಂತೆ (ಗಾದೆ). [ನೆಸೆ$_2$(<ನಸೆ$_1$) + -ಅಲು (<-ಅಲ್$_2$)]

**ನೆಸೆ$_1$** (ಕ್ರಿ). **೧.** ಏಳು ; ಮೇಲಕ್ಕೆ ಬರು : ಇಱುಂಪೆ ಊಱಲು ನೋಡುತಿರ್ದವ್ವ ಗಂಡೆ ನೆಸೆದುದೊ ನೊಂದು ಚುಳ್ಳನುರಿದುದೊ ತಂದೆ ಬೆಂದೆ ನಾಂ ಬೆಂದೆ ನಾನಿಲ್ಲೀಗಳೆಲೆ ತಂದೆ ಏನುತೆ (ರುದ್ರರ. ದೇ.೨೦೪-೩). **೨.** ಎತ್ತು ; ಎತ್ತರಿಸು ; ಎಬ್ಬಿಸು : ಕಟ್ಟದಿರೊಳೊಂದು ಚಟಿಕೆನೀಡದೊಳಿರ್ದುಂ ಕಿಱಿಮಱಿಯಂ . . . ಕೊಕ್ಕಿಂ ಮೆಲ್ಲುದ್ಪುಟಿನೊಸೆದು ನೆಸೆದುಂ ಲಲ್ಲೆಗೆಯ್ವುದಂ ನಟ್ಟಾಲಿಯೊಳಭೀಕ್ಷಿಸಿ ಮಕ್ಕಳ ಬಯಕೆಯಿಂ ಜಾನಕಿ ಸಖಿಗಿಂತೆಂದಳ್ (ರಾಮಾಶ್ವ. ೧೮-೩). **೩.** ನೀಡು ; ಚಾಚು : ಮಲಹರನ ನಡುವೊಂದೆಸೆಗೆ ಒಲಿದೊಲಿದು ಕೊಂಡಿದೆ ಕೈಗಳುಂ ಕೆಲಕೆಲಕೆ ನೆಸೆದುಜುಗಿದವು . . . ಕೊರಳುಂ ಸುಲಿದು ಬಿಗಿಯಿತ್ತು (ಬಸವು. ೧೭-೨). **೪.** ನಿಗುರು ; ನಿಮಿರು ; ಸೆಟೆದು ನಿಲ್ಲು : ಕುಡಿವಾಲಂ ನೆಸೆದಿರೆ . . . ಮೃಗತತಿಯಂ ಬೆಂಬಿಡದೆಱಗುತೆ ಪೊಯ್ದು ಕೆಡಪಿದವು ಜಾಯಿಲಗಳ್ (ಯಾದಚಂ. ೪-೫೪) ; ಮೇಂಗೊರಲ ನವಿರೋಳಿ ನೆಸೆಯೆ. . .ಭೀಕರಂಗಳಾಗಿರ್ಪ ಕಾಳ್ಕೋಣಂಗಳ ಗಡಣಂಗಳೊಳಂ (ಮಂಗಾಚ. ೮-೨೪ ಪ). **೫.** ಜಿಗಿ ; ಹಾರು ; ಚಿಮ್ಮು : (ಕ). **೬.** ಉಬ್ಬು ; ಮೆರೆ (?) : ಮದದಿಂ ನೆಸೆದು ನಾನಾ ಭವಭಯಂಗಳ ನುಸುಳಿ ಬರುತಿಪ್ಪವನು ತಾನೇ ಸ್ವಪ್ನಕಲ್ಪಿತನು (ಸದ್ಗುರು. ೪-೧೦). **೭.** ಕುಪ್ಪರಿಸು ; ಕೆಳಗೆ ಬೀಳು (?) : ಉಸುರ ಹಿಡಿದುಬ್ಬರಿಸುತುಬ್ಬಿಸಿ ಕುಸಿದು ನೆಸೆಯಲ್ಕದಱ ದೆಸೆಯಿಂ ಮಸುಳಿಸುವುದೇ ಮಾಯೆ (ಸದ್ಗುರು. ೧-೧೬) ; ಹಸಿಯದೆ ಹುಸಿಯದೆ ಕುಸಿಯದೆ ನೆಸೆಯದೆ ಹಸಗೆಡಪಖಿಳರೊಳಗೆ ಕಾರುಣ್ಯಂ ಮಸುಳದುದ್ರೇಕಿಸದೆ . . . ಮನಸ್ಸಂಸಾರದ ಬೆಸುಗೆಯುಳಿದು ಸುಳಿಯುತ್ತಿಹನಿಳೆಯೊಳು (ಯೋಗಾಂವಿ. ೬-೨೦) .

**ನೆಸನೆಸೆ** (ದ್ವಿರುಕ್ತಿ) : ತಟಕ್ಕನೆ ಸಂತೋಷಕ್ಕೆ ಮುಗ್ಗರಿಸಿದಂತೆ ಮುನ್ನುಗ್ಗಿ ಹಳು ಮುರಿಯುವಂತೆ ನೆಸೆನೆಸೆದು ಬಂದು . . . ಅವನ ಬಾಯನ್ನೆ ನೆಕ್ಕಿಬಿಟ್ಟಿದ್ದು ! (ಮಲೆನಾ. ೧೪೪). **ನೆಸ್ಸಾಟ** = (ಕೋಪದಿಂದ) ಹಾರಾಡುವುದು ; ಎಗರಾಡುವುದು : ನೆಸ್ಸಾಟಕ್ಕೆ ಹೋಗಿ ಮುಸ್ಸಾಟ ಹೆಚ್ಚಿತು(ಗಾದೆ). **ನೆಸ್ಸಾಡು** = ಹಾರಾಡು; ಎಗರಾಡು:(ಕ). 'ನೆಗೆ$_1$' ಪರಾ. [?]

**ನೆಸೆ$_2$** 'ನಸೆ$_1$' ನೋ.

**ನೆಳದಾಳ** 'ನೆಲದಾಳ' ನೋ.

**ನೆಳಲ್** 'ನೆಟಿಲ್$_1$' ನೋ.

**ನೆಳಲಂಚೆ** 'ನೆಟಿಲಂಚೆ' ನೋ.

**ನೆಳಲಂಚೆಕಾಱ** (ನಾ). (ಬಟ್ಟೆಯ ಮೇಲೆ ಬೊಂಬೆಯ) ನೆರಳಿನ ಆಟವನ್ನು ತೋರಿಸುವವನು : "ಶೋ[ಶಾ]ಭಿಕಃ = ಶೋಭಿಕ ನೆಂಬೊಂ, ನೆಳಲಂಚೆಕಾಱಂ" (ಶೋ[ಶಾ]ಭಿಕಃ ಕ್ಷಪಾಯಾಂ ಕಾಂಡಪಟಾವರಣೇನ ನಾನಾ ರೂಪದರ್ಶೀ) (ನೀತಿವಾ. ೧೩-೧೮). [ನೆಳಲ್ (<ನೆಟಿಲ್$_1$) + ಅಂಚೆ$_4$ + -ಕಾಱ]

**ನೆಳಲಪಾಣಿ** (ನಾ). ಒಂದು ಬಗೆಯ ಬಟ್ಟೆ : ಚಿತ್ರಾವಳಿಯ . . . ನೆಳಲಪಾಣಿಯ ಬಣ್ಣದ ಕಣದ ಬಣ್ಣವಣ್ಣಿಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪-೩೪ ಪ). [?]

**ನೆಳಲಿಸು** (ಕ್ರಿ). ನೆರಳನ್ನುಂಟು ಮಾಡು : ತಡೆಯರಿಯದೆ ಹರಿಯುವ ಗಗನತಲಂ ನಿನ್ನೊಡೆತನದ ಪತಾಕೆಯೊಲು ವಲಂ ನೆಳಲಿಸಿ ಹೊದಿವುದು ವಸುಮತಿಯಗಲಂ ನಿನ್ನ ಪ್ರಭಾವವನು (ಗಿಳಿವಿಂ. ೨೫-೫). [ನೆಳಲ್ (<ನೆಟಿಲ್$_1$) + -ಇಸು$_3$]

**ನೆಳಲು$_1$** 'ನೆಟಿಲ್$_1$' ನೋ.

**ನೆಳಲು$_2$** 'ನೇಟಿಲ್' ನೋ.

**ನೆಳಲುಗತ್ತರಿ** (ನಾ). (?) : ಘನ ನೆಳಲುಗತ್ತರಿಯ ಪಾಪಿಯ ಕೂಸಿನ ಕುದಿವ ಕೂಪದ ಕಮ್ಮರಿಯ . . . ತಾಣಂಗಳಂ ತೋಱದಂ ಭೈರವಂ ಸಿದ್ಧಪತಿಗೆ (ಸಿದ್ಧರಾ. ೩-೧) ; ಸುತ್ತಣ ಬಿಲದ್ವಾರಮಂ ಪುಗುತ ಘನ ನೆಳಲುಗತ್ತರಿಯನೆಡಪುತ್ತ ವಜ್ರಲೇಪವನು ತುಡುಕುತ್ತ ನಡೆದಂ (ಸಿದ್ಧರಾ. ೩-೮) ; ನೆಳಲುಗತ್ತರಿಯಂತೆ ಪೊಳೆಚ ಹೊಳ್ದಾಡುತಿಹ ಲಲನೆಯರ ನಂಬಿ ಶಿವಸುಖವನಱಿಯದಿಹ ಮಲದೇಹಿಗೆತ್ತಣದು ನಿತ್ಯ (ಗುರುಬೋ. ೧-೧೨೦). 'ಕತ್ತರಿಪಾಣಿ' ಪರಾ. [?]

**ನೆಳಲುಗಾಣು** (ಕ್ರಿ). ನೆರಳನ್ನು ಕಾಣು ; ಛಾಯೆಯನ್ನು ಕಾಣು : ನೆಳಲುಗಂಡವ್ವಳಿಸುವುದು ಸುಂಡಿಲನು ತೂಗಾಡುವುದು . . . ನೆಲಕೆ ಕಿವಿಯನು ಜೋಲುಬಿಡುವುದು ಬಲುಕಣೆಯ ಹಿಡಿಹಿಂಗೆ ಲಾಗಿಸುತಿರ್ದುದಾ ದಂತಿ (ಕುಮ್ಮಾದ್ರಾ. ೩-೩೭).
[ನೆಳಲು$_1$(<ನೆಟಿಲ್$_1$) + ಕಾಣು(<ಕಾಣ್)]

**ನೆಳಲುಗೆಡು** (ಕ್ರಿ). ಛಾಯೆ ಇಲ್ಲವಾಗು ; ನೆರಳಿಲ್ಲವಾಗು : ಒಲವು ಮಿಗೆ ಲಲಿತಾರ್ಘ್ಯಪುಷ್ಪಾಂಜಳಿಯನರ್ಪಿಸಿ ನಾಯ ಕಾಲಂ ತೊಳೆದ ತೆಱದಿಂ ಭಿನ್ನಕುಂಭದೊಳೆಱೆದುದಕದಂತೆ ನೆಳಲುಗೆಟ್ಟ ಮಹೀಜದಂತು ಜ್ವಳಿಪ ಲಿಂಗಪರಾಙ್ಮುಖರನಾಗಳು ಭಜಿಸಿ ಭವಬಂಧನಕ್ಕೊಳಗಾಗ ದೆಂತಿಹನು (ಬಸವು. ೬೦-೫೧). [ನೆಳಲು$_1$ (<ನೆೞಲ್$_1$)+ಕೆಡು$_1$]

**ನೆಳಲುಗೊಳ್** (ಕ್ರಿ). ನೆರಳನ್ನು ಸೇರು : ತೆಗೆದುದಗ್ಗದ ತಂಪು ನದಿ ಸರಸಿಗಳ ತಡಿಯಲಿ ಹಜ್ಜೆಯಾದುದು ಹಗಲು ಹಂಸೆಯು ನೆಳಲುಗೊಂಡದು ಬಯಸಿ [ಪಾಠಾಂ. ಹಗಲು ಹಾವಸೆ ಹರಿದು ಹೊಕ್ಕರಿಸಿದುದು] ಹಿಮಜಲವ (ಕುಮ್ಯಾಅ. ೫-೫). [ನೆಳಲು$_1$(<ನೆೞಲ್$_1$)+ಕೊಳ್$_1$]

**ನೆಳಲುಮರ** 'ನೆಳಲುವರ' ನೋ.

**ನೆಳಲುವರ,** ನೆಳಲುಮರ (ನಾ). ನೆರಳನ್ನು ಕೊಡುವ ಮರ : ತಳಿರುಗಳ ತೋರಣದ ಗುಡಿಗಳ ನೆಳಲುವ[ಪಾಠಾಂ. ಮ]ರಗಳ ತಿಂಥಿಣಿಯ ಶೀತಳ ತರುಚ್ಛಾಯೆಯಲಿ ಮೆಱೆವಾ ಪುರವರವ ಕಂಡ (ಸಿಭಾಗ. ೧೦-೩೬-೩೦). **ನೆಳಲುಮರ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ನೆಳಲು$_1$ (<ನೆೞಲ್$_1$)+ಮರ$_1$]

**ನೆಳಲ್ಕವಿ** (ಕ್ರಿ). ನೆರಳು ಪಸರಿಸು,—ಮುಸುಕು ; ಛಾಯೆ ಹರಡಿಕೊಳ್ಳು : ತಳಿರ್ದುಱುಗಿದೆಳಮಾವುಗಳ ನೆಳಲ್ಕವಿದ ನಿರ್ಮಲ ಪುಳಿನತಳದಿಂ . . . ನಳಿನೋತ್ಪಲಪ್ರಕರಶೋಭಿತಸರೋವರಂಗಳ ರಮ್ಯ ಸೋಪಾನದಿಂದೆ ತದ್ರಾಜಕೇಳೀವನಂ ಕಣ್ಗೆಸೆದುದು (ಜೈಮಿಭಾ. ೨೯-೪೫). [ನೆಳಲ್ (<ನೆೞಲ್$_1$)+ಕವಿ$_1$]

**ನೆಳವು** (ನಾ). ೧. ಗುಟ್ಟು ; ರಹಸ್ಯ(?) : ನೆಳವರಿಯದಜ್ಞಾನವುಂ ನಳಿವಳಿಪ ಸಂಶಯುವುಂ ಸ್ವಭಾವವ ತಿಳಿಯದಿಹ ವಿಪರೀತ ಭಾವನ ಸಹಿತ ಮೂವಿಧವೂ ಬೆಳವಿಗೆಯ ವಿಘ್ನತ್ರಯಂಗಳಿನೊಳವರಿದು ಶ್ರುತದೃಷ್ಟದಿಂದವೆ ಕಳಚಿ ನಿಂದ ವಿವೇಕಿಗಳೆ ಸಚ್ಛಿಷ್ಯರವರೆಂದ (ಗಗತಾ. ೧೩-೧೪). ೨. ಪರಿಚಯ : ತಾನು ಜೀವನು ಬ್ರಹ್ಮನಲ್ಲೆಂಬಾ ನೆಳವದಜ್ಞಾನವೆನಿಪುದು ಮೇಣಹುದೊ ತಾನಲ್ಲವೊಯೆಂಬಳವೆ ಸಂಶಯವೂ ತಾನು ಬ್ರಹ್ಮಮದಹುದು ಮುನ್ನಿನ ಹೀನಗುಣ ಬಿಡಲಿಲ್ಲವೆಂಬನುಮಾನವೇ ವಿಪರೀತಭಾವನವೆನಿಸುತಿಹದೆಂದ (ಗಗತಾ. ೧೩-೧೫). ೩. ಇರುವ ಸ್ಥಳ ; ನಿಯತಸ್ಥಾನ ; ನೆಲೆ : ಹಲ್ಲೂ, ಕೂದಲೂ, ಉಗುರೂ, ಮನುಷ್ಯರೂ ತಮ್ಮ ತಮ್ಮ ನೆಳವುಗಳು ತಪ್ಪಿದರೆ ಕೆಲಸಕ್ಕೆ ಬಾರದೇ ಹೋಗುವರು. ಕಾಗಿ, ಕುತ್ಸಿತ, ಪುರುಷ ಸಮೂಹ, ಮೃಗ ಮುಂತಾದವುಗಳು ತಮ್ಮ ನೆಳವುಗಳನ್ನು ಬಿಡಲಾರದೆ . . . ಅಲ್ಲೇ ತೀರಿಹೋಗುವವು (ಮುಂಬಯಿ. ೬-೩೩೬). [←ತೆಲು. ನೆಳವು]

**ನೆಳಿಲ್** 'ನೆೞಲ್' ನೋ.

**ನೆಳ್ಕನೆ** 'ನೆಟ್ಕನೆ' ನೋ.

**ನೆಳ್ಕು** 'ನೆಟ್ಕು' ನೋ.

**ನೆಳ್ಗು** 'ನಱುಂಕು' ನೋ.

**ನೆಳ್ಪಿಸು** (ಕ್ರಿ). (?) : ಅಗಜೆಯ ಮೋಟೆಯ ನೆಳ್ಪಿಸಿ ಶಕ್ರನ ಬಗೆಯಿಂದ ಮೈಯನಿದೋಱೆ ನಗೆವ ಮಾಲಿಯದ ಸಭವವೆನೆ ತೋಱು ಪಗಲಜಸಿರದುದ್ಧಾರಿಸುತ ಸಕಳ ಪ್ರಿಂಚಿಗಳ ಕಳಂಕವದೋಱುತ್ತ ವಿಕಳಶಕ್ತಿಯ ರೂಪುದೋಱೆ (ದೇವಾಂಪು. ೭-೭೫). [ ? + -ಇಸು$_3$]

**ನೆಱ$_1$,** ನೆರ$_1$ (ನಾ). ೧. ಮರ್ಮಸ್ಥಾನ ; ಮುಖ್ಯಸ್ಥಾನ ; ಆಯಕಟ್ಟು : "ಜೀವಸ್ಥಾನಂ, ಮರ್ಮ—ಈ ೨ ನೆಱಂ" (ಹಲಾಯು. ೮೭-೨೭೫) ; ಅಂಬುಜೋದರಂ . . . ತೊಡೆಯಂ ಪೊಯ್ದಾರ್ಪುದುಂ ದುರ್ಯೋಧನನ ನೆಱನದೆಂದಱದು ನೆಱನೀತಂಗೂರುಯುಗ್ಮಂ ನೆಱನನಱಿಯದಾನಿನ್ನೆಗಂ ಮಾಣ್ದಿನಿಂ ಪೋ ತೆಱಪಂ ಪಾರ್ದಿರ್ಪೆನೆಂದೊಯ್ಯನೆ ಗದೆಯನಣಂ ಪಾಡುಗೆಯ್ದಿರ್ದು ಭೋರೆಂದೆಱಪುಗ್ರಾರಾತಿಯೂರುದ್ವಯಮನಿಡೆ (ಪಂಪಭಾ. ೧೩-೯೬) ; ತೊಡೆಯಂ ಪೊಯ್ದಾರ್ದ ನೆವದೆ ನೆಱನೀತಂಗೀಯೆಡೆಯೆಂದು ತೋಱು ಕುಡೆ (ಗದಾಯು. ೮-೩೫) ; ಆವೆಡೆಯಂ ನಟ್ಟವು ಬಾಣಾವಳಿ ನಟ್ಟೆದೆಯೊ ತಮಗೆ ನೆಱನೆನೆ ಕೆಡೆದರ್ ಭೂವಳಯಕ್ಕೆ ವಿಯಚ್ಚರರ್ (ಪಂರಾಮಾ. ೯-೬೭). 'ಕಡುನೆಱ' ಪರಾ. ೨. ಗುಟ್ಟು ; ರಹಸ್ಯ : ಅಂತು ಪುಟ್ಟಿದ ವಿಭಂಗಜ್ಞಾನದಿಂದ ಪಗತನರಕ ಲೋಕವೃತ್ತಾಂತರಾದಿಂಬಱಿಯ ಮೋರೊರ್ವರ ನೆಱಂಗಳು ಮನನ್ಯೋನ್ಯ ವೈರಕಾರಣಂಗಳುಮನುಗ್ಘಡಿಸುತ್ತುಂ (ಆದಿಪು. ೫-೮೫ ವ); ಓರೊರ್ವರ ನೆಱಂಗಳುಮನನ್ಯೋನ್ಯಬದ್ಧ ವೈರಕಾರಣಂಗಳುಮಂ ಮೂದಲಿಸುತ್ತುಂ (ಸುಕುಮಾ. ೧೧-೪೨ವ). ೩. ಅಂತರಾಳ ; ಮರ್ಮ : ಕಥಾಕಥನವಿನ್ಯೋದದಿನಿರ್ದವರ ಮನಮನಱಿದು ನುಡಿವ ನುಡಿಗಂ . . . ಇಂಬಱಿದು ಸೇವಿಸುವ ಸೇವೆಗಂ ನೆಱನಱಿದು ಪಾಡುವ ಪಾಟಕ್ಕಂ ಪೊಟ್ಟಱಿದು ಸಾರ್ವ ಸಾರ್ಕೆಗಂ ಮನಂಬೆಚ್ಚು ಪತ್ತೆ ಪೊಯ್ದಂತಾಗಿರೆ (ಶಾಂತಿಪು. ೩-೪೯ವ). ೪. ಮರ್ಮಾಘಾತದಿಂದ ಉಂಟಾದ ನೋವು ; ಮರ್ಮೋದ್ಘಾಟನದಿಂದ ಉಂಟಾದ ವೇದನೆ : ಭೀಮಸೇನಂ ಕೌರವನಿದಿರ್ಗೆವಂದು . . . ನೆಱನನುಂಟುಮಾಡಿ ಮೂದಲಿಸಿ ನುಡಿಯೆ ದುರ್ಯೋಧನನತಿ ಕ್ರೋಧಾನಲನಾಗಿ (ಗದಾಯು. ೭-೩೧ವ). **ನೆರ$_1$ :** ೧. ಎತ್ತ ತಿರುಗಲುಮಿಲ್ಲದೆಮ್ಮೋರ್ ಬೀರುಗಲ್ಗಳ್, ಬಿಲ್ಲ ತಿರುವಿಂದ ಜೀವಮನುಣಲ್ ಬರ್ಪ ಕೋಲ್ಗಳ್, ನೆರ ಸಿರಿಯೆ, ತೊಪ್ಪತೊಪ್ಪನೆ ಕುಪ್ಪೆಯೊಟ್ಟಿದರ್ (ಪಾರಸಿ. ೧೮-೪೦೨).

**ನೆಱನೆತ್ತು** = ಮರ್ಮೋದ್ಘಾಟನ ಮಾಡು : ನೆಱನೆತ್ತಿ ಬೈವ ಪುರುಡಿಪ ಜಱುಚುವ ಪಿರಿದಲಸೆ ಕೂಡ ಲಟಲಟಿಸುವ ಮೇಲ್ಪರಿಯದೆ ಸೋಂಕುವ ಕೂರದೊಡೆಱಗುವ ವಿಟನೆಗ್ಗನಲ್ತೆ (ಮದತಿ. ೧೦-೪೮) ; ನೊಂದು ನುಡಿದ ತಾಯ ನುಡಿಯೆ ತಮ್ಮ ಪರಾಭವಮನಱಿಯೆ ತೆಱೆಯೆ ನೆಱನೆತ್ತಿ ಮೂದಲಿಸಿದಂತಾಗಿ (ಸುಕುಮಾ. ೨-೩೬ ವ) ; ಪಲತೆಱದಿ ನೆಱನೆತ್ತಿ ನುಡಿಯೆ ದಶಮುಖಂ ಮುಳಿದು ಪಲವಂ ಗಱಪಲೀಯದೀತನಂ . . . ಪೊಱಮಡಿಸಿ ಕಳೆಯಿಮೆನೆ (ಪಂರಾಮಾ. ೧೧-೧೪೦ವ).
[ದೇ.॥ ತಮಿ. ನಿಱ ; ತುಳು. ನೆರವು ; ನಿರವು ; ತೆಲು. ನೆಱಸು ; ಗೊಂಡಿ. ನರವ್]

**ನೆಱ$_2$** 'ನೆಱೆ$_2$' ನೋ.

△ **ನೆಱಂತೆ** 'ನೆಱತೆ' ನೋ.

**ನೆಱಗೊಳ್** (ಕ್ರಿ). ೧. ಮರ್ಮವನ್ನು ಭೇದಿಸು : ಶಿತಾಸ್ತ್ರಂಗಳಿಂ ದ್ವಿಜನ್ಮನ ನೊಸಲಂ ನೆಱಗೊಳ್ವನಮೆಚ್ಚೊಡೆ (ಪಂಪಭಾ. ೧೨-೭೪). ೨. (ಮನಸ್ಸನ್ನು) ಸೂರೆಗೊಳ್ಳು ; ಅಂತರಂಗವನ್ನು ಹೊಗು ; ಆಕರ್ಷಿಸು : ಗೀತಾರಾವದಿಂಪಿನ್ನೆಱೆಯೆ ನೆಱಗೊಳಲ್ ರಕ್ತಕಂಠೀಜನಂ ಬಂದಿರೆ ವಂದಿವ್ರಾತಮೆತ್ತಂ ಬಗೆಗೊಳಲಿರೆ ಚೆಲ್ವಾದುದಾಸ್ಥಾನರಂಗಂ (ಆಪಿಪು. ೨-೩). . ೧, ೨ : ಸ್ಮರಶರಮುಂ ತದೀಯ ಮೃದುಗೇಯಮುಮುರ್ಚಿದ ಪುಣ್ಣನೊಕ್ಕ ನೆತ್ತರನಱಸಲ್ಕೆವೇಡ ನೆಱಗೊಂಡುದನುಣ್ಮುವ ಕಣ್ಣ ನೀರಿನಂಕುರಿಸಿದ ಮೆಯ್ಯ ರೋಮದೊದವಿಂದುಪಲಕ್ಷಿಸೆ ಬರ್ಪುದಿಲ್ಲ ಬರ್ಬರೆಯ ಕಿರಾತೆಯೊಟ್ಟಜೆಗೆ ಕಿನ್ನರರೊಟ್ಟಜೆಯುಂ ತೆರಱ್ಕೆಯುಂ (ಶಾಂತಿಪು. ೨-೨೨). [ನೆಱ$_1$+ಕೊಳ್$_1$]

**ನೆಱತೆ,** ನೆರತೆ, ನೆಱಂತೆ (ನಾ). ೧. ಏಳಿಗೆ ; ಅಭಿವೃದ್ಧಿ : ಕೊಱತೆ ನೆಱತೆ ಕಂಡು ಕಲೆ ಸಸಿಯೊಳು . . . ಅಲ್ಲದೆ ಅಱಸಲಾ ನೆಲದೆಱೆಯ ನೊಳಿಲ್ಲ (ಸೊಬಸೋ. ೧-೬೧). ೨. ಹೆಚ್ಚಳ ; ಆಧಿಕ್ಯ ; ಸಮೃದ್ಧಿ : ಕರುಣಸಾಗರ ಜಿನಮುನಿಗಳು ಶೋಧಿಸಿ ನೆಱತೆ ಮಾಡಿತಿದ್ದಿಕೊಳ್ಳಿ (ದ್ವಾದಶಾ. ೧೨-೩೧) ; ಬಗೆಗೆ ಸರಿಯಾದರೆಯು ತವಗೀ ಮಗನ ಹೆಸರಲಿ ಕೊಱತೆ

ನೆಱತೆಯುದೇನು(ನಿಭಾಗ. ೯–೧೮–೨೨). **೩.** ಪೂರ್ಣತೆ ; ಸಮಗ್ರತೆ : ಭಕ್ತರ್ಗೆ ನೆಱತೆಯಿಂ ಕರುಣಮಂ ಕಱಿದು ಮಿಱುಪ ಮಱುವಾವುಗಳ ತುಱುಗಲಿಂದೊಪ್ಪುತಿಹ ಕರಿಗೊರಲ ಪಂಪಾವಿರೂಪಾಕ್ಷ ಸಲಹೆಮ್ಮನು (ಚೆಬಪು. ೨೪–೧). **೪.** ಪೂರೈಸುವುದು ; ಪೂರ್ತಿಯಾಗುವುದು ; ಪೂರೈಕೆ : ಕರ್ಣನ ವೀರಪಟ್ಟದಲಿ ನೆಱವಣಿಗೆಯುಂಟಾದಡೊಂದೇ ಕೊಱತೆಯಿದು ನಿಮ್ಮಿಂದ ಕಡೆಯಲಿ ನೆಱತೆಯಹುದಿನ್ನುತ್ತರೋತ್ತರಸಿದ್ಧಿ ಬಳಿಕೆಂದ (ಕುವ್ಯಾಕ. ೫–೧೬) ; ಇದಱ ಕೊಱತೆಯ ನೆಱತೆ ತನ್ನದು ವಿದಿತ ವೈದಿಕ ಲೌಕಿಕಕೆ ಜಗವದುಹದಂತಿರೆ ಚಿತ್ತಗೊಡಬೇಕೆಂದು ಕೈಮುಗಿದ (ತೊರರಾ. ೬–೫೩–೨೭). **ನೆರತೆ : ೩.** "ಪರಿಪೂರ್ಣತೆ; ಸಂಪೂರ್ಣತೆ; ಸಮುಗ್ರತೆ; ಸಾಂಗತೆ; ಸಂಪೂರ್ಣ, ಸಮುಗ್ರ,—ಮಾಡುವುದು; ಪೂರ್ಣ ವಿಕಸನ ; ನಿರ್ದುಷ್ಟತೆ ; ಅನ್ಯೂನತೆ;ನೆರತೆ; ತುಂಬಿಕೆ" ( Perfection. ಇಂಕನಿ). △ **ನೆಱಂತೆ: ೨.** ಕೊಱಂತೆಯಿಲ್ಲದ ನೆಱಂತೆಯ ನಿವಾಸಂ ನಾನಾ ವಸ್ತುವಿನ ಕೋಶಂ . . . ಸಿಂಗರದ ಸಿರಿಯ ಪಿರಿಯರಮನೆಯೊಳ್ ತ್ರೈಲೋಕ್ಯಚೂಡಾಮಣಿ ರಾಜಂ ಸಕಲೈಶ್ವರ್ಯಸಂಪದಾಗ್ರವಾಟೋಪ ಪ್ರತಾಪದಿಂದೊಪ್ಪುತ್ತಿರ್ದನಂತರದೊಳ್ (ಹವ್ಮಾರ. ೧–೬೬ ವ).

[<ನೆಱ$_1$+–ತೆ$_2$]

**ನೆಱತೆವಡೆ** (ಕ್ರಿ). ಪೂರ್ಣತ್ವವನ್ನು ಹೊಂದು; ಪರಿಪೂರ್ಣವಾಗು; ಸಂಪೂರ್ಣತೆಯನ್ನು ಪಡೆ : ಸೌಂದರಪುರಾಣದೀ ಕೃತಿಯುನವನಿಯೊಳಂದಚಂದಮಂ ಪಡೆವಂತೆ ಸಂಪೂರ್ಣವಾಗಿ ರಚಿಸೆಂದು . . . ಬೆಸಸಲು ಪೊಂದೇಗುಲಕ್ಕನರ್ಘ್ಯದ ರತ್ನಕಳಶಮಂ ತಂದು ಸೇರಿಸುವಂತೆ ನೆಱತೆವಡೆದೊಪ್ಪೆ ಪೇಳ್ದಂ (ಸೌಂದಪು. ೧೯–೩೬) ; ಪುದಿದು ಕಂದಿನೊಳೊಂದಿ . . . ಮುನ್ನಾಡೆ ನಾಣ್ಚದೆ ನೆ[ಪಾಠಾಂ. ಕೊ]ಱತೆವಡೆದಮುದ್ರ್ಗಯ್ಯನಂ ಪೊಂದಾವರೆಯುನಮುಳಮಣಿಮುಕುರಮಂ ಪದಪಿನಿಂದೇಳಿಪ್ಪ ಟಾಳಿಪ್ಪ ಜಾಳಿಪೊಂದದಟನಿಂದೇಳಿಸಿತು ಸುದತಿಯಾ ಮಿಱುಮಿನುಪ ವದನ (ಉದ್ಭದೇ. ೨–೫೫) [ನೆಱತೆ+ ಪಡೆ$_1$]

**ನೆಱಪು,** ನೆರಪು$_2$, ನೆರೆಪು$_2$, ನೆಱಹು, ನೆಱಿಪು (ಕ್ರಿ). **೧.** ಪೂರ್ತಿಗೊಳಿಸು ; ಪೂರ್ಣಮಾಡು ; ಪೂರೈಸು : ಆನರಸಿಯ ಬಯಕೆಯಂ ನೆಱಪುವೆಂ (ಪಡ್ಡಾರಾ. ೧೮೬–೧೨) ; ಆಗಳ್ ವೃಕೋದರಂ ತನ್ನ ತಳೋದರಿಯ ಮುಖಮಂ ನೋಡಿ ನಿನ್ನೆನ್ನ ಪ್ರತಿಜ್ಞೆಯಂ ನೆಱಪುವಂ ಬಾಯೆಂದು ಕೆಲದೊಳ್ ಕುಳ್ಳಿರಿಸಿ (ಪಂಪಭಾ. ೧೨–೧೫೨ ವ) ; ನೆಱಪಲ್ ಪೂಣ್ಕೆಯುನ ಮರರೊಳಿಱುದುದದೇಗಣಿದಮುಮರಹಿತನಚ್ಯುತ ನೀನಿಱುದುದನುಚಿತವದರ್ಕಾನಱುವುವೆನೊಂದಮರಹಿತಮನೆನ್ನಭಿಮತಮಂ (ಜಗವಿ. ೧೪–೨). **೨.** ಕೊನೆಗೊಳಿಸು ; ಮುಗಿಸು : ಪಗೆ ಸಾಱುವುದುಂ ಕೊಲ್ಲೆಂ ಪಗೆ ಸಾಱಿದ ಸಿನ್ನನಾರ ಮಱಿಯಂ ಪೊಕ್ಕುಂ ಪಗೆಯಂ ನೆಱಪೆನೆ ನೆಱಪುವ ಬಗೆಯೊಳೆ ಪೊಕ್ಕಂ ಕಡಂಗಿ ಕರ್ಣನ ದೊಣೆಯಂ (ಪಂಪಭಾ. ೫–೧೦೦). **೩.** ತುಂಬಿಸು; ಭರ್ತಿ ಮಾಡು : ಅಟವೀವ್ರಾತಮಂ ಚೂರ್ಣಿಸುತ್ತಂ ನೆಱಪುತ್ತಂ ನಿಮ್ನಮಂ ನಿಮ್ನಮ ತೆಮರನೊಡರ್ಚುತ್ತ ಮಾತ್ಕೀಯ ಸೈನ್ಯೋತ್ಕರದಿಂದಂ ರಾಜವರ್ಗಂ ಬೆರಸಿರೆ ಪೊಱಮಟ್ಟಂ ಮಹೀಭೃನ್ಮಹೇಂದ್ರಂ (ಕಾದಂಪೂ. ೬೧೨) ; ಕರ್ಣಂಗಳಿಗಮಂಗಲಧ್ವನಿಗಳಂ ನೆಱಪುವ ಬಲೆಯರ . . . ಆರಯ್ಯುತ್ತ ಹೊಕ್ಕನಾ ಸುಡುಗಾಡನವನೀಶನು (ಹಚಕಾ. ೧೧–೪೧) ; ಅಱಿಯೆಯಾ ಸ್ನ್ಯಾಸ್‌ದೇವನೆಂತೊಯ್ದು ಪೌಸಿನಾ ಪಾಪಮನ್ ಬಿಡದೆ, ಮೊಗೆಮೊಗೆದು ನೆಱಿಪಿದಪನಿನ್ನುಱುದಿರ್ಪ ನಮ್ಮಿರ್ವರಾ ಬಾಟಿಱೊಳ್ ? (ಅಂತಿಗೊ. ೧–೩). **೪.** ತಿಳಿಸು ; ಹೇಳು : ಬಂದು ತುಂಬುರನಿದಂ ನಂಬಿಯಣ್ಣಂಗಱುಪೆ ಎಂದ ಮಾತಂ ಸೌಂದರನ ಕರ್ಣದೊಳ್ ನೆಱಪೆ (ನಂಬಿರ. ೧೩–೬೨). **೫.** ಈಡೇರಿಸು ; ನೆರವೇರಿಸು; ಸಲ್ಲಿಸು : ಸಂಗರದೊಳ್ ಜೋಳದ ಪಾಟಿಯಂ ನೆಱಪಿದಂ ಗಂಡಂ ಪೆಱಂ ಗಂಡನೇ (ಪಂಪಭಾ.೧೦–೪೩) **೬.** ತೋರಿಸು ; ಪ್ರಕಟಪಡಿಸು : ಅಱುವೆಸದೊಳ್ನಂಟನೆಡಱೊಳೂರಱುವಿನೊಳಂ ತಱಿಸಂದು ಗಂಡು ತನ ಮನೆ ನೆಱಪದವಂ ಗಂಡನಲ್ಲನೆಂತುಂ ಷಂಡಂ (ಗದಾಯು. ೨–೨೪) ; ವಿದ್ಯುತ್ಪ್ರಭಂ ತಾನವರ್ ನೆಱಿ ಪುಟ್ಟಿದರ್ದನುರ್ವಿಯೊಳ್ ನೆಱಪಲೆಂದಾಕಾರವಿದ್ಧಂಗಳಂ ಮಿಱುಗಲ್ ಚಿತ್ರಿಸಿಕೊಂಡು . . . ವನಭೂಜಸ್ಕಂಧದೊಳ್ ಕಟ್ಟಿದಂ (ಕುಸುಮಾ. ೧೨–೧೯). **೭.** (ಸೇಡನ್ನು) ತೀರಿಸು : ನಿನ್ನನೆ ನಚ್ಚಿ ನಿನ್ನರಲ ಬಾಣಮುನರ್ಚಿಪ ಪುಷ್ಪಬಾಣನಂ ತನ್ನ ವಿಲಾಸದಿಂ ಪರಿಭವಕ್ಕೆಡೆಮಾಡಿದನೆನ್ನ ನಲ್ಲನಾ ಬನ್ನಮನಾತನೊಳ್ನೆಱಪಲಾಱದನಾಥೆಯೆನೆಂದಱಿಲ್ದು ನೀನೆನ್ನ ಮನಕ್ಕೆ ಮಾಡುವುದೆ ಮಲ್ಲಿಗೆ ಕೆಮ್ಮನೆ ತೀವ್ರತಾಪಮಂ (ಮಲ್ಲಿಪು. ೩–೩೭). **ನೆರಪು$_2$ : ೫.** ಅರಸಂಚೆಯ ನುಡಿ ಕಿವಿಯೊಳ್ಸುರಿದಂತೆಪೊಲಾಗಲಮೃತವೃಷ್ಟಿಯ ಬಗೆಯೊಳ್ ಹರುಸಂ ಮಿಗೆ ನುಡಿದನಿದಂ ನೆರಪಿದೊಡೆನಗಲ್ತೆ ನೀಂ ಪ್ರಿಯಂಕರನೆನುತಂ (ದಪುಸ್ವ. ೧–೧೩೧). **ನೆಱಹು : ೩.** ಕಿವಿಯೊಳಗೆ ನೆಱಹುವಂತಿರೆ ಶೈವಪಂಚಾಕ್ಷರಿಯನುಪದೇಶಿಸಿ ವಿನೂತನ ಹರುಷದಲಿ ಹರಿಸಿದನು ನಿರ್ಮಳ ಮತ್ತೆ ನಿಜಸುತೆಯ (ಪ್ರಭುಲೀ. ೯–೪). **೪.** ಅಂದು ಬಳಿಕಾ ಹದನನಾಗಳ್ ತಂದು ನೆಱಹಲು ಕೆಲರು ಭರವಸದಿಂದ ಮೋಹಿನಿದೇವಿ ತನ್ನಯ ಮಗಳ ಮಂದಿರಕೆ ಬಂದು (ಪ್ರಭುಲೀ. ೫–೫೫). **ನೆಱಿಪು : ೫.** ಸ್ವಸ್ತಿ ರಕ್ಕಸನೊಱಮ್ಬುಂ ಪಲ್ಲವಾಭರಣಂ ಶ್ರೀಮತ್ ಪಾಳಿಗಱ್ಗೆ ಪೂಣ್ದು ನೆಱಿಪಿ ಸತ್ತಂ ವೇಳೆವಡಿಯ ಅರಸಿಗನ ಮಯ್ದುನ (ಮೈಆರಿ. ೧೯೩೯, ೪೮–೨ ; 11ನೆಯ ಶತ). [ನೆಱ$_1$+–ಪು$_1$./ತೆಲು. ನೆಱಪು, ನೆರಪು]

**ನೆಱಲ್** (ಕ್ರಿ). **೧.** (ಬಲಹೀನವಾಗಿ) ಜೋಲು ; ನೇಲು : "ನೆಱಲ್—ನಿಶ್ಚೇಷ್ಟಾವಲಂಬನೇ (ದೊಣ್ಣೆ ಮೊದಲಾದುವುಗಳ ಸ್ಥಿರವಾದ ಆಧಾರ)" (ಶಮಧಾ) ; "ನೆಱಲೆಂದುಂ, ಎಱಲೆಂದುಂ ನೇಲ್ವುದು" (ಕಶಸಾ. ೭೨–೬೩೯) ; ಎಱಂಕೆ ನೆಱಲ್ದಿರೆ ಕಂಠನಾಳಮಂ ನೀಡಿ ಮಿಯತ್ತಲಕ್ಕೊಗೆದು ಕಾರಮುಗಿಲ್ವನಿಯಂ ಮನಂ ಕುಳಿರ್ಕೊಳ್ದುಮಿನಂ ಕರ್ದುಂಕಿನಲಿವಾಱುದುವಾಱುದುವಂದು ಚಾತಕಂ (ಪಂರಾಪೂ. ೭–೧೪೭) ; ನಡೆಕೋಲ್ವರಮುಂದಂಬುರದೆಡೆಯಂ ಪುಣ್ಯೊಗ್ರ್ತರ್ಕಾಳವಟ್ಟದ ಕೊಪ್ಪಂ ಪಿಡಿದು ನೆಱಲ್ದರ್ಕಸುತಂ ಗಿಡಿಗಂ ಪೊಯೆ ನೊಂದ ಭುಜಗನಿರ್ಪಂತಿರ್ದಂ (ಕಾವ್ಯಾಪ. ೩೦೮). **೨.** ಒರಗು ; ನೆಮ್ಮು : ಚಿತ್ರದೊಳ್ ಕೀಲಿಸೆ ಕಾವನಂಬವಱ ಬಿಣ್ಪಿನೊಳೊಯ್ಯನೆ ಜೋಲ್ದವೋಲೆ ತಾಂಬೂಲಕರಂಕವಾಹಿನಿಯ ಮೇಲೆ ನೆಱಲ್ದಿರೆ ಬಾಲಲೀಲೆಯಿಂ (ಪಂಪಭಾ. ೪–೪೩) ; ಅಂಗಜಶರಾಹತಿ ಪೊರ್ದದ ದೇಶಮುಳ್ಳೊಡಂತಲ್ಲಿಯೆ ಮಾಱ್ಕೆ ಮಜ್ಜನಮಂ ಬಿದಿಯೆಂದು ರಥಾಂಗಕಾಂತೆ ಹೃದ್ವಲ್ಲಭವಿಪ್ರಯುಕ್ತೆ ಬಗೆಗೆಟ್ಟು ನೆಱಲ್ದುದು ಪದ್ಮಪತ್ರದೊಳ್ (ಚಂದ್ರಪು.೮–೭) ; ನಳಿನದಳಂಗಳೊಳ್ ನೆಱಲ್ದು ಬಿರಯಿಸುವ ಜಕ್ಕವಕ್ಕಿಗಳಮದನಾನಲಜ್ವಾಲೆಗೆ ಜೌವನಮನೊಡರಿಸಿಯುಂ . . . ಸಾಯಂತನಸಮಯಸಮೀರಣಂ ತೀಡುತ್ತುಮಿರ್ಪಗಳ್ (ಕುಸುಮಾ. ೪–೨೯ ವ) ; ಪುಳಿಂದಸೌಂದರಿಯರ ಗೀತನಾದಮುಮನಾಲಿಸಿ ಸೋಲ್ತು ನೆಱಲ್ದೊಱಲ್ದು ಸುಂದರಗಿರಿಕಂದರೋದರದೊಳಿರ್ದುದದೊಂದು ಮದಾಂಧ ಸಿಂಧುರಂ (ಸೂಕ್ತಿಸು. ೩–೫೨). **೩.** ನಿಶ್ಚೇಷ್ಟಿತವಾಗು ; ಸ್ತಂಭಿತವಾಗು: ಇಡಿದಿರೆ ರೋಮಕೂಪದೊಳಗುರ್ಚಿದ[ಸಾಲ ಸರಲ್ಗಳುಂ ತೆಱಂಬಿಡಿದಿರೆ ಬೆಟ್ಟುವೋ]ಗುರ್ಡಿಸಿದಂತೆ ನೆಱಲ್ದಿರೆ . . . ಬಿಟ್ಟದೇನೆಸೆದನೋ ಶರಶಯ್ಯೆಯೊಳಂದು ಸಿಂಧುಜಂ (ಪಂಪಭಾ. ೧೩–೬೨) ; ನೆಲದೊಳ್ ಬಿಟ್ಟಡಗಿಂಡೆಯವಾಗೆ ನೆಱನಂ ನಟ್ಟುರ್ಚಿದುಗ್ರಾಯುಧಾವಲಿಯಿಂದುರ್ವಿಸುವಿಂದ್ರಜಾಲಿಗನವೋಲ್ ಜೋಲ್ದುಂ ನೆಱಲ್ದುಂ ಸಮಾಕುಲಿತರ್ ಮೋಹಿಸಿ ಮುಚ್ಚೆವೋಗೆ ಪರಿತಂದುತ್ತಪ್ತಲೋಹದ್ರವಂ ಜಲಮೆಂದಲ್ಲಿಯ ನಾಱಕರ್ ತಳಿವುದುಂ ತಾತ್ಕಾಲಿಕರ್ ನಾರಕರ್

(ಶಾಂತಿಪು. ೭-೪೯). **೪.** ತದೇಕಚಿತ್ತದಿಂದಿರು; ತನ್ಮಯವಾಗಿರು : ಸಗ್ಗದ ಪೊಸದೇಸಿಯೋಳಿಗಳನೊರ್ವಳೊಱಲ್ದು ನೆಱಲ್ದು ಪಾಡಿದಳ್ (ಪಂಪಭಾ. ೭-೯೦).

**ನೆಱವಟ್ಟೆ** (ನಾ). ಒಂದು ಬಗೆಯ ರೇಷ್ಮೆವಸ್ತ್ರ : ನಾಗವಟ್ಟೆ ಮಾಣಿಕವಟ್ಟೆ . . . ನೆಱವಟ್ಟೆ . . . ಎಳೆಹೂವಂ ಮೊದಲಾದ ನಾನಾ ವಸ್ತ್ರಂಗಳಂ ಕುಡುವ ಪದ್ಮನಿಧಿಯುಂ (ಶಾಸ್ತ್ರಟೀ. ೧೯-೭).

[ನೆಱ ? + ಪಟ್ಟೆ₃./ತೆಲು. ನೆಱುಪಟ್ಟು]

**ನೆಱವಣಿಗೆ, ನೆರವಣಿಗೆ₂, ನೆಱವಳಿಗೆ, ನೆಱೆವಣಿಗೆ, ನೆಱೆವಳಿಗೆ** (ನಾ). **೧.** ಪೂರ್ತಿಯಾಗಿರುವಿಕೆ ; ಸಂಪೂರ್ಣತೆ ; ಸಮಗ್ರತೆ : ಆಚಾರದ ಓದಿನ ನೆಱವಣಿಗೆ ಬ್ರಹ್ಮವರ್ಚಸಮೆಂಬುದು (ಹಲಾಯು. ೬೭-೨೪೩) ; ಸಮ್ಯಗ್ದರ್ಶನಜ್ಞಾನಚಾರಿತ್ರಂಗಳ ನೆಱವಣಿಗೆಯಂ ಪಡೆದ ನಂತರ ಚತುಷ್ಟಯಸ್ವರೂಪದಿಂ ಪರಿಣಮಿಸಲ್ಕೆ ಯೋಗ್ಯರಪ್ಪ ಜೀವಂಗಳು ಭವ್ಯರು (ಶಾಸ್ತ್ರಟೀ. ೧೨೨-೩) ; ಅವನು ದಿನದಿನದೊಳಣುವಣುಮಾತ್ರವನು ಬೆಳೆದು ಧರೆಯ ತುಂಬಲು ತನ್ನ ಸತ್ವದ ನೆಱವಣಿಗೆಗೈದಿಸದೆ ನಾನಾ ತೆಱದೊಳಾಯಸಗೊಳ್ಳನೇ (ಕುಪ್ರಾಆ. ೮-೨೨) ; ಪರಮಮಂಗಳಕೆ ಪಾರ್ವತಿ ಸೌಭಾಗ್ಯದ ನೆಱವಣಿಗೆಗೆ ಸಿರಿದೇವಿ ವರವಿದ್ಯಾಕಳಾಪ್ರೌಢಿಗೆ ಶಾರದೆ ಸರಿಮಿಗಿಲೆನಿಸಿ ರಾಜಿಪರು (ಕಂಸವಿ. ೨೪-೪). **೨.** ಶಕ್ತಿ ; ಬಲ ; ತ್ರಾಣ : "ನೆಱವಣಿಗೆಯದಾಳ್ತನ" (ಚತುನಿ. ೧೭೨) ; ಹಱುಯದರ್ಜುನನಿಂದ ಭೀಮನ ನೆಱವಣಿಗೆ ನೋಯಿಸದು . . . ಇಱುವಡಾ ಮಾದ್ರೇಶನನು ನೆಱೆ ಮುಱುವಡೆಯುಂ ನಿನಗಹುದು (ಕುಪ್ರಾಶ. ೧-೩೧) ; ತೆಱನನಱಿದು ನುಡಿಗೆ ನುಡಿಯನೀವ ಬಿನ್ನಣ ಬಿಱುಬಿನವನನೊಲಿಸು ಪೋಜೆ ಹಱುಯದುದನೆ ಹಸನುಗೆಯ್ವ ನೆಱವಣಿಗೆಯುವಳೆ ಮೃಗಾಕ್ಷಿ ಕೇಳ ಮಧ್ಯಮೆ (ಜನವ. ೫-೧೦) ; ಅದ್ಭುತದ ರಣ ನೆಱವಣಿಗೆಯುಳ್ಳವರೊ ರಾವಣ ರಾಘವಾನುಜರು (ತೊರರಾ. ೬-೪೪-೩೧). **೩.** ತುಂಬುವಿಕೆ ; ನಿರ್ಭರತೆ : ಸಱುಯನಿಟ್ಟಳವಳಿಕೆ ರೇಖೆಯ ನಿಱುಗೆ ಬಣ್ಣದ ಜಾತಿ ಭಾವದ ನೆಱವಣಿಗೆಯಿಂ ಬಲಿದ ನಿಪುಣತೆ ಕಣ್ಗೆ ಸೊಗಯಿಸಲು (ಕುಮುರಾ. ೩-೫೧). **೪.** ಪೂರ್ಣವಾದ ಸಿದ್ಧತೆ : ಸಂಪೂರ್ಣವಾದ ತಯಾರಿ : ನೆಱ[ಪಾಠಾಂ. ಱೆ]ವಣಿಗೆಯೊಳು ನಿಂದು ತೊಟ್ಟನು ನರ ಮಹಾಶರವ (ಕುಪ್ರಾವಿ. ೮-೫೯) ; ಮಱೆದನಾ ಹರಿ ಚರಣಚಿಂತೆಯ ತೆಱನ ತತ್ಪೂಜಾವಿಧಾನದ ನೆಱವಣಿಗೆ ನೆಱೆ ಬೀಳುಕೊಂಡುದು ನೃಪತಿಗಾಕ್ಷಣಕೆ (ನಿಭಾಗ. ೫-೫-೨೫). **೫.** ಕೌಶಲ ; ಚಾತುರ್ಯ : ಮೆಱೆವವೇ ರಘುನಾಥನಿದಿರಿನಲಱುತಕಾಱನ ಚಾಪವಿದ್ಯೆಯ ನೆಱವಣಿಗೆ (ತೊರರಾ. ೬-೪೭-೨೬). **೬.** ಪೂರ್ತಿಮಾಡುವುದು ; ಮುಕ್ತಾಯ : ಸ್ನಾನಾದಿ ನಿತ್ಯಕರ್ಮಾನುಷ್ಠಾನ ತಿರುವಾರಾಧನಂಗಳಂ ನೆಱವಣಿಗೆಗೊಳಿಸಿ (ಚಿಕವಂ. ೭೩-೪). **೭.** ಹೆಚ್ಚಳ ; ಆಧಿಕ್ಯ : ಘಾಯದ ನೆಱ[ಪಾಠಾಂ. ಱು]ವಣಿಗೆಯಲಿ ನೆಗ್ಗಿ ಮುಗ್ಗಿದ ಕುದುರೆ ಕಾಲಾಳ ಅಱುಯೆನಭಿವರ್ಣಿಸಲು (ಕುಪ್ರಾಕ. ೧೫-೨೫) ; ತೊಱೆದು ನಿಜಪಿತೃಮಾತೃಬಾಂಧವರಱುಕೆಯನು ಸತಿಸುತರ ಹಿತವರ ನೆಱವಣಿಗೆಯಾಸೆಯನು ಮೇಣಿಹಪರದ ಸೌಖ್ಯವನು (ನಿಭಾಗ. ೩-೧೩-೧೧); ಪಡವಣ್ಣಜ . . . ಗೋವೆ ನೆಱವಣಿಗೆ ಗೆದಿದು ಗೋವೆನಲಂಬೆವೆನುತ್ತೆ (ಬೊಂಕಶಾ. ೧೯೨೯, ಬಾದಾಮಿ. ೧೪೯-೧೯ ; ?). **ನೆರವಣಿಗೆ₂ :** **೧.** ಕಾಲೂರ ಕೇಡುಗಳ್ ಬಿಗಿದೊಂದನಿನ್ನೊಂದು ಮೇಲಾಟದಿಂದಹುದು ಹೊಳಲ ನೆರವಣಿಗೆ (ಕಾಲೂರ. ೧೧೧-೨೦೪). **೪.** ಬಾಳ್ಕೆಯಂ ಬಿಡದಳಿದು ಸರಿಯುಗುಂ ಮರೆತೂಗು ಪೋಳ್ವ ಪಗಲಾಣ್ಮಂಗೆ ಅಣಿಯೆ ನೆರವಣಿಗೆ (ಕಾಲೂರ. ೬೩-೧೧೫). **೮.** ಉಪಾಯ ; ಸಂಚು ; ಹಂಚಿಕೆ : ಕರದ ಚಕ್ರಕೆ ಗಯನನೊಪ್ಪಿಸಿ ಹರಣಮಂ ಬಳಿಕುಳುಹಿಕೊಂಬೀ ನೆರವಣಿಗೆ ಲೇಸೆನುತ ನುಡಿದನು ಮುಳಿದು ಮುರವೈರಿ (ಕೋಗಯ. ೨೭-೧೭). **ನೆಱವಳಿಗೆ :** **೭.** ಪ್ರವಿದಿತನಿದಂಗಾ ಪ್ರಮಾದದೋಷದಿ ಬಂದ ನೆವವನೇ ನೆಱವಳಿಗೆ ಮಾಡಿ ಮುಂಗೋಪದಿಂ ವಿವಿಧೋಪಸರ್ಗಮಂ ಮಾಡಿಸಿದ ದುಷ್ಕರ್ಮ ನಾನಲಾ (ಸಮ್ಯಕಾ. ೧೧-೭೯). **ನೆಱೆವಣಿಗೆ :** **೧.** "ಆಭೋಗಃ, ಪರಿಪೂರ್ಣತಾ – ಈ ೨ ನೆಱೆ[ಪಾಠಾಂ. ಱ]ವಣಿಗೆ" (ಹಲಾಯು. ೧೨೪-೭೦) ; ಸಂಸ್ಕೃತಮಂ ಮಱೆಗೊಳ್ಳದೆ ನೆಱೆವಣಿಗೆ[ಪಾಠಾಂ. ನೆಱೆವಣಿ]ಯಿಂದಚ್ಚಗನ್ನಡಮಂ ಪೇೞ್ವರ್ಗೀಯಪಭ್ರಂಶಪದಮುಂ ಇದಱ ಸಮಾಸಮುಂ ತತ್ಸಮದ ಸಮಾಸಮುಂ ಕಯ್ವೊಕ್ಕ ನಿಧಾನಮಿದಱೊಡನೆ ಕನ್ನಡದ ದೇಶೀಯ ಪದಮುಂ ಸಮಾಸಿಸಲಪ್ಪುದು (ಶಮದ.೨೯ ವೃತ್ತಿ). **೨.** ಬಳಿಕೀತನಾತನ ನೆಱೆವಣಿಗೆ ಲೇಸೆನುತ ತುಳುಕಿದನಂಬಿನಂಬುಧಿಯ (ಕುಪ್ರಾದ್ರೋ. ೧೦-೧೨). **೭.** ಮಱೆಯಲಱಿವೆನೆ ನಿಮ್ಮ ನೇಹದ ನೆಱೆ[ಪಾಠಾಂ. ಱ]ವಣಿಗೆಯನು ಕೋಟಿ ಕಲ್ಪಾಂತರಕೆ (ನಿಭಾಗ. ೧೦-೪೪-೨೭) ; ಧೈರ್ಯದ ನೆಱೆವಣಿಗೆಯಿಂ . . . ಚಾರುದತ್ತನು ನಡೆದನೊಲವಿನಲಿ (ಸಾಳ್ವಭಾ. ೧೭-೩೯). **೮.** ಕಪಟದ ನೆಱೆವಣಿಗೆಗಳನಱುಯರಿಂದ್ರ ದ್ರೋಣ ಶಂಕರರು (ಕುಪ್ರಾದ್ರೋ. ೪೧-೧೨); **ನೆಱೆವಳಿಗೆ :** **೯.** ಔಚಿತ್ಯ; ಸರಿಯಾದ ರೀತಿ : ಪುತ್ತ್ರೇಱು ಮೊಱೆಯಿಟ್ಟವರ ಕಾಯದ ತುಳಿಲಾಳ್ಗದು ನೆಱೆವಳಿಗೆಯೆ ಲೋಕವಱುಯೆ (ಶ್ರೀಪಾಲ. ೮-೬೮).

[ನೆಱೆ₂+ – ವಣಿಗೆ./ತೆಲು. ನೆಱವಣಿ, ನೆಱವಡಿ]

**ನೆಱವಣಿಗೆಗುಂದು** (ಕ್ರಿ). ಶಕ್ತಿಗುಂದು ; ಬಲಹೀನವಾಗು : ನೆಱವಣಿಗೆ[ಪಾಠಾಂ. ನೆಱೆವಣಿಗೆ]ಗುಂದಿತ್ತು ಬಲ ಕೈಮಱೆದರದಟರು ಬಿರುದ ಭಟರಿಂಗೆ ಬೆಱಗು ಬಲಿದುದು (ಕುಪ್ರಾಭೀ. ೭-೭).

[ನೆಱವಣಿಗೆ+ಕುಂದು₁]

**ನೆಱವಳಿಗೆ** 'ನೆಱವಣಿಗೆ' ನೋ.

**ನೆಱವಿ** (ನಾ). **೧.** ಮುಕ್ತಾಯ ; ಮುಗಿಯುವಿಕೆ: ಮತ್ತಂ [ನೋಂಪಿಯ] ಪ್ರಾರಂಭದೊಳಂ ನೆಱವಿಯೊಳಂ ಮಂದರದಂತೆ ಧೈರ್ಯಂಬೆರಸು . . . ನೋಂಪುದೆಂದು ಪೇೞ್ವುದುಂ (ಧರ್ಮಾಮೃ. ೧-೧೩೫) ; ಭವಪರ್ಯಾಯಪರಿಭ್ರಮಣದಿಂ ಬಂದು ಪುಟ್ಟುತ್ತುಂ ಕಡೆಯೊಳುತ್ಕೃಷ್ಟಾಯುಷ್ಯಮನೆಯ್ದಿ ನೆಱೆಯಿಸುವ ನೆಱವಿ ಭವಪರಿವರ್ತನಮೆಂಬುದು (ಸುಕುಮಾ. ೬-೬ ವ). **೨.** ಸಮಗ್ರತೆ : ಅಪರ್ಯಾಪ್ತಿನಾಮಂ ತಂತಮ್ಮ ಪರ್ಯಾಪ್ತಿಗಳ ನೆಱವಿಯನಾಗಲೀಯದು (ಪಸಾರ. ೧೭). [ನೆಱೆ₁+ – ವಿ]

**ನೆಱವು₁, ನೆರವು₂** (ನಾ). **೧.** ಸಂಪೂರ್ಣತೆ ; ಪೂರ್ಣತ್ವ ; ಸಮಗ್ರತೆ : ಮುಱುಕದ ಮುಂಗುಡಿ ಸೊಬಗಿನ ನೆಱವು . . . ತಲೆದೋಱಿದುದು ಜಗಮೆಱಗುವಿನಮವಳ್ಗೆ ಮದನನಾಳ್ಕೆಯ ಹರೆಯಂ (ವರ್ಧಪು. ೯-೨೭) ; ಈ ನೆ[ಪಾಠಾಂ. ತೆ]ಱವಿನೊಳೆಯ್ದಿ ಕಂಡು ನಯಮಂಜಯಮಂಪ್ರಿಯಮಂ ಪ್ರಧಾನರಾರಱುಪುವರಿಂತಧೀಶಹಿತಮಂ ಮಿತಮಂ ಮತಮಂ ಮಹಾಮತೀ (ಜಗವಿ. ೧೫-೬೨) ; ಸೊಬಗಿನ ನೆಱವುಂ ರೂಪಿನ ಬೆಡಂಗುಮಾ ಸತಿಗಧಿಕಂ (ಎಕ. V, ಚನ್ನರಾ. ೨೪೩-೧೪ ; 1210). **೨.** ಸನ್ನದ್ಧತೆ; ಸಜ್ಜು ; ಸಿದ್ಧತೆ ; ಅಣಿ : ವೀರವಿದ್ಯಾಧರನಾಯಕರಂ ಬರಿಸಿ ನಾಳೆ ಕಾಳೆಗಂ ಚಮರಚಂಪಾಪುರಿಗೆ ಪೊಱಮಡುವ ನೆಱವಂ ನಿಮಿರ್ಚುವುದೆಂದು ನೇಮಿಸಿ (ಶಾಂತೀಶ್ವ. ೫-೨೦೪ ವ). **೩.** ತಣಿವು ; ತೃಪ್ತಿ : ಅಱುವುಂ ನೆಱವುಂ ತನ್ನೊಳ್ ನೆಱೆದಂದಱದಱೊಳಿಸಪುದಲ್ಲದೆ ಬಱುಯಂ ಗುಱು ನೆಱದೆಡೆಯೊಳ್ ಮಮ್ಮಲಮಱುಗಿದೊಡಾ ನೆಱವುಮಱುವುಮೇಂ ಕೂಡುಗುಮೇ (ಆದಿಪು. ೩-೬೭). **ನೆರವು₂ :** 'ನೆರವೇರು' ಪರಾ.

[ನೆಱೆ$_1$ + – ವು. / ತಮಿ. ನಿಱವು, ನಿಱೈವು ; ಮಲ. ನಿಱವು ; ತೆಲು. ನೆಱವು, ನೆರವು]

**ನೆಱವು$_2$** 'ನೆರ$_2$' ನೋ.

**ನೆಱಹು** 'ನೆಱಪು' ನೋ.

**ನೆಱು$_1$** (ಕ್ರಿ). ನೇತು ಬಿಡು : ಶಕುಂತಪಾಳಿಕೆಯರ್ ಪೊಱಗೆ ವಾಸಯಷ್ಟಿಗಳೊಳ್ ನೆ[ಪಾಠಾಂ. ನಿಱು]ಱಿದ ಪೊನ್ನ ಪಂಜರದ ಪುಗಿಲ್ಗಳಿಂ ಜಾಳಿಸಿ ಪೊಕ್ಕು ದೀಹದ ಚಕೋರಿಕೆಗಳಟ್ಟಿಱಿಂ ಮುಕ್ಕುಱಿಪ ಮುಂಡಾಡುವ ಕರ್ದುಂಕು ಪೊದೆವ ಚೆಲ್ಲಕೆ ಮೈಸಾರ್ಚಿಯುಂ (ಚಂದ್ರಪ್ರ. ೮–೪೩ ವ). 'ನೆಱಿಲ್' ಪರಾ.

[ದೇ. ‖ ತಮಿ. ನಾಱು ; ಮಲ. ನೇಱು ; ಕೊಡ. ನೆರ್]

**ನೆಱು$_2$** 'ನಿಱು$_2$' ನೋ.

**ನೆಱುಗೆ** 'ನಿಱುಗೆ' ನೋ.

**ನೆಱುತ್ತೊಱೆ** (ನಾ). ಒಂದು ನದಿಯ ಹೆಸರು : ಪಶ್ಚಿಮಸ್ಯಾನ್ ದಿಶಿ ನೆಱುತ್ತೊಱೆ (ಮೈಆರಿ. ೧೯೩೪, ೮೦–೯೮ ; 799). [? + ತೊಱೆ$_2$]

**ನೆಱುಲ್ಗಾಲ್** (ನಾ). ಒಂದು ಕಾಲುವೆಯ ಹೆಸರು (?) : ತಸ್ಯ ಸೀಮಾನ್ತರಂ ಪೂರ್ವ್ವಸ್ಯಾನ್ದಿಶಿ ತುಱಿದ್ದಾಲೆ . . . ಅನ್ತೆ ಬನ್ದು ನೆಱುಲ್ಗಾಲೆ ಅನ್ತೆ ಬನ್ದು ಕೊಣ್ಣೆದ್ದಗಾಲೆ . . . ತೊಱೆಯುಳ್ ಕೂಡಿತ್ತು (ಮೈಆರಿ. ೧೯೩೬, ೫೩–೨೫ ; ಸು. 550).

[ನೆಱುಲ್$_0$ + ಕಾಲ್$_2$]

**ನೆಱುವಿಡಿ** 'ನಿಱುವಿಡಿ' ನೋ.

**ನೆಱೆ$_1$**, ನೆರೆ$_3$ (ಕ್ರಿ). **೧.** ಪೂರ್ಣವಾಗು; ಪೂರ್ತಿಯಾಗು : "ನೆಱೆ –ಸಮಗ್ರತ್ವೇ" (ಶಮಥಾ) ; ವನಿತಾಹೇತುವೆ ಕೇತುವಾಯ್ತು ನಿಮಗಂ ಗಾಂಧರ್ವರಿಂದಿಂದು ನಿಮ್ಮ ನಿಷೇಕಂ ನೆಱೆದತ್ತು ಸತ್ತಿರೆನುತುಂ . . . ನೀಚಕೀಚಕನಿಕಾಯಧ್ವಂಸನಂ ಮಾಡಿದಂ (ಪಂಪಭಾ. ೮–೮೦) ; ನೂಱು ನಾಲ್ವತ್ತು ದಿನಸದಿಂ ನೆಱೆವ ಕರ್ಮಕ್ಷಪಣಮೆಂಬ ನೋಂಪಿಯಂ ನೋಂತು (ಚಾವುಂಪು. ೨೦) ; ಮಱೆಯದೆ ಮನೆಯೊಳಗಿರ್ದುದೆಲ್ಲವ ಜಗದೆಱೆಯನ ಪೌತ್ರಗೆ ಸಾರ್ಚಿ ನೆಱೆಯದ ಕಡಮೆಗೆ ತಮ್ಮ ಕಣ್ಮನವ ಕೈಸೆಱೆಗೊಟ್ಟರಜ್ಞವೆಣ್ಣುಗಳು (ಮೋಹತ. ೧೯–೭೮). **೨.** ವೃದ್ಧಿಯಾಗು ; ವಿಕಾಸಹೊಂದು : ಅಂತು ಭುವನಭವನಕ್ಕೆಲ್ಲಮಾಯಮುಮೆಳವುಮುಱುವುಮುಣ್ಮಂ ಪುಟ್ಟುವಂತೆ ಪುಟ್ಟಿ ನವಯೌವನಂ ನೆಱೆಯೆ ನೆಱೆಯೆ (ಪಂಪಭಾ. ೧–೭೭ ವ) ; ದಿವ್ಯವಸ್ತ್ರಭೂಷಣಮಣಿಮಾಳೆಗಳ್ನೆಱೆದು ತನ್ನೊಡವುಟ್ಟಿರೆ ಬೇಗವೇಗಮಾಕ್ಷಣದೊಳೆ ಜವ್ವನಂ ನೆಱೆಯೆ ನೆಟ್ಟನೆ ತೊಟ್ಟನೆ ಬಂದು ಪುಟ್ಟಿದಂ (ಸುಕುಮಾ. ೯–೧೮) ; ಆ ಕುಮಾರರಂತೆ ಬಳೆದಶೇಷ ಕಳಾಕುಶಲತೆಯಿಂ ನವಯೌವನದೊಳಂ ನೆಱೆದು (ನೇಮಿಪು. ೩–೩೦ ವ). ಚಂದ್ರಂ ನೆಟ್ಟನೆ ನೆಱೆದು ಬಿಂಬದಿಂ ಪೂರ್ಣನಾಗೆ ರಾಕಾಖ್ಯೆ ಪೌರ್ಣಮಾಸಿಯದಕ್ಕುಂ (ವಸ್ತುಕೋ. ೧೬–೯). **೩.** ಚೆನ್ನಾಗಿ ಬೆಳೆ; ಪುಷ್ಟವಾಗು; ಬಲಿತುಕೊಳ್ಳು : ಆ ಪಾವು ಪಾಲಂ ಕುಡಿದು ಕೊಬ್ಬಿ ನೆಱೆದಾಡುತ್ತುಮಿರ್ದುದು (ಪಂಚತಂ. ೧೨೮–೧೯) ; ನೃಪನಾ ವಚನಮುಮಂ ನಂಬಿ ನೆಱೆದ ಪೊಲೆಯರ ಪೋಂತಂ ತರಿಸಿ . . . ಇರಿಸಿದೊಡೆ (ಯಶೋಚ. ೨–೪೯); ಉರಿವ ಕಾಳ್ಗಿಚ್ಚಿನೊಳು ಸಿಲ್ಕಿದ ಗಱು ನೆಱೆಯದಂಚೆಯ ಪೊಲಾದರು ಮಱುಗೆಡಸಿದೆಳೆವುಲ್ಲೆಯಂತಕಟಕಟ ದೆಸೆಗೆಟ್ಟು (ಸಾನಂಚ. ೭–೮೨). **೪.** ಪ್ರಾಯಕ್ಕೆ ಬರು ; ಋತುಮತಿಯಾಗು : ವರ್ಯಾ, ಪತಿಂವರಾ–ಈ ೨ ಕುಡಲ್ ನೆಱೆದ ಕೂಸು (ಹಲಾಯು. ೭೯–೩೭೯) ; ಪರಮಬ್ರಹ್ಮಹೃದಯಸರಸಿರುಹೋದರದೊಳಗೊಗೆದಾತನ ಸಿರಿಮೊಗದೊಳು ಗರುವಿಕೆದಾಳಿ ನೆಱೆದು ಕೈವಲ್ಯಸತಿಗೆ ಸಹಚರಿಯಾಗಿ ಭರದಿಂ ಭವ್ಯಭುಜಂಗರನವಳೊಳ್ ನೆಱೆವುವ ಕೋಣಿದೆ . . . ಮನ್ಮತಿಗೀವುದು ಮಾಂಗಲ್ಯವನು (ಜಯುಕಾ. ೧–೭). **೫.** ಪ್ರಾಪ್ತವಯಸ್ಕನಾಗು ; ವಯಸ್ಸಿಗೆ ಬರು : ನಿನ್ನುದಯಸಮಯದೊಳೆಮ್ಮ ಗುರುರೂಪ ವಿಶ್ವಪತಿಯತಿವೇಷದಿಂ ಬಂದು . . . ನೀಂ ನೆಱೆಯೆ ತನ್ನೆಡೆಗೆ ಬರ್ಪುದೆಂದೆಂದು ನಿರವಿಸಿದಂ (ಪದ್ಮರಾ. ೩–೧೦) ; ಮಕ್ಕಳ ಮಾಣಿಕ ಪ್ರದ್ಯುಮ್ನ [ನೆಱೆ]ದರೆ ಕಕ್ಕಸವಹುದೆಂದೆನುತ ರಕ್ಕಸರುಗಳು ಮಾಯದೊಳುಯ್ದರು (ಮೋಹತ. ೮–೯೧) ; ಕಿಱಿಯಮ್ಮ ದೀಕ್ಷೆಗೆಯ್ದುವೆನೆನೆ ಭರತೇಶನಱುಗೋಲನಾತ್ಮಜರಿನ್ನು ನೆಱೆವನ್ನ ದೀಕ್ಷೆಗೆಳಸಲಾಗದೆಂದು ಕಾಲ್ಗೆಱಗಿ ನಿಲ್ಲಿಸಿದನಾ ಚಕ್ರಿ (ಭರತೇ. ೫೩–೨). **೬.** ಅಧಿಕವಾಗು ; ಹೇರಳವಾಗು ; ಸಮೃದ್ಧವಾಗು ; ಹೆಚ್ಚಾಗು : ನೆಱೆದಾದ ವ್ರತಶೀಲ ನೋನ್ಪಿಗುಣದಿಂ ಸ್ವಾಧ್ಯಾಯಸಮ್ಪತ್ತಿನಿಮ್ ಕಱೆಇಲ್ಲಲ್ತ ಪರ್ವ್ಮದಾ ಸಸಿಮತಿಶ್ರೀಗನ್ತಿಯರ್ . . . ಸ್ವರ್ಗ್ಗಾಲಯಕ್ಕೇಱಿದಾರ್ (ಎಕ. II, ೭೬–೧ ; 700) ; ನೆಱೆದಾತನ ಪುಣ್ಯಮೆ ಕಣ್ದೆಱೆದಂತಿರೆ ತೆಱೆದುವಾ ವಿಮಾನದ ಪಡಿಗಳ್ (ಚಂದ್ರಪ್ರ. ೪–೬೨). ನೆಱೆಯೆ = ಪೆರ್ಚುಗೆಯಾಗೆ (ಶಮದ. ೩ ಟೀಕು). **೭.** ತುಂಬಿಕೊಳ್ಳು ; ಭರ್ತಿಯಾಗು ; ತೀವು : ಉಜ್ವಲಪಂಚರತ್ನಭಾಸ್ವದಸದನಂಗಳಿಂ ನೆಱೆದುದಂ ಸಮೆದಂ ಪುರಮಂ ಪುರಂದರಂ (ಆದಿಪು. ೬–೪೯) ; ತೀವಿದ ಪೊಕ್ಕರಣೆಗಳ ನೆಱೆದ ಕೆಱೆಗಳ ಸರೋವರಂಗಳ ಬೆಡಂಗಗುಂದಲೆಪುರದೊಳ್ (ಸುಕುಮಾ. ೯–೫೧). **೮.** (ಕಾಲ) ತೀರು ; ಮುಗಿ ; ಪೂರೈಸು : ನೆಱೆದುವು ಪನ್ನೆರಟ್ಟಬ್ದಿಸಮುಗ್ರವಿರೋಧಿಜನಕ್ಕೆ ಮಿಟ್ಟುಗಳ್ ನೆಱೆವವೊಲ್ (ಪಂಪಭಾ. ೮–೪೯) ; ನವಮಾಸಂ ನೆಱೆವುದುಮೆನ್ನ ಪೆಂಡತಿ ಗಂಡುಮಗನಂ ಪೆಱಲೊಡಂ (ಪಂಚತಂ. ೧೮೬–೫) ; ನೆಱೆವುದಾರಾಯುಂಪಕ್ವಾರಿಂದಱುತುಕೋ ಚಿತ್ರಭೆಯ ಮಾಯೆಯ ಮಱೆಯ ಜವನಿಕೆಯೇಕೆ ನೀನಿದಕಳುಕಬೇಡ (ತೊರಾ. ೨–೫–೧೬). **೯.** ಸಿದ್ಧವಾಗು ; ತಯಾರಾಗು ; ಸನ್ನದ್ಧವಾಗು : ಕೊಂಕಿ ಪಱುಯುತ್ತಿರವಿಂದೆ ಕೊಲಲ್ಕೆ ಮೊಕ್ಕಳಂ ನೆಱೆದುದಱಿಂದೆ ಸಪ್ತಮುಖದಿಂದೆ . . . ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೭೪೭ ಶೂದ್ರಕ) ; ಅಱಿವಗೆಯಂ ಪಱುಪಡಿಸಲ್ಕೆ ಹಲಾಯುಧ ನೆಱೆದಿರ್ದಪೆನೆನಗೆ ತೋಱು ಬಿಡು ಕೌರವನಂ (ಗದಾಯು. ೭–೬೧) ; ಮರೆ ಹುಲಿ . . . ಎಯ್ಯಮೃಗಂ ಕಡುಕೊರ್ಬಿ ಕಾನನಾಂತರದ ಕುಟೀರವಂ ಬೆಳೆದ ಕೆಯ್ಗಳನಂತಿರಲೀಯಮಂತವಂ ಸಿರಸನವೈದಿಸಲ್ ನೆಱೆವ ಬೇಂಟೆಗೆ ಕಾಲಮಿದು (ನಳಚಂ. ೬೫). **೧೦.** ಈಡೇರು ; ನೇರವೇರು ; ಸಿದ್ಧಿಸು : ಚಂದ್ರನಂ ನುಂಗೆಂದು ತೋಱುದೊಡಾಕೆಯುಂ ಕಂಡು ರಾಗಿಸಿಯಾ ಸೀರಂ ಕುಡಿದು ಬಯಕೆ ನೆಱೆದತ್ತು (ಪದ್ಮಾರಾ. ೧೮೬–೨೧) ; ನೆಱೆದ ತ್ರೈತ್ರಾನುಮಿಮಾ ದಂಪತಿಯ ಬಯಕೆ ಸಂಪೂರ್ಣಮಾಯ್ತುತ್ಸವಂ (ಆದಿಪು. ೪–೪೮). **೧೧.** ಸಾಕಾಗು ; ಸಾಲು : ಇದೆನ್ನ ಭುಜಾಸಿಗೆ ತೀಡುಪೊಸಲುಂ ನೆಱೆಯದು (ಕಾವ್ಯಸಾ. ೪೧೧ ಶೂದ್ರಕ) ; ಪರಮನ ನಿರತಿಶಯಾಂಗಸ್ವರೂಪಮುಮಂ ನೆಱೆಯ ನೋಡಲಾವೆಡೆಗಂ ತನ್ನೆರಡುಂ ಕಣ್ಗಳ್ ನೆಱೆಯದೆ ಸುರೇಂದ್ರನುಂ ಗಡ ಸಹಸ್ರಲೋಚನನಾದಂ (ಆದಿಪು. ೭–೧೦೭) ; ಸಿವಸ್ಥಾನಕ್ಕೆ ಮುನ್ನ ಕೊಟ್ಟ ಭೂಮಿ ನೆಱೆಯದೆನ್ದು ಮತ್ತ ಕಿಱುದು ಭೂಮಿಯ . . . ಕೊಟ್ಟರ್ (ಎಕ. IV, ಗುಂಡ್ಲುಪೇ. ೮೩–೮ ; ಸು. 995 ?) ; ಎನ್ನೊರ್ವನೆರ್ದೆ ಮರ್ದಿಂಗೆ ನೆಱೆಗುಂ ನೆಱೆಯದಿರ್ಕುಮದ ನಱುಯಲ್ಬಾರದು (ಪಂಚತಂ. ೨೮೧–೪). **೧೨.** ತೃಪ್ತಿಪಡು ; ಸಂತೃಪ್ತಿ ಹೊಂದು : ಕನ್ನೆ ನಿಜಜೀವಿತಮುಮಂ ತನ್ನುಮನಿರದಿತ್ತು ತೊಱು ತನಮಂ ತಾಂ ಕೊಂಡುಂ ನೆಱೆಯಳ್ (ಕಾದಂಉ. ೧೧೪) ; ಭಜಿಸಿ ನೆಱೆಯರು ನಾರದಾದ್ಯರು ನಿಜವನೀತನನೀತ ನಿನಗಾತ್ಮಜನೆ ಹೋಗೆಲೆ

ಮರುಳೆ ನೀನಾರೀತನಾರೆಂದ (ತೊರಂ. ೧-೮-೩೬). **೧೩.** ತೃಪ್ತಿ ಕೊಡು; ಸಂತೃಪ್ತಿಯನ್ನು ನೀಡು : ಆವಾಸ ನೆಱಯದು ಮಕ್ಕಳಿಲ್ಲದೆ ಭೂಪ ದಶರಥಗೆ (ಕೌಶಿರಾ. ೧-೨೮). **೧೪.** ಸಾಧ್ಯವಾಗು; ಶಕ್ತವಾಗು; ಸಮರ್ಥವಾಗು : ಕಿಱದಱೊಳೆ ಪಿರಿದುಮರ್ಥಮನಱಪಲ್ ನೆಱವಾತನಾತನಿಂದಂ ನಿಪುಣಂ (ಕವಿರಾ. ೧-೧೫), ಮೃಗಪ್ರಜದೊಡ್ಡೇಂ ಮೃಗರಾಜನಂ ನೆಱವುದೇ ತಾಂಗಲ್ಕೆ (ಆದಿಪು. ೧೩-೫೭); ಇಱುವ ಬೆಡಂಗನೊಳೞಯಲ್ ನೆಱಯ್ಯೆ ನಿನಗಾನೆ ಸಾಲ್ವೆಂ (ಗದಾಯು. ೭-೩); ವಿಶ್ವಾವನಿಯುಂ ಕೈಕೊಂಡು ತಾಳ್ದಲ್ ನೆಱವ ತನಯನಂ ಗರ್ಭದೊಳ್ತಾಳ್ದಿದೈ (ಮಲ್ಲಿಪು. ೪-೯೨). **೧೫.** ಯೋಗ್ಯವಾಗು; ಉಚಿತವಾಗು; ಅರ್ಹವಾಗು: ಸೋಲ್ತು ಕಪ್ಪಮನಿತ್ತೊಡೆ ಕೈಕೊಳ್ವುದುಂ, ಕಾವಲರ್ಗೆ ನೆಱಗುಂ (ರಾಮಾಶ್ವ. ೧೫-೧೭). **೧೬.** ಕಾಣಿಸಿಕೊಳ್ಳು; ಕಾಣು; ತೋರು : ಅಂದೊಮ್ಮೆ ವರಹಾವತಾರದಿ ನೆಱದ ಗೋವಿಂದ ತನ್ನಯ ಪೀತಾಂಬರವ ಕುಂದದೆ ಭೂಮಿಗೆ ಪೊದಿಸಿದೊಲಿರುವುದು ಗಂಧಶಾಲಿಯ ವನ ಕಳಿತು (ಮೋಹತ. ೨-೫೨). **ನೆರೆ$_3$ : ೪.** ಕಾಡ ಸಬ್ಬಸಿಗೆ ಸಮೂಲ ಹಿರಿಮದ್ದಿನ ಬೇರು ಸಹಾ ಒರಳಲ್ಲಿ ತಿರುಹಿ ರಸವ ಹಿಂಡಿಕೊಂಡು . . . ದಿನ ಮೂರು ನೆರೆಯದ ಕನ್ನೆಯರು ಸೇವಿಸೆ ಋತುವಹರು (ಸಕವೈ. ೧೨೫); ಮೈಸೂರುಶೀಮೆಯ ಜೈನರು ತಮ್ಮ ಹೆಣ್ಣು ಮಕ್ಕಳು ನೆರೆದ ಬಳಿಕ ಅವರ ಲಗ್ನ ಮಾಡುವರು (ಕಭಾಗೆ. ೯೯). **೫.** ನೆರೆದ ಮಗ = ಹರೆಕ ಬಂದ ಮಗ (ಜಾನಕೋ. ೧೨). **೭.** ದಣಿಯ ಅಪ್ಪಣೆಗೆ ತನ್ನ ಅಭಿಲಾಷೆಯೂ ನೆರೆಯಿತು (ಕಾವ್ಯಸ. ೯೬). **೧೭.** ಪೂರ್ಣ ಮಾಡು; ಪೂರ್ತಿಯಾಗಿಸು : ಒಪ್ಪಿನಿಂ ಕುಣಿವ ಪರಿಜಂ ನೆರೆದು ಜೋಲ್ವವಿರ ಕಪ್ಪು ಬೆಳ್ಪುಗಳ ಪೊಂಬೊಗರ ನೇವರಿಸಿ ಬಪ್ಪನೇಂ ಬೋಳನೆನೆ ಹೆಬ್ಬುಲಿಯುವು ಬರುತಿಹುದು (ಕಾಲೂರ. ೯೪-೧೮೬); ಮುಂದಪ್ಪುದಂ ನೆರೆಯಲಣಿಯೆನಲ್ ನಿಂದಂ (ಕಾಲೂರ. ೧೩೭-೨೯೫).

**ನೆರೆದ ಹಣ** = (ಅಗಸರ ಜಾತಿಯಲ್ಲಿ) ಹುಡುಗಿ ಮೈನೆರೆದಾಗ ನಡೆಯುವ ಶಾಸ್ತ್ರ ಮುಂತಾದುವುಗಳಿಗೆ ಆಕೆಯ ಗಂಡ ಅಥವಾ ಮದುವೆಯಾಗಲಿರುವ ವ್ಯಕ್ತಿ ಕೊಡುವ ಹಣ : (ಎಸಮ್ಮೆ. IV, ೧೦). **ನೆಱದ ಪೆಣ್, ನೆರೆದ ಪೆಣ್, ನೆರೆದ ಹೆಣ್ಣು** = ಪ್ರಾಯಕ್ಕೆ ಬಂದ ಹೆಣ್ಣು; ಋತುಮತಿಯಾದವಳು : "ತುಱುಮಿಂಡಿಯೆನೆ ನೆಱದ ಪೆಣ್ಣಕ್ಕು" (ಶಬ್ದಮಂ. ೭೪); ಪೆರನಾರೊ ಬಂದಿರಲ್ ಕಣ್ಮುರಿದು ಗೆಳತಿಯಂ ನೆರೆದ ಪೆಣ್—ನಿನಗೆಂದು ಚುಚ್ಚಿ ನುಡಿಯುವಳು (ಕಾಲೂರ. ೬೧-೧೦೨); ನೆರೆದ ಹೆಣ್ಣು = ಹರೆಕ ಬಂದ ಹೆಣ್ಣು (ಜಾನಕೋ. ೧೨).
[ದೇ.॥ ತಮಿ. ನಿಱೈ; ಮಲ. ನಿಱಯು; ತುಳು. ನೆರಿಯು, ನೆರೆವು; ಕೊಡ. ನೆರೆ, ನೆರ; ತೆಲು. ನೆಱಯು, ನೆರಯು; ಕೋಲಾ. ನಿಂದ್; ನಾಯ್ಕಿ. ನಿಂದ್, ನಿಪ್ಪ್; ಗೊಂಡಿ. ನಿಂದಾನಾ; ಕುಇ. ನೆಂಜ, ನೆಂಬ, ನೆಪ್ಪ, ನೆಸ್ಪ, ನೆಹ್ಪ; ಕುವಿ. ನೆಂಜಲಿ; ಕುರುಖ್. ನೀಂದ್‌ನಾ; ಮಲ್ತೊ. ನಿಂದೆ]

**ನೆಱ$_2$**, ನೆರೆ$_6$, ನೆಱಿ$_2$ (ನಾ). ೧. ಪರಿಪೂರ್ಣತೆ; ಸಮಗ್ರತೆ : "ನೆಱ ಪೂರ್ಣಾರ್ಥಾಹ್ವಯಂ" (ಕರ್ಣಾನಿ. ೪೦); "ಸಮಗ್ರತೆ ಬಹಳದೊಳ್ ನೆಱ" (ಶಬ್ದಮಂ. ೧೧೭). **೨.** ಅತಿಶಯ; ಹೆಚ್ಚಳ; ಆಧಿಕ್ಯ : "ಉಬ್ಬರಂ, ಉಬ್ಬಟೆ . . . ನೆಱ, ನೂಳದು, ಮಿಾಂಟು, ಒಟ್ಟಜೆ, ಪೆರ್ಚುಗೆ—ಈ ೧೯ ಅತಿಶಯಂ" (ಕಶಸಾ. ೫೭-೨೩೪). **೩.** ಸಮರ್ಥನಾದವನು : ಪೆಱ[ನಾ]ವಂ ಧರಾಚಕ್ರಕ್ಕೆಱಯಂ ಕೆಳೆಯಪ್ಪವಂ ನೆಱ ಯಾರೆಣೆಯೆಂಬನ್ನಂ ಕುಱುತಬ್ಧಿಗೆ ಬನ್ನಮಂ (ಕವಿರಾ. ೧೨-೭). **೪.** ತುಂಬಿ ಹರಿಯುವ ನೀರು; ತುಂಬುಪ್ರವಾಹ; ಮಹಾಪೂರ : ನೆಱಯ ಕಾಲದ ವೃಷ್ಟಿ ಸುರಿಯಲು . . . ಹೊಕ್ಕನು ದೈತ್ಯನಂದನೆಯ ಸಿರುತಮಂದಿರದೊಳಗೆ (ಸಂಭಪ. ಪರಿ. ೨-೬೦); ಬಗೆಗಚ್ಚರಿಯೆನಿಸಿ ನೆಱ ಬಂದು ಮಿಗೆ ಭೋರ್ಗರೆಯುತಿರ್ದುದು ಮುಂದೆ ಯಮುನಾನದಿಯು ಗುರುವಾಗಿ (ಸಾಳ್ವಭಾ. ೨೧-೧೬); ಇದು ನಾಡಿದು ಕಾಡಿದು ನೆಱಯಿದು ಕೆಱಯಿದು ನೆಲನಿದು ಪೊಲನಿದು . . . ಎಂದು ಬಗೆಯಲ್ಬಾರದಾಯ್ತು (ರಾಮಾಶ್ವ. ೨೨-೨೬). **೫.** ಸೇವೆ (?) : ಇಪ್ಪತ್ತಾರು ಮತ್ತಲ್ ಗಱ್ದೆ ಇನ್ನೂರ ನಯೆಳ್ಕೊಣ್ಡು ದೇವರ್ಗ್ಗೆ ನೆಱಗಂ ಬಿಟ್ಟ ಕೆಱಗಾಲನೂ (ಎಕ. VII, ಶಿಕಾ೨. ೧೯೪-೧೫; 935). (ಗು). **೬.** ಪೂರ್ಣವಾದ; ಸಮಗ್ರವಾದ : 'ನೆಱಗೆಲ್ಲ' ಪರಾ. **೭.** ಅಧಿಕವಾದ : 'ನೆಱಜಾಣ' ಪರಾ. **ನೆರೆ$_6$ : ೨.** "ನೆರೆಯೆನಲ್ ಪೆರ್ಚೆನಿಕ್ಕುಂ" (ಕಶರ. ೫೭). **೪.** ಕರೆ ಬಂದಿತಣ್ಣ, ತೆರೆ ಬಂದಿತಣ್ಣ ನೆರೆ ಬಂದಿತಣ್ಣ ಬಳಿಗೆ (ಹೃದಸ. ೧-೫); ಮೊರೆವ ಮಳೆ ಪಗಲಿರುಳ್ ಕಲ್ಮಣ್ಣು ಕೆಸರಾಗೆ ನೆರೆಯಿಂದ ಮುಗಿಯದಿದೆ ಕಡಲಿತ್ತ ಸಾಲಂ (ಕಾಲೂರ. ೪೫-೬೨); ನದಿಗೆ ನೆರೆ ಬಂದಾಗ ಖೋರಾಸಾನುಪ್ರಾಂತ ಇಡೀ ನೀರಿನಲ್ಲಿ ಮುಳುಗಿರುತ್ತಿತ್ತು (ದಕ್ಷಿನ. ೪೧). **೮.** (ಆಲಂ) ಉದ್ವೇಗ; ಉಬ್ಬರ: ಮತ್ತೆ ನನ್ನ ಮನಸ್ಸಿಗೆ ನೆರೆ ಬಂತು, ನಾನು ವಿಠೋಬನ ಗುಡಿಗೆ ಹೋಗಿ ತಾಸುಗಟ್ಟಲೆ ಅಳುತ್ತ ಕೂಡತೊಡಗಿದೆ (ಸ್ಮೃತಿಚಿ. ೨೦೭). **ನೆಱಿ$_2$ : ೯.** ಮುಕ್ತಾಯ; ಕೊನೆ : ಪುಟ್ಟುತ್ತುಂ ಸಾವುತ್ತುಮೆರಡುಂ ಕಾಲಮುಮನೀ ಮಾರ್ಗದಿಂ ಸಮಯೋತ್ತರವೃದ್ಧಿಯಿಂ ಪರಿಸಮಾಪ್ತಮಾಗೆ ನೆಱಮೆಯ್ದುಸುವುದು ಕಾಲಪರಿವರ್ತನಮೆಂಬುದು (ಸುಕುಮಾ. ೬-೬ ಪ). **೧೦.** ಶಕ್ತಿ; ಸಾಮರ್ಥ್ಯ : ಇನ್ನಮಗೆ ನಿತ್ತರಿಸಲ್ ನೆಱವಿಲ್ಲ [ಪಾಠಾಂ. ನಿಲ್ಲ] . . . ಕೂಟ ನೀರ ದೆಸೆಯಿಲ್ಲದೊಡಲ್ಗಳನೆಂತು ತಾಳ್ದುವಂ (ಆದಿಪು. ೯-೮೯).

**ನೆಱಯಾಗು** = ಹೆಚ್ಚಾಗು; ಅಧಿಕವಾಗು : ಒಪ್ಪುವ ಭೃಂಗಸಂಗವಿಲ್ಲದ ನವಪದ್ಮಿನೀಮುಕುಳದಿಕ್ಕೆಗಮೆನೆ ನೆಱಯಾಗಿ ಶೋಭಿವೆತ್ತುದೊ ಪರಿಶೋಭಿವೆತ್ತಿರೆ ವಿಲಾಸದ ವಿಭ್ರಮದೇಱ್ದ ಕನ್ನೆಯಾ (ಸುಕುಮಾ. ೫-೬೦); ಅಂತರಿತಮುಹರಾದಿಲೋಕದಲಂತರವು ನೆಱಯಾಯ್ತು ಯೋಜನವಂತು ನೂಱುಮೋಲದಿಪ್ಪತ್ತೆರಡುಕೋಟಿಗಳು (ಸಂಭಪ. ೧೧-೧೬).
[<ನೆಱ$_1$./ತಮಿ. ನಿಱೈ; ಮಲ. ನಿಱ; ತೆಲು. ನೆಱ, ನೆರ]

**ನೆಱ$_3$**, ನೆರೆ$_7$, ನೆಱಯೆ (ಅ). ೧. ಪೂರ್ಣವಾಗಿ; ಪೂರ್ತಿಯಾಗಿ : ಪಚ್ಚು ಪರಿಕಲಿಸಿ ಬೆನ್ನಂ ಮುಚ್ಚಿರೆ ಮುಡಿ ಕಳ್ಳಬೆಳ್ಳಿವಟ್ಟಲ್ ಬಾಯೊಳ್ ಬೆಚ್ಚಂತಿರೆ ಸತಿ ಶಶಿಯಂ ಕಚ್ಚಿ ನೆಲಕ್ಕಿೞದ ರಾಹುವಂ ನೆಱ ಪೋಲ್ತಳ್ (ಕಾವ್ಯಸಾ. ೯೬೬ ಶೂದ್ರಕ); ಭದ್ರಬಾಹು ತಪಂಬಟ್ಟು . . . ಸಕಲಶಾಸ್ತ್ರಪಾರಾವಾರಗನಾಗಿ ಎಲ್ಲಾ ಮೋದುಗಳುಮಂ ನೆಱಯೋದಿ ಕಲ್ತು (ವಡ್ಡಾರಾ. ೭೪-೨೪); ಕಾರ್ಯವಶದಿಂ ಕೂರ್ಪಂತೆವೋಲ್ ನಿನ್ನ ನಾಂ ನೆಱ ಕೊಂದೆಂ ಮುಳಿಸಿಂದಮಂಗನೃಪತಿ ಕೌಂತೇಯರೇಂ ಕೊಂದರೇ (ಪಂಪಭಾ. ೧೩-೫); ತೆಱಯದೆ ಮುಚ್ಚಿದ ಪಡಿಗಳ್ ತೆಱದುವು ನೆಱ ಮೋಕ್ಷಗೃಹದ ಸೌಖ್ಯದ ಪಡಿಗಳ್ ತೆಱದವೆನೆ ದಿವದ ಪಡಿಗಳ್ ತೆಱದುವದೇನರಿದೆ ಜೈನಪದಸೇವನೆಯಿಂ (ಸುಕುಮಾ. ೯-೧೯); ಸಕ್ಕದಮಂ ಪೇೞ್ವೊಡೆ ನೆಱ ಸಕ್ಕದಮಂ ಪೇೞ್ಗೆ (ಧರ್ಮಾಮೃ. ೧-೪೨). **೨.** ಚೆನ್ನಾಗಿ : ಕಸವರಮೆಂಬುದು ನೆಱ ಸೈರಿಸಲಾರ್ಪೊಡೆ ಪರವಿಚಾರಮುಂ ಧರ್ಮಮುಮಂ ಕಸವೇಂ ಕಸವರಮೇನುಬ್ಬಸಮಂ ಬಸಮಲ್ಲದಿರ್ದು ಮಾಡುವರೆಲ್ಲಂ (ಕವಿರಾ. ೩-೧೭೬); ದಿವದೊಳ್ ಮೇಲಪ್ಪ ರತ್ನಂಗಳೆಂತಸಿತಂ . . . ಈತನುಮಿಾಗಳ್ ನೆಱ ತೊಟ್ಟು ಬಂದಂ (ಆದಿಪು. ೨-೧೮); ಕೋಣನೊಂದು ಕುದುರೆಯ ನುಂಗಿತ್ತು ಕಟ್ಟಿದ ಪಕ್ಷಿ ನೆಱ ಪಾಱತ್ತು (ಆದಪ. ೩೭-೧೦೨); ಎಲೆ ತೀಡುವ ತೆಂಗಾಳಿಯೆ . . . ಕಾದಲನಂ ತಂದೊಡೆ ನಱುಸುಯ್ಯೆಲರಿಂದಂ ನಿನ್ನ

ನಾಗಳುಂ ನೆಱೆ ಪೊರೆವೆಂ (ಕಬ್ಬಿಕಾ. ೭೧). **೩.** ಹೆಚ್ಚಾಗಿ ; ಅಧಿಕವಾಗಿ ; ಬಹಳವಾಗಿ : ಮದನಹತಕನಿಂದಂ ನೆಱೆ ಮುನ್ನುಱುವೋದಕ್ಕಂ ತಾಂ ಪೇೞಲಱಿಯಳೆ ಮುನ್ನಮೆ ಮದೀಯ ಧೈರ್ಯಚ್ಯುತಿಯಂ (ಕಾದಂಬ. ೭೭) ; ನೆಱೆ ಸಂತೋಷದಿಂ ಕೈನೀರೆಱೆಯಲ್ಕೆಂದಿರ್ಪ ಪದದೊಳತ್ಯಾಶ್ಚರ್ಯಂ ನೆಱೆದಿರೆ ಮದಾಳಿಗಯುಸಂ ಪಱಪಡೆ ಬರ್ಪಂದದಿಂದೆ ನಂದಂ ಬಂದಂ (ಸುಕುಮಾ. ೭-೩೨) ; ಸಂಪಗೆ ಮೊಲ್ಲೆ ಕೇದಗೆ ಸಂದ ಪಾದರಿಯ ಪೂಗಳನಾವಗಂ ನೆಱೆ ಸೂಱೆಗೊಂಡು (ಧರ್ಮಾಮೃ. ೨-೨೪) ; ಪೊಱಮಟ್ಟನಚ್ಚ ಶಿವಲಿಂಗಾರ್ಚಕಂ ನೋಡೆ ನೆಱೆ ತೀವಿ ಪೂರದೊಳಗೆ ಧೂಪಧೂಮಂ ಕೂಡೆ (ತಿರುರ. ದೇ. ೬-೬). **೪.** ಅಪ್ಪಟವಾಗಿ ; ಪಕ್ಕಾ : ಕೋಱಚಾಡೆಲ್ಲರ ಮುಂದೆ ರಚ್ಚೆಗೆಱೆಯುತ್ತಂ ಕಿತ್ತು ಮೆಯ್ಯೆಲ್ಲವಂ ಹಱಿತಿಂದುಳ್ಳ ಸುವಸ್ತುವಂ ಕಡೆಯೊಳೊರ್ವಂಗಿತ್ತು ತಾಂ ಭಾಷೆಯಂ ಬಱಿಗಂಟಿಕ್ಕುವನೆಂದು ತಾಯ ಹೊಸೆಬಿಟ್ಟಿಟ್ಟಿ ಕೊಂಡಾಡುತಂತಿರುವಳ್ ತಾಂ ನೆಱೆ ಸೂಳೆಯ್ಯೆ (ಸೋಮೇಶ. ೭೩).. **ನೆರೆ**$_7$ **:** **೧.** ನೆರೆ ತೆರೆಯುಲುಂಟು ಸೌಂದರ್ಯ ಸತ್ಯ ಸಜ್ಜನಿಕೆ ಇರುವ ನೆಲೆಯು, ಸಿರಿಮನದ ವೈಭವದಿ ಮುಗಿಯಲಿಲ್ಲ ಈಶ್ವರನ ಸೃಷ್ಟಿಕಲೆಯು (ಹೃದಸ. ೧೦-೭) ; ನರುಗಂಪಿದು ಹಾಳೆ, ನೀನೆ ನೆರೆ ತಾಳೆ (ಬಾಸಿಗ. ೮-೨೨). **ನೆಱೆಯೆ :** **೧.** ದೋಷಮುಮನಂತೆ ಗುಣಮುಮಂ ಕಿಱಿದಱೊಳ್ ನೆಱೆಯೆ[ಪಾಠಾಂ. ಅಱಿಯೆ]ಪೇೞ್ದಂ (ಕವಿರಾ. ೧-೧೩೭) ; ರೌದ್ರತರರೂಪಮನೊರ್ವೆಯೆ ವಿಶ್ವರೂಪಮಂ ತೋಱಿದನಿರ್ದರಂ ನೆಱೆಯೆ ಮೋಹಿಸಿ ವೈಷ್ಣವದಿಂ ಮುರಾಂತಕಂ (ಪಂಪಭಾ. ೯-೬೦); ತನ್ನ ಬಂದ ವೃತ್ತಾಂತಮನೆಲ್ಲಮಂ ನೆಱೆಯೆ ಪೇೞ್ದು ಮತ್ತಮಾ ದಿವ್ಯಕಾಂತೆಯನಿಂತೆಂದಂ (ಕಾದಂಪೂ. ೭೯೫) ; ಒಂದು ಬಕಂ . . . ತಪೋರೂಪಮಂ ಕೈಕೊಂಡು ಕಿಱುಮೀಂಗಳೆಲ್ಲಮಂ ನೆಱೆಯೆ ತಿಂದು (ಪಂಚತಂ. ೮೩-೮). **೨.** ಪೊನ್ನ ಮಡಕೆಯೊಳ್ ಬೋನಮನೊಡ್ಡಿ ನೆಱೆಯೆ ತೊಟ್ಟುಟ್ಟು ಮಂಗಳವಸದನಂಗೊಂಡು ದಿವ್ಯಸ್ತ್ರೀ ಬಂದು ನಿಱಿಸಿದೊಡೆ (ಪಡ್ಡಾರಾ. ೮೯-೧೩) ; ಇದಿಚ್ಛೆಯ ಗಣ್ಡರ ನಾಮ್ಪವೆನ್ದು ಪೊಟ್ಟೆಳಿಸುವ ಬೀರರಂ ನೆಱೆಯೆ ಕಾಣೆಮೆ (ಎಕ. III, ಮಂಡ್ಯ. ४೧-೧೬ ; 950) ; ನೆಱೆಯಱಿವ ನೆಱೆಯೆ ಕಾಣ್ಬೀ ತೆಱದಿಂ ಸಮಸಂದು ಸಂದತೀಂದ್ರಿಯಸುಖದತ್ತೆಱಗಿದೆನಿಂ ವಿಷಯಸುಖಕ್ಕೆಱಗೆಂ ಪೞಕೆಯ್ದು ತೊಟ್ಟನುೞವಂತುೞವೆಂ (ಅಜಿಪು. ೨-೮೨); ವಿಪುಲಾಚಲದೊಳ್ ವೀರಜಿನಪಾರ್ಶ್ವದೊಳ್ ಗೌತಮಂ ಗಣಾಗ್ರಣಿ ಮಗಧಾಧಿಪನಱಿಯೆ ನೆಱೆಯೆ ಪೇೞ್ದುದನಪೂರ್ವಮೆನೆ ರಾಮಕಥೆಯನಭಿವರ್ಣಿಸುವೆಂ (ಪಂರಾಮಾ. ೧-೪೨). **೩.** ನೆಱೆಯೆ ಬಸಮೞಿದು ಚಿಂತಿಸಿ ಮಱುಗಿ ಯಶೋಭದ್ರೆ . . . ಕಡುಗಂದಿ ಕುಂದಿ ತೆರಮರದಿರ್ದಳ್ (ಸುಕುಮಾ. ೯-೯೭). [<ನೆಱೆ$_1$]

**ನೆಱೆಕೊಳ್** 'ನೆಱೆಗೊಳ್' ನೋ.

**ನೆಱೆಗಡಿ** (ಕ್ರಿ). ಪೂರ್ತಿಯಾಗಿ ಕತ್ತರಿಸು,—ತುಂಡುಮಾಡು : ಪಾರ್ಥನನಿಬರ ವಿಶಿಖವನು ನೆಱೆಗಡಿದು ಕೆತ್ತುವನನಿಬರೊಡಲುಗಳ (ಕುಮಾಭೀ. ೮-೪೩). [ನೆಱೆ$_3$ + ಕಡಿ$_2$]

**ನೆಱೆಗಡಿತ** (ನಾ). ಸಂಪೂರ್ಣವಾಗಿ ಕತ್ತರಿಸುವುದು,—ಕಡಿಯುವುದು : ತೂಳಿ ತುಳಿದವು ನೂಱುಗಜ ಭೂಪಾಲಕನ ನೆಱೆಗಡಿತದಡವಿಗೆ ಬಾಳೆ ಹೆಮ್ಮರನಾಯ್ತು ಗಡ (ಕುಮಾಗ. ೨-೩೭).
[ನೆಱೆ$_3$+ಕಡಿತ$_2$]

**ನೆಱೆಗಲಿ** (ನಾ). ಮಹಾಶೂರ ; ಕಡುಗಲಿ : ಲೋಕದೊಳುಳ್ಳ ನೆಱೆಗಲಿಗಳನೆಲ್ಲರನು ಮೊಱೆಯಿಡಲೊಯ್ದು ಹೆಣ್ಣುಗಳ ಗರ್ಭವ ಬಲು ಸೆಱೆಮನೆಯೊಳಗಿರಿಸುವನು (ತ್ರಿಪುದಾಂ. ೯೪) ; ಹುಡಿಗುಟ್ಟಿ ಯಜ್ಞಮಂ ಕಡುಹಿನಿಂ ಜಯಸಿರಿಯ ಪಡೆದ ನೆಱೆಗಲಿ ವೀರಭದ್ರೇಶನೊಲವಿಂದೆ ಕುಡುಗೆ ನಿರ್ವಿಘ್ನದೆಸಕವನೀ ಮಹಾಕೃತಿಗೆ (ಸೌಂದಪು. ೧-೭) ; ನೆಱೆಗಲಿ ಜೋದರುವೆರಸು ಉಱುಬಿದನಾ ಗಜಪತಿ ರಾಮನಾಥನ ಮುಱಿದು ಮೋದುವ ತವಕದಲಿ (ಕುರಾಸಾಂ. ೧೬-೪೬). [ನೆಱೆ$_2$ + ಕಲಿ$_2$]

**ನೆಱೆಗಾಣ್** (ಕ್ರಿ). ಕೊನೆಗಾಣು ; ಮುಕ್ತಾಯವನ್ನು ಕಾಣು : ನೆಱೆಗೊಂಡುದು ನಾರಾಚಂ ನೆಱೆಗಾಣಲ್ಕಾರ್ತುದಿಲ್ಲ ಬೀರಕೆ ಬೀಯಕ್ಕೆಱುವ ಬೆಡಂಗನೊಳಾರ್ದೊರೆ ನೆಱೆ ತೋರ್ಕುಮೆ ಶತ್ರುಜನಕವರ್ಥಿಜನಕ್ಕಂ (ಗದಾಯು. ೧-೧೮). [ನೆಱೆ$_2$+ಕಾಣ್]

**ನೆಱೆಗಿವುಡ** (ನಾ). ಪೂರ್ತಿಯಾಗಿ ಕಿವಿ ಕೇಳಿಸದವನು : ಅಪಸ್ಮಾರಗ್ರಹಗೃಹೀತರಂತೆ ವಕ್ರಗ್ರೀವರಾಗಿಯುಂ ನೆಱೆಗಿವುಡರಂತೆ ಕಿವುಂಡುಗೇಳ್ದುಂ (ಪಂಚತಂ. ೧೯-೧). [ನೆಱೆ$_3$ + ಕಿವುಡ(<ಕಿವುಂಡ)]

**ನೆಱೆಗೆಲ್ಲ** (ನಾ). ಪೂರ್ಣವಾದ ಜಯ ; ಪೂರ್ತಿಯಾದ ಗೆಲುವು : ಮಿೞೆ ಮದಾಜ್ಞೆಯಂ ಗಿರಿಯನೇಱಿದ ನಿನ್ನಯ ನೆತ್ತಿಗೀಗಳಿಂತೇಱಿಸಿ ಜೀವಮಂ ಜವನ ಲೆಕ್ಕದೊಳೇಱಿಸಿ ಮತ್ತೆ ನಿನ್ನನಾನೇಱಿಪೆನೆನ್ನ ತೋಳ್ಗೆ ಬೞಿಯಂ ನೆಱೆಗೆಲ್ಲಮನಲ್ಲದಂದು ಬಲ್ಪೇಱದೆನುತ್ತವಂ ತಿರಿಪಿದಂ ನಿಜನಿಷ್ಠುರಕಾಷ್ಠದಂಡಮಂ (ಚಂದ್ರಪು. ೫-೭೪). [ನೆಱೆ$_2$+ಗೆಲ್ಲ]

**ನೆಱೆಗೊಳ್, ನೆರೆಗೊಳು, ನೆಱೆಕೊಳ್** (ಕ್ರಿ). **೧.** ಎಲ್ಲವನ್ನೂ ಆಕರ್ಷಿಸು,—ಸೆಳೆ : ನೆಱೆಗೊಳೆ ಗಾಡಿ ನೋೞ್ಪ ಬಗೆ ಬರ್ಪುದುಂ (ಪಂಪಭಾ. ೪-೭೬). **೨.** ತುಂಬಿ ಬರು ; ಪೂರ್ಣತೆಯನ್ನು ಪಡೆ : ಇದು ಲೀಲಾಂದೋಳಮಿಂದೋಳದ ದನಿ ನೆಱೆಗೊಳ್ವನ್ನೆಗಂ ಪಾಡಲೆಂದೇಱಿದಳಂ ತೂಗುತ್ತುಮಿರ್ದೆನ್ನಯ ಪರಿಜ (ಆದಿಪು. ४-೯). **೩.** ಪೂರ್ಣಗೊಳ್ಳು ; ಪೂರ್ತಿಯಾಗು : ನೆಱೆಗೊಂಡುದು ನಾರಾಚಂ ನೆಱೆಗಾಣಲ್ಕಾರ್ತುದಿಲ್ಲ (ಗದಾಯು. ೧-೧೮) ; ನೆಱೆಗೊಂಡು ತಾನ್ ಮುಗಿದ ಮುನ್ನಮೇ ಬಾೞ್ ಕೊಯ್ದು ಬರ್ಪೆನ್ (ಅಂತಿಗೊ. ४೧-೮४४). **೪.** ಪೂರ್ಣವಾಗಿ ನಡು,—ನಾಟು : ತೆಱಪುವೆತ್ತು ಪಾಪೇಭಕಂಠೀರವನೆಚ್ಚೊಂದಪೂರ್ವಸಾಯಕಂ ಚಿತ್ರಾನೀಕನಂ ನೆಱೆಗೊಳ್ವುದು (ಶಾಂತಿಪು. ४-೨೩ ಪ) ; ಮುಂದಱಿಯದೆ ಸೀತೆಯಂ ಮದನನಾಕೆಯ ದೂಸಱನೆನ್ನ ನೆಚ್ಚಪಂ ನೆಱೆಗೊಳೆ ಪೂವಿನಂಬಲಗಿನಂಬುಗಳೆಂಬಿನಂ (ಪಂರಾಮಾ. ೯-೧೬೦) ; ನೆಱೆಗೊಂಡು ತೊನೆವ ಸರಲಿಂ ನೆಱಲ್ದು ರಥದೊಳಗೆ ಬಿೞ್ದು ಚಕ್ರಧರಂ ಮೆಯ್ಮಱೆದು ಗುಹಾಂತರದೊಳ್ ಮಿಗೆ ಮಱಸುಂದಿದ ಪುಲಿಯ ನಾಗಳಿನಿಸಂ ಪೋಲ್ತಂ (ಕಾವ್ಯಾಪ. ४४೮) ; ನೆಱೆ[ಪಾಠಾ.ಱ]ಗೊಂಡಿರೆ ಪೂಗಣೆಯ್ಯೆದುಮೊರ್ವಳ್ . . . ಪಲುಂಬಿದಳ್ (ಚಂದ್ರಪು. ೮-೬४). **ನೆರೆಗೊಳು :** **೫.** ತುಂಬಿಕೊಳ್ಳು ; ಭರ್ತಿಯಾಗು; ತುಂಬು : ನೆಗೆದೊಡನೆ ನೆರೆಗೊಳುವ ನೇತ್ರಾಂಬುತೀರ್ಥಗಳ ಹೊಗೆವೊಳಗನೇರೆ ಬಹ ದಿವ್ಯಭಾಗಗಳ (ಮಲಿದೇ. ೩४-೫). **ನೆಱೆಕೊಳ್ :** **೧.** "ನೆಱೆಕೊಳ್—ಸರ್ವಸ್ವಹರಣೇ, ಮರ್ಮಭೇದೇ ಚ (ವರ್ಮಭೇದೇ ಚ)(ಚುಚ್ಚು)" (ಶಮಧಾ) ; ಎಮ್ಮುಳ್ಳುದಂ ನೆಱೆಕೊಂಡೆಮ್ಮಯ ಬಾೞ್ವೆಯೊಳ್ ನಿಱುಸುವಂ ನೀಂ (ಪಂಪಭಾ. ೬-೩೦). [ನೆಱೆ$_2$ + ಕೊಳ್$_1$]

**ನೆಱೆಜವ್ವನ** (ನಾ). ತುಂಬುಯೌವನ ; ಪೂರ್ಣಯೌವನ : ನೆಱೆಜವ್ವನವೈಸೆ ನಿಂದ ಜವ್ವನವಲ್ಲ ಕುಱುಹಱಿಯಳು ರತಿಸುಖದ ಹೊಱಗೆಗಾಣಿಸಿ ನೇಮವಲುಗುತಿದ್ದಳು ಮರ್ಘು ತಱಿಮಿಂಡಿಯಾದರಿನ್ನೆಂತೊ (ಭರಚ. ೯-೧೦೫) ; ಮಲ್ಲಿಗೆಗೆ ಮೊಳೆಜವ್ವನಂ ಸುರಯಿಗೆ ನೆಱೆಜವ್ವನಂ . . . ತಾವರೆಗೆ ಎಱಂಜವ್ವನಮೊದವಿತ್ತು (ರಾಮಾಶ್ವ. ೧೧४-೧೯). [ನೆಱೆ$_2$+ಜವ್ವನ]

**ನೆಱೆಜಾಣ** (ನಾ). ಅಧಿಕವಾದ ಜಾಣತನವುಳ್ಳವನು ; ಬಹುಜಾಣ : ಅಧಿಕ ಸುಜಾಣರ ಜ್ಞಾನಲೋಚನಕೆ ಕಾಣ ಬರ್ಪಂತೆ ಕನ್ನಡ

ವಾಕ್ಯದೆ ನೆಱೆಜಾಣ ಸತ್ಕೃತಿಯ ವಿಸ್ತರಿಸು (ಮೋಹತ. ೩-೧); ನುಡಿ ಜಾಣ ನಡೆಜಾಣ ನೆಱೆಜಾಣ . . . ಜಗಕೆ ಸುಜಾಣ (ಭರಚ. ೭-೭೬). [ನೆಱೆ$_2$+ಜಾಣ]

**ನೆಱೆಜಾಣೆ** (ನಾ). ಬಹಳ ಬುದ್ಧಿವಂತೆ; ಅಧಿಕವಾದ ಜಾಣ್ಮೆಯುಳ್ಳವಳು : ನೆಱೆಜಾಣೆ ನಿನ್ನ ಕೀರ್ತನೆಗೆಯ್ವೊಡಹಿಲೋಕದೆಱೆಯಂಗೆ ಮತಿ ಮಂದವಹುದು (ಮೋಹತ. ೨೬-೨೭). [ನೆಱೆ$_2$+ಜಾಣೆ]

**ನೆಱೆದಾತ** (ನಾ). ಬಹಳವಾಗಿ ದಾನಮಾಡುವವನು; ನೆಱೆ ದಾತ ಬಸವಣ್ಣ ತಂದೆ ಪಟ್ಟೇಶ್ವರದೊಳಿರುತ ತನ್ನೆರಡು ಮಕ್ಕಳ ಶಿರವನರಿದು ಭಾಸುರ ವೀರಭದ್ರೇಶಗಾರತಿಯನೆತ್ತಿ . . . ಮೆಱೆದಂ (ಗುರುಚಾ. ೧೦-೪೪). [ನೆಱೆ$_3$+ದಾತ$_2$]

**ನೆಱೆದಿಂಗಳ್,** ನೆಱೆದಿಂಗಳು (ನಾ). ೧. ಪೂರ್ಣವಾಗಿ ತುಂಬಿದ ಚಂದ್ರ; ಪೂರ್ಣಚಂದ್ರ : ಫುಲ್ಲಶರಂ ಬಸಂತದ ಪುಗಿಲ್ ನೆಱೆದಿಂಗಳ ತಣ್ಪಿಸಿಲ್ . . . ತುಂಬಿಯ ಗೇಯಮೆಂಬಿನಂ ಬಲ್ಲವರಂ ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ (ಮಲ್ಲಿಪು. ೧-೪೪); ಎತ್ತಿದ ಮುತ್ತಿನ ಸತ್ತಿಗೆಯೆ ನೆಱೆದಿಂಗಳ್ಗೆಯುಂ ಬಳಸಿ ಪೊಳೆವ ದುಗುಲದ ಕಾಂಡಪಟಮೆ ಚಂದ್ರಿಕಾಪಟಳಮಾಗೆಯುಂ (ವರ್ಧಪು. ೭-೨ ವ); ನೆಱೆದಿಂಗಳಂ ಪೋಲ್ವ ತರುಣಿಯರ ಚೆಲ್ವ ನಗೆಮೊಗದ ಮುಂದೀಗ ತಾವರೆಯಾದುವೆಂಬಂತೆ ಪೆಣ್ಗಳಾಸ್ಯಕೆ ಸೋಲ್ದುವಾ ಕೊಳದ ಕಮಲಂಗಳು (ಜೈಮಿಭಾ. ೩೦-೯). ೨. ಪೂರ್ಣಮಾಸ; ಪೂರ್ತಿ ತಿಂಗಳು : ಕರಕರೆಯೇಕೆ ಸಾಕು ಚಿಕದೇವನೃಪಾಲಕನೊಲ್ಮೆವೆತ್ತ ನಿನ್ನರೆ ನೆಱೆದಿಂಗಳೊಳ್ ಮದುವೆಗೆಯ್ದಪೆಂ (ಅಪ್ರತಿ. ೨೩-೫). **ನೆಱೆದಿಂಗಳು :** ೧. ಹೊಗರೊಗುವ ನೆಱೆದಿಂಗಳೊಲು ಮೊಗ ಹೊನ್ನ ಸೆಳೆನಡು ತುಂಗಕಟಿ ಪೊಂಬಾಳೆದೊಡೆ . . . ಲತಾಂಗರುಚಿ ಕಣ್ಮನವ ಸೋಲಿಸಿದವು ಮನೋಭವನ (ಸಾಳ್ವಭಾ. ೨೮-೨೬); ಅಮೃತವಾರ್ಧಿಯು ಪೊರೆಯೊಳಿರ್ಪ ನೆಱೆದಿಂಗಳಂತೆ . . . ತೋರ್ಪ ಶಿಶುವಂ ಕಂಡು (ಚಿಬಪು. ೫-೨೩). [ನೆಱೆ$_2$+ತಿಂಗಳ್]

**ನೆಱೆದಿಂಗಳು** 'ನೆಱೆದಿಂಗಳ್' ನೋ.

**ನೆಱೆದೊಱೆ** (?) (?). (?) : ನೆಱೆದೊಱೆ ಕಾದಿದಂ ಕಡುಗಲಿಯಂ ಪೋಲ್ತುಗವೞೆ × × ತಿಳಕಂ (ಎಕ. IV, ನಾಗಮಂ. ೨೩-೪; 977). [?]

**ನೆಱೆನಂಬು,** ನೆರೆನಂಬು (ಕ್ರಿ). ಪೂರ್ತಿಯಾಗಿ ನಂಬು, — ನೆಚ್ಚು; ಸಂಪೂರ್ಣವಾಗಿ ವಿಶ್ವಾಸವಿಡು : ನೆಱೆನಂಬೊ ನೆಱೆ ನಂಬೊ ದಾಸದುಗ್ಗಳಿಯಂತೆ (ಬಸವ. ೧೪೯); ಗುರುವನು ನೆಱೆ ನಂಬಿದಡಾತನೆ ಪರಮಸುಖಿ (ಶಿವಗೀ. ೪೬೫); ಗುರುವೆಂದು ವಿನಯ ಗೂಡಿರ್ಪುದಿನಿಯನೊಳು ನೆರವೆಂದು ನೆಱೆ ನಂಬುವುದು (ಹದಿಬ. ೩-೪೦). **ನೆರೆನಂಬು :** ತೆಲುಗು—ತಮಿಳಿನ ಅಭಿಮಾನಿಗಳು ಹೇಳುವ ವ್ಯುತ್ಪತ್ತಿಯನ್ನು ನೆರೆನಂಬಿ ಅವುಗಳ ಜಾಡು ಹಿಡಿದು ನಡೆದುದರಿಂದ ಇವರ ನಿರುಕ್ತವು ಕೂಡ, ಅಭಿಮಾನಯುಕ್ತವಾಗಿದ್ದರೂ ದಾರಿ ತಪ್ಪಿದೆ (ದ್ರಾವಿವಿ. ೯೧). [ನೆಱೆ$_3$+ನಂಬು]

**ನೆಱೆನಗೆ** (ನಾ). ಹೆಚ್ಚಾದ ನಗು; ಗಹಗಹಿಕೆ : ನೆಱೆನಗೆಯ ನಯನಾಂಬುಗಳ ಖಳನೆಱೆಗಲತಿಸುಮಾನವೇನೆಂದಸುರ ಬೆಸಗೊಂಡ (ಕುಮ್ಯಾಅ. ೧೨-೧೪). [ನೆಱೆ$_2$+ನಗೆ]

**ನೆಱೆನುಡಿ$_1$** (ಕ್ರಿ). ಚೆನ್ನಾಗಿ ಹೇಳು, — ತಿಳಿಸು : ಅಱಿದಿಹುದು ನೀನೆಂದು ರಾಯಂಗಱುಹಿ ಭೀಮಾದಿಗಳಿಗುಚಿತವ ನೆಱೆನುಡಿದು ಮರುಪದಿಯ ಮನ್ನಿಸಿ ಮರಳಿದನು ಪುರಕೆ (ಕುಮ್ಯಾಅ. ೧೫-೩೦). [ನೆಱೆ$_3$+ನುಡಿ$_1$]

**ನೆಱೆನುಡಿ$_2$** (ನಾ). ಪರಿಪೂರ್ಣವಾದ ಮಾತು; ಅರ್ಥದಿಂದ ತುಂಬಿದ ನುಡಿ : ನೆಱೆನುಡಿಯ ಮಾನಿಸರ ಪೆರ್ಮೆಯನ್ ನೆಲದೊಳ್ ಮಱೆನುಡಿ ತೋಱು ಬಿಡುಗುಂ (ಕಃಹಳ್. ೧-೩-೮). [ನೆಱೆ$_2$+ನುಡಿ$_2$]

**ನೆಱೆನೂರ್** (ನಾ). ಒಂದು ಊರಿನ ಹೆಸರು : ಮಿಾಯಮಾರ ಮೂಲಿಗ ಕೆಱೆಯ ಹಳ್ಳಿಯ ಗುಲುಗಣ್ಣ ನೆಱೆನೂರಱುವಿನೊಳ್ಮಾದಿ ಸತ್ತ (ಎಕ. VIII, ಸೊರಬ. ೨೧೬-೮; 903). [?+ಊರ್]

**ನೆಱೆನೋಟ** (ನಾ). ತುಂಬುನೋಟ; ಪೂರ್ಣದೃಷ್ಟಿ : ಕಿಱು ನೋಟ ವಿಟನಿಂಗೆ ಅರೆನೋಟ ವಿದುಷಕಗೆ ನೆಱೆನೋಟ ನಾಗರಿಕಗೆ (ಸರ್ವಜ್ಞ. ೧೬೩೨). [ನೆಱೆ$_2$+ನೋಟ]

**ನೆಱೆಪು** 'ನೆಱಪು' ನೋ.

**ನೆಱೆಮಲವತ್ತಿ** (ನಾ). (?) : ಹೊಱವಾಱೊಳವಾಱು ಮಗ್ಗದೆಱೆ ಕಾಳಬೋವನ ಹಳ್ಳಿಯ × × × ಯಿನಿತಱ ಮತ್ತಂತು ಮನೆಸುಂಕ ನೆಱೆಮಲವತ್ತಿಯ ಸುಂಕವಿನಿತಂ . . . ಬಲ್ಲಯುಂ ಮನವೊಸದು ಭೋಗವಸದಿಯೊಳು ಜಿನಪೂಜೆಗೆ ಭಕ್ತಿಯಿಂದಿದಾ × × × (ಮೈಆರಿ. ೧೯೪೦, ೨೯-೪; 1173). [?]

**ನೆಱೆಮ್ಮೆ** (ನಾ). ಒಬ್ಬಾತನ ಹೆಸರು (?) : ಕಾದುವೆಮೆನ್ದು ಪರಿಚ್ಛೇದಿಸಿ ನಡವಾಗಳ್ದೆ ಬಟ್ಟದೆಱೆ ನೆಱೆಮ್ಮೆ ಕಲಿಗಳ್ಗನಂಬೋ . . . ಕಾದಿ ಸತ್ತೋಂ (ಸೌಇಇ. XI-i, ೨೧-೭; 893). [?]

**ನೆಱೆಯಗಲ್ತೆ** (ನಾ). ಸಂಪೂರ್ಣವಾಗಿ ತ್ಯಜಿಸುವುದು; ಪೂರ್ತಿಯಾಗಿ ತ್ಯಾಗ ಮಾಡುವುದು : ನಿಶ್ಶೇಷ ವಿಶ್ಲೇಷತಶ್ಚ—ನೆಱೆಯಗಲ್ತೆಯತ್ತಣಿಂದಮುಂ (ಜೀವಸಂ. ೧೬೬-೨೩). [ನೆಱೆ$_3$+ಅಗಲ್ತೆ]

**ನೆಱೆಯಱಿ** (ಕ್ರಿ). ಚೆನ್ನಾಗಿ ತಿಳಿ; ಪೂರ್ತಿಯಾಗಿ ಅರಿತುಕೊಳ್ಳು : ನೆಱೆಯಱಿದೆನಂತರಿಕ್ಷಸ್ವರಭೌಮವ್ಯಾಜನಾಂಗಚಿಹ್ನ ಸ್ವಪ್ನೋದ್ಧುರ ಲಕ್ಷಣಮೆಂದೇ ಬಿತ್ತರಿಪಷ್ಟಾಂಗದ ನಿಮಿತ್ತ ಶಾಸ್ತ್ರಾವಳಿಯಂ (ಶಾಂತೀಶ್ವ. ೫-೫೪); ಅಱಿವನಱಿಯದ ಗುರುವು ಪರವನಱಿಯದ ಶಿಷ್ಯ ನೆಱೆ ಯಱಿಯದೋದು ಇವು ಮೂಱು ಅಂಧಕನು ತಿರುಗಾಡಿದಂತೆ (ಸರ್ವಜ್ಞ. ೮೫). [ನೆಱೆ$_3$+ಅಱಿ]

**ನೆಱೆಯಱಿವು** (ನಾ). ಸಂಪೂರ್ಣಜ್ಞಾನ, — ವಿವೇಕ : ನೆಱೆಯಱಿವ ನೆಱೆಯೆ ಕಾಣ್ಬೇ ತೆಱದಿಂ ಸಮಸಂದು ಸಂದತೀಂದ್ರಿಯ ಸುಖದತ್ತ ಜಗಿದೆನಿಂ ವಿಷಯಸುಖಕ್ಕೆಱಗೆಂ (ಆದಿಪು. ೨-೮೨). [ನೆಱೆ$_2$+ಅಱಿವು]

**ನೆಱೆಯಿಸು** (ಕ್ರಿ). ಮುಗಿಸು; ಪೂರ್ಣಗೊಳಿಸು; ಪೂರ್ತಿ ಮಾಡು : ಅನೇಕಭವಪರ್ಯಾಯಪರಿಭ್ರಮಣದಿಂ ಬಂದು ಪುಟ್ಟುತ್ತುಂ ಕಡೆಯೊಳುತ್ಕೃಷ್ಟಾಯುಷ್ಯಮನೆಯ್ದಿ ನೆಱೆಯಿಸುವ ನೆಱವಿ ಭವಪರಿವರ್ತನಮೆಂಬುದು (ಸುಕುಮಾ. ೬-೬ ವ); ಒಡನೆ ತದ್ಭಾಷೆಯು ಕೊಱತೆ ನೆಱೆ [ಪಾಠಾಂ. ಱ]ಯಿಸುವನೀಗಳ್ಗೆ (ಬಸವಪು. ೩೬-೧೩). [ನೆಱೆ$_1$+-ಇಸು$_3$]

**ನೆಱೆಯೆ** 'ನೆಱೆ$_3$' ನೋ.

**ನೆಱೆವಣಿಗೆ** 'ನೆಱವಣಿಗೆ' ನೋ.

**ನೆಱೆವಳಿಗೆ** 'ನೆಱವಣಿಗೆ' ನೋ.

**ನೆಱೆವೆಱೆ,** ನೆರೆವೆರೆ (ನಾ). ಪೂರ್ಣ ಚಂದ್ರ; ಹುಣ್ಣಿಮೆಯ ಚಂದ್ರ : "ನೆಱೆವೆಱೆಯೆಂದು ಪೂರ್ಣಚಂದ್ರಂ" (ಕಶಸಾ. ೪೮-೨೭); ನೆಱೆವೆಱೆಯನು ನುಂಗಿತು ಕತ್ತಲೆ (ಜೀವಂಸಾಂ. ೪-೪೯); ನೆಱೆವೆಱೆಯಂ ನಿಜವದನಂ ಜಱೆಯೆ ಮುಗುಳ್ನಗೆಯ ಕಾಂತಿ ತಿಳಿಜೊನ್ನದೊಳೀಡಿಱಿಯೆ (ವಿಷ್ಣುಪು. ೫-೩-೧೨೯). **ನೆರೆವೆರೆ :** ನೆರೆವೆರೆಯ ಸಾನ್ದ್ರಚನ್ದ್ರಿಕೆಯ ಲಲಿತಾವರಣವನ್ನು ಸಂತಸದಲಂಪಿನ ಕ್ಷೀರಸಾಗರದ ರಂಗತ್ತರಂಗಗಳ ಕಳಿತ ಕಳಕಳವು ಡಂಗುರಿಸಿ ಬಿಟ್ಟಾಡಿ ಬಿಡುವುದಿಲ್ಲವೆ? (ಮಂತ್ರಶ. ೩೨-೨೫).

ನೆೞಿವೆೞಿಯಿರುಳ್ = ಪೂರ್ಣಚಂದ್ರನಿರುವ ರಾತ್ರಿ ; ಹುಣ್ಣಿಮೆಯ ರಾತ್ರಿ : ಮನೋಜ್ಞಮಾಗಿ ನೆೞಿವೆೞಿಯಿರುಳೊಳ್ ತಾಂ ತಮಗಿಱಿತಂದು ಬಿನದದಿಂ ವಿಹರಿಪಚ್ಚರಿಯರ ನೆಲೆಯ ಸಿಂಗರದ ಮಾಟದ ಬೆಳ್ಳಿವೆಟ್ಟುಗಳ ತಪ್ಪಲ್ಗಳೆಂಬಂತಿರೆ . . . ತೋರ್ಪ ಸೌಧಂಗಳಿಂ (ರಾಮಾಶ್ವ. ೧೦೨-೭). [ನೆೞಿ$_2$ + ಪೆೞಿ]

**ನೆೞಿವೆೞಿವೊಗ** (ನಾ). ಪೂರ್ಣಚಂದ್ರನಂತಿರುವ ಮುಖ ; ಸುಂದರವಾದ ಮುಖ : ನೆೞಿವೆೞಿವೊಗದಬಳೆಯ ಸುಜ್ಞೊರಲತಿ ರಂಜನೆವಡೆಯಿತ್ತು (ಜಯಕಾ. ೮-೫೧) ; ನೆೞಿವೆೞಿವೊಗದ ಬಾಲೆಯ ಕೀರ್ತನೆಗೆಯ್ದು ಕೞಿಗೊರಲನ ರಾಣಿ ಮೆಚ್ಚಿ ಮಱಿಯದೆ ವಸ್ತ್ರಭೂಷಣ ಪರಿಮಳದುಡುಗೊಱೆಯಿತ್ತು ಕುಸ್ತರಿಸಿದಳು (ಮೋಹತ. ೨೫-೩೨). [ನೆೞಿವೆೞಿ + ವೊಗ]

**ನೆೞಿವೈರಿ** (ನಾ). ಪ್ರಬಲ ಶತ್ರು ; ಕಡುವೈರಿ : ಕುರುಪತಿಯ ನೆೞಿವೈರಿ ಭೀಮನ ಸೀಳಲೇಳೆಂದ (ಕುವ್ಯಾಗ. ೫-೨೯). [ನೆೞಿ$_2$ + ವೈರಿ]

**ನೆೞಿಸಿಂಹ** (ನಾ). ವಯಸ್ಸಿಗೆ ಬಂದ ಸಿಂಹ ; ಪ್ರಾಯದ ಸಿಂಹ : ಮಱಿಸಿಂಹನೆಂಬರು ನೆೞಿಸಿಂಹನೆಂಬರು ಮಱಿ ತಾನೆ ನೆೞಿಸಿಂಹವಾಯ್ತು (ಭರಚ. ೬೯-೪೬). [ನೆೞಿ$_2$ + ಸಿಂಹ]

**ನೆೞಿಸು** 'ನಿಱಿಸು$_1$' ನೋ.

**ನೆೞಲ್**$_1$, ನೆರಳ್$_2$, ನೆರಳು$_2$, ನೆಳಲ್, ನೆಳಲು$_1$ (ನಾ). ೧. (ಮನುಷ್ಯ, ಮರ, ಗಿಡ, ಕೊಡೆ ಮುಂತಾದುವುಗಳ) ಛಾಯೆ : "ನೆೞಲ್ = ಆತಪತ್ರಾದಿ ಛಾಯೆ ; ಜಳದರ್ಪಣ ಪ್ರತಿಬಿಂಬಂ ; ಒಂದು ಮರಂ" (ಶಮದ. ಪರಿ. ೧) ; ಜಲದದ ನೆೞಲುಂ ಪರವುಂ ವಿಲಾಸಮುಂ ಬೆಳಗುವುದಿತವಿದ್ಯುಲ್ಲತೆಯುಂ ನೆಲಸವು ಚಲಂಗಳಾದಂ ವಿಲಾಸಿನೀಜನದ ನಲ್ಮೆಯುಂ ಸಂಗಮುಮುಂ (ಕವಿರಾ. ೩-೯೭); ಸುರಕುಜದ ನೆೞಲೊಳಂಗಣ ದೊಳೀನುಮಲಪಿಲ್ಲದೆ ಕಟ್ಟಿರೆ ಕಾಮಧೇನು (ಪಂಪಭಾ. ೪-೧೦) ; ಬಿಸಿಲೊಳ್ ನಿಂದೊಡೆ ನೆೞಲತ್ತ ಸಾರಿಮೆಂದೆಂದುಮಱಿವನಲ್ಲಂ ನಮ್ಮಂ (ಸುಕುಮಾ. ೨-೬೫) ; ಕಾಯಕ್ಲೇಶಮದೆನ್ನೊಳಾಗೆ ಜಗದೊಳ್ ಮರ್ಬುರ್ಬಿ ಮೈವೆರ್ಚಿದನ್ಯಾಯಂ ಕೈಮಿಗಲೆನ್ನ ಕಾಂತನನಲಂಪಿಂ ಕೂಡಿದಳ್ ಪಶ್ಚಿಮಾಶಾಯೋಷಿತ್ಕುಟಲಾತ್ಮೆಯೆಂದು ದಿವಸಶ್ರೀ ಬೈದು ಬೆಂಬತ್ತಿದಳ್ ಛಾಯಾಸಂಕುಳದಿಂದೆನಲ್ಕೆ ಪಡುವಲ್ ಮುಂತಾದುವೆಲ್ಲಾ ನೆೞಲ್ (ದಶಕು. ೪-೧೪). ೨. ಪ್ರತಿಬಿಂಬ ; ಪ್ರತಿರೂಪ : ಬಾಳದಿನೇಶಬಿಂಬದ ನೆೞಲ್ ಜಲದೊಳ್ ನೆಲಸಿತ್ತೊ (ಪಂಪಭಾ. ೧-೯೬) ; ತೊಲಗಿಪಳೆ ರಹಸ್ಯಶ್ರವಣಲಜ್ಜೆಯಿಂ ತನ್ನ ಪೊಳೆವ ನೆೞಲುಮನೆನೆ ನಿರ್ಮಲಮಣಿಕುಟ್ಟಿಮಮಂ ಕೋಮಲೆ ಚರಣಾಂಗುಷ್ಠದಿಂದೆ ಬರೆಯುತ್ತಿರ್ದಳ್ (ಕಾದಂಬ. ೨೪೯) ; ತಿಳಿದಿರ್ದ ಕೊಳದ ಜಲದೊಳ್ ಪಳಚ್ಚನೆಸೆದಿರ್ದ ತನ್ನ ನೆೞಲಂ ತನ್ನೋಪಳೆಗೆತ್ತು ಮುಟುಗಿ ಕಾಣದೆ ತಳವೆಳಗಾಗಿರ್ದುವಿರುಳ ವಿರಹವಿಹಂಗಂ (ಅಜಿಪು. ೬-೬೨) ; ನೀರೊಳಗಿರ್ದ ನಲ್ಲಳ ನೆೞಲಂ ಕಂಡು ನಲ್ಲಳೆಂದು ಮತಿಗೆಟ್ಟು ಪಾಯ್ದು ಸಾವ ಸಾಧುವಿಟನಂತೆ (ಧರ್ಮಾಮೃ. ೧೦-೫೪). **ನೆರಳ್**$_2$ : ೧. ತರುಗಳ ನೆರಳ್ಗಳಂ [ಪಾಠಾಂ. ನೆಳಲ್ಗಳಂ] ಸೇರತೊಡಗಿತು ಜನಂ (ಜೈಮಿಭಾ. ೧೮-೨೩); ಕಾಡ ಹೂವಿನ ನೆರಳ್ ನೆಲದ ಪುರುಳಿನ ಪುರುಳ್ ಪಡೆದ ಬೀಯದ ತಿರುಳ್ (ಕಾಲೂರ. ೬೧-೧೦೩). **ನೆರಳು**$_2$ : ೧. ನೆರಳಿಲ್ಲದೆ ನೀರಿಲ್ಲದೆ ಬೇರಿಲ್ಲದೆ ಸಸಿ ಹುಟ್ಟಿ ಹೂವಿಲ್ಲದೆ ಕಾಯಿಲ್ಲದೆ ಫಲ ತಂದಿತು (ಪುರಂದ. ೧-೩೭-೧) ; ಒಂದು ಠಾವಿನೊಳೇಕವೃಕ್ಷದ ನೆರಳಿ. [ಪಾಠಾಂ. ಳಲಿ]ನಲಿ ನವಕುಸುಮ ದಿಕ್ಕೆಯಲಿ ಆ ಕಮಲಜನ ತುರಗ ನಿದ್ರಾವ್ಯಾಕುಲದಿ ಮಲಗಿರಲು (ನಳಚ. ೨-೧೫) ; ತಪ್ಪ ಸಾಧಿಪ ನೃಪನೊಳಿಪ್ಪವನೆ ಕಡುಹೆದ್ದ ಸರ್ಪನುಱಿಹೆಡೆಯ ನೆರಳಲ್ಲಿ ಸೇರಿದ [ಪಾಠಾಂ. ನೆಳಲೆಂದು ಸಾರಿದ] ಕಪ್ಪೆಯಂತಕ್ಕು (ಸರ್ವಜ್ಞ. ೭೭೭) ; ಆಲಕ್ಕೆ ಹೂವಿಲ್ಲ ಸಾಲಕ್ಕೆ ಕೊನೆಯಿಲ್ಲ ಜಾಲಿಯ ಮರವು ನೆರಳಲ್ಲ (ಜಗೀತೆ. ೮೮). ೨. ಒಂದು ನಾಯಿ ಮಾಂಸದ ಕರಣೆಯನ್ನು ಕಚ್ಚಿಕೊಂಡು, ಹಳ್ಳ ದಾಟುವಾಗ ನೀರೊಳಗೆ ತನ್ನ ನೆರಳು ಕಂಡಿತು (ಮುಂಬಯಿ. ೨-೪) ; ನೆರಳು ನೋಡಿ ನಿಜಾಮರೆತ (ಗಾದೆ). ೩. (ಆಲಂ) ಆಶ್ರಯ ; ರಕ್ಷಣೆ ; ಆಸರೆ : ನೀರರು ಪರಸ್ಪರರ ತಿರುಳು ನೆರಳು, ಪಾಡುಪಟ್ಟಿತು ಕರುಳು, ರಾಗರಂಜಿತ ಕೊರಳು, ತಂತಿಯಲಿ ಮೂಡಿಸಿತು ಒಲೆದ ಬೆರಳು (ಅರಳು. ೪೦೧-೨) ; ಅವನ ಜೀವನವೇ ಅವರಿಂದ ನೆರಳು ಕಂಡಿತ್ತು (ಬೆಟ್ಟಹೊ. ೬೫). ೪. ಅನುಯಾಯಿ; ಹಿಂಬಾಲಕ: ನಾನು ನಿಮ್ಮ ಪ್ರಜೆ; ನಿಮ್ಮ ನೆರಳು(ಹಾಪುತ್ತ. ೧೭೦). ೫. ಬಳಿ ; ಸಮೀಪ ; ಹತ್ತಿರ : ಕೆಟ್ಟ ಹುಡುಗರ ನೆರಳಿಗೆ ಸಹ ಹೋಗಬಾರದು (ಮುಂಬಯಿ. ೪-೧) ; ಚಂದ್ರಭಾಗಕ್ಕನ ಕೈಹಿಡಿಯುವುದುಳಿಯಲಿ, ಅವಳ ನೆರಳಿಗೆ ಬರುವ ಯೋಗ್ಯತೆಯಾದರೂ ಇತ್ತೆ . . . ಇವನಿಗೆ ? (ಮೂರುದಾ. ೬೪). **ನೆಳಲ್** : ೧. ಮರದ ನೆಳಲಲಿದ್ದು ತನ್ನ ನೆಳಲನಱಿಸಬಹುದೆ (ಬಸವ. ೩೩೩) ; ಮುಗಿಲ ನೆಳಲು ವಿಂದ್ರಚಾಪವಚಿರವೆಂದು ಕಂಡುದಿಲ್ಲ ನಿತ್ಯವೆಂದು ನಿರುತವೆಂದು ಹತ್ತೆ ಸಾರುತಿರ್ದನಯ್ಯ (ಹಂಪರ.ಹ. ೫೧೧-೮) ; ಪಾರಿಜಾತಂ ನೆರೆಯೊಳಿರುತಿರೆ ಭೂರುಹಂಗಳ ನೆಳಲನರ್ಥಿಸಿ ಸಾರಿದನವೊಲು (ಬಸಪು. ೬೦-೪೬) ; ಬಂದು ವಟಕುಜದಡಿಯಲಿನಿಬರು ನಿಂದು ದುರುಪದಿ ಸಹಿತ ನೆಳಲೊಳಗಂದು [ಪಾಠಾಂ. ಬಳಲಿಕೆಯಿಂದ] ವಿಶ್ರಮಿಸಿದರು (ಕುವ್ಯಾವಿ. ೧-೨). ೨. ವಾರಿಧಿ ಬತ್ತುಗುಂ ವಸುಧೆ ಪೊತ್ತುಗು ದಿಗ್ಗಜಮಳ್ಕಿ ಬಳ್ಕುಗುಂ ಮೇರು ನಗಾದ್ರಿ ನೀರ ನೆಳಲಂತತಿಸಂಚಳಮಾಗಿ ತೋರ್ಕುಮೇ (ಎಕ. VIII, ಸಾಗರ. ೧೦೩-೨೭ ; 1089) ; ತಿಲದೊಳಿಹ ತೈಲದವೊಲ್ . . . ಕನ್ನಡಿಯೊಳಿಹ ನೆಳಲವೊಲ್ (ಬಸಪು. ೪೯-೩೨) ; ಹೊಳೆವ ಕನ್ನಡಿ ಕೈಯೊಳಿರ್ದು ನೋಡದೆ ನೀರ ನೆಳಲಲ್ಲಿ ಮೊಗವ ನೋಳ್ಪಂತೆ (ಭರಚ. ೧-೧೦೩); ಪೂದೊಡಂಬೆಯ ನೆಳಲ್ ತಾಗೆ ತೊರೆಯೊಳ್, ತೀಡಿ ಮೋದುವಂತಿರೆ ಕನ್ನಡಿಯ ಚೆಲ್ವು ಕಣ್ಗೆ (ಕಾಲೂರ. ೧೧೯-೨೪೮). ೩. ಮನೆ ನೆಳಲಂ ನೆನೆಯದೆ ಅರ್ಥಮುಂ ಲೆಕ್ಕಿಸದೆ . . . ಹರಭಕ್ತಿಯೊಳಾತುರದಿಂ ಬಾಗೆ ವಾಡಿಯಂ ಪೊಱಮಟ್ಟು (ಬಸರ. ೨-೪೪). **ನೆಳಲು**$_1$ : ೧. ಕಾಯವೆಂಬ ಕಂಥೆಯ ಧರಿಸಿ ನಿಂದಲ್ಲಿ ನೆಳಲಿಲ್ಲದೆ ಸುಳಿದರೆ ಹೆಜ್ಜೆ ಇಲ್ಲದೆ ಸುಳಿವ ಅಲ್ಲಮಪ್ರಭುರಾಯನ ಜಂಗಮಸ್ಥಲದ ನಿಲುಕಡೆ ಎಂತಿರ್ದುದೆಂದೊಡೆ (ಶೂನ್ಯಸಂ. ೨೦-೧೨) ; ಕೀಸೆ ನೆಳಲು ಹೊರೆಬಿಡುವುದೇ (ಸಿದ್ಧರಾ. ೬-೪) ; ಗಳಹನನಿಲಜ ಗಾಢಗರ್ವದ ಹುಳುಕನರ್ಜುನನವರ ದೇಹದ ನೆಳಲು ಮಾದ್ರೀಸುತರು (ಕುವ್ಯಾಅ. ೧೭-೧೩) ; ಕಳಿದರಧ್ವಶ್ರಮವನಾ . . . ನಳನಳಿಪ ಮಾಮರದ ನೆಳಲಲಿ ಮೂವರವರು (ತೊರರಾ. ೨-೪-೨೨). ೨. ಬೇರಿಲ್ಲದ ಮರ ನೀರಿಲ್ಲದ ನೆಳಲೊಳಗೆ ತೋಱಿದ ಪ್ರತಿಬಿಂಬವ ನಾನೇನೆಂಬೆ (ಅಪಚಂ. ೭-೨೪) ; ನೆಳಲು ಜಲದಲಿ ನಡುಗಲಿನ ಮಂಡಲಕೆ ಕಂಪವೆ (ಕುವ್ಯಾಸ. ೯-೧೪) ; ಮಾರುತನ ವೇಗಮಂ ಮುಂಕೊಂಡು . . . ಮಾರುತಿಯು ಪೋಗುತಿರೆ ನೆಳಲು ಪ್ರತಿಪಾಲಿಸಲಾ ನೀರಧಿಯೊಳು (ವೆಂಕಾರಾ. ೫-೧-೫೪). ೩. ಕೃಷ್ಣನ ನೆಳಲು[ಪಾಠಾಂ. ಒಲುಮೆ, ಬಲುಹು]ದಿಟವುಂಟಾದೊಡೊಳಗಾಗರು ವಿರೋಧಿಗಳು (ಕುವ್ಯಾದ್ರೋ. ೨-೬೨) ; ರಾಮಚಂದ್ರನ ನೆಳಲು ನಿರ್ಜರಕುಜದ ನೆಳಲಾಯ್ತಿಳೆಯ ಜನ ಪುರವರಜನಂಗಳಿಗೆ (ತೊರರಾ. ೨-೧-೭) ; ತಾಯಿಯ ನೆಳಲೂ ಹೊಂಗೆಯ ನೆಳಲೂ ಒಂದೇ ಅಂತೆ, ನನ್ನ ಪಾಲಿಗೆ ತಾಯಿಯ ನೆಳಲು ಬೆಂಕಿಯ ಉರಿಯ ನೆಳಲು (ಸುಮಸಂ. ೨೫). ೪. ಪೊಳೆಪೊಳೆವ ಪರಶಕ್ತಿಯುವನ ನೆಳಲೆನಿಸುತಿಹಳು (ಗಗತಾ. ೧೨-೭೯).

**೬.** ಸುಳಿವು ; ಸೂಚನೆ : ಅದರಲ್ಲಿ ವಿಷಯಾಸಕ್ತಿಯು ನೆಳಲೂ ಇಲ್ಲ (ತತ್ವಪ್ರಾ. ೩೮೦). **೭.** ಕತ್ತಲೆ ; ಅಂಧಕಾರ : ನೆಳಲು ಸುತ್ತಲು ಸುಳಿದುದಿನಮಂಡಳಕೆ ಕಾಳಿಕೆಯಾಯ್ತು ಫಲದಲಿ (ಕುವ್ಯಾಸ. ೧೦-೭೨). **೮.** ಆಕಾರ ; ಛಾಯಾಶರೀರ : ಹಿಂದೆ ರಾಯನ ಪಟ್ಟದರಸಿಯು ತಂದು ಭಾರಿಯ ಭಂಗಬಡಿಸಿದೆ . . . ಕದನದಲಿ ನೀನೊಂದು ನೆಳಲುಳಿಯಲು ಸಹೋದರವೃಂದ ತನುಜಜ್ಞಾತಿಬಾಂಧವರಳಿದರದಱಿಂದ (ಕುವ್ಯಾಗ. ೩-೨೭).

**ನೆರಳ ದಾರಿ**=(ಮರಗಿಡಗಳ) ಛಾಯೆಯಿಂದ ಆವೃತವಾದ ಮಾರ್ಗ : ನೆರಳ ದಾರಿಯಿಂದ ಹೋದರೆ, ಒಂದು ಕಡೆ ಮರದ ಕೆಳಗೆ ಗುಂಡಿ ಮಾಡಿದ ಒಂದು ಕಲ್ಲಿನಲ್ಲಿ ಸ್ವಚ್ಛವಾದ ನೀರಿತ್ತು (ಸಿಜಂಫ. II, ೧೫೭). **ನೆಳಲನೂಡು**=ನೆರಳನ್ನು ನೀಡು : ಎಲೆಗಳಾ ನಡುಹಗಲಿನಲಿ ಕಡುಬಳಲಿ ತೂಕಡಿಸುತ್ತಿರೆ, ನೆಲದ ತಾಪವನಿರದೆ ತಣಿಸುವ ನೆಳಲನೂಡುತ ಕಾಯುವೆ (ಕಏವು. ೨೯-೩). **ನೆಟಿಲ ಗುಡಿಸು**=ಸಂಪೂರ್ಣ ನಾಶ ಮಾಡು ; ಮೂಲೋತ್ಪಾಟನ ಮಾಡು : ಮರೂರು ಕುನ್ನಾಡಿಯ ನೆಟಿಲ ಗುಡಿಸಿದ ತ್ರೈಲೋಕ್ಯವೀರಕೆ ಕೊಟ್ಟ ಮಣ್ಣು ಇರ್ಪಣ್ಣುಗ (ಎಕ. IX, ಬೆಂಗಳೂ. ೪೦-೯ ; ಸು. 820). **ನೆಟಿಲಾಗು, ನೆರಳಾಗು, ನೆಳಲಾಗು**=**೧.** ಬಿಸಿಲು ಬೀಳದಂತೆ ತಡೆಯಾಗು ; ಛಾಯೆಯಾಗು : ನೆಟಿಲಾಗಿರ್ದ ಸರೋರುಹದಳಮುಡು ಕಡುಬಿಸಿಲ ಬೆಂಕಿಯಿಂ ಕೊರಗಿದೊಡಾಗಳೆ ತನ್ನೆಱಂಕೆಗೊಡೆಯಂ ಕಳವಳಿಸುವ ಸತಿಗೆ ಪಿಡಿದುದೊಂದು ರಥಾಂಗಂ (ಶಾಂತೀಶ್ವ.೧೨-೨೪); (ಕುಸುಮಾ. ೮-೧೩೦ **ನೋ.**). **೨.** ಅನುವರ್ತಿಯಾಗು ; ಅನುಸರಿಸು : ತಾಯವ್ವ ಪತಿಯ ನೆರಳಾಗಿ ನಡೆವಳು (ಸಿದ್ಧವು. ೧-೮೮) ; ನೀನು ನಗುತ ಕೈಪಿಡಿದವನ ನೆರಳಾಗಿ ಬಪ್ಪುದಂ ನೋಗ್ದು ನೋಡುವ ಬಯಕೆ ಕನಸಾದುದೇನು ? (ಕಾಲೂರ. ೧೭೬-೩೯೭) ; ಗಂಡಸಿನ ನೆಳಲಾಗಿ ಇರಲು ಮನಸು ಒಪ್ಪದು (ಯಕ್ಷಪ್ರ. ೧೫೭). **೩.** ನೆರಳು ಬೀಳು : ಅಳವಾಂತು ಗರುಡ ಕೃಷ್ಣನ ಕೊಂಡು ತೆರಳಲ್ಕೆ ವಳಯದೆ ಪುಣ್ಯಮೂರುತಿಯ ನೆಳಲಾದ ಸ್ವಸ್ಥಾನದೆ ಬಿದ್ದ ಮಾರ್ಗದ ಪೊಳಲವರ್ ಪುಣ್ಯವೆಯ್ದಿದರು (ಮೋಹತ. ೪೨-೧೦). **ನೆಟಿಲೊಳ್ಬರ್**=ಅಧೀನವಾಗು ; ಆಶ್ರಯದಲ್ಲಿರು ; ಅಧೀನಕ್ಕೆ ಬರು ; ಅಂಕೆಗೆ ಒಳಪಡು (?) : ದವಿತಾರಿಗೆ ಉಟ್ಟಸುಟ್ಟುಂಬೆಯ ನೆಟಿಲೊಳ್ಬಂದುಮುಗುಟಿನೊಳ್ ಪೂಬ್ದಂ ಭ್ರೂಲತಾಪ್ರತಾನದೊಳ್ ಕಟ್ಟುಂ ಕೆಟ್ಟಿಟ್ಟುವಿರ್ಪುದುಚಿತಮಲ್ತು (ಶಾಂತಿವು. ೪-೮೨ ವ).

[**ದೇ.॥ ತಮಿ.** ನಿೞಲ್, ನೀೞಲ್ ; **ಮಲ.** ನಿೞಲ್ ; **ತುಳು.** ನೆರಳ್, ನಿರಲ್ ; **ಕೊಡ.** ನೆಳ ; **ತೆಲು.** ನೀಡ ; **ಕೋಲಾ.** ನಿಂದ ; **ನಾಯ್ಕಿ.** ನೀಂಡ ; **ಪರ್ಜಿ.** ನೀರ ; **ಗಡಬ.** ನಿಕಿರ್ ; **ಗೊಂಡಿ.** ನೀರಾ]

**ನೆಟಿಲ್$_2$** 'ನೇಟಿಲ್' ನೋ.

**ನೆಟಿಲಂಚೆ,** ನೆಳಲಂಚೆ (ನಾ). (ರಾತ್ರಿವೇಳೆಯಲ್ಲಿ ಬೊಂಬೆಯಾಟದಲ್ಲಿ) ತೆರೆಯ ಮೇಲೆ ಪ್ರತಿಬಿಂಬವನ್ನು ತೋರಿಸುವ ಆಟ ಮತ್ತು ಅದಕ್ಕೆ ಉಪಯೋಗಿಸುವ ಬಟ್ಟೆ,—ತೆರೆ (?) : ಅಂತು ಸೋಪಾನಪಙ್ಕ್ತಿಯನೇಱಿ ಪಂಚರತ್ನಧೂಳೀಶಾಳದಿಂ ಪರಿವೇಷಂಗೊಂಡ . . . ಚಕ್ರವಾಳಭೂಮಿಯ ಚಿತ್ರದಂಚೆಯೊಡನೆ ನೆಟಿಲಂಚೆಯಾಡಿಯುಂ (ಮಲ್ಲಿವು. ೧೪-೨೧೦). **ನೆಳಲಂಚೆ :** ಅಳವುಳ್ಳ ರಾವುತರೇಱಲು ಮನವುಳ್ಳ ಬಲುಗುದುರೆಗಳ ಬೇಗದೊಳು ನೆಳಲಂ[ಪಾಠಾಂ. ಲನಂ]ಚೆಯ ಕುದುರೆಗಳಂತವು ಕಣ್ಗೊಳಿಸಿದವಾ ಮೋಹರದೊಳು (ಕುರಾಸಾಂ. ೧೨-೯೧) ; ಇಕ್ಕಿದ ನೆಳಲಂಚೆಯ ತೆರೆಯೊಳಗೆ ಕಾಲಿಕ್ಕುವ ಚಿತ್ರಾಶ್ವಗಳ ಮಿಕ್ಕು ಹೊಳೆದವು ಪಕ್ಕರಿಕೆಯ ಮಱಿಯೊಳು ಮಿಕ್ಕ ಮನದ ಕುದುರೆಗಳು (ಕುರಾಸಾಂ. ೧೨-೯೨). [ನೆಟಿಲ್$_1$ + ಅಂಚೆ$_4$]

**ನೆಟಿಲ್ದಾಣ** (ನಾ). ನೆರಳಿರುವ ಸ್ಥಳ,—ಪ್ರದೇಶ : ಮನಂಗೊಂಡೊಪ್ಪಿದಂ ಮುತ್ತಿನ ಕೊಡೆಯ ನೆಟಿಲ್ದಾಣದೊಳ್ ಕೃಷ್ಣನಾಗಳ್ (ಪರ್ಥವು.೮-೪) ; ವರರಾಜ್ಯಶ್ರೀನಿಜಚ್ಛತ್ರದ ಕುಳಿರ್ವ ನೆಟಿಲ್ದಾಣದೊಳ್ ಲೀಲೆಯಿಂದೊಪ್ಪಿರೆ ತಾನೆಂದುಂ . . . ತದ್ಭೂಕಾಂತನೋರಂತರಸುತನ ಮನಾ ರೂಢಿಯಿಂ ಮಾಡುತಿರ್ಪಂ (ಕುಸುಮಾ. ೩-೨೩).

[ನೆಟಿಲ್$_1$ + ತಾಣ]

**ನೆಟಿಲ್ಪಚ್ಚೆ** (ನಾ). ನೆಳಲುಬೊಂಬೆಯಾಟದ ತೆರೆ ; ನೆರಳಿನ ಚಿತ್ರಗಳನ್ನು ಮೂಡಿಸುವ ತೆರೆ: ಬನದಿಂದಂ ಬನದಾನೆಗಳ್ ಪಿಡಿಗಳಂ ಮುಂದಿಟ್ಟು ಪೋಪಂತೆ ಕಾಮಿನಿಯರ್ಕಳ್ವೆರಸಾರ್ಯರಾತ್ಮತನುಗಳ್ ತತ್ಕಾಲದೊಳ್ ಮಾಯಮಾಗೆ ನೆಟಿಲ್ಪಚ್ಚೆ[ಪಾಠಾಂ. ಳಟ್ಟಿಚ್ಚೆ]ಯ ರೂಪಿನಂತೆ ತಳರ್ದರ್ ಸೌಧರ್ಮಕಲ್ಪಕ್ಕೆ ಭಾವನೆ ಜೈನೋಕ್ತಿಯೊಳಾಗೆ ದುರ್ಗತಿಗಮಾ ಜೀವಕ್ಕಮೇಂ ಸಮ್ಮದಂ (ಶಾಂತಿವು. ೭-೧೨).

[ನೆಟಿಲ್$_1$ + ಪಚ್ಚೆ$_0$(**P**←ಪ್ರಾ. ಪಚ್ಛಯ=ಬಟ್ಟೆ)]

**ನೆಟಿಲ್ವಿಡಿ** (ಕ್ರಿ). ನೆರಳನ್ನುಂಟುಮಾಡು : ಹೇಮಸರೋಜದೊಳ್ತಳೆದು ಮಾಣಿಕಮುಂ ಶರದಭ್ರಶುಭ್ರಮುಂ ತಾಮರಸಪ್ರಸೂನಮುನದಕ್ಕೆ ನೆಟಿಲ್ವಿಡಿದೊರ್ವಳುತ್ಪಲಶ್ಯಾಮಳೆ ಮಂಗಳಾಭರಣಭೂಷಿತೆ ತಂದದನೀವುದಂ ಲತಾಕೋಮಳೆ ಕಂಡಳ್(ಮಲ್ಲಿವು.೪-೫೬). [ನೆಟಿಲ್$_1$ + ಪಿಡಿ$_1$]

**ನೆಟಿಲ್ವೀಱು** (ಕ್ರಿ). ನೆರಳನ್ನು ಬೀರು ; ಛಾಯೆಯನ್ನು ಪಸರಿಸು,—ಹರಡು : ರವಿಯಿರ್ದೆಡೆಗೆ ನೆಟಿಲ್ವೀಱುವ ಬಾಂಗಡರ್ದೇಱುವ ತರುಗಳಾ ತಪೋವನತರುಗಳ್ (ಜಗವಿ. ೧೬-೩೮). [ನೆಟಿಲ್$_1$ + ಬೀಱು$_1$]

**ನೆಟಿಲ್, ನೆಳಿಲ್** (ನಾ). ಒಂದು ಅನುಕರಣ ಶಬ್ದ : "ನೆಟಿಲ್ಲನೆ (ನೆಟಿಲೆನೆ), ನೆಟ್ಟನೆಯೆ ಮುಱಿದುದು—ಇವು ಅನುಕರಣಂಗಳ್" (ಶಮದ. ಪರಿ.೧). **ನೆಳಿಲ್ :** ತರ್ಕೈಸಿ ಸುರಿವ ತೆಱದಿಂದುರ್ಕಂಬುಗಳೆಱಗಿ ರೋಮರೋಮಕ್ಕೆ ನೆಳಿಲ್ ನೆಕ್ಕು ಚಳಿಲ್ ಚಕ್ಕು ದೊಗಲ್‌ದೊಕ್ಕನೆ ನಾಂಟದು ವರಾತಿಭಟರಮಯಮಮಂ (ಜಗವಿ. ೭-೮೧).

**ನೆಳಿಲ್ನೆಳಿಲ್** (ದ್ವಿರುಕ್ತಿ) : ಕರಮಂ ತೂಂತಿ ತದಾಸ್ಯದೊಳ್ ಬಳೆಯಿಸಲ್ ತದ್ವರ್ಧನೋದ್ರೇಕದಿಂ ಸಿರೆಗಳ್ ಬೀಗಿ ನೆಳಿಲ್‌ನೆಳಿಲ್ಲರೆಯೆ ನೆತ್ತರ್ ಮೂಗಿನೊಳ್ ತೀವಿ ಪಾಯ್ತರೆ ಸಿಟ್ಟೆಲ್ವು ಛಟಚ್ಛಟೆಂದೊಡೆಯೆ ತದ್ದೈತ್ಯಾಥಮುಂ ನೀಳದಿಂ ಬಿರಿದಂ (ಜಗವಿ. ೫-೪೬) ; ಬೆರಸಿ ಪದಾತಿ ನೆಕ್ಕುನೆರಿಲೆಂಬ ನೆಳಿಲ್ನೆಳಿಲೆಂಬ . . . ನಿಷ್ಠುರರವಂ ಮಿಗೆ ತಳ್ತಱಿದತ್ತು ಯುದ್ಧದೊಳ್ (ಗಿರಿಕ. ೬-೬೮).

**ನೆಟಿಳ್ದಾಳಿ (?).** (?) : ದೇವನ್ ಆಜ್ಞೆ ಸತ್ತ ಅತನಗಿಪ × × × ರರ್ ಕೊಟ್ಟೊದು ನೆಟಿಳ್ದಾಳಿ ಅಯ್ಗೊಳಂ ಕಟಿಸಿ ಇದನಳಿವೋನ್ × × × ಪಞ್ಚಮಹಾಪಾತಕನಕ್ಕು (ಎಕ. X, ಶ್ರೀನಿವಾ. ೪೧-೩ ; ?). [ ? ]

**ನೆಟ್ಕನೆ, ನೆಳ್ಕನೆ** (ಅ). ಒಂದು ಅನುಕರಣಾವ್ಯಯ : "ನೆಟಿಲ್ಲನೆ (ನೆಟಿಲೆನೆ), ನೆಟ್ಕನೆಯೆ ಮುಱಿದುದು—ಇವು ಅನುಕರಣಂಗಳ್" (ಶಮದ. ಪರಿ. ೧). **ನೆಳ್ಕನೆ :** ಮುನ್ನಂ ಶರಯಂತ್ರಮನತ್ಯುನ್ನತಿಯಿಂ ಶಬರರೊಲ್ದು ಕಪಿಲಾಸವದೊಳ್ ಚೆನ್ನೆಸೆಯೆ ಮಾಡಿರಲ್ ಯಂತ್ರಂ ನೆಳ್ಕನೆ ಪುಲಿಯ ಗೋಣನರಿಯಿತ್ತಾಗಳ್ (ದಶಕು. ೨-೧೩೫).

[ನೆಟ್ಕು + -ಅನೆ$_1$]

**ನೆಟ್ಕು, ನೆಳ್ಕು** (ನಾ). ಒಂದು ಅನುಕರಣ ಶಬ್ದ : ಒದೆದೆಡದ ಬರಿಯ ಪಲಗೆಯನಿಡಿಯೆಲ್ಲಳ್ ನೆಟ್ಕು ನೆಟಿಲೆನಲ್ ಕರಿ ತಟ್ಟುಂಗೆಡೆಯೆ ಭಗದತ್ತನಿಟ್ಟಂ ಕಡುಪಿಂ ಪಿಡಿದಿರ್ದ ನಿಶಿತವಜ್ರಾಂಕುಶದಿಂ (ಮಹಾನೇ. ೧೨-೧೩೯). **ನೆಳ್ಕು :** ಕೆಡೆವ ಕರಿ ನೆಳ್ಕು ನೆಳಿಲೆನಲುಡಿವ ವಿಷಾಣಂಗಳೊಂದೆವೊಯ್ಲಿಂ ಪಱಿದಿಕ್ಕಡಿಯಾಗಿ ಪಿಂದಣಂಗೊಂಡೊಡಲಜಗರದಂದ ಮಾದ ಶುಂಡಾದಂಡಂ (ಮಹಾನೇ. ೧೨-೫೩).

ನೆಟ್ಟುನೆಟ್ಟು (ದ್ವಿರುಕ್ತಿ) : ಕಡಲೇಟುಂ ಕದಡಲ್ ಕುಲಾದ್ರಿಕುಲ ಮಟ್ಟುಡಲ್ ಮಹೀಮಂಡಲಂ ನಡುಗಲ್ ತೀವ್ರಕರಾರದಾವಯವಮೆಲ್ಲಂ ನೆಟ್ಟುನೆಟ್ಟೆಂದೆನಲ್ . . . ಆ ಭೀಕರದಾಕರಂ ಘನರವಂ ಪರ್ವಿತ್ತು ಮೂಲೋಕಮಂ (ಮಹಾನೇ. ೧೩-೬೫).

△**ನೆಟ್ಟು** 'ನಟುಂಕು' ನೋ.

**ನೇ** 'ನೆಯ್$_1$' ನೋ.

**ನೇಕನಿಯತ್ತು,** ನೇಕುನಿಯತ್ತು (ನಾ). ಒಳ್ಳೆಯ ಸಂಕಲ್ಪ ; ಸದುದ್ದೇಶ : ಆ ಕಾಗದದಲ್ಲಿ ತಾವು ನೇಕನಿಯತ್ತಿನಿಂದ ಬಹಳ ದಿವಸ ದಾರಭ್ಯ ಹಮೇಷ ದೋಸ್ತಿಯಿಂದಾ ನಮ್ಮ ಸರಕಾರಕ್ಕೆ ಖೈರುಕಾಯಿ ಮಾಡಿರುವಂಥಾದ್ದು ನಾವು ದರಿಯಾಫ್ತ್ ಮಾಡಿ . . . ಬರದು ಇದ್ದೇವೆ (ರಾಜೇಂದ್ರ. ೨೨೮). **ನೇಕುನಿಯತ್ತು :** ಇಂಗ್ರೇಜ್ ಬಹಾದ್ದರರ ಜಯಪ್ರದವಾದ ಸರಕಾರದ ಯಾವತ್ತು ಜನರ ನೇಕುನಿಯತ್ತಿನಿಂದಾ ಆಗಿ ಇದೆ (ರಾಜೇಂದ್ರ. ೨೮೫). [←**ಪಾರ. ಹಿಂ. ಮರಾ. ನೇಕ್‌ನೀಯತ್**]

**ನೇಕರಿಸು** 'ನೀಕರಿಸು' ನೋ.

**ನೇಕಾರ** 'ನೆಯ್ಕಾರ' ನೋ.

**ನೇಕಾರಗೊತ್ತಳಿ** (ನಾ). ನೇಯ್ಗೆಕಾರರ ಸಂಘ : ಅಲ್ಲಿನ ನೇಕಾರ ಗೊತ್ತಳಿ, ಸಿಪ್ಪಿಗಗೊತ್ತಳಿಗಳೂ ಕೂಡ ಸ್ವಲ್ಪ ನೆರವಾಗಿವೆ (ಸಪತಿ. ೨೧).

[ನೇಕಾರ(<ನೆಯ್ಕಾರ)+ಕೊತ್ತಳಿ(<ಕೊತ್ತಟು)]

**ನೇಕಾರಿತಿ** (ನಾ). ನೆಯ್ಗೆಯ ಕೆಲಸ ಮಾಡುವವಳು ; ನೇಯುವವಳು : ನನ್ನ ನಿನ್ನಯ ಮನದ ಜೊನ್ನ ಮಗ್ಗದ ಮೇಲೆ ನಿನ್ನ ಮತ್ತೆನ್ನೆಡೆಯ ಕಸಿಗೆ ಕಸೆಯನುಗೊಳಿಸಿ ನನ್ನಿ ನೇಕಾರಿತಿಯು ಮುಗಿಯದಿಹ ಬಟ್ಟೆಯನ್ನನವರತ ನೇಯುತಿಹಳು (ಗರಿ. ೮-೧೨).

[ನೇಕಾರ(<ನೆಯ್ಕಾರ)+-ಇತಿ$_1$(<-ಇತ್ತಿ)]

**ನೇಕುನಿಯತ್ತು** 'ನೇಕನಿಯತ್ತು' ನೋ.

**ನೇಕ್ಚಾಲ್** (ಗು). ಸಭ್ಯರೀತಿಯ ; ಉತ್ತಮ ನಡವಳಿಕೆಯ ; ಸದ್ವರ್ತನೆಯ : ಗ್ರಾಮಾಧಿಕಾರಿಯು ತನ್ನ ಗ್ರಾಮದಲ್ಲಿ ಯಾರಾದರೂ ಅನುಮಾನಾಸ್ಪದವಾದ ನೇಕ್‌ಚಾಲ್ ಜನಗಳು ಬಂದು ಇಳಿದ ಕೂಡಲೇ ಆ ಸಂಗತಿಯನ್ನು . . . ಪೋಲಿಸಿಗೂ ತಿಳಿಸತಕ್ಕದ್ದು ಅವನ ಕರ್ತವ್ಯ (ಗ್ರಾಮಾಕ. ೪೬). [←**ಪಾರ. ಹಿಂ. ನೇಕ್‌ಚಾಲ್**]

**ನೇಗಲ್** 'ನೇಗಿಲ್' ನೋ.

**ನೇಗಲಿ** 'ನೇಗಿಲ್' ನೋ.

**ನೇಗಲಿಹೊಡೆ** 'ನೇಗಿಲುಹೊಡೆ' ನೋ.

**ನೇಗಲು** 'ನೇಗಿಲ್' ನೋ.

**ನೇಗಲುಕನ್ನೆಸೊಪ್ಪು** (ನಾ). ಒಂದು ಬಗೆಯ ಸಸ್ಯ : ನೇಗಲುಕನ್ನೆಸೊಪ್ಪು, ಗೊಲಗಂಡಿ (ವೈಔಗಿ. ೨೬-೫೦೫).

[ನೇಗಲು? + ಕನ್ನೆಸೊಪ್ಪು]

**ನೇಗಾರ** 'ನೆಯ್ಕಾರ' ನೋ.

**ನೇಗಿಲ್,** ನೇಗಲ್, ನೇಗಲಿ, ನೇಗಲು, ನೇಗಿಲು (ನಾ). **೧.** ಭೂಮಿಯನ್ನು ಉಳುವುದಕ್ಕಾಗಿ ಬಳಸುವ ಸಾಧನ ; ರೆಂಟೆ ; ಹಲ : "ಹಲಂ, ಲಾಂಗಲಂ, ಸೀರಃ—ಈ ೩ ನೇಗಿಲ್" (ಹಲಾಯು. ೯೪-೪೨೧) ; ನೇಗಿಲುಮೆಟ್ಟುಂ ಸಂಧಿಸಿ ಪೋಗಡೆ ನಿಲೆ ನಟ್ಟ ಮನೆಯ ಮುಟ್ಟುಗಳೊಳ್ ಮೇಣಾಗೆ ವಿಕಾರಂ ನರಿ ಮೇಣೋಗಡಿಸದೆ ಕರೆಯೆ ಕೆಯ್ದುವಿಂ ಭಯಮಕ್ಕುಂ (ಲೋಕೋಪ. ೪-೬೦) ; ಮೂಗಿನೊಳುಟಿ ವಾತಂಗೆ ನೇಗಿಲಂ ಕೊಟ್ಟರೆಂಬಂತೆ . . . ಲೋಕದೊಳೀತಂ ಮಾಯಾವಿದ್ಯೆಯುಪ್ಪಂಜನಘುಟಿಕೆಯಿಂ ಜನರ ಸರ್ವಸ್ವಮಂ ಕಳ್ವಂ (ಧರ್ಮಾಪ್ಪ. ೨-೧೪೯) ; ನೇಗಿಲುಬಿಲೊಳ್ಳಿತದು ಪಿಡಿದಾಗಳುಮೊಕ್ಕಲಿಗನಂತೆ ಕಪ್ಪಡಮುಟ್ಟಾಳಾಗಿರ್ದಮ್ಮರಸನ ಪೊಲವಾಗಿಲನೋಲಗಿಪುದೊಳ್ಳಿತವಱಿಂದಿರಿವೋ (ಬಂಹರಿ. ೧೧-೬೨). **ನೇಗಲ್ : ೧.** "ನೇಗಿಲ್ (ಲ,ನೇಗಲ್)—ಲಾಂಗಲ" (ತದ್ಭಕೋ.೨೩). **ನೇಗಲಿ : ೧.** ಪೋತ್ರ . . . ನೇಗಲಿಯ ತುದಿ (ಗಂಗಾಮ. ೨೧೮) ; ಭೂಮಿಯ ವ್ಯವಸಾಯಕ್ಕೆ ಬೇಕಾಗಿರುವ . . . ನೇಗಲಿ ಮಡಿಕೆ ರೆಂಟೆ ಕುಂಟೆ ಕೂರಿಗಿಯಡಿಯ ಕುಂಟೆ ಈಸು ನೊಗಗಳು ಶಿಲ್ಪಶಾಸ್ತ್ರಕ್ರಮದಂತೆ ಅನುವಾಗಿಯೂ ಬಲಾತ್ಕಾರವಾಗಿಯೂ ಇರಬೇಕು (ಕೃಷಿಪ್ರ. ೨೦) ; ನೇಗಿ ಹೂಡಿದ ಜೇಡ, ನೇಗಲಿಯ ಒಕ್ಕಲಿಗ ಹಾಗಿನಲಿ ಹಾಡಿ ಹುಲುಸಾಗಿ ಭೂಲೋಕ ತೂಗಿ ತೊನೆಯುವದು ಬೆಳೆ ತುಂಬಿ (ಕನ್ನಜಾ.೧೩೭). **ನೇಗಲು : ೧.** "ಲಾಂಗಲಂ, ಹಲಂ, ಗೋದಾರಣಂ, ಸೀರಃ—ನೇಗಲ ಹೆಸರುಗಳು" (ಸಿದ್ಧಾಂತಿ.೨೭೮) ; ಒಂದು ಸಣ್ಣ ಬಗಿ ಇದ್ದದ್ದು ನೇಗಲಾಯಿತು (ಮುಂಬಯಿ. ೫-೨೬೮) ; ನೇಗಲು ಉತ್ತರೆ ಹೊಲ, ಹಾಲು ಇದ್ದರೆ ಗೋವು (ಗಾದೆ). **೨.** ಯುದ್ಧದಲ್ಲಿ ಬಳಸುವ ಒಂದು ಬಗೆಯ ಸಲಕರಣೆ ; ನೇಗಿಲಿನಾಕಾರದ ಆಯುಧ : ಒಂದು ದಿಕ್ಕಿನಲ್ಲಿ ಮಹಾರಥಿಕರು ನೊಗೆಯನ್ನು ನೊಗೆಯಿಂದಲೂ ನೇಗಲನ್ನು ನೇಗಲಿಂದಲೂ . . . ತಾಕಿಸಿ . . . ಹೋರುತ್ತಿದ್ದರು (ಕೃಪಾಭೀ. ೭೪) ; ವಿದಳಿತವಾದ ನೇಗಲುಗಳೂ. . . ಹಲ್ಲಣಗಳೂ . . . ಇವೇ ಮೊದಲಾದವು ಯುದ್ಧರಂಗದಲ್ಲಿ ಭಯಂಕರವಾಗಿದ್ದವು (ಕೃಪಾಕ. ೧೦೧). **ನೇಗಿಲು : ೧.** ಹೊನ್ನ ನೇಗಿಲಲುತ್ತು ಎಕ್ಕೆಯ ಬೀಜವ ಬಿತ್ತುವರೆ (ಬಸವ. ೫೯೫) ; ಪೊನ್ನ ನೇಗಿಲಲುತ್ತು ಗುಳ್ಳದ ಬೀಜವಂ ನೆಜಿ ಬಿತ್ತುವಂದದಿ (ಬಸವು. ೬೦-೫೦) ; ಕುಲಿಶಪರಿಯಂತೇಕೆ ನೇಗಿಲ ಬಳಿಯ ಹುಲುವೆಟ್ಟಿಕೆ ವಿರೋಧಿಗಳಳಿಬಲಕೆ ಕಲಿಕರ್ಣ ನೀಪರಿಯಂತ ಸಂಗರವೆ (ಕುಪ್ಪಾಭೀ. ೧-೮) ; ನೇಗಿಲ ಹಿಡಿದಾ ಹೊಲದೊಳು ಹಾಡುತ ಉಳುವಾ ಯೋಗಿಯ ನೋಡಲ್ಲಿ (ಕೊಳಲು. ೨೮-೧). **೨.** ಬೀಸುನೇಣಿನ ಸೆಳೆವ ನೇಗಿಲ ಸೂಸುಗಣೆಗಳ ಕಡಿವ ಕೊಡಲಿಯ ಕೈಸುರಗಿ ಸೂನಗೆಯ ನಾನಾಯುಧದ ಗಡಣೆಗಳ . . . ವೈರಿಬಲವನು ಘಾಸಿಮಾಡಿದರೊಗ್ಗಿನಲಿ ಹವಿಶ್ಮಾರ ರಾವುತರು (ಕುಪ್ಪಾಭೀ. ೪-೬೨) ; ಗುಟ್ಟಳಿದುದು ವಜ್ರಮಯರಥ ನೇಗಿಲ ಪೆಟ್ಟು ಸಂಧಿಸಲು ನುಗ್ಗಾಯ್ತು ಬಿಟ್ಟುದು ಬಾಯ ರಕ್ಕಸರಾಯಸೈನ್ಯ ಕಂಗೆಟ್ಟುದು (ಮೋಹತ.೪೦-೫೯). **೩.** [**ಜ್ಯೋತಿ**] ಒಂದು ನಕ್ಷತ್ರಪುಂಜದ ಹೆಸರು : ಪ್ರಾಚೀನಕಾಲದ ಪಾಶ್ಚಾತ್ಯರು ಇದೇ ಪುಂಜಕ್ಕೆ 'ಸಪ್ತರ್ಷಭ' . . . ಎಂಬುದಾಗಿ ನಾಮಕರಣವನ್ನು ಮಾಡಿದ್ದರು. ಕೆಲವರು ಸಾಮಾನ್ಯವಾಗಿ ಇದನ್ನು 'ನೇಗಿಲು' ಎಂದು ಕರೆಯುವುದುಂಟು (ಜ್ಯೋತಿರ್ವಿ. ೨೫).

[**ದೇ.॥ತಮಿ.** ಞಾಞ್ಚಿಲ್, ನಾಞ್ಚಿಲ್ ; **ಮಲ.** ಞೇಞ್ಞೋಲ್ ; **ತುಳು.** ನಾಯೆರ್ ; **ತೆಲು.** ನಾಂಗಲಿ, ನಾಂಗೆಲು, ನಾಂಗೇಲು ; **ಗಡಬ.** ನಾಂಗಲ್ ; **ಕುಇ.** ನಾಂಗೆಲಿ./ಸಂ. ಲಾಂಗಲ]

**ನೇಗಿಲು** 'ನೇಗಿಲ್' ನೋ.

**ನೇಗಿಲುಹೊಡೆ,** ನೇಗಲಿಹೊಡೆ (ಕ್ರಿ). ನೇಗಿಲಿಂದ ಉಳು,—ಉಳುಮೆ ಮಾಡು : ಉಳು = ಹರಗು, ನೇಗಿಲುಹೊಡೆ (ಗಂಗಾಮ. ೪೭). **ನೇಗಲಿ ಹೊಡೆ :** ಸೀತೆ = ಹೊಲದೊಳಗೆ ನೇಗಲಿ ಹೊಡೆದ ಗೆರೆ (ಗಂಗಾಮ. ೩೨೯).

[ನೇಗಿಲು(<ನೇಗಿಲ್)+ಹೊಡೆ$_1$(<ಪೊಡೆ$_1$)]

**ನೇಗಿಲ್ಬಾಯ್** (ನಾ). ನೇಗಿಲಿನ ತುದಿಯ ಭಾಗ,—ಮುಂಭಾಗ : ಕುಟಂ (ಗುಟಂ) = ನೇಗಿಲ್ವಾಯ ಕರ್ಬುನಂ (ಶಮದ. ಪರಿ. ೧).

[ನೇಗಿಲ್ + ಬಾಯ್]

**ನೇಗೆ** 'ನೆಯ್ಗೆ' ನೋ.

**ನೇಜ** 'ನೇಜಯ' ನೋ.

**ನೇಜಯ, ನೇಜ, ನೇಜೆ, ನೇಜೆಯ, ನೇಜ್ಯೆ, ನೇಲ್ಶುಯ, ಲೇಜಯ** (ನಾ). ೧. ಒಂದು ಬಗೆಯ ಆಯುಧ; ಈಟಿ; ಭರ್ಜಿ; ಭಲ್ಲೆ : ಕರದ ಖಂಡೆಯದಿಂದ ರಿಪುಗಳ ಶಿರವನು ತಱಿದು ನೇಜಯದಿಂದಲಿಱಿದು ತುರಗಗಳನು ಬೀಳಗೆಡಹಿ ಬೆಟ್ಟದ ಚಾಮುದುರಗಲಿ ಮೆಟ್ಟಿದ ಸಾಹಸವ (ಕಂಸವಿ. ೩-೮೦) ; ರಾಜಬೀದಿಯೊಳಿಟ್ಟು ಮೂಱುತಿಹ ಪಡೆಯನುಂ ನೇಜಯದ ಮೊನೆಯಿಂದಲಿಱಿದು ಕೊಳ್ಳಲೆ ಬಸವರಾಜನೆ ಪ್ರಸಾದಮುಮನೆನಲು (ರಾಘಚ. ೧೨-೬೦) ; ನೇಜ[ಪಾಠಾಂ. ಜ, ಜೆ]ಯದಿಂದಿಱಿದೆತ್ತಿ ನಿಜೌಜಮನೆ ಬಿಡೆ ಜಸರ್ಗೆ ತೋರ್ಪಂತ ಸುಹೃದ್ರಾಜಿಯನೆ ವಾಜಿವಾಹಕರಾಜಿ ಮಹಾಜಿಯೊಳೆ ತಳರ್ದುದದ್ಭುತ ಮೊಗೆಯಲ್ (ರಾಜಶೇ. ೬-೬೫). ೨. ಒಂದು ಬಗೆಯ ಧ್ವಜ, — ಪತಾಕೆ : ಗೂಳಿಗಳ ಠಕ್ಕೆಯದ ವ್ಯಾಸನ ತೋಳ ಕೇತನಗಳ ಕಲಶಗಳ ಮೇಳವಿಸಿ ಮುಂಗಡೆಯ ಮಿಱುಗುವ ಶುಭ್ರ ನೇಜಯದ . . . ಗಡಣದೊಳು ತೆರಳಿದ ಹರಿಶರಣಭರಣ (ಶಂಕದಾ. ೬-೩೭). **ನೇಜ : ೧.** ತಾವರೆಯೆಲೆಯ ಕೋಡೆಯ ಪೊನ್ನ ಕದಳಿಯ ಸುಳಿಯ ನೇಜ[ಪಾಠಾಂ. ಜೆ]ಗಳಾ ಲಲಿತಹಸ್ತದೊಳಾಂತು . . . ನೋಡಿದನಮಿತ ಸೈನಿಕವ (ಅನಂರಾ. ೧-೯-೧೨) ; ವರಪಾತುಶಾಹಸ್ಯೆನ್ಯೋತ್ಕರವನೆರಳ್ಕಯ್ಯೊಳಾಂತ ನೇಜಗಳಿಂ ಕೋಡಿರಿದು ಕಾಲ್ದೆಗೆಸಿ ವೆಂಕಟನರಪತಿ ದ್ದೋನೇಜನೆಂಬ ಬಿರುದಂ ಮೆರೆದಂ (ಕೆಳನೃ. ೫-೨೫) ; ವಾಜಿಯನು ಏರುತಲಿ ಕರದಲಿ ನೇಜವನು ಪಿಡಿಯುತಲಿ ಜಗದಲಿ ಸೋಜಿಗವ ತೋರುತಲಿ ಮ್ಲೇಂಛರನೆಲ್ಲ ಮಥಿಸುತಲಿ (ಸುದಾಮು. ೩-೨೪). ೨. ಮೆಚ್ಚಿವ ನೇಜಗಳನು ಮೇಲಕೆ ಹಾಱಿಸಿ ದೊರೆಮಗನಿಗೆ ಕೈಯ ಮುಗಿದು (ಜ್ಞಾನಚ. ೪-೪೬). **ನೇಜೆ : ೧.** ರಾವುರಾವುತರು ಅತಿ ತವಕದಿಂದ ನೇಜಿ ನೇಜೆಗಳಿಂದಲಿಱಿದಾಡಿ ನೆತ್ತರವು ಹೂಜೆಯಿಂ ಬೀಳ್ವ ಕೆಂಜಲದಂತೆ ಸುರಿವುತ್ತ (ಪ್ರೌಢಂರಾ. ೧೪-೩೫) ; ತುರಗವನಡರಿ ನೇಜೆಯನಾಂತು ಕರದೊಳು ಹರಿಸಾಡುತ ಕುದುರೆಗಳ (ಜ್ಞಾನಚ. ೩೨-೩). **ನೇಜೆಯ : ೧.** ನೇಜೆಯದಿಱಿತಕೆ ಚಗಿದು ಕುದುರೆಯಿಂದ ಮಾಜದೆ ಬೀಳ್ವ ರಾವುತರ ವಾಜಿಯ ಪಿಡಿದು ಮೂಗರಿದವರನು ಯಮರಾಜನಾಲಯ ಕಟ್ಟಿದರು (ಕಂಸವಿ. ೩-೬೯) ; ಎರಕದಿಂ ನೇಜೆಯವನು ಕರದೊಳಗಾಂತು (ಜ್ಞಾನಚ. ೪-೬೬). ೨. ನೆಗಳ ನೇಜೆಯ ಬಗೆಬಗೆಯ ಪತಾಕೆಗಳ್ಮುಗಿಲ ನಲಿವುತ ಮುಂದೆಯ್ದೆ ಪೊಗಳುತ ವಂದಿಗಳೆಯ್ತರೆ (ಕುರಾಸಾಂ.೧೧-೪೨) ; ಮುಗಿಲ ಮುಟ್ಟುವ ವೈಜಯಂತಿಗಳಿಂ ನವದುಗುಲದ ನೇಜೆ[ಪಾಠಾಂ. ಜ, ಲ್ಶು]ಯದಿಂದ ಸೊಗಯಿಪ ಸಿಂದಂಗಳಿಂದ ಸ್ವಯಂವರ ಮಿಗೆ ರಂಜಿಸಿದುದು (ರಾಮವಿ. ೬-೩೨). **ನೇಜ್ಯೆ : ೧.** ಅನೇಕವಾದ ದುಷ್ಟ ಮೃಗಗಳನ್ನು ಕೆಣಕಿ ಬೇಟೆಯಾಡುತ . . . ಕೈಗೆ ಸಿಕ್ಕದೆ ಓಡುತ್ತಿದ್ದ ಮೃಗಗಳನು ಕುವರಾರಸ್ವಾಮಿಯೋಪಾದಿಯಲ್ಲಿ ನೇಜ್ಯೆಗಳಿಂದ ತಿವಿಯುತ (ಕೃವಾಆ. ೧೫೧). **ನೇಲ್ಶುಯ : ೧.** ಸಿಂಗಾಡಿ ತರಕಸ ಪೇಡೆಯ ನೇಲ್ಶು[ಪಾಠಾಂ. ಜೆ]ಯ ಕಂಗಲು ಬಲು ಜೋಡುಗಳನು ಅಂಗವ ತಂದೊಪ್ಪಿಸಿದನು ಕಾಟಣ್ಣ ನಭಂಗವಿಕ್ರಮರಾಮನೆಡೆಗೆ (ಕುರಾಸಾಂ. ೪೨-೮೨). **ಲೇಜಯ : ೧.** ನರಪತಿಯು ನಗುತಲಂಗಡಿಯೊಳಿಹ ಗಾರಿಗೆಯು ಸರಿಸದಿಂ ಲೇಜಯದ ಮೊನೆಯೊಳಾನುತೆ ಬಸವ ಕೊಳ್ಳೆನಲು ಹುಳು ಬಿಸುಡೆನೆ (ಪ್ರಭುಪು. ೬-೫೪).

[<-ಪಾರ. ಹಿಂ. ಮರಾ. ನೇಜಾ]

**ನೇಜಯಂಬೊಱು** (ಕ್ರಿ). ಈಟಿಯನ್ನು ಹಿಡಿದುಕೊಳ್ಳು : 'ನೆಗೆದಡರಿ ನೇಜಯಂಬೊತ್ತೆಱಿ ತಿವಿದೊಡನೆ ಚಿಗದೆತ್ತಿ ಬಿಸುಡುತ್ತ ರಾಪ್ತ ಗುದುರೆಗಳ ನುಗಿಬಗಿಮಾಡಿ ಕಾದುತ್ತಲಿರ್ದರಿರ್ಬಲದ ಘೋಟಾರೂಢರಾಹವದೊಳು (ಚೆಬಪು. ೪೮-೫೧). [ನೇಜಯಂ+ಪೊಱು]

**ನೇಜಿ** (ನಾ). ೧. (ಕರಾ) ಬತ್ತ, ರಾಗಿ ಮೊದಲಾದುವುಗಳ ಎಳೆಯ ಸಸಿ: ಸ್ವತಃ ತಮ್ಮ ಮನೆಯ ದನವೇ ಬೇಕಾದರೆ ಗದ್ದೆಗಳ ನೇಜಿ ತಿಂದರೆ "ನಿನ್ನನ್ನು ಹುಲಿಯೇ ತಿನ್ನಲಿ!" ಎಂದು ಶಪಿಸುತ್ತಿದ್ದರು (ಕೈಮಾಂಸ. ೪) ; ವೆಂಕಪ್ಪಯ್ಯನವರ ಗದ್ದೆಗಳಲ್ಲಿ ನೇಜಿ ಇದ್ದರೂ ಕೋಣಗಳಿಂದ ತುಳಿಸಿ ಅವುಗಳ ಪೈರನ್ನೆಲ್ಲಾ ಹಾಳು ಮಾಡಿಸಿದರೆ ಅವರು 'ಸಲಾಂ' ಹೊಡೆದು ಗದ್ದೆ ಮಾರುತ್ತಾರೆ (ಪಂಪಾಪ. ೩೪) ; ನೇಜಿಗಾಗಿ ಪ್ರತ್ಯೇಕ ಒಂದು ಕೆಸರು — ಮಜಲಿನಲ್ಲಿ ಬತ್ತದ ಬೀಜ ಚೆಲ್ಲಿ ನೀರನ್ನೊಣಗಿಸಿ ಬಿಟ್ಟರು (ಬಾಳಿಗಿ. ೧೦೩) ; ದೂಜಸೋಜರಿಗೆ ಸದ್ಯ ಗಿರಿಯಪ್ಪರ ನೇಜಿ ತೆಗೆಸಲು ಸಿದ್ಧತೆ ನಡೆಸುವ ಕೆಲಸ ಸಿಕ್ಕಿತ್ತು (ರಕ್ತರೂ. ೫೨). ೨. ಅಗೆ ಹಾಕಿ ಒಗ್ಗಾಗಿ ಬೆಳೆಸಿದ ಸಸಿಗಳನ್ನು ಕಿತ್ತು ಕ್ರಮವಾಗಿ ಬೇರೆ ಬೇರೆ ಸ್ಥಳಗಳಲ್ಲಿ ನೆಡುವಿಕೆ; ನಾಟಿ ಮಾಡುವಿಕೆ : ಅಂದು ಗಿರಿಯಪ್ಪರೇ ಸ್ವತಃ ನೇಜಿಯ ಕೆಲಸದ ಮೇಲ್ವಿಚಾರಣೆ ನಡೆಸುತ್ತಿದ್ದರು (ರಕ್ತರೂ. ೫೨).

**ನೇಜಿ ಹಾಕು** = ಒಗ್ಗಾಗಿ ಬೆಳೆಸಿದ ಸಸಿಗಳನ್ನು ಕಿತ್ತು ಕ್ರಮವಾಗಿ ನೆಡು ; ನಾಟಿ ಹಾಕು : ತರಕಾರಿ ಬೆಳೆಯಿಸಿದ ಗದ್ದೆಯಲ್ಲಿ ನೇಜಿ ಹಾಕಿದರೆ ಒಳ್ಳೆಯದಾಗುತ್ತದಾದ್ದರಿಂದ ಎಷ್ಟು ಸಾಧ್ಯವೋ ಅಷ್ಟು ನೆಟ್ಟು ಬೆಳೆಸುತ್ತಿದ್ದರು (ಭ್ರಾಂತಿಸು. ೩). [<-ತುಳು. ನೇಜಿ]

**ನೇಜಿ ಕೀಳು** (ಕ್ರಿ). ಒಗ್ಗಾಗಿ ಬೆಳೆಸಿದ ಸಸಿಗಳನ್ನು ನಾಟಿ ಹಾಕುವುದಕ್ಕಾಗಿ ಕೀಳು, — ತೆಗೆ : ಗದ್ದೆಯ ಒಂದಂಚಿನಲ್ಲಿ ಹತ್ತಿಪ್ಪತ್ತು ಜನ ನೇಜಿ ಕೀಳುವ ಕೆಲಸದಲ್ಲಿ ತೊಡಗಿದ್ದರು (ಚಿಗುಬ. ೭).

[ನೇಜಿ + $ಕೀಳು_1$(<$ಕೀೞ್_1$)]

**ನೇಜಿ ನಡು, ನೇಜಿ ನೆಡು** (ಕ್ರಿ). ನೇಜಿಹಾಕು ; ನಾಟಿ ಹಾಕು : ಹಲವರೊಟ್ಟು ಸೇರಿ . . . ಉಚ್ಚಸ್ವರದಿಂದ ಪಾಡ್ದನ ಹಾಡುತ್ತಾ ಮಿಂಚಿನ ವೇಗದಿಂದ ನೇಜಿ ನಡುತ್ತಾ ಸಾಗುವುದನ್ನು ನೋಡುವಾಗ ನಾವೂ ಹೋಗಿ ಅವರ ಮಧ್ಯದಲ್ಲಿ ಕಲೆತುಬಿಡುವ ಎಂದು ಮನಕ್ಕನ್ನಿಸುತ್ತಿತ್ತು (ಕುರುಕಾ. ೨೯). **ನೇಜಿ ನೆಡು :** ಬೈಲುಗದ್ದೆಗಳಲ್ಲಿ ಮಾತ್ರ ನೇಜಿ ನೆಡುವರು (ಬಾಳಿಗಿ. ೧೦೨) ; ಒಂದು ದಿನ ಗದ್ದೆಯಲ್ಲಿ ನೇಜಿ ನೆಡಲೆಂದು ಅವಳು ಹೋದಳು (ಹಾಹುತ್ತ. ೬೫) ; ಮಳೆ ಬಂದೊಡನೆ ಎಣೆಯ ಬೆಳೆಯ ಸಾಮಗ್ರಿಗಳನ್ನೆಲ್ಲ ಸಿದ್ಧಪಡಿಸಿ ನೇಜಿ ನೆಟ್ಟು ಪುನಃ ಗಟ್ಟಕ್ಕೆ ಮರಳುವ (ರಕ್ತರೂ. ೧೧). [ನೇಜಿ + $ನಡು_1$]

**ನೇಜಿ ನೆಡು** 'ನೇಜಿನಡು' ನೋ.

**ನೇಜಿಸೂಡಿ** (ನಾ). (ನಾಟಿಗಾಗಿ ಕಿತ್ತ) ಸಸಿಗಳ ಸಣ್ಣ ಸಿವುಡು,— ಕಂತೆ : ನೇಜಿಸೂಡಿಗಳನ್ನು ತಂದು ಗದ್ದೆಯಲ್ಲಿ ಹರಡುವರು. ಹಾರೆ ಹಿಡಿದು ಎತ್ತರ ತಗ್ಗುಗಳನ್ನು ಸರಿ ಪಡಿಸುವರು (ಕುರುಕಾ. ೨೯).

[ನೇಜಿ + $ಸೂಡಿ_2$(<$ಸೂಡು_2$)]

**ನೇಜೆ** 'ನೇಜಯ' ನೋ.

**ನೇಜೆಯ** 'ನೇಜಯ' ನೋ.

**ನೇಜ್ಯೆ** 'ನೇಜಯ' ನೋ.

**ನೇಲ್ಶುಯ** 'ನೇಜಯ' ನೋ.

**ನೇಟಾಲ್‌ಹುಲ್ಲು** (ನಾ). ಒಂದು ಬಗೆಯ ಹುಲ್ಲು : (ವೈಶಾಗಿ. ೬೬-೧೩೫೧). [ನೇಟಾಲ್ ? + ಹುಲ್ಲು(<ಪುಲ್)]

**ನೇಟು** (ನಾ). ೧. ನೇರ; ನೆಟ್ಟಗಿರುವಿಕೆ ; ಡೊಂಕಿಲ್ಲದಿರುವುದು: ಆಕಳುಗಳ ಕೋಡುಗಳು ನೇಟಾಗಿ ಅಥವಾ ಬಾಗಿ ಇರುವವು(ಮುಂಬಯಿ. ೫-೧೮); ನೇರವಾದ, ನೇಟಾದ ಸಮಾಚಾರ(First hand information. ಇಂಕಸಿ). ೨. ಚೆನ್ನಾಗಿರುವುದು ; ಸರಿಯಾಗಿರುವುದು : ಕಪಟನಾಟಕ ಶ್ರೀ ಲಕುಮಿಾಶ ಆಹ ನೇಟಾಗಿ ನಖಲಲಾಟ ಪರಿಯಂತ

ನೋಟದಿಂದಲೆ ಈಶಕೋಟಿ ಸಹಿತನಾಗಿ ಕಾಮಾದಿಗಳನ್ನೆಲ್ಲ ತರಿದು (ವಿವಾಕ್ಯ. ೫೩-೨೨); ಶ್ರೀನಿವಾಸಾಖ್ಯಕವಿ . . . ನೇಟಾದ ರಂಗ ನಗರಕ್ಕೈದಿ ನಿಜಸತಿಗೆ ತೋರಿಸಿದನದರ ಚಲುವಾ (ಅರ್ಚಾವಿ. ೧-೧); ಅವನೂ ನೇಟ ಕುಳವಾಗಿದ್ದರೆ, ಮೇಳದ ಒಡತಿಯು ನಕಾರ ಬರದಿದ್ದರೆ . . . ಖೇಲ್ – ಖಿಲಾಸಾದ ಮೇಲೆ ಏಕಾಂತವಾಗಿ ಜಮಾಸಿಕೊಳ್ಳುತ್ತಾರೆ (ದೀಪಹ. II, ೩೯೧). **೩.** ನಿಜ; ಸತ್ಯ: 'ನೇಟುಸುದ್ದಿ' ಪರಾ. **೪.** ಶಕ್ತಿ; ಬಲ; ಸಾಮರ್ಥ್ಯ: ನೇಟ (ಶಕ್ತಿ), —ಹುಡುಗನ ಮೈಯಾಗ ನೇಟ ಇಲ್ಲ (.ಹುಡುಗನ ಮೈಯಲ್ಲಿ ಶಕ್ತಿ ಇಲ್ಲ) (ಸುವರ್ಣ. ೩೨೬). 'ನಿಡಿದು$_1$', 'ನೀಟು$_2$' ಪರಾ.

[ದೇ.॥ ತಮಿ. ನೆಟ್ಟು, ನಟ್ಟ; ತೆಲು. ನೇಟು./ಮರಾ. ನೇಟ್]

**ನೇಟುಸುದ್ದಿ** (ನಾ). ನಿಜವಾದ ಸಮಾಚಾರ,—ಸುದ್ದಿ: (?).

[ನೇಟು+ಸುದ್ದಿ]

**ನೇಣ್$_1$, ನೇಣು** (ನಾ). **೧.** ಹಗ್ಗ; ಹುರಿ: "ಶುಲ್ಬಾ, ರಜ್ಜುಃ, ವಟಾರಃ, ವಟಃ, ತಂತ್ರೀಗುಣಃ–ಈ ೫ ನೇಣ್" (ಹಲಾಯು. ೯೮–೪೪೩); ಕೆಯ್ಯಂ ನೇಣುಮುನಳವಿಯೊಳ್ ಕೂಡಿ ನಡೆಯಲ್ವೇಟ್ಟು ಬೇಂಟೆವಸದನಂ ಗೊಂಡು [ಕಂ]ಡಿಯ ಬಾಗಿಲೊಳುದಾತ್ತನಾರಾಯಣನುಂ ನಾರಾಯಣ ನುಮಿರ್ದು . . . ಬಿಲ್ಲ ಬಲ್ಮೆಯಂ ಮೆಚಿದು (ಪಂಪಭಾ. ೫-೪೭ ವ); ಕರ್ಮಮುಳ್ಳಂಗೆ ನೇಣಂ ಪಿಡಿದೊಡಂ ಪಾವಾಗಿ ತಿಂಗುಂ (ಧರ್ಮಾಮೃ. ೧೩-೮೪). **ನೇಣು: ೧.** ಪಾತಾಳದಗ್ಗವಣಿಯ ನೇಣಿಲ್ಲದೆ ತೆಗೆಯು ಬಹುದೇ ಸೋಪಾನದ ಬಲದಿಂದಲ್ಲದೆ (ಚನ್ನಪ. ಕ. ೩೩೦-೬೪೭); ವಾಣಿ ನುಡಿಸುವ ವೀಣೆಯ ತಂತಿಯದು ದೊಡ್ಡ ನೇಣೆಂದು ನಗುವ ಚೆಲ್ವಿಕೆಯ ವೀಣೆಯ ನುಡಿಸುತ ಪಾಡಿದರರುಹನ ವೀಣಾಲಾಪೆಯರೊಲ್ದು (ಭರತ. ೫-೭೧); ಕೋಪವೆಂಬುದು ಕೀಳಿ ಪಾಪದ ನೆಲೆಗಟ್ಟು ಕೂಪದೊಳು ನೇಣು ಹಜಾದಂತೆ ನರಕದೊಳು ಕೋಪಿ ತಾನಿಳಿವ (ಸರ್ವಜ್ಞ. ೫೨೯). **೨.** ಅಪರಾಧಿಗಳ ಕೊರಳನ್ನು ಬಿಗಿದು ಕೊಲ್ಲುವ ಕುಣಿಕೆ,—ಉರುಲು ಮತ್ತು ಹಾಗೆ ಕೊಲ್ಲುವ ಶಿಕ್ಷೆ: ನಿಮ್ಮನಜಾಯದ ಕಾರಣ ಕೈಯಲ್ಲಿ ಹುಲ್ಲು ನಿಮಗೆಜಿಗದ ಕಾರಣ ಕೊರಳಲ್ಲಿ ನೇಣು (ಬಸವ. ೫೮೯); ಹನ್ನೆರಡು ವರ್ಷಗಳಿಂದ ನರಳಿದೆನಯ್ಯಾ ಆ ಭಯಂಕರ ರೋಗ ದಿಂದ . . . ಏನಾದರೂ ವಾಸಿಯಾಗಲಿಲ್ಲ. ಇನ್ನೇನು ನೇಣೊಂದೆ ಉಳಿದಿತ್ತು (ಚಂದ್ರಸ. ೪೫-೨೪); ಅವನಿಗೆ ನೇಣಾಯ್ತು (ರೂಢಿ). **೩.** ದಾರ; ನೂಲು; ಸೂತ್ರ: ನೇಣ ತುದಿಯ ಬೊಂಬೆಯಂತಂತೆ ಆಡಿದೆನಯ್ಯ ನೀನಾಡಿಸಿದಂತೆ (ಮಹಾದೇ. ಬ. ೧೬-೨೦); ಮತ್ತಾನ್ಯವಳಿಯ ದಾರದಲಂಬಿಗನು ಪೋಣಿಸುತಲಿರುತಿರಲು ಮನದೊಳಗೆ ಆ ಪ್ರಾಪ್ತಕಾಲಜ್ಞನು ನಿಧಾನಿಸಿಕೊಂಡು . . . ನೇಣನು ತುಡುಕಿ ತಾ ಕಚ್ಚಿಕೊಂಡೊಂ ದಿನಿತು ಚಲಿಸದೆ ನಿಂದುದಾಕ್ಷಣ (ತಿಮ್ಮಕಾ. ೩-೭೧). **೪.** (ಅಲಂ) ಜನಿವಾರ: ಬಡ ಹಾರುವನೇಸು ಭಕ್ತನಾದರೆಯೂ ನೇಣಿನ ಹಂಗ ಬಿಡ ಮಾಲೆಗಾಜನೇಸು ಭಕ್ತನಾದರೆಯೂ ಬಾವಿಯ ಬೊಮ್ಮನ ಹಂಗ ಬಿಡ (ಬಸವ. ೪೫೦).

**ನೇಣ ಜಂತ್ರ** = "ಸೂತ್ರದ ಬೊಂಬೆ" (ವರ್ಧಪು. ಕೋಶ): ನೇಣ ಜಂತ್ರದವೊಲಮರ್ಕಿಗೆಟ್ಟಬಲೆ ಲಾಂಗಲಿ ಮೂರ್ಛೆಗೆ ಸಂದು (ವರ್ಧಪು. ೯-೫೮).

[ದೇ.॥ ತಮಿ. ಞಾಣ್, ನಾಣ್, ನಾಣಿ; ಮಲ. ಞಾಣ್; ತುಳು. ನೇಣ, ನೇಣು, ನೇನು; ಗೊಂಡಿ. ನೋಣೆ; ಕುಇ. ನೋಣು]

**ನೇಣ್$_2$** (ನಾ). ಒಂದು ಬಗೆಯ ಮರ: "ನೇಣೆನೆ[ವಾಕಾಂ, ನೇಣೆಯೆನೆ]ಬೋನ ಗಾರೆ ಮಂಗಾರೆ ವಂಗ್ಯಾರೆಯುಕ್ಕು" (ಮಂಗರಾ. ೩೬-೧೭).

**ನೇಣಿಕ್ಕು** (ಕ್ರಿ). ಯಜ್ಞೋಪವೀತವನ್ನು ಧರಿಸು: ಮಾಣಿಯುವ ನೆಂದು ಕೊರಳೊಳು ನೇಣಿಕ್ಕಿದ ಕಡದೆ ಪಾರ್ಥನಾದಂ (ಸಮುಪ. I ಅನು. ೩೭೧-೪೦).

[ನೇಣ್$_1$+ಇಕ್ಕು$_1$]

**ನೇಣಿಗ** (ನಾ). ಯಜ್ಞೋಪವೀತವನ್ನು ಧರಿಸಿದವನು; ಬ್ರಾಹ್ಮಣ: ಪೂಜೆಯದಲ್ಲದೆ ಮಾಣೆವೆಂದು ಗುರು ಕಿಂಕರರ್ಘುಡಿಘುಡಿಸಿ ರೌದ್ರಾಕೃತಿಯು ತೋಜಲಾಕ್ಷಣಂ ಪಡಲಿಟ್ಟು ನೇಣಿಗರ ಪಡೆ ಕೆಟ್ಟವೆಂದು ದಡದಡಿಸಿ ಬೀಳುತ್ತೇಳುತೆ . . . ಮೊಜಿಯಿಡಲು (ಕೊಟ್ಟೂಬ. ೩-೧೩).

[ನೇಣ್$_1$+-ಇಗ]

**ನೇಣು** 'ನೇಣ್$_1$' ನೋ.

**ನೇಣುಕಾಜ** 'ನೇಣುಗಾಜ' ನೋ.

**ನೇಣುಗ** (ನಾ). ಹಗ್ಗವನ್ನು ಮಾಡುವವನು ಅಥವಾ ಮಾರು ವವನು: ಉಗ ಪ್ರತ್ಯಯಕ್ಕೆ—ನಾರುಗಂ . . . ನೇಣುಗಂ, ಹೆಣ್ಣುಗಂ, ಮಣ್ಣುಗಂ (ಶಮುದ. ೨೦೪ ಪ್ರಯೋ).

[ನೇಣ್$_1$+-ಉಗ]

**ನೇಣುಗಂಬ** (ನಾ). ನೇಣು ಹಾಕುವುದಕ್ಕೆ ನಿಲ್ಲಿಸಿದ ಕಂಬ; ಗಲ್ಲುಗಂಬ: ಇಂದು ಯಾರೂ ನೇಣುಗಂಬವನ್ನು ಏರುವುದಿಲ್ಲವೆಂಬ ತೃಪ್ತಿ ರಾಜಕೀಯ ಖೈದಿಗಳಲ್ಲಿ ಮೂಡಿತು (ಆತ್ಮಾಪರ. ೧೩).

[ನೇಣು(<ನೇಣ್$_1$)+ಕಂಬ$_1$(<ಕಂಭ)]

**ನೇಣುಗಾಜ, ನೇಣುಕಾಜ** (ನಾ). **೧.** =ನೇಣಿಗ: ಹೆಜರ ಗೋಣ ಕೊಯ್ದೆನೆಂದು ಮಂತ್ರವನೋದುವ ನೇಣುಗಾಜರ ಮೆಚ್ಚ ಕೂಡಲ ಸಂಗಮದೇವ (ಬಸವ. ೫೪೦). **ನೇಣುಕಾಜ: ೨.** =ನೇಣುಗ: ನೇಣುಕಾಜರ್ ವೀಸಂ ಕಾಗಿಣಿಯಂ ಬಿಟ್ಟರ್ (ಮುಂಬರಾ. XI, ೨೬೬-೭೪; 1162).

[ನೇಣು(<ನೇಣ್$_1$)+-ಕಾಜ]

**ನೇಣುಗೊಲೆ** (ನಾ). ನೇಣು ಹಾಕಿ ಕೊಲ್ಲುವಿಕೆ; ಗಲ್ಲಿಗೇರಿಸುವಿಕೆ: ಗಂಡ ಹೆಂಡಿರನ್ನು ಬೇರ್ಪಡಿಸಿ ಪರಸ್ತ್ರೀ ಪರಪುರುಷರೊಡನೆ ಬಲಾತ್ಕಾರವಾಗಿ ಸೇರಿಸುವ ಅತ್ಯಾಚಾರ, ಜೊತೆಗೆ ಗುಂಡುಗೊಲೆ ನೇಣುಗೊಲೆಗಳು—ಇಂಥ ಅಸಂಖ್ಯಾತ ಅತ್ಯಾಚಾರಗಳಿಗೆ ಸರ್ಕಾರವೇ ಹೊಣೆ (ಪುನರು. ೫೫೧).

[ನೇಣು(<ನೇಣ್$_1$)+ಕೊಲೆ$_2$]

**ನೇಣುರುಳು** (ನಾ). = ನೇಣುಹಗ್ಗ: ಹೂಮಾಲೆ ಸೂಡುವೆವು ಕೊರಳಿಂಗೆ ಎಂದೆನುತೆ ನೇಣುರುಳನೆಳೆದಯ್ಯೋ ಕೊಲ್ಲಬೇಡಿ (ಕೋಗಿಲೆ. ४೧-೨೦).

[ನೇಣು(<ನೇಣ್$_1$)+ಉರುಳು$_3$(<ಉರಿಲ್)]

**ನೇಣುಶಿಕ್ಷೆ** (ನಾ). ಗಲ್ಲಿಗೇರಿಸುವ ದಂಡನೆ: ಅಪರಾಧಿಗೆ ಶ್ರೇಷ್ಠ ನ್ಯಾಯಾಲಯದವರು ನೇಣುಶಿಕ್ಷೆಯನ್ನು ಘೋಷಿಸಿದರು (ರೂಢಿ).

[ನೇಣು(<ನೇಣ್$_1$)+ಶಿಕ್ಷೆ]

**ನೇಣುಹಗ್ಗ** (ನಾ). ನೇಣು ಹಾಕಲು ಬಳಸುವ ಹಗ್ಗ; ಗಲ್ಲಿಗೇರಿಸುವ ಮಿಣಿ: ಆ ಜನರು ಬಂದೂಕು, ಚೂರಿ, ಬಿಲ್ಲು–ಬಾಣ, ನೇಣುಹಗ್ಗಗಳೇ ಮೊದಲಾದ ಪ್ರಾಣಾಂತಕ ಆಯುಧಗಳ ಬಗ್ಗೆ ಹೆದರುತ್ತಿದ್ದಿಲ್ಲ (ಬಂಗಾಹೆ. ೨, ಮುನ್ನುಡಿ); ರಾಜಕೀಯವೆಂಬುದು ಲಕ್ಷೋಪಲಕ್ಷ ಮಂದಿಯ ಇಷ್ಟಾನಿಷ್ಟಗಳ, ಹಿತಾಹಿತಗಳ ಸಂಘಾತ. ಅದರಲ್ಲಿ...ಒಬ್ಬನಿಗಾದ ಹೂಮಾಲೆ ಇನ್ನೊಬ್ಬನಿಗೆ ನೇಣುಹಗ್ಗ (ಸಾಹಿಶ. ೧೪).

[ನೇಣು(<ನೇಣ್$_1$)+ಹಗ್ಗ(<ಪಗ್ಗ)]

**ನೇಣುಹಾಕು** (ಕ್ರಿ). (ಕೊಲ್ಲುವುದಕ್ಕಾಗಿ) ಕೊರಳಿಗೆ ಉರುಲು ಹಾಕು; ಗಲ್ಲಿಗೇರಿಸು: ನನ್ನನ್ನು ಕೊಂದರೆ ನಿಮ್ಮನ್ನು ಸುಮ್ಮನೆ ಬಿಡುತ್ತಾರೆಯೆ? ನಿಮ್ಮನ್ನೂ ನೇಣು ಹಾಕುತ್ತಾರೆ (ಹೊಸಕ್ಷಿ. ೧೧). ಕೊರಲನ್ನು ಹಿಡಿದು ನೇಣುಹಾಕುವಳು (ಕವಿಶ. ೪೮).

**ನೇಣು ಹಾಕಿಕೊಳ್ಳು** = **೧.** (ಸಾಯುವುದಕ್ಕಾಗಿ) ಕುತ್ತಿಗೆಗೆ ಉರುಲು ಹಾಕಿಕೊಳ್ಳು: ನೇಣು ಹಾಕಿಕೊಳ್ಳುವವನ ಹತ್ತಿರ ಕೋಣ

ಕೇಳಿದ ಹಾಗೆ (ಗಾದೆ) ; ಅಪ್ಪ ನೆಟ್ಟ ಆಲದ ಮರಕ್ಕೆ ನೇಣು ಹಾಕಿಕೊಂಡಂತೆ (ಗಾದೆ). ೨. (ಅಲಂ) ಹಿಂಸೆ ಕೊಡು : ಸಾಲದ ಹಣಕ್ಕಾಗಿ ಅವನು ದಿನಾ ಬಂದು ನೇಣುಹಾಕಿಕೊಳ್ಳುತ್ತಾನೆ (ರೂಢಿ).
[ನೇಣು(<ನೇಣ್$_1$)+ಹಾಕು(<ಪಾಯ್ಯು$_1$)]

**ನೇಣ್ಕಾರ್ತಿ** (ನಾ). ಸಾವುಂಟುಮಾಡುವವಳು : ಮೃಗಮುಂ ಪತಿಯಿಂದಂ ಗೋಣಿಗೆ ಪತ್ತಿಸಿ ಕೊಲಿಪ ಶಬರಿ ಪಥಿಕರನೊಳ್ಕಾತುಗಳಿಂ ಸಿಲ್ಕಿಸಿ ಪತಿಯಿಂದುಗಿಯಿಪ ನೇಣ್ಕಾರ್ತಿ[ಪಾಠಾಂ.ಎಣೆಗಾರ್ತಿ]ಯಿಂದಮುಂ ನೆನೆಯಿಸಿದಳ್ (ಪಾರ್ಶ್ವಪು. ೧೨-೭೭).
[ನೇಣ್$_1$+-ಕಾಱ+-ತಿ$_1$(<-ಇತ್ತಿ)]

**ನೇಣ್ಗಯ್ಯ** 'ನೇಣ್ಗೆಯ್ಯ' ನೋ.

**ನೇಣ್ಗೆಯ್ಯ, ನೇಣ್ಗಯ್ಯ, ನೇಣ್ಗೈಯ** (ನಾ). ಪಾಶವನ್ನು ಕೈಯಲ್ಲಿ ಹಿಡಿದಿರುವವನು ; ವರುಣ : "ನೇಣ್ಗೆ [ಪಾಠಾಂ. ಣ್ಗ]ಯ್ಯ ಮುನ್ನೀರೆಱೆಯ ಕರಮೆಸೆವ ನೆಗಟ್ದೀರ ಪಡುವದೆಸೆಗೊಡೆಯನೆನೆ ವರುಣನಾಮಂ" (ಶಬ್ದಮಂ. ೧೪). **ನೇಣ್ಗಯ್ಯ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ನೇಣ್ಗೈಯ :** ಕರ್ಮದಿನೆ ಇಂದಿರಂ ದೇವರ್ಕಳೊಡೆಯನಾದಂ . . . ತಗರ್ದೇರಂ ನೇಣ್ಗೈಯಂ ಮುಂತಪ್ಪರ್ ದೆಸೆವಳರಾದರ್ (ರಾಮಾಶ್ವ. ೧೪೦-೩).
**ನೇಣ್ಗಯ್ಯವ**=ನೇಣ್ಗೆಯ್ಯ : "ಸಲೆ ವರುಣನಕ್ಕು ನೇಣ್ಗಯ್ಯವಂ" (ಕಶರ. ೫೭). [ನೇಣ್$_1$+ಕೆಯ್$_2$+-ಅ$_7$]

**ನೇಣ್ಗೈಯ** 'ನೇಣ್ಗೆಯ್ಯ' ನೋ.

**ನೇಣ್ಗೋಣ** (ನಾ). ಕೊರಳಿಗೆ ನೇಣು ಹಾಕಿಸಿಕೊಂಡವನು : ಮುನ್ನಮೇ, ಮದಿಸಿ ನೀವುತ್ ನಡಸಿದತ್ಯಾಚಾರಮಿದನೆಲ್ಲ, ಜನಕೆ, ಬರ್ದುಕಿರ್ದೆ ನೇಣ್ಗೋಣರಾಗಿ, ನೀವುತ್ ತೋಱುಪ್ಪರ್ (ಅಂತಿಗೊ. ೧೫-೨೮೭). [ನೇಣ್$_1$+ಗೋಣ್+-ಅ$_7$]

**ನೇಣ್ಬಲೆ** 'ನೇಣ್ವಲೆ' ನೋ.

**ನೇಣ್ವಲೆ, ನೇಣ್ಬಲೆ** (ನಾ). (ಹಗ್ಗ ಅಥವಾ ಕಣ್ಣಿಯಿಂದ ಮಾಡಿದ) ಒಂದು ಬಗೆಯ ಬಲೆ ; ಉರುಳು ಹಾಕುವ ಬಲೆ : ಕರಿಯ ಜವಿವಲೆ ಮುಸುಕುವಲೆ ಬಿತ್ತರದ ನೇಣ್ವಲೆ ಮೊಕರವಲೆ ಬೇಡರ ಸಿರದೊಳೊಪ್ಪಿದುದು (ಸಾಳ್ವಭಾ. ೫-೧೯). **ನೇಣ್ಬಲೆ :** ಅಂತು ನಿದ್ರೆಗೆಯ್ದು ಕಿಱಿದು ಬೇಗಕ್ಕೆಂತಾನುಮೆಚ್ಚತ್ತು ನೇಣ್ಬಲೆಯೊಳ್ ಸಿಲುಕಿರ್ದೆನ್ನಂ ಕಂಡಿದೆತ್ತಣಿಂ ಬಂದುದೆಂದು ನೋಟ್ಪನ್ನೆಗಂ (ಕಾದಂಬ. ೭೩೭) ; ಓರೊರ್ಮೆ ಧಾರಾಗ್ರಹಾಂತರದೊಳಂತುಮಿಂತುಮುಣ್ಮುವ ಹಿಮಾಂಬುಧಾರೆಗಳ್ ಬಳಸೆ ಬೆಗಡುಗೊಂಡು ನೇಣ್ಬಲೆಯ ತೊಡರೊಳ್ ತೊಡಂಕಿ ನಡುಗುವ ಕುರಂಗಿಯೊಳ್ ದೊರೆಯಪ್ಪಳೆ (ಪರ್ಧಪು.೪-೫೪ ವ).
[ನೇಣ್$_1$+ಬಲೆ$_2$]

**ನೇಣ್ವಿಲ್ಲು** (ನಾ.) ಒಂದು ಬಗೆಯ ಬಿಲ್ಲು : ಅಲ್ಲಿಯಾತನ ಕೂಡೆ ತಟ್ಟಿಯ ಬಿಲ್ಲುಗಳನಾ . . . ನೇಣ್ವಿಲ್ಲುಗಳ ಪದವಿಲ್ಲುಗಳನೆಡೆಗೆಡೆಗೆ ಸೀವಳಿಬಿಲ್ಲುಗಳ ಪಿಡಿದಾ ನಿಶಾಟರು ನೆರೆದುದವನೊಡನೆ (ಸಾಳ್ವಭಾ. ೫-೧೩). [ನೇಣ್$_1$+ಬಿಲ್ಲು$_1$ (<ಬಿಲ್$_2$)]

**ನೇತ** 'ನೆಯ್$_1$' ಪರಾ.

**ನೇತಾಡು** 'ನೇಲ್' ಪರಾ.

**ನೇತಾರ** (ನಾ). ಮುಖಂಡ ; ಮುಂದಾಳು ; ನಾಯಕ : ಆರಾದೇಶಕ್ಕೆ–ಸವಿತಾರ, ಕರ್ತಾರ, ನೇತಾರ (ಶಮದ. ೬೪ ಪ್ರಯೋ); ಸುತ್ತಲು ಪ್ರಾಣಿಗಳ ಹಾಹಾಕಾರ ದಿಕ್ಕನ್ನೇ ಭೇದಿಸುವಂತೆ ಕೇಳುತ್ತಿದ್ದರೂ ಲೋಕನೀತಿಯ ನೇತಾರ ತಾನೆಂದು ತಿಳಿದ ವಿಶ್ವಾಮಿತ್ರ ಅದಕ್ಕೆ ಕಿವುಡನಾಗಿದ್ದಾನೆ (ಅಶ್ವಮೇ. ೩೧) ; ನಿತ್ಯಜೀವನದಲ್ಲಿ ಹೇಳ ಹೆಸರಿಲ್ಲದಂಥ ಹತ್ತಾರು ಮಂದಿ – ವೀರ, ಧೀರ ನೇತಾರರೆನಿಸಿದರು (ಗೊಂಡಾರ. ೪) ; ಹಿಂದೂ ಸಮಾಜದ ಆಶೆ-ಆಕಾಂಕ್ಷೆಗಳನ್ನು ಹಿಂದೂಮಹಾಸಭೆಯ ಕೆಲವು ನೇತಾರರು ಜಗತ್ತಿನ ಎದುರು ಚೆನ್ನಾಗಿ, ತರ್ಕಶುದ್ಧವಾಗಿ ಮಂಡಿಸಿದ್ದೇನೊ ನಿಜ(ಯಕ್ಷಪ್ರ. ೬೫). [ಸಂ. ನೇತೃ]

**ನೇತಿ** (ನಾ). [ಅದ್ವೈತ] ಅಲ್ಲದುದು ; ಇಲ್ಲದುದು ; ಶೂನ್ಯ : ಹಕ್ಕಿ ನೈರಾಶ್ಯದ ತಳದಲಿ ಸ್ವರ ಮರೆಸಿದ ರೀತಿ ಸುಮ್ಮನಿಹವು ಗಿಳಿ ಗೊರವಕ ನವಿಲು ; ಮೌನ ಮುದ್ರಿಸಿತು ನೇತಿ (ಸುಕೀತ. ೪೨-೧೦) ; ಅರಿಸ್ಟಾಟಲ್‌ನೆಂಬ ಪಾಶ್ಚಿಮಾತ್ಯತತ್ವಜ್ಞನು ತನ್ನ ನೈತಿಕಸಿದ್ಧಾಂತದ ಗ್ರಂಥದಲ್ಲಿ . . . ಪ್ರತಿಯೊಂದು ಸದ್ಗುಣವು ಅತಿ ಮತ್ತು ನೇತಿ ಇವುಗಳ ನಡುವಿನ ಮಿತಿಮಾರ್ಗವು, ಅದೇ ನಿಜವಾದ ಸದ್ಗುಣವು ಎಂದೆನ್ನುತ್ತಾನೆ (ಗೀತಾಸಂ. ೧೨೫). 'ನೇತಿಗಳೆ' ಪರಾ.
**ನೇತಿ ಮಾಡು**=ನೇತಿಗಳೆ ೧ : ಶರಣನು ಸಾಕಾರವಾಗಿ ದೃಶ್ಯನಪ್ಪ ಜೀವನಲ್ಲ ನಿರಾಕಾರನಾಗಿ ಸಾಕಾರವ ನೇತಿ ಮಾಡಿ ತೋರದಿಪ್ಪವನಲ್ಲ (ವಚಸಂ. ೫೩೫-೧೪ ಟೀಕು). [℗ ಇದು ಸಂಸ್ಕೃತದಲ್ಲಿ ಒಂದು ಪದವಲ್ಲ, ನ ಮತ್ತು ಇತಿ]

**ನೇತಿಗಳೆ** (ಕ್ರಿ). ೧. ಇಲ್ಲದಂತೆ ಮಾಡು ; ನಿವಾರಿಸು ; ತೆಗೆದುಹಾಕು : ತ್ರಿವಿಧಮಲವ ನೇತಿಗಳೆದು ಮತ್ತಾ ಅಱಿವ ಮಱೆದು ಮಲತ್ರಯವನೊಡಗೂಡಿದಲ್ಲಿ ಬಂಧನವೆಂಬುದಕ್ಕೆ ಸೂಚನೆ (ನೋಳ್ಪಮಾ. ೧೦೭-೪೨೧) ; ದೇಹಾದ್ಯನಾತ್ಮವರ್ಗಮಂ ಯುಕ್ತಿಯಿಂ ನೇತಿಗಳೆದುಳಿದಾತ್ಮನ ನಿಜವನಱಿಪುದೇ ಅತದ್ವ್ಯಾವೃತ್ತಿಲಕ್ಷಣವೆನಿಸುವುದು (ವಿವೇಕ. ೨೨) ; ಇನಿತು ವಿಧವಾಗಿರ್ದ ಪ್ರಾಣಗಳನಿತನಾತ್ಮಗಳೆಂದು ತಿಳಿದವ ಘನವಿವೇಕದಿ ನೇತಿಗಳೆದವಱಿ ಮಮತೆಯನು ನೆನೆಯದದಱ ನಿಮಿತ್ತಕಾರಣವೆನಿಪ ನಿಜಚೈತನ್ಯವಸ್ತುವನನಘ ನಿನ್ನೊಳು ಕಂಡು ನೀನೆಂದದನು ಚಿಂತಿಪುದು(ಅಮೃತ.೩-೬೫). ೨. ವ್ಯರ್ಥವಾಗಿ ಕಳೆ; ನಿರರ್ಥಕಗೊಳಿಸು : ಭೂತಳಾಧಿಪನಿಂತು . . . ಮೃಗಸಂಪ್ರೀತಿಪರವಶನಾಗಿ ದಿನವನು ನೇತಿಗಳೆವುತ್ತಿರ್ದನು (ನಿಭಾಗ. ೫-೫-೪೦). [ನೇತಿ+ಕಳೆ$_1$]

**ನೇತು** 'ನೇಲ್' ಪರಾ.

**ನೇತೃ** (ನಾ). ೧. ಮುಖಂಡ ; ಮುಂದಾಳು ; ನಾಯಕ : ಈ ಸಂಜೀವಕನನಾಪ್ತನೆಂದು ಮಂತ್ರಿಯಂ ಮಾಡಿ . . . ಅದು ಕಾರಣದಿಂ ನಿನ್ನ ರಾಜ್ಯಕ್ಕಾತನೇ ನೇತೃ [ಪಾಠಾಂ. ಧೂಮಕೇತು] ವಾದನೆಂದು ನುಡಿದ ದವನಕನ ನಿಪ್ಪುರಾಲಾಪಂಗಳ್ಗೆ ಪಿಂಗಳಕಂ ಕರಂ ಮುಳಿದಿಂತೆಂದಂ (ಪಂಚತಂ. ೯೯-೨) ; ಉಗ್ರಪಕ್ಷದ ನೇತೃಗಳಾದ ಬಾಲಗಂಗಾಧರತಿಲಕರ ಜೊತೆಯಲ್ಲಿ ನಿಂತು ಶ್ರೀ ಅರವಿಂದರು ಕೆಲಸ ಮಾಡತೊಡಗಿದರು (ಕಸಪು.೭-೮೩) ; ಸಾವಿತ್ರೀದೇವಿಯವರು . . . ಈ ಆಯೋಗದ ನೇತೃಗಳಾದ ರೋಹಿಣೀಕುಮಾರರವರೆಗೆ . . . ನಿರ್ಭಯವಾಗಿ ವ್ಯವಹರಿಸುತ್ತಿದ್ದರು (ಹೇಮಂತ. ೩೫೫). ೨. ಒಡೆಯ ; ಯಜಮಾನ ; ಅಧಿಪತಿ : "ನೇತೃವೆನಲೊಡೆಯಂಗೆ ನಾಮಮಕ್ಕು" (ಮಂಗರಾ. ೭೭-೬). [ಸಂ.]

**ನೇತೃತ್ವ** (ನಾ). ಮುಖಂಡತನ ; ನಾಯಕತ್ವ : ಪ್ರಧಾನ ಮಹಾಪ್ರಧಾನರ ನೇತೃತ್ವದಲ್ಲಿ ಭಟರು ಸಿದ್ಧರಾಗಿ ಕೆಲಸ ಮಾಡುತ್ತಿದ್ದರು (ಶಾಂತಲಾ. ೧೦೨) ; ರಾಜೇಸಾಹೇಬರ ಖಾಸ ನೇತೃತ್ವದಲ್ಲಿ ಹೆಸರಾಂತ ಪೈಲವಾನರ ಕುಸ್ತಿಗಳನ್ನು ಅಲ್ಲಿ ಏರ್ಪಡಿಸಲಾಗಿತ್ತು (ಗ್ರಾಮಾಯ.೫೧).
[ಸಂ.]

**ನೇತ್ರ** (ನಾ). ೧. ಕಣ್ಣು ; ನಯನ : "ದೃಕ್, ದೃಷ್ಟಿಃ, ನೇತ್ರಂ . . . ಅಕ್ಷಿ – ಈ ೯ ಕಣ್" (ಹಲಾಯು. ೮೬-೩೬೫) ; ಸುಮನೋಭೂಷಣದಿಂ ಜಂಗಮಲತೆಗಳೆನಿಪ್ಪ ಲಲನೆಯರ್ ನೃಪನೇತ್ರಭ್ರಮರಮನಾ ವನಲತೆಯಿಂ

ತನುಗಭಿಮುಖಮಾಗೆ ಮಾಡಿದರ್ ತತ್‌ಕ್ಷಣದೊಳ್ (ಮಲ್ಲಿಪು. ೬-೮೪); ನೇತ್ರ ನಾಸಿಕ ಪಾದ ಪಾಣಿ ಶ್ರೋತ್ರವೆಂಬಿವು ತಮ್ಮೊಳೊಂದೇ ಸೂತ್ರದಲಿ ಸಂಸ್ಪೃಷ್ಟವಾಗಿ ಸಮಾನಬುದ್ಧಿಯಲಿ ಗಾತ್ರವಿಡಿದಿಹವೋಲು ವಿಶ್ವದ ಮೈತ್ರಿಯಲಿ ಮನಸಂದು ಪಾತ್ರಾಪಾತ್ರವೆನ್ನದೆ ಬೆರಸಿ ಬದುಕುವುದಧಿಕ ಗುಣವೆಂದ (ಕುಮ್ಯಾವ್ಯಾ. ೪-೭); ರಮಣೀಯ್ಯದೊಳಗಧಿಕ ರಮಣೀಯ್ಯವಾಗಿರ್ಪ ರಮಣಿಯ ಮುಖಾಂಭೋಜದಲ್ಲಿ ಸುಳಿವುತ್ತಿರ್ಪ ರಮಣನೆನಿಸುವ ಶಿವನ ನೇತ್ರಭೃಂಗಗಳೊಪ್ಪಿದವು (ವೀಶೈವು. ೩-೧೭-೩೪). **೨.** ಕಡೆಗೋಲಿನ ಹಗ್ಗ; ಕಡೆಯುವ ಹಗ್ಗ. **೩.** ಮರದ ಬೇರು, —ಮೂಲ: "ಬೇರಲ್ಲಿಯುಂ ನೇತ್ರಮೆಂಬುದು" (ಹಲಾಯು. ೧೩೫-೨೩); "ಬೇರಲ್ಲಿ ನೇತ್ರವೆಂಬುದು" (ಮಂಗರಾ. ೧೯೯-೮). **೪.** ಮರದ ಬೀಳಲು. **೫.** ಒಂದು ಬಗೆಯ ಬಟ್ಟೆ,— ವಸ್ತ್ರ: "ಸೀರೆಯೊಳು ಗುಣದೊಳಕ್ಷಿಯೊಳು ನೇತ್ರವೆನಿಕ್ಕು" (ಮಂಗರಾ. ೧೫೦-೫೨); ಪಸಿಯ ನೇ[ಪಾಠಾಂ. ವೇ]ತ್ರಮುಮಂ ಪಚ್ಚವಡಿಸಿದಂತೆ ಪಸುರ್ಪುವಡೆದ ನೆಲದೊಳ್ ಪದ್ಮರಾಗದ ಪರಲ್ಗಳಂ ಬಲಿಗೆದಱಿದಂತೆ ಉಪಾಶ್ರಯಂಬಡೆದಳಂಕರಿಸುವಿಂದ್ರಗೋಪಂಗಳುಮಂ . . . ಕಂಡು (ಪಂಪಭಾ. ೭-೨೫ ವ); ಜಗ ಪೊಗಳೆ ಫುಲ್ಲಿಯ ಕಥಾಯಿ ಕಡೆಗಟ್ಟಿಂದ ಸೊಗಯಿಸಿದ ನೇತ್ರಸೂತ್ರಾವಳಿಗಳಿಂ ವಿವಾಹಗೃಹವೆಸೆಯಿತ್ತು (ಸಿದ್ಧರಾ. ೮-೫೩); ಆ ಪುರದೊಳಗುಣ್ಮಿ ಪೊಣ್ಮಿ ಕೃತಮಂಗಳತೂರ್ಯನಿನಾದವೆತ್ತಲುಂ ಸುರುಚಿರ ತೋರಣಂ ತುಱುಗೆ ತಳ್ತಿರೆ ನೇತ್ರವಿಚಿತ್ರಕೇತನಂ (ಪುಷ್ಪಪು.೮-೫೦). **೬.** ಅಡಕೆಯ ಮರ; ಪೂಗ: "ಕುಭೃತ್ಕುಜಾತ ಜಟಿಮೂಲಂ ಚೀಲ ಪೂಗಾಂಬಕಂ ಖ್ಯಾತಂ ಸದ್ಗುಣ ನೇತ್ರಮಕ್ಕು" (ನಾನಾರ. ೬೭). **೭.** [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ: "ಕರ ನೇತ್ರಮೆನಲೆರಡು" (ಮಂಗರಾ.೧೦೩-೮); ಯಮ ನಯನ ಕರ್ಣ ಕರ ಯಮಳಾಂಘ್ರಿ ದ್ವಿಯಕ್ಷಿ ಪಕ್ಷ ನೇತ್ರಂ ಸೂತ್ರಂ ಕ್ರಮ ಚರಣಂ . . . ಕಿವಿಗಳೆರಡಱ ನಾಮಮಂ (ವ್ಯವಹಾ.೯-೨). [ಸಂ.]

**ನೇತ್ರಗ್ರಾಹ್ಯ** (ನಾ). ಕಣ್ಣಿಗೆ ತಿಳಿಯುವಂಥದು; ದೃಗ್ಗೋಚರವಾದುದು: ಕೇಶಿರಾಜನು . . . ಅಕ್ಷರಗಳ ಉತ್ಪತ್ತಿಕ್ರಮವನ್ನು ನಿರೂಪಿಸಿ, ಅವುಗಳ ಸ್ವರೂಪವನ್ನು ಕುರಿತು 'ಧವಳವರ್ಣಮಕ್ಷರರೂಪಂ' (ಸೂತ್ರ ೩೪) ಎಂದಿದ್ದಾನೆ. ಈ ಧವಳವರ್ಣವು ನೇತ್ರಗ್ರಾಹ್ಯವಲ್ಲ, ಭಾವಗ್ರಾಹ್ಯವಾದ ರೂಪವನ್ನೆ ಕಲ್ಪಿಸಿ ಹೇಳಿದುದಾಗಿ ತೋರುತ್ತದೆ. (ಸಂಶೋಧ. ೨). [ನೇತ್ರ+ಗ್ರಾಹ್ಯ]

**ನೇತ್ರಚಿಕಿತ್ಸಕ** (ನಾ). =ನೇತ್ರವೈದ್ಯ: ಪೂರ್ಣದೃಷ್ಟಿನಾಶ, ಶಸ್ತ್ರಕ್ರಿಯೆಗೆ ಮೀರಿದ ಸ್ಥಿತಿ; ಫಲ: ಉಳಿದ ಜೀವನವನ್ನು ಕುರುಡಾಗಿ ಕಳೆಯುವುದು . . . ನೇತ್ರಚಿಕಿತ್ಸಕನನ್ನು ಹಳಿಯುವುದೆ? ಇಲ್ಲವೆ ಅವರ ಕರ್ಮಫಲವನ್ನು ಹಳಿಯುವುದೆ? (ನಿಮ್ಮದೃ. ೧೪೮). [ನೇತ್ರ+ಚಿಕಿತ್ಸಕ]

**ನೇತ್ರಚ್ಛದ** (ನಾ). ಕಣ್ಣಿವೆ; ರೆಪ್ಪೆ. [ಸಂ.]

**ನೇತ್ರಜ್ಞ** (ನಾ). ಕಣ್ಣಿನ ವಿಷಯದಲ್ಲಿ ಪರಿಣತನಾದವನು,— ತಜ್ಞನಾದವನು: ಯಾವ ನೇತ್ರಜ್ಞನೂ ಅರೆಕ್ಷಣ ಎರಚುವ ಬೆಳಕಿನಲ್ಲಿ ಗಟ್ಟಿಕಣ್ಣಿನ ಎಳಸಿನ ಸ್ಥಿತಿಯನ್ನು ಕಣ್ಣಾರೆಯಿಂದ ಪ್ರತ್ಯೇಕಿಸಿ ಗೊತ್ತು ಹಚ್ಚಲಾರ (ನಿಮ್ಮದೃ. ೧೪೪). [ಸಂ.]

**ನೇತ್ರತ್ರಯ** (ನಾ). ಮೂರು ಕಣ್ಣುಗಳುಳ್ಳವನು; ಮುಕ್ಕಣ್ಣ; ಶಿವ. [ಸಂ.]

**ನೇತ್ರಪಟ್ಟೆ** (ನಾ). "ರೇಷ್ಮೆಯ ಬಟ್ಟೆ" (ಮಹಾನೇ. ಕೋಶ): ಚೀನದ ಚಿತ್ರಾವಟಿಯ ದೇವಾಂಗದ ಸಂಧ್ಯಾರಾಗದುದಯರಾಗದ ನೇತ್ರಪಟ್ಟದ ಬಣ್ಣವಣ್ಣಿಗೆಯ ಜವಳಿಗಳಂ . . . ಪ್ರಮೋದದಿಂ ಕುಡುವುದುಂ (ಮಹಾನೇ. ೧೪-೧೨ ವ). 'ನೇತ್ರವಟ್ಟೆ' ಪರಾ. [ನೇತ್ರ+ಪಟ್ಟೆ$_3$./ತೆಲು. ನೇತ್ರಪಟ್ಟು]

**ನೇತ್ರಪಲ್ಲವ** (ನಾ). [ಯೋಗ] ಆರು ಮಂತ್ರಾಂಗ ಪಲ್ಲವಗಳಲ್ಲಿ ಒಂದು: ಮಂತ್ರಪಟ್ಪಲ್ಲವಂಗಳಲ್ಲಿ . . . ಮೋಹನ ಉದ್ದೀಪನ ಪುಷ್ಟಿ ವಿಜಯ ಶ್ರೇಯಸ್ಸಂಪಾದನಗಳಿಗೆ ನೇತ್ರಪಲ್ಲವಮಂ . . . ಮಂತ್ರಾಂತ್ಯದಲ್ಲಿ ಪ್ರಯೋಗಿಸಿ (ವಿವೇಕ. ೮೨). [ನೇತ್ರ+ಪಲ್ಲವ ?]

**ನೇತ್ರಪಲ್ಲವಿ** (ನಾ). ಕಣ್ಣಿನಿಂದ ಮಾಡುವ ಸಂಜ್ಞೆ; ಕಣ್ಸನ್ನೆ: ನೇತ್ರಪಲ್ಲವಿಯಿಂದ ಸೂತ್ರಗೊಂಬೀ ಹಾಂಗ ಪಾತ್ರ ಕುಣಿಸ್ಯಾನ (ಮೂರ್ತಿಕಾ. ೪೫-೧); ಬಾನ ಬರಸಿಡಿಲಲ್ಲಿ ಕೆಮ್ಮಿಂಚು ಹೊಮ್ಮಿಂಚು ಅಬ್ಬ! ವಜ್ರದ ಮಿಂಚು, ನೇತ್ರಪಲ್ಲವಿಯ ಈ ತಂತ್ರ ಬಲ್ಲವರಾರು? (ಸೂರ್ಯಪಾ. ೧೧೧-೨). [←ಮರಾ. ನೇತ್ರಪಲ್ಲವೀ, ನೇತ್ರಪಾಲವೀ]

**ನೇತ್ರಪಟಿ**, **ನೇತ್ರವಳಿ**, **ನೇತ್ರಾವಳಿ**, **ನೇತ್ರಾವಟಿ** (ನಾ). ಒಂದು ಬಗೆಯ ರೇಷ್ಮೆ ಬಟ್ಟೆ: ಎಲ್ಲಾ ಕಾಲಮುಂ ಮಣಿಕುಟ್ಟಿಮಭೂಮಿಯೊಳ್ ಪಾಸಿದ ನೇತ್ರ[ಪಾಠಾಂ. ನೇತ್ರದ]ಪಟಿಯಮೇಗೆ ನಡೆದ ಮೃದು ಲಲಿತಮಪ್ಪ ಚರಣದ್ವಯದೊಳ್ ಮುನ್ನೆಂದವುಂ ನೆಲನಂ ಕಿಟ್ಟಿಯಱಿಯದೊಂ ಕಠಿನಭೂಮಿಯೊಳ್ ನಡೆದೊಡೆ (ಪಡ್ಡಾರಾ. ೨೯-೮). **ನೇತ್ರವಳಿ**: ಸೂತ್ರವಳಿಯ ಚಿನ್ನಧಾರೆ ನೇತ್ರವಳಿಯ ಸುಲಿಪಲ್ಲು ಗಂಗಾಪುರ . . . ಕಂದವಾರದ ಸೀರೆ ಕೈಬರಹದ ಬಣ್ಣದಂದವ ನೇನ ಬಣ್ಣಿಸುವೆ (ಅಮುಸಾಂ. ೪-೮). **ನೇತ್ರಾವಳಿ**: ಪಳಿಯು ಪಟ್ಟಾವಳಿಯು ನೇತ್ರಾವಳಿಯು . . . ಇವು ಮೊದಲು ಥರಥರದೊಳಂದೆಮ್ಮವರುಗಳು ಪಡೆದೊದವಿಸಿದ ಯಿಾ ವಿವಿಧ ಪಟ್ಟಾವಳಿಗಳುಂಟು (ಬಸವು. ೧೧-೨೫); ಪೊಪ್ಪುಳಿಯು . . . ಮಿರುಪ ನೇತ್ರಾವಳಿಯು ಮುಖ್ಯನಾನಾವಿಧದ ಸೀರೆಗಳ ಚಿನ್ನದೆಳೆಮೊಗ್ಗ ಕಂಚುಕವ ಬೇಹನಿತ ತಗದು (ನವಮೋ. ೧೭-೬೦). **ನೇತ್ರಾವಟಿ**: ಎರಡು ಕೊಡೆಯುಂ ತೋಟಿ ತೆಮಳ್ದಿ ಬಿಗಿದುಟ್ಟು ನೇತ್ರಾವಟಿಯ ಚಲ್ಲಣಮುಂ . . . ಸೊರ್ಕಾನೆಯ ಕಯ್ಯ ಕರಿಯ ಪಿರಿಯ ಪಿಲ್ಲಣಿಗಯುಮುಗುರ್ಪುಮುದ್ಭುತಮಾಗೆ (ಅರ್ಥನೇ. ೮-೬೭ ವ). [ನೇತ್ರ+ಪಟಿ$_6$]

**ನೇತ್ರಪಾಟವ** (ನಾ). ಕಣ್ಣಿನ ಸಾಮರ್ಥ್ಯ,—ಪಟುತ್ವ: ವ್ಯಾಧಿಗ್ರಸ್ತನಾಗಿ, ಮರಣಾಸನ್ನನಾಗಿ, ನೇತ್ರಪಾಟವ ಕಡಿಮೆಯಾಗಿ ಇದ್ದ ಅರಸ ಅವು ಕೃಷ್ಣನ ಕಣ್ಣೆಂದೇ ನಂಬಿದ (ಅಳಿಕ. ೧೪); ಹೇಮಾದ್ರಿಗಳಿಗೆ ಇಷ್ಟು ಬೇಗ ನೇತ್ರಪಾಟವ ಕಡಿಮೆಯಾಯಿತೆ! (ಶಾಂತಲಾ. ೪೩). [ನೇತ್ರ+ಪಾಟವ]

**ನೇತ್ರಪುತ್ರಿಕೆ** (ನಾ). ಕಣ್ಣಿನ ಗೊಂಬೆ,-ಗುಡ್ಡೆ: ಪುಟ್ಟಿದಳ್ ಸ್ವಯಂಪ್ರಭೆ ಮಗಳಾಕೆ ಪಾರ್ಶ್ವಚರಭೂಚರಖೇಚರನೇತ್ರಪುತ್ರಿಕಾನಿಭೆ(ಶಾಂತಿಪು. ೫-೧೭); ನೇತ್ರಪುತ್ರಿಕಾಪ್ರಸಾಧನಸದನಮುಂ ಲಕ್ಷ್ಮೀಲೀಲಾ ಲಾಸ್ಯಮಾಂಗಲ್ಯರಂಗಮುಮೆನಿಪ ಪುರ ಬಹಿಃಪುರದಿಂದೊಳಗೆ . . . ಪೊನ್ನಕೋಂಟೆಯುಂ ಬಳಸಿರ್ಪಂ (ಪಂರಾಮಾ. ೧-೧೧೨ ವ); ನಾಗರಖಂಡ ಪತ್ರಪರಿವೇಷ್ಟನದಿಂ ಜನನೇತ್ರಪುತ್ರಿಕಾರಾಗಮನಿತ್ತು ಮಾಣ್ದುದೆ ಮನಸ್ಸುಖದಂ ಬನವಾಸೆಮಂಡಲಂ (ಎಕ. VIII, ಸೊರಬ. ೨೮೬-೮; 1168). [ನೇತ್ರ + ಪುತ್ರಿಕೆ]

**ನೇತ್ರಬಂಧ** (ನಾ). **೧.** ಕಣ್ಣನ್ನು ಕಟ್ಟುವುದು: "ನೇತ್ರಬಂಧಂ ಕಣ್ಣುಕಟ್ಟು" (ಮಂಗರಾ. ೬೭-೫). **೨.** ಕಣ್ಣುಮುಚ್ಚಾಲೆ ಆಟ. [ನೇತ್ರ+ಬಂಧ]

**ನೇತ್ರಮೂಲಿ** (ನಾ). (ನೀಲಿಬಣ್ಣದ ಹೂವು ಬಿಡುವ) ಒಂದು ಬಗೆಯ ಸಸ್ಯ; ವಿಷ್ಣುಕ್ರಾಂತಿ: "ನೇತ್ರಮೂಲಿ ಜಯಂತಿಯೇ ವಿಷ್ಣುಕ್ರಾಂತಿ" (ಮಂಗರಾ. ೩೯-೨೬). [ ? ]

**ನೇತ್ರರುಜೆ** (ನಾ). = ನೇತ್ರರೋಗ : (ಕ). [ನೇತ್ರ + ರುಜೆ]

**ನೇತ್ರರೋಗ** (ನಾ). ಕಣ್ಣಿನ ಬೇನೆ; ಕಣ್ಣಿಗೆ ಸಂಬಂಧಿಸಿದ ವ್ಯಾಧಿ : ಕೆಂಪಿನ ಅಗಸೆ :—ಈ ಹೂವಿನ ರಸವನ್ನು ದಿನ ಬಿಟ್ಟು ದಿನ ಒತ್ತಿ ನೀರನೆಱೆದರೆ ಮೂರ್ಧವ್ಯಾಧಿ, ನೇತ್ರರೋಗ ಗುಣ (ವಿವೈವಿ. ೪) ; ಕ್ಷೀರಧಾರಾ (ನೊರೆಹಾಲು) ಗುಣ—ಇದನ್ನು ಸೇವಿಸಲು . . . ನೇತ್ರ ರೋಗ, ವಿಷರೋಗ ಸಹ ಗುಣಮಕ್ಕುಂ (ಸಕವೈ. ೨೮).
[ನೇತ್ರ + ರೋಗ]

**ನೇತ್ರಲಾಂಛನ** (ನಾ). (ಮೈತುಂಬ) ಕಣ್ಣುಗಳ ಚಿಹ್ನೆಗಳುಳ್ಳವನು; ಇಂದ್ರ : ಇಂಚರದಮರಿಯರೊಡನಾಡುವ ನೇತ್ರಲಾಂಛನಗುಱಿ ಮೇಘವೆಣ್ಣು ಸಂಚಲದ್ಯಗುಸನ್ನೆಯುಮಾಡಿದಂದದಿ ಮಿಂಚಡರಿತು ನಭಸ್ಥಲದಿ (ಮೋಹತ. ೪-೩೩). [ನೇತ್ರ + ಲಾಂಛನ]

**ನೇತ್ರವಟ್ಟಣಿಗೆ** (ನಾ). = ನೇತ್ರಪಟಿ : ಚಿತ್ರಾವಟಿಯ ಪಟ್ಟಾವಟಿಯ ಪಟ್ಟಸೂತ್ರದ ಚಿತ್ರಸೂತ್ರದ ನೇತ್ರವಟ್ಟಣಿಗೆಯ ಪುಟ್ಟಗೆಗಳ ನೊಟ್ಟೆ ಬೆಟ್ಟಾಗಿ ಪುಂಜಿಸಿ . . . ಮೆಱೆದಳ್ (ಸುಕುಮಾ. ೧೦-೯೧ ವ).
[ನೇತ್ರ + ಪಟ್ಟಣಿಗೆ$_1$(<ಪಟ್ಟಳಿಗೆ$_1$)]

**ನೇತ್ರವಟ್ಟೆ** (ನಾ). = ನೇತ್ರಪಟಿ : ವಿರಾಜಿಸುವ ಪೂಜಾಗ್ರಹದಿಂದಖಿಲ ಪೂಜಾರ್ಥಿಗಳಸಿತ್ತ ಬನ್ನಿಮೆಂದು ಕೈಸನ್ನೆಗೆಯ್ವಂತೆ ಮಿಳಿರ್ವ ನೇತ್ರವಟ್ಟೆಯ ಜಾಗದ ಘಟಿಯಿಂಗೆಯ ತುಱುಗಲಿಂ (ಮಲ್ಲಿಪು. ೨-೭೪) ; ಸಾಧಕನ ವನೊಬ್ಬ ನೇತ್ರವಟ್ಟೆಯನುಟ್ಟು ಕೊಂಡು ಸೂತ್ರಧಾರಿಯ ನಱಿಸುತ್ತ ಬಂದನಯ್ಯಾ (ಸರ್ವಪ. ೨೮-೧೩೩) ; ಕಾರೋಹಣದ ಕಕ್ಕವಟಿಯಿಗೆಯ ನೇತ್ರವಟಿ[ಟ್ಟೆ]ಯ ಮದವಿಯ ಮಂಜಿಷ್ಠಿಯ ಸಂಧ್ಯಾರಾಗದುದಯ ರಾಗದ ಸೀಸಕ ಬಾಹರಿಕ್ಕೆ ಜೋಡು ಸವಗಮೊಚ್ಚಯಂಗಳ (ಮಹಾನೇ. ೧೨-೨೧ ವ) ; ಪಸುರ್ಪಟ್ಟೆಯ ಕಂಚುಕ, ನೇತ್ರವಟ್ಟೆಯ ಹೊಸ ಚಲ್ಲಣ, ಮುತ್ತಿನ ದಂಡೆ ಉಟ್ಟು ತೊಟ್ಟು ಮೂರೆಡೆ ಬಳುಕಿದ ಕಾಮನ ಬಿಲ್ಲಿನಂತೆ ತ್ರಿಭಂಗಿಯ ನಿಲುವಿನಲ್ಲಿ ನಿಂತ ನರ್ತಕಿ, ಲೀಲಾವತಿ! (ಸಾಹಿಸಂ. ೨೮).
[ನೇತ್ರ + ಪಟ್ಟೆ$_3$]

**ನೇತ್ರವಳಿ** ‘ನೇತ್ರಪಟಿ’ ನೋ.

**ನೇತ್ರವಾಯು** (ನಾ). ಒಂದು ಬಗೆಯ ಕಣ್ಣಿನ ಬೇನೆ: ಹೊನಗೊನ್ನೆಯ ರಸ, ಗರುಗದ ರಸ . . . ಕಸ್ತೂರಿ ಅರಸಿನ, ಇದಂ ಚೂರ್ಣವಂ ಮಾಡಿ ಹಾಕಿ ತೈಲ ಹದದಲ್ಲಿ ಕಾಸಿ ಈ ತೈಲ ಒತ್ತಿಕೊಳ್ಳಲು ನೇತ್ರ ವಾಯು ಗುಣ (ವಿವೈವಿ. ೧೩೫). [ನೇತ್ರ + ವಾಯು]

**ನೇತ್ರವೈದ್ಯ** (ನಾ). ಕಣ್ಣಿನ ರೋಗಗಳಿಗೆ ಚಿಕಿತ್ಸೆ ನಡೆಸುವ ವೈದ್ಯ : ಕಣ್ಣಿಗೆ ಏನಾದರೂ ತೊಂದರೆಯುಂಟಾದರೆ ತಕ್ಷಣ ನೇತ್ರ ವೈದ್ಯರಿಗೆ ತೋರಿಸಬೇಕು (ರೂಢಿ). [ನೇತ್ರ + ವೈದ್ಯ]

**ನೇತ್ರವ್ಯಾಧಿ** (ನಾ). = ನೇತ್ರರೋಗ : ನಿಂಬೇಹಣ್ಣಿನ ಹುಳಿ . . . ಗರುಗದ ರಸ, ಎಣ್ಣೆಯ ಸಮಭಾಗ ಕೂಡಿಸಿ ಅಟ್ಟು ತಲೆಗೆ ಒತ್ತಿಕೊಳ್ಳುವುದು . . . ಏಳುದಿನಕ್ಕೆ ನೇತ್ರವ್ಯಾಧಿ ಗುಣ (ವಿವೈವಿ. ೧೩೫).
[ನೇತ್ರ + ವ್ಯಾಧಿ]

**ನೇತ್ರಶ್ರವಣ** (ನಾ). ಕಣ್ಣೇ ಕಿವಿಯಾಗಿರುವ ಪ್ರಾಣಿ ; ಹಾವು : ನೇತ್ರಶ್ರವಣನು ಕುಂಡಲಾಕೃತಿಯಗೊಂಡಂತೆ ಪಳುಕಿನ ಸುಕೋಂಟೆ ಯೆಸೆಗು (ನಪಮೋ. ೨-೨೪). [ನೇತ್ರ + ಶ್ರವಣ$_2$]

**ನೇತ್ರಸೌಖ್ಯ** (ನಾ). ಕಣ್ಣಿಗೆ ಸುಖಕರವಾದುದು ; ನೋಡಲು ಸುಂದರವಾದುದು : ನೇತ್ರಸೌಖ್ಯಮನೊಂದುದಿನವಾ ಪಾತ್ರಚೂಡಾ ಮಣಿಯೆನಿಪ ನಿಜಪುತ್ರಿ ಮಗಧಸವುಂದರಿಯ ಸೊಬಗಾದ ನೃತ್ಯವನು . . . ತೋಱಿಸೆ ಕಂಡನಿಭಕೇತು (ಸಾಳ್ವಭಾ. ೬-೧೨).
[ನೇತ್ರ + ಸೌಖ್ಯ]

**ನೇತ್ರಾಂಚಲ** (ನಾ). ಕಣ್ಣಿನ ತುದಿ ; ಕಡೆಗಣ್ಣು ; ಕಟಾಕ್ಷ : ಆವಳ ಧವಳನೇತ್ರಾಂಚಲಾಲೋಕಮಾತ್ರಂ ನೆರವಾದತ್ತಂಗಜಂಗೀ ತ್ರಿಜಗಮುಮಿದಿರಿಲ್ಲೆಂಬಿನಂ . . . ಲೀಲೆಯಿಂ ಬಾಲೆಯಿರ್ಪಳ್ (ಜಗವಿ. ೧೦-೧೬). [ಸಂ.]

**ನೇತ್ರಾಂಬರ** (ನಾ). = ನೇತ್ರಪಟಿ : ಸುರರಾಜಪುರಶ್ರೀಗಾ ಪುರಲಕ್ಷ್ಮೀ ಕಾಂತೆ ಸೆಣಸಿ ಕಿಸುಗಣ್ಣಿದ ಕೇಕರಕಾಂತಿಯಂತೆ ನೇತ್ರಾಂಬರಕೇತನಮಾಳಿ ತುಱುಗಿದುವು ಮನೆಮನೆಯೊಳ್ (ಮಲ್ಲಿಪು. ೧೨-೯).
[ನೇತ್ರ + ಅಂಬರ]

**ನೇತ್ರಾಂಬು** (ನಾ). ಕಣ್ಣಿನಿಂದ ಬರುವ ನೀರು ; ಕಣ್ಣೀರು : “ಅಶ್ರು, ನೇತ್ರಾಂಬು, ರೋದನಂ, ಅಸ್ರಂ, ಅಸ್ರು—ಜ ಕಣ್ಣಿನಲ್ಲಿ ಸುರಿಯುವ ನೀರು” (ಸಿದ್ಧಾಂತಿ. ೧೯೬). [ನೇತ್ರ + ಅಂಬು$_3$]

**ನೇತ್ರಾಂಶುಕ** (ನಾ). = ನೇತ್ರಪಟಿ : ವನಲಕ್ಷ್ಮಿಯ ನೇತ್ರಾಂಶುಕವೆನೆ ನೇತ್ರಕ್ಕೆಸೆದು ಮಿಸುಗಿ ಪಸುರ್ವಡೆದುವು ನಂದನದ ಕೆಲಂಬಿಡಿದಾರ್ದ್ರಕವನ ಜೀರಕವನ ಹರಿದ್ರವನ ಸಂತತಿಗಳ್ (ಪುಷ್ಪಪು. ೨-೪೬).
[ನೇತ್ರ + ಅಂಶುಕ]

**ನೇತ್ರಾಕರ್ಷಣ** (ನಾ). ಕಣ್ಣುಗಳನ್ನು ಆಕರ್ಷಿಸುವುದು : ವಧೂಟೀ ಜನನೇತ್ರಾಕರ್ಷಣಾಲೇಪನಕಪಜಯುಮಂ ಮಾನಿನೀಚಿತ್ತಸಂಮೋಹನ ರೂಪಕ್ಕೆಗ್ಗನುತ್ಪಾದಿಸುವುದು ನೃಪರೂಪಂ ಜನಾಶ್ಚರ್ಯರೂಪಂ (ಮಲ್ಲಿಪು. ೩-೩೧). [ನೇತ್ರ + ಆಕರ್ಷಣ]

**ನೇತ್ರಾತುರ** (ನಾ). ಕಣ್ಣು ಬೇನೆಯುಳ್ಳವನು ; ಕಣ್ಣಿನಲ್ಲಿ ರೋಗ ವುಳ್ಳವನು : ಉಱುವ ಪೂಗಣೆ ನಾಟ ರಾಘವ ಬರವ ಹಾರುತ್ತಿರಲು ಜಾನಕಿ ಬರಲು ಮನವ್ರೊಳಸರಿದುದು . . . ಕರುಣೆ ಕಡಲಾಱಿತ್ತು ನೇತ್ರಾ ತುರನು ದೀಪವ ಕಾಂಬ ಪರಿಯಲಿ ಕಂಡ ದೇವಿಯನು (ಕಾಶಿರಾ. ೪೩-೧೬).
[ನೇತ್ರ + ಆತುರ]

**ನೇತ್ರಾಧ್ವ** (ನಾ). ಕಣ್ಣಿನ ಮಾರ್ಗ,—ದೃಷ್ಟಿ : ನಿಜ ನೇತ್ರಾಧ್ವ ದೊಳಾಗಳಾಗಳದಟಂ . . . ದೊರೆಕೊಂಡಂ ದ್ರೋಹನೆಂದೇಱಿದಂ ತ್ರಿಜಗದ್ಭೂಷಣದಂತಿಯಂ ರಿಪುಚಮೂವಿದ್ರಾವಣಂ ರಾವಣಂ (ಪಂರಾಮಾ. ೧೦-೨೦೯). [ನೇತ್ರ + ಅಧ್ವ]

**ನೇತ್ರಾನಂದ** (ನಾ). ಕಣ್ಣಿಗೆ ಉಂಟಾಗುವ ಆನಂದ ; ನೋಟ ದಿಂದ ಉಂಟಾಗುವ ತೃಪ್ತಿ,—ಸಂತೋಷ : ನೇತ್ರಾನಂದಮನೀಯೆ ಸಾಂದ್ರಶಶಿಬಿಂಬಾಡಂಬರಂ ಶ್ರೀಮುಖಂ . . . ಧಾತ್ರೀಧಾರ್ಮಿಕಸತ್ವ ಸಂತತಿಗೆನಲ್ (ಮಹಾನೇ. ೧-೨೧); ನೀನೀ ವಿಗ್ರಹದಿಂದ ಆವಾವುದನ್ನು ಮಾಡಿಸಬಲ್ಲೆಯೋ ಅದನ್ನೆಲ್ಲ ಮಾಡಿಸು. ನೇತ್ರಾನಂದವಾಗುವಂತೆ ನೋಡಿ ಬಿಡುವೆನು (ಕವಿಕ. ೧೮). [ನೇತ್ರ + ಆನಂದ]

**ನೇತ್ರಾಭ್ಯಂಗನ** (ನಾ). ಕಣ್ಣಿಗೆ ಎಣ್ಣೆಯನ್ನು ಹಚ್ಚಿಕೊಳ್ಳುವಿಕೆ : ಪಾದಾಭ್ಯಂಗನದಿಂದ ನೇತ್ರರೋಗವೂ ನೇತ್ರಾಭ್ಯಂಗನದಿಂದ ಶಿರೋ ರೋಗವೂ ಶಿರೋಭ್ಯಂಜನದಿಂದ ಸರ್ವರೋಗವೂ ಹರವಾಗುವುದು (ಸಕವೈ. ೩೧). [ನೇತ್ರ + ಅಭ್ಯಂಗನ]

**ನೇತ್ರಾವಳಿ** ‘ನೇತ್ರಪಟಿ’ ನೋ.

**ನೇತ್ರಾವಟಿ** ‘ನೇತ್ರಪಟಿ’ ನೋ.

**ನೇತ್ರಾಳಿ** (ನಾ). ಕಣ್ಣುಗಳ ಸಮೂಹ : ತನ್ನೇತ್ರಾಳಿಗಳಿನೆಸೆದನೀಶ ನಮಲಪ್ರಕಾಶಂ (ವೀಶೈಪು. ೩-೧೬-೩೪). [ನೇತ್ರ + ಆಳಿ$_4$(= ಅಲಿ$_4$)]

**ನೇತ್ರಿ$_1$** (ನಾ). ಹೊಳೆ; ನದಿ : “ನೇತ್ರಿ = ಹೊಳೆ” (ಗಂಗಾಮ. ೧೯೧).
[ಸಂ. ನೇತ್ರೀ]

**ನೇತ್ರಿ$_2$** (ನಾ). ಒಂದು ಬಗೆಯ ಸಸ್ಯ ; ಚವ್ಯ : “ಕೃಕವಾಕು ಮಸ್ತಕಂ ನೇತ್ರಿಯೆನೆ ಚವ್ಯವಕ್ಕು” (ಮಂಗರಾ. ೪೨-೩೮). [?]

**ನೇತ್ರೇಂದ್ರಿಯ**(ನಾ). ಕಣ್ಣು; ನಯನ: ಕೀಟಗಳ ಇಂದ್ರಿಯಾಂಗಗಳನ್ನು ಪ್ರತಿಕ್ರಿಯೆಗಳ ಆಧಾರದ ಮೇಲೆ ವಿಂಗಡಿಸಬಹುದು . . . ಬೆಳಕು, ನೇತ್ರೇಂದ್ರಿಯಗಳು (Visual organs) (ಕೀಟಬಿ. ೫೦).
[ನೇತ್ರ + ಇಂದ್ರಿಯ]

**ನೇತ್ರೋನ್ಮೀಲನ** (ನಾ). ಕಣ್ಣನ್ನು ತೆರೆಯುವಿಕೆ: ಜಯೆಯ ನೇತ್ರೋನ್ಮೀಲನಂಗೆಯ್ದು ಸಚ್ಚರಿತರ್ ಸಾಧುಗಳೆಮ್ಮನುದ್ಧರಿಸುಗೀ ಸಂಸಾರವಾರಾಶಿಯಿಂ (ಮಲ್ಲಿಪು. ೧–೫); ಮೂಲಬೇರದ ಸ್ಥಾಪನೆಯಾದ ಮೇಲೆ ಪ್ರಾಣಪ್ರತಿಷ್ಠಾ, ನೇತ್ರೋನ್ಮೀಲನಾದಿ ಕರ್ಮಗಳನ್ನು ವಿಧಿವತ್ತಾಗಿ ಮಾಡಿದರೆ ಕ್ಷೇತ್ರವು ಜಾಗೃತವಾಗುವುದು (ಹೊಯ್ಸಪಾ.೧೯).
[ನೇತ್ರ + ಉನ್ಮೀಲನ]

**ನೇದಿಷ್ಠ** (ನಾ). ತೀರ ಸಮೀಪದಲ್ಲಿರುವುದು: "ನೇದಿಷ್ಠಂ, ಅಂತಿಕತಮಂ—೨ ಬಹಳ ಹತ್ತಿರವಾದದ್ದು, ಕೇವಲ ಸಮೀಪವಾದದ್ದು" (ಸಿದ್ಧಾಂತಿ. ೩೪೧); ಶಕ್ರಯೋಷಿನ್ನೇದಿಷ್ಠ ೩ ಪದ್ಮರಾಗೋಜ್ವಳಮುಕುರವಿದೆಂಬಂತುಮಿಂಬಾಗೆ ಚೆಲ್ವಿಂದಾದಂ ಕಣ್ಗೊಂಡು ತೋಱುತ್ತುದಯಗಿರಿಶಿರೋಭಾಗದಿಂ ಚಂದ್ರಬಿಂಬಂ (ವರ್ಧಮಾ. ೮–೭೬೨). [ಸಂ.]

**ನೇದು** 'ನೆಯ್$_1$' ಪರಾ.

**ನೇಪತ್ರಿ** (ನಾ). ಎಳೆಯ ಬಿದಿರು; ಕಳಲೆ: ನೇಪತ್ರಿ (ಕಳಲೆ)ಯು ಹೊಟ್ಟೆಯುಬ್ಬುಮಾಡುವುದು (ಅಷ್ಟಾಂಗ. ೧೩೫–೮೦). [?]

**ನೇಪಥ್ಯ** (ನಾ). ೧. ಆಭರಣ; ಅಲಂಕಾರ; ತೊಡುಗೆ: "ಭೂಷಣಃ, ಆಳಂಕಾರಃ, ನೇಪಥ್ಯಂ, ಆಭರಣಂ—ಈ ೪ ತುಡುಗೆ" (ಹಲಾಯು. ೪೯–೩೮೫); ಅನತೋರ್ವೀಶರ ದಂತಿದಂತವಳಯಾಲಂಕಾರದಿಂ ವೀರವೈರಿನೃಪಾಲದ್ವಿಪಮೌಕ್ತಿಕಾವಳಿಗಳಿಂ ಕೆಯ್ಗೊಯ್ಯುಗುಂ ನಿನ್ನ ನಂದನೆಯಂ ಪೇಟ್ ಪೆಱರಂತೆ ಮಿಕ್ಕ ಬಳೆಯಿಂದಂ ಮಿಕ್ಕ ಮುತ್ತಿಂದವಂಗನೆಯಗ್ರಾಹವ ಧೀರನಾ ನೃಪವರಂ ನೇಪಥ್ಯಮಂ ಮಾಡ್ಪನೇ (ಪುಷ್ಪಪು. ೭–೪೮). ೨. ನಾಟ್ಯಗೃಹದಲ್ಲಿ ರಂಗಭೂಮಿಯ ಹಿಂಭಾಗ; ಪಾತ್ರಗಳು ವೇಷಭೂಷಣಗಳನ್ನು ಮಾಡಿಕೊಳ್ಳುವುದಕ್ಕಾಗಿ ಇರುವ ರಂಗಭೂಮಿಯ ಹಿನ್ನೆಲೆ: ಇದಕ್ಕೆ 'ರಂಗಶೀರ್ಷ' ವೆಂದು ಹೆಸರು. ಇದರ ಅಕ್ಕಪಕ್ಕಗಳಲ್ಲಿ ನೇಪಥ್ಯದೊಳಕ್ಕೆ ಹೋಗಲು ಬಾಗಿಲುಗಳಿರುತ್ತವೆ (ಸಂನಾಟ. ೨೩). [ಸಂ.]

**ನೇಪಥ್ಯಗೀತ** (ನಾ). (ನಾಟಕ, ಚಲನಚಿತ್ರ ಮೊದಲಾದುವುಗಳಲ್ಲಿ) ಹಿನ್ನೆಲೆಯಲ್ಲಿ ಹಾಡುವ ಗೀತೆ; ತೆರೆಮರೆಯ ಗೀತೆ: ನಾಟಕದ ಭಾವಗಳನ್ನು ಮೆರೆಯಿಸಲು ಬೆಳಕಿನ ಯೋಜನೆ, ನೇಪಥ್ಯಗೀತ (Back-ground Music), ತಿರುಗುವ ರಂಗಭೂಮಿ(Revolving Stage) ಗಳಂಥ ಹಲವು ನವೀನ ಸಲಕರಣೆಗಳು ಕಾಲಿರಿಸಿವೆ (ಬಾಲಪ್ರ.III, ೧೨೮೩).
[ನೇಪಥ್ಯ + ಗೀತ]

**ನೇಪಥ್ಯಗೃಹ** (ನಾ). (ನಟ, ನಟಿಯರ ಸಿದ್ಧತೆ ಮೊದಲಾದುವುಗಳಿಗಾಗಿ) ರಂಗಭೂಮಿಯ ಹಿಂಭಾಗದಲ್ಲಿ ಇರುವ ಗೃಹ,—ಕೋಣೆ: ನರ್ತನಾಲಂಕರಣದಿನಲಂಕರಿಸಿ ನರ್ತಕಿ ನೇಪಥ್ಯಗೃಹದಿಂ ವಿವಿಧರತ್ನರಚಿತಮೆನಿಸಿದ ಜವನಿಕೆಗವತರಿಸಿ (ಮಲ್ಲಿಪು. ೮–೩೫); ಇದರಲ್ಲಿ ಹಿಂದಿನಿಂದ ೧೬×೩೨ ಹಸ್ತ, ನೇಪಥ್ಯಗೃಹ; ಅಲ್ಲಿಯೆ ನಟರು ವೇಷಭೂಷಣಾದಿಗಳನ್ನು ಹಾಕಿಕೊಳ್ಳುವುದು (ಸಂನಾಟ. ೨೩).
[ನೇಪಥ್ಯ + ಗೃಹ]

**ನೇಪಾಲ$_1$, ನೆರ್ವಾಳ, ನೇಪಾಳ$_1$, ಲೇಪಾಳ$_1$** (ನಾ). ಒಂದು ಬಗೆಯ ಗಿಡ ಮತ್ತು ವಿರೇಚಕ ಗುಣವುಳ್ಳ ಅದರ ಕಾಯಿ:(೬). **ನೆರ್ವಾಳ**: ಆದಿರಾಜ, ಹೊಳೆತುಂಬೆ, ನೆರ್ವಾಳ, ಮವಲಂಗಮರ . . . ಹೊಡ್ಡೆಲೆನಗೆ (ಮೈಔಗಿ. ೨೫–೪೭೬). **ನೇಪಾಳ$_1$**: "ನೇತ್ರನಿರ್ಮಲಕಾರೀ–ಖಪ್ಪುಲಿ, ನೇಪಾಳ, ಜೇಪಾಳ, ತುತ್ತ, ತಾಮ್ರ, ನೇಪಾಳಿ, ಕೆಂಜಾಜಿ" (ಓಷಧಿ. ೯೦); ಶುದ್ಧಿಮಾಡಿದ ನೇಪಾಳ ೧೦ ವರಹ ತೂಕ . . . ನಿಂಬೆಹಣ್ಣಿನ ರಸದಿಂ ಮರ್ದಿಸಿ ಕಡುಹಂ ಮಾಡಿ ನೆಳಲಲ್ಲಿ ಒಣಗಿಸಿ ತಿಲಪ್ರಮಾಣವಂ ಕಣ್ಣಿಗೆಚ್ಚಲು ಸನ್ನಿಪಾತಂ ಗುಣಮುಕ್ಕುಂ (ಸಕವೈ. ೧೮೦). 'ಜಾಪಾಳ' ಪರಾ. **ಲೇಪಾಳ$_1$**: "ಮಾಳೀ–ಲೇಪಾಳ ಬೀಜ" (ಓಷಧಿ. ೧೨೩).
[ದೇ.॥ ತಮಿ. ನೇಪಾಳ, ನೇರ್ವಾಳ; ಮಲ. ನೀರ್ವಾಳ; ತೆಲು. ನೇಪಾಳ]

**ನೇಪಾಲ$_2$, ನೇಪಾಳ$_2$** (ನಾ). ೧. ಒಂದು ಬಗೆಯ ಲೋಹ; ತಾಮ್ರ. ೨. ಭಾರತದ ಉತ್ತರದಲ್ಲಿರುವ ಒಂದು ದೇಶದ ಹೆಸರು; P ಹಿಂದೆ ಪ್ರಸಿದ್ಧವಾಗಿದ್ದ ಐವತ್ತಾರುದೇಶಗಳಲ್ಲಿ ಒಂದು. **ನೇಪಾಳ$_2$**: ೨. ಅಂಗ ವಂಗ ಕಳಿಂಗ ಕೊಂಗ ಮಾಳವ ಚೋಳ ನೇಪಾಳ . . . ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ಇಂತು ನವರಸಂಗಳಿಂದಭಿನವರಸಂಗಳಾಗಿ ನೆಗಟುತ್ತು ವಿರೆಯಿರೆ (ಜಗವಿ. ೨–೩೯.ವ); ನೇಪಾಳ ಕುಂತಳ ಕುಕುರ ಬರ್ಬರ . . . ಕೇರಳ ಮುಖಾಪಾರದೇಶಂಗಳೊಳೆಸೆವ ಜಂಗಮುವು ಭಕ್ತಾಳಿ (ಬಸವು. ೭–೧೮); ಲಾಳ ಚೋಳ ವರಾಳ . . . ಕುರು ನೇಪಾಳ ನಿಷಧ ವಿದರ್ಭ ಧರಣೀಪಾಲತತಿ ಸಂದಣಿಸಿದುದು ಸಾಕೇತನಗರಿಯಲಿ (ತೊರರಾ. ೧–೭–೧೮); ನೇಪಾಳದೇಶದ ಭೂಪಾಲನಾದರೆ ಗೋಪಾಳದವನಿಗೆ ಏನು? (ಗಾದೆ). ೩. ನೇಪಾಳದೇಶದ ದೊರೆ: ಪಾಂಡ್ಯನ ಕಾಳಿಜಕ್ಕೆ ನೇಪಾಳನ ಬೆಂನ ಸೊಂಟಗೆಗೆ ಚೋಳನ ಕಾರಡಗಿಂಗೆ . . . ಕಾಯ್ದು ಖಳ್ಗ ಮಾಕಾಳಿಯಡುತ್ತುರ್ನಿಳ್ಕುವಳು ನಾಲಗೆಯಂ ನರಸಿಂಗಭೂಪನ (ಎಕ. IV (R), ಹುಣಸೂ. ೨೪–೧೭; 1182). [ಸಂ.]

**ನೇಪಾಳ$_1$** 'ನೇಪಾಲ$_1$' ನೋ.

**ನೇಪಾಳ$_2$** 'ನೇಪಾಲ$_2$' ನೋ.

**ನೇಪಾಳಕಂಬಳಿ** (ನಾ). ನೇಪಾಳದೇಶದಲ್ಲಿ ತಯಾರಿಸಿದ ಕಂಬಳಿ: ನೇಪಾಳಕಂಬಳಿ ಗುಣ . . . ವಾತಶ್ಲೇಷ್ಮಹರವಾಗಿಯೂ, ಐಶ್ವರ್ಯಪ್ರದವಾಗಿಯೂ ಇರುವುದು (ಸಕವೈ. ೩೬).
[ನೇಪಾಳ$_2$(= ನೇಪಾಲ$_2$) + ಕಂಬಳಿ]

**ನೇಪಾಳಗುದುರೆ** (ನಾ). ನೇಪಾಳದೇಶದ ಕುದುರೆ: ಸೀಳಿ ಹರಹಿತು ಕರಿಗಳನು ನೇಪಾಳಗುದುರೆಯ ಥಟ್ಟುಗಳ ಹಿಂಗಾಲಲಣೆದುದು . . . ಸುಪ್ರತೀಕಗಜ (ಕುಮಾರವ್ಯಾ.ದ್ರೋ. ೩–೧೫).
[ನೇಪಾಳ$_2$(= ನೇಪಾಲ$_2$) + ಕುದುರೆ]

**ನೇಪಾಳಬೇವು** (ನಾ). ಒಂದು ಬಗೆಯ ಬೇವು: "ನಾಡೀತಿಕ್ತಕಃ—ನೇಪಾಳಬೇವು" (ಓಷಧಿ. ೮೫). [ನೇಪಾಳ? + ಬೇವು$_1$]

**ನೇಪಾಳಿ** (ಗು). ನೇಪಾಳದೇಶಕ್ಕೆ ಸಂಬಂಧಿಸಿದ: ಮಂಡಲಗಳ ರಚನೆಯಲ್ಲಿ ನೇಪಾಳಿ ಕಲಾವಿದರು ತೋರಿರುವ ಮಾದರಿಗಳ ಅರಿವು, ಪ್ರಮಾಣಪರಿಜ್ಞಾನ ಪ್ರಶಂಸನೀಯವಾಗಿದೆ (ಭಾರದ. ೫೩೨). [ಸಂ. ನೇಪಾಲೀ]

**ನೇಪಿಸು** (ಕ್ರಿ). ಸರಿಪಡಿಸು; ಓರಣಗೊಳಿಸು; ಜೋಡಿಸು(?): ನೇಪಿಸಿದ ಪತ್ತಿಗೆಯೊಳನುಪಮರೂಪ ಚೀನಾಂಬರಗಳನು ಸದ್ವ್ಯಾಪಿಸಿಹ ರಂಗಡಿಯೊಳೆಲ್ಲೆಲ್ಲಾಲು ಸಾಲುಗಳ (ಜಿರಾಮಾ. ೨೬–೪೧); ಆಪಾದ ಸೋಂಕುತಿಹ ಕೇಶಗಳನೆಣೆಗಂಟೆ ನೇಪಿಸುವ ಸಮಯ (ಜಿನಮು. ೪೨–೩೯). [<ನೇರ್ಪು$_2$ + –ಇಸು$_3$]

**ನೇಮ$_1$** (ನಾ). ೧. (ಮನಸ್ಸಿನ) ನಿಯಂತ್ರಣ; ಸಂಯಮ; ಪ್ರತಿಬಂಧ: 'ನೇಮಿಸು' ಪರಾ. ೨. (ಹೀಗೆಯೇ ಇರಬೇಕೆಂಬ) ಕಟ್ಟಳೆ; ನಿಯಮ; ವಿಧಿ: ನಾನಾವ್ರತನೇಮಭೇದಂಗಳಲ್ಲಿ ಅಱುವತ್ತುನಾಲ್ಕು ವ್ರತ ಐವತ್ತಾಱು ಶೀಲ ಮೂವತ್ತೆರಡು

ನೇಮ ನಿತ್ಯಕೃತ್ಯ ಲೆಕ್ಕಕ್ಕವಧಿಯಿಲ್ಲ (ಸರ್ವಪ. ೧೮೮-೮೬೪) ; ಮುಗುದೆಯರೀ ಕೃತಿಗೇಳೆ ನಿಗಮದೊಳೊಗೆದ ನೇಮಂಗಳ ತಿಳಿದೀ ಜಗಕೆ ಪಾವನೆಯರೆನಿಪರು (ಹದಿಬ. ೧-೫೭) ; ದಿನಾಲು ನೇಮದಿಂದ ಶಾಲೆಗೆ ಬಂದು . . . ಕಲಿಯಬೇಕು (ಮುಂಬಯಿ. ೪-೧) ; ಹೋಳಿಯ ಆಟವು ಇದೇ ತರದ್ದಿರಬೇಕೆಂಬ ನೇಮ ನಿತ್ಯವಿಲ್ಲ (ಕನ್ನಜಾ. ೧೬೨) ; ನಾಮವಿಲ್ಲದ ಅರಸನಿಗೆ ನೇಮವಿಲ್ಲದ ಪ್ರಧಾನಿ (ಗಾದೆ). **೩.** ಆಜ್ಞೆ ; ಅಪ್ಪಣೆ ; ಅನುಜ್ಞೆ : ವಿಜಯವಿಗ್ರಹವೀರನಾ ಧರ್ಮಜನ ನೇಮದಲಂದು ವೈರಿವ್ರಜವ ತೊತ್ತಳದುಳಿದ ಸಾತ್ಯಕಿ ಕಂಡನರ್ಜುನನ (ಕುವ್ಯಾದ್ರೋ. ೧೧ ಸೂಚನೆ) ; ಬಿಡದಿಂದು ಮೊದಲು ನಿಮ್ಮಂದಳದ ಮುಂಬಿನೊಳು ಗುಡಿಗಟ್ಟಿ ಕುಣಿವುತ್ತ ಬಪ್ಪಂತೆ ನೇಮವಂ ಕೊಡಿಯೆನಗೆ (ಸೌಂದಪು. ೫-೫೧) ; ಮಡದಿಯರು ಮೂವರಿಗೆ ಮುನಿಕುಲ ಮೃಡವಸಿಷ್ಠನ ನೇಮದಲಿ ವಿಂಗಡಿಸಿ ಕೊಟ್ಟನು ನೃಪತಿ ಪರಮೋದನವನುಚಿತದಲಿ (ತೊರರಾ. ೧-೭-೫೭). **೪.** ಗೊತ್ತುಪಡಿಸುವಿಕೆ ; ನಿಯೋಜಿಸುವಿಕೆ : 'ನೇಮಿಸು' ಪರಾ. **೫.** ಕ್ರಮಬದ್ಧವಾದ ಆಚರಣೆ ; ಅನುಷ್ಠಾನ : "ನೇಮ-ನಿಯಮ" (ತದ್ಭಕೋ. ೨೩) ; ಬಂದುದ ಕೈಕೊಳ್ಳಬಲ್ಲರೆ ನೇಮ ಇದ್ದುದ ವಂಚನೆ ಮಾಡದಿದ್ದರೆ ಅದು ನೇಮ ನಡೆದು ತಪ್ಪದಿದ್ದರೆ ನೇಮ ನುಡಿದು ಹುಸಿಯದಿದ್ದರೆ ನೇಮ (ಬಸವ. ೨೩೧) ; ವ್ರತ ಉಪವಾಸಂ ನೇಮಗಳಿಂದಂ [ಪಾಠಾಂ. ನಿಯಮವೆಂಬುವಱಿಂ]ಗತವೆನಿಸುವವು ಪ್ರಸಾದಗಳವಱಿಂ (ದೀಕ್ಷಾಬೋ. ೯೩-೧). **೬.** ದೇವರ ಪ್ರೀತಿಗಾಗಿ ಮಾಡುವ ಉಪವಾಸ, ಧ್ಯಾನ ಮೊದಲಾದ ಆಚರಣೆ ; ವ್ರತ ; ನೋಂಪಿ : ಹಾಲ ನೇಮ ಹಾಲ ಕೆನೆಯ ನೇಮ ಕೆನೆ ತಪ್ಪಿದ ಬಳಿಕ ಕಿಚ್ಚಡಿಯ ನೇಮ ಬೆಣ್ಣೆಯ ನೇಮ ಬೆಲ್ಲದ ನೇಮ ಅಂಬಲಿಯ ನೇಮದವರನಾರನೂ ಕಾಣೆ (ಬಸವ. ೨೩೨). **೭.** ನಿಶ್ಚಿತವಾದುದು ; ನಿಯತವಾದುದು: 'ನೇಮಸೀಮೆ' ಪರಾ. **೮.** (ಕರಾ) ವರ್ಷಕ್ಕೊಮ್ಮೆ ನಡೆಸುವ ದೈವದ ಪೂಜೆ : ಕೋಲನೇಮಗಳಿಗೆ ಬೇಕಾದ ಹೂ ಕಿಸ್ಕಾರ ಮುತ್ತುಗದ ಹೂ ಯಾವ ಮಣ್ಣಿಗೂ ಬೇಡದ್ದು (ಮುಗಿಯು. ೧೭). **೯.** (ಉಕ) ಚೊಚ್ಚಲು ಗಂಡುಮಗುವಿನ ತಾಯಿ, ಅವನ ಮದುವೆಯವರೆಗೂ ಪಾಲಿಸುವ ನಿಯಮ,—ವ್ರತ ; ℙ ಹಸಿರು ಸೀರೆ, ಹಸಿರು ಬಳೆಗಳನ್ನು ಧರಿಸದಿರುವುದು, ಕೆಲವು ನಿರ್ದಿಷ್ಟ ತರಕಾರಿಗಳನ್ನು ತಿನ್ನದಿರುವುದು ಇತ್ಯಾದಿ : 'ನೇಮ ಬಿಡಿಸು' ಪರಾ. **೧೦.** [ಕಾಮಶಾ] ರತಿಕಲಾಸ್ಥಾನ : ಬಾಯ್ಗೆ ಮರ್ದುದೇಯಧರಮಾಗಿ ನೇಮವೆ ತಮ್ಮ ಕಯ್ಗೆ ಮರ್ದುದಾಗಿ ಮನಕಮರ್ದುದೇಮನೆಯಾಗಿ . . . ಅಱಕೆಗೂಡಿದ ಪರವಶಂ ಜಾರರೊಳ್ ಮೆಱೆದುದು (ಚಿಬಪು. ೯-೧೫). 'ನಿಯಮಸ್ಥಾನ' ಪರಾ. [<ಸಂ. ನಿಯಮ]

**ನೇಮು$_2$** (ನಾ). **೧.** ಒಂದು ಭಾಗ ; ಅರ್ಧ : "ಖಂಡಃ, ಅರ್ಧಃ (ರ್ಧಂ), ನೇಮಃ, ಶಕಲಂ, ಭಿನ್ನಂ, ಸಾಮಿ—ಈ ೬ ಅರ್ಧಂ" (ಹಲಾಯು. ೧೧೮-೨೮) ; ಶ್ರೀಮಾನಿನೀರಮಣ ಪ್ರೇಮಾಮರಾನತಾಸಾಮಾಮಲಶ್ರುತಿಗ್ರಾಮಾಮಿತಾಭವಕ್ಷ್ಮಾಮಾ ಮದೇಭೇಂದ್ರಹೋಮಾಮಯಾಹಿತಕಲಾಮಾಲಿನೇಮವಾಹ . . . ಕಾಮಾಂತಕ (ಉದ್ಭದೇ. ೩-೩೬). **೨.** ಮೋಸ ; ವಂಚನೆ ; ಕಪಟ. **೩.** [ಸಂಗೀತ] (?) : ಅಚ್ಚು ವೈಶಿಕ ನೇಮ ವ್ಯಾಪ್ತಿ ಬೊಟ್ಟು ಮೋಹರ ಅರಿದೆಂಬಿವಂ ತದಿರಾ ಎಂಬ ಕೂಱು ತಪ್ಪದೆ ಶುದ್ಧಭಾರಿ ಠವಣೆಯೆಂಬ ಮದ್ದಳೆಗಳಂ ಬಾಜಿಸುವ ಮದ್ದಳೆಕಾಱರಿಂ . . . ಗೀತ ಶಬ್ದ ನೇಮ ಉರುಪು ಪದ ಪಟ್ಟ ದರುಗಳಂ ತೋಱಿಸುವ . . . ಪಾತ್ರಂಗಳಿಂ (ದಶಾವ. ೨-೧೦ ಪ). [ಸಂ.]

**ನೇಮಂಬಡೆ** (ಕ್ರಿ). ಅಪ್ಪಣೆಯನ್ನು ಪಡೆ ; ಅನುಮತಿಯನ್ನು ಹೊಂದು : ತಾನುಂ ಸಹ ಪುರಮಂ ಪೊಱಮಟ್ಟು ರಕ್ಕಸರ ಮಾಱಿಯೊಡ್ಡಂ ತಾಗುವುದುಂ ಅಮರೇಂದ್ರನಿಂ ದಶರಥಂ ನೇಮಂಬಡೆದು (ದಶಾವ. ೮-೨೮ ಪ). [ನೇಮು$_1$ + ಪಡೆ$_1$]

**ನೇಮಂಬೆರಸು** (ಕ್ರಿ). = ನೇಮಂಬಡೆ : ಈಗಳಿವಂ ಗಿರಿಶನಂ ಗೆಲಲೆಳಸಿ ನೇಮಂಬೆರಸಿದ ಮನಸಿಜನಕ್ಕುಮಲ್ಲದೊಡೀ ಸೌಂದರ್ಯಮೆತ್ತಣದು (ಚಿಕವಂ. ೮೧-೧೪). [ನೇಮು$_1$ + ಬೆರಸು$_1$ (<ಬೆರೆಯಿಸು)]

**ನೇಮಂಬೊಱು** (ಕ್ರಿ). ನಿಯಮವನ್ನು ಹೊಂದು ; ವ್ರತವನ್ನು ಹೊಂದು : ಸತ್ತ ಕಱುವಿನ ಮಾಂಸವಂ ಮುದವೆತ್ತಿಯಾರೋಗಿಸುವ ನೇಮಂಬೊತ್ತು ಬಂದೆನು (ಬಸಪು. ೫೭-೩೪). [ನೇಮು$_1$ + ಪೊಱು]

**ನೇಮಕ** (ನಾ). **೧.** ಅಂಕೆಯಲ್ಲಿಟ್ಟುಕೊಳ್ಳುವುದು ; ನಿಯಂತ್ರಿಸುವುದು. **೨.** ನಿಯಮ ; ನಿಬಂಧನೆ : (ಕ). **೩.** ನಿಯಮಿಸುವಿಕೆ ; ಗೊತ್ತುಪಡಿಸುವಿಕೆ : 'ನೇಮಕಗೊಳ್ಳು' ಪರಾ.

**ನೇಮಕ ಮಾಡು** = ನಿಯೋಜಿಸು ; ಗೊತ್ತುಪಡಿಸು : ನಮ್ಮಲ್ಲಿರುವ ಎಲ್ಲಾ ದೊಡ್ಡ ವ್ಯಕ್ತಿಗಳೂ ಸೇನಾಧಿಪತ್ಯಕ್ಕೆ ಅರ್ಹರಾದವರು... ಹೀಗೆಂದು ನಾವು ಎಲ್ಲರನ್ನೂ ಒಟ್ಟಿಗೆ ನೇಮಕ ಮಾಡಿಕೊಳ್ಳುವ ಹಾಗಿಲ್ಲ (ವಚಭಾ. ೨೭೯) ; ತತ್ತ್ವಶಾಸ್ತ್ರಕೋವಿದನಾಗಬಲ್ಲವನನ್ನು ಕಾರ್ಖಾನೆಯ ಕೆಲಸಕ್ಕೂ ಕವಿತೆಗಳನ್ನು ಬರೆಯಬಲ್ಲವನನ್ನು ಕಲ್ಲಿದ್ದಲುಗಣಿಯ ಕೆಲಸಕ್ಕೂ ನೇಮಕ ಮಾಡುವುದು ಜನಾಂಗಕ್ಕೆ ನಷ್ಟ (ಕ್ರಿಯಾಶಿ. ೯೫).

**ನೇಮಕವಾಗು** = ನಿಯಮಿಸಲ್ಪಡು ; ನಿಯೋಜಿತವಾಗು : ಭಾರತ ಸರ್ಕಾರದ ವಾರ್ತಾಶಾಖೆಯ ಮಂತ್ರಿಯವರಾದ . . . ಅವರ ಅಧ್ಯಕ್ಷತೆಯಲ್ಲಿ ನೇಮಕವಾಗಿದ್ದ ಸಮಿತಿಯವರು ಪರಿಶೀಲಿಸಿ ಸಮ್ಮತಿಸಿದ ತರುವಾಯ ಈ ಪುಸ್ತಕವು ಮುದ್ರಿತವಾಗಿದೆ (ಭಾಧಾನ. ಪೀಠಿಕೆ) ; ಮರಳಿ ನೇಮಕವಾಗಿ ಗಂಗೋತ್ರಿಗೈದಿದೆ ಬಂದೆನು ತಿರುಗಿ ಈ ನೆಲೆಗೆ (ಇಂಚಾಪ. ೫೪-೫೬). [<ಸಂ. ನಿಯಾಮಕ]

**ನೇಮಕಗೊಳ್ಳು** (ಕ್ರಿ). ನಿಯಮಿಸಲ್ಪಡು ; ನಿಯೋಜಿತವಾಗು ; ಗೊತ್ತಾಗು : ವೃದ್ಧಶ್ರೀಮಂತನೊಬ್ಬನಿಗೆ ಪಾಲಕನಾಗಿ ಅವನು ನೇಮಕಗೊಂಡಿದ್ದುದಾಗಿಯೂ ನೆಕ್ಲುದೋವ್ ಹಿಂದೊಮ್ಮೆ ಕೇಳಿದ್ದನು (ಪುನರು. ೩೧೨) ; ಲಾಹೋರಿನ ಸರ್ಕಾರಿಕಾಲೇಜಿನಲ್ಲಿ ಸಸ್ಯಶಾಸ್ತ್ರದ ಪ್ರಾಧ್ಯಾಪಕನೆಂದೂ, ನಂತರ ಪಂಜಾಬ್ ವಿಶ್ವವಿದ್ಯಾಲಯದ ಉಚ್ಚ ಪ್ರಾಧ್ಯಾಪಕನೆಂದೂ ನೇಮಕಗೊಂಡನು (ಸಸ್ಯಕ. ೧೧೫). [ನೇಮಕ+ಕೊಳ್ಳು$_1$ (<ಕೊಳ್$_1$)]

**ನೇಮಕಪತ್ರ** (ನಾ). ನೌಕರಿ ಮೊದಲಾದುವುಗಳಿಗೆ ನಿಯೋಜಿತವಾದ ಬಗ್ಗೆ ಕೆಲಸಗಾರನಿಗೆ ಕಳುಹಿಸುವ ಅಧಿಕೃತವಾದ ತಿಳಿವಳಿಕೆಯ ಪತ್ರ : ಹೊಸಮನಿಯ ಪ್ರಯತ್ನವೆಲ್ಲ ಯಶಸ್ವಿಯಾಗಿ ಪತ್ರಿಕೆಯ ಕಚೇರಿಯಿಂದ ಅನಿಲನಿಗೆ ಒಂದು ಔಪಚಾರಿಕ 'ನೇಮಕಪತ್ರ' ಬಂದಿತು (ಅಸನಾ. ೨೪೦). [ನೇಮಕ+ಪತ್ರ]

**ನೇಮಕಹೊಂದು** (ಕ್ರಿ). ನೇಮಕವಾಗು ; ನಿಯೋಜಿತವಾಗು : ಅವರ ಖಾತೆಯಿಂದ ಮುನಿಸಿಪಾಲಿಟಿಯಲ್ಲಿ ಚೀಫ್‌ಆಫೀಸರ ಕೆಲಸಕ್ಕೆ ನೇಮಕಹೊಂದಿದ್ದವರಿಗೆ ನಾನು ಹೋಗಿ ಭೆಟ್ಟಿಯಾಗಲು ತಿಳಿಸಿ . . . ಹೇಳಿ ಕಳುಹಿಸಿದರು (ಹೇಮಂತ. ೧೭೭). [ನೇಮಕ+ಹೊಂದು$_1$ (<ಪೊರ್ದು)]

**ನೇಮಕಾತಿ** (ನಾ). (ಕೆಲಸ, ಅಧಿಕಾರ ಇತ್ಯಾದಿಗಳಿಗೆ) ನಿಯೋಜಿಸುವುದು,—ನೇಮಕ ಮಾಡುವುದು: ಈ ನೌಕರಿಯ ನೇಮಕಾತಿಯ ಜವಾಬ್ದಾರಿಯು ಮುಖ್ಯ ಸದಸ್ಯರ ಸಮಿತಿಯನ್ನವಲಂಬಿಸಿದೆ (ರೂಢಿ). [<ನೇಮಕ]

**ನೇಮಕ್ರಿ** (ನಾ). ತನ್ನ ನಿರ್ದಿಷ್ಟನಿಯಮಕ್ಕೆ ಸರಿಯಾಗಿ ಮಾಡುವ ಕ್ರಿಯೆ : ತನ್ನನುವಿಂಗೆ ಅನುವಾದುದನಱಿದು ಸಮ್ಮಂದಿಸಿ ಯಿಪ್ಪುದು ನೇಮಕ್ರಿ (ಏಲೇಶ್ವ. ೧). [ನೇಮ$_1$+ಕ್ರಿ]

**ನೇಮಗಲೆ** (ನಾ). [ಕಾಮಶಾ] ನಿಯಮಸ್ಥಾನವನ್ನು ತಿಳಿಯುವ ಕಲೆ ; ರತಿಕಲಾಸ್ಥಾನವನ್ನು ತಿಳಿಯುವ ಚಾತುರ್ಯ : ಬಳಿಕಾ ಸುಧನ್ವಂ ಮನದೊಳು ಭೀತಿಯಂ ತೊಱೆದು ಕಾಂತೆಯ ಕೂಡೆ ರಮಿಸಿದಂ . . . ಲಲ್ಲೆವಾತು ಗಳರವ ನೇಮಗಲೆ ತಾಡನಪ್ರೌಢಿ ಬಂಧ ಸಮ್ಮೋಹನದೊಳು (ಜೈಮಿಭಾ. ೧೧-೨೧). [ನೇಮ$_1$+ಕಲೆ$_3$]

**ನೇಮಗಾಣು** (ಕ್ರಿ). ನಿಯಮವನ್ನು ಅರಿ ; ಕ್ರಮವನ್ನು ತಿಳಿ : ಕಾಮನ ಸಖರು ದಕ್ಷಿಣನಾಗರಾದಿಗಳಾ ಮಾತಿಗೆಲ್ಲರೊಗ್ಗಾಗಿ ನೇಮಂಗಂಡಾಡಿದ ಪ್ರಣಯಚಂದ್ರಮಮಂತ್ರಿ ಸ್ವಾಮಿ ಮೆಚ್ಚುವನೆಂದರಿದಕೆ (ಭರಚ. ೪೮-೬೩). [ನೇಮ$_1$+ಕಾಣು(<ಕಾಣ್)]

**ನೇಮಗಾರ** 'ನೇಮಗಾಱ' ನೋ.

**ನೇಮಗಾರಿಕೆ** (ನಾ). ನಿಯಮಿಸುವಿಕೆ ; ಗೊತ್ತುಮಾಡುವಿಕೆ : ಈ ಇಂದಿನ ಮಹಾರಾಜನು . . . ತನ್ನ ಆ ನೇಮಗಾರಿಕೆಯ ನವೋನವೀನಲೀಲೆಗಳ ವಿಕಾರ ವಿಪರೀತಗಳನಿತಕ್ಕೂ ಮಹಾರಾಜಮುದ್ರೆಯನ್ನೊತ್ತಿಕೊಂಡು . . . ಕುಣಿದಾಡುತ್ತಿರುವನು (ಮಂತ್ರಶ. ೬೭-೨೩). [ನೇಮಗಾರ(<ನೇಮಗಾಱ)+-ಇಕೆ]

**ನೇಮಗಾಱ,** ನೇಮಗಾರ (ನಾ). ೧. ನಿಯಮಗಳನ್ನು ಬಲ್ಲವನು ; ಆಚಾರವಂತ : ಗಿರಿಜೆ ಶಂಕರನಂ ಸಿರಿಯರಸಿ ನಾರಾಯಣನಂ ಸಾರ್ದಂತೆ ಸಾರ್ದ ಅಮೃತಾಂಬೆಯೆಂಬರಸಿ . . . ಕ್ಷಮೆ ಜಿತಾತ್ಮನಂ ದಯೆ ಧಾರ್ಮಿಕನಂ ನೀತಿ ನೇಮಗಾಱನಂ ಬಱಸಲ್ವಂತೆ ಬಱಸಂದಿರ್ಪಳ್ (ಚಿಕಪಂ. ೬೪-೧). ೨. ಶೃಂಗಾರಕಲೆಗಳನ್ನು ಬಲ್ಲವನು ; ರಸಿಕ : ಅಪ್ಪಿದರಪ್ಪುವಳುಗುರಿಟ್ಟಿರುಗುರಿಕ್ಕಿ ಉಪ್ಪರಿಸುವಳೊದಱುವಳು ನೆಪ್ಪುಗಾತಿಯು ನೇಮಗಾಱನು ಹೊಕ್ಕರು ಮುಪ್ಪಿಡೆ ಸಾಧನೆಗಂದು. (ಭರಚ. ೧೧-೪೯). **ನೇಮಗಾರ :** ೩. ನಿಯಮಿಸುವವನು ; ನೇಮಕ ಮಾಡುವವನು : 'ನೇಮಗಾರಿಕೆ' ಪರಾ. [ನೇಮ$_1$+-ಕಾಱ]

**ನೇಮಗೊಳು** (ಕ್ರಿ). ನಿಯಮವಾಗಿ ಹೊಂದು ; ವ್ರತವಾಗಿ ಪಡೆ: ಆತನ ಚಿತ್ತ ನೋಯದಂತೆ ಮತ್ತಾವ ಬಂಧನದ ಕಟ್ಟನಿಕ್ಕದೆ ಕೃತ್ಯವ ನೇಮಗೊಂಡು ಮಾಡೆಂದು ನೇಮವ ಲಕ್ಷಿಸದೆ ಆತ ತನ್ನ ತಾನಱಿತು ಮಾಡಿದಲ್ಲಿ ಅದು ತನಗೆ ಮುನ್ನಿನ ಸೋಂಕೆಂಬುದನಱಿತು ಮುಟ್ಟದೆ ಆ ಪ್ರಸನ್ನವಪ್ಪ ವಸ್ತು ಮಹಾಮಹಿಮ ಕಲ್ಲೇಶ್ವರಲಿಂಗವು ತಾನಾದ ಶರಣ (ವಚಸಂ. ೧೯೧-೩೪). [ನೇಮ$_1$+ಕೊಳು(<ಕೊಳ್$_1$)]

**ನೇಮಣುಕಿ** 'ನೇಮಣೂಕು' ನೋ.

**ನೇಮಣೂಕ** 'ನೇಮಣೂಕು' ನೋ.

**ನೇಮಣೂಕಿ** 'ನೇಮಣೂಕು' ನೋ.

**ನೇಮಣೂಕು,** ನೇಮಣುಕಿ, ನೇಮಣೂಕ, ನೇಮಣೂಕಿ (ನಾ). (ಉಕ) ೧. (ನೌಕರಿ ಮೊದಲಾದುವುಗಳಿಗೆ) ನೇಮಕ ಮಾಡುವಿಕೆ,—ನಿಯಮಿಸುವಿಕೆ : ಪೋಲೀಸರ ನೇಮಣೂಕು ಆದ್ದರಿಂದ ಪ್ರಜೆಗಳ ಜೀವಿತಕ್ಕೂ ಆಸ್ತಿಗೂ ಭಯವಿಲ್ಲದ ಹಾಗಾಯಿತು (ಕಭಾಗ. ೩೬೨) ; ಈ ದಿನ ಅಲ್ಲಿ ನಡೆಯುವ ಲಿಲಾವಿನ ಬಂದೋಬಸ್ತಿಯ ಸಲುವಾಗಿ ನನ್ನ ನೇಮಣೂಕಾಗಿದೆ (ಕಳ್ಳಕಾ. ೨೫). ೨. ಮಾಸಾಶನ, ಜೀವನಾಂಶ ಮೊದಲಾದುವುಗಳ ಏರ್ಪಾಟು : ಹೈದರನು . . . ಚಾಮರಾಜನ ರಾಜ್ಯಾಧಿಕಾರ ಕಸುಕೊಂಡು, ಅವನನ್ನು ಕೆಲವು ನೇಮಣೂಕು ಗೊತ್ತುಮಾಡಿ ಶರೆಯೊಳಗಿಟ್ಟು ತಾನು ಹೈದರಅಲ್ಲೀಯೆಂಬ ಹೆಸರಿನಿಂದ ಆಳ ಹತ್ತಿದ್ದನು (ಕಭಾಗ. ೩೫೭). ೩. ಸಹಾಯಧನ ; ಅನುದಾನ : ಈ ಜಾತ್ರೆಗಾಗಿ ಸರಕಾರದಿಂದ ವರ್ಷಕ್ಕೆ ೩೦೦ ರೂಪಾಯಿ ನೇಮಣೂಕು ಬುನಾದಿಯಿಂದ ನಡಿಯುತ್ತ ಬಂದದೆ (ಕಭಾಗ. ೫೩೫) ; ಆ ನಾಡಿನ ಅರಸು . . . ಆ ದೇವರಿಗೆ ಒಂದು ನಂದಾದೀಪದ ನೇಮಣೂಕು ಮಾಡಿಕೊಟ್ಟನು (ಮುಂಬಯಿ. ೫-೧೭೫) ; ಮಧುಕೇಶ್ವರನಿಗೆ ಸರಕಾರದಿಂದ ೪೦೦೭ ರೂಪಾಯಿಯ ನೇಮಣೂಕು ನಡೆಯುತ್ತದೆ (ಕಾರವ. ೬೩). **ನೇಮಣುಕಿ :** ೧. ನೌಕರಿ ಬಿಟ್ಟ ಜನರ ಸ್ಥಳದಲ್ಲಿ ಕಾಯಂ ನೇಮಣುಕಿ ಆಗಿಲ್ಲ (ಕರವೀ. ೬೨). **ನೇಮಣೂಕ :** (೩). **ನೇಮಣೂಕಿ :** ೧. ನಿನಗೆ ನೇಮಣೂಕಿ ಆರ್ಡರ ಇನ್ನೂ ಬಂದು ಮುಟ್ಟಿಲ್ಲವೆ ? (ಜೆನ್ನುಹಿಂ. ೧೨) ; ಸಾಹೇಬರ ಸುಕುಮಾರಿ, ಕುಮಾರಿ ಚಿರಂಜೀವ ಶಕೂನಿಗೆ ನಾವು ಪಾಠ-ಪ್ರವಚನರತರಾಗಬೇಕೆಂಬ ನೇಮಣೂಕಿಯ ಫರ್ಮಾನು ಹೊರಟಿತು (ದೀಪಹ. II, ೧೯). ೨. ಆತ ಬನಾರಸದೊಳಗಿನ ಹಿಂದೂಧರ್ಮಾಧ್ಯಕ್ಷರ ನೇಮಣೂಕಿಗಳನ್ನು ನಿಲ್ಲಿಸಿಬಿಟ್ಟ (ಹಂಸಾ. ೧೪೨). [←**ಮರಾ.** ನೇಮಣೂಕ]

**ನೇಮದಟ್ಟು** (ಕ್ರಿ). ಮರ್ಮವನ್ನು ಮುಟ್ಟು ; ಹೃದಯಸ್ಪರ್ಶಿಯಾಗು : ವರ್ಣಕ ವಸ್ತುಕವೆಂಬ ಕವಿತ್ವದ ನಿರ್ಣಯದೊಳು ನೇಮದಟ್ಟ ಕರ್ಣರಸಾಮೃತವನೆ ಕಱೆವುತ ಕವಿತಾರ್ಣವರೆಸೆದರರ್ತಿಯೊಳು (ಭರಚ. ೬೪-೬೧). [ನೇಮ$_1$+ತಟ್ಟು$_1$]

**ನೇಮದಳೆ** (ಕ್ರಿ). ಆಜ್ಞೆಯನ್ನು ಹೊಂದು ; ಅಪ್ಪಣೆಯನ್ನು ಪಡೆ: ಬೆಟ್ಟದ ಚಾಮೇಂದ್ರ . . . ಘೇಲನೆ ಕೋಟೆಯ ನೃಪನ ಸಂಧಿಸಿ ನೇಮದಳೆದು ಶೀಘ್ರದೆ ತಿರುಗಿದನು (ಕಂನವಿ. ೩-೫೪). [ನೇಮ$_1$+ತಳೆ$_1$]

**ನೇಮದಾಣ** (ನಾ). [ಕಾಮಶಾ] ರತಿಕಲಾಸ್ಥಾನ : ನೇಮದಾಣವ ಬಲ್ಲ ನೀಱ ಸೀಱನ ಕೂಟ ಕಾಮನ ರತಿಯಾಟದಂತೆ ಕಾಮಾತುರ ಮಾತ್ರದವರಾಟ ಸೊಗಸಲ್ಲ ಪಾಮರಜನದಾಟದಂತೆ (ಭರಚ. ೭-೧೬). [ನೇಮ$_1$+ತಾಣ]

**ನೇಮಬಿಡಿಸು** (ಕ್ರಿ). (ಉಕ) (ಚೊಚ್ಚಲುಮಗನ ಮದುವೆಯ ಸಂದರ್ಭದಲ್ಲಿ, ತಾಯಿಯಾದವಳು ಮೊದಲಿನಿಂದ ಪಾಲಿಸುತ್ತಿದ್ದ) ನಿಯಮಗಳನ್ನು ಕೊನೆಗೊಳಿಸು,—ತೊರೆಯಿಸು : ಚೊಚ್ಚಲ ಮಗನ ತಾಯಿಾ ನೇಮಾ ಬಿಡಿಸಬೇಕು, ಚೌಕಲಾಣಿ ಹಾಕಬೇಕು (ಆಮನಿ. ೫೪). [ನೇಮ$_1$+ಬಿಡಿಸು]

**ನೇಮವಂತ** (ನಾ). ನಿಯಮಗಳನ್ನು ಪಾಲಿಸುವವನು ; ಧಾರ್ಮಿಕ ಆಚರಣೆಗಳನ್ನು ನಡೆಸುವವನು : ನೆಲ ಬಲವಂತನಿಗೆ, ಕುಲ ನೇಮವಂತನಿಗೆ (ಗಾದೆ). [ನೇಮ$_1$+-ವಂತ]

**ನೇಮವಳೆ** (ಕ್ರಿ). ಕ್ರಮಬದ್ಧವಾದ ಆಚರಣೆಯನ್ನು ತಪ್ಪು,-ಬಿಡು : ಗೌಡ ರಾಮಗಿರಿಯ ದುರ್ಗ ಮೊದಲಾದ ಘನವಹ ಸೀಮೆಯ ಖಳನಿಗೆ ಕೊಟ್ಟು ನೇಮವಳೆದು ನೆರೆಯವನಿತ್ತ ಕುಣಿಗಿಲಸೀಮೆಗೈದಿಹನು (ಕಂನವಿ. ೧೧-೬೨). [ನೇಮ$_1$+ಅಳೆ$_1$ (<ಅಱ$_1$)]

**ನೇಮವೀ** (ಕ್ರಿ). ಅಪ್ಪಣೆಯನ್ನು ಕೊಡು ; ಆಜ್ಞೆಮಾಡು ; ಅಣತಿ ನೀಡು : ಆ ಸತಿಯೊಳೊಂದಿ ನೀನೀ ಜಗತ್ಸೃಷ್ಟಿಯಂ ಬೇಸಱದೆ ಮಾಡೆಂದು ನೇಮವಿತ್ತಂಭೋರುಹಾಸನನನಳ್ಕಱಂ ಬೀಳ್ಕೊಟ್ಟು ಶಕ್ತಿಯಂತರ್ಧಾನದಿಂ ಪೋದಳು (ಚಬಪು. ೧೩-೧೭). [ನೇಮ$_1$+ಈ$_2$]

**ನೇಮವೇಳು** (ಕ್ರಿ). ಅಪ್ಪಣೆಯನ್ನು ಕೊಡು ; ಅನುಮತಿಯನ್ನು ನೀಡು : ಭಾಸ್ಕರ ಕೆಡೆದ ಪಶ್ಚಿಮಸಮುದ್ರದೊಳು ತಡವಿಲ್ಲದೆ ಪಯಣಕೆ ನೇಮವೇಳೆನೆ ಮಡದಿ ಮನ್ನಿಸಿದಳಾಕೆಯ (ಮೋಹತ. ೩೦-೪೧). [ನೇಮ$_1$+ಪೇಳು(<ಪೇೞ್)]

**ನೇಮಸೀಮೆ** (ನಾ). ನಿಯತವಾದ ಎಲ್ಲೆ ; ನಿಶ್ಚಿತವಾದ ಗಡಿ : ತಲ್ಲಿಂಗಾಭಿಷೇಕವಾರಿಯು . . . ಗೋಮತಿಯ ನದಿಯ ಕಳೆಯ ಲುವುಭಯ

ದಡಸೂಸಿ ನೇಮಸೀಮೆಯ ವಿಹಾರಿ . . . ಪರಿದುದು (ನಸಮೋ.೨೧-೨೬).
[ನೇಮ$_1$ + ಸೀಮೆ]

**ನೇಮಸುತ್ತು** (ನಾ). (ಕರಾ) ಒಂದು ಬಗೆಯ ವಸ್ತ್ರ,-ಪಂಚೆ : ಯಾವಾಗಲೂ ತೆಳ್ಳಗಿನ 'ನೇಮಸುತ್ತು' ಉಟ್ಟು ಮೈಮೇಲೆ ಬೆಳ್ಳಗಿನ ಮಕಮಲ್ಲು ಅಂಗಿ (ಹಹಸ. ೧೦). [←ತುಳು. ನೇಮಸುತ್ತು]

**ನೇಮಸ್ತ** (ನಾ).ವ್ರತಾಚರಣೆಗಳನ್ನು ಪಾಲಿಸುವವನು; ಧಾರ್ಮಿಕ ವಿಧಿಗಳನ್ನು ನೆರವೇರಿಸುವವನು ; ನೇಮವಂತ : ನೇಮಸ್ತನಱುವು ಪ್ರಪಂಚಿನಲ್ಲಿ ಹೋಯಿತ್ತು ಭಕ್ತನಱುವು ಸಮಾಧಾನದಲ್ಲಿ ಹೋಯಿತ್ತು (ಅಪಚಂ. ೭೧-೬೧೪); ಭವಿಮಿಶ್ರದವರ ಮನೆಯಲ್ಲಿ ನೇಮಸ್ತರುಗಳು ಹೊಕ್ಕು ಲಿಂಗಾರ್ಚನೆಯ ಮಾಡಿದಡೆ ಅನ್ನ ಪಾಕಾದಿಗಳ ಕೊಂಡಡೆ ನಾಯಡಿಗನರಮಾಂಸವು ತಪ್ಪದಯ್ಯಾ (ಚನ್ನವ. ೨೩-೯).[ನೇಮ$_1$+-ಸ್ತ]

**ನೇಮಸ್ಥ** (ನಾ). =ನೇಮಸ್ತ : ಗುರು ಅನಾಚಾರಿ ಲಿಂಗವು ನೇಮಸ್ಥ ಜಂಗಮ ದುರಾಚಾರಿ ಇಂತೀ ತ್ರಿವಿಧ ಭೇದ ಸ್ಥೂಲ ಸೂಕ್ಷ್ಮ ಕಾರಣ (ಮೋಳಿಮಾ. ೨೭೬-೨೮). [ನೇಮ$_1$+-ಸ್ಥ]

**ನೇಮಿ$_1$** (ನಾ). ನಿಯಮವನ್ನು ಹೊಂದಿರುವವನು ; ನೇಮವಂತ: ನೇಮಿಯ ನೇಮ ಲಿಂಗಾರ್ಚನೆಯ ಕೆಡಿಸಿತ್ತಲ್ಲಾ (ಸಕವ. II, ೬೧೬-೯೬ ಸಮಾವ). [ನೇಮ$_1$ +-ಇ$_2$]

**ನೇಮಿ$_2$** (ನಾ). ೧. ಗಾಡಿಯ ಚಕ್ರದ ಅಂಚು,—ಪಟ್ಟಿ : "ಚಕ್ರ ಧಾರಾ, ಪ್ರಧೀಃ, ನೇಮಿಃ—ಈ ೩ ನೆತ್ತಿವಟ್ಟಿಗೆ" (ಹಲಾಯು. ೬೩-೨೯೩) ; ಎರಡುಂ ತೇರೊಂದನೊಂದೆಯ್ತರೆ ನಡುಗೆ ನೆಲಂ ನೇಮಿ ಸಂಘಟ್ಟದಿಂದಂ (ಪಂಪಾಮಾ. ೧೩-೧೦೨); ಸಾರಥಿ ನಡೆಯಿಪ ರಥಿಕರೇಱಿದ ಬಲ್ದೇರಗಾಲಿಗಳ ನೇಮಿಗಳು (ಚಂಪ್ರಸಾಂ.೧೫-೬೫); ಓಡಿದನು ಮಾರೀಚ ನೆಟ್ಟದನು ದಾಶರಥಿ ; ಮುಟ್ಟಿದರು ನೀರದಾಕೃತಿವೆತ್ತ ಪುಷ್ಪಕಜಮಮಂ ಛಾಯಾವಲಯ ನೇಮಿಯಂ (ಶ್ರೀರಾಮಾ. ೨೩೭-೨೫೦). 'ಚಕ್ರನೇಮಿ' ಪರಾ. ೨. ಬಾವಿಯಿಂದ ನೀರೆತ್ತುವ ರಾಟೆ : "ಅಂಧುಃ, ಕೂಪಃ—ಈ ೨ ಬಾವಿ. ಪ್ರಧೀಃ, ನೇಮಿಃ (ಅದಱ ಜ್ಯಾಟೆ)" (ಹಲಾಯು. ೧೧೩-೬೨) ; "ನೇಮಿಃ, ತ್ರಿಕಾ, ೨-ಅಸ್ಯ ಈ ಭಾವಿಗೆ ಸಂಬಂಧಿಸಿದ ಭಂಡಿ, ತಿರಗಣಿ, ರಾಟೆ, ಕಪಿಲೆ, ಯಾತ ಮುಂತಾದ ನೀರೆತ್ತುವ ಯಂತ್ರಗಳಿಗೆ ಹೆಸರುಗಳು" (ಸಿದ್ಧಾಂತಿ. ೮೫). ೩. ಅಂಚು ; ದಡ ; ಎಲ್ಲೆ : "ಸಾರಿಹ ದಡಂ ಪ್ರಧಿ ನೇಮಿಯೆನಿಸಿಕ್ಕುಂ" (ಮಂಗರಾ. ೧೨೪-೧೮) ; ದುಮುಕುತಿದೆ ಆ ತಪೋವನದ ನೇಮಿಯೊಳೊಂದು ನಿರ್ಝರಿಣಿ (ಶ್ರೀರಾಮಾ. ೧೩೨-೨೦೪). ೪. ಒಂದು ಬಗೆಯ ಮರ ; ಹುಲಿಗಿಲ ಮರ :"ತಿನಿಶಃ, ಸ್ಯಂದನಃ, ನೇಮಿಃ, ರಥದ್ರುಃ . . . ಅತಿ ಚಿತ್ರಕೃತ್-೭ ಹುಲಿಗೇಮರದ ಪೆಸರುಗಳು. ಹುಲಿಗಿಲಿ, ನೆವ್ಮಿ, ಹೊಂಗೆ" (ಸಿದ್ಧಾಂತಿ.೧೧೭). ೫. [ಜೈನ] ಇಪ್ಪತ್ತೆರಡನೆಯ ತೀರ್ಥಂಕರನ ಹೆಸರು : ವೃಷಭ, ಅಜಿತ . . . ನೇಮಿ ಪಾರ್ಶ್ವ ವರ್ಧಮಾನ ರೆಂಬಿಪ್ಪತ್ತು ನಾಲ್ವರ್ ತೀರ್ಥಂಕರರ್ (ಚಾವುಂಪು. ೪೦೨) ; ನೇಮಿ ಲೋಕ ಸ್ವಾಮಿ . . . ನಿಸ್ಸೀಮ ದೀಕ್ಷಾಲಕ್ಷ್ಮಿಯೊಳು ಮದವಳಿಗ ತಾನಾದ (ಸಾಳ್ವಭಾ. ೫೯ ಪದ). ೬. ಕನ್ನಡದಲ್ಲಿ 'ಲೀಲಾವತಿ ಪ್ರಬಂಧ' ಮತ್ತು 'ನೇಮಿನಾಥಪುರಾಣ' ಎಂಬ ಗ್ರಂಥಗಳನ್ನು ಬರೆದ ಹನ್ನೆರಡನೆಯ ಶತಮಾನದ ಒಬ್ಬ ಪ್ರಸಿದ್ಧ ಕವಿಯ ಹೆಸರು ; ನೇಮಿಚಂದ್ರ : ರಸಮೋ ರಸಾಯನಮೋ ಶ್ರುತಿವಸಂತಮೋ ಕಿವಿ ಗಳಮೃತಮೋ ನೇಮಿಯ ವಾಕ್‌ಪ್ರಸರಮದೞಿಸಿಕದಿಂ ನಿಷ್ಪೊಸತಾದುದು ಜಗಕೆ ನೇಮಿಪುರಾಣಂ (ಅರ್ಧನೇ. ೧-೨೮) ; ಸರ್ವರ ಸಮ್ಮತಮೆನ ಗಿದು ಗರ್ವದ ಮಾತಲ್ಲ ಶಾಸ್ತ್ರಲೌಕಿಕಕಳೆಯೊಳ್ ಬೇರ್ಪರಿದ ನೇಮಿ ಜನ್ನಿ ಗರಿರ್ಪರೆ ಕರ್ಣಾಟಕೃತಿಗೆ ಸೀಮಾಪುರುಷರ್ (ಧರ್ಮನಾ. ೧-೪೧).[ಸಂ.]

**ನೇಮಿಕೆ** (ನಾ).(ನೌಕರಿ ಮೊದಲಾದುವುಗಳಿಗೆ) ನಿಯಮಿಸುವಿಕೆ, —ನಿಯೋಜಿಸುವಿಕೆ,—ಗೊತ್ತುಪಡಿಸುವಿಕೆ : ಒಂದು ವಾರದ ಅವಧಿಯಲ್ಲಿ ನನಗೆ ನೇಮಿಕೆಯ ಪತ್ರವು ಬಂದು ಮುಟ್ಟಿತು (ಹೇಮುಂತ. ೧೪೧). [ನೇಮಿಸು +-ಕೆ]

**ನೇಮಿತ** (ಗು).೧.ನಿಯಂತ್ರಿಸಿದ ; ಹತೋಟಿಗೆ ತಂದ ; ಸಂಯಮ ದಿಂದ ಕೂಡಿದ : (೬). (ನಾ). ೨. ಮಿತಿಯಲ್ಲಿರುವುದು ; ನಿಯಂತ್ರಿತವಾದುದು : ಅವರ ಸೇನೆಯು ನೇಮಿತವಾಗಿರಬೇಕೆಂದೂ ಒಂದು ವೇಳೆ ಅದನ್ನು ಬೆಳೆಸಿದ್ದಾದರೆ . . . ಅವರ ಸಂಸ್ಥಾನವನ್ನೇ ಕಿತ್ತುಕೊಳ್ಳಲಾಗುವುದೆಂದು ಕಟ್ಟಪ್ಪಣೆಯನ್ನು ವಿಧಿಸಲಾಯಿತು (ಪ್ರಬಂಧ. ೬೨). [<ಸಂ. ನಿಯಮಿತ]

**ನೇಮಿಮರ** (ನಾ). ಒಂದು ಬಗೆಯ ಮರ ; ತಿನಿಶ : ಪಾದರಿ, ಹಾದರಿ, ನೇಮಿಮರ (ಮೈಔಗಿ. ೫೪-೧೦೮೩). [ನೇಮಿ$_2$ + ಮರ$_1$]

**ನೇಮಿವತ್ತಿಗೆ** (ನಾ). ಚಕ್ರದ ಹೊರವಲಯದ ಪಟ್ಟಿ : ಸೂರ್ಯನ ರಥಕ್ಕೆ ಮಾಡಿದ ಗಾಲಿ ಐಂಭತ್ತು ಸಾವಿರದ ಯೋಜನಗಲಂ ನೇಮ[ಮಿ] ವತ್ತಿಗೆಯೆ ಸಾವಿರದ ಯೋಜನ ವಿಶಾಲಕದಕ್ಕೆದು ಮೊಳೆಯಾ ಗಾಲಿ ಸಾವಿರದ ಯೋಜನುದ್ದಂ (ತುರಂಗ. ೨೯-೫೦). 'ನೆತ್ತಿವಟ್ಟಿಗೆ' ಪರಾ. [ನೇಮಿ$_2$+ಪತ್ತಿಗೆ$_1$(<ಪತ್ತುಗೆ)]

**ನೇಮಿಸು** (ಕ್ರಿ). ೧. ಮನಸ್ಸನ್ನು ನಿಯಂತ್ರಿಸು,—ನಿರೋಧಿಸು ; ಸಂಯಮದಿಂದಿರು : (೬). ೨. ಅಪ್ಪಣೆ ಮಾಡು ; ಆಜ್ಞೆ ಮಾಡು ; ವಿಧಿಸು : ಭೀಮಲಿಂಗವು ರಾಮಪೀಠಕೆ ರಾಮಲಿಂಗವು ಭೀಮಪೀಠಕೆ ನೇಮಿಸಿದವೋಲಲ್ಲಿಗಲ್ಲಿಗೆ ಪಲ್ಲಟಿಸಿ ನಿಲಲು (ಬಸಪು. ೫೭-೫೪) ; ವೇದವ್ಯಾಸಮುನಿ ನಡೆತಂದು . . . ಆ ಸಮರವೃತ್ತಾಂತ ನಿನಗೆ ಸಮಾಸವಿಸ್ತಾರವಾಗಿರಲಿ ಭೂಮಿಶಾಶಿಲಕಂಗಜಯಿಸುವುದು ನೀನೆಂದು ನೇಮಿಸಿದ (ಕುಮಾರಭಿ. ೧-೫೫) ; ಎನಗೆ ನೇಮಿಸಿ ಕಳುಹಿ ನಿಮ್ಮಯ ಮನದ ಬಯಕೆಯ ಸಲಿಸುವೆನು (ನಳಚ. ೪-೬) ; ನಮ್ಮ ಬಲ ಸರ್ವ ಸನ್ನಾಹವೈದಿ ಬಂದಿಧಳೆಂದಾಗ ಮೇದಿನೀಶ್ವರ ದಳಪತಿಗೆ ನೇಮಿಸುತನು ವಾದನಾಹವಕಾ ಕ್ಷಣದೆ(ಕಂಸವಿ.೧೫-೧೧). ೩.(ಅಧಿಕಾರ,ಉದ್ಯೋಗ ಮುಂತಾದುವುಗಳಿಗೆ) ಗೊತ್ತುಪಡಿಸು,— ನಿಯಮಿಸು : ಅಂತ ರಂಗದಲಿ ಆ ಮಹಾ ಶಿವಲಿಂಗಸಂಗಪ್ರೇಮಿಯಾಗಿ ಶಿವೈಕ್ಯಪದವನ್ನು ನೇಮಿಸಿದ ಮಹದೇವಿಯಕ್ಕಗೆ ಶರಣು ಶರಣಾರ್ಥಿ (ಪ್ರಭುಲೀ. ೧-೫) ; ಅವನನ್ನೇ ತನ್ನ ಪ್ರಧಾನನ ಕೆಲಸಕ್ಕೆ ನೇಮಿಸಿಕೊಂಡನು (ಮುಂಬಯಿ. ೪-೮೦) ; ಕಂಠೀರವ ನರಸರಾಜರು . . . ತಮಗೆ ವಿಧೇಯರಾದಂತಹ ದಳವಾಯಿಗಳನ್ನು ನೇಮಿಸಿಕೊಂಡರು (ಸಂಸಕ. ೧೧೪).
[ನೇಮ$_1$ +-ಇಸು$_3$]

**ನೇಯ್** 'ನೆಯ್$_1$' ನೋ.

**ನೇಯ$_1$** 'ನಾಯ' ನೋ.

**ನೇಯ$_2$** (ಗು). ೧. ಅನ್ವಯಿಸುವ ; ಊಹಿಸುವ ; ಅಧ್ಯಾಹಾರ ವಾದ : 'ನೇಯಾರ್ಥ' ಪರಾ.(ನಾ). ೨. ಅನ್ವಯಿಸುವಂಥದು; ಅಳವಡುವಂಥದು : ಬಹುಸಂಘಿಗಳಾರ್ತಗೇಯಕರ್ ಕುಂದದೆ ಬೇಱಿ ಬೇಱಿಸಗಿ ನೇಯಮನಾ ಪ್ರಭುಗೆಯ್ದಿ ಕೇಳಿಸಲ್ ಕುಂದವನಾ ಕವಿತ್ವ ದೊಳೆ ಕಾಣದೆ ಸಂಶಯಕಲ್ಪನಾರ್ಥಮಂ (ಹಾಲಾಸ್ಯ. ೪-೪-೧೯) ; "ರೀತಿ ; ಕ್ರಮ" (ಹಾಲಾಸ್ಯ. ಕೋಶ) ; ಕಾಯ ನಿರ್ಣೇಯವವದರೊಳು ಮನವನಿರ್ಣೇಯ ಸ್ಥಾಯಿ ಸಂಖ್ಯೇಯ ಜೀವಳಮಸಂಖ್ಯೇಯ ಮೇಯಾ ಪ್ರಮೇಯ ಮಿಶ್ರಣವಿಂತು ನರಜಂತು ನೇಯವದು ವಿಶ್ವಕಂ (ಮಂಕುಕ. ೧೦೨). ೩. ಇನ್ನೊಬ್ಬರ ಮಾರ್ಗದರ್ಶನದಲ್ಲಿರುವವನು ; ಸ್ವಬುದ್ಧಿಯಿಲ್ಲದವನು : ತಾವು ಅಶ್ರದ್ಧಧಾನನಂತೆ, ನೇಯನಂತೆ,

ನೊಳುಂಟೆ ನೇರಗಳು (ನಾಗಕು. ೯-೧೨೦). ೨. ಸರಿಯಾದುದು ; ತಕ್ಕುದು ; ಉಚಿತವಾದುದು : ಹತ್ತಾರು ದಾರಿಯೊಳಲೆಯುವು ದೇತಕೆ ನೇರವಾದೊಂದರೊಳೋಡು (ಇಂಚಾಪ. ೯೨-೪೭) ; ಅವನು ಹೋಗುವ ದಾರಿ ಬಹಳ ನೇರವಾದುದು (ರೂಢಿ). ೩. ಸುತ್ತುಬಳಸು ಗಳಿಲ್ಲದಿರುವಿಕೆ ; ಸೀದಾತನ : ಅವನು ತುಂಬ ನೇರವಾಗಿ ಮಾತ ನಾಡುತ್ತಾನೆ (ರೂಢಿ). ೪. ಋಜುಮಾರ್ಗ ; ಸತ್ಪಥ : ನಾರಾಯಣನ ವಾಕ್ಯವ ಕೇಳಿ ತ್ರಿದಶೋಪಕಾರಕ್ಕೆ ಸ್ಮರ ತನ್ನನೆಚ್ಚು ಬಾರದ ಬಟ್ಟೆಯ ಬಳಿವಿಡಿದನ ಬಿಟ್ಟು ನೇರದಿ ಬಾಳೆಂದು ನುಡಿದ (ಮೋಹತ. ೮-೩೪) ; ಶ್ಲೇಷ್ಮಪ್ರಕೃತಿಯುಳ್ಳ ಪುರುಷನು . . . ಕೃತಜ್ಞನಾಗಿ ನೇರ [ಪಾಠಾಂ. ನೆನಪು]ವುಳ್ಳವನಾಗಿ ವಿದ್ವಾಂಸನಾಗಿ ಚಂದವುಳ್ಳವನಾಗಿ . . . ಸ್ಥಿರವಾದ ಸ್ನೇಹವುಳ್ಳವನಾಗಿ ಇಹನು (ವೈದ್ಯಸಾ. I, ೧೮). ೫. ದಿಕ್ಕು ; ಹಾದಿ ; ನಿಟ್ಟು : ಗಾಳಿ ತೀಡುವಾ ನೇರದೊಳ್, ದೂರದೊಳೆ, ಮೇಡ ಕೋಡಿನ ಮೇಲೆ ಕುಳ್ಳಿರ್ದಮ್ (ಅಂತಿಗೊ. ೧೯-೩೯೯) ; ಸೂರ್ಯನ ನೇರಕೆ ಹೋಗುವಿಯಾದರೆ ತಪ್ಪೀತು ಒಳಹಾದಿ ನಿನಗೆ (ಇಂಚಾಪ. ೨೧೧-೪೪). ೬. ಮನೋಹರತೆ ; ರಮಣೀಯತೆ ; ಸೊಗಸು : ಶಾರದೆ ವಿನಾಯಕಂ ನೇರದೆ ವಿಲಾಸಮಂ ತೀರದೆ ಕುಶಬ್ದಮಂ ತಾರದೆ . . . ಆರದೆಯೊಲಿದು ಬಾಲಶಾರದೆಯೆನಿಪ್ಪ ಮಂಗನ ಕೃತಿಯನಿಂತುಟುದ್ಧರಿಸಿ ತಿರ್ದುಗೆ ಕೃಪೆಯೊಳು(ಮಂಗರಾ. ೧-೨) ; ಶಾರದೆ ಜಡರತ್ತ ಸಾರದೆ ಪೆಜರ ಕೈಸಾರದೆ ಬಂದೆಮ್ಮುವನು ಸೇರಿದೆಯಿನ್ನು ನೀ ಜಾಜಿದೆ ಹೋರದೆ ನೇರದಿ ಮಾಡೀ ಕೃತಿಯ (ನಾಗಕು. ೧-೧೯) ; ತರುಣ ಪಲ್ಲವದ ವಿಸ್ತಾರದಿಂ ನೇರದಿಂ ಸರಗೈವರ ಕಲಪಿಕೋಚ್ಚಾರದಿಂ ಸಾರದಿಂ . . . ಕರಮೆಸೆಯುತಿರ್ಪ ಸಹಕಾರದಿಂ ತೀರದಿಂಪೆಲ್ಲಿಯುಂ ನಂದನದೊಳು (ಜೈಮಿಭಾ. ೩-೨೮) ; ಬಿಸಿಲ್ ತಣೆಯೆ, ತಂಗಾಳಿ ಮೈದೋಜಿತೆ, ವಿಹಗಂಗಳ್ ನೇರದಿಂ ಪಾಡೆ, ಮಾರ್ತಂಡಂ ಪಶ್ಚಿಮಾಭಿಮುಖನಾಗೆ, ಸೀತಾಲಕ್ಷ್ಮಣರುತ್ತರಾಭಿಮುಖರಾಗಿ ಪೊಜಿಮಟ್ಟರ್(ರಾಮಾಶ್ವ.೩೨-೩). ೭. ನಿಜ ; ಸತ್ಯ ; ದಿಟ : ನೇರಮೋ ಈ ಬೇಂಟೆ ? . . . ನೇರಂ. ಆತನದೆ ಈ ಕೆಲಸಮ್; ಒಳಗಿರ್ಪನ್ (ಅಶ್ವತ್ಥಾ.೨-೨೨). ೮. [ನಾಟ್ಯ] ಒಂದು ಬಗೆಯ ನೃತ್ಯ (?) : ಗಿರಿಯೊಳಾಡುವನೊಮ್ಮೆ ಮುಗಿ ಲೊಳಾಡುವನೊಮ್ಮೆ ಸರಿತದೋಜುವನು ಡೊಂಕಹನು ಉರುಪ ನೇರಗಳ ಚಕ್ಕಡಿ ಚಿಂತು ಮೊದಲಾದ ಪರಿಪರಿ ನಾಟ್ಯದೋಜಿದನು (ಭರಚ. ೭೪-೯೧). 'ನೇರ್$_2$' ಪರಾ.(ಗು). ೯. ನೆಟ್ಟಗಿರುವ ; ಡೊಂಕಿಲ್ಲದ: 'ನೇರಬೊಟ್ಟು' ಪರಾ.

**ನೇರಮಾಗು, ನೇರವಾಗು** = ೧. ಸರಿಯಾಗು ; ಯೋಗ್ಯ ವಾಗು; ಸಮಂಜಸವಾಗು : ನೆರೆಹೊರೆಯವರಜಿದೊಡೆ ನೇರಮಾ ಗದು (ಪ್ರಭಂಜ. ೨-೩೨) ; ಕಡಿತಲೆಯ ಸುರಗಿಯ ಕೊಂತದ ಸೂಳದ ಶ್ರೀರಂಗಪಟ್ಟಣ ಬಿಲ್ಗಣೆಯ ಮೂಡಿಗೆಯ ಭಟರ ದೆಖ್ಖಾಳಂ ನೇರಮಾಗೆ (ರಾಮಾಶ್ವ.೫೦-೮) ; ಕರ್ಣಾಟಕವೆಂಬ ನಾರಿಯ ನೊಸಲೊಳು ಮೆಜಿವ ಚಾರುರನ್ನದ ಬೊಟ್ಟನಂತಿಹುದದ ಕೊಳೆ ನೇರವಹುದು ರಾಜಕಾರ್ಯ (ಕಂನವಿ.೧೧-೬೭) ; ಯೌವನದಲ್ಲೇ ವಕ್ರವಾಗಿದ್ದ ಸ್ವಭಾವ ಮುಪ್ಪಿನಲ್ಲಿ ನೇರವಾಗುವುದಿಲ್ಲ (ಯೋಧವು. ೭೬). ೨. ನೆಟ್ಟಗಾಗು ; ಡೊಂಕಿಲ್ಲ ದಾಗು : ನಾಯಿಬಾಲ ನೇರವಾಗುವುದಿಲ್ಲ (ರೂಢಿ). ೩. ತಕ್ಕ ಷ್ಟಾಗು ; ಸಾಕಾಗು : ಎಷ್ಟು ಸಂಬಳ ತಂದರೂ ಎರಡು ಹೊತ್ತಿನ ಊಟಕ್ಕೇ ನೇರವಾಗೋಲ್ಲ (ಅನ್ನಾಪ. ೧೫). **ನೇರ ಮಾಡು** = ೧. ಕೊಂಕಿದುದನ್ನು ನೇರಗೊಳಿಸು ; ಡೊಂಕಾದುದನ್ನು ನೆಟ್ಟಗೆ ಮಾಡು : ಮಂತ್ರೀಶ ಬಳಿಯಟ್ಟೆ ಬಂದರಾಗಳೆ ದಿವ್ಯಮಂತ್ರ ವಾದಿಗಳು ಲಗ್ಗೆಯೊಳು ಮಂತ್ರಿಸಿ ನೇರ ಮಾಡುವೆವಿದ ನೋಡೆಮ್ಮ ಮಂತ್ರಶಕ್ತಿಯನೆಂದರವರು (ಭರಚ. ೪೯-೯೫). ೨. ಸಾಕಷ್ಟಾಗು ವಂತೆ ಮಾಡು ; ಸಾಕಾಗುವಂತೆ ಹೊಂದಿಸು : ಇರುವ ತಿಂಡಿ ಯನ್ನು ಎಲ್ಲ ಮಕ್ಕಳಿಗೂ ನೇರ ಮಾಡು (ರೂಢಿ). **ನೇರವಾಗಿ** = ೧. ನೆಟ್ಟಗೆ ; ಅಂಕುಡೊಂಕಿಲ್ಲದೆ : ತಾಳೆಗರಿ ಅಥವಾ ಓಲೆಗರಿಯ ಮೇಲೆ ಬರೆಯುವಾಗ ಅಕ್ಷರ ನೇರವಾಗೂ, ಚೌಕವಾಗೂ ಇದ್ದರೆ ಬರವಣಿಗೆಯಲ್ಲಿ ವೇಗ ಬರುವುದಿಲ್ಲ (ದ್ರಾವಿವಿ. ೫೯). ೨. ಅಡೆತಡೆಗಳಿಲ್ಲದೆ ; ನೆಟ್ಟಗೆ ; ಸೀದಾ : ಅಷ್ಟರಲ್ಲಿ ಒಂದು ಬಾನುಲಿಯು ಕೇಳ ಬಂದಿತು . . .ನಕುಲನು ಅದಾವುದನ್ನೂ ಕಿವಿಯದೆ ನೇರವಾಗಿ ನೀರು ಮೊಗೆಯಹೋದನು (ಯಕ್ಷಪ್ರ. ೨) ; ಫ್ರಿಟ್ಸ್ . . . ಜೀವಶಾಸ್ತ್ರಜ್ಞನಾದರೂ, ಪ್ರಾಯೋ ಗಿಕ ವಿಧಾನಗಳಿಂದ ಪ್ರಕೃತಿಯನ್ನೇ ನೇರವಾಗಿ ಪ್ರಶ್ನಿಸುತ್ತಾನೆ (ಸಸ್ಯಕ. ೮೩) ; ದೂತನನ್ನೇ ನೇರವಾಗಿ ಇಲ್ಲಿಗೆ ಕಳುಹಿಸಿ ಅವನಿಂದ ನಿಮಗೆ ತತ್ತ್ವಬೋಧೆ ಮಾಡಿಸುತ್ತಿದ್ದನು (ಕೈಮಹ. ೨೭). **ನೇರ ವಾಗಿರು** = ಹೊಂದಾಣಿಕೆಯಿಂದ ಕೂಡಿರು : ರಾಯನೆನಗೆ ನೇರ ವಾಗಿಹನಂಜದಿರೆಂದು ರಾಮನ ಭೀರುತೆಯನು ಬಿಡಿಸುವೆನು (ಕುಂಸಾಂ. ೨೬-೧೪೬). **ನೇರಾಗಿಸು** = ನೆಟ್ಟಗೆ ಮಾಡು ; ನೇರಗೊಳಿಸು ; ಡೊಂಕಿಲ್ಲದಂತೆ ಮಾಡು : ನೊಂದ ಬೆನ್ನನ್ನು ನೇರಾಗಿಸಲೆಂದು ನಿಂತ ಭಟನೊಬ್ಬನ ಕೈಯಿಂದ ಗುದ್ದಲಿಯನ್ನು ಕಸಿದು . . . ಮಣ್ಣು ಹೆಂಟೆಗಳನ್ನು ಕಡಿದು ಕೊಳ್ಳಕ್ಕೆ ಎಸೆಯಲಾರಂಭಿಸಿದರು (ಹುಲಿಹಾ. ೩೩೯). [<ನೇರಿತು]

**ನೇರ$_2$** (ನಾ). ಕಾಲ ; ಸಮಯ ; ಹೊತ್ತು : ನೇರವು ಸಾಯಂಕಾಲ ವಾಗುತ್ತ ಬಂದಿತು ; ಉಪವನಕ್ಕೆ ತೆರಳಿದ ರಾಜನಂದಿನಿಯು ಇನ್ನೂ ರಾಜಗೃಹಕ್ಕೆ ಹಿಂದಿರುಗಿ ಬರಲಿಲ್ಲ (ಅಮಾಸಂ. ೧೫).

[ದೇ.॥ ತಮಿ. ಮಲ. ನೇರ]

**ನೇರಂ** (ಅ). ೧. ನೇರವಾಗಿ ; ನೆಟ್ಟಗೆ ; ಸುತ್ತುಬಳಸಿಲ್ಲದೆ : ಉದ್ಯಾನದಿಂ ನೇರಮುರಮನೆಗೆಯ್ದಿ, ಪುತ್ರಾಭಿವಾಂಛೆಯತಿಚಿಂತೆಯಿಂ ಬರಿಸಿದನ್, ನುಡಿಸಿದನ್ ಗುರುಗಳಂ ವಾಮದೇವ ವಸಿಷ್ಠರಂ (ಶ್ರೀರಾಮಾ. ೮-೨೦೭) ; ನೇರಮೊರೆವೊಡೆ ಎನ್ನ ಉಪಕೃತಿಗಳನ್ ಇಂತು ದುಷ್ಕೃತಿ ಗಳಿನ್ ಮುಯ್ ಮಾಡಿದೆಲ್ಲ ದೇವರ್ಕಳುಂ ಎನಗೆ ಪಗೆಗಳೆಂದೇ ಎಣಿಸಿ ದಪ್ಪೆನ್ (ಬದ್ಧಪ್ರ. ೫೧-೧೧೨೩). ೨. ಚೆನ್ನಾಗಿ ; ಸೊಗಸಾಗಿ ; ಅಂದವಾಗಿ : ನುಡಿ ಬೇಸಜಿಂ ಬೆರೆಯೆ, ನಡೆಗಲಸು ನೆರೆಯೆ, ನಿಡುಬಾಸೆ ನೇರಂ ಮೆಜಿಯೆ, ನೋಟದ ಗಾಡಿ ತಟ್ಗೆ, ಮನಕೆ ಪುದುಮಯಕೆ ಪುದುಂಗೊಳೆ, ಸೀತೆ ಬಸಿಜಿಯಾದಳ್ (ರಾಮಾಶ್ವ. ೨೧-೯). [<ನೇರ$_1$]

**ನೇರಂದ** (ನಾ). ೧. ನೇರವಾದ ರೂಪ ; ನೆಟ್ಟಗಿನ ಆಕೃತಿ : ಚಂದನವಿತ್ತ ಮೂಹೊಜಿಡೆಯ ತನುವ ನೇರಂದವ ಮಾಡಿ ತೋಜಿಸಿದ ವೃಂದಾವನತಾತ್ಪರ್ಯನ ಕಾರುಣ್ಯದಿಂದೆ ಮೇಲ್ಗತೆಯ ವಿಸ್ತರಿಸು (ಮೋಹತ. ೪೦-೧). ೨. ಉತ್ತಮವಾದ ರೂಪ ; ಅತಿಶಯ ವಾದ ಸೌಂದರ್ಯ : 'ನೇರಂದವಡೆ' ಪರಾ. ೩. ಪರಿಶುದ್ಧ ವಾದ ನಡತೆ ; ಸದಾಚರಣೆ : ನೇರಂದವಾಗಿರ್ದ ಮುನಿಪತ್ನಿಗೆ ಸತ್ಕುಮಾರನ ಕೊಟ್ಟ ಸಾತ್ವಿಕನು ಚೋರರ ಕೊಲಬಂದ ನೋಡೆಂದು ನೆಯ್ದಿಲೆ ನೀರೊಳು ನಸುನಕ್ಕುವಾಗ (ಮೋಹತ. ೧೮-೩೧).

[ನೇರ್$_2$ + ಅಂದ]

**ನೇರಂದವಡೆ** (ಕ್ರಿ). ಅತಿಶಯವಾದ ಚೆಲುವನ್ನು ಪಡೆ ; ಹೆಚ್ಚಿನ ಸೌಂದರ್ಯವನ್ನು ಹೊಂದು : ಹೊಂದಗಡಿನ ಹೊದಕೆಯ ಮನೆ ಬಹಳ ನೇರಂದವಡೆದ ಪಟ್ಟಶಾಲೆ ಮುಂದೆಸೆಯಲಿ ತುಳಸಿಯ ಮಂಟಪದಿ ಗೋವಿಂದನ ಕೀರ್ತಿಸುತಿಹರು (ಮೋಹತ. ೩-೩೪).

[ನೇರಂದ + ಪಡೆ$_1$]

**ನೇರಗೊಳಿಸು** (ಕ್ರಿ). ಸರಿಗೊಳಿಸು ; ಯೋಗ್ಯವಾಗುವಂತೆ ಮಾಡು ; ಉತ್ತಮಪಡಿಸು : ದಿನದಿನವೂ ಜನರ ಚಿತ್ತವನ್ನು ನಯ ಭಯಗಳಿಂದ ತಿದ್ದಿ ನೇರಗೊಳಿಸುತ್ತಿದ್ದರೇ ಅಲ್ಲವೆ ಅವರಿಗೆ ಅಹಿಂಸೆ, ಸತ್ಯ, ಅಸ್ತೇಯ, ಮೊದಲಾದ ಉದಾತ್ತಗುಣಗಳಲ್ಲಿ ನಂಬಿಕೆ, ಅವುಗಳನ್ನು ಆಚರಣೆಯಲ್ಲಿಟ್ಟುಕೊಳ್ಳುವ ಉತ್ಸಾಹ ಇವು ಸವೆಯದೆ ಇರುವುವು ? (ಸಾಹಿಜೀ. ೭೮). [ನೇರ$_1$ + ಕೊಳು (<ಕೊಳ್$_1$) + -ಇಸು$_3$]

**ನೇರಣಿಗ** (ನಾ). ಚಿನ್ನದ ಕೆಲಸ ಮಾಡುವವನು ; ಅಕ್ಕಸಾಲಿಗ : ವೀರಭಟರ ವಿದ್ವಾಂಸರಕ್ಕರಿಗರ ನೇರಣಿಗರ ನಚ್ಚಣಿಗರ ವಾರವನಿತೆಯರ ವೈದ್ಯರ ಬಚ್ಚರ ಕೇರಿಯಿಂದೆಸೆಯಿತಾ ನಗರ (ನೇಮಿಸಂ. ೧-೭೯). 'ಏರಣಿಗ' ಪಠಾ. [<ನೇರಾಣಿ + -ಗ$_2$]

**ನೇರನೀರು** (ನಾ). ನೇರವಾಗಿ ಹರಿಯುವ ನೀರು : ನೆಟ್ಟಾನೆ ಬಾಳ್ವೆಯಲಿ ನೆಟ್ಟಾನೆ ನಡಿ, ನೇರನೀರಲಿ ಜಿಗುಳೆಯಂತೆ ಕೊಂಕುವರಿಯದಿರಣ್ಣ ! (ಹಪ್ಪೆರ. ೪-೪೭). [ನೇರ$_1$ + ನೀರು$_1$ (<ನೀರ್)]

**ನೇರಬೊಟ್ಟು** (ನಾ). ಹಣೆಯ ಮಧ್ಯಭಾಗದಲ್ಲಿ ಬೈತಲೆಯ ಕೆಳಭಾಗಕ್ಕೆ ಸರಿಯಾಗಿ ಇಡುವ ಆಭರಣ,—ಬೈತಲೆಬೊಟ್ಟು : "ತಿಂಗಳಿಗೆ ಜೂಳೆಯುಮೆನಲ್ ನೇರ[ಪಾಠಾಂ. ಮೆಱೆವ]ಬೊಟ್ಟು" (ಶಬ್ದಮಂ. ೭೩) ; "ಜೂಳಯು ತಿಂಗಳಿಗೆಯೆನಲ್ ನೇರಬೊಟ್ಟಿಗೆ ಪೆಸರ್" (ಕಬ್ಬಿಗೈ. ೨೬). [ನೇರ$_1$ + ಬೊಟ್ಟು$_1$]

**ನೇರಲು** 'ನೇಱಿಲ್' ನೋ.

**ನೇರಲುತಾರೆ** (ನಾ). ಒಂದು ಬಗೆಯ ಸಸ್ಯ : ಮಸ್ಸಿ, ಕರುವಾಡಿ, ನೇರಲುತಾರೆ (ವೈಔಗಿ. ೫-೮೨). [ ? ]

**ನೇರಲೆ** 'ನೇಱಿಲ್' ನೋ.

**ನೇರಶಿಷ್ಯ** (ನಾ). ಪ್ರತ್ಯಕ್ಷ ಶಿಷ್ಯ; ಖುದ್ದು ಶಿಷ್ಯ; ಖಾಸಾ ಶಿಷ್ಯ : ತ್ಯಾಗರಾಜರ ನೇರಶಿಷ್ಯರಲ್ಲೊಬ್ಬರಾದ ಮನಂಬುಚಾವಡಿವೆಂಕಟಸುಬ್ಬಯ್ಯರ್ ಇವರಿಗೆ ಸಂಗೀತಾಭ್ಯಾಸ ಮಾಡಿಸಿದ ಗುರುಗಳು (ಸಂಗೀತ. ೨). [ನೇರ$_1$ + ಶಿಷ್ಯ]

**ನೇರಸಂಧಾನ** (ನಾ). ೧. ಮಧ್ಯಸ್ಥರ ಸಹಾಯವಿಲ್ಲದೆ ನಡೆಸುವ ವ್ಯವಹಾರ. ೨. ಅಡೆತಡೆಗಳಿಲ್ಲದ ಸಂಪರ್ಕ : ಈ ರೀತಿ ಒಂದು ತಥ್ಯ ಬೇರೊಂದು ಸೂಕ್ಷ್ಮತರ ತಥ್ಯವನ್ನು ವ್ಯಂಜಿಸುತ್ತಾ ಕಾವ್ಯದ ಆತ್ಮದೊಡನೆ ನೇರಸಂಧಾನವನ್ನು ನಡೆಸುವ ನೆಲೆಯನ್ನು ತಲುಪಲು ಸಹಾಯಕವಾಗುತ್ತದೆ (ಶ್ರೀಷ್ಮಪ್ರ. ೭೩). [ನೇರ$_1$ + ಸಂಧಾನ]

**ನೇರಳೆ** 'ನೇಱಿಲ್' ನೋ.

**ನೇರಳೆಮಾವು** (ನಾ). ಒಂದು ಬಗೆಯ ಮರ : ದೇವಗರಿಗೆ, ಹಿರೇಕಣಿಗಲು, ನೇರಳೆಮಾವು, ದೀವರಿಗೆ, ಚಿಕ್ಕ ಕಮರಾಕ್ ಮರ, ಕಾಡುಜೀರಕ (ವೈಔಗಿ. ೩೮-೭೫೯). [ನೇರಳೆ (<ನೇಱಿಲ್) + ಮಾವು]

**ನೇರಾಣಿ,** ನೇರಾಳಿ (ನಾ). ಶುದ್ಧ ಬಂಗಾರ ; ಅಪ್ಪಟ ಚಿನ್ನ ; ಅಪರಂಜಿ : ಪಾಲ್ಗಡಲ ನೀರ ಪರಿವ ಪೊನಲ್ಗಳ್ ಸುರಗಿರಿಯ ಪಿರಿಯ ನೇರಾಣಿಯ ತಾಱಲ್ಗಳ್ವಿಡಿದಿ[ಱಿ](ದಂ)ದೇಱಲ್ಗೆಜಗಿದುವಾ ಜಿನೇಂದ್ರ ಸವನೋತ್ಸವದೊಳ್ (ಶಾಂತಿಪು. ೧೦-೫೧) ; ಮಾಣದೆ ತಪದಿಂ ಮುನಿಗೀರ್ವಾಣನ ತನು ತಪ್ತಮಾಗಿಯುಂ ಕಂದದೆ ನೇರಾಣಿಯ ಪೊಳೆಪಂ ತಳೆದುದು ಮಾಣಿಕಮುಂ ಬೆಳಗಿದಂತೆ ದಹನಕ್ರಿಯೆಯಿಂ (ಅನಂಪು. ೯-೧೦೮); ಚಿನ್ನದ ಬೊಂಬೆಗಳೆನೆ ನೇರಾಣಿಯ ಕನ್ನೆಯರೆನೆ . . . ಸನ್ನುತ ಸೌಭಾಗ್ಯಂಬಡೆದಬಲೆಯರೊಪ್ಪುವಡೆದರಾಗ (ಜಯಕಾ.೧೪-೨೫); ತೋರ ಮಾಣಿಕ ಪಚ್ಚೆ ವಜ್ರ ವೈಡೂರಿಯ ನೇರಾಣಿ ಮೌಕ್ತಿಕ ನೀಲ ರಾರಾಜಿಪ ರತ್ನಭೂಷಣಂಗೆಯ್ವ ಸೊನ್ನಾರರಂಗಡಿಗಳೊಪ್ಪಿದುವು (ಮೋಹತ. ೩-೨೫). 'ನೇರಾಣಿಗೆಲಸ' ಪಠಾ. **ನೇರಾಳಿ :** 'ನೇರಾಳಿಗೆಲಸ' ಪಠಾ.

**ನೇರಾಣಿಯ ಪೊನ್, ನೇರಾಣಿಯ ಹೊನ್** = ೧. ಶುದ್ಧವಾದ ಚಿನ್ನ ; ಅಪ್ಪಟ ಬಂಗಾರ : ಜೈನಾಗಮಮಾದ್ಯಂತಂ ನೇರಾಣಿಯ ಪೊನ್ನಂತುಟೆ ಮಧ್ಯಸ್ಥವೃತ್ತಿಯಿಂ ನೋಬ್ಪಾಗಳ್ (ಸಮಪ. ೩-೨೫). ೨. ಪ್ರೀತಿಪಾತ್ರವಾದ ವ್ಯಕ್ತಿ : ಮಾಣಿಕದನ್ನರಪ್ಪ ಪೊಸ ಚಿನ್ನರನೀಗಳೆ ತರ್ಪೆನೆನ್ನ ನೇರಾಣಿಯ ಹೊನ್ನೆ ಬೇಡವನ ನಣ್ಪಿದನಾಂ ಸೆಱಗೊಡ್ಡಿ ಬೇಡುವೆಂ (ಲೀಲಾವ. ೨-೧೨೨). [<ಸಂ. ಹೈರಣ್ಯ ?]

**ನೇರಾಣಿಗೆಲಸ,** ನೇರಾಳಿಗೆಲಸ (ನಾ). ಚಿನ್ನದ ಕೆಲಸ ; ಹೊಂಗೆಲಸ: ದ್ವಾರಪಾಲಕರ ಸುಮತದಿಂದ ಜ್ಞಾನೇಂದು ನೇರಾಣಿಗೆಲಸದೆರಡನೆ ದ್ವಾರದಿಂದೊಳಪೊಕ್ಕು (ಜ್ಞಾನಚ. ೬-೨೯). **ನೇರಾಳಿಗೆಲಸ :** ಮೂಱನೆ ಕೋಂಟೆಯ ನಟ್ಟನಡುವಿನಲ್ಲಿ ನೇರಾಳಿಗೆಲಸದಿ ಮೆಱೆವ . . . ಮಲಗುವ ಮನೆ (ಜ್ಞಾನಚ. ೧-೧೫೭). [ನೇರಾಣಿ + ಕೆಲಸ]

**ನೇರಾಳಿ** 'ನೇರಾಣಿ' ನೋ.

**ನೇರಾಳಿಗೆಲಸ** 'ನೇರಾಣಿಗೆಲಸ' ನೋ.

**ನೇರಿ** (ನಾ). ಒಂದು ಬಗೆಯ ಸಸ್ಯ ಮತ್ತು ಉಪ್ಪಿನಕಾಯಿಗೆ ಬಳಸುವ ಅದರ ಕಾಯಿ : ನಳನಳಿಸುವ ಮೆಣಸಿನ ಕರೆ ಹುಳಿಯುಲ್ಲಂಬಿದಿರ ಕಟಿಲೆಯೆಲಕ್ಕಿಯ ಕಾಯ್ ಮೊಟಗಿನ ಕಾಯ್ ನೇರಿ [ಪಾಠಾಂ. ನೆಲ್ಲಿ]ಯ ಕಾಯ್ ಕಟಿವೆಯ ಕಾಯ್ ಬೇಱೆವೇಱೆ ಸವಿವಡೆದಿರವೇ (ನಳಚಂ. ೪೬೩ ; ಸೂಕ್ತಿಸು. ೧೧-೮೮ ನೋ). [ ? ]

**ನೇರಿಡು** (ಕ್ರಿ). ೧. ಕ್ರಮವಾಗಿ ಇಡು ; ಸಾಲಾಗಿ ಇಡು : ಅಂಗಜಂ ತೋಳ ನೀಳದ ಪತ್ರಂ ಬರೆದೀಯೆ ಕೊಂಡು ಮಧುಚೌತಂಪೂಸಿ ನೇರಿಟ್ಟ ಮಾರ್ಗದೆ ಕಂಕೆಲ್ಲದ ಶೋಣಪಲ್ಲವಚಯಂ ಚೆಲ್ವಾದುವುದ್ಯಾನದೊಳ್ (ಪುಷ್ಪಪು. ೮-೮೨). ೨. ಕ್ರಮವಾಗಿ ಒದಗು ; ಒಂದಾದ ಮೇಲೊಂದರಂತೆ ಉಂಟಾಗು: ಅಂತು ಬಂದಾ ಕನ್ನೆವೆಣ್ ತವಸಿಯುಂ ಎಮ್ಮ ಜಾತ್ರೆವಯಣಿಗರ್ಗೆ ನೇರಿಟ್ಟಾಧಿವ್ಯಾಧಿಗಳಂ ಪರಿಹರಿಸಿ ಪೊರೆಯ್ಯೆ ಎಂದು ಕಾಲ್ಗೆಱಗಿದಳ್ (ರಾಮಾಶ್ವ. ೬೮-೧೯) ; ಹಗಲಿನಾಚೆಯಿರುಳ ಕರೆ ನೇರಿಟ್ಟಿತು ನೇಹಿಗರೆ ಆಸೆಯಂತೆ ಬಾಳಾಗೆ ತೋಷವೊಂದೆ ಮೇಲಾಗೆ ಬನ್ನಿ ಬನ್ನಿ (ಗೋಕುಸಿ. ೩-೧೮).
[ನೇರ್$_3$(<ನೇರಿತು$_2$) + ಇಡು$_1$]

**ನೇರಿತು,** ನೇರಿತ್ತು$_1$, ನೇರಿಗು (ನಾ). ೧. ನೇರವಾದುದು ; ನೆಟ್ಟಗಿರುವುದು ; ವಕ್ರತೆ ಇಲ್ಲದುದು : ಪೇನಂತೆ ಪತ್ತುವಿಡದು ಬಣಗಿನಂತೆ ನೇರಿತಲ್ಲದು (ಧರ್ಮಾಮೃ. ೪-೧೬೫) ; ಗುಂಡು ತೀವಿದ ಡಂಗದವೋಲ್ ನೇರಿತಲ್ಲದ ಹುಂಡಶರೀರಸಂಸ್ಥಾನಮುಮಂ ಯಥಾಕ್ರಮದಿಂ ಮಾಟ್ಕುಂ (ತತ್ತ್ವಪ್ರ. ೨೯೬) ; ಭಾರವೀಳದುದು ಬಳಿಕ ವಸುಧಾನಾರಿಗೊಱಗಿದ ಗೋಣುಸಾಸಿರ ನೇರಿತಾದವು ಫಣಿಪತಿಯ . . . ದಶಶಿರನ ಮರಣದಲಿ (ತೊರರಾ. ೧-೨-೨೨). ೨. ಸರಳವಾದುದು ; ವಕ್ರತೆಯಿಲ್ಲದುದು ; ಋಜುವಾದುದು. ೩. ಸರಿಯಾದುದು; ಉಚಿತವಾದುದು; ತಕ್ಕುದು : ನೆಱೆದಿರ್ದೇರಿಯ ನೇರಿತಪ್ಪೆಡೆಗಳೊಳ್ ನೇರ್ಪಟ್ಟು ಶೋಭಾವಹಕ್ಕೆಱೆವಟ್ಟುಜ್ಜ್ವಲ ಮಪ್ಪ ದೇವಕುಳದಿಂ . . . ಎತ್ತಮಾ ಕೆಱೆ ರಯ್ಯಂ (ಪಂಚತಂ. ೩೦೪-೧೩) ; ಸಂಚಿತ ಪೂರ್ವಕರ್ಮದುಷ್ಪ್ರೇರಣೆ ನೇರಿತಂ ನಡೆಯಲೀಗುಮೆ (ಪಂರಾಪಾ. ೧೧-೧೭೬) ; ನೇರಿತಂ ಪೇಳ್ದ ನುಡಿಯಂ ಬೇರೊಂದು ತೆರನೆಣ್ಣದಿರ್ ಒರಂಟನುಮೊರಟನ್ನಂ ಒಳಂ ಮಡಿಯ ಸಜ್ಜನಂ (ಸೌನಂದ. ೧೧-೧೫). ೪. ಅಂದವಾದುದು ; ಚೆಲುವಾದುದು ; ಸುಂದರವಾದುದು : ಚಲ್ಲಗಣ್ಗಳೊರ್ಕುಡಿತೆಗೆ ತಿಣ್ಣಮಾದುವಿವಳೀ ಪರಿಜೇಂಕಡುನೇರಿತಾದುದೋ (ಪುಲ್ಲಿಪು. ೭-೭೪) ; ಹೊರಸು ನೇರಿತಾಗಿಯುಂ ಹಾಸಲ್ಲದಂತೆ [ಪಾಠಾಂ. ಗುಡಿಸಲ್ ಚೆಲ್ವಾಗಿಯುಂ ಮಾಳಿಗೆಯಲ್ಲದಂತೆ]

. . . ದೂರಭವ್ಯರುಮಭವ್ಯರುಂ ಶ್ರಾವಕರಾಗಿಯುಂ ಋಷಿಯು ರಾಗಿಯುಂ ಮೋಕ್ಷಗಾಮಿಗಳಲ್ಲರ್ (ಧರ್ಮಾಮೃ. ೧೧-೧೮೬) ; ನೇರಿತ ನಿಪ್ಪ ಜನ್ಮವರದಿಂ ಕರಯುಗ್ಮದೊಳಾಂತ ದರ್ಭೆಯಿಂ . . . ವಾಮನ ರೂಪುವೆತ್ತ ಗಂಭೀರನುದಾತ್ತನಾ ಬಲಿಯು ಬೇಟ್ಟುದುಂ (ನೇಮಿಪು. ೫-೨೧). ೫. ನವುರು ; ನಯ ; ನುಣುಪು : ಕಡುಚಿಟ್ಟಂ ಬೊಯ್ದು ಬಣ್ಣಂಬಡೆದು ಮೊನೆಗಳುಂ ನೇರಿತಾಗಿರ್ದು ಮತ್ತಿಮ್ಮಡಿ ಚೆಲ್ವಂ ಬೀಱುತುಂ ರಂಜಿಪ ಬಿಳಿಯೆಲೆಗಳ್ (ಬಾಧಪು. ೧-೧೨೮) ; ಮೃಗ ಮದಕಾಂತಿಯಂ ಪರಮರತ್ನ ಮೃದುತ್ವಮನುದ್ಧ ಕರ್ಣಿಕಾರಗತಮೊನಿಪ್ಪ ಸೌರಭಮುಮಂ ಪರಿಚಂದನದೊಂದು ನೇರಿತಂ ಮಿಗೆ ಬಿದಿ ಕೊಂಡು ನಿರ್ಮಿಸಿದನೀಕೆಯನಲ್ಲದೊಡೆಂತು ಬಂದುದೀ ಸೊಗಯಿಪ ಕಾಂತಿಯುಂ ಮೃದುತೆಯುಂ ಸುರಭಿತ್ವಮುಮೆಯ್ದೆ ನೇರಿತಂ (ಬಾಧಪು. ೩-೩). (ಗು). ೬. ನುಣುಪಾದ ; ನಯವಾದ ; ನವುರಾದ : ನೇರಿತೆಳ ವಾಟಿಗಂಬಮನೋರಂತಿರೆ ನುಣ್ಪುವೆತ್ತು ಸೋಲಿಪ ಚೆಲ್ವಿಂ ಬಾರಿಸಿ ಸೊಬಗಿಂಗೆತ್ತಿದ ತೋರಣಗಂಬಂಬೊಲಿರ್ದುವಾಕೆಯ ತೊಡೆಗಳ್ (ಶಬ್ದಕಾ. ೭೫). **ನೇರಿತ್ತು**₁ : ೧. "ಉಬ್ಬನಂ, ಉಬ್ಬನೀಯಂ, ಈ ೨ ನೇರಿತ್ತು" (ಕಾಕಶ್ಯ. ೨೧೭). ೨. ಸುಜನರ ಮನದಂತೆ ನೇರಿತ್ತಾಗಿ ನಲಂಬೆತ್ತಿರ್ದೆಳಲತೆಗಳುಮಂ . . . ಮನೋವಲ್ಲಭೆಗೆ ತೋರುತ್ತುಂ (ಧರ್ಮಾಮೃ. ೧೩-೨೬) ; ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ತೋರಿತ್ತು, ನೇರಿತ್ತು, ಕೂರಿತ್ತು (ಶಮದ. ೭೭ ಪ್ರಯೋ). ೫. ದೂರದ ಬಿಟ್ಟದ ತೆಱದಿಂ ನೇರಿತ್ತಾಗಿಕ್ಕು [ಪಾಠಾಂ.ನೇರಿದವಾಗಿರ್ಕು] ಮಲ್ಲದೊಳಗಂ ನೋಡಲ್ ಸಾರತರವಲ್ತು ಪೊಕ್ಕು ವಿಚಾರಿಸುವಡೆ ಜೈನನಲ್ಲದವನ ಚರಿತ್ರಂ (ಸಮಪ. ೬-೮೪). **ನೇರಿದು** : ೧. ನೇರಿದಪ್ಪ ಬಾಸೆಯು ನುಣ್ಪುವಡೆದೂರುದ್ವಯದ ಮೃದುತಳದ . . . ವಿದ್ಯಾಧರ ವಾರನಾರೀಕದಂಬಂ (ಧರ್ಮಾಮೃ. ೮-೧೯೬). (ನಾ). ೭. ಧಾರ್ಮಿಕ ವಾದ ನಿಷ್ಠೆ,—ಶ್ರದ್ಧೆ ; "ಭಕ್ತಿ" (ಚತುಶಿ. ಕಿ. I, ೭೫).

**ನೇರಿತವಾಗು, ನೇರಿದವಾಗು**=೧.ಒಳ್ಳೆಯತನದಿಂದ ಕೂಡಿರು; ಒಳ್ಳೆಯದಾಗು : ಆ ಶರಣನ ಕುಮನವಳಿದ ನೇರಿತವಾದ ಮನಸ್ಸೆಂಬು ದೀಗ ಸರಂಗದ ಸುಮನದವೆಂಬ ಶಬ್ದಕ್ಕರ್ಥ (ಅಟಿಮಾ. ೧೬-೫೫). ೨. ಸುಂದರವಾಗು ; ಅಂದವಾಗು ; ಚೆಲುವಾಗು : ಸಾರಮೆನಲ್ ಕರಂತರದಿನೊಪ್ಪುವ ಪೊಂಗಳಸಂಗಳಿಂ . . . ನೇರಿದವಾದ ಗರ್ಭಗೃಹದಿಂ ಜಿನರಾಜಗೃಹಂಗಳೊಪ್ಪುಗುಂ (ಸುಕುಮಾ. ೯-೫೮). **ನೇರಿತ್ತಂ ಮಾಡು** =ಸರಿಯಾದುದನ್ನಾಗಿ ಮಾಡು ; ತಕ್ಕುದನ್ನಾಗಿ ಮಾಡು ; ತಿದ್ದು : ತಿರ್ದುವುದು=ನೇರಿತ್ತಂ (ಸರಿ)ಮಾಡುವುದು (ಶಮದ. ೪ ಟೀಕೆ). **ನೇರಿದಂ** = ನಿರುದ್ವಿಗ್ನನಾದವನು ; ಶಾಂತ ಸ್ವಭಾವದ ವ್ಯಕ್ತಿ : ಒಪ್ಪಿಸಿ ಮನಮಂ ಮಾನಿನಿಗೊಪ್ಪಿಸಿ ತನುವಂ ತಪಕ್ಕೆ ಮುನಿ ಮನಸಿಜನಿಂ ಸೊಪ್ಪಾಗಿರ್ದೊರ್ಕವಡಿಯ ಕುಪ್ಪಸಮಂ ಪೋಲ್ತು ಪೊಱಗೆ ನೇರಿದನಾದಂ (ಪಂರಾಮಾ. ೪-೧೩) ; ಮನದೊಳ್ ಬೆದಱಿ ದಿಟಂ ಬೆದಱಿದಂತೆ ಖೇಚರಪತಿ ನೇರಿದನಾಗಿ ಪೊಱಗೆ ತಾಂ ಬರಿಸಿದನಾ ಕತದಿಂದುವೆಂಬ ನೈಮಿತ್ತಿಕನಂ (ಶಾಂತೀಶ್ವ. ೩-೪೫). **ನೇರಿದರ್, ನೇರಿದರು** (ಬಹುವ) = ೧. ಸರಿಯಾದ ಮಾರ್ಗದಲ್ಲಿರು ವವರು ; ಋಜುಸ್ವಭಾವದವರು : ಪಂಡೆಯು ಯುದ್ಧದಂತೆ ಸದ್ಧರ್ಮಕ್ಕಂಜಿದರವರೆನಿಸದೆ ಸಮ್ಯಕ್ತ್ವದೊಳಿಂತಿವರಿರ್ಪರಂತೆ ನೇರಿದರೊಳರೇ (ಧರ್ಮಾಮೃ. ೧೦-೪೯) ; ಆ ಪುರದ ವೀರ ಬಣಿಂಜಿಗರುಗ್ರಕೋಜಮಂನೇರಿದರಲ್ಲದುದ್ಧತರನೀಗಳೆ ಸಿಕ್ಷಿಪೆಮೆಂದು ನಿಂದಾ ರಥಪಪ್ರಭಾವಮಮನದೇವೆಸ ಗೊಂಡಪೆಯಂಣ್ಣ(ಸೌಇಇ.IX-i,೨೯೭-೩೧;1177). ೨. ಬ್ರಾಹ್ಮಣರು; ದ್ವಿಜರು : "ದಿವ್ಯಿದರುಮೆನಲ್ ಸೈದರನೆ ಗನೆಪರೆನೆ ನೇರಿದರ್[ಪಾಠಾಂ. ಠಿನಲ್ಮಿರಿಂಸು] ಶಾಕಾಡಿನೆ ಬಿರಿಲರಿನೆ ಬ್ಯಾಕಲ ಸಾಗಸಂ" (ಶಬ್ದಸಂ.೨೩); ಬೆಳ್ಳಸಂಬಟ್ಟು ಕಳ್ಳಸಡ ಜನನಾಳ್ಗಳ್ ಪೈಸ್ತವರಂ ನಿವಾರಿಸೆಂದು ಬಡಿ ಯೊಳ್—ಹಿ ! ಸಿರಿಯುರಿದೇಶಜ ಗೆಯ್ಯೆಯೊ ! ನೇರಿದರ್ಗನಿಕೊಂದಣಾ ಗೇಸಿ ! . . . ಎಂದು ಬಿನ್ನಯಿಸಿದರ್ (ರಾಮಾಶ್ವ. ೮೧-೮) ; ಚೆನೆ ಗೇಸೊ ಕುದಿನ್ನೊಡಲ್ ಕಾಣಿನಿತು ತಗ್ಗಿ ತೆನೆ ತೊಡಗಿದರ್ ನುಡುವೆಯುಂ ಕೆಚಿಬಾರಿಯ್ಯ ಬಗೆಗೆ ಒಡನೆಯ್ದ ಘಾಳು ಬೋಳಿಸ ನೀಟಿಯುಂ ದಣಿ ಪರೆಯಿ ನೆದಪುಂ ಸ್ಕೋದ ನೇರಿದರ ಮನೆಗೆ (ಕಾಲೂರ. ೧೪೩-೩೧೧). ೩. ಪರಿಣತರಾದವರು ; ನಿಪುಣರು ; ಕುಶಲರು : ಸುರಸಿಂಧು ಸೂತ್ರ ಗುರು ಕರ್ಣ ಕೃಪ ಪ್ರಮುಖರ್ಕಳಂತು ನೇರಿದರೆ ರಂಜನವಾಗಮು ದೊಳಂಬನಮುಂಬಲದೊಳ್ ಸುರರ್ಕಳೀಂ ಪ್ರದಿಪನೊ ಬಾಣತಾಬದೆ ಗುರು ಸ್ತ್ರೀಯಸಂದನೆಸಂ ಮಡುಶ್ಶರ(ಪಂಪಭಾ. ೧೨-೬೭). ೪. ಧಾರ್ಮಿಕ ನಿಷ್ಠೆಯುಳ್ಳವರು ; ಧರ್ಮನಿರತರಾದವರು : ಸುಧರ್ಮಾದೊಳ್ ನೇರಿದರಪ್ಪಯುಂ [ಪಾಠಾಂ. ಧೀರರೆನಿಪ್ಪರುಂ] ಪಾಟಲಿ ಪ್ರಿಯರ್ಮಾವೆ ಜನರಂ ದುರಾತ್ಮರಂ (ಧರ್ಮಾಮೃ. ೪-೨೦೦). **ನೇರಿದಳ್** = ಋಜು ಸ್ವಭಾವದವಳು : ಅವಳ್, ಇವಳ್ . . . ನೇರಿದಳ್, ಸಿರಿಯಳ್, ಕಿಱಿಯಳ್ (ಶಬ್ದಾನು. ೧೮೪ ಪ್ರಯೋ). **ನೇರಿದುವು**= ೧. ನೇರ ವಾಗಿರುವುವು ; ನೆಟ್ಟಗಿರುವುವು ; ಡೊಂಕಿಲ್ಲದಿರುವುವು : ನೇರಿ ದುವುಂ ಸ್ನಿಗ್ಧಮುಮಪ್ಪ ರಿಯುವೊಳಗೆಱಗಿ ತೋಱುವುದು ಮಾಘ ಪಂಜ ಕ್ಷೀರನಿಭದಶನಮುಂ ನೆತ್ತರಾಕರಮುಮೆಂಬನಂಗಳುಂ ಪಾಳುಗೆಯುಂ (ಅಕ್ಷರಾ.೧-೨೦). ೨. ಉತ್ತಮವಾದುವು : ಕೂರಿದುವುಂ ನೇರಿದುವು ಮುಪ್ಪಯ್ದಮೋಘಾಸ್ತ್ರಂಗಳಂ ಬಾಣಧಿಯಿಂದುರ್ಚಿಕೊಂಡು ತನ್ನ ಮನ ದೊಳೆ ಸಮಕಟ್ಟಿಕೊಂಡಿರ್ಪ್ಪಗಳ್ (ಪಂಪಭಾ. ೧೨-೮೫ ವ) ; ನೇರಿದುವೆನಿಪದಂ ಕವಿತಾರಸವಿಮಾ ಸವಣನೊರ್ವನೊಳ್ ನೆಲಸಿದುವಿನ್ನಾರಾರ ಕವಿತ್ವಮುಮನುವಿಚಾರಿತ ರಮಣೀಯಮಲ್ಲಿ ಪುರುಳಱಿಸುವುದೇ (ಶಾಂತಿಪು. ೧೨-೬೯) ; ಪೊಕ್ಕ ಪೊಸತೆನಿಪಚ್ಚುಗಳ್ ನಿರ್ಮಿಸುತ್ತಂ ನೆಕ್ಕಸುದಿಂಬೆ ರೆಲಚ್ಚೆ ಚೆಡೆದುರುಳ್ವ ತೇರ ನೇರಿದುವಪ್ಪ ರಥಾಂಗಂಗಳ್ ನಿಜೇಚ್ಛೆವರೆ ಪಲ್ಲನೋಲ್ಲಸಿಪ ರಥಾಂಗವಿಘಟನಮುಂ ಸೂಚಿಸೆಯುಂ (ವರ್ಧಪು. ೯-೪೧ವ). ೩. ನಯವಾದುವು ; ನುಣುಪಾದುವು ; ನವುರಾದುವು : ಜೀರಿಂ ಕೊಟ್ಟು ತುದಿಗೊಂಬುವರನೋರಂತೆ ನೇರಿದುವಾಗಿರ್ಪೆಲೆಯಿಂ ಕುಱಿಗಿ ಫಲವಾದ ವನಸಿನ ಮರಂಗಳುಮಂ . . . ಜೋದ್ಯಂಬಟ್ಟು ನೋಡುತಿರ್ಪ ರಾಜಕುಮಾರನಂ ಅಲ್ಲಿರ್ದದೊಂದು ರಾಜಕೀರಂ ಕಂಡು (ಪಂಚತಂ. ೧೧೭-೧೮). ೪. (?) : ಪಾರಿವದ ನಿವಾಸ ನಡುನಾಡಾದ ಸ್ಪೋದಂಬದೆ ಪೊದಬ್ದು ನೀಳ್ದ ಸಿವಿಸಿಗಳ್ ನೇರಿದುವಾಗಿರೆ ರದನಗಳಕರಾ ? ಮುಭುಪಿಂಗಲೋಚನಂಗಳ್ ಶುಭದಂ (ಲೋಕೋಪ. ೧೧-೬೭).

[ದೇ.॥ ತಮಿ. ನೇತ್ತಿ, ನೇಱ್ಱು ; ಮಲ. ನೇಱ್ಱು]

**ನೇರಿತ್ತು**₁ 'ನೇರಿತು' ನೋ.

**ನೇರಿತ್ತು**₂(ಅ). ೧. ನೇರವಾಗಿ ; ನೆಟ್ಟಗೆ : 'ನೇರ್ಗುತ್ತು' ಪರಾ. ೨. ಕ್ರಮವಾಗಿ ; ಸಾಲಾಗಿ : 'ನೇರಿದು' ಪರಾ. ೩. ಚೆನ್ನಾಗಿ ; ಸೊಗಸಾಗಿ : ತಾರಾನಿಕರಾವೇಷ್ಟಿತ ತಾರಾಪತಿಯುಂ ಸಮಸ್ತಸುರ ಲೋಕಮುಮಂ ನೇರಿತ್ತು ಬೆಳಗಿ ತ್ಪೋಪುದನಾ ರಾತ್ರಿಯೊಳಿಂಪಸಂದ ನೀರ್ಯಂ ಕಂಡಂ (ಆದಿಪು. ೧೬-೪೬) ; ಸಾರಂ ಮುಂದುಭಿರಾಧಿರೋ ದ್ವಾರಿಯೊಳಂತಕನ ಬಾಧೆ ಭೂಭುಜರಱನರ್ ನೇರಿತ್ತು ಬೆಳೆಯುದಿಂತು ಧರಾಪರಯಂಕಣಾಯಿ ಜೀವ್ದನೊಳ್ಳಿನ ಬಟ್ಟಂ (ಜಗನ್ನಾ. ೭-೨೭).

[<ನೇರಿಸು]

**ನೇರಿಸು** 'ನೇರಿತು' ನೋ.

**ನೇರಿಳು** 'ನೇರಿಲ್' ನೋ.

**ನೇರಿಲೆ** 'ನೇಱಿಲ್' ನೋ.

**ನೇರಿಳೆ** 'ನೇಱಿಲ್' ನೋ.

**ನೇರು**$_1$ 'ನೇರ್$_1$' ನೋ.

**ನೇರು**$_2$ 'ನೇರ್$_2$' ನೋ.

**ನೇರೆ**$_1$, ನ್ಯಾರೆ$_1$ (ನಾ). ಒಂದು ಬಗೆಯ ತೃಣಧಾನ್ಯ (?) : ಗಂಗೆ ಬಟಲ್ದ ಪೊಳ್ನೆಲಕೆ ಬೆಳ್ಳಿಯ ಬಿಟ್ಟದ ಬಳ್ಳಿವೆಳ್ಪು ಬೆಳ್ಳಂಗೆಡೆದೊಪ್ಪೆ ತಟ್ಟಿಲ ಫಲಾರುಣಪರ್ಣತಟಾಕಸಂಕುಳಂ ತಿಂಗಳ ತೋಂಟದಂತೆ ಬಳೆದೊಪ್ಪುವ ನೇರೆಯ ಕೆಯ್ಗಳಚ್ಚವೆಳ್ದಿಂಗಳ ಕೆಯ್ಗಳಂತೆ ನಡೆ ನೋಟ್ಪರ ಕಣ್ಗೆ ಕರಂ ಮನೋಹರಂ (ಅರ್ಧನೇ. ೨-೭೦). **ನ್ಯಾರೆ**$_1$ : 'ನ್ಯಾರೇಭತ್ತ'ಪರಾ. [ ? ]

**ನೇರೆ**$_2$, ನ್ಯಾರಿ, ನ್ಯಾರೆ$_2$, ನ್ಯಾಹರಿ, ನ್ಯಾಹರೆ (ನಾ). ಬೆಳಗಿನ ಉಪಾಹಾರ; ತಿಂಡಿ; ನಾಷ್ಟ: ಒಮ್ಮೆ ಕೃಷ್ಣನು ಬೆಳಗಿನ ನೇರೆಯನ್ನು (ಅಲ್ಪಾಹಾರ) ವೃಂದಾವನದಲ್ಲಿಯೇ ಮಾಡಬೇಕೆಂದು ಯೋಚಿಸಿ ತಾನು ನಸುಕಿನಲ್ಲಿ ಕರುಗಳನ್ನು ಅಟ್ಟಿಕೊಂಡು ಅಡವಿಗೆ ಹೊರಟು, ಉಳಿದವರು ಬೇಗನೆ ಬರಬೇಕೆಂದು ಕೊಳಲೂದಿದನು (ಭಾಮೃತ.೩೧೩); ಅವರ ಮಕ್ಕಳು ಮರಿಗಳಿಗೆ ಬೆಳಗಿನ ನೇರೆಗೆ ರೊಟ್ಟಿಗಳು ದೊರೆಯುವುವು (ಮುಂಬಯಿ. ೫-೧೭೭); ಬೆಳಗಿನ ನೇರೆಗೂ ಸಂಜೆಯ ಊಟಕ್ಕೂ ರೊಟ್ಟಿ, ಕಾರದ ಬೇಳೆ, ಉಳ್ಳೇಗಡ್ಡಿ, ಬೆಳ್ಳುಳ್ಳಿಯ ಕಾರ ಇಷ್ಟಿದ್ದರೆ ಸಾಕು(ಕಭಾಗ.೨೯೨). **ನ್ಯಾರಿ** : ವಿಷ್ಣು 'ನ್ಯಾರಿ'ಯ ವೇಳೆಯಾಗುವ ತನಕ ಅಲ್ಲಿಯೇ ಹಡಗದ ಮೇಲೆ ಅತ್ತಿತ್ತ ತಿರುಗಾಡಿದ (ಸಮಜೀ. ೫೭೪); ಬಂದವನೆ ನಿತ್ಯದಂತೆ ನ್ಯಾರಿಯನ್ನು ಮುಗಿಸಿದೆನು (ಮೊಪಾಸಾ. ೬೫); ಪಾಪ, ಹುಡುಗರ ನ್ಯಾರಿಯೇ ಆಗಿರಲಿಲ್ಲ (ಪ್ರೇಮಾಶ್ರ. ೧೯೭). **ನ್ಯಾರೆ**$_2$ : ಪಿಚ್ಚು ತುಂಬಿದ ಕಣ್ಣುಗಳನ್ನೂ ಜೊಲ್ಲು ಸೋರಿದ ಬಾಯಿಯನ್ನೂ ತೊಳೆಯದೇ ಹಾಗೇ 'ನ್ಯಾರೆ'ಗೆ ಕುಳಿತುಕೊಂಡರು ಹುಡುಗರು (ಪಾತರ. ೬೭). **ನ್ಯಾಹರಿ** : ಬೆಳಗೆದ್ದು ನ್ಯಾಹರಿಯನ್ನು ಮುಗಿಸಿಕೊಂಡು ಮೊದಲು ಸಿಕ್ಕುವ 'ಮೋಟರಬಸ್'ನ್ನು ಹಿಡಿಯುವುದು (ಶ್ರೀರಂಗ. ೬೫). **ನ್ಯಾಹರೆ** : ಸಾಕು ಏಳಪಾ ಹಸಿವಾಗಿಲ್ಲೇನು ? ನ್ಯಾಹರೆ ತರಿಸಿದ್ದೀನಿ ಏಳು (ಮಾಡಿಮ. ೧೪೧).

[←ಪಾರ. ನಹಾರ್, ನಹಾರೀ ; ಹಿಂ. ನಹಾರೀ; ಮರಾ. ನ್ಯಾಹರೀ]

**ನೇರೇಳ್** (ಕ್ರಿ). ನೇರವಾಗಿ ಏಳು ; ನೆಟ್ಟಗೆ ಏಳು : ಮೊಗಗೆಂಪಾಗಿ ನೇರೆದ್ದು ನಿಂತು, ರಾಗಾಂಬಕಗಳಿಂದೀಕ್ಷಿಸುತ್ತಿದ್ದು, ಮೆಲ್ಲನೆ ತಿಳಿವಟ್ಟು ನಸುನಕ್ಕು, ಸುತ್ತ ವೀಕ್ಷಿಸಿ (ಮಂತ್ರಶ. ೪೯-೧೧).
[ನೇರ್$_3$(<ನೇರಿತ್ತು$_2$)+ಏಳ್$_1$(<ಏೞ್$_1$)]

**ನೇರ್ಗಿಱಿದು** (ನಾ). (ಇನ್ನೊಂದಕ್ಕಿಂತ) ಸ್ವಲ್ಪ ಮಾತ್ರ ಚಿಕ್ಕದು,—ನಸುವೇ ಕಿರಿಯದು : ಇಂತಾದ ಪೆಂಪಿಂದಮುರ್ವಿದ ಗುಜ್ಜಿಂದಮಿದಬ್ಧಿಗಗ್ಗಳಮೆನಲ್ ಕುಂದೆಂದು ಕಣ್ಕೆತ್ತಿದಂತದಕಂ ನೇರ್ಗಿಱಿ ದೆಂದೊಡಾವ ತೊಱೆಯುಂ ಸೀತೋದೆಯಂ ಪೋಲ್ಗುಮೇ (ಆದಿಪು. ೧-೫೫); ನಿಖಿಲಾಮರಕಲ್ಪಂಗಳ ಸುಖಮುಹಮಿಂದ್ರರ ಸುಖಕ್ಕೆ ಸಮ ನಾಗದಱಂ ಸುಖಮಯಮೆನಿಸುವ ಸಿದ್ಧರ ಸುಖಕ್ಕೆ ನೇರ್ಗಿಱಿದೆನಿಕ್ಕು ಮಹಮಿಂದ್ರಸುಖಂ(ಅಜಿಪು. ೧೧-೭೧) ; ಅದರದೆ ರಕ್ತೆಯಿಂ ಗಂಗೋದೆ ವರೆಗಮುಗಱನಗೆದುಮಾಗಧವಿಭು ಸೀತೋದೆಗೆ ನೇರ್ಗಿಱಿದೆನೆ ಸಂಪಾದಿಸಿದ ಪೋಲೆಸೆದುದಾ ನದೀಜಲಪೂರಂ (ಪಾರ್ಶ್ವಪು. ೧೦-೭೭).

ನೇರ್ಗಿಱಿಯ=ಸ್ವಲ್ಪ ಮಾತ್ರ ಚಿಕ್ಕವನು ; ನಸುವೇ ಕಿರಿಯವನು : ಮತ್ತಮಾ ಕುಮಾರನಿಂ ನೇರ್ಗಿಱಿಯನಾಗಿ . . . ಸರ್ವಾರ್ಥಸಿದ್ಧಿಯೊಳ್ ಪುಟ್ಟಿದಹಮಿಂದ್ರಂ ಬಂದು ವೃಷಭಸೇನನೆಂಬೊಂ ತನಯನಾದೊಂ (ಆದಿಪು. ೮-೪೪ ವ) ; ವಿಮಲಶ್ರುತಂ ಬಹುಕೈವಲ್ಯವೆಂಬ ಸಂಕಲ್ಪದಿನಿತೆ ನೇರ್ಗಿಱಿಯಂ ವಿಶ್ವಮನಱಿವ ಮಹಿಮೆಯಿಂ ವರ್ಧಮಾನಜಿನಪತಿಗೆ ವರ್ಧಮಾನಮುನೀಂದ್ರಂ (ಪಂಪಾಭಾ. ೧-೧೫) ; ಪೆಱರಳವೆ ರಾಮನೊಳ್ ತಳ್ತಿಱಿಯಲಿವಂ ರಾವಣಂಗೆ ಶೌರ್ಯದೊಳಂ ನೇರ್ಗಿಱಿಯನೆನೆ ಕುಂಭಕರ್ಣಂ ಮೆಱೆದಂ ಕೋದಂಡ ಬಾಹುದಂಡದ ನೆರವಂ (ಪಂಪಾಭಾ. ೧೪-೨೨) ; ಆ ನಾಗರುದ್ರಮಯ್ಯನಿಂ ನೇರ್ಗಿಱಿಯಂ ಶ್ರೀ ರಮಣೀಪತಿ ಸುಗುಣೋದಾರಂ . . . ಮದ್ದಿಮಯ್ಯಂ ನೆಗಳ್ದಂ (ಎಕ. V, ಹಾಸನ, ೭೧-೭೧ ; 1173 ?). **ನೇರ್ಗಿಱಿಯರ್**= ಸ್ವಲ್ಪ ಮಾತ್ರ ಚಿಕ್ಕವರು ; ನಸು ಕಿರಿಯರು : ದಿಗ್ಗಜಗಜಂಗಳ್ಗೆದೆ ದಶಭೂಭುಜರಾಪರೆನಿಪ್ಪ ತತ್ತತಾಪದ್ರವಿಣರ್ಗೆ ನೇರ್ಗಿಱಿಯರಾಗಿ ನೆಗಟ್ಟಿಗೆ ನೋಂತ ಕೊಂತಿಯುಂ ಮಾದ್ರಿಯುಮಂಧ್ರರಾಜಸುತೆಗಂ ಸತಿಗಂ ಸರಿವಂದರೇಟ್ಟಿಯೊಳ್ (ಅರ್ಧನೇ. ೪-೭೪). **ನೇರ್ಗಿಱಿಯವು**= ಸ್ವಲ್ಪ ಮಾತ್ರ ಚಿಕ್ಕವು ; ಅತ್ಯಲ್ಪ ಕಿರಿಯವು : ಬೇರ್ಗೊಂಡು ಪಣ್ತ ಪಲಸೆಳನೀರ್ಗಾಯಂ ತಳೆದ ತೆಂಗು ತನಿರಸಮೊಸರ್ವಾ ನೇರ್ಗೊನೆಯನಾಂತ ಮಾವಿವು ನೇರ್ಗಿಱಿಯವು ಕಲ್ಪತರುಗೆ ಸಿರಿಯಿಂದೆನಿಕುಂ (ಚಂದ್ರಪು. ೧೫-೨೬) ; ಅದಱಿಂದಂ ನೇರ್ಗಿಱಿಯವೆ[ಪಾಠಾಂ. ಯೆ] ನಿಸಿದುವೆರಡುಂ ದೆಸೆಯೊಳಭವನಪವನೋತ್ಸವಮಂ ತ್ರಿದಶಾಧಿಪರ್ದೆಸಗುವ ಸದಮಳಮಣಿವಿಪ್ಪರಂಗಳೆರಡೆಸೆದಿರ್ಕುಂ (ಪಾರ್ಶ್ವಪು. ೧೪-೬೫). **ನೇರ್ಗಿಱಿಯಳ್**=ಸ್ವಲ್ಪಮಾತ್ರ ಚಿಕ್ಕವಳು ; ನಸುವೇ ಚಿಕ್ಕವಳು : ಮುನ್ನಂ ವೃಷಭೇಶ್ವರಂ ವಜ್ರಜಂಘನಾದ ಭವದೊಳಾ ಮಹಾತ್ಮಂಗೆ ತಂಗೆಯಾದ ಸುಂದರಿಯೆ ಕತಿಪಯಭವಪರಿಭ್ರಮಣದಿಂ ಬಂದು ಬಾಹುಬಲಿ ಕುಮಾರನಿಂ ನೇರ್ಗಿಱಿಯಳಾಗಿ . . . ಸುನಂದೆಗಂದು ನಂದನೆಯಾದಳ್ (ಆದಿಪು. ೮-೫೩ ವ) ; ಸುಭದ್ರೆಂಗಂ ಸರ್ವಯಶೆಗಂ ಪುಟ್ಟಿದ ಯಶೋಭದ್ರಕುಮಾರನಿಂ ನೇರ್ಗಿಱಿಯಳ್ . . . ಯಶೋಭದ್ರೆ ಮನಮನುಱಿಕೆಯಿಱಿವಿಡಿದಳ್ (ಸುಕುಮಾ. ೯-೭೫ ವ) ; ಬಳಿಕ ಸುಲೋಚನೆಯಿಂ ನೇರ್ಗಿಱಿಯಳ್ ನಳಿನವಿಲೋಚನೆ ಲಕ್ಷ್ಮೀಮತಿಯಂ . . . ಕೈದಾರೆಯನೆಱೆದು (ಜಯನೃ. ೯-೧) ; ದುರ್ಗಂಧವೊಡಲ ಮೂಳರಿಗೆ ಮೂಳರ ತಂದು ವರ್ಗಿಸಿ ಸರಿಮಾಡಬಹುದು ನೇರ್ಗಿಱಿಯಳಿ ಮಲಮೂತ್ರವಳಿದ ದೇಹವರ್ಗಗಾರೆಣೆಯೆನಬಹುದು (ಭರತೇ. ೯-೯೩). [ನೇರ್$_2$+ಕಿಱಿದು]

**ನೇರ್ಗುತ್ತು** (ಕ್ರಿ). ನೇರವಾಗಿ ಚುಚ್ಚು,—ತಿವಿ ; ನೆಟ್ಟಗೆ ಹೊಡೆ : ಸಾರ್ದಿದಿರಾದ ಮಹಾರಥನಿಚಯವ ಸಾರ್ದವಟೆಂದೆ ನೇರ್ಗುತ್ತುತೆ ಪರ್ದಿಗೆ ಕಾಕ ಜಂಬುಕ ಭೂತನಿಚಯಕೆ ಬಿರ್ದಿಕ್ಕಿದರೀ ರಿಪುದಳವನು (ತ್ರಿಭುತಿ. ೧೪-೨೭). [ನೇರ್$_3$(<ನೇರಿತ್ತು$_2$)+ಕುತ್ತು$_1$]

**ನೇರ್ಗುಱುಪು** (ನಾ). ಸರಿಯಾದ ಕುರುಹು,—ಚಿಹ್ನೆ : ಬರ್ಪಕಾರ್ಗಾಲದಾ ನೇರ್ಗುಱುಪನಱಿತರಲ್ಲರ್ ಪೂಬಿಡುವ ವಸಂತದಾ, ಪಣ್ ಬಿಡುವ ಗ್ರೀಷ್ಮದಾ, ಮುನ್ನಱಿವು ಇರ್ದುದಿಲ್ಲಂ (ಬದ್ಧಪ್ರ. ೨೪-೫೧೭).
[ನೇರ್$_2$+ಕುಱುಪು(<ಕುಱು ಪು)]

**ನೇರ್ಗೈ** (ಕ್ರಿ). ಸರಿಗೊಳಿಸು ; ಸರಿಪಡಿಸು : ನೇರ್ಗೈದು ರಾಜ್ಯವನು ನೆಮ್ಮದಿಯ ನೆಲೆ ನಿಲಿಸು (ಮೂರುನಾ. ೯೯-೫೭).
[ನೇರ್$_3$(<ನೇರಿತ್ತು$_2$)+ಕೈ$_1$(<ಕೆಯ್$_1$)]

**ನೇರ್ಗೊಳಿಸು** (ಕ್ರಿ). =ನೇರ್ಗೈ: ಹಿಂದಿಲ್ಲ ! ಮುಂದಿಲ್ಲ ! ನಡೆದುದೊಂದೇ ಹಾದಿ ! ಸೊಗದಾಸೆಯೊಂದೆ ನೇರ್ಗೊಳಿಸುವಂಕುಶವು ! (ಕವಿಶಾ. ೬೯-೧೪). [ನೇರ್$_2$+ಕೊಳ್$_1$+-ಇಸು$_3$]

**ನೇರ್ಗೋಲ್** (ನಾ). ನೇರವಾಗಿ ಬಂದ ಬಾಣ(?) : ಏರ್ಗೆ ಳಿಂದೊರ್ಗುಡಿಸಿ ಸಾರಥಿ ಬಿಳಲ್ಕೆ ಕೆನ್ನೀರ್ಗಾಱಿ ದೀರ್ಘಶಯನಂಗೆಯ್ಕೆ ಕುದುರೆಗಳ್ನೇರ್ಗೋಲ ಪೋರ್ಗಳಾ ನೃಪನಂಗದೊಳ್ಕಾಣಿಸಿದುವು ಜಾಳಂದ್ರದಂತೆ (ಜೈಮಿಭಾ. ೪-೩೫). [ನೇರ್$_2$+ಕೋಲ್$_1$]

**ನೇಗೊರ್ಱಲ್ಪರಿ** 'ನೇಗೊರ್ಱಲ್ವರಿ' ನೋ.

**ನೇಗೊರ್ಱಲ್ವರಿ, ನೇಗೊರ್ಱಲ್ಪರಿ** (ಕ್ರಿ). ಬಾಣ, ಕೋಲುಗಳಂತೆ ನೇರವಾಗಿ ಸಾಗು,—ನೆಟ್ಟಗೆ ನುಗ್ಗು : ಅರಿವ ನಡುವುಡಿವ ನೇಗೊರ್ಱಲ್ವರಿದುಚರ್ಱವ ನಟ್ಟು ತೊನೆವ ಕಣೆಗಳ್ಗೆ ಮೊಗಂದಿರಿಯದಿರಿ ದಿರನದಿರದೆ [ಸು]ರಿಗಿಱವಂತೆಚ್ಚರಂಬನಂಬಟ್ಟುವಿನಂ (ಪಂಪಭಾ.೧೦-೭೪). **ನೇಗೊರ್ಱಲ್ಪರಿ :** ಜೀರ್ಱರೆಯೆ ತೆಗೆದು ಬಿಲ್ಲಂ ಭೋರ್ಱರೆದು ವರೂಥ ಯೂಥವಿಸಲನ್ಯೋನ್ಯಂ ಕರ್ಱಣೆ ನಟ್ಟುವು ನೇದರ್ಱವು ನೇ[ಪಾಠಾಂ. ನೀ]ಗೊರ್ಱಲ್ಪರಿದುವು ಪಳಂಚಿದುವು ದಿಕ್ತಟಮಂ (ಜಗವಿ. ೭-೬೩).

[ನೇರ್$_3$(<ನೇರಿತು$_2$)+ಕೋಲ್$_1$+ಪರಿ$_2$]

**ನೇಗೊರ್ಱಲ್ವೋಗು** (ಕ್ರಿ). =ನೇಗೊರ್ಱಲ್ವರಿ : ಇಡಿವಾಟ್ವುಚರ್ಱವ ನೇರ್ವ ಸೀಳ್ವರಿವ ನೇಗೊರ್ಱಲ್ವೋಪ ಪೋಟಿಸ್ವಲ್ವಿನೊಳ್ ನಡುವುದ್ಟಂ ಬಿರಿವಂಬಿನೊಳ್ ಕಿಡೆ . . . ತಮ್ಮುತಿರ್ವರು ಮಗುಳ್ವರ್ವೇಟ್ವನಂ ಕಾದಿದರ್ (ಶಾಂತಿಪು. ೪-೩೫).

[ನೇರ್$_3$(<ನೇರಿತು$_2$)+ಕೋಲ್$_1$+ಪೋಗು$_1$ (<ಪೋ)

**ನೇರ್ನಡೆ** (ನಾ). ಒಳ್ಳೆಯ ನಡತೆ; ಸನ್ಮಾರ್ಗದಲ್ಲಿ ಮುನ್ನಡೆ ಯುವಿಕೆ : ನಡೆವಳಿಯಲ್ಲಿ ನೀನೆ ನೆಱಿಜಾಣನಾದೊಡಂ, ನಿನ್ನ ನೇರ್ನಡೆ ಗೆಂದು ನಿನಗಿನಿತ ನಾನ್ ತಿಳಿಯುವೇಟಿಸ್ವನ್ (ಬದ್ಧಪ್ರ. ೧೮-೩೬೦).

[ನೇರ್$_2$+ನಡೆ$_2$]

**ನೇರ್ನುಡಿ** (ಕ್ರಿ). ಸರಿಯಾದುದನ್ನು ಹೇಳು; ತಕ್ಕುದನ್ನು ಹೇಳು; ಸತ್ಯವನ್ನು ಹೇಳು : ನಲ್ನುಡಿದೆ ! ನೇರ್ನುಡಿದೆ ! (ಹಟ್ಟಿರ. ೧೪-೧೧೧); ನೇರ್ನುಡಿವೊಡಿಂದಿನೀ ಕಷ್ಟಕ್ಕೆ ನಿನ್ನ ಕಲ್ಪಿಗೇನುಂ ಪಟುವು ಪೊರ್ದದೆಂಬೆನ್ (ಬದ್ಧಪ್ರ. ೩-೫೫). [ನೇರ್$_2$+ನುಡಿ$_1$]

**ನೇರ್ನುಗ್ಗು** (ಕ್ರಿ). ನೇರವಾಗಿ ನುಗ್ಗು; ಸೀದಾ ಆಕ್ರಮಣ ಮಾಡು : ವೈರಿಗಳ ನಡುವೆ ನೇರ್ನುಗ್ಗಿ, ಒರ್ಮೆಯ್ಕೆ ಮೂದಲಿಸಿ, ಸುತ್ತಣಿನ್ ಬಂದು ನಡುವಂಬಿನ್ ಬಿಟ್ಟಪೆನೆ? (ಅಶ್ವತ್ಥಾ. ೧೯-೩೯೪).

[ನೇರ್$_3$(<ನೇರಿತು$_2$)+ನುಗ್ಗು$_1$]

**ನೇರ್ಪಡಿಸು** 'ನೇರ್ವಡಿಸು' ನೋ.

**ನೇರ್ಪಡು$_1$** 'ನೇರ್ವಡು' ನೋ.

**ನೇರ್ಪಡು$_2$** (ನಾ). ೧. ಸಾಮರಸ್ಯ; ಹೊಂದಿಕೆ : 'ನೇರ್ಪಡು ಗಿಡು' ಪರಾ. ೨. ಸರಿಯಾದ ಕ್ರಮ; ಯೋಗ್ಯದಾರಿ; ಋಜುಮಾರ್ಗ : 'ನೇರ್ಪಡುಗಿಡು' ಪರಾ. [<ನೇರ್ಪಡು$_1$]

**ನೇರ್ಪಡುಗಿಡು** (ಕ್ರಿ). ೧. ಹೊಂದಾಣಿಕೆಯನ್ನು ಕಳೆದು ಕೊಳ್ಳು; ಸಾಮರಸ್ಯವನ್ನು ಕಳೆದುಕೊಳ್ಳು : ಅಮ್ಮಗನೆನಾಗೆ ಧರ್ಮಜನೇಮ್ಮಗನಲ್ಲನೆ ಬಱಕ್ಕೆ ನೀಮುಂ ತಾಮುಂ ನಿಮ್ಮೊಳ್ನೇರ್ಪಡು ಗಿಡದೆ ಸುಖಮ್ಮನ್ನಿನ ತೆಱದೆ ಬಾಟ್ವುದಾಂ ಬೆಸಕೆಯ್ಯೆಂ (ಗದಾಯು. ೪-೧೨). ೨. ಋಜುಮಾರ್ಗವನ್ನು ತೊರೆ; ಸರಿಯಾದ ಮಾರ್ಗ ವನ್ನು ಬಿಡು : ನುಡಿ ಕಿತ್ತಡವೆನಿಸದೆ ನೇರ್ಪಡುಗಿಡದೆ ನರೇಂದ್ರನಾಜ್ಞೆ ಯಿಂದಿರ್ಪುದಿದಂ ಕಡೆಗಣಿಸೆ ಬಱಕ್ಕಣ್ಣನ ತುಡುವ ಶಿಲೀಮುಖದೊಳುಂಟೆ ಮುಖದಾಕ್ಷಿಣ್ಯಂ (ಪಂರಾಮಾ. ೭-೮೧); ಕೀರ್ತಿ ಬಾರ್ತೆಗಿಡೆ ಲಕ್ಷ್ಮಿ ಮೊದಲ್ಗಿಡೆ ಮಾನಸಿಕ್ಕೆ ನೇರ್ಪಡುಗಿಡೆ (ಪಂರಾಮಾ. ೯-೮೫). ೩. ಹದ ವನ್ನು ಕಳೆದುಕೊಳ್ಳು; ಹದಗೆಡು; ಅಂದಗೆಡು : ಲೋಕಾಧಿ ಪತಿ ದಶಾನನನೇಕಾಕಿಯ ಮೇಲೆ ನಡೆದನೆಂಬಪವಾದಂ ಲೋಕಕ್ಕೆ ಪರ್ವಿ ನಿಜಬಾಹಾಕೌಕ್ಷೇಯಕದ ಕೂರ್ಪು ನೇರ್ಪಡುಗಿಡುಗುಂ (ಪಂರಾಮಾ. ೧೧-೧೩೧).

[ನೇರ್ಪಡು$_2$+ಕಿಡು (<ಕೆಡು$_1$)]

**ನೇರ್ಪಡೆ** (ಕ್ರಿ). ಹೊಂದಿಕೆಯನ್ನು ಪಡೆ; ಸಾಮಂಜಸ್ಯವನ್ನು ಹೊಂದು : ಜಡೆಯಿಂದೊಪ್ಪುವ ಪುಱ್ಪಚಾಪಸಿತಭಸ್ಮೋದ್ಧೂಳಿತಾಙ್ಗಕ್ಕೆ ನೇರ್ಪ್ಪಡೆದಿರ್ದ್ದಱ್ಗಜನಿತ್ರ ಚಾರುತರ ಕಾಶಾ ಪ್ರಚ್ಛದಚ್ಛಾದಿತಕ್ಕೆಡೆ ಗೊಟ್ಟಪ್ಪ ಶಶಾಂಕನೆಂಬ ನುಡಿಯಂ ಲೋಕಕ್ಕೆ ನಿಶ್ಚಯಿಸ್ಪದಂ ಗಡ ತಾನೆಂದೊಡದೇವೊಗಳ್ದಪುದೊ ಪೇಳ್ಸರ್ವ್ವೇಶ ಯೋಗೀಂದ್ರನಾ (ಎಕ.VIII, ಸೊರಬ. ೨೭೫-೨೪; 1231); ಎಡಗಾಲ ತೊಡರ ಬಾವುಲಿ ನಡೆಗೆಸೆವ ವಿಡಾಯಿ ಜಗಮನಂಗೆಯ್ಯೊಳ್ ನೋಟಿಸ್ಪಡೆ ತೋರ್ಪನೆಂಬ ನುಡಿ ನೇರ್ಪಡೆದೊಪ್ಪಿರಲಿಂದ್ರಜಾಲಿಗಂ ವಿಂಗೆ ಬಂದಂ(ದಶಕು. ೬-೧೧೧).

[ನೇರ್$_2$+ಪಡೆ$_1$]

**ನೇಪುರ್ಱ$_1$, ನೆಪ್ಪು$_3$** (ನಾ). (ಕೊಲೆಯ) ಸೇಡು,—ಮುಯ್ಯಿ : ವೈರಶುದ್ಧಿ : ಇನತನಯುನ ನೇರ್ಪಿಂ[ಪಾಠಾಂ. ನಣ್ಪಿಂ]ಧರ್ಜನನಂ ಮುಂ ಕೊಲ್ವೆನೆನ್ನ ತಮ್ಮನ ನೇರ್ಪಿಂ[ಪಾಠಾಂ. ನಣ್ಪಿಂ]ಗನಿಲಜನಂ ಕೊಲ್ವೆಂ ಕಮಲನಾಭ ನೇರ್ಪಿಂಗೆ [ಪಾಠಾಂ. ನಣ್ಪಿಂಗೆ] ನೇಪುರ್ಱಗೊಳ್ಳದೆ ಮಾಣೆಂ (ಗದಾಯು. ೭-೪೭). 'ನೇಪುರ್ಱಗೊಳ್$_1$' ಪರಾ. **ನೆಪ್ಪು$_3$:** ನೆಪ್ಪಿಂಗೆ ನೆಪ್ಪುಗೊಳ್ಳದೆ ಮಾಣೆನೆಂಬಂತೆ ಬಕಾಸುರನ ಮಗನಳಂಭೂಷ ನರ್ಜನನ ಮಗನಿಳಾವಂತನನಂತಕಲೋಕಮನೆಯ್ದಿಸುವುದುಂ (ಪಂಪಭಾ. ೧೧-೭ ಪ); ಎನ್ನವರೆಣ್ಬರ ತಪ್ಪಿಂಗೆಲವೋ . . . ಆಱಕರ್ಱಱಗುಡು ಇನ್ನಿರ್ವರ ಸರಿ ನೆಪ್ಪಿನ ನೆಪ್ಪಂ ನಿನ್ನ ಭವಿಷ್ಯಜ್ಜನ್ಮಕೆ ತೀರ್ವೆನುತುನ್ನತಿಕೆಯ ಮುನಿಸಿಂದೆಚ್ಚಂ ಜಯನೃಪತಿಯನಿನಕೀರ್ತಿ (ಜಯಕಾ. ೭-೭).

[ನೇರ್$_1$+-ಪು$_2$]

**ನೇಪುರ್ಱ$_2$, ನೆಪ್ಪು$_4$** (ನಾ). ೧. ನೇರವಾಗಿರುವಿಕೆ; ಋಜುತ್ವ; ಒಳ್ಳೆಯತನ : "ಸ್ಥೈತೆನೆ ನೇಪುರ್ಱ" (ಕವಿಕಂ. ೧೭೬); ಜಾಣಿನ ಬೆಡಂಗು ವಿಬುಧಪ್ರೀಣನಕರಮೆನಿಸಿ ನೇಪುರ್ಱ ನೇರ್ವೊಡೆ ಪೇಟ್ದಂ ಪ್ರಾಣಹಿತಾರ್ಥದಿ ನಜಿತಪುರಾಣಮನಳವಟ್ಟ ಕವಿತೆಯಿಂ ಕವಿರತ್ನಂ (ಸುಕುಮಾ. ೧-೩೯). ೨. ಸರಿಯಾಗಿರುವಿಕೆ; ಯುಕ್ತತೆ; ಔಚಿತ್ಯ : ಇಪ್ಪ ನೆಲೆಗೈದಸುರ ಶರಧಿಯಂ ವರುಣನುಪಸರ್ಪಣಂಗೈದ ಪವಮಾನ ಧನದಾದಿಗಳ್ ನೇರ್ಪಿಂದ[ಪಾಠಾಂ. ನೇರ್ಪಿದರ್] ಹಿಮಶೈಲತಪ್ಪಲಂ ಸಾರಿರ್ದರಾ ಕಪರ್ದಿಯನು ಕೂಡಿ (ವೆಂಕಾರಾ.೩-೬-೬); ಎನ್ನ ತಾಯನ್ ನೆರೆ ನೆವ್ಮಿ ಸ್ಯೂಸನಿಷ್ಟಕ್ಕೆ ಎನ್ನಿಷ್ಟಮನ್ ನೆರೆಪುವುದೆ ಎನಿತೊ ಒಳ್ಳಿತ್ತಾಗಿ ನೇರ್ಪಾಗಿ ಕಂಡತ್ತು (ಬದ್ಧಪ್ರ. ೧೩-೨೬೧). ೩. ನೇರವಾದ ಗುರಿ : ಬರ್ಪ ಸರಳ್ಮಳೆಯ ಬಿರುಘಾಳಿ ಮುರಿದಟ್ಟುವೊಲು ದರ್ಪಕನ ಪುತ್ರನವ ನತ್ತಣಿಂದತ್ತಲೇ ನೇರ್ಪಿನಿಂದುತ್ತರಿಸಿ ಪುಟನೆಗೆವುತಿರಲು (ನಪಮೋ. ೨೯-೧೨). ೪. ಸರಿಯಾದುದು; ಯೋಗ್ಯವಾದುದು : ಮನುಜಂಗೆ ಸ್ನೇಹಮೆಂಬುದು ಪುಸಿಯು ನಚ್ಚು—ಈಗಳೆನಗೆಲ್ಲಮುಂ ನೇರ್ಪಕ್ಕುಂ (ಅಶ್ವತ್ಥಾ. ೨೭-೫೩೯). ೫. ಹೊಂದಾಣಿಕೆ; ಸಾಮರಸ್ಯ : ನಸುಮುಗಿದಕ್ಷಿ ನಾಸಿಕದೊಳೊಂದಿರೆ ನಿಶ್ಚಲ ಚಿತ್ತ ವೃತ್ತಿ ನೀಳ್ದ ಸಿತಜಟಾಳಿ ನುರ್ಗಿದ ಬಹಿರ್ವಿಷಯಸ್ಥಿತಿ ನೂತ್ನಮೂರ್ತಿ ನೇರ್ಪಸೆದಿರೆ . . . ತನ್ಮುನಿಗೆ ವಂದಿಸಿದಂ ಮಗಧಕ್ಷಿತೀಶ್ವರಂ (ದಶಕು. ೨-೬೩); ಸಿಂಧುವಂ ಪೊಕ್ಕನಿನನನ್ಯೋನ್ಯದಾ ನೇರ್ಪಿನೊಳ್ಮೆಯಿಂದ (ಭಾಪಚಿಂ. ೭-೧೩). ೬. ಅಂದ; ಸೊಗಸು; ಚೆಲುವು : ಮೊಗದಿಂದಂ ನೇರ್ಪನಾಳ್ದಂತುರದಿನಗಲಿತಾದಂತೆ . . . ಮುಂಗಾಲ್ಗಳಿಂದಂ ಮುಗಿಲಂ ಮುಟ್ಟಿಪ್ಪುದೆಂಬಂತತಿಜವಮಿದಿರೊಳ್ ಬಂದುದಿಂದ್ರಾಯುಧಾಶ್ವಂ (ಕಾದಂಪೂ. ೪೫೭); ತೊಳಗುವ ದರ್ಪಣದ ನೇಪುರ್ಱ ನೆಲಸಿತ್ತ ದಱಿರೊಳ್ (ಚಂದ್ರಪು. ೧೩-೩೯); ವಿಧಿಯದ ಕೊಟಿ ಮಣ್ಣಿಂದಱಯ ದವರ್ ಚೆಚ್ಚರಮವಜ್ಞೆಯಿಂ ನೋಡದೆ ಮಾಡಿದ ರೂಪಿನಂತೆ ನೇರ್ಪಿಲ್ಲದ ವಿಕಟಾಕೃತಿಯ ಹುಂಡ ಸಂಸ್ಥಾನಂಗಳ್ (ಪರ್ಪಪು.೧೧-೩೭); ನೀಳನೀರಜಾ ಕಳಿತ ತಟಾಕಮಂಗಳದ ಕರ್ಪಿನ ನೇರ್ಪಮರ್ದಂಗಜಂಗೆ ಮಂಡಳಕರ ವರ್ಣಪೂರ ಪರಿಮಂಡಳಮಾಯ್ತು ಸುರನ್ಮುಮಂಡಳಂ (ಅನಂಪು.೧೧-೬).

೭. ಮಾರ್ಗ ; ಕ್ರಮ ; ರೀತಿ : (ಕ). ೮. ನ್ಯಾಯ ; ಸಮದೃಷ್ಟಿ : ಆರೊಳ್ಪು ತಪ್ಪುಗಳ ನೇರ್ಪಿನಿಂ ನೋಳ್ಪೆನ್ನ ಪೊರೆಯೆ ಮೊರೆಯಿಡುವೆನೆಂದೊರೆದ ತನ್ನಿರವಂ (ಕಾಲೂರ.೧೩೪-೨೮೮). **ನೆಪ್ಪು**$_4$ **:** ೪. ತಪ್ಪಿ ನಡೆಯಲದೊಂದು ಸಮಯದಿ ನೆಪ್ಪ ಗ್ರಹಿಸುವನಲ್ಲದಲೆ ದ್ವಿಜನಪ್ಪ ಶಾಸ್ತ್ರಜ್ಞಾನಿ ಕೆಡುವನೆ (ಜಿಜ್ಞಪು. ೭೬-೪) ; ಆಧುನಿಕ ಶೋಧನೆಗಳು ನಡೆದು ಹಿಂದಿನ ತಪ್ಪು ನೆಪ್ಪುಗಳನ್ನು ತೋರಿಸಿಕೊಡುವ ವರೆಗೆ ಇವನ ಗ್ರಂಥಗಳೇ ಪ್ರಮಾಣಗ್ರಂಥಗಳಾಗಿದ್ದವು (ಪ್ರಪಾಇ. I, ೧೦೬). **೬.** ಬಪ್ಪುದು ಬಾರದೆ ಬಿಡದು ಬಂದೆಡೆಯಲ್ಲಿ ತಪ್ಪುಗಾಯ್ದೆನ್ನ ನುಳುಹುವ ಒಪ್ಪ ರಂಗನದೆಂಬ ವೊಯ್ಯಾರಗಾತಿಯ ನೆಪ್ಪಿನಿಂದೆಂದು ನೆರೆವೆನೊ (ಶತಸಾಂ. ೩೬-೯೦) ; ಉಪ್ಪರಿಕೆಯೊಳು ಸಂಚರಿಸುವ ನಾರಿಯ ರೊಪ್ಪದಿ ಬರುವ ಚಂದಿರನ ನೆಪ್ಪಿನಿಂ ಪಿಡಿದು ಗುಂಡಾದ ಕನ್ನಡಿಯೆಂದು ತಪ್ಪದೆ ನೋಳ್ಪರು ಮುಖವ (ಸೌಗಂಪ. ೧-೧೦). **೭.** ಲೆಪ್ಪದ ಪುತ್ತಳಿ ಪೋಲು ಕುಳಿತತ್ತಿತ್ತಲೊಪ್ಪಚ್ಚಿ ದೇಹ ಕಂಪಿಸದೆ ನೆಪ್ಪಱಿದಾತ್ಮನ ನೋಡಿ ಸಿದ್ಧಾಂತದೊಳಿಪ್ಪ ಮಂತ್ರವ ಜಪಿಸಿದರು (ಭರಚ. ೩-೧೦೨) ; ಒಪ್ಪಿಸಿ ದೇಹಮಂ ತಪದ ತಾಪಕೆ ತನ್ನ ನಭಸ್ವರೂಪಮಂ ನೆಪ್ಪಱಿದಪ್ಪಿಕೊಂಡು ನಿಲೆ (ಅಪಶ. ೯೩) ; ಒಪ್ಪಾದ ನುಡಿಯೇಕೆ ಪುಷ್ಪವೇಱಿಸಲೇಕೆ ಅರ್ಪಿತದ ಗೊಡವೆ ತನಗೇಕೆ ಲಿಂಗದ ನೆಪ್ಪನಱಿಯದಗೆ (ಸರ್ವಜ್ಞ.೧೮೪).

**ನೇರ್ಪು ಮಾಡು** = ಅಣಿಗೊಳಿಸು; ಸಿದ್ಧಪಡಿಸು : ಕೊರತೆಯೇನೊ ಕಂಡ ನಿನಗೆ ? ಹುರಿಯನೇಕೆ ತುಯ್ಯುತಿರುವೆ ? ಮರೆಯದುಣಲು ಮಲಗ ಲೆಲ್ಲ ನೇರ್ಪು ಮಾಡಿ ಇರುವೆನಲ್ಲ! (ಇಂಗೀತ.೮-೨೨). [ನೇರ್$_2$+-ಪು$_2$]

**ನೇರ್ಪುಗೆಡಿಸು** (ಕ್ರಿ). ಅಂದಗೆಡಿಸು ; ಹಸಗೆಡಿಸು ; ಹಾಳು ಮಾಡು : ಸೂಳೆಬಿನ್ನಣದಿಂದ ಸುಲಿವ ಬುದ್ಧಿಗಳ ನೀ ಪೇಳಿ ನೇಹವ ನೇರ್ಪುಗೆಡಿಪುದುಚಿತವೆ (ಸೌಂದಪು. ೧೧-೪). [ನೇರ್ಪು$_2$+ಕೆಡಿಸು$_1$]

**ನೇರ್ಪುಗೊಳ್$_1$,** ನೆಪ್ಪುಗೊಳ್$_1$ (ಕ್ರಿ). (ಕೊಲೆಯ) ಸೇಡು ತೀರಿಸಿಕೊಳ್ಳು ; ಪ್ರತಿಹಿಂಸೆ ಮಾಡು ; ಪ್ರತೀಕಾರ ಮಾಡು : ಇನತನಯನ ನೇರ್ಪಿಂಗರ್ಜುನನಂ ಮುಂ ಕೊಲ್ವೆನೆನ್ನ ತಮ್ಮನ ನೇರ್ಪಿಂಗ ನಿಲಜನಂ ಕೊಲ್ವೆಂ ಕಮಲನಾಭ ನೇರ್ಪಿಂಗೆ ನೇರ್ಪುಗೊಳ್ಳದೆ [ಪಾಠಾಂ. ಗೊಳಿಸದೆ] ಮಾಣೆಂ (ಗದಾಯು. ೭-೪೭). **ನೆಪ್ಪುಗೊಳ್$_1$ :** ನೆಪ್ಪಿಂಗೆ ನೆಪ್ಪುಗೊಳ್ಳದೆ ಮಾಣೆನೆಂಬಂತೆ ಬಕಾಸುರನ ಮಗನಳಂಭೂಷನರ್ಜುನನ ಮಗನಿಳಾವಂತನನಂತಕಲೋಕಮನೆಯ್ದಿಸುವುದುಂ (ಪಂಪಭಾ. ೧೧-೭೫). [ನೇರ್ಪು$_1$+ಕೊಳ್$_1$]

**ನೇರ್ಪುಗೊಳ್$_2$** (ಕ್ರಿ). ೧. ಹೊಂದಿಕೆಯಾಗು ; ಅಳವಡು : 'ನೇರ್ಪುಗೊಳಿಸು' ಪರಾ. ೨. ತಿದ್ದುಪಡಿ ಹೊಂದು ; ಸರಿಯಾಗು : ಇದೇ ಕಾಲದಲ್ಲಿ ಪಂಚದ್ರಾವಿಡಭಾಷೆಗಳ ವಿಚಾರದಲ್ಲಿ ಇದ್ದ ತಪ್ಪು ಅಭಿಪ್ರಾಯಗಳೂ ನೇರ್ಪುಗೊಂಡವು (ದ್ರಾವಿವಿ. ೨೦ ಹಿನ್ನೆಲೆ). [ನೇರ್ಪು$_2$+ಕೊಳ್$_1$]

**ನೇರ್ಪುಗೊಳಿಸು** (ಕ್ರಿ). ಹೊಂದಿಸು ; ಅಳವಡಿಸು : ತಾವು ಆಯಾ ವಸ್ತುಗಳ ಅಭಿನಯರೂಪಕಾರ್ಯದಲ್ಲಿ ತಕ್ಕಂತೆ ಪಾತ್ರವನ್ನು ನೇರ್ಪುಗೊಳಿಸಿರುವ ಕಾರಣ ತಮಗೇನೂ ಕೊರತೆಯುಂಟಾಗಲಾರದು (ಶಾಕುಂತ. ೧-೧೫). [ನೇರ್ಪುಗೊಳ್$_2$+-ಇಸು$_3$]

**ನೇರ್ಪುವಡು** (ಕ್ರಿ). ಅಂದವಾಗು ; ಚೆಲುವಾಗು : ಎರಲೆದಿಟ್ಟ ಗುಡಿಯಲರ್ವಿಲ್ಲನಂಬಿನ್ನೆವಡಿ ನೇರ್ಪುವಟ್ಟ ನಿಡಿವಾಸೆಯುಳ್ಳೆರ್ದೆಗರಳಿಯಾಸೆ ಕಟ್ಟನಿವಾತು ವಿಟರ್ಗೆ ಕೇತು (ಉದ್ಭದೇ. ೫-೧೮). [ನೇರ್ಪು$_2$+ಪಡು$_1$]

**ನೇರ್ಪುವಡೆ,** ನೆಪ್ಪುವಡೆ (ಕ್ರಿ). = ನೇರ್ಪುವಡು : ಆಗಳ್ ಮೇಘರಥ ಮುನಿನಾಥಂ ದೃಢರಥಯತಿಸಮನ್ವಿತಂ . . . ನಭಸ್ತಿಳಕನಗಾಗ್ರಮನಾಗಳೇಱಿ ನೇರ್ಪುವಡೆದ ವಿಶಾಲಮಣಿಶಿಲಾಪಟ್ಟದರುಣಕಿರಣಂ ನಿಜಚರಣಪಲ್ಲವಘೃಣಿಗಣದಿಂ ಪಲ್ಲವಿತಂ ಮಾಡಿ (ಶಾಂತೀಶ್ವ. ೧೩-೧೧೧೫). **ನೆಪ್ಪುವಡೆ :** ಕಣ್ಗನುನಯವಾಗಿ ನೆಪ್ಪುವಡೆದುಜ್ಜ್ವಲಕಾಂತಿಯಿನೊಳ್ಪುವೆತ್ತ ತದ್ವನಿತೆಯ ಜಂಗೆಗಳ್ ವಿಟರ ಚಿತ್ತದ ಶಂಕುಗಳಲ್ತೆ ಸಂತತಂ (ನಳಚಂ. ೩೩೭) ; ನೆಲೆವನೆಯೊಳ್ ನೆಪ್ಪುವಡೆದ ಚಂದ್ರಕಾಂತದ ಸಡಗರದ ಶಕುನಿಯ ಮಂಚದಲ್ಲಿ ತೂಳ್ವಾಸಿನ ಮೇಲೆ ಬೆಳ್ದಿಂಗಳೊಂದಿರುಳೊಳ್ ನಲಿದು ಕವರ್ತೆಗೊಂಬ ಚೊನ್ನವಕ್ಕಿಯಂತೆ (ವಿಠೂಪಾ. ೭೨). [ನೇರ್ಪು$_2$+ಪಡೆ$_1$]

**ನೇರ್ಪುವೆಱು** (ಕ್ರಿ). ೧. ಔಚಿತ್ಯದಿಂದ ಕೂಡಿರು ; ಯೋಗ್ಯವಾಗಿರು ; ತಕ್ಕುದಾಗಿರು : ರಸಂಬಡೆದು ಪಂಡಿತಮಂಡಲಿ ಮೆಚ್ಚೆ ನೇರ್ಪುವೆತ್ತಿರಲವಿರೋಧಮಾಗೆ ಕೃತಿವೇಟಿಪ್ಪಡೆ ಸತ್ಕವಿ ನಾಗಚಂದ್ರನಂತಿರೆ ಪೆಱರಾರ್ ಸರಸ್ವತಿ ಕುಡಲ್ ಪಡೆದರ್ ವರಮಂ ಕವೀಶ್ವರರ್ (ಪಂರಾಮಾ. ೧೬-೯೭) ; ನೇರ್ಪುವೆತ್ತ ಕೈದೋಂಟಿಯನೊಪ್ಪಿ ಕುಟ್ಟುವ ಕರಂ ಪದನಾಗಿರೆ ಬಿಲ್ಲ ನಾರಿಯಂ ತಾಂಟಿಸಿ ನೋಟ್ಟಿ ಬೇವಸದೊಳಿರ್ದುದು ಪಳ್ಳಿಯ ಭಿಲ್ಲಸಂಕುಳಂ (ದಶಕು. ೨-೧೨೧). **೨.** ಅಂದವಾಗು ; ಚೆಲುವಾಗು : ಕನ್ನಡಿದೋಱುವಚ್ಚಮಂದಾರಲತಾಂತಮಂ ತಳಿವ ಸೇಸೆಯನಿಕ್ಕುವ ನೇರ್ಪುವೆತ್ತ, ವೃಂದಾರಕವಾರನಾರಿಯರ ನೊಯ್ಯನೆ ವೀಕ್ಷಿಸಿದಂ ಸುರೋತ್ತಮಂ (ಶಾಂತೀಶ್ವ. ೭-೫೮). [ನೇರ್ಪು$_2$+ಪೆಱು$_1$]

**ನೇರ್ಮೆ** (ನಾ). ೧. ನೇರವಾಗಿರುವಿಕೆ ; ಋಜುತ್ವ; ನೇರ್ಪು : ಸೊಲ್ಕೊಂಕದಿಲ್ಲದುದು ನೇರ್ಮೆ ಒರ್ನೆಲೆಯಾಗಿ ಮನ ಕೊಂಕಿ ನಿಲ್ಮೆಯನ್ ಪಡೆಯೆ (ಕುಱಳ್. ೧-೧೨-೯). **೨.** ಯೋಗ್ಯವಾದುದು ; ಸರಿಯಾದುದು ; ತಕ್ಕುದು : ನೇರ್ಮೆಯನ್ ನೆನೆದು, ನಿಱಿಯುಮನ್, ಅಱಮುಮನ್ ಪಿಡಿದು ಎತೆಯೊಕ್ಲೇಸ್ . . . ಮನ್ನಿಸಿದನೆಂಬರ್ (ಅಂತಿಗೊ. ೨-೧೯). [ನೇರ್$_2$+-ಮೆ$_1$]

**ನೇರ್ವಡಿಸು,** ನೇರ್ಪಡಿಸು (ಕ್ರಿ). ೧. ಹೊಂದಿಸು ; ಸೇರಿಸು ; ಅಳವಡಿಸು : ಗೀರ್ವಾಣ ಧನುರ್ಲೇಖೆಯ ನಿಱಿಮುಗಿಲೊಳು ನೇರ್ವಡಿಸಿದ ಮಾಳ್ಕೆಯೊಳು ಉರ್ವೀದೂರವ ಬಳಸಿದ ನಿಱಿಗಿಕ್ಕಿದಳೂರ್ವಸಿ ಮಣಿಮೇಖಲೆಯ (ನೇಮಿಸಂ. ೨೨-೪೩). **೨.** ಅಂದಗೊಳಿಸು ; ಚೆಲುವಾಗಿಸು : ನೇರ್ವಡಿಸಿ [ಪಾಠಾಂ. ನೀರ್ವಡಸಿ, ನೀರ್ವಡಿಸಿ] ಪಿಡಿದ ಕರಿಯಳಿ ನೀರ್ವೂವಂ ಚುಂಬಿಸುತ್ತೆ ನಾರಿಯ ನಾಣಿಂ ಸಾರ್ವ ಮೊಗಂ ಕಟ್ಟಿಲೆಯಂ ಪೀರ್ವಮೃತಕರಂಬೊಲೋಪನಂ ನುಡಿಯಲೊಡಂ (ಅರ್ಧನೇ. ೧-೧೧೫). **ನೇರ್ಪಡಿಸು : ೧.** ಈವಟ್ಟೆಯದಾಗಳುಂ ನಿನಗೆ ದಲ್ ಪದ್ಮಾಸನಂ ತಾನೆ ನೇರ್ಪಡಿಸಲ್ ಕೂಡಿದನಿರ್ಪುದಲ್ತು ನಯಮಿನ್ನೀ ಪೊಟ್ತೆ ಪೊಟಿಸ್ತಾಗೆ ನೀನೊಡಗೊಂಡುಯ್ವುದು ಕನ್ನೆಯಂ (ಪಂಪಭಾ. ೫-೨೦) ; ಬಟಿಕ್ಕೆ ನೇರ್ಪಡಿಸಿದನಂಗದೊಳ್ ವಚನದೊಳ್ ಮನದೊಳ್ ಪರಪೀಡೆ ಪೊರ್ದದೊಳ್ಪಡರ್ವಿನೆಗಂ ತ್ರಿಗುಪ್ತಿಗಳುಮಂ ಜಿನಶಾಸನರತ್ನದೀಪಕಂ (ಅನಂಪು.೪-೧೨); ಒಪ್ಪಲ ನೂಲನೊರ್ಮೊಟಿನ ಕಪ್ಪಡಮಂ ಜಿನಸಂಖ್ಯಹಸ್ತದಿಂ ನೇರ್ಪಡಿಸಿರ್ದ ದಂಡಿಗೆಯ ಮೇಲೆ ಪತಾಕೆಯನೆಯ್ದೆ ಕಟ್ಟೆ (ಱಟ್ಟಮ.೪-೧); ಇಂತೋರೊಂದು ಪೂಗಳೊಳೋರೊಂದು ಬಗೆಯ ಬಣ್ಣವಂ ನೇರ್ಪಡಿಸಿದ ಗಾಂಪನಾವಂ ? (ರಾಮಾಶ್ವ. ೮-೩೦). **೩.** ಕ್ರಮಗೊಳಿಸು ; ತಿದ್ದು ; ತೀಡು : ಕುಟಿಲಾಳಕಾವಳಿಗಳಂ ಸೈತೊತ್ತಿ ಚೆಲ್ವಾಗೆ ನೇರ್ಪಡಿಸುತ್ತುಂ . . . ತನ್ವಂಗಿ ಕಣ್ಗೊಪ್ಪಿದಳ್ (ಶೃಂಗಾರ. ೨-೫೯) ; ಕುಂಚಿತ ಕುಂತಳಾಳಿಗಳನೊಯ್ಯನೆ ನೇರ್ಪಡಿಪೊಂದು ಲಕ್ಷ್ಯದಿಂ . . . ಒಪ್ಪಿದರ್ಪಂಚಶರಂಗಳಂತೆ ನವಯೌವನೆಯರ್ ಗಣಿಕಾನಿಕಾಯದೊಳ್ (ಉದ್ಭಟ. ೧೦-೬೮) ; ಮದಾಳಿಮಾಲೆಯೆಂಬಳಕಮನೊತ್ತಿ ನೇರ್ಪಡಿಸಿ ತತ್ಸರಸೀರಮೆಯಂಬುಜಾಸ್ಯಮಂಡಳಮನೊಱಲ್ದು

ಚುಂಬಿಸಿ ಭುಜಂಗನವೋಲ್ಸುಳಿಗುಂ ಸಮೀರಣಂ (ಶಬಶಂ. ೨-೬೦) ; ಆಧುನಿಕರೀತಿಗನುಗುಣವಾಗಿ ಕಪ್ಪು ಕೂದಲನ್ನು ನಿರಿಗೆಯ ಮೇಲೆ ನಿರಿಗೆ ಕೂರುವಂತೆ ನೇರ್ಪಡಿಸಿಕೊಂಡಿದ್ದಳು (ಪುನರು. ೪೨೦). **೪.** ಹಸನು ಮಾಡು ; ಶುದ್ಧಗೊಳಿಸು : ಪಸಿವಿಂ ನಿಲಲಾಱದೆ ಕೂಡೆ ನೋಡಿ ಕಂಡತಿಶಯಮಾಗೆ ನೇರ್ಪಡಿಸಿದಕ್ಕಿಯಿರಲ್ ನೆಱೆ ಬಾಯೆ ಬೇಗ ಲಾರ್ತತೆ ಪಿರಿದಾಗೆ ತೀವಿಕೊಳಲ್ (ಧರ್ಮಪ. ೯-೨೫). **೫.** ದುರಸ್ತು ಮಾಡು : "ನೇರ್ಪಡಿಸು ; ದುರುಸ್ತು ಮಾಡು; ರಿಪೇರಿಮಾಡು" (Repair. ಪತ್ರಿನಿ. ೬೯). **೬.** ತಿದ್ದು ; ಸರಿಪಡಿಸು : ಹಿಂದೆ ಆಗಿಹೋದುದನ್ನು ಈಗ ನೇರ್ಪಡಿಸುವಂತಿಲ್ಲ (ಹುಲಿಹಾ. ೩೪೯) ; ಅರಸನು . . . ಮಾಡಿದ ತಪ್ಪನ್ನು ನೇರ್ಪಡಿಸಲು ಹದಿನೈದು ವರ್ಷಗಳು ಬೇಕಾದುವು (ಹಾಹುತ್ತ. ೧೦೭) ; ನಿನ್ನ ತಪ್ಪು ನಿನಗೆ ಮನವರಿಕೆಯಾಗಿದೆಯಲ್ಲ, ತಪ್ಪನ್ನು ನೇರ್ಪಡಿಸಿಕೊ (ಮಹಾಗ. ೮೭) ; ನಡೆನುಡಿಯ ತಪ್ಪುಗಳ ನೇರ್ಪಡಿಸಿ ಕಣ್ಬುಗೆಯ ಕಡೆಗೆಂತೊ ಕಾಳು ಬಿಗಿದಳಲಿಂದ ಬಂದಂ (ಕಾಲೂರ. ೧೦೯-೨೨೪). **೭.** ಸಮಾಧಾನಗೊಳಿಸು ; ಸಾಂತ್ವನಗೊಳಿಸು : ಚೆಂದವ್ವೆ . . . ರೋದಿಸುತ್ತಲೇ ಹೋಗಿ ಮಹಾರಾಣಿಯರನ್ನು ನೇರ್ಪಡಿಸುತ್ತಿರುವರು (ಮಾಡ.೨೩-೧೪). [ನೇರ್ವಡು + -ಇಸು$_3$]

**ನೇರ್ವಡು,** ನೇರ್ಪಡು$_1$ (ಕ್ರಿ). **೧.** ಸೇರು ; ಅಳವಡು ; ಹೊಂದಿಕೊಳ್ಳು : ನೆಟ್ಟನೆ ಸಚ್ಚಾರಿತ್ರದೊಳಳವಟ್ಟಂ ಲೌಕಿಕದೊಳೆಸೆವ ವೈದಿಕದೊಳ್ ನೇರ್ವಟ್ಟಂ ಶ್ರೀಸೋಮೇಶ್ವರಭಟ್ಟೋಪಾಧ್ಯಾಯನಾತ್ಮವಂಶಪವಿತ್ರಂ (ಎಇ. XV, ೩೫೨-೩೧ ; 1098) ; ಬೇರ್ವೆರಸು ಕಿಟ್ಟಿ ಪಲವುಂ ನೀರ್ವೂಗಳನೊಟ್ಟಿಕೊಂಡು ಬರ್ಪ ಗಜೇಂದ್ರಂ ಸೋರ್ವ ಮದಧಾರೆ ಕಟದೊಳ್ ನೇರ್ವಟ್ಟಿರೆ ಸುರಕರೀಂದ್ರಮೆನಿಸಿದುದಾಗಳ್ (ಕಾವ್ಯಾವ. ೭೧) ; ನೇರ್ವಟ್ಟಾ ನರನಾಥನ ಕೂರ್ವಾಳೊಳಳಂಕೆಗೊಂಡ ಧಾರಾಜಲದೊಳ್ ಬೇರ್ವರಿದಿರೆ ಮನದೆಱಕಂ ನೀರ್ವಾನಸೆಯಂತೆ ವಿಜಯವಧು ನೆಲಸಿರ್ಪಳ್ (ಚಂದ್ರಪು. ೩-೨೦). **೨.** ಒದಗು ; ಉಂಟಾಗು ; ಸಂಭವಿಸು : ಲೀಲಾಲಸಿಕೆ ಮನದೊಳಾದಂ ಪುಟ್ಟೆ ನೇರ್ವಟ್ಟೆ ಕೊರ್ವಿಂ ಬಸಿಱಿಸೆಯೆ ಮೊಗಂ ಬೆಳ್ಪೇಱೆ . . . ಪೆರ್ಚಿತ್ತು ಗರ್ಭಂ (ಚಂದ್ರಪು. ೩-೮೫). **೩.** ಚೆಲುವಾಗು ; ಸುಂದರವಾಗು ; ಶೋಭಿಸು : ಪೂರ್ವಪಶ್ಚಿಮಖಂಡದರಸರೊಳ್ಕೆಲಬರಪೂರ್ವವಸ್ತುವ ತಂದರಲ್ಲಿ ನೇರ್ವಟ್ಟೆ ಪೆಂಗಳ ಕೆಲಬರು ತಂದಿರ್ದರುರ್ವರಾಧೀಶ ಕೇಳ್ನನಗೆ (ಭರಚ. ೩೭-೬). **ನೇರ್ಪಡು$_1$:** **೧.** "ನೇರ್ಪಡು (ನೇರ್ + ಪಡು)—ಸಂಶ್ಲೇಷೇ (ಹೊಂದಿಕೊಳ್ಳು)" (ಶಮದಾ) ; ವಿವಿಧ ಪ್ರಾಣಿಗಣಂಗಳೊಳ್ ಸಮತೆ . . . ಜೀವಿತಾಂತ್ಯದೆಡೆಯೊಳ್ ಸಂನ್ಯಾಸಮುಂ ಮಾಟ್ಟುದೆಂಬಿವು ನೇರ್ಪಟ್ಟೆಸೆವನ್ನೆಗಂ ನೆಗಟ್ದುವಂ ಶಿಕ್ಷಾವ್ರತಂ ನಾಲ್ಕುಮಂ ತಾಳ್ದಿ (ಆದಿಪು. ೬-೯) ; ಕುಮಾರಲೋಧ್ರಸಮರಪ್ರಾರಂಭದೊಳ್ ಬಲ್ಕೆ ನೇರ್ಪಡೆ ಭೂವಲ್ಲಭನಂ ಮನಂಗೊಳಿಸಿದಂ ಶೌರ್ಯೋರ್ಜಿತಂ ಮಲ್ಲಪಂ (ಅಜಿಪು. ೧-೩೦) ; ಬಯಲೊಳವುಂಕಿ ನೂಂಕಿದುದು . . . ಸೆಲ್ಲದ ಮುಷ್ಟಿ ವಜ್ರಮುಷ್ಟಿಯೊಳೊಡಗೂಡಿದರ್ಚಿಸಿದ ಕೂರಸಿ ನೇರ್ಪಡೆ ಸಾದಿಸಂಕುಳಂ (ವರ್ಧಪು. ೮-೪೭) ; ಥಳಥಳಿಸಿ ಪೊಳೆವ ಧವಳಚಾಮರಂಗಳ ಚಳಾಚಳವಿಳಸನದಿಂ ನೇರ್ಪಟ್ಟೆ ಲೀಲೆಯಿಂದೋಲಗಂಗೊಟ್ಟಿರ್ದ (ಬಾಧಪು. ೨-೩೭ ವ). **೨.** ಪದಿನಾಱಿಲ್ಲವಲಂಕ್ರಿಯಾರಚನೆ ಮೂವತ್ತಾಱು ನೇರ್ಪಟ್ಟುವೊಂದಿದ ಶೃಂಗಾರಮದಲ್ಲವೊಂದೆ ರಸಂ ಒಂಬತ್ತು (ಗದಾಯು. ೧-೭) ; ಸಿತಾಬ್ಜಮಂ ಪಿಡಿದು ಮಲ್ಲಿಗೆಯಂ ಮುಡಿದುದ್ಧ ಶೋಭೆ ನೇರ್ಪಟ್ಟಿರೆ ದೇವಿ ಭೂಷಣಗೃಹಾಂತರಮಂ ಪೊಱಮಟ್ಟಳಟ್ಟಿಯಿಂ (ಕುಸುಮಾ. ೪-೧೨೫) ; ಕಾಟ್ಕಗಂಗಳೊಳೊಡಂಬಾಟಿಸ್ಕೊಂಡು ಬವಣೆ ನೇರ್ಪಟ್ಟುದೇ (ರಾಮಾಶ್ವ. ೨೮-೧೦). **೩.** ಬರ್ಪ ಬಸಂತನಲಂಪಿಂಗೊಳ್ಪಿಂ ವನಲಕ್ಷ್ಮಿಯೊಲ್ದು ಮುತ್ತಿನ ಕಡೆಯಂ ನೇರ್ಪಡಲಿಕ್ಕಿದವೋಲ್ ಸೊಗಸಿರ್ಪುದು ಕುಸುಮಿತ ಸುಮಲ್ಲಿಕಾಲತಿಕೌಘಂ (ಉದ್ಭಟ. ೯-೧೦). ; ಅಲರಂಬಂ ಶಶಿಬಿಂಬದೊಳ್ ಮಸೆದವೋಲ್ . . . ಪೊಸಮುತ್ತ ನಾಯ್ದು ಮರ್ದಿನೊಳ್ತೊಯ್ದಂತೆ ನೇರ್ಪ[ಪಾಠಾಂ. ರ್ವ]ಟ್ಟೆ ನಿರ್ಮಲದಂತಚ್ಛವಿ ಬೇಡಿದರ್ಗೆ ವರವೀವಂತಿರ್ಪುವಾ ಕಾಂತೆಯಾ (ಅನಂಪು. ೨-೧೪). **೪.** ಸರಿಯಾಗು ; ಯೋಗ್ಯವಾಗು ; ಉಚಿತವಾಗು : ಪಡೆ ಪಡೆಮೆಚ್ಚೆ ಗಂಡನೆನೆ ಸಂದರಿಕೇಸರಿಯೆಂಬಗುರ್ವು ನೇರ್ಪಡೆ ನೆಗಟ್ದಾನಣಂ ಸೆಡೆದು ಮಾಣ್ಬನೆ ನಾಳೆ ದಿನೇಶನಸ್ತದತ್ತುಡುಗದ ಮುನ್ನ ಸೈಂಧವನಗುರ್ವಿಸೆ ಕೊಲ್ಲದೊಡೇನೊ ಗಾಂಡಿವಂಬಿಡಿದೆನೆ (ಪಂಪಭಾ. ೧೧-೧೨೨). **೫.** ಸೊಗಸಾಗು ; ಹಿತವಾಗು : ನಳಿನೀತೀರಲತಾಗೃಹಂಗಳ ನೆಟಿಲ್ ನೇರ್ಪಟ್ಟಿರಲ್ ಪಟ್ಟು ಕಾಲ್ಗಳನಿಂಬಿಂ ಪರಿಕಾಲೊಳಿಟ್ಟತಿಮುದಂ ಕೈಸಾರೆ . . . ಪಥಾರ್ತರಿರ್ಪರಳಿಕೀರಧ್ವಾನದುದ್ಯಾನದೊಳ್ (ಜಗವಿ. ೯-೮೮) ; ಪದಂಗಳೆರಡಱಂತರಾಳರೇಫೆಗಳಂ ಕೂಡಿದಂತೆ ಶ್ರುತಿಕಷ್ಟಮಾಗೆ ಸಂಧಿಯಂ ಮಾಡಲಾಗದು; ಕರಡೆಯ ಗಿರ್ಗಟೆದ ಧ್ವನಿಯಂತಿರವು ನೇರ್ಪಡವು (ಶಮದ. ೬೩ ವೃತ್ತಿ) . **೬.** ನೆಲಸು ; ನೆಲೆಗೊಳ್ಳು : ವಚನಗಳು ಸಾಹಿತ್ಯದ ಒಂದು ಪ್ರಕಾರವಾಗಿ ನೇರ್ಪಟ್ಟುದು ಕನ್ನಡದಲ್ಲಿಯೆ (ಮಹಾಸಾ. ೧೩ ಪ್ರಸ್ತಾವನೆ). **೭.** ಈಡೇರು ; ನೆರವೇರು : ತಾವೇ ಶ್ರೇಷ್ಠರೆಂಬ ವಿಚಾರ ಬಹುಕರ್ತೃಗಳಿನೊಂದುಂ ಕಾರಿಯ ನೇರ್ಪಡದು ಪರಶಿವನೊರ್ವನೇ ಕರ್ತಂ (ಕ್ಷೇತ್ರಸು. ೨-೪). **೮.** ಒಪ್ಪು ; ಸಮ್ಮತಿಸು : (ಕಿ).

**ನೇರ್ವಡೆ, ನೇರ್ಪಡೆ** = **೧.** ಚೆನ್ನಾಗಿ; ಮನೋಹರವಾಗಿ: ಕವಿತ್ವದ ತತ್ವದೊಳ್ಪುದಿದು ನೇರ್ವ್ವಡೆ ಪೇಟಲುರ್ವ್ವಿಗಪೂರ್ವಮಾಗಿರೆ ಬಲ್ಲೋನಪ್ಪುದಱನೋರ್ವ್ವನೆ ವಾಗ್ವಧೂವರವಲ್ಲಭಂ ಜಿನವಲ್ಲಭಂ (ಪ್ರಕರ್ಣಾ. ೫೦-೩-೪೦ ; ಜಿನವಲ್ಲಭನ ಗಂಗಾಧರದ ಶಿಲಾಶಾಸನ. ಸಾಲು. ೭ ; 950) ; ಸಲೆ ಪೂಣ್ದು ಪೂಣ್ಕೆ ನೇರ್ಪಡೆ ನಡೆವನ್ನೆಗಂ ನಡೆದನಳ್ಕದೆ ಬಳ್ಕದೆ ತನ್ನೊಡಲ್ ಪಡಲ್ವಡುವಿನಮಣ್ಮುಗುಂದನೆ ದಲೇನಭಿಮಾನಧನಂ ಸುಯೋಧನಂ (ಪಂಪಭಾ. ೧೩-೯೭) ; ಶ್ರವಣಕ್ಕಮರ್ದಿನ ಸರಿ ಸುರಿವವೊಲಾಗೆ ವಚೋವಿಲಾಸವಾ ಸಭೆಗತುಕ್ಕುತ್ಸವಮಂ ಕುಡೆ ನೇರ್ಪಡೆ ಬಿನ್ನವಿಸಿದನಾವರಿಸೆ ದಂತರುಚಿ ತತ್ಸಭೆಯಂ (ಪಂರಾಪೂ. ೧೦-೬೭) ; ಆ ಚಾರುದತ್ತ ಮತ್ತ ಮಿತ್ರಂ ನೋಟ್ಪನ್ನೆಗಂ ನೇರ್ಪಡೆ ರತ್ನರಂಜಿತಮಾದ ಹಟತ್ತೇಟಮಂ ಭೋಂಕೆನೆ ಕಂಡು (ನೇಮಿಪು. ೪-೩೧ ವ). **೨.** ಕ್ರಮವಾಗಿ ; ಸರಿಯಾಗಿ : ಉಡೆವಱದಂದಿಂ ಬಟಿಕೆಡೆಯುಡುಗದೆ ಜಿನಮುನಿಗಳಿಂ ಜಿನಾಗಮಮಂ ನೇರ್ಪಡೆ ಕೇಳ್ದೋದುವ ಜಿನಮುನಿಗಡಣದೊಳೆ ವಿವೇಕಿಯಾಗಿ ಪೊಟ್ತಂ ಕಳೆವಂ (ಧರ್ಮಾಮೃ. ೭-೧೫). **೩.** ಅಂದವಾಗಿ ; ಒಪ್ಪುವಂತೆ : ಕೇಯೂರಾದಿಯಂ ಭೂಷಣೋತ್ಕರಮಂ ನೇರ್ಪಡೆ ಕಟ್ಟೆ ಪೂಜಿಸಿದರಾ ದೋರ್ದಂಡಮಂ ಭೀಮನಾ (ಗದಾಯು. ೮-೬೫) ; ಎಡೆವಱಯದಂತ ಪುರದೊಳ್ ಕಡೆಯಿಕ್ಕುವ ತೋರಮುತ್ತು ಕಟ್ಟುವ ಗುಡಿ ನೇರ್ಪಡೆ ಚೆಲ್ವೆತ್ತುವ ತೋರಣವಡಿಗಡಿಗುತ್ಸವದೆ ತಳಿವ ಪಟವಾಸಚಯಂ (ಪುಷ್ಪಪು. ೧೨-೧೮). **೪.** ಹೆಚ್ಚಾಗಿ ; ವಿಶೇಷವಾಗಿ ; ಅತಿಶಯವಾಗಿ : ತಡೆಯದೆ ಸೇದೆಯ ನೇಣಂ ಪಿಡಿದಿರೆ ಪುಲಿ ತೋಯಮೆಂದು ತದ್ವಿಪ್ರಂ ನೇರ್ಪಡೆ ಪೆರ್ಚೆ ತೆಗೆಯೆ ಪುಲಿ ಬಂದೊಡೆ ಭಯದಿಂ ನೋಡುತಿರ್ಪುದುಂ (ಧರ್ಮಾಮೃ. ೧೨-೧೭೨).

[ನೇರ್$_2$ + ಪಡು$_1$]

**ನೇರ್ವಣ** (ನಾ). ಮುಗಿಯುವುದು ; ಪೂರ್ಣಗೊಳ್ಳುವುದು ; ಮುಕ್ತಾಯ : ಇನ್ನೀ ದೇವರ ಭೂಮಿಯಲು ಪುಟ್ಟಿದತ್ಥದೊಳಗೆ . . . ಅಲ್ಲಿಂ ಮೇಲಾದ ಅತ್ಥ ದೇವರ ಕಲ್ವೆಸಕ್ಕೆ ನಡೆವುದು ಕಲ್ವೆಸಂ ನೇರ್ವ್ವಣಮಾದ ತದನಂತರಂ ದೇವರ ಗ್ರಾಸನದಲು ಅಪೂರ್ವ್ವಿಗ

ವ್ರಾಹಮ್ಣರು ಷಣ್ಣಿರ್ವ್ಯರ್ಗ್ಗೆ ಸತ್ರಂ ನಡೆವುದು (ಕಇಆ. ೭೯-೧೩-೪೨; ಸು. 1088). [<ನೇರ್$_1$]

**ನೇರ್ವರಿ** (ಕ್ರಿ). ಒದಗು ; ಉಂಟಾಗು ; ಸಂಭವಿಸು : ದ್ರೋಣ್ಯೆ ಕಲವ್ಯರ ಸಮಾಗಮಂ ನೇರ್ವರಿಯೆಂದೊಂದಲ್ಲ ಒಂದಪಾಯಂ ವೀರ ಬಾಲನಿಗೆ ತಟ್ಟದಿರದು (ಹಬ್ಬಿರ. ೨೨-೧೯೯). [ನೇರ್$_2$ + ಪರಿ$_2$]

**ನೇಲ್, ನೇಲು$_1$** (ಕ್ರಿ). ನೇತು, ನೇಲ್ದು (ಭೂತನ್ಯೂ). ೧. ಜೋಲು ; ಜೋತಾಡು ; ತೂಗಾಡು : ಮರದಡ್ಡಬಿರ್ದ ಕೊಂಬಂ ಕಂಡರಸಂ ಪಿಡಿದು ನೇ [ಪಾಠಾಂ. ಓ]ಲ್ದಿರ್ದೊಡಾನೆಯುಂ ಪೆಜತೊಂದು ದೆಸೆಗೆವೋಯ್ತು (ಪಡ್ಮಾರಾ. ೧೧೦-೧೪); ಕಿಸುಳದೊಳುಚ್ಚಳಿಪ್ಪ ಪೊಸ ನೆತ್ತರೆ ಕೆಂದಳಿರಾಗೆ ಕಣ್ಣಗುರ್ವಿಸುವಿನಮೊಕ್ಕ ನೇಲ್ವ ಕರುಳೋಳಿಯೆ ಬಾಳಮ್ಮೃಣಾಳವಾಗೆ (ಪಂಪಭಾ. ೧-೬); ನಿನಗೆ ಬಮ್ಮೀತಿಯಾಗೆ ಸಾವೆ ನೆಂದು ಅವರ ಕಾಣ್ಬಲ್ಲಿಯೊಂದು ಮರದೊಳ್ ಬಳ್ಳಿಯಂ ಕಟ್ಟಿ ಕೊರಲೊಳ್ ಸುತ್ತಿ ನೇಲ್ದು ಸತ್ತಳ್ (ಜೀವಸಂ. ೧೪೦-೧೨); ಬಲ್ಪೆಜಿಮೊಗದಬಲೆ ಯರ್ . . . ನೇಲ್ವ ಮುಡಿಯನೋವದೆ ಬಳಿಕಾ ಬಾಗಿಲ್ವಾಡದ ಕಾಪಿ ನವರ್ ಬಗ್ಗಿಸಿ ನಿಲ್ಲೆನೆ . . . ಈಕ್ಷಿಸಿದರ್ ನವಮನಸಿಜನಿಭನ (ಜಯಕಾ. ೧೦-೪೮); ಮಾಲೆಗಾರ್ತಿಯರ ಮೇಲ್ಲೆಗಳೊಳ್ ಸಾಲ್ದೊಂದು ನೇಲ್ವ ಮಾಲೆದೊಡಂಬೆಯಂ ತೂಗಿ . . . ಪಶ್ಚಿಮಾನಿಲಂ ಮೈದೋಜಿಲೊಡಂ ಪೊಲ್ಲೆ ಮುಗುಳ್ವುದು (ರಾಮಾಶ್ವ. ೨-೨೪). ೨. ತೂಗುವಂತೆ ಮಾಡು ; ಜೋಲಿಸು ; ಜೋತಾಡಿಸು : "ನೇಲ್–ಅಲಂಬನೇ (ತೂಗ ಬಿಡು)" (ಶಮಧಾ); ಅದು ಸುರಭೂಜವಲ್ಕವಸನದ್ವಯಮಂತದು ದಂಡಮಲ್ಲಿ ನೇಲಿದುದದು ಜೋಗವಟ್ಟಗೆ . . . ಎಂದು ನೋಡಿದನತಿ ವಿಸ್ಮಯಂಬೆರಸುತದ್ಗುಹೆಯಂ ನೃಪರೂಪಚಂದ್ರಮಂ (ಕಾದಂಪೂ. ೬೯೨).

**ನೇಲು$_1$ :** ೧. ತಲೆಕೆಳಗಾಗಿ ನೇಲುವ [ಪಾಠಾಂ. ನೇಲುತ, ನಿಲುತ] ಮರಗೊಂಬಿನೊಳ್ಪಲ್ಲುತಪಗೆಯ್ವ ತಾಪಸರ ಒಲಿಸಿ ತಾರೆಂದೊಡೆ ತಂದುಕೊಡುವಳಿಗೆ ಬಲುಹೆ ರಾಮನ ತಹುದೆನಗೆ (ಕುರಾಸಾಂ.೨೪-೪೫); ಜತನದಪ್ಪುದೆ ಕೊನೆವಿಡಿದು ನೇಲುವ ಚರ್ಮಾಯತನವಕ್ಕಿಯು ಕಂಡು ನಗುತೆ ಮಿತಿಯಿಲ್ಲದಲರ್ಗೋಟೆವ ಪೊಕ್ಕು ಕೊಯ್ದರಾಯತನೇತ್ರೆಯರು ಪುಷ್ಪಚಯವ (ಮೋಹತ. ೨೪-೬೨); ಭೂವಿಜಂಗಳ್ ಬಾಡಿ ಸೋಲು ತಿರ್ದುವು ಲತಾಸ್ತೋಮಂಗಳೊಣಗಿ ಮಿಗೆ ನೇಲುತಿರ್ದುವು ಕೂಡೆ ತಾವು ರಸವಾದಿಗಳ್ ಕೊರಗುತಿರ್ದುವು ಮುಃಖಮೆಂತಪ್ಪರಂ ಕೆಡಿಸದೆ (ಚೆಬಪು. ೩೫-೬೦); ಇಂದುಮತಿ ಭೂಪನೋಳೊಮ್ಮೆ ಸುಗೋಷ್ಠಿಯಿಂದಿರಲ್ ನಾರದ ಪೊತ್ತ ವೀಣೆಯೊಳು ನೇಲುವ ಪೂಸರ ಬೀಳಲಾಕ್ಷಣಂ ತೀರಳೆ (ಕಜಿಕೆಂ. ೩೮). 'ನೇಜು' ಪರಾ.

**ನೇತಾಡು** = ತೂಗಾಡು ; ಜೋತಾಡು ; ಜೋತುಬೀಳು : ಹರಿಣಾಂಬಿಕೆ . . . ಪಾತಕರುಗಳ ಕಂಧರ ಚರ್ಮಪಾಶದಿ ನೇತಾಡೆ ಮುಂಬಿಗರಲೆದು ಚೇತನಗಿಡಿಸಿ ಕೊಲ್ಲುತೆ ಕೊಂಡುಪೋಪೆಮದೂತರ ನೋಡುತ್ತೈದಿದಳು (ಮೋಹತ. ೨೯-೧೪); ಸಿಂಹವಿಕ್ರಮನು ಹಡಗಿನಿಂದ ಗಿರಿಶಿಖರದ ಮೇಲಕ್ಕೆ ಬರುತ್ತಾನೆ . . . ಒಂದು ಛುರಿಕೆಯು ನಡುವಿನಲ್ಲಿ ನೇತಾಡುತ್ತಿದೆ (ಆರ್ಯಾಕ. ೧); ಬಾಂಬೇ ಸ್ಟೈಕಲ್ ಸ್ಟೋರ್ಸ್ ಎಂಬ ತೂಗುಹಲಗೆ ಅದರ ಮುಂದೆ ನೇತಾಡುತ್ತಿತ್ತು (ನಿಸುತ. ೧); ಎರಡು ಮಕ್ಕಳ ವಿನಹ ಉಳಿದವೆಲ್ಲ ಒಂದು ಸಣ್ಣ ಚಿತ್ರವನ್ನು ಹಿಡಿದುಕೊಂಡು ೧೦ ಸೆಕಂಡುಗಳು ಡೊಂಬರವನು ನೇತಾಡುವಂತೆ ನೇತಾಡುತ್ತಿದ್ದುವು (ಜೀವಾತ್ಮ. ೧೭೪); ನೂಲು ಹಿಡಿದು ಜೋಲುವವನ ಕಾಲುಹಿಡಿದು ನೇತಾಡಿದ (ಗಾದೆ). **ನೇತು ಬೀಳು** = ನೇತಾಡು : ಕಡಿಮೆ ವಯಸ್ಸಿನವು ೧೨ ಮಕ್ಕಳು ಅರ್ಧನಿಮಿಷ ಮಾತ್ರ ನೇತುಬಿದ್ದಿದ್ದವಂತೆ. ಮೂರು ನಾಲ್ಕು ಮಕ್ಕಳು ೧ ನಿಮಿಷ ನೇತುಬಿದ್ದವು (ಜೀವಾತ್ಮ.೧೭೪); ವಸಂತ . . . ಏರುಗಚ್ಚೆಹಾಕಿ ಒಂದು ಕಿಡಿಕಿಗೆ ಕಾಲಿಕ್ಕಿ ಅದರ ಕಂಬಿಗಳ ಮೇಲೆ ಹೆಬ್ಬೆರಳುಗಳಿಂದ ಸರಿಯುತ್ತ ಕಿಡಿಕೆಯ ಕಮಾನಿನ ಮಧ್ಯಶಿಲೆಗೆ ನೇತುಬಿದ್ದನು (ಗಂಪಾಯಿ. ೬೯). **ನೇತುಹಾಕಿಕೊಳ್ಳು** = ೧. ತೂಗುಹಾಕಿಕೊಳ್ಳು : ಎರೋಪ್ಪನು, ಬೇಟೆಗೆ ಹೋಗಿದ್ದವನು ಸೊಂಟದಲ್ಲಿ ಕೆಲವು ಕಾಡುಕೋಳಿಗಳನ್ನು ನೇತುಹಾಕಿಕೊಂಡು . . . ಹಿಂತಿರುಗುತ್ತಿದ್ದನು (ಮಲಿನಾ. ೬೧). ೨. ನೇಣುಹಾಕಿಕೊಳ್ಳು ; ಉರುಲು ಹಾಕಿಕೊಳ್ಳು : ಅಪ್ಪ ನೆಟ್ಟ ಆಲದ ಮರಾಂತ ನೇತು ಹಾಕಿಕೊಂಡಂತೆ (ಗಾದೆ). ೩. ಬಲಾತ್ಕಾರಮಾಡು ; ಒತ್ತಾಯಮಾಡು ; ಪೀಡಿಸು : ಅವನು ಯಾವಾಗಲೂ ದುಡ್ಡಿಗಾಗಿ ಬಂದು ನೇತು ಹಾಕಿಕೊಳ್ಳುತ್ತಾನೆ (ರೂಢಿ). **ನೇತು ಹಾಕು** = ನೇತಾಡುವಂತೆ ಮಾಡು ; ನೇಲಿಸು ; ತೂಗುಹಾಕು : ಮೊದಲು ಕಬ್ಬಿಣದ ಪಂಜರದ ಅರ್ಧ ಭಾಗವನ್ನು ತಂದು ಹಗ್ಗಗಳಿಂದ ಸೂರಿಗೆ ನೇತುಹಾಕಿದರು (ಶಾಲಿಪು. ೧೨೪); ರಂಗಣ್ಣ . . . ಗೋಡೆಗೆ ನೇತು ಹಾಕಿದ್ದ ನಕ್ಷೆಯನ್ನು ನೋಡುತ್ತ . . . ತೀರ್ಮಾನಿಸಿಕೊಂಡನು (ರಂಗಕ. ೨೧).

[ದೇ.॥ ತಮಿ. ನಾಲ್, ಞಾಲ್ ; ಮಲ. ಞಾಲು ; ತುಳು. ನೇಲ್, ನೇಲು]

**ನೇಲವತ್ತಿ** 'ನೆಲ್ಲವತ್ತಿ' ನೋ.

**ನೇಲಿಸು** (ಕ್ರಿ). ೧. ನೇತುಹಾಕು ; ತೂಗುಹಾಕು : ಆಕೆ ಬರೆದ ಪಟಮಂ ಕೊಂಡಲ್ಲಿ ಬರೆಯದ ವಿನ್ನಾಣಂಗಳಂ ಬೆಸಗೊಂಡು ಪೋಗಿ ನಗರಮಧ್ಯಸ್ಥಿತ ಮಹಾಪೂತ ಜಿನಾಲಯದ ಪಟ್ಟಸಾಲೆಯ ಮುಂದೆ ನೇಲಿಸಿ ಕಾರ್ಯಸಿದ್ಧಿಯಂ ಪಾರುತಿರ್ದಳ್ (ಚಾವುಂಪು. ೧೯); ೨. ಸಿಕ್ಕಿಸು ; ನಾನು ಟೊಂಕದಲ್ಲಿ ಕೀಲಿಕೈ ಗೊಂಚಲನ್ನು ನೇಲಿಸುತ್ತ ಇದ್ದ—ಬಿದ್ದ ಕೆಲಸ ಮುಗಿಸುತ್ತಿದ್ದೆ (ಸ್ತ್ರೀ ಶಿಚಿ. ೩೩೩). ೩. ಜೋಡಿಸು, ಕೂಡಿಸು (?): ಪ್ರವಿದಿತ ಸಾಹಸೋರ್ಜಿತ ಮಹಾಪುರುಷೋದ್ಧತರಾ ರಸಂಗಳಂ ಸವಿಗಿಡೆ ಸೊಪ್ಪುವಟ್ಟ ಬಗೆಯಿಂದಬಾ ಗನ್ನಡಗಬ್ಬದೊಳ್ಪಗುಳ್ವುವ ಬೆಸನೇಕೆ ಮುಟ್ಟ ಮರಲಾಗದೆ ಮತ್ತೆ ನಿರರ್ಥಿಯಾದೊಡಂ ತವರದ [ನಂದದಿಂದೊ]ರೆಯೆ ನೇಲಿಸಲುತ್ತಮ ಪದ್ಯ ರಾಗದೊಳ್ (ಬಂಹರಿ. ೧-೧೨). [ನೇಲ್ + -ಇಸು$_3$]

**ನೇಲು$_1$** 'ನೇಲ್' ನೋ.

**ನೇಲು$_2$** (ನಾ). ತೂಗುಹಾಕಲು ಆಧಾರವಾಗಿರುವ ಸಾಧನ : ಬಟ್ಟೆಗಳನ್ನು ನೇಲಿನ ಮೇಲೆ ತೂಗುಹಾಕಿದ್ದೇನೆ (ರೂಢಿ). [<ನೇಲ್]

**ನೇಲುವತ್ತಿ** 'ನೆಲ್ಲವತ್ತಿ' ನೋ.

**ನೇಲೆ$_1$** (ನಾ). ಹಾಲು, ಮೊಸರು ಮುಂತಾದುವನ್ನು ಇಟ್ಟು ತೂಗುಹಾಕುವ, ಹಗ್ಗದಿಂದ ಮಾಡಿದ ಸಾಧನ; ನೆಲುವು: ಹಣ್ಣು ಸೌತೆಕಾಯಿ . . . ಮನೆಯ ಕಂಬಕ್ಕೂ ಅದು ತೂಗಿಕೊಂಡಿದೆ, ನೇಲೆಗೂ ತೂಗಿದೆ, ಜಂತಿಗೂ ಅದೇ ತೂಗಿ ಸಾಲು ಸಾಲಾಗಿದೆ (ಮರಮ.೧೦). 'ನೆಲು' ಪರಾ. [←ತುಳು. ನೇಲೆ, ನೇಲ]

**ನೇಲೆ$_2$** (ನಾ). (?) : ನೇಲೆಯಂ [ಪಾಠಾಂ. ಲಮಂ] ಹಿಡಿವ ಕಪ್ಪಡ ಮುಡುವ ನಿಂದಿರಲು ಸಾಲದಳವಳಿವ ಬಾಯ್ಬಿಡುವ ಸಂಕಟವಿಲ್ಲ . . . ಮರ್ಮಸ್ಥಾನಮಂ ನಿಗುಚುವ ಬಾಲೆಯರ ಹಂಗಿಲ್ಲ ಮೇಲೆ ನಾಣ್ಗೆಡುವ ನಿಘ್ರಾಲಂಬವಿಲ್ಲ ಮಧ್ಯಮರಾತ್ರಿ ಮೆಯ್ದೆಗೆದ ಕಾಲ ಶಯನಸ್ಥಳದೊಳೆಂದಿನಂದದಿ ನಿದ್ರೆಗಟೆವಟಸುತಿರ್ಪಾಗಳು (ಸಿದ್ಧರಾ. ೧-೫೫).

[ಇದು 'ಸೇಲೆ (=ವಸ್ತ್ರ)' ಎಂದಿರಬಹುದೇ ?]

**ನೇಲ್ಕೆ** (ನಾ). ನೇಲುವಿಕೆ ; ತೂಗಾಡುವಿಕೆ ; ಜೋತಾಡುವಿಕೆ : "ಲಂಬಿಃ, ಲಂಬನಂ, ಲಂಬನೀಯುಂ ಈ ೩ ನೇಲ್ಕೆ" (ಶಾಶಕ್ಕ. ೧೦೪).

[ನೇಲ್ + -ಕೆ]

**ನೇಲ್ಗಟ್ಟು** (ಕ್ರಿ). ನೇಲುವಂತೆ ಕಟ್ಟು ; ತೂಗುಹಾಕು ; ನೇತು ಹಾಕು : ತಮ್ಮ ದಿವ್ಯಾಯುಧಂಗಳನೆಲ್ಲಮನಾ ಪುರೋಪವನದ ಪಿತೃವನದ ಕೆಲದ ಶಮೀವೃಕ್ಷದ ಮೇಲೆ ಪುರುಷಾಕೃತಿಯಾಗಿ ನೇ[ಲ್ಗ] [ಪಾಠಾಂ. ಲಗ]ಟ್ಟಿ . . . ಪೊಟಲಂ ಪೊಕ್ಕು (ಪಂಪಭಾ. ೮-೫೨ ಪ).
[ನೇಲ್ + ಕಟ್ಟು$_1$]

**ನೇಲ್ದು** 'ನೇಲ್' ಪರಾ.

**ನೇವಚ್ಚ** (ನಾ). ಉಡುಗೆತೊಡುಗೆ ; ವೇಷಭೂಷಣ ; ಅಲಂಕಾರ : ಎಲೆ ಅರಸಿ . . . ನಿನ್ನ ನೇವಚ್ಚದಿಂ ನೀನೆಂದೇ ತಿಳಿದು ಇಂತು ಮೋಸವೋಗಿ ಆನಿಲ್ಲಿಗೆ ಬಂದೆಂ (ಮಿತ್ರಗೋ. ೪೯-೧೫).
[<ಪ್ರಾ. ಣೇವಚ್ಛ./ಸಂ. ನೇಪಥ್ಯ]

**ನೇವಣ** 'ನೇವಳ' ನೋ.

**ನೇವಣಿ** 'ನೇವಣೆ' ನೋ.

**ನೇವಣೆ,** ನೆವಣಿ, ನೆವಣೆ, ನೇವಣಿ (ನಾ). ೧. ನೈಪುಣ್ಯ ; ಕೌಶಲ ; ಚಾತುರ್ಯ ; ಪ್ರಾವೀಣ್ಯ : ಪಣೆಯಪ್ಪವಿಯು ಚಂದ್ರಗೆಣೆ ಪದಿರ್ನುಡಿಯ ನೇವಣೆ ಮದನನೆಸುಗೆಯುರವಣೆ . . . ಎನಿಪ ಜವ್ವನದ ಗಣಿಕೆಯರು ಬಂದರು (ಸೌಂದಪು. ೭-೩೮). ೨. ಒಯ್ಯಾರ ; ಬೆಡಗು ; ಬಿನ್ನಾಣ : ನೆಳಲ ರೂಪಿನ ನೇವಣೆಯು ಸುರಸ್ತ್ರೀಯರೆಳಲತೆಯಸುವಡೆದಂತೆ ನಳನಳಿಸುವ ಮೆಯ್ಯ ಸುರತಾಳಸುತೆಯ ಮುಂದೆಳಸ ಬಲ್ಲರೆ ನವಮದನ (ಕುರಾಸಾಂ. ೪೪-೩೩). ೩. [ಸಂಗೀತ] (?) : ಭಣಿತೆ ಬೆಡಂಗು ಕಾಕು ಖಚರಂ ಗಮಕಂ ತಿರುಪಿಂಪು ನುಣ್ಪು ನೇವಣೆ . . . ಗೀತಿ ಜತಿ ಜೋಕೆ ನಯಂ ಬಹುಲಾಯಿ ದೇಸೆ ಪೆಲ್ಲಣೆ ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮಂ (ಜಗವಿ. ೫-೩); ತಂತ್ರಿಯಂ ಸುತಂತ್ರಿಯಂ ಮಾಡಿ . . . ಕರಂಗಳ ಬಹುರೇಖಯ ಚಾರಣೆಯ ಧಿಕ್ಕವಣೆಯ ನೇವಣೆ ಬೊಲ್ಲವಣೆಯ ಬೆಡಂಗು ಬಿತ್ತರಿಕೆಯಂ ಬೀಱಿ ಬಾಜಿಸುತ್ತಿರೆಯುಂ (ಶಾಂತೀಶ್ವ. ೭-೯೩ ಪ) ; ತರಂಗಿಸುವ ತಾನಮಾನಂಗಳ ಸುಗೀತಂಗಳಾ ರಂಗು ನೇವಣೆ ಬಜಾವಣೆ ಭಣಿತೆ ಬೆಡಗು ಗಮಕಂಗಳಿಂದಶ್ವತರ ಕಂಬಳರು ಪಾಡುತಿರೆ ಭೃಂಗಿ ನಾಟ್ಯವನಾಡೆ ರಂಜಿಸಿತು ತೂರ್ಯತ್ರಯಂಗಳಿಂ ಶಿವನೋಲಗ (ಸೌಂದಪು. ೧-೪೦) ; ತುಂಬುರಾದಿಗಳ ಬೆಡಗು ನೇವಣೆ ಬಜಾವಣೆಯ ವೀಣಾಧ್ವನಿಯನುಡುಗದಾ ಕರ್ಣಸುತೆ ನಿರುಪಮಸುಖಾರ್ಣವದೊಳೊಪ್ಪಿದನಪರ್ಣೇಶನು (ಕೊಟ್ಟೂಬ. ೧-೬೩) ; ಲಳಿತೆ ಧನ್ಯಾಸಿಗಳಿಂದಾ ನಲಿದು ನೇವಣೆಯಿಂಪು ಕಾರಾಳಿಯಿಂದವೆ ಇಳಿಗೀಸನ ಪಾಡಿದರು (ತರ್ಕಕಾ. ೪-೭೬). ೪. [ನಾಟ್ಯ] ನೃತ್ಯದ ಒಂದು ಭಂಗಿ (?) : ಮುರುಹು ತಿರುಹು ಚಾರಿ ಕೈಲಾಗು ನೇವಣೆ [ಪಾಠಾಂ. ಣಿ] ಕರಣ ಭ್ರಮರಿಗಳನಱದು ತರುಣಿ ರಂಗಸ್ಥಳದಿ ನರ್ತಿಸಿದಳು ಧರಣೀಶರು ಮೆಚ್ಚುವಂತೆ (ಜೀಸಂಸಾಂ. ೯-೯೪) ; ಕರಣೆ ನೇವಣೆ ಭ್ರಮರಿ ನೆಲೆ ಸಲೆ ತಿರುಪು ಚಿತ್ರದ ಲಾಗು ಲಳಿ ಮಿಗೆ ಮ್ಮುರಜಗಟ್ಟಳೆ ತಾಳ ಸಂಗೀತಗಳ ಪವಣಿನಲಿ ಭರತಶಾಸ್ತ್ರಕ್ರಮುವ ತಿಳಿಪುವ ಪರಿಯೊಲಾ ಸತಿ ರಂಭೆಯೂರ್ವಶಿಯರಿಗೆ ಮಿಗಿಲೆಂದೆನಿಪ ರಚನೆಯ ತೋಱ ನಟಿಸಿದಳು (ಸನತ್ಕು. ೪-೨೦). **ನೆವಣಿ :** ೩. ವಿಪ್ಪನ್ನಗಾನರುಱರಂಗು ನೆವಣಿ ಭಜಾವಣೆಗಳಿಂ ಪಾಡಿ ಮುದದೆ (ಏಕೋಪು. ೧-೨೯) ; ಮುಖ್ಯ ಸುರರುಪಜೀವಿಯರು ರಂಗು ನೆವಣಿ ಭಜಾವಣೆಯಿ ಗೀತಂ ವಾದ್ಯದ (ಏಕೋಪು. ೨-೫೬). **ನೆವಣೆ :** ೧. ನುಡಿವ ಚದುರು ನೆಲೆಗೊಳಿಸುವ ಬಗೆ ನೆವವಿಡುವ ನೆವಣೆ ಕಣ್ಬನಿಯ ಬಿಡುವ ಬೆಡಗು ಬಯಲಕ್ಕೆ ಮೆಱೆಯಲಾ ಮಡದಿ ನುಡಿದಳು ಪುಸಿಗಳ (ಕುರಾಸಾಂ. ೩೪-೧೧೦). **ನೇವಣಿ :** ೩. ಗತಿ ಗಹಗಹಿಸಲ್ ಕಳಸೋನ್ನತಿ ಗಮಕಂ ವಹಣಿ ಕೊಂಕುಬಾಯ್ ನುಣ್ಪುನುಚಾಯ್ ಜತಿ ನೇವಣಿ ಮಿಗೆ ಸೊಂಪಾಹತ ಕಂಪಿತಮುಣ್ಮೆ ಪಾಡಿದಂ ಮುನಿಋಷಭಂ (ವೀರವಿ.೬-೯೦); ರಂಗು ನೇವಣಿ ಭಜಾವಣೆ ಸಂಗೀತದಿಂಗಿತವನಱದು ಪಾಡುವ ರಸಿಕಗಾನರಿಂ (ಏಕೋಪು. ೫-: "ಮದ್ದಳೆ ಬಾರಿಸುವ ಕೌಶಲ" (ಪ್ರಭಣ್ಣ).
[<ಪ್ರಾ. ಣೇಉಣ್ಣ./ಸಂ. ನೈಪುಣ್ಯ]

**ನೇವಣೆದೋಱು** (ಕ್ರಿ). ಕೌಶಲವನ್ನು ತೋರು ; ಚಾತುರ್ಯವನ್ನು ಪ್ರದರ್ಶಿಸು : ನಗೆದೋಱ ಬಗೆದೋಱ ನಟಣೆ ನೇವಣೆದೋಱ ಹೊಗರು ಬಜಾವಣೆದೋಱ ಒಗೆದುಂಚದಿಂದಿಪ್ಪು ಸ್ವರ್ಗದಿಂದಿಂದ್ರನ ತೆಗೆವಂತೆ ಸೊಗಸಿ ಹಾಡಿದರು (ಭರಚ. ೧೩-೩೩).
[ನೇವಣೆ + ತೋಱು]

**ನೇವರಿಕೆ** (ನಾ). ನೇವರಿಸುವಿಕೆ; ಮೃದುವಾಗಿ ಕೈಯಿಂದ ಸವರುವಿಕೆ : ನೇವರಿಕೆಯ ಬಯಸುತ್ತಿರುವಂತಿಹುದೀ ಹರಿಣ ಅಗೊ ನೋಡ ಎಂಥ ಹರಿಣ (ಹಂಸದ. ೬೨-೨೨) ; ನಿಸ್ತಬ್ಧನೆನ್ನೆಡೆಗೆ ಬಹ ಭೀರುಭಾಗಳ ಕೆಳೆಯ ನೋನೋಡೆಂದು ಸರಸ ಕೌತುಕದಿ ನುಡಿಬೆರಳ ನೇವರಿಕೆಗವಡುವ ಹಲಕೆಲವನಾದರಿಸಿ ತೋರುತಿಹೆ ವೃತ್ತವೃತ್ತದೊಳು (ಮಲೆದೇ ೪೫-೫). [<ನೇವರಿಸು + -ಇಕೆ]

**ನೇವರಿಸು,** ನ್ಯಾವರಿಸು (ಕ್ರಿ). ೧. (ಪ್ರೀತಿ, ಕರುಣೆಗಳನ್ನು ಸೂಚಿಸುವಾಗ ಕೈಯಿಂದ) ಮೃದುವಾಗಿ ಸವರು,—ನೀವು : ವಕ್ಷೋಜಮಂ ನಿಟ್ಟಿ ನೇವರಿಸುತ್ತುಂ ನೆಲೆವೆರ್ಚೆ ಕಾಮುಕನವೊಲ್ ನೀರೇಱುತಿರ್ದತ್ತು ತತ್ತರುಣೀಸಂಕುಳಮೆಲ್ಲವಿಾಗಳೊಳಗಾಯ್ತೆಂಬಂತೆ ಪದ್ಮಾಕರಂ (ಚಂದ್ರಪ್ರ.೭-೧೨೬) ; ಪರಸಿ ಕುಮಾರನಂ ಪರಮಹರ್ಷದೊಳಾಗಳೆ ಕೌಶಿಕವ್ರತೀಶ್ವರಂ . . . ಕರಾಗ್ರದಿಂ ಕದಪನೊಯ್ಯನೆ ನೇವರಿಸುತ್ತುಮಿರ್ದಂ (ಕುಸುಮಾ. ೭-೯೨); ನಿಟಿಲಮಂ ನೇವರಿಸುತಂಗುಲಿಯ ತುದಿಯಿಂದೆನೋಡುತ್ತೆ ತುಟಿವಿಡಿದು ನೋಡುತ್ತೆ . . . ಕುಟಿಲಕುಂತಳದ ಜಾರೆಯರ್ಸೈದಿ ಬರುತಿರ್ದರಲ್ಲಲ್ಲಿ ಕತ್ತಲೆಯೊಳು (ಜೈಮಿಭಾ. ೨೬-೧೨); ಆ ಗಜವು ಹೆಣ್ಣಾನೆಗಳಂ ಸೊಂಡಿಲಿನಿಂದ ನೇವರಿಸುತ್ತಿರಲು (ಸೌಗಂಧಿ. ೨೪೫-೨೧) ; ತಂಗಿಯ ತಲೆ ನೇವರಿಸಿ ಮೇಲೆ ನಡೆದ ರಾಜಣ್ಣ (ಮರಳಿ. ೧೦೨). ೨. (ನಯವಾಗಿ) ತಿದ್ದು; ತೀಡು; ಸರಿಪಡಿಸು : ಕುರುಳ ನೇವರಿಸಿದನು ಗಲ್ಲವನೊರಸಿ ಮುಂಡಾಡಿದನು (ಕುವ್ಯಾವಿ. ೩-೬೭) ; ಕೋಕನಯನಂಗೆಱಗಿ ನೊಸಲಲಿ ಕೋಕನದ ಕರ್ಣಿಕೆಯನಿಟ್ಟು ಸಿರಾಕುಳದಿ ನೋಡಿದಳು ನೆಳಲನು ನೇವರಿಸಿ ನವಿರ (ತೊರರಾ. ೩-೮-೨೩); ಅಳಕಮಂ ನೇವರಿಸಿ ಮೆಯ್ಯ ರಜಮಂ ತೊಡೆದು . . . ಬರುತಿರ್ದರಾತ್ಮಮಂದಿರಕಂದು ಬಂಧಕಿಯರು (ಚಿಬಪು. ೯-೧೬) ; ನಿಟಿಲತಟದೊಳುಯ್ಯಲಾಡುವ ಮುಂಗುರುಳನುಗುರ್ಗೊನೆಯಿಂ ತಿರ್ದಿಯುಂ, ಕೆಲಕ್ಕೊಂದಿದಕ್ಕಸರಮಂ ಸೈತು ನೇವರಿಸಿಯುಂ (ರಾಮಾಶ್ವ. ೨೦-೧೭) ; ರಾಣಿ ಮಂಗಳನ್ನು ಹಿಡಿದೆತ್ತಿದಳು; ಕೂದಲನ್ನು ನೇವರಿಸಿದಳು (ಹಾಹುತ್ತ. ೧೧೦). ೩. ತಗುಲಿಸು ; ಸೇರಿಸು ; ಅಂಟಿಸು ; ಸಂಪರ್ಕವನ್ನುಂಟುಮಾಡು : ತಾನೇ ಕರ್ಮಕರ್ತನು ಭೋಗಿ ತಾನೇ ದುಃಖಿ ಸುಖಿಯೆಂದು ನಿರ್ಮಳಾತ್ಮನೊಳೀಯಹಂಕೃತಿಧರ್ಮವನೆ ನೇವರಿಸಿ ಮಱುಗುವ ದುರ್ಮತಿಗಳನು ಪಶುಗಳೆಂದರೆ ಱೀದವೇಕೆಂದ (ಕುವ್ಯಾಕ. ೬-೨೬). ೪. ತೊಡೆ ; ಲೇಪಿಸು ; ಬಳಿ : ಕೋವಣಮುಂ ಗುಂಡಿಗೆಯುಂ ನೇವರಿಸಿದ ಬೂದಿಯುಂ ಜಲಕ್ಕನೆ ಚೆಲ್ವಿಂ ತೀವಿರೆ ಬಿಸುಗಣ್ಗೊರವಂ ಕಾವನ ತೋಳ್ವಲಮನಱವೆನೆಂದೇಟ್ಟಿದಂ (ಕಬ್ಬಿಕಾ. ೨೯೦) ; ಕಮಲಾಕ್ಷಿಯರು ಪೂರಿತಪರಿಮಳದ ತೈಲವನು ಮೊಗದು ಮನೋಭವನಂ ಪಿತನ ಅರಸಿಯಾಗೆಂದೊಸಗೆವಱಗಳಸರಭಸದ ಸೌರಂಭದಲಿ ನೇವರಿಸಿದರು ಸೆಳ್ಳುಗುರ್ಗಳಲಿ ಶಶಿಮುಖಿಯ ಸಿರಿಮುಡಿಯ (ತೊರರಾ. ೧-೧೪-೧೩) ; ಡಾಕ್ಟರರೂ . . . ಕಾಫಿಯ ರುಚಿಯ ಸಿಹಿಲೇಪನವನ್ನು ನಾಲಿಗೆಗೆ ನೇವರಿಸುತ್ತ ಕಾಫಿ

ಕುಡಿದರು (ಬಾಬಲ. ೬೬). ೫. (ಬಿಲ್ಲಿನ ಹೆದೆಯನ್ನು) ಏರಿಸು,— ಅಣಿಗೊಳಿಸು : ಮತ್ತೆ ಧರ್ಮಜ ಬಿಲುದಿರುವ ನೇವರಿಸಿ ನಿಂದನು ಸಮರ ಕನುವಾಗಿ (ಕುಪ್ಮಾಕ. ೪-೩೮) ; ಧನುವ ನೇವರಿಸಿದನು ಕೊಪ್ಪಿನ ಕೊನೆಯ ನಾರೈದು ಭಯದಲಿ ಸಿಂಜಿನಿಯ ದನಿದೋಱಿಸಿದನು . . . ರಘುಜ (ತೊರರಾ. ೩-೬-೭); ಕಂಡ ಮಾತ್ರದಿ ಖಳರಾಯ ನೇವರಿಸಿ ಕೋದಂಡವ ತೀವಿ ಜೇವೊಡೆಯೆ ಸೊಂಡಿಲ ನೆಗಹಿ ಭೂವಿಯ ಹೊತ್ತ ಸತ್ವವೇತಂಡಗ ಳೊಜಿಲಿದಂತಾಯ್ತು (ಮೋಹತ. ೧೨-೫೨). ೬. ಸಮಾಧಾನ ಗೊಳಿಸು ; ಸಾಂತ್ವನಗೊಳಿಸು : ಕಣ್ಣಿನಲಿ ಒಸರಿದ ನೀರು ಹೊರಗೆ ಕಾಣದಂತೆ ತಡೆದು, ಮೃದುವಾದ ನೇವರಿಸುವ ಧ್ವನಿಯಲ್ಲಿ ಹೇಳಿದರು (ಹಂಗೀತೆ. ೧೬೯). ೭. ಬೆರಸು ; ಕೂಡಿಸು ; ಸೇರಿಸು : ಭರವಸದ ಸುತನಿಂಗೆಂದನಾ ಮುನಿ ನಸುನಗೆಯ ನೇವರಿಸಿ ನುಡಿದನು ದೈವಗತಿಯಿಂದ (ಕೃಷ್ಣಾಕಾ. ೯-೪೬) ; ಸೆಳೆದು ಬಿಗಿಯಪ್ಪುತ್ತ ಪೇಳಿದನಿಳೆ ಗಧಿಕ ಕೌತುಕವ ಕೇಳೆಂದೆಳೆನಗೆಯ ನೇವರಿಸಿ ನುಡಿದನು ಪೂರ್ವಪದ್ಧತಿಯ (ಕೃಷ್ಣಾಕಾ. ೧೨-೮). **ನ್ಯಾವರಿಸು :** ೧. ಎದೆಯ ನ್ಯಾವರಿಸುತ್ತ ಪುರಹರ ಕದಲಿದಂ ಹಿನ್ನೆಲೆಗೆ ಹರಿಯನು ಬೆದಕಿದಂ (ಅಂಬಿಕಾ. ೩೮-೪೧) ೫. ಸ್ಮರನ ಕರದಿಂದ ನ್ಯಾವರಿಸಿದ ಚಾಪಮೆನೆ ಎರಡು ಹುಬ್ಬುಗಳು. ತಿರುಹುತಿಪ್ಪುದ ಕಂಡೆ (ತೀರ್ಥಮ. ೧೧೭). [ನೇವರಜೆ₀ + -ಇಸು₃]

**ನೇವಲೆ** (ನಾ). (?) : ಕಡಿತಲೆ ಕೆಯ್ಯ ನೇವಲೆಗೆ ಸಿಕ್ಕಿದ ಚಿಕ್ಕಸಿಥೇನು . . . ನಸುಗೆಂಪಿಡರ್ದರ್ವಿಷ ಬಿಟ್ಟ ದಿಟ್ಟ ನೂರ್ಮಡಿಸೆ ಪೊಡರ್ಪಾನಿಂತು ನಡೆದರ್ನಲವಿಂ ಪತಿಗಂಗರಕ್ಷಕರ್ (ಶಾಂತೀಶ್ವ. ೧೫-೮೮). [ ? ]

**ನೇವಸ** (ನಾ). (ಕರಾ) ದಮ್ಮು; ಉಬ್ಬಸ : ಮೊಧಲೇ ನೇವಸದ ಆಳು. ಬಂಗಲೆಯಲ್ಲಿ ಕುಳಿತು, ಗುಡುಗುಡಿ ಸೇದುವಾಗಲೆಲ್ಲ ಮೈ ನಡುಗು ತ್ತದೆ, ಕೆಮ್ಮು ಬರುತ್ತದೆ (ಜಾರುದಾ. ೨೦೪). [←ತುಳು. ನೇವಸೊ]

**ನೇವಳ, ನೇವಣ, ನೇವಳೆ, ನೇವಾಳ, ನೇವುಳು, ನ್ಯಾವಣ, ನ್ಯಾವಳ, ನ್ಯಾವಳಿ, ಲೇವಣ, ಲೇವಳ** (ನಾ). ೧. ಚಿನ್ನ ಅಥವಾ ಬೆಳ್ಳಿಯ ಹಾರ,—ಸರ : "ನೇ[ಪಾಠಾಂ.ಲೇ]ವಳಂ ಪದಕ ಸರಪಳಿ ಪಟ್ಟಿಕಾದಿಗಳ್ ಗ್ರೈವೇಯಮಕ್ಕು" (ಮಂಗರಾ. ೧೮೦-೨೫) ; ಹುತ್ತದಲ್ಲಿ ಕೈಯ್ಯನಿಕ್ಕಿ ಸರ್ಪನ ತೆಗೆವಾಗ ಸರ್ಪನ ಒಪ್ಪ ತಪ್ಪಿ ಮತ್ತೆ ವಸ್ತುವಿನ ನೇವಳ ಆಭರಣವಾಹಲ್ಲಿ ಆದಾರ ದೃಷ್ಟ (ಮೋಳಿಮಾ. ೫೮-೨೪೨); ತೋಳ ಬಂದಿಯ ಬಾಲಿಕೆ ಹುಲಿಯುಗುರ ಸುಲಲಿತೆ ನೇವಳದ ನಾಯಿಕೆ . . . ಪೆಣ್ಗಳ ಪುಣ್ಯಾಕಾರೆಯುಮೆನಿಸಿ ಮನಂಗೊಳಿಸುತ್ತಿದ್ದಳು (ಉದ್ಭಟ. ೫-೫೩ಪ); ಕಾವನನು ಕೊಲಬಗೆಯೆ ನೇವಳ ಹಾವಿನಂದದಿ ಹರಿವುದು (ಕೌಶಿಂಶಾ. ೩೬-೬೦) ; ಬೆಳ್ಳಿಯ ಅಥವಾ ಚಿನ್ನದ ಸರಿಗೆಗಳನ್ನು ನೆಯ್ದು ಮಾಡಿರುವ ದಪ್ಪದ ದಾರವೇ ನೇವಳ (ಸಂಶೋಧ. ೧೭೯). ೨. ನಡುಪಟ್ಟಿ; ಕಟಿಸೂತ್ರ; ಉಡಿನೂಲು: ಎರಡು ಬೆಟ್ಟವ ಮುಟ್ಟಿ ಕಾಮನ ಬಿಲ್ಲು ಶೇಖರಿಸಿ ಮೂಡಿದುದೊಯೆಂಬಂತೆ ಬೆರಕೆವೆರಲ ಹೊನ್ನ ನೇವಳ ಹೊಳೆದುದಾ ತರುಣಿಯ ಕಟಿತಟಾಗ್ರದೊಳು (ಭರತ. ೪೦-೫೮) ; ನೇವಳದೊಳ್ ನೇಲ್ವ ಪೊಂಗಿಜುಂಗಂಟಿ ಉಲಿಯದಂತೊರ್ಕೆಯೊಳ್ ಪಿಡಿದು . . . ಬಂದ ನಂದವಧು ಕಂದಲೊಡೆದುದಂ ಕಂಡು (ಚಿಕಪಂ. ೬೬-೧೬) ; ಅಕ್ಕಿ ಸಣ್ಣರಳಿಗೆ ಮುತ್ತು ಸಣಕೊರಳಿಗೆ ನೇವಳ ಸಣ್ಣ ನಡುವಿಗೆ (ಹಳ್ಳಿಜಾ. ೧೦೮). ೩. (ಚಿನ್ನದ ಅಥವಾ ಬೆಳ್ಳಿಯ) ಉಡಿದಾರ : ರುಕ್ಮಾಂಗದಂ ಬಾಸಿಗಮಂ ತೋಳ ಬಂದಿಯಂ ಕೊರಲ ಪದಗಮಂ ನೇವಳಮುಮನೆತ್ತಿಟ್ಟು . . . ಕೆಳದಿಯರೊಡಗೂಡಿ ನೀರೊಳಾಟಂಬೊಕ್ಕಂ (ರಾಮಾಶ್ವ. ೧೨೩-೨೧) ; ಒಂದು ಚಿನ್ನದ ನೇವಳ ಉಡಿದಾರದಂತೆ, ಸುತ್ತಿದ್ದ ಪಂಚೆಯ ಮೇಲೆ . . . ಹೊಳೆಯುತ್ತಿತ್ತು (ಮಲೆಮ. ೧೩೭). **ನೇವಣ :** ೧. ವಾರಮುಂ ಉಜಿಚೆಲ್ಲಿಯುಂ ನೇವಣಮುಂ ಲೀಲೆವಡೆಯೆ . . . ಮುಕುಂದಂ ನಗಯಜ್ಞೋಪಯೋಗ್ಯ ದ್ರವ್ಯಂಗಳಂ ತಂದು ಮುಂದೆ ನಿಂದಿರ್ದ ನಂದಗೋಪಪುರೋಗಮರನನು ರಾಗದಿಂ ನೋಡಿ (ಜಗವಿ. ೪-೮೦ ಪ) ; ತೋಳಬಂದಿಯ ಬಾಲಕಿಗೆ ಪುಲಿಯುಗುರ ಸುಲಲಿತೆಗೆ ನೇವಣ[ಪಾಠಾ.ಳ]ದ ನಾಯಕಿಗೆ. . . ರುದ್ರಾಣಿಗೆ ರಕ್ಷಣಾರ್ಥಂ ತಂದೆ ನಿಯಾಮಿಸಿ ಕೊಟ್ಟ . . . ಷೋಡಶಸಹಸ್ರ ವಿಳಾಸಿನಿಯರ್ವೆರಸು ನಡೆತಂದು (ಗಿರಿಕ. ೩-೯೧ ಪ) ; ನೇವುರದ ಸುಣ್ಣದನಿಯ ಕಾಂಚಿಯ ಕೇವಣದ ಕಿಂಕಿಣಿಯ ರಭಸದ ನೇವಣಗಳುಲುಹುಗಳ . . . ಡೊಳ್ಳಾಸಕಾತಿಯರಾ ವಿಬುಧಪತಿಯೋಲಗವ ಹೊಕ್ಕರು ನವಾಯಿಯಲಿ (ಕುಪ್ಮಾಅ. ೭-೯೦). **ನೇವಳೆ:** ೩. ಅಜ್ಜನ...ಸೊಂಟದ ನೇವಳೆ ಮತ್ತು ಕಿವಿಯ ಒಂಟಿಗಳೆಲ್ಲಾ ಅಡವಿಗೆ ಹೋಗಿದ್ದವು (ನಾಚಿಕೆ.೪). **ನೇವಾಳ :** ೧. ನೇ[ಪಾಠಾಂ. ಲೇ]ವಾಳಮೆಂದು ಕೆಲಬರ್ ಪಾವಂ ಪಿಡಿವಂತೆ ದೇವ ನೀನಲ್ಲದರಂ ದೇವರಿವರೆಂದು ಪಿಡಿದಿನ್ನೇವಿಧಿವಟ್ಟ ಪರೋ ಮೋಹಮೂರ್ಛೆಯಿನರುಹಾ (ಪಂಪರಾಮಾ. ೭-೪೧) ; ಅಭೀಳಕಾಳೋರಗನಂ ನೇವಾಳ ವೆಂದೆತ್ತುವ (ಚಂದ್ರನಾ. ೬) ; ಮೇಲೆ ಬಿಟ್ಟ ಸಾವುಂ ನೇವಾಳಮಾಗೆ (ಕಬ್ಬಿಕಾ. ೧೪೫). ೨. ಭೂರಮೆಯ ನೇವಾಳಮೆಂಬಿನಂ ಪೊನಲ್ವರಿವ ಪಯೋಷ್ಣೀನದಿಯ ಕೂಲದೊಳ್ (ರಾಮಾಶ್ವ. ೬೪-೧). ೩. ನೇವಾಳ ಕೊಟ್ಟದ್ದು ಸುಶೀಲಳಿಗಲ್ಲವಲ್ಲ (ಅಬೋಲೀ. ೬೯). **ನೇವುಳು :** ೧. ಉರಗ ನೇವುಳಾಯಿತೆನಲು ಉರಗ ನೇವುಳಾಯಿತೆಂಬೆ ಗರಳ ಮಧುರ ವಪ್ಪುದೆನಲು ಅಪ್ಪುದೆಂಬೆನು (ಸುಸಾರ. ೧೯-೨). **ನ್ಯಾವಣ :** ೩. ರಾಜಿಸುವ ಚಿನ್ನದೀ ನ್ಯಾವಣವ ನೋಡು ಕಾಂತೆ (ಅರ್ಜಾವಿ.೨೪-೨೨). **ನ್ಯಾವಳ :** ೧. ತುಲಸೀದಾಮಾಹಾರ ಸರಿಗೆ ನ್ಯಾವಳ ವನಮಾಲೆ ವೈಜಯಂತಿ . . . ಧರಿಸಿದವನ ಕಂಡೆ (ತೀರ್ಥಮ. ೨೨೧). **ನ್ಯಾವಳಿ :** ೧. ಥಳಥಳಿಸುವ ಕೊರಳೊಳು ತ್ರಿವಳಿ ನ್ಯಾವಳಿ ತಾಯಿತು (ವಿದಾಕ್ಕ ೭೧-೨). **ಲೇವಣ :** ೧. ಮುತ್ತಿನಸಮುಹಾರಾವಳಿಯನುಜ್ವಲಿಪ ಲೇವಣಮನುಸುರಲೇಂ ನಕ್ಷತ್ರಮಾಲೆಯಂ ಕಂಠಾಭರಣಮನಳವಡಲಮರ್ಚಿ (ಪದ್ಮರಾ. ೩-೪೬) ; ಹಾವಿನುದಯಾಸ್ತವಾ ಲೇವಣಕ್ಕಿಲ್ಲವಾ ಲೇವಣದೊಳಾದ ತೆಜನಂತೆ ಲೋಕಂ ಚಿದಾವಲಂಬನದೊಳಿಹುದೈಸೆ (ಅನುಸಾ. ೧-೬-೫) ; ಹುತ್ತದೊಳಗಣ ಹಾವ ಚಿಕ್ಕಸಂಗ್ಯೆಯ್ಯ ತೆಗೆವುತ್ತೀಯೆ ಲೇವಣವ ಮಾಡಿ ಸೇವೆಯನೆಸಗೆ ಮತ್ತೆ ನೃಪ ಕರೆಸಿ ಕೇಳಲ್ಕದೇ ಹಾವಾಗಿ ಹೊಡೆಯೆ ಬಸವಗೆ ನವಿಸಿದಂ (ವೀಶ್ವೆಪು. ೮-೪-೧೯). **ಲೇವಳ :** ೧. ಹಾವೆಂದಱಿಯದೆ ಲೇವಳವೆಂದಱಿಯದೆ ಕ್ಷಣ ನಾಗಭೂಷಣೆಯಾದಳವ್ವೆ (ಸರ್ವಪ. ೬೮-೩೬೬); ಅಂಗನಾಮಣಿಗಂಗನೆಯರು ಸುರಂಗ ಮೌಕ್ತಿಕ ಹಾರ ಮಣಿಪದಕಂಗಳಂ ಲೇ[ಪಾಠಾಂ.ನೇ]ವಳವನನುಸಂಧಿಸಿದರನುವಾಗಿ (ಬಸಪು. ೫-೩೭) ; ಬಸವನಂ ಕರೆಸಿ ತಾ ಪದಕಮಂ ತೋಱಿಮೆನೆ ವಿಷದ ಕಾಳೋರಗಂ ಮುದ್ರೆಯಿಂ ಪೊಱಮಡಲು ವಸುಧೇಶ ಬೆದಱಿ ಮತ್ತದುವೆ ಲೇವಳ[ಪಾಠಾಂ. ನೇವಣ]ವಾಗೆ ಬೆಱಗಾದನಾ ಬಿಜ್ಜಳ (ಲಶಿಚಂ.೩೨-೮೩). [ದೇ.‖ ತುಳು. ನೇವಳ, ನೇವಳೊ, ನೆವಲ ; ತೆಲು. ನೇವಳ, ನೇವಡ]

**ನೇವಳೆ** 'ನೇವಳ' ನೋ.

**ನೇವಾಳ** 'ನೇವಳ' ನೋ.

**ನೇವುರ** (ನಾ). ಕಾಲಂದುಗೆ; ಕಾಲುಕಡಗ; ನೂಪುರ : "ಕಟಿಲೆಂದುಂ ನೇವುರಮೆಂದುಂ ನೂಪುರಂ" (ಕಶಸಾ. ೬೩-೪೧೩) ; ಅರಸಂಚೆಗಳೊಡವರೆ ನೇವುರದಿಂಚರಕೊಲ್ದು ಪೋಗಲಾಂ ಕಿಱಿದೆಡೆಯಂ ಸರಸಿಗೆ ವಿಶಾಯಲ್ಕೆಂದೈತರುತಿರ್ದಂ ಮುಂದೆ ಮುನಿಕುಮಾರಕನೊರ್ವಂ (ಕಾದಂಪೂ. ೭೨೫) ; ನೇವುರದ ಕನ್ನವುರದೆಕ್ಕಾವಳಿಯ . . . ಘನಸ್ತನೆಯರ್ ಭಾವಜಗಜಘಟೆಯಂನಿಳಿಸಿ ಕಣ್ಗೊಳಿಸಿರ್ದರ್ (ಪಾರ್ಶ್ವಪು.೧೨-೧೦) ; ಕನ್ನೆಯ ಚರಣದ ಸೊಬಗಿಂತೆನ್ನರ ಮಕುಟಕ್ಕೆ ಸಾರ್ವುದೆಂದುಲಿವಂತ

ತ್ಯನ್ನತಪದದೊಳ್ ಮೆಱೆಗುಂ ರನ್ನದ ನೇವುರದ ದನಿ ಸರೋಜಾನನೆಯಾ (ದಶಕು.೬-೫೬); ಭೂರಿ ಭೇರೀವಾದ್ಯರವ ಕೈವಾರಿಗಳ ಕಳಕಳದೊಳಡಗಿತು ನಾರಿಯರ ನೇವುರದ ಮೊಳಗಿನೊಳದ್ದುದಾ ರಭಸ (ಕುಪ್ಯಾಸ. ೧೨-೧೦೧).
[<ಪ್ರಾ. ಣೇಉರ./ಸಂ. ನೂಪುರ]

**ನೇವುವುಗಟ್ಟು** (ಕ್ರಿ). ಗರ್ಭಿಣಿಸ್ತ್ರೀಗೆ ಸೀಮಂತಕರ್ಮವನ್ನು ಮಾಡು (?) : ಉರಗ ರಸಾಂತ್ಯವಲ್ಲದೆಡೆಯೊಳ್ ನೆಱೆ ಕೂಡೆ ಶುಭ ಗ್ರಹಂಗಳ್ . . . ಚಂದ್ರನೊಳ್ಪ ನಾಳ್ದಿರೆ ಶುಭವಾಸರಂ ನೆಗೞೆ ನೇವುವು ಗಟ್ಟು [ಪಾಠಾಂ. ಉಟ್ಟಗೆಗೆಟ್ಟು, ನೇಉಉಗಟ್ಟು]ವುದೆಂಟುತಿಂಗಳೊಳ್ (ಲೋಕೋಪ. ೨-೨೫). [<ನೇವುವುಗೆ+ಕಟ್ಟು$_1$]

**ನೇವುವುಗೆ** (ನಾ). ಗರ್ಭಿಣಿಸ್ತ್ರೀಗೆ ಮಾಡುವ ಸೀಮಂತಕರ್ಮ(?): ಸೀಮಂತಕರ್ಮಂ ಮಾಡುವೊಡೆ . . . ಆ ಕರ್ಮಮಂ ಮಾಡುವ ಲಗ್ನಕ್ಕೆ ಚಂದ್ರನುದಯುವಾಗಲ್ ಲೇಸ ಬಯಸುವವಂ ಎಂಟನೆಯ ತಿಂಗಳಲ್ಲಿ ನೇವುವುಗೆಯಂ ಮಾಡುವುದು [ಪಾಠಾಂ. ತಿಂಗಳಿಗೆ ಗರ್ಭವಾದೊಡೆ, ತಿಂಗಳಿಗೆ ಉಟಿಗೆಯ ಕಟ್ಟು] (ಲೋಕೋಪ. ೨-೨೫ ಟೀಕೆ). 'ನೇವುವುಗಟ್ಟು' ಪರಾ. [ ? ]

**ನೇವುಳು** 'ನೇವಳ' ನೋ.

**ನೇವೇದ್ಯ** (ನಾ). =ನೈವೇದ್ಯ ೨ : ಮೋದಕನೇವೇದ್ಯವನಣಗೈಯೆ ನೆಪವೇನಂ ಪೇಳಲಿ ನಾನರಿಯೆ (ಗಣೇಶ. ೩-೫೫).
[<ಪ್ರಾ.ಣೇವಜ್ಜ./ಸಂ. ನೈವೇದ್ಯ]

**ನೇಶ್ವತಂತ್ರ** (ನಾ). (?) : ಅಶ್ವತಂತ್ರ ಪದಾರ್ಥರಾಜಿಯುಂ ನೇಶ್ವತಂತ್ರ ಪದಾರ್ಥರಾಜಿಯನೇ ಸ್ವತಂತ್ರಜ್ಞಾನದೊಡನೆ ಸಮಸ್ವಭಾವಮೆನ್ನುವರ ವರಮಾತಿಂಗೆಳೆಯ ಮಧ್ಯದಲಿ ವಿಶ್ವಾಸಿಸಬಾರದು ಪಯಣದೊನಶ್ವ ಶಬ್ದಮರಾದವೀವುದು ಸುಸ್ವಸಿತಮಂ ಶಕುನದರಿಂತಿದು ನಿಕೃಷ್ಟವಲಾ (ವಿವೇಛ. ೮-೪೭). [ ? ]

**ನೇಷ್ಟಾರ** (ನಾ). ಋತ್ವಿಜ ; ಪುರೋಹಿತ : ಕರ್ತೃ-ಕರ್ತಾರನು ; ಭೋಕ್ತೃ-ಭೋಕ್ತಾರನು ; ನೇಷ್ಟೃ-ನೇಷ್ಟಾರನು (ಹೊಸುಗ. ೧೦೬).
[<ಸಂ. ನೇಷ್ಟೃ]

**ನೇಸಣ** 'ನಿವೇಶಣ' ನೋ.

**ನೇಸನ್ನಿಕೆ** (ನಾ). ಸ್ನೇಹ ; ಪ್ರೀತಿ ; ವಿಶ್ವಾಸ(?) : ಬೇಸಱದಾಸಱನೆ ವನಾವಾಸಂಗಳೊಳುನ್ನತಿಕ್ಕೆ ನಿಲೆ ನಮೆದವರೊಳ್ ನೇಸನ್ನಿ [ಪಾಠಾಂ.ನೀಸನ್ನಿ, ನೀಶಂ]ಕೆಯಿಂ ಕುರುಪತಿ ಬೀಸರವಂ ನುಡಿಯದೊಳ್ಳಿತಂ ನುಡಿದಪನೇ (ಕಾಪ್ಯಾವ. ೩೪೭).
[ನೇಸನ್ನ೦ (ᑭ←ಮಲ. ನೇಶನ್)+-ಇಕೆ]

**ನೇಸರ್** 'ನೇಸಱ್' ನೋ.

**ನೇಸರ** 'ನೇಸಱ್' ನೋ.

**ನೇಸರಣುಗ** 'ನೇಸಱಣುಗ' ನೋ.

**ನೇಸರು** 'ನೇಸಱ್' ನೋ.

**ನೇಸರ್ಗದಿರ್** (ನಾ). ಸೂರ್ಯನ ಕಿರಣ,—ರಶ್ಮಿ : ಪಸದಿಂ ನೇಸರ್ಗದಿರ್ಗಳ ಸಸಿಜೊನ್ನಂಗಳ ಪೊದಟ್ದು ಮಲರ್ಗಂಪುಗಳೊಂದೆಸಕಮನೆಣೆಗೊಂಡೆಡೆವಿಡದೆಸೆದರ್ ದೊಡದೇವಭೂಭೃದಪ್ಪುತಾಂಬಿಕೆಗಳ್ (ಚಿಕವಿ. ೩-೨೫). [ನೇಸಱ್+ಕದಿರ್$_2$]

**ನೇಸರ್ಗಲ್** (ನಾ). ಸೂರ್ಯಕಾಂತ ಶಿಲೆ : "ನೇಸರ್ಗಲ್, ಬಿಸುಗಲ್-ಈ ೨ ಸೂರ್ಯಕಾಂತಂ" (ಕಶಸಾ. ೫೦-೫೪) ; "ನೇಸರ್ಗಲ್ಸೂರ್ಯಕಾಂತೋಪಲಾಖ್ಯಂ" (ಚತುನಿ. ೮೫). [ನೇಸಱ್+ಕಲ್$_3$]

**ನೇಸರ್ಗುವರ** (ನಾ). ಸೂರ್ಯನ ಮಗ ; ಯಮ : "ಜಕ್ಕಂದೊಟಲಿ ದೇರ ಕಾರ್ಮಡುವಿನಣ್ಣಂ ಜವಂ ನೇಸರ್ಗುವರನಱಿಂ ತಾನೆಂದು ಯಮನ ನಾಮಂ" (ಕಬ್ಬಿಕೈ. ೧೪) ; "ತವೆ ನೇಸರ್ಗುವರನಱಿಂ ಜವ ಜಕ್ಕಂದೊಟಲಿ ದೇರನೆನೆ ಯಮನಕ್ಕುಂ" (ಕವಿಕಂ. ೩೬). [ನೇಸಱ್+ಕುವರ$_2$]

**ನೇಸರ್ದಾಣ** (ನಾ). ಸೂರ್ಯನಿರುವ ಸ್ಥಳ,—ಜಾಗ: ನೇಸರ್ವೊಲ್, ಬಾಸುಟಿರ್ವೊಲ್, ನೇಸರ್ದಾಣಂ, ಬಾಸುಟಿರ್ಗಂಟು (ಶಬ್ದಾನು. ೭೩ ಪ್ರಯೋ). [ನೇಸಱ್+ತಾಣ]

**ನೇಸರ್ಬಟ್ಟು**, ನೇಸಱುಬಟ್ಟು, ನೇಸಱುವಟ್ಟು (ನಾ). ಸೂರ್ಯಮಂಡಲ ; ರವಿಬಿಂಬ : ನೇಸಱು+ಬಟ್ಟು, ನೇಸರ್ಬಟ್ಟು (ಶಬ್ದಾನು. ೮೨ ಪ್ರಯೋ). **ನೇಸಱುಬಟ್ಟು :** ಇಳೆ ಘೂರ್ಮಿಸಿತೊ ನೇಸಱುಬಟ್ಟು [ಪಾಠಾಂ. ಜಿಬಟ್ಟು, ಜಬಟ್ಟು] ಕೆಡೆದುದೊ ಜಲಧಿ ಮೇರೆಯ ಮಿಱುದುದೊ . . . ಎನಲುಱೆ ಮೊಳಗಿದವಂದು ವಾದ್ಯಗಳು (ಕುರಾಸಾ. ೧೨-೪೯). **ನೇಸಱುವಟ್ಟು :** ಪರಿಭಾವಿಸೆ ನಿನಗಾತಂಗೇನಂತರವೆನ್ನೆರ್ದ ದಾವರೆಯನಹರ್ನಿಶಮರಲಿಪ ನೇಸಱುವಟ್ಟೇ ಕಟ್ಟಾಣ್ಮಾ ಮುಟ್ಟಮಿಱೆನಲು (ಉದ್ಭದೇ. ೩-೭೮). [ನೇಸಱ್+ಬಟ್ಟು$_1$]

**ನೇಸರ್ಬಳಿ** 'ನೇಸರ್ಬೞಿ' ನೋ.

**ನೇಸರ್ಬೞಿ**, ನೇಸರ್ಬಳಿ (ನಾ). ಸೂರ್ಯನ ವಂಶ ; ಇನಕುಲ ; ರವಿಕುಲ : ಮುನ್ನಮಿಾ ಪೊಡವಿಯೊಳ್ ತ್ರಿಶಂಕುವೆಂಬೊರ್ವಂ ನೇಸರ್ಬೞಿಯ ರಾಯಂ ಪಲವುಂ ಪಗಲರಸುಗೆಯ್ಯುತ್ತುಮಿರ್ದಂ (ಅದ್ಭುತ. ೩-೨೪). **ನೇಸರ್ಬಳಿ :** ಬಾಳ್ವೆಯ ಸೊಡರ್ ತಾನಾರ್ವ ಮುನ್ನಮಿನ್ನೊಂದು ಬತ್ತಿಯ ಕುಡಿಗೆ ದೀಪಾಂಕುರಂಗೈದು ಪೊತ್ತಿಸದೆ ಪೋದೊಡಾಂ ನೆಲದರಿಕೆ ನೇಸರ್ಬಳಿಗೆ ಕಳ್ತಲೆಯನಡಕಿ ಪೋದಂತುಟಲ್ತೆ ? (ಶ್ರೀರಾಪಾ. ೮-೨೧೫). [ನೇಸಱ್+ಬೞಿ$_3$]

**ನೇಸರ್ಮಯಣ** (ನಾ). ಗ್ರೀಷ್ಮಋತು ; ಬೇಸಿಗೆ ಕಾಲ : ರೇಫಕ್ಕೆ-ಕೆಸರ್ಮಲ್ಲಿಗೆ, ನೇಸರ್ಮಯಣ (ಶಮದ. ೧೪೩ ಪ್ರಯೋ).
[ನೇಸಱ್+ಮಯಣ]

**ನೇಸಲ್**, ನೇಸಲು (ನಾ). ಅಸ್ಪಷ್ಟವಾದ ರೇಖೆ,—ಆಕೃತಿ : ಪಱೌನಿಯಾದಲ್ ಸೀತೆ; ಅನಿಲಜನ ಕರಪುಟದಿ ಮಿರುಗುತಿರ್ದವತಂಸಮಂ ಬಿಚ್ಚುಗಣ್ಣಿಂ ನೋಡುತಿರ್ದಂತೆ, ನಗೆಯ ನೇಸಲ್ ಸುಳಿಯೆ ಕಣ್ಚಿಪ್ಪಿದಲ್ ಸ್ಮರಸುಖಸ್ವಪ್ನಣಸುಖಿ (ಶ್ರೀರಾಪಾ. ೫೨೩-೬೧೬). **ನೇಸಲು :** ಹೊರಗೆ ಜಗಲಿಯಲ್ಲಿ ಮತ್ತು ಅದಕ್ಕೂ ಕೆಳಗೆ ಅಂಗಳದಲ್ಲಿ ಕತ್ತಲೆ ಬರಬರುತ್ತಾ ಕಡಮೆಯಾಗಿ ಕಣ್ಣಿಗೆ ವಸ್ತುಗಳ ನೇಸಲು ಗೊತ್ತಾಗುವಂತಿತ್ತು (ಮಲೆಮ. ೨೪೧). [ ? ]

**ನೇಸಲು** 'ನೇಸಲ್' ನೋ.

**ನೇಸಱ್**, ನೇಸರ್, ನೇಸರ, ನೇಸರು, ನೇಸಱ, ನೇಸಱು (ನಾ). ೧. ಸೂರ್ಯ ; ರವಿ ; ಭಾನು : "ನೇಸಱ್ ದಿನೇಶಾಹ್ವಯಂ" (ಕರ್ಣಾನಿ. ೭೧) ; ಇಂತಾಱುದಿವಸಂ ಪೋದ ಬೞಿಕ್ಕೇೞನೆಯ ದಿವಸದಂದು ನೇಸಱ್ ಮೂಡಿದೊಡೆ ಭಟ್ಟಾರರಲ್ಲಿಗೆ ನಂದಿಮಿತ್ರಂ ವಂದು ಬಂದಿಸಿ ಇಂತೆಂದಂ (ವಡ್ಡಾರಾ. ೮೨-೧೯) ; ನೇಸಱ್ ಮೂಡಿದುದು ಬಳಂಗೆ ಮಿಟ್ಟು ಮೂಡುವ ತೆಱದಿಂ (ಪಂಪಭಾ. ೩-೨೭); ಧನಮಂ ಬಂಚಿಸಿಕೊಂಡೆನ್ನ ಮನೆಗುಯ್ವೆನೆಂಬನ್ನೆಗಂ ನೇಸರ್ಮೂಡಿದೊಡುಯ್ಯಲಿಂಬಿಲ್ಲದೆ ಮರದ ಪೊಟರೊಳಗಿಟ್ಟು ಬಂದು ಮಱುದಿವಸಂ . . . ಕೊಳಲಂಜಿಪೋದೆಂ (ಪಂಚತಂ. ೧೭೭-೧೩) ; ಕುಮುದಂಗಳ ನಗೆ ಬತ್ತಿದುವು ಪಾಯ್ದು ನೇಸಱುನಾಗಳ್ [ಪಾಠಾಂ. ಮುನ್ನೇಸಱುನೊಳ್] (ಲೀಲಾವ. ೩-೫) ; ಕಡಲೊಳ್ ನೇಸಱನಟ್ದುಲುಂ ಪೊಡವಿಯುಂ ನುರ್ಗೊತ್ತಲುಂ . . . ಪೊತ್ತು ಬಾನೆಡೆಯಂ ಬೇಗದಿನೆತ್ತಲುಂ ಬಗೆದನಾಗಳ್ ದಪ್ಪದಿಂ ದಪ್ಪಗಂ (ಕಬ್ಬಿಕಾ. ೧೫೨). ೨. ಸೂರ್ಯನಿರುವಷ್ಟು ಕಾಲ; ಹಗಲಿನ ಸಮಯ : ನೇಸಱುಂದೊಳಗಾಂ ದಿನಕರಸುತನನಿಕ್ಕಿ ಬಂದಲ್ಲದೆ ಕಾಣೆಂ

ದಲ್ ಭವತ್ಪದಾಬ್ಜಮಂ (ಪಂಪಭಾ. ೧೨-೧೩೪) ; ಇಂದಿನ ನೇಸಱಿಂದೊಳಗರಾತಿಯನಿಕ್ಕದೆ ಮಾ[ಣ್ಬೆ]ಮಪ್ಪೊಡಿನ್ನೆಂದುಮಸಾಧ್ಯಂ (ಪಂಪಭಾ. ೧೩-೭೫). **ನೇಸರ್ : ೧.** ಆ ಸಮಯದೊಳ್ ನೇಸರಪರಾಬ್ಧಿಗಿಳಿಯಲ್ (ರುಕ್ಮಾಂಗ. ೧೨-೨೮) ; ನೇಸರ್ಪೆರೆಗಳಿಂ ಸೊಡರ ಬೆಳಗಿ ತೀವಿರಲ್ ನರುಗಂಪು ತುಳಿಲ್ಗೆಯ್ಯುತೆದೆತುಂಬಿ ಕಾವನಂ ಬಗೆದೆತ್ತು ಬರೆಯುತಿದೆ ಸುಗ್ಗಿ (ಕಾಲೂರ.೧೨೦-೨೫೨). **ನೇಸರ: ೧.** ನೆಲ ಬಾನ ತಳ್ಕೆಯಲಿ ನೇಸರನು ಬಿಡುಗಣ್ಣನಾಗುತಿರಲು (ಭಾವಜೀ. ೧-೬) ; ಪೇಟೆಯಲ್ಲಿ ಸ್ವಲ್ಪ ಸುತ್ತಾಡಿಕೊಂಡು ಬರುವ ಹೊತ್ತಿಗೆ ನೇಸರ ನಡುನೆತ್ತಿಗೆ ಬರುವ ಹವಣಿಕೆಯಲ್ಲಿದ್ದ (ಶಿರೀಕ್ಷ.೧೪೯); ಆವಗಂ ತಿರುತಿರುಗುತಾಗಸದೆ ದೇವಿ ! ನಿನ್ನೀ ವನಜಮುಖಕೆ ನೀರಾಜನವನು . . . ತಂಗದಿರ ನೇಸರರ್ ತಾವು ಕಡುಹರುಷದಿಂದೆಸಗುತಿರಲು (ಕವಿಕಾ. ೨-೧). **ನೇಸರು : ೧.** "ನೇಸರೆನೆ ಜಲಜಬಾಂಧವನಕ್ಕು" (ಕಶರ. ೫೭) ; ವಾಸುದೇವನ ಪಾದಪುಂಡರೀಕಧ್ಯಾನ ನೇಸರಿನ ಬೆಳಗಿನೊಳ್ಪಥವಿಡಿದು ಬಂದು (ತುರಂಗ. ೯೧-೩) ; ಎಳೆಯ ನೇಸರು ಹತ್ತುಕೋಟಿಯ ಕಳೆಯೊಳೆಸೆದಿಹ ಆತ್ಮನೊಳು ಹೊಳೆಹೊಳೆವುತಿರ್ದುದು (ಮುಲ್ಲಾಶಾ. ೨-೧೧) ; ಮೂಡಣದಲ್ಲಿ ನೇಸರುದಿಸಿ ತನ್ನ ಹೊಂಗಿರಣಗಳನ್ನು ಹರಡುತ್ತಿದ್ದ (ಹಾಹುತ್ತ.೫೮). **ನೇಸಱ : ೧.** ನೇಸಱ ಉಳ್ಳನೆಗ ಬಿಟ್ಟ ಇದು ಬಲ್ಲಹನ ದತ್ತಿ (ಸೌಇಇ. IX–i, ೫೪-೬ ; 9ನೆಯ ಶತ) ; ಬೆಱಗುವಡೆದಿರೆ ನೆಯ್ದಿಲೆಗೆ ನೇಸಱನ ನೆಮ್ಮುಗೆಯಾದ ತೆಱನಱಿ ಮುಱುವಡೆದ ಮಾಯಾಂಗನೆಯ ಮುಖಭಂಗವನೆ ಕಂಡು ಮಱುಗುತಿರ್ದರು ಕೂಡೆ ಕೆಳದಿಯರು (ಪ್ರಭುಲೀ. ೭-೭೧). **ನೇಸಱು : ೧.** "ತಾವರೆಗೆಳೆಯಂ, ಪಗಲ ಬೊಜಂಗಂ, ಬೆಂಗದಿರಂ, ನೇಸಱು . . . ಗರಂಗಳಾಣ್ಮಂ—ಈ ೧೧ ಸೂರ್ಯನ ಪೆಸರ್" (ಕಶಸಾ. ೪೮-೨೮) ; ಜಲಧಿಗಳ ಕುಡಿದುದು ನಭೋಮಂಡಲವ ಸೆಳೆದುದು . . . ನೇಸಱಿನ ಕಂಗಳನು ಕದುಕಿತು ನೆನೆಯಬಾರದು ನಳಿನಭವ ಹರನಾದನೆನಲುಚ್ಚಳಿಸೆ ಪದಧೂಳಿ (ಕುಮ್ವ್ಯಾಭೀ. ೧-೪೮) ; ಆ ಸಮಾಧಿಯ ಭಾವದಲಿ ನವಮಾಸ ಪೂರಿತವಾಗಿ ನೆನಹಿನ ನೇಸಱಿನ ಬಲುಬಿಸಿಲು ಬೆಳಗಿದುದಂತರಂಗದಲಿ (ಪ್ರಭುಲೀ. ೬-೨೦) ; ಪೊಂಗುವ ಪೊಸ ನೇಸಱನಾಂತು ಮೂಡದೆಸೆ ಮಸಗುವವೋಲ್ . . . ಅಮೃತಮೂರ್ತಿ ಪೆಂಪಿಡಿದೆಸೆದಳ್ (ಚಕವಿ. ೪-೫).

**ನೇಸಱ ಕುಲಜ**=ಸೂರ್ಯವಂಶದಲ್ಲಿ ಹುಟ್ಟಿದವನು : ನೆಱೆ ನಿನ್ನ ನಂಬಿ ನಚ್ಚಿರ್ದ ಪರಿವಾರಮುಂ ಮಱೆದೆಯೋ ತೊಱೆದೆಯೋ ಮಾಱಿದೆಯೊ ಪೇಳು ನೇಸಱ ಕುಲಜ [ಪಾಠಾಂ. ನೇಸಱುಗುಲಜ] ಎಂದೆಂದು ನುಡಿನುಡಿದು ಪಿಂಡುವಿಡಿದಸೆ ಮಿಡುಕಿತ್ತು ಪೌರಜನವು (ಹಚಕಾ. ೯-೫).

[**ದೇ.॥ ತಮಿ.** ಞಾಯಿಱು, ನಾಯಿಱು ; **ಮಲ.** ಞಾಯಿಱು, ಞಾಯಿಱು, ಞಾಱು ; **ತುಳು.** ನೆಸುರು=ಬೆಳಗ್ಗೆ ; **ಮಲ್ತೊ.** ನೀಱು=ಬಿಸಿಲು, ಶಾಖ./**ಪ್ರಾ.** ಣೇಸರ]

**ನೇಸಱ** 'ನೇಸಱ್' ನೋ.

**ನೇಸಱಣುಂಗ**, ನೇಸರಣುಗ (ನಾ). ಸೂರ್ಯನ ಮಗ ; ಯಮ : "ಜವನಱಿಂ ದಮ್ಮನು ದಡಿಗರ್ಪ್ಪು ಜಕ್ಕಂದೊಟಲಿದೇರನ್ನೆದೆ ಕಾರ್ಮುದು ವಿನಣ್ಣಂ ನೇಸಱಣುಗನೆನಲಂತಕನೊಳೆಡೆವಿಡದ ನಾಮ" (ಶಬ್ದಮಂ.೧೩) ; **ನೇಸರಣುಗ** : "ನೇಸರಣುಗನೆನಲಂತಕಂ" (ಕಶರ. ೫೭); ನಿರುತಿ ಪೆರಸಾರ್ನೇಸರಣುಗ ನೀಂ ಸಂತಯಿರು (ಕುಮಾವು. ೧-೭೩).

[ನೇಸಱ್+ಅಣುಗ(<ಅಣುಂಗ)]

**ನೇಸಱಬಟ್ಟು** 'ನೇಸರ್ಬಟ್ಟು' ನೋ.

**ನೇಸಱವಟ್ಟು** 'ನೇಸರ್ಬಟ್ಟು' ನೋ.

**ನೇಸಱು** 'ನೇಸಱ್' ನೋ.

**ನೇಸಱುಪಳ್ಳಿ** (ನಾ). ಒಂದು ಹಳ್ಳಿಯ ಹೆಸರು : ಅಸ್ಯ ಗ್ರಾಮಸ್ಯ ಪ್ರಾಚ್ಯಾದಿ ಸೀಮಾವ್ಯವಸ್ಥಾ . . . ಪೂರ್ವ್ವಭಾಗ ಇಗ್ಗರೆ ನದೀಂಗತ್ವಾ ಸ್ಯೈವನದ್ಯೇವ ದಕ್ಷಿಣಸೀಮಾವೆಳ್ಳೆಱೆ ನಾಮ್ನ್ಯೇವ ಪಶ್ಚಿಮಸೀಮ್ನ್ಯೇವ ಗತ್ವಾ ಬೆಮ್ಬುಪ್ಪಾಟ್ಟಸಹಿತಂ ಪೆರಾಲ್ಗೊಲ್ಲಿಂ ಗತ್ವಾ ಉತ್ತರತಃನೇಸಱುಪಳ್ಳಿಂ (ಎಕ. III, ಮಂಡ್ಯ. ೧೧೩-೫೯ ; 713). [ನೇಸಱು$_0$+ಪಳ್ಳಿ]

**ನೇಹ** (ನಾ). ೧. ಗೆಳೆತನ ; ಸ್ನೇಹ ; ಮೈತ್ರಿ : "ಸ್ನೇಹದೊಳ್ ನೇಹಮುಕ್ಕುಂ" (ಕರ್ಣಾನಿ. ೪೧) ; ಚಪಲಕಪಿ ತನಗದುವೆ ವಿನೋದಮಾಗೆ ಮತ್ತಂ ಅತ್ತಿಯ ಪಣ್ಗಳನೀಡಾಡುತಿರ್ದುಮಾ ಪಣ್ಗಳಂ ಕ್ರಕಚನೆಂಬುದೊಂದು ಮೊಸಳೆ ಪ್ರತಿದಿನಮೊಲ್ದು ಮೆಲ್ದು ಕೆಲವಾನುಂ ದಿನಕ್ಕವೆರಡರ್ಕಂ ನೇಹಮಾಗೆ (ಪಂಚತಂ. ೨೭೭-೨೨). **೨.** ಪ್ರೀತಿ ; ಒಲುಮೆ ; ಅನುರಾಗ : "ನೇಹಮೆನೆ ಪ್ರೀತಿಯಕ್ಕುಂ" (ಕಶರ. ೫೭) ; ಇನಿಸೊಗೆತರ್ಪ ಕಣ್ಪನಿಗಳಿಂದಮೆ ನೇಹಮನುಂಟುಮಾಡುವಂಗನೆಯರೊಳೇನಪಾರಭವಭೋಗಮನಿಂತಿರೆ ಪತ್ತುವಿಟ್ಟು . . . ಶರೀರಮಂ ಕಱುತ್ತಿ ನಿವಿರದೊಂದು ಘೋರ ತಪಕೊಡ್ಡಿದೆ ನಿನ್ನವೊಲಾರ್ ಕೃತಜ್ಞೆಯರ್(ಕಾದಂಪೂ. ೯೬೦); ಒಲವಿಲ್ಲದ ಪೂಜೆ ನೇ[ಪಾಠಾಂ.ಸ್ನೇ]ಹವಿಲ್ಲದ ಮಾಟ ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣಾ (ಬಸವ. ೧೨೬) ; ಒಲವಿಂದ ನಡೆತಂದು ಶಿವನಿಳಯಮಂ ಪೊಕ್ಕು ನಲಿನಲಿದು ನೇಹವಂಕುರಿಸುತಿರೆ ಕೈಮಿಕ್ಕು (ಬಸರ. ೩-೪೦) ; ಮಿಂಗೆ ನುಡಿಗಳಿಂದೊಲಿಸಿ ನೇಹಂ ನಿಗುರ್ದು ಕೂಟದ ಮನವನಿತ್ತಾವಗಪ್ಪೊಲುಮೆಯಂ ತೋಱು (ಬಸಪು. ೪೨-೧೫). **೩.** ಎಣ್ಣೆ ; ತೈಲ : ಅವಚಱಿಸಿ ಪೊಯ್ದ ನೇಹಂ ತವೆಯಲೊಡಂ ಗುಣಮನುರುಪಿ ಪಿರಿದಾಗಿರೆ ಪೆರ್ಚುವ ಸೊಡರ್ಗಳ ಪೆರ್ಚಂ ನಗುವವೊಲು ಜ್ವಳಿಸಿದುವು ವಿಮಳಮಣಿದೀಪಿಕೆಗಳ್ (ಲೀಲಾವ. ೩-೨೦) ; ನೇಹವಿಲ್ಲದ ಸೊಡರ ತೆರದಿ (ಪಲ್ಲಾರಿ. ೪-೧೨). [<ಪ್ರಾ. ಣೇಹ./ಸಂ.ಸ್ನೇಹ]

**ನೇಹಂದಳೆ** (ಕ್ರಿ). ಪ್ರೇಮವನ್ನು ಪಡೆ ; ಒಲವನ್ನು ಹೊಂದು : ಮನೋಜವಾರಣಸೌಮ್ಯಗಮನೆ ನೇಹಂದಳೆದು ಮೇಲ್ವರಿದು ಬರೆ . . . ಕಿಱುನಗೆ ಮೊಗದೊಳೆಸೆಯೆ ನುಡಿದಂ (ಭಾವಚಿಂ. ೭-೧೭). [ನೇಹ+ತಳೆ$_1$]

**ನೇಹಂಬಡೆ** (ಕ್ರಿ). ಪ್ರೀತಿಯನ್ನು ಹೊಂದು ; ಒಲವನ್ನು ತಾಳು : ಅಲಘುಭುಜಂ ವಿಜಯ ಜಯಂತಾಮರಜರೊಳನಿಸುಂ ಬಿಡದೆ ಸಲೆ ನೇಹಂಬಡೆದೆಸಕಂಬಡೆದಂ ಲಲನಾಜನಸುಮನಶ್ಚಾಪಂ (ಜಯಕಾ. ೨-೭೨).

[ನೇಹ+ಪಡೆ$_1$]

**ನೇಹಕಟ್ಟು** (ನಾ). ಸ್ನೇಹದ ಕಟ್ಟು ; ಗೆಳೆತನದ ಬಂಧ : ಬಾಲಪ್ರೇಮಿಗಳ ನೇಹಕಟ್ಟು ಕಡಿದುಹೋಗುವದರ ಬದಲು ಇನ್ನಿಷ್ಟು ಗಟ್ಟಿಯಾಗತೊಡಗಿತು (ಭೂಮಿತಾ. ೫೧). [ನೇಹ+ಕಟ್ಟು$_2$]

**ನೇಹಗಲಹ** (ನಾ). ಪ್ರೇಮಕಲಹ ; ಪ್ರಣಯಕಲಹ : ನಳಿನನೇತ್ರೆಯರೊಳು ನೇಹಗಲಹವಾಂತು ಪುಳಿದರೆ ಸ್ಮರ ತಮ್ಮದಿಸಲು ಬಳಿಯ ಕಬ್ಬುಗಳು ಬಿಲ್ಲಹವೆಂದು ಮಸೆದ ಕಂದುಳಿಯಿಂದ ಕಡಿದ ಜೂದಿನಲಿ (ಮೋಹತ. ೨೦-೨೩); ಹೊರೆಗಾಣದಿಹ ನೇಹಗಲಹದೆ ಮೊಗಂಗೊಡದಗಿರಿಸುತೆಯ ಬೆಂಗಡೆಗೆ ಸೊಪ್ಪುಳಾಗದ ತೆಱದೋರದೆ ಬಳಸಂದು ತನ್ನಯನಾಬ್ಜಮಂ ನಿಜಾಂಜಲಿಯಿಂದೆ ಬಾಸಣಿಸಲು (ಚೆಬಪು. ೩೮-೧); ನಲ್ಲನಲ್ಲರ ನೇಹಗಲಹದೊಳ್ಮನಿದು ರತಿಗೊಲ್ಲದೊಲ್ಲದ ಕಾಂತೆಯರ ಮನಂ ತರಹರಿಸಿ ನಿಲ್ಲನಿಲ್ಲದವೊಲಂಗಜನುಱುಬತೊಡಗಿದಂ (ಜೈಮಿಭಾ. ೨೬-೫).

[ನೇಹ+ಕಲಹ]

**ನೇಹಗೆಯ್** (ಕ್ರಿ). ಪ್ರೀತಿಮಾಡು ; ಪ್ರೀತಿಸು : ಪರೀತಾಪಮಂ ಚಿತ್ತ ನೀನೇಕೆ ಸಾರ್ದಪಯ್ ತೆರಳ್ಗಂ ನಿಶೀಥಂ ಮಹೀನಾಥನೆತ್ತಂ ನರರ್ಕ್ಕಕ್ತ ಸತ್ಕರ್ಬುಹುಸ್ತ್ರೀವಿಲೋಲರ್ಕರುತ್ತೀತನೊಳ್ನೇಹಗೆಯ್ವಾನೆಗಾಂಪಳ್ (ನರಚ. ೯೪-೨೫೧). [ನೇಹ+ಕೆಯ್$_1$]

**ನೇಹದೋಟ**(ನಾ). = ನೇಹಗಲಹ : ಪರವೆ . . . ಉರವಣಿಸಿ ಕದಪಿನೊಳಗಶ್ರುಧಾರೆಗಳು ಸೈವರಿಯೆ ಮುನಿಸಂ ಮಸೆದು ನೇಹದೋಟಿಯುನು ಸೌಂದರನೊಡನೆ ರಚಿಸಿ ನಸುನಗೆಯನುಣ್ಮಿಸಿದಳಾತನ ಮೊಗದೊಳಾ ಪದದೊಳು (ಸೌಂದಪು. ೧೫-೩೧). [ನೇಹ+ತೋಟ₁]

**ನೇಹನೋಟ** (ನಾ). ಸ್ನೇಹದಿಂದ ಕೂಡಿದ ನೋಟ; ಪ್ರೀತಿಯಿಂದ ಕೂಡಿದ ದೃಷ್ಟಿ : ಬೇಡಿಡೆಯಿಟ್ಟ ದಿಟ್ಟಿಯಿನಭೀಕ್ಷಿಸುವಾಕೆಯ ನೇಹನೋಟವುಂ . . . ಸಾರದಿರೆಂದು ತನ್ನ ಸಖಿಗುತ್ತರವಂ ಮುನಿದಾಕೆಯಿತ್ತುದಂ ಕೋರಿದುದೆನ್ನದಾಗಹಹ ಕಾಮುಕನೀಕ್ಷಿಪನಲ್ತೆ ನೈಜಮಂ (ಶಾಕುಂತ. ೨೦-೩೬). [ನೇಹ+ನೋಟ]

**ನೇಹಮಿ₁, ನೇಹಮೀ** (ನಾ). ವಾಡಿಕೆ; ನಿತ್ಯರೂಢಿ; ಕಾಯಂ ಪದ್ಧತಿ : ಬಸವಂತಿ ತನ್ನ ನೇಹಮಿಯ ಮುಗುಳುನಗೆಯರಳಿಸಿ . . . ಆಹಾರ-ಪಾನೀಯ, ಶರೀರ-ಸಂಗೋಪನದ ಮೇಲೆ ತನ್ನ ಭಾಷ್ಯ ಮಾಡುತ್ತಿದ್ದಳು (ದೀಪಹ. II, ೧೬೬). **ನೇಹಮೀ :** ರಾವಜೀಕಾಕಾ ಗೋವಿಂದಭಟ್ಟನಿಗೆ ವಾಡಿಯ ಪೂಜೆಯನ್ನು ನೇಹಮೀಯಂತೆ ಸಾಗಿಸಿಕೊಂಡು ಹೋಗಲು ಫರ್ಮಾಯಿಸಿದ್ದರು (ದೀಪಹ. II, ೮).
[<ನೇಹಮಿ₂]

**ನೇಹಮಿ₂** (ಅ). ಯಾವಾಗಲೂ; ಸದಾ; ಸತತವಾಗಿ: ಈ ಪ್ರಕಾರದ ಬೊಬ್ಬಾಟಗಳು ಪತ್ರದ್ವಾರದಿಂದ ನೇಹಮಿ ನಡೆದಿರುತ್ತವೆ (ಮುಂಬಪ್ರಾ. ೮ ಪ್ರಸ್ತಾಪನೆ). [←ಮರಾ. ನೇಹಮೀ]

**ನೇಹಮೀ** 'ನೇಹಮಿ₁' ನೋ.

**ನೇಹಾಸ್ಪದ** (ನಾ). ಸ್ನೇಹಕ್ಕೆ ಅರ್ಹನಾದವನು; ಸ್ನೇಹಯೋಗ್ಯ: ನಂಟನತಿನೇಹಾಸ್ಪದನು ನಿಷ್ಕಂಟಕದ ರಮಣನು ವಿಚಾರವಿದುಂಟೆ ಮನದಲಿ ಹರಿ ನಿಜಾತುಮನೆಂಬ ಕಥನದಲಿ (ನಿಭಾಗ. ೧೧-೧೫-೧೬).
[ನೇಹ+ಆಸ್ಪದ]

**ನೇಹಿ** 'ನೆಮ್ಮಿ₃' ನೋ.

**ನೇಹಿಗ** (ನಾ). ಗೆಳೆಯ; ಸ್ನೇಹಿತ; ಮಿತ್ರ : ಪ್ರಾಣಾನುಕೂಲ ನೇಹಿಗರೊಂದುಗೂಡಿ ಚಿತ್ತಜನಾತ್ಮಸಂಭವ ಬರ್ಪ ವೀಥಿಯೊಳುತ್ತಮ ಜಾರನಾರಿಯರು . . . ಸುಳಿದಾಡುತಿಹರು (ಮೋಹತ. ೧೮-೨೧); ಅರಸಂ ನೇಹಿಗನೊಲ್ಮೆಗಂ ನೆರವಿಗಂ ಕಾವಂ ಹಿತಂ . . . ಬಿರುದಂತೆಂಬರ ಗಂಡನಪ್ರತಿಮವೀರಂ ಬಲ್ಲರೊಳ್ಪಲ್ಲಹಂ (ಅಪ್ರತಿ. ೧೪-೨೩); ಪಗೆವರ್ ನೇಹಿಗರೆನ್ನದೆ ಸುಗುಣರ್ ಗುಣಹೀನರೆನ್ನದಾರಾರೇನಂ ನಿಗದಿಸೆಯುಂ ಕೇಳ್ದದಱಲ್ಲಿ ಗುಣಗ್ರಹಣಮನೆಸಪ್ಪುದೇ ಅಱವೆನಿಕುಂ (ನೀತಿಮಂ. II ೩೦೩); ನಂಟರೆಲ್ಲರುಂ ನೇಹಿಗರ್, ನಾಡಿಗರ್ ನುಡಿಯೊಳ್ ನಡೆವರ್ (ರಾಮಾಶ್ವ. ೧೨-೯); ಅದೊ ಅವನ ನೇಹಿಗನ ನಗೆನುಡಿ–ಅಗಲಿದರು—ಬಹನಿತ್ತೆಡೆ ! (ಗಣೇಶ. ೪೯-೧). [ನೇಹ+-ಇಗ]

**ನೇಹಿತ** (ನಾ). = ನೇಹಿಗ : ಸುರನಾಥಸಖನ ತಾತನಡಿದಾವರೆಗೆ ಮಣಿದು ವಂದಿಸಿದೆ ಸಹಜಾತಹರ್ಷದೊಳೆಂದು ಬಿನ್ನವಿಸಯೋಧ್ಯಾಧಿನಾಥ ಭರತಂಗೆಮ್ಮ ಕೌಶಲವ ವಿಸ್ತರಿಸು ಮತ್ತಖಿಲನೇಹಿತರಿಗೆ (ವೆಂಕಾರಾ. ೨-೨೨-೨೩). [<ಸಂ. ಸ್ನೇಹಿತ]

**ನೇಳಲ್₁** 'ನೇಟಿಲ್' ನೋ.

**ನೇಳಲ್₂** (?) (?). (?) : ಕಟಿದುದು ಮೊಲ್ಲೆ ಮಲ್ಲಿಗೆ ಮುಗುಳ್ತುದು . . . ನೇಳಲಂಗೊಟಿಯುದೆ ಮಾವು ಬಂದುದದಱಂ ಶಿಶಿರಾಧಮನಂ ಜಡಾತ್ಮನೆಂದುಟಿದು ಬಸಂತನಂ ಕರೆದಳಕ್ಕುಮೆ ಭೂವಧು ವೇಶ್ಯೆಯಂದದಿಂ (ಅರ್ಥನೇ. ೩-೫೯). [ ? ]

**ನೇಱಳು** 'ನೇಱಿಲ್' ನೋ.

**ನೇಱಳೆ** 'ನೇಱಿಲ್' ನೋ.

**ನೇಱಿಡು** (ಕ್ರಿ). ತೂಗುಹಾಕು; ನೇತುಹಾಕು; ಜೋತುಬಿಡು : ನಾಗಶರ್ಮನೆಂಬ ಪಾರ್ವಂ . . . ಒಂದು ಕೊಡಂ ತೀವಿದ ಸತ್ತುಗದ ಪುಡಿಯಂ ಪಡೆದು ಆ ಕೊಡನಂ ತನ್ನ ಪಟ್ಟರ್ಪಡೆಯೊಳ್ ಕಟ್ಟಿ ನೇಱಟ್ಟು [ಪಾಠಾಂ. ನೇಲ್ದಿಟ್ಟು] . . . ತನ್ನೊಡನೆಯ ಬಡಪಾರ್ವಂಗಿಂತೆಂದಂ (ಪಂಚತಂ. ೧೭೫-೨೩). [ನೇಱು+ಇಡು₁]

**ನೇಱಿಲ್**, ನೀರಲ, ನೀಱಲು, ನೇರಲು, ನೇರಲೆ, ನೇರಳೆ, ನೇರಿಲು, ನೇರಿಲೆ, ನೇರಿಳೆ, ನೇಱಳು, ನೇಱಳೆ, ನೇಱಿಲು, ನೇಱಿಲೆ₁, ನೇಱಿಳೆ (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು; ಜಂಬು : "ಜಂಬೂನಾಮಂ ನೇಱಲ್" (ವಸ್ತುಕೋ. ೩೪-೧೦); ಪುಟ್ಟುಂಗುರುಡಿ . . . ಒಂದು ದಿವಸಮುದ್ಯಾನವನಕ್ಕೆ ಪೋಗಿ ನೇಱಲ ಪಣ್ಗಳಂ ತಡವರಿಸಿಯಱಯದ್ದಾಯ್ದು ತಿನ್ನುತ್ತಿರ್ಪಳ್ (ವಡ್ಡಾರಾ. ೯-೮); ಎತ್ತಿದಶೋಕಪಲ್ಲವಪತಾಕೆಯೊಳಂ ನೇಱಲ ರಕ್ತಚಾಮರಂಗಳೊಳಂ ಬಿಗಿದ ನಾರಂಗದ ಮೇಲ್ಕಟ್ಟನೊಳಂ . . . ಕಾಮದೇವನನತಿಪ್ರೀತಿಯಿಂದರ್ಚಿಸಿ (ಕಾದಂಉ. ೭೮೧); ಹುಲಿಗಿಲ ಬೇಳೆಗಳಂ ನೇಱಲ ಬೀಜಂ ಕಡಸಿಗೆಯನ ಬೇರಂ ಸುಣ್ಣಂ ಜಲಮಿಮಱಂ ತೆಗೆಯಲ್ ವಿಷಮಱಗುಂ (ಲೋಕೋಪ. ೮-೨೩); ಬಾಚಿಯ ಪಣ್ಣದೊಂದು ರುಚಿ ನೇಱಲ ಪಣ್ಗೊಳಗುಂಟೆ (ಧರ್ಮಾಮೃ. ೪-೧೨೬). 'ಅರನೇಱಲ್' ಪರಾ. **ನೀರಲ :** ನೀರಲದ ಹಣ್ಣು ಬಲು ಕಪ್ಪು ಇದ್ದರು ತಿಂದು ನೋಡಿದರೆ ರುಚಿ ಭಾಳ (ಗರತಿ. ೧೨೮); ನೀರಲ ಹಣ್ಣು ತಿನ್ನಲು ಬಲು ರುಚಿ (ರೂಢಿ). **ನೀಱಲು :** ನೀಱಲ ಫಲ ಉತ್ಪತ್ತಿ ಮಾವಿನ ಹಣ್ಣಿನಂತೆ ಇರುವರು ಮರ್ತ್ಯರು ಹಲಸು ತೆಂಗು ದಾಳಿಂಬರದಂತೆ ಇರುವರು ಸ್ವರ್ಗದವರು (ವಚಸಂ. ೪೮೬-೨೧೯). **ನೇರಲು :** 'ಪನ್ನೇರಲು' ಪರಾ. **ನೇರಲೆ :** (ಕಿ). **ನೇರಳೆ :** ಜಂಬುನೇರಳೆ, ನೇರಳೆ (ಮೈಔಗ. ೬೩-೧೪೯೪); ನೇರಳೆ ಹಣ್ಣಿನ ಶರಬತ್ತು ಉರಿಮೂತ್ರಕ್ಕೆ ಬಹಳ ಒಳ್ಳೆಯ ಔಷಧಿ (ರೂಢಿ). 'ಜಂಬುನೇರಳೆ' ಪರಾ. **ನೇರಿಲು :** ಅದರ ಎಲೆಗಳು . . . ನೇರಿಲ ಎಲೆಯ ಹಾಗೆ ಇದ್ದು ದೇಂಟಿನ ಬುಡದಿಂದ ತುದಿಯ ತನಕ ಎರಡೆರಡರಂತೆ ಸಾಲುಗೊಂಡಿರುತ್ತವೆ (ಮುಂಬಯಿ. ೪-೫೪). **ನೇರಿಲೆ :** ಫಲಸು ಮಾವು ನೇರಿಲೆ ಹುಣಿಸೆ ಬಾಳೆ ಬದಣ ಮುಂತಾದ ಏನುಳ್ಳ ಕೀಳುಪಚ್ಚೆ ತೃಣಕಾಷ್ಟ ಮುಂತಾದ ಧಾನ್ಯದ (ಎಕ. VII, ಶಿಮೊ. ೭೧-೨೮; 1431). **ನೇರಿಳೆ :** "ಅಪರಾಜಿತಾ—ಗಿರಿಕರ್ಣಿ ; ನೇರಿಳೆಹಣ್ಣು" (ಓಷಧಿ. ೬). **ನೇಱಳು :** ರಕ್ತಾತಿಸಾರದಲ್ಲಿ ಕೈಯಿಂದ ಕೊಡಹಿದ ಹಸುವಿನ ಮಜ್ಜಿಗೆಯಲ್ಲಿ ಹುಣಿಸೆಬೇರನಾದರೂ ನೇಱಳ[ಪಾಠಾಂ. ಬೇಲದ] ಚಿಗುರನಾದರೂ . . . ಅರೆದು ಕುಡಿಯಿಸಲು ಹಿತವಹುದು (ವೈದ್ಯಸಾ. I, ೨೨೧). **ನೇಱಳೆ :** ಮಾವಿನ ಬೀಜ, ನೇಱಳೆಬೀಜ, ಪದ್ಮಕ, ಲೋಧ್ರ; ಬೆಲ್ಲವತ್ತದ ಕಾಯ ತಿರುಳು, ಇದೊಂದು ಪ್ರಯೋಗ (ವೈದ್ಯಸಾ. I, ೨೦೯). **ನೇಱಿಲು :** "ಜಂಬುವೆನೆ ನೇಱಿಲು" (ಮಂಗರಾ. ೩೫-೧೩); ಬಸಿಱ ಬಾಳುವೆಗೆ ನಿಮ್ಮಲ್ಲಿ ಮಸಿಯ ಹೂಸಿ ನೇಱಿಲ ಹಣ್ಣ ಮಾಱುವಂತೆ ಕಾಲ ಸಾಲ ದಾರಿದ್ರ್ಯಕ್ಕಂಜಿ ನಿಮ್ಮ ಮಱಹೊಕ್ಕೆನಯ್ಯಾ (ಬಸವ. ೨೯೩); ನೆಲ್ಲಿ ನೇಱಿಲು ನಗರೆ ಕಡಸಿಗೆ ಕಲ್ಲರಳಿ ಕರ್ಪೂರ ಕದಳಿಗಳಲ್ಲಿ ನೋಡಿವೆ ಭೂಮಿಸುತೆ ಭೂಜಾತಸಂತತಿಯ (ತೊರರಾ. ೩-೧-೨೯); ನವರಸ ದಾಳಿಂಬದ ಬಿತ್ತಂ ನೇಱಿಲ ಪೊಸದೋರೆಯುನಿಮ್ಮಾವಿನ ಪಣ್ಣಂ ತರಿಸಿ ಕುಡುಕುಗೊಡಲು (ಜಯಕಾ. ೨-೨೩); ಹುಲ್ಲೆಹಳ್ಳಿಯ ಸೀಮೆಯ ನೆಲ್ಲಿಯ ಮರದ ಮೂಡ ಹಾಸನದ ಗಟ್ಟಿಯ ನೇಱಿಲ ಸೊಸಿಯಿಂದಂ ಛಳಿಯ ಹಳ್ಳದಿಂದಂ ತೆಂಕಯಿಂತೀ ಚತುಸ್ಸೀಮೆ (ಎಕ. V, ಹಾಸನ. ೧೩-೧೩; 1516). **ನೇಱಿಲೆ₁ :** 'ಜಂಬುನೇಱಿಲೆ' ಪರಾ. **ನೇಱಿಳೆ :** ವನದೊಳ್

ನೇಱಿಳೆವಣ್ಣನಗ್ಗಿಜೆ ಬಹು ಪ್ರಖ್ಯಾತಿಯಿಂ ಪತ್ತಿಸಲ್ ದನುಜಾರಾತಿ ಸ್ಯಮಂತರತ್ನವ ನೃಪಂಗೀಯಲ್ಕೆ ದೂಱ್ ಪೋದುದೇ (ಸೋಮೇಶ. ೮೩); ಮೆಲುವಡೆ ಬೆಳಲ ತನಿವಣ್ಣು ಮಾವಿನ ಹಣ್ಣು ನೇಱಿಳೆ [ಪಾಠಾಂ. ಲ] ಹಣ್ಣು . . . ಇಪ್ಪೆಯ ಹಣ್ಣದಱ ಹೂ ಮಧುರ ಮಧುವುಂಟು (ಬಸವು. ೧೮-೧೬).

[ದೇ.॥ ತಮಿ. ನಾವಲ್ ; ಮಲ. ಞಾೞಲ್, ಞಾವಲ್ ; ತುಳು. ನೇರೊಲು, ನೇರೊಳು ; ಕೊಡ. ನೇರು ; ತೆಲು. ನೇರೆಡು, ನೇರೇಡು]

**ನೇಱಿಲ ಕೆಱೆ** 'ನೇಱಿಲ್ಗೆಱೆ' ನೋ.

**ನೇಱಿಲಗೆ** (ನಾ). ಒಂದು ಸ್ಥಳದ ಹೆಸರು : ಕಾಳೆಗದೊಳಣ್ಣವಸಯ್ಯ . . . ಕಾದಿ ಸತ್ತಂ ಅತನ ಮಗಂ ಬೂತುಗಱ್ಗೆ ನೇಱಿಲಗೆಯ ಕಲ್ನಾಡು ಕೊಟ್ಟ ಚನ್ದ್ರಾರ್ಕ್ಕ ತಾರಂಬರಂ (ಎಕ.XV, ಅರಸೀ. ೨೩೭-೮ ; 971). 'ನೇಱಿಲೆ$_2$', 'ನೇಱಿಲ್ಗೆಱೆ' ಪರಾ. [ ? ]

**ನೇಱಿಲು** 'ನೇಱಿಲ್' ನೋ.

**ನೇಱಿಲುಗುಂಡಿ** (ನಾ). ಒಂದು ಸ್ಥಳದ ಹೆಸರು ; ℙ ಈಗಿನ ಹೊನ್ನಾಳಿ ತಾಲ್ಲೂಕಿನ 'ನೆರಳುಗುಂಡಿ' ಗ್ರಾಮ : ಸಕವರಿಸ ೯೮೬ ಜಯಸಂವಚರದ ×× ಹೆಯ ನೇಱಿಲುಗುಣ್ಡಿಯ ಪೂರೊಡೆಯ ಹಿಟ್ಟಮಯ್ಯ . . . ಮಾಡಿಕೊಟ್ಟ ಗೊ××ಸಸನ (ಎಕ. VII, ಹೊನ್ನಾಳಿ. ೧೧-೯೨೬ ; 1054 ?). [?]

**ನೇಱಿಲೆ$_1$** 'ನೇಱಿಲ್' ನೋ.

**ನೇಱಿಲೆ$_2$** (ನಾ). ಒಂದು ಸ್ಥಳದ ಹೆಸರು : ಬಡಗ ಆಲದ ಮರಂ ಪಡುವ ಮೊಗದೆ ಪೋಗಿ ಕಲ್ಕುಪ್ಪೆಯಿಂ ಬಡಗ ಮೊಗದೆ ಪೋಗಿ ಪಳ್ಳದ ಮೂಡನೇಱಿಲೆಬೞಿಯಂ ಬಡಗ ಮೊಗದೆ ಪೋಗಿ ಕಡೆಕೊಳಂ ಮರಿಯಿಸೆ ಎರಡೂರ ಇರ್ಕ್ಕೆಡು (ಮೈಆರಿ. ೧೯೩೪, ೩೮-೧೨ ; 10ನೆಯ ಶತ); ಶ್ರೀಮತ್ ಜೀಮೂತವಾಹನ ಸೇನವಾರಂ ಚಿತ್ತವಳ್ಳಿಯೊಳ್ ದೇಗುಲವಂ ಮಾಡಿ ಜೀವಿತೇಶ್ವರಕ್ಕೆ ನೇಱಿಲೆಯುಂ ಕಿಱಿಯ ಒರಲ್ಗೋಡುವಂ ಕೊಟ್ಟಂ (ಎಕ. VI, ಚಿಕ್ಕಮ. ೯೫-೯ ; ಸು. 1025). 'ನೇಱಿಲಗೆ', 'ನೇಱಿಲ್ಗೆಱೆ' ಪರಾ. [ ? ]

**ನೇಱಿಲ್ಗೆಱೆ, ನೇಱಿಲ ಕೆಱೆ** (ನಾ). ಒಂದು ಕೆರೆಯ ಹೆಸರು : ತಸ್ಯ ಕ್ಷೇತ್ರಸ್ಯ ಸೀಮಾ ಪೂರ್ವೋತ್ತರದಿಗ್ಭಾಗೇ ಸಿರಿಗಾಳುಗ್ರಾಮ . . . ತತಃ ಪ್ರಾಗ್ಗತ್ವಾ ನೇಱಿಲ್ಗೆಱೆ ತತಃ ಕುರುಪಕೆಱೆ (ಎಕ. XI, ದಾವಣ. ೬೬-೩೩ ; 694). **ನೇಱಿಲ ಕೆಱೆ :** ಮನೆಯ ನೆಲಸಣಂ ಮೂಡಣ ಪೆರ್ಬಾಗಲಿಂ ಪೊಱಗು ತೆಂಕ ಸೇತುವಿನ ಬಡಗಣ ಕೋಡಿಂ ಮೂಡ ದೇವಾಲಯಂ ಬಡಗ ನೇಱಿಲ ಕೆಱೆ ನಂದಾದೀವಿಗೆ ಗಾಣಂ ಮ ೬ಱು (ಎಕ. VII, ಶಿಕಾರಿ. ೨೦-೧೭ ; 1032). [ನೇಱಿಲ್? + ಕೆಱೆ]

**ನೇಱಿಲ್ಮರ** (ನಾ). ನೇರಳೆಯ ಮರ ; ಜಂಬೂವೃಕ್ಷ : ಕೞಿದುಗು ವಲರ್ಪುಡಿ ತಳೆದ ಭಸಿತದ ಸೊಗಸನುಗಿಸೆ ತುಂಬಿಗಳ ಸವಿ ಮೊಳೆವ ಝಂಕೃತಿ ಕಿವಿದೊಡವುವಾವುಗಳ ಪಾಡಿನಳವಡಿಕೆ ದುಡುಕೆ ಶಿವಚಿಹ್ನವಾಂತಂತೆ ನೇಱಿಲ್ಮರಂ ಚೆಲ್ವಾದುದು (ಪದ್ಮರಾ. ೮-೩೧).

[ನೇಱಿಲ್+ಮರ$_1$]

**ನೇಱಿಸು** (ಕ್ರಿ). ನೇತುಬಿಡು ; ತೂಗುಹಾಕು : ಶ್ರೀಮತಿಯಂ ಪಂಡಿತೆ ಬಂದು ಕಂಡು ನಿನ್ನ ಬರೆದ ಪಟಮಂ ಮಹಾಪೂತ ಜಿನಾಲಯದ ಮುಂದೆ ನೇಱಿಸಿದೆಂ[ಪಾಠಾಂ. ನೇಲಿದೆಂ] . . . ಎಂಬುದುಂ (ಚಾವುಂಪು. ೨೩); ವಾನಪ್ರಸ್ಥಜನಂಗಳ ಧೌತವಸ್ತ್ರ ಪವಿತ್ರಾಕ್ಷಸೂತ್ರಂಗಳಂ ತಮ್ಮ ಕವಲ್ಗೊಂಬುಗಳೊಳ್ ನೇಱಿಸಿಕೊಂಡಿಂಬಿನೊಳವರೊಡನೆ ನಡೆವ ಸಾರಂಗಸಮೂಹಮುಮಂ (ಪಂಚತಂ.೧೯೯-೩).

[ನೇಱು + -ಇಸು$_3$]

**ನೇಱಿಳೆ** 'ನೇಱಿಲ್' ನೋ.

**ನೇಱು** (ಕ್ರಿ). ೧. ನೇತುಹಾಕು ; ತೂಗುಹಾಕು ; ಜೋತು ಬಿಡು : "ಎಱಿಲ್ದುದು ನೇಱುದುದೆಂದುಂ ಬೞಿಕಂ ತಾಂ ನೇಲ್ದುದೆನ್ನಲದು ನೇತುದು" (ಕವಿಕಂ. ೨೫೬) ; ಪಂಡಿತೆ . . . ಬಂದನೇಕಧೂರ್ತಜನಮನಸ್ಸಮ್ಮೋಹನತಮಃಪಟಮಂ ಚಿತ್ರಪಟಮನಾ ಚೈತ್ಯಾಲಯದ ಕೆಲದ ಪಟ್ಟಸಾಲೆಯ ಮುಂತೆ ನೇಱು ನಿಜಾಭಿಲಷಿತಕಾರ್ಯಸಿದ್ಧಿಯನೆ ಪಾರುತ್ತಮಿರ್ದಳ್ (ಆದಿಪು. ೩-೪೫ ವ) ; ಅದು ಸುರಭೂಜವಲ್ಯವಸನದ್ವಯಮಂತದು ದಂಡಮಲ್ಲಿ ನೇಱು[ಪಾಠಾಂ. ಲಿ]ದುದದು ಜೋಗವಟ್ಟಿಗೆ (ಕಾದಂಪೂ. ೬೯೨); ಸೂಳೆಯ ಕೊರಳಲ್ಲಿ ಏಳುನೂಱಿಪ್ಪತ್ತಾನೆ ನೇಱುತ್ತ ಕಂಡೆ (ಅಪಚಂ. ೧೦-೩೮) ; ವಜ್ರಲೇಪದ ಕುಮಾರಧಾರೆಗಳ ನೇಱುದ ನೆಲಹಿನಾಯುಧದ ಕುಳಿಯ . . . ತಾಣಂಗಳಂ ತೋಱುದಂ ಭೈರವಂ ಸಿದ್ಧಪತಿಗೆ (ಸಿದ್ಧರಾ. ೩-೧). ೨. ತೂಗುಬೀಳು; ಜೋತುಬೀಳು; ನೇತುಬೀಳು: ಗಿರಿ ಹರಿಯು ಪವಿಯ ಹತಿಗೆಂದಿರಿಸಿದ ಶಾಣಾಂತರಕ್ಕೆ ನೇಱುರ್ದ ಪಲವುಂ ಹರಿಗೆಗಳೆನಲ್ಕೆ ನಭದೋವರಿಯೊಳ್ ಪೆಜ್ಜೇನು ಪುಟ್ಟಿ ರಂಜಿಸುತಿರ್ಕುಂ (ಮಲ್ಲಿಕಾ. ೩-೩೧) ; ತಳತಳಿಸಿ ಪೊಳೆವ ನಿರ್ಮಳಫಳಕಂ ನೇಱುರ್ದೊಡಂತದಂ ತೆಗೆದದಱೊಳ್ ಬಳಪದಿನಾಗಳ್ ಬರೆದೆಂ ಲಳನೆಯ ರೂಪಾತಿಶಯಮನೆನ್ನಱಿವನಿತಂ (ದಶಕು. ೮-೩೦೦). ೩. ನೀಡು ; ಚಾಚು: ದುರ್ಯೋಧನನಂ ಕೊಲ್ಲದಿರೆನೆಂದು ಭಾರತಮಲ್ಲಂ ಗಾಂಡಿವಕೆ ನೇಱುದಂ ಕರತಳಮಂ (ಗದಾಯು. ೮-೨೭). 'ನೇಲ್' ಪರಾ.

[ದೇ.॥ ತಮಿ. ಞಾಱ್ಱು, ನಾಱ್ಱು ; ಮಲ. ಞಾಱ್ಱು]

**ನೇಟಲ್, ನೆಳಲು$_2$, ನೆಟಿಲ್$_2$, ನೇಳಲ್$_1$** (ನಾ). ಒಂದು ಬಗೆಯ ಮರ ; ಪ್ರಿಯಂಗು : "ಪ್ರಿಯಂಗು ಶ್ಯಾಮೆ ಫಲಿನಿ ನೇಟ[ಪಾಠಾಂ. ಕೇಳ, ಸೆಳ]ಲಕ್ಕು" (ಮಂಗರಾ. ೩೪-೯) ; ಪೊನ್ನೆಯ ಕಮ್ಮರದಾರ ಕೇರ ನೇಟ[ಪಾಠಾಂ.ರಿ]ಲ ಸಿರಿತಾಳೆಯಿಂಗುಳದ ನೆಲ್ಲಿಯ . . . ಮರಂಗಳ ಕೊಂಬುಗಳಂಬರಂಬರಂ ಪುದಿದು . . . ಕಱಂಗಿ ಕಟ್ಟಿಲಿಸುತಿರ್ದುದು ಕಾನನಮೆತ್ತ ನೋಟಿಸ್ಗೊಡಂ (ಲೀಲಾವ.೬-೨೧). **ನೆಳಲು$_2$ :** ನೇಱಿಲ ತೊಕ್ಕು, ಮಾವಿನ ಬಿತ್ತಣ, ಹೆಮ್ಮರದ ತೊಕ್ಕು, ನೆಳಲ ತೊಕ್ಕು . . . ಬಲವಱಿತು ಸೇವಿಸಲು ರಕ್ತಪಿತ್ತ . . . ಗ್ರಹಣಿ ಮೊದಲಾದ ವ್ಯಾಧಿಗಳು ಪರಿಹರ (ವೈದ್ಯಸಾ.I,೨೨೨). **ನೆಟಿಲ್$_2$:** "ನೆಟಿಲ್ = ಆತಪತ್ರಾದಿ ಛಾಯೆ; ಜಳದರ್ಪಣ ಪ್ರತಿಬಿಂಬಂ ; ಒಂದು ಮರಂ" (ಶಮದ. ಪರಿ. ೧); "ನೆಟಿಲ ಮರ – ಶ್ಯಾಮೆ, ಮಹಿಲೆ, ಲತೆ, ಗೋವಂದನಿ, ಗುಂದ್ರೆ, ಪ್ರಿಯಂಗು . . . ಪ್ರಿಯಕ" (ನಾಚಿರಾ. ೬) ; "ಉಂಬೞಿ ಕೊಡಗೆ ನೆಟಿಲೆನಲ್ಕೊಂದು ವೃಕ್ಷಂ" (ಸಂಜೀವ. ೫). **ನೇಳಲ್$_1$ :** ಪಲಸು ಪಡ್ಡಳಿಯರನೇಱಿಲ್ ನೇಳಲ್ ನೆಲ್ಲಿ . . . ಸಿರಿಸ ದಾಳಿಂಬದ ಸಾಲ್ಗಳ್ ಸಲೆ ಸೊಗಸಿದುವಲ್ಲಿ (ಜಯಕಾ. ೧೫-೪೩).

[ದೇ.॥ ತಮಿ. ಞಾಟಲ್, ನಾಟಲ್ ; ಮಲ. ಞಾಟಲ್]

**ನೈ** 'ನೆಯ್$_2$' ನೋ.

**ನೈಋತ, ನೈರುತ** (ನಾ). ೧. ಅಸುರ ; ರಾಕ್ಷಸ : "ರಕ್ಷಃ ಕೋಣಪ ನೈಋತ ರಾಕ್ಷಸ . . . ಕ್ಷಣದಾಚರರೆಂದು ಸದೃಕ್ಷಾರ್ಥಂಗಳ್ ನಿಶಾಟ ಪರ್ಯಾಯಂಗಳ್" (ವಸ್ತುಕೋ.೮-೪೨). ೨. ನೈಋತ್ಯ ದಿಕ್ಪಾಲಕ; ನಿಋತಿ: ಇಂದ್ರಃ, ಅನಲಃ, ಯಮಃ, ನೈಋತಃ, ವರುಣಃ, ಮರುತ್, ಧನದಃ, ರುದ್ರಃ — ಈ ೮ ಮೂಡಲ್ ಮೊದಲಾದೆಂಟು ದೆಸೆಗಂ ಕ್ರಮದಿಂದೊಡೆಯರ್ (ಹಲಾಯು.೧೭-೧೦೦). **ನೈರುತ :** 'ನೈರುತಾಗಮ' ಪರಾ. [<ಸಂ. ನೈರ್ಋತ]

**ನೈಋತಿ, ನೈರಿತಿ, ನೈರಿತ್ತಿ, ನೈರುತಿ** (ನಾ). ೧. ಪಶ್ಚಿಮ ಮತ್ತು ದಕ್ಷಿಣಗಳ ನಡುವೆ ಇರುವ ವಿದಿಕ್ಕು,—ಉಪದಿಕ್ಕು; ನೈಋತ್ಯ :

ನೋಡಿ ಹಯ ನೈಋತಿಯಂ ನೀಡುಂ ಕೀಳಿಱಿಂತುನಿರ್ಋತಿಪರಾಷ್ಟ್ರ ದೊಳಂ ಮಾಡುಗುಮಪಾರ ಭಯಮಂ ಮಾಡುಗುಮಧಿಪತಿಗೆ ತುರಗ ಮಥಿನವಹಂದಾ್ರ (ಅಶ್ವಶಾ. ೪-೫೨). **೨.** = ನೈಋತ **೨** : "ಯಾತು, ಯಾತುಧಾನಃ . . . ನೈಋತಃ, ಕೋಣಪಕಃ, ಕೈಕಸೇಯಃ—ಈ ೯ ನೈಋತಿಯ ಪೆಸರ್" (ಹಲಾಯು. ೧೩-೭೩). **ನೈರಿತಿ :** **೧.** ಅಲ್ಲಿಂ ಪಡುವಲು ಸೀವಟ್ಟದ ಸನ್ನಿನೊಳು ನೈರಿತಿಯ ಗುಡ್ಡೆ ಅಲ್ಲಿಂ ಬಡಗಲು ಸೀವಟ್ಟದ ತದ್ದರ ಪೊಲದ ಸಂದಿನಲು ವಾಯುವ್ಯದ ಗುಡ್ಡೆ (ಸೌಇಇ. XX, ೧೮-೩೯ ; 980) ; ತೆಂಕ ಪಾಲ್ವಳ್ಳಂ ನೈರಿತಿಯೊಳ್ವರವುಲಿಗೆಱೆಯ ತೆಂಕಣ ಕೋಡಿಯಿಂ ಬಡಗಲ್ಪರಿಯೆರದ ಕೊಳನುಂ . . . ಮೇರೆಯಾಗೆ (ಸೌಇಇ. XI-i, ೫೨-೫೬ ; 1007). **ನೈರಿತ್ತೆ :** **೧.** ಆಗ್ನೇಯದೆಸೆ ಪುಲ್ಲಾಯಟಿ ದಕ್ಷಿಣದೆಸೆ ತಳ(?) ಅಣ್ಣಯರ್ ನೈರಿತ್ತೆದೆಸೆ ನೆಲುಮುಟ್ಟು ಗೂರ್ ಪ್ರತಿಚಿದೆಸೆ ಪೆದ್ದಾಣ (ಎಕ. X (S), ಮುಳಬಾ. ೩೨೮-೫೧; ಸು. 650). **ನೈರುತಿ :** **೧.** "ನೈರುತಿ–ನೈಋರ್ತಿ = ಒಂದು ದಿಕ್ಕು" (ತದ್ಭಕೋ. ೨೩). **೨.** ಶತಮುಖ ಹುತವಹ ಯಮ ನೈರುತಿ ವರುಣ ಮರುತ್ಕುಬೇರ ಶೂಲಧರರ್ ದಿಕ್ಪತಿಗಳ್ (ಪಶ್ತುಕೋ. ೯-೪೮). ಸುರಪತಿಯ ಭೋಗ ವಹ್ನಿಯ ತೇಜವಂಧಕಾಸುರನದಟು ನೈರುತಿಯ ಕಾಯ್ಪು . . . ಚಂದ್ರನ ಶಾಂತಿವೆರಸಿ ರೂಪಾದುದೆನಿಸುವ ಹರಿಶ್ಚಂದ್ರ ಭೂವರನಾ ಪುರಕ್ಕೊಡೆಯನು (ಹಶಕಾ. ೧-೪೦). [<ಸಂ.ನೈಋರ್ತೀ]

**ನೈಋತ್ಯ**, ನೈರುತ್ಯ (ನಾ). = ನೈಋತಿ ೧ : ಆ ರಾಜಗೃಹಂಗಳಂ ಕಟ್ಟುವೊಡೆ . . . ತೆಂಕಲ್ ಪವಡಿಸುವ ಮನೆ ನೈಋತ್ಯದಲ್ಲಿ ಆಯುಧಂ ಗಳನಿರಿಸುವ ಮನೆ . . . ಕಟ್ಟಿಸುವುದು (ಲೋಕೋಪ.೩-೧೮ ಟೀಕೆ); ನಿರುತಂ ಕುಮುದಶೋಭಿ ನೈಋತ್ಯದಂತೆ ವಾನರಸೈನ್ಯದಂತೆ . . . ಹರಿಜನ್ಮಭೂಮಿ ಗೋಕುಲದಂತೆ ವನದಂತೆ ತತ್ಪುರಂ ಕಂಗೊಳಿಸಿತು (ಜೈಮಿಭಾ. ೧೫-೧೧). **ನೈರುತ್ಯ :** ಶ್ರೀಗಿರಿಯ ನೈರು[ಪಾಠಾಂ.ಋ]ತ್ಯ ದಿಗುಭೂಭಾಗದೊಳೆಸೆವ ಗಣ್ಯಪುಣ್ಯವಿಭಾಗವಾ ಕ್ಷೇತ್ರಂ . . . ನಂದಿಮಂಡಲವೆಂಬ ಪೆಸರಾಯ್ತು (ಬಸವ. ೨-೨೮) ; ತೊಲಗಿತಾ ಓ ಲಕ್ಷ್ಮಣಾ ದಿನಂ . . . ಶಕುನಿವಾಣಿಯೆ ಶಕುನಮಲ್ತೆ ನಡೆದರೊ ನೆಮ್ಮಿ ನೈರುತ್ಯಮಂ (ತ್ರೀರಾಮಾ. ೨೬೩-೫).

[<ಸಂ. ನೈಋರ್ತ್ಯ]

**ನೈಕ** (ಗು). ಏಕವಲ್ಲದ; ಅನೇಕ ; ಬಹಳ ; ಹೆಚ್ಚಾದ : ನೈಕ ಶತಮಾನದಿಂ ಭೀಷ್ಮಪವಮಾನಹತಿಯಂ ಪ್ರತಿಭಟಿಸಿ ಮಲೆತು ನಿವಿರಿರ್ದ ಗರುವ ತರುವರಕುಲಂ ಮೂಲಮಂ ತಿರಿಪಿ ಮಿಾಂಟಿದವೋಲ್ ನೆಲ ಕ್ಕುರುಳಿದುವು (ಚಿತ್ರಾಂಗ. ೪೮-೧೩೧). [ಸಂ.]

**ನೈಕುಣಿಕೆ** (ನಾ). ಒಂದು ಬಗೆಯ ಮರ (?) : ನಲಿವ ಕೆಂದಡಸ ಭೂತಾಳೆ ಧುಂದುರ ಹಿತದಿ ಕಿಲುಬದರಿ ಬಿದುರು ಬೆತ್ತರ ಬಿಲ್ಲ ಕಲ್ಲತ್ತಿ ಬಿಲುವರ ಕಪಿತ್ಥ ನೈಕುಣಿಕೆ[ಪಾಠಾಂ.ನೈಕುಣಿ](ರುಕ್ಮಾಂಗ. ೧೦-೨).[?]

**ನೈಗಮ** (ಗು). **೧.** ನಿಗಮಕ್ಕೆ ಸಂಬಂಧಿಸಿದ; ವೇದಕ್ಕೆ ಸಂಬಂಧಿಸಿದ. (ನಾ). **೨.** ಬೀದಿ ; ದಾರಿ ; ರಸ್ತೆ. **೩.** ಪಟ್ಟಣಿಗ ; ನಾಗರಿಕ ; ಪೌರ. **೪.** ವರ್ತಕ ; ವ್ಯಾಪಾರಿ : "ಪಣ್ಯಾಜೀವಃ . . . ನೈಗಮಃ, ವೈದೇಹಃ—ಈ ೫ ಹರದಂ" (ಹಲಾಯು. ೯೩-೪೧೬) ; "ಬಣಂಜಿಸುವವಂ ವಿಪಣಿಕಂ ನೈಗಮಂ ವಣಿಜನಕ್ಕು"(ಮಂಗರಾ.೧೦೨-೧). **೫.** [ಜೈನ] ನಯಗಳಲ್ಲಿ ಒಂದು ; ನೈಗಮ, ಸಂಗ್ರಹ ಮತ್ತು ವ್ಯವಹಾರ ಎಂಬ ದ್ರವ್ಯಾರ್ಥಿಕನಯದ ಮೂರು ಭೇದಗಳಲ್ಲಿ ಒಂದು; ℙ ಪದಾರ್ಥಗಳನ್ನು ಪ್ರತ್ಯೇಕವಾಗಿ ನಿರ್ದೇಶಿಸದೆ ಗೌಣ ಮಾಡಿ, ಅವುಗಳ ಉದ್ದೇಶ ಅಥವಾ ಸಂಕಲ್ಪವನ್ನು ಹೇಳುವ ಅಥವಾ ಗ್ರಹಣ ಮಾಡುವ ಜ್ಞಾನ : ನೈಗಮ ಸಂಗ್ರಹ ವ್ಯವಹಾರ ಋಜುಸೂತ್ರ ಶಬ್ದ ಸಮಭಿರೂಢೈವಂಭೂತಾದಿ ನಯವಿಭೇದದಿಂ ನಾಮ ಸ್ಥಾಪನಾದ್ರವ್ಯಭಾವದಿಂ . . . ನಿರ್ಮಳಮಪ್ಪ ಸಮ್ಯಕ್ತ್ವರತ್ನಮಂ ಕೈಕೊಂಡು(ಸುಕುಮಾ.೩-೩೯ ವ) ; ವಸ್ತುವಿನ ಸ್ವರೂಪವನ್ನು ವಿವೇಚಿಸದೆ ಯಾವುದೊಂದು ಬಾಹ್ಯವಿಷಯದ ಸಂಬಂಧದಿಂದ ವಿಚಾರಮಾಡುವುದು ನೈಗಮವು (ಜೈನಧ. IX, ಉಪೋದ್ಘಾತ). [ಸಂ.]

**ನೈಗಮನಯ** (ನಾ). = ನೈಗಮ **೫** : ತತ್ತ್ವಾರ್ಥಸೂತ್ರದಲ್ಲಿ ನೈಗಮ ನಯ ೧ನೆಯದು . . . ಕಟ್ಟಿಗೆ, ನೀರು, ಅಕ್ಕಿಗಳನ್ನು ಇಟ್ಟುಕೊಂಡಿರುವ ಮನುಷ್ಯನಿಗೆ 'ನೀನು ಏನು ಮಾಡುವಿ?' ಎಂದು ಕೇಳಿದರೆ, 'ಅನ್ನ ಮಾಡುವೆ' ಎಂದು ಹೇಳುವನು. ಈ ಹೇಳಿಕೆಯು ನೈಗಮನಯಕ್ಕೆ ಅನುಸರಿಸಿ ಇದೆ (ಜೈನಪ. ೨೨೪). [ನೈಗಮ + ನಯ$_2$]

**ನೈಗೆ** 'ನೇಯ್ಗೆ' ನೋ.

**ನೈಚಿಕಿ** (ನಾ). **೧.** ಶ್ರೇಷ್ಠವಾದ ಗೋವು,—ಹಸು : "ಶ್ರೇಷ್ಠಾ : ನೈಚಿಕೀ—ಈ ೨ ತಲೆಯಾವು" (ಹಲಾಯು. ೪೫-೧೧೬) ; "ನೈಚಿಕಿ ಶ್ರೇಷ್ಠೆಯೆನೆ ತಲೆಯಾವೆನಿಕ್ಕು" (ಮಂಗರಾ. ೫೪-೪). **೨.** ಎತ್ತಿನ ಹಣೆ,—ತಲೆ : "ಹಣೆ ನೈಚಿಕಿಯೆನಿಕ್ಕು" (ಮಂಗರಾ. ೫೩-೨).

[ಸಂ. ನೈಚಿಕೀ]

**ನೈಚಿಕೆ** (ನಾ). **೧.** ಶ್ರೇಷ್ಠವಾದ ಹಸು; ಉತ್ತಮವಾದ ಗೋವು: "ಗೋಮತಲ್ಲಿಕೆ ಭದ್ರಾಖ್ಯನಂ ನೈಚಿಕೆಯೆನಿಕುಂ ತಾನು[ತ್ರ]ಮವು ದುವೆ" (ವಸ್ತುಕೋ. ೯೦-೭) ; ಅಲಘುಕಾಂಚನರಾಶಿಗಳನುಜ್ವಲವೆನಿಪ ಮಣಿಭೂಷಣಾಳಿಯ ಲಲಿತಪಟ್ಟಾಂಶುಕಸಮೂಹವನಗ್ರಹಾರಗಳ ಸಲೆ ಘಟೋಧ್ನಿಗಳಾದ ನೈಚಿ[ಚಿ]ಕೆಗಳನು ದಣಿವಂದದಲಿ ವಿಪ್ರಾವಳಿಗೆ ಪಿರಿದೆ ನಲಂಬಿಕಾಸುತನಿತ್ತನೊಲವಿನಲಿ (ತಿಮ್ಮಕ್ರ. ೨-೨೭). **೨.** ಎತ್ತಿನ ಹಣೆ, —ತಲೆ : (ಶ). [<ಸಂ. ನೈಚಿಕೀ]

**ನೈಚ್ಯ** (ನಾ). ಸಣ್ಣತನ ; ನೀಚತನ ; ಕ್ಷುಲ್ಲಕತೆ : ನೈಚ್ಯವನ್ನು ಸೂಚಿಸುವುದಕ್ಕಾಗಿ ಗಂಡಸರ ಹೆಸರಿಗೆ ಇಗ, ಹೆಂಗಸರ ಹೆಸರಿಗೆ ಇ ತುಣುಕುಗಳನ್ನು ಸೇರಿಸುವುದುಂಟು (ನಮ್ಮನು. ೨೧೭) ; ಹೊಗಳಲೆ ನಾಡಿನ ನೈಚ್ಯವನಳಿಸಿದ ಕಾರ್ಯವ ಹೊಗಳಲೆ ನರಪಶು ಮಾನವನೆನಿಸಿದ ಕಾರ್ಯವ (ಅಮತಂ. ೫೪-೧೪).; ಪಾಳಯಗಾರರು . . . ನಮ್ಮ ಕನ್ನಡ ನಾಡುಗಳಲ್ಲಿ ಈ ಶಬ್ದದ ಪ್ರಯೋಗವು ಅಷ್ಟು ನೈಚ್ಯವನ್ನು ಹೊಂದದೆ 'ಪ್ರಸಿದ್ಧ' ಎಂಬ ಅರ್ಥವನ್ನೇ ಒಳಗೊಂಡಿದೆ (ಪಾಳಗಾ. ೩). [ಸಂ.]

**ನೈಚ್ಯಭಾವ** (ನಾ). ತಾನು ಕೀಳೆಂಬ ಭಾವ : ಇಂದು ಸುಶಿಕ್ಷಿತರೆನಿಸಿಕೊಳ್ಳುವ ಆಂಗ್ಲವಿದ್ಯಾವಂತರಲ್ಲಿ ಕೀಳುತನದ ಭಾವ ಅಥವಾ ನೈಚ್ಯಭಾವ (Inferiority complex) ಎಂಬ ಶಬ್ದವು ಬಹಳವಾಗಿ ಬಳಕೆಯಲ್ಲಿ ಬಂದಿರುವುದಷ್ಟೆ (ಮನೋರೋ. ೩೪). 'ನೈಚ್ಯಾನುಸಂಧಾನ' ಪರಾ. [ನೈಚ್ಯ + ಭಾವ$_2$]

**ನೈಚ್ಯಾನುಸಂಧಾನ** (ನಾ). ಕೀಳ್ತನದ ಭಾವನೆಯನ್ನು ತನ್ನಲ್ಲಿ ಆರೋಪಿಸಿಕೊಳ್ಳುವುದು ; ತಾನು ಸಣ್ಣವನು ಎಂದು ಭಾವಿಸಿಕೊಳ್ಳುವುದು : "ದಾಸರ ದಾಸನು ನಾನು ದೋಷಿಗಳಗ್ರೇಸರ ನಾನು" ಎಂದು ನೈಚ್ಯಾನುಸಂಧಾನ ಮಾಡಿ ಮಾತನಾಡುತ್ತಿದ್ದರು (ಕಭವಿ.I, ೧೫೪) ; ಹರಿಸಿಂಗನೂ ಆತನ ಕಡೆಯವರೂ . . . ನೈಚ್ಯಾನುಸಂಧಾನದಿಂದಲೇ ದೊಡ್ಡ ಪದವಿಗೇರಿದನೆಂದು ಹೇಳುತ್ತ, ಸಮಯ ಬಂದಂತೆ ಹೈದರನಿಗೆ ಹೆಚ್ಚು ಹೆಚ್ಚು ಅಧಿಕಾರವನ್ನು ಕೊಡುವುದು ಯುಕ್ತವಲ್ಲವೆಂದು ದೇವರಾಜಯ್ಯನಿಗೆ ಹೇಳುತ್ತಿದ್ದರು (ಒಡೆಕ. ೭೮); ಕಲಾಧರಾ. . . ನೀನು ಆಕೆಯು ಮೆಚ್ಚುವಂತೆ ವಾದ್ಯವನ್ನು ನುಡಿಸಲು ಶಕ್ತನಾಗಿದ್ದೀಯೆ. ಹೀಗೆ ನೀನು ನೈಚ್ಯಾನುಸಂಧಾನವನ್ನು ಮಾಡಿಕೊಳ್ಳಬೇಡ ; ತೆಗೆದುಕೋ ವಾದ್ಯವನ್ನು (ಕಲಾಧ. ೨೪). [ನೈಚ್ಯ + ಅನುಸಂಧಾನ]

**ನೈಜ** (ಗು). ೧. ಸ್ವಂತದ; ತನ್ನದೇ ಆದ; ಸ್ವಕೀಯ : ರೇಣುಕೆಯುಂ ಜಾನಕಿಯುಂ . . . ಕ್ಷೋಣಿಯೊಳಧಮಚರಿತ್ರದ ಜಾಣೆಯರಂ ಜಱಿದು ನೈಜ ನೀತಿಯೊಳೆಸೆದಳ್(ಹವಿಪ್ರಾ.ರ.೨-೩೬); ಸಕಲಾಗಮಾರ್ಥವನೀವ ಷಟ್ಸ್ಥಲದ ಗುರುವೆ ನೈಜಾಂಘ್ರಿಶರಣಾಗತರನುರೆ ಪೊರೆವ (ಸುಮಾಪು. ೧-೨೬). ೨. ನಿಜವಾದ; ಸಹಜವಾದ; ಸ್ವಾಭಾವಿಕವಾದ; ಕೃತ್ರಿಮವಲ್ಲದ : ಇವುಗಳಲ್ಲಿ ಕೇವಲ ಕಲ್ಪನೆಗಳ ಹುಚ್ಚಾಟವಿರದೆ ನೈಜಭಾವದ ನಾವೀನ್ಯವು ತುಂಬಿ ಹರಿಯುವುದು (ಕನ್ನಜಾ. ೪೪). ೩. ಸ್ವತಸ್ಸಿದ್ಧವಾದ; ಆಗಂತುಕವಲ್ಲದ : ಶ್ರೀತರುಣಿವಲ್ಲಭನ ಪರಮವಿಭೂತಿರೂಪವ ಕಂಡಕಂಡಲ್ಲೀ ತಿಳಿದು ಚಿಂತಿಸುತ ಮನದಲಿ ನೋಡು ಸಂಭ್ರಮದಿ ನೀತ ಸಾಧಾರಣ ವಿಶೇಷ ಸಜಾತಿ ನೈಜಾಹಿತವು ಸಹಜ ವಿಜಾತಿ ಖಂಡಾಖಂಡ ಬಗೆಗಳನಱಿತು ಬುಧರಿಂದ (ಹಸಾರ. ೫-೧) ; ಕನ್ನಡದ ಒಂದೆರಡು ವಿಭಕ್ತಿಗಳು ನೈಜಸೃಷ್ಟಿಯಾಗಿರದೆ ಕೇವಲ ವೈಯಾಕರಣರು ಸಂಸ್ಕೃತಾನುಕರಣೆಯಿಂದ ಮಾಡಿಕೊಂಡ ಕೃತಕವ್ಯವಸ್ಥೆಯಾಗಿವೆ (ದ್ರಾವಿವಿ. ೨೧೨). (ನಾ). ೪. ನಿಜ ; ಸತ್ಯ ; ದಿಟ : "ಸತ್ಯಕ್ಕೆ ನೈಜಂ ನನ್ನಿಯೆಂದಕ್ಕು" (ಕಬ್ಬಿಕೈ. ೪೭) ; ಮೂಜಗಕೆ ರುದ್ರಾಕ್ಷಿ ಸಿತ ರಕ್ಷಾಜಟಾವಳಿ ನಿತ್ಯಮುಕ್ತಿಗೆ ನೈಜವಪ್ಪನುಸಾರಿವೇಷವು ಭವನಿವಾರಣವು (ಬಸಪು. ೩-೬೪) ; ಅಸ್ವಭಾವಕಮಲ್ಲ ನೈಜಮಿದು ತನಗೆನೆ ತಪಸ್ವಿಗಳ ಮೌಳಿಮಣಿ ನಾರದಂ ಪೋಗಿ ವೈವಸ್ವತಂಗಱುಪಿ . . . ವೀರವರ್ಮನಂ ಕಂಡು ಸತ್ಯತನಾಗಿ ವಿವರಿಸಿದನು (ಜೈಮಿಭಾ. ೨೭-೨೦). ೫. ಸಹಜವಾದುದು ; ಸ್ವಾಭಾವಿಕವಾದುದು : ಭೇದಕರ್ ಬಹುವಿಧದೆ ಪರಿಕಿಸಲೊಳಗುಗಾಣದಂತೆ ಛಿದ್ರಿಸಿ ತೆಗೆವ ಜಾಣ್ಕೆ ಕಡುನೈಜಮಾಗೆ ಪರಮಲಂಚವೆ ತಮಗೆ ಜೀವನಮದೆನಿಸಿ ಚಚ್ಚರದಿಂದಲೈಶ್ವರ್ಯಮಂ ಪಡೆದು ನೆಱೆ ಬಾಳ್ವ ಕರಣಿಕಶಿರೋಮಣಿಗಳೊಪ್ಪಿರ್ದರು (ಚಿಬಪು. ೭-೭) ; ಮರದಿನನೆ ನೈಜದಿಂದರಳೆ ಸೊಗವೆಲ್ಲರ್ಗೆ ಸೆರೆಮನೆಯ ನೇಮವೇಂ ? (ಮಂಕುಕ. ೪೪೫). [ಸಂ.]

**ನೈಜಗುಣ** (ನಾ). ಸಹಜವಾದ ಗುಣ ; ನಿಜಸ್ವಭಾವ : ಬಾಹ್ಯತರದ ಬೆಡಗನೊಂದೆ ಬಗೆದು ಬೆಲೆಯ ಕಟ್ಟಿ ಮುಂದೆ ತೋರುತಿರುವ ನೈಜಗುಣವನರಿಯದಿದ್ದನು (ಕವಿಕಾ. ೪೫-೧೫). [ನೈಜ + ಗುಣ]

**ನೈಜಚಿತ್ರ** (ನಾ). ಸಹಜವಾದ ಚಿತ್ರ ; ವಾಸ್ತವ ಚಿತ್ರ : ಜೀವನದ ವಿವಿಧ ನೈಜಚಿತ್ರಗಳನ್ನು ಚಿತ್ರಿಸುವ ಈ ಹಾಡುಗಳು ರೈತನಿಗೆ ಆನಂದವಾದಾಗಾಗಲಿ, ಇಲ್ಲವೆ ದಿನದ ದುಡಿಮೆಯ ದಣಿವನ್ನಾರಿಸಿಕೊಳ್ಳುವುದಕ್ಕಾಗಲಿ ಹೊರಹೊಮ್ಮಿದವುಗಳು (ಕನ್ನಜಾ. ೧೪೦). [ನೈಜ+ಚಿತ್ರ]

**ನೈಜರೂಪ** (ನಾ). ಪ್ರಕೃತಿ ರೂಪ ; ಮೂಲ ರೂಪ : ಕನ್ನಡದಲ್ಲಿ ಇರುವಂತೆ ಉಳಿದ ದ್ರಾವಿಡಭಾಷೆಗಳಲ್ಲೂ ಶಬ್ದದ ನೈಜರೂಪವೇ ಏಕವಚನದಲ್ಲಿ—ಪ್ರಥಮಾವಿಭಕ್ತಿ ರೂಪವಾಗುತ್ತದೆ (ದ್ರಾವಿವಿ. ೨೧೨). [ನೈಜ+ರೂಪ]

**ನೈಜಸಾಹಿತ್ಯ** (ನಾ). ಸೃಜನಶೀಲವಾದ ಸಾಹಿತ್ಯ : ವೈಯಕ್ತಿಕ ಅನುಭವ ಎಲ್ಲ ನೈಜಸಾಹಿತ್ಯದ ಅಡಿಗಲ್ಲು (ಸಾಹಿಪ್ರ. ೧೦). [ನೈಜ+ಸಾಹಿತ್ಯ]

**ನೈಜಸ್ಥಿತಿ** (ನಾ). ಸಹಜವಾದ ಸ್ಥಿತಿ ; ವಾಸ್ತವ ಸ್ಥಿತಿ : ಮಕ್ಕಳು . . . ನೈಜಸ್ಥಿತಿಗೂ ಕಲ್ಪನಾಸ್ವರೂಪಕ್ಕೂ ವ್ಯತ್ಯಾಸವನ್ನು ಕಂಡುಕೊಳ್ಳುತ್ತಾರೆ (ಶಿಕ್ಷದ. ೧೧೧೦). [ನೈಜ+ಸ್ಥಿತಿ]

**ನೈಜಸ್ವರೂಪ** (ನಾ). ಸಹಜವಾದ ಸ್ವರೂಪ ; ವಾಸ್ತವ ಸ್ವರೂಪ : ಕೇಶಿರಾಜ . . . ಬಣ್ಣಿದ ಕನ್ನಡಕೆ ಉಪಯೋಗಿಸದೆ ಬರಿಗಣ್ಣಿನಿಂದ ಕನ್ನಡನುಡಿಯ ಸೌಷ್ಠವವನ್ನು ಅವಲೋಕಿಸಿದ್ದರೆ ಕನ್ನಡದ ಇನ್ನೂ ಅನೇಕ ಬೆರಗುಗಳನ್ನು ಗುರುತಿಸಲೂ ಹಾಗೂ ಕನ್ನಡದ ನೈಜಸ್ವರೂಪವನ್ನು ಚೆನ್ನಾಗಿ ನೋಡಲೂ ಸಾಧ್ಯವಾಗುತ್ತಿತ್ತು (ದ್ರಾವಿವಿ. ೨೯೨). [ನೈಜ+ಸ್ವರೂಪ]

**ನೈತಿಕ** (ಗು). ನೀತಿ ಸಂಬಂಧವಾದ ; ತಾತ್ತ್ವಿಕವಾದ : ಈ ಕೃತಿಯಲ್ಲಿ . . . ನೈತಿಕ ಮತ್ತು ಸಾಮಾಜಿಕ ಮೌಲ್ಯಗಳಿಗೇ ಹೆಚ್ಚಿನ ಅವಕಾಶ ಕಲ್ಪಿಸಿಕೊಂಡಿದೆ (ಶಿಕ್ಷದ. VI, ಮುನ್ನುಡಿ) ; ಅಲ್ಲಿರಬಹುದಾದ ನೈತಿಕ ಮತ್ತು ಸಾಮಾಜಿಕ ಅಂಶಗಳನ್ನು ಕುರಿತು ಉಪಾಧ್ಯಾಯರು ಮಕ್ಕಳಿಗೆ . . . ಹೇಳುವುದು ಅನುಚಿತವಾಗಲಾರದು (ಶಿಕ್ಷದ. ೨೪೨). [ಸಂ.]

**ನೈತಿಕದೃಷ್ಟಿ** (ನಾ). ನೀತಿನಿಷ್ಠವಾದ ದೃಷ್ಟಿ ; ತತ್ತ್ವನಿಷ್ಠವಾದ ದೃಷ್ಟಿ : ಅಪರಾಧಿಯ ಗುಣಸ್ವಭಾವಗಳ ಮತ್ತು ನೈತಿಕದೃಷ್ಟಿಯ ವಿವರಣೆ ಕ್ರಿಮಿನಲ್ ಮೊಕದ್ದಮೆಗಳಲ್ಲಿ . . . ಪ್ರತಿಪಾದಿಸಿದೆ (ಪುನರು. ೨೦೩) ; ನೈತಿಕದೃಷ್ಟಿಯಿಂದ ಅವನ ವ್ಯಕ್ತಿತ್ವ ಕೇಶವನಿಗಿಂತ ಹೆಚ್ಚು ಗಟ್ಟಿಮುಟ್ಟಾದದ್ದು (ಹೊಸಕ್ಷಿ. ೨೯೫). [ನೈತಿಕ+ದೃಷ್ಟಿ]

**ನೈತಿಕಧೈರ್ಯ** (ನಾ). ನೀತಿಯಲ್ಲಿನ ಶ್ರದ್ಧೆಯಿಂದ ಬರುವ ಧೈರ್ಯ ; ತಾತ್ತ್ವಿಕ ಬಲ,—ಸ್ಥೈರ್ಯ : ಅವರೆದುರು ನಿಲ್ಲುವ ನೈತಿಕಧೈರ್ಯ ಆ ಕಳ್ಳ ಹೃದಯಕ್ಕೆ ಇದ್ದರಲ್ಲವೆ? (ಹೊಸಕ್ಷಿ. ೨೫). [ನೈತಿಕ + ಧೈರ್ಯ]

**ನೈತಿಕಪ್ರಜ್ಞೆ** (ನಾ). ನೀತಿ ಸಂಬಂಧವಾದ ಅರಿವು : ತನ್ನ ನಾಗರಿಕತೆಯ ದುರ್ಬಲತೆಗಳೇನು ಎಂಬುದನ್ನು ಚರ್ಚಿಸುವಷ್ಟು ಬುದ್ಧಿಶಕ್ತಿ ಮತ್ತು ನೈತಿಕಪ್ರಜ್ಞೆ ಅವನಲ್ಲಿವೆ (ಹೊಸಕ್ಷಿ. ೨೯೫). [ನೈತಿಕ + ಪ್ರಜ್ಞೆ]

**ನೈತಿಕಬಲ** (ನಾ). ನೀತಿಯನ್ನು ಅನುಸರಿಸುವುದರಿಂದ ಬರುವ ಶಕ್ತಿ ; ತಾತ್ತ್ವಿಕವಾದ ಬಲ,—ಸ್ಥೈರ್ಯ : ನೈತಿಕಬಲವಿಲ್ಲದ ವ್ಯಕ್ತಿ ಏಳಿಗೆ ಹೊಂದಲಾರನು (ರೂಢಿ). [ನೈತಿಕ + ಬಲ$_3$]

**ನೈತಿಕಭೂಮಿಕೆ** (ನಾ). ನೀತಿಯ ಮಟ್ಟ,—ಅಂತಸ್ತು : ಜನಸಾಮಾನ್ಯದ ಮಟ್ಟವನ್ನು ಮೀರಿ, ಅವರಿಗೆಟುಕದ ನೈತಿಕಭೂಮಿಕೆಯಲ್ಲಿದ್ದರೆಂಬ ಕಾರಣದಿಂದ ನಾಲ್ಕನೆಯ ಗುಂಪಿನ ಜನರಿಗೆ ಶಿಕ್ಷೆ ವಿಧಿಸಲಾಗಿತ್ತು (ಪುನರು. ೪೧೩). [ನೈತಿಕ + ಭೂಮಿಕೆ]

**ನೈತಿಕಮಟ್ಟ** (ನಾ). ನೀತಿಯ ಸ್ಥಾನಮಾನ : ಎಲ್ಲ ವ್ಯವಹಾರಗಳಲ್ಲೂ ನಮ್ಮ ನೈತಿಕಮಟ್ಟವನ್ನು ಕಾಯ್ದುಕೊಳ್ಳಬೇಕು (ರೂಢಿ). [ನೈತಿಕ + ಮಟ್ಟ$_1$]

**ನೈತಿಕಮಾರ್ಗ** (ನಾ). ನೀತಿಯುಕ್ತವಾದ ಮಾರ್ಗ ; ಧರ್ಮಮಾರ್ಗ ; ನೀತಿಗೆ ಅನುಸಾರವಾದ ದಾರಿ : ತಮ್ಮ ಸಂಸಿದ್ಧಿಗಳನ್ನು ನೀತಿಯುತವಾದ ಮಾರ್ಗದಲ್ಲಿ ಪ್ರಯೋಗಿಸುವ ಸ್ವಾತಂತ್ರ್ಯ ವಿಜ್ಞಾನಿಗಳಿಗಿಲ್ಲವಾಗಿದೆ. ಇಂತಹ ನೈತಿಕಮಾರ್ಗವನ್ನು ತೋರಿಸಲು ಅವಶ್ಯಕವಾದ ಆಧ್ಯಾತ್ಮಿಕ ಹಿನ್ನೆಲೆಯೂ ಈ ವಿಜ್ಞಾನಿಗಳಿಗಿಲ್ಲ (ಮಕ್ಸಾರ. ೪೨ ಪೀಠಿಕೆ). [ನೈತಿಕ+ಮಾರ್ಗ]

**ನೈತಿಕಾಂಶ** (ನಾ). ನೀತಿಸಂಬಂಧವಾದ ಅಂಶ ; ನೀತಿಯ ವಿಚಾರ: ಮೂಲಶಿಕ್ಷಣಶಾಲೆಯಲ್ಲಿ . . . ಧಾರ್ಮಿಕಶಿಕ್ಷಣವನ್ನು ಕಡ್ಡಾಯವಾಗಿ ಸೇರಿಸಿಲ್ಲ. ಆದರೆ, ಎಲ್ಲರಿಗೂ ಸಾಮಾನ್ಯವೆನಿಸುವ ನೈತಿಕಾಂಶಗಳನ್ನು ಬೋಧಿಸುವುದನ್ನು ಅದು ಒಪ್ಪುವುದು (ಶಿಕ್ಷದ. ೭೧೯). [ನೈತಿಕ + ಅಂಶ]

**ನೈದಿಧ್ಯಾಸ** (ನಾ). ಚೆನ್ನಾಗಿ ಅನುಸಂಧಾನ ಮಾಡುವುದು ; ಪದೇ ಪದೇ ನೆನಸಿಕೊಳ್ಳುವುದು,—ಆಲೋಚನೆ ಮಾಡುವುದು: ಈ ಸೊಬಗಿನಿಂ ಮೆರವ ನೈದಿಧ್ಯಾಸ ಮನನ ಶ್ರವಣಮಲ್ಲದೆ ವಾಸುದೇವನ ನೆಲೆಯನೈದಲಸಾಧ್ಯಮನ್ಯದಲೀ(ಗಗತಾ.೧೭-೪೯). 'ನಿದಿಧ್ಯಾಸ' ಪರಾ. [ಸಂ.]

**ನೈದಿಲ್** 'ನೆಯ್ದಿಲ್' ನೋ.

**ನೈದಿಲು** 'ನೆಯ್ದಿಲ್' ನೋ.

**ನೈದಿಲೆ** 'ನೆಯ್ದಿಲ್' ನೋ.

**ನೈದಿಲೆಗೆಡ್ಡೆ** (ನಾ). ನೆಯ್ದಿಲೆಯ ಗಡ್ಡೆ : ಭದ್ರಮುಸ್ತೆ, ನೈದಿಲೆ ಗೆಡ್ಡೆ, ಅಮರದವಳ್ಳಿ . . . ಶ್ರೀಗಂಧ, ಪರ್ಪಾಟಕ ಸಹ ಕಷಾಯ ಕಾಯಿಸಿ ತೆಗೆದುಕೊಳ್ಳಲು ಪಿತ್ತಜ್ವರ ಪರಿಹಾರವಾಗುವುದು(ಸಕವೈ. ೭೯). [ನೈದಿಲೆ(<ನೆಯ್ದಿಲ್)+ಗೆಡ್ಡೆ(<ಗಡ್ಡೆ)]

**ನೈದಿಲೆಗೋಲ್** 'ನೆಯ್ದಿಲ್‌ಗೋಲ್' ನೋ.

**ನೈದಿಲ್ಗೊಳ** 'ನೆಯ್ದಿಲ್ಗೊಳ' ನೋ.

**ನೈಪಥ್ಯ** (ನಾ). ಅಲಂಕಾರಕ್ಕಾಗಿ ಬಳಸುವ ಆಭರಣ, ಉಡುಗೆ ತೊಡುಗೆ, ವೇಷಭೂಷಣ, ಲೇಪನ ಇತ್ಯಾದಿ : ಕುಡುಮಿಂಚಂ ಪಲವಂ ವಿಗುರ್ವಿಸಿದನಿಂದ್ರಂ ಪುಷ್ಪಬಾಣಂಗಳಿಂ ಪಡೆದಂ ಪೆಣ್ಬಡೆಯಂ ಮನೋಜನೆನೆ ನೈಪಥ್ಯಂ ಬೆಡಂಗಪ್ಪಿನಂ ನಡೆಗೊಂಡತ್ತು . . . ನಾನಾ ನರ್ತಕೀನೈಕಿಕಂ (ಮಲ್ಲಿಪು. ೧೨–೬೭) ; ಸತ್ಕುಲಾಚಾರ ಕುಲವೇದ ಶಾಸ್ತ್ರಪಾಂಡಿತ್ಯದ ಸುವಿಪ್ರರಿಪ್ಪತ್ತು ಸಾವಿರಕೆ ನೈಪಥ್ಯವಸ್ತ್ರಾದಿ ಪೂಜೆಗಳಿಂದೆ ಸತ್ಕರಿಸಿ . . . ಸಾಲಂಕಾರಗೋಸಹಸ್ರವನೊಂದು ಭಾರ ಪೊನ್ನಂ ಕುಡುವುದು (ಜೈಮಿಭಾ. ೨–೨೭) ; ನಿಜಾಕರಂ ಜಾಜಿ ನೈ[ಪಾಠಾಂ. ನೇ]ಪಥ್ಯಮಂ ತಾಂ ತೊಡೆದಿರ್ದಿರ್ದಂತೆ ಬಂದಂದವನಿಸಿತಿಯನಬ್ಬಾಕ್ಷಿ ನೋಡುತ್ತಮಿರ್ದಳ್ (ರಾಜಶೇ. ೭–೮). 'ನೈಪಥ್ಯಗೃಹ' ಪರಾ. [ಸಂ.]

**ನೈಪಥ್ಯಂಗೆಯ್** (ಕ್ರಿ). ಅಲಂಕಾರ ಮಾಡಿಕೊಳ್ಳು ; ವೇಷಭೂಷಣಗಳನ್ನು ಧರಿಸು : ಸಮಯ ಸಮುಚಿತ ನೈಪಥ್ಯಂಗೆಯ್ದು ಝುಗಝುಗಿಪ ಜವನಿಕೆಯ ಮರೆಯೊಳ್ ಕಂದರ್ಪವಿವಾಹದೊಳಂದಂಬಡೆದ ಪೊಂದೆರೆಯಂ ಮರೆಗೊಂಡು ನಿಂದ ರತಿಯಂ ಪೋಲ್ತು ನಿಂದಿರ್ಪುದುಂ (ರಾಜಶೇ. ೫–೧೯ ವ). [ನೈಪಥ್ಯ+ಕೆಯ್$_1$]

**ನೈಪಥ್ಯಂದಳೆ** (ಕ್ರಿ). = ನೈಪಥ್ಯಂಗೆಯ್ : ರಾಜಶೇಖರರಾಜೇಂದ್ರ ನೋಡೆಯಿಂದಾಜಿಸನ್ನದ್ಧನಾಗಿ ಯಥೋಚಿತ ನೈಪಥ್ಯಂದಳೆದಮಾತ್ಯ ಸಮೇತಂ ಪಣ್ಣಿ ಬಂದಿಭೇಂದ್ರಮನೇಱಿ . . . ಶಿಬಿರಕ್ಕೆ ನಡೆತರ್ಪಾಗಳ್ (ರಾಜಶೇ. ೬–೧೧ ವ). [ನೈಪಥ್ಯ+ತಳೆ$_1$]

**ನೈಪಥ್ಯಂಬಡೆ** (ಕ್ರಿ). = ನೈಪಥ್ಯಂಗೆಯ್ : ಕೋಳಾಯಿಲರ್ ನೆರೆದು . . . ಸಮರಸಮಯಸಮುಚಿತ ನೈ[ಪಾಠಾಂ.ನೇ]ಪಥ್ಯಂಬಡೆದಬ್ಬರಿಸಿ ಬೊಬ್ಬೆಗೊಟ್ಟೇಱಿ ಸರಭಸಂ ಪರಿಯಿಪಾಗಳ್ (ರಾಜಶೇ. ೬–೧೧ ವ). [ನೈಪಥ್ಯ+ಪಡೆ$_1$]

**ನೈಪಥ್ಯಗೃಹ** (ನಾ). ಅಲಂಕಾರಮಂದಿರ ; ವೇಷಭೂಷಣಗಳನ್ನು ಧರಿಸುವ ಸ್ಥಳ ; ಪ್ರಸಾಧನ ಗೃಹ : ಮಜ್ಜನಂಬೊಕ್ಕು ನೈಪಥ್ಯಗೃಹಕ್ಕೆ ವಂದು ಕೈಗೆಯ್ಯಲೊಡಂ ಆ ರಾಜಶೇಖರಂಗೇಂ ರಾರಾಜಿಸಿದುದೊ ವಿಚಿತ್ರಮಣಿಗಣರಚನೋದಾರಂ ಶೇಖರಮುಜ್ವಳಮೇರುಶಿಖರ ಶಿಖರರತ್ನದೊಳ್ ಸರಿವರುತುಂ (ಚಂದ್ರಪ್ರ. ೬–೫೫ ವ). [ನೈಪಥ್ಯ+ಗೃಹ]

**ನೈಪಥ್ಯನಿಳಯ** (ನಾ). = ನೈಪಥ್ಯಗೃಹ : ಅನಂತರಂ ನೈಪಥ್ಯನಿಳಯಕ್ಕೆ ವಂದು . . . ನೆನೆಯಿಸಿದಂ ಮುಳಿಂದನಮ್ಮ ತಾಬ್ಧಿಯೋಳಿರ್ಪ ನಿಜಾದಿಮೂರ್ತಿಯಂ (ಜಗವಿ. ೧೦–೧೦೦ ವ). [ನೈಪಥ್ಯ+ನಿಳಯ(=ನಿಲಯ)]

**ನೈಪಥ್ಯವರ್ಗ** (ನಾ). ಅಲಂಕಾರ ಮಾಡುವವರ ಗುಂಪು,— ಸಮೂಹ : ಕೆಳೆವುವನಿಂದ್ರ ನೈಪಥ್ಯ[ಪಾಠಾಂ. ನೈವದ್ಯೆ]ವರ್ಗವನವತಳೆದು ಲೀಲೆಯೊಳು ವಾಸರವ ಕಳೆಪಲು ಜವ್ವನ ಮೊಳೆತುದು ಸುರಕುಜದೊಳು ಮೂಡುವಂತೆ ಪುದ್ಗಾಳಿ (ಪರ್ಪಚ. ೧೨–೨೯). [ನೈಪಥ್ಯ+ವರ್ಗ]

**ನೈಪಾಲಿ, ನೈಪಾಳಿ** (ನಾ). ೧. ನೇಪಾಳ ದೇಶದವನು ; ನೇಪಾಳಿ. ೨. ಮಣಿಶಿಲೆ. **ನೈಪಾಳಿ** : ೨. "ನೈಪಾಳೀ, ಕುನಟೀ, ಗೋಳಾ –ಇ ನೇಪಾಳದೇಶದಲ್ಲಿ ಹುಟ್ಟಿದ ಮಣಿಶಿಲೆ" (ಸಿದ್ಧಾಂಚಿ. ೩೦೭). [ಸಂ. ನೈಪಾಲೀ]

**ನೈಪಾಳಿ** 'ನೈಪಾಲಿ' ನೋ.

**ನೈಪುಣ್ಯ** (ನಾ). ಜಾಣತನ ; ನಿಪುಣತೆ ; ಕೌಶಲ : ಪಾಪೀಭಕಂಠೀರವಂ . . . ಎಯ್ತುರ್ಪರಂ ಶಾತಭಲ್ಲಸಹಸ್ರಂಗಳಿನಂಬರಕ್ಕೆ ತಲೆ ಭೂಭಾಗಕ್ಕೊಡಲ್ ಬಿಬ್ಬು ಪೋಗೆ ಸುರರ್ ಬಣ್ಣಿಸೆ ಬಿರ್ದಮೆಚ್ಚು ಮೆಱೆದಂ ಕೋದಂಡನೈಪುಣ್ಯಮಂ (ಶಾಂತಿಪು. ೪–೯) ; ಪಿಂದುಂ ಗೌರವಮುಂ ಬೆಡಂಗಿಡಿದು ತೋರ್ಪೊಂದಂದದಿಂ ನಾಡೆ ಬಂಧುರವಾಯ್ತಾ ನೃಪಕಾಂತೆಯೊಳ್ ಬಹುಕಳಾನೈಪುಣ್ಯಮುಂ ಪುಣ್ಯಮುಂ (ಚಂದ್ರಪ್ರ. ೩–೨೭) ; ಈ ಕೆಲಸದಲ್ಲಿ ದುಡಿದು ದುಡಿದೂ ತರಬೇತಾಗಿ ನಾನು ಇಷ್ಟೊಂದು ನೈಪುಣ್ಯ ಗಳಿಸಿದ್ದೇನಲ್ಲ (ದೇಕನೈ. ೩೨). [ಸಂ.]

**ನೈಮಿತ್ತ** (ಗು). ನಿಮಿತ್ತದಿಂದ ಉಂಟಾದ ; ನಿರ್ದಿಷ್ಟ ಕಾರಣದಿಂದ ಉಂಟಾದ : 'ನೈಮಿತ್ತಕರ್ಮ' ಪರಾ. [ಸಂ.]

**ನೈಮಿತ್ತಕರ್ಮ** (ನಾ). ಒಂದು ನಿರ್ದಿಷ್ಟ ಕಾರಣದಿಂದ ಮತ್ತು ನಿರ್ದಿಷ್ಟ ಕಾಲದಲ್ಲಿ ಮಾಡಬೇಕಾದ ಕರ್ಮ : ಈ ನಿಮಿತ್ತದೊಳ್ ದನೆಸಗುವುದೆಂಬುದು ತಾನ್ನೆಸೆ ನೈಮಿತ್ತಕರ್ಮ ಆ ನಿಮಿತ್ತದೊಳಾಚರಿಸುವುದೆಲ್ಲರುಮಾ ನೈಮಿತ್ತಕರ್ಮವನು (ಹರಿಬ. ೯–೧೨) ; ಇಂತು ಮುಕ್ತಿಯನೆಳಸುವರು ಕಾಮ್ಯವನುಳಿದಂತರಂಗದ ಶುದ್ಧಿಯೊಳು ಚಿಂತೆಗೊಳದೆ ನಿತ್ಯನೈಮಿತ್ತಕರ್ಮವ ಸಂತಸದೊಡನೆಸಗುವುದು (ಹರಿಬ. ೯–೧೩). [ನೈಮಿತ್ತ+ಕರ್ಮ]

**ನೈಮಿತ್ತಿಕ** (ಗು). ೧. ನಿರ್ದಿಷ್ಟಕಾಲಕ್ಕೆ ಸಂಬಂಧಿಸಿದ : 'ನೈಮಿತ್ತಿಕಪೂಜೆ' ಪರಾ. (ನಾ). ೨. = ನೈಮಿತ್ತಕರ್ಮ : ಉತ್ತಮನಿಮಿತ್ತಮುಂ ನೈಮಿತ್ತಿಕಮುಂ ಪೋಲ್ಕುಮೆನಿಸಿ ಸೊಡರಿಂ ಸೊಡರಂ ಪೊತ್ತಿಸಿ ತಂದುಪಮೆಯೊಳಚ್ಯೊತ್ತಿದುವವಂತರಂಗ ಬಹಿರಂಗಂಗಳ್ (ಶಾಂತಿಪು. ೭–೧೨೨) ; ಬನ್ದತಿಥಿಸತ್ಕಾರಂ ಜಗನ್ನುತವಿಶ್ರುತನೈಮಿತ್ತಿಕಮೆಂದು ಸಂದ ನಿಗಮಾನುಷ್ಠಾನಮಂ ಮಾಡಲಾಕೃತಕೃತ್ಯಾತ್ಮಕನೀ ಧರಿತ್ರಿಗೆ ಪವಿತ್ರಂ ತದ್ಗೃಹಸ್ಥಾಶ್ರಮಂ (ಕಇಅ. ೩–೨–೫೮ ; 1058) ; ವೇದೋಕ್ತವಾದ ಕರ್ಮಗಳನ್ನು ನಿತ್ಯ, ನೈಮಿತ್ತಿಕ, ಕಾಮ್ಯ ಎಂದು ಮೂರು ಪ್ರಕಾರ ವಿಭಾಗಿಸಿರುವರು (ಹಿಂದಸಾ. ೧೬೪). ೩. ನಿಮಿತ್ತಗಳನ್ನು ವಿವರಿಸುವವನು ; ಶಕುನಗಳನ್ನು ತಿಳಿಸುವವನು ; ಭವಿಷ್ಯಜ್ಞ ; ಜ್ಯೋತಿಷ್ಯ : ಮತ್ತೊಂದು ದಿವಸಂ ನೈಮಿತ್ತಿಕನನರಸಂ ಬೆಸಗೊಂಡ ನೆನ್ನ ಮಕ್ಕಳೊಳಗೆ ರಾಜ್ಯಾರ್ಹರಾರೆಂದು (ವಡ್ಡಾರಾ. ೧೬೪–೨೦) ; ನೈಮಿತ್ತಿಕನಿರೂಪಿತ ಶುಭದಿನಮುಹೂರ್ತದೊಳ್ . . . ಇಂದ್ರಾಕೃತಿ ಸೀರಪಾಣಿ ಮಹಿಮಾವಷ್ಟಂಭದಿಂ ಸಿಂಹಪೀಠಮಂದೇಱಿದನುತ್ಸವೋದಯಕರಂ ಸಜ್ಜನಕಂದಾಂಕುರಂ (ಶಾಂತಿಪು. ೧–೯೫ ವ) ; ಪಗಲುಳ್ಕಂ ಬೀೞ್ವುದಂ ಧಾರಿಣಿ ನಡುಗುವುದಂ . . . ಮಾಡದ ಮಣಿಕಲಶಂ ಬೀೞ್ವುದಂ ಕಂಡು ತವೊಳ್ ಬಗೆದರ್ ನೈಮಿತ್ತಿಕರ್ ನಾಳಿನ ಕದನದೊಳಕ್ಕುಂ ದಶಾಸ್ಯಂಗಪಾಯಂ (ಪಂಪರಾಮಾ. ೧೪–೧೨೨). [ಸಂ.]

**ನೈಮಿತ್ತಿಕಕರ್ಮ** (ನಾ). = ನೈಮಿತ್ತಕರ್ಮ : ಗೃಹಸ್ಥನಿಂದನುಷ್ಠಿಸಲ್ತಕ್ಕ ಕರ್ಮವಾದೊಡೆ – ನಿತ್ಯ ನೈಮಿತ್ತಿಕ ಪ್ರಾಯಶ್ಚಿತ್ತ ಕಾಮ್ಯ ನಿರ್ಮಲವೆಂದು ಪಂಚವಿಧವಾಗಿಹುದದಱಲ್ಲಿ . . . ಶುಭಕಾಲದೇಶಾಧಿಕದಲ್ಲಿ ಮಾಳ್ಪ ವಿಧಿವಿಶೇಷವೇ ನೈಮಿತ್ತಿಕಕರ್ಮವೆನಿಸುವುದು (ವಿವೇಕ. ೧೪೭) ; ಕರ್ಮಗಳಲ್ಲಿ ನಿತ್ಯ, ನೈಮಿತ್ತಿಕವೆಂದು ಎರಡು ವಿಧ . . . ವಿಷ್ಣುಪಂಚಕ ಮೊದಲಾದವು ನೈಮಿತ್ತಿಕಕರ್ಮ (ಹಸಾರ. ೯–೧೬) ;

ವಯೋವೃದ್ಧ, ತಪೋವೃದ್ಧ, ಆಚಾರವೃದ್ಧ, ಜ್ಞಾನವೃದ್ಧ, ದೇವತೆಗಳಿತ್ಯಾದಿಕರಾಗಮನಕಾಲದಲ್ಲಿ ದಾನ, ಪೂಜನ, ಮಹೋತ್ಸವಾದಿಗಳಂ ಮಾಡುವುದೇ ನೈಮಿತ್ತಿಕಕರ್ಮವು (ನಿಗಮ. ೧-೪-೧) ; ಗ್ರಹಣಗಳ ನಿಮಿತ್ತವಾಗಿ ಏರ್ಪಡುವ ಸಮಯಗಳಲ್ಲಿ ಮಾತ್ರ ಆಚರಿಸಬೇಕಾದ ಸ್ನಾನ ನೈಮಿತ್ತಿಕಕರ್ಮವಾಗುತ್ತದೆ (ತತ್ವಪ್ರಾ. ೨೮೪).
[ನೈಮಿತ್ತಿಕ + ಕರ್ಮ]

**ನೈಮಿತ್ತಿಕಪೂಜೆ** (ನಾ). ನಿರ್ದಿಷ್ಟಕಾಲಗಳಲ್ಲಿ ಮಾಡುವ ಪೂಜೆ,—ವ್ರತ : ರಾಜರೂ, ಅಧಿಕಾರಿಗಳಾದವರೂ, ಧನಿಕರೂ ದೇವಾಲಯಂಗಳನ್ನು ಕಟ್ಟಿಸಿ, ಅವುಗಳ ನಿತ್ಯ ನೈಮಿತ್ತಿಕಪೂಜೆಪುರಸ್ಕಾರಗಳಿಗಾಗಿ ಭೂಮಿಯನ್ನು ಉಂಬಳಿಯಾಗಿ ಬಿಡುವುದು ಒಂದು ಪುಣ್ಯಕಾರ್ಯವೆಂಬ ನಂಬುಗೆಯು ನಮ್ಮ ದೇಶದಲ್ಲಿ ಬಹಳ ಹಿಂದಿನ ಕಾಲದಿಂದಲೂ ಇದೆ (ಸಾಹಿಸ. ೧೧). [ನೈಮಿತ್ತಿಕ + ಪೂಜೆ]

**ನೈಮಿತ್ತಿಕಪ್ರಲಯ** (ನಾ). ನಿತ್ಯಪ್ರಲಯ, ಪ್ರಾಕೃತಪ್ರಲಯ, ನೈಮಿತ್ತಿಕಪ್ರಲಯ ಮತ್ತು ಆತ್ಯಂತಿಕಪ್ರಲಯವೆಂಬ ನಾಲ್ಕು ಬಗೆಯ ಪ್ರಲಯಗಳಲ್ಲಿ ಒಂದು : ನೈಮಿತ್ತಿಕಪ್ರಲಯವೆಂದರೆ ಬ್ರಹ್ಮನ ಅಹೋರಾತ್ರಿಗಳಲ್ಲಿ ನಡೆಯುವ ಲೋಕತ್ರಯಪ್ರಲಯ (ಹಿಂದಸಾ. ೧೯೮). [ನೈಮಿತ್ತಿಕ+ಪ್ರಲಯ]

**ನೈಮಿತ್ತಿಕಲಯ** (ನಾ). = ನೈಮಿತ್ತಿಕಪ್ರಲಯ : ಕಾರ್ಯಬ್ರಹ್ಮನಿಗೆ ಚತುರ್ಯುಗಗಳು ಒಂದು ಸಾವಿರ ಸಲ ತಿರುಗಿದರೆ ಒಂದು ದಿನ ಮುಗಿಯುವುದು, ಇದಕ್ಕೆ ನೈಮಿತ್ತಿಕಲಯ ಎಂದು ಹೆಸರು (ಭಾತತ್ತ್ವ. ೬೧೪). [ನೈಮಿತ್ತಿಕ + ಲಯ]

**ನೈಮಿತ್ತಿಕವಚನ** (ನಾ). ಭವಿಷ್ಯಜ್ಞನ ವಚನ ; ಜ್ಯೋತಿಷಿಯ ಹೇಳಿಕೆ,—ಆದೇಶ : ನೈಮಿತ್ತಿಕವಚನದಿಂ ಶುಭತಿಥಿಮುಹೂರ್ತದೊಳ್ ರಾಮ ಲಕ್ಷ್ಮಣರಂ ಚತುರಂಗಬಲಸಹಿತಂ ಮಿಥಿಳೆಗೆ ಕಟಿಾಪೆ (ಚಾವುಂಪು. ೨೯೯) ; ರಾಮನಸಹಾಯನಾಗಿ ಬನದೊಳೊರ್ವನೆ ತೊಟಲುತ್ತಮಿರ್ದನೆಂದಱಿಪೆ ನೈಮಿತ್ತಿಕವಚನದಿಂ ನಿಮ್ಮಲ್ಲಿಗೆನ್ನನಟ್ಟಿದೊಂ(ಚಾವುಂಪು.೩೦೫).
[ನೈಮಿತ್ತಿಕ + ವಚನ]

**ನೈಮಿತ್ತಿಕಾದೇಶ** (ನಾ). ಭವಿಷ್ಯಜ್ಞನ ಆದೇಶ ; ಜ್ಯೋತಿಷ್ಕನ ನುಡಿ ; ಭವಿಷ್ಯ ವಚನ : ಸೀತೆಯಿಂ ಪತಿವಿಯೋಗಕ್ಕೆ ಶಾನು ಸುಡಲ್ಕೆ ಬೆಂದಪೆಂ ಎನೆ ವಿಭೀಷಣಂ ನೈಮಿತ್ತಿಕಾದೇಶಮಂ ನೆನೆದು ಭಯಚಕಿತಚಿತ್ತನಾಗಿ . . . ಬಿನ್ನವಿಸೆ (ಪಂರಾಪೂ. ೯-೧೯೧ ಪ).
[ನೈಮಿತ್ತಿಕ+ಆದೇಶ]

**ನೈಮಿಶವನ** (ನಾ). = ನೈಮಿಷ ೨ : ಬಳಿಕ ಭೃಗು ನಿಜಬಂಧು ಮಿತ್ರಾವಳಿಗಱಿಹಿ ಬೀಳ್ಕೊಂಡು ತೀರ್ಥಂಗಳನನೇಕವ ಕಳೆದು ನೈಮಿಶವನದೊಳೈತಂದು (ತಿಮ್ಮಶಾಂ. ೧೦-೪೨). [ಸಂ.]

**ನೈಮಿಷ** (ಗು). ೧. ನಿಮಿಷಕಾಲದ ; ನಿಮಿಷಕ್ಕೆ ಸಂಬಂಧಿಸಿದ. (ನಾ). ೨. ಪುರಾಣಪ್ರಸಿದ್ಧವಾದ ಒಂದು ಅರಣ್ಯದ ಹೆಸರು : ಸಂಸಾರಚಕ್ರದಂತೆ ಭರಿತಪಾತಕಬಂಧಮಯಮಾಗಿ . . . ವಿಸ್ತರದ ನೈಮಿಷದಂತೆ ಪ್ರಾವೃತ ವಿರಕ್ತಮಯಮಾಗಿ ರಣಮೆಸೆದಿರ್ದುದು (ಜೈಮಿಭಾ. ೨೨-೨೨). [ಸಂ.]

**ನೈಮಿಷಾರಣ್ಯ** (ನಾ). =ನೈಮಿಷ ೨ : ಆಗ ಆತನು ಮಗನಿಗೆ ಆಗ್ರಹದಿಂದ ರಾಜ್ಯವನ್ನು ಕೊಟ್ಟು ಹೆಂಡತಿಯೊಡನೆ ನೈಮಿಷಾರಣ್ಯವನ್ನು ಕುರಿತು ಪ್ರಯಾಣ ಮಾಡಿದನು (ತುಳಸೀ. ೪೨).
[ನೈಮಿಷ + ಅರಣ್ಯ]

**ನೈಮೇಯ** (ನಾ). ಅದಲು ಬದಲು ವ್ಯಾಪಾರ ; ವಿನಿಮಯ ವ್ಯಾಪಾರ : "ಪರಿದಾನಂ, ಪರೀವರ್ತಃ, ನೈಮೇಯಃ, ನಿಮಯಃ-ಒಂದು ಬಗೇ ಜಿನುಸು ಕೊಟ್ಟು ಆದಕ್ಕೆ ಬದಲಾಗಿ ಮತ್ತೊಂದು ಬಗೇ ಜಿನುಸು ತೆಗೆದುಕೊಳ್ಳುವಿಕೆ" (ಸಿದ್ಧಾಂತಿ. ೨೯೭). [ಸಂ.]

**ನೈಯಗ್ರೋಧ** (ನಾ). ನ್ಯಗ್ರೋಧಕ್ಕೆ ಸಂಬಂಧಿಸಿದುದು; ಆಲದ ಮರದ ಫಲ : "ಆಶ್ವತ್ಥಂ, ವೈಣವಂ, ಪ್ಲಾಕ್ಷಂ, ನೈಯಗ್ರೋಧಂ, ಐಂಗುದಂ, ಬಾರ್ಹತಂ-ಈ ಆರೂ ಕ್ರಮವಾಗಿ ಅಶ್ವತ್ಥಾದಿ ವೃಕ್ಷಗಳ ಫಲಗಳಿಗೆ ಹೆಸರುಗಳು" (ಸಿದ್ಧಾಂತಿ ೩೧೫). [ಸಂ.]

**ನೈಯಾಯಿಕ** (ನಾ). ೧. ತರ್ಕಶಾಸ್ತ್ರಜ್ಞ : 'ನೈಯಾಯಿಕ ಬುದ್ಧಿ' ಪರಾ. ೨. ಷಡ್ದರ್ಶನಗಳಲ್ಲಿ ಒಂದಾದ ನ್ಯಾಯ ಸಿದ್ಧಾಂತವನ್ನು ಬಲ್ಲವನು : ಪಡಭಿಜ್ಞಂ ಕ್ಷಣಿಕಂ ಜಡಾತ್ಮನೆನಿಪಂ ನೈಯಾಯಿಕಂ . . . ನೋಟಿಪ್ಪೊಡೆಂದೊಲ್ಲದೊಳ್ಪಡರ್ವನ್ನಂ ಶ್ರುತಕೀರ್ತಿದೇವನೊಳೆ ನಿಂದಳ್ ವಾಣಿಯೇಂ ಜಾಣೆಯೋ (ಚಂದ್ರಪು.೧-೨೫); ನೈಯಾಯಿಕರಿಗೆ ಈಶ್ವರತತ್ತ್ವ ಅನುಮಾನಗಮ್ಯವಾಯಿತೆ ವಿನಾ ಅನುಭವವಿಷಯವಾಗಲಿಲ್ಲ (ಋಕ್ಸಾರ. ೧೦೦ ಪೀಠಿಕೆ) ; ನೈಯಾಯಿಕರು ಸಹಕಾರಿ ಕಾರಣಗಳೇ ಮೊದಲಾದ ಪದಾರ್ಥಗಳ ಸನ್ನಿಧಾನ ಬಂದಾಗ ವಸ್ತುವು ಕಾರ್ಯಕಾರಿಯಾಗುವುದೆಂದು ಹೇಳುವರು (ಭಾತತ್ವ. ೧೯೮).
[ಸಂ.]

**ನೈಯಾಯಿಕಬುದ್ಧಿ** (ನಾ). ತರ್ಕಬುದ್ಧಿ ; ವೈಚಾರಿಕ ಬುದ್ಧಿ : 'ನೀನು ಹೇಳುತ್ತಿರುವುದೇ ಉತ್ತಮ' ಎಂದು ಅವಳ ನೈಯಾಯಿಕ ಬುದ್ಧಿ, ಸಲಹೆ ನೀಡಿತು (ಬೆಂದಜೀ. ೬೨). [ನೈಯಾಯಿಕ+ಬುದ್ಧಿ]

**ನೈಯೆಣ್ಣೆ** (ನಾ). ಮದುವೆಯ ಅಂಗವಾಗಿ ಮದುಮಕ್ಕಳಿಗೆ ಮುತ್ತೈದೆಯರು ಅಂಬಿನ ಕೋಲಿನಿಂದ ಹಚ್ಚುವ ಎಣ್ಣೆ : ಗುರುವೀಗೆ ನೆನೆಯೂತ ಹರನೀಗೆ ನುತಿಸೂತ ಪರಮಪಾವನಗೆ ನೈಯೆಣ್ಣೆ ಎರೆಯೂತ ಕರುಣೆಯ ಕೋರಿದರು ಸತಿಪತಿಗೆ (ಸಿದ್ಧಪು. ೧-೬೯) ; ಶ್ರೀಗುರುದೇವನಿಗೆ ಶ್ರೀಗಿರಿಜಾವಲ್ಲಭಗೆ ಶ್ರೀ ಗಣಪತಿಯ ತಂದೆಗೆ— ನೈಯೆಣ್ಣೆ ಸುಗುಣೆಯರೇ ನೀವು ಹಚ್ಚಿರಿ (ಸಿದ್ಧಪು. ೧೯-೯೯ ನೈಯೆಣ್ಣೆ ಪದ); "ಎಣ್ಣೆ, ಅರಿಷಿಣ ಹಚ್ಚಿ ಎರೆಯುವುದು" (ಸಿದ್ಧಪು. ಕೋಶ). 'ಎಣ್ಣೆಶಾಸ್ತ್ರ', 'ನೈಯೆಣ್ಣೆ ಪದ' ಪರಾ.
[ನೈ(<ನೆಯ್$_2$)+ಎಣ್ಣೆ]

**ನೈಯೆಣ್ಣೆಪದ** (ನಾ). (ಮದುಮಕ್ಕಳಿಗೆ) ನೆಯ್ಯೆರೆಯುವಾಗ ಹೇಳುವ ಪದ,—ಹಾಡು : ನೈಯೆಣ್ಣೆಪದ (ಸಿದ್ಧಪು. ೧೯-೯೯).
[ನೈಯೆಣ್ಣೆ + ಪದ$_2$]

**ನೈಯೇಱಿಸು** 'ನೆಯ್ಯೇಱಿಸು' ನೋ.

**ನೈರಂತರ್ಯ** (ನಾ). ೧. ನಿರಂತರವಾಗಿರುವಿಕೆ; ಎಡೆಬಿಡದೆ ಇರುವಿಕೆ ; ಅನುಸ್ಯೂತವಾಗಿರುವಿಕೆ : ಒಂದಾದ ಮೇಲೊಂದು ಬರುವುದರಲ್ಲಿಯೇ ವಿರೋಧ ಕಾಣುವಂತಹ ರಸವಿದ್ದರೆ, ಆಗ ಅವೆರಡರ ನಡುವೆ ಮತ್ತೊಂದು ರಸವು ಬಂದು ಅವುಗಳ ನೈರಂತರ್ಯವನ್ನು ತಪ್ಪಿಸುವಂತೆ ಪ್ರಬಂಧವನ್ನು ರಚಿಸಬೇಕು (ಧ್ವನ್ಯಾಲೋ.೧೮೨). ೨. ತಣಿವು; ತೃಪ್ತಿ ; ತುಷ್ಟಿ ; ಸಮೃದ್ಧಿ : ಸಮುದಿತ ನವವಿಧಪುಣ್ಯಂ ಕ್ರಮ ಸಪ್ತಗುಣಾಬ್ಧಿ ಭವ್ಯಜನಕುಲಲಕ್ಷ್ಮೀರಮಣಂ ತಣಿಪೆ ಸಹಸ್ರಂ ಸಮುದಾಯಕ್ಕಾದುದೆಯ್ದೆ ನೈರಂತರ್ಯಂ (ಅನಂಪು. ೯-೨೮). [ಸಂ.]

**ನೈರಸ್ಯ** (ನಾ). ನೀರಸತೆ ; ಅರುಚಿ ; ಅನಾಸಕ್ತಿ : ಸರ್ವಸುಖಭೋಗಂಗಳೊಳುಂ ಕೊಱತೆಯಿಲ್ಲಮಾದೊಡಂ ಬಹುಕಾಲಕೆ ಸಂತಾನಂ ತಲೆದೋರ್ದುದಿಲ್ಲಮೆಂಬ ಕುಂದೊಂದೆಯೆ ಎಲ್ಲಾ ಭೋಗಂಗಳೊಳುಂ ನೈರಸ್ಯಮಂ ಪುಟ್ಟಿಸಿದುದು (ಅದ್ಭುತ. ೪-೫). [ಸಂ.]

**ನೈರಾಜ್ಯ** (ನಾ). ಅರಾಜಕತೆ ; ರಾಜನಿಲ್ಲದಿರುವಿಕೆ : 'ನೈರಾಜ್ಯ ಪಂಥಿ' ಪರಾ. [ಸಂ.]

**ನೈರಾಜ್ಯಪಂಥಿ** (ನಾ). ಅರಾಜಕತೆಯ ಪಂಥಕ್ಕೆ ಸೇರಿದುದು ; ರಾಜ ಅಥವಾ ಸರ್ಕಾರದ ಅಗತ್ಯವಿಲ್ಲವೆನ್ನುವ ಗುಂಪಿಗೆ ಸೇರಿದುದು : ಪ್ರಕೃತಿಯು ಶಾಸನದ ವಿಷಯದಲ್ಲಿ ಬೌದ್ಧಧರ್ಮ ಮೊದಲಿನಿಂದಲೂ ಪೂರ್ತಿಯಾಗಿ ನೈರಾಜ್ಯಪಂಥಿ (Anarchist)(ನಿಬಂಧ.I, ೩೮೬). [ಸಂ. ನೈರಾಜ್ಯಪಂಥಿನ್]

**ನೈರಾತ್ಮ್ಯ** (ನಾ).೧.[ಬೌದ್ಧ] ವಸ್ತುಗಳಿಗೆ ನಿಜಸ್ವರೂಪವಿಲ್ಲದಿರುವಿಕೆ,—ಪಾರಮಾರ್ಥಿಕ ಸ್ವರೂಪವಿಲ್ಲದಿರುವಿಕೆ; ಶೂನ್ಯ. ೨. =ನೈರಾತ್ಮ್ಯವಾದ: ಸಾರ್ವಾತ್ಮ್ಯ, ನೈರಾತ್ಮ್ಯ, ಏಕದೇಶ ಎಂದು ಮೂರು ಮಾರ್ಗಗಳು ಸಾಮರಸ್ಯೋಪಾಯಗಳೆಂದು ಅಭಿಪ್ರಾಯವಾಗುವುದು (ಹಿಂದಸಾ. ೬). [ಸಂ.]

**ನೈರಾತ್ಮ್ಯವಾದ** (ನಾ). [ಬೌದ್ಧ] ವಸ್ತುಗಳಿಗೆ ಪಾರಮಾರ್ಥಿಕ ಸ್ವರೂಪವಿಲ್ಲವೆನ್ನುವ ವಾದ; ಶೂನ್ಯವಾದ : ಕೆಲವರು ಸಕಲವಸ್ತುಗಳೂ, ಅವುಗಳ ಸ್ವಭಾವಗಳೂ ಪರಮಾರ್ಥಗಳಲ್ಲ, ವಸ್ತುವೆಂಬುದೇ ಇಲ್ಲದಿರುವುದರಿಂದ ವಿರೋಧವಿಲ್ಲ ಎಂದು ಹೇಳುವರು. ಇದಕ್ಕೆ ನೈರಾತ್ಮ್ಯವಾದವೆಂದೂ, ಶೂನ್ಯವಾದವೆಂದೂ ಹೆಸರು (ಹಿಂದಸಾ. ೬). [ನೈರಾತ್ಮ್ಯ+ವಾದ₂]

**ನೈರಾಶ್ಯ** (ನಾ). ಹತಾಶೆ; ನಿರಾಶಾಭಾವ: ಇದು ನಿರ್ಜನತೆಯಲ್ತು: ನೈರಾಶ್ಯದಾಕಳಿಕೆ ! ಇದು ಮೌನಮಲ್ತಲ್ತು ! ರವಶವಂ ! (ಶ್ರೀರಾಮಾ. ೨೬೩-೧೦) ; ಅಮ್ಮ ಏಕೆ ಸಾಯಬೇಕು ? ತಾನೇ ಏಕೆ ಸತ್ತುಹೋಗಬಾರದು ? ಎನ್ನುವಷ್ಟು ನೈರಾಶ್ಯ, ದುಃಖ (ಮಹಾಗ. ೧೬೫). [ಸಂ.]

**ನೈರಾಶ್ಯನಿರತ** (ನಾ). ನಿರಾಶೆಯಿಂದ ಕೂಡಿರುವವನು ; ನಿರಾಶೆಯನ್ನು ಹೊಂದಿರುವವನು ; ನಿರಾಶಾವಾದಿ: ನೈರಾಶ್ಯನಿರತಂಗೆ ದೇವತೆಗಳಿಂದೇನು ? ವೈರಾಗ್ಯಪಥಿಕಂಗೆ ನಷ್ಟ ಭಯವೇನು ? (ಮಂಕುಕ. ೭೯೦). [ನೈರಾಶ್ಯ+ನಿರತ]

**ನೈರಿತಿ** 'ನೈಋತಿ' ನೋ.

**ನೈರಿತ್ತಿ** 'ನೈಋತಿ' ನೋ.

**ನೈರುತ** 'ನೈಋತ' ನೋ.

**ನೈರುತಾಗಮ** (ನಾ). ಕಿರಣಾಗಮದ ಒಂಬತ್ತು ಭೇದಗಳಲ್ಲಿ ಒಂದು : ಗರುಡಾಗಮ ನೈರುತಾಗಮ ನೀಲತಂತ್ರ ರೂಕ್ಷಾಗಮ . . . ಕಾಲತಂತ್ರವೆಂದು ಕಿರಣಾಗಮದ ನವಭೇದಂಗಳು (ವಿವೇಕ. ೭೬). [ನೈರುತ(<ನೈಋತ)+ಆಗಮ]

**ನೈರುತಿ** 'ನೈಋತಿ' ನೋ.

**ನೈರುತ್ಯ** 'ನೈಋತ್ಯ' ನೋ.

**ನೈರ್ಋತ** (ಗು). ೧. ನಿಋತಿಗೆ ಸಂಬಂಧಿಸಿದ; ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳ ನಡುವಿನ; ನೈಋತ್ಯ ದಿಕ್ಕಿನ. (ನಾ). ೨. ನೈಋತ್ಯ ದಿಕ್ಕಿನ ಅಧಿಪತಿ; ನೈಋತ್ಯದಿಕ್ಪಾಲಕ: "ಇಂದ್ರಃ, ವಹ್ನಿಃ, ಪಿತೃಪತಿಃ, ನೈರ್ಋತಃ, ವರುಣಃ, ಮರುತ್, ಕುಬೇರಃ, ಈಶಃ—ಆ . . . ವಿದಿಕ್ಕುಗಳೊಡಗೂಡಿದ ಮೂಡಲು ಮುಂತಾದ ದಿಕ್ಕುಗಳಿಗಧಿಪತಿಗಳು, ಅಂದರೆ ಅಷ್ಟದಿಕ್ಪಾಲಕರು" (ಸಿದ್ಧಾಂತಿ.೨೭). [ಸಂ.]

**ನೈರ್ಋತಿ** (ನಾ). ೧. ನೈಋತ್ಯದಿಕ್ಕು. ೨. ನೈಋತ್ಯ ದಿಕ್ಪಾಲಕ: ಭೋರೆನೆ ತೂರ್ಯವಂಚಿಯಜಂ ಗಜಮುಂ ಬಳವೈರಿ ಮೇಷಮುಂ ಮಾರುತಬಂಧು ಸೈರಿಭಮನಂಬುಜಮಿತ್ರಸುತಂ ನೃವಾಹಮುಂ ನೈರ್ಋತಿ [ಪಾಠಾಂ.ರುತಿ, ರೃತಿ]ಯಬ್ಧಿಪಂ ಮಕರಮುಂ ಮೃಗಮುಂ ಪವನಂ ವಿಮಾನಮುಂ ಮಾರಹರಪ್ರಿಯಂ ವೃಷಭನಂ ಹರನೇಱಿ ಸಭಕ್ಕೆ ಸಲ್ವುದುಂ (ಜಗವಿ. ೧-೩೬). ೩. ರಾಕ್ಷಸ ; ಅಸುರ. [ಸಂ. ನೈರ್ಋತೀ]

**ನೈರ್ಋತ್ಯ** (ನಾ). ದಕ್ಷಿಣ ಪಶ್ಚಿಮಗಳ ನಡುವಿನ ವಿದಿಕ್ಕು ; ನೈಋತ್ಯ. [ಸಂ.]

**ನೈರ್ಗ್ರಂಥ್ಯ** (ನಾ). [ಜೈನ] ಸಂನ್ಯಾಸ : ಬಗೆ ತತ್ತ್ವಾರ್ಥವಿನಿಶ್ಚಯಂಬಡೆಯೆ ನೈರ್ಗ್ರಂಥ್ಯಂ ಪೊದಟ್ಟಿತ್ತು (ಪುಷ್ಪಪು. ೧-೫). [ಸಂ.]

**ನೈರ್ಘೃಣ್ಯ**(ನಾ). ಕರುಣೆಯಿಲ್ಲದಿರುವಿಕೆ ; ದಯೆಯಿಲ್ಲದಿರುವಿಕೆ; ನಿರ್ದಯತೆ ; ನಿಷ್ಕರುಣೆ : ಪರಮಾತ್ಮನು . . . ಕೆಲವರಿಗೆ ಸುಖ, ಕೆಲವರಿಗೆ ದುಃಖ ಮುಂತಾದುದನ್ನು ಕೊಡುವುದಾದರೆ ಒಂದು ನಿಮಿತ್ತ ಬೇಕು ; ಹಾಗಿಲ್ಲದಿದ್ದರೆ ಅವನಿಗೆ ವೈಷಮ್ಯ ಮತ್ತು ನೈರ್ಘೃಣ್ಯ ಬರುವುವು ಎಂಬೀ ಮುಂತಾದ ವಾದಗಳು ಸರ್ವೇಶ್ವರ ಪರಮಾತ್ಮತತ್ತ್ವಕ್ಕೆ ಸಂಗತವಲ್ಲ (ಭಾತತ್ತ್ವ. ೪೯೨); ಧರ್ಮವು ಯಾವ ವೈಷಮ್ಯ ನೈರ್ಘೃಣ್ಯವನ್ನು ಬುದ್ಧಿವಾದದಿಂದ ತಳ್ಳಬೇಕೆನ್ನುವದೋ ಅಂಥ ಪರಿಣಾಮವನ್ನು ಕವಿಯು ಎದೆ ಕರಗಿಸಿ, ರಸಮಯವಾಗಿ ಮಾಡಿ, ಮಾಡುವನು (ಸಾಹಿವಿ. ೩೯). [ಸಂ.]

**ನೈರ್ಮಲ್ಯ** (ನಾ). ನಿರ್ಮಲವಾಗಿರುವಿಕೆ ; ಕೊಳೆಯಿಲ್ಲದಿರುವಿಕೆ; ಶುದ್ಧವಾಗಿರುವಿಕೆ; ಸ್ವಚ್ಛತೆ : ಕುಂಡಲೀಶಾದಿ ದುರ್ಜನ ಹಸ್ತಕಹಿತ ಚಿತ್ಪಿಂಡಶಿವನೆನಿಪ ಮೇಲಣ ಗವಿಯ ಶಾಂತನಂಜುಂಡದೇಶಿಕಚಕ್ರವರ್ತಿ ಜಯವಿಗತಾ ನೈರ್ಮಲ್ಯಪುಣ್ಯಕೀರ್ತಿ (ವೀಶೈಪು. ೭-೬-೨) ; ಧರ್ಮಸುಕೃತಂ ಪ್ರಖ್ಯಾತ ನೈರ್ಮಲ್ಯ ಚಲ್ವಾವಾಸಂಗಳು ಪುಣ್ಯಮಕ್ಕು (ನಾಸಾರ. ೬೯) ; ಅನಂತಾನಂತವಾದ ಸಾಧ್ಯತೆಯುಳ್ಳ ಭವ್ಯಭವಿಷ್ಯವುಳ್ಳ ಬಾಳನ್ನೂ, ಆ ಬಾಳಿನ ನಾವೀನ್ಯ ನೈರ್ಮಲ್ಯಗಳನ್ನವನು ಮತ್ತೆ ಅನುಭವಿಸಿದಂತಾಯಿತು (ಪುನರು. ೨೭೪). [ಸಂ.]

**ನೈರ್ಮಲ್ಯಸ್ವರೂಪ** (ನಾ).ನಿರ್ಮಲವಾದ ಸ್ವರೂಪ ; ಪರಿಶುದ್ಧವಾದ ಸ್ವರೂಪ: ಅವಿರತಾನಂದಸ್ವರೂಪನನಾವನಱಿವವನು ನಿತ್ಯತಾನೆಲ್ಲರು ಅನಿತ್ಯರು ಸತ್ಯವೀ ಜನವಱಿಯಲೆನುತಂ ನಿತ್ಯ ನೈರ್ಮಲ್ಯಸ್ವರೂಪ ವಿನಿಶ್ಚಿತಂ ದೃಷ್ಟಪ್ರತ್ಯಯವಲಾ (ಬಸಪು. ೫೪-೫೯). [ನೈರ್ಮಲ್ಯ+ಸ್ವರೂಪ]

**ನೈರ್ವಿಣ್ಯ** (ನಾ). ದುಃಖ ; ಖೇದ ; ಖಿನ್ನತೆ ; ನಿರ್ವಿಣ್ಣತೆ : ತಾರುಣ್ಯದಿಂ ನಿನ್ನನುದ್ಧರಿಸಲೆಂದಚ್ಯುತಂ ಕೊಟ್ಟ ತನ್ನವತಾರದ ಪುಣ್ಯದಿಂ ಮಡಿದು ಮುಕ್ತಿಗೆ ಸಂದನಿದಕೆ ನೈರ್ವಿಣ್ಯ[ಪಾಠಾಂ. ನಿರ್ವಿಣ್ಣ, ನಿರ್ವಿಣ್ಯ] ವೆಮಗಿಲ್ಲ ನಾವಿನ್ನು ಹಯಮುಂ ಬಿಡಲರಣ್ಯವಾಸಿಗಳಲ್ಲ (ಜೈಮಿಭಾ. ೧೪-೧೦). [ಸಂ.]

**ನೈಲ** (ಗು). ೧. ನೀಲಿ ಬಣ್ಣಕ್ಕೆ ಸಂಬಂಧಿಸಿದ : ಭೋಂಕನೆಯೆ ಗೋಚರಿಸಿತಾ ಮಹೇಂದ್ರಾದ್ರಿ, ದಕ್ಷಿಣದಿಶಾನೈಶನೈರಾಶ್ಯ ಯಮದೇಹ ಗೋಪುರಮೆನಲ್ ಗ್ರಂಥಿತ ಕಳೇಬರದ ನೈಲ ವೈಶಾಲ್ಯದಿಂ ದೃಷ್ಟಿಗೆ ದಿಗಂತಮನೊಡರ್ಚಿ (ಶ್ರೀರಾಮಾ. ೩೬೬-೧೨೦). (ನಾ). ೨. ನೀಲವರ್ಣ ; ಶ್ಯಾಮಲವರ್ಣ. [ಸಂ.]

**ನೈಲಂಗಲ** (ನಾ). ಚೆಲುವು ; ಸೌಂದರ್ಯ : "ನೈಲಂಗಲಮೆನೆ ಚೆಲ್ವಿಕೆ" (ರನ್ನಕಂ. ೧೧). [?]

**ನೈಲಾನ್** (ನಾ). ೧. ಕೃತಕವಾಗಿ ನೀರು, ಕಲ್ಲಿದ್ದಲುಗಳ ಸಂಯೋಜನೆಯಿಂದ ತಯಾರಿಸಿದ ನೂಲು : ಕಲ್ಲಿದ್ದಲು ಕರಗಿದ ದ್ರಾವಕವನ್ನು ಲೋಮನಾಳಗಳಲ್ಲಿ ಹಾಯಿಸಿ ಹೊರಗಿಡುವ ಎಳೆಯೇ ನೈಲಾನ್ (ಗೃಹವಿ. ೭೧). ೨. =ನೈಲಾನ್ ಬಟ್ಟೆ : ನೈಲಾನ್ ಉಟ್ಟ ನಾಜೂಕ ನಾರಿಯಂತೆ ಬಳುಕುತ್ತ ಹೋಗುವ ಇದರ ಒಯ್ಯಾರ ಪ್ರೇಕ್ಷಣೀಯವಾಗಿದ್ದರೂ ಅದನ್ನು ನೋಡಿ ನಲಿಯಲು ಬಲು ಮಂದಿ ನೆರೆಯರೆಂಬುದು ಪಟಧಾರಿಗೆ ವಿಷಾದದ ವಿಷಯ (ಗಾಳಿಪ. ೬). [←ಇಂ. Nylon]

**ನೈಲಾನ್‌ಬಟ್ಟೆ** (ನಾ). ನೈಲಾನ್ ಎಂಬ ಕೃತಕ ನೂಲಿನಿಂದ ತಯಾರಿಸಿದ ಬಟ್ಟೆ: ನೈಲಾನ್‌ಬಟ್ಟೆಗಳು—ಇವು ಬಹಳ ನವುರಾಗಿ, ನುಣುಪಾಗಿ,ನುಣುಪಾಗಿರುವುವು (ಗೃಹವಿ. ೭೧). [ನೈಲಾನ್ + ಬಟ್ಟೆ$_2$]

**ನೈಲ್ಯ** (ನಾ). ನೀಲಿಯ ಬಣ್ಣ; ಶ್ಯಾಮವರ್ಣ. [ಸಂ.]

**ನೈವಾಳಿ** 'ನಿವಾಳಿ' ನೋ.

**ನೈವೇದ್ಯ** (ನಾ). ೧. (ಪೂಜಾವಿಧಿಯಲ್ಲಿ) ದೇವರಿಗೆ ಮಾಡುವ ಹಣ್ಣು, ಕಾಯಿ, ಭಕ್ಷ್ಯ, ಭೋಜ್ಯಾದಿಗಳ ಸಮರ್ಪಣೆ: ಪಂಚಾಮಿ ಗಳಲ್ಲದವರಲ್ಲಿ ನೈವೇದ್ಯವನೊಲ್ಲೆಯಯ್ಯ ನೀನು (ಮಹಾದೇ.ಬ.೧೨–೯), ಏಳೇಳ್, ಮಹಾಯೋಗಿ, ನಿಃಸ್ವಾರ್ಥಕಾರಣಕೆ ನಿನ್ನ ಸಿದ್ಧಿಯನಿಲ್ಲಿ ನೈವೇದ್ಯಮಂ ನೀಡಿ, ಪಡೆ ಪರಮಸಿದ್ಧಿಯಂ (ಶ್ರೀರಾಮಾ. ೩೯೮–೯೭೪). ೨. ದೇವರಿಗೆ ನಿವೇದಿಸಿದ ಹಣ್ಣು, ಕಾಯಿ, ಹವಿಸ್ಸು ಮೊದಲಾದ ದ್ರವ್ಯ: ದೇವರಿಗೆ ತಕ್ಕ ನೈವೇದ್ಯ! ಮಾರಿಗೆ ಕೋಣ, ಸೂರ್ಯನಿಗೆ ಅರ್ಘ್ಯ (ಧ್ವನ್ಯಾಲೋ. XIX ಪೀಠಿಕೆ). ೩. (ಆಲಂ) ಊಟ; ಭೋಜನ: ನೈವೇದ್ಯಂತೂ ಪಂತವಾಮಾ ಅವರಲ್ಲೆ ಆಗತದ. ಇನ್ನ ಅರಿವಿ ಅಂಚಡಿಗೂ ಅನ್ನದಾತಾನ ದಾತಾ(ದೀಪಹ.II,೧೧). ೪. ಏನೂ ಇಲ್ಲದಿರುವಿಕೆ; ಶೂನ್ಯ; ಸೊನ್ನೆ: ಅವನಿಗೆ ವಿದ್ಯೆ ನೈವೇದ್ಯವಾಗಿದೆ (ರೂಢಿ).

**ನೈವೇದ್ಯ ಮಾಡು**=(ದೇವರಿಗೆ ಹಣ್ಣು, ಕಾಯಿ ಮೊದಲಾದುವುಗಳನ್ನು) ಅರ್ಪಿಸು; ಸಮರ್ಪಣೆ ಮಾಡು: ನಿತ್ಯವೂ ದೇವರಿಗೆ ನೈವೇದ್ಯ ಮಾಡಿ ಪ್ರಸಾದವನ್ನು ಸ್ವೀಕರಿಸುವುದು ನಮ್ಮ ಹಿರಿಯರ ಪದ್ಧತಿ (ರೂಢಿ). [ಸಂ.]

**ನೈವೇದ್ಯಭಾಗಿ** (ನಾ). ಅರ್ಪಿಸಿದುದರಲ್ಲಿ ಭಾಗವನ್ನು ಪಡೆಯುವವನು: ಜೀವನವದೊಂದು ಪರಮೈಶ್ವರ್ಯ ಬೊಮ್ಮನದು ಸೇವೆಯ ದನೂರ್ಜಿತಂಗೊಳಿಸುವೆಲ್ಲ ಸಕ ಈವರಾರ್ ಕೊಳುವರಾರೆಲ್ಲರೊಂದಾಗಿರಲು ? ನೈವೇದ್ಯಭಾಗಿ ನೀಂ (ಮಂಕುಕ. ೨೫೦). [ನೈವೇದ್ಯ + ಭಾಗಿ]

**ನೈವೇದ್ಯವೇಳೆ** (ನಾ). ದೇವರಿಗೆ ನೈವೇದ್ಯವನ್ನು ಅರ್ಪಿಸುವ ಸಮಯ,—ಕಾಲ: ಅಮಳಲಿಂಗಾರ್ಚನ ಸಮಯದಲಿ ಸಮುಚಿತದ ನೈವೇದ್ಯವೇಳೆಯೊಳಮರ್ದು ಮೆಱವಣಿಯಲಿ ಸುರಗಿಯುಂ ಕಿತ್ತು ಹರಣಕ್ಕೆ ಅಮಮವೊರೆಯಂ ಕೊಯ್ವವೋಲುತ್ತಮನದಂ ಕೆಲದಲಿ ಮಡಗಿ ಜಂಗಮದ ಲಿಂಗಾವಸರಮಂ ಮಾಡಿಸುವವೊಲು (ಬಸವು. ೩೩–೧೦). [ನೈವೇದ್ಯ + ವೇಳೆ (=ವೇಲೆ)]

**ನೈಶಾಟ** (ನಾ). ೧. ನಿಶಾಟರಿಗೆ ಸಂಬಂಧಿಸಿದುದು; ರಾಕ್ಷಸ ಸಂಬಂಧವಾದುದು. ೨. ರಾಕ್ಷಸರ ಸಮೂಹ,—ಗುಂಪು: ನಡೆ ಸುಮಿತ್ರಾಸೂನು . . . ತೊಡೆವೆನೀ ತೋರ್ಪೀ ನಿಶಾಚರಪಡೆಯ ಭಾಗ್ಯದ ಭಾಳಲಿಪಿಯನು ನೆಡಿಸುವೆನು ನೈಶಾಟವಿಜಯಸ್ತಂಬಡಂಬರವ (ತೊರಂರಾ. ೩–೬–೪). [ಸಂ.]

**ನೈಶ್ರೇಯಸ** (ನಾ). ಮೋಕ್ಷಸಂಬಂಧಿಯಾದುದು: ಅದಱೊಳಗೆ ನೈಶ್ರೇಯಸವೆನಿಪ್ಪುದು ಮಹಾವನವಖಿಳಕಾಮಪ್ರದವೆನಿಪ ವರಕಲ್ಪವೃಕ್ಷಂಗಳಲಿ . . . ಕಮಲಾಕರದ ಶೋಭೆಯಲಿ (ನಿಭಾಗ. ೩–೪–೪೩). [ಸಂ.]

**ನೈಷಂಗ** (ನಾ). ಬತ್ತಳಿಕೆ; ತೂಣೀರ: ಮಾರ್ಗಣಾಡಂಬರದಿಂ ನೈಷಂಗಮಂ ಸತ್ಯವಿಕಳಿತಕಳಾರಂಭದಿಂ ಶುಂಭದಬ್ಜಾಕರಮಂ ಪೋಲ್ವಂ ಮಹೀಭಾಸುರಗುಣನಿಳಯಂ ಶಾಂತನುತ್ಕೀರ್ತಿಕಾಂತಂ (ಪುಷ್ಪವು.೧–೮೨). [ಸಂ.]

**ನೈಷಧ** (ನಾ). ೧. ನಿಷಧದೇಶಕ್ಕೆ ಸಂಬಂಧಿಸಿದುದು. ೨. ನಿಷಧ ದೇಶದ ಒಬ್ಬ ಪ್ರಸಿದ್ಧ ರಾಜ; ನಳ: ಸ್ಮರನ ರೂಪಿನ ನೈಷಧನ ಕಂಡರು ಮನೋರಾಗದಲಿ (ನಳಚ. ೩–೧೫). ೩. ಶ್ರೀಹರ್ಷನಿಂದ ರಚಿಸಲ್ಪಟ್ಟ ಒಂದು ಸಂಸ್ಕೃತಕಾವ್ಯ; ¶ ಸಂಸ್ಕೃತದಲ್ಲಿ ಪ್ರಸಿದ್ಧವಾದ ಪಂಚಮಹಾಕಾವ್ಯಗಳಲ್ಲಿ ಒಂದು. [ಸಂ.]

**ನೈಷ್ಕರ್ಮ್ಯ** (ನಾ). ಫಲಾಪೇಕ್ಷೆಯಿಲ್ಲದೆ ಕೆಲಸ ಮಾಡುವಿಕೆ: ಫಲಾಪೇಕ್ಷೆ ಇಲ್ಲದೆ ಕರ್ಮ ಮಾಡುವುದಕ್ಕೆ ನೈಷ್ಕರ್ಮ್ಯವೆಂದು ಹೆಸರು (ಹಸಾರ. ೨–೭ ಟೀಕೆ): ನೈಷ್ಕರ್ಮ್ಯ ಬೇರೆ, ನಿಷ್ಕ್ರಿಯತೆ ಬೇರೆ ಎಂಬುದನ್ನು ತಿಳಿಯುವ ಶಕ್ತಿ ಜನಸಾಮಾನ್ಯರಲ್ಲಿ ಉಳಿದಿರಲಿಲ್ಲ (ಕರ್ನಾಕ. ೩೮). [ಸಂ.]

**ನೈಷ್ಕಿಕ** (ನಾ). ಟಂಕಸಾಲೆಯ ಅಧಿಕಾರಿ: "ರೂಪ್ಯಾಧ್ಯಕ್ಷಃ—ಟಂಕಸಾಲೆಗೆ ಅಧಿಕಾರಿಯು, ನೈಷ್ಕಿಕನೆನ್ನಲ್ಪಡುವನು" (ಗುರುಬಾ. ೨೬೨). [ಸಂ.]

**ನೈಷ್ಟಿಕಮಠ** (ನಾ). ಅಖಂಡಬ್ರಹ್ಮಚರ್ಯವನ್ನು ಪಾಲಿಸುವವನು ಇರುವ ಮಠ: ಮಠಮಿದು ನೈಷ್ಟಿಕಮಠಂ ಈ ಮಠದೊಡೆಯಂ ಬ್ರಹ್ಮಚರ್ಯ್ಯಮಿಲ್ಲದೊಡಂದೀ ಮಠದಿಂ ಪೊಱಮಡಿಸುವುದು (ಎಕ. VII, ಶಿಕಾರಿ. ೨೭೬: 1143). [ನೈಷ್ಟಿಕ$_0$ + ಮಠ]

**ನೈಷ್ಟಿಕಸ್ಥಾನ** (ನಾ). =ನೈಷ್ಠಿಕಸ್ಥಾನ: ನೂಱುಬಳ್ಳಿಯ ತೋಂಟಂ ಪತ್ತುಂ ಮನೆಯುನೆ ××× ವರ್ಗ್ಗೆ ಕಾಲಂ ಕಟ್ಟಿ ಕೊಟ್ಟದವರೀ ನೈಷ್ಟಿಕಸ್ಥಾನಮಂ (ಸೌಇಇ.XX,೨೪–೩೮; 1034). [<ನೈಷ್ಠಿಕಸ್ಥಾನ]

**ನೈಷ್ಠಿಕ** (ಗು).೧.ಕೊನೆಯದಾದ; ಅಂತಿಮವಾದ. ೨. ನಿಷ್ಕೃಷ್ಟವಾದ; ಸ್ಪಷ್ಟವಾದ; ನಿರ್ಣಾಯಕವಾದ. ೩. ಸ್ಥಿರವಾದ; ದೃಢವಾದ; ಅಚಲವಾದ. ೪. ಸಮಗ್ರವಾದ; ಅಖಂಡವಾದ. ೫. ನುರಿತ; ಪಳಗಿದ; ನಿಷ್ಣಾತ. ೬. ಮಾಡಲೇಬೇಕಾದ. ೭. ಅಖಂಡಬ್ರಹ್ಮಚರ್ಯವನ್ನು ತೊಟ್ಟ; ಆಜೀವ ಬ್ರಹ್ಮಚರ್ಯವನ್ನು ಕೈಕೊಂಡ. ೮. ನಿಷ್ಠೆಯಿಂದ ಕೂಡಿದ: 'ನೈಷ್ಠಿಕತನ' ಪರಾ. (ನಾ). ೯. =ನೈಷ್ಠಿಕಬ್ರಹ್ಮಚಾರಿ ೧. ೧೦. ಒಂದು ಬಗೆಯ ಆಯುಧ: ತನಗೆ ದೇವೇಂದ್ರನಿತ್ತ ಐಂದ್ರವೆಂಬ ದಿವ್ಯಾಸ್ತ್ರಮುಮಂ ನೈಷ್ಠಿಕಮೆಂಬ ಮುಷ್ಟಿಯುಮಂ ಕೆಯ್ಕೊಂಡು (ಪಂಪಭಾ. ೮–೩೬ವ). ೧೧. =ನೈಷ್ಠಿಕಬ್ರಹ್ಮಚಾರಿ ೨: ಉಪನಯಾವಲಂಬಾದೀಕ್ಷಾಗೂಢನೈಷ್ಠಿಕಭೇದದಿಂ ಬ್ರಹ್ಮಚಾರಿಗಳ್ ಐದು ತೆಱಂ (ತತ್ತ್ವಪ್ರ. ೨೮೭). ೧೨. =ನೈಷ್ಠಿಕಶ್ರಾವಕ: ಶ್ರಾವಕರಲ್ಲಿ ಪಾಕ್ಷಿಕನೈಷ್ಠಿಕ ಮತ್ತು ಸಾಧಕರೆಂದು ಮೂರು ಗುಂಪುಗಳಾಗುತ್ತವೆ (ಜೈನಪ. ೪೬೪). [ಸಂ.]

**ನೈಷ್ಠಿಕತನ** (ನಾ). ನಿಷ್ಠೆಯಿಂದ ಕೂಡಿರುವಿಕೆ; ನಿಷ್ಠಾವಂತಿಕೆ: (೬). [ನೈಷ್ಠಿಕ + -ತನ]

**ನೈಷ್ಠಿಕತಪೋಧನ** (ನಾ). ಅಖಂಡ ಬ್ರಹ್ಮಚಾರಿಯಾದ ತಪಸ್ವಿ: ನೈಷ್ಟಿ(ಷ್ಠಿ)ಕತಪೋಧನಬ್ರಾಹ್ಮಣರ್ಗ್ಗಮ್ ಅವಿಶೇಷದಾನಮಮ್ ಮಾಡುವುದುತ್ತಮಪಕ್ಷವರ್ (ಎಇ. XVI, ೪–೨೪; 978); ಇನ್ತೆನಿಸಿದ ಕಾಳಾಮುಖ ನೈಷ್ಠಿಕತಪೋಧನರ್ಗ್ಗವಲ್ಲಿಯ ಚ್ಛಾತ್ರರ್ಗ್ಗವಲ್ಲಿಯ ಪಾವುಳಕ್ಕಂ . . . ಶ್ರೀಸ್ವಯಂಭುಸೋಮೇಶ್ವರದೇವರ್ಗ್ಗೆ ಧಾರಾಪೂರ್ವಕಂ ಮಾಡಿ ಬಿಟ್ಟು ಕೊಟ್ಟರ್ (ಸೌಇಇ. XX, ೪೯–೫೯; ಸು. 1076). [ನೈಷ್ಠಿಕ + ತಪೋಧನ]

**ನೈಷ್ಠಿಕಬ್ರಹ್ಮಚರ್ಯ** (ನಾ). ಯಾವಜ್ಜೀವವೂ (ಗುರುಕುಲದಲ್ಲಿದ್ದುಕೊಂಡು) ಪಾಲಿಸುವ ಬ್ರಹ್ಮಚರ್ಯ; ಅಖಂಡವಾದ ಬ್ರಹ್ಮಚರ್ಯ: ಬ್ರಹ್ಮಚರ್ಯದಲ್ಲಿ ನೈಷ್ಠಿಕಬ್ರಹ್ಮಚರ್ಯ ಅಥವಾ ಆಜೀವಬ್ರಹ್ಮಚರ್ಯ ಎಂಬ ಕಟ್ಟುನಿಟ್ಟಾದ ಒಂದು ಆಶ್ರಮವಿದೆ (ಬಂಕಿಮ. ೨೮೩); ಭೀಷ್ಮನು . . . ಮುಂದೆ ತನ್ನ ಕಡೆಯಿಂದ

ರಾಜ್ಯಾಧಿಕಾರಕ್ಕೆ ಹೋರಾಡಬಹುದಾದ ಸಂತತಿಯುಂಟಾಗದಂತೆ ತಾನು ನೈಷ್ಠಿಕಬ್ರಹ್ಮಚರ್ಯದಲ್ಲಿಯೇ ಇರುವೆನೆಂದೂ ಮಾತು ಕೊಟ್ಟು . . . ಬೇಡರ ದೊರೆಯ ಮಗಳಾದ ಸತ್ಯವತಿಯೆಂಬಾಕೆಯನ್ನು ತಂದು ತನ್ನ ತಂದೆಗೆ ಮದುವೆಯನ್ನು ಮಾಡಿದನು (ಸೀಗಟ್ಟು. ೬೨).
[ನೈಷ್ಠಿಕ+ಬ್ರಹ್ಮಚರ್ಯ]

**ನೈಷ್ಠಿಕಬ್ರಹ್ಮಚಾರಿ** (ನಾ). ೧. ಯಾವಜ್ಜೀವವೂ (ಗುರುಕುಲದಲ್ಲಿದ್ದುಕೊಂಡು) ಬ್ರಹ್ಮಚರ್ಯವನ್ನು ಪಾಲಿಸುವವನು; ನೈಷ್ಠಿಕಬ್ರಹ್ಮಚರ್ಯವನ್ನು ಪಾಲಿಸುವವನು; ಅಖಂಡಬ್ರಹ್ಮಚಾರಿ: ಸಾಧಕನು ಗೃಹಸ್ಥಾಶ್ರಮವನ್ನು ಸ್ವೀಕರಿಸದೆಯೇ ಬದುಕಿರುವವರೆಗೂ ಗುರುಕುಲದಲ್ಲಿಯೇ ಇದ್ದು ಅಧ್ಯಾಪನದಲ್ಲಿಯೇ ಜೀವನವನ್ನು ಕಳೆದರೆ ನೈಷ್ಠಿಕಬ್ರಹ್ಮಚಾರಿ ಎನಿಸುವನು (ಭಾರದ. ೧೫೯); ಗೋಪಾಲಕೃಷ್ಣ ಭಾರತಿಯವರು ನೈಷ್ಠಿಕಬ್ರಹ್ಮಚಾರಿ(ಸಂಗೀತ.೧೨೨). ೨. [ಜೈನ] ಉಪನಯನಬ್ರಹ್ಮಚಾರಿ, ಅವಲಂಬನಬ್ರಹ್ಮಚಾರಿ, ಅದೀಕ್ಷಾಬ್ರಹ್ಮಚಾರಿ, ಗೂಢಬ್ರಹ್ಮಚಾರಿ ಮತ್ತು ನೈಷ್ಠಿಕಬ್ರಹ್ಮಚಾರಿ ಎಂಬ ಐದು ಬಗೆಯ ಬ್ರಹ್ಮಚಾರಿಗಳಲ್ಲಿ ಕಡೆಯ ಗುಂಪಿಗೆ ಸೇರಿದವನು; ☞ ಐದು ಬಗೆಯ ಬ್ರಹ್ಮಚಾರಿಗಳಿರುವರೆಂದು ಜೈನಮತವು ಗುರುತಿಸುತ್ತದೆ. ೧. ಉಪನಯನಬ್ರಹ್ಮಚಾರಿ: ಇವನು ಗಣಧರಸೂತ್ರ ಅಥವಾ ಜನಿವಾರವನ್ನು ಧರಿಸಿ ಪರಮಾಗಮವನ್ನು ಅಭ್ಯಾಸಮಾಡಿ ಅನಂತರ ಗೃಹಸ್ಥನಾಗುತ್ತಾನೆ. ೨. ಅವಲಂಬನಬ್ರಹ್ಮಚಾರಿ: ಇವನು ಕೌಪೀನ, ಖಂಡವಸ್ತ್ರಾದಿಗಳನ್ನು ಧರಿಸಿ ಆಗಮಾಭ್ಯಾಸ ಮಾಡಿ ಬಳಿಕ ಗೃಹಸ್ಥನಾಗುತ್ತಾನೆ. ೩. ಅದೀಕ್ಷಾಬ್ರಹ್ಮಚಾರಿ: ಇವನು ವೇಷವಿಲ್ಲದೆ ಪರಮಾಗಮದ ಅಭ್ಯಾಸವನ್ನು ಮಾಡಿ ಅನಂತರ ಗೃಹಸ್ಥನಾಗುತ್ತಾನೆ. ೪. ಗೂಢಬ್ರಹ್ಮಚಾರಿ: ಇವನು ಕೌಮಾರಾವಸ್ಥೆಯಲ್ಲಿಯೇ ಮುನಿಯಾಗಿ,ಶಾಸ್ತ್ರಾಭ್ಯಾಸ ಮಾಡಿ ಅನಂತರ ಇತರರ ಬಲವಂತಕ್ಕೊಳಗಾಗಿ ಅಥವಾ ಪರೀಷಹಗಳನ್ನು ತಾಳಲಾರದೆ ಗೃಹಸ್ಥನಾಗುತ್ತಾನೆ. ೫. ನೈಷ್ಠಿಕಬ್ರಹ್ಮಚಾರಿ: ಇವನು ಜುಟ್ಟು, ಜನಿವಾರಗಳನ್ನು ಧರಿಸಿ, ಬಿಳಿಯ ಅಥವಾ ಕೆಂಪುಬಣ್ಣದ ಬಟ್ಟೆಯುಟ್ಟು ಭಿಕ್ಷಾಟನೆ ಮಾಡುತ್ತ ಜಿನಾರ್ಚನೆಯಲ್ಲಿ ನಿರತನಾಗಿ, ಆಜೀವಬ್ರಹ್ಮಚರ್ಯದಲ್ಲಿ ನೆಲಸುತ್ತಾನೆ: ನೈಷ್ಠಿಕಬ್ರಹ್ಮಚಾರಿಯೆಂಬೊಂ ಶಿಖಾಧರನುಂ ಧವಳರಕ್ತವಸ್ತ್ರಖಂಡಕೌಪೀನಧರಕಟಿಲಿಂಗನುಂ ಸ್ನಾತಕನುಂ ಯಜ್ಞೋಪವೀತಲಕ್ಷಿತವಕ್ಷಸ್ಥಳನುಂ ಭಿಕ್ಷಾವೃತ್ತಿನಿರತನುಂ ದೇವತಾರ್ಚನಾಪರನುಮಕ್ಕುಂ (ಚಾವುಂಪು. ೨೨೮). [ನೈಷ್ಠಿಕ+ಬ್ರಹ್ಮಚಾರಿ]

**ನೈಷ್ಠಿಕಭಕ್ತಿ** (ನಾ). [ವೀಶೈ] ಆರುವಿಧವಾದ ಭಕ್ತಿಗಳಲ್ಲಿ ಒಂದು ಬಗೆ; ನಿಷ್ಠಾಭಕ್ತಿ: ಭಕ್ತಿ ಆರು ವಿಧವಾಗಿದೆ. ಶ್ರದ್ಧಾಭಕ್ತಿ, ನೈಷ್ಠಿಕಭಕ್ತಿ . . . ಸಮರಸಭಕ್ತಿ, ಭಗವತ್ತಾದಾತ್ಮ್ಯವೇ ಭಕ್ತಿಯ ಅಂತಿಮ ಗಮ್ಯ (ಭಾರದ. ೧೧೯). [ನೈಷ್ಠಿಕ+ಭಕ್ತಿ]

**ನೈಷ್ಠಿಕಭಾವ** (ನಾ). ನಿಷ್ಠೆಯಿಂದ ಕೂಡಿರುವಿಕೆ; ನಿಷ್ಠತೆ: ಬಹಿರಂಗದ ಮೇಲಿದ್ದ ಇಷ್ಟಲಿಂಗದಲ್ಲಿ ನೈಷ್ಠಿಕಭಾವವಿಂಬುಗೊಂಡು ಅನಿಮಿಷದೃಷ್ಟಿ ಅಚಲಿತವಾಗಿ ಬಲಿದಿರಲು . . . ಷಡ್ವಿಧಲಿಂಗವಾಗಿ ನೆಲೆಗೊಂಬುದು (ಅಖಂಡೇ. ೧೯೪-೪). [ನೈಷ್ಠಿಕ+ಭಾವ₂]

**ನೈಷ್ಠಿಕಮುನೀಶ್ವರ** (ನಾ). = ನೈಷ್ಠಿಕತಪೋಧನ: ಜಳನಿಧಿಪರೀತವಸುಧಾತಳದೊಳು ನೈಷ್ಠಿಕಮುನಿ(ನೀ)ಶ್ವರಾರಾಧ್ಯರ್ ಶ್ರೀಕಳಶೇಶದೇವಪ[ಾ]ದಕಮಳಭೃಂಗ ಸೋಮೇಶ್ವರಬ್ರತೀಶರ್ ಸ್ತುತ್ಯರ್ (ಎಇ. XVIII, ೧೯೮-೨೩; 1107). [ನೈಷ್ಠಿಕ+ಮುನೀಶ್ವರ]

**ನೈಷ್ಠಿಕಶ್ರಾವಕ** (ನಾ). [ಜೈನ] ಪಾಕ್ಷಿಕ, ನೈಷ್ಠಿಕ ಮತ್ತು ಸಾಧಕರೆಂಬ ಮೂರು ಬಗೆಯ (ತರಗತಿಯ) ಶ್ರಾವಕ(ಗೃಹಸ್ಥ)ರಲ್ಲಿ ಮಧ್ಯದ ಗುಂಪಿಗೆ ಸೇರಿದವನು; ಅತಿಚಾರರಹಿತವಾದ ಶ್ರಾವಕಧರ್ಮವನ್ನು ಪಾಲಿಸುವವನು; ☞ನೈಷ್ಠಿಕಶ್ರಾವಕರಲ್ಲಿ ಹನ್ನೊಂದು ತರಗತಿಗಳುಂಟು. ಈ ಹನ್ನೊಂದು ಸ್ತರಗಳಲ್ಲಿ ಅವನು ತನ್ನ ಆಧ್ಯಾತ್ಮಿಕಚೈತನ್ಯವನ್ನು ಹೆಚ್ಚಿಸಿಕೊಳ್ಳುತ್ತಾನೆ. ೧. ದಾರ್ಶನಿಕ. ೨. ವ್ರತಿಕ (ಏಳು ಶೀಲವ್ರತಗಳನ್ನೂ ಉಳ್ಳವನು). ೩. ಸಾಮಾಯಿಕಿ. ೪. ಪ್ರೋಷಧೋಪವಾಸಿ. ೫. ಸಚಿತ್ತವಿರತ. ೬. ದಿವಾಮೈಥುನವಿರತ. ೭. ಬ್ರಹ್ಮಚಾರಿ. ೮. ಆರಂಭವಿರತ. ೯. ಪರಿಗ್ರಹವಿರತ. ೧೦. ಅನುಮತಿವಿರತ. ೧೧. ಉದ್ದಿಷ್ಟವಿರತ. ಈ ಹನ್ನೊಂದು ತರಗತಿಗಳಿಗೆ ಜೈನ ಪರಿಭಾಷೆಯಲ್ಲಿ 'ಪ್ರತಿಮೆ'ಗಳೆಂದು ಕರೆಯುವರು: ಅತಿಚಾರರಹಿತ ಶ್ರಾವಕಧರ್ಮವನ್ನು ಪಾಲಿಸುವವನು ನೈಷ್ಠಿಕಶ್ರಾವಕನು (ಜೈನಪ. ೪೬೪).
[ನೈಷ್ಠಿಕ+ಶ್ರಾವಕ]

**ನೈಷ್ಠಿಕಸಂಯಮಿ** (ನಾ). = ನೈಷ್ಠಿಕತಪೋಧನ: ಅಂಭೋನಿಧಿಪರಿವೃತ ವಿಶ್ವಂಭರೆಯೊಳ್ ನೆಗ[ರ್ದಿ]ರ್ದ್ದ ಲಿಂಗವಂ ಪೊಗಟ್ದರ್ . . . ಅದು ನೈಷ್ಠಿಕಸಂಯಮಿಯಲ್ಲದರ್ಗ್ಗೆ ಪೂಜಿಸುವುದರಿದು (ಸೌಇಇ. XX, ೪೯-೪೬; 1076 ?). [ನೈಷ್ಠಿಕ+ಸಂಯಮಿ]

**ನೈಷ್ಠಿಕಸ್ಥಾನ** (ನಾ). ನೈಷ್ಠಿಕ ಬ್ರಹ್ಮಚಾರಿಗಳ ನೆಲೆ; ಅಖಂಡ ಬ್ರಹ್ಮಚಾರಿಗಳ ನಿವಾಸ: ಶ್ರೀಮತ್ಸೋಮೇಶ್ವರಪಣ್ಡಿತದೇವರ್ಗ್ಗೆ ಶ್ರೀಮದರಿಕೇಸರಿದೇವರು ಕಾಲಂ ಕರ್ಚ್ಚಿ ಧಾರಾಪೂರ್ವ್ವಕದಿಂ ಪ್ರಧಾನರು ಮಿಟ್ಟು ನೈಷ್ಠಿಕಸ್ಥಾನಂ ಮಾಡಿ ಪೂರ್ವ್ವಭುಕ್ತಿಯೊಳು . . . ಸರ್ವ್ವನಮಸ್ಯಮಾಗೆ ಬಿಟ್ಟರ್ (ಕಇ. I, ೧೭-೩೩; 1055); ಶೈವಗುರುಗಳು ಅಖಂಡಬ್ರಹ್ಮಚಾರಿಗಳಾಗಿದ್ದುಕೊಂಡು ಬ್ರಹ್ಮಚಾರಿವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುತ್ತಿದ್ದ ಸ್ಥಾನವೇ'ನೈಷ್ಠಿಕಸ್ಥಾನ' . . . ರಾಜನೂ ಅವನ ಅಧಿಕಾರಿಗಳೂ ಸೇರಿ ದೇವಸ್ಥಾನಗಳನ್ನು 'ನೈಷ್ಠಿಕಸ್ಥಾನ'ಗಳನ್ನಾಗಿ ಪರಿವರ್ತಿಸಿದ ಉದಾಹರಣೆಗಳು ಕೆಲವು ದೊರೆಯುತ್ತವೆ (ಕಶಾಅ. ೧೪೦). [ನೈಷ್ಠಿಕ+ಸ್ಥಾನ]

**ನೈಷ್ಠಿಕೆ** (ನಾ). ನಿಷ್ಠೆಯಿಂದ ನಡೆದುಕೊಳ್ಳುವಿಕೆ: ಶಿವಧರ್ಮವಾಭೂತಿಕಂ ನೈಷ್ಠಿ[ಷ್ಠಿ]ಕೆಯುಮೆನಿಸುತ್ತವು ಯುಂಗ್ಮದಲ್ಲಿ ಭೂತಿಕವೆ ಸುವ್ರತ ಮೋಕ್ಷವಿವು ಯುಗಳಯುಕ್ತವಾ ವ್ರತವದಂಗವನುಳ್ಳ ತನಕ ನಡವುದೆ ನೈಷ್ಠಿ[ಷ್ಠಿ]ಕೆ (ವೀಶೈಪು. ೬-೬-೬೨), [ಸಂ. ನೈಷ್ಠಿಕ]

**ನೈಷ್ಠೆ** (ನಾ). ನಿಷ್ಠೆಯಿಂದ ಕೂಡಿರುವಿಕೆ: ತನುವಿನ ಕಾಂಕ್ಷೆಯ ಸುಟ್ಟುರುಹಿ . . . ಸದ್ಭಕ್ತಿಯ ನಿಜನಿಷ್ಠೆಯ ತಿಳಿದು ಸತಿ ಸುತಂಗೆ ಸದಾಚಾರ ಸನ್ಮಾರ್ಗವ ತೋಱಿ ನಿರ್ವಂಚಕದಿಂದ ಆಱಿದಾಚರಿಸಬಲ್ಲಾತನೇ ಅಚ್ಚ ಶರಣ ನೋಡಾ (ವಚಸಂ. ೪೫೬-೯೭); ಭಕ್ತಂಗೆ ವಿಶ್ವಾಸ ಮಾಹೇಶ್ವರಂಗೆ ನೈಷ್ಠೆ . . . ಐಕ್ಯಂಗೆ ಕಱುಹುಗೊಂಬುದಕ್ಕೆ ಮುನ್ನವೆ ನಿರಾಳ (ಪದಗೋ. ೪-೧೧೮). 'ನಿಟ್ಟೆ' ಪರಾ. [<ಸಂ. ನಿಷ್ಠಾ]

**ನೈಸರ್ಗಿಕ** (ಗು). ೧. ಸಹಜವಾದ; ಸ್ವಾಭಾವಿಕವಾದ; ನೈಜವಾದ: 'ನೈಸರ್ಗಿಕಕಾರಣ' ಪರಾ. ೨. ನಿಸರ್ಗಕ್ಕೆ ಸಂಬಂಧಿಸಿದ; ಪ್ರಾಕೃತಿಕವಾದ: ನೈಸರ್ಗಿಕ ನಿಯಮದಲ್ಲಿ ಈಶ್ವರಸಂಕಲ್ಪವನ್ನು ಕಂಡು ಆನಂದಿಸುವ ಭಾವುಕತೆ, ಆತ್ಮಾನುಭವಗಳು ವಿಜ್ಞಾನಿಗಳಿಗಿರಲಿಲ್ಲ (ಮಕ್ಸಾರ. ೧೧ ಪೀಠಿಕೆ). (ನಾ). ೩. ಸಹಜವಾದುದು; ಸ್ವಾಭಾವಿಕವಾದುದು: ಮಾಂತ್ರಿಕ ದೈವಿಕ ನೈಸರ್ಗಿಕ ಯೌಕ್ತಿಕ ವಾಸ್ತವಿಕಗಳೆಂಬ ಪಂಚಭೇದಸಾಧನಂಗಳಿಂದಲುಂ ಪರಭಯಂಕರವೇಷಭಾಷಾಕಾರಂಗಳುಳ್ಳ ಘನದೇವರ್ಕಳಿರ್ಕುಂ(ವಿವೇಕ. ೨೮೧); ಖರ್ಜೂರದಲ್ಲಿ

ಬಹಳ ಪ್ರಮಾಣದಲ್ಲಿ ನೈಸರ್ಗಿಕವಾದ ಸಕ್ಕರೆಯಿರುವುದರಿಂದ ಅದು ಮಕ್ಕಳಿಗೂ ದೊಡ್ಡವರಿಗೂ ಒಳ್ಳೆಯ ಆಹಾರ (ಅಡುಸಾ. ೭೯). [ಸಂ.]

**ನೈಸರ್ಗಿಕಕಾರಣ** (ನಾ). ಸಹಜವಾದ ಕಾರಣ ; ಸ್ವಾಭಾವಿಕವಾದ ಕಾರಣ : ಭಾಷೆ ವ್ಯತ್ಯಾಸ ಹೊಂದುವುದಕ್ಕೆ . . . ಮಾನವ ಸಾಮಾನ್ಯವಾದ ಸೌಲಭ್ಯಾಕಾಂಕ್ಷೆಯೂ ವೈಯಕ್ತಿಕವಾದ ಉಚ್ಚಾರಣಾ ಭೇದವೂ ಮುಖ್ಯವಾದ ಆಂತರಿಕ ಅಥವಾ ನೈಸರ್ಗಿಕಕಾರಣವಾಗಿರುತ್ತವೆ (ಕೈಪಿಡಿ. ೨೯೫). [ನೈಸರ್ಗಿಕ+ಕಾರಣ$_1$]

**ನೈಸರ್ಗಿಕಸಮ್ಯಕ್ತ್ವ** (ನಾ). [ಜೈನ] ವಿಮರ್ಶೆ, ಉಪದೇಶಾದಿಗಳಿಲ್ಲದೆ ಸ್ವಾಭಾವಿಕವಾಗಿಯೇ ಜೈನಧರ್ಮದಲ್ಲಿ ನಂಬಿಕೆಯನ್ನು ಹೊಂದಿರುವಿಕೆ : ಸತ್ಯಸ್ವರೂಪದ ಮೇಲೆ ಶ್ರದ್ಧೆಯಿಡುವುದೇ ಸಮ್ಯಕ್ತ್ವ ಎನಿಸುವುದು. ಇದೊಂದು ಸತ್ಯನಿಷ್ಠೆಯಾಗಿದೆ. ಈ ನಿಷ್ಠೆಯು ಸ್ವಾಭಾವಿಕವಾಗಿರುವ ಜೀವಿಗಳು ನೈಸರ್ಗಿಕಸಮ್ಯಕ್ತ್ವವುಳ್ಳವರು (ಜೈನಪ. ೩೦೦). [ನೈಸರ್ಗಿಕ+ಸಮ್ಯಕ್ತ್ವ]

**ನೈಸರ್ಗಿಕಸೌಂದರ್ಯ** (ನಾ). ಸಹಜವಾದ ಸೌಂದರ್ಯ ; ನಿಸರ್ಗ ಸೌಂದರ್ಯ : ಅಲಿಕಾದರನು . . . ಆ ವನದ ನೈಸರ್ಗಿಕ ಸೌಂದರ್ಯಾತಿಶಯವನ್ನು ನೋಡುತ್ತಾ ಸ್ವಲ್ಪ ಹೊತ್ತು ಕಳೆದನು (ಮಣಿಸ. ೩೫). [ನೈಸರ್ಗಿಕ+ಸೌಂದರ್ಯ]

**ನೈಸರ್ಪ** (ನಾ). [ಜೈನ] ಚಕ್ರವರ್ತಿಯ ನವನಿಧಿಗಳಲ್ಲಿ ಒಂದು ; ಶಯ್ಯೆ, ಆಸನ, ಭವನ ಮುಂತಾದುವನ್ನು ಒದಗಿಸುವ ನಿಧಿ : ಅನುಕ್ರಮದಿಂದಂ ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಆದಿಪು. ೧೫-೩ ವ) ; ಕಾಳ ಮಹಾಕಾಳ ಪಾಂಡುಕ ಪಿಂಗಳ ನೈಸರ್ಪ ಪದ್ಮ ಮಾಣವಕ ಶಂಖ ಸರ್ವರತ್ನ ನವನಿಧಿಪರಿಪೂರ್ಣಮುಂ (ಅಜಿಪು. ೭-೨೦ ವ) ; ಸಮುಚಿತೋಪಭೋಗದ್ರವ್ಯಂಗಳಂ ಕುಡುವ ಕಾಳನಿಧಿಯುಂ ನಾನಾಪ್ರಸಾದಭೋಜನೋಪಕರಣಂಗಳನೀವ ಮಹಾಕಾಳಮುಂ ದಿವ್ಯಶಯ್ಯಾಸನಪ್ರಭೇದಂಗಳಂ ಪಡೆವ ನೈಸರ್ಪಮುಂ . . . ಕನಕಮಣಿಮುಕ್ತಾದಿ ನಾನಾವಸ್ತುವಂ ಕುಡುವ ಭಾರೋಪನಿಚಿತಮಪ್ಪ ಸರ್ವರತ್ನಮುಮೆಂ[ಬೊಂಬ]ತ್ತುಂ ಮಹಾನಿಧಿಗಳುಂ (ವರ್ಧಮಾ.೧೦-೩ವ); ಕಾಳ ಮಹಾಕಾಳ ಪದ್ಮ ಪಾಂಡುಕ ನೈಸರ್ಪ ಮಾಣವಕ ಪಿಂಗಳಶಂಖ ಸರ್ವರತ್ನಗಳೆಂಬೊಂಬತ್ತುನಿಧಿಗಳುಮನನುಕ್ರಮದೊಳರ್ಚಿಸಿ .(ಚಂದ್ರಪು. ೬-೧೦೧ ವ). [ಸಂ.]

**ನೈಸೇಸ** (ನಾ). ರಾತ್ರಿಯ ಒಡೆಯ ; ನಿಶೆಯ ಈಶ ; ಚಂದ್ರ : ನೇಸರ್ಬೀಸಿದ ಕೈಗಳಿಂದುರಿವುವಂ ಲೋಕಂಗಳಂ ಚಿತ್ತಮಂ ನೈಸೇಸಂ ಸೆಳೆವಂ ಮುಟುಂಗೆ ಸತತಂ ನೀರೊಟ್ಟು ಮೇಱೊಂದುಗುಂ ಏಸೋ ಸಾಂತಿಯನೆಯ್ದಿಹಂ ಮದನನುಂ ರಯ್ಯಂ ಮಿಗಿಲ್ಸಂಜೆಯುಂ ಬಾಸಿಪ್ಪಾಯುರಿವೇಗೆಯಿಂದೆ ಯುವಕರ್ಕಂಡಾಟಕೊಲ್ಲಾಡುವರ್ (ಮೈಸೂಮ. ೩-೪೯). [<ಸಂ. ನೈಶೇಶ]

**ನೈಸ್ತ್ರಿಂಶಿಕ** (ನಾ). ಕತ್ತಿಯನ್ನು ಧರಿಸಿದವನು ; ಖಡ್ಗಧಾರಿ : "ನೈಸ್ತ್ರಿಂಶಿಕಃ—೧ ಅಸಿಹೇತಿಃ—ಕತ್ತಿಯೇ ಆಯುಧವಾಗಿ ಉಳ್ಳವನು, ಅಡ್ಡಾಯುಧದವನು" (ಸಿದ್ಧಾಂತಿ. ೨೫೭). [ಸಂ.]

**ನೈಸ್ಪೃಹ್ಯ** (ನಾ). ನಿಸ್ಪೃಹತೆ ; ಪ್ರಾಮಾಣಿಕತೆ ; ಸತ್ಯವಂತಿಕೆ: ಇಲ್ಲಿ ಶ್ಲಾಘನೆಗೆ ಅರ್ಹವಾದ್ದು ಆ ದೊರೆಯ ಧಾರಾಳವೋ ಆ ಶೂರರ ನೈಸ್ಪೃಹ್ಯವೋ ಹೇಳುವುದು ಕಷ್ಟ (ಚಿತ್ರಪಾ. ೯೫). [ಸಂ.]

**ನೈಹಂಚಿ** (ನಾ). ಒಂದು ಬಗೆಯ ಸಸ್ಯ : ನೊಸೆ ನೈಹಂಚಿ[ಪಾಠಾಂ. ನೈವಂಚಿ] ಕಣಗಿಲೆ ನಾಲೆ ಗರುಗ . . . ಎಸೆದಿಹವಾ ವಿಪಿನದೊಳು (ಶ್ರೀಪಾಲ. ೭-೧೪). [?]

**ನೊಂದ** 'ನೋ' ಪರಾ.

**ನೊಂದಣಿ** 'ನೋಂದಣಿ' ನೋ.

**ನೊಂದಾಯಿಸು** 'ನೋಂದಾಯಿಸು' ನೋ.

**ನೊಂದಿಸು** 'ನಂದಿಸು$_1$' ನೋ.

**ನೊಂದು$_1$** 'ನಂದು' ನೋ.

**ನೊಂದು$_2$** 'ನೋ' ಪರಾ.

**ನೊಕ್ಕಿಗೋಡು** (ನಾ). ಒಂದು ಊರಿನ ಹೆಸರು (?) :ಕಿಟ್ಟಿಕಿಟಿ ಗುಡಗತಾಣಮ್ ನೊಕ್ಕಿಗೋಡು ಮಣಲಿ ಮಕ್ಕಿಯಸ್ಕ (ಮೈಆಂ. ೧೯೦೮; ೧೦ ; 700). [?]

**ನೊಕ್ಕು** (ನಾ). ಚೂರು ; ಚಕ್ಕೆ ; ತುಂಡು (?) : ವರ್ಷದ ಹಿಂದೆ ಅವನೇ ಕೊಟ್ಟಿದ್ದುದು ಅದು, ಅದರ ಬಣ್ಣ ಒಂದೆರಡು ಕಡೆ ಎದ್ದು ಹೋಗಿತ್ತು. ನೊಕ್ಕು ನೊಕ್ಕುಗಳಾಗಿ ಹೋಗಿದ್ದವು (ಸ್ವಾಮಿಸ್ನೇ.೨೧೩). 'ನುಱುಗು$_2$' ಪರಾ.

[ದೇ.॥ ತಮಿ. ನುಕ್ಕು ; ಮಲ. ನೊಕ್ಕು = ಪುಡಿಮಾಡು]

**ನೊಗ, ನೊಗನು, ನೊಗೆ$_1$** (ನಾ). ೧. ಬಂಡಿಯನ್ನಾಗಲಿ, ನೇಗಿಲನ್ನಾಗಲಿ ಎಳೆಯಲು ಎತ್ತು, ಕುದುರೆ ಮೊದಲಾದುವುಗಳ ಕತ್ತಿನ ಮೇಲೆ ಇಡುವ ಉದ್ದವಾದ ಮರದ ದಿಂಡು ; ಯುಗ ; ಧುರ : "ನೊಗನೆಂಬುದು ಯುಗನಾಮಂ" (ವಸ್ತುಕೋ. ೮೭-೨೯) ; ಉಡಿದಿರ್ದಚ್ಚುಱುದೀಸು ತಟ್ಟಿದ ನೊಗಂ ಜೀಱಿಟ್ಟ ಚಕ್ರಂ ಸಿಡಿಲ್ ಪೊಡೆದಂತೊರ್ಮೆಯೆ ಸೂಸಿ ಪಾಱಿದ ಮಡಂ . . . ಕಣ್ಗೊಂಡು ದುಗ್ರಾಜಿಯೊಳ್ (ಪಂಪಭಾ. ೧೦-೯೧) ; ತೆಗೆನೆಱೆದೆಚ್ಚ ಕೂರ್ಗಣೆಗಳಿಂ ರಥದಚ್ಚುಡಿದು . . . ನೊಗಂ ನೆಱೆ ನುರ್ಗಿ ಪಡಲ್ವಡಲ್ಕೆ ಕಾಳೆಗಮತಿ ರೌದ್ರಮಾಯ್ತು (ಮಹಾನೇ. ೧೨-೪೩) ; ತೇಜಿಗಳಂ ತೇರ ನೊಗಕೆ ಹೂಡುವ ಕುದುರೆಗೆ ಕುಱುಹಿನ ಸಂಜೋಗಗಳಂ ಸೇರಿಸುತುಂ . . . ನಾಲ್ಕಡಿದತಿಬಲರೆಸಗಿದರು (ಜಯಕಾ. ೬-೧೫). ೨. ಒಂದು ನೊಗದ ಅಳತೆ ; ಒಂದೂವರೆ ಮಾರು ; ನಾಲ್ಕು ಹಸ್ತ : ಸಂಯಮೋಪಕರಣಕ್ಕೆಡಗೈ ಬಲಗೈ ಪೆಗಲ್ಗೆ ನೇರ್ಪಡೆ ನೊಗದಂತರಂ ನಡೆಯೆ ಕಣ್ ಕೆಸಱಿಂ ಕಱುವಿಟ್ಟ ಜಂತ್ರಮಂ ನಡೆಯಿಸುವಂತೆ ವರ್ತಿಪನರಣ್ಯದೊಳೇಕವಿಹಾರಿ ತಾಪಸಂ (ಅನಂಪು. ೪-೨೪) ; ನೊಗದಂತರದ ಭೂಮಿಯ ಮುಂದೆ ನೋಡುತ (ಜ್ಞಾನಚ. ೨-೮೨). ೩. ಆಕಾಶಭಾಗ : ಎಲಾ ಪೂಜ್ಯಳೆ, ಸೂರ್ಯನಾದರೆ ನೊಗದ ಮಧ್ಯಕ್ಕೆ ಹತ್ತಿದನು, ಬೇಗ ನಡೆ (ಶಾಕುಂತ. ೫೮-೩). ೪. ದಾಸ್ಯ ; ಬಂಧನ : ಮೇಣಿದುವೆ ನೆವಗೆಯ್ದವರು ನಮ್ಮ ನೊಗದಿಂ ತಮ್ಮ ಬಿಡುಗಡೆಗೆ ಹೆಣಗಾಡೆ (ಗೊಲ್ಗೊಥಾ. ೮-೧೯೯). ೫. ಭಾರ; ಹೊರೆ: ಮೈಮನದ ನೊಗವನ್ನು, ಕೊರಳೊಳಿಹ ನೊಗವನ್ನು ಪುಣ್ಯವನು ಪಾಪವನು, ತಾಪ-ಸಂತಾಪವನು (ನಮ್ಯಧ್ವ. ೨-೧೩). **ನೊಗನು : ೧.** ಗಾಲಿಯ ಗಜಱು ಘೀಳಿಡೆ ನೊಗನ ಹೆಗಲಲಿ ಕುಣಿದವಶ್ವಚಯ (ಕುಮ್ಯಾಶ. ೨-೪); ಮಿಳಿ ನೊಗನು ಕೀಲಚ್ಚು ಕೂಬರ ಬಳೆಮೊಳೆಯನಾರೈದು ಹೆಱೆಯನು ಬಳಿದು ಹೂಡಿದರಿದ್ದೆಸೆಯಲೆಂಭತ್ತು ಸಾವಿರವ (ತೊರರಾ. ೫-೭-೫) ; ಭಾನು ಚಂದ್ರರ ಮಂಡಲಂಗಳೇ ಗಾಲಿ ನೊಗನಾ ನಿಸಿ ದಿವಸ . . . ಶಾಸ್ತ್ರಮೇ ಕೀಲಾದುವು (ಚೆಬಪು.೪೧-೪೧). **ನೊಗೆ$_1$: ೬.** ಒಂದು ಬಗೆಯ ಆಯುಧ : ಒಂದು ದಿಕ್ಕಿನಲ್ಲಿ ಮಹಾರಥಿಕರು ನೊಗೆಯನ್ನು ನೊಗೆಯಿಂದಲೂ ನೇಗಲನ್ನು ನೇಗಲಿಂದಲೂ . . . ತಾಕಿಸಿ . . . ಹೋರುತ್ತಿದ್ದರು (ಕೃವಾಭೀ. ೭೪). 'ಜುಗ' ಪರಾ. [<ಸಂ. ಯುಗ]

**ನೊಗಗೊಳ್** (ಕ್ರಿ). ನೊಗಕ್ಕೆ ಜೋಡಿಸಲ್ಪಡು,—ಹೂಡಲ್ಪಡು : ನೀನೊ, ಪೊಸತೆ ನೊಗಗೊಂಡ ಕುದುರೆಮಱಿ ತನತು ಕಡಿವಾಣಮನ್

ಕಟಕಟನೆ ಕಡಿವುತ್ತುಮೇೞಿಸುರ್ಖಂತೆ ಅಳವಿಗಟುದುದ್ಧತನ್ (ಬದ್ಧಪ್ರ. ೫೪-೧೧೬೭). [ನೊಗ+ಕೊಳ್$_1$]

**ನೊಗಸು** 'ನೊಗ' ನೋ.

**ನೊಗಪಟ್ಟಿ** (ನಾ). ನೊಗಕ್ಕೆ ಹಾಗೂ ಎತ್ತಿನ ಕುತ್ತಿಗೆಗೆ ಸೇರಿಸಿ ಕಟ್ಟುವ ಹಗ್ಗ,—ಚರ್ಮದ ಪಟ್ಟಿ; ಅಗಡುಕಣ್ಣಿ; ಜೊತ್ತಗೆ: (೬). [ನೊಗ+ಪಟ್ಟಿ$_2$]

**ನೊಗಭಾರ** (ನಾ). ನೊಗದ ಹೊರೆ; ನೊಗದ ಭಾರ: ಹೊತ್ತಿಗ್ಯಾಗ ಬರಿ ಶಾಸ್ತ್ರದಾಧಾರ ಕುತ್ತಿಗಿ ವ್ಯಾಲ್ಯೆತಿ ನೊಗಭಾರ . . . ನಂಬ ಗೀನ ಸೋರಿದದ ಬಲ ಇಲ್ಲಾ (ಮುಕ್ತಕಂ. ೪೫-೧೬). [ನೊಗ+ಭಾರ]

**ನೊಗವರಿ** (ಕ್ರಿ). ನೊಗವನ್ನು ಇಳಿಸು; ಪ್ರಯಾಣವನ್ನು ಮುಗಿಸು: ಭಾಸ್ಕರಂ ನೊಗವರಿದನಾದೊಡಂ ಚಾಂದಳದ ಬಿಸುಮುಗಿಲ ಮುಸುಕಿನ್ನು ತೆಗೆದಿಲ್ಲ (ಹಬ್ಬೆರ. ೨೨-೧೨೫). [ನೊಗ+ಪರಿ$_1$(<ಪಱಿ$_1$)]

**ನೊಗವಿಕ್ಕು** (ಕ್ರಿ). ನೊಗಕ್ಕೆ ಹೂಡು; ನೊಗವನ್ನು ಕಟ್ಟು; ಆರು ಕಟ್ಟು: ಸೋಮಶೇಖರನೆತ್ತ ತರೆದಾ ಭೂಮಿಯಲಿ ನೊಗವಿಕ್ಕಿ ಯುಳುವರು ತಾಮುಸರು ಬೀಸಱಿಸುತಿರ್ಪರು ಮೂಱುಲೋಕವನು (ಸಂಭಪ. ೭-೧೭). [ನೊಗ+ಇಕ್ಕು]

**ನೊಗವೊರು** 'ನೊಗವೊಱು' ನೋ.

**ನೊಗವೊಱು, ನೊಗವೊರು** (ಕ್ರಿ). ೧. ಬಂಡಿಯ ಅಥವಾ ನೇಗಿಲಿನ ನೊಗವನ್ನು ಹೊರು,—ಹೊತ್ತುಕೊಳ್ಳು: ಪರಮ ದೂರ್ವಾಸನಂ ವರರಥದೊಳಿರಿಸಿ ನಿಜಕೊರಲ್ಗಳೊಳು ನೊಗವೊತ್ತು ಪುರದೊಳೆಲ್ಲಂ ಹರಿ ರುಕುಮಿಣಿಗಳುವಾದರಿಸಿ ಮೆಱೆಯಿಸಿತನಾ[ದಾ] ಹರನ ಶ್ರೀಸ್ಕಂದಾದಿ ಪೌರಾಣದಿಂ ಪ್ರಸಿದ್ಧಂ (ಸಾನಂಚ. ೨-೧೧೧). **ನೊಗವೊರು:** ೨. (ಅಲಂ) ಹೊರೆಯನ್ನು ಹೊರು; ಜವಾಬ್ದಾರಿಯನ್ನು ಹೊತ್ತುಕೊಳ್ಳು: ತನ್ನಿಷ್ಟದೇವತೆಯ ಸೇವೆಯಂ ನೊಗವೊತ್ತ ಪೆಗ ಲೊಳೆಯೆ ಸತ್ತರಾ ಸಾವುಮುತ್ತಮಗತಿಯೆ, ನಾಸ್ತಿಕನಲ್ಲದಾತ್ಮಜ್ಞಂಗೆ (ಶ್ರೀರಾಮಾ. ೩೭೫-೩೫೧). [ನೊಗ+ಪೊಱು]

**ನೊಗಹಣ** (ನಾ). ಒಂದು ಬಗೆಯ ತೆರಿಗೆ; ನೊಗದ ಮೇಲೆ ಹಾಕುವ ಸುಂಕ: ನಾರಾಯಣಭಟ್ಟರು ಇಎಬಿದು ಕೊಟ್ಟ ಸ್ಥಳಂಗಳಿಂಗೆ ತೆಱು ಮುಡಗಡಿ ದೇವರ ಧರ್ಮ್ಮ ಅರುಗಡಿ [ಮ]ನೆಹಣ ನೊಗಹಣ ವೊಕ್ಕಲುಗುತ್ತಗೆ ಕಾಣಿಕೆ (ಕಇ. I, ೫೭-೨೭; 1433); ಶಾಸನಗಳಲ್ಲಿ ಬರುವ ತೆರುವಣಗಳು:—ತೆರು, ಮುಡಗಡಿ, ಅರುಗಡಿ, ದೇವರ ಧರ್ಮ್ಮ, ಮನೆಹಣ, ನೊಗಹಣ, ಒಕ್ಕಲಗುತ್ತಿಗೆ (ತುಳುನಾ. ೨೭೧). [ನೊಗ+ಹಣ(<ಪಣವು$_1$)]

**ನೊಗೆ$_1$** 'ನೊಗ' ನೋ.

**ನೊಗೆ$_2$** (ನಾ). ಒಂದು ಬಗೆಯ ಔಷಧಿ ಸಸ್ಯ: ಕೆಂಪುಗಂಧಗಿರಿ, ನಂದಿವೃಕ್ಷ, ಟೂನಮರ, ನೊಗೆ, ನಂದುರಿ, ಬೆಳಂದಿ, ಗಂಧಗರಿಗೆ (ಮೈಔಗಿ. ೧೯-೩೪೪); ಸಂಕೀರ್ಣ . . . ನಂಜಿನ ಗಿಡ, ಕಾಡುಮೆಣಸು, ಅಂಗಾರಕ, ಇಂಗಳೀಕ, ಸಾಂಬ್ರಾಣಿ, ನೊಗೆ, ಹುರಗಲು, ಕಂಗೊಂದಿ (ನಮ್ಮನು. ೨೩೪). [ ? ]

**ನೊಗೆಕೂಲಿ** (ನಾ). ನೊಗದ ಕೆಲಸವನ್ನು ಮಾಡುವವನು; (ಜೀವನಕ್ಕಾಗಿ) ಗಾಡಿಯನ್ನು ಹೊಡೆಯುವವನು: ಬಳಲಿದ ಒಬ್ಬ ನೊಗೆಕೂಲಿಯು ಕಾಡಿನಲ್ಲಿ ಬಿದಿರನ್ನು ಕಡಿದು ತುಂಬಿಕೊಂಡು, ತನ್ನ ಕಿರು ಗುಟ್ಟುತ್ತಿರುವ ಗಾಡಿಯನ್ನು . . . ಅಂಗಳಕ್ಕೆ ಹೊಡೆದು ತಲೆಯನ್ನು ಅಲ್ಲಾಡಿಸುತ್ತಿರುವ ಎತ್ತಿನ ನೊಗವನ್ನು ಬಿಡುತ್ತಾನೆ (ಮಲೆನಾ. ೨೫). [ನೊಗೆ$_1$(<ನೊಗ)+ಕೂಲಿ$_1$]

**ನೊಗ್ಗು** (ಕ್ರಿ). ಕುಗ್ಗು; ಕುಸಿ: ತರುಣಿಯರಿಗಾ ಸತಿಯು ರೂಪನು ಧರಿಸಿ ಬಳಲದು ಚಿತ್ತ ಬೇಸದಿ ಚರಿಸಿ ನೊಗ್ಗದು ನೋಟ (ಜೀವಂಚ. ೮-೧೦). 'ನಗ್ಗು$_1$' ಪರಾ. [ ? ]

**ನೊಚ್ಚಗೆ** (ಅ). ಹಿತವಾಗಿ; ಹಾಯಾಗಿ: ಮಂಜುಗಡ್ಡೆಯಂತೆ ಕಠಿಣ ವಾದ ನರಸಮ್ಮನ ಹೃದಯ ಕರಗಿ . . . ಮಂಗಳಿ ಮಾತೇ ಅವಳ ಕಿವೀಗೆ ನೊಚ್ಚಗೆ ಎಂದುಬಿಟ್ಟಳು (ಸರ್ವಮಂ. ೩೩೯); ನುಚ್ಚಿಗೆ ಬೆಚ್ಚುವವ ನೊಚ್ಚಗೆ ಮಾತಾಡಿದರೂ ನಚ್ಚಿಗೆ ಸಾಲದು (ಗಾದೆ).

**ನೊಚ್ಚಗಾಗು**=೧. ಹಿತವಾಗು; ಇಷ್ಟವಾಗು: ಕಾತ್ಯೂಷಾ . . . "ತುರುಚಿಯ ಕಡಿತ ನೊಚ್ಚಗಾಯಿತೆ?" ಎಂದಳು (ಪುನರು. ೫೬); ಅವನಿಗೆ ಮೈಗೆ ಬೆಚ್ಚಗಾದದ್ದಕ್ಕಿಂತಲೂ ಮನಸ್ಸಿಗೆ ನೊಚ್ಚಗಾಗಿ ಇಬ್ಬರೂ ಸವಿನಿದ್ದೆ ಮಾಡಿದ್ದರು (ಪುಟಮ. ೨೫೭). ೨. ಹಿತವನ್ನು ಹೊಂದು; ಹಾಯಾಗು: ಮೆಚ್ಚಿದಿನಿಯಳೊಂದು ಹುಚ್ಚ ನುಡಿದರೆದೆ ನೊಚ್ಚಗಾಗಿ ಹುದು ನಲ್ಲರಿಗೆ ಅಚ್ಚಗಾನವನಾಕೆ ಪಾಡುತಿರಲು ಕೇಳ್ದು ಮೆಚ್ಚದಿಹನೆ ಚಕ್ರಧರನು (ಭರಚ. ೧೧-೩೧). [<ನೊಚ್ಚಿತು+-ಅಗೆ$_3$]

**ನೊಚ್ಚನಡೆ** (ನಾ). ಹಗುರವಾದ ನಡಗೆ; ಮೃದುವಾದ ನಡಗೆ: ಅಚ್ಚರಿಯ ನಡೆಯಂಚೆನಡೆ ಮನಮೆಚ್ಚಿಸುವ ನಡೆಯೊಳನಡೆ ಕಿರುನೊಚ್ಚ ನಡೆ ಮೃದುಗತಿಯ ನಡೆಯಂದೆಳೆಯ ನಡೆಯಂದು (ಜರಾಮಾ. ೧೭-೬೭). [<ನೊಚ್ಚಿತು+ನಡೆ$_2$]

**ನೊಚ್ಚನೆ** (ಅ).=ನೊಚ್ಚಗೆ: ಕಲಾಧರಂ ಚೆಚ್ಚರಮಿಟುತಂದು ಪಚ್ಚೆ ಗಪ್ಪುರಂ ತೀವಿದ ಕೆಂದಳಿರ್ವೆರಲಿಂ ಮುಚ್ಚಿದ ಕಣ್ಗಳಂ ತಡವಿ ಪೋಪುದುಂ ಬೆಚ್ಚೆವೆಗಳ್ ನೊಚ್ಚನೆ ತಣ್ಪೇಱೆ ತನ್ನಿಂ ಮುಂಚುವ ರೋಮಾಂಚಮುಂ (ಚಿಕವಿ. ೬-೨೦೫ವ).

**ನೊಚ್ಚನಾಗು**= ೧. ಹಗುರವಾಗು; ಲಘುವಾಗು: ಇದಟಿ ಜವಕ್ಕೆ ಸೋಲ್ತು ಗರುಡಂ ಗಱುಯಿಂ ಕಡುನೊಚ್ಚನಾದನೇಱದನಿದ ಱೊಳ್ ಕಡಂಗಿ ಪರಿದಾಱನೆ ಕಾಲ್ನಡೆಗೆಟ್ಟು ಗಾಳಿ ಮಾಳದ ಮಱುವುಲ್ಲೆ ವೋರಿಯನೆನಲ್ (ಮಲ್ಲಿಪು. ೮-೧೫೪). ೨. ಹಿತವಾಗು; ಇಷ್ಟವಾಗು: ಆದಂ ಕಂಡು ವಿದೂಷಕನವಳರ್ಚನೆಯಾಡೆ ಪೀಠಮರ್ದನಂಗೆ ನೊಚ್ಚನಾದುದೆಂದು ನಗಿಸುತ್ತಂ ಪೋಗೆ (ಅನಂಪು.೮-೩೦ವ). ೩. ಹಿತ ವನ್ನು ಹೊಂದು; ಹಾಯಾಗು: ತೋಱು ಬಯಲಾದುದೆಂದು ಚಕ್ರೇಶಗೆಲ್ಲವ ತೀರಲೊರೆದಾ ನೊಚ್ಚನಾಯ್ತೆದೆ ಸಾಕು ಕುಳಿತು ಮುಂದಾದುದನುಚ್ಚರಿಸೆನಲು (ಭರಚ. ೫೭-೯೬). [<ನೊಚ್ಚಿತು+-ಅನೆ$_1$]

**ನೊಚ್ಚಿತು, ನೊಚ್ಚಿತ್ತು** (ನಾ). ೧. ಹಗುರಾದುದು; ಲಘು ವಾದುದು. ೨. ಕ್ಷುಲ್ಲಕವಾದುದು; ಕೀಳಾದುದು: ಎಮ್ಮ ಪಿತಾಮಹನಪ್ಪ ಮಾಲಿಯುಂ ಮುಂ ಕಡುಕೆಯ್ದು ಕೊಂದೆಟೆದು ಕೊಂಡನನಿಕ್ಕಿ[ಕ್ಕ]ದೊಡೆನ್ನ ಬಾಹುವೀರ್ಯಂ ಕಡುನೊಚ್ಚಿತಕ್ಕುಮೆ ನುತುಂ ಮನದುಮ್ಮಳದಿಂ ಕನಲ್ದು ವೀತಾಂಕುಶನೆತ್ತಿದಂ ಮುಳಿದು ಲಂಕೆಗನೂನ ಬಲಂ ದಶಾನನಂ (ಪಂರಾಮಾ. ೧೦-೧೫೩); ವಿಷಂ ದುಷ್ಟ ನಾಶಯದಿಂದುಗ್ರಮೆ ಬೇಡಿ ಬಾಟ್ಟ ನರನಿಂ ಪುಲ್ ನೊಚ್ಚಿತೇ ಮಾನುಷ ಕ್ರಿಯೆಯಿಂದಪ್ಪ ಮಹೇಂದ್ರಜಾಲಮುದುವೀ ಸಂಸಾರದಿಂ ಚೋದ್ಯಮೊ (ಜೀವಸಂ. ೮೪-೨೦). ೩. ನಯವಾದುದು; ಮೃದುವಾದುದು: 'ನೊಚ್ಚನಡೆ' ಪರಾ. ೪. ಹಿತವಾದುದು. ೫. ಸೂಕ್ಷ್ಮ ವಾದುದು (?): ನಿಚ್ಚಟದ ರೂಹಿಂದೆ ಹೊಗೆ ಬಲು ನೊಚ್ಚಿತವು ಹೊಗಬಾರದೆನಲತಿ ಚರ್ಚೆಯಿಂದಿರುತಿಹುದು ಘನಪಾತಾಳದೊಳು ಲಂಕೆ (ಮೈರಾಕಾ. ೩-೫೪). **ನೊಚ್ಚಿತ್ತು:** ೧. ಅಗುರುಲಘು—ಬಿಣ್ಪಿತ್ತುಂ ನೊಚ್ಚಿತ್ತುಮಲ್ಲದ ಶರೀರಮುಂ ಮಾಟ್ಪ ಅಗುರುಲಘು

ನಾಮಮಂ (ತಸೂಪ್ಪ. ೭೫೪); ಅಗುರುಲಘುಕನಾಮಕರ್ಮಂ ತಂತಮ್ಮುದಯದೊಳು ಬಿಣ್ಣಿತ್ತುಂ ನೊಚ್ಚಿತ್ತುಮಲ್ಲದ ಶರೀರಮಂ ಮಾಳ್ಪುದು (ಪಸಾರ. ೧೬).

**ನೊಚ್ಚಿತಾಗು** = ೧. ಹಗುರವಾಗು; ಲಘುವಾಗು. ೨. ಕೀಳಾಗು; ಕ್ಷುಲ್ಲಕವಾಗು: ಸುರರಾಜಂ ಬಯಸಲ್ಕೆ ತಕ್ಕ ಸಿರಿಯಂ ಪುಲ್ಲಿಂ ಗಡಂ ನೊಚ್ಚಿತಾಗಿರೆ ಕಂಡಂ (ಮಲ್ಲಿಪು. ೧೦-೪೩); ಆ ನೃಪಾಳೋತ್ತಮನಿಂತು . . . ಪುಲ್ಲಿಂದಂ ಕಡು ನೊಚ್ಚಿತಾಗಿ ಬಗೆದಂ ಭೂಭಾರಮಂ (ಬಾಧಪು. ೫-೭೩). ೩. ಹಿತವಾಗು; ನೆಮ್ಮದಿಯಾಗು: ಪರಮಗುಣಾಂಬುರಾಶಿ ಖಳನಿಕ್ಕಿದ ಮರ್ದನ ತೀವ್ರಮಪ್ಪ ನಿಷ್ಠುರವಿಷದುಕ್ಕು ಪೋಗೆ ತನು ಘರ್ಮನಲೋರ್ಮೆಯಿ ನೊಚ್ಚಿತಾಗೆ ತದ್ಗಿರಿಯೊಳ್ ನಿಂದೆನೆಂಬ ಬಗೆಯಿಂ ಮುಱಿದೊಯ್ಯನೆ ಮೆಯ್ಯನಾದರಂ ಬೆರಸು ನಿಮಿರ್ಚೆ (ಧರ್ಮಾಮೃ. ೧೧-೧೨೪). ೪. ಸ್ಪಷ್ಟವಾಗು; ನಿಚ್ಚಳವಾಗು: ಅಚ್ಚ ಬೆಳಗಿನಲ್ಲಿ ತೋರ್ಪನೊಡನೆ ಕರ್ಪು ಮುಚ್ಚಿ ಮಾಸುವ ಕೂಡೆ ಹೊಳೆವ ನೊಚ್ಚ[ಚ್ಚಿ]ತಾಗಿರೆ ತೋರ್ಪ ಹೆಚ್ಚಿ ತೋರ್ಪನು ಹುಲ್ಲ ಕಿಚ್ಚನಂತಾಗ ಧ್ಯಾನದೊಳು (ಭರಚ. ೭೨-೪೫).

**ನೊಚ್ಚಿದನ್** = ಅಲ್ಪನಾದವನು; ಕ್ಷುದ್ರನಾದ ವ್ಯಕ್ತಿ: ಸಿರಿಯ ತವಿಲಿಂ ಮಕ್ಕಳ್ ಕೈಮಿಕ್ಕು ಪೇಟ್ದುದು ಗೆಯ್ಯದಿರ್ಪರವನವನೀ ದೇವಾಮ್ನಾಯಕ್ಕೆ ನೊಚ್ಚಿದನಾಗಿ ಮೆಯ್ಗುರೆವೆಸಕದಿಂ ನಿಚ್ಚಂ ಬೆಂಬಿದ್ದು ಚಿಂತಿಸಿ ದುಃಖದೊಳ್ ಪಿರಿದುಮಮರಿಂ ಕಣ್ಗೆಟ್ಟಂ ಭಟ್ಟಂ ನಿಕೃಷ್ಟರ ದೂಸಱಿಂ (ಸುಕುಮಾ. ೨-೯); 'ತಱಗೆಲೆಯಂತೆ ನೊಚ್ಚ[ಚ್ಚಿ]ದನಾಗದೆ [ಪಾಠಾಂ. ಪಟಿಯಿ ಸೀರೆಯಂತೆ ಗುಣದೊಳ್ ನೂನಮಾಗದೆ] ಕಾಗೆಯಂತೆ ಪೆಱರ್ಗೆ ಪೀಡೆಯಂ ಮಾಡದೆ (ಧರ್ಮಾಮೃ. ೫-೯೯); ಪರಾಂಗನಾಲಿಂಗನಸಂಗಕೃತರತಿಯುಪ್ಪಂ ವೈರಾನುಬಂಧಿಗಳ ದೆಸೆಯಿಂ ಲಿಂಗಚ್ಛೇದನ ವಧ ಬಂಧನ ಸರ್ವಸ್ವಹರಣಾದಿಗಳಂ ಇಲ್ಲಿಯೆ ಪಡೆಗುಂ ಮಱುಭವದೊಳ್ ದುರ್ಗತಿಗೆ ಸಲ್ಗುಂ ಪುಲ್ಲಿಂ ನೊಚ್ಚಿದನುಮಕ್ಕುಂ (ತತ್ತ್ವಪ್ರ. ೨೭೨). **ನೊಚ್ಚಿದರ್**(ಬಹುವ): ತಾಯ ಮೊಗಮನಾವ ಮೊಗದೊಳ್ ನೋಡುವಮೆಂದು ನಾಣ್ಚಿ ಚಿಂತಿಸುವ ಚಿಂತೆಯೊಳತಿಬಳನೃಪಾಸ್ಥಾಯಿಕೆಯೊಳ್ ಪುಲ್ಲಿಂ ನೊಚ್ಚಿದರಾದೆವೆಂಬೆವದೊಳಂ ತಮ್ಮನುಱಿಸೆಟಿಗೆಯ್ದು (ಸುಕುಮಾ. ೨-೩೨ ವ); ಗಱಯಿಂ ನೊಚ್ಚಿದರೆನೆ[ಪಾಠಾಂ. ನೋರ್ಚಿದರೆನೆ, ಸೋರ್ಚಿದುದೆನೆ] ಕೆಂಗಱಯಂ ಬೆಬ್ಬಟ್ಟೆ ರಾಜಸುತಸಂದೋಹಂ ಗಱಸೋಂಕದೆ ಬೆಳ್ಕಿರಲೆಗೆ ಗಱ ಮೂಡಿದ ತೆಱದಿನೋಡಿ ಪೋದತ್ತಾಗಳ್ (ಪಂಂರಾಮಾ. ೩-೫೬); ವಸುದೇವಕುಮಾರನ ರೂಪುಗುಂಡು ಸೋಲ್ತಿನ್ನರುವನ್ನರೆನ್ನದೆ ಪುರಾಂಗನೆಯರ್ ನೆಱಿ ಕಾಮಶಸ್ತ್ರಸಂಭಿನ್ನತೆವೆತ್ತು ಕೂಡಿ ಗಱುಯಿಂ ಕಡುನೊಚ್ಚಿದರಾದರ್ (ನೇಮಿಪು. ೩-೧೩೫). **ನೊಚ್ಚಿದಳ್** = ಲಘುವಾದವಳು; ಕೀಳಾದವಳು: ಭೋಗಕಾಂಕ್ಷೆಯಿಂ ಮದುವೆಗೆ ಮನಂದಂದಂದಬಲಾಬಾಲಗೋಪಾಲಜನಂ ಮೊದಲಾಗೆನ್ನಂ ಪುಲ್ಲಿಂದಂ ನೊಚ್ಚಿದಳಂ ಕಲ್ಲಿಂದಂ ಬೆಟ್ಟಿದಳುಮಾಗಿ ಬಗೆವರ್ (ಶಾಂತಿಪು. ೪-೭೯ ವ). **ನೊಚ್ಚಿದುವು** = ೧. ಹಗುರಾದುವು; ಲಘುವಾದುವು: ತುಂಗನಿತಂಬದಿಂ ಕುಚದ ಬಿಣ್ಪೊಱಯಿಂ ಪೊಡರಲ್ಕಮಾಱದಿರ್ಪಂಗನೆಯರ್ ಸರೋಜಲದೊಳಂದವು ನೊಚ್ಚಿ [ಪಾಠಾಂ. ಪ್ಪಿ]ದುವಾಗೆ ರಾಗದಿಂ ಪೊಂಗಿ ಪೊದಟ್ದು ಪಾಱ ಪೊಳೆದಾಡಿದರ್ (ಲೀಲಾವ. ೧೩-೧೨೪; ಸೂಕ್ತಿಸು. ೧೨-೬೪ ನೋ.). ೨. ಹಿತವಾದವು: ಪೊನ್ನ ಸಿಪ್ಪಿನ ಕತ್ತುರಿಯಂ ಕೊಂಡು ಬೊಟ್ಟಿಸಿಟ್ಟು ಬೆಲೆಗೆ ಬಿಣ್ಣದುವುಂ ಮೆಯ್ಗೆ ನೊಚ್ಚಿದುವುಮಪ್ಪ ದೇವಾಂಗ ಮುನುಡಿಸಿ ಮಾಣಿಕದೊಡಿಗೆಯಂ ತೊಡಿಸಿಯುಮೃತಾನ್ನಮನೂಡಿ . . . ಉಣಲುಮಿತ್ತು (ಅರ್ಥನೇ. ೮-೨೧ ವ).

**ನೊಚ್ಚಿತ್ತು** 'ನೊಚ್ಚಿತು' ನೋ.

**ನೊಜೆ** 'ನೊದೆ' ನೋ.

**ನೊಜೆಹುಲ್ಲು** 'ನೊದೆಹುಲ್ಲು' ನೋ.

**ನೊಟಗೂಲಿ** (ನಾ). ಒಂದು ಬಗೆಯ ಮಾನ್ಯ (?): ಹದಿಕೆ ಜೋಡಿಗ್ರಾಸ ನೊಟಗೂಲಿ ಮಾದಾಱಕೆವಟ್ಟ ಕಟ್ಟಿಗೆ ದಂಡಾಯಿರ ಸಾಂಮ್ಯ ಹೊದಕೆ ಹದಿನೆಂಟು . . . ಉಂಬಳಿಯ ಕಳೆದು (ಎಕ. VIII, ತೀರ್ಥಹ. ೧೯೬-೩೦; 1404). [?]

**ನೊಟನಪಾರಿವಾಳ** 'ಲೊಟನ್ಪಾರಿವಾಳ' ನೋ.

**ನೊಣ** 'ನೊಳವು' ನೋ.

**ನೊಣಂಬ** 'ನೊಟಂಬ' ನೋ.

**ನೊಣಂಬವಾಡಿ** 'ನೊಟಂಬವಾಡಿ' ನೋ.

**ನೊಣಕಸ** (ನಾ). ಒಂದು ಬಗೆಯ ಸಸ್ಯ: (೬).
[ನೊಣ (<ನೊಳವು)+ಕಸ]

**ನೊಣಗೇಡಿ** (ನಾ). (ಅಲಂ) ಅಲ್ಪನಾದವನು; ಕ್ಷುದ್ರ: ಸತಿಯಂ ಕೋರ್ವರ ಸಲಹದ ನೊಣಗೇಡಿಗಳ್ ಕ್ಷಿತಿಯೊಳಿನ್ನುಂಟೆಯಿಂಥವರು (ಜುಮಿಪ. ೨೧). [ನೊಣ (<ನೊಳವು) + ಕೇಡಿ$_1$]

**ನೊಣಗೇಡಿತನ** (ನಾ). ನೀಚತನ; ಅಲ್ಪತನ; ಹೀನಸ್ವಭಾವ: ಸಿಕ್ಕೆವು ನಾವಿಂಥಾ ನೊಣಗೇಡಿತನಕೆ ನೀ ದುಃಖಿಸಬೇಡವಿಲ್ಲಿ(ಜುಮಿಪ.೨೧).
[ನೊಣಗೇಡಿ+-ತನ]

**ನೊಣಚಿ** (ನಾ). ದನಗಳ ರಕ್ತವನ್ನು ಹೀರುವ ಒಂದು ಬಗೆಯ ಕೀಟ,—ಹುಳು; ತೊಣಚಿ: ಆದರೆ ಹೆಂಡತಿಯ ಸೂಚನೆ ನೊಣಚಿಯಂತೆ ಅವರನ್ನು ಹೊಕ್ಕು ಕಾಡಿತು. ಏನೇ ನಾಶವಾಗಲಿ, ಪುತ್ರನಾಶ ಬೇಕಾದರೂ ಆಗಲಿ, ತನ್ನ ಬ್ರಾಹ್ಮಣ್ಯದ ನಾಶಕ್ಕೆ ಅವನು ತಯ್ಯಾರಿಲ್ಲ (ಸಂಸ್ಕಾರ. ೩೧). 'ತೊಣಸೆ' ಪರಾ. [<ತೊಣಚಿ ?]

**ನೊಣಬ** 'ನೊಟಂಬ' ನೋ.

**ನೊಣಬುಲಿ** (ನಾ). ನೊಣವನ್ನು ಹಿಡಿದು ತಿನ್ನುವ ಒಂದು ಬಗೆಯ ಹುಳು; ನೊಣದ ಹುಲಿ: ನೊಣಬುಲಿಯಂ ಲಂಘನೆಗೆ ಮೃಗಗಣ ಜುಣುಗುವವೆ ಮರ್ಮು ನಿನ್ನ ಹುಲುಂಪರಿ ಕಣೆಗೆ ಖಳನಾಯಕರು ಮುರಿವೆವೆ ಬಣಗ ಹೋಗೆನುತ ಕಣುಗಳಲಿ ಕಿಡಿಸೂಸಿ (ಅಂಬಿಕಾ. ೨೭-೧೦). [ನೊಣ (<ನೊಳವು)+ಪುಲಿ]

**ನೊಣರೋಗ** (ನಾ). ಸಸ್ಯಗಳಿಗೆ ನೊಣಗಳಿಂದುಂಟಾಗುವ ಒಂದು ಬಗೆಯ ರೋಗ: ಅನೇಕ ತೆರದ ನೊಣಗಳಿಂದುಂಟಾದ ಸಸ್ಯವ್ಯಾಧಿಗಳು: ನೊಣರೋಗ (Fly.ಇಂಕಶ). [ನೊಣ (<ನೊಳವು)+ರೋಗ]

**ನೊಣವು** 'ನೊಳವು' ನೋ.

**ನೊಣಸುತ್ತ** (ನಾ). ಒಂದು ಬಗೆಯ ಸಸ್ಯ: (ಪಂಡಿತ. ೧೮೪).
[ದೇ.॥ ತಮಿ. ತೆಲು. ನೊಣಸುತ್ತು]

**ನೊಣಸುತ್ತಕ** (ನಾ).=ನೊಣಸುತ್ತ: ನೊಣಸುತ್ತಕವೆಂಬ ವನಸ್ಪತಿಯ ಎಲೆಗಳ ಮೇಲೆ ಅಂಟಿನಿಂದ ಜಿಗಟುಪದಾರ್ಥವೂ ಸುಂಕವೂ ಇರುವದುಂಟು (ಮುಂಬಯಿ. ೬-೨೭೫). [<ನೊಣಸುತ್ತ]

**ನೊಣೆ, ನೊನೆ** (ಕ್ರಿ). ೧. ನುಂಗು; ಕಬಳಿಸು: "ನೊಣೆ—ಗಿಲನೇ (ನುಂಗು)" (ಶಮಧಾ); ಅನಿಲಸುತಂ ಸವಿಸವಿದು ಬಿಕ್ಕಬಿಕ್ಕನೆ ಸವಿ ನೋಡೆನ್ನಾಣೆಯೆಂದು ರಕ್ಕಸಿಗಮುದಂ ಸವಿದೋಱ ನೆತ್ತರೆಲ್ಲಂ ತವೆ ಮುಳಿಸಿಂದವನ ಕರುಳ ಪಿಣಿಲಂ ನೊಣೆದಂ (ಪಂಪಭಾ. ೧೨-೧೫೪); ವಿಸ್ತಾರ್ತ್ಯ ವಿಮಾಱದರನಡುತ್ತುರ್ಯ ಹೊಯ್ವ ಸಿಡಿಲುದ್ಧತರಂ ನೊಣೆವುಗ್ರ ರಾಹುವೆಂಬುದನೆನೆ ಮತ್ತನನ್ನ ನೊಳನನ್ನ ಪರಾಕ್ರಮನೊಳ್ . . . ಕಾದುವ ಮೆಯ್ಗಲಿಯಾದ್ಧರಿತ್ರಿಯೊಳ್(ಸೌಇಇ.XX,೭೪-೨೪; 1112);

ಗಾಳಿ ರಭಸವಾಗಿ ಬೀಸುತ್ತಿದ್ದರಿಂದ ಬೆಂಕಿ ತನ್ನ ರಕ್ತನಾಲಗೆಗಳನ್ನು ಮರದ ರೆಂಬೆರೆಂಬೆಗೆ ಚಾಚಿ ನೊಣೆಯುತ್ತಿತ್ತು (ಸರ್ವಮಂ.೩೨). ೨. (ಆಲಂ) ಸಂಪೂರ್ಣವಾಗಿ ನಾಶಮಾಡು ; ಹಾಳು ಮಾಡು : ಮಕ್ಕಳ ಮೊಮ್ಮಕ್ಕಳ ರಥಮೆಕ್ಕೆಯನೆಡೆಗೊಂಡೊಡವರನೋವದೆ ರಣದೊಳ್ ಮಕ್ಕಳನಾಂ ಕೊಂಡೊಡೆ ತನ್ನಿಕ್ಕಿದ ತತ್ತಿಯನೆ ಪಾವು ನೊಣೆವಂತಕ್ಕುಂ (ಪಂಪಭಾ. ೧೦-೧೩) ; ಕರಿಯಂ ನುಂಗಿ ಕಳಿಂಗನಂ ನೊಣೆದ ದರ್ಪಕ್ಕೊಂದುಗೊಳ್ . . . ಎಂದು ಮಚ್ಚರದಿಂದೋವದೆ ಪೊಯ್ದು ನೆತ್ತಿಗದೆಯಿಂ ದುರ್ಯೋಧನಂ ಭೀಮನಂ (ಗದಾಯು. ೮-೧೮) ; ಇಱಿದು ನೊಣೆದು ತಣಿಯದೆ ಮತ್ತಂ ದ್ರೋಹರನಱಸುತ್ತಿರ್ಪುದು (ಎಕ.VIII, ಸಾಗರ. ೧೧೮-೧೮ ; 1631) ; ಇಂತು ನೀನವರ ಚಿತ್ತಕ್ಕೆ ನೆಱೆ ಮಱಪಿಟ್ಟು ಕಂತುಹರನೀ ಬಸವನಂ ನೊಣದೆಯಲ್ಲದೊಡೆ ಮುಂತುಗೊಂಡಾ ಶರಣರೀವರೀ ಬಸವಣ್ಣನಂ (ಅರಾಚ.೪-೧೦-೩೪). **ನೊಣೆ :** ೨. ತನಗೆ ವೈರಿಗಳ ಹರಿಯುವರನು ನೊಣೆದು ಕಳೆಯಲು ಬೇಕು (ತಿಮ್ಮಅ. ೧೦-೩೩). ೩. (?) : ತನಗೆ ಸಿಕ್ಷ್ಯೆಸಿದಮ್ಮದು ಕಾರಣಂ ಶಾಪ ಜನಿಸಿರ್ದವನ್ನರಿದು ನೊಣೆಯರದಕಂ ತಾನು ಚಿನುಮಯಂ ಪರಿಹರಿಸದಿರ್ದಧಿಕಸಂತೋಷಮಂ ತಾಳ್ದು ತನ್ನನದೊಳು (ತುರಂಗ. ೮೬-೧೩).

**ನೊಣೆದು ನುಂಗು** = ಸಂಪೂರ್ಣವಾಗಿ ನುಂಗು ; ಕಣ್ಣ ನೀರೊಡನೊಡನುರ್ಚೆ ಪಾಯೆ ಮುಳಿಸಿಂದದನೊಯ್ಯನೆ ತಾಳ್ದಿ ಕಾಯ್ಪಿನೊಳ್ ಕಡಗಿ ಜಗಂಗಳಂ ನೊಣೆದು ನುಂಗಲುಮಾಟಿಸಿದಂ ಸುಯೋಧನಂ (ಪಂಪಭಾ. ೧೧-೧೦೦) ; ಮಿಕ್ಕವರಿಗೆ ಬಂದದ್ದು ಏಕೆ ಜನ್ಮಕ್ಕೆ ಹತ್ತಿ ಶನಿಯಾಗಿ ನೊಣೆದು ನುಂಗಿಬಿಡುತ್ತದೆ ? (ಬಂಕಿಮ. ೧೦೮).

[ದೇ.॥ ತಮಿ. ನೊಳ್ ; ಮಲ. ನುಣ ; ಕುರುಖ್. ನುಲ್ನಾ]

**ನೊಣೆನೆಕ್ಕು** (ಕ್ರಿ). ಸಂಪೂರ್ಣವಾಗಿ ನಾಶಮಾಡು,—ಹಾಳು ಮಾಡು : ಬಿರುಗಾಳಿ ತರಗೆಲೆಗಳಂ ಬೀಸುತೆಳ್ಪಟ್ಟುವೋಲ್, ಕಾಳ್ಗಿಚ್ಚು ಕರಡಬೆಣಮಂ ನೊಣೆನೆಕ್ಕಿ ಕರಕುವಂತೋಲ್ ಕಲ್ತ ಮಾಯಾಸಮಸ್ತವಿದ್ಯೆಯನವರ ಮೇಲ್ ವ್ಯಯಿಸುವೆನ್ (ಶ್ರೀರಾಮಾ. ೫೭೧-೫೨೨).

[ನೊಣೆ + ನೆಕ್ಕು$_1$(<ನಕ್ಕು$_1$)]

**ನೊಣೆಪ** (ನಾ). ನುಂಗುವಿಕೆ ; ಕಬಳಿಸುವಿಕೆ : ತಡೆಪಂ, ಅಣೆಪಂ, ನೊಣೆಪಂ, ಪೊರೆಪಂ . . . ಒರೆಪಂ (ಶಬ್ದಾನು. ೫೭೧ ಪ್ರಯೋ).

[ನೊಣೆ+-ಪ$_2$]

**ನೊತೆ** 'ನೊದೆ' ನೋ.

**ನೊತೆಹುಲ್ಲು** 'ನೊದೆಹುಲ್ಲು' ನೋ.

**ನೊದೆ, ನೊಜೆ, ನೊತೆ, ನೊಸೆ$_2$** (ನಾ). ಒಂದು ಬಗೆಯ ಹುಲ್ಲು ; ಜೊಂಡು ; ಮುಂಜಾಹುಲ್ಲು : "ದೃಢಮೂಲಃ—ನೊ (ಮೊ?)ದೆ, ಪಡಪರ" (ಓಷಧಿ. ೬೯) ; ನೊ(ಮೊ)ದೆ ಗೆಂಕು ಬೆಳೆಯೆ ನೀರಿಲ್ಲದ ನೆಲದೊಳ್ ಪುಟ್ಟಿದಾಗಳವಱಡಿಯೊಳ್ ತೋಡಿದೊಡೆ ಜಲವೊಂದೆ ಪುರುಷದೊಳುದಯಿಕ್ಕುಂ (ಜಟ್ಟಮ. ೧೧-೨೫) ; ಲಾಮಜ್ಜಕ, ಲಾಮಂಚ, ಮುಂಜ, ನೊದೆ, ವಲ್ಲಭ, ಬಲ್ಲಹ (ಶಬ್ದಾನು. ೧೬೦ ಪ್ರಯೋ) ; ಮುಂಜ—ನೊದೆ, ವಲ್ಲಭ-ಬಲ್ಲಹ (ಹೊಸಗ.೧೧೮). **ನೊಜೆ :** 'ನೊಜೆಹುಲ್ಲು' ಪರಾ. **ನೊತೆ:** 'ನೊತೆಹುಲ್ಲು' ಪರಾ. **ನೊಸೆ$_2$** : ನೊಸೆ ನೈಹಂಚಿ ಕಣಿಗಿಲೆ . . . ಕವಲ್ಗೊಟ್ಟೆ ಮರದಾರಕ್ಕೆವುಲ್ಲೆಯೆಸೆದಿಹವಾ ವಿಪಿನದೊಳು (ಶ್ರೀಪಾಲ. ೭-೧೮) ; ಗಂಗ್ವಾಡೀ ಬಸವ್ವೆನ ಕಟ್ಟೆಗೆ ತೆಂಗಂಗ್ವಾಯಲ್ಲೆವತ್ತು ಮರಳ ಹೊಲದರೆ ಕಲ್ಲಿಗೆ ಪ ನೊಸೆಬಳಿಯ ಲಿಂಗಮುದ್ರೆ ಬಳಿ ಬಡಗಮುಖನೆ (ಎಕ. III, ತಿರುಮ. ೬೩-೪೮೪ ; 1748) ; ಹಂಚಿ, ಗರಿಕೆ, ನೊಸೆ, ಜಂಡು, ಬಿದಿರು (ನಮ್ಮಸು. ೨೩೮). 'ಮೊದೆ' ಪರಾ.

**ನೊದೆಹುಲ್ಲು, ನೊಜೆಹುಲ್ಲು, ನೊತೆಹುಲ್ಲು, ನೊಸೆಹುಲ್ಲು** (ನಾ). =ನೊದೆ : ಆ ಮುಂಗುಸಿಗೆ ಹರಿತ ಎಂದು ಹೆಸರು . . . ಅದರ ಮೈ ತುಂಬ ನೊದೆಹುಲ್ಲಿನಂತಹ ಕೂದಲು (ನಾಳೀಜಂ.೪೪). **ನೊಜೆಹುಲ್ಲು :** ಒಂದು ಸಣ್ಣ ಕೊಠಡಿಯ ಮೂಲಕ ಹೋಗಿ, ಬೆಂಚಿನ ಮೇಲೆ ಹಾಸಿದ್ದ ವರ್ತುಲಾಕಾರವಾದ ನೊಜೆಹುಲ್ಲಿನ ಆಸನಗಳ ಮೇಲೆ ಕುಳಿತೆವು (ನಿಬಂಧ. II, ೧೮೭). **ನೊತೆಹುಲ್ಲು :** ನೊಸೆಹುಲ್ಲು, ನೊತೆಹುಲ್ಲು (ಮೈಔಗ.೬೦-೧೨೯). **ನೊಸೆಹುಲ್ಲು :** ಕೊಡಿಮುರಹುಲ್ಲು, ಗೊಡುರಹುಲ್ಲು, ಜರಿಹುಲ್ಲು, ನೊಸೆಹುಲ್ಲು (ಮೈಔಗ. ೩೪-೬೫೪).

[ನೊದೆ+ಹುಲ್ಲು(<ಪುಲ್)]

**ನೊನೆ** 'ನೊಣೆ' ನೋ.

**ನೊಪ್ಪ** (ನಾ). (?) : ಪರಿಹರಮಂ ಕಟಾಕ್ಷದಲರುಹಬೇಕೆನಲಾರ್ಯನಸುನಗುತ ಶಂಕಿಪಲು ಬರಿವಾರ್ತೆ ನೊಪ್ಪದ ದಿಂಕವೇ ಶ್ರುತಿವಚನಸಮ್ಮತಿ ಧಿಃಕರಿಸಲಯುಮಾತುಮಾ ಬ್ರಹ್ಮಾ ಮಹಾವಾಕ್ಯ (ಗಗತಾ. ೧೩-೪೬).

[?]

**ನೊಪ್ಪನೆ** (ಅ).೧. ಹಗುರವಾಗಿ ; ಲಘುವಾಗಿ. ೨. ಶೀಘ್ರವಾಗಿ; ವೇಗವಾಗಿ ; ತಟ್ಟನೆ: ಅರ್ಥಮುಳ್ಳನಂ ಪೊರ್ದಿ ಮಾಡುತುಂ ಪಱಿಯಿತಿಂದು ನೊಪ್ಪ[ಪಾಠಾಂ. ಚ್ಚ]ನೆ ನೆಗೆವರ್ (ಸಮಸ, ೧೨-೪೦).

**ನೊಪ್ಪನೊಪ್ಪನೆ** (ದ್ವಿರುಕ್ತಿ) : ೧. ಕೀಳಾಗಿ ; ಹೀನವಾಗಿ : ಮೋಹನವನಪ್ಪಿದ ಘನರೂಪಿನಿದಿರೊಳಂಗಜರೂಪು ನೊಪ್ಪನೊಪ್ಪನೆ ಗಭೀರತೆಯಿಂದಿರೊಳಂಬುನಿಧಿ ತೆಳ್ಳತೆಳ್ಳನೆ ಶಾಂತಿಯದಿರ ಶಶಿ ಬೆಚ್ಚಬೆಚ್ಚನೆಯೆನೆ ಹರಿಶ್ಚಂದ್ರನೆಸೆದಿರ್ದನು(ಹಚಕಾ.೧-೪೧). ೨.ವೇಗವಾಗಿ; ಶೀಘ್ರವಾಗಿ : ತೊಪ್ಪತೊಪ್ಪನೆ, ತೆಪ್ಪತೆಪ್ಪನೆ ಪುರುಳ್, ನೊಪ್ಪನೊಪ್ಪನೆ ಪೆಟಿಂದು (ಶಮದ. ೧೯೩ ಪ್ರಯೋ). [<ನೊಪ್ಪಿತು+-ಅನೆ$_1$]

**ನೊಪ್ಪಿತು** (ನಾ). ಹಗುರ ; ಲಘು : ಕಂಡು ಮಾಗಧ ಕರೆದನೀ ಧನು ಚಂಡಿಯಿದು ನಮಗಲ್ಲ ನಾವ್ ಮುಂಕೊಂಡು ತಪ್ಪಿತು ನೊಪ್ಪಿತಾದುದು ಭಾರಿಯಗ್ಗಳಿಕೆ (ಕುಮ್ಮಾಅ. ೧೪-೧೬).

**ನೊಪ್ಪಿತಾಗು** = ಬಲಹೀನವಾಗು ; ಶಕ್ತಿಗುಂದು : ತಪ್ಪಿ ರಥವನು ತಾಗಿದಡೆ ನೆಲ ನೊಪ್ಪಗೊಂಡುದು ರಥಹಯವು ಸಹಿತೊಪ್ಪವನಾಧ್ವಜಸಹಿತ ಸಮರಚ್ಛತ್ರಧಾರಿಗಳ ನೊಪ್ಪಿತಾದುದು ಜೀವ ನೃಪನೊಡಲೊಪ್ಪವಳಿದುದು (ನಿಭಾಗ. ೧೦-೪೯-೪೯). **ನೊಪ್ಪಿದುವು**=ಹಗುರವಾದವು; ಲಘುವಾದವು : ತುಂಗನಿತಂಬದಿಂ ಕುಚದ ಬಿಣ್ಪೊಱೆಯಿಂ ಪೊಡರಲ್ಕಮಾಱದಿರ್ಪಂಗನೆಯರ್ ಸರೋಜಲದೊಳಂದವು ನೊಪ್ಪಿ[ಪಾಠಾಂ.ಚ್ಚಿ]ದುವಾಗೆ (ಲೀಲಾವ. ೧೩-೧೨೮).

[?]

**ನೊಪ್ಪು** 'ನೋರ್ಪು' ನೋ.

**ನೊಪ್ಪುನೆಗೆ** (ಕ್ರಿ). ಲಘುವಾಗಿ ಹಾರು ; ಹಗುರಾಗಿ ಕುಪ್ಪಳಿಸು (?) : ಪಂದಿಯ ಬಳಿಯೊಳ್ ನೊಪ್ಪುನೆಗೆದುರ್ದಿ ಪಾಯುಂತೆ ಚಪ್ಪರಿಸುತ್ತುಗಿದು ಬಗಿದು ತೆಗೆದುವು ನಾಯ್ಗಳ್ (೧೨ಕ. ೧-೧೦೩).

[<ನೊಪ್ಪಿತು+ನೆಗೆ$_1$]

**ನೊಯ್ಪುಡು** (ಕ್ರಿ). ಕಷ್ಟವನ್ನು ಅನುಭವಿಸು ; ತೊಂದರೆಗೊಳಗಾಗು ; ನೋಯು : ನೀವಿಂತು ನೊಯ್‌ಪಟ್ಟುಮೆನ್ನವೊಲು ನಿಮ್ಮೊಳಾರೊರ್ವನುಂ ಪಟ್ಟರನ್ (ಮೂರುನಾ. ೯೯-೬೮).

[ನೊಯ್$_0$(<ನೋವು)+ಪಡು$_1$]

**ನೊಯ್ಯವಾಲ** (ನಾ). ಒಂದು ವಂಶದ ಹೆಸರು (?) : ಇದುವೆ ಸೂದೂಱು ನೊಯ್ಯವಾಲರಯ್ಯಮ್ಮನ್ಗೆ ಧರ್ಮ್ಮತೂಂಬುಂ ಕೊಟ್ಟರ್ (ಎಕ. XIV, ತಿರುಮ. ೨೫೩-೧೧ ; ಸು. 800).

[?]

**ನೊರಂಜು, ನೊರಜು$_1$**(ನಾ).೧.ಒಂದು ಬಗೆಯ ಸೊಳ್ಳೆ ಜಾತಿಯ ಸಣ್ಣ ಕೀಟ ; ದೋಮೆ: ವಿಕಲ್ಪದಿಂದುಗೆ . . . ನೊರಂಜು, ನೊರಜು;

ಜಿನುಂಗು, ಜಿನುಗು (ಶಮದ. ೩೬ ಪ್ರಯೋ); ಬಣಂಜು, ಬಣಜು, ನೊರಂಜು, ನೊರಜು (ಶಬ್ದಾನು.೮೮ ಪ್ರಯೋ). **ನೊರಜು$_1$** :೧."ಆವಿ ಚಕ್ಕಾಡು ರಹಿ ತೊನಸೆ ತುಷಮೆನೆ ನೊರಜು" (ಮಂಗರಾ. ೫೩-೧೧) ; ಬೆಳೆದ ಭಾರದ ಬಿದ್ದ ಮೊಲೆಯನೆಳಲುವ ತುಟಿಯ ಬೆಳುಗಣ್ಣ ಜೋಲ್ವ ಕಿವಿಯುಸುರು ಮಸಗಿದ ಬಾಯ ಒಳಗೆ ಸುಳಿವ ನೊರಜಂ ನೂಂಕಿ (ಸೋಮಚ. ೪-೪೨) ; ಕುಕವಿಗಳಾರ್ ಗಣಿಸಿದಪರ್ ಮುಸುಱು ಪರೆವ ನೊರಜಂ ನೊಳಮಂ (ಪುಷ್ಪಪು. ೧-೪೫) ; ಎಲೆ ಮರುಳೆ ಭೂಪಾಲ ನೊರಜಿನ ಕಳಕಳಕೆ ಕರಿ ಬೆಚ್ಚುವುದೆ (ಕುವ್ಯಾಸ. ೮-೪೬) ; ಅವರು ಕೊಡಗಿನ ದೊರೆ ಎಂಬ ನೊರಜನ್ನು ಒರಸಿ ಹಾಕಿ, ತಮಗೆ ಗೆಲುವಿನ ಮಂಗಳದ ಒಸಗೆಯನ್ನು ತರುವರು (ಹುಲಿಹಾ. ೨೩೫). **೨.** (ಆಲಂ) ಅಲ್ಪವಾದುದು ; ಕ್ಷುದ್ರ : ರಾಮನ ಪಡೆಯಂನೆಣಿಪರೆ ಕಟ್ಟಕಡೆಯಣ ನೊರಜು ತಾನೆಂದ (ಕೌಶಿರಾ. ೧೧-೫೨) ; ಹರಿಗಿರಿಯಜಗಿಜ ಸುರಗಿರ ಪದವಿಯ ನೊರಜೆಂದು ಜಱೆದು ಶಿವನೊಳು ಬೆರಸಿ ತಮ್ಮಿಂ ತಾವೆ ರಾಜಿಪ ಶರಣರ ಪುರವ ಕಂಡನು ಧರಣೀಶ (ಮೋಳಿಪು. ೫-೫೭) ; ನೊರಜು ನಾಂ (ವೆಂಕಾರಾ. ೬-೯-೧೨). (ಗು). **೩.** ಕ್ಷುದ್ರವಾದ ; ಕೀಳಾದ ; ಕಳಪೆಯಾದ: ಧುರದೊಳು ಹಿರಣ್ಯನ ಕರುಳನುಗಿಯಲೆಂದರವಿಂದನಾಭನು ಪಡೆದಾ ನರಹರಿರೂಪಮಲ್ಲದೆ ಲೋಕದೊಳುಳ್ಳ ನೊರಜುಸಿಂಗದ ಪರಿಯಲ್ಲ (ಅಂಜಚ. ೧೦-೧೭) ; ಕರಣಾಭಿಮಾನಿಗಳ ಜಯಿಸಿದ ಜಗಜ್ಜೀವ ನೊರಜು ದಾನವರ ಗೆದ್ದದ್ದು ಮಹಾಸೊಬಗೆ (ವಿವಾಕ್ಯ. ೧೧೩-೨).

**ನೊರಕಾಟ** (ನಾ). ಸಂಕಟ ; ನೋವು ; ವೇದನೆ: ಸ್ಮರನ ಕಲೆ ಸವಿಯೂಟ ಸೊಂಪಡಗೆ ನೊರಕಾಟ ತಿರುಗಿ ಬೀಳುಗುಮಾಟ ತಿಪ್ಪೆಯೊಳ ಗಣ ಕಾಟ (ತುರಂಗ. ೩೫-೨೫). [ನೊರಕು + ಆಟ]

**ನೊರಕಿಸು** (ಕ್ರಿ). ನೋಯಿಸು ; ಹಿಂಸೆಪಡಿಸು ; ಬಾಧೆಪಡಿಸು : ಮರುತಜನ ಬಿಲ್ಲೊಪ್ಪಿನಿಂದಿರಿದ ನೃಪತಿಯಂ ನೊರಕಿಸಿದನಡಿಗಡಿಗೆ ಕಣೆಗರೆದು (ತುರಂಗ. ೭೦-೩೦) ; ಅರಸ ಕೇಳ್ಕುರುನಂದನಂ ತಡದು ಭೀಮನಂ ನೊರಕಿಸಿದನೆಂಟೆಂಬಿನಿಂದೆಚ್ಚು (ತುರಂಗ.೭೨-೧೯).[ನೊರಕು + -ಇಸು$_3$]

**ನೊರಕು** (ಕ್ರಿ). ನರಳು ; ಸಂಕಟಪಡು ; ಬಾಧೆಪಡು : ಕುರುನೃಪತಿ . . . ಗಂಧರ್ವರೋಳ್ಸಿಕ್ಕಿ ನೊರಕುತಿರಲರ್ಜುನಂ ಬಿಡಿಸೆ ಮಾನಂ ಪೋಗಿ ಹಸ್ತಿನಾಪುರಿಗೆ ಬಂದಂ (ತುರಂಗ. ೩೪ ಸೂಚನೆ) ; ಶಕುನಿ ಸೈಂಧವಂ ಗುರುಸೂನು ಮುಂತಾಗಿ ಘಾಯದಿಂದ ನೊರಕುತಿರಲಿತ್ತ ತುರುವಿಂಡುಗಳನರ್ಜುನಂ ಪುರಕೆ ಕಳುಹಿದನು (ತುರಂಗ. ೩೭-೩೪). [<ನರಕು]

**ನೊರಕೆ** (ನಾ). ಬಾಧೆ ; ನೋವು ; ವೇದನೆ: ರಣಹಂಬಲಂ ಮರದ ಮಾದ್ರೇಶ್ವರಂ ದುಶ್ಶಾಸನೆಂಬವಂ ಸಾವನುಳಿವನೊ ಕಾಣೆ ನೊರಕೆಯಿಂ ಮಲಗಿದನು ಮೂರ್ಛೆಯಿಂದ (ತುರಂಗ. ೫೧-೩೭). [<ನೊರಕು]

**ನೊರಜು$_1$** 'ನೊರಂಜು' ನೋ.

**ನೊರಜು$_2$** 'ನುರುಜು' ನೋ.

**ನೊರಜುಗಣ್ಣು** (ನಾ). ನೊರಜು ಮುತ್ತುತ್ತಿರುವ ಕಣ್ಣು ; ಪಿಸುರುಗಣ್ಣು (?) : ನೊರಜುಗಣ್ಣಿನ ನಳಿದ ಮೂಗಿನೆಳಲುವ ತುಟಿಯ ಕುರುಟುವಲ್ಲಿನ ಕರಿಯ ಕಬ್ಬಾಯವೊಳಸರಿದ ಹಜಿದಲೆಯ . . . ನಾಱುವ ಬಾಯ ನೊರೆ ಸೂಸುತಿರ್ದಳು (ಹಚಕಾ. ೪-೨೮). [ನೊರಜು$_1$(<ನೊರಂಜು)+ಕಣ್ಣು(<ಕಣ್)]

**ನೊರಜುಗಲ್ಲು** 'ನುರುಜುಗಲ್ಲು' ನೋ.

**ನೊರಜುವುಟು** (ನಾ). = ನೊರಂಜು ೧ : ಮಱಿದು ಬಾಯ್ದೆಱೆದ ಬಗ್ಗದ ಬಾಯೊಳ್ ಬೀಟಲ್ ಬರ್ಪ ನೊರಜುವುಟುಗಳಂತೆ ಬಂದರಲಾ (ಅದ್ಭುತ. ೪೩-೭). [ನೊರಜು$_1$(<ನೊರಂಜು)+ಪುಟು]

**ನೊರೆ$_1$** (ಕ್ರಿ). ಬುರುಗು ಏಳು ; ನೊರೆ ಮೇಲಕ್ಕೆ ಬರು : ಕರ ತಾವರೆ ಕರುಳ್ವಳ್ಳಿ ತೋಳ್ದರೆ ಪಯೋಧರ ಮೀನು ಗಜತುಂಡು ಮೊಸಳೆ ನೊರೆತ ರೋಹಿತ ಫೇನ ಕಡಿದಲೆ ಕಮಠ ಸಂಗರವಿದ್ದುದಂಬುಧಿಯಂತೆ (ಮೋಹತ. ೩೫-೨೩) ; ಹೊರಳಿ ನಿದ್ದೆವೊಲಿರಲಿ, ಮೊರೆಯದೆಯೆ, ನೊರೆಯದೆಯೆ, ತುಂಬುದೆರೆಯುಬ್ಬುಹೊನಲು, ಕರೆಯುಬ್ಬಿದಾಳದಿಂದೆದ್ದು ಹೊರಬಿದ್ದುದದು ಮರಳಿ ಮನೆಗೆಯ್ದುವಾಗ ! (ಇಂಗೀತ. ೯೮-೫) ; ಜಲ, ಅಹುದೊ ಅಹುದೋ, ಎಂದು ಮೊರೆಯುತಲಿತ್ತು ಮೇಲ್ವಾಯ್ದು ಹೊರಳಿ. ಮೇಲ್ವಾಯ್ದು ಹೊರಳುತ್ತ ಮೊರೆದು ನೊರೆಯುತ್ತ ಹೊರಳಿ ಬಹ ಹೊತ್ತ ಕಾದಿದೆ ಊರ ಮಿತ್ತು (ನವಂ. IV, ೨೯-೧೫). [ದೇ.॥ ತಮಿ. ನುರೈ ; ಮಲ. ನುರೆ]

**ನೊರೆ$_2$** (ನಾ). ೧.ಬುರುಗು; ಫೇನ: "ಫೇನಃ, ಡಿಂಡೀರಃ–ಈ ೨ ನೊರೆ" (ಹಲಾಯು.೧೧೦–೪೬) ; ಪನಿಪುಲ್ಲ ಮುಗಿಲ ಸಂಜೆಯ ಕನಸಿನ ಸುರಧನುವ ನೆಗೆದ ನೊರೆಗಳ ನೆಱನಂತನಿತುಂ ನಿಲ್ಲವು ಬಗೆವೊಡೆ ಮನುಜರ ಯೌವನಮುಮರ್ಥಮುಂ ಬಾೞ್ಕೆಗಳುಂ (ಪದ್ಮರಾ. ೧೧೩-೧೧) ; ಪಾಲ್ಗಡಲ ತೆರೆಯ ನೊರೆಯ ದೊರೆಯ ದುಕೂಲಾಂಬರದೊಳಿಂಬಾಗಿ ಚಲ್ಲಣಮನುಟ್ಟು ಪುಡಿಗತ್ತುರಿಯಂ ತಲೆಯೊಳ್ ತೀವೆ (ಪಂಪಭಾ.೧೨-೧೦೮ ವ) ; ಹಾಲ ತೊಱೆಗೆ ಬೆಲ್ಲದ ಕೆಸಱು ಸಕ್ಕರೆಯ ಮಳಲು ತವರಾಜದ ನೊರೆತೆರೆಯಂತೆ ಆದ್ಯರ ವಚನವಿರಲು ಬೇಱೆ ಬಾವಿಯ ತೋಡಿ ಉಪ್ಪುನೀರನುಂಡವನ ವಿಧಿಯಂತೆ ಆಯಿತ್ತೆನ್ನ ಮತಿ (ಬಸವ. ೨೯೦) ; ತಿರುಗಿ ನೋಡಲೊಬ್ಬೆಯಾಚೆ, ಒಬ್ಬಳಲ್ಲಿ ಹೆಣ್ಣುಮಗಳು ನೊರೆಯ ಬಿಳುಪು ಕುರಿಯ ಮರಿಯ ತಲೆಯ ತಡವುತಿದ್ದಳು (ಇಂಗೀತ. ೮-೪). **೨.** ಎಳೆಯದು ; ಹೊಸದಾದುದು ; ತಾಜಾ : 'ನೊರೆಮೀಸೆ', 'ನೊರೆಹುಲ್ಲು' ಪರಾ. **೩.** ಹೊಸದಾಗಿ ಬಂದ ಹುಲ್ಲು ; ಎಳೆಯ ಹುಲ್ಲು ; ಚಿಗುರುಹುಲ್ಲು : ಬಡುವಿನಲ್ಲಿ ನೊರೆಯೇ ಬಂದಿಲ್ಲ (ರೂಢಿ). [<ನೊರೆ$_1$./ತಮಿ. ನುರೈ; ಮಲ. ನುರ, ನುರಿ ; ತುಳು. ನುರೆ ; ತೆಲು. ನುರುಗು, ನುರುವು ; ಕೊಡ. ನೆರೆ]

**ನೊರೆಕಾಯಿ** (ನಾ). ನೀರಿನಲ್ಲಿ ನೆನೆಯಿಸಿ ಉಜ್ಜಿದಾಗ ನೊರೆ ಬರುವ (ಬಟ್ಟೆ ಒಗೆಯಲು ಉಪಯೋಗಿಸುವ) ಒಂದು ಬಗೆಯ ಕಾಯಿ ; ಅಂಟುವಾಳದ ಕಾಯಿ : ಕೂಗಟಿಮರ, ಅಂಟುವಾಳ, ನೊರೆಕಾಯಿ (ವೈಔಗಿ. ೬೮-೧೩೮೩) ; ಮಕ್ಕಳೆಲ್ಲ ತಮ್ಮ ಅಂಗಿ ವಸ್ತ್ರಗಳನ್ನು ನೊರೆಕಾಯಿ ಹಾಕಿ ಬಂಡೆಕಲ್ಲಿನಲ್ಲಿ ಒಗೆದಾಯಿತು(ರಕ್ತರೂ.೪೭). [ನೊರೆ$_2$+ಕಾಯಿ$_4$(<ಕಾಯ್$_4$)]

**ನೊರೆಗಟ್ಟು** (ಕ್ರಿ). ನೊರೆಯುಂಟಾಗು : ಸಖೀಜನಂ ಕೆಯ್ಗೊಟ್ಟೆಯ್ತಂದು ಕೊಳನಂ ಪುಗಿಸೆ ಮೆಯ್ಯ ಬೆಂಕಿಯಿಂ ಱುಯ್ಯೆಂದು ನೊರೆಗಟ್ಟಿ ಬಿಸಿಯ ತೆರೆ ತನುಮುಟ್ಟೆ ಸೆಕೆಯುಸಿರ್ ಭುಗಿಲನೊಗೆದು ಕಾದ ನೀರ್ ಕಾಯಮುಮಂ ಸುಡೆ (ಗಿರಿಜಾ. ೪-೧೧೮ ವ) ; ಸಾಮಾನ್ಯಗುಣಗಳು–ಮೂತ್ರವು ವಾತರೋಗದಲ್ಲಿ ಬಿಳಿದಾಗಿಯೂ ಶ್ಲೇಷ್ಮರೋಗದಲ್ಲಿ ನೊರೆಗಟ್ಟಿಕೊಂಡೂ ಪಿತ್ತರೋಗದಲ್ಲಿ ಕೆಂಪಾಗಿಯೂ ದ್ವಂದ್ವರೋಗಗಳಲ್ಲಿ ಮಿಶ್ರವಾಗಿಯೂ ಇರುವುದು (ಸಕವೈ. ೧೪) ; ಅಂಟುವಾಳದ ಕಾಯಿ : ಈ ಕಾಯಿಯನ್ನು ಜಜ್ಜಿ ನೀರಿನಲ್ಲಿ ನೆನೆಸಿದಾಗ ನೀರು ನೊರೆಗಟ್ಟುತ್ತದೆ (ಗೃಹವಿ. ೮೬). [ನೊರೆ$_2$ + ಕಟ್ಟು$_1$]

**ನೊರೆಗಡಿಯಣ** (ನಾ). (ಕುದುರೆಯ ಬಾಯಿಯ) ನೊರೆಯಿಂದ ಕೂಡಿದ ಕಡಿವಾಣ ; ಬುರುಗು ಸಮೇತವಾದ ಕಡಿವಾಣ : ಪಚ್ಚಳದುಪ್ಪರದ ಮುಖದ ದೃಢಗತಿಯ ದೃಷ್ಟಿಗಳ ಕೋಪದಿ ಸಿಡಿವ ಕಿವಿಗಳ ನಿಟ್ಟುಸುರ ನೊರೆಗಡಿಯಣದ ಹಯವಂಜಿಸಿತು ಹರಿಹಯ ತುರಂಗಮವ (ತೊರಂರಾ. ೬-೩೦-೧೦). [ನೊರೆ$_2$ + ಕಡಿಯಣ(<ಕಡಿವಾಣ)]

**ನೊರೆನೆತ್ತರ್,** ನೊರೆನೆತ್ತರು (ನಾ). ನೊರೆಯಿಂದ ಕೂಡಿದ ರಕ್ತ; ಬುರುಗು ತುಂಬಿದ ರಕ್ತ : ಮುನ್ನಂ ಪರಶುರಾಮನೀ ನೆಲದೊಳುಳ್ಳರಸುವಕ್ಕಳೆಲ್ಲರುಮನಿರ್ಪತ್ತೊಂದು ಸೂಬ್ಬರೆಗಂ ಪಿಳ್ದೆ ಪೆಸರಿಲ್ಲ ದಂತು ಕೊಂದವಂದಿರ ನೊರೆನೆತ್ತರೊಳ್ ಶೀವಿ (ಗದಾಯು. ೬–೨೮ ಪ); ಬಿಸುನೆತ್ತರುಣ್ಮೆ ನೊರೆನೆತ್ತರ್ ಸೂಸೆ ಕರ್ನೆತ್ತರಂ ಬಿರಿವಿಟ್ಟೂರ್ವಿಸೆ ಕೂಡೆ ಬಿಲ್ವಡೆ ಪಡಲ್ವಟ್ಟತ್ತು ಸಂಗ್ರಾಮದೊಳ್ (ಪಂರಾಪಾ.೧೩–೪೭); ಕಡುಮುಳಿದು ನೆನೆಯದೆಯೆನ್ನ ತನೂಭವನೆಂಬುದನನಿತಂ ಮಾಡಿದ ದೇಸಿಗರೀರ್ವರ ಮನುಜರ ನೊರೆನೆತ್ತರ ಕುಡಿದೀಗಳೆ ಬಪ್ಪೆ ನಾನೆಂದನೆ ದನುಜಂ (ಕುಸುಂರಾ. ೯–೧೯); ಕರುಳು ಕರುಳಲಿ ತೊಡಕಿ ನೊರೆನೆತ್ತರಲಿ ನೆತ್ತರು ಕೂಡಿ ಕಡಿಯಲಿ ಬೆರಸಿ ಕಡಿ ಪಲ್ಲಟಿಸೆ ಕಾದುವೆನಿಂದು ಹಗೆಯೊಡನೆ (ಕುಪ್ಯಾಕ. ೮–೩೮). **ನೊರೆನೆತ್ತರು :** ಉರಿವ ಕೋಪಾಗ್ನಿಯಲಿ ಕರ್ಣನ ಶಿರದ ಭಾಂಡದಲಿವನ ನೊರೆನೆತ್ತರಿನಲಿವನಗ್ರಜನ ಕೊಬ್ಬಿದ ನೆಣನ ಕೋಯ್ಕೊಯ್ದು ಮಹೋಗ್ರಭೂತದ ನೆರವಿಗುಣಲಿಕ್ಕುವೆನು (ಕುಪ್ಯಾಸ. ೧೫–೩೪); ನರಕದಲಿ ಪಶುನಿಕರ ಕೊಲುವವು ಪರಿಪರಿಯ ವಧಗಳಲಿ ನೊರೆನೆತ್ತರನು ಕುಡಿವವು ಕೇಳು ರಕ್ಷೋಗಣಗಳುಚಿಕಿ ಕಡಿದು (ಸಿಭಾಗ. ೫–೧೧–೩೭). [ನೊರೆ$_2$+ನೆತ್ತರ್]

**ನೊರೆನೆತ್ತರು** 'ನೊರೆನೆತ್ತರ್' ನೋ.

**ನೊರೆಪಾಲು** 'ನೊರೆವಾಲ್' ನೋ.

**ನೊರೆಬಾಯಿ** 'ನೊರೆವಾಯ್' ನೋ.

**ನೊರೆಮಾಲೆ**(ನಾ). ಬುರುಗಿನ ಸಾಲು ; ನೊರೆಯ ಮಾಲೆ : ಪಕ್ಕಜಲ್ಲಿಗಳಿಂ ಪರಿಶೋಭಿವಡೆದು ಪರಿವ ತುರಂಗಸಂಘದಿಂ ನೊರೆಮಾಲೆ ವೆರಸಿ ತರಂಗೊಂಡು ತರಂಗಸಂಘಾತಂ ಬಳಜಳಧಿಯೊಳ್ನೆಗೆದಂತೆಯುಂ (ರಾಜಶೇ. ೧೩–೭೭ ಪ). [ನೊರೆ$_2$+ಮಾಲೆ]

**ನೊರೆಮೀಸೆ** (ನಾ). ಚಿಗುರುಮೀಸೆ ; ಎಳೆಮೀಸೆ ; ತುಪ್ಪುಳು ಮೀಸೆ : ನಿತ್ಯ ಚಿಂತೆಯ ಕಂತೆಯಲ್ಲಿ (೧೮ ವರ್ಷದ ಬಾಲಕರು ಮೀಸೆ ಮೂಡುವ ಮೊದಲೇ ನೊರೆಮೀಸೆ ತಾಳುವ ಈ ದಿನದಲ್ಲಿ) ನಮ್ಮ ಚಿಂತೆ ಯನ್ನು ಎರಡು ತಾಸಿನ ಅವಧಿಯ ತನಕ ನಗುವಿನಿಂದ ಮರೆಯಿಸುವವರು ಬೇಕು (ಕನ್ನಸು. I, ೧೩೩). [ನೊರೆ$_2$+ಮೀಸೆ]

**ನೊರೆಯಡಕೆ** (ನಾ). ಎಳೆಯದಾದ (ಬೇಯಿಸದ) ಅಡಕೆ ; ಹಾಲಡಕೆ : ಕೈರಗುಳಿಗೆ ನೊರೆಯಡಕೆ ಮುತ್ತಿನ ಸುಣ್ಣ ನೇರದ ಚವರ ಮುಂತಾದ ಭೂರಿಯೊಳೆನಗಿದು ತನಗಿದೆಂದೆಲ್ಲರು ಕೋಜುಟ್ಟು ಪ್ರತವ ಮಾಡಿದರು (ಭರಚ. ೨೧–೩೧). [ನೊರೆ$_2$+ಅಡಕೆ$_1$]

**ನೊರೆಯಾಱು** (ಕ್ರಿ). ೧. ನೊರೆಯು ಇಲ್ಲವಾಗು,—ಅಡಗು. ೨. (ಆಲಂ) ಬಿಸುಪನ್ನು ಕಳೆದುಕೊಳ್ಳು ; ತಣ್ಣಗಾಗು ; ಕುಗ್ಗು : ಹಾಱುತಾಯುಧವೆಂದು ಭೀತಿಗೆ ಮಾಱುಹೋದನೆ ವೀರರಸ ನೊರೆಯಾಱುತೇ ನಿಜಬಾಹುಶಕ್ತಿಯೊಳುಂಟೆ ಖಯಬೋಡಿ (ಕುಪ್ಯಾಅ. ೬–೨೫). [ನೊರೆ$_2$+ಆಱು$_1$]

**ನೊರೆಯಿಡು** (ಕ್ರಿ). ನೊರೆಬಿಡು ; ಬುರುಗಾಗು : ಮೇಳಿಸಿ ಪೊರ್ದಿ ದಾಳಿಯರ ಮೈ ಬಿಸುಪೇಱು ಬೆಮರ್ತುರ್ವಂಗದೊಳ್ ಬಾಳಮೃಣಾಳಿಕಾ ಸಮಿತಿ ಚುಯ್ಯೆಂನುತುಂ ನೊರೆಯಿ[ಪಾಠಾಂ. ವಿ]ಟ್ಟು ದಶ್ರುಧಾರಾಳಿ ಕಪೋಲದೊಳ್ ಕುದಿದು ಬತ್ತಿದುದೊಯ್ಯನೆ ಬೀಸುತಿರ್ಪ ಪೊಂಬಾಟಿಯ ಚಾಮರಂಗಳಲೆಸೀದುವು ತನ್ನಿಯ ದೇಹದಾಹದಿಂ (ಜಗವಿ. ೧೧–೨೧ ; ಕಾವ್ಯಸಾ. ೫೪೮ ನೋ). [ನೊರೆ$_2$+ಇಡು$_1$]

**ನೊರೆರಕುತ** (ನಾ). =ನೊರೆನೆತ್ತರ್ : ಮಂಡಿಸಿತು ನೊರೆರಕುತ ಕರುಳಿನ ಜೊಂಡು ಮಸಗಿತು ಕಡಿದ ಖಂಡದ ದಿಂಡು ತಳಿತುದು (ಕುಪ್ಯಾಭೀ. ೯–೧೩); ನೊರೆರಕುತ ಸುಳಿ ಮಸಗಿ . . . ಕರುಳ ಬಂಬಲು ಖಂಡದಿಂಡೆಯ ತುಱುಗಿದೆಲುವಿನ ತಳಿತ ಚರ್ಮದ ಶಿರದ ತಡಿಗಳಲಡಸಿ ಹರಿದುದು ವೈರಿಸೇನೆಯಲಿ (ಕುಪ್ಯಾದ್ರೋ.೨–೫೭). [ನೊರೆ$_2$+ರಕುತ]

**ನೊರೆವನಿ**(ನಾ). ನೊರೆಯ ಹನಿ,—ತುಂತುರು; ಬುರುಗಿನ ಕಣ: ಅತುಳ ಕರಧೂತ್ಕೃತಾನಿಲಹತಿಯಿಂ ನೆಱೆ ಸೂಸೆ ಪತ್ತಿದಿನ[ವಾಹ] ಮುಖೋದ್ಗತದ ನೊರೆವನಿಗಳೆನೆ ಮಾರುತಪಥದೊಳ್ ತುಱುಗಿ ಮಿಱುಗಿ ದುವು ತಾರಗೆಗಳ್ (ಕುಸುಪೂ. ೧೧–೧೩೦); ಬಂದುದೀ ಮೃಗಪೋತ . . . ಕೊಳಗುದಾಗಿದ ಕಲ್ಲ ರತುನಾವಳಿಯ ಮಾಡುತ ನೊರೆವನಿಯಲು ಜ್ವಲಸುಮುಕ್ತಾಫಲವ ಕೆದಱುತ . . . ಐದಿತು ನಿತಂಬಿನಿಯ (ತೊರರಾ. ೩–೮–೨೯). [ನೊರೆ$_2$+ಪನಿ$_2$]

**ನೊರೆವಳಿ** (ನಾ). ನೊರೆಯು ಬಿದ್ದಿರುವ ಜಾಗ,—ಸ್ಥಳ : ತೊಳಗು ವಜ್ಜಯನುದಿರ್ದ ತುಪ್ಪಳ ಬಳಿಯ ಮಲಗಿದು ಮೆಲುಕಿಱುದ ನೊರೆ ವಳಿಯ ನೊಣವಿಱುದಾಡಿದೊಗುನೆತ್ತರಿನ ಬೆಂಬಳಿಯ ನೆಲನನಿಕ್ಕೆಯ ಹಕ್ಕೆಯಾಡುಂಬೊಲನ ಘುರಗಾಡುಗಳೊಳಗೆ . . . ಹೊಕ್ಕುದಗಲಕೆ ಶಬರ ಸಂದೋಹ (ತೊರರಾ. ೩–೩–೧೧). [ನೊರೆ$_2$+ಬಳಿ$_3$(<ಬಟು$_3$)]

**ನೊರೆವಾಯ್,** ನೊರೆಬಾಯಿ (ನಾ). ೧. ನೊರೆಯನ್ನು ಒಳ ಗೊಂಡಿರುವ ಬಾಯಿ ; ಬುರುಗು ಆವರಿಸಿರುವ ಬಾಯಿ : ನರೆ ಗೊರಳ ನೊರೆವಾಯ ಹಾವಸೆವರಿದ ಪಲ್ಗಳ . . . ಕಾರೊಡಲ ಕುಱುಬನು (ಬಸಪು. ೨೦–೧೧) ; ನೊರೆವಾಯ್ಜೋಲ್ದುಟಿ ಪೆಮೂರ್ಗರಲ್ದ ಕೆವಿಮ್ಮಾಸೆ ಕೆದರ್ದ ಪಱುಗಡ್ಡಂ ಕರ್ಬುರರುಚಿಯನುಗುಳ್ವ ಕಾರೊಡಲಿರೆ (ನೃಪವಿ. ೧೧–೬೧). **ನೊರೆಬಾಯಿ :** ೨. ನೀರು ಸುರಿಯುವ ಬಾಯಿ ; ನೀರೂರುವ ಬಾಯಿ ; ಜೊಲ್ಲುಬಾಯಿ.

**ನೊರೆಬಾಯ ಏಳಿಸು**=ಬಾಯಲ್ಲಿ ನೀರೂರಿಸು ; ಆಸೆಯನ್ನು ಹುಟ್ಟಿಸು : ಮೇಲೆ ಇಪ್ಪತ್ತೈದು ಲಕ್ಷದ ಸಾಲ ಹರಿವಾಣದಲಿ ಲಕ್ಷ್ಮೀ ಲೋಲಗರ್ಪಿಸಿದನ್ನ ಬಡಿಸಿತು ಸುರರ ನೊರೆಬಾಯ ಏಳಿಸುವ ದಿವ್ಯಾನ್ನ ದೆಡೆಗಳೆಗಾಳುಸಹಿತೈತಂದು ನೃಪಜನದೋಳಿಯಲಿ ಭೋಜನವ ಮಾಡಿದನು (ಸಂಭಪ. ೨೪–೬೨). [ನೊರೆ$_2$+ಬಾಯ್]

**ನೊರೆವಾಲ್,** ನೊರೆಪಾಲು, ನೊರೆವಾಲು, ನೊರೆಹಾಲು (ನಾ). ನೊರೆಯಿಂದ ಕೂಡಿದ ಹಾಲು ; ಆಗ ತಾನೇ ಹಿಂಡಿದ ಹಾಲು ; ತಾಜಾಹಾಲು : ಬೇವಿನ ಗಿಡುವಂ ತಂದಿಟ್ಟಾವಿನ ನೊರೆವಾಲನೆಱೆದು ನಡಪಿದೊಡಂ ಕೇಳ್ ಬೇವಿಂಗೆ ಕೈಪೆ ಪಿಂಗದು ಭೂವಳಯದೊಳ್ (ಧರ್ಮಾಮೃ. ೫–೧೫೭); ನೊರೆವಾಲ ಮೊಸರ ತುಪ್ಪದ ಪರಿವೊನಲಾ ಗಿರಿಯ ಪಿರಿಯ ಸಾನುಗಳೊಳ್ ನಿರ್ಝರಮೆಂಬ ನೆವದಿನಿನ್ನುಂ ಪರಿದ ಪುವೇಂ ಪಿರಿದೊ ಜಿನನ ಜನ್ಮಸ್ಥಾನಂ (ಪುಷ್ಪಪು. ೧೧–೪೨). **ನೊರೆ ಪಾಲು :** ದನದ ಕಣ್ಣಿಗೆ :—ದನಗಳಿಗೆ ನೊರೆಪಾಲು, ಕೊಂಡಿಯ ರಸ, ಜಾಜಿ, ಉತ್ತ(ರಣೆರ)ಸ, ಇಷ್ಟನ್ನು ಅರೆದು ಹಚ್ಚಲು ಕಣ್ಣು ಹೂವು ಮಾಣ್ಗುಂ (ವಿವೈವಿ. ೬೯). **ನೊರೆವಾಲು :** ಉಣ್ಣೆ ಕಚ್ಚಿಲು ಹತ್ತಿ ಉಂಬುದೇ ನೊರೆವಾಲ ಪುಣ್ಯಕ್ಷೇತ್ರದಲ್ಲಿ ಹುಟ್ಟಿ ಉಣ್ಣದವನು ಆ ಉಣ್ಣೆಯಿಂದ ಕರಕಷ್ಟ (ದೇದಾಪ. ೪೧–೬೯); ಎಣ್ಣೆಯ ತಲೆಗೂಡಿದುದಿಲ್ಲ ನೊರೆವಾಲು ಬೆಣ್ಣೆಯ ಮೆಲಿಸಿದುದಿಲ್ಲ ಕಣ್ಣವೆ ಹಳಚಿ ನೋಡಿದುದಿಲ್ಲ ಮಗನ ಲಾವಣ್ಯವನೆಂದಳಲಿದಳು (ಮೋಹತ. ೪–೮೦); ಜ್ವರ ಬಂದ ಮನು ಜಂಗೆ ನೊರೆವಾಲು ಕಹಿಯಕ್ಕು ನರಕದಲಿ ಬೀಳ್ವ ಅಧಮಂಗೆ ಶಿವಭಕ್ತಿ ಹಿರಿದು ಕಹಿಯಕ್ಕು (ಸರ್ವಜ್ಞ. ೨೫೦) ; 'ಅಂಬೆ' 'ಅಂಬೆ' ಎಂದೊರಲಿ ಬರುವವೋ ಇಲ್ಲಿ ನೂರು ಕರುವು. ನಂದಿದವಗೆ ತಂಬಿಗೆಯ ತುಂಬ ನೊರೆ ವಾಲು ಕರುಱಿ ಕುರುಹು (ನೆಲಸು. ೩೮–೨). **ನೊರೆಹಾಲು :** ಹಿಡಕೋ ಬಿಡಬೇಡ ರಂಗನ ಪಾದ . . . ಮಕ್ಕಳೊಳಗೆ ಪುಂಡ ಮನೆ ಮನೆಗಳ ಹೊಕ್ಕು ಸಕ್ಕರೆ ನೊರೆಹಾಲು ಸವಿಸವಿದು . . . ತಾ ಮೆದ್ದು

ಸಿಕ್ಕದೆ ಜಿಗಿದೋಡಿ ಪೋಗುವ ಕಳ್ಳನ (ಪುರಂದ. ೨-೬೬-೪).
[ನೊರೆ$_2$ + ಪಾಲ್$_1$]

**ನೊರೆವಾಲು** 'ನೊರೆವಾಲ್' ನೋ.

**ನೊರೆವಿಂಡು** (ನಾ). ಬುರುಗಿನ ರಾಶಿ; ನೊರೆಯ ಸಮೂಹ; ಫೇನರಾಶಿ : ನೊರೆವಿಂಡುಟ್ಟ ದುಕೂಲಮಾಗೆ ಸಲಿಲಂ ಮೆಯ್ಯಾಗೆ ಹಂಸಾವಳೀವಿರುತಂ ನೂಪುರನಾದಮಾಗೆ ತೆರೆಗಳ್ ತೋಳಾಗೆ ಒರ್ವಳ್ ಮನೋಜಾಂಬುಜಾಕರದಂತಾ ನೃಪನಂದನಂಗೆ ಪಡೆದಳ್ ಬೇಱೊಂದತಿಪ್ರೀತಿಯಂ (ಶಾಂತಿಪು. ೮-೬೬) ; ಗಗನಪಯೋನಿಧಿಯೊಳು ಮಿಗೆ ಸೊಗಯಿಪ ನೊರೆವಿಂಡಿದೆನಿಪ ಪಾಂಡುರವರ್ಣಂ ಮುಗಿಲೊಗೆದು . . . ಪಡೆದುದತಿಕೌತುಕಮಂ (ಧರ್ಮಪು. ೧೩-೫) ; ತುಂಗತರಂಗಂ ಸುೞಿವ ತುರಂಗಂ ನೊರೆವಿಂಡು ನೃಪರ ಬೆಳ್ಗೊಡೆಯಾಗಲ್ ಗಂಗಾ ಪ್ರವಾಹಮೆನಿಪುದು ಸಂಗತಜನಕಳಕಳಂ ಪ್ರತೋಳೀವಳಯಂ (ಪುಷ್ಪಪು. ೨-೬೮). [ನೊರೆ$_2$ + ಪಿಂಡು$_2$]

**ನೊರೆವುಲ್**, ನೊರೆಹುಲ್ಲು (ನಾ). ಎಳೆಯ ಹುಲ್ಲು ; ಮೃದುವಾದ ಹುಲ್ಲು : ನೊರೆವುಲ್ಲಂ ಮೇದೆರಟ್ಟೆಣಿಲ್ ತುಮುಟಿ ಕುಡಿದು ಪೂರಾಂಬುವಂ . . . ಮಾಹಿಷೀಸಂತತಿ ವಿಪಿನಭವಂ ಕಣ್ಗಗುರ್ವಾಯ್ತು ಕಾರೊಳ್ (ಚಂದ್ರಪ್ರ. ೪-೪೮). **ನೊರೆಹುಲ್ಲು :** ಬದುಗಳ ಮೇಲೆ ತೇವದಿಂದ ಕೂಡಿದ ನೊರೆಹುಲ್ಲು ಇರುತ್ತದೆ (ರೂಢಿ).
[ನೊರೆ$_2$ + ಪುಲ್]

**ನೊರೆವೆರೆ** (ಕ್ರಿ). ಬುರುಗಿನಿಂದ ಕೂಡು ; ನೊರೆಯನ್ನು ಹೊಂದು : ಪಿರಿದೆನಿಪ ಲಯಸಮುದ್ರದ ತೆರೆಗಳ್ ನೊರೆವೆರೆದು ನೆರೆದು ನೆಗೆದಪುವೆಂಬಂತಿರೆ ಫೇನಪುಂಜಧವಳಿತ ತುರಂಗಸಂದೋಹಸೈನ್ಯಮೆಸೆದತ್ತಾಗಳ್ (ಕಾದಂಪೂ. ೪೬೭). [ನೊರೆ$_2$ + ಬೆರೆ$_1$]

**ನೊರೆವೇೞು** (ಕ್ರಿ). ನೊರೆಯು ರಾಶಿಯಾಗು ; ಬುರುಗು ಒಟ್ಟಿಲಾಗು : ಗಿಡುಗಳೊಳ್ ದನಿದೋಱಿ ಗೊಡಲೆಯೊಳ್ನೊರೆವೇೞಿ ನಿೞಿ ನಿೞಿದು ತೆರೆಯಿೞಿದು ಕಿಱುಮಟಿಲ ದಿಣ್ಣೆಯೊಳ್ ಪರಿವ ಬರಿವೊನಲೆಸೆದು ಪೋರೊಂದುತಾಣದೊಳ್ (ಅನಂಪು. ೯-೧೬ ರಗಳೆ).
[ನೊರೆ$_2$ + ಪೇೞು$_1$]

**ನೊರೆಸಂಡಗೆ** (ನಾ). ಒಂದು ಬಗೆಯ ಅಕ್ಕಿಸಂಡಿಗೆ : ನೊರೆಸಂಡಗೆಯನು ಹುರಿಸಂಡಗೆಯ ಬಾಳಕವನು ತಪ್ಪದೆಲ್ಲಾ ಸಾಧನವನು ಸಂವರಿಸಿ ತಂದೊಪ್ಪಿಸಿದಡೆ (ಸಿದ್ಧರಾ. ೮-೫೨). [ನೊರೆ$_2$ + ಸಂಡಗೆ]

**ನೊರೆಹಪ್ಪಳ** (ನಾ). ಒಂದು ಬಗೆಯ ಅಕ್ಕಿ ಹಪ್ಪಳ : (ಕ).
[ನೊರೆ$_2$ + ಹಪ್ಪಳ(<ಪಪ್ಪಡ)]

**ನೊರೆಹಾಲು** 'ನೊರೆವಾಲ್' ನೋ.

**ನೊರೆಹುಲ್ಲು** 'ನೊರೆವುಲ್' ನೋ.

**ನೊಲಿ** 'ನೊಲ್ಲಿ' ನೋ.

**ನೊಲೆನಾಡು** (ನಾ). ಒಂದು ನಾಡಿನ ಹೆಸರು ; ನವಿಲೆನಾಡು : ಸ್ವಸ್ತಿಶ್ರೀನೊಲೆನಾಡ ಕುಡಲುರ ನಿಗಳಙ್ಕಮಲ್ಲ ಚಂಗಾಳ್ವ ಪರಿವು ಪಯ್ದನ್ದು (ಎಕ. IV, ಹೆಗ್ಗಡ. ೧೦೪-೫ ; 1037). [<ನವಿಲೆನಾಡು]

**ನೊಲ್ಲಿ, ನೊಲಿ** (ನಾ). ಒಂದು ಬಗೆಯ ಹುಲ್ಲು : ಗೋದಿಯನ್ನು ಬಿತ್ತುವ ಸಮಯದಲ್ಲಿ ಹುಲ್ಲು ಸದಿ ನೊಲ್ಲಿ ಮುಂತಾದ ಕಸಪದಾರ್ಥಗಳು ಮೊಳೆತಿದ್ದರೆ ಮತ್ತೊಂದು ಸಾಲು ಹರಗಿ ಬಿತ್ತಬೇಕು (ಕೃಷಿಪ್ರ. ೮೩). **ನೊಲಿ :** ಪೊನ್ನಳ್ಳಿನಾಮಗ್ರಾಮಸ್ಸರ್ವ್ವ ಪರಿಹಾರೋಪೇತೋದತ್ತಃ ತಸ್ಯ ಸೀಮಾನ್ತರಾಣಿ ಪೂರ್ವ್ವಸ್ಯಾಂ ದಿಶಿ ನೊಲಿ ಬೆಳೆವಾ ಬೆಳ್ಗಲ್ಲೊಡ್ಡಿ (ಎಕ. IV, ನಾಗಮಂ. ೮೫-೬೧ ; 776). [ ? ]

**ನೊಸಗೊನ್ನೆ** 'ನಸುಗುನ್ನಿ' ನೋ.

**ನೊಸಲ್**, ನೊಸಲು, ನೊಸಳು (ನಾ). ಹಣೆ ; ಲಲಾಟ : "ಲಲಾಟಂ, ಅಳಿಕಂ—ಈ ೨ ನೊಸಲ್" (ಹಲಾಯು. ೮೭-೩೭೧) ; ನೊಸಲಂ ತೊಂಗಲ್ಗುರುಳ್ ಮೇಲುದನೊಗೆವ ಕುಚಂ ಬೆನ್ನನಾ ನೀಳಕೇಶಪ್ರಸರಂ . . . ಉರಮಂ ಸಂಚಳತ್ತಾರಹಾರಂ ಪಸರಂಬೆತ್ತತ್ತ ಮೋರಂತಲೆಯೆ ಭರತನಂ ನೋಡಲೈತಂದಳೊರ್ವಳ್ (ಆದಿಪು. ೧೧-೧೬); ಅಸುಹೃತ್ಸೇನೆಗೆ ಸಾಲ್ವನೊರ್ವನೆ ಗಡಂ ರುದ್ರಾವತಾರಂ ಗಡಂ ನೊಸಲೊಳ್ಕಣ್ಗಡಮೆಂದು ನಚ್ಚಿ ಪೊರೆದಂ . . . ಜೋಳದ ಪಾೞಿಯಂ ಬಗೆದರಿಲ್ಲಾ ದ್ರೌಣಿಯುಂ ದ್ರೋಣನುಂ (ಗದಾಯು. ೩-೧೧) ; ಅನತಾರಾತಿ ಮಯೂರ ತಾರಕಹ ××× ನಂಗೆ ಮಾಱಾಂತು ಕಾಯಿವರೊಳಾಟಂದಿದಿರಾಂಪವಂಗೆ ನೊಸಲೊಳ್ ಕಣ್ಣ್ ನೀಳಕಂಠಂ ಗಜಾಜಿನಮುರ್ಸೇಂಧು ಜಟಾಗ್ರಮುಗ್ರಫಣಿಹಾರಂ ವ್ಯಾಘ್ರಚರ್ಮ್ಮಂ ತ್ರಿಶೂಳ ×× ಗ್ರಾಯುಧಮೆಂಬಿವೇನೊಳವೆ ಪೇಳ್ಸಂಗ್ರಾಮರಂಗಾಗ್ರದೊಳ್ (ಎಕ. VIII, ಸಾಗರ. ೧೦೯-೨೦ ; 1042); ಕೊಂಡಾಡಿ ಕೊಂಡಾಡಿ ಮಜ್ಜನಕ್ಕೆಱೆವುತಂ ಮುಂಡಾಡಿ ಮುಂಡಾಡಿ ನೊಸಲೊಳಚೊತ್ತುತ್ತಂ (ಬಸರ. ೩-೫೨). **ನೊಸಲು :** "ಲಲಾಟಂ ಅಳಿಕಂ ಗೋಧಿಃ—ಈ ಮೂಱು ನೊಸಲು" (ನಾಚಿರಾ. ೧೨೨) ; ನಮ್ಮ ಕೂಡಲಸಂಗನ ಶರಣರಿಗೆ ನೊಸಲ ವಿಭೂತಿಯೇ ಶೃಂಗಾರ (ಬಸವ. ೭೪); ಪೊಟ್ಟೆಜೆಯಿಂ ನುಡಿವಹಿತರ ನಿಟ್ಟೋಡುವರದೆಂದು ವೀರಲಕ್ಷ್ಮಿಯ ನೊಸಲೊಳು ಬೊಟ್ಟಿಟ್ಟಂದದೊಸಮಾರನಗುರನ ಕಟ್ಟಿದಿರೊಳು ನಿಲುವ ಗಣ್ಡನಾವಂ ಧುರದೊಳು (ಎಕ. XVI, ಚಿಕ್ಕನಾ. ೧೦೬-೩ ; 1245) ; ಕರವ ನೆಗಹಿದನಕಟ ಹೋ ಹೋ ಬಿರುದ ರಂಜದಿರಂಜದಿರಿ ನಿಮ್ಮರಿಭಟಗೆ ನಾಲ್ಕಿಲ್ಲ ಕೈ ಕಣ್ಣಿಲ್ಲ ನೊಸಲಿನಲಿ . . . ವೃಥಾ ಭಯವೇಕೆನುತ ಕುರುರಾಯನನುವಾದ (ಕುವ್ಯಾಕ. ೪-೨೬) ; ಮುಟ್ಟಿ ಶ್ರೀಗಂಧವನು ಇಟ್ಟು ತಾ ನೊಸಲೊಳಗೆ ನೆಟ್ಟನೆಯೆ ಸ್ವರ್ಗಪಡೆವಡೆ ಸಾಣೆಕಲ್ ಕೆಟ್ಟು ಕೀಡೇನು (ಸರ್ವಜ್ಞ. ೯೨೪) ; ನೊಸಲು ನೊಸಲಿ ನಲಿರಿಸಿ ಸುಸಿಲಾಡುವವು ಹೂವು (ಉಯ್ಯಾಲೆ. ೯-೧). **ನೊಸಳು :** ಆವಳ ನೊಸಳೊಳಗಿನ ಗೋರೋಚನದ ಬೊಟ್ಟು (ಮುಂಬಯಿ. ೫-೨೦೦).

**ನೊಸಲ ಕಣ್ಣ ದೇವ** = ಹಣೆಯಲ್ಲಿ ಕಣ್ಣುಳ್ಳವನು ; ಶಿವ : ಸಂಬಂಧದ ಸಂಬಂಧಕ್ಕೆ—ನೊಸಲ ಕಣ್ಣ ದೇವಂ, ತೋಳ ಬಾಳ ಕಾಂತಿ, ಪರಿಯ ಪೊಕ್ಕುಳ ತಾವರೆ (ಶನುದ. ೧೩೨ ಪ್ರಯೋ). **ನೊಸಲ ಕಣ್ಣವರು** = ಹಣೆಯಲ್ಲಿ ಕಣ್ಣುಳ್ಳವರು : ತಮತಮಗೆಲ್ಲ ನೊಸಲ ಕಣ್ಣವರು ತಮತಮಗೆಲ್ಲ ನಂದಿವಾಹನರು ತಮತಮಗೆಲ್ಲಾ ಖಟ್ವಾಂಗ ಕಪಾಲ ತ್ರಿಶೂಲಧರರು ದೇವರಾರು ಭಕ್ತರಾರು ಹೇಳಿರಯ್ಯಾ (ಬಸವ. ೮೧೮). **ನೊಸಲ ಕಣ್ಣಾತ** = ನೊಸಲ ಕಣ್ಣ ದೇವ : ಇದು ಕೈಲಾಸಂ ಭವಾನೀಧವನ ನೆಲೆ ಮನೋಜಾತನಂ ಬೂದಿಮಾಡಿ[ತ್ತಿ]ದಱೊಳ್ ದಕ್ಷಾಧ್ವರ ಧ್ವಂಸಕನ ನೊಸಲ ಕಣ್ಣಾತ[ನೊಳ್]ತನ್ನ ದೋರ್ಗರ್ವದಗುರ್ವಂ [ಪ್ರಾ]ಕಟಂ ಮಾಡುವ ಬಗೆಯೊಳಿದಂ ಪತ್ತಿ [ಕಿೞ್ತೊ]ತ್ತಿ ಪೊ[ತ್ತೆ]ತ್ತಿ ದೊಡಿತ್ತಂ [ಮೆಚ್ಚಿ ಲಂಕಾಧಿಪತಿಗೆ ಬರವಂ ರಾಗದಿಂ] ನೀಳಕಂಠಂ (ಪಂಪಭಾ. ೭-೭೪). **ನೊಸಲ ಕಣ್ಪಾಯ್ದವ** = (ಶಿವನ) ಹಣೆಗಣ್ಣಿನಿಂದ ಹುಟ್ಟಿದವನು ; ವೀರಭದ್ರ : ಪೂಗಣೆಯನೆತ್ತಿಬಂದುದ ನಾಗಳೆ ಸಿವನಱಿದು ನೊಸಲ ಕಣ್ಪಾಯ್ದ[ಪಾಠಾಂ. ಗಣ್ಪಾಯ್ದ]ವನಂ ಬೇಗದೆ ನಡೆದವನೊಳ್ ನೀಂ ತಾನೆನೆ (ಕಬ್ಬಿರಾ. ೨೩೯). **ನೊಸಲಗಣ್ಣವ, ನೊಸಲ ಕಣ್ಣವ** = ನೊಸಲ ಕಣ್ಣ ದೇವ : ನೊಸಲಗಣ್ಣವನ ಸುತನೆಂಬುದಂ ಧರೆಗೆ ಸೂಚಿಸುವೊಲುಜ್ವಲಿಸುವರಳೆಲೆಯೊಪ್ಪೆ . . . ಬಾಲಕಂ ಕಣ್ಗೆಸೆದನು (ಚಿಬಪು. ೫-೩೭) ; ನೊಸಲೊಳೀಂ ನಿಮುಗುಂಟೆ ಕಂಗಳು ನೊಸಲ ಕಣ್ಣವ ಕಂಸರಾಯನ ವಸನಗಳನೆಳೆದುಡುವಡಾಱದೆ ತೊಗಲ ನುಟ್ಟನೆನೆ . . . ಕೃಷ್ಣನು ನಸುನಗುತಲಾ ವಸನಗಳನೆಳೆದಿತ್ತ ಗೋವರಿಗೆ

(ಸಾಳ್ವಭಾ. ೨೨-೬೧). **ನೊಸಲಗಣ್ಣು, ನೊಸಲ ಕಣ್, ನೊಸಲ ಕಣ್ಣು** = ಹಣೆಯಲ್ಲಿರುವ ಕಣ್ಣು ; ಹಣೆಗಣ್ಣು ; ಫಾಲನೇತ್ರ : ಹರನು ನೆಟ್ಟನೆ ಮುನಿದು ತ್ರಿಪುರವನುರುಹುವಂದಿನ ನೊಸಲಗಣ್ಣಿಂದುರ ವಣೆಸಲಲ್ಲಿಂದ ಸಡಲಿದ ಕಿಡಿಗಳೆಲ್ಲವನು ಪರಿಗಣಿಸೆ (ಕುಪ್ಪಾಡ್ರೋ. ಒ೦೩. ೧೫-೪೯ ಅಡಿಪದ್ಯ) ; ಅಶ್ವತ್ಥಾಮಂ . . . ಆಗಳುರಿಯುರುಳಿಯಂತಪ್ಪ ತನ್ನ ನೊಸಲ ಕಣ್ಣಿಂ ತೋಱಿ ತನ್ನ ಸಾಹಸಮಂ ತೋಱಲೆಂದು ನಾರಾಯಣಾಸ್ತ್ರಮಂ ತೊಟ್ಟೆಚ್ಚಾಗಳ್ (ಪಂಪಭಾ. ೧೨-೩೧ಪ); ತ್ರಿಪುರದ ಕೋಟಿ ಬಲ್ಲಿತ್ತೆಂದರೆ ನೊಸಲ ಕಂಗಳಲುರುಹಿದನವ್ವ (ಮಹಾದೇ. ಬ. ೧೧-೬) ; ನೊಸಲ ಕಣ್ಣಭವನೊಬ್ಬನೆ ನಮ್ಮ ಕೂಡಲಸಂಗಮದೇವ (ಬಸವ. ೫೬೫) ; ವಿಷವಲಾ ಬ್ರಹ್ಮಸ್ವವೆಂಬುದು . . . ನೊಸಲ ಕಣ್ಣ ಮಹೇಶ್ವರಗೆ ಸೈರಿಸದು ಮಿಕ್ಕ ಮನುಷ್ಯರಿಗೆ ಜೀರ್ಣಿಸುವುದೇ (ಶಿಭಾಗ. ೧೦-೮೩-೪೫). **ನೊಸಲ ನಯನ** = **೧.** ಹಣೆಗಣ್ಣು : ಬಲರಭೈರವನಾತನತಿಬಲ ಶಿವನ ನೊಸಲ ನಯನದೊಳವನು [ಪಾಠಾಂ. ನೊಸಲಂದದಲಿ] ಮೆಱೆವವನಿವನು ಜಿತಸಂಗ್ರಾಮನಶ್ವತ್ಥಾಮ ನೋಡೆಂದ (ಕುಪ್ಪಾವಿ. ೬-೫೫) ; ನೊಸಲ ನಯನದಂತೊಪ್ಪುವ ಕುಂಕುಮರಸದ ಲಲಾಮದಿ ನಿಡುಮುಡಿಯೊಳು ರಂಜಿಸುವ ಹಸುಳೆವೆಱೆ ಯಂತೆ ವಿರಾಜಿಪ ಬೆಳಗ್ಗೀದಗೆಯೆಸಳಿಂ . . . ವಸುಧಾಧಿಪಸತಿಯಂದಿನ ದುರ್ಗಾಂಬಿಕೆಯಂತೊಪ್ಪಿದಳು (ಜಯಕಾ. ೨-೧೧). **೨.** ಹಣೆಯಲ್ಲಿ ಕಣ್ಣುಳ್ಳವನು ; ಹಣೆಗಣ್ಣ ; ಶಿವ : ತ್ರಿಶೂಲ ಡಮರುಗಧರಾ ನೊಸಲ ನಯನ ವಿಕಸಿತಾಂಬುಜಮುಖ ಶಶಿಧರಾ (ವಿಪಕೀ. ೩೯-೧). **ನೊಸಲ ಪಟ್ಟ, ನೊಸಲಪಟ್ಟ** = ಹಣೆಯಲ್ಲಿ ಕಟ್ಟುವ ಪಟ್ಟ; ಲಲಾಟ ಪಟ್ಟ : (ಶಿ); ಧಾನ್ಯಮಂ ಕಟ್ಟಿ ಪುಷ್ಪಗಳಿಂದಲೂ ಆಭರಣಗಳಿಂದಲೂ ಅಲಂಕರಿಸಿ ನೊಸಲ ಪಟ್ಟಯಂ ಕಟ್ಟಿರುವ ಆ ಆನೆ ಕುದುರೆಗಳನ್ನೂ . . . ಪೂಜೆ ಮಾಡಿದನು (ಮಹಾಪಂ. I, ೩೫). **ನೊಸಲ ಬರೆಹ, ನೊಸಲಿನ ಬರಹ** = ನೊಸಲಕ್ಕರ : ಜಗದೇವಂಗೆ ಬೆಸನಿತ್ತು ತನ್ನ ರೇಂದ್ರನ ನೊಸಲ ಬರೆ[ಪಾಠಾಂ. ರ]ಹವ ಮುನ್ನೊರೆಸಿ ಬಿಜ್ಜಳನ ಸಾಮ್ರಾಜ್ಯೋನ್ನತಿಯನೀಶನ ಕವಳಿಗೆಯೊಳಂತು ತೊಡೆಯಿಸುತ (ಬಸಪು. ೬೧-೭) ; ನೊಸಲ ಬರೆಹಮಿದೆಂದು ತಡೆತಡೆದು ನಡೆದುದಂ ಉಸುರಿದಳ್ (ಶಾಲೂರ. ೧೩೨-೨೮೩) ; ನೊಸಲಿನ ಬರಹ ಬಸಲೆಯಿಂದ ಒರಸಬಹುದೇ ? (ಗಾದೆ). **ನೊಸಲ ಬೊಟ್ಟು** = ಹಣೆಯಲ್ಲಿಡುವ ಬೊಟ್ಟು, —ತಿಲಕ : ಗೋರೋಜನ ಸುಗಂಧದಿಂದ ರಚಿಸಿದ ನೊಸಲ ಬೊಟ್ಟು (ರಾಘಚ. ೧೭-೬೫). **ನೊಸಲುರಿಗಣ್** = ಹಣೆಯಲ್ಲಿರುವ ಉರಿಗಣ್ಣು : ಕೊರಲ ಕಱೆ ಶಿರದ ಪೆಱೆ ನೊಸಲುರಿಗಣ್ ಧೃತಚಾಪ ಹಸ್ತ ಶಾಕ್ವರಚಿಹ್ನಂ ವಿರಚಿಸೆ ಕೃಪಕೃತವರ್ಮರ್ಬೆರಸಾಗಳ್ ಮುಳಿದು ಬಂದನಶ್ವತ್ಥಾಮಂ (ಗದಾಯು. ೯-೨) ; ನೊಸಲಲ್ಲಿ ನಟ್ಟ ಶರಮಂ ಮಿಸುಗದೆ ನಾಂ ಕೀಳೆ ರಕ್ತಪ್ರಸರಂ ಮಸಗಿ ಕೆಂಪಾಗಿ ತೋಱಲ್ ನೊಸಲುರಿಗಣ್ತೆಗೆದ ಶಿವನವೊಲ್ ಭಟನಿರ್ದಂ (ಬಾಧಪು. ೧೩-೮೨). **ನೊಸಲೊಳ್ ಬರೆದಕ್ಕರ** = ನೊಸಲಕ್ಕರ : ನೋವಱದಂಜುವುದೇಕೆ ನಿಂದರೇಂ ತಪ್ಪದೊ ಪೇೞಿಮಯ್ಯ ನೊಸಲೊಳ್ ಬರೆದಕ್ಕರಮಾ ವಿಧಾತ್ರನಾ (ಪಂಪಭಾ. ೧೩-೧೯).

[ದೇ.॥ ತಮಿ. ಮಲ. ನುತಲ್ ; ತುಳು. ನೆಸಲು, ನಸುಡಿ ; ತೆಲು. ನೊಸಲು, ನುದುರು]

**ನೊಸಲಕ್ಕರ** (ನಾ). ಹಣೆಯ ಬರಹ ; ವಿಧಿಲಿಖಿತ : ಉರವಣಿಸಿ ತಮ್ಮನೞಗುಂ ಧುರದೊಳಿದೆಂದಂಜಿ ಹೊಗರ ನೆವದಿಂ ರಿಪುಭೂಪರ ನೊಸಲಕ್ಕರಮಿರ್ಪುವು ನೆರೆದು ಶರಣ್ಬೊಕ್ಕಿಳಾಧಿಪನ ಕೂರಸಿಯೊಳ್ (ವರ್ಧಪು. ೭-೩೦) ; ಬಿಡು ಮಹಾಹವವೆನಗೆ ನೂಕದು ತೊಡೆಯದಿರು ನೊಸಲಕ್ಕರವ ನೀನೊಡೆಯ ಕಿಂಕರರಾಗಿಹೆವು ನಾವಿಂದು ಮೊದಲಾಗಿ (ಕುಪ್ಪಾವಿ. ಒ೦೩. ೭-೩೩) ; ಬಿದಿ ಬರೆದ ನೊಸಲಕ್ಕರವ ತೊಡೆವಘಟನಾವನೊ (ಸಾಳ್ವಭಾ. ೨೮-೩೩) ; ಇಂತಹ ಮಹಾಸ್ವಾಮಿಯವರಯ್ಯನ್ವರ ನೊಸ ಲಕ್ಕರದ ಸೃಷ್ಟಿಸ್ಥಿತಿಪ್ರಳಯಾಧಿಕಾರವನ್ನಾಳುವ ದೇಶದಕ್ಷರು ನಾವು (ಮಂತ್ರಶ. ೧೦-೧೮). [ನೊಸಲ್ + ಅಕ್ಕರ$_2$]

**ನೊಸಲಿಕ್ಕು** (ಕ್ರಿ). [ವೀಶೈ] ಹಣೆಗೆ ವಿಭೂತಿಯಿಟ್ಟು ಶುದ್ಧೀ ಕರಣದ ಸಂಸ್ಕಾರವನ್ನು ಮಾಡು : ಒಡೇರಮ್ಮನು ಬಂದು ಶವಕ್ಕೆ ನೊಸಲಿಕ್ಕಿದರು (ರೂಢಿ). [ನೊಸಲು (<ನೊಸಲ್) + ಇಕ್ಕು]

**ನೊಸಲು** 'ನೊಸಲ್' ನೋ.

**ನೊಸಲೆಗಲ್ಲು** (ನಾ). ಒಂದು ಬಗೆಯ ಕಲ್ಲು : ಮೂಡಲು ಹೂವಿನ ಹಳ್ಳಿಯ ತೆಂಕಲು ನೆಟ್ಟ ಸಾಲುಗಲ್ಲವೊಳಗಣ ನೊಸಲೆಗಲ್ಲು (ಎಕ. V, ಹಾಸನ. ೧೩೩-೬೯ ; 1406). 'ನೊಸೆಕಲ್' ಪರಾ.

[ನೊಸಲೆ? + ಕಲ್ಲು (<ಕಲ್$_3$)]

**ನೊಸಲ್ಗಣ್** (ನಾ). ಹಣೆಯಲ್ಲಿರುವ ಕಣ್ಣು ; ಹಣೆಗಣ್ಣು : 'ನೊಸಲ್ಗಣ್ಣ' ಪರಾ. [ನೊಸಲ್ + ಕಣ್]

**ನೊಸಲ್ಗಣ್ಣ** (ನಾ). ಹಣೆಯಲ್ಲಿ ಕಣ್ಣುಳ್ಳವನು; ಶಿವ: ಮುಖ್ಯವಾದ ಗೋಮಯಹಾವುದೆಂಬುದನು ಬೆಸಸಲೆಯೊಳೆಂದು ಬಿನ್ನೈಸಿದನು ನಂಬಿ ಯಣ್ಣನು ನೊಸಲ್ಗಣ್ಣನೊಡನೆ(ಸೌಂದಪು. ೫-೭೪). [ನೊಸಲ್ಗಣ್ + -ಅ$_7$]

**ನೊಸಲ್ಚಾರ್ಚು** (ಕ್ರಿ). ಹಣೆಯನ್ನು ಚಾಚು ; ವಂದಿಸು ; ನಮ ಸ್ಕರಿಸು : ಅಲರ್ಗೋಲನತಿತವಕದಿಂದೆದ್ದುಯ್ಯಡಿಗಡಿಗೆ ಬಲುಭಕ್ತಿರಸ ತುಳುಂಕುತ್ತೆ ಪೊಡಮಡುತೆದ್ದು ಸಲ್ಲೀಲೆಯಿಂದಂಘ್ರಿಪಲ್ಲವಗಳ್ಗೆ ನೊಸ ಲ್ಚಾರ್ಚೆ ತತ್ಪಾದರೇಣುಮುಮಸೂ ವುತ್ತಮಾಂಗದಿ ತಳೆದು (ನವಮೋ. ೫-೫). [ನೊಸಲ್ + ಸಾರ್ಚು]

**ನೊಸಳು** 'ನೊಸಲ್' ನೋ.

**ನೊಸೆ** 'ನೊದೆ' ನೋ.

**ನೊಸೆಕಲ್** (ನಾ). ಒಂದು ಬಗೆಯ ಕಲ್ಲು : ಮುಗ್ಗುಡ್ಡೆಯ ನೊಸೆ ಕಲ್ಲೆಂಬ ಬಿಳಿಯ ಕಲ್ಲು (ಮೈಆರಿ. ೧೯೨೧, ೧೦-೧೭೯; 962). 'ನೊಸಲೆ ಗಲ್ಲು' ಪರಾ. [ನೊಸೆ ? + ಕಲ್$_3$]

**ನೊಸೆಪಳ್ಳ** (ನಾ). ಒಂದು ಹಳ್ಳದ ಹೆಸರು : ತೆಂಕಲು ನೊಸೆಪಳ್ಳ ಆಗ್ನೇಯಾಂದಿಶಿ ಗದಿಗನ ಮಲೆಯ ಪಡುವಣ ಭಾಗೆ ನಾಲೆ ಗೋಡಲರ್ಮ್ ನಡಣ ಭಾಗೆ (ಎಕ. XIV, ಎಳಂದೂ. ೧೭೦-೯ ; ಸು. 965 ?).

[ನೊಸೆ? + ಪಳ್ಳ]

**ನೊಸೆವಮಾಳ** (ನಾ). ನೊದೆಹುಲ್ಲು ಬೆಳೆದಿರುವ ಪ್ರದೇಶ,—ಜಾಗ: ಇವರ ಪಸಬವತ್ತಿಗಂಗ್ವಾಯರಗಂ ೨ ಯಲ್ಲೀ ಬಳೀ ನೊಸೆಮಾಳ ಬಸವೈನ ಕಟ್ಟಿಗೆ ಪ ಗಂ (ಎಕ. III, ತಿರುಮ. ೬೩-೪೮೬; 1748).

[ನೊಸೆ + ಮೊಳ$_3$(= ಮಾಲ$_2$)]

**ನೊಸೆಯಱೆ** (ನಾ). = ನೊಸೆಕಲ್ : ಗ್ರಾಮಸ್ಯ ಸೀಮಾನ್ತರವರ್ ಪುವ್ರ್ವಸ್ಯದಿಶಿ ನೊಸೆಯಱೆ ಎ ಅನ್ತೆ ಬನ್ದು ಬೆಱಾಯ ಎಱೆಗಲ್ಲೆ ಆಗ್ನೇಯಾ ದಿಶಿ (ಮೈಆರಿ. ೧೯೨೦, ೯-೨೧ ; 267?). [ನೊಸೆ ? + ಅಱೆ$_4$]

**ನೊಸೆಹುಲ್ಲು** 'ನೊದೆಹುಲ್ಲು' ನೋ.

**ನೊಳ** 'ನೊಳವು' ನೋ.

**ನೊಳಂಬ** 'ನೊಣಂಬ' ನೋ.

**ನೊಳಂಬರಸ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಸಮಧಿಗತ ಪಞ್ಚ ಮಹಾಶಬ್ದ ಶ್ರೀಪಲ್ಲವ × × × ನೊಳಮ್ಬರಸರು ಊರಜನಲುಂ ಮಡುವ ಬರಸಗೆ × × × ಪಾರ್ವಗ್ಗೆಱುವರ್ ಕೊಟ್ಟ ಮಣ್ಣು (ಮೈಆರಿ. ೧೯೨೯, ೩೩-೩ ; ?). [ನೊಳಂಬ(<ನೊಣಂಬ) + ಅರಸ$_1$]

**ನೊಳಂಬವಾಡಿ** 'ನೊಟಂಬವಾಡಿ' ನೋ.

**ನೊಳಗ** (ನಾ). ದನಕರುಗಳಿಗೆ ದ್ರವಪದಾರ್ಥಗಳನ್ನು ಕುಡಿಯಿಸಲು ಬಳಸುವ ಸಾಧನ; ಗೊಟ್ಟ: ನೊಳಗ (ನಾಟಿಯಿಂದ ಮಾಡಿದ ಒಳಲೆ)ದಲ್ಲಿ ಹಾಲು ಹಾಕಿ ಕರುವಿಗೆ ಕುಡಿಸಲಿಕ್ಕಿಸಿದ (ಸಂನ್ಯಾಕ. ೧೦೨). [<ಸಂ. ನಾಲಕ]

**ನೊಳಗಾಡು** (ನಾ). ನೊಣಗಳಿಂದ ಕೂಡಿದ ಪ್ರದೇಶ (?): ಕೆಱೆವೊನ್, ಬಡನಡು, ನೊಳಗಾಡು, ಎತ್ತರದಿಟ್ಟ (ಶಬ್ದಾನು. ೩೩೨ ವ್ಯಾಖ್ಯಾ). [ನೊಳ(<ನೊಳವು)+ಕಾಡು$_2$]

**ನೊಳಲೆ** (ನಾ). ನೀರಿನಲ್ಲಿ ವಾಸಿಸುವ ಒಂದು ಬಗೆಯ ಹುಳು: 'ನಾಯ್ನೊಳಲೆ' ಪಠಾ. [?]

**ನೊಳವು, ನೊಣ, ನೊಣವು, ನೊಳ** (ನಾ). ಒಂದು ಬಗೆಯ ಹಾರುವ ಕೀಟ; ಮಕ್ಷಿಕ: "ನೊಳವು ಮುಚ್ಚಿಂದಕ್ಕು" (ಕಬ್ಬಿಕೈ.೮೪); ತಾಂ ಕೊನ್ನನಾಗಿ ಮುರುಂಟಿದ ಕೈಯುಂ ಕಾಲುಂ ಬೆರಸು ಮೞಗೊಳ ಗರ್ದುರಸಿಗೆ ಸುರಿಯೆ ನೊಳವುಗಳ್ ಮುಸುಱಿಕೊಂಡು ತಿನೆ (ಪದ್ಮಾರಾ. ೧೨೨-೨೩); ಸುಯೋಧನಂ . . . ಮನದೊಳಾದೇವದಿಂ ದೇವಕೀನಂದನನ ಮೇಲೆವಾಯ್ದುದುಂ ನಂಜಿನ ಮೇಲೆವಾಯ್ದ ನೊಳವಿನಂತುರುಳ್ದರೆ ಪಾಯ್ದು (ಪಂಪಭಾ. ೯-೫೯ ವ); ನರವುಂ ನೆರವುಂ ದೇವರ ಬರವುಂ ತೆರವುಂ ನೆಗಟ್ಟೆಯಿಟ್ಟರವುಂ ಸಂಚರಿಸುವ ನೊಳವುಂ ತಾಮರೆಬರ ಮತ ದಿಂದಂತ್ಯವರ್ಣಲೋಪಮನಾಳ್ಗುಂ (ಶಮದ. ೪೬). **ನೊಣ:** ಕಳೆದುಂಬುದು ಕೂಟಕೊಳಗಣ ನೊಣ[ಪಾಠಾಂ.ಳ]ವಂ (ಸಮಪ. ೬-೧೦); ವಿಷದ ಹುಟ್ಟಿಯೊಳುಜಿಗಿ ನೊಣ ಜೀವಿಸುವುದೇ (ಉಪ್ಪಾದ್ರೌ. ೬-೪೦); ಬೆಲ್ಲವೆ ನೀ ಮುದ್ದುವೆಂಗಳ ಮೃದುವಾಯ ಬೆಲ್ಲವಾಗಿರದೆ ಬಂದಿಲ್ಲಿ ಹೊಲ್ಲೆಹ ನೊಣನ ಮುತ್ತಿಸಿಕೊಳಬೇಡೆಂದು ಬೆಲ್ಲವನೊಡೆಯೆ ಗುದ್ದಿದನು (ಮೋಹತ. ೨೦-೨೪); ಗಂಧವನು ತೀವಲ್ಲಿ ಒಂದು ನೊಣವನು ಕಾಣೆ (ಸರ್ವಜ್ಞ. ೮೧೮); ನೊಣವು ಅತ್ಯಂತ ಅಸಹ್ಯಕರವಾದ ಹುಳು (ಗೃಹವಿ. ೧೮೮). **ನೊಣವು:** ಪಶುವಿನೊಳಲ್ಲಿರಲೇಂ ತಾನೆಂತೂ ತೊಣಸೆಯೋ ನೊಣವುಗಳೋ (ಸಮಪ. ೯-೬೧); ಹೋಮಮಂ ಮಾಡುವ ಬ್ರಾಹ್ಮಣಂ ನೊಣವು ಬೆನ್ನನೂಱಿದೊಡೆ ಸೈರಿಸಲಾಱದೆ ಬೆನ್ನಂ ಪೊಯ್ದುಕೊಳ್ವುದುಂ (ಧರ್ಮಾಮೃ. ೧೧-೫೩); ಇನಿತು ಲಿಂಗಸದರ್ಥನಾಗಿಯು ಘನದರಿದ್ರತೆಯಾದುದಯ್ಯೋ ಮನೆಯೊಳಗೆ ನೋಡಲು ತವುದು ನೊಣವಿಂಗೆಜಗಲಿಲ್ಲ (ಬಸವ. ೨೩-೬). **ನೊಳ:** "ಮುಚ್ಚಿನೆ ನೊಳಂ" (ಶಬ್ದಮಂ. ೪೫); ಜೇನ ನೊಳಂಗಳ್ ತುಪ್ಪವನಿರಿಸಿದೊಡೆ ಲೋಗರ್ ಕೊಂಡು ಪೋಪರ್ (ಪಂಚತಂ. ೭೨-೮); ಸದಗುಪ್ಪೆಯನುಪ್ಪಂ ತುಪ್ಪದೊಳಂ ಮೇಣ್ ಮೆಣಸು ನಾಗರಂ ನಂದ್ಯಾವರ್ತದ ಕುಸುಮಮೆಂಬಿವಂ ಪೊಸಿದಂದು ನೊಳ(ಣ)ನಿಱಿದ ನೋವನಿರದುಪಶಮಿಕುಂ (ಲೋಕೋಪ. ೧೦-೩೦); ವಿಬುಧಸಭೆಯೊಳ್ ತಾಮೇಂ ಗಣ್ಯರೆ ಕುಕವಿಗಳಾರ್ ಗಣಿಸಿದಪರ್ ಮುಸುಱಿ ಪರಿವ ನೊರಜಂ ನೊಳವುಂ (ಪುಷ್ಪ ಪು. ೧-೪೫).

**ನೊಣಪ್ರತಿ** = ಮೂಲದ ತದ್ವತ್ತಾದ ನಕಲು; ಮಕ್ಕೀಕಾ ಮಕ್ಕೀ. **ನೊಣವಿನ ಚೂರ್ಣ** = ಒಂದು ಬಗೆಯ ಔಷಧಿ: ನೊಣವಿನ ಚೂರ್ಣವಂ ಕರಿಯಿಂಗಸೆವೆಳನಾರಿನ ರಸದಿಂ ಕಲಸಿ ತನ್ನ ಯಿಂದ್ರಿಯ ಸಹಿತ ಸುಣ್ಣದೊಳಗಿಕ್ಕೆ ವಶ್ಯಂ (ಕಾಮಶಾ. ೨೬೨).

[ದೇ.॥ ತಮಿ. ನುಳಮ್ಪು, ನುಳ್ಳಲ್, ನೊಳ್ಳಲ್; ಮಲ. ನುಟಮ್ಪು; ಕೋಲಾ. ನುಲ್ಲೆ]

**ನೊಳ್ಳಿ** (ನಾ). ಶಾಸನ, ಹಸ್ತಪ್ರತಿಗಳಲ್ಲಿ ಉಪಯೋಗಿಸುವ ದ್ವಿತ್ವಾಕ್ಷರಸೂಚಕವಾದ ಚಿಹ್ನೆ; ಸಾಮಾನ್ಯವಾಗಿ ಬಳಸುವ ಸೊನ್ನೆಗಿಂತ ದಪ್ಪವಾದ ಸೊನ್ನೆ. [?]

**ನೊಟಂಬ, ನೊಣಂಬ, ನೊಳಂಬ** (ನಾ). ೧.ಒಂದು ರಾಜವಂಶದ ಹೆಸರು: ಪೋಳಲ್ಚೋರನೆಮ್ಪು ನೊಟಮ್ಪ ಮಹಾಸಾಮನ್ತನ್ ಈನಾ ××× ನಾಡಾಳುತ್ತ ××× ಟೂರ ಮೇಗೆ ಎಟ್ಟು ಕೋಟೆಯ ಕೊಳ್ವನ್ದು (ಎಕ. XII, ತಿಪಟೂ. ೪೭-೬; ಸು. 880). ೨. ನೊಳಂಬದೇಶದವನು: ಅಜವರ್ಮ್ಮ ಗಜ್ಜರ ಬೆಸದೆ . . . ನೊಟಮ್ಪಕೆ ಕಾದಿ ಸತ್ತೊಡೆ . . . ಅಜವರ್ಮ್ಮನ ಕಲ್ಲ ನೊಟಂಬರ್ ಸುಟ್ಟೊಡೆ ಇವ್ವೆರ್ಗೆ ಈ ಕಲ್ಲು ನಟ್ಟುದು (ಎಕ. XI, ಜಗಳೂ. ೧೯-೫; 907) ೩. ಒಬ್ಬಾತನ ಹೆಸರು: ಆಹವಮಲ್ಲ ನೊಟಂಬನ ದನ್ತಿಯ ಮುನ್ತ ××× ಬ್ಯೂಹಮುಗುಬ್ಬಿಸಲ್ಕೆ (ಎಕ. XII, ಶಿರಾ. ೨೬-೧; ಸು. 980 ?). **ನೊಣಂಬ:** ೩. ನೊಣಂಬನಾಳಿಮ್ ಮುನಿಜಾವ ಬಮ್ಮದೇವ ಚೋಳಮಹಾರಾಜರು ಗೋವಿಂದವಾಡಿಯ ರಾಜ್ಯಂಗೆಯ್ಯುತ್ತಮಿರೆ (ಎಕ. XII, ಶಿರಾ. ೩೭-೧೩; ಸು.1040). **ನೊಳಂಬ:** ೩. ಮುಳಿದಪ ನೆನುತಂ ಕೊಂಕಣಮ್ ಸಂಕೆಯಿಂ ಗೂಡುಗೊಳ್ಳುತ್ತಿರ್ದ್ದಪುದೇವ್ ಬಲ್ಲಿದನೋ ಚಕಿತವಿದ್ವಿಷ್ಟನೆಂಬೀ ನೊಳಂಬಂ (ಮೈಆರಿ. ೧೯೨೯, ೬೫-೩೫; 1081).

**ನೊಳಂಬವಟ್ಟ** = ನೊಳಂಬರಾಜನು ಕೊಟ್ಟ ಒಂದು ಪ್ರಶಸ್ತಿ,—ಅಧಿಕಾರ (?): ಒಸೆದು ಶಿವಲಿಂಗವಮಂ ಪೂಜಿಸುವ ಶಿವಬ್ರತಿಗೆ ಭಕ್ತಿಯಿಂ ಮಾಳ್ಪ ಜಗಳ್ಕೆಸೆಯೆ ಶಿವಾಲಯಂಮಂ ಮಾಡಿಸುವಂಗೆ ನೊಳಂಬವಟ್ಟಮೆಂಬುದು ಬರಿದೇ (ಸೌಇಇ. XX, ೪೯-೬೭; 1076). **ನೊಟಂಬಕುಳಾಂತಕ, ನೊಣಂಬಕುಳಾಂತಕ** = ನೊಳಂಬವಂಶಕ್ಕೆ ಮೃತ್ಯುಸ್ವರೂಪನಾದವನು; ಒಂದು ಬಿರುದು: ಶ್ರೀಮನ್ನೊಟಂಬಕುಳಾನ್ತಕದೇವಂ ಪಲವೆಡೆಗಳೊಳಂ ಬಸದಿಗಳುಂ ಮಾನಸ್ತಂಭಙ್ಗಳುಮಂ ಮಾಡಿಸಿದಂ (ಎಕ. II, ೫೯-೧೦೭; 974); ಗಂಗಕುಳಾಚಳಶಿಖರಶೇಖರರುಂ ಗಂಗಚೂಡಾಮಣಿಯುಂ ಜಗದೇಕವೀರರುಂ ಧರ್ಮಾನುರಾಗನುಮೆನಿಸಿದ ನೊಣಂ[ಪಾಠಾಂ.ಳೊಂ]ಬಕುಲಾಂ[ಪಾಠಾಂ.ಳಾಂ]ತಕದೇವನೆ ತನಗೆ ಪರಮಸ್ವಾಮಿಯಾಗೆ (ಚಾವುಂಪು. ೪). **ನೊಟಂಬದೊಡ್ಡ** = ನೊಳಂಬರಾಜನು ಕೊಟ್ಟ ಒಂದು ಬಿರುದು: ಶ್ರೀವೀರ ನೊ(ಟ)ಮ್ಬಾಧಿರಾಜ ರಾಜಪರಮೇಶ್ವರ ಬೆದ್ದುಗೊನ್ದೆಯ ಕೆಱೆಯ ಕಟ್ಟಿಪ್ಪನ್ದು ಅಜ್ಜಪರ್ವರ ಭಿದಿಯೆಱೆಯರ ನೊಟಮ್ಪದೊಡ್ಡನೆನ್ದು ಕಡಗಮಿಟ್ಟರ್ (ಸೌಇಇ.IX-i, ೧೬-೯; 9ನೆಯ ಶತ). **ನೊಟಂಬಿಬಡಿಗ** = ನೊಳಂಬರಲ್ಲಿ ಪರಾಕ್ರಮಿಯಾದವನು; ಒಂದು ಬಿರುದು: ಮಹಾರಾಜರುಂ ಬಾಣರಸರುಂ ಸೋರೆಮಟಿ ಕೋಟ್ಟೆಯಿಟ್ಟಲ್ಲಿ ನೊಟಂಬಿಬಡಿಗ ರಾಚಮಲ್ಲಂ ಮುಯಿನ್ದ ಗುಂಡಿಗೆಗುಳ್ಳ ಎನೆಬರು ಸಮಸ್ತಬಲಂ ಬೆಱಸಿ ಬಿಟ್ಟೊಡೆ (ಎಇ. XXIV, ೨೬-೬; ಸು. 885). [?]

**ನೊಟಂಬಗಾಮುಂಡ, ನೊಟಂಬಗಾವುಂಡ** (ನಾ). ಒಬ್ಬಾತನ ಹೆಸರು: ತ್ರಿಭುವನಕರ್ತ್ತರ ಭಟಾರರ್ ಆ ವಸ್ಸದ ಸ್ಥಾನಮನಾಳುತ್ತಿರೆ ಮುಸೆಕಲೆ××× ಪ್ಪದೇವರ××× ಜಿಗನ ಮಗಂ ನೊಟಂಬಗಾಮುಣ್ಡ ಬಲ್ಲದ ಊರೞಿವಿನೊಳ್ ಕಾದಿ ಸತ್ತು ಸ್ವರ್ಗಸ್ಥನಾದಂ (ಎಕ. X, ಮುಳಬಾ. ೯೧-೬; 1007). **ನೊಟಂಬಗಾವುಂಡ:** ಪೆಂಜ್ಜುಱುವಿನ ನೊಟಮ್ಪಗಾವುಣ್ಡನುಂ ಕಲಿ ನೊಟಮ್ಪಗಾವುಣ್ಡನುಂ ಸೀಯವುರದ ಮಾಗಿಗಾವುಣ್ಡನುಂ . . . ಇನ್ತಿವರ್ನಡದರ್ ಸರ್ವ್ವಬಾಧಪರಿಹಾರ ಪಡೆದರ್ ಚಿಲ್ಲುಕಭಟಾರರ್ (ಎಕ. XII, ಶಿರಾ. ೨೮-೪೭; 943); ಕಿತ್ತಿಗಾ[ಮು]ಣ್ಡನ ಮಗಂಗೆ ಪಟ್ಟವಂ ಕಟ್ಟಿ ಪುಲಿನಾಟ್ಟಕೆಱೆಯ ಬೆಳಗಟೂರಂ ನೊಟಂಬಗಾವುಣ್ಡಗೆ ಕೊಡಗೆಯ ಗೆಯ್ದುವ್ (ಸೌಇಇ. IX-i, ೩೯-೧೩; ?). [ನೊಟಂಬ+ಗಾಮುಂಡ]

**ನೊಟಂಬಗಾವುಂಡ** 'ನೊಟಂಬಗಾಮುಂಡ' ನೋ.

**ನೊಟಂಬವಾಡಿ,** ನೊಣಂಬವಾಡಿ, ನೊಳಂಬವಾಡಿ (ನಾ). ಒಂದು ನಾಡಿನ ಹೆಸರು; ೯ ಈಗಿನ ಬಳ್ಳಾರಿ, ತುಮಕೂರು, ಚಿತ್ರದುರ್ಗ ಜಿಲ್ಲೆಗಳ ಪ್ರದೇಶಗಳನ್ನೊಳಗೊಂಡಿದ್ದ ಪ್ರದೇಶ: ಶ್ರೀಮನ್ನುದಯಾದಿತ್ಯದೇವ ವೀರರಾಜೇಂದ್ರ ವೀರನೊಟಂಬ ಪಲ್ಲವ ಪೆರ್ಮ್ಮಾನಡಿ ನೊಟಂಬವಾಡಿಮೂವತ್ತಿಚ್ಛಾಸಿರವಂ ದುಷ್ಟನಿಗ್ರಹ ವಿಶಿಷ್ಟಪ್ರತಿಪಾಲನಂಗೆಯ್ದು (ಎಕ. XII, ಶಿರಾ. ೯-೬ ; 1072). **ನೊಣಂಬವಾಡಿ :** ಶ್ರೀಮತ್ತ್ರಿಭುವನಮಲ್ಲ ತಲೆಕಾಡು ಕೊಂಗು ನಂಗಲಿ ನೊಣಂಬವಾಡಿ ಬನವಸೆ ಹಾನುಂಗಲ್ಲುಗೊಂಡ ಭುಜಬಳವೀರಗಂಗಪ್ರತಾಪಹೊಯ್ಸಳ ಬಿಟ್ಟಿದೇವರು . . . ರಾಜ್ಯಂಗೆಯ್ಯುತ್ತಮಿರೆ (ಎಕ. XII, ತಿಪಟೂ. ೫೮-೩೦ ; ಸು. 1120). **ನೊಳಂಬವಾಡಿ :** ಶ್ರೀಮಜ್ಜಗದೇಕಮಲ್ಲದೇವರ ಪಾದಪ[ದ್ಮೋಪ]ಜೀವಿಗಳಪ್ಪ ಘಟಿಯಂಕಕಾಱ ನೊಳಂಬ(ಭ)ರಸ ನೊಳಂಬವಾಡಿ[ಯುಂ] ಕರಿವಿರಿಮೂವತ್ತ ನಾಳುತ್ತಮಿರೆ (ಸೌಇಇ. XI–i, ೬೧-೪೭ ; ಸು. 1024); ಶ್ರೀವಿಷ್ಣುವರ್ದ್ಧನಮಹಾರಾಜ ವಿಜಯಾದಿತ್ಯದೇವರ್ ನೊಳಂಬವಾಡಿ ಮೂವತ್ತಿಚ್ಛಾಸಿರಮುಂ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ (ಎಕ. XI, ದಾವಣ. ೧೧-೧೩ ; 1066).

**ನೊಣಂಬವಾಡಿಗೊಂಡ** = ನೊಳಂಬವಾಡಿಯನ್ನು ಜಯಿಸಿದವನು ; ಒಂದು ಬಿರುದು : ಗಂಗವಾಡಿ ನೊಣಂಬವಾಡಿಗೊಂಡ . . . ನಿಶ್ಶಂಕಪ್ರತಾಪ ವೀರಬಲಾಳದೇವರು ದೋರಸಮುದ್ರದ ವೀಡಿನೊಳು ನಿಲೆ (ಎಕ. III (R), ನಂಜನ. ೧೫೬-೨ ; 1198).

[ನೊಟಂಬ+ಪಾಡಿ$_2$]

**ನೊಟಂಬಸೆಟ್ಟಿ** (ನಾ). ಒಬ್ಬಾತನ ಹೆಸರು : ಶ್ರೀಮತ್ ನನ್ನಿನೊಟಂಬಂ×××ಟ್ಟಂಗಟ್ಟಿ ಪ್ರಿಥ್ವೀರಾಜ್ಯಂಗೆಯ್ಯುತ್ತಿರೆ ಸಕಪಾದಿಗೆಟಿವ ಪೊಗಟ್ಮಲ್ಲೆನಂಬೇ ಮಗಂ ನೊಟಂಬಸೆಟ್ಟಿ ಉತ್ತನೂರ ಮಹಾಜನಂ ಪನ್ನಿಬ್ಬರ್ಗ್ಗಂ ನೂಱುಗದ್ಯಾಣಂ ಪೊನ್ನ ಕೊಟ್ಟನ್ (ಎಕ. X, ಮುಳಬಾ. ೧೨೨-೭ ; 969) ; ಅನ್ನಾದಿಯರ ನೊಟಂಬಸೆಟ್ಟಿಯಮಗಂ ನಿರುಗುನ್ದಸೆಟ್ಟಿಯುಂ ಮಣಿಯಬ್ಬೆಯುಂ ಇವರಿಬ್ಬರು ಕಾರಪಕರಾಗಿ ಗೆಯ್ನಿದರ್ (ಎಕ. IX, ಹೊಸಕೋ. ೧೦-೧೭ ; 1023).

[ನೊಟಂಬ+ಸೆಟ್ಟಿ]

**ನೊಟಂಬಳ್ಗೆ** (ನಾ). ಒಂದು ನಾಡಿನ ಹೆಸರು : ಶ್ರೀಪ್ರಿಥಿವೀವಲ್ಲಭ ಪರಮೇಶ್ವರ ಪಲ್ಲವದಿಯರನ್ನೊಟಂಬಳ್ಗೆ ಸಾಸಿರಮುನ್ನಿಗ್ರ್ಗನ್ದನಾಡು ಮೂನೂಱುಮನಾಳೆ (ಎಕ. XI, ಚಳ್ಳಕೆ. ೩೩-೩೭ ; ಸು. 815). 'ನೊಟಂಬೆ' ಪರಾ. [<ನೊಟಂಬ]

**ನೊಟಂಬಾಧಿರಾಜ** (ನಾ). ನೊಳಂಬರ ದೊರೆ : ಎಱೆಯಂಗಪ್ಪನ ಮಗಂ ಮಾಚಿಗಂ ಗುತ್ತಿಯ ಗಂಗನ ಬೆಸದೊಳ್ಪುಟ್ಟನ್ದಪೊಟಲ ಕಾಳೆಗದೊಳ್ನೊಟಂಬಾಧಿರಾಜ ರಾಜರೊಳ್ಕಾದಿ ಸತ್ತಂ (ಎಕ. III (R), ಹೆಗ್ಗಡ. ೨೬-೧೩; ಸು. 9ನೆಯ ಶತ) ; ಸ್ವಸ್ತಿಶ್ರೀಮದಾಹವಮಲ್ಲ ನೊಟಂಬಾಧಿರಾಜ ಪೃಥುವೀರಾಜ್ಯಂಗೆಯ್ಯುತ್ತಿರೆ (ಎಕ. XII, ಶಿರಾ. ೨೯-೨ ; ಸು. 980 ?). [ನೊಟಂಬ+ಅಧಿರಾಜ]

**ನೊಟಂಬೆ** (ನಾ). ಒಂದು ಊರಿನ ಹೆಸರು : ಕಿಱುವುಸೂರ ಪೆರ್ಗ್ಗಡಿಯರ ಬಿಜಯಿತಗಾವುಣ್ಡನ ಮಗಂ ಅಮ್ಮಡಿಗಾವುಣ್ಡಂ ನೊಟಂಬೆಯ ಗ್ರಾಮ್ಮಣ್ಡನ ಭಾಗದ ದಸ್ಸಿವಭಾಗಂಗೊಣ್ಡು ಕೆಱೆಯಂ ಕಟ್ಟಿಸಿದಂ (ಮೈಶಿ೨. ೧೯೩೧, ೪೩-೭ ; 993). 'ನೊಟಂಬಳ್ಗೆ' ಪರಾ.

[<ನೊಟಂಬ]

**ನೊಟಮ್ಮ** (ನಾ). ಒಬ್ಬಾತನ ಹೆಸರು : ಶ್ರೀಮತ್ ಪೆರ್ಮ್ಮಾನಡಿಗಳ ಪಟ್ಟಂಗಟ್ಟಿದ ಇಪ್ಪತ್ತೆರಡನೆ ವರಿಷ××× ರಿಳ್ಳಗರ ಕೋಟೆಯೊಳ್ ನೊಟಮ್ಮನೊಳ್ ಕಾದಿ ರಾಚೆಯ ಗಜ್ಜ ಸತ್ತೊಡೆ (ಎಕ. III, ನಂಜನ. ೧೩೯-೩ : 915 ?). [<ನೊಟಂಬ+ಅಮ್ಮ$_1$]

**ನೋ, ನೋಯು** (ಕ್ರಿ). ನೊಂದ (ಭೂತಕೃ), ನೊಂದು$_2$ (ಭೂತನ್ಯೂ). ೧. ಬಾಧೆಪಡು ; ದುಃಖಪಡು ; ಯಾತನೆಪಡು : "ನೋ—ವ್ಯಥನೇ" (ಶಮಧಾ) ; ಮಿಾನ್ಗಳಂತೆ ಗಾಳದೊಳ್ ತೊಡರ್ದಿರ್ದ ಪಾದರಿಗರಿಂ ಮಹಿಷಾಸುರನಂತೆ ಸೂಲದೊಳ್ ನೊಂದು ನರಳ್ವ ಕಳ್ಳರಿಂ (ಕಾವ್ಯಸಾ.೫೨೯ ಶೂದ್ರಕ) ; ಯುದ್ಧದಾಳ್ಗೆ ರೋದನ ಮೆನಗಾವುದಯ್ಯನೆನಗೇಕೆಯೊ ಶೋಕಿಪನೆಂದು ಧರ್ಮನಂದನ ನರನಂದನಂ ನಿನಗೆ ಸಗ್ಗದೊಳೇನಭಿಮನ್ಯು ನೋಯನೇ (ಪಂಪಭಾ. ೧೧-೧೦೭) ; ಅಲ್ಲಿಯೆ ನೊಂದು ಬಸವೞಿದಿರ್ದ ಬಲಿಭುಗ್ಬಲಪ್ರಧಾನರಂ ಕಂಡು ಬೆಱಗಾಗಿರ್ದ ವಾಯಸಾಧೀಶ್ವರನಲ್ಲಿಗೆ ಕೆಲವು ವಾಯಸಂಗಳ್ ಬಿಱುತೋಡಿ . . . ಬಿನ್ನಪಂಗೆಯ್ಯೆ (ಪಂಚತಂ.೨೦೩-೧೫); ಏಕೆ ಧರ್ಮಜ ನೋವೆ ನೀನವಿವೇಕಿಯೆ ಬೇಡಿನ್ನು ಚಿತ್ತವ್ಯಾಕುಲವ ಬಿಡು ಕೇಳು ನಿನಗೀ ಕೃಷ್ಣನೊಲಿದಿಹನು (ತಿಮ್ಮಶಾಂ. ೧-೪೦). ೨. ಗಾಯಗೊಳ್ಳು ; ಘಾಸಿಹೊಂದು : ಎಂದುಂ ಪೋಗೆಂದನೆ ಮಾಣೆಂದನೆ ಪೆಱತೊಂದನೀವೆನೆಂದನೆ ನೊಂದಃ ಎಂದನೆ ಸೆರಗಿಲ್ಲದೆ ಪಿಡಿಯೆಂದನಿದೇಂ ಕಲಿಯೊ ಚಾಗಿಯೋ ರವಿತನಯಂ (ಪಂಪಭಾ. ೧-೧೦೨) ; ತೊಲಗದೆ ನಿಂದ ವೀರನಂ ತಲೆಗಡಿದುರುಳ್ಚುವ ಮೂದಲಿಪ ವೀರನಂ ತೌದಲೆಗಾಣಿಪ ಮಾಯದ ವೀರನಂ ನೋಯಲಿಱಿದು ಕೆಡಪುವ . . . ಪಲಬಿರುದುಗಳ್ನೆಗಳ್ತೆವಡೆಯೆ (ರಾಜಶೇ. ೬-೧೧ ಪ). ೩. ಕಷ್ಟಪಡು ; ಶ್ರಮಪಡು ; ದಣಿ : ಮಾಯಮನೆ ಬೀಸಿ ಪೆಱರನುಪಾಯದೆ ಠಕ್ಕಿಕ್ಕಿ ದೇವಕಾರ್ಯದೊಳಿನಿಸುಂ ನೋಯದೆ ಸುಖಿಯಿಪ ಸವಣರುಪಾಯಮನಿಂ ನಿನ್ನೊಳಣ್ಣ ಭಾವಿಸಿ ನೋಡಾ (ಧರ್ಮಾಮೃ. ೧-೧೧೨). **ನೋಯು :** ೧. ಚಂದನವ ಕಡಿದು ಕೊಱೆದು ತೇದೊಡೆ ನೊಂದೆನೆಂದು ಕಂಪಬಿಟ್ಟಿತ್ತೆ (ಮಹಾದೇ. ಬ. ೨೮-೫೮). ೨. ಎಡದ ಕೈಯಲಿ ನಿಗಳವನಿಕ್ಕಿ ಬಲದ ಕೈಯ ಕಡಿದುಕೊಂಡಡೆ ನೋಯದಿಪ್ಪುದೆ (ಬಸವ. ೪೦೫) ; ನೋಯಲೊಡಿಲುವ ಶರಭ ಸಿಂಹ ಉಲಾಯ ವೃಕ ಶಾರ್ದೂಲ ಶಶಗೋಮಾಯು ಮೊದಲಾದಖಿಳಮೃಗರವ ತುಂಬಿತಂಬರವ (ಕುಮ್ಯಾಅ. ೧೩-೨೮) ; ಬೋಳನ ಆಲೋಚನೆಯ ಆಕಾಶದ ಬಣ್ಣವು ಬದಲುತ್ತಾ ಇದ್ದಂತೆ ನೋಯುತ್ತಾ ತನ್ನ ಮನೆಗೆ ನಡೆದನು (ಕಾಲೂರ. ೧೨ ಕಥಾಸಾರ).

**ನೊಂದ ಹಾವು** = ಕೆಣಕಿದ ಹಾವು ; ಪೆಟ್ಟು ತಿಂದ ಹಾವು : ಕರಿಯ ಸೊಗಡಿನ ಮೃಗಪತಿಗೆ ಮೈಹಱಿದ ಹಂದಿಗೆ ನೊಂದ ಹಾವಿಂಗರಸ ಮೈಚಾಚಿದೆಯಲಾ ನೀನೆಂದನಾ ಶಕುನಿ (ಕುಮ್ಯಾಸ. ೧೬-೪). **ನೊಂದುಕೊಳ್ಳು** = ದುಃಖಪಡು ; ಸಂಕಟಪಡು : ನನ್ನ ದುಡ್ಡಿನ ದರ್ಪ ನನ್ನ ದವಡೆಯನ್ನೇ ಮುರಿಯಿತು ಎಂದು ಬಹುವಾಗಿ ನೊಂದುಕೊಳ್ಳುತ್ತಿದ್ದರು (ಪದ್ಮಸ. ೨೦೪) ; ವಿಚಾರಪರರು . . . ಬೇರೆ ಅರ್ಥವಿವರಣೆಯನ್ನು ಕಾಣದೆ ಬಹುವಾಗಿ ನೊಂದುಕೊಳ್ಳುತ್ತಲೂ ಇದ್ದರು (ಜಗದಾ. ೪೫). **ನೋಯೆ ನುಡಿ** = ನೋವಾಗುವಂತೆ ಮಾತನಾಡು ; ಮರ್ಮಭೇದಿಯಾಗಿ ಮಾತನಾಡು : ಆಮ್ಮಾತಱಿಯದೆ ಮುಳಿದುಂ ನಿಮ್ಮಡಿಯಂ ನೋಯೆ ನುಡಿದೆನುಱದೇಳಿಸಲೇನೆಮ್ಮಳವೆ ಮಱೆವುದಾ ಮನದುಮ್ಮಚ್ಚರಮಜ್ಜ ನಿಮ್ಮನೆರೆಯಲೆ ಬಂದೆಂ (ಪಂಪಭಾ. ೧೨-೫೪) ; ತನ್ನ ನೋಯೆ ನುಡಿದ ನಿಜಾಗ್ರಜನ ನುಡಿಗೆ ಮನದೊಳೇವೈಸಿಯುಮಪೋವೈಸದೆ ವಿನಯಮನೆ ಮುಂದಿಟ್ಟು ವಿನಯವಿಭೂಷಣನಿಂತೆಂದಂ (ಪಂಪಭಾ. ೧೨-೧೩೦ ಪ).

[ದೇ.॥ ತಮಿ. ನೋ, ನೋಯ್ ; ಮಲ. ನೋ, ನೋವು, ನೋವಿ ; ತುಳು. ನೋವು, ನೋಪಿ, ನೋಯಿಪಿ; ಕೊಡ. ನೊ ; ತೆಲು. ನೋಯು]

△ **ನೋಂಟೆ** 'ನೋಟ' ನೋ.

**ನೋಂತ** 'ನೋನ್' ಪರಾ.

**ನೋಂತು** 'ನೋನ್' ಪರಾ.

**ನೋಂದ,** ನೋಂದು (ನಾ). ಅಧಿಕೃತವಾದ ದಾಖಲು ; ರಿಜಿಸ್ಟರು : ೬೦೦ಕ್ಕೆ ಒಪ್ಪಿ ಆ ಪ್ರಕಾರ ಕರಾರುಪತ್ರ ನೋಂದ ಕೂಡಾ ಆಗಿದೆ (ದಾಸಹು. ೬೫) ; ರಶೀದಿಯಲ್ಲಿ ಬರಿದ ತಪಶೀಲದ ಪ್ರಕಾರ ಬಿಲ್ಲ ಬಂದ ಕೂಡಲೆ ನೋಂದ ತಕ್ಕೊಳ್ಳಬೇಕಾಗುತ್ತದೆ (ಮುಂಬಪ್ಯಾ. ೯೧). **ನೋಂದು :** 'ನೋಂದಿಸು' ಪರಾ.

**ನೋಂದಾಗು** = ಅಧಿಕೃತವಾಗಿ ದಾಖಲಾಗು ; ರಿಜಿಸ್ಟರು ಆಗು : ಅವನ ಹೆಸರಿಲೆ ಈ ಗುತ್ತಿಗೆ ನೋಂದಾದದ್ದನ್ನು ನಾನು ಕಣ್ಣುಟ್ಟಿ ನೋಡಿ ಬಂದಿದ್ದೇನೆ (ಬ್ರಂಗಾಹ. ೪೮). [←ಮರಾ. ನೋಂದ]

**ನೋಂದಣಿ,** ನೊಂದಣಿ (ನಾ). ದಾಖಲು ಮಾಡುವಿಕೆ ; ರಿಜಿಸ್ಟರು ಮಾಡುವಿಕೆ : ಪತ್ರಗಳ ನೋಂದಣಿಯ (ರಿಜಿಸ್ಟ್ರೇಷನ್) ಬಗ್ಗೆಯೂ ಒಂದು ಸಾರ್ವತ್ರಿಕ ನಿಯಮವೇರ್ಪಟ್ಟಿತು (ಕವಿಕೋ. I, ೬೪). **ನೊಂದಣಿ :** ೧೧ ತಾಲೂಕುಗಳಲ್ಲಿ ದೊಡ್ಡೊಬ್ಬ ಸಬರಜಿಸ್ಟ್ರಾರನೆಂಬ ನೊಂದಣೀಕಾರಕೂನನಿರುತ್ತಾನೆ (ಕಭಾಗೆ. ೩೮೦) ; ಸರಕಾರದವರು ಛಾಪೆಕಾಗದ ನೊಂದಣಿ ಮುಂತಾದ ಕಾಯ್ದೆಗಳನ್ನು ಮಾಡಿದರು (ಮುಂಬಯಿ. ೬–೧೦೧) ; ಇದರಂತೆ ನಾನು ಕರಾರಪತ್ರವನ್ನು ಬರೆದು ನೊಂದಣಿ ಮಾಡಿಸಿ ಕೊಡುತ್ತೇನೆ (ವೋಹಿಸೀ. ೮೫).

**ನೋಂದಣಿ ಮಾಡು** = ಅಧಿಕೃತವಾಗಿ ದಾಖಲು ಮಾಡು ; ರಿಜಿಸ್ಟರು ಮಾಡು : "ರಜಿಸ್ಟರು ಮಾಡು ; ನೋಂದಣಿ ಮಾಡು" (Register. ಪತ್ರಿನಿ. ೬೪) ; ಕಾಗದ ನೋಂದಣಿ ಮಾಡುವದನ್ನು ಮಾಡಿ ಕೊಡಲಿಕ್ಕೆ ಬೇಕೇ ಬೇಕು (ಆಶೋಕ. ೩೬).

[←ಮರಾ. ನೋಂದಣೀ]

**ನೋಂದಣಿಕಚೇರಿ** (ನಾ). ದಾಖಲು ಮಾಡಿಸುವ ಕಾರ್ಯಾಲಯ ; ರಿಜಿಸ್ಟರು ಮಾಡಿಸುವ ಕಚೇರಿ ; ಸಬ್‌ರಿಜಿಸ್ಟ್ರಾರು ಕಚೇರಿ : ಸಬ್‌ರಿಜಿಸ್ಟರ ಅಥವಾ ನೋಂದಣಿಕಚೇರಿ (ಲಂಚಪ್ರ. ೧೧) ; ನೋಂದಣೀಕಚೇರಿ ಅಗತದಂತಲ್ಲೋ ಸಾವಕಾರ ಈ ಊರಿಗೆ (ಬೆಳಭಾ. ೯೭). [ನೋಂದಣಿ + ಕಚೇರಿ]

**ನೋಂದಣಿವಿವಾಹ** (ನಾ). ಸಬ್‌ರಿಜಿಸ್ಟ್ರಾರು ಕಚೇರಿಯಲ್ಲಿ ಅಧಿಕೃತವಾಗಿ ದಾಖಲೆ ಮಾಡಿ ಆಗುವ ಮದುವೆ ; ದಾಖಲೆ ಮದುವೆ ; ರಿಜಿಸ್ಟರ್ ಮದುವೆ : ನೀವೊಂದು ಕೆಲಸ ಮಾಡಿರಿ, ನೋಂದಣಿವಿವಾಹ ಮಾಡಿಕೊಳ್ಳಿರಿ ಮೊದಲು, ಆಮೇಲೆ ನಾನು ಬಂದು ಶಾಸ್ತ್ರೋಕ್ತವಾಗಿ ಮದುವೆ ಸಾಂಗ ಮಾಡುತ್ತೇನೆ (ಎರಸಿ. ೭೫).

[ನೋಂದಣಿ+ವಿವಾಹ]

**ನೋಂದಾಯಿಸು,** ನೊಂದಾಯಿಸು (ಕ್ರಿ). ಅಧಿಕೃತವಾಗಿ ದಾಖಲು ಮಾಡು ; ನೋಂದಣಿ ಮಾಡು : ನೋಂದಾಯಿಸಲಾದ ಕ್ರಿಯಾಶೀಲಸದಸ್ಯರ ಸಮಿತಿಯು ಈ ಗೊತ್ತುವಳಿಯನ್ನು ನಿರ್ಣಯಿಸಿತು (ರೂಢಿ). **ನೊಂದಾಯಿಸು :** ತಮ್ಮ ಪೀಠಕ್ಕೆ ಇವರೇ ಉತ್ತರಾಧಿಕಾರಕ್ಕೆ ಯೋಗ್ಯರೆಂದೂ, ಮುಂದೆ ಇವರಿಗೇ ಮಾಡತಕ್ಕದೆಂದೂ ವಿಲ್ಲು ದಸ್ತವೇಜನ್ನು ಬರೆದು ನೊಂದಾಯಿಸಿ . . . ಶಿವಸಾಯುಜ್ಯ ಹೊಂದಿದರು (ಗುರುವ. ೪೬) ; ಗ್ರಂಥಪರಿಗ್ರಹಣ ರಜಿಸ್ಟರಿನಲ್ಲಿ (Accession Register) ನೊಂದಾಯಿಸಿ ಆ ಗ್ರಂಥದ ಪರಿಗ್ರಹಣ ಸಮಂಕವನ್ನು . . . ಬರೆಯಲಾಗುವದು (ಗ್ರಂಥಾಲ. ೧೫) ; ಈ ಗುತ್ತಿಗೆ ಫರ್ ಬ್ರೇಬರನ ಹೆಸರಿನಲ್ಲಿ ನೊಂದಾಯಿಸಲ್ಪಟ್ಟಿದೆ (ಬಂಗಾಹ. ೪೭).

[ನೋಂದಾವಣೆ$_0$+–ಇಸು$_3$]

**ನೋಂದಿಸು** (ಕ್ರಿ). = ನೋಂದಾಯಿಸು : ಮರುದಿನ ಪ್ರೇಮಶಂಕರರಿಗೆ ಒಂದು ನೋಂದಿಸಿದ ಪಾಕೀಟು ಬಂದಿತು (ಪ್ರೇಮಾಶ್ರ. ೧೧೫).

[ನೋಂದು(<ನೋಂದ)+–ಇಸು$_3$]

**ನೋಂದು** 'ನೋಂದ' ನೋ.

**ನೋಂಪ** 'ನೋನ್' ಪರಾ.

**ನೋಂಪಿ,** ನೋಹಿ (ನಾ). ವ್ರತ ; ನಿಯಮ : ನೆಜಿಕಿದಾದ ವ್ರತಶೀಲ ನೋನ್ಪಿಗುಣದಿಂ ಸ್ವಾಧ್ಯಾಯಸಮ್ಪತ್ತಿನಿವಹ್ ಕಜಿಕಿಇಲ್ಲಲ್ಲಪ ಧರ್ಮ್ಮದಾಸಸಿಮತಿಶ್ರೀಗನ್ತಿಯರ್ವ್ವರನ್ದು (ಎಕ. II, ೬೬–೧ ; ಸು. 700) ; ಕ್ಷೀರಕುಮಾರನೆಂಬೊನಾತಂ . . . ಬ್ರಹ್ಮಚರ್ಯಂ ಮೊದಲಾಗೊಡೆಯ ಬ್ರತಂಗಳಂ ಪ್ರತಿಪಾಳಿಸಿ ಆಚಾಮ್ಲ ವರ್ಧನಮೆಂಬ ನೋಂಪಿಯಂ ಪನ್ನೆರಡು ವರ್ಷಂಬರಂ ನೋಂತು ಸಮಾಧಿಮರಣದಿಂದಂ ಮುಡಿಪಿ (ವಡ್ಡಾರಾ. ೬೬–೧೭) ; ಒರ್ಪನಗಲ್ದ ತನ್ನ ಮನೋವಲ್ಲಭೆಯಂ ನೆನೆದು . . . ಆನಿಯಮಂ ಪತ್ತಿರ್ಪ ಸ್ವೈಪೇಕೆ ಸಂಗಳಿಕುಂ ಮೌನದೆ ಮುನ್ನ ಮಾನವರ ನೋಂತಾ ನೋಂಪಿಯಂ ನೋಂತನೇ ಎಂದು ಪಂಬಲಿಸುತ್ತಿರ್ದಂ (ಆದಿಪು. ೧೨–೩೯) ; ಧಿಗಿಲನೆದ್ದಳು ಕುಸುಮಾಜಿ ಕೈಮುಗಿದಿಂದು ಹಗಲೊಂದು ನೋಂಪಿಯುಂಟಿನಗೆ ಸುಗತನಿವಾಸಕೆ ಪೋಪೆನೆಂದಳು (ಭರಚ. ೬–೧೧) ; ಅಕ್ಕನವರು . . . ನನ್ನನ್ನು ನೋಡಿ, 'ಮಾಚಿ, ನಿನ್ನ ಎಷ್ಟು ತಪಸ್ಸಿನ ಫಲವೇ ಇದು ! ಯಾವ ನೋಂಪಿಯ ಫಲವೆ ?' ಎಂದು ಕೇಳಿದರು (ಶಾಂತಲಾ. ೮). **ನೋಹಿ :** ಭಾದ್ರಪದಶುದ್ಧ ಚತುರ್ದಶಿ ಅನಂತನ ನೋಹಿ ಕಲಶಪ್ರಭಾವನೆ ಮಹಾಆರಾಧನೆ ಮುಂತಾದ್ದಕ್ಕೆ . . . ಚತುಸ್ಸೀಮೆ ವಿವರ (ಎಕ. XI, ಹೊಳಲ್ಕೆ. ೧–೨೦ ; 1154) ; ಈ ವಿಧಿಯಿ ಪಾಂಡವರಿಗಕಟಾ ಸಾವು ಸೇರದು ತನಗೆ ತಾ ಮುನ್ನಾವ ನೋಹಿಯನಳಿದನೋ ಭವಭವಸಹಸ್ರದಲಿ . . . ಎನುತ ಮಿಗೆ ಮಜುಗಿದನು ಧೃತರಾಷ್ಟ್ರ (ಕುವ್ಯಾಆ. ೧೭–೬) ; ನೋಹಿಯಾತನದು–ತನ್ನರಮನೆಯ ಹಸಗೆಯ್ದು ಬೆಳಗಿದಂತೆಯೆ, ಬೆಳಗಿ ಊರ, ನಾಡ, ಹಸಗೆಯ್ದ್ವೆ, ಹೊಸಗೆಯ್ವೆನೆಂಬೊಲುಮೆ (ಹೊಂಗಳು. ೬–೧೦). 'ನೋಂಪು' ಪರಾ.

[ನೋನ್+–ಪಿ]

**ನೋಂಪು** (ನಾ). = **ನೋಂಪಿ :** ಯದುಕ್ಷೋಣಿಪಾಳಕಚೂಡಾಮಣಿ ನಾರಸಿಙ್ಗನೆನಲೇನ್ನೋಂಪುಳ್ಳನೋ ಹುಳ್ಳಪಂ (ಎಕ. II, ೬೪–೧೦೭, 1163) ; ತೀರ್ಥವಂದನೆ ನೋಂಪು[ಪಾಠಾಂ. ಪಿ]ಜಪ ದೇವತಾವಂದನಾರ್ಥ ವೆಲ್ಲವು ಪುಣ್ಯಯೋಗ (ಭರಚ. ೬೮–೯೭). 'ನೋಂಪಿ' ಪರಾ.

[ನೋನ್ +–ಪು$_2$. /ತಮಿ. ಮಲ. ನೋನ್ಪು, ನೋಮ್ಪು ; ತುಳು. ನೋಂಪು ; ತೆಲು. ನೋಮು]

**ನೋಕನೀಯ** (ನಾ). ಕನಿಷ್ಠನಲ್ಲದವನು ; ಶ್ರೇಷ್ಠ : ನೋಕನೀಯನ್ನ ಮಹಲೀಲೆ ಕೊಂಡಾಡುವಂಥ ಏಕಮನವ ಕೊಡು ಶೀಲೆ (ವಿವಾಕ್ಯ. ೬–೨). [ಸಂ.]

**ನೋಕರ** 'ನೌಕರ' ನೋ.

**ನೋಕರಿ** 'ನೌಕರಿ' ನೋ.

**ನೋಕರ್ಮ** (ನಾ). [ಜೈನ] ದೇಹ, ವಚನ, ದ್ರವ್ಯ, ಮನಸ್ಸುಗಳ ರಚನೆಗೆ ಬೇಕಾಗುವ ಒಂದು ಬಗೆಯ ಕರ್ಮಾಣು : ನೋಕರ್ಮ ವಿದೂರೋಹಂ ಸಪ್ತಧಾತು ಕಲಿತೌದಾರಿಕಾದಿ ನೋಕರ್ಮ ವಿದೂರನೆ ನಾಂ (ತತ್ತ್ವಪ್ರ. ೩೭೬) ; ಕೂರುಗೊಂಡೆಂಟುಕರ್ಮವೆ ದ್ರವ್ಯಕರ್ಮವೀ ಮೂಜುಕರ್ಮವೆ ಭಾವಕರ್ಮ ತೋಜುವ ದೇಹ ನೋಕರ್ಮ ಕರ್ಮಗಳಿಂತು ಮೂಜುಕಾಂಡಗಳಹುವೊಮ್ಮೆ ನೋಕರ್ಮಗಾಣದಂತಾ ದ್ರವ್ಯಕರ್ಮವಾಲೋಕಿಸೆ ಹಿಂಡಿಯಂತಿಹುವು ಹೋಕಿನ ಭಾವಕರ್ಮಗಳೆಣ್ಣೆಯಂತೊಳಗಾಕಾಶದಂತಾತ್ಮನಿಹನು (ಭರಚ. ೬೭–೧೧೧).

ಆತ್ಮನಿಗೆ ಶರೀರನಾಮಕರ್ಮದ ಉದಯವಾಗುವುದು. ಅದರಿಂದ ದೇಹ, ವಚನ, ದ್ರವ್ಯ, ಮನಸ್ಸುಗಳ ರಚನೆಗೆ ಬೇಕಾಗುವ 'ನೋಕರ್ಮ' ಎಂಬ ಕರ್ಮಾಣುಗಳು ಅಂಟಿಕೊಳ್ಳುವುವು (ಜೈನಪ. ೩೦೦). [ಸಂ.]

**ನೋಕಷಾಯ** (ನಾ). [ಜೈನ] ಚಾರಿತ್ರಮೋಹನೀಯದಲ್ಲಿ ಒಂದು ಭೇದ ; ಕಿಂಚಿತ್ ಕಷಾಯ : ಮತ್ತಮಂತರ್ಮುಹೂರ್ತ ದಿನಪ್ರತ್ಯಾಖ್ಯಾನಕ್ರೋಧಮಾನಮಾಯಾಲೋಭಂಗಳಂ ನಿರಾಕರಿಸಿ ಬಳಿಯಂ ಸಂಜ್ವಲನಕಷಾಯಚತುಷ್ಕನೋಕಷಾಯ ನವಕನಾಮ ತ್ರಯೋದಶಪ್ರಕೃತಿಗಳನರಿದು (ಶಾಂತಿಪು.೧೧–೧೧೧ಪ) ; ಚಾರಿತ್ರ್ಯಮೋಹನೀಯದಲ್ಲಿ ಕಷಾಯ ಮತ್ತು ನೋಕಷಾಯ ಎಂದು ಎರಡು ಭೇದಗಳು . . . ನೋಕಷಾಯ ಎಂದರೆ ಕಿಂಚಿತ್‌ಕಷಾಯ. ಇದರಲ್ಲಿ ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸೆ, ಸ್ತ್ರೀವೇದ, ಪುಂವೇದ, ನಪುಂಸಕವೇದ ಗಳೆಂದು ಒಂಬತ್ತು ಭೇದಗಳಿವೆ (ಜೈನಪ. ೩೩೭). [ಸಂ.]

**ನೋಕಷಾಯವೇದನೀಯ** (ನಾ). = ನೋಕಷಾಯ : ಕಷಾಯ ವೇದನೀಯಮುಂ ನೋಕಷಾಯವೇದನೀಯಮುಂ ಎಂದು ಚಾರಿತ್ರ ಮೋಹನೀಯಂ ದ್ವಿವಿಧಂ (ತತ್ತ್ವಪ್ರ. ೭೯).

[ನೋಕಷಾಯ+ವೇದನೀಯ]

**ನೋಗು** (ನಾ). [ಸಂಗೀತ] (?) : ಕಳಪಿಕಪಂಚಮಾಂಚಿತ ಮೃದು ಧ್ವನಿಯಂ ಗೆಲೆವಂದು ಸುಸ್ವರಂ ಲಳಿ ಲುಳಿ ಧಾತು ರೀತಿ ಗತಿಯೋಜೆ ಬಜಾವಣೆ ಠಾಯ ಸುಟ್ಟೆ ಕೋಮಳ ವಳಿ ಲಾಗು ನೋಗು ಪಸರಂ ಪರಿಪಾಂಗು ಬೆಡಂಗು ಭಂಗಿ ಸಂಗಳಿಸೆ ಸುಕಂಠಿ ಪಾಡಿ ಪುದಿದಳ್ ಮುದಮಂ ನರನಾಥಚಿತ್ತದೊಳ್ (ಕುಸುಮಾ. ೧–೩೭). [?]

**ನೋಚ್ಚಿ** (ನಾ). ಒಂದು ಬಗೆಯ ಸಸ್ಯ : ನೀರ್ಗುಂಡಿ, ನೋಚ್ಚಿ, ನೀರ್ಲಕ್ಕಿ (ವೈಟಿನಿ. ೭೮–೧೬೦೧). [?]

**ನೋಟ, ನೋಂಟ** (ನಾ). ೧. ನೋಡುವಿಕೆ ; ಅವಲೋಕನ ; ಕಾಣುವಿಕೆ ; ದರ್ಶನ : "ನಿಭಾಳನಂ, ನಿಶಮನಂ, ನಿಧ್ಯಾನಂ, ಅವಲೋಕನಂ, ಲಕ್ಷಣಂ, ದರ್ಶನಂ, ದೃಷ್ಟಿಃ, ದ್ಯೋತನಂ–ಈ ಏ ನೋಟಂ" (ಹಲಾಯುಧ ೯೩–೪೧೨) ; ನುಡಿಯಂ ತಗುಳ್ಚಿ ನೋಟಂ ನುಡಿ ಪರಿಚಯಮಂ ತಗುಳ್ಚಿ ಪರಿಚಯಮುಳಿಪಂ ತಡೆಯದೆ ತಗುಳ್ಚಿ ಮನದಳಿಪೊಡಗೂ[ಡಿದು]ದಂ ತಗುಳ್ಚುಗುಂ ಕಾಮಿಗಳಾ (ಕವಿರಾ. ೩–೨೦೩) ; ನೋಟದೊಳ್ಬುಜಂಬಡೆದು ಮೆಲ್ನುಡಿಯೊಳ್ ಬಗೆವೊಕ್ಕು ಜಾಣೊಳ್ಸಾಟಮನೆಲ್ಲಮಂ ಕಿಡಿಸಿ . . . ಕೂಟಸುಖಂಗಳಂ ಪಡೆದನೇಂ ಚದುರಂ ಗಳ ಬದ್ದೆದಲ್ಲಟಂ (ಪಂಪಭಾ. ೩–೮೨) ; ಜಂಗಮವಿಲ್ಲದ ಮಾಟ ಕಂಗಳಿಲ್ಲದ ನೋಟ ಹಿಂಗಿತ್ತು (ಬಸವ. ೪೨೬) ; ನೋಟವಿದು ಲೇಸಲ್ಲ ದೈತ್ಯರ ಕೋಟಿಗದು ಗಂಟಲನು ಕೊಯ್ಯಲಿಕಾಟವಿದು ಪರಸತಿಯ ನೋಟವು ಸಲ್ಲದಿಹಪರಕೆ (ಸಂಭಪ. ೫–೧೨೫) ; ನೋಟದೊಳಾವುದೊ ವೇದನೆ ತೋರಿತು ನಾನದ ಬಣ್ಣಿಸಲರಿಯೆ (ಇಂಚಾಪ. ೪೩–೫) ; ನೋಟ ನೆಟ್ಟಗಿದ್ದರೆ ಕಾಟವೇಕೆ ಬಂದೀತು ? (ಗಾದೆ). ೨. ನೋಡುವ ಅಂಗ ; ಕಣ್ಣು ; ನೇತ್ರ : ಮಲ್ಲಿಗೆಯ ತುಂಬಿಯ ಕೂಟಮೆ ನೋಟ ಮಾಡ ನಂದನವನಲಕ್ಷ್ಮಿ ಕಣ್ಗೆಸೆದು ತನ್ನನೆ ನೋಡಿಸಿದಳ್ ತದಾರ್ಯರಿಂ (ಶಾಂತಿಪು. ೭–೧೦) ; ದೂರದಿಂ ತವೆ ನೋಳ್ಪ ನೋಟವು ದೂರದಲಿ ಸಲೆ ಕೇಳ್ವ ಕರ್ಣಂ ದೂರದಿಂದಡಿಯಿಡುವ ಮೊದಲಾದಖಿಳಸಿದ್ಧಿಗಳು (ಬಸವು. ೧೦–೫೫) ; ಹೊಕ್ಕುಳಲಿ ಮಗವುಂಟೆ ಹಣೆಯಲಿ ನೋಟವೇ ಹಗೆಗೆ (ಕುಪ್ಯಾಕ. ೧೩–೧೦). ೩. ದೃಶ್ಯ : ಆ ಸಂಜೆಬಿಸಿಲಿನಲ್ಲಿ ಆ ಕಾಡಿನಲ್ಲಿ ಎತ್ತ ನೋಡಿದರೂ ಸುಂದರವಾದ ನೋಟವೇ ಕಾಣುತ್ತಿತ್ತು ! (ಕಳಹು. ೩) ; ಆ ನೋಟ ನೋಡಲು ತುಂಬ ಸುಂದರವಾಗಿದೆ (ರೂಢಿ). ೪. ದೃಷ್ಟಿಕೋನ : ಆರ್ಥಿಕ ಉದ್ಯಮಗಳನ್ನು ಹಣದ ಕಡೆಯಿಂದ ನೋಡುವ ನೋಟ ಮಾತ್ರ ಇಲ್ಲಿನದು (ಹಣಪ್ರ. XI, ಅಂಕ). ೫. (ನಾಣ್ಯ, ರತ್ನ ಮೊದಲಾದುವುಗಳ) ಪರೀಕ್ಷೆ ; ವಿಮರ್ಶೆ : ಸಾಧಾರಣಸಂವತ್ಸರದ ಫಾಲ್ಗುಣ ಸು ೧ ಆರಲೆಹದರೆಂಮರ್ಸರ ಮಗ ನೋಟದ ಪಡರಿದೇವನು (ಮೈಅಂ. ೧೯೩೪, ೬೩–೪ ; ಸು. 1371) ; ಗಡುಪಣ ತಳವಾಜಾಕೆಯ ಹಣ ಅಕ್ಕಸಾಲೆಯ ನೋಟದ ಹಣ ಕೆರೆಯ ಭಣ್ಣಿಯ ಹಣಯಿವು ಮುನ್ನಾದ ಸಮಸ್ತಸುಙ್ಕಸ್ವಾಮ್ಯವನು . . . ಪಾಲಿಸಿ ಬಿಟ್ಟೆ ಧರ್ಮಶಾಸನ (ಎಕ. XII, ಚಿಕ್ಕನಾ. ೫–೧೭ ; 1535) ; ನಾಣ್ಯದ ನೋಟ ಬಲ್ಲವನೇ ಸೆಟ್ಟಿ (ಗಾದೆ). ೬. ಚಿತ್ರ, ನಾಟಕ ಮೊದಲಾದುವುಗಳ ಪ್ರದರ್ಶನ : ಆ ಹಳ್ಳಿಯ ಬಹಳ ಜನ ಇಂದು ನೋಟ ನೋಡಲು ಹೋಗಿದ್ದರು (ರೂಢಿ). ೭. ರೂಪ ; ಆಕೃತಿ : ಅಂಗದ ನೋಟವು ಸಿಂಗದ ಗಾತ್ರವು ಹಿರಿಗದು ಮನದಲ್ಲಿ ನಾನಾ ವಿಕಾರವು (ಬಸವ. ೪೨). ೮. ನಾಟಕದಲ್ಲಿಯ ದೃಶ್ಯ ; ಅಂಕದಲ್ಲಿಯ ಭಾಗ : ನೋಟ ೨ : ೧ನೆಯ ನೋಟದ ೬–೮ ದಿನಗಳ ಬಳಿಕ (ಹಚ್ಚಿರ. ೮) ; ನೋಟ ೩ : ೨ನೆಯ ನೋಟದ ಸುಮಾರು ೧–೨ ವರ್ಷಗಳ ಬಳಿಕ ೧ನೆಯ ನೋಟದಲ್ಲಿ ಹೇಳಿದ ಭಿಲ್ಲರ ಹಳ್ಳಿಯಲ್ಲಿ . . . ಕುಳಿತುಕೊಂಡಿರುತ್ತಾರೆ (ಹಚ್ಚಿರ. ೧೫). △ **ನೋಂಟ** : ೧. ಚಂಡವೇಗಂ ಕರುಮಾಡದ ಮೇಗಣ ನೆಲೆಯೊಳಿರ್ದು ನೋಂಟಕ್ಕೆ ಗೆಂಟುಪೋಗೆ [ಪಾಠಾಂ. ವಿನೋದದಿಂ ಗೆಂಟಿಟಿರ್ದು] ಚಕ್ರಮನಿಟ್ಟೊಡೆ (ಪದ್ಮಾರಾ. ೧೨೧–೭).

**ನೋಟದಳತೆ** = ದೃಷ್ಟಿಗೆ ಎಟುಕುವಷ್ಟು ದೂರ ; ಕಣ್ಣಳವು : ಇಂತು ರಥಂ ಪೋಗೆವೋಗೆ ನೋಟದಳತೆಯೊಳ್ . . . ತ್ರಿಪಥಗೆ ಕಾಣಿಸಿಕೊಂಡಳ್ (ರಾಮಾಶ್ವ. ೩೦–೧೦).

[<ನೋಡು./ ತಮಿ. ಮಲ. ನೋಟ್ಟ ; ತುಳು. ನೋಟ]

**ನೋಟಂದೆಗೆ** (ಕ್ರಿ). ಕಣ್ಣನ್ನು ತೆರೆ ; ಕಣ್ಣು ಬಿಡು : ಬಗೆಗುಂದಿ ಚಕ್ರವಿಥುನಂ ವಿಗೆ ನೊಂದೊಂದೊಂದನಗಲಲಾಜದೆ ನೋಟಂದೆಗೆ ಯುತ್ತಲುತ್ತೊಬಲುತ್ತಗಲ್ದುವು ಉಜಿತ ಪಗಲನಜಿಸಿ ತಿರುಗುವ ತೆಜದಿಂ (೧೦೮. ೪–೬೯). [ನೋಟ+ತೆಗೆ₁]

**ನೋಟಕ** (ನಾ). ೧. ನೋಡುವವನು ; ವೀಕ್ಷಿಸುವವನು ; ಪ್ರೇಕ್ಷಕ : ಸರಿಗೆಯೊಳ್ ಸಮೆದಕ್ಷಮಾಲಿಕೆ ಪೊನ್ನ ಮುಂಚಿ . . . ದುಕೂಲದ ಕೋವಣಂ ಕರಮೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ (ಪಂಪಭಾ. ೬–೮) ; ತೊಟ್ಟಿಯ ಸುತ್ತುವೆತ್ತ ಪಸುರ್ವಂದಲ ಮುತ್ತಿನ ಮಂಟಪಂಗಳೊಳ್ . . . ನೇರ್ಪಟ್ಟುದು ನೋಟಕರ್ಗೆಸಗೆ ಯುಬ್ಬಣಮಪ್ಪಿನಮಾ ವಿವಾಹದೊಳ್ (ಸೂಕ್ತಿಸು. ೬–೨೨) ; ಈಜಿ ಗೊರಳಭವನಾ ಶರಣನಂ ಮೆಜೆಯಿಸಲು ಬಗೆದೊಂದ್ದುದಿನದಲಿ ಕೀಜು ಕುಲನವೊಲು ಸತ್ತ ಕಜುವಂ ಹೊತ್ತು ನೋಟಕರು ಹೊಜಗೆ ನೋಡಲು ರುದ್ರಮುದ್ರೆಯ ಕುಜುಹಿಸಲಿ ನಡೆತರಲು (ಬಸವು. ೫೭–೩೨) ; ದ್ಯುಮಣಿ ಪರಿಯಂತಿಕೆ ರಶ್ಮಿಗೆ ತಿಮಿರಮಿದಿರೇ ನೀವು ನೋಟಕರೆಮಗೆ ರಣದೆಸ್ವಾಳ ವೆಂದನು ಕರ್ಣ ಗುರುಸುತಗೆ (ಕುಪ್ಯಾಕ. ೧೦–೨೧). ೨. ನಾಟಕಾದಿಗಳನ್ನು ನೋಡುವವನು ; ಪ್ರೇಕ್ಷಕ : ಗಗನಂ ನಾಟ್ಯನಿಕೇತನಂ ದಿವಿಜರೆಲ್ಲರ್ ನೋಟಕರ್ ದೇವ ನೀನೆ ಗಡಂ ನಟ್ಟುವನಾಗೆ . . . ನಿನ್ನ ಗದಾನರ್ತಕಿ ನರ್ತಿಸಲ್ ಪದೆದಪಳ್ ರಕ್ಷಶ್ಶಿರೋರಂಗದೊಳ್ (ಜಗವಿ. ೧೧–೭೭) ; ನಾಟಕವ ನೋಡು ಬ್ರಹ್ಮಾಂಡರಂಗಸ್ಥಲದಿ ಕೋಟಿನಟ ರಾಂತಿಹರು ಚಿತ್ರಪಾತ್ರಗಳ ಆಟಕ್ಕೆ ಕಥೆಯಿಲ್ಲ ಮೊದಲಿಲ್ಲ ಕಡೆಯಿಲ್ಲ ನೋಟಕರು ಮಾಟಕರೆ (ಮಂಕುಕ. ೨೫೪).

**ನೋಟಕಜನ** = ನೋಡುವವರು ; ಪ್ರೇಕ್ಷಕರು : ಸವಮಳಾತ್ಮನು ಕಿನ್ನರಯ್ಯನು ಮದನಮರ್ದನನಂ ನುಡಿಸಿದಲ್ಲದೆ ಬಿಡಂ ತಾನೆನುತ ನೋಟಕಜನರು ಕೀರ್ತಿಸಲು (ಬಸವು. ೨೮–೫೧) ; ಉಲಿವ ವಾದ್ಯದಲೆಡ

ಬಲದ ಹೆಕ್ಕಳದ ನೋಟಕಜನದಲಾ ನೃಪಕುಲಶಿರೋಮಣಿ ಹೊಕ್ಕನ ಸುಖಮು ರಾಜಮಂದಿರವ (ತೊರರಾ. ೧-೧೭-೨೨). [ನೋಟ+-ಕ$_3$]

**ನೋಟಕಾತಿ** 'ನೋಟಗಾತಿ' ನೋ.

**ನೋಟಕೂಟ**(ನಾ). ೧. ದೃಷ್ಟಿ ಬೆರೆಯುವಿಕೆ,—ಒಂದಾಗುವಿಕೆ. ೨. ದರ್ಶನದಿಂದ ಪಡೆಯುವ ಐಕ್ಯ,-ಸಾಕ್ಷಾತ್ಕಾರ : ಮಾಟಕೂಟ ಬಸವಣ್ಣಂಗಾಯಿತ್ತು ನೋಟಕೂಟ ಪ್ರಭುದೇವರಿಗಾಯಿತ್ತು (ಮಹಾದೇ.ಬ. ೭೭-೧೯೩). [ನೋಟ+ಕೂಟ$_1$]

**ನೋಟಗ** (ನಾ). = ನೋಟಗಾರ ೨ : ಸಲ್ಲದಾ ಹೊನ್ನುಗಳಿಗೆ ಬಂದರು ಮೂಜು ನೋಟಗರು ಇಬ್ಬರು ಕುರುಡರು ಒಬ್ಬಗೆ ಕಣ್ಣೆ ಇಲ್ಲ (ಪುರಂದ. ೩-೨೭-೫). [ನೋಟ+-ಗ$_2$]

**ನೋಟಗಾತಿ, ನೋಟಕಾತಿ** (ನಾ). (ರೋಗಾದಿಗಳನ್ನು ಉಂಟು ಮಾಡುವ ಭೂತಪ್ರೇತಾದಿಗಳನ್ನು ಬಲಿ, ನೈವೇದ್ಯ ಮುಂತಾದುವುಗಳಿಂದ ತೃಪ್ತಿಪಡಿಸುವ) ಮಾಟಗಾತಿ ; ಮಂತ್ರಗಾತಿ(?): ಲೋಕದ ಬುದ್ಧಿಗೇಡಿ ಮನುಜರೆಲ್ಲರು ಶುದ್ಧಚಿತ್ತ ಜಂಗಮಲಿಂಗದ ಮಾತ ಕೇಳದೆ ಅದ್ದನ ಜೋಳ ಅರೆಮಾನ ಎಣ್ಣೆಯ ಕೊಂಡು ನೋಟಗಾ[ಪಾಠಾಂ.ಕಾ]ತಿಯರ ಮನೆಗೆ ಹೋಗಿ ಅವರು ಹೇಳಿದ ತಾತು ಭೂತದ ಕೋಟಲೆಗೊಳಗಾಗಿ ಕೈಕೊಂಡು ಬಂದು ಅವಕ್ಕೆ ಊಟವನಿಕ್ಕಿ ಮಿಕ್ಕ ಕೂಳ ತಮ್ಮ ಲಿಂಗಕ್ಕೆ ತೋರುವ ಲಿಂಗದ್ರೋಹಿಯ ಮಾತ ಕೇಳಲಾಗದು (ಮಡಿಮಾ. ೨೪-೩೪; ವಚಸಂ. ೩೭೯-೪೩ ನೋ). **ನೋಟಕಾತಿ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ನೋಟ+-ಕಾತಿ$_5$]

**ನೋಟಗಾರ** (ನಾ). ೧ = ನೋಟಕ ೧ : ಕೆಲಂಬರು ನೋಟಗಾರರು (ಸೌಗಂಧಿ. ೧೩೨-೯); ದಕ್ಷಿಣದಲ್ಲಿನ ತ್ರಿಭಂಗಭಂಗಿಯಲ್ಲಿನ ದೇವಿಯರ ಪ್ರತಿಮೆಗಳು, ತಮ್ಮ ನಿಲುವಿನಿಂದ ಮನಮೋಹಕವಾಗಿರುವುವಲ್ಲದೆ, ತಮ್ಮ ಸರಳ ನಡೆಯಿಂದ ನೋಟಗಾರನ "ನೇತ್ರಕೌಮುದಿ"ಯಾಗಿ ಪರಿಣಮಿಸಿವೆ (ಭಾರದ. ೫೧೯). ೨. ನಾಣ್ಯ, ರತ್ನ ಮೊದಲಾದುವುಗಳ ಪರೀಕ್ಷಕ ; ಸರಾಫ : ಕಂದಾಚಾರದ ಶ್ಯಾನುಭಾಗರ ಜನ ೩ಕೆ . . . ನೋಟಗಾರನ ಜನ ೧ಕೆ (ಮೈಆರ್. ೧೯೩೩, ೩೧-೩೨ ; 1737) ; ಕತ್ತೆ ಚಿತ್ರಗಾರನ ಮಿಂಡ, ಹಣ ನೋಟಗಾರನ ಮಿಂಡ, ಟವಣೆ ಶಾನಭೋಗನ ಮಿಂಡ (ಗಾದೆ). [ನೋಟ+-ಕಾರ(<-ಕಾಱ)]

**ನೋಟಬೇಟ** (ನಾ). ನೋಡಿದೊಡನೆ ಉಂಟಾಗುವ ಮೋಹ ; ಕಣ್ಬೇಟ ; ಚಕ್ಷುಃಪ್ರೀತಿ : ಯುವತಿಯಲಿ ನೋಟಬೇಟದಿ ಕೂಟವನು ಪಡೆದು ಕಾಯುವವಳಿಗಧೀನವಾಗಿರೆ ಗಾಯವಡೆದಂಗಜನ ಬಾಣಕೆ ಬಾಯ ಕಿಸಿದಾಯಾಸಗೊಂಬುದೆ ಮಾಯೆ ಕೇಳೆಂದ (ಅಮೃತ. ೨-೭೮) ; ನೋಟಬೇಟವು ತನಗೆ ನಾಟಿಸಿದ ಬಳಿಕೆಲ್ಲಿ ಸಾಟಿಯೆ ಕಾಮನೆಸುಗೆಗೆ ಒಲುಮೆಗೆ ನೋಟವೇ ಮುಖ್ಯ (ಸರ್ವಜ್ಞ. ೧೭೯೩). [ನೋಟ+ಬೇಟ$_1$(<ಬೇಂಟ)]

**ನೋಟವಟ್ಟೆ** (ನಾ). ದೃಷ್ಟಿಪಥ ; ಕಣ್ಬೊಲ : ನಿಟ್ಟಿಸಿ ನೆರೆ ರಂಗಯಿಂಬಂಗನೆಯ ನೋಟವಟ್ಟೆಗಾನೆಂದು ಸಂದಿಪೆನೊ (ಶತಸಾಂ. ೩೨-೬೭). [ನೋಟ+ಬಟ್ಟೆ$_1$]

**ನೋಟವಣ** (ನಾ). ಒಂದು ಬಗೆಯ ತೆರಿಗೆ ; ನಾಣ್ಯಪರೀಕ್ಷೆಗೆ ತೆರುವ ಹಣ : ಶ್ರೀಮನ್ಮಹಾ ಪಸಾಯಿತರುಮಪ್ಪ ತಮ್ಮ ಕುಳವ ಸಾಯಣ್ಣನವರಿಗೆ ಆ ಶ್ರೀ ವೀರಬಲ್ಲಾಳದೇವರಸರು ಆ ಸ್ತಳದ ಖಾಣ ಪ ೩ಬಿ ಕಿಱುಕುಳ ತೂಕ ನೋಟವಣ ಅಭ್ಯಾಗತ ಪಳವಿಂಳಿ ತುಪ್ಪ ನೂಲು . . . ಧಾರಾಪೂರ್ಬ್ಬಕಂ ಮಾಡಿ ಕೊಟ್ಟರು (ಎಕ. VI, ಕಡೂರು. ೪೯-೪೦ ; 1291) ; ನಾಡು ತಳವಾರಿಕೆ ಹಣ ಸಟ್ಟವಣ ನೋಟವಣ ತಳವಾರಿಕೆ ಹಣ . . . ಇಷ್ಟನು ಬಿಟ್ಟೆವು (ಎಕ. VI, ಕಡೂರು. ೧೫೮-೧೦ ; 1542). [ನೋಟ+ಪಣ$_3$]

**ನೋಟಸನ್ನೆ** (ನಾ). ಕಣ್ಣಿನಿಂದ ಮಾಡುವ ಸೂಚನೆ ; ಕಣ್ಸನ್ನೆ : ನೆಟ್ಟನಾಳೆಯ ನೋಟಸನ್ನೆಯ ದಿಟ್ಟಗವದಿರು ಮರುಳುಗೊಂಡರು ಕೆಟ್ಟ ಕೇಡಿಂಗೇನ ಹೇಳುವೆ ದೈತ್ಯಕೋಟಿಗಳ (ಸಂಭಪ. ೫-೧೨೦). [ನೋಟ+ಸನ್ನೆ$_2$]

**ನೋಟಸಲಿಕೆ** (ನಾ). (?) : ದೊರೆಗಳವರು ರಾಮಾಯಣ ಪಾರಾಯಣದಲ್ಲಿಯೇ ಕಾಲವನ್ನು ಕಳೆದು ಎರಡು ಸಾವಿರ ವರಹ ಬಂದ ಬಳಿಕ, ಪರಾಂಬರಿಸಿ ನೋಟಸಲಿಕೆಯನ್ನು ಮಾಡಿಸಿ . . . ದಾನಧರ್ಮಗಳನ್ನು ಮಾಡುತ್ತಿದ್ದರು (ಮಹಾಪಂ. I, ೧೨೬). [ ? ]

**ನೋಟೀಸು** (ನಾ). ೧. ಸೂಚನಾಪತ್ರ ; ತಿಳಿವಳಿಕೆಯ ಪತ್ರ ; ಎಚ್ಚರಿಕೆಯ ಪತ್ರ : "ಸದಾನಂದನನ್ನು ಕೆಲಸದಿಂದ ತೆಗೆದು ಹಾಕಿರುವರು", "ಕಾರಣವೇನಂತೆ ? ನೋಟೀಸೇನೂ ಕೊಟ್ಟಿಲ್ಲವೇ ?" "ನೋಟೀಸೂ ಇಲ್ಲ ಕಾರಣವೂ ಇಲ್ಲ" (ದೀಪದ. ೬೮) ; ಏನೋ ನೋಟೀಸು ಆದೆ (ಅಶೋಕ. ೨೪೪) ; ಎಲ್ಲಾ ಸಮನುಗಳು, ನೋಟೀಸುಗಳು ಮುಂತಾದವುಗಳನ್ನು ತನ್ನ ಸ್ವಂತ ಹೆಸರಿನಲ್ಲಿ ಸಾದರ್ಮಾಡತಕ್ಕದ್ದು (ಗ್ರಾಸೂಕ. ೧೮). ೨. ಪ್ರಕಟಣೆ ; ಜಾಹೀರಾತು : ಹಳೆಯ ನೋಟೀಸುಗಳನ್ನು ಹೊರಗೆ ಕಂಬಕ್ಕೆ ಗೋಡೆಗೆ ಅಂಟಿಸಿದ ಕುರುಹುಗಳು ನಿಮ್ಮ ಕಣ್ಣನ್ನು ಕುಕ್ಕುವುವು (ಗಾಳಿಗು. ೧). [←ಇಂ. Notice]

**ನೋಟು** (ನಾ). ೧. ಟಿಪ್ಪಣಿ ; ಗುರುತು ; ಮುಖ್ಯಾಂಶಗಳ ಪಟ್ಟಿ : ಅವರು ಭಾಷಣಕ್ಕಾಗಿ ಮಾಡಿಕೊಂಡ ನೋಟು ಸಿಕ್ಕಿದೆ (ರೂಢಿ). ೨. ಹಣದ ರೂಪದಲ್ಲಿ ಚಲಾವಣೆಯಲ್ಲಿರುವ ಕಾಗದ; ಕಾಗದದ ಹಣ : ನೋಟವನೆಸೆದನು ನೋಟು ತೋರಿಸಿದನು ನುಡಿದನು ಚತುರ ಚಾಟುವನು ಆದರು ಆ ಸೀರೆಗಾರನಿಗೊಲಿಯದೆ ಈಕೆ ನಿಂತಳು ಶೀಲಗೆಡದೆ (ಚಂದ್ರವೀ. ೨೪-೯೫) ; ನೋಟುಗಳ ಕಟ್ಟುಗಳನ್ನು ಒಂದು ಕಡೆ ಗುಂಪುಗೂಡಿಸಿ ಇಟ್ಟಿದ್ದರು (ರತ್ನಗೋ. ೯೭) ; ನೋಟನ್ನು ಚಲಾವಣೆಗೆ ತರುವ ಅಧಿಕಾರ ಎಲ್ಲ ಬ್ಯಾಂಕುಗಳಿಗೂ ಇರುವುದಿಲ್ಲ (ಹಣಪ್ರ. ೩೦). ೩. ಕರಾರುಪತ್ರ; ಲಿಖಿತ ಒಪ್ಪಂದ : "ಹಣದ ಇಮ್ಮಡಿಯ ನೋಟು ಬರೆದುಕೊಡಬೇಕು ನಮಗೆ" ಎಂದು ಒಬ್ಬ ಸಾವುಕಾರನ ಆಶೆ ಹೊರಹೊಮ್ಮಿತು . . . ನೋಟುಗಳನ್ನು ಬರೆದು ಪ್ರಭುವಿನ ಒಪ್ಪಿತ ಹಾಕಿದನು (ಜಿಟ್ಟಹೂ. ೬೧).

**ನೋಟು ಹಾಕಿಕೊಳ್ಳು** = (ಸಂಕ್ಷೇಪವಾಗಿ) ಟಿಪ್ಪಣಿ ಮಾಡಿಕೊಳ್ಳು ; ಗುರುತುಮಾಡಿಕೊಳ್ಳು : ಆತ ಉಪಾಧ್ಯಾಯರು ಹೇಳಿದ್ದನ್ನೆಲ್ಲವನ್ನು ನೋಟು ಹಾಕಿಕೊಂಡಿದ್ದ (ರೂಢಿ). **ನೋಟ್ಸು** = ೧. ಟಿಪ್ಪಣಿ : ಉಪಾಧ್ಯಾಯರು ಪಠ್ಯವಿಷಯಗಳ ಬಗ್ಗೆ ನೋಟ್ಸು ಬರೆಸುತ್ತಾರೆ (ರೂಢಿ). ೨. ಟಿಪ್ಪಣಿ ಪುಸ್ತಕ : ನಿನ್ನ ನೋಟ್ಸನ್ನು ಕೊಟ್ಟರೆ ಸ್ವಲ್ಪ ಬರೆದುಕೊಂಡು ಕೊಡುತ್ತೇನೆ (ರೂಢಿ). [←ಇಂ. Note]

**ನೋಟುಪುಸ್ತಕ** (ನಾ). ಟಿಪ್ಪಣಿ ಮೊದಲಾದುವನ್ನು ಬರೆದುಕೊಳ್ಳುವುದಕ್ಕಾಗಿ ಹಾಳೆಗಳನ್ನು ಕೂಡಿಸಿ ಕಟ್ಟಿದ ಪುಸ್ತಕ : ಅವರ ನೋಟುಪುಸ್ತಕಗಳನ್ನು ಪರಿಶೀಲಿಸುತ್ತಿರಬೇಕು (ಶಿಕ್ಷದ. ೨೮೭) ; ನನಗೆ ಶಾಲೆಯಲ್ಲಿ ಬರೆದುಕೊಳ್ಳುವುದಕ್ಕೆ ನೋಟುಪುಸ್ತಕ ಬೇಕಾಗಿದೆ (ರೂಢಿ). [ನೋಟು+ಪುಸ್ತಕ]

**ನೋಟುಬುಕ್ಕು** (ನಾ). = ನೋಟುಪುಸ್ತಕ : ಅವನು ನೋಟುಬುಕ್ಕಿನ ತುಂಬ ಚಿತ್ರಗಳನ್ನು ಬಿಡಿಸಿದ್ದಾನೆ (ರೂಢಿ). [ನೋಟು+ಬುಕ್ಕು$_2$]

**ನೋಡಿಸು** (ಕ್ರಿ). ೧. ಕಾಣುವಂತೆ ಮಾಡು ; ನೋಡುವಂತೆ ಮಾಡು: "ನೋಡಿಸು-ಲೋಚನಕ್ರಿಯಾಯಾಂ" (ಶಮಧಾ); ದುರ್ಯೋಧನಂ . . . ಕಾಡೊಳ್ ಬೇಡರಂತೆ ತೊಟಿಲ್ವ ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡುವುದುಮೆನ್ನನವರಿಂ ನೋಡಿಸುವುದುಮಿದಾಯೆರಡೆ ಸಂಸಾರಫಲಮೆಂದು . . . ನಂದನವನದೊಳ್ ಪಾಂಡವರ್ಗೆ ಸವಿಾಪಮಾಗೆ ಬೀಡಂ ಬಿಟ್ಟು (ಪಂಪಭಾ. ೬-೩೨ ಪ) ; ನಂದನವನಲಕ್ಷ್ಮಿಕಣ್ಗೆಸೆದು ತನ್ನನೆ ನೋಡಿಸಿದಳ್ ತದಾರ್ಯರಿಂ (ಶಾಂತಿಪು. ೬-೧೦) ; ನಾನು ದೀಪಾರತಿಯ ನೋಡುವುದಕ್ಕೆ ಮುನ್ನವೇ ಜಂಗಮಕ್ಕೆ ಆರತಿಯ ನೋಡಿಸುವೆ (ಮಹಾದೇ. ಬ. ೮೯-೨೧೫). **೨.** ಹುಡುಕಿಸು ; ಶೋಧನೆ ಮಾಡಿಸು : ಆಯುಧಂಗಳಂ ಪೂಟ್ದುರ್ದರಪ್ಪುದಱಿಂ ಕೂರ್ಪರನಟ್ಟಿ ಅವರೋದುವ ಕ್ಷೇತ್ರದೆ ಬಳಸಿಯುಂ ನೋಡಿಸುವುದೆಂದು ಪೇೞ್ದೊಡೆ (ವಡ್ಡಾರಾ. ೧೬೬-೨೨). **೩.** ಪರೀಕ್ಷಿಸಿ ನೋಡಲು ಹೇಳು ; ಪರಾಮರ್ಶಿಸಿ ನೋಡಲು ಹೇಳು : ಬೆಸಗೊಳ್ವಳ್ ಋಷಿಸಂಘಮಂ ನಯದೆ ಸಿದ್ಧಾದೇಶಮಾದಂತೆ ಮನ್ನಿಸುವಳ್ ತಾನೋಲವಿಂ ಸಮಸ್ತಶಕುನಜ್ಞಾನೀಕಮಂ ಕೂಡೆ ನೋಡಿಸುವಳ್ (ಕಾದಂಪೂ. ೩೬೮); ಗಣಿತಜ್ಞರಂ ಕರೆಸಿ ನೋಡಿಸಿದನಾಗಳನುಗುಣಮಾದ ರಾಶಿಕೂಟವನಮಲಲಗ್ನಮಂ (ಜೈಮಿಭಾ. ೩೦-೫೩) ; ಹುಡುಗಿಯ ಜಾತಕ ನೋಡಿಸಿದರು (ರೂಢಿ).

[ನೋಡು + –ಇಸು₃]

**ನೋಡು** (ಕ್ರಿ). ನೋರ್ಪ, ನೋಳ್ಪ, ನೋಟ್ಪಿ (ಭವಿಕೃ). **೧.** ಈಕ್ಷಿಸು; ಕಾಣು; ದೃಷ್ಟಿಸು : "ನೋಡು—ಪ್ರೇಕ್ಷಣೇ" (ಶಮಧಾ); ಕೊಳದೊಳಗೇನಂ ನೋಟ್ಪಿಗ ವಿಳಾಸಿನೀ ನಿನ್ನವೋಲದೇನತಿಶಯಮೋ (ಕವಿರಾ. ೧-೮೮) ; ಅನಿಬರುಂ . . . ಒಂದು ಕೆಲದಿಂದೊಂದು ಕೆಲಕ್ಕೆ ಮಗುಟದೆ ಕುಳ್ಳಿರದೆ ನಿಂದಿರದೆ ನುಡಿಯದೆ ಕೆಲಂಗಳಂ ನೋಡದಿಂತು ಪ್ರಾಯೋಪಗಮನಂಗೆಯ್ದು ಪದಿನಯ್ದು ದಿವಸಂ ಮೆಯ್ಯಂ ತೊಱೆದಿರ್ದೊರ್ (ವಡ್ಡಾರಾ. ೧೦೧-೧೩) ; ನೋರ್ಪ್ಪರ ಕಣ್ (ಎಇ. XIII, ೩೩೧-೨೮ ; 929) ; ಪಡೆ ನೋಡಲ್ ಬಂದವರಂ ಗುಡಿವೊಱಿಸಿದರೆಂಬುದಾಯ್ತು ನಿನ್ನೆನ್ನೆಡೆಯೊಳ್ (ಪಂಪಭಾ. ೩-೧೫) ; ನೆಱೆದ ನಿಜಸೇನಾಧಿಪರ ಸಂವರಣೆಗಳ ನೋಡಿದನು ನೀಡಿದನರಿಬಿರುದಮಂಡಳಿಕರಿಗೆ ಕಾಳೆಗದ ವೀಳೆಯವ (ಕುಮಾವ್ಯಾ. ೪-೧೫) ; ಮರಗಳ ಎಲೆ ಟೊಂಗೆ ಮೊದಲಾದವುಗಳು ಅಲ್ಲಾಡುವುದನ್ನು ನಾವು ದಿನಾಲು ನೋಡುತ್ತೇವೆ (ಮುಂಬಯಿ. ೪-೫೮). **೨.** ಪರೀಕ್ಷಿಸು ; ಪರಾಮರ್ಶಿಸು : ನಕುಳ ಸಹದೇವರಿರ್ವರುಂ ಬಂದಾಂತೊಡಿವರನೇಗೆಯ್ವುದೆಂದು ಕರುಣಿಸಿ ಶಲ್ಯನ ಮನಮಂ ನೋಡಲೆಂದು ಬೆಸಗೊಂಡೊಡೆ (ಪಂಪಭಾ. ೧೨-೧೧೬ ಪ) ; ಒಳಪೊಕ್ಕು ನೋಡೆ ಭಾರತದೊಳಗಣ ಕಥೆಯೆಲ್ಲಮಿಾ ಗದಾಯುದ್ಧದೊಳಂತೊಳಕೊಂಡತ್ತೆನೆ ಸಿಂಹಾವಳೋಕನಕ್ರಮದಿನಱಿಪಿದಂ ಕವಿ ರನ್ನಂ (ಗದಾಯು. ೧-೪೫) ; ಜೀವಂ ಕರ್ತೃ ಭೋಕ್ತೃವೆಂಬೀ ಸೂಕ್ತಂ ಜಿನವಚನದೊಳಲ್ಲದೆ ಮತ್ತಿನ ಕುಮತದೊಳುಂಟೆ ನೋಟ್ಪಡೆಲ್ಲಂದದೊಳಂ (ಸಮಪ. ೩-೨೦) ; ಆ ದಿವಿಜ ಕ್ಷಿತಿಜಕ್ಕೆ ನೋರ್ಪ್ಪಡಾ ವನಧಿಯ ಗುಣ್ಪು ಮೇರುವಿನ ಪೆಂಪು . . . ಧರಾತಳದೊಳಾರ್ದೊರೆ ಹೆಗ್ಗಡೆ ಕಾಳಿಮಯ್ಯನೊಳ್ (ಎಕ. V, ಹಾಸನ. ೫೩-೪೨ ; 1170) ; ಶಂಕರಂಗಿಂತೀಗ ಮಸ್ತಕವಂ ಕಡಿದು ಕೊಟ್ಟೀಗ . . . ಬಳಿಕ ಶಿರವಂ ಪಡೆದಪೆಂ ಭೂತಳದ ಜನವಱಿಯಲ್ಕೆ ಹೇಳಿದೆನೆಲವೊ ನೋಡಲು ಶಕ್ತಿಯುಳ್ಳಡೆ ನೋಡಿ ಭೋ ಮುಂದೆ (ಬಸವು. ೫೨-೩೬) ; ಅರಿದನಿದ ನಾವ್ ನೋಡಬೇಕೆಂದರಸನುತ್ತಮವಾಜಿ ಹೂಡಲಿ ವರವರೂಥಕ್ಕೆನಲು ತಂದನು ಸೂತನುರುಹಯವ (ತೊರರಾ. ೩-೨-೧೯) ; ಕತ್ತಲೆಯ ಪಾಳಿಯುಮೆತ್ತಲೋಡಿದುದೊ ನೋಡಿದಪಂ (ಜೈಮಿಭಾ. ೨-೬೫). **೩.** ಆಲೋಚಿಸು ; ವಿಚಾರ ಮಾಡು : ಶ್ರುತದೊಳ್ ಭಾವಿಸಿ ನೋೞ್ಪೊಡೆ ಸತತಂ ಕವಿವೃಷಭರಾ ಪ್ರಯೋಗಂಗಳೊಳಂ ಕೃತಪರಿಚಯಬಲನಪ್ಪನನತಿಶಯಧವಳನ ಸಭಾಸದರ್ ಮನ್ನಿಸುವರ್ (ಕವಿರಾ. ೧-೫) ; ಪರಮೇಷ್ಠಿಸ್ವಾಮಿಗಳೀ ಭರತಾವನಿಯೊಳಗೆ ನೋೞ್ಪೊಡಿವರೇದಿಂತೀ ಧರೆ ಬಣ್ಣಿಸೆ ನೆಗೞ್ದರ್ಕವಿಪರಮೇಷ್ಠಿಸ್ವಾಮಿಗಳ್ ಸಮಸ್ತಾವನಿಯೊಳ್ (ಸುಕುಮಾ. ೧-೧೮) ; ಕೆಲವಂ ಸುಜ್ಞಾನದಿಂ ನೋಡುತಂ ಕೆಲವಂ ಸಜ್ಜನಸಂಗದಿಂದಲಱಿಯಲ್ ಸರ್ವಜ್ಞನಪ್ಪಂ ನರಂ (ಸೋಮೇಶ. ೧) ; ಕುಲವ ನೋಡಿದಡಿಲ್ಲ ತನ್ನಯ ಬಲುಹ ನೋಡಿದಡಿಲ್ಲ ಕದನದೊಳುಳಿವ ನೋಡಿದರಿಲ್ಲಲಾ ಪತಿಯೆಂಬ ಪಾತಕಿಯ (ಕುಮಾವ್ಯಾ. ೫-೮೧); ಶ್ರುತವಮಂ ನೋಳ್ಪ ತದರ್ಥಮಂ ತಿಳಿವ ತನ್ಮರ್ಯಾದೆಯೊಳ್ಪೋಪ ಸುವ್ರತಮಂ ಪಾಲಿಪ . . . ಜೀವಹಿತಮಂ ಪೇಳ್ವಾತನೇ ಮದ್ಗುರು (ರತ್ನಾಶ. ೧೦೬). **೪.** ಭೇಟಿ ಮಾಡು ; ಸಂಧಿಸು : ನೋಡುವೆನಾ ಮಹೀಪತಿಯನರ್ಥಿಗಳಾರ್ಥಿತ ಕಲ್ಪವೃಕ್ಷನಂ ಬೇಡುವೆನರ್ಥಸಂಚಯಮನೆಂಬುದಿದುತ್ತರಮಾರ್ಗವಾಚಕಂ (ಕವಿರಾ. ೨-೧೦೨) ; ಇವರ ಕಂಡೆನಗೀ ಸುಖಂ ಪುಟ್ಟಿಲೇಕಿವರು ಶಿವನ ಸಮ್ಮುಖರಾಗದಿರರು ನೋಡುವೆನೆಂದು ಕವಿಕುಲಲಲಾಮಂ ಹರಿಶ್ಚಂದ್ರನಾ ಮುನೀಶ್ವರನೆಡೆಗೆ ಬರುತಿರ್ದನು (ಹಚಕಾ. ೫-೫೯). **೫.** ಎದುರಿಸಲು ಸಮರ್ಥವಾಗಿರು ; ಪ್ರತಿಭಟಿಸಲು ಸಿದ್ಧವಾಗಿರು; ವಿಚಾರಿಸಿಕೊಳ್ಳು : ಬರ್ಕೆ ನಿನ್ನ ಪಿರಿಯಣ್ಣನೆ ಪಣ್ಣನೆ ನೋಟ್ಪಮಾತನೊಡ್ಡಱಿಯದ ಗಂಡವಾತಂ (ಪಂಪಭಾ. ೩-೧೬) ; ಕಲುಷ ಜೈನರ ನಿಚಯದಗ್ಗದ ಬಲುಹನೀಗಳೆ ನೋಡುವೆನು (ಬಸವು. ೫೦-೨೫) ; ಸಾರಿರೈ ನಮ್ಮೊಡನೆ ಕೈ ಮನವಾರೆ ಕಾದುವ ಬಳಿಕ ಮೊದಲೊಳುದಾರ ಭೀಮಾರ್ಜುನರ ನೋಡುವೆನೆನುತ ಕೈಕೊಂಡ (ಕುಮಾವ್ಯಾ. ೧-೫೪). **೬.** ತಿಳಿ ; ಅರಿ : ಎನ್ನ ನಡೆಯೊಂದು ಪರಿ ಎನ್ನ ನುಡಿಯೊಂದು ಪರಿ ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯಾ (ಬಸವ. ೩೦) ; ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರನೆಱೆದಡೆ ಮೇಲೆ ಪಲ್ಲವಿಸಿತ್ತು ನೋಡಾ (ಬಸವ. ೪೨೦). **೭.** ಹುಡುಕು ; ಅರಸು : ಸಗರರಂದು ಮಹಾಧ್ವರಾಶ್ವವ ಜಗವೆರಡಱಲಿ ನೋಡಿ ಕಾಣದೆ (ತೊರರಾ. ೧-೯-೧೬). **೮.** ಆರೈಕೆ ಮಾಡು ; ಯೋಗಕ್ಷೇಮವನ್ನು ನೋಡಿಕೊಳ್ಳು : ಕಂದಿದೆನಯ್ಯಾ ಎನ್ನ ನೋಡುವರಿಲ್ಲದೆ (ಬಸವ. ೪೩೧) ; ಕೂಡಲೊಬ್ಬಳು ಸತಿಯು ನೋಡಲೊಬ್ಬನು ನೆಂಟ ಬೇಡಿದನು ಕೊಡುವ ನೃಪತಿಯು ಭಕ್ತಿಯ ಮಾಡಿದರಿಗುಂಟು (ಸರ್ವಜ್ಞ. ೨೯೩). **೯.** ಲಕ್ಷ್ಯಕ್ಕೆ ತೆಗೆದುಕೊಳ್ಳು ; ಗಮನಿಸು ; ಎಣಿಸು : ಕ್ರಮಮಂ ವಿಕ್ರಮದಿಂದೆ ತಾಳ್ದುವ ಮಗಂ ಗಾಂಗೇಯನಿರ್ದಂತೆ ನೋಡ ಮರುಳ್ ಶಂತನು ತನ್ನದೊಂದು ಸವಿಗಂ ಸೋಲಕ್ಕಮಿತ್ತಂ ನಿಜಕ್ರಮಮಂ ತನ್ನಯ ಬೇಟದಾಕೆಯ ಮಗಂಗೆ (ಪಂಪಭಾ. ೧-೭೧); ನೋಡಿರೆ ಪೇಟ್ವ ಮೂಱುವರೆ ಭಾಷೆಗಳಂ ಪೆಱರರ್ಥಮಂ ಪೆಱರ್ ಮಾಡಿದ ದೇಸೆಯಂ . . . ಕಡಂ ಮಾಡುವ ಕಳ್ವ ಕೊಳ್ವ ಖಳರಿರ್ಕೆಮ ಕಬ್ಬಿಗಗಳ್ಳರೆಂದು ಕೂಸಾಡಿಸ ಬಾರದಕ್ಕರದ ರಾಜ್ಯದೊಳೀ ಕವಿಚಕ್ರವರ್ತಿಯಾ (ಶಾಂತಿಪು. ೧೨-೭೭) ; ಪ್ರಜಾಕ್ಷೋಭಂಗಳಂ ನೋಡದೆಲ್ಲರು ವಿಶ್ವಾಸಿಗಳೆಂದು ನಂಬಿ ಬಹುದಂ ಪೋದಪ್ಪುದಂ ಕಾಣದಾತುರದಿಂದುಂಡತಿನಿದ್ರೆಗೆಯ್ದು ಮದನಂಗಾಳಾಗಿಹಂ ಲೋಕದೊಳ್ ದೊರೆಯೋ ಸೊಕ್ಕಿದ ಕೋಣನೈ (ಸೋಮೇಶ. ೫೫) ; ಹೀಹಾಳಿಗೆಡಿಸಿದೆನೆಂದು ಸಭೆಯಲಿ ಖೂಳನವಗುಣಶತವ ನೋಡದೆ ನಿಮ್ಮ ಮೆಱೆಯೆಂದ (ಕುಮಾವ್ಯಾ. ೧-೨೬) ; ಕೃತಿಯ ಪೇಳ್ವಾತ ಸಾಮಾನ್ಯನಹುದು ಕಾವ್ಯಪತಿ ಚಕ್ರಿ ಸಾಮಾನ್ಯನಲ್ಲ ಕೃತಿಗಾದಿನಾಥನ ಕೂರ್ತು ಕೇಳ್ವುದು ಕಾವ್ಯಕೃತನ ದೋಷವ ನೋಡಬೇಡ (ಭರಚ. ೧-೧೬). **೧೦.** ಅನುಭವದಿಂದ ತಿಳಿ,—ಕಂಡುಕೊಳ್ಳು : ಮದುವೆ ಮಾಡಿ ನೋಡು, ಮನೆ ಕಟ್ಟಿ ನೋಡು (ಗಾದೆ).

ನೋಡಿ = ಗುಂಟೆ ; ಅನುಸರಿಸಿ : ಪಡುವರ್ ಅಳರಿವದಿಯ್ಯೊ ಬ್ಬರ್ಳ್ಗಾಯ್ನೋಡಿ ನಡದುದು ಬೆಟ್ಟು ಪೊಟ್ರಾಗ ಮೂಡಾಯ್ ನೋಡಿ ನಡದು (ಎಕ. IV, ಹೆಗ್ಗಡ. ೪-೯ ; ಸು. 750). **ನೋಡಿಕೊಳ್, ನೋಡಿಕೊಳ್ಳು** = **೧.** ಕಾಣು ; ಈಕ್ಷಿಸು : ಬಾಲೆಯೊರ್ವಳು ತನ್ನ ಲಲಿತಗೇಹದ ಭದ್ರಶಾಲೆಯೊಳ್ ನಿಂದು ಸುಣ್ಗೋಲೆಯ ಮೇಲಿಹ ಸೆಜಗ ಪಿಡಿದು ನೋಡಿದಳು ರತಿಗೋಲೆಯ ನೋಡಿಕೊಂಬಂತೆ (ಮೋಹತ. ೧೪-೩೭). **೨.** ಪರೀಕ್ಷಿಸು ; ಪರಿಶೀಲಿಸು : ಇದು ರತ್ನಭಂಡಾರವಿದು ಹೇಮಭಂಡಾರ . . . ಇದು ಪದಾತಿವ್ರಾತವಿದ ನೋಡಿಕೊಳ್ಳೆ [ಪಾಠಾಂ. ಕೋಯೆ]ನುತ್ತೊಪ್ಪಿಸಿದನಾ ಮುನಿಗೆ ಭೂನಾಥಕಂದರ್ಪನು (ಹಚಕಾ. ೯-೩) ; ಮುನ್ನಂ ತಾಂ ಬರೆಸಿ ಕಳುಹಿದ ಪತ್ರಮುಂ ತರಿಸಿ ನೋಡಿಕೊಂಡದಜಿಶೋಳಿರ್ದ ಭಿನ್ನಿಸಿದ ಭಾವಾರ್ಥಮಂ ತಿಳಿದು . . . ಬಿಸುಸುಯ್ದು ಬೆಜಗಾದನು (ಜೈಮಿಭಾ. ೩೧-೩೫). **೩.** ಮಾಡು ; ಆಚರಿಸು : ಆತನಂ ಕರೆವುದಕ್ಕೇನುಪಾಯಂ ನಾವು ಸೋತೆವೆನೆ ಬಂದಪಂ ಬಂದು ಪುಟವೆದ್ದು ಹರುಷಾತುರದಿ ಕದದೆಜಿದಪಂ ತೆಜಿದ ಬಳಿಕದಕೆ ತಕ್ಕುದಂ ನೋಡಿಕೊಂಬಂ (ಸೋಮಚ. ೪-೬೦). **೪.** ಹುಡುಕು ; ಅರಸು : ಸ್ತನ ಜಘನವ ಪೊತ್ತ ಪದಯುಗಳಕ್ಕೆ ಲೋಚನತಪ್ತ ಜಲವ ಸಿಂಪಿಸುತ ಘನ ಪರಿತಾಪದೆ ರತಿದೇವಿ ಬಂದಳು ಮನದೆಜಿಯನ ನೋಡಿಕೊಳುತ (ಮೋಹತ. ೯-೩೭). **೫.** ಆರೈಕೆ, ಶುಶ್ರೂಷೆ, ಆದರೋಪಚಾರ ಮುಂತಾದುವುಗಳನ್ನು ಮಾಡು : ಮಡದಿಯನಾರೈವೆ ಮಕ್ಕಳಿಗುಣಿಸೀವೆ ಬಂದ ವರನು ನೋಡಿಕೊಳುವೆ (ಇಂಚಾಪ. ೫೯-೮೨). **೬.** ಪ್ರತೀಕಾರಕ್ಕೆ ಸಿದ್ಧವಾಗಿರು ; ಪ್ರತ್ಯುಪಾಯಕ್ಕೆ ಸಮರ್ಥವಾಗಿರು : ನನ್ನ ಹತ್ತಿರಕ್ಕೆ ಬಾ, ನಿನ್ನನ್ನು ನೋಡಿಕೊಳ್ಳುತ್ತೇನೆ (ರೂಢಿ). **೭.** ಮೇಲ್ವಿಚಾರಣೆ ನಡೆಸು ; ಉಸ್ತುವಾರಿ ಮಾಡು ; ಗಮನಿಸಿಕೊಳ್ಳು : ಅವನು ನಮ್ಮ ತೋಟ, ಗದ್ದೆಗಳನ್ನು ನೋಡಿಕೊಳ್ಳುತ್ತಾನೆ (ರೂಢಿ). **ನೋಡುತ್ತೆ ಗೆಲ್ವ** = ನೋಡುತ್ತಿರುವಂತೆಯೇ ಗೆಲ್ಲುವವನು; ಬಹಳ ಬೇಗನೆ ಗೆಲ್ಲುವವನು ; ಅರ್ಜುನನ ಒಂದು ಬಿರುದು : ಎಂತಪ್ಪ ಮಾರ್ಪಲಂಗಳುಮಂ ನೋಡುತ್ತೆ ಗೆಲ್ವುದಱಿಂ ನೋಡುತ್ತೆ ಗೆಲ್ವನುಂ . . . ಅರಿಕೇಸರಿಯುಮಾಗಿ . . . ಭೋಗಿಸಿದಂ ಗುಣಾರ್ಣವಂ (ಪಂಪಭಾ. ೧೪-೩೭ ಪ).

[ದೇ.॥ ತಮಿ. ಮಲ. ನೋಕ್ಕು ; ಕೊಡ. ಕೋತ. ನೋಟ್]

**ನೋಡುಗ** (ನಾ). ನೋಡುವವನು ; ವೀಕ್ಷಕ : ಶಿಸ್ತು ಅಚ್ಚುಕಟ್ಟುತನ ಆ ಪಾಠಶಾಲೆಯಲ್ಲಿ ಬಂದು ನೋಡುಗರಿಗೆ ಒಳ್ಳೇ ಆಶ್ಚರ್ಯವಾಗುವಂತಿತ್ತು (ಗಳಗ. ೨೯) ; ಮೈಯ ಬಣ್ಣ ತೀರ ಕಪ್ಪು. ಮುಖವು ದುಂಡಗಿದ್ದು ಅದರಲ್ಲಿ ಎರಡು ಹೊಳೆವ ಕಣ್ಣುಗಳು ನೋಡುಗರನ್ನು ಬೆರಗುಗೊಳಿಸುತ್ತವೆ (ರಕ್ತಧ್ವ. ೧). [ನೋಡು+-ಗ$_2$]

**ನೋಡುಗಂಡಿ** (ನಾ). ಈಕ್ಷಿಸಲು ಅನುಕೂಲವಾದ ರಂಧ್ರ,— ತೂತು : "ನೋಡುಗಂಡಿ ; ಇಣಿಕುಗಂಡಿ" (Eye-hole. ಇಂಕನ್ನಿ). [ನೋಡು + ಕಂಡಿ,]

**ನೋಡುಗಬೇರು** (ನಾ). ಒಂದು ಬಗೆಯ ಮೂಲಿಕೆ : ನೋಡುಗ ಬೇರನ್ನು ಮೇಕೆಹಾಲಿನಲ್ಲಿ ಅರೆದು ಕುಡಿಯಲು ಕಲ್ಲು ಬೀಳುವುದು (ಸಕವೆ ಪಠಿ ೪೯೬). [?+ಬೇರು(<ಬೇರ್)]

**ನೋಡುಗುದುರೆ** (ನಾ). (ಕೇವಲ) ಪ್ರದರ್ಶನಕ್ಕೆ ಅರ್ಹವಾದ ಕುದುರೆ : ನೋಡುಗುದುರೆಯಲ್ಲದದು ಸಂಗರಭೂಮಿಗೀಡಹ ಕುದುರೆಯಲ್ಲ ಗಡ ಕೇಡಹುದದಱಿಂದ ನಿನಗೆ ನೀನದಱ ಮಾತಾಡಬೇಡ (ಕುಂರಾಸಾಂ. ೯-೬೪). [ನೋಡು + ಕುದುರೆ]

**ನೋತು** 'ನೋನ್' ಪರಾ.

**ನೋದನ** (ನಾ). **೧.** ಉತ್ತೇಜನಗೊಳಿಸುವುದು ; ಪ್ರೇರಣೆ ; **೨.** ಮುಂದಕ್ಕೆ ತಳ್ಳುವುದು,—ನೂಕುವುದು. **೩.** ಕತ್ತರಿಸುವುದು ; ತುಂಡುಮಾಡುವುದು. **೪.** [ನ್ಯಾಯ] ಸಂಯೋಗದಲ್ಲಿ ಒಂದು ಬಗೆ ; ಶಬ್ದವಿರದ ಸಂಯೋಗ : ಸಂಯೋಗದಿಂದ ಉಂಟಾಗುವ ಸಂಯೋಗವು ಕೆಲವು ವೇಳೆ ಶಬ್ದವನ್ನು ಹುಟ್ಟಿಸುವುದು ; ಕೆಲವು ವೇಳೆ ಇಲ್ಲ. ಶಬ್ದವನ್ನು ಹುಟ್ಟಿಸಿದಾಗ ಇದು ಅಭಿಘಾತ ಎನಿಸುವುದು ; ಇತರ ವೇಳೆ ನೋದನ ಎನಿಸುವುದು (ಭಾತತ್ತ್ವ. ೩೦೦). [ಸಂ.]

**ನೋದುಃಖ** (ನಾ). ದುಃಖವಿಲ್ಲದುದು : ಆರ್ಯರಾರ್ಯಚರಿತರ್ ನೋಕರ್ಮ ನೋದುಃಖ ಭೀಷಣಮೆಂದುಂ ಸುರನರ್ವಿಶೇಷ ಸುಖ ಸರ್ವಸ್ವಂ ಕುರೂರ್ವಿತಳಂ (ಶಾಂತಿಪು. ೬-೧೨೨). [ಸಂ.]

**ನೋನ್,** ನೋನು (ಕ್ರಿ). ನೋಂತ (ಭೂತಕೃ), ನೋಂತು, ನೋತು (ಭೂತನ್ಯೂ), ನೋಂಪ (ಭವಿಕೃ). **೧.** ವ್ರತವನ್ನು ಕೈಕೊಳ್ಳು ; ವ್ರತವನ್ನು ಹಿಡಿ: "ನೋನ್—ವ್ರತಾಚರಣೇ" (ಶಮಧಾ); ಸಸಿಮತಿಶ್ರೀಗನ್ತಿಯರ್. . . ಕಟ್ವಪ್ಪಿನೊಳ್ ತೊಜದಾರಾಧನೆ ನೋನ್ತು ತೀರ್ತ್ಥಗಿರಿ ಮೇಲ್ಸ್ವರ್ಗ್ಗಾಲಯಕ್ಕೇಱಿದಾರ್ (ಎಕ. II, ೭೬-೪ ; ಸು. 700) ; ಶ್ರೀಸರ್ವ್ವನನ್ದಿಭಟಾರರ್ . . . ಪಲಕಾಲನ್ತಪಂಗೆಯ್ದು ಸನ್ಯಾಸನ ನೋನ್ತು ಮುಡಿಪಿದರ್ (ಕಇಅ. ೭೧-೩-೪ ;881); ದಂಡಕರಸಿಯರ್ . . . ನೋಂಪಿಯುಂ ನೋಂತು ವಿಹಾರಿಸುತ್ತಂ ಪೋಗಿ ನರ್ಮದೆಯ ತಡಿಯೊಳ್ ಮಾಮರದ ಕೆಳಗೆ ಸ್ವಾಧ್ಯಾಯಂ ಗೆಯ್ಯುತ್ತಿರ್ದರ್ (ವಡ್ಡಾರಾ. ೧೭೨-೧೩) ; ನೋನದೆ ಗುಣಾರ್ಣವನ ಪಡೆಯಲ್ಕೆ ತೀರ್ಗುಮೆ (ಪಂಪಭಾ. ೧-೧೩೬) ; ನೆರಪಲ್ವಾರದ ವಿತ್ತಂ ದೊರೆಕೊಂಡುದು . . . ಮೆಚ್ಚಿದಂದದಿಂ ಭೋಗಿಸುವೆಂ ಎಂದು ಮನದೊಳ್ ಪಾಲ್ಗುಡಿದು ನೋಂಪಿಯಂ ನೋಂಪ ಕ್ರಮಮುಂ ಪೇಱಿಮೆನೆ ವೈಶ್ಯವಂಶಲಲಾಮನಿಂತೆಂದಂ (ಧರ್ಮಾಮೃ. ೧-೧೩೨) ; ಕೋಮಲಲತಾಂಗಿ . . . ದೃಢದಿಂದೆ ಹೈಮವತಿಯಂ ಕುಱಿತು ಚಿರತಪವನೆಸಗುತ್ತ ಗೌರಿ ನೋಂಪಿಯ ನೋನಲು (ಪ್ರಾಭಲಾ. ೧೦-೫೫). **೨.** ಪುಣ್ಯಮಾಡು ; ಪುಣ್ಯವನ್ನು ಗಳಿಸು : ಎರೆದಿಂತಟ್ಟಲೆವೆಟ್ಟಿ ಕನ್ನೆ ಬಱಿಯಂ ಬಂದಳ್ ಮರುಳ್ದಂಬುಜೋದರನಿಂತಟ್ಟಿದನಿಂತು ನೋಂತರೊಳರೇ ಸೈಪಿಂಗೆ (ಪಂಪಭಾ. ೫-೨೪); ಜಿನನಾಥರುಮೆಂದುಂ ಚಕ್ರನಾಥರುಂ ಕುಂದರೆನೆ ತದುರ್ವರೆಯುವೊಲಾವ ನೆಲಂ ನೋಂತುದೊ ನಿರುಪಮಮೆನಿಪ ಪವಿತ್ರತೆಗಮನಿತು ನಕ್ಷತ್ರತೆಗಂ (ಚಂದ್ರಪು. ೧-೭೭); ಅನುಗುಣಕೆ ಪಡಿಯೆನಿಸಿ ತನ್ನಂ ತನಯನಾಗಲು ನೋಂತಳಬುಜಾನನೆಯ ಸುಕೃತವನೇನನೆಂಬೆನು (ಬಸವು. ೨-೫೭) ; ಎಳವರೆಯದೊಳೆಳೆಯರ್ಕಳನೆಳಸುತೆ ನಳಿದೋಳ್ಗಳಿಂದೆ ಬಿಗಿದಪ್ಪಿ ಮನಂಗೊಳೆ ತಳ್ತು ನೋಡಿ ಮುದ್ದಿಪ ವಿಳಾಸಮೊಂದಕ್ಕೆ ನೋಂತುದಿಲ್ಲಾಂ ಕೆಳದೀ (ರಾಜಶೇ. ೩-೪೬) ; ವಿಷ್ಣುದೂತರಾ ತುಂಬುರನಂ ಕೆಯ್ಪಿಡಿದು ಕರೆದುಯ್ಯೆ, ಪಿಮ್ಮೆಯ್ಯೋಳೇಂ ನೋಂತನೋ ! (ಅದ್ಭುತ. ೨೦-೧೨). **ನೋನು : ೧.** ಸರ್ವಾರ್ಥ್ವರಕೆ ನೋತವನದಾರು (ತುರಂಗ. ೩-೧). **೨.** ಜನನದಂತಸ್ಥವಱಿಯದವರೀ ವೃದ್ಧರಿಗೆ ಈತನೆಂತು ಮಗನಾದನೆಂದೆಲ್ಲರುಂ ನೆಗಲು ನೋಂತೆನೆ (ಸಿದ್ಧರಾ. ೨-೫೦) ; ಸುರನರೋರಗರೊಳಗೆ ನಿಮ್ಮೈನರಿಗೆ ಸರಿಯಿಲ್ಲಬಲೆಯೊಬ್ಬಳ ಹರಿಬದಲಿ ಹಂಗಾದಿರೆಂಬಪದೆಸೆಗೆ ನೋನುವರೆ (ಕುಪ್ಯಾಉ. ೬-೨೪) ; ಪೀತಾಂಬರತಲ್ಪದೊಳುರುಳ್ವೆಯನನೆತ್ತುವ ಭಾಗ್ಯಂ ಮುನ್ನಂ ನೋನದರ್ಗುಂಟೇ (ಜಯಕಾ. ೨-೩೬). **೩.** ಆರಾಧನೆ ಮಾಡು ; ಪೂಜಿಸು ; ಅರ್ಚಿಸು : ಗೌರಿಯ ನೋನುವ ಬನ್ನಿರೇ (ಬಸಪ. ೮೨) ; ಅತಿಮುಗುದೆಯಪ್ಪನ್ನ ಮಗಳ ಕಾಮಜ್ವರೋರ್ಜಿತ ತಾಪವಾಱಿದಡೆ ಕಾಮನಂ ನೋನುವೆಂ ರತಿಯನರ್ಚಿಸುವೆ (ಹಚಕಾ. ೪-೨೬) ; ಸೂನು ಬದುಕಿದಡಿಂದು ನಿನ್ನಂ ನೋನುವೆವು

ಗುಡ್ಡವ್ವೆ (ಬಸಪು. ೪೮-೧೯) ; ಲಲನೆಯ ಸ್ಮರತಾಪವಿಳಿದಿರೆ ಚಂದ್ರನ ಬಲಗೊಂಡು ರತಿಯು ನೋನುವೆನು (ಜೀವಂಸಾಂ. ೧೨-೬೮).

[ದೇ.॥ ತಮಿ. ಮಲ. ನೋಲ್ ; ತೆಲು. ನೋಚು]

**ನೋನಿಸು** (ಕ್ರಿ). ವ್ರತವನ್ನು ಕೈಗೊಳ್ಳುವಂತೆ ಮಾಡು ; ವ್ರತವನ್ನು ಹಿಡಿಸು : ಈಗಳ್ ನೀನಿರ್ದು ನೋನಿಸೆ ನೋಂತು ಮಹಾಬಲಂ ಲಲಿತಾಂಗಂ . . . ಸರ್ವಾರ್ಥಸಿದ್ಧಿಯೊಳ್ ಪುಟ್ಟಿ ಭರತದೊಳನ್ನಾದಿ ದೇವನಪ್ಪೊಂ (ಆದಿಪು. ೨-೪೪) ; ಮನುಷ್ಯಕ್ಷೇತ್ರದಲ್ಲಿ ಪ್ರವರ್ತಿಸೆಂದಾ ಕೆಯನಯ್ದುದಿವಸಪರಿಯಂತರಂ ನೋನಿಸಲದಂ [ಪಾಠಾಂ. ವಿಸೆ ಅದಂ] ಕಂಡು ಸಂತುಷ್ಟರಾಗಿ ದೇವರ್ಕಳ್ ನಿಜನಿವಾಸಕ್ಕೆ ಪೋದರ್ (ಪುಣ್ಯಾಸ್ರ. ೧-೧೦೫ ಪ) ; ಇಂದ್ರನೈರಾವತವ ಧರಣಿಗೆ ತಂದು ನಿಜಮಾತೆಯನು ನೋನಿಸಲೆಂದು ಫಲುಗುಣ ಕೀರ್ತಿವಡೆದನು ಮೂಱುಲೋಕದಲಿ (ಸಂಭಪ. ೨೦ ಸೂಚನೆ). [ನೋನ್+-ಇಸು$_3$]

**ನೋನು** 'ನೋನ್' ನೋ.

**ನೋಯಿಸು, ನೋವಿಸು, ನೋಹಿಸು** (ಕ್ರಿ). ೧. ನೋವನ್ನುಂಟು ಮಾಡು ; ಬಾಧೆಪಡಿಸು : ಓವದೆ ಕಾಯದ ಕೂರಕರ್ಮದಿಂ ಸೂನೆ ಸುರಿವನ್ನೆಗಂ ಪೞಿದು ನೋಯಿಸಿ ಕಾಡಿದೆವಿನ್ನದೊಂದುಮಂ ನೆನೆಯದೆ ನೀನುಮಾಮುಮೊಡನಿರ್ದಿರವಂ ನೆನೆ ಬಾಳಚೂತಮೇ (ಆದಿಪು.೧೧-೧೨೮); ಅಲರಂ ನೋಯಿಸದೊಯ್ಯನೊಯ್ಯನಳಿಗಳ್ ಬಂದುಣ್ಬುವು (ಪಂಪಭಾ. ೫-೮೧) ; ತನುವ ನೋಯಿಸಿ ಮನವ ಬಳಲಿಸಿ ನಿಮ್ಮ ಪಾದವಿಡಿದವ ರೊಳರೆ (ಬಸವ. ೪೦೬); ಆವ ಗಿಡುವಂ ನೋಯಿಸಿದಡಂ ಭಾವಿಸುವಡಿದು ಹಿಂಸೆಯೆನುತಂತೋವಿ ಹೂಗಿಡುಗಳ ಕೆಳಗೆ ಸುತ್ತುವರೆ ಸಾರಿಸುತ (ಬಸಪು. ೩೭-೧೦) ; ಮಾಯೆ ಎನ್ನ ಕಾಯವನ್ನು ಪಾಯದಿಂದ ನೋಯಿಸಿ ಬಾಯಿ ಮುಚ್ಚಿ ಕೊಲ್ಲುತಾಳೆ ಕಾಯೊ ಲಕ್ಷ್ಮಿಯರಸನೆ (ಪುರಂದ. ೧-೧೭೬-೧). ೨. ಗಾಯಗೊಳಿಸು ; ಘಾಸಿ ಮಾಡು : ತಾಯ ಮಾತನು ಮೀಱಿ ನಿನ್ನನು ನೋಯಿಸಿದೆನದೆ ಸಾಕು ಜೀವವ ಕಾಯಿದೆನು ಬಿಟ್ಟೆನು ವೃಕೋದರ ಹೋಗು ಹೋಗು (ಕುಮ್ಮಾದ್ರೋ. ೧೩-೬೪) ; ಕಾಕುತ್ಸ್ಥಂ ಕೆರಳ್ದು ಕುಶಲವರ ಮೇಲೆ ಎಚ್ಚೊಡಾ ಕೋಲ್ಗಳಂ ಬಾಲಕರ್ ಮಧ್ಯದೊಳ್ಕೊಚ್ಚಿ ರಾವಣರಿಪುವಿನಂಗಮಂ ನೋಯಿಸಿದರ್ (ಜೈಮಿಭಾ. ೨೧-೩೪). ೩. ದುಃಖಪಡುವಂತೆ ಮಾಡು ; ವ್ಯಥೆಗೊಳ್ಳುವಂತೆ ಮಾಡು : ಕಾಯಕ್ಲೇಶದಿನಡವಿಯ ಕಾಯಂ ಪಣ್ಣುಮನುದಿರ್ಪ ತಿಂದಗಲದೆ ನಿಂದೀ ಯಮಳರಾವ ತೆಱದಿಂ ನೋಯಿಸರಯ್ ನಿನ್ನ ನನ್ನಿಕಾಱನ ಮನಮಂ (ಪಂಪಭಾ. ೭-೪೮) ; ದೇವಿ ನಿನ್ನ ಯುವರಾಜಂ ನಿನ್ನ ಕುಸುಮಸುಕುಮಾರಮಪ್ಪ ಮನವ ನೇತಱಿಂ ನೋಯಿಸಿದಂ (ಕಾದಂಉ. ೩೦೩) ; ಅಂತಿದೊರ್ಡದನೆ ದೋಷಂಗೆಯ್ದು ರೋಷಗ್ರಹಾವೇಶನಾಗಿ ನಿಷ್ಕಾರಣಂ ಪರಿಭವಿಸಿ ನೋಯಿಸಿದೆ (ಪಂಚತಂ. ೭೭-೧೦) ; ಮೃಡನನೊಂದವಸರಕೆ ಬಗೆಯದ ಕಡುಹುಕಾಱರು ನಿನ್ನವರು ಕೆಡೆನುಡಿದು ನೋಯಿಸಲೇತಕೆ (ಕುಮ್ಮಾದ್ರೋ. ೧೬-೨೬) ; ನೋಯಿಸಿ ನುಡಿಸದೆ ನೋಡದುಚಿತಗಳ ಬೀಯವೆಸಗಿ ಬೇಸಱಿಸದೆ ಅಯವಱಿತು ತರಲಱಿಯದ ಪತಿಯೊಳಸೂಯೆಗೊಳದೆ ಸುಖಿಸುವುದು (ಹವಿಬ. ೩-೨೬). ೪. (ದೇಹವನ್ನು) ದಂಡಿಸು ; ಶಿಕ್ಷಿಸು : ತನ್ನ ತಪದಿಂ ನೋಯಿಸದುನ್ನತಿಯ ದಿವ್ಯಭೋಗವಮಂ ಬಯಸುವ ಗಾಂಪಂ ನೆಱೆ ಪೋಲ್ಕುಂ ಸಾಲಿಸದಿನ್ನಳಿಪಿಂ ಬಡ್ಡಿವೇಡಿ ಮಱುಗುವ ಮರುಳಂ (ಧರ್ಮಾಮೃ. ೬-೧೫೬). **ನೋವಿಸು :** ೩. ನೀವು ಮಾಡಿದ ಪಾಪ ನಿಮ್ಮನು ನೋವಿಸುವುದೈ . . . ಸರ್ವಜ್ಞ ರಾದೊಡೆ ನೋವಿಸದೆ ಕಾಯೆಂದು ವಾಣೀದೇವಿಯರು ಕಳುಹಿದರು ಕಮಲಜನಾಜ್ಞೆಗೊಂಡವರ (ಸಂಭಪ. ೩೩-೪). **ನೋಹಿಸು :** ೧. ಸಲೆ ಜಗತ್ರಯಂಗಳಂ ಮೋಹಿಸಿತು ನೋಹಿಸಿತು ಯತಿಗಳಂ ಮನಸಿಜನ ಬಾಣ ಸೌಭಾಗ್ಯವು ವಸಂತದೊಳಗೆ (ತುರಂಗ. ೮೧-೧೩).

[ನೋ+-ಇಸು$_3$]

**ನೋಯು** 'ನೋ' ನೋ.

**ನೋರೆ** (ನಾ). (?) : ಪಿಡಿನಡುವಿನ ಪೆರ್ಮೊಲೆವೆಣ್ಗಳು ಹೋ ಹಿಡಿ ನೋರೆಗಳೊ [ಪಾಠಾಂ. ನೊರೆಗಳಲೊ]ಗ್ಗಯ್ಯ ಪಿಡಿದರನೇಕ ಸತ್ಪರಿಕರಗಳ ತಂದು ಬಡಿಸಿದರತಿವೇಗದಲಿ (ಮೋಹತ. ೧೪-೧೦). [ ? ]

**ನೋರ್ಪು, ನೊಪ್ಪು** (ನಾ). ಸ್ಪರ್ಧೆ ; ಪೈಪೋಟಿ (?) : ಪುಸಿ ನಸು ವಂಚನೆ ನೋರ್ಪನುವಸಿದಗಲಿತು ತಕ್ಕುದಕ್ಕು ಪಗೆ ಕೆಯ್ಪುಗೆ ಕೆಯ್ಯುಸುರಿ ನುಸುಳೆಂಬ ಕೇಣದ ಕುಸುರಿಯುನಱಿದಱಿದು ಮೆಱೆದು ನೆಱೆ ದುಱಿದರೆ ಬರ್ (ಪಂಪಭಾ. ೧೦-೮೧); ಕಿಱಿಪುವ ಗೇಣ ಕೇಣವಿಪರಿಂ ನವಯೌವನ ಯೋಗ್ಯಮಾಯ್ತು ಕಣ್ಡೆಱೆದುದು ರೂಪುಗೊಂಡುದೆನೆ ಚಾರಿ ಪುಗಿಲ್ ನೆಲೆ ನೋರ್ಪು ದಂಡೆ ಸೂಟ್ . . . ಎಂಬಿವಂ ಮೆಱೆವೊವಜರ್ಕಳಿಂ ಕಲಿಸುತಿರ್ಪರೊ ಚಟ್ಟರನಟ್ಟುವಟ್ಟರಂ (ಪುಷ್ಪಪು. ೨-೬೧). **ನೊಪ್ಪು :** ಬೊಬ್ಬಿಱುವ ಖೇಚರರ ಕಳಕಳಿಸುವ ಖೇಚರಿಯರ ತುಮುಳರವದೊಳ್ ತೊಡರ್ದು ಪರಿವಂತೆ ಮನದೊಳ್ಮಚ್ಚರಿಸಿ ಪಾಱುವಂತೆ ನುಸುಳಂ ನೊಪ್ಪು ಮನಪ್ಪುಕೆಯ್ದು (ಅರ್ಧನೇ. ೩-೧೬ ಪ). [ ? ]

**ನೋವಿ** (ನಾ). = ನೋಂಪಿ : ಆವದಾವದರ ಹರಿಫಲವನು ತೆಗೆದುಕೊಂಡು ನೀವಾನು ಅವರವರ ನೋವಿಯು ನೂತಂತೆ ಜೀವಗಳಿಗೆ ಭಿನ್ನಾದಿ ದೇವ ವಿಜಯವಿಠ್ಠಲನ್ನ ಭಾವದಲ್ಲಿ ತಿಳಿದಿದು ಭಾಗವತರ ಕೇಳು (ವಿಸಾಸು. ೪೦-೭). [<ನೋಂಪಿ]

**ನೋವಿಸು** 'ನೋಯಿಸು' ನೋ.

**ನೋವು** (ನಾ). ೧. ಬೇನೆ ; ಶೂಲೆ ; ಬಾಧೆ : "ಕ್ಲಮಥು ಗ್ಲಾನಿಯೆಂದೆನಲು ನೋವೆನಿಕ್ಕುಂ" (ಪುಂಗರಾ. ೧೧೩-೧) ; ನಡೆ ನಾರಾಚದ ನೋವಿನ ನಡುಕಂ ಪಿರಿದಾಯ್ತು (ಪಂಪಭಾ.೧೨-೭೧); ಕೂರಂಬೊಂದು ಬಂದು ನಡೆ ನೋವಿಂ ಬಿದ್ದಂ ಸಾವ ಪೊತ್ತನಾವಂ ಬಲ್ಲಂ (ಧರ್ಮಾಮೃ. ೧-೨೦೯) ; ಶಿವಭಕ್ತರ ನೋವೆ ಅದು ಲಿಂಗದ ನೋವು (ಬಸವ. ೪೦೬) ; ಆನಿರೆ ಮಹಾದೇವ ನಿನಗೆ ನೋವಪ್ಪುದೇ (ಕಣ್ಣರ. ದೇ. ೧೪೭-೧೮) ; ಅಹಹ ಮುರಹರ ಪಾರ್ಥನಿಸುವ ಬಾಣಕೆ ನಿನ್ನ ಬಹಳಸುಕೃತವನಿತ್ತೆಲೇಸಾದುದಿದನಱಿಯಬಹುದೆ ನೋವಿಲ್ಲಲಾ ನಿನಗೆ (ಜೈಮಿಭಾ. ೧೩-೩೮). ೨. ದುಃಖ ; ವ್ಯಥೆ ; ಅಳಲು : "ತರ್ಜ-ವ್ಯಥನೇ, ನೋವಿನೊಳ್" (ಕಾಶಕ್ಕ. ೧೩) ; ಕೆಳೆಯುಂ ಗುಱಿಯುಂ ಗೊಟ್ಟಿಯುಮಳವಿಗೆ ಪಿರಿದಾಗೆ ತನಗೆ ದುರ್ಯೋಧನನೊಳ್ ನುಳಿಸುಂ ನೋವುಂ ಕಲುಷಮುಮಳುಂಬಮೆನೆ ತನಗರಾತಿಕಾಳಾನಳನೊಳ್ (ಪಂಪಭಾ. ೨-೫೮) ; ಯಶೋಭದ್ರೆ ಮಕ್ಕಳಿಲ್ಲದೆ ನೋವಿಂ ಪಱಿದು ಬಿಸುಟ್ಟೆಳಲತೆವೋಲ್ ಕಱಂಗಿ ಕಡುಗಂದಿ ಕುಂದಿ ತೆಱಮಱದಿರ್ದಳ್ (ಸುಕುಮಾ. ೯-೯೭) ; ನೋವಂ ಮಾಣದಿರಾರ್ಗಮೊಳ್ಪನೊಳಕೊಳ್ (ಜೀವಸಂ. ೧೦-೧೫) ; ಇಳೆಯೊಳಿಂತಹ ಕರುಣವುಳ್ಳವರೊಳರೆ ಚರಜೀವಿಗಳಿಗೆಲ್ಲಂ ಬಳಿಕ ಸಾವುಂ ನೋವು ಸಂಯೆಂದುಲಿವುತಿರ್ದಪನು (ಬಸಪು. ೨೭-೧೫) ; ನಿಮ್ಮಿಷ್ಟಸಿದ್ಧಿಯ ಬೆಳಸು ಫಲವಾಯ್ತೇಕೆ ನೋವಿನ್ನು (ಕುಮ್ಮಾದ್ರೋ. ೭-೧೪) ; ನೋವು ಮಾಯ್ತುದು ; ಸಂದೆಯಮಣಮಿಲ್ಲಂ (ರಾಮಾಶ್ವ. ೨-೧೬) ; ನೋವಿನಿಂದ ತುಂಬಿದ ಹುಡುಗರ ಈ ಗಾಂಭೀರ್ಯವನ್ನು ನೋಡಿ ದೊಡ್ಡವರಿಗೆ ಬಹಳ ದುಃಖವಾಗುತ್ತಿತ್ತು (ಕಳಹು. ೯೦).

[ನೋ+-ವು$_2$./ತಮಿ. ನೋವು, ನೊವ್ವು ; ಮಲ. ತುಳು. ನೋವು ; ತೆಲು. ನೊವ್ವಿ, ನೊವ್ವು, ನೋವಿ, ನೋವು ; ಕುಇ. ನೋವ; ಕುವಿ. ನೋಹಿ ; ಮಲ್ತೊ. ನುಂಜೆ; ಕೋತ. ನೊವ್ ; ತೊದ. ನು ]

**ನೋವುಗಂಟು** (ನಾ). ಬಾಧೆಯಿಂದಾಗುವ ಗಂಟು ; ನೋವಿನಿಂದಾಗುವ ಗಂಟು : ಲೇಹ್ಯವನ್ನು ನೋವು ಆದ ಠಾವಿಗೆ ಉಜ್ಜುವುದು. ಶೂಲೆ, ನೋವುಗಂಟು, ಮುಡುಬು ಇವು ಗುಣ (ವಿವೈವಿ.೧೫೧). [ನೋವು+ಗಂಟು]

**ನೋವುಣ್ಣು** (ಕ್ರಿ). ನೋವನ್ನು ಅನುಭವಿಸು : ಹೆರರು ನೋವುಂಡರು ಬಂದೆವು ನಾವೆಲ್ಲ ಮತ್ತೆ ಹೋಹೆವು ನೊಂದು ನಾವೆ (ಇಂಚಾಪ. ೧೩೧-೪೫). [ನೋವು+ಉಣ್ಣು(<ಉಣ್)]

**ನೋಸಂಸಾರ** (ನಾ). ಸಂಸಾರವಿಲ್ಲದುದು : ಚತುರ್ಗತಿಭ್ರಮಣಮುಂ ಸಂಸಾರಾವಸಾನಪ್ರಾಪ್ತಿಯುಂ ಇಲ್ಲಪ್ಪುದಱಿಂ ಸಯೋಗಕೇವಲಿಜಿನಾವಸ್ಥಾನಂ ನೋಸಂಸಾರಂ (ತತ್ತ್ವಪ್ರ. ೩೨೭). [ಸಂ.]

**ನೋಹಿ** 'ನೋಂಪಿ' ನೋ.

**ನೋಹಿಸು** 'ನೋಯಿಸು' ನೋ.

**ನೋೞ್** (ಕ್ರಿ). ನೋೞ್ಕು₂ (ಭೂತನ್ಯೂ). ೧. ಮುಂದೆ ನುಗ್ಗು ; ಮುಂದುವರಿ : 'ನೋೞಿಸು' ಪರಾ. ೨. ಮುಂದಾಳಾಗು ; ಮುಂದಾಳುತನವನ್ನು ವಹಿಸು ; ಅಗ್ರಗಾಮಿಯಾಗು : "ನೋೞ್ —ಅಗ್ರಗಮನೇ (ಮುಂದರಿ)" (ಶಮಧಾ) ; ನೋೞ್ದನೆನೆ ಮುಂದೆ ಪೋದಂ (ಸಂಜೀವ. ೨೫) ; ಜನ್ನಗುಡುರೆ . . . ನೆಲ್ಲಿಯ ಕಂಕೆಲ್ಲಿಯ ನೇಱಲ ನೆಟಲಿಂ ಕಟ್ಟಲಿಸಿದ ಪಟುವೊಳೊಂದು ತಪ್ಪಲಂ ನುರ್ಗಿ ನೋೞ್ದು ಪೊದಱಿ ಪಾಯ್ದು . . . ಮಱಿಯಱೆಯೊಳ್ ತಾಂಟಿದತ್ತು (ರಾಮಾಶ್ವ. ೧೩೫-೨೩). [ ? ]

**ನೋೞಿಯ** (ನಾ). (ಕರಾ) ನೆಲದಡಿಯಲ್ಲೇ ಗಿಡಗಳ ಬುಡವನ್ನು ಕತ್ತರಿಸುವ ಒಂದು ಬಗೆಯ ಹುಳು. [ ? ]

**ನೋೞಿಸು** (ಕ್ರಿ). ಮುಂದೆ ನುಗ್ಗಿಸು ; ವೇಗವಾಗಿ ಮುಂದುವರಿಯುವಂತೆ ಮಾಡು : ಕಾರ ಕರ್ಮುಗಿಲೊಡ್ಡೆನಲ್ಕೆಡ್ಡ ಮೆಸೆವ ಪೇರಾನೆಗಳ ಘಟೆಯುಂ ನೋೞಿ[ಪಾಠಾಂ.ನೋೞ್ಕಿ]ಸುತುಂ (ರಾಮಾಶ್ವ. ೯೦-೨೨). [ನೋೞ್ +-ಇಸು₁]

**ನೋೞ್ಕು**₁ (ಕ್ರಿ). ೧. = ನೋೞ್ ೧ : ಕೆಳರೆ ವಿರಹಿವೃಂದಂ ಪುಷ್ಪಿತಾಶೋಕದಿಂದಂ ತಳರೆ ಕುಸುಮಜಾಳಂ ಬಾಳಚೂತಪ್ರವಾಳಂ ಪೊಳೆಯೆ ಪುಱುಲ ತಣ್ಪಂ ನೋೞ್ದು ತಟ್ಟೈಸಿ ಬಿಣ್ಪಂ ಬಳೆಯೆ ಮದನದಾಹಂ ಬೀಸುಗುಂ ಗಂಧವಾಹಂ (ಕಾವ್ಯಾವ. ೫೫೮) ; ನೋೞ್ದದನೆಂದಿದಿರ್ಚಿ ನಡೆದಂ (ಶಮುದ.ಪಂ.೧). ೨. ಬಳಿಸಾರು ; ಸಮೀಪಿಸು : ನೋೞ್ದು ಕೊಂಡು ಬೆನ್ನೊಳ್ಸಿಲ್ತಂ ಗಾಂಡೀವಿ (ಶಮುದ. ೨೫೧ ಪ್ರಯೋ). [<ನೋೞ್]

**ನೋೞ್ಕು**₂ 'ನೋೞ್' ಪರಾ.

**ನೋೞ್ಪು** (ಕ್ರಿ). ಮುನ್ನುಗ್ಗು ; ಎದುರಿಸಿ ನಡೆ ; ಪ್ರತಿಭಟಿಸಿ ನಡೆ : "ನೋೞ್ಪಿದಂ= ಇದಿರ್ಚಿ ನಡೆದಂ" (ಶಮುದ. ಪಂ. ೨). [ನೋೞ್ +-ಪು₁]

**ನೌ** (ನಾ). ೧. ಹಡಗು ; ದೋಣಿ : "ನೌ ತರಣಿ ಯಾನಪಾತ್ರಂ ಪೋತಂ ಪ್ರವಹಣಮೆನಿಪ್ಪುದಱಿಗೆ ವಹಿತ್ರಂ" (ನಮ್ರತಕೋ.೨೩-೧೦) ; ಔಕಾರಕ್ಕೆ — ನೌವನೇಱಿದಂ ; ಗ್ಲೌವಂ ನೋಡಿದಂ (ಶಮುದ. ೫೫ ಪ್ರಯೋ) ; ತರಳತರಾಳನಿಸ್ತುಳತರಂಗತುರಂಗಗನಗೋತ್ಕರೇಭವಿಸ್ತರಬಹುವಾರಿಜಂತುಭಟನೌರಥವೃಂದಸಮನ್ವಿತಾಬ್ಧಿ ಭೂವರನಱಿಲೋರು ಘೋಷನವಭೇರಿಯ ರಾವದೆ ಬಂದು ನಿಂದಿರಲ್ (ಹಾಲಾಸ್ಯ. ೧-೧೪-೩೩). ೨. ಒಂದು ನಕ್ಷತ್ರಪುಂಜ : 'ನೌಭವ', 'ನೌಯೋಗ' ಪರಾ. [ಸಂ.]

**ನೌಕರ**, ನವುಕರ, ನೋಕರ (ನಾ). ವೇತನವನ್ನು ಪಡೆದು ಸೇವಾವೃತ್ತಿಯಲ್ಲಿರುವವನು ; ಚಾಕರ ; ಕರ್ಮಚಾರಿ : ಗ್ರಾಮಾಧಿಕಾರಿಗಳು ಮತ್ತು ಗ್ರಾಮನೌಕರರು ೮ ವಿಧಗಳಾಗಿ ವಿಂಗಡಿಸಲ್ಪಟ್ಟವರು (ಗ್ರಾಮಾಕ. ೧) ; ಹಾಗಾದರೆ ಆಫೀಸಿನಲ್ಲಿ ಕೆಲಸ ಮಾಡುವ ನೌಕರರ ಗತಿ ? (ಮಗಮಾಂ. ೬೧). **ನವುಕರ :** ಗ್ರಾಮಮುನಸಿಫನ ಹುಕುಂ ಮೇರೆಗೆ ನಡೆಯುವುದು ಸಹ ವಾಡಿಕೆಯಾಗಿ ಕಾಗದಪತ್ರಗಳನ್ನು ತೆಗೆದುಕೊಂಡು ಹೋಗುವ ಗ್ರಾಮನವುಕರನ ಕರ್ತವ್ಯವಾಗಿರತಕ್ಕದ್ದು (ಗ್ರಾಮಾಕ. ೧೯). **ನೋಕರ :** ನಿಮ್ಮ ಮುತ್ತಜ್ಜನು ಸರಕಾರೀ ನೋಕರನಿದ್ದನೇನು ? (ಉದವ್ಯೆ. ೫).

[←ಪಾರ. ಹಿಂ. ನೌಕರ್ ; ಮರಾ. ನೌಕರ್, ನೋಕರ್]

**ನೌಕರವರ್ಗ** (ನಾ). ಸೇವಕವರ್ಗ ; ಸಿಬ್ಬಂದಿ : "ನೌಕರವರ್ಗ, ಸಿಬ್ಬಂದಿ" (Staff. ಪತ್ರಿನಿ. ೭೭). [ನೌಕರ+ ವರ್ಗ]

**ನೌಕರಶಾಹಿ**, ನೌಕರಷಾಹಿ (ನಾ). ಸರ್ಕಾರೀ ಹುದ್ದೇದಾರರಲ್ಲಿ ಅಧಿಕಾರವು ಕೇಂದ್ರೀಕೃತವಾಗಿರುವ ಆಡಳಿತ ; ಅಧಿಕಾರಿಗಳ ಆಡಳಿತ : 'ನೌಕರಶಾಹೀಸರಕಾರ' ಪರಾ. **ನೌಕರಷಾಹಿ :** ಮುಸಲ್ಮಾನರ ಅಕುಂಠಿತಸ್ವಾಮ್ಯ ಸ್ವಚ್ಛಂದಪ್ರಭುತ್ವ ಮತ್ತು ನೌಕರಷಾಹಿಯ . . . ಪರಿಣಾಮವಾಗಿ, ಜೀವನದಲ್ಲಿ ಸಂಕಟಗಳೂ ದಾರುಣವಾದ ವೇದನೆಯೂ ತಲೆದೋರಿದವು (ಭಾರದ. ೩೭೩).

[←ಪಾರ.ಹಿಂ. ನೌಕರಶಾಹೀ ; ಮರಾ. ನೌಕರಶಾಹೀ, ನೋಕರಶಾಹೀ]

**ನೌಕರಶಾಹೀಸರಕಾರ** (ನಾ). ಸರ್ಕಾರೀ ಹುದ್ದೇದಾರರಲ್ಲಿ ಆಡಳಿತದ ಅಧಿಕಾರವು ಕೇಂದ್ರೀಕೃತವಾಗಿರುವ ಸರಕಾರ ; ಅಧಿಕಾರಿಗಳು ಆಡಳಿತ ನಡೆಸುವ ಸರಕಾರ : ಆ ಅವಧಿಯಲ್ಲಿ . . . ನೌಕರಶಾಹೀಸರಕಾರವು ಹೆಚ್ಚಿನ ಅಡ್ಡಿ ತಡೆಗಳನ್ನು ತಂದೊಡ್ಡಲಿಲ್ಲ (ರಾಜನ. ೪೭). [ನೌಕರಶಾಹಿ + ಸರಕಾರ(<ಸರ್ಕಾರ)]

**ನೌಕರಷಾಹಿ** 'ನೌಕರಶಾಹಿ' ನೋ.

**ನೌಕರಿ**, ನವಕರಿ, ನವುಕರಿ, ನೋಕರಿ (ನಾ). ಉಪಜೀವನಕ್ಕಾಗಿ ಹಿಡಿದ ಸೇವಾವೃತ್ತಿ,—ಉದ್ಯೋಗ : ಶ್ರೀಮನ್ಮಹಾರಾಜರವರು . . . ಆಯಾ ನೌಕರಿಗಳಿಗೆ ಯೋಗ್ಯರನ್ನು ನೇಮಿಸುತ್ತ ಬಂದರು (ಮಹಾಪಂ. II, ೩೮) ; ಅವನಿಗೆ ನೌಕರಿಯ ಮೇಲೆ ಆಸ್ಥೆ ಇರಲಿಲ್ಲ (ರಂಗರೋ. ೬೦) ; ಆರಂಬ ಬುಡ ಕಷ್ಟ, ವ್ಯಾಪಾರ ತುದಿ ಕಷ್ಟ, ನೌಕರಿ ಯಾವಾಗಲೂ ಕಷ್ಟ (ಗಾದೆ). **ನವಕರಿ :** ಕಾಲೇಜದ ಮೆಟ್ಟಿಲನ್ನು ಇಳಿಯುವದೊಂದೇ ತಡ ನವಕರಿಯು ಸಿಕ್ಕಿತು (ವಾಸನಾ. ೯) ; ಇಂಥ ಕಾಲದಲ್ಲಿ ಬಾಬಣ್ಣ ನವಕರಿ ಕಳೆದುಕೊಂಡು ಮನೆಗೆ ಮರಳಿದ್ದ (ಅಶೋಕ. ೧೬೭). **ನವುಕರಿ :** ನನ್ನ ಭಾವ-ಮೈದುನರಿಗೆ . . . ಒಂದು ನವುಕರಿ ದೊರೆಯುವಂತೆ ಮಾಡು (ಹನ್ನೊಂದ. ೧೩೫) ; ಸೋದರಮಾವ ಕೊಡಿಸಿದ ನವುಕರಿ, ರಾಜಾಮಿಲ್ಲಿನಲ್ಲಿ ಫೋರ್‌ಮನ್ ಕೆಲಸ (ಬೆಂಗಬ. ೧೬). **ನೋಕರಿ :** ನೋಕರಿಗಾಗಿ ಕೋರಾಣ್ಯ ಮಾಡಿದರೂ ಜೋಳಿಗೆಯಲ್ಲೇನೂ ಬೀಳಲಿಲ್ಲ (ಮಾವಿತೋ. ೮) ; ನಿನಗೇನು ನೋಕರಿ ಬ್ಯಾಡಾಗ್ಯದೇನು ? (ಸೀನಮು. ೨೦೪). [←ಪಾರ. ಹಿಂ. ನೌಕರೀ ; ಮರಾ. ನವಕರೀ]

**ನೌಕಾಂಗಣ** (ನಾ). ಹಡಗನ್ನು ನಿರ್ಮಿಸುವ ಹಾಗೂ ದುರಸ್ತು ಮಾಡುವ ಸ್ಥಳ : "ಹಡಗುಕಟ್ಟೆ, ನೌಕಾಂಗಣ" (Ship yard. ಪತ್ರಿನಿ. ೭೫). [ಸಂ.]

**ನೌಕಾಗಾರ** (ನಾ). (ಸಮುದ್ರದಲ್ಲಿ) ಹಡಗುಗಳನ್ನು ಭರ್ತಿ ಮಾಡುವುದಕ್ಕೂ, ಅವುಗಳಿಂದ ಸಾಮಾನು ಇಳಿಸುವುದಕ್ಕೂ ಅಥವಾ ಅವನ್ನು ದುರಸ್ತುಮಾಡುವುದಕ್ಕೂ ಅನುಕೂಲಿಸುವಂತೆ ನೀರನ್ನು ಒಳಕ್ಕೆ ಬಿಡುವುದಕ್ಕಾಗಲಿ ಹೊರಕ್ಕೆ ಹೊರಡಿಸುವುದಕ್ಕಾಗಲಿ ತಕ್ಕ ಬಾಗಿಲುಗಳ ಏರ್ಪಾಟುಳ್ಳ ಹೊಂಡದಂಥ ಕಟ್ಟೆ ; ಹಡಗುಕಟ್ಟೆ : (Dock. ಇಂಕಶ). [ಸಂ.]

**ನೌಕಾದಂಡ** (ನಾ). ಹರಿಗೋಲು, ದೋಣಿ ಮುಂತಾದುವನ್ನು ನಡೆಸುವ ಗಳೆ; ಹುಟ್ಟು: "ನೌಕಾದಂಡಃ, ಕ್ಷೇಪಣೀ-೨ ಹಡಗು ನಡಿಸುವ ಗಡೇ ಹೆಸರುಗಳು. ಅಂದರೆ ಹಡಗು ಮುಂದಕ್ಕೆ ಹಾಯು ವಂತೆ ಕೆಳಗಡೇ ನೀರನ್ನು ಹಿಂದಕ್ಕೆ ತಳ್ಳುವ ಮರಮುಟ್ಟು ಸಾಮಾನು" (ಸಿದ್ಧಾಂತಿ. ೭೯). [ಸಂ.]

**ನೌಕಾಧಿಕರಣ** (ನಾ). ನೌಕಾಪಡೆಯ ನ್ಯಾಯಪೀಠ : ಈ ಸೂಚಿ ಯಲ್ಲಿನ ಯಾವುದೊಂದು ವಿಷಯವನ್ನು ಕುರಿತು . . . ನ್ಯಾಯಾಲಯ ಗಳ ಅಧಿಕಾರವ್ಯಾಪ್ತಿ ಮತ್ತು ಶಕ್ತಿಗಳು ; ನೌಕಾಧಿಕರಣದ ಅಧಿಕಾರ ವ್ಯಾಪ್ತಿ (ಭಾಧಾನ. ೨೮೭). [ಸಂ.]

**ನೌಕಾನಯನ** (ನಾ). ಹಡಗನ್ನು ನಡೆಸುವಿಕೆ. [ಸಂ.]

**ನೌಕಾಪಡೆ** (ನಾ). ಹಡಗಿನ ಮೂಲಕ ಸಮುದ್ರದ ಮೇಲೆ ಯುದ್ಧ ಮಾಡುವ ಸೇನೆ; ನೌಕಾದಳ : ಅವರ ಕಷ್ಟಕರವಾದ ಈ ದೀರ್ಘಪ್ರಯಾಣದಲ್ಲಿ ನೌಕಾಪಡೆಯಲ್ಲಿದ್ದ ಆರುನೂರುಜನರಲ್ಲಿ ಎಂಟು ಜನ ಬಿಟ್ಟು ಉಳಿದವರೆಲ್ಲರೂ . . . ಸತ್ತು ಹೋದರು (ಪ್ರಪಾಇ. II, ೯). [ಸಂ. ನೌಕಾ+ಪಡೆ$_2$. / ℙ ಈಚೆಗೆ ಕನ್ನಡದಲ್ಲಿ 'ಕೈಗಾರಿಕಾಇಲಾಖೆ', 'ನೌಕಾಪಡೆ', 'ಸಲಹಾ ಸಮಿತಿ'-ಇಂತಹ ಅನೇಕ ಪದಗಳು ನಿರ್ಮಾಣ ವಾಗುತ್ತಿವೆ. ಇವು ವ್ಯಾಕರಣವಿರೋಧವಾದರೂ ಪ್ರಯೋಗಪ್ರಸಿದ್ಧವಾಗಿವೆ]

**ನೌಕಾಪರಿವಹಣ** (ನಾ). ಹಡಗುಗಳ ಚಲನವಲನ; ನೌಕಾ ಸಂಚಾರ: ಯಂತ್ರದಿಂದ ನಡೆಯಿಸುವ ಜಲಯಾನಗಳ ವಿಷಯದಲ್ಲಿ ಸಂಸತ್ತಿನಿಂದ ರಾಷ್ಟ್ರೀಯ ಜಲಪಥಗಳೆಂದು ಘೋಷಿತವಾದ ಒಳನಾಡಿನ ಜಲಪಥಗಳ ಮೇಲೆ ನೌಕಾವಹನ ಮತ್ತು ನೌಕಾಪರಿವಹಣ ; ಅಂಥ ಜಲ ಪಥಗಳಲ್ಲಿ ಪಥನಿಯಮ (ಭಾಧಾನ. ೨೮೦). [ಸಂ.]

**ನೌಕಾಬಲ** (ನಾ). = ನೌಕಾಪಡೆ : "ನೌಕಾಬಲ, ಹಡಗುಪಡೆ" (Navy. ಪತ್ರಿಸಿ. ೫೭). [ಸಂ.]

**ನೌಕಾಯಾನ** (ನಾ). ಹಡಗಿನ ಪ್ರಯಾಣ; ಜಲಯಾನ : (Navigation. ಪತ್ರಿಸಿ. ೫೭). [ಸಂ.]

**ನೌಕಾರೋಹಿ** (ನಾ). ನಾವಿಕ : ನೌಕಾರೋಹಿಗಳ ಗದ್ದಲವು ಮತ್ತಷ್ಟು ಹೆಚ್ಚಾಯಿತು. ಯುವಕನು ಅವರನ್ನು ಸ್ವಲ್ಪ ಸಮಾಧಾನ ಗೊಳಿಸಿ, ನೌಕೆಯನ್ನು ನಡೆಯಿಸುತ್ತಿದ್ದವರನ್ನು ಕುರಿತು . . . ಹೇಳಿ ದನು (ಕಪಾಕುಂ. ೪). [ಸಂ. ನೌಕಾರೋಹಿನ್]

**ನೌಕಾವಹನ** (ನಾ). ಹಡಗುಗಳ ಸಂಚಾರ : ಒಳನಾಡಿನ ಜಲಪಥ ಗಳ ಮೇಲೆ ನೌಕಾವಹನ ಮತ್ತು ನೌಕಾಪರಿವಹಣ; ಅಂಥ ಜಲಪಥಗಳಲ್ಲಿ ಪಥನಿಯಮ (ಭಾಧಾನ. ೨೮೦). [ಸಂ.]

**ನೌಕಾಶ್ರಯ** (ನಾ). ಹಡಗುಕಟ್ಟೆ; ಬಂದರು : ಆಸ್ಟ್ರೇಲಿಯದ ಸಿಡ್ನಿ ನೌಕಾಶ್ರಯ (Harbour)ದಲ್ಲೂ ಈ ರೀತಿಯ ಭಾರಿ ಎರಡು ಸೇತುವೆ ಗಳಿವೆ (ಬಾಲಪ್ರ. I, ೨೮೮). [ಸಂ.]

**ನೌಕಾಸ್ಫೋಟ** (ನಾ). ಹಡಗಿಗೆ ಗುರಿಯಿಟ್ಟು ನೀರಿನೊಳಗಡೆ ಯಿಂದ ಪ್ರಯೋಗಿಸುವ, ಅದಕ್ಕೆ ತಗುಲಿದೊಡನೆ ಸಿಡಿಯುವ, ಸಮುದ್ರದ ತಳದಲ್ಲಿ ನೆಟ್ಟ, ಚುಟ್ಟದ ಆಕಾರದ ಸ್ವಯಂಚಾಲಿತ ಅಸ್ತ್ರ : "ಕಡಲ ತಳದಲ್ಲಿ ನೆಟ್ಟ ನೌಕಾಸ್ಫೋಟ ; ಹಡಗುಕೊರೆ" (Ground-Torpedo. ಇಂಕನಿ). [<ಸಂ. ನೌಕಾಸ್ಫೋಟ]

**ನೌಕೆ** (ನಾ). ೧. ಹಡಗು; ನಾವೆ; ದೋಣಿ: ಪ್ರೇಮ ತುಂಬಿದ ದಾಂಪತ್ಯ ಜೀವನವೇ ನೌಕೆಯಾಗುವುದು (ಕನ್ನಜಾ. ೧೧೯) ; ನಾನು ಮುಳುಗುವ ನೌಕೆ ನಾವಿಕ ಆಡಿಯ ಕಡಲಿದೊ ಭೀಕರ (ಮಾನಸ. ೪೧-೧). ೨. ಒಂದು ನಕ್ಷತ್ರಪುಂಜ : ಇದಕ್ಕೆ ಪಶ್ಚಿಮದಲ್ಲಿರುವ ಗಣವೇ 'ನೌಕಾ' (Argo) ಎಂಬ ಪುಂಜ (ಜ್ಯೋತಿರ್ವಿ. ೪೮). [ಸಂ. ನೌಕಾ]

**ನೌಕ್ಕಗೆಜಿ** (ನಾ). ಒಂದು ಸ್ಥಳದ ಹೆಸರು : ತತಃ ನೌಕ್ಕಗೆಜಿ ದಕ್ಷಿಣನ್ತ ಭಾಗತತಃ ತೇನನ್ನಾಕಗೆಜಿ ದಕ್ಷಿಣಾನ್ತ ಭಾಗತತಃ (ಮೈಆರ್. ೧೯೪೨, ೭೫-೧೧೬ ; 819). [ ? ]

**ನೌತಾರ್ಯ** (ನಾ). ನೌಕಾಯಾನಕ್ಕೆ ತಕ್ಕುದಾದುದು ; ಹಡಗು ಸಂಚಾರಕ್ಕೆ ಯೋಗ್ಯವಾದುದು : "ನೌತಾರ್ಯಂ ನಾವ್ಯಂ" (ವಸ್ತುಕೋ. ೧೧೦-೭೨). [ಸಂ.]

**ನೌದಂಡ** (ನಾ). = ನೌಕಾದಂಡ. [ಸಂ.]

**ನೌಪತ್ತು** 'ನೌಬತ್ತು' ನೋ.

**ನೌಫೂರಿ** 'ನಫಿರಿ' ನೋ.

**ನೌಬತ್** 'ನೌಬತ್ತು' ನೋ.

**ನೌಬತು** 'ನೌಬತ್ತು' ನೋ.

**ನೌಬತುಖಾನೆ** (ನಾ). ನೌಬತ್ತುಗಳನ್ನು ಬಾರಿಸುವ ಸ್ಥಳ : ಅಷ್ಟರಲ್ಲಿ ನೌಬತುಖಾನೆಯೊಳಗೆ ನೌಬತು ಬಾರಿಸಹತ್ತಿತು. ಕೊಂಬು, ತುತೂರಿಗಳು ಊದಹತ್ತಿದವು (ಛತ್ರಪ. ೧೩೭). 'ನವಪತ್ತುಖಾನೆ' ಪರಾ. [ನೌಬತು(<ನೌಬತ್ತು) + ಖಾನೆ]

**ನೌಬತ್ತು,** ನಪತ್ತು, ನವಪತ್, ನವಪತ್ತು, ನವಬತ್ತು, ನವು ಬತ್ತು, ನೌಪತ್ತು, ನೌಬತ್, ನೌಬತು (ನಾ). ಒಂದು ಬಗೆಯ ಚರ್ಮವಾದ್ಯ ; ಅರಮನೆ, ದೇವಾಲಯ ಮೊದಲಾ ದುವುಗಳ ಮುಂದೆ ನಿಗದಿಯಾದ ಸಮಯಕ್ಕೆ ಬಾರಿಸುವ ನಗಾರಿ : ಆ ನಳರಾಜನ ಮಂದಿ ಮಾರ್ಬಲ ನಗಾರಿ ನೌಬತ್ತು ವ್ಯಾಳ ತಾಳದಿಂದ ಬರುವ ವಿಸ್ತಾರಮಂ ಪೇಳ್ವೆನು (ಯನಳ. ೩೮) ; ನಗಾರಿ, ನೌಬತ್ತು, ಚೌಗಡಗಳು ಪ್ರತಿಧ್ವನಿಗೊಡಬೇಕು (ಕನ್ನಜಾ. ೯) ; ನಗಾರಿ ನೌಬತ್ತುಗಳನ್ನೂ, ಇವರು ಕಳುಹಿಕೊಟ್ಟದ್ದಕ್ಕಿಂತ ಇಮ್ಮಡಿಯಾಗಿ ನೀರಾಜಿ ಖಿಲ್ಲತ್ತು ನವರತ್ನಾಭರಣಗಳನ್ನೂ . . . ಕಳುಹಿಸಿ ಕೊಟ್ಟರು (ಮಹಾಪಂ. I, ೧೪೪). **ನಪತ್ತು :** ಆನೆ ಕುದುರೆ ಕೈವಾಡದ ಜನರು ದೇವಸ್ಥಾನದಲ್ಲಿ ೪ ವೇಳೆ ನಪತ್ತು ಮುಂತಾದ ಕೆಲಸಗಳಲ್ಲಿ ನೆಲೆಗೊಂಡಿರುವ ಜನಗಳ ಜೀವನ (ಚಾಮಸಂ. ೨೮೨). **ನವಪತ್ :** ರಾಜಬಿರುದುಗಳು ನವಪತ್, ಮೋರ್ಚಾಲೆ, ಸೂರ್ಯಪಾನ . . . ಆಪ್ತಾಗಿರಿ (ಗುರುದ. ೧೦). **ನವಪತ್ತು :** ಪಟಹ ಡಿಂಡಿಮ ಥಕ್ಕ ಕಹಳೆ ನವಪತ್ತುಗಳ್ . . . ಚಟುಲಮಾದೋಲಗಗಳುಂ ಕೂಡಿ ಸಕಲದಿಕ್ತಟಗಳೋಳ್ಮೊಳಗುತಿವೆ (ಅಚಾರ್ವಿ. ೨೪-೩೧) ; ನಾಗಾರಿ ನುಡಿದಾವು ನವಪತ್ತು ನುಡಿದಾವು ಬೇಗ ತಿರಗೀ ಬೇಗ (ಹುಟ್ಟಿಹ. ೨೪). **ನವಬತ್ತು :** ಎಡೆವಿಡದೆ ಪಗಲಿರುಳ್ ಮೂರುದಿನಂಬರಂ ನವಬತ್ತುಗಳ ನಿನಾದಮುಂ ಪೂರ್ಣಂ ಗೆಯ್ಸಿ (ಕೆಳನೃ. ೧೦-೭೧). **ನವುಬತ್ತು:** "ನವುಬತ್ತು—ನಗಾರಿಯಂಥ ವಾದ್ಯ" (ಜಾನಕೋ. ೯). **ನೌಪತ್ತು :** ಈ ಎರಡು ಕಡೆಯಲ್ಲಿಯೂ ಪೂಜೆ ಮತ್ತು ನಾಲ್ಕುವೇಳೆ ನೌಪತ್ತು ನಡೆವಂತೆ ಕಟ್ಟಳೆ ಮಾಡಿದರು (ಮಹಾಪಂ. II, ೧೪೬) ; ರಾಯಭಾರಿಯು . . . ಪದ್ಧತಿಯಂತೆ ನಗಾರಿ ನೌಪತ್ತುಗಳ ಸಮೇತ ಅರಮನೆಯನ್ನು ಪ್ರವೇಶಿಸಿದನು (ಪ್ರಪಾಇ. II, ೪೦೫) ; ನಗಾರಿ ನೌಪತ್ತುಗಳ 'ಬಾಜಾಬಜಂತ್ರಿ'ಯೊಂದಿಗೆ ದುರ್ಗಾ ಪೂಜೆ ಸಾಂಗವಾಗಿ ಶಾಸ್ತ್ರೋಕ್ತವಾಗಿ ನಡೆಯುತ್ತದೆ (ಬೆಳುಮ. ೧೧೧). **ನೌಬತ್ :** ಜಯಜಯವೆನ್ನುತ ಬಿರುದುಗ್ಗಡಿಸಲು ವಂದಿಗಳೊಲವಿಂದ ನೆಲ ನಡುಗಿಸಿದವು ನಗಾರಿ ನೌಬತ್ ಗುಡುಗಿನ ದನಿಯಿಂದ (ನಾಪದ. ೧೭೧). **ನೌಬತು :** 'ನೌಬತುಖಾನೆ' ಪರಾ.

[←ಪಾರ. ಹಿಂ. ಮರಾ. ನೌಬತ್]

**ನೌಬಲ** (ನಾ). = ನೌಕಾಪಡೆ : ನೌಬಲಾಧಿಪತಿ ; ನೌಬಲದ ಪ್ರಧಾನಾ ಧಿಕಾರಿ (Admiral. ಇಂಕನಿ). [ಸಂ.]

**ನೌಬಲಾಧಿಪತಿ** (ನಾ). ನೌಕಾದಳದ ಅಧಿಪತಿ; ಹಡಗಿನ ಸೈನ್ಯದ ಮುಖ್ಯಾಧಿಕಾರಿ: "(ರಾಜ್ಯದ) ನೌಬಲಾಧಿಪತಿ; ನೌಬಲದ ಪ್ರಧಾನಾಧಿಕಾರಿ; ನೌಗಣದ ಅಧಿಪತಿ" (Admiral. ಇಂಕಸಿ). [ನೌಬಲ+ಅಧಿಪತಿ]

**ನೌಭವ** (ನಾ). [ಜ್ಯೋತಿ] ನೌಗಣ ನಕ್ಷತ್ರದಲ್ಲಿ ಹುಟ್ಟಿದವನು: ವಿತತಯಶೋರ್ಥಿ ನೌ[ಪಾಠಾಂ. ನೋ]ಭವಂ (ಜಾತತಿ. ೧೩-೧೮). [ಸಂ.]

**ನೌವಿ೧** 'ನಾವಿ೧' ನೋ.

**ನೌಯೋಗ** (ನಾ). [ಜ್ಯೋತಿ] ಲಗ್ನದಿಂದ ಮೊದಲು ಮಾಡಿ ಏಳುರಾಶಿಗಳಲ್ಲೂ ಗ್ರಹವಿರುವ ಯೋಗ: ನೌಯೋಗದಲ್ಲಿ ಎಲ್ಲ ಗ್ರಹಗಳೂ ಸಾಲಾಗಿ ಅದೃಶ್ಯಚಕ್ರಾರ್ಧದಲ್ಲಿರುತ್ತವೆ (ಜಾತತಿ. ೧೩-೮ ಅಡಿಟ); ನೌಯೋಗದಲ್ಲಿ ಹುಟ್ಟಿದವನು ಕೀರ್ತಿವಂತನಾಗುತ್ತಾನೆ (ಜಾತತಿ. ೧೩-೧೮ ಅಡಿಟ). [ಸಂ.]

**ನೌರಸ** (?). (?) : ಹಾಲು ಬೇಕೇನೊ ನಿನಗೆ ಸೆಜಗ ಬಿಡೊ ಕರವ ಪಿಡಿ ವರೆನ್ನ ನೌರಸ ಮುತ್ತಿನ ಸರಗಳು ಹಿರಿದಾವು ಮುಟ್ಟದಿರೊ ರಂಗ (ಪುರಂದ. ೩-೬೪-೧). [?]

**ನೌರು** 'ನವಿರು೩' ನೋ.

**ನೌಲಾದಿ** (ನಾ). ಒಂದು ಬಗೆಯ ಸಸ್ಯ: (ವೈಶಿಗಿ. ೭೮-೧೬೦೦). [?]

**ನೌವಾಹ್ಯ** (ನಾ). = ನೌತಾರ್ಯ: ಯಾವ ನದಿ ಆಳವಾದ್ದೊ ಆ ನದಿಯೇ ನೌವಾಹ್ಯ (Navigable). ಅದರ ಗಭೀರತೆಯೇ ಅದನ್ನು ದಾಟಲು ಅನುಕೂಲವನ್ನೊದಗಿಸುತ್ತದೆ (ನಿಬಂಧ. I, ೩೮೭). [ಸಂ.]

**ನೌಸಾಧನ** (ನಾ). ನೌಕೆಗಳ ಬಲ: ನೌಸಾಧನೋದ್ಧತರನಂತಾ ಸೇನಾನಿ ತ್ರಿವಂಶರಂ ಕಿಟ್ಟು ಗತಾಯಾಸಂ ನಟ್ಟಂ ನೃಪಜಯಶಾಸನಮಂ ಗಂಗೆಯೆರಡುತಡಿಯೊಳಮೊಗದೊಳ್ (ಶಾಂತಿಪು. ೧೦-೧೬೦). [ಸಂ.]

**ನೌಸ್ತಂಭ** (ನಾ). ಹಗ್ಗವನ್ನು ಎಳೆದು ಕಟ್ಟುವ ಹಡಗಿನ ಮಧ್ಯ ಭಾಗದ ಕಂಬ; ಕೂವೆಕಂಬ: ನೌಸ್ತಂಭದ ಕಾಕನೊಲಂತಮ್ಮುಖ ದಿಂ ಪರವಶವಿಹ ಮನದೇಕಾಗ್ರತೆಯಿ ವಿಲಾಯಿಸಿಯು (ಕೈಕವ. ೫-೧೪-೪). [ಸಂ.]

**ನೌಳಿಕ** (ನಾ). [ಯೋಗ] ದೇಹವನ್ನು ಶುಚಿಗೊಳಿಸುವ ಕ್ರಿಯೆ ಗಳಲ್ಲಿ ಒಂದು: ಆಧಾರಾಕುಂಚನದಿಂದಾದಂ ಪೊಡೆಪೊಕ್ಕ ನೀರನೆ ಕುಲಕಿಯನುವಿಂ ಶ್ರೀದಂ ನೌಳಿಕದಿಂದಂ ಬಾಧೆವಡೆಯದಂತೊಡರಿಪನಾ ಬಸ್ತಿಕಮಂ (ಮೈಸೂಮ. ೫-೧೪೩). [?./ಮರಾ. ನೌಲಿ]

**ನ್ಯಂಕು** (ನಾ). ಎರಳೆ; ಜಿಂಕೆ; ಚಿಗರೆ: "ನ್ಯಂಕುಃ, ರಂಕುಃ— ಈ ೨ ಮರಿ" (ಹಲಾಯು. ೩೯-೭೭); "ಆ ರಂಕು ನ್ಯಂಕುವೆನೆ ಮರಿಗೆ [ಪಾಠಾಂ. ಮಕುರಮೆನಲ್ ಮರಿಗೆ, ರಂಕು ರುಂಕುವೆನೆ ಮರಿಗೆ, ನಂಕು ವೆನೆ ಮರಿಯು]ಪೆಸರಕ್ಕು" (ಮಂಗರಾ. ೪೮-೧೧). [ಸಂ.]

**ನ್ಯಂಚಿತ** (ನಾ). ೧. ಕೆಳಕ್ಕೆ ಎಸೆದುದು. ೨. ಬಗ್ಗಿದುದು; ಬಾಗಿದುದು. ೩. ನೆಗ್ಗಿದುದು; ತಗ್ಗಿಹೋದುದು: "ನ್ಯಂಚಿತಂ, ಅಧಃಕ್ಷಿಪ್ತಂ – ಈ ೨ ನೆಗ್ಗಿದುದು" (ಹಲಾಯು. ೧೨೭-೮೩). [ಸಂ.]

**ನ್ಯಕ್ಕರಿಸು** (ಕ್ರಿ). ತಿರಸ್ಕರಿಸು; ಉಪೇಕ್ಷಿಸು: ಮಗಧನಂ ಧಿಕ್ಕರಿಸಿ ಸಗರನಂ ನ್ಯಕ್ಕರಿಸಿ ಪಾಂಡ್ಯನಂ ಪರಿಹರಿಸಿ . . . ಭೂವಿನುತರೂಪನಂ ಭಾವಿಸುತ್ತೊಲ್ಪನಂ . . . ನೋಡುತ್ತೆ (ಜಗವಿ. ೧೭-೧೧೮ ರಗಳೆ). 'ನಿಃಕರಿಸು' ಪರಾ. [ಸಂ. ನ್ಯಕ್ಕರಣ+-ಇಸು೩]

**ನ್ಯಕ್ಷ** (ಗು). ೧. ಕೀಳಾದ; ಕೆಳಮಟ್ಟದ; ನಿಕೃಷ್ಟ. (ನಾ). ೨. ಪೂರ್ಣವಾದುದು; ಇಡಿಯಾದುದು; ಸಮಗ್ರವಾದುದು: "ನಿಶ್ಶೇಷಂ, ನ್ಯಕ್ಷಂ – ಈ ೨ ಉಟಿಯದುದು" (ಹಲಾಯು. ೧೨೭-೮೫); "ನಿಶ್ಶೇಷಂ ನ್ಯಕ್ಷಮೆನಲುಱಿಯದಿಹುದಕ್ಕೆ ನಾಮಂ" (ಮಂಗರಾ. ೧೩೪-೩೧). ೩. ಕೋಣ. ೪. ಪರಶುರಾಮ. ೫. ಒಂದು ಬಗೆಯ ಹುಲ್ಲು. [ಸಂ.]

**ನ್ಯಗ್ಭೂತ** (ಗು). ಕೀಳಾದ; ಕೆಳಮಟ್ಟದ: ನ್ಯಗ್ಭೂತಸುರಪುರಂ ಸುವಣೆಗ್ಹಾಸಿ ಸಮಸ್ತವಸ್ತು ಪರಿಪೂರ್ಣಂ ಸಮ್ಯಗ್ಭವನರುಚಿರಮುತ್ತರ ದಿಗ್ಭಾಗದೊಳುಂಟು ಮಧುರೆಯೆಂಬುದು ನಗರಂ (ಪಂಚತಂ. ೧೬೯-೨೩). [ಸಂ.]

**ನ್ಯಗ್ರೋಧ** (ನಾ). ೧. ಆಲದ ಮರ; ವಟವೃಕ್ಷ: "ನ್ಯಗ್ರೋಧಃ, ವಟಃ—ಈ ೨ ಆಲಂ" (ಹಲಾಯು. ೩೩-೪೩); ನ್ಯಗ್ರೋಧಶಮ್ಯಪಾ ವರ್ಗಾ ಖದಿರಾದಿ ಶುಷ್ಕಸವಿತ್ತುಗಳುಮಂ . . . ಕೊಂಡು ಧೇನುಗಳಂ ಮುಂಕೊಂಡು ಬರ್ಪ ಶಿಷ್ಯಸಮೂಹಂಗಳುಮಂ (ಪಂಚತಂ. ೧೧೬-೨೧); ಉಡುರಾಜಂ ಕಳೆಗುಂದಿ ಪೆರ್ಚದಿಹನೇ ನ್ಯಗ್ರೋಧಬೀಜಂ ಕೆಲಂ ಸಿಡಿದುಂ ಪೆರ್ಮರನಾಗದೇ (ಸೋಮೇಶ. ೩೫); ನ್ಯಗ್ರೋಧಬೀಜೋದರಗತಮೆನಿಪಾ ವೃಕ್ಷದಂತೊಂದಿ ನಿನ್ನೊಳ್ ಹರಿಯಾಕಲ್ಪಾಂತದಲ್ಲಿರ್ದೊಡನೆ ಪಸರಿಕುಂ ಸೃಷ್ಟಿಯೊಳ್ ಸ್ವಾಮಿ ನಿನ್ನಿಂ (ವಿಷ್ಣುಪು. ೧-೩-೧೨೪); ಮುಂದೆ ಗೋಚರಿಪುದೊಂದು ನ್ಯಗ್ರೋಧಭೂರುಹಂ (ಶ್ರೀರಾಮಾ. ೧೯೩-೬೬). ೨. ಮುತ್ತುಗದ ಮರ; ಪಲಾಶವೃಕ್ಷ. ೩. ಒಂದು ಮಾರು ಅಳತೆ. ೪. ಬನ್ನಿಮರ; ಶಮೀವೃಕ್ಷ. ೫. ವಿಷ್ಣು; ನಾರಾಯಣ. ೬. ದಾರಿ; ಹಾದಿ. ೭. ಚಂದ್ರ. ೮. ದಿಕ್ಕು. ೯. ಛಲ; ಹಟ. ೧೦. ಕಾಡು; ಅಡವಿ: "ಶಶಿ ಮಾರ್ಗಂ ದಿಶ್ ಪಲಾಶಂ ಛಲ ವಟ ವನಮಿಂತೈದೆ ನ್ಯಗ್ರೋಧಮಕ್ಕು" (ನಾನಾರ. ೪೩). [ಸಂ.]

**ನ್ಯಗ್ರೋಧಪರಿಮಂಡಲ** (ನಾ). ದೇಹದ ಸುತ್ತಳತೆಯು ಆರು ಅಡಿಯಷ್ಟಾಗುವ ಗಾತ್ರ: ಚತುರಸ್ರಮುಂ ನ್ಯಗ್ರೋಧಪರಿಮಂಡಲ ಮುಂ ಸ್ವಾತಿಯುಂ ವಾಮನಮುಂ ಕುಬ್ಜಮುಂ ಪುಂಡಮುಮೆಂದು ಸಂಸ್ಥಾನನಾಮಂ ಷಡ್ವಿಧಮಕ್ಕುಂ (ಅಜಿಪು. ೧೧-೩ ವ); ತಮ್ಮ ಬಾರು ಅಳತೆಯೂ ಎತ್ತರವೂ ಸರಿಹೋಗುವುದಕ್ಕೆ ನ್ಯಗ್ರೋಧಪರಿ ಮಂಡಲವೆನ್ನುವರು (ಹಸಾರ. ೧-೩ ವಿಶೇಷಾರ್ಥ). [ಸಂ.]

**ನ್ಯಗ್ರೋಧಪರಿಮಂಡಲೆ** (ನಾ). ಮನೋಹರಳಾದವಳು; ಚೆಲುವೆ; P ಕಠಿನಕುಚಗಳೂ ವಿಶಾಲನಿತಂಬಗಳೂ ತೆಳುವಾದ ನಡುವೂ ಕರುಕೆಯ ದೇಟಿನಂತೆ ವರ್ಣವೂ ಇರುವ ಸುಂದರಿ: ಈಕೆ [ನ್ಯಗ್ರೋಧ] ಪರಿಮಂಡಲೆಯುಮವಧೀರಿತ ಮಹೀಪಾಲಕುಮಾರ ಮಂಡಲೆಯುಮಪ್ಪುದಲ್ (ಶಾಂತಿಪು. ४-೮೮ ವ). [ಸಂ. ನ್ಯಗ್ರೋಧಪರಿಮಂಡಲಾ (ನ್ಯಗ್ರೋಧ+ಪರಿಮಂಡಲ+-)]

**ನ್ಯಗ್ರೋಧಿ** (ನಾ). ಒಂದು ಬಗೆಯ ಮರ; ಇಲಿಯಾಲ; "ಆಖು ಕರ್ಣೀ, ಮೂಷಿಕ ಕರ್ಣೀ" (ಪಂಡಿತ. ೨೭೫). [ಸಂ. ನ್ಯಗ್ರೋಧೀ]

**ನ್ಯರ್ಬುದ** (ನಾ). [ಗಣಿತ] ಒಂದು ಸಂಖ್ಯೆ; ಹತ್ತುಸಾವಿರ ಕೋಟಿ; ನಿರ್ಬುದ: ಏಕ್ಕಂ ದಾಹಂ ಶತಂ ಸಾವಿರ . . . ಅರ್ಬುದ ನ್ಯರ್ಬುದ ಖರ್ವ . . . ಮಹಾಪರಿಮಿತ ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೮-೨೩); ಏಕ್ಕಂ ದಹಂ ಶತಂ ಸಾವಿರ ದಹಸಾವಿರ ಲಕ್ಷ ದಹಂಲಕ್ಷ ಕೋಟಿ ದಹಂಕೋಟಿ ಶತಂಕೋಟಿ ಅರ್ಬುದ ನ್ಯ[ಪಾಠಾಂ. ನಿ]ರ್ಬುದ ಖರ್ವ . . . ಮಹಾಕ್ರತುವೆಂಬಿವೇ ಉಗ್ಗಡಣೆ ಗಳು (ವಿವೇಕ. ೬); ಅಂಕೆಗಳ ಶ್ರೇಣಿ ಹದಿನೆಂಟರವರೆಗೂ ಹೋಗುತ್ತದೆ. ಈ ಹದಿನೆಂಟು ಶ್ರೇಣಿಗಳು ಯಾವುವೆಂದರೆ ಏಕಂ, ದಶಂ . . . ಕೋಟಿ, ನ್ಯರ್ಬುದ (ಪ್ರಪಾಇ. I, ೩೫೭). [ಸಂ.]

**ನ್ಯಸನ** (ನಾ). ೧. ಇರಿಸುವಿಕೆ; ಇಡುವಿಕೆ; ಸ್ಥಾಪನೆ: ಪ್ರತಿ ವಸ್ತೂಪಮೆಸಾಮ್ಯಪ್ರತೀತಿಯಿಂದಂ ಸಮಾನವಸ್ತುನ್ಯಸನಂ ಪ್ರತಿಪಾದಿಸು

ವುದಭೇದಾತ್ಮತೆಯಿಂದುಪಮೆಯನದಲ್ತೆ ರೂಪಕಮಕ್ಕುಂ (ಕಾವ್ಯಾವ. ೬೮೫). ೨. ಎಸೆಯುವಿಕೆ; ಪ್ರಯೋಗಿಸುವಿಕೆ. ೩. ಒಪ್ಪಿಸುವಿಕೆ; ವಹಿಸುವಿಕೆ. ೪. ಬಿಟ್ಟುಕೊಡುವಿಕೆ; ತ್ಯಾಗ. [ಸಂ.]

**ನ್ಯಸ್ತ** (ಗು). ೧. ಇಡಲ್ಪಟ್ಟ; ಇಟ್ಟ: ತನ್ನಿವಾಸಿಗಳಪ್ಪ ಯಕ್ಷಕಿನ್ನರಾದಿಗಳ್ ಮಸ್ತಕದೊಳ್ ನ್ಯಸ್ತಹಸ್ತರ್ಕಳಾಗಿ . . . ಕುಮಾರನಂ ಪೂಜಿಸಿದರ್ (ವಡ್ಡಾರಾ. ೫೭-೨); ಸೂರ್ಯಮಿತ್ರದ್ವಿಜಂ . . . ಸುಧರ್ಮಮುನಿಮುಖ್ಯರಂ ಕಂಡು ಮೂಱುಸೂಱ್ ಬಲಗೊಂಡು ಭಕ್ತಿಭರವಿನಮಿತಮಸ್ತಕನ್ಯಸ್ತಹಸ್ತಪುಟನಾಗಿ (ಸುಕುಮಾ. ೩-೨೩ ವ); ಸತತಂ ದಾನಿ ಮದೇಭದಿಂ ಸಕಲಭೂಭೃನ್ನ್ಯಸ್ತಕನ್ಯಸ್ತಪಾದತಳಂ ಕೇಸರಿಯಿಂ . . . ಸತ್ಕಲಾಚತುರಂ ಚಂದ್ರನಿನಾದಪಂ (ಪಂಪರಾಮಾ. ೩-೯೧); ಚತುರರ ಚಾತುರಂಗಾನ್ವಿತಂ ಮಂಜುಳಖಡ್ಗನ್ಯಸ್ತಹಸ್ತಂ ತಳರ್ದನಹಿತಸೇನಾಬ್ಧಿ ನೀಕುಂಜರೇಂದ್ರಂ (ರಾಜಶೇ. ೬-೧೨); ಶತ್ರುಘ್ನ! ಇಂತು ಜಾಬಾಲಿಯೊಂದುಪದೇಶಮಂ ಗುರೂಪದೇಶಮೆಂದೇ ಬಗೆದು ಋತಂಭರಂ ದೈವನ್ಯಸ್ತನಿಜಭಕ್ತಿಭರಂ ಸುಲಕ್ಷಣಲಕ್ಷಿತಮಾದ ಆವನಾಗಳುಂ ಸೇವಿಸುತುಮಿರ್ದಂ (ರಾಮಾಶ್ವ. ೧೦೭-೨೬). (ನಾ). ೨. ಇರಿಸಿದುದು; ಇಟ್ಟುದು: "ಆಹಿತಂ, ನಿಹಿತಂ, ನ್ಯಸ್ತಂ, ಆರೋಪಿತಂ—ಈ ೪ ಏಱಿಸಲ್ಪಟ್ಟುದು" (ಹಲಾಯು. ೧೨೩-೬೨); ಚಿತ್ರಕಾಶಚಿತ್ಕಲಾಲಿಂಗವನು ಯೆನ್ನ ಆತ್ಮಸ್ಥಲದಲ್ಲಿ ಮೆಲ್ಲನೆ ತಂದು ನ್ಯಸ್ತವ ಮಾಡಿದನಯ್ಯಾ (ಪದಗೋ. ೬-೨೫೦); ಜನಚಿತ್ತಾಹ್ಲಾದಪಾದಂ ಸಕಲಧರಣಿಭೃನ್ನ್ಯಸ್ತಕನ್ಯಸ್ತಮಾರ್ಗಿರ್ಪಿಸಂ . . . ಒಳ್ಪಂ ಪೆತ್ತುದಾತ್ತಂ ಬೆಳಗುಗೆ ಜಗಮಂ ಗೋಪಮಾರ್ತಂಡದೇವಂ (ಜಗವಿ. ೧-೪). ೩. ರವಾನಿಸಲ್ಪಟ್ಟುದು; ಒಪ್ಪಿಸಲ್ಪಟ್ಟುದು; ತಲಪಿಸಲ್ಪಟ್ಟುದು. [ಸಂ.]

**ನ್ಯಸ್ತಭರ** (ನಾ). ಬೇರೆಯವರಿಗೆ ಜವಾಬ್ದಾರಿಯನ್ನು ವಹಿಸಿಕೊಟ್ಟವನು; ತನ್ನ ಹೊಣೆಗಾರಿಕೆಯನ್ನು ಕಳೆದುಕೊಂಡವನು: ಮನವ ನಿನ್ನಲಿಟ್ಟು ತನುವ ನಿನಗೆ ತೆತ್ತು ಧನಧಾನ್ಯಸಕಲವಸ್ತುಗಳ ನಿನಗೆ ಸಮರ್ಪಿಸಿ ನ್ಯಸ್ತಭರನು ಆಗಿಪ್ಪನುವ ಪಾಲಿಸು ರಂಗಧಾಮ (ಶತಸಾಂ. ೧೦-೫೭). [ಸಂ.]

**ನ್ಯಸ್ತಾವಶೇಷ** (ನಾ). ಹುದುಗಿದ ಪಳೆಯುಳಿಕೆ; ಅಡಗಿರುವ ಅವಶೇಷ: ಭೂಗರ್ಭದೊಳಗೆ ಅತ್ಯದ್ಭುತವಾದ ನ್ಯಸ್ತಾವಶೇಷಗಳಿರುತ್ತವೆಂತಲೂ ಅವುಗಳಿಂದ ಆಶ್ಚರ್ಯಕರವಾದ ಸಂಗತಿಗಳು ತಿಳಿಯುತ್ತವೆಂತಲೂ (ಮುಂಬಯಿ. ೬-೨೪೧). [ನ್ಯಸ್ತ + ಅವಶೇಷ]

**ನ್ಯಾದ** (ನಾ). ಆಹಾರ; ಊಟ: "ಜಗ್ಧಿಃ, ಭೋಜನಂ . . . ನ್ಯಾದಃ—೭ ಭೋಜನದ ಹೆಸರುಗಳು. ಊಟ, ಆರೋಗಣೆ" (ಸಿದ್ಧಾಂತಿ. ೨೯೧). [ಸಂ.]

**ನ್ಯಾನಿ** (ನಾ). ತಿಳಿದವನು; ಜ್ಞಾನಿ: ದಾನಿಗಳಿಂ ಮಾನಿಗಳಿಂ ನ್ಯಾನಿಗಳಿಂ (ಬೆಂಕಶಾ. ೧೯೪೪, ಬಂಕಾಪುರ, ೨೧-೧೪; 1069). [<ಸಂ. ಜ್ಞಾನಿನ್]

**ನ್ಯಾಪ್‌ಕಿನ್** (ನಾ). ಚಿಕ್ಕ ಆಕಾರದ ಟವೆಲು; ಸಣ್ಣ ಚೌಕ: ತಾಯಿಗೆ ಹಾಸಿಗೆ, ಮಡಿಬಟ್ಟೆಗಳು . . . ಮಗುವಿಗೆ ನ್ಯಾಪ್‌ಕಿನ್, ಹತ್ತಿ . . . ಇವುಗಳನ್ನು ಸಿದ್ಧಮಾಡಿಕೊಳ್ಳಬೇಕು (ಗೃಹವಿ. ೧೦೨). [←ಇಂ. Knapkin]

**ನ್ಯಾಪ್‌ಚಾಕ್, ನಾಕಚಾಪು, ನಾಕ್ಯಾಪ್** (ನಾ). (ಸಿಪಾಯಿಯ ಅಥವಾ ಪ್ರಯಾಣಿಕನ) ಆವಶ್ಯಕವಾದ ಸಾಮಾನುಗಳನ್ನು ಒಯ್ಯುವ, ರಟ್ಟುಬಟ್ಟೆಯ ಅಥವಾ ತೊಗಲಿನ, ಬೆನ್ನಿಗೆ ಕಟ್ಟಿಕೊಳ್ಳುವ ಚೀಲ; ಬೆನ್ನುಚೀಲ: "ನ್ಯಾಪ್‌ಚಾಕ್" (Knapsack) ಎಂಬ ಚಕ್ಕಳದ ಚೀಲಗಳಲ್ಲಿ ಸಾಮಾನನ್ನು ಇಟ್ಟುಕೊಂಡು ಸಿಪಾಯಿಗಳು ಹೊರಡುತ್ತಿದ್ದರೆಂದು ಹಳೇಗ್ರಂಥದಲ್ಲಿ ಬರೆದಿದೆ (ಪಾಳಗಾ. ೪೯). **ನಾಕಚಾಪು:** ಸಾಕಚಾಪು – ಚಿಲ್ಲರೆ ಸಾಮಾನುಗಳನ್ನು ಹಾಕಿ ಸಿಪಾಯಿಗಳು ಬೆನ್ನಿಗೆ ಕಟ್ಟಿಕೊಳ್ಳುವ ಚೀಲ. ನ್ಯಾಪ್‌ಸ್ಯಾಕ್ ಎಂಬ ಇಂಗ್ಲೀಷ್ ಶಬ್ದ ಕೆಟ್ಟು ಈ ಶಬ್ದ ಹುಟ್ಟಿರುವಂತೆ ಕಾಣುತ್ತೆ (ಚಿತ್ರಪಾ. ಅನುಬಂಧ ೨). **ನಾಕ್ಯಾಪ್:** ಈ ಭಟರು . . . ಮೂರುದಿನದ ರೊಟ್ಟಿಬುತ್ತಿಯನ್ನು "ನಾಕ್‌ಚಾಪ್" ಚೀಲದಲ್ಲಿ ಹಾಕಿ ಬೆನ್ನಿಗೆ ಕಟ್ಟಿಕೊಂಡು . . . ಹೊರಟರು (ಚಿತ್ರಪಾ. ೬೭). [←ಇಂ. Knapsack]

**ನ್ಯಾಬಳ್ಳಿ** (ನಾ). ಕಟುವಾಸನೆಯುಳ್ಳ ಒಂದು ಬಗೆಯ ಬಳ್ಳಿ; ಅಜಗಂಧಿಕೆ; ನಾರುಂಬೇಳೆ: "ಅಜಗಂಧಿಕೆ = ನ್ಯಾಬಳ್ಳಿ" (ಗಂಗಾಪು. ೫). [? + ಬಳ್ಳಿ]

**ನ್ಯಾಮಕ** (ನಾ). ಎಲ್ಲರನ್ನೂ ಹತೋಟಿಯಲ್ಲಿಟ್ಟುಕೊಳ್ಳುವವನು; ನಿಯಾಮಕ: ಹಲಬರರಿಯದಂತೆ ಉಳ್ಳ ನೃಪನ ತೆರದಿ ಬಲು ಬಲ್ಲಿದ ಗ್ರಹಕುಲದಲ್ಲಿ ಒಳಗೆ ನ್ಯಾಮಕನಾಗಿ (ಪ್ರೇರಕನಾಗಿ) . . . ವಿಜಯವಿಠ್ಠಲ ನೀನೆ ನೆಲೆಯಾಗಿ ಗ್ರಹದಿಂದ ಕೊಲಿಸಲು ನಾನಂಜೆ (ಮೋಕ್ಷದೀ. ೩೭-೩). [<ಸಂ. ನಿಯಾಮಕ]

**ನ್ಯಾಮತಿ** (ನಾ). ಒಂದು ಬಗೆಯ ಮರ: ಕುಂಕುಮದ ಮರ, ಕಪಿಲಾರಂಗು, ಹುಲೀಚಂಡು, ಚಂದ್ರಹಿಟ್ಟು, ಊರಬತ್ತಿ, ನ್ಯಾಮತಿ (ಮೈಜಿಗ. ೫೨-೧೦೩೯). [?]

**ನ್ಯಾಮದಡಿ** (ನಾ). ಬಟ್ಟೆಯ ಅಂಚುಗಳಲ್ಲಿ ಒಂದು ಪ್ರಕಾರ,—ಬಗೆ: ದಟ್ಟಿ ಪಟ್ಟಾಳ ಸೀರಿ ಎಚ್ಚದಡಿಯ ನ್ಯಾಮದಡಿಯ ಜರತಾರ ಸೀರಿ ಚಾಯಾ ಕುಟ್ಟು ಜಾಣ ನಿನ್ನ ಕರಿಯ ಬಂದೆ (ಲೋಕಗೀ. ೧೩೯). 'ಎಚ್ಚದಡಿ' ಪರಾ. [ನ್ಯಾಮ$_0$ + ದಡಿ$_2$ (<ತಡಿ$_2$)]

**ನ್ಯಾಯ** (ನಾ). ೧. ತಿಳಿದವರು ಒಡಂಬಡಲು ಯೋಗ್ಯವಾದುದು,—ಒಪ್ಪತಕ್ಕುದು. ೨. ನಿಯಮ; ಕಟ್ಟಳೆ: ಗ್ರಾಮೇಕರಾತ್ರಂ ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಮೆಂಬೀ ನ್ಯಾಯದಿಂ ವಿಹಾರಿಸುತ್ತುಂ . . . ಇರ್ದರ್ ಮುನೀಂದ್ರರೊರ್ವರ್ ಸುಧರ್ಮನಾಮಾಚಾರ್ಯರ್ (ಸುಕುಮಾ. ೩-೭ ವ). ೩. ಸರಿಯಾದುದು; ಯೋಗ್ಯವಾದುದು; ಉಚಿತವಾದುದು: "ನ್ಯಾಯವುಚಿತಂ ಯುಕ್ತಮೆನೆ ಪ್ರಾಪ್ತಮಕ್ಕು" (ಮಂಗರಾ. ೧೩೫-೩೮); ನ್ಯಾ[ಪಾಠಾಂ. ನೋ]ಯದೆ ಪಡೆದೊಡಮೆಯನನ್ಯಾಯದೆ ಕೊಳಲಿರ್ಪರೆಲ್ಲರ್ (ಜೀವಸಂ. ೧೩-೨೪); ನ್ಯಾಯಂ ಮಂತ್ರಿಗಳುಕ್ತಿ ಬಪ್ಪನ ಮತಂ ಕಾಲೋಚಿತಂ ನಿಮ್ಮಭಿಪ್ರಾಯಂ ನೆಟ್ಟನೆಲಂಘ್ಯಮಿಂತಿನಿತನೀಗಳ್ಕೇಱುದಂ (ಅನಂಪು. ೧೩-೬೧); ನ್ಯಾಯವ ಬಿಟ್ಟನ್ಯಾಯವ ಪೇಳುವ ನಾಯಿಗೆ ನರಕವು ತಪ್ಪೀತೆ (ಕನಕ. ೨೫-೪); ಇವುಗಳಲ್ಲಿ ನ್ಯಾಯವಾಗಿ ಅರ್ಥ, ಕಾಮ, ಧರ್ಮ, ಮೋಕ್ಷವೆಂದು ಕ್ರಮವಿರಬೇಕು (ಹಿಂದಸಾ. ೧೪೮). ೪. ನೀತಿ; ಧರ್ಮ: ನ್ಯಾಯದಿನೆಯ್ದೆ ರಕ್ಷಿಸು ಸಮಸ್ತಧರಾತಳಮಂ (ಬಾಧಪು. ೬-೨೯); ನ್ಯಾಯವು ಧರ್ಮವೆಂಬುದರ ಒಂದು ರೂಪ. ಅನ್ಯೋನ್ಯವ್ಯವಹಾರದ ಧರ್ಮವೇ ನ್ಯಾಯ (ರಾಜ್ಯಶಾ. ೫೬). ೫. (ನ್ಯಾಯಾಲಯದ) ನಿರ್ಣಯ; ತೀರ್ಪು; ತೀರ್ಮಾನ: ನ್ಯಾಯ ನಮ್ಮ ಕಡೆಗೇ ಆಯಿತು (ರೂಢಿ). ೬. ಷಡ್ದರ್ಶನಗಳಲ್ಲಿ ಒಂದು; ಗೌತಮರಿಂದ ರೂಪಿಸಲ್ಪಟ್ಟ ತಾತ್ತ್ವಿಕ ಸಿದ್ಧಾಂತ; ನ್ಯಾಯದರ್ಶನ: ವೇದ ವೇದಾಂತಾದಿ ಸಿದ್ಧಾಂತಾದಿ ತರ್ಕವಿವಾದದಿಂ ಸಂವಾದಿಸುತ್ತಾ ನ್ಯಾಯ ವೈಶೇಷಿಕಮುಖಾನೇಕವಾದವಾಗ್‌ದೃಷ್ಟಾದಿ ವಿಧಿಯುಕ್ತಾದಿಗಳಿನೊಡಬಡಿಸುತಂ ಮೇಲಾದ ವಸ್ತುಸಮಸ್ತಕಥಿಕಂ ರಾಮನಾಥನಲಾ (ಬಸಪು. ೫೧-೧೨); ವೈಶೇಷಿಕ, ನ್ಯಾಯ, ವೇದಾಂತ, ಸಾಂಖ್ಯ, ಯೋಗ, ವೇದ ಎಂದು ಆರು ದರ್ಶನಗಳು (ಹಿಂದಸಾ. ೯). ೭. ತರ್ಕಶಾಸ್ತ್ರ; ನ್ಯಾಯಶಾಸ್ತ್ರ:

ನ್ಯಾಯವೆಂದರೆ ಬುದ್ಧಿಯ ಒರೆಗಲ್ಲಿನ ಮೇಲೆ ಬಂಗಾರವೆನಿಸಿದ್ದನ್ನು ತಿಕ್ಕಿ ನೋಡಿ ಬಂಗಾರವೇ ಎಂದು ನಿರ್ಣಯಿಸತಕ್ಕ ಯುಕ್ತಿಯುಕ್ತವಾದ ರೀತಿ (ಭಾರದ. ೧೨೩); ನ್ಯಾಯವೆಂದರೆ ಪ್ರಮಾಣಗಳಿಂದ ಪದಾರ್ಥಗಳನ್ನು ಪರೀಕ್ಷೆ ಮಾಡುವ ಶಾಸ್ತ್ರವೆಂದರ್ಥ (ಹಿಂದಸಾ. ೧೧೧). **೮.** ತರ್ಕಬದ್ಧವಾದ ವಾದ; ತಾರ್ಕಿಕರ ವಾದ. **೯.** ಕಾನೂನು; ಕಾಯಿದೆ: 'ನ್ಯಾಯಪ್ರಕ್ರಿಯೆ' ಪರಾ. **೧೦.** ಲೋಕಪ್ರಸಿದ್ಧವಾದ ದೃಷ್ಟಾಂತ; ಲೋಕೋಕ್ತಿ: ಆಗಮಸಮಯನ್ಯಾಯವಿಭಾಗಕಳಾಕಾಲಲೋಕದೇಶವಿರುದ್ಧಂ ಭೋಗಿವಿಷಂಬೋಲ್ತಾಣತ್ಯಾಗಮನಾಗಿಸುಗುಮಮಳಕ್ಕೆತಿವಳ್ಗುಗಿಸಿತುಂ(ಕವಿರಾ.೧-೭೦). **೧೧.** ಪ್ರಸಿದ್ಧವಾದ ದೃಷ್ಟಾಂತದಿಂದ ವಿಷಯವನ್ನು ಸ್ಪಷ್ಟಪಡಿಸುವ ರೀತಿ: 'ಕಾಕತಾಲೀಯ ನ್ಯಾಯ' ಪರಾ. **೧೨.** ಒಂದು ಬಗೆಯ ತೆರಿಗೆ: ಆ ಎರಡು ವೃತ್ತಿಗೆ ಹಳೆ ಹಿರಿ ಊರೊಳಗಣ ಕೊಡಗಿದೆಚಿ ಬಿನಂಗುದೆಚಿ ಖಾಣ ಅಭ್ಯಾಗತೆ ಸೇಸೆ ಸಿಥಾಯ ಅಳಿಉ ನ್ಯಾಯ ಮೊದಲಾಗಿ ಏನು ಬಂ[ದ] ಆ ಬೊಂಮಂಣ ಮಾದಂಣಂಗಳು ತಾವೆ ಎತ್ತಿಕೊಂಬರು (ಎಕ. VI (R), ಕೃಷ್ಣರಾ. ೮೬-೧೧; 1179); ಯಿಂನೆಯ ಗದ್ದೆ ಬೆದ್ದಲಿಂಗೆ ನ್ಯಾಯ ಅಂನ್ಯಾಯ ಅವ ತೆಱುಗೆಯಿಲ್ಲೆಂದು ವೀರಣ್ಣಂ[ಗ]ಳಿಗೆ ಆ ಮಹಾಜನಗಳು ಧಾರಾಪೂರ್ವಕಂ ಮಾಡಿ . . . ಬರಸಿದ ಶಾಸನ (ಎಕ. IV (R), ಪಿರಿಯಾ. ೪೫-೮; ಸು. 14ನೆಯ ಶತ). 'ಅನಾಯ', 'ಸನಾಯ' ಪರಾ. **೧೩.** (ಆಲಂ) ಜಗಳ; ತಂಟೆ; ತಕರಾರು; ವ್ಯಾಜ್ಯ: ಹಾಗೆ ಮಾತಿಗೆ ಮಾತು ಹೊರಟು ಅವನಿಗೂ ನನಗೂ ಭಾರಿ ನ್ಯಾಯವಾಯಿತು (ಕಾಲಚ. ೫೩).

ನ್ಯಾಯ ತೀರಿಸು = ವ್ಯಾಜ್ಯವನ್ನು ಇತ್ಯರ್ಥಗೊಳಿಸು; ವ್ಯಾಜ್ಯ ಮುಗಿಸು: ಗ್ರಾಮದಲ್ಲಿ ಉಂಟಾಗುವ ಜಗಳಗಳಲ್ಲಿ ನ್ಯಾಯ ತೀರಿಸುವ ಅಧಿಕಾರ ಪಟೇಲರದು (ರೂಢಿ). ನ್ಯಾಯ ತೆಗೆ = ನ್ಯಾಯ ಹೂಡು: ನನ್ನ ನಾಸೇಂದ್ರಿಯವು ಅನ್ಯಾಯವಾಗಿ ನ್ಯಾಯ ತೆಗೆದು ಸಂಪು ಹೂಡಿಬಿಟ್ಟಿತು (ದೇಶಕನ್ಯೆ. ೯). ನ್ಯಾಯ ಹೂಡು = ತಕರಾರು ಹೂಡು; ವ್ಯಾಜ್ಯವನ್ನು ತೆಗೆ: ಅವನು ಜಮೀನಿನ ಬಗ್ಗೆ ಕೋರ್ಟಿನಲ್ಲಿ ನ್ಯಾಯ ಹೂಡಿದ್ದಾನೆ (ರೂಢಿ). [ಸಂ.]

**ನ್ಯಾಯಕಾರ** (ನಾ). ನ್ಯಾಯಶಾಸ್ತ್ರವನ್ನು ತಿಳಿದವನು: "ನೈಯಾಯಿಕಃ = ನ್ಯಾಯಕಾರಂ" (ಶಾಶಕ್ಯ. ೧೬೫). [ಸಂ.]

**ನ್ಯಾಯಖಾತೆ** (ನಾ). ನ್ಯಾಯನಿರ್ಣಯ ನೀಡುವ ವಿಭಾಗ: ಶ್ರೀಯುತರು ಕರ್ನಾಟಕ ಸರ್ಕಾರದ ನ್ಯಾಯಖಾತೆಯಲ್ಲಿದ್ದು ನಿವೃತ್ತರಾದವರು (ರೂಢಿ). [ನ್ಯಾಯ + ಖಾತೆ$_2$]

**ನ್ಯಾಯಗಂಟೆ** (ನಾ). ಜಗಳಗಂಟ: ಅವನು ನ್ಯಾಯಗಂಟನಿದ್ದಂತೆ ಎಡೆಗಾರನೂ ಇದ್ದ (ಜನಿನಾನ್ದಾ. ೧೧೮). [ನ್ಯಾಯ + -ಗಂಟ$_2$]

**ನ್ಯಾಯದರ್ಶನ** (ನಾ). = ನ್ಯಾಯ **೬**: ಗೌತಮನ ನ್ಯಾಯದರ್ಶನ, ಕಣಾದನ ವೈಶೇಷಿಕದರ್ಶನ, ಕಪಿಲನ ಸಾಂಖ್ಯದರ್ಶನ, ಪತಂಜಲಿಯ ಯೋಗದರ್ಶನ, ಜೈಮಿನಿಯ ಪೂರ್ವ ಮೀಮಾಂಸಾ ದರ್ಶನ, ಬಾದರಾಯಣನ ಉತ್ತರಮೀಮಾಂಸಾ ದರ್ಶನ—ಇವೇ ಷಡ್ದರ್ಶನಗಳು (ಭಾರದ. ೧೨೧); ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ ಸಿದ್ಧಾಂತ ಅವಯವ ತರ್ಕ ನಿರ್ಣಯವಾದ ಜಲ್ಪ ವಿತಂಡಾ ಹೇತ್ವಾಭಾಸ ಛಲ ಜಾತಿ ನಿಗ್ರಹ ಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದಸಾ. ೧೧೨). [ನ್ಯಾಯ + ದರ್ಶನ]

**ನ್ಯಾಯದರ್ಶಿ** (ನಾ). ನ್ಯಾಯಸ್ಥಾನದ ಸದಸ್ಯ: ನೆಕ್ಲುದೋವ್ ತನ್ನ ಹೆಸರನ್ನು ತಿಳಿಸಿ, ನ್ಯಾಯದರ್ಶಿಗಳ ಕೊಟಡಿಗೆ ಹೋದನು (ಪುನರು. ೨೩). [ಸಂ. ನ್ಯಾಯದರ್ಶಿನ್]

**ನ್ಯಾಯದಾತ** (ನಾ). ನ್ಯಾಯನಿರ್ಣಯ ನೀಡುವವನು; ನ್ಯಾಯಾಧಿಪತಿ: ಓ! ನ್ಯಾಯದಾತಾ! ನೀನೇ ನಿಷ್ಪಕ್ಷಪಾತವುಳ್ಳ ಬುದ್ಧಿಯುಳ್ಳವನು (ಕವಿಕ. ೧೮). [<ಸಂ. ನ್ಯಾಯದಾತೃ]

**ನ್ಯಾಯದೂರ** (ನಾ). ನ್ಯಾಯವನ್ನು ಬಿಟ್ಟವನು; ಅನ್ಯಾಯ ಮಾಡುವವನು: ಕಾಯಿ ಕಾರ್ಯ್ಯಂಗಾಣದಜ್ಞಾನಾಯತರನಪಗತ ಮತಿಗಳನು . . . ನ್ಯಾಯದೂರರನಪಜಯರನನ್ಯಾಯಕಾರರನಧಿಕಳಪ ಟೋಪಾಯರಂ (ಬಸಪು. ೨೮-೬೩). [ನ್ಯಾಯ + ದೂರ]

**ನ್ಯಾಯನಿಯುಕ್ತ** (ನಾ). ನ್ಯಾಯದಿಂದ ಕೂಡಿದುದು; ನೀತಿಯುಕ್ತವಾದುದು: ಉಕ್ತವಿಚಾರಂ ನ್ಯಾಯನಿ[ಪಾಠಾಂ. ವಿ]ಯುಕ್ತಂ ಕ್ರಮವಿನ್ನದಕ್ಕೆ ಬಾರದುವೆಲ್ಲಂ ವ್ಯಕ್ತಂ ನ್ಯಾಯವಿರುದ್ಧಂ ಪ್ರೋಕ್ತ ಮಹಾದೋಷಮಂತು ಪೇಟಲ್ಪೆಂತುಂ (ಕವಿರಾ. ೧-೧೦೬). [ಸಂ.]

**ನ್ಯಾಯನಿರ್ಣಯ** (ನಾ). (ನ್ಯಾಯಾಲಯದ) ವ್ಯಾಜ್ಯಕ್ಕೆ ಸಂಬಂಧಿಸಿದ ನಿರ್ಧಾರ,—ತೀರ್ಮಾನ,—ತೀರ್ಪು: ಬಿಸನಪುರದ ಈನೇದಾರ ಹಮೀದಖಾನ . . . ದುಡ್ಡು ನೋಡಿ ನ್ಯಾಯನಿರ್ಣಯ ಕೊಡುತ್ತಿದ್ದ (ಜನಿನಾನ್ದಾ. ೧೧೮). [ನ್ಯಾಯ + ನಿರ್ಣಯ]

**ನ್ಯಾಯನಿರ್ಣಾಯಕ** (ನಾ). ನ್ಯಾಯನಿರ್ಣಯ ಮಾಡುವವನು; ನ್ಯಾಯಾಧಿಪತಿ: "ಪ್ರಾಡ್ವಿವಾಕಃ, ಅಕ್ಷದರ್ಶಕಃ—ಶ ವ್ಯವಹಾರಾಣಾಂ ದ್ರಷ್ಟರಿ—ನ್ಯಾಯನಿರ್ಣಾಯಕನ ಹೆಸರುಗಳು. ಜಡ್ಜಿ, ಮುನಸೀಫ್, ಧರ್ಮಾಧಿಕಾರಿ" (ಸಿದ್ಧಾಂತ. ೨೩೬). [ನ್ಯಾಯ + ನಿರ್ಣಾಯಕ]

**ನ್ಯಾಯನಿಷ್ಠ** (ನಾ). ನ್ಯಾಯಕ್ಕೆ ನಿಷ್ಠನಾಗಿರುವವನು; ನೀತಿಯುಕ್ತವಾದ ಮಾರ್ಗದಲ್ಲಿ ನಡೆಯುವವನು: ಅವನು ತುಂಬ ನ್ಯಾಯನಿಷ್ಠನಾಗಿ ಬಾಳಿದ ವ್ಯಕ್ತಿ (ರೂಢಿ). [ಸಂ.]

**ನ್ಯಾಯನಿಷ್ಠುರ** (ನಾ). ನ್ಯಾಯವಿಷಯದಲ್ಲಿ ನಿರ್ದಾಕ್ಷಿಣ್ಯನಾಗಿರುವವನು: 'ನ್ಯಾಯನಿಷ್ಠುರಿ' ಪರಾ. [ಸಂ.]

**ನ್ಯಾಯನಿಷ್ಠುರತೆ** (ನಾ). ನ್ಯಾಯವಿಷಯದಲ್ಲಿ ನಿರ್ದಾಕ್ಷಿಣ್ಯದಿಂದಿರುವಿಕೆ: ಒಲವು ಮಿಗಿಲಾದುದು ಗೆಲವು ಮಿಗಿಲಾದುದು . . . ನೋಳ್ಪಡೆ ಮತ್ತಿನದೆಲ್ಲಕೆ ಜಗದೊಳು ನ್ಯಾಯನಿಷ್ಠುರತೆಯೆ ಮಿಗಿಲು (ಇಂಚಾಪ. ೧೭೨-೪೯). [ಸಂ. ನ್ಯಾಯನಿಷ್ಠುರತಾ]

**ನ್ಯಾಯನಿಷ್ಠುರಿ** (ನಾ). = ನ್ಯಾಯನಿಷ್ಠುರ: ನ್ಯಾಯನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ ಲೋಕವಿರೋಧಿ ಶರಣನಾರಿಗಂಜುವನಲ್ಲ (ಬಸವ. ೭೫೩). [<ನ್ಯಾಯನಿಷ್ಠುರ]

**ನ್ಯಾಯಪದ್ಧತಿ** (ನಾ). **೧.** ನೀತಿಯುಕ್ತವಾದ ಮಾರ್ಗ. **೨.** ಒಳ್ಳೆಯ ನಡತೆಯ ಬಗ್ಗೆ ಇರುವ ಕೈಪಿಡಿ ಅಥವಾ ಮಾರ್ಗದರ್ಶಕ ಪುಸ್ತಕ; ನೀತಿಪುಸ್ತಕ: (೬). [ನ್ಯಾಯ + ಪದ್ಧತಿ]

**ನ್ಯಾಯಪರತೆ** (ನಾ). ನ್ಯಾಯಕ್ಕೆ ಅಂಟಿಕೊಂಡಿರುವಿಕೆ; ನ್ಯಾಯದೃಷ್ಟಿಯನ್ನು ಹೊಂದಿರುವಿಕೆ: ಮನವಚನಕಾಯಗಳಲ್ಲೂ ಸತ್ಯನಿಷ್ಠೆ, ಧರ್ಮದೃಷ್ಟಿ, ನ್ಯಾಯಪರತೆ—ಇವು ವ್ಯಾಪಿಸಿದಲ್ಲದೆ ಶಿವಾನುಗ್ರಹ ದೊರೆಯದು (ಶಕ್ತಿವಿ. ೭೪). [ಸಂ. ನ್ಯಾಯಪರತಾ]

**ನ್ಯಾಯಪಾಲಿಕೆ** (ನಾ). ನ್ಯಾಯವನ್ನು ಪಾಲಿಸುವ ಆಡಳಿತ ವಿಭಾಗ; ನ್ಯಾಯದ ಇಲಾಖೆ; ನ್ಯಾಯಾಂಗ: ರಾಜ್ಯದ ಲೋಕಸೇವಾವ್ಯವಸ್ಥೆಯಲ್ಲಿ ನ್ಯಾಯಪಾಲಿಕೆಯನ್ನು ಕಾರ್ಯಪಾಲಿಕೆಯಿಂದ ಪ್ರತ್ಯೇಕಿಸಲು ರಾಜ್ಯವು ಕ್ರಮ ಜರುಗಿಸತಕ್ಕುದು(ಭಾಧಾನ.೨೫). [ಸಂ. ನ್ಯಾಯಪಾಲಿಕಾ]

**ನ್ಯಾಯಪೀಠ** (ನಾ). ನ್ಯಾಯಾಧಿಪತಿಯ ಸ್ಥಾನ,—ಗದ್ದುಗೆ: (Judgement Seat. ಪತ್ರಿಸಿ. ೪೯). [ನ್ಯಾಯ + ಪೀಠ]

**ನ್ಯಾಯಪುರುಷ** (ನಾ). ನಿಷ್ಪಕ್ಷಪಾತವಾಗಿ ನ್ಯಾಯಕ್ಕೆ ತೀರ್ಪು ಕೊಡುವವನು,—ನ್ಯಾಯವನ್ನು ನಿರ್ಣಯ ಮಾಡುವವನು : ದೇವರ ಗುಂಡು ಗುಜಿಗುಜಿಗೊಂಡು ಪೊಗಟೆ[3] ನ್ಯಾಯಪುರುಷಸಂತಾನ ಮಾನಸಸ್ಥಾನಂ ಬಿಲ್ಮುಟ್ಟಿ ಲಕ್ಷಣೋಪೇತಂ ಬಗೆ ಬಾಗವಸಮೆಂ ಬಿವನಱಿದು ಧನುರ್ವಿದ್ಯೆಯೇ ರೂಪುಗೊಂಡಂತಿರ್ಪರುಂ ಕಾದೆ (ಶಾಂತಿಪು. ೪–೪೫ ಪ). [ಸಂ.]

**ನ್ಯಾಯಪ್ರಕ್ರಿಯೆ** (ನಾ). ಕಾನೂನಿಗೆ ಬದ್ಧವಾದ ಕ್ರಮ : ನ್ಯಾಯಪ್ರಕ್ರಿಯೆ (ಪ್ರೊಸೀಜರ್) ದೃಷ್ಟಿಯಿಂದ ಇವುಗಳನ್ನು ಅಪರಾಧವೆಂತಲೇ ಎಣಿಸಬೇಕಾಗುತ್ತದೆ (ಕವಿಕೋ. I, ೩೫೬).
[ನ್ಯಾಯ + ಪ್ರಕ್ರಿಯೆ]

**ನ್ಯಾಯಬಾಹಿರ** (ಗು). ಕ್ರಮವಲ್ಲದ ; ಕಾನೂನಿಗೆ ಹೊರತಾದ : "ಶಾಸನಬಾಹಿರ ; ನ್ಯಾಯಬಾಹಿರ ; ಅಕ್ರಮ" (Unlawful. ಪತ್ರಿಸಿ. ೮೬). [ನ್ಯಾಯ + ಬಾಹಿರ]

**ನ್ಯಾಯಬೆಲೆ** (ನಾ). ಯೋಗ್ಯವಾದ ಬೆಲೆ ; ಉಚಿತವಾದ ಬೆಲೆ : ಸಕ್ಕರೆ ಬಳಕೆಯನ್ನು ಉತ್ತೇಜಿಸುವ ಹಾಗು ಉತ್ಪನ್ನರಾಷ್ಟ್ರಗಳಿಗೆ ನ್ಯಾಯಬೆಲೆ ದೊರಕಿಸುವಂತಹ ಮಟ್ಟದಲ್ಲಿ ಬೆಲೆಯನ್ನು ಸ್ಥಿಮಿತಗೊಳಿಸುವುದು (ಅಂತಸಂ. ೧೯೪).

**ನ್ಯಾಯಬೆಲೆ ಅಂಗಡಿ** = ನಿಗದಿಯಾದ ಬೆಲೆಯಲ್ಲಿ ಕ್ಲುಪ್ತ ಪ್ರಮಾಣದಲ್ಲಿ ಜನರಿಗೆ ದಿನಸಿಗಳನ್ನು ಒದಗಿಸಲು ಸರ್ಕಾರವು ಗೊತ್ತುಪಡಿಸಿದ ಅಂಗಡಿ : ಜನರ ಅನುಕೂಲಕ್ಕಾಗಿ ಸರ್ಕಾರವು ಹೆಚ್ಚುಹೆಚ್ಚು ನ್ಯಾಯಬೆಲೆ ಅಂಗಡಿಗಳನ್ನು ತೆರೆಯಬೇಕು (ರೂಢಿ).
[ನ್ಯಾಯ + ಬೆಲೆ$_2$]

**ನ್ಯಾಯಮಾರ್ಗ** (ನಾ). ಸರಿಯಾದ ಹಾದಿ ; ಋಜುಮಾರ್ಗ : ಧೀರರಾದವರು ನ್ಯಾಯಮಾರ್ಗದಲ್ಲಿಟ್ಟ ಹೆಜ್ಜೆಯನ್ನು ಎಂದಿಗೂ ಚಲಿಸುವುದಿಲ್ಲ (ನೀತಿಚಂ. XI, ೪). [ನ್ಯಾಯ + ಮಾರ್ಗ]

**ನ್ಯಾಯಮೂರ್ತಿ** (ನಾ). = ನ್ಯಾಯನಿರ್ಣಾಯಕ : "ನ್ಯಾಯಾಧಿಪತಿ, ನ್ಯಾಯಮೂರ್ತಿ" (Justice. ಪತ್ರಿಸಿ. ೪೯). [ನ್ಯಾಯ + ಮೂರ್ತಿ]

**ನ್ಯಾಯರಕ್ತ** (ನಾ). ನ್ಯಾಯಮಾರ್ಗದಲ್ಲಿ ಆಸಕ್ತಿಯುಳ್ಳವನು : ಸಿರಿಯೊಡೆಯನಾಗಿಯುಂ ದರ್ಪರಹಿತನೋದೊಡೆಯನಾಗಿಯುಂ ವಿಗಳಿತ ಮತ್ಸರನಧಿಕನಾಗಿಯುಂ ನ್ಯಾಯರಕ್ತನೇಂ ಪಿರಿಯನೊ ಖಗೇಂದ್ರಾಧೀಶಂ (ಶಾಂತಿಪು. ೩–೮೬). [ಸಂ.]

**ನ್ಯಾಯವಂತ** (ನಾ). ಪ್ರಾಮಾಣಿಕನಾದ ವ್ಯಕ್ತಿ; ಯೋಗ್ಯನಾದವನು : ಉಭಯಕುಲವಿಶುದ್ಧರ್ ನ್ಯಾಯವಂತರ್ ಜಿತಾತ್ಮರ್ ಪ್ರಭುಗಳಧಿಕಪುಣ್ಯರ್ ಮುನ್ನೆ ನಿಮ್ಮಜ್ಜಪಜ್ಜರ್ . . . ಆದಱಿಂದೀ ದುರ್ಯಶಕ್ಕೆಂತು ನೋಂತೈ (ಶಾಂತಿಪು. ೩–೭೬). [ನ್ಯಾಯ + -ವಂತ]

**ನ್ಯಾಯವರ್ತಿ** (ನಾ). ನ್ಯಾಯಮಾರ್ಗದಲ್ಲಿರುವವನು; ಸದ್ವರ್ತನೆಯುಳ್ಳವನು. [ಸಂ. ನ್ಯಾಯವರ್ತಿನ್]

**ನ್ಯಾಯವಾಕ್ಯ** (ನಾ). ವಾದವನ್ನು ಪ್ರತಿಪಾದಿಸುವ ವಾಕ್ಯ ; ಪಕ್ಷವನ್ನು ಸ್ಥಾಪಿಸುವ ಮಾತು : ಈ ಅನುಮಾನಪ್ರಮಾಣದಲ್ಲಿ ನ್ಯಾಯವಾಕ್ಯವೆಂದು ಕೆಲವು ವಾಕ್ಯಗಳನ್ನು ವಾದಿ ಪ್ರತಿವಾದಿಗಳು ವಾದಕಾಲದಲ್ಲಿ ಉಪಯೋಗಿಸುವರು. ಎಂದರೆ, ಅವರವರ ಪಕ್ಷವನ್ನು ಸ್ಥಾಪಿಸುವ ವಾಕ್ಯವೆಂದರ್ಥ (ಹಿಂದಸಾ. ೧೪೨). [ನ್ಯಾಯ + ವಾಕ್ಯ]

**ನ್ಯಾಯವಾದಿ** (ನಾ). ೧. (ನ್ಯಾಯಸಂಬಂಧದಲ್ಲಿ) ವ್ಯವಹಾರ ಪ್ರತಿನಿಧಿ ; "ನ್ಯಾಯವೃತ್ತಿಯವನು ; ನ್ಯಾಯವಾದಿ; ವಕೀಲ; ನ್ಯಾಯಶಾಸ್ತ್ರಪಂಡಿತ" (Lawyer. ಇಂಕನಿ) : ನ್ಯಾಯಾಲಯಗಳಲ್ಲಿ ವೃತ್ತಿಯನ್ನು ನಡೆಯಿಸ ತಕ್ಕ ನ್ಯಾಯವಾದಿಗಳಿಗೂ ಅಧಿವಕ್ತರುಗಳಿಗೂ ವಕೀಲರುಗಳಿಗೂ ಕೊಡಬಹುದಾದ ಫೀಜುಗಳ ಪಟ್ಟಿಗಳನ್ನು ಸಹ ನಿರ್ಧರಿಸಬಹುದು (ಬಾಧಾನ. ೧೨೪). ೨. ನ್ಯಾಯ ಪಕ್ಷಪಾತಿ ; ನ್ಯಾಯವಂತ ; ಪ್ರಾಮಾಣಿಕ : ಪ್ರಾಯ ಬಂದ ಹುಡುಗಿಯ ಮನೆಯಲ್ಲಿ ಗಂಡಿದ್ದರೆ ಅವರಿಬ್ಬರೂ ನ್ಯಾಯವಾದಿಗಳಾಗಿದ್ದರೂ ಸಮಾಜ ಅದನ್ನು ನಂಬುವುದಿಲ್ಲ (ಕಾವೇರಿ. ೩೭). [ಸಂ. ನ್ಯಾಯವಾದಿನ್]

**ನ್ಯಾಯವಿದ** (ನಾ). ೧. ನ್ಯಾಯಶಾಸ್ತ್ರವನ್ನು ಅರಿತವನು ; ನ್ಯಾಯಶಾಸ್ತ್ರಜ್ಞ : "ಅರ್ಥದೃಕ್ ಪ್ರಾಡ್ವಿವಾಕಂ ನ್ಯಾಯವಿದನಕ್ಯ" (ಮಂಗರಾ. ೭೯–೭). ೨. ನ್ಯಾಯಾಧಿಪತಿ ; ನ್ಯಾಯನಿರ್ಣಾಯಕ.
[ಸಂ. ನ್ಯಾಯವಿದ್]

**ನ್ಯಾಯವಿದ್ಯೆ** (ನಾ). = ನ್ಯಾಯ ೭ : ನ್ಯಾಯವಿದ್ಯೆಯೂ ಆತ್ಮಾನಾತ್ಮಸ್ವರೂಪವನ್ನು ವಿಚಾರಪೂರ್ವಕವಾಗಿ ನಿರ್ಣಯಿಸುವ ವಿದ್ಯೆಯಾದುದರಿಂದ ಆತ್ಮವಿದ್ಯೆಯೆಂದೆನಿಸಿರುವುದು (ಹಿಂದಸಾ. ೧೧೨).
[ನ್ಯಾಯ + ವಿದ್ಯೆ]

**ನ್ಯಾಯವಿಧಾಯಕ** (ಗು). ಶಾಸನ ರಚನೆಯ ; ಕಾನೂನು ರಚನೆಯ : 'ನ್ಯಾಯವಿಧಾಯಕ ಸಭೆ' ಪರ್ಯಾ.
[ನ್ಯಾಯ + ವಿಧಾಯಕ]

**ನ್ಯಾಯವಿಧಾಯಕಸಭೆ** (ನಾ). ಕಾನೂನುಗಳನ್ನು ರೂಪಿಸುವ ಸಭೆ ; ಶಾಸನಸಭೆ. [ನ್ಯಾಯವಿಧಾಯಕ+ಸಭೆ]

**ನ್ಯಾಯವಿರುದ್ಧ** (ಗು). ೧. ಕಾನೂನನ್ನು ಪ್ರತಿಭಟಿಸುವ ; ಕಾಯಿದೆಯನ್ನು ವಿರೋಧಿಸುವ : "ನ್ಯಾಯವಲ್ಲದ ; ನ್ಯಾಯವಿರುದ್ಧ; ಕಾನೂನಿಗೆ ವಿರುದ್ಧವಾದ; ನಿರ್‌ನ್ಯಾಯ" (Illegal. ಇಂಕನಿ); "ಕಾನೂನು ವಿರುದ್ಧ, ನ್ಯಾಯವಿರುದ್ಧ, ಬೇಕಾಯಿದೇಶೀರ್" (Illegal. ಪತ್ರಿಸಿ. ೪೩). (ನಾ). ೨. ನ್ಯಾಯಕ್ಕೆ ವಿರೋಧವಾದುದು ; ನೀತಿಯುಕ್ತವಲ್ಲದುದು : ಉಕ್ತವಿಚಾರಂ ನ್ಯಾಯನಿಯುಕ್ತಂ ಕ್ರಮವಿನ್ನದಕ್ಕೆ ಬಾರದುವೆಲ್ಲಂ ವ್ಯಕ್ತಂ ನ್ಯಾಯವಿರುದ್ಧಂ ಪ್ರೋಕ್ತಮಹಾದೋಷಮಂತು ಪೇಟಲ್ಕೆಂತುಂ (ಕವಿರಾ. ೧–೧೦೬). [ನ್ಯಾಯ + ವಿರುದ್ಧ]

**ನ್ಯಾಯಶಾಲೆ** (ನಾ). ನ್ಯಾಯನಿರ್ಣಯ ಮಾಡುವ ಸ್ಥಳ ; ನ್ಯಾಯಾಲಯ : ಧರ್ಮಶಾಸ್ತ್ರಾನುಸಾರವಾಗಿ ಅರ್ಥಶಾಸ್ತ್ರವನ್ನು ವಿವೇಚಿಸಿ ಪ್ರಯೋಗಿಸುವ ಸ್ಥಾನವು ನ್ಯಾಯಶಾಲೆ ಎನ್ನಿಸುವುದು ಎಂದು ಹೇಳಿದೆ (ಭಾರದ. ೩೫೪). [ನ್ಯಾಯ+ಶಾಲೆ$_3$]

**ನ್ಯಾಯಶಾಸ್ತ್ರ** (ನಾ). ೧. = ನ್ಯಾಯ ೭ : ನ್ಯಾಯಶಾಸ್ತ್ರದಲ್ಲಿ ವಿದ್ಯೆ ಅನ್ವೀಕ್ಷಕೀ ತ್ರಯೀ ವಾರ್ತಾ ದಂಡನೀತಿ ಎಂದು ಸಾಮಾನ್ಯವಾಗಿ ನಾಲ್ಕು ವಿಧವೆಂದು ವಿಂಗಡಿಸಿರುವರು . . . ನ್ಯಾಯಶಾಸ್ತ್ರವನ್ನು ಆತ್ಮಶಾಸ್ತ್ರವೆಂದು ಹೇಳುತ್ತಾರೆ (ಹಿಂದಸಾ. ೧೧೨). ೨. ಕಾನೂನುಗಳನ್ನು ತಿಳಿಸುವ ಶಾಸ್ತ್ರ : "ಒಂದು ಸಮಾಜವು ಅನುಸರಿಸಲು ಅಂಗೀಕರಿಸಿರುವ ಶಾಸನಸಭಾರಚಿತವಾದ ಅಥವಾ ಸಂಪ್ರದಾಯರೂಢವಾದ ವಿಧಿಗಳು, ಕಟ್ಟಳೆಗಳು; ವ್ಯವಹಾರ ನಿಬಂಧನೆ; ನ್ಯಾಯಶಾಸ್ತ್ರ" (Law. ಇಂಕನಿ).
[ನ್ಯಾಯ+ಶಾಸ್ತ್ರ]

**ನ್ಯಾಯಸಮ್ಮತ** (ನಾ). ಉಚಿತವಾದುದು; ಯೋಗ್ಯವಾದುದು; ನ್ಯಾಯವಾದುದು : ನ್ಯಾಯಸಮ್ಮತವಲ್ಲದಂತಹ ಹೊಗಳಿಕೆ ಲೇಸಲ್ಲವೆಂದಿಗು ತಗದು ನ್ಯಾಯಸಮ್ಮತವೆನ್ನುವಂತಹ ತೆಗಳಿಕೆಯದಕಿಂತ ಲೇಸೆನ್ನಿಸುವುದು (ಇಂಚಾಪ. ೭೭–೭೩) ; ಸರ್ಕಾರದಿಂದ ಉಚಿತವಾಗಿ ತನಗೆ ಸಲ್ಲಬೇಕಾದ್ದು ನ್ಯಾಯಸಮ್ಮತವೆಂದು ಅವನು ತಿಳಿದುಕೊಂಡಿದ್ದನು (ಪುನರು. ೩೩೪). [ನ್ಯಾಯ+ಸಮ್ಮತ]

**ನ್ಯಾಯಸ್ಥ** (ನಾ). = ನ್ಯಾಯವಂತ : ಪ್ರಾಯಸ್ಥನಾದವ ನ್ಯಾಯಸ್ಥನಾಗಿರಬೇಕು (ಗಾದೆ). [ಸಂ.]

**ನ್ಯಾಯಸ್ಥಾನ** (ನಾ). ವ್ಯವಹಾರಗಳನ್ನು ವಿಚಾರಣೆ ಮಾಡಿ ಕಾನೂನುಬದ್ಧವಾಗಿ ತೀರ್ಪು ಕೊಡುವ ಸ್ಥಳ; ನ್ಯಾಯಾಲಯ; ಕೋರ್ಟು: ನ್ಯಾಯಸ್ಥಾನದಲ್ಲಿ ವ್ಯವಹರಿಸಿ ಅವನ ಸಹೋದರನಿಂದ ಒಂದು ತೋಟ ಹೊಡೆದಿದ್ದಾನೆ (ಮುರಿನಾ. ೧೦೨). [ನ್ಯಾಯ+ಸ್ಥಾನ]

**ನ್ಯಾಯಾಂಗ** (ನಾ). ಶಾಸನಾಂಗ, ಕಾರ್ಯಾಂಗ ಹಾಗೂ ನ್ಯಾಯಾಂಗವೆಂಬ ರಾಜ್ಯಾಡಳಿತದ ಮೂರು ಅಂಗಗಳಲ್ಲಿ ಒಂದು; ವ್ಯಾಜ್ಯ, ವ್ಯವಹಾರಗಳನ್ನು ವಿಧಿವತ್ತಾದ ಶಾಸನಗಳ ಮೇರೆಗೆ ನಿರ್ಣಯಿಸುವ ಅಂಗ : "(ಒಂದು ರಾಜ್ಯದ ಎಲ್ಲ) ನ್ಯಾಯಾಧಿಪತಿಗಳು ; (ಪಾರಿ) ನ್ಯಾಯಾಂಗ" (Judiciary. ಪತ್ರಿನಿ. ೪೯).
[ನ್ಯಾಯ + ಅಂಗ$_2$]

**ನ್ಯಾಯಾಧಿಕರಣ** (ನಾ). = ನ್ಯಾಯಸ್ಥಾನ : ದೋಷಾರೋಪದ ಅನುಸಂಧಾನಕ್ಕಾಗಿ . . . ನಾಮೋದ್ದಿಷ್ಟವಾದ ಯಾವುದೊಂದು ನ್ಯಾಯಾಲಯವು ನ್ಯಾಯಾಧಿಕರಣವು ಅಥವಾ ನಿಕಾಯವು ರಾಷ್ಟ್ರಪತಿಯವರ ಆಚರಣೆಯನ್ನು ಪುನರ್ವಿಲೋಕನಕ್ಕೆ ಒಳಪಡಿಸಬಹುದು (ಭಾಧಾನ. ೨೧೪). [ನ್ಯಾಯ + ಅಧಿಕರಣ]

**ನ್ಯಾಯಾಧಿಪತಿ** (ನಾ). = ನ್ಯಾಯನಿರ್ಣಾಯಕ : "೧. ನ್ಯಾಯಾಧೀಶ, ನ್ಯಾಯಾಧಿಪತಿ, ತೀರ್ಪುಗಾರ. ೨. ಪರೀಕ್ಷಕ" (Judge. ಪತ್ರಿನಿ. ೪೮). [ನ್ಯಾಯ+ಅಧಿಪತಿ]

**ನ್ಯಾಯಾಧೀಶ** (ನಾ). = ನ್ಯಾಯನಿರ್ಣಾಯಕ : "೧. ನ್ಯಾಯಾಧೀಶ, ನ್ಯಾಯಾಧಿಪತಿ, ತೀರ್ಪುಗಾರ. ೨. ಪರೀಕ್ಷಕ" ( Judge. ಪತ್ರಿನಿ. ೪೮). [ನ್ಯಾಯ+ಅಧೀಶ]

**ನ್ಯಾಯಾಧ್ಯಕ್ಷ** (ನಾ). = ನ್ಯಾಯನಿರ್ಣಾಯಕ : "ಪ್ರಾಡ್ವಿವಾಕಃ, ಅರ್ಥದೃಶ್, ಸ್ಥೇಯಃ, ನ್ಯಾಯಾಧ್ಯಕ್ಷಃ—ಈ ೪ ನ್ಯಾಯಾಧ್ಯಕ್ಷಂ" (ಹಲಾಯು. ೭೧-೨೭೫). [ನ್ಯಾಯ+ಅಧ್ಯಕ್ಷ]

**ನ್ಯಾಯಾನಪೇತ** (ನಾ). ನ್ಯಾಯದಿಂದ ಕೂಡಿದುದು ; ನ್ಯಾಯಾನ್ವಿತವಾದುದು: "ಸಾರಮುದುತ್ಕೃಷ್ಟಬಲಂ ಸಾರಂ ನ್ಯಾಯಾನಪೇತಮುಂ ತಾನಕ್ಕುಂ" (ವಸ್ತುಕೋ. ೧೨೬-೫೨). [ನ್ಯಾಯ+ಅನಪೇತ]

**ನ್ಯಾಯಾನ್ವಿತ** (ಗು). ೧. ನ್ಯಾಯದಿಂದ ಕೂಡಿದ : ನ್ಯಾಯಾನ್ವಿತತತ್ತ್ವಾಭಿಪ್ರಾಯಂ ಪಸರಿಪುದು ಭಾಷೆ ಸಾಧುಜನಶ್ರದ್ಧೇಯಂ ಪರಪ್ರಮಾಣಾಜೇಯಂ ಸರ್ವಾರ್ಥಮಾಗಮಿಾಯಂ ಶ್ರೇಯಂ (ಚಂದ್ರಪು. ೧೬-೩೭). (ನಾ). ೨. ನ್ಯಾಯದಿಂದ ಕೂಡಿರುವವನು ; ನೀತಿವಂತ : ಕುಲಮಂ ನಾಭಿತನೂಭವಂ ಮಹಿಮೆಯಂ ಸತ್ಪಾತ್ರದಾನಂ ನಿರಾಕುಲಮಂ ಜೀವದಯಾರಸಂ ವಿಭವಮಂ ಪಂಚಾಂಗಮಂತ್ರಂ ಚತುರ್ಬಲಮಂ ಪ್ರಾಭವಮೆಯ್ದೆ ಮಾಡೆ ಪಡೆದಂ ನ್ಯಾಯಾನ್ವಿತಂ ತೊಟ್ಟನಾ ಬಲೆಯೊರ್ವಂ ತೆಗೆದಂತೆ ಬಂದುದು ವಯೋವಿಭ್ರಾಜಕಂ ರಾಜಕಂ (ಶಾಂತಿಪು. ೫-೭೫).
[ನ್ಯಾಯ + ಅನ್ವಿತ]

**ನ್ಯಾಯಾರ್ಜಿತ** (ಗು). ನೀತಿಯುಕ್ತವಾದ ಮಾರ್ಗದಲ್ಲಿ ಸಂಪಾದಿಸಿದ; ಉಚಿತಮಾರ್ಗದಲ್ಲಿ ಗಳಿಸಿದ : ನ್ಯಾಯಾರ್ಜಿತವಿತ್ತಂ ಧರ್ಮಾಯತ್ತಮೆನಿಪ್ಪ ರಾಜವೃತ್ತಂ ತನಗೇಕಾಯತ್ತಮಾಗೆ ಧರೆಯಂ ಜೀಯೆಂನಿಸಿದನಿಂತುದಾತ್ತಚರಿತರುಮೊಳರೇ (ಪಂರಾಮಾ. ೨-೭೦).
[ನ್ಯಾಯ + ಅರ್ಜಿತ]

**ನ್ಯಾಯಾಲಯ** (ನಾ). = ನ್ಯಾಯಸ್ಥಾನ : "ನ್ಯಾಯಾಲಯ, ನ್ಯಾಯಸ್ಥಾನ" (Judicature. ಪತ್ರಿನಿ. ೪೯).

**ನ್ಯಾಯಾಲಯ ಅವಮಾನ** = ನ್ಯಾಯಾಸ್ಥಾನದ ಆದೇಶ ಅಥವಾ ಕ್ರಮಗಳನ್ನು ಉಲ್ಲಂಘಿಸುವಿಕೆ : ಉಪಖಂಡದಲ್ಲಿ ಹೇಳಿರುವುದು ಯಾವುದೊಂದು ಕೂಡ, ಅಪಮಾನಲೇಖ, ಅಪಮಾನವಚನ, ಮಾನಹಾನಿ, ನ್ಯಾಯಾಲಯ ಅವಮಾನ, ಇವಕ್ಕೆ ಸಂಬಂಧಪಟ್ಟ ಮಟ್ಟಿಗೆ ಮತ್ತು ಶಿಷ್ಟಾಚಾರಕ್ಕೆ . . . ಭಂಗವನ್ನುಂಟುಮಾಡುವಂಥ . . . ಯಾವುದಾದರೂ ವಿಧಿಯ ಅಮಲಿಗೆ ಅಡ್ಡಿಯಾಗಿರತಕ್ಕುದಲ್ಲ (ಭಾಧಾನ. ೧೦).

**ನ್ಯಾಯಾಲಯದ ನಿಂದನೆ** = ನ್ಯಾಯಾಲಯ ಅವಮಾನ : "ನ್ಯಾಯಾಲಯಕ್ಕೆ ಅಗೌರವ (ತೋರುವುದು) ; ನ್ಯಾಯಾಲಯದ ನಿಂದನೆ" (Contempt of Court. ಪತ್ರಿನಿ. ೨೩). [ನ್ಯಾಯ+ಆಲಯ]

**ನ್ಯಾಯಾಸನ** (ನಾ). ನ್ಯಾಯಾಧೀಶನ ಪೀಠ. [ನ್ಯಾಯ+ಆಸನ]

**ನ್ಯಾಯಾಸ್ಥಾನ** (ನಾ). = ನ್ಯಾಯಸ್ಥಾನ. [ನ್ಯಾಯ + ಆಸ್ಥಾನ]

**ನ್ಯಾಯಿಕ** (ಗು). ನ್ಯಾಯಕ್ಕೆ ಸಂಬಂಧಪಟ್ಟ; ಕಾನೂನಿಗೆ ಸಂಬಂಧಿಸಿದ : "ನ್ಯಾಯಾಸ್ಥಾನದ, ನ್ಯಾಯಿಕ" (Judicial. ಪತ್ರಿನಿ. ೪೯). [ಸಂ.]

**ನ್ಯಾಯಿಕಪದ** (ನಾ). ನ್ಯಾಯಾಲಯಕ್ಕೆ ಸಂಬಂಧಪಟ್ಟ ಅಧಿಕಾರ ಅಥವಾ ಪದವಿ : ವಿವರಣೆ ೨–ಈ ಖಂಡದ ಉದ್ದೇಶಕ್ಕಾಗಿ, ಯಾರೊಬ್ಬರೇ ಆಗಲಿ . . . ಅವರು ಅಧಿವಕ್ತರಾದ ಮೇಲೆ ಜಿಲ್ಲಾ ನ್ಯಾಯಾಧೀಶಪದಕ್ಕೆ ಕಡಿಮೆಯಿಲ್ಲದ ನ್ಯಾಯಿಕಪದವನ್ನು ಧಾರಣ ಮಾಡಿದ್ದ ಅವಧಿಯನ್ನೂ ಸೇರಿಸತಕ್ಕುದು (ಭಾಧಾನ. ೬೭).
[ನ್ಯಾಯಿಕ + ಪದ$_2$]

**ನ್ಯಾಯಿಕಸೇವೆ** (ನಾ). ನ್ಯಾಯಾಲಯಕ್ಕೆ ಸಂಬಂಧಿಸಿದ ಸೇವೆ : "ನ್ಯಾಯಿಕಸೇವೆ" ಎಂಬ ಪದಗಳಿಗೆ, ಜಿಲ್ಲಾ ನ್ಯಾಯಾಧೀಶರ ಸ್ಥಾನವನ್ನು ಮತ್ತು ಜಿಲ್ಲಾ ನ್ಯಾಯಾಧೀಶರ ಸ್ಥಾನಕ್ಕಿಂತ ಕಡಮೆಯಾದ ವ್ಯವಹಾರ ನ್ಯಾಯಿಕಸ್ಥಾನಗಳನ್ನು ಭರ್ತಿ ಮಾಡಲು ಉದ್ದೇಶಿಸಿರತಕ್ಕ ಜನಗಳನ್ನೇ ಕೇವಲ ಒಳಗೊಂಡಿರತಕ್ಕ ಸೇವೆ ಎಂದರ್ಥ (ಭಾಧಾನ. ೧೨೯).
[ನ್ಯಾಯಿಕ + ಸೇವೆ$_1$]

**ನ್ಯಾಯಿಗ** (ನಾ). ನ್ಯಾಯವನ್ನು ನಿರ್ಣಯಿಸುವವನು : ಇದು ಹಿರಿದೊಂದು ತಪ್ಪೆಂದು ನ್ಯಾಯಿಗರು ಎಣಿಸಿದರು (ನವರಾ. IV, ೫೯-೨೧).
[ನ್ಯಾಯ+-ಇಗ]

**ನ್ಯಾಯೋಪಾರ್ಜಿತ** (ಗು). = ನ್ಯಾಯಾರ್ಜಿತ : ಅಂತಾತನತಿಪ್ರಬುದ್ಧಂ ಧನಕನಕಸಮೃದ್ಧಿಯೊಳ್ ನೆಱೆದಿಷ್ಟವಿಷಯಕಾಮಭೋಗಂಗಳನನುಭವಿಸುತ್ತುಂ ನ್ಯಾಯೋಪಾರ್ಜಿತವಿತ್ತನುಂ ಧರ್ಮಾಪಾದಿತಚಿತ್ತನುಮಾಗಿ ಕೆಲವುಕಾಲಂ ಸುಖಸಂಕಥಾವಿನೋದದಿನಿರ್ದು (ಪಂಚತಂ. ೨೨-೭).
[ನ್ಯಾಯ + ಉಪಾರ್ಜಿತ]

**ನ್ಯಾಯೋಲ್ಲಂಘನೆ** (ನಾ). ನ್ಯಾಯವನ್ನು ಮಿಾರುವಿಕೆ ; ಕಾನೂನನ್ನು ಅತಿಕ್ರಮಿಸುವಿಕೆ : ಇಂಥ ತೀರ್ಪಿಗೆ ನ್ಯಾಯೋಲ್ಲಂಘನೆಯೆ ಮತ್ತು ಕಾನೂನಿನ ದೋಷಗಳೆ ಪೂರ್ಣಕಾರಣವೆಂಬುದು ಸುಸ್ಪಷ್ಟ (ಪುನರು. ೨೦೩). [ನ್ಯಾಯ + ಉಲ್ಲಂಘನೆ]

**ನ್ಯಾಯ್ಯ** (ನಾ). ೧. = ನ್ಯಾಯ ೧: "ಯುಕ್ತಂ, ಔಪಯಿಕಂ, ಲಭ್ಯಂ, ಭಜಮಾನಂ, ಅಭಿನೀತಂ, ನ್ಯಾಯ್ಯಂ—೬ ತ್ರಿನ್ಯಾಯದಿಂದೊಡಗೂಡಿದ್ದಕ್ಕೆ ಹೆಸರುಗಳು, ತಿಳುವಳಿಕೆಯುಳ್ಳವರು ಒಡಂಬಡತಕ್ಕಂಥಾದ್ದು" (ಸಿದ್ಧಾಂತಿ. ೨೪೨). ೨. ಕ್ರಮವಾದುದು ; ಯೋಗ್ಯವಾದುದು ; ಅರ್ಹವಾದುದು ; ಉಚಿತವಾದುದು : "ಯುಕ್ತಂ, ಉಚಿತಂ, ನ್ಯಾಯ್ಯಂ, ಪ್ರಾಪ್ತಂ, ಔಪಯಿಕಂ—ಈ ೫ ಉಚಿತಂ" (ಹಲಾಯು. ೧೨೩-೬೧). [ಸಂ.]

**ನ್ಯಾಯ್ಯಯುಕ್ತ** (ನಾ). ಉಚಿತವೂ ನ್ಯಾಯವೂ ಆದುದು ; ಯೋಗ್ಯವಾದುದು : ಸುಮಂತ್ರನು . . . ಸಾವಧಾನದಿಂದ ಪರ್ಯಾಲೋಚಿಸಿ ನ್ಯಾಯ್ಯಯುಕ್ತವಾಗಿ ಮಾತನಾಡಿದ (ಕವಿಕ. ೨೭).
[ನ್ಯಾಯ್ಯ + ಯುಕ್ತ]

**ನ್ಯಾರಿ** 'ನೇರ್ಲೆ$_2$' ನೋ.

**ನ್ಯಾರೆ$_1$** 'ನೇರೆ$_1$' ನೋ.

**ನ್ಯಾರೆ$_2$** 'ನೇರೆ$_2$' ನೋ.

**ನ್ಯಾರೇಭತ್ತ** (ನಾ). ಒಂದು ಬಗೆಯ ಬತ್ತ ; ನೀವಾರ : ನೀವಾರ (ನ್ಯಾರೇಭತ್ತ). . .ಕಫ ಪಿತ್ತಗಳನ್ನು ನಾಶಮಾಡುವುವು(ಅಷ್ಟಾಂಗ.೧೧೪). [ನ್ಯಾರೆ$_1$(<ನೇರೆ$_1$)+ಭತ್ತ$_1$(<ಬತ್ತ$_1$)]

**ನ್ಯಾವಣ** 'ನೇವಳ' ನೋ.

**ನ್ಯಾವಣಿಸು** (ಕ್ರಿ). (ಬೆಡಗು, ಒಯ್ಯಾರಗಳಿಂದ) ನಿಧಾನಿಸು ; ತಡಮಾಡು : ಅವಳು ಮದುವೆಮಂಟಪಕ್ಕೆ ಬರಲು ತುಂಬ ನ್ಯಾವಣಿಸುತ್ತಿದ್ದಾಳೆ (ರೂಢಿ). [ನ್ಯಾವಣಿ$_0$(<ನೇವಣಿ)+-ಇಸು$_3$]

**ನ್ಯಾವರಿಸು** 'ನೇವರಿಸು' ನೋ.

**ನ್ಯಾವಳ** 'ನೇವಳ' ನೋ.

**ನ್ಯಾವಳಸರ** (ನಾ). ಒಂದು ಬಗೆಯ ಕಂಠಾಭರಣ : ನ್ಯಾವಳಸರ ಕಂಠಮಾಲೆ ಪದಕ ಕಂಬುಗ್ರೀವ ಸರಿಗೆ ದಿವ್ಯಚಂದನ ಲೇಪಿಸಿ (ವಿದ್ಯಾಕ್ಷ. ೧೧-೨). [ನ್ಯಾವಳ(<ನೇವಳ)+ಸರ$_3$]

**ನ್ಯಾವಳಿ** 'ನೇವಳ' ನೋ.

**ನ್ಯಾಸ** (ನಾ). **೧.** ಇಡುವಿಕೆ ; ಇರಿಸುವಿಕೆ. **೨.** ಕೇಳಿದಾಗ ಕೊಡುವಂತೆ ಹೇಳಿ, ನಂಬಿಕೆಯಿಂದ ಕಾಪಾಡುವುದಕ್ಕಾಗಿ ಇನ್ನೊಬ್ಬರಲ್ಲಿ ಇಟ್ಟ ವಸ್ತು : ಪೆತ್ತರೊಳ್ ಪೆಣ್ಣೊಡಮೆಯಿದು ನ್ಯಾಸಮಲ್ತೆ (ರಾಮಾಶ್ವ. ೬೮-೯) ; ಭರತನು ತನ್ನಲ್ಲಿ ನ್ಯಾಸವಾಗಿದ್ದ ರಾಜ್ಯವನ್ನು ಸಂತೋಷದಿಂದ ರಾಮನಿಗೆ ಒಪ್ಪಿಸಿದನು (ವಚಭಾ. ೪೧೪); ಒಡವೆಯನ್ನು ನ್ಯಾಸವಾಗಿಟ್ಟವರು ಬಂದು ಕೇಳಿದಾಗ ಹಿಂತೆಗೆಯುವುದು ... ಸಾಧುವಲ್ಲ (ಕುಮಾಸಾಂ. ೬೨). **೩.** ಹೊಂದುವ ಉಪಾಯ ; ಪಡೆಯುವ ಉಪಾಯ : ಅಧಿಗಮೋಪಾಯಮಂ ನ್ಯಾಸಮೆಂಬುದು (ತಸ್ವೃಪ.೩೦); ಪ್ರಮಾಣಮಂ ಜ್ಞಾನವೆಂಬುದು, ಅಧಿಗಮೋಪಾಯಮಂ ನ್ಯಾಸಮೆಂಬುದು, ಅಜೀವನ ಅಭಿಪ್ರಾಯಮಂ ನಯಮೆಂಬುದು (ತತ್ತ್ವಪ್ರ. ೭೬). **೪.** ಜಪ ಮತ್ತು ಪೂಜೆಯ ಕಾಲಗಳಲ್ಲಿ ಮಂತ್ರಪೂರ್ವಕವಾಗಿ ಅಂಗಗಳನ್ನು ಮುಟ್ಟಿಕೊಳ್ಳುವಿಕೆ,— ಸ್ಪರ್ಶಿಸಿಕೊಳ್ಳುವಿಕೆ : ಮೇಲಾ ಮಂತ್ರದಿಂ ಕರನ್ಯಾಸಂಗೈವಲ್ಲಿ . . . ಆದಿಮಧ್ಯಾಂತರಪರ್ವಗಳಲ್ಲಿ ಪ್ರತ್ಯೇಕ ಬಿಂದುಯುಕ್ತವಾದ ಅಕಾರ ಉಕಾರ ಮಕಾರಂಗಳಂ ನ್ಯಾಸಂ ಮಾಡಿ ಬಳಿಕಾ ಬಿಂದುಯುಕ್ತ ಪ್ರಣವವನಾ ಸರ್ವಾಂಗುಳಿಗಳಲ್ಲಿಯೂ ನ್ಯಾಸಂಗೈದು(ವಿವೇಕ. ೮೯) ; ಶತಪಂಚಾಕ್ಷರಿಯ ಜಪಿಸಿ ಲಿಂಗಬೀಜಾಕ್ಷರಗಳಿಂ ನ್ಯಾಸಮಂ ಮಾಡಿ ಪೂರ್ವದೋಷವನಳಿಯುತಂ (ಪಹಾವಿ. ೯-೨೦) ; ಆಸನದ ಸ್ಥಿತಿಯೂ ಒಂದು ನ್ಯಾಸವಾಗಿರುತ್ತದೆ. ನ್ಯಾಸಗಳಿಂದ ಶರೀರದಲ್ಲಿ ಮಾರ್ದವ ಮತ್ತು ಸುವ್ಯವಸ್ಥಿತವಾದ ಆಸನಸಿದ್ಧಿಯೂ ಉಂಟಾಗುತ್ತದೆ (ಭಾರದ. ೧೫೭). 'ಅಂಗನ್ಯಾಸ', 'ಕರನ್ಯಾಸ' ಪರಾ. **೫.** ವಿಧಾನ ; ರಚನೆ ; ರೀತಿ ; ಬಗೆ : ನ್ಯಾಸವೊಳ್ಪಿತು ಗುರುವಿನಭಿವಿನ್ಯಾಸಮೆಂತುಟೊ ಶಿವಶಿವಾ ಕಾಳಾಸ ತಪ್ಪದ ಕಳವಿನೆಸುಗೆಯ ಚಿತ್ರ ಲೇಸೆಂದ (ತೊರರಾ. ೪-೪-೩೫) ; ಕಲ್ ಬಂಡೆ, ರೂಪಾಂತರಂಬೆತ್ತು ಹೊಂಚಿರ್ಪ ಭದ್ರನೆಯ ಕಾಪಿನೋಲಂತೆ, ನಾನಾನ್ಯಾಸಮಂ ರಚಿಸಿ ಚಿತ್ರಮಾದುವು ಕಣ್ಗೆ (ಶ್ರೀರಾಮಾ. ೨೯೨-೧೯೩); ಮೊದಲಲ್ಲಿ ಕಠಿನತೆಯಿಂದ ಕೂಡಿದ್ದ ಇವರ ಮನಸ್ಸು . . . ಕೊನೆಗೆ ಅಪರಂಜಿಯಾಯಿತು. ಅದು ಹೀಗಾದ ವಿಚಿತ್ರನ್ಯಾಸವನ್ನು ನಾನು ಹೇಗೆ ವಿವರಿಸಬಹುದು ? (ಸುಬ್ಬಣ್ಣ. ೨). **೬.** ಇಡುಗಂಟು ; ಠೇವಣಿ : 'ನ್ಯಾಸಕಾರಿ' ಪರಾ. **೭.** ಧರ್ಮದರ್ಶಿಗಳ ಮಂಡಲಿ; ವಿಶ್ವಸ್ತಸಮಿತಿ : ಮೇಲಿನ (೧) ನೆಯ ಖಂಡದಲ್ಲಿ ಹೇಳಿರುವುದು ಯಾವುದೊಂದೂ, ಒಂದು ವಿದ್ಯಾಸಂಸ್ಥೆಯು ಆಡಳಿತವು ರಾಜ್ಯದಿಂದ ನಡೆಯುತ್ತಿದ್ದರೂ, ಅದರಲ್ಲಿ ಧಾರ್ಮಿಕ ಶಿಕ್ಷಣವನ್ನು ಕೊಡಬೇಕಾದ ಕಟ್ಟುಪಾಡುಗಳ ಯಾವುದಾದರೂ ಧರ್ಮಸ್ವಕ್ಕೆ ಅಥವಾ ನ್ಯಾಸಕ್ಕೆ ಅಧೀನವಾಗಿ ಆ ಸಂಸ್ಥೆಯು ಸ್ಥಾಪಿತವಾಗಿದ್ದಲ್ಲಿ ಆ ವಿದ್ಯಾಸಂಸ್ಥೆಗೆ ಅನ್ವಯಿಸತಕ್ಕುದಲ್ಲ (ಭಾಧಾನ. ೧೭). **೮.** ವ್ಯಾಖ್ಯಾನ ; ಭಾಷ್ಯ ; ಟೀಕೆ ; ಪಂಚಿಕೆ : 'ನ್ಯಾಸಕಾರ' ಪರಾ. **೯.** ಕಾದಂಬರಿ : ಇಂದು ಹಲಸಂಗಿಯ ಧೂಲಾಸಾಹೇಬರು ಇದೇ ಸಂಪ್ರದಾಯವನ್ನು ಅನುಸರಿಸಿ ಕನ್ನಡದಲ್ಲಿ ಕಾವ್ಯ, ಕತೆ, ನ್ಯಾಸಗಳನ್ನು ಬರೆಯುತ್ತಿದ್ದಾರೆ(ಕನ್ನಸು.I,೩೯). **೧೦.** 'ಕಾಶಕೃತ್ಸ್ನ' ಗ್ರಂಥಕ್ಕೆ ಜಿನೇಂದ್ರಬುದ್ಧಿಯು ಬರೆದ ವ್ಯಾಖ್ಯಾನ,—ಭಾಷ್ಯ : ತದುಪಾಧ್ಯಾಯಿಗಳು ೩ ಭಟ್ಟದರ್ಶನ ನ್ಯಾ[ಸ] ಪ್ರಭಾಕರವ್ಯಾಖ್ಯಾತೃಗಳ್ಗೂವರ್ಗ್ಗ೯೦ . . . ಸರ್ವ್ವನಮಸ್ಯವಾಗಿ ಕೊಟ್ಟ ಕೆಯ್ಯಾಣಿಕೇಶ್ವರದಗಟಾಂ ಬಡ[ಗ]ಮತ್ತರು ೧೦೦೦ . . . ಭಾಟ್ಟದರ್ಶನವ್ಯಾಖ್ಯಾತೃಗೆ ಮತ್ತರು ೩೫ ನ್ಯಾಸವ್ಯಾಖ್ಯಾತೃಗೆ ಮತ್ತರು ೩೦ ಪ್ರಭಾಕರವ್ಯಾಖ್ಯಾತೃಗೆ ಮತ್ತರು ೪೫ (ಕಇಅ.೬-೨-೧೯೩; 1058) ; ಭಟ್ಟವೃತ್ತಿ ನ್ಯಾಸದೆರೆ ಮತ್ತರು ೧೫ ಹರಳ್ಮತ್ತರು ೧೦ ಪ್ರಭಾಕರದೆರೆ ಮತ್ತ ೨೦ ಪರಳ್ಮತ್ತ ೧೦ ವೇದಾನ್ತದೆರೆ ಮತ್ತ ೧೫ ಹರಳ್ಮತ್ತರು ೧೦ (ಸೌಇಇ. XX,೩೦೦-೧೩ ; ಸು. 17ನೆಯ ಶತ). **೧೧.** [ಸಂಗೀತ] ಗ್ರಹಸ್ವರ, ಹಂಸಸ್ವರ, ನ್ಯಾಸಸ್ವರವೆಂಬ ಪ್ರಧಾನಸ್ವರಗಳಲ್ಲಿ ಒಂದು : ಗ್ರಹ, ಅಂಶ, ಮಂದ್ರ, ತಾರ ಹಾಗೆಯೇ ನ್ಯಾಸ, ಅಪನ್ಯಾಸ ನಂತರ ಸನ್ಯಾಸ, ವಿನ್ಯಾಸಗಳು, ಬಹುತ್ವ ಹಾಗೆಯೇ ಅಲ್ಪತ್ವ ರಾಗಗಳ ಈ ಹತ್ತು ಲಕ್ಷಣಗಳನ್ನು ಮುನಿಗಳು ಹೇಳಿದರು (ಚತುಪ್ರ.೫೪) ; ಒಂದೊಂದು ರಾಗಕ್ಕೂ ಹಾಡಲು ಪ್ರಾರಂಭಿಸಬೇಕಾದ ಸ್ವರ (ಗ್ರಹ), ಸ್ವರೂಪವನ್ನು ಚಿತ್ರಿಸಲು ಸಾಧ್ಯವಾಗುವ ಸ್ವರ (ಅಂಶ), ಒಂದೊಂದಕ್ಕೂ ಎರಡೆರಡರಷ್ಟು ಧ್ವನಿಪ್ರಮಾಣ ಹೆಚ್ಚುವ ಸ್ವರಸಪ್ತಕದ ಶ್ರೇಣಿ (ಮಂದ್ರ, ಮಧ್ಯ, ತಾರ), ಅಲ್ಲಲ್ಲಿ ನಿಲ್ಲಲು ಉಪಯುಕ್ತ ಸ್ವರಗಳು (ನ್ಯಾಸ, ಅಪನ್ಯಾಸ, ವಿನ್ಯಾಸ), ಸಪ್ತಸ್ವರಗಳಲ್ಲಿ ಎಷ್ಟು ಬಗೆಯ ರೂಪಕಗಳು ರಚಿತವಾಗಲು ಸಾಧ್ಯವೋ ಅರಿಯಲು ಪ್ರಸ್ತಾರ . . . ನಿಷ್ಕರ್ಷಿಸಲ್ಪಟ್ಟವು (ಭಾರದ. ೫೪೧) ; ನ್ಯಾಸ-ಅಂಶಸ್ವರದ ಸಂಬಂಧ ಹೊಂದಿ ರಾಗವನ್ನು ಮುಕ್ತಾಯಗೊಳಿಸುವ ಸ್ವರ (ಸಂಗೀಚಂ. ೨೩). 'ನ್ಯಾಸಸ್ವರ' ಪರಾ. **೧೨.** [ಗಣಿತ] ಅಗಲದ ಅಳತೆ : ನ್ಯಾಸವೆಂದರೆ ಅಡ್ಡಗಲವೆನಿಸುವದು (ಕ್ಷೇತ್ರಗ. ೫೭-೬). [ಸಂ.]

**ನ್ಯಾಸಕಾರ** (ನಾ). ವ್ಯಾಖ್ಯಾನಕಾರ; ವಿವರಣೆಕಾರ; ಭಾಷ್ಯಕಾರ: ಈ ನುಡಿ ನಿನಗಲ್ಲದೆ ದಿವಿಜಾನೀಕಕ್ಕಮರದವರ ವಚನಂ ಜಡಸಂಸ್ಥಾನಮ ವಿಜ್ಞೇಯಮದರ್ಕೇನಾನುಂ ನ್ಯಾಸಕಾರರಂ ತರವೇಟ್ಕುಂ (ಶಾಂತಿಪು. ೧೦-೧೮೦). [ಸಂ.]

**ನ್ಯಾಸಕಾರಿ** (ನಾ). ಠೇವಣಿ ಇಡುವವನು : "(ಹಣ,ಆಸ್ತಿ,ವೊ.ನ್ನು) ನ್ಯಾಸವಿಡುವವನು; ನ್ಯಾಸಕಾರಿ; ಠೇವಣಿಗ; ಠೇವಣಿದಾರ" (Depositor. ಇಂಕನಿ). [ಸಂ. ನ್ಯಾಸಕಾರಿನ್]

**ನ್ಯಾಸಧಾರಿ** (ನಾ). ತನಗೆ ವಹಿಸಿಕೊಟ್ಟ ವ್ಯಕ್ತಿ, ವಸ್ತುಗಳನ್ನು ನಂಬಿಕೆಯಿಂದ ಪಾಲಿಸುವವನು ; ವಿಶ್ವಸ್ತ : "ಯಾವನಿಗೆ ವಸ್ತುವನ್ನು ವಹಿಸಿದೆಯೊ ಅವನು : ನ್ಯಾಸಧಾರಿ" (Depository. ಇಂಕನಿ); ನೆಕ್ಲುದೋವನನ್ನು ಕಾನೂನುಬದ್ಧವಾದ ನ್ಯಾಸಧಾರಿಗೆ ವಶಪಡಿಸಬೇಕೆಂದು ರಾಗೊಜಿನ್‌ಸ್ಕಿ ತೀವ್ರಾಲೋಚನೆ ನಡೆಸಿದನು (ಪುನರು. ೪೧೯). [ಸಂ. ನ್ಯಾಸಧಾರಿನ್]

**ನ್ಯಾಸನಿರ್ವಾಹಕ** (ನಾ). = ನ್ಯಾಸಧಾರಿ : ಈಗ ನಾನೊಬ್ಬ ನ್ಯಾಸನಿರ್ವಾಹಕ . . . ನಾನೆ ಅವನ ವ್ಯವಹಾರವನ್ನೆಲ್ಲ ನಡೆಸುತ್ತಿದ್ದೇನೆ (ಪುನರು. ೩೧೧). [ನ್ಯಾಸ+ನಿರ್ವಾಹಕ]

**ನ್ಯಾಸಪೂರಿತ** (ನಾ). ಜಪ ಮತ್ತು ಪೂಜೆಯ ಕಾಲಗಳಲ್ಲಿ ಮಂತ್ರ ಪೂರ್ವಕವಾಗಿ ಅಂಗಾಂಗಗಳನ್ನು ಸ್ಪರ್ಶಿಸಿಕೊಳ್ಳುವ ಕ್ರಿಯಾ ವಿಶೇಷ : ಸಂತತಂ ಸಕಲಮಂತ್ರಗಳಿಗೆ ಮಾತೆಯುಪ್ಪಂತ ಪ್ರಣವೋಕ್ತ ಪಂಚಾಕ್ಷರದ ನ್ಯಾಸಪೂರಿತವಾಗಿ (ನಪಮೋ.೧೮-೨೭). [ನ್ಯಾಸ+ಪೂರಿತ]

**ನ್ಯಾಸವಸ್ತು** (ನಾ). ನಂಬಿಕೆಯಿಂದ ಕಾಯ್ದಿಡಲು ಕೊಟ್ಟ ವಸ್ತು : ನಿಜವಾಗಿ ಅದೊಂದು ನ್ಯಾಸವಸ್ತು. ಗೌರವದಿಂದ ಬೆಳೆಸ ಬಹುದು . . . ಕಡೆಗೆ ಇನ್ನೊಬ್ಬರ ಸ್ವಾಧೀನಮಾಡಬೇಕು (ಜಯಂತ. ೨೯೩). [ನ್ಯಾಸ+ವಸ್ತು]

**ನ್ಯಾಸವಿದ್ಯೆ** (ನಾ).[ವೇದಾಂತ]ಎಲ್ಲವನ್ನೂ ಪರಮಾತ್ಮನಿಗೆ ಒಪ್ಪಿಸುವ ವಿದ್ಯೆ ; ಶರಣಾಗತಿ ವಿದ್ಯೆ : ಈ ವಿದ್ಯೆಗಳಲ್ಲಿ ತೈತ್ತಿರೀಯ ಉಪನಿಷತ್ತಿನಲ್ಲಿ ವಿವರಿಸಿರುವಂತೆ ನ್ಯಾಸವಿದ್ಯೆಯು ಶರಣಾಗತಿವಿದ್ಯೆಯೆಂದು ಪ್ರಸಿದ್ಧಿಯಾಗಿದೆ (ಭಾರದ. ೨೬೪) ; ವೇದಾಂತದಲ್ಲಿ ಅಲ್ಲಲ್ಲಿ ಸಂಕ್ಷೇಪವಾಗಿ ಉಪದೇಶಿಸಲ್ಪಟ್ಟಿರುವ ನ್ಯಾಸವಿದ್ಯಾ, ಶರಣಾಗತಿ, ಪ್ರಪತ್ತಿ ಮೊದಲಾದ ಪದಗಳಿಂದ ವ್ಯವಹರಿಸಲ್ಪಡುವ ಸುಲಭವಾದ ಮೋಕ್ಷಸಾಧನವನ್ನು ವಿಸ್ತರಿಸಿ ಪಾಂಚರಾತ್ರಶಾಸ್ತ್ರವೆಂಬ ಭಗವಚ್ಛಾಸ್ತ್ರದಲ್ಲಿ ಭಗವಂತನು ಉಪದೇಶಿಸಿರುವನು (ಹಿಂದಸಾ. ೨೬೦). [ನ್ಯಾಸ+ವಿದ್ಯೆ]

**ನ್ಯಾಸಸ್ವರ** (ನಾ). = ನ್ಯಾಸ ೧೧ : ರಾಗಕ್ಕೆ ಮೂರುವಿಧ ಪ್ರಧಾನ ಸ್ವರಗಳುಂಟು. ಕ್ರಮವಾಗಿ ಅವು (೧) ಗ್ರಹಸ್ವರ, (೨) ಅಂಶಸ್ವರ, (೩) ನ್ಯಾಸಸ್ವರ . . . ರಾಗವನ್ನು ಮುಕ್ತಾಯಗೊಳಿಸುವ ಸ್ವರವೇ ನ್ಯಾಸಸ್ವರ (ಸಂಗೀಚಂ. ೨೨). [ನ್ಯಾಸ+ಸ್ವರ$_2$]

**ನ್ಯಾಸಾಪಹಾರ** (ನಾ). ನಂಬಿಕೆಯಿಂದ ಕಾಯ್ದಿಡಲು ಕೊಟ್ಟ ವಸ್ತುವನ್ನು ಮರಳಿ ಕೊಡದೆ ವಂಚಿಸುವಿಕೆ,—ಅಪಹರಿಸುವಿಕೆ: ನಾನಾಮಿಥ್ಯೋಪದೇಶಂ ಪುದಿದೊದವಿದ ಸಾಕಾರಮಂತ್ರಂ ರಹೋವ್ಯಾಖ್ಯಾನಂ ನ್ಯಾಸಾಪಹಾರಕ್ರಮಮನುಗತಿಯಿಂ ಕೂಟಲೇಖಕ್ರಿಯಾ ವಿಜ್ಞಾನಂ ಸತ್ಯವ್ರತಕ್ಕಿಂತಿವು ಪರಿವಿಡಿಯಿಂದಯ್ದತೀಚಾರಮಕ್ಕುಂ (ಸುಕುಸೂ. ೬-೧೪) ; ಬಯ್ಕೆಗೊಟ್ಟಾತಂ ಮಱೆದು ಕಿಱಿದಂ ಪೇಟ್ದೊಡ ನಿತನೆ ಕೊಟ್ಟುಟಿದುದಂ ವಂಚಿಸುವುದು ನ್ಯಾಸಾಪಹಾರಮಕ್ಕುಂ (ಶ್ರಾವಕಾ. ೧೨೬-೨). [ನ್ಯಾಸ+ಅಪಹಾರ]

**ನ್ಯಾಸಾರ್ಪಣ** (ನಾ). ನಂಬಿಕೆಯಿಂದ ಕಾಯ್ದಿಡಲು ಕೊಟ್ಟುದನ್ನು ಹಿಂದಕ್ಕೆ ಕೊಡುವಿಕೆ,–ಮರಳಿ ಒಪ್ಪಿಸುವಿಕೆ:(*). [ನ್ಯಾಸ+ಅರ್ಪಣ]

**ನ್ಯಾಸಿ** (ನಾ). = ನ್ಯಾಸಧಾರಿ : ೧೦. ನ್ಯಾಸ ಮತ್ತು ನ್ಯಾಸಿಗಳು. ೧೧. ಮಹಾಪ್ರಶಾಸಕರು ಮತ್ತು ಸರ್ಕಾರಿ ನ್ಯಾಸಿಗಳು (ಭಾಧಾನ. ೨೯೪). [ಸಂ. ನ್ಯಾಸಿನ್]

**ನ್ಯಾಸ್ತಾ** (ನಾ). ಸ್ನೇಹ ; ಗೆಳೆತನ : ಇವರ ನ್ಯಾಸ್ತಾ ಬಾಳಾ ಬೆಳೀತಿದೆ (ಚಂದತೋ. ೧೬೩). [ ? ]

**ನ್ಯಾಹರಿ** 'ನೇರೆ$_2$' ನೋ.

**ನ್ಯಾಹರೆ** 'ನೇರೆ$_2$' ನೋ.

**ನ್ಯುಬ್ಜ** (ನಾ). ೧. ಕೆಳಗೆ ಬಾಗಿದುದು,—ಬಗ್ಗಿದುದು ; ಅಧೋಮುಖವಾದುದು. ೨. ತಲೆಬಾಗಿದವನು ; ಅಧೋವದನನಾದವನು : "ನ್ಯುಬ್ಜಃ, ಅಧೋಮುಖಃ—ಈ ೨ ತಲೆಯಂ ಬಾಗಿರ್ಪವಂ" (ಹಲಾಯು. ೬೩-೨೩೦). ೩. ಕುಳ್ಳ ; ಕುಬ್ಜ ; ಗಿಡ್ಡ. ೪. ಬೆನ್ನು ಬಾಗಿದವನು ; ಗೂನ. ೫. ಒಂದು ಬಗೆಯ ನಿಂಬೆ. ೬. ಆಲದ ಮರ ; ನ್ಯಗ್ರೋಧ. ೭. ರೋಗದಿಂದ ಕುಗ್ಗಿದವನು,—ಕಂದಿದವನು : "ನ್ಯುಬ್ಜಃ-ರುಜಾಭುಗ್ನೇ-ರೋಗದಿಂದ ದುರ್ಬಲನಾಗಿ ಬೊಗ್ಗಿ ಹೋದವನ ಹೆಸರುಗಳು, ರೋಗದಿಂದ ಕಂದಿದವನು" (ಸಿದ್ಧಾಂತಿ.೧೮೬). [ಸಂ.]

**ನ್ಯುಮೋನಿಯ, ನಿಮೋನಿಯ** (ನಾ). ಶ್ವಾಸಕೋಶಕ್ಕೆ ಸಂಬಂಧಿಸಿದ ಒಂದು ಬಗೆಯ ರೋಗ ; ಶ್ವಾಸಕೋಶದ ಉರಿಯೂತ : ಆ ಮಗು ನ್ಯುಮೋನಿಯಾದಿಂದ ನರಳುತ್ತಿದೆ (ರೂಢಿ). **ನಿಮೋನಿಯ:** ಮಗುವು ಜ್ವರದಿಂದ ನರಳುತ್ತಿದ್ದರೂ ನಿಮೋನಿಯಾದಿಂದ ಏದುತ್ತಿದ್ದರೂ ಮನೆಯಲ್ಲಿರುವ ಮುದುಕರು ಮಗುವಿಗೆ ಇಂಜೆಕ್ಷನ್ನನ್ನಾಗಲೀ, ಔಷಧವನ್ನಾಗಲೀ ಕೊಡಲು ಅವಕಾಶವನ್ನೇ ಕೊಡುವುದಿಲ್ಲ (ಕೆಲರೋ. ೧). [←ಇಂ. Pneumonia]

**ನ್ಯೂನ** (ಗು). ೧. ಕೊರತೆಯುಳ್ಳ ; ಕಡಮೆಯ ; ಸಮಗ್ರವಲ್ಲದ. ೨. ಕೀಳಾದ ; ತುಚ್ಛವಾದ. (ನಾ). ೩. ಕೊರತೆ ; ದೋಷ : ಇಲ್ಲಿ 'ಅಪೂರ್ವವಿರಿಂಚ'ನೆಂದು ಹೇಳಿರುವುದರಿಂದ ಬ್ರಹ್ಮನಿಗೆ ಅಸಾಧಾರಣವಾದ ಚತುರ್ಮುಖತ್ವಾದಿಗಳಿಲ್ಲದಿರುವುದು ನ್ಯೂನವಾಗಿ ಕಾಣುತ್ತದೆ (ಕೈಪಿಡಿ. ೨೬೪).

**ನ್ಯೂನಾತಿರೇಕ** = ಕಡಮೆ ಮತ್ತು ಹೆಚ್ಚು ; ಹೆಚ್ಚು ಕಡಮೆ ; ಏರುಪೇರು : ನ್ಯೂನಾತಿರೇಕಗಳು ಎಲ್ಲರಲ್ಲಿಯೂ ಇರುತ್ತವೆ (ರೂಢಿ). **ನ್ಯೂನಾಧಿಕ್ಯ** = ನ್ಯೂನಾತಿರೇಕ : ಇದರಿಂದ ಹವೆಯ ಸ್ಥಿರತ್ವದಲ್ಲಿ ನ್ಯೂನಾಧಿಕ್ಯವಾದಂತೆ, ಸಮುದ್ರದ ಸ್ಥಿರತ್ವದಲ್ಲಿಯೂ ನ್ಯೂನಾಧಿಕ್ಯವಾಗುತ್ತದೆಂದು ತಿಳಿಯುತ್ತದೆ (ಮುಂಬಯಿ. ೬-೨೦೦). [ಸಂ.]

**ನ್ಯೂನಗಂಡ** (ನಾ). ಉಳಿದವರಿಗಿಂತ ತಾನು ಕೀಳೆಂಬ ಭಾವನೆ ; ನೈಚ್ಯಾನುಸಂಧಾನ : ಶತಮಾನಗಳಿಂದ ಅಂಧಶ್ರದ್ಧೆ, ಅಜ್ಞಾನ, ದಾಸ್ಯ . . . ನ್ಯೂನಗಂಡ, ಮೂಢಭಾವನೆ . . . ಇವನ್ನೆ ಪುರುಷಾರ್ಥವೆಂದೂ ಪರಮಾರ್ಥವೆಂದೂ ಭಾವಿಸಿ, ಅನುಭವಿಸಿ ಬದುಕಿ ಬಂದ ಜನತೆಯಲ್ಲಿ . . . ರಾಜಕಾರಣಕ್ಕೆ ಎಲ್ಲೂ ಇಲ್ಲದ ಎಂದೂ ಸಲ್ಲದ ಮಹತ್ವ ಬರುತ್ತದೆ (ವಿಚಾಪಾ. ೮೮). [ನ್ಯೂನ+ಗಂಡ? ]

**ನ್ಯೂನತಾದ್ರೂಪ್ಯರೂಪಕ** (ನಾ). [ಕಾವ್ಯಮೀ] ತಾದ್ರೂಪ್ಯರೂಪಕಾಲಂಕಾರಗಳಲ್ಲಿ ಒಂದು ಬಗೆ ; ಆರೋಪ ಮಾಡುವ ವಸ್ತುವಿಗಿಂತ ಆರೋಪಿಸಿಕೊಳ್ಳುವ ವಸ್ತುವಿನಲ್ಲಿ ನ್ಯೂನತೆ ತೋರುವ ತಾದ್ರೂಪ್ಯರೂಪಕ : ಇಂತು ತಾದ್ರೂಪ್ಯರೂಪಕಮುಂ ಅನುಭಯತಾದ್ರೂಪ್ಯರೂಪಕಮೆಂದುಂ ನ್ಯೂನತಾದ್ರೂಪ್ಯರೂಪಕಮೆಂದುಂ ಅಧಿಕತಾದ್ರೂಪ್ಯರೂಪಕಮೆಂದುಂ ಮೂಱುಂ ತೆಱಂ (ಅಪ್ರತಿ. ೪೨-೯) ; ವದನಚತುಷ್ಕಮಿಲ್ಲದ ರಜೋಗುಣಮಿಲ್ಲದ ಪದ್ಮಪೀಠವಿಲ್ಲದ ಕಳಹಂಸವಿಲ್ಲದ ಕಮಂಡಲುವಿಲ್ಲದ ಪಾಶರಜ್ಜುವಿಲ್ಲದ ವಿಮಳಾಕ್ಷಮಾಲಿಕೆಯುಮಿಲ್ಲದಪೂರ್ವವಿರಿಂಚಧರ್ಮಕೋವಿದ ನಯಯುಕ್ತದಾನಪತಿ ಪೇಟ್ದಪೆನಾಂ ನಿನಗೊಂದು ಕಾರ್ಯಮಂ—ಇಲ್ಲಿ 'ಅಪೂರ್ವವಿರಿಂಚ'ನೆಂದು ಹೇಳಿರುವುದರಿಂದ ಬ್ರಹ್ಮನಿಗೆ ಅಸಾಧಾರಣವಾದ ಚತುರ್ಮುಖತ್ವಾದಿಗಳಿಲ್ಲದಿರುವದು ನ್ಯೂನವಾಗಿ ಕಾಣುತ್ತದೆ. ಆದ್ದರಿಂದ ಇದು ನ್ಯೂನತಾದ್ರೂಪ್ಯರೂಪಕ (ಕೈಪಿಡಿ. ೨೬೪). [ಸಂ.]

**ನ್ಯೂನತೆ** (ನಾ). ಕೊರತೆ ; ಅಪೂರ್ಣತೆ ; ಲೋಪ : ಮೆದುಳಿನ ಯಾವುದಾದರೊಂದು ವಿಶೇಷಾಂಶ ನಷ್ಟವಾದಲ್ಲಿ ಸ್ಮೃತಿಯೇ ಮೊದಲಾದ ಮೆದುಳಿನ ಶಕ್ತಿಗಳಲ್ಲಿ ನ್ಯೂನತೆ ಉಂಟಾಗುತ್ತದೆ (ಜೀಪಾತ್ಮ. ೫೮) ; ಈ ಪದ್ಧತಿಯಲ್ಲಿರುವ ಮುಖ್ಯ ನ್ಯೂನತೆ : ಒಂದು ನಕ್ಷತ್ರದ ದಿಗಂಶ ಕೋನೋನ್ನತಿಗಳು ಏಕಕಾಲದಲ್ಲಿ ಒಂದೊಂದು ವೀಕ್ಷಣಸ್ಥಾನಕ್ಕೂ ಬೇರೆ ಬೇರೆಯಾಗಿರುತ್ತವೆ, ಒಂದೇ ಸ್ಥಾನದಲ್ಲಿ ಕಾಲಕಾಲಕ್ಕೂ ಬೇರೆ ಬೇರೆಯಾಗುತ್ತಿರುತ್ತವೆ ಎಂಬುದು (ನಕ್ಷತ್ರ. ೬೬); ಪದಗಳ ಅರ್ಥ ಮಬ್ಬು ಮಬ್ಬಾಗಿ ತಿಳಿದಿರುವುದೂ ಒಂದು ನ್ಯೂನತೆಯೇ (ಶಿಕ್ಷದ. ೫೪೪). [ಸಂ. ನ್ಯೂನತಾ]

**ನ್ಯೂನಪದ** (ನಾ). [ಕಾವ್ಯಮಿ಼ಾ] ಕಾವ್ಯರಚನೆಯ ದೋಷಗಳಲ್ಲಿ ಒಂದು ; "ಪ್ರಕೃತಾರ್ಥವನ್ನು ತಿಳಿಸುವುದಕ್ಕೆ ಸಾಕಾಗುವಷ್ಟು ಪದಗಳನ್ನು ಉಪಯೋಗಿಸಿಲ್ಲದಿರುವುದು" (ಕೈಪಿಡಿ. ೨೨೮). [ನ್ಯೂನ + ಪದ$_{2}$]

**ನ್ಯೂನಪೂರ್ತಿ** (ನಾ). ಕಡಮೆಯಾಗಿರುವುದನ್ನು ತುಂಬಿ ಪೂರ್ಣಗೊಳಿಸುವಿಕೆ ; ಕೊರತೆಯನ್ನು ನಿವಾರಿಸುವಿಕೆ : ಇದರಿಂದ ಕೇವಲ ಅಲಂಕಾರಕ್ಕೋಸ್ಕರವಲ್ಲದೆ, ನ್ಯೂನಪೂರ್ತಿಯ ಸಲುವಾಗಿ ಸಂಸ್ಕೃತ ಶಬ್ದಗಳು ದ್ರವಿಡಭಾಷೆಗಳಲ್ಲಿ ಸೇರಿಸಲ್ಪಡಲಿಲ್ಲವೆಂದು ತಿಳಿಯುವುದು (ಪಮುಂಬಯಿ. ೫–೨೪೦). [ನ್ಯೂನ + ಪೂರ್ತಿ$_{1}$]

**ನ್ಯೂನಪೋಷಣೆ** (ನಾ). (ತಕ್ಕಷ್ಟು ಆಹಾರ)ಪೋಷಣೆ ಇಲ್ಲದಿರುವಿಕೆ: "ತಕ್ಕಷ್ಟು, ಸರಿಯಾದ, ಆಹಾರಪೋಷಣೆ ಇಲ್ಲದಿರುವುದು : ನ್ಯೂನಪೋಷಣೆ" (Malnutrition. ಇಂಕನಿ). [ನ್ಯೂನ + ಪೋಷಣೆ]

**ನ್ಯೂನಭ್ರೂಣ** (ನಾ). ಸರಿಯಾಗಿ ಬೆಳೆಯದಿರುವ ಭ್ರೂಣ ; ಅಪೂರ್ಣಭ್ರೂಣ : ಅಂಡ ಒಂದು ಶಬಲಚಿತ್ರದಂತಾಗಿ (Mosaic) ಜೀವಕಣಗಳು ಆಯಾ ಸ್ಥಳದಲ್ಲಿ ಸೇರಿರುವ ಆಧಾರದ ಮೇಲೆ ಅವುಗಳ ಮುಂದಿನ ಕಾರ್ಯಗಳನ್ನು ಮುನ್ಸೂಚಿಸಬಹುದು. ಯಾವುದೇ ಭಾಗ ಕೆಟ್ಟರೆ ನ್ಯೂನಭ್ರೂಣ ಉತ್ಪತ್ತಿಯಾಗುತ್ತದೆ (ಕೀಟಬಿ. ೧೦೫). [ನ್ಯೂನ + ಭ್ರೂಣ]

**ನ್ಯೂನಶ್ರುತಿ** (ನಾ). [ಸಂಗೀತ] ಪ್ರಮಾಣ, ನ್ಯೂನ ಹಾಗೂ ಪೂರ್ಣವೆಂಬ ಶ್ರುತಿಯ ಮೂರು ಹಂತಗಳಲ್ಲಿ ಒಂದು : ಇವುಗಳಲ್ಲಿ ಮೊದಲ ಹಂತ, 'ಪ್ರಮಾಣಶ್ರುತಿ', ಎರಡನೆಯದು 'ನ್ಯೂನಶ್ರುತಿ' ಮತ್ತು ಮೂರನೆಯದು 'ಪೂರ್ಣಶ್ರುತಿ'—ಹೀಗಿದೆ ಪ್ರಾಚೀನಶಾಸ್ತ್ರಕಾರರ ಒಂದು ಶ್ರುತಿಯಲ್ಲಿನ ಕ್ರಮವಾದ ಹಂತಗಳ ವಿಭಜನೆ (ಸಂಗೀಚಂ. ೮). [ನ್ಯೂನ + ಶ್ರುತಿ]

**ನ್ಯೂನಾಕ್ಷರ** (ನಾ). [ಛಂದ] ಪದ್ಯದಲ್ಲಿ ಅಕ್ಷರ ಕಡಮೆಯಾದ ಪದ ಅಥವಾ ಪಾದ : ಮೊದಲ ಪದಂ ನ್ಯೂನಾಕ್ಷರಮುದಱಿಂದೆ ಬಱಿಕ್ಕಮರ್ಥಮಧಿಕಾಕ್ಷರಮಿಂತಿದಱಿಂ ಛಂದೋಭಂಗಂ ಪದನಱಿದದ ನಿಂತು ಸಮಱಿ ಪೇೞ್ದೊಡೆ ಚೆಲ್ವಂ (ಕವಿರಾ. ೧–೯೨) ; ಪದ್ಯಪಾದದ ಕಡೆಯ ಗಣದಲ್ಲಿ ಒಂದು ಅಕ್ಷರ ಸಾಲದಿರುವ: ನ್ಯೂನಾಕ್ಷರ (Catalectic. ಇಂಕನಿ). 'ಅಧಿಕಾಕ್ಷರ' ಪರಾ. [ನ್ಯೂನ + ಅಕ್ಷರ]

**ನ್ಯೂನಾಭಿವೃದ್ಧ** (ಗು). ಚೆನ್ನಾಗಿ ಬೆಳೆಯದ ; ಅಭಿವೃದ್ಧಿ ಕುಂಠಿತವಾದ : "ಅಭಿವೃದ್ಧಿ ಕೊರೆಯಾದ ; ನ್ಯೂನಾಭಿವೃದ್ಧ" (Under-developed. ಪತ್ರಿನಿ. ೮೬). [ಸಂ.]

**ನ್ಯೂನಾಭಿವೃದ್ಧಿ** (ನಾ). ಏಳಿಗೆಯಲ್ಲಿನ ಕೊರತೆ ; ಅಭಿವೃದ್ಧಿಯಲ್ಲಿ ಅಭಾವವಿರುವಿಕೆ : "ಅಲ್ಪಾಭಿವೃದ್ಧಿ ; ನ್ಯೂನಾಭಿವೃದ್ಧಿ" (Under-development. ಪತ್ರಿನಿ. ೮೬). [ನ್ಯೂನ + ಅಭಿವೃದ್ಧಿ]

**ನ್ರಿತ್ಯಮಂಟಪ** (ನಾ). ನರ್ತನಶಾಲೆ : ಗ್ರಿಹ××× ದಿಂ ಬ[ಳ]ಸಿದ ಪರಿಸೂತ್ರ ನ್ರಿತ್ಯಮಂಟಪದಿಂದಂ ಜಳರುಹನಾಭನ ಭವನದ ಮಿಳಿರ್ವ್ಪ ×××ಳೊಳೆಸೆಗುವತಿಶಯದಿಂದ (ಸೌಇಇ. XX, ೧೧೧–೪೨ ; 1140). [<ಸಂ. ನೃತ್ಯಮಂಡಪ]

**ನ್ರಿಪತಿ** (ನಾ). ರಾಜ ; ದೊರೆ : 'ಪರನ್ರಿಪತಿ' ಪರಾ. [<ಸಂ. ನೃಪತಿ]

**ಪ₁** (ನಾ). **೧.** ಕನ್ನಡ ವರ್ಣಮಾಲೆಯ ನಲವತ್ತೊಂದನೆಯ ಅಕ್ಷರ; ಪಕಾರ: ಅಚ್ಚಗನ್ನಡದಲ್ಲಿ ೪೭ ಅಕ್ಷರಗಳಿವೆಯೆಂದು ಕೇಶಿರಾಜನು ಹೇಳಿರುತ್ತಾನೆ. ಆ ಅಕ್ಷರಗಳು ಯಾವುವೆಂದರೆ . . . (ii) ವ್ಯಂಜನಗಳು :— ವರ್ಗೀಯ : ಕ ಖ . . . ಪ ಫ ಬ ಭ ಮ (ಶ್ಯಪಿತಿ. ೩). **೨.** ಶಾಸನಗಳಲ್ಲಿ ಬರುವ 'ಪಣ' ಎಂಬುದರ ಸಂಕ್ಷಿಪ್ತರೂಪ: ದಾಸಯ ಶಣಂಗಿಯರ ಬಿದ್ದಣ್ಣಂ ಬಿಟ್ಟ ಗ ೧ ಪ ೫ (ಸೌಇಇ. XI–ii, ೧೪೯–೫; 1106). **೩.** [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: "ಸಿರುತದಿಂ ಕಟಪ[ಯ]ಮೆನಲ್ಕೊಂದು" (ಮಂಗರಾ. ೧೦೪–೧೦). **೪.** [ಸಂಗೀತ] ಸಪ್ತಸ್ವರಗಳಲ್ಲಿ ಒಂದು; ಪಂಚಮಸ್ವರ: "ಷಡ್ಜಮಾ ಋಷಭಮಾ ಗಾಂಧಾರಮಾ ಮಧ್ಯಮಂ ವಿಸಾಱಿಪ್ಪ ಪಂಚಮಂ ಧೈವತಂ ಸುನಿಷಾದಮೋರಂತೆ ಸಪ್ತಸ್ವರಂಗಳಕ್ಕ ವಱಲ್ಲಿ ತೋಱುವಕ್ಷರಾದಿ ಸಂಜ್ಞೆಗಳು ಪುಟ್ಟಿದುವು ಸರಿಗಮಪಧನಿಸ ಯೆಂಬಿವು" (ಮಂಗರಾ. ೨೩–೩); ಸಪ್ತಸ್ವರಗಳು ಏರಿಕೆಯ ಕ್ರಮದಲ್ಲಿ ಅನುಕ್ರಮಿಸುವುದು ಆರೋಹಣವೆನಿಸುತ್ತದೆ. ಉದಾ :— ಸ ರಿ ಗ ಮ ಪ ಧ ನಿ ಸ (ಸಂಗೀಚಂ. ೧೭).

**ಪ₂,** –ಹ₂ (ಪ್ರ). ಒಂದು ಕೃದಂತಭಾವನಾಮ ಪ್ರತ್ಯಯ: ಕುದಿಪ, ಕುದಿಪಂಗಳ್; ಮಿದಿಪ, ಮಿದಿಪಂಗಳ್ (ಶಬ್ದಾನು. ೫೬೨ ವೃತ್ತಿ); ಭಾವಾರ್ಥದ ಕೃತ್ತ್ಯಯಗಳು ಅನೇಕವಾಗಿರುವುವು. ಅವುಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಿದೆ . . . ಪ—ಬರೆ–ಬರೆಪ (ಕೈಪಿಡಿ. ೧೭). –**ಹ₂** : 'ಅಪ್ಪಿಕೊಳುಹ', 'ಪಿಡಿಹ', 'ಪಿಸುಣಾಡುಹ' ಪರಾ.

**ಪ₃** (ಪ್ರ). ಒಂದು ಭಾವನಾಮ ಪ್ರತ್ಯಯ; ⒫ ಸಂಸ್ಕೃತದಲ್ಲಿಯ 'ಧರಣಿಪ', 'ಭೂಮಿಪ' ಮೊದಲಾದ ಶಬ್ದಗಳ ಅನುಕರಣದಿಂದ 'ಪೊಡವಿಪ', 'ಮಲೆಪ' ಮೊದಲಾದ ದೇಶ್ಯ ಶಬ್ದಗಳಲ್ಲಿ ಕಂಡುಬರುವ ಒಂದು ಪ್ರತ್ಯಯ.

**ಪಉಜುದಾರ** 'ಫೌಜುದಾರ' ನೋ.

**ಪಉಳಿ** 'ಪೌಳಿ₁' ನೋ.

**ಪಂ** 'ಪನ್₂' ನೋ.

**ಪಂಕ₁** (ನಾ). **೧.** ಕೆಸರು; ರಾಡಿ; ಕರ್ದಮ: "ಪಂಕಃ, ಸಾದಃ, ನಿಷದ್ವರಃ, ಜಂಬಾಳಃ, ಕರ್ದಮಃ, ಅವಕಿಲಃ—ಈ ೬ ಕೆಸಱು" (ಹಲಾಯು. ೧೧೨–೫೭); ಬಡಪಸು ಪಂಕದಲ್ಲಿ ಬಿದ್ದೊಡೆ ಕಾಲ ಬಡಿವುದಲ್ಲದೆ ಬೇಱೆ ಗತಿಯುಂಟೆ (ಬಸವ. ೫೩); ಕಪಿಲೇಶಲಿಂಗದಭಿಷೇಕಕ್ಕೆ ಭಕುತಿಯಿಂದೋರ್ವ ಪನ್ನೊಂದು ಸಾಸಿರಕುಂಭಕ್ಷೀರವನು ಎಱೆಯಲಾಗ ವಸುಧೆಯೊಳು ಪರಿದು ಪಂಕಮದಾಗೆ (ಪ್ರೌಢರಾ. ೨೧–೪); ಓ ಭಾವ ಗಂಗಾವೇಣಿ . . . ಮುಟ್ಟಿದರೆ ನಿನ್ನ ಮೆಯ್ಯ್, ರಾಮಾಂಘ್ರಿ ಸೋಂಕಿದೊಡನೆಯೆ ಕಲ್ಲು ಕಡುಚೆಲ್ವು ಪೆಣ್ಣಾಗಿ ಸಂಭವಿಸಿದೋಲ್ ಪಂಕದಿಂ ಕಲಾಪಂಕಜಂ ಕಂಗೊಳಿಪುದಯ್ (ಶ್ರೀಂಘಾಪು. ೫–೧೩೨). **೨.** (ಗಂಧವೇ ಮೊದಲಾದ ಮಂದವಾದ) ವಿಲೇಪನ ದ್ರವ್ಯ; ದೇಹಕ್ಕೆ ಬಳಿದುಕೊಳ್ಳುವ ಕಲ್ಕ: ಚಂದನಪಂಕಾರ್ದ್ರಂಗಳಪ್ಪ ಕರಕಮಲಂಗಳಂ ಮುಗಿದು (ಕಾದಂಪೂ. ೮೮೫); ಮಾಸರಮೊಕ್ಕ ಕತ್ತುರಿಯ ಪಂಕಮನಲ್ಲದೆ ಪಂಕಮಂ . . . ಅಱಿಯಂ (ಸುಕುಮಾ. ೧೦–೧೦೭); ಗಿರಿಜಾ ಸುಸ್ತನವಿಲೇಪ ನವ ಕಸ್ತೂರಿ ಪಂಕಾಂಕ ಹಸ್ತಪಲ್ಲವಯುಗ . . . ನಮಸ್ತೇ ವಿರೂಪಾಕ್ಷ (ಚಿಬಪು. ೩೭–೧). **೩.** ಕೊಳೆ; ಹೊಲಸು; ಮಲ: ಪೊಡೆಯೊಳ್ ತುಂಬಿರೆ ಪಂಕ ಮೇಲೆ ತೊಳೆಯಲ್ ತಾಂ ಶುದ್ಧನೇನಪ್ಪನೇ (ಸೋಮೇಶ. ೯೭). **೪.** ಪಾಪ; ಪಾತಕ: "ಪಂಕಂ, ಪಾಪಂ . . . ದುಷ್ಕೃತಂ–೧೨ ಪಾಪದ ಹೆಸರುಗಳು" (ಸಿದ್ಧಾಂತಿ. ೪೨); ಮುಟ್ಟಿ ಸೇವಿಪರ ಪಂಕಮನೊರ್ಮೊದಲೊಳ್ ಪಾಟ್ಸಿಡಿಸುತುಂ . . . ವಿಶ್ವರೂಪಿಣಿಯೆನೆ ಮೆಱೆವ ನೆಲೆಗಾಣದ ನಿನ್ನೀ ಮೈಮೆಯಂ ಬಣ್ಣಿಸಲಾವಂ ಸಾಲ್ವಂ (ರಾಮಾಶ್ವ. ೩೧–೩). **೫.** (ಅಲಂ) ಕ್ಲೇಶ, ಬಾಧೆ: ಜನರಿವರು ಬಡತನದ ಪಂಕದಲಿ ಮಿಳಮಿಳನೆ ಪುಳುಗಳಂತುದಿಸುವರು ಸಾಯುವರು (ನಾಗರಿ. ೪೧–೯೯); ನೀವು ಹೀಗೆಯೇ ಪಾರತಂತ್ರ್ಯದ ಪಂಕದಲ್ಲಿ ಚಿರಕಾಲ ಕೊಳೆಯುತ್ತಿ . . . ನಿಮ್ಮ ಧರ್ಮದ ಪದ್ಧತಿಯನ್ನು ನಿಮ್ಮ ಕೈಯಿಂದಲೇ ಮುರಿಯುವಷ್ಟು ನಾಸ್ತಿಕರು ನೀವಾಗಬೇಕಾದೀತು (ಧಾರ್ಮಿತೀ. ೨೦೫). [ಸಂ.]

**ಪಂಕ₂** 'ಪಂಖ' ನೋ.

**ಪಂಕಜ** (ನಾ). **೧.** ಕೆಸರಿನಲ್ಲಿ ಹುಟ್ಟಿದುದು; ತಾವರೆ; ಕಮಲ: "ಸಹಸ್ರಪತ್ರಂ . . . ಅರವಿಂದಂ, ಪದ್ಮಂ, ಪಂಕಜಂ—ಈ ೧೭ ತಾವರೆ" (ಹಲಾಯು. ೧೧೨–೫೭); ಪಂಕಜಮುಂ ಸುಹೃದ್ವದನಪಂಕಜಮುಂ ಮುಗಿವನ್ನಮುಗ್ರತೇಜಂ ಕಿಡುತಿರ್ಪಿನಂ . . . ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್ (ಗದಾಯು. ೯–೩೪); ಚಿಪ್ಪಿನೊಳ್ ಮುತ್ತು ಕಾಸಾರದೊಳ್ ಪಂಕಜಂ . . . ಪುಟ್ಟುವಂತಿರೆ ಪುಟ್ಟಿದಂ ಶಿವನ ಶಿಶುವಲ್ಲಿ (ಬಸರ. ೧–೧೨೫). **೨.** [ಛಂದ] ಸಂಕೃತಿ ಎಂಬ ಅಕ್ಷರ ಛಂದಸ್ಸಿನಲ್ಲಿ ಒಂದು ವೃತ್ತ; ಪ್ರತಿಪಾದದಲ್ಲೂ ಇಪ್ಪತ್ತುನಾಲ್ಕು ಅಕ್ಷರಗಳ ನ, ಜ, ಭ, ಜ, ಜ, ಜ, ರ, ಸ ಗಣಗಳ ಒಂದು ವೃತ್ತ: ಅಮರಗಣಾರ್ಕ ಶೀತಕರ ಭಾನುಗಣತ್ರಿತಯಾಂತ್ಯಪಾವಕಂ ಪವನಂ ಸಮುದಿತವಿಶ್ರಮಂ ನೆಲಸಿ ದಿಕ್ಕರಿಯೊಳ್ ಕರಮೊಪ್ಪೆ ರಾಗದಿಂದ ವನೀ ಸಮದೊಳೆ ನಾಗವರ್ಮನ ಮತಂ ಪರೆದತ್ತು ಸಮಸ್ತಧಾತ್ರಿಗೆಲ್ಲಮಿದುಂ ಕ್ರಮದೊಳಗಾದುದಿಂತಿದನೆ ಪೇಳ್ದನೆ ಸತ್ಯವಿವರ್ಜ ಕೇಳ ಪಂಕಜಮಂ (ಛಂದೋಂಬು. ೨–೧೪೨). [ಸಂ.]

**ಪಂಕಜಗರ್ಭ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ; ಅಬ್ಜಯೋನಿ. [ಪಂಕಜ+ಗರ್ಭ]

**ಪಂಕಜನಂದನ** (ನಾ). ಬ್ರಹ್ಮ: ಪಂಕಜನಂದನ ದಾನವಾರಿ ರುದ್ರರ್ ಪೊಂಕದ ಬೋಳೆಯರಾದಿಕಾರಣಾಂಗರ್ ಬಿಂಕದ ಮೂವರಿವರ್ಗೆ ಬೀಜನಿವಾಶಂ ಸಂಕಥಿತರ್ ಶ್ರುತಿರಾಜಿಯೊಳ್ಸತತ್ತ್ವರ್ (ಹಾಲಾಸ್ಯ. ೧–೧೭–೨೭). [ಪಂಕಜ+ನಂದನ]

**ಪಂಕಜನಾಭ** (ನಾ). ಕಮಲವು ಹೊಕ್ಕುಳಲ್ಲಿರುವವನು; ಪದ್ಮನಾಭ; ವಿಷ್ಣು. [ಸಂ.]

**ಪಂಕಜನೇತ್ರೆ** (ನಾ). ಕಮಲದಂತೆ ಸುಂದರವಾದ ಕಣ್ಣುಳ್ಳವಳು; ಅಂಬುಜನೇತ್ರೆ: ಪಂಕಜನೇತ್ರೆ ಹಂಸಗಮನಾನ್ವಿತೆ . . . ಪೇಟೀಱ ಭ್ರಮರಜಾಳಮನೇಱುಸಿ ಪೋಗಲೀಗುಮೇ (ಪಾರ್ಶ್ವಪು. ೧೦–೫೧). [ಸಂ. ಪಂಕಜನೇತ್ರಾ]

**ಪಂಕಜಪಾಣಿ** (ನಾ). ಕಮಲದಂತೆ ಕೈಯುಳ್ಳವಳು ; ಕೋಮಲವಾದ ಹಸ್ತವುಳ್ಳವಳು : ಇಂತೊಪ್ಪುವ ಸುಕುಮಾರಂಗೆ . . . ಶೋಣಪಂಕಜಪಾಣಿ ಶಿವಮಂತ್ರವಾಣಿ ಕಾಂತಾಶಿರೋಮಣಿ ಕಾಂಭೋಜ ರಾಜನ ಪುತ್ರಿ ಕಾಂತ ಗೌರೀದೇವಿಯೆಂಬ ತರುಣಿಯಂ ಮದುವೆಯಂ ಮಾಡಿ (ಹವಿಮ್ಮರ. ೨-೩೨ ಪ). [ಪಂಕಜ + ಪಾಣಿ$_2$]

**ಪಂಕಜಬಾಣ** (ನಾ). ಕಮಲವೇ ಬಾಣವಾಗಿರುವವನು ; ಮನ್ಮಥ : ಕಂಬಿಕಾತಿಯರುಗಳ ಸಡಗರವನಾರು ಪೇಳುವರೆ ಪಂಕಜ ಬಾಣನಂಕದಾನೆಯ ಪೋಲ್ವಳ್ (ನವಮೋ. ೪-೩೮). [ಪಂಕಜ + ಬಾಣ]

**ಪಂಕಜಬೀಜ** (ನಾ). ತಾವರೆಬೀಜ : ಬಜೆ ಕೋಷ್ಠಂ ಶಂಖಂ ಪಂಕಜಬೀಜಂ ಲೋಹಮೆಂಬಿವಂ ಕೊರಲೊಳ್ ಕಟ್ಟಿಜಗರಮುಂ ಗ್ರಹಗಣಮುಂ ದ್ವಿಜಗಣಮುಂ ಪೊರ್ದಲಣ್ಮವಾ ಬಾಲಕನಂ (ಲೋಕೋಪ. ೯-೧೮೪). [ಪಂಕಜ+ಬೀಜ]

**ಪಂಕಜಭವ** (ನಾ). = ಪಂಕಜಗರ್ಭ : ಪಂಕಜಭವ ಅಹಿಕಂಕಣನುತ ಪದಪಂಕಜ ತೋರೋ ವಿಜಾನಾಂಕನ ಜನಕ (ವಿವಾಕ್ಯ. ೫೯ ಅನುಪಲ್ಲವಿ). [ಪಂಕಜ + ಭವ]

**ಪಂಕಜಮುಖಿ** (ನಾ). ಕಮಲದಂತೆ ಸುಂದರವಾದ ಮುಖವುಳ್ಳವಳು ; ಕಮಲಮುಖಿ : ಪಂಕಜಮುಖಿ ಬಾ ಎನೆ ತಾಯಂ ಕಾಮಿನಿ ಜಡಿಯೆ (ತ್ರಿಪುವಿ. ೨೪-೧೩೮) ; ಪಂಕಜಮುಖಿಯರೆಲ್ಲರು ಬಂದು ಲಕ್ಷ್ಮೀ ವೇಂಕಟೇರವಣಗಾರತಿಯೆತ್ತಿರೆ (ಪುರಂದ. ೪-೨೦೩ ಪಲ್ಲವಿ) ; ಕೊಂಕುಗುರಳಿನ ರಂಭೆ ಕಂಕಣವು ಕಟಿಸೂತ್ರ ಪಂಕಜಮುಖಿಯು[ಪಾಠಾಂ. ಪಂಕಜಾ ಗಂಧಿಯು]ಎನಬೇಡ ತಾನೊಲಿದ ಮಂಕೆ ಮಾಣಿಕವು (ಸರ್ವಜ್ಞ. ೧೭೧೦). [ಸಂ. ಪಂಕಜಮುಖೀ]

**ಪಂಕಜವಿಷ್ಟರ**(ನಾ). ೧. ತಾವರೆಯ ಪೀಠ,—ಆಸನ. ೨. ತಾವರೆಯನ್ನೇ ಆಸನವನ್ನಾಗಿ ಮಾಡಿಕೊಂಡಿರುವವನು; ಕಮಲಾಸನ ; ಬ್ರಹ್ಮ : ಪದ್ಮವಿಷ್ಟರದಿಂ ಪಂಕಜವಿಷ್ಟರಂ ನತವಿನೇಯವ್ರಾತ ಚೇತಸ್ತಮೋಹರನಾಗಿರ್ದುದಱಿಂ ಹರಂ ಭವಹರಂ ಮಾಣಿಕ್ಯದೇವಂ ವಸುಂಧರೆಗಿಂತೊರ್ವನೆ ದೇವನಾಗಿರೆ ಜಯಂ ಭದ್ರಂ ಶುಭಂ ಮಂಗಳಂ (ಆದಿಪು. ೧೬-೬). [ಪಂಕಜ + ವಿಷ್ಟರ]

**ಪಂಕಜವೈರಿ** (ನಾ). ಕಮಲಗಳಿಗೆ ಶತ್ರುವಾಗಿರುವವನು ; ಚಂದ್ರ. [ಪಂಕಜ + ವೈರಿ]

**ಪಂಕಜಸಂಭವ** (ನಾ). = ಪಂಕಜಗರ್ಭ : ಪಂಕಜಸಂಭವಂ ನಿನಗೆ ಪಾಸಟಿಯಲ್ಲದ ರಾಘವಂಗೆ ನಿನ್ನಂ ಕುಡೆ ಕಂಡು ಸೈರಿಸದೆ ಚಿತ್ತಭವಂ ದಶಕಂಧರಂಗೆ ಕೊಟ್ಟಂ (ಪಂರಾಮಾ. ೯-೧೬೪). [ಪಂಕಜ + ಸಂಭವ]

**ಪಂಕಜಾಕರ** (ನಾ). ತಾವರೆಗಳಿಗೆ ಆಶ್ರಯಸ್ಥಾನವಾದುದು ; ತಾವರೆಗೊಳ; ಕಮಲಾಕರ : ಅಂಚೆಗಳಿಲ್ಲದಂಬುರುಹವಂಬುಜಮಿಲ್ಲದ ಪಂಕಜಾಕರಂ ಮಿಂಚುವ ಪಂಕಜಾಕರಮದಿಲ್ಲದ ನಲ್ವನಂ . . . ಸಮತುಂಚ ಪೊಟಿಲ್ಲಳಿಲ್ಲದ ಮಹೀತಳಮಿಲ್ಲ ತದೀಯರಾಜ್ಯದೊಳ್ (ಉದ್ಭಟ. ೩-೬) ; ಶರನಿಧಿಯಲ್ಲಿ ವೃಕ್ಷತತಿಯಲ್ಲಿ ಮರುತ್ಪಥದಲ್ಲಿ ಪಂಕಜಾಕರದೆಡೆಯಲ್ಲಿ ತಳ್ತ ತಿಳಿಜೊನ್ನಮನಂಚೆಗಳುನ್ಮದಾಳಿಗಳ್ ಸುರಮುನಿಗಳ್ಗ ಜಂಗಳೊಸೆದೀಂಟಲುಮಾರ್ದಜಗಲ್ಮುಳುಂಗಲಾತುರಿಸಿ ಕರಾಗ್ರದಿಂದುಡಿಯಲಾಟಿಪುವು (ರಾಜಶೇ. ೧೩-೪೩). [ಪಂಕಜ + ಆಕರ$_3$]

**ಪಂಕಜಾಕ್ಷ**(ನಾ). ಕಮಲದಂತೆ ಕಣ್ಣುಳ್ಳವನು; ಕೃಷ್ಣ ; ವಿಷ್ಣು : ವೇಣುವಂ ಬಾಜಿಸುತ್ತುಂ ತುಱುಗಾದಂ ಗೋಪವೇಷೋಚಿತ ವನಕುಸುಮಾಲಂಕೃತಂ ಪಂಕಜಾಕ್ಷಂ (ಜಗವಿ. ೪-೩೮). [ಸಂ. (ಪಂಕಜ + ಅಕ್ಷಿ + –)]

**ಪಂಕಜಾತ** (ನಾ). = ಪಂಕಜ ೧ : ಖುರಖುರಘಾತಜಾತ ಧರಣೀತಳರೇಣುವಜಾಂಡ ಪಂಕಜಾತವಿದೆಂಬಿನಂ ನೆಗೆದು ತೀವಿರೆ (ರಾಜಶೇ. ೧೩-೯೦). [ಪಂಕ + ಜಾತ]

**ಪಂಕಜಾನನೆ** (ನಾ). ಕಮಲದಂತೆ ಸುಂದರವಾದ ಮುಖವುಳ್ಳವಳು : ಪಂಕಜಾನನೆ ನಿನ್ನ ಸ್ವಾಮಿಗಳಂ ಕಳುಹಿ ಕಳೆ ನೀನೆನಲು (ಬಸವು. ೫೧-೭). [ಸಂ. ಪಂಕಜಾನನಾ]

**ಪಂಕಜಾಪ್ತ** (ನಾ). ಕಮಲಗಳಿಗೆ ಬಂಧುವಾದವನು ; ಸೂರ್ಯ. [ಪಂಕಜ + ಆಪ್ತ]

**ಪಂಕಜಾರಿ** (ನಾ). = ಪಂಕಜವೈರಿ. [ಪಂಕಜ + ಅರಿ$_6$]

**ಪಂಕಜಾಸನ** (ನಾ). = ಪಂಕಜವಿಷ್ಟರ ೨ : ಜನಪ ನಿನಗೆಚ್ಚಱಿಪನಾದಿಯೊಳ್ ಪಂಕಜಾಸನನ ಮಾನಸಪುತ್ರನಾದನಂಗಿರಂ (ಜೈಮಿಭಾ. ೫-೨೭); ಪಂಕಜೇಕ್ಷಣ ಪಂಕಜಾಸನ ಪಾಕಶಾಸನ ಮುಖ್ಯರಾ ಬಿಂಕಮಂ ತೃಣಮಿಟ್ಟು ಯಕ್ಷನ ರೂಪಿನಿಂ ಮುಱಿದಂ ಮಹೇಶಂ (ವೃಷವಿ. ೩೭-೧೦೭). [ಪಂಕಜ+ಆಸನ]

**ಪಂಕಜಿನಿ** (ನಾ). ಕಮಲದ ಬಳ್ಳಿ ; ತಾವರೆ ಬಳ್ಳಿ ; ಕಮಲಿನಿ : "ಅಬ್ಜಿನೀ, ಕಮಲಿನೀ, ಸರೋಜಿನೀ, ಪಂಕಜಿನೀ, ಪುಷ್ಕರಿಣೀ, ಅಂಭೋಜಿನೀ ಮುಂತಾದ ಶಬ್ದಗಳೂ ತಾವರೇಬಳ್ಳಿಗೆ ಹೆಸರುಗಳು" (ಸಿದ್ಧಾಂತಿ. ೮೯) ; ರಕ್ತ ಪಂಕರುಹಮನಾಂತ ಪಂಕಜಿನಿಯಂತೆ ನವೋದಿತ ಚಂದ್ರಬಿಂಬಮಂ ಧರಿಯಿಸಿದಿಂದ್ರದಿಗ್ವನಿತೆಯಂತೆಸೆದಳ್ ಮಧುಪಾನಗೋಷ್ಠಿಯೊಳ್ (ಕಾವ್ಯಸಾ. ೯೬೨). [ಸಂ. ಪಂಕಜಿನೀ]

**ಪಂಕಜೇಕ್ಷಣ** (ನಾ). = ಪಂಕಜಾಕ್ಷ : ಪಂಕಜೇಕ್ಷಣ ಪಂಕಜಾಸನ ಪಾಕಶಾಸನ ಮುಖ್ಯರಾ ಬಿಂಕಮಂ ತೃಣಮಿಟ್ಟು ಯಕ್ಷನ ರೂಪಿನಿಂ ಮುಱಿದಂ ಮಹೇಶಂ (ವೃಷವಿ. ೩೭-೧೦೭). [ಪಂಕಜ + ಈಕ್ಷಣ]

**ಪಂಕಜೋದರ** (ನಾ). ಕಮಲವನ್ನು ಹೊಟ್ಟೆಯಲ್ಲಿ ಹೊಂದಿರುವವನು ; ವಿಷ್ಣು. [ಪಂಕಜ + ಉದರ]

**ಪಂಕಜೋದ್ಭವ** (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ : ಮುದದೊಳೀನುವನಜಯ ದವರು ತನ್ನೊಳು ತಾವೆ ಮೊದಲೊಳೊಗೆದುದು ಹರಿಗೆ ಪಂಕಜೋದ್ಭವಗೆಯಂತದಱ ತಱುವಾಯು ಬಳಿಕೆನಗೆ ನಿನಗೆಂದು ಭಾಗೆಯ ಮಾಡಿಕೊಳುತ ಮಥಿಸೆ (ಲತಿಚಂ.೧೨-೭). [ಪಂಕಜ+ಉದ್ಭವ]

**ಪಂಕಪ್ರಭೆ** (ನಾ). [ಜೈನ]ಒಂದು ನರಕದ ಹೆಸರು ; P ರತ್ನಪ್ರಭೆ, ಶರ್ಕರಾಪ್ರಭೆ, ವಾಲುಕಾಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಃಪ್ರಭೆ,ಮಹಾತಮಃಪ್ರಭೆ ಎಂಬ ಏಳು ನರಕಗಳಲ್ಲಿ ನಾಲ್ಕನೆಯದು : ಪಂಕಪ್ರಭೆಯೊಳ್ ದಶಾಬ್ಧ್ಯುಪಮೆಯಿಂ ದುಃಖಾಗ್ನಿಯೊಳ್ ಬೆಂದು ಮತ್ತವನಲ್ಲಿಂ ಪೊಱಮಟ್ಟು ಮುನ್ನ ಧನಮಂ ಬಯ್ತಿರ್ದಗಾರಣ್ಯದೊಳ್ ಪುಲಿಯಾಗಿ ಪುಟ್ಟಿ (ಆದಿಪು. ೫-೪) ; ಲಕ್ಷ್ಮಣಂ ಸತ್ತು ಪಂಕಪ್ರಭೆಯೊಳ್ ಪುಟ್ಟಿದೊಂ (ಚಾವುಂಪು. ೩೧೬). [ಪಂಕ$_1$+ಪ್ರಭೆ]

**ಪಂಕಭಾಗ** (ನಾ). [ಜೈನ] ರತ್ನಪ್ರಭೆಯೆಂಬ ನರಕಭೂಮಿಯ ಮೂರು ಭಾಗಗಳಲ್ಲಿ ಒಂದು ; ಎಂಬತ್ತನಾಲ್ಕು ಸಾವಿರ ಯೋಜನಪ್ರಮಾಣವಿರುವ ಪ್ರದೇಶ : ರತ್ನಪ್ರಭೆಯೆಂಬ ಪೃಥ್ವಿಯಿರ್ಕುಮಾ ಪೃಥ್ವಿ ವಜ್ರಖರ ಪಂಕಜಲಬಹುಳಭಾಗದಿಂ ತ್ರಿವಿಧಮಕ್ಕುಮಲ್ಲಿ . . . ಪಂಕಭಾಗಮೆಣ್ಬತ್ತನಾಲ್ಕುಸಾಸಿರ ಯೋಜನಂ (ಸುಕುಮಾ. ೧೧-೪೧ ಪ). [ಪಂಕ$_1$ + ಭಾಗ]

**ಪಂಕಭೂಮಿ** (ನಾ). ಕೆಸರುಳ್ಳ ಭೂಮಿ ; ಹಸಿಯಾದ ನೆಲ : ಅಂಕುರಬೀಜದೊಳಿರುತದೆ ಭೂಮಿಯ ಸೋಂಕದಿರ್ದರೆ ವೃಕ್ಷವಹುದೆ ಪಂಕಭೂಮಿಯ ಸೋಂಕಲಾ ಬೀಜದಿಂದೊಡೆದಂಕುರಿಪುದು ವೃಕ್ಷವಹುದು (ಭರತೇ. ೬೯-೧೧೪). [ಪಂಕ$_1$ + ಭೂಮಿ]

**ಪಂಕರುಹ** (ನಾ).=ಪಂಕಜ ೧: ತನ್ನ ಸದ್ಭಾವದಿನೆನ್ನನಾಳ್ದನ ಮಗಳ್ ಪದಪಿಂದಮೆ ತಂದಳಿಂತಿದಂ ದೇವರ ಪಾದಪಂಕರುಹದಲ್ಲಿಗೆ (ಕಾದಂಪೂ. ೫೭); ಪರಹಿತರೆಂದುದಾತ್ತಯಶರೆಂದು ಜಿತೇಂದ್ರಿಯರೆಂದು ಯೋಗಪಂಕರುಹ ದಿನೇಶರೆಂದು. . .ದೇವಸಿಂಗಿಜೀಯರ ಪದಯುಗ್ಮಮಂ ಪಡೆದು ಕಟ್ಟಿದರರ್ತ್ಥಿಯೆ ಪುಣ್ಯಮೂರ್ತ್ತಿಗಳ್ (ಸೌಇಇ. XX, ೪೯–೫೭; ಸು. 1076 ?). [ಸಂ.]

**ಪಂಕರುಹಗರ್ಭ** (ನಾ).=ಪಂಕಜಗರ್ಭ: ತನ್ನ ಮುನ್ನಿನ ಕರ್ಮ ವನಗಳ್ಗಿ ಮರಳೆ ತೊಡೆಯಲು ಕಾಯಲುಂ ಪಂಕರುಹಗರ್ಭಂಗಾಗದು (ಬಸವು. ೪೬–೧೩). [ಪಂಕರುಹ+ಗರ್ಭ]

**ಪಂಕರುಹನಾಭ** (ನಾ).=ಪಂಕಜನಾಭ: ತರುಣಿಯರು ಕೆಂದಳಿರ ಕಲಶದ ಕರತಳದ ಗರುವಾಯಿಯಲಿ ಪಂಕರುಹನಾಭನಿದಿರುಗೊಂಡರು (ಕುಪ್ಯಾಉ. ೭–೨೦). [ಸಂ.]

**ಪಂಕರುಹಪತ್ರ** (ನಾ). ತಾವರೆಯ ಎಲೆ; ಕಮಲದ ಎಲೆ: ನರೇಂದ್ರನರ್ಥಮಂ ಪೊರೆದಿರವಲ್ಲಿ ಪಂಕರುಹಪತ್ರದ ನೀರವೊಲಪ್ಪುದು . . . ನಿಜಾಭಿಮಾನಮಂ ಧರಿಯಿಸುವಲ್ಲಿ ಚಾದಗೆವೊಲಪ್ಪುದು ತಪ್ಪದ ಮಾತ್ಯಲಕ್ಷಣಂ (ಕಾವ್ಯಸಾ. ೪೨೨). [ಪಂಕರುಹ+ಪತ್ರ]

**ಪಂಕರುಹಮುಖಿ** (ನಾ). = ಪಂಕಜಮುಖಿ: ಕೃಷ್ಣನ ವರ ಸುಧಾಮಯವಚನವನು ಪಂಕರುಹಮುಖಿ ಕೇಳುತ್ತ ನನೆದಳು ನಯನ ವಾರಿಯಲಿ (ಕುಪ್ಯಾಉ. ೮–೨೪). [ಸಂ. ಪಂಕರುಹಮುಖೀ]

**ಪಂಕರುಹಾರಾತಿ** (ನಾ).=ಪಂಕಜವೈರಿ: 'ಪಂಕರುಹಾರಾತಿ ಸುತ' ಪರಾ. [ಪಂಕರುಹ+ಅರಾತಿ]

**ಪಂಕರುಹಾರಾತಿಸುತ** (ನಾ). ಚಂದ್ರನ ಮಗ; ಬುಧ: ಪಂಕರು ಹಾರಾತಿಸುತಾಂಶದೊಳ್ ಕಪಟಿ ದುಶ್ಚಾರಿತ್ರ ಶುಕ್ರಾಂಶದೊಳ್ (ಜಾತತಿ. ೨೨–೩). [ಪಂಕರುಹಾರಾತಿ+ಸುತ]

**ಪಂಕರುಹವದನೆ** (ನಾ).=ಪಂಕಜಮುಖಿ: ಪಂಕರುಹವದನೆ ಮನ ದಾಶಂಕೆಯಿದೇಂ ಸ್ನೇಹವೆಂಬುದೆರಡಿಲ್ಲೆನ್ನೊಳ್ (ಜಗವಿ. ೧೨–೯೮); ಪಂಕರುಹವದನೆಗೆಸೆದುವು ಕುಂಕುಮದಿಂ ತೊಯ್ದ ಚಮರಿಯಂ ಮೋದಿದವೋಲ್ ಕೊಂಕಿ ನಖರೇಖೆ ಕೊರಲೊಳ್ (ಸೂಕ್ತಿಸು. ೧೮–೨೯). [ಸಂ. ಪಂಕರುಹವದನಾ]

**ಪಂಕಿಲ,** ಪಂಕಿಳ (ಗು). ೧. ಕೆಸರಿನಿಂದ ಕೂಡಿರುವ; ಕೆಸರಾದ: ವಿಧಿಯ ವಾಹನಗಳಿಗೆ ಗ್ರೀಷ್ಮಾವಧಿಕ ಪಂಕಿಲ ಪಲ್ವಲಸ್ಥಾಂಬು ಧೃತಿ ಯಲಿ ಸೊಗಸುವುದೆ ಭೀಕರಗಳಿಂದ ಸಂಸೇವ್ಯಂ (ವಿನೇಭ. ೮–೨೬). (ನಾ). ೨. ಕೆಸರಿನಿಂದ ಕೂಡಿರುವುದು; ಕೆಸರುಳ್ಳದು: ಪಂಕಿಲಮಾಗಿ ಗೋಕುಲದ ಗೋಮಯದಿಂ ನಡೆಗೊಳ್ಳ ಘಾತದಿಂದಂ ಕದಡಾಗಿ . . . ಕೆಳಗೆ ಪಾಯ್ಯು ಪಶುವ್ರಜವಿಪಾಸಿ ಬರ್ಪುದುಂ (ಲೀಲಾವ. ೫–೮೪); ಬಲ ಮಿದೆ ಬಂದುದದ್ರಿ ಪುಡಿಯುಪ್ಪಿನಮುಗ್ಗದರಣ್ಯಮೆಲ್ಲಮುಂ ನೆಲಸರಿ ಯಪ್ಪಿನಂ ಘನತರಂಗಿಣಿ ಪಂಕಿಲ[ಪಾಠಾಂ. ಳ]ಮಾಗುತಿರ್ಪಿನಂ (ರಾಜಶೇ. ೬–೩೪); ತೀವ್ರಮುಂ ಪಂಕಿಲಮುಂ ಪುರಾಣಮೆಸಿಪ್ಪೀ ತ್ರಿತಯಂ ಜರಠಾಭಿಧಾನಂ (ನಾನಾರ. ೧೪೭). ೩. ಕೆಸರು; ಪಂಕ: "ಪಂಕಿಲಃ, ಜಂಬಾಲೇ—ಕೆಸರಿನಿಂದೊಡಗೂಡಿದ ದೇಶಕ್ಕೆ ಹೆಸರು" (ಸಿದ್ಧಾಂತಿ. ೯೫); ಇಳೆ ದಣಿವುತೋಂಕರಿಸಿತೆನೆ ಪಂಕಿಲಗಳುಬ್ಬಿದವಖಿಳ ಜೀವರ ತೊಳಲಲೀ ಯದೆ ನಡುಗಿಸಿತು ಪರ್ಜನ್ಯನಾಟೋಪ (ಅನಂರಾ. ೪–೨–೯). **ಪಂಕಿಳ:** ೨. ರಾಜವಿದ್ಯಾಧರಂ . . . ದಕ್ಷಿಣಪಾಣಿಶೋಣಿಮದಿಂ ಕುಂಕುಮ ಪಂಕಿಳಂ ಮಾಟ್ಪಂತೆ ಕಂಧರಮನಪ್ಪಳಿಸುತ್ತುಂ (ಪಲ್ಲಿಪು. ೯–೫೦); ತಳರಲ್ಕೆಂದಡಿಯಿಟ್ಟು ಜಾಱಿ ಜವದಿಂ ಕೈಯೂಱಿ ಬಿಳ್ದೇಳ್ದು ಪಂಕಿಳ ಮಾದಂಶುಕಮಂ ಪೊನಲ್ವರಿವ ನೀರೊಳ್ಕರ್ಚಿ . . . ಕೋಲ್ಗಳನಾಂತ್ಯೆ ದುವ ಪಾಂಥರಂ ನಗುವರಾ ಹರ್ಮ್ಯಾಗ್ರದಬ್ಜಾಕ್ಷಿಯರ್ (ರಾಜಶೇ. ೮–೧೨೪). ೩. 'ಪಂಕಿಳಿಸು' ಪರಾ. ೪. (ಅಲಂ) ದೋಷಯುಕ್ತ ನಾದವನು: ಆರ್ಪಿನೊಳು . . . ಬಲದೊಳು ಮಾಧವಭಟ್ಟನೇಂ ದನುಜನೊಳು ದಾನಕ್ಕೆ ಕೋಡಿಟ್ಟನಂ ಕಲಿಕಾಲೇಯು ಕಳಂಕಪಂಕಿಳರ ನೆನ್ನುಂ ಪೋಲಿಸಲು ಬಲ್ಲರೇ (ಸೌಇಇ. XV, ೫–೫; 1105). [ಸಂ.]

**ಪಂಕಿಲತೆ** (ನಾ). ಕೊಳಕು; ಮಲಿನತೆ: ತೊಱೆದು ಕಳಂಕಪಂಕಿಲ ತೆಯಂ ಮಱೆಗಾಲದ ಸೊಂಪನೇಳಿಸಲ್ ನೆಱೆದನುಬಂಧಮಂ ಮೆಱೆದ ನಚ್ಚರಿ ಲಾಂಗಲಪಾಣಿ ಸೀತೆಯೊಳ್ (ಪಂರಾಮಾ. ೭–೧೩೪). [ಸಂ. ಪಂಕಿಲತಾ]

**ಪಂಕಿಳ** 'ಪಂಕಿಲ' ನೋ.

**ಪಂಕಿಳಿಸು** (ಕ್ರಿ). ಕೆಸರುಮಾಡು; ರಾಡಿಯಾಗಿಸು: ಬಂದು ಗೊಂದಳದಿಂ ಕಿನ್ನರ ಖೇಚರ ಪ್ರಮದೆಯರ್ಪೊಕ್ಕಾಡೆ ಪೀನಸ್ತನಂಗಳ ಮೇಲೊಟ್ಟಿದ ಯಕ್ಷಕರ್ದಮದ ಪಂಕಂ ನೂಂಕಿ ತೇಂಕಾಡಿ ಪಂಕ[ಕಿ]ಳಿಸು [ಪಾಠಾಂ. ಸಂಕಳಿಸು]ತ್ತಿರ್ಪುದು ನಿಸ್ತರಂಗತಟ ಧೂಳೀಚಿತ್ರಪತ್ರಂಗಳಂ (ಅನಂಪು. ೧೦–೨೪). [ಪಂಕಿಳ(=ಪಂಕಿಲ)+-ಇಸು$_3$]

**ಪಂಕೇಜ** (ನಾ). = ಪಂಕಜ ೧: ಪಂಕೇಜದಿಂ ಶ್ರೀವಧೂಧವನಾ ವಾರಿಧಿಯಿಂದಪಾರಮಹಿಮಂ . . . ಪುಟ್ಟುಗುಂ ನಂದನಂ (ಜಗವಿ. ೨–೮೩); ಇದು ಸಕಲಭಕ್ತಪದಪಂಕೇಜರೇಣುಮಸ್ತದ ಮಲ್ಲಣಾರ್ಯನಾ ಚೇರಮಾಂಕಂಗೆ ಬೆಸಸಿದ ಭಕ್ತಸತ್ಕೇಂದ್ರಚೋಳಕ್ಕತಿ ಭಾವಚಿಂತಾರತ್ನವು (ಭಾವಚಿಂ. ೯–೬೫). [ಸಂ.]

**ಪಂಕೇಜವಕ್ತ್ರೆ** (ನಾ).=ಪಂಕಜಮುಖಿ: ಆ ನೀಚನಾ ದ್ರೋಹನಾ ಚಂಡಾಲನಾ ಪಾತಕನಿರವನಿದಂ ನೋಡು ಪಂಕೇಜವಕ್ತ್ರೇ (ಗದಾಯು. ೮–೪೫). [ಸಂ. ಪಂಕೇಜವಕ್ತ್ರಾ]

**ಪಂಕೇಜಸಖ** (ನಾ).=ಪಂಕಜಾಪ್ತ: ಪಂಕೇಜಸಖಕುಲದ ಪೀಳಿಗೆಯು ರಾಯರ್ಗೆ ವೀರಸಿರಿ ಸಲೆ ನಲಿದು ಕೈಗೈದು (ಹಚಕಾ. ೧–೩೫). [ಪಂಕೇಜ+ಸಖ]

**ಪಂಕೇಜಾತ** (ನಾ).=ಪಂಕಜ ೧: ಶಿವಕವಿನಿಕರಪಾದಪಂಕೇಜಾತ ಭೃಂಗ . . . ವಿರುಪೆಯ ಲಿಂಗ ಪೇಟೆನಲ್ ಬಲ್ಲರಿದನಾಂ ಪೇಟ್ದೆನು (ಕಬ್ಬಕೈ. ೨); ವಿಷಯಂಗಳಂ ಗೆದ್ದ ನಿರ್ಮಲತಪಸ್ವಿಗಳ ನಿಶ್ಚಲ ಹೃದಯಮಧ್ಯಪಂಕೇಜಾತದ ಗದ್ದುಗೆಯೊಳೆಸೆವ ಚಿದ್ರೂಪನಂ . . . ಕಂಡನು (ಜೈಮಿಭಾ. ೫–೯). [ಸಂ.]

**ಪಂಕೇರುಹ** (ನಾ).=ಪಂಕಜ ೧: "ಪದ್ಮಂ, ನಳಿನಂ . . . ಪಂಕೇರುಹಂ, ತಾಮರಸಂ . . . ಅಂಭೋರುಹಂ—೧೬ ತಾವರೇ ಹುವ್ವಿನ ಹೆಸರು ಗಳು" (ಸಿದ್ಧಾಂತಿ. ೯೦); ನಾರದಾದಿ ಮುನಿಪಾವನತ ಪಾದಪಂಕೇರುಹ ದ್ವಂದ್ವಂ . . . ದೇವಗಂಗಾಧರಂ ಬಿಡದೆ ಸಲಹುಗೆ ನಮ್ಮನು (ಜೈಮಿಭಾ. ೧–೨). [ಸಂ.]

**ಪಂಕೇರುಹಜಾತ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಪಂಕೇರುಹಜಾತ ಪಾಪಿಷ್ಠ ಮನೆಗೊರ್ಪ ಮಂಕಕೊರ್ದುಚಿದ ತನ್ನಸೋಂಕ ಲೊಪ್ಪುವ ಕಾಂತನ ವೈವಾಹಕೆ ಕಂಕಣಗಟ್ಟಿಂದರಳುತ (ಮೋಹತ. ೧೮–೨೪). [ಸಂ.]

**ಪಂಕ್ತಿ** (ನಾ). ೧. ಸಾಲು; ಶ್ರೇಣಿ: "ಆಳೀ(ಃ), ಶ್ರೇಣೀ(ಃ), ಆವಳಿಃ, ಪಂಕ್ತಿಃ, ವೀಥೀ, ರಾಜೀ—ಈ ೬ ಪಂತಿ" (ಹಲಾಯು. ೧೯೯–೩೬); ಈ ಮಹಾಕ್ರತುವರವ ನೀ ಮಾಡಾ ಮಹೇಶ್ವರ ಪಂಕ್ತಿಯಲ್ಲಿ ನಿರಾಮಯನು ನಿಮ್ಮಯ್ಯನಿಹನು ಸತೇಜದಲಿ ಬಳಿಕ (ಕುಪ್ಯಾಸ. ೧–೯೨); ಅಳಿಯನು ಸಾಮಾನ್ಯರ ಪಂಕ್ತಿಗೆ ಸೇರಿದವನಲ್ಲದ ಕಾರಣ ಅಂತಹವನು ಕೋಪಿಸಿಕೊಂಡರೆ ಅನರ್ಥವಾದೀತೆಂದು ಭಯ (ತುರಾಯಿ. ೬೯);

ಬಭ್ರುವಾಹನ ಸೇನೆಯೊಂದು ಕಡೆ ; ಸಮ್ಮುಖದಿ ಫಲ್ಗುಣವರೂಥಿನಿಯ ಪಂಕ್ತಿ (ಚಿತ್ರಾಂಗ.೮೧-೨೩೪). **೨.** ಹಿಂಡು; ಗುಂಪು ; ಸಮೂಹ : ಸರಯೂ ತರಂಗಿಣಿಗೆ ಹಿಮಗಿರಿಯು ದೂರದಿಂದೈತಂದು ನೆಡೆಬಿಡದೆ ಕ್ರೌಂಚ ಸಾರಸ ಪಂಕ್ತಿ (ಶ್ರೀರಾಮಾ.೧೫-೩೮). **೩.** ಊಟಕ್ಕೆ ಕುಳಿತಿರುವ ಜನರ ಸಾಲು : ಬಂದಳೆ ದೇವಿ ಪಂಕ್ತಿಗೆಡೆಮಾಡಿಸಿದಪ್ಪಳೆ ಚಂಡ ಶಾಸನಂ ಬಂದನೆಯೆಂದು ಮಂದಿರ ಮಹತ್ತರರಂ ಬೆಸಗೊಳ್ಳಿನಂ(ಅನಂಪು. ೧೧-೬೪) ; ಹರಗಣ ಪಂಕ್ತಿಯು ನಡುವೆ ಕುಳ್ಳಿರ್ದ ನಾನು ಒಡೆಯತನದ ನಾಯ ತೇಜವ ಹೊತ್ತುಕೊಂಡು ಮಡದಿಯೆನ್ನಗಲೊಳಗೆ ಸಕಲದೇವಾನ್ನವ ಒಡೆಯರಿಂದಲೂ ಮಿಗಿಲಾಗಿಕ್ಕಲು ತೆಗೆದಿರಿಸಿದೆನು (ಬಸವ, ೪೩೯); ನಾವು ಎಲ್ಲರೂ ಒಂದೇ ಪಂಕ್ತಿಯಲ್ಲಿ ಕುಳಿತು ಭೋಜನ ಮಾಡಿದೆವು (ಪ್ರತಾಪ. ೨೦) ; ಪಂಕ್ತೀ ಊಟವಾದರೂ ಸಂಗ್ತೀ ಗುಣ ಬಿಡಲಿಲ್ಲ (ಗಾದೆ). **೪.** ಪುಸ್ತಕದಲ್ಲಿಯ ಅಕ್ಷರಗಳ ಸಾಲು. **೫.** ಕೀರ್ತಿ; ಪ್ರಸಿದ್ಧಿ. **೬.** ಐದ್ವೈದರ ಗುಂಪು,—ಸಾಲು. **೭.** [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ. **೮.** ಹತ್ತುಎಂಬ ಸಂಖ್ಯೆಯ ಸಂಕೇತ : 'ಪಂಕ್ತಿರಥ' ಪರಾ. **೯.** [ಛಂದ] ಅಕ್ಷರಛಂದಸ್ಸಿನಲ್ಲಿ ಹತ್ತನೆಯ ಛಂದಸ್ಸಿನ ಹೆಸರು ; ಒಂದು ಪಾದದಲ್ಲಿ ಹತ್ತು ಅಕ್ಷರಗಳಿರುವ ಸಮವೃತ್ತಗಳ ವರ್ಗ; ಇಪ್ಪತ್ತೇಳು ಬಗೆಯ ವರ್ಣಛಂದಸ್ಸಿನಲ್ಲಿ ಹತ್ತನೆಯದು: ಏತತೋಕ್ತಮತ್ಯುಕ್ತ ಮಧ್ಯಾಪ್ರತಿಷ್ಠೆ . . . ಪಂಕ್ತಿ ತ್ರಿಷ್ಟುಪ್ ಜಗತಿ ಉತ್ಕೃತಿಗಳೆಂದೆನಿಪುವಿಪ್ಪತ್ತಾಱು ಛಂದಂಗಳಕ್ಕುಂ" (ಮಂಗರಾ.೧೦೬-೧೮); ಅಲ್ಲಿ ಸಮಂ ಅರ್ಧಸಮಂ ವಿಷಮಮೆಂದು ವೃತ್ತಂ ಮೂಱುಂ ತೆಱನಕ್ಕುಂ ಅಲ್ಲಿ ಉಕ್ತೆ ಅತ್ಯುಕ್ತೆ ಮಧ್ಯೆ ಪ್ರತಿಷ್ಠೆ ಸುಪ್ರತಿಷ್ಠೆ ಗಾಯತ್ರಿ ಉಷ್ಣಿಕ್ ಅನುಷ್ಟುಪ್ ಬೃಹತಿ ಪಂಕ್ತಿ . . . ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೨-೪೬ ವ); ೧೦ನೆಯ ಪಂಕ್ತಿಯಲ್ಲಿ :—(೧) ವೀರವಿಲಸಿತಂ ಭಸಂಜಗಂ (ಕೈಪಿಡಿ. ೭೯). **೧೦.** ಪ್ರತಿಪಾದದಲ್ಲಿ ಎಂಟು ಅಕ್ಷರಗಳಿರುವ ಐದು ಪಾದಗಳ ವೈದಿಕ ಛಂದಸ್ಸಿನ ಒಂದು ವೃತ್ತದ ಹೆಸರು.

**ಪಂಕ್ತಿಯೊಳ್ ಪರಪಂಚಮುಂಮಾಡು, ಪಂಕ್ತಿಯಲ್ಲಿ ಪರಪಂಚ ಮಾಡು**=ಪಂಕ್ತಿಯಲ್ಲಿ ಪಕ್ಷಪಾತ ಮಾಡು,— ತಾರತಮ್ಯ ತೋರಿಸು : ಗರಳಮಂ . . . ಅವಳ್ಕೊಂಡು ಬಂದು ಗರುವೆಯ ದಾಕ್ಷಿಣ್ಯಮಂ ಮಾಡಿ ಪಂಕ್ತಿಯೊಳ್ ಪರಪಂಚಮಂ ಮಾಡೆ ಹೋಪ ಮೆಂದೆಲ್ಲರ್ಗ ಸರಿಯಾಗಿ ಬಡಿಸಲವರುಂಡು ಕೈದೊಳೆವ ಸಮಯದೊಳು ಮೈಮಱೆದುರುಳ್ದರು (ಸಮ್ಯಕೌ. ೯-೪೩) ; ಪಂಕ್ತಿಯಲ್ಲಿ ಪರಪಂಚ ಮಾಡಿದವನು ನರಕಕ್ಕೆ ಹೋಗುತ್ತಾನೆ (ರೂಢಿ). [ಸಂ.]

**ಪಂಕ್ತಿಕೆ** (ನಾ). ಸಾಲು. [ಸಂ. ಪಂಕ್ತಿಕಾ]

**ಪಂಕ್ತಿಗ್ರೀವ** (ನಾ). ಸಾಲಾಗಿ ಹತ್ತುತಲೆಗಳುಳ್ಳವನು ; ರಾವಣ; ದಶಗ್ರೀವ. [ಪಂಕ್ತಿ+ಗ್ರೀವ]

**ಪಂಕ್ತಿಭೇದ** (ನಾ). **೧.** ಊಟ ಮೊದಲಾದ ಸಂದರ್ಭಗಳಲ್ಲಿ ಸಾಲಾಗಿ ಕುಳಿತಿರುವವರಲ್ಲಿ ಒಬ್ಬೊಬ್ಬರಿಗೆ ಒಂದೊಂದು ತಾರತಮ್ಯವನ್ನು ತೋರಿಸುವುದು,—ಪಕ್ಷಪಾತ ಮಾಡುವುದು : ಅನುವನಱಿಯದೆ ಪಂಕ್ತಿಭೇದವನಿನಿತ ಮಾಡಿದನೇ (ಬಸಪು. ೪೫-೧೮) ; ಪಂಕ್ತಿಭೇದವನ್ನು ಮಾಡತಕ್ಕವನು . . . ವೇದವನ್ನು ಕ್ರಯವಮಾಡುವವನು, ಇವರೈವರೂ ಬ್ರಹ್ಮಘಾತಕರು (ಶೀತಿಚಂ. X, ೧೮ ಅಡಿಟ). **೨.** ಬರವಣಿಗೆಯಲ್ಲಿ ಒಂದೊಂದು ಸಾಲು ಬೇರೆ ಬೇರೆ ಆಗಿರುವುದು ; ಸಾಲುಗಳ ವ್ಯತ್ಯಾಸ. **೧, ೨ :** ವಕ್ರಚಾರಂ ಸರ್ಪಂಗಳೊಳ್ ಪಂಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ). [ಪಂಕ್ತಿ+ಭೇದ]

**ಪಂಕ್ತಿಭೋಜನ** (ನಾ). **೧.** ಸಾಲಾಗಿ ಕುಳಿತುಕೊಂಡು ಮಾಡುವ ಊಟ ; ಸಾಮೂಹಿಕ ಭೋಜನ : ರಥೋತ್ಸವ ಕಾಲದಲ್ಲಿ ಪಂಕ್ತಿಭೋಜನ ನಡೆಯುತ್ತದೆ (ರೂಢಿ). **೨.** ಒಬ್ಬರ ಜೊತೆಯಲ್ಲಿ ಕುಳಿತುಕೊಂಡು ಮಾಡುವ ಊಟ : ಕೆಳೆಯನ ಪಂಕ್ತಿಭೋಜನದೊಳೊರ್ಮೆ ವಿಳಾಸದೆ ಬಡ್ಡಿಸುತ್ತುಮಿರ್ಪಳೆಯಳ ತೋಳ ಮೂಲದ ಪೊಗರ್ . . . ಕಣ್ಗೆ ಕುಡೆ ಕೌತುಕಮಂ (ಅನಂಪು. ೧೧-೨೮). [ಪಂಕ್ತಿ+ಭೋಜನ]

**ಪಂಕ್ತಿಭ್ರಷ್ಟ** (ನಾ). ಸಾಲಿನಲ್ಲಿ ಸೇರಲು ಅನರ್ಹನಾದವನು ; ಯಾವುದಾದರೂ ದೋಷದಿಂದ ಶಿಷ್ಟರ ಜೊತೆಯಲ್ಲಿ ಸೇರಲು ಅಯೋಗ್ಯನಾದವನು : ದೇವಲಕನೆಂದೆನಿಸಿಕೊಂಡು . . . ದೇವರ ಭಂಡಾರದಿಂದ ಜೀವಿಸುವವನಾಗಿ ಕೀಳುಮುಟ್ಟದವನಾಗಿ ಸಕಲ ಕರ್ಮಗಳಲ್ಲಿಯೂ ಪಂಕ್ತಿಭ್ರಷ್ಟನಾಗಿರುವನೆಂದು ತಿಳಿಯತಕ್ಕದು (ತುಳುನಾ. ೨೩೩). [ಪಂಕ್ತಿ+ಭ್ರಷ್ಟ]

**ಪಂಕ್ತಿಯೋಗ್ಯ** (ನಾ). ಉತ್ತಮರೊಂದಿಗೆ ವ್ಯವಹರಿಸಲು ಅರ್ಹನಾದವನು ; ಸಾಲಿನ ಜೊತೆಯಲ್ಲಿ ಕುಳಿತುಕೊಂಡು ಊಟ ಮಾಡಲು ಅರ್ಹನಾದವನು ; ಅರ್ಹ ; ಶಿಷ್ಟ : ಆಂಗ್ಲ ಹುಡುಗಿಯನ್ನು ಮದುವೆ ಮಾಡಿಕೊಂಡಿರುವುದರಿಂದ ಅವನು ಪಂಕ್ತಿಯೋಗ್ಯನಲ್ಲ (ರೂಢಿ). [ಪಂಕ್ತಿ+ಯೋಗ್ಯ]

**ಪಂಕ್ತಿರಥ** (ನಾ). ಹತ್ತು ದಿಕ್ಕುಗಳಲ್ಲೂ ತಡೆಯಿಲ್ಲದೆ ರಥವನ್ನು ನಡೆಸಿಕೊಂಡು ಹೋಗುವವನು ; ದಶರಥ : ರಾಮನಂ ವೀಕ್ಷಿಸುತಲೊಂದು ದಿನ ಪಂಕ್ತಿರಥನು (ವೆಂಕಾರಾ. ೧-೩-೮). [ಪಂಕ್ತಿ+ರಥ]

**ಪಂಕ್ತಿವಿಭೇದ** (ನಾ). ಪಂಕ್ತಿಯಲ್ಲಿ ಉಂಟಾಗುವ ವ್ಯತ್ಯಾಸ : ಬರೆದ ಕಾವ್ಯದಿ ಹಸ್ತದೋಷವು ಇರಲು ತಿದ್ದುವುದಲ್ಲಿ ಬುಧತತಿ ಮಱೆದು ಪಂಕ್ತಿವಿಭೇದವಾಗಿರೆ ಶುದ್ಧಗೊಳಿಸುವುದು (ಕವಿಚ. III, ೧೮೪). [ಪಂಕ್ತಿ+ವಿಭೇದ]

**ಪಂಕ್ತ್ಯವಸ್ಥೆ** (ನಾ). ಹತ್ತು ವಿಧವಾದ ಕಾಮದೆಸೆಗಳು : P(i) ಅಭಿಲಾಷಾ, ಚಿಂತಾ, ಅನುಸ್ಮೃತಿ, ಗುಣಕೀರ್ತನ, ಉದ್ವೇಗ, ವಿಲಾಪ, ಉನ್ಮಾದ, ವ್ಯಾಧಿ, ಜಡತಾ, ಮರಣ. ಅಥವಾ (ii) ಅಭಿಲಾಷೆ, ಚಿಂತೆ, ಸಂಸ್ಮೃತಿ, ನಿಜಗುಣಸ್ಮೃತಿ (ಕೀರ್ತನ), ಸಂತಾಪನ, ಕ್ರಿಯಾದ್ವೇಷ, ವಿಕಲತೆ, ಮೌನ, ಮೂರ್ಛೆ, ಮರಣ ಎಂದು ಹತ್ತು ಬಗೆಯ ಮದನಾವಸ್ಥೆಗಳು : ಪಂಕ್ತ್ಯವಸ್ಥೆಗಳ್ಗೆ ಹೇತು ಪಂಚಪುಷ್ಪಲತಿಕಾಸ್ತ್ರಮೆಂದು ಕೋವಿದಾಳಿ ಪೇೞ್ಗುಂ ಮಂಗನೇ (ಅನುಮು. ೨೯). 'ದಶಾವಸ್ಥೆ' ಪರಾ. [ಪಂಕ್ತಿ+ಅವಸ್ಥೆ]

**ಪಂಖ,** ಪಂಕ$_2$, ಪಂಖಾ (ನಾ). **೧.** ಗಾಳಿ ಬೀಸುವ ಸಾಧನ; ಬೀಸಣಿಗೆ : ರೈಲು ವೇಗವಾಗಿ ಓಡುತ್ತಿದ್ದರೂ ತಲೆಯ ಮೇಲೆ ಪಂಖಗಳು ಗಿರಿಗಿರಿ ತಿರುಗುತ್ತಿದ್ದರೂ ಬೆವರು ಹರಿಯುತ್ತಿತ್ತು (ಬದುಜ. ೯) ; ಧನಿಕರೆಲ್ಲರೂ ಬೆಟ್ಟಗಳ ಮೇಲಿನ ಪಟ್ಟಣಗಳನ್ನು ಸೇರಿ ಬಂಗಲೆಗಳಲ್ಲಿ ವಾಸಮಾಡುತ್ತಾ ಪಂಖಗಳಿಂದ ಬೀಸಿಸಿಕೊಳ್ಳುವುದು (ತಾಪ್ಯಾರಿ. ೧೨೯). **ಪಂಕ$_2$ : ೧.** "ಮರದ ಪಟ್ಟಿಗೆ ಬಿಳಿಗೆಯ ಬಟ್ಟೆಯನ್ನ ಳವಡಿಸಿ ತೂಗ ಹಾಕಿರುವುದನ್ನು ಹಗ್ಗದಿಂದ ಎಳೆದು ಗಾಳಿ ಬೀಸುವ ದೊಡ್ಡ ಬೀಸಣಿಗೆ ; ಪಂಕ" (Punka. ಇಂಕನಿ) ; ಅನಾದಿ ಕಾಲದಲ್ಲಿ ರೈಲುಬಂಡಿಗೆ ತೊಡಿಸಿದ್ದ ಇಲೆಕ್ಟ್ರಿಕ್ ಪಂಕಗಳು ನಾವು ಬಂಡಿ ಏರಿದ ಗಳಿಗೆಯಿಂದ ತಿರುಗುತ್ತಲೇ ಇದ್ದುವು (ಅಬೂಬ. ೧) ; ಬಂಡಿಯು ಮುಚ್ಚಿಗೆಗೆ ತೂಗಿದ ಪಂಕಗಳಂತು ತಿರುಗುತ್ತಲೇ ಇದ್ದವು (ಅಳಿನಿ. ೫೭) ; ಹಂದರವ್ಮಾಲಲ್ಲಿ ಜೋಡೆದ್ದು ಗಿಣಿ ಕೂತು ಘಂಕನಲ್ಲಾಡಿ ನಗತಾವ ಅವು ಮಾತಾಡ್ಯಾವ ಅಕ್ಕ ಭಾವಗ ವರನಂದ (ಮಲ್ಲಿಗೆ. ೮೦). **ಪಂಖಾ : ೧.** ನೀವು ಮಾತ್ರ ಆಫೀಸಿಗೆ

ಹೋಗಿ ಸುಖವಾಗಿ ಕುಳಿತು ಬಿಡಿ, ಪಂಖಾದ ಬುಡದಲ್ಲಿ (ಹಸ್ನೊಂದ.೫೬).
[<ಪ್ರಾ. ಪಂಖ./ಸಂ. ಪಕ್ಷ./ಹಿಂ. ಪಂಖ, ಪಂಖಾ ; ಮರಾ. ಪಂಖ, ಪಂಖಾ, ಪಖ]

**ಪಂಖಾ** 'ಪಂಖ' ನೋ.

**ಪಂಗ$_1$**, ಪಂಗು$_1$, ಪಾಂಗ, ಹಂಗ$_1$ (ನಾ). ೧. ರಾಜನಿಗೆ ಸಲ್ಲಬೇಕಾದ ಕರದ ಭಾಗ; ರಾಜಾದಾಯ: ಬ್ರಹ್ಮದೇಯ ಸಮಯೇನ ಅಭಟಪ್ರವೇಶಮನ್ತಃಕರವಿಷ್ಟಿ ಕಪ್ಪುರಿಹೃತ ಪಞ್ಗೋತ್ಕೋಟಿಮ್ ದತ್ತವಾನ್ (ಎಕ. IV, ಹುಣಸೂ. ೧೮-೧೮ ; ಸು. 450 ?); ಜ್ಯೇಷ್ಠ ಪವುರ್ಣ್ಣಮಾಸ್ಯಾಮುದಕಪೂರ್ವ್ವಕವ್ ಸರ್ವ್ವಪಂಗ ಪರಿಹೃತೋ ದತ್ತೋ (ಎಇ. XXXI, ೨೩೬-೧೨; 6ನೆಯ ಶತ ?); ಪಂಗಮು ಸರ್ವ್ವಮಾನ[ಮು]ಂಖ ೧ ತೋಂಟಕು ಪಂಗಂ ಸರ್ವ್ವಮಾನ[ಮು]ಮು(ಸೌಇಇ. X, ೪೪೯-೧೨; 1280); ಪಂಗವಿದ್ದಲಿದ್ದಕ್ಕಂದಿರುವರು ತುಂಗಮಾತ್ರವ್ರಾತಮುದಿದೆಂದಿಂಗಿತಮದೇನುಂಟೆ ನಡವುದು ವಿಜನಪದಕೃತ್ಯಂ (ವಿವೇಭ. ೧೦-೧೩) ; ನೆನೆನೆನೆಯಿಸಿ ಪಂಗಂ ಕಿತ್ತಡಂ ಕಯ್ಪೆ ದುಃಖಂ ಕನಲಿಸೆ ಪಗೆದೂಳ್ವೋ ! ಕಬ್ಬಿಗಂ ಕೇಳ್ ಕೃತಜ್ಞಂ (ಸಂಪಪ.೧೧-೨೬). **ಪಂಗು$_1$:** ೧. ಪಞ್ಗುವಮ್ ಪೊನ್ ಕೊಡು ದಣ್ಣಾಯ××× ತ್ತೋವಮ್× (ಎಕ. VI (R), ಪಾಂಡವ. ೨೨೬-೧೩ ; 1273). **ಪಾಂಗ:** ೧. ತದ್ ಗ್ರಾಮಾತ್ ಸೋನ್ಸಾರ[ಜ್ವ]ವೀ ಚಿಞ್ಚಖಿಣ್ಣೀತಿ ಪಾಲಣಮ್ ಶತಾತ್ ಕ್ರೀತ್ವಾದದವು ಸರ್ವ್ವಮೇತತ್ ಪಾಂಗಾದಿ ವರ್ಜ್ಜಿತಮ್ (ಎಇ. XXX, ೬೬-೨೬ ; 1107). **ಹಂಗ$_1$:** ೨. ಒಂದು ಬಗೆಯ ತೆರಿಗೆ : ××× ಕೆಡೆಯೊಳಗೆ ಬಿಟ್ಟ ಹಂಗದ ಮತ್ತರು ೨ ವೂರೊಳಗಣ ಗಾಣ . . . ೧ಱ ಲೆಕ್ಕದೆ ಬಿಟ್ಟ ಪಳಿಗೆ ೧ (ಸೌಇಇ. XX, ೧೬೮-೫೨ ; 1192). 'ಪನ್ನಾಯ', 'ಪಾಗ' ಪರಾ.
[ದೇ.॥ ತಮಿ. ಪಞ್ಕು; ಮಲ. ಪಞ್ಗು; ತುಳು. ಪಾಂಗಳ; ತೆಲು. ಪಂಗ]

**ಪಂಗ$_2$** (ನಾ). ಕವಲು ; ಟಿಸಿಲು : 'ಪಂಗನಾಮ' ಪರಾ.
[←ತೆಲು. ಪಂಗ, ಪ್ರಂಗ, ಪ್ರಗ್ಗ]

**ಪಂಗ$_3$** (ನಾ). ಕಾಲಿಲ್ಲದವನು ; ಹೆಳವ ; ಕುಂಟ : ಅಂಗಡಿಯ ಬೀದಿಯಲ್ಲಿ ಕೊಂಗಿತಿ ಕುಳಿತು ಭಂಗವ (ಭಂಗಿಯ) ಮಾಡುತಿಪ್ಪಳು ನೋಡಾ ಆಕೆಗೆ ಹರಿಗೆಯ ಪಂಗನೆಂಬವ ಗಂಡನಾಗಿಪ್ಪನು ನೋಡಾ (ಸಿದ್ಧೇಪ. ೧೧೦-೩೪೨). [<ಸಂ. ಪಂಗು]

△ **ಪಂಗ$_4$** 'ಹಂಗ$_2$' ನೋ.

**ಪಂಗಡ** 'ವಂಗಡ' ನೋ.

**ಪಂಗಣಿಗಪ್ಪು** (ನಾ). ಆನೆಯನ್ನು ಹಿಡಿಯುವುದಕ್ಕಾಗಿ ತೋಡಿರುವ ಕುಳಿ,—ಹಳ್ಳ ; ಖೆಡ್ಡಾ : ಪಿಡಿವರ್ಪಂಗಣಿಗಪ್ಪುಗಳೆಡೆಯೊಳ್ಕೆಲರಾನೆವಿಂಡನೀಯಪ್ರತಿಮಂ ಪಿಡಿದಂ ಪೆರ್ಬಲೆವಳಸಿನೊಳಡವಾಯ್ದುಕೇರಿಯವರ ಪೇರಾನೆಗಳಂ (ಅಪ್ರತಿ. ೮೧-೯೨). ℙ ಇದು 'ಪಂಗಣಿ' ಹಾಗೂ 'ಕಪ್ಪು' ಒಂದೇ ಅರ್ಥದಲ್ಲಿ ಬಳಸಿರುವ ಕೂಡುನುಡಿ.
[ಪಂಗಣಿ$_0$ (ℙ ←ತೆಲು. ಪಂಗಿಡಿ, ಪಂಗೆನ) + ಕಪ್ಪು$_3$]

**ಪಂಗತಪ್ಪು** (ನಾ). ರಾಜನಿಗೆ ಕೊಡಬೇಕಾದ ರಾಜಪಾಲು ತಪ್ಪಿದಲ್ಲಿ ಹಾಕುವ ತಪ್ಪಿನ ದಂಡ. [ಪಂಗ$_1$ + ತಪ್ಪು$_2$]

**ಪಂಗತಿ** 'ಪಂತಿ' ನೋ.

**ಪಂಗನಾಮ,** ಪೆಂಗ್‌ನಾಮ, ಪೆಂಗಿನಾಮ (ನಾ). ೧. ಹಣೆಗೆ ಹಾಕಿಕೊಳ್ಳುವ ಕವಲುಗಳುಳ್ಳ ಲಾಂಛನ; ಶ್ರೀವೈಷ್ಣವರು ಧರಿಸುವ ತಿರುನಾಮ : ಒಮ್ಮೆ ಆದವಾನಿಯಲ್ಲಿ ಪಂಗನಾಮದ ತಿಮ್ಮಣ್ಣನವರ (ವೇಣುಗೋಪಾಲವಿಠಲ) ಮನೆಯಲ್ಲಿ ಶ್ರೀವಿಜಯದಾಸರ ಸಂದರ್ಶನವಾಯಿತು (ಜಗದಾ. ೧೩೬). 'ಗೂಟನಾಮ' ಪರಾ. ೨. (ಆಲಂ) ಮೋಸ; ವಂಚನೆ: ಪದ್ದೂಗೆ ಪ್ರಾಯಶ್ಚಿತ್ತ ಪಂಗನಾಮ (ನಡೆವಾ. I, ೫೨೧); ಆತನನ್ನು ವ್ಯಾಪಾರಕ್ಕೆ ಸೇರಿಸಿಕೊಂಡುದರಿಂದ ಮೂಲಧನಕ್ಕೇ ಪಂಗನಾಮವನ್ನು ಹಾಕಿಸಿಕೊಂಡರು (ರೂಢಿ). **ಪೆಂಗ್‌ನಾಮ :** ೨. ನಿಮಗೆಲ್ಲ ಕೂಲಿನಾಲೀ ಬವುನೀಸ್ ಎಲ್ಲಕ್ಕೂ ಪೆಂಗ್‌ನಾಮ (ಚೆಂಗೂಲಿ. ೪೬). **ಪೆಂಗಿನಾಮ :** ೧. "ನನ್ನ ಮನೆಗೆ ನಾನೇ ದಾಸ, ಬೆಕ್ಕಿಗಿಡೋ ಪೆಂಗಿನಾಮ" ಎಂಬ ಸೂಳೆಯರ ಗಾದೆಯಂತೆ (ಕೃಷಿಪ್ರ. ೩೦೨).

**ಪಂಗನಾಮ ಹಾಕು** = ಮೋಸ ಮಾಡು ; ಇಲ್ಲದಂತೆ ಮಾಡು : ತೋಟೀ ಇನಾಂತೀಗೆ ಪಂಗನಾಮ ಹಾಕಬೇಕಾಗುತ್ತೆ ಇನ್ನು (ನಮ್ಮಳ್ಳಿ. ೯). [ಪಂಗ$_2$ + ನಾಮ./ತೆಲು. ಪಂಗನಾಮ]

**ಪಂಗರ** (ನಾ). ( ? ) : ಪೊಂಗೈಸಾಸಿರ ಅಡಕೆಯ ಅಂಗೈ ಅಂಗಡಿಯೊಳು ವಂದು ಮಾಜಲಾಲಕ್ಕುಂ ಪಂಗರದೊಳುಟ್ಟು ಮಾಜಲು ಪಿಂಗದೆ ಲಕ್ಕಕೆಯೋನು ಪೊಂಗಳು ಬಕ್ಕುಂ (ಭಾಸ್ಕರ. ೨೪-೨). [ ? ]

**ಪಂಗರಿಕೆ** (ನಾ). ಒಂದು ಊರಿನ ಹೆಸರು: ಉಪ್ಪಲಿಕಾಶತತ್ರಯಾನ್ತರ್ಗ್ಗತವಪ್ಪುಲತಲ್ಲ ದ್ವಾದಶಮಧ್ಯೇ ಪಂಗರಿಕಾ ನಾಮಗ್ರಾಮಃ (ಇಆ. XII, ೨೬೬-೫೨ ; 972). [ ? ]

**ಪಂಗಲು** (ನಾ). ಕವಲು; ಟಿಸಿಲು : ಈ ಮರ ತುಂಬಾ ಪಂಗಲು ಪಂಗಲಾಗಿದೆ (ರೂಢಿ). [ಪಂಗ$_2$ + -ಅಲು(<-ಅಲ್$_2$)]

△ **ಪಂಗಾಗೆ** 'ಹಂಗಾಗೆ' ನೋ.

**ಪಂಗಾಯ್** (ನಾ). ಹಸುರುಕಾಯಿ ; ಎಳಗಾಯಿ ; ಹೀಚು : ಕೆಚ್ಚನೆ ತೆಂಗು, ಕೆಂದೆಂಗು. ಏವಂ ಕೆಂದಳಿರ್, ಕೆಂಬೊನ್; ಪಂದಲೆ ಪಂದೊವಲ್, ಪಂಗಾಯ್ (ಶಬ್ದಾನು. ೩೪೧ ಪ್ರಯೋ).
[ಪಂ (<ಪಸಿ$_3$) + ಕಾಯ್$_4$]

**ಪಂಗಾವಣ** (ನಾ). ಹಸುರುವಾಣಿ ಚಪ್ಪರ: ಆ ನಗರಲಕ್ಷ್ಮಿ ರಾಜಮರ್ಯಾದೆಯಿಂ ತಮಗೆ ಶೀತೋಪಚಾರಮನೆಸಗಲ್ಕೆರಡುಂ ಕೆಲದೊಳೋರಣದಿಂ ಪರುಠವಿಸಿದ ಪಂಗಾವಣಂಗಳೆಂಬಂತೆ ಕಂಗೊಳಿಪ ಸಾಲಮರಂಗಳಿಂ (ಮರಾಚ. ೧೧-೧೩ ವ). [ಪಂ (<ಪಸಿ$_3$) + ಕಾವಣ$_1$]

**ಪಂಗಿಗ,** ಹಂಗಿಗ (ನಾ). ೧. ಹಂಗಿಗೆ ಸಿಕ್ಕಿದವನು ; ದಾಕ್ಷಿಣ್ಯಕ್ಕೆ ಕಟ್ಟುಬಿದ್ದವನು; ಋಣಿ. ೨. ಅಧೀನನಾದವನು; ವಶವರ್ತಿ; ಪರಾಧೀನ : ಅಜಿಸಿ ಕೊಲುತಿರ್ಪ ಜವನೆಂಬಜಾಕೆಯ ಪಗೆವಂಗದೆಂತು ಪಂಗಿಗನಪ್ಪೆಂ (ಆದಿಪು. ೪-೬೬). **ಹಂಗಿಗ :** ೧. ಗುರುವೆಂಬೆನೆ ಕಂಡ ಕಂಡವರಿಗೆ ಲಿಂಗವ ಕೊಟ್ಟು ದ್ರವ್ಯಕ್ಕೆ ಹಂಗಿಗನಾದ (ಮೋಳಿಮಾ. ೧೫೮-೫೯೪) ; ನಿನ್ನ ಹಂಗಿಗನು ಸಿರಿಯಾಳಸೆಟ್ಟಿಯ ಹಾಂಗೆ ಎನ್ನಂ ನೋಡದಾ ಮತಿ ಹಿಂಗಿದವಳೇ ನಿಂಬಿ ಶರಣರ ಸಿಂಬಿ ನಾನಯ್ಯ (ಬಸಪು. ೨೪-೬೪) ; ನಿನಗೆ ಹಂಗಿಗನಾದೆ ನಾನು (ಅಕ್ರೂಚ. ೮-೫೪) ; ನಾಮ ರೂಪಿಗನಲ್ಲ ಸೀಮೆ ಹಂಗಿಗನಲ್ಲ . . . ಸ್ವಾಮಿ ಚರಮೂರ್ತಿ ಜಂಗಮ ದೇವನು (ಮೈಲಾರ. ೧೩೧-೧). ೨. ನಾನದಾವುದು ಧರ್ಮತತ್ವನಿಧಾನವೆಂದಜಾಯದೆ ಕೃತಾಂತಂಗಾನು ಹಂಗಿಗನಾದೆನೆಂದೊಜಲಿದನು ಯಮಸೂನು (ಕುಪ್ಯಾಭೀ. ೧೦-೨೦) ; ಕಂಗಳೀಕ್ಷಿಸಲಮೃತಕರನುತ್ತುಂಗಬಿಂಬವನದಱ ನಡುವೆ ಕುರಂಗವದೆ ಕುಜುಹೀ ಜಗತ್ರಯಕರಸ ಚಿತ್ರೈಸು ಹಂಗಿಗನೆ ಹುಸಿಯೆ[ಗೆ]ನಲು (ತೊರರಾ. ೩-೧೧-೫೨); ಈ ನಳಿನಲೋಚನನಾಜುಮುಡಿ ಹಂಗಿಗನು ಭಕ್ತರಿಗೆ (ನಿಭಾಗ. ೭-೧-೩೯). [ಪಂಗು$_2$ + -ಇಗ]

**ಪಂಗು$_1$** 'ಪಂಗ$_1$' ನೋ.

**ಪಂಗು$_2$,** ಹಂಗು (ನಾ). ೧. ದಾಕ್ಷಿಣ್ಯ; ಆಭಾರ; ಋಣ : ಮುಂಗಿಲ್ಗಳ ಪಂಗಿನಿತುಂಟೆ ಕೇಕಿಯಾಹ್ಲಾದದೆ ಕಂಡು ನರ್ತಿಪುದಿದಲ್ತೆ ಸಮಾನವಯಃಪ್ರವರ್ತನಂ (ರಾಜಶೇ.೮-೧೨೨); ಶಿವೆಯರಸ ನಿನ್ನ ಪಂಗಿನೊಳೆಯ್ದೆ ಬಿಡದೆ ತಾನವಿರತಂ ಬಾಳ್ವ ಬಡಸಿರಿಯಾಳ್ವನಂತೆನ್ನನೇಕೆ ನೋಡುವೆ

ಮಹೇಶ (ಕುಮಾವ್ಯ. ೫-೧೨೩). **೨.** ಅಗತ್ಯ ; ಆವಶ್ಯಕತೆ : ಸುರಭಿ ಶರಂಗಳಂ ಮುಗುಳದೇಕೆ ಪೊತ್ತನೊ ತಾಳ್ದಿರಲ್ಕೆ ಮುಂಬರಿಸಿದನಕ್ಕು ಮಿಕ್ಷುಧನುವಂ ಶಶಿಬಿಂಬದ ಪಂಗದೇಕೆ ಚಪ್ಪರಿಕೆಯೊಳಪ್ಪುದೇಂ (ಲೀಲಾವ. ೧೧-೭೫). **ಹಂಗು : ೧.** ಒಲ್ಲೆನೊಲ್ಲೆ ಮರ್ತ್ಯದ ಹಂಗ (ಅಪಚಂ. ೨೭೮-೧೨೭೬) ; ಬೆಳ್ದಿಂಗಳ ಹಂಗಿನ ಚಂದ್ರಕಾಂತಮಂ ನಗುವಂತಿರ್ದ ಸ್ವಭಾವ ರಸಾಂಗಿಯ ಲಜ್ಜೆಯ ಲಂಚಗುಳಿಯ ನೋಟದ . . .ಮನವಂ ತನ್ನತ್ತ ಸೆಳೆದು (ನಂಬಿರ. ೧೪-೪೫) ; ಕರುಣಾಸಮುದ್ರನು ನೀಸಿರಲು ಕಮಲಾಸನನ ಹಂಗೇಕೆ (ಹರಿಸಾ. ೬೩) ; ಹಂಗಿನರಮನೆಯಿಂದ ವಿಂಗಡದ ಗುಡಿ ಲೇಸು (ಸರ್ವಜ್ಞ. ೧೫೩೪) ; ಕತ್ತಲೆಯ ಮಂದಿರದಿ ಕೆಡಹಿದ ವಿತ್ತಮಂ ಕಾಣಲ್ಕೆ ಬೆಳಗಿನ ವರ್ತಿ ತಾ ಪಿಡಿದರಸಿ ಕೆಡದಾ ವಸ್ತು ದೊರೆದಲ್ಲಿ ವರ್ತಿಬೆಳಗಿನ ಹಂಗದೇತಕೆ (ಗಗತಾ. ೧೬-೪೯) . **೨.** ಜಾತ್ಯಶ್ವಂಗಳ ವಳಯುಮಂ ಸೋಂಕದಂಕಣಿಯ ಹಂಗಿಲ್ಲದೆ ಭೋಂಕನೇಱಿ . . . ನಿಂದ ತಾರಕಾಸುರನ ಚಾತುರಂಗಬಲವೆಂತಿರ್ದುದೆಂತೆಂದೊಡೆ (ಗಿರಿಕ. ೬-೫೫ಪ); ಗೂಡಾರ ಗುಡಿಗಳ ಹಂಗಿಲ್ಲದೆಲ್ಲರು ಬೀಡಾರಗಳ ಹೊಕ್ಕರೊಸೆದು (ಭರಚ.೨೨-೭೫) ; ಒಲ್ಲೆನಯ್ಯ ಜಗದ ಹಂಗಿನ ಭೋಗೋಪಭೋಗವನು (ಅಖಂಡೇ. ೧೪೪-೧೩೧) ; ದೇವರ ಹಂಗು ನಮಗೇನು ಎಂದು ವಾದಿಸುವವರನ್ನೂ ಗೀತೆಯು ಎತ್ತಿಹಿಡಿಯುವುದಿಲ್ಲ (ಗೀತಾಸಂ. ೧೭) ; ಹಂಗು ಹರಿದ ಮೇಲೆ ತೊಂಗೇನು, ತೊಡರೇನು ? (ಗಾದೆ). **೩.** ಸಹಾಯ; ಉಪಕಾರ : ಮಂಗಳಾತ್ಮಕ ಕೇಳು ನಿನ್ನಯ ಹಂಗ ನೊಲ್ಲೆನು (ಕುಮ್ಯಾಭೀ. ೬-೪೪) ; ಸಾಕಿದೇತಕೆ ಹಂಗು ಹೋರಲದೇಕೆ ಹೊರೆಯೊಳು ನಿಧಿಯಿರಲು ತಿರಿದೇಕೆ ಬಳಲುವೆನೆನುತ ಬಹಳಾಟೋಪದಲಿ ಜಡಿದು (ನಿಭಾಗ. ೧೦-೭೧-೪೨) ; ನಿನ್ನಂಥ ಅಣ್ಣ ಇರುವಾಗ ನನಗೆ ಹಂಗಿನ ಹೆದರಿಕೆಯಿದೆಯೆ ? (ವಾತ್ಸಲ್ಯ. ೯೩) ; ಲಿಂಗ ಹರಿದ ಮೇಲೆ ಜಂಗಮನ ಹಂಗೇನು ? (ಗಾದೆ). **೪.** ಆಶೆ ; ಬಯಕೆ ; ಇಚ್ಛೆ : ಅರ್ಹಂತ್ಯಕ್ಕೆ ಹಂಗೇಕೆ ಯೋ ಭಾವಸ್ಸೋ ಭವಮೆಂಬ ವಾಕ್ಯಮೆ ವಲಂ ಮೂಢಪ್ರಬೋಧಾವಹಂ (ಅನಂಪು. ೧-೬೧) ; ಧಾತ್ರಿಯ ಹಂಗೆ ಹೂವಿನ ಹಂಗೆ ಚಿನ್ಮಯಗಾತ್ರಗೆ ಹಂಗಳಿದವಗೆ (ಭರಚ. ೧-೯೧) ; ಉದಂಕನೆ ನಿನ್ನ ಸಚ್ಚರಿತ್ರವೇ ನನಗೆ ಗುರುಕಾಣಿಕೆ. ನನಗೆ ಬೇರೆ ಗುರುದಕ್ಷಿಣೆಯ ಹಂಗೇಕೆ (ಮಣಿಸ.೬೪) ; ಎರಡು ಸೇನೆಗಳೂ ಜೀವದ ಹಂಗನ್ನು ತೊರೆದು ಭಯಂಕರವಾದ ಯುದ್ಧವನ್ನು ಪಕ್ರಮಿಸಿದವು (ಶಾಂತಲಾ. ೧೫೧). **೫.** ಆಶ್ರಯ ; ಅವಲಂಬನ : ಕ್ರೈಸ್ತಮತ ವಿಚಾರದಲ್ಲೂ ಮತಾಧಿಕಾರಿಗಳ ಹಂಗಿಲ್ಲದೆ ನೇರವಾಗಿ ಯೇಸುಕ್ರಿಸ್ತನ ಮಾತುಗಳಿಂದಲೇ ಪ್ರಚೋದನೆ ಪಡೆಯುವ ಹಕ್ಕು ಉಂಟೆಂದು ಮಾರ್ಟಿನ್‌ಲ್ಯೂಥರ್ . . . ಸಾರಿದ (ಕವಿಕೋ. I, ೭೬೮). **೬.** ಸಂಬಂಧ ; ನಂಟು : ಪಕ್ಷ ಮಾಸಾಬ್ದತತಿಗಳ ಹಂಗು ಹೊದ್ದದು (ಸಿದ್ಧರಾ. ೨-೧೧) ; ಹಳತರ ಹಂಗನ್ನು ಹರಿದೊಗೆದು ಹೊಸ ಸೃಷ್ಟಿಯನ್ನೇ ಸ್ಥಾಪಿಸ ಹೊರಟಿರುವ ಈ ನವನಡೆಯ ಉತ್ಸಾಹವನ್ನು ನೋಡು (ಕತ್ತಜೆ. ೧೫).

**ಪಂಗಾಗು, ಹಂಗಾಗು** = ಅಧೀನವಾಗು ; ವಶವಾಗು : ಜೋಲ್ವ ಕಚಭರಮನುರದೆಗೊಂಡು ನೆಗಪಲ್ ಪೋಪ ನಲ್ಲರಳಿಪಂ ತೋಱಿ ತುಡುಕಿ ತೆಗೆದಪಾಂಗಕ್ಕೆ ಪಂಗಾಗಿ[ಪಾಠಾಂ. ಪಕ್ಕಾಗಿಸಿ](ಲೀಲಾವ. ೩-೨೦ ಪ) ; ಅಬಲೆಯೊಬ್ಬಳ ಹರಿಬದಲಿ ಹಂಗಾದಿರೆಂಬಪದೆಸೆಗೆ ನೋನುವರೇ(ಕುಮ್ಯಾಉ. ೬-೨೪). **ಹಂಗ ತಿದ್ದು** = ಋಣವನ್ನು ತೀರಿಸು; ಋಣತಿದ್ದು : ಅಂಗವ ತುಱಿಸಲ್ಕೆ ತುಱಿಸುವ ಕೈಗಳ್ಗೆ ಹಂಗ ತಿದ್ದುವ ಶಾಸ್ತ್ರವುಂಟೆ (ಮೋಹತ. ೩೦-೪೦). **ಹಂಗ ಮಗುಚು** = ಋಣ ತೀರಿಸು : ಹಂಗ ಮಗುಚುವೆನೆಂದು ಭೂಮಿ ಕೈನೀಡಿ ಮೇಘಂಗಳಿಗೆ ಕೊಡುವಮೃತಕಲಶ ಸಂಕುಳವೊ . . . ಎನಿಸಿ ಫಲಿತ ಚೆಂದೆಂಗೆಸೆದುವು (ಹಚತಾ. ೩-೨೮) ; **ಹಂಗಿನ ಕೂಳು** = ಋಣದ ಅನ್ನ, — ಆಹಾರ : ಅವರಿವರ ಮನೆ ಹಿಟ್ಟೆತ್ತಿಕೊಂಡು ಹಂಗಿನ ಕೂಳು ತಿಂದುಕೊಂಡು ವಿದ್ಯಾಭ್ಯಾಸ ಮಾಡದಿದ್ದರೂ ಅಗ್ತದೆ (ಚೆಂಗಾಳ್ವ. ೬). **ಹಂಗಿನವನು** = ಋಣದಲ್ಲಿರುವವನು ; ಋಣಿ : ಬಡಹಾರುವನೇಸು ಭಕ್ತನಾದಡೆಯೂ ನೇಣಿನ ಹಂಗಬಿಡ . . . ನಾನಾವ ಹಂಗಿನವನಲ್ಲ ನಿಮ್ಮ ಶರಣರ ಹಂಗಿನವನಯ್ಯಾ (ಬಸವ. ೪೫೦). [**ದೇ.॥ ತುಳು. ಹಂಗ್**]

**ಪಂಗು$_3$** (ಗು). **೧.** ಅಸಮರ್ಪಕವಾದ ; ಕುಂಠಿತವಾದ : ಕವಿಯ ವರ್ಣನೆಗಳವೆ ಚಿತ್ರಿಸಲತೀಂದ್ರಿಯವ್ಯಾಪಾರಮಂ ಮನುಜಕಲ್ಪಿತ ಮರ್ತ್ಯ ಭಾಷೆಯ ಪಂಗುಲಿಪಿಯಲ್ಲಿ ?(ಶ್ರೀರಾಮಾ. ೭೧೭-೨೧೨). (ನಾ). **೨.** ಕಾಲಿಲ್ಲದವನು ; ಹೆಳವ;ಕುಂಟ : "ಖಂಜಃ, ಪಂಗುಃ, ಶ್ರೋಣಿಃ–ಈ ೩ ಪೆಸರ್ವಂ" (ಹಲಾಯು. ೧೨೦-೪೫೬) ; ಕುಲಹೀನಂ ದೀನಮಾನಂ . . . ಜಡಮತಿ ಕಿವುಡಂ ಪಂಗು ಮೂಕಂ . . . ನಿತ್ಯರೋಗಾಕುಳನೆಂಬೀ ನಾಮನಾಮಾವಳಿಗೆ ನಿಳಯನಕ್ಕುಂ ವ್ರತವ್ರಾತಹೀನಂ (ಪಶ್ವಾರಾ. ೧೦-೩೦) ; ಮನುಜಜನ್ಮದೊಳುದ್ಭವಿಸಿರ್ದು ಮೂಗನಾಗದೆ ಸಲೆಯಂಧನಾಗದಿರೆ ಪಂಗುವುಮಾ[ಪಾಠಾಂ. ಪಂಗುಳನಾ]ಗದೆ . . . ಮೆಚ್ಚಿವಲ್ಲಿ ಪೂಜಿಸು ಮಹೋತ್ಸವದಿಂದಲೆ ಹಂಪೆಯಾಳ್ದನಂ (ಪಂಪಾಶ. ೭೫) ; ಮೂಕಾಂಧ ಬಧಿರ ಪಂಗು ಕುಬ್ಜ ವೃದ್ಧ ಸರೋಗ ದಾರಿದ್ರ್ಯಾಭಿಭೂತ ಕ್ಷುತ್ತೃಡ್ವಧ ಬಂಧನಾದಿ ವಿಪತ್ಪೀಡಾಕ್ರಾಂತ ನಾಸ್ತಿಕಜೀವಂಗಳೊಳು ದಯಾರಹಿತತೆಯುಂ . . . ಮೊದಲಾದ ದುಷ್ಟವರ್ತನೆಯೊಳು ವರ್ತಿಸುವ ಜೀವನ ಪರಿಣತಿಯಂ ಕೃಷ್ಣಲೇಶ್ಯಾಪರಿಣಾಮಮೆಂದಱಿವುದು (ಪಸಾರ. ೪೧೩) ; ಕುರುಡನಾ ಕೈಕಾಲು ಮುದುಡಿ ರವಿಸಲು ಪಂಗು ತರುಣನಪ್ಪಂ (ವೀಶ್ಯಪು. ೪-೨೧-೩೦) ; ಮಹಾತ್ಮರಾದ ನಿಮ್ಮ ದಯೆಯು ಪಂಗುವಿನಲ್ಲಿ ಗಂಗೆ ಬಂದು ಬಿದ್ದಂತೆ ನನ್ನಲ್ಲಿ ಉಂಟಾಯಿತು (ಮುದ್ರಾಮಂ. ೬೫). **೩.** ಶನಿಗ್ರಹ : "ಅಸಿತಃ, ಕ್ರೋಡಃ, ಪಂಗುಃ, ಛಾಯಾತನಯುಃ, ಶನೈಶ್ಚರಃ, ಶೌರಿಃ–ಈ ೬ ಶನಿಯ ಪೆಸರ್" (ಹಲಾಯು. ೯-೪೮) ; ಅಂಗಾರಕ ಬುಧ ಗುರು ಭೃಗು ಪಂಗುಗಳಿಂದುವನೆ ಭೇದಿಸಲ್ ಜಗದೀಶರ್ ಸಂಗರದೊಳಿಱಿದು ಮಡಿವರ್ (ಜಟ್ಟಮ. ೭-೧೧೩). **೪.** (ಆಲಂ) ಪ್ರಗತಿಯಿಲ್ಲದಿರುವುದು : ಅವರನ್ನು ಸೇರಿಸಿಕೊಳ್ಳಬೇಡ. ಸೇರಿಸಿಕೊಂಡರೆ ನಿನ್ನ ಉದ್ಯೋಗ ಪಂಗು ಆಗಿಬಿಟ್ಟೀತು (ತ್ರೀಕಾಂತ. ೨೪೩). **೫.** ಮುಂದುವರಿಯಲು ಶಕ್ತಿಯಿಲ್ಲದವನು ; ಕುಂಠಿತವಾದ ಶಕ್ತಿಯುಳ್ಳವನು ; ಅಭಿವೃದ್ಧಿಹೊಂದದವನು : ಆಧ್ಯಾತ್ಮಿಕ ಕ್ಷೇತ್ರದಲ್ಲಿ ಆವನನ್ನು ಕೃತ್ರಿಮ ಉಪಾಯಗಳಿಂದ ಮೂಢನನ್ನಾಗಿ ಪಂಗುವನ್ನಾಗಿ ಮಾಡಿಟ್ಟಂತಾಗದೆ ? (ನಿಬಂಧ. I, ೨೨೮) ; ಮಾಧವರಾಯ ಮಂಡ್ಯಕ್ಕೆ ಹೋದುದು ಪಂಗುಗಳಾಗಿದ್ದ ಕಿರಿಯ ವಕೀಲರಿಗೆ ರೆಕ್ಕೆ ಬಂದಂತಾಯಿತು (ಗೃಹಃ. ೨೬೮).

**ಪಂಗ್ವಂಧರ ನೀತಿ** = ಕುಂಟ, ಕುರುಡರ ನ್ಯಾಯ; ಆ ಹೆಳವನಿಗೆ ಕಣ್ಣಿದೆ, ನಡೆಯಲಾಗುವುದಿಲ್ಲ. ಕುರುಡನಿಗೆ ನಡೆಯಲಾಗುತ್ತದೆ, ದಾರಿಯನ್ನು ಕಾಣಲು ಕಣ್ಣಿಲ್ಲ. ಕುರುಡನು ಹೆಳವನನ್ನು ಬೆನ್ನ ಮೇಲೆ ಕುಳ್ಳಿರಿಸಿಕೊಂಡು ಹೊರಟರೆ ಪರಸ್ಪರ ಸಹಾಯವಾಗಿ ಪ್ರಯಾಣ ಸಾಗುತ್ತದೆ. ಇದು ಈ ದೃಷ್ಟಾಂತದಿಂದ ಗೊತ್ತಾಗುವ ನ್ಯಾಯ ; ಪರಸ್ಪರ ಸಹಾಯದಿಂದ ಉಭಯರ ಕಾರ್ಯಸಾಧನೆಯೂ ಆಗುವುದು : ನಮಗೊಪ್ಪಿತು ಪಂಗ್ವಂಧರ ನೀತಿ ಒಯ್ಯೆನ್ನನು ನಿನಗೊಪ್ಪುವ ರೀತಿ (ಅಹಲ್ಯೆ. IV ಅರ್ಪಣೆ).

[**ಸಂ.**]

**ಪಂಗುತ್ವ** (ನಾ). **೧.** ಹೆಳವವು; ಕುಂಟು. **೨.** (ಆಲಂ) ಪ್ರಗತಿಹೀನತೆ ; ಮುಂದುವರಿಯಲು ಆಗದಿರುವಿಕೆ ; ಕುಂಠಿತತನ :

ತಾಯಿಗೆ . . . ಈ ಎಲ್ಲ ಅನುಷ್ಠಾನಗಳ ಪಂಗುತ್ವವನ್ನೂ ತಥ್ಯಶೂನ್ಯತೆಯನ್ನೂ ಎತ್ತಿ ಬೈದಿದ್ದಾರೆ (ಇಪ್ಪ.ಕ. ೪೬೪). [ಸಂ.]

**ಪಂಗುನಿ** (ನಾ). ಸೌರಮಾನದ ಕೊನೆಯ ತಿಂಗಳು; ಮೀನಮಾಸ; ತಮಿಳು ಫಾಲ್ಗುಣಮಾಸ: ಮೊದಲ ಪಂಗುನಿ[ಪಾಠಾಂ. ಲಿ]ಯ ತಿರುನಾಳ್ ಬರಲು ನಲ್ಮೆಯಿಂ ಮುದದಿಂದ ಪಟ್ಟಣಂ ಕೈಗೆಯ್ಯ ಲೊಲ್ಮೆಯಿಂ . . . ಇಂತೆಂದಳಾ ಪೂರ್ಣಶಶಿಮುಖಿಗೆ (ನಂಜಿರ. ೧೧-೧೧); ಒಂದು ಪಂಗುನಿಮಾಸ ಉತ್ಸವಕಾಲದಲ್ಲಿ ಸ್ವಾಮಿಸೇವೆಯನ್ನು ಮಾಡಿಕೊಂಡು ಮನೆಗೆ ಹೋಗಿಬೀದಿಯ ಜಗಲಿನಲ್ಲಿ ಕುಳಿತಿದ್ದರು(ಭುಂಪಿ.೧೪೪). [←ತಮಿ. ಪಙ್ಗುನಿ ; ಮಲ. ಪಙ್ಗುನಿ./ಪ್ರಾ. ಫಗ್ಗುಣೀ, ಫಾಲ್ಗುಣೀ]

**ಪಂಗುಳ** (ನಾ). ಕಾಲಿಲ್ಲದವನು ; ಹೆಳವ : ಅನಿಲನ ಕುಂದಿಂದೆ ಪಂಗುಳಾಂಧ ಕೃಶಂ ವಾಮನ ಕುಬ್ಜ ಬಧಿರ ಮೂಕರುಮನೇಕವಿಧದಂಗಹೀನರುಂ ಜನಿಯಿಸುವರ್ (ಮದತಿ. ೧-೪೫); ನಿಮ್ಮ ವೇಷಧಾರಿಯ ಮನೆಯ ಪಂಗುಳ ನಾನಯ್ಯಾ (ಬಸವ. ೩೪೧); ತನುವಿಕಾರಿಯನಂಗಹೀನನ ಪಂಗುಳಾಂಧಕನ ಘನರುಜಾಂಗನ . . . ಉಪ್ಪವಡಿಸುವ ಸಮಯದೊಳನಿಬರನು ಕಾಣ್ಬುದು ಮಹೀಶರಿಗಂಗವಲ್ಲೆಂದ (ಕುವ್ಯಾಉ. ೩-೧೦೭); ತಿಪ್ಪೆಯೊಳಗಿರ್ಪ ಪಂಗುಳನು ಮಿಱುಗುವ ರನ್ನದುಪ್ಪರಿಗೆಯೊಳ್ ನಿಂದು ರಾಜಿಪ ಕುಮಾರಿಯ ಬಿಗಿಯಪ್ಪುವೆನುಮೆಂದು ಕೈನೀಡಿದರೆ ಬರ್ಪಳೆ (ಏಕೋಪ. ೧೪-೮೯). [ಸಂ. ಪಂಗುಲ]

**ಪಂಗುಳೆ** 'ಪಂಗೋಳಿ' ನೋ.

**ಪಂಗೂಳಿ** 'ಪಂಗೋಳಿ' ನೋ.

**ಪಂಗೋಳಿ**, ಪಂಗುಳೆ, ಪಂಗೂಳಿ (ನಾ). ತುಚ್ಛ ; ನಿಂದ್ಯ ; ಅಯೋಗ್ಯ : ಯಾವನೋ ಪಂಗೋಳಿ ಮನಸ್ಸು ಬಂದ ಹಾಗೆ ಬರೆದಿದ್ದಾನೆ (ನಟಸಾ. ೫೭೦); ಒಳ್ಳೆ ಪಂಗೋಳಿಗಳನ್ನು ಸೇರಿಸಿದೆ ಬಿಡು (ಕಾಮಿಕಾಂ. ೧೦೫). **ಪಂಗುಳೆ :** ಆ ಪಂಗುಳೆ ಮನುಷ್ಯನಿಂದ ಯಾವ ಕೆಲಸವನ್ನೂ ಮಾಡಿಸಲು ಸಾಧ್ಯವಿಲ್ಲ (ರೂಢಿ). **ಪಂಗೂಳಿ :** ಆ ಪಂಗೂಳಿ ಮನುಷ್ಯನ ಜೊತೆ ಸೇರಬೇಡ (ರೂಢಿ). [ ? ]

**ಪಂಚ**$_1$ (ನಾ). ಅಪೂರ್ವವಾದುದು ; ಅಪರೂಪವಾದುದು ; ಸಿಕ್ಕಲಾರದುದು : "ಪಂಚಮಪೂರ್ವಂ" (ಚತುನಿ. ೬೭); ಪಿರಿದುಮಿಾಪುರದೊಳಾನೊರ್ವಳಲ್ಲದೆ ನಿನಗೆ ವರಯುವತಿಯರ್ಪಂಚಮೆಯೆಲವೊ ಗುರುಭಕ್ತ (ಅರಾಚ. ೨-೫-೩೩); ಎಚ್ಚಂತೆ ಮುಂ ಧೂರ್ಜಟಿಪುತ್ರಂ ಕ್ರೌಂಚಮಂ ಪಂಚಮೆನೆ ರಿಪುಮಹಾಕಲ್ಪಕಾಲಾಗ್ನಿರುದ್ರಂ (ರಾಜಶೇ. ೬-೮೯); ಮಾಂಸಲದ ಮೆಯ್ಸಿರಿಗೆ ಬೀಗಿ ಪರಿಪುಷ್ಪಮಾದೆನ್ನ ವಕ್ಷಸ್ಥಳಕೆ ಬಿಸುಡೆ ಬಿಮ್ಮನೆ ಬಿಳ್ದುದಾಳಾಳಿಗಂ ಪಂಚಮಿದು ದಿಟ್ಟಗೀಗಳೇನುಂಟೆ ? (ಸಂಸಪ. ೩೫-೨೨೮). 'ಪಂಚೆ$_2$' ಪರಾ.

**ಪಂಚ**$_2$ (ನಾ). ೧. ಒಂದು ಸಂಖ್ಯೆ; ಐದು : ಪಂಚಪ್ರಕಾರದುಃಖಮೆ ಪಂಚಮಹಾಭೂತಮಾಗೆ ಪುಟ್ಟಿದರ್ (ಚಂದ್ರಪ. ೧೬-೧೧); ಪುರಹರವಕ್ತ್ರಂ, ಪಂಚಂ . . . ಪಾಂಡವ ಪುರವೈರಿಮುಖಂಗಳೈದಱ ನಾಮಂ (ಪ್ಯಪಹಾ. ೯-೫); ಪಂಚನಳರೆಲ್ಲರಿಂದಂ ಮುಂಚುವೆವೆಂದು ಸ್ವಯಂವರಾಲಯದ ಲಸತ್ಕಾಂಚನಸಿಂಹಾಸನದೊಳ್ ಸಂಚಲಿಸದೆ ನೆಲಸಿದರ್ (ನಳಚಂ. ೩೧೧); ಶಿವಶರಣರಿಗೆ ಕ್ಷೇತ್ರವಿತ್ತವ ಪಂಚಸುರಕುಜಕೆ ಧವನೆನಿಪ ಶಿವಭಕ್ತರಿಗೆ ದ್ರವ್ಯವನೊಲಿದು ಕೊಟ್ಟು (ಶಂಕದಾ. ೯-೭೪). ೨. ಪಂಚಾಯಿತಿಯ ಸದಸ್ಯ : ಅಣಬಗೆ ಕಿಕೇರಿ ಒಳುದಯ ಇಂ ಧರ್ಮ್ಮದ ನಿಂಮ್ಮ ಹೊಬುಹಂಗಳ್ ಶ್ರೀ ಬ್ರಹ್ಮೇಸ್ವರದ ಮಾರ್ಕ್ಕ ಒಳು ಪಂಚರ್ಗ್ಗದೆಮಲ್ಲಿ ಬಳಾಲ ಆ ವಿಳಾಸಂಗಳಿಂ (ಎಕ. VI(R), ಕೃಷ್ಣರಾ. ೩೭-೧೭ ; 1095); ಆಷಾಢಪೌರ್ಣಿಮೆಯು ಜಾತ್ರೆಯ ದಿನವೆಂದು ಪಂಚರು ಗೊತ್ತುಪಡಿಸಿದ್ದರು (ಸಂಜೀವಿ. ೧೩೦); ಪಂಚರು ಯಾರ ಸ್ನೇಹಿತರೂ ಅಲ್ಲ, ಯಾರ ವೈರಿಗಳೂ ಅಲ್ಲ (ಗೃಹದಾ. ೩೧); ಜಗಳ ತೀರಿಸಲೆಂದು ಬಂದು ನೆರೆದ ಪಂಚರ ಪರಿವಾರ . . . ತುಂಟರ ನೆರವಿ ಇವೆಲ್ಲ ಕಾಣುವುವು ಚಾವಡಿಯಲ್ಲಿ (ಗಾಳಿಗು. ೩); ಜನ ಅವನನ್ನು ಊರಿನ ಪಂಚನಾಗುವುದಕ್ಕೆ ಹೇಳಿದರು (ಮಹಾತ್ಮಾ. ೬೦). 'ಪಂಚಾಯಿತಿ' ಪರಾ. ೩. ಗುಡಿ, ಶಾಲೆ ಮೊದಲಾದ ಸಾರ್ವಜನಿಕ ಸಂಸ್ಥೆಗಳ ಮೇಲ್ವಿಚಾರಣೆಗಾಗಿ ಏರ್ಪಡಿಸಿರುವ ಸಮಿತಿಯ ಸದಸ್ಯ : ನೀವು ಸಾಲೆಯ ಪಂಚರೆಂದು ನಿಮ್ಮ ಬೆಟ್ಟಿಗೆ ಬರಲಿಲ್ಲ ಗೌಡರೆ (ಹಬ್ಬಬ. ೨೭೬).

**ಪಂಚಕನ್ಯೆಯರು**=ಅಹಲ್ಯೆ, ದ್ರೌಪದಿ, ಸೀತೆ, ತಾರೆ ಮತ್ತು ಮಂಡೋದರಿ ಅಥವಾ ಅಹಲ್ಯೆ, ದ್ರೌಪದಿ, ತಾರೆ, ತಾರೆ, ಮಂಡೋದರಿ ಎಂಬ ಪುರಾಣಪ್ರಸಿದ್ಧರಾದ ಐವರು ಮಹಿಳೆಯರು ; ℙ ಇವರ ಸ್ಮರಣೆಯಿಂದ ಪಾಪಪರಿಹಾರವಾಗುವುದೆಂದು ನಂಬಿಕೆಯಿದೆ : ನನ್ನ ತಂಗಿ ತಾರಾ (ಅಹಹ ! ಪಂಚಕನ್ಯೆಯರಲ್ಲೊಬ್ಬಳೇನೋ !) ಸ್ವತಃ ನೋಡಿದ್ದು (ಮೂರುದಾ. ೧೬೩). **ಪಂಚಯ್ವರು, ಪಂಚೈವರು** = ಐದು ಜನ : ಎನ್ನ ಪಂಚಯ್ವರ ಭಕ್ತರ ಮಾಡು (ಬಸವ. ೪೬); ಪಿನಾಕಿ ಅಲ್ಲಟಿ ಪಲ್ಲಟದಿಂದ ಪಂಚೈವರ ಪ್ರಾಣಂಗಳು ಸಂಚಗೆಡವೆ (ಸಕವ. II, ೬೦೭-೭೦); ನಾಲ್ಕು ಗ್ರಾಮದ ಪಟ್ಟಣಕ್ಕೆ ಪಂಚೈವರ ಕಾವಲು ನೋಡಾ (ಚನ್ನಪ. ೭೫-೧೩); ಎನ್ನ ಮನ ಒಪ್ಪಿ ಪಂಚೈವರು ಸಾಕ್ಷಿಯಾಗಿ ನುಡಿಯುತಿಪ್ಪೆನಯ್ಯ (ಘನಪ.೯-೬).

[ಸಂ. ಪಂಚನ್]

**ಪಂಚ**$_3$ (ಗು). ವಿಸ್ತಾರವಾದ; ವಿಶಾಲವಾದ ; ಅಗಲವಾದ : 'ಪಂಚಪಾತ್ರೆ$_2$', 'ಪಂಚಾನನ$_2$' ಪರಾ. [ಸಂ.]

**ಪಂಚಉಷಃಕಾಲ** (ನಾ). "ದಿವಸದ ೫೫ನೆಯ ಗಳಿಗೆ, ಎಂದರೆ ಸೂರ್ಯೋದಯಕ್ಕೆ ಐದು ಗಳಿಗೆಯ ಹಿಂದಿನ ಹೊತ್ತು" (ಶ್ರೀವತ್ಸ. ೨೪೩). [ಪಂಚ$_2$+ಉಷಃಕಾಲ]

**ಪಂಚಕ** (ನಾ). ೧. ಐದರ ಗುಂಪು; ಐದು ವಸ್ತುಗಳ ಸಮೂಹ: ಅಮರಗಣಾರ್ಕ ಶೀತಕರ ಭಾನು ಪಾವಕೋತ್ತಮ ಗಣಪಂಚಕಂ [ಪಾಠಾಂ. ಸಂಚಯಂ] ನೆರೆಯೆ . . . ಸುಕೇಸರಂ (ಛಂದೋಂಬು. ೨-೧೫೬); ಸೌಮಿತ್ರಿ ಕೇಳ್ದು ಕಡುಮುಳಿದು ನಿಮ್ಮಡಿಗಳವಿವೇಕಿಗಳಂತರ್ಘನಾಶಾದಿ ವಚನಪಂಚಕಂಗಳಂ ನುಡಿಯಲಾಗದದಿಂತೇಕೆ ನುಡಿವಿರೆಂದು ಮತ್ತಮಿಂತೆಂದಂ (ಪಂರಾಮಾ. ೧೫-೬೮ ವ); ಇಪ್ಪತ್ತನಾಲ್ಕು ಸಂವತ್ಸರ ೨೫ ಪರ್ಯ್ಯಂತರವು ಬಂದಂತಹ ವುಂಡಿಗೆಯನು ಹಂನೆರಡು ಪಂಚಕದವರೊಳಗೆ ಆರುಂ ಅ ಅಳಿಹಲಾಗ(ದು) (ಎಕ. VI, ಕಡೂರು. ೧೩೩-೭ ; 1247 ?); ಪ್ರಕಟತರ ವ್ಯಂಜನ ಸಂಜ್ಞೆ ಕಕಾರದಿನಾ ಳಕಾರಪರ್ಯಂತಂ ಪಂಚಕಪಂಚಕಂಗಳಿಂ ಪಂಚಕಮಕ್ಕುಂ ವರ್ಗಮಂತ್ಯವರ್ಣಮವರ್ಗಂ (ಶಮದ. ೧೩); ನಾಗಭೂಷಣನ ಪರಮಯೋಗಚಲನಗ ಭರದಿ ಪೂಗೋಲ ಪಂಚಕಂಗಳ ಪ್ರಯೋಗಿಸಲು (ನಮಮೋ. ೪-೨೧). ೨. ಐದು ಸಂಖ್ಯೆಗೆ ಸಂಬಂಧಿಸಿದುದು ; ಐದರಿಂದ ಮಾಡಿದುದು. ೩. ರಣರಂಗ ; ಯುದ್ಧಭೂಮಿ : ಏನ ಹೇಳುವೆ ಗಜಘಟಾಪ್ರತಿಮಾನದಲಿ ಕೋದಂಬುಗಳು ಹಿಂಡಾನೆಗಳ ನೇಳಿಂಟೆನೊದೆದೋಡಿದವು ಪಂಚಕಕೆ (ಕುವ್ಯಾಶ. ೩-೧೫). ೪. ಐದು ಶ್ಲೋಕಗಳುಳ್ಳ ದೇವರ ಸ್ತೋತ್ರ : ಗಣೇಶಪಂಚಕ ಬಹಳ ಚೆನ್ನಾಗಿದೆ (ರೂಢಿ). ೫. ಕಾಗದ ಮೊದಲಾದುವುಗಳ ಕಟ್ಟು,—ಗಂಟು. ೬. ಧಾನ್ಯದ ಒಂದು ಅಳತೆ : ೧ ಖಂಡುಗ= ೪ ಪಂಚಕ, ೧ ಪಂಚಕ=೫ ಕೊಳಗ (ವ್ಯವಹಾ. ೮ ಮುನ್ನುಡಿ); ಪೊನ್ನಿಗೆ ಪಂಚಕವೆರಡುಂ ಚೆನ್ನಾಗಿಯೆ ಪಣವು×××(ಪಂ)ಚಕ ಶಶಿಗಂ (ವ್ಯವಹಾ. ಅನುಬಂಧ ೧). ೭. ಮಾನ್ಯವಾಗಿ ಬಂದ ಭೂಮಿ,—ಪ್ರದೇಶ :

ನಮಗೆ ತೆರಕಣಾಂಬೆಯ ಸೀಮೆಯಪಡುಗು ನಾಡಸ್ಥಳದ ಹುಲ್ಲಾನಕ್ಕೆ ಪ್ರತಿನಾಮವಾದ ಕಾಮಲಾಪುರದ ಅಘ್ರಾರದಲೂ ನಮಗೆ ಸರ್ವಮಾಂನ್ಯವಾಗಿ ಶಾಸ[ನ]ಸ್ಥವಾಗಿ ನಡದ ಬಹ ಪಂಡಿತರ ಪಂಚಕರ ಯಲ್ಲಿಯ ತೋಟದ ವ್ರಿತ್ತಿ ೧ ಗೋಪಣಗಳ ಪಂಚಕದಲ್ಲಿ ನಮಗೆ ಧಾರಾಸಹಿತವಾಗಿ ನಡೆದು ಬಹ ಅತ್ತಿತಾಳ ತೋಟವ್ರಿತ್ತಿ ಕ೯ (ಎಕ.III(R), ಗುಂಡ್ಲು ಪೇ. ೧೩೭-೧ ; 1535) ; ಯಿಾ ಯೆರಡು ವ್ರಿತ್ತಿಗೆ ಸಲ್ಲು[ವ] ಸ್ಥಳಗಳ ವಿವರ ಕಾಲುವೆ ಕೆಳಗೆ ಕೊಟಗೆಯವರ ಪಂಚಕದ ಸ್ಥಳ ೧ಕ್ಕೆ ಬೀಜವರಿ . . . ಸಮರ್ಪಿಸಿದೆಉ (ಸೌಇಇ. IV, ೨೪೫-೧೩ ; 1541). ೮. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ. ೯. [ಜ್ಯೋತಿ] ಐದು ನಕ್ಷತ್ರಗಳ ಗುಂಪು,—ಸಮೂಹ; ಮೃಗಶಿರಾ, ಆರ್ದ್ರಾ, ಪುನರ್ವಸು, ಪುಷ್ಯ, ಆಶ್ಲೇಷಾ ಎಂಬ ಐದು ನಕ್ಷತ್ರಗಳಿಂದಲೂ ಮಘಾ, ಪೂರ್ವಫಲ್ಗುನೀ, ಉತ್ತರಫಲ್ಗುನೀ, ಹಸ್ತ, ಚಿತ್ರಾ ಎಂಬ ಐದು ನಕ್ಷತ್ರಗಳಿಂದಲೂ ಆರಂಭವಾಗುವ ಮಳೆಗಳು ಬಿತ್ತನೆಗೆ ಬಹಳ ಯೋಗ್ಯವೆಂದೂ ಧನಿಷ್ಠೆ, ಶತಭಿಷೆ, ಪೂರ್ವಾಭಾದ್ರೆ, ಉತ್ತರಾಭಾದ್ರೆ ಮತ್ತು ರೇವತಿ ಎಂಬ ಐದು ನಕ್ಷತ್ರಗಳು ಅನಿಷ್ಟಕಾರಕವೆಂದೂ ಈ ನಕ್ಷತ್ರಗಳಲ್ಲಿ ಮರಣವು ಸಂಭವಿಸಿದರೆ ಮನೆ ಬಿಡಬೇಕೆಂದೂ ಸೂಚಿಸುತ್ತಾರೆ: ಪಂಚಕದಲ್ಲಿ ಮರಣವಾಗಿರುವುದರಿಂದ ಮನೆ ಬಿಡಬೇಕೆಂದು ಶಾಸ್ತ್ರಗಳು ಹೇಳಿದ್ದಾರೆ (ರೂಢಿ). 'ಮೃಗಪಂಚಕ' ಪರಾ. [ಸಂ.]

**ಪಂಚಕಂಚುಕ** (ನಾ). [ವೀಶೈ] ಕವಚವು ಶರೀರವನ್ನು ಮುಚ್ಚುವಂತೆ ಜೀವವನ್ನು ಆವರಿಸಿರುವ ಐದು ಪದಾರ್ಥಗಳು : ಕಾಲ, ನಿಯತಿ, ಕಲಾ, ವಿದ್ಯಾ ಮತ್ತು ರಾಗ ಇವುಗಳಿಗೆ ಪಂಚಕಂಚುಕಗಳೆಂದು ಹೆಸರು (ಭಾತತ್ತ್ವ. ೬೬೫) ; ಶಿವನ ಚಿಚ್ಛಕ್ತಿ, ಆನಂದಶಕ್ತಿ, ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳು . . . ಈ ಶಕ್ತಿ ಸಂಕೋಚಗಳೇ ಪಂಚಕಂಚುಕಗಳಾಗಿಯೂ ಮೂರು ಮಲಗಳಾಗಿಯೂ ಪರಿಣಮಿಸಿದವು (ಭಾರದ. ೨೧೩). [ಪಂಚ$_2$+ಕಂಚುಕ]

**ಪಂಚಕಚೇರಿ** (ನಾ). ಪಂಚಾಯಿತಿಯ ಕಾರ್ಯಾಲಯ,—ಕಚೇರಿ : (ಮುಂಬಯಿ. ೯. ೪-೧೪೬). [ಪಂಚ$_2$+ಕಚೇರಿ]

**ಪಂಚಕಚ್ಚೆ** (ನಾ). ಒಂದು ವಿಶಿಷ್ಟ ರೀತಿಯಲ್ಲಿ ಐದು ಕಡೆ ಸಿಕ್ಕಿಸಿ ಕಚ್ಚೆ ಉಡುವ ವಿಧಾನ : ನೆರೆ ಹಿಡಿದುಟ್ಟಿಹ ಪಂಚಕಚ್ಚೆಯ ಧೋತ್ರ ನಾಮ ವಿಭೂತಿಯ ಬೆಳಕು (ಚಿದಾವ. ೭೨-೬). [ಪಂಚ$_2$+ಕಚ್ಚೆ]

**ಪಂಚಕಜ್ಜಾಯ** 'ಪಂಚಗಜ್ಜಾಯ' ನೋ.

**ಪಂಚಕಠಾರಿ** (ನಾ). ಒಂದು ಬಗೆಯ ಆಯುಧ : ಪಂಚರಾಯುಧ (ಮೈಸೂರು ಅರಮನೆಯ ಆಯುಧಾಗಾರದಲ್ಲಿ 'ಪಂಚಕಠಾರಿ'ಯೆಂಬ ಆಯುಧವಿದೆ) (ಕಠಾಅ. ೨೭೭). [ಪಂಚ$_2$+ಕಠಾರಿ]

**ಪಂಚಕರಣ** (ನಾ). ೧. ಕಣ್ಣು, ಕಿವಿ, ಮೂಗು, ನಾಲಗೆ ಮತ್ತು ಚರ್ಮ ಎಂಬ ಐದು ಇಂದ್ರಿಯಗಳು: ಪಂಚಭೂತಂಗಳ ಪೂರ್ವಾಶ್ರಯವಳಿದು ಪಂಚ[ಪಾಠಾಂ. ಚೀ]ಕರಣಂಗಳ ಹಂಚುಹಜಿ ಮಾಡಿ (ಅಖಂಡೇ. ೧೯೩-೧೪) ; ಸುಖದ ವಿಷವು ದುಃಖ ವಿಷವು ಹಿಗ್ಗಿ ಪ್ರಾಣ ಪೂರಣಾ ಪಂಚಕರಣಗಳೀ ಗಡಣಕಟ್ಟಿತು ಗುಡಿತೋರಣಾ (ಗಿರಿ. ೧೧೩-೧೦) ; ಇನ್ನೈದುಗಳಿಗೆಯಲಿ ಇದರ ಹರಣ ಗಾಳಿಮಳೆಗೂಡುವವು ಪಂಚಕರಣ (ಪಿಪಾಸೆ. ೪೩-೪). ೨. ವಾಕ್ಕು, ಪಾಣಿ, ಪಾದ, ಪಾಯು ಮತ್ತು ಉಪಸ್ಥ ಎಂಬ ಐದು ಕರ್ಮೇಂದ್ರಿಯಗಳು. ೩. ಚಿತ್ತ, ಬುದ್ಧಿ, ಅಹಂಕಾರ, ಮನ ಮತ್ತು ಜ್ಞಾನ ಎಂಬ ಐದು ಅಂತಃಕರಣಗಳು : ಪಂಚಕರಣಂಗಳು : ಚಿತ್ತ, ಬುದ್ಧಿ, ಅಹಂಕಾರ, ಮನ, ಜ್ಞಾನ (ಮಹಾಸಾ. ಅನುಬಂಧ. ೨). [ಪಂಚ$_2$+ಕರಣ]

**ಪಂಚಕರ್ಣ** (ನಾ). [ರೇಖಾಗ] ಐದುಭುಜಗಳ ಸರಳರೇಖಾಕೃತಿ ; ಪಂಚಕೋಣ : ಎರಡು ತ್ರಿಕೋಣ ಅಥವಾ "ಪಂಚಕರ್ಣ" (Pentagon) ಕ್ಷೇತ್ರಫಲಗಳ ಮೊತ್ತವುಳ್ಳಂತೆ ಚಚ್ಚೌಕವನ್ನು ರಚಿಸುವಿಕೆ (ಗಣಿಚ. ೧೮೪). [ಪಂಚ$_2$+ಕರ್ಣ$_2$]

**ಪಂಚಕರ್ಮ** (ನಾ). [ವೈದ್ಯಶಾ] ಆಯುರ್ವೇದಚಿಕಿತ್ಸಾಕ್ರಮದಲ್ಲಿನ ಸ್ನೇಹ, ಸ್ವೇದನ, ವಮನ, ವಿರೇಚನ ಮತ್ತು ನಸ್ಯ ಎಂಬ ಐದು ಬಗೆಯ ಚಿಕಿತ್ಸಾಕ್ರಮ : ಈ ಪಂಚಕರ್ಮಗಳು ಸಕಲರೋಗಗಳಲ್ಲಿಯೂ ಪ್ರಯೋಗಿಸುವ ಮುಖ್ಯ ಚಿಕಿತ್ಸೆಗಳು (ಸಕವೈ. ೨೪) ; ನಾಡೀಪರೀಕ್ಷೆ, ಪಂಚಕರ್ಮ, ಲೋಹಾದಿಗಳ ಭಸ್ಮಪ್ರಯೋಗಗಳು ಚಿಕಿತ್ಸೆಯಲ್ಲಿ ಬಹಳ ಉಪಯುಕ್ತವಾಗಿವೆ (ಕವಿಕೋ. I, ೮೫೦). [ಪಂಚ$_2$+ಕರ್ಮ]

**ಪಂಚಕಲಶ,** ಪಂಚಕಳಶ (ನಾ). ೧. ವ್ರತ ಮತ್ತು ಸಮಾರಂಭಗಳಲ್ಲಿ ಪೂಜೆಗಾಗಿ ಸ್ಥಾಪಿಸುವ ಐದು ಪೂರ್ಣಕುಂಭಗಳು : ಮುಂದೆ ಮಗುವಿಗೆ ಎಂಟು ವರ್ಷಗಳು ಕಳೆದ ಮೇಲೆ ಕ್ರಮವಾಗಿ ಕುಂಡ, ಮಂಡಪ, ಪಂಚಕಲಶಗಳನ್ನು ಸ್ಥಾಪಿಸಿ . . . ಲಿಂಗವನ್ನು ಮಂತ್ರೋಪದೇಶಪೂರ್ವಕವಾಗಿ ನೆಲೆಗೊಳಿಸುವನು (ಭಾರದ. ೨೪೯). ೨. [ವೀಶೈ] ಶುಭಕಾರ್ಯಗಳಲ್ಲಿ ಪಂಚಾಚಾರ್ಯರ ಹೆಸರಿನಲ್ಲಿ ಸ್ಥಾಪಿಸುವ ಐದು ಕಲಶಗಳು. ೩. ಶಿವನ ಪಂಚಮುಖಗಳ ಸಂಕೇತವಾಗಿ ಇರಿಸುವ ಐದುಕಲಶಗಳು : ದೀಕ್ಷೆ, ಲಗ್ನ ಮೊದಲಾದ ಕಾಲಗಳಲ್ಲಿ ಪಂಚಕಲಶಗಳನ್ನು ಸ್ಥಾಪಿಸುವುದುಂಟಷ್ಟೇ. ಆಗ ಅವು ಪರಶಿವನ ಪಂಚಮುಖಗಳೆಂದು ಭಾವಿಸಲ್ಪಡುತ್ತವೆ (ಶಿವಾಕೋ. ೨೧೫). **ಪಂಚಕಳಶ :** ೧. ಪಂಚಕಳಶ ಸ್ಥಾಪನೆಯಾಗಬೇಕು(ರೂಢಿ). [ಪಂಚ$_2$+ಕಲಶ]

**ಪಂಚಕಲೆ** (ನಾ). ಪೃಥ್ವಿ, ಅಪ್ಪು, ತೇಜಸ್ಸು, ವಾಯು ಮತ್ತು ಆಕಾಶಗಳಿಗೆ ಕ್ರಮವಾಗಿ ಹೇಳಿರುವ ನಿವೃತ್ತಿ, ಪ್ರತಿಷ್ಠೆ, ವಿದ್ಯೆ, ಶಾಂತಿ ಮತ್ತು ಶಾಂತ್ಯತೀತ ಎಂಬ ಐದು ಬಗೆಯ ಕಲೆಗಳು : ಆ ಪಂಚಮುಖದಿಂದನೆ ಪಂಚಾಕ್ಷರಿ ಉತ್ಪತ್ತಿ ಆ ಪಂಚಾಕ್ಷರಿಯಿಂದವೇ ಪಂಚಕಲೆಗಳುತ್ಪತ್ತಿ ಆ ಪಂಚಕಲೆಗಳಿಂದಲೇ ಪಂಚಶಕ್ತಿಗಳುತ್ಪತ್ತಿ (ಮಹಾದೇ. ಬ. ೧೦೨-೨೩೫). [ಪಂಚ$_2$+ಕಲೆ$_3$]

**ಪಂಚಕಲ್ಯಾಣ** (ನಾ). ೧. ಮುಖವೂ ಕಾಲುಗಳೂ ಬೆಳ್ಳಗಿರುವ ಒಂದು ಬಗೆಯ ಕುದುರೆ : ವದನದೊಳಂ ನಾಲ್ಕುಂ ಪಾದದೊಳಂ ಬೆಳ್ಪಾಗೆ ಪಂಚಕಲ್ಯಾಣಂ (ಅಶ್ವಶಾ. ೨-೧೪). ೨. ಶುಭಲಕ್ಷಣಸಂಪನ್ನವಾದ ಒಂದು ಬಗೆಯ ಆನೆ : ಸುರಕರೀಂದ್ರಮನೆ ಕಟ್ಟಿಲ್ ನಟ್ಟ ಪಾರಿಜಾತದ ಮುಂಡಗಂಭಂಗಳಂ ಪೋಲ್ತೊಪ್ಪಿ ಸಾಹಣೌಘದೊಳ್ ನಿಚ್ಚ ಮೋಲಗಿಸುವ ಪಂಚಕಲ್ಯಾಣಂಗಳುಮಂ . . . ನೋಡಿ ಪೊಗಟ್ಟು (ಶಾಂತಿಪು. ೩-೧೯ ವ). ೩. [ಜೈನ] ತೀರ್ಥಂಕರನಿಗೆ ಸಂಬಂಧಿಸಿದಂತೆ ನಡೆಸುವ ಗರ್ಭಾವತರಣ, ಜನ್ಮಾಭಿಷೇಕ, ನಿಷ್ಕ್ರಮಣ, ಕೇವಲಜ್ಞಾನೋತ್ಪತ್ತಿ ಮತ್ತು ಪರಿನಿರ್ವಾಣಕಾಲಗಳೆಂಬ ಐದು ಬಗೆಯ ಸಮಾರಂಭಗಳು ಮತ್ತು ಅಂದು ಇಂದ್ರಾದಿಗಳು ನಡೆಸುವ ಉತ್ಸವ : ಜಿನಕ್ಷೇತ್ರ ಪೂಜಾವಿಧಿಯಂ ನಿರ್ವರ್ತಿಸಿ ತದ್ಧೂಪ ಪೂತಚೂರ್ಣಪಂಚಕಲ್ಯಾಣಭಾಗಿಗಳಪ್ಪೆವೆಂದು . . . ಸೌಧರ್ಮೇಂದ್ರಂ ಪರಿನಿರ್ವಾಣಕಲ್ಯಾಣದೊಳಾನಂದನೃತ್ಯಮನಾಡಿ ಪೋದಂ (ಚಾವುಂಪು. ೮೪) ; ಮೂವತ್ತನಾಲ್ಕತಿಶಯ ಪಂಚಕಲ್ಯಾಣ ತೀವಿದ ಹಲವತಿಶಯದ ದೇವಜಿನರ ನಾಟಕವನೇಳನೆಯಾ ಠಾವಿನಲ್ಲಿ ಆಡುವರು (ದ್ವಾದಶಾ. ೧೧-೭೪೩) ; ಸಲ್ಲಲಿತ ಶ್ರೀಪಂಚಕಲ್ಯಾಣಿಲ್ಲ ಪೂಜಾವೈಭವಂಗಳ . . . ನಡಸಿದರಧಿಕಭಕ್ತಿಯಲಿ (ಬಿಜ್ಜಪು. ೧೧೪-೧೦೩). [ಪಂಚ$_2$+ಕಲ್ಯಾಣ]

**ಪಂಚಕಲ್ಯಾಣಮಹೋತ್ಸವ** (ನಾ). ೧. = ಪಂಚಕಲ್ಯಾಣ ೩ : ಸಮನಿಸಿತು ಪಂಚಕಲ್ಯಾಣಮಹೋತ್ಸವ ವರ್ಣನಂಗಳಂ ಕೇಳ್ವಿಷ್ಟಂ ರಮಣಿಗೆ (ಚಂದ್ರಪ್ರ. ೩-೯೨). ೨. ಬಸದಿಗಳಲ್ಲಿ ಪಂಚಕಲ್ಯಾಣದ ಸ್ಮೃತಿಗಾಗಿ ಮಾಡುವ ಉತ್ಸವ : ಭಗವಾನ್ ಶಾಂತಿನಾಥಸ್ವಾಮಿ ಯವರ ಪಂಚಕಲ್ಯಾಣಮಹೋತ್ಸವವು ಅತ್ಯಂತ ವೈಭವದಿಂದ ನೆರವೇರಿತು (ತಿಟ್ಟೂಶಾಂ. III, ೭೦೪). [ಪಂಚಕಲ್ಯಾಣ + ಮಹೋತ್ಸವ]

**ಪಂಚಕಲ್ಯಾಣಿ** (ನಾ). = ಪಂಚಕಲ್ಯಾಣ ೧ : ತವೆ ಮುಖದೊಳ್ ಚರಣದೊಳಂ ಧವಳತೆಯಿರಲದುವೆ ಪಂಚಕಲ್ಯಾಣಿಯಲ್ತೆ (ಹಾಲಾಸ್ಯ. ೪-೧೧-೭೭). [ಪಂಚ$_2$ + ಕಲ್ಯಾಣಿ$_1$]

**ಪಂಚಕಲ್ಯಾಣೋತ್ಸವ** (ನಾ). = ಪಂಚಕಲ್ಯಾಣ ೩ : ಪಂಚ ಕಲ್ಯಾಣೋತ್ಸವಕ್ಕಮಚ್ಯುತೇಂದ್ರನೊಡನೆ ಫಿಜಪೂಜಾವಿಳಾಸಮಂ ಮೆರೆ ಯಲೆಂದು ಪೋಗಿ (ಆದಿಪು. ೨-೭೭ಪ). [ಪಂಚಕಲ್ಯಾಣ + ಉತ್ಸವ]

**ಪಂಚಕಸೆ** (ನಾ). = ಪಂಚಕಚ್ಚೆ : ರಾಜನು ಆನೆಯ ಮೇಲೆ ಸತುವಿನ ಅಂಬಾರಿಯಲ್ಲಿ ಕೂತು ಸವಾರಿ ಹೊರಟನು. ಆಗ ಖಾಸಾಹಜರತ್ತು ಮುಕ್ಕಣ್ಣ ಸುತ್ತು ಪಂಚಕಸೆ ಯಡಭರ್ಜಿ ಬಲಭರ್ಜಿಯವರೂ . . . ಹೊರಟರು (ಚಿತ್ರಪಾ. ೯೭). [ಪಂಚ$_2$ + ಕಸೆ$_2$]

**ಪಂಚಕಳಶ** 'ಪಂಚಕಲಶ' ನೋ.

**ಪಂಚಕಳಸ** (ನಾ). = ಪಂಚಕಲಶ ೩ : ಪರಮೇಶ್ವರನ ಪಂಚಮುಖವನೆ ಪಂಚಕಳಸವಾಗಿ ಮೂರ್ತಿಗೊಳಿಸಿ ಆ ಗಣಂಗಳು ಸಾಕ್ಷಿಯಾಗಿ ಕರಸ್ಥಲ ದಲ್ಲಿ ಶಿವಲಿಂಗವ ಕೊಟ್ಟು ಈ ಲಿಂಗವೆ ಗಂಡ ನೀನೆ ಹೆಂಡತಿ ಎಂದು ಹೇಳಿ . . . ಪಾದೋದಕ ಪ್ರಸಾದವನಿತ್ತು ಎಂದೆಂದಿಗೂ ಸತಿಪತಿಭಾವ ತಪ್ಪದಿರಲಿ ಎಂದು ನಿರೂಪಿಸಿದನಯ್ಯ (ಸಿದ್ಧೇಪ. ೬೨-೧೪೦). [ಪಂಚ$_2$ + ಕಳಸ$_1$(< ಕಲಶ)]

**ಪಂಚಕಾರುಕ** (ನಾ). ೧. (ಗ್ರಾಮಗಳಲ್ಲಿರುವ) ಐದು ವರ್ಗದ ಕೆಲಸಗಾರರು ; ಉ ಬಡಗಿ, ಅಕ್ಕಸಾಲೆ, ಕಮ್ಮಾರ, ಕಲ್ಲುಕುಟಿಕ ಹಾಗೂ ಕಂಚುಗಾರ ಅಥವಾ ಬಡಗಿ, ನೆಯ್ಗೆಕಾರ, ಕ್ಷೌರಿಕ, ಅಗಸ ಹಾಗೂ ಚಮ್ಮಾರ. ೨. ಕಾರುಕರು ಕೊಡಬೇಕಾದ ಉದ್ಯೋಗ ತೆರಿಗೆ : ಹೆಗ್ಗಡೆ ಜಂನಯುಮುಂ ಆ ದೇವರ ಪುರದ ಸಾದ ಬಣ್ಣಿಗೆ ಮುಗ್ಗ ಪಂಚಕಾರುಕ ರಾಣವೆಜೆಯುಂ ಶ್ರೀಮದ್ರಾಜಗುರು ಲೋಕಾಭರಣ ಗುರುದೇವರ್ಗೆ . . . ಧಾರಾಪೂರ್ವ್ವಕಂ ಮಾಡಿ ಬಿಟ್ಟ ಧರ್ಮ್ಮ (ಸೌಇಇ. IX-i, ೩೨೩-೫ ; 1197) ; ಮಗ್ಗತೆಱೆ ಹೊಗೆದೆಱೆ ಲವಣ ಪಂಚಕಾರುಕ ಕಾಳು ಕೈಬಣ್ಣ ನೂಲು . . . ಮುಖ್ಯವಾದ ಸರ್ವ್ವ ಆಯವನು ಆ ಚೂಡನಾಥ ದೇವರಿಗೆ ಸರ್ಬ್ಬಮಾನ್ಯಂ ಮಾಡಿ (ಎಕ. IX, ಚನ್ನಪ. ೭೭-೧೪ ; 1288) ; ಸುಂಕಕಾರುಕ ಗ್ರಾಮಗದ್ಯಾಣ ಪಂಚ ಕಾರುಕ ಗಾಣದೆಱೆ . . . ಮುಂತಾದ ಏನುಳ್ಳ ಸುಂಕ (ಎಕ. VII, ಶಿಮೊ. ೭೧-೩೦ ; 1431).

ಪಂಚಕಾರುಕರ ಮನೆ = ಬಡಗಿಯೇ ಮೊದಲಾದ ಉದ್ಯೋಗಿ ಗಳು ಕೆಲಸ ಮಾಡುವ ಸ್ಥಳ ; ಕರ್ಮಶಾಲೆ ; ಕಮ್ಮಟ : "ಆ ಪಂಚಕಾರುಕರ ಮನೆ ಕರ್ಮಶಾಲೆಯೆಂಕ್ಕು" (ಮಂಗರಾ. ೫೪-೧೦). [ಪಂಚ$_2$ + ಕಾರುಕ$_2$]

**ಪಂಚಕೃತ್ಯ** (ನಾ). ೧. ಪರಮೇಶ್ವರನಿಗೇ ಮೀಸಲಾಗಿರುವ ಐದು ಕಾರ್ಯಗಳು ; ಪರಮಾತ್ಮ ಮಾತ್ರ ನಿರ್ವಹಿಸ ಬಲ್ಲ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಭಾವ ಮತ್ತು ಅನುಗ್ರಹಕರಣವೆಂಬ ಐದು ಕಾರ್ಯಗಳು : ಇವರು ನಿನ್ನಿಂದ ಹುಟ್ಟಿದ ಪಂಚಕೃತ್ಯಂಗಳಿ ಗೊಳಗಾದರು (ಶಿಪರೀ. ೧೬೨-೮೦೨ ಪ) ; ಜಯ ಪಂಚಕೃತ್ಯ ಸಂಸ್ತುತ್ಯ ಯೆಂದಂ ಚೋಳರಾಯ ನೈರ್ಮಲ್ಯಕಾಯ (ಭಾಪಚಿಂ. ೯-೫೨). ೨. ಅಸಿ, ಮಸಿ ಕೃಷಿ, ವಾಣಿಜ್ಯ ಮತ್ತು ದೇವನಿರ್ಮಾಣ ವೆಂಬ ಐದು ಬಗೆಯ ಕೃತ್ಯಗಳು : ಅಸಿ ಮಸಿ ಕೃಷಿ ವಾಣಿಜ್ಯ ದೇವನಿರ್ಮಾಣಮೆಂಬ ಪಂಚಕೃತ್ಯನಿಯಾಮಕರಾಗಿರ್ಪ್ಪಂ (ವಿವೇಕ. ೨೪೫). ೩. ನಲವತ್ತೈದು ಮಂತ್ರಸಾಧನಗಳಲ್ಲಿ ಒಂದು : ಬಳಿಕ ಮಂತ್ರಸಿದ್ಧಿ ಸೂಚಕವಾರ ಮಾತೃಕಾಚಕ್ರ . . . ಪಂಚಪಾದ ಪಂಚ ಕೃತ್ಯ ಪಂಚರ ಮಾಲಿಕೆ ಮೂಲಿಕೆ ತಂತ್ರಬಲಿ ಆತ್ಮೈಕ್ಯಗಳೆಂಬ ಪಂಚ ಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (ವಿವೇಕ. ೮೦). [ಪಂಚ$_2$ + ಕೃತ್ಯ$_2$]

**ಪಂಚಕೋಣ** (ನಾ). ೧. ಐದು ಮೂಲೆಗಳು. ೨. [ರೇಖಾಗ] ಐದು ಭುಜವುಳ್ಳ ಒಂದು ಆಕೃತಿ. ೩. ಒಂದು ನರಕದ ಹೆಸರು : ಮತ್ತಂ ಮಹಾಚೂರ್ಣ ಮೂಲಸಂಚೂರ್ಣ ಪಟಿಪಕ್ಷಪ್ರಮರ್ದನತಪ್ತಶೈಲ ತಪ್ತಶೈಲವೆಂಬೈದು ಮಂತ್ರಿನರಕಂಗಳಿಂ ಜೊತೆಗೊಂಡು ಪಂಚಕೋಣ ವೆಂಬರಸುನರಕವಿಹುದು (ವಿವೇಕ. ೧೪೧). [ಪಂಚ$_2$ + ಕೋಣ$_2$]

**ಪಂಚಕೋಲ** (ನಾ). ಔಷಧಗಳಿಗೆ ಉಪಯೋಗಿಸುವ ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ ಮತ್ತು ಶುಂಠಿ ಎಂಬ ಐದು ಬಗೆಯ ಗ್ರಂದಿಗೆ ಪದಾರ್ಥಗಳು : ಹಿಪ್ಪಲಿಮೂಲಂ ಚವ್ಯಂ ಪಿಪ್ಪಲಿ ದಹನಂ ಮಹೌಷಧಂ ಸಮಭಾಗಂ ತಪ್ಪದೆ ಕೂಡಿದೊಡಯ್ದು ಮಿವಪ್ಪುವು ಮುಂಪೇಳ್ದ ಪಂಚಕೋಲದ ಪೆಸರ್ಗಳ್ (ಅಶ್ವಶಾ. ೧೧-೩೦); ಪಂಚಕೋಲವೆಂದರೆ ಹಿಪ್ಪಲಿ, ಹಿಪ್ಪಲೀಮೂಲ, ಚವ್ಯ, ಚಿತ್ರಮೂಲ, ಶುಂಠಿ (ವೈದ್ಯಸಾ. I, ೩೦೩) ; ಎಸಗದ ಬೇರ್ಗಳು, ಕತ್ತರಿಬೇರು . . . ಬಜೆ, ಪಂಚಕೋಲ ಇವಂ ಸಮಾನ ಕಷಾಯಂ ಕಾಸಿ ಕುಡಿಯಲು ಅಭಿನ್ಯಾಸಸನ್ನಿ ಪರಿಹರಮಕ್ಕು (ಸಕವೈ. ೧೬೪). [ಪಂಚ$_2$ + ಕೋಲ$_2$]

**ಪಂಚಕೋಶ** (ನಾ). [ವೇದಾಂತ] ಶರೀರಾಂತರ್ಗತನಾದ ಆತ್ಮ ನನ್ನು ಆವರಿಸಿಕೊಂಡಿರುವ ಐದು ಪದರಗಳು; ಜೀವನಿಗಿರುವ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯವೆಂಬ ಐದು ಆವರಣಗಳು : ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಂಗಳೆಂಬಿವೆ ಪಂಚಕೋಶಂಗಳೆನಿಕ್ಕುಂ (ಮನೋವಿ. ೫-೩೮ಟೀಕು) ; ಕೇಳು ಶುಕ ದೃಗ್ದೃಶ್ಯ ಭೇದವ ಪೇಳುವೆನು . . . ವಿವೇಕವ ಪಂಚಕೋಶಗಳ (ಅನುಭ. ೩-೧೪) ; ಸೂಕ್ಷ್ಮಶರೀರವೂ ಸ್ಥೂಲಶರೀರವೂ ಸೇರಿ ಚೈತನ್ಯಕ್ಕೆ ಆವರಣವಾಗಿರುವುದ ರಿಂದ ಪಂಚಕೋಶವೆಂದು ಉಪದೇಶಿಸುವರು (ಹಿಂದಸಾ. ೧೯೬). [ಪಂಚ$_2$ + ಕೋಶ$_2$]

**ಪಂಚಕ್ಲೇಶ** (ನಾ). ಯೋಗಶಾಸ್ತ್ರದಲ್ಲಿ ಹೇಳಿರುವ ಐದು ಬಗೆಯ ಕ್ಲೇಶಗಳು; ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ ಮತ್ತು ಅಭಿನಿವೇಶ ಗಳೆಂಬ ಐದು ಕಷ್ಟಗಳು : ಇಂತೀ ಪಂಚಕ್ಲೇಶವೆ ಸರ್ವಜೀವರುಗಳ ಲ್ಲಿಯೂ ಬೆಳೆದು ಪಲ್ಲವಿಸಿ ಹುದುಗಿಕೊಂಡಿಹುದು (ಚನ್ನಪ. ಕ. ಪಂ. ೬೪೧) ; ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಂಗಳೆಂಬಿವೆ ಪಂಚಕ್ಲೇಶಂಗಳೆನಿಸುಗುಂ (ಮನೋವಿ. ೫-೩೭ ಟೀಕು) ; ಪಂಚಕೋಶ ಪಂಚಕ್ಲೇಶಂಗಳ ಪರಿಹರಿಸಿ (ಅಖಂಡೇ. ೧೯೩-೧೩) ; ದೇಶ ಕಾಲಾದಿಗಳಿ ಗಂಜದೆ . . . ಪಂಚಕ್ಲೇಶಗಳಿಗೆಡೆಗೊಡದೆ (ಗಗತಾ. ೧೫-೧). [ಪಂಚ$_2$ + ಕ್ಲೇಶ]

**ಪಂಚಕ್ಷೇತ್ರ** (ನಾ). [ಶೈವ] ಶ್ರೀಶೈಲ, ಕಾಶಿ, ಕೇದಾರ, ಕಾಳಹಸ್ತಿ ಮತ್ತು ಪಟ್ಟಿಸ ಎಂಬ ಐದು ಪುಣ್ಯಕ್ಷೇತ್ರಗಳು : ಪಡೆದು ಮುಕ್ತಿನ ಪಂಚತಾವಡವ ಸತ್ತಿರ್ದ ಘಟಿಸರ್ಪಗಸುವಿತ್ತು ಪೊಳಲ್ಗಂದದಾ ಶಕ್ತಿ ಗೊಡನೆ ಕೃಪೆಯಾದ ಪಂಚಕ್ಷೇತ್ರದವಸರವನೊರೆದೊಂದು ಲಗ್ನದಲ್ಲಿ (ಗುರುಚಾ. ೧೩-೪೪). [ಪಂಚ$_2$ + ಕ್ಷೇತ್ರ]

**ಪಂಚಗಜ್ಜಾಯ,** ಪಂಚಕಜ್ಜಾಯ (ನಾ). ದೇವರ ನೈವೇದ್ಯಕ್ಕಾಗಿ ತಯಾರಿಸುವ ಅವಲಕ್ಕಿ (ಅಥವಾ ನೆಲಗಡಲೆ), ಬೆಲ್ಲ, ಕೊಬ್ಬರಿ, ಕಡಲೆ ಮತ್ತು ಎಳ್ಳು–ಈ ಐದು ಪದಾರ್ಥಗಳನ್ನು ಸೇರಿಸಿ ಮಾಡುವ ಒಂದು ಬಗೆಯ ಸಿಹಿತಿಂಡಿ : ವೆಂಕಟಲಕ್ಷ್ಮಮ್ಮ ಪಂಚಗಜ್ಜಾಯ ಹಂಚುತ್ತಾ ಹೇಳಿದರು (ಬಾಳಿವೈ. ೨೦೩). **ಪಂಚಕಜ್ಜಾಯ :** ಪಂಚಕಜ್ಜಾಯವ ಪರಿಪರಿವಣ್ಣ ಪಳಂಚಲರ್ಚನೆ ಮಾಡಿದಾಗ ಪಂಚವರ್ಣದ ಮುಗಿಲದ್ರಿಗೆ ಕವಿದಂತದೇಂ ಚೊಕ್ಕನಾದುದೊ ಪೂಜೆ (ಭರಚ. ೭೩–೫೨); ಶಿವದೇವಾಲಯದ ಮಹಾಮಂಗಳಾರತಿ ಬೇಗ ಮುಗಿದಿತ್ತು . . . ಪಂಚಕಜ್ಜಾಯದ ವಿನಿಯೋಗ ಆಗುವಾಗಲೇ ರಾತ್ರಿ ನಾಲ್ಕು ಗಳಿಗೆ ಕಳೆದು ಹೋಗಿತ್ತು (ದೇಪಹೆಂ. ೯); ಅಂತರಂಗದ ಶುದ್ಧಿಯಾಗಲೆಂದು ಆಂಡ್ರೂಸರ ಆಲ್ಕಲೈನ್‌ಪುಡಿಯನ್ನು ಪಂಚಕಜ್ಜಾಯದಂತೆ ಪೂರೈಸಿದನು (ತುಂಬಕೊ. ೬೬). [ಪಂಚ$_2$ + ಕಜ್ಜಾಯ]

**ಪಂಚಗಟ್ಟೆ** (ನಾ). ಪಂಚಾಯಿತಿ ಕಟ್ಟೆ ; ಚಾವಡಿ : ಏನ ಇರೂದು ಇನ್ನ ಮುಂದ ಪಂಚಗಟ್ಟಿ ಕೈಯಾಗ ಬರೂ ಹಾದೀನ ನೋಡತಿದ್ದೆ (ನಡೆದಾ. I, ೨೭೭). [ಪಂಚ$_2$ + ಕಟ್ಟೆ$_1$]

**ಪಂಚಗವ್ಯ** (ನಾ). ಹಸುವಿನಿಂದ ಉತ್ಪತ್ತಿಯಾಗುವ ಹಾಲು, ಮೊಸರು, ತುಪ್ಪ, ಗಂಜಲ ಮತ್ತು ಸಗಣಿ ಎಂಬ ಐದು ವಸ್ತುಗಳು : ಪೊಟಿಲ ಬೀದಿಗಳೊಳೆಲ್ಲಂ ಗಂಧೋದಕ ಪಂಚಗವ್ಯಂಗಳಂ ತಳಿಯಿಸಿ (ಪಂಪಭಾ. ೪–೫ ಪ); ಪಂಚಗವ್ಯವಾವುದೆಂದೊಡೆ . . . ಕಪಿಲೆಯಾವಿನ ಸಗಣ ಗೋಮೂತ್ರಂ ಘೃತ (ಆ ತುಪ್ಪ) ಕ್ಷೀರ (ಆ ಹಾಲು) ದಧಿ (ಆ ಮೊಸರು) ಇವು ಪಂಚಗವ್ಯಂಗಳು (ಪ್ರತಿಷ್ಠಾ. ೭–೧೦); ವಿದಿತವಹ ಪಂಚಗವ್ಯಂ ಸುಧೆಗಳ್ದುಮಂತೊದಗಿದಾ ಹವ್ಯಕವ್ಯವನು ಕಾಯಂ ಮುಟ್ಟೆ ಮುದಗೆಡುಗುಮೆಲ್ಲಾ ಮಶುದ್ಧಮೆಂದಜಾಪುವನ ಚರಣಾಂಬುಜಕ್ಕೆ ಶರಣು (ಲಕ್ಷಿಚಂ. ೩೯–೪೭); ಪಂಚಗವ್ಯವ ತಾನು ಸ್ವೀಕರಿಸೆ ಸಕಲವಿದ್ಯೆಯು ಬಹುದು (ಗಗತಾ. ೪–೮೦); ನೀನು ವಿಧಿವತ್ತಾಗಿ ಪಂಚಗವ್ಯ ಇವುಗಳನ್ನು ಸ್ವೀಕರಿಸಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗುವುದು (ಝೂಾಣಿ. ೫೨). ℙ ಪಂಚಗವ್ಯಪ್ರಾಶನದಿಂದ ಸಕಲಪಾಪ ನಿವೃತ್ತಿಯಾಗುವುದೆಂಬ ನಂಬಿಕೆಯಿದೆ.

[ಪಂಚ$_2$ + ಗವ್ಯ]

**ಪಂಚಗಾರ್ತಿ** (ನಾ). ೧. ಪಂಚಕಾರುಕವರ್ಗಕ್ಕೆ ಸೇರಿದವನ ಹೆಂಡತಿ. ೨. ಪಂಚಕಾರುಕವರ್ಗಕ್ಕೆ ಸೇರಿದ ಹೆಂಗಸು : ಮಾಲೆಗಾಜನೆಂಬುದಜ ಜಕಾರಕ್ಕೆ ರೇಫಮಾದುದಾಗಿ ಮಾಲೆಗಾರ್ತಿ ; ಕಂಚಗಾರ್ತಿ, ಪಂಚಗಾರ್ತಿ (ಶಮದ. ೨೦೯ ಪ್ರಯೋ).

[ಪಂಚಗಾಜ + –ತಿ$_1$ (<–ಇತ್ತಿ)]

**ಪಂಚಗಾಲು** (ನಾ). = ಪಂಚರಂಗಿ ೨ : ನಾಲ್ಕು ಕಾಲಿನಲ್ಲೂ ಗೊರಸಿನ ಹತ್ತಿರ ಬಿಳಿಯ ಬಣ್ಣವಿದ್ದು ಹಣೆಯಲ್ಲಿ ಮೂಗಿನ ಮೇಲೆ ಬಿಳಿಯ ಪಟ್ಟೆಯಿದ್ದಿತು. ಅಂಥ ಕುದುರೆಗೆ ಪಂಚರಂಗಿಯೆಂದು ಕರೆಯುವ ವಾಡಿಕೆ. ಅದನ್ನು ಪಂಚಗಾಲು ಕುದುರೆಯೆಂದೂ ಕರೆಯುತ್ತಿದ್ದರು (ಚೆಂಗಾಳ್ವ. ೨೫). [< ಪಂಚಕಲ್ಯಾಣಿ?]

**ಪಂಚಗಾಜ** (ನಾ). ಪಂಚಕಾರುಕರಲ್ಲಿ ಒಬ್ಬ : 'ಪಂಚಗಾರ್ತಿ' ಪರಾ. ℙ ಇದು 'ಪಂಚಕಾರುಕ' ಶಬ್ದಕ್ಕೆ ಸಂಬಂಧಿಸಿರಬಹುದೆ ? [ಪಂಚ$_2$ + –ಕಾಜ]

**ಪಂಚಗುಂಡಿಗೆ** (ನಾ). (ಆಲಂ) ಅತಿದಿಟ್ಟತನ; ಬಹಳ ಧೈರ್ಯ : ಪಂಚಬಾಣನ ಕುಮಾರಕನಾದ ಕಾರಣ ಪಂಚಸಾಯಕವ ತೋಱಸಿದೆ ಪಂಚಗುಂಡಿಗೆಯಿಂದ ಕಾದುಕೋ ಎನುತಲಿ ಪಂಚಸಾಯಕದೊಳಿಕ್ಕಿದನು (ಮೋಹತ. ೩೪–೧೫). 'ಎಂಟೆರ್ದೆ' ಪರಾ. [ಪಂಚ$_2$ + ಗುಂಡಿಗೆ$_1$]

**ಪಂಚಗುಪ್ತ** (ನಾ). ೧. ನಾಲ್ಕು ಕಾಲುಗಳು ಮತ್ತು ತಲೆಯನ್ನು ಗುಪ್ತವಾಗಿರಿಸಿಕೊಳ್ಳ ಬಲ್ಲ ಪ್ರಾಣಿ ; ಆಮೆ. ೨. ಚಾರ್ವಾಕರ ಭೌತವಾದದ ಸಿದ್ಧಾಂತ ; ಚಾರ್ವಾಕಮತ. [ಪಂಚ$_2$ + ಗುಪ್ತ]

**ಪಂಚಗುರು** (ನಾ). [ಜೈನ] ಅರ್ಹಂತ, ಆಚಾರ್ಯ, ಉಪಾಧ್ಯಾಯ, ಸರ್ವಸಾಧು ಮತ್ತು ಸಿದ್ಧ ಎಂಬ ಐವರು ಗುರುಗಳು; ಪಂಚಪರಮೇಷ್ಠಿಗಳು : ಆಗಳಾ ಸ್ವಯಂಬುದ್ಧಂ ನಿರ್ಯಾಪಕಾಚಾರ್ಯನಾಗಿ ಪಂಚಗುರುಸಮಕ್ಷದೊಳ್ . . . ಚತುರ್ವಿಧಾಹಾರಶರೀರಪ್ರತ್ಯಾಖ್ಯಾನಮಂ ಕೊಟ್ಟು (ಆದಿಪು. ೨–೫೧ ಪ); ಈ ಪಂಚಗುರುನಾಮಪದದುಚ್ಚರಣೆಯನಾ ಪೊತ್ತು ನೆನೆವ ಮನುಜರ ಆಪತ್ತು ಸಂಸಾರ ಭ್ರಮಣರೂಪಮುಪ್ಪ ಪಾಪ ಕೆಟ್ಟು ಮುಕ್ತಿಯಹುದು (ದ್ವಾದಶಾ.೧–೬); ಭಕ್ತಿಯಲಿ ಶ್ರೀ ಪಂಚಗುರುಗಳವ್ಯಕ್ತದಿಂದಲಿ ಭಜಿಸಿ (ಬಜ್ಜಪು. ೨–೮).

[ಪಂಚ$_2$ + ಗುರು$_2$]

**ಪಂಚಗುಲ್ಮ** (ನಾ). ಒಂದು ಬಗೆಯ ಗುಲ್ಮರೋಗ ; ಜಠರವು ವಿಸ್ತಾರವಾಗುವ ರೋಗ : ಶಂಖಭಸ್ಮ :—ಹುಣಸೆ ಸುಟ್ಟ ಬೂದಿಯೊಳಗೆ . . . ಗಂಧಕ, ವತ್ಸನಾಭಿ ಇವೆಲ್ಲವಂ ನಿಂಬೇಹುಳಿಯಲ್ಲಿ ಮರ್ದಿಸಿ . . . ಒಂದು ಗುಳಿಗೆಯಂ ಅಲ್ಲದ ರಸದಲ್ಲಿ ಕೊಳ್ಳಲು ಸರ್ವಶೂಲೆ, ಪಂಚಗುಲ್ಮ . . . ಇವೆಲ್ಲವೂ ಮಾಣುವುವು (ವೈವಿ. ೫೦); ಈ ಲೋಹಸಿಂಧೂರದ ಹತ್ತು ತೂಕಕ್ಕೆ ಶುಂಠಿ ಹಿಪ್ಪಲಿ . . . ಅಡಿಕೆಪ್ರಮಾಣ ಗುಳಿಗೆಯನ್ನು ಮಾಡಿ ನಿತ್ಯವೂ ಸೇವಿಸೆ . . . ಪಂಚಗುಲ್ಮ ಶ್ವಾಸ ಕಾಸ . . . ವಾತರೋಗಗಳು ಸಹ ಗುಣವಾಗುವುವು (ಸಕವೈ. ೯೫).

[ಪಂಚ$_3$ + ಗುಲ್ಮ]

**ಪಂಚಗೌಡ** (ನಾ). ೧. ಸಾರಸ್ವತ, ಕಾನ್ಯಕುಬ್ಜ, ಗೌಡ, ಉತ್ಕಲ ಮತ್ತು ಮೈಥಿಲ ಎಂಬ ಐದು ಪ್ರದೇಶಗಳು. ೨. ಆ ಪ್ರದೇಶಗಳಿಂದ ಬಂದುವೆಂದು ನಂಬಲಾದ ಬ್ರಾಹ್ಮಣ ಜಾತಿಗಳು : ಅವರು ಪಂಚಗೌಡಾದಿ ಬ್ರಾಹ್ಮಣರಲ್ಲಿ ಒಂದು ಶಾಖೆಯವರು. ಈ ಪಂಚಗೌಡ ಬ್ರಾಹ್ಮಣರ ಮೊದಲಿಗರು ಸಾರಸ್ವತರು (ತುಳುನಾ.೧೬೦). ೩. ಆ ಪ್ರದೇಶದ ಭಾಷೆಗಳು : ಪಂಚಗೌಡ ಮೊದಲಾದ ಆ ದೇಶಭಾಷೆಗಳು ಸಂಸ್ಕೃತಾಪಭ್ರಂಶವಾಗಿವೆ (ಹೊಸುಗ. ೧೨೦). [ಪಂಚ$_2$ + ಗೌಡ$_2$]

**ಪಂಚಗೌಳ** (ನಾ). = ಪಂಚಗೌಡ ೧ : ಧಾಳಿ ಹರಿದುದು ಪಂಚಗೌಳವರಾಳ ಪೊಡ್ಡಿಯರಾಂಧ್ರ ಜಾಳಾಂಧ್ರಾಳಿಗಳನಪ್ಪಳಿಸಿ ಹೂಡಿಸಿದನು ಮಹಾಧನಪ (ಕುಪ್ಪಾಸ. ೪–೧೧). [ಪಂಚ$_2$ + ಗೌಳ$_1$]

**ಪಂಚಘಂಟೆ** (ನಾ). ಆನೆಗೆ ತೊಡಿಸುವ ದೊಡ್ಡ ಗಂಟೆಗಳಿಂದ ಕೂಡಿದ ಒಂದು ಬಗೆಯ ಅಲಂಕಾರ : ಹೊನ್ನ ಮಿಳಿ ಸಹಿತ ತೆತ್ತಿಸಿದ ವಿಕ್ಕೆಲದಲಂದಱುವತ್ತು ಸಾವಿರ ಪಂಚಘಂಟೆಯು ಮತ್ತಗಜ ಶೃಂಗರಿಸಿತು (ಸಂಭಪ. ೨೦–೯೨); ತಳಸಂಕಲೆ ಪಂಚಘಂಟೆ ಕೊಡರು ಬೆನ್ನ ಮಿಳಿ ಕೈಪಟ್ಟೆಯವೆಸೆಯೆ ತಳುವದಾನೆಗಳ ನೂಕಿದರಾರ್ದು ಜೋದರು ಕಲಿರಾಮನಾಥನ ಮೇಲೆ (ಕುಮಾರಾಂ. ೧೬–೪೭). [ಪಂಚ$_3$ + ಘಂಟೆ]

**ಪಂಚಚಕ್ರ** (ನಾ). [ಯೋಗ] ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ ಮತ್ತು ವಿಶುದ್ಧ ಎಂಬ, ಪಂಚಭೂತಗಳಿಗೆ ಸಂಬಂಧಿಸಿದಂತೆ ಬರುವ ಐದು ಬಗೆಯ ಚಕ್ರಗಳು : ಇವರು ನಿನ್ನೊಳಗಿಪ್ಪರಮ್ಮ ಪಂಚಭೂತಂಗಳಿಗೊಡೆಯರಮ್ಮ ಪಂಚಚಕ್ರಗಳಿಗಧಿಕಾರಿಗಳಮ್ಮ (ಶಗೀ. ೧೬೩–೮೦೨ ಪ).

[ಪಂಚ$_2$ + ಚಕ್ರ$_1$]

**ಪಂಚಚಾಮರ** (ನಾ). [ಛಂದ] ವರ್ಣಛಂದಸ್ಸಿನಲ್ಲಿ ಹದಿನಾರನೆಯದಾದ 'ಅಷ್ಟಿ'ಗೆ ಸೇರಿದ ಒಂದು ವೃತ್ತ ; ಜ ರ ಜ ರ ಜ ಗಣಗಳು, ಗುರು ಹೀಗೆ ನಾಲ್ಕು ಪಾದಗಳಲ್ಲೂ ಬರುವ ವೃತ್ತ:

ಪಂಚಚಾಮರಂ—ಜರಜರಜಗಂ (ಛಂದೋಂಬು. ೨-೧೬೩ ಅಡಿಟಿ); ಜರಂ ಜರಂಜಗಂ ಬರಲ್ ನೆಗಟ್ದ ಪಂಚಚಾಮರಂ (ಕೈವಿ. ೮೪). [ಸಂ.]

**ಪಂಚಚಾರಿತ್ರ** (ನಾ). [ಜೈನ] ಸಂಸಾರಕಾರಣಗಳನ್ನು ದೂರೀಕರಿಸಿ ಸಮ್ಯಗ್‌ಜ್ಞಾನವನ್ನು ಪಡೆಯಲು ಸಾಧಕವಾದ ಸಾಮಾಯಿಕ, ಛೇದೋಪಸ್ಥಾಪನೆ, ಪರಿಹಾರ ವಿಶುದ್ಧಿ, ಸೂಕ್ಷ್ಮಸಾಂಪರಾಯ ಮತ್ತು ಯಥಾಖ್ಯಾತಚಾರಿತ್ರ ಎಂಬ ಐದು ನಡವಳಿಕೆಗಳು : ಜೈನಮತದಲ್ಲಿ ತ್ರಿಗುಪ್ತಿಗಳು, ಪಂಚಸಮಿತಿಗಳು . . . ಪಂಚಚಾರಿತ್ರಗಳು, ದ್ವಾದಶತಪಗಳು ಇವುಗಳಿಂದ ಸಂವರವು ಸಾಧಿಸಲ್ಪಡುವುದು (ಜೈಸಧ. ೩). [ಪಂಚ$_2$+ಚಾರಿತ್ರ]

**ಪಂಚಛಲ್ಲಿ** (ನಾ). ಐದು ಬಗೆಯ ಮರಗಳ ತೊಗಟೆ,—ಸಿಪ್ಪೆ : ಸರ್ವೌಷಧಿ ಗೋರೋಚನ ಸಿದ್ಧಾರ್ಥ ಪಂಚಪಲ್ಲವ ಪಂಚಛಲ್ಲಿ ಪಂಚಗನ್ಧ ವೇಲಾದಿ ಚಂದನಾದಿ ಮರಗಳ ದ್ರವ್ಯಂಗಳನಿಕಿ (ಎಕ. VII, ಶಿಕಾ. ೧೮೫-೬೫ ; 1158). [ಪಂಚ$_2$+ಛಲ್ಲಿ$_2$]

**ಪಂಚಜಡೆ** (ನಾ). ಮಕ್ಕಳಿಗೆ ಅಲಂಕಾರಕ್ಕಾಗಿ ಹಾಕುವ ಒಂದು ಬಗೆಯ ಜಡೆ (?) : ತೊಡರ್ದಮರ್ದ ಬಾಳವಣ್ಣ ಜ ತುಡುಗೆ ಪಳಂಚಲೆವ ಪಂಚಜಡೆ ನೊಸಲೊಳೊಡಂಬಡುವರಳೆಲೆಯಿಪಜುಂ ಚೆಲ್ವಿಡಿದಿರ್ದುದು ಬಾಳಕೇಳಿ ಧರ್ಮಾತ್ಮಜನಾ (ಪಂಪಭಾ.೨-೪). [ಪಂಚ$_2$+ಜಡೆ$_1$]

**ಪಂಚಜನ** (ನಾ). ೧. ದೇವ, ಮನುಷ್ಯ, ಗಂಧರ್ವ, ನಾಗ ಮತ್ತು ಪಿತೃದೇವತೆಗಳೆಂಬ ಐದು ವರ್ಗದ ಜೀವಿಗಳು. ೨. ಮನುಷ್ಯ ; ಮಾನವ : "ಮನುಷ್ಯಃ . . . ಪಂಚಜನಃ, ನಾ, ಪುರುಷಃ, ಪೂರುಷಃ, ವಿಟ್—ಈ ೧೨ ಮಾನಸರ್" (ಹಲಾಯು.೫೫-೧೬೩). ೩. ಕೃಷ್ಣನಿಂದ ಹತನಾದ, ಪಾಂಚಜನ್ಯವೆಂಬ ಶಂಖವನ್ನು ಉದರದಲ್ಲಿ ಹೊಂದಿದ್ದ ಒಬ್ಬ ರಾಕ್ಷಸ : ಸಾಂದೀಪನಿತನಯನ ನೆನ್ನೊಳಿರ್ಪ ಪಂಚಜನನೆಂಬ ನಕ್ತಂಚರಂ ನುಂಗಿದಂ (ಜಗವಿ. ೭-೧೮ ಪ). [ಸಂ.]

**ಪಂಚಜನಭಂಜನ** (ನಾ). ಪಂಚಜನನೆಂಬ ರಾಕ್ಷಸನನ್ನು ಸಂಹರಿಸಿದವನು ; ಕೃಷ್ಣ : ಪಂಚಜನಭಂಜನ ವಿರಿಂಚಿಮುಖನಿರ್ಜರಸಮುಂಚಿತ ಪದಾಂಬುಜ . . . ಶೌರಿ ಪಂಚಮುಖ ಮಂತ್ರರಸನಾಂಚಲವ್ಯಪೇಂದ್ರಾ (ವೃಷವಿ. ೫-೧೦೧). [ಪಂಚಜನ+ಭಂಜನ]

**ಪಂಚಜನೀನ** (ನಾ). ೧. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ರಥಕಾರ ಕುಲಗಳಿಗೆ ಭಕ್ತಿಯಿಂದ ನಡೆದುಕೊಳ್ಳುವವನು. ೨. ಗಾಯಕ, ವಾದಕ, ನರ್ತಕ, ವೇಶ್ಯೆ ಮತ್ತು ವಿದೂಷಕ—ಈ ಐದುಜನರೊಡನೆ ವ್ಯವಹರಿಸುವವನು ; ನಟ : "ಆಡಿಗನಂ ಪಂಚಜನೀನನೆಂಬುದು" (ಹಲಾಯು. ೬೦-೨೧೩). [ಸಂ.]

**ಪಂಚಜ್ಞಾನ** (ನಾ). ೧. ಐದು ಬಗೆಯ ಜ್ಞಾನ : ಜ್ಞಾನ ವಿಜ್ಞಾನ ಸುಜ್ಞಾನ ಮಹಾಜ್ಞಾನ ಅಪರಜ್ಞಾನ ಇಂತೀ ಪಂಚಜ್ಞಾನವ ದಹ್ಯಮಾಡಿ ಬ್ರಹ್ಮಲಿಖಿತವ ತೊಡೆವಂತೆ ಧರಿಸುವದೆ ತ್ರಿಪುಂಡ್ರ (ಮೋಳಿಪಾ. ೧೫೪-೫೫೧). ೨. ಐದು ಬಗೆಯ ಜ್ಞಾನವುಳ್ಳವನು; ಬುದ್ಧ. ೩. [ವೀಶೈ] ಶಿವಜ್ಞಾನ, ಸ್ವಯಜ್ಞಾನ, ಸಮ್ಯಗ್‌ಜ್ಞಾನ, ಅವಧಿಜ್ಞಾನ ಮತ್ತು ಪರಜ್ಞಾನ ಎಂಬ ಐದು ಬಗೆಯ ಜ್ಞಾನಗಳು. ೪. ಪಾಶುಪತಜ್ಞಾನವನ್ನು ಉಳ್ಳವನು,—ತಿಳಿದವನು. ೫. [ಜೈನ] ಮತಿ, ಶ್ರುತ, ಅವಧಿ, ಮನಃಪರ್ಯಯ ಮತ್ತು ಕೇವಲ ಎಂಬ ಐದು ಬಗೆಯ ಜ್ಞಾನಗಳು : ಅಲ್ಲಿ ಪಂಚಜ್ಞಾನೈಕತ್ವಂ ಉಪಾದೇಯಮೆಂಬುದಥಿ ಪ್ರಾಯಂ (ತತ್ತ್ವಪ್ರ. ೫೩). [ಪಂಚ$_2$+ಜ್ಞಾನ]

**ಪಂಚಜ್ಞಾನಾವರಣ** (ನಾ). [ಜೈನ] ಮತಿಜ್ಞಾನಾವರಣ, ಶ್ರುತಜ್ಞಾನಾವರಣ, ಅವಧಿಜ್ಞಾನಾವರಣ, ಮನಃಪರ್ಯಾಯಜ್ಞಾನಾವರಣ ಮತ್ತು ಕೇವಲ ಜ್ಞಾನಾವರಣಗಳೆಂಬ ಐದು ಬಗೆಯ ಜ್ಞಾನಾವರಣಗಳು : ಪಂಚಜ್ಞಾನಾವರಣಂಗಳುಂ ದ್ವಿವೇದನೀಯಂಗಳುಂ ಅಷ್ಟಾವಿಂಶತಿಮೋಹನೀಯಂಗಳುಂ. . . ಸರ್ವಜ್ಞನಿಂದಂ ನಿರೂಪಿಸಲ್ಪಟ್ಟವು (ಗೊಮ್ಮಸಾ. ೬-೮). [ಪಂಚ$_2$+ಜ್ಞಾನಾವರಣ]

**ಪಂಚತಂತ್ರ** (ನಾ). ೧. [ರಾಜನೀ] ಮಿತ್ರಲಾಭ, ಮಿತ್ರಭೇದ, ಸಂಧಿವಿಗ್ರಹ, ಲಬ್ಧನಾಶ ಮತ್ತು ಅಸಂಪ್ರೇಕ್ಷ್ಯಕಾರಿತ್ವಗಳೆಂಬ ರಾಜನೀತಿಯ ಐದು ಉಪಾಯಗಳು : ಅತೀಂದ್ರಿಯಗುಣಮುಮನಿತುಮಂ ಗೆಲಲಾರ್ಕುಂ ಮನಮುಂ ಗೆಲ್ದೊಡೆ ನಾಯಕನನೆಗೆಲ್ದೊಡೆ ಪಂಚತಂತ್ರಮುಂ ಗೆಲಲರಿದೆ (ಅಜಿಪು. ೨-೮೫). ೨. ರಾಜನೀತಿಕೋಶವೆನಿಸಿದ, ದುರ್ಗಸಿಂಹನ ಒಂದು ಗ್ರಂಥದ ಹೆಸರು : ಪೊಸತಾಗಿರೆ ವಿರಚಿಸುವೆಂ ವಸುಮತಿಯೊಳ್ ಪಂಚತಂತ್ರಮಂ ಕನ್ನಡದಿಂ (ಪಂಚತಂ. ೧೩-೮). [ಪಂಚ$_2$+ತಂತ್ರ]

**ಪಂಚತತ್ತ್ವ** (ನಾ). ೧.=ಪಂಚಭೂತ. ೨. [ಶೈವ] ಶುದ್ಧಸೃಷ್ಟಿಯಲ್ಲಿರುವ ಐದು ಬಗೆಯ ಪದಾರ್ಥಗಳು : ಸೃಷ್ಟಿ ಶುದ್ಧ, ಅಶುದ್ಧವೆಂದು ಎರಡು ಪ್ರಕಾರ. ಶುದ್ಧಸೃಷ್ಟಿಯಲ್ಲಿ ಬಿಂದು ಮಹಾಮಾಯೆಯೆಂಬ ಶಿವತತ್ತ್ವ, ಶಕ್ತಿತತ್ತ್ವ, ಸದಾಶಿವತತ್ತ್ವ, ಈಶ್ವರತತ್ತ್ವ, ವಿದ್ಯಾತತ್ತ್ವಗಳಾಗಿ ಪರಿಣಮಿಸಿ ಪಂಚತತ್ತ್ವಗಳಾಗುವುವು (ಹಿಂದಸಾ. ೨೯೬). [ಪಂಚ$_2$+ತತ್ತ್ವ]

**ಪಂಚತತ್ವ** (ನಾ). = ಪಂಚಭೂತ : ಪಂಚತತ್ವದಲ್ಲಿದ್ದು ಪರತತ್ವವನರಿಯಬೇಕು (ಅಜಿಪಾ. ೧೪೩-೧೪೬); ಪಂಚತತ್ವಂಗಳ ಮೇಲಿಪ್ಪ ಆಚಾರಲಿಂಗದ ನಿಷ್ಠೆಯ ಬಲದಿಂದ . . . ತ್ಯಾಗಾಂಗಿಯಾದೆ (ಘನವ. ೩೮-೩೨). [ಪಂಚ$_2$+ತತ್ವ$_1$]

**ಪಂಚತನ್ಮಾತ್ರ** (ನಾ). [ತತ್ತ್ವಶಾ] (ಅಹಂಕಾರವೆಂಬ ತತ್ತ್ವದಿಂದ ಹುಟ್ಟುವ ಹಾಗೂ) ಪಂಚಮಹಾಭೂತಗಳ ಉತ್ಪತ್ತಿಗೆ ಕಾರಣವಾದ ಶಬ್ದ, ರಸ, ಸ್ಪರ್ಶ, ರೂಪ ಮತ್ತು ಗಂಧಗಳೆಂಬ ಐದು ಪದಾರ್ಥಗಳು : ಪುರುಷನ . . . ಸನ್ನಿಧಾನದಿಂದ ಪ್ರಕೃತಿಯು ಮಹತ್, ಅಹಂಕಾರ, ಏಕಾದಶೇಂದ್ರಿಯ, ಪಂಚತನ್ಮಾತ್ರ ಮತ್ತು ಪಂಚಭೂತಂಗಳ ರೂಪವಾಗಿ ಪರಿಣಾಮವನ್ನು ಹೊಂದುವುದು (ಭಾತತ್ತ್ವ. ೩೦೭); ಈ ಅಹಂಕಾರತತ್ತ್ವದಿಂದ ಹುಟ್ಟುವ ತತ್ತ್ವಗಳು . . . ಪಂಚತನ್ಮಾತ್ರಗಳು ಮತ್ತು ಪಂಚಭೂತಗಳು (ಭಾರದ. ೨೧೪). [ಪಂಚ$_2$+ತನ್ಮಾತ್ರ]

**ಪಂಚತನ್ಮಾತ್ರೆ** (ನಾ). = ಪಂಚತನ್ಮಾತ್ರ : ಶಬ್ದ ಸ್ಪರುಶ ರೂಪು ರಸ ಗಂಧವು ಪ್ರೇಮದಿಂದುದಿಸಿದವು ಪಂಚತನ್ಮಾತ್ರೆಗಳು (ಲಶಿಚಂ.೨೬-೫); ಸತ್ಯಸಂಕಲ್ಪದಿಂ ಪ್ರಕೃತಿಯೊಳ್ ಪೊಕ್ಕು ಮಹದಹಂಕಾರಂಗಳಂ ಪಂಚತನ್ಮಾತ್ರೆಗಳಂ ಪಂಚಮಹಾಭೂತಂಗಳನುಂಟು ಮಾಡಿ (ಚಕಬ. ೯). [ಪಂಚ$_2$+ತನ್ಮಾತ್ರೆ]

**ಪಂಚತರು** (ನಾ). ದೇವಲೋಕದ ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ ಮತ್ತು ಹರಿಚಂದನ ಎಂಬ ಐದು ಮರಗಳು. [ಪಂಚ$_2$+ತರು$_2$]

**ಪಂಚತಾರೆ** (ನಾ). = ಪಂಚಕ೯ : ಪಂಚತಾರೆಯುಂ ಮೃಗದ ಲಾಂಛನವು ಸಹ ತಾರೆ ಕಂಚಿಯಿಂದತ್ತ ಮಳೆಯಿಲ್ಲ ಭತ್ತವನು ಸಂಚಯಿಪುದೊಳಿತು (ಸರ್ವಜ್ಞ. ೧೫೫೪). [ಪಂಚ$_2$+ತಾರೆ$_2$]

**ಪಂಚತಾವಡ** (ನಾ). ಐದು ಎಳೆಗಳುಳ್ಳ ಒಂದು ಬಗೆಯ ಹಾರ ; ಜೇಗದಿಂದೆನ್ನ ಮುತ್ತಿನ ಪಂಚತಾವಡವನೀಗಳಾತಂಗೆ ಭೂಷಿತವನಿತ್ತು

ಕೊಡುವುದೆನಲು (ಸಿದ್ದೇಶ್ವ. ೩-೮); ಬಡಗದೇಶದ ಮಾಬಳೇಶಲಿಂಗದ ಶಿರದೊಳಡಿಯಿಟ್ಟು ಜಲವ ಬರಿಸಿದನು ದ್ರಾವಿಡದೊಳಣ್ಣಾ ಮಲೇಶ್ವರ ಲಿಂಗದಿ ಪಡೆದು ಮುಕ್ತಿ ನ ಪಂಚತಾಂಡವದ (ಗುರುಚಾ. ೧೩-೮೮).
[ಪಂಚ$_2$ + ತಾಂಡವ]

**ಪಂಚತಿಕ್ತ**(ನಾ). ಬೇವು, ನೆಲ್ಲಿ, ಆಡುಸೋಗೆ, ಪಟೋಲ, ಹೆಗ್ಗುಳ್ಳ ಎಂಬ ಐದು ಕಹಿ ಪದಾರ್ಥಗಳು : "ಪಂಚತಿಕ್ತ–ನಿಂಬಾ; ೨ ಅಮೃತ; ೩ ವೃಷ; ೪ ಪಟೋಲ; ೫ ನಿದಿಗ್ಧಿಕ" (ನಾನಾರ್ಥ. ೨೮೮).
[ಪಂಚ$_2$ + ತಿಕ್ತ]

**ಪಂಚತೀರ್ಥ** (ನಾ). ೧. ಕಾಶಿಯಲ್ಲಿರುವ ಜ್ಞಾನವಾಪಿ, ನಂದಿಕೇಶ, ತಾರಕೇಶ, ಮಹಾಕಾಲೇಶ್ವರ, ದಂಡಪಾಣಿ ಎಂಬ ಐದು ಪವಿತ್ರ ಸ್ಥಳಗಳು. ೨. ಗಂಗಾದ್ವಾರ, ಕುಶಾವರ್ತ, ಬಿಲ್ವಕ, ನೀಲಪರ್ವತ ಮತ್ತು ಕನಖಲ ಎಂಬ ಐದು ಪುಣ್ಯಕ್ಷೇತ್ರಗಳು. ☞ ಆಯಾ ದೇಶದ ಪರಂಪರೆಯ ಮೇರೆಗೆ ಈ ಹೆಸರುಗಳು ಬದಲಾಗುತ್ತವೆ. ೩. ದೇವ, ಪಿತೃ, ಋಷಿ, ಭೂತ ಮತ್ತು ಮನುಷ್ಯನ ತೃಪ್ತಿಗಾಗಿ ಬೇರೆ ಬೇರೆ ವಿಧಾನದಿಂದ ಕೊಡುವ ತರ್ಪಣ : ಈ ಪಂಚತೀರ್ಥಗಳ ತಿಳಿದು ಆಸರದ್ವಾರಾ ಮಾಡಿದ ಕರ್ಮ ಅಕ್ಷಯವಾಗುತ್ತದೆ (ಅಧ್ಯಾಮಾ. ೨೫). [ಪಂಚ$_2$ + ತೀರ್ಥ]

**ಪಂಚತೆ** (ನಾ). ೧. ಐದರ ಮೊತ್ತ. ೨. ಐದು ಮಡಿ; ಐದು ಪಟ್ಟು. ೩. = ಪಂಚಭೂತ. ೪. ಸಾವು; ಮರಣ : "ಪಂಚತಾ, ಕಾಲಧರ್ಮಃ . . . ಮರಣಂ, ನಿಧನಃ—೧೦ ಸಾಯುವುದಕ್ಕೆ ಹೆಸರುಗಳು, ಸಾವು, ಮರಣ" (ಸಿದ್ಧಾಂತಿ. ೨೭೨); ಅಂತದು ಕಡುಪಿಂ ಪಂಚತೆಯಾಗದೆ ಮಾಣ್ಗುಮೆ ವಶಗತಂಗೆ ಪಂಚೇಂದ್ರಿಯದಿಂ (ಅಜಿಪು. ೨-೮೭); ಸಹಜಂ ಶಾರೀರಜಂ ಮಾನಸೋದ್ಭವಾಗಂತುಕಮುಗ್ರರಾಕ್ಷಸಕೃತಂ ತಾನೆಂಬ ದುಃಖಾಗ್ನಿ ಪಂಚವಿಧಂ ಪಂಚತೆ ಮುಟ್ಟೆ ಪಂಚಂಪಜಾ ಮಾಟ್ಕುಂ ನಾರಕಾನೀಕಮುಂ (ಅನಂಪು. ೯-೪೧); ಉತ್ತುಂಗ ಹೋಳ ಕ್ಷಿತೀಶ್ವರನ ಪಿರಿಯರಸಿ ಪಂಚತೆಯನೆಯ್ದುಲ್ಕೆ ಸಂಸ್ಕರಿಸಿ (ಸೌಂದಪು. ೧೫-೫೪). [ಸಂ. ಪಂಚತಾ]

**ಪಂಚತ್ವ** (ನಾ). ೧. = ಪಂಚತೆ ೧ : ಪಂಚತ್ವಮನಾನದೆಯುಂ ಪಂಚತ್ವಮನಾಂತು ಪರಮಪಂಚಾಕ್ಷರಮಂ ಪಂಚಮೆನೆ ಜಪಿಪ ತಲೆಗಳ್ ಪಂಚಮುಖಧ್ಯಾನಿ ಚೋಳನ್ಪನೀಕ್ಷಿಸಿದಂ (ರಾಜಶೇ. ೧೪-೬೭). ೨. = ಪಂಚತೆ ೪ : "ನಿಧನಂ, ನಾಶಃ, ಮೃತ್ಯುಃ, ಮರಣಂ, ಪಂಚತ್ವಂ . . . ದೀರ್ಘನಿದ್ರಾ—ಈ ೧೨ ಸಾವು" (ಹಲಾಯು. ೧೦೩-೬); ಖಳಂ ಪಂಚತ್ವಮನೈದಿ ಮರ್ಚ್ಛೃಂಚಲಮನನೀಗಳಲ್ತೆ ವಾನರನಾದಂ (ಆದಿಪು. ೫-೧೮); ಅಂತು ಪಂಚಾಸ್ಯನಂ ಪಂಚತ್ವಮೆಯ್ದಿಸಿ . . . ಬರುತ್ತಂ (ವರ್ಧಮಾ. ೩-೪೫ ವ); ಪಂಚಮಹಾಪಾತಕಫಲದಿಂ ಪಂಚತ್ವಮುಂ ಪೊರ್ದಿದ ಮನುಷ್ಯರಂ ಕಂಡು (ಸುಕುಮಾ. ೮-೧ ವ); ಇವರುನೈದಜುಂ ರಕ್ಕಸಂ ಪಂಚತ್ವಮನೈದಿದಂ (ರಾಮಾಶ್ವ. ೧೧೪-೭); ಪೊರ್ದಿದುದು ಪಂಚತ್ವಮಂ, ಅಹಂಕೃತಿಲಯದಿ ಪಂಚೇಂದ್ರಿಯಪ್ರಪಂಚಂ (ಶ್ರೀರಾಮಾ. ೬೯೬-೫೦೭). ೧, ೨ : ದುರ್ಯೋಧನಾನುಜ ದುಶ್ಶಾಸನ ಭೀಮ ಭೀಮಗದೆಯಿಂ ಪಂಚತ್ವಮಂ ಪೊರ್ದಿದ್ಧೈ (ಗದಾಯು. ೫-೫). [ಸಂ.]

**ಪಂಚದಶ**(ಗು). ೧. ಹದಿನೈದನೆಯ : ಇಂದ್ರಪ್ರಸ್ಥಪ್ರಯಾಣವರ್ಣನಂ ಪಂಚದಶಾಶ್ವಾಸಂ (ಜಗವಿ. ೧೫-೮೦ ವ); ಶ್ರೀಮದ್ ಬಸವರಾಜವಿಜಯ ಮಹಾಪುರಾಣದೊಳ್ ಹಲಾಯುಧವೃತ್ತಾಂತವರ್ಣನಂ ಪಂಚದಶಾಶ್ವಾಸಂ ಸಮಾಪ್ತಂ (ವೃಷವಿ. ೧೫-೪೫ ವ). (ನಾ). ೨. ಒಂದು ಸಂಖ್ಯೆ; ಹದಿನೈದು : "ಆ ಘಟಿಗೆ ಷಷ್ಟಿ ಸಂಖ್ಯೆಗೆಯುಹೋರಾತ್ರಮಕ್ಕುವು ಪಂಚದಶಮಾಗೆ ಪಕ್ಷಮಕ್ಕುಂ" (ಮಂಗರಾ. ೧೯-೫). [ಪಂಚ$_2$ + ದಶ]

**ಪಂಚದಶಪ್ರಮಾದ** (ನಾ). [ಜೈನ] ಹದಿನೈದು ಪ್ರಮಾದಗಳು; ☞ ಧರ್ಮಕ್ರಿಯೆಯಲ್ಲಿ ಅನಾದರವನ್ನು ಹುಟ್ಟಿಸುವ ಕ್ರೋಧ, ಮಾನ, ಮಾಯೆ ಮತ್ತು ಲೋಭ ಎಂಬ ನಾಲ್ಕು ಕಷಾಯಗಳು; ಸ್ತ್ರೀಕಥೆ, ಭೋಜನಕಥೆ, ರಾಷ್ಟ್ರಕಥೆ ಮತ್ತು ರಾಜಕಥೆ ಎಂಬ ನಾಲ್ಕು ವಿಕಥೆಗಳು; ಸ್ಪರ್ಶೇಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ, ಚಕ್ಷುರಿಂದ್ರಿಯ, ಮತ್ತು ಕರ್ಣೇಂದ್ರಿಯ ಎಂಬ ಐದು ಇಂದ್ರಿಯಗಳು; ನಿದ್ರೆ ಮತ್ತು ಸ್ನೇಹ ಸೇರಿ ಆಗುವ ಹದಿನೈದು ಪ್ರಮಾದಗಳು : ಅಷ್ಟಾದಶಸಹಸ್ರಶೀಲರತ್ನಾಕರನುಮಾಗಿ ಪಂಚದಶಪ್ರಮಾದಂಗಳಂ ಬಂಚಿಸಿ (ಆದಿಪು. ೬-೨೯ ವ); ಪಂಚದಶ ಪ್ರಮಾದವರ್ಜಿತನುಮಾಗಿ ದರುಶನವಿಶುದ್ಧಿ ಪ್ರಭೃತಿ ಷೋಡಶಭಾವನೆಗಂ ತೀರ್ಥಕರಪುಣ್ಯಕಾರಣಂಗಳಂ ಭಾವಿಸುತ್ತಂ (ವರ್ಧಮಾ. ೧೦-೫೬ ವ).
[ಪಂಚದಶ + ಪ್ರಮಾದ]

**ಪಂಚದಶಿ** (ನಾ). ಪ್ರತಿಪಕ್ಷದ ಹದಿನೈದನೆಯ ದಿನ; ಹುಣ್ಣಿಮೆ ಅಥವಾ ಅಮಾವಾಸ್ಯೆ : "ಪಕ್ಷಾಂತೌ, ಪಂಚದಶೌ—ಈ ೨ ಅಮಾವಾಸ್ಯೆ, ಹುಣ್ಣಿಮೆಗಳ ಹೆಸರುಗಳು" (ಸಿದ್ಧಾಂತಿ. ೩೬).
[ಸಂ. ಪಂಚದಶೀ]

**ಪಂಚದಶೀತೋಪು** (ನಾ) ಒಂದು ಬಗೆಯ ತೋಪು,—ಫಿರಂಗಿ : ಹಣ ಫವುಜು ಸಹಾ ಜಾಸ್ತಿ ಮಾಡುತ್ತಾ ತಿರಚನಾಪಲ್ಲಿಯಿಂದಾ ಕಾರೀಗಾರರ ಕರಸಿ ಹೊಸ್ತಾಗಿ ಪಂಚದಶೀ ತೋಪುಗಳನ್ನು ಮಾಡಿಸುತ್ತಾಯಿದ್ದರು (ಹೈದರ. ೩೫). [? + ತೋಪು$_3$]

**ಪಂಚದಾರ** 'ಪಂಚಧಾರೆ$_1$' ನೋ.

**ಪಂಚದೀಪಾರತಿ** (ನಾ). = ಪಂಚಾರತಿ : ಪರಮತೇಜೋಮಯದ ಪಂಚದೀಪಾರತಿಯ ಹರುಷದಿಂ ಬೆಳಗಿ (ನವಮೋ. ೨೪-೮೭).
[ಪಂಚ$_2$ + ದೀಪಾರತಿ]

**ಪಂಚದೀವಟಿಗೆ** (ನಾ). ಗೌರವಾರ್ಥವಾಗಿ ಮೆರವಣಿಗೆ ಮೊದಲಾದ ಸಂದರ್ಭಗಳಲ್ಲಿ ಹಿಡಿಯುವ ಐದು ದೀವಟಿಗೆಗಳು : ಅನು[ಪ]ಮತೇಜೋನಿಧಿಯೆಂದೆನಿಸಿದ ವರಪಂಚದೀವಟಿಗೆ ಸಿನಗಿರಲೆಂದನಿತರೊಳ್ ತರಿಸಿ ಕೊಟ್ಟರ್ ಘನಮಹಿಮಾಸ್ಪದಗೆ ಘಂಟೆನೃಪವರಗಾಗಳ್ (ಬೀಳನಂ. ೧-೧೦೪). [ಪಂಚ$_2$ + ದೀವಟಿಗೆ]

**ಪಂಚದೇವತೆ** (ನಾ). ಶಿವ, ವಿಷ್ಣು, ಸ್ಕಂದ, ಗಣಪತಿ ಮತ್ತು ಭಾಸ್ಕರ ಎಂಬ ಐದು ದೇವತೆಗಳು : ಅವರ ಆಳ್ವಿಕೆಯ ಕಾಲದಲ್ಲಿ ಶಿವ, ವಿಷ್ಣು, ಸ್ಕಂದ, ಗಣಪತಿ, ಭಾಸ್ಕರ ಪಂಚದೇವತೆಗಳ ಆರಾಧನೆಯು ಹೆಚ್ಚಿನ ಪ್ರಾಮುಖ್ಯತೆಯನ್ನು ಹೇಗೆ ಪಡೆಯಿತೆಂದೂ ಮೇಲೆ ನಿರೂಪಿಸಿದೆ (ತುಳುನಾ. ೮೮). [ಪಂಚ$_2$ + ದೇವತೆ]

**ಪಂಚದ್ರಾವಿಡ** (ನಾ). ೧. ಕನ್ನಡ, ತಮಿಳು, ಮಲಯಾಳ, ತುಳು ಮತ್ತು ತೆಲುಗು ಎಂಬ ದ್ರಾವಿಡಭಾಷಾವರ್ಗದ ಐದು ಮುಖ್ಯಭಾಷೆಗಳು : ಕನ್ನಡಭಾಷೆ ಪಂಚದ್ರಾವಿಡವೆಂದು ಪ್ರಖ್ಯಾತವಾಗಿರುವ ಭಾಷೆಗಳಲ್ಲಿ ಒಂದಾಗಿದೆ. ಈ ಭಾಷಾವರ್ಗಕ್ಕೆ ತಮಿಳು, ತೆಲುಗು, ಮಲೆಯಾಳ, ತುಳು ಇವೂ ಸೇರಿವೆ (ಕವಿಚ. I, ಅವತರಣಿಕೆ); ಕೇರಳ ತೌಳವ ಕರ್ಣಾಟಕಾಂಧ್ರಗಳೆಂಬ ನಾಲ್ಕು ಭಾಷೆಗಳಾದವು; ಇವು ದ್ರಾವಿಡಾಭಾಸಗಳಾದ್ದರಿಂದಲೇ ಈ ಭಾಷೆಗಳೂ ದ್ರಾವಿಡವೂ ಸೇರಿ ಪಂಚದ್ರಾವಿಡವೆಂಬ ಪ್ರಸಿದ್ಧಿಯನ್ನು ಹೊಂದಿದವು (ಹೊಸಗ. iii ಪೀಠಿಕೆ). ೨. ತಮಿಳು, ಕನ್ನಡ, ಗುಜರಾಥಿ, ತೆಲುಗು ಮತ್ತು ಮರಾಠಿ ಎಂಬ ಐದು ದಾಕ್ಷಿಣಾತ್ಯ ಭಾಷೆಗಳು. ೩. ದಕ್ಷಿಣಭಾರತದ ಬ್ರಾಹ್ಮಣರ ಐದು ವರ್ಗಗಳಾದ ದ್ರಾವಿಡ, ಕರ್ಣಾಟ, ಗುರ್ಜರ, ಆಂಧ್ರ ಮತ್ತು ಮಹಾರಾಷ್ಟ್ರ. [ಪಂಚ$_2$ + ದ್ರಾವಿಡ]

**ಪಂಚದ್ವಯ** (ನಾ). ಐದರ ಎರಡು ; ಎರಡೈದು ; ಹತ್ತು : ಪಂಚ ದ್ವಯಭುಜದಿಂದೆಸೆದು ಸಂಚರಿಸುತಿಹನಾ ಶಿವನ ತತ್ವವ ಮಿಂಚಿನಿಂದಾವರಿ ಪುದೊಂದರ್ಬುದವಧಿಕವೆನಿಸಿ (ಗಗತಾ. ೭-೪೬). [ಪಂಚ$_2$+ದ್ವಯ]

**ಪಂಚದ್ವಾರ** (ನಾ). ೧. ಐದು ಬಾಗಿಲುಗಳು. ೨. (ಆಲಂ)ದೇಹ ದಲ್ಲಿಯ ಐದು ರಂಧ್ರಗಳು : ಪಂಚದ್ವಾರಂಗಳಿಂ ಬರುವ ಪಂಚ ಶಬ್ದಾದಿ ವಿಷಯಂಗಳೊಳೊಂದಕ್ಕೊಂದಕ್ಕೆ ಗುಣತ್ರಯಂಗಳಿಂ ಮೂಱು ಕೆಱಿನಾದವು (ಪಂಚೀಶ. ೨೫). [ಪಂಚ$_2$+ದ್ವಾರ]

**ಪಂಚಧಾರೆ**$_1$, ಪಂಚದಾರ (ನಾ). ಒಂದು ಬಗೆಯ ಸಕ್ಕರೆ : ಬಿಸಿ ನೀರನೆಱಿದು ಕಿವಿಚಿದ ಪುಲ್ಲ ಸೊಜ್ಜಿಗೆಯು ರಸದೊಳಗೆ ಅರೆದಕ್ಕಿಯಂ ಸಮಂಗೂಡಿ ಸೋದಿಸಿಕೊಂಡು ಪಂಚಧಾರೆಯ ಸಕ್ಕರೆಯನಿಕ್ಕಿ (ಸೂಪಶಾ. ೧-೩೬); ಮುದ್ದುನಾಲುಕುಮೂಲೆಯಾದಂತೆ ತನಿಬೆಲ್ಲದುದ್ದುಕ ವರ ಪಂಚಧಾರೆ ಬಿದ್ದಿಹುದಾಲೆಯ ಮನೆಮನೆಗಳ ಮುಂದೆ ಹೆದ್ದೊಱಿ ಮಳಲೊಟ್ಟಲಂತೆ (ನೋಹತ. ೨-೫೧). **ಪಂಚದಾರ :** "ಶರ್ಕರಾ, ಸಿತಾ—೨ ತವರಾಜನೆಂಬ ಸಕ್ಕರೆ, ರಾಯಿಪುಡೀಸಕ್ಕರೆ, ಆಂಧ್ರದಲ್ಲಿ ಪಂಚದಾರ" (ಸಿದ್ಧಾಂತಿ.೨೪೬). 'ಅಯಿದಾರೆ', 'ಪಂಚಸಾರ' ಪರಾ. [**ದೇ.॥ ತಮಿ.** ಪಞ್ಚತಾರೈ ; **ಮಲ.** ಪಞ್ಚತಾರ ; **ತೆಲು.** ಪಂಚದಾರ]

**ಪಂಚಧಾರೆ**$_2$ (ನಾ). ಕುದುರೆಯ ಐದು ಬಗೆಯ ನಡಗೆಗಳು ; ☞ ಆಸ್ಕಂದಿತ (ಎಳೆನಡಿಗೆ), ಧೌರಿತಕ (ಬಿರುನಡಿಗೆ), ರೇಚಿತ (ಲಯಕ್ಕೆ ಸರಿಯಾಗಿ ನಡೆಯುವುದು, ಬಿಗುನಡಿಗೆ), ವಲ್ಗಿತ (ಕಾಲನ್ನು ಹಾರಿಸುತ್ತಾ ನಡೆಯುವುದು), ಪ್ಲುತ (ಕುಣಿಯು ವಂತೆ ನಡೆಯುವುದು)ಎಂಬುವು : ಅತಿವೇಗವೆಂದೆಂಬ ಪಂಚಧಾರೆಯ ದೊಂದು ನುತವಱಿದೇಱಿದನಾಗ (ತ್ರಿಪಾಲ. ೪-೧೧); ಅಂಚಿತದ ಹಲ್ಲಣದ ಗಮಕದಿಂ ಹೊಳೆಕಿದುವು ಪಂಚಧಾರಾಪ್ರೌಢವಾಜಿಗಳ್ (ಜಿಬಪು. ೨೬-೧೩); ಪರಿಯಿಪ ನೆಟ್ಟನೆ ನಟ್ಟುವಿದಿರೇಱಿಪ . . . ಪಂಚ ಧಾರೆಯೊಳ್ ಪರಿಣತಿದೋರ್ಪ ವಾಹಳಿತನಂ ಬಗೆಗೊಂಡುದು ಮಂತ್ರಿ ಪುತ್ರನಾ (ರಾಜಶೇ. ೧೩-೪೨). 'ಧಾರಾಪಂಚಕ' ಪರಾ. [ಪಂಚ$_2$+ಧಾರೆ]

**ಪಂಚನಖ** (ನಾ). ೧. ಐದು ಉಗುರು. ೨. ಐದು ಉಗುರುಳ್ಳ ಪ್ರಾಣಿ ; ಆನೆ, ಹುಲಿ, ಸಿಂಹ, ಆಮೆ, ಮುಳ್ಳುಹಂದಿ, ಮೊಲ ಮೊದಲಾದುವು. [ಪಂಚ$_2$+ನಖ]

**ಪಂಚನಖಯೋಗ** (ನಾ). [ಕಾಮಶಾ] ನಖಕ್ಷತಗಳಲ್ಲಿ ಒಂದು : ಉಱಿಸ್ಸುವಂದದೆ ರೇಖೆ ಮಿಱುಗುವಂದದೆ ಮೊಲೆಯನುಱಿ ನಾಲ್ಕು ಬೆರಳೊಳುಂಗುಟದೊಳೊತ್ತಿ ತಱಿತಱಿಸಿ ಸುರತದೊಳ್ ನೆಱಿವಾಗಲೆಳೆ ಯುಲದು ನೆಱಿ ಪಂಚನಖಯೋಗಮೆನಿಪುದು (ಜನನ. ೭-೩೭); ಪಂಚನಖಯೋಗ . . . ಉತ್ಪಲವೆಂಬ ಸಪ್ತವಿಧನಖೋಪಕ್ಷತವಿಹಿತರಿಂ (ವಿವೇಕ. ೨೩೦). [ಪಂಚನಖ+ಯೋಗ]

**ಪಂಚನಖಾಗ್ರಸಂಯೋಗ** (ನಾ). = ಪಂಚನಖಯೋಗ : ತರ್ಜ ನ್ಯಾದಿ ನಾಲ್ಕುಬೆರಳುಗುರೊಡನೆ ಹೆಬ್ಬೆರಳುಗುರಂ ತಾಟಿಸುವುದು ಪಂಚನಖಾಗ್ರಸಂಯೋಗಮೆಂಬುದು (ಕಾಮಶಾ. ೨೨೬). [ಪಂಚನಖ+ಅಗ್ರ$_1$+ಸಂಯೋಗ]

**ಪಂಚನಮಸ್ಕಾರ** (ನಾ). ೧. ಎರಡು ಕೈ, ಎರಡು ಮೊಳಕಾಲು, ತಲೆ, ಎದೆ ಮತ್ತು ಕಣ್ಣುಗಳಿಂದ ಮಾಡುವ (ಸಾಷ್ಟಾಂಗ) ನಮಸ್ಕಾರ. ೨. [ಜೈನ] ಪಂಚಪರಮೇಷ್ಠಿಗಳಿಗೆ ಮಾಡುವ ನಮಸ್ಕಾರ ಮತ್ತು ಆಗ ಹೇಳುವ ಐದು ಮಂತ್ರ : ಕಿತ್ತಯ್ಯಾ ನಿಮಗೀಗಳ್ ಪ್ರಾಣಂ ಪೋಗಲ್ ಬಗೆದಪ್ಪುದು ದೇವರಂ ಜಾನಿಸುವುದು ಪಂಚನಮಸ್ಕಾರಮನೋದುತ್ತಮುಚ್ಚಾರಿಸುವುದಂ ಕೇಳುತ್ತವಿರಿಮೆಂದು ಕಲ್ಪಿಸಿ ಭಟ್ಟಾರರ್ ಪಂಚನಮಸ್ಕಾರಮಂ ಪಿರಿದು ಬೇಗಂ ಪೇೞಿ (ವಡ್ಡಾರಾ. ೮೩-೧೨); ಮುಕುಳೀಕೃತಕರಕಮಳನಾಗಿ ಪಂಚನಮಸ್ಕಾರ ಮನುಚ್ಚರಿಸುತ್ತಮದೃಶ್ಯನಾಗಿ ಬಂದು (ಚಾವುಂಪು. ೧೭); ತರಂಗತಮ ನೆಂಬ ವಿದ್ಯಾಧರಂ ಕಂಡು ಸಮಿಪಕ್ಕೆ ಬಂದು ಪಂಚನಮಸ್ಕಾರಮಂ ಪೇೞ್ವುದುಮುಪಶಮಚಿತ್ತದಿಂ ಸತ್ತು (ಪಂಂಪಾಮಾ. ೧೬-೩೯ ವ); ಪಂಚ ನಮಸ್ಕಾರವನ್ನುಳಿದು ಬೇರೆ ಮಂತ್ರವನ್ನು ನೆನೆಯುವವರಲ್ಲ (ಕನಾಟಿ. ೧೧೧). [ಪಂಚ$_2$+ನಮಸ್ಕಾರ]

**ಪಂಚನಮಸ್ಕೃತಿ**(ನಾ). = ಪಂಚನಮಸ್ಕಾರ ೨ : ಮುನಿಪ್ಪಂದೋ ಚ್ಚಾರಿತಪಂಚನಮಸ್ಕೃತಿಗಾಂತು ಕಿವಿಯನರ್ಹತ್ಪದಮಂ ನೆನೆಯುತ್ತಂ . . . ಸೇಸೆಗೊಳ್ ಖಚರಪತೀ (ಆದಿಪು. ೨-೫೭); ಅಂತು ನಿಬಿಡ ನಿಬದ್ಧ ಪಲ್ಯಂಕಾಸನನಾಗಿ . . . ಮೇಣ್ಮುನಿಜನಂಗಳೋದುವ ಪಂಚನಮಸ್ಕೃತಿ ಗಳಂ ಕೇಳ್ವುದು (ಪಸಾರ. ೩೬೯); ಸಾವಾತಂಗೆ ಪಂಚನಮಸ್ಕೃತಿಯ ಪೇಳೆ ತ್ರಿದಶಪದವಿಗೆ ಪೋದಂ (ಸಾಳ್ವಭಾ. ೧೭-೬೭). [ಪಂಚ$_2$+ನಮಸ್ಕೃತಿ]

**ಪಂಚನಾಮೆ** (ನಾ). ಪಂಚಾಯಿತರು ತೀರ್ಪು ಬರೆದಿರುವ ವರದಿ ಅಥವಾ ಪಂಚಾಯಿತರ ಸಮಕ್ಷದಲ್ಲಿ ಸರಕಾರಿ ಅಧಿಕಾರಿಗಳು ತನಿಖೆ ಮಾಡಿ ಸಿದ್ಧಗೊಳಿಸಿದ ವರದಿ; ಮಹಜರು : ಯಾರಾದರೂ ಕದ್ದು ತಂದಿದ್ದರೆ ಅದನ್ನು ಪತ್ತೆ ಹಚ್ಚಿ ಪಂಚನಾಮೆ ಮಾಡಿ, ಜಪ್ತ ಮಾಡಲು ಗುಪ್ತವೇಷದ ಒಂದು ಸಿಬ್ಬಂದಿಯನ್ನು ಇಡಬೇಕಾದೀತು (ಗಾಳಿಪ. ೩೮); ಹಗ್ಗವನ್ನು ಕತ್ತರಿಸಿ ಶವವನ್ನು ಹೊರಗಡೆ ತಂದು, ನಡೆಯಬೇಕಾದ 'ಪಂಚನಾಮೆ' ನಡೆಯಬೇಕಾದರೆ ಸುಮಾರು ಒಂದು ಗಂಟೆಯ ಮೇಲೆ ಹಿಡಿಯಿತು (ಸ್ವರ್ಗಬಾ. ೨೦೫). [←ಹಿಂ. ಮರಾ. ಪಂಚನಾಮಾ]

**ಪಂಚನಾರೀತುರಗ** (ನಾ). ಮುಖ, ಕಾಲು, ಬಾಲ ಮೊದಲಾದ ಐದು ಅವಯವಗಳಲ್ಲಿ ಸ್ತ್ರೀಯರ ಆಕೃತಿ ಕಾಣುವಂತೆ ನಿರ್ಮಿಸಿದ ಕುದುರೆಯ ವಿಗ್ರಹ : ಪಂಚನಾರೀತುರಗದಂದದಿ ಪಂಚ ರೂಪಾತ್ಮಕನು ತಾ . . . ರಮಿಸುವನು (ಹಸಾರ. ೬-೮). [**ಸಂ.**]

**ಪಂಚನಿವಾರಣ** (ನಾ). [ಬೌದ್ಧ] ಪರಿಹಾರದ ಐದು ಬಗೆಯ ಆಲೋಚನೆಗಳು,—ಚಿಂತನೆಗಳು : ಅಭಿಧ್ಯೆ, ವ್ಯಾಪಾದಪ್ರದೋಷ, ಸ್ತ್ಯಾನಮಿದ್ಧ, ಔದ್ಧತ್ಯಕೌಕೃತ್ಯ, ವಿಚಿಕಿತ್ಸೆ—ಎಂಬ . . . ಪಂಚ ನಿವಾರಣಗಳು ಹೋದ ಮೇಲೆ, ತಾನು . . . ಕ್ಷೇಮಾಂತಭೂಮಿಗಳಲ್ಲಿ ಇದ್ದಂತೆ ಕಾಣುವನು (ಬುದ್ಧಪ. ೧೯೩). [ಪಂಚ$_2$+ನಿವಾರಣ]

**ಪಂಚನಿಶಾನಿ** (ನಾ). ರಾಜರು, ಮಠಾಧಿಪತಿಗಳು ಮೊದಲಾದ ವರು ಇಟ್ಟುಕೊಳ್ಳುವ ಗೌರವಸೂಚಕವಾದ ಛತ್ರಿ, ಪಂಜು, ಭೇರಿ, ಕಹಳೆ ಮೊದಲಾದ ಐದು ಬಗೆಯ ಲಾಂಛನಗಳು : (ಸಾಧಾರಣ ಬಿರುದುಗಳು). . . ಕತ್ತಿ ವಗೈರೆ ೫೦, ಮಾಯಾಮುರತಾಪು, ಪಂಚನಿಶಾನಿ, ಡವಣೆ, ಅರಲಿವಸ್ತ್ರ (ಗುರುದ. ೧೧). [ಪಂಚ$_2$+ನಿಶಾನಿ]

**ಪಂಚಪಕ್ವಾನ್ನ** (ನಾ). ಐದು ಬಗೆಯ ಪಕ್ವಾನ್ನಗಳು ; ☞ ಅಮೃತಾನ್ನ, ಭೋಜ್ಯಾನ್ನ, ದೇವಾನ್ನ, ದಿವ್ಯಾನ್ನ ಮತ್ತು ಅಮೃತರಸಾಯನ ಎಂದೂ ಚಿತ್ರಾನ್ನ, ದಧ್ಯನ್ನ, ಶರ್ಕರಾನ್ನ, ಮಾಷೋದನ (ಉದ್ದಿನ ಹುಡಿಅನ್ನ), ತಿಲೋದನ (ಎಳ್ಳುಹುಡಿ ಅನ್ನ) ಎಂದು ಎರಡು ವಿಧಗಳಿವೆ : ಹೊಸಹೊನ್ನ ಪರಿಯಾಣಮನಳ ವಡಿಸಿ ಪಂಚಪಕ್ವಾನ್ನಮನಮಳದೇವಾನ್ನ ದಿಬ್ಯಾನ್ನಂಗಳಂ ಬಡಿಸಿ (ಬಸವು.೮-೧೪); ಪಂಚಪಕ್ವಾನ್ನವನು ಬಿಕ್ಕೆಯಲಿ ಕಂಡಾಗ ಅಮೃತಾನ್ನ ಉಂಡಿರುವೆಯಾ ? (ಸೂರ್ಯಪಾ. ೬೮-೫). [ಪಂಚ$_2$+ಪಕ್ವಾನ್ನ]

**ಪಂಚಪಕ್ಷಿಸ್ವನ**(ನಾ). ೧. ಐದು ಬಗೆಯ ಪಕ್ಷಿಧ್ವನಿ. ೨. [ಕಾಮಶಾ] ರತಿ ಕಾಲದಲ್ಲಿ ಹೊಮ್ಮುವ ಐದು ಬಗೆಯ ಪಕ್ಷಿಗಳ ಸ್ವರದಂತಹ ಶಬ್ದ : ಪಂಚಾಂಗುಲೀಹತಂ ಪಂಚಪಕ್ಷಿಸ್ವನಂ ಪಂಚವಿಧ ತಾಡನಂ . . . ಚದುರರಿವನಱಿವುದು (ಜನವ. ೮-೫೧). [ಪಂಚ$_2$ + ಪಕ್ಷಿ + ಸ್ವನ]

**ಪಂಚಪತ್ರ** (ನಾ). ೧. ಮಾವು, ಬಿಲ್ವ, ನೆಲ್ಲಿ, ದರ್ಭೆ ಮತ್ತು ಉತ್ತರಣೆ ಎಂಬ ಐದು ಬಗೆಯ ಪತ್ರೆಗಳು. ೨. (ಪತ್ರವನ್ನು) ಬರೆಯುವವನು, ಬರೆದುಕೊಡುವವನು, ಬರೆಸಿಕೊಳ್ಳುವವನು, ಇಬ್ಬರು ಸಾಕ್ಷಿಗಳು ಹೀಗೆ ಐದು ಜನ ಸೇರಿ ಬರೆಯುವ ಪತ್ರ : “ಪಂಚಪತ್ರ–ಬರಕೊಡುವವ, ಬರಕೊಂಬವ, ಎರಡುಸಾಕ್ಷಿ , ಬರವವ” (ನಾನಾಶ. ೨೮) [ಪಂಚ$_2$ + ಪತ್ರ]

**ಪಂಚಪತ್ರೆ** (ನಾ). ಅಗಲವಾದ ಎಲೆಯುಳ್ಳ ಒಂದು ಬಗೆಯ ಗಿಡ: “ದೇವಪತ್ರಂ ಪಂಚಪತ್ರೆ” (ಮಂಗರಾ. ೪೦-೩೦). [ಪಂಚ$_3$ + ಪತ್ರೆ]

**ಪಂಚಪದ** (ನಾ). = ಪಂಚನಮಸ್ಕಾರ ೨ : ಮಂಗಳಕಾರಣಪಂಚಪದಂಗಳನಪವರ್ಗಮಾರ್ಗವಿರಚಿತಸೋಪಾನಂಗಳಂ . . . ಓದುವುದು (ಆದಿಪು. ೨-೫೪) ; ತಪಸ್ವಿನಿ ಸಮಾಧಿ ಸಮನಿಸೆ ಮನದೊಳ್ ಪಿಂಗದೆ ನೆಲಸಿರೆ ಪಂಚಪದಂಗಳ್ ನಾಲಿಗೆಯೊಳಱಿವೆ ಮೆಯ್ಯಾಗಿರ್ದಳ್ (ಪಂರಾಮಾ. ೧೪-೫೭) ; ಬಾಗಿಲ ಮುಂದೆ ಬೀಳಲು ಶ್ವಾನನ ಕಂಡು ನಾಗಶ್ರೀ ಪಂಚಪದಗಳ ಆಗ ಪೇಳಲು ಲಾಲಿಸಿ ಸುರಲೋಕಕ್ಕೆ ಬೇಗ ಪೋದುದ ಕೇಳ್ದಱಿಯ (ದ್ವಾದಶಾ. ೪-೯). [ಪಂಚ$_2$ + ಪದ$_2$]

**ಪಂಚಪದಾರ್ಥ** (ನಾ). ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ ಎಂಬ ಐದು ಬಗೆಯ ಪದಾರ್ಥಗಳು : ಪಂಚಭೂತವಂಗವಾಗಿಪ್ಪ ಆತ್ಮಂಗೆ . . . ಪಂಚವಿಷಯವು ಪೂಜೆ ಪಂಚಪದಾರ್ಥವೇ ಭೋಗ (ಉರಿಪೆ. ಕ. ೨೦೧-೨೭೭). [ಪಂಚ$_2$ + ಪದಾರ್ಥ]

**ಪಂಚಪರಮೇಷ್ಠಿ** (ನಾ). = ಪಂಚಗುರು : ಮಂದರದಂತಚಲಿತ ಧೈರ್ಯರಾಗಿರ್ದು ವಿದ್ಯೆಗಳಂ ಸಾಧಿಸಿ ಸಿದ್ಧವಿದ್ಯರ್ ಪಂಚಪರಮೇಷ್ಠಿಗಳಂ ಪೂಜಿಸಿದಂ ಬಱಿಯಂ (ಪಂರಾಮಾ. ೧೦-೧೪೭ ವ) ; ಶ್ರೀಮನ್ನಿತ್ಯಪೂಜಾನಿಮಿತ್ತಂ ಶ್ರೀಮತ್ಪಞ್ಚಪರಮೇಷ್ಠಿ ಪ್ರತಿಬಿಂಬಮಾನದುತಞ್ಚ ನಗರ್‌ಮ ಪೆರುಮಾಳ ಶ್ರಾವಕರಾಲ ಶೇವಿತ್ತ ಉಭಯಂ (ಎಕ. II (R), ೪೮೮-೮ ; 1858) ; ಜೈನರು ಅರಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸರ್ವಸಾಧುಗಳೆಂಬ ಪಂಚಪರಮೇಷ್ಠಿಗಳನ್ನು ಪೂಜಿಸುತ್ತಾರೆ (ಭಾರದ. ೧೭೯). [ಪಂಚ$_2$ + ಪರಮೇಷ್ಠಿ]

**ಪಂಚಪರುಷ**(ನಾ). ಮುಟ್ಟಿದುದನ್ನು ಪವಿತ್ರಗೊಳಿಸುವ ಮನಸ್ಸು, ವಾಕ್ಕು, ಹಸ್ತ, ದೃಷ್ಟಿ ಮತ್ತು ಭಾವ ಎಂಬ ಐದು ಬಗೆಯ ಸ್ಪರ್ಶಗಳಿಂದಾಗುವ ಸಿದ್ಧಿ : ಬಸವರಾಜನ ಕರೆದು ನೀಂ ಭಕ್ತಿಲೀಲೆಯನು ಧರಣಿಯೊಳು ನಟಿಸಪೋಗೆಂದು ನೀಲಗಳ ಪಂಚಪರುಷವನಿತ್ತು ಪ್ರಮಥಗಣವೆರಸಿ ಬೀಳ್ಕೊಟ್ಟನಾಗ (ಪ್ರಾಥರಾ. ೨-೩) ; ಇವರಿಗಾದರೂ ಮನಪರುಷ, ವಾಕ್ಪರುಷ, ಹಸ್ತಪರುಷ, ದೃಷ್ಟಿಪರುಷ, ಭಾವಪರುಷಂಗಳು ಎಂಬ ಪಂಚಪರುಷಂಗಳನ್ನು ಜಗದೀಶ್ವರನು ಕೊಟ್ಟಿರುವನಾಗಿ ಈ ಶಿವಭಕ್ತರ ಅಂಗಣವೇ ಕೈಲಾಸ (ಕೃಷಿಪ್ರ. ೨೭೫). [ಪಂಚ$_2$ + ಪರುಷ$_1$]

**ಪಂಚಪರ್ಬ** (ನಾ). ೧. = ಪಂಚಪರ್ವ. ೨. ದೇವಸ್ಥಾನಗಳಲ್ಲಿ ನಡೆಯುವ ದವನ, ವಸಂತ, ಪವಿತ್ರಾರೋಪಣ, ದೀಪೋತ್ಸವ, ನವಾನ್ನವೆಂಬ ಸಮಾರಂಭಗಳು,—ಉತ್ಸವಗಳು : ಅ ಮಹಾಜನಗಳು ಶ್ರೀರಾಮಕೃಷ್ಣಪ್ರಭುಗಳ ವೃಂದಾವನದ ಶ್ರೀಗೋಪಾಳದೇವರ ಅಮೃತಪಡಿ ದೀಪೋತ್ಸವ ಚೈತ್ರಪವಿತ್ರ ಒಳಗಾದ ಪಂಚಪರ್ಬಕೆ ವರ್ಷಂಪ್ರತಿ ಎಂದೆಂದೂ ನೆಲೆಯಾಗಿ ಕೊಡುವರು (ಎಕ. XVI, ಚಿಕ್ಕನಾ. ೭೧-೨೪ ; ?). [ಪಂಚ$_2$ + ಪರ್ಬ]

**ಪಂಚಪರ್ವ** (ನಾ). ೧. ಚತುರ್ದಶಿ, ಅಷ್ಟಮಿ, ಅಮಾವಾಸ್ಯೆ, ಪೌರ್ಣಮಿ ಮತ್ತು ಸಂಕ್ರಾಂತಿ ಎಂಬ ಐದು ಪರ್ವಕಾಲಗಳು : ‘ಪಂಚಪರ್ವತಿಥಿ’ ಪರಾ. ೨. = ಪಂಚಪರ್ಬ ೨ : ಶ್ರೀನಂದೀಶ್ವರ ದೇವರಿಗೆ . . . ನಿತ್ಯಕಟ್ಟಿ ಅಮೃತಪಡಿ ನಂದಾದೀಪ ವಿಶೇಷಕಟ್ಟಿ ಪಂಚಪರ್ವ ಸಂಬಳಗಾರಜನಕ್ಕೆ ಸಹ ಅಪಣೆ ಕೊಡಿಸಿಯಿರುವ ಕಂಠೀರಾಯಿ ೧೨೨೧ (ಎಕ. I, ೧೧-೨೦ ; 1816). ೩. [ವೇದಾಂತ] ಐದು ಬಗೆಯ ಅಜ್ಞಾನಗಳು : ಯೀ ಲಿಂಗದಲ್ಲಿ ಯರಡು ಆಚ್ಛಾದನಗಳು ಅವೆ (ಜೀವಾಚ್ಛಾದಿತ, ಪರಮಾಚ್ಛಾದಿತ) ಯಲ್ಲಿ ಮೋಹ ಮಹಾಮೋಹ ತಮೋಮೋಹತಾಮಿಶ್ರ ಅಂಧತಾಮಿಶ್ರಯೀ ಪಂಚಪರ್ವಗಳು ಅಂದರೆ ಅಜ್ಞಾನಗಳು ಅವೆ (ಅಧ್ಯಾಮಾ. ೧೨). [ಪಂಚ$_2$ + ಪರ್ವ]

**ಪಂಚಪರ್ವತಿಥಿ** (ನಾ). = ಪಂಚಪರ್ವ ೧ : ಇದು ಕಾರಣನಿತ್ಯನೈಮಿತ್ತಿಕ ಪಂಚಪರ್ವತಿಥಿಗಳಲ್ಲಿ ಅವ ದಿನದಲ್ಲಿಯೂ ಎಂದೆಂದೂ ಅಷ್ಟವಿಧಾರ್ಚನೆ ಷೋಡಶೋಪಚಾರವೇ ಕರ್ತವ್ಯ ನೋಡಾ (ಉರಿಪೆ. ಕ. ೨೪-೪೭). [ಪಂಚಪರ್ವ + ತಿಥಿ]

**ಪಂಚಪಲ್ಲವ** (ನಾ). ಕಲಶಪ್ರತಿಷ್ಠೆ ಮೊದಲಾದ ಸಂದರ್ಭಗಳಲ್ಲಿ ಉಪಯೋಗಿಸುವ ಆಲ, ಅರಳಿ, ಬಸರಿ, ನೇರಿಳೆ, ಮಾವು ಅಥವಾ ನೇರಿಳೆ, ಮಾವು, ಬೇಲ, ಮಾದಲ, ಬಿಲ್ವ ಅಥವಾ ಆಲ, ಅತ್ತಿ, ಅರಳಿ, ಗೋಣಿ, ಬಸರಿ ಮರಗಳ ಚಿಗುರು : ಸರ್ವೌಷಧಿ ಗೋರೋಚನ ಸಿದ್ಧಾರ್ಥ ಪಂಚಪಲ್ಲವ ಪಂಚಭಲ್ಲಿ ಪಂಚಗವ್ಯ ಮೇಲಾದಿ ಚಂದನಾದಿ ಮಂಗಳದ್ರವ್ಯಂಗಳನಿಕಿ (ಎಕ. VII, ಶಿಕಾರಿ. ೧೮೫-೭೫ ; 1158) ; ಪಂಚಾಮೃತಂಗಳ ತರಿಸಿ ಪರಿಮಿಶ್ರಮಂ ಮಾಡಿ ಶಿಷ್ಯಮೂರ್ಧ್ನಿಯೊಳು ತದ್ಗುರುಮೂರ್ತಿ ಪಂಚಪಲ್ಲವಗಳಿಂ ಸಂಪ್ರೋಕ್ಷಿಸುವುದು ಶಿಷ್ಯನ ಶಿರಕ್ಕೆ (ವೀಶೈಪು. ೭-೧೨-೧೦); ಕೊತ್ತಂಬರಿ ಬೀಜ, ಜೀರಿಗೆ . . . ಪಂಚಪಲ್ಲವಗಳು, ನೆಲ್ಲೀಕಾಯಿ, ಆಲದ ಬಿಳಲು ಇವನ್ನು ಕಷಾಯವಿಟ್ಟು ಸೇವಿಸಿದರೆ ಶ್ಲೇಷ್ಮಛರ್ದಿ, ಸಕಲಛರ್ದಿ ಸಹ ನಿಲ್ಲುವವು (ಸಕವೈ. ಪರಿ. ೪೫೭).

**ಪಂಚಪಲ್ಲವದ ಕುದುರೆ** = ಪಂಚಕಲ್ಯಾಣ ೧ : ಮೂವತ್ತೆರಡು ಪಂಚಪಲ್ಲವದ ಕುದುರೆಗಳು (ಸುಗುಗಂ. ೧೪-೯). ☞ ಇದು ‘ಪಂಚಕಲ್ಯಾಣಿ’ ಯಿಂದ ಬೇರೆಯಾದ ಐದು ಶುಭಲಕ್ಷಣಗಳಿಂದ ಕೂಡಿರಬಹುದೆ? **ಪಂಚಪಲ್ಲವದ ವಾಜಿ** = ಪಂಚಪಲ್ಲವದ ಕುದುರೆ: “ಪಂಚಪಲ್ಲವದ ವಾಜಿಗಳ್ = ರಾಜವಾಹನಂಗಳ್” (ಶಮದ.ಪಂ. ೨); “ಪಂಚಪಲ್ಲವದ ವಾಜಿಗಳೆನಲ್ ರಾಜವಾಹನಂ” (ಕಬ್ಬಿಕೈ. ೭೭).
[ಪಂಚ$_2$ + ಪಲ್ಲವ]

**ಪಂಚಪಾಂಡವ** (ನಾ). ೧. ಪಾಂಡುರಾಜನ ಐದು ಜನ ಮಕ್ಕಳು ; (ಮಹಾಭಾರತದ ಕಥಾನಾಯಕರಾದ) ಯುಧಿಷ್ಠಿರ, ಭೀಮ, ಅರ್ಜುನ, ನಕುಲ ಮತ್ತು ಸಹದೇವ : ಪಂಚರಾತ್ರಾಗಮಪೂಜೆಗಳಿಂದ ಕಿಂಚಿತು ಭಕುತಿಯಿಂದಲೆ ಮಾಡಲು ಚಂಚಲಮನವ ಮಾಡಗೊಡಲು ಬೇಡ ಪಂಚಪಾಂಡವಪ್ರಿಯ ವಿರಿಂಚಾಧೀಶನೆ (ಪುರಂದ. ೩-೮೩-೧) ; ಪಂಚಪಾಂಡವರು ಇರ್ದಂತೆ ದ್ರೌಪತಿಯು . . . ಕರ್ಣಂಗೆ ಮನ ಸೋಲಳೇ (ಪ್ರಭುಪು. ೫-೮೩); ಪಂಚಪಾಂಡವರೆಂದರೆ ಮಂಚದ ಕಾಲಿನಂತೆ ಮೂರುಜನ ಅಂದ ಹಾಗೆ (ಗಾದೆ). ೨. ದ್ರೌಪದಿಯ ಮಕ್ಕಳಾದ ಪ್ರತಿವಿಂಧ್ಯ, ಸುತಸೋಮ, ಶ್ರುತಕೀರ್ತಿ, ಶತಾನೀಕ ಮತ್ತು ಶ್ರುತಸೇನ ಎಂಬ ಐವರು ಉಪಪಾಂಡವರು: ಅಶ್ವತ್ಥಾಮಂ . . . ಶ್ರುತಸೋಮಕ ಪ್ರಮುಖರಪ್ಪ ಪಂಚಪಾಂಡವರಂ ಪಾಂಡವರೆ ಗೆತ್ತುಕೊಂದು ತದುತ್ತಮಾಂಗಂಗಳಂ ಕೊಂಡು . . . ಕೊಳ್ ನಿನ್ನ ನಚ್ಚಿನ ಪಾಂಡವರ ತಲೆಗಳನೆಂದು ಮುಂದಿಕ್ಕಿದಾಗಳ್ ದುರ್ಯೋಧನಂ ನೋಡಿ

(ಪಂಪಭಾ. ೧೩-೧೦೬ ಪ); ಪಾಂಡವರ ಶಂಕೆಯಿಂ ಶ್ರುತ ಸೋಮಕ ಪ್ರಭೃತಿಗಳಪ್ಪ ಪಂಚಪಾಂಡವರ ತಲೆಗಳಂ ಕೊಂಡು . . . ದುರ್ಯೋಧನನ ಮುಂದಿಕ್ಕಿದೊಡೆ (ಗದಾಯು. ೯-೩೨ ಪ). [ಪಂಚ$_2$+ಪಾಂಡವ]

**ಪಂಚಪಾಣಿ** (ನಾ). [ಸಂಗೀತ]ನೂರೆಂಟು ತಾಳಗಳಲ್ಲಿ ಒಂದು : ಚಂಚತ್ಪುಟ ಚಾಚತ್ಪುಟ ಧ್ರುವ . . . ಏಕವೆಂಬ ಸಪ್ತ ತಾಳಭೇದಂಗಳಂ ಅವುಗಳೊಳು ಪಂಚಪಾಣಿ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮). [ಸಂ.]

**ಪಂಚಪಾತಕ** (ನಾ). = ಪಂಚಮಹಾಪಾತಕ ೧ : ಹುಸಿದು ಮಾಡುವ ಮಹಾಯಜ್ಞಶತವೆಯ್ದೆ ಪಂಚಪಾತಕ ಸತ್ಕವೆರಸಿದ ನ್ಯಾಯವದು ಲಿಂಗಾರ್ಚನೆ (ಹಚಶಾ.೧೪-೧೦); ದುರಿತಕೋಟಿಗಳೊಡನೆ ಪಂಚಪಾತಕ ಮುಖ್ಯದೊರೆಗಳಟ್ಟಣಿಸಲಗಣಿತರೋಗಸಂಕುಲಂವೆರಸಿ ಮಿಗೆ ರಾಜಕ್ಷಯಾದಿ ನಿಖಿಳವ್ಯಾಧಿನಾಯಕರ್ಬಳಿಸಂದರು (ಜೈಮಿಭಾ.೨೭-೨೪). [ಪಂಚ$_2$ + ಪಾತಕ]

**ಪಂಚಪಾತ್ರೆ$_1$** (ನಾ). ಐದು ಭರಣಿಗಳು ಕೂಡಿರುವ ಪಾತ್ರೆ; ಪಂಚವಾಳ: ಪಂಚಪಾತ್ರೆಯಲ್ಲಿ ಪಲ್ಯಗಳನ್ನು ಹಾಕಿಕೊಂಡರೆ ಬಡಿಸುವುದಕ್ಕೆ ಸುಲಭ (ರೂಢಿ). [ಪಂಚ$_2$ + ಪಾತ್ರೆ]

**ಪಂಚಪಾತ್ರೆ$_2$** (ನಾ). ೧. ಅಗಲವಾದ ಬಾಯುಳ್ಳ ಹಿತ್ತಾಳೆ, ತಾಮ್ರ ಮೊದಲಾದ ಲೋಹಗಳಿಂದ ಮಾಡಿದ ಒಂದು ಬಗೆಯ ದೊಡ್ಡಪಾತ್ರೆ; ಕೊಳಗದಪ್ಪಲೆ : ಓಡಿಗೆ ಜಲ್ಲಡಿ ಪಂಚಪಾತ್ರೆ (ಸಿದ್ಧಕಾ. ೧೩-೪೪). ೨. ಅಗಲವಾದ ಬಾಯುಳ್ಳ (ಕೊಳಗದಪ್ಪಲೆಯಾಕಾರದ) ಸಣ್ಣ ಪಾತ್ರೆ: ಬಸವ . . . ಕ್ಷಣ ಬಿಟ್ಟು ಒಂದು ಪಂಚಪಾತ್ರೆಯಲ್ಲಿ ತುಂಬ ನೀರನ್ನು ತಂದನು (ಚಿಕಂಾ. ೧೬೭). [ಪಂಚ$_3$ + ಪಾತ್ರೆ]

**ಪಂಚಪಾದ** (ನಾ). ನಲವತ್ತೈದು ಮಂತ್ರಸಾಧನಗಳಲ್ಲಿ ಒಂದು: ಮೇಲೆ ಷಡಾಮ್ನಾಯಮೂಲ . . . ಪಂಚಪಾದ ಪಂಚಕೃತ್ಯ ಪಂಜರ ಮಾಲಿಕೆ ಮೂಲಿಕೆ ತಂತ್ರ ಬಲಿ ಆತ್ಮೈಕ್ಯಗಳೆಂಬ ಪಂಚಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (ವಿವೇಕ. ೮೦). [ ? ]

**ಪಂಚಪಾಶ** (ನಾ). ಮಲ, ಮಾಯಾ, ಕರ್ಮ, ತಿರೋಧಾನ ಮತ್ತು ಬಿಂದು ಎಂಬ ಐದು ಬಗೆಯ ಪಾಶಗಳು : "ಮಲ (ಜ್ಞಾನಕ್ರಿಯೆಗಳನ್ನು ಮುಚ್ಚಿ ಹಾಕುವದು), ಮಾಯಾ (ಪ್ರಪಂಚದ ತತ್ತ್ವಗಳಿಗೆಲ್ಲ ಉಪಾದಾನಕಾರಣವಾಗಿ ಸತ್ಯವಾಗಿರುವದು), ಕರ್ಮ (ಧರ್ಮಾಧರ್ಮಾತ್ಮಕವಾದದ್ದು), ತಿರೋಧಾಯಿಕ (ಭೋಗವನ್ನುಂಟುಮಾಡುವದು),ಬಿಂದು (ಮೋಕ್ಷವನ್ನು ಕೊಡುವ ಈಶ್ವರತತ್ತ್ವ— ಮೋಕ್ಷವನ್ನು ಕೊಡುವದು ಈಶ್ವರನಧೀನವೆಂಬುದೂ ಒಂದು ಪಾಶವೆ) ಇವು ಪಂಚಪಾಶಗಳೆಂದು . . . ಗ್ರಹಿಸಬಹುದು (ಅಮೃತ. ೩-೧೫೦ ಅಡಿಟ). [ಪಂಚ$_2$ + ಪಾಶ]

**ಪಂಚಪಾಳಿ,** ಪಂಚವಾಳ (ನಾ). (ದೇವರ ಪೂಜೆ ಮೊದಲಾದ ಸಂದರ್ಭಗಳಲ್ಲಿ) ಅರಿಶಿನ, ಕುಂಕುಮ, ಚಂದ್ರ, ಮಂತ್ರಾಕ್ಷತೆ ಮತ್ತು ಗಂಧಗಳನ್ನು ಇಟ್ಟುಕೊಳ್ಳಲು ಐದು ಬಟ್ಟಲುಗಳನ್ನು ಜೋಡಿಸಿ ಮಾಡಿರುವ ಲೋಹದ ಅಥವಾ ಮರದ ಉಪಕರಣ; ಪಂಚವಣಿಗೆ ಬಟ್ಟಲು : ಆಕೆ ಎಡದ ಕೈಯಲ್ಲೊಂದು ಅರಿಸಿಣ ಕುಂಕುಮ ಅಕ್ಕೀಕಾಳುಗಳಿಂದ ತುಂಬಿದ ಪಂಚಪಾಳೆಯನ್ನು ಹಿಡಿದಿದ್ದಳು (ಗಂಗಾಸಾ. ೬). **ಪಂಚವಾಳ:** ಹೂವು, ಹಣ್ಣು, ಪಂಚವಾಳಗಳಿಂದ ಕೂಡಿದ ತಟ್ಟೆ ಕೈಲಿ ಹಿಡಿದು ಪ್ರವೇಶಿಸಿ (ಮಾಂಗಲ್ಯ. ೫೭); ಕಂಕುಳಲ್ಲಿ ಒಂದು ಮಡಿ ಪೆಟ್ಟಿಗೆಯೊಳಗೆ ಒಂದು ಸಣ್ಣ ಗೌರೀ ಪೆಟ್ಟಿಗೆ, ಅರಿಶಿನ ಕುಂಕುಮದ ಪಂಚವಾಳ(ಇಬದು.೧). [←ಮರಾ.ಪಂಚಪಾಳೀ]

**ಪಂಚಪಿತೃ** (ನಾ). ತಂದೆಯೆಂಬ ಗೌರವಕ್ಕೆ ಯೋಗ್ಯರಾದ ಐವರು ಪಿತೃಗಳು ; ತಂದೆ ಹಾಗೂ ತಂದೆಗೆ ಸಮಾನರಾದ ನಾಲ್ವರು ; ℙ ೧. ಜನಕ, ೨. ಉಪನಯನ ಮಾಡಿದ ಆಚಾರ್ಯ, ೩. ವಿದ್ಯಾದಾನ ಮಾಡಿದ ಗುರು, ೪. ಅನ್ನದಾನ ಮಾಡಿದವನು, ೫. ಭಯದಿಂದ ರಕ್ಷಿಸಿದವನು ಎಂದೂ ೧. ಜನಕ, ೨. ಉಪನಯನ ಮಾಡಿದ ಆಚಾರ್ಯ, ೩. ಕನ್ಯಾದಾನ ಮಾಡಿದವನು, ೪. ಅನ್ನದಾನ ಮಾಡಿದವನು, ೫. ಭಯದಿಂದ ರಕ್ಷಿಸಿದವನು ಎಂದೂ ಎರಡು ವಿಧ : ಪಂಚಪಿತೃ ಜನಕ: ೨ ಉಪನೀತ; ೩ ಕನ್ಯಾದಾತಾ; ೪ ಅನ್ನದಾತ; ೫ ಭಯಂತ್ರಾತಾ" (ನಾನಾಶ. ೨೮೮) [ಪಂಚ$_2$ + ಪಿತೃ]

**ಪಂಚಪೀಠ** (ನಾ). [ವೀಶೈ] ಕಾಶಿ, ಕೇದಾರ, ಉಜ್ಜಯಿನಿ, ಶ್ರೀಶೈಲ, ರಂಭಾಪುರಿ (ಬಾಳೆಹೊನ್ನೂರು) ಎಂದು ಪ್ರಸಿದ್ಧವಾದ ಐದು ವೀರಶೈವ ಪೀಠಗಳು. [ಪಂಚ$_2$ + ಪೀಠ]

**ಪಂಚಪೀರ** (ನಾ). ಸಮುದ್ರಕ್ಕೆ ಅಭಿಮಾನಿಗಳೆಂದು ಮಹಮದೀಯರು ಭಾವಿಸಿರುವ ಐವರು ಮಹಾತ್ಮರು : ನಾವೆಯನ್ನು ನಡೆಯಿಸುವವರು ಒಮ್ಮೊಂದೊಮ್ಮೆ ಸಮುದ್ರದ ಪಂಚಪೀರರ ಹೆಸರನ್ನು ಕೀರ್ತನೆ ಮಾಡಿದರು (ಕಪಾಕುಂ. ೪). ℙ "ಪೀರ್ ಅಂದರೆ ಮುಸಲ್ಮಾನರಲ್ಲಿ ಮಹಾತ್ಮರಿಗೆ ಹೆಸರು. ಮುಸಲ್ಮಾನ ಅಂಬಿಗರು ಸಮುದ್ರಕ್ಕೆ ಐದು ಮಂದಿ ಮಹಾತ್ಮರಿದ್ದಾರೆಂದು ನಂಬಿದ್ದು ಕಷ್ಟ ಬಂದಾಗ ಅವರ ಹೆಸರನ್ನು ಸ್ಮರಿಸಿಕೊಳ್ಳುತ್ತಾರೆ" (ಕಪಾಕುಂ. ೪ ಅಡಿಟ). [ಪಂಚ$_2$ + ಪೀರ (ℙ←ಹಿಂ.ಪೀರ್)]

**ಪಂಚಪುಟ್ಟಿ** (ನಾ). ( ? ) : ಅಷ್ಟಾದಶಪಟ್ಟಸಾಧಿಷ್ಠಿತ ಪಂಚಪುಟ್ಟಿಗಾದಿ ಬಾವನ್ನವೀರಂ . . . ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಸಾಮನ್ತಂ ಮಾರ್ತಣ್ಡಯ್ಯಂ (ಸೌಇಇ. XI–i, ೭೮-೮೨; 1045). [?]

**ಪಂಚಪುರುಷಾರ್ಥ** (ನಾ). ಧರ್ಮ, ಅರ್ಥ, ಕಾಮ, ಮೋಕ್ಷ ಹಾಗೂ ಪರಾಭಕ್ತಿ ಎಂಬ ಐದು ಬಗೆಯ ಪುರುಷಾರ್ಥಗಳು : ಚರಿತದಿಂ ಧರ್ಮಾರ್ಥ ಕಾಮ ಮೋಕ್ಷಂಗಳಿಂ ಪಿರಿದೆನಿಪ ಪರಮಸುಖಲಕ್ಷಣ ಪರಾಭಕ್ತಿ ದೊರೆವಡೆದ ಪಂಚಪುರುಷಾರ್ಥವೆಂದೊರೆದವನ ಚರಣಾಂಬುಜಕ್ಕೆ ಶರಣು (ಲಶಚಿಂ. ೫೪-೪೮). [ಪಂಚ$_2$+ಪುರುಷಾರ್ಥ]

**ಪಂಚಪ್ರಪಂಚ** (ನಾ). [ಸಂಗೀತ] (?): ಪಂಚಪ್ರಪಂಚಮದಿಂಬಾಗಿರೆ ತೇನತೇನಮೊದವಲ್ತಾನಂ ಲಯಂ ಮುಂಚೆ ಸಂಭ್ರಮದಿಂ ಬಾಜಿಸಿದಳ್ ಬಜಾವಣೆಯಿನಂದಂಬೆತ್ತ ವಲ್ಲೀಣೆಯಂ (ರಾಜಶೇ. ೧೦-೩೨). [ಪಂಚ ?+ಪ್ರಪಂಚ]

**ಪಂಚಪ್ರಮೆ** (ನಾ). ೧. ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ಚರ್ಮ ಎಂಬ ಐದು ಪ್ರತ್ಯಕ್ಷಜನಕವಾದ ಪ್ರಮಾಣಗಳು. ೨. ಪಿಪೀಲಿಕಾಜ್ಞಾನ, ವಿಹಂಗಮಜ್ಞಾನ, ಮರ್ಕಟಜ್ಞಾನ, ಗಜಜ್ಞಾನ, ಪೂರ್ಣಜ್ಞಾನ ಎಂಬ ಐದು ಬಗೆಯ ಪ್ರಮಾಜ್ಞಾನಗಳು : ಪಂಚಪ್ರಮಾಮಂಜರೀ . . . ಪಂಚಾಕ್ಷರೀಪಾತುವಃ (ರಾಜಶೇ. ೪-೧೦೩). [ಪಂಚ$_2$+ಪ್ರಮೆ]

**ಪಂಚಪ್ರಾಣ** (ನಾ). ೧. ಶರೀರದಲ್ಲಿರುವ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನವೆಂಬ ಐದು ವಾಯುಗಳು : ಸಮುದಾಯದಿಂದ ಪ್ರಾಣಾಪಾನ ವ್ಯಾನೋದಾನ ಸಮಾನಗಳೆಂಬ ಪಂಚಪ್ರಾಣಗಳು ಹುಟ್ಟುವುವು(ಹಿಂದಸಾ.೧೯೬). ೨. (ಆಲಂ)ಒಬ್ಬ ವ್ಯಕ್ತಿಗೆ ತನ್ನ ಪ್ರಾಣದ ಮೇಲೆ ಎಷ್ಟು ಇಷ್ಟವೋ ಅಷ್ಟೇ ಇಷ್ಟವುಳ್ಳ ವಸ್ತು, ವ್ಯಕ್ತಿ ಇತ್ಯಾದಿ ; ಸರ್ವಸ್ವವಾಗಿರುವುದು : ಅವನಿಗೆ ಜನರೆಂದರೆ ಪಂಚಪ್ರಾಣ (ಸ್ಮೃತಿಚಿ. ೧೭) ; ಹೆಣ್ಣುಮಕ್ಕಳಿಗಂತೂ ಹೂ

ಗಳೆಂದರೆ ಪಂಚಪ್ರಾಣ (ಕಪವು. ೬-೧೦೮) ; ಮಗಳಿಗೆ ಕಥೆ ಎಂದರೆ ಪಂಚ ಪ್ರಾಣ ಎನ್ನುವುದು ತಾಯಿಗೆ ಗೊತ್ತು (ಕಥಕ. ೪೭).[ಪಂಚ$_2$+ಪ್ರಾಣ]

**ಪಂಚಫಕೀರ** (ನಾ). ಅತಿಯಾದ ತುಂಟ: "ಪಂಚಫಕೀರ=ಉಡಾಳ, ತುಂಟ" (ಜಾನಕೋ. ೧೩). [ಪಂಚ$_3$+ ಫಕೀರ(<ಪಕೀರ)]

**ಪಂಚಬಲ** (ನಾ). [ಬೌದ್ಧ] ಶ್ರದ್ಧಾಬಲ, ವೀರ್ಯಬಲ, ಸ್ಮೃತಿ ಬಲ, ಸಮಾಧಿಬಲ ಮತ್ತು ಪ್ರಜ್ಞಾಬಲ ಎಂಬ ಐದು ಬಗೆಯ ಬಲಗಳು : ಇವು ನಾಲ್ಕು ಸಮ್ಯಕ್ಪ್ರಧಾನಗಳು, ಇವು ನಾಲ್ಕು ಋದ್ಧಿ ಪಾದಗಳು, ಇವು ಪಂಚೇಂದ್ರಿಯಗಳು, ಇವು ಪಂಚಬಲಗಳು . . . ಎಂದು ಕುಶಲವಾದ ಧರ್ಮಗಳನ್ನೂ ಅಕುಶಲವಾದವುಗಳನ್ನೂ . . . ಮೇಲಿಂದ ಮೇಲೆ ಹೇಳಿಕೊಳ್ಳುವನು (ಬುದ್ಧಪ. ಮಿಲಿಂದ. ೪೯). [ಪಂಚ$_2$+ಬಲ$_3$]

**ಪಂಚಬಲಿ** (ನಾ). ಕಾಳಿಕಾದೇವಿಗೆ ಬಲಿಯಾಗಿ ಕೊಡುವ ಕೋಣ, ಕುರಿ, ಆಡು, ಕಬ್ಬು ಮತ್ತು ಕುಂಬಳಕಾಯಿ ಎಂಬುವು : **ಕಾಳೀಪೂಜೆಯ** ದಿನ ಪಂಚಬಲಿ ಕೊಡುವ ಪದ್ಧತಿಯನ್ನು ವಂಶಲೋಚ ನರು ಇನ್ನೂ ಬಿಟ್ಟಿಲ್ಲ. ಒಂದೊಂದು ಕೋಣ, ಕುರಿ, ಆಡು, ಕಬ್ಬು, ಕುಂಬಳಕಾಯಿ ಈ ಐದನ್ನು ಬಲಿಕೊಟ್ಟು ಪೂಜೆ ಸಾಂಗವಾಗುತ್ತಿದೆ (ಎರಸ. ೧). [ಪಂಚ$_2$+ಬಲಿ$_3$]

**ಪಂಚಬಾಣ** (ನಾ). ೧. ಐದು ಬಾಣಗಳು : ಪಂಚಬಾಣಂಗಳು ಪಂಚೇಂದ್ರಿಯಂಗಳು ಕರ್ಣ ನಾಸಿಕ ದೃಗು ಜಿಹ್ವೆ ತ್ವಚಂಗಳು (ಮದತಿ. ೧-೬೭) ; ಅಂಗ ಮನ ಪ್ರಾಣ ನೇತ್ರ ಚಿತ್ತಂಗಳೊಳು ಪಂಚಮುಖವೆಂಬ ಪಂಚಬಾಣಂಗಳು ನೆಟ್ಟಿವಯ್ಯಾ (ಘನವ. ೨-೧). ೨. ತಾವರೆ, ಅಶೋಕ, ಮಾವು, ಮಲ್ಲಿಗೆ ಮತ್ತು ಕನ್ನೈದಿಲೆ ಎಂಬ ಮನ್ಮಥನ ಐದು ಬಾಣಗಳು: ವಿಷಮಾಸ್ತ್ರಂ ಪಂಚಬಾಣಕ್ಕೆ ಮಾಣದೆ ಕಣ್ಗಾದಿರಿಸಿಟ್ಟ ಮಲ್ಲಿಗೆ ಮನೋಜಂ ಸ್ವಚ್ಛ ವಾಃಕೇಳಿಸಮ್ಮದಕೆಂದೋವಿದ ಪದ್ಮ ಪಂಡಮೆಸೆಗುಂ ತನ್ನಂದನೋಪಾಂತದೊಳ್ (ಚಂದ್ರಪು. ೧-೧೦೪) ; ಮತ್ತಮಲ್ಲಿ . . . ಪಂಚಬಾಣಕ್ಕೆ ತಕ್ಕ ಕುಸುಮಶರವಂ ಬೆಸಲೆಯಾಗದ ಮಲ್ಲೀವಲ್ಲರಿಗಳಿಲ್ಲ (ಪುಷ್ಪಪು. ೯-೨೧ ಪ). ೩. ಸಮ್ಮೋಹನ, ಸಂತಾಪನ, ಸಂದೀಪನ, ಸಂಶೋಷಣ ಮತ್ತು ದ್ರಾವಣ ಎಂಬ ಮನ್ಮಥನ ಐದು ಬಾಣಗಳು : ಘನಸಮ್ಮೋಹನ ಸಂತಾಪನ ಸಂದೀಪನವಶೀವ ಸಂಶೋಷಣ ಸಂಜನಿತ ದ್ರಾವಣಮೆನೆ ಕಾಮನ ಸಮ್ಯಙ್ಮಂತ್ರ ಪಂಚ ಬಾಣಾಖ್ಯಂಗಳ್ (ಮನ್ಮವಿ. ೩-೭). ೪. ಐದು ಬಾಣಗಳನ್ನು ಹೊಂದಿರುವವನು ; ಮನ್ಮಥ ; ಕಾಮ : ಪಂಚಬಾಣನೆ ಪರಮಾತ್ಮನು (ಮದತಿ. ೧-೬೭) ; ಮನಮಂ ಕಟ್ಟಿ ಗುಣಂಗಳಿಂ ತುಟುದು ಪಂಚಾಚಾರದಿಂ ಪಂಚಬಾಣನ ಬಾಹಾಬಲಮಂ . . . ದಯೆಗೆಯ್ವರಕ್ಕೆ . . . ಮಹಾಮಹಿಮೆವೆತ್ತಾಚಾರ್ಯರಾಚಾರವಂ (ಪಂರಾಮಾ. ೧-೩) ; ಪಂಚಬಾಣನ ಕುಮಾರಕನಾದ ಕಾರಣ ಪಂಚಸಾಯಕವ ತೋಱುಸಿದೆ (ಮೋಹತ. ೩೪-೧೫) ; ಪಂಚಬಾಣನೆ ನೀನು ? ರತಿರಮಣನಲ್ಲದಿರೆ ನನ್ನಿದೆ ಆದೇಕಿಂತು . . . ನಡುಗುತಿದೆ ? (ಚಿತ್ರಾಂಗ. ೨೬-೬೨೨).

[ಪಂಚ$_2$+ಬಾಣ]

**ಪಂಚಬಾಣಾಹವ** (ನಾ). ರತಿಕ್ರೀಡೆ ; ಸುರತ ; ಸಂಭೋಗ : ಪಂಚಾಂಗುಲೀಹತಂ . . . ಪಂಚಬಾಣಾಹವ[ಪಾಠಾಂ. ಗಮ]ದೊಳಂ ಚೆಚ್ಚರಂ ಸಲ್ವುವಂಚೆನಡೆಯಳೆ ಚದುರರಿವನಱುವುದು (ಜನವ. ೮-೫೧).

[ಪಂಚಬಾಣ+ಆಹವ]

**ಪಂಚಬಾಬು** (ನಾ). ರಾಜ್ಯಕ್ಕೆ ಆದಾಯ ಕೊಡುವ ಕಂದಾಯ ಇಲಾಖೆಯ ಸಾರಾಯಿ, ಮಾದಕಪಾನೀಯ, ಅಫೀಮು, ಗಾಂಜಾ ಮತ್ತು ಸುಂಕ ಎಂಬ ಐದು ಬಾಬುಗಳು : (ಕ).

[ಪಂಚ$_2$+ಬಾಬು$_1$]

**ಪಂಚಬಾಬುಕಚೇರಿ** (ನಾ). ಐದು ಬಾಬುಗಳಿಂದ ಬರುವ ಹಣವನ್ನು ವಸೂಲುಮಾಡುವ ಕಾರ್ಯಾಲಯ : (ಕ).

[ಪಂಚಬಾಬು + ಕಚೇರಿ]

**ಪಂಚಬಿಲ್ವ** (ನಾ). ಐದು ಬಗೆಯ(ಮರದ) ಪತ್ರೆಗಳು ; ೧ ಬೆಳಲು, ಕರಮರ್ದ, ಶಂಖಿನಿ, ಸಿಂಧುವಾರ ಮತ್ತು ಗಿರಿಚೂತ ಅಥವಾ ತುಳಸಿ, ಬಿಲ್ವ, ನಿರ್ಗುಂಡಿ ನಿಂಬೆ, ಮತ್ತು ನೆಲ್ಲಿ ಎಂಬ ಐದು ಪತ್ರೆಗಳು : ಬೆಳಲು ಕರಮರ್ದ ಶಂಖಿನಿ ಸಿಂಧುವಾರ ಗಿರಿಚೂತಂಗಳೂ ನುಡಿಸಿಕೊಂಬವು ಪಂಚಬಿಲ್ವವೆಂದಾರು ಶಿವನಡಿಯಂ ನಿವಱಿಂ ಭಜಿಸೆ ಬಿಲ್ಲಪತ್ರೆಯ ಫಲವ ಕೊಡುವವೈ (ವೀಶೈಪು. ೭-೧೦-೩೭).

[ಪಂಚ$_2$+ಬಿಲ್ವ]

**ಪಂಚಬ್ರಹ್ಮ** (ನಾ). ೧. [ವೀಶೈ] ಸದಾಶಿವ, ಶಿವ, ರುದ್ರ, ವಿಷ್ಣು, ಮತ್ತು ಬ್ರಹ್ಮ ಎಂಬ ಪರಮಾತ್ಮನ ಐದು ಸ್ವರೂಪಗಳು : ಪಂಚಭೂತಂಗಳಲಿ ಪಂಚಬ್ರಹ್ಮನನಿರಿಸಿದರಾಗಿ ಭೂತಶುದ್ಧಿಯಾಯಿತ್ತೆನಗೆ (ಚನ್ನವ. ೨೪-೫೫) ; ಮುಖಚತುಷ್ಟಯ ಭುಜಚತುಷ್ಟಯದ ವಾರಿಜಾಸನ ವಿಷ್ಣು ರುದ್ರಾಧಾರನೀಶ್ವರ ಪಂಚವಕ್ತ್ರಾಕಾರದಲಿ ಶಿವ ಮೆಱೆದ ಪಂಚಬ್ರಹ್ಮರೂಪದಲಿ (ಕುಪ್ವಾಅ. ೬-೭೪). ೨. ಪಂಚಬ್ರಹ್ಮರೂಪನಾದ ಪರಮಾತ್ಮ ; ಪರಶಿವ : ಪಂಚಬ್ರಹ್ಮನ ಕೆಡಿಸಿತ್ತು ಪ್ರಣವಮಂತ್ರವ ನೀಡಾಡಿತ್ತಲ್ಲಾ (ಬಸವ. ೭೪೮) ; ಪಂಚಬ್ರಹ್ಮಂಗಮೈದಲ್ಕರಿದೆನಿಪ ಭವತ್ಪಾದಮಂ . . . ಬಲ್ಲವೊಲುಱೆ ಪೊಗಟ್ದಿಂ ತಾಯೆ ರಕ್ಷಿಪ್ಪುದೆನ್ನಂ (ಉದ್ಭಟ. ೩-೪೯) ; ಪಂಚೇಂದ್ರಿಯಂಗಳಲ್ಲಿ ಪಂಚಲಿಂಗಂಗಳಂ ಪ್ರತಿಷ್ಠಿಸಿ ಪಂಚಬ್ರಹ್ಮದ ಮೂಲವನಱಿದು (ಅಖಂಡೇ. ೮೭-೯೦). ೩. ಪರಮಾತ್ಮನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಐದು ಮುಖಗಳು : ಇದು ಗುಣತ್ರಯವನತಿಗಳೆದಿರ್ಪ ಪರಶಿವನ ಮೊದಲಲಿಹ ಓಂಕಾರದಕ್ಷರೇಶಾನಾದಿ ವದನವಿಂತಿದುವೆ ಪಂಚಬ್ರಹ್ಮ ಸೂಕ್ಷ್ಮದಕ್ಷರ (ಲಶಿಚಿಂ. ೪೦-೪). ೪. ಬಿಂದುವಿನಿಂದ ಹುಟ್ಟುವ ಮೂರ್ತಿಬ್ರಹ್ಮ, ಪಿಂಡಬ್ರಹ್ಮ, ವಿಜ್ಞಾನಬ್ರಹ್ಮ, ಕಲಾಬ್ರಹ್ಮ ಮತ್ತು ಆನಂದಬ್ರಹ್ಮಗಳೆಂಬ ಸದಾಶಿವತತ್ತ್ವ : ಎಸೆವ ಲಕ್ಷಣವೈದಯಂಸಗೊಂಡು ಬಿಂದು ರಾಜಿಸಿತವಱೊಳುದಯ ಪಂಚಬ್ರಹ್ಮವು (ಮನೋವಿ. ೨-೩೯). ೫. ಒಂದು ಉಪನಿಷತ್ತಿನ ಹೆಸರು: ಶ್ರೀರುದ್ರ . . . ಪಂಚಬ್ರಹ್ಮ ಮುಂಡಕವೆಂಬಿವು ಮೊದಲಾದವೇ ಶತೋಪನಿಷತ್ತುಗಳು (ವಿವೇಕ. ೫). [ಪಂಚ$_2$+ಬ್ರಹ್ಮ]

**ಪಂಚಭಕ್ಷ** (ನಾ). = ಪಂಚಭಕ್ಷ್ಯ ೨ : ಸನ್ನುತೋಜ್ವಳ ಮಂಗಳಾರತಿಯಂ ನಿವಾಳಿಸಿ ಪಂಚಭಕ್ಷ ರಸಾನ್ನಯುತ ನೈವೇದ್ಯಮಂ ಸೌರಾಷ್ಟ್ರಪತಿಗಿತ್ತು (ಬಸವು. ೪೩-೨೦). [ಪಂಚ$_2$+ಭಕ್ಷ]

**ಪಂಚಭಕ್ಷ್ಯ** (ನಾ). ೧. ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ ಮತ್ತು ಪಾನೀಯವೆಂಬ ಐದು ಬಗೆಯ ಆಹಾರ. ೨. ಅತಿರಸ, ಹೋಳಿಗೆ, ಲಡ್ಡು, ಜಿಲೇಬಿ ಮತ್ತು ಅಪೂಪ ಎಂಬ ಐದು ಬಗೆಯ ಭಕ್ಷ್ಯಗಳು : ಪಂಚಭಕ್ಷ್ಯವನು ಪರಮಾನ್ನಾಯ ರಸರಸಾಯನಂ ಚದುರಿನಿಂದೆ ಪರಿಪಾಕಮಂಗೈದು (ನಮೋ. ೯-೫); ಹತ್ತಿಪ್ಪತ್ತು ಜನರಿಗಾಗುವಷ್ಟು ಪಂಚಭಕ್ಷ್ಯಗಳು ಬಡಿಸಿ ಬಂದಿದ್ದವು (ಸ್ಮೃತಿಚಿ. ೮೩).

[ಪಂಚ$_2$+ಭಕ್ಷ್ಯ]

**ಪಂಚಭಾವ** (ನಾ). [ಜೈನ] ಔಪಶಮಿಕ, ಕ್ಷಾಯಿಕ, ಕ್ಷಾಯೋಪಶಮಿಕ, ಔದಯಿಕ ಮತ್ತು ಪಾರಿಣಾಮಿಕ ಎಂಬ ಐದು ಬಗೆಯ ಜೀವಪರಿಣಾಮ: ಪಂಚಭಾವದ ಭೇದಮೆಂತೆನೆ ಔಪಶಮಿಕ ಕ್ಷಾಯಿಕ ಕ್ಷಾಯೋಪಶಮಿಕ ಔದಯಿಕ ಪಾರಿಣಾಮಿಕಮೆಂದಯ್ದು ಭೇದಂ (ಪಸಾರ. ೧೧೪). [ಪಂಚ$_2$+ಭಾವ$_2$]

**ಪಂಚಭುಜ**(ನಾ). [ರೇಖಾಗ] ಐದು ಕೋನಗಳನ್ನು ಉಳ್ಳುದು: 'ಪಂಚಭುಜಾಕೃತಿ' ಪರಾ. [ಪಂಚ$_2$+ಭುಜ]

**ಪಂಚಭುಜಾಕೃತಿ** (ನಾ). [ರೇಖಾಗ] ಐದು ಕೋನವುಳ್ಳ ಒಂದು ಆಕೃತಿ: ಸಹದೇವರಾಶಿಯುಲ್ಲಿ ಸ್ವಾತಿಯನ್ನುಳಿದು ಇತರ ಐದು ನಕ್ಷತ್ರಗಳು ಒಂದು ಪಂಚಭುಜಾಕೃತಿಯಲ್ಲಿವೆ (ನಕ್ಷತ್ರ. ೬೯). [ಪಂಚಭುಜ+ಆಕೃತಿ]

**ಪಂಚಭುಜಿ** (ನಾ). = ಪಂಚಭುಜಾಕೃತಿ: ನೌಕಾಪೃಷ್ಠದ ಪ್ರಧಾನ ನಕ್ಷತ್ರಗಳು ನೌಕಾಪಟ ತೃತೀಯದೊಂದಿಗೆ ಸೇರಿ ಒಂದು ಪಂಚಭುಜಿಯಾಗುತ್ತದೆ, ನೌಕಾಪೃಷ್ಠವು ಪಂಚಭುಜಿಯ ಮೇಲೆ (ಉತ್ತರಕ್ಕೆ) ಏಕಶೃಂಗಿಯವರೆಗೂ ಹಬ್ಬಿದೆ (ನಕ್ಷತ್ರ. ೭೫). [<ಪಂಚಭುಜ]

**ಪಂಚಭೂತ** (ನಾ). ಪ್ರಪಂಚದಲ್ಲಿ ಪದಾರ್ಥಗಳ ಮೂಲವಸ್ತುಗಳೆನಿಸಿದ ಪೃಥ್ವಿ (ಭೂಮಿ), ಅಪ್ಪು (ನೀರು), ತೇಜಸ್ಸು (ಪ್ರಕಾಶ), ವಾಯು ಮತ್ತು ಆಕಾಶಗಳೆಂಬ ಐದು ವಸ್ತುಗಳು: ಪರಮಾನಂದಪರಂಪರೆ ದೊರೆಕೊಂಡಂತಿತ್ತು ಪಂಚಭೂತಂಗಳೊಳಂ (ಆದಿಪು. ೭-೭೭); ಪಂಚಭೂತಮಯಮಾಗಿಯುಮಾ ತನುವಿಂದುಕಾಂತಿಯಂತಿರೆ ಪೊಳೆಯುತ್ತಮಿರ್ದಪುದಿದೇಂ (ಕಾದಂಪೂ. ೬೫೪); ಸುರಕುಲಂ ಮುನಿಕುಲಂ ಪಂಚಭೂತಂಗಳಿಂ ಖರಕರಂ ಹಿಮಕರಂ ಯಜಮಾನವೆರಸಿ ಶಂಬರಹರನನುರುಪಿದೆಡೆಯಂ ತೋಱು (ಹಚಕಾ. ೫-೭೭); ಪಂಚಭೂತಂಗಳೊಳಸಂಚಲವನಱಿಯದಲೆ ಹಂಚನೆ ಹಿಡಿದು ತಿರಿದುಂಬ ಜ್ಞಾನಿತಾ ಹಂಚುಹಱಿಯುಹನು (ಸರ್ವಜ್ಞ. ೩೪೪). [ಪಂಚ$_2$+ಭೂತ]

**ಪಂಚಭೂತಾತ್ಮಕ** (ನಾ). ಪಂಚಭೂತ ಸ್ವರೂಪವಾದುದು; ಪಂಚಭೂತರೂಪವಾಗಿರುವುದು: ಆತ್ಮವದು ತಾ ಪಂಚಭೂತಾತ್ಮಕವದೆಂದೆನಿಸಿ . . . ಶಿವನಲ್ಲ ಹೋಗಲಿ ಸಲ್ಲದೀ ಮಾತು (ಬಸವು. ೫೧-೩೦); ವಿಶ್ವವ್ಯಾಪಕವಾದ ನಿಷ್ಕಲಲಿಂಗವು . . . ವಿಶ್ವದ ಎಲ್ಲಾ ಕಡೆಗಳಲ್ಲೂ ಪಂಚಭೂತಾತ್ಮಕವಾಗಿ ನೆಲಸಿ . . . ಜೀವರಿಗೆ ಅನುಗ್ರಹಮಾಡುತ್ತಿರುವುವು (ಶಕ್ತಿವಿ. ೨೭). [ಸಂ.]

**ಪಂಚಭೇದ** (ನಾ). [ದ್ವೈತ] ಪ್ರಪಂಚದಲ್ಲಿರುವ ಐದು ಬಗೆಯ ಭೇದ: ಪಂಚಭೇದಾತ್ಮಕ ಪ್ರಪಂಚಕೆ ಎಂಬಲ್ಲಿ ಪಂಚಭೇದಗಳ ವಿವರ:— ಜೀವನಿಗೂ ಈಶ್ವರನಿಗೂ ಭೇದ, ಜೀವನಿಗೂ ಜೀವನಿಗೂ ಪರಸ್ಪರ ಭೇದ, ಜೀವನಿಗೂ ಜಡಕ್ಕೂ ಭೇದ, ಜಡಕ್ಕೂ ಈಶ್ವರನಿಗೂ ಭೇದ, ಜಡಜಡಕ್ಕೂ ಪರಸ್ಪರ ಭೇದ ಹೀಗೆ ಐದು ಭೇದಗಳು (ಹಸಾರ. ೧-೯ ತಾತ್ಪರ್ಯ); ಮಿಕ್ಕ ದಾಸರ ಕೃತಿಗಳಲ್ಲಿ ರಾಶಿರಾಶಿಯಾಗಿ ಕಂಡುಬರುವ ಪಂಚಭೇದ . . . ಮುಂತಾದ ಮಾಧ್ವತತ್ತ್ವಜ್ಞಾನದ ಪ್ರಮೇಯಗಳನ್ನು ಕನಕದಾಸರು ಚರ್ಚಿಸುವ ಇಲ್ಲವೆ ಪ್ರಸ್ತಾಪಿಸುವ ಗೊಡವೆಗೆ ಹೋದಂತಿಲ್ಲ (ಕರ್ನಾಜ. ೬೭). [ಪಂಚ$_2$+ಭೇದ]

**ಪಂಚಮ** (ಗು). ೧. ಐದನೆಯ: ಷೋಡಶತೀರ್ಥನಾಥ ಮದನತ್ವದ ಪಂಚಮಚಕ್ರವರ್ತಿ . . . ಶಾಂತಿನಾಥಜಿನಚಂದ್ರಮುನೀಂದ್ರನದೇಂ ಕೃತಾರ್ಥನೋ (ಶಾಂತಿಪು. ೧೨-೫೪); ಕಮಲಗರ್ಭಂ ಗರ್ವಿಸಿದಡಂ ಪ್ರಮಥನಾಥನು ಮುನ್ನವರ ಪಂಚಮಶಿರವನಾಗ್ರಹಿಸುತಾಗಳೆ ಚಿವುಟಿ ಬಿಸುಟನಲಾ (ಬಸವು. ೫೪-೪೪). ೨. ಮಂಗಳವಾದ: 'ಪಂಚಮ ಮಾಂಗಲ್ಯ' ಪರಾ. (ನಾ). ೩. ಐದನ್ನು ಪೂರ್ಣಗೊಳಿಸುವುದು; ಐದರ ಪೂರಣ; ಐದನೆಯದು. ೪. ಶೂದ್ರ: "ತುಟಿಬಲ್ಸಂದಂ =ವೀರಂ; ಪಂಚಮಂ" (ಶಮದ. ಪರಿ. ೧); "ನೆಱೆ ಪಂಚಮಂ ಪದ್ಮನಕ್ಕು" (ಮಂಗರಾ. ೧೧೦-೬). ೫. ಸುಂದರವಾದುದು; ಕಾಂತಿಯುತವಾದುದು; ಮನೋಹರವಾದುದು. ೬. ನಿಪುಣ; ಜಾಣ; ಕುಶಲ. ೭. ಸಂಭೋಗ; ಮೈಥುನ. ೮. ಅಂತ್ಯಜ; ಚಂಡಾಲ: ಒಕ್ಕಲಿಗನಕ್ಕೆ ಪಂಚಮನಕ್ಕೆಮ ಸದ್ವೃಷ್ಟಿಯಾಗೆ ಕಾಲಂ ಕರ್ಚಲ್ಕೆಕ್ಕುದು ಜೈನಂಗೆ (ಸಸುಪ. ೫-೧೪೧); ಇಲ್ಲಿ ಈ ಭೂಮಿಯಲಿ ಅಧಿಕಾರ ಬಲ ದರ್ಪ ಐಶ್ವರ್ಯವಿನಿತಿರದ ಪಂಚಮನ ಗುಡಿಸಿಲಲಿ ಬೆಂಕಿಯಿಯು ನಿಧೇಯುತೆಯೊಳುರಿವಂತೆ (ಕೋಗಿಲೆ. ೧೨-೨೨). ೯. [ವ್ಯಾಕ] ವರ್ಗದ ಐದನೆಯ ಅಕ್ಷರ; ಅನುನಾಸಿಕ. ೧೦. [ಸಂಗೀತ] ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದ ಎಂಬ ಏಳು ಸ್ವರಗಳಲ್ಲಿ ಒಂದು: ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಂಗಳೆಂಬ ಸಪ್ತಸ್ವರಮುಮಂ . . . ಸೌಧರ್ಮಕಲ್ಪೇಶ್ವರಂ ಪ್ರತ್ಯಕ್ಷಂ ಮಾಡಿದಾಗಳ್ (ಆದಿಪು. ೫-೩೦ ವ); ಷಡ್ಜಮಾ ಋಷಭಮಾ ಗಾಂಧಾರಮಾ ಮಧ್ಯಮಂ ಮಿಱುಪ್ಪ ಪಂಚಮಂ ಧೈವತಂ ಸುನಿಷಾದಮೋರಂತೆ ಸಪ್ತಸ್ವರಂಗಳಕ್ಕು (ಮಂಗರಾ. ೨೩-೩); ಷಡ್ಜ, ಮಧ್ಯಮ, ಪಂಚಮಗಳಿಗೆ ನಾಲ್ಕು ನಾಲ್ಕು ಶ್ರುತಿಗಳ ಅಂತರವಿರುವ 'ಖರಹರಪ್ರಿಯ' ರಾಗದಿಂದ ಅಭ್ಯಾಸವನ್ನಾರಂಭಿಸುವುದು ಸ್ವಲ್ಪ ಕಷ್ಟ (ಹೇಮಕೂ. ೧೦೪). ೧೧. ಒಂದು ರಾಗದ ಹೆಸರು: ಆಕ್ಷೈ ಸೈಂಧವಿ, ರಾಗದ ಪಂಚಮ ಷಾಡವ ದೇವಗುಪ್ತ ಗಾಂಧಾರ ಗುಪ್ತ ಕೌಶಿಕಗುಪ್ತ ಉಪಾಂಗವೆಂಬೆಂಟು ಷಟ್ಸ್ವರ ಜಾತಿಯಿಂದಾದ ರಾಗಂಗಳುಂ (ವಿವೇಕ. ೧೪೭).

ಪಂಚಮದ ಶನಿ = ಜನ್ಮರಾಶಿಯಿಂದ ಐದನೆಯ ಸ್ಥಾನದಲ್ಲಿರುವ ಶನಿಗ್ರಹ; ➡ ಇವನು ಕೆಟ್ಟಫಲಗಳನ್ನುಂಟು ಮಾಡುತ್ತಾನೆ ಎಂಬ ನಂಬಿಕೆಯಿದೆ: ಪಂಚಮದ ಶನಿ ಹಂಚಿನಲ್ಲಿ ಉಣಿಸ್ಯಾನು (ಗಾದೆ). [ಸಂ.]

**ಪಂಚಮಂಡಲ** (ನಾ). (?): ತನ್ನ ನಾಲ್ಕುದಿಕ್ಕಿನೊಳಂ ನಾಲ್ಕು(ವಿ)ದಿಕ್ಕುಗಳೊಳಂ ಒಪ್ಪುತಿಪ್ಪ ಹಂಕಾರಂ . . . ಪಂಚಮಂಡಲ ಲಕ್ಷಣಂ (ಪ್ರತಿಷ್ಠಾ. ೧೦-೫೫); ಪಂಚಮಂಡಲತ್ರೈಗುಣಂಗಳ ಹಂಚಿಕೂಡಲಿಕಪ್ಪದಳಗಳ ಸಂಚು ನೋಡಿದು ಧ್ಯಾನರೂಪಕೆ ಕಾರಣವಿದಹುದು (ಗಗತಾ. ೨೦-೬೭). [ಪಂಚ? + ಮಂಡಲ]

**ಪಂಚಮಂಬೊರೆ** (ಕ್ರಿ). ಪಂಚಮಸ್ವರವನ್ನು ಹೊಂದು; ಪಂಚಮಸ್ವರದಿಂದ ಕೂಡಿರು: ಪುರವನಿತಾಜನಂ ರುಚಿರಹರ್ಮ್ಯಗೃಹಾಗ್ರತಳಂಗಳಲ್ಲಿಗಾವರಿಸುವ ಪಂಚಮಂಬೊರೆದ ನುಣ್ಚರಮಂ ನಸು ಗೇಳ್ದು ಸೋಲ್ತು (ಚಂದ್ರಪ್ರ. ೧-೧೨೪). [ಪಂಚಮ + ಪೊರೆ$_2$]

**ಪಂಚಮಕಾರ** (ನಾ). ಮತ್ಸ್ಯ, ಮಾಂಸ, ಮದ್ಯ, ಮುದ್ರೆ, ಮತ್ತು ಮೈಥುನ ಎಂಬ ಐದು ಬಗೆಯ ತಾಂತ್ರಿಕ ಆಚರಣೆಗಳು: ಪಂಚ ಮಕಾರಗಳು (ಮತ್ಸ್ಯ, ಮಾಂಸ, ಮದ್ಯ, ಮುದ್ರೆ, ಮೈಥುನ) ಈ ತಾಂತ್ರಿಕ ಆಚರಣೆಗಳಲ್ಲಿ ಸೇರಿಹೋಗಿ ಅನೇಕ ಬೀಭತ್ಸ ಕರ್ಮಗಳು ಕಾಣಿಸಿಕೊಂಡವು (ಕಶಾಅ. ೧೨೦); ಪಂಚ ಮಕಾರ (ತಾಂತ್ರಿಕ)— ಮದ್ಯ; ೨. ಮಾಂಸ; ೩. ಮತ್ಸ್ಯ; ೪. ಮುದ್ರಾ; ೫. ಮೈಥುನ (ನಾನಾಶ. ೨೮೪). [ಪಂಚ$_2$ + ಮಕಾರ]

**ಪಂಚಮಕಾಲ** (ನಾ). [ಜೈನ] ಅವಸರ್ಪಿಣಿಯಲ್ಲಿ ಬರುವ ಸುಷಮಸುಷಮ, ಸುಷಮ, ಸುಷಮದುಷ್ಷಮ, ದುಷ್ಷಮ ಸುಷಮ, ದುಷ್ಷಮ, ಅತಿದುಷ್ಷಮ ಎಂಬ ಕಾಲಭೇದಗಳಲ್ಲಿ ಐದನೆಯದು: ಧರಣೀಪಾಲಕಮುನಿಪರ್ ಪಂಚಮಕಾಲದೊಳಣಮಾಗರಲ್ತೆ ಋದ್ಧಿಪ್ರಾಪ್ತರ್ (ಆದಿಪು. ೧೫-೪೧). [ಪಂಚಮ + ಕಾಲ]

**ಪಂಚಮಗತಿ** (ನಾ). ಐದನೆಯ ಅವಸ್ಥೆ; ದೇವ, ಮಾನುಷ, ತಿರ್ಯಂಚ ಮತ್ತು ನಾರಕ ಎಂಬ ನಾಲ್ಕು ಅವಸ್ಥೆಗಳನ್ನು ಮೀರಿದ ಅವಸ್ಥೆ; ಮೋಕ್ಷ: ಈ ನಾರಕ ತಿರ್ಯಗ್ಗತಿಗೀ ನರಸುರಗತಿಗೆ ಪೇಸಿದೆಂ ದರ್ಶನದಿಂ ಜ್ಞಾನದಿನೊಪ್ಪುವ ಪರಮಸ್ಥಾನಮನಾಂ ಪಡೆವನಕ್ಕೆ

ಪಂಚಮಗತಿಯಂ (ಆಜಿಪು. ೨-೬೩); ಅಮಳಜ್ಞಾನಂಗಿದು ಪಂಚಮಗತಿ ರಾಜ್ಯಾಭಿಷೇಕಂ (ಚಂದ್ರಪು. ೧೨-೧೯೯); ಅಂತು ಪಂಚಶರಪ್ರಮೋದ ವಿಜಯಿ ಪಂಚಮಗತಿಪ್ರಾಪ್ತಿಗೆ ಸಂಚಕರಮಂ ಕೊಳ್ವಂತೆ ದೀಕ್ಷೆಯಂ ಕೆಯ್ಕೊಳಲೊಡಂ (ಪುಷ್ಪಪು. ೧೩-೧೧೩ ವ). [ಪಂಚಮ+ಗತಿ]

**ಪಂಚಮಗಾಂಧಾರ** (ನಾ). [ಸಂಗೀತ] ಒಂದು ರಾಗದ ಹೆಸರು: ನರ್ತಕಿ . . . ಪಂಚಮಭ್ರಮಾಳ ಪಂಚಮಗಾಂಧಾರ ರೂಪಸಾಧಾರಣ ವೆಂಬೇಳು ಸಪ್ತಸಾಧಾರಣಜಾತಿಯಿಂದಾದ ರಾಗಂಗಳು (ವಿವೇಕ. ೧೮೬).
[ಪಂಚಮ+ಗಾಂಧಾರ]

**ಪಂಚಮಗಾಂಧಾರಿ** (ನಾ). [ಸಂಗೀತ] ಒಂದು ರಾಗದ ಹೆಸರು: ಗಾಂಧಾರಿ ರಕ್ತಗಾಂಧಾರಿ. . .ಮಧ್ಯಮಗಾಂಧಾರಿ, ದಿವ್ಯಾವತಿ, ಮಧ್ಯಮ ದಿವ್ಯಾವತಿ, ಪಂಚಮಗಾಂಧಾರಿ . . . ಕೌಶಿಕೆ ಎಂಬ ಹತ್ತೀ ಮಧ್ಯಮ ಗ್ರಾಮದಿಂದಾದ ರಾಗಂಗಳು (ವಿವೇಕ. ೧೮೬).
[ಪಂಚಮ+ಗಾಂಧಾರಿ]

**ಪಂಚಮಜಲಧಿ,** ಪಂಚಮಜಳಧಿ (ನಾ). [ಜೈನ] ಲವಣೋದ, ಕಾಲೋದ, ಪುಷ್ಕರೋದ, ವಾರುಣೋದ, ಕ್ಷೀರೋದ, ಘೃತೋದ ಮತ್ತು ಕ್ಷೋಧೋದ ಎಂಬ ಏಳು ಸಮುದ್ರಗಳಲ್ಲಿ ಐದನೆಯ ಸಮುದ್ರ; ಕ್ಷೀರಸಮುದ್ರ: ನೀರೊಳ್ ಪಂಚಮಜಲಧಿಯ ನೀರೆ ಪವಿತ್ರಂ (ಶಾಂತಿಪು. ೧೦-೩೮); ಪಂಚಮಜಲಧಿಯ ಪಾಲ್ಮೊಗೆದಂಚಿರ ಮಾದೊಡೆ ಬಟುಕ್ಕೆ ತೀರ್ಥಜಲಂಗಳ್ ಪಿಂಚಿದರ್ಗಿಲ್ಲೆಂಬಂತಿರೆ (ಅನಂಪು. ೫-೭೫). **ಪಂಚಮಜಳಧಿ:** ಅಮಳಜ್ಞಾನಂಗಿದು ಪಂಚಮಗತಿ ರಾಜ್ಯಾಭಿಷೇಕಮಿಂತಿಲ್ಲಿಗೆ ಪಂಚಮಜಳಧಿ ಜಳಮೆ ಯೋಗ್ಯಂ ಸುಮಜ್ಜನ ಕ್ಕೆಂದು ಬೆಸಸಿದಂ ಸೌಧರ್ಮಂ(ಚಂದ್ರಪು. ೧೨-೧೯೯).
[ಪಂಚಮ+ಜಲಧಿ]

**ಪಂಚಮಜಲನಿಧಿ** (ನಾ). = ಪಂಚಮಜಲಧಿ: ಪಂಚಮಜಲನಿಧಿ ಯಲ್ಲದೆ ಪಂಚಮಗತಿಪತಿಯ ಸವನಕೆಯ್ದುಸವು ಪಯಃಸಂಚಯಮನುಟಿುದ ತೋಜಿತ ಕೆಜಿತ ಬೆಂಚಿ ಕೊಳಂ ಕೂಪಂ (ಪುಷ್ಪಪು. ೧೧-೬).
[ಪಂಚಮ+ಜಲನಿಧಿ]

**ಪಂಚಮಜಳಧಿ** 'ಪಂಚಮಜಲಧಿ' ನೋ.

**ಪಂಚಮಠ** (ನಾ). ಊರಿನ ಹಿರಿಯ ಮಠ: ಸಮಸ್ತನಗರವೂ ಸೇರಿ ಆ ಊರಿನ ಪಂಚಮಠ, ಹಿರಿಯ ಮಠ, ಭೇರುಂಡೇಶ್ವರದಾಚಾರ್ಯ ಮೂಲಿಗ ಮಧುಕೇಶ್ವರಪಂಡಿತದೇವರು ಮುಂತಾದ ಮಠಾಧಿಪತಿಗಳ ಮುಂದೆ, ಜೀರ್ಣೋದ್ಧಾರದ ಕಾರ್ಯವನ್ನು 'ತಮ್ಮ ಧರ್ಮವಾಗಿ ಕೊಂಡು' . . . ಅದಕ್ಕೆ ಗವರೇಶ್ವರದೇವರೆಂದು ಹೆಸರಿಡುತ್ತಾರೆ (ಕಶಾಅ. ೧೭೮). [ಪಂಚ$_3$+ಮಠ]

**ಪಂಚಮಠಸ್ಥಾನ** (ನಾ). = ಪಂಚಮಠ: ರಾಜಗಾವುಣ್ಡನುಂ ××× ವಗಾವುಣ್ಡಗಳುಂ ಪಂಚಮಠಸ್ಥಾನಮುಖ್ಯವಾಗಿ ದೇವರು ನಿವೇದ್ಯ ××× ವಳ್ಳದಿಂ . . . ಸರ್ವ್ವನಮಸ್ಯವಾಗಿ ಬಿಟ್ಟ ಕಂಮ್ಮ (ಸೌಇಇ. XX, ೩೮-೪೧; 1058); ಇಂತಿನಿತುಮಂ ನಗರಮಹಾಜನ ಪಂಚ ಮಠಸ್ಥಾ[ನಮಾಚಂ]ದ್ರಾರ್ಕ್ಕಸ್ಥಾಯಿವರಂ ನಡೆಯಿಸುವರು (ಕಇಅ. ೯೨-೧-೫೯; 1082); ಆ ಮಹಾರಾಜಧಾನಿ ಬಳ್ಳಿಗಾವೆಯ ಪಂಚ ಮಠಸ್ಥಾನದೊಳ್ ಪಿರಿಯ ಮಠದಾಚಾರ್ಯ್ಯ ಶಾನ್ತಶಿವಪಣ್ಡಿತರುಂ (ಎಕ. VII, ಶಿಕಾರಿ. ೯೯-೭೨; 1113). [ಪಂಚಮಠ+ಸ್ಥಾನ]

**ಪಂಚಮತಂತಿ** (ನಾ). ವೀಣೆಯಲ್ಲಿ ಪಂಚಮಸ್ವರವನ್ನುಂಟು ಮಾಡುವ ತಂತಿ: ವೆಂಕಟರಮಣದಾಸರು . . . ಪಂಚಮತಂತಿಯ ನ್ನೊಮ್ಮೆ ಸಾರಣೆಯ ತಂತಿಯನ್ನೊಮ್ಮೆ ಮಿಾಟುತ್ತಾ ನುಡಿಸಿದರು (ಸಂಗೀತ. ೬೯). [ಪಂಚಮ+ತಂತಿ]

**ಪಂಚಮದಳ** (ನಾ). ಗೂಢಚಾರರ ತಂಡ,—ಸೈನ್ಯ: ಆ ಮರು ದಿನ ಪ್ರತಾಪಚಂದ್ರ ಬ್ರಿಟಿಷರ 'ಪಂಚಮದಳ'ಕ್ಕೆ ಸೇರಿದವನೆಂಬ ಆರೋಪವೂ ಹುಟ್ಟಿಕೊಂಡಿತು (ಗೊಂಡಾರ. ೫).
[ಪಂಚಮ+ದಳ$_2$(=ದಲ)]

**ಪಂಚಮಭ್ರಮಾಳ** (ನಾ). [ಸಂಗೀತ] ಒಂದು ರಾಗದ ಹೆಸರು: ನರ್ತಕಿ . . . ಪಂಚಮಭ್ರಮಾಳ ಪಂಚಮಗಾಂಧಾರ ರೂಪಸಾಧಾರಣ ವೆಂಬೇಳು ಸಪ್ತಸಾಧಾರಣಜಾತಿಯಿಂದಾದ ರಾಗಂಗಳು (ವಿವೇಕ. ೧೮೬).
[ಪಂಚಮ+ಭ್ರಮಾಳ]

**ಪಂಚಮಮಾಂಗಲ್ಯ** (ನಾ). ಶುಭಕರವಾದ ಉತ್ಸವ; ಮಂಗ ಳೋತ್ಸವ: ಪಂಚಮಮಾಂಗಲ್ಯದೊಳಿಂದ್ರಗಾಯಕರದೇನಿಂಬಿಂ ನಯಂ ಬೆತ್ತರೋ (ಶಾಂತಿಪು. ೧೦-೩೫). [ಪಂಚಮ+ಮಾಂಗಲ್ಯ]

**ಪಂಚಮಲ** (ನಾ). ೧. ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ಚರ್ಮ—ಇವುಗಳಿಂದ ಬರುವ ದೇಹದ ಐದು ಬಗೆಯ ಮಲಗಳು: ಏರಂಡಮೂಲಮಂ ಹ್ರೂಂ ರೂಂ ಎನುತ್ತೆ ರವಿವಾರದೊಳ್ ತಂದಲ್ಲಿ ಪಂಚ ಮಲಮಂ ಸೇರಿಸುತ್ತು ದಯದೊಳ್ ನಾರಿಗಿಕ್ಕಲು ವಶ್ಯಂ(ಜನಪ.೧೩-೪೬); ರುದ್ರಜಟೆಯಂ ಕೃತಾಂಜಲಿ ಎಂದು ಮುಟ್ಟಿದರೆ ಮುರುಟುವನು ತುಪ್ಪದಿಂ ಜೇನುತುಪ್ಪದಿಂ ಕೂಡಿ ತನ್ನ ದೇಹದ ಪಂಚಮಲಮಂ ಕೂಡಿ ತಿಲಕವನಿಡಲು ತ್ರೈಲೋಕ್ಯವಶಮಪ್ಪುದು (ಕಾಮಶಾ. ೨೬೨). ೨. [ವೀಶೈ]ರೋಧಮಲ, ಬಿಂದುಮಲ, ಕರ್ಮಮಲ, ಮಾಯಾ ಮಲ ಮತ್ತು ಆಣವಮಲಗಳೆಂಬ ಐದು ಬಗೆಯ ಮಲಗಳು: ಅಷ್ಟಭೋಗಂಗಳ ಶಕ್ತಿ ಕೆಟ್ಟಲ್ಲಿ ರೋಧಮಲ ನಷ್ಟ . . . ಪದವಸ್ತು ವಿನ ಕಳೆ ತನ್ನಲ್ಲಿ ಬೆಳಗಿದಲ್ಲಿ ಆಣವಮಲ ನಷ್ಟ ಇಂತೀ ಪಂಚಮಲಂಗಳು ನಷ್ಟ ವಾದಲ್ಲಿ ಸೌರಾಷ್ಟ್ರಸೋಮೇಶ್ವರಲಿಂಗ ಸಮ್ಯಕ್‌ದೃಷ್ಟ (ಆದವ. ೧೧೬-೧೯೫). [ಪಂಚ$_2$+ಮಲ$_3$]

**ಪಂಚಮವೇದ** (ನಾ). ೧. ನಾಲ್ಕುವೇದಗಳಂತೆಯೆ ಧರ್ಮವನ್ನು ಬೋಧಿಸುವ ಪುರಾಣಗಳು: ಪುರಾಣಗಳನ್ನು ಇಂಥವರೇ ರಚಿಸಿದ ರೆಂದು ಹೇಳಲಾಗುವುದಿಲ್ಲ . . . ಅದ್ದರಿಂದಲೇ ಇವುಗಳನ್ನು ಪಂಚಮ ವೇದವೆಂದು ಕರೆದಿರುವುದು (ಭಾರದ. ೧೮೬). ೨. ಮಹಾಭಾರತ: ಪಂಚಮವೇದವೆಂದು ಪ್ರಖ್ಯಾತವಾಗಿರುವ ಮಹಾಭಾರತದಲ್ಲಿರುವ ಧರ್ಮ ವ್ಯಾಖ್ಯೋಪಾಖ್ಯಾನವೊಂದೇ ಸಾಕು ಜಾತಿಗಳ ಗೊಂದಲದಿಂದ ಭಾರತೀಯ ಸಾಮಾಜಿಕಜೀವನವು ಹಾಳಾಯಿತೆಂದು ಆಕ್ಷೇಪಿಸುವವರಿಗೆ ಸಮಾಧಾನ ಹೇಳುವುದಕ್ಕೆ (ಭಾರದ. ೩೮೯); ಉತ್ತಮಸಂದೇಶವನ್ನು ನೀಡುವ ಭಗವದ್ಗೀತೆಯೊಡನೆ ಕೂಡಿದ ಮಹಾಭಾರತ ಪಂಚಮವೇದವೆನಿಸಿ ಕೊಂಡಿತು (ಮಕ್ಕಾರ. ೧೦೩ ಪೀಠಿಕೆ). ೩. ನಾಟಕ: ಭರತನಾಟ್ಯ ಶಾಸ್ತ್ರದಲ್ಲಿ ನಾಟಕವನ್ನು ಸಾರ್ವವರ್ಣಿಕ, ಪಂಚಮವೇದ ಎಂದು ಮೊದಲಾಗಿ ಬಣ್ಣಿಸಲಾಗಿದೆ (ಭಾರದ. ೫೬೦). [ಪಂಚಮ+ವೇದ]

**ಪಂಚಮಶ್ರುತಿ** (ನಾ). ೧. = ಪಂಚಮವೇದ ೨: ಸ್ತುತಿಗೆಯ್ವೆಂ ಕೃತ ಪಂಚಮಶ್ರುತಿಪುರಾಣವ್ಯಾಸನಂ ವ್ಯಾಸನಂ (ಜಗವಿ. ೧-೮); ತಿಳಿಯ ಹೇಳುವೆ ಕೃಷ್ಣಕಥೆಯನು ಇಳೆಯ ಜಾಣರು ಮೆಚ್ಚುವಂತಿರೆ ನೆಲೆಗೆ ಪಂಚಮಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ (ಕುಪ್ಮಾಅ. ೧-೧೩). ೨. [ಸಂಗೀತ] ಪಂಚಮಸ್ವರದಿಂದ ಪ್ರಾರಂಭವಾಗುವ ನಾದ ವಿಶೇಷ,—ಶ್ರುತಿ: ಪಂಚಮಶ್ರುತಿ ತಂಬೂರಿ (ಸಂಗೀತ. ೧೧೦).
[ಪಂಚಮ+ಶ್ರುತಿ]

**ಪಂಚಮಸಮುದ್ರ** (ನಾ). = ಪಂಚಮಜಲಧಿ: ಪಂಚಮಸಮುದ್ರ ದೊಳ್ ಕೂಡಿ ಮುನೀಂದ್ರನನಭಿವಂದಿಸಿ ಬಲಗೊಂಡು ನಾಕಪತಿಗಳ್ ದಿವಕ್ಕೆ ತಳರ್ದುದಂ (ಶಾಂತಿಪು. ೯-೬೬). [ಪಂಚಮ+ಸಮುದ್ರ$_1$]

**ಪಂಚಮಸಾಧಾರಣ** (ನಾ). [ಸಂಗೀತ] ಒಂದು ಬಗೆಯ ರಾಗ : ಷಡ್ಜಗ್ರಾಮ . . . ಪಂಚಮಸಾಧಾರಣ . . . ಮಾಳವ ಕೌಶಿಕಿಯೆಂಬಾಱು ಶುದ್ಧಜಾತಿಯಿಂದಾದ ರಾಗಂಗಳು (ವಿವೇಕ. ೨೩೩).
[ಪಂಚಮ + ಸಾಧಾರಣ]

**ಪಂಚಮಸ್ಥಾನ** (ನಾ). = ಪಂಚಮಗತಿ : ಪಂಚಮಸ್ಥಾನಗಳ ಪಡೆದರ . . . ತೀರ್ಥಕರೊಲಿದು ಭಜಿಸುವೆ ಚಂಚಲವನಳಿದು (ಬಿಜ್ಜಪು. ೧-೩). [ಪಂಚಮ + ಸ್ಥಾನ]

**ಪಂಚಮಸ್ವನ** (ನಾ). = ಪಂಚಮಶ್ರುತಿ ೨ : ಸತ್ತಿಗೆ ಗಗ್ಗರಂ ಕರುಳ ಬಕ್ಕಳೆ . . . ನೆತ್ತರ ತಳ್ತ ಬಲ್ದಲೆಯ ಬಿಂದಿಗೆ ಪಾವುಗೆ ಪಂಚಮಸ್ವನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೫೩೩). [ಪಂಚಮ+ಸ್ವನ]

**ಪಂಚಮಸ್ವರ** (ನಾ) ೧. = ಪಂಚಮ ೧೦. : ವರಾಲೀ ಮಧ್ಯಮವೊಂದೇ ಪಂಚಮ (ಸ್ವರ)ದ ಪ್ರದೇಶದಲ್ಲಿ ಹುಟ್ಟುತ್ತದೆ (ಚತುಪ್ರ. ೨೧). ೨. = ಪಂಚಮಶ್ರುತಿ ೨ : ಪಂಜರದಲ್ಲಿ ಕಾಗೆ ಇಟ್ಟರೆ ಪಂಚಮಸ್ವರ ಕೊಟ್ಟೀತೆ ? (ಸೀತಿಚಿಂ. X, ೮). [ಪಂಚಮ + ಸ್ವರ$_2$]

**ಪಂಚಮಹಪಾತಕ** (ನಾ) ೧. = ಪಂಚಮಹಾಪಾತಕ ೧: ಆ ತರುಣಿಗಂ ಕೆಲವು ಕಾಲಕ್ಕೆ ಪಂಚಮಹಪಾತಕಂಗಳೆ ಕೂಡಿ ಪುಟ್ಟುವಂದದೊಳೊಗೆದರ್ಪೈ ತನುಜರ್ಪೈವರು (ವೀಶೈಪು. ೨-೬-೧೭). ೨. = ಪಂಚಮಹಾಪಾತಕ ೩ : ವಂಚಕರ ನಿಜವೇದಬಾಹಿರ ಹಂಚುಗಳ ಸನ್ಮಾರ್ಗವಿಲ್ಲದ ಪಂಚಮಹಪಾತಕರ ಜೈನರ ಹಿಂಡು ನೆರೆದು (ಬಸವು. ೫೧-೫೪).
[<ಸಂ. ಪಂಚಮಹಾಪಾತಕ]

**ಪಂಚಮಹವಾದ್ಯ** (ನಾ). = ಪಂಚಮಹಾವಾದ್ಯ : ಮೂಡಲರುಣೋದಯವದತ್ತಲಿತ್ತಂ ಹರಿದು ತೀಡಿತ್ತು ತಂಬೆಲರು ಪಂಚಮಹವಾದ್ಯಗಳು ನಾಡೆ ಮೊಳಗಿದವು (ಹಚಕಾ. ೪-೫೫); ಮುಂಗಡೆಯೊಳುಲಿವ ಪಂಚಮಹವಾದ್ಯದಿ[ಪಾಠಾಂ. ಪಂಚಮವಾದ್ಯದಿಂ]ನವರಸಂಗಳಭಿನಯಿಸುವೆಡೆಯೊಳು (ಭಾಪಚಿಂ. ೧-೩೬). [<ಸಂ. ಪಂಚಮಹಾವಾದ್ಯ]

**ಪಂಚಮಹಾಕಲ್ಯಾಣ** (ನಾ). = ಪಂಚಕಲ್ಯಾಣ ೩ : ಉಪೋಷಿತವ್ರತಮಂ ಕೈಕೊಂಡು . . . ಪಂಚಮಹಾಕಲ್ಯಾಣಂಗಳುಮಂ ನಾಮೋದ್ದೇಶಂಗೆಯ್ದು ಪಾರಣೆಯ ದಿವಸಮಲ್ಲದಱುವತ್ತುಮೂಱುದಿವಸದುಪವಾಸದಿಂ ಸಮೆಯೆ (ಆದಿಪು. ೩-೪೦ ವ); ದೇವೇಂದ್ರರಿಂ ವರ್ಣಿಸಲ್ಪಟ್ಟ ಕೀರ್ತಿಯನುಳ್ಳ ಪಂಚಮಹಾಕಲ್ಯಾಣಂ ಗಣಮಹಾಪೂಜೆಗಳನೆಯ್ದಿದ ಪರಮಜಿನೇಶ್ವರಂ (ಪ್ರತಿಷ್ಠಾ. ೮-೧೧). [ಪಂಚ$_2$+ಮಹಾಕಲ್ಯಾಣ]

**ಪಂಚಮಹಾನಕ** (ನಾ). = ಪಂಚಮಹಾವಾದ್ಯ : ಮಹಾಪತಾಕೆಗಳುಮೊಪ್ಪುವ ಪಂಚಮಹಾನಕಂಗಳುಂ ಸುರುಚಿರಚಾಮರಪ್ರಕರಮುಂ ಧವಲಾತಪವಾರಣಂಗಳುಂ (ಜೀವಸಂ. ೧-೩೩). [ಪಂಚ$_2$ + ಮಹಾನಕ]

**ಪಂಚಮಹಾನಿನದ** (ನಾ). ಪಂಚಮಹಾವಾದ್ಯಗಳ ಧ್ವನಿ: ಕೋಂಟೆಯೊಳಾಳ್ವರಿಯ ಮೇಲೆ ಸೇನೆಯುಂ ನೆರೆಯಿಸಿ ಬಳಸುತಸಮಾನವಿಕ್ರಮದಿಂದೆ ಪಂಚಮಹಾನಿನದವಾಕ್ರಮಿಸುತಿರೆ ಬಲುದುರ್ಗಮಂ ಬಲಿದು (ಬಸವು. ೧೬-೧೪). [ಪಂಚ$_2$ + ಮಹಾನಿನದ]

**ಪಂಚಮಹಾಪಾತಕ** (ನಾ). ೧. ಬ್ರಹ್ಮಹತ್ಯೆ (ಬ್ರಾಹ್ಮಣನನ್ನು ಕೊಲ್ಲುವುದು), ಸುರಾಪಾನ (ಹೆಂಡ ಕುಡಿಯುವುದು), ಸ್ವರ್ಣಸ್ತೇಯ (ಚಿನ್ನವನ್ನು ಕದಿಯುವುದು), ಗುರುಪತ್ನೀಗಮನ (ಗುರುವಿನ ಹೆಂಡತಿಯನ್ನು ಕೂಡುವುದು) ಮತ್ತು ಇವುಗಳನ್ನು ಮಾಡಿದವರ ಸಂಸರ್ಗ — ಇವುಗಳಿಂದುಂಟಾಗುವ ಐದು ದೊಡ್ಡ ಪಾಪಗಳು : ಪಂಚಮಹಾಪಾತಕವಂಜುವುದು ಕೂಡಲಸಂಗನ ನಾಮುಕ್ಕೆಯ್ಯಾ (ಬಸವ.೭೫); ಪಂಚಮಹಾಪಾತಕಂಗಳ ಮಾಡಿದವನಾದಡಾಗಲಿ. . . ಒಬ್ಬ ಶಿವಭಕ್ತನ ದರ್ಶನವಾದಲ್ಲಿ ಆ ಪಾತಕಂಗಳು ಬೆಂದು ಭಸ್ಮವಾಗಿಹೋಗುವವು ನೋಡಾ (ಅಖಂಡೇ.೫೭-೫). ೨. ಪರಧನ, ಪರಸತಿ, ಪರದೈವ, ಪರನಿಂದೆ ಮತ್ತು ಪರಹಿಂಸೆ ಎಂಬ ಐದು ಪಾಪಗಳು: ಪರಧನ ಪರಸತಿ ಪರದೈವ ಪರನಿಂದೆ ಪರಹಿಂಸೆ ಎಂಬ ಪಂಚಮಹಾಪಾತಕಂಗಳೊಡನೆ ಚರಿಸುವಂತಹದ್ದೇ ವರ್ತಿನಿ ಎಂಬ ಮದವು (ವಚಶಾ. II, ೧೨೧). ೩. ಮೇಲ್ಕಂಡ ಐದು ಮಹಾಪಾಪಗಳನ್ನು ಮಾಡಿರುವ ವ್ಯಕ್ತಿ ; ಬಹಳ ದೊಡ್ಡ ಪಾಪಗಳನ್ನು ಮಾಡಿರುವ ವ್ಯಕ್ತಿ : ಈ ಧರ್ಮಮಾನ್ನಿರಕ್ಷಿಚ್ಚಿದೋನ್ನಡಿ ಎನ್ನಂಡೆಲೊ ಈ ಧರ್ಮಮಾನ್ನಳಿವೋನ್ ಪಞ್ಚಮಹಾಪಾತಕನಕ್ಕು (ಎಕ. X, ಕೋಲಾರ. ೬-೧೧; 753) ; ನಿಮ್ಮಡಿ ನಿಮ್ಮನಾ ಪಂಚಮಹಾಪಾತಕನ ಮನೆಗೊಡಗೊಂಡುಯ್ದನೇಕಾಪವಾದೋಪಸರ್ಗಂಗಳಂ ಮಾಡಿದೆಂ (ಸುಕುಮಾ. ೪-೩೮ ವ) ; ಅಂಗದ ಮೇಲೆ ಲಿಂಗಪ್ರತಿಷ್ಠೆಯ ಮಾಡಿದ ಬಳಿಕ ಒಳಗೆ ಪ್ರಾಣಲಿಂಗವುಂಟೆಂಬ ಪಂಚಮಹಾಪಾತಕರ ನುಡಿಯ ಕೇಳಲಾಗದು (ಚನ್ನಪ.ಕ. ೧೯೫-೪೩೪) ; ಗುರುವಿನಲ್ಲಿ ಗುಣವನಱಸಿದಡೆ ಒಂದನೆಯ ಪಾತಕ . . . ಪ್ರಸಾದದಲ್ಲಿ ರುಚಿಯನಱಸಿದಡೆ ಐದನೆಯ ಪಾತಕ ಇಂತೀ ಪಂಚಮಹಾಪಾತಕರ ಎನಗೊಮ್ಮೆಯೂ ತೋಱದಿರಯ್ಯ (ಅಖಂಡೇ. ೭೫-೫೦). ೪. [ಜೈನ] ಬಾಲವಧೆ, ಸ್ತ್ರೀವಧೆ, ಗೋವಧೆ, ಬ್ರಾಹ್ಮಣವಧೆ ಮತ್ತು ಋಷಿವಧೆ ಎಂಬ ಐದು ಮಹಾಪಾಪಗಳು : ಮಧು ಮದ್ಯ ಮಾಂಸಂಗಳಂ ಸೇವಿಸುವರುಂ ಬಾಲವಧೆ ಸ್ತ್ರೀವಧೆ ಗೋವಧೆ ಬ್ರಾಹ್ಮಣವಧೆಯೆಂದೀ ಪಂಚಮಹಾಪಾತಕಂಗಳಂಗೆಯ್ದವರುಂ . . . ದುಃಖಂಗಳನನುಭವಿಸುವರ್ (ವಡ್ಡಾರಾ. ೯೬-೨೩).
[ಪಂಚ$_2$+ಮಹಾಪಾತಕ]

**ಪಂಚಮಹಾಪಾತಕಿ** (ನಾ). = ಪಂಚಮಹಾಪಾತಕ ೩ : ವಕ್ಷಃಸ್ಥಳದ ಶ್ರೀಲಾಂಛನಮಂ ಕಂಡು ಜಾತಿಸ್ಮರೆಯಾಗಿ ಮೂರ್ಛೆಗೆ ಸಂದು ನೀಡಱಿಂದೆಚ್ಚೆತ್ತು ಹಾ ಪಂಚಮಹಾಪಾತಕಿಯೆನೆನ್ನ ಮಗನಂ ಪೋಟ್ಟು ತಿಂದೆನೆಂದು ತನ್ನಂ ತಾಂ ನಿಂದಿಸಿ (ವಡ್ಡಾರಾ. ೪೮-೨೮) ; ಪಂಚಮಹಾಪಾತಕಿಯುಂ ವಂಚಕನಂ ನುಡಿದು ಪುಸಿವನಂ ಸಂಗರದೊಳ್ ಹಿಂಜುವನಂ ಪುಟಿಗೊಂಡದ ಸಂಚದೊಳಿಕ್ಕುವ ಕಾಲಮೇಟಿದ ತೆಱದಿಂ (ದಶಕು. ೩-೧೮) ; ಪಂಚಮಹಾಪಾತಕಿಗೆ ಎಂತು ಬುದ್ಧಿಯ ಪೇಳೆ ತನ್ನ ವಂಚನೆಯಿಂದಲಿ ತನಗೆ ತಾನೆ ಕೆಟ್ಟುಹೋಹನು (ಪುರಂದ. ೫-೫೬ ಪಲ್ಲವಿ). [ಸಂ. ಪಂಚಮಹಾಪಾತಕಿನ್]

**ಪಂಚಮಹಾಪಾಪ** (ನಾ). = ಪಂಚಮಹಾಪಾತಕ ೧ : ಪ್ರಪಂಚ ಬಿಡುತ್ತೇನೆಂದು ಪಂಚಮಹಾಪಾಪ ಹೊಂದಿಕೊಂಡ (ಗಾದೆ).
[ಪಂಚ$_2$+ಮಹಾಪಾಪ]

**ಪಂಚಮಹಾಭೂತ** (ನಾ). = ಪಂಚಭೂತ : ಅದರ ದೆಸೆಯಿಂದ ಪಂಚಮಹಾಭೂತಗಳು . . . ಇಪ್ಪತ್ತುನಾಲ್ಕು ತತ್ವಗಳೂ ತತ್ವಾಭಿಮಾನಿ ದೇವತೆಗಳೂ ಹುಟ್ಟಿದರು (ಹಸಾರ. ೩-೧ ವಿಶೇಷಾರ್ಥ) ; ಪಂಚತನ್ಮಾತ್ರೆಗಳಿಂದ ಆಕಾಶ, ವಾಯು, ತೇಜಸ್ಸು, ಜಲ, ಪೃಥ್ವಿ ಎಂಬ ಪಂಚಮಹಾಭೂತಗಳು ಹುಟ್ಟುವುವು (ಹಿಂದಸಾ. ೫೬) ; ಪುರುಷ, ಅವ್ಯಕ್ತ ಹಾಗೂ ಪ್ರಕೃತಿ, ಅಹಂಕಾರ, ಪಂಚಮಹಾಭೂತಗಳು . . . ಸೇರಿದರೆ ತತ್ವ (ಪ್ರವಾಇ. I, ೩೪೦). [ಪಂಚ$_2$+ಮಹಾಭೂತ]

**ಪಂಚಮಹಾಯಜ್ಞ** (ನಾ). ೧. ದೇವತೆಗಳ ಪ್ರೀತ್ಯರ್ಥವಾಗಿ ಗೃಹಸ್ಥನು ನಡೆಸಬೇಕಾದ ದೇವಯಜ್ಞ (ಹೋಮ), ಪಿತೃಯಜ್ಞ (ತರ್ಪಣ), ಭೂತಯಜ್ಞ (ಬಲಿ), ಮನುಷ್ಯಯಜ್ಞ (ಅತಿಥಿ ಪೂಜನ) ಮತ್ತು ಬ್ರಹ್ಮಯಜ್ಞ (ಅಧ್ಯಾಪನ) ಎಂಬ ಐದು ಬಗೆಯ ಧಾರ್ಮಿಕಕೃತ್ಯಗಳು : ಪ್ರತಿದಿನ ಕ್ರಿಯಮಾಣ

ಪಂಚಮಹಾಯಜ್ಞ ಪವಿತ್ರೀಕೃ . . . ದಿವಾಕರಭಟ್ಟೋಪಾಧ್ಯಾಯರ್ಗ್ಗೆ . . . ಬಿಟ್ಟ ತೋಂಟಂ (ಸೌಇಇ. XX, ೬೫-೩; 1101) ; ಪಂಚಮಹಾಯಜ್ಞ ಗೃಹಸ್ಥನಿಗೆ ವಿಧಿವಿಹಿತ (ಮುಕ್ತಾರ. ೯೦ ಪೀಠಿಕೆ) ; ಸಕಲಧರ್ಮಶಾಸ್ತ್ರಗಳಲ್ಲೂ ಶೂದ್ರರಿಗೆ ಪಂಚಮಹಾಯಜ್ಞಗಳು . . . ವೇದೋಕ್ತ ಧರ್ಮಾಧಿಕಾರವು ಅಪಾರವಾಗಿರುವುದು (ಹಿಂದಸಾ.೧೬೨). ೨. [ವೀಶೈ] ಭಕ್ತನು ಆಚರಿಸಬೇಕಾದ ಶಿವವ್ರತ, ಶಿವಧ್ಯಾನ, ಶಿವಜ್ಞಾನ, ಶಿವಭಕ್ತಿ ಮತ್ತು ಶಿವಾರ್ಚನ ಎಂಬ ಐದು ಬಗೆಯ ಪತಿಧರ್ಮಗಳು : ಶ್ರೀ ರೇಣುಕಾಚಾರ್ಯರು . . . ಈ ಐದು ಪತಿಧರ್ಮಗಳನ್ನೇ ಪಂಚಮಹಾಯಜ್ಞಗಳೆಂದು ವಿವರಿಸಿರುತ್ತಾರೆ (ಭಾರದ. ೨೪೧).
[ಪಂಚ$_2$ + ಮಹಾಯಜ್ಞ]

**ಪಂಚಮಹಾವಾದ್ಯ** (ನಾ). ರಾಜಮರ್ಯಾದೆಯನ್ನು ಸೂಚಿಸುವ ಸಲುವಾಗಿ ಬಾರಿಸುವ ಶೃಂಗವಾದ್ಯ(ಕೊಂಬು), ತಮ್ಮಟೆ (ಹಲಗೆ), ಶಂಖ (ಧವಳ), ಭೇರಿ(ಬಾಜಾ), ಜಯಘಂಟೆ (ಜಾಗಟೆ) ಅಥವಾ ಭೇರಿ, ಶಂಖ, ಕಹಳೆ, ಗಂಟೆ ಮತ್ತು ವೀಣೆ ಎಂಬ ಐದು ಬಗೆಯ ವಾದ್ಯಗಳು : ಹೊಲೆಯ ಮಾದಿಗ ಭಕ್ತನಾದರೆ ಆತನ ಮನೆಯ ಸೊಣಗಂಗೆ ಪಂಚಮಹಾವಾದ್ಯದಲಿ ಸನ್ಮಾನವ ಮಾಡೆನೆ (ಬಸವ. ೫೯೩) ; ಗುರುಮಠಂ ದೇವತಾಭವನಂಗಳಗಣಿತಂ ಮೊಱೆವ ಶಂಖಂ ಭೇರಿ ಪಂಚಮಹಾವಾದ್ಯದಿಂದಿರುಳುಂ ಪಗಲುಂ ಮಹಾಭರಿತ ದರ್ಶನೆಗಳಿಂ . . . ಮೆಱೆವುದು (ಲಕಿಚಂ. ೩೧-೧೧) ; ಪಂಚಮಹಾವಾದ್ಯ ನೃತ್ಯಗೀತಂಗಳಿಂದತಿಶೋಭನವಾಗೆ ಚಿತ್ತವೃತ್ತಿಯಿಂ ಶಿವನಂ ಭಜಿಸಿ (ಹವ್ಮಾರ. ೨-೫೫ ಪ). [ಪಂಚ$_2$ + ಮಹಾವಾದ್ಯ]

**ಪಂಚಮಹಾವ್ರತ** (ನಾ). [ಜೈನ] ಸಾಧುಗಳು ಆಚರಿಸುವ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ ಎಂಬ ಐದು ಬಗೆಯ ವ್ರತಗಳು : ಪಂಚಮಹಾವ್ರತ ಪಂಚಸಮಿತಿ ಮಿಳಿತ ತ್ರಿಗುಪ್ತಿಗುಪ್ತಂ ಮುನಿಪಂ (ಶಾಂತಿಪು. ೯-೧೧೧) ; ಗುಪ್ತಿಗಳಂ ಪಾಲಿಸಿ ಪಂಚಮಹಾವ್ರತಲೀಲೆಯಿನೆಸೆದಂ ಪ್ರಮಾದವಿಲ್ಲೆನೆ ಮುನಿಪಂ (ಮಲ್ಲಿಪು.೧೧-೧೩) ; ಪಂಚಮಹಾವ್ರತ ಯತಿ ನಿಲೆ ಸಂಚಿತಪುಣ್ಯಾಗಮಕ್ಕೆ ಮುನ್ನಮೆ ದಿವದಿಂ ಸಂಚಕರಂ ಬರ್ಪಂತಿರೆ ಪಂಚವಿಧಂ ರತ್ನರಾಶಿ ಸುರಿದ ತ್ತಾಗಳ್ (ಬಂಹರಿ.೧೩-೨೯) ; ಪಂಚೇಂದ್ರಿಯವೆಂಬ ಮದಗಜವಿಜಯರು ಪಂಚಬಾಣನ ಭಂಜನರು ಪಂಚಮಹಾವ್ರತ ಸಮಿತಿ ಸಮೇತರು ಪಂಚಸೂನು ವರ್ಜಿತರು (ದ್ವಾದಶಾ. ೧೬೭-೩೩೦). 'ಅಣುವ್ರತ', 'ಮಹಾವ್ರತ' ಪರಾ. [ಪಂಚ$_2$ + ಮಹಾವ್ರತ]

**ಪಂಚಮಹಾಶಬ್ದ** (ನಾ). ೧. ಅರಮನೆ, ದೇವಾಲಯ ಮೊದಲಾದ ಕಡೆಗಳಲ್ಲಿ ಗೌರವಸೂಚಕವಾಗಿ ಬಾರಿಸುವ ಐದು ಬಗೆಯ ವಾದ್ಯಗಳ ಧ್ವನಿ ; ಕೊಂಬು, ತಮಟೆ, ಶಂಖ, ಭೇರಿ, ಜಯಘಂಟೆ ಅಥವಾ ಭೇರಿ, ಶಂಖ, ಕಹಳೆ, ಗಂಟೆ ಮತ್ತು ವೀಣೆಗಳ ಶಬ್ದ,-ಮಂಗಳಧ್ವನಿ; P ಇದೊಂದು ರಾಜಮರ್ಯಾದೆಯೆಂದು ಪರಿಗಣಿಸಲ್ಪಟ್ಟಿದೆ : ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದ ಮಹಾಸಾಮನ್ತಾಧಿಪತಿ ಪ್ರಭೂತ ವರಿಷ ಶ್ರೀಮಾನ್ಯೋಯಿನ್ದರಸರ್ (ಮೈಆರಿ. ೧೯೪೨, ೪೭-೩; ಸು. 790) ; ಸಮನೆನಿಸುವ[ರ್] ಪ್ರಶಸ್ತಿಕ್ರಮದೊಳ್ ಸ್ವಸ್ತಿ ಸಮಧಿಗತ ಪಂಚ[ಮಹಾ]ಶಬ್ದ ಮಹಾಸಾಮಂತರೆನಲ್ ಸಮನೆನಿಪರೆ ಗುಣದೊಳರಿಗನೊಳ್ ಸಾಮಂತರ್ (ಪಂಪಭಾ.೧-೪೯) ; ಸಮಧಿಗತ ಪಂಚಮಹಾಶಬ್ದ ಮಹಾಸಾಮಂತಾಧಿಪತಿ ಮಹಾಪ್ರಚಣ್ಡ ದಣ್ಡನಾಯಕಂ (ಸೌಇಇ. XX, ೪೭-೩೨ ; 1072) ; ಪಂಚಮಹಾಶಬ್ದಂ ದಿಕ್ಸಂಚಯಮಂ ಶೀವೆ ಯಮಜನಾಜ್ಞೆಯಿನಿತ್ತಂ ಕಾಂಚನಭಾಜನದಿಂ ನಕ್ತಂಚರರಿಪುಗಗ್ರಪೂಜೆಯಂ ಸಹದೇವಂ (ಜಗವಿ. ೧೭-೩೧) ; ತತ್ಸಮಯದೊಳಮರಪತಿ ಜಗತ್ಪತಿಯ ಮಧುಕರನೀಳಕುಂತಳಪ್ರಪಂಚಮಂ ಪಂಚಪಯೋರಾಶಿಯೊಳ್ ಪಂಚಮಹಾಶಬ್ದದೊಡನೆ ಪಸರಿಸಲೊಡಂ (ಚಂದ್ರಪು. ೧೩-೧೧೪ ಪ). ೨. ಮಂಗಳಧ್ವನಿಯನ್ನುಂಟುಮಾಡುವ ಐದು ಬಗೆಯ ವಾದ್ಯಗಳು : ಪಂಚಮಹಾಶಬ್ದಂಗಳುಂ ಬದ್ದವಣದ ಪಱೆಗಳುಂ ಬಾಜಿಸೆ ಅರಮನೆಯಂ ಪೊಕ್ಕು (ಪದ್ಮಾರಾ. ೧೩೧-೨೧) ; ಪಂಚಮಹಾಶಬ್ದವಿಜೃಂಭಿತಧ್ವನಿ ಲಸದ್ಗಾಂಧಾರನಾದಂ . . . ಆಯ್ತೆತ್ತಂ ಕ್ರಿಯಾಮಾಂತ್ಯದೊಳ್ (ಆದಿಪು. ೧೨-೪೮) ; ಪಂಚಮಹಾಶಬ್ದದ ನಡು ವಿಂಚರದಿಂದೆಸೆವ ಕನಕಕಾಹಳೆಜಯಘಂಟಾಂಚಿತಮಂಗಳಪಟುಪಟಹಂ ಚಕ್ರಿಯ ಮುಂದೆ ವರ್ಧಮಾನನಿನಾದಂ (ಶಾಂತಿಪು. ೧೦-೧೫೧) ; ಪಂಚಮಹಾಶಬ್ದವ ಬಾಜಿಸಿದರೇನೋ ಕಿವುಡಂಗೆ ಕೂಡಲಸಂಗಯ್ಯನ ಪಥವಿನ್ನಾವುದೆಂದಱಿಯದವಂಗೆ (ಬಸವ. ೬೩೩).
[ಪಂಚ$_2$+ ಮಹಾಶಬ್ದ]

**ಪಂಚಮಹಾಸಬ್ದ** (ನಾ). = ಪಂಚಮಹಾಶಬ್ದ ೧ : ಸ್ವಸ್ತಿ ಸಮಧಿಗತ ಪಂಚಮಹಾಸಬ್ದಂ ಮಹಾಸಾಮಂತ ಅಗ್ರಗಣ್ಯ (ಎಕ. II, ೫೬-೧ ; 1100). [<ಸಂ. ಪಂಚಮಹಾಶಬ್ದ]

**ಪಂಚಮಾಂಚಿತ** (ಗು). ಪಂಚಮಸ್ವರದಿಂದ ರಮಣೀಯವಾದ,—ಮನೋಹರವಾದ : ಅದೊರ್ಮೆ ಮೃದುಪಂಚಮಾಂಚಿತ ವಿಪಂಚಿಕಾನಾದದಿಂದದೊರ್ಮೆ ರಸಭಾವಕಂಚುಕಿತ ಚಿತ್ರಕರ್ಮಂಗಳಿಂ. . . ಕಳೆವನಿಂತು ಪೊತ್ತಂ ನೃಪಂ (ಕಾದಂಪೂ. ೨೧). [ಪಂಚಮ + ಅಂಚಿತ$_1$]

**ಪಂಚಮಾಬ್ಧಿ** (ನಾ). = ಪಂಚಮಜಲಧಿ : ಅಂತಾ ಪರಮೇಶ್ವರನ . . . ಕುಂತಳಂಗಳನುತ್ತರ ದಕ್ಷಿಣೇಂದ್ರರ್ ಪಂಚರತ್ನದ ಪಡಲಿಗೆಗಳೊಳಾಂತು ಪಂಚಮಾಬ್ಧಿಯೊಳಿಕ್ಕಿದರ್ (ಶಾಂತಿಪು. ೮-೧೨೩ ಪ).
[ಪಂಚಮ+ಅಬ್ಧಿ]

**ಪಂಚಮಾಯಿ** (ನಾ). ಒಂದು ಕ್ಷುದ್ರದೇವತೆ : ಕೊಂಕಣೀ ಕುಣಬಿಗಳಿಗೆ ಕಾಳೆ ಕುಣಬೀಯೆಂತಲೂ ಅನ್ನುವರು . . . ಬಿರಾಮಣಿ, ಪಂಚಮಾಯಾ, ಸಾತೆರಿಯೆಂಬ ದೇವತೆಗಳಿಗೆ ನಡಕೊಳ್ಳುವರು (ಕಭಾಗ.೧೭೯).
[ಪಂಚ ? + ಮಾಯಿ]

**ಪಂಚಮಾಶಬ್ದ** (ನಾ). = ಪಂಚಮಹಾಶಬ್ದ ೧ : ಪಂಚಮಾಶಬ್ದದಿಂದಂ ಬೇಗಮೆಚ್ಚತ್ತು ಮಂಚದಿನೆರ್ದು ಬೆಳಗಾಗಿ ಕೆಯ್ಗೆಯ್ದು ಕಾಂಚನ ಕುಂಭಕುಚೆ ಕಂಡಳ್ (ಬಂಹರಿ. ೯-೧೦೪).
[ಪಂಚ$_2$ + ಮ್ಹಾ$_3$+ಶಬ್ದ]

**ಪಂಚಮಿ** (ನಾ). ೧.ಮಾಸದ ಶುಕ್ಲ ಕೃಷ್ಣ ಪಕ್ಷಗಳ ಐದನೆಯ ದಿನ: ಸಿತಪಕ್ಷದ ಪಂಚಮಿ ದಿನಪತಿವಾರಂ ಶುಭದ ಮೂಲನಕ್ಷತ್ರದೊಳನ್ವಿತಮಾಗೆ ನೆಗಟ್ದುದೀ ಮತ್ಕೃತಿ (ಅದಿಪು.೧೬-೭೭);ಶುಕ್ಲ ಕೃಷ್ಣ ಭೇದದಿಂದಿತ್ತೆಱನಾಗಿರ್ಪುದಾ ಪಕ್ಷಂಗಳು ಮಿಗೆ ಅಗ್ನಿಯೇ ದೇವತೆಯಾಗುಳ್ಳ ಪಾಡ್ಯ. . . ಲಕ್ಷ್ಮಿ ಅಧಿದೇವತೆಯಾಗಿಹ ಪಂಚಮಿ . . . ಚಂದ್ರನಧಿದೇವತೆಯಾದ ಪೌರ್ಣಮೆ (ವಿವೇಕ. ೩೨೦). ೨. ನಾಗರ ಪಂಚಮಿ : ನಾಳೆ ಪಂಚಮಿಯಾದ್ದರಿಂದ ನಾಗನಿಗೆ ತನಿ ಎರೆಯಬೇಕು (ರೂಢಿ). ೩. ಚದುರಂಗದ ಆಟದಲ್ಲಿ ಉಪಯೋಗಿಸುವ ಚಚ್ಚೌಕವಾದ ಹಾಸುಬಟ್ಟೆ ಅಥವಾ ಹಲಗೆ. ೪. [ವ್ಯಾಕ] ಏಳು ಬಗೆಯ ವಿಭಕ್ತಿಗಳಲ್ಲಿ ಐದನೆಯದು ; ಪಂಚಮೀವಿಭಕ್ತಿ : ಅತ್ತನೆಮೆಂದನುಸಂಧಿಸಿಯೊತ್ತಂಬರದಿಂ ತಗುಳ್ಚುವರ್ ಪಂಚಮಿಯೊಳ್ (ಶಾವ್ಯಾವ.೧೧೭) ; ಪಿಂತೆ ಪೇಟ್ದ ನಾನಾ ತೆಱದ ಲಿಂಗಂಗಳ್ಗೆ ಪರವಾಗಿ ನಾಮವಿಭಕ್ತಿಗಳ್ . . . ಪ್ರಥಮೆಗಂ, ದ್ವಿತೀಯೆಗಂ, ತೃತೀಯೆಗಂ, ಚತುರ್ಥಿಗಂ, ಪಂಚಮಿಗಂ, ಷಷ್ಠಿಗಂ, ಸಪ್ತಮಿಗಂ-ಏಱಾಗಿ ಕಾರಕವಶದಿಂ ಪತ್ತುಗುಂ (ಶಮದ. ೯೩ ವೃತ್ತಿ). [ಸಂ. ಪಂಚಮೀ]

**ಪಂಚಮಿಗ** (ನಾ). ಅಂತ್ಯಜ : 'ಪಂಚಮಿಗಿತಿ' ಪರಾ.
[ಪಂಚಮ + -ಇಗ]

**ಪಂಚಮಿಗಿತಿ** (ನಾ). ಪಂಚಮನ ಹೆಂಡತಿ : ಇತಿಗೆ—ಚಾಮರಿಗಿತಿ . . . ಪಂಚಮಿಗಿತಿ, ವೇರಡಿಗಿತಿ (ಶಮದ. ೨೦೮ ಪ್ರಯೋ).
[ಪಂಚಮಿಗ+-ಇತಿ₁(<-ಇತಿ)]

**ಪಂಚಮಿಸೆ** (ನಾ). ಇಪ್ಪತ್ತೈದು : ನೋಡಿದರೇನ್ರಿ ದೊಡ್ಡಮ್ಮ ನೋರೇ . . . ಇದಕ್ಕಿನ್ನೂ ಪೈಲೆ ಪಂಚಮಿಸೆ, ಆಗಲೇ ಹತ್ತಿದರೊಂದು; ಇಳಿದರೊಂದು (ಮಲ್ಲಿ. ೨೫೫).
[←ಮರಾ. ಪಂಚವಿಶೀ./ಸಂ. ಪಂಚವಿಂಶತಿ]

**ಪಂಚಮೀವಿಭಕ್ತಿ** (ನಾ). = ಪಂಚಮಿ ೪ : ಪಂಚಮೀವಿಭಕ್ತಿ :- ಇದು ಅಪಾದಾನ ನಿಮಿತ್ತಗಳನ್ನು ತಿಳಿಸುವಾಗಲೂ ಭಯ, ಆಧಿಕ್ಯ ಮೊದಲಾದ ಅರ್ಥಗಳುಳ್ಳ ಶಬ್ದಗಳು ಪ್ರಯೋಗವಾದಾಗಲೂ ಬರುವುದು (ಕೈಪಿಡಿ. ೫೫) ; 'ಹೊಳೆಯ ದೆಸೆಯಿಂದ' ಎನ್ನುವುದು ಪಂಚಮೀ ವಿಭಕ್ತಿಯ ರೂಪವೆಂದೂ, '-ದೆಸೆಯಿಂದ' ಎನ್ನುವುದು ಇಲ್ಲಿಯ ವಿಭಕ್ತಿ ಪ್ರತ್ಯಯವೆಂದೂ ಹೇಳುವುದುಂಟು (ಮಧ್ಯಮ. ೫೪). [ಸಂ.]

**ಪಂಚಮುಖ₁** (ನಾ). ೧. ಐದು ಮುಖಗಳು. ೨. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ ಎಂಬ ಪರಮೇಶ್ವರನಿಗಿರುವ ಐದು ಮುಖಗಳು : ಆ ಪಂಚಲಿಂಗಪ್ರಕಾಶವೇ ಪಂಚಮುಖವೆನಿಸಿತ್ತು ಆ ಪಂಚಮುಖದಿಂದವೆ ಪಂಚಾಕ್ಷರಿ ಉತ್ಪತ್ತಿ (ಮಹಾದೇ. ಬ. ೧೦೨-೨೩೫). ೩. ಐದು ಪಕ್ಕ,-ಮಗ್ಗುಲು : ಅಯ್ಯಾ ನಿಮ್ಮ ಪಂಚವಕ್ತ್ರಗಳೇ ಪಂಚಮುಖದ ರುದ್ರಾಕ್ಷಿಗಳಾದುವಾಗಿ . . . ಎನ್ನ ಮುಕ್ತಿಪಥಕ್ಕೆ ಈ ರುದ್ರಾಕ್ಷಿ ಸಾಧನವಯ್ಯಾ (ಬಸವ. ಶ. ೧೦೨೫). ೪. ದೇವರ ಪೂಜೆ ಮೊದಲಾದ ಸಂದರ್ಭಗಳಲ್ಲಿ ಎತ್ತುವ ಐದು ಕುಡಿಗಳುಳ್ಳ ಆರತಿ; ಪಂಚಾರತಿ: ಪಂಚಮುಖದ ಜ್ಯೋತಿ ಬೆಳಗಲು (ಪುರಂದ. ೨-೪೨-೩). ೫. ಐದು ಮುಖಗಳುಳ್ಳವನು ; ಶಿವ ; ಪರಮೇಶ್ವರ : ಪಂಚಾಕ್ಷರಗಳೊಳಗೆ ಸಂದರಾ ಘಟಮೆಯರು ಪಂಚಮುಖ ನಿರ್ದೇಡೆಗೆ ಪೋದರಾ ಪರಮೆಯರು (ನಂಬಿರ. ೧೭-೧೨೭) ; ಮುಂಚೆ ಕಿನ್ನರ ಶರಣನಸುವಂ ಹಿಂಚೆ ಬಸವರಸನ ಹರಣವಂ ಪಂಚಮುಖನಲಿ ಪಡೆದು ಮೆಚಿದನು ಮಾಚಿದೇವಯ್ಯ (ಬಸವು. ೩೭ ಸೂಚನೆ) ; ಪಂಚಮುಖ ದಶಪಂಚನೇತ್ರ ದಶಭುಜ ಎನಿಪ ಕೆಂಜೆಡೆಗಳ ಶಶಿಮೌಳಿ . . . ಬಂದಿರಯ್ಯ ಎನ್ನ ಕರಸ್ಥಲಕ್ಕೆ ಅಖಂಡೇಶ್ವರಾ (ಅಖಂಡೇ. ೩೧-೧೭).
[ಪಂಚ₂+ಮುಖ]

**ಪಂಚಮುಖ₂** (ನಾ). ಅಗಲವಾದ ಮುಖವುಳ್ಳುದು ; ಸಿಂಹ : ಯಮುನಾವಾರಿಯಂ . . . ಪೀರ್ದಂ ಗಜಾರಾತಿ . ಪಂಚಮುಖಂ ತೀಕ್ಷ್ಣನಖಂ (ಪಂಚತಂ. ೫೪-೧೨) ; ಸಾರ ಹೇಳೋ ರಾಯಕುವರ ಮುರಾರಿ ದುಶ್ಶಾಸನ ಕಣಾ ಘಡ ವೈರಿಭೀಮದ್ವಿರದಕುಂಭಸ್ಥಳಕೆ ಪಂಚಮುಖ (ಕುಮಾ.ಕ. ೧೯-೮).  [ಪಂಚ₃+ಮುಖ]

**ಪಂಚಮುಖವಾದ್ಯ** (ನಾ). ಈಶ್ವರನ ಐದು ಮುಖಗಳ ಹೆಸರುಗಳನ್ನು ಹೊಂದಿರುವ, ಐದು ಮದ್ದಳೆಗಳನ್ನು ಕೂಡಿಸಿ ಮಾಡಿರುವ ಒಂದು ಬಗೆಯ ಚರ್ಮವಾದ್ಯ : 'ಸರ್ವವಾದ್ಯಸೇವೆ', 'ಪಂಚಮುಖವಾದ್ಯ' (೫ ದೊಡ್ಡ ಮದ್ದಳೆಗಳನ್ನು ಜೋಡಿಸಿ ಬಂಡಿಯಲ್ಲಿ ತಂದು ಬಾಜಿಸುವ) ಸೇವೆಗಳು ದಕ್ಷಿಣದೇಶದ ಅನೇಕ ದೇವಸ್ಥಾನಗಳಲ್ಲಿ ರೂಢಿಯಲ್ಲಿವೆ (ಸಂಗೀಚಂ. ೧೯೩) ; ಮದ್ರಾಸಿನ ಸರ್ಕಾರಿ ಮ್ಯೂಜಿಯಮ್ಮಿನಲ್ಲಿರುವ 'ಪಂಚಮುಖವಾದ್ಯ'ವೆಂಬುದು, ಹೆಸರೇ ಹೇಳುವಂತೆ, ಐದು ಬಾಯಿಗಳಿರುವ ಒಂದು ವಾದ್ಯವನ್ನು ಸೂಚಿಸುತ್ತದೆ (ಸಂಶೋತ. ೨೪೭).
[ಪಂಚಮುಖ₁+ವಾದ್ಯ]

**ಪಂಚಮುಖಿ** (ನಾ). ಐದು ಮುಖಗಳುಳ್ಳುದು : ತೀರ ಇತ್ತೀಚೆಗೆ ಪಂಚಮುಖಿಯ ಗಣಪತಿ ವಿಗ್ರಹವೊಂದು ದೊರಕಿದೆ (ರೂಢಿ).
[ಸಂ. ಪಂಚಮುಖೀ]

**ಪಂಚಮುಖೀಮುದ್ರೆ** (ನಾ). ಮಂತ್ರ, ಜಪ ಮೊದಲಾದ ಕಾಲಗಳಲ್ಲಿ ಪ್ರಯೋಗಿಸುವ ಒಂದು ಬಗೆಯ ಕರವಿನ್ಯಾಸ : ಸಂಹಾರಮುದ್ರೆ ಪಂಚಮುಖೀಮುದ್ರೆ ಸುರಭಿಮುದ್ರೆ . . . ಎಂಬಾದಿಯಾಗಿ ಸಕಲ ಮುದ್ರೋಪಮುದ್ರಾಬಂಧಲಕ್ಷಣಂಗಳಂ ಗುರುಮುಖದಿಂದಱಿತು (ವಿವೇಕ. ೧೦೩). [ಸಂ. ಪಂಚಮುಖೀಮುದ್ರಾ]

**ಪಂಚಮುದ್ರಿಕೆ** (ನಾ). = ಪಂಚಮುದ್ರೆ ೨ : ಶಿವನಿರೂಪದಿ ಕುಮಾರೇಶನತಿಪ್ರೇಮದಿಂ . . . ನೆರೆ ಪಂಚಮುದ್ರಿ[ಕೆಗಳನಾಂತು]ಪಟ್ಟಸ್ಥಳಂಗಳನರಿದನು (ಕುಮಾರ. ೨ ಸೂಚನೆ). [ಪಂಚ₂ + ಮುದ್ರಿಕೆ]

**ಪಂಚಮುದ್ರೆ** (ನಾ). ೧. ಆವಾಹನೀ, ಸ್ಥಾಪನೀ, ಸನ್ನಿಧಾಪನೀ, ಸಂಬೋಧನೀ, ಸಂಮುಖೀಕರಣೀ ಎಂಬ ದೇವರ ಪೂಜಾಕಾಲದಲ್ಲಿ ಮಾಡುವ ಐದು ಬಗೆಯ ಅಂಗುಳೀವಿನ್ಯಾಸಗಳು ; ℙ (i) ಪುಷ್ಪಗಳಿಂದ ತುಂಬಿದ ಅಂಜಲಿಯು ಆವಾಹನೀಮುದ್ರೆ, (ii) ಕೆಳಮುಖವಾದ ಅಂಜಲಿಯು ಸ್ಥಾಪನೀಮುದ್ರೆ, (iii) ಮೇಲುಮುಖವಾದ ಅಂಗುಷ್ಠಗಳಿಂದ ಕೂಡಿದ ಮುಷ್ಟಿಬಂಧವು ಸನ್ನಿಧಾಪನೀ ಮುದ್ರೆ, (iv) ಅಂಗುಷ್ಠಗಳನ್ನು ಒಳಗಡೆ ಸೇರಿಸಿದ ಮುಷ್ಟಿಬಂಧವು ಸಂಬೋಧನೀಮುದ್ರೆ , (v) ಮೇಲುಮುಖವಾದ ಮುಷ್ಟಿಯ ಜೋಡಣೆಯು ಸಂಮುಖೀಕರಣ ಮುದ್ರೆ—ಇವು ಪೂಜಾಕಾಲದ ಪಂಚಮುದ್ರೆಗಳು. ೨. [ವೀಶೈ]ವೀರಶೈವ ದೀಕ್ಷೆಗೆ ಅಂಗವಾದ ಭಸ್ಮಘುಟಿಕೆ, ಕಂಥೆ, ದಂಡ, ಭಿಕ್ಷಾಪಾತ್ರೆ ಮತ್ತು ಕಮಂಡಲು ಎಂಬ ಐದು ಬಗೆಯ ಬಾಹ್ಯಚಿಹ್ನೆಗಳು : ಶೈವರಂದದಿ ಪಂಚಮುದ್ರೆಗಳೋಲವೊಪ್ಪುತವಿಪ್ಪರಂ . . . ಕಳುಹಲು (ಬಸವು.೨೭-೩೪); ಕಂಥೆ ದಂಡ ಕಮಂಡಲು ಭಿಕ್ಷಾಪಾತ್ರೆ ಭಸ್ಮಘುಟಿಕೆಯೆಂಬ ಬಾಹ್ಯಪಂಚಮುದ್ರೆಗಳಂ ಆಯಾ ಮಂತ್ರಪೂರ್ವಕವಾಗಿ ಧರಿಸಿ (ವಿವೇಕ.೧೨೬) ; ಬಹಿರಂಗದಲ್ಲಿ ಕಂಥೆ ಕರ್ಪರ ದಂಡ ಕಮಂಡಲು ಭಸ್ಮದ ಗುಂಡಿಗೆ ಎಂಬ ಪಂಚಮುದ್ರೆಗಳ ಧರಿಸಿಧರೆಯ ಮಂಡಲದೊಳಗೆ ಚರಿಸುವ ಅಣ್ಣಗಳ ಕಂಡು ಬೆಚಗಾದೆನಯ್ಯಾ (ಅಖಂಡೇ. ೪೯-೭೪). ೩. ಲಿಂಗ, ಜಡೆ, ರುದ್ರಾಕ್ಷಿ, ಭಸ್ಮ ಮತ್ತು ಉಪವೀತಗಳೆಂಬ ಐದು ಚಿಹ್ನೆಗಳು : ಲಿಂಗ ಜಡೆ ರುದ್ರಾಕ್ಷಿ ಭಸಿತಂ ಕಂಗೊಳಿಸುವುಪವೀತವೆಂಬ ಶಿವಾಂಗವಹ ಶ್ರೀಪಂಚಮುದ್ರೆಯ ಗುರುಮುಖದಿ ಮಗನೆ ಅಂಗದೊಳು ಧರಿಸಿದರೆ ಮಾಯಾಸಂಗ ಬಿಡುವುದು (ಶಂಕದಾ.೩-೩೨). ೪. [ದ್ವೈತ] ಶರೀರದಲ್ಲಿ ಗೋಪೀಚಂದನದಿಂದ ಧರಿಸುವ ಶಂಖ, ಚಕ್ರ, ಗದೆ, ಪದ್ಮ ಮತ್ತು ನಾರಾಯಣ ಎಂಬ ಐದು ಮುದ್ರೆಗಳು : ಪಂಚಮುದ್ರೆಗಳನ್ನು ಧಾರಣ ಮಾಡುವಾಗ ಅವುಗಳಲ್ಲಿ ಚಿಂತಿಸಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ (ಹಸಾರ. ೨-೨೮ ತಾತ್ಪರ್ಯ) ; ಅವರಲ್ಲಿಯು ಕೆಲವರು'ಘನಪಟ್ಟಿ ನಾಮತಿರುಚೂರ್ಣ'ಗಳನ್ನೂ ಇನ್ನು ಕೆಲವರು'ಗೋಪೀಚಂದನ-ಪಂಚಮುದ್ರೆ'ಗಳನ್ನೂ ಬೇರೆಯ ಕೆಲವರು 'ಭಸಿತ-ಗಂಧಾಕ್ಷತೆ' ಗಳನ್ನೂ 'ಭಾಳಲಾಂಛನ'ವನ್ನಾಗಿ ಮಾಡಿಕೊಂಡರು (ಕರ್ನಾಜ. ೯೭).
[ಪಂಚ₂+ಮುದ್ರೆ]

**ಪಂಚಮುಷ್ಟಿ** (ನಾ). ೧. ಐದು ಹಿಡಿ. ೨. [ಜೈನ] ಕೇಶಲುಂಛನದಲ್ಲಿ ಉಪಯೋಗಿಸುವ ಐದು ಹಿಡಿ ; ℙ ಎರಡು ಮುಟ್ಟಿಗೆಗಳಿಂದ ತಲೆಯ ಕೂದಲುಗಳನ್ನು ಕಿತ್ತುಕೊಳ್ಳುವುದು, ಎರಡು ಮುಟ್ಟಿಗೆಗಳಿಂದ ಎರಡೂ ಮಗ್ಗಲಿನ ಮೀಸೆಯ ಕೂದಲುಗಳನ್ನು ಕಿತ್ತುಕೊಳ್ಳುವುದು, ಇನ್ನೊಂದು ಮುಟ್ಟಿಗೆಯಿಂದ

ಗದ್ದದ ಕೂದಲುಗಳನ್ನು ಕಿತ್ತುಕೊಳ್ಳುವುದು. ಇದು ಪಂಚ ಮುಷ್ಟಿಲೋಚವಾಗಿದೆ : ಆ ಜಗತ್ಪತಿ . . . ಆತ್ಮಕೇಶಕಳಾಪಂ ಬರೆ ಪಂಚಮುಷ್ಟಿಗೆ ಜಿನಶ್ರೀದೀಕ್ಷೆಯಂ ತಾಳ್ದಿದಂ (ಶಾಂತಿಪು. ೮–೧೨೩). **೩.** ದೇಹದ ಐದು ಅಂಗಗಳಿಂದ ಮಾಡುವ ನಮಸ್ಕಾರ: ಅಂತರ್ಚಿಸಿ ಗುರುಭಕ್ತಿಪೂರ್ವಕಂ ಪಂಚಮುಷ್ಟಿಯಿಂ ವಂದಿಸುವುದುಂ (ಪುಷ್ಪಪು. ೯–೫೨); ಪಂಚಮುಷ್ಟಿ ಪರಿನಿಷ್ಠಿತಾಂಗಯಷ್ಟಿಯಾಗಿ ವಂದನೆಯಂ ಮಾಡಿ ಮುಂದೆ ನೆಲದೊಳ್ ಕುಳ್ಳಿರ್ದು (ಬಾಹುಪು.೩–೪೮ ಪ).
[ಪಂಚ$_2$+ಮುಷ್ಟಿ$_2$]

**ಪಂಚಮೂರ್ತಿ** (ನಾ). [ಶೈವ] ಪಂಚಕೃತ್ಯಗಳನ್ನು ನೆರವೇರಿಸುವ ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ ಮತ್ತು ಸದಾಶಿವ ಎಂಬ ಐವರು ದೇವರು : ಆ ಪಂಚಶಕ್ತಿಯರಿಗೆ ಪಂಚಮೂರ್ತಿಯರ ಕೈಗೊಳಿಸಿದಾತ ನಮ್ಮ ಬಸವಯ್ಯನು (ಶೀಲವ. ೨೫–೧); ಪರಮೇಶ್ವರನು . . . ಪಂಚಕೃತ್ಯಗಳನ್ನು ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ, ಸದಾಶಿವರೆಂಬ ಪಂಚಮೂರ್ತಿಗಳಿಂದ ನೆರವೇರಿಸುತ್ತ ಭಕ್ತಾನುಗ್ರಹ ಮಾಡುತ್ತಾನೆಂಬುದು ಶೈವಾಗಮದ ಸಿದ್ಧಾಂತ (ಭಾರದ. ೭೫).
[ಪಂಚ$_2$+ಮೂರ್ತಿ]

**ಪಂಚಮೂಲ**(ನಾ).[ವೈದ್ಯ]ಗುಳ್ಳ, ನೆಲಗುಳ್ಳ, ಎರಡೆಲೆಹೊನ್ನೆ, ಮೂರೆಲೆಹೊನ್ನೆ ಮತ್ತು ನೆಗ್ಗಿಲುಗಳ ಐದು ಬಗೆಯ ಬೇರುಗಳು ; ℙ ಪಂಚಮೂಲಗಳಲ್ಲಿ ಲಘುಪಂಚಮೂಲ, ಬೃಹತ್ ಪಂಚಮೂಲ, ಶತಾವರ್ಯಾದಿ ಪಂಚಮೂಲ, ತೃಣಪಂಚಮೂಲ, ಜೀವಿಕಾದಿ ಪಂಚಮೂಲ, ಪುನರ್ನವಾದಿ ಪಂಚಮೂಲ, ಗೋಕ್ಷುರಾದಿ ಪಂಚಮೂಲ, ವಲ್ಲೀಪಂಚಮೂಲ ಎಂದು ಎಂಟು ಭೇದಗಳಿವೆ : ಗುಳ್ಳ ನೆಲಗುಳ್ಳ ಎರಡೆಲೆಹೊನ್ನೆ ಮೂರೆಲೆಹೊನ್ನೆ ನೆಗ್ಗಿಲು ಇವು ಲಘುಪಂಚಮೂಲವೆನಿಸಿಕೊಂಬುವು (ವೈದ್ಯಸಾ. I, ೬೩). [ಪಂಚ$_2$+ಮೂಲ]

**ಪಂಚಮೇಂದ್ರಿಯನಂದಿನಿ** (ನಾ). [ಸಂಗೀತ] ಒಂದು ರಾಗದ ಹೆಸರು : ಗಾಂಧಾರಿ . . . ಪಂಚಮೇಂದ್ರಿಯನಂದಿನಿ . . . ಕೌಶಿಕಿಯೆಂಬ ಹತ್ತು ರಾಗಂಗಳು ಮಧ್ಯಮಗ್ರಾಮದಿಂ ಪುಟ್ಟಿದವು(ವಿವೇಕ.೨೩೩).
[ಸಂ. ಪಂಚಮೇಂದ್ರಿಯನಂದಿನೀ]

**ಪಂಚಯಜ್ಞ** (ನಾ). = ಪಂಚಮಹಾಯಜ್ಞ **೧ :** ಷಟ್ಕರ್ಮಸಹಿತನಾದ ವಿಪ್ರನು ಕೃಷಿಕರ್ಮವನ್ನೂ ಮಾಡಬಹುದು . . . ಅವನು ತಾನೇ ನೆಲವನ್ನು ಉತ್ತು ಹದಮಾಡಿ ತಾನೇ ಸಂಪಾದಿಸಿದ ಬೀಜಗಳನ್ನು ಬಿತ್ತಿ ಪಂಚಯಜ್ಞಗಳನ್ನಾಚರಿಸಬೇಕು (ಭಾರದ. ೫೫); ಉತ್ತರಸಹ್ಯಾದ್ರಿಯಲ್ಲಿ ಹೇಳಿದಂತೆ ಪಾಟಾಳಿಯು ದಾಸಿಪುತ್ರನಾದುದು. . . ಪಂಚಯಜ್ಞ ತರ್ಪಣ . . . ಕಾಮುವ್ರತಾದಿಗಳ ಆಚರಣೆ–ಇತ್ಯಾದಿಗಳನ್ನು ಮಾಡಬಾರದವನಾದುದು, ನೀಚಮಾರ್ಗಾವಲಂಬಿಯಾದುದು ಹೇಗೆ ಎಂಬುದು ವಿಚಾರಕ್ಕೆ ನಿಲುಕದಾಗಿದೆ (ತುಳುನಾ. ೧೦೯).
[ಪಂಚ$_2$+ಯಜ್ಞ]

**ಪಂಚಯೋಗ** (ನಾ). **೧.**ಐದು ಪದಾರ್ಥಗಳ ಸಂಯೋಗ. **೨.**ಐದು ಬಗೆಯ ಯೋಗಗಳು ; ℙ ಭಕ್ತಿಯೋಗ, ಕರ್ಮಯೋಗ, ರಾಜಯೋಗ, ಜ್ಞಾನಯೋಗ, ಮತ್ತು ಹಠಯೋಗ ಅಥವಾ ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ ಮತ್ತು ಶಿವಯೋಗ ಎಂದು ಬೇರೆಬೇರೆ ಉಲ್ಲೇಖಗಳಿವೆ : ಗಗನಹುಚ್ಚನೆ ಪಂಚಯೋಗಗಳು (ಗಗತಾ. ೧–೯); ಕೇಳು ಬಳಿಕ ಪಂಚಯೋಗವಿದನು ಮಾಡಲಾಳಲಹುದು ಮುಕ್ತಿಪದವನು (ಸುಜ್ಞಾ.ಚಂ. ೧೨೭ ಪಲ್ಲವಿ). [ಪಂಚ$_2$+ಯೋಗ]

**ಪಂಚರಂಗ** (ನಾ). ಬಿಳುಪು, ಕಪ್ಪು, ಕೆಂಪು, ಹಳದಿ ಮತ್ತು ಹಸುರು ಎಂಬ ಐದುಬಣ್ಣಗಳು: ೪ ತಳಿಗೆಯುಲು ಪಂಚರಂಗದಕ್ಕಿಯಿಂ ದೊಪ್ಪಂಮಾಡಿ ಹಿಟ್ಟಿನ ಸೊಡರ್ಗಳಧಿದೂರ್ವ್ವವೆರಸಾರತಿ ನಿವಾಳಿಸುವಲ್ಲಿ (ಎಕ. VII, ಶಿಕಾ. ೧೮೫–೭೯ ; 1158) ; ಬಿಡಲುಪಟ್ಟ ಬೇಂಟೆಯುಳ್ಳ ಪುರುಷನು ಪಂಚರಂಗದ ವಸ್ತ್ರ ನಾಣೆಯ ಶಿಲೆ ಲೆಪ್ಪ ಕಾಷ್ಠ ಮೊದಲಾದವರಲ್ಲಿ ಸ್ಥಾಪಿಸಲ್ಪಟ್ಟ ಜೀವಂಗಳ ಭೇದ ಮೊದಲಾದವನ್ನು ಮಾಡಲಾಗದು (ಸಾಗಾಧ. ೩೪) ; ಪಂಚರಂಗದ ಚೂಣಿಕೆ . . . ಮಂಟಪ ಸುಂದರವಾಗಿ ರಾರಾಜಿಸುತ್ತಿತ್ತು (ಗಿರಿನ. ೧೨೩).
[ಪಂಚ$_2$+ರಂಗ]

**ಪಂಚರಂಗಿ** (ನಾ). **೧.**ಐದು ಬಣ್ಣಗಳುಳ್ಳದು. **೨.** ದೇಹದ ಮೇಲೆ ಐದು ಕಡೆ ಬಿಳಿಯ ಮಚ್ಚೆಗಳುಳ್ಳ ಕುದುರೆ; ಪಂಚಕಲ್ಯಾಣಿ : ನಾಲ್ಕು ಕಾಲಿನಲ್ಲೂ ಗೊರಸಿನ ಹತ್ತಿರ ಬಿಳಿಯ ಬಣ್ಣವಿದ್ದು ಹಣೆಯಲ್ಲಿ ಮೂಗಿನ ಮೇಲೆ ಬಿಳಿಯ ಪಟ್ಟೆಯಿದ್ದಿತು. ಅಂಥ ಕುದುರೆಗೆ ಪಂಚರಂಗಿಯೆಂದು ಕರೆಯುವ ವಾಡಿಕೆ (ಚೆಂಗಾಳ್ವ. ೨೫). **೩.** ಉತ್ತಮ ನಡತೆಯ ಖೈದಿ : ಜೇಲಿನಲ್ಲಿ ದೀರ್ಘಾವಧಿ ಶಿಕ್ಷೆಗೆ ಒಳಗಾದವರು, ಜೇಲಿನ ಅಧಿಕಾರಿಗಳಿಂದ ಉತ್ತಮನಡತೆಗೆ ಪ್ರಶಸ್ತಿ ದೊರಕಿಸಿಕೊಂಡವರು 'ಪಂಚರಂಗಿ'ಗಳೆಂದು ಕರೆಯಿಸಿಕೊಂಡು ಸಹಾಯಕರಾಗಿ ಕೆಲಸ ಮಾಡುತ್ತಾರೆ. ಖೈದಿಗಳನ್ನು ಪೀಡಿಸಲು ಪಂಚರಂಗಿಗಳ ಪಾತ್ರವು ಮುಖ್ಯ (ಆತ್ಮಾಪರ. ೭). [ಸಂ. ಪಂಚರಂಗಿನ್]

**ಪಂಚರತ್ನ** (ನಾ). **೧.** ಐದು ಬಗೆಯ ರತ್ನಗಳು ; ℙ ನೀಲ, ವಜ್ರ, ಪದ್ಮರಾಗ, ಮುತ್ತು, ಹವಳ ಅಥವಾ ಚಿನ್ನ, ಬೆಳ್ಳಿ, ಮುತ್ತು, ಮಾಣಿಕ್ಯ, ಹವಳ ಅಥವಾ ಚಿನ್ನ, ವಜ್ರ, ನೀಲ, ಪದ್ಮರಾಗ, ಮುತ್ತು ಹೀಗೆ ವಿವರಗಳಲ್ಲಿ ಅನೇಕ ಭೇದಗಳಿವೆ: ಪಂಚರತ್ನಂಗಳುಮಂ ಪುದುಂಗೊಳಿಸಿ ಪೊಂಗಳಸಂಗಳೊಳಿರ್ದ ಪುಣ್ಯತೋಯಂಗಳೊಳಟ್ಟಿಱಂ ಮಿಸಿಸಿ ಕಟ್ಟಿದನಾ ವಿಭು ವೀರಪಟ್ಟಮಂ (ಪಂಪಭಾ. ೧೦–೧೫); ಪಸರಿಸಿದ ಪಂಚರತ್ನದ ಪಸರದ ಪೃಥು ರಾಶಿ ಗಗನಮಂ ತಾಗೆ (ಶಾಂತಿಪು. ೯–೨೦೮) ಪುಣ್ಯತೀರ್ತ್ಥಂಗಳೊಳ್ ಸಾಸಿರ ಕವಿಲೆಯು ಕೋಡುಂ ಕೊಳಗುಮಂ ಪಂಚರತ್ನದೊಳ್ ಕಟ್ಟಿಸಿ (ಸೌಇಇ. XX,೭೪–೩೮ ; 1112); ಧೃತ ಪಂಚರತ್ನಮಂ ರಾಗಿತೆಯೊಳ್ ಭೂಷಣಮನಾಂಪ ತೇಜದಿಂದೆ . . . ಅಂತನಾ ವಿಭು ತಪಮಂ (ಚಂದ್ರಪು. ೧೧–೨) ; ಮುತ್ತು ಪಚ್ಚೆ ಪವಳಂ ವಜ್ರ ಸುನೀಲಂ ತರೆಂತರದಿಂ ಸಾಲಿಡೆ ಪಂಚರತ್ನಮಯ ಧಾರಾಸಾರಮೇ ನೊಪ್ಪಿತೋ (ಪುಷ್ಪಪು. ೯–೫೪). **೨.** ಐದು ಶ್ಲೋಕಗಳ ಗುಂಪು, —ಪುಂಜ : ಇಂತೆಂದಾ ಪಾಂಡ್ಯರಾಜಂ ಸುಲಲಿತತರ ಸತ್ಪಂಚರತ್ನಂಗಳಿಂದಂ ಕಾಂತೋದ್ಯದ್ಭಕ್ತಿಯುಕ್ತಂ ನುತಿಸೆ (ಹಾಲಾಸ್ಯ. ೨–೫–೪೦) ; ಅವಳು ಗಣೇಶ ಪಂಚರತ್ನವನ್ನು ಬಹಳ ಚೆನ್ನಾಗಿ ಹಾಡುತ್ತಾಳೆ(ರೂಢಿ).

**ಪಂಚರತ್ನ ಕೃತಿ**=ನಾಟಿ, ಗೌಳ, ವರಾಳಿ, ಆರಭಿ ಮತ್ತು ಶ್ರೀರಾಗ ಎಂಬ ಐದು ಘನರಾಗಗಳಲ್ಲಿ ರಚಿತವಾದ ತ್ಯಾಗರಾಜರ ಐದು ಕೃತಿಗಳು : ಅಲ್ಲಿನ ಅಧಿದೇವತೆಗಳೆಲ್ಲರ ಪರ ತ್ಯಾಗರಾಜರು ಕೃತಿರಚನೆ ಮಾಡಿದ್ದಾರೆ. ಸ್ಥೂಲವಾಗಿ ಆ ಕೃತಿಗಳನ್ನು ಹೀಗೆ ವಿಂಗಡಿಸಬಹುದು :–೧. ತಿರುವಟ್ಟಿಯೂರು ಪಂಚರತ್ನ ಕೃತಿಗಳು. ೨. ಚೆನ್ನಪಟ್ಟಣ (ಮದ್ರಾಸ್) ಕೃತಿಗಳು. ೩. ಕೋವೂರು ಪಂಚರತ್ನ ಕೃತಿಗಳು . . . ೧೦. ಷೋಲಿಂಗರ್ ಕ್ಷೇತ್ರ ಕೃತಿಗಳು (ಸಂಗೀಚಂ. ೨೩೮).
[ಪಂಚ$_2$+ರತ್ನ]

**ಪಂಚರಸ** (ನಾ). **೧.** ತುಪ್ಪ, ಹಾಲು, ಜೇನುತುಪ್ಪ, ಎಣ್ಣೆ,—ಮತ್ತು ಮದ್ಯ ಎಂಬ ಐದು ಬಗೆಯ ದ್ರವಪದಾರ್ಥಗಳು. **೨.** [ವೈದ್ಯ] ಕಹಿ, ಹುಳಿ, ಕಾರ, ಸಿಹಿ ಮತ್ತು ಒಗಚು ಎಂಬ

ಐದು ಬಗೆಯ ರಸಗಳು ; ☞ "ರಸ—೫ : (ಅ) ಘೃತ, ಕ್ಷೀರ ಮಧು, ತೈಲ, ಮದ್ಯ (ಕಿ). (ಆ) ಲಾಲಾರಸ, ಮಧುರರಸ, ಜಠರರಸ, ಪೈತ್ಯರಸ, ಆಂತ್ರರಸ (ವಿದ್ಯಾಕ. ೬೪). (ಇ) ಯಶಸ್ಸು, ತೇಜ, ಇಂದ್ರಿಯ, ವೀರ್ಯ, ಅನ್ನಾದ್ಯ (ಛಾಂದೋಗ್ಯ. ೩-೧-೩). (ಈ) ಮಧುರ, ಆಮ್ಲ, ಕಟು, ಕಷಾಯ, ತಿಕ್ತ—ಈ ರಸಗುಣಗಳಿರುವ ನೆಲ್ಲಿಕಾಯಿ (ಚರಕ. I,೧-೨೮,೩೫).(ಉ) ತಿಕ್ತ, ಆಮ್ಲ,ಕಟುಕ,ಮಧುರ, ಕಷಾಯ (ತತ್ತ್ವಪ್ರ. ೫-೨೪೨)." (ಶ್ರೀವತ್ಸ. ೩೬೯). [ಪಂಚ$_2$ + ರಸ]

**ಪಂಚರಸಿ** (ನಾ). ಚಿನ್ನ, ಬೆಳ್ಳಿ, ಕಬ್ಬಿಣ, ತಾಮ್ರ ಮತ್ತು ತವರ ಎಂಬ ಐದು ಬಗೆಯ ಲೋಹಗಳು : ಪರಾಭವ ಸಂ ಭಾದ್ರಪದ ಶು ೧೪ ಲು ಸುಬಾಚಾರಿ ಮಡಿದ ರುಪಾಯಿ ಮಡವ ಪಂಚರಸಿಯ ಸಳಾಕೆ ಮ ೨೪ ನೆ॥ ೯ (ಮೈಆರ್. ೧೯೩೧, ೬೨-೧ ; 1726).
[←ಮರಾ. ಪಂಚರಸೀ]

**ಪಂಚರಾತ್ರ** (ನಾ). ೧. ಐದು ರಾತ್ರಿಗಳು. ೨. ವಾಶಿಷ್ಠ, ನಾರದೀಯ, ಕಾಪಿಲ, ಗೌತಮಿಾಯಕ, ಸನತ್ಕುಮಾರೀಯ ಎಂಬ ಐದು ವಿಧವಾದ ಜ್ಞಾನಗಳನ್ನು ಉಪದೇಶಿಸುವ ಒಂದು ತತ್ತ್ವಶಾಸ್ತ್ರ : ಪಂಚರಾತ್ರಶಾಸ್ತ್ರವನ್ನು ಭಗವಂತನು ವ್ಯೂಹ ವಾಸು ದೇವಾವತಾರದಲ್ಲಿ ಉಪದೇಶಿಸಿರುವನು . . . ಈ ನಾಲ್ಕು ಅಂಶಗಳನ್ನೂ ಪರಸ್ಪರ ಅನುಕೂಲವಾಗಿ ಸೇರಿಸಿ ಒಂದು ತತ್ತ್ವವನ್ನಾಗಿ ಮಾಡಿ ಉಪ ದೇಶಿಸುವುದಕ್ಕಾಗಿಯೇ ಹೊರಟಿರುವುದು ಪಂಚರಾತ್ರಶಾಸ್ತ್ರ (ಹಿಂದಸಾ. ೨೪೩). ೩. ಐದು ವಿಧವಾದ ಜ್ಞಾನಗಳು : "ಪಂಚರಾತ್ರಗಳು ಎಂದರೆ ಪಂಚವಿಧ ಜ್ಞಾನಗಳು : ಸಾತ್ತ್ವಿಕ, ಸಾತ್ತ್ವಿಕ, ನೈರ್ಗುಣ್ಯ, ರಾಜಸಿಕ, ತಾಮಸ (ಶಕದ್ರು. IV, ೧೩)." (ಶ್ರೀವತ್ಸ. ೩೬೬). [ಸಂ.]

**ಪಂಚರಾಯುಧ** (ನಾ). ಒಂದು ಬಗೆಯ ಆಯುಧ( ? ): ತೊಳಗುವ ಬಾಳ್ ತಟಿತ್ತಟಿಾಪ ಕಕ್ಕಡೆ ಬಂಭುಕದೊಳ್ ತಗುಳ್ದು ಪಜ್ಜಳಿಸುವ ಪಂಚರಾಯುಧಂ . . . ಭಯಂಗೊಳಿಸೆ ಕಡಂಗಿ ತಾಗಿದುದಸುಂಗೊಳೆ ತುಂಗತುರಂಗಸಾಧನಂ (ಪಂಪಭಾ. ೧೦-೬೬) ; ಪಂಚರಾಯುಧಂ ಬೆರಸೆಸೆವಟ್ಟೆ . . . ಪೊರೆದಿರೆ ಬಿನ್ನಣಂ ನೆಗಟಿಕೆ ತಳ್ತಿಱಿದರ್ ಕೆಲರಾಜಿರಂಗದೊಳ್ (ಪಂಪಭಾ. ೧೦-೬೪). [ ? ]

**ಪಂಚರಾಶಿ** (ನಾ). [ಗಣಿತ] ಒಂದು ಬಗೆಯ ಲೆಕ್ಕ ; ಐದು ಹಂತಗಳ ರಚನೆಯಿಂದ ಉತ್ತರವನ್ನು ಪಡೆಯುವ ಲೆಕ್ಕ ; ದ್ವಿಗುಣಿತ ತ್ರೈರಾಶಿ : ಪಂಚರಾಶಿ . . . ಮಿಗೆ ಪಂಚಸಪ್ತ ನವರಾಶಿಗಳೊಳ್ ಪಡುವುಱಿಯ ಬೇಱಿವೇಱಿಕ್ಕೆಲದೊಳ್ ನೆಗಟ್ದುರ್ದ ರಾಶಿ ತನ್ಮೊಳ್ ಮಿಗೆ ಗುಣಿಯಿಸಲೊಡ್ಡಿದಲ್ತೆ ರಾಜಾದಿತ್ಯಾ ? (ವ್ಯವಹಾ. ೩೩-೨). [ಪಂಚ$_2$ + ರಾಶಿ]

**ಪಂಚರಾಶಿಕ** (ನಾ). = ಪಂಚರಾಶಿ : ಇನ್ನು ಮುಂದೆ ರಾಜಾದಿತ್ಯದ ಗಣಿತದಲ್ಲಿ ತ್ರಯಿರಾಶಿಕ ಬೆಸ್ತ ತ್ರಯಿರಾಶಿಕ ಪಂಚರಾಶಿಕ ಬೆಸ್ತ ಪಂಚರಾಶಿಕ (ವ್ಯವಹಾ. ಅನುಬಂಧ. I,೧೧-೧೦) ; ಮಿಗೆ ಪಂಚರಾಶಿಕದೊಳಗೆ ಮಿಗೆ ಮಧ್ಯದ ರಾಶಿಯನೆ ತಂದು (ವ್ಯವಹಾ. ಅನುಬಂಧ. I, ೩೪-೨).
[ಸಂ.]

**ಪಂಚರೂಪ** (ನಾ). ೧. ಐದು ಆಕಾರಗಳು : ಮಾತರಿಶ್ವನು ಪಂಚರೂಪದಿ ಪಾತಕಗಳೆಂಬರಿಗಳನು ಸಂಹರಿಪ ತಳವಾರ (ಹಸಾರ. ೫-೨೦). ೨. [ದ್ವೈತ] ಪರಮಾತ್ಮನ ಐದು ರೂಪಗಳು : ಪಂಚರೂಪಗಳು –ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣನೆಂಬ ಪರಮಾತ್ಮನ ಐದು ರೂಪಗಳು (ಹಸಾರ. ೧-೯ ತಾತ್ಪರ್ಯ).
[ಪಂಚ$_2$+ರೂಪ]

**ಪಂಚಲಕ್ಷಣ** (ನಾ). ೧. ಪುರಾಣಗಳ ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ ಮತ್ತು ವಂಶಾನುಚರಿತ ಎಂಬ ಐದು ಲಕ್ಷಣಗಳು : ಮತ್ತಮಾ ಪುರಾಣಂಗಳಲ್ಲಿ ಸರ್ಗ ಪ್ರತಿಸರ್ಗ ವಂಶ ಮನ್ವಂತರ ವಂಶಾನು ಚರಿತೆಗಳೆಂಬ ಪಂಚಲಕ್ಷಣಂಗಳುಂ . . . ವಿದಿತಂಗಳಕ್ಕುಂ (ವಿವೇಕ. ೯) ; "ಪುರಾಣಂ, ಪಂಚಲಕ್ಷಣಂ . . . ಪಂಚಲಕ್ಷಣಗಳಿಂದೊಡಗೂಡಿದ ಸ್ಕಾಂದಾದಿ ಪುರಾಣಗಳ ಹೆಸರುಗಳು" (ಸಿದ್ಧಾಂತಿ. ೫೦). ೨. ಪುರಾಣ: ಪುರಾಣವೆಂದರೆ . . . ವ್ಯಾಸರೇ ಮೊದಲಾದ ಮುನಿಗಳಿಂದ ರಚಿತವಾದ ಪಂಚಲಕ್ಷಣ ಸಮನ್ವಿತವಾದ ಶಾಸ್ತ್ರ ಎಂದೂ ಪುರಾಣಶಬ್ದಕ್ಕೆ ನಿರ್ವಚನ ವನ್ನು ಹೇಳುತ್ತಾರೆ (ಭಾರದ. ೧೩೪). ೩. ಪರಮಾತ್ಮನಿಗಿರುವ ಸತ್, ಚಿತ್, ಆನಂದ, ನಿತ್ಯತ್ವ ಮತ್ತು ಪರಿಪೂರ್ಣತ್ವ ಎಂಬ ಐದು ಲಕ್ಷಣಗಳು,—ಧರ್ಮಗಳು : ಸಚ್ಚಿದಾನಂದ ನಿತ್ಯ ಪರಿಪೂರ್ಣತ್ವಮೆಂಬ ಪಂಚಲಕ್ಷಣಾಂಚಿತಮಾಗಿ ಬಿಂದುವೊಪ್ಪಿತ್ತು (ಮನೋವಿ. ೨-೩೯ ಟೀಕು). [ಪಂಚ$_2$ + ಲಕ್ಷಣ]

**ಪಂಚಲಪನ**$_1$ (ನಾ). ಪಂಚಮುಖಗಳುಳ್ಳವನು; ಶಿವ : ಪಂಚಲಪನನ ಪಂಚಮುಖಯುವಂಗಳಿಗೆ ಗುರಿ ಸಂಚು ತಪ್ಪದ ತೆರದಿ ಲಕ್ಷಿಸಿಯೆ ತನ್ನಯ ಪಂಚವಿಶಿಖಂಗಳನು ಸರ್ವಶಕ್ತಿಯ ಬಲದಿಯೆಚ್ಚೆಚ್ಚು ಬೊಬ್ಬಿರಿಯಲು (ನವಮೋ. ೬-೪೯). [ಪಂಚ$_2$+ಲಪನ]

**ಪಂಚಲಪನ**$_2$ (ನಾ). = ಪಂಚಮುಖ$_2$: ಸದಾಭ್ರಾಂತ ಬೌದ್ಧಾದಿಮತ ಕುಂಭವಿದಳನ ಪಂಚಲಪನನನುಪಮವೀರನು (ಆರಾಚ. ೨-೨-೩೩).
[ಪಂಚ$_3$ + ಲಪನ]

**ಪಂಚಲಬ್ಧಿ** (ನಾ). [ಜೈನ] ಕ್ಷಯೋಪಶಮ, ವಿಶುದ್ಧಿ, ದೇಶನೆ, ಪ್ರಾಯೋಗ್ಯತೆ ಮತ್ತು ಕರಣ ಎಂಬ ಸಮ್ಯಕ್ತ್ವಕ್ಕೆ ಕಾರಣವಾದ ಐದು ಲಬ್ಧಿಗಳು ; ☞ಪಂಚೇಂದ್ರಿಯಗಳು ಬುದ್ಧಿಶಕ್ತಿಗೊಳಗಾಗಿ ರುವುದು ಅಥವಾ ಪಾಪದ ಉದಯವನ್ನು ನಶಿಸುವಂಥದು ಕ್ಷಯೋಪಶಮ, ಅಶುಭವನ್ನುಳಿದು ಶುಭದ ಕಡೆ ಚಲಿಸುವಂಥದು ವಿಶುದ್ಧಿ, ಜಿನವಾಣಿಯನ್ನು ಅರಿತುಕೊಳ್ಳುವುದು ಅಥವಾ ಮನನ ಮಾಡುವ ತೀವ್ರಾಸಕ್ತಿಯೇ ದೇಶನಾ, ವಿಶೇಷವಾದ ಮನನದಿಂದ ಕರ್ಮಸ್ಥಿತಿಯನ್ನು ತೊಡೆದುಕೊಳ್ಳುವುದು ಪ್ರಾಯೋಗ್ಯ, ಅಧಃ, ಅಪೂರ್ವ, ಅನಿವೃತ್ತಿ ಎಂಬ ಕರಣ ಗಳನ್ನು ಪಡೆಯುವುದು ಅಂದರೆ ಅನಂತಗುಣವಿಶುದ್ಧಿಯ ಸಮಯದಲ್ಲಿ ಉಂಟಾಗುವ ಪರಿಣಾಮಗಳ ಪ್ರಾಪ್ತಿಯೇ ಕರಣ: ಕ್ಷಯೋಪಶಮ ವಿಶೋಧಿ ದೇಶನಾ ಪ್ರಾಯೋಗ್ಯ ಕರಣಾಭಿಧಾನ ಪಂಚ ಲಬ್ಧಿಗಳಪ್ಪುವು (ತತ್ತ್ವಪ್ರ. ೮೦) ; ಕ್ಷಯೋಪಶಮ ಲಬ್ಧಿ . . . ಕರಣ ಲಬ್ಧಿಗಳೆಂದು ಪಂಚಲಬ್ಧಿಗಳಂ ಪಡೆದಂ (ಪಸಾರ. ೩೪). [ಪಂಚ$_2$+ಲಬ್ಧಿ]

**ಪಂಚಲವಣ** (ನಾ). ಕಾಚಕ, ಸೈಂಧವ, ಸಾಮುದ್ರ, ಬಿಡ ಮತ್ತು ಸೌವರ್ಚಲ ಎಂಬ ಐದು ಬಗೆಯ ಉಪ್ಪುಗಳು: ಇಂಗು ಬಜೆ ಪಂಚಲವಣಂ ಶೃಂಗಿಯ ಬೇರುಂ . . . ಪಿಂಗಿಸುಗುಂ ಶೂಲವೇನೆಯಂ ತತ್ಕ್ಷಣದೊಳ್ (ಅಶ್ವಶಾ. ೧೧-೧೩). [ಪಂಚ$_2$ + ಲವಣ]

**ಪಂಚಲಾಂಗಲದಾನ** (ನಾ). ಷೋಡಶ ಮಹಾದಾನಗಳಲ್ಲಿ ಒಂದು ; ಚಿನ್ನ, ಬೆಳ್ಳಿ ಮೊದಲಾದುವುಗಳ ಆಭರಣಗಳಿಂದ ಅಲಂಕರಿಸಲ್ಪಟ್ಟ ಐದು ಜೊತೆ ಎತ್ತುಗಳಿಂದ ಕೂಡಿದ ಐದು ಶ್ರೇಷ್ಠವಾದ ನೇಗಿಲುಗಳನ್ನು ತಕ್ಕಷ್ಟು ಭೂಮಿಯೊಂದಿಗೆ ದಾನ ಮಾಡುವುದು : ಷೋಡಶ ಮಹಾದಾನಗಳನ್ನು ಮಾಡಬೇಕೆಂದು ಸಂಕಲ್ಪಿಸಿ, ಆಯಾ ಪುಣ್ಯಕಾಲದಲ್ಲಿ ವರ್ಷಕ್ಕೆ ಎರಡು ಮೂರರ ಮೇರೆಗೆ ರಂಗ ನಾಥಸ್ವಾಮಿ ಸನ್ನಿಧಿಯಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ (೧) ತುಲಾಪುರುಷ ದಾನ . . . (೧೦) ಪಂಚಲಾಂಗಲದಾನ . . . ಶಾಸ್ತ್ರಕ್ಕೆ ಸ್ವಲ್ಪವೂ

ನ್ಯೂನತೆ ಇಲ್ಲದಂತೆ ಮಾಡಿ ಸತ್ಕೀರ್ತಿಯಂ ಪಡೆದರು (ಮಹಾಪಂ.I,೧೧೧).
[ಪಂಚ₂+ಲಾಂಗಲ+ದಾನ]

**ಪಂಚಲಿಂಗ**(ನಾ). ೧. ಗಜಾರಣ್ಯವೆಂದು ಪ್ರಸಿದ್ಧವಾದ ತಲಕಾಡಿನಲ್ಲಿರುವ ಐದು ಲಿಂಗಗಳು; ಅರ್ಕೇಶ್ವರ, ಪಾತಾಳೇಶ್ವರ, ಮರಳೇಶ್ವರ, ಮಲ್ಲಿಕಾರ್ಜುನೇಶ್ವರ ಮತ್ತು ವೈದ್ಯೇಶ್ವರ ಎಂಬ ಲಿಂಗಗಳು: ಹನ್ನೆರಡುವರ್ಷಕ್ಕೊಮ್ಮೆ ತಲಕಾಡಿನಲ್ಲಿ ಪಂಚಲಿಂಗದರ್ಶನವೆಂಬ ಜಾತ್ರೆ ನಡೆಯುತ್ತದೆ (ರೂಢಿ). ೨. ತಮಿಳುನಾಡಿನಲ್ಲಿರುವ ಪ್ರಸಿದ್ಧವಾದ ಐದುಲಿಂಗಗಳು; ಪಂಚಭೂತಲಿಂಗಗಳು. ℙ"ಪೃಥ್ವೀಲಿಂಗ (ಕಾಂಚೀವರಂ), ಅಪೋಲಿಂಗ (ಜಂಬುಕೇಶ್ವರ), ತೇಜೋಲಿಂಗ (ಅರುಣಾಚಲಂ), ವಾಯುಲಿಂಗ (ಕಾಳಹಸ್ತಿ), ಆಕಾಶಲಿಂಗ (ಚಿದಂಬರ)" (ಶ್ರೀವತ್ಸ. ೩೮೪). ೩. [ವೀಶೈ] ಪಂಚೇಂದ್ರಿಯಗಳಲ್ಲಿ ಭಾವಿಸುವ ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ ಮತ್ತು ಆಚಾರಲಿಂಗ ಎಂಬ ಐದು ಲಿಂಗಗಳು: ಶ್ರೋತ್ರ ತ್ವಕ್ಕು ಚಕ್ಷು ಜಿಹ್ವೆ ಘ್ರಾಣವೆಂಬ ಪಂಚೇಂದ್ರಿಯಂಗಳಲ್ಲಿ ಪ್ರಸಾದಲಿಂಗ ಜಂಗಮಲಿಂಗ ಶಿವಲಿಂಗ ಗುರುಲಿಂಗ ಆಚಾರಲಿಂಗವೆಂಬ ಪಂಚಲಿಂಗಗಳು ತಮ್ಮ ತಮ್ಮ ಮುಖದೊಳು ನಿಂದು . . . ಸರ್ವೇಂದ್ರಿಯಂಗಳು ಲಿಂಗವಶವಾಗಿಪ್ಪರಯ್ಯಾ (ಆದಯ.ಮು. ೨೦೪-೩೫೪); ಪಂಚೇಂದ್ರಿಯಂಗಳಲ್ಲಿ ಪಂಚಲಿಂಗಂಗಳ ಪ್ರತಿಷ್ಠಿಸಿ . . . ಮೂರುಲೋಕದೊಡೆಯನಲ್ಲಿ ಮನವಡಗಿರ್ಪ ಮಹಾಶರಣರ ಶ್ರೀಪಾದಕ್ಕೆ ನಮೋ ನಮಃ ಎಂಬೆನಯ್ಯ (ಅಖಂಡೇ. ೮೭-೯೦). [ಪಂಚ₂+ಲಿಂಗ]

**ಪಂಚಲೋಭಿ** (ನಾ). ಬಹಳ ದುರಾಶೆಯುಳ್ಳವನು; ಕಡು ಲೋಭಿ: "ದೀನಂ ಕದರ್ಯಂ ಪಂಚಲೋಭಿ[ಪಾಠಾಂ. ಲೋಭಿ]ಕೀನಾಶನಕ್ಕುಂ" (ಮಂಗರಾ. ೬೪-೭). [ಪಂಚ₃+ಲೋಭಿ]

**ಪಂಚಲೋಹ**(ನಾ).೧.ತಾಮ್ರ, ಹಿತ್ತಾಳೆ, ತವರ, ಸೀಸ ಮತ್ತು ಕಬ್ಬಿಣ ಎಂಬ ಐದು ಬಗೆಯ ಪ್ರಸಿದ್ಧವಾದ ಲೋಹಗಳು: "ಇಳೆಯಾದಿ ಭೂತಂಗಳಲಿ ಪಂಚಲೋಹದಲಿ . . . ಧಾತುವೆಂಬಭಿಧಾನವರ್ತಿಸಿರ್ಕುಂ" (ಮಂಗರಾ. ೧೪೬-೩೪). ೨. ವಿಗ್ರಹ ಮೊದಲಾದುವನ್ನು ಮಾಡುವುದಕ್ಕಾಗಿ ಐದು ಲೋಹಗಳನ್ನು ಸೇರಿಸಿ ಮಾಡುವ ಒಂದು ಮಿಶ್ರಲೋಹ: ಗಂಗರ ಕಾಲದ ಪಂಚಲೋಹದ ಮೂರ್ತಿಗಳು ಇಲ್ಲವೇ ಇಲ್ಲವೆಂದು ಹೇಳಬಹುದು (ಭಾರದ. ೫೦೩).
[ಪಂಚ₂+ಲೋಹ]

**ಪಂಚವಕ್ತ್ರ₁** (ನಾ). =ಪಂಚಲಪನ₁: ಉಮಾಧಿನಾಥರು ಕೋಟಿ ಪಂಚವಕ್ತ್ರರು ಕೋಟಿ ನಂದಿವಾಹನರೊಂದು ಕೋಟಿ ನೋಡಯ್ಯಾ (ಬಸವ. ೯೨೦); ಮುಂತೆ ಶಿವಮೂರ್ತಿ ಜಗವೆಲ್ಲಱಿಕೊಳು ತೊಳತೊಳಗೆ ದಶಭುಜಂ ಪಂಚವಕ್ತ್ರಂ ತ್ರಿಣೇತ್ರದಿನೊಪ್ಪೆ (ನಂಬಿರ. ೭-೧೨೫).
[ಪಂಚ₂+ವಕ್ತ್ರ]

**ಪಂಚವಕ್ತ್ರ₂** (ನಾ). = ಪಂಚಮುಖ₂: "ಹರಿ ಮೃಗೇಂದ್ರಂ ಪಂಚವಕ್ತ್ರಂ ನಖಾಯುಧಂ . . . ಕೇಸರಿಯೆನಲ್ ಸಿಂಹಮೆನಿಸಿಕ್ಕು" (ಮಂಗರಾ. ೪೭-೭). [ಪಂಚ₃+ವಕ್ತ್ರ]

**ಪಂಚವಕ್ತ್ರರಸ** (ನಾ). ಒಂದು ಬಗೆಯ ಔಷಧ: ಪಂಚವಕ್ತ್ರರಸ:— ಇದನ್ನು ಮಾಡುವ ಕ್ರಮ – ೧ ತೂಕ, ಗಂಧಕ ೧, ಬಿಳಿಯ ಮೆಣಸು ೧, ಶುದ್ಧ ಬಿಳುಗಾರದ ಹಳುಕು ೧, ಹಿಪ್ಪಲಿ ೧, ಇಷ್ಟನ್ನು ಸಮಗೊಂಡು ಮರ್ದಿಸಿ . . . ಹಸಿ ಶುಂಠಿರಸದಲ್ಲಿ ಕೊಡುವುದು (ವಿನೈವಿ. ೩೬).
[ಪಂಚವಕ್ತ್ರ₁+ರಸ]

**ಪಂಚವಟಿ₁** (ನಾ). "ಕೂದಲಿನಿಂದ ವಿಶಾಲವಾಗಿ ಮಾಡಿಸಿ ಎದೆಯಲ್ಲಿ ಧರಿಸಿಕೊಳ್ಳುವ ದಾರವು"(ಪುರಾವಿ. ೬೩೮): ಆಗ ಮಹಾವ್ರತಿ ಆ ಯುವತಿಯ ಕೂದಲನ್ನು ಕಂಡು "ಇದು ನಮ್ಮ ಪಂಚವಟಿಗೆ ಉಪಯೋಗವಾಗುವುದು" ಎಂದನು (ಪುರಾವಿ. ೯೩).
[<ಸಂ. ಪಂಚಪಟ=ಯಜ್ಞೋಪವೀತ]

**ಪಂಚವಟಿ₂** (ನಾ). ೧. ಅಶ್ವತ್ಥ, ಬಿಲ್ವ, ವಟ, ಧಾತ್ರೀ ಮತ್ತು ಅಶೋಕ ಎಂಬ ಐದು ಮರಗಳು. ೨. ಶ್ರೀರಾಮನು ವಾಸ ಮಾಡಿದ ಗೋದಾವರೀನದಿಯ ದಡದಲ್ಲಿರುವ ಪಂಚವಟ ವೃಕ್ಷಗಳನ್ನು ಒಳಗೊಂಡಿದ್ದ ಒಂದು ಅರಣ್ಯಪ್ರದೇಶ; ℙ ಈಗಿನ ನಾಸಿಕ ಜಿಲ್ಲೆಯ ಒಂದು ಪ್ರದೇಶ: ಸುದತಿ ಕಿಷ್ಕಿಂಧೆಯನು ನೋಡಾ ಇದುವೆ ಬಾಲಿಯ ಸದನ ಮುಂದಿಹುದದುವೆ ಪಂಚವಟಿಯು (ಕೌತಿರಾ. ೪೪-೪೯); ತರಣಿವಂಶಜರತ್ರಿಮುನಿಯುಪಚರಣೆಯನು ಕೈಗೊಂಡು ರಜನೀಚರ ವಿರಾಧನ ಮುಱಿದು ಸಾರ್ದರು ಪಂಚವಟವನವ (ತೊರಂರಾ. ೩-೧ ಸೂಚನೆ). [ಸಂ. ಪಂಚವಟೀ]

**ಪಂಚವಣ್ಣ** (ನಾ). =ಪಂಚವರ್ಣ ೧: "ಪಂಚವಣ್ಣ–ಪಂಚವರ್ಣ" (ತದ್ಭಕೋ. ೨೩); ಪಂಚವಣ್ಣದ ಪಟ್ಟೆಯ ಬಿರುದಿನ ಬೀರಗಚ್ಚೆಗಟ್ಟಿರ್ದ ಪಿರಿಯ ನೇಜೆಯವನೋಜೆಯಿಂದೆತ್ತಿ ಪಿಡಿದು (ರಾಜಶೇ. ೬-೧೧ ಪ).
[<ಸಂ. ಪಂಚವರ್ಣ]

**ಪಂಚವಣ್ಣಿಗೆ** (ನಾ). ೧. ಐದು ಬಗೆಯ ಬಣ್ಣಗಳು; ಪಂಚವರ್ಣ: ಪಂಚವಣ್ಣಿಗೆಯ ಪುಲ್ಲಿಯ ಚಲ್ಲಣದಿಂ ಕಟೀತಟಂ ನಸುನಗೆ ಸಿಂಹಬಂಹಿಮಕಟೀತಟಮಂ ಭುಜದಂಗದಂಗಳಾಗಿಸೆ ಪುರದೊಳ್ ಪುರಂದರ ಶರಾಸನಮಂ ನಿಜರತ್ನರಶ್ಮಿಯಿಂ (ಮಹಾನೇ.೬-೭೧). ೨. ಒಂದು ಬಗೆಯ ಅಲಂಕಾರ; ಐದು ಬಣ್ಣಗಳಿಂದ ಮಾಡಿದ ವರ್ಣರಚನೆ,—ಚಿತ್ರರಚನೆ: ಕಟ್ಟದ ಪಂಚವಣ್ಣಿಗೆಯ ಪಟ್ಟೆಯ ತೊಂಗಲೋಳಿಂದ್ರಚಾಪಮಂ ಪುಟ್ಟಿಸಿ . . . ಲೋಹಿತವೃಷ್ಟಿಯ ನಾಸವಾರಿಗಳ್ ಪುಟ್ಟಿಸೆ (ಪಂರಾಮಾ. ೧೩-೫೯); ತೆಗೆದು ತರಂಗೋಳಿಸಿದ ಪಂಚವಣ್ಣಿಗೆಯ ಪಟ್ಟೆಯ ಸಿಂಗರಿಸಿದ ಮಕರತೋರಣದ ಸಂಗಳಿಸಿದ ನನೆಯ ಸೂಸಕಂಗಳ . . . ಗಾಡಿವಡೆದ ಮಂಟಪದ ಮಧ್ಯದಲ್ಲಿ ನೆರೆದವಿಬುಧರಿಂ (ರಾಜಶೇ. ೮-೫ ಪ). ೩. ಮಂಗಳಸಮಾರಂಭಗಳಲ್ಲಿ ನೆಲದ ಮೇಲೆ ಬರೆಯುವ ಐದು ಬಣ್ಣಗಳ ಹಿಟ್ಟು, ರಂಗೋಲೆ ಮೊದಲಾದುವುಗಳ ಮಂಡಲ: ನಾರಿಯರು ಬಂದು ಅಂಗಳ ಬಳಿದು ಗಂಧದ ಸಾರಣೆಯದಳೆದು ಮುತ್ತಿನ ರಂಗವಾಲೆ ವಿಸ್ತಾರದಿಂದಲಿ ಪಂಚವಣ್ಣಿಗೆಯ ಬಿಟ್ಟು (ವಿದಾಕ್ಯ. ೯೨-೩); ಗಂಗೋದಕವ ತಳಿದು ರಂಗವನಿಕ್ಕಿ ನವ ಪಂಚವಣ್ಣಿಗೆಯ ನೆಲೆನೆಲೆಯೊಳುಂ ರಚಿಸಿ (ಪರಶು. ೩೩-೨). ೪. ಒಂದು ಮಠದ ಹೆಸರು: ಪರತರ ಪರಂಜ್ಯೋತಿ ಪಂಚವಣ್ಣಿಗೆ ಯಾರ್ಯ ನಂಜೇಶ ಸಲಹುಗೆಮ್ಮ (ರಾಘಚ. ೧-೩).
[<ಸಂ. ಪಂಚವರ್ಣಿಕಾ]

**ಪಂಚವತ್ಸರ** (ನಾ). ೧. ಐದು ವರ್ಷಗಳು. ೨. ಐದು ವರ್ಷದವನು; ಬಾಲಕ: ಪಂಚವತ್ಸರನಾದ ಪುತ್ರನನಂದು ಗೌಡಿಯರಾತ್ಮಜರ್ ವಂಚಿಸುತ್ತೆ ಸಮಸ್ತವಸ್ತುಗಳುಂ ಬಗಲ್ಗಳವಟ್ಟಿರಲ್ ಸಂಚಯಗೊಳುತೋಡಿದರ್ (ಹಾಲಾಸ್ಯ. ೨-೧-೮). [ಪಂಚ₂+ವತ್ಸರ]

**ಪಂಚವದನ₁** (ನಾ). ೧. ಐದು ಮುಖಗಳು: ಪೃಥೆ ಅಪ್ಪು ತೇಜ ವಾಯುವಾಕಾಶವೆಂಬ ಪಂಚತ್ವವೇ ಪಂಚವದನವಾಗಿ ಆ ಪಂಚವದನವೇ ಪಂಚೀಕೃತವನೆಯ್ದಿ ಜಗದಾದಿ ಸೃಷ್ಟಿಯನನುಮಾಡುವುದಕ್ಕೆ ಕರ್ತನಾದ ನಮ್ಮ ಬಸವಯ್ಯನು (ಸೀಲಪ. ೨೫-೧); ಪಂಚವದನಂಗಳಿಂದೆಸೆದು ತ್ರೈಪಂಚನಯನಂಗಳಿಂ ವಿರಾಜಿಪ ಪಂಚವರ್ಣಂಗಳಿಂದೆಸೆದು ಬಲ್ಮಿಂಚಿನಂದದಲಿ (ಗಗತಾ. ೭-೮೬). ೨. ಐದು ಮುಖವುಳ್ಳವನು; ಶಿವ: ಪಂಚವದನನ ಭಕ್ತರಿಗೆ ನಿರ್ವಂಚಕರದೊಳರ್ಥಂಗಳೆಲ್ಲವನಂಚಿತಪ್ರಿಯದಿಂದ

ವಾರಾಧಿಸಿ ಸವೆಯಲೊಡನೆ (ಬಸವು. ೨೮-೫); ಪಂಚವದನನ ಪರಮ ಯೋಗಮುದ್ರೆಯನೊಡೆದು ಕರಣಂಗಳೆಲ್ಲ ಕದಡಿ (ನಪಮೋ. ४-೧೬). [ಪಂಚ$_2$ + ವದನ]

**ಪಂಚವದನ$_2$**(ನಾ). = ಪಂಚಮುಖ$_2$ : ಪರಮಪಂಚಾಕ್ಷರಿಯು ಸೀವು ಮಱೆಯದಿರಬ್ಬೆಯಿಂ ಪಱಿದು ತಲೆ ಬೀಳುವಾ ವೇಳೆಯವಧಾನವೇ ಬೇಹುದದು ದೋಷಕರಿಪಂಚವದನವೆನಲು (ಭಾಪಚಿಂ. ೯-೨೩); ವೀರೇಶ್ವರಂ ಸಿಂಹವಾಗುತ್ತಲಂತದಱ ಮಸ್ತಕವನಿಬ್ಬಗೆಯಾಗಿ ಸೀಳಲುರಗಂ ಬಳಿಕ್ಕುಗ್ರಪಂಚವದನನಾಗಲ ಶರಭನಾಗಿ ರುದ್ರಂ ಸೀಳಲು (ವೀಶೈಪು. ೩-೮-೧೪). [ಪಂಚ$_3$ + ವದನ]

**ಪಂಚವರ್ಗ** (ನಾ). ೧. ಐದರ ಗುಂಪು. ೨. [ವ್ಯಾಕ] ಕಕಾರದಿಂದ ಮಕಾರದವರೆಗಿರುವ ಐದು ಐದು ಅಕ್ಷರಗಳ ಐದು ಗುಂಪು; ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ. ೩. [ರಾಜನೀ] ಕಾಪಟಿಕ, ಉದಾಸ್ಥಿತ, ಗೃಹಪತಿಕ, ವೈದೇಹಕ ಮತ್ತು ತಾಪಸ ಎಂಬ ಐದು ಬಗೆಯ ಗೂಢಚಾರರ ಗುಂಪು : ಸಾಮ, ದಾನ, ಭೇದ, ದಂಡ ಎಂಬ ನಾಲ್ಕು ಉಪಾಯಗಳು, ಅಷ್ಟವರ್ಗ ಮತ್ತು ಪಂಚ ವರ್ಗಗಳು ಮತ್ತು ತೀರ್ಥಗಳು—ಇವುಗಳ ವಿವರಣೆಯಿಂದ ರಾಜನೀತಿಯ ಅರಿವು ಉಂಟಾಗುತ್ತದೆ (ಭಾರದ. ೩೬೯). [ಪಂಚ$_2$ + ವರ್ಗ]

**ಪಂಚವರ್ಣ**(ನಾ). ೧. ಬಿಳುಪು, ಹಳದಿ, ಕೆಂಪು, ಹಸುರು ಮತ್ತು ಕಪ್ಪು ಎಂಬ ಐದು ಬಗೆಯ ಬಣ್ಣಗಳು: ತದೀಯ ಶಿರಂ ವರಪಂಚವರ್ಣ ಪಂಜರಮೆನೆ ಪಂಚವರ್ಣಶುಕವೊಪ್ಪಿದುದಲ್ಲಿ (ರಾಜಶೇ. ೧೪-೭೯). ೨. ಐದು ಅಕ್ಷರಗಳು. ೩. ಐದು ಅಕ್ಷರಗಳಿಂದ ಕೂಡಿರುವ ಒಂದು ಮಂತ್ರ; ಶಿವಪಂಚಾಕ್ಷರಮಂತ್ರ : ಭೂಪನಾನಂದದಿಂದಂ . . . ಶ್ರೀಪಂಚವರ್ಣಮಂ ಜಿಹ್ವೆಯೊಳ್ ಜಪಿಸುತ್ತಿರಲು (ಭಾಪಚಿಂ. ४-೩೧); ಚಿದ್ಘನಲಿಂಗಕ್ಕಿದು ಪೆಸರೆಂದೆನೆ ಬಣ್ಣಿಪರಾರೊ ಪಂಚವರ್ಣದ ಘನಮಂ (ರಾಜಶೇ. ४-೯४). [ಪಂಚ$_2$ + ವರ್ಣ]

**ಪಂಚವರ್ಣಗಿಳಿ** (ನಾ). ಐದು ಬಗೆಯ ಬಣ್ಣಗಳ ಗರಿಗಳನ್ನುಳ್ಳ ಗಿಳಿ : ಮಂಡಕಿ ಚಕ್ರವಾಳ ಬಕದಾರ ಮರಾಳನು ಜಕ್ಕವಕ್ಕಿಯಿಂ ತೊಂಡಿಗ ಪಂಚವರ್ಣಗಿಳಿ ಕೋಕಿಲ . . . ಒಪ್ಪುತಿಹುದಲ್ಲಿಯ ರೌದ್ರದ ರಣ್ಯಮಧ್ಯದೊಳ್ (ಪುಲ್ಲಕಾ. ೩-೧೪೧). [ಪಂಚವರ್ಣ + ಗಿಳಿ]

**ಪಂಚವರ್ಣೆ** (ನಾ). ಐದು ಬಣ್ಣಗಳಿಂದ ಕೂಡಿಕೊಂಡಿರುವವಳು : ಚಂಚನ್ನಿಜಪಂಚವರ್ಣೆ ಪಡೆಗುಂ ಚಿತ್ರಾಂಗನಾಶಂಕೆಯಂ (ಅಜಿಪು. ೨-೪೪). [ಸಂ. ಪಂಚವರ್ಣಾ]

**ಪಂಚವರ್ನ** (ನಾ). = ಪಂಚವರ್ಣ ೩ : ವರಧರ್ಮಸುಗುಣ ದಾಸೋಹದೊಳು ಸಂಪನ್ನರುರುಪಂಚವರ್ನಷಡ್ವರ್ನ ಮೂಲಪ್ರಣಮ ದಿವ್ಯಾತ್ಮಸದ್ರೂಪರು (ವೀಶೈಪು.೧-೧-೨೪); ಪಂಚವರ್ನ ಸ್ವರೂಪಕ ಯನ್ನ ಹೃತ್ಸರಸಿಯೊಳಗೆ ನೆಲಸಿರ್ಕಳ್ಳಿರಿಂ (ನಪಮೋ. ೧-೭). [ಪಂಚ$_2$ + ವರ್ನ]

**ಪಂಚವಲ್ಕಲ** (ನಾ). ಆಲ, ಅತ್ತಿ, ಅರಳಿ, ಗೋಣಿ ಮತ್ತು ಬಸರಿ ಎಂಬ ಐದು ಮರದ ತೊಗಟೆಗಳು ; P ಆಲ, ಅತ್ತಿ, ಅರಳಿ, ಬಸರಿ ಮತ್ತು ಪಿಪ್ಪಲ ಎಂದೂ ಭೇದಗಳುಂಟು : ಕೊತ್ತಂಬರಿ ಬೀಜ, ಜೀರಿಗೆ. . . ಪಂಚವಲ್ಕಲಗಳು, ಪಂಚಪಲ್ಲವಗಳು, ನೆಲ್ಲೀಕಾಯಿ, ಆಲದ ಬಿಳಲು ಇವನ್ನು ಕಷಾಯವಿಟ್ಟು ಸೇವಿಸಿದರೆ ಶ್ಲೇಷ್ಮಛರ್ಧಿ, ಸಕಲ ಛರ್ಧಿ ಸಹ ನಿಲ್ಲುವುವು (ಸಕವೈ. ४೫೭). [ಪಂಚ$_2$+ವಲ್ಕಲ]

**ಪಂಚವಳ್ಳಿ** (ನಾ). ಒಂದು ಬಗೆಯ ಬಳ್ಳಿ : ಇತ್ತಡೆ ನಿನ್ನನಾಂ ನಡಪಿದೆಂ ಮೊಲೆಯಾಗದುದೆಲ್ಲಿವಂದುದೋ ಚಿತ್ತಜ ನಿನ್ನನೋಲ್ದು ಮೋಱಿ ಯಿಟ್ಟಿಪೆ ನೀನೆನಗಕ್ಕಟೆಂಬುದಾಪತ್ತಿನೊಳಪ್ಪಡಂ ಫಲಮನುಣ್ಣದೆ ಸಾವರೆ ಪಂಚವಳ್ಳಿಯಂ ಪಿತ್ತಿಲೊಳಿಟ್ಟರುಂ ಮರನನಿಟ್ಟರುಮೇಂ ಫಲಮುಂಬ ರಲ್ಲರೋ (ಬಂಹರಿ. ೮-೬೧). [ಸಂ. ಪಂಚವಲ್ಲೀ]

**ಪಂಚವಾದ್ಯ** (ನಾ). = ಪಂಚಮಹಾವಾದ್ಯ : ಜವಳಿಮದ್ದಳೆಯು, ಕಾಳೆಯು, ಪಂಚವಾದ್ಯದ, ಬಿರುದಿನ ಬಾವುಲಿಯ ಸಡಗರದಿಂ ಬಂದು ಶತ್ರುಘ್ನಂ ಮುಂತಪ್ಪಗ್ಗೆ ಕಾಣಿಸಿಕೊಂಡು (ರಾಪೂಶ್ವ. ೧೦೮-೨೯). [ಪಂಚ$_2$ + ವಾದ್ಯ]

**ಪಂಚವಾಯು** (ನಾ). ಶರೀರದಲ್ಲಿರುವ ಐದು ಬಗೆಯ ವಾಯುಗಳು; P ಶರೀರದಲ್ಲಿ ಪ್ರಾಣ, ಅಪಾನ, ಸಮಾನ, ಉದಾನ ಮತ್ತು ವ್ಯಾನ ಎಂಬ ವಾಯುಗಳಲ್ಲದೆ, ಶರೀರವ್ಯಾಪಾರಕ್ಕೆ ಸಾಧಕವಾದ ಬೇರೆ ಐದು ಬಗೆಯ ವಾಯುಗಳಿವೆ. ಅವೇ ನಾಗ, ಕೂರ್ಮ, ಕೃಕರ, ದೇವದತ್ತ ಮತ್ತು ಧನಂಜಯ ವಾಯುಗಳು. ಇವುಗಳಲ್ಲಿ ನಾಗವು ತೇಗನ್ನು ಉಂಟುಮಾಡುತ್ತದೆ, ಕೂರ್ಮವು ಕಣ್ಣು ತೆರೆಯುವುದಕ್ಕೆ ಸಾಧಕವಾಗಿದೆ, ಕೃಕರವು ಸೀನು ಬರಲು ಕಾರಣವಾಗಿದೆ, ದೇವದತ್ತವು ಆಕಳಿಕೆಯನ್ನುಂಟುಮಾಡುತ್ತದೆ, ಧನಂಜಯವು ಶರೀರವನ್ನೆಲ್ಲಾ ವ್ಯಾಪಿಸಿಕೊಂಡಿರುತ್ತದೆ—ಮನುಷ್ಯನ ಪ್ರಾಣವಾಯು ಹೋದರೂ ಧನಂಜಯವು ಇನ್ನೂ ಸ್ವಲ್ಪಕಾಲ ಇರುತ್ತದೆ : ಚಿಚ್ಛಕ್ತಿಯ ಮಥನದಿಂದ ನಾಗ ಕೂರ್ಮ ಕೃಕರ ದೇವದತ್ತ ಧನಂಜಯ ಎಂಬ ಪಂಚವಾಯುಗಳ ನಿಲಿಸಿ (ಚನ್ನವ. ಪರಿ.ಕ. ೧-೬೯೦); ನಾಗ ಕೂರ್ಮ ಕೃಕರ ದೇವದತ್ತ ಧನಂಜಯಗಳುಯಂಬ ಪಂಚವಾಯುಗಳುಂಟು (ಈಶ್ವಸ್ವ. ೧೫-೩೨). [ಪಂಚ$_2$ + ವಾಯು]

**ಪಂಚವಾರ್ಷಿಕ** (ಗು). ಐದು ವರ್ಷಕ್ಕೆ ಸಂಬಂಧಿಸಿದ : 'ಪಂಚವಾರ್ಷಿಕಯೋಜನೆ' ಪರಾ. [ಸಂ.]

**ಪಂಚವಾರ್ಷಿಕಯೋಜನೆ** (ನಾ). ವ್ಯವಸ್ಥಿತವಾಗಿ ಮಾಡಬೇಕಾದ ಕಾರ್ಯಗಳ ರೂಪರೇಷೆಯ ವಿಧಾನಗಳನ್ನು ಐದು ವರ್ಷಗಳಿಗೆ ಒಮ್ಮೆ ಮುಂಚಿತವಾಗಿ ರೂಪಿಸಿಕೊಳ್ಳುವುದು : ಮೊದಲ ಪಂಚವಾರ್ಷಿಕಯೋಜನೆ ಮುಗಿದ ಹೊತ್ತಿಗೆ ಹೊರಗಿನವರು ನಮಗೆ ಕೊಟ್ಟ ಸಾಲ ಮತ್ತು ಗ್ರಾಂಟು ನೆರವು ಸುಮಾರು ೩೦೦ ಕೋಟಿ ರೂಪಾಯಷ್ಟು (ಹಣಪ್ರ. ೩೭೬). [ಪಂಚವಾರ್ಷಿಕ + ಯೋಜನೆ]

**ಪಂಚವಾಳ** 'ಪಂಚಪಾಳೆ' ನೋ.

**ಪಂಚವಿಂಶ** (ನಾ). ಇಪ್ಪತ್ತೈದು : ಶಂಖಿಕಾರ್ಯೆಯುಂ ಸೌಧರ್ಮ ಕಲ್ಪದೊಳ್ ಪಂಚವಿಂಶ ಪಲ್ಯೋಪಮಾಯುಷ್ಯದಿಂ ಪುಟ್ಟಿ (ಶಾಂತಿಪು. ೯-೮೪ ವ). [ಪಂಚ$_2$+ವಿಂಶ]

**ಪಂಚವಿಂಶತಿ** (ನಾ). ಇಪ್ಪತ್ತೈದು : ತೆಂಕವೊಗದೆ ಬಂದು ವೃಷಭಾಚಲಮಂ ಕಂಡನದು . . . ಪಂಚವಿಂಶತಿಶತಯೋಜನಾವಗಾಹಮುಮಾಗಿ ಸಂದು (ಆದಿಪು. ೧೩-೬೯ ವ); ನವಯೌವನಮಾದಂತುನ್ನತ ಪಂಚವಿಂಶತಿಪ್ರಾಯಮಾಗಿ (ನಂಬಿರ. ೧೦-೫). [ಪಂಚ$_2$ + ವಿಂಶತಿ]

**ಪಂಚವಿಂಶತಿಕ್ರಿಯೆ** (ನಾ). [ಜೈನ] ಜೈನರು ತಮ್ಮ ಬಾಳಿನಲ್ಲಿ ಅನುಸರಿಸಬೇಕಾದ ಇಪ್ಪತ್ತೈದು ವಿಧವಾದ ಕ್ರಿಯೆಗಳು ; P "ಪಂಚವಿಂಶತಿಕ್ರಿಯೆಗಳು—೧ ಸಮ್ಯಕ್ತ್ವಕ್ರಿಯೆ (ದೇವಗುರುಶಾಸ್ತ್ರಾದಿ ಪೂಜೆ) ೨ ಮಿಥ್ಯಾತ್ವಕ್ರಿಯೆ (ಅನ್ಯದೇವಗುರುಶಾಸ್ತ್ರಾದಿ ಪೂಜೆ) ೩ ಪ್ರಯೋಗಕ್ರಿಯೆ (ಗಮನಾಗಮನ) ४ ಸಮಾದಾನ (ವಿರತನು ಅವಿರತನಾಗುವುದಕ್ಕೆ ಅಭಿಮುಖನಾಗುವುದು) ೫ ಈರ್ಯಾಪಥ (ಗಮನ) ೬ ಪ್ರಾದೋಷಿಕ (ಕ್ರೋಧಾವೇಶದಲ್ಲಾಗುವ ಪ್ರಮಾದ) ೭ ಕಾಯಿಕಿ (ಕುಕರ್ಮೋ

ದ್ಯೋಗ) ೮ ಆಧಿಕರಣಿಕೆ (ಶಸ್ತ್ರಧಾರಣ) ೯ ಪರಿತಾಪಿಕೆ (ಪರ ದುಃಖೋತ್ಪಾದನ) ೧೦ ಪ್ರಾಣಾತಿಪಾತ (ಆಯುಸ್ಸು, ಇಂದ್ರಿಯಶಕ್ತಿ, ಪ್ರಾಣ ಇವುಗಳ ವಿಯೋಗಕ್ರಿಯೆ) ೧೧ ದರ್ಶನ (ರಮಣೀಯಸ್ವರೂಪಾವಲೋಕನ) ೧೨ ಸ್ಪರ್ಶನ ೧೩ ಪ್ರಾತ್ಯಯಿಕೆ (ಭೋಗ್ಯವಸ್ತುಸಂಗ್ರಹ) ೧೪ ಸಮಂತಾನುಪಾತ (ಪ್ರಾಣಿಗಳು ವಾಸಿಸುವಲ್ಲಿ ಮಲಮೂತ್ರತ್ಯಾಗ) ೧೫ ಅನಾಭೋಗ (ಪಿಂಛಾದಿಯಿಂದ ನೆಲವನ್ನು ಡುಗದೆ ಕುಳ್ಳಿರುವುದು, ಮಿಂ) ೧೬ ಸ್ವಹಸ್ತಕ್ರಿಯೆ (ಪರರು ಮಾಡಬಹುದಾದ್ದನ್ನು ತಾನು ಮಾಡುವುದು) ೧೭ ನಿಸರ್ಗ (ಪಾಪೋತ್ಪಾದಕ ಕ್ರಿಯೆಯನ್ನು ತಾನು ಸಾಧುವೆಂದು ತಿಳಿವುದೂ ಪರರಿಗೆ ಮಾಡಲಪ್ಪಣೆಯಾವುದೂ) ೧೮ ವಿದಾರಣ (ಆಲಸ್ಯದಿಂದ ಶ್ರೇಯಸ್ಕರಕ್ರಿಯೆಯನ್ನು ಮಾಡದಿರುವುದು ಮತ್ತು ಅನ್ಯರ ಪಾಪಕರ್ಮವನ್ನು ಪ್ರಕಟಿಸುವುದು) ೧೯ ಅಜ್ಞಾವ್ಯಾಪಾದಿಕೆ (ಶಾಸ್ತ್ರಾನುಮತ ಕ್ರಿಯೆಯನ್ನು ಮಾಡದೆ ಅನ್ಯವಿಧವಾಗಿ ಮಾಡುವುದು) ೨೦ ಅನಾಕಾಂಕ್ಷೆ (ಅರ್ಹಂತರು ವರ್ಣಿಸಿದ ಕ್ರಿಯೆಯಲ್ಲಿ ಅನಾದರ) ೨೧ ಪ್ರಾರಂಭ (ಸ್ವಕೃತ—ಪರಕೃತ ಛೇದನ ಭೇದನಗಳಲ್ಲಿ ಹರ್ಷ) ೨೨ ಪಾರಿಗ್ರಾಹಿಕೆ (ಪರಿಗ್ರಹರಕ್ಷಣಕ್ಕಾಗಿ ಪ್ರವೃತ್ತನಾಗುವುದು) ೨೩ ಮಾಯೆ (ಜ್ಞಾನದರ್ಶನಾದಿಗಳಲ್ಲಿ ಕಪಟೋಪಾಯ) ೨೪ ಮಿಥ್ಯಾದರ್ಶನ (ಪರರ ಮಿಥ್ಯಾತ್ವಕ್ರಿಯೆಗೆ ಉತ್ತೇಜನ) ೨೫ ಅಪ್ರತ್ಯಾಖ್ಯಾನ (ಸಂಯಮದಲ್ಲಿ ಉದ್ಯುಕ್ತನಾಗದಿರುವುದು" (ಜೈನಧ. ೬೩). [ಪಂಚವಿಂಶತಿ + ಕ್ರಿಯೆ]

**ಪಂಚವಿಂಶತಿಗುಗ್ಗುಳಚೂರ್ಣ** (ನಾ). [ವೈದ್ಯಶಾ] ಗುಗ್ಗುಳವೇ ಮೊದಲಾದ ಇಪ್ಪತ್ತೈದು ಪದಾರ್ಥಗಳನ್ನು ಸೇರಿಸಿ ಮಾಡುವ ಚೂರ್ಣ: ಪಂಚವಿಂಶತಿಗುಗ್ಗುಳಚೂರ್ಣ–ತ್ರಿಕಟುಕ, ತ್ರಿಫಲ . . . ಇವೆಲ್ಲಕ್ಕೂ ಸಮ ಮಹಿಷಾಕ್ಷಿ ಗುಗ್ಗುಳು ಎಲ್ಲಾ ಒಟ್ಟು ಸೇರಿಸಿ . . . ತೆಗೆದುಕೊಳ್ಳಲು . . . ಎಂಬತ್ತು ವಿಧ ವಾತಗಳೂ ಸಹ ಮಾಣುವುವು (ಸಕವೈ. ಪಂ. ೪೩೭). [ಪಂಚವಿಂಶತಿ + ಗುಗ್ಗುಳ (= ಗುಗ್ಗುಲ) + ಚೂರ್ಣ$_2$]

**ಪಂಚವಿಂಶತಿತತ್ತ್ವ** (ನಾ). = ಪಂಚವಿಂಶತಿತತ್ವ : ಪಂಚವಿಂಶತಿ ತತ್ತ್ವಂಗಳ ವಂಚನೆಯನಳಿದು ಹತ್ತುನಾಡಿಗಳ ವ್ಯಕ್ತೀಕರಿಸಿ (ಅಖಂಡೇ. ೧೯೩-೧೪). [ಪಂಚವಿಂಶತಿ + ತತ್ತ್ವ]

**ಪಂಚವಿಂಶತಿತತ್ವ** (ನಾ). [ತತ್ತ್ವಶಾ] ಸಾಂಖ್ಯರ ಮೇರೆಗೆ ಜಗತ್ತಿಗೆ ಮೂಲವಾದ ಇಪ್ಪತ್ತೈದು ತತ್ವಗಳು ; ಅಷ್ಟಪ್ರಕೃತಿಗಳು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಮನಸ್ಸು, ಪಂಚವಿಷಯ, ಪುರುಷ ಎಂಬುವುಗಳಿಂದ ಕೂಡಿ ಆದ ತತ್ವ : ಪಂಚವಿಂಶತಿತತ್ವರೂಪದ ಸಂಚವಜಾಯದೆ ನೀತಿಮುಖದಲಿ ರಂಜಿಗಾಣದೆ ಸಗುಣಮಯ ನೀಹಾರದಲಿ ಮುಳುಗಿ . . . ಆತುಮ ವಂಚಕರು ನೀವ್ ಪಶುಗಳೆಂದರೆ ಖೇದವೇಕೆ (ಕುವ್ಯಾಕ. ೬-೨೭) ; ಪಂಚವಿಂಶತಿತತ್ವಂಗಳೆಂಬ ಮಾಯಾಸುಭಟರ ಸುಡಕೊಂದು (ಘನವ. ೩೪-೩೧). [ಪಂಚವಿಂಶತಿ + ತತ್ವ$_1$]

**ಪಂಚವಿಂಶತಿಮಳ** (ನಾ). [ಜೈನ] ಸಮ್ಯಗ್ದರ್ಶನಕ್ಕೆ ಬಾಧಕವಾದ ಇಪ್ಪತ್ತೈದು ದೋಷಗಳು ; ಮಿಥ್ಯಾದರ್ಶನವೇ ಮೊದಲಾದುವು : ಒಳಕೊಂಡ ಪಂಚವಿಂಶತಿಮಳದಿಂದಂ ಪಿಂಗಿ . . . ಬೆಳಗುಗುವಿಮಾ ತೆಜದೆ ನಿನ್ನ ದರ್ಶನರತ್ನಂ (ಸುಕುಮಾ. ೬-೪೬); ℙ"ಮಿಥ್ಯಾದರ್ಶನ, ಮಿಥ್ಯಾಜ್ಞಾನ, ಮಿಥ್ಯಾಚಾರಿತ್ರ, ಮಿಥ್ಯಾದೃಷ್ಟಿಯುಳ್ಳವನು, ಮಿಥ್ಯಾಜ್ಞಾನಿಯಾದವನು, ಮಿಥ್ಯಾಚಾರಿತ್ರವಂತನು (ಈ ಆರು ಅನಾಯತನಗಳು); ದೇವಮೂಢ, ಗುರುಮೂಢ, ಸಮಯಮೂಢ (ಈ ಮೂರು ಮೂಢಗಳು) ; ಜ್ಞಾನ, ಕುಲ, ಬಲ, ಪೂಜೆ, ಜಾತಿ, ಐಶ್ವರ್ಯ, ತಪ, ಶರೀರ (ಈ ಎಂಟು ಮದಗಳು) ; ಶಂಕೆ, ಕಾಂಕ್ಷೆ, ಅನ್ಯದೃಷ್ಟಿಪ್ರಶಂಸೆ, ಸಂಸ್ತವ, ವಿಚಿಕಿತ್ಸೆ (ಈ ಎಂಟು ಶಂಕಾದಿಕ ದೋಷಗಳು) (ಸಿದ್ಧಾಂತಸಾರ. ೧-೩೪-೫೦)" (ಶ್ರೀವತ್ಸ. ೨೧೩). [ಪಂಚವಿಂಶತಿ + ಮಳ$_4$ (= ಮಲ$_3$)]

**ಪಂಚವಿಧಜ್ಞಾನ** (ನಾ). [ಜೈನ] ಮತಿಜ್ಞಾನ, ಶ್ರುತಜ್ಞಾನ, ಅವಧಿಜ್ಞಾನ, ಮನಃಪರ್ಯಾಯಜ್ಞಾನ, ಕೇವಲಜ್ಞಾನ ಎಂಬ ಐದು ಬಗೆಯ ಜ್ಞಾನಗಳು : ಈ ಪಂಚವಿಧಜ್ಞಾನಮುಂ ತದ್ಭೇದಾದಿಗಳುಂ ಮುಂತೆ ಪೇೞಲ್ಪಡೆಗುಂ (ತತ್ತ್ವಪ್ರ. ೫೩). [ಪಂಚ + ವಿಧ + ಜ್ಞಾನ]

**ಪಂಚವಿಧಜ್ಯೋತಿಷ್ಕ** (ನಾ). ಚಂದ್ರ, ಸೂರ್ಯ, ಗ್ರಹ, ನಕ್ಷತ್ರ, ಪ್ರಕೀರ್ಣಕಗಳೆಂಬ ಐದು ಬಗೆಯ ಜ್ಯೋತಿಷ್ಕರು : ಚಂದ್ರಾದಿತ್ಯಗ್ರಹನಕ್ಷತ್ರಪ್ರಕೀರ್ಣಕಂಗಳೆಂಬ ಪಂಚವಿಧಜ್ಯೋತಿಷ್ಕರಿಂ ಪರಿವಾರಿತಂಗಳಪ್ಪ (ಪ್ರತಿಷ್ಠಾ. ೪-೧೬). [ಪಂಚ + ವಿಧ + ಜ್ಯೋತಿಷ್ಕ$_1$]

**ಪಂಚವಿರುತಿ** (ನಾ). = ಪಂಚಪಕ್ಷಿಸ್ವನ ೨ : ಪಂಚವಿರುತಿಯಿಂ ತಾಳಗತಿಗುರವಣೆಸಲಿರ್ಪರದು ಸುರತಾಧಿಕಂ (ಜನಪ. ೧೦-೨೪); ಪಂಚವಿರುತಿಗಳ ಸಂಚ ಶಕುನಿಮಂಚದಿಂಚರಸ್ತನಿತ ಸೀತ್ಕಾರ ಮುಂಚುವ . . . ಸುಸಿಲೇಳ್ವೆ (ಭೈರಸೂ. ೨೯೭). [ಪಂಚ$_2$ + ವಿರುತಿ]

**ಪಂಚವಿಶಿಖ** (ನಾ). = ಪಂಚಬಾಣ ೧ : 'ಪಂಚವಿಶಿಖಾಸ್ತ್ರ' ಪರಾ. [ಪಂಚ$_2$ + ವಿಶಿಖ]

**ಪಂಚವಿಶಿಖಾಸ್ತ್ರ** (ನಾ). ಐದು ಬಾಣಗಳೇ ಆಯುಧವಾಗಿ ಉಳ್ಳವನು ; ಮನ್ಮಥ : ಪಂಚವಿಶಿಖಾಸ್ತ್ರನೆಡೆಗಳಿಳಪಕ್ಷಿಯ ನಾಯಕರನು ಕರೆತಂದೊಪ್ಪಿಸಿ (ನಪಮೋ. ೫-೯೧). [ಪಂಚವಿಶಿಖ + ಅಸ್ತ್ರ]

**ಪಂಚವಿಷಯ** (ನಾ). ಐದು ಬಗೆಯ ಜ್ಞಾನೇಂದ್ರಿಯಗಳಾದ ಶ್ರೋತ್ರ (ಕಿವಿ), ತ್ವಕ್ಕು (ಚರ್ಮ), ಚಕ್ಷು (ಕಣ್ಣು), ಜಿಹ್ವೆ (ನಾಲಗೆ), ಘ್ರಾಣ (ಮೂಗು)ವೆಂಬ ಪಂಚೇಂದ್ರಿಯಗಳಿಗೆ ಕ್ರಮವಾಗಿ ಗೋಚರವಾಗುವ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ಬಗೆಯ ಗುಣಗಳು : ಪಂಚಭೂತವಂಗವಾಗಿಪ್ಪ ಆತ್ಮಂಗೆ ಪಂಚೇಂದ್ರಿಯಂಗಳೇ ಮುಖಗಳು ಕರಣಂಗಳೇ ಕೈಗಳು ಪಂಚವಿಷಯವು ಪೂಜೆ (ಉರಿಪ. ಕ. ೨೦೧-೨೭೭) ; ರೂಪಾದಿ ಪಂಚವಿಷಯ ಪ್ರಾಪಣದಿಂದಲ್ಲದಾಗದಖಿಲೇಂದ್ರಿಯಸೌಖ್ಯೋಪಚಯಂ (ಚಂದ್ರಪ. ೧೧-೩೭). [ಪಂಚ$_2$ + ವಿಷಯ]

**ಪಂಚವೃತ್ತಿ** (ನಾ). ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎಂಬ ಐದು ಬಗೆಯನ್ನು ಹೊಂದಿರುವುದು ; ಪ್ರಾಣವಾಯು : ಇನ್ನು ಪ್ರಾಣಶಬ್ದವು ಪಂಚವೃತ್ತಿಯ (ವಾಯುವಿಕಾರದಲ್ಲಿ) ಹೆಚ್ಚು ಪ್ರಸಿದ್ಧವಾಗಿದೆ ಎಂದಿರಲ್ಲ, ಅದಕ್ಕೆ (ಹಿಂದಿನ ಅಧಿಕರಣದಲ್ಲಿ) ಆಕಾಶ ಶಬ್ದದ ವಿಷಯಕ್ಕೆ ಹೇಳಿ)ದಂತೆಯೇ ಪರಿಹಾರವನ್ನು ಮಾಡಿಕೊಳ್ಳಬೇಕು (ಬ್ರಹ್ಮಭಾ. ೧೯೪). [ಪಂಚ$_2$ + ವೃತ್ತಿ]

**ಪಂಚವೆ** (ನಾ). = ಪಂಚಮಿ : ಇತ್ತಕ್ಕೆತ್ತಂ . . . ಪಂಚಮಿ—ಪಂಚವೆ; ಪುಷ್ಕರಿಣಿ—ಹೊಕ್ಕರಣೆ (ಶಸುದ. ೨೭೯ ಪ್ರಯೋ). [<ಸಂ. ಪಂಚಮೀ]

**ಪಂಚವ್ಯೂಹ** (ನಾ). [ವಿಶಿಷ್ಟಾ] ಪರಮಾತ್ಮನಿಗಿರುವ ಪರ, ವ್ಯೂಹ, ಅಂತರ್ಯಾಮಿ, ವಿಭವ ಮತ್ತು ಅರ್ಚಾ ಎಂಬ ಐದು ಬಗೆಯ ವ್ಯೂಹಗಳು : ಈ ಸಂಪ್ರದಾಯದಂತೆ ಪರಮಾತ್ಮನು ಪಂಚವ್ಯೂಹರೂಪದಿಂದ ವಿಶ್ವಾತ್ಮಕನಾಗಿಯೂ ವಿಶ್ವಾತೀತನಾಗಿಯೂ ಇರುತ್ತಾನೆ. ಪರ, ವ್ಯೂಹ, ಅಂತರ್ಯಾಮಿ, ವಿಭವ, ಅರ್ಚಾ ಎಂಬುವುಗಳೇ ಪಂಚವ್ಯೂಹಗಳು (ಭಾರದ. ೨೬೨). [ಪಂಚ$_2$ + ವ್ಯೂಹ]

**ಪಂಚಶಕ್ತಿ** (ನಾ).೧.[ವೀಶೈ] ಜ್ಞಾನಶಕ್ತಿ, ಇಚ್ಛಾಶಕ್ತಿ, ಕ್ರಿಯಾಶಕ್ತಿ, ಆದಿಶಕ್ತಿ ಮತ್ತು ಪರಾಶಕ್ತಿ ಎಂಬ ಐದು ಬಗೆಯ ಶಕ್ತಿಗಳು : ಆ ಪಂಚಕಲೆಗಳಿಂದವೇ ಪಂಚಶಕ್ತಿಗಳುತ್ಪತ್ತಿ. ಆ ಪಂಚಶಕ್ತಿಗಳಿಂದವೇ ಜ್ಞಾನ ಮನ ಬುದ್ಧಿ ಚಿತ್ತ ಅಹಂಕಾರಂಗಳ ಜನನ (ಮಹಾದೇ.ಬ. ೧೦೨-೨೩೫); ಪರಶಿವ ಸದಾಶಿವ ಮಹಾಮಹಿಮ ಪಂಚಶಕ್ತ್ಯಾಧಾರ ನೆನಿಪ ಮಾಹೇಶಲೀಲಾವಿಗ್ರಹ (ವೀಶೈ ಪು.೧-೧-೧); ಆ ಸೃಷ್ಟಿಯ ಮುಖವ ಕಂಡು ಸೃಜಿಸಲು ಪುಟ್ಟಿದರು ಪಂಚಶಕ್ತಿಯರು, ಆ ಪಂಚಶಕ್ತಿಯರಿಗೆ ಪಂಚಮೂರ್ತಿಯರ ಕೈಗೊಳಿಸಿದಾತ ನಮ್ಮ ಬಸವಯ್ಯನು (ಸೀಲಸ. ೨೫-೧). ೨. ಈ ಐದು ಶಕ್ತಿಗಳ ಅಧಿದೇವತೆಗಳು [ಪಂಚ$_2$+ಶಕ್ತಿ]

**ಪಂಚಶತ** (ನಾ). ಒಂದು ಸಂಖ್ಯೆ; ಐದುನೂರು : ಅಪಾರವೀರ್ಯನುಂ ಪಂಚಶತ ಚಾಪೋತ್ಸೇಧನುಂ . . . ಅಪ್ರತಿಹತಶಾಸನನುಮಾಗಿ (ಆಪು. ೧೫-೩೪); ಇತ್ತಲ್ ಬಟುಕ್ಕ ಪಂಚಶತತೋತ್ತಮ ಯತಿಸಮಿತಿವೆರಸು ಗಮನ ಪ್ರಾಯಶ್ಚಿತ್ತನಿಮಿತ್ತಂ ಬಂದು ಸುದತ್ತಾಚಾರ್ಯರ್ ಪುರೋಪವನಮಂ ಸಾರ್ದರ್ (ಯಶೋಚ. ೧-೪೪). [ಪಂಚ$_2$+ಶತ]

**ಪಂಚಶಯನ** (ನಾ). = ಪಂಚಶಯ್ಯೆ ೨ : ಪಂಚಶಯನ–[ಐದು ಬಗೆಯ ಹಾಸುಗೆ] ಎಂದರೆ ಅಂದ, ಶೈತ್ಯ, ಮಾರ್ದವ, ಪರಿಮಳ, ಶುಭ್ರತೆ—ಈ ಐದು ಗುಣವುಳ್ಳ . . . ಹಾಸುಗೆ ಎಂಬ ವ್ಯವಹಾರವು ತಮಿಳರಲ್ಲಿ ಮಾತ್ರವಿದೆ (ಜೀವಸಂ. ೮ ಮುನ್ನುಡಿ). [ಪಂಚ$_2$+ಶಯನ]

**ಪಂಚಶಯ್ಯೆ** (ನಾ). ೧. ಅಂಡಜ, ಪಿಂಡಜ, ವಾಳಜ, ವಲ್ಕಜ ಮತ್ತು ರೋಮಜ ಎಂಬ ಐದು ವಸ್ತುಗಳಿಂದ ನಿರ್ಮಿಸಿದ ಹಾಸುಗೆ. ೨. ಅಂದ, ಶೈತ್ಯ, ಮಾರ್ದವ, ಪರಿಮಳ ಮತ್ತು ಶುಭ್ರತೆ ಎಂಬ ಐದು ಗುಣವುಳ್ಳ ಹಾಸುಗೆ : ಪಂಚಶಯ್ಯೆಯೊಳಗೊ ಜಗುವಿಂಬದುವೆತ್ತ ಹಾ ಪರಲ ಮೊನೆಯೊತ್ತೆ ನೆಲವಟ್ಟೆ(ಕ್ಕೆ)ಯಿರವೆತ್ತ (ಜೀವಸಂ. ೧೨೦-೧೪ ರಗಳೆ). [ಪಂಚ$_2$+ಶಯ್ಯೆ]

**ಪಂಚಶರ** (ನಾ). ೧. ತಾವರೆ, ಅಶೋಕ, ಮಾವು, ಮಲ್ಲಿಗೆ ಮತ್ತು ನೈದಿಲೆಗಳೆಂಬ ಐದು ಹೂಬಾಣ. ೨. ಇಂಥ ಬಾಣಗಳುಳ್ಳವನು ; ಮನ್ಮಥ : "ಮದನಃ, ಮನ್ಮಥಃ, ಮಾರಃ, ಪ್ರದ್ಯುಮ್ನಃ, ಮೀನಕೇತನಃ, ಕಂದರ್ಪಃ, ದರ್ಪಕಃ, ಅನಂಗಃ, ಕಾಮಃ, ಪಂಚಶರಃ . . . ವಿಶ್ವಕೇತುಃ—೨೧ ಮನ್ಮಥನ ಹೆಸರುಗಳು" (ಸಿದ್ಧಾಂತಿ. ೧೭); ಪಂಚಶರಂಗೆ ಮಾರ್ಸರಲದಾಗಿ ವಿಜೃಂಭಿಸುವೆಮ್ಮ ಕಣ್ಣಂಚಿನಕಾಂತಿಗೊಂದಿನಿತು ಸಾಮ್ಯವ ನೋಡಿ(ಉದ್ಭಟ.೧-೬೩); ಅವನಿಪ ರೂಪ ಪಂಚಶರನೋಲಗದಿಂ ನಡೆತಂದಳ್ಳಿಯಿಂ (ರಾಜಶೇ. ೧೧-೭೦). [ಪಂಚ$_2$+ಶರ]

**ಪಂಚಶಾಖ** (ನಾ). ಬೆರಳುಗಳೆಂಬ ಐದು ಟಿಸಿಲುಗಳುಳ್ಳದು ; ಕೈ ; ಹಸ್ತ : "ಪಾಣಿಶಯಃ, ಪಂಚಶಾಖಃ, ಕರಃ, ಹಸ್ತಃ—ಈ ೪ ಕೆಯ್ಗೆ"(ಹಲಾಯು. ೬೪-೩೫೭) ; "ಪಂಚಶಾಖಃ, ಶಯಃ, ಪಾಣಿಃ—೩ ಮಣಿಕಟ್ಟಿನಿಂದಲೂ ಬೆರಳುಗಳಿಂದಲೂ ಕೂಡಿದ ಸಂಪೂರ್ಣ ಹಸ್ತದ ಹೆಸರುಗಳು" (ಸಿದ್ಧಾಂತಿ. ೧೯೩). [ಸಂ.]

**ಪಂಚಶಾಖೆ** (ನಾ). = ಪಂಚಶಾಖ : "ಪಾಣಿಹಸ್ತಂ ಪಂಚಶಾಖೆ ಕರ ಮೊನಲು ಕೈ" (ಮಂಗರಾ. ೯೫-೮). [ಸಂ. ಪಂಚಶಾಖಾ]

**ಪಂಚಶಿಕ್ಷೆ** (ನಾ). [ಬೌದ್ಧ] ಉಪಾಸಕರಿಗೆ ವಿಧಿಸುವ ಅಹಿಂಸೆ (ಹಿಂಸಿಸದಿರುವುದು), ಅಚೌರ್ಯ (ಕದಿಯದಿರುವುದು), ಬ್ರಹ್ಮಚರ್ಯ, ಸತ್ಯ(ದಿಟವನ್ನೇ ನುಡಿಯುವುದು)ಮತ್ತು ಮಧುಮದ್ಯತ್ಯಾಗ(ಜೇನು ಮತ್ತು ಮದ್ಯ ಕುಡಿಯದಿರುವುದು) ಎಂಬ ಐದು ಬಗೆಯ ಆಚರಣೆ: ಯಾವ ಬೌದ್ಧನಿಗೆ ಪಂಚಶಿಕ್ಷೆಯನ್ನು ಕೊಡತಕ್ಕುದು (ಕಸಾಪ. I, ೩೧೦). [ಪಂಚ$_2$+ಶಿಕ್ಷೆ]

**ಪಂಚಶಿಖ** (ನಾ). ಸಂಪ್ರದಾಯದಂತೆ ತಲೆಯಲ್ಲಿ ಐದು ಜುಟ್ಟನ್ನು ಹೊಂದಿರುವವನು : ಆತನ ತನೂಜನುಪಮಾತೀತಂ ನೆಗಟ್ದಂ ಹಾರಿತ ನಾತಂಗೆ ಜಗನ್ನುತ ಪಾದಾಬ್ಜಂ ತ್ರಿಜಗಖ್ಯಾತಂ ಹಾರೀತಿ ಪುಟ್ಟಿದಂ ಪಂಚಶಿಖಂ (ಕಇಕ. ೧-೨-೧೧ ; 1058). [ಸಂ.]

**ಪಂಚಶಿಖಿ** (ನಾ). ೧. ಐದು ತುದಿಗಳು : ಪರಮೇಶ್ವರನುಂ ಕಾರ್ತಸ್ವರದ ಚತುಷ್ಕೋಣಕಲಶಮುಂ ಪೋಲ್ತುವೆ ಮಂದರಶಿಖರಪಂಚಶಿಖಿಯಂ ಪರಿಮಳವಿಮಿಳಿತಾಳಿಪಟಳರುಚಿ ಜಟಿಳತೆಯಂ (ಅಜಿಪು. ೪-೭೦). ೨.[ತತ್ತ್ವಶಾ] ಷಡಧ್ವದಲ್ಲಿ ಒಂದಾದ ಭುವನಾಧ್ವದ ಇನ್ನೂರು ಇಪ್ಪತ್ತುನಾಲ್ಕು ಭೇದಗಳಲ್ಲಿ ಒಂದು : ವರಪಂಚಶಿಖಿಯಾ ಪ್ರಪಂಚಾತ್ಮಕಂ ತೀಕ್ಷ್ಣನುರುತರ ಸುಸೂಕ್ಷ್ಮಂ (ವೀಶೈ ಪು. ೬-೪-೨೧). [ಪಂಚ$_2$+ಶಿಖಿ]

**ಪಂಚಶಿಖೆ** (ನಾ). ಆಚಾರವಂತರು ತಲೆಯಲ್ಲಿ ಬಿಡುವ ಐದು ಜುಟ್ಟು : (೬). [ಪಂಚ$_2$+ಶಿಖೆ]

**ಪಂಚಶಿಲ್ಪ** (ನಾ). ೧. ಐದು ಬಗೆಯ ಕೈಗೆಲಸಗಳು ; ⊫ ಬಡಗಿ, ಅಕ್ಕಸಾಲೆ, ಕಮ್ಮಾರ, ಕಂಚುಗಾರ, ಕಲ್ಲುಕುಟಿಕ ಅಥವಾ ಬಡಗಿ, ನೇಕಾರ, ನಾಯಿಂದ, ಅಗಸ, ಚಮ್ಮಾರ ಇವರುಗಳ ಕೈಗೆಲಸ : ಪಂಚಶಿಲ್ಪಗಳಾದಿ ಲೋಕಪ್ರಪಂಚವೆಲ್ಲವ ತಿಳುಹಿ (ಬಿಜ್ಜ ಪು. ೧೧-೪೫). [ಪಂಚ$_2$+ಶಿಲ್ಪ]

**ಪಂಚಶೀಲ** (ನಾ). ೧. = ಪಂಚಶಿಕ್ಷೆ. ೨. [ಜೈನ] ನೀತಿಶಾಸ್ತ್ರದಲ್ಲಿ ಮುನಿಗಳು ಗೃಹಸ್ಥರಿಗೆ ಹೇಳಿರುವ ಅಹಿಂಸೆ, ಸತ್ಯ, ಅಸ್ತೇಯ (ಕದಿಯದಿರುವುದು), ಬ್ರಹ್ಮಚರ್ಯ ಮತ್ತು ಅಪರಿಗ್ರಹ (ಸಂಗ್ರಹ ಬುದ್ಧಿಯಿಲ್ಲದಿರುವುದು) ಎಂಬ ಐದು ಬಗೆಯ ವ್ರತಗಳು : ಜೈನ ನೀತಿಶಾಸ್ತ್ರವು ಅಹಿಂಸೆ . . . ಅಪರಿಗ್ರಹ ಎಂಬ ಪಂಚಶೀಲಗಳ ಮೇಲೆ ನಿಂತಿದೆ (ಭಾರದ. ೧೮೨). ೩. [ರಾಜನೀ] ಪರಸ್ಪರ ಪ್ರದೇಶ ಮತ್ತು ಸಾರ್ವಭೌಮತ್ವವನ್ನು ಮನ್ನಿಸುವುದು, ಅನಾಕ್ರಮಣ, ಪರಸ್ಪರ ಆಂತರಿಕ ಕಾರ್ಯಭಾರಗಳಲ್ಲಿ ಹಸ್ತಕ್ಷೇಪ ಮಾಡದಿರುವುದು, ಸಮಾನತೆ ಮತ್ತು ಪರಸ್ಪರ ಅಭಿವೃದ್ಧಿಗಾಗಿ ಶ್ರಮಿಸುವುದು ಎಂಬ ಅಂಶಗಳನ್ನು ಅನುಸರಿಸುವುದು ; ಶಾಂತಿಯುತ ಸಹಜೀವನ : ಕೆಡುಕಿಗೆ ಅಧಿಕಾರ ಬಂತು, ಅಧಿಕಜೀವಜಾತದಿ ಪಂಚಶೀಲಪಾಂಚಾಲಿಯ ವಸ್ತ್ರಹರಣ ನಡೆದಿದೆ (ಕಲ್ಲೋಲ. ೫೭-೫) ; ಮಹಾತ್ಮಗಾಂಧಿಯವರ ಉಪದೇಶದ ಮಹತ್ತಿನಿಂದ ಭಾರತೀಯರು ಶಾಂತಿಪ್ರಿಯರಾಗಿ ಇತರ ದೇಶದವರೊಡನೆ ಪಂಚಶೀಲನೀತಿಯನ್ನು ಅನುಸರಿಸುತ್ತಿದ್ದಾರೆ (ಭಾರದ. ೩೩೭). [ಪಂಚ$_2$+ಶೀಲ]

**ಪಂಚಶುದ್ಧಿ** (ನಾ). ೧. ಐದು ಬಗೆಯ ಶುದ್ಧಿಗಳು : ಪಂಚಶುದ್ಧ್ಯನ್ವಿತಾ=ಮನಃಶುದ್ಧಿ, ವಚನಶುದ್ಧಿ, ಶರೀರಶುದ್ಧಿ, ದ್ರವ್ಯಶುದ್ಧಿ, ಕ್ರಿಯಾಶುದ್ಧಿಗಳೆಂಬಯ್ದುಂ ಶುದ್ಧಿಗಳಿಂ ಕೂಡಿದ (ಪ್ರತಿಷ್ಠಾ. ೧-೧೭). ೨. ಆತ್ಮಶುದ್ಧಿ, ಸ್ಥಾನಶುದ್ಧಿ, ದ್ರವ್ಯಶುದ್ಧಿ, ಲಿಂಗಶುದ್ಧಿ, ಮತ್ತು ಮಂತ್ರಶುದ್ಧಿ ಎಂಬ ಐದು ಬಗೆಯ ಶುದ್ಧಿ : ಆತ್ಮಶುದ್ಧಿ ಸ್ಥಾನಶುದ್ಧಿ ದ್ರವ್ಯಶುದ್ಧಿ ಲಿಂಗಶುದ್ಧಿ ಮಂತ್ರಶುದ್ಧಿಗಳೆಂಬ ಪಂಚಶುದ್ಧಿಗಳಂ ವಿಸ್ತರಿಸುವಡಜಲ್ಲಿ (ವಿವೇಕ. ೧೦೩). [ಪಂಚ$_2$+ಶುದ್ಧಿ]

**ಪಂಚಶೂಲೆ** (ನಾ). ಒಂದು ಬಗೆಯ ರೋಗ : ಹಿಪ್ಪಲಿ, ಹಿಪ್ಪಲೀ ಮೂಲ, ಚವ್ಯ, ಚಿತ್ರಮೂಲ, ಶುಂಠಿ—ಈ ೫ ೞ ಕಷಾಯವಂ ಕಾಸಿ ಕೊಳ್ಳೆ ಪಂಚಶೂಲೆ ಮಾಣ್ಗುಂ (ವಿದ್ಯವಿ. ೭೧). [ಪಂಚ$_2$+ಶೂಲೆ$_1$]

**ಪಂಚಸಂಸ್ಕಾರ**(ನಾ).[ವಿಶಿಷ್ಟಾ] ತಪ, ಪುಂಡ್ರ, ನಾಮ, ಮಂತ್ರ ಮತ್ತು ಯಾಗ ಎಂಬ ಐದು ಬಗೆಯ ಧಾರ್ಮಿಕ ಆಚಾರಗಳು ;

೧. ತಪ: ಮಹಾವಿಷ್ಣುವಿನ ಆಯುಧಗಳಾದ ಶಂಖ, ಚಕ್ರಗಳ ಲಾಂಛನವನ್ನು ತೋಳಿನಲ್ಲಿ ಧರಿಸುವುದು. ೨. ಪುಂಡ್ರ: ನಾಮುವನ್ನು ಇಟ್ಟುಕೊಳ್ಳುವುದು. ೩. ನಾಮ: ವಿಷ್ಣುವಿನ ಹೆಸರನ್ನು ಇಟ್ಟುಕೊಳ್ಳುವುದು. ಪುರುಷನು ವಿಷ್ಣುವಿನ ದಾಸನೆಂತಲೂ, ಸ್ತ್ರೀಯರು ವಿಷ್ಣುವಿನ ದಾಸಿಯೆಂತಲೂ ಹೇಳಿಕೊಳ್ಳಬೇಕು. ೪. ಮಂತ್ರ: ವಿಷ್ಣುವಿಗೆ ಸಂಬಂಧಿಸಿದ ಮೂರು ವಿಧದ ಮಂತ್ರಗಳು. ೫. ಯಾಗ: ವಿಷ್ಣುವಿನ ಪೂಜೆ: ಪಂಚಸಂಸ್ಕಾರಗಳನು ಪಡೆದೊಡನರ್ಥಪಂಚಕತತ್ವಮನಱಿತು . . . ನಿಶ್ಚಂಚಲಚಿತ್ತದೊಳಿಹುದು (ಹರಿಬ್ರ.೯-೪೭); ಅವರ ವಿವಾದದಲ್ಲಿ ವೈಷ್ಣವನಾದ ವಿಷ್ಣುಚಿತ್ತನು ಗೆದ್ದನು. ಸರಿ, ಆ ಕ್ಷಣವೇ ಈತನು ಆತನ ಶಿಷ್ಯನಾಗಿ ಪಂಚಸಂಸ್ಕಾರಗಳನ್ನು ಹೊಂದಿದನು (ಸಾಹಿಜೀ. ೯೪). [ಪಂಚ$_2$+ಸಂಸ್ಕಾರ]

**ಪಂಚಸಮಿತಿ** (ನಾ). [ಜೈನ] ಈರ್ಯಾಸಮಿತಿ, ಭಾಷಾಸಮಿತಿ, ಏಷಣಾಸಮಿತಿ, ಆದಾನನಿಕ್ಷೇಪಣಸಮಿತಿ ಮತ್ತು ಉತ್ಸರ್ಗಸಮಿತಿ ಎಂಬ ಐದು ಬಗೆಯ ಧಾರ್ಮಿಕ ಪ್ರವೃತ್ತಿಗಳು,—ಪ್ರಾಣಿಪೀಡಾಪರಿಹಾರೋಪಾಯಗಳು: ಕಸವರಮುಂ ಕಸಮುಂ ಪೂಜಿಸುವನುಮೇಳಿಸುವನುಂ ಸಮಾನಂ ಪ್ರತಿಭಾಷಿಸೆ ಪಂಚಮಹಾವ್ರತ ಪಂಚಸಮಿತಿಮಿಳಿತ ತ್ರಿಗುಪ್ತಿಗುಪ್ತಂ ಮುನಿಪಂ (ಶಾಂತಿಪು. ೯-೧೧೧): ಷಡಾವಶ್ಯಕಕಷಾಯದರ್ಪದಳನನುಂ ಪಂಚಸಮಿತಿನಿಯತನುಂ . . . ಷೋಡಶ ತೀರ್ಥಕರಭಾವನೆಯುಮಂ ಭಾವಿಸಲ್ ಬಗೆದು (ಅಜಿಪು.೩-೧ ಪ). [ಪಂಚ$_2$+ಸಮಿತಿ]

**ಪಂಚಸರ** (ನಾ). ೧. = ಪಂಚಶರ ೨: "ಅಯ್ಯಂಬಂ ಪಂಚಸ[ಪಾಠಾಂ.ಶ]ರಂ" (ಚತುಸಿ. ೫೧); ಮೊದಲ ಪದನಪಭ್ರಂಶಕ್ಕೆ ಬಾರದೆ ಪರಪದಂ ತದ್ಭವಮಾದ ಸಮಾಸಕ್ಕೆ . . . ಪಂಚಶರ-ಪಂಚಸರ (ಶಮದ. ೨೮೯ ಪ್ರಯೋ). ೨.ಐದು ಎಳೆಗಳ ಹಾರ: ತರಳೆಯ ಮೊಗ್ಗೆ ಮೊಲೆಯ ಮುಸುಕಿದಳೊರ್ವ ತರುಣೆ ಮುತ್ತಿನ ಪಂಚಸರದಿಂದೆ (ತ್ರಿಭುತಿ. ೨೨-೫೧); ಹಾರ ತಿಸರ ಪಂಚಸರ ಕಂಠಮಾಲೆಯು . . . ರಾಯಸಿತ್ತ ನಂದನೆಗೆ (ರಾಮವಿ. ೮-೪೭); ನವರತ್ನದ ಪುಸ್ತಿ ಕಟ್ಟಾಣಿಮುತ್ತಿನ ಋಳಋಳಿಸುವ ಪಂಚಸರದ . . . ಕುವಲಯನೇತ್ರೆಯೊಪ್ಪಿದಳು (ಕಂಸವಿ. ೯-೭೨). [ಪಂಚ$_2$+ಸರ$_3$]

**ಪಂಚಸಾದಾಖ್ಯ** (ನಾ). [ವೀಶೈ] ಶಿವ, ಅಮೂರ್ತಿ, ಮೂರ್ತಿ, ಕರ್ತೃ, ಕರ್ಮಗಳೆಂಬ ಐದು ಸಾದಾಖ್ಯಗಳು: ಆ ಮಹಾಲಿಂಗವೇ ಪಂಚಸಾದಾಖ್ಯವೆನಿಸಿತ್ತು ಆ ಪಂಚ ಸಾದಾಖ್ಯವೇ ಪಂಚಲಿಂಗಪ್ರಕಾಶವೆನಿಸಿತ್ತು (ಸುಹಾದೇ. ಬ. ೧೦೨-೨೩೫); ' ಪಂಚಸಾದಾಖ್ಯಂಗಳನೊಳಗೊಂಡು ಸಾಕಾರವಾಗಿ ಬಂದ ಇಷ್ಟಲಿಂಗವೇ [ಆ] ಶಿವನು (ಘನಪ. ೩೦-೨೪); ಕಡೆಯು ನಾದದ ಸಹಸ್ರಾಂಶದೊಳು ಕೂರ್ಪಿನಿಂದೆಡೆವಿಡದೆ ಪಂಚಸಾದಾಖ್ಯಂಗಳೊಂದೊಂದಱೊಡನೆ ಸಾವಿರ ಭಾಗೆ ಭಾಗೆಯಿಂದೊಗೆದು . . . ಮಹೇಶ್ವರನುದಿಸಿ ಸೃಜಿಸತೊಡಗಿದನಖಿಳವಂ (ವೀಶೈಪು. ೧-೭-೪೦). [ಪಂಚ$_2$+ಸಾದಾಖ್ಯ]

**ಪಂಚಸಾಮ**(ನಾ).ಉದ್ಗೀಥ, ಪ್ರಸ್ತಾವ, ಹಿಂಕಾರ, ಪ್ರತಿಹಾರ ಮತ್ತು ನಿಧನಗಳೆಂಬ ಐದು ಬಗೆಯ ಸಾಮಗಳು; ಸಾಮ—೫ ವಿಧ: ಗುಣಸಂಕೀರ್ತನ (ಗುಣಕೀರ್ತನ ಮಾಡುವುದು), ಸಂಬಂಧೋಪಾಖ್ಯಾನ (ಸಂಬಂಧಗಳನ್ನು ತಿಳಿಸುವುದು), ಪರಸ್ಪರೋಪಕಾರ ಸಂದರ್ಶನ (ಪರಸ್ಪರೋಪಕಾರವನ್ನು ಮನಗಾಣಿಸುವುದು), ಆಯತಿಪ್ರದರ್ಶನ (ಒಳ್ಳೆಯತನವನ್ನೆಸಗುವುದು), ಆತ್ಮೋಪನಿಧಾನ (ನಾನು ನಿನ್ನವನೆಂದು ಒಳ್ಳೆಯ ಮಾತುಗಳನ್ನಾಡುವುದು) (ಅರ್ಥಶಾ.೭೪-೨-೧೦)" (ಶ್ರೀವತ್ಸ. ೪೮೩): ಗೋವುಗಳೊಳುದ್ಗೀಥನಿಹ ಪ್ರಸ್ತಾವ ಹಿಂಕಾರೆರಡು ರೂಪದಲಾವಿಯಜಗಳೊಳಗಿಹನು ಪ್ರತಿಹಾರಂ ಹಯಗಳೊಳು ಜೀವನಪ್ರದ ನಿಧನ ಮನುಜರೋಳೀ ವಿಧದಲಿಹ ಪಂಚಸಾಮವ ಜ್ಞಾನವಜ್ಞಾನಕೆ ನೆನವರಿಗೆಯ್ದಿಸನು ಜನುಮಂಗಳ (ಹಸಾರ. ೬-೧೪). [ಪಂಚ$_2$+ಸಾಮ$_3$]

**ಪಂಚಸಾಯಕ** (ನಾ).೧. = ಪಂಚಬಾಣ ೧: ಧನುವನೇರಿಸಿ ಪುಷ್ಪಶರಗಳ ಕೊನೆಯ ಮಂತ್ರಿಸಿ ಪಂಚಸಾಯಕವನು ಸೆಳದು ಕರ್ಣಾಂತ ಮುಷ್ಟಿಯಲಾಗ ಮನಸಿಜನು (ಜ್ಞಾನಸಿಂ. ೪೩-೧೪೪). ೨. = ಪಂಚಬಾಣ ೫: ನೀನುಂ ನನೆಗೋಲ್ಗಳಂ ಸಿಡಿಲ್ಗೆ ಸಾಟಿಯನಾಗಿಪೆ ಪಂಚಸಾಯಕಾ (ಶಾಕುಂತ. ೩೨-೫೬). [ಪಂಚ$_2$+ಸಾಯಕ]

**ಪಂಚಸಾರ** (ನಾ.). ೧. [ವೈದ್ಯಶಾ] ಪಿಪ್ಪಲಿ (ಹಿಪ್ಪಲಿ), ಸರ್ಪಿ (ತುಪ್ಪ), ಸಿತ (ಸಕ್ಕರೆ), ಕ್ಷೌದ್ರ (ಜೇನು) ಮತ್ತು ಪಯಸ್ಸು (ಹಾಲು) ಗಳೆಂಬ ಐದು ಬಗೆಯ ಸಾರಗಳು. ೨. ಪಂಚಸಾರಗಳ ಮಿಶ್ರಣದಿಂದಾದ ಔಷಧ: ಪಂಚಸಾರಕ್ಕೆ:—ಹಾಲು, ಜೇನುತುಪ್ಪ, ತುಪ್ಪ, ಹಿಪ್ಪಲಿ, ಸಕ್ಕರೆ ಇಷ್ಟನ್ನೂ ಕೂಡಿ ಇಟ್ಟು ಲೇಹ್ಯಂ ಮಾಡಿ ಕೊಡುವುದು (ವೈವಿ. ೧೪೪). ೩. [ವೀಶೈ] (?): ನವಸಾರ ಅಷ್ಟಸಾರ ದಶಸಾರ ಪಂಚಸಾರ ಚತುಸ್ಸಾರ ಮೇಕಸಾರಯಿಂತಿವನತಿಗಳೆದ ಮಹಾಮಹಿಮನ ನಿಲವು ಲಿಂಗದಲ್ಲಿ ಸಂಪೂರ್ಣ (ಪದಗೋ. ೧೩-೧೭೩). [ಪಂಚ$_2$+ಸಾರ$_2$]

**ಪಂಚಸಿದ್ಧಾಂತ** (ನಾ). ೧. [ಜ್ಯೋತಿ] ಜ್ಯೋತಿಷಗ್ರಂಥಗಳಲ್ಲಿ ಪ್ರತಿಪಾದಿತವಾಗಿರುವ ರೋಮಕ, ಪೈತಾಮಹ, ವಾಸಿಷ್ಠ, ಪೌಲಿಶ ಮತ್ತು ಸೌರಗಳೆಂಬ ಐದು ಸಿದ್ಧಾಂತಗಳು: ಈ ಮತದಲ್ಲಿ ಪಂಚಸಿದ್ಧಾಂತಗಳೆಂಬ ಜ್ಯೋತಿಶ್ಶಾಸ್ತ್ರ ಸಿದ್ಧಾಂತಗಳಲ್ಲಿ ಒಂದು ಸಿದ್ಧಾಂತದ ಪ್ರಕಾರ . . . ಅತಿವಿಸ್ತರವಿರುವುದಾದರೂ ಆಧುನಿಕ ಸಂಸ್ಕಾರಕ್ಕೆ ಅನಾವಶ್ಯಕವೆಂದು ಅದರಲ್ಲಿ ಪ್ರವರ್ತಿಸಲಿಲ್ಲ(ಹಿಂದಸಾ.೯೧). ೨. [ತತ್ತ್ವಶಾ] ಆಧ್ಯಾತ್ಮವಿಚಾರಕ್ಕೆ ಪ್ರವರ್ತಿಸಿರುವ ವೇದ, ಪಾಂಚರಾತ್ರ, ಸಾಂಖ್ಯ, ಯೋಗ ಮತ್ತು ಪಾಶುಪತಗಳೆಂಬ ಐದು ಸಂಪ್ರದಾಯಗಳು: ವೇದಂಗಳುಂ ಶ್ರೀ ಪಾಂಚರಾತ್ರಮುಂ ಸಾಂಖ್ಯಮುಂ, ಯೋಗಮುಂ,ಪಾಶುಪತಮೆಂಬೀ ಪಂಚಸಿದ್ಧಾಂತಂಗಳುಂ ಪರಸ್ಪರ ವಿರುದ್ಧಮಾದ ತತ್ವದ ನೆಲೆಗಳಂ ಪ್ರತಿಪಾದಿಸುವುವೋ? (ಚಿಕಬಿ. ೨೧). [ಪಂಚ$_2$+ಸಿದ್ಧಾಂತ]

**ಪಂಚಸುಜ್ಞಾನ** (ನಾ). [ಜೈನ] ಮತಿಜ್ಞಾನ, ಶ್ರುತಜ್ಞಾನ, ಅವಧಿಜ್ಞಾನ, ಮನಃಪರ್ಯಾಯಜ್ಞಾನ ಮತ್ತು ಕೇವಲಜ್ಞಾನಗಳೆಂಬ ಐದು ಬಗೆಯ ಜ್ಞಾನಗಳು: ಪಂಚಕಲ್ಯಾಣಗಳಿಗಾಶ್ರಯ ಪಂಚಸುಜ್ಞಾನಗಳ ಸಲೆ ನೆಲೆ ಪಂಚಮಸ್ಥಾನಗಳ ಪಡೆದರ . . . ತೀರ್ಥಕರೊಲಿದು ಭಜಿಸುವೆ (ಬಜ್ಜಪು. ೧-೩). 'ಪಂಚವಿಧಜ್ಞಾನ' ಪರಾ. [ಪಂಚ$_2$+ಸುಜ್ಞಾನ]

**ಪಂಚಸೂತಕ** (ನಾ). ಜನನಸೂತಕ, ಮರಣಸೂತಕ, ರಜಸ್ಸೂತಕ,ಉಚ್ಛಿಷ್ಟಸೂತಕ ಮತ್ತು ಜಾತಿಸೂತಕಗಳೆಂಬ ಐದು ಬಗೆಯ ಸೂತಕಗಳು; ಈ ಐದು ಸೂತಕಗಳ ಹೆಸರುಗಳ ಪಟ್ಟಿಯಲ್ಲಿ ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ. ಉದಾಹರಣೆಗೆ: "ಸೂತಕ—೫: (ಅ) ಜಾತ, ಮೃತ, ರಜಃ, ಉಚ್ಛಿಷ್ಟ, ಜಾತಿ (ವಿದ್ಯಾಕ. ೫೩). (ಆ) ಮಧುಪಾನ, ಅನೃತ, ದೇವಲಕಸ್ಪರ್ಶ, ಯೂಪಸ್ತಂಭಸ್ಪರ್ಶ, ಶವದರ್ಶನ (ವಿದ್ಯಾಕ. ೫೩). (ಇ) ಜಾತಿ, ಜನನ, ಮರಣ, ನಿತ್ಯ, ನೈಮಿತ್ತಿಕ (ಸಂಜ್ಞಾ. ೮೩). (ಈ) ಜಾತಿ, ಜನನ, ಪ್ರೇತ, ಉಚ್ಛಿಷ್ಟ, ಪ್ರಜಾ (ವಿಚಿಂ. ೨-೧೮೩)" (ಶ್ರೀವತ್ಸ. ೪೯೧): ಜಾತಿಸೂತಕ ಜನನಸೂತಕ

**ಪ್ರೇತಸೂತಕ** ಎಂಜಲ **ಸೂತಕ** ರಜಸ್ಸೂತಕವೆಂಬ ಪಂಚಸೂತಕವುಳ್ಳ ಮಹಾನುಭಾವಿಗಳು . . . ಭವವಿಶ್ರವ ಕಳೆದೆವೆಂತೆನ್ನ ಬಹುದೆ (ಚನ್ನಪ. ೨೨-೨) ; ಜಾತಿಸೂತಕ ಪ್ರೇತಸೂತಕ ಜನನಸೂತಕ ಉಚ್ಛಿಷ್ಟಸೂತಕ ರಜಸ್ಸೂತಕವೆಂಬ ಪಂಚಸೂತಕಂಗಳಂ ಕಳೆದು (ಅಖಂಡೇ. ೮೭-೯೦) ; ವೀರಶೈವ ಸ್ತ್ರೀಪುರುಷರೆಲ್ಲರೂ . . . ಲಿಂಗಪೂಜೆಯನ್ನು ಮಾಡಲೇ ಬೇಕೆಂಬ ಪ್ರಬಲವಿಧಿಯಿರುವುದರಿಂದ ಇವರಿಗೆ ಲಿಂಗಧಾರಣ, ಲಿಂಗ ಪೂಜೆಗಳಲ್ಲಿ ಪಂಚಸೂತಕ ನಿರ್ಬಂಧವಿಲ್ಲ (ಭಾರದ. ೨೫೧).

[ಪಂಚ$_2$ + ಸೂತಕ]

**ಪಂಚಸೂತ್ರ** (ನಾ). [ವೀಶೈ] ಶಿವಲಿಂಗಗಳ ಪ್ರತಿಷ್ಠಾಕಾಲದಲ್ಲಿ ಗಮನಿಸುವ ಲಿಂಗೋಚ್ಚತೆ, ಲಿಂಗವಿಸ್ತಾರ, ಲಿಂಗಸ್ಥೌಲ್ಯ, ಪೀಠವಿಸ್ತಾರ, ಪ್ರನಾಲಿಕಾಮಾನಗಳೆಂಬ ಐದು ಸೂತ್ರಗಳು ; ℙ ಈ ಐದು ಸೂತ್ರಗಳ ಹೆಸರುಗಳ ಪಟ್ಟಿಯಲ್ಲಿ ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ. ಉದಾಹರಣೆಗೆ : "ಸೂತ್ರ—ಙ : (ಅ) ಲಿಂಗೋಚ್ಚತೆ, ಲಿಂಗವಿಸ್ತಾರ, ಲಿಂಗಸ್ಥೌಲ್ಯ, ಪೀಠವಿಸ್ತಾರ, ಪ್ರನಾಲಿಕಾಮಾನ (ಧರ್ಮಸಿಂ. ೩ ಪೂ—೫೫೭). (ಆ) ಪಡ್ವಿಡಿ, ವೃಷ್ಟಿ, ಮುಕ್ತಾಗುಚ್ಛ, ಲಂಬನ, ಪಂಚವರ್ಣ (ವೀಸಾಇ. I-೮೭). (ಇ) ಸಂಕಲ್ಪ, ಮಾರ್ಜನ, ವರುಣ ಸೂಕ್ತ, ಅಘಮರ್ಷಣ, ಸ್ನಾನಾಂಗತರ್ಪಣ (ವಿದ್ಯಾಕ.೫೩)" (ಶ್ರೀವತ್ಸ. ೯೯೨) : ಎಲೇ ಹಿರಿಯರುಗಳಿರಾ ಕೈಯಲ್ಲಿರುವುದು ಪಂಚಸೂತ್ರಪ್ರಮಾಣದಿಂದ ಕಟೆದು ತಿದ್ದಿ ತೀರ್ಚಿ ಒಪ್ಪವಿಟ್ಟುದು ಲಿಂಗವೆಂದಲ್ಲಿ ಅಹುದೆಂಬರು (ನೋಳಿಮಾ. ೧೮೫-೬೯೪ ಟೀಕು) ; ಸ್ವಶಾಖೀಯ ಗುರುಗಳು . . . ಪಂಚಸೂತ್ರಘಟಿತವಾದ ಲಿಂಗವನ್ನು ಸಾಮಾನ್ಯಾಕಾರದಿಂದ ಸಂಸ್ಕರಿಸಿ ಗರ್ಭಿಣಿಯರ ವಶಕ್ಕೆ ಕೊಡುವರು (ಭಾರದ. ೨೪೯).

[ಪಂಚ$_2$ + ಸೂತ್ರ]

**ಪಂಚಸೂನ** (ನಾ). "ಕುಟ್ಟುವುದು, ಕೇರುವುದು, ಬೀಸುವುದು, ಒಲೆ ಹೊತ್ತಿಸುವುದು, ನೀರು ತುಂಬುವುದು—ಈ ಐದು ಕ್ರಿಯೆಗಳಿಗೆ ಪಂಚಸೂನವೆಂದು ಹೆಸರು" (ದ್ವಾದಶಾ. ಕೋಶ) ; ℙ "ಸೂನಾ—ಙ : ಗೃಹಸ್ಥನು ತಾನು ಮಾಡದೆಯೇ (ಪ್ರಾಣಿಹಿಂಸೆಯ ದೋಷವನ್ನು) ಹೊಂದುವ, ಐದು ಪ್ರಾಣಿಹಿಂಸೆಯ ಸ್ಥಾನಗಳು : ಚುಲ್ಲೀ (ಒಲೆ), ಪೇಷಣೀ (ಅರೆಯುವ ಕಲ್ಲು), ಉಪಸ್ಕರಃ (ಪೊರಕೆ), ಕಂಡನೀ (ಒರಳು ಮತ್ತು ಒನಕೆ), ಉದಕುಂಭ (ನೀರಿನ ಕೊಡ) (ಮನು. ೩-೬೮ ; ಧರ್ಮಸಿಂ. ೩ ಪೂ—೨೪೭). ಉದ್ವಾಹನೀ, ದೃಷದುಪಲಾತ್ಮಿಕಾ, ಗೃಹೋಪಕರಣ ಕುಂಡಸಂಮಾರ್ಜನ್ಯಾದಿ, ಉಲೂಖಲ ಮುಸಲ, ಜಲಾಧಾರ ಕಲಶ (ಮನು. ೩-೬೮ ವ್ಯಾ). ಕಂಡನೀ, ಪೇಷಣೀ, ಚುಲ್ಲೀ, ಉದಕುಂಭ, ಮಾರ್ಜನೀ (ಪರಾಶರಸ್ಮೃತಿ. ೨-೧೧)" (ಶ್ರೀವತ್ಸ. ೯೯೩) : ಪಂಚೇಂದ್ರಿಯವೆಂಬ ಮದಗಜವಿಜಯರು ಪಂಚಬಾಣನ ಭಂಜನರು ಪಂಚಮಹಾವ್ರತಸಮಿತಿಸಮೇತರು ಪಂಚಸೂನು[ನ]ವರ್ಜಿತರು (ದ್ವಾದಶಾ. ೧-೩೩೦). 'ಪಂಚಸೂನಾದೋಷ' ಪರಾ.

[ಸಂ. ಪಂಚಸೂನಾ]

**ಪಂಚಸೂನಾದೋಷ** (ನಾ). ೧. ಪ್ರಾಣಿಹತ್ಯೆಗೆ ಆಸ್ಪದವಾದರೂ ಗೃಹಸ್ಥನು ವಿಧಿಯಿಲ್ಲದೆ ಪ್ರತಿದಿನವೂ ಮಾಡಬೇಕಾದ ಐದು ದೋಷಗಳು,—ಪಾಪಗಳು ; ℙ ಚುಲ್ಲೀ(ಒಲೆ), ಪೇಷಣೀ (ಅರೆಯುವ ಕಲ್ಲು), ಉಪಸ್ಕರ (ಪೊರಕೆ), ಕಂಡನೀ (ಒರಳು ಮತ್ತು ಒನಕೆ), ಉದಕುಂಭ (ನೀರಿನ ಕೊಡ)—ಈ ವಸ್ತುಗಳಿಂದ ಗೃಹಸ್ಥನು ಐದು ಬಗೆಯಲ್ಲಿ ಉಂಟುಮಾಡುವ ಪ್ರಾಣಿಹಿಂಸೆ. ಇವುಗಳಿಂದಾದ ಪ್ರಾಣಿಹಿಂಸಾಪಾಪಪರಿಹಾರಕ್ಕಾಗಿ ದೇವರಿಗೆ ನೈವೇದ್ಯ, ವೈಶ್ವದೇವ ಕರ್ಮಗಳನ್ನು ಮಾಡಬೇಕೆಂದು ವಿಧಿಯಿದೆ. ೨. (ಬತ್ತವನ್ನು) ಕೊಯ್ಯುವುದು, ತುಳಿಯುವುದು, ಕುಟ್ಟುವುದು, ಪೋಟುಹಾಕುವುದು, ಬೇಯಿಸುವುದು ಎಂಬ ಐದು ಕ್ರಿಯೆಗಳಿಂದುಂಟಾಗುವ ದೋಷ,—ಪಾಪ : ನೆಲ್ಲನ್ನು (ಭತ್ತವನ್ನು) ಕೊಯ್ಯುವುದು ೧. ತುಳಿಸುವದು ೨. ಕುಟ್ಟುವದು ೩. ಪೋಟುಹಾಕುವದು ೪. ಬೇಯಿಸುವುದೆಂಬ ಪಂಚಸೂನಾದೋಷವು ಬರುವುದು (ಪಸಾರ. ೨೨-೨೯ ತಾತ್ಪರ್ಯ). [ಸಂ.]

**ಪಂಚಸೂಳ್ಗವಣೆ** (ನಾ). ಐದು ಸಲ ಕ್ರಮವಾಗಿ ಬಿಡುವ ಬಾಣ : ಎನ್ನ ಕೋಮಲಶರೀರ ಶಿವನಕ್ಷಿಗಾಹುತಿಯಾದೊಡಾಗಲಿ ಮತ್ತೂ ರಪಂಚಸೂಳ್ಗಣೆಗಳೆಚ್ಚ ಭವನತ್ತುಗ್ರತಪೋಭ್ರಷ್ಟನಂ ಮಾಡುವೆ(ಸಮೋ. ೫-೩೫).

[ಪಂಚ$_2$ + ಸೂಳ್$_2$(< ಸೂಟ್) + ಕಣೆ$_1$]

**ಪಂಚಸೌಗಂಧ** (ನಾ). ಐದು ಬಗೆಯ ಸುಗಂಧಗಳು; ℙ "ಸುಗಂಧ ಙ : (ಅ) ಕರ್ಪೂರ, ಕಕ್ಕೋಲ, ಲವಂಗಪುಷ್ಪ, ಗುವಾಕ, ಜಾತೀಫಲ (ರಾಜನಿ.—ಶಕದ್ರು. IV-೧೫). (ಆ) ಲವಂಗಕುಸುಮ, ಕಕ್ಕೋಲ, ಕಾಂಡ, ಜಾತೀಫಲ, ಕರ್ಪೂರ (ಶಬ್ದಚಂದ್ರಿಕಾ.—ಶಕದ್ರು. IV-೧೫). (ಇ) ಶ್ರೀಗಂಧ, ತಕ್ಕೋಲ, ಜಾಯಿಫಲ, ಪದ್ಮಕೇಸರ, ತಾವರೆಯ ಕೇಸರ (ಓಕೋ. ೯೩). (ಈ) ಕುಂಕುಮದ ಹೂವು, ಅಗರು, ಪಚ್ಚಕರ್ಪೂರ, ಕಸ್ತೂರಿ, ಚಂದನ (ವಸ್ತುಪ್ರ. ೭೦೪)" (ಶ್ರೀವತ್ಸ. ೯೯೦) : ದೇವರ್ಗ್ಗೆ . . . ಮಂಗಳಾಭಿಷೇಕಮಂ ಮಾಡಿ ಪಂಚಸೌಗಂಧಗಂಧಂಗಳಿಂ ಪೂಸಿ ವಸ್ತ್ರಾಳಂಕಾರಮುಂ ಪವಿತ ಮಧುಪರ್ಕ್ಕವಾಚಮನೀಯ ಪುಷ್ಪಿಪೂಜೆ ಪುಷ್ಪ ಫಳ ಪಕ್ವಾಂನ ಮಂಟಪ ಧೂಪ ಘೃತ ದೀಪಾರತಿಗಳಂ ಕೊಟ್ಟು (ಎಕ. VII, ಶಿಕಾರಿ. ೧೮೫-೭೮ ; 1158). [ಪಂಚ$_2$ + ಸೌಗಂಧ]

**ಪಂಚಸೌಜ್ಞೆ** (ನಾ). [ವೀಶೈ] ಪರಮೇಶ್ವರನಿಗಿರುವ ಪರ, ಗೂಢ, ಶರೀರಸ್ಥ, ಲಿಂಗಕ್ಷೇತ್ರ, ಅನಾದಿಗಳೆಂಬ ಐದು ಸಂಜ್ಞೆಗಳು : ಆ ಶಿವನೇ ಮಹಾಲಿಂಗವು ತವೆ ಮಹತ್ಸೌಜ್ಞೆಯಂ ಪಂಚಸೌಜ್ಞೆಯ ನುಳ್ಳುದು (ವೀಶೈಷ. ೧-೮-೧೩). [ಪಂಚ$_2$ + ಸೌಜ್ಞೆ]

**ಪಂಚಸ್ಥಾನ** (ನಾ). ೧. ಯುದ್ಧಮಾಡುವಾಗ ನಿಂತುಕೊಳ್ಳುವ ಐದು ವಿಧವಾದ ಕ್ರಮಸ್ಥಾನಗಳು ; ℙ ಸ್ಥಾನ—ಙ : ಆಲೀಢ, ಪ್ರತ್ಯಾಲೀಢ, ಸಮಪಾದ, ವೈಷ್ಣವ, ಮಂಡಲಾಗ್ರ (ಗದಾಯು. ೮-೧೭). ಆಲೀಢ ಪ್ರತ್ಯಾಲೀಢ, ಸಮಪಾದ, ವಿಶಾಖ, ಮಂಡಲ (ಶಬ್ದರ.೧೧೧೭)" (ಶ್ರೀವತ್ಸ. ೫೦೦). ೨. [ಯೋಗ] ತಾರಕ, ದಂಡಕ, ಕುಂಡಲಿ, ಪ್ರಣವ ಮತ್ತು ಬಿಂದುಗಳೆಂಬ ಐದು ಸ್ಥಾನಗಳು : ಇರುವ ಪಂಚಸ್ಥಾನಮರ್ಮವ ಕರತಳಾಮಳಕದೊಲು ಕೃಪೆಯಿಂದರುಹಿಸಲಹುದೆನಲು (ಗಗತಾ. ೨೦-೩೯). ೩. [ವೀಶೈ] ಇಷ್ಟಲಿಂಗವನ್ನು ಧರಿಸುವ ಶರೀರದ ಐದುಭಾಗಗಳು ; ತಲೆ, ಕರ್ಣ, ಉರ (ಎದೆ), ಅಮಳೋಕ್ಯ (ಬಾಯಿ) ಮತ್ತು ಕಕ್ಷ (ಕಂಕುಳು): ಪಂಚಸ್ಥಾನದಲ್ಲಿಪ್ಪ ಲಿಂಗವ ಕರಸ್ಥಲದಲ್ಲಿ ಮೂರ್ತಿಗೊಳ್ಳಲಿಕ್ಕಾಗಿ (ಮಧೇವ.೨೪೭-೬೭). [ಪಂಚ$_2$ + ಸ್ಥಾನ]

**ಪಂಚಸ್ಥಾವರ** (ನಾ). [ಜೈನ] ಕೇವಲ ಸ್ಪರ್ಶೇಂದ್ರಿಯವನ್ನು ಹೊಂದಿರುವ ಪೃಥ್ವಿಕಾಯ, ಅಪ್ಕಾಯ, ತೇಜಃಕಾಯ, ವಾಯುಕಾಯ ಮತ್ತು ವನಸ್ಪತಿಕಾಯಗಳೆಂಬ ಐದು ಚೈತನ್ಯ ವಸ್ತುಗಳು : ಕಾಯಾನುವಾದದಿಂ ಪಂಚಸ್ಥಾವರಂಗಳ್ಗೆ ಗುಣಸ್ಥಾನ ಭೇದಾಭಾವದಿಂ ಅಲ್ಪಬಹುತ್ವಾಭಾವಮಕ್ಕುಂ (ತತ್ತ್ವಪ್ರ. ೪೯).

[ಪಂಚ$_2$ + ಸ್ಥಾವರ]

**ಪಂಚಸ್ವರ** (ನಾ). ಪಂಚಭೂತಗಳಿಗೆ ಸಂಬಂಧಿಸಿದ ನಾಳಗಳಿಂದ ಹೊರಡುವ ಪೃಥ್ವೀಸ್ವರ, ಅಪ್ಪುಸ್ವರ, ತೇಜಸ್ಸಿನ ಸ್ವರ, ವಾಯುವಿನ ಸ್ವರ ಮತ್ತು ಆಕಾಶಸ್ವರಗಳೆಂಬ ಐದು ಬಗೆಯ ಸ್ವರಗಳು : ಒಂದೊಂದು ನಾಳದಲ್ಲಿ ಪೃಥ್ವೀಸ್ವರ ಅಪ್ಪುಸ್ವರ ತೇಜಸ್ಸಿನ ಸ್ವರ ವಾಯುವಿನ ಸ್ವರ ಆಕಾಶಸ್ವರ ಇಂತೀ ಪಂಚಸ್ವರಸಂಜ್ಞೆಯಂ ತಾಳಿ (ವಿವೇಕ. ೧೯೭). [ಪಂಚ$_2$+ಸ್ವರ$_2$]

**ಪಂಚಳ** 'ಪಂಚಾಲ' ನೋ.

**ಪಂಚಾಂಗ** (ನಾ). ೧. ಐದು ಭಾಗಗಳಿಂದ ಕೂಡಿದುದು : 'ಪಂಚಾಂಗಮಂತ್ರ' ಪರಾ. ೨. [ಜ್ಯೋತಿ] ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳೆಂಬ ಐದು ಅಂಶಗಳು : "ನಾಡಿಯ ಱುವತ್ತಕ್ಕೆ ಒಂದು ತಿಥಿಯಕ್ಕು . . . ಭವಾದಿಗಳು ಕರಣವಕ್ಕಿವು ಕ್ರಮದಿ ಕೂಡೆ ನವಗ್ರಹದ ಸಂಚಾರಕೆಡೆಯಪ್ಪ ಪಂಚಾಂಗಮೆಂದೆನಿಕ್ಕುಂ" (ಮಂಗರಾ. ೨೧-೯). ೩. ಪ್ರತಿದಿನದ ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳನ್ನು ತಿಳಿಸುವ ಹೊತ್ತಿಗೆ,–ಕೈಪಿಡಿ : ಇವನದೇಂ ಪಂಚಾಂಗಮಂ ಪೇೞೆ ಮಾವಿನ ಪಣ್ ಬೀೞ್ವುದೇ ಕೊಲ್ಲಿಮೆಂಬನಿತ ಱಿೞೊಳ್ (ದಿವ್ಯಚ. ೭-೫೭); ಇಂದು ಬಿಟ್ಟರೆ ಈ ತಿಂಗಳಲ್ಲಿ ಮುಹೂರ್ತವೇ ಇಲ್ಲವೆಂದು ಪಂಚಾಂಗ ನೋಡಿ ಹೇಳಿದರು (ಪರಿಣೀ. ೫೫); ನಾವು ಪಂಚಾಂಗವನ್ನು ತೆಗೆದು ನೋಡಿದರೆ ಪ್ರತಿ ದಿನಾಂಕದಲ್ಲಿಯೂ ವಾರದ – ದಿವಸದ ಹೆಸರು, ತಿಥಿ ಮತ್ತು ನಕ್ಷತ್ರಗಳ ವಿವರ ಕೊಟ್ಟಿರುವುದನ್ನು ನೋಡುತ್ತೇವೆ (ಅಕಾಶ. ೮೩); ಪಂಚಾಂಗ ಹೋದರೆ ನಕ್ಷತ್ರ ಹೋದೀತೇ ? (ಗಾದೆ) ೪. ದಿನಾಂಕ ಮೊದಲಾದುವನ್ನು ತಿಳಿಸುವ ಪಟ್ಟಿ : ಪಂಚಾಂಗ (Calendar. ಇಂಕತಿ); ಈಜಿಪ್ಟ್ ದೇಶದಲ್ಲಿ ಪಂಚಾಂಗ (Calendar) ವೊಂದನ್ನು ತಯಾರಿಸಲಾಯಿತು (ಗಣಿಚ. ೪). ೫. (ಆಲಂ) ಪೊಳ್ಳುಮಾತು ; ಬುರುಡೆಮಾತು ; ಹರಟೆ : ನಿನ್ನ ಪಂಚಾಂಗ ಸಾಕು. ನಾನು ಇಲ್ಲಿಂದ ಉಲುಕುವುದಿಲ್ಲ. ಇದು ನಿನಗೆ ತಿಳಿದಿರಲಿ (ಮುಂಬಯಿ. ೫-೪೮); ಆಮೇಲೆ ಅವರು ತಮ್ಮ ಪಂಚಾಗವನ್ನೇ ಬಿಚ್ಚಿದರು (ಕಮನೆ. ೮). ೬. [ವೈದ್ಯಶಾ] ಮರದ ತೊಗಟೆ, ಎಲೆ, ಹೂವು, ಬೇರು, ಹಣ್ಣು ಅಥವಾ ಕಾಯಿ ಎಂಬ ಐದು ಅಂಶಗಳು : ಕರಿಬೇವಿನ ಪಂಚಾಂಗವನ್ನು ಜೇನುತುಪ್ಪ ಗಂಮಜ್ಜಿಗೆಯಲ್ಲರೆದು ಕದಡಿ ಕೊಡುವುದು (ವಿವೈವಿ.೧೫೪). ೭. [ವಾಸ್ತು] ಗೃಹಾರಂಭದಲ್ಲಿ ಮಾಡುವ ಪಂಚಶಿಲಾಸ್ಥಾಪನೆ,—ಶಂಕುಸ್ಥಾಪನೆ ; ತಳಹದಿ : "ಪಂಚಾಂಗ-ತಳಹದಿ, ಪಾಯ" (ಸಿರಿಕೋ. ೩೨೮); ಚಚ್ಚೌಕವಾದ ಪಂಚಾಂಗದಿಂದ ಎ೦ ಎರಿ ಚೂಪಾಗುವ ಶಿಖರಗಳಂತೆ ಈ ಮಂದಿರಗಳು ಕಾಣುವುವು (ಬಾಲಪ್ರ. I, ೪೭೭).

**ಪಂಚಾಂಗ ಕೇಳು** = ತಿಥಿ, ವಾರ, ನಕ್ಷತ್ರಾದಿಗಳನ್ನು ಕೇಳಿ ತಿಳಿದುಕೊಳ್ಳು : ತಂದೆಯವರು ಪಂಚಾಂಗ ಕೇಳಿ ಬರಲು ಜೋಯಿಸರ ಮನೆಗೆ ಹೋಗಿದ್ದಾರೆ (ರೂಢಿ). **ಪಂಚಾಂಗದವನು** = ೧. ಪಂಚಾಂಗವನ್ನು ಹೇಳುವವನು ; ಜೋಯಿಸ : ಇವರ ವಕಾಲತ್ತು ವಹಿಸಿಕೊಂಡಿರುವೆಯಾ ಪಂಚಾಂಗದವನೇ (ರಂಗರೋ. ೫); ಪಾಂಚಾಲದೇಶದ ಪಾಲಕನಾದರೆ ಪಂಚಾಂಗದವನಿಗೇನು ? (ಗಾದೆ). ೨. ಬಡಪಾಯಿ : (ಕ). **ಪಂಚಾಂಗ ಹೇಳು**=೧. ತಿಥಿ, ವಾರ, ನಕ್ಷತ್ರಾದಿಗಳನ್ನು ತಿಳಿಸು,—ವಿವರಿಸು. ೨. ಸಂದರ್ಭಕ್ಕೆ ತಕ್ಕಂತೆ ಏನನ್ನಾದರೂ ಹೇಳು ; ಬಾಯಿಗೆ ಬಂದಂತೆ ಹೇಳು : (ಕ). [ಪಂಚ$_2$+ಅಂಗ$_2$]

**ಪಂಚಾಂಗಕರ್ತ** (ನಾ). ಪಂಚಾಂಗದ ಹೊತ್ತಿಗೆಯನ್ನು ರಚಿಸುವವನು,—ತಯಾರಿಸುವವನು : ನೇಯ್ಗಾರರೂ, ಪಂಚಾಂಗಕರ್ತರೂ, ವರ್ಣಗಾರರೂ (ತುಳುನಾ. ೧೭೩). [ಪಂಚಾಂಗ + ಕರ್ತ]

**ಪಂಚಾಂಗಚೂರ್ಣ** (ನಾ). [ವೈದ್ಯಶಾ] ಯಾವುದಾದರೂ ಒಂದು ಮರದ ತೊಗಟೆ, ಎಲೆ, ಹೂವು, ಬೇರು ಮತ್ತು ಫಲಗಳ ಪುಡಿ: ಇದನ್ನು ಒಂದು ತೂಕ ತಂಗಡಿ ಪಂಚಾಂಗಚೂರ್ಣದೊಂದಿಗೆ ಕೊಟ್ಟರೆ ಬಹುಮೂತ್ರ ನಿಲ್ಲುವುದು (ಸಕವೈ. ೫೦೦). [ಪಂಚಾಂಗ + ಚೂರ್ಣ$_2$]

**ಪಂಚಾಂಗಪ್ರಣಾಮ** (ನಾ). ಎರಡು ಕೈ, ಎರಡು ಮಂಡಿ, ತಲೆ, ಮಾತು ಮತ್ತು ದೃಷ್ಟಿಗಳೆಂಬ ಐದರಿಂದ ಮಾಡುವ ನಮಸ್ಕಾರ : ರಾಜಮಾತೆ . . . ದೇವಿಗೆ ಪಂಚಾಂಗಪ್ರಣಾಮವನ್ನು ಸಲ್ಲಿಸಿ ಸಂತೋಷಚಿತ್ತರಾಗಿ ಅರಮನೆಗೆ ಹಿಂದಿರುಗಿದರು (ಶಾಂತಲಾ. ೨೮). [ಪಂಚಾಂಗ+ಪ್ರಣಾಮ]

**ಪಂಚಾಂಗಮಂತ್ರ** (ನಾ). [ರಾಜನೀ] ರಾಜನಿಗೆ ಇರಬೇಕಾದ ಕರ್ಮಾರಂಭೋಪಾಯ, ಪುರುಷದ್ರವ್ಯಸಂಪತ್ತು, ದೇಶಕಾಲ ವಿಭಾಗ, ವಿನಿಪಾತಪ್ರತೀಕಾರ ಮತ್ತು ಕಾರ್ಯಸಿದ್ಧಿಗಳೆಂಬ ಐದು ಬಗೆಯ ರಾಜನೀತಿಗಳು ; ರಾಜನೀತಿಯಲ್ಲಿ ಗಮನಿಸಬೇಕಾದ ಐದು ಅಂಗಗಳ ವಿಚಾರ : ನಾಲ್ಕುಂ ನೃಪವಿದ್ಯೆಯೊಂದು ಬಲದಿಂ ಪಂಚಾಂಗಮಂತ್ರಂ ಮನಂಬುಗೆ ಬೇಱೊಂದೆಡೆಗಾಣದುದ್ಧತ ರಿಪುಶ್ರೀಕಾಂತೆ ತನ್ನಂ ಶರಣ್ಬುಗೆ ಪೊಕ್ಕಂ ಯುತಮಂತ್ರಿವಂತ್ರಗ್ಯ ಹಮಂ ಸೌಜನ್ಯಕಂದಾಂಕುರಂ (ಶಾಂತಿಪು. ೨-೨೮); ಸಮುಮಂ ಮಾಡೆ ಸುಮಂತ್ರಿ ವರ್ಗಮರಿಷಡ್ವರ್ಗಕ್ಕೆ ಪಂಚಾಂಗಮಂತ್ರಮೆ ಸಪ್ತಾಂಗಸಮೃದ್ಧಿಯಂ ಕುಡೆ . . . ಶೌರ್ಯಮಾದಮೆ ತನ್ನೊಳ್ ದಳವೇಱಿದತ್ತೆನಿಸಿದಂ ಶಕ್ತಿತ್ರಯಾಧೀಶ್ವರಂ . (ಚಂದ್ರಪು. ೨-೭); ವರ ಷಾಡ್ಗುಣ್ಯಂ ಸಪ್ತಾಂಗ ರಾಜ್ಯದೊದವಂ ತ್ರಿಶಕ್ತಿ ಚತುರಂಗಬಲಂ ನಿರುತಮುಪಾಯಚತುಷ್ಕಂ ಧರಣಿಪ ಪಂಚಾಂಗಮಂತ್ರಮಿರ್ಪುದು ನಿನ್ನೊಳ್ (ತ್ರಿಷುವಿ. ೨೪-೨೪೩). [ಪಂಚಾಂಗ + ಮಂತ್ರ]

**ಪಂಚಾಂಗರಾಯ** (ನಾ). ಅಲಂಕಾರಕ್ಕಾಗಿ ಕಟ್ಟುವ ಐದು ಬಣ್ಣದ ಬಟ್ಟೆಯ ತೋರಣ : ಮಿಱುಗುವ ಪಂಚಾಂಗರಾಯ ಪಟ್ಟಾಳಿಯ ಸರ ಗೊಂಡೆಯ ಝಲ್ಲಿಗಳು ಮೆಱೆದವು ರಥದಂತರಾಂತರದೊಳಗಿಹ ಸುರುಚಿರ ಲೋವೆಗಳೊಳಗೆ (ಕಂಸವಿ. ೨೩-೬೮). [ ? ]

**ಪಂಚಾಂಗಶುದ್ಧಿ** (ನಾ). ೧. [ಜ್ಯೋತಿ] ಇಷ್ಟಕಾಲದಲ್ಲಿ ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳು ಉತ್ತಮವಾಗಿರುವುದು ; ಪಂಚಾಂಗಕ್ಕೆ ಅನುಸಾರವಾಗಿ ಯಾವ ದೋಷವೂ ಇಲ್ಲದಿರುವುದು,—ನಿರ್ದುಷ್ಟವಾಗಿರುವುದು : ಪಂಚಾಂಗಶುದ್ಧಿ ನೋಡಿ ಮುಹೂರ್ತವನ್ನು ಗೊತ್ತುಮಾಡಬೇಕಾಗಿದೆ (ರೂಢಿ). ೨. [ವೈದ್ಯಶಾ] ಗಿಡಮರಗಳ ತೊಗಟೆ, ಎಲೆ, ಹೂವು, ಬೇರು ಮತ್ತು ಫಲಗಳು ದೋಷರಹಿತವಾಗಿರುವುದು. ೧, ೨ : ಆ ಪಂಡಿತಂ ಕನ್ನಗಳ್ಳನಂತೆ ಬಳಪಮಂ ತೆಗೆದು ಕಬ್ಬಿಗನಂತೆ ಗೋಮೂತ್ರಕವೃತ್ತಾಳಂಕೃತನಾಗಿ ಭಂಡಾರಿಗನಂತಾಯಮಮಂ ಪಿಡಿದು . . . ವೈದ್ಯನಂತೆ ಪಂಚಾಂಗ ಶುದ್ಧಿಯಂ ನೋಡಿ ಮಂತ್ರವಾದಿಯಂತೆ ಗ್ರಹಗತಿಯಂ ಕಂಡು (ಸುಕುಮಾ. ೩-೬೬). [ಪಂಚಾಂಗ + ಶುದ್ಧಿ]

**ಪಂಚಾಂಗಶ್ರವಣ** (ನಾ). ಹೊಸವರ್ಷವು ಪ್ರಾರಂಭವಾಗುವ ಯುಗಾದಿಯ ದಿವಸ ಆ ವರ್ಷದ ಶುಭಾಶುಭಫಲಗಳನ್ನು ಹೇಳುವ ಮತ್ತು ಕೇಳುವ ಒಂದು ವಿಧಿ,—ಸಂಪ್ರದಾಯ : ರಾಮಮಂದಿರದಲ್ಲಿ ಪಂಚಾಂಗಶ್ರವಣ ನಡೆಯುತ್ತದೆ (ರೂಢಿ). [ಪಂಚಾಂಗ + ಶ್ರವಣ$_3$]

**ಪಂಚಾಂಗಸನ್ಮಂತ್ರ** (ನಾ). ೧. = ಪಂಚಾಂಗಮಂತ್ರ. ೨. ಐದು ವರ್ಣಗಳೆಂಬ ಭಾಗಗಳಿಂದ ಕೂಡಿರುವ ಮಂತ್ರ ; ಪಂಚಾಕ್ಷರ ಮಂತ್ರ. ೧, ೨ : ಅರಿವರ್ಗಧ್ವಂಸಮಂ ಪೂಣ್ದೆಸಗಿ ತಳೆದು ಪಂಚಾಂಗ

ಸನ್ಮಂತ್ರಮಂ . . . ತಾಳ್ದಮೋಘಂ ಪ್ರಭುತ್ವಂ ದೊರೆಕೊಂಡೆಮ್ಮಾಳ್ದನಾದಲ್ಲಮವಿಭು ವಿರತಿಶ್ರೀಯುಮಂ ಮಾಳ್ಪುದೆಮ್ಮೊಳ್ (ರಾಜಶೇ. ೧-೧೩). [ಪಂಚಾಂಗ+ಸನ್ಮಂತ್ರ]

**ಪಂಚಾಂಗಿ** (ನಾ). ಪಂಚಾಂಗವನ್ನು ಹೇಳುವವನು ; ಜೋಯಿಸ: ಕರಸಿದಂ ಪಂಚಾಂಗಿಗಳಂ (ಪರಶು. ೯-೧೭). [ಸಂ. ಪಂಚಾಂಗಿನ್]

**ಪಂಚಾಂಗುಲ** (ನಾ). ೧. ಐದು ಬೆರಳುಗಳು. ೨. ಹರಳುಗಿಡ ; ಔಡಲಗಿಡ : "ವ್ಯಾಘ್ರಪುಚ್ಛಃ . . . ಪಂಚಾಂಗುಲಃ, ಮಂಡಃ, ವರ್ಧಮಾನಃ, ವ್ಯಡಂಬಕಃ—೧೧ ಹರಳುಗಿಡದ ಪೆಸರುಗಳು" (ಸಿದ್ಧಾಂತಿ. ೧೦೮). [ಪಂಚ₂ + ಅಂಗುಲ]

**ಪಂಚಾಂಡಕ** (ನಾ). ( ? ) : ಮನಸಿಜನ ವಿಲೋಕನಾಕರ್ಷಣಸ್ಥಾನದಂತೆ ಪಂಚಾಂಡಕಪರಿಣತಿಯಿಂ ದೃಷ್ಟಶ್ರುತಾತ್ಮವಿದ್ಧದೊಳ್ಮೆಱೆವ ರಸಚಿತ್ರದೊಳಂ ಷಡ್ಜಾತೀಯ ಪಂಚವಿಧಪತ್ರಗತಿಯೊಳಮತಿಶಯಮಾದ ಚಿತ್ರಶಾಲೆಯಿಂ ಮನಂಗೊಳಿಸಿ (ಮಲ್ಲಿಪು. ೨-೭೪). [ ? ]

**ಪಂಚಾಂಡಿ** (ನಾ). ಅಗಲವಾದ ಬಾಯಿಯುಳ್ಳ ಒಂದು ಬಗೆಯ ಪಾತ್ರೆ; ಬಾನಿ: ಗಣಪಯ್ಯ . . . ಎಮ್ಮೆ ನೀರು ಕುಡಿದು ಖಾಲಿ ಮಾಡಿದ ಪಂಚಾಂಡಿಯನ್ನು ಜೊತೆಗೆ ತಂದ ಕೊಡವನ್ನು ಎತ್ತಿ ಮನೆಯ ಹಾದಿ ಹಿಡಿದ (ಮೂರುದಾ. ೧೫೭). [ ? ]

**ಪಂಚಾಕ್ಷರ** (ನಾ). ೧. ಐದು ಅಕ್ಷರಗಳು. ೨. 'ನಮಃಶಿವಾಯ' ಎಂಬ ಮಂತ್ರದಲ್ಲಿರುವ ಐದು ಅಕ್ಷರಗಳು : ಪಂಚಾಕ್ಷರಗಳೊಳಗೆ ಸಂದರಾ ಪರಮೆಯರು ಪಂಚಮುಖನಿರ್ದೆಡೆಗೆ ಪೋದರಾ ಪರಮೆಯರು (ನಂಬಿಯ. ೧೭-೧೨೫) ; ಶ್ವೇತ ನೀನೀ ದೇವನ ಮುಂದಿರವ ಬೋಹಂಸೆನುತ್ತಲಾ ರಂಭೆಯಾನಂದದಿಂ ನುಡಿದು ತದ್ಧಸಿತ ರುದ್ರಾಕ್ಷೆಗಳ ಸೌಂದರ್ಯ ಪಂಚಾಕ್ಷರಂಗಳಗ್ಗಳವ ಬಿತ್ತರಿಸಿದಳು ನಲವಿಂದ (ವೀಶೈಪು. ೨-೬-೨೦). ೩. = ಪಂಚಾಕ್ಷರಿ : ಪಂಚಾಕ್ಷರಾಮೋದವಿಸ್ಫುರಿತಸ್ವಾಂತಪಯೋರುಹಂ . . . ರಾಜಶೇಖರಮಹೀಶಂ . . . ಒಪ್ಪಿರ್ದಂ ತದಾಸ್ಥಾನದೊಳ್ (ರಾಜಶೇ. ೧೪-೧೭೧). [ಪಂಚ₂ + ಅಕ್ಷರ]

**ಪಂಚಾಕ್ಷರಿ** (ನಾ). ಐದು ಅಕ್ಷರಗಳುಳ್ಳ ಮಹಾಮಂತ್ರ ; 'ನಮಃ ಶಿವಾಯ' ಎಂಬ ಶಿವಪಂಚಾಕ್ಷರಮಂತ್ರ : ಇಂತೀ ಪಂಚಾಕ್ಷರಿಯ ಮೂಲಮಂತ್ರ (ದಲ್ಲಿ ?) ಸಂಬಂಧವಾಗಲಾಗಿ ಅದು ಪ್ರಣವದ ಬೀಜ (ಸರ್ವಪ. ೧೩೩-೬೬೬) ; ಎಸೆವ ಪಂಚಾಕ್ಷರಿಯೆ ಪರಮನರಮನೆ (ತಿರುಶ. ದೇ. ೩-೪) ; ಶಿವನೆಯಿತಂದು . . . ಅಬುಹಿ ಪಂಚಾಕ್ಷರಿಯ ನಭಯಕರವ ಶಿರದೊಳಿಟ್ಟು (ಬಸವು. ೧೮-೩); ಪಂಚಾಕ್ಷರಿಯೆಂದಡೆ ಪರತತ್ತ್ವವು (ಅಖಂಡೇ. ೪೯-೧).

**ಪಂಚಾಕ್ಷರಿಯ ಮಣಿಮಾಲೆ** = ರುದ್ರಾಕ್ಷಿಯ ಸರ (?) : ಪಂಚಾಕ್ಷರಿಯ ಮಣಿಮಾಲೆಯಲ್ಲಿ ಸಂಚಿತಪ್ರಾರಬ್ಧಕರ್ಮವೆಂಬ ದಾರ ನಡುವೆ ಸಿಕ್ಕಿ ಮಣಿಯ ತಿರುಗಾಡಿಸುತ್ತದೆ (ಅಜಮಾ. ಕ. ೧೩೪-೫೧೧). [ಸಂ. ಪಂಚಾಕ್ಷರೀ]

**ಪಂಚಾಗ್ನಿ** (ನಾ). ೧. ಐದು ವಿಧವಾದ ಅಗ್ನಿ ; ℙ "ಅಗ್ನಿ—೫ : (ಅ) ಪವನ (ಆವಸಥ್ಯ), ಪಾವನ (ಸಭ್ಯ), ತ್ರೇತಾ (ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ) (ಗೋಭಿಲ. ೧-೬-೧೧ವ್ಯಾ ; ಆಷ್ಟೆ ವಾಯುಪು. ೭೩-೫ ; ಮತ್ಸ್ಯಪು. ೧೬-೭). (ಆ) ಜಾಠರ ಕಾಲಾಗ್ನಿ, ಬಾಡಬಾಗ್ನಿ, ಭೌಮಾಗ್ನಿ, ವೈದ್ಯುತಾಗ್ನಿ, ಸೂರ್ಯಾಗ್ನಿ (ವಿಚಿಂ.೨-೨೪೧). (ಇ) ಕಾಲಾಗ್ನಿ, ಸೂರ್ಯ ಸೂರ್ಯಕಾಂತ—, ದಾವ—, ಉದರ— (ವಿಚಿಂ. ೨-೨೪೧). (ಈ) ಗಾಯತ್ರಿಯ ಪಂಚಮುಖಗಳು : ಸೂರ್ಯಾಗ್ನಿ, ಜಠರ—, ವೈದಿಕ—, ಲೌಕಿಕ—, ಜ್ಞಾನ— (ವಿಚಿಂ.೨-೨೨೧). (ಉ) ಬ್ರಾಹ್ಮ, ಪ್ರಾಜಾಪತ್ಯ, ಗಾರ್ಹಸ್ಥ್ಯ, ದಕ್ಷಿಣಾಗ್ನಿ, ಕ್ರವ್ಯಾದಾಗ್ನಿ (ಸಂಜ್ಞಾ. ೨೨). (ಊ) ವಡವಾಗ್ನಿ, ಮಂದ—, ಜಠರ—, ಶೋಕ—, ಕಾಮ—, (ಕಗೀ. ೨-೩೩). (ಋ) ಪಾಚಕಾಗ್ನಿ (ಜಠರ), ರಂಜಕ— (ರಕ್ತಾಂತರ), ಸಾಧಕ— (ಹೃತ್), ಆಲೋಕನ— (ದೃಕ್), ಭ್ರಾಜಕ— (ತ್ವಕ್) (ಸಂಜ್ಞಾ. ೨೧). (ೠ) ಜ್ಞಾನಾಗ್ನಿ (ಆತ್ಮ), ಕಾಲ— (ಪಾದಗಳು), ಕ್ಷುಧಾ— (ನಾಭಿ), ಶೀತ— (ಹೃದಯ), ಕೋಪ— (ನೇತ್ರಗಳು) (ವಿದ್ಯಾಕ. ೫೪)" (ಶ್ರೀವತ್ಸ. ೭). ೨. ಋಷಿಗಳು ಬೇಸಿಗೆಯಲ್ಲಿ ತಪಸ್ಸು ಮಾಡುವಾಗ ನಾಲ್ಕು ಕಡೆಗಳಲ್ಲೂ ಇರುತ್ತಿದ್ದ ನಾಲ್ಕು ಅಗ್ನಿ ಮತ್ತು ಮೇಲಿನ ಸೂರ್ಯ : ಪಂಚಾಗ್ನಿತಾಪತಪ್ತಮಾನಸರಪ್ಪ ತಪೋಧನಜನಕ್ಕೆ ತಪನತಾಪಮನಾಗಲೀಯದೆ ತಳಿರ್ದುಱುಗಲಂ ಪೊತ್ತು ನಭದೊಳ್ ನಲಿದಾಡುವ ಸೋಗೆನವಿಲ್ಗಳ ಪಿಂಡುಗಳುಮಂ (ಪಂಚತಂ. ೮೯-೧೬) ; ಮಿಗೆ ಸುತ್ತಿದ ದವಾಗ್ನಿ . . . ಬೇಸಗೆಯಗ್ನಿಯೆಂದೆನಿಸಿ ತೋಱುತ್ತಿರ್ಪ ಪಂಚಾಗ್ನಿಮಧ್ಯಗತಾಂಘ್ರಿಪ್ರಭೆ ನಿಂದಳುಗ್ರತಪದೊಳ್ ಶರ್ವಾಣಿ (೧೦ಕ. ೯-೧೦) ; ಪಂಚಾಗ್ನಿಯಲಿ ಕುಳಿತು ವಂಚಿಸಿದ ದೇಹಕ್ಕೆ ಮುಂಚೆ ಉರಿನರಕವನನುಭವಿಸಿದಾ ಮೇಲೆ ಸಂಚಿಸಿದ ಫಲವು (ಸರ್ವಜ್ಞ. ೩೭೬). ೩. ಪಂಚಾಗ್ನಿಯ ನಡುವೆ ಮಾಡುವ ತಪಸ್ಸು ; ℙ "ಆತಪ — ೫ : ನಾಲ್ಕುದಿಕ್ಕುಗಳಲ್ಲಿಯೂ ಯಜ್ಞೋಚಿತವಾದ ದಾರುವಿಶೇಷಗಳಿಂದ ತನಗೆ ಏಕಹಸ್ತಾಂತರದಲ್ಲಿ ಅಗ್ನಿಸ್ಥಾಪನೆ ಮಾಡಿ, ಗಾಢವಸ್ತ್ರಾಚ್ಛಾದನೆ ಮಾಡಿಕೊಂಡು ಅದರ ನಡುವೆ ಕುಳಿತು, ವೈಶ್ವಾನರೇಷ್ಟಿಯನ್ನು ಮಾಡುತ್ತ, ಐದನೆಯ (ಅಗ್ನಿಯಾದ) ಸೂರ್ಯನನ್ನು ನೋಡುತ್ತ, ಗ್ರೀಷ್ಮಋತುವಿನಲ್ಲಿ ಮಾಡುವ ತಪಸ್ಯಾವಿಶೇಷ (ಕಾಲಿಕಾಪುರಾಣ. ಅ. ೪೨-ಶಕದ್ರು.೧೬)" (ಶ್ರೀವತ್ಸ.೪೯): ಪಂಚಾಗ್ನಿಯೇ ಮುಂತಾದ ತಪಸ್ಸಾಧನೆಗಳಿಂದ ಇಂತಹ ಸಿದ್ಧಿ ಬಾರದು. ಇದೊಂದು ಹೊಸ ತಪಸ್ಸೇ ಆಗಿರಬೇಕು (ಧ್ವನ್ಯಾಲೋ. ೪೧ ಅಡಿಟ). ೪. ಗೃಹಸ್ಥನು ಅಗ್ನಿಯಂತೆ ಪೂಜ್ಯಭಾವನೆಯಿಂದ ಸೇವಿಸಬೇಕಾದ ಐವರು; ತಾಯಿ, ತಂದೆ, ಗುರು, ಅಗ್ನಿ ಮತ್ತು ಪರಮಾತ್ಮ : ಪಿತನು ಗುರು ಶಿಖಿಯಾತ್ಮ ತಾಯೆಂಬತುಳಪಂಚಾಗ್ನಿಯನು ಕ್ರಮದಿಂ ಪ್ರತಿದಿನಂ ಪರಿಚರಿಯ ಮಾಳ್ಪುದು ಲೇಸ ಬಯಸುವರೆ (ಕುವ್ಯಾಉ. ೩-೩೭). ೫. [ದ್ವೈತ] ನಾರಾಯಣನ ಮೂವತ್ತು ಮೂರ್ತಿಗಳನ್ನು ಧ್ಯಾನಿಸುತ್ತ, ಅಗ್ನಿಯಂತೆ ಭಾವಿಸಬೇಕಾದ ಐದು ವಸ್ತುಗಳು ; ತಾಯಿ, ತಂದೆ, ಭೂಮಿ, ಮೇಘ ಮತ್ತು ಆಕಾಶ : ಜನನಿ ಪಿತ ಭೂವಾರಿದಾಂಬರವೆನಿಪ ಪಂಚಾಗ್ನಿಯಲಿ ನಾರಾಯಣನ ತ್ರಿಂಶತಿಮೂರ್ತಿಗಳ ವ್ಯಾಪಾರವ್ಯಾಪ್ತಿಗಳ ನೆನೆದು (ಹಸಾರ. ೬-೧). ೬. [ವೈದ್ಯಶಾ] ಜೀರ್ಣಶಕ್ತಿಯನ್ನು ಹೆಚ್ಚಿಸುವ ಐದು ಬಗೆಯ ಔಷಧಗಳು : ಮಂಜಿಯ ಗೆಡ್ಡೆ, ತನ್ನಿಲೆ ಹುಲುಗನ ಗೆಡ್ಡೆ, ಚಿತ್ರಮೂಲ, ಸೂರಣ, ಮಂಗರವಳ್ಳಿ . . . (ಪಂಚಾಗ್ನಿ ಎಂದು ಕರೆಯಲ್ಪಡುವ ಈ ಔಷಧಗಳು ಮನುಷ್ಯರ ಹೊಟ್ಟೆಯಲ್ಲಿ ಅಗ್ನಿದೀಪನವಂ ಉಂಟುಮಾಡುವವು) (ವೈದ್ಯಸಾ. I, ೩೨೩).

**ಪಂಚಾಗ್ನಿವಿದ್ಯೆ** = ಛಾಂದೋಗ್ಯವೆಂಬ ಉಪನಿಷತ್ತಿನಲ್ಲಿ ಹೇಳಿರುವ ಒಂದು ವಿದ್ಯೆ : ಛಾಂದೋಗ್ಯದಲ್ಲಿ ಪಂಚಾಗ್ನಿವಿದ್ಯೆಯಲ್ಲಿ ವಿಧಿಸಿರುವುದರಿಂದ ಸ್ತ್ರೀ ಪುರುಷರನ್ನು ಅಗ್ನಿಯೆಂದು ಭಾವಿಸುವುದು ಒಂದು ಬಗೆಯ ಧ್ಯಾನಕ್ರಿಯೆಯು (ಬ್ರಹ್ಮಭಾ. ೫೬ ಅಡಿಟ) ; ಛಾಂದೋಗ್ಯೋಪನಿಷತ್ತು . . . ಇದರಲ್ಲಿ ಉದ್ಗೀಥೋಪಾಸನೆ, ಸತ್ಯಕಾಮ ಜಾಬಾಲಿಯ ವೃತ್ತಾಂತ, ಉಪಕೋಸಲವಿದ್ಯೆ, ಪಂಚಾಗ್ನಿವಿದ್ಯೆ . . . ಮೊದಲಾದ ವಿಷಯಗಳಿವೆ (ಭಾರದ. ೩೮). **ಪಂಚಾಗ್ನಿಸಾಧಕ** = ಪಂಚಾಗ್ನಿಗಳ

ಮಧ್ಯದಲ್ಲಿ ತಪಸ್ಸು ಮಾಡುವ ವ್ರತವನ್ನು ಹಿಡಿದಿರುವವನು; ಸಿದ್ಧಿ ಪಡೆಯಲು ಪಂಚಾಗ್ನಿಗಳ ಮಧ್ಯದಲ್ಲಿ ಕುಳಿತು ತಪಸ್ಸು ಮಾಡುವವನು: ದೇವರ್ . . . ಪಂಚಾಗ್ನಿಸಾಧಕನಪ್ಪ ತಪೋಧನನಂ ಕಂಡಾನುಮಿಂತೆ ತಪಂಗೆಯ್ವೆನೆಂದು ಪಂಚಾಗ್ನಿತಾಪತಪ್ತನಾಗಿ . . . ಸಿಂಗನಾಗಿ ಪುಟ್ಟಿದಿರ್ (ಪಂಚತಂ. ೬೦–೧೧); ತನಗೆ ರವಿಯಗ್ನಿಯು ತೇಜವದಾವರಿದೆನಿಸಿ ಮುನಿಪ್ರವರರ್ ಪಂಚಾಗ್ನಿಸಾಧಕರ್ ಬೇಸಗೆಯೊಳ್ (ಜಗವಿ. ೧೬–೬೫). ಪಂಚಾಗ್ನಿಸಾಧನಿ = ಪಂಚಾಗ್ನಿಸಾಧಕ: ಧೂಮ್ರಪಾನಿಗಳೂ ಪಂಚಾಗ್ನಿಸಾಧನಿಗಳೂ ಆದ ನೈಷ್ಠಿಕತಾಪಸಿಗಳಿಗೂ ಸಹ ಕಾಮತಾಪವನ್ನುಂಟುಮಾಡತಕ್ಕ ವಸಂತರಾಜನು ತನ್ನ ಸಂಪೂರ್ಣವೈಭವದಿಂದ ಈ ಉಪವನದಲ್ಲಿ ವಿರಾಜಮಾನನಾಗಿದ್ದಾನೆ (ಮಂಜುಳ. ೧೧).

[ಪಂಚ$_2$ + ಅಗ್ನಿ]

**ಪಂಚಾಗ್ನಿಯೋಗ** (ನಾ). [ವೈದ್ಯಶಾ] ಅಗ್ನಿಯಂತೆ ಉದ್ದೀಪಕಗಳಾದ ಐದು ವನಸ್ಪತಿಗಳ ಸಂಯೋಗದಿಂದ ಮಾಡುವ ಒಂದು ಬಗೆಯ ಔಷಧ: ಪಂಚಾಗ್ನಿಯೋಗ:–ಹೆಗ್ಗುರುಟಿಗೆ, ಇದನ್ನು ಕೆಲವರು ಸವಣೀಗಡ್ಡೆ ಎಂಬರು. ಗೋಳುಹಿಮ್ಮೆಯ ಗೆಡ್ಡೆ, ಚಿತ್ರಮೂಲ, ಸೂರಣದಗೆಣಸು, ಮಂಗರವಳ್ಳಿ ಎಂಬಿವುಗಳ ಚೂರ್ಣವನ್ನು ಉದಯಕಾಲದಲ್ಲಿ ಮಜ್ಜಿಗೆಯಲ್ಲಿ ಕಲಸಿ ಕುಡಿಯಲು . . . ಅಪಾನದ್ವಾರರೋಗಮಂ ಕೆಡಿಸುಗುಂ (ವಿನ್ಯವಿ. ೩೬). [ಪಂಚಾಗ್ನಿ + ಯೋಗ]

**ಪಂಚಾಚಾರ** (ನಾ). ೧. [ಜೈನ] ದರ್ಶನಾಚಾರ, ಜ್ಞಾನಾಚಾರ, ಚಾರಿತ್ರಾಚಾರ, ತಪಾಚಾರ ಮತ್ತು ವೀರ್ಯಾಚಾರಗಳೆಂಬ ಐದು ಬಗೆಯ ಆಚರಣೆಗಳು: ಮನಮಂ ಕಟ್ಟ ಗುಣಂಗಳಿಂ ತುಱುದು ಪಂಚಾಚಾರದಿಂ ಪಂಚಬಾಣನ ಬಾಹಾಬಲಮಂ . . . ಅನವದ್ಯರ್ ದಯೆಗೆಯ್ವರಕ್ಕೆ (ಪಂಠಾಮಾ. ೧–೩); ವರಪಂಚಾಚಾರಮಾಚಾರವನೊದವಿಸೆ . . . ಲೋಕೋತ್ತರರಾದಾಚಾರ್ಯರೆಮ್ಮಂ ನಿಯಮಿಸುಗೆ ನಿಜಾನುಗ್ರಹಪ್ರೌಢಿಯಿಂದಂ (ಪುಷ್ಪಪು.೧–೩); ಅಡಿಗೆಱಗುವೆನು ಪಂಚಾಚಾರವೆಂದೆಂಬ ಪಡಗೇಱು ಭವಸಾಗರವ ತಡೆಯದೆ ದಾಂಟಿ ದಾಂಟುವರಿಗಾ ಮಾರ್ಗವ ಬಿಡದೆ ತೋರ್ಪಾಚಾರ್ಯಕರ (ನಾಗಕು.೧–೩). ೨. [ವೀಶೈ] ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಮತ್ತು ಭೃತ್ಯಾಚಾರಗಳೆಂಬ ಐದು ಬಗೆಯ ಆಚಾರಗಳು; ℙ "ಶೃತ್ಯಾಚಾರ, ಸ್ಮೃತ್ಯಾಚಾರ, ಪೌರಾಣಿಕಾಚಾರ, ಆಗಮಾಚಾರ, ತಂತ್ರಾಚಾರ— ಇವನ್ನು ಪಂಚಾಚಾರಗಳೆಂದು ಹೇಳುವರು (ರಾಜಶೇ. ಪಾರಿಭಾಷಿಕ ವಿಶೇಷಾರ್ಥಗಳು. ೮೪೩): ಗುರುವನಱಿದು ಲಿಂಗವನಱಿವವರುಂಟು ಲಿಂಗವನಱಿದು ಪಂಚಾಚಾರವನಱಿವವರುಂಟು (ಮದೇವ.೨೭೭–೫೯); ಸದಾಚಾರ ಲಿಂಗಾಚಾರ ಶಿವಾಚಾರ ಗಣಾಚಾರ ಭೃತ್ಯಾಚಾರವೆಂಬ ಪಂಚಾಚಾರಂಗಳೊಳವಟ್ಟು . . . ಮಹಾಶರಣರ ಶ್ರೀಪಾದಕ್ಕೆ ನಮೋನಮಃ ಎಂಬೆನಯ್ಯಾ (ಅಖಂಡೇ. ೮೭–೯೦); ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಮಾರ್ಗಗಳ ಅನುಷ್ಠಾನದಿಂದ ಶಿವತ್ವವನ್ನು ಹೊಂದಬೇಕೆಂಬುದೇ ಈ ಮತದ ಗುರಿ (ಭಾರದ. ೨೧೭).

[ಪಂಚ$_2$ + ಆಚಾರ]

**ಪಂಚಾಚಾರ್ಯ** (ನಾ). [ವೀಶೈ] ಪ್ರಸಿದ್ಧವಾಗಿರುವ ಪಂಚಪೀಠಗಳ ಐವರು ಮೂಲ ಗುರುಗಳು: "ಪಂಚಾಚಾರ್ಯರು— ರೇಣುಕ, ದಾರುಕ, ಏಕೋರಾಮ, ಮರುಳಸಿದ್ಧ, ವಿಶ್ವಾರಾಧ್ಯರು" (ಶರಸಾ. ೨೪–೭). ℙ ಪಂಚಾಚಾರ್ಯರು: i) ಕೃತಯುಗದಲ್ಲಿ: ಏಕಾಕ್ಷರ ಶಿವಾಚಾರ್ಯ, ದ್ವ್ಯಕ್ಷರ ಶಿವಾಚಾರ್ಯ, ತ್ರ್ಯಕ್ಷರ ಶಿವಾಚಾರ್ಯ, ಚತುರಕ್ಷರ ಶಿವಾಚಾರ್ಯ, ಪಂಚಾಕ್ಷರ ಶಿವಾಚಾರ್ಯ. ii) ತ್ರೇತಾಯುಗದಲ್ಲಿ: ಏಕವಕ್ತ್ರ ಶಿವಾಚಾರ್ಯ, ದ್ವಿವಕ್ತ್ರ ಶಿವಾಚಾರ್ಯ, ತ್ರಿವಕ್ತ್ರ ಶಿವಾಚಾರ್ಯ, ಚತುರ್ವಕ್ತ್ರ ಶಿವಾಚಾರ್ಯ, ಪಂಚವಕ್ತ್ರ ಶಿವಾಚಾರ್ಯ. iii) ದ್ವಾಪರಯುಗದಲ್ಲಿ: ರೇಣುಕ ಶಿವಾಚಾರ್ಯ, ದಾರುಕ ಶಿವಾಚಾರ್ಯ, ಶಂಖುಕರ್ಣ ಶಿವಾಚಾರ್ಯ, ಧೇನುಕರ್ಣ ಶಿವಾಚಾರ್ಯ, ವಿಶ್ವಕರ್ಣ ಶಿವಾಚಾರ್ಯ. iv) ಕಲಿಯುಗದಲ್ಲಿ: ರೇವಣಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯ" (ರಾಜಶೇ. ಪಾರಿಭಾಷಿಕ ವಿಶೇಷಾರ್ಥಗಳು. ೮೪೪).

[ಪಂಚ$_2$ + ಆಚಾರ್ಯ]

**ಪಂಚಾಟ** (ನಾ). ತೀರ್ಪು ಕೊಡುವಿಕೆ; ನ್ಯಾಯನಿರ್ಣಯ; ಪಂಚಾಯತಿ ತೀರ್ಮಾನ; ಐತೀರ್ಪು: ಯಾವುದಾದರೂ ನ್ಯಾಯಾಲಯದ ಅಥವಾ ಮಧ್ಯಸ್ಥ ನ್ಯಾಯಾಧಿಕರಣದ ಯಾವುದಾದರೂ ನಿರ್ಣಯ, ಆಜ್ಞಪ್ತಿ ಅಥವಾ ಪಂಚಾಟ ಇವುಗಳ ಮೇರೆಗೆ ಪಾವತಿಯಾಗಬೇಕಾದ ಯಾವುದಾದರೂ ಮೊಬಲಗುಗಳು (ಭಾಧಾನ. ೫೯). [<ಪಂಚಾಯಿತಿ]

**ಪಂಚಾಣುವ್ರತ** (ನಾ). [ಜೈನ] ಗೃಹಸ್ಥರು ಅನುಸರಿಸಬೇಕಾದ ಅಹಿಂಸೆ (ಹಿಂಸೆ ಮಾಡದಿರುವುದು), ಸತ್ಯ (ಸುಳ್ಳು ಹೇಳದಿರುವುದು), ಅಸ್ತೇಯ (ಕದಿಯದೆ ಇರುವುದು), ಬ್ರಹ್ಮಚರ್ಯ ಮತ್ತು ಅಪರಿಗ್ರಹ (ಸ್ವೀಕರಿಸದಿರುವುದು) ಗಳೆಂಬ ಐದು ಬಗೆಯ ವ್ರತಗಳು: ಪಂಚಾಣುವ್ರತಾದಿ ಪ್ರವರ್ತನಸ್ವಭಾವಸಂಯಮಮುಮನಶನವ್ರತ್ಯಾದಿತಪೋನುಷ್ಠಾನಮುಂ ಚಿರಸಾರ್ಯಪಟ್ಕರ್ಮಂಗಳಂ ನಿಮಗಿವು ಕುಲಾಚಾರಂಗಳೆಂದಱಿಯೆ ಪೇಟ್ದು ಕೈಕೊಳಿಸಿ (ಆದಿಪು. ೧೫–೧೩ ವ); ಸಂಯಮಮೆಂಬುದು ಪಂಚಾಣುವ್ರತಪ್ರವರ್ತನಮಕ್ಕುಂ (ಅಜಿಪು. ೧೨–೧ ವ); ವರಪಂಚಾಣುವ್ರತಮಂ ನಿರತಿಕ್ರಮಮಾಗೆ ತಾಳ್ದಿ . . . ಶಲ್ಯತ್ರಯವಿರಹಿತನೆರಡನೆಯ ನೆಲೆಯುಮಂ ತಾಂ ಪ್ರತಿಕಂ (ಸುಕುಮಾ. ೬–೨೭). 'ಅಣುವ್ರತ' ಪರಾ.

[ಪಂಚ$_2$ + ಅಣುವ್ರತ]

**ಪಂಚಾಣೂತ್ತರೆ** (ನಾ). [ಜೈನ] ಲೋಕಾಕಾಶದ ತುದಿಯ ನೆಲೆಯಲ್ಲಿರುವ ಐದು ವಿಮಾನಗಳು,— ಪುಣ್ಯವಂತರ ವಾಸಸ್ಥಾನಗಳು: ಪಂಚಾಣೂತ್ತರಭಾಗಿನೋ ಜಿನಗೃಹಾಃ ಪಂಕ್ತ್ಯೈವ ತಾನರ್ಚಯೇ (ಆದಿಪು. ೧೬–೬೬); ಸಮಾಧಿಮರಣದಿಂ ಶರೀರಪರಿತ್ಯಾಗಂಗೆಯ್ದು ಪಂಚಾಣೂತ್ತರೆಗಳೊಳಗಣ ವಿಜಯದೊಳಹಮಿಂದ್ರನಾಗಿ ಪುಟ್ಟಿ (ಅಜಿಪು. ೩–೨ ವ); ಅಂತಾ ಸ್ವರ್ಗಸಂಭವರೆಲ್ಲಂ . . . ನವಾಣೂತ್ತರೆ ಪಂಚಾಣೂತ್ತರೆಗಳೊಳಂ ಸಮ್ಯಗ್ದೃಷ್ಟಿಗಳಲ್ಲದೆ ಪುಟ್ಟುವರಲ್ಲರ್ (ಸುಕುಮಾ. ೧೧–೭೧ ವ); ಪದ್ಮನಾಭಚರನಹಮಿಂದ್ರಂ ತ್ರಯತ್ರಿಂಶದಾಯುರಬ್ಧಿಗಳನುತ್ತರಿಸಿ ಪಂಚಾಣೂತ್ತರೆಗಳೊಳಗಣ ವೈಜಯಂತವಿಮಾನದಿಂ ಜ್ಞಾನತ್ರಯಮುಯಂ ಬಂದು (ಚಂದ್ರಪು. ೧೨–೨೧ ವ). [ಪಂಚ$_2$ + ಅಣೂತ್ತರೆ]

**ಪಂಚಾತಿಚಾರ** (ನಾ). [ಜೈನ] ಐದು ಬಗೆಯಲ್ಲಿ ದಾರಿತಪ್ಪುವಿಕೆ,— ಮೀರಿ ನಡೆಯುವಿಕೆ; ℙ ಸಮ್ಯಗ್ದೃಷ್ಟಿಗೆ ಶಂಕೆ, ಕಾಂಕ್ಷೆ, ನಿರ್ವಿಚಿಕಿತ್ಸೆ, ಅನ್ಯದೃಷ್ಟಿಪ್ರಶಂಸೆ ಮತ್ತು ಅನ್ಯದೃಷ್ಟಿಸಂಸ್ತವನ ಎಂಬುವೇ ಐದು ಅತಿಚಾರಗಳು: ದೇವರೊಳಾದ ಶಂಕೆಯುಂ . . . ಸದೋಷಿಯಪ್ಪಾತನಂ ಪೊಗಟ್ವಲ್ಲಿ ಅನ್ಯದೃಷ್ಟಿಸಂಸ್ತವನಮುಮೆಂಬ ಪಂಚಾತಿಚಾರದೊಳಂ ಕೂಡದುದುಂ ಒಂದನೆಯ ದಾರ್ಶನಿಕನೆಂಬ ಶ್ರಾವಕಂಗಕ್ಕುಂ (ಧರ್ಮಾಮೃ. ೫–೧೨೫); ಯತಿಪಂ ಪಂಚಾತಿಚಾರಪ್ರಕೃತನಿಯಮದಿಂ . . . ಆರ್ಹತ್ತ್ವತಿಬಿಂಬಭ್ರಾಂತಿಯಂ ಮಾಡಿದನಮಯವದಿಂದೀಕ್ಷಣಕ್ಕಾಗಳೆನ್ನಾ (ಚಂದ್ರಪು. ೨–೮೨). 'ಅತಿಚಾರ' ಪರಾ. [ಪಂಚ$_2$ + ಅತಿಚಾರ]

**ಪಂಚಾನ** 'ಪಂಚಾಲ' ನೋ.

**ಪಂಚಾನನ**$_1$ (ನಾ). ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ ಎಂಬ ಹೆಸರುಳ್ಳ ಐದು ಮುಖಗಳುಳ್ಳವನು; ಶಿವ; ಪರಮೇಶ್ವರ : ಪಂಚಾನನಂ ಸೋಮನಾಥನ ಜಠರದೊಳಗೆ ಸುಜ್ಞಾನಕಲೆ ತಾನೆ ಸಂಭವಿಸಿ ರೇವಣಸಿದ್ಧನಾಮಂಬಡೆದ (ಉದ್ಭದೇ. ೩-೫). [ಪಂಚ$_2$+ಆನನ]

**ಪಂಚಾನನ**$_2$ (ನಾ). ೧. ವಿಶಾಲವಾದ ಮುಖವುಳ್ಳದು ; ಸಿಂಹ; ಪಂಚಾಸ್ಯ : "ಹರಿಃ, ಮೃಗಪತಿಃ, ಪಂಚಾನನಃ . . . ಕಂಠೀರವಃ —ಈ ೯ ಸಿಂಹದ ಪೆಸರ್" (ಹಲಾಯು. ೩೬-೬೧); ಪಂಚಾನನದಂತೆ ಗರ್ಜಿಸಿ ರಘೂದ್ವಹನೇಜು ವರೂಥಮಂ . . . ಜೇವೊಡೆದಂ ನಿಜ ಚಾಪದಂಡಮಂ (ಪಂರಾಮಾ. ೩-೫೦); ಪಂಚಾನನೋಪಸರ್ಗಜಯಂ ಚಿತ್ರಕೃತಿ ವಿಚಿತ್ರಮಂ ಕುಡೆ (ಪಾರ್ಶ್ವಪು. ೧೩-೬೬); ವಾನರನ ಹಯ ಕುಂಜರನ ಪಂಚಾನನನ ಮೃಗಪೋತಕನ ಗುಣವಾ ನರೇಂದ್ರನೊಳಿರಲು ಬೇಹುದು (ಕುಪ್ಯಾಉ. ೩-೧೦೯); ಕಂಡಳೈ ಕಮಲಾಕ್ಷಿ ಖಳವೇತಂಡ ಪಂಚಾನನನ [ಪಾಠಾಂ. ಕಂಠೀರವನ] . . . ಮಾಯಾತ್ರಿವಿಕ್ರಮನ (ತೊರರಾ. ೬-೧೬-೧೦); ಪೇರಾನೆಯ ಕುಂಬತಳಮಂ ತನ್ನೊಂದೆ ಕೈಯ ಪೊಯ್ಲಿಂ ಸೀಳ್ದು ಪೋಟ್ವ ಪಂಚಾನನಂಗವೆನಗಂ ಪೆಜರ ಕೆಲಚಕ್ಕುಮೆ? (ರಾಮಾಶ್ವ. ೧೧೧-೧೫). ೨. (ಅಲಂ) ಶ್ರೇಷ್ಠ ವ್ಯಕ್ತಿ; ಉತ್ಕೃಷ್ಟನಾದವನು : ಒಪ್ಪಿದಂ ಶಂಭುಸಂಭವ ತದ್ರೇಣುಕರೂಪ ರೇವಣಮಹಾಯೋಗೀಂದ್ರ ಪಂಚಾನನಂ (ರಾಜಶೇ. ೧-೬೩). [ಪಂಚ$_3$+ಆನನ]

**ಪಂಚಾನನರಸ** (ನಾ). [ವೈದ್ಯಶಾ] ಒಂದು ಬಗೆಯ ಔಷಧ ; ರಸ, ಮೆಣಸು, ಹಿರಾವಳಿ, ತಾಮ್ರಭಸ್ಮ ಮತ್ತು ಅರ್ಕಮೂಲರಸ ಇವುಗಳ ಮಿಶ್ರಣ : ಪಂಚಾನನರಸ :—ರಸ ಗ ೨ ತೂಕ, ಮೆಣಸು ಗ ೩ ತೂಕ, ಹಿರಾವಳಿ ಗ ೪ ತೂಕ, ತಾಮ್ರಭಸ್ಮ ಗ ೭ ತೂಕ, ಇಷ್ಟನ್ನು ಅರ್ಕಮೂಲರಸದಲ್ಲಿ ಲೇಸಾಗಿ ಮರ್ದಿಸಿ, ಗುಂಜಿತೂಕವನ್ನು ಸಕ್ಕರೆ, ಆಲದ ರಸದಲ್ಲಿ ಕೊಡಲು ಸರ್ವಜ್ವರಹರ (ವಿಶ್ವೈವಿ. ೩೬). [ಪಂಚಾನನ+1ರಸ]

**ಪಂಚಾಭಿಷೇಕ** (ನಾ). ಹಾಲು, ಸಕ್ಕರೆ, ತುಪ್ಪ, ಮೊಸರು ಮತ್ತು ಜೇನು ಎಂಬ ಐದು ವಿಧವಾದ ಮಧುರಪದಾರ್ಥಗಳನ್ನು ಒಂದೊಂದಾಗಿ ಸುರಿದು ಮಾಡುವ ಅಭಿಷೇಕ : ಅಂಬುಜವದನೆ . . . ಬಳುಕುತ ಬಂದು ಪಂಚವಿಧದಮೃತಪಾತ್ರೆಯನೀಯೆ ಲಿಂಗಕ್ಕೆ ಪಂಚಾಭಿಷೇಕವೆರೆದು (ನವಮೋ. ೧೯-೧೮). [ಪಂಚ$_2$+ಅಭಿಷೇಕ]

**ಪಂಚಾಮೃತ** (ನಾ). ೧. ದೇವರ ಅಭಿಷೇಕಕ್ಕೆ ಉಪಯೋಗಿಸುವ ಐದು ಮಧುರಪದಾರ್ಥಗಳು ; ಹಾಲು, ಮೊಸರು, ತುಪ್ಪ, ಜೇನುತುಪ್ಪ ಮತ್ತು ಸಕ್ಕರೆ. ೨. ಈ ಐದು ಮಧುರ ಪದಾರ್ಥಗಳ ಮಿಶ್ರಣ : ನಾಯ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯಾ (ಬಸವ. ೨೨೩); ವಿನುತ ಪಂಚಾಮೃತಂಗಳನಲ್ಲಿ ಮಾಡಿಸುತೆ ಸಾಲದೆನುತಂ ಸಹಸ್ರಾಭಿಷೇಕವ ಮಾಡಿ (ರುದ್ರರ. ದೇ. ೨೦೪-೬); ಲೇಸಿನಿಂ ವೇದೋಕ್ತಕ್ರಮವಿಡಿದು ಪಂಚಾಮೃತವನೆರೆದು . . . ಮಂಗಳಸೂತ್ರ ಲೇಸಿನಲಿ ಕಂಠದಲಿ ಬಂಧಿಸುತ (ನವಮೋ. ೧೩-೫೭); ಚಕ್ರಖಂಡೇಶ್ವರ ದೇವಸ್ಥಾನಕ್ಕೆ ಹೋಗಿ . . . ಭಟ್ಟರ ಕಡೆಯಿಂದ ಒಂದು ಪಂಚಾಮೃತದ ಅಭಿಷೇಕ ಮಾಡಿಸುತ್ತೇನೆ (ಮೂರುದಾ. ೩೨೮). ೩. (ಅಲಂ) ಹಿತಕರವಾದುದು ; ಆನಂದಜನಕವಾದುದು : ನೀವು ನನ್ನನ್ನು ಆಗೆಗಾಗೆ ಪ್ರೀತಿಯಿಂದ ಮಾತನಾಡಿಸಿದರೆ ನನಗೆ ಅದೇ ಪಂಚಾಮೃತ (ಕಾವೇರಿ. ೧೦೪); ಹೆಣ್ಣುಗಂಡೂ ಕೂಸುಕುನ್ನಿ ಮುಪ್ಪಿನ ಮುದುಕ ಅವರವರ ಪಾಲಿಗಿದೆ ಪಂಚಾಮೃತ (ನೆಲಮು. ೧೯-೨೦); ಪಾಲಿಗೆ ಬಂದದ್ದು ಪಂಚಾಮೃತ (ಗಾದೆ). ೪. [ವೈದ್ಯಶಾ] ಗೋಮೂತ್ರ, ಗೋಮಯ, ಮೊಸರು, ಹಾಲು, ತುಪ್ಪಗಳೆಂಬ ಐದು ವಸ್ತುಗಳು. ೫. ಹಿಪ್ಪಲಿ, ತುಪ್ಪ, ಸಕ್ಕರೆ, ಜೇನುತುಪ್ಪ, ಹಾಲುಗಳೆಂಬ ಐದು ಪದಾರ್ಥಗಳು. ೬. ಅಭ್ರಕ, ಮಾಕ್ಷಿಕ, ಲೋಹ, ರಸ, ಗಂಧಕಗಳೆಂಬ ಐದು ವಸ್ತುಗಳು.

**ಪಂಚಾಮೃತಘೃತ**=ಗೋಮೂತ್ರ, ಗೋಮಯ, ಮೊಸರು, ಹಾಲು, ತುಪ್ಪಗಳೆಂಬ ಐದು ವಸ್ತುಗಳನ್ನು ಸೇರಿಸಿ ಮಾಡುವ ಒಂದು ಬಗೆಯ ಔಷಧ: ಪಂಚಾಮೃತಘೃತ . . . ಸಕ್ಕರೆವೆರಸಿ . . . ಸೇವಿಸೆ ಪಿತ್ತಭ್ರಮುಹೆ . . . ಪರಿಹಾರಮಕ್ಕುಂ (ಸಕವೈ. ೧೩೯). **ಪಂಚಾಮೃತಯೋಗ**=ಹಿಪ್ಪಲಿ, ತುಪ್ಪ, ಸಕ್ಕರೆ, ಜೇನುತುಪ್ಪ, ಹಾಲು—ಈ ಐದು ಪದಾರ್ಥಗಳನ್ನು ಸೇರಿಸಿ ಮಾಡುವ ಒಂದು ಬಗೆಯ ಔಷಧ : ಪಂಚಾಮೃತಯೋಗ . . . ರೂಕ್ಷಜ್ವರನಿವಾರಣಂ (ವಿಶ್ವೈವಿ. ೩೬). **ಪಂಚಾಮೃತರಸ**=ಅಭ್ರಕ, ಮಾಕ್ಷಿಕ, ಲೋಹ, ರಸ, ಗಂಧಕಗಳೆಂಬ ಐದು ವಸ್ತುಗಳಿಂದ ತಯಾರಿಸುವ ಔಷಧ: ಪಂಚಾಮೃತ ರಸ . . . ಆಳಲೇಕಾಯಂ ಕರಿಯ ಚೂರ್ಣಮಂ ಮಾಡಿ . . . ಕೊಡಲು ಅತಿಸಾರ ಹರ (ವಿಶ್ವೈವಿ. ೩೬). [ಪಂಚ$_2$+ಅಮೃತ]

**ಪಂಚಾಮೃತಾಭಿಷೇಕ** (ನಾ). ಪಂಚಾಮೃತದಿಂದ ಮಾಡುವ ಅಭಿಷೇಕ : ಈಕೆಯ ದಾನಧರ್ಮದಿಂದಾಗಿ ದಿನವೂ ಸಹಸ್ರಾರು ಜಿನಬಿಂಬಗಳಿಗೆ ಪಂಚಾಮೃತಾಭಿಷೇಕವಾಗುತ್ತಿತ್ತು (ದಾನಚಿಂ. ೧೬೩). [ಪಂಚಾಮೃತ+ಅಭಿಷೇಕ]

**ಪಂಚಾಮ್ಲ** (ನಾ). [ವೈದ್ಯಶಾ] ಹಸುವಿನ ಮಜ್ಜಿಗೆ, ಅಂಬಿಲ, ಹುಣಿಸೇಹಣ್ಣು, ದಾಳಿಂಬೆ ಹಣ್ಣು ಮತ್ತು ಮಾದಳಗಳೆಂಬ ಐದು ಬಗೆಯ ಆಮ್ಲ,—ಹುಳಿ; ☞ "ಆಮ್ಲ—೫ : (ಅ) ಆಮ್ಲವೇತಸ, ವೃಕ್ಷಾಮ್ಲ, ಬೃಹಜ್ಜಂಬೀರ, ನಿಂಬುಕ, ಬೀಜಪೂರ (ಭಾವಪ್ರಕಾಶ—ಶಕದ್ರು. ೪೨೦). (ಆ) ಕೋಲ, ದಾಡಿಮ, ವೃಕ್ಷಾಮ್ಲ, ಆಮ್ಲವೇತಸ, ಮಾತುಲಂಗ (ಶಬ್ದಚಿಂ—ಶಕದ್ರು. ೧೬)" (ಶ್ರೀವತ್ಸ. ೫೪): ಹಸುವಿನ ಮಜ್ಜಿಗೆ, ಅಂಬಿಲ, ಹುಣಿಸೇಹಣ್ಣು, ದಾಳಿಂಬದ ಹಣ್ಣು, ಮಾದಳದ ಹಣ್ಣು ಇವು ಪಂಚಾಮ್ಲವೆಂದು ಪ್ರಸಿದ್ಧ (ವೈದ್ಯಸಾ. I, ೧೬೨); ಹಸುವಿನ ಮಜ್ಜಿಗೆ, ಅಂಬಿಲ, ಹುಣಿಸೆಹಣ್ಣು, ದಾಳಿಂಬದ ಹಣ್ಣು, ಮಾದಳದ ಹಣ್ಣು ಈ ೫ ಪಂಚಾಮ್ಲ ವೆನಿಸಿಕೊಂಬುವು (ಸಕವೈ. ೨೮೨). [ಪಂಚ$_2$+ಆಮ್ಲ]

**ಪಂಚಾಯತ** 'ಪಂಚಾಯಿತಿ' ನೋ.

**ಪಂಚಾಯತದಾರ** (ನಾ). ತೀರ್ಮಾನಕ್ಕಾಗಿ ಏರ್ಪಡಿಸುವ ಸಮಿತಿಯ ಸದಸ್ಯ: ಕುಸ್ತಿಯ ಪಂಚಾಯತದಾರರು ಇಬ್ಬರ ಬೆನ್ನನ್ನೂ ತಟ್ಟಿದರು (ಭೀಮಕಾ. ೩). [ಪಂಚಾಯತ(<ಪಂಚಾಯಿತಿ)+-ದಾರ$_4$]

**ಪಂಚಾಯತನ** (ನಾ). ೧. ಸ್ಮಾರ್ತ ಸಂಪ್ರದಾಯದ ಹಿಂದುಗಳು ನಿತ್ಯವೂ ಪೂಜಿಸುವ ಐವರು ದೇವರು ; ಶಿವ, ಅಂಬಿಕೆ, ವಿಷ್ಣು, ಸೂರ್ಯ ಮತ್ತು ಗಣಪತಿ ದೇವರುಗಳು; ಐದು ದೇವರೆಂಬ ಭಾವನೆಯಿಂದ ಪೂಜಿಸುವ ಪಂಚಶಿಲೆಗಳು : ರಾಮುಹುಟ್ಟನೆ ಪಂಚಾಯತನ ದೇವತಾದಿಯು (ಗಗತಾ. ೧-೮); ಇನ್ನೂ ಹೆಚ್ಚು ಸಂಸ್ಕಾರವಾದವನಿಗೆ ಮೇಲೆ ಹೇಳಿದಂಥಾ ವಿಗ್ರಹಗಳ ಅವಶ್ಯವಿಲ್ಲ. ಆದಿಶಕ್ತಿ, ಮಹಾವಿಷ್ಣು, ಆದಿತ್ಯ, ಗಣಪತಿ, ಮಹಾದೇವ . . . ಎಂಬ ಪಂಚಾಯತನಗಳೇ ಸಾಕು (ಆರ್ಯಧ. ೨೦೬). [ಸಂ.]

**ಪಂಚಾಯತಶಾಲೆ** (ನಾ). ಗ್ರಾಮಪಂಚಾಯತಿಯು ನಡೆಸುವ ಪಾಠಶಾಲೆ : ಕೇವಲ ಒಂದು ಪಂಚಾಯತಶಾಲೆಯಲ್ಲಿ ಐದನೆಯ ತರಗತಿ ವರೆಗೆ ಓದಿದ್ದಳು ಅಷ್ಟೆ (ಮುಂಗಾಮು. ೬೫). [ಪಂಚಾಯತ(<ಪಂಚಾಯಿತಿ)+ಶಾಲೆ$_3$]

**ಪಂಚಾಯುತಿ** 'ಪಂಚಾಯಿತಿ' ನೋ.

**ಪಂಚಾಯುತಿಕೆ** 'ಪಂಚಾಯಿತಿಕೆ' ನೋ.

**ಪಂಚಾಯಿತ,** ಪಂಚಾಯ್ತ (ನಾ). = ಪಂಚಾಯತದಾರ : ಪಂಚಾಯಿತರ ತೀರ್ಮಾನಗಳು ನಿಷ್ಪಕ್ಷಪಾತವಾಗಿದ್ದವು (ಕಳಹು. ೯೪) ; ಪಂಚಾಯಿತರ ಊಟೋಪಚಾರದಲ್ಲಿ ದುಗ್ಗಮ್ಮನಿದ್ದಳು (ಗಂಗಾಳ.೩೦). **ಪಂಚಾಯ್ತ :** ಇಲ್ಲೇ ಪಂಚಾಯ್ತರು ಕುಳಿತುಕೊಳ್ಳುವುದು (ನನ್ನೂರು. ೧೦). [ಪಂಚಾಯಿತಿ+-ಅ$_7$]

**ಪಂಚಾಯಿತಿ,** ಪಂಚಾಯತ, ಪಂಚಾಯತಿ, ಪಂಚಾಯ್ತಿ (ನಾ). ೧. ಗ್ರಾಮದ ಅಥವಾ ಗ್ರಾಮಕೂಟದ ಆಡಳಿತವನ್ನು ನಡೆಸುವ ಸ್ಥಳೀಯ ಸಂಸ್ಥೆ : ನಾನು ನಿನ್ನೆ ಪಂಚಾಯಿತಿ ಚುನಾವಣೆಯಲ್ಲಿ ಕೊಟ್ಟ ಓಟಿನ ವಿಚಾರವನ್ನೇ ಕುರಿತು ನಾನು ಯೋಚಿಸಿದರೆ (ಜೀವಾತ್ಮ. ೯೦) ; ಆ ಪಂಚಾಯಿತಿಗಳನ್ನು ರದ್ದು ಮಾಡಲು ಯಾವ ರಾಜನೂ ಒಪ್ಪುವುದಿಲ್ಲ (ಝಾರಾಣಿ. ೮೪) ; ಪ್ರತಿಯೊಂದು ಪಂಚಾಯಿತಿಯಲ್ಲಿಯೂ ಗಣಕ, ಲೇಖಕ ಮತ್ತು ಸಾಧ್ಯಪಾಲ ಎಂಬ ಮೂವರನ್ನು ನೇಮಿಸಿರುತ್ತಿದ್ದರು (ಭಾರದ. ೫೯). ೨. ಬೇಸರ ತರುವ ಪ್ರಸಂಗ ; ತಂಟೆ ; ತಕರಾರು : ಲೋ ಸುಮ್ಮನೆ ಪಂಚಾಯಿತಿ ಮಾಡಬೇಡ ಕಾಣೋ (ಸ್ವಾಮಿಸ್ನೇ. ೮೫) ; ಆ ಹಾಳು ಲೆಖ್ಖದ್ದೇ ಒಂದು ಪಂಚಾಯಿತಿ (ಶಾಲಿಮ. ೧). **ಪಂಚಾಯತ :** ೩. ನಿರ್ಣಯ ; ತೀರ್ಮಾನ : ಮಂತ್ರಿಗಳ ಮಂತ್ರಕ್ಕೆ ಉದುರುವುದೆ ಮಾಂಗಾಯಿ ? ಮಂತ್ರಶಕ್ತಿಯು ದೈವ ಪಂಚಾಯತ (ನೆಲಮು. ೧೯-೨೨). **ಪಂಚಾಯುತಿ :** ೨. ಈ ಪಂಚಾಯುತಿಯನ್ನು ಧನಿಗಳು ತೋಟಕ್ಕೆ ಬರುವ ಮೊದಲೇ ನಾವು ಬಗೆಹರಿಸದೆ ಹೋದರೆ, ನಾಳೆ ತುಕ್ರನ ಮಿಾಸೆಯೇ ಮೇಲಾಗುತ್ತದೆ (ಕುಡಿಕೂ. ೧೨೪) ; ಯಾರು ಯಾವ ಕೆಲಸ ಮಾಡಬೇಕೋ ಅದನ್ನು ಸರಿಯಾಗಿ ಮಾಡಿದರೆ ಈ ಪಂಚಾಯುತಿ ಯಾಕೆ ಸ್ವಾಮಿ ? (ಪುರಳ. ೯). ೪. ದೇವಸ್ಥಾನ ಮೊದಲಾದ ಧರ್ಮ ಸಂಸ್ಥೆಗಳ ಆಡಳಿತಕ್ಕಾಗಿ ಏರ್ಪಡಿಸಿರುವ ಸಮಿತಿ ; ಧರ್ಮದರ್ಶಿಗಳ ಸಮಿತಿ : ಮಿತಸಂಸ್ಥೆ, ಪಂಚಾಯತಿಗಳು (Trusts) ಮೊದಲಾದವುಗಳ ಲೆಕ್ಕವನ್ನು ಬರೆಯಬೇಕು (ತಕ್ಕಡಿ. ೬೫). ೫. ಗೊಡವೆ ; ಉಸಾಬರಿ : ಉಳಿದ ಪಂಚಾಯತಿ ನಮಗೇತಕ್ಕೆ ? (ಪರಿಲ. ೫). ೬. ಜಗಳ : ಅಣ್ಣ ತಮ್ಮಂದಿರ ಪಂಚಾಯತಿ ಕೊನೆಯಾಗಲೇ ಇಲ್ಲ (ರೂಢಿ). ೭. ಸಿಕ್ಕು ; ಗೋಜು ; ಗೊಂದಲ : ಈ ಪಂಚಾಯತಿಯ ತಳ ಬುಡ ತಿಳಿಯುವುದಿಲ್ಲ (ರೂಢಿ). ೮. ತೊಂದರೆ ; ಕಷ್ಟ : ತಿನ್ನಲು ಅನ್ನ ಇಲ್ಲವಾದರೆ ಹೋಗಲಿ ; ಕುಡಿಯಲು ನೀರಿಗೂ ಪಂಚಾಯತಿಯಾಗತೊಡಗಿತು (ಸ್ಮೃತಿಚಿ. ೩೦೩). ೯. ಪರಿವೆ ; ಲಕ್ಷ್ಯ ; ಗಮನ : ಗಂಡ ತನ್ನನ್ನು ಬಿಟ್ಟು ಹೋಗಿದ್ದಾನೆ, ತಾನು ಅತ್ತೆ ಮಾವಂದಿರಿಗೆ ಸರಿಯಾಗಿ ನಡೆಯಬೇಕು ಎನ್ನುವ ಪಂಚಾಯತಿಯೇ ಇಲ್ಲ ಈಕೆಗೆ ! (ಮಸಕೂ. ೩೭). **ಪಂಚಾಯ್ತಿ :** ೧. 'ಪಂಚಾಯ್ತಿಮನೆ' ಪರಾ. ೧೦. ಊರಿನ ಜನರಿಗೆಲ್ಲ ಸಂಬಂಧಪಟ್ಟ ವಿಷಯವನ್ನು ಚರ್ಚಿಸಲು ಅಥವಾ ಜನರ ಪರಸ್ಪರ ವಿವಾದಗಳನ್ನು ವಿಚಾರಿಸಿ ತೀರ್ಪು ಕೊಡಲು ಸೇರುವ ಗ್ರಾಮಮುಖಂಡರ ಸಭೆ : ಅದರ ಪಕ್ಕದಲ್ಲಿ ಚಾವಡಿ. ನನ್ನೂರಿನ ನ್ಯಾಯ ಪಂಚಾಯ್ತಿಗಳೆಲ್ಲ ನಡೆಯುವ್ರದೇ ಇಲ್ಲಿ (ನನ್ನೂರು. ೧೦).

**ಪಂಚಾಯಿತಿ ತೀರ್ಮಾನ** = ಪಂಚಾಯಿತಿಯಲ್ಲಿ ಆದ ನಿರ್ಣಯ : ಪಂಚಾಯಿತಿ ತೀರ್ಮಾನದಂತೆ ನಡೆದುಕೊಳ್ಳಬೇಕು (ರೂಢಿ). **ಪಂಚಾಯ್ತಿ ಕಟ್ಟೆ** = ನ್ಯಾಯವಿಚಾರಣೆ ಮಾಡುವ ಜಗಲಿ,— ವೇದಿಕೆ : ಅವನು ತಪ್ಪು ಮಾಡಿದ್ದೇ ಅಲ್ಲದೆ, ಪಂಚಾಯ್ತಿ ಕಟ್ಟೆಗೂ ಬಾರದೆ ತಪ್ಪಿಸಿಕೊಂಡಿದ್ದನು (ರೂಢಿ). **ಪಂಚಾಯ್ತಿ ಮಾಡು** = ವಿಚಾರಣೆ ಮಾಡು,— ನಡೆಸು ; ಚರ್ಚಿಸಿ ತೀರ್ಮಾನಿಸು : ಊರುಮುಖಂಡರು ಬಂದು ಪಂಚಾಯ್ತಿ ಮಾಡಿ ಗಂಡ ಹೆಂಡಿರನ್ನು ಒಂದು ಮಾಡಬೇಕು (ಸುಪಸಂ. ೩೧). [←ಹಿಂ. ಪಂಚಾಇತ್, ಪಂಚಾಯತ್, ಪಂಚಾಯತೀ; **ಮರಾ.** ಪಂಚಾಈತ್, ಪಂಚಾಯತ್]

**ಪಂಚಾಯಿತಿಕೆ,** ಪಂಚಾಯತಿಕೆ (ನಾ). ಪಂಚಾಯಿತಿ ಮಾಡುವಿಕೆ ; ವಿಚಾರಣೆ ನಡೆಸುವಿಕೆ : ಚುಚ್ಚುನುಡಿಗಳನ್ನು ಪಂಚಾಯಿತಿಕೆಯಾಗುವಾಗ ನನಗಾಗಿ ಹೇಳಿದ (ಕುರುಕಾ. ೧೫೪). ಕೇಳುವುದೇನು— ಎದ್ದಿತು ಪಂಚಾಯಿತಿಕೆ (ಕಂಬಹು. ೬೮). **ಪಂಚಾಯತಿಕೆ :** ಆ ಜೋಡಿಕೊಲೆಯ ಪಂಚಾಯತಿಕೆ ಇಂದಿನಿಂದ ಪ್ರಾರಂಭವಾಗಿದೆ (ರೂಢಿ). [ಪಂಚಾಯಿತಿ+-ಇಕೆ]

**ಪಂಚಾಯುಧ** (ನಾ). = ಪಂಚಶರ ೨ : ಪಿಡಿವಾಗಳೊಂದು ಪಿಡಿಯಂ ತುಡುವಾಗಳೆರಡು ತೊಟ್ಟನೆ ಸಿಡಿವಾಗಳ್ಮೊಲು ಗುಜಿಯಂ ಕೆಡೆವಾಗಳ್ ನಾಲ್ಕು ಪಂಚಾಯುಧನ ಪೊಸಮುಸೆಯ ವಿಶಿಖಂಗಳ್ (ರಾಮಾಶ್ವ. ೫೮-೨೯). [ಪಂಚ$_2$ + ಆಯುಧ]

**ಪಂಚಾಯ್ತ** 'ಪಂಚಾಯಿತ' ನೋ.

**ಪಂಚಾಯ್ತಿ** 'ಪಂಚಾಯಿತಿ' ನೋ.

**ಪಂಚಾಯ್ತಿಮನೆ** (ನಾ). ಪಂಚಾಯಿತರು ತಮ್ಮ ಕಾರ್ಯಕಲಾಪಗಳನ್ನು ನಡೆಸುವ ಕಟ್ಟಡ : ಪಂಚಾಯ್ತಿ ಮನೆ ಇದೆಯಲ್ಲಾ ಅದರ ಪಕ್ಕದಲ್ಲಿ ದೊಡ್ಡದೊಂದು ಪಾಳುಮನೆ ಇದೆ (ಚಂದತೋ. ೩೧). [ಪಂಚಾಯ್ತಿ (<ಪಂಚಾಯಿತಿ)+ಮನೆ]

**ಪಂಚಾರ** (ನಾ). (ಪ್ರಾಯದ) ಕುದುರೆ : ಹಳೆಯ ಪಂಚಾರವ ತೆಗೆದಡಿಗಡಿಗೆ ಮತ್ತೆಳೆಗುದುರೆಯ ಕಟ್ಟುವಂತೆ ಪಳಿತ ನಾರಿಯರ ಜಾಣುಸು ತೆಳಿವೆಣ್ಣ ಮಂಗಳವಾಗುತಿರ್ದನಾ ಸೊಬಗ (ಭರಚ. ೭೫-೬೮). [ ? ]

**ಪಂಚಾರತಿ** (ನಾ). ೧. ದೇವರ ಪೂಜೆ ಮೊದಲಾದ ಸಂದರ್ಭಗಳಲ್ಲಿ ಎತ್ತುವ ಐದು ಕುಡಿಗಳುಳ್ಳ ಆರತಿ : ಪಂಚಾರತಿಯನೀಯ್ಯಲಸುರೇಂದ್ರ ಲಿಂಗಕ್ಕೆ ಬೆಳಗಿದನು (ನಪಮೋ. ೧೯-೨೭), ಪಂಚಾರತಿ, ಗೋಪುರಾರತಿ, ಕರ್ಪೂರಾರತಿ ಮುಂತಾದ ಎಲ್ಲ ಆರತಿಗಳನ್ನೂ ಮಾಡಿಸಿ ಪ್ರಸಾದ ಸ್ವೀಕರಿಸಿದ್ದಾಯಿತು (ಗಂಪೂಯಿ. ೧) ; ಯಾವ ವಿಶ್ವಮಾತೆ ನಿನ್ನ ಹೆತ್ತಳವಳ ಸಂತತಿ ಎತ್ತದಿಹುದೆ, ಅವಳಿಗೆಂದು ಪ್ರಾಣದ ಪಂಚಾರತಿ ? (ದ್ಯಾಪಾಪ್ಯ. ೧೭-೬) ; ತಾವು ಪಂಚಾರತಿ ಬೆಳಗಿಸಿಕೊಂಡ ಮಿಾಸೆ ಹೊತ್ತ ಗಂಡಸರು (ಅಂಬಿಕೆ. ೧೩೦). ೨. ಸಾಲಾದ ಐದು ದೀಪಗಳನ್ನು ಎತ್ತಲು ಅನುಕೂಲವಾಗುವಂತೆ ಮಾಡಿರುವ ಐದು ಮುಖಗಳುಳ್ಳ ಒಂದು ಸಾಧನ : ಪಂಚಾರತಿ ಗಂಟೆಗಳಿಂದ ಮೆಚಿ*ದವು ಕಂಚುಗಾಜಿರ ಪಸರಗಳು (ಕಂಸವಿ. ೬-೯೯) [ಪಂಚ$_2$+ಆರತಿ$_1$]

**ಪಂಚಾರಶೀಲ** (ನಾ). (ಕುದುರೆಯಂತೆ). ಕಾಮುಕಸ್ವಭಾವದವನು : ಸ್ತ್ರೀಯ ವೇಶಿಯ ನೆವದಿಂ ಆ ವೇಳೆಯಲ್ಲಿ ಕಾಮದಿ ಅಳವಡಿಸುವಂ ಅಲ್ಲ ಕಾಮಚಿಹ್ನಮಂ ಸೂಚಿಸುವನಂ ಪಂಚಾರಶೀಲನೆಂಬುದು (ಕಾಮಶಾ. ೯-೨೦೭). [ಪಂಚಾರ + ಶೀಲ]

**ಪಂಚಾರಿಸು** (ಕ್ರಿ). (ಕುದುರೆ) ಪ್ರಾಯಕ್ಕೆ ಬರು : ಆ ಕುದುರೆಗೆ ಐದು ಹಲ್ಲುಗಳು ಹುಟ್ಟಿ ಕಾಂತಿಯು ಪರಾಕ್ರಮವು ಉಳ್ಳುದಾದ ಕಾರಣ ಪಂಚಾರಿಸಿತ್ತೆಂದು ಹೇಳುವರು (ಅಶ್ವಟೀ. ೨೩-೩). [ಪಂಚಾರ + -ಇಸು$_3$/ ಮರಾ. ಪಂಚಾರಣೀ, ಪಂಜಾರಣೀ = (ಕುದುರೆಗೆ) ಐದು ವರ್ಷ ಪ್ರಾಯವಾಗು]

**ಪಂಚಾಲ,** ಪಂಚಳ, ಪಂಚಾನ್ನ, ಪಂಚಾಳ (ನಾ). ೧. = ಪಂಚಕಾರುಕ ೧ : ಅವರು ಪಂಚಾಲವರ್ಗದ ಜನರು (ರೂಢಿ). **ಪಂಚಳ :**

೧. ಕಾಳಿಕ ಚಕ್ರವರ್ತಿ ಶ್ರಾಜವನು ಆಳುತಾಯಿರಲು ವಂದನ ವಂದು ದಿನದಲ್ಲಿ ಪಂಚಳಪರಬ್ರಹರದವರ ಕರಶಿ ಕಿರಿಟವನು ಮಡಿಯಂಬುದಗಿ ದೊರೆಯುವರು ಪ್ರಧಾನಿಯವರು ಹೇಳಿದರ್‍ರಿಂದ ಪಂಚಳವರುನು ಕೇಳಿ ದನು (ಎಕ. XVI, ಗುಬ್ಬಿ. ೬೯-೩; ?). **ಪಂಚಾನ: ೧.** ದ್ಯಾಮ್ಮೆಯ್ಯನ ಕಲ್ಲೆಯ ಪಂಚಾನದವರೂ ಕಂಮಾರ ರಂಗೈಯ್ಯ ಬಡಗಿ ಬಸವ ಅಕಸಾಲೆ ನಾರಣ್ಣೆಯ್ಯ (ಎಕ. XVI, ಚಿಕ್ಕನಾ. ೯೦-೩೯; 1802). **ಪಂಚಾಳ: ೧.** ಪಂಚಾಳ ಕುಲದಲ್ಲಿ ಒಬ್ಬ ಪತ್ತಾರನಿಗೆ ಒಂದು ಸನಗು ಮಾಡಿಕೊಡೆಂದು ಕೊಟ್ಟರೆ (ಪಚಸಂ. ೧೨೭-೧೦೭); ಕಂಚಿಯ ಫಲ ಲೇಸು ವಿಂಚು ಮುಗಿಲಿಗೆ ಲೇಸು . . . ಊರಿಂಗೆ ಪಂಚಾಳ ಲೇಸು (ಸರ್ವಜ್ಞ. ೧೧೩೮); ನನ್ನ ತಂದೆಯು ಕೈಕೆಳಗೆ ಥೋಮಸನು ಪಂಚಾಳನ ಉದ್ಯೋಗವನ್ನು ಅವಲಂಬಿಸಿಕೊಂಡು ಬೆಳೆದನು (ಬೆಂಜನ್. ೧೦). **೨.** ಅಕ್ಕಸಾಲೆ: ಕನಕವನು ಪಂಚಾಳನಿಗೆ ಕೊಡೆ ತುಣುಕು ತುಣುಕನು ಮಾಡಿ ಕಡಿದೇ ಜಿನಿಸುಜಿನಿಸಿನ ಒಡವೆ ಮಾಡಿದ (ಜ್ಞಾನಸಿಂ. ೬-೮). **೩.** ಶಿಲ್ಪಿ: ಪ್ರತಿಮೆಂತು ಯೋಗ್ಯಲ್ಲ ಬ್ರಹ್ಮ ಮಾಡಿಹವು ಪ್ರತಿಮೆಂತು ಯೋಗ್ಯ ಪಂಚಾಳನವು (ಚಿದಾಕೋ. ೭೩-೩). **೪.** ಬಡಗಿ: ಪಂಚಾಳರು ದಂಡಿಗೆ ಹತ್ತಿದ ಹಾಗೆ (ಗಾದೆ).

ಪಂಚಾಳಮಿಂಡಿಯ ವೆರ್ಗಡೆ = ಒಂದು ಬಿರುದು: ಶ್ರೀಮಂನ್ನು ಮಹಾಸಬಳ ಪಂಚಾಳಮಿಂಡಿಯವೆರ್ಗ್ಗಡೆ . . . ಶ್ರೀಮತು ಸೋಯಿದೇವರ್‍ಸರು (ಸೌಇಇ. IX-i, ೩೭೪-೫; 1265).

[<ಸಂ. ಪಾಂಚಾಲ./ಹಿಂ. ಪಂಚಾಲ; ಮರಾ. ಪಂಚಾಳ]

**ಪಂಚಾಲಿಕೆ** (ನಾ). ಬೊಂಬೆ; ಪುತ್ತಳಿ: ಸಿಂಗರದಿಂಗದಿರೆನೆ ಮಿಗೆ ಪಸದನದಿಂಗಡಲೆನೆ ಕೈಮಾಟವ[ದ]ಮಂಗಲ ಪಂಚಾವಿ[ಲಿ]ಕೆಯೆನೆ ಸಂಕಿಲೆ ಕಂಗೊಳಿಸಿದಳತಿಶಯಮಾಗಿ (ತ್ರಿಭುತಿ.೨೨-೬೦). 'ಪಾಂಚಾಲಿಕೆ' ಪರಾ. [ಸಂ. ಪಂಚಾಲಿಕಾ]

**ಪಂಚಾವಯವ** (ನಾ). **೧.** ಮಸ್ತಕ, ಮುಖ, ವಕ್ಷ, ಪೃಷ್ಠ ಮತ್ತು ಹೃದಯಗಳೆಂಬ ದೇಹದ ಐದು ಭಾಗಗಳು,—ಅಂಗಗಳು: ಪಂಚಬಾಣಂಗಳಿಗೆ ಲಕ್ಷ್ಯಸ್ಥಾನಮಾದ ಮಸ್ತಕ ಮುಖ ವಕ್ಷಸ್ಸು ಪೃಷ್ಠ ಹೃದಯುವೆಂಬ ಪಂಚಾವಯವಗಳಿಂ (ವಿವೇಕ. ೨೩೦). **೨.** [ವೀಶೈ] ಪರಮೇಶ್ವರನಿಗಿರುವ ಸತ್, ಚಿತ್, ಆನಂದ, ನಿತ್ಯ ಮತ್ತು ಪರಿಪೂರ್ಣಗಳೆಂಬ ಐದು ಧರ್ಮಗಳು: ಇವೆ ಕಣಾ ಪಂಚಾವಯವವೆಂಬುವಾದ್ಧರಿಂದವೆ ಕೇಳ್ದು ಪೇಳ್ದವು (ಮನೋವಿ. ೨-೪೪); ಬ್ರಹ್ಮಕ್ಕೆ ಸ್ಪಂದೆ, ನಾದ, ಕಳೆ, ರಸ, ಬಿಂದುವೆಂಬ ಪಂಚಾವಯವವಾಗಿರ್ಪುವು (ಮನೋವಿ. ೨-೪೪ ಟೀಕು). **೩.** [ನ್ಯಾಯ] ಪರಸ್ಪರಾಭಿಪ್ರಾಯುಗಳನ್ನು ಬೋಧಿಸಿ ಸಾಧಿಸುವ ನ್ಯಾಯ ವಾಕ್ಯದಲ್ಲಿ ಸೇರಿರುವ ಪ್ರತಿಜ್ಞಾ, ಹೇತು, ಉದಾಹರಣ, ಉಪನಯ ಮತ್ತು ನಿಗಮನಗಳೆಂಬ ಐದು ಚಿಕ್ಕವಾಕ್ಯಗಳು: ತಾರ್ಕಿಕರು ಪಂಚಾವಯವಗಳನ್ನು ಉಪಯೋಗಿಸುವರು. ಪ್ರತಿಜ್ಞಾ, ಹೇತು, ಉದಾಹರಣ, ಉಪನಯ, ನಿಗಮನವೆಂದು ಅವಕ್ಕೆ ಹೆಸರುಗಳು (ಹಿಂದಸಾ. ೧೪೨). [ಪಂಚ $_2$ + ಅವಯವ]

**ಪಂಚಾವರಣ** (ನಾ). **೧.** ಐದು ಸುತ್ತಿನ ಮರೆ,—ಆಚ್ಛಾದನೆ: ಖರಕಿರಣ ಮುಖ್ಯಗ್ರಹಂಗಳು ಗರುಡಕಿನ್ನರಸಿದ್ಧ ವಿದ್ಯಾಧರರು ಪಂಚಾವರಣರಾಗಿಯಲರ್ದು ಕೀರ್ತಿಸಲು (ಬಸವು. ೨೫-೪೬); ಹರಿ ಮುಖಾಮರ ಪರಿಚರರು ಪಂಚಾವರಣದಲಿವೆರಸಿ ಭಜಿಸುವ ಪಶುಗಳು (ಬಸವು. ೫೪-೧೮). **೨.** [ವೇದಾಂತ] ಐದು ಬಗೆಯ ಆವರಣಗಳು; ℙ "ಆವರಣ-೫: ಮಾಯೆ, ಅವಿದ್ಯೆ, ಭ್ರಾಂತಿ, ಅಜ್ಞಾನ, ಸಂವೃತಿ (ಹಿಂದಸಾ. ೩೦)" (ಶ್ರೀವತ್ಸ. ೫೭). [ಪಂಚ $_2$ + ಆವರಣ]

**ಪಂಚಾವಸ್ಥೆ** (ನಾ). ಐದು ಅವಸ್ಥೆಗಳು,—ಹಂತಗಳು; ℙ "ಅವಸ್ಥಾ—೫: (ಅ) ಆತ್ಮನ: ಅವಸ್ಥಾ—೪ (ಅ) + ಉನ್ಮನೀ ಅಥವಾ ತುರ್ಯಾತೀತ (ವಿಚಿಂ. ೧-೫೮). (ಆ) ಕಾಮದ: ಇಷು—೫ (ಆ). (ಇ) ಜೀವಿಗಳ: ಬದ್ಧ, ಕೇವಲ, ಮುಮುಕ್ಷು, ಮುಕ್ತ, ನಿತ್ಯ. (ಈ) ದ್ರವ್ಯದ: ರಸ, ಗುಣ, ವೀರ್ಯ, ವಿಪಾಕ, ಪ್ರಭಾವ (ವಿದ್ಯಾಕ. ೩೮). (ಉ) ಪಂಚಭೂತಗಳ: ನೋ. ಭೂತಗಳು—೫.(ಊ) ವಯೋಧರ್ಮದ: ಶೈಶವ, ಬಾಲ್ಯ, ಯೌವನ, ಪ್ರೌಢತ್ವ, ವಾರ್ಧಕ್ಯ(ಕಿ).(ಋ) ನಾಟ್ಯಶಾಸ್ತ್ರದ: ಆರಂಭ, ಯತ್ನ, ಪ್ರಾಪ್ತ್ಯಾಶೆ, ನಿಯತಾಪ್ತಿ, ಫಲಾಗಮ (ದಶರೂ. ೧೫). (ೠ) ಸಾಧಕನ: ಶ್ರವಣ, ವರಣ, ಸ್ಮರಣ, ಆಪನ, ಪ್ರಾಪನ (ವಿದ್ಯಾಕ. ೮೩). (ಎ) ಸ್ತ್ರೀಜೀವನದ: ಕನ್ಯಾ, ಭಗಿನೀ, ಪತ್ನೀ, ಮಾತಾ, ಮಾತಾಮಹಿ (ಪಿತಾಮಹಿ) (ಸಂಜ್ಞಾ. ೨೨; ಸಂ. ೭೪)." (ಶ್ರೀವತ್ಸ. ೪೨): ಮತ್ತಂ ಜಾಗರಣಂ ಸ್ವಪ್ನ ಸುಷುಪ್ತಿ ತೂರ್ಯ ತುರ್ಯಾತೀತಗಳೆಂಬವೇ ಪಂಚಾವಸ್ಥೆಗಳು (ಗಗತಾ. ೧-೪). 'ಪಂಚಾವಸ್ಥೆಗೆಡು' ಪರಾ.

[ಪಂಚ $_2$ + ಅವಸ್ಥೆ]

**ಪಂಚಾವಸ್ಥೆಗೆಡು** (ಕ್ರಿ). ಪಂಚಭೂತಾವಸ್ಥೆಯನ್ನು ಹರಡು,—ಪ್ರಸರಿಸು; ಪಂಚತ್ವವನ್ನುಂಟುಮಾಡು; ಮರಣವನ್ನುಂಟುಮಾಡು: ಪಾಂಚಾಳನುಮಂ ಪಂಚಾವಸ್ಥೆಗೆಡಿಲುಂ ಕರಂ ಚೆನ್ನೆಯರಾಗಿಯುಂ . . . ಬಲ್ಲವರಾಗಿ (ಶಾಂತಿಪು. ೮-೭೨ ವ).

[ಪಂಚಾವಸ್ಥೆ + ಕೆದಱು $_1$ (<ಕೆದಱ್ $_1$)]

**ಪಂಚಾಶ್ಚರ್ಯ** (ನಾ). [ಜೈನ] ಉತ್ತಮಪಾತ್ರಕ್ಕೆ ಆಹಾರದಾನ ಮಾಡಿದಾಗ ಉಂಟಾಗುವ ಐದು ಬಗೆಯ ಅತಿಮಾನುಷವಾದ ಸೋಜಿಗಗಳು; ℙ ದೇವದುಂದುಭಿ ಮೊಳಗುವುದು, ಹೂವಿನ ಮಳೆ ಕರೆಯುವುದು, ಚಿನ್ನದ ಮಳೆ ಸುರಿಯುವುದು, ಕಮ್ಮನೆಯ ಮೆಲುಗಾಳಿ ಬೀಸುವುದು ಮತ್ತು ದೇವತೆಗಳು ಪ್ರಶಂಸೆ ಮಾಡುವುದು ಎಂಬ ಐದು ಆಶ್ಚರ್ಯಗಳು: ಸುರತೂರ್ಯಧ್ವಾನಮೆಯ್ದೆ ಸೂಲರ ಸರಿ ಪೊದಟ್ಟುರ್ದ ರೈಧಾರೆ ದೇವೇಂದ್ರರಹೋದಾನಪ್ರಸಿದ್ಧ ಧ್ವನಿ ಸುರಭಿಸಮೀರಪ್ರಚಾರಂ ಜಗಕ್ಕಚ್ಚರಿ ಪಂಚಾಶ್ಚರ್ಯಮೆತ್ತಂ ನೆಗೞ್ (ಆದಿಪು. ೪-೯೮); ಐನೆಸೆದುದೊ ರೈವೃಷ್ಟಿ ಹಿಮಾನಿಲನಳಿಮಿಳಿತ ಕುಸುಮವರ್ಷಂ ಸುರಭೇರೀನಿನದಂ ದಿವಿಜರಹೋದಾನಶ್ರುತಿ ನೆಗೞ್ ನೆಗಟ್ದ ಪಂಚಾಶ್ಚರ್ಯಂ (ಪಂರಾಮಾ. ೯-೨); ಆ ರಾಜಭವನದೊಳ್ ವಸುಧಾರೆಯು ತಣ್ಣೆಲರ ಪುಷ್ಪವೃಷ್ಟಿಯು ಸುರಭೇರೀರವದ ಪೊಗಟ್ದ ದೇವರಹೋರಭಸದ ಪುದುವಿನಾಯ್ತು ಪಂಚಾಶ್ಚರ್ಯಂ (ಪುಷ್ಪಪು. ೧೪-೧೧). [ಪಂಚ $_2$ + ಆಶ್ಚರ್ಯ]

**ಪಂಚಾಸ್ತಿಕಾಯ** (ನಾ). **೧.** [ಜೈನ] ಬಹುದೇಶವ್ಯಾಪಿಯಾದ ಜೀವ, ಪುದ್ಗಲ, ಧರ್ಮ, ಅಧರ್ಮ ಮತ್ತು ಆಕಾಶಗಳೆಂಬ ಐದು ಪದಾರ್ಥಗಳು: ಜೀವಾಜೀವ . . . ಪಂಚಾಸ್ತಿಕಾಯ ಷಡ್ದ್ರವ್ಯಂಗಳು ಮೊಂಬಿವಜಿಳಾದಮಾನುಮಟಾತಮುಂ . . . ಗುಣಂಗಳುಮನಱಿದು (ವಡ್ಡಾರಾ. ೬-೧೯); ಷಡ್ದ್ರವ್ಯಮೆನಿಕುಮವೆ ಮತ್ತಂ ಕಾಲಮುದಿಲ್ಲದಂದು ಪರಮಾಗಮದೊಳ್ ಪಂಚಾಸ್ತಿಕಾಯಮೆನಿಕುಮಮೋಘಂ (ಚಂದ್ರಪು. ೧೬-೨೦); ಭೂತಹಿತಜಿನರ್ . . . ಅವರ್ ಸದ್ಧರ್ಮ ಸ್ವರೂಪಮಂ . . . ಪಂಚಾಸ್ತಿಕಾಯ ಷಡ್ದ್ರವ್ಯ ಸಪ್ತ ತತ್ತ್ವ ನವಪದಾರ್ಥ ಸ ರೂಪಮಂ ನಿರೂಪಿಸುವುದುಂ (ಪುಷ್ಪಪು. ೯-೬ ವ). 'ಅಸ್ತಿಕಾಯ' ಪರಾ. **೨.** ಕುಂದಕುಂದಾಚಾರ್ಯರ ಗ್ರಂಥದ ಹೆಸರು.

[ಪಂಚ $_2$ + ಅಸ್ತಿಕಾಯ]

**ಪಂಚಾಸ್ತ್ರ** (ನಾ). ಪಂಚಾಯುಧ; ಮನ್ಮಥ : ಪಂಚಾಸ್ತ್ರಹೃದ್ಭೀಕರೀ . . . ಮಹಾಸುಖಕರೀ ಪಂಚಾಕ್ಷರೀ ಪಾತುವಃ (ರಾಜಶೇ. ೪–೧೦೩). [ಪಂಚ$_2$ + ಅಸ್ತ್ರ]

**ಪಂಚಾಸ್ಯ** (ನಾ). ಸಿಂಹ; ಪಂಚಾನನ : ವೈರಿಭೂಭೃನ್ಮದವನ್ಮಾತಂಗಕುಂಭಸ್ಥಳದಳನ[ಖ]ರೋಗ್ರಾಸಿ ಪಂಚಾಸ್ಯಧೈರ್ಯಂ . . . ಹರಿಗನಿರೆ ಬಿಗುರ್ತಾಂಪನಂತಾವಗಂಡಂ (ಪಂಪಭಾ. ೬–೭೭); ಸಮಸ್ತರಿಪುನೃಪಕುಂಭಿಕುಂಭದಳನ ಪಞ್ಚಾಸ್ಯ ಸಮುದಿತ ಶ್ರೀಮ×××ಳವಿಮುಕ್ತ ಚೋಳಭೂಪಾಳ (ಎಕ. III, ಮಂಡ್ಯ. ೭೮–೧; 1022); ಹರಿಶ್ಚಂದ್ರಭೂವರನಾಪುರಕ್ಕೊಡೆಯನರಿಶರಧಿವಡಬನಾರಾತಿಗಜಪಂಚಾಸ್ಯನು (ಹಚಕಾ. ೧–೪೦); ಕುರುಕುಲಗಜಕೆ ಪಂಚಾಸ್ಯ ಚೀಯ ಬಿನ್ನಹ . . . ಅಖಿಳಕೌರವರಾಯದಳವನು ಗೆಲಿದು ಉತ್ತರ ತುಱುವ ಮರಳಿಚಿದ (ಕುಮ್ಮಾವಿ. ೯–೮). [ಪಂಚ$_3$ + ಆಸ್ಯ]

**ಪಂಚಾಸ್ಯವಾಹಿನಿ** (ನಾ). ಸಿಂಹವನ್ನು ವಾಹನವಾಗಿ ಉಳ್ಳವಳು; ಸಿಂಹವಾಹಿನಿ; ದುರ್ಗೆ; ಚಾಮುಂಡಿ : ಪಂಚಾಸ್ಯವಾಹಿನಿಯು ವಾಮಪಾರ್ಶ್ವದಿಯುಮರಧುನಿಯುಂಡುಪವೌಳಿ ಮೃಡನೇ (ನಪಮೋ. ೧–೭). [ಸಂ. ಪಂಚಾಸ್ಯವಾಹಿನೀ]

**ಪಂಚಾಸ್ರವ** (ನಾ). ಐದು ಬಗೆಯ ಆಸ್ರವಗಳು : ಚಾರಿತ್ರವಂತನೆಂಬೊಂ . . . ನಿರುದ್ಧ ಪಂಚಾಸ್ರವನುಂ ಷಟ್ಕಷಾಯ ಸಂಯುತನುಂ . . . ರತ್ನಭೂಷಣನುಮಕ್ಕುಂ (ಚಾವುಂಪು. ೬). ❡ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷವೆಂಬ ಜೈನ ಸಿದ್ಧಾಂತದಲ್ಲಿ ಹೇಳಿರುವ ಸಪ್ತತತ್ತ್ವಗಳಲ್ಲಿ ಆಸ್ರವವು ಮೂರನೆಯದು. ಜೀವನಿಗೆ ಶುಭಾಶುಭರೂಪವಾದ ಕರ್ಮವನ್ನು ಗಂಟುಹಾಕುವುದೇ ಆಸ್ರವ. ಒಟ್ಟಿನಲ್ಲಿ ಮನಸ್ಸು, ವಚನ, ಕಾಯಗಳ ಕ್ರಿಯೆಯೇ ಆಸ್ರವವೆನಿಸುವುದು. ಇದರಲ್ಲಿ ಅನೇಕ ಭೇದಗಳಿವೆ. ಮುಖ್ಯವಾಗಿ ಇಂದ್ರಿಯ, ಕಷಾಯ, ಅವ್ರತ, ಕ್ರಿಯೆಗಳ ಮೂಲಕ ಉಂಟಾಗುವ ಆಸ್ರವಗಳು ಒಟ್ಟು ಸೇರಿದರೆ ಇಂದ್ರಿಯ ಸಂಬಂಧದಿಂದ ೫, ಕಷಾಯದಿಂದ ೪, ಅವ್ರತದಿಂದ ೫, ಕ್ರಿಯೆಯಿಂದ ೨೫—ಹೀಗೆ ಒಟ್ಟು ೩೯ ಭೇದಗಳಾಗುತ್ತವೆ. ಆದರೂ 'ಚಾವುಂಪು.' ಪ್ರಯೋಗದಲ್ಲಿ ಪಂಚಾಸ್ರವವೆಂದು ಮೊದಲನೆಯದಾದ ಇಂದ್ರಿಯಗಳ ಸಂಬಂಧದ ಐದು ಆಸ್ರವಗಳನ್ನು ಮಾತ್ರ ಮುಖ್ಯವಾಗಿ ಪರಿಗಣಿಸಿ ಹೇಳಿದೆ. [ಪಂಚ$_2$ + ಆಸ್ರವ]

**ಪಂಚಾಹಿಕಜ್ವರ** (ನಾ). ಐದು ದಿನಕ್ಕೊಮ್ಮೆ ಬರುವ ಜ್ವರ : ಕಳ್ಳಂಗಡಲೆ, ಬೋಳಂಗಡಲೆ . . . ಇವುಗಳನ್ನು ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಪಂಚಾಹಿಕಜ್ವರ ಗುಣಮಕ್ಕುಂ (ಸಕವೈ. ೧೦೬). [ಪಂಚ$_2$+ಆಹಿಕ+ಜ್ವರ]

**ಪಂಚಾಳ** 'ಪಂಚಾಲ' ನೋ.

**ಪಂಚಾಳವಳಕೆ** (ನಾ). ಪಂಚಾಳರು ಕೊಡಬೇಕಾದ ತೆರಿಗೆ : ಮನೆದೆಱೆ ಮಗ್ಗದೆಱೆರ×××ದೆಱೆ ಪಂಚಾಳವಳಕೆ ಕಟುಗೂಳು . . . ಕಾಣಿಕೆ ಕಿರುಕುಳ ಏನು ಹದಿಕೆಗಳನೂ ಮುಂದೆ ಹುಟುವ (ಎಕ. IX(೩), ಬೆಂಗಳೂ. ೧೬೯–೨; 1329). [ಪಂಚಾಳ (<ಪಂಚಾಲ)+ಬಳಕೆ (<ಬಟಕೆ)]

**ಪಂಚಾಳಿ$_1$** (ನಾ). ಬಹಳ ಮಾತನಾಡುವವಳು: "ಮಾತುಗಂಟೆ" (ಜಾನಕೋ. ೧೪). [←ತುಳು. ಪಂಚಾಳಿ. / ಮರಾ. ಪಚಾಲ, ಪಚಾಳ]

**ಪಂಚಾಳಿ$_2$** (ನಾ). ಒಂದು ಬಗೆಯ ವಾದ್ಯ : ಕಂಚಿನ ಚೌಡುಕಿ ಮಿಂಚುವ ಜಾಂಗೂಟ ಪಂಚಾಳಿ ಕೋಟ ಶಬುದವ ಎಲ್ಲವ್ವ ಕೆಂಚಿ ಜೋಗಾಡ ಬಂದಾಳ (ಕನ್ನಜಾ. ೧೩). [ ? ]

**ಪಂಚಿ$_1$**, ಹಂಚಿ$_2$ (ನಾ). ಪಗಡೆ ಆಟದಲ್ಲಿ ಐದರ ಗರ : ಬೇಡ ಚೌಕದ ಮಾತು ನಿನಗೆಂದು . . . ಪಂಚೇಂದ್ರಿಯಕೆ ಲಿಂಗಪ್ರಸಾದವನು ಕೂಡಿ ಪಂಚಿಕ್ಕುವ ಕೆಱದೊಳನುಗೂಡಿ ಪಂಚಿಯನಿಕ್ಕಿ ಗುರ್ಜರನಾಡುವನು ತಾಂ ಚೌಕದುಗವಂ ಚೌಕದುಗಕಿಕ್ಕಿ (ಬಸಪು. ೪೩–೬); ಪಂಚಿ[ಚಿ]ಯಿದ್ದಾಗ ಚೌಕ ದುಗ ನಟ್ಟಿ . . . ಈರೈದಿನಿತುಮಂ ಬೇಗದಿಂ ಹಾಯಿಕು (ಕುಮುರಾ. ೧೩–೫೯); ತಡೆಯದೆ ಪಂಚಿಟ್ಟಾಡುವ ಪಂಚಿಯ ಕಡುಪಿಂ ನಾಲ್ಕುಂ ಕರಣದ ಜೀವದ ಕಡೆಯೊಳ್ ಶಂಕರನಂ ನಿಲಿಸುತ್ತಾಡುವ ಚೌಹಂಚಿಯನು (ಉದ್ಭಟದೇ. ೩–೧೨). **ಹಂಚಿ$_2$** : ವನಿತೆ ಮೆಚ್ಚುಗು ಹಂಚಿಹಾಯ್ಕಿದಡೆನುತ ಚೌಹಂಚಿಯನೊಸೆದು ತಾನನಘನಾಡುವನೀ ಪರಿಯ ನೆತ್ತವನಿಳೆಯೊಳು (ಬಸಪು. ೪೩–೮). [<ಪಂಚ$_2$ ?]

**ಪಂಚಿ$_2$** (ನಾ). ಹರಟೆ; ವ್ಯರ್ಥವಾದ ಮಾತು : ಇರ್ಲಿ ಹೋಗು. ಇಲ್ಲದ್ದೆ ಪಂಚಿ ಉಚ್ಚಬೇಡ (ನಡೆದಾ. I, ೨೬೦). [←ಮರಾ. ಪಂಚೀ = ವಿಸ್ತೃತ ಭಾಷಣ]

**ಪಂಚಿ$_3$** (ನಾ). ಕರುಳು (?) : ಎಕ್ಕಲಂ ಪುಯ್ದು ಪಂಚಿಯಿದೆ ಪುಲಿ ಮಿಗವನಗಿದುಗಿದ ಪಿಶಿತವಿದೆ (ಏಕೋಪು. ೧೦–೩೪). 'ಪಚ್ಚಿ$_1$' ಪರಾ. [<ಪಚ್ಚಿ$_1$ ?]

**ಪಂಚಿಕರಣ** (ನಾ). = ಪಂಚೀಕರಣ$_1$ **೨.** : ಪಂಚಿಕರಣವನಿಂತು ವಿವರದಿ . . . ಪೇಳಿದೆನು ತಿಳಿಯೈಯೆಂದ ಸಾಂಬಶಿವ (ಜ್ಞಾನಸಿಂ. ೪–೧೧೯). [<ಸಂ. ಪಂಚೀಕರಣ]

**ಪಂಚಿಕೆ** (ನಾ). = ಪಂಜಿಕೆ **೨** : ಆಕೃತಿಗೆ ಪಂಚಿಕೆವೇಟ್ಪುದದರ್ಕೆ ಟಿಪ್ಪಣಂಬೇಟ್ಪುದು ಟೀಕುವೇಟ್ಪುದೆನೆ ಪೇಟ್ದವನುಂ ಕವಿಯೆಂಬ ಲೆಕ್ಕಮೇ (ಕಾವ್ಯಾವ. ೨೯೯); ಮನುಚರಿತಕ್ಕೆ ವೃತ್ತಿ ನೃಪನೀತಿಗೆ ಪಂಚಿಕೆ ಲೌಕಿಕಪ್ರವರ್ತನೆಗಳ ವಾರ್ತಿಕಂ . . . ಎಂದೊಡಾ ಜನಪತಿ ರತ್ನಶೇಖರನ ರಾಜಗುಣಂ ಬುಧಸೇವ್ಯಮೆನ್ನಿರೇ (ಅನಂಪು. ೩–೨೧); ನಿನ್ನ ಪದ್ಯಕ್ಕೆ ಸದ್ಯಕ್ಕೆ ಟೀಕು ಟಿಪ್ಪಣಿ ಪಂಚಿಕೆ ಎಲ್ಲವೂ ಬೇಕು (ಸಾಹಿವಿ. ೭೦). [ಸಂ. ಪಂಚಿಕಾ]

**ಪಂಚೀಕರಣ$_1$** (ನಾ). **೧.** ಐದನ್ನಾಗಿ ಮಾಡುವುದು; ಐದೈದನ್ನು ಕೂಡಿಸುವುದು. **೨.** [ವೇದಾಂತ] ಸೂಕ್ಷ್ಮವಾದ ಆಕಾಶ ಮೊದಲಾದ ತನ್ಮಾತ್ರಗಳನ್ನು ಐದೈದರ ಬೆರಕೆಯಿಂದ ಸ್ಥೂಲವನ್ನಾಗಿ ಮಾಡುವುದು; ಪ್ರತ್ಯೇಕವಾದ ಸೂಕ್ಷ್ಮಭೂತಗಳಲ್ಲಿ ಪಂಚಭೂತಗಳ ಅಂಶವನ್ನೂ ಸೇರಿಸಿ ಸ್ಥೂಲಭೂತವನ್ನಾಗಿ ಮಾಡುವುದು : ಆ ಪಂಚಭೂತಂಗಳೇ ಪಂಚೀಕರಣವನೆಯ್ದಿ ಆತ್ಮಂಗೆ ಅಂಗವಾಯಿತ್ತು (ಮಹಾದೇ. ಬ. ೧೦೩–೨೩೫); ಮಗನೆ ಪಂಚೀಕರಣ ಭಾಗದ ಬಗೆಯ ನಿರ್ಣೈಸಿದೆನು (ಗಗತಾ. ೭ ಸೂಚನೆ); ಪಂಚೀಕರಣವೆಂದರೆ ಒಂದು ಭೂತದ ಅರ್ಧಭಾಗವೂ ಇತರ ಭೂತಗಳ ಅಂಶಗಳಾದ ಅರ್ಧಭಾಗವೂ ಸೇರಿ, ಶುದ್ಧ ಚಿನ್ನ ತಾಮ್ರದೊಡನೆ ಸೇರಿ ಕೆಲಸಕ್ಕೆ ಉಪಯೋಗವಾಗುವಂತೆ, ಬ್ರಹ್ಮಾಂಡಸೃಷ್ಟಿಗೆ ಉಪಯೋಗವಾಗಿರುವುದು (ಹಿಂದಸಾ. ೧೯೬). **೩.** [ವೀಶೈ] ಮಿಶ್ರಾರ್ಪಣ, ಷಟ್ಸ್ಥಲ, ಅಷ್ಟಾವರಣ, ಲಿಂಗ ಮತ್ತು ಅಂಗ ಸಾಮರಸ್ಯ ಇವುಗಳ ಸಮೀಕರಣ : ಮಿಶ್ರಾರ್ಪಣ, ಷಟ್‌ಸ್ಥಲ, ಅಷ್ಟಾವರಣ, ಲಿಂಗಾಂಗಸಾಮರಸ್ಯ ಇವು ಸೇರಿದರೆ ಪಂಚೀಕರಣಗಳು (ಶರಸಾ. ೨೪–೭). [ಸಂ.]

**ಪಂಚೀಕರಣ$_2$** (ನಾ). ವಿಸ್ತಾರಗೊಳಿಸುವಿಕೆ; ದೊಡ್ಡದು ಮಾಡುವಿಕೆ : 'ಪಂಚೀಕರಿಸು$_2$' ಪರಾ. [ಸಂ.]

**ಪಂಚೀಕರಿಸು$_1$** (ಕ್ರಿ). [ವೀಶೈ] ಪಂಚೀಕರಣಮಾಡು: ಸದ್ಯೋಜಾತಾದಿಪಂಚಾನನದೆ ಪಡೆದು ಮಹದಾದಿಭೂತಂಗಳಂ ತಳ್ತು ದ್ಯೋಗಂಬೆತ್ತು ಪಂಚೀಕರಿಸಿ ಬೆರಸುತಯ್ದುಯ್ದು ಭೂತಂಗಳಿಂದಂ (ಶಬಶಂ. ೫–೩೧);

ಅನಂತರದಲ್ಲಿ ಪೂರ್ವೋಕ್ತಮಾದ ಪಂಚಭೂತಂಗಳ ಪಂಚೀಕರಿಸುವ ಕ್ರಮವೆಂತೆಂದರೆ ಒಂದೊಂದು ಭೂತವನ್ನು ಯೆರಡೆರಡು ಭಾಗವಂ ಮಾಡಿ ಅರ್ಧಾಂಶದಲ್ಲಿ ನಾಲ್ಕು ನಾಲ್ಕು ಭಾಗೆಯುಂ ಮಾಡಿ (ನಾನಾಗು.೧೧-೧೬). [ಪಂಚೀಕರಣ$_1$ + –ಇಸು$_3$]

**ಪಂಚೀಕರಿಸು$_2$** (ಕ್ರಿ). ವಿಸ್ತಾರವಾಗು ; ದೊಡ್ಡದಾಗು : ಮತ್ತಾ ಕಲಲವೈದುದಿನಕ್ಕೆ ಬಬ್ಬುಳಿಕೆಯಹುದು . . . ಇಪ್ಪತ್ತೈದು ದಿನಕ್ಕಲ್ಲಿ ಪಂಚೀಕರಿಸಿ ಮೈದೋರ್ಪುದು[ಪಾ:ವಾಂ.ಪಂಚಾಂಕುರಸೀಮೆ ದೋರ್ಪುದು] (ವಿವೇಕ. ೩೧೫). [ಪಂಚೀಕರಣ$_2$ + –ಇಸು$_3$]

**ಪಂಚೀಕೃತ** (ಗು). ೧. ಐದು ಭಾಗವಾದ ; ಪಂಚೀಕರಣವನ್ನು ಹೊಂದಿದ : ಮತ್ತಂ ವಾಯ್ವಂಶಮರ್ಧಮುಂ ಮಿಕ್ಕ ನಾಲ್ಕುಂ ಭೂತಂಗಳಷ್ಟಮಾಂಶಂಗಳ್ ನಾಲ್ಕುಂ ಕೂಡಿ ಪಂಚೀಕೃತವಾಯು ವೆನಿಕ್ಕುಂ (ಚಿಕಬ. ೨೬) ; ಈ ಪಂಚೀಕೃತ ಭೂತ ಸಮುದ್ಭವರೋಗಂ ಗಳಾದರೋ ಲವಲವಿಕೆಯಂ ಅನ್ಯಥಾಜ್ಞಾನಮಂ ಸರ್ವತ್ರಾನವಸ್ಥಿತಿಯಂ ಕೊಡುವವು (ಬಾಹಟೀ. ೧-೧ ಪ) ; ಪಂಚೀಕೃತ ಪಂಚಭೂತಗಳಿಂದ ಬ್ರಹ್ಮಾಂಡವೂ ಜರಾಯುಜ, ಅಂಡಜ, ಸ್ವೇದಜ, ಉದ್ಭಿಜಗಳೆಂಬ ನಾಲ್ಕುವಿಧ ಸ್ಥೂಲಶರೀರಗಳೂ ಅವರವರ ಕರ್ಮಾಧೀನವಾಗಿ ಬರುವುವು (ಹಿಂದಸಾ. ೧೯೬). (ನಾ). ೨. ಐದು ಭಾಗವನ್ನು ಹೊಂದಿರುವುದು : ಪಂಚತತ್ತ್ವವೇ ಪಂಚವದನನಾಗಿ ಆ ಪಂಚವದನನೇ ಪಂಚೀಕೃತವನೆಯ್ದಿ ಜಗದಾದಿ ಸೃಷ್ಟಿಯನನುಮಾಡುವುದಕ್ಕೆ ಕರ್ತನಾದ ನಮ್ಮ ಬಸವಯ್ಯನು (ಸೀಲವ. ೪. ೫-೯) ; ಪಂಚಭೂತಂಗಳು ಪಂಚೀಕೃತವಾಗಿ ವಂದೊಂದು ಭೂತಕ್ಕೆ ಐದು ಐದರ ಲೆಕ್ಕದಿಂದ ಇಪ್ಪತ್ತೈದು ತತ್ವಗಳುಂ ಪುಟ್ಟಿದವು (ತತ್ವಚಿಂ. ೧-೩). [ಸಂ.]

**ಪಂಚೀಕೃತಿ** (ನಾ). = ಪಂಚೀಕರಣ ೧ : ಸಂಚಲವಿಲ್ಲದೆ ನಿರೀಕ್ಷಿಸಲು ಪಂಚ ಪಂಚೀಕೃತಿಯ ಪ್ರಪಂಚ ಪರಿಹಾರವಾಗಿ ನಿಷ್ಪ್ರಪಂಚ ನಿರ್ಲೇಪಕನಾದೆನು ಕಾಣಾ (ಸಿದ್ಧೇಪ. ೩೩-೮೫) ; ಪಂಚಭೂತಗಳ ಪಂಚಾಕ್ಷರಿಯ ಪಂಚೀಕೃತಿಯ ಸಂಚಲ ತಿಳಿದು ಉಳಿದಿರ್ದರಿರವು ಪ್ರಪಂಚಿಗಳು ಬಯಸಲಹುದೇನು (ಗುರುಬೋ.೧-೫೨). [ಸಂ.]

**ಪಂಚು$_1$** 'ಪಸು$_1$' ನೋ.

△ **ಪಂಚು$_2$** 'ಹೆಂಚು$_2$' ನೋ.

**ಪಂಚು$_3$** (ನಾ). ಕಾಗದ ಮೊದಲಾದುವುಗಳಲ್ಲಿ ತೂತು ಕೊರೆಯುವ ಸಾಧನ : ಈ ಪಿಸ್ಟನ್‌ಗಳು ಪಂಚುಗಳಿರುವ ಪಂಚುಬಾರುಗಳನ್ನು ಮೇಲಕ್ಕೆತ್ತಿ ಕಾಗದದಲ್ಲಿ ಎರಡು ಅಥವಾ ಮೂರು ರಂಧ್ರಗಳನ್ನು ಮಾಡುತ್ತವೆ (ಕವಿಕೋ. I, ೧೯೪) ; ನಮ್ಮ ಕಚೇರಿಗಳಲ್ಲಿ ಕಾಗದಪತ್ರಗಳನ್ನು ಕಡತಗಳಲ್ಲಿ ಅಚ್ಚುಕಟ್ಟಾಗಿ ಇಡುವುದಕ್ಕೆ ಪಂಚುಗಳು ಇರುವುದರಿಂದ ಎಷ್ಟೋ ಸಹಾಯವಾಗಿದೆ (ರೂಢಿ). [←ಇಂ. Punch]

**ಪಂಚುಗೆ** 'ಪಸುಗೆ' ನೋ.

**ಪಂಚುಗೆಗೊಳ್** 'ಪಸುಗೆಗೊಳ್' ನೋ.

**ಪಂಚೆ,** ಪಂಚ$_1$, ಪಂಜಿ$_1$, ಪಂಜೆ$_1$ (ನಾ). ಗಂಡಸರು ಉಡುವ ಹಾಗೂ ಹೊದೆಯುವ ಬಟ್ಟೆ: "ಪಂಚೆಯೆಂದಜುವ" (ಕಬ್ಬಿಕೈ.೫೩); "ಪಂಚೆಯೆನೆ ವಸ್ತ್ರಮಕ್ಕುಂ" (ಕಶರ. ೬೦) ; ರಂಗಣ್ಣ ಸರಿಗೆಯ ಪಂಚೆಯನ್ನು ಉಟ್ಟುಕೊಂಡು . . . ಪೇಟೆಯ ಕಡೆಗೆ ಹೊರಟಿದ್ದಾನೆ (ರಂಗಳ. ೨) ; ಬಾಳಾಜಿಯು ಒಂದು ಪಂಚೆಯನ್ನು ಉಟ್ಟು . . . ಕುರ್ಚಿಯ ಮೇಲೆ ಕುಳಿತಿದ್ದಾನೆ (ಕಿಂಟಿರ. ೧). **ಪಂಚ$_1$ :** ನಿಮ್ಮ ಹೆಗಲ ಮೇಲಿನ ಪಂಚವನ್ನು ಅಲ್ಲಿ ಹಾಸಿರಿ . . . ಅತಿಥಿ ತುಟಿ ಬಿಚ್ಚದೆ ಪಂಚವನ್ನು ಹಾಸಿದನು (ಕಂಬಹು. ೫೩). **ಪಂಜಿ$_1$ :** ತಲೆಗೆ ಪಂಜೀ ಸುತ್ತಿಕೊಂಡು (ಮುಂಬಯಿ. ೪-೧೬೫) ; ವೆಂಕಟಿರಮಣ . . . ಉಟ್ಟ ಪಂಜಿಯ ತುದಿಯಿಂದ ಬಾಯಿ ಒರಸಿಕೊಂಡ (ಮೂರುದಾ. ೧೮೩). **ಪಂಜೆ$_1$ :** ಗಂಡಸರು ಪಂಜೆ ಉಡುವರು (ಕಭಾಗ. ೮೩) ; ಉದ್ದವೂ ಅಗಲವೂ ಕಡಿಮೆಯಾಗಿ ಉರುಟುನೂಲು ಇದ್ದರೆ ಅವುಗಳಿಗೆ ಪಂಜೆಗಳೆನ್ನುತ್ತಾರೆ (ಮುಂಬಯಿ. ೩-೧೦೦) ; ಯಾರೊಡನೆಯೂ ಮಾತನಾಡದೆ ಪಂಜೆ ತೆಗೆದುಕೊಂಡು ಗೋವುತಿಯ ಕಡೆಗೆ ಹೊರಟರು (ಪ್ರೇಮಾಶ್ರ. ೧೮೫) ; ಕೆಳಗಿಟ್ಟ ಒದ್ದೆಯಾಗಿದ್ದ ಪಂಜೆಯನ್ನು ತಲೆಯ ಮೇಲೆ ಹೊತ್ತುಕೊಂಡರು (ಹೊಸಕ್ಕಿ. ೧೮೯).

[ದೇ.॥ತಮಿ. ಪಞ್ಚ = ಬಿಳಿಯ ಬಟ್ಟೆ, ಪಞ್ಚು = ಬಟ್ಟೆ ; ತೆಲು. ಪಂಚೆ = ಉಡುವ ಬಟ್ಟೆ./ಮರಾ. ಪಂಚಾ = ತುಂಡು ಧೋತ್ರ]

**ಪಂಚೇಂದ್ರಿಯ** (ನಾ). ೧. ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮಗಳೆಂಬ ಐದು ಬಾಹ್ಯೇಂದ್ರಿಯಗಳು : ಪಂಚೇಂದ್ರಿಯಗಳೊಳಗೆ ಒಂದಕ್ಕೆ ಪ್ರಿಯನಾದರೆ ಸಾಲದೆ (ಮಹಾದೇ. ಬ. ೫೨-೧೨೬) ; ಅರಿಷಡ್ವರ್ಗಮಂ ಬಿಟ್ಟು ಪಂಚೇಂದ್ರಿಯಮಂ ಒಟ್ಟೈಸಿ . . . ತಾಪತ್ರಯಮೆನ್ನೊಳ್ ಪಿಂಗಲಾಂ ದ್ವಂದ್ವಮನುಱಿದೆನಗಾದ್ವೈಕ್ಯದಿಂದೊಂದಿ ನಿಲ್ವೆಂ (ಜಗವಿ. ೯-೫೩) ; ಕೂಡಿರ್ದ ಪಂಚೇಂದ್ರಿಯಗಳೊಳು ನಾಲ್ಕಧಮವೊಂದಧಿಕವೇ ಎಂದರು (ಹಚಕಾ. ೭-೧೯) ; ಪಂಚೇಂದ್ರಿಯವಿಷಯವ್ಯಾಪಾರದಲ್ಲಿ ಲಂಪಟರಾದ ಮನುಜರು ಕೆಟ್ಟ ಕೇಡನೇನೆಂಬೆನಯ್ಯಾ (ಅಖಂಡೇ. ೭-೪). ೨. ಐದು ಇಂದ್ರಿಯಗಳನ್ನು ಉಳ್ಳ ಜೀವ : ಸ್ಪರ್ಶನ ರಸನ ಘ್ರಾಣ ಚಕ್ಷು ಶ್ರೋತ್ರೇಂದ್ರಿಯ ಸಮೇತಂಗಳಪ್ಪ ಮನುಷ್ಯಾದಿ ಪಂಚೇಂದ್ರಿಯಂಗಳುಮೆಂದಿಂತು ತ್ರಸಜೀವಂಗಳ್ ಚತುರ್ವಿಧಮಕ್ಕುಂ (ಆದಿಪು.೧೦-೬೩ ಪ) ; ಮನುಷ್ಯಂ ಮೊದಲಾದ ಪಂಚೇಂದ್ರಿಯಂಗಳ್ಗಂ (ತಪೂಪ್ರ. ೪೩). [ಪಂಚ$_2$ + ಇಂದ್ರಿಯ]

**ಪಂಚೇರು** (ನಾ). ಐದು ಸೇರಿನ ತೂಕ ; ಐದು ಸೇರು : ಬಸವಶೆಟ್ಟಿ . . . ಹಸುಬೆಯ ಶೋಧನೆಯಂ ಕೊಟ್ಟು ಐದು ಪಂಚೇರು ತೂಕವಂ ಒಪ್ಪಿಸಿ ಒಳಯಿಂಕೆ ಬಿಡಿಸಿಕೊಂಡು ಬಂದು ಕೇರಿಕೇರಿಯೊಳು ಗಂದಿಗೆ ಮಸಾಲೆದ್ರವ್ಯಗಳಂ ಮಾರುತಿರ್ದಪನು (ಶರಲೀ. ೧೯೧-೩ ಪ) ; ಪಕ್ಕಾ ಸೇರುಗಳಿಗೂ ಕಚ್ಚಾ ಸೇರುಗಳಿಗೂ ಕಚ್ಚಾ ಸೇರು, ಪಂಚೇರು, ಧಡೆಯ, ಮಣ ಮುಂತಾದುವುಗಳಿಂದ . . . ವ್ಯಾಪಾರ ಮಾಡುವಂತೆ ಕಟ್ಟಳೆ ಮಾಡಿಸಿದರು (ಚಾಮುವಂ. ೧೯೯). [ಪಂಚ$_2$ + ಸೇರು$_2$]

**ಪಂಚೇಷು** (ನಾ). ೧. ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲವೆಂಬ ಐದು ಬಗೆಯ ಹೂವಿನ ಬಾಣಗಳು : ಪಂಚೇಷುವಿಂದಂತಗೆವುಗಿಲವೊಲಪ್ಪಂತು ಕಂದರ್ಪನೆಚ್ಚೆಚ್ಚೆಂತುಂ . . . ಕೋದಂಡದಿಂ ಪೊಯ್ದು (ಸಂರಾಮಾ. ೯-೮೪). ೨. ಐದು ಬಗೆಯ ಬಾಣಗಳುಳ್ಳವನು ; ಪಂಚಬಾಣ ; ಮನ್ಮಥ : "ಪ್ರದ್ಯುಮ್ನಃ, ಮಕರಧ್ವಜಃ . . . ಪಂಚೇಷುಃ . . . ಮನೋಭವಃ —ಈ ೨೮ ಕಾಮು(ದೇವ)ನ ಪೆಸರ್" (ಹಲಾಯು. ೭-೩೩) ; ಸೀಂಚರಮದೇಹಧರನ್ನೆ ಪಂಚೇಷುವನಿಕ್ಕಿ ಗೆಲ್ದು ಪಂಚೇಂದ್ರಿಯಮಂ . . . ಪಡೆಯ ಪಂಚಮಗತಿಯಂ (ಅಜಿಪು. ೬-೭೨) ; ಕಾಮಾತುರವ್ರಾತಮಂ ಮೆಲ್ಲೆಲರಿಂ ಪಂಚೇಷು ಗೆಲ್ಲಂಬಡೆವಿನಮೆಸೆಗುಂ (ಜಗವಿ. ೨-೩೩) ; ವಿಜಿತಪಂಚೇಷುವೆನಲ್ . . . ಒರ್ವನುದಂಚಿತರಾಗಡೆ ಸೌರಾಷ್ಟ್ರಪುರಕ್ಕೆಳ್ದುದು (ಉದ್ಭದೇ. ೩-೨೩). [ಪಂಚ$_2$ + ಇಷು]

**ಪಂಚೊಡೆ** (ಕ್ರಿ). ಚೆದರು ; ಚೆಲ್ಲಾಪಿಲ್ಲಿಯಾಗು : ಹೊರಗಡೆಯಲ್ಲಿ ಜನಜಾತ್ರೆ ಪಂಚೊಡೆಯುತ್ತಿದ್ದಂತೆ ಜಯಘೋಷಧ್ವನಿಯೂ ಸಣ್ಣದಾಗುತ್ತಿರಲು ರಾಘವಾಂಕನು . . . ನಮಸ್ಕಾರ ಮಾಡಿ ನಿಲ್ಲುವನು (ತುಂಗಭ. ೪೧). [ಪಂಚು$_1$(<ಪಸು$_1$) + ಒಡೆ$_1$]

**ಪಂಚೋಟಿಮರ** (ನಾ). ಒಂದು ಬಗೆಯ ಮರ : ಪಂಚೋಟಿಮರ, ಹಡಸಾಲೆ, ಹಲುಸಲ್ಲೆ, ಪಲುಚೊಟ್ಟಿ, ನಾಟಿಗಟ್ಟಿಪರ್ಜ (ಮೈಶಾಗಿ. ೫೯–೧೧೮೪). [ಪಂಚೋಟಿ$_0$ + ಮರ$_1$]

**ಪಂಚೋಪಚಾರ** (ನಾ). ೧. ಉಪಾಸ್ಯದೇವತೆಗೆ ಸಲ್ಲಿಸುವ ಗಂಧ, ಪುಷ್ಪ, ಧೂಪ, ದೀಪ ಮತ್ತು ನೈವೇದ್ಯಗಳೆಂಬ ಐದು ಬಗೆಯ ಸೇವೆ. ೨. ದೇವತಾರ್ಚನೆಯಲ್ಲಿ ಆಹ್ವಾನ, ಸ್ಥಾಪನ, ದೇವತಾ ಸನ್ನಿಧೀಕರಣ, ಪುಷ್ಪಾರ್ಚನೆ ಮತ್ತು ವಿಸರ್ಜನವೆಂಬ ಐದು ಹಂತಗಳು : ಪಂಚೋಪಚಾರವಿಧಿನಾ–ಆಹ್ವಾನ, ಸ್ಥಾಪನ, ಸನ್ನಿಧೀಕರಣ, ಅರ್ಚನೆ, ವಿಸರ್ಜನೆಗಳೆಂಬ ಪಂಚೋಪಚಾರವಿಧಾನದಿಂ (ಪ್ರತಿಷ್ಠಾ. ೧–೩). [ಪಂಚ$_2$ + ಉಪಚಾರ]

**ಪಂಚೋಪಚಾರಪೂಜೆ** (ನಾ). ಐದು ಬಗೆಯ ಉಪಚಾರದಿಂದ ಕೂಡಿದ ಪೂಜೆ : ಸುಧಾಕರ್ಪು[ದುಪ]ಭೋಗಕ್ಕಂ ಪಂಚೋಪಚಾರ ಪೂಜೆಗಂ ಪರಮೇಸ್ವರದತ್ತಿಯಾಗಿ (ಕಇಅ. ೧೦೩–೮–೨೨ ; 1076). [ಪಂಚೋಪಚಾರ+ಪೂಜೆ]

**ಪಂಚೋಪಸಾಧನ** (ನಾ). ಮೋಕ್ಷಕ್ಕೆ ಸಹಾಯಕವಾದ ಉಪರತಿ, ತಿತಿಕ್ಷೆ, ಭಕ್ತಿ, ಸಮಾಧಾನ ಮತ್ತು ಮುಮುಕ್ಷುತ್ವಗಳೆಂಬ ಐದು ಸಹಕಾರಿ ಸಾಧನಗಳು : ಸಾಧನವು ಪಂಚೋಪಸಾಧನ ಅವಯವವು ಅದಕೆ ಸಾಧನಕೆ ಉಪಸಾಧನವನಾಸಾಧಿಸು (ಜ್ಞಾನಸಿಂ. ೧೦–೧೯). [ಪಂಚ$_2$ + ಉಪಸಾಧನ$_0$]

**ಪಂಚೌದುಂಬರ** (ನಾ). ಅತ್ತಿ, ಅರಳಿ, ಆಲ, ಗೋಣಿ ಮತ್ತು ಬಸರಿಗಳೆಂಬ ಐದು ಬಗೆಯ ಹಾಲುಮರಗಳು : ಪಂಚಪರಮೇಷ್ಠಿಗಳೊಳಂ . . . ಭಕ್ತಿಯುಕ್ತನುಂ ಸಂಸಾರಶರೀರಭೋಗವಿರಕ್ತನುಂ ಪಂಚೌದುಂಬರಸಪ್ತವ್ಯಸನವಿರಕ್ತನುಮಕ್ಕುಂ (ಪಸಾರ. ೨೯೪). [ಪಂಚ$_2$ + ಔದುಂಬರ]

**ಪಂಜ$_1$** (ನಾ). = ಪಂಚ$_2$ ೧. : 'ಪಂಜಂಹಿಸ್ಸೆ' ಪರಾ. [←ಪಾರ. ಹಿಂ. ಮರಾ. ಪಂಜ./ಸಂ. ಪಂಚನ್]

**ಪಂಜ$_2$** 'ಪಂಜಾ' ನೋ.

**ಪಂಜಂಹಿಸ್ಸೆ** (ನಾ). ಐದನೆಯ ಒಂದು ಭಾಗ : ಸಂಸ್ಥಾನದ ಸಿಬ್ಬಂದಿ ಮೊದಲಾದ ಬಾಬುಗಳ ಖರ್ಚು ಕಳೆದು ಉಳಿದ ಮೊಬಲಗಿನಲ್ಲಿ ಪಂಜಂ ಹಿಸ್ಸೆಯೂ . . . ಸಂದಾಯವಾಗಬೇಕೆಂದು ತೀರ್ಮಾನವಾಯಿತು (ಮಹಾಪಂ. II, ೯೮). [ಪಂಜ$_1$+ಹಿಸ್ಸೆ]

**ಪಂಜಮರೇಶಿಮೆ** (ನಾ). ರೇಷ್ಮೆಯಲ್ಲಿ ಒಂದು ಬಗೆ; ಕೀಳು ದರ್ಜೆಯ ರೇಷ್ಮೆ : ರೇಶಿಮೆ ಪೈಕಿ ಪಂಜಮರೇಶಿಮೆಯ ಮೇಲೆ ಇರುವ ಮಾರ್ಕವು ರೇಶಿಮೆಯ ಹೆಸರಿನ ಮೇಲಿಂದ ಆಗಿರುವದಿಲ್ಲ (ಮುಂಬಪ್ರಾ. ೨೬ ಪ್ರಸ್ತಾವನೆ). [←ಮರಾ. ಪಂಜಮರೇಶಮಾ]

**ಪಂಜರ$_1$** (ನಾ). ೧. ಹಕ್ಕಿಗಳನ್ನು ಅಥವಾ ಮೃಗಗಳನ್ನು ಕೂಡುವ ಸಾಧನ : ಪೊನ್ನ ಪಂಜರಮಂ ಪೊತ್ತಿರದೇಟ್ಟಂದಂ ಚಂಡಿಕೆವೆರಸಿದ ಚಂಡಾಲಬಾಲಕಂ ಮತ್ತೊರ್ವಂ (ಕಾದಂಪೂ. ೩೭) ; ಅಂಬರದೊಳಗಾಡುವ ಗಿಳಿ ಪಂಜರದೊಳಗಣ ಬೆಕ್ಕ ನುಂಗಿ ರಂಭೆಯ ತೋಳಿಂದಗಲಿತ್ತು ನೋಡಾ (ಅಪಚಂ. ೧೦–೩೬) ; ಕುಮಾರನಂ . . . ಅಖಿಲವಿದ್ಯಾಚಾರ್ಯರಾ ಮುಂದಿಟ್ಟೊಡಗೊಂಡು ಬರ್ಪುದುಂ ಪಂಜರ ವಿಮುಕ್ತ ಕುಂಜರಾರಾತಿಯಂತೆ ಮಂಟಪದಿಂ ನೃಪನಿವಾಸಕ್ಕೆ ಬಂದು (ಪುಷ್ಪಪು. ೪–೭೦) ; ಗಿಳಿಯ ಪಂಜರ ಪಾರಿವಗಳ ಪೊಂಗೂಡು . . . ಸೂಳೆಗೇರಿಯ ಸಾಲಭವನದ ಮಳಿಗೆಗಳೊಳಗೆ ರಾಜಿಪುವು (ಕಂಸವಿ. ೬–೯೩) ; ಅಂತು ಪಂಜರನೋಲಾನುಂ ಮಂಜರನೋಲಾನುಂ ಸಾವಕ್ಕೆ (ರಾಮಾಶ್ವ. ೨–೧೨) ; ಗಿಡಗನನ್ನು ಪಂಜರದಲ್ಲಿ ಕೂಡಿದರೆ ಸಲಾಕಿ ಚಿನ್ನವಾದರೇನು ? ಕಬ್ಬಿಣವಾದರೇನು ? ಅದು ಸಲಾಕಿಗಳನ್ನು ಕಡಿಯದೆ ಬಿಟ್ಟೀತೆ ? (ಆರ್ಯಕ. ೪೧) ; ಪಂಜರದಲ್ಲಿ ಕಾಗೆ ಇಟ್ಟರೆ ಪಂಚಮಸ್ವರ ಕೊಟ್ಟೀತೆ? (ಗಾದೆ). ೨. ರಾಣಿವಾಸದವರು ಪ್ರಯಾಣ ಮಾಡುವ ಪಲ್ಲಕ್ಕಿ, ಮೇನೆ ಮೊದಲಾದ ಯಾನಗಳಿಗೆ ಆಚ್ಛಾದಿಸುವ ಮುಸುಕು,—ಗೌಸು : ಪಲ್ಲ ಬೆಳಗು ಪಸರಿಸೆ ಪಂಜರದೊಳು ಪಲ್ಲವಾಧರದ ಕೆಂಪೆಸೆಯೆ ಪಲ್ಲಕ್ಕಿಯೊಳು ತೆರಳಿತು ಸಾವಿರ ಸರ್ವವಲ್ಲಭೆಯರು ದಂಡಿನೊಳಗೆ(ಕುರಾಸಾಂ.೪೧–೫೬).'ಪಂಜರಿಸು' ಪರಾ. ೩. ಎಲುಬು ಗೂಡು; ಅಸ್ಥಿಪಂಜರ. ೪. ನಲವತ್ತೈದು ಮಂತ್ರಸಾಧನಗಳಲ್ಲಿ ಒಂದು : ಮಂತ್ರಸಿದ್ಧಿಸೂಚಕವಾದ ಮಾತೃಕಾಚಕ್ರ ಪಂಚಕೃತ್ಯ ಪಂಜರ ಮಾಲಿಕೆ ಮೂಲಿಕೆ ತಂತ್ರಬಲಿ ಆತ್ಮೈಕ್ಯಗಳೆಂಬ ಪಂಚಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (ವಿವೇಕ. ೮೦). ೫. [ಸಂಗೀತ]ಒಂದು ತಾಳದ ಹೆಸರು: 'ಪಂಜರಾಯತ' ಪರಾ. [ಸಂ.]

**ಪಂಜರ$_2$** 'ಪಂಜಾ' ನೋ.

**ಪಂಜರಂಬಡೆ** (ಕ್ರಿ). ಪಂಜರವನ್ನು ಕಟ್ಟು,–ನಿರ್ಮಿಸು ; ಪಂಜರದಂತೆ ಸರಳು ಮೊದಲಾದುವನ್ನು ಜೋಡಿಸು : ಅಸ್ತ್ರಜಾಲದಿಂ ತಡೆಯದೆ ಪಂಜರಂಬಡೆದನಂದು ವಿಯತ್ತಳದೊಳ್ ಗುಣಾರ್ಣವಂ (ಪಂಪಭಾ. ೨–೭೬). [ಪಂಜರ$_1$+ಪಡೆ$_1$]

**ಪಂಜರವಳ್ಳಿ** 'ಪಂಜುರ್ಲಿ' ನೋ.

**ಪಂಜರಾಹೇಟೆ** (ನಾ). ಮೀನು ಹಿಡಿಯಲು ಉಪಯೋಗಿಸುವ ಬಿದಿರುಕಡ್ಡಿ ಮೊದಲಾದುವುಗಳಿಂದ ಮಾಡಿರುವ ಬುಟ್ಟಿ ; ಕೂಳಿ. [ಸಂ.]

**ಪಂಜರಾಯತ** (ನಾ). [ಸಂಗೀತ] ಒಂದು ತಾಳದ ಹೆಸರು : ಸಂತತ ಘನರಕ್ತಿ ಪಂತು ಪಂಜರಾಯತ ದೇಶೀಯಾಹತ . . . ತಾರಸ್ವರ ಗರ್ಭಮಧುರ ಸಂಗೀತಶ್ರವಣಲೋಲುಪ ಪರಾಕು (ಯಾದಚಂ. ೩–೧ ಪ). [ಸಂ.]

**ಪಂಜರಿಸು** (ಕ್ರಿ). ೧. ಮುತ್ತು ; ಕವಿ ; ಆವರಿಸು : ಸುಚಾರು ಸೀಕರಾಸಾರದಿಂ ಮಂಜು ಪಂಜರಿಸಿದಂಜನಾಚಲದಂತಿರ್ಪುದು (ಅನಂಪು. ೧೩–೨೧ಪ) ; ಮಂಜು ಮುಸುಕುವ ತೆಱದಿ ದೈತ್ಯರು ಪಂಜರಿಸಿದರು ದೇವವೃಂದವ ಕಂಜನಾಭನು ಕಂಡು ಕೈವೀಸಿದನು ಸುರಜನಕೆ (ಸಂಭಪ. ೬–೨೬). ೨. ಹರಡು ; ಪ್ರಸರಿಸು ; ವ್ಯಾಪಿಸು : "ಪಂಜರಿಸಿತೆಂದು ಪಸರಿಸಿದುದು" (ಕಶಸಾ. ೬೭–೫೧೨) ; ಪಾಂಡುಕಶಿಲಾತಳ ಕಾಂತಿ ಕವಲ್ದು ಮೇಲೆ ಪಂಜರಿಸಿದುದು (ಅನಂಪು. ೫–೬೧). ೩. ಗುಂಪಾಗು; ಒಗ್ಗೂಡು ; ಪುಂಜೀಭೂತವಾಗು : ಪಂಜರಿಸಿ ಮೆಯ್ಯುಡುಡಿ ನೆಲದಿಂದೆ ಮುಗಿಲೆಳ್ದು ಮೆಯ್ವೆರ್ಚಯಂಚೆಂದುಪ್ಪಳ ದುಗುಲವಾಸಾಗಿ ಧರೆ ಪೀರ್ಗುಮೆನೆ ಕೂನಮಾಗಿ ಪೊಚ್ಚರಿಸಿಯುಂ (ಸಂಸಪ. ೩೩–೧). [ಪಂಜರ$_1$ + –ಇಸು$_3$./ತೆಲು. ಪಂಜಾರಿಂಚು]

**ಪಂಜರುಳ್ಳಿ** 'ಪಂಜುರ್ಲಿ' ನೋ.

**ಪಂಜಲ,** ಪಂಜಳ (ನಾ). [ಸಂಗೀತ] ಸಂಗೀತದಲ್ಲಿ ಒಂದು ಕ್ರಮ, — ವಿಧಾನ : ಲಂಘಿತ ಕಾಕು ಜಾಯನುಜಾಯಿ ಪಂಜಲ [ಪಾಠಾಂ. ಳ]ಬಜಾವಣೆ ತಾಳ (ವೃಷವಿ. ೧೧–೯). **ಪಂಜಳೆ :** ಪೊಸ ದೇಸಿ ಪಜ್ಜಳಿಸೆ ಪಂಜಳಂ ಪಲ್ಲಯಿಸೆ . . . ಕಾಂತಿ ಕವಲೇಱು ಸರಿಯೊಳು ಪಂಜಳವನುಗುಳೆ (ಅನಾರ. ದೇ. ೧೮೨–೫) ; ಗಮಿಪ ಪಂಜಳ ಖಚರ ವಿಷಯಕ್ರಮ ವಿಮೋಕ್ಷಭ ಜವಣಿ ಕವಣಿಗಳಮುಮ ಭರಣ ವಿಠಾಯಿ ನಿಜವಣಿವಳಿಯು ಮುಂಚಿಯುಮಂ (ಬಸಪು. ೧೯–೧೩) ; ಪೊಂದಾಳಮಂ ಪಿಡಿದು ರಾಗಂಗೆಯ್ದು ಪಂಜಳದಲಿ ಅಂದವಡೆದಿಹ ಕಟ್ಟಣೆಯಲಿ ಕಡು

ಜಾಣ್ಮೆಯ ಸರಂದೋಱು (ಸೌಂದಪು. ೧೧-೧೪).

[←ತೆಲು. ಪಂಜಳ./ಸಂ. ಪಂಜರ]

**ಪಂಜಳ** 'ಪಂಜಲ' ನೋ.

**ಪಂಜಾ,** ಪಂಜ$_2$, ಪಂಜರ$_2$ (ನಾ). **೧.** ಸಿಂಹ ಮೊದಲಾದ ಮೃಗಗಳ ಹಾಗೂ ಪ್ರಾಣಿಗಳ ಉಗುರು ಬೆಳೆಯುವ ಕಾಲಿನ ಉಂಡೆಯಾದ ಭಾಗ,-ಮೆತ್ತೆ : "ಪಂಜಾ" (Pad. ೨೦೮೫). **ಪಂಜ$_2$ :** **೧.** ಪ್ರಾಣಿಗಳು ಸಿಂಹದ ಕೈಗೆ ಸಿಕ್ಕಿದರೆ ತಪ್ಪಿಸಿಕೊಳ್ಳುವುದು ತುಂಬ ಕಷ್ಟ. ಅದರ ಪಂಜಗಳು ಅಷ್ಟು ಉಗ್ರವಾಗಿರುತ್ತವೆ (ಜೀವಾತ್ಮ. ೨೫೯); ಸಿಡುಸುಯ್ಯುತೀ ಕಡಲು ತನ್ನ ಬಂಧಿಸುವರೆಯ ದಡವನಲೆಪಂಜದಿಂ ಪರಚಿ (ಗಣೇಶ. ೩೫-೩); ಸಿಂಹದ ಪಂಜಕ್ಕೆ ಸಿಕ್ಕಿರುವ ಆನೆಯಂತೆ, ತತ್ತರಿಸುತ್ತಿದೆ (ಭಾವಗೀ. ೧೭೬); ಅದಕ್ಕೋಸ್ಕರ ಹುಲಿಯು ತನ್ನ ಉಗುರುಗಳನ್ನು ಪಂಜದೊಳಕ್ಕೆ ಸೆಳೆದುಕೊಂಡು ಸಪ್ಪುಳ ಮಾಡದೆ . . . ನಡೆಯುತ್ತದೆ (ಮನೋಣಂ. ೧೭೯). **೨.** ಮೊಹರಂ ಸಂದರ್ಭದಲ್ಲಿ ಮುಸಲ್ಮಾನರು ಪೂಜಿಸುವ ಐದು ಬೆರಳುಗಳಿಂದ ಕೂಡಿದ ಲೋಹದ ಹಸ್ತ : ಈ ಸಂದರ್ಭದಲ್ಲಿ ಹಾಕುವ ಹುಲಿವೇಷಗಳಿಗೂ ಇಟ್ಟು ಪೂಜಿಸುವ ಪಂಜಾಗಳಿಗೂ ಈ ಮುಹರ್ರಂ ದಿನಾಚರಣೆಗೂ ಏನೂ ಧಾರ್ಮಿಕವಾದ ಸಂಬಂಧವಿಲ್ಲ (ರಾಮುರಾ. ೯೬). **ಪಂಜರ$_2$ :** **೧.** ಸಿಂಹವು ಎಚ್ಚೆತ್ತು . . . ಆ ಇಲಿಯನ್ನು . . . ತನ್ನ ಪಂಜರದಿಂದ ಹಿಡಿಯಿತು (ಮುಂಬಯಿ. ೪-೮೬); ನಳ್ಳಿಯು ತೆಂಗಿನ ಸಿಪ್ಪೆಯನ್ನು ಮೂರು ಕಣ್ಣುಗಳಿರುವ ಕಡೆಯಿಂದ ಸುಲಿಯಲಾರಂಭಿಸುತ್ತದೆ. ಅನಂತರ ತನ್ನ ಬಲವಾದ ಪಂಜರದಿಂದ ರಂಧ್ರ ಬೀಳುವವರೆಗೂ ಒಂದು ಕಣ್ಣಿನ ಮೇಲೆ ಹೊಡೆಯುತ್ತಿರುತ್ತದೆ (ಜೀವಾತ್ಮ. ೧೫೫); ಮನೆನೊಣದ ಪಂಜರದಲ್ಲಿರುವ ಟೊಳ್ಳು ಕೂದಲುಗಳಿಂದ ಅಂಟು ಸ್ರವಿಸಿ, ನೊಣ ತಲೆಕೆಳಗಾಗಿ ಮತ್ತು ನುಣುಪು ಜಾಗದಲ್ಲಿ ನಡೆಯಬಲ್ಲದು (ಕೀಟಬಿ. ೧೭).

[←ಪಾರ. ಮರಾ. ಪಂಜಾ]

**ಪಂಜಾಮುದ್ರೆ** (ನಾ). ಪಂಜದ ಗುರುತಿನ ಉಂಗುರ ಮೊದಲಾದುವು; ಹೆಸರನ್ನು ಕೆತ್ತಿರುವ ಉಂಗುರ; ಸೀಲು; ಮೊಹರು; ಹಸ್ತಮುದ್ರಿಕೆ : ಅವರೊಡನೆ ಇದ್ದ ನಿರ್ಮಲಳೂ ಬಂದಳು. ಆದರೆ ತನ್ನಲ್ಲಿದ್ದ ಪಂಜಾಮುದ್ರೆಯನ್ನು ತೋರಿಸಿ . . . ತಪ್ಪಿಸಿಕೊಂಡಳು (ಬಂಕಿಮ. ೨೨೧). [ಪಂಜಾ + ಮುದ್ರೆ]

**ಪಂಜಾಮೊಹರು** (ನಾ). = ಪಂಜಾಮುದ್ರೆ : ಔರಂಗಜೇಬನ ಪಟ್ಟದ ರಾಣಿಯಾದ ಯೋಧಪುರಿ ಬೇಗಂ . . . ತನ್ನ ಗುರುತಿನ ಹಸ್ತಮುದ್ರಿಕೆ ಅಥವಾ ಪಂಜಾಮೊಹರನ್ನು ಕೊಟ್ಟು . . . ಹೇಳಿಕಳುಹಿಸಿದಳು (ಬಂಕಿಸು. ೨೧೬). [ಪಂಜಾ + ಮೊಹರು]

**ಪಂಜಿ$_1$** 'ಪಂಜೆ' ನೋ.

**ಪಂಜಿ$_2$** (ನಾ). ನೂಲುವುದಕ್ಕೆ ಸಿದ್ಧಪಡಿಸಿದ ಅರಳೆಯ ಉಂಡೆ; ಹತ್ತಿಯನ್ನು ಹಿಂಜಿ ಮಾಡಿದ ಸುರುಳಿ; ನೂಲಲು ಸಿದ್ಧಮಾಡಿದ ಹತ್ತಿಯ ಬತ್ತಿ ; ಹಂಜಿ : ತನು ಪಂಜಿವೊಲ್ ಬೆಳರ್ತಿರ್ಪಿನೆಗಂ ಹಿಮಮೆಕ್ಕಿದರಲೆವೊಲ್ ಪುದಿದಿರೆಯುಂ (ಆದಿಪು. ೬-೩೩); ಪೇರಾನೆಯನವಯವದಿಂ ಪಂಜಿಯೊಳ್ ಕಟ್ಟಿದಂದುಮ್ಮಳದಿಂ ಮತ್ತದ್ವಿಪಂ ನಿಂದಪುದೆ (ಧರ್ಮಾಮೃ. ೧೧-೪೫); ಗುಲಗಂಜೀ ಕೆಂಪು ಗುಲಗಂಜೀ ಬೇಕೇನು ಪಂಜಿ ಬಿಳಿಬಿಳೀ ಪಂಜಿ (ತುಪದ. ೪೪). [ಸಂ. ಪಂಜಿ, ಪಂಜೀ]

**ಪಂಜಿಕೆ** (ನಾ). **೧.** = ಪಂಜಿ$_2$. **೨.** ಪ್ರತಿಯೊಂದು ಪದದ ವಿವರಣೆ ಮತ್ತು ವಿಶ್ಲೇಷಣೆಯೊಂದಿಗೆ ನಿರಂತರವಾಗಿ ಮುಂದುವರಿಯುವ ವ್ಯಾಖ್ಯಾನ : ಮಂಜೀರಕ ಮಂಜುಳ ಮೃದುಸಿಂಜಪರಿಸ್ಫುರಿತಮೆಸೆಯೆ ಭರತದ ಪಲವುಂ ಪಂಜಿಕೆಗಳಂತದೇಂ ಸುರಲಂಜಿಕೆಯರ್ ವಿಷಮಮಂ ಸಮಂ ಮಾಡಿದರೋ (ಶಾಂತಿಪು. ೭-೩೩). **೩.** ದಿನ, ತಿಥಿ, ವಾರ ಮತ್ತು ನಕ್ಷತ್ರಾದಿಗಳನ್ನು ತಿಳಿಸುವ ಕೈಪಿಡಿ; ಪಂಚಾಂಗ. **೪.** ಜಮಾಖರ್ಚುಗಳನ್ನು ಬರೆದಿಡುವ ಪುಸ್ತಕ; ದಿನಚರಿ ಪುಸ್ತಕ. **೫.** ದಾಖಲೆ ಪುಸ್ತಕ. [ಸಂ. ಪಂಜಿಕಾ]

**ಪಂಜಿಗೆಟ್ಟಣಿ** (ನಾ). ( ? ) : ಶ್ರೀ ಬಲಿಯ ಪಂಜಿಗೆಟ್ಟಣಿಗೆ ಬಿಟ ತಳವ ವಿ[ವರ] (ಸೌಇಎ. ೧೯೩೦, ಉಡುಪಿ. ೫೭೫-೨೦ ; ?). [ ? ]

**ಪಂಜು** (ನಾ). **೧.** ಬಟ್ಟೆಯನ್ನು ದಪ್ಪವಾಗಿ ಸುತ್ತಿ ಎಣ್ಣೆ ಸುರಿದು ಉರಿಸುವ ಕೋಲು : ಪಂಜ ಹಿಡಿದವಂಗೆ ಸಂದೇಹವಲ್ಲದೆ ಉರಿವ ಬೆಳಗಿಂಗೆ ಸಂದೇಹವುಂಟೇ (ಸರ್ವವ. ೧೨೫-೬೩೯); ಎಡೆಯ ಪಂಜುಗಳಿ ರ್ದುವು ನಾಗನಾಥನ ಹೆಡೆವಣಿಗಳ ದೀಪ್ತಿಯಂತೆ (ಪ್ರೋಹತ. ೧೫-೨೫); ಗಿರಿಜಾತೆಸಹಿತೆ ನಾನಾವೇದಘೋಷದಿಂದೆ ಥಳಥಳಿಪ ಪಂಜುಗಳ ಮೊತ್ತದಿಂ . . . ಕಾಲ್ನಡೆಯೊಳ್ಳಿದಿ ಬರಲುತ್ಸವದೊಳು (ಚಿಬಪು. ೩೭-೬೦); ಸುಡುವರೆ ಪಂಜಿಹುದು ಬಡಿಯೆ ಭೇರಿಯು ಇಹುದು ಪೊಡವಿಯೊಳು ವರ ಮದುವೆಯ ವೆಚ್ಚಕೊಂದಡಿಕೆಲೆಯು ಬೇಡ (ಸರ್ವಜ್ಞ. ೭೪೭); ತಂದೆ ಮದುವೆಗೆ ಪಂಜು ಹಿಡಿಯುವ ಮಗ (ಗಾದೆ). **೨.** (?) : ತಡವಡಿಸಿ ಪುಡುಕಿ ಪಂ[ಪಾಠಾಂ. ಪುಂ]ಜಿನ ನಡುಬೀದಿಯೊಳಿರ್ದು ಮಱುಗುತಿರೆ ಕಂಡು ಕೆಲರ್ಬಡಿದೆಡೆಯೊಳೊಡೆದ ಪುಣ್ಣಳಿನೆಡೆಯುಡುಗದೆ ರುಧಿರವೊಱೆತು ಕಱಿ ಗಟ್ಟುವಿನಂ (ಸುಕುಮಾ. ೪-೫೪).

**ಪಂಜಿನ ಪಂದ್ಯ** = ಪುರಾತನ ಗ್ರೀಕರು ನಡೆಸುತ್ತಿದ್ದ ಒಂದು ಪಂದ್ಯ : ಆದು ಪ್ರಮಿಥ್ಯೂಸ್ ಬಲಿಪೀಠವೆಂದೇ ಕರೆಯಲ್ಪಡುತ್ತಿತ್ತು. ಪ್ರಮಿಥಿಯಾ ಅಥವಾ ಹಿಫೀಸ್ಟಿಯಾ ಎಂದು ಕರೆಯುತ್ತಿದ್ದ 'ಪಂಜಿನ ಪಂದ್ಯ' ಇವನ ಪೂಜೆಯ ಪ್ರಧಾನ ಸಂಗತಿ (ಬದ್ಧಪ್ರ. I ಪೀಠಿಕೆ). **ಪಂಜಿನ ಮೆರವಣಿಗೆ** = ಪಂಜುಗಳನ್ನು ಹಿಡಿದು ನಡೆಸುವ ಮೆರವಣಿಗೆ : ಮೈಸೂರು ದಸರಾಕಾಲದಲ್ಲಿ ನಡೆಯುತ್ತಿದ್ದ ಪಂಜಿನ ಮೆರವಣಿಗೆ ಸುಪ್ರಸಿದ್ಧವಾದುದು (ರೂಢಿ). **ಪಂಜಿನೋಲೆ** = ಒಂದು ಬಗೆಯ ಹೊಳೆಯುವ ಕರ್ಣಾಭರಣ : ಹರುಷದಿಂ ಪಂಜಿನೋಲೆಯನಿಟ್ಟು ಕರ್ಣದಲಿ ಧರಿಸಿದಳು ಕುಚ್ಚೂ ಮುತ್ತಿನ ಬಾವುಲಿಗಳಾ (ಶ್ರೀಕೃಪಾ. ೫೪). [ದೇ.॥ ತಮಿ. ಪನ್ತ ; ಮಲ. ಪನ್ದ ; ತುಳು. ಪಂಜಿ, ಪಂಜು ; ತೆಲು. ಪಂಜು]

**ಪಂಜುಕಳ್ಳ** 'ಪಂಜುಗಳ್ಳ' ನೋ.

**ಪಂಜುಗಳ್ಳ,** ಪಂಜುಕಳ್ಳ (ನಾ). ರಾತ್ರಿಯ ಕಾಲದಲ್ಲಿ ಪಂಜು ಹಿಡಿದುಕೊಂಡು ಗುಂಪಿನಲ್ಲಿ ಬಂದು ಬೆದರಿಸಿ ತುಡುಗು ಮಾಡುವವನು ; ದರೋಡೆಖೋರ : ಲಿಂಗದ ಚಿತ್ತದಲ್ಲಿ ಪಂಜುಗಳ್ಳರು ಬಂದು ಮೋಱೆಯ ಸುಟ್ಟು ಬಾಧಿಸಿದಂತಾಯಿತ್ತಯ್ಯ (ವಚಶಾ. I, ೨೨೧); ಧೂರ್ತದುರ್ಜನರೂ ಪಂಜುಗಳ್ಳರೂ ಅವನ ಸಹಾಯಕ್ಕೆ ಬಂದು . . . ಅರಮನೆಯನ್ನು ಸುತ್ತುಗಟ್ಟಿಕೊಳ್ಳುವರು (ಬಿಟ್ಟಿಆ. ೧೯೯-೧೦). **ಪಂಜುಕಳ್ಳ :** "ಪಂಜುಕಳ್ಳರು-ದರೋಡೆಖೋರರು" (ಜಾನಕೋ. ೧೩). [ಪಂಜು + ಕಳ್ಳ$_1$]

**ಪಂಜುಬಳೆ** (ನಾ). ಪಂಜು ಉರಿದಂತೆಲ್ಲ ಅನುಕೂಲವಾಗುವಂತೆ ಮಾಡಿರುವ, ಬಳೆಯಂತೆ ದುಂಡಾಗಿ ಸುತ್ತಿರುವ ಬಟ್ಟೆಯ ಸುರುಳಿ : ಅಲ್ಲಿಯೆ ಪಾತ್ರೆಯಲ್ಲಿ ಎಣ್ಣೆಯಲ್ಲಿ ಚೆನ್ನಾಗಿ ನೆನೆಸಿಟ್ಟಿದ್ದ ಬಟ್ಟೆಯ ಪಂಜುಬಳೆಗಳನ್ನು ಆ ಪಾತ್ರೆಯೊಡನೆ ರಥದಲ್ಲಿರಿಸಿಕೊಂಡರು (ಶಾಂತಲಾ. ೩೨೦). [ಪಂಜು + ಬಳೆ$_2$]

**ಪಂಜುರುಳಿ** 'ಪಂಜುರ್ಲಿ' ನೋ.

**ಪಂಜುರ್ಲಿ,** ಪಂಜರವಳ್ಳಿ, ಪಂಜರುಳ್ಳಿ, ಪಂಜುರುಳಿ, ಪಂಜ್ರೊಳ್ಳಿ (ನಾ). (ಕರಾ) ಕರ್ನಾಟಕದ ಮಲೆನಾಡು ಮತ್ತು ಕರಾವಳಿಗಳಲ್ಲಿ

ಉಪದ್ರವಕಾರಿಯೆಂದು ನಂಬಲಾದ ಒಂದು ಬಗೆಯ ಭೂತ,—ದೆವ್ವ,—ಕ್ಷುದ್ರದೇವತೆ : "ಅದು ಮನೆಯ ಮುಂದಿನ ಪಂಜುರ್ಲಿಯ ಉಪದ್ರವ"ವೆಂದು ನಿಶ್ಚಯವಾಯಿತು (ಚೋಮದು. ೩೫); ನನ್ನ ಮನೆ ದೆವ್ವ ಪಂಜುರ್ಲಿ. ಏನೇ ಕಷ್ಟ ಬಂದರೂ ನಾನು ಪಂಜುರ್ಲಿಗೆ ಅಡ್ಡಬೀಳುತ್ತೇನೆ (ಪದ್ಮಸ. ೭೭); ಪಂಜುರ್ಲಿಗೆ ಕೋಳಿಯ ಬಲಿ ಕೊಟ್ಟು ಮುಂದಿನ ಅಮಾಸೆ ಕುರಿ ಕೊಡುತ್ತೇವೆಂದು ಹರಕೆ ಹೇಳಿಕೊಂಡರೂ ಬೆಳ್ಳಿಯ ಅಪ್ಪ ಅವ್ವ . . . ಪ್ರಾಣ ಬಿಟ್ಟವು (ಸಂಸ್ಕಾರ. ೧೧೨). **ಪಂಜರ ವಳ್ಳಿ :** ಅಂದಿನ ಮಲೆನಾಡಿನಲ್ಲಿ ಭೂತ, ಪ್ರೇತ, ಪಿಶಾಚಿ, ಪಂಜರವಳ್ಳಿ, ರಣಮಾರಿ . . . ಮುಂತಾದ ಹಲವು ಹೆಸರಿನ ಹಲವು ಜಾತಿಯ ದೆವ್ವಗಳಿದ್ದವು (ಪಂಜಪಂ.೨). **ಪಂಜರುಳ್ಳಿ :** ನಂಬಿದ ದೈವಕ್ಕೂ ಕರುಣೆ ಬರಲಿಲ್ಲವೆಂದರೆ ಗುತ್ತೆಮ್ಮನಿಗೆ ಎರಡು ಕುರಿ ಆಯಿತು, ಕಲ್ಕುಡಕನಿಗೆ ಹೇಳಿಕೊಂಡದ್ದಾಯಿತು. ಪಂಜರುಳ್ಳಿಗೆ ತಂಪು ಆಯಿತು (ನಡೆದಾ.II,೧೨೩೦). **ಪಂಜುರುಳಿ :** ಪಂಜುರುಳಿಗೆ ಸಿಹಿಯುವಲಕ್ಕಿ ಆಳುಕಾಳುಗಳಿಗೆ ಸಿಹಿಯೂಟ . . . ಹಂಚುವ ಕೆಲಸ (ಮಲಿಮಂ. ೩೮). **ಪಂಜೊ್ರಳ್ಳಿ :** ದೆವ್ವ, ಭೂತ, ಜಕ್ಕಣಿ, ಪಂಜೊ್ರಳ್ಳಿ ಮೊದಲಾದ ಅಂತರ ಬೆಂತರಗಳಿಗೆಲ್ಲ ಕೋಳಿಗಳನ್ನು ಬಲಿಕೊಟ್ಟಿದ್ದಾನೆ (ಕಾನೂರು. ೮೫); ನಾಗತ್ತೆಯ ಕೈಯಲ್ಲಿ ನಾಗಕ್ಕ 'ಪಂಜೊ್ರಳ್ಳಿ ಕೈಲಿ ಸಿಕ್ಕ ಜಕಣಿ'ಯಂತಾದಳು (ಮಲೆಮ. ೭೧). [←ತುಳು. ಪಂಜುರ್ಲಿ]

**ಪಂಜುಸೇವೆ** (ನಾ). ದೇವಸ್ಥಾನಗಳಲ್ಲಿ ನಡೆಯುವ ಒಂದು ಬಗೆಯ ಸೇವೆ; ಪಂಜಿನ ಸೇವೆ; ಪಂಜುಗಳಿಂದ ನಿವಾಳಿಸುವುದು : ಕಂಜಾಕ್ಷ ಶ್ರೀಕೃಷ್ಣರಾಯನಿದಿರೊಳು ಸಂಜೆಯ ಕಾಲದಿ ರಂಜಿಪ ರಜತದ ಪಂಜುಸೇವೆಗೆ ಕರಾಂಜಲಿಯನ್ನು ಮುಗಿದು (ಪುರಂದ. ಧಾ. ೩-೮೮-೧). [ಪಂಜು + ಸೇವೆ$_1$]

**ಪಂಜುಹಚ್ಚು** (ಕ್ರಿ). ೧. ಪಂಜನ್ನು ಹತ್ತಿಸು,—ಉರಿಸು. ೨. (ಆಲಂ) ವೇದನೆಯನ್ನು ಉಂಟುಮಾಡು : ಹಣವನ್ನು . . . ತಾನು ಬೇಡವೆಂದರೂ ಯಜಮಾನರು ಯಾಕೆ ಕೊಟ್ಟರೋ ಎನ್ನುವುದು ಭಾಗೀರಥಿಯಲ್ಲಿ ಪಂಜುಹಚ್ಚತೊಡಗಿತು (ಭಾರಥಿ. ೪೪). [ಪಂಜು + ಹಚ್ಚು$_1$(<ಪಚ್ಚು$_3$)]

**ಪಂಜೆ$_1$** 'ಪಂಚೆ' ನೋ.

**ಪಂಜೆ$_2$** (ನಾ). ಒಂದು ಬಗೆಯ ಮರ ; ಹಿಪ್ಪೆ ಮರ (?) : ಮೊದೆ ಬಾಳಂಕುಸೆ ಗೇರ್ ಪ್ಲವಂ . . . ಕಬ್ಬಾವಾಕು ಪಂಜೆಳ್ಳಿ(ಯಿಪ್ಪೆ)ಯು ದಾತ್ರಾಂಘ್ರಿಪ . . . ಇರಲುಂ(ವುಂ) ಮೂಡಿಬಾಳೊಳಕ್ಕುಂ ಜಲಂ (ಬಿಟ್ಟಪು. ೧೧-೫೭). [←ತೆಲು. ಪಂಜೆ = ಒಂದು ಬಗೆಯ ಮರ, ಭಾರಂಗ]

**ಪಂಜೆ$_3$** (ನಾ). ೧. ಕ್ಷುದ್ರ ; ಅಲ್ಪ : ಸುಡು ಪಂಜೆ[ಪಾಠಾಂ.ಚಿ]ಗಳೆಂಜಲ ಹಂಚೆಯೆಂದು ಬಯ್ವುದ (ಅನಂಪು.೮-೩೧). ೨.(?) : ಹಗಲುದೀವಟಿಯ ಪಂಜೆಯು ಬಗೆಗತಿಶಯಮಾದ ಸಿಂಹಲಕ್ಷ್ಮಪತಾಕಂ . . . ಮುಂಗೈ ಮುರಾರಿಯೆಂಬುದನಿತ್ತಂ (ಜೀಳಪಂ. ೧-೧೦೮); ಕುಲಿಶದ ಸಕಲಗಳಂ ವಿಚಕಿಲಕುಂದದ ಕುಟ್ಮಲಂಗಳಂ ಪಂಜೆಗಳಿಂದಲಸದೆ ಬಿದಿ ರಚಿಸಿದನೆನೆ ಚಲಭೀಮನ ರದನಪಂಕ್ತಿಗಿನ್ನೆಣೆಯುಂಟೇ ? (ಬೀಳಪಂ. ೨-೫೩); ಪರಲೋಕಕ್ಕೈದುವುದು ಭಾಗವತ ಚರಣ ಪಂಜೆಯು ಫಲಂಬಿದು ಕಣಾ ತಿರುವೇಂಕಟಾಚಾರ್ಯ ಮೌನಿವರ್ಯ (ತಿರುಶ. ೮-೪೯). [ ? ]

**ಪಂಜೆತನ** (ನಾ). ಹೀನಸ್ಥಿತಿ ; ಬಡತನ ; ಅಲ್ಪತನ : "ಪಂಜೆತನ—ಬಡತನ" (ಕಂನುಹು. ೮೮). [ಪಂಜೆ$_3$ + -ತನ]

**ಪಂಜೆಬ್ರಾಹ್ಮಣ** (ನಾ). ಬಡ ಬ್ರಾಹ್ಮಣ : ಈ ಪಂಜೆ ಬ್ರಾಹ್ಮಣನು ಎಷ್ಟು ಮಾತ್ರದವನು (ಮುದ್ರಾಮಂ. ೨೮). [ಪಂಜೆ$_3$ + ಬ್ರಾಹ್ಮಣ]

**ಪಂಜೇವಾರ್** (ಗು). ಅಲ್ಪ ; ದರಿದ್ರ: ನಾವು ಮಾಡತಕ್ಕ ಕಾರ್ಯ ನಿರ್ವಾಹವನ್ನು ಕೆಡಿಸುವುದಕ್ಕೆ ಆ ಪಂಜೇವಾರ್ ಮನುಷ್ಯನ ಕೈಲೇನಾದೀತು ? (ಮುಸುಗ. ೧೨೧). [ಪಂಜೆ$_3$ + ?]

**ಪಂಜೊ್ರಳ್ಳಿ** 'ಪಂಜುರ್ಲಿ' ನೋ.

**ಪಂಟಿ** (ನಾ). ೧. ಊಟ ; ಭೋಜನ : ಭಾರತಿಯೆಂಗುಂ ಅಂತಪ್ಪೊಡೆ ತಳ್ವದೆ ತಱಿದು ಸುಂಟಿಗೆ ಪಂಟಿಗೆ ಸಲ್ವಿನಂ ನಿಮ್ಮನೆ ಬಾಣಸುಗೆಯ್ವುದ ಪರ್ದಿಂಗೆ ಬಿರ್ದಿಕ್ಕುವೆಂ (ರಾಮಾಶ್ವ. ೧೪೪-೩೦) ; ಶುಂಠಿ ಪಂಟಿಗೆ ಲೇಸು ದಂಟಿ ಕುರುಡಗೆ ಲೇಸು (ಹಾಸ್ಯಮಂ.೯); ಗಂಟಲ ತಂದಿವರುಗಳಾ ಮಾಂಸದೆಂಟು ಬಗೆಯಲೆಸಗುವೆನು ಶಾಕಗಳಾ ಪಂಟಿಗೆ ಹಾಸಿ ಚರ್ಮಗಳಾ ನಮ್ಮ ನೆಂಟರಿಪ್ಪರಿಗಿಕ್ಕುವೆನು ಕಜ್ಜಾಯಗಳಾ (ಪಾಲಿಕಾ. ೩-೨). ೨. (?) : ಪಂಟಿಯ ಮಾಡಿ ಪರಮಸುಂದರಿ ಕಂಬುಕಂಠಿಯ ನವ ವಸ್ತ್ರಗಳ ಗಂಟಿಕ್ಕಿ ಕೆಳದಿಯ ಕರೆತಂದಳು ಕಾಲ ಮುಂಟಿಕೆ ಘಲಿರೆಂಬ ರವದಿ (ಮೋಹತ. ೩೧-೪೭) ; ಪಂಟಿ ಹೊಡೆದು ಕಾದಿರು ನೀನು ಮಗಳು ಹುಟ್ಟಲು ನಿನಗೆ ನಂಬು (ಢಂಡೋಲು. ೧೭). [ ? ]

**ಪಂಟಿಮಾರಿಗ** (ನಾ). ದುಷ್ಟ ; ಪಟಿಂಗ(?) ಕುಂಟನಾಗಲಿ ಕುರುಡನಾಗಲಿ ಪಂಟಿಮಾರಿಗನಾಗಲೈವತ್ತೆಂಟ ಬೈವವನಾಗಲಳಿವನು ಬಯಸುವರೆ ಮಗಗೆ (ಪ್ರಹ್ಲಾಚ. ೧೦-೨೭). [ ? ]

**ಪಂಟಿಸು,** ಪಂಠಿಸು (ಕ್ರಿ). ೧. ಮುಚ್ಚು; ಹೊದೆಸು; ಆಚ್ಛಾದಿಸು: ನನೆಯಾಗಿರ್ದಾಂ ಮನೋನಾಥನ ಸಿರಿಮುಡಿಯೊಳ್ ವಕ್ಷದೊಳ್ ಹಾರವಾಗಿರ್ದ ನಿತಂಬಾಭಾಗದೊಳ್ ಪಂಟಿಸಿದ ದುಗುಲವಾಗಿರ್ದ (ಅನಂಪು. ೮-೧೭). ೨. ಆಕ್ರಮಿಸು ; ಆವರಿಸು ; ಮುತ್ತು ; ಸುತ್ತುವರಿ : ಪಂಟಿಸಿದ ಮದಮುಖರು ಕೆಲಕೆಲರುಂಟು ರಿಪುಗಳು ಧಟ್ಟಿಸುತ ಬಲು ಕಂಟಕದಿ ಕಾಡುವರು ಕಾಯ್ಕೆ ಕಲುಷಸಂಹಾರ (ಹರಿಸಾ. ೭೧) ; ಪಂಟಿಸಿದ ಬಲ್ಪಿಂ ಕೆಂಗೆರೆಗೋಂಟೆಯನಾ ವೀರಭದ್ರದುರ್ಗದ ನೆರವಿಂ . . . ಲುಂಠಿಸಿದಂ (ಚಿಕವಿ. ೨-೧೨೯) ; ಗಂಟಿಕ್ಕಿತಾಗುಭಯವೀರರಿಂಗಾಹವಂ ಪಂಟಿಸುತ್ತಾಗೊಡನೆ ಕೆಂಗರಿಯ ಕೋಲ್ಗಳಂ ಜಂಟಿನಿಂದೈನೂರು ಬಿಲ್ಗಳಿಂ ತೂರಲಂದಾಗ (ಪರಶು. ೧೦-೯). ೩. ನೆರೆ; ಕೂಡು : ಇರುತೊಂದು ದಿವಸ ಶಿವನಾಸ್ಥಾನಕ್ಕೆತಂದು ಪಂಟಿಸಿದ ಮುನಿಗಳೊಡನೆ (ಚೋರಬ. ೭-೩೭). ೪. ಎದುರಿಸು ; ಸೆಣಸು ; ಹೋರಾಡು : ಅಂಟಿದ ಜಗಳದೊಳಗೆ ಮಾರ್ಬಲವನು ಪಂಟಿಸಿ ಮುಱಿಯಿಱಿದಾಗ ಒಂಟಿಂಗದಲಿ ಮೆಱೆದರ ಕೇರಿಯೆಸೆದುವು (ಕಂಸವಿ. ೬-೬೦); ಆವತಿಶಳುತಿಯಿಂ ಪಂಟಿಸುವವೆಂದುದು ಸೇನೆ ಕ್ರತುಭುಜರ (ಅಂಬಿಕಾ. ೪೮-೫೨); ಎನ್ನಳವೆ ಹರಿಯೊಡನೆ ಪಂಟಿಸಿ ನಿನ್ನ ಸಲಹುವುದು (ಕೋಗಯ. ೬-೨೪). ೫. ಹರಡು ; ವ್ಯಾಪಿಸು : ಪ್ರಳಯ ದಿನದಲಿ ಪಂಟಿಸುವ ಸಿಡಿಲಿಳಿದುದೆನೆ ಬಹುವಿಧದ ವಾದ್ಯದ ಮೊಳಗುಗಳ ತುದಿ ತುಡುಕಿತಾ ಬ್ರಹ್ಮಾಂಡಮಂಡಲವ (ಕುವ್ಯಾಶ. ೨-೪೧) ; ಪಂಟಿಸಿಯೆ ಕಹಳೆ ಹೆಗ್ಗಾಳೆ ವುಕ್ಕಡಗಹಳೆ . . . ಭೋರ್ಗರೆಯಲ್ (ನವಮೋ. ೧೧-೩೦). ೬. ನಾಶಮಾಡು : ರಘುಪತಿ ನಗೆಮೊಗದಲೊಂದಂಬ ಕಳುಹಿದನಸುರನಿದ್ದೆಡೆಗೆ . . . ವಿಸುಪ ಧವಳಚ್ಛತ್ರ ಪಂಗ್ತಿಯ ಪಸರಿಕೆಯ ಪಂಟಿಸಿತು(ತೊರರಾ.೬-೯-೧೭). ೭. ಮುಗ್ಗರಿಸು; ಎಡವು; ತತ್ತರಿಸು : ನುಸುಳ್ವ ಪೆಡಂಮಗುಬ್ಬಿ ಹೆಜಮೆಟ್ಟುವ ತಟ್ಟುವ ಮೇಲೆ ಪಾಯ್ವ ಪಂಟ[ಪಾಠಾಂ.ಠಿ]ಸುವ ಕೆಲಕ್ಕೆ ಸಾರ್ವ . . . ಅತಿದುಷ್ಟಮಪ್ಪ ಹಯಮಂ ಕುಡಲುಂ ಪಡೆದೀಯೆ ವಾಹಕಂ (ಧರ್ಮಪ. ೮-೧೩) ; ಕೊಳ್ಳದೀ ಧನುವೀತನುಬ್ಬಿನೊಳಳ್ಳೆಗೊಬ್ಬಿನೊಳೌಕಿ ತೊಡರಿನ ಘಲ್ಲಣೆಯ ಘನಕುಲಿಯೆ ಪಂಟಿಸಿ ನಿಮಿಷಮಾತ್ರದಲಿ ಬಿಲ್ಲು ಬಿಡದವನಿಯಲಿ ಬಿದ್ದನು (ಕುವ್ಯಾಆ. ೧೪-೨೧) ; ಎಂಟು ಗೇಣು ಶರೀರ ಒಂದು ಗೇಣು ಮಾಡಿ

ಕೊಂಡು ಪಂ[ಪಾಠಾಂ. ವಂ]ಟಿಸುತ್ತ ಮೆಲ್ಲಮೆಲ್ಲನೆ ಪೋಗಿ (ಪುರಂದ. ೧-೧೬೪-೨) ; ಚರಣವ ಅಂತರಂತರಕಿಟ್ಟು ದೂಂಟಿಸುತೆ ಪಂಟಿಸುತೆ . . . ಭೃಂಗಿ ನಟಿಸಿದ ನವನಾಟ್ಯವ (ಮದೇವು. ೧-೩೭). **ಪಂಠಿಸು :** **೨.** ಕಂಠೀರವೇಂದ್ರನ ಹಳೆಯ ಪೈಕದ ಬಲುವೊಂಟಿಯಗಾಜಿ ನಾಯಕರು ಪಂಠಿಸಿ ರಿಪುಗಳ ಮುಯಿಯಲಿಯದು ಮನಕಂಟಿಸಿದರು ಭೀತಿಯನು (ಕಂನವಿ. ೧೮-೧೦೪). **೪.** ನೂಕಿದರೆ ಹೆಜಿತೆಗೆವ ಹೆಜತೆಗೆದಾಕುವೌಕಿದ ಡೊತ್ತುವೊತ್ತಿದಡಾಕ್ಕೆಯಲಿ ಪಂಠಿಸುವ ಪಂಠಿಸೆ ಕೂಡೆ ಸಂಧಿಸುವ . . . ಜೋಕೆಯಲಿ ಕಾದಿದರು ಸಮಬಲರಾಹವಾಗ್ರದಲಿ (ಕುವ್ಯಾಗ. ೬-೨೬) ; ಪಂಠಿಸಿ ನಿಮಗಿದಿರಹರು ದುಷ್ಕೀರ್ತಿಗಳಂಟೆ ನಿರ್ನಾಮರಾಗುವರು (ಕಂನವಿ. ೧೨-೭೨); ಎಲವೊ ಸಾರಥಿ ಲೋಕಪಾಲರ ಗೆಲಿದು ನೆರೆ ನಿರ್ವಿಘ್ನದಾಯಕ ನೊಳಗೆ ಪಂಠಿಸಿ ಪ್ರಮಥವೀರರ ವಿಸಾರಿ ನಡೆತರಲು (ಅಂಬಿಕಾ.೩೯-೩೯). **೫.** ಕಡುತವಕದಿಂದೆ ಮನ್ಮಥನ ಹೂವಿನ ತೇರಿನೆಡಬಿಲದೊಳಿಟ್ಟಣಿಸಿ ಪರಿದು ಪಂಠಿಸಿ ಹೊಳಕಿ ನಡೆವ ಕಾಲಾಳ ವಂಗಡದ ಸಂದಣಿಯ ಸಂಭ್ರಮವ ನೇವಣ್ಣಿಸುವೆನು (ಚೆಬಪು.೩೫-೧೧) ; "ಲಾಗಹೊಡಿ" (ಚೆಬಪು. ಕೋಶ). **೮.** ಸ್ಪರ್ಧಿಸು : ಕನಲಿಕೆಯ ಹೊರಿಗೆಯಲಿ ತಮತಮಗೆ ಪಂಠಿಸಿ ವಿರಸ ದಿಂದಾಡುತ್ತಲಿರಲಂದರಸ ಗೆಲಿದನು ಸೋತ ಪುಷ್ಕರ ಸಭೆಯ ಮಧ್ಯದಲಿ (ಅಂಬಿಕಾ. ೪೮-೭೨). **೯.** ತಟ್ಟು; ಬಡಿ : ಶೂಲವನು ಹಿಡಿದಬ್ಬರಿಸಿ . . . ಬೊಬ್ಬೆಯ ತಾಳಿ ಪುನರಪಿ ಪಿಡಿದು ಮಗುಳಿ ಸುರಾಳಿ ಬೆದಱಲಿಕಿಟ್ಟು ಬಲು ಗೈಗಳನು ಪಂಟಿಸಿದ[ಪಾಠಾಂ. ಪರಚಿಸಿದ, ರೂಢಿಸಿದ, ವಿರಚಿಸಿದ, ಪಸರಿಸಿದ] (ತೊರಂರಾ. ೬-೪೯-೩೮). **೧೦.** ಮಿಶ್ರ ಮಾಡು : ನಿಶಿತ ಪರಿಮಳ ಮೋದದಿಂ ಮೋದಿಸುವ ಗಂಧದ್ರವ್ಯದಲಿ ಪಂಠಿಸಿದ ಜೀವನ ಜೀವ ತನ್ನಯ ಜೀವನವೆಯೆಂದು . . . ರಾಜನನೋಲಗಿಸುವವನೆ ಪಾನೀಯಧಾರಕನು (ಕುವ್ಯಾಉ. ೩-೯೩). [ಪಂಟು? + -ಇಸು$_3$]

**ಪಂಟು,** ಫಂಟ (ನಾ). ೧. ಜಂಬದ ಮಾತು ; ಒಣಹೆಮ್ಮೆಯ ಮಾತು : ನಾವು ಇರುವೆವು ಎಂಬ ಪಂಟಿನ ನುಡಿಯು ಸಾಕಾಯ್ತು (ಬಾಸಿಗ. ೪-೩) ; ಸಾಕು ನಿನ್ನ ಪಂಟು ; ಹೇಳುವೆಯೋ ಇಲ್ಲವೋ ? (ಭೂಮಿತಾ. ೧೬) ; ಹೊತ್ತರಗೊ ಗಂಟು ಬಡಿಯಬೇಡಿ ಪಂಟು (ಸೂರ್ಯಪಾ. ೫೦-೧೯). **ಫಂಟ :** **೨.** ಮೋಸ ; ಕಪಟ : 'ಫಂಟ ತನ' ಫರಾ. [?]

**ಪಂಟುಗಲ್ಲು** (ನಾ). (?) : ಅಲ್ಲಿಂದಂ ತೆಂಕಲು ತೇಕುಲೋಡಿನ ವೊಡ್ಡಿನ ಮುಗುಡ್ಡೆಯ ಹೊಲ ಪಂಟುಗಲ್ಲ ಶಾಸನ ಮೇರೆ ಅಲ್ಲಿಂದಂ ಪಡುವಲು ಅಗ್ರಹಾರ (ಸೌಇಇ.IX–ii, ೫೩೫-೩೧ ; 1531).
[ಪಂಟು ? + ಕಲ್ಲು(<ಕಲ್$_3$)]

**ಪಂಟುನುಡಿ** (ನಾ). ಹರಟೆಮಾತು ; ವ್ಯರ್ಥಾಲಾಪ : ಸೀತೆಯನ್ನು . . . ವಶಗೊಳಿಸಿಕೊಳ್ಳಬೇಕೆಂಬ ಅವನಾಡಿದ ಪಂಟುನುಡಿಗಳು ಅಂಥ ಕಲೆಯ ಎತ್ತರಕ್ಕೆ ಹೋಗುವುದಿಲ್ಲ (ಕಸಾಚ. ೨೬೬). [ಪಂಟು + ನುಡಿ$_2$]

**ಪಂಟುಬಡಿ,** ಪಂಟುಬಡೆ (ಕ್ರಿ). ಹೆಮ್ಮೆಯ ಮಾತನಾಡು; ಜಂಬ ಕೊಚ್ಚಿಕೊಳ್ಳು : ಇರ್ಲಿ ಹೋಗು ಪಂಟುಬಡೀಬ್ಯಾಡ (ತಿಮಗು. ೧೫); ಇರ್ಲಿ ಹೋಗವ್ವಾ ಯಾಕೆ ಪೀಡಿಸುವಿ ನಮಗ ನಿಮ್ಹಂಗ ಒಳಗ ತಿರುಳಿಲ್ಲದೆ ಮೇಲೆ ಮಾತ್ರ ಒಣ ಪಂಟುಬಡಿಯಲಿಕ್ಕೆ ಬರುವುದಿಲ್ಲ (ಕನ್ನಕ. ೧೫); ಒಣಾ ಪಂಟುಬಡೀಬ್ಯಾಡ (ಗಂಗಾಸಾ. ೪೩). **ಪಂಟುಬಡೆ :** ನನ್ನ ಮನಸ್ಸನ್ನು ತನ್ನ ಕಡೆಗೆ ಆಕರ್ಷಿಸಿಕೊಳ್ಳುವುದಕ್ಕಾಗಿ ಈ ಮೇರೆಗೆ ಪಂಟುಬಡೆದಿರಬಹುದು (ಕಸಿಂಹಾ. ೬೫); ಸುಮ್ಮನೆ ಪಂಟುಬಡೆಯಬೇಡ. ನಿನಗೆಲ್ಲವೂ ಗೊತ್ತಿದೆ (ಹಬ್ಬಬ. ೨೭೫) ; ಇಲ್ಲದ ಪಂಟುಬಡೆದು ನನ್ನ ತಲೆ ಎಬ್ಬಿಸಬೇಡ (ಮಣ್ಣಿಮ. ೨೩೯). [ಪಂಟು + ಬಡಿ$_1$]

**ಪಂಟುಬಡೆ** 'ಪಂಟುಬಡಿ' ನೋ.

**ಪಂಟುಹಚ್ಚು** (ಕ್ರಿ). = ಪಂಟುಬಡಿ : ಪಂಟುಹಚ್ಚಬೇಡ ; ಮದುವೆ, ಮರಣ ಎರಡರಲ್ಲಿ ಯಾವದು ಬೇಕಾದದ್ದು ಒಪ್ಪಿಕೋ (ಹುಚ್ಚಾಟ. ೭೯).
[ಪಂಟು + ಹಚ್ಚು$_1$(<ಪಚ್ಚು$_3$)]

**ಪಂಟುಹೊಡೆ** (ಕ್ರಿ). = ಪಂಟುಬಡಿ : ಪಂಟುಹೊಡೆಯಬೇಡಿರಿ ಮಹಾಶಯರೆ (ಶ್ರೀಕಾಂತ. ೧೨) ; ನೀ ಅರೇದವ ಅಂತ ನಿನ್ನ ಮುಂದ ಪಂಟು ಹೊಡಿತಾನ (ಗಂಮಾಯಿ. ೧೬) ; ನಮ್ಮ ಹತ್ತಿರ ಹೀಗೆ ಪಂಟುಹೊಡೆಯುವ ಈ ವ್ಯಕ್ತಿ . . . ನಾಯಿಯ ಹಾಗೆ ಇರಬಹುದು (ಪ್ರಶ್ನೆ.೧೩೧).
[ಪಂಟು + ಹೊಡೆ$_1$(<ಪೊಡೆ$_1$)]

**ಪಂಟೆ** (ನಾ). ಕೊಂಬೆ ; ರೆಂಬೆ : ಹೆತ್ತ ತಾಯ ಕರೆದುಕೊಂಡು ಹಿತ್ತಲೊಳಗೆ ಮುತ್ತಿನ ಗಿಡ ತೋಱಿಸಿದ ಪಂಟೆಪಂಟೆಗೆ ಎಂಟು ಎಂಟು ಗೊಂಚು ಗೊಂಚು ಜೋಲುತಿರಲು ಕಡಿದು ಕಡಿದು ರಾಶಿಹಾಕಿದ ಪರಮ ಪುರಂದರವಿಠಲರಾಯ (ಪುರಂದ. ೩-೧೧೬-೩). [?]

**ಪಂಠಿಸು** 'ಪಂಟಿಸು' ನೋ.

**ಪಂಡ**$_1$ (ನಾ). ನಪುಂಸಕ ; ಷಂಡ. [ಸಂ.]

**ಪಂಡ**$_2$ (ನಾ). (ಸಾಮಾನ್ಯವಾಗಿ ಉತ್ತರಭಾರತದ ಪುಣ್ಯಕ್ಷೇತ್ರಗಳಲ್ಲಿನ) ಪುರೋಹಿತ : ಪಂಡಿತನೆ ಪಂಡ ಅಥವಾ ಪುಂಡ ಪಶು ಕಲಿಯ ಖಂಡದಲಿ ಮೇಧಸ್ಸು (ನಸ್ಯಧ್ವ. ೧೩-೧೧) ; ಅತ್ತ ಶ್ರೀಯು ಒಂದು ಯಾತ್ರಿಕರ ಗುಂಪನ್ನು ಸೇರಿಕೊಂಡು ಭರಿಸ್ನಾದ ಶ್ರೀಕ್ಷೇತ್ರದ ಕಡೆಗೆ ಹೋಗುತ್ತಿದ್ದಳು. ಆದರೆ ಆ ಗುಂಪಿನಲ್ಲಿದ್ದ ಪಂಡನು ಅವಳ ಮೇಲೆ ಕಣ್ಣುಹಾಕಿದ್ದರಿಂದ ಅವರನ್ನು ಬಿಟ್ಟು ಒಬ್ಬಳೇ ಮುಂದುವರಿದಳು (ಬಂಕಿಮ. ೩೦೩). [←ಹಿಂ. ಪಂಡಾ]

**ಪಂಡಕ** (ನಾ). = ಪಂಡ$_1$ : ವನಿತಾಪಶುಪಂಡಕವರ್ಜ್ಯನಿವಾಸೋದ್ದೇಶ ದೆಡೆಗಳೊಳ್ ಚರಿಯಿಸುತುಂ ಮುನಿಪತಿ ವಿವಿಕ್ತಶಯ್ಯಾಸನವೆಂಬಯ್ದನೆಯ ತಪದೊಳುಪಗತನಾದೊಂ (ಸುಕುಮಾ. ೪-೮) ; ಸ್ತ್ರೀಪಶುಪಂಡಕ ವರ್ಜಿತ ಮಾಪತ್ಕರದಂಶಮಶಕ ಶೀತಾದಿಗಳುಂ (ಉಸಾರ. ೨೨-೧೯೫). [ಸಂ.]

**ಪಂಡಮಯ್ಯ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಪಣ್ಡಮಯ್ಯ ಆಳಟ್ಟಲಿ ಉಳ್ಳನ್ದು (ಎಕ. X, ಚಿಂತಾಮ. ೭೭-೧ ; ಸು. 1000?).
[ಪಂಡ? + ಅಮ(<ಅಮ್ಮ$_1$) + ಅಯ್ಯ$_1$]

**ಪಂಡಾಣೆ** (ನಾ). ಹಸಿಯ ಕೋಲು,—ದೊಣ್ಣೆ : ಪೊಂಜೆಳ, ಪಂಡಾಣೆ, ಪೊಂಡವಕೆ (ಶಬ್ದಾನು. ೮೦ ವ್ಯಾಖ್ಯಾನ).
[ಪಂ(<ಪಸಿ$_3$) + ಡಾಣೆ$_2$(<ಧಾಣೆ$_1$)]

**ಪಂಡಾಪೂರ್ವ** (ನಾ). ೧. ನಿಷ್ಫಲವಾದ ಅದೃಷ್ಟ. ೨. ಪರಲೋಕದಲ್ಲಿ ಯಾವ ಫಲವನ್ನೂ ಕೊಡದಿರುವ (ಇಹಲೋಕದಲ್ಲಿ ಮಾಡುವ) ಕರ್ಮ : ಫಲವಿಲ್ಲದೆ ಬರಿಯ ನಿತ್ಯನೈಮಿತ್ತಿಕಕರ್ಮಾನುಷ್ಠಾನದಿಂದ ಏನು ಸುಖವೆಂದರೆ . . . ಈ ಲೋಕದಲ್ಲಿ ಯಶಸ್ಸೇ ಮುಖ್ಯವಾಗಿ ಸುಖವಾಗಿರುವುದು . . . ಇದನ್ನೇ ಪಂಡಾಪೂರ್ವವೆಂದು ಆ ಸಿದ್ಧಾಂತದವರ ವ್ಯವಹಾರ (ಹಿಂದಸಾ. ೧೬೭). [ಸಂ.]

**ಪಂಡಿತ** (ನಾ). ೧. ದೊಡ್ಡ ವಿದ್ಯಾವಂತ ; ವಿದ್ವಾಂಸ : "ಧೀರಃ, ಧೀಮಾನ್ . . . ಪಂಡಿತಃ, ಸನ್, ಮನೀಷೀ, ಜ್ಞಃ, ದೋಷಜ್ಞಃ, ಕೋವಿದಃ . . . ಮತಿಮಾನ್—ಈ ೨೮ ವಿದ್ವಾಂಸರ್" (ಹಲಾಯು. ೫೫-೧೭೭) ; ಶೂರನೀತನೆ ಪಂಡಿತನೀತನೇ . . . ಧ್ರುವಮೆಂಬುದಾಧಾರ ವಿಂತವಧಾರಣದೊಳ್ ಗುಣಂ (ಕವಿರಾ. ೧-೧೪೦) ; ಈತನನೆಮಗೊಪ್ಪಿಸಿಮೆಲ್ಲಾ ಶಾಸ್ತ್ರಂಗಳುಮಂ ಕಲ್ಪಿಸಿ ಪಂಡಿತನಂ ಮಾಡಿ ನಿಮಗೊಪ್ಪಿಸುವೊಂ (ಪದ್ಮಾರಾ. ೭೪-೭) ; ಪಂಡಿತರುಂ ಮೂರ್ಖರುಮೆಕ್ಕೆಯಿಂ ಪೊಗಟಿಪೇಟಿಲ್ ಬಾಜಿಸಲ್ಕುಂ ಸರಸ್ವತಿಯಂ ಸಾಧಿಸೆ ಸಂದ ಸಯ್ಪು ಸವಣಂಗಳ್ಕುಂ ಪೆಱಂಗಳ್ಕುಮೇ (ಶಾಂತಿಪು. ೧-೮) ; ಪಂಡಿತನಾಗಲಿ ಮೂರ್ಖನಾಗಲಿ

ಸಂಚಿತಕರ್ಮ ಉಂಡಲ್ಲದೆ ಬಿಡದು (ಬಸವ. ೬೭೩) ; ಪಂಡಿತರಂ ಲಾಸ್ಯಕಳಾಮಂಡಿತರಂ . . . ತಣಿಪಿದಂ ವೃಷಭೇಂದ್ರಂ (ವೃಷವಿ. ೪೦–೮೯). **೨.** ದೇಶೀಯವೈದ್ಯವನ್ನು ತಿಳಿದಿರುವವನು ; ಆಯುರ್ವೇದವನ್ನು ಬಲ್ಲವನು : ಮೇಗರವಳ್ಳಿಯಲ್ಲಿ ಮಲೆಯಾಳದ ಪಂಡಿತರೆಂದು ಪ್ರಸಿದ್ಧಿ ಪಡೆದಿದ್ದ ಕಣ್ಣಾಪಂಡಿತರಿಂದ ಔಷಧಿ ತರಿಸಿಕೊಂಡಳು (ಮಲೆಮ. ೩೮) ; ಅಳಲೇಕಾಯಿಪಂಡಿತನಿಗೂ ಮಳಲೀಕೊಪ್ಪದ ಗ್ರಾಮಕ್ಕೂ ಜೋಡಿಯಲ್ಲವೇ ? (ಗಾದೆ). **೩.** ಭಾಷೆ, ಸಾಹಿತ್ಯ, ತರ್ಕ, ವ್ಯಾಕರಣ, ವೇದಾಂತ ಮೊದಲಾದ ವಿಷಯಗಳನ್ನು ಸಾಂಪ್ರದಾಯಿಕ ರೀತಿಯಲ್ಲಿ ಅಭ್ಯಸಿಸಿ ಪರಿಣತನಾಗಿರುವವನು: ಕನ್ನಡ ಪಂಡಿತರು ಇಂದು ಬಂದಿಲ್ಲ (ರೂಢಿ) ; ವ್ಯಾಕರಣಪಂಡಿತರು ತುಂಬಾ ಚೆನ್ನಾಗಿ ಕಲಿಸುತ್ತಾರೆ (ರೂಢಿ). [ಸಂ.]

**ಪಂಡಿತಂಮನ್ಯ** (ನಾ). ತಾನು ಪಂಡಿತನೆಂದು ಭಾವಿಸಿಕೊಂಡಿರುವವನು ; ವಿದ್ವಾಂಸನಲ್ಲದಿದ್ದರೂ ವಿದ್ವಾಂಸನೆಂಬ ಅಹಂಕಾರವುಳ್ಳವನು : ರಸಿಕತೆ ಸಾಲದ ಪಂಡಿತಂಮನ್ಯರೊಡನೆ ವಿವಾದ ಅನಗತ್ಯ (ಧ್ವನ್ಯಾಲೋ. ೧೨೮ ಅಡಿಟ). [ಸಂ.]

**ಪಂಡಿತತ್ವ** (ನಾ). ಪಾಂಡಿತ್ಯ ; ವಿದ್ವತ್ತೆ : ಈ ವಿಚಿತ್ರ ಕಳಂಬಖಂಡನ ಪಂಡಿತತ್ವವನು ನೀವು ತೋಱುರೆ ಸಾಕು (ಕುಮ್ಯಾಭ. ೩–೩೬). [ಸಂ.]

**ಪಂಡಿತಪುತ್ರ** (ನಾ). **೧.** ಪಂಡಿತನ ಮಗ. **೨.** (ಆಲಂ) ದಡ್ಡ : ಕನ್ನಡವಲ್ಲೇ ತೇರ್ಗಡೆಯಾಗದ ಪಂಡಿತಪುತ್ರರ ಪಡೆ ನಾವು (ತಲಾಲ. ೧೭–೬). [ಪಂಡಿತ+ಪುತ್ರ]

**ಪಂಡಿತಮಂಡಳಿ** (ನಾ). ವಿದ್ವಾಂಸರ ಸಭೆ ; ಪಂಡಿತರ ಸಮೂಹ: ಪಂಡಿತಮಂಡಳಿಗಂ ಕವಿಮಂಡಳಿಗಂ ತನ್ನ ಮನೆ ತವರ್ಮನೆಯೆನೆ ಕೆಯ್ಕೊಂಡು ಪೊಗಟ್ಟಪುದು . . . ಮಲ್ಲಪನಂ (ಅಜಿಪು. ೩–೨೮) ; ಪಂಡಿತಮಂಡಳಿಯಿಂದಮಖಂಡಿತಸಂಯಮಿಗಳಿಂ ಗುಣಪ್ರಣಯಿಗಳಿಂ ಮಂಡಿತಮಾ ಜನಪದಮಾಖಂಡಳನಿಭವಿಭವವಿಭುಗಳಿಂದನವರತಂ (ನೇಮಿಪು. ೧–೫೭). [ಪಂಡಿತ+ಮಂಡಳಿ(=ಮಂಡಲಿ)]

**ಪಂಡಿತಮರಣ** (ನಾ). [ಜೈನ] ಜ್ಞಾನಿಯಾಗಿ ಸಲ್ಲೇಖನದಿಂದ ಸಾವನ್ನು ಪಡೆಯುವುದು : ಇಂತಾ ಮಹಾನುಭಾವಂ . . . ಪಂಡಿತಮುನಿಜನಸ್ತುತಚಾರುಚರಣಂ ಪಂಡಿತಮರಣದೊಳ್ ವೀರಪ್ರಾಯೋಪಗಮನಸಂನ್ಯಸನಸಮಾಧಿಯಿಂ . . . ನಿಜಾಯುಷ್ಯಾಂತಮೆಯ್ದೆವರ್ಪುದುಂ (ಸುಕುಮಾ. ೧೨–೪೧ ಪ) ; ಸನ್ಯಸನವಿಧಿಯಿಂ ದಂಡಿತಕರಣನಾಗಿ ಪಂಡಿತಮರಣದಿಂ ಮುಡಿಪಿ ರತ್ನದಂತಿರಾಕಲ್ಪದೊಳುದಯಿಸಿರ್ದನಾ ಮಹಾಬಳಚರೇಂದ್ರನುಂ (ಅನಂಪು. ೧೨–೪೩ ಪ) ; ಸಲ್ಲೇಖನವನ್ನು 'ಪಂಡಿತಮರಣ'ವೆಂದೂ ಕರೆಯುತ್ತಾರೆ (ಕಶಾಅ. ೯೨). 'ಬಾಲಮರಣ' ನೋ.
[ಪಂಡಿತ+ಮರಣ]

**ಪಂಡಿತವಕ್ಕಿ** (ನಾ). ಮಾತನಾಡುವ ಜಾಣ್ಮೆಯುಳ್ಳ ಹಕ್ಕಿ ; ಗಿಣಿ ; ಶುಕ : "ಪಂಡಿತವಕ್ಕಿ ಕೀರನೊಳೆ" (ಕರ್ಣಾಶ. ೩೩) ; ಗಂಡುಪಂಡಿತವಕ್ಕಿ ಕೇಳ್ ಕಮಲಾಯತಾಂಬಕೆ . . . ನವೇಕ್ಷುಕೋದಂಡಸನ್ನಿಭನೊರ್ವನೊಪ್ಪಿರಲ್ಕೆದೆ ನಿಟ್ಟಿಸಿ ನೋಡಿದಳ್ (ಉದ್ಭಟ. ೭–೭೧) ; ಪಂಡಿತವಕ್ಕಿಯ ಮಾತನಾಡಿಸುತವೆ ಚಂಡವಿಕ್ರಮನೊಱಗಿದನು (ಮೋಹತ. ೧೮–೯೯) ; ತೊಂಡುಗೆಡೆವಗ್ಗದ ಪಂಡಿತವಕ್ಕಿ . . . ವಿಯೋಗಿಗೇಂ ಮಾಡದೆ ಪೋಕುಮೇ ಮದನನಂಡಲೆಯಂ (ಶಬಶಂ. ೧–೫೨). 'ಜಾಣ್ಪಕ್ಕಿ' ನೋ. [ಪಂಡಿತ+ಪಕ್ಕಿ]

**ಪಂಡಿತವರ** (ನಾ). ಪಂಡಿತರಲ್ಲಿ ಶ್ರೇಷ್ಠನಾದವನು ; ಉದ್ದಾಮವಿದ್ವಾಂಸ : ಪಂಡಿತವರಂ . . . ರಾಜೇಂದ್ರಚಕ್ರೇಶ್ವರಂ (ಹಮ್ಮಿರ. ೧–೨೭). [ಪಂಡಿತ+ವರ₂]

**ಪಂಡಿತವರ್ಯ** (ನಾ). = ಪಂಡಿತವರ : ಪಂಡಿತವರ್ಯಭೂಸಿತಸುಮಂಡಿತರುದ್ರಾಕ್ಷಭೂಷಿತಾಂಗರ್ (ವೃಷವಿ. ೪೦–೨೧). [ಪಂಡಿತ+ವರ್ಯ]

**ಪಂಡಿತಿಕೆ,** ಪಂಡಿತಿಕ್ಕೆ (ನಾ). ಪಾಂಡಿತ್ಯ ; ವಿದ್ವತ್ತು : ಇದು ಪಂಡಿತಿಕೆಯೆಂಬುದುತ್ತರವಾಕ್ಯಂ (ನೀತಿಪಾ. ೨೬–೫೩). **ಪಂಡಿತಿಕ್ಕೆ :** ಮಗನೆ ನಿನ್ನ ಪೊಟಿಲ್ಗೆ ನೀಂ ಪೋಗಿ ನಿನ್ನ ಕಲ್ತ ವಿದ್ಯೆಯುಂ ಪಂಡಿತಿಕ್ಕೆ [ಪಾಠಾಂ. ರ್ಕೆ]ಯುಮನಾ ಪೊಟಿಲೊಳ್ ನೆಗಟ್ಚಿ ನೆಗಟ್ದ ಪಂಡಿತರ್ಕಳೊಡನೆ ವಾದಂಗೆಯ್ದು ಗೆಲ್ದು (ವಡ್ಡಾರಾ. ೭೪–೧೩) ; ಒಂದೆಡೆಯೊಳೊಂದು ಕಂದದ ಮೊದಲುಮಂ ವೃತ್ತದ ತುದಿಯುಮನೊಂದುಮಾಡಿ ಪದಮಿಕ್ಕಿಯೋದಿ ಪಂಡಿತಿಕ್ಕೆಗೆ ಮುಯ್ಯಾಂತುಂ (ಪಂಪಭಾ. ೪–೯೪ ವ).
[ಪಂಡಿತ+–ಇಕೆ]

**ಪಂಡಿತಿಕ್ಕೆ** 'ಪಂಡಿತಿಕೆ' ನೋ.

**ಪಂಡಿತೆ** (ನಾ). ವಿದ್ಯಾವಂತಳಾದ ಹೆಂಗಸು ; ವಿದುಷಿ : ಪಂಡಿತೆಯೆಂಬ ಪೆಸರನಾ ಪ್ರಸ್ತಾವದೊಳ್ನನ್ನಿ ಮಾಡಿದ ಪಂಡಿತೆಯುಂಬೆರಸು (ಆದಿಪು. ೪–೮೧ ವ) ; ಪಂಡಿತೆ ನಾವೆಮ್ಮ ಮನೆಯೊಳಿದ್ದನ್ನವ ಕೊಂಡರೊಳ್ಳಿತೊ ಭುಕ್ತಿಗೆಮ್ಮ ಪೆಂಡಿರೊಳೊರ್ವಳ ಮನೆಗೆ ಹೋಹುದು ಲೇಸೊ ಕಂಡುದನುಸುರು ನೀನು (ಭರತೇ. ೮–೬೭). [ಸಂ. ಪಂಡಿತಾ]

**ಪಂಡಿತೋಕ್ತಿ** (ನಾ). ಪಂಡಿತರ ಮಾತು ; ವಿದ್ವಾಂಸರ ವಚನ : ಜನಪತಿ ಖನತೀಸರ್ಪಂ ಖನತಿ ಯೆನಲ್ ತಕ್ಕ ಪಂಡಿತೋಕ್ತಿಗೆ ದೊರೆಯಪ್ಪಿನಮಾಡಲ್ಕೆ (ಶಾಂತಿಪು. ೮–೩೯). [ಪಂಡಿತ+ಉಕ್ತಿ]

**ಪಂಡಿಪೊದಱ್** (ನಾ). ಒಂದು ಊರಿನ ಹೆಸರು : ಪಂಡಿಪೊದಱ ಎಮ್ಮೆ ತುಱುಗೊಳ್ ಅರಾಱುರನ್ ಆನೆಕಟ್ಟೆ ಇಕ್ಕಿಸಿ ಸತ್ತನ್ (ಮೈಆರ್. ೧೯೨೪,೪೭–೬ ; 9ನೆಯ ಶತ). [ ? ]

**ಪಂಡ್ರಿಕೆ** (ನಾ). ಒಂದು ಬಗೆಯ ತೆರಿಗೆ (?) : ಬೀಜವರಿಯೊಳಗಣ ಮಾಱಿ ಸಹಾ ಸಕಲ ಪಂಡ್ರಿಕೆ ಸುವರ್ನಾದಾಯ ಬಿರಾಡ ಜೋಡಿ ಆಯಸ್ವಾಮ್ಯ ಮೊದಲಾದ ರೊಕ ಧಾನ್ಯ ಸಹವಾಗಿ ಸರ್ವಮಾನ್ಯವಾಗಿ ದೇವಭಂಡಾರಕ್ಕೆ ಸಮರ್ಪಿಸಿದೆವು (ಸೌಇಇ. IX–ii, ೬೬೮–೫ ; 1559). [ ? ]

**ಪಂತ₁,** ಪಂಥ₁, ಪಂದ, ಪಂದ್ಯ, ಪಣಿದ₂, ಹಂತ₁, ಹಣಿದ₂, ಹೊಂತ₂ (ನಾ). **೧.** ಪಣ ; ಪ್ರತಿಜ್ಞೆ; ಶಪಥ : ಪಂತ [ಪಾಠಾಂ. ಥ] ಮಱಿದು ಪಾಡಱಿದು ಬಂಟರ ಮಿಗೆ ಸಂತೈಪ ಗಡ ಸಮರದೊಳು (ಕುಮಾಸಾಂ. ೯–೯) ; ಆ ವೇಳೆಯೊಳೊರ್ವ ಬಿರುದಂಕನಾಯಕಂ ಪಂತಮಂ ಪೇಳುತಿರ್ದಂ (ಹಮ್ಮಿರ. ೩–೩೧ ವ) ; ಗಂಡಸುತನವೆತ್ತು ನುಡಿದ ಪಂತದ ಹೆಮ್ಮೆಗಂಡು ವೃಂದಾರಕರುಗಳ ಹಿಂಡು ಬದುಕಿತೆಂದು ಜೀವನು ಕಳುಹಿಸಿಕೊಂಡಡರಿದ ಸುರಪುರಿಗೆ (ಮೋಹತ. ೫–೬೨) ; ಎಂತೀ ಮಗುವನು ಸಲಹುವೆನು ಹುಯ್ಯಲು ಇಡುವಾ ಸಾಧ್ವಿಯ ಮಕ್ಕಳ ಪಂತದಿ ಬೆಳೆಯಿಸಿ ನಡೆಸುವೆನು (ಕವಿಸೋ. ೫೫–೮). **೨.** ಹಟ ; ಛಲ : ತವೆ ಪಂತವೆ ಪಂಕಜಾಕ್ಷಿಯೊಳ್ (ರಾಜಶೇ. ೧೧–೧೪೦) ; ಎಂಟು ಕಿನ್ನೂರ ನುಡಿದ್ದಾಂಗ ನನ ಗೆಳತಿ ಪಂತ ನಿನಗ್ಯಾಕ ದನಿಗೋಡ (ಕನ್ನಜಾ. ೫೨) ; ಪಂಕ್ತಿಯಲ್ಲಿರುವವನಿಗೆ ಪಂತವಿರಬಾರದು(ಗಾದೆ). **೩.** ಸ್ಪರ್ಧೆ; ಮೇಲಾಟ: "ಪಂತ(ಥ)—ಪಣಿತ=ಸ್ಪರ್ಧೆ"(ತದ್ಭಕೋ. ೨೪) ; ಪೊರೆಯೊಂ ಪಂತಮುಮಿಲ್ಲದಂತೆ ಮನದೊಳ್ ನಿಷ್ಕಾರಣಂ ಕಾಯ್ವರಂ ಪರಚಿಂತಾಕರ ಏಹಿ ಎಂಬ ನುಡಿಯುಂ ಮುಂ ಕೇಳ್ದೆನಿಲ್ಲಾಗದೇ (ಪಂಪಭಾ. ೭–೩೫) ; ಹೊಂತಕಾಱಗಳಾಗ ರಾಯಮೋಹರದಲಿ ಪಂತದೊಳೆಸೆದರುಬ್ಬಿನಲಿ (ಕಂನವಿ. ೧೫–೨೧) ; ಕಾರ್ವಗಲವ್ವಳಿಪಂತೆ ಪಂತದಿಂದೆಸಗಿತು ಸುತ್ತಮುತ್ತಿಗೆಯನೊತ್ತರದಿಂ ಮುಗಿಲೊಡ್ಡುವಂದದಿಂ (ಚಿಕವಿ. ೨–೧೦೬). **೪.** ಜೂಜು ; ಪಂದ್ಯ : "ಶಠ—ಕೈತವೇ ಚ, ಜೂಜಿನೊಳ್, ಪಂತದೊಳಂ" (ಕಾಶಕ್ಕ. ೨೨). **೫.** ಜೂಜಿನಲ್ಲಿ ಒಡ್ಡುವ ವಸ್ತು ; ಪಣ ; ಒತ್ತೆ ; ಬಾಜಿ :

ಮೊದಲು ಧರ್ಮರಾಯನು . . . ದ್ರೌಪದಿಯನ್ನೂ . . . ತಮ್ಮಂದಿರನ್ನೂ ಏಕಕಾಲದಲ್ಲಿ ಪಂತವಾಗೊಡ್ಡಿ ಪಗಡೆಯನ್ನಾಡಿ ಪರಾಜಿತನಾಗಿ ಕ್ಲೇಶಪಟ್ಟದ್ದನ್ನು ನೀನು ಕೇಳಿಯಿಲ್ಲವೇ ? (ಕೃಪಾವಿ. ೧೧೭) ; ಪಂಚಮ ಶಾಲೆಯವರ ಕಂಚು ಪಂತಕ್ಕೆ ಸಿಕ್ಕೀತೇ ? (ಗಾದೆ). **೬.** ಜಂಬ ; ಗರ್ವ ; ಅಹಂಕಾರ : "ಉಕ್ಕೆವಂ . . . ಪಂತ . . . ಅಪಟು— ಈ ೭ ಗರ್ವಂ" (ಕಶಸಾ.೫೬–೨೩೧). **ಪಂಥ$_1$ : ೧.** ಇದು ಕಡಲಂದದೆ ಕಡುಗಡಿದಿದಱಿಕೊಳಗಾನಿವನನಿಕ್ಕಿ ಕೋಪಮನಾಱುವ್ಪದೆ ಪಂಥಮೆಂದು ಬಂದು ತದಗ್ರದೇಶಕ್ಕೆ ಕೋಣಪಂ (ಚಂದ್ರವು. ೫–೪೨) ; ಭಾನುಸನ್ನಿಭ ಮರಳು ಭೂಪನ ಹಾನಿವೃದ್ಧಿಗಳೆಲ್ಲ ನಿನ್ನದು ನೀನು ಪಂಥದ ಜಾಣನಲ್ಲಾ ವಿಜಯನಾಗೆನಲು (ಕುಮ್ಯಾದ್ರೋ. ೧–೩೨) ; ಅಳಿಯನೆಂದೊಡೆ ಅಳಿಯನೇ ಚಲವಳಿಯ ಚಾಗವನಳಿಯ . . . ಪಂಥವನಳಿಯ (ಸಾಳ್ವಭಾ. ೧–೩೧). **೨.** ತರಳರರ್ಜುನ ಸಾತ್ಯಕಿಗಳವದಿರಿಗೆ ಪಂಥವದೇಕೆ ನಿಮ್ಮನು ಗುರುಡಿಯಲಿ ವಂದಿಸುವ ವಂದನೆಯುಂಟೆ ಸವರರದಲಿ (ಕುಮ್ಯಾದ್ರೋ. ೧೨–೧೫). **೩.** ಪುರುದೇವಂ ದೇವದೇವಂ ಕುಡೆ ಪಡೆದ ನೆಲಕ್ಕಾರೊಳಂ ಪಂಥ ಮುಂಟೇ (ಆದಿಪು. ೧೪–೭೭) ; ಇಂತೆಸೆವ ಇಂಗಡಲ ಮಧ್ಯದೊಳು ತಾರಾದ್ರಿ ಪಂಥದಿಂ ಬೆಳೆದು ತನಗಾರು ಸರಿಯಿಲ್ಲವೆಂಬಂತೆ (ಪ್ರಾಥಂ. ೧–೨೮). **೭.** ಸಾರುವುದು ; ಘೋಷಣೆ : ಇನ್ನು ಪೇಳುವೆ ಚನ್ನರಾಮನ ಕೃತಿಯನು ಚೆನ್ನಾಗಿ ಕೇಳಿ ಸಜ್ಜನರು ಮುನ್ನಿನ ಪಾಂಡವ ಶೌರ್ಯ ಪಂಥದಿ ಬಣ್ಣಿಸುವೆನು ಧರೆಯೊಳಗೆ (ಕುಮಾಸಾಂ. ೧೧). **೮.** ಸ್ಪರ್ಧೆಯಿಂದ ಆಡುವ ಕ್ರಿಕೆಟ್, ಕಾಲುಚೆಂಡು ಮುಂತಾದ ಆಟ : ಕಾಲುಚಂಡಿನ ಪಂಥ ನಡೆಯುತ್ತದೆ (ಜೀವಾತ್ಮ. ೩೨). **ಪಂದ: ೧.** ಶ್ರೀಮಹಾಬಲಿ ಬಾಣರಸರ್ ಪೆರ್ಮಾನಡಿಗಳ್ಬಾಣರಸರಾ ಮಹಾರಾಜರಾನೊಡಗೊಣ್ಡು ನೊಟಿವ್ಪು ರಾಚಮಲ್ಲ ಮಯಿನ್ನಾದಿಯ ಪಡಿಗನಾ ಮೇಗೆ ಪಂದಮುಯ್ದು (ಎಕ. X, ಮುಳಬಾ. ೨೨೮–೫ ; ಸು. 890 ?) ; ಬೇಡ ಮಗನೆ ಪಂದದ ಮಾತು ಕಲಿಕಾಮ ನಾಡಾಡಿಯಲ್ಲ ಮಾರಾಂತಕ (ತ್ರಿಭುತಿ.೧೭–೪೮). **ಪಂದ್ಯ : ೪.** ಪ್ರಾಣಿಗಳ ಪಂದ್ಯವು ಪ್ರಾಣಿದ್ಯೂತವು (ಗುರುಬಾ. ೩೪೧). **೫.** ಭೀದದಲಿ ಕಲಿಪುರುಷ ಮಾಯೋಪಾಧಿಯಲಿ ಪುಷ್ಕರನ ಜೂಜಿನ ವಾದದಿಂದರೆಗಳಿಗೆಯಲಿ ಗೆಲಿಸಿದನು ಪಂದ್ಯ [ಪಾಠಾಂ. ವಸ್ತು]ಗಳ (ನಳಚ. ೪–೨೮) ; ಉಳಿದವರಿಬ್ಬರೂ . . . ಪಂದ್ಯವನ್ನಿಡುವುದಕ್ಕೆ ನಿಶ್ಚಯಿಸಿ ಗೆದ್ದವರಿಗೆ ಸೋತವರು ನೂರು ರೂಪಾಯಿಗಳ ಪಂದ್ಯವನ್ನು ಕೊಡುವುದೆಂದು ಸಮ್ಮತಿಸಿದರು (ಕವಿಕ. ೬೨) ; ಪಂದ್ಯಕೊಡ್ಡಿರುವ ಸಿರಿಯ ರಾಶಿಯನು ಚದುರ ಜೂಜಿನವ ಕುಗ್ಗಿಪೊಲು ಮನುಜಜೀವನದ ಪರಿಮಿತಿಯಳಿಸುತ ದೇವಿಯು ಬರುತಿಹಳು ! (ಭಾವಗೀ.೧೦೩). **೮.** ಎಂ.ಜಿ.ಎಸ್.ಪಂದ್ಯಕ್ಕೆ ನಾನು ಆ ವರ್ಷ ಹೋಗುವುದಂತೂ ಖಂಡಿತವೇ ಆಗಿತ್ತು (ಅಲಹೂ.೫೩). **ಪಣೆದ$_2$ : ೫.** ನೆತ್ತದೊಳ್ ಬಿತ್ತರಂದೋಱುತೆ . . . ಕೊಯ್ಲೊವಿಂಡರಂ ಪಣೆದದಿಂ ಮಣಿಯಿಸುತ್ತೆ ಸುತ್ತೇನೋ ರಸವಕ್ತ್ರ ಹಾಸ್ಯ ಸಗ್ರಾಮ್ಯೋಕ್ತಿವೃತ್ತಿಗಳನೆಸಪ ಸಖರಿರವಱಿದು ಮನ್ನಿಸುತೆ ಮತ್ತಶುಕಕೇಕಿ ಹಂಸಾದಿಗಳೊಡನೆ ಬಿನದಿಸುತ್ತೆಸೆದುದಬಲಾಜನಂ (ಪದ್ಮರಾ.೮–೮೮). 'ಪಣೆದಂಬೊಯ್$_2$' ಪರಾ. **ಹಂತ$_1$ : ೧.** ದಾಳಿ ಬಂದುದೊ ತಲ್ಲಣಿಸದಿರಿ . . . ಶೂಲಿಭಕ್ತನು ಸತ್ತನೋ ಈ ಕೇಳಿಕೆಗಳೇಂ ಹಂತವಂ ಮುಱಿದಾಳಿನಂತೆ ನಿಗುರ್ದಪಿರಿ ಸಂಕಿಸದೆ ಬಿಂಕದಲಿ (ಬಸವು. ೫೬–೧೬). **ಹಣೆದ$_2$ : ೩.** ಹಾಡುವರು ಕೆಲರಲ್ಲಿ ಕೈಹೊಯ್ದಾಡುವರು ಕೆಲರಲ್ಲಿ ಹಣೆದವನಾಡುವರು ಕೆಲರಲ್ಲಿ ಜೂಜಾಡುವರು ಕೆಲವರು (ಕೊಲ್ಲಾ.ಪ.೯.೭). **ಹೊಂತ$_2$ : ೩.** ಹೊಂತಕಾರ$_2$' ಪರಾ.

ಪಂತ ಮಾಡು = ಪಣ ತೊಡು; ಪ್ರತಿಜ್ಞೆ ಮಾಡು: ಪಂತ ಮಾಡು ತಲವಳು ನೀಡದಿಹ ಹಿರಿಯ ಅಂತರ್ಯಶಾಂತಿಯನು ನೀನು ನೀಡು (ಅರುಣ. ೧೧–೧೭) ; ಜಯಮಲ್ಲನ ತಲೆಯನ್ನು ಬೆಲೆಗೊಳ್ಳದೆ ಬಿಡೆನೆಂದು ಪಂತ ಮಾಡಿ ಅದರಂತೆಯೇ ಅವನನ್ನು ಕೊಂದನು (ಆರ್ಯಕೀ. ೩೮).

**ಪಂತವಾಸಿ** = ಪ್ರತಿಜ್ಞೆ : ಅಗಸನ ಮನೆ ಕೊಳ್ಳೆಯಾಯಿತು. ನಾಯಿಯು ಪಂತವಾಸಿ ಗೆದ್ದಿತು (ಕಥಾಮು. IV, ೧೯೨). **ಹಂತವಂ ಮುಱಿ, ಹಂತವ ಮುಱಿ** = ಗರ್ವವನ್ನು ಮುರಿ ; ಅಹಂಕಾರವನ್ನು ನಾಶಪಡಿಸು : ಸುರಹೊನ್ನೆಬಸದಿಯೊಳಗಿಪ್ಪರುಹನ ಹಂತವಂ ಮುಱಿದೊಡೆದು ನಿಲಿಸಿದಪೆನು (ಸೋಮಚ. ೩–೬೪) ; ಬೇಡವೋ ಇಲಿಚಯ್ಯಾ ನಿನಗಂಜರು ನಿನ್ನ ಗಣಪತಿಗಂಜರು ಕೂಡಲಚೆನ್ನಸಂಗನ ಶರಣರು ಕಂಡಡೆ ನಿನ್ನ ಹಲ್ಲ ಕಳೆವರು ಹಂತವ ಮುಱಿವರು (ಚನ್ನವ. ಕ. ೫೩೮–೧೧೬೬) ; ಹಂತವ ಮುಱಿಯ ಬಂದಸುರರಿಗಿದಿರ್ವಂದು ನಿಂತಿರೆ ಕಂಡು ಸೈರಿಸದೆ (ಮೋಹತ. ೧೨–೩೪).

[ದೇ.‖ ತಮಿ. ಪನ್ತಯ ; ಮಲ. ಪಂದಯ ; ತುಳು. ಪಂತೊ; ತೆಲು. ಪಂತ, ಪಂದಿಯ,ಪಂದೆಂ, ಪನ್ನಿದ. / ಪ್ರಾ. ಪಣಿಅ. / ಸಂ. ಪಣಿತ]

**ಪಂತ$_2$**, ಹಂತ$_4$, ಹೊಂತ$_3$ (ನಾ). ೧. ದಾರಿ ; ಮಾರ್ಗ : ಪಂಥ = ಪಂತ (ಶಬ್ದಾನು. ೧೪೨ ಪ್ರಯೋ.). ೨. ನಡವಳಿಕೆ ; ಪದ್ಧತಿ ; ಧರ್ಮ : ಪಲಾಯನವಕಟಕಟ ಪಾರ್ಥಿವರ ಪಂತ[ಪಾಠಾಂ. ಥ]ವೆ ಮರಳಿ ನಿಂದಿರು ಕೊಲುವುದಿಲ್ಲೆಂದ (ಕುಮ್ಯಾವಿ. ೮–೭೫) ; ರಘುಕುಲ ವಾರ್ಧಿರಾಕಾಶಶಾಂಕಂ ತಾನೆ ಮೈದೋಱುವನ್ನೆಬರಂ ಕ್ಷತ್ರಿಯರ ಪಂತಮಂ ಬಿಡದೆ ಬಿಡದೆ ಹಯಮುಮಂ ಕಟ್ಟಿ ಕಾದುವೆನೆಂದು ನೀಡುಂ ಬಗೆದು (ರಾಮಾಶ್ವ. ೧೪೧–೨೫). ೩. ಪದವಿ ; ಸ್ಥಾನ ; ಅಧಿಕಾರ: ಶ್ರೀಕಲಿವಿಟ್ಟರಸರ ಬೆಸದೊಳಶೀತನಾಡೊಡಾತನ ಗಾವುಣ್ಡಿಗರಸನ್ನಾಟಾಂಗಾವುಣ್ಡ ಪಂತಮುನಿತ್ತೊಡೆ ಜಕ್ಕಿಯಬ್ಬೆ ನಾಟಾಂಗಾವುಣ್ಡುಗೆಯ್ಯುತ್ತಿರೆ (ಎಕ. VII, ಶಿಕಾರಿ. ೨೧೯–೧೧ ; 918). **ಹಂತ$_4$ :** ೧. "ಹಂತ (ಹೊಂತ) — ಪಂಥ = ಮಾರ್ಗ" (ತದ್ಭಕೋ. ೪೮); ಪಂಥ = ಹಂತ (ಶಮದ. ೨೫೮ ಪ್ರಯೋ.). **ಹೊಂತ$_3$ : ೧.** "ಹಂತ (ಹೊಂತ)—ಪಂಥ = ಮಾರ್ಗ" (ತದ್ಭಕೋ.೪೮); "ಹೊಂತ = ಹಾದಿ" (ಜಾನಕೋ.೬೦). [<ಸಂ. ಪಂಥಾ]

**ಪಂತ$_3$**(ನಾ).೧.ವಿದ್ವಾಂಸ ; ಪಂಡಿತ:(ಹ). ೨.ಉಪಾಧ್ಯಾಯ:(ಹ). ೩. ಮಹಾರಾಷ್ಟ್ರದ ಕೆಲವು ಬ್ರಾಹ್ಮಣರು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳುವ ಒಂದು ಉಪಪದ : ಪಂತರು ಹೊತ್ತುಂಟಲೆ ಮನೆಗೆ ಹೋಗಲಿಕ್ಕೆ ನಮಗೆ ಅಪ್ಪಣೆ ಕೊಟ್ಟರು (ಮುಂಬಯಿ.೧–೩೩). [←ಮರಾ. ಪಂತ./ಸಂ. ಪಂಡಿತ]

**ಪಂತಂಗಟ್ಟು**, ಪಂತಕಟ್ಟು, ಪಂದ್ಯಕಟ್ಟು (ಕ್ರಿ). ೧.ಸ್ಪರ್ಧಿಸು : ಸಗ್ಗಿಗರಾಣ್ಮನೆಂದು ಸಭೆಯಂ ಶ್ರೀಧರ ಕೃಷ್ಣರಾಜಸಭೆಯಂ ಪೋಲಲ್ಕೆ ಮುಂ ಪುಟ್ಟಿಯುಂ ಪಂತಂಗಟ್ಟಿಯುಮಾಱವಂತೆ ಪೊಸತಂ ಪ್ರಾಚೀನಮೇಂ ಪೋಲ್ಗುಮೇ (ಮೈಸೂಮ.೫–೨೯). **ಪಂತಕಟ್ಟು : ೨.** ಜೂಜಿನಲ್ಲಿ ಒತ್ತೆಯನ್ನು ಇಡು; ಪಣವನ್ನು ಒಡ್ಡು. ೩. ಪ್ರತಿಜ್ಞೆ ಮಾಡು ; ಪಣತೊಡು : ಹಂತಿಯದು ಹಾಡೆಂದು ಪಂತಕಟ್ಟಲು ಬೇಡ (ಕನ್ನಜಾ. ೨೧೫). **ಪಂದ್ಯಕಟ್ಟು : ೨.** ಪಂದ್ಯಕಟ್ಟುವುದು ಮತ್ತು ಜೂಜು (ಭಾಧಾನ. ೨೯೦). [ಪಂತ$_1$ + ಕಟ್ಟು$_1$]

**ಪಂತಕಟ್ಟು** 'ಪಂತಂಗಟ್ಟು' ನೋ.

**ಪಂತಗಾರ** 'ಪಂತಗಾಱ' ನೋ.

**ಪಂತಗಾಱ**, ಪಂತಗಾರ, ಪಂಥಗಾರ, ಪಂಥಗಾಱ, ಹೊಂತಕಾರ$_2$ (ನಾ). ೧. ಹಟಗಾರ; ಛಲಗಾರ: (ಹ). ೨.ಜೂಜುಗಾರ : (ಹ). ೩. ಗರ್ವಿ ; ಅಹಂಕಾರಿ : (ಹ). ೪. ಗ್ರಾಮದ ಆಯಗಾರರಲ್ಲಿ ಒಬ್ಬ : ಸುಂಕ ತಳವಾಱ ಅನುಪು ಮಗಮೆ ಚಲವಾದಿ ಸಂಗೆಡಿ ಪಂತ

ಗಾಜಿರಿಗೂ ಇದೇ ಭಾಷೆ (ಸೌಇಇ. IX–ii, ೫೩೨–೨೦ ; 1530).

**ಪಂತಗಾರ :** ೫. ಪ್ರತಿಜ್ಞೆ ಮಾಡುವವನು; ಪಣತೊಡುವವನು : ಪಂತಗಾರರ ಪರಬಲ ಸಂತವಿಡುವನು (ಸೌಂದಕಾ. ೨–೪೫). **ಪಂಥಗಾರ :** ೫. ನಿರ್ದೋಷಪಕ್ಷ ಕೃತಿಯ ನಿರ್ವಿಸುವೆನೆನ್ನುವ ಪಂಥಗಾರ ! ಹಂಬಲ ವೇನೊ ಹಿರಿದು (ಉಯ್ಯಾಲೆ. ೨೫–೧). **ಪಂಥಗಾಱ : ೨.** ಘಲಘಲ ನುಱುವ ಪಲವು ಪಂಥಗಾಱರ ನೆಲೆಗೆಡಿಸುವ . . . ತುರಗವ ಗಣನೆಯಿಲ್ಲದೆ ತೋಱಿದರು (ಅಂಜಚ. ೬–೪೯); ಗಾಯವಡೆದ ಕಾಳ್ಪಂದಿಯಂತಜಂ ಪೊಸರಥದೊಳ್ಬೆದಿ ಬಿಲ್ಲಾಳ್ಪಂಥಗಾಱ ನೀನಹುದೆನುತ್ತ (ಚೆಬವು. ೩೧–೪೯).

**ಹೊಂತಕಾರ**$_2$**: ೬.** ಹುರುಡಿಸುವವನು; ಸ್ಪರ್ಧಾಳು : ಹೊಂತ ಕಾರರೆಲ್ಲ ಓಟದ ಗದ್ದೆಯಲ್ಲಿ ಒಬ್ಬರ ಮೈಗೆ ಒಬ್ಬರು ಅಂಟಿದಂತೆ ಸಾಲಾಗಿ ನಿಂತರು . . . 'ಹೊಂತಕಾರರೆಲ್ಲ ಬಂದಿರಾ ?' ಗ್ರಾಮತಕ್ಕ ಕೆಸರಗದ್ದೆ ಗಿಳಿದು ಕೇಳಿದ (ಹುಲಿಹಾ. ೩೧). [ಪಂತ$_1$ + –ಕಾಱ]

**ಪಂತಡಿ** (ನಾ). [ನಾಟ್ಯ] ಒಂದು ಬಗೆಯ ಲಾಸ್ಯ : ಸಾರಿ ಕುಮ್ಮಿ ಪಂತಡಿ ಇವು ಲಾಸ್ಯಗಳು (ಭಾರದ. ೫೫೭). [ ? ]

**ಪಂತಪಾಡು,** ಪಂಥಪಾಡು$_1$ (ನಾ). ೧. ಶಪಥದ ಘೋಷಣೆ; ಪ್ರತಿಜ್ಞಾ ವಾಕ್ಯ ; ಪ್ರತಿಜ್ಞೆಯ ಉಗ್ಗಡಣೆ : ತಮ್ಮ ಕೇಣದ ಪಂತಪಾಡಿನ ಸೇಡನ್ನು ತೀರಿಸಿಕೊಳ್ಳದೆ ಬಿಡುವುದಿಲ್ಲ (ಮಂತ್ರಶ. ೪೮–೨೪).

**ಪಂಥಪಾಡು**$_1$ **: ೧.** ಚೂಣೆಗಾಳೆಗದ ಭಟರೆತ್ತಿದರ್ಪಂಥಪಾಡುಗಳ ನಸಿತಧ್ವಜಂ ನಡೆದನರ್ಜುನನ ಮೇಲೆ (ಜೈಮಿಭಾ. ೯–೧೫) ; ನರಸರಾಜನ ಈ ಅಸಮಾನವಾದ ಪರಾಕ್ರಮದ ಆಯತವನ್ನು ನೋಡಿ ರಣದುಲ್ಲಾ ಖಾನನ ಪಂಥಪಾಡುಗಳೆಲ್ಲವೂ ಹೇಳ ಹೆಸರಿಲ್ಲದೆ ಹೋದವು (ಕವೀರ.೧೧೪). **೨.** ಸ್ಪರ್ಧೆ ; ಸೆಣಸಾಟ ; ಹೋರಾಟ : ಮೂಡಿದ ವಿರಕ್ತಿಯಿಂ ನಾಚಿ ಮನದೊಳ್ಪಂತಪಾಡಿವನೊಳಿನ್ನು ಸಲ್ಲದು ತನಗೆ ಕಾರುಣ್ಯಕೀಡಾದ ಬಳಿಕದೇತಕೆ ಸಮರವೆನುತ (ಜೈಮಿಭಾ. ೪–೫೦). 'ಪಾಡುಪಂತ' ಪರಾ. [ಪಂತ$_1$ + ಪಾಡು$_2$]

**ಪಂತಪೌರುಷ** (ನಾ). ಹಟದಿಂದ ಕೂಡಿದ ಪರಾಕ್ರಮ; ಛಲದಿಂದ ಉಂಟಾದ ಶೌರ್ಯ,— ಸಾಹಸ : ಇಂತು ಬಲುಬಗೆಯಿಂದ ತಮ್ಮಯ ಪಂತಪೌರುಷ ಮೆರೆಯೆ . . . ಕಾದಿಹರು ಪಯಪಾಡಿನಲಿ ಸಮವಾಗಿ (ಕೋಗಯ. ೧೦–೫೦). [ಪಂತ$_1$ + ಪೌರುಷ]

**ಪಂತಪೌರುಸ** (ನಾ). = ಪಂತಪೌರುಷ : ಇಂತೆಂದು ಕಂಠೀರವ ನರ ಸೇಂದ್ರನ ಪಂತಪೌರುಸವ ಪೊಗಳುತ (ಕಂನವಿ. ೧೩–೬೯). [ಪಂತ$_1$ + ಪೌರುಸ]

**ಪಂತಮಣೆ** (ನಾ). ಅಟ್ಟಗುಳಿ ಮಣೆ : ಪಂತಮಣೆಗೆ ಹುಣಸೆಬೀಜ ತೆಗೆದುಕೊಂಡು ಬಾ (ರೂಢಿ). [ಪಂತ$_0$ + ಮಣೆ]

**ಪಂತವಾತು** (ನಾ). ಪಣತೊಡುವ ಮಾತು ; ಪ್ರತಿಜ್ಞೆ : ಇಂತು ಮಹಿಶೂರಭಟರೋರಂತುಸಿರ್ದರ್ ಪಂತವಾತುಗಳ ಪಸುಗೆಗಳೊಳ್ (ಅಸ್ರತಿ. ೭೧–೧೫). 'ಪಂತಪಾಡು' ಪರಾ. [ಪಂತ$_1$ + ಮಾತು$_1$]

**ಪಂತವೊಡ್ಡು** (ಕ್ರಿ). ಜೂಜು ಮೊದಲಾದ ಸಂದರ್ಭಗಳಲ್ಲಿ ಪಣ ವೊಡ್ಡು : ಅವನಿಗೆ ಇಸ್ಪೀಟು ಚಟ ಎಷ್ಟು ಇದೆ ಅಂದರೆ ತನ್ನನ್ನೇ ಬೇಕಾದರೂ ಪಂತವೊಡ್ಡಿಕೊಳ್ಳುತ್ತಾನೆ (ರೂಢಿ). [ಪಂತ$_1$+ಒಡ್ಡು$_1$]

**ಪಂತಹಾಕು** (ಕ್ರಿ). ಪಣತೊಡು; ಪ್ರತಿಜ್ಞೆ ಮಾಡು: ಪಂತ ಹಾಕಿದವರ ಹತ್ತಿರ ಶಾಂತರಾಗಿರಬೇಕು (ಗಾದೆ); ಅವರು ಈ ಸಾರಿ ಓಟು ಬರದಿದ್ದರೆ ನಮ್ಮ ತಾಲ್ಲೂಕಿಗೆ ಕಾಲಿಡುವುದಿಲ್ಲವೆಂದು ಪಂತಹಾಕಿದ್ದರು (ರೂಢಿ). [ಪಂತ$_1$ + ಹಾಕು (<ಪಾಯ್ಕು$_1$)]

**ಪಂತಿ,** ಪಂಗತಿ, ಪಂಗ್ತಿ, ಬಂತಿ, ಹಂತಿ$_1$ (ನಾ). **೧.** ವಸ್ತುಗಳ ಹಾಗೂ ವ್ಯಕ್ತಿಗಳ ಸಾಲು,—ಓಳಿ : "ಆಳೀ (೩), ಶ್ರೇಣೀ (೩), ಆವಳೀ, ಪಂಕ್ತೀ, ವೀಥೀ, ರಾಜೀ(೩)—ಈ ೬ ಪಂತಿ" (ಹಲಾಯು. ೧೯೯–೩೬) ; ಪಶ್ಚಿಮಮುಖದೆ ಸನ್ನ ಬಹುಮೂಲಿಕ ಪನ್ತಿಯೆ . . . ಉತ್ತರಾಮುಖದೆ ಸಂದ ಬಹುಮೂಲಿಕ ಪನ್ತಿಯೆ . . . ಕೂಡಿತ್ತು ಸೀಮಾನ್ತರಂ (ಎಕ. I, ೧–೨೪ ; ಸು. 466) ; ಮೆಲ್ಲನಾನನವನಜಾತಮಂ ಕುರುಳ ಪಂತಿಗಳಂ ಪೋಳೆವಕ್ಷಿಯುಗ್ಮಮಂ ಕನಕಘಟೋಪಮಸ್ತನಯುಗಂ ಗಳನೀಕ್ಷಿಸುತುಂ (ಧರ್ಮಾಮೃ. ೬–೧೬೧) ; ಬೇಱಿಬೇಱಿಗ್ಗವಣಿ ಬೇಱಿ ಪುಷ್ಪದ ಪಂತಿ ಬೇಱಿಲ್ಲಿ ಬೇಱಿ ಶಿವಸಿಂಹಾಸನದ ಕಾಂತಿ (ಬಸರ. ೭–೨೩). **೨.** ಊಟಕ್ಕೆ ಕುಳಿತುಕೊಳ್ಳುವ ಜನರ ಸರದಿ,—ಪಾಳಿ; ಭೋಜನ ಪಂಕ್ತಿ : ಆಯ್ಯೂರ್ವರ್ ಮಕ್ಕಳ್ಗೊಂದೆ ಪಂತಿಯೊಳ್ ತುಯ್ಯಲಂ ಬಡ್ಡಿ ಸಿಯಯ್ಯೂಱು ನಾಯನವರ ಮೇಗೆ ಬಿಟ್ಟೊಡೆ (ವಡ್ಡಾರಾ. ೧೬೪–೨೨) ; ಮತ್ತೊಂದು ಸಮಯದೊಳೆಲ್ಲಾ ಕುಮಾರರಂ ಪಂತಿ[ಪಾಠಾಂ.ಥಿ]ಯೊಳಿ ರಿಸಿ ಪಾಯಸಮಂ ಪರಿವಾಣಂಗಳನಿಟ್ಟು ಬಡಿಸಿ (ಪುಣ್ಯಾಸ್ರ. ೩–೮ ವ) ; ದಳಪತಿ ಸಹ ಬಂಧುಗಳು ಕೂಡಿ ಪಂತಿಯೊಳೊಲಿದು ಭೋಜನವನು ಮಾಡಿ (ಕಂನವಿ. ೮–೯೨). **೩.** ಸಹಪಂಕ್ತಿ ; ಸಮಪಂಕ್ತಿ : ರವಿತನೂ ಜನ ಕರಸಿ ಪಂತಿಯಲಿ ಜನಪನಾರೋಗಿಸಿದನು (ಕುಪ್ಪಾಭೀ. ೧–೧೬).

**ಪಂಗತಿ : ೩.** ದೊಡ್ಡ ಅಧಿಕಾರಿಗಳು ಬಹಳ ರೊಕ್ಕ ಗಳಿಸಿದ್ದಾರೆ ಎಂದ ಮಾತ್ರಕ್ಕೆ ಅವರು ಜಾತಿ ಕೆಟ್ಟುಹೋದರೂ ಅವರ ಪಂಗತಿಗೆ ಕೂತು ತಿನ್ನುವುದೇ ? (ಆಚೋಲೀ. ೧೪೩). **ಪಂಗ್ತಿ : ೧.** ವಿಸುಪ ಧವಳಛತ್ರ ಪಂಗ್ತಿಯ ಪಸರಿಕೆಯ ಪಂಟಿಸಿತು ಬೆದಱುದುದಸುರಬಲವಲ್ಲಲ್ಲಿ ಬಿರುದಿನ ಬಲುಭಟಸ್ತೋಮ (ತೊರಂಾ. ೬–೯–೧೬). **೨.** ಇನ್ನೂ ಮೊದಲನೆಯ ಪಂಗ್ತಿಯ ಊಟ ಮುಗಿದಿಲ್ಲ (ರೂಢಿ). **ಬಂತಿ : ೧.** "ವೀಥಿಃ, ಆಳಿಃ, ಆವಳಿಃ, ಪಂಕ್ತಿಃ, ಶ್ರೇಣಿಃ—೫ ಪಂಕ್ತಿ ಮಾತ್ರಕ್ಕೆ ಹೆಸರು, ಬಂತಿ, ಸಾಲು" (ಸಿದ್ಧಾಂತಿ. ೧೧೦) ; ಈ ಕೊನೆಯ ಬಂತಿಗಳನ್ನು ಪದೇ ಪದೇ ನೆನವರಿಸುತ್ತದೆ (ಚಿತ್ರಸ್ಯ.೭ ಮುನ್ನುಡಿ). **ಹಂತಿ$_1$ : ೧.** ಪೊಂಗಳಸವಾಂತ ಕರುವಾಡಗಳ ಮಣಿವಂಕದಾರಗಳ ಹಂತಿಯಿಂದೊಪ್ಪಿದುದು ಮೋಹನಂ ಸಂಚರಿಪ ದಾರಿಯಾ ಸೂಳೆಗೇರಿ (ಪದ್ಮರಾ. ೮–೮೫) ; ಅಡಕಿ ತುಂಬುವ ಹೇಮಘಟದುಗ್ಗಡದ ಹೊಂದೋಣಿಗಳ ಹಂತಿಯ ಸಡಗರದ ಸೌರಂಭ ವೆಸೆದುದು ಸುತ್ತುವಳಯದಲಿ (ತೊರಂಾ. ೧–೧೩–೧೦) ; ಅಲ್ಲಿ ಹೊಂಗುಲಾಬಿ ಹಂತಿ; ಇಲ್ಲಿ ಚಿನ್ನವೂಮಳೆ (ಅನಿಕೇ. ೨೦–೧೦). **೨.** ಗುಣ ಪಸಾಯದ ಕಾಣಿಕೆಯ ಹರಿಯಣದ ಹಂತಿಯ ದಾಯದೂಟಕೆ ಮಣಿಗ ಳಾದೆವೆ (ಕುಪ್ಪಾಕ.೧೩–೨). **೪.** ಗುಂಪು; ಸಮೂಹ: "ಬಂಬಲ್ . . . ಹಂತಿ . . . ಗೊಂದಣ (ಉಂದಲ್)—ಈ ೪೦ ಸಮೂಹಂ" (ಕಶಸಾ. ೫೬–೨೨೨) ; ಹಸಿದವ್ವಳಿಪ ಸಿಂಹದ ಹಂತಿ . . . ಮಹಾರಥರಳವಿ ಗೊಟ್ಟದೆ ನೋಡು ದುರ್ಯೋಧನ ಸಹೋದರರ (ಕುಪ್ಪಾಭೀ. ೩–೧೬). **೫.** ಒಂದಾದ ಮೇಲೆ ಒಂದು ಬರುವುದು ; ಪರಂಪರೆ : ಮುಂದೆಯೊದಗಿದ ಕಷ್ಟಗಳ ಹಂತಿಯನು ನೆನಸಿಕೊಂಡೊಡೆ (ನನ್ನಪ. ೨೫–೧೧). **೬.** ಅಕ್ಷರಗಳ ಸಾಲು,—ಪಂಕ್ತಿ : ಆ ಶಿವಾಗಮಲಿಖಿತ ಹಂತಿಯೆನಿಸುವ ಸಾಧನಂಗಳಿಂದ ನೆಲೆಯಱಿದು (ಭಾವಚಿಂ. ೩–೨೪). **೭.** ಕಣದಲ್ಲಿ ಬತ್ತ, ರಾಗಿ ಮೊದಲಾದ ಧಾನ್ಯಗಳನ್ನು ಒಕ್ಕುವಾಗ ತುಳಿಸುವುದಕ್ಕಾಗಿ ಸಾಲಾಗಿ ಕಟ್ಟುವ ದನಗಳ ಸಾಲು: ನನ್ನ ತಂದೆಯು ಹಂತಿಯಲ್ಲಿ ಹಾಡುವ ಶಿವಶರಣರ, ಹಾಡು ಗಳನ್ನು, ತಾಯಿಯು. . . ಶಿವಸೊಲ್ಲುಗಳನ್ನು ಹಾಕಿ ಶ್ರಾವಣಮಾಸದಲ್ಲಿ ಹಾಡುತ್ತ ಬಂದಿದ್ದರು (ಕನ್ನಜಾ. ii, ಅರಿಕೆ) ; ಹರಗಿ ಬಿತ್ತಿ ಹಂತಿಯಲಿ ತಿರುಗಿ ನೀ ಸ್ವಂತ ರಾಶಿಮಾಡು (ನೆಲಮು. ೩೬–೭) ; ಕಾಳು ಪೂರಾ ಒಣಗಿದ ಮೇಲೆ ಖಣವ ಮಾಡಿ ಹಂತಿಯ ಕಟ್ಟಿ ಕಾಳು ತುಳಿಸಿ ತೂರಿಸಿ ಮನೆಗೆ ತೆಗೆದುಕೊಂಡು ಹೋಗುತ್ತಾರೆ (ಮುಂಬಯಿ. ೫–೧೯೭).

**ಪಂತಿಯಾಗು**=ವರ್ಧಿಸು ; ಮುಂದುವರಿ : ಕಾಂತೆಯುಂಗದೊಳುದಿಸಿದ ಗರ್ಭಚಿಹ್ನವು ಪಂತಿಯಾಗಿರುತಿರೆ ಕಂಡು (ಅಂಜಚ. ೯–೧೬). **ಹಂತಿದಪ್ಪು**=ಚೆಲ್ಲಾಪಿಲ್ಲಿಯಾಗು ; ಕೆದರಿಹೋಗು : ಹಂತಿದಪ್ಪಿ ತಾಱುಂಬಱಿಯುಂ ತೆರಳ್ದ ಕುರುಳುಣ್ಕೆ (ಚಂದ್ರಪ್ರ. ೮–೭೨). **ಹಂತಿಯ ಹಾಡು**=ತೆನೆ ತುಳಿಸುವಾಗ ಹಾಡುವ ಹಾಡು : ಮಲ್ಲಪ್ಪನ ಹಂತಿಯ ಹಾಡು ಸುತ್ತಮುತ್ತಲಿನ ಹೊಲದಲ್ಲಿದ್ದವರಿಗೂ ಕೇಳಿ ಬರುತ್ತಿತ್ತು (ನಡುಗೋ. ೩೭) ; ಶಿವಶರಣರ ಹಂತಿಯ ಹಾಡುಗಳನ್ನು ಪ್ರತ್ಯೇಕವಾಗಿ ಸಂಕಲಿಸಲಾಗಿದೆ (ಕನ್ನಜಾ. III, ಅರಿಕೆ). [<ಸಂ. ಪಂಕ್ತಿ]

**ಪಂತಿಕಂಠ** (ನಾ). ಸಾಲಾಗಿ ಹತ್ತು ಕೊರಳುಳ್ಳವನು ; ದಶಕಂಠ; ರಾವಣ : ಅಹಂಕರಿಸಿದಾ ಪಂತಿಕಂಠನ ಶಂಕರಂ ಪಾದಾಂತದಿಂದೊತ್ತಿ ದಡಧಃಸ್ಥಳಕಿಳಿದು ಹೋದನಲ (ಬಸಪು. ೫೪–೫೦). [ಪಂತಿ+ಕಂಠ]

**ಪಂತಿಕಾಱ,** ಹಂತಿಕಾಱ, ಹಂತಿಗಾಱ (ನಾ). ೧. ಊಟಕ್ಕೆ ಕುಳಿತಿರುವವರಿಗೆ ಬಡಿಸುವ ಏರ್ಪಾಡಿನ ಮೇಲ್ವಿಚಾರಕ. ೨. ಸಾಲಿನಲ್ಲಿ ಊಟಕ್ಕೆ ಕುಳಿತಿರುವವನು : ಎಡೆವಟ್ಟಲ್ಗಡ್ಡಣಿಗೆಗೆ ಪಡಿಗಕ್ಕೆ ತಗುಳ್ದ ಪಟ್ಟೆಯ ಬಿತ್ತರಿಗೆಗೆ ತಕ್ಕೆಡೆಯುಱದು ಪಂತಿಕಾಱರನೆಡೆಯುಱದು ವಿಲಾಸದಿಂದಮಿರಿಸಿದರಾಗಳ್ (ಸುಕುಮಾ. ೧೧–೨೬). **ಹಂತಿಕಾಱ :** ೩. ಜೊತೆಯಲ್ಲಿ ಕುಳಿತುಕೊಳ್ಳುವವನು ; ಸಾಲಿನಲ್ಲಿರುವವನು: ಭ್ರಾಂತಿ ಬಿಗಿದಿದೆ ಚದುರಚಿತ್ತಕೆ ಚಿಂತೆ ಬೇಱೊಂದಾಯ್ತು ರಾಯನ ಹಂತಿಕಾಱರು ಬರಲಿ ಹಿಡಿಯಲಿ ನಿರಶನವ್ರತವ (ಕುವ್ಯಾಅ. ೨೧–೩೨). **ಹಂತಿಗಾಱ :** ೨. ಕಿಱುಮೊರಡಿ ವಿಸ್ತಾರಪೀಠವು ಹಂತಿಗಾಱರು ಭೂರಿ ಸರ್ಪಾವಳಿಗಳರಮನೆ ಹೊದಱು ಹೊಸ ಮೆಳೆಯ (ಕುವ್ಯಾಅ. ೨೧–೮). [ಪಂತಿ+-ಕಾಱ]

**ಪಂತಿಗಟ್ಟು,** ಬಂತಿಗಟ್ಟು, ಹಂತಿಕಟ್ಟು, ಹಂತಿಗಟ್ಟು (ಕ್ರಿ). ೧. ಸಾಲಾಗಿ ನಿಲ್ಲು ; ಸಾಲಾಗು. ೨. ಒಟ್ಟಿಗೆ ಸೇರು ; ಗುಂಪುಗೂಡು ; ಸುತ್ತುಗಟ್ಟು : ಪವನಸುತ ಸಹದೇವ ಸಾತ್ಯಕಿ ದಿವಿಜಪತಿಸುತರಾದಿಯಾದವರವಿರಳದ ಶೋಕಾಗ್ನಿತಪ್ತರು ಪಂ[ಪಾಠಾಂ. ಹಂ]ತಿಗಟ್ಟಿದರು (ಕುವ್ಯಾಭೀ. ೧೦–೧೯). ೩. ಸಾಲಾಗಿ ಕಟ್ಟು ; ಸಾಲಾಗಿ ನಿಲ್ಲುವಂತೆ ಮಾಡು : ಪಂತಿಗಟ್ಟಿದರಲ್ಲಿ ಮಿಗಗಳಂ, ಕಾಳ್ಪಂದಿ ಕಾಳ್ಕೋಣ ಕುರಿ ಕೋಳಿ ಗೂಳಿ ಮೊದಲಾಗವಂ ಸುತ್ತುಂಬರಿಸಿ, ಹರಸಿ (ಶ್ರೀರಾಮಾ. ೬೬೮–೧೯೭). **ಬಂತಿಗಟ್ಟು :** ೧. ಕಟ್ಟಱವೆ ಬಂತಿಗಟ್ಟಿದರುಂ ತನಗಾಱುತಿಂಗಳೊಳಗನಿಷ್ಟ ತಪ್ಪದು (ವಿವೇಕ. ೧೯೫). **ಹಂತಿಕಟ್ಟು :** ೪. ತೆನೆಗಳನ್ನು ತುಳಿಸುವುದಕ್ಕಾಗಿ ದನಗಳನ್ನು ಸಾಲಾಗಿ ಕಟ್ಟು ; ತೆನೆ ತುಳಿಸು : ಆಳುಗಳನ್ನು ತಕ್ಕೊಂಡು ಹಂತಿ ಕಟ್ಟುವುದಕ್ಕೆ ಹಿರೇ ಕಮತಿಗನು ಊಟವನ್ನು ಮುಗಿಸಿಕೊಂಡು ಬಂದನು (ಬೆಳಭಾ. ೭೯) ; ಇದುವರೆಗೂ ಯಾರೂ ಈ ರೂಲು ಹೂಡಿ ಹಂತಿಕಟ್ಟಿಲ್ಲ (ರಾಜಾದೇ. ೫೮) ; ಹಂತಿಕಟ್ಟಲಿಕ್ಕೂ ಸುಲಭ (ಅಶೋಕ. ೧೦೯). **ಹಂತಿಗಟ್ಟು :** ೧. ರಣ ಗಜಬಜದ ಗೋಳಾಗೋಳಿ ತಣಿತುದು ಹಂತಿ[ಪಾಠಾಂ. ಪಂಕ್ತಿ]ಗಟ್ಟಿತು ಮತ್ತೆ ನೃಪನಿಕರ (ಕುವ್ಯಾಸ. ೧೧–೧). [ಪಂತಿ+ಕಟ್ಟು$_1$]

**ಪಂತಿಗುರುಳ್** (ನಾ). ಸಾಲಾಗಿರುವ ಮುಂಗುರುಳು : ತಟೀಪಾದಪವೀಧಿ ಪಂತಿಗುರುಳಂತಿರೆ . . . ಒಪ್ಪಿರೆ ಕೊಂಕುವೆತ್ತ ಸೀತೋದೆ (ಅರ್ಧನೇ. ೧–೬೧) ; ಹಸುಳೆದುಂಬಿಯ ಪಂತಿಗುರುಳ್ಗಳಿಂ ಗೆಲ್ವಳಾ ಕುಸುಮಶರನ ಮಂತ್ರದೇವಿ (ನಾಗಕು. ೨–೯೦). [ಪಂತಿ+ಕುರುಳ್$_1$]

**ಪಂತಿಗೊಡು** (ಕ್ರಿ). ಊಟದಲ್ಲಿ ಎಲ್ಲರ ಜೊತೆಯಲ್ಲಿ ಕುಳಿತುಕೊಳ್ಳುವಂತೆ ಮಾಡು ; ಜೊತೆಯಲ್ಲಿ ಕುಳಿತುಕೊಂಡು ಆಹಾರವನ್ನು ಸ್ವೀಕರಿಸುವಂತೆ ಮಾಡು: ಆರಾ ಮುನಿಪಂ ? ಜಂಟದೇವರ್ಗೆಂದು ಸುರರೊಳ್ ಪಂತಿಗೊಟ್ಟನೇಕೆ ? (ರಾಮಾಶ್ವ. ೬೪–೧೪). [ಪಂತಿ+ಕೊಡು$_1$]

**ಪಂತಿಗೊಳ್,** ಹಂತಿಗೊಳ್; ಹಂತಿಗೊಳ್ಳು (ಕ್ರಿ). ಸಾಲುಗಟ್ಟು; ಗುಂಪುಕೂಡು ; ಜೊತೆಗೂಡು : 'ಪಂತಿಗೊಳಿಸು' ಪರಾ. **ಹಂತಿಗೊಳ್ :** ಬಿಳಿಯ ಸತ್ತಿಗೆಗಳ್ ನೂರೆವಿಂಡನಾನೆಗಳ್ ಕೆದಱದೆ ಹಂತಿಗೊಂಡ ನೆಗಟಂ . . . ನೆಗಟ್ಟೆ (ಕಬ್ಬಿಕಾ. ೨೦೭). **ಹಂತಿಗೊಳ್ಳು :** ಪಲರಾಣಿಯರೂಳಿಗದ ಪೆಣ್ಗಳುಮಿಕ್ಕೆಲದೊಳು ಹಂತಿ[ಪಾಠಾಂ. ಪಂಕ್ತಿ]ಗೊಂಡೆಸೆಯೆ (ಹದಿಬ. ೧–೧೯); ಗಂಪಣನು ಬಂಕೆಯರಸನೊಡನೆ ತಾನೂ ಹಂತಿಗೊಂಡಿದ್ದನು (ವೀರಬಂ. ೭೭). [ಪಂತಿ+ಕೊಳ್$_1$]

**ಪಂತಿಗೊಳಿಸು** (ಕ್ರಿ). ಸಾಲುಗಟ್ಟಿಸು ; ಗುಂಪುಗೂಡಿಸು : ಸುಳಿಗುರುಳೆಂಬ ತುಂಬಿಯ ಬಂಬಲಂ ತನ್ನ ಬೆಳ್ವೆಳಗನುಗುಟ್ಟಿ ಸೆಳ್ಳುಗುರೆಂಬ ಪೊಂಗೇದಗೆಯ ಕುತ್ತುಂಗಱಗಳ್ ಪತ್ತೆ ಸಾರ್ಚಿ ಪಂತಿಗೊಳಿಸುವಿನೆಗಂ (ಅನಂಪು. ೬–೬೯ ವ). [ಪಂತಿಗೊಳ್+-ಇಸು$_3$]

**ಪಂತಿದೇರ,** ಬಂತಿದೇರ (ನಾ). ಹತ್ತುದಿಕ್ಕುಗಳಲ್ಲೂ ತಡೆಯಿಲ್ಲದೆ ರಥವನ್ನು ಕೊಂಡೊಯ್ಯುವ ಸಾಮರ್ಥ್ಯವುಳ್ಳವನು ; ದಶರಥ : ಸ್ವೈರಿಪುದು ಸ್ವೈರಿಪುದು ಪಂತಿದೇರಂಗೆ ರಾಮವೆಸರಿಂ ಪುಟ್ಟುವನ್ನಮೆಂದು ಸ್ವೈತಿಟ್ಟು (ರಾಮಾಶ್ವ. ೧೪–೭); ಮುಳಿತುದು ಮುಂದೆ . . . ಮಹದ್ವನಂ, ಪಂತಿದೇರನ ಸೊಸೆಯ ಕಣ್ಗೆದೆಗಳರ್ಕೆಯಂ ಬೀರ್ದು (ಶ್ರೀರಾಮಾ. ೧೨೭–೫೮). **ಬಂತಿದೇರ :** ಜನಕಜಾರಾಮರೆಸೆದರಾ ಬಂತಿದೇರನ ಪಟ್ಟದರಸಿಯೆಡಬಲದೊಳ್ (ಶ್ರೀರಾಮ. ೫–೨೯); ರಾಘವಂ ಬಂತಿದೇರಂಗೆ ಪುಟ್ಟದ ಪರಿಯುನಱತ್ತೆ (ಅದ್ಭುತ. ೧೬–೧೧). [ಪಂತಿ+ತೇರ್$_2$+-ಅ$_7$]

**ಪಂತಿದೋಳ್** (ನಾ). ಸಾಲಾದ ತೋಳು,—ಭುಜ.

**ಪಂತಿದೋಳವ**=ಎರಡು ಕಡೆಯಲ್ಲೂ ಸಾಲಾದ ಹತ್ತು ಹತ್ತು ತೋಳುಗಳುಳ್ಳವನು ; ರಾವಣ : ಸಂಬುಚೋಳಮಂ ನೆಗಪಿದ ಪಂತಿದೋಳವ × × ನೇಳಿಪಂ (ಎಕ. VII, ಶಿಮೊ. ೪–೮೬ ; 1122). [ಪಂತಿ+ತೋಳ್]

**ಪಂತಿಯುಣಿಸು** (ನಾ). ಜೊತೆಯಲ್ಲಿ ಊಟಮಾಡುವುದು ; ಸಹಭೋಜನ : ಅಂತು ವಿಕಲ್ಪವಿಲ್ಲದೆ ನಿರಂತರದಿಂ ಕಂತುರೂಪನುಯೇಕಾಸನದಿ ಪಂತಿಯುಣಿಸು ಸಹಕ್ರೀಡೆಯೊಳಿರ್ದುದನಂತಿಂತುಂತೆನಬಹುದೇ (ಅನಂಚ. ೧೬–೮೨). [ಪಂತಿ+ಉಣಿಸು$_2$]

**ಪಂತಿಯೂಟ,** ಹಂತಿಯೂಟ (ನಾ).=ಪಂತಿಯುಣಿಸು : ನೀಚ ಜಾತಿಯವರೊಡನೆ ಪಂತಿಯೂಟದ ಸವ್ಯವಹಾರವಾಗುವಂತೆ ಎಂತೋ ಏರ್ಪಡಿಸಿ (ಬಿಟ್ಟಅ. ೪೮–೧೯). **ಹಂತಿಯೂಟ :** ಹಂತಿಯೂಟದ ಚಂದ್ರಮನೆಲ್ಲಿ . . . ಇಂತಾಗಲಪ್ಪುದೆ ನಿನ್ನನೊರ್ವನ ಕಾಲಾಂತಕಗೊಪ್ಪಿಸಿಕೊಟ್ಟು (ಮೋಹತ. ೮–೧೯). [ಪಂತಿ+ಊಟ]

**ಪಂತಿರಥ** (ನಾ).=ಪಂತಿದೇರ : (ಕ). [ಪಂತಿ+ರಥ]

**ಪಂತಿವಲ್ಲು** (ನಾ). ಸಾಲಾಗಿರುವ ಹಲ್ಲು; ಓರೆಕೋರೆಗಳಿಲ್ಲದೆ ಸಾಲಾಗಿ ಬೆಳೆದಿರುವ ಹಲ್ಲು ; ದಂತಪಂಕ್ತಿ : ಸುಲಿಪಲ್ಲ ಕೆಂಬಲ್ಲ ಮೊಲ್ಲೆಯ ಮುಗುಳ್ವಲ್ಲಯೆಳೆರನ್ನವಲ್ಲ ಕುಲಿಶದ ಪಂತಿವಲ್ಲ ಕಂಗೊಳಿಪ ಮೊನೆವಲ್ಲುಗಳ ನಾರಿಯರ್ ಶೃಂಗಾರಹಾರಿಯರ್ ಬರುತಿರ್ದರು (ಚಿಬಪು. ೩೭–೪೫). [ಪಂತಿ+ಪಲ್ಲು (<ಪಲ್)]

**ಪಂತಿವಿಡಿ,** ಹಂತಿವಿಡಿ (ಕ್ರಿ). ಸಾಲುಹಿಡಿ ; ಓಳಿಯಾಗಿ ನಿಲ್ಲು : ಪಂತಿವಿಡಿದ ತರುನಿಕರವ ತೋಱುತ ಸಂತಸದಿಂ ಬರುತಿರಲು (ಅನಂಚ. ೯–೧೬) ; ಪೊಂಜಗಲಿಯೊಳ್ ಮಿಸುಪ ಕಂಬಂಗಳಂ ನೆಮ್ಮಿ ಮಂಟಪ ದಿಕ್ಕೆಲಂಗಳೊಳ್ ಪಂತಿವಿಡಿದು . . . ಶಶಿಮುಖಿಯರಲ್ಲಲ್ಲಿ ಕರುವಿಟ್ಟರೆದ

ಹೊಸ ಪೊನ್ನ ಪುತ್ತಳಿಗಳಂತೆ ಕಣ್ಗೊಳಿಸಿದರು (ಚಬಪು. ೫-೧೧). **ಪಂತಿವಿಡಿ :** ಕಟಿದೊಳಗೊಗೆದು ಹಿಂಗದ ಮದಕೆ ಮೊದಲ್ಮುಸುಕಿದ ಬಹುಭೃಂಗಂ ಪಂತಿವಿಡಿದು (ಜಯಕಾ. ೩-೩೬) ; ಪಂತಿವಿಡಿದು ಬರುತಿರ ಲರ್ಕಕೀರ್ತಿ ತಾನಿಂತೆಂದು ನುಡಿವುತೆಯ್ದಿದನು (ಭರಚ. ೪೫-೯೨) ; ಅರಸುಮಕ್ಕಳು ಭರತನನ್ನು ಹಿಂಬಾಲಿಸಿ ಹೋಗಿ ಪಂತಿವಿಡಿದಿದ್ದರು (ಕಗದ್ಯ. ೧೬೦). [ಪಂತಿ + ಪಿಡಿ$_1$]

**ಪಂತಿಸು** (ಕ್ರಿ). (?) : ಅಂತಸಂ ತಾಗೆ ಪಂತಿಸೆ ಬಸಮುಟಿದು ಪಣ್ತ ಕೆಕ್ಕರಿಯಂತೆ ಬಿಕ್ಕನೆ ಬಿರಿ[ದ] ಮೆಯ್ಯುಂ ಬಳೆಯ ಪೇಱಂ ನುಗ್ಗಿದಂತೆ ಕಳ್ಳಳಗಟಿಲ್ವಸ್ಥಿಬಂಧಮುಂ ವಿಸಾನಬಸೆಯಂತಿನಿಸಿನಿಸುಮೊಸರ್ದು ಬಸಿಯು ತ್ತಿರ್ಪ ರಸಿಗೆಯುಂ (ವರ್ಧಮಾ. ೫-೩೫ ವ). [ ? ]

**ಪಂತು** (ನಾ). [ಸಂಗೀತ] ಒಂದು ರಾಗದ ಹೆಸರು : ತಾಳಮೇಳ ರಾಗಂಗಳ ಪಂತು ಒಪ್ಪಿ ಲಾಲಿಸೆಮಗೆ ಸರ್ವೇಶ್ವರ ಸಂತು (ವಾದಿಕೀ. ೧೨೭-೨೭). [ಸಂ.]

**ಪಂತುವರಾಲಿ,** ಪಂತುವರಾಳಿ (ನಾ). [ಸಂಗೀತ] ಒಂದು ರಾಗದ ಹೆಸರು : ಪಂತುವರಾಲಿಯೆಂಬ ರಾಗವು ಸಂಪೂರ್ಣವು, ಪಾಮರರಿಗೆ ಪ್ರಿಯವಾದುದು. ಗೀತ, ಠಾಯ, ಪ್ರಬಂಧಗಳಿಗೂ ಇದಕ್ಕೂ ಬಹು ದೂರವೆಂದು ಸಮ್ಮತಿಸಿದೆ (ಚತುಪ್ರ. ೬೪). **ಪಂತುವರಾಳಿ :** ಶೋಕ ವರಾಳಿ . . . ಪಂತುವರಾಳಿ ನಾಗವರಾಳಿಯೆಂಬ ವರಾಳೀಸಪ್ತಕವೇ ಶುದ್ಧ ವರಾಳಿಗೆ ಮಿಶ್ರಂಗಳು (ವಿವೇಕ. ೨೩೫) ; ಪ್ರಳಯತಾಂಡವ ಪಂತು ವರಾಳಿ (ವಿಸೀಗೀ. ೩-೨). [ಸಂ. ಪಂತುವರಾಲೀ]

**ಪಂತುವರಾಳಿ** 'ಪಂತುವರಾಲಿ' ನೋ.

**ಪಂತೈಸು** (ಕ್ರಿ). ಸಾಲುಗಟ್ಟು ; ಪರಿಧಿಯಂತೆ ಮಂಡಲಿಸು : ರಾಮಚಂದ್ರಂ ಪಂತೈಸಿ ನಗರವಂ ಕವಿಯುಲಪ್ಪಣೆಯಿತ್ತನು (ವೆಂಕಾರಾ. ೬-೧೫ ಸೂಚನೆ). [ಪಂತಿ + -ಇಸು$_3$]

**ಪಂತೋಜಿ** (ನಾ). ಶಾಲೆಯ ಉಪಾಧ್ಯಾಯ ; ಪಂಡಿತ : ಮೋತಿ ಚಂದನಂಥ ಪಂತೋಜಿಯು ದೊರಕಿದ ಮೇಲೆ ಕಲಿಯಲಿಕ್ಕೆ ಅಸಾಧ್ಯ ವೇನು ? (ಮೋಹಿಸೀ. ೪೩). [←ಮರಾ. ಪಂತೋಜಿ]

**ಪಂಥ$_1$** 'ಪಂತ$_1$' ನೋ.

**ಪಂಥ$_2$** (ನಾ). ೧. ದಾರಿ ; ಮಾರ್ಗ : 'ಪಂಥಾತಿಚಾರನಿಯಮ' ಪರಾ. ೨. ಉಚಿತವಾದ ಕ್ರಮ ; ಯೋಗ್ಯವಾದ ಮಾರ್ಗ : ಇದು ಕಡಲಂದದೆ ಕಡುಗಡಿದಿದಱೊಳಗಾನಿವನನಿಕ್ಕಿ ಕೋಪಮನಾಱುವುದೆ ಪಂಥಮೆಂದು ಬಂದಂ ತನಗ್ರದೇಶಕ್ಕೆ ಕೋಣಪಂ (ಚಂದ್ರಪು. ೫-೪೨). ೩. ಮತ ; ಸಂಪ್ರದಾಯ ; ಒಂದು ತತ್ತ್ವವನ್ನು ನಂಬುವವರ ಶಾಖೆ,—ವರ್ಗ : ಚೈತನ್ಯದೇವನ ಪಂಥದಲ್ಲಿ ಪ್ರಸಿದ್ಧರಾದವರು ಸನಾತನ ರೂಪ,ಜೀವಗೋಸ್ವಾಮಿ ಎಂಬುವರು (ಭಾರದ.೨೯೦); ಅಕ್ಕಲಕೋಟೆಯ ಮಹಾರಾಜರು ಮಾಣಿಕಪ್ರಭುಗಳು, ಇತ್ತೀಚಿನ ವಾಸುದೇವಾನಂದ ಸರಸ್ವತಿ ಟೆಂಬೇ ಮಹಾರಾಜರು ಈ ಪಂಥದವರು (ಮಸಾಹಿ. ೨೨). [ಸಂ. ಪಂಥಾ]

**ಪಂಥಗಾರ** 'ಪಂತಗಾಱ' ನೋ.

**ಪಂಥಗಾಱ** 'ಪಂತಗಾಱ' ನೋ.

**ಪಂಥತೊಡು** (ಕ್ರಿ). ಹಟಕಟ್ಟು ; ಪಣತೊಡು; ಪ್ರತಿಜ್ಞೆ ಮಾಡು: ಆಗ ವೆಂಕಟರಮಣದಾಸರು ತಮ್ಮ ವಾದನವನ್ನು ಎಲ್ಲರಿಗೂ ಕೇಳಿಸಿಯೇ ತೀರುವುದಾಗಿ ಪಂಥ ತೊಟ್ಟು, ಬಾಗಿಲುಗಳನ್ನೂ ಕಿಟಕಿಗಳನ್ನೂ ತೆರದೇ ಇರುವಂತೆ ಹೇಳಿದರು (ಸಂಗೀತ. ೭೧). [ಪಂಥ$_1$(<ಪಂತ$_1$) + ತೊಡು$_1$]

**ಪಂಥಪಾಡು$_1$** 'ಪಂತಪಾಡು' ನೋ.

**ಪಂಥಪಾಡು$_2$** (ನಾ). ಉಚಿತವಾದ ರೀತಿ ; ಯೋಗ್ಯವಾದ ಮಾರ್ಗ : ಘನಯೋಗದಲಿ ಜೀವವ ಬಿಡುವ ಭೂರಿಶ್ರವನ ನೀ ಕಡಿದೆ ಇದು ವಿಚಾರಿಸೆ ರಾಜಧರ್ಮವೆಯಿದು ಸುಭಟರಿಗೆ ಪಂಥಪಾಡೇಯಿದ್ದನು ನೀ ಮಱೆದೆನ್ನ ಜಱೆವರೆ ನೀಚ ಹೋಗೆಂದ (ತಿಮ್ಮಮಾ. ೧-೪೯). [ಪಂಥ$_2$ + ಪಾಡು$_3$]

**ಪಂಥವಾಡು** (ಕ್ರಿ). ಸ್ಪರ್ಧಿಸು ; ಹಟದಿಂದ ಹೋರಾಡು ; ವಿಷಯ ವನ್ನು ಚರ್ಚಿಸು : ರಾಜಸಭೆ ! ಬ್ರಹ್ಮಸಭೆ ! ಪಂಥ, ಪಂದ್ಯಗಳು !! ಆದಕ್ಕಾಗಿ ಟಗರುಗಳುಂಟು, ಕೋಳಿಗಳುಂಟು, ಪಂಥವಾಡಲಿ. ರಾಜಾ ಸ್ಥಾನದಲ್ಲಿ ಕವಿ ಪಂಡಿತರೂ ಮೆಯ್ದ ಟಗರುಗಳೆ ? (ತುಂಗಭ. ೭). [ಪಂಥ$_1$(<ಪಂತ$_1$) + ಆಡು$_1$]

**ಪಂಥಾತಿಚಾರನಿಯಮ** (ನಾ). [ಜೈನ] ಶ್ರಮಣರ ಪ್ರಯಾಣ ದಲ್ಲಿ ಉಂಟಾಗುವ ಕ್ರಿಮಿಕೀಟಾದಿಗಳ ಹಿಂಸೆಗಾಗಿ ಆಚರಿಸುವ ಪ್ರಾಯಶ್ಚಿತ್ತ ; ಗಮನಪ್ರಾಯಶ್ಚಿತ್ತ : ತಪೋಧರರೆಂಬ ರಿಸಿಯರ್ . . . ಬಂದು ಪಂಥಾತಿಚಾರನಿಯಮಂಗೆಯ್ದು ಪಗಲ್ ದೇವರಂ ವಂದಿಸಿ (ವಡ್ಡಾರಾ. ೧೩೬-೨೬) ; ಉಗ್ರೋಗ್ರತಪಶ್ಚರಣನಿರತರಾಗಿಯುಮತ್ಯಂತ ಶಾಂತರಸಸ್ವರೂಪಮಂ ತಾಳ್ದಿ ಪಂಚಾತಿಚಾರನಿಯಮದಿಂ (ಸುಕುಮಾ. ೩-೭ ವ). [ಪಂಥ$_2$ + ಅತಿಚಾರ + ನಿಯಮ]

**ಪಂಥಾತಿಚಾರನೇಮ** (ನಾ). = ಪಂಥಾತಿಚಾರನಿಯಮ : ಸಾರಸ್ವತ ರೆಂಬಾಚಾರ್ಯರ್ . . . ಶ್ರಾವಂತಿಪುರಕ್ಕೆ ಬಂದು ಮನೋಹರೋ ದ್ಯಾನದೊಳ್ ಲೇಸಪ್ಪ ಶಿಲಾತಳದ ಮೇಲೆ ಕುಳ್ಳಿರ್ದು ಪಂಥಾತಿಚಾರ ನೇಮಮಂ ಮಾಡುತ್ತಿರ್ಪುದುಂ (ಧರ್ಮಾಮೃ. ೧೪-೪೯). [ಪಂಥ$_2$ + ಅತಿಚಾರ + ನೇಮ]

**ಪಂಥಾನ** (ನಾ). ದಾರಿ ; ಮಾರ್ಗ : ಶ್ವನ್, ಪಥಿನ್, ಮಥಿನ್ ಶಬ್ದ ಗಳುಳಿದ ನಕಾರಾಂತಗಳ ನಕಾರಕ್ಕೆ ಲೋಪ ಬರುತ್ತದೆ . . . ಶ್ವಾನವು, ಪಂಥಾನವು, ಮಂಥಾನವು ಎಂದಾಗುತ್ತದೆ (ಹೊಸಗ. ೧೦೭) ; ಬೇಗಂ ಗಮನಾತೀತಂ ನೋಡಲ್ಕಮಮ ಮನೋರಥಕಮೆನಿಪುವೀ ಪಂಥಾನಂ (ಧ್ವನ್ಯಾಲೋ. ೧೬೧). [ಸಂ.]

**ಪಂಥಾಭಿಮಾನಿ** (ನಾ). ಮತದ ಮೇಲೆ ಬಹಳ ಪಕ್ಷಪಾತವುಳ್ಳ ವನು ; ತನ್ನ ಮತವೇ ಹೆಚ್ಚೆಂಬ ಅಭಿಮಾನವುಳ್ಳವನು ; ಸಂಪ್ರ ದಾಯನಿಷ್ಠ : ಪಂಥಾಭಿಮಾನಿಗಳ ಪ್ರಾರ್ಥನಾಪತ್ರವನ್ನು ಚಕ್ರವರ್ತಿಗೆ ನೇರವಾಗಿ ತಲುಪಿಸುವಂತೆ ನೆಕ್ಲುದೋವ್ ಆವನನ್ನು ಕೇಳಿಕೊಂಡಿದ್ದನು (ಪುನರು. ೩೭೬). [ಸಂ. ಪಂಥಾಭಿಮಾನಿನ್]

**ಪಂಥಿ** (ನಾ). ಒಂದು ಪಂಥಕ್ಕೆ ಸೇರಿದವನು ; ಒಂದು ಸಂಪ್ರ ದಾಯಕ್ಕೆ ಸೇರಿದವನು : ನರ್ಮದಾತೀರದವರೆಗೂ ಜೈನ ಪಂಥಿಗಳು ಬಹುಕಾಲ ಕನ್ನಡಿಯನ್ನು ಅರಿತವರೆ ಆಗಿರುವ ಶಕ್ಯತೆಯನ್ನು ಒಪ್ಪಿ ಕೊಳ್ಳಬೇಕಾಗುತ್ತದೆ (ಕರ್ಣಾಟ. ೧೬೮). [ಸಂ. ಪಂಥಿನ್]

**ಪಂಥೀಯ** (ನಾ). = ಪಂಥಿ : ಅಲ್ಲಿ ನೋಡು . . . ಆ ಈಸಾಯಿಯೂ ಆ ಸಿಖ್ಖ ಪಂಥೀಯನೂ ಕೈಕುಲುಕುತಿರುವರು (ಕೈಲಾಕ. ೬೫). [ಸಂ.]

**ಪಂದ** 'ಪಂತ$_1$' ನೋ.

**ಪಂದಯ್ಯ** (ನಾ). ಒಬ್ಬಾತನ ಹೆಸರು : ಪಲರೊಡೆಗಣ್ಣಂ ಪರಬಲ ದಣುವ ದ್ರೋಹರ ಶೂರ ಸಾಮನ್ತಸರ್ವಜ್ಞ ಶ್ರೀಮತ್ ಪನ್ದಯ್ಯಂ (ಎಕ. XI, ಚಿತ್ರದು. ೫೦-೮ ; 968). [ಪಂದ? + ಅಯ್ಯ$_1$]

**ಪಂದರ್,** ಪಂದರ, ಪಂದರು, ಪಂದಲ್, ಪಂದಲು, ಹಂದರ್, ಹಂದರ$_1$, ಹಂದರು, ಹಂದಲ, ಹಂದಲು (ನಾ). ಚಪ್ಪರ ; ಕಾವಣ : "ಕಾವಣಮೆಂದುಂ, ಪಂದರೆಂದುಂ ಚಪ್ಪರಂ" (ಕಶಸಾ. ೬೩-೪೦೬) ; ಆತನುಂ ಪಿರಿಯ ಪಂದರಂ ಮಾಡಿಸಿಯುಲ್ಲಿ . . . ದೇವತಾ

ಪ್ರತಿಮೆಯುಂ ನಿಱಿಸಿ (ವಡ್ಡಾರಾ. ೧೪೨-೧೦); ಬಾಣಸಿನ ಮಜ್ಜನದ ರಾಣಿವಾಸದ ಮನೆಗಳುಮಂ ನನೆಯ ಪಂದರುಮಂ ತಳಿರ ಕಾವಣಂಗಳುಮಂ (ಪಂಪಭಾ. ೫-೪೬ ವ); ಎಳದಳಿರ್ವಂದರ್ ಪೊದಪ್ಪಿಂಗಳಶೃಂಗಾರ ರಸಂ ಕೈನೀರ್ ಮುಂದಂ ಪೊಂಗಳಸಮೊಲವು ಮೌಹೂರ್ತಮಾಗಲ್ (ಜಗವಿ. ೧೧-೫೩); ಪಡೆ ನಡೆಗೊಳೆ ಪವನಾಧ್ವಮನಡರ್ದುದು ಕೆಂಧೂಳಿಯಂಬರ ಮುಸುಳ್ವಿನೆಗಂ ಜಡಿದುದು ಜಗತೀವಳಯಂ ನಡವಿಯುಪಸುರ್ವಿದಿರ ಪಂದರಂದದಿನಾಗಳ್ (ಮಹಾನೇ. ೧೩-೪೪); ತಳಿರ್ವಂದರ್ ತೋರಣಂ ವೇದಿಕೆ ವಿವಿಧ ಪತಾಕಾಳಿ . . . ಕಂಗೊಳಿಸಲ್ (ದಶಕು. ೯-೧೯೯). **ಪಂದರ:** "ಕಾವಣ ಪಂದರಮುಮೆನಲ್ಕಾವಗ ಚಪ್ಪರಮೆನಿಕ್ಕು" (ಕವಿಕಂ. ೧೭೭); ಅದಲ್ಲದೆಯುಂ ಮತ್ತಮೊರ್ವ ಗಾಡಿಕಾರ್ತಿ ಸಂದಣಿಸಿ ಚೆಂದಂಬಡೆದ ಕೆಂದಳಿರ ಪಂ[ಪಾಠಾಂ. ಹಂ]ದರಮಂ ಮೆಯ್ವೆಂಕೆ ಗಂಜಿ ಪತ್ತೆಸಾರ್ದಿಂತೆಂದಳ್ (ಕಬ್ಬಿಕಾ. ೭೦); ಪರಿವಡೆದು ತೋರ್ಪ ಚೆಂದಳಿರ ಪಂದರಂಗಳಿಂ . . . ಪ್ರಪಾಶಾಲೆ ಕಂಗೊಳಿಸಿರ್ದುವು (ಪಾಸೋಪು.೨-೬). **ಪಂದರು:** "ಪಂದರುಯೆನಲ್ಕೆ ಚಪ್ಪರಮಕ್ಕು" (ಕಶಶ. ೬೧); "ಪಂದರು ಚಪ್ಪರ" (ಕಲ್ಪದ್ರು. ೨೨೫). **ಪಂದಲ್:** "ಕಾವಣಮೆಂದೆನೆ ಪಂದಲ್" (ಚತುಶಿ. ೭೫); "ಚಪ್ಪರಕೆ ಕಾವಣಮೆಂದು ನೆಱಿ ಪಂದಲೆಂ[ಪಾಠಾಂ. ರೆಂ]ದು" (ಕಬ್ಬಿಕೈ. ೨೫); ಕಣ್ಗೆಸೆದತ್ತೆಳದಳಿರ್ದೋರಣಂಗಳಿಂದಾ ಪಂದಲ್(ಉದ್ಭಟ.೮-೬); ಪಸೆ ಪಂದಲ್ ದಟ್ಟೆ ಜಾಗಂ ಜಗಲಿ . . . ಕನ್ನಡಿ ಜವಳಿಗಳುದ್ವಾಹದೊಳ್ ವರ್ಣನೀಯಂ (ಸೂಕ್ತಿಸು. ೬-೧). **ಪಂದಲು:** ಉರಿವ ಸೊಡರ ತಿಂಥಿಣಿಯಿಂ ತರಗೊಂಡ ಮರಕತಮಣಿಗಂಬಗಳಿಂ ಪಿರಿದೊಪ್ಪಿತಾ ಪಂದಲು ಚೂತ ಚಂಪಕ ತರುವನವೆಂಬ ಮಾಳ್ಕೆಯೊಳು (ಶ್ರೀಪಾಲ. ೧೦-೧೫); ಮರಕತಮಣಿಕಂಭಗಳ ಮೇಲೆಸೆವ ಕೆಂಬರಲ ಪಂದಲ ಚೆಲ್ವಿನಿಂದ ಅರಮನೆ ಮೆಱೆದುದು (ಚಂಪ್ರಸಾಂ. ೧೨-೨). **ಹಂದರ್:** ಹಕಾರಕ್ಕೆ— ಪಲಗೆ, ಹಲಗೆ; ಪಂದರ್—ಹಂದರ್ (ಶಮದ. ೧೫೫ ಪ್ರಯೋ). **ಹಂದರ₁:** ಹಸಿಹಂದರವನಿಕ್ಕಿ ನಿಮ್ಮಡಿಗಳಿಗೆಡೆವಾಡಿಕೊಂಡಿಪ್ಪೆನಯ್ಯಾ (ಮಹಾದೇ. ಬ. ೧೩೯-೬೧೪); ಧರೆಯೊಳು ಪೆಸರ್ವೆತ್ತ ರಾಯರ ಮಕುಟವೆಂಬುರುತರಮಪ್ಪ ಹಂದರಕೆ ನರನಾಥ ನಿಮ್ಮಾಜ್ಞೆಯೆನಿಪೊಂದು ಲತೆಯನಾ ತ್ವರಿತದಿ ಹಬ್ಬಿಸಿ ಬಹೆನು (ನಾಗಕು. ೧೧-೨೪); ಯಾಗಶಾಲೆಯಂ ನೇರ್ಪಡಿಸಿ ಕುಂಬೆಯಂ ಬಲಿದು ಹಂದರವೆತ್ತಿ . . . ಯಾಗಂಗಳಂ ನೆರೆಯಿಸುತಿರ್ದರ್ (ರಾಮಾಶ್ವ. ೧೬-೪); ಪ್ರಕೃತಿಯ ಸುಂದರ ಹಂದರದಲ್ಲಿ ವಧುವಾಗಿರುವಳು ಈ ಮುಗುದೆ (ಭಾವಗೀ. ೭). **ಹಂದರು:** ಅಂದವಿಲ್ಲದ ಮುಸ್ತು ಹಂದರಿಲ್ಲದ ಮದುವೆ ಕಂದನಿಲ್ಲದ ಮನೆವಾರ್ತೆ ಇವು ಮೂಱು ಕುಂದು ಕಾಣಯ್ಯ (ಸರ್ವಜ್ಞ.೧೭೯೧). 'ಹಂದರುವಣ' ಪರಾ. **ಹಂದಲ:** ಹಂದಲವೊಕ್ಕು ವಿವಾಹ ಮಂಟಪಕಾನಂದದಿ ಬಂದನಾ ನೃಪತಿ (ಶ್ರೀಪಾಲ. ೧೦-೮೪). **ಹಂದಲು:** ಸೊಸೆಗೆ ಬಿಸಿ ಇಲ್ಲ, ಹಂದಲಿಗೆ ಹಸಿ ಇಲ್ಲ (ಗಾದೆ.)

**ಪಂದರ ಪಣ, ಹಂದರ ಹಣ, ಹಂದಲ ಹಣ** = ಮದುವೆ ಮುಂತಾದ ಸಮಾರಂಭಗಳಲ್ಲಿ ಮನೆಯ ಮುಂದೆ ಚಪ್ಪರ ಹಾಕುವಾಗ ಕೊಡಬೇಕಾದ ತೆರಿಗೆ; ಚಪ್ಪರಹಣ: ಎಟ್ಟಕ್ಕೊಕ್ಕಲ ಮದುವೆಯ ಪನ್ದರ ಪಣಮು ಸೂಳೆಯೆರೆಲ್ಲಿಯ ಕನ್ನಡಿವಣಮುಮಂ ಚಂದ್ರಾರ್ಕ್ಕತಾರಂ ಬಿಟ್ಟರ್ (ಎಕ. VII, ಶಿಕಾರಿ. ೨೯೫-೨೧; 1074); ಮದುವೆದೆಱಿ— ಮದುವೆಗಳ ಮೇಲಿನ ತೆರಿಗೆ. 'ಪಂದರ ಪಣ' ಎಂದರೂ ಇದೇ ಇರಬಹುದು (ಪಂದರ—ಹಂದರ = ಮದುವೆಯ ಚಪ್ಪರ) (ಕಶಾಅ. ೪೦೨); ಮೇಟಗಣ್ಡುಗಮುಮಂ ಹನ್ದರ ಹಣಮುಮಂ ಬಿಟ್ಟರು (ಕಇ. IV, ೩೯-೨೭; 1111); ಘಟ್ಟದೇವರಸರು ಮದುವೆಯಾದಲ್ಲಿ ಹಂದರ ಹಣವಂ . . . ಬಿಟ್ಟರು (ಸೌಇಇ. IX-i, ೨೦೦-೫೦; 1121); ಕೊಡವೀಸ ಹಂದರ ಹಣ ಹರವಿಗೂಳು (ಮೈಆರಿ. ೧೯೩೪, ೨೭-೨೧; 1430); ಅರಕೆರೆ ಹಂದಲ ಹಣ ಪರಿಹಾರ (ಎಕ. IX, ಕೊಡಗು. ೩೩-೧೨; 1115 ?). **ಪಂದರವಿಕ್ಕು** = ಚಪ್ಪರವನ್ನು ಕಟ್ಟು,—ರಚಿಸು: ಬಾಣಜಾಲದಿಂ ಪಂದರವಿಕ್ಕಿದಂತಿರೆ ನಭಂ . . . ತಾಗಿದುವಂದೆರಡುಂ ಚತುರ್ಬಲಂ (ಪಂರಾಮಾ. ೪-೬೦); ಘನಮಾರ್ಗದೊಳ್ ಸರಲ ಸಂತತಿ ಪಂದರವಿಕ್ಕಿದಂತೆ ಸಂಧಿಸಿ ನಿಲೆ (ಜಗವಿ. ೮-೬೧). [ದೇ.॥ ತಮಿ. ಪನ್ತರ್, ಪನ್ತಲ್; ಮಲ. ಪನ್ತಲ್; ಕೊಡ. ಪಂದ; ತೆಲು. ಪಂದಿರಿ, ಪಂದಿಲಿ; ಕೋಲಾ. ಪನ್ಡಿ]

**ಪಂದರ** 'ಪಂದರ್' ನೋ.

**ಪಂದರಿಕ್ಕು,** ಹಂದರಿಕ್ಕು (ಕ್ರಿ). ಚಪ್ಪರವನ್ನು ಹಾಕು; ಕಾವಣ ಕಟ್ಟು: ಕೂರ್ಗಣೆಯೊಳ್ ಪಂದರಿಕ್ಕಿದಂತಾಯ್ತು ಗಗನವಂಡಳವೆಲ್ಲಂ (ಪಂಪಭಾ. ೧೦-೭೨). **ಹಂದರಿಕ್ಕು:** ಶರದೊಳೆ ತಟ್ಟುಗಟ್ಟದುದು ದಿಕ್ತಟವಂಬಿನ ಹಂದರಿಕ್ಕಿದಂಬರತಳವೆಂಬಿನಂ ತುಱುಗಿ ಬೀಱಿಟ್ಟೊಡೆಯಚ್ಚಲಗಂಬು ತಾಗಿ (ಅನಂಪು. ೧೪-೬). [ಪಂದರ್+ಇಕ್ಕು]

**ಪಂದರಿಸು,** ಪಂದಲಿಸು, ಹಂಜರಿಸು₁ (ಕ್ರಿ). ೧. ಚಪ್ಪರವಾಗು; ಕಾವಣದಂತೆ ಹರಡು: ತಾರಾಪಥಮುಂ ಮಂಡಲಮುಂ ನೆಱಿ ಪಂದರಿಸಿ ಬೆಳೆದ ನವತರುಗಳ ತುಱುಗಿದ ತೂಱಲ್ಕೊಂಬಿನ ಕೆಲವು ಕವಲ್ಕೊಂಬೊಪ್ಪಿದುವು (ಜಯಕಾ. ೧೫-೨೫). **ಪಂದಲಿಸು:** ೧. ಮದವಣಿಗನ ಮುಂದೆಯ್ದುವ ನೃಪತಿಳಕರ ಪಲವು ಕೊಡೆಯಾಗಸವಂ ಪಂದಲಿಸುತ್ತಂ ನಡೆತರೆ (ಜಯಕಾ. ೮-೨೭). **ಹಂಜರಿಸು₁:** ೨. ಹೆಣೆ: ಉರಿಕರಿಯಾದ ಕರಿಕೊಳ್ಳಿಗಳನಱಸಿ ಸಿದ್ಧಿಗೆಯ ನುಲಿಯ ಒತ್ತಿ ಬಿಗಿಬಿಗಿದು ಹಂಜರಿಸಿ ತವಗವನಿಕ್ಕಿ ಮತ್ತೆ ಮೇಲೊಂದು ತಲೆಗುಡಿಸಿಲಂ ಕಟ್ಟಿ (ಹಚಕಾ.೧೧-೪೩). [ಪಂದರ್+-ಇಸು₃]

**ಪಂದರು** 'ಪಂದರ್' ನೋ.

**ಪಂದಲ್** 'ಪಂದರ್' ನೋ.

**ಪಂದಲಿಡು**(ಕ್ರಿ). = ಪಂದರಿಸು ೧: ಮೇಲಾಗಸದೊಳು ಪಂದಲಿಟ್ಟಂತೆ ಮುಸುಕಲು ಶರವಲ್ಲಿ (ನೇಮಿಸಂ. ೨೭-೪೦). [ಪಂದಲ್(<ಪಂದರ್)+ಇಡು₁]

**ಪಂದಲಿಸು** 'ಪಂದರಿಸು' ನೋ.

**ಪಂದಲು** 'ಪಂದರ್' ನೋ.

**ಪಂದಲೆ,** ಪಣ್ದಲೆ, ಹಂದಲೆ (ನಾ). ಹಸಿತಲೆ; ಆಗ ತಾನೇ ಕತ್ತರಿಸಿದ ತಲೆ; ರಕ್ತ ಬಸಿಯುತ್ತಿರುವ ತಲೆ: "ಪಂದಲೆಯೆಂದು ಪಸಿಯ ತಲೆ" (ಕಶಸಾ. ೫೮-೨೭೪); ಮರುಳ್ಗಳಾಟಮಂ ಪಳಪಳನೆಮೆಯಿಕ್ಕದೆ ನೋಡಿ ಮುಗುಳ್ನಗೆ ನಗುವ ವೀರಭಟರ ಪಂದಲೆಗಳುಂ (ಪಂಪಭಾ. ೧೦-೧೧೬ ವ); ಓವದೆ ಕೌಂತೇಯರನಿಕ್ಕಿ ಪಂದಲೆಗಳುಂ ತಂದಿಕ್ಕು (ಗದಾಯು. ೯-೨೯); ಪಂದಲೆಗಳ ಮಾಲೆಯ ಶೂಲದ ಕಲಿಗಂಜದೆ ಮನವನೆಂತು ಮಾಡಿದೆ ಮುಗ್ಧೆ (೧೦ಕ. ೯-೧೧೪); ಅವರ ಪಂದಲೆಯ ತಿಱಿಕಲ್ಲಾಟದಿಂದ ಮರುಳ್ಪಡೆಗೆ ನಲವೆರ್ಚಿಸುತುಂ ಕಪ್ಪಕಾಣ್ಕೆಗಳನೆಱಿದು ತರ್ಪಂ (ರಾಮಾಶ್ವ. ೪೯-೧೮). **ಪಣ್ದಲೆ:** ಮಲೆಯದೆ ವಿಶಾಱಿ ಕೀಱಿ ತಲೆದೋಱಿದೆ ಕಪ್ಪಮನಿತ್ತು ಬಂದು ಬಾಳ್ದಲೆಯನೆ ಕೊಟ್ಟು ಪೊತ್ತು ವೆಸಗೆಯ್ವುದಲ್ಲದೊಡಿಕ್ಕಿ ಮೆಟ್ಟಿ ಪಣ್ದಲೆಯನೆ ಕೊಳ್ಗುಂ (ಶಾಸಪ. ೧೫-೧೯; ಮ. 1158); ಪಾಡುವ ಭಟಕ್ಕಳ ಪಣ್ದಲೆಯಿಂದೆ ನೋಡಲಾಸುರಮು[ಮು]ಗುರ್ವ್ವುಮಾಯ್ತು ಱದುಗೆಲ್ದೆಡೆ ಬಿಜ್ಜಣದೇವಭೂಪನ (ಕಇ. I, ೨೭-೩೪; 1162); ಪಱಿದ ಪಣ್ದಲೆ ಯೋಳಿಗಳಲ್ಲ ನೋೞ್ಪಡಂ ಕೀಳ್ಗಳನಡ್ಡಗಟ್ಟಿ ಕೆಡದಿರ್ದ್ದ ತುರಂಗದ ಪೇರ್ವ್ವಣಂಗಳಂದಾಳ್ಗಳ ದೇವ ದೇಸುವಿಱಿ ದಾಹವ[ಅವ]ದ್ದು ತೆಯ್××

ಧಾತ್ರಿಯೊಳ್ (ಎಕ. VIII, ಸಾಗರ. ೧೪೦-೧೪ ; 1265). **ಹಂದಲೆ :** ಮುಂದಿಳುಹಿದಳು ಹೇಸಿಕೆ ಹೊನಲಿಡುವ ಹಂ[ಪಾಠಾಂ. ಹೆಂ, ಬಲು, ಹಜು]ದಲೆಯುನಿದು ನಿನ್ನನುಜ ವೀರ ಖರಾಸುರನ ತಲೆನೋಡೆನಲು(ತೊರರಾ. ೩-೭-೨೧) ; ಅದಿರದಿದಿರ್ಚಿ ಸಾರ್ಚಿದರ ಹಂದಲೆಯಂ ಹರಿದೆಯ್ದಿ (ಬೊಂಕಶಾ. ೧೯೩೬, ಹಾಸುಗ. ೪೪-೮ ; ?). 'ಬಾಟ್ಲಿಲೆ' ಪರಾ.

[ಪಸ್$_2$(<ಪಸಿ$_3$)+ತಲೆ$_1$]

**ಪಂದಲೆಗೊಳ್** (ಕ್ರಿ). (ಕತ್ತರಿಸಿ) ರಕ್ತ ಬಸಿಯುತ್ತಿರುವ ಹಸಿಯ ತಲೆಯನ್ನು ಪಡೆ,—ಹೊಂದು : ಬಲಿದೆಚ್ಚಾ ಕವಲಂಬರೆಬರ ಪಂದಲೆ ಗೊಂಡದಜಿಕೆಗಳಗುಚ್ಚಳಿಸುತ್ತಿರೆ (ಜಯಕಾ. ೭-೪೩).

[ಪಂದಲೆ+ಕೊಳ್$_1$]

**ಪಂದಲೆದರ್** (ಕ್ರಿ). (ಕತ್ತರಿಸಿ) ರಕ್ತ ಬಸಿಯುತ್ತಿರುವ ಹಸಿಯ ತಲೆಯನ್ನು ತೆಗೆದುಕೊಂಡು ಬರು : ರಣಾಡಂಬರದಿಂದಮಂಜ ದೊಡೆ ಪಂದಲೆದಂದಪೆನೆಂದು ಪೂಣ್ದು (ಪಂರಾಮಾ. ೧೩-೧೩೫).

[ಪಂದಲೆ+ತರ್]

**ಪಂದಲೆಪಚ್ಚ** 'ಪಂದಲೆವಚ್ಚ' ನೋ.

**ಪಂದಲೆವಚ್ಚ,** ಪಂದಲೆಪಚ್ಚ(ನಾ). ಹಸಿಯ ತಲೆಗಳನ್ನು ಆಭರಣ ವನ್ನಾಗಿ ಮಾಡಿಕೊಂಡಿರುವವನು ; ಪರಮೇಶ್ವರ; ಶಿವ : "ಎಣ್ಮಯ್ಯಂ . . . ಪಂದಲೆವಚ್ಚಂ . . . ಅಯ್ಮೊಗಂ—ಈ ೩೩ ಈಶ್ವರಂಗೆ ಪೆಸರ್" (ಕಶಸಾ. ೪೭-೧) ; "ಪಂದಲೆವಚ್ಚ, ಸಾಂತ, ಬೆಳ್ಪಡಿಯನೆನೆ ಶಿವಗೆ ಪೆಸರ್" (ಕಬ್ಬಿಕ್ಕೈ. ೫) ; ಪಂದಲೆವಚ್ಚನ ಪಸಿದೊಗಲ್ದಳೆದನ . . . . ಸೌಂದರ್ಯಶಾಲಿಯ ರಂಗಗೆ ಸಾಟಿಯೆಂಬ ಮಂದಭಾಗ್ಯರ ಮಾತು ನಿಜವೆ (ಶತಸಾಂ. ೮-೪೨) ; ಪಂದಲೆವಚ್ಚಂಗಚ್ಚಸರಮಂ ತುಡಿಸಿ (ರಾಮಾಶ್ವ. ೧೩೧-೧೨). **ಪಂದಲೆಪಚ್ಚ :** "ಪಂದಲೆಪಚ್ಚ, ಪಂದಲೆ ವಚ್ಚ=ಹಸಿ ತಲೆಗಳನ್ನು ಆಭರಣ ಮಾಡಿಕೊಂಡವ, ಶಿವ" (ಗಂಗಾಮು. ೧೯೩).

[ಪಂದಲೆ+ಪಚ್ಚ$_2$]

**ಪಂದಳಿಗೆ** (ನಾ). ಹಸಿಯ ಹುಲ್ಲಿನಿಂದ ಹೆಣೆದುದು; ಹುಲ್ಲುಚಾಪೆ : ಪಂದಳಿಗೆನೆಲ ಮಿಂಚೆ ಬಿದ್ದಿನನ ಸವಿನುಡಿಯ ನಿಂದು ನೋಡುವುದೆನಲ್ ಹೊಂಚೆ ಬೆಂದಳಗೆ (ಕಾಲೂರ. ೬೪-೧೯೯). [ಪಸ್$_2$(<ಪಸಿ$_3$)+ದಳಿಗೆ]

**ಪಂದಳಿರ್** (ನಾ). ಹಸುರಾಗಿರುವ ಎಲೆ; ಹೊಸಚಿಗುರು ; ನವಪಲ್ಲವ : ಕೆಟಗಣ ಕೆಂದಳಿರ್ ಪುದಿದ ಮೇಗಣ ಪಂದಳಿರೊಂದಿ ದೊಂದು ಕೆಯ್ಗೊಟಿದ ಪಸುರ್ಪುಮಂ ಪೊಳೆವ ಕೆಂಪುಮನಾಳ್ದಿರೆ (ಪಂಪಭಾ. ೫-೩೨); ಪಂದಳಿರ ತೋರಣಂ . . . ಮಂಗಳಾನಕದೊಂದು ರವಂ ಬಗೆಗೆ ವಂದುದಂದರಮನೆಯೊಳ್ (ಕಾವ್ಯಾವ. ೨೩೪) ; ಜನ್ನಸಾಲೆಯಂ ಬಳಿಯ ಪಂದಳಿರ ಪಂದರದಿ ಸಮೆದ ಬೀಡಾರಕವರಂ ಪುಗಿಸಿ, ಪರಿದರ್ (ಶ್ರೀರಾಮಾ. ೪೦-೩೩೨).

[ಪಸ್$_2$(<ಪಸಿ$_3$)+ತಳಿರ್$_2$]

**ಪಂದಿ,** ಹಂದಿ (ನಾ). ೧. (ಕಠಿಣವಾದ ಮೂತಿಯುಳ್ಳ ಮತ್ತು ಅದರಿಂದ ನೆಲವನ್ನು ಅಗೆದು ಗೆಡ್ಡೆಗೆಣಸುಗಳನ್ನು ತಿನ್ನುವ) ಒಂದು ಬಗೆಯ ಸಸ್ಯಾಹಾರಿಯಾದ ಪ್ರಾಣಿ; ವರಾಹ; ಸೂಕರ : ಉಪಶ್ರೇಣಿಕಂ ಬೇಂಟೆಯನಾಡಲ್ವೋಗಿಯಡವಿಯೊಳ್ ದುಷ್ಟಾಶ್ವಮನೇಱಿ ಪಂದಿಯ ಬೞಿಯಂ ತಗುಳ್ದೊಡೆ (ವಡ್ಡಾರಾ. ೧೬೨-೧೭) ; ವಿಮಾನಾವೆ ಪಂದಿಯೆಂದೆನಿತಾನುಂ ತೆಱನಾಗಿ ಡೊಂಬವಿದ್ದೆ ಯಂನಾಡಲ್ ನೀನಱಿವೆಯ್ (ಪಂಪಭಾ. ೬-೫೭) ; ಕೆಟಲೆನಾಡ ಬೆಳ ತೂರ ಪಡುವಣ ದೆಸೆಯ ಮೊಱಡಿಯೊಳ್ ಪಿರಿಯ ಪನ್ದಿಗೆವಿಟ್ಟೊಡೆ ಪನ್ದಿಯುಂ ನಾಯುಂಮೊಡಸತ್ತುವು (ಎಕ. III, ಮಂಡ್ಯ. ೪೧-೧೧, 950); ಪಂದಿ ಡುಱುಕೆಂದೊಡೆ ತಾಂ ಡುಱುಕೆಂಬುದೇ ಮಹಾವನಕರಿಯಂ ವಿದಾರಿಸುವ ಸಿಂಹಂ (೧೦೪. ೧-೨೯). ೨. ಕಾಡುಹಂದಿ : ತುಂಗ ಭದ್ರೆಯಾ ತಡಿಯೊಳ್ . ತಾಣಬೀಡುಗಳಿಟ್ಟು ರಾಮೇಶ್ವರ ಎಮ್ಬ ತೀರ್ತ್ಥದಾ ಮೊದಲೊಳ್ ಮೆಪ್ಪಿಕ್ಕಿ ಪೊರದ ಪನ್ದಿಗಳನಿಱಿಯಲ್ ಬನ್ದಲ್ಲೀ (ಲ್ಲಿ) (ಎಇ. XXXIII, ೩೩೧-೧೦ ; 804). **ಹಂದಿ : ೧.** "ಕೋಳಃ, ಕ್ರೋಡಃ, ಸೂಕರಃ, ವರಾಹಃ, ಪೋತ್ರೀ, ದಂಷ್ಟ್ರೀ, ಘೃಷ್ಟಿಃ, ಕಿರಿಃ—ಈ ೮ ಹಂದಿ" (ಹಲಾಯು. ೩೮-೭೩) ; ಅವಂ ಸತ್ತೊಡೆ ಹನ್ದಿ ಸತ್ತುದು ನಾಯಿ ಸತ್ತುದು (ಸೌಇಇ. XI-ii, ೧೪೭-೧೫ ; 1104) ; ಈ ಕ್ರಮದಲ್ಲಿ ನಡೆಯದಾತಂಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ . . . ಅವನ ಬಾಳುವೆ ಹಂದಿಯ ಬಾಳುವೆ (ಮಹಾದೇ. ಬ. ೯೦-೨೧೫) ; ಹಂದಿ . . . ಮಲೆವುತ ಗಜಱಿ ಗರ್ಜಿಸಿತು (ಕುಮ್ಯಾಅ. ೫-೪೫) ; ಹಂದಿಗೆ ತುಪ್ಪ ಸಕ್ಕರೆ ಉಣಿಸಲು ಗಜೇಂದ್ರನಾಗಬಲ್ಲುದೆ (ಪುರಂದ. ೧-೧೫೬-೧).

**ಹಂದಿಯ ಗಡಿಂಬದ ಘಳೆ**=ಭೂಮಿಯನ್ನು ಅಳೆಯಲು ಒಂದು ಪ್ರದೇಶದಲ್ಲಿ ಬಳಸುತ್ತಿದ್ದ ಒಂದು ಅಳತೆಯ ಕೋಲು,—ಗಳೆ : ಕಟ್ಟಿದಲಗಿನ ನಾಲ್ವತ್ತು ಗೇಣ ಹಂದಿಯ ಗಡಿಂಬದ ಘಳೆಯ ಮತ್ತರಯ್ತು ತ್ತು ಂಕೊಟ್ಟರ್ (ಎಇ. V, ೧೪-೪೩;1142). **ಹಂದಿಮುಸುಡಿಹುಣ್ಣು**= ಹಂದಿಯ ಮೂತಿಯಂತೆ ಕೆಂಪಾಗಿದ್ದು ಯಾವಾಗಲೂ ಕೀವು ಸೋರುವ ಹುಣ್ಣು,—ವ್ರಣ : ಕಾಲಿನಲ್ಲಿ ಹಂದಿಮುಸುಡಿಹುಣ್ಣಾಗಿ ಕೀವು ಸೋರುತ್ತಿದೆ (ರೂಢಿ). **ಹಂದಿಮೂತಿಹುಣ್ಣು** ಹಂದಿಮುಸುಡಿ ಹುಣ್ಣು: ಕಾಲಿನಲ್ಲಿ ಹಂದಿಮೂತಿಹುಣ್ಣಾಗಿದೆ (ರೂಢಿ). **ಹಂದಿಯ ಸಲಿಕೆ** =ಒಂದು ಪ್ರದೇಶದಲ್ಲಿ ಬಳಕೆಯಲ್ಲಿದ್ದ ಧಾನ್ಯದ ಒಂದು ಅಳತೆ (?) : ಮತ್ತರಿಂಗೆ ಹಂದಿಯ ಸಲಿಕೆಯೊಂದಂ ತಿಱುವರ್(ಎಇ. V, ೧೪-೪೬ ; 1142).

[**ದೇ.॥ ತಮಿ.** ಪನ್ಱಿ, ವನ್ಱಿ ; **ಮಲ.** ಪನ್ನಿ ; **ತುಳು.** ಪಂಜಿ ; **ಕೊಡ. ತೆಲು.** ಪಂದಿ ; **ತೊದ.** ಪೊಡಿ ; **ಕೋತ.** ಪಜ್ ; **ಪರ್ಜಿ.** ಪೆಂಡ್, ಪೆಂದ್; **ಗದಬ.** ಪಂಡ್, ಪಂಡು ; **ಗೊಂಡಿ.** ಪದ್ದೀ ; **ಕುಇ.** ಪಜಿ ; **ಕುವಿ.** ಪಜ್ಜಿ, ಪಋಜ್ಜಿ]

**ಪಂದಿಗ** (ನಾ).೧. ಒಬ್ಬಾತನ ಹೆಸರು : ಆತಂಗೆ ಮಗಂ ಸನ್ದ ಮಹಾ ಸಾಮನ್ತಂ ಪನ್ದಿಗನ್ (ಎಕ. XI, ಚಿತ್ರದು. ೭೪-೧೧ ; 968). ೨. ಒಂದು ಬಗೆಯ ಮೀನು : ಕೊರವಂ . . . ಮುಡಿಲುಂ ಪಂದಿಗ ನೆಂಬ ಮೀಂದೆಗೆದನಾ ಭಕ್ತಂ ಮಹಾಲೀಲೆಯಿಂ (ಶ್ರೀಪುವಿ. ೫೭-೮). 'ಪಂದಿಮೀನ್' ಪರಾ.

[ಪಂದಿ+-ಗ$_2$]

**ಪಂದಿಗಡ್ಡೆ,** ಹಂದಿಗಡ್ಡೆ, ಹಂದಿಗೆಡ್ಡೆ (ನಾ). ಒಂದು ಬಗೆಯ ಗಡ್ಡೆ ; ವಾರಾಹಿ : ನಯನಜಲಂಗಳಂಮ್ಮವೊಡೆ . . . ಪಂದಿ ಗಡ್ಡೆಯ ಪುರುವಳ್ಳಿಯೂಷಜಳಮಕ್ಕುಪಯೋಗಿಸಿದಂದು ಮಟ್ಟುಗುಂ (ಲೋಕೋಪ. ೯-೨೦೫). **ಹಂದಿಗಡ್ಡೆ :** "ವಿಶ್ವಕ್ಸೇನಾ, ಪ್ರಿಯಾ, ಘೃಷ್ಟಿಃ, ವಾರಾವತಾಂಘ್ರಿ, ಬದರೀ—ಈ ೫ ವಾರಾಹಿ, ಹಂದಿಗಡ್ಡೆ" (ನಾಚಿರಾ. ೧೧೨) ; "ಅಮೃತ—ಬೋಟಗಡಲೆ, ಹಂದಿಗಡ್ಡೆ"(ಒಷಧಿ.೪). **ಹಂದಿಗೆಡ್ಡೆ :** ಮುನಿಕುಮಾರರ್ಗೆ ಹಂದಿಗೆಡ್ಡೆಯಂ ದಾಡೆಯಿಂದುಗುಟ್ಟು ನೀಡುವ ವನವರಾಹಂಗಳಿಂ . . . ಸೊಗಯಿಸುವುದು (ಕಾದಂಪೂ. ೨೨೦).

[ಪಂದಿ+ಗಡ್ಡೆ./**ತೆಲು.** ಪಂದಿಗಡ್ಡ]

**ಪಂದಿಗೊಳ** (ನಾ). ಒಂದು ಊರಿನ ಹೆಸರು ; ☞ ಧಾರವಾಡ ಜಿಲ್ಲೆಯ ಗದಗ ತಾಲ್ಲೂಕಿನ ಈಗಿನ (ಹಿರೇ)ಹಂದಿಗೋಳ : ಶ್ರೀ[ಕೊ]ನ್ನದ ಪೆಗ್ಗಡೆಯ್ಯಂ ಪನ್ದಿಗೊಳವನಕಳಪ್ರವೃತ್ತಿಯಿನ್ನಾಳುತ್ತುಂ (ಸೌಇಇ. XI-i, ೪೩-೧೫ ; 970).

[ಪಂದಿ+ಕೊಳ$_2$]

**ಪಂದಿದಲೆ** (ನಾ). ಕೋಟೆಕಾಳಗದಲ್ಲಿ ಬಳಸುತ್ತಿದ್ದ ಒಂದು ಬಗೆಯ ಆಯುಧ ; ಹಂದಿಯ ತಲೆಯಾಕಾರದ ಆಯುಧ ; ☞ "ಹಂದಿಯ ತಲೆಯ ಶಕ್ತಿಯೂ ಅವುಗಳ ಕೋರೆಹಲ್ಲುಗಳ

ಮೊನೆಯೂ ಅದರಿಂಪ ಏಟು ತಿಂದವರಿಗೇ ಗೊತ್ತು. ಅದೇ ಆಕಾರದ ಅದೇ ಶಕ್ತಿಗುಣಗಳುಳ್ಳ ಈ ಆಯುಧಗಳು ಕೋಟೆಯ ಮೇಲೆ ಯಾವಾಗಲೂ ಇದ್ದೇ ಇರುತ್ತಿದ್ದವು" (ಕರ್ಣಾಜ. ೫೮) ; ಕತ್ತರಿ ಪಂದಿದಲೆ ಹಾರೆ . . . ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಪ್ಪಿತು (ಸಮ್ಯಕೌ. ೮-೨೮); ಬಲಿವ ಪಟಲ ಬೆಣೆ ಡೆಂಕಣಿಗೈ ಪಂದಿದಲೆ ತಿರುಗುಣಿ ಭೀಮಗದೆಯ ಬಲಿದು ಕೆತ್ತುವ ಬಡಗಿಗಳಿಂದಾ ದುರ್ಗ ಸಲೆ ಮೆಱೆದುದು ಕಣ್ಗಳಿಗೆ (ಕುರಾಸಾಂ. ೩೭-೫೮) ; ಎಡಬಲದೊಳಿಟ್ಟಣೆಪರಂ ಮುಚ್ಚಿದರ್ ಕಲ್ಗುಂಡುವಳೆಗಳಿಂ ಪಂದಿದಲೆಗಳೊಳಿಟ್ಟು ಬೊಬ್ಬಿಱಿದರು (ಚಿಬಪು. ೪೨-೩೩) ; ಮೇಲೊಪ್ಪುತಿಹ ಪಂದಿದಲೆ ದಸಿ ಶೂಲಗಳ್ಮೊಲೋಕ ಕತಿಶಯುಮಾಯ್ತು (ಕಂನವಿ. ೨-೬೬). [ಪಂದಿ+ತಲೆ$_1$]

**ಪಂದಿಪುಟ್ಟು** 'ಪಂದಿಪೊಟ್ಟು' ನೋ.

**ಪಂದಿಪೊಟ್ಟು,** ಪಂದಿಪುಟ್ಟು, ಪಂದಿಪೋಟು (ನಾ). **೧.** ಹಿಂದಿನ ಕಾಲದಲ್ಲಿ ಕೋಟೆಯ ರಕ್ಷಣೆಗಾಗಿ ಇಡುತ್ತಿದ್ದ ಒಂದು ಉಪಕರಣ,—ಸಾಧನ : ಗದೆ ಪಂದಿದ[ಪಾಠಾಂ. ತ]ಲೆ ಪಂದಿಪೊಟ್ಟಟ್ಟ ಡೆಂಕಣಿಗಳ ನಿಲಿಸಿದರು (ಕುರಾಸಾಂ. ೪೨-೩೬). **೨.** (ಹಂದಿಯನ್ನು ಬೇಟೆಯಾಡಲು ಬಳಸುವ) ಒಂದು ಬಗೆಯ ಆಯುಧ : ತುಡುಕಿ ಪಿಡಿದು ಪಂದಿಗಳ ಜಾಯಿಲಗಳು ತಡೆದು ನಿಲಿಸಲು ಕಲಿಗಳು ಬಿಡದೆಯ್ತಂದಿಟ್ಟ ಪಂದಿಪೊಟ್ಟುಗಳಿಂದ ಕಡಿಕೆಯ್ದುಱದಾಡಿದರು (ಕುರಾಸಾಂ. ೨೭-೮೯). **ಪಂದಿಪುಟ್ಟು : ೨.** ತಟ್ಟುಗಿದಂಬುಗಳಿಂದೆ ತಿವಿವ ಪಂದಿಪುಟ್ಟುಗಳಿಂದೆ ಕೊರಲು ಕೊಯ್ವವರಿಂದಸುಗಳು ಬಿಟ್ಟು ಪೋದಪುದರೆ ಬರನು (ರಾಮವಿ. ೧೬-೨೭). **ಪಂದಿಪೋಟು: ೧.** ಸುರಗಿ ಸಬಳ ಪಂದಿಪೋಟಟ್ಟ ಗದೆ ತೊಲೆ ವರಗುಂಡು ಪಟಲುಗಳಿಂದ . . . ಲಗ್ಗೆಯನಿಳುಹಿದರು (ಕುರಾಸಾಂ. ೩೯-೨೭). 'ಪಂದಿದಲೆ' ಪರಾ.

[←-ತೆಲು. ಪಂದಿಪೋಟು, ಪಂದೀಟ]

**ಪಂದಿಪೋಟು** 'ಪಂದಿಪೊಟ್ಟು' ನೋ.

**ಪಂದಿವಿಱಾನ್,** ಹಂದಿವಿಮಾನು (ನಾ). ಒಂದು ಬಗೆಯ ವಿಮಾನು : ಗಱುವಿಱಾನ್ನೀಗುಡಿ . . . ಪಂದಿವಿಱಾನ್ಪೆಱೆವಿಱಾನ್ಪಗ್ಗಡೆ ಬಣ್ಣವಿಱಾನೆನಿಪಿವೆಲ್ಲಂ ಬೀಳ್ದುವಾ ತಾಣದೊಳ್ (ರಾಜಶೇ. ೫-೧೧೫). **ಹಂದಿವಿಮಾನು:** ಕೊಡತಿವಿಮಾನು, ಹಂದಿವಿಮಾನುಗಳು ನೋಟಕ್ಕೆ ಇಷ್ಟಪಷ್ಟು ಚಂದವಾಗಿಲ್ಲ (ಬಾಲಪ್ರ. II, ೯೬೧). [ಪಂದಿ+ವಿಱಾನ್$_2$]

**ಪಂದಿರಿಬೋಯ** (ನಾ). ಒಬ್ಬಾತನ ಹೆಸರು : ಪನ್ದಿರಿಬೋಯ [ಸ್ಯ] ಭಾರದ್ವಾಜಗೋತ್ರ ಪವ್ವಶಮ್ಮಣ (ಇಆ. VII, ೧೮೮-೪೨ ; 668). [?+ಬೋಯ]

**ಪಂದಿವಿಂಡು** (ನಾ). ಹಂದಿಗಳ ಗುಂಪು,—ಸಮೂಹ : ಪಂದಿವಿಂಡುಗಳಗ್ರಗಣ್ಯನೆನಿಪ್ಪ ಮದ್ವಪುವಂ ನೃಪಂ ಬಂದು ಬೀಳಿಪಂ (ಹಾಲಾಸ್ಯ. ೩-೧೩-೨೫). [ಪಂದಿ+ಪಿಂಡು$_2$]

**ಪಂದಿವೇಂಟೆ,** ಹಂದಿವೇಂಟೆ (ನಾ). ಹಂದಿಯ ಬೇಟೆ: ಮತ್ತಂ ಪಂದಿವೇಂಟೆಯ ಮಾತಂ ಬಿನ್ನಪಂಗೆಯ್ವೆಂ (ಪಂಪಭಾ. ೫-೪೫ ಪ). **ಹಂದಿವೇಂಟೆ :** ತನತನಗೆ ಹಂದಿವೇಂಟೆಗೆ ವನಚರರೆಯ್ತಂದು ನಿಂದು (ಗಿರಿಕ. ೧-೯೯). [ಪಂದಿ+ಬೇಂಟೆ]

**ಪಂದು** (ನಾ). ಹಂಚಿಕೆ ; ಯುಕ್ತಿ ; ಉಪಾಯ : ನನ್ನ ಕರಕೊಂಡು ಹೋಗಿ ಅವರ ಮುಂದೆ ನಿಲ್ಲಿಸೋರಾದರೂ ಯಾರು ? ಆದಕ್ಕಾಗಿ ಒಂದು ಪಂದು ಮಾಡಿದೆ (ಮಲ್ಲಿ. ೧೦) ; ತಾನು ಏನಾದರೂ ಒಂದು ಪಂದು ಮಾಡಬೇಕು. ಅವನನ್ನು ಉರುಳಿಸಬೇಕು ಎಂದು ಗೊತ್ತುಮಾಡಿಕೊಂಡನು (ಘಾಟೀಮು. ೭೮) ; ಮುಖ್ಯನ್ಯಾಯಾಧೀಶನೇ ಎದುರಿಗೆ ಬಂದು ನಿಂತ ಮೇಲೆ ಇಂಥ ಪಂದು ಮಾಡುವುದಕ್ಕಾಗುವುದಿಲ್ಲವಷ್ಟೆ (ಷೇಕ್ಸಪಿ. ೨೫೧).

[←ತಮಿ. ಪನ್ತು./ಪಾರ. ಮರಾ. ಫಂದ್ = ಮೋಸ, ಕುಟಿಲ ; ಹಿಂ. ಪಂದ್, ಫಂದಾ = ಜಾಲ, ಪಾಶ, ಬಲೆ ]

**ಪಂದೆ,** ಹಂದೆ (ನಾ). ಹೇಡಿ ; ಅಂಜುಬುರುಕ ; ಪುಕ್ಕಲ : "ದರಿತಃ . . . ಶಂಕಿತಃ—ಈ ೬ ಪ(ಹ)ಂದೆ" (ಹಲಾಯು. ೫೮-೧೯೯) ; ಕೊಂದು ಜಟಾಯುವನಾತಂ ಮುಂದಿಟ್ಟಾ ಜನಕಸುತೆಯನೊಯ್ದಂ ಮತ್ತಾ ಪಂದೆಯನಂತಕಮುಖದೊಳ್ ತಂದಿಟ್ಟಂದಲ್ಲದುಱುಗುಮೇ ರೌದ್ರರಸಂ (ಕವಿಾ. ೩-೧೯೪) ; ನಾಣಿಲಿ ಪಾಣ್ಬಂ ಪಂದೆ (ಪಡ್ನಾರಾ. ೧೦-೩೦) ; ಕಲಿಯುಂ ಪೊರೆದೊಡೆ ಕೂರ್ಪಂ ತೋರ್ಪಂತಿರೆ ತೋರ್ಕುಮೆ ಪಂದೆ ಪತಿಗೆ ಸಂಗರದೆಡೆಯೊಳ್ (ಗದಾಯು. ೨-೨೩) ; ಪೆಣನಂ ಕಂಡ ಪಂದೆಯಂತೆ ಕಣ್ಣಂ ಮುಚ್ಚುತ್ತುಂ (ಧರ್ಮಾಮೃ. ೧-೧೪೪) ; ಪಂದೆಯ ಗೆಂತಂತು ನೀಂ ಕುಱು, ಪೆಣ್ಗಂಜುವೆಯಾ ! (ರಾಮಾಶ್ವ. ೬೧-೨೧). **ಹಂದೆ :** "ಭೀರು ಭೀಕಂ ಹಂದೆ" (ಮಂಗರಾ. ೬೯-೧೨) ; ಹಂದೆಯ ಕೈಯಲ್ಲಿ ಚಂದ್ರಾಯುಧವಿರ್ದು ಫಲವೇನು (ಬಸವ. ೧೦೮) ; ಶರಣರ ಮನೆಯ ಬಿರುದಿನಂಕಕ್ಕೆ ಹಿಮ್ಮೆಟ್ಟದಿರೆಲೆ ದೇವ ಎಲೆ ತಂದೆ ಎಲೆಲೆ ಹಂದೆ ಕೂಡಲಸಂಗ ಸ್ವಯವಾಗು (ಬಸರ. ೧೨-೩೦) ; ಹಂದೆ ಹೋಗೆಲೆ ನಾಯೆ ನಿನಗೇಕಮರಮಾನವರ ದಂಡಶೂಕರ ಭುವನದೊಡೆತನ (ತೊರರಾ. ೫-೩-೫೩) ; ನಿಂದು ಕಲಿಗಳ ಕಾಲ್ಗೆಱಗಿ ಬಿಡಿಸಿಕೊಂಡ ಹಂದೆಗಳಿಗೆ ಲೆಕ್ಕವಿಲ್ಲ (ಕಂನವಿ. ೧೫-೯೮). **[ದೇ.॥ ತೆಲು.** ಪಂದ]

**ಪಂದೆಗಜ್ಜ** (ನಾ). ಹೇಡಿಯ ಕೆಲಸ : ಬಗೆದಂದೀ ಪಂದೆಗಜ್ಜಂಗಳ ನಱುವ ನಿನ್ನುಕ್ತಿಯಂತಿರ್ಕೆ (ಜಗವಿ. ೧೩-೫೬). [ಪಂದೆ+ಕಜ್ಜ$_1$]

**ಪಂದೆತನ,** ಹಂದೆತನ (ನಾ). ಹೇಡಿತನ ; ಅಂಜುಬುರುಕುತನ ; ಪುಕ್ಕಲುತನ : ನಿನಗೆ ಪಂದೆತನಮೆ ತಾನಾದೊಡಿನಿತಾನುಂ ಭಯವಿಲ್ಲದೊವರ್ಯೆ ನೆಲಪಿನ ಕಾಲೆಲ್ಲಮಂ ಕೊಯ್ವೆಂ (ಧರ್ಮಾಮೃ. ೨-೧೩೧) ; ಪಂದೆತನವಲಸತನದಿಂದ ಬಿಡುಗಡೆಯೊಂದಿ ಹಿಂದಿನಪಮಾನಗಳ ತೊಳೆಯಿರೇಳಿ (ವಿಸೀಗೀ. ೪೩-೫). **ಹಂದೆತನ :** ನಿನ್ನ ಸಿಂಹವಾಗಿ ಬೆಳೆದು ಎನ್ನ ಹಂದೆತನವ ಕಳೆದು ಮುನ್ನ ನಿನ್ನ ವಾಹನವೆನುವಂತೆ ಸಾಗುವೆ (ಜೀವಲ. ೭೬-೮). [ಪಂದೆ+-ತನ]

**ಪಂದೆಮು** (ನಾ). (?) : ಸಾಲವಿಲ್ಲಾ ಮೆಕ್ಕೆ ಸಾಕ್ಷಿ . . . ಕದಂಬೂರಾ ನಾಲ್ಪದಿನ್ಪರು ವಿದತ್ತೂರು ನಾವಿದ ಪಂದೆಮುಂ ಅಱಿಯ ಈರೆ ದೆತ್ತರಾ ಪೊರುಳ × × × ಮುನಿಗಿತ್ತು (ಎಕ. X, ಕೋಲಾರ .೭-೯; ಸು. 760). [ ? ]

**ಪಂದೆವಾನಿಸ** (ನಾ). ಹೇಡಿಯಾದ ಮನುಷ್ಯ ; ಅಂಜುಬುರುಕ : ಪಂದೆವಾನಿಸರ್ ಲೇಸನೆ ಕಾಣರೆಂಬ ಪಟನಾಣ್ಣುಡಿಯಂ ಪಿಡಿಗಟ್ಟನಳ್ಕದಿರ್ (ಚಿಕವಿ. ೬-೧೪೭). [ಪಂದೆ+ಮಾನಿಸ$_1$(<ಮಾನುಸ)]

**ಪಂದೊಗಲ್** 'ಪಂದೋಲ್' ನೋ.

**ಪಂದೊವಲ್** 'ಪಂದೋಲ್' ನೋ.

**ಪಂದೋಲ್,** ಪಂದೊಗಲ್, ಪಂದೊವಲ್, ಹಂದೊಗಲ್ (ನಾ). ಹಸಿಯ ತೊಗಲು ; ಹೊಸದಾಗಿ ಸುಲಿದ ಚರ್ಮ : ಪಂದೋಲ್ ನೆತ್ತರ್ಕೀವಡಗಂದಿನ ತಾಂ ತೊಱೆದ ವಸ್ತು ಸತ್ತ ಕ್ರಿಮಿಗಳ್ ಸಂದಸ್ಥಿಯೆಂಬಿವೇಱುಂ ಕುಂದದೆ ಮುಟ್ಟುಪಡಮುಕ್ಕುಮರ್ಹನ ಮತದಿಂ (ಧರ್ಮಾಮೃ. ೫-೧೩೩) ; ಪಂದೋಲ್, ಪಂದೊವಲ್ (ಶಮದ. ೧೮೨ ಪ್ರಯೋ). **ಪಂದೊಗಲ್ :** ಪಂದೊಗಲೊಳ್ಪುಱುವೆರಸು ತೀವಿದಾ ನೀರುಮನುಂಡು ಗಡಂ ತಮ್ಮಾಚಾರಕೆ × × × ಮಿಗಿಲಾಮೆ ಪಿರಿಯರೆಂಬರ್ ಕೆಲಬರ್ (ಸಮಪ. ೬-೧೫). **ಪಂದೊವಲ್ :** ನಾಭಿವರೆಗಂ ಬಸಿಱಿಂ ಪೋಱ್ದು, ಅಲ್ಲಚಮ್ಮಂ—ಪಂದೊವಲಂ ತೆಗೆದು (ಪಡ್ನಾರಾ. ೫೦-೫) ; ಆ ಚಂಡಾಲಕನ್ನಿಕೆ ರೋಮಂಬೊರೆದ ಪಂದೊವಲ ಪಂಜರ

ದೊಳಿಕ್ಕಿ . . . ಪಡಿಯಂ ಕೆತ್ತಗುಳಿಯನಿಕ್ಕಿ (ಕಾದಂಬ. ೬೫೦); ಅವರಾಳ್ತನವ ಕಂಡುಱದೆ ಕಣ್ಣಟ್ಟಿ ಕಲ್ಲೇಱಿ ಪಂದೊವಲನಾಂತು ದೆಸೆಯುಟ್ಟಿಗೆಯನುಟ್ಟು ಭವಗೆಟ್ಟ ಭರ್ಗ (ಉದ್ಭದೇ. ೫-೨೯); ನರರ ತಲೆಗಳ ಜಪದ ಸರದಿಂದೆ ಪಂದೊವಲ[ಪಾಠಾಂ.ಪಸಿದೊಗಲ]ಧೋತ್ರದಿಂದ . . . ಭಯಂಕರರೂಪನಾದ ಮೋದೋಹೋತನ್ನೈತಂದೊಡೆ(ಜೈಮಿಭಾ.೧೬-೨೪). **ಹಂದೊಗಲ್:** ಹಂದೊಗಲ ಹಾಸಿನೊಳು ಮಂಚಂ ಜಡಿಯೆ ಹೊಲೆಯ ಸೋಲಗವಿತ್ತು (ಹಚಕಾ. ೧೧-೩೧).

[ಪನ್$_2$(<ಪಸಿ$_3$)+ತೋಲ್$_1$]

**ಪಂದ್ಯ** 'ಪಂತ$_1$' ನೋ.

**ಪಂದ್ಯಕಟ್ಟು** 'ಪಂತಂಗಟ್ಟು' ನೋ.

**ಪಂದ್ಯಾಟ** (ನಾ). = ಪಂದ್ಯ ೧: ಇಂದು ಭಾರಿ ಭೋಜನ ; ಆಮೇಲೆ ಪಂದ್ಯಾಟ (ಮಣಿಸ. ೮೩); ಆ ಪುಟ್ಟ ಹುಡುಗನಿಗೆ ಬೇಗನೆ ಪಂದ್ಯಾಟದ ಹುಚ್ಚು ಹಿಡಿಯಿತು (ರಂಗವ. ೨೧೩); ಪಂದ್ಯಾಟದಲ್ಲಿ ಯಾರೂ ಹೆಸರು ಕೊಡಬಹುದು (ನೆಲಮು. ೩೩-೨೨). [ಪಂದ್ಯ (<ಪಂತ$_1$) + ಆಟ]

**ಪಂಪ$_1$** (ನಾ). ಸಮಭಾಗ: "ಪಂಪಮೆನಲ್ ಸಮಭಾಗಂ" (ಚತುನಿ.೯); "ಪಂಪಮೆ ಸಮಭಾಗಂ" (ಕವಿಕಂ. ೫೪).

[<ಪಸು$_1$ ?./ತಮಿ. ಪಯಲ್ ; ತೆಲು. ಪಂಪಕ, ಪಂಪು]

**ಪಂಪ$_2$**, ಹಂಪ$_1$ (ನಾ). ೧. ಒಬ್ಬಾತನ ಹೆಸರು: 'ಪಂಪಯ್ಯ' ಪರಾ. ೨. ಕನ್ನಡ ಭಾಷೆಯಲ್ಲಿ 'ಆದಿಪುರಾಣ', 'ವಿಕ್ರಮಾರ್ಜುನ ವಿಜಯ'ಗಳೆಂಬ ಕಾವ್ಯಗಳನ್ನು ಬರೆದಿರುವ ಸುಪ್ರಸಿದ್ಧ ಜೈನಕವಿ: ಮುಂ ಸಮಸ್ತ ಭಾರತಮನಪೂರ್ವಮಾಗೆ ಸಲೆ ಪೇೞ್ದ[ಕವೀಶ್ವರರಿ]ಲ್ಲ ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇೞ್ವೊಡೆ ಪಂಪನೆ ಪೇೞ್ಗುಮೆಂದು ಪಂಡಿತರೆ ತಗುಳ್ದು ಬಿಚ್ಚಱಿಸೆ ಪೇೞಲೊಡರ್ಚಿದೆನೀ ಪ್ರಬಂಧಮಂ (ಪಂಪಭಾ. ೧-೧೧); ನಯದಿಂ ಪಂಪನೊಱಲ್ದು ನಿರ್ಮಿಸಿದ ಪೊನ್ನಂ ಪ್ರೀತಿಯಿಂ ಪೇೞ್ದ ಭಕ್ತಿಯಿನಾ ರತ್ನಕವೀಶ್ವರಂ ಸಮೆದ ತತ್ಕಾವ್ಯತ್ರಯಕ್ಕಂ ಜಗತ್ತ್ರಯಮುಂ ಮುಂ ಬೆಲೆಯಾಗಿ ಪೋಯ್ತೆನೆ (ಚಂದ್ರಪು. ೧-೬೬); ಆದಿಕವಿ ಪಂಪನೆಂದನುವಾದಿಸೆ ವಾದಿಸಿ ವಿರೋಧಿ ವಿಪರೀತತೆಯಿಂದೋದೆ ವಿಲೋಮದೆ ಪೆಸರಂ ಮೇದಿನಿಯೊಳವನ ಪೆಸರೆ ಪೆಸರ್ವಡೆದೆಸೆಗುಂ(ಧರ್ಮನಾ.೧-೩೬). **ಹಂಪ$_1$: ೨.** ಶ್ರೀವಿಜಯನ ಹೊನ್ನನ ಹಂಪನ ಸುಜನೋತ್ತಂಸನ ಸುಮಾರ್ಗಮಿದಱೊಳೆ ಲಕ್ಷ್ಯಂ (ಶಮದ. ೫); ನೇಮಿಚಂದ್ರನ ಹಂಪನ ನಾಗವರ್ಮಾದಿ ಭೂಮಿಗೊಪ್ಪಿದ ಕವಿಗಳನು ಪ್ರೇಮದಿಂ ಬಲಗೊಂಡು ಬಣ್ಣಿಸೆ (ಜೀವಂಸಾಂ. ೧-೪). [?]

**ಪಂಪಕ**, ಪಪ್ಪಕ$_1$, ಪಪ್ಪುಕ$_1$ (ನಾ). ೧. ದಟ್ಟವಾದುದು ; ಒತ್ತಾಗಿರುವುದು ; ಸಂದಣಿಸಿದುದು: ಸಂದಣಿಸಿದ ಕುಂದಲತೆಯ ಮೇಳೈಸಿದ ಮಾಲತೀಲತೆಯ ಪಂಪಕಮಾದ ಚಂಪಕಾಲತೆಯ ಪಿಣಿಲೇಱಿದ ಕರವೀರಲತೆಯ . . . ರತ್ನರಚಿತ ಕೃತಕಾಚಲಂಗಳೊಳ್ (ಅನಂಪು. ೧೦-೨೬ವ). **ಪಪ್ಪಕ$_1$: ೧.** ಪಪ್ಪಕಮಾಗಿರೆ ಪಱಿಮೆಗಳುಪ್ಪಯಣಂಗೆಯ್ದುವಂದು ಪೊಸಮಲ್ಲಿಗೆಯೊಳ್ (ಅಜಿಪು. ೬-೨೧). **ಪಪ್ಪುಕ$_1$: ೨.** ಹೆಚ್ಚಳ; ಆಧಿಕ್ಯ: ಪ[ಪಾಠಾಂ.ಕ]ಪ್ಪುಕಮಪ್ಪಂಗನೆಯ ತೊಳಪ್ಪಡಿದಳಿರ್ಗೆಯ್ದು ಸೋಲ್ತು ತಳಿರ್ಗಳ್ ಕೆಂಪಂ ಕಪ್ಪಂಗುಡುವವೊಲೂಡಿದಳೊಪ್ಪಿರೆ ಕೆಂದಳದೊಳಱ್ದಕೊಂಡಲತಗೆಯಂ (ಲೀಲಾವ.೧೨-೭೪); ಮುಡಿದ ಮಲ್ಲಿಗೆಯ ಪರಿಮಳಕ್ಕಮಡಸಿದ ಕಪ್ಪುರದ ಪಪ್ಪುಕಕ್ಕಂ ಮಱಿದುಂಬಿವಿಂಡು ಮುಂದೆ ಮಂಡಳಿಸಿ ಕಟ್ಟೆ ಬರೆ (ಅನಂಪು. ೨-೨೮ವ). (ಗು). **೩.** ಮನೋಹರವಾದ ; ಅತಿಶಯವಾದ: ಅಪ್ಪುವಳಿಕಿನ ಪಪ್ಪುಕ ಜಗಲಿಯೊಳ್ ವನಱಿನೋದಪ್ರಸಂಗಚತುರಪ್ರಸಾದಿತ ಪರಿಜನಪರೀತಂ ಸುಖಾಸೀನನಾಗಿರ್ಪನಂ (ಅನಂಪು. ೭-೧೧ವ).

[ದೇ.॥ ತಮಿ. ಪಮ್ಮು, ಪಮ್ಮು$_1$=ದಟ್ಟವಾಗಿರು, ಒತ್ತಾಗಿರು ; ಪಮ್ಮಲ್ ; ತೆಲು. ಪಂಬು, ಪಮ್ಮು$_1$=ಅತಿಶಯವಾಗು, ಅಧಿಕವಾಗು]

**ಪಂಪಯ್ಯ** (ನಾ). ಒಬ್ಬಾತನ ಹೆಸರು: ಚಿಮ್ಮಚನೂರ ಮಹಾರಾಜಯ್ಯನುಂ ಮೊಳಿಯನೂರ ದೇವಯ್ಯನುಂ ಪಂಪಯ್ಯನುಂ(ಎಕ. XI, ಚಿತ್ರದು. ೭೬-೨೦; 937); ಪಂಪಯ್ಯಂ ನಾನೊನ್ದಕ್ಷತೆಯನಪ್ಪಂದವಿಹಾಯೆನೆನ್ದು ತಱಿಸಲಾ ಮಾ(ಂ)ನ್ಯ ದಿಟ್ಟ ಮಹಾಜನಮು ನಮಸ್ಕಾರಂಗೆಯ್ದು (ಸೌಇಇ. XI-i, ೩೬-೭; 942). [ಪಂಪ$_2$+ಅಯ್ಯ$_1$]

**ಪಂಪಲ** 'ಪಣ್$_3$' ಪರಾ.

**ಪಂಪಱಿ** (ನಾ). ಒಂದು ಬಗೆಯ ವಾದ್ಯ.

**ಪಂಪಱಿಘೋಷಣ** = ಕರ್ನಾಟಕದ ಚೋಳವಂಶದ ರಾಜರ ಒಂದು ಬಿರುದು: ಕಾಸ್ಯಪಗೋತ್ರಂ ಕಲಿಕಾಲಾನ್ವಯಂ ಕಾವೇರೀವಲ್ಲಭಂ ಪಂಪಱಿಘೋಷಣಂ ಮಯೂರಪಿಂಛಧ್ವಜಂ . . . ಗೊಂದಳಬಡಿವಂ ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಸೌಇಇ. IX-i, ೨೦೭-೧೦; ಸು.1124). [ಪಂಪ$_0$ (P←ತಮಿ. ಪಮ್ಪೈ ; ತೆಲು. ಪಂಬ) + ಪಱಿ$_1$]

**ಪಂಪಾದೇವಿ** (ನಾ). ಒಬ್ಬಾಕೆಯ ಹೆಸರು: ಶ್ರೀ ಮಚ್ಚಾಳುಕ ಪೆರ್ಮಾನಡಿ ದೇವರು ತತ್ಪುತ್ರಿ ಶ್ರೀ ಪಂಪಾದೇವಿಯರ ರಾಜ್ಯಾಭ್ಯುದಯದಂದು (ಎಕ. IV, ಹುಣಸೂ. ೫೦-೩; 997). [ಸಂ.ಪಂಪಾದೇವೀ]

**ಪಂಪು$_1$**(ನಾ). ೧. ಮಾಯಾವಿದ್ಯೆ; ಇಂದ್ರಜಾಲ ; ಗಾರುಡಿ: "ಪಂಪು =ಕಣ್ಣುಕಟ್ಟು ; ಗ್ರಹ" (ಕಲ್ಪದ್ರು. ೨೨೬). **೨.** ಶಕ್ತಿಪ್ರದರ್ಶನ ; ವಿಜೃಂಭಣೆ ; ವೈಭವ.

**ಪಂಪುಮಾಡು** = ಶಕ್ತಿಯನ್ನು ಪ್ರದರ್ಶಿಸು ; ವಿಜೃಂಭಿಸು: ಇಂತು ಪ್ರತಿಜ್ಞೆಯಾ ಮಾಡುವನಿತರೊಳು ವಿಷ್ಣುಚಕ್ರವು ಪಂಪುಮಾಡೆ . . . ನೆಟ್ಟನೆ ಪುಲಿಶಿರವರಿದು (ಯನಳ. ೧೧).

[ದೇ.॥ ತಮಿ. ಪಮ್ಮು = ಆಟ, ವಿನೋದ, ಕ್ರೀಡೆ ; ತೆಲು. ಪಂಪು]

**ಪಂಪು$_2$** (ನಾ). ೧. ಬಾವಿ, ಹೊಳೆ ಮೊದಲಾದ ಜಲಾಶಯಗಳಿಂದ ನೀರನ್ನು ಮೇಲಕ್ಕೆ ಎತ್ತುವ ಸಾಧನ ; ರೇಚಕಯಂತ್ರ; ಪೂರಕಯಂತ್ರ: ನೀವು ಬಾವೀಗೆ ಪಂಪು ಹಾಕಿಸೋದೂ ಸಾಕು, ಅದರಲ್ಲಿ ನಾಗಪ್ಪ ಬೀಳೋದೂ ಸಾಕು! (ಕಾಬಢ್ಯೂ. ೨೬). **೨.** ಸೀಮೆಯೆಣ್ಣೆ ಮೊದಲಾದುವನ್ನು ಡಬ್ಬದಿಂದ ಮೇಲಕ್ಕೆತ್ತುವ ಸಾಧನ: ಮಗ್ಗುಲಲ್ಲಿ ಸೀಮೆಯೆಣ್ಣೆಯ ಡಬ್ಬ, ಬುದ್ಧಿವಂತ, ಪಂಪು ; ಆದರ ಮಗ್ಗುಲಲ್ಲಿ ಗಳುವಿನ ಮೇಲೆ ನೇತಾಡುವ ಎಲೆಸರ, ಪಂಚೆ ಇತ್ಯಾದಿ (ರಾಮಾನೆ.೧೦೧). **೩.** ಬೈಸಿಕಲ್ಲಿನ ಚಕ್ರ ಮೊದಲಾದುವುಗಳಿಗೆ ಗಾಳಿ ತುಂಬುವ ಸಾಧನ: ಚಕ್ರದಲ್ಲಿ ಗಾಳಿಯೇ ಇಲ್ಲ. ಪಂಪು ತೆಗೆದುಕೊಂಡು ಬಾ (ರೂಢಿ). **೪.** ಸೊಳ್ಳೆ ಮೊದಲಾದ ವಿಷಕ್ರಿಮಿಗಳನ್ನು ನಾಶಪಡಿಸಲು ದ್ರಾವಕಗಳನ್ನು ಸಿಂಪಡಿಸುವ ಸಾಧನ ; ಪಿಚಕಾರಿ: ಬರಿ ದ್ರಾವಕ ತಂದರೆ ಸೊಳ್ಳೆ ಸಾಯುತ್ತದೆಯೆ ? ಪಂಪು ತೆಗೆದುಕೊಂಡು ಬಾ, ಹೊಡೆಯೋಣ (ರೂಢಿ). **೫.** ಅನಿಲವನ್ನಾಗಲಿ, ದ್ರವವಸ್ತುವನ್ನಾಗಲಿ ಹೀರಿ ಹೊರಕ್ಕೆ ಬಿಡುವ ಸಾಧನ,- ಯಂತ್ರ: ಗಂಟಲ ಕುಹರ ಚುಚ್ಚುವ, ಹೀರುವ, ಒತ್ತಿ ಹೀರುವ . . . ಕೀಟಗಳಲ್ಲಿ ಹೀರುವ 'ಪಂಪಾ'ಗಿದೆ (ಕೀಟಬಿ. ೨೮).

**ಪಂಪು ಮಾಡು** = ಪುಸಲಾಯಿಸು: ಅವನನ್ನು ಈ ಕೆಲಸಕ್ಕೆ ಒಪ್ಪಿಸಲು ಎಷ್ಟು ಪಂಪು ಮಾಡಬೇಕಾಯಿತು (ರೂಢಿ). **ಪಂಪು ಹೊಡೆ** = ಪಂಪುಮಾಡು: ಎಷ್ಟು ಪಂಪು ಹೊಡೆದರೂ ಅವನನ್ನು ಜಗ್ಗಿಸಲಾಗಲಿಲ್ಲ (ರೂಢಿ). [←ಇಂ. Pump]

**ಪಂಪೆ** (ನಾ). ಪಂಪಾಕ್ಷೇತ್ರ ; ಹಂಪೆ: ಆದಿತ್ಯವಾರ ಸೂರ್ಯ್ಯಗ್ರಹಣದಂದು ಪಂಪೆಯ ತೀರ್ತ್ಥದಲು ಶ್ರೀರಾಜಧಾನಿ ವಿಕ್ರಮಪುರದ ಬ್ರಹ್ಮ

ಪುರಿಯ ನಂದಿಯಣ್ಣ ಷಡಂಗಿ ಭಟ್ಟೋಪಾಧ್ಯಾಯರು ಪ್ರಮುಖಂ ನಾಲ್ವತ್ತಿರ್ವರು ವಿದ್ವಾಂಸರಪ್ಪ ಮಹಾಜನಕ್ಕೆ . . . ಕೊಟ್ಟ ಕೆ[ಇ] ಒಂದು (ಸೌಇಇ. XI–i, ೮೮–೬ ; 1053) ; ಸೌಂದರಿವೆರಸಾ ಮೃಡನಂ ಬೀಟಿಕೊಂಡರಸಂ ಬಿಡದೆ ಮನಂಗೊಳಿಪ ಪಂಪೆಯಂ ಪೊಱಮಟ್ಟಂ (ಉದ್ಭಟ. ೮–೧೩೨). 'ಹಂಪೆ' ಪರಾ. [ಸಂ. ಪಂಪಾ]

**ಪಂಬಕ್ಕಿ,** ಹಂಬಕ್ಕಿ (ನಾ). ಒಂದು ಬಗೆಯ ಹಕ್ಕಿ : ಎಲ್ಲಿಯ ಮಾರಿ ನೃಪರ ಕೊಂಡು ಪೋದುದೆಂದೆಲ್ಲರು ಪಂಬಕ್ಕಿಯಂತೆ ನಿಲ್ಲದೆ ಬಾಯ್ವಿಡು ತಿರೆ (ನೇಮಿಸಂ. ೨೪–೧೧೬). **ಹಂಬಕ್ಕಿ :** ಹಂಬಕ್ಕಿಯಂತೆ ನಾ ಬಾಯಂ ಬಿಡುತ್ತೈದೇನೆ ಬಳಲಿದೆಯಲಾ ಮಗನೇ ಹಂಬಲಿಸದಿರೆಂಬುದು ನಿಮಗಂ ಬಱನಾಯಿತೆ ಪ್ರಸನ್ನಶಂಕರಲಿಂಗಾ (ಶಂಕಕಂ. ೫೮).

[ಪನ್$_2$? + ಪಕ್ಕಿ]

**ಪಂಬದ** (ನಾ). ದೆವ್ವ, ಭೂತಗಳ ಆವೇಶಕ್ಕೊಳಗಾಗಿ ಕುಣಿಯು ವವನು : ಭೂತಕ್ಕೆ ನರ್ತಿಸುವ ಪಂಬದನಿಗಾದರೂ ಸರಿಯೆ ; ಬಹು ಸಂತೋಷ (ಒಡ್ಡಉ. ೩೦). [←ತುಳು. ಪಂಬದೆ]

**ಪಂಬಲ್,** ಹಂಬಲ, ಹಂಬಲು (ನಾ). ೧. ತವಕ ; ಹೆಬ್ಬಯಕೆ ; ಉತ್ಕಟೇಚ್ಛೆ ; ಆಸೆ; ಆಕಾಂಕ್ಷೆ ; ಅಪೇಕ್ಷೆ : ಎಲ್ಲರುಮಾ ಕುಮಾರನಂ ಪಿಡಿದಿರಿಮೆನ್ನ ಪಂಬಲನಿದಂ ಬಿಸುಡಿಂ ಬಿಡಿಮೆಂದು ಖೇಚರಂ ಬಿಡಿಸಿ ದನಾಪ್ತರಂ (ಆದಿಪು. ೨–೫೦) ; ಕದನಕ್ಕಳ್ಳಿ ಕೃಷ್ಣವದನನಾ ವನದ ಪಂಬಲಂ ಬಿಸುಟು ತನ್ನ ಯೂಥಮುಮಂ ಮಱೆದು ತಾನನಾಥನಾಗಿ ಪಾರಾವಾರಂಬೋಗಿ (ಪಂಚತಂ.೨೭೭–೧೦) ; ಪಲವುಂ ಶಾಸ್ತ್ರಮನೋದಿದ ಬಲದಿಂ ಪೆಂಪೊರ್ಚಿ ಗರ್ವದಿಂ ಧರ್ಮದ ಪಂಬಲನುೞಿದು (ಧರ್ಮಾಮೃ. ೫–೮೮) ; ನೆಗೞ್ದನಗೆ ತಂದೆ ತಾಯ್ ಸೊಸೆ . . . ಎಂಬೀ ಮೋಹದ ಬಂಬಲ ಪಂಬಲ್ಗೊಳೇಂ (ಪುಷ್ಪಪು. ೧೩–೪೮). ೨. ಆಸಕ್ತಿ : ಪಗಲಿರುಳೆಂಬೀ ವಿಭೇದಂಗಳಿಲ್ಲಾಳರಸೆಂಬೀ ಪಂಬಲಿಲ್ಲಾರ್ಜವರೆ ಮನುಜ ರೆಲ್ಲಂ . . . ಸುಖಮುಸುಖಮುಕಾಲಸ್ವಭಾವಪ್ರಭಾವಂ (ಪಂರಾಮಾ.೧–೬೦). **ಹಂಬಲ :** ೧. ಧುರದ ಹಂಬಲ ಬಿಡಿಸಿ ಲಂಕಾಪುರ ಭಯಂಕರನೊಡನೆ ಬಲುಸಂಗರವ ಸಂಘಟಿಸಿದನು (ತೊರರಾ. ೬–೩೦–೩೭) ; ಮನೆಯ ಹಂಬಲ ಮಱೆದ ಕೆಳೆಯರನಿನಿಸು ನೆನಸನು (ಸಾಳ್ವಭಾ. ೧೭–೨೭) ; ಡಂಭಕ ಹಿರಣ್ಯಕ ಕುಮಾರ ಪ್ರಹ್ಲಾದನ್ನ ಹಂಬಲವಿಲ್ಲದೆ ಬಾಧಿಸ ಬರಲು . . . ಪೊರೆದದ್ದು ಎಲ್ಲಿ ಕಲಿತೆಯ್ಯ (ಪುರಂದ.೧–೯೬–೯). **ಹಂಬಲು :** ೧. ನಿಮಗೆಮ್ಮ ಹಂಬಲು ಬೇಡ (ತಿರುರ. ದೇ. ೧೭–೧೪) ; ಶಂಭುಪದ ಭಕ್ತಿ ನಂಬುಗೆಯ ಹಂಬಲು ಬೇಕು (ದೀಕ್ಷಾಬೋ. ೧೬–೨೫೬); ಬಯ್ವ ಹೆಂಡಿರ ಚಿಂತೆಯಿಲ್ಲದೆ ಹೋಯ್ವ ಕೀರ್ತಿಯ ಹಂಬಲಿಲ್ಲದೆ . . . ಬದು ಕುವ ದೈವದೂರರು ನಾವು (ಕುವ್ಯಾಕ. ೧೩–೪) ; ಪರಕಾಮಿನಿಯರ ಹಂಬಲು ಬಿಡಬೇಕು (ಪುರಂದ. ೧–೧೮೪–೨). ೩. ನೆನಪು; ಸ್ಮರಣೆ : ಬೆಂಬಿಡದೆ ಗದೆಯಿಂದ ವಕ್ಷದ ತುಂಬನೆಱಗಲು ಮಱೆವನಿತ್ತಣ ಹಂಬಲನು ಪ್ರದ್ಯುಮ್ನನುರುತರ ಗದೆಯ ಘಾಯದಲಿ (ನಿಭಾಗ. ೧೦–೮೧–೩೨).

[ದೇ.॥ ತುಳು. ಹಂಬಲ್]

**ಪಂಬಲಿಸು,** ಹಂಬಲಿಸು (ಕ್ರಿ). ೧. ತವಕಿಸು ; ತೀವ್ರವಾಗಿ ಬಯಸು ; ಹಾತೊರೆ ; ಉತ್ಕಟೇಚ್ಛೆಯನ್ನು ಹೊಂದು : ಅಲಸದೆ ಮಾಡಿ ಬೇಸಱದೆ ಸಾಲ್ಗುಮಿದೆನ್ನದೆ ಮೆಯ್ಯೊಗಕ್ಕೆ ಪಂಬಲಿಸದೆ . . . ನಿಯಮಕ್ರಮಂಗಳಂ ಸಲಿಸಿದರ್ (ಪಂಪಭಾ.೧–೧೩೬); ಎಲೆ ವೈಶಂಪಾಯನ ತನ್ನೊಲವಿಂದಂ ಬಂದನೀಗಳಱಸುತ್ತೆ ಕಪಿಂಜಲನಿಲ್ಲಿಗೆ ನಿನ್ನಂ ಪಂಬಲಿ ಸುತ್ತಂ (ಕಾದಂಬು. ೭೧೧); ಕೆಮ್ಮನೆ ದೇವಲೋಕಸುಖಮಂ ಮನದೊಳ್ ಪಂಬಲಿಸಿ ಮಱುಗಲೇಂ ಸಮನಿಕುಮೇ (ಧರ್ಮಾಮೃ. ೬–೧೪೪). ೨. ವಿಯೋಗ ಹೊಂದಿದವರನ್ನಾಗಲಿ, ಮೃತರನ್ನಾಗಲಿ ಕುರಿತು ಗೋಳಾಡು—ಅಳು,—ಹಲುಬು,— ರೋದಿಸು : ಆತನಿನಗ್ಗಳದ, ಮಗನೆ ನಾಂ . . . ಪಡೆಮಾತೇಂ ಪಂಬಲಿಸದೆನ್ನ ಪೇೞ್ದುದು ಗೆಯ್ಯಂ (ಪಂಪಭಾ. ೧೪–೭); ಅದವಟಿಲೊದವೆ . . . ಪಟಿವಿಸಿ ಪಲುಂಬಿ ಪಂಬಲಿ ಸಿಯುಂ (ಕಾದಂಪೂ. ೯೨೭) ; ಕುಸುಮಕೋದಂಡನ ಸುಧಾಮಯ ಸದ್ಗುಣಂಗಳನೆಣಿಸಿಯೆಣಿಸಿ ಪಲುಂಬಿ ಪಂಬಲಿಸಿ (ಗಿರಿಕ. ೮–೭೩ ವ) ; ಶರಣಜನ ವಿಯೋಗವ್ಯಥೆಗೆ ಬೆಂಬೀಳ್ದು ಬೇಳಾಗಿ ಪಂಬಲಿಸಿ (ಪದ್ಮರಾ. ೬–೧೧) ; ನಾನಾ ಪ್ರಕಾರದಿಂ ಪಂಬಲಿಸಿ ಸುತನ ಗುಣಶೀಲಂಗಳಂ ನೆನೆದು ಹಳವಳಿಸಿದಂ (ಜೈಮಿಭಾ. ೧೩–೫೯). ೩. ಚಿಂತಿಸು ; ಒಂದೇ ಸಮನೆ ನೆನೆಸು; ಆಲೋಚಿಸು: ಪಂಬಲಿಸಿದಂ ಪಲವಂ ಮನದೊಳ್ ದಶಾನನಂ (ಪಂರಾಮಾ. ೯–೧೫೪) ; ಮುನ್ನಿನ ಸಿರಿಯಂ ನೆನೆಯದೆ ಮುನ್ನಿನ ಲೀಲೆಗಳನೆಯ್ದೆ ಪಂಬಲಿಸದೆ (ಧರ್ಮಾಮೃ. ೧೧–೧೦೬) ; ಪರಮಾತ್ಮನ ಮುನಿ ಪಂಬಲಿಪಂತೆ ಹೃತ್ಸರಸಿಜ ಮಧ್ಯದಿ ತನ್ನ ತರುಣಿಯನಿಟ್ಟು ಜಾನಿಸುವನು ಜೀವಂಧರನಿಂತು ವಿರಹದೊಳಿರ್ದ (ಜೀವಂಸಾಂ.೧೨–೪೭) ; ಧಾರಿಣೀಪತಿ ರಾಮಲಕ್ಷ್ಮಣರ ಪಂಬಲಿಸಿ ತೋರದುಃಖದಿ ತನುವ ತೊರೆದ ಳಲ್ಲದಲಿರಲು ತೋರದಿರ್ದಪಳೆ ತಾಂ ನೋಡಿದಾಗಾರಗಳೊಳು (ವೆಂಕಾರಾ. ೫–೫–೧೧). ೪. ಮೊರೆಯಿಡು : ಎಲೆ ಗಿರಿಜಾತೆ ಮಾತೆ ಕರುಣಾಕರೆ . . . ನೊಂದೆನಿಂದು ನಿನ್ನಲಘು ಕೃಪಾಕಟಾಕ್ಷದಿನಭೀಕ್ಷಿಸಿ ರಕ್ಷಿಪುದೆನ್ನನಂಬಿಕೇ ಎಂದು ಪಂಬಲಿಸಿ (ರಾಜಶೇ. ೧೩–೧೩೦ ವ). **ಹಂಬಲಿಸು :** ೧. ಕಾರ್ಗಾಲ ಮುಂಬನಿಯ ಸುಖವ ಚಾದಗೆ ಬಯಸುವಂತೆ ಅನು ನಿಮ್ಮ ಶರಣರ ಬರವ ಹಾರಿ ಹಾರಿ ಹಂಬಲಿಸುತ್ತಿದ್ದೇನೆ ಕರುಣಿಸಯ್ಯಾ (ಆದಪ. ೧೬–೩೬) ; ಫಲಿಸಲಱಿಯದ ಕಾರ್ಯದಲಿ ಹಂಬಲಿಸಿ ಕೆಡುವವ ನಂತೆ ಕೆಡೆದನು (ತೊರರಾ.೧–೧೫–೨೪) ; ನಂಬಬೇಡಿ ನಾರಿಯರನು ಹಂಬ ಲಿಸಿ ಹಿಗ್ಗಿ (ಪುರಂದ. ೨–೧೬–೧) ; ಹಂಬಲಿಸಿ ಒಂದು ಭೋಗವನ್ನು ಸಂಪಾದಿಸುವ ಹೊತ್ತಿಗೆ ಅದನ್ನು ಆಸ್ವಾದಿಸುವ ಪ್ರಾಣವೇ ಕುಗ್ಗಿ ಹೋಗಿ ರುತ್ತದೆ (ನಂಟರು. ೨೦). ೨. ಬಸವಣ್ಣ ಮರವಟ್ಟು ಹಂಬಲಿಸಿ ಹಲುಬಿ ಘನತಾಪ ಮನಮಂ ನಟ್ಟು (ಬಸರ. ೧೧–೭೮) ; ಸಿಂದಿರುತ ಬೆಱಗಾಗುತ ವನೀನಂದನೆಯುದೇನಾದಳೋ ಹಾಯೆಂದೆನುತ ಹಂಬಲಿಸಿ ಹಲುಬುತ ಹನುಮನೈತಂದ (ತೊರರಾ. ೫–೩–೧) ; ಮಿಗೆ ಕಾತುರದೆ ಹಂಬಲಿಪಳು ಕಂಬನಿಯೊಗುವಳೇನೆಂಬೆನಚ್ಚರಿಯ (ಕಂನವಿ. ೯–೧೯೫). ೩. ಹಂಬಲಿಸ ದಿರು ದೈತ್ಯರೆಂಬರಿಗಿಂಬುಗೊಡದೀ ಮೋಕ್ಷಲಕ್ಷ್ಮೀಕಾಂತದೂರರಿಗೆ(ಸಂಭಪ. ೮–೧೩೨) ; ರಾವಣ ಮನದಲುಮ್ಮಳಿಸಿ ಹಲವ ಹಂಬಲಿಸುತ್ತಲಿರ್ದನು (ಕಾಶಿರಾ. ೧೭–೩೯) ; ಈ ಬಾಲಕಂ ತನ್ನ ತಾಯ್ತಂದೆಗಳನೊಡಹುಟ್ಟಿದ ವರ ಹಂಬಲಿಸದೆ ಮುರಾರಿಯಂ ನೆನೆವನು (ಜೈಮಿಭಾ. ೨೮–೫೬). ೪. ಹಂಬಲಿಸುತಿಹ ನಿಗಮಶಾಸ್ತ್ರಗಳಿಂಬುಗಾಣದ ಗಾಢದೈವದ ಬೆಂಬಳಿ ಯಲಿರಲಿನ್ನದಾವುದಸಾಧ್ಯ ನಿಮಗೆಂದ (ಕುವ್ಯಾಅ. ೧೬–೪೫). ೫. ನೊಂದುಕೊಳ್ಳು ; ವ್ಯಥೆಪಡು ; ದುಃಖಿಸು ; ಕಷ್ಟಪಡು : ಅಂಬುಜದ ಸಖಸೂನು ನೋಡೆ ತ್ರಿಯಂಬಕನ ಸಮಜೋಡಿಯಲ್ಲಾ ಬಾಹುವಿಕ್ರಮದಿ ಹಂಬಲಿಸಲವನುರವನೆಚ್ಚನು ಬೆಂಬಿಡದೆ ಕೀಚಕನ ರಥದೊಳು ತುಂಬಿಸಿದ ಬಲುಗೋಲ ಮಳೆಯಲಿ ನಾದಿದನು ಹಯವ (ಸಂಭಪ.೧೯–೪೦). [ಪಂಬಲ್ + –ಇಸು$_3$]

**ಪಂಬಸಲೆ** (ನಾ). ಹಸುರಾದ ಹುಲ್ಲು ಬೆಳೆದಿರುವ ನೆಲ ; ಹಸು ರಾದ ಹುಲ್ಲುಗಾವಲು : ಎಳವು ಪಂಬಸಲೆ ಬಳ್ಳಿವನೆ ಕೆರೆಕುಂಟೆ (ಸಂಸಪ. ೨೯–೪). [ಪಂ(<ಪಸಿ$_3$)+ಪಸಲೆ]

**ಪಂಬಾಡು** (ನಾ). ತೆರೆ ; ಮರೆ : ಕಳುಹಿ ಸರಸಿಯ ಸುತ್ತ ಪಂಬಾಡು ಗಳ ಬಿಗಿಸಿ ಲಲನೆ ರುಕ್ಮಿಣಿ ಸತ್ಯಭಾಮೆ ಗೋಪಿಕಾವಳಿಯ ಪೆಣ್ಗಳ ಕೂಡಿ ಕೊಳನ ತೀರದಿ ನಿಲಲು (ನಪಮೋ.೧೦–೪೩). [←ತೆಲು.ಪಂಬುಕಾಡು]

△ **ಪಂಸೆ** (ನಾ). ಹಂಸಪಕ್ಷಿ: ಕೆಂದಾವರೆಯ ಮಿಸುಪ ಮೆಲ್ಪೊಗ್ಗೆಯಂ ಮಾಣದೆಂದುಂ ನಿನಗೀವೆಂ ಪಂಸೆ [ಪಾಠಾಂ. ವೇನಂಚೆ] (ಕಬ್ಬಿಕಾ. ೩೧೮); ಜಾಣರಿಲ್ಲದ ಜನಪ ಪಂಸೆಯಿಲ್ಲದ ಕೊಳನು (ನವಮೋ. ೨೩–೪೯); ಕೊಳಗಳಿಲ್ಲದ ಬನವು ಅಳಿಗಳ ಬಳಗವೆರಗದ ಪುಷ್ಪವಾಟಿಯುಂ . . . ತೊಳಪ ಕಳಕಂಠಗಳು ಪಂಸೆಯುಂ ಮಿಳಿರ್ವ ಝಲ್ಲಿಯ ಮೃಗವು ಕಸ್ತೂರಿ ಕಲಿತ ಮಿಗಸಂಕುಳಗಳಿಲ್ಲದ ಗಿರಿಗಳಿಲ್ಲ (ನಾಗಷ. ೨–೭). [<ಹಂಸೆ]

**ಪಕತ್,** ಪಕತ್ತು, ಪಕ್ತ, ಫಕತ, ಫಕ್ತ (ಅ). ೧. ಪೂರ್ಣವಾಗಿ; ಬಹಳವಾಗಿ; ಸಕತ್: ನನ್ನ ಸೋದರ ದೂರ್ವಾಸಪುರದಲ್ಲಿ ಪಕತ್ ಖಾಹಿಲೆಯಾಗಿ ಮಲಗಿದ್ದಾನೇಂತ ಊಟಕ್ಕೆ ನಾನು ಕೂತಿದ್ದಾಗ ತಿಳಿಯಿತು (ಸಂಸ್ಕಾರ. ೧೪೩). **ಪಕತ್ತು:** ೧. ಪಕತ್ತು ಮೂರು ಸೇರು ಕೊಡುತ್ತದೆಂದು ಹೇಳಿದಾಗ ಅವರು ಇನ್ನೂ ಹಿಗ್ಗಿದರು (ಚೆಂಗಾಳ್ವ. ೧೬೦). **ಪಕ್ತ:** ೧. ಪಕ್ತ ಬೈಗೋಳು ಬಡದಾಟ (ನಾಥಾರಿ. ೯೩). **ಫಕತ:** ೧. ಸುಕೃತದಿಚ್ಛೆಯಿಂದ ವ್ಯಯಿಸಿ ಯುಕುತಿಯಿಂದಲಿ ಭಕುತಿಯಿಂದ ಮೂರು ಕೆರೆಯ ಫಕತ ಕಲ್ಲಿಲಿ (ಕಜಾಗೀ. ೨೧೭). ೨. ಬರಿ; ಕೇವಲ: "ಫಕತ–ಬರೆ, ಕೇವಲ" (ಜಾನಕೋ. ೧೮). **ಫಕ್ತ:** ೨. ಅದರಲ್ಲಿ ಫಕ್ತ ಉಪ್ಪಿನ ಕಲಮಿಗೆ ಮಾತ್ರ (ಮುಂಬವ್ಯಾ. ೧೦ ಪ್ರಸ್ತಾವನೆ); ಪಬ್ಲಿಕ್ ಲೈಫ್ ಎಂಬುದೇ ಬೇಡ ಆ ಪ್ರಾಣಿಗೆ. ಫಕ್ತ ಕಾಸು ಮಾಡುವುದೊಂದೇ (ಜಾರುದಾ. ೨೪೮).

[←ಅರ. ಹಿಂ. ಫಕತ್; ಮರಾ. ಫಕತ್, ಫಕಸ್ತ]

**ಪಕತ್ತು** 'ಪಕತ್' ನೋ.

**ಪಕಪಕ** (ನಾ). ಒಂದು ಅನುಕರಣ ಶಬ್ದ: ಏನು ಹೇಳಿದರೂ ಪಕಪಕ ಅಂತ ಬಾಯಿಬಿಡುತ್ತಾನೆ (ರೂಢಿ).

**ಪಕಪಕ** ನಗು = ಪಕ ಪಕ ಎಂಬ ಧ್ವನಿ ಬರುವಂತೆ ನಗು; ಗಟ್ಟಿಯಾಗಿ ನಗು: ಪಕಪಕ ನಗುವವರನ್ನು ನೋಡಿ ಬಿಕ್ಕಿಬಿಕ್ಕಿ ಅತ್ತ (ಗಾದೆ).

**ಪಕಪಕನೆ** (ಅ). ಪಕಪಕ ಎಂದು: ನಿನಗೆ ಪಕಪಕನೆ ನಗುವುದಕ್ಕೆ ಮಾತ್ರ ಬರುತ್ತದೆ (ರೂಢಿ). [ಪಕಪಕ + –ಅನೆ$_1$]

**ಪಕಳ** 'ಪಕಳೆ' ನೋ.

**ಪಕಳಿ** 'ಪಕಳೆ' ನೋ.

**ಪಕಳೆ,** ಪಕಳ, ಪಕಳಿ (ನಾ). ಹೂವಿನ ದಳ, —ಎಸಳು, –ರೇಕು: ಎರಡೇ ಎಸಳು ನಾಲ್ಕೇ ಪಕಳೆ ಕಳೇವರದೊಳು ಕಂಡಿತೊಂದು ಕಳೆ (ಗರಿ. ೯೦–೭); ಚೆಂಗುಲಾಬಿಯ ಪಕಳೆ ಅಕಳಂಕವಾಗಿರುವ ಭಾವ ವೀಣೆಗೆ ಬೆರಳನಾಡಿಸಿತ್ತು (ಭಾವಗೀ. ೧೧–೨೦೭); ನೋಡ ನೋಡುತ್ತಲೇ ಹೂವಿನ ಬಣ್ಣ ಮಾಸುತ್ತದೆ; ಪಕಳೆಗಳು ನಲುಗಿ, ಸಡಿಲವಾಗಿ ಉದುರಿ ಹೋಗುತ್ತವೆ (ಸೌಂದಸ. ೫೭); ನೆಲಕ್ಕೆ ಬಿದ್ದಾಕ್ಷಣ ಹೂವಿನ ಪಕಳೆಗಳು ಅತ್ತಿತ್ತ ಹರಿದಾಡಿ ಬಿದ್ದುವು (ಕನಸಿ. ೧). **ಪಕಳ:** ಆ ಪ್ರಸೂನರಾಜಿಗಳ ಪಕಳಗಳಲ್ಲಿ ತುಷಾರಬಿಂದುಗಳು ಶೋಭಿಸುತ್ತಿದ್ದುವು (ಶ್ರೀರಾಪ. ೭೮). **ಪಕಳಿ:** ಒಳಗೆ ಹೂವಿನ ಸಣ್ಣ ಸಣ್ಣ ಪಕಳಿಗಳು ಒಂದಕ್ಕೊಂದು ಹೊಂದಿ ಮುದುಡಿಕೊಂಡು ಇರುತ್ತವೆ (ಮುಂಬಯಿ. ೩–೩೭); ಆ ನೋಟ–ಹೂವು ಪಕಳಿಗಳೂ ಪ್ರಾಣದುಂಬಿ ಚಿಟ್ಟೆಯಾಗಿ ಕಾಣುವುವೋ? (ದತ್ತಪಾ. ೨೭); ಹೂವಿನ ಪಕಳಿಗಿಂತ ತಿಳಿವು ತಿಳಿವು ಅಂತ? ಹೂವಿಗೆ ಹೋಗಿ ತಾವ ಗಲ್ಲಾ ತಿವಿತಾವ (ಗರಿ. ೯೬–೧).

ಪಕಳೆಪಕಳೆ (ದ್ವಿರುಕ್ತಿ): ಮಂಜುಳವಾದ ಕಲ್ಪನಾವಿಲಾಸ ಪಕಳೆಪಕಳೆಯಾಗಿ ಬಿಚ್ಚಿ . . . ಕಂಪು ಹೊರಬರಲು ಹವಣಿಸುತ್ತಿದೆ (ಗಾಳಿಪ. ೨೦೫).

[←ಹಿಂ. ಪಖುಡೀ; ಮರಾ. ಪಾಕಳೀ, ಫಕಡೀ]

**ಪಕಾಯಿಸು** (ಕ್ರಿ). ಅಡಿಗೆ ಮಾಡು; ಬೇಯಿಸು: "ಸಾಹೇಬರು ಇಲ್ಲೇ ಖಾನಾ ಮಾಡುತ್ತಾರೆ", "ಬಾಳ ಚಲೋದು ಬಾಯಿಜೀ, ಏನು ಪಕಾಯಿಸಲಿ?" (ನಟಸಾ. ೨೩೯).

[ಪಕಾ$_0$ (P← ಹಿಂ. ಪಕಾನಾ) + –ಇಸು$_3$]

**ಪಕಾರ** (ನಾ). 'ಪ' ಎಂಬ ಅಕ್ಷರ: ಪಕಾರದ ತೃತೀಯತ್ವಕ್ಕೆ–ಕಣ್ಬುನಿ; ತಣ್ಬುಟಿಲ್ (ಶಮದ. ೭೫ ಪ್ರಯೋ). [ಸಂ.]

**ಪಕಾಲಿ** 'ಪಕ್ಕಲೆ' ನೋ.

**ಪಕಾಲಿನೀರು** (ನಾ). ಚರ್ಮದ ಚೀಲದಲ್ಲಿ ಹಾಕಿರುವ ನೀರು: ಪಕಾಲಿನೀರು ಕುಡಿಯುವವನಿಗೆ ಪಕ್ಷಪ್ರಾಯಶ್ಚಿತ್ತವೇಕೆ? (ಗಾದೆ).

[ಪಕಾಲಿ (<ಪಕ್ಕಲೆ) + ನೀರು$_1$ (<ನೀರ್)]

**ಪಕಾಸಿ** 'ಪಕಾಸು' ನೋ.

**ಪಕಾಸು,** ಪಕಾಸಿ (ನಾ). ಮನೆ ಕಟ್ಟಲು ಉಪಯೋಗಿಸುವ ದೂಲ, —ಜಂತೆ, —ತೀರು: ಕಬ್ಬಿಣದ ಸರಳುಗಳು ಸೇತುವೆಯನ್ನು ಹಿಡಿಯುವಂತೆಯೂ, ಮರದ ಜಂತಿ, ಪಕಾಸು, ಕಂಭಗಳು ಮನೆಯನ್ನು ನೆಟ್ಟಗೆ ನಿಲ್ಲಿಸುವಂತೆಯೂ ಇವು ದೇಹವನ್ನು ನಿಲ್ಲಿಸುತ್ತವೆ (ಬಾಲಪ್ರ. I, ೧೯೬); ಮನೆಯ ಸುತ್ತು ಅಡ್ಡಾದಿಡ್ಡಿಯಾಗಿ ಬೆಳೆದ ಹನೆಮರಗಳನ್ನು ಸಿಗಿಸಿದರೆ ಹೆಬ್ಬಾಗಿಲಿಗೆ ಬೇಕಾದಷ್ಟು ಪಕಾಸಾದಾವು (ಸುರಮ. ೧೨೯). **ಪಕಾಸಿ:** ನುಣುಪಾಗಿ ಕೊಯ್ದ ತೊಲೆಗಳು, ಹಲಗೆಗಳು, ರೀಪು ಪಕಾಸಿಗಳು ರಾಶಿರಾಶಿಯಾಗಿ ಸುವ್ಯವಸ್ಥಿತವಾಗಿ ಬಿದ್ದಿವೆ (ಕಾನೂರು. ೪೭); ಹುಲ್ಲುಮಾಡು . . . ಹಳೆಯ ತೊಲೆ ಪಕಾಸಿಗಳು—ಕಿಚ್ಚು ಬಹು ಬೇಗ ಹೊತ್ತಿಕೊಂಡಿತ್ತು (ದೇಪಹಂ. ೧೪).

[←ತುಳು. ಪಕಾಸ್, ಪಕ್ಕಸ್]

**ಪಕೀರ,** ಫಕೀರ್, ಫಕೀರ (ನಾ). ೧. ಬಡವ; ಗರೀಬ: ಹಾರ ಪದಕ ಚೌಕುಳಿಯನಿಟ್ಟವ ತಮ್ಮ ಕೇರಿಯೊಳಗೆ ಸುಳಿದಾಡೆ ಸೇರಿಸಿಕೊಂಡವನೊಡವೆಯ ನಗುತ ಪಕೀರನ ಮಾಡಿ ಬಿಡುವರು (ಕಂನವಿ. ೨–೯೮). ೨. (ಮುಹಮ್ಮದೀಯರಲ್ಲಿ) ಸಂಸಾರವನ್ನು ತೊರೆದವನು; ವಿರಕ್ತ; ಸಾಧು: ಯೀ ಗ್ರಾಮವನು ನಿರುಪಾಧಿಕ ಸರ್ವಮಾನ್ಯವಾಗಿ ಪಕೀರರ ಧರ್ಮಕ್ಕೊಡಿಸಿಯಿರೂದರಿನ್ದ ನೀನು ಮುನ್ತಾದ ಪಕೀರರು ಯೀ ಧರ್ಮವನ್ನು . . . ಅನುಭವಿಸಿಕೊಣ್ಡು ಬರುವದು (ಎಕ. IX, ಆನೇಕ. ೯೦–೧೦; 1759); ಅನೇಕ ಜಂಗಮಾತಿಥಿ ಪರಮಹಂಸ ಪಕೀರ . . . ಜನರ್ಗನ್ನದಾನವಸ್ತ್ರದಾನಂಗಳಂ ಮಾಳ್ಪಂತು ಸ್ಥಿರಮಾದ ಕಟ್ಟಳೆಯಂ ರಚಿಯಿಸಿ (ಕಳನೃ. ೧೦–೨೦). ೩. ಭಿಕ್ಷೆಬೇಡುವವನು. **ಫಕೀರ್:** ೧. ಆಗಲೇ ಬದುಕಿದರೆ ಬಡೇಸಾಬರು ಕೆಟ್ಟರೆ ಫಕೀರ್‌ಸಾಬರು ಅಂತ ಅವರು ಯಾತಕ್ಕೂ ಜಗ್ಗಲಿಲ್ಲ (ಚೆಂಗೂಲಿ. ೧೫೫). ೨. (ರೈಸ್‌ಗೆ. II, ೫೪೮). **ಫಕೀರ:** ೨. ಧೀರಂ ವಜೀರನಿಂದು ಫಕೀರಂ ತಾನಪ್ಪಂ (ಚಿಕವಿ. ೨–೧೧೯); ನೀವು ಮಾಡುವ ಫಕೀರರ ಧರ್ಮಕ್ಕೆ (ಸೌಇಎ. ೧೯೩೪, ಸೇಲಂ. ೧೫೫–೯; 1759); ಗಂಗಾರಾಮನು ಆ ಆಜ್ಞೆಯನ್ನು ಕೇಳಿ ಆದದ್ದಾಗಲೆಂದು ನಿರ್ಭೀತನಾಗಿ ಫಕೀರನ ಮುಖದ ಮೇಲೆ ಒಂದು ಸಲ ಒದ್ದನು (ಬಂಕಿಮ. ೩೦೧).

[←ಅರ. ಹಿಂ. ಮರಾ. ಫಕೀರ್]

**ಪಕುಳ** (ನಾ). ವಸ್ತ್ರ; ಉಡುಪು; ವೇಷ (?): ತನ್ನ ಪೋಲ್ವೆಯ ವಿನುತಮಪ್ಪೊಂದು ಪುತ್ಥಳಿಯ ಅನುಗೆಯ್ದದಕೆ ಪೂರಿಸಿ ಪಕುಳವ ತಾನನುರಾಗದಿಂ ಪವಡಿಸುವ ಮನೆಯನು ಮಾಣಿಕದ ಪಾಸಿನ ಮಂಚದ ಮೇಲೆ ಘನತರಮಪ್ಪ ವಸ್ತ್ರವನು ಹೊದಿಸಿ ಅದನು ಮಲಗಿಸಿ ತಾನು ಬೇಜಿಕೊಂದು ಸದನಕಾರಜಿಯದಂದದೊಳು ಪದಪಿಂ ಪೋಗಿಯಡಗಿಕೊಂಡಿರಲು (ಪ್ರಭಂಜ. ೨–೬೦). [?]

**ಪಕೋಡ** (ನಾ). (ಈರುಳ್ಳಿ, ಮೆಣಸಿನಕಾಯಿ ಮುಂತಾದು ವನ್ನು ಹಾಕಿ) ಕರಿದು ಮಾಡಿದ, ಒಂದು ಬಗೆಯ ಕಡಲೆಹಿಟ್ಟಿನ ತಿಂಡಿ ; ಬೋಂಡ : ಭೀಮಾಚಾರಿ ಹೋಟೆಲ್‌ನಲ್ಲಿ ಪಕೋಡ ಕೊಂಡು ಕೊಂಡ (ಇಬದು. ೪೧) ; ಚೌಚೌನಲ್ಲಿದ್ದ ಪಕೋಡಾ ತೆಗೆದುಕೊಂಡು ತಿನ್ನುತ್ತ (ಕಾಮಿಕಾಂ. ೧೭೯).

[←ಹಿಂ. ಪಕೌಡಾ ; ಮರಾ. ಪಕೋಡಾ]

**ಪಕ್ಕ**, ಪಕ್ಕು₅, ಪಕ್ಕೆ₃, ಬಂಕ₂, ವಂಕ₂ (ನಾ). **೧.** ಬದಿ; ಮಗ್ಗುಲು; ನೆರೆ ; ಪಾರ್ಶ್ವ : ಎರಡುಂಪಕ್ಕದೊಳೋಲಗಕ್ಕೆ ಪದಪಿಂ ಬಂದಿರ್ದ ಕಾಂತಾಜನೋತ್ಕರರತ್ನಾಭರಣಪ್ರಭಾಪ್ರಸರವಾದಂ ತಳ್ತು (ಕಾದಂಪೂ. ೧೦-೧೧) ; ಎರಡುಂ ಪಕ್ಕದೆ . . . ಚಾಮರಮಂ ಚೆನ್ನೆಯರಿಕ್ಕೆ (ಪಂರಾಪೂ. ೨-೧೧) ; ವಾಸ್ತವವಾಗಿ ತುಳುವಿನಲ್ಲಿ ಪ>ಹ ಆಗಿಲ್ಲ. ಅಂಥ ಪದಗಳೆಲ್ಲಾ ನಿಸ್ಸಂದೇಹವಾಗಿ ಅದರ ಪಕ್ಕದ ಭಾಷೆಯಾದ ಕನ್ನಡದಿಂದ ತೆಗೆದುಕೊಂಡ ಪದಗಳು (ದ್ರಾವಿ. ೧೪೭). **೨.** ಹತ್ತಿರ ; ಸನಿಹ ; ಸಾಮೀಪ್ಯ ; ಸನ್ನಿಧಾನ : "ಪೊರ್ದುಗೆ, ಪೊರೆ, ಪಕ್ಕಂ, ಸನಿಹಂ, ಕೆಲಂ — ಈ ೫ ಸಮೀಪಂ" (ಕಶಸಾ. ೬೪-೪೩೪) ; ಗೋವರ್ಧನಭಟ್ಟಾರರ ಪಕ್ಕದೆ ಕುಮಾರಬ್ರಹ್ಮಚಾರಿಯಾಗಿ ಭದ್ರಬಾಹು ತಪಂಬಟ್ಟು (ವಡ್ಡಾರಾ. ೭೪-೨೧) ; ಅವರ್ಗೆಲ್ಲಂ ಸಂಸ್ಕಾರವಿಧಿಯಂ ನಾನೆ ಪಕ್ಕದೊಳಿರ್ದು ಮಾಡಿ ಸುವೆಂ (ಪಂಪಭಾ. ೧೪-೮ ವ) ; ಪಕ್ಕಿಗಳಲ್ಲಿ ತಿಂದುೞಿದ ನೆಲ್ಲಳ ನುಚ್ಚು ಗಳಂ ಫಲಂಗಳಂ ಪಕ್ಕದೊಳಿರ್ಪ ಗೂಡುಗಳಿನಾಯ್ದು ನಗಿಕ್ಕುವನಟ್ಟಿಱಂದೆ (ಕಾದಂಪೂ. ೧೩೬) ; ಚಿಕ್ಕನೆ ಬಲ್ಲಿದರಂ ಮಱೆವೊಕ್ಕೊಡದೋಸರಿಸಿ ಪೋಕುಮಲ್ಲದೆ ನೀನಿಂತಕ್ಕಟ ಱಕ್ಕಟೆಮಿರ್ದೊಡೆ ಪಕ್ಕಕ್ಕೊಳಗಪ್ಪೆ ಪಸಿದು ಮಸಗಿದ ಜವನಾ (ಚಂದ್ರಪ್ರ. ೧೩-೭೪) ; ಶಿವಭಕ್ತಿ ಮುತ್ತಂತಿರ್ದ ಮುತ್ತಬ್ಬೆಯ ಪಕ್ಕದೊಳು . . . ನಾಲ್ಕೆರಡುವರ್ಷಂ ಸುಖದೊಳಿರೆ (ಬಸರ. ೨-೯). **೩.** ಕಡೆ ; ಪಕ್ಷ ; ಬಣ : ಓಜಂ ಗಡ ಚಃ ಭಾರದ್ವಾಜಂ ಗಡ ಬಿಲ್ಲ ಬಲ್ಮೆಯುಂ ಕುಲಮುಂ ನಿರ್ವ್ಯಾಜಂ ಮುಸುಟ್ಟುದವು ಪಾಂಡುತನೂಜರ ಪಕ್ಕದೊಳೆ ಪಾಱಗಿಡೆ ನೆಗೞ್ದುದಱಿಂ (ಗದಾಯು. ೨-೧೮). **೪.** ಗರಿ ; ರೆಕ್ಕೆ : "ಜಿಟ್ಟೆಯೆಜಿಂಕೆ ತವೆ ಪಕ್ಕಂ" (ಕಬ್ಬಿಕೈ. ೬೮) ; ಪಕ್ಷಿಗೆ ಪಕ್ಕ ಬಂದಿತ್ತು ಗಗನಕ್ಕೆ ಹಾಱಿತ್ತು (ಅಪಚಂ. ೧೭೧-೬೬೮) ; ಪಳಂಚಲೆದೊಲೆದು ಪಕ್ಕಮಂ ಬಿರ್ಚಿ ಲಲ್ಲೆಗೆಯ್ದುತ್ತು ಪಾರಿವಂ ಪಾರಿವದೊಳ್ (ಗಿರಿಕ. ೨-೫೨) ; ಗಿರಿಗಳ ಪಕ್ಕಮಂ ಕಡಿದು ಗೋತ್ರವಿರೋಧಿಯೆನಿಪ್ಪ ನಾಮಮುಮಂ ಧರಿಸಿದ ದೇವವಲ್ಲಭನ ಪತ್ತನ ಕೀಗಳೆ ದಾಱಯಿಟ್ಟು (ದಶಕು. ೨-೧೦೫) ; ಬೀಸಣಿಗೆಯ ತಂದು ಬೀಸು ವೆನೆಂದರೆ ಬೀಸುತಿಹನು ಖಗ ತನ್ನ ಪಕ್ಕದಲಿ (ಪುರಂದ. ೬-೬೭-೪). **೫.** ಚಾಂದ್ರಮಾನದ ತಿಂಗಳಿನ ಅರ್ಧಭಾಗ; ಶುಕ್ಲಪಕ್ಷ ಅಥವಾ ಕೃಷ್ಣಪಕ್ಷ : ಪಕ್ಕಕ್ಕೊಂದುಪವಾಸ ಪುಕ್ಕಟೆ ಶ್ರೀತೊಲಸಿ ಸಿಕ್ಕಿಸಿಕ್ಕಿದಲಿ ಹರಿನಾಮ ಭವಭವದಿ ಸಿಕ್ಕಿ ಸಾಯುವದು (ಸರ್ವಜ್ಞ. ೯೧೪). **೬.** ರಂಗ ಭೂಮಿಯ ಎಡಬಲಗಳಲ್ಲಿ ಕಟ್ಟುವ, ಹೆಚ್ಚು ಅಗಲವಿಲ್ಲದ ಪಟ್ಟಿಕೆ : ರಂಗಭೂಮಿ ಸುಸಜ್ಜಿತವಾಯ್ತು ; ಪರದೆ ಕಟ್ಟಲಾಯಿತು ; ಪಕ್ಕಗಳನ್ನು ನಿಲ್ಲಿಸಲಾಯ್ತು (ಜಿಟ್ಟಹೊ. ೩೫). **೭.** ಶರೀರದಲ್ಲಿ ಎದೆಯ ಕೆಳಗಿನ ಎರಡು ಪಾರ್ಶ್ವ ; ಪಕ್ಕೆ ; ಪಕ್ಕೆಲುಬು ; ಪಕ್ಕಡಿ (ಉಕ) : ಪಕ್ಕಂಗಳ್ ಪೊಡೆಯುಳಿಕಂ ತಕ್ಕ ಪೆಗಲ್ ಮೂಗು ವಕ್ಷಮಾಱುಬ್ಬುಗಳಿವು ಮಿಕ್ಕಿರಲಾತಂಗೈಸಿರಿ ಚಕ್ಕನೆ ಬಂದಿರ್ಪುದಿದುವೆ ತಪ್ಪದಮೋಘಂ (ಜಾಲಾಸ್ಯ. ೧-೧೨-೩೮). **ಪಕ್ಕು₅ : ೮.** ಜೊತೆ ; ಜೋಡಿ : 'ಪಕ್ಕುವಿಡಿ' ಪರಾ. **ಪಕ್ಕೆ₃ : ೨.** ನಮ್ಮಕ್ಕನಸುವ ಸೂಱೆ ಗೊಂಡು ಪಕ್ಕೆಗೆಯ್ದದೆ ದೂರದೊಳಗಿದ್ದ (ಭರಚ. ೯-೩೯). 'ಪಕ್ಕೆಮನೆ' ಪರಾ. **೭.** ಪಕ್ಕೆಗೇ ಕೊಂಬು ನೆಟ್ಟು ಬಿಟ್ಟಂತೆ (ಸುಪಸಂ. ೪); ತೋಳು ಗಳನ್ನು ತನ್ನ ಪಕ್ಕೆಗಳ ಮೇಲೆ ಜಾಡಿಸಿದ (ಏಳಜೀ. ೯೮). **ಬಂಕ₂ : ೧.** ಬಳಿಕ್ಕದಱ ಬಂಕದೊಳೊಪ್ಪುಗುಮುಜ್ವಳಾಂಗನನ್ವಿತಬಹುಸಂಖ್ಯ ರುದ್ರಗಣಸೇವಿತನಗ್ಗದ ನೀಲಲೋಹಿತಂ (ಶಬಶಂ. ೧-೬೭). **ವಂಕ₂ : ೧.** ಎಡಬಲವಂಕದೊಳ್ ನೆಲನನುಗ್ಗಡಿಪಾಳಿಯರಿಂ ವಿಳಾಸದಿಂದಡಿಯಿಡು ವಲ್ಲಿ (ಗಿರಿಕ. ೩-೧೧೮) ; ವೇಲೆಯ ಶಿರವನೊಡೆದುಬ್ಬೇಳ್ವ ಘನಸಾಗರದ ವೊಲು ಪಿಡಿದೊದಱ ಕವಿದುದು ಕೂಡೆ ವಂಕದಲಿ ಕರಿ ತುರಂಗ ರಥವಾಜಿ ಕಾಲಾಳು (ಕುವ್ಯಾಅ. ೧೨-೧೯). 'ಎಡವಂಕ', 'ಬಲವಂಕ' ಪರಾ. **೯.** ದೆಸೆ ; ದಿಕ್ಕು : 'ತೆಂಕವಂಕ' ಪರಾ.

**ಪಕ್ಕಂಗೆದರ್** = ರೆಕ್ಕೆ ಉದುರಿ ಹೋಗು : ಪಕ್ಕಂಗೆದರ್ದನೆಂ, ಮಕ್ಕಳಿರ; ಮುದುಕನೆಂ. ಬನ್ನಿಮೆನ್ನಂ ನೆಗಹಿ ; ಕುಳ್ತ ಬಳಿಕೊರೆದಪೆನ್ ನಿಮ್ಮಿಷ್ಟಮನ್ (ಶ್ರೀರಾಪೂ. ೩೮೫-೬೨೬). **ಪಕ್ಕಗೂಡಾಗು** = (ಹಕ್ಕಿಯು) ಮಗ್ಗುಲಿನ ರೆಕ್ಕೆಗೂಡನ್ನು ನೆಮ್ಮಿ ನಿಲ್ಲು,–ಆಧರಿಸಿ ನಿಂತುಕೊಳ್ಳು : ಗಱ ಪಾಱಲ್ಕಿಲ್ಲ ಕಾಲುಂ ಬಲಿಯವು ನಡೆಯಲ್ ಬೆಟ್ಟಿತೆಂಬಂತೆ ಮೂಗಂ ಮುಱವನ್ನಂ ಮುಂದೆ ಮುಗ್ಗುತ್ತೆಡಬಲದೊಳ ಗಾಂ ಬೀೞುತುಂ ಪಕ್ಕಗೂಡಾಗೊಱಗುತ್ತಂ ಪೋಗಿ (ಕಾದಂಪೂ. ೧೯೨); ಚಳಿಗೆ ಪಕ್ಕಗೂಡಾಗೊರಗಿ ಮಾಗಿಯೆಳವಿಸಿಲ ಕಾಯಿಸುತಿರ್ದ ನರೆನವಿರ ಗರಿಮೆಯ್ಯವಂ. . . ನಿಡುನೋಡಿ (ಶ್ರೀರಾಪೂ. ೩೮೫-೬೨೨). **ಪಕ್ಕು ಮಾಡು₂** = ಜೊತೆಮಾಡು; ಒಡಗೂಡಿಸು : ಆಗಳ್ ಸೌಧರ್ಮೇಂದ್ರ ನೇಱದೈರಾವತಗಜೇಂದ್ರಕ್ಕೆ ನಿಜಗಜೇಂದ್ರಂಗಳಂ ಪಕ್ಕುಮಾಡಿ (ಆದಿಪು. ೭-೪೯ ವ) ; ಅಗಳಾ ಗೀರ್ವಾಣಗಣಾಗ್ರಣಿಯೇಱದೈರಾವಣಕ್ಕಾತ್ಮೀಯ ಮದಮುತಂಗಜಮಂ ಪಕ್ಕುಮಾಡಿ (ನೇಮಿಪು. ೮-೧೧೮ ವ).

[<ಸಂ. ಪಕ್ಷ]

**ಪಕ್ಕಂಬಿಡಿ** (ಕ್ರಿ). ಮಗ್ಗುಲನ್ನು ಹಿಡಿ ; ಪಕ್ಕವನ್ನು ಆಶ್ರಯಿಸು : ಪೊಱಮಟ್ಟು ತೋಱೆಯ ನಡುವಣ ಕುಱುವಂಗಳ ಕೆಲದೊಳಿರ್ದು ಕಾದುವು ಬಿಸಿಲಂ ಮಱಗಳ್ ಪಕ್ಕಂಬಿಡಿದೆಡೆಗಿಱದಿರೆ ಕುಂಭೀರಕಮುಕ ಕರ್ಕಟಂಗಳ್ (ಜಗವಿ. ೧೪-೧೨) ; ಗದ್ದೆಗಳ ಮಡಿಯ ತಡಿವಿಡಿದು ಪರಿವ ಪರಿಕಾಲ್ಗಳ ಪಕ್ಕಂಬಿಡಿದು ಕಿಕ್ಕಿಱಗಿಱದು ಪೊಂಗೇದಗೆಯ ಬಾೞೆವೇಲಿ ಗಳ ಕೆಲ್ಲೆಯೊಳಲ್ಲಲ್ಲಿ ಪಲ್ಲವಿಸಿದ ಸುರಹೊನ್ನೆ (ಧರ್ಮನಾ. ೨-೨೯ವ).

[ಪಕ್ಕ + ಪಿಡಿ₁]

**ಪಕ್ಕಗಂಟೆ** (ನಾ). ಆನೆಗಳಿಗೆ ಎರಡೂ ಬದಿಗಳಲ್ಲಿ ಜೋಲಾಡು ವಂತೆ ಕಟ್ಟಿರುವ ಗಂಟೆ : ತಳಸಂಕಲೆಯ ತೊಡರಂಕಣೆಯ ಕೊಂಡೆಯ ಪಕ್ಕಗಂಟೆಗಳ . . . ಜೋಡಿಸಿದರುಬ್ಬರದ ಮದಗಜವ (ಕುವ್ಯಾದ್ರೋ. ೩-೨) ; ಕೊರಳ ಹೊರಜಿ ಕುಂಭಸ್ಥಳ ಕೋಹಾಳೆ ಸರಗಂಟೆ ಪಕ್ಕಗಂಟೆ ಗಳು . . . ಪುದಕರಿಯ ಮೇಲೊಡನೆ ಮೆಱೆದುವು (ಕಂನವಿ. ೨೩-೧೦೨).

[ಪಕ್ಕ + ಗಂಟೆ₂]

**ಪಕ್ಕಗೆ** (ಅ). = ಪಕ್ಕನೆ : ಪಕ್ಕನೆ, ಪಕ್ಕಗೆ– ಇತಿ ಗಡಾದಿರಾಕೃತಿಗಣಃ (ಶಬ್ದಾನು. ೪೯ ಪ್ರಯೋ). [ಪಕ್₀+–ಅಗೆ₃]

**ಪಕ್ಕಗೊಳ್** (ಕ್ರಿ). ಹತ್ತಿರವನ್ನು ಸೇರು ; ಸಮೀಪಿಸು : ಪಕ್ಕ ಗೊಂಡೆಲ್ಲರೊಪ್ಪಿದರು ಚಕ್ರಿಯ ಮಂತ್ರಿ ದಕ್ಕಿತು ಛಲ ನಿನಗೆಂದ (ಭರಚ. ೩೮-೯೩). [ಪಕ್ಕ + ಕೊಳ್₁]

**ಪಕ್ಕಘಂಟೆ** (ನಾ). = ಪಕ್ಕಗಂಟೆ : ಪಕ್ಕಘಂಟೆಯ ಝುಗೆಯ ಮೊಗರಂಬದ ನವಾಯಿಯ ದಂತಿಯ ಹೆಗಲ ಹೊಂಗದ್ದುಗೆಗೆ ಬಿಜಯಂಗೈದನಾ ಭೂಪ (ಕುವ್ಯಾಸ. ೧೨-೯೭).

[ಪಕ್ಕ + ಘಂಟೆ]

**ಪಕ್ಕಜಲ್ಲಿ** (ನಾ). ಪಕ್ಕದಲ್ಲಿ ತೂಗಾಡುವ ಕುಚ್ಚು,–ಗೊಂಡೆ : ತಳಿರ್ಗಳಮುಕ್ತೆವೆತ್ತ ತಲೆಕಟ್ಟು ಲತಾಂತದ ಮಾಲೆ ಬೆನ್ನ ಬತ್ತಳಿಕೆ

ಮರೆಂದದಣ್ಪು ಪಸುರಂಗಿಗೆ ಪೀಲಿಯ ಪಕ್ಕಜಲ್ಲಿ ಗೇಣಳವಡೆ (ಶಬಶಂ. ೩-೧೬). [ಪಕ್ಕ+ಜಲ್ಲಿ$_2$]

**ಪಕ್ಕಜಿಹ್ವೆ** (ನಾ). ಕೀಟಗಳ ಬಾಯಲ್ಲಿರುವ ಒಂದು ಉಪಾಂಗ : ನಾಲ್ಕು ಅಖಂಡ ಅನುಬಂಧಗಳು – ಒಂದು ಮಧ್ಯದ ಜೊತೆ ಜಿಹ್ವೆ . . . ಒಂದು ಪಕ್ಕದ ಜೊತೆ ಪಕ್ಕಜಿಹ್ವೆ (ಕೀಟಬಿ. ೭೨). [ಪಕ್ಕ+ಜಿಹ್ವೆ]

**ಪಕ್ಕಟಿಪ್ಪಣಿ** (ನಾ). ಬರವಣಿಗೆಯಲ್ಲಿ ಬಿಟ್ಟು ಹೋದ ಅಥವಾ ಬೇರೆ ತಿಳಿಸಬೇಕಾದ ವಿಷಯವನ್ನು ತಿಳಿಸುವುದಕ್ಕಾಗಿ ಪಕ್ಕದಲ್ಲಿ ಬರೆಯುವ ಪುಟ್ಟಬರಹ ; ಮಗ್ಗುಲುಟಿಪ್ಪಣಿ : ಪಾರ್ಶ್ವಟಿಪ್ಪಣಿ ; ಪಕ್ಕ[illegible] (Apostil. ೫೦೪೩) ; ಪುಸ್ತಕ ವಿಷಯವನ್ನು ವಿಶದೀಕರಿಸಲು ಕೆಲವು ಟಿಪ್ಪಣಿಗಳನ್ನು ಉಪಯೋಗಿಸುವುದು ಅನಿವಾರ್ಯ . . . ಮುಖ್ಯವಾಗಿ ಪಕ್ಕಟಿಪ್ಪಣಿ, ಹೆಗಲುಟಿಪ್ಪಣಿ (ಮುದ್ರಕ. ೪೪). [ಪಕ್ಕ+ಟಿಪ್ಪಣಿ]

**ಪಕ್ಕಡಿ** (ನಾ). (ಉಕ) ಎದೆಯ ಕೆಳಗಿನ ಎರಡು ಮಗ್ಗುಲು ; ಪಕ್ಕೆ : ಒಡಲೆಲ್ಲ ಹೊಡೆಮರಳಿ ಸೆಟೆದು ನಿಲ್ಲುತ್ತದೆ. ಪಕ್ಕಡಿ ಮುರಿದು ಹೋದೀತೆಂಬ ಖಬರು ಕೂಡ ಅದಕ್ಕಿದ್ದಂತಿಲ್ಲ (ದೇಕನ್ನ. ೧೩೪) ; ಮಗುವು ಆಕೆಯ ತೊಡೆಯ ಮೇಲೆ ಇರುವಾಗಲೇ ಅದರ ಪಕ್ಕಡಿಯನ್ನು ಮುಟ್ಟಿ ಜ್ವರವನ್ನು ನೋಡಿದನು (ಜನಜೀ. ೪೩) ; ಪಕ್ಕಡಿಯ ಮೇಲೆ ಮಲಗಬೇಕು (ಭಾರಸಂ. ೧೪೩). [<ಪಕ್ಕ]

**ಪಕ್ಕಣ** (ನಾ). ೧. ಬೇಡರು ವಾಸಿಸುವ ಹಳ್ಳಿ : "ವನಮಧ್ಯಗತಂ ಶಬರೋಪನಿಚಿತಮದು ಪಕ್ಕಣಂ ಪುಳಿಂದಸ್ಥಾನಂ" (ವಸ್ತುಕೋ. ೬೫-೩); ಕೆಲವೆಡೆ ಕಿನ್ನರೀವಿಹರಣೋಚಿತ ಸೌಂದರಕಂದರಂಗಳಿಂ . . . ಕೆಲವೆಡೆ ಕೂಡೆ ಕ[ಣ್ಣು]ಜುಗುಗುಂ ಶಬರೋ[ಲ್ಬ]ಣ ಪಕ್ಕಣಂಗಳಿಂ (ವರ್ಧಮಾ. ೫-೫೩) ; ಬೆಟ್ಟುಗೂಂಟಮಂ ಬಸಿವ ಪುಳಿಂದಸಂಕುಳದ ಪೆರ್ಕಣದಿಂದೆಸೆದತ್ತು ಪಕ್ಕಣಂ (ಚಂದ್ರಪು. ೫-೫೪) ; ಸಂತೋಷದಿಂ . . . ಗವಿಸಿದಂ ಪಕ್ಕಣಕ್ಕಾ ಪುಳಿಂದಂ (ಉದ್ಭಟ. ೪-೧೨೬) ; ಮುತ್ತಕಾಲದೊಳೊರ್ವ ಬೇಂಟೆಯೊಂದು ಬೆಸನದಿಂ ಆ ತೋರ್ಪ ನೆರೆವೆಟ್ಟನೆಮ್ಮ ಪಕ್ಕಣದಿಂ ತಳರ್ದು (ರಾಮಾಶ್ವ. ೭೬-೨೨). ೨. ಜಾತಿಯಿಂದ ಬೇಡರಲ್ಲದಿದ್ದರೂ ಪ್ರಾಣಿವಧೆಯಿಂದ ಜೀವಿಸುವ ಚಂಡಾಲ ಮೊದಲಾದ ಕೆಳವರ್ಗದವರು ವಾಸಿಸುವ ಹಳ್ಳಿ : ಅನಂತರಮ ತೋಜುತಿಂದ್ರಪುರದಂತಿರಾ ಪಕ್ಕಣಂ (ಕಾದಂಉ. ೭೫೭). [ಸಂ.]

**ಪಕ್ಕದ್ವಂದ್ವ** (ನಾ). ರೆಕ್ಕೆಗಳ ಜೋಡಿ ; ಎರಡು ರೆಕ್ಕೆಗಳು : ಪಕ್ಕದ್ವಂದ್ವಂಗಳಂ ಝಾಡಿಸಿ ಕೆಲಕೆ ನಿಮಿರ್ದೊತ್ತಿ ಮೂಗಿಂದೆ ಗೋಣಂ ಹೆಕ್ಕುತ್ತಂ ಬಂದು . . . ನಗರದೊಳ್ ಕೂಗಿತಾ ತಾಮ್ರಚೂಡಂ (ಸೂಕ್ತಿಸು. ೯-೩೦). [ಪಕ್ಕ+ದ್ವಂದ್ವ]

**ಪಕ್ಕನುಸುಳು** (ಕ್ರಿ). ಪಕ್ಕಕ್ಕೆ ಬರು ; ಸಮೀಪಕ್ಕೆ ಸಾರು : ಪಕ್ಕನುಸುಳಿದ ಕರ್ಣಿಕೆಯು ಕಾವಲಿರ್ದರಸುಮಕ್ಕಳರನೆಲೆ ಧಾತುಗೆಡಿಸಿ ಸಿಂಹರವದಿ ಬೊಬ್ಬಿಕ್ಕಿದನು (ತುರಂಗ. ೫೧-೧೦). [ಪಕ್ಕ+ನುಸುಳು$_1$(<ನುಸುಳ್$_1$)]

**ಪಕ್ಕನೆ** (ಅ). ಇದ್ದಕ್ಕಿದ್ದ ಹಾಗೆಯೇ ; ಒಮ್ಮಿಂದೊಮ್ಮೆಲೆ ; ಹಠಾತ್ತನೆ; ತಟ್ಟನೆ: ಆ ಸೂಕರಂ ಕಕ್ಕಸದ ಬಾಣದಿಂದೊಕ್ಕು ದೊಡಲಂ ನೆಲಕೆ ಪಕ್ಕನಸುವಂ ಬಿಡಲ್ (ಜೈಪು. ೫೩-೩೯) ; ಪಕ್ಕನೆ ನಕ್ಕರದಂ ಕಂಡಕ್ಕಜ ಮಿಗೆ ಗೊಳ್ಳನೆಲ್ಲರುಂ ಕೈವೊಯ್ಯುಂ (ಹಾಲಾಸ್ಯ. ೪-೧೫-೭೧) ; ಅದನು ಕೇಳುತ ನಕ್ಕು ಪಕ್ಕನೆ ಮುದಿಯಶೆಟ್ಟಿಯು ಪೇಳ್ದನವರಿಗೆ (ಯಚೋರ. ೫೬). [ಪಕ್$_0$+-ಅನೆ$_1$./ತೆಲು. ಪಕ್ಕುನ]

**ಪಕ್ಕರಂಗ** (ನಾ). ರಂಗಸ್ಥಳಕ್ಕೆ ಹೋಗುವ ಮೊದಲು ನಟರು ನಿಂತುಕೊಳ್ಳುವ ರಂಗಸ್ಥಳದ ಮಗ್ಗುಲು ಭಾಗ : ದೃಶ್ಯಸಲಕರಣೆಗಳನ್ನು ತಂದು ಜಾರಿಸುವ, ನಟರು ರಂಗವನ್ನು ಪ್ರವೇಶಿಸುವುದಕ್ಕೆ ಮೊದಲು ಬಂದು ನಿಂತುಕೊಳ್ಳುವ,—ರಂಗಸ್ಥಳದ ಭಾಗ: ಪಕ್ಕರಂಗ (Slip. ೫೦೪೩). [ಪಕ್ಕ+ರಂಗ]

**ಪಕ್ಕರಕ್ಕೆ** 'ಪಕ್ಕರಿಕೆ' ನೋ.

**ಪಕ್ಕರಗೆ** 'ಪಕ್ಕರಿಕೆ' ನೋ.

**ಪಕ್ಕರಿಕೆ**, ಪಕ್ಕರಕ್ಕೆ, ಪಕ್ಕರಗೆ, ಪಕ್ಕರಿಗೆ, ಪಕ್ಕೆರಕ್ಕೆ, ಹಕ್ಕರಕ್ಕೆ, ಹಕ್ಕರಿಕೆ$_2$, ಹಕ್ಕರಿಕ್ಕೆ, ಹಕ್ಕರಿಗೆ$_2$, ಹಕ್ಕಲಿಕೆ (ನಾ). ಕುದುರೆ, ಆನೆ ಮೊದಲಾದುವುಗಳಿಗೆ ಹಾಕುವ ರಕ್ಷಾಕವಚ,—ಮೈಜೋಡು : ರನ್ನದ ಪಕ್ಕರಿಕೆ[ಪಾಠಾಂ. ರಕ್ಕೆ]ಯ ಕಟ್ಟಿದ ಗೆಜ್ಜೆಯ ಸೂಟಿಯ ರವದ ಪೊರ್ಕುಳ ಗಂಟೆಯ (ಗಿರಿಕ. ೬-೫೫ ಪ) ; ರಾಜಿಪ ಪಕ್ಕರಿಕೆಯ ರುದ್ರಾಕ್ಷಿಯ ವಾಜಿಗಳಮಲಭಸಿತದಿಂದೆ ತೇಜವಡೆದ ಸಾಮಜತತಿ (ತ್ರಿಭುತಿ.೨೭-೨೯); ಕಡಿವ ಕಬ್ಬಿಗಳ ಘುರುಘುರುಧ್ವನಿ ಹೇಷಿತಸ್ವನಂ ಕಟವಾಯ ನೊರೆ ರನ್ನವಕ್ಕರಿಕೆಗಳ್ ಮೆಱೆಯೆ ಬಂದತ್ತು ತುರಗಬಲಂ (ಜೈಪು. ೪೭-೩೫); ತವೆ ಸೆಡಕಿನ ಝಲ್ಲಿ ತೆಱೆದ ಪಕ್ಕರಿಕೆಯ ಭುವನೇಶನಶ್ವವ್ರೈದಿದುವು (ಕಂಸವಿ. ೨೩-೯೦). **ಪಕ್ಕರಕ್ಕೆ:** ಪಜ್ಜಳಿಸುವ ಪಕ್ಕರಕ್ಕೆಗಳ ಗೆಜ್ಜೆಯ ಬಲ್ಲುಲಿ ನೀಳ್ದು ದಿಕ್ಕಿನೊಳ್ ಬಳಸೆ . . . ತೇಜಿಯ ತಟ್ಟು ತೆರಳ್ದುದೆತ್ತಲುಂ (ಕಬ್ಬಿಕಾ. ೨೦೪) ; ಗಿಳಿಗಳಟ್ಟೆಳವೆ ಪಚ್ಚೆಯ ಪಕ್ಕರಕ್ಕೆ. . . ಆಗಲ್ಕತನುಗೆಳಸಿ ಮಧುಯೋಧನನಲಂಕರಿಸಿ ಪಿಡಿದ ಮದಗಜದಂತೆ ಚೂತಮೆಸೆಗುಂ (ಪದ್ಮರಾ. ೮-೩೦). **ಪಕ್ಕರಗೆ :** 'ಪೊಂಬಕ್ಕರಗೆ' ಪರಾ. **ಪಕ್ಕರಿಗೆ :** ನಾಡಾಡಿ ಕುದುರೆಯಿಪ್ಪತ್ತೆಂಟು ಸಾವಿರ ಜೋಡು ಪಕ್ಕರಿಗೆ ಹಲ್ಲಣದಿ ಪಾಡಾಗಿ ಬಂದು ಕಾಳಗಕೊದಗುವದೊಂದು ಗಾಡಿಯನಾರು ಬಣ್ಣಿಪರು (ಅಮುಸಾಂ. ೨-೯೩). 'ಪೊಂಬಕ್ಕರಿಗೆ' ಪರಾ. **ಪಕ್ಕೆರಕ್ಕೆ :** ಹಲ್ಲಣದ ಮೊಗರಂಬಗಳ ಪಕ್ಕೆರಕ್ಕೆಗಳ ಕಡಿಯಣದ ವಾಜಿಗಳ್ (ಜೈಪು. ೨೩-೩೪). **ಹಕ್ಕರಕ್ಕೆ :** ಇಲ್ಲಿದು ಹೊನ್ನ ಹಲ್ಲಣವನೊಟ್ಟಲನಾನಿಸು ಹಕ್ಕರಕ್ಕೆಯುಂ ಬಲ್ಲೆಯಮಂ ಬಯಲ್ಗೆತೆಗೆ (ನಳಚಂ. ೬೫೧). **ಹಕ್ಕರಿಕೆ$_2$ :** "ದಂಶನಂ ಹಕ್ಕರಿಕೆ" (ಮಂಗರಾ. ೮೬-೩೧) ; "ಗುಟಿವಾನೆಯ ಹಕ್ಕರಿಕೆಯು" (ಕವಿಕಂ. ೧೨೭) ; ಬಾಯಿಗೆ ಹಲ್ಲಣ . . . ಹಲ್ಲಿಗೆ ಹಕ್ಕರಿಕೆ (ಸುಂಕಬಂ.೬೬೫-೬೪); ಹಱಿದ ಹಕ್ಕರಿಕೆಗಳ . . . ನೆಗ್ಗಿದ ಹರಿಗೆಯುನು ಮುಂಕ್ಕಾದ ಕೈದುವ ತರಿಸಿ ಕಳುಹಿಸು ತಿರ್ದನತಿರಭಸದಲಿ ದ್ರೋಣ (ಕುಪ್ಪಾದ್ರೋ. ೧೫-೧೮); ಹಸ್ತಿಯ ಮೇಗಡೆ ಹಾಕಿದ ಹಕ್ಕರಿಕೆಗಳತಿ ರಂಜಿಸಿದುವು (ನೇಮಿಸಂ. ೨೭-೬೦) ; ಕುದುರೆಗಳ ಜೀನ ಹಲ್ಲಣ ಲೇವೆ ಕಬ್ಬಿ ಕಂದದ ಹಕ್ಕರಿಕೆ . . . ತುಂಬಿ ಬಂಡಿಗಳಗಣಿತಂ ಬಂದುವು (ಜೈಪು. ೪೭-೪೪) ; ಛತ್ರ ಚಾಮರ ಹರಿಗೆ ಹಕ್ಕರಿಕೆ . . . ಯುಗಾಕ್ಷಂಗಳುರಿಗೊಳೆ (ಜೈಮಿಭಾ. ೮-೩೮). **ಹಕ್ಕರಿಕ್ಕೆ :** ರಚಿಸಿದ ಹಕ್ಕರಿಕ್ಕೆಗಳ . . . ವಿಲಾಸದಲಂದಲಂಕರಿಸಿದರು ತೇಜಿಗಳ (ಕುಪ್ಪಾಭೀ. ೪-೪೯) ; ಸರಪಳಿ ದರ್ಪಣಂ ಹೊರಜೆ . . . ಘನಸೋಳಹ ಖಂಡದ ಹಕ್ಕರಿಕ್ಕೆ ಝಲ್ಲರಿ ತುಡಿಸಿರ್ದ . . . ಗಂಧಸಿಂಧುರ (ತ್ರಿಪುವಿ. ೨೪-೨೯೩). **ಹಕ್ಕರಿಗೆ$_2$ :** ಕಡಿದ ಹರಿಗೆ ಸೀಳಾದ ಸಿಂಗಾಡಿಗಳುಡಿದ ಹಕ್ಕರಿಗೆಯಂಚೆಗಳ ಬಿಡದೆ ಪಱಿದ ದಟ್ಟದಗಲೆ ಜೋಡುಗಳಿಂದ ಜಡಿದುದು ರಣಭೂಮಿಯಾಗ (ಕಂಸವಿ. ೧೫-೬೪). **ಹಕ್ಕಲಿಕೆ :** ಮೇಲೆ ಸುಳಿಯಿಂ ಸಿಲ್ಕಿ ಮದಸುಂಡಾಲವದ್ದವು ಕೆಲವು ಹಯಗಳು ತೇಲಿದವು ಹಕ್ಕಲಿಕೆ ಹಲ್ಲಣ ಸಹ ಸಮುದ್ರದಲಿ (ಅಂಬಿಕಾ. ೨೧-೬೩) ; ಹಲ್ಲಣಿಸಿದುದು ತುರಗ ಹೀಲಿಯ ಝಲ್ಲರಿಗಳಿಕ್ಕಿದವು ಚವುಕದ ಪುಲಿವಟ್ಟೆಯ ಹಕ್ಕಲಿಕೆಯಿಕ್ಕಿಲವ ಪಚ್ಚಳದ (ಕೊಲ್ಲಾಚ. ೩೬೪). [ಪಕ್ಕರೆ$_1$+-ಇಕೆ]

**ಪಕ್ಕರಿಗೆ** 'ಪಕ್ಕರಿಕೆ' ನೋ.

**ಪಕ್ಕರಿಸು** (ಕ್ರಿ). ಆನೆ, ಕುದುರೆ ಮೊದಲಾದುವುಗಳಿಗೆ ರಕ್ಷಾಕವಚವನ್ನು ಹಾಕಿ ಸಜ್ಜುಗೊಳಿಸು : ವಾರಿಜವಮಸಟ್ಟು ಕಿವಿಯೊಳ್

ವಾರುವಮಂ ಪೀಲಿಯಿಂದೆ ಪಕ್ಕರಿ [ಪಾಠಾಂ.ಲಿ]ಸಿ . . . ನೃಪಕುಮಾರ ನೇಱುವನೊಲವಿಂ (ಅರ್ಧನೇ. ೪–೧೪೧) ; ತುರಗವ ಪಕ್ಕರಿಸಲು ಪೇಳು (ವರ್ಧಚ. ೬–೨೪). [ಪಕ್ಕರೆ₁ + –ಇಸು₃]

**ಪಕ್ಕರೆ₁,** ಪಾಕರ, ಪಾಗರ₂, ಹಕ್ಕರಿ, ಹಕ್ಕರೆ(ನಾ). = ಪಕ್ಕರಿಕೆ : ರನ್ನದ ಪಕ್ಕರೆಯಿಂದಂ ಕಣ್ಗೊಳಿಸುವ ಕರಿಕಳಭದ ತೇಜದಿನೆಸೆದುದಾ ದಿವ್ಯಾಶ್ವಂ (ಕಾದಂಪೂ. ೪೫೪); ಮೊಟಗುವ ರಣಪಟಹಂಗಳೆ ಗುಟವದ ಪಕ್ಕರೆಯ ಸದ್ದುಗಳಂಗಳ ಪಲವುಂ ಪಟಯಿಗೆಯ ಪೊಳೆವ ಕೈದುವ ಘಟಾಯದಿನತಿಭಯದಮಾದುದಾ ಪ್ರತಿಭಯದಂ (ವರ್ಧಮಾ. ೪–೮೨) ; ಪಕ್ಕರೆ ತೇಜಿವಾರು ಕಟಾದಿರ್ಕಡಿಯಾದುವು (ಕಬ್ಬಿಗಕಾ. ೨೪೦) ; ಪೊಸ ರನ್ನದ ಪಕ್ಕರೆಯಿಂದ ಮೂಡುವ ಬಿಸಿಗದಿರನ ಬಿಂಬವನು ಮಸುಳಿಪ ದಿವ್ಯವಾಜಿಯ ಬೆಂಗೆವಾಯ್ದನಂದಸಹಾಯಶೂರನಾ ರಾಮ (ಕುರಾಸಾಂ. ೪೩–೬೪). **ಪಾಕರ :** ತನ್ಮಹಾಗಜದಂಗೋಪಾಂಗಂಗಳೊಳ್ಗೊರ್ಚಿದ ಮಿಳಿ ಪೊರಜೆ ಜೊತ್ತಗಂಗಳುಮಂ ನಿಲುನಿಲುಂಕಿ ಪೊಯ್ಪೊಯ್ದು ಕತ್ತರಿಸಿ ರೆಂಚೆಯಂ ಸಡಲ್ಚಿಸಿ ಪಾಕರಮಂ ಪತನಂಗೈಸಿ ತತ್ಕುಂಜರವನಾತ್ಮವಶಂಗೈವ ನಿತರೊಳ್ (ಕಳಸ್ಯ. ೨–೩೪). **ಪಾಗರ₂ :** ಆಗ ಸಡಿಲಿದ ಪಾಗರಗಳೂ ಮುರಿದು ಬೀಳುವ ದಂತಗಳೂ ಸುಂಡಿಲಂಗಳೂ . . . ಉಂಟಾಗಿ ಮದ್ದಾನೆಗಳು . . . ಕಾಣಲ್ಪಟ್ಟವು (ಕೃವಾಭೀ. ೨೪). **ಹಕ್ಕರಿ :** ಕವಿಯ ಕೀಳಿನ ವಾರುವದ ಬಲುವಿಲ್ಲ . . . ಜೋಡು ಹಕ್ಕರಿಯ ಹವಣುಗಳಿದ ತುರಂಗಕೋಟಿಗಳವಯವದಿನೊಯ್ಯಾರದಿಂ ತಳರ್ದುವು (ಕುಮುರಾ. ೪–೨೯) ; ಹಕ್ಕರಿಯ[ಪಾಠಾಂ.ಕೆ] ಹಯಂಗಳು ಶಿರ ನಡು ತೊಡೆ ತುಂಡೇಳಿ ತುರಗಕಾರರು ಸೇರಿ ಕಡಿದಾಡುತಿರಲು (ನಾಗಕು.೧೪–೬೩). **ಹಕ್ಕರೆ :** ಲೋಹದ ಸಿಪ್ಪಡಸಿದ ಸನ್ನಾಹಂ ಹಕ್ಕರೆ ಹಯಾಂಗಮಂ ಪೊಯ್ಕಳ್ದೆ (ಮಹಾನೇ. ೧೧–೧೩೬).

[<ಪ್ರಾ. ಪಕ್ಖರ./ಸಂ. ಪ್ರಕ್ಖರ, ಪ್ರಕ್ಷರ, ಪ್ರಖರ]

**ಪಕ್ಕರೆ₂** 'ಪಕ್ಕಲೆ' ನೋ.

**ಪಕ್ಕರೆಯಿಕ್ಕು**(ಕ್ರಿ). ರಕ್ಷಾಕವಚದಿಂದ ಕೂಡಿರು; ಮೈಜೋಡನ್ನು ಅಳವಡಿಸಿಕೊಂಡಿರು : ಪಕ್ಕರೆಯಿಕ್ಕಿ ಬಂದುವು ಹಯಂ ಘಟಿ ಪಣ್ಣಿದು ವಾಯುಧಂಗಳಿಂ ತೆಕ್ಕನೆ ತೀವಿ ಬಂದುವು ರಥಂ (ಪಂಪಭಾ. ೩–೬೭) ; ಪಕ್ಕರೆಯಿಕ್ಕಿದಶ್ವತತಿ ಪಣ್ಣಿದ ದಂತಿಘಟಾಳಿ ಸನ್ನಣಬೊಕ್ಕ ಪದಾತಿ (ಜಗವಿ. ೯–೩೧) ; ಪಕ್ಕರೆಯಿಕ್ಕಿ ಬಂದವು ಹಯಂ ಪವಣಿಲ್ಲದೆ ವಾರಣಂಗ ಳೆಕ್ಕೆಕ್ಕೆಯೊಳೆಯ್ದಿ ಪಣ್ಣಿ ನಡೆತಂದವು (ಪುಣ್ಯಾಸ್ರ. ೧–೮೨).

[ಪಕ್ಕರೆ₁ + ಇಕ್ಕು]

**ಪಕ್ಕಲೆ,** ಪಕಾಲಿ, ಪಕ್ಕರೆ₂, ಪಕ್ಕಳೆ, ಪಖ್ಖಲೆ (ನಾ). ೧. ಎತ್ತು, ಕುದುರೆ ಮೊದಲಾದ ಪ್ರಾಣಿಗಳ ಮೇಲೆ ನೀರು ಮೊದಲಾದ ದ್ರವಪದಾರ್ಥಗಳನ್ನು ಸಾಗಿಸಲು ಉಪಯೋಗಿಸುವ ಚರ್ಮದ ಚೀಲ : ಕರ್ಪೂರಧೂಳಿಯ ಹೊಳಹುಗಳ ಪನ್ನೀರ ಪಕ್ಕಲೆಯ . . . ಪರಿಮಳಭಾರದಲಿ ಬಿಱುಗಾಳಿ ಕುಸಿದುದು (ಕುಪ್ಯಾಅ. ೧೨–೧೦) ; ತೀರ ತೀರಲಿಕೊಟ್ಟು ತಿರ್ದರು ಭಾರಸಂಖ್ಯೆಯ ಬಣ್ಣ ಬಿಳಿದಿನ ಸೀರೆ ಬುದ್ದಣಿ ಹಾಡ ಪಕ್ಕಲೆ ಕಂಬಿಗಳ ಕೊಡನ (ತೊರಾ. ೫–೮–೪) ; ಪಕ್ಕಲೆಯ ಸಗ್ಗಲೆಯೊಳಿಕ್ಕಿರ್ದ ವಾರಿಯನು ಚೊಕ್ಕಟವೆಂದು ಕುಡಿಯುತಿರೆ ಹೊಲೆ ಯರು ಚಿಕ್ಕವರು ಹೇಗೆ (ಸರ್ವಜ್ಞ. ೯೫೫); ಬಳಿಕ ಪಕ್ಕಲೆಗಳಲ್ಲಿ ನೀರನ್ನು ತಂದು ಅದರ ಮೇಲೆ ಸುರಿದು (ಭಾರವೀ. ೧೧೯). ೨. ಒಂದು ಬಗೆಯ ಬಾಯಗಲದ ಪಾತ್ರೆ ; ಕೊಪ್ಪರಿಗೆ ; ದೊಡ್ಡ ಪಾತ್ರೆ : "ಪಕ್ಕಲೆ ಯೆಂದೊಡೆ ಅದು ತಾನಕ್ಕುಂ ಕೊಪ್ಪರಿಗೆ" (ಭಾರನಿ. ೨೫). ೩. ನೀರಿನ ಒರತೆ; ಚಿಲುಮೆ : "ಪಕ್ಕಲೆಯೆಂದುಂ, ಬಗರಗೆಯೆಂದುಂ, ಒಱಂತೆ ಯೆಂದುಂ ವಜ್ಜರಂ" (ಕಶಸಾ. ೬೬–೪೯೨) ; ಪಕ್ಕಲೆಯೆನೆ ಕವಿಗಳೊ ಲಿದು ಬಗರಗೆಯೆಂಬರ್" (ಕವಿಕಂ. ೨೦೧). **ಪಕಾಲಿ :** ೧. ಮದ್ಯದ ಪಕಾಲಿ (Wine bag. ಇಂಕನಿ); ದಪ್ತರಖಾನೆಯ ಹಿಂದೆ ಗಂಗಾಜಲದಿಂದ ತುಂಬಿದ ಪಕಾಲಿಗಳನ್ನು ಹೇರಿದ ಎತ್ತುಗಳೂ ಒಂಟೆಗಳೂ ಸಾಗಿದ್ದವು (ರಾಣಾರಾ. ೯೦); ರಘುನಾಥಸಿಂಹರು . . . ಬೆನ್ನಿಗೆ ಪಕಾಲಿಯನ್ನು ಕಟ್ಟಿ ಕೊಂಡು, ಬೇಗನೆ ಪಾನಕವನ್ನು ತಯಾರುಮಾಡಿದರು (ರ್ಘುರಾಣಿ. ೪೬೩). **ಪಕ್ಕರೆ₂ :** ೧. ನಾನಾರತ್ನದಾ ಪೊಚಿಗಳಂ ಪನ್ನೀರವಕ್ಕರೆಗಳಂ ದಿವ್ಯ ಪರಿಮಳದ್ರವ್ಯ ದೇವಾಂಗ ಧನಕನಕವಂ ಚರರಿಂದ ಪೊಱಿಸಿ ಕಳುಹಿದನು (ಸೌಂದಪು. ೧೫–೨). **ಪಕ್ಕಳೆ :** ೨. ಹಡಪ ಚಾಮರ ಕುಂಚ ಬೀಸಣಿಗೆಯುಂ ಖಡ್ಗ ಕುಡಿನೀರ ಪಕ್ಕಳೆಯು . . . ಪಿಡಿದಿರುವರಂ (ಪ್ರಭುಪು. ೪–೧೫). **ಪಖ್ಖಲೆ :** ೨. ನೂಱಾಱು ಪಖ್ಖಲೆಗಳನೆತ್ತಿ ನೀರಂ ಸುರಿಯೆ (ವಾಗೀರ. ದೇ. ೨೬೬–೧೦); ಕಂದ ಪಖ್ಖಲೆಗಳಲಿ ತೀವಿದ ಮಂದರಕುತದ ತೋಟ ತಲೆಗಳ ತಿಂದು ಬಿಸುಡುವ . . . ಪೂತನಿವ್ಯಂದ ವನು ಕಂಡೋಸರಿಸುವನದೊಂದು ದೆಸೆಗಾಗಿ (ಕುಪ್ಯಾಗ. ೩–೧೧) ; ನಟ್ಟ ಗಾಲಿಯು ಕೀಳುತರೆಗಳ ಕಟ್ಟು ತಚ್ಚಿನ ಕಿಚ್ಚಿನುಱುಬೆಯ ದಟ್ಟ ಹೆಗೆ ಧಾರೆಗಳ ಬಿಡುತೆಣ್ಣೆಗಳ ಪಖ್ಖ[ಪಾಠಾಂ.ಕ್ಕ]ಲೆಯ ... ಈ ಪರಿ ನಡೆಸಿ ತಂದರು ದೃಢಪರಾಕ್ರಮನ (ತೊರಾ. ೫–೬–೧೩).

[<–ಹಿಂ. ಮರಾ. ಪಖಾಲ್./ತಮಿ. ಪಕ್ಕಾಳಿ ; ತುಳು. ಪಕಾಲಿ ; ತೆಲು. ಪಕಾಲಿ, ಪಕಾಳಿ, ಪಕ್ಕಾಲಿ./ಸಂ. ಪಯಸ್ಖಲ್ಲ]

**ಪಕ್ಕವಣಿ** (ನಾ). ಹಾರದಲ್ಲಿರುವ ನಾಯಕಮಣಿಯ ಪಕ್ಕದಲ್ಲಿ ರುವ ರತ್ನ ; ಮಧ್ಯಮಣಿಯ ಜೊತೆಯಲ್ಲಿರುವ ಮಣಿ : ಕಲಾ ಧರಂ ಪಕ್ಕವಣಿಗಳೊಳಂ ತರಳತೆ ತೋರ್ಕುಮೆಂಬುದುಂ ನಾಯಕರತ್ನದ ಪೆರ್ಕಳಮ್ಮೆಸೆಯೆಂದಿವರ್ ಬಿನದವಾತುಗಳನಾಡುತ್ತಿರೆ (ಚಿಕವಿ. ೬–೧೭೩ ಪ).

[ಪಕ್ಕ + ಮಣಿ₃]

**ಪಕ್ಕವಾದಕ** (ನಾ). ಸಂಗೀತ, ನರ್ತನಗಳಿಗೆ ಪಕ್ಕವಾದ್ಯವನ್ನು ನುಡಿಸುವವನು ; ಪಕ್ಕವಾದ್ಯಗಾರ : ತದನಂತರಂ ನಾಟ್ಯವಿದ್ಯಾ ವಿಶಾರದರ ಪಕ್ಕವಾದಕಪ್ರಕರಂ ಧ್ರುತಮಧ್ಯಲಯವಿಳಂಬಿತಗತಿಗತ ಪ್ರಹರಣಪ್ರಾಗಲ್ಭ್ಯಮಂ ಪ್ರಕಟೀಕರಿಸುವುದುಂ (ಮಹಾನೇ. ೪–೫೫ ಪ).

[ಪಕ್ಕ + ವಾದಕ]

**ಪಕ್ಕವಾದ್ಯ** (ನಾ). ಹಾಡು, ನರ್ತನಗಳ ಜೊತೆಯಲ್ಲಿ ಬಾರಿಸುವ ಮೃದಂಗ, ಪಿಟೀಲು, ಘಟ, ತಬಲ ಮೊದಲಾದ ವಾದ್ಯ : ತಿರು ಕ್ಕೋಡಿಕೋವಿಲ್ ಕೃಷ್ಣಯ್ಯರ್ ಮತ್ತು ನಾರಾಯಣಸ್ವಾಮಿಅಪ್ಪ ಇವರೇ ಪಕ್ಕವಾದ್ಯಗಳನ್ನು ನುಡಿಸಿದರೆ ಮಾತ್ರ ಹಾಡಲೊಪ್ಪಿದರು (ಸಂಗೀತ.೧೪) ; ಕೊಳಲು ಪಕ್ಕವಾದ್ಯಗಳಿಂದ ಕೂಡಿದ ಈ ನಾಟ್ಯವು ವಿಶ್ವಶಾಂತಿಯನ್ನು ಸೂಚಿಸುತ್ತದೆ (ಭಾರದ. ೫೪೯). [ಪಕ್ಕ + ವಾದ್ಯ]

**ಪಕ್ಕವಾದ್ಯಗಾರ** (ನಾ). ಸಂಗೀತ, ನರ್ತನಗಳಲ್ಲಿ ಪಕ್ಕವಾದ್ಯ ವನ್ನು ನುಡಿಸುವವನು : ಮಹಾವೈದ್ಯನಾಥಅಯ್ಯರ್ ಅವರಿಗೆ ಪಕ್ಕವಾದ್ಯಗಾರರಾಗಿದ್ದ . . . ಇವರೇ ಪಕ್ಕವಾದ್ಯಗಳನ್ನು ನುಡಿಸಿದರೆ ಮಾತ್ರ ಹಾಡಲೊಪ್ಪಿದರು (ಸಂಗೀತ. ೧೪).

[ಪಕ್ಕವಾದ್ಯ + –ಗಾರ₁(<–ಕಾಱ)]

**ಪಕ್ಕಶೂಲೆ,** ಪಕ್ಕೆಶೂಲೆ (ನಾ). ದೇಹದ ಎದೆಯ ಕೆಳಗಿನ ಎಡ ಅಥವಾ ಬಲಭಾಗದಲ್ಲಿ ಉಂಟಾಗುವ ನೋವು ; ಪಕ್ಕೆನೋವು ; ಪಕ್ಕಡಿಶೂಲೆ : ಇಂಗು, ಬಜೆ . . . ತಿಗಡೆ ಇವಂ ಚೂರ್ಣವಂ ಮಾಡಿ ಮಾದಳದ ಹುಳಿಯಲ್ಲಿ ಕಲಸಿ ನೆಲ್ಲಿಕಾಯುಪ್ಪು ಬಿಸಿನೀರಲ್ಲಿ ಕೊಳ್ಳಲು ಪಕ್ಕಶೂಲೆ ಮಾಣ್ಗುಂ (ವಿವೈವಿ. ೧೨೫) ; ಆತ ಪಕ್ಕಶೂಲೆ ಬಂದು ಆಸ್ಪತ್ರೆಗೆ ಸೇರಿದ್ದಾನೆ (ರೂಢಿ). **ಪಕ್ಕೆಶೂಲೆ :** ಪಕ್ಕೆಶೂಲೆಗೆ :— ಕಿರುಗುರುಟಿಗೆಯ ಬೇರು, ಬೇವಿನ ಬಡಗಣ ಬೇರಂ ತಂದು ಈ ಎರಡುಂ

ಕಾಳಾಡಿನ ಹಾಲಲ್ಲರೆದು ಮೂಱುದಿನಗಳು ಕುಡಿಯೆ ಪಕ್ಕೆಶೂಲೆ ಹರ (ವಿವೈವಿ. ೧೫೨). [ಪಕ್ಕ+ಶೂಲೆ$_1$]

**ಪಕ್ಕಸಾರಿ,** ಪಕ್ಕಸಾರೆ, ಪಕ್ಕೆಸಾರಿ, ಪಕ್ಕೆಸಾರೆ (ನಾ). ೧. ಪಕ್ಕದಲ್ಲಿ ಜೊತೆಗೂಡಿ ಬರಲು ಯೋಗ್ಯತೆಯುಳ್ಳುದು. ೨. ಪಟ್ಟದಾನೆಯ ಅಕ್ಕಪಕ್ಕಗಳಲ್ಲಿ ಜೊತೆಗೂಡಿ ಬರುವ **ಆನೆ:** ದಾನವರಾಜನೋಲಗದೊಳಿರ್ದಾರೋಹಕರ್ನಿಮ್ಮ ದಂತಿಗಳೊಳ್ ವೈರಿಭೂಳ ಪ್ಪನಂ ಕುಳಿಸಿಯುಂ ದೇವರ್ಗೆ ಚೌದಂತನೋಲಗಮೆಂದಂಕುಶಮುತ್ತ ನಾಗಳ ದುವಂ ಕೈಕೊಂಡು ನಿಮ್ಮಲ್ಲಿಗಾ ಜಗದೇಕಪ್ರಭು ಪಕ್ಕ[ಪಾಠಾಂ. ಕ್ಕೆ] ಸಾರಿಗಿದುವೇಟ್ಟುಂ ತಕ್ಕುದೆಂದಟ್ಟಿದಂ (ಅನಂಪು. ೧೩-೪೩). **ಪಕ್ಕಸಾರೆ: ೨.** ಪಟ್ಟದ ತನ್ನ ಗಜದ ಪಕ್ಕಸಾರೆಗೆ ಪಟ್ಟಿಗಟ್ಟಲು ಬೇಕೆಂದು **ಅಟ್ಟಿದ** ತರಲೆಂದೆನ್ನ ಧಿರಾಜನು ಪಟ್ಟವರ್ಧನ ಕೇಳು ರಾಯ (ಅನಂಚ. ೨೧-೧೦೫). **ಪಕ್ಕೆಸಾರಿ: ೨.** ಮೇಲಿನ 'ಅನಂಪು. ೧೩-೪೩' ಪ್ರಯೋಗದ ಪಾಠಾಂತರವನ್ನು ನೋಡಿ. **ಪಕ್ಕೆಸಾರೆ: ೨.** ಎರಡುಂ ಕರಿಯ ಗಜಂ ಬಿಳಿಯಾನೆಗೆ ಹರಿನೀಲದ ಪಕ್ಕೆಸಾರೆಯಾಗಿ ಕೈಲದೊಳ್ (ಅನಂಪು. ೫-೩೪). [ಪಕ್ಕ+ಸಾರಿ$_3$]

**ಪಕ್ಕಸಾರೆ** 'ಪಕ್ಕಸಾರಿ' ನೋ.

**ಪಕ್ಕಳಿಸು** (ಕ್ರಿ). ಚಿತ್ರದಲ್ಲಿ ಪಕಳೆಗಳನ್ನು ನಿರ್ಮಿಸು,—ರೇಕುಗಳನ್ನು ಬಿಡಿಸು: ಕಿಕ್ಕಿರಿದ ರತ್ನಶೋಭಿತದ ಭಿತ್ತಿಗಳ ಮೇಲ್ಪಕ್ಕಳಿಸಿ ರತ್ನರೇಖೆಗಳ ನಿರ್ಮಿಪೆವೆಂದು ಪೊಕ್ಕಲ್ಲಿ ಪ್ರತಿಬಿಂಬಮುಂ ಕಂಡು ಬೆರಗಾಗಿ (ರುಕ್ಮಾಂಗ. ೩-೪೦). ☞ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ. [ಪಕ್ಕಳೆ$_0$(<ಪಕಳೆ)+-ಇಸು$_3$]

**ಪಕ್ಕಳೆ** 'ಪಕ್ಕಲೆ' ನೋ.

**ಪಕ್ಕಾ** (ಗು). ೧. ಬೆರಕೆಯಿಲ್ಲದ; ಶುದ್ಧವಾದ; ಅಪ್ಪಟವಾದ: ಪಕ್ಕಾ ಅಂಗ್ರೇಜಿಲೇ ಹೇಳೋದಾದರೆ ಹಾಗೆ ಇನ್ನು ಸುಲಿದ ಬಾಳೆಯ ಹಣ್ಣಿನಂತಹ ತಿಳಿಗನ್ನಡದಲ್ಲಿ ಹೇಳಬೇಕೂಂದ್ರೆ ನೀನಿನ್ನೂ ಜ್ಞಾನದಂತವನ್ನು ಕಡೆದಿಲ್ಲ (ಮಾಮುನಿ. ೧೭೬). ೨. ಅಚ್ಚುಕಟ್ಟಾದ; ಉತ್ತಮವಾದ: ಅಂಗಾಲಿಂದ ಜೀವನದ ಎಳೆತ ಕಡಮೆಯಾದ್ದರಿಂದ ನಾನು ಪಕ್ಕಾ ರಸ್ತೆಯನ್ನು ಪೂರ್ತಿ ಬಿಟ್ಟು ಬಿಡುವ ಸಾಧ್ಯತೆಯನ್ನು ನೋಡಿದೆ (ಸಿಬಂಧ. II, ೧೦೨). ೩. ಸಂಪೂರ್ಣವಾದ; ಪೂರ್ತ; ಭಾರಿ; ಪ್ರಚಂಡ: ಅವನು ತಕ್ಕಮಟ್ಟಿಗೆ ಚೆನ್ನಾಗಿದ್ದಾನೆ. ಪಕ್ಕಾ ಘಾಟಿ(ತುಂಬಿಕೊ.೪೧); ಹಾ ನಮ್ಮ ಶಿನ್ನ! ಪಕ್ಕಾವ್ಯಾಪಾರಿ (ಮೂರುದಾ. ೧೩೪); ನೀನು ಪಕ್ಕಾ ಕಳ್ಳಿ ಕಣೇ (ಮರಳಿ.೧೦೦); ಶ್ರಾದ್ಧದ ದಿನಗಳಲ್ಲಿ ನಾವು ಪಕ್ಕಾ ಸುರಪುರದ ಆಚಾರ್ಯರಾಗಿಬಿಡುತ್ತಿದ್ದೆವು (ಫಲಸಂ.೧೭). (ನಾ). ೪. ಕಳಿತಿರುವುದು; ಪಕ್ವವಾದುದು: ಹಣ್ಣೇನು ಪಕ್ಕಾ ಅಲ್ಲ, ಕಾಯಿ (ರೂಢಿ). ೫. ಬೆರಕೆಯಿಲ್ಲದುದು; ಪರಿಶುದ್ಧವಾದುದು: ಹಾಲೂ ಅಷ್ಟೆ ಪಕ್ಕಾ ಎಲ್ಲಿ ಕೊಡುತ್ತಾರೆ, ನೀರು ಬೆರಸಿಯೇ ಕೊಡುವುದು (ರೂಢಿ). ೬. **ಖದೀಮ; ಚಾಣಾಕ್ಷ:** ನಮ್ಮ ರಾಯರು ಮಹಾ ಪಕ್ಕಾ ಇದ್ದಾರೆ (ಪಂಲ. ೧೭). ೭. ಸರಿಯಾದುದು; ನಿರ್ದಿಷ್ಟವಾದುದು: ಮತ್ತ ಇದು ನೋಡು ಪಕ್ಕಾ ಆಗಬೇಕಾದರೆ ಅದಕ್ಕ ಇನ್ನೊಂದು ಮಸಲತ್ತೈತಿ (ದಾಸಕು. ೫೭). ೮. ನಿರ್ಧಾರ; ನಿರ್ಣಯ; ನಿಶ್ಚಯ: ಮಾತು ಪಕ್ಕಾ ಮಾಡಿಕೊಳ್ಳಬೇಕು (ರೂಢಿ). [<-ಹಿಂ. ಮರಾ. ಪಕ್ಕಾ./ಪ್ರಾ. ಪಕ್ಕ./ ಸಂ. ಪಕ್ವ]

**ಪಕ್ಕಾಖರಡೆ** (ನಾ). ದಿನಚರಿಪುಸ್ತಕದ ಆಧಾರದಿಂದ ರಚಿಸಿದ ಕ್ರಮವಾದ ಖಾತೆ: (ಶಿ). [ಪಕ್ಕಾ+ಖರಡೆ]

**ಪಕ್ಕಾಗು$_1$** 'ಪಕ್ಕು$_3$' ಪರಾ.

**ಪಕ್ಕಾಗು$_2$** 'ಪಕ್ಕು$_4$' ಪರಾ.

**ಪಕ್ಕಾವಹಿ** (ನಾ). ಅಚ್ಚುಕಟ್ಟಾಗಿ ಬರೆದಿಡುವ ಹಾಳೆಗಳನ್ನು ಹೊಲಿದು ಮಾಡಿರುವ ಖಾಲಿ ಪುಸ್ತಕ; ಪರಿಷ್ಕರಿಸಿ ಬರೆಯುವ ನೀಟಾದ ಪುಸ್ತಕ: ರಂಗನು ಅದನ್ನು ಮತ್ತೆ ತಿದ್ದಿ ಬರೆದು ತನ್ನ ಪಕ್ಕಾವಹಿಯಲ್ಲಿ ಸುಂದರವಾಗಿ ಬರೆದಿಡುತ್ತಿದ್ದನು (ರಂಗರೋ. ೩೪). [ಪಕ್ಕಾ+ವಹಿ]

**ಪಕ್ಕಾಶೇರು** 'ಪಕ್ಕಾಸೇರು' ನೋ.

**ಪಕ್ಕಾಸಿಪಾಯಿ** (ನಾ). ಅತ್ಯುತ್ತಮ ಯೋಧ; ಶ್ರೇಷ್ಠನಾದ ಭಟ,—ದಂಡಾಳು: ಆ ಕೃಷ್ಣಸಿಂಗ್ ಪಕ್ಕಾಸಿಪಾಯಿ (ರೂಢಿ). [ಪಕ್ಕಾ+ಸಿಪಾಯಿ]

**ಪಕ್ಕಾಸೇರು,** ಪಕ್ಕಾಶೇರು (ನಾ). ೧. ಕರಾರುವಾಕ್ಕಾದ ಸೇರು; ಸರ್ಕಾರದಿಂದ ಅಧಿಕೃತವಾಗಿ ಮಾನ್ಯತೆ ಪಡೆದ ಸೇರು: ಇಂಥಾ ರಾತಲು ಎರಡಕ್ಕೆ ಪಕ್ಕಾಸೇರು ಒಂದು (ರಾಜೇಂದ್ರ.೧೯೯); ನಿಂಗೆ . . . ದಿನ್ಕೆ ಐದ್ಪಕ್ಕಾಸೇರು ಕುಚ್ಚಕ್ಕಿ ಬೇಕು (ಪಂಜಪಂ. ೧೨). **ಪಕ್ಕಾಶೇರು: ೨.** (ಉಕ) ಒಂದು ನಿರ್ದಿಷ್ಟ ಅಳತೆ; ೮೦ ತೊಲದ ತೂಕ: ಪ್ರವಾಹಿ ಪದಾರ್ಥವನ್ನು ೨೦ರು. ತೂಕ ನೀರು ಹಿಡಿಯುವ ಪಾತ್ರೆಗೆ ತುಂಬಿದರೆ ೧ ಶೇರು ಎನ್ನುತ್ತಾರೆ. ಇಂಥಾ ನಾಲ್ಕು ಶೇರುಗಳಿಗೆ ಪಕ್ಕಾಶೇರು ಎನ್ನುವುದುಂಟು (ಗೃಹವೈ. ೯). [ಪಕ್ಕಾ+ಸೇರು$_2$]

**ಪಕ್ಕಿ,** ಹಕ್ಕಿ (ನಾ). ಪಕ್ಷಿ; ವಿಹಗ: "ಪಕ್ಕಿ ಪಕ್ಷಿಯೆ" (ಕರ್ನಾನಿ.೭೨); ನಿನ್ನ ಭರ್ತಾರಂ ಬಂದು ಪಕ್ಕಿಗಳಂ ಕಾಣದೆ ಬಿಟ್ಟು ಕಳೆದರಾರೆಂದು ಬೆಸಗೊಂಡೊಡೆ (ವಡ್ಡಾರಾ. ೧೫೧-೭); ಮೆಯ್ಗೊಂಡೊಲವಿಂದಗಲ್ಕೆಗಣ ಮಾಱದೆ ಪಕ್ಕಿಗಳೆಲ್ಲಮಂ ಮರುಳ್ಗೊಂಡವೊಲೂಳ್ದು ಕೂಡೆ ಬೆಸಗೊಂಡು ಬಟಲ್ದುವು ಜಕ್ಕವಕ್ಕಿಗಳ್ (ಪಂಪಭಾ. ೪-೪೮); ಪಕ್ಕಿಗಳಲ್ಲಿ ತಿಂದುಬಿಡದ ನೆಲ್ಲಳ ಸುಚ್ಚುಗಳಂ ಫಲಂಗಳಂ ಪಕ್ಕದೊಳಿರ್ದ ಗೂಡುಂಗಳಿನಾಯ್ದಿನಗಿಕ್ಕುವನಟ್ಟುಱಿಂದೆ (ಕಾದಂಪೂ. ೧೩೬); ಕಲುಕುಟಿಕಾದಿ ತೋಟದ ಪಕ್ಕಿಗಳ ಕೊರಲುಲುಹಾದುದಾ ತಪೋವನದಿ (ನೋಹತ. ೭-೧೭). **ಹಕ್ಕಿ:** "ಹಕ್ಕಿಯೆನಲ್ವಿಹಗಂ" (ರನ್ನಕಂ. ೩); "ಪತತ್ . . . ದ್ವಿಜಃ —ಈ ೨೬ ಹಕ್ಕಿ" (ಹಲಾಯು. ೪೦-೮೫); ಕೊಂಬಿನ ಮೇಱ(ಗ)ಳ ಹಕ್ಕಿಯ ಆಕಾಶದ ಮೇಱ(ಗ)ಳ ಗಿಡುಗ ಹಿಡಿಯಿತ್ತು (ಅಱುಪಾ. ಕ. ೧೩೩-೫೦೮); ಹಕ್ಕಿ ಹರಿಣಿಯ ತಱಿದ ಗಡ ಕೈಯಿಕ್ಕಿದರೆ ಕಡುಗುದುರೆಯನು ನೆಲ ಕಿಕ್ಕಿದನೆ (ಕುಪ್ವಾಸ. ೧೦-೧೪); ಪಿಕ ಚಕೋರಕ ಮಾಂಬುಲಿಗ ಹಕ್ಕಿ[ಪಾಠಾಂ.ಪಕ್ಷಿ]ಗಳು ರಂಜಿಸಿತು (ನಳಚ. ೧-೪೨); ತುಂಗವಿಕ್ರಮದಿಂದೆ ಹಕ್ಕಿ ಹಾವಂ ಸದೆದ ಸಾಹಸದೆ ಬೆಱಿ ತಿರ್ದೊಡೆ (ಜೈಮಿಭಾ. ೭-೫೯); ಹಕ್ಕಿಯಿಲ್ಲದ್ದು ತೋಟವಲ್ಲ, ಮಕ್ಕಳಿಲ್ಲದ್ದು ಮನೆಯಲ್ಲ (ಗಾದೆ).

**ಪಕ್ಕಿಗಳರಸ**=ಹಕ್ಕಿಗಳ ಒಡೆಯ; ಗರುಡ: "ಗರುಡಂಗೆ ಯೆಲರುಣಿವಗೆಯು ಪರ್ದು ಪಕ್ಕಿಗಳರಸನೆಂದು ತಕ್ಕುದೀ ಪೆಸರು" (ಶಬ್ದಮಂ.೭); "ಪಕ್ಕಿಗಳರಸನೆನಲ್ ಪರ್ದೆನಲ್ ಗರುಡಂಗೆ ತಕ್ಕ ನಾಮಂ" (ಕಶರ. ೬೩). **ಪಕ್ಕಿಗಳಾಣ್ಮ**=ಪಕ್ಕಿಗಳರಸ: "ಪಕ್ಕಿಗಳಾಣ್ಮಂ, ಎಲರುಣಿವಗೆಯಂ, ಪರ್ದು—ಈ ೩ ಗರುತ್ಮಂಗೆ ಪೆಸರ್" (ಕಶಸಾ. ೪೭-೧೨); "ಎಲರುಣಿವಗೆಯನೆಂದು ಪರ್ದು ಪಕ್ಕಿಗಳಾಣ್ಮ ಬಳ ಗರುಡಃ" (ಕಬ್ಬಿಕೈ. ೮); **ಹಕ್ಕಿಯ ರೋಗ**=ಮೂಳೆಗಳು ಮೆದುವಾಗುವ ಒಂದು ಬಗೆಯ ಮಕ್ಕಳ ರೋಗ; ಹಕ್ಕಿರೋಗ: ಮೂಳೆಗಳಲ್ಲಿ ಕ್ಯಾಲ್ಸಿಯಂ ಫಾಸ್ಫೇಟ್ (Calcium phosphate) ಎಂಬ ಲವಣವು ಅಡಗಿದೆ. ಇದು ಶೇಖರಿಸಲ್ಪಡದೆ ಇದ್ದರೆ ಮೂಳೆಗಳು ಸರಿಯಾಗಿ ಬೆಳೆಯದೆ ಸಣ್ಣವಾಗಿ, ಸ್ವಲ್ಪ ಪೆಟ್ಟಿಗೆ ಬೇಗನೆ ಮುರಿಯುವುವು. ಒಂದು ಮಾದರಿಯ ಹಕ್ಕಿಯ ರೋಗವು (ricket) ಪ್ರಾಪ್ತವಾಗುತ್ತದೆ (ಗೃಹವಿ. ೨೦).

[<ಪ್ರಾ. ಪಕ್ಖಿ./ಸಂ. ಪಕ್ಷಿನ್]

**ಪಕ್ಕಿದೇರ** (ನಾ). (ಗರುಡ) ಪಕ್ಷಿಯನ್ನು ವಾಹನವಾಗಿ ಉಳ್ಳವನು ; ಪಕ್ಷಿವಾಹನ ; ವಿಷ್ಣು : ಏ ಪಕ್ಕಿದೇರ, ಎನ್ನೊಡೆಯ, ಮೇಲೆಸಗೈ. ಅನಂದಮೂರ್ತಿ ! ನೀನೆ ಅನಂತಂ (ಅದ್ಭುತ. ೬-೨೨).
[ಪಕ್ಕಿ + ತೇರ್$_2$ + -ಅ$_7$]

**ಪಕ್ಕಿಯರಸ** (ನಾ). ಹಕ್ಕಿಗಳ ರಾಜ ; ಗರುಡ : ಪಕ್ಕಿಯರಸನ ಕುಕ್ಕಿ, ಗರಿ ಕಿತ್ತು ನಡುಗಿಸಿತು (ಪಾರಃ. ೧೦-೨೨೩). [ಪಕ್ಕಿ + ಅರಸ$_1$]

**ಪಕ್ಕಿಯೆಱೆಯ** (ನಾ). = ಪಕ್ಕಿಯರಸ : ಪಕ್ಕಿಯೆಱೆಯನ ಕೊರಲ ತೆಱದಂದದಿ ಕಕ್ಕಸಬಲವೆರಸಿರ್ದ (ವರ್ಧಚ. ೬-೭೪). [ಪಕ್ಕಿ+ಎಱೆಯ]

**ಪಕ್ಕಿವಡಿಕ** (ನಾ). ಪಕ್ಷಿಗಳನ್ನು ಬೇಟೆಯಾಡುವವನು ; ಬೇಡ : ಅಕ್ಕುವುದೆ ಹಾಲಾಹಲ ವ್ಯಗವು ಪೋತಕಕ್ಕೆಲೆ ಮರುಳೆ ಭೂರತಿ ಕೂರ್ತು ಇಕ್ಕುವ ತೊಡವೆತ್ತ ನೀನೆತ್ತ ಪೇಳ್ವುಳುವಕ್ಕಿವಡಿಕಯೆಂ [ಪಾಠಾಂ. ಪಕ್ಕಿಬಡಿಗನೆಂ, ಪಕ್ಕಿಬಡಿಕೆಯೆಂ]ದು ಗಜರ್ದರು (ಸೊಬಸೋ. ೨೦-೫೬). [ಪಕ್ಕಿ + -ಬಡಿಕ$_2$]

**ಪಕ್ಕಿವಣೆ** (ನಾ). ಹಕ್ಕಿಯ ಗೂಡು : ತತ್ತಮೋಬಳದ ಮುಂದೂಳ ದಾಟಿಯನಾಳ್ಗಳಂತಿರೋಳಿಯೊಳ್ ಕೇಳೀಮಯೂರಂಗಳ್ ಉದ್ಘಮೊಗೆದು ಪೊಂಗಡೆಯ ಪಕ್ಕಿವಣೆಗೆ ಪಾಱೆಯುಂ (ವರ್ಧಪು. ೬-೨೩ವ).
[ಪಕ್ಕಿ+ಪಣೆ$_2$]

**ಪಕ್ಕು$_1$**, ಹಕ್ಕು$_1$ (ನಾ). ೧. ಮೂಗು, ಕಣ್ಣು ಮೊದಲಾದುವುಗಳಲ್ಲಿ ಬರುವ ಕೊಳೆ,-ಒಣಮಲ ; ಪಿಚ್ಚು ; ಹೊಕ್ಕು : ಪಡಲಂ ಕವಿದೊಳಪುಗೆ ಕಣ್ಗಡುವೊಡೆ ನೀರ್ ಸುರಿಯೆ ಪಕ್ಕು ಮೆತ್ತಿರೆ ಮುಷ್ಕಂ ಸಡಿಲಿರೆ ತುರಗಕೆ ಮರಣಂ ತಡೆಯದೆ ಸಮನಿಸುಗುಮೆಂದನಭಿನವಚಂದ್ರಂ (ಅಶ್ವಶಾ. ೬-೩೯). **ಹಕ್ಕು$_1$** : ೧. "ಕಿಟ್ಟ, ಮಲ - ಕಣ್ಣ ಹಕ್ಕು ಮೊದಲಾದ ಮೆಯ್ಯ ಮಲಂ" (ನಾಚಿಂ. ೩) ; ನುಂಗದೆ ರಾಹು ಹೇಸಿಯುಗುೞ್ದಂಜಲನತ್ರಿಯ ಕಣ್ಣ ಹಕ್ಕನೇಣಂ ಗತಿಗೆಟ್ಟ ಪೆರ್ಮೊಲನನಾರತವಾಡುವ ಕಾಡನಿಂದುವೆಂದಂಗನೆಯೇಕೆ ಬಣ್ಣಿಸುವೆ (ನಳಚಂ. ೨೦೭). ೨. ಗಾಯವು ಮಾಯುವಾಗ ಮೇಲೆ ಏಳುವ ಪದರ,— ಹುರುಪು : (೩). 'ಹಕ್ಕಳೆ' ಪರಾ. ೩. ದೀಪದ ಬತ್ತಿ ಮೊದಲಾದುವುಗಳ ಕರಿಕಾದ ತುದಿ : (೩).
[ದೇ.॥ ತಮಿ. ತೆಲು. ಪಕ್ಕು ; ತುಳು. ಪುರ್ಕು, ಪುಳ್ಕು]

**ಪಕ್ಕು$_2$** (ನಾ). ಭೇದ ; ವಿಕಲ್ಪ ; ಭಿನ್ನತೆ : ಮನಕಂ ಪಕ್ಕಲ್ಲದೆ ನೆಲನಿನಿಸಾನುಂ ಮೆಚ್ಚೆ ಕರ್ಣನಂ ನೋಡಿ ನರಂ ನೆನೆದಂ ತನ್ನೊಳ್ ತಾಗಿದ ಪಿನಾಕಪಾಣಿಯ ಕಿರಾತ ತನುಸೌಷ್ಠವಮಂ (ಕಾವ್ಯಾವ.೭೧೫).
[<ಪಸು$_1$./ತಮಿ. ಪಕ್ಕು]

**ಪಕ್ಕು$_3$** (ನಾ). ೧. ಗುರಿ ; ಈಡು : ಆವಂ ಕುಡುವೊಂ ಕುಡಿಸುವ ನಾವೊಂ . . . ಇರ್ವರುಮೇಕೀಭಾವದಿನಿರೆ ನಿಮ್ಮೊಳಗಿನಿತಾವುದು ಭೇದಕ್ಕೆ ಪಕ್ಕು ಪೇೞಿತೇಂ ನೃಪತೀ (ಶಾಂತಿಪು. ೨-೭೯). ೨. ನೆಲೆ ; ಆಶ್ರಯ. ೩. ಆಸ್ಪದ ; ಅವಕಾಶ ; ಎಡೆ ; ಸಂದರ್ಭ : 'ಪಕ್ಕುಗಾಣ್' ಪರಾ.

**ಪಕ್ಕಾಗಿಸು** = ಆಶ್ರಯವಾಗುವಂತೆ ಮಾಡು : ತತ್ಕಾಲೋಪಜಾತ ಪ್ರಚುರಪುಲಕಮಂ ಭೂಷಣಶ್ರೀಗೆ ಪಕ್ಕಾಗಿಸುವೀ ವ್ಯಾಪಾರಸಾರಂ ಸಮನಿಸುಗೆ ಕಾದಂಬರೀದೇವಿಗಾಗಳ್ (ಕಾದಂಉ.೫೧೬). **ಪಕ್ಕಾಗು$_1$** = ೧. ಗುರಿಯಾಗು ; ಒಳಗಾಗು ; ಈಡಾಗು : ಏಕಾಂತದೊಳ್ ನೂಪುರರವವಿಳಸದ್ವಾಮಪಾದಪ್ರಹಾರಕ್ಕಿದೞಿೊಳ್ ಪಕ್ಕಾಗಿ ಗೋತ್ರಸ್ಖಲನೆ ನೆಗೞ್ ಪೂಮಾಲೆಯಿಂ ಮೋದುವೆತ್ತಂ (ಆದಿಪು. ೪-೯); ಅಂತೆನಿಸಿದ ಮನಸಿಜನ ನನೆಯಂಬಿನ ಕೋಳ್ಗೆ ಪಕ್ಕಾಗಲೊಡನೆ (ಕಾದಂಉ. ೩೧೦) ; ರಾಕ್ಷಸರ ಕಾಲ್ದುಳಿತಕ್ಕೆ ಪಕ್ಕಾದೆನೇ (ಚಿಬಪು. ೧೧-೨೬) ; ಎಣೆವೆಂಡಿರ ನಗೆಗೆನ್ನಂ ಪಕ್ಕಾಗದಂತು ಮಾಡಿ ಗೆಲ್ಲವೆಣ್ಣಂ ಸವತಿಯನಾಗಿಸೈ (ರಾಮಾಶ್ವ. ೪೯-೧೦). ೨. ವಶವಾಗು ; ಅಧೀನವಾಗು : ಪಗೆಗೆ ಪಕ್ಕಾಗಿ ನಿಷ್ಕಾರಣಂ ಸಾವುದಾವ ಕಾರಣಂ ಬರ್ದನೆ ಬಂಟಂ ಎಂಬ ನಾಣ್ನುಡಿಯುಂಟು (ಪಂಚತಂ. ೧೧೫-೧೨). ೩. ಆಶ್ರಯವಾಗು : ಮಲ್ಲಿಕಾಲತೆಯ ಜೊಂಪಕ್ಕೆ ಪಕ್ಕಾಗಿ ಕುಳಿರ್ವ ತಿಳಿಗೊಳದ ತಡಿಯ ತಣ್ಪುಱಿಲ ಸುಣ್ಮಣಲೊಳ್ (ಪುಷ್ಪಪು. ೨-೩೯ವ). ೪. ಮರೆಹೊಗು ; ಆಶ್ರಯಿಸು : ಮನಮೊಲ್ದಾತನ ಗಾಡಿಯಂ ದರವುರಂಗಂಡಾಕೆಗಳ್ ಪೂವಿನಂಬಿನ ಕೋಳ್ಗಂ . . . ಒಂದೊಂದೆ ತಣ್ಬನಿಯೊಳ್ ಕೋಡಿಸುತಿರ್ಪ ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ (ಆದಿಪು.೧-೭೫). **ಪಕ್ಕು ಮಾಡು$_1$** = ೧. ಗುರಿಮಾಡು ; ಈಡುಮಾಡು : ಆರೋಪಿತ ಚಾಪನಪ್ಪ ಕುಸುಮಚಾಪಂಗೆ ಪಕ್ಕುಮಾಡಿದ ಚಂದ್ರಾಪೀಡನನಪಾಂಗವಿಕ್ಷೇಪತರಳತರತಾರಶಾರೋದರನಯನಂಗಳಿಂದಡಿಗಡಿಗೆ ನೋಡುತ್ತಮಿರ್ದು (ಕಾದಂಉ. ೫೧). ೨. ಇಂಬುಗೊಡು ; ಒಡ್ಡು ; ಎಡೆಗೊಡು : ನತಾಸ್ಯಾಂಬುಜೆಯಾಗಿ ಭಕ್ತಿಭರದಿಂ ಶೇಷಪ್ರಸೂನ ಪ್ರಸಾಧನಸಂಪತ್ತಿಗೆ ಪಕ್ಕುಮಾಡಿ ಮುಡಿಯಂ ತತ್ಕಾಂತೆ ಕಣ್ಗೊಪ್ಪಿದಳ್ (ಶಾಂತೀಶ್ವ.೧೪-೨೧). ೩. ಆಶ್ರಯಿಸುವಂತೆ ಮಾಡು ; ನೆಲೆಗೊಳ್ಳುವಂತೆ ಮಾಡು : ಕೇಳೀವನಕ್ಕೈತಂದೊಂದು ಮನೋಹರಮಪ್ಪ ಚಂದ್ರಕಾಂತದ ಶಿಲಾತಲದೊಳ್ನಿಜನಿತಂಬಮಂ ಪಕ್ಕುಮಾಡಿ (ತ್ರಿಪುವಿ. ೩-೫೬ ವ).

**ಪಕ್ಕು$_4$** (ನಾ). ೧. ಉತ್ತಮವಾದುದು ; ಶ್ರೇಷ್ಠವಾದುದು. ೨. ಚೆನ್ನಾಗಿ ಬೆಂದಿರುವುದು ; ಪಕ್ವವಾದುದು : ಆತುರದಿನಡುಗೆ ಪಕ್ಕಹುದೇ ? (ಮಂಕುಕ. ೭೮೧).

**ಪಕ್ಕಾಗು$_2$** = ೧. ಉತ್ತಮವಾಗು ; ಶ್ರೇಷ್ಠವಾಗು : ಪಕ್ಕಾದ ನವೀನತಾನತತಿಯೊಪ್ಪಲ್ ಪಾಡಿದರ್ (ಉದ್ಭಟ.೩-೯೩). ೨. ಪರಿಪಾಕವಾಗು; ಅನುಭವಿಸುವ ಮಟ್ಟಕ್ಕೆ ಬರು : ಮಕ್ಕಳ ಭವಿಷ್ಯಕ್ಕೆ ಕಕ್ಕುಲಿತೆಗೊಳಬೇಡ ಪಕ್ಕಾಗುವುದು ಭಾಗ್ಯವೆಂತೆಂತೊ ಜಗದಿ (ಮಂಕುಕ.೪೨೦). [<ಸಂ. ಪಕ್ವ]

**ಪಕ್ಕು$_5$** 'ಪಕ್ಕ' ನೋ.

△ **ಪಕ್ಕು$_6$** 'ಹಕ್ಕು$_2$' ನೋ.

**ಪಕ್ಕುಗಾಣ್** (ಕ್ರಿ). ಅವಕಾಶವನ್ನು ಹೊಂದು : ಅಜಿತನ ನಗೆಗಣ್ಗಳ ಚೆಲ್ವನೊಸೆದು ನೋಡಲ್ ಪಡೆಯಲ್ ನಗೆಮೊಗದ ನೀಱೆಯರ್ [ನಗು]ಮೊಗದಿಂದಂ ಪಕ್ಕುಗಾಣದಗಲಗಲಿರ್ಪರ್ (ಅಜಿಪು. ೫-೯೨).
[ಪಕ್ಕು$_3$ + ಕಾಣ್]

**ಪಕ್ಕುಗುಡು** 'ಪಕ್ಕುಗೊಡು' ನೋ.

**ಪಕ್ಕುಗೊಡು**, ಪಕ್ಕುಗುಡು (ಕ್ರಿ). ೧. ಅವಕಾಶವನ್ನುಂಟುಮಾಡು ; ಆಶ್ರಯ ಕೊಡು : ಮನಂ ಮಱುಕಕ್ಕೆ ನೀಳ್ದ ಕಣ್ಣೞಿದುಗುವಶ್ರುವಾರಿಗೆ ತೊದಳ್ನುಡಿ ಲಲ್ಲೆಗೆ ಪಕ್ಕುಗೊಟ್ಟು ಕಾಲ್ಗೆಱಗಿರೆ (ಪಂಪಭಾ. ೪-೧೨) ; ಒರ್ವ ವ್ಯಾಧನೊಂದು ಪಕ್ಕಿಯಂ ಪಿಡಿತರೆ ಕರುಣಿಸಿ ಬೇಡಂಗೆ ಬೆಲೆಗುಡಿಸಿ ಬಿಡಿಸಿದೊಡಾ ಪಕ್ಷಿಯುಪಶಮಕ್ಕೆ ಪಕ್ಕುಗೊಟ್ಟಸುವಂ ಬಿಟ್ಟು ಬೇಡವಟ್ಟಗೊಡೆಯನಾದುದು (ಪಂರಾಮಾ. ೮-೫೪ ವ). **ಪಕ್ಕುಗುಡು**: ೧. ಕಾಮಾಗಮನಕ್ಕೆ ಪಕ್ಕುಗು[ಪಾಠಾಂ. ಗೊ]ಡುವಂತೆ ಪೊಲಿರ್ದುದು ಸುಯ್ನಿರಂತರಂ (ಕಾದಂಪೂ. ೬೪೭) ; ಯುದ್ಧಾಪಜಯಕ್ಕೆ ಪಕ್ಕುಗುಡುವಂತಿರ್ದಂ ಸಹಸ್ರಾಂಬಕಂ (ಜಗವಿ. ೧೩-೬೨) ; ಅದಕ್ಕೆ ಪಕ್ಕುಗುಡದಾ ಸತ್ಕೇಂದ್ರಚೋಳೇಂದ್ರಸತ್ಪದಪದ್ಮಕ್ಕೆ ಮರಂದಮಂ ಪಡೆದು (ರಾಜಶೇ. ೪-೧೧೩). ೨. ಅರ್ಪಿಸು ; ಒಪ್ಪಿಸಿಕೊಳ್ಳು : ಜನನಿ ನಿರೀಕ್ಷಿಸಿ ಚಿತ್ತಮನನೂನಹರುಷಕ್ಕೆ ಪಕ್ಕುಗುಡು[ಪಾಠಾಂ. ತಕ್ಕುದುಡು]ತಿರಲಿರಲಿಂತನುಗತಿಯಿಂದೇೞ್ಗೆಯ ಚಂದ್ರನ ತೆಱದಿಂ ಕೃಷ್ಣ

ನೆಯ್ದೆ ನಿಷ್ಠಾತತೆಯಿಂ (ಮಹಾನೀ. ೬-೮; ಪದ್ಯಸಾ. II, ೧೫೫ ನೋ). [ಪಕ್ಕು₃+ಕೊಡು₁]

**ಪಕ್ಕುಮಾಡು₁** 'ಪಕ್ಕು₃' ಪರಾ.

**ಪಕ್ಕುಮಾಡು₂** 'ಪಕ್ಕ' ಪರಾ.

**ಪಕ್ಕುವಣಿ,** ಪಕ್ಕುವಣೆ, ಪಕ್ಕೊವಣಿ(ನಾ). ೧. ನೆಂಟ ; ಬಂಧು : "ಪಕ್ಕುವಣಿಯೆಂದುಂ, ಪಕ್ಕೊವಣಿಯೆಂದುಂ ಬಂಧು" (ಕಶಸಾ. ೭೩-೬೬೫). **ಪಕ್ಕುವಣೆ : ೨.** ಬಂಧುವರ್ಗ; ಬಳಗ : "ಪಕ್ಕುವಣೆಯುಮನೆ ಬಂಧುವರ್ಗಮಕ್ಕುಂ" (ಕವಿಕಂ. ೨೫೦). **ಪಕ್ಕೊವಣಿ : ೧.** ಒಲವರದಿಂದ ಓಲಗಿಸುತ್ತಿರುವ ನಮ್ಮ ಏಕಾನ್ತದ ಬಳಿಯ ನೀ ಪಕ್ಕೊವಣಿ—ತುಂಗನು ಕಯ್ವಾರಿಸಿದ ಬಿರುದಾವಳಿಯ ಸಮ್ಮೋಹನಕ್ಕೆ ನೀನೇ ಕರಗಿ (ಬಿಟ್ಟಅ. ೨೧೮-೧೦) ; ತನ್ನ ಪಕ್ಕೊವಣಿಯಿವಂ ದಲೆಂಬುತ್ಸುಕದ ಸಂಭ್ರಮದ ಸಂತಸದ (ಸಂಸಪ. ೨೩-೭). [ ? ]

**ಪಕ್ಕುವಣೆ** 'ಪಕ್ಕುವಣಿ' ನೋ.

**ಪಕ್ಕುವಾರು** (ಕ್ರಿ). ನಿರೀಕ್ಷಿಸು ; ಎದುರುನೋಡು : ಮಾಣ್ದಿರದೆ ಬಳಸಲಿಂ ನಿನ್ನನಾ ಕಾಂತೆಯಂತಾ ನಳಿತೋಳ್ಗಳ್ ಪಕ್ಕುವಾರ್ದಿರ್ದುವು ಪಿರಿದು ತೊಡರ್ಪಾದುದಿನ್ನೆತ್ತ ಪೋಪ್ಪೆ (ಆದಿಪು. ೮-೨೧). [ಪಕ್ಕು₃+ಪಾರು₁(<ಪಾರ್₁)]

**ಪಕ್ಕುವಿಡಿ** (ನಾ). ಜೊತೆಯ ಹೆಣ್ಣಾನೆ; ಒಡನಾಡಿಯಾದ ಕರಿಣಿ: ರಜನಿವಿನೋದನಕ್ಕೆ ಮುಳಿದಿರ್ದ ಲತಾಂಗಿಯನಪ್ಪುಕೆಯ್ಯು ಸಾಮಜಪತಿ ಪೊಕ್ಕು ಪಕ್ಕುವಿಡಿಯಂ ನಡೆಸೋಂಕುವವೋಲ್ . . . ಅಮರ್ದಪ್ಪೆ (ಶಾಂತಿಪು. ೮-೧೧೦). [ಪಕ್ಕು₅(<ಪಕ್ಕ)+ಪಿಡಿ₃]

**ಪಕ್ಕುವೆಱು** (ಕ್ರಿ). ಅವಕಾಶವನ್ನು ಹೊಂದು,—ಪಡೆ : ವಿಶಾಖನಂದಿ ರಿಪುಭೂಪರ್ ಪಕ್ಕುವೆತ್ತೆತ್ತಿ ತಟ್ಟಿಱಿದೆತ್ತಂ ಸೆಱೆಗೆಯ್ದುಕೊಂಡು (ಶಾಂತಿಪು. ೭-೫೯). [ಪಕ್ಕು₃+ಪೆಱು₁]

**ಪಕ್ಕೊವಣಿ** 'ಪಕ್ಕುವಣಿ' ನೋ.

**ಪಕ್ಕೊವಣಿತನ** (ನಾ). ನೆಂಟು ; ಬಾಂಧವ್ಯ : ನಮ್ಮವನ ಪಕ್ಕೊವಣಿತನಕ್ಕಾಗಿರುವ ಸೈನ್ಯಭಾಗಗಳನ್ನೆಲ್ಲ ಅವರವರ ಸೇನಾಗಾರಗಳಲ್ಲಿಯೇ ಸೆರೆಗಾವಲ್ಗೊಳಕೊಳಿಸಿ (ಮಂತ್ರಶ. ೧೩೪-೧೪). [ಪಕ್ಕೊವಣಿ(<ಪಕ್ಕುವಣಿ)+-ತನ]

**ಪಕ್ಕೆ₁** 'ಪಟಿಕ್ಕೆ' ನೋ.

**ಪಕ್ಕೆ₂** (ನಾ). ಒಂದು ಬಗೆಯ ಗಿಡ : ಪಿಚುಲ, ಝಾಬುಕ ಶಬ್ದಗಳು ಸಣ್ಣ ಎಲೆಗಳುಳ್ಳ ಪಕ್ಕೆಗಿಡದ ಹೆಸರುಗಳು (ಗುರುಬಾ. ೧೪೪). [<—ತೆಲು. ಪಕ್ಕೆ]

**ಪಕ್ಕೆ₃** 'ಪಕ್ಕ' ನೋ.

**ಪಕ್ಕೆದಲೆ,** ಹಕ್ಕೆದಲೆ(ನಾ). ೧. ಮಲಗುವ ಎಡೆ ; ಶಯನಸ್ಥಾನ : ಬೆಲೆ ತಲೆಯುದ್ದವಿಲ್ಲವಸರಂ ಮನೆವೊಕ್ಕೊಡೆ ಸೂಳೆಬಂಟರಗ್ಗಲಿಸಿದ ಮಾತೆ ಪಕ್ಕೆದಲೆಯೊಳ್ . . . ಇಚ್ಛೆಯಗ್ಗಲಿಸಿದ ಮಾತೆ ಪಕ್ಕೆದಲೆಯೊಳ್ ವಿನುತಂ ರತಿಯಿಲ್ಲ ಮಿಂಡಿಯೊಳ್ (ಸೂಕ್ತಿಸು. ೮-೪೯). **ಹಕ್ಕೆದಲೆ : ೨.** ಪ್ರಾಣಿ, ಪಕ್ಷಿ ಮುಂತಾದುವುಗಳು ತಂಗುವ ಸ್ಥಳ,—ನೆಲೆ,—ಆಶ್ರಯಸ್ಥಾನ; ಇಕ್ಕೆದಾಣ : ಮೇಪುಗಾಡಂ ಹಕ್ಕೆ[ಪಾಠಾಂ. ಕ್ಕಿ]ದಲೆಗೆ ಹರಿಯಿಡುವ ಹರಿಣೀಗಣದ ಕಡೆವಾಯೊಳರೆ ಮೆಲ್ದುಱಿದೆಳೆಗಱುಂಕೆಯೆಸಟ್ಗಳಂ ಸೆಳೆದು ತಂದಾ ಬಯಲೊಳ್ ಬಳ್ಳಿವಸಲೆಯಂ ಪೊಸಯಿಸಿಯುಂ (ಚಂದ್ರಪು. ೮-೪ ಪ). [ಪಕ್ಕೆ₁(<ಪಟಿಕ್ಕೆ)+-ದಲೆ]

**ಪಕ್ಕೆಮನೆ** (ನಾ). ಪಕ್ಕದ ಮನೆ ; ನೆರೆಮನೆ : ತಿಮ್ಮನಿಗೊಮ್ಮೆ ಊರಿಗೆ ಹೋಗಬೇಕಿತ್ತು. ಪಕ್ಕೆಮನೆಯ ರೈಲ್ವೆ ರಂಗರಾಯರು ಪಾಸು ಕೊಟ್ಟರು (ತಿಂಪುತ. ೧೨೪). [ಪಕ್ಕೆ₃ (<ಪಕ್ಕ) + ಮನೆ]

**ಪಕ್ಕೆಯ** (ನಾ). ದೇವರ ಉತ್ಸವ, ರಾಜರ ಮೆರವಣಿಗೆ ಮುಂತಾದ ಸಂದರ್ಭಗಳಲ್ಲಿ ಪಕ್ಕದಲ್ಲಿ ಹಿಡಿಯುವ ಬೀಸಣಿಗೆಯಂತಹ ಅಲಂಕಾರ ಸಾಧನ : ಕರಿಯದೂ ಅಲ್ಲದ ಬಿಳಿಯದೂ ಅಲ್ಲದ ಒಂದು ಕೊಡೆ, ಕೈಬಟ್ಟಲಿನ ಹಾಗೆ ಕಾಣುವ ಎರಡು ಪಕ್ಕೆಯ, ಒಂದು ಆಬ್ದಾಗಿರಿ—ಇಷ್ಟೂ ನಾಯಕರ ಪಲ್ಲಕ್ಕಿಯ ಬಳಿ ಇರಲೇಬೇಕು (ಬಿಳುಮ. ೧೧೨). [<ಸಂ. ಪಕ್ಷ ?]

**ಪಕ್ಕೆರಕ್ಕೆ** 'ಪಕ್ಕರಕ್ಕೆ' ನೋ.

**ಪಕ್ಕೆವನೆ** 'ಪಟಿಕ್ಕೆವನೆ' ನೋ.

**ಪಕ್ಕೆವಾಡ** (ನಾ). ಮಲಗುವ ಮನೆ ; ಶಯನಗೃಹ : ಪಡುಗಡೆ ಪಗಲಾಣ್ಮನ ಪಕ್ಕೆವಾಡದೊಳೊಡರುವ ಮಣಿವಾಗಿಲೊಳು ತೊಡದ ಮಾಣಿಕತೋರಣದ ಬೆಳಗಿನಂತೆ ಒಡವರಿದುದು ಸಂಜೆಗೆಂಪು (ಶ್ರೀಪಾಲ. ೬-೧೫). [ಪಕ್ಕೆ₁(<ಪಟಿಕ್ಕೆ)+ವಾಡ₁]

**ಪಕ್ಕೆವೆಟ್ಟ** 'ಪಟಿಕ್ಕೆವೆಟ್ಟ' ನೋ.

**ಪಕ್ಕೆವೆಟ್ಟು** 'ಪಟಿಕ್ಕೆವೆಟ್ಟ' ನೋ.

**ಪಕ್ಕೆಶೂಲೆ** 'ಪಕ್ಕಶೂಲೆ' ನೋ.

**ಪಕ್ಕೆಸಾರಿ** 'ಪಕ್ಕಸಾರಿ' ನೋ.

**ಪಕ್ಕೆಸಾರೆ** 'ಪಕ್ಕಸಾರಿ' ನೋ.

**ಪಕ್ಖಾಳನ** (ನಾ). ತೊಳೆಯುವುದು ; ಶುದ್ಧಿಮಾಡುವುದು : "ಪ್ರಕ್ಷಾಲನ—ಪಕ್ಖಾಳನ" (ಶಬ್ದಾನು. ೧೬೦ ವ್ಯಾಖ್ಯಾ). [<ಪ್ರಾ. ಪಕ್ಖಾಳಣ./ಸಂ. ಪ್ರಕ್ಷಾಲನ]

**ಪಕ್ತೃ** 'ಪಕತ್ರ್' ನೋ.

**ಪಕ್ವ** (ಗು). ೧. ಬೇಯಿಸಿದ; ಅಟ್ಟ: ಪೊನ್ನಿಂ ಪೊಣೆದ ಪಡಗೆ ಕುಕ್ಕೆಗಳಡಿಯೆ ಮೃಗಪಕ್ಷಿಪಕ್ವಪರಿಮಳಪಲಾನ್ನಂಗಳಿಂ, ತಂದಡಕಿದರು ರಾಕ್ಷಸರ್, ರಾಕ್ಷಸನ ಮುಂದೆ (ಶ್ರೀರಾಮಾ. ೬೭೨-೨೯೦). 'ಪಕ್ವಾನ್ನ' ಪರಾ. ೨. ಕಳಿತ ; ಮಾಗಿದ ; ಹಣ್ಣಾದ : 'ಪಕ್ವಫಲ' ಪರಾ. ೩. ಪೂರ್ಣವಾಗಿ ಜೀರ್ಣಿಸಿದ. ೪. ನುರಿತ; ಪಳಗಿದ; ಕುಶಲ; ನಿಪುಣ. ೫. ಪರಿಪೂರ್ಣವಾದ ಅನುಭವವುಳ್ಳ. ೬. (ಹಣ್ಣುಗಳು) ಬಿದ್ದುಹೋಗುವಷ್ಟು ಕಳಿತಿರುವ. ೭. (ತಲೆಗೂದಲು) ನರೆತ ; ಬೆಳ್ಳಗಾದ. ೮. (ರೋಗವು) ಪರಿಪೂರ್ಣಾವಸ್ಥೆಯನ್ನು ಹೊಂದಿದ ; ಅಂತಿಮಘಟ್ಟವನ್ನು ಮುಟ್ಟಿದ ; ವಾಸಿಯಾಗುವುದಕ್ಕೆ ಪ್ರಾರಂಭವಾಗುವ ಸ್ಥಿತಿಯಲ್ಲಿರುವ ; ರೋಗ ಇಳಿಯಲು ಸಿದ್ಧವಾಗಿರುವ : 'ಪಕ್ವಾತಿಸಾರ' ಪರಾ. (ನಾ). ೯. ಚೆನ್ನಾಗಿ ಬೆಂದಿರುವುದು; ಹದವಾದುದು: ಹೆಸರುಕಟ್ಟು, ಬೇವಿನ ಎಣ್ಣೆಗಳನ್ನು ಸಮನಾಗಿ ತೆಗೆದುಕೊಂಡು ಪಕ್ವವಾಗಿ ಕಾಯಿಸಿ ನಸ್ಯ ಮಾಡಿದರೆ ಮೂಗಿನಿಂದ ಸುರಿಯುವ ರಕ್ತ ನಿಲ್ಲುವುದು (ಪಶವೈ. ಪರಿ. ೪೩೦); ಸುಟ್ಟ ಕಣಕ ಪಕ್ವವಾಗಿ ರೊಟ್ಟಿಯಾಗುತ್ತದೆ (ಕಲ್ಲೋಲ. ೧೮-೪). ೧೦. ಹಣ್ಣು ಚೆನ್ನಾಗಿ ಮಾಗಿರುವುದು,—ಕಳಿತಿರುವುದು. ೧೧. ಬೇಯಿಸಿದ ಅನ್ನ ಮೊದಲಾದ ಆಹಾರಪದಾರ್ಥ ; ಹಸಿಯಲ್ಲದ ಖಾದ್ಯ : ವೇದೋಕ್ತ ಧರ್ಮವನ್ನು ಎಲ್ಲರೂ ಮಾಡಬೇಕು. ಆದರೆ ಮಾಡುವ ಕ್ರಮದಲ್ಲಿ ಕಾಲ ದೇಶ ಶಕ್ತಿ ಶುದ್ಧಿ ಅಶುದ್ಧಿ ಸಹಾಯ ಮೊದಲಾದ ಸಾಮಗ್ರೀಭೇದದಿಂದ ದ್ರವ್ಯ ಪದಾರ್ಥ ಆಮ ಪಕ್ವ ಮೊದಲಾದ ಪ್ರಭೇದಗಳೆಂದು ನಿರ್ಣಯವಿರುವುದು (ಹಿಂದಸಾ. ೧೬೨). ೧೨. ಕಾಸಿದ ತುಪ್ಪ: "ತುಪ್ಪಕೆರಗೆ ಪಕ್ವಂ ದ್ರುತಂ" (ಮಂಗರಾ. ೫೪-೬).

ಪಕ್ವಮಾಗು, ಪಕ್ವವಾಗು = ೧. (ಪಾಪ, ಪುಣ್ಯ ಮೊದಲಾದುವುಗಳಲ್ಲಿ) ಫಲ ಕೊಡುವ ಸ್ಥಿತಿಗೆ ಬರು ; ಫಲೋನ್ಮುಖತ್ವವನ್ನು ಹೊಂದು : ಅಪ್ಪುದೆ ಪುತ್ರೋತ್ಪತ್ತಿ ಮುನ್ನಂ ನೆರಪಿದ ಸುಕೃತಂ

ಪಕ್ವಮಾದಲ್ಲದಂದು (ಪುಷ್ಪಪು. ೩-೧೦೧). **೨.** (ಮನಸ್ಸು)ಹದವಾಗು; ಸ್ಥಿಮಿತಕ್ಕೆ ಬರು : ಸೊಕ್ಕಿನಲಿ ಬೆರತಿಹರಿಗೆಂದಿಗು ಪಕ್ವಮಪ್ಪುದೆ ಮನವು (ಗಗತಾ. ೧೩-೧೯). **೩.** (ಹಣ್ಣು) ಚೆನ್ನಾಗಿ ಮಾಗು ; ಕಳಿತಿರು : ಫಲ ಪಕ್ವವಾದಲ್ಲದೆ ಹೊಜಗಣ ಸಿಪ್ಪೆ ಒಪ್ಪಗೆಡದು (ಮಹಾದೇ. ಬ. ೭೩-೧೮೩). **೪.** ಪರಿಪೂರ್ಣವಾಗು ; ಸಂಪೂರ್ಣವಾಗು : ಮೊದ ಮೊದಲು ತೃಪ್ತಿಕರವಾಗಿ ಅನುಕರಿಸದಿರಬಹುದು. ಅದರಂತೆ ಆಚರಿಸ ಬೇಕೆಂಬ ಸಂಕಲ್ಪದಿಂದ ಅಭ್ಯಾಸ ನಡಸಿ ಕೊನೆಗೆ ಪಕ್ವವಾಗಿ ಕಲಿಯ ಬಹುದು (ಶಿಕ್ಷದ. ೭೨೪). **೫.** ಅನುಕೂಲವಾಗು : ಅದರಿಂದ ಸಮಯ ಪಕ್ವವಾಗುವುದನ್ನು ನೋಡಿಕೊಂಡಿದ್ದು . . . ವ್ಯತ್ಯಾಸ ಮಾಡುವುದು ವಾಡಿಕೆ (ಹಣಪ್ರ. ೧೮೮). **೬.** ಸ್ವಚ್ಛವಾಗಿರು ; ನಿರ್ದುಷ್ಟವಾಗಿರು : ಉಚ್ಚಾರಣೆ ಪಕ್ವವಾದರೆ ಒಳ್ಳೆಯ ವಾಗ್ಮಿಯಾಗಬಹುದು (ಶಿಕ್ಷದ. ೨೪೫). [ಸಂ.]

**ಪಕ್ವಂದಾಳ್** (ಕ್ರಿ). ಹಣ್ಣಾಗು ; ಮಾಗು : ಪಕ್ವಂದಾಳ್ದ ಮಾದಲ ಪಣ್ಣು . . . ಅಂಗಡಿಗಳೊಪ್ಪಿದುವು (ಭರತ. ೪೭-೨೦). [ಪಕ್ವ + ತಾಳ್₁]

**ಪಕ್ವಂಬೆಱು** (ಕ್ರಿ). = ಪಕ್ವಂದಾಳ್ : ಪಕ್ವಂ[ಪಾಠಾಂ. ಚೆಲ್ವಂ] ಬೆತ್ತಾಲದ ತನಿವಣ್ಣಿಂ ಮಿಗೆ ವಿಭ್ರಾಜಿಸುವಂದದೊಳು (ಜಯಕಾ. ೪-೧೧). [ಪಕ್ವ + ಪೆಱು₁]

**ಪಕ್ವಗೊಳ್ಳು** (ಕ್ರಿ). ಹದವಾಗು : ಜೀವನ ಕೇವಲ ಗ್ರಂಥಪಠನದಿಂದ ಪಕ್ವಗೊಳ್ಳಲಾರದು (ಶಿಕ್ಷದ. ೧೩೧). [ಪಕ್ವ + ಕೊಳ್ಳು₁ (<ಕೊಳ್₁)]

**ಪಕ್ವಚೇತನ** (ನಾ). **೧.** ಹದವಾದ ಮನಸ್ಸು ; ಮಾಗಿದ ಮನಸ್ಸು. **೨.** ಮಾಗಿದ ಮನಸ್ಸುಳ್ಳವನು ; ಪರಿಪಾಕ ಗೊಂಡ ಮನಸ್ಸುಳ್ಳವನು : ಕಾಲಕ್ರಮೇಣ ಪಕ್ವಚೇತನನಾದಾಗ ದಿವ್ಯಕಾರುಣ್ಯದೃಷ್ಟಿಯಿಂದ ನಡೆದುಕೊಂಡನೆಂಬುದು ಈಸ್ಕಿಲಸ್‌ನ ಆಶಯ (ಬದ್ಧಪ್ರ. XXXIV, ಪೀಠಿಕೆ). [ಪಕ್ವ + ಚೇತನ]

**ಪಕ್ವಜ್ವರ** (ನಾ). ಪರಮಾವಧಿ ಮುಟ್ಟಿದ ಜ್ವರ ; ಪೂರ್ಣಾವಸ್ಥೆಗೆ ಬಂದ ಜ್ವರ : ಜ್ವರವು ಬಹುವೇಗವಾಗಿ, ಅತಿದಾಹ, ಬಹಳ ಪ್ರಲಾಪ, ಶ್ವಾಸ, ಭ್ರಮೆ, ಮಲಪ್ರವೃತ್ತಿ, ವೆಗ್ಗಳವಾದ ಬಳಲಿಕೆ ಇವುಗಳೆಲ್ಲಾ ಇರುವುದೇ ಪಕ್ವಜ್ವರವೆನಿಸಿಕೊಳ್ಳುವುದು (ಸಕವೈ. ೯೭). [ಪಕ್ವ + ಜ್ವರ]

**ಪಕ್ವತೆ** (ನಾ). ಪರಿಪೂರ್ಣತೆ : ಪಕ್ವತೆಗೆ ಸ್ವಲ್ಪ ಸಮಯ ಬೇಕಾಗು ತ್ತದೆ (ಪ್ರಕಾಶ. ೩೦). [ಸಂ. ಪಕ್ವತಾ]

**ಪಕ್ವಫಲ** (ನಾ). ಮಾಗಿದ ಹಣ್ಣು ; ಕಳಿತ ಹಣ್ಣು : ಪೋಗಿ ತಾಳವನಮಂ ಪೊಕ್ಕು ಪಕ್ವಫಲಮಂ ಕಂಡಬ್ಬಿ ವಟ್ಟು (ಜಗವಿ. ೪-೪೦ಪ); ಪಕ್ವಫಲಂಗಳಿಂದೆ ರಸನೇಂದ್ರಿಯಮಂ ವರಪುಷ್ಪಗಂಧದಿಂ ಮಿಕ್ಕಿರೆ ನಾಸಿಕೇಂದ್ರಿಯಮಂ . . . ಪ್ರವಾಳಿಸಚ್ಛಕ್ಕಣಶಯ್ಯೆಯಿಂದೆ ವಪುರಿಂದ್ರಿಯಮಂ ತಣಿಪುತ್ತುಮೊಪ್ಪುಗುಂ (ಬಾಭಪು. ೧-೧೧೦) ; ಲಲಿತಶುಕಚಯ ಚಂಚುಪುಟದಿಂ ದಳಿತ ಜಂಬೂಪಕ್ವಫಲರಸಲುಳಿತ ನವಮಕರಂದ ಮಧುರೋರ್ಝರಸ್ನಿವಾತದಲಿ . . . ಎಸೆದುದು ಗಜಪುರೋದ್ಯಾನ (ಕುಮ್ಯಾಉ. ೭-೨೭). [ಪಕ್ವ + ಫಲ₁]

**ಪಕ್ವಬಿಂಬ** (ನಾ). ಮಾಗಿರುವ (ಕೆಂಬಣ್ಣಕ್ಕೆ ತಿರುಗಿರುವ) ತೊಂಡೆಹಣ್ಣು : ಪಕ್ವಬಿಂಬಚ್ಛವಿಯಂ ಮಾರ್ಕೊಳ್ವುದಧರಮಣಿ ಮುನಿ ವರನಾ (ಕಾದಂಪೂ. ೭೩೩) ; ಪಡೆವನ್ನಂ ಪಕ್ವಬಿಂಬಕ್ಕಧರಮಧರತಾ ವಾಪ್ತಿಯಂ (ಚಂದ್ರಪು. ೨-೨೩) ; ಜನಕಾದೇಶದೆ ಬಂದನಲ್ಲಿಗೆ ಕುಮಾರಂ ಪಕ್ವಬಿಂಬಾಧರಂ ತನಿಗೆಂಪಿಂ ಕಿಸುಸಂಜೆಯಂ ಕೆಡೆಚಿ (ಪುಷ್ಪಪು. ೪-೮೦). [ಪಕ್ವ + ಬಿಂಬ]

**ಪಕ್ವಮತಿ** (ನಾ). ಪರಿಣತವಾದ ಬುದ್ಧಿಯುಳ್ಳ ವ್ಯಕ್ತಿ ; ಕುಶಲ ಮತಿ: ಈ ಹೊತ್ತಿಗೆಯಲ್ಲಿ ಇದ್ದಿರಬಹುದಾದ ಅಪಕ್ವ ಅಭಿಪ್ರಾಯಗಳನ್ನು ಪಕ್ವಮತಿಗಳು ತೋರಿ ತಿದ್ದಬೇಕು (ದ್ರಾವಿವಿ. XII, ಮೊದಲ ಮಾತು). [ಪಕ್ವ + ಮತಿ]

**ಪಕ್ವರಕ್ತ** (ನಾ). ಕೀವು : "ಕೀವಂ, ಕೀವನಂ, ಕೀವು—ಈ ೩ ಪಕ್ವ ರಕ್ತಂ" (ಕಾಶಕ್ಕ. ೫೩). [ಪಕ್ವ + ರಕ್ತ]

**ಪಕ್ವಶಾಳಿ** (ನಾ). ಹಣ್ಣಾಗಿರುವ ಬತ್ತದ ಪೈರು ; ಕೊಯ್ಲಿಗೆ ಬಂದಿರುವ ಬತ್ತ : ಪಕ್ವಶಾಳಿ ಕಣಿಶಾಳೀನನ್ನುಮೊಪ್ಪಿರ್ದದೇಂ ಗೆಲೆವಂದತ್ತೊ ಸುವರ್ಣವರ್ಣದಿನಿಳಾಶ್ರೀಯುಟ್ಟ ಪೊಂಬಟ್ಟೆವೋಲ್ (ಜಗವಿ. ೨-೫). [ಪಕ್ವ + ಶಾಳಿ(= ಶಾಲಿ₂)]

**ಪಕ್ವಸ್ಥಿತಿ** (ನಾ). (ಕಾಯಿಲೆಯ) ಪರಿಪೂರ್ಣಾವಸ್ಥೆ ; ಗರಿಷ್ಠ ಮಟ್ಟ ; ಪರಿಣಾಮಾವಸ್ಥೆ : ಈ ಕಾಯಿಲೆ ಪಕ್ವಸ್ಥಿತಿಗೆ ಬರುವುದಕ್ಕೆ ೭ ರಿಂದ ೧೪ ದಿವಸಗಳು ಬೇಕಾಗುತ್ತವೆ (ಕಲರೋ. ೨೮). [ಪಕ್ವ + ಸ್ಥಿತಿ]

**ಪಕ್ವಾಜೀರ್ಣ** (ನಾ). ಅತಿಯಾದ ಅಜೀರ್ಣ (?) : ಸಂವತ್ಸರ ಲವಣ, ಇಂಗು, ಶುಂಠಿ ಸಹ ಚೂರ್ಣವಂ ಮಾಡಿ ಬಿಸಿನೀರಲ್ಲಿ ಕದಡಿ ಕುಡಿಯೆ ಪಕ್ವಾಜೀರ್ಣಂ ಮಾಣ್ಗುಂ (ಸಕವೈ. ೩೬೫). [ಪಕ್ವ + ಅಜೀರ್ಣ]

**ಪಕ್ವಾತಿಸಾರ** (ನಾ). ಪರಿಣಾಮಾವಸ್ಥೆಯನ್ನು ಮುಟ್ಟಿ, ಇಳಿ ಯುವ ಘಟ್ಟಕ್ಕೆ ಬಂದಿರುವ ಅತಿಯಾದ ಅತಿಸಾರ ; ಬಹಳ ದಿನಗಳಿಂದ ಇರುವ ಅತಿಸಾರ,—ಭೇದಿ : ನೀರಿನಲ್ಲಿ ಮಲವ ಹಾಕಿ ನೋಡಲು ಮುಳುಗಿದರೆ ಆಮಾತಿಸಾರ, ತೇಲಿದರೆ ಪಕ್ವಾತಿಸಾರ ವೆಂದರಿವುದು (ಸಕವೈ. ೩೦೭). [ಪಕ್ವ + ಅತಿಸಾರ]

**ಪಕ್ವಾನ್ನ** (ನಾ). **೧.** ಬೇಯಿಸಿದ ಅನ್ನ ; ಖಾದ್ಯ : ಆಜ್ಯರಸಪ್ರಿಯ ಪಕ್ವಾನ್ನಚಯಮನುಂಡೆಂ ತಣಿದೆಂ . . . ಎಂದು . . . ಹರಿ ನುಡಿದಂ (ಜಗವಿ. ೪-೮೩) ; ಆ ದಿವಸ ಲೀಲೆಗೆ ರಾಮುವಿಗಾಗಿ ಎಷ್ಟು ಬಗೆಯ ಪಕ್ವಾನ್ನಗಳನ್ನು ಮಾಡಿಸಿದರೂ ತೃಪ್ತಿಯಾಗಲಿಲ್ಲ (ಕುಂಕುಮ. ೬೦) ; ಅದೆ ಅಕ್ಕಿ, ಜೋಳ, ಗೋಧಿಗಳಿಂದ ವಿಧವಿಧದ ಪಕ್ವಾನ್ನ ಗಮಗಮಿಸು ವುದು (ನೆಲಮು. ೩೨-೧೬). **೨.** ತುಪ್ಪದಲ್ಲಿ ಕರಿದ ಲಾಡು, ಚಿರೋಟಿ ಮೊದಲಾದ ಸಿಹಿತಿಂಡಿ ; ಭಕ್ಷ್ಯ : ಔತಣ ವೈಭವಪೂರ್ಣ ವಾಗಿತ್ತು . . . ಶ್ರೀಖಂಡ-ಪುರಿ ಇಂಥ ನಾಲ್ಕು ಬಗೆಯ ಪಕ್ವಾನ್ನ ಗಳು (ಸ್ಮೃತಿಚಿ. ೧೧೮). [ಪಕ್ವ + ಅನ್ನ₃]

**ಪಕ್ವಾವಸ್ಥೆ** (ನಾ). ಫಲ ಕೊಡುವ ಸ್ಥಿತಿ ; ಆರಂಭಿಸಿದ ಕಾರ್ಯ ಸಿದ್ಧಿಸುವ ಕಾಲ ; ಅಭಿವೃದ್ಧಿ ದಶೆ : "ಪಕ್ವಾವಸ್ಥೆ, ಪರಿಪಕ್ವತೆ" (Development. ಪತ್ರಿಸಿ. ೩೧). [ಪಕ್ವ + ಅವಸ್ಥೆ]

**ಪಕ್ವಾಶಯ** (ನಾ). **೧.** ಹೊಕ್ಕುಳಿನ ಕೆಳಭಾಗ ; ನಾಭಿಯ ಅಧೋಭಾಗ ; ಕಿಬ್ಬೊಟ್ಟೆ. **೨.** ಹೊಟ್ಟೆ ; ಉದರ ; ಜಠರ. [ಪಕ್ವ + ಆಶಯ]

**ಪಕ್ವಿ** (ನಾ). ಪಕ್ವತೆಯುಳ್ಳವನು ; ಪರಿಪೂರ್ಣನಾದವನು (?) : ಶಕ್ತಿಗೂಡಿ ಶಿವ ಸಲೆ ತನ್ನ ಪರಿಪೂರ್ಣ ಕೆಡದೆ ಪಕ್ವಿಯ ಚೆಲ್ವ ತಲೆಯೊಳಿಹ ಪೂವಿನರಮನೆಯೊಳು ಸುವ್ಯಕ್ತ ಪ್ರಕಾಶಾಂಗನಾಗಿರ್ಪನು (ಏಕೋಪು. ೮-೩೭). [<ಸಂ. ಪಕ್ವ]

**ಪಕ್ಷ** (ನಾ). **೧.** ಹಕ್ಕಿಗಳ ರೆಕ್ಕೆ,—ಗರಿ : "ಪತ್ರ ತನೂರುಹ ವಾಜ ಪತತ್ರಚ್ಛದ ಪಿಂಛ ಪಕ್ಷನಾಮಂ ಗಱಿ" (ವಸ್ತುಕೋ. ೪೧-೧೦) ; ಚಕಿತೋದ್ಭ್ರತಪಕ್ಷಪಕ್ಷಸ್ವನದೊಳಮರ್ದ ಕೋಳಾಹಲಧ್ವಾನದಿಂ ಕೊರ್ವಿ . . . ಪೊಣ್ಮಿತ್ತು ವಿಂಧ್ಯಂ ನಡುಗೆ ಘನರವಸ್ಪರ್ಧಿ ಕೈರಾತಘೋಷಂ (ಕಾದಂಪೂ. ೧೫೩) ; ಒದವಿದ ಕೇಗು ನೀಳ್ದ ಕೊರಲೆತ್ತಿದ ಪಕ್ಷ ವೊಜಲ್ಚುತಿರ್ಪಿನಂ . . . ಬಿರ್ಚಿ ಬರ್ಹಮಂ ಪದೆದು ನವಿಲ್ಗಳಾಡೆ (ಜಗವಿ. ೪-೩೦) ; ಆ ಜಟಾಯು . . . ಪಕ್ಷಧ್ವನಿಗೆ ಗಿರಿಗಹ್ವರಂ ಗುಡುಗೆ, ಚೀರ್ದನಿಗೆ ಮಾರ್ದನಿಸೆ ಪುಷ್ಪಕಾಭ್ಯಂತರಂ ಹಾರಿದನು

(ಶ್ರೀರಾಮಪೂ. ೨೪೮-೫೪೦). **೨.** ಬಾಣದ ಹಿಂದೆ ಕಟ್ಟುವ ಗರಿ,—ಪುಂಖ. **೩.** (ಯಾವುದಾದರೂ ಒಂದು ವಸ್ತುವಿನ ಅಥವಾ ಮನುಷ್ಯನ) ಮಗ್ಗುಲು ; ಪಕ್ಕ ; ಬದಿ ; ಪಾರ್ಶ್ವ : ಈ ಸ್ಥಾನಗಳ ಭೇದವರಿತು . . . ಬಲ, ಎಡವೆಂಬ ಪಕ್ಷವನ್ನೂ . . . ಮನ್ಮಥ ಕ್ರೀಡಾಸಮೇತನಾದ ಪುರುಷನು ತಿಳಿದೆಸಗುವುದು (ಸಕವೈ. ೬೦). **೪.** ಗುಂಪು ; ಬಣ ; ಪಂಗಡ : "ಬರಿ ಮಾಸಾರ್ಧ ಸಮೀಪ ಭಿತ್ತಿ ಗಱಿಯುಂ ಪಕ್ಷೀಕರಂ ಪಕ್ಷಮಕ್ಕು" (ನಾನಾರ. ೧೧೩) ; ಪಕ್ಷವೆರಡೇ ಲೋಕದೊಳ್ ಪಿತೃಪಕ್ಷ ಮೇಣಾ ಮಾತೃಪಕ್ಷ (ಕುಮ್ಯಾಅ. ೮-೧೭) ; ಕೌರವರು ದುರಾಶೆಯುಳ್ಳವರು, ಬಹುಕಾಲದಿಂದ ಪಡೆಯನ್ನೂ ಪಕ್ಷವನ್ನೂ ಕಟ್ಟಿಕೊಂಡಿರುವವರು (ಪಚಭಾ. ೨೪೧); ಪಾರ್ಟಿ, ಪಕ್ಷ, ಗುಂಪುಗಾರಿಕೆ, ಪಕ್ಷಾಂತರ ನನ್ನೂರಿನಲ್ಲಿಯೂ ಯೋಗ್ಯತಾನುಸಾರ ಇವೆ (ನನ್ನೂರು. ೩೧೬). **೧,೪:** ಜಮದಗ್ನಿರಾಮನಂ ಕಂಡು ಬಲಭದ್ರರಾಮನ ಮೊಗಮಂ ಅಚ್ಯುತಂ ನೋಡಿ ಈ ಮಹಾಪುರುಷಂ ಕುಭೃತ್ಪಕ್ಷವಿಚ್ಛೇದನನಾಗಿಯುಂ ವಜ್ರಧರನಲ್ತು . . . ಎಂದು(ಜಗವಿ.೮-೧೦೪). **೫.** ವಿಶಿಷ್ಟ ಧ್ಯೇಯಗಳನ್ನು ಹೊಂದಿರುವ ರಾಜಕೀಯ ತಂಡ,—ಬಣ,—ಪಂಗಡ: ಗೌಡರು ಮೊದಲು ಸ್ವತಂತ್ರಪಕ್ಷದಲ್ಲಿದ್ದರು, ಈಗ ರಾಷ್ಟ್ರೀಯಪಕ್ಷಕ್ಕೆ ಸೇರಿದ್ದಾರೆ (ರೂಢಿ). **೬.** ಒಂದು ಬಣಕ್ಕೆ ಸೇರಿದವನು; ಪಕ್ಷಾವಲಂಬಿ. **೭.** ಒಲವು ; ಪಕ್ಷಪಾತ : ದಕ್ಷನ ಜನ್ನಮಂ ತೊಡೆದು ಪಕ್ಷದಿನೆಯ್ದಿದ ಬೋಳೆಯರ್ಕಳಂ ಶಿಕ್ಷಿಸಿ (ಹಾಲಾಸ್ಯ. ೧-೧-೫) ; ಪಕ್ಷವಿಲ್ಲದವನಿಗೆ ಲಕ್ಷ್ಯವೇನು ? (ಗಾದೆ) ; ಪಕ್ಷ ಪಾಂಡವರಲ್ಲಿ, ಊಟ ಕೌರವರಲ್ಲಿ (ಗಾದೆ). **೮.** ಹಾಗೆ, ಹೀಗೆ ಎಂಬೆರಡರಲ್ಲಿ ಒಂದು ; ಒಂದು ವೇಳೆ, ಹೀಗಾಗುವುದಾದರೆ ಎಂಬರ್ಥವನ್ನು ಸೂಚಿಸುವ ಶಬ್ದ : ಜ್ಞಾನಕ್ರಿಯಾಭೋಗಗಳು ಆತ್ಮನ ಗುಣಗಳು . . . ಇದು ನಿಜವಾಗುವ ಪಕ್ಷಕ್ಕೆ ಅಂಗಗಳು ಅಂತರಿಸಿದರೂ ಈ ಶಕ್ತಿಗಳು ಅಂತರಿಸಕೂಡದು (ಜೀವಾತ್ಮ. ೧೬೭). **೯.** ಹತ್ತಿರ; ಸಮೀಪ. **೧೦.** ಗೋಡೆ; ಭಿತ್ತಿ. **೧೧.** ಚಾಂದ್ರಮಾನದಲ್ಲಿ ಒಂದು ತಿಂಗಳಿನ ಅರ್ಧಭಾಗ; ಪಾಡ್ಯದಿಂದ ಹುಣ್ಣಿಮೆಯ ವರೆಗೆ ಅಥವಾ ಪಾಡ್ಯದಿಂದ ಅಮಾವಾಸ್ಯೆಯ ವರೆಗಿರುವ ಹದಿನೈದು ದಿನಗಳ ಕಾಲಮಾನ: "ಪಾಡಿವಮುದಾದಿಯೆನೆ ತಿಥಿ ಪಕ್ಷಸ್ಥಿತಿಯೊಳ್ ಪದಿನೆಯ್ದಕ್ಕುಂ" (ವಸ್ತುಕೋ. ೧೬-೭) ; ಪದಿನೈದು ದಿವಸಮಾದೊಡೆ ಪಕ್ಷಂ (ಪಂರಾಪೂ. ೧-೫೧) ; ಆ ವಾರ ಹದಿನೈದಾಗಲೊಂದುಪಕ್ಷವೆನಿಸುವದು (ವಿವೇಕ. ೩೨೦) ; ಮಾಸಕೆ ಪಕ್ಷವೆರಡು ತಿಥಿ ಮೂವತ್ತುಂ (ಭಾಸ್ಕರ. ೫೨-೨). "ಗೋಡೆಯಲ್ಲಿ ಗಱಿಗಳಲ್ಲಿ ಮಾಸಾರ್ಧದಲ್ಲಿ ಪರಿಗ್ರಹದಲ್ಲಿ ಬರಿಯಲ್ಲಿ ಆ ಸಮೀಪದಲಿ ಪಕ್ಷಮೆನಿಕ್ಕು" (ಮಂಗರಾ. ೧೪೬-೩೩) ; "ಬರಿ ಮಾಸಾರ್ಧ ಸಮೀಪ ಭಿತ್ತಿ ಗಱಿಯುಂ ಪಕ್ಷೀಕರಂ ಪಕ್ಷಮಕ್ಕು" (ನಾಸಾರ. ೧೧೩). **೧೨.** ಮನೆ; ಗೃಹ. **೧೩.** ವಿಭಾಗ ; ಪಾಲು : "ಪಕ್ಷ—ವಿಭಾಗೇ, ಪಾಲೊಳ್" (ಕಾಶಕ್ಕ. ೧೧೮). **೧೪.** ಅಡ್ಡಮುಡಿ ; ಓರೆ ದುರುಬು : "ಪಕ್ಷಮೆನಲಡ್ಡಮುಡಿ" (ಮಂಗರಾ. ೯೪-೬). **೧೫.** ಪಿತೃಪಕ್ಷ; ಮಹಾಲಯ ಪಕ್ಷ : ನಾಳೆಯಿಂದ ಪಕ್ಷ ಪ್ರಾರಂಭ, ಅಮಾವಾಸ್ಯೆ ಕಳೆದ ಮೇಲೆ ನವರಾತ್ರಿಯಲ್ಲಿ ಬೇರೆ ಮನೆಗೆ ಹೋಗಬಹುದು (ರೂಢಿ). **೧೬.** ಮಹಾಲಯದಲ್ಲಿ ಮಾಡುವ ಪಿತೃಕ್ರಿಯೆ ; ಮಹಾಲಯ ಶ್ರಾದ್ಧ : ನಾಳೆ ನಮ್ಮ ಮನೆಯಲ್ಲಿ ಪಕ್ಷದ ಕಟ್ಟಳೆ ಮಾಡಬೇಕು (ರೂಢಿ). **೧೭.** ವಿಕಲ್ಪ ; ಮತಾಂತರ ; ಒಮ್ಮೊಮ್ಮೆ; ಒಂದೊಂದು ಸಲ : ಅವಿಶೇಷದಿನಾ ದೀರ್ಘವ್ಯವಹೃತಿ ಶಬ್ದಾಂತರಾಳದೊಳ್ ಪಕ್ಷದಿನುದ್ಭವಿಕುಂ (ಶಮುದ. ೧೧೮). **೧೮.** [ಗಣಿತ] ಹದಿನೈದು ಎಂಬ ಸಂಖ್ಯೆಯ ಸಂಕೇತ : "ಪಕ್ಷ ಹದಿನೈದು" (ಮಂಗರಾ. ೧೦೪-೯); ಮರುದಾಕಾಶದ್ವಯೇಂದ್ರಾನಿಲ ಹುತವಹ ಯುಗ್ಮಾಂಗಜಾರಾತಿಯರ್ಕಳ್ ಬರೆ ಪಕ್ಷಸ್ಥಾನದೊಳ್ ನಿಲ್ತಿರೆ ವಿರತಿ ಮಹಾಸ್ರಗ್ಧರಾನಾಮವೃತ್ತಂ (ಛಂದೋಂಬು. ೨-೧೮೩). **೧೯.** ಎರಡು ಎಂಬ ಸಂಖ್ಯೆಯ ಸಂಕೇತ : ಯಮ ನಯನ ಕರ್ಣ ಕರ ಪದ ಯಮಳಾಂಘ್ರಿ ದ್ವಿಯಕ್ಷಿ ಪಕ್ಷ ನೇತ್ರಂ . . . ಎರಡಱ ನಾಮಂ (ಸ್ಯಪಹಾ. ೯-೨). **೨೦.** [ನ್ಯಾಯ] ಅನುಮಾನಪ್ರಮಾಣವನ್ನು ಪ್ರಯೋಗಿಸುವಾಗ ಸಾಧಿಸಲ್ಪಡುವ ವಸ್ತುವಿರುವ ಸ್ಥಳ : ಯಾವ ಸ್ಥಳದಲ್ಲಿ ಸಾಧ್ಯವು ತಿಳಿಯಲ್ಪಡುವುದೋ ಅದಕ್ಕೆ ಪಕ್ಷವೆಂದು ಹೆಸರು (ಹಿಂದಸಾ. ೧೪೧); ಸಾಧ್ಯವುಳ್ಳ ವಸ್ತು ಪಕ್ಷವೆನ್ನಿಸುವುದು. ಪರ್ವತವು ವಹ್ನಿ ಉಳ್ಳುದು ಎಂಬಲ್ಲಿ ವಹ್ನಿ ಸಾಧ್ಯ ; ಈ ಸಾಧ್ಯವುಳ್ಳ ಪರ್ವತವು ಪಕ್ಷ (ಭಾತತ್ತ್ವ. ೧೬೬). **೨೧.** [ಜೈನ] ಮೈತ್ರಿ, ಪ್ರಮೋದ, ಕಾರುಣ್ಯ ಹಾಗೂ ಮಾಧ್ಯಸ್ಥಭಾವದಿಂದ ಎಲ್ಲ ಬಗೆಯ ಹಿಂಸೆಯನ್ನು ತೊರೆಯುವುದು : ಪಕ್ಷಮೆಂಬುದು ಜೈನಂಗೆ ಸರ್ವಹಿಂಸಾವರ್ಜನಂ (ವಿಸರ್ಜನಂ) ಮೈತ್ರಿ ಪ್ರಮೋದ ಕಾರುಣ್ಯ ಮಾಧ್ಯಸ್ಥೋಪಬೃಂಹಿತಂ ಸ್ಥಾಪಬ್ರಹತಂ (ಚಾವುಂಪು. ೨೨೭).

**ಪಕ್ಷ ಹಿಡಿ** = ಎರಡು ತಂಡಗಳಲ್ಲಿ ಒಂದಕ್ಕೆ ಬೆಂಬಲವನ್ನು ಕೊಡು ; ಒಂದು ಪಕ್ಷವನ್ನು ಅಂಗೀಕರಿಸು,—ವಹಿಸು,—ಸಮರ್ಥಿಸು: ಹೀಗೆ ಪಕ್ಷ ಹಿಡಿದು ಮಾತನಾಡಿದರೆ ನ್ಯಾಯ ತೀರ್ಮಾನವಾಗುವುದಿಲ್ಲ (ರೂಢಿ). **ಪಕ್ಷ ಹಿಡಿದು ವಾದಿಸು** = (ನ್ಯಾಯಾಲಯದಲ್ಲಿ ವಕೀಲನು) ತನ್ನ ಕಕ್ಷಿಗಾರನದೇ ನ್ಯಾಯವೆಂದು ಸಮರ್ಥಿಸು : ಪಕ್ಷ ಹಿಡಿದು ವಾದಿಸುವುದಕ್ಕೇ ಲಾಯರಿರುವುದು (ರೂಢಿ). [ಸಂ.]

**ಪಕ್ಷಂ** (ಅ). ಹೀಗಾಗುವುದಾದರೆ; ಇಂತಹ ಸಂದರ್ಭದಲ್ಲಿ ; ಈ ಪ್ರಸಂಗದಲ್ಲಿ; ☞ ಇದು ಸಾಮಾನ್ಯವಾಗಿ ನಿಯಮ ಅಥವಾ ಶರತ್ತನ್ನು ಹಾಕುವ ಸಂದರ್ಭದಲ್ಲಿ ಬಳಸಲ್ಪಡುತ್ತದೆ: ಸ್ವರ ಮಿದಿರೊಳಿರೆ ವಿಭಕ್ತಿಸ್ವರಕಂ ಪ್ರಕೃತಿಸ್ವರಕ್ಕಮಕ್ಕುಂ ಲೋಪಂ . . . ನಾಮರೂಢಿಯಱಿಯದ ಪಕ್ಷಂ (ಶಮುದ. ೫೨). [<ಸಂ. ಪಕ್ಷ]

**ಪಕ್ಷಂಗೆಡು** (ಕ್ರಿ). ಒಲವು ಇಲ್ಲದಂತಾಗು ; ಆಸೆಯನ್ನು ಬಿಡು : ಮಱುದಿವಸಂ ಭಕ್ಷ್ಯದ ದೆಸೆಗೆ ಪಕ್ಷಂಗೆಟ್ಟು ಪಾಲಿಂಗೆ ಬೆರ್ಚಿ ತುಪ್ಪಕ್ಕನಿಸ ಪ್ಪೊಡಂ ಮನಂದರಲಾಱದೆ ತೃಷೆಯೊಳಾದ ಭೀತಿಯಿಂದೊಲ್ಲೆನೆಂಬುದುಂ (ಧರ್ಮಾಮೃ. ೧-೧೬೨). [ಪಕ್ಷ+ಕೆಡು$_1$]

**ಪಕ್ಷಂಗೆದಱು** (ಕ್ರಿ). ರೆಕ್ಕೆಯನ್ನು ಬಿಚ್ಚು,—ಪಸರಿಸು : ಭೃಂಗ ಮಿಥುನಮಂಭೋರುಹದೊಳಗೆ ಮಲಂಗಿ ಬಳಿಕ್ಕಾ ನಿದ್ರೆ ತಿಳಿಯೆ ಪಕ್ಷಂಗೆದಱುವ ಭಂಗಿಯ ಕಡುಚೆಲ್ವಂ ನೆನೆಯಿಸುತೊಪ್ಪಿದುವು (ಜಯಕಾ. ೨-೪೩). [ಪಕ್ಷ+ಕೆದಱು$_1$(<ಕೆದಱ್$_1$)]

**ಪಕ್ಷಕ** (ನಾ). **೧.** ಹೆಬ್ಬಾಗಿಲ ಸಮೀಪದಲ್ಲಿ ಮಾಡಿರುವ ಚಿಕ್ಕ ಬಾಗಿಲು; ದಿಡ್ಡಿಬಾಗಿಲು; ಸಾರ್ವಜನಿಕರ ಉಪಯೋಗಕ್ಕಲ್ಲದ ಖಾಸಗಿ ಬಾಗಿಲು : "ಪಕ್ಷದ್ವಾರಂ, ಪಕ್ಷಕಃ—೨ ದಿಡ್ಡೀಬಾಗಿಲ ಹೆಸರು. ರೆಕ್ಕೆಬಾಗಿಲು, ಬಾಗಿಲ ಕದದೊಳಗಾಗಲೀ ಸಮೀಪದೊಳಗಾಗಲೀ ಮಾಡಲ್ಪಟ್ಟಿರುವ ಚಿಕ್ಕ ಬಾಗಿಲು" (ಸಿದ್ಧಾಂತಿ. ೧೦೨). **೨.** ಎರಡು ಪಕ್ಷಗಳುಳ್ಳವನು ; ಶುಕ್ಲಪಕ್ಷ, ಕೃಷ್ಣಪಕ್ಷವೆಂಬ ಎರಡು ಪಕ್ಷಗಳಿಂದ ಕೂಡಿರುವವನು ; ಚಂದ್ರ. **೩.** ಪಕ್ಷಪಾತಿ. **೨,೩** : ಸನ್ಮಾರ್ಗದಿಂ ನಡೆದು ದೋಷಾಕರಂ ಮಲಿನನುನ್ಮಾರ್ಗನತಿಜಡಂ ಪಕ್ಷಕಂ ಗರಳಸಹಜನ್ಮನೆನಿಸಿದನಂತೆ ಗಡ ಚಂದ್ರನೆಂ ತನ್ನ ಕೊಂಕಿಂದಂ (ಉದ್ಭದೇ.೨-೨೩). **೪.** ಬೀಸಣಿಗೆ ; ಪಂಖ. [ಸಂ.]

**ಪಕ್ಷಕಾರ** (ನಾ). (ವಕೀಲನಿಗೆ) ತನ್ನ ಪರವಾಗಿ ಕೋರ್ಟಿನಲ್ಲಿ ವಾದಿಸಲು ವಕಾಲತ್ತು ಕೊಟ್ಟಿರುವವನು ; ಕಕ್ಷಿಗಾರ :

ಅದಾರೋ ಒಬ್ಬರು ಬಾಗಿಲನ್ನು ತೆರೆಯುತ್ತ ಒಳಬಂದರು. ಪಕ್ಷಕಾರರಿರದೆ ಬೇರಿನ್ನಾರಿರಬೇಕು ! (ವೊಪಾಸಾ. ೪೧). [ಸಂ.]

**ಪಕ್ಷಕುತ್ಕೀಳ** (ನಾ). ಪಕ್ಕದ ಸಣ್ಣ ಬೆಟ್ಟ; ಕಿರುಬೆಟ್ಟ,—ಗುಡ್ಡ : ನಗನಿಕರಂ ಪಕ್ಷಕುತ್ಕೀಳಮೆಂಬಂತಿರೆ . . . ಕಱಿದುದು ಬಹಳಾಸಾರಮಂ ನೀರದೌಘಂ (ಚಂದ್ರಪು. ೪–೪೧). [ಪಕ್ಷ+ಕುತ್ಕೀಳ(<ಕುತ್ಕೀಲ)]

**ಪಕ್ಷಗಜ** (ನಾ). ಪಕ್ಕದ ಆನೆ ; ಒಂದು ಗಜದ ಜೊತೆಯಲ್ಲಿ ಬರುತ್ತಿರುವ ಗಜ ; ಒತ್ತಿನ ಆನೆ : ಆಗಳ್ ಸೈನ್ಯಾಧಿನಾಥನಧಿನಾಥನ ಕೆಲದೊಳ್ ಪಕ್ಷಗಜಾಧಿರೂಢನಾಗಿ . . . ಅನೇಕದೇಶಾಧೀಶಬಲಂಗಳಂ ಬೇಱವೇಱ ತೋಱುತ್ತಂ ಬರ್ಪನ್ನೆಗಂ (ಆದಿಪು. ೧೩–೪೫ ವ) ; ಸನತ್ಕುಮಾರಮಾಹೇಂದ್ರಪತಿಗಳಿಂದ್ರಾಯುಧೋಪಮಾನರಾಥ್ಯರ್ಮಣಿಮಯೂಖಮಾಳಿಕಾದುರಾಲೋಕನನಕ್ಷತ್ರಮಾಳಾಕಳಾಪ ಕಕ್ಷಂಗಳಪ್ಪ ಪಕ್ಷಗಜಂಗಳನೇಱ . . . ಚಾಮರಂಗಳನಿಕ್ಕೆಯುಂ (ಶಾಂತಿಪು. ೧೦–೧೩ ವ). 'ಪಕ್ಕಸಾರಿ' ಪರಾ. [ಪಕ್ಷ+ಗಜ]

**ಪಕ್ಷಘಾತ** (ನಾ). ರೆಕ್ಕೆಯ ಹೊಡೆತ,—ಬಡಿತ : ಭೃಂಗೀಶ್ವರಂ ಬೇಡೆ ಖಗವಲ್ಲಭಂ ಪತಿನಿರೂಪವನೊಮ್ಮೆಯುಂ ಮೀರ್ವನಲ್ಲೆಂದತಿಕ್ರಮಿಸಿ ನಡೆಯಲಾ ಪಕ್ಷಘಾತದೊಳಾತನಳವಳಿದನು (ಜೈಮಿಭಾ. ೧೪–೧೯). [ಪಕ್ಷ+ಘಾತ$_2$]

**ಪಕ್ಷಜ** (ನಾ). ಚಂದ್ರ ; ಶಶಿ. [ಸಂ.]

**ಪಕ್ಷತಿ**(ನಾ). ೧. ರೆಕ್ಕೆಯ ಬುಡ ; ಪಕ್ಷದ ಮೂಲ : "ಪಕ್ಷಮೂಲಂ, ಪಕ್ಷತಿಃ —ಈ ೨ ಎಱಕೆಯ ಮೊದಲ್" (ಹಲಾಯು. ೪೦–೮೬) ; ಅಳಿಕುಳಪಕ್ಷತಿಕ್ಷಿಪಿತಪದ್ಮಪರಾಗಪರಾಗಮುದಕೋಕಿಳಕಳನಾದಬೃಂಹಿತಂ . . . ಕೋಮಳಮಳಯಾನಿಳಾಂಗಜಗಜಂ ಪರಿದತ್ತಿದಿರೊಳ್ ಮಹೀಶನಾ (ರಾಜಶೇ. ೧೦–೧೫). ೨. ಪಕ್ಷದ ಮೊದಲನೆಯ ದಿನ ; ಪಾಡ್ಯ : "ಪಕ್ಷತಿ, ಪ್ರತಿಪಚ್ಛಬ್ದಗಳು ಪಾಡ್ಯಮಿಯ ಹೆಸರು" (ಗುರುಬಾ. I, ೪೬). [ಸಂ.]

**ಪಕ್ಷತ್ಯಾಗ** (ನಾ). ೧. ಗುಂಪನ್ನು ಬಿಡುವುದು ; ಕೂಟವನ್ನು ತ್ಯಜಿಸುವುದು. ೨. [ರಾಜನೀ] ಯಾವುದಾದರೂ ವೈಮನಸ್ಯದಿಂದ ತಾನು ಸದಸ್ಯನಾಗಿದ್ದ ರಾಜಕೀಯ ಪಕ್ಷವನ್ನು ಬಿಟ್ಟು ಹೋಗುವುದು,—ಬಹಿಷ್ಕರಿಸುವುದು : "ಯಾವುದಾದರೂ ವಿಷಯದಲ್ಲಿ ಸರಿಬೀಳದೆ ಒಂದು ಪಕ್ಷಕ್ಕೆ ಸೇರಿದ ಕೆಲವರು ಆ ಪಕ್ಷವನ್ನು ಬಿಟ್ಟು ಹೋಗುವುದು: ಪಕ್ಷತ್ಯಾಗ" (Cave. ೩೦೮೫). [ಪಕ್ಷ+ತ್ಯಾಗ]

**ಪಕ್ಷದ್ಯೋತ** (ನಾ). [ನಾಟ್ಯ] ಮೂವತ್ತು ನೃತ್ತಹಸ್ತಗಳಲ್ಲಿ ಒಂದು;"ಎರಡು ತ್ರಿಪತಾಕಹಸ್ತಗಳ ಬೆರಳುಗಳು ಎದುರಾಗಿರುವಂತೆ ಅಂಗೈಗಳನ್ನು ಮೇಲಕ್ಕೆ ಮಾಡಿ ಬೆರಳುತುದಿಗಳನ್ನು ಸೊಂಟದಲ್ಲಿಟ್ಟು ಮತ್ತೆ ಬೆರಳುಗಳನ್ನು ಮೇಲಕ್ಕೆ ನೀಡಿ ಹಿಮ್ಮುಖವಾಗಿ ಕೈಗಳನ್ನು ಅಲ್ಲೇ ನಿಲ್ಲಿಸುವುದು" (ಲಾಸ್ಯರಂ. ೨೫೨ ಗದ್ಯಾನುವಾದ) : ಬರಿಯೆರಡಕೆ ತ್ರಿಪತಾಕದ ಕರಮುವು ಮೇಲ್ಮೊಗಗಳಾಗಿ ಬೆರಲಭಿಮುಖಮಾಗಿರೆ ಮೇಣೂರ್ಧ್ವಾಂಗುಲಿಗಳ್ ಪರಾಙ್ಮುಖಂ ತಾನದಾಗೆ ಪಕ್ಷದ್ಯೋತಂ (ಲಾಸ್ಯರಂ. ೨–೬೨). [ಸಂ.]

**ಪಕ್ಷದ್ವಯ** (ನಾ). ೧. ರೆಕ್ಕೆಗಳ ಜೋಡಿ ; ಎರಡು ರೆಕ್ಕೆಗಳು. ೨. ಒಂದು ತಿಂಗಳಲ್ಲಿ ಬರುವ ಎರಡು ಪಕ್ಷಗಳು : ಈ ಸ್ಥಾನಗಳ ಭೇದವರಿತು . . . ಬಲ ಎಡವೆಂಬ ಪಕ್ಷವನ್ನೂ ಕೃಷ್ಣ ಶುಕ್ಲವೆಂಬ ಪಕ್ಷದ್ವಯಗಳ ನಿರುಗೆಯ ತಾಣ ವಿವರಗಳನ್ನೂ . . . ಪುರುಷನು ತಿಳಿದೆಸಗುವುದು (ಸಕವೈ. ೬೦). [ಪಕ್ಷ+ದ್ವಯ]

**ಪಕ್ಷದ್ವಾರ** (ನಾ). =ಪಕ್ಷಕ ೧: "ಪಕ್ಷದ್ವಾರಂ, ಪಕ್ಷಕಃ ೨–ದಿಡ್ಡಿಬಾಗಿಲ ಹೆಸರು. ರೆಕ್ಕೆಬಾಗಿಲು. ಬಾಗಿಲ ಕದದೊಳಗಾಗಲೀ ಸಮೀಪದೊಳಗಾಗಲೀ ಮಾಡಲ್ಪಟ್ಟಿರುವ ಚಿಕ್ಕ ಬಾಗಿಲು" (ಸಿದ್ಧಾಂತಿ. ೧೦೨). [ಪಕ್ಷ+ದ್ವಾರ]

**ಪಕ್ಷಧರ** (ಗು). ೧. ರೆಕ್ಕೆಯನ್ನು ಹೊಂದಿರುವ : ನೋಡೆನ್ನ ಪಕ್ಷಧರಚತುಷ್ಪಾದಿಯಿದು ಬಡಿಯತೊಡಗಿರ್ದಪುದು ಅಭ್ರಾವಕಾಶಮನ್ ಅಗಲಿತೆಱಕೆಗಳಿಂದೆ (ಬದ್ಧಪ್ರ. ೨೨–೪೫೩). (ನಾ). ೨. ರೆಕ್ಕೆಯನ್ನು ಹೊಂದಿರುವುದು ; ಪಕ್ಷಿ. [ಸಂ.]

**ಪಕ್ಷಧರೆ** (ನಾ). ರೆಕ್ಕೆಯನ್ನು ಧರಿಸಿರುವವಳು : ಅವರ ತಂಗೆಯರ್ ಮೂವರ್, ಪಕ್ಷಧರೆಯರ್ (ಬದ್ಧಪ್ರ. ೪೨–೯೧೬). [ಸಂ. ಪಕ್ಷಧರಾ]

**ಪಕ್ಷಪದ್ಧತಿ** (ನಾ). [ರಾಜನೀ] ಚುನಾವಣೆಯಲ್ಲಿ ಬಹುಮತಗಳಿಸಿರುವ ರಾಜಕೀಯ ಪಕ್ಷವು ರಾಷ್ಟ್ರವನ್ನು ಆಳುವ ಪದ್ಧತಿ,—ವ್ಯವಸ್ಥೆ : ಇಂದಿನ ಪಕ್ಷಪದ್ಧತಿಯ ಆಳಿಕೆಯ ಕಾಲದಲ್ಲಂತೂ "ರಾಜಾಶ್ರಯ"ವು ಎಚ್ಚರಿಕೆಯಿಂದಿರದಿದ್ದರೆ, ಅಪಾಯಕಾರಕವೆ ಆಗಬಹುದು (ಭಾರದ. ೫೬೫). [ಪಕ್ಷ+ಪದ್ಧತಿ]

**ಪಕ್ಷಪರಿತ್ಯಾಗ** (ನಾ). ವಾದ ಮಾಡುವಾಗ ತನ್ನ ಪಕ್ಷವನ್ನು ಸಾಧಿಸಲಾರದೆ ಅದನ್ನು ಕೈಬಿಡುವುದು : ಪ್ರತಿವಾದಿ ನಿರುತ್ತರನಾಗಿ ಪಕ್ಷಪರಿತ್ಯಾಗಂ ನಿಗ್ರಹಸ್ಥಾನಮೆಂಬುದಱಂ ನಿಗ್ರಹಸ್ಥಾನಮನೆಯ್ದಿಯುಮಿರದೆ (ಶಾಂತಿಪು. ೮–೧೪೧ ವ). [ಪಕ್ಷ+ಪರಿತ್ಯಾಗ]

**ಪಕ್ಷಪಾತ** (ನಾ). ೧. ಹಕ್ಕಿಗಳ ರೆಕ್ಕೆಗಳು ಉದುರುವಿಕೆ,—ಗರಿಗಳು ಕೆಳಕ್ಕೆ ಬೀಳುವಿಕೆ. ೨. ರೆಕ್ಕೆ ಬಡಿಯುವಿಕೆ. ೩. ಒಂದು ಕಡೆಗೆ ಹೆಚ್ಚು ಪ್ರೀತಿಯನ್ನು ತೋರಿಸುವುದು ; ಒಂದು ಪಕ್ಷವನ್ನು ವಹಿಸಿಕೊಳ್ಳುವುದು ; ಒಬ್ಬರಲ್ಲಿ ಹೆಚ್ಚು ಒಲವನ್ನು ತೋರಿಸುವುದು ; ಒಲವರ : ಎನಿತೊಂದು ಪಕ್ಷಪಾತಮೊ ವನಿತೆಯರಂ ಮಾಡುವೆಡೆಯೊಳಬ್ಜಭವಂಗೆ (ಕಾದಂಉ. ೨೩೯) ; ಇವರದಾವನ ಪಕ್ಷಪಾತವ್ಯವಹರಣೆಯವರಲ್ಲ ಕೇಳಿನ್ನಿವರ ನುಡಿಗಳನು (ಕುವ್ಯಾಉ. ೯–೧೪) ; ಶಿಷ್ಯರ ಯೋಗ್ಯತೆಯನರಿದು ಪಕ್ಷಪಾತಗಳಿರದೆ ಬೋಧಿಸಿ ರಕ್ಷಿಸುವನುತ್ತಮನು (ಗಗತಾ. ೧೩–೧೩) ; ಅರ್ಜುನನಲ್ಲಿ ಅವರಿಗೆ ಪಕ್ಷಪಾತವಿತ್ತು (ವಚಭಾ. ೨೯೨); ಅವನು ಪಕ್ಷಪಾತವಿಲ್ಲದೆ– ತಡಮಾಡದೆ, ತೀರ್ಪು ಕೊಡುತ್ತಾನೆ (ವೀರಯೋ. ೫೫). ೨, ೩ : ಮತ್ತಂ ದಾನಹೀನತೆ ಕರಿಣಿಗಣಂಗಳೊಳ್ ಪಕ್ಷಪಾತಂ ಶಿಶಿರಸಮಯಶ್ಯಾಮಕಂಠಂಗಳೊಳ್ ದೋಷಾನುಬಂಧಂ ದ್ವಿಜರಾಜನೊಳ್ . . . ಜಡವೃತ್ತಿ ವರ್ಷಕಾಲದೊಳಲ್ಲದಿಲ್ಲಂ (ಶಾಂತೀಶ್ವ. ೧೩–೧೩೭ ವ).

**ಪಕ್ಷಪಾತ ಮಾಡು** = ಒಬ್ಬರಿಗೊಂದು, ಇನ್ನೊಬ್ಬರಿಗೊಂದು ಮಾಡು ; ಭೇದಭಾವ ತೋರಿಸು : ತಂದೆಯೆ ಮಕ್ಕಳಲ್ಲಿ ಪಕ್ಷಪಾತ ಮಾಡಿದರೆ ಏನು ಮಾಡುವುದು ? (ರೂಢಿ). [ಪಕ್ಷ+ಪಾತ$_1$]

**ಪಕ್ಷಪಾತವಿಧಿ** (ನಾ). [ರಾಜನೀ] ಸರಕುಗಳನ್ನು ವಿದೇಶಕ್ಕೆ ಕಳುಹಿಸುವ ಸಂದರ್ಭದಲ್ಲಿ ತೆರಿಗೆ ಹಾಕುವ ವಿಷಯದಲ್ಲಿ ಪಕ್ಷಪಾತವನ್ನು ತೋರಿಸುವ ಬಗ್ಗೆ ದೇಶವು ಮಾಡಿಕೊಂಡಿರುವ ನಿಯಮ,— ಕಾನೂನು : ಈ ತರಹದ 'ಕಸ್ಟಮ್ಸ್ ಸಂಘ' ಮತ್ತು 'ನಿರಾತಂಕ ವ್ಯಾಪಾರ ಕ್ಷೇತ್ರ' ಏರ್ಪಾಡುಗಳನ್ನು ಸಾರ್ವತ್ರಿಕ ಒಪ್ಪಂದದ ಪಕ್ಷಪಾತವಿಧಿಗಳೊಡನೆ (Discriminatory classes) ಸಮನ್ವಯಗೊಳಿಸುವುದು ಅತಿಮುಖ್ಯಪ್ರಶ್ನೆಯಾಗಿದೆ (ಅಂತಸಂ. ೧೭೪). [ಪಕ್ಷಪಾತ+ವಿಧಿ]

**ಪಕ್ಷಪಾತಿ** (ಗು). ೧. ಪಕ್ಷಪಾತವನ್ನು ತೋರಿಸುವ ; ಒಬ್ಬರಿಗೊಂದು, ಇನ್ನೊಬ್ಬರಿಗೊಂದು ಮಾಡುವ ; ಒಬ್ಬರಲ್ಲಿ ಹೆಚ್ಚು ಒಲವನ್ನು ತೋರಿಸುವ,—ಒಲವರ ಮಾಡುವ : ಸ್ಮರಹರನು ಪುರಹರನು . . . ಯಥಾರ್ಥವನೊರೆಯಲೊಲ್ಲನು ಪಕ್ಷಪಾತಿ ಪುರಾಣ

ಭಟ್ಟನಲಾ (ಬಸವು. ೫೭–೨೮). (ನಾ). **೨.** ಪಕ್ಷಪಾತವನ್ನು ಮಾಡುವ ವ್ಯಕ್ತಿ; ಒಲವರ ತೋರಿಸುವ ವ್ಯಕ್ತಿ; ಒಂದು ಪಕ್ಷವನ್ನು ವಹಿಸುವ ವ್ಯಕ್ತಿ: ಆದಿಗಳಿಗಾದಿಗಳು ಕಾಮ ಕ್ರೋಧ ಲೋಭಾದೀಷಣತ್ರಯಸಾಧನಂಗಳು ಮಂದಮತಿಗಳು ಪಕ್ಷಪಾತಿಗಳು . . . ಕುತಾಪಿಗಳು (ಬಸವು. ೪೦–೬೫); ಆ ಚರ್ಚೆಯಲ್ಲಿ ಆನಂದ ಮೋಹಿನಿಯರು ವಿರುದ್ಧ ಪಕ್ಷಪಾತಿಗಳು (ಕನುಸಿ. ೨); ಬಹಿರಂಗವಾಗಿ ಈ ಸಿದ್ಧಾಂತವನ್ನು ವಿರೋಧಿಸಿದರೂ ಅನೇಕರು ಇದರ ಪಕ್ಷಪಾತಿಗಳಾಗಿದ್ದರು (ಜೀವಾತ್ಮ. ೮೫). **೩.** ಅನುಯಾಯಿ.

[ಸಂ. ಪಕ್ಷಪಾತಿನ್]

**ಪಕ್ಷಪ್ರತಿಷ್ಠಾಪನೆ** (ನಾ). (ಶಾಸ್ತ್ರಾರ್ಥವಿಚಾರ ನಡೆಸುತ್ತಿರುವಾಗ) ತನ್ನ ಸಿದ್ಧಾಂತವನ್ನು ಯುಕ್ತಿಪೂರ್ವಕವಾಗಿ ಮಂಡಿಸುವುದು: 'ಪಕ್ಷಪ್ರತಿಷ್ಠಾಪನೆಗೆಯ್' ಪರಾ.

[ಪಕ್ಷ + ಪ್ರತಿಷ್ಠಾಪನೆ]

**ಪಕ್ಷಪ್ರತಿಷ್ಠಾಪನೆಗೆಯ್** (ಕ್ರಿ). ಪಕ್ಷವನ್ನು ಪ್ರತಿಪಾದಿಸು; ಮತವನ್ನು ಮಂಡಿಸು: ಅನೇಕ ಕುನಯೋಪಪತ್ತಿಗಳಿಂ ಪಕ್ಷಪ್ರತಿಷ್ಠಾಪನೆಗೆಯ್ದು ಕವಳಿಗೆಯು ಭಟ್ಟಂ ನುಡಿಯೆ (ಶಾಂತಿಪು. ೮–೧೩೪ ಪ).

[ಪಕ್ಷಪ್ರತಿಷ್ಠಾಪನೆ + ಕೆಯ್$_1$]

**ಪಕ್ಷಪ್ರದೋಷ** (ನಾ). ಪ್ರತಿಪಕ್ಷದ ತ್ರಯೋದಶಿಯಂದು ಹಗಲು ಉಪವಾಸವಿದ್ದು, ರಾತ್ರಿ ಶಿವಪೂಜೆ ಮಾಡುವ ಒಂದು ವ್ರತ: ಪ್ರತಿ ಸೋಮವಾರವೂ ನಕ್ತಭೋಜನ, ಪಕ್ಷಪ್ರದೋಷ, ಶ್ರಾವಣಮಾಸ ೧ ತಿಂಗಳು, ಕಾರ್ತಿಕಮಾಸ ೧ ತಿಂಗಳು, ಶನಿಪ್ರದೋಷ . . . ಈ ಪ್ರಕಾರ ನಡಿಸುತ್ತಿದ್ದನು (ಚಿತ್ರಪಾ. ೫೮). [ಪಕ್ಷ + ಪ್ರದೋಷ]

**ಪಕ್ಷಭಾವನೆ** (ನಾ). [ರಾಜನೀ] ತಾನು ಸದಸ್ಯನಾಗಿರುವ ರಾಜಕೀಯ ತಂಡವೇ ಹೆಚ್ಚು, ಅದೇ ರಾಜ್ಯಭಾರ ಮಾಡಬೇಕು ಎಂಬ ಧೋರಣೆ; ಪಕ್ಷಾಭಿಮಾನ: "ಪಕ್ಷಭಾವನೆ, ಪಕ್ಷಾಭಿಮಾನ" (Party-spirit. ಪತ್ರಿಶ. ೬೧); ಈಗಿನ ಜನನಾಯಕರು ಪಕ್ಷಭಾವನೆಯನ್ನು ಬೆಳಸಿಕೊಂಡಿದ್ದಾರೆ (ರೂಢಿ). [ಪಕ್ಷ + ಭಾವನೆ]

**ಪಕ್ಷಭೇದ** (ನಾ). **೧.** ಒಂದು ಬಣದಲ್ಲಿಯ ಬಿರುಕು,—ಅಂತಃಕಲಹ,—ವೈಷಮ್ಯ. **೨.** ಎರಡು ಪಕ್ಷಗಳ ನಡುವಿನ ವ್ಯತ್ಯಾಸ,—ತಾರತಮ್ಯ. **೩.** ಪಕ್ಷಪಾತ; ಒಲವರ: ಪಕ್ಷಭೇದ ಮಾಡಿದವನಿಗೆ ಶಿಕ್ಷೆ ತಪ್ಪದು (ಗಾದೆ). [ಪಕ್ಷ + ಭೇದ]

**ಪಕ್ಷಭ್ರಮೆ** (ನಾ). ಇವನು ತನ್ನವನು, ಇವನು ಪರ ಎನ್ನುವ ಭ್ರಮೆ; ಪಕ್ಷಪಾತದ ಭಾವನೆ: ಎಮಗೆ ಸರಿಯಿತ್ತಂಡದಲ್ಲಿಯು ಮಮತೆ ಬೇಡಿಬ್ಬರಲಿ ಪಕ್ಷಭ್ರಮೆಯ ಮಾಡೆವು ಹಿತವ ಬಯಸು ವೆವೆರಡುಸಂತತಿಗೆ (ಕುಮ್ಮಾವ್ಯ. ೫–೬). [ಪಕ್ಷ + ಭ್ರಮೆ]

**ಪಕ್ಷಮುಖ** (ನಾ). ಪಕ್ಷದ ಪ್ರಾರಂಭದ ದಿನ; ಪಾಡ್ಯ: ಗಂಗಾದೇವಿಯರ್ಗೆ . . . ನವಮಾಸ ತೀವಿದ ಪಕ್ಷಮುಖಸಮಯದೊಳು . . . ಸುಪುತ್ರನುದ್ಭವಿಸೆ (ಬಸರ. ೧೦–೧೦೩). [ಪಕ್ಷ + ಮುಖ]

**ಪಕ್ಷಮೂಲ** (ನಾ). = ಪಕ್ಷತಿ **೧**: "ಪಕ್ಷಮೂಲಂ, ಪಕ್ಷತಿಃ—ಈ ೨ ಎಱಕೆಯ ಮೊದಲ್" (ಹಲಾಯು. ೪೦–೮೬); "ಪಕ್ಷತಿಃ, ಪಕ್ಷಮೂಲಂ–೨ ರೆಕ್ಕೆಗಳ ಬುಡಕ್ಕೆ ಹೆಸರುಗಳು" (ಸಿದ್ಧಾಂತಿ. ೧೬೪). [ಸಂ.]

**ಪಕ್ಷರಕ್ಷೆ** (ನಾ). = ಪಕ್ಕರಿಕೆ: ಅತಿದೀರ್ಘಘ್ರಾಣಹಸ್ತಂ ನಿಶಿತದಶನ ದಂಷ್ಟ್ರಾಂಕುರಂ ಪಕ್ಷರಕ್ಷಾಯತ ಪಕ್ಷತಾರ್ಕ್ಷ್ಯನಂತೊವಗಿಸಿ ತುಳಿಯೆ ತನ್ನಾನೆ (ಎಕ. V, ಬೇಲೂರು. ೧೭–೩; 1136). [ಪಕ್ಷ + ರಕ್ಷೆ]

**ಪಕ್ಷವಂಚಿತ** (ನಾ). [ನಾಟ್ಯ] ಮೂವತ್ತುಬಗೆಯ ನೃತ್ತಹಸ್ತಗಳಲ್ಲಿ ಒಂದು; "ಎರಡು ತ್ರಿಪತಾಕಹಸ್ತಗಳ ಬೆರಳುತುದಿಗಳನ್ನು ಸೊಂಟದಲ್ಲಿರಿಸುವುದು" (ಲಾಸ್ಯರಂ. ೨೫೨ ಗದ್ಯಾನುವಾದ): ಮತ್ತಾತ್ರಿಪತಾಕಂಗಳ್ ಬಿತ್ತರದಿಂ ತುದಿಗಳಿಂದೆ ಕಟಿಗಳನೊಂದಲ್ ವೃತ್ತಸ್ತನದಳೆ ಕೇಳಿದುಮತ್ತಂತೋನ್ನತದ ಪಕ್ಷವಂಚಿತಮಕ್ಕುಂ (ಲಾಸ್ಯರಂ. ೨–೬೧).

[ಸಂ.]

**ಪಕ್ಷವಧ** (ನಾ). ಶರೀರದ ಒಂದು ಪಾರ್ಶ್ವವನ್ನು ನಿಶ್ಚೇತನಗೊಳಿಸುವ ಒಂದು ಬಗೆಯ ರೋಗ; ಪಾರ್ಶ್ವವಾಯು; ಲಕ್ವ: ಸಾಂತೂರು ದೇಜಪ್ಪಸೆಟ್ಟಿಗೆ ಇದ್ದಕ್ಕಿದ್ದಂತೆ 'ಪಕ್ಷವಧ' ಬಡಿಯಿತೆಂಬ ಕೆಡುಸುದ್ದಿ ವೇಣೂರಿಗೆ ಮುಟ್ಟಿದೊಡನೆ ಬಾಳಪ್ಪಸೆಟ್ರು ಸಿದ್ದಣ್ಣನನ್ನು ಕರೆದುಕೊಂಡು ಅಲ್ಲಿಗೆ ಧಾವಿಸಿದರು (ಒಡ್ಡಿಉ. ೭೪). [ಸಂ.]

**ಪಕ್ಷವಾತ** (ನಾ). ವಾತರೋಗ; ಸಂಧಿವಾತ: ಕೈಕಾಲುಗಳಿಗೆ ಪಕ್ಷವಾತ ಹಿಡಿದಿರಬೇಕು (ಈಕಥೆ. ೨೬); ಅವಳ ಮಗಳು ಇತ್ತೀಚೆಗೆ ಪಕ್ಷವಾತದಿಂದ ಬಳಲ ತೊಡಗಿದ್ದಳಂತೆ (ಹಳ್ಳಿಹಾ. ೧೦೭). [ಪಕ್ಷ + ವಾತ]

**ಪಕ್ಷವಾಸ** (ನಾ). ಹದಿನೈದು ಅಂಗುಲಗಳ ಅಳತೆಯ ಒಂದು ಬಗೆಯ ಕೋಲಲು: ಬಳಿಕ ಹದಿನೆಂಟಂಗುಲ . . . ಒಂದಂಗುಲ ಪ್ರಮಾಣಿನ ಕ್ರಮವಿಡಿದು ಜಾತಿವಾಸ . . . ಪಕ್ಷವಾಸ . . . ಭುವನಾಧಿಪತಿವಾಸವೆಂಬ ಹದಿನೆಂಟುತೆಱದ ವಾಸಂಗಳ ಲಕ್ಷಣವನಱಿದು (ವಿವೇಕ. ೧೯೧). [ಪಕ್ಷ + ವಾಸ$_1$]

**ಪಕ್ಷಶೂಲೆ** (ನಾ). ಒಂದು ಬಗೆಯ ರೋಗ; ಪಕ್ಕೆಗಳಲ್ಲಿ ಕಾಣಿಸಿಕೊಳ್ಳುವ ನೋವು; ಪಕ್ಕೆಶೂಲೆ: ಪಕ್ಷಶೂಲೆಗೆ:—ವಿಳಂಗ, ತ್ರಿಫಳೆ, ತ್ರಿಕಟುಕ, ಚಿತ್ರಮೂಲ, ಚವ್ಯ . . . ಮೆಲ್ಲಿಸೆ ಪಕ್ಷಶೂಲೆ ತೀರ್ಗುಂ (ವೈವಿ. ೮೯). [ಪಕ್ಷ + ಶೂಲೆ$_1$]

**ಪಕ್ಷಸಂಪುಟ** (ನಾ). ರೆಕ್ಕೆಯ ಒಳಭಾಗ: ಅಂತಶ್ಶ್ರುತಪೂರ್ವಧ್ವನಿಯಂ ತೊಟ್ಟನೆ ಕೇಳ್ದು . . . ಛೀಱಿದಲ್ವೊಕ್ಕಂ ತಂದೆಯ ಶಿಥಿಲಪಕ್ಷಸಂಪುಟದೆಡೆಯೊಳ್ (ಕಾದಂಪೂ. ೧೫೪). [ಪಕ್ಷ + ಸಂಪುಟ]

**ಪಕ್ಷಸಿದ್ಧಿ** (ನಾ). (ಶಾಸ್ತ್ರಾರ್ಥ ವಿಚಾರದಲ್ಲಿ) ಒಂದು ಮತವನ್ನು ಸಾಧಿಸುವುದು; ಯುಕ್ತಿಗಳಿಂದ ತನ್ನ ವಾದವೇ ಸರಿಯೆಂದು ತೋರಿಸುವುದು: ಈಗಳಿಲ್ಲಿಗೇವಿಧೇಯಂ ಮಾಟ್ಪುದೆಂದು ಪೂರ್ವಪಕ್ಷದ ಪಕ್ಷಸಿದ್ಧಿಯ ವಿಸ್ತಾರಕ್ಕವಕಾಶಮುಪ್ಪಂತು ನುಡಿದು (ಶಾಂತಿಪು. ೨–೩೫ ಪ).

[ಪಕ್ಷ + ಸಿದ್ಧಿ]

**ಪಕ್ಷಾಂತ** (ನಾ). ಪಕ್ಷದ ಕೊನೆಯ ದಿನ; ಪೌರ್ಣಿಮೆ ಅಥವಾ ಅಮಾವಾಸ್ಯೆ: "ಪಕ್ಷಾಂತೌ, ಪಂಚದಶ್ಯೌ—ಈ ೨ ಅಮಾವಾಸ್ಯೆ ಹುಣ್ಣಿಮೆಗಳ ಹೆಸರುಗಳು" (ಸಿದ್ಧಾಂತಿ. ೩೬). [ಪಕ್ಷ + ಅಂತ$_2$]

**ಪಕ್ಷಾಂತರ** (ನಾ). **೧.** ಬೇರೊಂದು (ರಾಜಕೀಯ) ಪಕ್ಷ. **೨.** ಒಂದು (ರಾಜಕೀಯ) ಪಕ್ಷವನ್ನು ಬಿಟ್ಟು ಮತ್ತೊಂದು ಪಕ್ಷಕ್ಕೆ ಸೇರುವಿಕೆ: ಪಾರ್ಟಿ, ಪಕ್ಷ, ಗುಂಪುಗಾರಿಕೆ, ಪಕ್ಷಾಂತರ ನನ್ನೂರಿನಲ್ಲಿಯೂ ಯೋಗ್ಯತಾನುಸಾರ ಇವೆ (ನನ್ನೂರು. ೩೧೬). **೩.** ಒಂದು ವೇಳೆ, ಹೀಗಾದರೆ ಎಂಬರ್ಥ; ವಿಕಲ್ಪಾರ್ಥ: ಪಿರಿದುಂ ಪಕ್ಷಾಂತರಮುಂ ನಿರವಿಪೆಕಾರಂ ನಿಜಾಂತಮಾದೊಡೆ ಶಬ್ದಂ ಪರಿಕಿಸೆ ಧಾತ್ವಂತ್ಯದೊಳಾವರಿಸಿರ್ಕುಂ ಲಿಂಗವಚನಪುರುಷಾಯತ್ತಂ (ಶಮದ. ೨೫೦).

ಪಕ್ಷಾಂತರಗೊಳ್ಳು = ಒಂದು (ರಾಜಕೀಯ) ಪಕ್ಷವನ್ನು ಬಿಟ್ಟು ಮತ್ತೊಂದು ಪಕ್ಷಕ್ಕೆ ಸೇರಿಕೊಳ್ಳು: ಆಡಳಿತಪಕ್ಷದ ಹದಿನೈದು ಮಂದಿ ಸದಸ್ಯರು ಪಕ್ಷಾಂತರಗೊಂಡಿದ್ದರಿಂದ ಅದು ಬಹುಮತವನ್ನು ಕಳೆದುಕೊಂಡಿತು (ರೂಢಿ). **ಪಕ್ಷಾಂತರ ಮಾಡು** = ಪಕ್ಷಾಂತರಗೊಳ್ಳು: ಅವರು ಪಕ್ಷಾಂತರ ಮಾಡಿ ಅಧಿಕಾರಕ್ಕೆ ಬಂದರು (ರೂಢಿ). **ಪಕ್ಷಾಂತರ ಹೊಂದು** = ಪಕ್ಷಾಂತರಗೊಳ್ಳು: ಅವರು ನಿರೋಧ

ಪಕ್ಷದಲ್ಲಿದ್ದು ಉಪಯೋಗವಿಲ್ಲವೆಂದು ಆಳುವ ಪಕ್ಷಕ್ಕೆ ಪಕ್ಷಾಂತರ ಹೊಂದಿದರು (ರೂಢಿ). [ಸಂ.]

**ಪಕ್ಷಾರ್ಥ** (ನಾ). = ಪಕ್ಷಾಂತರ ೩ : ಒಡೆ—ಪಕ್ಷಾರ್ಥವನ್ನು ತಿಳಿಸುವಾಗ ಧಾತುವಿಗೆ ಸಾಮಾನ್ಯವಾಗಿ ಭೂತಭವಿಷ್ಯತ್‌ಕಾಲಸೂಚಕ ಪ್ರತ್ಯಯಗಳ ಮುಂದೆ ಒಡೆ ಎಂಬ ಪ್ರತ್ಯಯವು ಸೇರುತ್ತದೆ (ಕೈಪಿಡಿ.೫೦).

**ಪಕ್ಷಾರ್ಥದ ರೂಪ** = ಪಕ್ಷಾರ್ಥವನ್ನು ತಿಳಿಸುವ ರೂಪ: ಸಾಪೇಕ್ಷಕ್ರಿಯಾರೂಪಗಳಿಗೆ ಕಾಲಭೇದ, ಅರ್ಥಭೇದಗಳು ಮಾತ್ರ ಉಂಟು. ಉದಾಹರಣೆಗೆ . . . 'ಹೊರಟರೆ' ಎಂಬುದಕ್ಕೆ ಪಕ್ಷಾರ್ಥದ ರೂಪವೆಂದೂ 'ಹೊರಡಲು' ಎಂಬುದಕ್ಕೆ ಭಾವಾರ್ಥದ ರೂಪವೆಂದೂ ಹೆಸರು (ಮಧ್ಯಮ. ೭೫). [ಪಕ್ಷ + ಅರ್ಥ]

**ಪಕ್ಷಾವೇಶಿ** (ನಾ). ಒಂದು ಪಕ್ಷವನ್ನು ಕುರಿತು ಉದ್ವೇಗವನ್ನು ಹೊಂದಿರುವವನು,—ತೀವ್ರವಾದ ಅಭಿಮಾನವನ್ನು ಹೊಂದಿರುವವನು : ನಾವಲೇ ಕೌರವನ ಪಕ್ಷಾವೇಶಿಗಳು ಸಾಕಿನ್ನದಂತಿರಲಿ (ಕುಪ್ಯಾಗ. ೬-೬). [ಸಂ. ಪಕ್ಷಾವೇಶಿನ್]

**ಪಕ್ಷಾಳ** (ನಾ).(?) : ದಿನನಾಥಂ ಮಕರಕ್ಕೆ ಬರ್ಪ ಪದದೊಳ್ ಪಕ್ಷಾ(ಕಲ್ಪಾ)ಳಯೊಳ್ ಸೌಮ್ಯಚಂದ್ರನಿರಲ್ ದ್ವಾದಶದಲ್ಲಿ ಭಾನುಜನಿರಲ್ ಮೇಣಿಂದುವಂ ಮಂತ್ರಿ ಮೆಲ್ಲನೆ ಷಟ್ಸಪ್ತಕದಲ್ಲಿ ಭಾನು ಶಶಿಗಳ್ ಕುಳ್ಳಿರ್ದೊಡಂ ಮತ್ತೆ ಮೇದಿನಿಯೊಳ್ ಭಾವಿಪೊಡಕ್ಕುಮಲ್ಪಫಲಮುಂ (ಜಿಟ್ಟಮ. ೮-೨೦೨). [?]

**ಪಕ್ಷಿ** (ನಾ). ರೆಕ್ಕೆಗಳನ್ನು ಹೊಂದಿರುವ (ಆಕಾಶದಲ್ಲಿ ಹಾರುವ ಶಕ್ತಿಯುಳ್ಳ)ಜೀವಿ; ಹಕ್ಕಿ: "ಪತತ್, ಪತಂಗಃ . . . ಪಕ್ಷೀ . . . ದ್ವಿಜಃ—ಈ ೨೬ ಹಕ್ಕಿ" (ಹಲಾಯು. ೪೦-೮೫) ; ಚಕಿತೋದ್ಯತ್ಪಕ್ಷಿಪಕ್ಷಸ್ವನದೊಳಮುರ್ದ ಕೋಳಾಹಳಧ್ವಾನದಿಂ ಕೊರ್ವಿ (ಕಾದಂಪೂ. ೧೫೩) ; ಚರಿಪಾರಣ್ಯದ ಪಕ್ಷಿಗೊಂದು ತರು ಗೊಡ್ಡಾಗಲ್ ಫಲಂ ತೀವಿದಾ ಮರಗಳ್ ಪುಟ್ಟವೆ (ಸೋಮೇಶ. ೨೬) ; ಪಕ್ಷಿ ಮೊದಲಾಗಿ ಭವದುಃಖಕ್ಷಯಕಾರಣಮಿದೆಂದು ತನ್ನಯ ಶಿಶುವಂ ರಕ್ಷಿಸುತಿರ್ದಪುದು (ದಶಕು. ೧-೫೮) ; ಪಕ್ಷಿಗೆ ಆಕಾಶವೇ ಬಲ, ಮತ್ಸ್ಯಕ್ಕೆ ನೀರೇ ಬಲ (ಗಾದೆ) ; ಪಕ್ಷಿಗೆ ಗೂಡು, ಮಕ್ಕಳಿಗೆ ತಾಯಿ (ಗಾದೆ). [ಸಂ. ಪಕ್ಷಿನ್]

**ಪಕ್ಷಿಗಾವುದ** (ನಾ). ಪಕ್ಷಿಗೆ ಕಾಣಿಸುವಷ್ಟು ದೂರ (?); ಪಕ್ಷಿ ಹಾರುವಷ್ಟು ದೂರ (?) : ಪಕ್ಷಿಗಾವುದಕೊಂದು ಪಟ್ಟಣ ನಿಂತೀತು ಕೇಳಿರಣ್ಣಾ (ಕಾಲಸಂ. ೧೧೧-೨). 'ಅಕ್ಷಿಗಾವುದ' ಪರಾ. [ಪಕ್ಷಿ+ಗಾವುದ]

**ಪಕ್ಷಿಗ್ರಹ** (ನಾ). ಮಕ್ಕಳಿಗೆ ಬರುವ ಒಂದು ಬಗೆಯ ರೋಗ; ಹಕ್ಕಿರೋಗ; ℙ ಪಕ್ಷಿರೋಗದಿಂದ ಪೀಡಿತವಾದ ಶಿಶುವಿಗೆ ಬಹಳ ಬಾಯಾರಿಕೆ, ಜ್ವರ ಇದ್ದು ಓಕರಿಕೆಯುಂಟಾಗುತ್ತದೆ. ಹೊಟ್ಟೆ ಹಸುರಾಗುವುದು. ಕೈಕಾಲು, ಮೈ ಎಲ್ಲವೂ ಬತ್ತುತ್ತವೆ : ಚಪ್ಪೆಸೊಪ್ಪಿನ ರಸವನೂ ಎಣ್ಣೆಯನೂ ಕೂಡಿ ಮಸ್ತಕಕ್ಕೆ ಒತ್ತಿಸಲು ಪಕ್ಷಿಗ್ರಹ ಹರವಹುದು (ವೈದ್ಯಸಾ. II, ೧೪). [ಪಕ್ಷಿ+ಗ್ರಹ]

**ಪಕ್ಷಿಗ್ರಹದೋಷ** (ನಾ). ಪಕ್ಷಿಗ್ರಹವೆಂಬ ರೋಗದಿಂದ ಉಂಟಾಗುವ ಬಾಧೆ,—ತೊಂದರೆ : ಬೇವಿನ ಹೂವು . . . ಬಳ್ಳಿಸುಂಡೆ, ಇವಱ ರಸವನೂ ಎಣ್ಣೆಯನೂ ಕೂಡಿ ಅದಱಲ್ಲಿ ಆ ಬೇರುಗಳ ಅರೆದು ಕದಡಿ ಕಾಸಿ ಅಭ್ಯಂಗವ ಮಾಡಿಸಲು ಪಕ್ಷಿಗ್ರಹದೋಷ ಶಮನವಹುದು (ವೈದ್ಯಸಾ. II, ೧೪). [ಪಕ್ಷಿಗ್ರಹ+ದೋಷ]

**ಪಕ್ಷಿಗ್ರಹಶಂಕೆ** (ನಾ). ಪಕ್ಷಿಗ್ರಹರೋಗದ ಸೂಚನೆ: ಸರ್ವಾಂಗಗಳಲ್ಲಿಯೂ ಬಳಲಿಕೆಯುಂಟಾಗಿ ಇಹುದು. ಕೊರಳು, ಬೆನ್ನು, ನೆತ್ತಿ, ಬಾಯಿ ಕುಳಿ ಬಿದ್ದು ಇಹುದು. ಈ ಲಕ್ಷಣಂಗಳು ಉಂಟಾಗಿ ಇದ್ದರೆ ಇದು ಪಕ್ಷಿಗ್ರಹಶಂಕೆ ಎಂದಱಿವುದು (ವೈದ್ಯಸಾ. II, ೧೨). [ಪಕ್ಷಿಗ್ರಹ+ಶಂಕೆ]

**ಪಕ್ಷಿಜ್ಯೇಷ್ಠ** (ನಾ). ಪಕ್ಷಿಜಾತಿಯಲ್ಲಿ ಹಿರಿಯದು; ಹದ್ದು : "ಪಕ್ಷಿಜ್ಯೇಷ್ಠಂ ಗೃಧ್ರಮೆನೆ ಹದ್ದು" (ಮಂಗರಾ. ೫೨-೯). [ಪಕ್ಷಿ+ಜ್ಯೇಷ್ಠ]

**ಪಕ್ಷಿಣಿ** (ನಾ). ಎರಡು ಹಗಲಿನಿಂದ ಕೂಡಿದ ರಾತ್ರಿ ; ಒಂದೂವರೆ ದಿನ : "ಪಕ್ಷಿಣೀ—ಆಗಾಮಿ ವರ್ತಮಾನಾಹರ್ಯುಕ್ತಾಯಾಂ—ಬರುವ ಹಗಲಿನೊಂದಿಗೂ ಈಗಿನ ಹಗಲಿನೊಂದಿಗೂ ಕೂಡಿದ ನಿಶಿರಾತ್ರಿಯಲ್ಲಿ ವರ್ತಿಸುವುದು, ಅಂದರೆ, ಈಗಿನ ಹಗಲು. ಈ ದಿನ ರಾತ್ರಿ, ನಾಳೆ ಹಗಲು, ಅಂತೂ ೯೦ ಘಳಿಗೆಗಳ ೨ ಹಗಲುಗಳ ಮಧ್ಯೆ ಇರುವ ರಾತ್ರಿಗೆ ಪಕ್ಷಿಣಿಯೆಂದು" (ಸಿದ್ಧಾಂತಿ. ೩೫). [ಸಂ. ಪಕ್ಷಿಣೀ]

**ಪಕ್ಷಿನೋಟ** (ನಾ). ೧. ಪಕ್ಷಿಯು ಹಾರುವ ಎತ್ತರದಿಂದ ಕಾಣುವ ಭೂದೃಶ್ಯ,—ನೋಟ. ೨. ಯಾವುದಾದರೊಂದು ವಿಷಯದ ಸ್ಥೂಲವಾದ ವಿವರಣೆ : ವಿಶಾಲದೃಷ್ಟಿಯ ಪಕ್ಷಿನೋಟದಿಂದ ಮೊದಲು ವಿಷಯವನ್ನು ಸಾಮಾನ್ಯವಾಗಿ ಪರಿಚಯ ಮಾಡಿಕೊಂಡು . . . ಸೂಕ್ಷ್ಮವಾಗಿ ಬೋಧಿಸುವುದು ಉಚಿತವೆಂದು ಈ ನಿಯಮ ಸೂಚಿಸುತ್ತದೆ (ಶಿಕ್ಷದ.೨೧೯); ಅವರ ಉಪನ್ಯಾಸವು ಕಾದಂಬರಿಯ ವಸ್ತುವಿನ ಪಕ್ಷಿನೋಟವಾಗಿತ್ತು (ರೂಢಿ). 'ವಿಹಂಗಮನೋಟ', 'ಹಕ್ಕಿನೋಟ' ಪರಾ. ℙ ಇದು ಇಂಗ್ಲೀಷಿನ 'Bird's eye view' ಎಂಬುದರ ಅನುವಾದ. [ಪಕ್ಷಿ+ನೋಟ]

**ಪಕ್ಷಿಯಾನ** (ನಾ). ೧. ಪಕ್ಷಿಗಳ ಹಾರಾಟ. ೨. ಗರುಡಪಕ್ಷಿಯ ಮೇಲೆ ಪ್ರಯಾಣ ಮಾಡುವವನು ; ವಿಷ್ಣು : ಕಕ್ಷ್ಯದಲ್ಲಿ ಸ್ವರ್ಣಪುತ್ಥಳಿಯ ಪಳಿಯುವ ಪಕ್ಷಿಯಾನತನುಜಸದೃಶ ಪುತ್ರನೆತ್ತುವೆ (ಕಪಾಕುಂ. ೬೦). [ಪಕ್ಷಿ+ಯಾನ]

**ಪಕ್ಷಿರಥ** (ನಾ). = ಪಕ್ಕಿದೇರ : ಪಕ್ಷಿರಥ ಪದ್ಮಭವ ಶಕ್ರ ಸುರಮುಖ್ಯರನು ಆ ಕ್ಷಣದಿ ಕರೆದೊಯ್ದು ತನ್ನ ನಿಜಪುರದೊಳಗೆ ದಕ್ಷ ಯಾಗವನೆಸಗೆ (ಪ್ರೌಢರಾ. ೧-೧೪); ಘನವಕ್ಷ ಪಕ್ಷಿರಥ ಕಮಲಾಕ್ಷ ಕಿನ್ನರಯಕ್ಷಸುರಮುನಿರಕ್ಷ ಸುಜನಾಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ (ಉರರಾ. ೨೦-೨೫). [ಪಕ್ಷಿ+ರಥ]

**ಪಕ್ಷಿರಾಜ** (ನಾ). ಹಕ್ಕಿಗಳ ದೊರೆ ; ಗರುಡ. [ಪಕ್ಷಿ+ರಾಜ]

**ಪಕ್ಷಿವಾಹನ** (ನಾ). ಗರುಡಪಕ್ಷಿಯೇ ವಾಹನವಾಗಿರುವವನು ; ವಿಷ್ಣು : ಪಕ್ಷಿವಾಹನನಂ ಗಜಾಸುರರಾಕ್ಷಸರು ನಿರ್ಜಾಡಿಸಿದಪುದನೀ ಕ್ಷಿತಿಯೆ ಬಲ್ಲುದು (ಬಸಪು. ೫೪-೩೭) ; ಪಕ್ಷಿವಾಹನ ಲಕ್ಷ್ಮೀರಮಣ ಲಕ್ಷ್ಯವಿಟ್ಟು ನೋಡೊ (ಪುರಂದ. ೩-೭-೧) ; ಫಲುಗುಣಂ ಸೇನಾಸಮೂಹಮಂ ಪಿಂದುಳಿಪಿ ರತ್ನನಗರಿಗೆ ಪಕ್ಷಿವಾಹನನ ಕೂಡೆ ನಡೆತಂದನು (ಜೈಮಿಭಾ. ೨೬-೩). [ಪಕ್ಷಿ+ ವಾಹನ]

**ಪಕ್ಷಿಶಕುನಶಾಸ್ತ್ರ** (ನಾ). ಹಕ್ಕಿಗಳ ಚಲನವಲನಾದಿಗಳಿಂದ ಭವಿಷ್ಯದ ಶುಭಾಶುಭಗಳನ್ನು ತಿಳಿಸುವ ಶಾಸ್ತ್ರ : ( Ornithoscopy. ಇಂಕನಿ). [ಪಕ್ಷಿ+ಶಕುನ+ಶಾಸ್ತ್ರ]

**ಪಕ್ಷೀಂದ್ರ** (ನಾ). = ಪಕ್ಷಿರಾಜ : ಪುರಹರಂ ಕೃಪೆಯೊಳವನಂ ಮತ್ತೆ ಸಂತೈಸಿ ಕರೆದು ವೃಷರಾಜಂಗೆ ಬೆಸಸೆ ಬೆಂಬತ್ತಿದಂ ಪಕ್ಷೀಂದ್ರನಂ ನಭದೊಳು (ಜೈಮಿಭಾ. ೧೪-೨೦). [ಪಕ್ಷಿ+ಇಂದ್ರ]

**ಪಕ್ಷೀಕರ** (ನಾ). ಪಕ್ಷಕ್ಕೆ ಸೇರಿದವನು ; ಪಕ್ಷವನ್ನು ವಹಿಸಿದವನು ; ಪಕ್ಷಾವಲಂಬಿ : "ಬರಿ ಮಾಸಾರ್ಧ ಸಮಾಪ ಭಿತ್ತಿ ಗಱಯುಂ ಪಕ್ಷೀಕರಂ ಪಕ್ಷಮಕ್ಕು" (ನಾನಾರ. ೧೧೩). 'ಪಕ್ಷೀಕರಂಗೊಳ್' ಪರಾ. [ಸಂ.]

**ಪಕ್ಷೀಕರಂಗೊಳ್** (ಕ್ರಿ). ಪಕ್ಷಕ್ಕೆ ಸೇರಿದವನಾಗು ; ಪಕ್ಷವನ್ನು ವಹಿಸು,—ಅಂಗೀಕರಿಸು : ಕುಲಮಂ ಗೋತ್ರಮನುರ್ವಿಯುಂ ಬಿರುದುಮಂ ಪಕ್ಷೀಕರಂಗೊಂಡು ತಾನೊಲವಿಂ ತನ್ನವೆನುತ್ತಂ ನಿಂದಿಪಂ ಜೀವನಂಡಲೆದು ಭಕ್ತರ ನಾಲ್ಕುಲಕ್ಷಭವದೊಳ್ಪಂದಲ್ಲಿ ತಾನಾವುದ ಕೊರ್ಲಿವಂ ನಿಂದಿಪನಾವುದಂ (ರತ್ನಾಕ. ೩೦). [ಪಕ್ಷೀಕರ + ಕೊಳ್$_1$]

**ಪಕ್ಷೀಕರಿಸು** (ಕ್ರಿ). ೧. ಪಕ್ಷಪಾತವನ್ನು ತೋರಿಸು; ಪಕ್ಷ ವಹಿಸು: ಈತನಿನಿತರ್ಥಮಂ ಕೊಂಬುದುಚಿತವೆ ಹೇಳು ತಾತ ಪಕ್ಷೀಕರಿಸದೆ (ಹಚಕಾ. ೧೧-೯) ; ಅಕ್ಷರಭೇದವನಱಿಯದೆನಗೆ ಮತ್ತೆ ಲಕ್ಷಣಗಳು ಗೋಚರವೆ ರಕ್ಷಿಸಿದಾತ ದೋಷವನೀ ಕೃತಿಯೊಳು ಪಕ್ಷೀಕರಿಸಿ[ಪಾಠಾಂ. ಪಕ್ಷವಿಲ್ಲದೆ] ಕೇಳುವುದು (ತ್ರಿಪುಸಾಂ. ೨-೨೨); ಮಾತೆ ಪಿತ ಸತಿ ಪುತ್ರ ಬಂಧುವರ್ಗಂ ಗಳೊಳ್ ಪ್ರೀತಿಯಿಂ ಪಕ್ಷೀಕರಿಸದೆ ಶಿವಧರ್ಮಮಾರ್ಗದೊಳು ಸತ್ಪಥಿಕ ರಾಗಿ (ಲಚಿಂ. ೩೮-೨೦೮) ; ಪೆಂಪು ದೀಪಿಸುವೋಜೆವೋದುಗಳೆಂಬಿವು ರಂಗ ನೀ ಪಕ್ಷೀಕರಿಸಿದರ್ಗಳ್ಕು (ಶತಸಾಂ.೫೧-೬೦). ೨. ಸಮಭಾಗಿ ಯಾಗು; ಪಾಲುದಾರನಾಗು. [ಪಕ್ಷೀಕರಣ$_0$ + -ಇಸು$_3$]

**ಪಕ್ಷೀಯ**(ಗು). ೧.ಒಂದು ಗುಂಪಿಗೆ ಸೇರಿದ: 'ದ್ವಿಪಕ್ಷೀಯ' ಪರಾ. (ನಾ). ೨. ಪಕ್ಷಕ್ಕೆ ಸಂಬಂಧಿಸಿದುದು ; ಪಕ್ಷಪಾತದಿಂದ ಕೂಡಿ ದುದು ; ಅಭಿಮಾನದಿಂದ ಕೂಡಿದುದು : ನಮ್ಮಲ್ಲಿಯ ಅನೇಕ ಸುದ್ದಿಗಾರರು "ಶಿಷ್ಟ"ರೆಂದೆನಿಸಿಕೊಂಡು ಸ್ಥಾನಿಕಜೀವನದಲ್ಲಿ ಒಂದೊಂದು ಸ್ಥಾನವನ್ನಾಕ್ರಮಿಸಿದ್ದರಿಂದ, ಅವರ ವರದಿಗಳು ಅನೇಕ ಸಲ ಪಕ್ಷೀಯ ವಾಗಿರುತ್ತವೆ (ಪತ್ರಿಕಾ. ೫೩). [ಸಂ.]

**ಪಕ್ಷೋಪಚಾರ** (ನಾ). ತನ್ನ ಪಕ್ಷದ ಮೇಲಿನ ಆದರ ; ತನ್ನ ಅಭಿಪ್ರಾಯವೇ ಸರಿಯೆಂಬ ದೃಢವಾದ ವಿಶ್ವಾಸ : ಈ ಪರಿಯ ಲೆರಡಟ್ಟೆ ಜಗದಾಳಾಪವನು ಕರ್ಣಾರ್ಜುನರ ಪಕ್ಷೋಪಚಾರ ಪ್ರಕಟ ಕಲಹಕಕೋರಕಳಕಳವ . . . ಪಿತಾಮಹನಱಿದು ಸಂತೈಸಿದನು (ಕುಮ್ಯಾಕ. ೨೨-೧೪). [ಪಕ್ಷ + ಉಪಚಾರ]

**ಪಕ್ಷೋಪವಾಸಿ** (ನಾ). [ಜೈನ] ಹದಿನೈದು ದಿನಗಳು ಸತತವಾಗಿ ಉಪವಾಸ ಮಾಡುವ ವ್ರತವನ್ನು ಕೈಗೊಂಡಿರುವವನು : ಪಕ್ಷೋಪವಾಸಿಗಳ್ಪಾಪಕ್ಷಯಕರಮೂರ್ತಿಗಳ್ಸ್ಗಹಾವಾಸಿಗಳತ್ಯಕ್ಷಂಂಣ ಚರಿತರಿವರೆನ್ದೀ ಕ್ಷಿತಿ ಪೊಗಟ್ದಪುದು ಗೊಹೆಯ ಭಟ್ಟಾರಕರನ್ (ಎಕ. IV, ನಾಗಮಂ. ೬೭-೨ ; ಸು. 1060 ?). 'ಮಾಸೋಪವಾಸಿ' ಪರಾ. [ಸಂ. ಪಕ್ಷೋಪವಾಸಿನ್]

**ಪಕ್ಷ್ಮ** (ನಾ). ೧. ರೆಪ್ಪೆಗೂದಲು ; ಎವೆಗೂದಲು ; ಅಕ್ಷಿರೋಮ: "ನಯನರೋಮಂ ಪಕ್ಷ್ಮಂ" (ವಸ್ತುಕೋ.೭೧-೨೨); ನೀಲದೀರ್ಘಬಾಹು ಳಾಂಚಿತಪಕ್ಷ್ಮನೇತ್ರನುಂ (ಆದಿಪು. ೧೨-೫೬ ವ) ; ಅಕ್ಷಿಗಳ್ [ಬಹುಳ] ಪಕ್ಷ್ಮಂಗಳ್ ಕುರಂಗಾಕ್ಷಿಯಾ (ಗದಾಯು.೮-೫೫); ರಾಮಚಂದ್ರಾಂಗನೆ ನೀಳ್ದ ಕಣ್ಮಲರ್ಗಳಿಂದುಗೆ ಕಣ್ಬನಿಗಳ್ ಮಡಲ್ತು ಪಕ್ಷ್ಮಂಗಳನೊತ್ತಿ (ಪಂಪರಾಮಾ. ೯-೧೦೭); ಆ ಲತಾಂಗಿ ದೃಕ್‌ಪಕ್ಷ್ಮಸ್ಪಂದಮನೆ ಮಾಡುತಂ (ತ್ರಿಪುವಿ. ೨-೧೩೬). ೨. ಹೂವಿನ ಕೇಸರ. ೩. ದಾರದ ತುದಿ. ೪. ರೆಕ್ಕೆ ; ಪಕ್ಷ. [ಸಂ. ಪಕ್ಷ್ಮನ್]

**ಪಕ್ಷ್ಮಪಾತನ**(ನಾ). ರೆಪ್ಪೆ ಹೊಡೆಯುವುದು; ಎವೆಯಿಕ್ಕುವುದು: ವಿಸ್ಮೃತಪಕ್ಷ್ಮಪಾತನಮಪೂರ್ವಾ[ಪಾಠಾಂ.ಪಾತಮನಪೂರ್ವಾ] ಲೋಕನಾ ಕೌತುಕಾಕುಲಿತಾಂತಃಕರಣಂ . . . ನೆರೆದತ್ತಿತ್ತಂ ಪುರಸ್ತ್ರೀಜನಂ (ಆದಿಪು. ೪-೬೦). [ಸಂ.]

**ಪಕ್ಷ್ಮಪಾಳಿ** (ನಾ). ರೆಪ್ಪೆಕೂದಲಿನ ಸಾಲು,—ಪಂಕ್ತಿ : ಅಗ್ರಾ ಧರಪಕ್ಷ್ಮಪಾಳಿ ಪೊಳೆವಾಲಿ ವಿನಿರ್ಮಲಪೂರವಾರಿಯಾಗೆ (ಚಂದ್ರಪು. ೧-೮೨). [ಪಕ್ಷ್ಮ + ಪಾಳಿ$_5$ (= ಪಾಲಿ$_2$)]

**ಪಕ್ಷ್ಮಮಾಲೆ** (ನಾ). = ಪಕ್ಷ್ಮಪಾಳಿ : ಮರಕತಪರ್ಯಂಕದೊಳವಿರ ಳಾಶ್ರುಬಿಂದುಸಂದೋಹದಂತುರಿತ ಪಕ್ಷ್ಮಮಾಲಾಲುಳಿತನೇತ್ರೆಯುಂ . . . ಆಗಿರ್ಪನೆಗಂ (ಚಂದ್ರಪು. ೩-೫೦ ವ). [ಸಂ. ಪಕ್ಷ್ಮಮಾಲಾ]

**ಪಕ್ಷ್ಮಲ** (ಗು). ದಟ್ಟವಾದ ಕೂದಲಿನ ಎವೆಯುಳ್ಳ ; ಸುಂದರ ವಾದ ರೆಪ್ಪೆಯುಳ್ಳ. [ಸಂ.]

**ಪಕ್ಷ್ಮಸ್ಪಂದನ** (ನಾ). = ಪಕ್ಷ್ಮಪಾತನ: ಅರಮನೆಯಂ ಲಕ್ಷ್ಮೀನಿಳಯ ಮನೀಕ್ಷಿಸಿ ಪಕ್ಷ್ಮಸ್ಪಂದನಮನಾರೊ ಮಱೆಯದರದಱಿಗೊಳ್ (ಚಂದ್ರಪು. ೧೧-೮೦). [ಪಕ್ಷ್ಮ + ಸ್ಪಂದನ]

**ಪಕ್ಷ್ಮಾಂತರ** (ನಾ). ರೆಪ್ಪೆಗೂದಲಿನ ಮಧ್ಯಭಾಗ : ಅರಸೀ . . . ನಿನ್ನಯ ಪಕ್ಷ್ಮಾಂತರಲಗ್ನಬಾಷ್ಪಬಿಂದುವನೊರಸುತವಿಂದೆನ್ನ ದುಗುಡವಂ ಪರಿಹರಿಪೆಂ (ಶಾಕುಂತ. ೧೧೦-೧೪೮). [ಪಕ್ಷ್ಮ + ಅಂತರ]

**ಪಕ್ಷ್ಮಾಳಿ** (ನಾ). = ಪಕ್ಷ್ಮಪಾಳಿ : ತುಹಿನಕಣ್ಮಾಧರಜಾತಾಲೋಲೇ ಕ್ಷಣವಿಲಸತ್ಪಕ್ಷ್ಮಾಳೀ ಸಸ್ಮಿತಕೃತನುತ ಚತುರಾಭಿಜ್ಞಮನೋಜ್ಞಾಖಿಲ ವೃಷಭ(ಉದ್ಭದೇ. ೩-೩). [ಪಕ್ಷ್ಮ + ಆಳಿ$_4$( = ಆಲಿ$_4$)]

**ಪಖ್ಖಲೆ** 'ಪಕ್ಕಲೆ' ನೋ.

**ಪಖ್ಖಳ** 'ಪಖ್ಖಾಳ' ನೋ.

**ಪಖ್ಖಾಳ,** ಪಖ್ಖಳ (ನಾ). ತೊಳೆಯುವುದು ; ಶುದ್ಧಿ ಮಾಡು ವುದು : ವರ್ಗದ್ವಿತೀಯಾಕ್ಷರಂಗಳ್ಗೆ — ವಖ್ಖಾಣಂ, ದೆಖ್ಖಾಣಂ (ದೆಖ್ಖಾಳಂ), ಪಖ್ಖಾಳಂ (ಶಮದ. ೧೫ ವೃತ್ತಿ). **ಪಖ್ಖಳ :** ದ್ವಿತ್ವದ ಖಕಾರಕ್ಕೆ—ಪ್ರಕ್ಷಾಲ–ಪಖ್ಖಾಳ, ಪಖ್ಖಳ (ಶಮದ. ೨೫೨ ಪ್ರಯೋ). [<ಪ್ರಾ. ಪಕ್ಖಾಲ./ಸಂ. ಪ್ರಕ್ಷಾಲ]

**ಪಗ** 'ಪಗವು' ನೋ.

**ಪಗಂಟು** 'ಪಗಟು' ನೋ.

**ಪಗಂಡಿಱು** (ಕ್ರಿ). ೧. ಎದ್ದುಕಾಣು ; ಪ್ರಕಟವಾಗು : ನೆಱೆಯೆ ನೆಗತ್ತೆವೆತ್ತುದು ನಿಯೋಗಮಗುಂದಲೆಯಾಯ್ತು ತೇಜಮುಚ್ಚಿಱಿದುದು ಮಿಕ್ಕ ಬಿಚ್ಚತಿಕೆ . . . ದಳಮೋಱಿದುದಕ್ಕರಂ ಪಗಣ್ಡಿಱಿದುದು ಪೌರುಷಂ ಸಫಳಮಾದುದು ಮಾನ್ಯತೆ ಮಾದಿರಾಜನೊಳ್ (ಸೌಇಇ. XI-ii, ೧೪೭-೩೭ ; 1099) ; ಬಱಬಱ ಬತ್ತೆ ಬಾಯ್ ಬೆರಲ ಬಾಸುಟ ಪದ್ಧತಿ ಮಧ್ಯದೊಳ್ ಪಗಂಡಿಱಿದಿರೆ(ಪಂಪರಾಮಾ.೯-೩೦). ೨. ಹಬ್ಬು ; ಹೆಣೆದುಕೊಳ್ಳು ; ವ್ಯಾಪಿಸು : ಆವರಿಸಿರ್ದ ಲತೋತ್ಕರಂ ಪಗಂಡಿಱಿ ವುದು ನಿಂದು ಪಾವನ ತಪೋವನದೊಳ್ (ಚಂದ್ರಪು. ೧೧-೨೦). [ಪಗಂಡು + ಇಱಿ$_1$]

**ಪಗಂಡು** (ನಾ). ೧. ಎದ್ದು ಕಾಣುವಿಕೆ; ಪ್ರಕಟವಾಗುವಿಕೆ; ಚೆನ್ನಾಗಿ ತೋರುವಿಕೆ : 'ಪಗಂಡಿಱಿ' ಪರಾ. ೨. ಹಬ್ಬುವಿಕೆ; ವ್ಯಾಪನ: 'ಪಗಂಡುಗೊಳ್' ಪರಾ. [<ಪ್ರಾ. ಪಗಡ./ಸಂ. ಪ್ರಕಟ]

**ಪಗಂಡುಗೊಳ್** (ಕ್ರಿ). ಹರಡು ; ವ್ಯಾಪಿಸು ; ತೊಡರಿಕೊಂಡು ಹಬ್ಬು : ಒದವಿದ ಕೋಪವಹ್ನಿಯುರಿಯುಂ ಪೊಗೆಯುಂ ನೆಗೆವಂತೆ ಪದ್ಮರಾಗದ ಹರಿನೀಲದುನ್ನುಖವಿಭೂಷಣರಶ್ಮಿ ಪಗಂಡುಗೊಳ್ವಿನಂ (ಪಂಪರಾಮಾ. ೯-೭೩) ; ಮೇದಿನೀರುಹಂಗಳ ತಳದಿನಗ್ರಂಬರಂ ನಿವಿಡಮ ಪರ್ವಿ ಪರಕಲಿಸಿ ಪಗಂಡುಗೊಂಡು ದಾಂಗುಡಿವಿಡಿದೆಲಾಮಾಲತೀ ಮಲ್ಲಿಕಾದಿ ನಾನಾಲತೆಯ ಕಾವಣಂಗಳ್ (ಧರ್ಮನಾ. ೨-೬೧ ವ). 'ಪಗಂಡೇಱು' ಪರಾ. [ಪಗಂಡು + ಕೊಳ್$_1$]

**ಪಗಂಡೇಟ್** (ಕ್ರಿ). = ಪಗಂಡುಗೊಳ್ : ಪರಿದುಬ್ಬಾರಿಸಿ ಪೊಯ್ದೊ ಡಾಂತ ಕರವಾಳ್ಪಾಳೊಳ್ಪಗಂಡೆಟ್ದು ಗಗ್ಗರಿಲೆಂದೆತ್ತುವ ಸುತ್ತುವತ್ತಳಿಪು ಸೂಟಿಗೊಳ್ಸಿಳ್ದು ಪೋಟ್ದುರ್ಮಂ (ಅನಂಪು. ೧೧-೬೦). [ಪಗಂಡು + ಏಟ್$_1$]

**ಪಗಂಶಿವಳ್ಳಿ** (ನಾ). ಒಂದು ಹಳ್ಳಿಯ ಹೆಸರು : ಸಾಲತ್ತ ಕಾಡೇಜುನ ಪೇರೊಟ್ಟಿವಿ ಪಗನ್ತಿವಳ್ಳಿಮೆ ಗೋಸನ್ತನೆ ಕೊಣ್ಡನ್ದಗೆಬಿವಿ . . . ಪಟ್ಟೋಗೆಯು ಮೊದಲುಳ್ ಬಡಗಾಯ್ಪಿಗ್ಗೊಳ್ಳಿಯೆ ಸನ್ದು ಕಾವೇರಿಯುಳ್ ಕೂಡಿತ್ತು ಸೀಮೆ (ಎಕ. IV, ಎಡತೊ. ೬೦-೭೫ ; ಸು. 890).
[ ?+ಪಳ್ಳಿ]

**ಪಗಚೆ** (ನಾ). ಒಂದು ಬಗೆಯ ಸೊಪ್ಪು : ನರುವಲದ ಸೊಪ್ಪು. . . ಹಳಿಕೀರೆಸೊಪ್ಪು, ಪಗಚೆಸೊಪ್ಪು, ಈರುಳ್ಳಿ . . . ಪಥ್ಯದ್ರವ್ಯಗಳೆಂದು ಮತಾಂತರದಲ್ಲಿ ಹೇಳಲ್ಪಟ್ಟಿದೆ (ಸಕವೈ. ೧೦೨). [ ? ]

**ಪಗಟು**, ಪಗಂಟು, **ಪೊಗಟು** (ನಾ). ೧. ಸುಳ್ಳುಮಾತು; ಬಣ್ಣದ ಮಾತು ; ತೋರಿಕೆಯ ಮಾತು : ನಂಬಿಯಣ್ಣಂ ಕೇಳ್ದು ಬಲ್ಲೆ ಬಲ್ಲೆನಿದೆಲ್ಲವಂ ಕೊಳ್ಳಿ ಕೊಳ್ಳಿನೀ ಪಗಟನೆನಗೆ ಸಂಕಿಲಿ ಬೇಡ ಪ್ರಮಾಣ ಪತ್ರವೆ ಸಾಲ್ಗುಂ ಕೊಡುಕೊಡೆಂದು . . . ಸಿಡಿಮಿಡಿಗೊಂಡು (ನಂಬಿರ. ದೇ. ೪೦೦-೯). **ಪಗಂಟು** : ೨. ಮೋಹ; ಮಾಯೆ ; ವ್ಯಾಮೋಹ: ಸಂಸ್ಕೃತಿವಾರ್ಧಿಯೊಳ್ ಜೀವಿಪಾಸೆ ಧನಾಸೆಯೆಂಬ ಪಗಂಟು ಪಣ್ಣಿದ ಕಣ್ಣಿಯಿಂ ಜೀವನಂ ಗಡ ಕಟ್ಟಿ ನೆಟ್ಟನೆ ಕರ್ಮವುಟ್ಟುಗುಮೊರ್ಮೆಯುಂ (ಪರ್ಶ್ವಪು. ೧೨-೯೪). **ಪೊಗಟು** : ೩. ಜಂಬ; ಗರ್ವ; ಸೊಕ್ಕು : ಯಾಕೆಲೊ ರಂಗ ನಿನಗಿಂತು ನಟನೆಯ ಮಾತು ಮಾಕಾಂತ ಕರೆಸಿದರೆ ಬಾರದಿಹ **ಪೊಗಟು**(ಕನಕ. ೮೬ ಅನುಪಲ್ಲವಿ). 'ಪೊಗರ್$_2$' ಪರಾ. [ದೇ.॥ತಮಿ. ಪಕಟ್ಟು ; ತೆಲು. ಪಗಟು]

**ಪಗಡಿ$_1$** (ನಾ). ೧. ತಲೆಗೆ ಸುತ್ತಿಕೊಳ್ಳುವ ರುಮಾಲು ; ಪಾಗು ; ಮುಂಡಾಸು : ಪರಶುರಾಮದೀಕ್ಷಿತನು ಅದನ್ನು ಕೇಳಿ ತನ್ನ ತಲೆಯ ಪಗಡಿಯನ್ನು ತೆಗೆದು ಅಂಗಿಯನ್ನು ಕಳಚಿಬಿಟ್ಟನು (ವಿಧಿವೈ. ೧೨೩) ; ಒಬ್ಬನು ಪಗಡಿಯನ್ನು ಹಾಕಿದ್ದಾನೆ (ಹುಚ್ಚಾಟ. ೧೦) ; ಮುಂದೆ ಕೋಚುಪೆಟ್ಟಿಗೆಯ ಮೇಲೆ, ತಲೆಯಲ್ಲಿ ಓರೆಪಗಡಿಯನ್ನು ಧರಿಸಿ ಕುಳಿತಿರುತ್ತಿದ್ದ ಕೋಚ್‌ಮ್ಯಾನ್ (ನಿಬಂಧ. II, ೩೧) ; ಮಾತ ತಲೆ ತೂಗಿದರೆ ಪಾತಾಳದ ನೀರು ಬಂತು, ತಾತ ತಲೆ ತೂಗಿದರೆ ಪಗಡಿ ಬಿತ್ತು (ಗಾದೆ). ೨. ಶಿರೋಭೂಷಣ : ಪಗಡಿ ಹಾಕಿದ ಗಣಪ್ಪ (ಜೀಪಾಠ.೨೯). ೩. ಗೌರವ ; ಸನ್ಮಾನ; ಮನ್ನಣೆ : ವಿದ್ಯಾಸಾಗರರು ಸಾಹೇಬರಿಂದ 'ಪಗಡಿ' ಸಂಪಾದಿಸಲು ಎಂದೂ ತಲೆ ಬಗ್ಗಿಸಿದವರಲ್ಲ(ನಿಬಂಧ.I,೪೨). 'ಪಗ್ರಿ' ಪರಾ. [←ಹಿಂ. ಮರಾ. ಪಗಡೀ]

**ಪಗಡಿ$_2$**, ಪಾಗಡಿ (ನಾ). ಮನೆ, ಮಳಿಗೆ ಮೊದಲಾದುವುಗಳನ್ನು ಬಾಡಿಗೆಗೆ ತೆಗೆದುಕೊಳ್ಳುವಾಗ ಕೊಡುವ ವಿಶೇಷರೀತಿಯ ಹಣ: ಕಟ್ಟಡ ಪೂರ್ತಿಯಾಗುವುದಕ್ಕೆ ಮುಂಚೆಯೇ ಮೂರು ನಾಲ್ಕು ತಿಂಗಳ ಬಾಡಿಗೆ, ಮೇಲೆ 'ಪಗಡಿ'ಗಳನ್ನೂ ಕೊಟ್ಟು ಚಾತಕಗಳಂತೆ ಕಾದಿರುತ್ತಿದ್ದರು (ಮರ್ಯಾದೆ. ೨೯೭). **ಪಾಗಡಿ** : ಕಡಿಮೆ ಪಾಗಡಿಯಲ್ಲೊಂದು ಮನೆ ಸಿಗುವ ಸಂದರ್ಭವೊದಗಿತು (ನಡೆದಾ. II, ೧೨೩೯). 'ಪಗುದಿ' ಪರಾ. [?./ ಮರಾ. ಪಾಗುಡೀ]

**ಪಗಡೆ$_1$** 'ಪೊಗಡ' ನೋ.

**ಪಗಡೆ$_2$** (ನಾ). ೧. ದಾಳಗಳನ್ನು ಉರುಳಿಸಿ ಅದರ ಗರಗಳಿಗೆ ತಕ್ಕಂತೆ ಹಳದಿ, ಹಸುರು, ಕೆಂಪು ಮತ್ತು ಕಪ್ಪು ಬಣ್ಣದ ನಾಲ್ಕು ತೆರದ ಒಟ್ಟು ಹದಿನಾರು ಕಾಯಿಗಳನ್ನು ಹಾಸಿನ ಮನೆಗಳಲ್ಲಿ ನಡೆಸಿ ಆಡುವ ಒಂದು ಬಗೆಯ ಆಟ; ಮನೋವಿನೋದಕ್ಕಾಗಿ ಅಥವಾ ಪಣವನ್ನು ಒಡ್ಡಿ ಜೂಜಿನಂತೆ ಆಡುವ ಪ್ರಸಿದ್ಧವಾಗಿರುವ ಅಕ್ಷದ ಆಟ : ಸದ್ಭಕ್ತ ದೈವವೆಂದು ಅರ್ಚಿಸುವ ಠಾವಿನಲ್ಲಿ ಮತ್ತತ್ವ ದುಶ್ಚಾರಿತ್ರ ಪಗಡೆ ಪರಿಹಾಸಕತನ ಚಾಟುಲತನ ಗೆಲ್ಲಸೋಲತನ ಇವೆಲ್ಲವ ಬಿಡಬೇಕು (ಮೋಳಿಮಾ. ೫೫-೨೨೫) ; ತತ್ಪುರದಿನಶಶಿವೀಧಿಗಳುನ್ನತಿಕೆಯೊಳೊಪ್ಪುವಡೆದ ಪಗಡೆಯ ನಾಲ್ಗರದಂತೊಪ್ಪಿದುವು (ಜಯಕಾ. ೧-೫೫) ; ಚದುರಂಗ ಪಗಡೆಯ ನಾಡುವನಮ್ಮ (ಷಿರಂದ.'೧-೧೪೦-೬). ಬೇಸಜಿ ತವಿಪೊಡೆ ಪಗಡೆಗೆ ಬಂದ ವಿಲಾಸದ ವಿಟನ ಕೈಪಿಡಿದು (ಕಂನವಿ. ೬-೧೧೭). ೨. ಪಗಡೆಯಾಟದಲ್ಲಿ ದಾಳದ ಮೇಲಿನ ಒಂದು ಎಂಬ ಸಂಖ್ಯೆಯ ಗುರುತು : "(ಪಗಡೆಯಾಟದಲ್ಲಿ ಉಪಯೋಗಿಸುವ) ದಾಳದ ಮೇಲಿನ ಒಂದನೆಯ ಸಂಖ್ಯೆಯ ಗುರುತು; ಪಗಡೆ" (Ace. ಇಂಕನಿ). ೩. ಪಗಡೆಯಾಟದಲ್ಲಿ ಉಪಯೋಗಿಸುವ ದಾಳ; ನೆತ್ತ : "ಅಕ್ಷಃ— ಲೆತ್ತಿ, ಲೆತ್ತ, ಪಗಡಿ ಮುಂತಾದುವು" (ಗಂಗಾಮು. ೨೧). ೪. ಪಗಡೆ ಆಟದಲ್ಲಿ ಉಪಯೋಗಿಸುವ ಕಾಯಿ ; ಪಗಡೆಕಾಯಿ : ಬೇಗ ಬೇಗ ಪಗಡೆ ನಡೆಸು (ರೂಢಿ). ೫. ಒಂದು ಬಗೆಯ ಸೀರೆ ; ಪಗಡೆಕಾಯಿಯಾಕಾರದ ಚಿತ್ರವಿರುವ ಅಂಚು ಅಥವಾ ಪಗಡೆಹಾಸಿನಂತಹ ಪೊಪ್ಪಳಿಯ ವೈಯುಳ್ಳ ಒಂದು ಬಗೆಯ ಸೀರೆ : ಉಚ್ಚಂಗಿ ಬಣ್ಣದ ಜಾವಳಿ ಹುಲ್ಲೆಳೆ ಮೆಂಚ್ಚಿನ ರೇವಣಗಾವಿ ರಚ್ಚಿಗ ವೈರ ಗೆರಟು ಪಗಡೆಯು[ಪಾಠಾಂ. ಪಗಡಸಾಲೆಯು] ಪೂವು ಅಚ್ಚರಿಯೇನ ಬಣ್ಣಿಸುವೆ (ಅಮುಸಾಂ. ೪-೨೧).

**ಪಗಡೆ ನೆತ್ತ, ಪಗಡೆ ಲೆತ್ತ** = ಪಗಡೆಯ ಆಟ : ತಗರ ಕಾದಿಸುವ ಮಲ್ಲರ ಹೋರಿಸುತ್ತಿಹ ಪಗಡೆ ನೆತ್ತಗಳಾಡಿ ನಲಿವ . . . ರಾಜಪುತ್ರರು ಸೊಗಸಿದರಾ ಬೀದಿಯೊಳಗೆ (ಕಂನವಿ. ೨-೭೬) ; ಒತ್ತಿಲಿಹ ನಲ್ಲನಂ ಮಣಿವುತಾಡುವ ಪಗಡೆ ಲೆತ್ತ ಚದುರಂಗಂಗಳಂ ಬಿಸುಟ್ಟೋಡುತಿಹ ಚಿತ್ತಜಾಗಮದೋಲೆಗಳನೊದ್ದು ನೂಂಕಿ (ಚೆಬಪು. ೧೯-೨೮) ; ಪಗಡೆ ಲೆತ್ತ ಚತುರಂಗಯಿರದೆ ದಂಪತಿಗಳಾಡಿದರು (ಸೌಂದಕಾ. ४-೪೬). **ಪಗಡೆಯ ಆಟ** = ಪಗಡೆ$_2$೧ : ಪಗಡೆಯ ಆಟದಲ್ಲಿ ಒಂದು ಕಾಯಿ ಹೋದರೆ ಆಟ ಹೋಯಿತೇ? (ಬಂಕಿಮ. ೧೪೬). **ಪಗಡೆಯ ಕಾಯಿ** = ಪಗಡೆ ಆಟದಲ್ಲಿ ಬಳಸುವ ಕಾಯಿ: ಅಟದಲ್ಲಿ ಒಟ್ಟು ಹದಿನಾರು ಪಗಡೆಯ ಕಾಯಿಗಳಿರುತ್ತವೆ (ರೂಢಿ). **ಪಗಡೆಯ ಕೋಟೆ** = ಪಗಡೆ ಹಾಸಿನ ಮಧ್ಯದಲ್ಲಿರುವ ಹಣ್ಣಾದ ಕಾಯಿಗಳನ್ನು ಇಡುವ ಸ್ಥಳ,—ಚಚ್ಚೌಕವಾದ ಸ್ಥಳ: ಈ ಕಾಯಿ ಪಗಡೆಯ ಕೋಟೆ ಸೇರಿತು (ರೂಢಿ). **ಪಗಡೆಯ ಪಟ್ಟ** = ಪಗಡೆ ಹಾಸು; ಹಾಸಂಗಿ: (ಶ). **ಪಗಡೆಯ ಬೀದಿ** = ಕಾಯಿಗಳನ್ನು ನಡೆಸಲು ಪಗಡೆ ಹಾಸಿನಲ್ಲಿರುವ ಮನೆಗಳ ಸಾಲು. **ಪಗಡೆಯ ಮನೆ** = ಪಗಡೆಯ ಹಾಸಿನಲ್ಲಿರುವ ಚಚ್ಚೌಕವಾದ ಬಣ್ಣಬಣ್ಣದ ಭಾಗ : (ಶ). **ಪಗಡೆಯ ಲೆತ್ತ** = ಪಗಡೆಯ ದಾಳ :"ಅಕ್ಷಂ – ಇಂದ್ರಿಯವು, ಪಗಡೆಯ ಲೆತ್ತಕ್ಕೂ, ಲಂ ಗುಲಗಂಜೀ ತೂಕಕ್ಕೂ, ಬಂಡೀಕಣ್ಣಿಗೂ, ವ್ಯವಹಾರಕ್ಕೂ, ತಾರೇಮರಕ್ಕೂ ಹೆಸರಾದಾಗ ೬" (ಸಿದ್ಧಾಂತಿ. ४೨४). **ಪಗಡೆಯ ಸಾಲು** = ಪಗಡೆಯ ಬೀದಿ : (ಶ). **ಪಗಡೆಯ ಹಾಸು** = ಪಗಡೆಯ ಪಟ್ಟ : ನಮ್ಮ ಮನೆಯಲ್ಲಿ ಹೊಸದಾದ ಪಗಡೆಯ ಹಾಸಿದೆ (ರೂಢಿ). **ಪಗಡೆಯಾಟ** = ಪಗಡೆ$_2$ ೧ : ಒರ್ವ ಜಾಣಂ ಪಗಡೆಯಾಟ ನೆವವಿಂಟ್ಟು ಲೋಲೆಯ್ಯ ಜಜಿದನು (ಚೆಬಪು. ೧೦-४೭) ; ಜನರು ಅಡಿಗಡಿಗೆ ಪಗಡೆಯಾಟ ಮತ್ತು ಇತರ ಜೂಜಾಟಗಳಲ್ಲಿ ಶ್ರದ್ಧೆಯಿಂದ ನಿರತರಾಗಿದ್ದರು (ದಭಾಇ. ೮೧). **ಪಗಡೆಯಾಡು** = ಪಗಡೆಯಾಟವನ್ನು ಆಡು : ಹಾಸಂಗಿಯಂ ಪಚ್ಚೆಯ ವಿದೂಷಕನುರುಳ್ಚಿದಂ ಬಾಲೆಯರ ಮಚ್ಚಿಸುವ ಕಟಕಿವಾತುಗಳ ಜಾಣ್ಮೆಗಳಿಂದೆ ಪಗಡೆಯಾಡುವ ನೆವದೊಳು (ಜೈಮಿಭಾ. ೬-೩೧) ; ರಾಯರು ಪಗಡೆಯಾಡುತ್ತಿದ್ದರು (ರಾಯಕ.೨೭); ಪಗಡೆಯಾಡಿ ಪಾಂಡವರು ಕೆಟ್ಟರು (ಗಾದೆ).

[ದೇ.॥ ತಮಿ. ಪಕಟ್ಟೆ ; ಮಲ. ತೆಲು. ಪಗಡ, ಪಗಡೆ; ತುಳು. ಪಗಡೆ. / ಮರಾ. ಪಗಡಾ]

**ಪಗಡೆಕಾಯಿ** (ನಾ). ಪಗಡೆ ಆಟದಲ್ಲಿ ಉಪಯೋಗಿಸುವ, ಮರ ಮುಂತಾದುವುಗಳಿಂದ ಮಾಡಿದ ಬುಗುರಿಯಾಕಾರದ ಸಾಧನ ; **ಅಕ್ಷ :** ಕುಲಪರ್ವತಗಳು ಪಗಡೆಕಾಯಿಗಳಂತೆ ಕಾಣಿಸುತ (ಸೌಗಂಧಿ. ೨೯೧–೧೮) ; ಶಕುನಿಯು ಅದೇ ಪ್ರಕಾರ ಅವರ ಮೂಳೆಯಲ್ಲಿ ಪಗಡೆ ಕಾಯನ್ನೂ ದಾಳವನ್ನೂ ಮಾಡಿ ಇರಿಸಿಕೊಂಡನು(ಸೀತಿಚಿಂ. VIII, ೯). [ಪಗಡೆ$_2$+ಕಾಯಿ$_4$ (<ಕಾಯ್$_4$)]

**ಪಗಡೆಚಾರಿ** (ನಾ).೧. = ಪಗಡೆಕಾಯಿ. ೨. ಪಗಡೆಯ ಹಾಸು,— ಹಲಗೆ : ಶಾರಿಫಲಕ ಗಜದಂತ ರಚಿತಮಾಗಿ ಕೃಷ್ಣರೇಖೆಗಳಿಂದ ಕೂಡಿ ಎಲ್ಲರಿಗೂ ವಿನೋದವನ್ನುಂಟುಮಾಡುವ ಪಗಡೆಚಾರಿಯಂ ಹಾಸಿ (ಕೃಪಾವಿ. ೩) ; ಅಲ್ಲಿ ಅನೇಕ ಜನ ದೊಡ್ಡಮನುಷ್ಯರು ಸೇರಿದ್ದರು. ಪಗಡೆಚಾರಿ ಹಾಸಿತ್ತು. ಒಂದು ಕಡೆ ಚಾರಿಗೆ ಒಬ್ಬ ನಾಯಕಸಾನಿ ಕೂತಿದ್ದಳು (ಅದೂಟ. ೧೫೩). [ಪಗಡೆ$_2$ + ಚಾರಿ$_1$]

**ಪಗಡೆದಾಳ** (ನಾ). ಪಗಡೆಯಾಟದ ನೆತ್ತ : ಪಗಡೆದಾಳವು ನನಗೆ ಅತಿಶಯುವಾದ ಸಂತೋಷವನ್ನುಂಟು ಮಾಡುತ್ತದೆ (ಯಕ್ಸಾರ.೩೦೪). [ಪಗಡೆ$_2$ + ದಾಳ]

**ಪಗಡೆಮರ** (ನಾ). ಒಂದು ಬಗೆಯ ಮರ : ಪಗಡೆಮರ, ರಂಜ, ಕೇಸರ (ಮೈಔಗಿ. ೫೪–೧೮೧). [ಪಗಡೆ$_1$(<ಪೊಗಡ) + ಮರ$_1$]

**ಪಗಡೆವಾಸು,** ಪಗಡೆಹಾಸು (ನಾ). ಪಗಡೆಯ ಹಾಸು ; ಹಾಸಂಗಿ: ಮುಗುಳ್ನಲ್ಲಿನಾ ರತಿದೇವಿಯರಾಡುವ ನಗರಜನದ ಸಾರಿಯಿರ್ಪ ಪಗಡೆ ವಾಸೆಂದೆನೆ ರವಿಸೋಮವೀಥಿಗಳ್ ಸೊಗಸಿಹವಾ ನಗರಿಯೊಳು (ತ್ರೈಪಾಲ. ೧–೭೫). **ಪಗಡೆಹಾಸು :** ನಮ್ಮ ಮನೆಯ ಪಗಡೆಹಾಸು ಹರಿದುಹೋಗಿದೆ (ರೂಢಿ). [ಪಗಡೆ$_2$+ಹಾಸು$_3$(<ಪಾಸು$_2$)]

**ಪಗಡೆಹಾಸು** 'ಪಗಡೆವಾಸು' ನೋ.

**ಪಗದಸ್ತು,** ಪೊಗದಸ್ತು (ನಾ). ೧. ಸಮೃದ್ಧವಾದುದು ; ಸಮಾಚೀನವಾದುದು : ಇರೋ ತನಕ ಪಗದಸ್ತಾಗಿ ಊಟ ಹಾಕಿ ಬಿಡ್ರಿ (ಮಾಮನೆ. ೧೯೧). ೨. ಅಚ್ಚುಕಟ್ಟು; ಓರಣ ; ಅಣಿ : ಇದಕ್ಕೋಸ್ಕರವೇ ಮನುಷ್ಯನು ಕೋಣೆಯಲ್ಲಿ ಪಗದಸ್ತಾಗಿ ಕುಳಿತಿರುವಾಗ ಬೀಳ್ಕೊಡುಗೆಯ ಏರ್ಪಾಡು ಕಷ್ಟಕರ (ನಿಬಂಧ. II, ೧೭೯). **ಪೊಗದಸ್ತು :** ೧. ಊಟ ತಿಂಡಿಗಳಲ್ಲೂ ಅಷ್ಟೆ, ಸುಂದರರಾಯರ ಪೊಗದಸ್ತು ಪ್ರಸಿದ್ಧವಾಗಿತ್ತು (ಸಂಧ್ಯಾರಾ. ೪೪) ; ಪೊಗದಸ್ತಾಗಿತ್ತು ಕಾಜೊ ಔತಣ (ಹಸುಹೊ. ೩೧೫); ಅವನಿಂದ ಪೊಗದಸ್ತಾಗಿಯೇ ಗಿಟ್ಟಿಸಬಹುದಾಗಿತ್ತು (ಜೀವಯಾ. ೮೨). ೨. ಅಗ ಮಾತಿನ "ಪೊಗದಸ್ತಿ"ನ . . . ಜೊತೆಗೆ ಮುಖದ ಕಾಂತಿ . . . ಪರವಶಗೊಳಿಸುತ್ತಿದ್ದುವು (ಮಹಾಗ. V, ಮುನ್ನುಡಿ). ೩. ದಷ್ಟಪುಷ್ಟ ; ದೃಢಕಾಯ : ಬಂಡೀಪುರದ ಮಗ್ಗುಲಲ್ಲಿ ಸೂಳೇರು ಪೊಗದಸ್ತಾಗಿರುತಾರೆ ಅಂತಾರೆ (ಮಲ್ಲಿ. ೩೦). ೪. ಚೆನ್ನಾದುದು ; ಆಕರ್ಷಕವಾದುದು : ರಾವಣನ ಮೀಸೆಯನ್ನು ಪೊಗದಸ್ತಾಗಿ ಬಣ್ಣಿಸಿದ ಮುದ್ದಣಕವಿ ಅತನ ಮೂಗನ್ನೇಕೆ ಮರೆತನು? (ದೇಕನ್ನೈ. ೧೯). [←ಮರಾ. ಪಗದಸ್ತ]

**ಪಗದಿ** 'ಪಗುದಿ' ನೋ.

**ಪಗರಣ,** ಪಗರಣೆ, ಹಗಣ, ಹಗರಣ$_1$, ಹಗರಣೆ, ಹಗರಣೆ (ನಾ). ೧. ಹತ್ತು ಬಗೆಯ ದೃಶ್ಯಕಾವ್ಯಗಳಲ್ಲಿ ಒಂದು ; ಶೃಂಗಾರರಸಪ್ರಧಾನವಾದ, ಕಲ್ಪಿತವಾದ ಕಥೆಯಿಂದ ಕೂಡಿದ, ಧೀರಶಾಂತನಾಯಕನನ್ನುಳ್ಳ ಒಂದು ಬಗೆಯ ದೃಶ್ಯ ಪ್ರಬಂಧ ; ಪ್ರಕರಣ : ಮಿಗೆ ದುಷ್ಕರಕಾವ್ಯಂಗಳೊಳಗರ್ಹಿತಪ್ರಾಯಮುಕ್ಕುಮಾ ಶ್ರುತಿಕಷ್ಟಂ ಪಗರಣದೊಳುಟಾದ ಮೂಜುಂ ನಗಿಸುಗುಮಪ್ಪುದಱ ನಲ್ಲಿಗಂತವದೋಷಂ (ಕವಿರಾ.೧–೬೮). ೨. ಹೆಚ್ಚು ಹೆಚ್ಚಾಗಿ ಹಾಸ್ಯ ಪ್ರಕರಣಗಳಿಂದ ಕೂಡಿರುವ ದೃಶ್ಯ ; ಯಕ್ಷಗಾನ, ಬಯಲಾಟ ಮುಂತಾದುವು : ಪಗರಣಮಂ ನೋಡುವರಂತೆ ನಗುತ್ತುಮಿಂತೆಂದರ್ (ಧರ್ಮಾಸ್ಮು. ೪–೭೭) ; ಸಂಸ್ಕೃತದ 'ಪ್ರಕರಣ'ವು ಹಾಸ್ಯರಸಪ್ರಧಾನವಾದ 'ಪಗರಣ'ವಾಗಿ ಪರಿಣಮಿಸಿ ಕನ್ನಡನಾಡಿನಲ್ಲಿ ಬಳಕೆಗೆ ಬಂದಿದ್ದಿತೆ ಎಂಬುದು ವಿಚಾರಣೀಯ (ಕವಿರಾ. ೧–೬೮ ಟಿಪ್ಪಣಿ). ೩. ನಾಟಕವೇ ಮೊದಲಾದ ದೃಶ್ಯ : ಪಗೆಯೊಮ್ಮೆ ಕೆಳೆಯನಾಗುವ ನೊಮ್ಮೆ ಕೆಳೆಯನೆ ಪಗೆಯನಾಗುವನದಱಿಂದ ಪಗರಣದಂತಿರ್ದ ಭವದೊಳಿನ್ನಾರಾರ ಬಗೆದೆಣಿಸುವೆನೆಂದರವರು (ಭರಚ. ೬೫–೫೩). 'ನಾಟ್ಪಿಗರಣ' ಪರಾ. ೪. ಗಲಾಟೆ; ಅವಾಂತರ; ಗೊಂದಲ; ಗಲಿಬಿಲಿ ; ರಾದ್ಧಾಂತ: ಕವಿ ಲೋಕದಿಂದಪೇಕ್ಷಿಪ ಕೊಳ್ಳ ಭೋಗಿಪಲ್ಪವುಮೆ ಲಾಭಂ ಜಸಂ ಪೂಜೆಯಿಾ ಪಗರಣದ ಪವಣ ಪೆರ್ವ್ವಸರ್ಗಳಿಂ ಮೆರೆದವುದು (ಸಂಸಪ. ೧೧–೬). ೫. ವೇಷ ; ತೋರಿಕೆ ; ನಟನೆ ; ಪ್ರದರ್ಶನ : ಪಗರಣಮಣ್ಮಮೆಚ್ಚು ಪಸಿಘ್ರ್ಮ್ಮಿಯೆ ಬೂದಿಯಿಂ(ಂ) ಬೊಟ್ಟು ಗಣ್ಣವಾತುಗಿಬಗಿ ಕೀರ್ತಿ ಕುಪ್ಪಕುಱು ಮುತ್ತರ ಮೂದಲೆ ಪೆಂಪು ವಿಕ್ರಮಂ ಭಗವತಿಯೇಱು (ಸೌಇಇ. XI–i, ೫೨–೩೩ ; 1007).

**ಪಗರಣೆ :** ೬. ಲೀವಿ ; ಬೆಡಗು ; ವಿಲಾಸ : ನೊರೆವಿಂಡಿನಂದದಿ ದಿವ್ಯಾಂಬರವನು ದೊರೆ ಪಗರಣೆಯೊಳು ಪೊದೆದು (ಜ್ಞಾನಚ. ೩೯–೯೧).

**ಹಗಣ :** ೭. ಬಿನ್ನಾಣ; ಒಯ್ಯಾರ: ರಾ. ಕು. ಅವರ ವಾಣಿವಿಲಾಸ ಇಂದಿನ ಕನ್ನಡಕ್ಕೆ ಹೊಸಬೆಡಗು, ಬಿನ್ನಾಣ, ಬಿಬ್ಬೋಕ, ಮುರುಕ, ಹಗಣ, ಹಗುರಗತ್ತಿನಿಂದ ತಿಳಿಸಿಕೊಟ್ಟಿದೆ (ಗಾಳಿಪ. X, ಮುನ್ನುಡಿ). 'ಹಗಣಗಿತ್ತಿ' ಪರಾ. **ಹಗರಣ$_1$ :** ೨. ನಮ್ಮರಸಂ ಪಾಱುವ ಬಹುರೂಪವಿಕೃತಮಂ ಪಲತೆಱದಿಂ ತೋಱುವ ಹಗರಣಮಿವರೊಳ್ ಮಾಱಾಂತೊಡನೊಡನಾಡೆ ನಗೆಗೆಡೆಯಕ್ಕುಂ (ವರ್ಧಪು. ೭–೫೭); ಮೊಱೆಯಿಡುವ ಹಗರಣದ ಮರುಳ ಮಂಥಣದಂತೆ ಕುಂಜದ ಕನಿಷ್ಠರುಂ ತಱಟನ ವಿಡಂಗರುಂ . . . ಸುತ್ತು ಮುತ್ತಿರಲು . . . ನಡುವೆ ಮೆಱೆದಂ ಧರ್ಮಸೇನಪಂಡಿತನಲ್ಲಿ (ಪಾರ್ಶ್ವ. ದೇ. ೨೫೪–೨೦) ; ಮಗನು ಮಾಡಿದ ಮೃಗದ ಮೋಱೆಯಲೊಗೆದುದೀ ರವಿಕೋಟಿತೇಜದಿ ಜಗಕೆ ಸೋಜಿಗವಾಯ್ತು ಚೀಱಿನ್ನೇಕೆ ಹಗರಣವು (ಸಂಭಪ. ೮–೧೦೧) ; ತೋಱುಸುವೆನರೆಘಳಿಗೆಯಲಿ ನಗೆಗಾಱರಿಗೆ ಹಗರಣವ [ಪಾಠಾಂ. ನಾಟಕವ] ಸನ್ನೆಯ ಸಾಱಿಕೆಯಿಂದೀಗೆಂದು ಸಂತೈಸಿದನು ಸುಗ್ರೀವ (ತೊರರಾ. ೬–೨೭–೫೮) ; ಸಾಲೆಯಲ್ಲಿ ಅದೇನೋ ನಡೆದಿದೆಯಂತಲ್ಲ—ಹಗರಣವೋ ಡೊಂಬರಾಟವೋ (ಮೂರುದಾ. ೩೦). ೪. ತ್ರಿಜಗವೆಲ್ಲಾ ನಿಬ್ಬಣ ಹೋಯಿತು ಗುಹೇಶ್ವರನನಱಿಯದ ಹಗರಣವೊ (ಅವಚಂ.೧೦೨–೪೧೬); ದುಗುಡ ಬೇಡೊಮ್ಮಿಂಗೆ ನಿಮ್ಮಯ ಮಗನುಳಿದ ನಿಮ್ಮಧಿಕರೋಷದ ಹಗರಣದ ಹಗೆ ಹೋಯಿತೆಂದನು ನಗುತ ಮುರವೈರಿ (ಕುಷ್ಯಾಗ.೧೧–೪೦) ; ಒಗುವ ಕಿವಿ ಮೂಗುಗಳ ರಕುತದ ಹಗರಣದ ಹೊಸನಾಟಕದ ಹಲುದೆಗೆದ ರಕ್ಕಸಿ ಬಂದಳೊದಱುತ ಖರನ ಪಟ್ಟಣಕೆ (ತೊರರಾ. ೩–೪–೩೦); ಪುರದಾ ಜೈನರುಗಳೆಲ್ಲ ಬಂದವಳ ಪತಿಪುರುಷನಾತಂಗೆ ಹಗರಣವಿದೇನು ನಿನ್ನಂಗನೆಯಳಿಂದೆಮ್ಮ ಜೈನಕುಲಕಳಿವೆಂದೆನೆ (ಪ್ರಾಥರಂ. ೧೨–೧೬) ; ಸದ್ಯ ಸೊಸೈಟಿಯಲ್ಲಿ ಯಾವ ಹಗರಣವೂ ಆಗದೆ ಇದ್ದರೆ ಸಾಕು (ಮರಳಿ. ೧೫೨). ೫. ಹಗರಣದವ್ಮಾವಿನ ಹಯನು ಸಯವಪ್ಪುದೇ (ಅವಚಂ. ೯–೩೫) ; ಕಬ್ಬನಗಿದ ಗಾಣ ಬಲ್ಲುದೆ ಹಾಲ ಸವಿಯ . . . ಹಗರಣಕ್ಕೆ ಪೂಜಿಸುವರು ಬಲ್ಲರೆ ನಮ್ಮ ಶರಣರ ಸುಳುಹ (ಚನ್ನಪ. ಕ. ೧೭೧–೩೭೭). ೭. ಹಗರಣದ ನಿಱುಗುರುಳ ಬಾಲೆಯರ ಮುಂದೆ ತಿರುಗುತ್ತಿಪ್ಪ ಬಱು ವಾಯ ಭುಂಜಕರುಗಳು ಬೀಗಿ ಬೆಱೆಯುತ್ತಿಪ್ಪರು (ಮೋಳಿಮಾ. ೧೮೮–೭೦೯). ೮. ಅಚ್ಚರಿ ; ಸೋಜಿಗ : ಜಗವನೊಳಕೊಂಡ ಲಿಂಗವು

ಸೊಗಸಿಂದೆ ಎನ್ನ ಕರಸ್ಥಲಕ್ಕೆ ಬಂದಿರಲು ಕಂಡು ಹಗರಣವಾಯಿತ್ತೆನಗೆ (ಅಖಂಡೇ. ೨೯–೮). ೯. (ದೇವರ) ಆಟ ; ಲೀಲೆ : ಜಗದುದರನಹ ವಿಷ್ಣು ಭೂಪರ ಬಗೆಯನಂಗೀಕರಿಸಿ ನೆಲಸಿದ ಹಗರಣವ ಸುರರೆಲ್ಲ ಕೇಳು ವುದು (ಕೋಗಯ. ೩–೬). ೧೦. ಕೀಟಲೆ ; ಕುಚೇಷ್ಟೆ ; ಕಿಡಿ ಗೇಡಿತನ : ಜಗದಧಿನಾಥನ ಬಸುಱಲ್ಲಿ ಬಂದು ನಾಡುಗರ ಮಧ್ಯ ದೊಳಿಂತು ನಿಂದು ಹಗರಣಕೆಳಸಿದನೆಯೆಂದು ಮೆಲ್ಲಮೆಲ್ಲಗೆ ನೊಂದು ನುಡಿವುತೆಯ್ದಿದನು (ಭರಚ. ೫೧–೫೮). ೧೧. ಕದನ ; ಯುದ್ಧ : ಶತ್ರುಘ್ನಂ . . . ಲವನಿರದೆ ವಿರಚಿಸಿದ ಹಗರಣವನವರ ಮುಖದಿಂ ತಿಳಿದು ಸುಮತಿಯೊಡನಿಂತೆಂದನು (ಶೇಷರಾ. ೨೮–೧೫) ; ಅಣ್ಣನ ಕರೆಯಲಗಣಿತಪರಾಕ್ರಮದಿ ಹಗರಣಕೊದಗಿ ತಮ್ಮಗೆ ನುಡಿದ ವಾಲೀ (ವಾಲಿಕಾ. ೪೦). ೧೨. (ಭೀಕರವಾದ) ದೃಶ್ಯ ; ನೋಟ : ಆ ಹಗರಣವನ್ನು ನೋಡಿ ಆ ಹೆಂಗಸಿನ ಪರಾಕ್ರಮವನ್ನೂ ಸಾಹಸವನ್ನೂ ಕೊಂಡಾಡಿದರು (ಚತ್ರಪಾ. ೯೩). ೧೩. ತೊಂದರೆ ; ಅಪಾಯ ; ದುಷ್ಪರಿಣಾಮ : ನೀ ಸುಗುಣಿಯೆನ್ನಿಸಿಕೊಳಲು ವ್ಯಯಮಾಡಿದೆ ಹಗರಣವ ಪಡಿಸಿದರೆ ಸಾಲಗಾಱನು ಬಂದು ಬಗೆಬಗೆಯೊಳವರ ಕಾಲ್ಗೆಱಗಿ ಬಿದ್ದಿರುವೆ (ಪುರಂದ. ೧–೪೪–೪) ; ಸಿದ್ಧತೆಯಿಲ್ಲದೆ ಕೆಲಸಕೆ ಮುಂದಾಗೆ ಬರಿಯೊಂದು ಹಗರಣವಲ್ತೆ (ಇಂಚಾಪ. ೮೯–೩೪) ; ಆ ಅವಧಿಯಲ್ಲಿ ಮನಸ್ಸಿನ ಮೇಲೆ ಕೆಟ್ಟ ಪರಿಣಾಮವುಂಟಾಗುವುದು ಹಗರಣಕ್ಕೆ ದಾರಿ (ಕ್ರಿಯಾಶಿ. ೩೧). ೧೪. ವಿರೋಧ ; ದ್ವೇಷ : ಮಗನೆ ನಿನ್ನನು ಪಡೆದುದಕೆಯೆನಗೊಗುವಿಗೆಯು ಶೋಕವನು ಮಾಡಿದೆ ಹಗರಣವು ಭೀಮಾದಿಗಳಿಗೆನ್ನಲ್ಲಿ ಬಲಿದುದಲಾ (ತಿಮ್ಮಸ್ತ್ರೀ. ೧–೮). **ಹಗರಣಿ :** ೫. 'ಹಗರಣಿಯಾಟ' ಪರಾ. **ಹಗರಣೆ :** ೯. ಹಗರಣೆಗೆ ನೀ ಯೆಂಜಲ್ಹಣ್ಣನ್ನು ಮೆದ್ದು ಮೂಜಗದೊಡೆಯನೆನಿಸಿ ಮೆಱೆದೆ ತಿಱುದೆ (ಪುರಂದ. ೩–೭೩–೨).

**ಪಗರಣದರಸ**=ನಾಟಕದ ರಾಜ ; ರೂಪಕಗಳಲ್ಲಿ ನಟನಿಂದ ಅಭಿನೇಯನಾದ ರಾಜ ; ನಿಜವಾದ ರಾಜತ್ವವಿಲ್ಲದ ರಾಜ ವೇಷಧಾರಿ : ಬಗೆಗೊಂಡ ಕುಲಧನಂ ಸಮದಗಜಂ ಜಾತ್ಯಶ್ವಮೆಂಬಿವಂ ಮತ್ತೊರ್ವಂ ಪಗೆವಂಗೆ ಕೊಟ್ಟು ಚಃ ಕೆಮ್ಮಗೆ ಬೆಸೆವವನರಸದೆಂತೊ ಪಗರಣದರಸಂ (ಆದಿಪು. ೧೨–೯೮) ; ಅರಸನೆಂಬ ಪೆಸರ್ ಪಗರಣದರಸಂಗಂ ಧಾರಿಣೀಶ್ವರಂಗಂ ಕರಮಾದರದಿಂದಮಕ್ಕುಂ (ಧರ್ಮಾಮೃ. ೧–೧೮೮). **ಪಗರಣದಾಟ, ಹಗರಣದಾಟ**=ವೇಷ ಹಾಕಿಕೊಂಡು ಮಾಡುವ ಅಭಿನಯ,—ನಟನೆ ; ಸೋಗು : ಆಗಳಾ ನಗಿಸಿದ ಪಗರಣಿಗಂಗೆ ಪಿರಿದು ಕಸವರಮನಿತ್ತೊನಂದಿಂದಿತ್ತ ಬಾದುಬ್ಬೆಯು ಪರ್ವಮುಂ ಪಗರಣ ದಾಟಪಾಟಮುಮಾದುವು (ಪದ್ಮರಾ. ೧೧೮–೨೨) ; ಹಗರಣದಾಟವನೆಲ್ಲಿ ಕಲಿತೆಯ್ಯ (ಪುರಂದ. ೧–೯೬–೭). **ಪಗರಣದಾನೆ**=ಕೃತ್ರಿಮವಾದ ಆನೆ ; ಆನೆಯಂತೆ ಮಾಡಿರುವ ಆಕಾರ : ತಿಪ್ಪೆಯ ನೀರಂತೆ ಬಡವನ ಮಹಿಮೆಯಂತೆ ಪಗರಣದಾನೆಯಂತೆ . . . ಸನ್ಮಾರ್ಗವಂ ಬಿಟ್ಟು (ಧರ್ಮಾಮೃ. ೮–೯೪). **ಹಗರಣದ ಚೋಹ**=ನಾಟಕದ ವೇಷ,—ಸೋಗು : ಎಂಬತ್ತೆಂಟು ಪವಾಡವ ಮೆಱೆದು ಹಗರಣದ ಚೋಹದಂತಾಯಿತ್ತೆನ್ನ ಭಕ್ತಿ (ಬಸವ. ೮೯೧). **ಹಗರಣದ ಮನೆ**=ನಾಟಕದ ಮನೆ ; ನಾಟಕಶಾಲೆ ; ನಾಟ್ಯಗೃಹ : ಹಗರಣದ ಮನೆಯ ಕೊಡಗಿಗೆ ಆಳುಪಿದವರು ಕತ್ತೆಯ ×× ಯ ತಿಂಬೋರು ಕಳವೆ (ಎಕ. VII, ಶಿಮೊ. ೮–೧; ?). **ಹಗರಣದ ರಾಜ**=ನಾಟಕದ ರಾಜ : ಹುಯ್ಯಲಂ ಕಂಡು ಬಿಱುತೋಡಿ ಘಟ್ಟ ಬೆಟ್ಟಂಗಳಂ ಸಾರ್ದು ಬಾಯ್ದೆಱೆವವಂ ರಾಜನೇ ಹಗರಣದ ರಾಜಂ (ಚೆಬಪು. ೮–೧೨). **ಹಗರಣದಲಂಕಾರ**=ನಾಟಕದ ಅಲಂಕಾರ,—ಶೃಂಗಾರ : ಶಿವಲಿಂಗವಲ್ಲದೀ ಹಗರಣದಲಂಕಾರಮಂ ಬಯಸಿ ತೊಡದಿಹುದು (ವೀಶೈಪು. ೭–೧೩–೧೮). **ಹಗರಣದ ಸಂಸಾರಸುಖ** = ನಾಟಕದ ಕುಟುಂಬಸೌಖ್ಯ ; ಕ್ಷಣಿಕವಾದ ಸಂಸಾರಸುಖ : ಹಗರಣದ ಸಂಸಾರಸುಖವು ಬೀದಿಯೊಳಿಟ್ಟ ಸೊಡರಂತದೇಂ ಪೇಳ್ವೆನು (ವೆಂಕಾರಾ.೨–೩೫–೧೭). **ಹಗರಣದ ಹಣ್ಣು** = ತೋರಿಕೆಯ ಹಣ್ಣು ; ಕೃತ್ರಿಮವಾದ ಹಣ್ಣು : ಹಗರಣದ ಹಣ್ಣ ಮೆದ್ದು ಹಸಿವು ಹೋಯಿತ್ತೆಂದಡೆ ಆರು ಮೆಚ್ಚುವರು ಹೇಳಾ (ಆವಚಂ. ೧೮೫–೮೩೩). **ಹಗರಣ ಮಾಡು**= ೧. ಸೋಗು ಹಾಕು ; ನಟನೆಮಾಡು : ನಗೆಯು ಬರುತಿದೆ ಎನಗೆ . . . ಜಗದೊಳಿರುವ ಮನುಜರೆಲ್ಲ ಹಗರಣ ಮಾಡುವುದ ಕಂಡು (ಪುರಂದ. ೧–೨೨ ಅನುಪಲ್ಲವಿ). ೨. ರಾದ್ಧಾಂತ ಮಾಡು ; ಗೊಂದಲ ಎಬ್ಬಿಸು : ಇಷ್ಟೆಲ್ಲ ಹಗರಣ ಮಾಡಿ ಕೊನೆಗೂ ನಾನು ಸಾಧಿಸಿದ್ದು ಇಷ್ಟೇನೆ ? (ಹೊಸಕ್ಷಿ.೪೪) ; ಇಲ್ಲದ ಹಗರಣ ಮಾಡದೇ ಸುಮ್ಮನಿರು (ಛೀಮುಕಾ. ೧೧೫). **ಹಗರಣವಾಗು**= ರಾದ್ಧಾಂತವಾಗು ; ಗೊಂದಲವಾಗು : ಸೊಗಸನಂತಿಂತೆಂದು ನುಡಿದೆನಾದರೆ ಬಲು ಹಗರಣವಹುದು (ಭರಚ. ೧೦–೧೦೦).

[<ಸಂ.ಪ್ರಕರಣ]

**ಪಗರಣಿಗ,** ಹಗಣಿಗ, ಹಗರಣಿಗ (ನಾ). ೧. ವಿವಿಧ ವೇಷಗಳನ್ನು ಧರಿಸಿ ಅಭಿನಯದಿಂದ ಜನರನ್ನು ನಗಿಸುವವನು ; ವೇಷಧಾರಿ : ಲೋಗರ್ ಪಗರಣಿಗರಾಗಿ ಎನಿತಾನುಂ ತೆಱದ ರೂಪುಗಳಂ ಕೈಕೊಂಡು ಮರಮೊಗಂಗಳನಿಟ್ಟು ಬಂದು ಮುಂದೆ ಆಡಿಯುಂ ಪಾಡಿಯುಂ ನಗಿಸಿಯುಂ (ಪದ್ಮರಾ. ೧೧೮–೧೪) ; ತಪೋಧನರಾಹಾರದಾನಕ್ಕಮ್ಮಾಟಕೂಟಕ್ಕಂ ತಱಂಬೆಯ ಪೊಲದ ಹಗರಣಿಗನ ಬಾಗಿಂ ಪಡುವಣದೆಸೆಯಲಿ . . . ಕೊಟ್ಟ ಗುಣಿಗನ ಮತ್ತರ್ ೧೫ (ಸೌಇಇ. IX–i, ೧೬೫–೪೨ ; 1099) ; ಪೊಲೆಯರ್ಬಡಿವ ಪಱೆಯೋಜೆಗಾಡುವ ಪಗರಣಿಗರಂ ಕಂಡ ವರ್ನಗುವರಲ್ಲದೆಯವರಾಟಕ್ಕೆ ಲಕ್ಷಣಮಂ ನೋಡರ್ (ಧರ್ಮಾಮೃ. ೫–೧೦೩) ; ನಗೆಗೆಡೆಯಾಗಿರೆ ಸಿಂಗದ ಮೊಗಮಂ ಧರಿಯಿಸಿ ನಿಶಾಟನಂ ನೀಂ ಕೊಂದೈ ಪಗರಣಿಗರಲ್ಲದುಟಾದರ್ ಮೊಗಮಂ ಪೆಱತೊಂದ ನೆಂತುಮೇಂ ಧರಿಯಿಪರೇ (ಜಗವಿ. ೧೭–೩೭) ; ಪಡೆವಳ್ಳರ ಪಗರಣಿಗರ ರಸಿಕರ . . . ನಿಡುಗೇರಿಗಳೊಪ್ಪಿದವು (ಕುರಾಸಾಂ.೪–೧೧೧). **ಹಗಣಿಗ :** ೨. ವೇಷಾಂತರದಿಂದ ಮೋಸಗೊಳಿಸುವವನು ; ಪ್ರಚ್ಛನ್ನ ವೇಷಧಾರಿ : ಹಗಣಿಗರಾಗಿ ಬರಲು ಜಂಗಮಮುಖದಲ್ಲಿ ಲಿಂಗವ ಮಾಡಿದವರಾರು ಹೇಳಾ (ಸಿದ್ಧಪು. ೨೭–೫೮). **ಹಗರಣಿಗ :** ೧. ಹ[ಪಾಠಾಂ.ಪ]ಗರಣಿಗರಂತೆ ಬಹುರೂಪುಗಳಿಂದಾಡುವರನಾಪ್ತರೆಂದಾ ಪೊತ್ತುಂ ಬಗೆಯದೆ (ಸಮುಪ.೮–೨೩೮) ; ಹಸಿದು ಬಂದ ಗಂಡನಿಗೆ ಉಣಲಿಕ್ಕದೆ ಬಡವಾದನೆಂದು ಮಱುಗುವ ಸತಿಯ ಸ್ನೇಹದಂತೆ ಬಂದುದನಱಿಯಳು ಇದ್ದುದ ಸವಿಸಳು ದುಃಖವಿಲ್ಲದ ಅಕ್ಕೆ ಹಗರಣಿಗನ ತೆಱನಂತೆ (ಬಸವ. ೨೧೮) ; ಬತ್ತಲೆಯ ಭಂಡರೊ ಮರುಳುಗಳೊ ತಟ್ಟುಗಳ ಹಗರಣಿಗರೊ ಎನಲು ಮಲಧಾರಿಗಳು ಗಜಬಜಿಸಿ ನೆರೆವುತ್ತ (ಬಸಪು. ೫೧–೫೩) ; ಅಲ್ಲಿಯ ಹಗರಣಿಗ ನಾನಾದೆನದು ನೋಟಕದ ಜನವಾಯ್ತು (ಕುವ್ಯಾಸ. ೧೨–೪೨) ; ನಗೆಯು ಸೂಸುವಡಾವು ಲೋಕದ ಹಗರಣಿಗರೇ (ತೊರರಾ. ೧–೯–೩೦). ೨. ಪರವಾದಿ ಬಿಜ್ಜಳನು ಒರೆದುನೋಡಲೆಂದಟ್ಟಿದಡೆ ಹಗರಣಿಗರ ಜಂಗಮ ಮುಖದಲ್ಲಿ ಲಿಂಗವ ಮಾಡಿದವರಾರು ಹೇಳಾ ನೀವಲ್ಲದೆ (ಚನ್ನವ.ಕ. ೨೪೬–೫೩೫) ; ಹಗರಣಿಗರು ಕಂಗೊಳಿಪ ಸರ್ವಾಂಗಭಸಿತ ವಾತಾರ್ಕಫಲ ಲಿಂಗಕುರವಣಿಯ ಜಡೆಗಳ ಧರಿಸಿ ಬರಲು (ಲಶಿಚಂ. ೩೨–೧) ; ಮತ್ತೊಮ್ಮೆ ಹಿಗ್ಗುತ್ತೆ ಹಗರಣಿಗರುಂ ತಪಸಿಗಳ ಮಾಡಿ ಬಸವ ಕರೆದೊಯ್ಯುವೆನಲು (ಪ್ರಭುಪು. ೭–೪೫) ; ಹಗರಣಿಗರುಂ . . . ಜಂಗಮಾಕಾರಮುಮನು ಬಗೆಗೊಂಡು ತೋಱುತಿರಲು (ರಾಘಚ.೮–೩೬).

೩. ನಾಟಕ ಮೊದಲಾದುವುಗಳಲ್ಲಿ ಪಾತ್ರಗಳನ್ನು ಧರಿಸುವವನು; ಪಾತ್ರಧಾರಿ; ನಟ. ೪. ನಾಟಕವನ್ನು ಆಡಿಸುವವನು; ಸೂತ್ರಧಾರ: ಅಗಧರನೆ ಶ್ರೀಕಾಂತ ಲೋಕದ ಪಗರಣೆಗ ನೀನೆಮ್ಮ ಕಾವುದು (ಸಂಭಪ. ೪-೧೮). ೫. ಹಾಸ್ಯಾಸ್ಪದನಾದವನು; ನಗೆಗೀಡಾದವನು: ಅಳಿದುದೇಳಕ್ಷೋಹಿಣಿ ಗಂಧರ್ವಪಡೆ ಲೋಕದೊಳು ಪಗರಣಿಗನಾದೆನು (ರುಕ್ಮಾಂಗ. ೧೩-೪೮). [ಪಗರಣ+-ಇಗ]

**ಪಗರಣೆ** 'ಪಗರಣ' ನೋ.

**ಪಗರಿ** (ನಾ). ಕವಣೆಬಿಲ್ಲು; "ಕಲ್ಲೆಸೆವ ಬಿಲ್ಲು, ಒಂದು ಬಗೆ ಕವಣೆ" (ಸಿರಿಕೋ. ೩೧೦): ನಮ್ಮ ದೇಶದ ಕೆಲವು ಹೊಲೆಯರಲ್ಲಿ ಕಂಕಣ, ಕಂಚಿನ ಪಾತ್ರೆ, ಮೇಲಾಗಿ ಕವಣೆಬಿಲ್ಲು (ಪಗರಿ) ಈ ಮೂರನ್ನು ತಂದು ಹುಡುಗಿಯ ಹಿರಿಯರಿಗೆ ಒಪ್ಪಿಸಬೇಕು (ಬಾಲಪ್ರ.III, ೧೩೧೩); ನಿಮ್ಮ ಪಗರಿ, ಬಿಲ್ಲುಗಳನ್ನು ಒಳಗೆ ಹಾಕಿ! ಇದರ ಮುಂದೇನು (ಕುಡಿಕೂ. ೩೫). [ದೇ.॥ ತಮಿ. ಮಲ. ಪಕಟು=ಬಾಣ; ತುಳು. ಪಗರಿ=ಬಾಣ, ಈಟಿ, ಭರ್ಜಿ]

**ಪಗಲ್**, ಪಗಲು, ಹಗಲ್, ಹಗಲು (ನಾ). ೧. ಸೂರ್ಯನು ಹುಟ್ಟಿದ ಕಾಲದಿಂದ ಹಿಡಿದು ಮುಳುಗುವವರೆಗಿನ ಕಾಲ: "ದಿವಸಂ ದಿನಂ ದಿವಾಹಂ ದ್ಯುವಾಸರಂ ಘಸ್ರಮೆನೆ ಪಗಲ್" (ವಸ್ತುಕೋ.೧೫-೪); ನೆನೆದಿರುಳುಂ ಪಗಲುಂ ನಿನ್ನನೆ ಪೀನಮೊಜಲ್ದು ಮಱುಗಿ ಕಾತರಿಸುತ್ತುಂ ಮನದೊಳ್ ಸೈರಿಸಲಾಱೆಂ (ಕವಿಾ. ೨-೮೩); ವನಮಂ ಕೋಗಿಲೆ ಜಕ್ಕವಕ್ಕಿ ಪಗಲಂ . . . ನೆನೆವಂತಾಂ ನೆನೆವೆಂ ಸರೋಜಮುಖಿಯಂ ಶ್ಯಾಮಾಂಗಿಯಂ ನಲ್ಲಳಂ (ಆದಿಪು. ೧೨-೩೧); ಉತ್ಸಾಹಿಗಳಪ್ಪ ರಾಜಪುತ್ರರಂ ನಿಯಾಮಿಸುತ್ತಮಿರ್ದು ಪಗಲುಂ ಕಳೆಯೆ ರಜನೀಪ್ರವೇಶದೊಳ್ (ಕಾದಂಬ. ೫೦೧); ಪಗಲ್ ಬಯ್ಗಿರುಳೆನ್ನದೆ ಸಲೆ ಬೆಸಕೆಯ್ಗುಂ ಮುನಿಗಳ್ಗೆ ನಗದ ಮರ್ಕಟನಿಕರಂ (ಗಿರಿಕ. ೧-೬೫); ಪಗಲುಮಿರುಳುಂ ಸುರಿವ ಬಲ್ಬೋನೆಯ ಜಿನುಂಗಿನತ್ತಣೆನೆನ್ನ ಬಗೆಯುಂ ಬೇಸತ್ತುದು (ರಾಮಾಶ್ವ. ೪-೧೫). 'ನಡುವಗಲ್' ಪರಾ. ೨. ಒಂದು ಹಗಲು, ಒಂದು ರಾತ್ರಿ ಕಳೆಯುವಷ್ಟು ಕಾಲ; ಒಂದು ಸೂರ್ಯೋದಯದಿಂದ ಮತ್ತೊಂದು ಸೂರ್ಯೋದಯದವರೆಗೆ ಇರುವ ಇಪ್ಪತ್ತು ನಾಲ್ಕು ಗಂಟೆಗಳ ಕಾಲ; ಒಂದು ದಿವಸ: "ಪಗಲೆನೆ ದಿವಸಮೆಂದಕ್ಕು" (ಕಶಠ. ೬೧); ಮುನ್ನಮಿಾ ಪೊಡವಿಯೊಳ್ ತ್ರಿಶಂಕು ವೆಂಬೊರ್ವಂ ನೇಸರ್ಬಱಿಯ ರಾಯಂ ಪಲವುಂ ಪಗಲರಸುಗೆಯ್ಯುತ್ತಮಿರ್ದಂ (ಅದ್ಭುತ. ೩-೨೫); ಒಂದು ಪಗಲೆತ್ತುವುದು, ಒಂದು ಪಗಲುರುಳ್ವುದು ಮಾನುಷಮನೆಲ್ಲಮನ್ (ಅಶ್ವತ್ಥಾ. ೬-೧೧೫). **ಪಗಲು:** ೧. ಪಗಲಿರುಳೆನ್ನದೆ ಪತಿಯಾಣತಿಯೊಳು ಮೊಗದಿರುಹದೆ ಮೊನೆಗೊಳದೆ . . . ಭಕ್ತಿಯೊಳೆಸಗುವುದು (ಹದಿಬ. ೩-೮); ಮುಳಿದಂ ಪದ್ಮಬಂಧುವೆನೆ ಪಗಲಿನೊಳ್ ತೋರದು ಬಿಸಿಲ್ (ಮಹಾವಿ. ೮-೧೫). ೨. ಹರಭಕ್ತಿಯಂ ಪ್ರತಿಷ್ಠಿಸಿ ದಿವ್ಯಹರ್ಷದಿಂದಿರುತೊಂದು ಪಗಲಲ್ಲಿ ತಮ್ಮಯ್ಯನಾದ ಮಲ್ಲರಸರ ವಿರತಿಗೇಳ್ದು (ಪದ್ಮರಾ.೨-೧೨). **ಹಗಲ್:** ೧.'ಹಗಲ್ದೀವಟಿಗೆ' ಪರಾ. **ಹಗಲು:** ೧. ಸೂರ್ಯ ಚಂದ್ರಮರುಗಳು . . . ಹಗಲಿರುಳು ಉದಯ ಬೈಗುಗಳು ಧರ್ಮವು ಎಂಬಿವು ಮನುಷ್ಯರ ನಡೆವಳಿಯನಱಿವುವು (ಪಂಚತಂ. ೧೭೨-೯); ಹಗಲು ನಾಲ್ಕು ಜಾವ ನಿಮ್ಮ ಕಳವಳದಲ್ಲಿಪ್ಪೆನು (ಮಹಾದೇ. ಬ. ೩೭-೭೯); ಹಗಲು ಸವೆದುದು ಪೊಂಬಿಸಿಲು ನೆಱೆ ತೆಗೆದುದತಿವೇಗದಲಿ (ನಳಚ. ೫-೪೩); ನಿಗಿನಿಗಿ ಮುಗಿಲು ನಿಗಿನಿಗಿ ಹಗಲು ಕೆಂಡವ ಕಾರುವದು (ನಾದಲೀ. ೨೧-೨); ಇರುಳು ಕಂಡ ಬಾವಿಯಲ್ಲಿ ಹಗಲು ಬಿದ್ದ ಹಾಗೆ (ಗಾದೆ).

**ಪಗಲ ಕರ**=ಸೂರ್ಯ: ದಿವ್ಯವಸ್ತ್ರಗಳಾದಿ ಬಗೆಬಗೆ ನವ್ಯವಸ್ತುಗಳಂಗದೊಳು ಸಂಸೇವ್ಯವಾಗಲು ಪಗಲ ಕರನಂತೆಸೆವ ಸಮಯದಲಿ (ಪಶುಭಾ. ೧೩-೭). **ಪಗಲ ಕೈದೀವಿಗೆ**=ಹಗಲಿನ ಮೆರವಣಿಗೆಯಲ್ಲಿ, ಗೌರವಸೂಚಕವಾಗಿ ಹಿಡಿಯುವ ದೀವಟಿಗೆ; ಹಗಲು ದೀವಟಿಗೆ: ಪಳದಿಯ ಸೀಗುರಿಯ ಪಗಲ ಕೈದೀವಿಗೆಯ ವಜ್ರದಂಕುಶದ . . . ಪೊಡರ್ಪು ಪಡಿತಳಿಸೆ (ರಾಜಶೇ. ೬-೧೧೨). **ಪಗಲ ಬಲ್ಲಹ**=ಸೂರ್ಯ: ಪಗಲ ಬಲ್ಲಹನ ಕೆಂಗದಿರ್ಗೊಂಗಲಿಸಿಸು ಪುಗದೆ ಗಭೀರಮಾಗಿ ಕಳ್ತಲಿಸಿದ ತಮಾಲದ ತರುಗಳ ತಣ್ಣೆಳಲೊಳ್ (ಪದ್ಮರಾ. ೮-೨೭); ಮುಗುಳ್ದುವು ಮುನ್ನೀರಣುಗೆಯ ಸೆಜ್ಜೆಗಳಗಲ್ದುವು ಜಕ್ಕವಕ್ಕಿಗಳು ನಗುತಿರ್ದ ವಿಂದೀವರನಸ್ತಮಿಸುವಾ ಪಗಲ ಬಲ್ಲಹನ ಕಾಲದೊಳು (ಶ್ರೀಪಾಲ. ೧೧-೪). **ಪಗಲ ಬೊಜಂಗ**=ಸೂರ್ಯ: "ತಾವರೆಗೆಳೆಯಂ, ಪಗಲ ಬೊಜಂಗಂ . . . ಗರಂಗಳಾಣ್ಮಂ—ಈ ೧೧ ಸೂರ್ಯನ ಪೆಸರ್" (ಕಶಸಾ. ೪೮-೨೮); "ಬೆಂಗದಿರಂ ನೆಱೆ ಪಗಲ ಬೊಜಂಗಂ . . . ನೇಸಱೆಂದು ತಾವರೆಗೆಳೆಯಂ" (ಕವಿಕಂ.೪೦). **ಪಗಲ ಬೋನ**=ಹಗಲಿನ ಊಟ,-ಆಹಾರ: ಮೇಣೀ ನಿನ್ನ ಪಾಟಿಯೊಡಲ ನೆತ್ತರ್ ಪಿರಿತಿನಿವಡೆಗೆ ಪಗಲ ಬೋನದೊಂದು ಕಟ್ಟಿಕ್ಕುಂ (ರಾಮಾಶ್ವ. ೮೬-೨೦). **ಪಗಲವಕ್ಕಿ**=ಗಂಡು, ಹೆಣ್ಣು ಹಕ್ಕಿಗಳು ಹಗಲುವೇಳೆ ಮಾತ್ರ ಸೇರಿ ನಲಿಯುವುವೆನ್ನಲಾದ ಒಂದು ಬಗೆಯ ಪಕ್ಷಿ; ಜಕ್ಕವಕ್ಕಿ; ಚಕ್ರವಾಕ: ಪಗಲವಕ್ಕಿಯ ನೇಳಿಸುವ ಪಯೋಧರೆ ಪಗಲ ಪಂಕೋದ್ಭವವದನೆ (ನೇಮಿಸಂ.೨೨-೭೮). **ಪಗಲ ಸಿರಿ**=ಹಗಲಿನ ಸಂಪತ್ತು; ಹಗಲಿನ ಬೆಳಕು: ಪರಿವೃತ ಕತಿಪಯಪರಿಜನಂ ವಜ್ರಕರ್ಣಂ ವಜ್ರಕುಂಡಲಮರೀಚಿ ಪಗಲ ಸಿರಿಗೆ ಕಣ್ದೆಱವಿ ಮಾಡೆ (ಪಂರಾಮಾ. ೭-೯೧ಪ). **ಪಗಲಿರುಳ್, ಪಗಲಿರುಳು, ಹಗಲಿರುಳು**=೧. ಹಗಲು ಮತ್ತು ರಾತ್ರಿ; ಅಹೋರಾತ್ರಿ: ಪಗಲಿರುಳೆಂಬ ಭೇದಮನಯಂ ಬಡವರ್ . . . ಅಪಮೃತ್ಯುವೆಂಬಿವಲ್ಲಿಗೆ ಪೊಙಗು (ಆದಿಪು. ೫-೩೦); ಪಗಲಿರುಳೆಂಬ ಅಡುಗರ್ಬುಗಳಿಂ ಮಾಸ ಋತುಗಳೆಂಬ ಸಟ್ಟುಗದಿಂ ತೊಳಸುತ್ತುಂ ಭೂತಂಗಳಂ ಜವನಡುತಿರ್ದನಿಂತೆಂಬುದೆ ವಾರ್ತೆ (ಪಂಚತಂ. ೬೫-೬); ವಿದ್ರುಮಚ್ಛವಿಯ ಸಂಜೆಗೆಂಪಿನ ಪಗಲಿರುಳ್ಗಳಲ್ಲಿ . . . ಕಾಲಭೇದವನಱಿಯದಾ ಮಹಾಸಭೆ ಸುರಪನೋಲಗದ ಮಂಟಪದ ಸೌಭಾಗ್ಯಕೆಂಟುಮಡಿಯಾಗಿರ್ದುದು (ಜೈಮಿಭಾ. ೧೭-೨೬); ಹಗಲಿರುಳು ಏಳುದಿನಮಲ್ಲಿ ಚೈತ್ಯಾಲಯಂ ಚಿತ್ರಾಂಗದೆಯ ಯಶಶ್ಚೈತ್ರ ಸುರತರುವಂತೆ ಬೆಳೆದುದು (ಚಿತ್ರಾಂಗ. ೯೦-೨೪೮೭). ೨. ಯಾವಾಗಲೂ; ಸದಾ: ಮೊರೆವ ಮಳೆ ಪಗಲಿರುಳ್ ಕಲ್ಮಣ್ಣು ಕೆಸರಾಗೆ (ಕಾಲೂರ. ೪೫-೬೨); ಬೇಟೆ ಕರ್ಣನ ಕೂಡೆ ಹಗಲಿರುಳಾಟ ಕರ್ಣನ ಕೂಡೆ (ಕುಪ್ಯಾಅ. ೬-೪೪); ಹಗಲಿರುಳಿ ನೊತ್ತಂಬರದ ಕಾಳಗದವೊಲು ಖಳಕಪಿಕದಂಬದ ವಿಗಡ ರಣ ರಂಜಿಸಿತು ಘನರೌದ್ರಾಭಿಸಾರದಲಿ (ತೊರರಾ. ೬-೩೧-೯). **ಪಗಲ ಚುಕ್ಕೆ**=ಸೂರ್ಯ: ಕೋಟಿ ಚುಕ್ಕೆ ಬರುವವಣ್ಣ ಇರುಳ ಮೈಯ ನೆಕ್ಕುತ ಹಗಲ ಚುಕ್ಕೆಗೀಡೆ ಅದುವು ಬಹದು ಕಣ್ಣ ಕುಕ್ಕುತ (ಹೃದಸ. ೪೪-೧೧). **ಹಗಲ ಬತ್ತಿ**=ಪಗಲ ಕೈದೀವಿಗೆ: ಲಕ್ಷ ಹಗಲ ಬತ್ತಿಗಾಳು ಹಚ್ಚಿಯಿಹುದಾನೆ ಕಂಡೆ (ಚಿದಾನ. ೧೩೩-೧೨). **ಹಗಲ ಬಾಣ**=ಉತ್ಸವ ಕಾಲಗಳಲ್ಲಿ ಪ್ರಯೋಗಿಸುವ, ದಿನದಷ್ಟೆ ಬೆಳಕು ಬೀರುವ, ಮದ್ದಿನಿಂದ ಮಾಡಿದ ಒಂದು ಬಗೆಯ ವಸ್ತು: ವೇಳೆವಾದಾವಂದು ಗ್ಯಾನ ಮಾಡಲಿ ಬ್ಯಾಡ ನಾಕೊತ್ತು ಪಂಜುಗಳು ಹಗಲ ಬಾಣ (ಲೋಕಗೀ. ೨೪). **ಹಗಲಿನ ದೀಪ**=ಸೂರ್ಯ: ಹಗಲ ಮೂರನೆಯ ಜಾಮದೊಳ್ ಹಗಲಿನ ದೀಪವಾರಿತೇನೆಂದು ನೆರೆದವರೆಲ್ಲರೆದೆ ನಡುಗೆ (ಗೊಲ್ಲೊಭಾ. ೧೩-೩೨೩). **ಹಗಲಿನ ಹಾವಸೆ**=ಮಂಜಿನ ಮಳೆ: "ಹಗಲಿನ ಹಾವಸೆಯೆನೆ ಮಂಜಿನ ಸರಿ" (ಭಾಗಿ. ೧೦).

[ದೇ.॥ ತಮಿ. ಮಲ. ಪಕಲ್; ತುಳು. ತೆಲು. ಪಗಲು]

**ಪಗಲಾಣ್ಮ** (ನಾ). ಹಗಲಿನ ಒಡೆಯ ; ದಿನಪತಿ ; ಸೂರ್ಯ : ಬಿರಯಿಗಳಂಜೆ ತಾಱೆ ಪಗಲಾಣ್ಮನ ಮೆಯ್ಯ್ ಬಿಸುಪೇಱೆ (ಕಬ್ಬಿಕಾ. ೫೩) ; ಪಗಲಾಣ್ಮರೀರಾಜು ಮಂದಿ . . . ಇರ್ದುದು ಮಹೇಶನೋಲಗದಲ್ಲಿ ಸಂಭ್ರಮದೊಳು (ಸೌಂದವು. ೧-೩೪) ; ಪಗಲಾಣ್ಮ ಕೋಟಿ ತೇಜೋಮಯಚಕ್ರ ಜಗಜಗಿಸುವ ಜ್ವಾಲೆವೆರಸಿ ನಗರವ ರಕ್ಷಿಸುತಿರೆ ಕಂಡು (ಮೋಹತ. ೨೯-೨೮) ; ಪಗಲಾಣ್ಮನೊಡನೊಡನೆಳ್ದು ಗೋದಾವರಿಯ ಮಿಂದರ್ (ಶ್ರೀರಾಮಾ. ೨೨೯-೨೯). [ಪಗಲ್ + ಆಣ್ಮ (<ಆಳ್ಮ)]

**ಪಗಲು** 'ಪಗಲ್' ನೋ.

**ಪಗಲುಗೋಲು** (ನಾ). ಗುಡಿಸಲು, ಹೆಂಚಿನ ಮನೆ ಮೊದಲಾದ ಕಡೆಗಳಲ್ಲಿ ಕಂಡಿಗಳಿಂದ ತೂರಿ ಬರುವ ಸೂರ್ಯನ ಕಿರಣ; ಬಿಸಿಲುಕೋಲು : ಮುಗ್ಧೆಯೊರ್ವಳ ನಗೆಗಣ್ಗೊಗೆದಚ್ಚಗದಿರ ಸೊಗಸುಗೊನರು ಜೊನ್ನವಕ್ಕಿವಱಿಗಳಲ್ಲಿ ಪಗಲುಗೋ[ಪಾಠಾಂ. ಣ]ಲೆಂದೆಸಗುವವು (ಶ್ರೀಪಾಲ. ೯-೨೬).

[ಪಗಲು(<ಪಗಲ್) + ಕೋಲು$_1$( <ಕೋಲ್$_1$)]

**ಪಗಲುವಗೆಯ** (ನಾ). ಹಗಲಿನ ಶತ್ರು ; ಚಂದ್ರ : ಪಗಲುವಗೆಯು ನೊಡಲೊಳು ಕಪ್ಪನಾಗಿಸಿ ಜಗುನೆಗೆ ಬಿಡಿಸಲೆಂದಜನು ಮಿಗೆ ಕಪ್ಪ ಬಿಟ್ಟ ಚಂದಿರನನು ಪಡೆದಂತೆ ನಗೆಮೊಗವೆಸೆವುದಬಲೆಯ (ವರ್ಧಚ. ೨-೩೪).

[ಪಗಲು (<ಪಗಲ್)+ಪಗೆ$_2$+-ಅ$_7$]

**ಪಗಲುಳ್ಕ** (ನಾ). ಹಗಲುಹೊತ್ತಿನಲ್ಲಿ ಆಕಾಶದಿಂದ ಕೆಳಕ್ಕೆ ಬೀಳುವ ತೇಜಃಪುಂಜವಾದ ವಸ್ತು,—ಉಲ್ಕೆ ; ℙ ಅನಿಷ್ಟ ಸೂಚಕವಾದ ಇದು, ಸದ್ಯದಲ್ಲಿ ಒದಗುವ ವಿಪತ್ತನ್ನು ಸೂಚಿಸುವುದೆಂಬ ನಂಬಿಕೆಯಿದೆ : ನೆಲಂ ಮೊಱಗಿದುದೊಂಭತ್ತುಂ ಗ್ರಹಂಗಳಟ್ಟಾಡುತ್ತಿರ್ದುವು ಬಿದ್ದುವಳ್ಕೆ ಪಗಲುಳ್ಕಂಗಳ್(ಶಾಂತಿಪು. ೩-೧೦೩); ಪಗಲುಳ್ಕಮುಳ್ಕುವಂದದಿನೊಗೆವ ಗದಾಶುಲ್ಕಮುಳ್ಕೆ . . . ಗದಾಹವ ಮಗುರ್ವುಮದ್ಭುತಮುಮಾಯ್ತು ಕುರುಪಾಂಡವರಾ (ಗದಾಯು. ೮-೧೨) ; ಮಿಱುಗಿದುವು ಪಗಲುಳ್ಕಂಗಳ್ ದೆಸೆಯೊಳವಿರಳಪ್ರಸರಂಗಳ್ (ಚಂದ್ರಪು. ೬-೧೬). [ಪಗಲ್+ಉಳ್ಕ (<ಉಲ್ಕಾ)]

**ಪಗಲುಳ್ಕು**, ಹಗಲುಳುಕು (ನಾ). = ಪಗಲುಳ್ಕ : ಮಿಡಿವಿಲ್ವಿಡಿದು ಪುಳಿಂದಿಯರಿಡೆ ಗಜಮೌಕ್ತಿಕದ ಮಿಹಾಂಟೆಯಂಬರದೆಡೆಯೊಳ್ ನಡೆದು ಪಗಲುಳ್ಕು ಬೀಳ್ವವೊಲೊಡನೆಸೆದುದು ಮೃಗದ ಕೇಡನಱಿಪಲ್ ಬನದೊಳ್ (ರಾಜಶೇ.೫-೮೦). **ಹಗಲುಳುಕು :** ಸೂಸಿದವು ಹಗಲುಳುಕು ಮೃಗಗಣವಾಸುರದಲೊದಱಿದವು ಕಂದಿತು ವಾಸರಪ್ರಭೆ ಕೌರವೇಂದ್ರನ ಪತನಕಾಲದಲಿ (ಕುಪ್ಯಾಗ. ೮-೪). [ಪಗಲ್ + ಉಳ್ಕು$_4$]

**ಪಗಲೂಟ** (ನಾ). ಹಗಲಿನ ಊಟ,—ಆಹಾರ.

**ಪಗಲೂಟದ ಕೆಯ್** = ಹಗಲಿನ ಊಟದ ಧಾನ್ಯಕ್ಕಾಗಿ ಬಿಟ್ಟ ಗದ್ದೆ : ಕೋಡಿವರ ಪಗಲೂಟದ ಕೆಯ್ಯಿಂದಂ ಬಡಗಲು ಕದಂಬೇಶ್ವರ ದೇವರ ಗೃಹ (ಕಕುಲ. ೨೦-೮ ; ?). [ಪಗಲ್ + ಊಟ]

**ಪಗಲೆರೆಯ** 'ಪಗಲೆಱೆಯ' ನೋ.

**ಪಗಲೆಱೆಯ,** ಪಗಲೆರೆಯ, ಹಗಲೆಱೆಯ (ನಾ). ಹಗಲಿನ ಒಡೆಯ; ದಿನಪತಿ ; ಸೂರ್ಯ : "ನಿಸಿವಗೆಯ . . . ಪಗಲೆಱೆಯ ಬಿಸುಗದಿರ ಪಲ್ಲಿಲಿ ಜವನ ತಂದೆ ಜಗುನೆಯಯ್ಯನೆನಲ್ಕೆ ಸೂರ್ಯನಾಮಂ" (ಶಬ್ದಮಂ. ೧೫) ; ಪಗಲೆಱೆಯನುದಯಮಂ ಬಯಸಿ ಕಡುಪೆರ್ಚುತುಂ ಪೊಗರೊಗುವ ಕಟ್ಟಲೆಗೆ ಕಣ್ಗಳಂ ಮುಚ್ಚುತುಂ (ಉದ್ಭಟ.೧೦-೧೨೭) ; ಪಗಲೆಱೆಯನ ಕಂಡ ಕನಸಿನ ಸುಕೃತದಿಂಪಗಲದ ಸುತನುದ್ಭವಿಪನು (ನೇಮಿಸಂ. ೨೨-೭೮). **ಪಗಲೆರೆಯ :** "ಪಗಲೆರೆಯನೆನಲು ಪಲ್ಲಿಲ್ಲದವನೆನಲು ದಿನನಾಥನಕ್ಕುಂ" (ಕಶರ. ೬೧). **ಹಗಲೆಱೆಯ :** ನೆಱೆ ತಾಗಿ ತಟ್ಟುರ್ಚಿತೆಂಬ ಶಕ್ತಿಯ ಕೈಮುಱಿಯದೆ ಕೃಷ್ಣ ಖಂಡಿಸಿದ ಒಱೆಯೊಳಗಿರ್ದ ಚಕ್ರವ ತೆಗೆದನು ಹಗಲೆಱೆಯನ ಪ್ರಭೆಯ ಕೀಳ್ಪಡಿಸೆ (ಮೋಹತ. ೪೦-೭೭). [ಪಗಲ್ + ಎಱೆಯ]

**ಪಗಲೊಡೆಯ,** ಹಗಲೊಡೆಯ (ನಾ). = ಪಗಲೆಱೆಯ : ಗಾಳಿವಟ್ಟೆಯೊಳ್ ನಡೆವ ಪಗಲೊಡೆಯನ ಕುದುರೆ ಸೇದೆಯಂ ಪಿಂಗಿಸೆಯುಂ (ಕಬ್ಬಿಕಾ. ೨೮೮). **ಹಗಲೊಡೆಯ :** ಹಗಲೊಡೆಯನಸ್ತಮಿಸಲಿನಿಯನ ನಗಲ್ದ ಪದ್ಮಿನಿಯಿರವನೀಕ್ಷಿಸಿ ನಗುವವೊಲು ನೆಯ್ದಿಲುಗಳೆಯ್ದೆ ವಿಕಾಸವೆಯ್ದಿದವು (ಬಸವು. ೧೧-೪೭) ; ಹಗಲೊಡೆಯನು ಮೆಲ್ಲನೆ ಮೇಲಕ್ಕೇರುತ್ತಾನೆ (ಜ್ಯೋತಿರ್ವಿ. ೨೨೪). [ಪಗಲ್+ಒಡೆಯ$_1$]

**ಪಗಲ್ಗನಸು,** ಹಗಲುಗನಸು (ನಾ). ೧. ಎಚ್ಚರವಾಗಿರುವಾಗಲೇ ಕಾಣುವ ಕನಸು ; ಮುಂದೆ ಒಳ್ಳೆಯದಾಗುತ್ತದೆ ಎಂಬುದನ್ನೇ ಕಾಣುವ ಕಲ್ಪನೆ ; ಆಸೆ ಆಕಾಂಕ್ಷೆಗಳ ಲಹರಿ : ಮರಕುಟಿಗವಕ್ಕಿದನಿ, ಕಲ್ಲೋಳೆಯ ಮೊರೆ, ಬೇಸಗೆಯ ಕಾಡ ಬೇಸರಿನ ನಿದ್ದೆಯ ಪಗಲ್ಗನಸಕನವರಿಕೆಯಾಗಿರಲ್ (ಶ್ರೀರಾಮಾ. ೫೨೩-೬೩೧). **ಹಗಲುಗನಸು :** ೧. ಈ ತೆರನಾದ ಮುನಿಸು ಕಿನಿಸುಗಳು ಹಗಲುಗನಸಿನಂತೆ ಮಾಯವಾದುವು (ದ್ರಾವಿವಿ. ೪೩೨). ೨. (ಆಲಂ) ಈಡೇರದ ಬಯಕೆ ; ಗಾಳಿಗೋಪುರ ; ನಡೆಯಲಾರದ ಸಂಕಲ್ಪ; ವ್ಯರ್ಥವಾದ ಆಲೋಚನೆ : ನಿನ್ನ ಚೆಂದಕೆ ಸೋತು, ಗಗನಕಮಲವ ಕೇಳು, ಹಗಲುಗನಸುಗಳನ್ನು ಹಾರಬಿಟ್ಟಿಹೆನು (ನನ್ನರ. ೨೪) ; ಅವಳು ಹಬ್ಬದ ಹಗಲುಗನಸಿನಲ್ಲಿ ನಲಿಯುತ್ತಾಳೆ (ಕನ್ನಜಾ. ೧೪೬) ; ಭಾರತದಲ್ಲಿ ನಾರೀವರ್ಗವು . . . ಸಮಾಜಬಂಧನಗಳ ತೊಡಕಿನಲ್ಲಿ ಸಿಲುಕಿರುವವರೆಗೆ ರಾಷ್ಟ್ರೀಯಜೀವನವೆಂಬುದು ಬರಿಯ ಹಗಲುಗನಸು (ಪ್ರಬಂಧ. ೮೫). [ಪಗಲ್+ಕನಸು]

**ಪಗಲ್ಗಳ್ಳ,** ಹಗಲುಗಳ್ಳ (ನಾ). ೧. ಹಗಲುಹೊತ್ತಿನಲ್ಲೇ ಕಳ್ಳತನ ಮಾಡುವವನು ; ಹಗಲುದರೋಡೆ ಮಾಡುವವನು ; ಎದುರಿನಲ್ಲೇ ದಿಟ್ಟತನದಿಂದ ಕಳ್ಳತನ ಮಾಡುವವನು : ಜಲಕ್ಕೆ ಕನ್ನವನಿಕ್ಕಿ ಉದಕವ ತಂದು ಲಿಂಗಮಜ್ಜನಕ್ಕೆಱೆವ ಹಗಲು[ಪಾಠಾಂ. ಲ]ಗಳ್ಳರಿಗೆ ಮೆಚ್ಚುವನೆ ಚೆನ್ನಮಲ್ಲಿಕಾರ್ಜುನ (ಮಹಾದೇ. ಬ. ೪೭-೧೧೦) ; ಎಲೆಲೆ ಪಗಲ್ಗಳ್ಳ ! ಏತಱೆಂದು ಗೆಯ್ತಂ. ತಾಂ ತಾಂ ಬಟ್ಟೆವಿಡಿದ್ಯೆದಿಪೋಪ ಕುದುರೆಯನಿಂ ನೀಂ ಕಟ್ಟಿಕೊಂಡುಯ್ವ ಬಲ್ಪೇವುದೊ ! (ರಾಮಾಶ್ವ. ೪೬-೧೩). **ಹಗಲುಗಳ್ಳ :** ೨. ಮೋಸಗಾರ ; ವಂಚಕ (?) : ಬ್ರಾಹ್ಮಣನು . . . ಆ ಹಗಲುಗಳ್ಳನನ್ನು ಹಿಂದಟ್ಟಿಕೊಂಡು ಕುದುರೆಯ ಮೇಲೆ ಕೂತು ಹೊರಟನು (ಸೀತಿಚಿಂ. VI, ೧೪).

[ಪಗಲ್+ಕಳ್ಳ$_1$]

**ಪಗಲ್ಪಗೆಯ** 'ಪಗಲ್ವಗೆಯ' ನೋ.

**ಪಗಲ್ಮಣಿ** (ನಾ). ಹಗಲಿನ ರತ್ನದಂತಿರುವವನು ; ದಿನಮಣಿ ; ಸೂರ್ಯ : ತನ್ನಯ ಬರ್ದುಕದೇಕೆಂದು ಜೀವನದಿಯಂ ಬಿರ್ದು ಪೋದನೆಂದೆನೆ ಪಗಲ್ಮಣಿಯಸ್ತಮಯನಾದನು (ವಿಕೋಪು. ೬-೧೭).

[ಪಗಲ್ + ಮಣಿ$_3$]

**ಪಗಲ್ವಕ್ಕಿ** (ನಾ). ಹಗಲು ಮಾತ್ರ ರತಿಸುಖವನ್ನು ಪಡೆಯುವುದೆನ್ನಲಾದ ಹಕ್ಕಿ; ಚಕ್ರವಾಕ ಪಕ್ಷಿ : ಗಂಡು ಹೆಣ್ಣುಗಲ್ವಕ್ಕಿ ಸ್ವಸ್ಥಾನದೊಳಿಂಬುಗೊಂಡಿರ್ದು . . . ಒಪ್ಪಿದುವು (ಮೋಹತ. ೨೭-೩).

[ಪಗಲ್ + ಪಕ್ಕಿ]

**ಪಗಲ್ವಗೆಯ,** ಪಗಲ್ಪಗೆಯ (ನಾ). ಹಗಲಿಗೆ ಶತ್ರುವಾದವನು ; ಚಂದ್ರ : (೬). **ಪಗಲ್ಪಗೆಯ :** (೬). [ಪಗಲ್ + ಪಗೆ$_2$ + -ಅ$_7$]

**ಪಗವು,** ಪಗ, ಪಗವ, ಪಗೆವು$_1$, ಹಗ$_1$, ಹಗವ, ಹಗವು, ಹಗಹ, ಹಗೆ$_3$, ಹಗೆಯ$_2$, ಹಗೆವು, ಹಗೆಹು, ಹಗೇವ, ಹಗೇವು (ನಾ).

ರಾಗಿ, ಜೋಳ ಮುಂತಾದುವುಗಳನ್ನು ತುಂಬಿಡಲು ಭೂಮಿಯಲ್ಲಿ ಮಾಡಿರುವ ಗುಳಿ : ಬಿಂಬಾಧರಂಗಳಿಂ ಪವಳದ ಪಗವಂ ತೆಱೆದಂತೆಯುಂ ಮುಗುಳ್ನಗೆಗಳಿಂ ಬಿಡುವೆಳ್ದಿಂಗಳ ಭಂಡಾರದಂತೆಯುಂ (ಲೀಲಾವ. ೧೨-೧೨ ವ) ; ರುಜೆಯೆಂಬ ತೇಳ್ಗಳಾ ಪಗವಿನೊಳಿರ್ಪವೊಲ್ತನುವಿನೊಳ್ಪಿರಿದಿರ್ಪಜನಾತ್ಮನೆಂಬುದಂ ಬಗೆಯದ ಕಾರಣಂ ಬರ್ದುಕು ರಂಜಸಿತು (ಅಪಶ. ೪೪). **ಪಗ :** ಅಗರುಧೂಪದ ಪೊಗೆಗಳು ಮಗಮಗಿಸುತ ನೆಗೆದವಲ್ಲಲ್ಲಿ ಬೀದಿಯಲಿ ಸೊಗಸಿತೆಂತೆನೆ ದಿವ್ಯಾಮೋದ ತುಂಬಿದ ಪಗದ ಮುತ್ತುಳ ತೆಗೆದಂತೆ (ರಾಮವಿ. ೧೯-೫೯). **ಪಗವ :** ಜೈನಪುರಾಣಮನೆಯ್ದೆ ತಿಳಿದು ಮನುಜಂ ಬೞಿಯಂ ಕುಪಥಕ್ಕೆಐಗನಿರುಳ್ ಬಿರ್ದ ಪಗವ[ಪಾಠಾಂ. ಪಳ್ಳ]ದೊಳು ಪಗಲುಮಱಿವೊಡಂ ಬಿರ್ದಪನೆ (ಸಮಪ. ೩-೯೬) ; ತೀವಿದ ಕೆಱೆಯಂತೆ ಪಗವಕ್ಕೆ [ಪಾಠಾಂ. ಹಗಹಕ್ಕೆ] ಬಂದ ಧಾನ್ಯದಂತೆ (ಧರ್ಮಾಮೃ. ೯-೩). **ಪಗೆವು**$_1$ **:** ಹರಿ ಪಾಯ್ದುಗ್ಗಿದವುದುಗುರಿಂ ಮುತ್ತಿನ ಪಗೆವಂ ತೆಗೆವಂತೆ ಕುಂಭಿಕುಂಭಸ್ಥಳಮಂ (ಲೀಲಾವ. ೮-೨೩). **ಹಗ**$_1$ **:** ಆ ಫಲವ ಬಯಲ ಕಣದಲೊಕ್ಕಿ ಮನದ ಹಗದಲ್ಲಿ ತುಂಬಿ ಬಾಯಿ ಹಗದಲ್ಲಿ ತೆಗೆದು ಕಣ್ಣಿನ ಕೊಳಗದಲ್ಲಿ ಅಳೆವುತ್ತಿರಲಾಗಿ (ಸುಂಕಬಂ. ೧-೨೩೧) ; ಬಲ್ಲಿತಾಗಿರ್ದ ಹಗವನು ಪೊಕ್ಕಂತಾಗೆ ನಿಲ್ಲದಲ್ಲಿಂ ಪೋದಳರಸ (ಚಂಪ್ರಸಾಂ. ೧೦-೧೫೩); ಬಡಗುಂಪುವೆತ್ತೊಂದು ಹಗದ ಬಾಯ್ದೆಱೆವಾಗ ಪೊಡವಿಯೊಳ್ಸೆಕೆಯುಗಿದಱಿಯ (ಭರಚ. ೨೮-೭೬) ; ಹಗ ಪೆಟ್ಟಿಕಣಜದೊಳಿಹ ಬಹುಧಾನ್ಯವ ಬಗೆಯದೆ ಸೂಱೆಯಕೊಟ್ಟು . . . ಜನವಂಜಿ ಜಗುಳಿದರು (ಕಂಸವಿ. ೧೧-೪೮) ; ಆರು ಹಗದಲ್ಲಿ ರಾಗಿ ಮಾತ್ರ ಇದೆ (ಚಿಂಗಾಳ್ವ. ೨೮೫). **ಹಗವ :** ಕಿಡಿಯ ಕಡಲಂ ಹೊಗೆಯ ಹ[ಗ]ವ [ಪಾಠಾಂ. ಹೊಗುವ, ಹಗ್ಗ, ಹಳ್ಳ]ಮಂ ದಳ್ಳುರಿಯ ಮಡುಗಳಂ. . . ಪಾಯ್ದು (ಸಿದ್ಧರಾ. ೩-೯); ಭುವನಗರ್ಭಕುಹರಂ ತಾನಾವಗವಿಮಿಡಿದಡಸಿದ ತುಂತುಱ ಹಗವವಿದೆನಿಸಿದುದು ಬಿಡದ ಬಡಹದ ಕೊರ್ಬಿಂ (ಕುಸುಮಾ. ೬-೪೦) ; ಶರಣಾಗತರಂ ರಕ್ಷಿಪ ಬಿರುದು ಧರೆ ಪೊಗಳೆ ಹಗವದೊಳ್ ಸೀಯಲ್ ಕಳ್ಳರೆನಿಪ ಮಾತಂಗರನಂದುರಿಯೊಳ್ ತಾಂ ಪೊಕ್ಕು ಕಾಯ್ದನಾ ಗುರುದೇವಂ (ಮುಂಬರಾ.X, ೨೬-೨೧; 1229). **ಹಗವು :** ಬೆಳೆಯದೆ ಹಗವಂ ತೋಡುವೆನೆಂಬ ಪುಟ್ಟದ ಕೂಸಿಂಗೆ ಪೆಸರಿಡುವೆನೆಂಬ . . . ಮರುಳನಂತೆ (ಧರ್ಮಾಮೃ. ೧೨-೨೪) ; ಜಗವ ತುಂಬುವ ಪ್ರಭೆಯಿದೆ ಇದ ಮೈಯೆಂಬ ಹಗವಿನೊಳುತ್ತಬಿದರಾರು (ಭರಚ. ೬೦-೩೬). **ಹಗಹ :** ಹಗಹದ ಜೋಳದಂತೆ ಕಿತ್ತ ಪಡಿಯಂತೆ . . . ಕಿವಿಯಲಿಕ್ಕಿದೋಲೆಯಂತೆ (ಧರ್ಮಾಮೃ. ೮-೧೪೭ ಅಡಿಟಿ) ; ಹಗ [ಪಾಠಾಂ. ಸಂಗ್ರ]ಹದಲ್ಲಿ ಬಿದ್ದವರ ಮೇಲೆ ಒರಳ ನೂಂಕುವರೆ (ಬಸವ. ೩೧೬). **ಹಗೆ**$_3$ **:** ಹೇರಿ ಹಗೆಗಳ ತುಂಬಿ ಉಳಿದ ಧಾನ್ಯಮನೆಲ್ಲ ಮಾರಿ (ನವಮೋ. ೨-೪೩) ; ಅರಿಷಿಣವನ್ನು ನಾಲ್ಕೈದು ತಿಂಗಳವರೆಗೂ ಕಡೆಯಲ್ಲಿ ಇಟ್ಟರೆ ಹುಳ ಹತ್ತುವದೆಂದು ಹಗೆಯಲ್ಲಿ ಹಾಕುತ್ತಾರೆ (ಕೃಷಿಪ್ರ. ೧೪೯); ಬಹುದಿವಸ ಮುಚ್ಚಿದ ಬಾವಿಯೊಳಗೂ ಹಗೆಗಳಲ್ಲಿಯೂ ಈ ಗ್ಯಾಸವು ಬಹುತರವಾಗಿ ಇರುತ್ತದೆ (ಮುಂಬಯಿ.೫-೧೫೮); ಅವನು ಐವತ್ತು ಚೀಲ ಗಟ್ಟಳೆ ಜೋಳವನ್ನು 'ಹಗೆ'ಯಲ್ಲಿ ಹಾಕಿರುತ್ತಿದ್ದ (ಬರಹಾ. ೯೯). **ಹಗೆಯು**$_2$ **:** ಕುರುಡರ ಹಿಡಿದು ಹಾಳ ಹಗೆಯದಲ್ಲಿ ಬೀಳುವ ತೆಱನೆನಗಾಯಿತು (ಮೋಳಿಮಾ. ೧೬೫-೬೧೫) ; ಹೊಗಬಹುದು ಕಾಳಾಹಿ ತುಂಬಿದ ಹಗೆಯವನು ಹಸಿದಿರ್ದ ಹುಲಿಗಳ ಮೊಗವ . . . ಹೊಗುವಡಳವಲ್ಲಿರುಳು ಲಂಕೆಯನಾವ ವೀರರಿಗೆ (ಕೌತಿರಾ. ೧೦-೧೫) ; ಜಗಲಿ ಸೂಳೆಗೆ ಲೇಸು ಹಗೆಯುದ ಭತ್ತವುಣ ಲೇಸು ಸತಿಯರಿಗೆ ನಗೆಮೊಗವು ಲೇಸು (ಸರ್ವಜ್ಞ. ೧೬೯೮) ; ತನುವ ನಾನಿನ್ನಿದನು ತಳೆಯಲಾರೆನು ದೇವ . . . ವಂಚನೆಯ ಸೀಮೆ ನಿಷ್ಠುರದ ಚಾವಡಿ ಭೀತಿಯ ಹಗೆಯವು (ಕೈಕವ. ೧-೧೪-೧) ; ಬೇಡಾದ ಬರಡಾದ ಕತ್ತಲೆಯ ಹಗೆಯದಲಿ ಬೇಡಿಗಳ ತೊಡಿಸಿರುವ ತೆರ ನಾವು ನಿಂತಿಹೆವು (ಬಾಸಿಗ. ೬೬-೧೩) ; ಹಗೆಯದೊಳಗೆ ಬಿದ್ದ ನಾಯಿ ಹಾಕುವವರನ್ನರಿಯದು ತೆಗೆಯುವವರನ್ನರಿಯದು (ಗಾದೆ). **ಹಗೆವು :** ಮುತ್ತು ಮಾಣಿಕ ಹವಳಗಡಿ ತಿಮಿಂಗಿಲ . . . ಮಕರಗಳಡಸಿ ತುಂಬಿದ ಹಗೆವೆನಿಸಿ[ಪಾಠಾಂ. ಹಗೆಯೆನಿಸಿ, ಹಗವೆನಿಸಿ, ಹಗವದೆನಿಸಿ, ಹಡಗವೆಸೆವ] ಮಹಿಮೆಯಿಂ ಮೆಱೆದುದರರೆ ಪಶ್ಚಿಮ ವನನಿಧಿ(ಸೋಮಚ. ೧-೬೦). **ಹಗೆಹ :** ಬಲ್ಲಿದನ ಹಗೆಹ[ಪಾಠಾಂ. ಯ] ತೆಗೆವನ್ನಬರ ಬಡವನ ಹರಣ ಹೋದ ತೆಱನಂತಾಯಿತ್ತು (ಮಹಾದೇ. ಬ. ೩೩-೬೧) ; ಕೊಯಿವನಯ್ಯಾ ಕೊಱೆವನಯ್ಯಾ ಒಕ್ಕುವನಯ್ಯಾ ಏಳುವನಯ್ಯಾ ಲೋಕಾದಿಲೋಕಗಳ ಹಗೆಹ[ಪಾಠಾಂ. ಯ, ವು]ನಿಕ್ಕುವನಯ್ಯಾ (ಸರ್ವವ. ೧೬೨-೭೬೯). **ಹಗೇವ :** ಪಾತಕಜೀವಂಗಳ್ ಎಳ್ಳಿನಂತೆ ಗಾಣಕ್ಕೆ ಪಂದು . . . ಧಾನ್ಯದಂತೆ ಹಗೇವಕ್ಕೆ ಪಂದು (ಧರ್ಮಾಮೃ. ೩-೭೬). **ಹಗೇವು :** ಮರುಕ್ಷಣದಲ್ಲಿಯೆ ಒಂದು ದೊಡ್ಡ ಸುಣ್ಣದ ಹಗೇವು ಸಿದ್ಧವಾಯಿತು (ಕುಮಾಸಾಂ. ೨೧೯) ; ಹಗೇವಿನಲ್ಲಿದ್ದ ಮುಗ್ಗಲುರಾಗಿ ತಿಂದು ಒಬ್ಬಿಬ್ಬರು ಸತ್ತರು (ಕಲಿನೆ. ೨೩೯) ; ಒಂದು ಹೊಸ ಹಗೇವು ತೋಡಿಸಿ ಅದಕ್ಕೆ ಜೋಳ ತುಂಬಿದೆ (ಬೆಳುಮು.೧೧೭). [ದೇ.॥ ತಮಿ. ಪಯಮ್ಪು]

**ಪಗಾರ** (ನಾ). (ಉಕ) ಸರ್ಕಾರ ಮೊದಲಾದ ಕಡೆಗಳಲ್ಲಿ ಸಲ್ಲಿಸುವ ಸೇವೆಗಾಗಿ, ಅವರಿಂದ ಪಡೆಯುವ ಪ್ರತಿಫಲದ್ರವ್ಯ; ಸಂಬಳ; ವೇತನ : ಒಂದು ವೇಳೆ ಕೆಲಸ ಸಿಕ್ಕಿದರೂ ಸಿಗುವ ಪಗಾರ ಎಂಭತ್ತು ರೂಪಾಯಿ (ವಾತ್ಸಲ್ಯ. ೬೮) ; ತಿಂಗಳಿಗೆ ಇನ್ನೂರು ರೂಪಾಯಿ ಪಗಾರ ಅವರಿಗೆ ದೊರಕುತಲಿದ್ದಿತು (ಕಾಲಯಾ. ೫) ; ಕೈಯಲ್ಲಿಯ ಪಗಾರವು ಈ ಮೊದಲೇ ತೀರಿತ್ತು (ಅನ್ನ. ೩೬);ಸಾಲಕ್ಕಾಗಿ ಅರ್ಧ ಪಗಾರ ಹೋಗುತ್ತಿದೆ (ಮುತ್ತೈದೆ. ೧೧೭). [←ಹಿಂ. ಮರಾ. ಪಗಾರ್./ಪೋರ್ಚು Paga]

**ಪಗಾರಿ** (ಗು). ಸಂಬಳವನ್ನು ಪಡೆಯುವ : ನಾನು ಪಗಾರೀ ಕಾರ್ಯದರ್ಶಿಯಾಗದಿದ್ದರೂ ಸೇಟಸಾಹೇಬರ ಚಿತ್ರಗುಪ್ತನ ಪೀಠದಲ್ಲೂ ಆಗೀಗ ಮಂಡಿಸತೊಡಗಿದೆ (ದೀಪಹ. II, ೩೫೩). [< ಪಗಾರ]

**ಪಗಿನ್**, ಪಗಿನ, ಹಗಿನ, ಹಗಿನು (ನಾ).**೧.** ಗೊಬ್ಬುಳಿ ಮೊದಲಾದ ಮರಗಳ ತೊಗಟೆಯಿಂದ ಸ್ರವಿಸುವ ಜಿಗುಟಾದ ದ್ರವ ; ಅಂಟು ; ಗೋಂದು : ಬೇಡಂ ಮಾಣಿಕಮೊಂದಂ ಕಾಡೊಳ್ ಕಂಡೊರ್ಮೆ ಮೆಲ್ದು ಪಗಿನಲ್ಲೆಂದೀಡಾಡಿದನೆಂಬೀ ನಾಣ್ನುಡಿ ನಾಡೆಯುಮೆಸೆದಪುದು ದುರಿತವಶದಿಂದವನೊಳ್ (ಧರ್ಮಾಮೃ. ೧-೧೧೫) ; ಪಚ್ಚೆಯ ಪರಲ್ಗಳಂದದ ಪಗಿನನಿರದುರ್ಚಿ ತಳಿರ ಮೂಡೆಯೊಳೆ ಮಲ್ಲಿಗೆಯ ಮುಗುಳ್ಗಳನೊಟ್ಟಿ (ಲೀಲಾವ. ೧೧-೧೦ ರಗಳೆ) ; ತದುಕಿನ ಮರದ ಮುಱಿಗಣ್ಣೊಳೊಗೆದ ಪಗಿನೊಳಗ್ಗಿವೆಗಡಿಂ ಕಾಲ್ದೊಡರ್ದು ವಿಡುಕಿಕಳವಳಿಪ ಕಳವಿಂಕಸಂಕುಳಂಗಳುಂ (ಚಂದ್ರಪ್ರ. ೫-೭೫ ವ) ; ತಱಿಯದ ಮತ್ತಿಯ ಮರನೆರಡಱ ಪಗಿನಂ ತ್ರಿಫಲೆ ಪಂಚಮೂಲಮಿವಂ ನೀರೆಱೆಯದೆ ಪುಡಿಗೆಯ್ದು (ಅಶ್ವಶಾ. ೧೪-೧೫). **ಪಗಿನ : ೧.** ಕರಿಕರಾಗ್ರದಿಂ ಮುಱಿದ ತಳಿರ ತದುಕಿನ ಮರದ ನಿಡುಗೋಡೊಳಱಿಯದೆಐಗಿ ಮಱಿವೆರಸಿ ಕುಳ್ಳಿರ್ದು ಪಸಿಯ ಪಗಿನದೊಳ್ ಕಾಲ್ ಜಿಗಿಲ್ತು ತಳ್ಪಂಕಂಗೊಳ್ವ ಸಮಯದೊಳ್ (ರಾಜಶೇ. ೫-೬೫ ವ). **೨. ಸುಗಂಧ ದ್ರವ್ಯ:** ಹಿಮಕರಸುಧಾಕಿರಣದ ತಿರುಳಂತೆ ರಮಣೀಯಮಪ್ಪ ಪರಿಮಳದ ಪಗಿನಮಂ (ಶಬಶಂ. ೨-೪೨ ವ). **ಹಗಿನ : ೧.** "ಪಿಲ್, ಪಿಲಃ, ಪೇಲಃ, ಪೇಲುಃ, ಪಿಲೀಃ, ಪೈಲಂ–ಈ ೬ ಹಗಿನಂ" (ಕಾಶಕ್ಯ. ೪೮); ಅತಸಿ–ಅಗಸೆಯ, ಪಿಚ್ಛಿಯಾ–ಹಗಿನದಿಂದಲೂ (ಬಾಹಟೀ. ೨-೨-೨೯ ವ). **೨.** ಮರ ತಿಗಡು ಹಗಿನ ಮೊದಲಾದವಱಲ್ಲಿಯು ಗಂಧವನಱಿವುದು ಆಚಾರಲಿಂಗದಲ್ಲಿಯ ಗುರುಲಿಂಗ (ಆದವ. ೫-೧೨). **ಹಗಿನು :**

೧. ಬೆರಸೆಲವದ ಹಗಿನೆಲಹುರಿಯಿರವಂತಿಗೆಯೆಂಬಿವಂ (ಖಮದ. ೫-೮೮); ಮಗಧರುಹಂ ಮಧು ಕಕ್ಕೆಯ ಹಗಿನುದಧಿಜ . . . ಇನಿತಂ ಮರ್ದಿಸಿ ಶಿಶ್ನಗೆ ತೊಡೆದೊಂದಲ್ ಭಗದ್ರವಂ ಪಿರಿದಕ್ಕುಂ (ಮನ್ಮವಿ. ೧೮-೨೬); ವೃಕ್ಷಂಗಳಿಗೆ ಹಗಿನೀ ಪಾಪ ಕಡಿದಡೆ ಬೆಳೆವ ವರವೆಂದ (ನಿಭಾಗ. ೬-೯-೫); ಎಲವದ ಹಗಿನು, ಅಷಾಢಗೆಣಸು . . . ಚೂರ್ಣವಂ ಮಾಡಿ . . . ತೆಗೆದುಕೊಳ್ಳಲು ಪೈತ್ಯದಿಂದಾದ ಗಂದೆ, ದದ್ದು ಮುಂತಾಗಿ ಮಾಣ್ಗುಂ (ಸಕವೈ. ೧೪೩). ೨. "ನಿರ್ಯಾಸಃ — ಹಗಿನು; ದೇವಧೂಪ" (ಓಷಧಿ. ೮೭); ಸುಗುಣದುರ್ಗುಣವೆಂಬುಭಯದ ಹಗಿನುವ ತೆಗೆದು ನಿಜಸುಗಂಧದ ಧೂಪವನಿಕ್ಕಿ (ಸರ್ವವ. ೫೪-೨೯೦); ಹುಲ್ಲ ಕಿಚ್ಚುವ ಕಲ್ಲ ಬೀಜವ ನೀರ ನೆಳಲುವ ಗಾಳಿಯ ನಾರುವ ಅಗ್ನಿಯ ಹಗಿನು [ಪಾಠಾಂ. ನ]ವ ಬಿಸಿಲಿನ ರುಚಿಯ ತನ್ನ ಬೆಳಗುವನಾರು ಬಲ್ಲರು ಗುಹೇಶ್ವರ ನಿಮ್ಮ ಶರಣರಲ್ಲದೆ (ಅವಚಂ.೧೩೫-೬೧೬). 'ಪಗಿಲ್' ಪರಾ. [ದೇ.॥ ತಮಿ. ಪಚ್ಚೈ, ಪಯಿನ್ ; ಮಲ. ಪಚ, ಪಯ, ಪಶ; ತುಳು. ಪಯ]

**ಪಗಿನ** 'ಪಗಿನ್' ನೋ.

**ಪಗಿಲ್** (ಕ್ರಿ). ೧. ಅಂಟಿಕೊಳ್ಳು ; ಹತ್ತಿಕೊಳ್ಳು : "ಪಗಿಲ್–ಸ್ನಿಗ್ಧಸಂಶ್ಲೇಷಯೋಃ" (ಶಮಧಾ. ನ) ; "ಪಗಿಲ್ತುದು ಪತ್ತಿದುದಕ್ಕುಂ" (ಕವಿಕಂ. ೭೬) ; ಬಿಗಿದೊಗೆದ ನಿನ್ನ ಮೊಲೆಗಳ ಮೃಗಮದದ ಪುಳಿಂಚುಗಳ್ ಪ[ಗಿಲ್ತಿ] [ಪಾಠಾಂ. ನಿತ್ತಿ]ರಲ್ (ಪಂಪಭಾ. ೮-೭೭) ; ಆ ಮನೋಹರನ ಮಂದ್ಯೆಸಿ ನಿಂದ ಚಂದನದಣ್ಪಿನಿಂ ಪಗಿಲ್ತು ಪತ್ತಿ ಬೆಳ್ಪಱಿಸಿ ರಂಜಿಸುವ ಕೆಂಜೆಡೆಯ ಮೊದಲಿಂ ಬೆಡಂಗುವಡೆದು ಮಿಱುಪ ಪೆಱೆನೊಸಲೊಳಂ (ಕಾದಂಪೂ. ೯೨೭) ; ಆಗಳಾ ಗಜದ ಪೊರ್ಕುಳಿಯಿನವಯವದೊಳಲ್ಲಲ್ಲಿಗೆ . . . ಪಗಿಲ್ತಿರ್ದ ಕಲಿಲಮದಸಲಿಲಮುಂ (ಜಗವಿ. ೬-೫೫ವ) ; ಪಗಿಲ್ತ ಕತ್ತುರಿಯ ಪತ್ರಲತಾಂಕುರದಚ್ಚು ತಳ್ತು . . . ನಿರವಿಸುತಿರ್ದೊಡಂ (ವರ್ಧಪು. ೬-೫೦) ; ನೀಂ ಶ್ರೀಲೋಲಂ ಸಿರಿಯಂ ಪಗಿಲ್ತ ತೆರದಿಂದಪ್ಪೆರ್ಪೆ ಮೇಣ್ವಕ್ಷದೋಳ್ (ಮೈಸೂಮ. ೨-೨೪). ೨. ಸೇರು ; ಕೂಡು ; ಜೊತೆಯಾಗು ; ಒಟ್ಟುಗೂಡು ; ಹೆಣೆದುಕೊಳ್ಳು : ಪೊರೆವೊರೆಗೊಂಡಿರೆ ಮುಗಿಲ್ ಪಗಿಲ್ತುವು ನಭದೊಳ್ (ಪಂರಾಮಾ. ೭-೧೬೫) ; ಕರ್ಪುಕಾರ್ಮುಗಿಲ ಮಿಂಚೆನೆ ಕಣ್ಗದಿರುರ್ವಿ ಮಿಂಚೆ ಸಾರ್ದೆಳಸಿ ಪಗಿಲ್ತ ಕೇಕಿಯೆನೆ ಬಲ್ಮುಡಿ ತೋಱೆ (ಶಬಶಂ. ೩-೧೫); ಕನಲ್ವ ಜಾಱುವ ಜವಂಗೆಡದೊತ್ತುವ ಪತ್ತುವಣ್ಮನಿಂ ಬಿಗಿವ ತುಡುಂಕುವವ್ವಳಿಪ ಬಿನ್ನಣವೊಪ್ಪೆ ಪಗಿಲ್ತು ಕಾದಿದರ್ (ಶಬಶಂ. ೪-೭೪) ; ಕಡಲಿಂ ಬಾಂಬರಂ ನೆಗೆದ ಕರ್ಮುಗಿಲೊಡ್ಡಿಂ ಪಗಿಲ್ತು ಕೊಳನ ನೀರುಣಲೆಂದು ತೇಂಕಿವರ್ಪ ಕಿಱುಮುಗಿಲ್ (ರಾಮಾಶ್ವ. ೧೦೧-೧೦). ೩. ಹಬ್ಬು ; ವ್ಯಾಪಿಸು ; ಹರಡು : ಕವಿದು ನಿಳಿಂಪಕೋಟೆ ಮೊಗೆಯುತ್ತಿರೆ ಶಂಖದ ಬಳ್ಳಿ ತಳ್ತುದೋ ಪವಳದ ಬಳ್ಳಿ ಪರ್ವಿದುದೊ ಪಾವಸೆಬಳ್ಳಿ ಪಗಿಲ್ತುದೋ ಸಮುದ್ರವನೆನೆ (ಪುಷ್ಪಪು. ೧೧-೧೩).

**ಪಗುಡಿ** (ನಾ). ೧. ಹಾಸ್ಯ ; ಕುಚೋದ್ಯ; ಲೇವಡಿ : ಸರಸಸಮ್ಮೇಳ ಪಗುಡಿ ಪರಿಹಾಸಕ ಚದುರಂಗ ನೆತ್ತ ಪಗಡೆ ಜೂಜು ಶಿವಭಕ್ತಗುಂಟೆ (ಏಲೇಶ್ವ.೭೭). ೨. ಹಾಸ್ಯಗಾರ ; ಕುಚೋದ್ಯ ಮಾಡುವವನು : ವೇದವ ಪಠಿಸುವಲ್ಲಿ ಶಾಸ್ತ್ರವನೋದುವಲ್ಲಿ ಆಗಮಂಗಳ ತಿಳಿವಲ್ಲಿ ಶಿವಜ್ಞಾನ ಅನುಭಾವವ ಮಾಡುವಲ್ಲಿ ಪಗುಡಿ ಪರಿಹಾಸಕರ ಅರ್ತಿಕಾಱರ ಹೊತ್ತುಹೋಕನಿಗಾಗಿ ಘಟ್ಟಿವರ ಕೂಡಲುಂಟೆ (ಅಂಬಿವ.ಕ. ೩೮೯-೧೪೬೧); ಶಿವಲಿಂಗಪೂಜೆಯ ಮಾಡುವಲ್ಲಿ ಪಗುಡಿ ಪರಿಹಾಸಕರ ವಾಗಾದಿಗಳ ಕೂಡದೆ (ತುಱಿಂಗಾ. ೬-೧೯); ವಿಷಯ ಸೊಕ್ಕಿದಿಲಿಗಳನು ಪಿಡಿವ ಬೆಕ್ಕುಗಳ್ ಪಗುಡಿ ಗುಣತರ್ಕಿಯರ್ ಇಹಪರದೊಳಕ್ಕೆಯರ್ (ಷತಿಲ. ೨-೭೦). [ ? ]

**ಪಗುಡಿತನ** (ನಾ). ಪರಿಹಾಸ ಮಾಡುವಿಕೆ ; ಕುಚೋದ್ಯ ಮಾಡುವಿಕೆ : ಭಕ್ತನು ವಿರಕ್ತಂಗೆ ಜೂಜುವೇಂಟೆ ಕುತರ್ಕ ಕರ್ಕಸ ನೆತ್ತ ಚದುರಂಗ ಪಗಡೆ ಪಗುಡಿತನ ಪರಿಹಾಸಕ ಇಂತೀ ಸಮೇಳ ಸ್ವಸಂ (ಸಂಚಂ)ಗಳ ಮಾಡುತ್ತ (ಸರ್ವವ. ೯೭-೫೩೩). [ಪಗುಡಿ+-ತನ]

**ಪಗುದಿ,** ಪಗದಿ, ಪೊಗದಿ (ನಾ). ಸಾಮಂತರಾಜರು ಸಾರ್ವಭೌಮನಿಗೆ ಕೊಡುತ್ತಿದ್ದ ಧನರೂಪವಾದ ಕಾಣಿಕೆ,—ಕಪ್ಪ ; ಆಶ್ರಿತ ಸಂಸ್ಥಾನವು ಪೋಷಕರಾಷ್ಟ್ರಕ್ಕೆ ಕೊಡುತ್ತಿದ್ದ ವಾರ್ಷಿಕ ಕಪ್ಪ,—ತೆರಿಗೆ : ತುರುಕರಿಗೆ ಪಗುದಿ ತೆರುಥಾರೆಯೆಂಬದರಿಂದ ತಾತ್ಕಾಲಕೆ ಅವರಲ್ಲಿ ಮುನ್ನೂರುವರಹದ ಗ್ರಾಮವನಿರಿಸಿ (ಎಕ. VIII, ತೀರ್ಥಹ. ೯೮-೪೦ ; 1668) ; ಯಿಾಗ ಹೆಚಿದು ಪಗುದಿಯಿಂದ ಹುಟ್ಟುವಳಿ ಮೇಲೆಗ ೧ಕ್ಕೆ (ಎಕ. VII, ಶಿಕಾರಿ. ೨೧೦-೧೩ ; 1758) ; ಮತ್ತಂ ಸ್ವರಾಷ್ಟ್ರಂಗಳೊಳಕಾಲಚಕ್ರದೊಳೆತ್ತುವುತ್ತಾರ ಪಗುದಿಯನೆತ್ತದಂತು ನಿಯಾಮಕಮಂ ರಚಿಸಿ (ಕಳನ್ನ. ೧೦-೨೦) ; ವನ್ನಿಕೆಗೆ ಬಂದ ಅವನಿಂದ ಪಗುದಿಯ ಹಣವು ಬರುವಂತೆ ಖಣ್ಡಣೆ ಮಾಡಿದ್ದರು (ಬೆಟ್ಟಅ. ೪೪-೧೨). **ಪಗದಿ** : ಮುಗಿಲ ನಾಡನಿತಕ್ಕೆ ಮೂಗುಬ್ಬಸಗೆಯ್ದು ಪಗದಿ ಚೌದಾಯಿಯ ಪಟ್ಟೆ ಪಗಲೆ ಕೊಂಡ ವಿಗಡ ಜೇತಜಿ ತನ್ನ ಬಿಂಕದೊಳಯ್ತರೆ (ಚಿಕಸ. ೨೧) ; ಪಗದಿ ಮುಂತಾದನ್ನು ಕ್ಯಾಳದಂತೆ ಸ್ಥಳಕ್ಕೆ ತಾಕಿತಿ ಮಾಡಿಸಿ (ಮೈಅರಿ. ೧೯೩೦, ೪೪-೮ ; 1768) ; ಅರಸುಗಳಿರಾ, ನಮಗೆ ಪಗದಿಗಳಂ ಕೊಡುತ್ತ ಎಂದಿನಂತೆ ನಮ್ಮ ಕಾರ್ಯಕ್ಕೆ ಸಹಾಯಕರಾಗಿ ಇರಿ (ಮುದ್ರಾಮಂ.೧೭೫); ಪಗದಿ ಕೊಡದವನಿಗೆ ನಿಗದಿ ಮಾಡಿ ಏನು ? (ಗಾದೆ). **ಪೊಗದಿ :** ಆ ಚಿಕ್ಕಪ್ಪಶೆಟ್ಟಿಯು ಬಂದು . . . ಮಹೀಶೂರ ಧೊರೆಗಳಿಗೆ ೧೨ ಸಾವಿರ ವರಹಗಳನ್ನು ಪೊಗದಿ ಕೊಡುವಂತೆ ಗೊತ್ತುಮಾಡಿ . . . ಹೊರಟು ಹೋದನು (ಚಾಮವಂ. ೫೩) ; ರಾಜಒಡೆಯರು . . . ತಾವು ಕೊಡುತ್ತಿದ್ದ ಪೊಗದಿಯನ್ನು ಮೆಲ್ಲಗೆ ತಪ್ಪಿಸಿದರು (ಸಂಸಕ. ೧೩೦) ; ಗುಮ್ಮನಾಯಕನು ವಿಜಯನಗರದ ಅರಸರಿಗೆ ಪೊಗದಿಯನ್ನು ಕೊಡುತ್ತಾ . . . ಕೌಲು ಮಾಡಿಕೊಂಡನು (ಪಾಳಗಾ. ೬). 'ಪಂಗ$_1$' ಪರಾ.

ಪಗದಿಹಣ, ಪೊಗದಿಹಣ = ಸಾಮಂತರಾಜರು ಸಾರ್ವಭೌಮನಿಗೆ ಕಪ್ಪವಾಗಿ ಕೊಡುತ್ತಿದ್ದ ಧನ: ಆನಂದಸಂವತ್ಸರದ ಫಾಲ್ಗುಣ ಶುದ್ಧ ೭ ಶುಕ್ರವಾರದಲ್ಲಿ ಪ್ರಭಾವಳಿತವಾದ ರಾಜ್ಯಗಳನ್ನು ಸ್ವಾಧೀನಮಾಡಿಕೊಂಡು ಪಗದೀಹಣ ಬರುವಂತೆ ಗೊತ್ತುಮಾಡಿದ ರಾಜ್ಯಗಳು (ಚಾಮವಂ.೧) ; ಪೊಗದಿ ಕೊಡುವ ರಾಜ್ಯದಿಂದ-ಕೊಡುವ ಪೊಗದಿಹಣ ಅಪಹಾರವಾಗುವುದು (ದಾದಾನ. ೧೩೩).

[ದೇ.॥ ತಮಿ. ಪಕುತಿ ; ಮಲ. ಪಗುದಿ ; ತುಳು. ಪಗದಿ ; ತೆಲು. ಪಗಿದಿ./ಸಂ. ಭಕ್ತಿ]

**ಪಗೆ$_1$,** ಹಗೆ$_1$ (ಕ್ರಿ). ದ್ವೇಷಿಸು ; ವಿರೋಧಿಸು ; ಶತ್ರುತ್ವವನ್ನು ಹೊಂದು : ಪಗೆದು ಮೂಱುಂ ಮೆಯ್ಯುಂ ಸಮೆದು ಮೇಣೆನ್ನಂ ಕಾಣ್ಬುದು ಪೆಱತೊಂದು ; ಇವಱೊಳಾವುದು ಮನಕ್ಕೇಱುವುದದಂ ಪೇೞಿಮೆನೆ (ರಾಮಾಶ್ವ. ೧೩-೫) ; ಪಗೆಗಳನ್ ಪಗೆವುದು ಮರುಳೆನಲ್ ನಾನ್ ಮರುಳನೆನ್(ಬದ್ಧಪ್ರ.೫೨-೧೧೨೭). 'ಪಗೆಯ', 'ಪಗೆವ' ಪರಾ. **ಹಗೆ$_1$:** ಆಡಿ ಕಾಡಿ ಬೇಡಿ ನೀಡಿ, ಒಲಿದೊ ಹಗೆದೂ ಅರಕೆಯೊಳ್ ತನ್ನ ಪೂರ್ಣತೆಯನೆ ತೋರಿ, ಹೊಂದಿ ಬಾಳ್ವ ಹರಕೆಯೊಳ್(ಅಹಲ್ಯೆ. ೮೫-೧೫); ಎಲ್ಲರಲಿ ದಯೆದೋರಿ, ಯಾರನೂ ಹಗೆಯದಿರಿ (ವೈಶಾಖಿ. ೮೨-೪೯೩).

[ದೇ.॥ ತಮಿ. ಪಕೈ ; ಮಲ. ಪಗೆ]

**ಪಗೆ$_2$,** ಪಗೆವು$_2$, ಹಗೆ$_2$ (ನಾ). ೧. ದ್ವೇಷ ; ಶತ್ರುತ್ವ ; ವೈರ : "ವಿದ್ವೇಷಂ ದ್ರೋಹಂ ವೈರಂ ವಿರೋಧಮೆನೆ ಪಗೆಯಕ್ಕುಂ" (ವಸ್ತುಕೋ. ೧೧೧-೪) ; ಪಗೆ ನೀಗೆಯುಂ ಮುಳಿಸು ಪೋಗೆಯುಂ

ಮಾಯತಿ ಪೆರ್ಚೆಯುಂ . . . ನೃಪರಂ ತವೆ ಕೊಲ್ವುದು (ಪಂಪಭಾ. ೮-೮೮) ; ಪಗೆಗೆ ಪಕ್ಕಾಗಿ ನಿಷ್ಕಾರಣಂ ಸಾವುದಾವ ಕಾರಣಂ (ಪಂಚತಂ. ೧೧೫-೧೨) ; ಅಂತು ಪಗೆ ಕೆಳೆಯಿಲ್ಲದೆಲ್ಲಾ ಮೃಗಂಗಳುಂ ಮಿತ್ರತ್ವ ದೊಳಿರೆ (ಧರ್ಮಾಮೃ. ೩-೯೧) ; ಪಗೆ ಕೆಳೆಯೆಂಬ ಭೇದಮಿನಿತಾದೊಡ ಮಿಲ್ಲದೆ ಮೋನದಿಂದಮಿರ್ದು . . . ವಿರಾಜಿಸಿದನಾ ಮುನಿ ಚಂದನವೃಕ್ಷ ಮೆಂಬಿನಂ (ಬಾಧಪು. ೫-೮೧). **೨.** ಶತ್ರು; ವೈರಿ : "ಮಱುವಸಲಂ, ಬೇರಂ, ಪಗೆ–ಈ ೩ ಶತ್ರು" (ಕಶಸಾ. ೫೭-೨೫೮) ; ಅನಲಾನಿಲ ಸಂಯೋಗಮುರಿಪದಿರ್ಕುಮೆ ಪಗೆಯಂ (ಗದಾಯು. ೧-೬೬) ; ಪಗೆಯಂತೆ ಭಯಮಂ ಮಾಳ್ಪುದು (ಧರ್ಮಾಮೃ. ೪-೧೭೫); ಪಗೆಯಂ ಬಾಲಕನೆಂಬರೇ (ಸೋಮೇಶ. ೪೧) ; ಪಗೆಯೊಮ್ಮೆ ಕೆಳೆಯನಾಗುವ ನೊಮ್ಮೆ ಕೆಳೆಯನೆ ಪಗೆಯನಾಗುವದಱಿಂದ ಪಗರಣದಂತಿರ್ದ ಭವದೊಳಿ ನ್ನಾರಾರ ಬಗೆದೆಣಿಸುವೆವೆಂದರವರು (ಭರಚ. ೬೫-೫೩); ಅಳಿನಿಕರಕೆ ಪಗೆ ಸರ್ವಜನಕೆ ಸುಖಗಳನೀವೆವು ಸೌರಭದಲಿ . . . ಎಂದಲರೊಪ್ಪಿದುವು ಸಂಪಗೆಗಳ (ಕಂನವಿ. ೫-೯೩). **ಪಗೆವು$_2$ : ೨.** ಪಗೆವಿನ ಪೆಸರೊಳ್ ರಾವಣಂ ಬರ್ಕೆ ಬೆನ್ನಿತ್ತಱಿಯಂ . . . ಕೀರ್ತ್ಯಂಗನಾದೃಕ್ಶಫರಸರಸಿ ಮಾರ್ತ್ತಣ್ಡನಾಜಿಪ್ರಚಣ್ಡಂ (ಸೌಇಇ. XI–i, ೭೮–೭೪ ; ಸು. 1045). **ಹಗೆ$_2$ : ೧.** ಹಗೆ ಕೆಳೆಗಳೆಂದಿಲ್ಲ ಪುರವಡವಿಯೆಂದಿಲ್ಲ (ಸಿದ್ಧರಾ. ೧-೪೦); ಬೊಮ್ಮಗವು[ಡ]ನ ಮಗ ಬೈಚ[ಗ]ವುಡನ ಹಗೆಗೆ ಕವುತೆಯು ಹದ ಮಾದೆ ಗವುಡ ಗಿನ ಮಲಗವುಡನ ಕೊಂದು (ಮೈಆರಿ. ೧೯೩೨, ೨೨-೭ ; 1229); ಮುಂಱಿದುದೈ ರಿಪುರಾಯದಳ ಹಗೆ ಹಱಿದುದೈ ಕುರುಪತಿಗೆ (ಕುವ್ಯಾಕ. ೧೪-೭); ಈಹಾಳುಬದುಕಿಗಾಗಿ ಹಗೆಯು ಬೇಡ ನೀ ತಿಳಿದು ನೋಡೆಚ್ಚಱಿಕೆ (ಪುರಂದ. ೧-೧೬೦-೩) ; ಕುಳಿತರೆ ನಿಂತರೆ ಹುಳುಕನೆ ಬಗೆವೆ, ತುಸು ತಪ್ಪಾದರು ಕಲಹವ ತೆಗೆವೆ; ಒಲವೋ ಹಗೆಯೋ ಯಾವುದಿದು ? (ಒಲುಮೆ. ೨೬-೯). **೨.** "ಅಭಿಯಾತಿಃ, ಅರಾತಿಃ . . . ದ್ವಿಷನ್ —ಈ ೨೪ ಹಗೆ" (ಹಲಾಯು. ೭೫-೩೦೧); ಭಂಡಾರಂ ಸವೆದೆಡೆ ಪ್ರಜೆ ಕೆಟ್ಟೆಡೆ ಹಗೆ ಸಮೀಪವಾದೆಡೆಯುಲಿರಲಾಗದು (ಪಂಚತಂ. ೩೯-೨೨); ತನ್ನಾತ್ಮ ತನಗೆ ಹಗೆಯಾದ ಬಳಿಕ ಬಿನ್ನಾಣವುಂಟೇ (ಬಸವ. ೧೨) ; ಪರಿಹರಿಸಿ ಮಗುಳೆಚ್ಚನೀತನು ಧರಣಿಪನನವನೀಶನೆಚ್ಚನು ಹಗೆಯ ರಥ ಹಯವ (ಕುವ್ಯಾಕ. ೧೧-೪೮) ; ವಿದ್ಯಾರಣ್ಯರು . . . ರಾಜೋಪಾಯ ಗಳನ್ನು ಕಂಡುಹಿಡಿದು ಹಗೆಗಳ ಪ್ರಾಬಲ್ಯವನ್ನು ಮುರಿದರು (ಶ್ರೀವಿದ್ಯಾ. ೧೪೮).

**ಪಗೆಕೋಳಾಹಳ** = ಶತ್ರುಗಳಿಗೆ ತಳಮಳವನ್ನುಂಟುಮಾಡು ವವನು ; ಒಂದು ಬಿರುದು: ನಗುವಳು . . . ಮನದೊಳುಬ್ಬುವಳು ದುಗುಡಕೋಳಾಹಳ ದುರ್ಗಕೋಳಾಹಳ ಪಗೆಕೋಳಾಹಳನ ಮುಂದವಳು (ಭರಚ. ೧೪-೧೧೬). **ಪಗೆ ಮುಟ್ಟೆ ಗಂಡ** = ಶತ್ರುಗಳು ಎದುರಿಸಿದರೆ ಪರಾಕ್ರಮವನ್ನು ತೋರಿಸುವವನು ; ಒಂದು ಬಿರುದು : ವೀರ ಶ್ರೀನಿವಾಸ ದಕ್ಷಿಣದೋರ್ದ್ದಣ್ಡಂ ಪಗೆ ಮುಟ್ಟೆಗಂಡಂ . . . ಶ್ರೀಮಚ್ಚಟ್ಟಯ್ಯದೇವರ್ (ಸೌಇಇ. XI–i, ೭೮–೩೭ ; 1045). **ಪಗೆ ಮೆಚ್ಚೆ ಗಂಡ** = ಶತ್ರುವೂ ಮೆಚ್ಚಿಕೊಳ್ಳುವ ವೀರ ; ಒಂದು ಬಿರುದು : ದೆಪ್ಪಾದೆಪ್ಪಿಯೊಳು ಕಾದಿ ತಳ್ತಿಱಿದು ಗೆಲ್ದು ತುರಗದಳಮಂ ತಂದ ಪಗೆ ಮೆಚ್ಚೆ ಗಂಡ . . . ರಣರಂಗಸಿಂಗ (ಸೌಇಇ. IX–i, ೩೪೩-೨೨ ; 1226). **ಹಗೆ ಮಾಡು** = ದ್ವೇಷಿಸು ; ವೈರತ್ವ ತಾಳು : ನಿಮಗೆ ಹಗೆ ಮಾಡಿ ತೋಱಿದೆನು ಕೇಳಲೇ (ಸರ್ವವ.೧೭೮-೮೨೯). **ಹಗೆಯಾಗು** = ದ್ವೇಷಿ ಯಾಗು; ಶತ್ರುವಾಗು : ಜಲವಿಳಿಯಲೀ ವನ ಕಲುಷಕಾನನವಾಯ್ತು ಭಾರಿಯ ಖಳಂಗಾಶ್ರಯವಾಯ್ತು ನಮ್ಮಾಶ್ರಮಕೆ ಹಗೆಯಾಯ್ತು (ತೊರರಾ. ೧-೧೦-೩) ; ಇಂದು ದಾರಿಯೂ ತನಗೆ ಹಗೆಯಾಯಿತೇ (ಕಾಲೂರ. ೧೧ಕಥಾಸಾರ); ಗೆಳೆಯನಾಗಿ ಬಂದವನು ಹಗೆಯಾಗಿ ಮರಳು ವಂತಾಯಿತು(ಹಾಹುತ್ತ.೨೫). [<ಪಗೆ$_1$./ತಮಿ. ಪಕೈ, ಪಕೈಮೈ ; **ಮಲ. ತೆಲು.** ಪಗ ; **ತುಳು.** ಪಗೆ]

**ಪಗೆಕಾಱ** 'ಪಗೆಗಾಱ' ನೋ.

**ಪಗೆಗಟ್ಟು** (ಕ್ರಿ). ದ್ವೇಷವನ್ನು ಹೊಂದು ; ವೈರವನ್ನು ತಾಳು : ನೆವದಿಂ ಜಾನಕಿಯಂ ಪೋಗೊಳಿಸಿ ದಾನವರೊಳ್ ಪಗೆಗಟ್ಟೆ . . . ಕಾದಿ ಬಂಡಣದೊಳನಿಬರಂ ಸೈಮಿಸಿಗಟ್ಟಿದುದು ಜನಮೆ ಎಂಗುಂ (ರಾಮಾಶ್ವ. ೧೪-೧೦). [ಪಗೆ$_2$+ಕಟ್ಟು$_1$]

**ಪಗೆಗಾಱ,** ಪಗೆಕಾಱ, ಹಗೆಗಾರ (ನಾ). ಆಗದವನು ; ಶತ್ರು ; ದ್ವೇಷಿ : ಪುಲ್ಪುಂಟೆನಂ ನಂಬಿ ಬಲ್ಪುಂಟೆನಂ ಬಿಡುವ ಪಗೆಗಾಱನುಮಂ (ಧರ್ಮಾಮೃ. ೮-೫೧) ; ಪಗೆಗಾಱರ ಮೊನೆಗಾಱರ ಬೀರ! (ರಾಮಾಶ್ವ. ೮೧-೩). **ಪಗೆಕಾಱ :** ಪಾಟಕಾಱನೊಳ್ನುಡಿಕಾಱಂ ಪಗೆಕಾಱನಾಗಿಯುಂ ಕೆಯ್ಮೆಗೆ ತಕ್ಕಂ ಕೆಯ್ದುಕಾಱನೆನಿಸಲ್ಕಾಱಂ (ಕಾವ್ಯಾವ. ೩೨೫) ; ವ್ಯವಹರಿಪನೆಂಬಲ್ಲಿ ಕಾಱ ಪ್ರತ್ಯಯಮಕ್ಕುಂ. . . ಪಗೆಕಾಱಂ, ಬಗೆಕಾಱಂ (ಶಮದ. ೧೯೯ ಪ್ರಯೋ). **ಹಗೆಗಾರ :** (ಕ). [ಪಗೆ$_2$+-ಕಾಱ$_1$]

**ಪಗೆಗೊಳ್,** ಹಗೆಗೊಳ್, ಹಗೆಗೊಳ್ಳು (ಕ್ರಿ). ದ್ವೇಷವನ್ನು ಹೊಂದು ; ವೈರವನ್ನು ತಾಳು ; ಶತ್ರುತ್ವವನ್ನು ಪಡೆ : ಪಗೆ ಗೊಂಡಾಡುವ ಶತ್ರುಭೂಪತಿಗಳಂ (ಎಇ. XIII, ೩೨೯-೩ ; 929) ; ಪೆಣನನಿಱಿದು ಪಗೆಗೊಂಡರ್ (ಪಂಪಭಾ. ೧೨-೨೯ವ); ಪಗೆಗೊಂಡ ತುಂಬಿಯಂ . . . ಸೊಗಯಿಸಿ ಕಾಮನ ಪಗೆಯಂ ಬಗೆಯಂ ತೀರ್ಚಿದುವು ಸುಗ್ಗಿಯೊಳ್ಸಂಪಗೆಗಳ್ (ಮಲ್ಲಿಪು.೫-೧೯) ; ಪಾದಾಶ್ರಿತರಾದರ ತಲೆಗಾದುದು ಪಗೆಗೊಂಡ ನೃಪರ ತಲೆಗೊಂಡುದು ಕೌಮೋದಕಿ ನೀಮ ದಱಿಂ ಹರಿಪಾದಾಶ್ರಿತರಾಗಿಮಿಲ್ಲದೊಡೆ ಪಗೆಗೊಳ್ಳಿಂ (ಜಗವಿ. ೮-೧೦೫) ; ಅಕ್ಕಟಾ ಮರುಳ್ದುಂಬಿಗಳೇಕೆ ಸಂಪಗೆಗಳೊಳ್ ಪಗೆಗೊಂಡುವೊ ನಿರ್ನಿಮಿತ್ತದಿಂ (ಶಮದ. ೧೧೭ ಪ್ರಯೋ). **ಹಗೆಗೊಳ್ :** ಹರನ ಹಣೆಗಣ್ಣ ನಗ್ನಿಯನು ಹಗೆಗೊಂಬಂದದಿಂ ಇಂದೆನ್ನ ಹಗೆಗೊಂಡೆ (ಹಚರಾ. ೮-೯). **ಹಗೆಗೊಳ್ಳು :** ಈ ನಿಭೃತಕೋದಂಡಚಂಡಕೃಶಾನುವಿನ ಹೊಯ್ಲಿನಲಿ ಹಗೆಗೊಂಡಾನುವವರಾರು (ತೊರರಾ. ೪-೬-೧೪) ; ಹರಿಯ ಹಗೆಗೊಂಡು ಕೆಡುವಾಯಸಂ ತನಗೇಕೆ (ಜೈಮಿಭಾ. ೯-೨೨). [ಪಗೆ$_2$+ಕೊಳ್$_1$]

**ಪಗೆತನ,** ಹಗೆತನ (ನಾ). ದ್ವೇಷ; ವೈರ : ವಿಶ್ವತೋಮುಖನೊಡನೆ ಬಲ್ಪಗೆತನಂ ಬಂದುದು (ಪದ್ಮರಾ. ೮-೧೮) ; ಬನಗಳ್ತಲೆಯುಂ ಕಮಳಾಪ್ತನ ಕದಿರುಂ ಕಾದಿ ಮಡಿವುತಳಿಯುಂ ಚಾಂಪೇಯನಿಕಾಯ ಮಾದುವಲ್ಲದೊಡೆನಸುಂ ತದ್ವಯಕೆ ಪಗೆತನಂ ಸಮನಿಪುದೇ (ರಾಜಶೇ. ೨-೫೪). **ಹಗೆತನ :** ಹಗೆತನವು ನಿನಗೇನು ಕಾರಣ ಚಿಗುರಿದುದು (ತೊರರಾ. ೪-೨-೨೩) ; ಹಗೆತನದ ಸಾವೊಮ್ಮೆ ಮುಟ್ಟಿಯೋಡುತಲಿತ್ತು (ಕಾಲೂರ. ೨೯-೨೨). [ಪಗೆ$_2$+-ತನ]

**ಪಗೆಬಲ್ಮೆ** (ನಾ). ಶತ್ರುವಿನ ಶಕ್ತಿ, — ಪರಾಕ್ರಮ : ನಾನೇಗಳುಂ ಪಗೆಬಲ್ಮೆಯಂ ಕಿರಿದು ಭಾವಿಸಿದೆನಿಲ್ಲ (ಶ್ರೀರಾಮಾ. ೬೪೭-೧೪೨).

[ಪಗೆ$_2$ + ಬಲ್ಮೆ]

**ಪಗೆಯ,** ಹಗೆಯ$_1$ (ನಾ). ಶತ್ರು; ಅರಿ ; ದ್ವೇಷಿ : ಪಗೆಯೊಮ್ಮೆ ಕೆಳೆಯನಾಗುವನೊಮ್ಮೆ ಕೆಳೆಯನೆ ಪಗೆಯನಾಗುವನು (ಭರಚ. ೬೫-೫೩). **ಹಗೆಯ$_1$ :** ಹಗೆಯರಲಿ ಹತವಾದನೇ ಹಾ ಸುಗುಣನಿಲ್ಲಿಗೆ ಬಾರನೇ (ಕುವ್ಯಾದ್ರೋ. ೮-೨೦) ; ಹಗೆಯನಾದರೆ ಕುಂದೆ ಗುಣದಲಿ (ಕಾತಿರಾ. ೩೬-೧೯) ; ಹಗೆಯರಿಗೆ ವರವೀವರಿಬ್ಬರು ತೆಗೆಯಲರಿಯರು ಕೊಟ್ಟ ವರಗಳ (ಹರಿಸಾ. ೨೮).

[ಪಗೆ$_1$ +–ಅ$_7$./ತಮಿ. ಪಕೈಇಞನ್ ; ಮಲ. ಪಗಯನ್]

**ಪಗೆವ,** ಹಗೆವ (ನಾ). = ಪಗೆಯ : ಶ್ರೀಪ್ರಭುಮಾಣಿ ಪರಮಸುಭಗನ್ ಪಗೆವರ ಗನ್ಧಾಹಸ್ತಿ ಪಾರ್ವ್ವರ ಇಚ್ಚೆ (ಎಕ. XVI, ಮದ್ದಗಿ. ೧೧೮–೨ ; 8ನೆಯ ಶತ) ; ಅಜಾಯದವಂ ಮುನಿಗುಂ ಪಗೆವಂಗೆ (ಕವಿರಾ. ೧–೭೯) ; ಪಗೆವರ ಗಂಟಲ ಬಳೆಯನೊಡೆದು ಕಳೆವುದನನುಕರಿಸುವಂತೆ ಶೀವಿ ತೊಟ್ಟ ಮುಂಗೆಯ್ಯ ಬಳೆಗಳನೊಡೆದು ಕಳೆದು (ಪಂಪಭಾ. ೮–೧೦೦ಪ) ; ಅರ್ಕನಂದನಂಗವನ್ನಿತನೂಜ ಸೋಮಸರಸೀಜಸಖರ್ಪಗೆವರ್ ನಿರಂತರಂ (ಜಾತತಿ.೨–೧೬) ; ವೀರವಂ ನೋಟಕರ್ ಪೊಗಳೆ ಪಗೆವನ ಸರಳ ಸಾರವಂ ಕಡಿವುತ್ತೆ ವೈರಿಮದಹಸ್ತಿಕಂಠೀರವಂ . . . ದೈತ್ಯನಂ ಘಾತಿಸಿದನು (ಚಿಬಪು. ೪೩–೪೭). **ಹಗೆವ** : ನಾಳೆ ಹಗೆವನ ಹೊಯ್ವೆ (ಕುಮಾರವ್ಯಾಸ. ೯–೪೩) ; ಕೇಳಿದೈ ಸುಗ್ರೀವ ಹಗೆವನ ಮೇಲಣಧಿಕಕ್ರೋಧ ದಿನದಿನ ಕೇಳಿದಿಟವಹುದೆಂಬ ನಾಣ್ಣುಡಿ ನಮ್ಮೊಳಾದುದು (ತೊರರಾ. ೪–೭–೫) ; ನನ್ನ ಹಗೆವನನ್ನು ಕೊಂದು ನನ್ನ ಕೋಪಾಗ್ನಿಗೆ ಆಹುತಿ ಮಾಡುತ್ತೇನೆ (ಭಾಮಣಿ. ೬೪).

**ಪಗೆವರ ಗಂಡಂ** = ಶತ್ರುಗಳಲ್ಲಿ ಪರಾಕ್ರಮವನ್ನು ತೋರಿಸುವವನು ; ಒಂದು ಬಿರುದು : ಅವನನುಜ ××× ರಿಪುಗೆ ಮಾರಿ ಪಗೆವರ ಗಣ್ಡಂ (ಸೌಇಇ. XX, ೨೪–೨೦; 1034). **ಪಗೆವರಾದಿತ್ಯ** = ಶತ್ರುಗಳೆಂಬ ಕತ್ತಲೆಗೆ ಸೂರ್ಯನಂತಿರುವವನು ; ಒಂದು ಬಿರುದು : ಪಗೆವರಾದಿತ್ಯನಾವಾದಿ ಸಮಸ್ತಪ್ರ[ಶ]ಸ್ತಿ ಸಹಿತ ಶ್ರೀಮನ್ಮನ್ನೆಯ ನಾಯಿಮರಸ[ನುಂ] (ಸೌಇಇ. XX, ೨೬–೧೧ ; 1040); ಅಭಿನವ ವಿಕ್ರಮಾದಿತ್ಯ ಪಗೆವರಾದಿತ್ಯ ಶ್ರೀಮತ್ತ್ರೈಲೋಕ್ಯಮಲ್ಲ (ಸೌಇಇ. XX, ೩೯–೨೧; 1064). **ಪಗೆವೊಚ್ಚೆಗಂಡಂ** = ಒಂದು ಬಿರುದು : ಪಗೆವೊಚ್ಚೆ ಗಂಡಂ (ಬೊಂಕಶಾ. ಹಾವೇರಿ, ೧೩೫–೨೫ ; 1155).

[< ಪಗೆ$_1$. / ತಮಿ. ಪಕೈವನ್ ; ತೆಲು. ಪಗವಾಡು]

**ಪಗೆವಡೆ** (ನಾ). ಶತ್ರುಸೈನ್ಯ ; ಅರಿಬಲ : ಪಗೆವಡೆಯಿದು ತಾನೆಂತುಂ ಬಗೆವೊಡೆ ಕಿಱಿದಲ್ಲ (ನೇಮಿಪು. ೧೦–೧೪೮) ; ಮೆಟ್ಟಿ ನಡೆದು ಬಹ ಪಗೆವಡೆ ಗಂಡು ಕಣ್ಗೆಟ್ಟೆಡಬಲಕೆ ತೊಲಗುವ (ಕುಂರಾಸಾಂ. ೧೧–೫೬) ; ಬಿಡದಾಗ ಗಡಿಯ ದುರ್ಗಗಳ ಮುತ್ತಿದ ಪಗೆವಡೆಯ ಸನ್ನಾಹವ ಕೇಳಿ (ಕಂಸವಿ. ೩–೪೯).

[ಪಗೆ$_2$ + ಪಡೆ$_2$]

**ಪಗೆವನೆ** (ನಾ). ಶತ್ರುವಿನ ಮನೆ : ಪಗೆವನೆಯೊಳಗೆ ನರ್ತಿಸುತಿಹ ಬಾಲನ ಬಗೆ ಲೇಸಾಯ್ತು ನೋಳ್ಪರಿಗೆ (ಮೋಹತ. ೧೧–೭೦).

[ಪಗೆ$_2$ + ಮನೆ]

**ಪಗೆವಾಡಿ** (ನಾ). ಶತ್ರುಗಳ ಪಾಳೆಯ, — ಬಿಡಾರ : ಗುರುಗಳಂ ಕುಲವೃದ್ಧರನಾಜಿಗುಯ್ಯು ಕೆಮ್ಮಗೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ (ಪಂಪಭಾ. ೧೦–೧೬) ; ನಗೆ ಪಗೆವಾಡಿ ಗೋಗ್ರಹಣದೊಳ್ ಪೊಱಮಾಱಿದ ಬನ್ನಮೊಂದು ನೆಟ್ಟಗೆ ಮನಮಂ ಪಳಂಚಲೆಯೆ (ಪಂಪಭಾ. ೧೦–೧೧೧). [ಪಗೆ$_2$ + ಪಾಡಿ$_2$]

**ಪಗೆವು**$_1$ 'ಪಗವು' ನೋ.

**ಪಗೆವು**$_2$ 'ಪಗೆ$_2$' ನೋ.

**ಪಗೆವೊಯ್** (ಕ್ರಿ). ದ್ವೇಷವನ್ನುಂಟುಮಾಡು ; ವಿರೋಧವನ್ನುಂಟುಮಾಡು : ಧನಹೀನಂ ಧನಮಿತ್ರಂ ಧನಮುಳ್ಳವನಾವನ ಸ್ವರೂಪಂ ಚಿದ್ರೂಪ ನಿವಾಸಿಯಾನದರ್ಕಂದೆನಗಮುವಂಗಂ ವಿದೂಷಕರ್ ಪಗೆವೊಯ್ದರ್ (ದಶಕು. ೮–೭೫). [ಪಗೆ$_2$ + ಪೊಯ್$_2$] .

**ಪಗೆಸಾಱು** (ಕ್ರಿ). ದ್ವೇಷವನ್ನು ಘೋಷಿಸು ; ಶತ್ರುತ್ವವನ್ನು ಸಾರು : ಗೂಗೆಗಳ್ಪಗಲಂ ನಾಸ್ತಿಕರ್ ವೇದಶಾಸ್ತ್ರಂಗಳಂ ಗಾಂಪರೊಳ್ಳಬ್ಬಮನೆಗ್ಗರಕ್ಕರಿಗರಂ ಪಗೆಸಾಱಿ ಪಂಬಲಿಸಿ ಬಸವಱುವಂತೆ ಪಲಕೆಱದಿಂ ಬನ್ನಂಬಡುವರ್ (ಚಿಕವಂ. ೨೫–೧೮). [ಪಗೆ$_2$ + ಸಾಱು$_1$]

**ಪಗೆಸುಯ್** (ಕ್ರಿ). ದ್ವೇಷವನ್ನು ಕಾರು ; ಶತ್ರುತ್ವವನ್ನು ಹೊಮ್ಮಿಸು : ಕಳ್ ನೆತ್ತಿಗೇಱಿದೊನ್, ಪಗೆಸುಯ್ದು ದ್ವೇಷಮನ್ ಕಾಱುತ್ತುಮುಱಬಿದೊನ್ . . . ಇದೊ ಬಿಟ್ಟು ಕೆಡೆದೊನ್ (ಅಂತಿಗೊ. ೭–೧೨೦).

[ಪಗೆ$_2$ + ಸುಯ್$_1$]

**ಪಗೋಡ,** ಪೆಗೋಡ (ನಾ). ೧. ಬೌದ್ಧ ದೇವಾಲಯ : ಈ ಬೌದ್ಧರ ದೇವಾಲಯಗಳಿಗೆ ಬ್ರಹ್ಮದೇಶದಲ್ಲಿ "ಪಗೋಡ"ಗಳೆಂದೆನ್ನುವರು (ಎಆಗ್ನೇ. ೭೧). ೨. ಗೋಪುರ : "(ಇಂಡಿಯ, ಚೀನ, ಮೊ. ದೇಶಗಳಲ್ಲಿ) ದೇವಸ್ಥಾನ, ಪವಿತ್ರಭವನ, ಮು. ಚತುರಸ್ರ ಗೋಪುರ ; ಪಗೋಡ" (Pagoda ಇಂಕನಿ) ; ಒಂದು ಮನುಷ್ಯಜೀವನವನ್ನುಳಿಸುವುದೆಂದರೆ ಏಳಂತಸ್ತಿನ ಪಗೋಡವನ್ನು ಕಟ್ಟಿಸುವುದಕ್ಕಿಂತಲೂ ದೊಡ್ಡದು ಎಂಬುದನ್ನು ನೆನಪಿನಲ್ಲಿಟ್ಟುಕೊ (ಚಿಕಿತ್ಸ. ೧೧೦). ೩. ದಕ್ಷಿಣ ಭಾರತದಲ್ಲಿ ಬಳಕೆಯಲ್ಲಿದ್ದ ಮೂರುರೂಪಾಯಿಗಳ ಮೌಲ್ಯದ ಒಂದು ನಾಣ್ಯ : "ದ. ಇಂಡಿಯದಲ್ಲಿ ಹಿಂದೆ ಬಳಕೆಯಲ್ಲಿದ್ದ ಒಂದು ಚಿನ್ನದ ನಾಣ್ಯ : ಪಗೋಡ" ( Pagoda. ಇಂಕನಿ) ; ಸಾವಿರ ಪಗೋಡಾಗಳನ್ನು ಭಕ್ಷೀಸ್ ಕೊಡು (ದಾಲತ್. ೩೪೬). **ಪೆಗೋಡ:** ೧. ಆವರ ದೇವಾಲಯಗಳಿಗೆ "ಪೆಗೋಡ" ಎನ್ನುತ್ತಾರೆ. ಇಂಥ ಹಲವು ಪೆಗೋಡಗಳು ಈ ದೇಶದಲ್ಲಿವೆ (ಬಾಲಪ್ರ. I, ೩೮೧). 'ಡಾಗೋಬ' ಪರಾ.

[← ಇಂ. Pagoda ; ಪೋರ್ಚು. Pagode ]

**ಪಗ್ಗ** , ಹಗ್ಗ (ನಾ). ೧. ನಾರನ್ನು ಹೊಸೆದು ಮಾಡಿದ ದಪ್ಪಹುರಿ ; ಪಾಶ ; ರಜ್ಜು : ಪರಿವ ಮನಕ್ಕೆ ಪಗ್ಗವಿಲ್ಲಂ ನೋಡುವ ಕಣ್ಗಳ್ಗೆಡೆ ಗಟ್ಟಿಲ್ಲಂ (ಅನಂಪು. ೧೧–೩೨ ವ) ; ತರಕಾಱಂಬೊಲದರ್ತು ಮುಪ್ಪಡಸಿ ಬೇಗಂ ಬಂದು ಕೊಯ್ಯಾಳ್ಗಳಂ ಸೆರೆಯೆಂಬಗ್ಗದ ಪಗ್ಗದಿಂ ಬಿಗಿದು ನಂಟರ್ನೋಡನೋಡಲ್ (ಧರ್ಮನಾ.೫–೯೭). **ಹಗ್ಗ** : ೧. "ಯೋಕ್ತ್ರಂ, ರಶ್ಮಿಃ, ಆಬಂಧಃ — ಈ ೩ ಹಗ್ಗಂ" (ಹಲಾಯು. ೯೪–೪೨೧) ; ಹರಿವ ಮನಮಂ ಕಟ್ಟಿ ಹಿಡಿವ ಹಗ್ಗಂ ಮಾಡಿ (ಇಳರ. ದೇ. ೪೮–೧೬) ; ಹೋಳಿವ ಹಗ್ಗನೆಯಾದ ಮತ್ಸ್ಯನು (ಸಂಭಪ. ४–೮) ; ನುಗ್ಗಾದ ಬಲವ ಕಾಣುತಲಾ ವರುಣನು ಹಗ್ಗದಿಂದಸುರನಾಯಕರಂ ಮಗ್ಗಿಸಿ (ಅಂಜಚ. ೭–೧೮೪) ; ಹಮ್ಮುಯೆಂಬೊದೆ ಎಮ್ಮೆ ಗಮ್ಮುಯೆಂಬೋದೆ ಹಗ್ಗ ಹೆಮ್ಮೆ ಎಂಬೊದೆ ಅದಕೆ ಧಮ್ಮುಗುದ್ದಿ (ಪುರಂದ. ೨–೫೫–೧) ; ಹನಿಗೂಡಿ ಹಳ್ಳ ನಾರೊಡಗೂಡಿ ಹಗ್ಗ (ಭರಚ. ೪೯–೮೨) ; ಸಗ್ಗ ಸಗ್ಗ ಸಗ್ಗವದೋ ಅದು ಉರುಲಿನ ಹಗ್ಗ (ಅರಳು. ೪೧೨–೧೨). ೨. ಒಂದು ಬಗೆಯ ಆಯುಧ: ಭಲ್ಲೆಯೆಂದೂ ಹಗ್ಗವೆಂದೂ ಕ್ಷುರಪ್ರವೆಂದೂ . . . ಮೂವತ್ತೆರಡು ಆಯುಧಗಳ ಹೆಸರು (ಖಡ್ಗಟೀ. ೨–೩೭).

**ಹಗ್ಗ ಹಾಕು** = ಉರುಲು ಬಿಗಿ ; ಗಾಳಹಾಕು : ಕಾಂತರಾಜನು ಮತ್ತೆ ಕಾಮಾಕ್ಷಿಯ ಪ್ರಾಪ್ತಿಗಾಗಿ ಹಗ್ಗ ಹಾಕತೊಡಗಿದನು (ಯದುರಾ. ೮೦). [< ಪ್ರಾ. ಪಗ್ಗಹ./ಸಂ. ಪ್ರಗ್ರಹ]

**ಪಗ್ರಿ** (ನಾ). ರುಮಾಲು ; ಪಗಡಿ : ಧೋತಿಗಳನ್ನುಟ್ಟುಕೊಂಡು ಉತ್ತರೀಯಗಳನ್ನು ಧರಿಸಿ, ಪಗ್ರಿಗಳನ್ನು ಹಾಕಿಕೊಂಡು . . . ಕೀರ್ತನೆಗಳನ್ನು ಹಾಡುತ್ತಾರೆ (ಆಭಾಸ್ನ.೯೯). [< ಪಗಡಿ$_1$. / ಇಂ. Puggree]

**ಪಚಂಪಚೆ** (ನಾ). ಮರದರಿಸಿನ : "ಮರದರಿಸಿನಂ ಪಚಂಪಚೆ" (ಮಂಗರಾ. ೩೯–೨೮) ; "ಪೀತದ್ರುಃ . . . ಪಚಂಪಚಾ, ದಾರುಹರಿದ್ರಾ, ಪರ್ಜನೀ –೭ ಮರದರಸಿನ" (ಸಿದ್ಧಾಂತಿ. ೧೩೫). [ಸಂ. ಪಚಂಪಚಾ]

**ಪಚಕ್** (ಅ). ಒಂದು ಅನುಕರಣಾವ್ಯಯ : ಕೆಸರನ್ನು ಪಚಕ್ ಎಂದು ತುಳಿದ ಮೇಲೆ ಬಟ್ಟೆಯೆಲ್ಲ ಕೆಸರಾಗದೆ ಇರುತ್ತದೆಯೆ ? (ರೂಢಿ).

**ಪಚಗಾರಿಸು** 'ಪಚಾರಿಸು$_1$' ನೋ.

**ಪಚಡಿ** 'ಪಚ್ಚಡಿ' ನೋ.

**ಪಚನ** (ನಾ). ೧. ಬೇಯಿಸುವುದು; ಅಡುವುದು : ಅವಕಾಶ, ವ್ಯೂಹನ, ಪಚನ, ಸಂಗ್ರಹಣ, ಧಾರಣವೆಂದು ಆಕಾಶಾದಿ ಪಂಚ ಮಹಾಭೂತಗಳ ಕೃತ್ಯಗಳು (ಹಿಂದಸಾ. ೨೯೮) ; ನರಪಶುವನ್ನು . . . ತಾಯಿ ಹಿಡಿದುಕೊಂಡು ಇರಲು, ತಂದೆಯು ಖಂಡಿಸಿ ಪಚನವನ್ನು ಮಾಡಿಸ ಬೇಕು (ಪುರಾವಿ. ೨೦೦). ೨. ತಿಂದ ಆಹಾರವು ಅರಗುವುದು ; ಜೀರ್ಣವಾಗುವುದು : ಉಪ್ಪು . . . ಅದರಿಂದ ಅನ್ನಕ್ಕೆ ರುಚಿ ಹುಟ್ಟುವುದಲ್ಲದೆ ಪಚನವೂ ಆಗುತ್ತದೆ (ಮುಂಬಯಿ. ೪-೧೯೮) ; ರಕ್ತದ ಸಕ್ಕರೆ ಹೆಚ್ಚಳಿಕೆ, ಸ್ನಾಯುಗಳಿಗೆ ಹೆಚ್ಚು ರಕ್ತದ ಹರಿವು, ಪಚನ ಕುಂದು ವುದೇ ಮೊದಲಾದುವು ಈ ಪರಿಣಾಮಗಳು (ಕವಿಕೋ. I, ೨೨೩).

ಪಚನವಾಗು = ಅರಗು ; ಜೀರ್ಣವಾಗು : ಅನ್ನದಿಂದ ನಮ್ಮ ಮೈ ಯಲ್ಲಿ ಶಕ್ತಿ ಬರಬೇಕಾದರೆ ಅದು ಪಚನವಾಗಿ ನಮ್ಮ ಹೊಟ್ಟೆಯಲ್ಲಿ ಅದರ ರಸವಾಗಲಿಕ್ಕೆ ಬೇಕು (ಮುಂಬಯಿ. ೪-೩೨). [ಸಂ.]

**ಪಚನಂಗೆಯ್**, ಪಚನಗೈ (ಕ್ರಿ). ೧. ಬೇಯಿಸು; ಅಡು. ೨. (ಆಲಂ) ಅಡಗಿಸು ; ನಾಶಪಡಿಸು : ಶುಚಿ ತಾನಾಗದೆ ಸರ್ವ ಶಾಸ್ತ್ರನಿಪುಣಂ ತಾನಾಗದೇ ಕಾಮಮಂ ಪಚನಂಗೆಯ್ಯದೆ . . . ವಚನ ಬ್ರಹ್ಮದೆ ಮುಕ್ತಿಯೇ (ಸೋಮೇಶ. ೧೦೦). **ಪಚನಗೈ** : ೧.ಶುಚಿರುಚಿ ಯಪ್ಪಂತೆ ಸುಯಿಧಾನದೊಳೈದೆ ಪಚನಗೈವುದು ಭಾವೆಯರು (ಹದಿಬ. ೮-೨೬). [ಪಚನ + ಕೆಯ್$_1$]

**ಪಚನಕ್ರಿಯೆ** (ನಾ). ೧. ಅರಗುವ ಕಾರ್ಯ : ಎಣ್ಣೆಯಲ್ಲಿ ಕರಿದ ಪದಾರ್ಥಗಳು ಪಚನಕ್ರಿಯೆಗೆ ಅಡ್ಡಿಯನ್ನುಂಟುಮಾಡುತ್ತವೆ (ರೂಢಿ). ೨. ಅರಗಿಸಿಕೊಳ್ಳುವ ಕೆಲಸ : ಇದೇ ಅಲ್ಲವೇ ಅನುಭವವನ್ನು ಸ್ವೀಕ ರಿಸುವ ರೀತಿ—ಅದನ್ನು ಅರಗಿಸಿಕೊಳ್ಳುವ ರೀತಿ . . . ಅದೊಂದು ದೊಡ್ಡ ಪಚನಕ್ರಿಯೆ (ಮೂರುದಾ. ೨೦೫). [ಪಚನ + ಕ್ರಿಯೆ]

**ಪಚನಗೈ** 'ಪಚನಂಗೆಯ್' ನೋ.

**ಪಚನರಸ** (ನಾ). ಆಹಾರವು ಜೀರ್ಣವಾಗುವಂತೆ ಮಾಡುವ ದೇಹದೊಳಗೆ ಉತ್ಪನ್ನವಾಗುವ ಒಂದು ಬಗೆಯ ದ್ರವವಿಶೇಷ; ಪಿತ್ತರಸ : ಪಿಷ್ಟವು ಪಚನರಸಗಳಿಂದ ಮಾಲ್ಟೋಸ್ ಮತ್ತು ಅಂತ್ಯ ದಲ್ಲಿ ಗ್ಲೂಕೋಸ್ ಸಕ್ಕರೆಯಾಗಿ ವಿಭಜಿಸಲ್ಪಡುತ್ತದೆ (ಗೃಹವಿ. ೧೭). [ಪಚನ + ರಸ]

**ಪಚನವ್ಯಾಪಾರ** (ನಾ). ಆಹಾರವನ್ನು ಜೀರ್ಣವಾಗಿಸುವ, ಕೆಲಸ,—ಕಾರ್ಯ : ಪಿಷ್ಟಗಳು ಪಚನವ್ಯಾಪಾರದಲ್ಲಿ ಮೊದಲು ಶರ್ಕರೆಯ ಗುಣವನ್ನು ಹೊಂದಿ, ಬಳಿಕ ಜೀರ್ಣವಾಗುತ್ತವೆ (ಮುಂಬಯಿ. ೫-೧೬೩). [ಪಚನ + ವ್ಯಾಪಾರ]

**ಪಚನಿಸು** (ಕ್ರಿ). = ಪಚನಂಗೆಯ್ ೧ : ತನಿವಾಲ ಶರ್ಕರೆಯ ನಾಡೆ ಪಚನಿಸುತ (ಲಿಂಗಪು. ೮-೩) ; ಕಣಿಕದ ಬಟು ತೆಗದು ವಣಿಕಸೂಸಲನಿಕ್ಕಿ ಮಣಿದು ಪೈಠವದ ವರ್ತುಳಭಾಷಣಂಗೈದು ಲಣಿತಗವಿಯಿಂ ಪಚನಿಸುತ್ತ (ಲಿಂಗಪು. ೮-೧೦). [ಪಚನ + – ಇಸು$_3$]

**ಪಚನೆ** (ನಾ). ಪಕ್ವಗೊಳಿಸುವಿಕೆ : ದೇವರನೆರೆಯದೆ ಕಾವ್ಯದ ರಚನೆಯೆ ನುತಿಯುರಿ ಇಲ್ಲದೆ ಭಾವದ ಪಚನೆಯೆ ? (ಗಣೇಶ. ೧-೨). [ಸಂ. ಪಚನ]

**ಪಚಪಚ** (ನಾ). ಕೆಸರು ಮೊದಲಾದ ದ್ರವ ಪದಾರ್ಥಗಳನ್ನು ಒಂದೇ ಸಮನೆ ತುಳಿಯುವಾಗ ಉಂಟಾಗುವ ಧ್ವನಿಯನ್ನು ಅನುಕರಿಸುವ ಶಬ್ದ : ಆ ರಸ್ತೆಗೆ ಟಾರು ಹಾಕಿಲ್ಲ. ಮಳೆ ಬಂದುಬಿಟ್ಟರೆ ಎಲ್ಲರೂ ಪಚಪಚ ಎಂದು ರಾಡಿಮಣ್ಣನ್ನು ತುಳಿದುಕೊಂಡು ಓಡಾಡ ಬೇಕು (ರೂಢಿ).

**ಪಚರಿ** 'ಪಚ್ಚಾರಿ' ನೋ.

**ಪಚಾರ$_1$** (ನಾ). ಮೂದಲಿಕೆ; ಅವಹೇಳನ; ನಿಂದೆ : 'ಪಚಾರಿಸು$_1$' ಪರಾ. [<ಪ್ರಾ. ಪಚ್ಚಾರ]

**ಪಚಾರ$_2$** (ನಾ). ಪ್ರಸಾರ; ಪ್ರಚಾರ : 'ಪಚಾರಿಸು$_2$' ಪರಾ. [<ಸಂ. ಪ್ರಚಾರ]

**ಪಚಾರಿಸು$_1$**, ಪಚಗಾರಿಸು (ಕ್ರಿ). ೧. ಹೀಯಾಳಿಸು ; ಮೂದ ಲಿಸು ; ಅವಹೇಳನ ಮಾಡು : ಓಡುವ ಖಳಪರಿವೃಢನಂ ನೋಡಿ ಮಹೀನಾಥನಂದು ಧನುವಂ ಕೈಕೊಂಡೋಡದಿರಿದಿರ್ಚೆನುತ್ತುಂ ಕೂಡೆ ಪಚಾರಿಸುತೆ ಬೆಂಬಿಡಿದನತಿಜವದಿಂ (ಉದ್ಭಟ. ೪-೧೦೯) ; ವನಧಿಪನ ಸೋಲವ ಪಚಾರಿಸಿ ತನಿನಗೆಯನುಬ್ಬಿಸುವ ಹಾಸ್ಯದ ವಿನುತಪರಿಹಾಸಕರಿ ನೆಸೆದುದು ಸಭೆ ದಶಾನನನ (ತೊರಂರಾ. ೬-೧೦-೧೦) ; ಕರ್ಣಜಂಗಗನದಿಂ ಬಿದ್ದಳಿಗೆ ಪೊಡೆಚೆಂಡಿನಂತೆ ಪುಟನೆಗೆದೆದ್ದು ರೋಷದಿಂ ಘುಡುಘುಡಿಸಿ ಪಾರ್ಥಸುತನಂ ಪಚಾರಿಸಿ ಕನಲ್ದು ತೆಗೆದಿಸಲ್ (ಜೈಮಿಭಾ. ೨೩-೧೯) ; ಇವರ ಮನೆದೇವರು ಸ್ವಪ್ನದಲ್ಲಿ ಪಚಾರಿಸಿ-ನನ್ನ ಹೊತ್ತುಕೊಂಡು ಕಂಡ ಕಡೆಗೆ ಹೋಗಬೇಡ . . . ಎಂದು ಅಪ್ಪಣೆ ಕೊಡಿಸಿ (ಚಿತ್ರಪಾ. ೪). ೨. ನಿರ್ಲಕ್ಷಿಸು ; ಉದಾಸೀನ ಮಾಡು : ದಾನವನಾ ಗದೆಯ ಬೆಂಬಿ ಡದೆ ತೆಗೆದಬ್ಬರಿಸಿ ದೇವನನಿಡಲು ಬಹ ಗದೆಯನು ಪಚಾರಿಸಿ ಹಿಡಿದ ನಸುರಾರಿ (ಪ್ರಹ್ಲಾಚ. ೩-೪೨). ೩. ಅನಾಯಾಸವಾಗಿ ಎದುರಿಸು : ಸಾರಣನ ಮುವ್ವತ್ತು ಬಾಣದಿ ಪಚಾರಿಸುತ ಮಾರೀಚನಂ ಪತ್ತು ಮಾರ್ಗಣದಿ ರ್ಝಾಡಿಸುತ (ರಾವಣೋ. ೪೨) ; ಭೂರಿಸರಳ ಸವರುತುರೆ ಪಚಾರಿ ಸುತ್ತಲೆ ಚಾರಿವರಿವುತಂದು ರವಿಕುಮಾರಕನಲಿ ಭೂಪನೆದೆಯ ಬೀರುವಂತೆ ಯಚ್ಚ ಶರದ ಸಾರಗಟಿಸಲು (ಕರ್ಣಾಕಾ. ೧೦). **ಪಚಗಾರಿಸು:** (ಕ). [ಪಚಾರ$_1$ + – ಇಸು$_3$]

**ಪಚಾರಿಸು$_2$**, ಪಚ್ಚರಿಸು (ಕ್ರಿ). ಪ್ರಚಾರಪಡಿಸು ; ಪ್ರಸಿದ್ಧ ಪಡಿಸು : ಮುನ್ನಿನ ಕಲಿವೀರ ಧೀರರು ಕಾದಿದ ರಣಗಳನು ಪರಿಪರಿ ಯಲಿ ಬಣ್ಣಿಸಿ ಹೇಳಬಹುದಲ್ಲದೆ ಆ ದಳವಿದಿರಾದಲ್ಲಿ ಬಿರಿದ ಪಚಾರಿಸಿ ಕಾದಿ ತೋಱಲು ಬಾರದು (ಬಸವ. ೬೭೮); ವ್ಯಾಳಂ ಕೇಳ್ದು ನೀಲಗಿರಿಯಂ ಪಣ್ಣಿ ಕಡೆಗಾಲದ ಕೃತಾಂತನಂತೆ ದಂತಿಯಂ ನೂಂಕಿ ತನ್ನ ಪೆಸರಂ ಪಚಾ ರಿಸುತ್ತಂ ದುಷ್ಟವಾಕ್ಯನ ಸಮ್ಮುಖಕ್ಕೆ ವರೆ (ಪುಣ್ಯಾಸ್ರ. ೭-೬೨ಪ) ; ಕನಲಿ ನುಡಿಗಳಲಾಲಿ ಬೊಬ್ಬಿರಿದನುವರಿತು ಬಿಲ್ಲಾಳು ಸಮರವನೊಸರಿ ಸಿತು ಪಯಪಾಡುಪಂಥಗಳಲಿ ಪಚಾರಿಸುತ (ಕೋಗಯು. ೨೧-೪). **ಪಚ್ಚರಿಸು** : ಅನ್ಯದರ್ಶನಮತಂಗಳ ಪುಚ್ಚಳಿಸಿಯೆನ್ನ ಭಕ್ತಿಯಂ ಘನ ತರಂ ಮಾಡಿ ಪಚ್ಚರಿಸಿ ವರ್ಧನಗೆಯ್ವುದು (ಪಾಸೋಪು. ೧-೫೭). [ಪಚಾರ$_2$ + – ಇಸು$_3$]

**ಪಚಾಲಿ** 'ಪಚ್ಚಾರಿ' ನೋ.

**ಪಚಿಪಚಿ** (ನಾ). ಒಂದು ಅನುಕರಣ ಶಬ್ದ : ಗೋಡೆ ಹಾಕುವುದ ಕ್ಕಾಗಿ ಮಣ್ಣನ್ನು ಪಚಿಪಚಿ ಎಂದು ತುಳಿಯಬೇಕು (ರೂಢಿ).

**ಪಚಿಯಿಸು**, ಪಚಿಸು (ಕ್ರಿ). ೧. ಅಡುಗೆ ಮಾಡು ; ಬೇಯಿಸು : ದಹಿಸುವುದಿಂತು ದಾಹಕಮುಂ ಪಚಿಯಿಸುವುದೆಂದಿಂತು ಪಾಚಕಮು ಮೆಂದಿಂತು ವಿಷಯಭೇದದಿಂ ದಾವಾಗ್ನಿದ್ರವ್ಯಂ ದ್ವಿವಿಧಂ (ಪಸಾರ. ೩೯೮). **ಪಚಿಸು** : ೧. ಘೃತ ದುಗ್ಧದಲಿ ಪಚಿಸಿದ ಪಲವು ಪರಿಮಳವೆರೆದ ತಾಳಿದ ಗಳನು ತಂದುಚಿತ ಬಡಿಸಿದರು ಬಾವನ್ನಗಂಧಿಯರು (ಸನತ್ಕು. ೧೪-೭) ; ಪಚನವಂ ಮಾಡುವಂ ಪಚಿಸುವಂ (ಶಬ್ದಾನು. ೫೩೩ ಪ್ರಯೋ); ಹೊಂಬಟ್ಟ ಲಲ್ಲಿ ನರಮಾಂಸವಂ ತಂದು ನನ್ನ ವಶಕ್ಕೆ ಕೊಡಲು ಅದಂ ಪಚಿಸುವುದಕ್ಕೆ ಬಾಣಸದ ಮನೆಗೆ ಕಳುಹಿ (ಶುಕಸ. ೨೧೪) ; ತನ್ಮೃಗದಂಗಮಂ ಕಡಿದು ಖಂಡಮಂ ತೆಗೆದು . . . ಪೊರಳ್ಚಿ ಸುಂಟಗೆಯಿಂದೆ ಪಚಿಸಿ (ಕುಮಾಪು. ೪-೨೨೫). ೨. ಅರಗು ; ಜೀರ್ಣವಾಗು : ಹಸಿವೆಯಾಗದಿರುವುದು, ಅನ್ನವು ಪಚಿಸದಿರುವುದು (ಬ್ರಹ್ಮಜೀ. ೨೨). 'ಪಚನಿಸು' ಪರಾ. [<ಪಚನ + – ಇಸು$_3$]

**ಪಚಿಸು** 'ಪಚಿಯಿಸು' ನೋ.

**ಪಚ್ಚ**$_1$, ಹಚ್ಚ$_1$ (ಸಪೂರೂ). 'ಪಸುರ್' ಎಂಬ ನಾಮವಾಚಕಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪಚ್ಚಗಂಬಳಿ', 'ಪಚ್ಚಗಪ್ಪುರ' ಪರಾ. **ಹಚ್ಚ**$_1$: 'ಹಚ್ಚನೆ', 'ಹಚ್ಚಹಸಿ' ಪರಾ.

**ಪಚ್ಚ**$_2$, ಪಚ್ಚೆ$_2$, ಹಚ್ಚ$_2$ (ನಾ). ೧. ಲೇಪನ ; ಬಳಿಯುವಿಕೆ: ಓರೊರ್ಮೆ ಕುಳಿರ್ವ ಕಪ್ಪುರದ ಪಚ್ಚಮನಮರ್ಚ ಮನ್ಮಥಜ್ವಲನಪಾತದಿಂ ಮೆಯ್ಯ್ ಮಿಗೆ ಪುಗುಟ್ಟುದೆಂಬ ಸಂಕೆಯಿಂ ಕೆಳದಿಯರ್ಗೆ ಬಳಯಿಸುವಳ್ (ವರ್ಧಪು. ೪-೫೭ ವ). ೨. ಒಡವೆ ; ಆಭರಣ: "ಪಸದನಂ, ಪಚ್ಚಂ, ತೊಡಂ—೩ ಆಭರಣಂ" (ಕಶಸಾ.೬೬-೪೧೯); ಅಲರ್ವಚ್ಚಂ ಪಚ್ಚಮುಂ ಪೊಚ್ಚಮುವೆನಿಸದೆ ಮೆಯ್ಯೆತ್ತೊಡಂಬಟ್ಟು ತನ್ನೊಳ್ ನಿಲೆ (ಶಾಂತಿಪು. ೮-೪೫) ; ಮುತ್ತಿನ ಪಚ್ಚಮಂ ತುಡುವುದಂ ಮಣಿಕೆದೊಪ್ಪಿರೆ (ಕಬ್ಬಿ ಕಾ. ೩೩೬) ; ಅಚ್ಚಪೂಗಳನಱಸಿ ಕೊಯ್ದು ತಂದವರಿಂದೆ ಪಚ್ಚವಂ ಮಾಡಿ ತತ್ತತ್ಸ್ಥಾನಕಳವಡಿಸಿ (ಚಿಬಪು.೩೪-೩೧); ಚರಿಪ ನಿಳಿಂಪ ಕಾಂತೆಯರ ಪಚ್ಚದ ಪಚ್ಚೆಯ ಕಾಂತಿ ಕಣ್ಗೆ ಮುಂಬರಿಯೆ ಕಱುಂಕೆಗೆತ್ತೆ ಳಸಿ (ರಾಜಶೇ.೧-೧೯೯). 'ಪಂದಲೆವಚ್ಚ' ಪರಾ. ೩. ವೇಷ: 'ಪೊಱಪಚ್ಚ' ಪರಾ. ೪. ಸಿಂಗಾರ; ಅಲಂಕಾರ : ಪೊಳೆವ ಪಚ್ಚದೊಳ್ ಸೊಗಯಿಸುವ ಮೃದುತಲ್ಪದೊಳ್ ಲಲಿತಗಂಗಾನದೀಲಹರಿಕಾತಲ್ಪದೊಳ್ . . . ಭಾವಿಜಿನಜನನಿ ಸತಿ ಪವಡಿಸಿ ನಿಶಾಂತದೊಳ್ (ಆದಿಪು. ೭-೨೭ ರಗಳೆ). **ಪಚ್ಚೆ**$_2$ : ೨. "ಪಚ್ಚೆಯೆನಲಾಭರಣಮಕ್ಕು" (ಕಶರ. ೫೪) ; ಇಂತು ನೆಗಳಲು ದೇಶದೂರೂರ ಪಚ್ಚೆಗಳು ಸಂತತಂ ಬಂದವಾ ನೃಪನ ಮನದಿಚ್ಛೆಗಳು (ನಂಬಿರ. ೧-೧೫) ; ಮಾವಿನ ತಳಿರನುಟ್ಟು ದಂತದ ಬಳೆಯನಿಟ್ಟು ಪೂವಿನ ಪಚ್ಚೆಗಳೊಳಲಂಕರಿಸಿ . . . ಪಾಡುತಿರ್ಪ ವನಚರಿಯರಿಂ ವನಮೆಸೆದುದು (ಚಿಬಪು. ೫೩-೨೩). **ಹಚ್ಚ**$_2$ : ೨. ಮಣಿಖಿಂಗಳ ಹಚ್ಚಂ ಹೆಮ್ಮೆಯ ಸಮ್ಮಂಗುಡುಗೆಮುಗೆ (ಉದ್ಭದೇ. ೭-೩). 'ಕುಳಿರ್ಗಯ್ಯ ಹಚ್ಚ' ಪರಾ. [<ಪಚ್ಚು$_3$]

**ಪಚ್ಚ**$_3$ 'ಪಸು$_1$' ಪರಾ.

**ಪಚ್ಚಕರ್ಪುರ** 'ಪಚ್ಚಗಪ್ಪುರ' ನೋ.

**ಪಚ್ಚಕರ್ಪೂರ** (ನಾ). (ಕರ್ಪೂರವೃಕ್ಷದ ರಸದಿಂದ ಉತ್ಪನ್ನವಾಗುವ ನಸುಹಸುರು ಬಣ್ಣದ) ಒಂದು ಬಗೆಯ ಸುಗಂಧ ದ್ರವ್ಯ : "ಕರ್ಪೂರಃ, ಘನಸಾರಃ . . . ಹಿಮವಾಲುಕಾ—೫ ಕರ್ಪೂರದ ಹೆಸರು, ಪಚ್ಚಕರ್ಪೂರ" (ಸಿದ್ಧಾಂತಿ.೨೦೮); ಪಚ್ಚಕರ್ಪೂರ, ಅಭ್ರಕಭಸ್ಮ . . . ಇವುಗಳಲ್ಲಿ ನಾಲಿಗೆಗೆ ಗಂಡೂಷವನ್ನು ಮಾಡಲು ಪಿತ್ತಜ್ವರ . . . ಮೊದಲಾದುವು ಗುಣವಾಗುವುವು (ಸಕವೈ. ೮೫) ; ಪಚ್ಚಕರ್ಪೂರ . . . ಪನ್ನೀರು ಮುಂತಾದ ಸಹಜ ಸುಗಂಧದ್ರವ್ಯಗಳಲ್ಲಿ ಮುಳುಗಿ ತೇಲಿದವರು ಆ ಕಾಲದವರು (ಸಾಹಿಜೀ. ೫೨). [ಪಚ್ಚ$_1$(<ಪಸುರ್$_2$)+ಕರ್ಪೂರ]

**ಪಚ್ಚಕ್ಖಾಣ**, ಪಚ್ಚಖ್ಖಾಣ (ನಾ). [ಜೈನ] ಸೀಮಿತಕಾಲಕ್ಕೆ ಆಹಾರ ಬಿಡುವುದು ಅಥವಾ ದೋಷ—ಕರ್ಮಗಳನ್ನು ಯಾವಜ್ಜೀವ ತ್ಯಾಗಮಾಡುವುದು : 'ಪಚ್ಚಕ್ಖಾಣಂಗುಡು' ಪರಾ. **ಪಚ್ಚಖ್ಖಾಣ** : 'ಪಚ್ಚಖ್ಖಾಣಂಗೊಳ್' ಪರಾ.
[<ಪ್ರಾ. ಪಚ್ಚಕ್ಖಾಣ]

**ಪಚ್ಚಕ್ಖಾಣಂಗುಡು** (ಕ್ರಿ). [ಜೈನ] ಪಚ್ಚಕ್ಖಾಣ ವ್ರತಕ್ಕೆ ದೀಕ್ಷೆಯನ್ನು ಕೊಡು ; ಆಹಾರನಿವೃತ್ತಿಯ ಪ್ರತಿಜ್ಞೆಯನ್ನು ಮಾಡಿಸು : ಭಟಾರಾ ಇನಿತು ಕಾಲಮುಂಡುದು ಸಾಲ್ಗು ಮೆಮಗೆ ಯಾವಜ್ಜೀವಂ ಬಾಟ್ಟಿನ್ನೆಗಮುಪವಾಸ ಪಚ್ಚಕ್ಖಾಣಂಗುಡುವುದೆಂದೊಡೆ (ವಡ್ಡಾರಾ. ೮೨-೨೧). [ಪಚ್ಚಕ್ಖಾಣ+ಕುಡು$_1$(<ಕೊಡು$_1$)]

**ಪಚ್ಚಖ್ಖಾಣ** 'ಪಚ್ಚಕ್ಖಾಣ' ನೋ.

**ಪಚ್ಚಖ್ಖಾಣಂಗೊಳ್** (ಕ್ರಿ). [ಜೈನ] ಪಚ್ಚಕ್ಖಾಣವ್ರತವನ್ನು ತೊಡು ; ಆಹಾರನಿವೃತ್ತಿಯ ಪ್ರತಿಜ್ಞೆಯನ್ನು ಮಾಡು : ಮತ್ತಂ ತ್ರಿರಾತ್ರಕ್ಕೆ ಪಚ್ಚಖ್ಖಾಣಂ[ಪಾಠಾಂ. ಪ್ರತ್ಯಾಖ್ಯಾನಂ]ಗೊಂಡರ್ (ವಡ್ಡಾರಾ. ೬೪-೨೭). [ಪಚ್ಚಖ್ಖಾಣ(<ಪಚ್ಚಕ್ಖಾಣ)+ಕೊಳ್$_1$]

**ಪಚ್ಚಗಂಬಳಿ** (ನಾ). ಹಸುರು ಬಣ್ಣದ ಕಂಬಳಿ : ಕೆಳಗೆ ಎಲ್ಲೆಡೆಗೆ ಹುಲ್ಲಿನ ಪಚ್ಚಗಂಬಳಿ ! ನಡುನಡುವೆ ಜೋಡಿಸಿರುವ ರತ್ನಗಳಂತೆ ಕಾಡು ಕುಸುಮಗಳ ಸೊಬಗು (ಚಿಲುಶಿ. ೧೦೮).
[ಪಚ್ಚ$_1$(<ಪಸುರ್$_2$)+ಕಂಬಳಿ]

**ಪಚ್ಚಗಪ್ಪುರ**, ಪಚ್ಚಕರ್ಪುರ, ಪಚ್ಚಗರ್ಪುರ (ನಾ). = ಪಚ್ಚಕರ್ಪೂರ : ಸೊಗಯಿಸುವ ಪಚ್ಚಗಪ್ಪುರದ ಪುಡಿಯಂ ಮೆಯ್ಗೆ ತಿಗುರಿದೊಡೆ (ಜೈಮಿಭಾ. ೩೧-೨). **ಪಚ್ಚಕರ್ಪುರ** : ಪಚ್ಚಕರ್ಪುರದ ಪನ್ನೀರ ಜಳಕಕೆ ಹಿಡಿಸಿ ನಿಚ್ಚಟದ ಮಜ್ಜನಕೆಚಿಕಿದು (ಗುಭಚ. ೨-೪೬). **ಪಚ್ಚಗರ್ಪುರ**: ಬಿಳಿಯೆಲೆಗಳಂ . . . ಪಚ್ಚಗರ್ಪುರದ ಪರಿಮಳದ ಹಳುಕಂ ಬೆರೆಸಿ ಮೆಚ್ಚುತ್ತ ಶಿವಗಿತ್ತು (ಅಸೀರ. ದೇ. ೮೪-೩). [ಪಚ್ಚ$_1$(<ಪಸುರ್$_2$)+ಕಪ್ಪುರ]

**ಪಚ್ಚಗರ್ಪುರ** 'ಪಚ್ಚಗಪ್ಪುರ' ನೋ.

**ಪಚ್ಚಗಾಱ**, ಪಚ್ಚೆಗಾಱ (ನಾ). ೧. ವಸ್ತ್ರಾಲಂಕಾರ ಮಾಡುವ ವೃತ್ತಿಯನ್ನು ಅವಲಂಬಿಸಿರುವವನು ; ಸಿಂಗರಿಸುವ ಊಳಿಗವನ್ನು ಮಾಡುವವನು ; ಪ್ರಸಾಧನಗಾರ : "ಪಚ್ಚಾಯ್ಲಂ = ಪಚ್ಚಗಾಱಂ" (ಶಮದ.ಪರಿ. ೨). ೨. ಅಲಂಕಾರ ಮಾಡಿಕೊಳ್ಳುವ ಚಟವುಳ್ಳವನು : ಗಾಳಿಸು ಗೆಲ್ವನಂ ಹರಹು ಹೂಜಿಗನಂ . . . ಪೂರ್ಬಿ ಪುಸಿವನಂ ಪೊಸೆದಿಕ್ಕುಗೆ ಪಚ್ಚ[ಪಾಠಾಂ. ಚ್ಚೆ]ಗಾಱನಂ (ಲೀಲಾವ. ೨-೧೦೭). **ಪಚ್ಚೆಗಾಱ** : ೧. "ಪಚ್ಚಾಯ್ಲಂ ಪಚ್ಚೆಗಾಱ ನೀಱನೊಳಾಲ್ದಂ?" (ಕರ್ಣಾನಿ. ೫೪). ೨. ಮೇಲಿನ 'ಲೀಲಾವ.' ಪ್ರಯೋಗದ ಪಾಠಾಂತರವನ್ನು ನೋಡಿ. [ಪಚ್ಚ$_2$+-ಕಾಱ]

**ಪಚ್ಚಗುಪ್ಪಸ** (ನಾ). ೧. ಹಸುರು ಬಣ್ಣದ ರವಿಕೆ,—ಕುಪ್ಪಸ: ಅಚ್ಚುಹಾಕಿದ ಸೀರೆ ಪಚ್ಚಗುಪ್ಪಸ ತೊಟ್ಟು ಹೆಚ್ಚಾಗಿ ಮುಱುಕ ಮಾಡುವಳು ಕಾಮನು ನೆಚ್ಚಿದ ಬಾಣ (ಸರ್ವಜ್ಞ.೧೮೨೭). ೨. ಹಸುರು ಬಣ್ಣದ ಅಂಗಿ,—ಕವಚ : ನಳನಳಿಪ ಪೊಸ ಪಚ್ಚ[ಪಾಠಾಂ. ಚ್ಚೆ]ಗುಪ್ಪಸವಳವಡುತ್ತಿರೆ ಪಚ್ಚೆಟೊಪ್ಪಿಗೆ ತಲೆಯೊಳೆಸೆಯಲು (ಬಸವು. ೩೪-೨೨).
[ಪಚ್ಚ$_1$(<ಪಸುರ್$_2$)+ಕುಪ್ಪಸ]

**ಪಚ್ಚಟೊಪ್ಪಿಗೆ** (ನಾ). ಹಸುರು ಬಣ್ಣದ ಟೋಪಿ : ನಳನಳಿಪ ಪೊಸ ಪಚ್ಚಗುಪ್ಪಸವಳವಡುತ್ತಿರೆ ಪಚ್ಚ[ಪಾಠಾಂ. ಚ್ಚೆ]ಟೊಪ್ಪಿಗೆ ತಲೆಯೊಳೆಸೆಯಲು (ಬಸವು. ೩೪-೨೨).
[ಪಚ್ಚ$_1$(<ಪಸುರ್$_2$)+ಟೊಪ್ಪಿಗೆ(<ಟೋಪಿ)]

**ಪಚ್ಚಡ**, ಪಚ್ಚಳ$_1$, ಹಚಡ, ಹಚ್ಚಡ$_1$, ಹಚ್ಚಡಿ (ನಾ). ೧. ಹೊದೆಯಲು ಅಥವಾ ಹಾಸಲು ಉಪಯೋಗಿಸುವ (ಸಾಮಾನ್ಯವಾಗಿ ದಪ್ಪವಾಗಿರುವ) ವಸ್ತ್ರ; ದುಪ್ಪಟಿ; ಚಾದರ: ದೂಪಕನ ಪೆಣಂ ಕಾಣಲಾಗದೆಂಬಂತೆ ಭೋಂಕನೆ ಪಚ್ಚಡದಿಂ ಮುಸುಂಕಿಕ್ಕಿ (ಜೊಮ್ಮರ. ಹ. ೩೩೪-೧೨) ; ಅರುಣಮಣಿಕಂಕಣಪ್ರಭೆ ಪರೆದಿರೆ ಪಚ್ಚಡಿಸುವಲ್ಲಿ ಕುಂಕುಮರಸದೊಳ್ ಪೊರೆದುದು ಪಚ್ಚಡ ಮೆಂದೋಸರಿಸಿದಳ್ ಸಜ್ಜೆವಳ್ತಿ ತನಮೋಂ ಮುದ್ದೋ (ಪುಷ್ಪಪು. ೯-೮೮). ೨. ಉತ್ತರೀಯ ; ಮೇಲುಹೊದಿಕೆ : ಒರ್ವ ಕಳ್ಳ ನೋಡಿ ಬಂದು ಸೆಟ್ಟಿಯ ಮಱಿಯಿಂ ಪುಗಲಾ ಪರದಂ ಕೃಪಾಭಾವದಿಂ ಪಚ್ಚಡದಿಂ ಮುಚ್ಚಿಕೊಂಡಿರ್ಪನಂ (ಪುಣ್ಯಾಸ್ರ. ೩-೭೭ ವ) ; ಎದ್ದನು ಜಿನ ಶರಣೆಂದು ಕೆಲದೊಳಿರಿಸಿದ್ದ ಪಚ್ಚಡವ ಮೇಲ್ಕೊಳುತ (ಭರಚ. ೧೦-೫೯) ; ಉಡುವ ಸೀರೆ, ಪೊದೆವ ಪಚ್ಚಡಂ (ಶಬ್ದಾನು. ೫೪೩

ವ್ಯಾಖ್ಯಾ); ಬಣ್ಣದ ಪಚ್ಚಡವಂ ಬಲ್ಸಣ್ಣಂಬಿಡಿದಿರ್ದ ಜೋತ್ರಮುಂ ತಾಳ್ದು . . . ಎಯ್ದಿದಂ ವೈಶ್ಯನವೊಲ್(ಹಾಲಾಸ್ಯ.೧-೨-೧೪).'ಪಚ್ಚವಡ$_1$' ಪರಾ. **ಪಚ್ಚಳ್$_1$:** ೧. 'ಪಚ್ಚಳಿತಿ' ಪರಾ. **ಹಚಡ:** ೧. ಏಳು ವರಹದ ಹಚಡ ಕೊಟರು (ಎಕ. VII, ಶಿವಮೊ. ೧೦೭-೩೫; 1576 ?). ೩. ಬಟ್ಟೆ ; ವಸ್ತ್ರ : ಈ ಎಳೆಯ ಮೇಲೆಯೇ ಇನ್ನೊಂದು ಹರಟೆಯ ಹಚಡವನ್ನು ನೇಯುವ ಇಲ್ಲವೆ ನುಂಗುವ ಹೊತ್ತು ಬಂದೀತು (ಮುಂಗಾಪು. ೪ ಮುನ್ನುಡಿ). ೪. ಒರಟಾದ ಬಟ್ಟೆ : ಮಂತ್ರಿಪದವಿಗಾಗಿ ಮ್ಯಾಂಛೆಸ್ಟರ್ ಬಟ್ಟೆಯನ್ನು ಸಹ ತ್ಯಜಿಸಿ, ಹಚಡವನ್ನುಟ್ಟು ಜೇಲಿಗೆ ಬಂದ ಜಾಣ (ದಾಕೂಟ. ೧೭). **ಹಚ್ಚಡ:** ೧. "ಹಚ್ಚಡಂ ದುಪ್ಪಟಾಖ್ಯಂ" (ಮಂಗರಾ. ೧೧೧-೨೮) ; ಮಡದಿಯು ಹಚ್ಚಡವಂ ಸುಲಿವೆಡೆಯೊ ಳ್ಳೇಳಣ್ಣ ಕಿವಿಯ ಕೊಪ್ಪಂ ನೀಂ ಕೊಳ್ಳೊಡೆ ನೋಯದಂತೆ ತೆಗೆ ಯೆಂದೊಡೆ (ಧರ್ಮಪ. ೯-೨೧). ೨. ಉದುಗೊರೆಯ ಹಚ್ಚಡ ೪ (ಎಕ. XV, ಬೇಲೂರು. ೨೪೮-೧೨ ; 1295) ; ಅಯ್ಯಂಗಳು ಹೊದೆದ ಹಚ್ಚಡದ ಸೆಱಗಂ ಪಿಡಿದು ಕೈಯಿಂದ ಸೆಳೆಸೆಳೆದು ಜೋಲುತ್ತ ತೆಗೆವಂ (ಬಸವು. ೪೭-೪೭) ; ಕಳೆದು ಬಿಸುಟರು ಮತ್ತೆ ರತ್ನಾವಳಿಯ . . . ಲಲಿತಕೃಷ್ಣಾಜಿನವ ಹೊದೆದರು ಹಾಯ್ಕಿ ಹಚ್ಚಡವ(ಕುವ್ಯಾಸ.೧೬-೫೯); ಹೂವಿನ ಹೊಸ ಬಣ್ಣದ ಹಚ್ಚಡವಂ ಹೊದೆದು . . . ಸುಹೃಜ್ಜನ ವಿತತಿ ನಡೆದುದತಿಮುದದಿಂದ (ಜಯಕಾ. ೧೪-೧೯); ಹತ್ತ್ಹತ್ತು ಹೊನ್ನಿನ ಹಚ್ಚಡ ಹೊತ್ತಾರ ಮುತ್ತನಿಟ್ಟಾರ ಕಿವಿಯಾಗ (ಲೋಕಗೀ. ೧೨). ೩. ಮಾಲಿನಿಯು ಕಸೂತಿ ಅಂಚಿನ ಪಟ್ಟೆಯ ಹಚ್ಚಡವನ್ನು ಉಟ್ಟಿದ್ದರೂ ಮೈಗೆ ಆಭರಣಗಳು ವಿಶೇಷವಾಗಿದ್ದಿಲ್ಲ (ವಿಭಿನ್ನ. ೪೨). **ಹಚ್ಚಡಿ:** ೧. ಎದುರಿಗೆ ಹಾಸಿದ ಹಚ್ಚಡಿಯ ಮೇಲೆ ಬಂಗಾರಿಯ ಮಗು (ಎಳಜೀ.೯).

**ಹಚ್ಚಡದರಿವೆ**= ಒರಟು ಬಟ್ಟೆ ; ಖಾದಿಯ ವಸ್ತ್ರ : ಹಚ್ಚಡದರಿವೆ (ಖಾದಿ)ಯನ್ನು ಹೊರುವ ಗುರುಗಳು ಹೇಳಿದ ಕಥೆಯಿಂದ ಉದ್ದೀಪಿತ ನಾಗಿ (ದಾಸಹು. ೮೪).

[<ಸಂ. ಪ್ರಚ್ಛದ. / ಪ್ರಾ. ಪಚ್ಛದ, ಪಚ್ಚಯ./ತಮಿ. ಪಚ್ಚಟ ; ತುಳು. ಪಚ್ಚಡೆ, ಹಚ್ಚಡೆ ; ಕೊಡ. ಪಚ್ಚಡ; ತೆಲು. ಪಚ್ಚಡ, ಪಚ್ಚಳ]

**ಪಚ್ಚಡಕೆ** (ನಾ). ಹಸುರು ಬಣ್ಣದ ಅಡಕೆ : ಪಚ್ಚಡಕೆ, ಪಚ್ಚೋಲೆ (ಭಾಷಾಭೂ. ೧೪೭ ಉದಾ) ; ಸ್ವರಂ ಪರವಾಗೆ ಪಚ್ಚನೆ ಶಬ್ದಕ್ಕೆ ಪಚ್ಚೋಲೆ, ಪಚ್ಚಡಕೆ, ಪಚ್ಚೆಲೆಯೆಂದಪ್ಪುದು (ಶಮದ. ೧೮೨ ಪ್ರಯೋ).

[ಪಚ್ಚ$_1$(<ಪಸುರ್$_2$) + ಅಡಕೆ$_1$]

**ಪಚ್ಚಡಿ,** ಪಚಡಿ (ನಾ). ೧. ಚೂರು ; ತುಂಡು : ಇಬ್ಬರೂ ಕೂಡಿ ಮಾವಿನ ಕಾಯಿಗಳನ್ನು ಉದುರಿಸಿ, ಪಚ್ಚಡಿ ಮಾಡಿ ತಿಂದು . . . ತೃಪ್ತಿ ತಾಳುತ್ತಾರೆ (ಸ್ವಪ್ನಹೊ. ೪೯). ೨. ಹಸಿಯ ತರಕಾರಿಗಳಿಂದ ಮಾಡುವ ಒಂದು ಬಗೆಯ ವ್ಯಂಜನಪದಾರ್ಥ : ಪೂರಿತಾಮ್ರ ಪ್ರಮುಖ ಷಡುರಸದೋರಣದ ಶಾಖಗಳು ಪಚ್ಚಡಿ ಭೂರಿಪರಿಕರವಾದ ವಾಕ್ಷಣ ಭೂಪನಾಜ್ಞೆಯಲಿ (ಸನತ್ಕು. ೧೪-೩) ; ಪಚ್ಚಡಿಯ ಮೆಲ್ಪದಾ ರುಚಿಯ ಕೊಂಡಾಡುತ್ತೆ (ಚಿಬಪು. ೫-೬೧) ; ತಾಳದ ಸೀಕರಣೆ ಕಸರಿ ಪಚ್ಚಡಿಗಳು ಮೇಲಾದ ಷಡುರಸಗಳನು . . . ಲೋಲಾಕ್ಷಿಯರು ಬಡಿಸಿ ದರು (ಕಂಸವಿ. ೮-೮೫) , ಅಚ್ಚ ಸಾಸುವೆಯರೆದು ಮಾಡಿದ ಪಚ್ಚಡಿಯ ಹರಳುಪ್ಪುಗಾಯ್ಗಳ . . . ಯಶೋದೆ ಬಡಿಸಿದಳಚ್ಯುತಗೆ (ಕೋಗಯ. ೪-೧೮). **ಪಚಡಿ :** ೨. ವರಹಸ್ವಾಮಿಯ ಸನ್ನಿಧಿಯಲು ನಿತ್ಯಕಟ್ಟಳೆ ಯಾಗಿ ನಡವ ಮಧ್ಯಾಹ್ನದ ಅವಸರತಳಿಗೆವೊಂದಕೆ ಅಮ್ರುತಪಡಿ ಪುಜಿ ಕೊಳಗದಳುವೊಕ್ಕಳ ಮೊಸರು ತುಪ್ಪ ಪಚಡಿ ಸಹ ವರುಷ ೧ ಕೆ ಸಲುಉದು ಗ ೨೪ ವರಹ (ಎಕ. XIV, ಶ್ರೀರಂಗ. ೨೬೦-೬ ; 1551). ೩. (ಅಲಂ) ಹಾಳು; ನಾಶ ; ನಜ್ಜುಗುಜ್ಜು : ಕೊಡೆ ಹಿಡಿದು ಕಾಯಿರ್ ಪಲ್ಲೆ ತಂದರೆ, ಪ್ಯಾಂಟು ಕೂಡಲೆ ಪಚಡಿಯು (ನೇಮು. ೧೨-೧೭). [ದೇ.॥ ತಮಿ. ಪಚ್ಚಟ ; ಕೊಡ. ಮಲ. ತುಳು. ತೆಲು. ಪಚ್ಚಡಿ./ಮರಾ. ಪಚಡೀ]

**ಪಚ್ಚಡಿಕೆ,** ಹಚ್ಚಡಿಕೆ(ನಾ). ೧. = ಪಚ್ಚಡ ೧. : ಸೆಜ್ಜೆಯ ಕಾಪಿನವರ್ ಪರಿತಂದು ಶೋಧಿಸಿ ನೋಡಿ ಪಚ್ಚಡಿಕೆಯಂ ಪತ್ತಿರ್ದ ಕೂಱೆಯಂ ಕಂಡು (ಪಂಚತಂ.೧೩೦-೧೪); ತಾನುಣ್ಣದ ಪೆರ್ಜಿಗ್ಗಿಕ್ಕದ ಪೇಸಿಯ ಪಚ್ಚಡಿಕೆಯೆನಿಪ ಲೋಭಿಯ ಪೊನ್ನಂ ತಾನೊಂದುಮುಱಿಯದಂತಿರೆ ಹೀನಗುಣಂ ಕವರ್ದುಕೊಂಡು ಚಾಗಂಗೆಯ್ವಂ (ಧರ್ಮಾಮೃ. ೨-೩೪) ; ಮಿಸುಗುವ ಪಚ್ಚಡಿಕೆಯು ಮೇಲೆ ಪೊದೆದಾಕೆಯ ನಳಿತೋಳ್ವಚ್ಚಡವಂ ಚದುರಿಂ ಪೊದೆದು (ಜಯಕಾ. ೧೬-೧). **ಹಚ್ಚಡಿಕೆ :** ೧. "ನಿಚೋಲಃ; ಪ್ರಚ್ಛದಪಟ ಎಂದೊಡೆ ಹಚ್ಚಡಿಕೆಯು ಸೀರೆ; ಹಚ್ಚಡವೆಂದೂ ಎಂಬರು" (ನಾಚಿರಾ. ೩);"ಹಚ್ಚಡಿಕೆ-ಪ್ರಚ್ಛಾದಿಕಾ"(ತದ್ಭ ಕೋ.೪೮). ೨. ಹಾಸುಗೆ; "ತಲ್ಪ, ಶಯನ" (ನಾಚಿರಾ. ೩). [ಪಚ್ಚಡ+-ಇಕೆ]

**ಪಚ್ಚಡಿಗೆಯ್ಯು** (ಕ್ರಿ). ತುಂಡರಿಸು ; ಸಂಹರಿಸು : ಕೊಚ್ಚಿ ಪಚ್ಚಡಿ ಗೆಯ್ವೆ ನಾನಿರ್ದರಸುರರಂ ಬಹುಜನ್ಮವೆಡೆಗೊಂಬವೆ (ಪರಶು. ೩-೧೭).

[ಪಚ್ಚಡಿ+ ಗೆಯ್ಯು(<ಕೆಯ್ಯ್$_1$)]

**ಪಚ್ಚಡಿಸು,** ಹಚ್ಚಡಿಸು (ಕ್ರಿ). ೧. ಹೊದಿಸು ; ಆಚ್ಛಾದಿಸು : ನನೆಯ ತೊಡವಂ ಮಾಡೀ ಪಂಕೇಜಪತ್ರಮನೊತ್ತು ಮಾವಿನ ತಳಿರುಮಂ ಪಾಸೀ ಪೂವಿಂದೆ ಪಚ್ಚಡಿಸುತ್ತುಂ (ಲೀಲಾವ. ೧೧-೧೯). ೨. ಹಾಸು ; ಹರಡು : ಪೂವಿನ ಸೆಜ್ಜೆಯೊಳು ಪೊಚ್ಚಪೊಸ ಮೃದುವಂ ಪಚ್ಚಡಿಸಿ [ಪಾಠಾಂ. ವಡಿಸಿ]ದ ಹಂಸತೂಳದ ಹಾಸುಮಂಚವನಾಸೆಗೆಯ್ವುತುಂ (ಸಂಬಿರ. ೧೧-೭೧) ; ಪೊಳೆವ ತಣ್ಣದಿರ್ಗಲ್ಲ ಪಸೆಯೊಳೇಳೆಲೆವಾಳೆಯೆಳೆ ಯೆಲೆಯ ಪಚ್ಚಡಿಸಿ . . . ಪನಿನೀರ್ದಳಿದು ತನ್ನನಿಯುನಂ ಕಳವಳಿಪ ಕಾಂತೆಯ ಮಲಂಗಿಸಿ (ಪದ್ಮರಾ. ೮೭-೯೨) ; ಸೇವಂತಿಯೆಸಳ ಪಚ್ಚಡಿಸಿ ಯೊಱಗಿಹನು ಭೂವನಿತೆಯನಪ್ಪುವಂತೆ (ನೇಮಿಸಂ. ೮-೧೨೯) ; ನಡೆವ ಕಾಂತೆಯರ . . . ಬಿಡದಂಗಕಾಂತಿ ಕನಕದ ಭೂಪಣದ ಹಬೆ ಕೂಡೆ ಪೊಂಬಟ್ಟೆ ಚಲುವ ನಡೆಮಡಿಯ ಪಚ್ಚಡಿಸಿದಂತಾಗೆ (ಚತುಪು. ೨-೬-೫೧). ೩. ಸಿದ್ಧಪಡಿಸು; ಅಣಿಮಾಡು ; ಸಜ್ಜುಗೊಳಿಸು: ಸಿರಿಮಂಚಮಂ ಪಚ್ಚಡಿಸಿ ಕೊಟ್ಟು ಸುಯ್ಯುತಂ ತಿರುನೀಲಕಂಠಕುಶವರ ಕೆಲದೊಳೊಪ್ಪುತಂ (ತಿರುರ. ದೇ.೭-೧೭). ೪. ಸಿಂಗರಿಸು; ಅಲಂಕಾರಮಾಡು ; ಪಚ್ಚಡಿ ಪನೆನೆ ಪಚ್ಚಾಯ್ತಲ್ಲ (ಕಬ್ಬಿಕೈ. ೩೫). ೫. ವ್ಯಾಪಿಸು ; ಪಸರಿಸು : ಚಿಂತನೆಯೆನಿಪ್ಪ ಪೊಗೆ ಪಚ್ಚಡಿಸಿರೆ ತಮುವೆಂಬ ಶಿಖಿ ಪೊಣ್ಮೆ . . . ಪಲ ತೆರದೆ ನಂದನಳ್ದಂ (ಸೌನಂದ. ೭-೧೨). **ಹಚ್ಚಡಿಸು :** ೧. ನಡುವೆ ಮಣಿಮಂಚದಲಿ ಮೇಲ್ವಾಸಡಕಿಲನು ಹಚ್ಚಡಿಸಿದರು (ಕುವ್ಯಾಉ. ೮-೩); ಬಿಳಿಯ ವಸನವ ಬಿಗಿದು ಹಚ್ಚಡಿಸಿ ಸಂಚಳಿಪ ಪರಿಮಳದ ತುಂಬಿಗಳಿಂಚರದ . . . ತಾಯ್ವನೆಯೆನಿಸಿದುದು ಸಜ್ಜೆವನೆಯುಂದು (ಸಾಳ್ವಭಾ. ೩-೩೭) ; ತಳಿದು ಪೃಥ ಪರಿಪರಿಯ ಪುಷ್ಪಾವಳಿಯ ತಲ್ಪದ ಮೇಲೆ ಪತ್ರಾವಳಿಯ ಹಚ್ಚಡಿಸುತ್ತ ಮಿಗೆ ತಂಬಲರ ಕೈಕೊಳುತ . . . ನಿವಿಷಕೆ ತಿಳಿವ ಕಾಳ್ಬಿಡಿವಬಲೆಯರ ನಿಟ್ಟಿಸಿದನಸುರಾರಿ (ಅಕ್ರೂಚ. ೬-೮). ೨. ಪೊಸ ಮಾದಳಿರ ಹಚ್ಚಡಿಸಿ ಕುಮಾರಗೆ ಬಿಸಜದೆಲೆಗಳಿಂದ ಬೀಸೆ(ಅಂಜಚ.೫-೮೧); ಒಡನೊಪ್ಪುವ ಹಂಸತೂಳದ ತಲ್ಪವ ಕಡುಚೆಲ್ವ ಮಿಸುನಿಮಂಚದಲಿ ಮಡಿಸಿ ಹಚ್ಚಡಿಸಿ ರತ್ನದ ಬಟ್ಟುವೊಚಗ ಸಂಗಡಿಸಿದರತಿಮುದದಿಂದ (ಕಂಸವಿ. ೮-೧೩). ೪. ಹಚ್ಚಡಿಸುವಾತನಕ್ಕುಂ ಪಚ್ಚಾಯ್ತಲ್ಲಂ (ಕವಿಕಂ. ೧೫೮).

[ಪಚ್ಚಡ+-ಇಸು$_3$]

**ಪಚ್ಚಣ** (ನಾ). ರಹಸ್ಯವ್ಯವಹಾರ : ಉಚ್ಚತರಸ್ವರಂ ನೆಗೆಯೆ ತದ್ವಸು ದೇವಕುಮಾರಕನೆಂದನೇಪಚ್ಚಣವಣ್ಣ ನೆನ್ನನವಿಚಾರತೆಯಿಂ ಸೆಱೆಯಿಟ್ಟೊ

ಡಾದವುಮ್ಮಚ್ಚದ ಪೆರ್ಚಿನಿಂದುರಿವ ಕಿರ್ಚನೊಳಿಕ್ಕಿದೆನೆಂದು ಪೇಟು (ನೇಮಿಪು. ೩-೧೬೧). [ಪಚ್ಚು$_4$ (< ಪರ್ಚು$_3$)+-ಅಣ]

**ಪಚ್ಚತಳಕರ್ಪೂರ** (ನಾ). = ಪಚ್ಚಕರ್ಪೂರ : ಕಿಚ್ಚಿನೊಳು ಸುಘ್ಘ ತವು ಪಚ್ಚತಳಕರ್ಪೂರವು ಅಚ್ಚಳಿದು ನಿಜದಿ ನಿಂದಂತೆ ಭೇದವನು ಮುಚ್ಚು ವನೆ ಶರಣ (ಸರ್ವಜ್ಞ. ೧೪೨).
[ಪಚ್ಚ$_1$(<ಪಸುರ್$_2$) + ತಳ? + ಕರ್ಪೂರ (<ಕಪ್ಪುರ)]

**ಪಚ್ಚನೆ$_1$** 'ಪಚ್ಚನೆಯ' ನೋ.

**ಪಚ್ಚನೆ$_2$** (ಅ). ಇದ್ದಕ್ಕಿದಂತೆ ; ಸಾಕ್ಷಾತ್ಕಾರವಾದಂತೆ : ಇನ್ನಂ ಪಚ್ಚನೆಲ್ಲಿಂದೆ ಬಂದನಿವಂ ತಾನಿದು ದುರ್ನಿಮಿತ್ತಂ (ದಿವ್ಯಚ. ೯-೬೬).
[<ಪಚ್$_0$+-ಅನೆ$_1$]

**ಪಚ್ಚನೆಯ,** ಪಚ್ಚನೆ$_1$, ಹಚ್ಚನೆ, ಹಚ್ಚನೆಯ (ಗು). ಹಸುರು ಬಣ್ಣವುಳ್ಳ; ಹಸುರಾದ: ಪಚ್ಚನೆಯ ಬಣ್ಣ–ಪಲಾಶ, ಹರಿತ, ಹರಿತ್ (ನಾಚಿರಾ. ೬). **ಪಚ್ಚನೆ$_1$** : ಶುಕಾಳಿಯನಂದು ಬೆರ್ಚಿಪುಜ್ಜುಗದೊಳೆ ನೋಟ್ಪ ಪಾಮರಿಯ ಚಾರುಕಟಾಕ್ಷಮರೀಚಿ ನೀಳ್ದು ಶೋಭೆಗೆ ನೆಲೆ ಯಾಯ್ತು ತತ್ಕಳಮಭೂರಿಮೆಗೆತ್ತಿದ ಪಚ್ಚನಪ್ಪ ಸತ್ತಿಗೆಗಳವಟ್ಟು ತೋರ್ಪ ಶಶಿಕಾಂತದ ಕಾಂತದ ಕಾವಿದೆಂಬಿನಂ (ಚಂದ್ರಪ್ರ. ೧–೯೫); ದಿನಕರನಂ ಶಶಿಯಂ ಪಚ್ಚನೆವಣ್ಣದೆ ಬಳಸಿ ನಿಂದ ಪರಿವೇಷದೆ ನೆಟ್ಟನೆ ಮುಟಿಕೊಳ್ಳುಂ (ಅಟ್ಟಮ. ೫-೧೨); ರಾಜಿಸೆ ನೀರ್ದಾಣದೊತ್ತಿನೊಳ್ ಪಚ್ಚನೆ ಬೆಳೆದ ಹರಿತ ಶಾಡ್ವಲಮುಂ . . . ಒಪ್ಪಿರೆ ನದೀಪ್ರದೇಶಂ ಚೆಲ್ವಾಯ್ತು (ರಾಮಾಶ್ವ. ೩೦-೨೧). **ಹಚ್ಚನೆ** : ಹಚ್ಚನೆ ಸೀರೆ ಉಟ್ಟುಕೊಂಡಾಗ ಅವಳು ಎಷ್ಟು ಚೆನ್ನಾಗಿ ಕಾಣುತ್ತಾಳೆ (ರೂಢಿ). **ಹಚ್ಚನೆಯ** : ಹಚ್ಚನೆಯ ವರ್ಣ — ಹರಿಣಿ, ಹರಿತೆ (ನಾಚಿರಾ. ೬); ಹಚ್ಚನೆಯ ಬಯಲಲಿ ಹರಡಿ ಬಿದ್ದಿಹುದು ಹಿಮಕರನ ಕಿರಣರಾಶಿ (ಕಗದ್ಯ. ೧೩೮); ಹಚ್ಚನೆಯ ಹುಲ್ಲಿನಿಂದ ಮುಚ್ಚಿದ ಮಡಿಯಲ್ಲಿ ನನ್ನನ್ನು ಕರೆದೊಯ್ದಾಳು (ಪ್ರಣಸ. ೨); ಹಚ್ಚನೆಯ ಹಸಿರು ಅಲ್ಲಿ ಗೋಚರಿಸದು (ಹಾಹುತ್ತ. ೯೯).

ಪಚ್ಚನೆ ಪಸಿ = ಪಚ್ಚಪಸಿ ೨ : ಪಚ್ಚನೆ ಪಸಿಯ ಗೋವನ್ನೆ ಕರಮು[ನ]ಯದೆ ನಿನ್ನಳವಿಗಳವನಱಿಯದೆ ನೆಗಟ್ದ್ಪೈ (ಪಂಪಭಾ.೬-೫೨).
[ಪಚ್ಚ$_1$ (< ಪಸುರ್$_2$) + -ಅನೆಯ$_2$]

**ಪಚ್ಚಪಸಿ,** ಹಚ್ಚಹಸಿ (ಗು). ೧. ಅಚ್ಚ ಹಸುರಾದ : ಕಡೆವಾಯ ಲೋಳೆಯೊಳ್ ಪೊರೆದುಗುತರ್ಪ ಪಚ್ಚಪಸಿಯುಚ್ಚಗಱುಂಕೆ ಮರಲ್ದ ದಿಟ್ಟಿ . . . ಸೂಚಿಸಿದಪ್ಪುದು ಸೋಲ್ತ ಭಾವನುಂ (ಕಾದಂಪೂ. ೬೫೧). ೨. ತಿಳಿವಳಿಕೆಯಿಲ್ಲದ; ಮುಗ್ಧವಾದ : ದೆಸೆದೆಸೆಗೆ ಬೆಸೆವ ಪಚ್ಚಪಸಿ ಯೆಗ್ಗರುಮಂ ಕಂಡು (ಪಂಪಭಾ. ೪-೯೪ ವ); ನಾಲಗೆಯಿಲ್ಲದೆ ನುಡಿವೆ ನೆಂಬ ಪಱುಗೋಲಿಲ್ಲದೆ ತೊಱೆಯಂ ಪಾಯ್ವೆನೆಂಬ ಪಚ್ಚಪಸಿಯೆಗ್ಗನಂ ಪೋಲ್ಕುಂ (ಧರ್ಮಾಮೃ. ೧-೬೭). ೩. ಹೊಚ್ಚ ಹೊಸದಾದ ; ತಾಜಾ : ಬಚ್ಚಬಱಿಯಚ್ಚಸುಖದ ಪಚ್ಚಪಸಿಯ ಪೊಚ್ಚಪೊಸಹರೆಯದ ಮುಗ್ಧಾಂಗನೆಯರೊಳಂ (೧೮೪. ೨-೧೦೫ ವ). 'ಪಚ್ಚಪಸಿವರೆಯ' ಪರಾ. (ನಾ). ೪. ಅನಾಗರಿಕವಾಗಿರುವುದು ; ಒರಟಾಗಿರು ವಿಕೆ : ಅಳವಱಿಯದೆಗ್ಗು ಬಳವಳ ಬಳೆವಿನೆಗಂ ಪಚ್ಚಪಸಿಯ ತುಱು ಕಾಱಂಗಗ್ಗಳಿಕೆಯನೆ ಮಾಡಿ ನೀನುಂ ಪಱಿಯಂ ಕಟ್ಟಿದೆಯೊ ಭೂಪರಿನಿಬರ ಕೊರಲೊಳ್ (ಪಂಪಭಾ. ೬-೪೬). **ಹಚ್ಚಹಸಿ** (ಗು). ೫. ಹಸಿ ಯಾದ; ಒಣಗಿಲ್ಲದ : ಪಿರಿದೆನಿಸುವ ಹಚ್ಚಹಸಿಯ ಬಡಿಗೆಗೊಂಡು ಹರದರೀರ್ವರು ಹೊಯ್ದಾಡಿ ಭರದೊಳು ಸತ್ತು (ನೇಮಿಸಂ. ೭-೧೯).
[ಪಚ್ಚ$_1$ (<ಪಸುರ್$_2$) + ಪಸಿ$_4$]

**ಪಚ್ಚಪಸಿವರೆಯ** (ನಾ). ಆಗ ತಾನೆ ಆರಂಭವಾಗಿರುವ ಯೌವನ; ನವಯೌವನ : ವಜ್ರಮಾಣಿಕ್ಯದ ಹೋಲುವೆಯ ದಂತಪಂಕ್ತಿಯ ಪಚ್ಚಪಸಿವರೆಯದ . . . ಪೆಣ್ಣಳೊಪ್ಪಿದರು (ಭಾಪಚಿಂ.೫-೨೯); ಪಚ್ಚ ಪಸಿವರೆಯಂದಲರ್ಗಳ ಪಚ್ಚದ . . . ಸೊಗಯಿಪ್ಪಚ್ಚರಸಿಯರಂತೆ ಮೆಱೆವ ತರುಣಿಯರೆಸೆದರ್ (ರಾಜಶೇ. ೨-೨೨).
[ಪಚ್ಚಪಸಿ + ಹರೆಯ (< ಪರಯ)]

**ಪಚ್ಚಬಾಳೆ** (ನಾ). = ಪಚ್ಚೆಬಾಳೆ : ಎರಡು ಪಚ್ಚಬಾಳೆಹಣ್ಣುಗಳನ್ನು ಕೊಂಡು ಉತ್ತರೀಯದಲ್ಲಿ ಕಟ್ಟಿದರು (ಏಕಾಂಗಿ. ೫೬).
[ಪಚ್ಚ$_1$(<ಪಸುರ್$_2$)+ಬಾಳೆ$_1$(<ಬಾೞೆ)]

**ಪಚ್ಚಯಿಲ** (ನಾ). ಅಲಂಕಾರ ಮಾಡುವವನು ; ಸಿಂಗರಿಸುವ ವನು : ಇಲ ಪ್ರತ್ಯಯಕ್ಕೆ—ಪಚ್ಚಯಿಲಂ, ಪಡೆಯಿಲಂ, ಗಾವಿಲಂ (ಶಮದ. ೨೦೫ ಪ್ರಯೋ); ಗಾವಿಲಂ . . . ಪಚ್ಚಯಿಲಂ, ತಟ್ಟುಕಂ (ಶಬ್ದಾನು. ೪೪೧ ಪ್ರಯೋ). [ಪಚ್ಚ$_2$ + -ಇಲ]

**ಪಚ್ಚರಿಸು** 'ಪಚಾರಿಸು$_2$' ನೋ.

**ಪಚ್ಚವಡ$_1$,** ಹಚ್ಚವಡ, ಹಚ್ಚವಡಿ (ನಾ). ೧. ಬಟ್ಟೆ ; ವಸ್ತ್ರ : 'ಪಚ್ಚವಡತಿ' ಪರಾ. **ಹಚ್ಚವಡ** : ೨. ಹೊದಿಕೆ; ಆಚ್ಛಾದನೆ: 'ಹಚ್ಚವಡಿಸು' ಪರಾ. **ಹಚ್ಚವಡಿ** : (೬).
[<ಸಂ. ಪ್ರಚ್ಛದಪಟ./ತಮಿ. ಪಚ್ಚವಟ; ಮಲ. ಪಚ್ಚಪಡ]

**ಪಚ್ಚವಡ$_2$** (?). (?) : ಕೀರ್ತಿಲಲಿತಾಲತೆ ಪರ್ವೆ ದಿಗಂತರಾಳಮಂ ರೂಢಿಯ ಚಾಮದೇವನಗ್ರತನೂಜರ ವಿಕ್ರಮಕ್ರಮಂ ಪಚ್ಚವಡಂ ಬೆಂಗಾಣದ ನಿಚ್ಚಟಗಲಿ ಮನಹಬಿಟ್ಟಿದೇವಂ ನೋಡಲ್ ಉಚ್ಚಂಗಿಯ ಮೇಲಿಱಿದಂ ಮುಚ್ಚರಿಸುವರೆದೆಯ ಗೂಣ್ಪ ಗೋಣಿಯ ಬಣ್ಣಂ (ಎಕ. XII, ಚಿಕ್ಕನಾ. ೨೯-೧೯; 1149). [ ? ]

**ಪಚ್ಚವಡತಿ** (ನಾ). ವಸ್ತ್ರಾಲಂಕಾರ ಮಾಡುವವಳು ; ಸೈರಂಧ್ರಿ : "ಪಚ್ಚವಡತಿ—ಹಚ್ಚಡಿಸುವಾಕೆ" (ಶಮದ. ಪರಿ. ೨); "ಪಚ್ಚವಡತಿಯೆನೆ ಪಚ್ಚವಡಿಸುವ ಸತಿ" (ಕಬ್ಬಿಗ. ೯೧).
[ಪಚ್ಚವಡ$_1$ + -ತಿ$_1$ (<-ಇತ್ತಿ)]

**ಪಚ್ಚವಡಿಕೆ** (ನಾ). ಹಾಸುಗೆಯ ಮೇಲೆ ಹೊದಿಸುವ ಬಟ್ಟೆ,— ಹಚ್ಚಡ : ಅಕೆಯನೆತ್ತಿ ಪಾಸಿನ ಪಚ್ಚವಡಿಕೆಯಂ ನೋಡಿದಾಗಳ್ (ಲೀಲಾವ. ೧೦-೭೨ ವ). [ಪಚ್ಚವಡ$_1$+ -ಇಕೆ]

**ಪಚ್ಚವಡಿಗೆ,** ಹಚ್ಚವಡಿಗೆ(ನಾ) = ಪಚ್ಚವಡಿಕೆ: ಎನಿತಾನುಂ ದುರ್ಜನ ನುಂ ನಯಮಂ ಮಾಡುತ್ತಮಿರ್ದನುಂ ಗುಣಿಯೆನಿಕುಂ . . . ಪಾಸಿನ ಪಱುಪಂ ಪಚ್ಚ [ಪಾಠಾಂ.ಪಾಚ] ವಡಿಗೆ ಮುಚ್ಚುವ ತೆಱದಿಂ (ಸಮುಪ. ೧೫-೩೪). **ಹಚ್ಚವಡಿಗೆ**: "ಪ್ರಚ್ಛದಃ, ಉತ್ತರಚ್ಛದಃ-ಈ ೨ ಹಚ್ಚ ವಡಿಗೆ" (ಹಲಾಯು. ೫೧-೧೫೩). [< ಪಚ್ಚವಡಿಕೆ]

**ಪಚ್ಚವಡಿಸು,** ಪಚ್ಚೆವಡಿಸು, ಹಚ್ಚವಡಿಸು (ಕ್ರಿ). ೧. ಹೊದಿಸು; ಮುಚ್ಚು ; ಆಚ್ಛಾದಿಸು : ಪಸಿಯ ನೇತ್ರಮಂ ಪಚ್ಚವಡಿಸಿದಂತೆ ಪಸುರ್ಪುವಡೆದ ನೆಲದೊಳ್ ಪದ್ಮರಾಗದ ಪರಲ್ಗಳಂ ಬಲಿಗೆದಱಿದಂತೆ ಉಪಾಶ್ರಯಂಬಡೆದಳಂಕರಿಸುವಿಂದ್ರಗೋಪಂಗಳುಮಂ (ಪಂಪಭಾ. ೭-೨೫ವ); ಅಂತು ಬಂದ ವಧೂಕಾಂತರಿರ್ವರುಮಂ ವಿವಾಹವೇದಿಕಾ ಮಧ್ಯದೊಳ್ ದಳಿಂಬದಿಂ ಪಚ್ಚವಡಿಸಿದ ಪಳಿಕಿನ ಪಟ್ಟವಣೆಯೊಳಿರಿಸಿ (ಚಂದ್ರಪ್ರ. ೬-೭೦ ವ). ೨. ಹರಡು ; ಹಾಸು : ಪರಾಂಗಣದೊಳ್ ಪಚ್ಚವಡಿಸಿರ್ದಮೃತಾರ್ಣವತರಂಗಸ್ಥೂಲಹಂಸತೂಳತಲ್ಪದೊಳ್ ಮಗ್ನ ಮೂರ್ತಿಯಾಗಿ ಕುಳ್ಳಿರ್ದ (ಅರ್ಧನೇ. ೪-೫೦ ವ) ; ನವಮಣಿ ಮಂಚದಿಂದೆ ಮಿಸುಪಂಚೆಯ ತುಪ್ಪುಟ ತೂಳಿಯಿಂದೆ ಪಚ್ಚವಡಿಸಿದಚ್ಚ ನುಣ್ದುಗುಲದಿಂದೆ . . . ಎಸೆದಿರ್ದ ಸೆಜ್ಜೆಯೊಳ್ (ಪುಷ್ಪಪು. ೯-೯೭) ; ಅದಱಡಿಯೊಳೆಯ್ದೆ ಪಾಲಾಶಪತ್ರಂಗಳಂ ಪಚ್ಚವಡಿಸಿ (ವೀಶೈಪು. ೪-೭-೩೯). ೩. (ಅಲಂ) ಅಲಂಕರಿಸು; ಸಿಂಗರಿಸು :

ಪಚ್ಚ [ಪಾಠಾಂ. ಚ್ಚೆ]ವಡಿಸಿದುಯ್ಯಲ ಮಣೆಯ ಕಡೆಯಂ ಪಿಡಿದು ಚಿತ್ರ ವಲ್ಲಭನೊತ್ತಿ ಸಾರ್ಚ ಮಾಂಗಳಿಕಮನುಗ್ಗಡಿಸೆ ತುಂಗಕುಚಭರಾಲಸಗಮನೆ ನಡೆತಂದು ನಿಂದು ನೋಡಿ (ಅನಂಪು. ೮-೩೨); ಪಚ್ಚವಡತಿಯೆನೆ ಪಚ್ಚ ವಡಿಸುವ ಸತಿ (ಕಬ್ಬಿಕ್ಕೈ. ೯೧). **ಪಚ್ಚೆವಡಿಸು:** ೨. ಆ ಮಾವಿನಡಿಯೊಳಡಿವಾಸಿ (?) ಪೂವಿನ ಪುಡಿಯ ಪುಟಾಲಂ ಜಗಲಿಗಟ್ಟಿ ಪೊಸದಳಿರ ಪಾಸಂ ಕುಸುಮದೆಸಟಾಂ ಪಚ್ಚೆವಡಿಸಿ (ಅರ್ಧನೇ. ೫-೫೬ ವ). **ಹಚ್ಚವಡಿಸು:** ೨. ದುಕೂಲಚೇಲದಿಂ ತೆರಳದೆ ಕೂಡಿ ಹಚ್ಚವಡಿಸಿರ್ದ ಸಮುಜ್ಜ್ವಳಶಯ್ಯೆಯಿಂದಮೆಬ್ಬು (ಚಂದ್ರಪು.೭-೭೯); ಮನದನ್ನನಿಂದು ಬಂದಪನೆಂದು . . . ಸೆಜ್ಜೆಯಂ ಸಿಂಗರಿಸಿ ಹಾಸುಮಂ ಹಚ್ಚವಡಿಸಿ ವಿನುತ ಪರಿಮಳಪುಷ್ಪತಾಂಬೂಲಮಂ ತರಿಸಿ ಮನಮೊಸೆದು ಕಾದಿರ್ದ ನಿನಿತುವರೆಗಂ (ಚಬಪು. ೧೦-೩೨). [ಪಚ್ಚವಡ$_1$+-ಇಸು$_3$]

**ಪಚ್ಚವಣ** 'ಪುಚ್ಚವಣ' ನೋ.

**ಪಚ್ಚವಳ** 'ಪಚ್ಚಳ$_2$' ನೋ.

**ಪಚ್ಚವಾಗಲ್** (ನಾ). ೧. ಮರಕತದ ಸುತ್ತುಗೋಡೆ,—ಪ್ರಾಕಾರ: ಸುತ್ತಲುಂ ಬಳಸಿ ಪರ್ವಿದ ಕೇದಗೆ ಪಚ್ಚವಾಗಲೆಂ[ಪಾಠಾಂ. ಕಲೆಂ, ಕಮೆಂ]ಬೆಸಕಮನಾಳ್ದು ಪೂಗಣೆಯನಿರ್ಪ ಪೊಟಲ್ಗೆ ಣೆಯಾದುದೀ ಬನಂ (ಕಬ್ಬಿಕಾ. ೧೦೧).

[ಪಚ್ಚ$_1$(<ಪಸುರ್$_2$)+ಪಾಗಲ್$_2$(<ಪಾಗಾರ)]

**ಪಚ್ಚಳ$_1$** 'ಪಚ್ಚಡ' ನೋ.

**ಪಚ್ಚಳ$_2$**, ಪಚ್ಚವಳ, ಪಛಳ, ಪೆಚ್ಚಳ$_2$, ಹಚ್ಚಳ (ನಾ). (ಮನುಷ್ಯನ ಅಥವಾ ಪ್ರಾಣಿಯ) ಪೃಷ್ಠಭಾಗ; ನಿತಂಬಪ್ರದೇಶ; ಪಿರ್ರೆ: ಸೋರ್ಮುಡಿ ಸೋರ್ದು ಪಿಂದಲೆಯೆ ಪಚ್ಚಳ[ಪಾಠಾಂ. ಶ್ಚಿಮ]ಮಂ . . . ಒರ್ವಳೋಪನಂ ಪೆರ್ಮೊಲೆ ಬೆನ್ನನುರ್ಚಿದಪುವೆಂಬಿನಮುಪ್ಪಿದಳಾಗಳಾರ್ತದಿಂ (ಕಾವ್ಯಾವ.೮೨೩); ಮಿಕ್ಕು ಪಚ್ಚಳಕೆತ್ತಿ ಮೆಯರ್ ನಿಮಿರಿ . . . ಕಾಡೆಮ್ಮೆಗಳ ತೆಕ್ಕೆಯೊಳು ಕೋಣನಿರೆ (ಹಚಕಾ. ೫-೩೯); ಎತ್ತಿ ಬಾಲವನೆರಡು ಪ[ಪಾಠಾಂ. ವ]ಚ್ಚಳದೊತ್ತಿನಲಿ ಮೋಹಿಸಿದ ಸುರಗಿಯ ನೆತ್ತಿಯಲಿ ತೋಟಾದರು (ತೊರರಾ. ೬-೧೩-೩೯); ಪೆಗಲುರ ಪಂಚಕ ಖುರ ಕೋಡು ಕಾಲ್ಕಹೊಗ ಪಣೆ ಪಚ್ಚಳ ಪಿಳಿಲು ಸೊಗಯಿಸೆ ಮೆಱೆದುವಂದಲ್ಲಿ ಉಲಾಯುಗಳಗಲದೆ ಕಾಡೆಮ್ಮೆವಿಂಡು (ಕುರಾಸಾಂ. ೨೭-೬೧) **ಪಚ್ಚವಳ:** ಎಚ್ಚಡಾಯುಧಮಂ ಕಿಟ್ರಿಯೆನೆ ನೂಂಕೆ ತುರಗಮಂ ತುಕ್ಕಿಡಿಗಳ್ ಪಚ್ಚವಳದೆಡೆಗಳಂ ಮುನ್ನೆಚ್ಚ ಸರಲ್ ತಾಗೆ ಪಱಿದವುಱಿ ಚೆಚ್ಚಱಿದಿಂ (ಚಂದ್ರಪು. ೧೦-೭೯). **ಪಛಳ:** ಹಾರಿ ಹಾರಿ ಪಾದಪಾರ್ಶ್ವದ್ವಯೇನ ಯರಡುಹಿಮ್ಮಡುಹಿಮ್ಮಡಗಳಿಂದ ನೀಕಂಬದ್ವಯತಾಡನಂ ಯರಡು ಪಛಳ ತಾಡಿಸುವದು . . . ಉಪ್ಪರದ ಸಾಧನೆಯೆಂಬರು (ಖಡ್ಗಟೀ. ೪-೭೦). **ಪೆಚ್ಚಳ$_2$:** ಸಣ್ಣಗಾಲ್ಗಳಂ ನೆಱಿಗೊಳಗುಬ್ಬರ್ವೆಚ್ಚಳಮುದಂಚಿತವಾಲಧಿ ಸೂಕ್ಷ್ಮರೋಮದಿಂ ಮೆಱೆದುವು ವೇಗದಿಂ ಜಱಿದುವಾ ಜಘನವಾಜಿಗಳಿಂದ್ರವಾಹಮಂ (ಚಕವಿ. ೨-೯೫). **ಹಚ್ಚಳ:** ಚಂದ್ರಾಪೀಡನು ತನ್ನ ಕುದುರೆಯ ಹಚ್ಚಳದ ಮೇಲೆ ಕೈಯಿರಿಸಿಕೊಂಡು . . . ಉಜ್ಜಯಿನಿಪಟ್ಟಣದ ವೃತ್ತಾಂತವ ಕೇಳುತಲೆ ನಡೆದು (ವಚಕಾ. ೮೯).

ಪಚ್ಚಳದ ಮನೆ=ಮಲವಿಸರ್ಜನೆ ಮಾಡುವ ಸ್ಥಳ; ಶೌಚಾಲಯ; ಕಕ್ಕಸು: "ಕಿಟ್ಟಾಲಯಂ ಪಚ್ಚಳದ ಮನೆಯೆನಿಕ್ಕುಂ" (ಮಂಗರಾ. ೫೮-೯).

[<ಸಂ. ಪಶ್ಚಾತ್ತಲ. / ಪ್ರಾ. ಪಚ್ಛಲ್ಲ./ತುಳು. ಪಚ್ಚಲ]

**ಪಚ್ಚಳತೆ** (ನಾ). (?): ದೃಢವಿಡಿದು ಕೆಡಿಸು ಕರಣಂಗಳುಪತಾಪವನು ಮಡಿದು ನೋಡಿ ಪಚ್ಚಳತೆಯ ವಿಷಯವನು ಕೆಡವೊಡೆದು ಮೃಢ ಗುರು ಬಸವನೆ ತಾನೇಕಭಕ್ತನಹನು (ಗುರುಬ. ೬೭-೧೨). [?]

**ಪಚ್ಚಳಿತಿ** (ನಾ). = ಪಚ್ಚವಡತಿ: "ಪಚ್ಚಡಿಸುವಾಕೆಯಲ್ಲಿಯೆ ಪ[ಪಾಠಾಂ. ವ]ಚ್ಚಳಿತಿಯೆನಲ್ಕೆ" (ಕರ್ಣಾಶ. ೫೫).

[ಪಚ್ಚಳ$_1$ (< ಪಚ್ಚಡ) +-ಇತಿ$_1$ (<-ಇತ್ತಿ)]

**ಪಚ್ಚಟಿ** (ಕ್ರಿ). ಹೊಂದಿಕೆಯನ್ನು ಬಿಡು: ಪಟಾಯಂ ಕೇಳ್ದನೊ ಮೇಣ್ನಡೆವಟಾಯಂ ತಪ್ಪಿದನೊ . . . ಪಚ್ಚಟಾದನೊ ಪೇಟ್ಳಾಡಿ ನಿನ್ನೊಳಂಗಾಧಿಪತೀ (ಗದಾಯು. ೫-೧೪). [ಪಚ್ಚು$_5$+ಅಟು$_1$]

**ಪಚ್ಚಾಯಿಲ**, ಪಚ್ಚಾಯ್ಲ (ನಾ). = ಪಚ್ಚಯಿಲ: "ಪಚ್ಚಾಯಿಲನೆಂದು ಪಚ್ಚಡಿಸುವಾತಂ" (ಕಶಸಾ. ೬೧-೩೪೧); ನನ್ನ ಪುಣ್ಯ, ಅಣ್ಣಯ್ಯನ ಪಚ್ಚಾಯಿಲನು ಇದನ್ನಿಲ್ಲಿಯೇ ಮರೆತು ಹೋಗಿದ್ದರಬೇಕು (ಸುಗುಗಂ. ೧೧೧-೮). **ಪಚ್ಚಾಯ್ಲ:** "ಪಚ್ಚಾಯ್ಲಂ=ಪಚ್ಚಗಾಱಂ" (ಶಪದ ಪರಿ. ೨); ಅರಮನೆಯೊಳಿರಿಸುವುದು . . . ಅಂಗರಕ್ಷಕರ ಪಚ್ಚಾಯ್ಲರಂ (ಶೀಷರಾ. ೨-೩೨). [ಪಚ್ಚ$_2$ +-ಅಯಿಲ$_2$]

**ಪಚ್ಚಾಯ್ಲ** ಪಚ್ಚಾಯಿಲ ನೋ.

**ಪಚ್ಚಾರಿ**, ಪಚರಿ, ಪಚಾಲೆ, ಪಚ್ಚೇರಿ (ನಾ). ಒಂದು ಬಗೆಯ ಮರ: ಮತ್ತಿ ಮಧುಕಂ ಮಂಗಾರೆ ಪಚ್ಚಾರಿ[ಪಾಠಾಂ. ಲ] . . . ಕಕ್ಕೆ ಬಿಕ್ಕೆ ಬಕುಳಂ ಬೇವೆತ್ತಕಂ ಕಿಂಶುಕಂ (ರಾಜಶೇ. ೫-೫೬); ಎಲವಂ ಮುತ್ತುಗ . . . ಮಾವಿಂಗಳಂ ಬೇಲ ಬೊಬ್ಬುಲಿ ಪಚ್ಚಾರಿ ಪತಂಗಮೆಕ್ಕೆ ಮೊದಲಾದುರ್ವೀರುಹಂ ರಾಜಿಕುಂ (ಯಾದಚಂ. ೪-೪೫); ಕಕ್ಕೆ ಪಚ್ಚಾರಿ ಮೇಲಾದ ಬಿದಿರು . . . ಕಿಕ್ಕಿರಿಪ ಕಾನನದೊಳು (ನವಮೋ. ೮-೯). **ಪಚರಿ:** ಮರಗಳು . . . ಬೂರಗ, ಹುರಗಲು, ಸೊಳ್ಳೆ, ಬೀಟೆ, ಪಚರಿ (ನಮ್ಮನು. ೨೩೬). **ಪಚಾಲೆ:** ಪಚ್ಚೇರಿ, ಪಚಾಲೆ, ಪದರು ಪಚಾಲಿ (ಮೈಔಗಿ. ೨೮-೫೪೯). **ಪಚ್ಚೇರಿ:** ಪಚ್ಚೇರಿ, ಪಚಾಲೆ, ಪದರು ಪಚಾಲಿ (ಮೈಔಗಿ. ೨೮-೫೪೯).

[ದೇ.॥ ತಮಿ. ಪಚ್ಚಿಲೈ, ಪಚಿರ; ಮಲ. ತುಳು. ಪಚ್ಚಿಲ]

**ಪಚ್ಚಾಳ್** 'ಪಸು$_1$' ಪರಾ.

**ಪಚ್ಚಿ$_1$** (ನಾ). ಪಿತ್ತಕೋಶ; ಈರಿ: "ಪಚ್ಚಿದಕೆಯೊಲಿ[ರಿ]" (ಮಂಗರಾ.೧೧೭-೫); ಹೊಟ್ಟೆ ಬಗೆದು ಪಚ್ಚೀನೂ ಅಲ್ಲೇ ಹಾಕಿದ್ದಾರಲ್ಲೊ . . . ಅವರ ಪಚ್ಚೀನೂ ಹೀಂಗೆ ತೆಗೀಬೇಕು (ಮಲಿಮ. ೪೫೨).

**ಪಚ್ಚಿ$_2$** (ನಾ). ಉಪಹಾಸ; ಗೇಲಿ: ಸಚ್ಚರಿತೆಯರ ಭಕ್ತಿಯ ಕಂಡು ಮಾಧವ ಮೆಚ್ಚಿದೆ ಕೇಳಿ ನೀವೆನಲು ಬೆಚ್ಚಿ ಬಿನ್ನವಿಸಲೇತಕೆ ಚಿತ್ತವರಿಯದೆ ಪಚ್ಚಿಗಿಕ್ಕದಿರೆಂದರವರು (ಕೃಷ್ಣಗೋ. ೩-೧೬); ಇವರ ಎಲ್ಲಾರೂ ಕೂಡಿ ಇಲ್ಲದ ಅಂಡ್ರಂಡ್ರಾದ್ನಿ ಮಾಡಿ ನನ್ನ ಪಚ್ಚಿ ಮಾಡಿಬಿಟ್ರು (ಹೊಸಂಸಾ. ೧೨೨). [← ಮರಾ. ಪಚ್ಚೀ]

**ಪಚ್ಚಿ$_3$** (ನಾ). ಚಿನ್ನ, ಬೆಳ್ಳಿ ಮುಂತಾದುವುಗಳ ಆಭರಣಗಳಲ್ಲಿ, ಆಯಾ ಧಾತುವಿನ ತೆಳು ತಗಡುಗಳ ಅಂಚನ್ನು ಸುತ್ತಲೂ ಬಾಗಿಸುವುದರಿಂದ ರತ್ನಗಳನ್ನು ಮೆಟ್ಟಿರುವಿಕೆ: (ಕ). [?]

**ಪಚ್ಚಿಮ**, ಪಚ್ಚಿವ, ಪಶ್ಚಿವ (ನಾ). ೧. ಪಡುವಣ ದಿಕ್ಕು; ಪಶ್ಚಿಮ: ದೇವರ ಪಚ್ಚಿಮಭಾಗದ ಬೆದಲೆ ಅರವತ್ತರು (ಎಕ. XI, ದಾವಣ. ೧೫೫-೨೦; 1124); ಪಚ್ಚಿಮದ ದೆಶೆಗೊಡೆಯ . . . ನೆಗಟ್ದೀರನೆನೆ ವರುಣನು (ಕಬ್ಬಿಕ್ಕೈ.೧೪). **ಪಚ್ಚಿವ:** 'ಪಚ್ಚಿವದೆಸೆ' ಪರಾ. **ಪಶ್ಚಿವ:** ೨. ಹಿಂಭಾಗ; ಪೃಷ್ಠ: ವಾಳಮುಂ ವಕ್ಷಮುಂ ಪಶ್ಚಿವಮುಂ ವಿಸ್ತೀರ್ಣಂ. . . ಇಂತಿವು ತನುವೆನಿಪೊಂದಶ್ವಮುರ್ವೀಶಪೂಜ್ಯಂ (ಲೋಕೋಪ. ೧೧-೭೪). [< ಪ್ರಾ. ಪಚ್ಚಿಮ./ಸಂ. ಪಶ್ಚಿಮ]

**ಪಚ್ಚಿಮದೆಸೆ**, ಪಚ್ಚಿವದೆಸೆ (ನಾ). = ಪಚ್ಚಿಮ ೧. **ಪಚ್ಚಿವದೆಸೆ.**

ಪಚ್ಚಿಮದೆಸೆಗೊಡೆಯ, ಪಚ್ಚಿವದೆಸೆಗೊಡೆಯ = ಪಶ್ಚಿಮದಿಕ್ಕಿನ ಅಧಿಪತಿ; ವರುಣ: "ನೆಗಟ್ದೀರಂ, ಪಚ್ಚಿಮದೆಸೆಗೊಡೆಯಂ,

ನೀರೊಟ್ಟಿಲಾಣ್ಮಂ—ಈ ೩ ವರುಣಂಗೆ ಪೆಸರ್" (ಕಶಸಾ. ೪೯–೩೭) ; "ಪಚ್ಚಿವದೆಸೆಗೊಡೆಯಂ ತಾಂ ನಿಚ್ಚಂ ನೀರೊಟ್ಟಿಲಾಣ್ಮ ನೆಗಟ್ಟೀರನೆನಲ್ ಚಚ್ಚರದೆ ವರುಣನಪ್ಪಂ" (ಕವಿಕಂ. ೩೭). [ಪಚ್ಚಿಮ + ದೆಸೆ$_2$]

**ಪಚ್ಚಿಯ** (ನಾ). ಗೂಡೆ ; ಕುಕ್ಕೆ : ಗಣಪತಿ ಪುತ್ತರಿಯ ಪಚ್ಚಿಯದಲ್ಲಿ ಮಾವಿನ ಎಲೆ . . . ಅಚ್ಚಿಯ ನಾರುಗಳನ್ನು ತಂದಿರಿಸಿದ (ಹುಲಿಹಾ. ೧೮೭). [←ಕೊಡ. ಪಚ್ಚಿಯ]

**ಪಚ್ಚಿವ** 'ಪಚ್ಚಿಮ' ನೋ.

**ಪಚ್ಚಿವದೆಸೆ** 'ಪಚ್ಚಿಮದೆಸೆ' ನೋ.

**ಪಚ್ಚಿಸು$_1$**, ಹಚ್ಚಿಸು$_1$ (ಕ್ರಿ). ಹೋಳುಮಾಡು ; ಕತ್ತರಿಸು : ಇಂತಪ್ಪ ಮೈವೆಳಗಿನಮಳ ಮಚ್ಛನಯಿದನು ಕೊಯ್ದು ಪಚ್ಚಿಸಿವುಂಡೊಡೆ ಯೇನಹುದು (ನಪಮೋ. ೧೨–೬). **ಹಚ್ಚಿಸು$_1$** : ತರಕಾರಿ ಹಚ್ಚಿಸೋದಕ್ಕೆ ಅಡುಗೆ ಆಳುಗಳಿದ್ದಾರೆ (ರೂಢಿ).

[ಪಚ್ಚು$_1$ (< ಪಸು$_1$) +–ಇಸು$_3$]

**ಪಚ್ಚಿಸು$_2$**, ಪರ್ಚಿಸು$_2$, ಹಚ್ಚಿಸು$_2$ (ಕ್ರಿ). **೧.** ಒಂದರಲ್ಲೊಂದನ್ನು ಅಂಟಿಕೊಳ್ಳುವಂತೆ ಹೊಂದಿಸು ; ಬೆಸೆ : ಕಡುನಿಮಿರ್ದ ತೋರಮೊಲೆಗಳ ನಡುವೆಡೆಯೊಳ್ಪೊಕ್ಕು ಪಚ್ಚಿಸಿದವೊಲ್ತೊಡರ್ದಿರ್ದೊಡ ಮೇನವಂಗೆ ನಡುಕಮನೊಡರಿಸಲಾರ್ತಪುದೆ ನೋಡ ಹಿಮಮುಂ ಗಿಮಮುಂ (ಬಾಧಪು. ೪–೭೫). **೨.** ಅಂಟಿಕೊಳ್ಳು ; ಹೊಂದಿಕೊಳ್ಳು : ವನಜನಾಭನು . . . ಜೀವರನೆ ಪುಟ್ಟಿಸುವ ಲಿಂಗದೇಹದಿಂದ ಘನವಾಗಿ ಜೀವಕ್ಕೆ ಬಿಡದಂತೆ ತೊಯಿದ ವಸನದೋಪಾದಿಯಲಿ ಪಚ್ಚಿಸುವ ತನುವಿನ ನೆಳಲಂತೆ ಹರಿಯಾಡಲು ಜೀವನ ಪ್ರವರ್ತಿಸುವುದು (ವಿದಾಕ್ಯ. ೪೪–೩). **೩.** ಲೇಪಿಸು ; ಬಳಿ : ನರನೊಬ್ಬ ಅಂಜನವ ಮಾಡಿ ತಂದು ತನ್ನ ಕರತಲದಲಿ ಪಚ್ಚಿಸಿಕೊಂಡು ನೋಡಿದರೆ ಸರಿಸ ದೂರದಲಿದ್ದ ವಸ್ತು ಕಾಣಿಸುವುದು (ವಿದಾಕ್ಯ. ೧೨೩–೩). **ಪರ್ಚಿಸು$_2$** : **೪.** (ದೀಪ, ಉರಿ ಮೊದಲಾದುವನ್ನು) ಹತ್ತಿಸು ; ಹೊತ್ತಿಸು ; ಜ್ವಲಂತಗೊಳಿಸು : ಸೊಡರಂ ಪರ್ಚಿಸಿದಂತಿರೆ ಬೆಡಂಗುವಡೆದೆಸೆವ ಮುನಿಯ ದೇಹದ್ಯುತಿಯಂ ಕಡುಗವಿಲಮಾಗಿ ಕಾಂಚನದಡವಿಯನನುಕರಿಸಿ ತದ್ವನಂ ಸೊಗಯಿಸುಗುಂ (ಕಾದಂಪೂ. ೭೨೯). **ಹಚ್ಚಿಸು$_2$** : **೪.** ಕತ್ತಲಾಯಿತು, ದೀಪವನ್ನು ಹಚ್ಚಿಸು (ರೂಢಿ). **೫.** ಬಳಿಯುವಂತೆ ಮಾಡು : ಮನೆಗೆ ಸುಣ್ಣ ಹಚ್ಚಿಸಬೇಕು (ರೂಢಿ). **೬.** (ಸಸ್ಯಗಳನ್ನು) ಊರುವಂತೆ ಮಾಡು ; ಅಂಟಿಸು: ಬಾಗಿಲ ಬಳಿ ಎರಡೂ ಪಕ್ಕಗಳಲ್ಲಿ ಮಲ್ಲಿಗೆ ಬಳ್ಳಿಯನ್ನು ಹಚ್ಚಿಸಲಾಗಿದೆ (ರೂಢಿ). [ಪಚ್ಚು$_3$ +–ಇಸು$_3$]

**ಪಚ್ಚೀಸು**(ನಾ). **೧.** ಇಪ್ಪತ್ತೈದು. **೨.** ಇಪ್ಪತ್ತೈದು ಎಂಬುದೇ ಎಲ್ಲಕ್ಕೂ ಹೆಚ್ಚಿನ ಗರವಾಗಿದ್ದು ಲೆತ್ತಗಳ ಬದಲಾಗಿ ಕವಡೆಗಳನ್ನು ಬಳಸಿ ಆಡುವ ಒಂದು ಬಗೆಯ ಆಟ : (ಕ).

[← ಹಿಂ. ಪಚ್ಚೀಸ್, ಪಚೀಸ್. / ಪ್ರಾ. ಪಚೀಸ್]

**ಪಚ್ಚು$_1$** 'ಪಸು$_1$' ನೋ.

**ಪಚ್ಚು$_2$** 'ಪರ್ಚು$_1$' ನೋ.

**ಪಚ್ಚು$_3$**, ಪರ್ಚು$_2$, ಹಚ್ಚು$_1$ (ಕ್ರಿ). **೧.** ತೊಡಗಿಸು ; ಸೇರಿಸು ; ಹೊಂದಿಸು: 'ಪಚ್ಚಿಸು$_2$' ಪರಾ. **೨.** ಬಳಿದುಕೊಳ್ಳು ; ಲೇಪಿಸಿಕೊಳ್ಳು : ಅಚ್ಯುತ ನಿನ್ನಯ ಧ್ಯಾನವಿಲ್ಲದೆ ದ್ವಾದಶನಾಮ ಪಚ್ಚುವೆನು (ಪ್ರಸಕೀ. ೯–೧). △ **ಪರ್ಚು$_2$** : **೩.** (ದೀಪವನ್ನು) ಅಂಟಿಸು ; ಹೊತ್ತಿಸು : 'ಪರ್ಚಿಸು$_2$' ಪರಾ. **೪.** ಅಂಟಿಕೊಳ್ಳು ; ಸೇರು ; ಬೆಸೆ : ಅವರ ಲಾವಣ್ಯರಸ ಪರಿದೈದಿ ರುಕ್ಮಿಣಿಧವನ ಕಣ್ಮನದೊಳು ತುಂಬಿಯತಿಮೋಹಲತೆ ತವೆ ಬಳ್ಳಿವರಿದವರ ತನುಭುಜಗಳನು ಪರ್ಚೆ (ನಪಮೋ. ೧೦–೫೮). **ಹಚ್ಚು$_1$** : **೧.** ಮಗನು ನೌಕರಿಯಿಲ್ಲದೆ ಕುಳಿತಿದ್ದಾನೆ; ಎಲ್ಲಿಯಾದರೂ ಕೆಲಸಕ್ಕೆ ಹಚ್ಚಬೇಕು (ರೂಢಿ). **೨.** ತಿಲಕಮಂ ಫಣೆಗೆ ಕಪ್ಪಂ ಕಣ್ಣಿಗುರೆ ಹಚ್ಚದೊಲಪಿನಿಂ ಕನ್ನಡಿಯನೀಕ್ಷಿಸದೆ . . . ಕುಳಿತು (ಪರಶು. ೬–೪). **೩.** ಮಿಂಚಬೇಕೆಂದು ಬಲು ಜ್ಯೋತಿಗಳನು ಹಚ್ಚಿ ವಂಚನೆಯಿಂದಲೆ ಪೂಜೆಯ ಮಾಡುವುದು (ಪುರಂದ. ೨–೨೫–೨) ; ತುಪ್ಪದ ದೀವಿಗೆ ಹಚ್ಚುವೆ ಸಂಕಟಕ ನೆಪ್ಪಿರಲೊ ದೇವ (ಕನ್ನಜಾ. ೧). **೫.** ಬಳಿ ; ಲೇಪಿಸು : ಹಚ್ಚಿದೆಣ್ಣೆ ಬಚ್ಚಲ ಪಾಲು (ಗಾದೆ). **೬.** ಆರಂಭಿಸು; ಮೊದಲುಮಾಡು; ಉಪಕ್ರಮಿಸು : ಈಹೊತ್ತು ನಿಮಗೆ ನಾಲ್ಕನೇ ಪುಸ್ತಕವನ್ನು ಹಚ್ಚುತ್ತೇವೆ (ಮುಂಬಯಿ. ೪–೧) ; ಮತ್ತೆ ನಿನ್ನ ರಗಳೆ ರಾಮಾಯಣ ಹಚ್ಚಬೇಡ (ರೂಢಿ). **೭.** (ಸಸಿಗಳನ್ನು) ಊರು ; ನೆಡು ; ನಾಟು : ಹಚ್ಚಿದ ವರ್ಷಕ್ಕೆ ಬಾಳೆ ಈಯುತ್ತದೆ (ಮುಂಬಯಿ. ೨–೪೬) ; ಗಾಳಿ ಹಚ್ಚಿದ ಬಳ್ಳಿಗಾರೇನು ನೀರೆರೆವರು ? (ಪಯಣ. ೨೩–೧೦). **೮.** ಪಟ್ಟಿಗೆ ಸೇರಿಸು; ನೋಂದಾಯಿಸು : ಅವರು ಈ ಸಮಾಜದ ಸದಸ್ಯರ ಪಟ್ಟಿಯಲ್ಲಿ ತಮ್ಮ ಹೆಸರನ್ನು ಹಚ್ಚಿದರು (ರೂಢಿ). [ದೇ.॥ ತುಳು. ಹಚ್ಚು ; ಗಡಬ. ಪರ್ಜ್]

**ಪಚ್ಚು$_4$** 'ಪರ್ಚು$_3$' ನೋ.

**ಪಚ್ಚು$_5$** (ನಾ). ಸೇರುವೆ; ಹೊಂದಿಕೆ : ಭವಸಂತಾಪವಿಲೋಪಮಂ ನಿಯಮದಿಂದಿಚ್ಛಿಪವಂ ನಿಚ್ಚಮುಂಚ್ಚವದಿಂ ತ್ವಚ್ಚರಣೋಚ್ಚಭಕ್ತಿರಮೆಯಂ ಪಚ್ಚಿಂ[ಪಾಠಾಂ. ಪರ್ಚಂ]ಚಿರಂ ನಚ್ಚಿ ಮಚ್ಚಿ ವಲಂ ವರ್ತಿಕೆ (ವರ್ಧಪು. ೧೬–೮೨). [<ಪಚ್ಚು$_3$]

**ಪಚ್ಚು$_6$** (ನಾ). (ಸುಕ್ಕಾಗಿ) ಒಳಸೇರುವಿಕೆ ; ಹಳ್ಳ ಬೀಳುವಿಕೆ: ಅವಳ ಗಲ್ಲಗಳು ಪಚ್ಚುಬಿದ್ದಿವೆ (ಕುರಿಹಿಂ. ೬೭) ; ಆ ಪಚ್ಚು ಬಡೆದ ಗಲ್ಲ, ಸಪ್ಪಗಾದ ಮೊಗ–ಸಾಕು, ಸಾಕು ! ರಮಾಬಾಯರೇ ಆ ರೂಪವನ್ನು ವರ್ಣಿಸಬೇಕು ! (ಸಮಜೀ. ೮). [< ಬಚ್ಚು$_2$]

**ಪಚ್ಚುಕುಡು** 'ಪಚ್ಚುಗೊಡು' ನೋ.

**ಪಚ್ಚುಕೊಡು** 'ಪಚ್ಚುಗೊಡು' ನೋ.

**ಪಚ್ಚುಕೊಳ್** 'ಪಚ್ಚುಗೊಳ್' ನೋ.

**ಪಚ್ಚುಗಂಟು**(ನಾ). ಎರಡು ಬೇರೆ ಬೇರೆಯ ಗಂಟು; ವಿಭಾಗಿಸಿದ ಗಂಟು : ಅಳಿನೀಳೋಜ್ವಳ ಸಹಸ್ರಕುಂತಳಂಗಳ್ ಪರಕಲಿಸಿ ಬಂದು ಪೊಜಿಮುಯ್ವನಳ್ಳಿಜಿಯೆ ಪಚ್ಚುಗಂಟಿಕ್ಕಿ ಗಾಂಡೀವಧನ್ವಂ ಸನ್ನದ್ಧನಾಗಿರ್ಪನ್ನೆಗಂ (ಪಂಪಭಾ. ೧೨–೨೦೨ ವ).

[ಪಚ್ಚು$_1$ (< ಪಸು$_1$)+ಗಂಟು]

**ಪಚ್ಚುಗುಡು** 'ಪಚ್ಚುಗೊಡು' ನೋ.

**ಪಚ್ಚುಗೂಟ**, ಪರ್ಚುಗೂಂಟ (ನಾ). (ಚಿತ್ರವನ್ನು ತೂಗುಹಾಕುವ) ದಸಿ,—ಗೂಟ : ವಕ್ರೋಕ್ತಿಯಿಂದೆನ್ನಂ ತೆಗಟ್ಟಿ ತನ್ನಂ ಪೊಗಟ್ವ ಚಿತ್ರಿಕೆಯ ಚೇತಶ್ಚಕೋರಮಂ ದರಸ್ಮಿತಚಂದ್ರಿಕೆಯಿನಲರ್ಚಿ ಮತ್ತೀಯೆಡೆಯೊಳಚ್ಚಜಿದಂತಣ್ಕೆಗೆಯ್ದ ಪಚ್ಚುಗೂಟ[ಪಾಠಾಂ. ಪರ್ಚುಗೂಂಟ]ಮಂ ಕಂಡು (ಧರ್ಮನಾ. ೩–೧೪೭ ವ). **ಪರ್ಚುಗೂಂಟ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ಪಚ್ಚು$_3$ + ಗೂಟ(<ಗೂಂಟ)]

**ಪಚ್ಚುಗೆ** (ನಾ). **೧.** ಮಂತ್ರಾಲೋಚನೆ ; ಏಕಾಂತದ ಮಾತು–ಕತೆ ; ಗುಪ್ತ ಸಲ್ಲಾಪ: 'ಪಚ್ಚುಗೆಗಾರ್ತಿ' ಪರಾ. **೨.** ವಿವಿಕ್ತವಾದ ಸ್ಥಾನ ; ಏಕಾಂತಸ್ಥಳ : (ಕ).

[ಪಚ್ಚು$_2$(<ಪರ್ಚು$_1$)+–ಗೆ]

**ಪಚ್ಚುಗೆಗಾರ್ತಿ** (ನಾ). ಏಕಾಂತದಲ್ಲಿ ಸಲಹೆ ಮಾಡುವವಳು : "ಪಚ್ಚುಗೆಗಾರ್ತಿ, ಮಂತಣಗಾರ್ತಿ–ಈ ೨ ಏಕಾಂತದವಳ್" (ಕಶಸಾ. ೬೨–೩೭೯). [ಪಚ್ಚುಗೆ +–ಕಾಱ+–ತಿ$_1$ (<–ಇತ್ತಿ)]

**ಪಚ್ಚುಗೊಡು,** ಪಚ್ಚುಕುಡು, ಪಚ್ಚುಕೊಡು, ಪಚ್ಚುಗುಡು, ಪರ್ಚುಗುಡು, ಪರ್ಚುಗೊಡು (ಕ್ರಿ). ಹಂಚಿ ಕೊಡು; ವಿಭಾಗ ಮಾಡಿ ನೀಡು ; ಪಾಲುಮಾಡಿ ಕೊಡು: ರತ್ನಕಂಬಳಂಗಳಂ ಕೊಂಡು . . . ಮೂವತ್ತಿರ್ವರ್ ಸೊಸೆವಿರ್ಕಳ್ಗೆ ಪಚ್ಚುಗೊಟ್ಟೊಡೆ (ಪದ್ಮಾರಾ. ೨೫-೨೮) ; ಮತ್ತಮಾ ವೃಷಭನಾಥನುಟಿದಪತ್ಯವರ್ಗಕ್ಕೆಲ್ಲವಿಳಾತಳ ವಿಭವಮಂ ಪಚ್ಚುಗೊ[ಪಾಠಾಂ. ಕೊ]ಟ್ಟು . . . ಸುದರ್ಶನವೆಂಬ ಶಿಬಿಕೆಯ ನೇಱಿದಾಗಳ್ (ಆದಿಪು. ೯-೭೨ ವ) ; ದಾಮೋದರಂ ಸಿಂಹೋದರಂಗಂ ವಜ್ರಕರ್ಣಂಗಂ . . . ನಾಡುಮಂ ಬೀಡುಮಂ ಪಚ್ಚುಗೊ[ಪಾಠಾಂ. ಕೊ, ಗು]ಟ್ಟು (ಪಂರಾಮಾ.೭-೮೦ ವ); ಪರಿವಿಡಿಯೊಳೆಡೆಗೊಂಡ ಪಂಕ್ತಿಗೆ ತೀರ್ಥಪ್ರಸಾದಂಗಳನೋರಣದಿಂ ಪಚ್ಚುಗೊಟ್ಟು ... ಪೊಱಮಟ್ಟಂ (ರಾಮಾಶ್ವ. ೭೭-೮). **ಪಚ್ಚುಕುಡು :** ಪರಿಜನಕ್ಕೆಡಱಾದೊಡೆ ಪೊರೆವುದುಂ ಪಡೆದುದಂ ಪಚ್ಚುಕುಡುವುದುಂ . . . ಮೊದಲಾಗಿ ಮತ್ತಮುತ್ತವು ಗುಣಂಗಳೊಳವು (ಪಂಚತಂ. ೨೧೪-೧). **ಪಚ್ಚುಕೊಡು :** ಆನವರ್ಗೆ ಪಟ್ಟಮಂ ಕಟ್ಟಿ ನೆಲನಂ ಪಚ್ಚುಕೊಡುವಾಗಳದ್ದಂ ಬರ್ಪ ಗಂಡರಂ ನೋಟಿಪ್ಪೆಂ (ಪಂಪಭಾ. ೪-೭ ವ) ; ಇತ್ತ ಆದಿದೇವಂ ಭರತ ಬಾಹುಬಲಿ ಗಳಂ . . . ಅಧಿರಾಜಯುವರಾಜರ್ಮಾಡಿ ನಿಱಿಸಿ ವೃಷಭಸೇನಾದಿಗಳ್ಗೆ ವಿಳಾತಳಮಂ ಪಚ್ಚುಕೊಟ್ಟು (ಚಾವುಂಪು. ೩೭). **ಪಚ್ಚುಗುಡು :** ತನಗಂ ಮನೆಗಂ ಕೆಳದಿಯಿಂದಮೆ ಪಚ್ಚುಗುಡಲೆವೇಟ್ಟು ತನಗೆ ನೀಡುವ ಪೂವಂ ತಂದಣ್ಣಂಗೆ ಕುಡಾಂ ಕೆಯ್ಯಾಸಿದೆನೆಂದಳಂ . . . ತೋಱ (ಶಾಂತಿಪು. ೮-೮೧ ವ) ; ಸರ್ವಘಾತಿದ್ರವ್ಯಮಂ ದೇಶಘಾತಿಗಂ ಪಚ್ಚುಗುಡುವುದು(ತತ್ತ್ವಪ್ರ. ೩೧೮); ಹರನುರಿಪಿದೊಡುರಿಪಮನೆಲ್ಲರ ಮೆಯ್ಗಂ ಪಚ್ಚುಗುಡುವವೋಲ್ ಪುಗುತಿರ್ಪಾ ಸ್ಮರನಂ ಪುಗಲೀತ್ತೊಡೆ ಮನಮುರಿವುದುಮಂಗಂಗಳುರಿವುದುಂ ವಿಸ್ಮಯಮೇ (ಲೀಲಾವ. ೪-೪೭) ; ರಾಯನುಮತಿ ಹರ್ಷದಿಂದಾ ವೃತ್ತಾಂತಮನಿತುಮನೆಕ್ಕಟಿಯುಸಿರ್ದು ಸಂತಸಮುಂ ಪಚ್ಚುಗುಡುವುದುಂ (ಚಕವಿ. ೩-೧೦೪). **ಪರ್ಚುಗುಡು :** ಮಿಕ್ಕಿರೆಯಿಂ ದಾಸಿಯರ್ಗೆ ಪರ್ಚುಗುಡ್ಡೆ (ರಾಮಾಶ್ವ. ೩೮-೧೯) ; ಭೃಂಗಾಯಿವರ್ಣಗಳನ್ನು ತೋಟಗನು ತಂದು ಕೊಡಲು, ಕೃಷ್ಣನು ರುಕ್ಮಿಣಿ-ಸತ್ಯಭಾಮೆಯರಿಗೂ ಮಿಕ್ಕ ರಾಣೀವಾಸದವರಿಗೂ ಪರ್ಚುಗುಡುವನು (ಕರ್ಣಾಜ. ೧೧೧). **ಪರ್ಚುಗೊಡು :** ತನ್ನ ಮಾಡಿದ ಪಿಶಿತ ಮನವರ್ಗೆಲ್ಲಂ ಪರ್ಚು[ಪಾಠಾಂ. ರ್ಚಿ, ಚ್ಚು]ಗೊಟ್ಟುಮಸಿಬರುಮೊಂದಾಗಿ ಪೋಪನ್ನೆಗಂ (ಪದ್ಮಾರಾ. ೧೯-೧೯) ; ತದ್ದೈತ್ಯಾಧಮಂ ನೀಳದಿಂ ಬಿರಿದಂ ಭೂತಗಣಕ್ಕಮುಂಡಜಗಣಕ್ಕಂ ಪರ್ಚುಗೊ[ಪಾಠಾಂ. ಚ್ಚುಕೊ]ಟ್ಟಂದದಿಂ (ಜಗವಿ. ೫-೪೭). [ಪಚ್ಚು$_1$(<ಪಸು$_1$)+ಕೊಡು$_1$]

**ಪಚ್ಚುಗೊಳ್,** ಪಚ್ಚುಕೊಳ್, ಪರ್ಚುಕೊಳ್, ಪರ್ಚುಗೊಳ್, ಹಚ್ಚುಕೊಳ್ (ಕ್ರಿ). ಹಂಚಿಕೊಳ್ಳು ; ಭಾಗ ಮಾಡಿಕೊಳ್ಳು : ಪ್ರತಿದಿನಕ್ಕೊಂದು ಮಲ್ಲಲ ಕೂಟುಮನೊಂದು ಮೊಗಪೆ ನೀರುಮಂ ನೆಲ ಮನೆಯೊಳಗಣ್ಗೆ ನೀಡಿದೊಡನಿಬರು ಪಚ್ಚು[ಪಾಠಾಂ.ರ್ಚು]ಗೊಂಡುಣ್ಬರ್ (ಪದ್ಮಾರಾ. ೧೮೨-೧೧) ; ಮೃಗನಯನೆಯ ಮನದ ಖೇದಮಂ ಪಚ್ಚುಗೊಳಲ್ ಬಗೆದಂತಾಕುಳಚಿತ್ತಂ ದೃಗಂಬುವಂ ತೊಡೆದು ಮೆಲ್ಲನಿಂತೆಂದಂ (ಚಂದ್ರಪು. ೩-೫೩) ; ನಯನ ತ್ರಿಭಾಗವಾಯ್ತಾದಿಯೊಳಚ್ಚರಿಯಿಂ ತ್ರಿವರ್ಗಮವು ಪಚ್ಚುಗೊಳಲ್ ಪ್ರಿಯದಿಂದಲ್ಲದೊಡಬಲೆಯ ನಯನವಿಭಾಗಕ್ಕೆ ಕಾರಣಂ ಪೆಱತುಂಟೇ (ನಳಚಂ. ೩೭೪). **ಪಚ್ಚುಕೊಳ್ :** ಜಕ್ಕವಕ್ಕಿಗಳ್ ಸುರತಮಕರಧ್ವಜನ ಸುಭದ್ರೆಯ ವಿರಹಪರಿತಾಪಮಂ ಪಚ್ಚುಕೊಂಡಸುಂಗೊಂಡಗಲೆ (ಪಂಪಭಾ. ೪-೪೮ ವ) ; ಅರ್ಧರಾತ್ರಿಯೊಳ್ ಧರ್ಮಬುದ್ಧಿ ದುರ್ಬುದ್ಧಿಯಪ್ಪ ದುಷ್ಟಬುದ್ಧಿಯಂ ಕರೆದು ಪೊನ್ನಂಪಚ್ಚು[ಪಾಠಾಂ.ರ್ಚು]ಕೊಳ್ವಮೆನೆ (ಪಂಚತಂ. ೧೭೦-೮). **ಪರ್ಚುಕೊಳ್:** ಮೇಲಿನ 'ಪಂಚತಂ.' ಪ್ರಯೋಗದ ಪಾಠಾಂತರವನ್ನು ನೋಡಿ. **ಪರ್ಚುಗೊಳ್ :** ಮದನಾತುರೆಯಪ್ಪೆನ್ನೀ ಹೃದಯದ ರಾಗವನೆ ಪರ್ಚುಗೊಂಡಂತಿರೆ ಕೆಂಪೊಧವಿದ ಪಡುವಣ ದೆಸೆಗೆಯ್ದಿದನರುಣ ರುಚಿಪ್ರಕಾಶನಪ್ಪ ದಿನೇಶಂ (ಕಾದಂಪೂ. ೮೦೮) ; ಸಮಭಾಗಂ ಬರೆ ಹಸ್ತಿ ವಾಜಿ ಸಹಿತಂ ಭಂಡಾರಮಂ ಪರ್ಚುಗೊಂಡು ಮಗಂಗರ್ಧಮನಿತ್ತು (ಅನಂಪು.೧೨-೩೦) ; ಎಂದಿನ ತೆಱನಲ್ಲದಿದೇನಿಂದೀ ವಲ್ಲಭೆಯ ವದನವನಜಂ ಕೊರಗಿತ್ತೆಂದುದನೆ ಪರ್ಚುಗೊಳ್ವಂದದಿನೇನರಸನಾನನಂ ಕೊರಗಿದುದೋ (ಪುಷ್ಪಪು. ೩-೬೫); ಕಾಂತೆಯ ಚಿಂತೆಯನಾ ವಿಭು ತಾಂ ಪರ್ಚುಗೊಂಡು ತಳೆದಿಂತೆಂದಂ (ರಾಜಶೇ. ೩-೭೦). **ಹಚ್ಚುಕೊಳ್ :** ಸಮಾನಭಾಗೆಯಲು ಹಚ್ಚುಕೊಂಡುಂಬರ ಮಂಗಳ ಮಹಾಶ್ರೀ (ಎಕ.VI,ಕಡೂರು. ೧೫೭-೭೫; 1191). [ಪಚ್ಚು$_1$(<ಪಸು$_1$)+ಕೊಳ್$_1$]

**ಪಚ್ಚುಡಿ** (ಕ್ರಿ). ಹಂಚಿಹೋಗು ; ಇಬ್ಭಾಗವಾಗು : ಒಡವುಟ್ಟಿದ ತಳದಳಿಸುವ ತುಡುಗೆಯ ದುಗುಲದ ನಮೇರುದಾಮಕದೊಳ್ ಪಚ್ಚುಡಿದುದು ಪರಾರ್ಥ್ಯಕೂಟದ ಬೆಡಂಗೊಡಂಬಟ್ಟುದಿರ್ವರಹಮಿಂದ್ರರೊಳಂ (ಶಾಂತಿಪು. ೯-೨೩೦). [ಪಚ್ಚು$_1$(<ಪಸು$_1$)+ಉಡಿ$_1$]

**ಪಚ್ಚುನುಡಿ$_1$** (ಕ್ರಿ). ಕಿವಿಮಾತನ್ನು ಹೇಳು ; ಪಿಸುಮಾತನ್ನು ಹೇಳು ; ರಹಸ್ಯವಾಗಿ ತಿಳಿಸು : ಅರಸಾ ನಿನ್ನ ಸುಹೃದ್ಭೂವರಜಯ ತರುಣಿಯವಗೆ ನಿಡುನಿದ್ದೆಯನೊದವಿಸಿ ಭರದಿಂ ಬರ್ಪೆನೆನುತುಮೆನ್ನಂ ನಿನ್ನೆಡೆಗಟ್ಟಿದಳೆನುತ ಪಿರಿದುಂ ಪಚ್ಚುನುಡಿವ ತೆಱದಿಂ ಜಯನರಪಾಲಕನಾ ಕರ್ಣಾಂತಂ ತೆಗೆದುರುಕೋದಂಡದ ನಾರಿ ಕರಂ ಕಣ್ಗೆಡ್ಡವಡೆದುದಾಗ (ಜಯಕಾ. ೭-೯). [ಪಚ್ಚು$_4$(<ಪರ್ಚು$_2$)+ನುಡಿ$_4$]

**ಪಚ್ಚುನುಡಿ$_2$** (ನಾ). ಪಿಸು ಮಾತು ; ಕಿವಿ ಮಾತು ; ಗುಟ್ಟಿನ ಮಾತು : ಬೆಚ್ಚದೆ ಕೊಲ್ವೆನೆಂದಾ ದಾದಿಯೊಳು ತಾನು ಪಚ್ಚುನುಡಿಯ ನಾಡಿದಳು (ಪ್ರಭಂಜ. ೨-೫೭). [ಪಚ್ಚು$_4$(<ಪರ್ಚು$_4$)+ನುಡಿ$_4$]

**ಪಚ್ಚುಮಳಲು** (ನಾ). ಸಣ್ಣ ಮರಳು ; ನುಣ್ಮರಳು : ಮೊಳಕಾಲುದ್ದದ, ಉಸುಬಿಗಿಂತ ಕೇಡಾಗಿರುವ ಪಚ್ಚುಮಳಲಿನ ಬಯಲಂತೆ, ಅಂತಹ ಮಳಲುನೆಲದಲ್ಲಿ ಆ ಹೇರನ್ನು ಒಂದು ಮಾರುದೂರ ಎಳೆದುಕೊಂಡು ಹೋದ ಎತ್ತಿಗೆ ಚಿನ್ನದ ಕೋಡಣಸು (ಬೆಳುಮು. ೧೭೬).
[ಪಚ್ಚು? + ಮಳಲು$_2$(<ಮಣಲ್)]

**ಪಚ್ಚುವರೆ** (ಕ್ರಿ). ಬಿಡಿ ಬಿಡಿಯಾಗಿ ಹರಡು: ಕೆದಱದ ಮುಡಿಕಟ್ಟು ಪಚ್ಚುವರೆದು[ಪಾಠಾಂ. ಪರ್ಚಿ ಪರೆದು]ಮುಚ್ಚಿ ಮುಸುಂಕಿ ಭಾಳತಳಮಂ (ಗಿರಿಕ. ೮-೭೭ ವ). [ಪಚ್ಚು$_1$(<ಪಸು$_1$) + ಪರೆ$_1$]

**ಪಚ್ಚೆ$_1$** 'ಪಸು$_3$' ನೋ.

**ಪಚ್ಚೆ$_2$** 'ಪಚ್ಚ$_2$' ನೋ.

**ಪಚ್ಚೆ$_3$** 'ಬಚ್ಚೆ$_1$' ನೋ.

**ಪಚ್ಚೆಕದಿರು** (ನಾ). = ಪಚ್ಚೆತೆನೆ; "ಒಂದು ಸುಗಂಧ ಸಸ್ಯ" (ಸಿರಿಕೋ). [ಪಚ್ಚೆ$_1$(<ಪಸು$_3$) + ಕದಿರು$_2$(<ಕದಿರ್$_1$)]

**ಪಚ್ಚೆಕರ್ಪುರ** 'ಪಚ್ಚೆಗಪ್ಪುರ' ನೋ.

**ಪಚ್ಚೆಕರ್ಪೂರ** (ನಾ). = ಪಚ್ಚಕರ್ಪೂರ : "ತುಷಾರಗೌರಃ—ಪಚ್ಚೆಕರ್ಪೂರ" (ಒಷಧಿ. ೭೧) ; ಚಾತುರ್ಥಿಕ ಜ್ವರಕ್ಕೆ :-ಪಾಷಾಣ ಹಣ ೧ ತೂಕ, ಕೋಷ್ಠ ಹಣ ೧ ತೂಕ, ಪಚ್ಚೆಕರ್ಪೂರ ಹಣ ೨ ತೂಕ ಇವಿಷ್ಟನ್ನೂ . . . ಮುದಕಣಿಕೆಯ ರಸದಲ್ಲಿ ಕೊಡುವುದು (ವೈವಿ. ೧೬೨).
[ಪಚ್ಚೆ$_1$(<ಪಸು$_3$) + ಕರ್ಪೂರ]

**ಪಚ್ಚೆಕಾಯಿ** 'ಪಚ್ಚೆಗಾಯ್' ನೋ.

**ಪಚ್ಚೆಗಂಬಿ** (ನಾ). ಕಲಾಬತ್ತಿನ ಹಸಿರಂಚು ; ಹಸಿರು ಬಣ್ಣದ ಕಂಬಿ : ಹಚ್ಚಡವ ಹೊದ್ದವ್ನೆ ಪಚ್ಚೆಗಂಬಿಯಾ ಪಾಗಾನೆ ಸುತ್ತವ್ನೆ (ಹುಟ್ಟಹ. ೨೪). [ಪಚ್ಚೆ$_1$(<ಪಸು$_3$) + ಕಂಬಿ$_1$]

**ಪಚ್ಚೆಗನ್ನವಚ್ಚ** (ನಾ). ಮರಕತದಿಂದ ಕೂಡಿದ ಕರ್ಣಾಭರಣ : ಎಳಗಲ್ಲದೋಳಿಟ್ಟ ದಿಟ್ಟಬೊಟ್ಟಂ ಕೆಳೆಗೊಂಡೊಪ್ಪುವ ಪಚ್ಚೆಗನ್ನವಚ್ಚಂ (ಚಿಕವಿ. ೩-೪೪). [ಪಚ್ಚೆ$_1$(<ಪಸು$_4$) + ಕನ್ನವಚ್ಚ]

**ಪಚ್ಚೆಗಪ್ಪುರ,** ಪಚ್ಚೆಕರ್ಪುರ (ನಾ). = ಪಚ್ಚಕರ್ಪೂರ: ಪಚ್ಚೆಗಪ್ಪುರ ಪನ್ನೀರು ಮೃಗನಾಭಿ ಮುಖ್ಯಲೇಪನದಿ ತಿಗುರನಿಕ್ಕಿದರಾಳಿಯರು (ವೆಂಕಟೇಹತ. ೨೩-೧೨). **ಪಚ್ಚೆಕರ್ಪುರ:** ಕಸದ ಕೊಟಿತೆಗೆ ಪಚ್ಚೆಕರ್ಪುರದ ರಜವನಂಬಿಲದ ಕೊಟಿತೆಗೆ ಸುಧೆಯನು ಹುಸಿಯ ಕೊಟಿತೆಗೆ ಸತ್ಯವನು ಕೊಟ್ಟು ಕೆಡಿಸುವಂತೆ (ಆಸಪು. ೨-೧೩೨) ; ಪಚ್ಚೆಕರ್ಪುರವಚ್ಚೆಗಳನು ತೊಡರ್ಚಿದಳು ತಂದೋರ್ವ ಸಖಿಯುದು ಕಿಚ್ಚು ಪತ್ತಿದ ತೆಬಿದುರಿಯೆ (ಸಾಳ್ವಭಾ. ೬-೨೦). [ಪಚ್ಚೆ$_1$(<ಪಸು$_4$) + ಕಪ್ಪುರ]

**ಪಚ್ಚೆಗಬ್ಬುನ** 'ಪಚ್ಚೆಗಬುರ್ನ' ನೋ.

**ಪಚ್ಚೆಗಬುರ್ನ,** ಪಚ್ಚೆಗಬ್ಬುನ (ನಾ). ಸಂಸ್ಕರಿಸದ ಕಬ್ಬಿಣ ; ಶುದ್ಧವಾಗದ ಕಬ್ಬಿಣ : ತತ್ತರುಣಿಯ ಬಟುವಟುಯುಂ ಪತ್ತಿ ಹಿತಾಹಿತವಿವೇಕವಿಕಲಂ ಪಟುಯಂ ಪೆತ್ತಾ ಮುನಿಪಂ ಭ್ರಾಮಕ ದತ್ತೆಳಸುವ ಪಚ್ಚೆಗಬುರ್ನ[ಪಾಠಾಂ. ಬ್ಬು]ನಕ್ಕೆಣೆಯಾದಂ (ಪಂರಾಮಾ. ೪-೮೩). **ಪಚ್ಚೆಗಬ್ಬುನ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಪಚ್ಚೆ$_1$(<ಪಸು$_4$) + ಕಬುರ್ನ(<ಕರ್ಬೊನ್)]

**ಪಚ್ಚೆಗಾಯ್,** ಪಚ್ಚೆಕಾಯಿ (ನಾ). ಹಸಿರು ಕಾಯಿ ; ಮಿಡಿಕಾಯಿ : ವೃಕ್ಷಜಾಲಮೆಲ್ಲಂ ತಳಿರ್ತನೆ ಪಚ್ಚೆಗಾಯ್ದೋರೆವಣ್ಗಳಂ ಪಡೆದುವಾಗ (ಸಮ್ಯಕೌ. ೭-೪). **ಪಚ್ಚೆಕಾಯಿ.**

**ಪಚ್ಚೆಕಾಯಿಗಿಡ** = ಒಂದು ಬಗೆಯ ಸಸ್ಯ : ಅಡಿಕೆಬಾಳೆ . . . ಪಚ್ಚೇಕಾಯಿ ಗಿಡ, ದೊಡ್ಡಮೆಕ್ಕೆ, ಹಾಲ್ಕೆಕ್ಕೆಬಳ್ಳಿ (ಸಸ್ಯನಿ. ४२).

[ಪಚ್ಚೆ$_1$(<ಪಸು$_4$) + ಕಾಯ್$_4$]

**ಪಚ್ಚೆಗಾಟಿ** 'ಪಚ್ಚಗಾಟಿ' ನೋ.

**ಪಚ್ಚೆಗುಪ್ಪಸ** (ನಾ). = ಪಚ್ಚಗುಪ್ಪಸ ೨ : ಮಿಱುಗುವ ಪೀಲಿಗಟ್ಟು ಪೊಸನಿಗ್ಗವದೊಳ್ಪಳೆ ಪಚ್ಚೆಗುಪ್ಪಸಂ ಕಿಱುದಳಿರಾಂತ ಚಲ್ಲಣಮದೇಂ ಬಗೆಗೊಂಡುದೊ ತತ್ಕಿರಾತರಾ (ಶಬಶಂ. ೩-೨೭).

[ಪಚ್ಚೆ$_1$(<ಪಸು$_4$) + ಕುಪ್ಪಸ]

**ಪಚ್ಚೆಗೆಂಪು** (ನಾ). ಒಂದು ಮಿಶ್ರ ಬಣ್ಣ ; ಹಳದಿ ಮತ್ತು ಕೆಂಪು : ಮಿಗೆ ಪಚ್ಚೆಗೆಂಪಲತೆಗೆಯು ಹುರುಡಿಪುದು ತೆಳುಗಲ್ಲವಾ ಸ್ವಯಂಪ್ರಭೆಗೆ (ವರ್ಧಚ. ೪-೮೦). [ಪಚ್ಚೆ$_1$(<ಪಸು$_4$) + ಕೆಂಪು$_1$]

**ಪಚ್ಚೆಗೊಂಡಲ** (ನಾ). ಮರಕತದಿಂದ ಮಾಡಿದ ತೊಂಡಿಲು(?) : ಅಲರೆಸೆವೆಳದಳಿರೆಲೆಯರಲೆಲೆ ಬಲ್ಮಿಡಿ ಮಿಸುಪ ಪಚ್ಚೆಗೊಂಡಲಮಳಿ ಕಜ್ಜಲ ತಿಲಕಮಾಗೆ ತೋರ್ಪುದು ಸಲೆ ಸೊಗಯಿಸಿ ಬಾಲನಂದದಿಂ ಮಾಕಂದಂ (ಕುಸುಮಾ. ೫-೩೬).

[P ಇದು 'ಪಚ್ಚೆದೊಂಡಲ' ಎಂಬುದರ ಅಪಲಿಖಿತವಿರಬಹುದು]

**ಪಚ್ಚೆಗೊಡೆ** (ನಾ). ಹಸಿರು ಬಣ್ಣದ ಕೊಡೆ : ಪೊದಟ್ದ ಪಚ್ಚೆಗೊಡೆಯೆಂಬಂತೆತ್ತಿ ಪಂಕೇಜಿನೀದಳಮಂ ಬಾಳಕರೇಣುವಂ ಬಯಿಕೆಯೊಳ್ ಕೊಂಡಾಡುತಿರ್ದತ್ತಿಭಂ (ಲೀಲಾವ. ೮-೪).

[ಪಚ್ಚೆ$_1$(<ಪಸು$_4$) + ಕೊಡೆ$_2$]

**ಪಚ್ಚೆತೆನೆ** 'ಪಚ್ಚೆಯ ತೆನೆ' ನೋ.

**ಪಚ್ಚೆತೈಲ** (ನಾ). ಕರ್ಪೂರದಿಂದ ತಯಾರಿಸಿದ ತೈಲ : ಪಚ್ಚೆತೈಲ ಹಾಕಿ ಮೂಟೆಯನ್ನು ಸೇರಿಸುವ ಯತ್ನದಲ್ಲಿ ಗಂಟೆಕಾಲ ಉಜ್ಜಿದ ಪಂಡಿತನ ಅಭಿಪ್ರಾಯ . . . ಒಂದು ಕಾಲೇ ವ್ಯರ್ಥವಾಗುವ ಸಂಭವವೇ ಕಾಣುತ್ತದೆ ಎಂದು (ದೇಪಹಂ. ೨೪೧). [ಪಚ್ಚೆ$_1$(<ಪಸು$_4$) + ತೈಲ$_1$]

**ಪಚ್ಚೆತೋರಣ** 'ಪಚ್ಚೆದೋರಣ' ನೋ.

**ಪಚ್ಚೆದೇವರು** (ನಾ). ಪಚ್ಚೆಯ ಬಣ್ಣದ ಮೈಯುಳ್ಳ ದೇವರು ; ವಿಷ್ಣು : ಹುಚ್ಚನೆಂದರು, ಲುಚ್ಚನೆಂದರು, ಮುಂಚ್ಚು ಮರೆಯುವನೆಂದರು. ಕಚ್ಚಿ ನುಡಿದರು, ಚುಚ್ಚಿ ನುಡಿದರು. ಪಚ್ಚೆದೇವರೆ ಬಲ್ಲನು (ಕಎಪು. ೨೦-೨೯). [ಪಚ್ಚೆ$_1$(<ಪಸು$_4$)) + ದೇವರು(<ದೇವರ್)]

**ಪಚ್ಚೆದೋರಣ,** ಪಚ್ಚೆತೋರಣ (ನಾ). ಹಸಿರಾದ ತೋರಣ ; ಹಸಿರುತೋರಣ : ಕಾಂಸ್ಯ ತೋರಣ, ತಳಿದೋರ್ಣರಣ, ಪಚ್ಚೆದೋರಣ, ಮಕರದೋರಣ (ಶಮದ. ೨೯೮ ಪ್ರಯೋ); ತಳಿದೋರ್ಣರಣಂ ಪಚ್ಚೆದೋರಣ ಕಾಂಸ್ಯಮಕರತೋರಣ (ಕಬ್ಬಿಕ್ಕೈ. ೯೬). **ಪಚ್ಚೆತೋರಣ :** ಎಲ್ಲೆಲ್ಲೂ ಪಚ್ಚೆತೋರಣಗಳು ರಾರಾಜಿಸುತ್ತಿದ್ದವು (ಗೂಢ).

[ಪಚ್ಚೆ$_1$(<ಪಸು$_4$) + ತೋರಣ]

**ಪಚ್ಚೆಪಡಿಮೆ** (ನಾ). ಹಸಿರುಬಣ್ಣದ ಪ್ರತಿಮೆ : ಯಾವ ಕಾವ್ಯಕೇನು ಕಡಿಮೆ, ರೈತನ ಈ ಹಸುರು ದುಡಿಮೆ, ಶಿಶುಪೈರಿನ ಪಚ್ಚೆಪಡಿಮೆ ? (ಕದಳೆ. ೬೮-೩). [ಪಚ್ಚೆ$_1$(<ಪಸು$_4$) + ಪಡಿಮೆ]

**ಪಚ್ಚೆಪಯಿರು** (ನಾ). ಹಸಿರಾದ ಬೆಳೆ : ಪಚ್ಚೆಪಯಿರಿನ ನಾಡ ಅಚ್ಚುಅಚ್ಚ ಒತ್ತಿದ ಮೈಯ ಸಿರಿಯೇ (ನಾದಲೀ. ೯-೩).

[ಪಚ್ಚೆ$_1$(<ಪಸು$_4$) + ಪಯಿರು(<ಪಯಿರ್)]

**ಪಚ್ಚೆಬಾಳೆ** (ನಾ). ಒಂದು ಬಗೆಯ ಬಾಳೆ ; ಹಸಿರು ಬಣ್ಣದ ಬಾಳೆ : ಪಚ್ಚೆಬಾಳೆ, ನಾಡಬಾಳೆ, ಮಧುರಂಗಬಾಳೆ ಮೊದಲಾದ ನಾನಾ ಜಾತಿಯ ಬಾಳೆಯ ಬನಗಳೂ ಅಲ್ಲಿ ಇದ್ದುವು (ಕರ್ಣಾಜ.೧೫೫).

[ಪಚ್ಚೆ$_1$(<ಪಸು$_4$) + ಬಾಳೆ$_1$(<ಬಾಟೆ)]

**ಪಚ್ಚೆಮಾಲೆ** (ನಾ). ಹಸಿರು ರತ್ನಗಳ ಮಾಲೆ ; ಮರಕತಮಣಿಮಾಲೆ : ಪಚ್ಚೆಮಾಲೆ, ಪೂಮಾಲೆ, ವನಮಾಲೆ (ಶಮದ. ೨೯೮ ಪ್ರಯೋ).

[ಪಚ್ಚೆ$_1$(<ಪಸು$_4$) + ಮಾಲೆ]

**ಪಚ್ಚೆಯ** 'ಪಾಚ್ಛಾ' ನೋ.

**ಪಚ್ಚೆಯತೆನೆ,** ಪಚ್ಚೆತೆನೆ, ಪಚ್ಚೇತೆನೆ (ನಾ). (ಹಸಿರು ಬಣ್ಣದ ಕದಿರಿನಿಂದ ಕೂಡಿದ) ಒಂದು ಬಗೆಯ ಸುಗಂಧ ಸಸ್ಯ ಮತ್ತು ಅದರ ತೆನೆ : ಬಲುಗಂಪು ಸೊಂಪು ಮಾಡಿದವೊಲು ಪಚ್ಚೆಯ ತೆನೆಗಳೊಪ್ಪಿದುವು(ಮಲ್ಲಕಾ. ೪-೪೧೬). **ಪಚ್ಚೆತೆನೆ:** ಬಿಳಿ ದಾಸವಾಳ ಪಚ್ಚೆತೆನೆ ಬನ್ನಿಪತ್ರಿ ಎಳೆಯ ಶ್ರೀಗಂಧದ ಪತ್ತುರಿ (ಸಿದ್ಧಪು.೧೮-೯೫). **ಪಚ್ಚೇತೆನೆ :** ಮರುಗ ಪಚ್ಚೇತೆನೆ (ಚೆಂಗೂಲಿ. ೫೩). [ಪಚ್ಚೆ$_1$(<ಪಸು$_4$) + ತೆನೆ$_1$]

**ಪಚ್ಚೆಯಱೆ** (ನಾ). ಮರಕತ ಶಿಲೆ : ಮುತ್ತಿನ ಮತ್ತವಾರಣ ಪುಷ್ಯರಾಗದ ಪುತ್ತಳಿ ಪಚ್ಚೆಯಱೆಗಳ ಉತ್ತಮವೇದಿಕೆ ರತ್ನದುಪ್ಪರಿಗೆ ಮೆಯ್ವೆತ್ತಿರೆ ಮೆಱೆದುದಾ ಭವನ (ಕುರಾಸಾಂ. ೩-೯೪).

[ಪಚ್ಚೆ$_1$(<ಪಸು$_4$) + ಅಱೆ$_4$]

**ಪಚ್ಚೆಲೆ** (ನಾ). ಹಸಿರು ಬಣ್ಣದ ಎಲೆ ; ಹಸಿರೆಲೆ : ಕೆಂದಳಿರ ತಳಮಿದೇಕೆಂದು ಹಸ್ತಾಗ್ರದೊಳ್ ಪಚ್ಚೆಲೆಯಂ ಕೊಂಡಿಟ್ಟು ಕಟ್ಟು ತೊತ್ತರೆದು ಸಿಡಿವಿನಂ ಕಯ್ಪುರಲ್ಪೊಂಗೆ ಮುಂಗೈ ಸುಲಿವನ್ನಂ ಕಾಮನೆಚ್ಚಂ ಪಡಲಿಡುವಿನೆಗಂ ಪೌರನಾರೀನಿಕಾಯಂ (ಅಧರ್ನೇ. ೪-೧೪೫) ; ತಾವರೆಯ ಪಚ್ಚೆ[ಪಾಠಾಂ.ಚ್ಚ]ಲೆಯಂ ಮೆಯ್ಯೊಳಾಂತು . . . ನೀರ್ವಣ್ಣಂತಿರ್ಪಳ್ (ಕಬ್ಬಿಕಾ. ೩೧೫) ; ಪಚ್ಚೋಲೆ, ಪಚ್ಚಡಕೆ, ಪಚ್ಚೆಲೆ (ಶಮದ. ೧೮೨ ಪ್ರಯೋ) ; ಹಾವಿನ ಹೆಡೆವಣಿದೊಡವು ಮುಡಿದ ಕಾಡ ಹೂವ ಮೆಯ್ದೊಗಲೆದಾನೆಸೊಕ್ಕು ಮಾವಿನ ಪಚ್ಚೆಲೆ ದುಪ್ಪಟಿಯುಡಿಗೆಯೊಳಾ ವನಚರಿಯರೊಪ್ಪಿದರು (ಶ್ರೀಪಾಲ.೭-೩೬) ; ಪಚ್ಚೆಲೆಯ ತರುವನೊಣಗಿದ ಮರದ ಪೊರೆಯ ಕಾಳ್ಗಿಚ್ಚು ಕೊಂಡುರಿವೊಲಾ ಜ್ವಾಲೆಯ ಮುಳಿಸಿನೊಡನೆ ಪಚ್ಚಿತಮರಾಪಗೆಯ ಕೋಪಂ (ಜೈಮಿಭಾ. ೯-೩೨).

[ಪಚ್ಚ$_1$(<ಪಸುರ್$_2$) + ಎಲೆ$_1$]

**ಪಚ್ಚೆಲೆದೊಂಗಲ್** (ನಾ). ಹಸಿರಾದ ಎಲೆಗಳ ಗುಚ್ಛ : ಪಿರಿದುಂ ಪಚ್ಚೆಲೆದೊಂ[ಪಾಠಾಂ. ಪಚ್ಚೆಲೊರ್ದಂ]ಗಲಂ ಪುಡುಕಿ ಸುಯ್ಯುತ್ತಿರ್ಕುವೋ ಮುಗ್ಧೆ ಮೈಗರೆದಾನಿರ್ದನೆಗೆತ್ತು . . . ಎನುತುಂ ಬಂದಾ ಶುಕಂ ಸೋಂಕಲೊಡನೆ (ಲೀಲಾವ. ೬-೯೬). [ಪಚ್ಚೆಲೆ+ತೊಂಗಲ್]

**ಪಚ್ಚೆವ** (ನಾ). (?) : ಕೈಮಣಿಗೊಂಡ ಪಟವನಂತೆ ಕುಕ್ಕುಱಿಸಿ ಪೊಕ್ಕು ಸಾರ್ವ ಪಚ್ಚೆವದ ಪದಪಿನೊಳಂ ಮೆಚ್ಚಿ ನೋಟ್ಪ ರಾಜರಾಜನ ಕಣ್ಗಳಂಗಣದೊಳ್ ಬೆಡಂಗು ಭಂಗಿವಡೆವಿನಮೇಱಿ ತೋಱಿ (ಅನಂಪು. ೨-೩೦ ವ). [?]

**ಪಚ್ಚೆವಟ್ಟು** (ನಾ). ಮರಕತದ ಬಟ್ಟು, — ಉಂಡೆ : ಕಾವಿಕ್ಕಿದಯಸ್ಕಾಂತದ ಪೂಪಂ ಚುಂಬಿಸುವ ಪಚ್ಚೆವಟ್ಟುಗಳವೊಲಿಂದೀವರದ ನಬಲೆ ಗೊಂಚಲ ಪೂವುಗಳಂ ಪೊಡೆಯೆ ಪತ್ತಿ ಮುತ್ತಿದುವಳಿಗಳ್(ಲೀಲಾವ. ೧೩-೭೫). [ಪಚ್ಚೆ$_1$ (< ಪಸು$_3$)+ಬಟ್ಟು$_2$ ?]

**ಪಚ್ಚೆವಡಿಗ** (ನಾ). ಮರಕತದಿಂದ ಮಾಡಿದ ಪೀಕದಾನಿ, — ಉಗುಳುಪಾತ್ರೆ : ಅಲರ್ದ ಮೊಗದಿಂದೆ ನಱುದಂಬುಲವುಂಗುಳ್ದಳ್ಳೆಳಿಪಚ್ಚೆವಡಿಗದೊಳೆಂಬಂತಲರ್ದಲರಿಂದುಗುತಂ ಕೀಳೆಲೆಯೊಳ್ಮಧುಮಿಶ್ರತದ್ರಜಂ ರಂಜಿಸುಗುಂ (ರಾಜಶೇ. ೨-೭೦).

[ಪಚ್ಚೆ$_1$(<ಪಸು$_3$) + ಪಡಿಗ]

**ಪಚ್ಚೆವಡಿಸು** 'ಪಚ್ಚವಡಿಸು' ನೋ.

**ಪಚ್ಚೆವಣ್ಣ** (ನಾ). ಹಸಿರು ಬಣ್ಣ : ಪಚ್ಚೆವಣ್ಣದ ಕಿಱುಗೆಯುಂ ನಿಱುಗೆವಿಡಿದುಡಿಸಿ (ಮದೇಪು. ೧೭-೬). [ಪಚ್ಚೆ$_1$ (< ಪಸು )+ಬಣ್ಣ]

**ಪಚ್ಚೆವರಲ್** (ನಾ). ಹಸಿರುರತ್ನ ; ಮರಕತಮಣಿ : ಅಮೃತಸಾರವಾರಿಯುಂ ಪಚ್ಚೆವರಲ ಕರಗಂಗಳೊಳ್ ತೀವಿ ತೆಂಬೆಲರ ಪೊಯ್ಲಿನಿಂ ತಣ್ಪುವಡೆಯಲೆಂದು ನೆಱಪಿದಂತಿರ್ದ ನೀರ್ಗಾಯ ತುಱುಗಲಿಂದೆಱಗಿದ ನಾಳಿಕೇರಭೂರುಹಂಗಳುಂ (ಚಂದ್ರಪು. ೧-೧೦೫ ವ) ; ವನಲಕ್ಷ್ಮಿ ನಿಜಾನುರಾಗದಿಂ ಕೊರಳ್ತೊಡವಿಂಗೆ ಸಮೆದಿರ್ದ ಪಚ್ಚೆವರಲ ಪದಕಗಳೆಂಬಂತೆ ಪಸುರ್ಗಾಯ ತುಱುಗಲಿಂ ಮೆಱೆವ ಕ್ರಮುಕವೃಂದಂಗಳಿಂ (ತ್ರಿಪುವಿ. ೭-೬ ವ) ; ಎಸೆವ ಮಿಡಿಗಳ ಪಚ್ಚೆವರಲ ಸೂಸಕಗಳಿಂದ . . . ಚರಿಪ ಮಱಿದುಂಬಿಗಳ ನೀಲಮಣಿಮಾಲೆಯಿಂದೆಸೆವ ಮಾಮರಂಗಳೆ ವಸಂತಂ ಸ್ಮರನ ಬರವಿಂಗೆ ಕೈಗೈದ ಗೂಡಾರಮೆನಲೆಸೆದುವು (ಚಿಬಪು. ೪೫-೨೦).

[ಪಚ್ಚೆ$_1$(<ಪಸು$_3$)+ಪರಲ್]

**ಪಚ್ಚೆವರಿಗೆ** (ನಾ). ಹಸಿರುರತ್ನದ ಗುರಾಣಿ ; ಮರಕತದ ಗುರಾಣಿ : ಅಸುರಕೋಲಾಹಳನ ದೈತ್ಯಮರ್ದನನ ದಾನವಾರಿಯ ರಕ್ಕಸಜಾಱನ ಪಚ್ಚೆವರಿಗೆಯ ಪಸದನದ[ಪಾಠಾಂ. ಪಚ್ಚೆಯ ಪರಿಗೆಯ ಪಸರದ] ಪಾರಿಯದೊಯ್ಯಾರದ ಕೆಂದಟ್ಟನ ಪಂತಿಯ . . . ಬಿರುದಿನ ಹರಿಗೆಕಾಱರ ಪರಿವೀಥಿಯೊಳಂ (೧೦ಕ. ೬-೫೪ ವ).

[ಪಚ್ಚೆ$_1$(<ಪಸು$_3$) + ಪರಿಗೆ$_3$[

**ಪಚ್ಚೆವಲಗೆ** (ನಾ). ಮರಕತವನ್ನು ಅಳವಡಿಸಿದ ಹಲಗೆ : ನೀಲಮಣಿಛತ್ತಿಗಳ ವಜ್ರದ ಸಾಲುಗಂಬದ ಪಚ್ಚೆವಲಗೆಯ ಮೇಲೆ ಮುತ್ತಿನ ಲೋವೆ ಹವಳದಿ ಕಡೆದ ಬೋದಿಗೆಯ ಸಾಲು ಮಣಿಮಂಟಪದಿ . . . ನಳನ ಚಿಂತೆಯ ತಾಳಿದಂಗನೆ ಸತಿಯರೊಡನಿರೆ ಕಂಡುದಾ ಪಕ್ಷಿ (ನಳಚ. ೨-೩೦). [ಪಚ್ಚೆ$_1$(<ಪಸು$_3$) + ಪಲಗೆ]

**ಪಚ್ಚೆವಾಕಲು** (ನಾ). ೧. ಬಳ್ಳಿಮನೆ; ಲತಾಮಂಟಪ. ೨. ಮಲ್ಲಿಗೆಯ ಬಳ್ಳಿ. ೧, ೨ : ಪಚ್ಚೆವಾಕಲುಯೆಂಬ ಶಬ್ದಂ=ತಳಿರಿಂ ಮಾಡಿದ ಮನೆಯಲ್ಲಿಯುಂ, ಮಲ್ಲಿಕಾಲತೆಯಲ್ಲಿಯುಂ (ಶಮದ.ಮ. ೩೧೨). 'ಪಚ್ಚವಾಗಲ್' ಪರಾ.

[ಪಚ್ಚೆ$_1$(<ಪಸು$_3$)+ಪಾಕಲು(<ಪಾಗಾರ)]

**ಪಚ್ಚೆವಿಲ್** (ನಾ). ಹಸಿರಾದ ಬಿಲ್ಲು; ಕಬ್ಬಿನ ಬಿಲ್ಲು: 'ಪಚ್ಚೆವಿಲ್ಲ' ಪರಾ.

ಪಚ್ಚೆವಿಲ್ಲಣ್ಣ = ಪಚ್ಚೆವಿಲ್ಲ : ಏನೇನು ಝುಂಝಾನಿಲ ಪಚ್ಚೆವಿಲ್ಲಣ್ಣನೇನಾದ ಹುಚ್ಚುಗೊಂಡಂತೆಮ್ಮ ಬಿಸುಟುಹೋದನೆ (ಭರಚ. ೫೨-೫೬).

[ಪಚ್ಚೆ$_1$(<ಪಸು$_3$)+ಬಿಲ್$_2$]

**ಪಚ್ಚೆವಿಲ್ಲ** (ನಾ). ಕಬ್ಬಿನ ಬಿಲ್ಲನ್ನು ಹೊಂದಿದವನು ; ಕಾಮ : ಇಚ್ಚೆಗಾರ್ತಿ ಪಚ್ಚೆವಿಲ್ಲರಿಂ ಮಚ್ಚುವಡೆದಚ್ಚರಿ ಮಿಗೆ ತಳರ್ದೊಚ್ಚೇರೆಗಣ್ಪೆರ್ಚಿನಚ್ಚರಿಯರಿಂ (ರಾಜಶೇ. ೧-೧೩೫ ವ) ; ಎಮ್ಮಶ್ವಪತಿಗೆ ಶತಪಚ್ಚೆವಿಲ್ಲಸಮಾನ ಪುತ್ರರಾಗಲಿ (ಲಕ್ಷ್ಮಭಾ. ೩-೩೧-೩೨) ; ನಿಮ್ಮಣುಗೆ ವಾರಿಜಾಕ್ಷಿಯು ವಿದರ್ಭೆಯನೀಗ ಪಚ್ಚೆವಿಲ್ಲಗೆ ಕೊಡಹೇಳಿರಲದ ಕೇಳಿ ಬೆಚ್ಚಿ ಕೋಪದಿ ಪೇಳ್ದನಿಂತು (ಕಂದಕೊ. ೧೯೩).

ಪಚ್ಚೆವಿಲ್ಲಾಗಮ=ಕಾಮಶಾಸ್ತ್ರ : ಪಚ್ಚೆವಿಲ್ಲಾಗಮದ ಪರಿವಿಡಿಯೊಳಿನಿಸುಳಿಯದಚ್ಚರಿಯ ಬೇರಿಯತುಲಾನಂದಗಳ ತೋರಿ (ಲಕ್ಷ್ಮಭಾ. ೧-೧೬-೭). [ಪಚ್ಚೆವಿಲ್+–ಅ$_7$]

**ಪಚ್ಚೆವೆಣ್** 'ಬಚ್ಚೆವೆಣ್' ನೋ.

**ಪಚ್ಚೆವೋಗು** (ಕ್ರಿ). ೧. ಮೈ ಹಸಿರುಗಟ್ಟು; ನಿಸ್ತೇಜವಾಗು : ಮುಂಚ್ಚೆಯಿಂ ಪಚ್ಚೆವೋದ ಕಿಱುದಮ್ಮನಂ ಬಂದಿಗೊಂಡಿರಕ್ಕುಂ (ರಾಮಾಶ್ವ. ೧೫೬-೨೮). ೨. (ಅಲಂ) ನಿರಾಶೆಹೊಂದು ; ಪ್ರತಿಫಲ ಪಡೆಯದೆ ಹೋಗು : ಮೆಚ್ಚಂ ನಚ್ಚಿ ಪಚ್ಚೆವೋದೆಂ. ಆಯ್ತು ನೋಟ್ಪೆಂ (ರಾಮಾಶ್ವ. ೧೪೮-೨೬). [ಪಚ್ಚೆ$_1$(<ಪಸು )+ಪೋಗು$_1$]

**ಪಚ್ಚೆಸಾರ** (ನಾ). ೧. ಶ್ರೇಷ್ಠವಾದ ಪಚ್ಚೆರತ್ನ ; ಉತ್ತಮವಾದ ಮರಕತಮಣಿ : ಓಳಿದೋರಣಮಾಯ್ತು ಹಾರದ ಪಚ್ಚೆಸಾರದ ಮಾಲೆ (ಪಂಪಭಾ. ೧೪-೧೫); ಪಂಚಶರ ಸಾರ್ವಭೌಮನ ಪಂಚರತ್ನದ ಸಂಚಯಕ್ಕೆ ಪಚ್ಚೆಸಾರದ ಕೇರಂ ಕಟ್ಟಿದಂತೆ ನಂದನಕ್ಕೆ ಬಾಟೀಲಿಯಾದ ಕೇದಗೆಯ ಬನದ ಬಳಸಿನೊಳಗೆ (ಅನಂಪು.೧-೯೦ ವ). ೨. (ಮರಕತಮಣಿಯಿಂದ ಮಾಡಿದ) ಒಂದು ಬಗೆಯ ಆಭರಣ (?) : ಪೊಸ ಮಾವಿನ ಮಿಡಿಯೊಳ್ ಪಚ್ಚೆಸಾರಮಂ ಮಾಡುವಱ್ತಿಯಿಂ ಪಕ್ತೊರ್ವಳ್ . . . ಮಿಡಿಯುಂ ಕೊಯ್ದಳ್ (ಆದಿಪು. ೧೧-೯೮) ; ಮಾಮಿಡಿಗಳಂ ತೆಗೆದು ಪಚ್ಚೆಸಾರಮನಿಕ್ಕಿ . . . ತೋರಮಲ್ಲಿಗೆಮುಗುಳ ಮೂಕುತಿಯ ನೊಸೆದಿಕ್ಕಿ (ಲೀಲಾವ. ೬-೧೧೪ ರಗಳೆ) ; ಕಾಂಚವಾರದ ಕಾಂಚಿಯುಮಂ ಪಸುರ್ಮಿಡಿಯ ಪಚ್ಚೆಸಾರಮುಮಂ ಚಂಪಕದ ಚಂಪಕಮಾಲೆಯುಮಂ . . . ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು (ಚಂದ್ರಪು. ೭-೧೧೪ ವ). [ಪಚ್ಚೆ$_1$(<ಪಸು$_3$)+ಸಾರ?]

**ಪಚ್ಚೆಹಕ್ಕಿ** (ನಾ). ಹಸಿರು ಬಣ್ಣದ ಒಂದು ಬಗೆಯ ಹಕ್ಕಿ : ಪಚ್ಚೆಹಕ್ಕಿಯು ಪಾರಿವಾಳವು ಹೆಬ್ಬನಾ ಗೌಜೀನ ಹಕ್ಕಿಯು . . . ಮೆರೆದವರಣ್ಯದಿ (ಗೋಹಾಡು. ೧೩).

[ಪಚ್ಚೆ$_1$(<ಪಸು$_3$) + ಹಕ್ಕಿ(<ಪಕ್ಕಿ)]

**ಪಚ್ಚೇತೆನೆ** 'ಪಚ್ಚೆಯ ತೆನೆ' ನೋ.

**ಪಚ್ಚೇರಿ** 'ಪಚ್ಚಾರಿ' ನೋ.

**ಪಚ್ಚೋಂತಿ,** ಪಚ್ಚೋತಿ, ಹಚ್ಚೊತ್ತಿ (ನಾ). (ಹಸಿರು ಬಣ್ಣದ) ಗೋಸುಂಬೆ; ಊಸರವಳ್ಳಿ : ಪಗರಣಿಗರಂತೆ ಪಚ್ಚೋಂತಿಯಂತೆ . . . ಜೀವಂಗಳ್ ಬಗೆದ ಬಣ್ಣಿಗೆಯಕ್ಕುಮೆಂದು ಪೇಟ್ವ ಸಂಸಾರಮುಮಂ (ಧರ್ಮಾಮೃ. ೧೪-೧೦೪). **ಪಚ್ಚೋತಿ :** ಪಚ್ಚೋತಿಯಂತೆ ಪಲವುಂ ಬಣ್ಣಮಾಗಿ (ಧರ್ಮಾಮೃ.೨-೧೦೫); ಪಚ್ಚೋಲೆ, ಪಚ್ಚೋತಿ(ಭಾಷಾಭೂ. ೧೩೮ ಉದಾ). **ಹಚ್ಚೊತ್ತಿ :** "ಕೃಕಲಾಸಃ-ಓತಿ, ಹಚ್ಚೊತ್ತಿ ?" (ಓಷಧಿ. ೩೮). [ಪಚ್ಚೆ$_1$(<ಪಸು$_3$)+ಓಂತಿ]

**ಪಚ್ಚೋತಿ** 'ಪಚ್ಚೋಂತಿ' ನೋ.

**ಪಚ್ಚೋಲೆ** (ನಾ). ೧. ಹಸಿರುಬಣ್ಣದ ಓಲೆಗರಿ. ೨. (ಮುತ್ತೈದೆಯರು) ಕಿವಿಗೆ ಆಭರಣದಂತೆ ಧರಿಸುವ ತಾಳೆಗರಿಯ ಸುರುಳಿ: ಸುಲಿವಲ್ ಸೋರ್ಮುಡಿ ತೆಳ್ವಸಿಱ್ ಪೆಱೆನೊಸಲ್ ಪೊಂಬಾಳೆ ಪಚ್ಚೋಲೆ . . . ಚೆಲ್ವಾಗಿರೆ ನಿಂದ ಬೇಡಿತಿಯರಂ ಕಂಡಂ ಮಹೀವಲ್ಲಭಂ (ಕಾವ್ಯಾವ. ೨೦೬); ಮಾಲೆಯುಂ ನೆಗಪಿ ಕನ್ನಡಿಯುಂ ಪಿಡಿದಚ್ಚ ಪಚ್ಚೋಲೆಯುಂ ತಳೆದು . . . ಮನೋಹರಮಪ್ಪಿನಂ ಸಾಲಭಂಜಿಕೆಗಳೇನೆಸೆದಿರ್ದುವೊ ಸುತ್ತಲುಂ (ಲೀಲಾವ. ೧೧-೬೯); ರಾಜೀವಲೋಚನಂ ಕ್ರೀಡಿಸಿದಂ ಪೀಲಿಯ ತಲೆಸುತ್ತಿನ ಪಚ್ಚೋಲೆಯ ಪೊಂಬಟ್ಟೆಯುಡೆಯ ಚೆಲ್ವೆಸೆವಿನೆಗಂ (ಜಗವಿ. ೪-೪೬); ತಳಿರ್ಗಳಂ ತಾನುಟ್ಟು ಪಚ್ಚೋಲೆ ದಾಳ್ದೊಡನಾಂತೊಳ್ಗಱಿಯಂಬುಮಂ ಬಿದಿರ ಬಿಲ್ಲಂ ಬೇಡವೆಣ್ಬೊಂದು ನಿಂದೆಡೆಯೊಳ್ನಿಲ್ವನನಂಗಂ (ರಾಜಶೇ. ೫-೧೧೨). 'ಬಿಚ್ಚೋಲೆ' ಪರಾ. ೩. ಮರಕತದ ಓಲೆ: ಪೊಸಚೀನಮನುಟ್ಟು ಬೆಡಂಗುವೆತ್ತ ಪಚ್ಚೋಲೆಯನಿಕ್ಕಿ ಕಣ್ಗೆವರೆ ರೂಪು ವಿಳಾಸಮುಳ್ಳಂಬವಾಗೆ . . . ಬಾಲಿಕೆ ಬಂದಳೊರ್ವಳ್ (ಧರ್ಮಾಮೃ. ೬-೧೬೬). [ಪಚ್ಚೆ$_1$(<ಪಸು$_3$)+ಓಲೆ]

**ಪಚ್ಚೋಲೆವಚ್ಚ** (ನಾ). = ಪಚ್ಚೋಲೆ ೨: ಪವಿತ್ರಮನಿಟ್ಟು ಪಚ್ಚೋಲೆವಚ್ಚದೊಳೊಡಂಬಡೆ ಬಂದು ವಿದಗ್ಧ ಭೂಪಾಲನಂದನನನಂದರು ಕಾಧರೆ ನೋಡಿದಳ್ (ಕಾವ್ಯಾವ. ೨೨೧). [ಪಚ್ಚೋಲೆ + ಪಚ್ಚ$_2$]

**ಪಚ್ಛನೂರ್** (ನಾ). ಒಂದು ಊರಿನ ಹೆಸರು: ವೆಳ್ಮಟ್ಟಿಕವಾಡ ಪಚ್ಛ(? ವ್ವ) ನೂರ್ ಗಜ್ಜವೂರ್ ಪುಲಿಗೆಱೆ ಗಣ್ಡವ ಗ್ರಾಮ (ಮಾ) ಇತಿ ಅಸ್ಯ ಭುಕ್ತಿ (ಕ್ರಿ 8) (ಇಆ. VIII, ೨೪೩-೧೮; 634).

[? + ಊರ್]

**ಪಛಳ** 'ಪಚ್ಚಳ$_2$' ನೋ.

**ಪಛಾಡಿಸು** (ಕ್ರಿ). ಹಿಂದಕ್ಕೆ ಹಾಕು; ಮಿಾರು (?): ಚೆನ್ನ ದಂಡೇಶ್ವರನ ಬಿರುದಿನ ಹನ್ನೆರಡು ಸಾವಿರ ವಜೀರರು ಎನ್ನ ಬಿಡು ತನ್ನ ಬಿಡು ಎಂದೆನುತಾಗ ಹೊಣಕೆಯಲಿ ಭಿನ್ನವಿಲ್ಲದೆ ಒಬ್ಬರೊಬ್ಬರು ಚೆನ್ನದಂಡೇಶನ ಪಛಾಡಿಸಿ ಇನ್ನು ಹೊಕ್ಕರದೇನ ಹೇಳುವೆನವರ ಕಾಳಗವ (ಶರಲೀ. ೫೫೧-೫); ವೀರ ಮಡಿವಾಳಯ್ಯ . . . ಬಿರುದಾಂಕಮಹಿಮರುದಾರ ಚೆನ್ನಣ್ಣನ ಪಛಾಡಿ[ಪಾಠಾಂ. ರ]ಸಿ ಘೋರನೆದ್ದರು ಕ್ರೂರ ಜೈನನ ಸಾರಬಲಕಿದಿರ (ಶರಲೀ. ೫೫೩-೧೨). 'ಪಚಾರಿಸು$_1$' ಪರಾ.

[ಪಛಾಡ$_0$ (P← ಮರಾ. ಪಛಾಡಣೇ = ಸೋಲಿಸು) + -ಇಸು$_3$]

**ಪಜೀತಿ** 'ಫಜೀತಿ' ನೋ.

**ಪಜ್ಜ, ಪಿಜ್ಜ, ಹಜ್ಜ** (ನಾ). ಅಜ್ಜಿಯ ಅಥವಾ ತಾತನ ತಂದೆ; ಮುತ್ತಜ್ಜ; ಪ್ರಪಿತಾಮಹ: ನ್ಯಾಯವಂತರ್ ಜಿತಾತ್ಮರ್ ಪ್ರಭುಗಳಧಿಕಪುಣ್ಯರ್ ಮುನ್ನೆ ನಿಮ್ಮಜ್ಜ ಪಜ್ಜರ್ (ಶಾಂತಿಪು. ೩-೬೬); ದಿವ್ಯಮಪ್ಪ ಸದ್ಧರ್ಮವೆ ಪಜ್ಜನುತ್ತಮದ ಧರ್ಮಮೆ ಭಾವಿಪೊಡಜ್ಜಂ (ಧರ್ಮಾಮೃ. ೧೩-೮೫); ಅಜ್ಜ ಪಜ್ಜರ ಪೆಂಪಿಂದಮೆ ಪಾಂಗುತಿರ್ದ್ದಪನೆ ತಾನ್ (ಕಇ. II, ೧೨-೩೦; 1114); ರಣೋರ್ವ್ವರೆಯೊಳಂತನಿತುಂ ತನಗಜ್ಜ ಪಜ್ಜರಿಂ ಪಡೆದ ನೆಲಂ ದಲ್ (ಎಕ. VII, ಶಿಕಾರಿ. ೧೯೬-೩೩; 1182 ?). **ಪಿಜ್ಜ**: ಊಟಕ್ಕೆ ನಮ್ಮ ಪಿಜ್ಜನ ಮನೆಯಿದೆಯೆಂದು ಹೇಳುತ್ತಾಳಲ್ಲ ಅಮ್ಮ (ಚಿಗುಕ. ೫೪); ನನ್ನ ಅಜ್ಜನೋ, ಪಿಜ್ಜನೋ, ಹಾದಿ ತಪ್ಪಿಯೋ ಇತ್ತ ಬಂದಿರಬೇಕು . . . ಅಜ್ಜ, ಪಿಜ್ಜ ಬಂದರು ಎನ್ನುವುದಕ್ಕಿಂತಲೂ ಪಿಜ್ಜನ ಪಿಜ್ಜ ಎಂದರೂ ಸಮನೇ (ಬಿಟ್ಟಜೀ. ೨೩). **ಹಜ್ಜ**: 'ಅಜ್ಜ ಹಜ್ಜ' ಪರಾ. [ದೇ.॥ ತುಳು. ಪಿಜ್ಜೆ]

**ಪಜ್ಜತಿ, ಪಡ್ಡಳಿ$_2$, ಪದ್ದಳಿ** (ನಾ). ೧. ಪದ್ಧತಿ; ಕ್ರಮ: ಸೆಜ್ಜೆವಳರ್ ಬಾಣಸಿಗರ್ . . . ಅಂಗರಕ್ಷಕರಾಗಿರ್ಪ್ಪಜ್ಜುಗಕಮರರ ಗಣಮನೆ ಪಜ್ಜತಿಯಿಂದಿರಿಸಿ ಶತಮುಖಂ ಕೃತಕೃತ್ಯಂ (ಪುಷ್ಪಪು. ೧೨-೫೬). **ಪಡ್ಡಳಿ$_2$**: ೨. [ಛಂದ] ಅಪಭ್ರಂಶಭಾಷೆಯ 'ಪದ್ಧತಿ' ಛಂದಸ್ಸಿಗೆ ಸದೃಶವಾದ ಛಂದಸ್ಸು ಮತ್ತು ಆ ಛಂದಸ್ಸಿನಲ್ಲಿ ರಚಿಸಿದ ರಗಳೆ; P ಇದು 'ಮಂದಾನಿಲರಗಳೆ'ಗೆ ಮೂಲವಾಗಿದ್ದಿರಬಹುದೆಂದು ತೋರುತ್ತದೆ: (ಪಜ್ಜ[ಡ್ಡ]ಳಿಯೆಂದರೆ ಒಂದು ದಂಡಕದ ಹಾಂಗೆ ಓದುವಣ) ಪಜ್ಜ[ಡ್ಡ]ಳಿ (ಜಟ್ಟಮ. ೮-೧೨). **ಪದ್ದಳಿ**: ೨. (ಪದ್ದಳಿ) [ಪಾಠಾಂ. ಪಡ್ಡಳಿ] (ಪಂಚತಂ. ೧೬೧-೧೬); ಪದ್ದಳಿ (ಸುಕುಮಾ. ೮-೬೬).

[<ಸಂ. ಪದ್ಧತಿ].

**ಪಜ್ಜಲ** (ನಾ). ಪಾದತೀರ್ಥ; ಪಾದೋದಕ: ಕ್ಷೇತ್ರಜ್ಞನ ಮುಂಗುಣಮಂತೊಳವೀರ್ಯೆದುಂ ಪಜ್ಜಲದೊಡನೆ ಈರ್ಯೆದೆಂಬೀ ದಾಯಂ ಬೀಳಲ್ಕೆ (ಉದ್ಭವದೇ. ೩-೧೦); ಶಿವನ ಪಜ್ಜಲಕೆ ಬಾಯ್ದೆಗೆದಂತೆ ಚಿನ್ನ ಬೆಳ್ಳಿಯ ಮಜ್ಜನದ ಪಾತ್ರೆಯ ನಿವಹದಿಂ . . . ಶಿವನ ಮಹದೈಶ್ವರ್ಯ ಬೆಳಸಿನ ಸ್ಥಾನಮೆನಲೊಪ್ಪಿಪ್ಪ ತದ್ಗೃಹದೊಳು (ಷತಿಲ. ೪-೬೪).

[< ಸಂ. ಪಾದಜಲ]

**ಪಜ್ಜಳ** (ನಾ). ಹೊಳಪು; ಪ್ರಕಾಶ; ಪ್ರಜ್ವಲತೆ: "ಪಜ್ಜಳಮೆಂದುಂ ಪ್ರಜ್ವಲಂ" (ಕಶಸಾ. ೫೬-೨೧೫); ಮಿಱುಪ ಮಣಿಕುಂಡಲಗಳ ಪಜ್ಜಳಕೆ ಪಕ್ಕಾಗಿ ಶ್ರುತಿಯುಗಮೊಪ್ಪುತಿರ್ದುದಾ ಶ್ರೀಪಾರ್ವತೀ ದೇವಿಯ (ನಂದಿಮಾ. ೯-೧೪); ನವರತ್ನಖಚಿತದ ಕಜ್ಜದಲುಗುವ ಕರ್ಣದೋಲೆಯ ಪಜ್ಜಳದಿ ಮಮಕಾರಮಂ ಪುಟ್ಟಿಸಿದರಾ ದ್ವಿಜಗೆ (ಕಾವೇಮ. ೩೫-೬೫); ಲೊಡ್ಡದ ಚೆಲ್ವ ಮುಳ್ಳುಗದ ಬಂದುಗೆ ಪಜ್ಜಳ ದಾಸಿವಾಣದಾ . . . ನವಲೋಹದ ಗುಂಡಿನ ಥಾಳಮಾಗಿ ತೋರ್ಪುದ್ದುದ ಜಾತರಂಗಮದೆ ಲೋಕದೊಳೆಣ್ದಿಟನೆಂದೆನಿಪ್ಪುದೈ (ಹಾಲಾಸ್ಯ. ೨-೧-೬೨).

[< ಸಂ. ಪ್ರಜ್ವಲ]

**ಪಜ್ಜಳಂಬೆಱು** (ಕ್ರಿ). ಉಜ್ವಲತೆಯನ್ನು ಪಡೆ; ಪ್ರಜ್ವಲವಾಗು: ಸಾತ್ವತಿಯೊಳ್ ಪಜ್ಜಳಂಬೆತ್ತು ಭಾರತಿಯೊಳ್ ಕಾಂತಿ ಕೆಯ್ಗಣ್ಮ ಆಸ್ಥಾನಮಂ ಕೌತುಕರಸದೊಳ್ ಕರುವಿಟ್ಟಂತಿರಿಸುವ ಸಾಮರ್ಥ್ಯಮನೊಳಕೊಂಡು ಕುಳ್ಳಿರ್ಪ ಗಮಕಿಗಳ ತಂಡದೊಳಂ (೧೦ಕ. ೨-೧೦೫ ವ).

[ಪಜ್ಜಳ + ಪೆಱು$_1$]

**ಪಜ್ಜಳಿಕೆ** (ನಾ). = ಪಜ್ಜಳ: ಆತನ ಬೆಳ್ಗೊಡೆಯ ಪಜ್ಜಳಿಸುವ ಪಜ್ಜಳಿಕೆಯೆ ತನ್ನೊಳಪೊಕ್ಕಂತೆ ಚಂದ್ರಮಂಡಲಕುಚ್ಚವಾಗೆ ಪಳಚ್ಚನಪ್ಪ ಬೆಳ್ದಿಂಗಳುಂ (ಆದಿಪು. ೧೧-೫ ವ); ತೊಳಪ ತನಿಗರ್ಪು ಕೇಶಾವಳಿಯೊಳೊತ್ತರಿಸಿ ಪೊಳೆವ ಪಜ್ಜಳಿಕೆ ಸಿಡುಗಣ್ಗಳೊಳ್ ಬಿತ್ತರಿಸಿ (ಕುಸುಮಾ. ೬-೧೩೩ ರಗಳೆ); ನುಡಿಯ ಬೆಳಗಿನಿಂ ತೊಡವಿನ ಪಜ್ಜಳಿಕೆಯಿಂ ಬಿಜಯಂಗೈದು ಬರ್ಪ ಮನ್ಮಥನ ಪೌಜಿನಂತೆ (ದಶಾವ. ೬-೪೮ ವ).

[ಪಜ್ಜಳ + -ಇಕೆ]

**ಪಜ್ಜಳಿಸು** (ಕ್ರಿ). ೧. ಹೊಳೆ; ಥಳಥಳಿಸು; ಪ್ರಜ್ವಲಿಸು; ಚೆನ್ನಾಗಿ ಕಾಣು; ಪ್ರಕಾಶಮಾನವಾಗು: ತೇಜಂ ಪಜ್ಜಳಿಸೆ ತಟತಟಿಸಿ ತೊಳತೊಳತೊಳಗಿದಂ . . . ದಿನಪಸುತಂ (ಪಂಪಭಾ. ೧೨-೨೧೦); ಬೆಳಗುವ ಸೊಡರೊಳ್ಪೊಡರಂ ಬೆಳಗಿ ಪಲಕೊರ್ಂಡು ಪೋಗೆಯುಂ ಕುಂದದೆ ಪಜ್ಜಳಿಸುವವೊಲ್ ಜಗಮೆಲ್ಲಂ ಕೊಳಲುಂ ತವದಿತ್ತು ಮೆಱೆವನಿಱುವ ಬೆಡಂಗಂ (ಗದಾಯು. ೧-೩೦); ತುಪ್ಪೇಱಿದ ದರ್ಪಣದೊಳ್ ಪಜ್ಜಳಿಸಲಾರ್ಪುದೇ ಪ್ರತಿಬಿಂಬಂ (ಯಶೋಚ. ೧-೬೬); ಆವನ ಪಜ್ಜಳಿಪ್ಪ ಜಸಮೆಣ್ದೆಸೆಯೊಳ್ ನೆಲಸಿರ್ಪುದಾತನೀಗಾವಗಮೆನ್ನ ಜಾಣ್ನುಡಿಗೆ ಮೆಯ್ಸಿರಿಯಂ ನನೆವಿಲ್ಲ ಬಲ್ಲಹಂ (ಕಬ್ಬಕಾ. ೧); ಕಣ್ಣಾಲಿಯಂ ಪಜ್ಜಳಿಸುವಂತೆ ಮಾಡು (ಸೌಂದಪು. ೧೪-೨೮). ೨. ಬೆಳಗಿಸು; ಪ್ರಸಿದ್ಧಿಗೆ ತರು: ನಿಜರುಚಿಯಿಂ ಪಜ್ಜಳಿಸಿ ದಿಗಂಬರಕುಲಮಂ

ಬೆಳಗಿದ ಯೋಗೀಂದ್ರ ದೇವಚಂದ್ರನೆ ವಂದ್ಯಂ (ಪುಷ್ಪಪು. ೧-೩೧). ೩. ಹೆಚ್ಚಾಗು ; ಅಧಿಕವಾಗು; ಅತಿಶಯವಾಗು : ಮಜ್ಜನನಾಸ್ಪದ ವಾಯುವೆ ತನುವೆನಗುಜ್ಜುಗಿಪ ಬ್ರಹ್ಮವೆ ಲಿಂಗಂ ಕೇಳ್ ಪಜ್ಜಳಿಪ ಸ್ಪರ್ಶನವೆ ಪದಾರ್ಥಂ ದಾನಾಮಲಕರದಿಂ (ಕ್ಷೇತ್ರಸು. ೧೮-೧೦೯) ; ಅಂತು ಚೇತೋನಿಕೇತನದೊಳ್ ಲಜ್ಜೆ ಪಜ್ಜಳಿಸೆ (ವರ್ಧಪು. ೨-೫೬ ವ) ; ವೇದವಿಜ್ಞನರ್ ಪಜ್ಜಳಿಪಚ್ಛ ಸಂತಸದೊಳೊಂದಿರೆ ಪಂಡಿತರುರ್ಕೆ . . . ಮಾಡಿದನಧ್ವರಮಂ ಮುನೀಶ್ವರಂ (ಉದ್ಭಟ. ೪-೫೮) ; ಲಜ್ಜೆ ಪಜ್ಜಳಿಸು ವನ್ನೆಗಮೊಪ್ಪಿರೆ ಸಾಕಿದೆನ್ನೊಳೀ ಜೋಡೆ ಕನಲ್ದು ಬಂದು ತಪವಂ ತಳೆವಳ್ ಗಡ (ದಶಕು. ೮-೧೫). ೪. ಶುದ್ಧಿಗೊಳಿಸು ; ನಿರ್ಮಲಗೊಳಿಸು : ಎಲ್ಲಾ ಸುತೀರ್ಥಂಗಳಿಗಧಿಕತೀರ್ಥಂ . . . ತಿಳಿಯೆ ಕ್ರಿಮಿಕೂಟಸ್ಥಳಂ ನಿರ್ಮಲದೆ ಶ್ರೇಷ್ಠತೆಯಾಗೆನಗೆ ಪಜ್ಜಳಿಪುದಗಜಾದೇವಿ ನಿಶ್ಚಯಮಿದನರಿವು ದೆಂದ (ಕಾವೇಮ. ೪೫-೧೫) ; ನಿರ್ಜರಾಲಯದಮೃತದಿಂ ನನಹಿ ಗೋಧಿ ಯಂ ಪಜ್ಜಳಿಸುತೊಣಗಿಸುತ ಕುಮ್ಮುತೊಡವುತ ಬೇಗ . . . ಮುದ್ದೆ ಗೈದು (ಲಿಂಗಪು. ೮-೧೭). [ಪಜ್ಜಳ+-ಇಸು$_3$]

**ಪಜ್ಜೆ**, ಪೆಜ್ಜೆ, ಹಜ್ಜೆ$_1$, ಹೆಜ್ಜೆ (ನಾ). ೧. ಪಾದವನ್ನು ಊರಿದ ಗುರುತು ; ಕಾಲಿನ ಗುರುತು; ಪಾದಚಿಹ್ನೆ : ಶಂಖಚಕ್ರಹಳಕುಳಿಶ ಲಾಂಛಿತವಾಗಿರ್ದಾಡಿವಜ್ಜೆಯಂ ನೋಡಿ ದುರ್ಯೋಧನನ ಪಜ್ಜೆಯಪ್ಪು ದೇನುಂ ತಪ್ಪಿಲ್ಲೆಂದು ಕಳಕಳನಿನಾದಂಗಳಿಂದಾರ್ದು (ಪಂಪಭಾ. ೧೩-೭೬ ವ) ; ಒರ್ವಳ್ ನೋಟಾಪ್ಪಾಡಂಬರದಡಿಯಿಟ್ಟು ಗವಾಕ್ಷಂಬರಮಲ ತೆಗೆಯ ಪಜ್ಜೆಯಂ ಪಸರಿಸಿದಳ್ (ಶಾಂತಿಪು. ೬-೭) ; ಬರೆದರೊ ಪತ್ರಮ ನೆಂಬಂತಿರೆ ಪಜ್ಜೆಗಳೆಸೆಯೆ ನಾಂದು ನೆತ್ತರೊಳೆತ್ತಂ . . . ತೋಱದಪುದು ಮೃಗಪತಿಮಾರ್ಗಂ (ಕಾದಂಪೂ. ೧೫೯) ; ಬಾಗಿಲೊಳ್ ನಿಂದು ಪುಲಿಯ ಪಜ್ಜೆಯುಮಂ ಸೊಪ್ಪಾದ ಬಿಲನುಮಂ ಕಂಡು (ಪಂಚತಂ. ೩೮-೫) ; ತೊಱೆಯನಿಳಿದು ರೋಧದಲಿ ಗೋವಿನ ಪಜ್ಜೆಯಲಿ ಬೀಳುವ ಮನುಜನಂತೆ (ಸಿಭಾಗ.೧೧-೮-೨೫). ೨. ಜಾಡು ; ಹಾದಿ ; ಮಾರ್ಗ: ಸಹದೇವನ ಪೋದ ಪಜ್ಜೆಯನೆ ಪೋಗಿ ಕೊಳದ ತಡಿಯೊಳ್ ಬಿಟ್ಟಿರ್ದ ತಮ್ಮನಂ ಕಂಡು (ಪಂಪಭಾ. ೮-೩೯ ವ) ; ಪಾವು ಪಾವಿನ ಪಜ್ಜೆಯನಱಿ ವಂತೆಮ್ಮಂದಿಗರ್ಗಲ್ಲದಾತನಭಿಪ್ರಾಯಮಂ ಪೆಱರ್ಗಱಿಯಲ್ ಬಾರದು (ಪಂಚತಂ. ೧೦೪-೧೭) ; ಅಭಿಮಾನದ ಪಜ್ಜೆಯನೇಂ ತಪ್ಪಿ ಮೆಟ್ಟಲ ಱಗುವೆ ತಕ್ಕಂ (ಪಂರಾಮಾ. ೬-೧೦೧). ೩. ಅಡಿ ; ಪಾದ : "ಪಜ್ಜೆ ಯೆನೆ ಹೆಜ್ಜೆಯಕ್ಕುಂ" (ಚತುನಿ.೧೫೨) ; ಪೊಸೆಯದೆ ಪಜ್ಜೆಗಳಂ ನಾಲ್ವೆಸೆ ಯೊಳವೆಂಟೆಂಟುದಿವಸಮಿರುಳುಂ ಪಗಲುಂ ಮಿಸುಕದೆ ನಿಲೆ ನಿಂದೆಸೆವಂ ಪಸರಿಸಿದರ್ ಲೋಕದೊಳ್ ಚತುರ್ಮುಖದೇವರ್ (ಸಮಪ. ೧-೧೬) ; ಎಡಬಲನನಾರೈವುತೊಡನೆ ಪಜ್ಜೆಗಳಿಡುತ (ವೆಂಕಾರಾ. ೫-೩-೨೩). ೪. ಗುರುತು ; ಚಿಹ್ನೆ ; ಸುಳಿವು ; ಕುರುಹು : ಸ್ತನದ ನಿತಂಬದ ಬಿಣ್ಪಂ ವನಜಭವಂ ತೂಗಿ ನೋಡೆ ನಡುವಂ ಪಿಡಿದಾತನ ಬೆರಲ ಪಜ್ಜೆ ಪತ್ತಿದುವೆನೆ ವಳಿಗಳ್ ಕಣ್ಗೆವಂದುವಾ ಕೋಮಳೆಯಾ (ಲೀಲಾವ. ೩-೩೩) ; ಬಾಯ್ಮುಡಿಯ ಪಜ್ಜೆಯನಾರೈವುತಿರ್ದು ತಾಪದೊಳ್ ಪೊರೆದುಱಿ ಸುಯ್ದು ಪೊಯ್ದು ಬಡವಟ್ಟರೆ (ಪುಣ್ಯಾಸ್ರ. ೬-೧೩).

**ಪೆಜ್ಜೆ** : ೧. ಉಡುಪವದನೆಯರುಯಾಯತವಾಗೆ ಮಿತ್ರೆಯಳನೊಡ ಗೂಡಿ ಮಣಿಮಯದ ಪಾವುಗೆಯ ಪೆಜ್ಜೆಯಿಂ . . . ರಾಜಿಸುತಿರೆ (ನವಮೋ. ೨೪-೬೦) ; ಕೆಲರ್ಗೆ ಮನದೊಡನೆ ಪೆಜ್ಜೆಯುಂ ಪೆಜ್ಜೆಗೆಟ್ಟುದು (ಅದ್ಭುತ. ೪೬-೧೩). **ಹಜ್ಜೆ$_1$** : ೧. ನಡೆದ ಹಜ್ಜೆಯಿಲ್ಲ ಸುಳಿದಡೆ ನೆಳಲಿಲ್ಲದೆ ಬೆಳಗೆ ಸ್ವರೂಪವಾಗಿ ಚರಿಸಾಡುತ್ತ (ಪದಗೋ. ೯೬) ; ನಡೆದಡೆ ನಡೆದ ಹಜ್ಜೆಯಂ ಸೋಂಕಿ ಹಿಗ್ಗುತ್ತೆ (ಬಹರ. ದೇ. ೩೩-೧೩) ; ಸಹಸಿ ಗನ ಹಾವುಗೆಯ ಹಜ್ಜೆಯಿವೆ (ಸಿದ್ಧರಾ. ೨-೩೫). ೨. ಆಹ ಎನ್ನೊಡೆ ಯರೊಲವಿಂ ನಡೆದ ಹೊಸ ಹಜ್ಜೆ (ಕಾರಿರ. ದೇ. ೨೯೩-೨೪) ; ಪದ್ಧತಿ- ಪಜ್ಜೆ, ಹಜ್ಜೆ (ಶಮದ. ೨೮೩ ಪ್ರಯೋ) ; ಹೋದ ಹಜ್ಜೆಯ ಹೊಲಬ ನಱಿಯರು ಕವಿರ್ಗಳು (ಸಿಭಾಗ. ೪-೮-೧೭). ೩. ತೆಗೆಯದಿರಿ ಕೊಂಡ ಹಜ್ಜೆಯ (ಚೆಬಪು. ೩೯-೫) ; ಹಿಂದಕ್ಕೆ ಹಜ್ಜೆಯ ತೆಗೆದವರಿಗೆ ಸ್ವರ್ಗ ವೆಂದೆಂದಿಗಿಲ್ಲ (ಕಂನವಿ. ೧೭-೩೧). ೪. ಗುಜ್ಜುವಡೆದ ಗುರುಕುಚ ವುಗುರ್ವೊಯ್ಗಳ ಹಜ್ಜೆ ಹೊಳೆವ ನಳಿತೋಳ್ . . . ಒಪ್ಪಿತು ರತ್ನಂತದ ಸತಿಗೆ (ಜಯಕಾ. ೧೪-೮೩). ೫. ನಡಗೆಯಲ್ಲಿ ಎರಡು ಹೆಜ್ಜೆಗಳ ನಡುವಿನ ಅಂತರ : ಕರ್ಣನ ತೆರಳಿಚಿದನೈನೂಱು ಹಜ್ಜೆಯಲಿಂದ್ರಸುತ ಸೂನು (ಕುಮ್ಯಾದ್ರೋ. ೬-೫೧) ; ಹೊಸಕೆರೆವಳಗೆರೆ ಭೂಮಿ ಮಾದ ಬೋಯನ ಅಡು ೧ಕ್ಕೆ ೩೨ ಹಜ್ಜೆ ಕೋಲಿನಲಿ ಸಲೆ ನಿಜಗೋಲು ೭೯೪ (ಎಕ.III, ತಿರುಮ. ೬೩-೧೩೫೩; 1748). ೬. (ಕಾಲಿನ)ಗತಿ ; ಚಲನೆ: ಸಂದ ಸುಭಟರು ಬನ್ನಿ ಸ್ವರ್ಗದ ಬಂದಿಕಾಱರು ಬನ್ನಿ ಮನದಿಂ ಮುಂದೆ ಹಜ್ಜೆಯ ತವಕಿಗರು ಬಹುದೆನ್ನ ಸಂಗಾತ (ಕುಮ್ಯಾಕ. ೮-೮೧). ೭. ಆಶ್ರಯ ; ನೆಲೆ : ಇಂದು ಮೊದಲಾಗಿಯುಗಲೆಂ ನಿನ್ನ ಹಜ್ಜೆಯಂ (ಕಣ್ಣರ. ದೇ. ೧೩೦-೧೭). ೮. ಮಲ್ಲಯುದ್ಧದ ವರಸೆಯಲ್ಲಿ ಹೆಜ್ಜೆ ಯಿಡುವ ಒಂದು ಕ್ರಮ,—ಬಗೆ : "ಕಳಾಸ ಚಾಳಿಯ ಮಂಡಿ ಸೀರ್ಣಂ ಹಜ್ಜೆಯಕ್ಕುಂ" (ಮಂಗರಾ. ೮೮-೩೮). **ಹೆಜ್ಜೆ** : ೧. ನೀರ ಮೇಲಣ ಹೆಜ್ಜೆಯನಾರು ಬಲ್ಲವರಿಲ್ಲ (ಪ್ರಭುವ. ೧೫೨) ; ಆತನು ನಿಂದಿರೆ ನೆಳಲಿಲ್ಲ ಸುಳಿದರೆ ಹೆಜ್ಜೆ ಇಲ್ಲ (ಶೂನ್ಯಸಂ. ೪೩-೩೧) ; ಬಂದ ಪಾರ್ಥಿವ ಜನದ ಹೆಜ್ಜೆಯ ಹಿಂದುಗೊಂಡೈತಂದು ಕಂಡನು ಮುಂದೆ ರಾಜಮರಾಳ ನಾದಾಂಬುಜಸರೋವರವ (ಕುವ್ಯಾಆ. ಓರಿಇ. ೪-೪೯). ೨. ಮೆಲ್ಲನೀ ತನು ಕವಿವ ಕತ್ತಲೆಯೊಳಗೆ ಹೆಜ್ಜೆಯ ಸವೆಸಲಱದಾ ಸಮಯದಲಿ ಹರಿ ತಂದಳಾ . . . ಘೋರರಕ್ಕಸಯುವತಿ ಲಂಕಿಣಿಯೆಂಬವಳು (ತೊರರಾ. ೫-೨-೭) ; ನೀ ಹೆಜ್ಜೆಯನು ಸಾಧಿಪಡೆ ಸಜ್ಜೆಯಲಿ ಶಿವನ ಧರಿಸಿಪ್ಪ ಶರಣರ ಹೆಜ್ಜೆಯಲಿ ನಡೆಯೊ (ಸರ್ವಜ್ಞ. ೨೮೬) ; ಕಳ್ಳನ ಹೆಜ್ಜೆ ಕಳ್ಳನೇ ಬಲ್ಲ (ಗಾದೆ). ೩. ಭಾಗ್ಯದ ಲಕ್ಷ್ಮೀ ಬಾರಮ್ಮ . . . ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ (ಪುರಂದ. ೧-೨೧೧-೧). ೯. ಕಾಲನ್ನು ಇಡುವಿಕೆ; ಪಾದನ್ಯಾಸ: ಉರವಣಿಸುವುದು ಕೊಂಡ ಹೆ[ಪಾಠಾಂ.ಹ]ಜ್ಜೆಗೆ ಮುರಿಯ ಲಾಗದು . . . ಹರಣದಲಿ ಕಕ್ಕುಲಿತೆ ಬೇಡ (ಕುವ್ಯಾದ್ರೋ.೧೫-೨೧). ೧೦. ಸಂಪ್ರದಾಯ ; ಪದ್ಧತಿ : ಹಿಂದಣ ಹೆ[ಪಾಠಾಂ.ಹ]ಜ್ಜೆಯ ನೋಡಿ ಕಂಡಲ್ಲದೆ ನಿಂದ ಹೆಜ್ಜೆಯನಱಿಯಬಾರದು (ಅವಚಂ. ೧೦೫-೪೭೫). ೧೧. [ನಾಟ್ಯ] ಒಂದು ನೃತ್ಯ ಪದ್ಧತಿ : 'ಹೆಜ್ಜೆ'ಯ 'ಮಜಲು' ಎದ್ದಿದೆ (ಗಂಗಾಗೌ. ೧೨೧). 'ಹೆಜ್ಜೆ ಕುಣಿತ' ಪರಾ.

**ಹಜ್ಜೆಹಜ್ಜೆ, ಹೆಜ್ಜೆಹೆಜ್ಜೆ** (ದ್ವಿರುಕ್ತಿ) : ನೂಪುರವಲುಗದಂತೆ ಹತ್ತೆ ಸಾರುವಳೊಮ್ಮೆ ಸೋಂಕಲೆಂತಹುದೆಂದು ಮತ್ತೆ ಮುರಿದಪಳೊಮ್ಮೆ ಹಜ್ಜೆ ಹಜ್ಜೆ[ಪಾಠಾಂ. ಹೆಜ್ಜೆ ಹೆಜ್ಜೆ]ಯ ಮೇಲೆ ಸಲ್ವಳಮ್ಮದೆ ನಿಲ್ವಳು(ಜೈಮಿಭಾ. ೩೦-೨೩) ; ಇಂತಱದು ರುದ್ರಾಕ್ಷಿಯ ಧರಿಸಿದ ಶಿವಮಹೇಶ್ವರನ ಹೆಜ್ಜೆ ಹೆಜ್ಜೆಂಗೆ ಅಶ್ವಮೇಧದ ಫಲ ತಪ್ಪದಯ್ಯ(ಆದವ.೧೮-೪೫) ; ತೆಗೆದು ದಾರಿಗೆ ಹೆಜ್ಜೆ ಹೆಜ್ಜೆಗೆ ಚಿಗುರುದೋಱದ ತಳಿರ ತಱತಱದಗಲದಲಿ ಪಸರಿಸುತ . . . ಜನಕನ ಮಗಳ ನಡೆಸುತ ತಂದರೊಂದು ಮಹಾಸರೋವರಕೆ (ತೊರರಾ. ೨-೪-೧೯) ; ವೇಮನನ ಹಾಗೆ ಹೆಜ್ಜೆಹೆಜ್ಜೆಗೂ ಬ್ರಹ್ಮನನ್ನು ಬೈಯದೆ ನಮಗೆ ತಿಳಿಯದ ವಿಷಯಗಳನ್ನು ಚಿಂತಿಸಿ . . . ಅವಸ್ಥೆ ಪಡುವುದಕ್ಕಿಂತ ಶಿವ ತೋರಿದಂತಿಹುದೇ ಲೇಸು (ಸಾಹಿಜೀ. ೧೦೩). **ಹಜ್ಜೆಯಾಗು** = ಹೆಜ್ಜೆಯಿಡು : ನದಿ ಸರಸಿಗಳ . . . ತಡಿಯುಲ್ ಹಜ್ಜೆಯಾದುದು ಹಗಲು (ಕುವ್ಯಾಆ. ೫-೫). **ಹೆಜ್ಜೆಯ ಕುಣಿತ** = ಒಂದು ಬಗೆಯ ನೃತ್ಯ ; ಹೆಜ್ಜೆಕುಣಿತ : ಗುಡಿಯ ಪಟಾಂಗಣ

ಹಳ್ಳಿಯ ಯುವತಿಯರ ತಂಡವು ನೆರೆದು, ಹೆಜ್ಜೆಯ ಕುಣಿತವನ್ನು . . . ನೋಡುತ್ತಿತ್ತು (ಜೀವರಂ. ೨೨).

[<ಪ್ರಾ. ಪಜ್ಜಾ./ಸಂ. ಪದ್ಯಾ]

**ಪಜ್ಜೆಕಾಱ** (ನಾ). ಹೆಜ್ಜೆಯ ಗುರುತನ್ನು ಕಂಡುಹಿಡಿಯುವವನು,–ಜಾಡು ಹಿಡಿಯುವವನು; ಬೇಹುಗಾರ: ತನ್ನ ಪಜ್ಜೆಯಂ ಪಜ್ಜೆಕಾಱರಱಿಯದಂತು ವಸುದೇವಕುಮಾರಂ ಪಾಯ್ದು ಪೋದಂ (ಅರ್ಥನೀ. ೫-೪೧ ವ). [ಪಜ್ಜೆ + –ಕಾಱ]

**ಪಜ್ಜೆಗೆಜ್ಜೆ** (ನಾ). ಕಾಲಿಗೆ ಕಟ್ಟಿಕೊಳ್ಳುವ ಗೆಜ್ಜೆ : ಬಂದಳಾ ವಿಯಚ್ಚರಯೋಷೆ, ಪಜ್ಜೆಗೆಜ್ಜೆಗಳುಲಿಯ ಬಿಂಕಂ ಬಲೆಯ ಬೀಸೆ (ಶ್ರೀರಾಮಾ. ೨೧೫-೩೦೩). [ಪಜ್ಜೆ + ಗೆಜ್ಜೆ$_1$]

**ಪಜ್ಜೆಗೆಡು,** ಪೆಜ್ಜೆಗೆಡು (ಕ್ರಿ). ಮುಂದೆ ನಡೆಯಲಾರದಿರು ; ಸ್ಥಗಿತಗೊಳ್ಳು : ರಾಘವಾವರಜಂ ತಾಂ ಕೈಸೋಲ್ವುದುಂ, ಪಡೆ ಬಡವಪ್ಪುದುಂ, ಮಿಡುಕಿನ ಬೆಂಬಲಂ ಪಜ್ಜೆಗೆಟ್ಟು ಬೆಂಗುಡುವುದುಂ (ರಾಮಾಶ್ವ. ೧೩೨-೭೯). **ಪೆಜ್ಜೆಗೆಡು:** ಕೆಲರ್ಗೆ ಮನದೊಡನೆ ಪೆಜ್ಜೆಯುಂ ಪೆಜ್ಜೆಗೆಟ್ಟುದು (ಅದ್ಭುತ. ೪೬-೧೩). [ಪಜ್ಜೆ + ಕೆಡು$_1$]

**ಪಜ್ಜೆದೋಱು** (ಕ್ರಿ). ಕುರುಹು ತೋರು,—ಮೂಡು: ಕಾಂತನೆಡೆಗೆ ನಸುಲಜ್ಜೆ ಮಂದಸ್ಮಿತಂ ಕಿಱುಬೆಮರ್ಕಾತುರಂ ಪಜ್ಜೆ ದೋಱಲ್ಕೊಗದೊಳ್ಕೈತಂದು ಸಾರ್ದರ್ಳೊಯ್ಯನೆ ಮತ್ತಗಜಗಾಮಿನಿ (ಜೈಮಿಭಾ. ೧೮-೩೦). [ಪಜ್ಜೆ + ತೋಱು]

**ಪಜ್ಜೆಯಿಡು,** ಹಜ್ಜೆಯಿಡು, ಹೆಜ್ಜೆಯಿಡು(ಕ್ರಿ). ೧. ಅಡಿಯಿಡು; ನಡೆ: ಪಜ್ಜೆಯಿಡಲಾ ನಮ್ಮ ಮುಂದಕ್ಕೆ (ಮದೇವು. ೭-೬೩). ೨. ಪ್ರವರ್ತಿಸು ; ತೊಡಗು ; ಉದ್ಯೋಗಿಸು : ಕಜ್ಜ ಕೈಗೂಡುವನ್ನಬರ ನಾನಾಪರಿಯುಜ್ಜುಗದೊಳು ಬಲ್ಲವರು ಪಜ್ಜೆಯಿಡುವರು (ಕುರಾಸಾಂ. ೨೬-೫೪) ; ಮತ್ತಮಾ ನಾರದಂ ನಾರಾಯಣನಾಜ್ಞೆಯಂ ಶಿರದೊಳಾಂತು . . . ಜತನದಿಂ ಬಿಜ್ಜೆಯೊಳ್ ಪಜ್ಜೆಯಿಡುತಿರ್ದಂ (ಅದ್ಭುತ. ೨೭-೪). **ಹಜ್ಜೆಯಿಡು :** ೧. ಹೊನ್ನ ಹಾವುಗೆವೆರಸಿ ಜಗದೇಕಪರಮಸೌಂದರಿ ಹಜ್ಜೆಯಿಡಲು ಹೊವ್ಮಿಗ ಹೋದ ಬಟ್ಟೆಯಂತಾಯ್ತು (ಮೋಹತ. ೨೪-೩೬). ೨. ಆ ಹಿಂದಿನ ಪಾಪವೇ ಇಂದು ಲಜ್ಜೆಯಾಗಿ ಹಜ್ಜೆಯಿಟ್ಟಿದೆ (ನಾಡೋಜ. ೧೨). **ಹೆಜ್ಜೆಯಿಡು :** ೧. ಗೆಜ್ಜೆಗಳು ಘಲಘಲೆನೆ ಮೆಲ್ಲನೆ ಹೆ[ಪಾಠಾಂ. ಪ]ಜ್ಜೆಯಿಡೆ . . . ನಾಚ್ಚಿ ಹೊಂಗುತೆ ಬಂದು (ಸಾಳ್ವಭಾ. ೩-೧೪). ೨. ಇಂಥ ಪಕ್ಷಿವಸ್ತು . . . ದುರಭ್ಯಾಸಗಳ ಕಡೆ ಹೆಜ್ಜೆಯಿಡುವಂತೆ ಮಾಡುತ್ತದೆ (ಶಿಕ್ಷಣ. ೧೩೦). [ಪಜ್ಜೆ + ಇಡು$_1$]

**ಪಜ್ಜೆವಟ್ಟೆ** (ನಾ). ಹೆಜ್ಜೆಯ ಜಾಡು ; ಕಾಲುದಾರಿ : ಪೊಡವಿಗೀಱದು ಪಜ್ಜೆವಟ್ಟೆಯೊಳಿರ್ವರು . . . ತಡವಮಾಡದನುರಾಗದಿಂದ ನಡೆತಂದು (ಶ್ರೀಪಾಲ. ೭-೧೪೭) ; ಅಂತೆಯೆ ಇಳಾತ್ಮಜೆ ಇನಕುಲಾತ್ಮಜನ ಅಡಿಯ ಪಜ್ಜೆವಟ್ಟೆಯ ನಡೆಯೆ (ಶ್ರೀರಾಮಾ. ೧೮೪-೩೩೧). [ಪಜ್ಜೆ + ಬಟ್ಟೆ$_1$]

**ಪಜ್ಜೆವಟ್ಟು** (ನಾ). = ಪಜ್ಜೆವಟ್ಟೆ : ಇದೆ ಮರೆ ಹಿಕ್ಕೆಯಿಕ್ಕಿದೆಡೆ ಪುಲ್ಲೆಯ ಬಾಯ ಕಱುಂಕೆ ಸೂಸಿದತ್ತಿದೆ . . . ಎನುತ್ತೆ ಪೆರ್ಚಿದ ವನದಲ್ಲಿ ಪಜ್ಜೆವಟ್ಟಯಿಂ ನಡೆಗೊಂಡುದು ಭಿಲ್ಲಸಂಕುಳಂ (ದಶಕು. ೨-೧೧೦). [ಪಜ್ಜೆ + ಬಟ್ಟು$_3$]

**ಪಜ್ಜೆವಿಡಿ,** ಹಜ್ಜೆವಿಡಿ, ಹೆಜ್ಜೆವಿಡಿ (ಕ್ರಿ). ೧. ಹೆಜ್ಜೆಯ ಜಾಡನ್ನು ಅನುಸರಿಸು ; ಹೆಜ್ಜೆಯ ಗುರುತು ಹಿಡಿದು ಹಿಂಬಾಲಿಸು : ಅಚ್ಛೋದಸರೋವರದ ತೀರದೊಳಿಂದ್ರಾಯುಧದ ಪಜ್ಜೆವಿಡಿದು ಬಂದು ಬಟ್ಟಿರ್ದ ನಿಜಸ್ಕಂಧಾವಾರಮಂ ಕಂಡು (ಕಾದಂಉ. ೧೪೨) ; ಪಜ್ಜೆವಿಡಿದು ನಡೆದು ರಾಮುಲಕ್ಷ್ಮಣರಂ ಕಂಡು (ಪಂರಾಮಾ. ೯-೩೩ ವ) ; ಖಡ್ಗಧೇನುಗಳ ತೊರೆದ ಪೊಲೆಯಿಂದಂ ಬಱಿವಿಡಿದು ಸುರಿವ ಪಾಲ್ಗೆ ಪಜ್ಜೆವಿಡಿದು ಪರಿವರಣ್ಯಮಾರ್ಜಾರಪೋತಕಂಗಳುಂ (ಚಂದ್ರಪು. ೫-೬೫ ವ); ಮಿಱುಪಾಱುವ ಪಱಿಮೆಗಳ ಪಜ್ಜೆವಿಡಿದಱಿಸಿ . . . ಮೊರೆವ ಮಧುಕರಪ್ರಕರದಿಂ (೧೦೫. ೧-೭೧ ವ) ; ನಡೆ ಪ[ಪಾಠಾಂ. ಪೆ]ಜ್ಜೆವಿಡಿ ಪೋಗು . . . ಎಂಬ ನುಡಿಗಳಡಿಗಡಿಗೆ ಕಿವಿಗಿಡಿದುದು (ಜೈಮಿಭಾ. ೨೮-೪೫). **ಹಜ್ಜೆವಿಡಿ :** ೨. ಸುಳಿವನ್ನು ಕಾಣು : ಕಳವಂ ಕೊಂಡವನೆಯ್ದೆ ಹ[ಪಾಠಾಂ. ಹೆ]ಜ್ಜೆವಿಡಿದಾ ಮರ್ಮಂಗಳಂ ಕಾಣದೇ . . . ಪಱಿವನ್ನಾಯುವ ನೋಡದನ್ನರೊಳೆ ದೂಱಿಟ್ಟೆಲ್ಲರಂ ಬಾಧಿಪಾ ತಳವಾಱಂ ಬೆಳವಾರನ್ನೆ (ಸೋಮೇಶ. ೬೬). **ಹೆಜ್ಜೆವಿಡಿ :** ೧. ಸಂಗ್ರಾಮಧೀರನ ಹೆಜ್ಜೆವಿಡಿದು ಮಹೀಮನೋಹರನಱಿಸಿ ಹೊಕ್ಕನು ಘೋರಕಾನನವ (ಕುವ್ಯಾಅ. ೧೩-೩೭).

[ಪಜ್ಜೆ + ಪಿಡಿ$_1$]

**ಪಜ್ಜೆಹಾಕು,** ಹಜ್ಜೆಹಾಕು, ಹೆಜ್ಜೆಹಾಕು (ಕ್ರಿ). ೧. ನಡೆ ; ಸಾಗು : ಅರಮನೆಯ ಚೋರರುಂ ಪೊಕ್ಕು ಚಾಮಿಕರನವರತ್ನಭೂಷಣವ ಕದ್ದು . . . ಅಯಯ್ಯನಿರುವಾಶ್ರಮಕೆ ಪಜ್ಜೆಹಾಕಿ ತಾವುಂ ತಳರಲು (ಪ್ರಭುಪು. ೯-೧೯). **ಹಜ್ಜೆಹಾಕು :** ೧. ಅವಳು ಭಾರವಾದ ಎದೆಯಿಂದ ಮನೆಯೊಳಗೆ ಹಜ್ಜೆಹಾಕಿದಳು (ಹಾಪುತ್ತ. ೬೩). **ಹೆಜ್ಜೆಹಾಕು :** ೧. ಮೂರ್ತಿ . . . ಸವಿಾಪದ ಬಸ್‌ತಾಣದ ಕಡೆಗೆ ಹೆಜ್ಜೆ ಹಾಕಿದ (ವಾತ್ಸಲ್ಯ. ೨೦೭) ; ಅವನ ಮಾತನ್ನು ಕೇಳಹೋಗದೆ ರಭಸದಿಂದ ಹೆಜ್ಜೆಹಾಕತೊಡಗಿದಳು (ಕುಸುಸಂ. ೧೧೦). ೨. (ಆಲಂ) ತಾಳಕ್ಕೆ ಸರಿಯಾಗಿ ಕಾಲುಹಾಕು,—ಕುಣಿ.

[ಪಜ್ಜೆ + ಹಾಕು(<ಪಾಯ್ಕು$_1$)]

**ಪಜ್ಝಟಿಕೆ** (ನಾ). [ಛಂದ] ಮಾತ್ರಾಗಣಬದ್ಧವಾದ ನಾಲ್ಕು ಚರಣಗಳುಳ್ಳ ಒಂದು ಸಮಪಾದವೃತ್ತ : ಪಜ್ಝಟಿಕೆಯು ಸಂಸ್ಕೃತವೃತ್ತಗಳಿಂದ ಭಿನ್ನವಾದ ಪ್ರಾಕೃತ ಮಾತ್ರಾಬಂಧ . . . ಕನ್ನಡದಲ್ಲಿ ಮಂದಾನಿಲವೆಂದು ಹೆಸರುಗೊಂಡ ರಗಳೆಯೂ ಅದರ ಪ್ರಭೇದಗಳೂ ಈ ಅಪಭ್ರಂಶ ಛಂದಸ್ಸಿನ ಪ್ರಭಾವದಿಂದ ರೂಪುಗೊಂಡಿರಬಹುದೆಂದು ಊಹಿಸಲು ಅವಕಾಶವಿದೆ (ಛಂದೋವಿ. ೧೬೬); 'ಜಗನ್ನಾಥವಿಜಯ'ದಲ್ಲಿ . . . ಕೆಲವು ಕೈಬರೆಹದ ಪ್ರತಿಗಳಲ್ಲಿ ಪಜ್ಝಟಿಕೆಯಂತಿರುವ ರಗಳೆಯೊಂದಿದೆ (ಶಬ್ದವಿ. ೨೯). 'ಪಜ್ಝತಿ' ಪರಾ. [ಸಂ. ಪಜ್ಝಟಿಕಾ]

**ಪಟ** (ನಾ). ೧. ಬಟ್ಟೆ ; ವಸ್ತ್ರ : "ವಾಸವಾಚ್ಛಾದನಂ ವಸ್ತ್ರಂ ಪಟಂ . . . ಅಂಬರಮೆನಲ್ಕಾ ಸೀರೆಯಕ್ಕು" (ಮಂಗರಾ. ೧೧೦-೨೭) ; ಪಟವ ಹಱಿದು ತಂತುವ ನೋಡಲದೇಕೆ ಆ ಪಟವೇ ತಂತುವೆಂದಱಿದೊಡೆ ಸಾಲದೇ (ದೇದಾವ. ೬೦-೧೨೫) ; ಹೊದ್ದೆ ಹರಿಯಲಿಬೇಕು ಕರ್ಮಶೇಷದ ಪಟವ (ಮಂಕುಕ. ೬೩೩). ೨. ಉತ್ತಮವಾದ ವಸ್ತ್ರ. ೩. ತೆರೆ ; ಪರದೆ; ಜವನಿಕೆ. ೪. ಚಿತ್ರ ಮೊದಲಾದುವನ್ನು ಬರೆಯಲು ಸಿದ್ಧಪಡಿಸಿದ (ನುಣುಪಾದ ಮೇಲ್ಮೈಯುಳ್ಳ)ಬಟ್ಟೆ, ಹಲಗೆ ಇತ್ಯಾದಿ : ಸುಕೇಶಿನಿಯುಂ ತನ್ನ ಮುನ್ನಿನ ಜನ್ಮದೊಳ್ ನೆಗಟ್ದುದೆಲ್ಲಮಂ ಪಟದೊಳ್ ತಾನೆ ಬರೆದು . . . ಏಕಾಂತದೊಳ್ ನೋಡುತ್ತಿರ್ಕುಂ (ವಡ್ಡಾರಾ. ३೪-೧೨). ೫. ಲೆಕ್ಕ ಮೊದಲಾದುವುಗಳನ್ನು ಬರೆಯುವುದಕ್ಕಾಗಿ ಚರಿ, ಇದ್ದಿಲು ಮುಂತಾದ ದ್ರವ್ಯಗಳಿಂದ ಸಿದ್ಧಪಡಿಸಿದ ಕರಿಯ ಮೇಲ್ಮೈಯುಳ್ಳ ಹತ್ತಿ ಬಟ್ಟೆ : ಈ ಲೇಖ್ಯವಸ್ತುವಿಗೆ ಪಟ, ಪಟಿಕಾ, ಕಾರ್ಪಾಸಿಕ ಪಟ ಎಂಬ ಹೆಸರುಗಳು ಸಂಸ್ಕೃತದಲ್ಲಿದ್ದುವಂತೆ (ಕನ್ನಸಂ.೪೦); ಇದನ್ನು ಪಟ, ಪಟಿಕಾ, ಕಾರ್ಪಾಸಿಕ ಪಟ ಎಂದು ಕರೆಯುತ್ತಿದ್ದರು (ಭಾರಪ. ೧೩). ೬. ಚಿತ್ರ, ನಕ್ಷೆ, ಯೋಜನೆ ಮೊದಲಾದುವುಗಳನ್ನು ಬರೆದ ಹಾಳೆ : ಆ ಭೂಮಿಯ ವನಯವನು ಪಟದಲ್ಲಿ ಬಂದು ನೋಡಿ ಆ ಹೇಮದೇವಾಚಾರ್ಯ್ಯರ ಕೈಯಲಿಯಿದ್ದ . . .

ಶಾಸನಂಗಳನು **ವೋದಿ ನೋಡಲಾಗಿ** (ಸೌಇಇ. XX, ೨೩೨-೧೫; 1412); ಉಪನ್ಯಾಸಗಳ ಯೋಜನೆಯು ಪಟವು, ತಮಗೆ ನಾನು ಕೊಡಲಿರುವ ಭಾಷಣಗಳ ಕ್ರಮವನ್ನು ಅರುಹಬಲ್ಲದು (ಪರಪ. ೧೧). **೭.** ಚಿತ್ರ; ವರ್ಣಚಿತ್ರ: ಚಿಂತಿಸದಿರ್ ತಾ ತೋಱು ನಿನ್ನೀ ಬರೆದ ಪಟಮಂ (ಆದಿಪು. ೩-೪೪); ಬರೆದಟ್ಟಿದಳೀ ಪಟಮಂ ಪರೀಕ್ಷಿಸೆಂದೀಯೆ (ಮಹಾನೇ. ೯-೧೩೨); ರಾಜಿಯ ರೂಮಿನಲ್ಲಿ ದೇವರ ಕೆಲವು ಹೊಸ ಪಟಗಳಿದ್ದುವು (ಭೀಮಕಾ. ೨೦೫). **೮.** ನೌಕೆಗೆ ಕಟ್ಟುವ ಹಾಯಿ: "ಪಟಂ ಹಾಹೆಯಕ್ಕು" (ಮಂಗರಾ. ೧೨೧-೫); ಏಱಿ ಬಹಿತ್ರಮಂ ಪಟಮನೆತ್ತಿಸೆ . . . ಪಯೋಧಿಯೊಳ್ ಪರಿದುದು (ಮಹಾನೇ. ೯-೧೩೩); ಕಟ್ಟಾಚಾರಮೆ ತರಣಿಯುಱುವೆ ಪಟ . . . ಪುಟ್ಟುಗಡಲ ದಾಂಟಿಪ ನಾವಿಕ ತಾನೆಂಬಂತೊಯ್ಯುತಿರೆ (ಉದ್ಭದೇ. ೭-೭); ನಾಳೆ ಹಡಗಿನ ಪಟಗಳನ್ನೇರಿಸಿ ತುಷಾರನಗರಕ್ಕೆ ಮರಳುವೆಯಾ? (ಆರ್ಯಕ. ೧೦೮). **೯.** ಗಾಳಿಪಟ: ಆಕಾಶದಲಾಡುವ ಪಟಕ್ಕಾದಡೆಯೂ ಮೂಲಸೂತ್ರವಿರಬೇಕು (ಚನ್ನಪ. ಕ. ೫೯-೧೩೩); ಈತನಿದ್ದನು ಸವಡಿಗೈಯಲಿ ಸರಿವ ನೇಣಿನ ನಭದ ಪಟದಂತೆ (ತೊರರಾ. ೫-೧-೧೭); ಹುಡುಗರೂ ದೊಡ್ಡವರೂ ಎಲ್ಲರೂ ಹೊಲಗಳ ಬೈಲಿನಲ್ಲಿ ಪಟ ಆಡಿಸುವ ಸಂತೋಷದಲ್ಲಿದ್ದರು (ಹುಟ್ಟುಹ. ೭೧). **೧೦.** ಒಂದು ಬಗೆಯ ಸಸ್ಯ. **೧೧.** ಚೆನ್ನಾಗಿ ಒಪ್ಪವಾಗಿ ಮಾಡಿದುದು; ಉತ್ತಮವಾಗಿ ರಚಿತವಾದುದು. **೧೨.** ಬಾವುಟ; ಧ್ವಜ: ಪಟದ ಸೀರೆಯಂತಲ್ಲಾಡಿ ಒಲ್ಲದ ಹೆಂಡತಿಯಂತೆ ಸುಯ್ದು (ಧರ್ಮಾಮ್ಮ. ೧-೧೬೮); ಚಾಮರದ ಧವಳಚ್ಛತ್ರ ಪಟಪಳಹರದ ಪದಪಿನಲೌಕಿ ನಡೆದುದು ಮುಂದೆ ಪಾಯದಳ (ಕುವ್ಯಾಕ. ೧೪-೩೩); ಆಲವಟ್ಟವು ಸತ್ತಿಗೆ ಮದಕರಿಗಳ ಸಾಲ ಪಟಗಳಿನಪ್ರಭೆಯು ತೂಳಗೊಡದೆ ಮುಸುಕಲು (ಕಂಸವಿ. ೧೯-೪೪).

**ಪಟದ ಕುಣಿತ** = ಬಣ್ಣಬಣ್ಣದ ರೇಷ್ಮೆಬಟ್ಟೆಯ ಪಟ್ಟಿಗಳನ್ನು ಸುತ್ತಿದ ಉದ್ದವಾದ ಬಿದಿರಿನ ಕೋಲುಗಳನ್ನು ಹಿಡಿದುಕೊಂಡು ಮಾಡುವ ಕುಣಿತ: ವೈಷ್ಣವ ಸಂಪ್ರದಾಯದ ಕುಣಿತದಲ್ಲಿ ಒಂದೆಂದು ಹೇಳಲಾಗುವ 'ಪಟದ ಕುಣಿತ' ದಕ್ಷಿಣ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಮಾತ್ರ ಕಂಡುಬರುತ್ತದೆ . . . ಸಾಮಾನ್ಯವಾಗಿ ಒಕ್ಕಲಿಗರಲ್ಲಿ ಪ್ರಚಲಿತವಿರುವ ಪಟದ ಕುಣಿತ ನಡೆಯುವುದು ಹಬ್ಬಹರಿದಿನಗಳಲ್ಲಿ, ಜಾತ್ರೆ ಉತ್ಸವಗಳಲ್ಲಿ (ಕಜಕ. ೧೦೪). **ಪಟದ ಹುಳು** = ಬಟ್ಟೆಯನ್ನು ಹಾಳು ಮಾಡುವ ಒಂದು ಬಗೆಯ ಹುಳು: ಪತಂಗ, ಜಿರಲೆ, ಗೆದ್ದಲಹುಳು, ಪಟದ ಹುಳು (ಗೃಹವಿ. ೧೮೪). **ಪಟವಾಡಿಸು** = ಗಾಳಿಪಟದಂತೆ ಆಡಿಸು: ಪಟವಾಡಿಪಳ್ ಜೀವಗಳನಂಬೆ, ಆದ್ಯಾಶಕ್ತಿ (ಶ್ರೀರಾಮಾ. ೭೫೫-೧೭೯). [ಸಂ.]

**ಪಟಂಗೊಳ್** (ಕ್ರಿ). (ಅಲಂ) ಮೆರೆ; ಪ್ರಸಿದ್ಧವಾಗು: ವರ ಶಶಿವಿಶದ ಯಶಃಪಟಂಗಳಂ ನನ್ನಿ ಪಟಂಗೊಳ್ವಂತೆ ವಿವಿಧ ಧ್ವಜಪಟಂಗಳಂ ಕೊಂಡು ಗೆಲ್ಲಂಗೊಂಡು ತಾನುಮುತ್ತರನುಂ ವಿರಾಟಪುರಕ್ಕೆ ಮಗುಟ್ದು ಬರ್ಪಾಗಳ್ (ಪಂಪಭಾ. ೮-೧೦೯ ವ). [ಪಟ + ಕೊಳ್$_1$]

**ಪಟಕ**$_1$ 'ಪಟಕ' ನೋ.

**ಪಟಕ**$_2$ (ನಾ). ೧. ಹತ್ತಿಯ ಬಟ್ಟೆ. ೨. ಪಾಳೆಯ; ಠಾಣ್ಯ. [ಸಂ.]

**ಪಟಕ**$_3$, ಪಟಕಾ, ಪಟಕೆ, ಪಟಗ$_2$, ಪಟಗಾ (ನಾ). ತಲೆಗೆ ಸುತ್ತುವ ಉದ್ದವಾದ ರುಮಾಲಿನಂಥ ವಸ್ತ್ರ; ಪೇಟಾ: ನಡುವಿಗೆ ಸುತ್ತಿಕೊಂಡ ಅಂಚಿನ ಒಲ್ಲಿಯಾಗಲಿ, ತಲೆಗೆ ಸುತ್ತಿದ ತುರಾಯಿಕಟ್ಟಿನ ಪಟಕವಾಗಲಿ ಆ ಸಂದರ್ಭದಲ್ಲಿ ತೀರ ಒಪ್ಪುತ್ತವೆ (ಸುವರ್ಣ. ೪೧). **ಪಟಕಾ:** ಶೇಖ, ಸೈಯದ್, ಮೊಗಲ್, ಪಠಾಣ, ಈ ನಾಲ್ಕು ಜಾತಿಗಳ ಜನರು ತಲೆಗೆ ಮುಂಡಾಸ ಹಾಕುವರು, ಇಲ್ಲವೆ ಪಟಕಾ ಸುತ್ತುವರು (ಕಭಾಗ. ೨೨೭); ಮುಂಡಾಸ, ತುರುಬಿನ ರುಮಾಲು, ಪಟಕಾ, ಪಾಗೋಟಿ ಎಂದು ರುಮಾಲಿನ ವಿಭಾಗಗಳು (ಗೋಯಾತ್ರೆ. ೩೪); ಗುಲಾಬಿ-ಕಿತ್ತಳೆ ಬಣ್ಣದ ಪಟಕಾ ಸುತ್ತುವನು (ಹೂಬಿಸಿ. ೭೩). **ಪಟಕೆ:** ಪರಮಾನಂದ ಭರಿತನಾಗಿ ಅವನು ತನ್ನ ತಲೆಗೆ ಸುತ್ತಿದ್ದ ಪಟಕೆಯನ್ನು ಅವನಿಗೆ ಇನಾಮಾಗಿ ಕೊಟ್ಟನೆಂತಲೂ . . . ಹೇಳುತ್ತಾರೆ (ಬೀರಬ. ೧೪). **ಪಟಗ**$_2$**:** ಶಿವಪುತ್ರ, ಮಾದೇವರಿಗೆ ಹೊಸ ಷರಟು, ಧೋತರ, 'ಪಟಗ', ಕೋಟುಗಳಿಂದ ಅಲಂಕರಿಸಿದರು (ಬರಹಾ. ೧೮೭); ಅವನ ಮೈಮೇಲಿನ ಬಟ್ಟೆಗಳು, ತಲೆಗೆ ಸುತ್ತಿದ 'ಪಟಗ' ಒಗೆಯಲಾರದೆ ಎಷ್ಟು ದಿನ ಕಳೆದಿದ್ದುವೊ (ಗಂಗಾಗೌ. ೭೫). **ಪಟಗಾ:** ಟೊಪ್ಪಿಗೆ ಬೇಡವಾದರೆ 'ಪಟಗಾ' ಸುತ್ತುವೆವು (ಗಾಳಿಪ. ೧೩೨); ತಲೆಯ ಮೇಲಿನ ಪಟಗಾಗಳೆಲ್ಲ ಆಕಾಶದಲ್ಲಿ, ಇವರ ಕೇಕೆಯೊಡನೆ ಹಾರಿದವು (ಗ್ರಾಮಾಯ. ೫೧).

[←ಹಿಂ. ಮರಾ. ಪಟಕಾ]

**ಪಟಕಣ್ಣಿ** 'ಪಟಗಣ್ಣಿ' ನೋ.

**ಪಟಕಾ** 'ಪಟಕ$_3$' ನೋ.

**ಪಟಕಾರ**$_1$ 'ಪಟಕಾರು' ನೋ.

**ಪಟಕಾರ**$_2$ 'ಪಟಕಾರ' ನೋ.

**ಪಟಕಾರ**$_3$ (ನಾ). ೧. ನೇಕಾರ; ಜಾಡ: ದೇವಾಂಗರು, ಪಟಕಾರರು, ಸಾಲಿಗರು, ನೆಯ್ಗೆಯವರು, ಶೀಲವಂತರು, ಮೊದಲಾದ ಹೆಸರುಗಳಿಂದ ದಕ್ಷಿಣಭಾರತದಲ್ಲೆಲ್ಲ ಪ್ರಸರಿಸಿರುವ ದೇವಾಂಗರು . . . ಛಿನ್ನವಿಚ್ಛಿನ್ನರಾಗಿದ್ದರು (ಶರಚ. ೪೩); ಜಗತ್ತಿಗೆಲ್ಲ ಮೊಟ್ಟಮೊದಲಿಗೆ ಬಟ್ಟೆ ಕೊಟ್ಟಿವೆನ್ನುವ ಈ ಪಟಕಾರರು—ಹಟಕಾರ(ಜಾಡ)ರು ಆರ್ಯಪೂರ್ವ ಜನಾಂಗವೆಂದು ಸಿದ್ಧವಾಗುತ್ತಿಲ್ಲವೆ? (ಕರ್ನಾಪೂ. ೧೪೫). ೨. ಚಿತ್ರಕಾರ; ವರ್ಣಚಿತ್ರಗಳನ್ನು ಬರೆಯುವವನು. [ಸಂ.]

**ಪಟಕಾರು,** ಪಟಕಾರ$_1$ (ನಾ). ಚಿಮುಟ; ತಂಡಸ: "ಇಕ್ಕುಳ, ಚಿಮುಟ, ಪಟಕಾರು, ತಂಡಸ" (Tongs. ಇಂಕನಿ); ಬೈರಿಗೆಯ ಅಲಗು; ತೋಬಡದ ಉಳಿಯಲಗು; ಪಟಕಾರು, ಮೊ.ಗಳ ಕೊನೆ ಗತ್ತರಿ (Bit. ಇಂಕನಿ). **ಪಟಕಾರ**$_1$ **:** "ಯಾವುದಾದರೂ ಪದಾರ್ಥವನ್ನು ಬಿಗಿಯಾಗಿ ಹಿಡಿದುಕೊಳ್ಳುವ ಸಾಧನ; ಶ್ರವಣ; ಚಿಮುಟ; ಪಟಕಾರ" (Pincers. ಇಂಕನಿ).

[←ತೆಲು. ಪಟಕಾರು, ಪಟುಕಾರು]

**ಪಟಕಾಸು,** ಪಟಕಿಸು$_1$ (ಕ್ರಿ). ಬಲವಾಗಿ ಹಿಡಿ; ಅಮುಕಿ ಹಿಡಿ: ಆಶಿ ಅಗಸಗ ಪಟಕಾಸ್ತು. ಜಾರಿದೆ. ಮನಿ ಮುರೀತು (ರಕ್ತಧ್ವ. ೩೨೫). **ಪಟಕಿಸು**$_1$ **:** ಅದು ಕಾರಸ್ಥಾನ. ನೀನೂ ನನ್ನನ್ನು ಮೋಸದಿಂದಲೇ ಪಟಕಿಸುವವ (ರಕ್ತಧ್ವ. ೨೫೭).

[? + -ಇಸು$_3$./ಮರಾ. ಪಟಕಾವಿಣೇ]

**ಪಟಕಿ,** ಪಟಕೆ$_3$ (ನಾ). ಕಾಲರಾ ರೋಗ: ಪಟಕಿಯ ಜುಲಾಬು ಅಕ್ಕೀ ಕಚ್ಚಿನಂತೆ ಬಹಳ ಪ್ರಮಾಣದಿಂದ ಆಗ ಹತ್ತುತ್ತದೆ. ಕೈಕಾಲಿಗೆ ಒರಟಿ ಬಂದು ಮನುಷ್ಯನು ಗಾಬರಿಯಾಗುತ್ತಾನೆ (ಗೃಹವೈ. ೨೭). 'ಪಟಕಿಬೇನೆ' ಪರಾ. **ಪಟಕೆ**$_3$ **:** ಪಟಕೆಯ ಉಪದ್ರವವಿದ್ದ ಕಾಲದಲ್ಲಿ . . . ಕಪ್ಪುರ ಸುಡುವದರಿಂದ ಹಿತವಾಗುತ್ತದೆ (ಮುಂಬಯಿ. ೫-೧೫೭).

[←ಮರಾ. ಪಟಕೀ]

**ಪಟಕಿಬೇನೆ** (ನಾ). = ಪಟಕಿ: ಬೈಲುಶೀಮೆಯಲ್ಲಿ ಪಟಕೀಬೇನೆಯ ಉಪದ್ರವವಿದ್ದಷ್ಟು ಉಳಿದ ಮೂರು ವಿಭಾಗಗಳಲ್ಲಿ ಇರುವುದಿಲ್ಲ (ಕಭಾಗ. ೨೧); ಈ ಸೀಮೆಯಲ್ಲಿ ಪಟಕೀಬೇನೆಯ ಭೀತಿಯು ಮಾತ್ರ ಬಹಳ ಇರುತ್ತದೆ (ಬೆಳವ. ೨೦). [ಪಟಕಿ + ಬೇನೆ$_1$]

**ಪಟಕಿಸು.** 'ಪಟಕಾಸು' ನೋ.

**ಪಟಕಿಸು**₂ (ಕ್ರಿ). ಪಟಪಟನೆ ಹೇಳು : ಏನಿವನು ಪಟಕಿಸುವ ಏಳು ಬೀಳಿನ ಮಂತ್ರ ? (ಕಿಲಾಲ. ೬೪–೧೫) ; ನಮ್ಮ ನಾಣಪ್ಪನೋರು ಮಾತು ಮಾತಿಗೂ ಗಾದೆ ಪಟಕಿಸ್ತಾರೆ (ಬೈಸರ್ವೆ. ೬೨). [ ? +–ಇಸು₃]

**ಪಟಕುಟಿ** (ನಾ). (ಬಟ್ಟೆಯಿಂದ ರಚಿಸಿದ) ಗುಡಾರ ; ಡೇರೆ : "ದೂಷ್ಯಂ, ಸ್ಥೂಳಂ, ಪಟಕುಟೀ, ಗುಣಲಯನೀ, ಕೇಲಿಕಾ— ಈ ೫. ಗುಡಿ" (ಹಲಾಯು. ೭೪–೨೯೭) ; ದೇವರಮ್ಯಮೆಂಬ ಪಟಕುಟಿಯುಂ . . . ಎಪ್ಪತ್ತೆಂಟ್ಬಾರ್ಸಿರದುರ್ಗಾಟವಿಗಳುಂ ಪದಿನೆಣ್ಬಾಸಿರಮ್ಲೇಚ್ಛರಾಜರುಮಾತ್ಮೀಯಸಾಮ್ರಾಜ್ಯಪರಿಚ್ಛೇದನಾಗೆ (ಆದಿಪು. ೧೫–೩ ವ) ; ಅಭ್ರತುಂಗಪಟಕುಟಿಯ ಮಹಾಕನಕದ ಕಂಬಂಬೋಲ್ಮಿಗೆ ಮಿನುಗುಗುಮುರುಚಾರುಚಂದ್ರಗಿರಿಗಂಭೀರಂ(ಹಮ್ಮಿ ರ.೧–೩೪) ; ಸುರಪನ ವಿಭವದಿ ಜಯಿಸಿದ ಚಕ್ರಿಗೆ ಹರಿಸದಿ ಗಿರಿಗಳಂಬುಧಿಯ ಪೊಟಟಿರ್ದವಂದಂತೆ ಪಟಕುಟಿಗಳು ಬಂಧುರಮಾದವು ಬೀಡಿನೊಳು (ಚಂಪ್ರಸಾಂ. ೧೫–೧೦೪) ; ಎತ್ತಿ ತಂದರಾ ರಾಕ್ಷಸಶರೀರಮಂ ಪಡೆವಳಂ ಗಂಧಮಾದನನಿರ್ದ ಪಟಕುಟಿಗೆ (ಶ್ರೀರಾಮಾ. ೬೦೩–೪೯). [ಪಟ+ಕುಟಿ₂]

**ಪಟಕುಟೀರ** (ನಾ). = ಪಟಕುಟಿ : ಆ ಸೇನಾಪತಿಯು ಸ್ಥಪತಿರತ್ನದಿಂ ನಿರ್ಮಿತವಾದ ಆ ಪಟಕುಟೀರದೊಳ್ ಷಡಂಗಬಲವನ್ನೂ ಆ ಬಳಿಯೊಳೇ ತಳುಗಿಸಿದನು (ಪುರುಚ. ೧೫೪). [ಪಟ+ಕುಟೀರ]

**ಪಟಕೆ** 'ಪಟಕ₃' ನೋ.

**ಪಟಕೋಶಿ** (ನಾ). ಬಟ್ಟೆಯ ಚೀಲ : "ಚೀಲಃ = ಪಟಕೋಶೀ" (ಕಾಶಕ್ಕ. ೫೦). [ಸಂ. ಪಟಕೋಶೀ]

**ಪಟಕ್ಕನೆ** (ಅ). ಒಮ್ಮಿಂದೊಮ್ಮೆಲೆ ; ತಟ್ಟನೆ : ಪಟಕ್ಕನೆ ದೀಪ ಆರಿಹೋಯಿತು (ರೂಢಿ). [ಪಟಕ್$_0$+–ಅನೆ₁]

**ಪಟಗ**₁ 'ಪಟಕ' ನೋ.

**ಪಟಗ**₂ 'ಪಟಕ₃' ನೋ.

**ಪಟಗಣಿ** (ನಾ). ಒಂದು ಬಗೆಯ ಸಸ್ಯ : ಪಟಗಣಿ, ಸೊನೆಪಟ್ಟೆ, ತಿಗುಡು (ಮೈಡಿಗ. ೫೯–೧೧೭೪). [ ? ]

**ಪಟಗಣ್ಣಿ**, ಪಟಕಣ್ಣಿ (ನಾ). ಎತ್ತಿಗೆ ನೊಗವನ್ನು ಕಟ್ಟುವ ಹಗ್ಗ ; ಜೊತ್ತಗೆ ; ಮಿಳಿ : ಒಂದೇ 'ಹ್ಯಾಟು' ಇದ್ದರೂ ಯಾವ ಎತ್ತಿನ ಕೊರಳಿಗಾದರೂ ಹವಣಾಗುವ 'ಪಟಗಣ್ಣಿ'ಯಂತೆ, ಎಲ್ಲ ಸೂಟಿಗೂ ಹೊಂದಿಕೊಳ್ಳುವಂತಹದು (ಬೆಳುಮ. ೨೫೩). **ಪಟಕಣ್ಣಿ :** ಪಟಕಣ್ಣಿಯನ್ನು ತೆಗೆದುಕೊಂಡು ಬಾ (ರೂಢಿ). [ಪಟ ? + ಕಣ್ಣಿ]

**ಪಟಗಾ** 'ಪಟಕ₃' ನೋ.

**ಪಟಗಾರ** 'ಪಟಗಾಱ' ನೋ.

**ಪಟಗಾಱ**, ಪಟಗಾರ (ನಾ). ೧. ಗಾಳಿಪಟವನ್ನು ಹಾರಿಸುವವನು,—ಆಡಿಸುವವನು : ಪಟಗಾಱನುಱೆ ಸೂತ್ರವಿಡಿದಿದ್ದರಾ ಗಾಳಿಪಟ ಗಗನದೊಳಾಡುವಂತೆ ಕುಟಿಲವಲ್ಲಾತ್ಮ ನಿನ್ನಂಗದೋಳಿರ್ದು ಸಂಘಟಿಸಿ ಮುಕ್ತಿಯೊಳದೆ ಬುದ್ಧಿ (ಭರಚ. ೨–೪೩). **ಪಟಗಾರ :** ೨. ನೇಯ್ಗೆಯವನು ; ನೇಕಾರ ; ಪಟಕಾರ : ಪಟಗಾರ ರಾಯಂಣ ನಾಯ್ಕನಿಗೆ ಬಿಳಿಚತ್ರಿ . . . ಶಾಲು ನಾಮೆ ಸಹ ಕೊಟ್ಟು (ಎಕ. IV (R), ಚಾಮುರಾ.೨೯೨–೩೨ ; 1345). [ಪಟ+–ಕಾಱ]

**ಪಟಗೃಹ** (ನಾ). = ಪಟಕುಟಿ : ಪ್ರಭಾಕಾಂಡವೆಂಬ ಪಟಗೃಹದಲ್ಲಿ ಆ ನಾವೀರ್ವರೂ ಕ್ರೀಡಿಸುವ ರೀತಿಯು ಇದೇ (ಪುರುಚ. ೩೭) ; ಅಧಿಕಾರಿಗಳು ರಾಜಯೋಗ್ಯವಾದ ಪಟಗೃಹವನ್ನು . . . ದೇವಾಲಯದ ಬಳಿಯಲ್ಲಿ ನಿರ್ಮಿಸಿ ತಳಿರು ತೋರಣಗಳಿಂದಲಂಕರಿಸಿದರು (ಕಭವಿ.೪೩೦) ; ತರತರದ ವರ್ಣಂಗಳಿಂದೆಸೆವ ಪಟಗೃಹದ ಪಂಕ್ತಿಯಿಂ . . . ರಣ ಶಿಬಿರವೆಸೆದತ್ತು (ಚಿತ್ರಾಂಗ. ೧೭–೪೬೪). [ಪಟ+ಗೃಹ]

**ಪಟಚ್ಚರ** (ನಾ). ೧. ಹಳೆಯ ಬಟ್ಟೆ : "ಪಟಚ್ಚರಮೆಂಬುದು ಹಱಿಯ ಸೀರೆ" (ಹಲಾಯು. ೯೦–೩೯೭) ; ನೆಱಿಯೆ ಪಟಚ್ಚರದೊದವಿದ ಸೆಱಂಗಿನೊಳ್ ತಂದು ತೀವಿ ಪವನಂ ಹಿಮಮಂ ಸೆಱಯಿಟ್ಟಂತಿರೆ ಮೊಗದೊಳ್ ತುಱುಗಿದ ಕಿಱುಬೆಮರದೇಂ ಮನಂಗೊಳಿಸಿದುದೋ (ಶಾಂತಿಪು. ೮–೨೪) ; ವಿವಿಧ ವೈಪಥಪಾಂಸುಗಳಿಂದೆ ನಾಡೆ ಸೀಳಿದ ತಲೆಯುಂ ಕರಂ ಮಲಿನಮಾದ ಪಟಚ್ಚರಮುಂ ನೆಗೞ್ದಲಂದಿದಿರೊಳೆ ಲೇಖವಾಹನಿವಹಂ ಬರೆ ಕಂಡನಿಳಾಧಿನಾಯಕಂ (ಕಾದಂಬ. ೬೩೭) ; ಜಟಿಲಿತಕೇಶಂ ವೇಷ್ಟಿತ ಪಟಚ್ಚದಂ[ಚ್ಚರಂ] ದೀರ್ಘದೇಹಿ ಜಟ್ಟಿಗನೆಂಬೋಲ್ ಕುಟಿಲಗತಿ ಬರುತು ಮಿರ್ದಂ ಭಟನೊರ್ಬಂ ಪೊತ್ತು ಬೆಮರುತುಂ ತದ್ಧ್ವಜಮಂ (ಲೀಲಾವ. ೪–೮೧). ೨. ಕಳ್ಳ ; ಚೋರ. [ಸಂ.]

**ಪಟಡಿ** 'ಪಟ್ಟಡಿ₁' ನೋ.

**ಪಟತ್ಕಾರ** (ನಾ). ಪಟಪಟ ಎಂಬ ಸದ್ದು,—ಶಬ್ದ : ಝಂಪಕೇತನ ಪ[ಪಾಠಾಂ. ಫ]ಟತ್ಕಾರಂ ತರುಣೀಚರಣಮುದ್ರಿಕಾಕಣತ್ಕಾರಂ ತತ್ಕಟಕ ಮಂಜೀರಝುಣತ್ಕಾರಂ . . . ಆಗಸವುಂ ಮುಸುಂಕೆ(ಗಿರಿಜಾ. ೮–೮ ವ). [ಸಂ.]

**ಪಟಪಟ** (ನಾ). ಒಂದು ಅನುಕರಣ ಶಬ್ದ : ಜ್ವರ ಕಾಯುತ್ತಿತ್ತು, ನಾಡಿಯು ಪಟಪಟ ಬಡಿಯುತ್ತಿತ್ತು (ಕತ್ತಬಿ. ೭).

**ಪಟಪಟನೆ** (ಅ). ೧. ಪಟ ಪಟ ಎಂದು ಸದ್ದಾಗುವಂತೆ : ಇವರ ಅಂಗುಳ ಮೆಟ್ಟ ಪಟಪಟನೆ ಹೊಡಿ ಎಂದಾತ ನಮ್ಮ ದಿಟ್ಟ ಧೀರ ಅಂಬಿಗರ ಚೌಡಯ್ಯ ನಿಜಶರಣನು (ವಚಶಾ. I, ೩೭೦) ; ಚಟುಲಶಿಖಿ ಪಟುದೃಷ್ಟಿ ಪಾತಕೆ ಕುಟಿಲದೈವಂಗಳು ಛಿಟಿಲು ಛಿಟಿಲೆನುತ ಬೇವುತ್ತ ಪಟಪಟನೆ ಸಲೆ ಬಿರಿವುತಂ ಮೇಣ್ ಛಟಛಟನೆ ಕೇಳಿಯಲ್ಕೆ (ಬಸವು. ೨೩–೧೭). ೨. ಸರಸರನೆ; ಬೇಗ ಬೇಗನೆ : ತಟಿತಟಿಯಹ ಲಾಲಸೆಯನು ಸೂಡಿ ಪಟಪಟನ್ಯೆದಿ ಪರರ ತಾ ಬೇಡಿ (ಅವಧೂ. ೨೯) ; ಮಘಮಘಿಸುವಾ ಮುಂಗಿದ ಮೊಗ್ಗೀ ಪಟಪಟನೇ ಒಡೆದು (ಗರಿ. ೧–೧೧). [ಪಟಪಟ+–ಅನೆ₁]

**ಪಟಪಟಿಸು** (ಕ್ರಿ). ಪಟ ಪಟ ಎಂದು ಸದ್ದು ಮಾಡು : ಗುಬುಟಿನ ಬಾವುಟಗಳು ಪಟಪಟಿಸುತಲೊಲೆದವು ನಲವೆರಚಿ (ನಾಪದ. ೧೪೯). [ಪಟಪಟ+–ಇಸು₃]

**ಪಟಮಂಟಪ** (ನಾ). = ಪಟಕುಟಿ : ಲತಾಮಂಟಪ ದರ್ಪಣಮಂಟಪ ಪಟಮಂಟಪ . . . ತರುವಾಟಿಗಳ ತಣ್ಣೆಳಲ್ಗಳೊಳಗೆಯುಂ (ವಿವೇಕ. ೨೧೩). [ಪಟ+ಮಂಟಪ]

**ಪಟಮಂಡಪ** (ನಾ). = ಪಟಕುಟಿ : ಭವದೀಯ ವನಾಯುಜ ಹಯನಿವಹಂ ಕೇಳ್ ಮೂರಿವಿಟ್ಟು ನಿಶ್ವಾಸಂ ಸ್ಯಂಧವಮಂ ಮಾಸಿಸೆ ಸೊಗಯಿಸಿತು ವಿನಿದ್ರಂ ದೇವ ದೀರ್ಘಪಟಮಂಡಪದೊಳ್ (ಶಾಂತಿಪು. ೫–೯೨). [ಪಟ+ಮಂಡಪ]

**ಪಟಮಂದಿರ** (ನಾ). = ಪಟಕುಟಿ : ಮಾರನು ದಿಗ್ವಿಜಯಾರ್ಥವಾಗಿ ಪೊರಟು ಬರುವನೆಂದು ವನದೇವತೆಗಳೆಲ್ಲ ಕೂಡಿ ಮಾಡಿಸಿರುವ ಪದ್ಮರಾಗ ರತ್ನಮಯವಾದ ಪಟಮಂದಿರಗಳೊಯೆಂಬಂತೆ . . . ತೋರುವ ಚಿಗುರುಗಳ ಕೆಂಪಾದ ಕಾಂತಿಗಳು ದಿಕ್ಕುದಿಕ್ಕುಗಳನೆಲ್ಲ ವ್ಯಾಪಿಸುತ್ತಿರಲು (ಸೌಗಂಧಿ. ೪೬೪–೪). [ಪಟ+ಮಂದಿರ₂]

**ಪಟಲ**₁ 'ಪಡಲ₁' ನೋ.

**ಪಟಲ**₂, ಪಟಳ (ನಾ). ೧. ಮನೆಯ ಮೇಲಿನ ಹೊದಿಕೆ ; ಛಾವಣಿ; ಮಾಡು. ೨. ಪರದೆ ; ಆವರಣ. ೩. ಕಣ್ಣಿನಲ್ಲಿ ಬರುವ ಪೊರೆ ; ಕಾಚಬಿಂದು : ಪಟಲಂ ಕಣ್ಣೊಳ್ ಕವಿದುಂಗುಟವಂ ಮೊದಲಾಗಿ ಕಾಣೆನೆಂದೊಡೆ (ಪಂಚತಂ. ೨೭೩–೧೪) ;

ಪಟಲವೆಂಬುದು ಕಾಚವೆಂಬುದು ಪಟುತರದ ದೃಷ್ಟಿಯ ನಿರೋಧಿಸಿ ನೆಟಿಸದಿಹ ಕಂಚುಕವೆನಿಪುದು ದೃಷ್ಟಿಗತದೋಷಂ (ವಿವೇಚ. ೩-೪೫); ಅರಿಯು, ಪಟಲಂ, ನೀರು ಸುರಿವದು, ಅರ್ಜುನಗಣ್ಣು, ಅದಕ್ಕೆ ಔಷಧಿ (ವೈದ್ಯವಿ. ೧೯೩). **೪.** ಗುಂಪು; ಸಮೂಹ; ರಾಶಿ: ನವೀನ ಪ್ರಸೂನ ಮಧುವಿಲೀನಮಧುಕರಪಟಲಕರ್ಬುರಿತ ರತ್ನಪಟಲಿಕೆಗಳಿಂ . . . ಮನಂಗೊಳಿಪ ದೇವಪೂಜಾಗ್ರಹಮಂ ಪೊಕ್ಕು (ಪಂರಾಮಾ. ೧೨-೨ ವ); ಷಟ್ತ್ರಿಂಶತ್‌ಪ್ರಭಾಪಟಲದ ಪ್ರಭೆಯು ಬೆಳಗಿದೆ ನೋಡಿರೆ (ಬಸವ. ೯೫೫); ಧವಳಾಂಬುದ ಪಟಲಮೆಸೆದುದಂಬರತಳದೊಳ್ (ಜಗವಿ. ೪-೬೧); ದಾರಿಯಲ್ಲಿ ಇಲ್ಲಿಯೇ ನಮ್ಮದೂ ಪಟಲ ಆ ಸೇನೆಯೊಡನೆ ಸೇರಿಕೊಳ್ಳುತ್ತದೆ (ಸವತಿ. ೬೦). **೫.** ಗ್ರಂಥಭಾಗ; ಪ್ರಕರಣ: ವಾತುಳಾಖ್ಯಪರಮಾಗಮದ ಮೊದಲ ತತ್ತ್ವಪಟಲದ ಭಿತ್ತಿಯ ಕಾಂತಿಯ ಕಳಾನಿಳಯ ವೆನಿಪ ನಾನಾತತ್ತ್ವಚಿಂತಾಮಣಿಯ ಪ್ರಭಾವದೊಳು ಗತಿವಡೆದ ನಿರ್ಭ್ರಾಂತ ಪದವಿಹಿತವಿಶ್ರಾಂತಿಯಜೀವನರ ವಿಮಲಚರಣಾಂಬುಜಕ್ಕೆ ಶರಣು (ಲಶಚಂ. ೧-೨೧); ಅನೇಕ ಆಗಮಗಳಲ್ಲಿ ಪ್ರತ್ಯೇಕ ಇಲ್ಲವೆ ಮಿಶ್ರ ಪಟಲಗಳಿರುತ್ತವೆ (ತತ್ತ್ವಪ್ರಾ. ೭೨೪); ಆ ದೇವಿಯರ ಸಂಬಂಧವಾದ ಮಂತ್ರ ಪಟಲಗಳನ್ನೆಲ್ಲ ಸರಹಸ್ಯವಾಗಿ ಉಪದೇಶ ಮಾಡಿದರು (ಮಹಾಣ. ೮೧). **೬.** ಪ್ರತಿಬಿಂಬದ ಗ್ರಹಣಕ್ಕಾಗಿ ಕ್ಯಾಮರಾಗಳಲ್ಲಿ ಇಡುವ ತೆಳ್ಳನೆಯ ಸೆಲ್ಯುಲೈಡ್ ಹಾಳೆ; ಫೋಟೋ ಅಚ್ಚು ಮಾಡಲು ಬಳಸುವ ಕಾಗದ: ಮಧ್ಯಪಟಲದ ಒಳಮೈಯಲ್ಲಿ ಪಸರಿಸಿ ಕನ್ನಡಿಯಂಥ ಪಟಲವಾಗಿರುತ್ತದೆ (ಮುಂಬಯಿ. ೬-೧೪೪); ನಾವು ಕ್ಯಾಮರಾವಿನಿಂದ ಫೋಟೋಗಳನ್ನು ತೆಗೆಯುವಾಗ ಒಳಗಿರುವ ಪಟಲದ (Film) ರಾಸಾಯನಿಕಗಳ ಮೇಲೆ ಈ "ಅಲ್ಟ್ರಾವಯಲೆಟ್" ಕಿರಣಗಳು ಪ್ರತಿಕ್ರಿಯೆಯನ್ನು ತೋರಿಸುತ್ತವೆ (ಕಲ್ಪನಾ. ೧೯೧). **೭.** ಬರೆಯಲು ಬಳಸುವ ಪತ್ರ,—ಹಾಳೆ: ಪಾಣಿನಿ ತನ್ನ ಗ್ರಂಥದಲ್ಲಿ . . . "ಪಟಲ" ಎಂಬುದನ್ನು "ಬರೆವ ಹಾಳೆ" (ಪತ್ರ) ಎಂಬ ಅರ್ಥದಲ್ಲಿಯೂ ಪ್ರಯೋಗಿಸಿದ್ದಾನೆ (ಸಂಶೋಧ. ೪). **೮.** [ಜೈನ] ನರಕಭೂಮಿಯಲ್ಲಿಯ ಸ್ತರ,—ನೆಲೆ: ಪಟಲಮಧ್ಯದೋಳಿಂದ್ರಕಂಗಳಿರ್ಪುವು (ಶ್ರಾವಕಾ. ೧೯-೧೧); ಹದಿಮೂರುಪಟಲಗಳೆರಡೆರಡ್ಡ್ರಗ್ಗಲು ಮೊದಲಿಂದ ತುದಿಯೊಳಗೊಂದು ವಿದಿತರತ್ನಪ್ರಭವಾದಿಯ ಗುಣನಾಮ ಪುದಿದುದಾ ಸಪ್ತ ಪೃಥ್ವಿಯೊಳು (ವರ್ಧಚ. ೮-೬೭); ಪಟಲವೆಂದರೆ ಅಂತಸ್ತು (ನೆಲೆ)ಎಂದು ಹೇಳಬಹುದು. ಪ್ರತಿಯೊಂದು ನರಕಭೂಮಿಯಲ್ಲಿ . . . ನಡುವೆ ಪಟಲಗಳಿರುತ್ತವೆ (ಜೈನಧ. ೩೫). **ಪಟಳ:** **೧.** "ಪೊದಯಿಸಿದಾಚ್ಛಾದನಮುಂ ಛದಿಯುಂ ಪಟಳಮುಮೆನಿಪ್ಪುದು" (ವಸ್ತುಕೋ. ೪೭-೧೫). **೨.** ಘಟಿಯ ದಟಮುಲಿವು ಲಯಘನಘಟಿಗಳ ಮೊಟಗಿನಿಸೆ ಪೊಟ್ಟಗೊಡೆದತ್ತು ರಟಿಪ್ರಟುಪಟಹಶಂಖಭೇರಿಯ ಚಟುಳಿತದಿಂದಟಳಪಟಳಮಂಬರ ಪಟಳಂ (ಪಂಪಭಾ. ೧೦-೬೭); ಜಳಧರಪಟಳಪಟುರಟನಮಂ ಕೇಳ್ದ ಕಳಹಂಸನಂತೆ ಕ್ಷಿತಿಕಾಂತಂ ಚಕಿತಾಂತರಂಗನತಿವೇಗಂ ಬಂದು (ವರ್ಧಪು. ೨-೫೮ ವ). **೪.** "ಪಟಳಮೆಂಬು(ದದು) ನಿಚಯದೊಳಂ" (ವಸ್ತುಕೋ. ೧೩೮-೧೨೩); "ನಿಕರಃ, ಪಟಳಂ, ಪೇಟಕಂ . . . ಸ್ತೋಮಃ—ಈ ೩೯ ಸಮೂಹಂ" (ಹಲಾಯು. ೧೧೧೪-೨). [ಸಂ.]

**ಪಟಲಕ,** ಪಟಳಕ (ನಾ). **೧.** ತೆರೆ; ಪರದೆ; ಜವನಿಕೆ. **೨.** ಸಂಪುಟ; ಭರಣಿ: ಆಕೆಯ ಕೆಲದೊಳ್ ಬರ್ಪ ತರಳಿಕೆಯ ಕಯ್ಯ ಸಿತಾಂಶುಕಾಚ್ಛಾದಿತ ರತ್ನಮಯ ಪಟಲಕದೊಳ್ . . . ಎಸೆದುದುಜ್ಜ್ವಳ ಮೌಕ್ತಿಕಹಾರಮಂಡಲಂ (ಕಾದಂಉ. ೧೦೫); ಶೃಂಗಾರಸದನಮಂ ಮಕುಟಾಂಗದ ಮಣಿಹಾರಕಟಕಕುಂಡಲನವದೇವಾಂಗವಸನಾತ್ತ ಪಟಲಕ ಸಂಗತಮಂ ಬಂದು ಲೀಲೆಯಿಂದೊಳಪೊಕ್ಕಂ (ಚಂದ್ರಪು. ೯-೨). **೩.** ರಾಶಿ; ಸಮೂಹ: 'ಪಟಲಿಕೆ' ಪರಾ. **ಪಟಳಕ:** **೨.** ಆಗಳ್ ಭಂಡಾರಿಗರ್ ವಿವಿಧಪಟಳಕಂಗಳೊಳ್ ತಂದು ಮುಂದಿಟ್ಟಿದ ಸುಗಂಧಾನುಲೇಪನಕುಸುಮವಸನಭೂಷಣಂಗಳಿನರಸಿಯುಂ ತಾನುಂ ಶೃಂಗಾರಂಗೆಯ್ದು (ಚಂದ್ರಪು. ೭-೧೪೯ ವ); ಸುರೇಂದ್ರನೆರ್ದು ರತ್ನಪಟಳಕದೊಳ್ ಕೇಶಪಾಶಮನಿಟ್ಟು ಪಾಲ ಸಮುದ್ರದೊಳಿಕ್ಕೆಮೆಂದು ದೇವರ್ಕಳ್ಗೆಯ್ವೊಳ್ ಕೊಟ್ಟು (ಬಂಪುರಿ. ೧೩-೨೮ ವ). [ಸಂ.]

**ಪಟಲಕಣ್ಣು** 'ಪಟಲಗಣ್ಣು' ನೋ.

**ಪಟಲಗಣ್ಣು,** ಪಟಲಕಣ್ಣು (ನಾ). ಕಣ್ಣಿಗೆ ಪೊರೆ ಬರುವ ಒಂದು ಬಗೆಯ ರೋಗ; ಕಾಚಬಿಂದು: ಪಟಲಗಣ್ಣಿಗೆ:—ಉತ್ತುತ್ತೆ ನಾಲ್ಕು ತೂಕ, ಕಪ್ಪಲಿ ನಾಲ್ಕು ತೂಕ, ನೀಲಾಂಜನ ನಾ(ಲ್ಕು)ತೂಕ, ಇಷ್ಟನ್ನು ಸಣ್ಣನಾಗಿ ಮರ್ದಿಸಿ . . . ಗುಳಿಗೆಯಂ ಮಾಡಿ ಆ ಗುಳಿಗೆಯನ್ನು ಮೊಲೆಯಹಾಲಲ್ಲಿ ತೇದು ಹಚ್ಚಲು ಪಟಲಗಣ್ಣು ಮಾಣ್ಗು೦(ವೈದ್ಯವಿ. ೭೯). **ಪಟಲಕಣ್ಣು:** ಪಟಲಕಣ್ಣಿಗೆ . . . ಗಿರಿಕರ್ಣಿಕೆಯ ಸಮೂಲ, ಶಂಖ, ಶುಂಠಿ, ಅರಿಸಿನ, ಸಮಾನಂಗೊಂಡು ನೀರಲ್ಲಿ ಅರೆದು ಗುಳಿಗೆಯ ಮಾಡಿ ಕಣ್ಣಿಗೆ ಹಚ್ಚೆ ಕೆಟ್ಟಗಣ್ಣು, ಸರ್ವರೋಗಂಗಳೆಲ್ಲ ಮಾಣುವುವು (ವೈದ್ಯವಿ. ೭೯). [ಪಟಲ$_2$ + ಕಣ್ಣು (<ಕಣ್)]

**ಪಟಲಪ್ರಾಂತ**(ನಾ). ಚಾವಣಿಯ ತುದಿ,—ಸೂರು: "ವಲೀಕಂ, ನೀವ್ರಂ, ಪಟಲಪ್ರಾಂತಂ— ೩ ಮಪ್ಪಾರದ ಚೂರು, ಲೋವೆಚೂರು, ಮನೆಯ ಚುಂಚು, ಹೊದಿಕೆಚೂರು . . . ಇದನ್ನು ಸೂರೆಂತಲೂ ಅನ್ನುವರು" (ಸಿದ್ಧಾಂಕಿ. ೧೦೩). [ಸಂ.]

**ಪಟಲಾಂ** 'ಪಟಾಲಂ' ನೋ.

**ಪಟಲಾಂತ** (ನಾ). = ಪಟಲಪ್ರಾಂತ: "ನೀವ್ರಂ, ವಳೀಕಂ, ಪಟಲಾಂತಂ — ಈ ೩ಸೂ(ರು)ರು" (ಹಲಾಯು. ೫೧-೧೪೮).

[ಪಟಲ$_2$ + ಅಂತ$_2$]

**ಪಟಲಾರ್ಬುದ** (ನಾ). ಕಣ್ಣಿನ ಪೊರೆಯಲ್ಲಾಗುವ ಹುಣ್ಣು; ಒಂದು ಬಗೆಯ ನೇತ್ರರೋಗ: ಅಂಧಕಾರ, ಪಟಲಾರ್ಬುದ ಮೊದಲಾಗಿ ಇವೆಲ್ಲ ಒಳಗಣ ಕೂಟಂಗಳನೆಲ್ಲಮಂ ಕೆಡಿಸುಗುಂ(ವೈದ್ಯವಿ. ೧೬೦).

[ಪಟಲ$_2$ + ಅರ್ಬುದ$_2$]

**ಪಟಲಿ** (ನಾ). ಗುಂಪು; ಸಮೂಹ: ತುಱುಗಿರ್ದ ನೀಲಮೇಘದ ತುಱುಗಲ್ ನೆಱೆ ಪಿಂಗಿ ಪೋಗೆ ತೆಱಪಾದುದಱಿಂದೆಱಗಿದಳಿಪಟಲಿ ಪೋಗಲ್ ತೆಱಪಾದುತ್ಪಲವನಂಬೊಲಿರ್ದುದು ಗಗನಂ (ಜಗವಿ. ೪-೫೯). [ಸಂ. ಪಟಲೀ]

**ಪಟಲಿಕೆ,** ಪಟಳಿಕೆ(ನಾ). **೧.** ಗುಂಪು; ಸಮೂಹ. **೨.** ಬುಟ್ಟಿ; ಗೂಡೆ. **೩.** ಕರಂಡಕ; ಸಂಪುಟ: ತದುತ್ಪಾಟಿತ ವಿನೀಳಕುಟಿಲಕುಂತಲಂಗಳನಮರತರುಕುಸುಮ ದಾಮೋದ್ದಾಮರಜೋರಂಜಿತಂಗಳನನರ್ಘ್ಯ ರತ್ನಮಯಪಟಲಿಕೆಯೊಳಾಂತು (ಆದಿಪು. ೯-೭೯ ವ); ನವೀನಪ್ರಸೂನ ಮಧು ವಿಲೀನಮಧುಕರ ಪಟಲಕರ್ಬುರಿತ ರತ್ನಪಟಲಿಕೆಗಳಿಂ . . . ಮನಂಗೊಳಿಪ ದೇವಪೂಜಾಗ್ರಹಮಂ ಪೊಕ್ಕು (ಪಂರಾಮಾ. ೧೨-೨ ವ); ನಳನಳಿಸುವ ಪೂವಿನ ವಿಕಾಸಲುಕಂಪನಳಿಗಳೆಂಜಲಿಸುಗುಮೆಂದು ತಳೆದಳೊರ್ವಳು ಚಂಪಕಗಂಧಿ ಕುಸುಮಾಕಳಿತ ಪಟಲಿಕೆಯನೊಸೆದು (ಕುರಾಸಾಂ. ೭-೮೧). 'ಪಟಲಕ' ಪರಾ. **ಪಟಳಿಕೆ:** **೧.** ವನದೊಳಗೆ ಪೊಕ್ಕನಧಿಪಂ ಘನಪಟಳಿಕೆಯೊಳಗೆ ಪುಗುವ ಚಂದ್ರನ ತೆಱದಿಂ (ಬಾಧಪು. ೩-೩೮). **೨.** ಆಕೆ ದೇವಕಿಯಾನಂದವಸನಂಗಳಂ ಪಟಳಿಕೆಯೊಳಿಕ್ಕಿ ತಂದಿತ್ತ ನೋಟ್ಪುದೆಂದು . . . ಕೋಱೆ (ನೇಮಿಪು. ೬-೫ ವ). [ಸಂ. ಪಟಲಿಕಾ]

**ಪಟವಾಸ** (ನಾ). **೧.** ಸುಗಂಧದ ಹುಡಿ; ಬುಕ್ಕಿ ಹಿಟ್ಟು: "ಪಿಷ್ಟಾತಚೂರ್ಣಮದು ಪಟವಾಸಂ" (ವಸ್ತುಕೋ. ೭೭-೧೫); ವಿತತೋದ್ಯತ್ಪಟವಾಸವಾಸಿತದಿಶಾಕಾಂತಾಗಣಂ ನಿರ್ಭರೋತ್ಥಿತ ಪಿಷ್ಟಾತಕ

ಪಿಂಜರೀಕೃತ ವಿಯಚ್ಚಕ್ರಂ . . . ಜಗಕ್ಕತಿಚೋದ್ಯಾವಹಮಾಗೆ (ಆದಿಪು. ೭-೩೮); ಕೆದಱುವ ಪಿಷ್ಟಾತಕಚೂರ್ಣಮುಂ ಪಸರಿಸುವ ಪಟವಾಸಮುಮೆಸೆಯೆ (ಮಲ್ಲಿಪು. ೪-೧೧೮); ಎಡೆವಱಿಯದು . . . ಅಡಿಗಡಿಗುತ್ಸವದೆ ತಳಿವ ಪಟವಾಸಚಯಂ (ಪುಷ್ಪಪು. ೧೨-೧೮). **೨.** = ಪಟಕುಟಿ. **೩.** ಒಳವಸ್ತ್ರ; ಒಳಪಾವಡೆ. [ಸಂ.]

**ಪಟವಾಸಕ** (ನಾ). = ಪಟವಾಸ: ೧. "ಪಿಷ್ಟಾತಃ ಪಟವಾಸಕಃ–೨ ಬಟ್ಟೆಗಳಿಗೆ ಪರಿಮಳ ಕಟ್ಟುವ ಗಂಧದ್ರವ್ಯದ ಹೆಸರು" (ಸಿದ್ಧಾಂತಿ. ೨೧೧); ಮಱುದಿವಸವವಭೃತವ ನೆಱೆ ವಿಸ್ತರಿಸಿದರು ಪನ್ನೀರ ಹೊಂಗೊಪ್ಪರಿಗೆಗಳ ಕುಂಕುಮದ ಪ[ಪಾಠಾಂ. ಘು]ಟವಾಸಕದ ರಚನೆಯಲಿ (ಕುಮಾರವಿ. ೧೦-೮೧). [ಸಂ.]

**ಪಟವಾಸಕ್ಷೋದ** (ನಾ). = ಪಟವಾಸ ೧: ಖರಾಂಶು ಪೂಟಿಪಟವಾಸಕ್ಷೋದದಿಂ ಕೇಕಿಸಂಕುಳಮಾಡಿತ್ತು ನಟೀಕದಂಬದೊಡವಂದ ಭ್ರಾಗಮುಭ್ರಾಂತಿಯಿಂ (ಪುಷ್ಪಪು. ೪-೩೭). [ಪಟವಾಸ + ಕ್ಷೋದ]

**ಪಟವಾಸಚೂರ್ಣ** (ನಾ). = ಪಟವಾಸ ೧: ದಿಶಾಯುವತೀಕೀಲಿಕೀರ್ಣಪಟವಾಸಚೂರ್ಣಂ . . . ಪೌರಾಂಗನಾವಶೀಕರಣಚೂರ್ಣ ಮಾದುದು ಬಳೌಘಧೂಳೀಚಯಂ (ಆದಿಪು. ೧೧-೧೫); ಪಸರಿಸಿ ಪಟವಾಸಚೂರ್ಣಮೆಸೆದುವು ದೆಸೆಯೊಳ್ (ಪುಷ್ಪಪು.೧೨-೧೭); ಪದೆದು ಚೆಲ್ಲುವ ಪಟವಾಸಚೂರ್ಣವು ನೃಪಸದನದೊಳೊಪ್ಪಿದವಾಗ(ಚಂಪ್ರಸಾಂ. ೨೪-೭೧). [ಪಟವಾಸ + ಚೂರ್ಣ$_2$]

**ಪಟವಿದ್ದೆ** (ನಾ). ಚಿತ್ರಲೇಖನ ಸಾಮರ್ಥ್ಯ,—ಕೌಶಲ; ಚಿತ್ರಕಲೆಯ ಚಾತುರ್ಯ (?): ಎತ್ತಿದ ತೋಳ ಮೊತ್ತಮೊದಲಂ ಗಜನಂ[ಪಾಠಾಂ.ಲಂ] ಪಟವಿದ್ದೆಗೆತ್ತಿ ದಂತೆತ್ತಮಪೂರ್ವಮಾಗೆ . . . ಚಲ್ಲವಾಡಿ ಪೂವೆತ್ತುವ ಮಾಲೆಗಾರ್ತಿಯರನಂದರಿಕೇಸರಿ ನಿಂದು ನೋಡಿದಂ (ಪಂಪಭಾ. ೪-೮೧). [ಪಟ + ವಿದ್ದೆ (< ಬಿಜ್ಜೆ$_2$)]

**ಪಟವಿದ್ಯೆ** (ನಾ). = ಪಟವಿದ್ದೆ: ಪಟವಿದೆ ನಾಲ್ಕುಮನ್ಯಭವವಲ್ಲಭನಂ ಪಟವಿದ್ಯೆಯೆತ್ತಲುಂ ಜಟಮಟಕರ್ಕಳಿಂ ತೊಡರೆ ಸುತ್ತಲುಮಪ್ಪುದಱಿಂ ಸಮಸ್ತ ಭೂಪಟಲಮನಾಂ ತೊಟಲ್ದಱಿಸಿ ನಿನ್ನೊಡಗೂಡಿ ನಿಜೇಶನಂ ಯಶಃಪಟಹನಿನಾದಮಂ ಪರಪುವೆಂ ದೆಸೆಯಂತುವರಂ (ಆದಿಪು. ೩-೪೫). [ಪಟ + ವಿದ್ಯೆ]

**ಪಟವಿಳಿಸು** (ಕ್ರಿ). ನೌಕೆಗೆ ಕಟ್ಟಿದ ಹಾಯಿಯನ್ನು ಬಿಚ್ಚು: ಕವಿಯ ಮನಸ್ಸು ಪಟವಿಳಿಸಿದ ಓಡಿನಂತೆ . . . ಇರುವಾಗ, ಅವರು ದೂರದಲ್ಲಿ ಒಂದು ಆಕೃತಿಯನ್ನು ಕಾಣುತ್ತಾರೆ (ಸೌಂದಸ. ೩೭). [ಪಟ + ಇಳಿಸು$_2$ (< ಇೞಿಸು)]

**ಪಟವೆ** (ನಾ). ರೇಷ್ಮೆ ವಸ್ತ್ರ: 'ಪಟವೆಗಾರ' ಪರಾ. [<– ಹಿಂ. ಮರಾ. ಪಟವಾ]

**ಪಟವೆಗಾರ** (ನಾ). ರೇಷ್ಮೆ ವಸ್ತ್ರಗಳನ್ನು ನೇಯುವವನು; ಪಟಕಾರ: ಪಟವೇಗಾರರು.–ಈ ಹೆಸರು ಪಟ್ಟೇಗಾರರು, ಅಂದರೆ ರೇಶಿಮೆ ಮಾಡುವವರು ಯೆಂಬುದರ ಅಪಭ್ರಂಶವಿರುತ್ತದೆಂದು ತೋರುತ್ತದೆ. ಪಟವೇಗಾರರು ತಾವು ಗುಜರಾಥದಿಂದ ಬಂದ ಕ್ಷತ್ರಿಯರೆಂದು ಹೇಳುತ್ತಾರೆ (ಕಭಾಗ. ೧೬೭). 'ಪಟ್ಟೆಗಾಜಿ' ಪರಾ. [<– ಮರಾ. ಪಟವೇಗಾರ್]

**ಪಟವೇಂಟೆ** (ನಾ). (ಬಟ್ಟೆಯನ್ನು ಬಳಸಿ ಮಾಡುವ) ಒಂದು ಬಗೆಯ ಬೇಟೆ: ಗೋರಿವೇಂಟೆ ಪಳಹರವೇಂಟೆ ಪಟವೇಂಟೆ . . . ಸೋಹುವೇಂಟೆಗಳೆನಿಪ್ಪ ಹೆಸರಂ ಹೊತ್ತು ಮೆಱೆವುತಿಪ್ಪೆಂಟುತೆಱದುಚಿತವೇಂಟೆಯನಾಡಿದಂ ಹರಿಶ್ಚಂದ್ರವಸುಧಾಧೀಶನು (ಹಚಕಾ. ೫-೪೯). [ಪಟ + ಬೇಂಟೆ]

**ಪಟವೈಶ್ಯಜ** (ನಾ). ಬಟ್ಟೆಯ ವ್ಯಾಪಾರ ಮಾಡುವವರ ವಂಶದವನು; ಜವಳಿ ವ್ಯಾಪಾರಿ: ಒಂದೆಡೆಯೊಳ್ ನವಚಾರುವಸ್ತ್ರಸಂಕುಳನಿಭೃತಂಗಳಾಗಿ ಪಟವೈಶ್ಯಜರಂಗಡಿಗಳ್ ನಿರಂತರಂ ತಳೆದವನೂನಸಂಪದಮನಿಂದ್ರನ ಭಾಂಡಗೃಹಂಗಳೆಂಬಿನಂ (ಬಾಧಪು. ೧-೧೨೭). [ಪಟ + ವೈಶ್ಯಜ]

**ಪಟಶಾಲೆ** 'ಪಡಸಾಲೆ$_1$' ನೋ.

**ಪಟಸಾಲೆ** 'ಪಡಸಾಲೆ$_1$' ನೋ.

**ಪಟಸ್ತಂಭ** (ನಾ). ಹಡಗಿನಲ್ಲಿ ಹಾಯಿಪಟಗಳ ಆಶ್ರಯಕ್ಕಾಗಿ ಹಡಗಿನ ಅಡಿಗಟ್ಟಿನಿಂದ ಎತ್ತರವಾಗಿ ನಿಲ್ಲಿಸಿರುವ ಕಂಬ; ಕೂವೆಕಂಬ: ಬಹಳ ದೊಡ್ಡ ಹಡಗಿಗೆ ಮೂರು ಪಟಸ್ತಂಭಗಳಿರುತ್ತವೆ (ಮುಂಬಯಿ. ೩-೧೧೭); ಗಾಳಿಯ ವೇಗಕ್ಕೆ ನೌಕೆಯೊಳಗಿನ ಪಟಸ್ತಂಭ ಎದುರಿಗೆ ಬಾಗಿ ಮೈಮೇಲೆ ಬೀಳುವಂತಾಯಿತು (ಬಂಕಿಮ. ೧೦೦); ಒಂದು ತರಹ ಬಿದಿರು ಬೆಳೆಯುತ್ತದೆ. ಇದು . . . ಎತ್ತರದಲ್ಲಿ ದೊಡ್ಡ ಹಡಗಿನ ಪಟಸ್ತಂಭದಷ್ಟಿರುತ್ತದೆ (ಪ್ರವಾಜ. I, ೨೦). [ಪಟ + ಸ್ತಂಭ]

**ಪಟಹ** (ನಾ). ಒಂದು ಬಗೆಯ ಚರ್ಮವಾದ್ಯ: "ಆನಕಃ, ಪಟಹಃ, – ಈ ೨ ಪಡಡಕ್ಕೆ" (ಹಲಾಯು. ೧೭-೯೭); ನೆಗಟ್ದರೆ ಪುಣ್ಯಾಹಸ್ವರ ಮೊಗೆದಿರೆ ಪಟುಪಟಹಕಾಹಳಾರವನಾಗಳ್ ಪುಗವೇಟ್ದಂ . . . ತನ್ನ ಚಟ್ಟರಂ ಕಳಶಭವಂ (ಪಂಪಭಾ. ೨-೬೯); ಭೇರೀ ಮೃದಂಗ ಮರ್ದಳ ಪಟಹಕಹಳಾಶಂಖರವಜನಿತರಭಸಮುಂ (ಕಾದಂಪೂ. ೪೨೮); ಅಗಿವ ಪಟಹಮೃದಂಗಕಹಳಾದಿಗಳ ಕಳಕಳ . . . ದಶದಿಕ್ಕುಗಳ ಮಾತಾಡಿಸೆ (ಕುಮಾರಭೀ. ೧-೯೬). [ಸಂ.]

**ಪಟಹಡಕ್ಕೆ** (ನಾ). ಒಂದು ಬಗೆಯ ವಾದ್ಯ: ಉಭಯಪಕ್ಷದೊಳ್ ಸೂಟಿಸುವ ದುಂದುಭಿಗಳ್ ಪೊಡೆವ ಪಟಹಡಕ್ಕೆ [ಪಾಠಾಂ.ಪಡಹಢಕ್ಕೆ, ಪಡಢಕ್ಕೆ]ಗಳ ಬೊಬ್ಬಿಱಿವ ಪೇಚರಿಯರ ತುಮುಳರವದೊಳ್ ತೊಡರ್ದು (ಅರ್ಧನೇ. ೩-೧೬ ಪ). [ಪಟಹ + ಡಕ್ಕೆ]

**ಪಟಹಾರಿ** (ನಾ). ಬಟ್ಟೆಯನ್ನು ನಾಶಮಾಡುವಂಥದು; ಜಿರಲೆ: "ಪಟ[ಪಾಠಾಂ. ಟಾ]ಹಾರಿ ಜಿಱಿಲೆಯಕ್ಕು" (ಮಂಗರಾ. ೪೯-೧೩). [ಸಂ. ಪಟಹಾರಿನ್]

**ಪಟಳ** 'ಪಟಲ$_2$' ನೋ.

**ಪಟಳಕ** 'ಪಟಲಕ' ನೋ.

**ಪಟಳಿಕೆ** 'ಪಟಲಿಕೆ' ನೋ.

**ಪಟಾಂಗಣ** (ನಾ). ವಿಸ್ತಾರವಾದ ಬಯಲು,—ಮೈದಾನ; ಪ್ರಾಂಗಣ: ಗುಡಿಯ ಪಟಾಂಗಣದಲ್ಲಿ ಹಳ್ಳಿಯ ಯುವತಿಯರ ತಂಡವು ನೆರೆದು, ಹೆಜ್ಜೆಯ ಕುಣಿತವನ್ನು . . . ನೋಡುತ್ತಿತ್ತು (ಜೀವರಂ. ೨೨); ಪ್ರಾಥಮಿಕ ಶಾಲೆಯ ಮುಂದಿನ ಪಟಾಂಗಣದಲ್ಲಿ ದೊಡ್ಡದೊಂದು ಸಭೆ ಸೇರಿತು (ಪ್ರಬಂಧ. ೯೭). [<– ಮರಾ. ಪಟಾಂಗಣ]

**ಪಟಾಕಿ, ಪಟಾಕ್ಷಿ, ಪಠಾಕಿ, ಪಠಾಕ್ಷಿ, ಫಟಾಕ್ಷಿ** (ನಾ). ಬೆಂಕಿ ಮುಟ್ಟಿಸಿದ ಕೂಡಲೆ ಹೊತ್ತಿಕೊಂಡು ಡಬ್ ಎಂದು ಸದ್ದು ಮಾಡಿ ಹಾರುವಂತೆ, ಸಿಡಿಮದ್ದು ತುಂಬಿ ತಯಾರಿಸಿದ ಕಾಗದದ ಕೊಳವೆ; ಪಟಾಸು; ಗರ್ನಾಲು: ನನಗೆ ಎಷ್ಟೊಂದು ಮತಾಪು, ಪಟಾಕಿ, ಅಪ್ಪ ಕೊಟ್ಟಿದ್ದಾನೆ (ಪಠಾಕ್ಷಿ. ೪); ಹುಡುಗರು ಈಗಲೇ ಪಟಾಕಿ ಪಟಾಸು ಸುರುಸುರುಬತ್ತಿಗಳನ್ನು ಹತ್ತಿಸುತ್ತಿದ್ದರು (ಹುಟ್ಟಿದ. ೭೨). **ಪಟಾಕ್ಷಿ**: ಅಲಿಯ ಅಕ್ಷತೆ ಗಿರಿದರಿ ಗಾಯನ ಸಿಡಿಲ ಪಟಾಕ್ಷಿಯು ದಿಶೆಗಳ ನರ್ತನ (ಕರುಶ್ರಾ. ೯೩-೧೨); ಟಿಳಕರು . . . ಎಲ್ಲ ಪಟಾಕ್ಷಿಗಳನ್ನೂ ಬಾಲಮಿತ್ರರೊಂದಿಗೆ ಹಾರಿಸಿ ಮುಗಿಸಿದರು (ಸ್ಮೃತಿಚಿ. ೧೧೯). **ಪಠಾಕಿ**: "ಹೇಗೆ ಬೇಕಪ್ಪಾ ಪಟಾಯಿ ಪಠಾಕಿ ?" ಎಂದು ಗೋಪಾಲಯ್ಯ

ಕೇಳಿದರು (ಪಟ್ಟಜೀ. ೧೯೯). **ಪಠಾಕ್ಷಿ :** ಪಠಾಕ್ಷಿ ಹೊಟ್ಟೆಯೊಡೆದು, ಉರಿದು ಸೀದು ಹೋಯಿತು (ಪಠಾಕ್ಷಿ. ೨). **ಫಟಾಕ್ಷಿ :** ಬರಿ ಒಂದು ಫಟಾಕ್ಷಿಯನ್ನು ಹಾರಿಸಿದರೂ ಹಾರಿಹೋಗುವ ಹಕ್ಕಿಯಂತೆ ಹೃದಯ ಸಂಪನ್ನತೆಯಿದ್ದರೂ ವ್ಯಕ್ತಿಯು ಅಜ್ಞನಾಗುತ್ತಾನೆ (ನವ್ಯಕಾ. ೧೩).

[←ಹಿಂ. ಪಟಾಕಾ, ಪಟಾಖಾ, ಫಟಾಕಾ; ಮರಾ. ಫಟಾಕಾ, ಫಟಾಕೀ]

**ಪಟಾಕ್ಷಿ** 'ಪಟಾಕಿ' ನೋ.

**ಪಟಾಟೋಪ,** ಪಟಾಟೋಪು (ನಾ). ಆಡಂಬರ; ಸಡಗರ; ಸಂಭ್ರಮ : ಸೂಕ್ಷ್ಮಶರೀರದ ಫೋಟೋ ತೆಗೆಯುವ ಸಾಹಸವಂತರೂ ಹೊರಟಿದ್ದಾರೆ. ಅಮೆರಿಕ ಮುಂತಾದ ದೇಶಗಳಲ್ಲಿ ಈ ಬಗೆಯ ಪಟಾಟೋಪ ಬಹಳ (ಜೀವಾತ್ಮ. ೨೫೮); ಬಾದಶಹರು ದೇವರ ಸೇವಕರಂತೆ; ನಮಗೇಕೆ ಈ ಪಟಾಟೋಪ ಎನ್ನುತ್ತಾರೆ (ತಿವಥ. ೪೩); ದಿಲ್ಲಿಯಿಂದ ಕವಿಗಳು ಬಂದು ಸೇರಿದೊಡನೆಯೇ ಕವಿತ್ವದ ಪಟಾಟೋಪವು ಹೆಚ್ಚಿತು (ಉರ್ದುಪಾ. ೧೮). **ಪಟಾಟೋಪು :** ಇವಗೆ ಪುರುಷತ್ವವಿಲ್ಲಾ. ಸುಮ್ಮನೆ ಪಟಾಟೋಪು ಮಾಡುತ್ತಾನೆಯೆಂದು ಉಪಹಾಸ್ಯ ಮಾಡಿ ನಕ್ಕನು (ತಾತ್ಪನಿ. ೯೬-೧). 'ಅಟಾಟೋಪ' ಪರಾ.

[< ಸಂ. ಫಟಾಟೋಪ / ತಮಿ. ತೆಲು. ಪಟಾಟೋಪ]

**ಪಟಾಟೋಪು** 'ಪಟಾಟೋಪ' ನೋ.

**ಪಟಾಣಿ** 'ಪಠಾಣ' ನೋ.

**ಪಟಾಪಟಿ**$_1$ 'ಪಟ್ಟಿ$_2$' ಪರಾ.

**ಪಟಾಪಟಿ**$_2$ (ನಾ). ಪಟಪಟ ಎಂದು ಮಾತನಾಡುವಿಕೆ: ಅವರ ಪಟಾಪಟಿಗೆ ಮರುಳಾಗಿ ನನ್ನ ತಂದೆ ಸಹ . . . ನನಗೆ ಕಾಗದ ಬರೆದೇ ಬಿಟ್ಟರು! (ಸ್ವಪ್ನಹೊ. ೧೬೨). [← ಹಿಂ. ಪಟಾಪಟ್]

**ಪಟಾಯಿತ** (ಗು). ೧. ನಿಪುಣನಾದ; ಚತುರನಾದ : ಆತನು ಇಂಥ ಪಟಾಯಿತ ಕಳ್ಳನೆಂಬುದು ಮೊದಲೇ ಗೊತ್ತಿದ್ದರೆ ನಾನು . . . ನಿಶ್ಚಿಂತೆಯಿಂದ ಮಲಗಿಕೊಳ್ಳುತ್ತಿರಲಿಲ್ಲ (ಗುಲಾಹೂ. ೮೩). (ನಾ). ೨. ಚತುರ; ನಿಷ್ಣಾತ; ನಿಪುಣ : ನಾನೇ ಅಲ್ಪಾವಧಿಯಲ್ಲಿಯೆ ಲಂಚ ಹೊಡೆಯುವುದರಲ್ಲಿ ಪಟಾಯಿತನಾಗಿ ಬಿಟ್ಟೆ (ನಾವೋಲೀ. ೧೧೫); ಅಂತೂ ನೀವು ಪಟಾಯಿತರಪ್ಪ ಈ ವಿದ್ಯೆಯಲ್ಲಿ (ಜರತಾ. ೩೮); ಚಟುವಟಿಕೆಗಳಲ್ಲಿ ಪಟಾಯಿತ ಎಂಬ ಮಾತು ಅವರಿಗೆ ಅಪರಿಚಿತವೇನಲ್ಲ (ಗ್ರಾಮಾಯ. ೨೬೬). [←ಮರಾ. ಪಟಾಈತ್, ಪಟ್ಟಾಈತ್]

**ಪಟಾಯಿಸು,** ಪಟಾಸು$_1$(ಕ್ರಿ). ಮನಸ್ಸಿಗೆ ಬರು; ಒಪ್ಪಿಗೆಯಾಗು; ಮಾನ್ಯವಾಗು : ಅವ್ವನಿಗೂ ನನ್ನ ಮಾತು ಪಟಾಯಿಸಿತು (ವೈನಿ. ೩೦೨); ನಾ ನಿಮಗ ಒಂದು ಮಾತು ಹೇಳತೀನಿ. ಅದು ಪಟಾಯಿಸದಿದ್ದರೆ ನಾ ಜಾನಕೀಬಾಯಿ ಅಲ್ಲ! (ಸಮಜೀ. ೩೪೨). **ಪಟಾಸು**$_1$ : ಎಲ್ಲಾ ಜನಕ್ಕ ಈ ವಿಚಾರ ಪಟಾಸೂದಿಲ್ಲ (ಅಪನಾ. ೨೦೧); ರಾವಜೀಕಾಕಾ ಅವರಿಗೆ ಗಿರಿಜಾನ ಸಲಹೆ ಪಟಾಸಿತು (ದೀಪಹ. II, ೪೬); ನಿಮಗ ಹ್ಯಾಂಗ ಅನಸತದ ಈ ಮಾತು? ಪಟಾಸಿದರ ಹೇಳ್ರಿ (ದೀಪನಿ. ೧೫೫).

[ಪಟಾ$_0$ (ℙ← ಮರಾ. ಪಟಣೇ = ಮಾನ್ಯವಾಗು) +– ಇಸು$_3$]

**ಪಟಾರನೆ** (ಅ). 'ಪಟಾರ್' ಎಂಬ ಶಬ್ದದೊಡನೆ : ಅವನಿಗೆ ಪಟಾರನೆ ಏಟು ಬಿತ್ತು (ರೂಢಿ). [ಪಟಾರ್$_0$+–ಅನೆ$_1$]

**ಪಟಾರು** (ನಾ). ರೇಷ್ಮೆ ವಸ್ತ್ರ : ಮಳೆಗಾಲದಲ್ಲಿ ಜನರು ಪಟಾರನ್ನು ಮೈಕೈಗೆಲ್ಲಾ ಹೊದೆದುಕೊಳ್ಳುತ್ತಾರೆ (ಪ್ರವಾಇ. II, ೧೬೫).

[←ಹಿಂ. ಪಟೋರ್]

**ಪಟಾಲಂ,** ಪಟಲಾಂ, ಪಟಾಲವು, ಪಟಾಲಮ್ಮು (ನಾ). ೧. ಕಾಲ್ದಳದ ಒಂದು ದೊಡ್ಡ ಭಾಗ; (ಸೈನ್ಯದ)ದಳ; ತುಕಡಿ: ಎರಡು ಪಟಾಲಂ ಪೆರಿಯಾಪಟ್ಟಣದ ಕೋಟೆ ಒಳಗೆ ಇಟ್ಟು ಉಳಕೆ ಫೌಜು ಸಮೇತ ಪೆರಿಯಾಪಟ್ಟಣದ ಹಳೇಕೋಟೆ ಸಮಾಪದಲ್ಲು ಇಳುಕೊಂಡರು (ರಾಜೇಂದ್ರ. ೬೨); ಪ್ರತಿ ಪಟಾಲಂನಲ್ಲಿಯೂ ೫೦೦ ಮಂದಿಯಂತೆ ಒಟ್ಟು ೪೦೦೦ ಬಾರ್ ಶಿಪಾಯಿಗಳಿದ್ದರು (ಮಹಾವಂ. II, ೫೧). ೨. (ಹಿಂಸೆ ಮಾಡುವ) ಗುಂಪು; (ತುಂಟ ಸ್ವಭಾವದ) ತಂಡ : ಹುಡುಗರು ಇನ್ನೂ ಸ್ಕೂಲು ಬಿಡುವುದಕ್ಕಿಲ್ಲ, ಆಗಲೇ ಅವರು ಒಂದು ಸಣ್ಣ ಪಟಾಲಂನ ತಂದೆಗಳಾಗಿರುತ್ತಾರೆ (ಬಂಕಿಮ. ೪೭೯); ಅವತ್ತು ರೌಡಿಗಳ ಪಟಾಲಂ ಬಂದು ಕಿಟಕಿಯೆಲ್ಲ ಮುರಿದು ಹಾಕಿದರಲ್ಲ (ಸ್ವಾಮಿನ್ನೀ. ೧೬೪). **ಪಟಲಾಂ :** ೨. ನಿನ್ನನ್ನು . . . ಸಾಬೀತಿನಲ್ಲಿಟ್ಟುಕೊಳ್ಳುವುದು ತೋಮನಿಗೆ ತುಂಬ ಸುಲಭವಲ್ಲ. ಈ ಪೋಕ್ರಿಗಳ ಪಟಲಾಂನಲ್ಲಿ (ಹೊಸಕ್ಷಿ. ೫೧). **ಪಟಾಲವು :** ೧. ಫೌಜುಗಳಿಗೆ ಸೇರಿದ ಜನಗಳ ಆಯುಧಗಳು . . . ಪಟಾಲವಿನ ಸಂಬಂಧವಾದ ಶಸ್ತ್ರಾಸ್ತ್ರಗಳು (ಗ್ರಾಮಾಕ. ೩೬). ೨. ಆ ಸಾಹೇಬರ ಜೊತೆಗೆ ಪಾಟೀಲ, ಕುಲಕರ್ಣಿ, ನಾಯಿಕ ಇವರೂ ಮತ್ತೆ ಅವರ ಕೆಲವು ಮಂದಿಯೂ ಸೇರಿ ಒಂದು ಪಟಾಲಮೇ ಬಂದಿತ್ತು (ಸ್ಮೃತಿಚಿ. ೨೩೫). **ಪಟಾಲಮ್ಮು :** ೨. ಕಾಲೇಜಿನಲ್ಲಿ ಆ ಯುವಕ ಪಟಾಲಮ್ಮು . . . Parade ಮಾಡೋವಾಗ (ಕಂಕಕೂ. ೧೮); ಒಂದು ದಿನ ಇದ್ದಕ್ಕಿದ್ದಂತೆ ನನ್ನೂರಿಗೆ ಅವರ ಪಟಾಲಮ್ಮೇ ಬಂದಿಳಿಯಿತು (ನನ್ನೂರು. ೨೦೭).

[←ಇಂ. Battalion./ತಮಿ. ಪಟ್ಟಾಳಮ್ ; ಮಲ. ಪಟಾಲನ್; ತುಳು. ಪಟಾಲಂ, ಪಟಲಾಂ ; ತೆಲು. ಪಟಾಲಮು, ಪಟಾಳಮು]

**ಪಟಾಲವು** 'ಪಟಾಲಂ' ನೋ.

**ಪಟಾಲಮ್ಮ** (ನಾ). ಒಂದು ಕ್ಷುದ್ರ ದೇವತೆಯ ಹೆಸರು : ಪಟಾಲಮ್ಮನ ಗುಡಿಯ ಹತ್ತಿರವೇ ಅವರ ಮನೆ ಇದೆ (ರೂಢಿ). 'ಪಟ್ಲಾಯಿ' ಪರಾ. [?+ ಅಮ್ಮ$_2$]

**ಪಟಾಲಮ್ಮು** 'ಪಟಾಲಂ' ನೋ.

//**ಪಟಾವಳಿ** 'ಪಟ್ಟವಳಿ' ನೋ.//

**ಪಟಾವುಜ,** ಪಟ್ಟಾವುಜ (ನಾ). ಒಂದು ಬಗೆಯ ಚರ್ಮವಾದ್ಯ : ಡಿಂಡಿಮ ಅವುಜ ಪಟಾವುಜ ಮೃದಂಗ ಮರುಜ ಭೇರಿ ಮೊದಲಾದ ವಾದ್ಯವನೂವುದು ಪ್ರಸಾದಲಿಂಗದಲ್ಲಿ ಶಿವಲಿಂಗ (ಆದಪ. ೬ ೧೨); ಕಂಡಾವುಜ ಪಟಾವುಜ ನಿಬದ್ಧಿವಿಡಿದಿರ್ದ ಕುಡುಪಾವುಜವಡಾವುಜಂಗಳು ಶಬ್ದದುಗ್ಗಡಣೆಯ ವೃದ್ಧಿವಡೆಯಿಸೆ (ಸೌಂದಪು. ೮-೬). **ಪಟ್ಟಾವುಜ :** ಕಂಡಾವುಜ ಪಟ್ಟಾ[ಪಾಠಾಂ. ಟಾ]ವುಜ ಕುಡುವಾವುಜ ಅಡಾವುಜಮೆಂಬ ನಾಲ್ಕುತೆಱದ ಅವುಜಮನೋಜೆಯಿಂ ಬಾಜಿಸುವಾವುಜಕಾಜಿರಿಂ (ವಿವೇಕ. ೧೯೧). [<ಪಟಹ+ಅವುಜ]

**ಪಟಾಸು**$_1$ 'ಪಟಾಯಿಸು' ನೋ.

**ಪಟಾಸು**$_2$ (ನಾ). 'ಢಂ' ಎಂದು ಶಬ್ದವನ್ನುಂಟುಮಾಡುವ ಪುಡಿಯನ್ನು ಬಟ್ಟೆಯಲ್ಲಿ ಸುತ್ತಿ ಮಾಡಿದ, ಮದ್ದಿನ ಒಂದು ಬಗೆಯ ಸಾಧನ : ಹೊರಗಡೆ ಹುಡುಗರು ಪಟಾಸನ್ನು ಪ್ರಳಯಕಾಲದ ಸಿಡಿಲಿನಂತೆ ಶಬ್ದ ಮಾಡುತ್ತಾರೆ (ಗರುಡಾ. ೬೦); ತೋಳದ ಎಲೆಗಳು ಗುಡಿಸಿಲಿನ ಛಾವಣಿ . . . ಒಣಗಿದ ಗಂಡು ಹೂಗುತ್ತಿಗಳು ದೀಪಾವಳಿಯಲ್ಲಿ ಪಟಾಸು (ಹಸುಹೊ. ೩೩೮).

[ದೇ.॥ ತಮಿ. ಪಟಾಚು, ಪಟ್ಟಾಚು ; ಮಲ. ಪಟ್ಟಾಸ್]

**ಪಟಿ** (ನಾ). ೧. ನಾಟಕರಂಗದ ತೆರೆ,—ಪರದೆ. ೨. ಚಿತ್ರಲೇಖನಕ್ಕೆ ಬಳಸುವ ಒರಟಾದ ಹಾಗೂ ದಪ್ಪವಾದ ಬಟ್ಟೆ. ೩. ಬಣ್ಣದ ಬಟ್ಟೆ. [ಸಂ.]

**ಪಟಿಂಗ** 'ಫಟಿಂಗ' ನೋ.

**ಪಟಿಂಗತನ** 'ಫಟಿಂಗತನ' ನೋ.

**ಪಟಿಕ,** ಪಟಿಕ$_1$, ಪಟಿಗ$_1$, ಪಟಿಕೆ$_1$, ಪಟುಕ$_1$, ಪಳಕು$_2$, ಪಳಿಕ, ಪಳಿಕು, ಪಳುಕ, ಪಳುಕು, ಪಳ್ಕು, ಫಟಿಕ, ಹಳಕು, ಹಳುಕು (ನಾ). ೧. ಸ್ವಚ್ಛ ಹಾಗೂ ಪಾರದರ್ಶಕವಾದ ನೀರ್ಗಲ್ಲಿನಂತಹ ಒಂದು ಬಗೆಯ ಖನಿಜಶಿಲೆ ; ಸ್ಫಟಿಕ : ಥಳಥಳಿಪ ಪಟಿಕದ[ಪಾಠಾಂ. ಳುಕಿನ] ಶಿಲೆಯೊಳಹ ವಿಳಸಿತ ಪ್ರತಿಬಿಂಬದಂತೆ . . . ಎಲ್ಲೆಡೆಯೊಳುಂ ತಾನೆಯಾಗಿದ್ದಹನಲಾ ವಿಶ್ವವಲ್ಲಭಂ (ಬಸವ.೫೧–೩೩) ; ಅಳಲೆಕಾಯಿ, ಶುಂಠಿ,ಸಕ್ಕರೆ, ಬಿಳಿಗಾರ, ಪಟಿಕ, ಪಟ್ಲುಪ್ಪು, ಜೇನುತುಪ್ಪ ಇವನ್ನು ನಿಂಬೆ ಹಣ್ಣಿನ ರಸದಲ್ಲಿ ಮೃದುವಾಗುವಂತೆ ಅರೆದು ಗಂಡೂಷ ಮಾಡಲು ಛರ್ದಿ ನಾಶವಾಗುವುದು (ಸಕವೈ.ಪರಿ.೪೬೧) ; ಅಗ್ನಿಪರ್ವತವು ಉಗುಳಿದ ಮಣ್ಣು ಕಲ್ಲು ಲಾವಾಪ್ರವಾಹಗಳಿಂದ ಪಟಿಕ, ಬಿಳಿಗಾರ, ಗಂಧಕ ಮೊದಲಾದ ಪದಾರ್ಥಗಳನ್ನು ತಯಾರಿಸುವರು(ಕಪಪು.೫–೧೪೫). ೨. ಒಂದು ಬಗೆಯ ಹೂವು; ಗೊರಟೆ; ಸ್ಫಟಿಕ : ಕುರವಕ, ಪಟಿಕದ ಹೂ, ಸ್ಫಟಿಕದ ಹೂ (ವೈಡಿಗಿ. ೧೧–೧೯೫). **ಪಟಿಕ$_1$ :** ೧. ಪೊಳೆವ ಪಟಿಕವ ಚರುಚೆ ಕಣ್ಣಳನುಳ್ಳಿಸೆ ಪಿಡಿದು ತಿರುಪುತಿರ್ಪ ಸರಲ್ ಮಾರ್ಪೊಳೆಯೆ ರವಿಕಿರಣ ದೊಳ್ ಕಂಡಳವಳಿದತ್ತಂಗಭೂಮಿಪತಿಚತುರಂಗಂ (ಮಹಾನೇ. ೧೨–೨೧೬) ; ಈ ತಡಸಲದ ಹತ್ತರ ಅಭ್ರಕವೂ ಪಟಿಕವೂ ಹೇರಳವಾಗಿ ಉಂಟು (ಮುಂಬಯಿ. ೫–೬೮) ; ಇದರ ಹೊರ್ತು ಪಟಿಕಾ, ಪೊಬ್ಬರಿ ಎಣ್ಣೆ ಮುಂತಾದವುಗಳ ಪೀಪಾಯಿಗಳು ಇರುತ್ತವೆ (ಮುಂಬವ್ಯಾ. ೨೫೮). **ಪಟಿಗ$_1$ :** ೧. ಪಟಿಗ, ಕೆಂಪದು, ಅರಿಸಿದ್ದು (ಮುಂಬವ್ಯಾ. ೧೨೨). **ಪಟಿಕೆ$_1$ :** (೬). **ಪಟುಕ$_1$ :** ೧. ಪಟುಕದ ಘಟದಲ್ಲಿ ರಜನೀರ ತುಂಬಿ ಧವಲ ಪರಿಸೂತ್ರವುಂಟಿ (ಮೆಜಿಮಿಂ. ೪೭–೧೧). **ಪಳಕು$_2$ :** ೧. ಎಳೆ ಮಿಂಚಿನಂದದ ಬೊಂಬೆಯೊ . . . ಪಳಕಿನ ಪುತ್ತಳಿಯೋಯೆನೆ ಕ್ರಮದಿಂದ ಹೊಳೆವುದೊಳಗೆ ತನ್ನ ರೂಪು (ಭರಚ. ೨–೭೭). **ಪಳಿಕ :** ೧. ಪಳಿಕಂ [ಪಾಠಾಂ. ಕು],ಫೇಳಿಗೆ . . . ಪುಳಂ–ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟ್ಟಿಯುಂ ಕುಳಂಗಳಾದುವು (ಶಮದ. ೨೨ ವೃತ್ತಿ). **ಪಳಿಕು :** ೧. “ಸ್ಫಟಿಕಕ್ಕೆ ಪಳಿಕೆನಿಕ್ಕುಂ” (ಸಂಜೀವ. ೨೯) ; ತಳತಳಿಸಿ ತೊಳಗಿ ಬೆಳಗುವ ಪಳಿಕಿನ ಸಟಿಯೊಂದು ಮಣಿಯೊಳಿರ್ದರಲೆ ಮಹೋಜ್ಜ್ವಳ ತುಹಿನಕಿರಣಮಂಡಲದೊಳಗಣ ಹರಿಣಂಬೊಲೊಪ್ಪಿ ತೋಱುತ್ತಾಗಳ್ (ಕಾವ್ಯಸಾ.೧೦೫೦.ಶೂದ್ರಕ);ಜಿನಚಂದ್ರಕುಮಾರಂ ಕ್ಷೀರನೀರಪೂರಪ್ಲವಾಂತ ರಸ್ಥಂ ಪೋಲ್ತಂ ಕನಕರುಚಿಯಿಂದಮಾ ಪಳಿಕಿನ ಕೊಡನೊಳಗಿರ್ದ ನಂದ ದೀವಿಗೆಯಿರವಂ (ಶಾಂತಿಪು. ೧೦–೪೨) ; ಹರಿನೀಲದ ನೆಲೆಗಟ್ಟಿಜ್ಜ ರಾಗ ದಡಿಗಲ್ಗಳೆಸೆವ ಪಳಿಕಿನ ಕಂಭಂ (ವರ್ಧಮಾ. ೧–೬೯). **ಪಳುಕ :** ೧. ಪಳುಕದಿಂ ಕೈಗೈದು ಮಿಱುಗುವ ಕಳಶದೊಳು ದೀವಿಗೆಯನಿಟ್ಟು ಱಿ ಬೆಳಗುವಂದದಿ (ಶಂಕದಾ. ೫–೫). **ಪಳುಕು :** ೧. ಪಳುಕಿನ ಪಾಪೆಯ ನಮರ್ದಿಂ ತೊಳೆದಂತೊರ್ವೊಱಬದ ದಿವ್ಯವಪು . . . ಏಂ ವಿಳಾಸಮಂ ತಾಳ್ದಿದುದೋ (ಅಜಿಪು. ೬–೩೯) ; ಪಳುಕಿನ ಪುತ್ಥಳಿಕೆಯಂತೆ ಕರಮೆಸೆ ದಿರ್ದಳ್ (ಕಾದಂಪೂ. ೭೭೮) ; ಪಳುಕಿನ ಕೇರ್ಗಳ್ ಪವಳದೆಸೆವ ಕಂಬಂ ಕರ್ಕೇತನದ ತೊಲೆ (ಕಾವ್ಯಾವ. ೫೧೮) ; ಪಳು[ಪಾಠಾಂ. ಳಿ]ಕಿನ ಪಾಂಗಿ ನಂತಿರೊಳಗುಂ ಪೊಱಗುಂ ಮಿಗೆ ನಿರ್ಮಳತ್ವದಿಂ ತೊಳಗುಗುಂ (ವಿಷ್ಣುಪು. ೩–೨–೨೬). ೩. ಚೂರು; ತುಣುಕು; ಹರಳು: ಎಳೆವೆಱೆಯ ಮುಱಿ ಗಳನೇಳಿಪ ಕಪ್ಪುರದ ಪಳುಕುಗಳುಮಂ . . . ಮಲಯಜವಿಲೇಪನಮುಮ ನರಸಂಗೆ ತೋಱಿ (ಕಾದಂಉ.೧೮೮). ‘ಕಪ್ಪುರವಳುಕು’ ಪರಾ. **ಪಳ್ಕು :** ೩. ‘ಕಪ್ಪುರವಳ್ಕು’ ಪರಾ. **ಫಟಿಕ :** ೧. ರಾಡಿನೀರೊಳಗೆ ಪಟಿಕದ ಪುಡಿ ಚೆಲ್ಲಿದರೆ ರಾಡಿಯು ತಳಕ್ಕೆ ಕೂಡ್ರುತ್ತದೆ ; ಆದರೆ ಫಟಿಕದಿಂದ ನೀರಿನ ರುಚಿ ಕೆಡುತ್ತದೆ (ಮುಂಬಯಿ. ೫–೧೬೦) ; ಫಟಿಕ, ಮುಂತಿಯ ಮಣ್ಣು, ಕುಂಬಾರರ ಮಣ್ಣು, ಕಾವಿ, ಪೀವಡಿ ಮುಂತಾದ ಮೃತ್ತಿಕೆಗಳು ಈ ಧಾತುವಿನಿಂದ ಹುಟ್ಟುತ್ತವೆ (ಮುಂಬಯಿ. ೬–೧೭). **ಹಳಕು :** ೧. ನಾಲಗೆಯ ತುದಿಯೆ ನೆಲೆಯಾದ ಅಚ್ಚ ಬಿಳಿ ಹಳಕಿನಂಗದವಳ ಸರಸ್ವತಿಯ ಮೈ ಮೂರ್ತ ಮಾಣಿಕವು ಅಹುದು ಕಂಡ ಹವಳ ! (ಮುಕ್ತಕಂ. ೨೩–೧೧). ೩. ಲೋಳೆಸರದ ಹಳಕುಗಳಿಗೆ ಅಳಲೆಕಾಯಿ ಚೂರ್ಣವನ್ನು ಹಾಕಿಟ್ಟರೆ ನೀರು ಬರುವುದು (ಸಕವೈ.ಪರಿ. ೫೦೩) ; ಉಸಿರ ತೇವ ಕಲ್ಲಾಗಿ ಮೈಯ ಕೂದಲ ಮೇಲೆ, ದವಡೆ, ಮುಸುಡಿ, ಕಣ್ಣೆವೆಗಳ ಮೇಲೆ ಹಳಕು ಹಿಮವಾಗಿ ನೆಲೆಸಿತ್ತು (ಎಳಜೀ.೯೦) ; ಕೊರಡು ಅಪ್ಪಳಿಸಿ, ಘಳಾರನೆ ಗಾಜುಗಳನ್ನು ಒಡೆಯಿತು. ಹಳಕುಗಳು ಪಳಪಳ ಉದುರಿದವು (ರಕ್ತಧ್ವ. ೩೩೧). **ಹಳುಕು :** ೧. ತರುಣಕುರಂಗವಿಲೋಚನೆಯೊರ್ವಳ್ ಹರಸದಿ ಹೊಸ ಹಳುಕಿನ ಬಟ್ಟೆಲೋಳಿಟ್ಟಿರವಂತಿಯ ಪೂವಂ ತೆಗೆದುರು ವೇಣೀಮೂಲದೊಳಿಡಲು (ಜಯಶಾ. ೧೧–೧೭). ೩. ಪಚ್ಚಗರ್ಪೂರದ ಪರಿಮಳದ ಹಳುಕಂ ಬೆರಸಿ (ಆನೀರ. ದೇ. ೮೪–೩) ; ಚಂದದೋಗರ ದೊಳಗೆ ಚಂದ್ರಿಕೆಯು ಹೊಸ ಹಳುಕಿನಂದದೆಮೈಯ ಮೊಸರು (ಸಿದ್ಧರಾ. ೨–೩೩) ; ತೊಲಗಿ ನಿಂದರು ಕರ್ಪುರದ ತನಿಹಳುಕನಣಲೊಳಗಡಸಿ ದಂಡೆಯ ಬಲಿದು ಬಜಿಸಿಡಿಲೆಱಕವೆನೆ ತಾಗಿದರು ತವಕದಲಿ (ಕುಮ್ಮಾಸ. ಓರಿಇ. ೨–೧೧೨). ೪. ಬೆಳಕು; ಪ್ರಕಾಶ; ಕಾಂತಿ : “ಕರಂ ಹಳುಕು ಟಿಹೊಬ್ಬೆಯೆನಲ್ಕದು ತಾಂ ಪ್ರಕಾಶದೊಳ್” (ಕರ್ಣಾನಿ. ೨೨).

**ಪಳಿಕಿನ ಕಲ್ಲು** = ಸ್ಫಟಿಕಶಿಲೆ : ರುಕ್ಮಿಣಿ ಸತ್ಯಭಾಮೆಯರುಗಳೋತು ಪಳಿಕಿನ ಕಲ್ಲ ತಣ್ಪೊಳದಿ . . . ತುಳುಕಿದರ್ ಗಂಧೋದಕವ (ಮೋಹತ. ೧೪–೫೦). [<ಸಂ. ಸ್ಫಟಿಕ]

**ಪಟಿಕಾರ,** ಪಟಿಕಾರ$_2$, ಪಟಿಗಾರ (ನಾ). ಸ್ಫಟಿಕ ; ಪಟಿಕ : “ಶೀತ ಶಿವಂ — ಸೈಂಧವ, ಪಟಿ(ಕಾ)ಕಾರ” (ಒಷಧಿ. ೧೬೬) ; ಮೂಗಿಗೆ ಪಟಿ ಕಾರ ಮತ್ತು ಬಿಳಿಗಾರದ ನೀರನ್ನು ಹಾಕುವುದು (ಗ್ರಾಮಾಕ. ೧೪೧) ; ಒಂದು ಬಟ್ಟಲಿನಲ್ಲಿ ಒಂದಿಷ್ಟು ಪಟಿಕಾರವನ್ನು ತಂದು, ನೀರಿನಲ್ಲಿ ಹಿಡಿಯು ವಷ್ಟನ್ನೆಲ್ಲ ಕರಗಿಸಿ . . . ಒಂದು ಕಡೆಯಲ್ಲಿರಿಸಿದರೆ, ನೀರು ಆರುತ್ತ ಬಂದಂತೆ, ಚಿಕ್ಕಪುಟ್ಟ ಹರಳುಗಳನ್ನು ಬುಡದಲ್ಲಿ ಕಾಣಬಹುದು(ಬಾಲಪ್ರ. I, ೧೮೫). **ಪಟಿಕಾರ$_2$ :** (೬). **ಪಟಿಗಾರ :** (೬).
[<ಸಂ. ಸ್ಫಟಿಕಾರಿ./ತಮಿ. ಪಟಿಕ್ಕಾರ ; ತುಳು. ತೆಲು. ಪಟಿಕಾರ]

**ಪಟಿಕೆ$_1$** ‘ಪಟಿಕ’ ನೋ.

**ಪಟಿಕೆ$_2$** (ನಾ). ೧. ನೆಯ್ದ ಬಟ್ಟೆ. ೨. ಬರೆಯುವುದಕ್ಕಾಗಿ ಲೇಪನ ಮಾಡಿ ಸಿದ್ಧಪಡಿಸಿದ, ಕಡಿತದಂತಹ ಬಟ್ಟೆ : “ಪಟಿಗೆ—ಪಟಿಕಾ= ವಸ್ತ್ರವಿಶೇಷ” (ತದ್ಭಕೋ. ೨೫) ; ಹತ್ತಿಯ ಬಟ್ಟೆಗೆ . . . ಇದ್ದಲ ಪುಡಿಯನ್ನೋ ದೀಪದ ಕಾಡಿಗೆಯನ್ನೋ ಬಳಿದು ಕಡಿತಗಳನ್ನು ಸಿದ್ಧಪಡಿ ಸುತ್ತಿದ್ದರು . . . ಈ ಲೇಖ್ಯವಸ್ತುವಿಗೆ ಪಟ, ಪಟಿಕಾ, ಕಾರ್ಪಾಸಿಕ ಪಟ ಎಂಬ ಹೆಸರುಗಳು ಸಂಸ್ಕೃತದಲ್ಲಿದ್ದುವಂತೆ (ಕನ್ನಸಂ.೪೦) ; ಇದನ್ನು ಪಟ, ಪಟಿಕಾ, ಕಾರ್ಪಾಸಿಕಪಟ ಎಂದು ಕರೆಯುತ್ತಿದ್ದರು (ಭಾರಪ.೧೩).
[ಸಂ. ಪಟಿಕಾ]

**ಪಟಿಕೆ$_3$** ‘ಪಟಿಕಿ’ ನೋ.

**ಪಟಿಗಾರ** ‘ಪಟಿಕಾರ’ ನೋ.

**ಪಟಿಮ** (ನಾ). ೧. ಚಾತುರ್ಯ ; ಕೌಶಲ. ೨. ಚುರುಕುತನ.
[ಸಂ. ಪಟಿಮನ್]

**ಪಟಿಲ್** (ನಾ). ಒಂದು ಅನುಕರಣ ಶಬ್ದ : ಪಟಿಲ್ಗಳೊ ರಣರಕ್ಕಸಿ ಯರ ನಾಸಾಪುಟಗಳೊ ಪೊಗೆಯೊ ನಿಟ್ಟುಸಿರೊ ಪಟಿಲೆಂಬ ದನಿಯೋ ಸಿಡಿಲಿರವವೋಯೆನೆ ಭಟರ್ಗಳ ಭಯುಗೊಳಿಸಿತ್ತು (ಚಂಪ್ರಸಾಂ.೮–೪೮).

**ಪಟಿಲು** (ನಾ). ಪೊರೆ ; ಪಟಲ : ‘ಪಟಿಲುಗಟ್ಟು’ ಪರಾ.
[<ಸಂ. ಪಟಲ]

**ಪಟಲುಗಟ್ಟು** (ಕ್ರಿ). ಕಣ್ಣಿಗೆ ಪೊರೆ ಬರು,—ಪೊರೆಗಟ್ಟು: ಪಿರಿದು ಕಂಪಿಸುವ ಪಲ್ ಪಟಲುಗಟ್ಟಿದ ದಿಟ್ಟಿ . . . ವಿಸುಪ ವೃದ್ಧ ವನಚರಿಯೊರ್ವಳಾ ಪಣ್ಗಳಂ ಸವಿದು . . . ಏಱುಂಜವ್ವನಂಬಡೆದಳು (ಸಮ್ಯಕೌ. ೧೦-೪೩). [ಪಟಲು+ಕಟ್ಟು-1]

**ಪಟಿಷ್ಠ** (ಗು). ೧. ಬಹಳ ಹರಿತವಾದ; ಅತಿ ತೀಕ್ಷ್ಣವಾದ. ೨. ಅತ್ಯಂತ ಸಮರ್ಥವಾದ; ನಿಪುಣತೆಯುಳ್ಳ: ವನಕರಿಕುಂಭಪಾಟನಪಟಿಷ್ಠಕಠೋರನಖಪ್ರಹಾರಭೇದನಗಳಿತಾ[ಸ್ರ]ರಕ್ತನವಮೌಕ್ತಿಕ ಪಙ್ಕ್ತಿವಿಳಾಸಭಾಸುರಾನನಂ (ಪಂಪಭಾ. ೧೩-೫೧); ಅವನಿಗಧಿಪನಾದಂ ವಿದ್ವಿಷತ್ಕುಂಭಿಕುಂಭಪ್ರವಿದಳನಪಟಿಷ್ಠಶ್ರೇಷ್ಠವೃತ್ತಪ್ರಕೋಷ್ಠಂ (ವರ್ಧಮಾ. ೪-೯೯), ಆ ನಿಶಾಚರಾಧಿನಾಥಂ ಸ್ವಕೀಯಸಾಂಪರಾಯಕೇಳೀಪಟಿಷ್ಠನಿಷ್ಠುರ ಭುಜಾವಷ್ಟಂಭಸಂಭ್ರಮಸಂಹೃತಾಹಿತಸುಭಟಂ (ಜಗವಿ. ೧೧-೮೧ ವ). [ಸಂ.]

**ಪಟೀರ್** (ನಾ). ಒಂದು ಅನುಕರಣ ಶಬ್ದ: ಭೀಮಲಿಂಗದ ಬಳಿರ್ದ ಕಟ್ಟು ಪಟೀರೆಂದು ವಡೆಯೆ ಕಟ್ಟದಿರೊಳು ಭೀಮಲಿಂಗ ಸೀಳಿತು (ಪೂಜ್ಯಚ. ३-೧೬३).

**ಪಟೀರ** (ನಾ). ೧. ಶ್ರೀಗಂಧ; ಚಂದನ: ಸಾರಗಾನದೊಳಿಂಪು ಜಾತಿಪಟೀರದೊಳು ತಂಪು ತ್ರಿದಶಧರಣೀರುಹದೊಳೊಳುಗಂಪುವಿರ್ಪವೊಲ್ (ಬಸವು. ೧-೭); ಪಟೀರಮನಾಲೇಪಂಗೆಯ್ದು ಸ್ತಂಬೇರಮದಾಲಸಗಾಮಿನಿಯೊರ್ವಳ್ . . . ತಡಂಬಡೆದಳ್ ನೀಹಾರಮಹೀಧರಮಂ ಪರ್ವಿದ ಶೃಂಗಾರಮರುಲ್ಲತೆಗೆ (ಉದ್ಭದೇ. ೪-೪೪); ಹಾರಹೀರಪಟೀರಧವಳಶರೀರೆ . . . ಶಾರದೆ ಪಾಲಿಸು (ಉತ್ತರಾ. ೧-೪). ೨. ಮನ್ಮಥ; ಕಾಮ. ೩. ಹೊಟ್ಟೆ. ೪. ಜರಡಿ; ಒಂದರಿ. ೫. ಹೊಲ; ಕ್ಷೇತ್ರ. ೬. ಮೋಡ; ಮೇಘ: ಸರಸಮತಿಯಂ ಪಟೀರವಿಸರಸಮತನುಕಾಂತಿ ಕಾಂತೆಯಿಾಗೆಮಗನಿಶಂ (ವಿಷ್ಣುಪು. ೧-೧-೧೪). ೧,೬: ವರುಣನ ಕುಂತದ . . . ಪಟೀರದೇಳ್ಗೆಯ ಕಪೋತದ ಬೊಟ್ಟಿನ ಕೆಂಡದಬ್ಬಿ ನೀವರನಭಿಧಾನವಮಂ ತಳೆದ ಭೂರುಹಮೊಪ್ಪುಗುಮಾ ವನಾಂತದೊಳ್ (ರಾಜಶೇ. ೫-೫೭). ೭. ಆಟದ ಚೆಂಡು. ೮. ಸಂಧಿವಾತ; ವಾತರೋಗ. ೯. ಎತ್ತರ; ಔನ್ನತ್ಯ. ೧೦. ಕಾಚು. ೧೧. ಮೂಲಂಗಿ. ೧೨. ನೆಗಡಿ; ಶೀತಬಾಧೆ. [ಸಂ.]

**ಪಟೀರದ್ರುಮ** (ನಾ). ಗಂಧದ ಮರ; ಚಂದನವೃಕ್ಷ: ಇಲ್ಲಿಯೆ ಸೆವಧರಣೀರುಹಂಗಳ್ ನಾಡೆ ಮಂದಾರಮುಖ್ಯ ತರುನಿಕರಂಗಳು ನಿಸದಮಿಲ್ಲಿಯ ಕೊಜಡುಗಳ್ ಪಟೀರದ್ರುಮದ ವಿಸರಂಗಳ್ (ಆರಾಚ. ೫-೧-೨೭); ಪಟೀರದ್ರುಮಪ್ರಕರ . . . ನವಿಲಡಿ ಹೊನ್ನೆಯರುಟಾಳ(ಶೀವಣ.೪-೧೨). [ಪಟೀರ+ದ್ರುಮ]

**ಪಟೀರವ** (?) (ನಾ). (?): ಆ ಪಟೀರವದ ಬೆಳಗಿಂದೆಸವ ಕೊತ್ತಳದಿರೂಪಿಸುವಪೂರ್ವ ನಗವೆನಲೊಪ್ಪುವಟ್ಟಳೆಯ ಗೋಪುರಾಕೃತಿಯ ಹೆಬ್ಬಾಗಿಲಿಂ ರಂಜಿಪುದುಮಾಪತಿ ಸುಖನಗರವು (ಲಿಂಗಪು. ೧೯-೨). [?]

**ಪಟು** (ಗು). ೧. ತೀಕ್ಷ್ಣವಾದ; ತೀವ್ರವಾದ; ಉಗ್ರವಾದ: ಪಟುಕೋಪಾಟೋಪ ಬದ್ಧಭ್ರುಕುಟಿ . . . ಪದ್ಮರಾಗಾರುಣವಿಕಟಕಟಾಕ್ಷಂ (ರಾಜಶೇ. ೬-೮೯); ಪಟುಗರಳಪಾವಕಪ್ರಸ್ಫುಟಚಲರಸನಾಗ್ರಪಾಟಲಸ್ಫುಟಚಟುಲೋತ್ಕಟಭೀಕರಮುಖಫಣಿಯಂ ಕುಟಿಲಾತ್ಮರ್ ಘಟದೊಳಿಟ್ಟು ಮುಂದಿಳುಪುತ್ತುಂ (ವೃಷವಿ. ३೫-೫೭). ೨. ಉಷ್ಣವಾದ; ತಪ್ತವಾದ. ೩. ಪ್ರಚಂಡವಾದ; ಶಕ್ತಿಶಾಲಿಯಾದ: 'ಪಟುಭಟ' ಪರಾ. ೪. ಚಟುವಟಿಕೆಯುಳ್ಳ; ಚುರುಕುತನವುಳ್ಳ: ಅಸುರಾರಿನಲವಿನಲಿ ಪಟುಗತಿಯ ಗಱುವಾಯಿಯಲಿ ಸಂಘಟಿಸಿ ಹಯವನು ಸುಳಿಸಿದನು ಚೌಪಟದೊಳು (ಕುಮಾಭೀ. ३-३). ೫. ಅತಿಶಯವಾದ; ಅಧಿಕವಾದ; ಮಹತ್ತಾದ: ಪಟುತರಜ್ವರರೂಪದಿಂದುತ್ಕಟಿಸಿ ಸುಡಲು (ಬಸವು. ೫೦-೨೬). 'ಪಟುಪ್ರತಾಪ' ಪರಾ. ೬. ಕುಶಲತೆಯುಳ್ಳ; ನಿಪುಣತೆಯುಳ್ಳ; ಚತುರವಾದ: ಪಟುಪುಣ್ಯಪಾಠಕ ಸಮುಚ್ಚಾರ್ಯಮಾಣಮಂಗಳವಚನರಚನಾಸಮುತ್ಕೃಷ್ಟಶ್ಲಥಬಾಹುನಿದ್ರಾಲಿಂಗನವಿಮುಖನಾಗಿ ಸೆಜ್ಜೆಯಿಂದೆಟ್ಟು (ಶಾಂತಿಪು. ೮-೧೧೪ ವ); ಪಟು+ಏಕವಾಕ್ಯಂ=ಪಟುವೇಕವಾಕ್ಯಂ (ಶಮದ. ೫೨ ಪ್ರಯೋ). ೭. ತೀವ್ರವಾದ ಧ್ವನಿಯುಳ್ಳ: ಗಜರ್ವ ಪಟುಕಹಳೆಯುಂ . . . ತಾಳಮದ್ದಳೆಗಳೆಂಬ ಬಹುವಾದ್ಯದುಬ್ಬಟೆಯುಖಿಳದೆಸೆಯೊಳಾವರಿಸಲು (ಚಬಪು. ೫-೭). ೮. ದೃಢವಾದ; ಬಲಿಷ್ಠವಾದ: ಪಟುತರ ಪ್ರಕೃತಿಯಲಿ ಶುದ್ಧ ಸ್ಫಟಿಕಸನ್ನಿಭರಾಗಿ ನಲಿವುತೆ . . . ಶಿವಪುರಿಗಡರ್ದು (ಕಾವೇಪು. ೭-३೧). 'ಪಟುಭುಜ' ಪರಾ. ೯. ತಂತ್ರಗಾರನಾದ; ಮಾಯಾವಿಯಾದ; ಕಪಟೋಪಾಯಗಳನ್ನು ಬಲ್ಲ. ೧೦. ವಾಕ್ಚಾತುರ್ಯವುಳ್ಳ; ಮಾತುಗಾರಿಕೆಯಲ್ಲಿ ಬಲ್ಲಿದನಾದ. ೧೧. ಆರೋಗ್ಯವಂತವಾದ; ನಿರಾಮಯವಾದ. ೧೨. (ಚುಚ್ಚುಮಾತುಗಳಂತೆ) ವೇಧಕವಾದ; ಕ್ರೂರವಾದ. ೧೩. ಅರಳಿದ; ವಿಸ್ತರಿಸಿದ; ಅಗಲವಾದ. (ನಾ). ೧೪. ಸಮರ್ಥನಾದವನು: "ಪ್ರತಿಭಾನ್ವಿತಂ ಪ್ರಗಲ್ಭಂ ಪಟು"(ವಸ್ತುಕೋ. ೯೯-೬); ಪ್ರತಿಮನುಂ ಪ್ರತಾಪಪ್ರಸರಪ್ರಕಟಪಟುವಾಗಿ ಪಲವು ಕಾಲಮರಸುಗೆಯ್ದು (ಪಂಪಭಾ. ೧-೬೫ ವ); ಮದವದ್ವೈರಿನರೇಂದ್ರಸೈನ್ಯವಿಧ್ವಂಸನಪಟುಗಳು ನಾಗವರ್ಮನುಂ ಮಾಧವನುಂ (ನಾಂದೇಡ್. ३-೭ ; 1047); ದಿವಿಜವಧಪಟುಗೆ ನಿನಗಭಿಭವಮಿಾಶಿಶುವಧಂ (ಜಗವಿ. ೨-೫೪). ೧೫. ಕುಶಲನಾದವನು; ಜಾಣ: ಪಟುವೀತಂ, ಗಾಳುವಿವಳ್ (ಭಾಷಾಭೂ. ೨೧ ಉದಾ). ೧೬. ಚಟುವಟಿಕೆಯುಳ್ಳವನು: "ಪಟುಃ—ಜಡನಲ್ಲದಾತಂ" (ಪ್ರತಿಷ್ಠಾ. ೧-೨೪); "ದಕ್ಷಃ, ಚತುರಃ, ಪೇಶಲಃ, ಪಟುಃ . . . ಆಲಸ್ಯವಿಲ್ಲದವನ ಪೆಸರುಗಳು" (ಸಿದ್ಧಾಂತಿ. ३೧೨). ೧೭. ನಿರೋಗಿಯಾದವನು; ಆರೋಗ್ಯವಂತ: "ಅರುಜಂ ವಾರ್ತಂ ಕಲ್ಯಂ ನಿರಾಮಯಂ ಪಟುವೆನಿಪ್ಪ ನಾರೋಗ್ಯಮಯಂ" (ವಸ್ತುಕೋ. ೭೨-३३). ೧೮. ಸಮರ್ಥವಾದುದು: ಅಜ್ಞಾನಘಟಿತತಮಃಪಟಲವಿಘಟನಪಟುವುಂ . . . ಕೇವಲಜ್ಞಾನಮುಮೆಂಬೀ ಸಂಜ್ಞಾನಪಂಚಕಮುಂ (ಸುಕುಸೂ. ೮-೪ ವ). ೧೯. ಉದ್ದೀಪನ; ಪ್ರಜ್ವಲಿಸುವಿಕೆ: ಪೊಸ ಸುಂಟಿಗೆಗೋಲನೊಂದು ಕೀಸಿ ಪೊಸ ಕಿಚ್ಚಂ ಪೊಸೆದು ಪಟುವಂ ಮಾಡಿ (ತ್ರಿಪುವಿ. ೨೭-೧೨೨ ವ). 'ಪಟುಗೆಯ್' ಪರಾ. ೨೦. ಅಧಿಕವಾದುದು; ಅತಿಶಯವಾದುದು: ಸವೆಯದಿಬ್ಬರಿಗಧಟು ಪಟುತರವಾಯ್ತು ಕೋಪಾಗ್ನಿ (ಕೌರಾ. ३೬-೫೬); ಪಟುತರದ ಭಯದಿಂದ ಕೈಗಳ ನೆಟಿಗೆಯನು ಮುರಿಮುರಿವ ಕಾರಣ ಕಟಕಿಯೆನ್ನೊಳು ಸಟೆಯನಾಡದೆ ದಿಟವನುಸುರೆ (ಕಂಕ. ೪೮-೫). ೨೧. ಬಲ; ಸಾಮರ್ಥ್ಯ; ಶಕ್ತಿ: ಶೌರ್ಯದಲ್ಲಿ . . . ಪಾಂಡಿತ್ಯದಲ್ಲಿ ಪಟುತರದಲ್ಲಿ ಪರಾಕ್ರಮದಲ್ಲಿ ಭೀಮನ ಸರಿ ದಾರು ಇಲ್ಲ (ತಾತ್ಪನಿ. ೧३-३). ೨೨. ಪ್ರಖರವಾದ ಕಿರಣ: "ತೀವ್ರಂ, ತಿಗ್ಮಂ . . . ಉಷ್ಣಂ, ಪಟು—ಈ ೭ ಉಷ್ಣರಶ್ಮಿ" (ಹಲಾಯು. ೮-೪೦). ೨३. ಪಡವಲಕಾಯಿ; ಪಟೋಲ: "ಕುಲಕಂ, ಪಟೋಲಃ, ತಿಕ್ತಕಃ, ಪಟುಃ—೪ ಪೈಪಡವಲಗಿಡ. ಹುಚ್ಚುಪಡವಲಗಿಡ" (ಸಿದ್ಧಾಂತಿ. ೧೪೭).

**ಪಟು ಮಾಡು**=(ಬೆಂಕಿಯನ್ನು) ಉರಿಸು,—ಪ್ರಜ್ವಲಿಸುವಂತೆ ಮಾಡು: ಮನಪವನನಡುಗಬ್ಬನಿಕ್ಕಿ ಅಗ್ನಿಯ ಪಟು ಮಾಡಬಲ್ಲವರನೊಬ್ಬರನೂ ಕಾಣೆ (ಅವಚಂ. ೨೫೯-೧೧೭೫); ಸದೆಬಡಿದು ಮಾಯೆಯನು ಹೃದಯರಸದೊಳಡಗಿದನಲನಂ ಪಟು ಮಾಡಿ ಪದ ನಾಲ್ಕ ನೋಡಿ ನಗುವರು (ಗುರುಬೋ. ೧-೫೮); ಶರ್ವನನರ್ಚಿಸಿ ಧೂಪದ. ಪಾತ್ರದೊಳುರ್ವಿಂ

ಸೆಕ್ಕೆಯ ತೆಕ್ಕೆಯನಿಕ್ಕೆಯಂಗುರ್ವಿಸುವನಲನ ಪಟುವಮಾಡುತೆ (ಉದ್ಭಟೇ. ೩-೫೬). ಪಟುವಾಗು = ೧. ಕುಶಲನಾಗು; ಚತುರನಾಗು: ಕವಿಗೆ ಪಟುವಾದ ನಟನೊಬ್ಬನು ದೊರಕಿ, ನಾಟಕ ಒಂದು ಘಟ್ಟಕ್ಕೆ ಮುಟ್ಟಿದ ಹಾಗೆ (ವೀರಯೋ. vii, ಮುನ್ನುಡಿ). ೨. ಸಮರ್ಥವಾಗು: ಪಟುವಾಗಿ ಬಯಲು ತಾನಹ ಪರಿಯದಾವುದು (ಪ್ರಭುಲೀ. ೧೨-೧೫). ೩. ಅಧಿಕವಾಗು; ಅತಿಶಯವಾಗು: ಸುಟವೆತ್ತು ಮುಗಿಲಗಲದಿ ಪರಿವಾಕಾಶತಟಿನಿಯ ಬುದ್ಬುದದಂತೆ ಪಟುವಾಗಿ ನಿಖಿಲ ನಕ್ಷತ್ರಸಂದೋಹ ಸಂಘಟಿಸಿತು (ಮೋಹತ. ೧೫-೫); ಪಟುವಾದ ರೂಪಿನಿಂದ . . . ಮೈಯ ಸೊಂಪಿನಿಂದ ಮೆಱೆವ ಕುದುರೆ ವೈಶ್ಯಜಾತಿಯೆನಿಸಿಕೊಂಬುದು (ಅಶ್ವಟೀ. ೪೩-೧೦). ೪. ದೃಢವಾಗು; ಗಟ್ಟಿಯಾಗು: ವಜ್ರಮಯದ ಪಲ್ಲಕ್ಕಿ ಬಲ್‌ಪಟುವಾಗಿ ಹಲ್ಲಣಿಸಿದಶ್ವರಥ ಗಾಡಿಗಳ್ (ಕೃಷ್ಣವಿ. ೨-೨೯); ಹಿಂಸೆ ಹೆಚ್ಚಿದಷ್ಟೂ ಮಹಮ್ಮದನ ಹೃದಯವು ಹುರಿಗೂಡಿ ಪಟುವಾಯಿತು (ಪೈಗಂಬ. ೨೩). [ಸಂ.]

**ಪಟುಕ$_1$** 'ಪಟಕ' ನೋ.

**ಪಟುಕ$_2$** (ನಾ). ಪಡವಲ; ಪಟೋಲ. [ಸಂ.]

**ಪಟುಕರಣ** (ನಾ). ಚುರುಕಾದ ಇಂದ್ರಿಯ: ಹಸಿದ ಪಟುಕರಣಗಳ ತಣಿಸಲ್ಕೆ ಬಾರ (ಅಹಲ್ಯೆ. ೬೩-೧೬). [ಪಟು + ಕರಣ]

**ಪಟುಕರಣೆ** (ನಾ). ಚುರುಕಾದ ಇಂದ್ರಿಯವುಳ್ಳವಳು: ಗರುವೆ ವಿಹಿತಗುಣಜ್ಞೆ ಸರಸೆ ಪಟುಕರಣೆ ಪಂಕರುಹಮುಖಿಯವಳೆ ಕನ್ನಡತಿ (ಜನವ. ೬-೯). [ಪಟುಕರಣ+-ಎ$_2$]

**ಪಟುಕ್ಕಣ್ಣಸತ್ತಿ** (ನಾ). ಒಬ್ಬಾತನ ಹೆಸರು: ಶ್ರೀ ಬಿಸೆಯಸತ್ತಿ ಕುಮಾರ ವಸುನ್ಧಪತಿತನಯ ಪಟುಕ್ಕಣ್ಣಸತ್ತಿಯಾ ಪುತ್ರನತಿಪ್ರಸಿದ್ಧ ಘನನಿರ್ಮಲಮಾಗುತ (ಎಕ. XVI, ಪಾವುಗ. ೧೨-೧; 754). [ಪಟುಕ್ಕಣ್ಣ$_0$+ಸತ್ತಿ$_2$]

**ಪಟುಗೆಯ್,** ಪಟುಗೈ (ಕ್ರಿ). ಪ್ರಜ್ವಲಿಸುವಂತೆ ಮಾಡು; ಉದ್ದೀಪನಗೊಳಿಸು: ಕಾಲಾರಿ . . . ಚಳಿಯಿಂದಂ ಕಂಪಿಸುತ್ತಾರ್ತಿವೆತ್ತಿರೆ ಕಿರ್ಚಂ ಪಟುಗೆಯ್ದು ತನ್ನ ಗುಡಿಲಂ ಕಿಳ್ತಿಕ್ಕಿ ಪೊತ್ತಿಕ್ಕುತುಂ (ವೃಷವಿ. ೧೬-೬೧). ಪಟುಗೈ: ಆ ಸಖಿಯ ಮೂಲಾನಿಲನ ಕೂಡಿ ಪಟುಗೈದು ಭಾಸುರದ ನಾಭಿಕಂದದಲಧೋಮುಖದ ಕುಂಡಲಿಯನೂರ್ಧ್ವಕ್ಕೆ ನೆಗಹಿ (ನವಮೋ. ೬-೨೬). [ಪಟು + ಕೆಯ್$_1$]

**ಪಟುಗೈ** 'ಪಟುಗೆಯ್' ನೋ.

**ಪಟುಗೊಳಿಸು** (ಕ್ರಿ). ೧. ಚುರುಕುಗೊಳಿಸು; ತ್ವರಿತಗೊಳಿಸು: ಮೆಯ್ಯೊಳೆಪುಗಳ ಸುಟಿಯೊಳಾವರ್ತ ತಿರುಪುಗೊಂಡು ನಾಟ್ಯವ ಪಟುಗೊಳಿಸಿದರೇವೆಲ್ವೆ (ಕಂಸವಿ. ೨೧-೧೧೪). ೨. ಪ್ರಜ್ವಲಗೊಳಿಸು; ಉದ್ದೀಪನಗೊಳಿಸು: ಭೂಸುರರ್ ಶ್ರುತಿಘೋಷದಿಂದೆ ಹುತಾಶನನ ಪಟುಗೊಳಿಸಿ ಸಮಿಧಾಜ್ಯಾನ್ನಪೂರ್ವಕದೆ (ಕಾವೇಮ. ೫೫-೪೩). [ಪಟು + ಕೊಳ್$_1$ +-ಇಸು$_3$]

**ಪಟುತನ** (ನಾ). ೧. ಉಗ್ರತೆ; ತೀಕ್ಷ್ಣತೆ: ಪರಶುರಾಮನ ಪಟುತನಕೆ ಮದ್ದರೆದೆನೆಂಬೀ ನಿಟಿಲನೇತ್ರನ ಭುಜಬಲಕೆ ಸಮಜೋಳಿ ಗಡ ನೀವು (ಕುಮ್ಮಾಭೀ. ೯-೩೨); ನಿಟಿಲನಯನನ ನೊಸಲ ವಹ್ನಿಯ ಪಟುತನ [ಪಾಠಾಂ. ರ]ವ ನಂದಿಸುವ . . . ಸಮರಜಯಸಂಘಟಿರನೈದಿರ್ಬುದವ ನಗ್ನಿಕುಮಾರ ತೋಱಿಸಿದ (ತೊರಂರಾ. ೪-೭-೧೪). ೨. ಚುರುಕುತನ; ಲವಲವಿಕೆ: ಪಟುತನದಿ ಕರಸಿದನು ದಶಮುಖಚಟುವಟಿಕೆಯುಳ್ಳಧಿಕ ಹಾಕಲು ಗುಟಿಕರನು (ಉತ್ತಕ. ೧೨-೧೧). ೩. ಚಾತುರ್ಯ; ಕುಶಲತೆ: ಕಟ ಕಚ ಕುಚಗಳ ಭಾರವನ್ನು ಈಕೆ ಹೊತ್ತು ನೆಗೆದ ಈ ಪಟುತನ ತುಂಬಾ ಲೇಸು (ಮಾಮಲ್ಲಿ. ೭೫). ೪. ಕಲಿತನ; ಪರಾಕ್ರಮ; ಸಾಮರ್ಥ್ಯ: ಪಟುತನವು ದೊರಕಿದರೆ ಶುಚಿತನ ಘಟಿಸಲರಿಯದು ಶುಚಿತನವು ಸಂಘಟಿಸಿದರೆ ಪಟುವಾಗದುಭಯಗುಣಂಗಳುಳ್ಳವಗೆ ಘಟಿಸದಧಿಕ ವಿವೇಕ (ತೊರಂರಾ. ೫-೯-೨೬); ಬಸೆ ನೆಣನನುಱುಬಿ ಮೂಡಲಿಸುವರ್ ನಿಲಿಸುವರ್ ಪಟುತನವನುಭಯಭಟರು (ಜೆಬಪು. ೩೮-೩೬). [ಪಟು +-ತನ]

**ಪಟುತಪ** (ನಾ). ಉಗ್ರವಾದ ತಪಸ್ಸು; ತೀವ್ರವಾದ ತಪಸ್ಸು: ಪಟುತಪದೊಳ್ ತಗುಳ್ದು ಕೃಪೆಯಿಂದಿಳೆಯಂ ಪಟುಯಂತೆ ಪನ್ನಗಸ್ಫಟಿವಳಿವಂದದಿಂದಿಱಿಸನಾತ್ಮಸುತಾಯತ ಬಾಹುಪೀಠದೊಳ್ ಸ್ಫುಟಮೆನಲಿಟ್ಟು ಕಪ್ಪುಱನ ಕಾಣ್ಕೆಗೆ ತಾಂ ಕಡೆಯಾಣಿಯಾದನಂತುಟಿ ಪರಿಭಾವಿಸಲ್ ನಿಯಮದಿಂ ದಯೆಯಿಲ್ಲದ ಧರ್ಮಮೇವುದೋ (ಧರ್ಮನಾ. ೫-೧೨೮). [ಪಟು + ತಪ$_3$]

**ಪಟುತೆ** (ನಾ). ೧. ಚುರುಕುತನ; ಲವಲವಿಕೆ: ಫಣಿಯೊಂದು ಘೋರಭೀಷಣವದನಂ . . . ಪಟುತೆಯಿಂನಂದಣಿಯರವಿಳಿತಂದುದು ವೇಗಣ ಸರಪಳಿವಿಡಿದು (ವೃಷವಿ. ೩೧-೨೩). ೨. ಕುಶಲತೆ; ದಕ್ಷತೆ: ಪ್ರವಚನಪರಿಪಠನಕ್ಷಮತೆ ವಾಣಿಯಂ ತೀರ್ಥಯಾನದಕ್ಷತೆ ಪದಮಂ ಕಿವಿಯಂ ಜಿನವರಚರಿತಶ್ರವಣಪಟುತೆ ಪಿಂಗದನ್ನಮಾರ್ಜಿಪೆನೆಜನಂ (ಚಂದ್ರಪು. ೪-೧೬); ಗುರುಪದಮಂ ತೆಕ್ಕದೆ ಬಿಕ್ಕದೆ ಗುಕ್ಕದೆ ತಕ್ಕಳಿಸದೆ ಪಠಿಪ ಪಟುತೆ ಘಟಿಯಿಸುಗೆನ್ನೊಳ್ (ಉಸಾರ. ೩೦೪). [ಸಂ. ಪಟುತಾ]

**ಪಟುತ್ವ** (ನಾ). ೧. ಚಟುವಟಿಕೆ; ಲವಲವಿಕೆ: ಸತ್ತ್ವವು ಲಘು, ಪ್ರಕಾಶಕ. ವಸ್ತುಗಳಲ್ಲಿರುವ ಪಟುತ್ವಕ್ಕೆ ಅದೇ ಕಾರಣ(ತತ್ವಪ್ರಾ. ೨೬೨); ಇಂದ್ರಿಯಗಳ ಪಟುತ್ವವನ್ನು ಬೆಳೆಸುವುದು . . . ಹಲವು ಹುಟ್ಟುಗುಣಗಳನ್ನೂ ಸಂವೇದನೆಗಳನ್ನೂ ಉಚಿತರೀತಿಯಲ್ಲಿ ತಿದ್ದುವುದು—ಇವೇ ಅಲ್ಲಿ ಸಾಧಿಸತಕ್ಕ ಮುಖ್ಯಅಂಶಗಳು (ಶಿಕ್ಷದ. ೧೮೪). ೨. ನೈಪುಣ್ಯ; ಕೌಶಲ: ರಾಜಕಾರಣಪಟುತ್ವಕ್ಕೆ, ವ್ಯವಹಾರದಕ್ಷತೆಗೆ ಯಾವುದಕ್ಕೂ ಕೊರತೆಯಿಲ್ಲ (ವಿಚಾಪಾ. ೧೧). [ಸಂ.]

**ಪಟುದೇಹ** (ನಾ). ಚಟುವಟಿಕೆಯುಳ್ಳ ದೇಹ: ಪಟುದೇಹಕ್ಕಸುವೆಂತುಟಂತುಟಿ ಕುಜಾನೀಕಕ್ಕೆ ಬೇರೆಂತುಟಂತುಟಿ . . . ದರ್ಶನಂ ಸಕಲ ಧರ್ಮಕ್ಕಂ (ಧರ್ಮಾಮೃ. ೧-೬೩). [ಪಟು + ದೇಹ]

**ಪಟುಪಟಹ** (ನಾ). ತೀಕ್ಷ್ಣವಾಗಿ ಧ್ವನಿಮಾಡುವ ಪಟಹ: ಪಟುಪಟಹತುಣವಭಂಭಾಮರ್ದಳೆ ಝಲ್ಲರಿ . . . ವಂಶ ವೀಣಾ ಸ್ವರಂಗಳೆಸೆಯೆ (ವಡ್ಡಾರಾ. ೮೨-೨೮); ಪಟುಪಟಹಶಂಖರುತಿ ದಿಕ್ತಟಮಂ ತಳ್ಪೊಯ್ಯೆ (ಪಂಠಾಮಾ. ೨-೧೦); ಪಟುಪಟಹಂಗಳುಚ್ಚರವಂ . . . ನಿಮಂಜಗತಕುಂಜರವೈರಿಗೆ ಮಾಡೆ ಕೋಪದುತ್ಕಟತೆಯಂ (ಪರ್ಧಪು. ೩-೪೩); ಪಟುಪಟಹರವಮೆ ಧೂಳೀಪಟಮಂ ಮಾಡಿದುದು ರೂಢಿವೆತ್ತವನೀಭೃತಕಟಕಮುಮಂ ರಿಪುಭೂಭೃತ್ಕಟಕಮುಮಂ ತನ್ನಿತಂಬಿನೀಕಟಕಮುಮಂ (ಪಾರ್ಶ್ವಪು. ೮-೭೧). [ಪಟು + ಪಟಹ]

**ಪಟುಪರ್ಣಿ** (ನಾ). ಒಂದು ಬಗೆಯ ಸಸ್ಯ; ಘಂಟಾಮಣಿಸೊಪ್ಪು; ಕಂಕೋಷ್ಠ: "ಪಟುಪರ್ಣೀ, ಹೈಮವತೀ, ಸ್ವರ್ಣಕ್ಷೀರೀ, ಹಿಮಾವತೀ—೪ ಕಂಕೋಷ್ಠದ ಹೆಸರು" (ಸಿದ್ಧಾಂತಿ. ೧೪೪); "ಪಟುಪರ್ಣೀ—ಕಂಕುಷ್ಠ" (ಓಷಧಿ. ೯೨). [ಸಂ. ಪಟುಪರ್ಣೀ]

**ಪಟುಪ್ರತಾಪ** (ನಾ). ೧. ಅತ್ಯಂತ ಪರಾಕ್ರಮ. ೨. ಅತಿ ಪರಾಕ್ರಮವುಳ್ಳವನು: ಆ ನೃಪಂ . . . ಪಟುಪ್ರತಾಪನಾಗಿಯುಂ ಪಟುಪ್ರತಾಪಿಯಲ್ಲು (ಪುಷ್ಪಪು. ೯-೩೯ ಪ). [ಪಟು + ಪ್ರತಾಪ$_1$]

**ಪಟುಪ್ರತಾಪಿ** (ನಾ). ಅಧಿಕವಾದ ತಾಪವನ್ನುಂಟುಮಾಡುವವನು; ಅತಿಯಾಗಿ ಬಾಧಿಸುವವನು: ಆ ನೃಪಂ . . . ಪಟುಪ್ರತಾಪನಾಗಿಯುಂ ಪಟುಪ್ರತಾಪಿಯಲ್ಲು (ಪುಷ್ಪಪು. ೯-೩೯ ಪ). [ಪಟು + ಪ್ರತಾಪಿ]

**ಪಟುಪ್ರಧ್ವಾನ** (ನಾ.) ತೀಕ್ಷ್ಣವಾದ ಧ್ವನಿ; ತೀವ್ರವಾದ ನಾದ : ಉರ್ವಿ ಪಟುಪ್ರಧ್ವಾನಮಂ ಬೀಱುದುವು ಕಹಳೆಗಳ್ (ರಾಜಶೇ. ೬-೧೭). [ಪಟು + ಪ್ರಧ್ವಾನ]

**ಪಟುಭಕ್ತಿ** (ನಾ). ಅಧಿಕವಾದ ಭಕ್ತಿ : ಪಟುಭಕ್ತಿಯಿಂದೆ ನೀಮು ತ್ಕಟವಾಗಿನ್ನಿಂದಿನಿಂದೆ ಲಿಂಗಾರ್ಚನೆಯಂ ಸ್ಫುಟಮಪ್ಪ ವೊಲೊಡರಿಸಿಂ (ದಿವ್ಯಚ. ೧೦-೫೪). [ಪಟು+ಭಕ್ತಿ]

**ಪಟುಭಟ** (ನಾ). ಪರಾಕ್ರಮಿಯಾದ ಯೋಧ; ವೀರಭಟ : ಎಷ್ಟು ಪಟುಭಟರಾದರೂ ಸ್ಫಟಿಕದ ಮಱೆಯಲ್ಲಿ ಅಡಗಬೇಕು (ವೋಳಮಾ. ೨೧-೮೨) ; ಪಟುಭಟಪದೋತ್ಥಧೂಳೀಪಟಳಂ ಕವಿದಂಧಕಾರಮಂ ಪುಟ್ಟಿಸೆ (ದಶಕು. ೩-೧೦) ; ನಿನಗೀ ನೆರೆದ ಪಟುಭಟರಿದ್ದು ಕಾದುವ ಮನದ ಭರವಿದ್ದು ಹಿರಿದು ಚಿಂತಿಸಲೇಕೆ (ಕೌಶಿರಾ. ೧೯-೪) ; ದಿಟಂ ಪಟುಭಟಂ ; ನಮಗೆ ಮಲೆಯಲ್ ತಕ್ಕನೀತನದಟಂ (ಶ್ರೀರಾಮಾ. ೪೫೨-೩೨೦). [ಪಟು+ಭಟ$_2$]

**ಪಟುಭಟತನ** (ನಾ). ಬಹಳ ಪರಾಕ್ರಮ : ಹುತ್ತವನೇಱಿ ಹುಲ್ಲಕಚ್ಚಿದಲ್ಲಿ ಪಟುಭಟತನವನಱಸಲಿಲ್ಲ (ಸರ್ವವ. ೧೯೦-೮೯೦). [ಪಟುಭಟ + -ತನ]

**ಪಟುಭುಜ** (ನಾ). ಬಲಿಷ್ಠವಾದ ತೋಳುಗಳುಳ್ಳವನು : ಪಟುಭುಜನೊತ್ತಿ ಜೀವೊಡೆದು ಸಿಂಜಿನಿಯಂ ಸೆಳೆದು . . . ಎಚ್ಚೊಡೆ (ರಾಜಶೇ. ೬-೮೭). [ಪಟು +ಭುಜ]

**ಪಟುಮತಿ** (ನಾ). ತೀಕ್ಷ್ಣವಾದ ಬುದ್ಧಿಯುಳ್ಳವನು ; ಬುದ್ಧಿಶಾಲಿ : ವಟುವೇಷಧಾರಿಯಾ[ದಂ] ಪಟುಮತಿ . . . ಅರಮನೆಯ ಬಾಗಿಲೊಳ್ ಬಂದಿರ್ದಂ (ಶಾಂತಿಪು. ೮-೧೨೬) ; ಸಕಳಕಳಾಪ್ರವೀಣನಪ್ಪ ಪಟುಮತಿಗಮುನ್ಮಾರ್ಗಮನುಪಾದೇಯಮೆಂಬ ಸನ್ಮಾರ್ಗಮಂ . . . ತತ್ತ್ವವಿಚಾರದೊಳ್ ಪುಟ್ಟಿಸುವುದು (ಪಸಾರ. ೯೦೪-೧೩) ; ಘಟಿತಕರ್ಮವ ಸುಟ್ಟರೆಲ್ಲರು ಮುಕ್ತರು ಪಟುಮತಿಯಿಂತಿದ ನಂಬು (ಭರಚ. ೬೮-೨೬). [ಪಟು+ಮತಿ]

**ಪಟುರವ** (ನಾ). ತೀವ್ರವಾದ ಧ್ವನಿ; ಗಟ್ಟಿಯಾದ ಧ್ವನಿ : ಆ ವನದ ಪುರದ ನಡುವೆ ಸುಖಾವಹಮತಿವಿಭ್ರಮಂ ವಿಶಾಲಂ ಸರ್ವೋರ್ವೀವರ ಶಸ್ತ್ರಾಭ್ಯಾಸನಿಜಾವಾಸಂ ಸುಭಟಪಟಲಪಟುರವ ಭರಿತಂ (೧ಂಕ. ೨-೭೩) ; ಪಟುರವದಿಂದೆ ಬೊಬ್ಬೆಗುಡುತಬ್ಬರಿಸುತ್ತೆ . . . ಮಸ್ತಕವಂ ನಾರ್ದನರಿದಾಕ್ಷಣವಾ ಶಿರಂ ಪರಿಸ್ಫುಟರವದಿಂದೆ ಬೊಬ್ಬಿಱಿದು ಕೀರ್ತಿಸುತಿರ್ದುದು ವಾಮಹಸ್ತದೊಳ್ (ವೃಷವಿ. ೩೬-೬೩). [ಪಟು+ರವ]

**ಪಟುವೆರು** (ಕ್ರಿ). ಅಧಿಕವಾಗು ; ಹೆಚ್ಚಾಗು : ವಟಫಲಾಧರೆಯರು . . . ಪಟುವೆತ್ತು ಕಾಯ್ದ ಘರ್ಮೋದಕವ ಭರ್ಮ್ಯತಂಬುಗೆಗಳಲಿ ಮೊಗೆದರೆವುತೆ ವಟಪುತ್ರಿಯಳನುಯೆಬ್ಬಿಸಿ ನಿಲ್ಲಿಸಲು (ನವಮೋ. ೧೩-೪೨). [ಪಟು + ಪೆರು$_1$(<ಪೆಱು$_1$)]

**ಪಟುಸಂರಂಭ** (ನಾ). ಅಧಿಕವಾದ ಸಡಗರ,—ಸಂಭ್ರಮ : ಪಟುಸಂರಂಭದಿನಿಂತುತ್ಕಟರವ್ಮಕತೆವೆತ್ತು ರಂಜಿಪಾ ಪುರದಾಣ್ಮಂ . . . ಉದ್ಭಟದೇವನೆನಿಪ್ಪ ಪೆಸರ ಧರಣೀನಾಥಂ (ಉದ್ಭಟ. ೧-೮೨). [ಪಟು + ಸಂರಂಭ]

**ಪಟೂಕ್ತಿ** (ನಾ). ಚತುರೋಕ್ತಿ ; ಜಾಣ್ಣುಡಿ : (ಕ). [ಪಟು+ಉಕ್ತಿ]

**ಪಟೆ$_1$** 'ಪಟ್ಟೆ$_2$' ನೋ.

**ಪಟೆ$_2$** (ನಾ). ಒಂದು ಬಗೆಯ ಸಸ್ಯ : ಬಕುಳ, ಪಟೆ (ಮೈಔಗ. ೫೪-೧೦೮೨). [ ? ]

**ಪಟೆಯ** 'ಪಟ್ಟೆಯ$_2$' ನೋ.

**ಪಟೇಲ** 'ಪಟ್ವಾಯಿಲ' ನೋ.

**ಪಟೇಲಿ** (ನಾ). = ಪಟೇಲಿಕೆ : ಗೌಡರು ಜೋಗೀಪುರದ ಪಟೇಲರಾದರೂ ಆಗಲೇ ಹೇಳಿದಂತೆ ಒಂದು ದಿನವೂ ಪಟೇಲಿ ಮಾಡಲಿಲ್ಲ (ನನ್ನೂರು. ೧೫೩). [ಪಟೇಲ (<ಪಟ್ವಾಯಿಲ)+-ಇ$_3$]

**ಪಟೇಲಿಕೆ** (ನಾ). ಪಟೇಲನ ಹುದ್ದೆ, —ಪದವಿ; ಗೌಡಿಕೆ : ನಿನಗೇನು ಊರಲ್ಲಿ ಜಮಿನು ದಾರಿಯೋ ? ಪಟೇಲಿಕೆಯೋ ? (ಮುಗಿಯು. ೨೧) ; ಗೌಡರ ಪಟೇಲಿಕೆಯ ಊರಾದ ಜೋಗೀಪುರಕ್ಕೆ ಬೇಡವಾದ್ದು ನನ್ನೂರಿಗೂ ಬೇಡ (ನನ್ನೂರು. ೧೫೩). [<ಪಟೇಲ (ಪಟ್ವಾಯಿಲ)+-ಇಕೆ]

**ಪಟೇಲಿಕೆಲಸ** (ನಾ). = ಪಟೇಲಿಕೆ : ಗೌಡರ ಪಟೇಲಿಕೆಲಸವನ್ನು ಶಾನುಭೋಗರೇ . . . ಮಾಡುತ್ತಿದ್ದರು (ನನ್ನೂರು. ೧೫೩). [ಪಟೇಲಿ+ಕೆಲಸ]

**ಪಟೋಡಿ** 'ಪಟ್ಟಡಿ$_1$' ನೋ.

**ಪಟೋಲ**, ಪಟೋಳ (ನಾ). ಪಡವಲ ಬಳ್ಳಿ ಹಾಗೂ ಅದರ ಕಾಯಿ : "ಪಟೋಲಃ, ಪಟೋಲೀ–ಈ ಯೆರಡುಂ ಪಡಲ" (ಓಷಧಿ. ೯೧); ಇಂಗುಳವಾಡಸೋಗೆ ಕಟುಕಂ . . . ಚಿತ್ರಕಂ ಪಟೋಲಂಗಳನೊಪ್ಪೆ ತಕ್ರ ಲವಣಂಗಳುಮಂ ತುಱುದೊಂದುಮಾಡಿ ಸುಸ್ತಂಗಱಿದಿಕ್ಕೆ ಪೊರ್ದುವಣಂ ರುಜೆಗಳ್ ಜಠರಾಗ್ನಿ ಪೆರ್ಚುಗುಂ (ಲೋಕೋಪ. ೯-೨೨೦). **ಪಟೋಳ** : "ಕೋಶಾತಕಾಖ್ಯಂ ಕುಲಕಂ ಪಟೋಳಂ" (ಪಸ್ತುಕೋ. ೩೯-೩೭) ; "ಪಡಳಂ ಪಟೋಳವದು" (ಮಂಗರಾ. ೪೪-೪೪). [ಸಂ.]

**ಪಟೋಲಿ**, ಪಟೋಳಿ (ನಾ). = ಪಟೋಲ: "ಪಟೋಲಃ, ಪಟೋಲೀ–ಈ ಯೆರಡುಂ ಪಡಲ" (ಓಷಧಿ. ೯೧). **ಪಟೋಳಿ** : "ಕೋಶಾತಕೀ, ಪಟೋಳೀ — ಈ ೨ ಹಡಲಂ" (ಹಲಾಯು. ೩೪-೪೯). [ಸಂ. ಪಟೋಲೀ]

**ಪಟೋಲಿಕೆ**, ಪಟೋಳಿಕೆ (ನಾ). = ಪಟೋಲ : "ಜ್ಯೋತ್ಸ್ನೀ, ಪಟೋಲಿಕಾ, ಜಾಲೀ–೩ ಪಡವಲಗಿಡದ ಹೆಸರು" (ಸಿದ್ಧಾಂತಿ. ೧೩೯). **ಪಟೋಳಿಕೆ** : "ಪಟೋಳಿಕೆ = ಪಡವಲಕಾಯಿ" (ಗಂಗಾಮ. ೧೯೪). [ಸಂ. ಪಟೋಲಿಕಾ]

**ಪಟೋಳ** 'ಪಟೋಲ' ನೋ.

**ಪಟೋಳಿ** 'ಪಟೋಲಿ' ನೋ.

**ಪಟೋಳಿಕೆ** 'ಪಟೋಲಿಕೆ' ನೋ.

**ಪಟ್ಟ$_1$** 'ಪಡು$_1$' ಪರಾ.

**ಪಟ್ಟ$_2$** 'ಪಟ್ಟೆಯ$_1$' ನೋ.

**ಪಟ್ಟ$_3$** (ನಾ). ೧. ಬಟ್ಟೆ; ವಸ್ತ್ರ. ೨. ಉತ್ತಮವಾದ ಬಣ್ಣದ ಬಟ್ಟೆ. ೩. ರೇಷ್ಮೆ ವಸ್ತ್ರ ; ರೇಷ್ಮೆ : 'ಪಟ್ಟಗುಚ್ಛ', 'ಪಟ್ಟಸಾಲಿಗ' ಪರಾ. ೪. ಮೇಲೆ ಧರಿಸುವ ವಸ್ತ್ರ ; ಹೊರಪಾವುಡೆ. ೫. ಚಿತ್ರಲೇಖನಕ್ಕಾಗಿ ತಯಾರಿಸಿದ ವಸ್ತ್ರದ ಪಟ. ೬. ರಾಜಶಾಸನಗಳನ್ನು ಕಂಡರಿಸುವುದಕ್ಕಾಗಿ ತಯಾರಿಸಿದ ಲೋಹದ ಪಟ ಮತ್ತು ರಾಜಶಾಸನ. ೭. ಪಟ್ಟಾಭಿಷೇಕದ ಪ್ರಸಂಗದಲ್ಲಿ ಅರಸನಿಗೂ ಅರಸಿಗೂ ಕಟ್ಟುವ ಚಿನ್ನದ ಪಟ್ಟಿ ; ಅಧಿಕಾರ ಸೂಚಕವಾದ ಹಣೆಗಟ್ಟು : ಕಟ್ಟಿದ ಪಟ್ಟಮೆ ಸರವಿಗೆ ನೆಟ್ಟನೆ ದೊರೆ (ಪಂಪಭಾ. ೧೦-೧೭) ; ಒಪ್ಪಿರಲ್ ಕಟ್ಟಿದ ಪಟ್ಟಂ ಬರ್ಪ ಮುಪ್ಪಂ ಮಱೆಯೆನಿಸಿತು (ಕಾದಂಪೂ. ೫೫೪); ತಳೆದಳ್ ಪಟ್ಟಮನೆಸೆದಿರೆ ಗಂಗನ ಪಟ್ಟಮಹಾದೇವಿಯನುತ್ತ ಸೋನ್ತರುವೊಳರೆ (ಎಕ. VII, ಶಿಮೊ. ೯೭-೧೨ ; 1113) ; ಪಿರಿಯಾತಂಗೆ ಪಟ್ಟಂ ಭೀಮಂಗೆ ಯುವರಾಜಪಟ್ಟಮರ್ಜುನಂಗೆ [ವೀರ]

ಪಟ್ಟವೆಂದು ಕಾಯ್ದು ಕರ್ಪೂರನ್ನ ಪಟ್ಟಂಗಳಂ ನೊಸಲೊಳ್ ಕಟ್ಟಿ (ಬಂಹರಿ. ೧೪-೫೫ ಪ) ; ಇವರೆಲ್ಲ ಹಗೆಯ ಮಾಡಿ ಮುರಾಂತಕನ ಕಾಳಗದೊಳೆಲ್ಲರನಿಕ್ಕಿ ಪಟ್ಟವ ಜಿಗಿಸಿಕೊಂಡವರಲ್ಲವೇ (ಕುವ್ಯಾಸ. ೮-೪೯). **೮.** (ಅಲಂಕಾರಯುಕ್ತವಾದ) **ಹಣೆಗೆ ಕಟ್ಟುವ ಪಟ್ಟಿಕೆ:** ಎನ್ನ ಗಂಡನಂ ಕಣ್ಣಾಣದಂತು ಮಾಡಿದೊಡೆ ನಿನಗೆ ನಾಂ ಪೊನ್ನ ಪಟ್ಟಮಂ ಬೊಟ್ಟುಮನೀವೆಂ (ಪಂಚತಂ. ೨೭೨-೨೩). **೯.** ರೇಖೆ ; ಗೆರೆ : 'ವಿಭೂತಿಪಟ್ಟ' ಪರಾ. **೧೦.** ತಲೆಗೆ ಸುತ್ತುವ ರೇಷ್ಮೆಯ ವಸ್ತ್ರ,—ಮುಂಡಾಸು. **೧೧.** ಸಿಂಹಾಸನ ; ಗದ್ದುಗೆ : 'ಪಟ್ಟವೇಱು' ಪರಾ. **೧೨.** ಕಿರೀಟ : ನೀನುಳ್ಳೊಡುಂಟು ರಾಜ್ಯಂ ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟೈ (ಗದಾಯು. ೫-೨೦). **೧೩.** ಅಧಿಕಾರ ; ಪದವಿ : ಪ್ರವರವಿಹಂಗಮಕುಲಚಕ್ರವರ್ತಿಪಟ್ಟಕ್ಕೆ ಯೋಗ್ಯನಂ ಮಾಡಿ ಮಹೋತ್ಸವದಿಂ ಮಾಡುವುದಭಿಷೇಕವಂ (ಪಂಚತಂ. ೨೨೩-೬) ; ಈತನೆ ಯೌವರಾಜ್ಯಪದಪಟ್ಟದ ಪೆರ್ಮೆಗೆ ನೋನ್ತಂ (ಎಇ. XXVIII, ೫-೧೮; ಸು.1082); ಅವನಿಯ ಪಟ್ಟ ಜ್ಯೇಷ್ಠರಿಗುರುವುದಲ್ಲದೆ ಬೇಱೆ ಸಲ್ಲದು ತತ್ಕನಿಷ್ಠರಿಗೆ(ತೊರರಾ.೨-೩-೪೩). **೧೪.** ಉತ್ತಮವಾದುದು ; ಶ್ರೇಷ್ಠವಾದುದು : ಪೀಯೂಷಪೂಷನ್ಮೃಗ್ಯುಳೂಕಸಂಭವಂಗಳುಂ ದೇವಮುನಿಸತ್ವಂಗಳುಮಪ್ಪ ಪಟ್ಟತರದ ವಾರುವಂಗಳ . . . ಏಱಿ ತೋಱಿ (ಅನಂಪು. ೨-೩೦ ಪ). 'ಪಟ್ಟಕರು' ಪರಾ. **೧೫.** ನಾಡು ; ಪ್ರಾಂತ ; ರಾಜ್ಯ : ಬಪ್ಪವ್ವಂ ಬನವಾಶಿ ಪನ್ನಿಚ್ಛಾಸಿರದ ಪಟ್ಟಮನಾಳೆ (ಮೈಆರಿ. ೧೯೨೯, ೭೮-೫; 964). **೧೬.** ಪಟ್ಟಾಭಿಷೇಕ: ಪಟ್ಟಕೆ ಭದ್ರಹಸ್ತಿಗಳ ಒಂದು ತರಿಸಿಯೆ ಭೂಸುರರ ಮತದಿಂದಲಾ ರಾಜ್ಯಾಭಿಷೇಕವನಂದು ಮಾಡಿಸಿ ಸರ್ವರನು ಕಾಣಿಸಿದನೊಲವಿನಲಿ (ಜೀವಂಜ. ೧೮-೧೨) ; ಶತ್ರುಘ್ನನಿಲ್ಲಿರ್ದೊಡಾತನುಂ ಪಟ್ಟಕ್ಕೆ ವಿಘ್ನಪೊಡ್ಡುವನೆಂದು ಭರತನೊಡವೆರಸಟ್ಟಿ ಕಳೆದರವ್ವಾ (ಶ್ರೀರಾಪ್ರಾ. ೬೩-೨೫೫). **೧೭.** ನಾಲ್ಕು ಮಾರ್ಗಗಳು ಕೂಡುವ ಸ್ಥಳ; ಚೌಕ; ಬೀದಿಕೂಟ. **೧೮.** ಪಟ್ಟಣ ; ನಗರ. **೧೯.** (ವೈದ್ಯಕೀಯ ಚಿಕಿತ್ಸೆಯಲ್ಲಿ ಕಟ್ಟುವ) ಪಟ್ಟಿ,—ಕಟ್ಟು : ನೊಸಲೊಳಿಕ್ಕುವ ಚಂದ್ರಕಾಂತದ ಪಟ್ಟಂಗಳೊಳಂ ಮುಯ್ಪಿನೊಳಮರ್ಚುವ ಮೃಣಾಳದ ಕೋಳ್ವಲಯಂಗಳೊಳಂ . . . ಎಂತುಮಾ ಸಂತಾಪಮಂ ಸಂತಯಿಸಲಾಱದೆ (ಕಾದಂಉ. ೭೬೩). **೨೦.** ತಾಮ್ರಪಟ ; ತಾಮ್ರಪತ್ರ : ಬೋಧಿಸವೆ ಪೆಱೆವು ಜಿನಗೃಹಕ್ಕಾಧಿಕ್ಯಮದಿಲ್ಲೆನಿಪ್ಪುದಂ ಸನ್ಯಸನಾರಾಧನೆಯು ಜವದಿ ಸನ್ನ ನಿಶೀಧಿಗೆಯುಡ್ಡಣೆಗೆ ತಳಿಗೆ ಪಟ್ಟಮಿವಿ[ನಿ]ತುಂ (ಸೌಇಇ. XI-i, ೫೨-೭೯ ; 1007). **೨೧.** ಅಗಲ ಕಿರಿದಾಗಿ ಉದ್ದ ಹೆಚ್ಚಾಗಿರುವ ಕಾಗದ, ಬಟ್ಟೆ ಮುಂತಾದುವುಗಳ ತುಂಡು,—ಪಟ್ಟಿ. **೨೨.** ತೆರೆ ; ಜವನಿಕೆ: (ಕ). **೨೩.** ಪಗಡೆ ಮೊದಲಾದುವುಗಳ ಹಾಸು: (ಕ). **೨೪.** ಆಳ್ವಿಕೆಯ ಅವಧಿ ; ರಾಜ್ಯಭಾರದ ಕಾಲ (?) : ಹರಿಹರಗೆ ಪಟ್ಟವಂ ಕಟ್ಟಲವನಾಳುವಂ ಹದಿಮೂಱು ಪಟ್ಟ ಪರಿಯಂತರಂ ಪೇಳಲೇಂ ತನ್ನ ಸಂತತಿಗೂಡಿ ನೂಱೈವತ್ತೈದು ಸಂವತ್ಸರವನು (ಚಿಬಪು. ೬೩-೨).

**ಪಟ್ಟಕ್ಕೆ ಕುಳಿತುಕೊಳ್ಳು** = ಗದ್ದುಗೆಯನ್ನೇರು ; ಅಧಿಕಾರವನ್ನು ಪಡೆ : (ಕ). **ಪಟ್ಟಕ್ಕೆ ಕೂರು** = ಪಟ್ಟಕ್ಕೆ ಕುಳಿತುಕೊಳ್ಳು : ಚಿಕ್ಕದೇವರಾಜನು ಸನ್ ೧೬೭೨ ನೇ ಇಸವಿಯಲ್ಲಿ . ಮೈಸೂರು ಸಂಸ್ಥಾನದ ಪಟ್ಟಕ್ಕೆ ಕೂತನು (ಮುಂಬಯಿ. ೪-೮೦). **ಪಟ್ಟದ ಕತ್ತಿ** = ರಾಜನಿಗೆ ಮಾತ್ರ ಮೀಸಲಾದ (ಶ್ರೇಷ್ಠವಾದ) ಖಡ್ಗ : ಪಟ್ಟದ ಕತ್ತಿಯನ್ನು ಪೂಜಾಸ್ಥಾನಕ್ಕೆ ದೊರೆಗಳವರೇ ತಂದಿರಿಸಿ . . . ಪೂಜಿಸಿದರು (ಮಹಾಪಂ. I. ೨೫೯). **ಪಟ್ಟದ ಕುದುರೆ** = (ಶ್ರೇಷ್ಠವಾದ ಲಕ್ಷಣಗಳಿಂದ ಕೂಡಿದ) ರಾಜನಿಗೆ ಮಾತ್ರ ಮೀಸಲಾದ ಕುದುರೆ : ಪಟ್ಟದ ಕುದುರೆಯಂ . . . ಪಟ್ಟದ ಗದ್ದಿಗೆಯಂ ನೆಱೆ ಕೊಟ್ಟಂ ಧವಳಾತಪತ್ರಮಂ ಚಾಮರಮಂ (ಬಾಧಪು. ೧೨-೧೨೦) ; ದೊರೆಗಳವರು ಆಯುಧವನ್ನೂ ಪಟ್ಟದ ಕುದುರೆ ಆನೆ ಮುಂತಾದ ವಾಹನಗಳನ್ನೂ ಕಲ್ಪೋಕ್ತವಿಧಿಯಿಂದ ಪೂಜಿಸಿದರು (ಮಹಾಪಂ. I. ೨೫೯). **ಪಟ್ಟದ ಗಜ** = (ಶ್ರೇಷ್ಠವಾದ ಲಕ್ಷಣಗಳಿಂದ ಕೂಡಿದ) ರಾಜನಿಗೆ ಮಾತ್ರ ಮೀಸಲಾದ ಆನೆ ; ಪಟ್ಟವರ್ಧನ : "ಪಟ್ಟವರ್ಧನಮೆನಲ್ ಪಟ್ಟದ ಗಜಂ" (ಕಶರ.೬೨). **ಪಟ್ಟದ ಚರ** = ಪಟ್ಟದ ದೇವರ ಅಧೀನದಲ್ಲಿರುವ ಜಂಗಮ ; ಚರಂತ : ಪಟ್ಟದ ಚರನುಲ್ಲಾಸಂಬೆತ್ತಂತೆಗೆಯ್ವುನಿದಾವ ಗಹನಮೆಂದಾಕ್ಷಣಂ ಬಸವನೆಡೆಗೇಳ್ತಂದು (ವೃಷವಿ.೮-೨೫ ಪ). **ಪಟ್ಟದ ದಂತಿ** = ಪಟ್ಟದ ಗಜ: ಪಟ್ಟದ ದಂತಿ ಪಟ್ಟದಿಂ ಪೋಗದೆ ಬಿಟ್ಟುದಟ್ಟವಿಳೆಯೊಳ್ ನಿಧಿಗಳ್ (ಶಾಂತಿಪು. ೩-೧೦೪); ಬೊಮ್ಮಂ ತಿರ್ದಿ ತೋರ್ಪ ಪಟ್ಟದ ದಂತಿಯೆಂದೆನಲ್ ಕನಕಾಚಲಂ ಮೆಱೆದುದು (ಚಿಬಪು. ೨-೮). **ಪಟ್ಟದ ದೇವರು** = (ವೀರಶೈವರಲ್ಲಿ) ಧಾರ್ಮಿಕ ಸಂಸ್ಕಾರವನ್ನು ನೀಡುವ ಅಧಿಕಾರವುಳ್ಳ ಮಠಾಧಿಪತಿ : ವಟುವಿಗೆ ಸ್ವತಃ ಪಟ್ಟದ ದೇವರೇ ದೀಕ್ಷೆ ನೀಡಿದರು (ರೂಢಿ). **ಪಟ್ಟದ ಬಸದಿ** = ರಾಜವಂಶದವರಿಗೆ ಸಂಬಂಧಪಟ್ಟ ಚೈತ್ಯಾಲಯ: ಪಟ್ಟದ ಬಸದಿಯ ಪ್ರತಿಬದ್ಧವಾಗಿ ಸಮಾದೇಯರ್ ಮುಖ್ಯವಾಗಿ ಬಿಟ್ಟ ದತ್ತಿ (ಎಕ. VII, ಶಿಮೊ. ೪-೭೦ ; 1122). **ಪಟ್ಟದ ಬಿತ್ತರಿ** = ರಾಜನ ಪಟ್ಟದ ಸಿಂಹಾಸನ,—ಗದ್ದುಗೆ: ಆ ಪಟ್ಟದ ಬಿತ್ತರಿಯನ್ನು ನೀನು ಆರೋಹಣ ಮಾಡಲೆಬೇಕು! (ಚಿಟ್ಟಅ. ೧೧೦-೧೧). **ಪಟ್ಟದ ಬೊಂಬೆ** = ನವರಾತ್ರಿ ಉತ್ಸವದ ಅಂಗವಾಗಿ ಇಟ್ಟು ಪೂಜೆ ಮಾಡುವ (ಕರಿಮರದ ಗಂಡು ಮತ್ತು ಹೆಣ್ಣಿನ) ಬೊಂಬೆಯ ಜೋಡಿ : ಪಟ್ಟದ ಬೊಂಬೆಗೆ ಮಣಿಸರ ಹಾಕಿ ಅಲಂಕಾರ ಮಾಡು (ರೂಢಿ). **ಪಟ್ಟದ ಮೊದಲಿಗ** = ರಾಜ್ಯಾಧಿಕಾರಕ್ಕೆ ಮೊದಲ ಹಕ್ಕುದಾರ : ಪಟ್ಟದ ಮೊದಲಿಗರಾಜಿಗೆ ಜಟ್ಟಿಗರವರೆಂದು ಮಾಳ್ವ ಮುನ್ನಿನ ನೆಲನಂ ಕೊಟ್ಟು ಬೞಿಯಟ್ಟು (ಪಂಪಭಾ. ೯-೪೦). **ಪಟ್ಟದಯ್ಯ** = ಪಟ್ಟದ ದೇವರು : (ಕ). **ಪಟ್ಟದರಸಿ** = ಅರಸನ ಜೊತೆಗೆ ಪಟ್ಟಾಭಿಷೇಕ ಮಾಡಿಸಿಕೊಂಡು ಸಿಂಹಾಸನದ ಮೇಲೆ ಕುಳಿತುಕೊಳ್ಳುವ ಅಧಿಕಾರವುಳ್ಳ ರಾಣಿ; ಅಗ್ರಮಹಿಷಿ : "ಕೃತಾಭಿಷೇಕಾ, ಮಹೀಷಿ—ಈ ೨ ಪಟ್ಟದರಸಿಯರ್" (ಹಲಾಯು. ೭೯-೩೨೬); ಪಟ್ಟದರಸಿಗೆ ತನೂಜಂ ಪುಟ್ಟದಂ (ವರ್ಧಮಾ. ೨-೯) ; ಪಟ್ಟದರಸಿಗೆ ಪೊಡವಿಪಗೆ ಪೊಡಮಟ್ಟು ಗುರುಪದಕಭಿನಮಿಸಿ ಪೊಱಮಟ್ಟನಾ ವೈದೇಹಿ ಸಹಿತರಮನೆಯನಾ ರಾಮ (ತೊರರಾ. ೨-೩-೪೬). **ಪಟ್ಟದರಸು** = ಪಟ್ಟಾಭಿಷೇಕ ಮಾಡಿಸಿಕೊಂಡು ವಿಧ್ಯುಕ್ತವಾಗಿ ರಾಜನಾದವನು : ಪಟ್ಟದರಸಾಗಲ್ಕೆ ಚಂದ್ರಹಾಸಂ ಬಳಿಕ ಪಟ್ಟಣದ ಜನಮಱಿಯಲೆಂದು . . . ಗಜಮಸ್ತಕದ ಮೇಲೆ ನೃಪಸುತೆ ಸಹಿತ ಪೊಱಮಟ್ಟನು (ಜೈಮಿಭಾ. ೩೧-೫೦). **ಪಟ್ಟದ ರಾಣಿ** = ಪಟ್ಟದರಸಿ : ಪಟ್ಟದ ರಾಣಿಗೆ ಹೇಳಿ ಪದವಿ ಕೊಡಿಸೊ (ಪುರಂದ. ೨-೨೩-೧) ; ಚಿಕದೇವರಾಜಚಂದ್ರಮನ ಪಟ್ಟದ ರಾಣಿ ಸಕಲಸದ್ಗುಣಸಂಪನ್ನೆ (ಹದಿಬ. ೧-೧೪) ; ಧವಳಶಂಖ, ಉದ್ದಂಡ, ಪುಂಡರೀಕ, ಕನಕದಂಡ, ಚಾಮರಸ್ತೋಮಗಳು ಪಟ್ಟದ ರಾಣಿಯ ಚಿಹ್ನೆಗಳಾಗಿದ್ದುವು (ಕಶಾಅ. ೪೧೮). **ಪಟ್ಟದ ವನಿತೆ** = ಪಟ್ಟದರಸಿ : ಪಟ್ಟದ ವನಿತೆ ಕುಮಾರರು ಪುಟ್ಟದ ಚಾರಿತ್ರಮುಂ ಮಂತ್ರಿ ಸಮ್ಯಕ್‌ಜ್ಞಾನಂ (ಭವ್ಯಾಪ್ಯ. ೭೬). **ಪಟ್ಟದ ಸತಿ** = ಪಟ್ಟದರಸಿ : ಪಲಗಣ್ಣನ ಪಟ್ಟದ ಸತಿ ಸಗ್ಗದ ಲಲನೆಯರೊಳಗೋಲಗಮಿರ್ಪಂತೆ (ಜಯಕಾ. ೨-೧೯). **ಪಟ್ಟದ ಸಿಂಹಾಸನ** = **ಪಟ್ಟದ ಬಿತ್ತರಿ** : ಪಟ್ಟದ ಸಿಂಹಾಸನಮುಳ

ವಟ್ಟಿದು ಪರಿಪರಿಯ ಮಾಣಿಕದ ಪೊಳೆಪಿಂದಂ ದಿಟ್ಟಿಗೆ ಕಡು ಚೋಜಿಗಮಂ ಪುಟ್ಟಿಸುತುಂ ಬಹಳ ಕಿರಣಜಾಳನಿವಂಗ್ನಂ (ಬಾಧಪು. ೧೨-೧೯೦). **ಪಟ್ಟದಾನೆ, ಪಟ್ಟದ ಆನೆ**=೧. ಪಟ್ಟದ ಗಜ : ಮಗನೆ ಮಗನೆ ನಂಬಿ ನಂಬಿ ಪಟ್ಟದಾನೆಗೆ ಪಡಿಸಣವಾದಾ (ನಂಬಿರ. ೨-೫೪) ; ದುಷ್ಟಮಾವನ ಮನೆಗ್ಹೋಗಲು ಬೇಡ ಪಟ್ಟದಾನೆಗಳಿಂದ ಗಟ್ಯಾಗಿ ಮೇಲ್ತುಳಿಸುವ ನವ (ಪುರಂದ. ೪-೧೫೭-೩) ; ಕಾವರಾಯನ ಪಟ್ಟದಾನೆಯೆಂದೆನಲಾ ಭಾವಕಿ ಯೌವನಮದವ ತೀವಿದ ವಿಟದುಂಬಿಗೀಯುತ ಸನ್ಮೋಹನಾವಳಿ ಯೊಳಗೊಪ್ಪಿದಳು (ಕಂಸವಿ. ೯-೩೭) ; ಪಟ್ಟದಾನೆ ಕುದುರೆಗಳು ಬಂದು ಅಡ್ಡ ಬಿದ್ದು ಅರಮನೆಯೊಳಗೆ ಆರತಿಯನ್ನೆತ್ತಿದ ಮೇಲೆ ಸ್ವಸ್ಥಾನವನ್ನು ಸೇರಲು (ಮಹಾಪಂ. I, ೨೫೭) ; ಪಟ್ಟದ ಆನೆ ಕುದುರೆಗಳು ಪಾಡ್ಯದ ದಿವಸ ನಡೆಮುಡಿಯ ಮೇಲೆ ಬಂದಂತೆ (ಮಹಾಪಂ. I, ೨೫೮). **೨.**(ಆಲಂ) ಮೆಚ್ಚಿಗೆಯ ವೀರ; ನೆಚ್ಚಿನ ಯೋಧ : ಮರಳಿದರು ನಿನ್ನಯ ಪಟ್ಟದಾನೆಗಳು ಭೀತಿಗೊಂಡನು ದ್ರೋಣ ಸೋಲಕೆ ಕೇತುವಾದನು ಶಲ್ಯನು (ಕುವ್ಯಾದ್ರೋ. ೧೬-೧೩) ; ಫಡಫಡೆತ್ತಲು ಸ್ವಾಮಿದ್ರೋಹರು ಸಿಡಿದರೋ ನಿಜಕುಲದ ಬೇರ್ಗಳ ಕಡಿದರೋ ಕುರುಬಲದ ಕಾಹಿನ ಪಟ್ಟದಾನೆಗಳು (ಕುವ್ಯಾಕ. ೨-೧೦). **ಪಟ್ಟದೂರ್**=ರಾಜಧಾನಿ : ಅಯೋಧ್ಯಾ=ಸೀತಾರಾಮನ ಪಟ್ಟದೂರ್ (ಕಾಶಕ್ಯ. ೨೦೨). **ಪಟ್ಟದೊಡೆಯ**=ಪಟ್ಟದರಸು : ಕರಿಯ ಕೈಲಿ ಕುಸುಮಮಾಲೆಯಿತ್ತು ಪುರದೊಳು ಬಿಡಲದಾರ ಕೊರಳಿನಲ್ಲಿ ತೊಡರಿಸಲ್ಕೆಯವರ ಪಟ್ಟದೊಡೆಯ ರನ್ನು ಮಾಳ್ಪೆವೆಂದು ಬಿಟ್ಟರಲ್ಲಿಗೆ (ಕನಕ. ೨೧೩-೨). **ಪಟ್ಟಮಂ ಕಟ್ಟು, ಪಟ್ಟವಂ ಕಟ್ಟು, ಪಟ್ಟವ ಕಟ್ಟು**=ಪಟ್ಟಾಭಿಷೇಕ ಮಾಡು ; (ವಿಧ್ಯುಕ್ತವಾಗಿ) ಸಿಂಹಾಸನದ ಮೇಲೆ ಕೂರಿಸು ; ರಾಜ್ಯಾಧಿಕಾರವನ್ನು ನೀಡುವ ಸಂಕೇತವಾಗಿ ಚಿನ್ನದ ಪಟ್ಟಿಯನ್ನು ಕಟ್ಟು : ಆತ್ಮಜನ್ಮಂಗಧಿಕವಿಭವದಿಂ ಪಟ್ಟಮಂ ಕಟ್ಟಿ ದೀಕ್ಷಾಭರವಂ ಕೆಯ್ಕೊಂಡು ಗೆಲ್ಲಂಗೊಳಲ್ ಬಗೆದಂ . . . ವತ್ಸನಾಭಂ (ಅಜಿಪು. ೨-೧೧೬) ; ಲಲ್ಲೆಗೆಯ್ದು ಬಲ್ಲಾಳ್ತನದಿಂ ಪಟ್ಟಮಂ ಕಟ್ಟಿ . . . ರಾಜ್ಯದೊಳ್ ನಿಱಿಸಿ (ಧರ್ಮಾಮೃ. ೧೧-೧೩೫) ; ಕುಸುಮಾವತಿಯನೆನಗೆ ಕೊಟ್ಟಲ್ಲಿಯೆ ಪಟ್ಟವಂ ಕಟ್ಟಿ ತಾಂ ಕುಸುಮಪುರಿಗೆ ಪೋದಂ (ದಶಕು. ೫-೮೭ ಪ) ; ಪಟ್ಟವ ಕಟ್ಟಿದ ಬಳಿಕ ಲಕ್ಷಣವನಱಿಸುವರೆ (ಬಸವ. ೧೩೮) ; ರವಿಕುಲದ ಪೀಳಿಗೆಯೊಳೊಗೆದ ರಾಯರ್ಗೆ ಪಟ್ಟವ [ಪಾಠಾಂ. ಪಟ್ಟವನು] ಕಟ್ಟುವಂದಿದಿಲ್ಲದೊಡರಸುತನ ಸಲ್ಲದು (ಹಚಕಾ. ೭-೧೦). **ಪಟ್ಟವಾಗು**= ರಾಜ್ಯಾಧಿಕಾರ ಬರು : ಆತನ ಮಗನಿಗೆ ಪಟ್ಟವಾಯಿತು (ಮುಂಬಯಿ. ೪-೩). **ಪಟ್ಟವೇರು**= ಸಿಂಹಾಸನವನ್ನು ಏರು; ರಾಜನಾಗು : (ಕ).

[ಸಂ.]

**ಪಟ್ಟಂಗ,** ಪಟ್ಯಾಂಗ (ನಾ). ಒಣಹರಟೆ ; ಖಾಲಿ ಮಾತು, ಸಂಕಪ್ಪಯ್ಯ ...ಶಾನುಭೋಗನ ಜೊತೆ ಪಟ್ಟಂಗ ಹೊಡೆಯುವ ಇಷ್ಟವಾಗದೆ ಹೊರಟರು (ಪ್ರಶ್ನೆ. ೩೮); ಚಿನ್ನಮ್ಮನ ಮನಃಸ್ಥಿತಿ ವಿನೋದಕ್ಕಾಗಲಿ ಪಟ್ಟಂಗಕ್ಕಾಗಲಿ ಸ್ವಲ್ಪವೂ ಸಿದ್ಧವಾಗಿರಲಿಲ್ಲ(ಮಲೆಮ.೮೪೩). **ಪಟ್ಯಾಂಗ:** ಅವರೊಡನೆ ನಾವು ಪಟ್ಯಾಂಗಕ್ಕೆ ಕುಳಿತರೆ ಮನೆಯ ಕೆಲಸಕ್ಕೆಲ್ಲ ತೊಂದರೆ (ಬೆಟ್ಟಜೀ. ೨೦) ; ಐತಾಳರೋ . . . ಹೆಂಡತಿಯೊಡನೆ ಪಟ್ಯಾಂಗ ಹೊಡೆಯುವ ಹೆಣ್ಮರುಳರೇ ! (ಮರಮ. ೧೭) ; ಚಂದ್ರಮತಿಯೊಡನೆ ಅಧ್ವರ್ಯು ಚೆನ್ನಾಗಿ ಪಟ್ಯಾಂಗ ಹೊಡೆಯುತ್ತಿದ್ದ (ರಾಯಚಾ. ೧೮೦).

[←ತುಳು. ಪಟ್ಟಂಗ, ಪಟಂಗ, ಪಟ್ಯಾಂಗ./ಹಿಂ. ಪಟಾಂಗ್]

**ಪಟ್ಟಂಗಟ್ಟಿಸು** (ಕ್ರಿ). ಪಟ್ಟವನ್ನು ಕಟ್ಟು ; ಪಟ್ಟಕ್ಕೆ ಕೂರಿಸು : ಪ್ರಿಥಿವಿಸಾಗರನ್ ಪಟ್ಟಂಗಟ್ಟಿಸಿ ಉಡೆಯ ಪುರಮಾನ್ ಪೊಗುತಪ್ಪಲ್ಲಿ (ಎಇ. IX, ೨೦-೩ ; ಸು. 800). [ಪಟ್ಟಂಗಟ್ಟು+-ಇಸು$_3$]

**ಪಟ್ಟಂಗಟ್ಟು**, ಪಟ್ಟಗಟ್ಟು (ಕ್ರಿ). ೧. ವಿಧ್ಯುಕ್ತವಾಗಿ (ಅಧಿಕಾರ ಸೂಚಕವಾದ) ಪಟ್ಟಿಯನ್ನು ಹಣೆಗೆ ಕಟ್ಟು : ಇರುಗಱ್ಗ ನಾಗತ್ತರಪಟ್ಟಂಗಟ್ಟಿ (ಎಇ. I, ೩೫೦-೫ ; ಸು. 900); ಸಂಪ್ರತಿಚಂದ್ರಗುಪ್ತನೆಂದು ಪೆಸರನಿಟ್ಟು ರಾಜ್ಯಾಭಿಷೇಕಂಗೆಯ್ದು ಪಟ್ಟಂಗಟ್ಟಿ . . . ಕುಣಾಳನುಮನೆಂದಂ (ವಡ್ಡಾರಾ. ೭೫-೨೫) ; ಪಗೆವರ ನಿಟ್ಟೆಲ್ವಂ ಮುಱಿವೊಡೆನಗೆ ಪಟ್ಟಂಗಟ್ಟಾ (ಪಂಪಭಾ. ೧೦-೧೭); ಪಟ್ಟಂಗಟ್ಟಿದೊಡ ಜಸಲ್ಕೆವೇಟ್ಕುಮೇ ಲಕ್ಷಣಮಂ (ಸಮಪ. ೧-೮೦). **೨.** ಪಟ್ಟವನ್ನು ಹೊಂದು ; ಅಧಿಕಾರವು ಬರು : ಶ್ರೀಮತ್‌ಪೆರ್ಮ್ಮನಡಿಗಳ್ ಪಟ್ಟಂಗಟ್ಟಿದ ಅಯ್ದನೆಯ ವರಿಷ ಗೆಟ್ಟವಡಿಯ ಅಣ್ಣಮನಾಳುತುಮಿರೆ (ಎಕ. III, ನಂಜನ. ೯೭-೩ ; 898 ?) ; ಪಟ್ಟಂಗಟ್ಟಿದರಸಿನಂತೆ ಮಹಾಭೂತಿವೆರಸು ಜೀವಿತಂಬಡೆದ ಬಂಟನಂತೆ ರಾಗಿಸಿ (ಧರ್ಮಾಮೃ. ೮-೨೧೫). **೩.** ಅಧಿಕಾರವನ್ನು ನೀಡು: ಪಟ್ಟಂಗಟ್ಟಿ ಗಂಗಮಹಾನಾಇಗಗೆ×× ಗಱನಿವೆರಸು ಮೂವತ್ತುಗುಳ ಅಯ್ಗಳ ಪಾಱ ಕೋಟ್ಪೋರ್ ಶ್ರೀಪುರುಷನಾಯಿಗಗೆ ಪಟ್ಟಗಟ್ಟಿ ಕೊಟ್ಟ ಕಱನಿ (ಎಕ. IX, ಹೊಸಕೋ. ೮೬-೩; ಸು. 720) ; ಪ್ರಮಥೇಂದ್ರಪದವಿಗೆ ಚೆನ್ನ ಪಟ್ಟಂಗಟ್ಟಿ ಸರ್ವಜ್ಞತ್ವಮಂ ಕುಡಲು (ಬಸಪು. ೨-೨೫). **ಪಟ್ಟಗಟ್ಟು : ೨.** ಸತ್ಯದ ಬಿತ್ತು ಹುರಿದುದು ಪಟ್ಟಗಟ್ಟಿದುದಾ ಕೃತಘ್ನತೆಗೆ ನೆತ್ತಿ ಕಣ್ಣಾಯ್ತು ಧಮತೆಗೆ (ಕುವ್ಯಾಅ. ೨೧-೬೯). **೩.** ಸಲೆ ಘರ್ಮಜಲ ಸೂಸಿ ಸುರತ ಸಾಮ್ರಾಜ್ಯದ ವಿಲಸಿತ ಪಟ್ಟಗಟ್ಟಿದಳು (ಕಂಸವಿ. ೧೦-೪೯) ; ಕಾವ್ಯಲೋಕದ ಭವ್ಯಕವಿದೇವಪದವಿಯಲಿ ಪಟ್ಟಗಟ್ಟಿದತ್ತು !(ಅನಿಕೇ. ೫೩-೧೪). **೪.** (ಆಲಂ) ಪ್ರಬಲವಾಗಿರು : ಸೃಷ್ಟಿಯಲಿ ಜಿನಧರ್ಮ ಪಟ್ಟಗಟ್ಟಿರುತಿಕ್ಕು ಕೆಟ್ಟರೆ ಕೆಡಗು ಜಗವೆಲ್ಲ ತಲೆ ಹೋದ ಅಟ್ಟೆಯಂತಿಕ್ಕು (ಸರ್ವಜ್ಞ. ೧೦೧೨).

ಪಟ್ಟಂಗಟ್ಟಿದಂ=ಪಟ್ಟಾಭಿಷಿಕ್ತನಾದವನು ; ರಾಜ : ಪಟ್ಟಂಗಟ್ಟಿದನೆಂಗುಮೋ ಬಡವ ನೀಂ ಪೋ ಬಱಿದ್ದ ಮಾಣೆಂಗುಮೋ . . . ಕೆಮ್ಮನೇಗೆಟ್ಟತ್ತೆಂಬವೊಲಟ್ಟಿ ಕೊಂದಪನಿವಂ ಮಾಯ್ದಂತಕಂ ಪಾತಕಂ (ಜೀವಸಂ. ೧೦-೧೩). [ಪಟ್ಟು$_3$+ಕಟ್ಟು$_1$]

**ಪಟ್ಟಂಗಿ$_1$** (ನಾ). ಹರಟೆಮಲ್ಲಿ ; "ಮಾತುಗಂಟೆ" (ಜಾನಕೋ. ೧೪).

[ಪಟ್ಟಂಗ+-ಇ$_2$]

**ಪಟ್ಟಂಗಿ$_2$** (ನಾ).=ಪಟ್ಟಂಗ : ಎದಿ ಮ್ಯಾಲ ಕೆಲಸಾ ಇಟಗೊಂಡು ಹೊರಗ ಪಟ್ಟಂಗಿ ಆಡತಾನ (ಬಾಬಲ. ೯) ; ಜವಿಾನ ಐತೆಂತ ಬಲೀ ಪಟ್ಟಂಗಿ ಬಡೀತೈತಿ (ಬಾಬಲ. ೫೨). [<ಪಟ್ಟಂಗ]

**ಪಟ್ಟಂಗಿ$_3$** (ನಾ). ರೇಷ್ಮೆಬಟ್ಟೆಯ ಅಂಗಿ : ಆಗಳೊರ್ವನುವಿರ್ತಳಾಲಿಂಗಿತಸರ್ವಾಂಗಂ ದೇಸೆವೆತ್ತ ಮೊಗಸುತ್ತುಂ ಪಱಿಯ ಪಟ್ಟಂಗಿಯುಂ ಉಟ್ಟ ಪಟ್ಟಣಿಗೆಯುಂ ಪೊದೆದ ಪಾಣಿಯವಣ್ಣಮುಮೆಸೆಯೆ . . . ನವರಸೋಚಿತಸ್ತವನಮುಖರಮುಖನಾಗಿ (ಮಲ್ಲಿಪು. ೮-೧೫೭).

[ಪಟ್ಟು$_5$(<ಪಟ್ಟ$_2$)+ಅಂಗಿ$_2$]

**ಪಟ್ಟಂಗೊಳ್** (ಕ್ರಿ). ರಾಜ್ಯಾಧಿಕಾರವನ್ನು ಕಿತ್ತುಕೊಳ್ಳು : ಪಟ್ಟಂಗೊಳುತಪ್ರತಿಮಂ ಮಟ್ಟಟ್ಟಂ ಮಧುರೆ ಕೆಳದಿ ದೊರೆಗಳ ಬಲ್ಪಂ (ಅಪ್ರತಿ. ೬೧-೫). [ಪಟ್ಟು$_3$+ಕೊಳ್$_1$]

**ಪಟ್ಟಂಪಾಱಿಸು** 'ಪಟ್ಟಂಬಾಱಿಸು' ನೋ.

**ಪಟ್ಟಂಪಾಱು** 'ಪಟ್ಟಂಬಾಱು' ನೋ.

**ಪಟ್ಟಂಬಾಱಿಸು,** ಪಟ್ಟಂಪಾಱಿಸು (ಕ್ರಿ). ಪಟ್ಟನೆ ಹಾರಿಸು ; ಧೂಳೀಪಟಮಾಡು ; ನಾಶಮಾಡು ; ನಿರ್ನಾಮಮಾಡು : ವಿಾರಿದ ಪಗೆವನ ಪಟ್ಟಂಬಾ[ಪಾಠಾಂ. ಪಾ]ಱಿಸುವೆನೊ ಮುನ್ನಮ ಮರರುಂಡಮೃತಮನೇಂ ಕಾಱಿಸುವೆನೊ (ಗದಾಯು. ೬-೧೭).

**ಪಟ್ಟಂಪಾಜಿಸು** : ಮುಟ್ಟವಿರದಾಂತ ಪಗೆವರ ಪಟ್ಟಂಪಾಜಿಸಡೆ ಮಾಣ್ಬನೇ ವೈರಿದಿಶಾಪಟ್ಟಂ ರಿಪುಗೋಧೂಮಘರಟ್ಟಂ (ಕಇ. I, ೨೫-೫೫ ; 1186). [ಪಟ್ಟಂಬಾಜು+-ಇಸು₃]

**ಪಟ್ಟಂಬಾಜು,** ಪಟ್ಟಂಪಾಜು (ಕ್ರಿ). ಧೂಳೀಪಟವಾಗು: 'ಪಟ್ಟಂಬಾಜಿಸು' ಪರಾ. **ಪಟ್ಟಂಪಾಜು** : ಇಜಿುಯಲ್ಪೊಂಗುವ ದೈತ್ಯಹಂಸತತಿ ಪಟ್ಟಂಪಾಜಿ . . . ಕಜಿದಂ ನಿಂದುವಿುದಂಬುವಾಹ ಕದವೊಲ್ ಧಾರಾಶರಾಸಾರಮಂ (ಅನಂಪು. ೧೪-೧೪).
[<ಪಟ್ಟನೆ+ಪಾಜು₁]

**ಪಟ್ಟಕ** (ನಾ). ೧. ರಾಜಶಾಸನಕ್ಕಾಗಿ ಬಳಸುವ ತಾಮ್ರ ಮೊದಲಾದ ಲೋಹದ ಪಟ ಮತ್ತು ಅದರಲ್ಲಿ ಬರೆಸಿದ ಶಾಸನ,— ಅಧಿಕಾರಪತ್ರ. ೨. ಪಟ್ಟಿ ; ಪಟ್ಟಿ : ಪ್ರತಿಬಿಂಬವು ಒಂದು ರೇಖೆಯಂತಿರದೆ ಪಟ್ಟಗಳನ್ನು ಬಳಿದಂತೆ ಕಾಣುವುದು . . . ಒಂದೊಂದು ಪಟ್ಟಗೂ ಒಂದು ಪಟ್ಟಕವೆಂದು (Band) ಹೆಸರು (ಭೌತವಿ. ೨೧೫). ೩. ಮೂರು ಮೈಯುಳ್ಳ ಕಾಜು; ಲೋಲಕ: "ಪಟ್ಟಕ ; ತ್ರಿಪಾರ್ಶ್ವ; ಮುಪ್ಪಟಿಗಾಜು ; ಲೋಲಕ" (Prism. ಪಾರಿಸಿ. ೮೭). ೪. ಆಸನ ; ಪೀಠ : ದೆಸೆಗೆ ಭಿತ್ತಿಗಳನಾಗಸಕೆ ಚಪ್ಪರವಿಕ್ಕೆಲೆಸೆದಂಬುರುಹದ ಪಟ್ಟಕದಿ ಅಸಮವೀರರಿಗೆ ರುಧಿರದ ಕೈಧಾರೆಗಳೆಸೆದವು ವೀರಸಿರಿಯೊಳು (ನರ್ಧಚ. ೬-೧೨೩). 'ಪಟ್ಟಿಕೆ' ಪರಾ. [ಸಂ.]

**ಪಟ್ಟಕತ್ತಿ** 'ಪಟ್ಟಾಕತ್ತಿ' ನೋ.

**ಪಟ್ಟಕರು** (ನಾ). ಶ್ರೇಷ್ಠವಾದ ಎರಕದ ಬೊಂಬೆ,— ಮೂರ್ತಿ : ಸೃಷ್ಟಿಗತಿಶಯವಾದ ಚೆಲುವಿನ ಪಟ್ಟಕರುವನು ಮಾಡಿ ನಾನಾಪರಿಯ ಬಣ್ಣಗಳನಿಟ್ಟು (ದೇವೀಮ. ೫-೬೯). [ಪಟ್ಟ₃+ಕರು₂]

**ಪಟ್ಟಕರ್ಮ** (ನಾ). ರೇಷ್ಮೆಯನ್ನು ನೇಯುವ ಕೆಲಸ : ಇದು ರತ್ನಭಂಡಾರವಿದು ಹೇಮಭಂಡಾರವಿದು ಸುನಾಣೆಯ ವರ್ಗವಿದು ಪಟ್ಟಕರ್ಮ ಕುಲ . . . ನೋಡಿಕೋಯೆನುತೊಪ್ಪಿಸಿದನಾ ಮುನಿಗೆ ಭೂನಾಥ ಕಂದರ್ಪನು (ಹಚಕಾ. ೯-೩). [ಪಟ್ಟ₃+ಕರ್ಮ]

**ಪಟ್ಟಕಾರ** (ನಾ). ಬಟ್ಟೆಯ ವ್ಯಾಪಾರ ಮಾಡುವವನು ; ಜವಳಿ ವ್ಯಾಪಾರಿ : ನಾಲ್ಕುದಿಕ್ಕಿನ ಐವತ್ತಾರುದೇಶದ ಯೆಂಟುಬಗೆ ಪಲರು ಪಟ್ಟಕಾರರು ಕೂಡಿ ಧರ್ಮಶಾಸನದ ಪಟ್ಟೆಯವ ಬರೆಸಿಕೊಟ್ಟ ಕ್ರಮು (ಎಕ. III (R), ಗುಂಡ್ಲುಪೇ. ೮೧-೧೫ ; 1751). [ಸಂ.]

**ಪಟ್ಟಕ್ರಮ** (ನಾ). ಪಟ್ಟಾಭಿಷೇಕದ ವಿಧಿ : ಪಟ್ಟಕ್ರಮಕ್ಕೆ ಮುನ್ನಂ ಪಟ್ಟದ ನೃಪತನಯನಂತವಂ ಯುವರಾಜಂ (ವಸ್ತುಕೋ. ೬೦-೪೯).
[ಪಟ್ಟ₃+ಕ್ರಮ]

**ಪಟ್ಟಗಜ** (ನಾ). ಪಟ್ಟದ ಆನೆ ; ಪಟ್ಟವರ್ಧನ : ಬಹಿತ್ರಮುನಡರಿ ಬರ್ಪಂತೆ ಪಟ್ಟಗಜವೇರಿ ಹರಿ ಬರುತಿರ್ದನು (ನವಮೋ. ೧೦-೩೫).
[ಪಟ್ಟ₃+ಗಜ]

**ಪಟ್ಟಗಟ್ಟು** 'ಪಟ್ಟಂಗಟ್ಟು' ನೋ.

**ಪಟ್ಟಗದ್ದುಗೆ** 'ಪಟ್ಟಗದ್ದುಗೆ' ನೋ.

**ಪಟ್ಟಗದ್ದುಗೆ,** ಪಟ್ಟಗದ್ದುಗೆ (ನಾ). ಅರಸನು ಕುಳಿತುಕೊಳ್ಳುವ ಪೀಠ,—ಗದ್ದುಗೆ ; ಸಿಂಹಾಸನ : ಪಟ್ಟಗದ್ದುಗೆ, ಪಟ್ಟಗೊಜಿ, ಪಟ್ಟಮಹಿಷಿ (ಶಮದ. ೨೯೪ ಪ್ರಯೋ) ; ಶ್ರೀರಮಣನ ಪಾಲನತತ್ತ್ವ ರಾಧನವಿಧಿಗೆ ನೃಪತಿ ನೆರೆವಂತಾಳಲ್ಕಾರಯ್ಕೆಗಂಕುಶತ್ವಕೆ ಹೇರಿಗನಹಿ ಪತಿಯೆ ಪಟ್ಟಗದ್ದುಗೆ ಪುರುಳಿಂ (ಮಂತ್ರಶ. ೧೮೨-೪). **ಪಟ್ಟಗದ್ದುಗೆ:** ಪಟ್ಟಗದ್ದುಗೆಯ ಮೇಲೆ ಕುಮಾರನಂ ಬಿಜಯಂಗೈಸಿ (ಮಳಿರ.ಹ. ೨೨೭-೨೩) ; ದೇವರಮ್ಮಮೆಂಬ ಪಟ್ಟಗದ್ದುಗೆ ಪ್ರೇಕ್ಷಾಪಾಸವರ್ಧಮಾನಾಖ್ಯ ಮೂವತ್ತೆರಡನುಪಮಚಾಮರ ಯಕ್ಷದೇವರಿಕ್ಕುವರು (ಶಾಂತೀಚ. ೮-೫೯) ; ಪಟ್ಟಗದ್ದುಗೆಯೊಳು ನೃಪನಾ ಮುಟ್ಟಿ ಕುಳ್ಳಿರುವುದೊಂದಾಗಬೇಕೆಂದರು (ಭರಚ. ೩೭-೧೧೪) ; ಪಟ್ಟಗದ್ದುಗೆಯನ್ನು ತ್ರಿಪ್ರದಕ್ಷಿಣ ಬಂದು ಆದಕ್ಕೆ ಮತ್ತೊಮ್ಮೆ ಮಹಾರಾಜವಂಶದ ವೀರವನ್ನನವನೊಪ್ಪಿಸಿ . . . ನಿರುಕಿಸುತ್ತಿರುವನು (ಚಿಟ್ಟಅ. ೧೧೧-೧೭).
[ಪಟ್ಟ₃+ಗದ್ದುಗೆ₂]

**ಪಟ್ಟಗಲ್** (ನಾ). ಗಡಿಯ ಗುರುತಿನ ಕಲ್ಲು (?) : ಅನ್ತೆ ಬನ್ದುಬೆಂಬನಾಲೆ . . . ಅನ್ತೆ ಬನ್ದು ಪಟ್ಟಗಲ್ಲೆ (ಎಕ. IV (R), ಚಾಮರಾ. ೩೫೪-೮೩; 906). [ಪಟ್ಟ?+ಕಲ್₃]

**ಪಟ್ಟಗಾಣಿಕೆ** (ನಾ). ಪಟ್ಟಾಭಿಷೇಕವಾದ ಕಾಲದಲ್ಲಿ ಅರಸನು ಕೊಡುವ ಕಾಣಿಕೆ,—ಇನಾಮು : ಆ ಚಿಕ್ಕಂಣನಾಯಕನಿಗೆ . . . ಪಟ್ಟಾ ಕಟ್ಟಿದರು. ಈ ಹೊಸದೊರೆಯು ಸಕಲರಿಗೂ ಅರ್ಥಾಯ ಪಟ್ಟಗಾಣಿಕೆ ಎಂದು ಸಂದಾಯ ಮಾಡಿದನು (ಚಿತ್ರಪಾ. ೨೭).
[ಪಟ್ಟ₃+ಕಾಣಿಕೆ(<ಕಾಣ್ಕೆ)]

**ಪಟ್ಟಗಾಜಿ** (ನಾ). ರೇಷ್ಮೆವಸ್ತ್ರಗಳನ್ನು ನೇಯುವವನು ; ನೇಕಾರ: ಮೂಜಿಚಿಕ್ಕೇರಿಯಾ ಪಟ್ಟಗಾಜರ ಸೇಣಿಯನಿತ್ತ ಧರ್ಮ (ಎಇ. VI, ೧೬೬-೫ ; 793) ; ಸಮಯ ಪಟ್ಟಗಾಜಿಗ್ಗೆ ನೆಲಂಗೊಟ್ಟು (ಎಇ. XIII, ೧೮೭-೧ ; ಸು. 900) ; ತೆಂಕಲು ಪಟ್ಟಗಾಜರ ಕೆಯ್ಯಿಂ (ಇಎ. ೧೯೪೭, ಹುಬ್ಬಳ್ಳಿ. ೨೪೫-೩೬ ; 994) ; ಉದ್ವೃತ್ತನಂ ನಾರಸಿಂಹನ ರೂಪಿಂ ನಖದೊಳ್ ವಿದಾರಿಸಿ ಕುಸುಂಭಾರಕ್ತಮಂ ಪಟ್ಟಗಾಜನೆ ಪಾಸಂ ತವೆ ತೋಡುವಂತೆ ಕರುಳಂ ನೀಂ ತೋಡಿದಯ್ ದೈತ್ಯನಾ (ಕಾವ್ಯಾವ. ೩೫೫) ; ರೇಷ್ಮೆ ಮುಂತಾದ ನಯವಾದ ವಸ್ತ್ರಗಳನ್ನು ನೇಯುವವರೇ ಪಟ್ಟಗಾಜರು (ಕಶಾಅ. ೪೪೧). [ಪಟ್ಟ₃+-ಕಾಜ]

**ಪಟ್ಟಗುಚ್ಛ** (ನಾ). ರೇಷ್ಮೆ ಎಳೆಯ ಕುಚ್ಚು ; ರೇಷ್ಮೆಗೊಂಡೆ : ಪಟ್ಟಗುಚ್ಛಂಗಳಂ ವೇಣ್ಯಗ್ರದೊಳ್ ತಳೆಯುತೆ ಒಸೆದು ಪೋಪರ್ ಕೆಲರ್ (ಅರಾಜ. ೫-೪-೨೧). [ಪಟ್ಟ₃+ಗುಚ್ಛ]

**ಪಟ್ಟಗೊಜಿ** (ನಾ). ರೇಷ್ಮೆಯ ವಸ್ತ್ರ : ಪಟ್ಟಗದ್ದುಗೆ, ಪಟ್ಟಗೊಜಿ, ಪಟ್ಟಮಹಿಷಿ (ಶಮದ. ೨೯೪ ಪ್ರಯೋ). [ಪಟ್ಟ₃+ಕೊಜಿ₇(<ಕೂಜಿ)]

**ಪಟ್ಟಜಿನಾಲಯ** (ನಾ). ರಾಜವಂಶಕ್ಕೆ ಸಂಬಂಧಪಟ್ಟ ಚೈತ್ಯಾಲಯ ; ಪಟ್ಟದ ಬಸದಿ : ಜ[ಟ್ಟ]ರ ಪಟ್ಟಜಿನಾಲಯಕಿಟ್ಟಳವಾದಯ್ವ ತೊಕ್ಕಲನುಮತದಿಂದಂ ಕೊಟ್ಟರ್ಜಿನೇಂದ್ರಪೂಜೆಗೆ ನೆಟ್ಟನೆ ××× (ಸೌಇಇ. XX, ೧೪-೨ ; 980). [ಪಟ್ಟ₃+ಜಿನಾಲಯ]

**ಪಟ್ಟಟ** (ನಾ). ಒಂದು ಬಗೆಯ ಘನವಾದ್ಯ : ಮೊಜಿವ ಜಯಘಂಟೆ ಪಟ್ಟಟ ಪಟ್ಟಶುಕ್ತಿ ಭಾಸುರ ಕುಡುಕ ಕಮ್ರಾದಿ ಘನಮನಾಪಾಲಿಕೆ ಮುಹುರಿಶೃಂಗವಂಶಕಹಳಾಶಂಖಪಾವಪ್ರಭೃತಿಸುಷಿರವಾದ್ಯಚಯಮಂ . . . ತಳಪಾಟ ಹಸ್ತಪಾಟದ್ವಯದಿನಮರ್ದ(ಪದ್ಮರಾ. ೩-೫೩).
[?]

**ಪಟ್ಟಡಿ₁,** ಪಟಡಿ, ಪಟ್ಟೋಡಿ, ಪಟ್ಟಡೆ, ಪಟ್ಟಳಿ₁ (ನಾ). ೧. ನೀರಾವರಿಯ ಭೂಮಿ ; ಗದ್ದೆ : ಅರಗದ ದೇವಸ್ಥಾನದ ಸೀಮೆ ನಾರಣಭಟ್ಟನ ಪಟ್ಟಡಿ ವಳಗಣ ಬಾವಿಕೈಯಿ ದಾಸನ ಗದ್ದೆಯಿಂದ (ಎಕ. VIII, ತೀರ್ಥಹ. ೬೧-೧೭ ; 1688) ; ಪಟ್ಟಣದ ಸುತ್ತಣ ಪಟ್ಟಡಿಯಿಂದ ಅರಗದ ಕೆರೆ ಕೆಳಗಣ ಗದೆಯಿಂದ ಮಲ್ಲಿಸೆಟ್ಟಿ ಪಾಲು (ಎಕ. VIII, ತೀರ್ಥಹ. ೫೯-೧೨ ; 1712). ೨. ನೀರಾವರಿಭೂಮಿಯ ಮೇಲೆ ಹಾಕುವ ತೆರಿಗೆ,—ಸುಂಕ : ಬಾಲದೇಜಿಗೆ ನಾಮಗಾಣಿಕೆ ಗೋಪಾಲಸ್ವಾಮಿವರ್ತನೆಸುಂಕಕ್ಕೆ ಸಲ್ಲುವ ಪಟ್ಟಡಿ ಯೇರುಸುಂಕ ತೆಗೆದ ಬಾಗಿಲ ಹಣ (ಎಕ. III, ಶ್ರೀರಂಗ. ೧೦೦-೧೭ ; 1724). ೩. (ಅಕ್ಕಸಾಲೆಯು ಉಪಯೋಗಿಸುವ) ಅಡಿಗಲ್ಲು ; ಅದ್ದಗಣೆ : 'ಮರಪಟ್ಟಡಿ'

ಪರಾ, ೪. (ಅಕ್ಕಸಾಲೆಯ) ಕಾರ್ಯಾಲಯ ; ಕಾರ್ಖಾನೆ: 'ಪಟ್ಟಡಿಮನೆ' ಪರಾ. **ಪಟಡಿ : ೧.** ಆರಗ ದೇವಸ್ಥಾನಕೆ ಬಂದೆದ ಪಟಡಿಗೆ ದೇವಸ್ತಾನದ ಸ್ವಾಸ್ತಿಯಿಂದಲು ಗ ೬೯ ಶುಧ ಗ ೩೩ ಅಂತು ಸಿರಿಗಾರ ಪಟಡಿಯಿಂದಲು ಸಿಸ್ತು ಗ ೫೮೩ (ಎಕ. VIII, ತೀರ್ಥಹ. ೭-೧೧೭ ; 1665). **ಪಟೋಡಿ : ೫.** ಗುಂಪು ; "ಬಣ" (ಜಾನಕೋ. ೧೩). **ಪಟ್ಟಡೆ : ೧.** ಕೋಳಾಲಸೀಮೆಯೊಳಗಣ ಕೊತನೂರ ಪಟ್ಟಡೆ ಸ್ಥಳದ ಕೆಂದಟ್ಟುಗ್ರಮು ೧ (ಎಕ. X (S), ಕೋಲಾರ. ೩೦೪-೧೨ ; ಸು. 17ನೆಯ ಶತ). **೬.** ವಂಶ ; ಸಂತತಿ : ಒಬ್ಬ ಪ್ರಸಿದ್ಧಪುರುಷನಿಂದ ಅವರ ಮಕ್ಕಳು ಮೊಮ್ಮಕ್ಕಳುಗಳನ್ನು ಇಂತಹವರ ತೆಂಡೆ, ವಟಾರ, ಪಟ್ಟಡೆ ಎಂಬುದಾಗಿ ಕರೆಯುವ ವಾಡಿಕೆ (ಹುಟ್ಟಹ. ೧೮). **ಪಟ್ಟಳಿ$_1$ : ೭.** ತೊಲೆ ; ದೂಲ : 'ಪಟ್ಟಳಿ ಕಂಭ' ಪರಾ.

[ದೇ.॥ ತಮಿ. ಪಟ್ಟಟ್ಟಿ, ಪಟ್ಟಜ್ಕಿ, ಪಟ್ಟರೈ ; ತೆಲು. ಪಟ್ಟಡ]

**ಪಟ್ಟಡಿ$_2$**, ಪಟ್ಟಳಿ$_2$ (ನಾ). ಎತ್ತು, ಕುದುರೆ ಮೊದಲಾದುವುಗಳ ಮೈಯ ಸುತ್ತಲೂ ಬಿಗಿಯುವ ಪಟ್ಟಿ,—ಬಾರು; "ತಂಗುಪಟ್ಟಿ, ನಡುಕಟ್ಟು" (ನಾನಾಶ). **ಪಟ್ಟಳಿ$_2$**: "ಉರಪಾಶವೂ ಪಟ್ಟಳಿಯೆನಿಕ್ಕು" (ಮಂಗರಾ. ೧೦೨-೩). [<ಪ್ರಾ. ಪಟ್ಟಾಡಾ./ತೆಲು. ಪಟ್ಟಡ]

**ಪಟ್ಟಡಿಮನೆ**(ನಾ).(ಅಕ್ಕಸಾಲಿಗರ)ಕಾರ್ಯಾಲಯ; ಕಾರ್ಖಾನೆ: "ಆವೇಶನಂ, ಶಿಲ್ಪಶಾಲಾ—೨ ಅಕ್ಕಸಾಲಿಗರ ಕಾರ್ಖಾನೆ, ಪಟ್ಟಡಿಮನೆ; ವಾಜರ ಮನೆ" (ಸಿದ್ಧಾಂತಿ. ೧೦೦). [ಪಟ್ಟಡಿ$_1$+ಮನೆ]

**ಪಟ್ಟಡಿಮರ** (ನಾ). "ದೂಲ, ತೀರು, ಮೊ.ಗಳ ಭಾರವನ್ನು ಹಂಚಿ ಹಾಕಲು ಗೋಡೆಯಲ್ಲಿ ಉಪಯೋಗಿಸುವ ಅಡ್ಡಮರ ; ಪಟ್ಟಡಿಮರ" (Templet. ಇಂಕನಿ). [ಪಟ್ಟಡಿ$_1$+ಮರ$_1$]

**ಪಟ್ಟಡೆ** 'ಪಟ್ಟಡಿ$_1$' ನೋ.

**ಪಟ್ಟಣ** (ನಾ). ೧. ನಗರ; ಪುರ; ಶಹರು: "ಪತ್ತನಂ, ಅಧಿಷ್ಠಾನಂ, ನಿಗಮಃ, ಪುಟಭೇದನಂ . . . ಪುರಂ, ಪುರೀ — ಈ ೧೧ ಪಟ್ಟಣಂ" (ಹಲಾಯು. ೪೮-೧೩೦) ; ತೊಂಭತ್ತಾಱುಕೋಟಿ ಗ್ರಾಮಂಗಳಿಂದಂ ನಾಲ್ವತ್ತೆಣ್ಛಾಸಿರ ಪಟ್ಟಣಂಗಳಿಂದಂ . . . ನೆಱೆದೈಶ್ವರ್ಯದ ಮೇಗೆ (ಶಾಂತಿಪು. ೧೧-೮೪ ವ) ; ಬಟ್ಟೆಯಿಲ್ಲದ ಪಯಣಮುಂ ಪಟ್ಟಣಮಿಲ್ಲದ ರಾಜ್ಯಮುಂ . . . ಒಪ್ಪಲಾರ್ಕುಮೆ (ಧರ್ಮಾಮೃ. ೧-೭೫) ; ನಿಷ್ಠೆಯುಳ್ಳ ಭಕ್ತ ನಟ್ಟಡವಿಯಲ್ಲಿರ್ದಡೇನು ಅದು ಪಟ್ಟಣವೆಂದೆನ್ನಿಸುವದು ನಿಷ್ಠೆ ಇಲ್ಲದ ಭಕ್ತ ಪಟ್ಟಣದಲ್ಲಿದ್ದರೂ ಅದು ನಟ್ಟಡವಿ (ದೇದಾವ. ೪೫-೮೮); ಪೆಸರಾದ ಸಮಸ್ತವಸ್ತುವಲ್ಲಿಯೆ ಪೆಱತೊಂದು ಪಟ್ಟಣದೊಳಿಲ್ಲೆನೆ ಪಟ್ಟಣಮೊಪ್ಪಿ ತೋಱುಗುಂ (ಸೂಕ್ತಿಸು.೪-೧೦೩); ಸೂಱೆ ಹೋದುದು ನಗರಿ ಖಳರಿಗೆ ಮಾಱಿದರು ಪಟ್ಟಣವನಕಟಾ (ಕುಮಾ.ಕ.೧-೮) ; ಕೆಟ್ಟು ಪಟ್ಟಣ ಸೇರು (ಗಾದೆ). **೨.** ಶ್ರೀರಂಗಪಟ್ಟಣ : ರಾಘವಪುರದಿಂ ಪಟ್ಟಣಕ್ಕೆ ಹೋದ ದಾರಿಯ . . . ವತೆಯಲು ಬರದು ನಟ್ಟ ಕಲ್ಲು ೧ (ಎಕ. III (R), ಗುಂಡ್ಲುಪೇ. ೪೦-೬೮ ; 1320) ; ಪಟ್ಟಣ ಮೈಸೂರು ತೆರಕಣಾಂಬಿಯನಾಳ್ವ ಕಟ್ಟುಗ್ರದಘಟ ಮನ್ನೆಯರು ನೆಟ್ಟನೆ ಲಗ್ಗೆಗೇಱಿದ ಖಳರನು ಸದೆಗುಟ್ಟುವ ಪರಿಯನೇವೇಳ್ವೆ (ಕಂಸವಿ. ೧೪-೫೭). **೩.** ಪಟ್ಟಣದ ವ್ಯಾಪಾರಿಸಂಘದ ಸದಸ್ಯ : ಅಷ್ಟಾದಸ ಪಟ್ಟಣರುಂ ಯೆಂಟುನಾಡ ಪದಿನಱು×××ಸ್ವಾಮಿಗಳುಂ ಸೆಟ್ಟಿಯರುಂ (ಸೌಇಇ. XX, ೬೩-೩೧ ; 1098). [<ಪ್ರಾ. ಪಟ್ಟಣ./ಸಂ. ಪಟ್ಟನ]

**ಪಟ್ಟಣಗಾಱ** (ನಾ). ನಗರದಲ್ಲಿ ವಾಸಿಸುವವನು; ಪಟ್ಟಣಿಗ ; ನಗರವಾಸಿ : ಸೂಱೆಯೋದುದು ನಗರಿ ಪಟ್ಟಣಗಾಱರಳಿದರು (ಸಿಭಾಗ. ೧೦-೮೨-೩೧). [ಪಟ್ಟಣ+-ಕಾಱ]

**ಪಟ್ಟಣವಾಸ** (ನಾ). ನಗರದಲ್ಲಿ ವಾಸಮಾಡುವಿಕೆ ; ನಗರವಾಸ: ಪಟ್ಟಣವಾಸದೋರು ಕಳಿಸೋ ಹಾಗೆ ನಾವು ಕಳಿಸೋಕಾದೀತಾ ಸ್ವಾಮಿ (ಮಾರ್ಗದ. ೪೫). [ಪಟ್ಟಣ+ವಾಸ$_2$]

**ಪಟ್ಟಣವಾಸಿ** (ನಾ). = ಪಟ್ಟಣಗಾಱ : ಪಟ್ಟಣವಾಸಿಗಳ ಜೀವನ ಬಹುಮಟ್ಟಿಗೆ ಯಾಂತ್ರಿಕವಾಗಿಬಿಟ್ಟಿದೆ (ರೂಢಿ). [ಪಟ್ಟಣ+ವಾಸಿ$_2$]

**ಪಟ್ಟಣವಾಸಿಗ** (ನಾ). = ಪಟ್ಟಣಗಾಱ : ಪಟ್ಟಣವಾಸಿಗರೂರುಗರೊಡನೊಂದು ಬಟ್ಟೆಯೊಳಗೆ ಹೋಗುವಾಗ ಸಟ್ಟಾಟವಾಡುತ ಹೋಹಂತೆ ಮೋಹದ ತಿಟ್ಟವಿಹುದು ಮೋಕ್ಷರತನ (ಭರಚ. ೫-೧೦೧).

[ಪಟ್ಟಣವಾಸ+-ಇಗ]

**ಪಟ್ಟಣಶೆಟ್ಟಿ** 'ಪಟ್ಟಣಸೆಟ್ಟಿ' ನೋ.

**ಪಟ್ಟಣಶ್ವಾಮಿ** 'ಪಟ್ಟಣಸಾಮಿ' ನೋ.

**ಪಟ್ಟಣಸಾಮಿ,** ಪಟ್ಟಣಶ್ವಾಮಿ, ಪಟ್ಟಣಸಾವಿ (ನಾ). = ಪಟ್ಟಣಸ್ವಾಮಿ: ಪಟ್ಟಣಸಾಮಿ ಅಂಕಿಸೆಟ್ಟಿ ಮಾಳಿಸೆಟ್ಟಿ ಪ ೩ ಮಹದೇವ ಸೆಟ್ಟಿ ಗೋವಿಸೆಟ್ಟಿ ಪ ೨ (ಎಕ. II, ೨೩೫-೧೯; ಸು. 1185) ; ಮುದದಿಂ ಪಟ್ಟಣಸಾಮಿಯೆಂಬ ಪೆಸರಂ ತಾಳ್ದಿರ್ದ . . . ಮಲ್ಲಿಸೆಟ್ಟಿವಿಭುಗಂ ಲೋಕೋತ್ತಮಾಚಾರಸಂಪದೆಗೀ ಮಾಚಿವೆಸೆಟ್ಟಿಕವ್ವೆಗಂ . . . ಪುಟ್ಟಿದ ಚಂದವ್ವೆ (ಎಕ. II, ೩೩೫-೩೮ ; 1195) ; ಚಿಮ್ಮತ್ತನಕಲ್ಲ ಪಟ್ಟಣಸಾಮಿ ಸೋಯಿಸೆಟ್ಟಿ (ಎಕ. XI, ಚಿತ್ರದು. ೬-೨೨ ; 1338). **ಪಟ್ಟಣಶ್ವಾಮಿ :** ಪಟ್ಟಣಶ್ವಾಮಿ ನಾಗದೇವ ಹೆಗ್ಗಡೆವುಂ ಕೆಜ್ಜಗೌಡನುಂ (ಎಕ. II, ೪೦೭-೩ ; ಸು. 1250). **ಪಟ್ಟಣಸಾವಿ :** ಶ್ರೀರಾಜಧಾನಿ ಬಳ್ಳಿಗ್ರಾಮೆಯ ಪಟ್ಟಣಸಾವಿ ಮೊದಲಾಗೆ ಸಮಸ್ತನಗರಂ ಪವಿತ್ರಕೆ ಕೊಟ್ಟ ಪಣ (ಎಕ. VII, ಶಿಕಾರಿ. ೧೧೧-೨೪ ; ಸು. 1080) ; ಪಟ್ಟಣಸಾವಿ ಮುಖ್ಯಮಾಗಿ ಸಮಸ್ತನಗರಂಗಳುಂ ಗಂಮುಂಡಸಾವಿ ಸಂಕರಯ್ಯನುಂ . . . ಇಂತು ಪಟ್ಟಣಮುಶೇಷದ ಸಂನ್ನಿಧಾನದಲು (ಎಕ. VII, ಶಿಕಾರಿ. ೧೦೬-೩೦ ; 1098). [ಪಟ್ಟಣ+ಸಾಮಿ]

**ಪಟ್ಟಣಸಾವಿ** 'ಪಟ್ಟಣಸಾಮಿ' ನೋ.

**ಪಟ್ಟಣಸಾಳಿ** (ನಾ). ಒಂದು ಬಗೆಯ ಜೋಳ : ಭಗವಂತ, ಫುಲ್ಗರ . . . ಪಟ್ಟಣಸಾಳಿ, ಗೌರೀಕುಲ . . . ಕೊಡಮೂಕನ ಜೋಳ ಈ ಎಂಟು ಜಾತಿಗಳನ್ನು . . . ಹಲಕೆಲವು ಸಾಲುಗಳಾಗಿ ಬಿತ್ತುವರು (ಕಭಾಗೆ. ೨೭೧). [ ? ]

**ಪಟ್ಟಣಸೆಟ್ಟಿ ,** ಪಟ್ಟಣಶೆಟ್ಟಿ (ನಾ). ವರ್ತಕಶ್ರೇಣಿಯ ಪ್ರಮುಖ; ವರ್ತಕರಿಗೆ ಮುಖ್ಯಸ್ಥ : ಪಟ್ಟಣಸೆಟ್ಟಿಯ ಮನೆಯ ಕನ್ನ ಕೊರೆದು (ಮುಂಬಯಿ. ೩-೯೭). **ಪಟ್ಟಣಶೆಟ್ಟಿ :** ಗೌಡ ಶಾನಭೋಗರ ಕೈಕೆಳಗೆ ತಳವಾರ, ಪಟ್ಟಣಶೆಟ್ಟಿ, ಹಳಬರು ಮುಂತಾದ ಕಿರುಕುಳ ಕಾಮದಾರರಿರುತ್ತಾರೆ (ಕಭಾಗೆ. ೩೭೬). [ಪಟ್ಟಣ+ಸೆಟ್ಟಿ]

**ಪಟ್ಟಣಸ್ವಾಮಿ** (ನಾ). ನಗರಾಧಿಪತಿ ; ನಗರದ ಪ್ರಮುಖ : ದೋರಸಮುದ್ರದ ಪಟ್ಟಣಸ್ವಾಮಿ ಪೊಯ್ಸಳ ಸೆಟ್ಟಿಯರಾದ ನೊಣಂಬಿ ಸೆಟ್ಟಿ (ಎಕ. VI (R), ಕೃಷ್ಣರಾ. ೩-೧೫ ; 1118) ; ನಾಕಿಸೆಟ್ಟಿಯರ ಮಗ ಪಟ್ಟಣಸ್ವಾಮಿ ಪಾಯಕಣ್ಣ (ಎಕ. VI, ಕೊಪ್ಪ. ೪-೫ ; ಸು. 1300) ; ರಾಯಪುರದ ಪೇಂಠೆಯ ಗೌಡಸೇನಬೋವರು ಸೆಟ್ಟಿ ಪಟ್ಟಣಸ್ವಾಮಿ ನಾನಾಪ್ರಜೆಗಳಿಗೆ . . . ಮಾಡಿ ಕೊಟ್ಟ ಶಿಲಾಶಾಸನದ ಕ್ರಮವೆಂತೆಂದರೆ (ಸೌಇಇ. IX-ii, ೫೧೬-೩ ; 1525) ; ಪಟ್ಟಣದ ರಾಜನು ತನಗೆ ವಿವೇಕಿಯೆಂದು ಕಂಡು ಬಂದ ವ್ಯಕ್ತಿಗೆ ಪಟ್ಟಣಸ್ವಾಮಿ ಪಟ್ಟವನ್ನು ಕೊಡುತ್ತಿದ್ದನು (ಕಶಾಅ. ೩೮೪). [ಪಟ್ಟಣ+ಸ್ವಾಮಿ]

**ಪಟ್ಟಣಸ್ವಾಮಿಕೆ** (ನಾ). ನಗರಾಧಿಪತಿಯ ಪದವಿ : ಹರದಿಕೆಯ ಹರಂಬಕ್ಕೆ ಮನ್ನಣೆಯ ಮೊದಲಿಂಗೆ ಗರುವಿಕೆಯ ಗತಿಗೆ ಪಟ್ಟಣಸ್ವಾಮಿಕೆಯ

ಪದಕೆ ನೆರೆದು ಪಟ್ಟಂಗಟ್ಟಿ . . . ಪರಿಣತನ ಮಾಡಿದನಯ್ಯನಾದಯ್ಯನ (ಸೋಮಚ. ೧-೯೩). [ಪಟ್ಟಣಸ್ವಾಮಿ + -ಇಕೆ]

**ಪಟ್ಟಣಾಧಿಪತಿ** (ನಾ). = ಪಟ್ಟಣಸ್ವಾಮಿ : ಸಕಳವಿಷಯಪಟ್ಟಣಾಧಿಪತಿ ಶ್ರೀಮತ್ಕಿಸುವೊಳಲ ಮೂಲಸ್ಥಾನದ ಮಹಾದೇವರುಪಭೋಗಕ್ಕೆ ಸರ್ವಬಾಧಾಪರಿಹಾರವಾಗೆ ನಮಸ್ಯಂ ಬಿಟ್ಟ . . . ಕೆಯಿ ಮತ್ತ ೧೨ (ಕೊಲ್ಹಾಶಾ. ೨-೧೨ ; 1069) ; ಪ್ರತಿಯೊಬ್ಬ ಗ್ರಾಮಾಧಿಪತಿಯೂ ಪಟ್ಟಣಾಧಿಪತಿಯೂ ತಮ್ಮ ತಮ್ಮ ಗ್ರಾಮ-ಪಟ್ಟಣಗಳನ್ನು ಕಣ್ಣಿಟ್ಟು ನೋಡಿಕೊಳ್ಳುತ್ತಿದ್ದರು (ಕರ್ನಾಜ. ೩). [ಪಟ್ಟಣ + ಅಧಿಪತಿ]

**ಪಟ್ಟಣಿಗ** (ನಾ). = ಪಟ್ಟಣಗಾಱ : ಎಗ್ಗುಗೊಂಡು ಪಟ್ಟಣಿಗರಿದೇಕೆ ಪೋದಪರೊ ಪೇೞೆನುತ್ತಂ ನಡೆತಂದರ್ . . . ಇರ್ವರಗುರ್ವಿನ ಪಾರ್ವರಾವಗಂ (ಪುಣ್ಯಾಸ್ರ. ೬-೫೫) ; ಕರಹಡಿಗಂ, ಒಳ್ಪೂರಿಗಂ, ಬಾಸಿಗಂ, ಪಟ್ಟಣಿಗಂ (ಶಬ್ದಾನು. ೪೧೯ ಪ್ರಯೋ) ; ಇಂದೀಗ ಈ 'ಹೊಸಗನ್ನಡ'ವನ್ನು ಪಟ್ಟಣಿಗರು ಕೆಲವರು ಮನೆಮಾತನ್ನಾಗಿ ಬಳಸುವುದುಂಟು (ಸುವರ್ಣ. ೨೪೬). [ಪಟ್ಟಣ + -ಇಗ]

**ಪಟ್ಟಣಿಗೆ**$_1$ 'ಪಟ್ಟಳಿಗೆ$_1$' ನೋ.

**ಪಟ್ಟಣಿಗೆ**$_2$ (ನಾ). ಅರಳು ಹುರಿಯುವಾಗ ಕೈಯಾಡಿಸಲು, ತುದಿಗೆ ಬಟ್ಟೆ ಸುತ್ತಿ ಚೆಂಡಿನಂತೆ ಮಾಡಿಕೊಂಡ ಕೋಲು : ಅರಳು ಹುರಿಯಲಿಕ್ಕೆ ಪಟ್ಟಣಿಗೆಗೆ ಆದರೂ ಬರುವುದೆಂದು ಹರಕ ಚಿಂದೆಯನ್ನು ಮಂದೀ ಮನೆಯಿಂದ ಕೂಡಹಾಕುವಾಕೆ, ಗಂಟಿಗೆ ಗಂಟೀ ಹೇಗೆ ಬಿಟ್ಟಳೋ (ರಕ್ತಧ್ವ. ೧೦೯). [ ? ]

**ಪಟ್ಟತ್ತಿಮೂಡಿ** (ನಾ). ಬ್ರಾಹ್ಮಣರ ಹುಡುಗಿ,—ಕನ್ಯೆ : ನಾನೇನೂ ಪಟ್ಟತ್ತಿಮೂಡಿಯಲ್ಲವಲ್ಲ ? ಮಂಗಲವಾಗದಿದ್ದರೆ ಕಣ್ಣು ಕಟ್ಟಿ ಕಾಡಿಗೆ ಬಿಡುತ್ತಾರೆ ಎಂಬ ಹೆದರಿಕೆ ಇಲ್ಲ (ಹುಲಿಹಾ. ೨೬೮).
[←ಕೊಡ. ಪಟ್ಟತ್ತಿಮೂಡಿ]

**ಪಟ್ಟದಳ** (ನಾ). (?) : ಸ್ವಸ್ತಿಶ್ರೀ ಕೋಜೋತಗವುಣ್ಡರ ಮಗ ಎಱೆಯಮ್ಮ ವೆಳಚಿಗವುಣ್ಡನ ಪಟ್ಟದಳ ಪೊನ್ನಚರಿ ಮಾಡಿದಂ (ಎಕ. IX, ಹೊಸಕೋ. ೮೭-೬ ; ಸು. 750). [?]

**ಪಟ್ಟದಾಯ** (ನಾ). ಬೇಕಾದ ದಾಯ ; ತಕ್ಕ ಗರ ; ಲಾಭದಾಯಕವಾದ ಗರ : ಪಾಪಂ ಪುಣ್ಯವೆಂಬಾ ನಲ್ಲಹಾಸಂಗಿಗಳನೊಯ್ಯನೆ ಹಾಯ್ಕಲದಱಿಂದ ಒಳ್ಳಿತಾಗಲು ಪ್ರಾಪ್ತಿಸುವ ಫಲದಲ್ಲಿ ಬೀಳಲು ಪಟ್ಟದಾಯಗಳಲ್ಲಿ ಭಕ್ತಿಯೆಸಿಪ್ಪುದೊಂದೀರೈದೊದಗಿತೆನುತ . . . ದಾಯವನಾಡುವನು (ಬಸವು. ೪೩-೪). [ಪಟ್ಟ$_3$ + ದಾಯ$_1$]

**ಪಟ್ಟಧೋತ್ರ** (ನಾ). ರೇಷ್ಮೆಯ ಧೋತ್ರ,— ಪಂಚೆ ; ಪೀತಾಂಬರ : ಅಮಳತರಧವಳ ಪಟ್ಟಧೋತ್ರದ ತೊಳಪ ಸುಲಿಪಲ್ಗಳಾ ಮಿಂಚುವೂರ್ಧ್ವಾಂಬಕದ ದಿವ್ಯಶಿವಯೋಗಿತಿಲಕಂ . . . ಅನುದಿನವೀಗೆ ಪಂಡಿತಾರಾಧ್ಯಗುರುರಾಯನೆಮಗಿಷ್ಟಫಲವಾ (ಸೌಂದಪು. ೧-೯).
[ಪಟ್ಟ$_3$ + ಧೋತ್ರ]

**ಪಟ್ಟನ** (ನಾ). ಪಟ್ಟಣ ; ಪುರ ; ನಗರ. [ಸಂ.]

**ಪಟ್ಟನೂಲ್** (ನಾ). ರೇಷ್ಮೆಯ ದಾರ; ಪಟ್ಟಸೂತ್ರ : ಪದಿನಾಲ್ಕನೆಯ ಜಿನೇಂದ್ರಂ ತ್ವದೀಯ ಗುರುವದಱನಮಳಸೂತ್ರಾಂತಿಕದೊಳ್ಪದಿನಾಲ್ಕುಂ ಗಂಟನಿಕ್ಕುವುದದು ಕನಕದ ಪಟ್ಟ [ಪಾಠಾಂ. ಟ್ಟು]ನೂಲ ನೂಲಭಿರಚಿತಂ (ಅನಂಪು. ೧೦-೭೨). [ಪಟ್ಟ$_3$ + ನೂಲ್$_2$]

**ಪಟ್ಟನೆ** (ಅ). ೧. ತಟ್ಟನೆ ; ಕೂಡಲೆ ; ಚಕ್ಕನೆ : ಬಿ[ರ್ದಿ] ಮನೆಯ ಮೇಗೇಱಿ ಕಳ್ಳರೆಂದು ಪುಯ್ಯಲಿಟ್ಟಾಗಳಸಿಬರುಂ ತ್ರಸ್ತಾಭಿಭೂತರಾಗಿ ಪಟ್ಟನೆ ಪಾಱಿ[ಪಾಠಾಂ. ಪಟ್ಟಂ ಪರಿ]ಯೋಡಿ . . . ಪಗೆಸಾಱಿರ್ದರ್ (ವಡ್ಡಾರಾ. ೧೮-೨೫) ; ವೀರಪಟ್ಟಮಂ ತಡೆಯದೆ ಕಟ್ಟ ವೈರಿಗಳ ಪ[ಪಾಠಾಂ. ತ]ಟ್ಟನೆ ಪಾಱಿಸಿ ಕಾವುದೆನ್ನ ಬೆಳ್ಗೊಡೆಯುಮನೆನ್ನ ಪಟ್ಟಮುಮನೆನ್ನುಮಂ (ಪಂಪಭಾ. ೧೨-೫೧). ೨. ಪಟ್ ಎಂಬ ಸದ್ದಿನೊಡನೆ : ಮೇಲ್ಗಟ್ಟನೊಳ್ ಕೀಲಿಸಿದ ಚಂದನದ ಪೊಟ್ಟಣಂಗಳಿಂ ಪಟ್ಟನೆ ಪನಿವ ತಣ್ಪನಿಯ ತಂದಲುಂ (ವರ್ಧಪು. ೫-೬೩ ಪ) ; ತನ್ನ ಕಣ್ಣೊಂದನೊಡೆವೆನೆನುತಂದು ತದ್ರೂಪ ನೆಲದೊಳು ಬರೆದು ನೊಸಲಗಣ್ಣ ಕರದ ಕೋಲಿಂದ ನಿಬ್ಬರದಿ ತಿವಿಯೆ ಪಟ್ಟನೊಡೆಯೆ ಕುರುಡನಾಗುತ ... ಪೇಳಿದನು (ಭೈರವೇ. ೧-೧೪೬) ; ತಪದ ಗರ್ಭಂ ಪಟ್ಟನೊಡೆವುದು (ಷತಿಲ. ೧೩-೧೫) ; ಇರುವೆಗಳನ್ನು ಪಟ್ಟನೆ ಬಡಿದು (ಮುಂಬಯಿ. ಕ. ೨-೪೩). [ಪಟ್$_0$ + -ಅನೆ$_1$]

**ಪಟ್ಟಪಗಲ್**, ಪಟ್ಟಪಗಲು (ನಾ). ನಿಚ್ಚಳವಾದ ಹಗಲು ; ಹಾಡುಹಗಲು : ಬಲುವಾವ ಪುಲ್ಸರವೆನಿಸುವನು ಪಟ್ಟಪಗಲೆ ನೇಸಱನು ಮಱಸುವನು (ಗೀತಗೋ. ೧೯-೧). **ಪಟ್ಟಪಗಲು :** ಪುಣ್ಣವೆಯೊಳುದಿಸುವ ಸುರಾಕೇ[ಕೇಂ]ದುಯಿರ್ಾವರೀ ಪಟ್ಟಪಗಲು . . . ಬರುತಿಹರುವರಿಯೆವಿವರಾರೆಂದು (ನವಮೋ. ೨೪-೭೪).
[ದೇ.॥ ತಮಿ. ಪಟ್ಟಪ್ಪಕಲ್ ; ಮಲ. ಪಟ್ಟಾಪಕಲ್; ತೆಲು. ಪಟ್ಟಪಗಲು]

**ಪಟ್ಟಪಗಲು** 'ಪಟ್ಟಪಗಲ್' ನೋ.

**ಪಟ್ಟಪಸೆ** (ನಾ). ಸ್ವಲ್ಪ ಹಸಿ : ಧಾರ್ಮಿಕವಾದ ಆತನ ಪುರುಷಾರ್ಥಕಾಮದ ಪಟ್ಟಪಸೆಯೂ ಉಳಿದಿಲ್ಲ. ಬದಲಾಗಿ ಅಧಾರ್ಮಿಕವೆನ್ನಿಸಿದ ಶತ್ರುಕಾಮಕ್ಕೆ ರೆಕ್ಕೆ ಮೂಡಿತು (ಪಾರ್ತಿಸು. ೬೦). [<ಪಸೆ$_1$]

**ಪಟ್ಟಪಱಿ** (ನಾ). ಚೂರುಚೂರು ; ತುಂಡುತುಂಡು ; ಛಿನ್ನವಿಚ್ಛಿನ್ನ : ತ್ರಿಜಗದ್ಭೂಷಣಗಜಂ ಕ್ರೋಧಿಯೆಂಬ ಮದದೊಳ್ ಮತ್ತನಾಗಿ . . . ಲೋಹದ ಶೃಂಖಲೆಗಳಂ ಪಟ್ಟಪಱಿಯುಂ [ಪಾಠಾಂ. ಪಟ್ಟುಪಱಿ] ಮಾಡಿ ಕಟ್ಟುಪಂಜರದಿಂ ಪೊಱಮಟ್ಟು ಬರುತ್ತ (ಪುಣ್ಯಾಸ್ರ. ೨-೭ ಪ) ; ಸೆಱಗ ಹಿಡಿದೊಡೆ ಸೆಣಸೆ ಸೀರೆಯ ಪಟ್ಟಪಱಿಯ ಮಾಡಿದೆ ಗಡ ನೀನು ಬರಸೆಳೆದಪ್ಪಿ ಬೈದೊಡೆ ತೊಟ್ಟ ತೊಡಿಗೆಯ ಮುಱಿದಿಟ್ಟೆ ಗಡ ದೆಸೆದೆಸೆಗೆ (ಕುರಾಸಾಂ. ೩೫-೧೦೧). [<ಪಱಿ$_3$]

**ಪಟ್ಟಪುಣಿಜ** (ನಾ). ೧. ಜರಿ. ೨. ಜಿರಲೆ : "ಕರ್ಣಜಲೌಕೆ, ಶತಪದಿ ಎಂದೊಡೆ ಪಟ್ಟಪುಣಿಜ ; ಜಿಱಲೆಯ ಹುಟುವೆಂದೂ ಎಂಬರು" (ನಾಚಿರಾ. ಕ). [ಪಟ್ಟ? + ಪುಣಿಜ]

**ಪಟ್ಟಬಂಧ** (ನಾ). ೧. ರಾಜನನ್ನಾಗಿ ಅಧಿಕಾರಕ್ಕೆ ತರುವ ಸಮಯದಲ್ಲಿ ಆ ವ್ಯಕ್ತಿಯ ಹಣೆಗೆ ಶಾಸ್ತ್ರೋಕ್ತವಾಗಿ ಪಟ್ಟವನ್ನು ಕಟ್ಟುವಿಕೆ ; ವಿಧಿವತ್ತಾಗಿ ರಾಜನೆಂದು ಅಭಿಷೇಕ ಮಾಡಿ ಸಿಂಹಾಸನದಲ್ಲಿ ಕುಳ್ಳಿರಿಸುವುದು ; ಪಟ್ಟಾಭಿಷೇಕ : ಮಧುಮನೋಭವರಿರ್ವರ್ಗುಮುಟ್ಟಿವಟ್ಟು ಮಲ್ಲಿಗೆಗೆ ಬಸಂತದೊಳ್ ಬಯಸಿ ಮಾಡಿದರಲ್ಲರೆ ಪಟ್ಟಬಂಧಮಂ (ಆದಿಪು. ೧೧-೧೦೩); ೧ನೆಯ ಶಿವಕುಮಾರನ ಪಟ್ಟಬಂಧದ (ಕ್ರಿ.ಶ. ೬೭೯) ಪೂರ್ವದಲ್ಲಿ . . . ಪೊಲವೀರ ಶ್ರೀವಿಕ್ರಮ ಭೂವಿಕ್ರಮರ ಆಳಿಕೆಗಳು ಮುಗಿದಿದ್ದವು (ಕರ್ನಾಅ. ೨೨). ೨. ಕಿರೀಟ : ಇವಳ ತಲೆಯ ಮೇಲಿರುವ ಪಟ್ಟಬಂಧದಲ್ಲಿ ಹಿಂದು ಮುಂದಕ್ಕೆ ಸರಿಯುವ ಸಣ್ಣ ಉಂಗುರವಿದೆ (ಹೊಯ್ಸಪಾ. ೩೫). [ಪಟ್ಟ$_3$ + ಬಂಧ]

**ಪಟ್ಟಬಂಧನ** (ನಾ). = ಪಟ್ಟಬಂಧ ೧ : ಆದಿವಂಶಾವತಾರಸಂಭವಂ . . . ವೈವಾಹಂ ಯುಧಿಷ್ಠಿರ ಪಟ್ಟಬಂಧನಂ . . . ಅರ್ಜುನಾಭಿಷೇಕಂ ಪೆಱವುಮುಪಾಖ್ಯಾನಕಥೆಗಳೊಳಮೊಂದುಂ ಕುಂದಲೀಯದೆ ಪೇೞ್ದಂ (ಪಂಪಭಾ. ೧೪-೫೨ ಪ) ; ಕಿಱಯಂ ಪಾರ್ಥಂ ಮಹೀಮೋಹಮಿಲ್ಲೆನಗೀತಂ ಕುರುಯುದ್ಧಲಬ್ಧಜಯನೀ ಭೀಮಂಗೆ ನೀಂ ಪಟ್ಟಬಂಧನಮಂ ಮಾಟ್ಪುದು (ಗದಾಯು. ೧೦-೩೩). [ಪಟ್ಟ$_3$ + ಬಂಧನ]

**ಪಟ್ಟಬಂಧೋತ್ಸವ** (ನಾ). ಪಟ್ಟಗಟ್ಟುವ ಉತ್ಸವ,—ಸಮಾರಂಭ : ಶ್ರೀಮದಿನ್ದ್ರರಾಜಪಟ್ಟಬಂಧೋತ್ಸವಸ್ಯ . . . ಶ್ರೀನೊಳಂಬಕು×××ಕದೇವಸ್ಯ ಶೌರ್ಯ್ಯಶಾಸನಂ (ಎಕ. II, ೫೯-೧೩; ಸು. 974); ಸಕಲಸಾಮ್ರಾಜ್ಯಶ್ರೀಯಂ ಶ್ರೀಷೇಣಭೂಪತಿ ನಿಜತನೂಜನೊಳ್ ನಿಯೋಜಿಸಿ ಸಮಸ್ತಸಾಮಂತ ಮಂತ್ರಿಸಂದೋಹಮಂ ಪಟ್ಟಬಂಧೋತ್ಸವಮಂ ಮಾಡಲ್ವೇಡ್ಡು (ಚಂದ್ರಪು. ೪-೨೪ ಪ); ಆತ್ಮಪುತ್ರಂಗಧಿಕ ಮಹಿಮೆಯುಂ ಮಾಡಿದಂ ಪಟ್ಟಬಂಧೋತ್ಸವಮಂ ಸುಗ್ರೀವಭೂಪಾಳಕಂ (ಪುಷ್ಪಪು. ೧೨-೧೧೪). [ಪಟ್ಟಬಂಧ+ಉತ್ಸವ]

**ಪಟ್ಟಬದ್ಧ,** ಪಟ್ಟಬದ (ನಾ). ಒಂದು ಬಗೆಯ ತೆರಿಗೆ (?) : ಕಿಱುಕುಳ ಪಟ್ಟಬದ್ಧ ಪುತ್ರೋತ್ಸಾಹ ಆನೆಯ ಸೇಸೆ ಕುದುರೆಯ ಸೇಸೆ . . . ಎಲ್ಲಾ ತೆಱಿಯನೂ ಎಲ್ಲಾ ಬಾಧೆಯನೂ ಪರಿಹರಿಸಿ ಕೊಟ್ಟು (ಎಕ. VII (R), ನಾಗಮಂ. ೬೪-೩೬; 1271); ಪಟ್ಟಬದ್ಧ ಪುತ್ರೋತ್ಸಾಹದ ವಳಾರದ ಭಂಡಿ ತುಪ್ಪ ದಳವಿಳಿ . . . ಕಬ್ಬಿಲವಡಿಕೆ ಇಂನ್ತೀವೊಳಗಾದ ಎಲ್ಲಾ ಹದಿಕೆಯನೂ ಎಲ್ಲಾ ಬಾಧೆಯನೂ ಆ ಮಹಾಜನಂಗಳು ಪರಿಹರ್ಸಿ ಕೊಟ್ಟು (ಎಕ. VII (R), ನಾಗಮಂ. ೬೩-೪೮; 1309). **ಪಟ್ಟಬದ :** ಉತ್ಸಾಹ ಪಟ್ಟಬದ ಪುತ್ರೋತ್ಸಾಹ . . . ಆ ಮಹಾಜನಂಗಳು ಆ ದೆವಪ್ಪನವರೂ ತೆತ್ತು (ಎಕ. V (R), ತಿರುಮ. ೨೩೮-೪೬; 1290). [ ? ]

**ಪಟ್ಟಬಾಸಿಗ** (ನಾ). **೧.** ಪಟ್ಟದ ಬಾಸಿಂಗ ; ರಾಜತ್ವಸೂಚಕವಾದ ಬಾಸಿಂಗ : ಆ ಭರತರಾಜನ ಮಸ್ತಕದೊಳ್ ಪೃಥ್ವೀಸಾಮ್ರಾಜ್ಯವೆಂಬ ಅಭಿಷೇಕವಂ ಮಾಡಿ ಲಲಾಟದೊಳ್ ಪಟ್ಟಬಾಸಿಗಮಂ ಕಟ್ಟಿದನು (ಪುರುಚ. ೮೮). **೨.** ಮದುಮಕ್ಕಳ ಹಣೆಗೆ ಕಟ್ಟುವ ಶುಭಸೂಚಕವಾದ ಪಟ್ಟ : 'ಪಟ್ಟಬಾಸಿಗಗಟ್ಟು' ಪರಾ. [ಪಟ್ಟ$_3$+ಬಾಸಿಗ$_1$]

**ಪಟ್ಟಬಾಸಿಗಗಟ್ಟು** (ಕ್ರಿ). ಮದುವೆಯ ಸಮಯದಲ್ಲಿ ಹಣೆಗೆ ಶುಭಸೂಚಕವಾದ ಬಾಸಿಗವನ್ನು ಧರಿಸು : ಪಟ್ಟಬಾಸಿಗಗಟ್ಟಿ ಮದುವೆಯುಪ್ಪುದದೊಂದು ಪಟ್ಟಗದ್ದುಗೆಯೊಳು ನೃಪನಾ ಮುಟ್ಟಿ ಕುಳ್ಳಿರುವುದೊಂದಾಗಬೇಕೆಂದರು (ಭರಚ. ೩೬-೧೧೪).

[ಪಟ್ಟಬಾಸಿಗ+ಕಟ್ಟು$_1$]

**ಪಟ್ಟಭದ್ರ** (ಗು). **೧.** ಅಧಿಕಾರ ಮುಂತಾದುವು ಕೆಲವೇ ವ್ಯಕ್ತಿಗಳ ಕೈಯಲ್ಲಿ ನೆಲೆಯೂರಿ ನಿಂತ,—ಕೆಲವರಿಗೆ ಮಾತ್ರ ಹಕ್ಕು ಅಥವಾ ಬಾಧ್ಯತೆಯಂತೆ ನಡೆದು ಬಂದಿರುವ : ಪಟ್ಟಭದ್ರ ಹಿತಗಳು (Vested interests. ಪತ್ರಿಸಿ. ೪೬). (ನಾ). **೨.** ಸ್ಥಿರವಾದ ಅಧಿಕಾರವನ್ನು ಪಡೆದವನು ; ಅಧಿಕಾರದಲ್ಲಿ ಸ್ಥಿರವಾಗಿರುವವನು : ಮುಖಲರು ಪಟ್ಟಭದ್ರರಾದ ತರುವಾಯ ಅವರು ಕಲೆಗೆ ಪ್ರೋತ್ಸಾಹ ನೀಡತೊಡಗಿದರು (ಭಾರದ. ೫೫೧). [ಪಟ್ಟ$_3$+ಭದ್ರ]

**ಪಟ್ಟಮಹಾದೇವಿ** (ನಾ). ಅರಸನ ಜೊತೆಯಲ್ಲಿ ಪಟ್ಟಾಭಿಷಿಕ್ತಳಾದ ರಾಣಿ ; ಪಟ್ಟಮಹಿಷಿ ; ಹಿರಿಯರಸಿ : "ಭಟ್ಟನಿಯರ್ ನೃಪಸತಿಯರ್ ಪಟ್ಟಮಹಾದೇವಿಯಗ್ರಮಹಿಷಿಯೆನಿಕ್ಕುಂ" (ವಸ್ತುಕೋ. ೬೦-೪೯); ತ್ರಿಭುವನಮಲ್ಲ ಭುಜಬಳಗಂಗ ಪೆರ್ಮ್ಮಾಡಿದೇವರ ಪಟ್ಟಮಹಾದೇವಿ (ಎಕ. VII, ಶಿಮೊ. ೯೬-೧೧; 1113); ಬಿಟ್ಟಿದೇವನ ಹಿರಿಯರಸಿ ಪಟ್ಟಮಹಾದೇವಿ ಶಾನ್ತಲದೇವಿಯ ಸದ್ಗುಣವನ್ತಿಗೆ . . . ಉಳಿದ ಸತಿಯರ್ ದೊರೆಯೇ (ಎಕ. II, ೧೪೦-೧೮೨; 1145).

[ಪಟ್ಟ$_3$+ಮಹಾದೇವಿ]

**ಪಟ್ಟಮಹಿಷಿ** (ನಾ). = ಪಟ್ಟಮಹಾದೇವಿ : ಪಟ್ಟಮಹಿಷಿ, ಪಟ್ಟವಣಿ (ಶಮದ. ೨೯೮ ಪ್ರಯೋ.) ; ನೀನು ಪಟ್ಟಮಹಿಷಿಯಾಗಿರುವಾಗ ನಿನ್ನ ಪಟ್ಟವನ್ನು ಕಿತ್ತು ಇನ್ನೊಬ್ಬರಿಗೆ ಕೊಟ್ಟರೆ, ಜನರು ಇಲ್ಲದ ಸಲ್ಲದ ಕಾರಣಗಳನ್ನು ಕಲ್ಪಿಸಿ ಹರಟುವರು (ಶಾಂತಲಾ. ೨೩೯) ; ಯುದ್ಧದಲ್ಲಿ ಗೆದ್ದ ಮೇಲೆ ಪಟ್ಟಮಹಿಷಿ ಆಗುವವಳು ದ್ರೌಪದಿಯಲ್ಲ, ಸುಭದ್ರೆ (ಕಸಾಚ. ೯೫). [ಪಟ್ಟ$_3$+ಮಹಿಷಿ]

**ಪಟ್ಟಮಾದೇವಿ** (ನಾ). = ಪಟ್ಟಮಹಾದೇವಿ : ಮಹಾಸೇನಮಹಾರಾಜಂ . . . ಮೇಗಣ ನೆಲೆಯುಪ್ಪರಿಗೆಯ ಕಳಕಳರವಮಂ ಕೇಳ್ದು ಪಟ್ಟಮಾದೇವಿಯೋಲಗಸಾಲೆಗಭಿಮುಖನಾಗಿ (ಬಾಧಪು. ೨-೬೮ ಪ).

[ಪಟ್ಟ$_3$+ಮಾದೇವಿ]

**ಪಟ್ಟಮಾರ್ಗ** (ನಾ). ಪ್ರಧಾನಮಾರ್ಗ ; ಮುಖ್ಯಬೀದಿ : ಸಂಚರತ್ಸ್ಮೈರನಿತಂಬಿನ್ಯಂದುಕಾರಾವದಿನತಿಮುಖರಂ ತತ್ಪುರೀಪಟ್ಟಮಾರ್ಗಂ (ಚಂದ್ರಪು. ೧-೧೩೧). [ಪಟ್ಟ$_3$+ಮಾರ್ಗ]

**ಪಟ್ಟಮಾರ್ಗಂಬಿಡಿ** (ಕ್ರಿ). ರಾಜಮಾರ್ಗವನ್ನು ಹಿಡಿ : ಸುಬಳಧರಾಧೀಶ್ವರಂ . . . ಪಟ್ಟಮಾರ್ಗಂಬಿಡಿದು ಪಾದಮಾರ್ಗದಿಂ ಸನ್ಮಾರ್ಗಮಾರ್ಗಿಗಳನೆಯ್ದೆವಂದು (ಸುಕುಮಾ. ೮-೪೮ ಪ). [ಪಟ್ಟಮಾರ್ಗ+ಪಿಡಿ$_1$]

**ಪಟ್ಟಮುಡುಹು** 'ಪೊಟ್ಟಮುಡುಹ' ನೋ.

**ಪಟ್ಟರಾಜ** (ನಾ). ಪಟ್ಟಾಭಿಷಿಕ್ತನಾದ ರಾಜ ; ಪಟ್ಟಕಟ್ಟಿಸಿಕೊಂಡ ದೊರೆ : ಯಾವಂ ಪಟ್ಟರಾಜನಂ ರಾಜನೆನ್ನದೆ ತಾನೆ ಅರಸೆನುವನವಗೆ ಮರಣದಿನನ್ಯವಿಧಿಯೆ ? (ಗೊಲ್ಲೊಥಾ. ೬-೧೬೦).

[ಪಟ್ಟ$_3$+ರಾಜ]

**ಪಟ್ಟಲ್** (ನಾ). ಒಂದು ಸ್ಥಳದ ಹೆಸರು : ಪಟ್ಟಲ್‌ನಾಮಗ್ರಾಮಂ . . . ಮಾದ(ಧ)ವಚಾವೇರಗ್ಗ೯ಂ (ಇಆ. XVIII, ೩೬೭-೧೭; ಸು. 8ನೆಯ ಶತ) ; ಕಡೆಕೊಳಂ ಮರಿಯಿಸೆ ಪಟ್ಟಲ್ಮಾಱೂರ ಮುಕ್ಕೊಡು . . . ತೆಂಕ ಪೋಗಿ ಕಡೆಕೊಳಂ ಪಟ್ಟಲ್ಪೆಯ್ದಗೆ ಮುಕ್ಕೊಡು (ಮೈಆರಿ. ೧೯೩೪, ೩೮-೧೫; 11ನೆಯ ಶತ). . [ ? ]

**ಪಟ್ಟಲು** 'ಪಡಲ$_1$' ನೋ.

**ಪಟ್ಟಲೆ** (ನಾ). **೧.** ಜಿಲ್ಲೆ. **೨.** ಪಂಗಡ ; ಜಾತಿ. [ಸಂ. ಪಟ್ಟಲಾ]

**ಪಟ್ಟವಣೆ** (ನಾ). **೧.** ರಾಜಪೀಠ ; ಗದ್ದುಗೆ; ಸಿಂಹಾಸನ : "ಪಟ್ಟವಣೆಯೆಂದುಂ ಬಿತ್ತರಿಯೆಂದುಂ ಸಿಂಹಾಸನಂ" (ಕಶಸಾ. ೬೦-೩೨೩); ಕೆಂಬೊನ್ನ ಪಟ್ಟವಣೆಯ ದಳಿಂಬಂ ಪುಡಿಗೆದಱಿ ಪರೆದ ಪೂ[ವ] ತುಱುಂಗಲ್ . . . ಬಗೆಗಳುಂಬಮಾಗೆ ತೋಱಿದುವು (ವರ್ಧಮಾ. ೩-೮೭) ; ಓಲಗಸಾಲೆಯೊಳ್ ಸಿಂಗರದ ಚೆನ್ನನಾಂತ ಪಟ್ಟವಣೆಯ ಮೇಲೆ ಇಚ್ಚೆಗಾರ್ತಿವೆರಸು ನನೆವಿಲ್ಲ ಬಲ್ಲಹಂ ಕುಳ್ಳಿರಲ್ (ಕಬ್ಬಿಕಾ. ೩೪೧) ; ಪಿರಿದುಂ ಪೊಂಪುಱಿಯೇಱಿ ಪಟ್ಟವಣೆಯಂ ತಾನೇಱಿದಂ ಸದ್ಗುಣಾಕರನಂದಿರ್ವಡಿ ರಾಜರಾಜಂ (ಚಿಕವಿ. ೨-೮೫) ; ಏನ್ನನುಱಿದೆಂತರೆಮೆಯ್ಯೊಳಿರ್ಪಯ್ ! ಎಂತು ಪಟ್ಟವಣೆಯನೇಱುವಯ್ ! (ರಾಮಾಶ್ವ. ೩೬-೨) ; ಪಟ್ಟವಣೆಗೆ ಮುಂದಿನ ಉತ್ತರಾಧಿಕಾರಿ ನೀನು ಅಪ್ಪಾಜಿ (ಕಪಪು. ೭-೮೯). **೨.** ವಧೂವರರು ಕುಳಿತುಕೊಳ್ಳಲು ನಿರ್ಮಿಸಿದ ಹಸೆಮಣೆ : ಚೆಂಬೊನ್ನ ಪಟ್ಟವಣೆಯ ಮೇಗಣ ದುಗುಲದ ಪಸೆಯೊಳ್ ಗುಣಾರ್ಣವನನಾ ದ್ರುಪದಜೆಯನೊಡನೆ ಕುಳ್ಳಿರಿಸಿ . . . ಕೆಯ್ನೀರೆಱೆದು ಪಾಣಿಗ್ರಹಣಂಗೆಯ್ಸಿ (ಪಂಪಭಾ. ೩-೭೪ ಪ) ; ಅಂತು ಬಂದ ವಧೂಕಾಂತರಿರ್ವರುಮಂ ವಿವಾಹವೇದಿಕಾಮಧ್ಯದೊಳ್ ದಳಿಂಬದಿಂ ಪಚ್ಚವಡಿಸಿದ ಪಳಿಕಿನ ಪಟ್ಟವಣೆಯೊಳಿರಿಸಿ (ಚಂದ್ರಪು. ೬-೭೦ ಪ); ಅನಂತನಾಥಂ . . . ದುಗುಲದಿಂ ಪಾಸಿದ ಪಟ್ಟವಣೆಯ ಪಸೆಯನಲಂಕರಿಸೆ (ಅನಂಪು. ೬-೫೭ಪ). **೩.** ಹಲಗೆ ; ಮಣೆ : ಕಟ್ಟದ ಬೆಳುವಟ್ಟೆಯ ಮೇಲ್ಕಟ್ಟನೊಳಂ ತೀವಿದ ಚೆಂಬೊನ್ನ ದೋಣಿಗಳೊಳಮಳಂಕರಿಸಿದ ಪಳುಕಿನ ಪಟ್ಟವಣೆಗಳೊಳಂ . . . ಎಸೆವ ಮಜ್ಜನಪ್ರದೇಶಕ್ಕೆ . . . ಬಂದು (ಕಾದಂಪೂ. ೭೦).

[ಪಟ್ಟ$_3$+ಮಣೆ]

**ಪಟ್ಟವರ್ಧನ** (ನಾ). ೧. ಶ್ರೇಷ್ಠಲಕ್ಷಣಗಳಿಂದ ಕೂಡಿದ, ರಾಜನಿಗೆ ಮಾತ್ರ ಮೀಸಲಾದ ಆನೆ; ಪಟ್ಟದ ಆನೆ; ಪೂಜಾಗಜ : "ಪೂಜಾಗಜಂ = ಪಟ್ಟವರ್ಧನಂ" (ಶಸುದ. ಪರಿ. ೨) ; ಮಂಡನಾಯೋಗಂಗಳೊಳಾಯೋಗಂಗೊಂಡು ಬಂದ ಮದಾಂಧಗಂಧಸಿಂಧುರಮಪ್ಪ ಪಟ್ಟವರ್ಧನದ ಬೆಂಗೆವಾಯ್ದು (ಪಂಪಭಾ. ೧೨-೨೬ ಪ); ವಜ್ರಾಯುಧಂ ಪೋಗಿ ಸಮವಸರಣಭೂಮಿಯನೆಯ್ದಿ ಪಟ್ಟವರ್ಧನದಿಂದಮಿೞಿಯೆ (ಶಾಂತಿಪು. ೮-೧೫೫ ಪ) ; ಭದ್ರಗಜಮಂ ಕಂಡು ಮನದೆ ಕೊಂಡೆನಗೆ ಪಟ್ಟವರ್ಧನವಾಗಲಿದುವೆ ತಕ್ಕುದೆಂದು . . . ಅಶ್ರಮದೊಳೆ ಪಿಡಿದು (ಪಂಚಮಾ. ೧೦-೧೪೯ ಪ). ೨. (ಗುಹ್ಯಭಾಗ, ಮುಖ ಹಾಗೂ ಕಾಲುಗಳು ಬೆಳ್ಳಗಿರುವ) ಒಂದು ಬಗೆಯ ಉತ್ತಮಜಾತಿಯ ಕುದುರೆ : ಅಭಿಷೇಕಂ ತೋರಣದೊಳ್ ವಿಭೂತಿಯಿಂ ತಂದು ಪಟ್ಟವರ್ಧನಕೆ ಜಗತ್ತ್ರಭುವಂ ಪೊಡಮಡಿಸುವುದಿರುಳಭಿಮುಖನಾಗಿರ್ದು ಶಾಸ್ತ್ರವೇದ್ಯಂ ವೈದ್ಯಂ (ಅಶ್ವಶಾ. ೮-೨೫). ೩. ಅನೇಕ ಶಾಸ್ತ್ರಪಾರಂಗತನಾದ ಬ್ರಾಹ್ಮಣ : ಸೆಟ್ಟಿಯರಲ್ಲ ಮೇಣು ಪಟ್ಟವರ್ಧನರಿವರು ಬಟ್ಟೆತ್ತಾಗಿಯೆ ಬೊಟ್ಟನಿಟ್ಟಿಹರು (ಸರ್ವಜ. ೧೬೫-೭೮೩). [ಸಂ.]

**ಪಟ್ಟವಸ್ತ್ರ** (ನಾ). ರೇಷ್ಮೆವಸ್ತ್ರ ; ಪಟ್ಟಾವಳಿ : ಸಿಂಹಳನೃಪಂ . . . ತನ್ನ ಕುವರಿಯರಿರ್ವರಂ ಮಣಿಗಳ ಪಟ್ಟ[ಪಾಠಾಂ. ಟ್ಟು]ವಸ್ತ್ರಗಳ . . . ಕೊಟ್ಟು (ಭಾಪಚಿ. ೫-೨೧). [ಪಟ್ಟ$_3$+ವಸ್ತ್ರ]

**ಪಟ್ಟವಳಿ** 'ಪಟ್ಟವೞಿ' ನೋ.

**ಪಟ್ಟವೞಿ**, ಪಟ್ಟವಳಿ, ಪಟ್ಟವಾಳಿ, ಪಟ್ಟಳಿ, ಪಟ್ಟೞಿ$_2$, ಪಟ್ಟಾವಳಿ, ಪಟ್ಟಾವೞಿ, ಪಟ್ಟಾವೊಳಿ, ಪಟ್ಟಾಳಿ, ಪಟ್ಟೋಳಿ (ನಾ). ೧. ರೇಷ್ಮೆ ; ಕೌಶೇಯ : ಮಿಸುಗುವ ಚೌಕದ ಮುತ್ತಿನ ಪಸೆವಾಸಿನ ಪಟ್ಟವೞಿಯ ದುಗುಲದ ರುಚಿಗಳ್ ಪಸರಿಸೆ ಪೊಂಜಗಲಿ ವಿರಾಜಿಸುತಿರ್ದುದು (ಜಗವಿ. ೧೦-೯೫). **ಪಟ್ಟವಳಿ :** ೨. ರೇಷ್ಮೆ ವಸ್ತ್ರ ; ಪಟ್ಟೆಮಡಿ; ಪೀತಾಂಬರ: ಪಟ್ಟವಳಿಯಂ ಪೊದಿಸಿ (ರೇವಣ. ೧೦೫-೭); ಪಟ್ಟವಳಿಗಳು ಛಿದ್ರವಾದುದ ನಿಟ್ಟಿಸಿದಳೊರ್ವ ಸತಿ (ಶಂಕದಾ. ೭-೬೪). **ಪಟ್ಟವಾಳಿ :** ೨. ತರಿಸಿ ಸುತ್ತಿದ ಪಟ್ಟವಾಳಿಯನಿರದೆ ಚಿತ್ರಾವಳಿ ಗಜಾವಳಿ ಜರಿಯ ಪುಲ್ಲಿಯ ಸೂಕರಾವಳಿ ಹಲವು ವರ್ಣಗಳ (ಕಾಶಿರಾ. ೧೨-೧೦) ; ಪಟ್ಟವಾಳಿಯನುಟ್ಟು ಬನ್ನಿ ದಟ್ಟಚಂಗ ಬಿಟ್ಟು ಬನ್ನಿ ಪಟ್ಟವಸ್ತ್ರದಿ ಪುರಂದರವಿಟ್ಠಲರಾಯನ ನೋಡುವ ಬನ್ನಿ (ಪುರಂದ.೧-೧೦೭-೭). **ಪಟ್ಟಳಿ :** ೧. ತುಂಬುರ ಸಚಿವನು . . . ಮಱೆವಿಡಿದ ಪಟ್ಟಳಿಯ ತೆರೆಯೊತ್ತಿನಲಿ ನಿಂದನು (ಸೌಂದಪು.೧೩-೪೫); ಮಾರಾರಿಲಿಂಗಕ್ಕೆ ಪಟ್ಟಳಿಯ ಭಕ್ತಿ ಕರ್ಪೂರಸಮ್ಮಿಶ್ರ ಕಾರ್ಪಾಸಭಕ್ತಿಗಳನಾ ನೂಱಾಱುಸಾಹಸ್ರವೆಸೆವ ಲಸದಾರತಿಯನಾ ನಿರಾಜನವೆನಿಸುವ ಚಾರುತರಧಾರತಿಗಳಂ ಬೆಳಗುವಾತಂಗೆ ಸೂರಾಬ್ಜ ಶಿಖಿನೇತ್ರನೊಲಿದು . . . ಸರ್ವಸುಖಮಂ ಕೊಡುವನು (ಗುರುಚಾ. ೬-೪೪). **ಪಟ್ಟೞಿ$_2$:** ೨."ಪಟ್ಟೞಿಯೆನಲ್ಕೆ ದುಗುಲಮದು" (ಚತುಸಿ. ೧೨೧). **ಪಟ್ಟಾವಳಿ :** ೨. ಇಳೆಗೆ ಪಟ್ಟಾವಳಿಯನುಡಿಸಿದವರಿಂತುಂಟೆ ತಿಳಿವಡೆನ್ನಯ ಪೂಜೆಗಳವಡಿಸಿದವರುಂಟೆ (ಅಸೀರ.ದೇ.೧೦೪-೧); ಪಳಿಯು ಪಟ್ಟಾವಳಿಯು ನೇತ್ರಾವಳಿಯು ಹಂಸಾವಳಿಯು (ಬಸವು. ೧೧-೨೫) ; ಸುರಂಗಿನ ಪಟ್ಟೆ ಪಟ್ಟಾವಳಿಯ ದಿಂಡುಗಳ . . . ಚಿತ್ರಾವಳಿಯ ಸತ್ತಿಗೆ ಹೇಮಘಟಿಸಂತತಿಯನೊಟ್ಟೆದರು (ಕುವ್ಯಾಸ. ೫-೪೭) ; ರತ್ನಾರತಿವೆಳಗಿ ದಸರಿ ಪಟ್ಟಾವಳಿ ಚಿತ್ರವಸ್ತ್ರವ ನಿವಳಿಸಿದರಚ್ಯುತನಂಘ್ರಿಗಳಲಿ (ಮೋಹತ. ೪೨-೨೭). **ಪಟ್ಟಾವೞಿ :** ೨. ಪಟ್ಟಾವೞಿಯನುಟ್ಟು ಕೊಂಡರಸುಮಗನಂ ಪೋಲ್ತು . . . ಇಷ್ಟವಿಷಯ ಕಾಮಭೋಗಂಗಳನನುಭವಿಸುತಿರ್ಪುದುಂ (ಪಂಚತಂ. ೧೮೬-೧೫) ; ಚೀನದ ಮಹಾಚೀನದ ಪಟೞಿಯ ಚಿತ್ರಾವೞಿಯ ಪಟ್ಟಾವೞಿಯ ಪಟ್ಟಸೂತ್ರದ . . . ಪುಟ್ಟಗೆಗಳನೊಟ್ಟೆ ಬೆಟ್ಟಾಗಿ ಪುಂಜಿಸಿ (ಸುಕುಮಾ. ೧೦-೯೧ ಪ) ; ತಾಂ ದೊಡ್ಡ ವ್ಯವಹಾರಿಯಾಗಿ ಎಲ್ಲಾ ಪರದರಿಗೆ ಮುಖ್ಯನಾಗಿ ಪಟ್ಟಾವೞಿ ಮೊದಲಾದ ವಸ್ತ್ರಂಗಳುಮಂ . . . ಪೇಱಿಕೊಂಡು (ಪುಣ್ಯಾಸ್ರ. ೩-೪೩ ಪ). **ಪಟ್ಟಾವೊಳಿ :** ೨. ಭುವನಕೋಶದ ಸೀರೆ ಶುಭ್ರಪಟ್ಟಾವೊಳಿ ನವರಂಗವು ಕರ್ಕವಾಡ ಚವುಕವಳಿಯು ಸಿಂಹಳಾಂತಕ ಕಂಠಿಯು ಅವುಗಿದೇವನ ಮನೆಯೊಳಗೆ (ಅಮುಸಾಂ.೪-೨೩). **ಪಟ್ಟಾಳಿ:** ೧. ಮಿಱುಗುವ ಪಂಚಾಂಗರಾಯ ಪಟ್ಟಾಳಿಯ ಸರಗೊಂಡೆಯ ಝಲ್ಲಿಗಳು ಮೆಱೆದುವು ರಥದಂತರಾಂತರದೊಳಗಿಹ ಸುರುಚಿರ ಲೋವೆಗಳೊಳಗೆ (ಕಂಸವಿ. ೨೩-೬೮). **ಪಟ್ಟೋಳಿ :** ೧. ಪಟ್ಟೋಳಿಯ ಸರ ಗೊಂಡೆಯದ ಲೋವೆಯಿಂದ ವರರತ್ನದ ಪ್ರತಿಮೆಗಳಿಂದ ಭೂಪನ ಹಿರಿಯ ಹಜಾರವೊಪ್ಪಿದುದು (ಕಂಸವಿ. ೭-೩೦) ; ಪಟ್ಟೋಳಿ ಈ ಸೀರೆ ಪಾದ ಮುಚ್ಚುಡುವೊಳು (ಲೋಕಗೀ. ೧೨೩). [ಪಟ್ಟ$_3$+ಪೞಿ$_6$]

**ಪಟ್ಟವಾಲ** (ನಾ). (?) : ಲಾಲರು ತೆರುವ ಗ ೧೫ ಪಟ್ಟವಾಲರುಗಳಿಗೆ ಗ ೩ ಆರಿಯರು ತೆರುವ ಗ ೮ ತೀರಬುತ್ತಿಯರು ತೆರುವ ಗ ೧೫ (ಎಕ. XV, ಬೇಲೂರು. ೨೯೮-೭೩ ; 1279). [ ? ]

**ಪಟ್ಟವಾಳಿ** 'ಪಟ್ಟವೞಿ' ನೋ.

**ಪಟ್ಟವೇದಿ** (ನಾ). ಅಧಿಕಾರಸೂಚಕವಾದ ಉಂಗುರ ; ಮುದ್ರೆಯುಂಗುರ (?) : ಕುನ್ದಿಗನೊಳ್ಪಡೆದಂ ನಡು[ನಾ][ಡ]ತೀರ್ತ್ಥವೀಮಹಿಮೆಗಳಂ ಪಟ್ಟವೇದಿಯುಂ ಬೆ×× ಬಟ್ಟನ್ದಂ ××× ಕುನ್ದಿಗಂ (ಸೌಇಇ. XX, ೨೪-೧೫ ; 1034). [ಪಟ್ಟ$_3$ + ವೇದಿ$_2$]

**ಪಟ್ಟವೇರು** 'ಪಟ್ಟವೇಱು' ನೋ.

**ಪಟ್ಟವೇಱು**, ಪಟ್ಟವೇರು (ಕ್ರಿ). ಸಿಂಹಾಸನವನ್ನು ಹತ್ತು,—ಆರೋಹಿಸು ; ರಾಜನಾಗು : ಪೊಸತೆ ಪಟ್ಟವೇಱಿದನ ಕಯ್ಮೆಗಳುಂ ಬಿಗಿಯೆ (ಬದ್ಧಪ್ರ. ೨-೪೦). **ಪಟ್ಟವೇರು :** ಮೂರನೆಯ ಗೋವಿಂದನ ಮರಣಾನಂತರ ಅವನ ಮಗ ಅಮೋಘವರ್ಷನೃಪತುಂಗ ಪಟ್ಟವೇರಿದ್ದನು (ನೊಳಂಬ. ೨೭). [ಪಟ್ಟ$_3$ + ಏಱು$_1$(<ಏಱ್$_1$)]

**ಪಟ್ಟಶರ** (ನಾ). ದೊಡ್ಡ ಕೆರೆ,—ಕೊಳ : "ಪಟ್ಟಸರ—ಪಟ್ಟಶರ = ದೊಡ್ಡಕೆರೆ" (ತದ್ಭಕೋ. ೨೩) ; ಪಟ್ಟವರ್ಧನ, ಪಟ್ಟಶರ (ಶಮದ. ೨೯೮ ಪ್ರಯೋ). [ಪಟ್ಟ$_3$+ಶರ]

**ಪಟ್ಟಶಾಲಿ** 'ಪಡಸಾಲೆ$_2$' ನೋ.

**ಪಟ್ಟಶಾಲೆ** 'ಪಡಸಾಲೆ$_1$' ನೋ.

**ಪಟ್ಟಶಾಳೆ** 'ಪಡಸಾಲೆ$_1$' ನೋ.

**ಪಟ್ಟಶಿಲ್ಪಿ** (ನಾ). (ಅರಮನೆಯ) ಮುಖ್ಯ ಶಿಲ್ಪಿ ; ಪ್ರಧಾನ ಶಿಲ್ಪಿ : ಒಂದನೆ ನರಸಿಂಹನ ಪಟ್ಟಶಿಲ್ಪಿ ಕೇದಾರೋಜನು ೪ ದ್ವಾರಗಳನ್ನೂ ಮತ್ತು ಜಾಲಂಧ್ರಗಳನ್ನೂ ಸೇರಿಸಿದನು (ಭಾರದ. ೫೦೬). [ಪಟ್ಟ$_3$ + ಶಿಲ್ಪಿ$_1$]

**ಪಟ್ಟಶಿಷ್ಯ** (ನಾ). ಮೆಚ್ಚಿನ ವಿದ್ಯಾರ್ಥಿ ; ಪ್ರಧಾನಶಿಷ್ಯ : ಅರ್ಜುನನು ದ್ರೋಣಾಚಾರ್ಯರ ಪಟ್ಟಶಿಷ್ಯನೆನಿಸಿಕೊಂಡನು (ರೂಢಿ). [ಪಟ್ಟ$_3$ + ಶಿಷ್ಯ]

**ಪಟ್ಟಸ$_1$** 'ಪಟ್ಟಸ$_1$' ನೋ.

**ಪಟ್ಟಸ$_2$** (ನಾ). ಖಡ್ಗದಂತಹ ಒಂದು ಬಗೆಯ ಆಯುಧ : "ಪಟ್ಟಸ—ಪಟ್ಟಿಶ = ಒಂದಾಯುಧ" (ತದ್ಭಕೋ. ೨೩) ; ಕೃಪಾಣ ಪಟ್ಟಸ ಪರಶು ಪರಿಘ ಗದಾದಿ ಶಸ್ತ್ರದಿನೆಸೆದುದಾ ದುರ್ಗ (ತೊರರಾ. ೬-೭-೭) ; ಸುರಗಿ ಸೂನಗಿ ಶಕ್ತಿ ಕರವಾಳು ಗದೆ ಖಡ್ಗ ಪರಶು ಪಟ್ಟಸ ಕೊಂತ ಲೌಡಿ . . . ಮುದ್ಗರ ಮೊದಲಾದಾಯುಧದೊಳು . . . ಪೊಡದು(ಭೈರವೇ.೩-೯) ; ಕುಂತಂಗಳಿಂ ಜಂತೆಗಳಂ ಪ್ರಾಸ ಪಟ್ಟಸಂಗಳಿಂ

ಪಾಸುವಲಗೆಗಳಂ . . . ಅಳವಡಿಸಿ (ಚಕಪಂ. ೫೪-೧೫); ರ್ಘುಲ್ಲಿಸುವ ಪಟ್ಟೆಸದಲಸಿ ಗದೆಯಲ್ಲಿ ತಾಗಿದ ಗಾಯದಲಿ ಬಲುಬಲ್ಲಿದರು ನೆಲ ಕುರುಳಿ ಹೊರಳುವರುಭಯಕಟಕದಲಿ (ಕೋಗಯು. ೨೧-೨೮).

[<ಸಂ. ಪಟ್ಟಿಸ]

**ಪಟ್ಟೆಸರ** (ನಾ). = ಪಟ್ಟೆಶರ : "ಪಟ್ಟೆಸರ—ಪಟ್ಟೆಶರ = ದೊಡ್ಡ ಕೆರೆ" (ತದ್ಭಕೋ. ೨೩); ಶೋಭಿಸುವ ಪಟ್ಟೆಸರಮುಂ ಪಟ್ಟೆವಹಿಷಿಯುಂ . . . ತೋಱುತಿರ್ಕುಂ (ಕಬ್ಬಿಕೈ. ೯೮). [ಪಟ್ಟೆ₃+ಸರ₃]

**ಪಟ್ಟೆಸಹಣ** 'ಪಟ್ಟಸಾಹಣ' ನೋ.

**ಪಟ್ಟೆಸಹಣಿ** 'ಪಟ್ಟಸಾಹಣಿ' ನೋ.

**ಪಟ್ಟೆಸಾಣಿ** (ನಾ). ಉತ್ತಮವಾದ ಜವನಿಕೆ,—ತೆರೆ : ಸುತ್ತಲೂ ಬಣ್ಣಬಣ್ಣದ ಪಟ್ಟೆಸಾಣಿ (ಪರದೆ) ಗಳನ್ನು ಕಟ್ಟಿ, ದಿವ್ಯವಾದ ಅಲಂಕಾರಗಳಿಂದ ಭೂಷಿತರಾಗಿ (ಬುದ್ಧಜಾ. ೧೦೮). [ಪಟ್ಟೆ₃+ಸಾಣಿ?]

**ಪಟ್ಟೆಸಾಲಿಗ** (ನಾ). ಪಟ್ಟೆವಸ್ತ್ರವನ್ನು ನೇಯುವವನು; ರೇಷ್ಮೆ ನೇಕಾರ : ವೃದ್ಧತಾಪಸನಂ . . . ಅಲ್ಲಿಯ ಮೂಲಿಗನಪ್ಪ ಪಟ್ಟೆಸಾಲಿಗಂ ಕಂಡು ತನ್ನ ಮನೆಗೊಡಗೊಂಡು ಪೋಗಿ (ಪಂಚತಂ. ೭೩-೮); ಶಾಸನ ಪಟ್ಟೆಸಾಲಿಗ ಸಮಯಸಮುದಿತ ಲಲಾಟಪಟ್ಟಂ . . . ಶ್ರೀಮನ್ಮಹಾಸಾಮನ್ತಂ ಮಾರ್ತ್ತಣ್ಣಯ್ಯಂ (ಸೌಇಇ. XI-i, ೭೮-೮೨; 1045); ಶ್ರೀಮದ್ರಾಜಧಾನಿ ಅವಂಚೆಯ ಪಟ್ಟೆಸಾಲಿಗಂ ತ್ರೈಳೋಕ್ಯಮಲ್ಲ ಅಂಗಡಿಸೆಟ್ಟಿಗಂ (ಕಇಅ. ೨೮-೪೦-೩೩; 1115); ಗಂದಿಗ ನೆರವಣಿಗಂ ಸರವಂದಿಗನಾ ಪಟ್ಟೆಸಾಲಿಗಂ ಬಾಣಸಿಗಂ ಮಾಂದರಿಗಂ ಜೋಯಿಸಿಗಂ ಸಂದಱಿಕೆಯ ಕಬ್ಬಿಗಂ ಸಮಂಜಸನೊಳನೇ (ಕಾವ್ಯಾವ. ೩೨೩); ಪಱಿಗಜ್ಜಂ ಪಟ್ಟೆಸಾಲಿಗರೊಳ್ (ರಾಮಾಶ್ವ. ೭-೨೪).

[ಪಟ್ಟೆ₃+ಸಾಲೆ₁(<ಸೇಲೆ)+-ಇಗ]

**ಪಟ್ಟೆಸಾಲಿಗಿತಿ,** ಪಟ್ಟೆಸಾಲಿತಿ (ನಾ). ರೇಷ್ಮೆನೇಕಾರರ ಜಾತಿಯ ಹೆಂಗಸು : ಸರವಂದಿಗಿತಿ, ಪಟ್ಟೆಸಾಲಿಗಿತಿ, ಗಂದಿಗಿತಿ (ಶಬ್ದಾನು. ೧೯೨ ಪ್ರಯೋ). **ಪಟ್ಟೆಸಾಲಿತಿ :** ಪಾರ್ವಂತಿ, ಅಕ್ಕಸಾಲಿತಿ, ಪಟ್ಟೆಸಾಲಿತಿ (ಶಬ್ದಾನು. ೨೦೨ ವ್ಯಾಖ್ಯಾ). [ಪಟ್ಟೆಸಾಲಿಗ+-ಇತಿ₁(<-ಇತ್ತಿ)]

**ಪಟ್ಟೆಸಾಲಿತಿ** 'ಪಟ್ಟೆಸಾಲಿಗಿತಿ' ನೋ.

**ಪಟ್ಟೆಸಾಲೆ** 'ಪಡಸಾಲೆ₁' ನೋ.

**ಪಟ್ಟೆಸಾಹಣ,** ಪಟ್ಟೆಸಹಣ (ನಾ). ಶ್ರೇಷ್ಠವಾದ ಕುದುರೆಗಳ ಲಾಯ; ಮುಖ್ಯವಾದ ಲಾಯ : 'ಪಟ್ಟೆಸಾಹಣಾಧೀಶ' ಪರಾ. **ಪಟ್ಟೆಸಹಣ :** ಪಟ್ಟೆಸಹಣದ ಹಿರಿಯ ಸಹಣದ ವಿಮಲಸಹಣಿಗಳವರ ಕರೆ (ಕುವ್ಯಾಭೀ. ೪-೪೭). [ಪಟ್ಟೆ₃+ಸಾಹಣ]

**ಪಟ್ಟೆಸಾಹಣಾಧಿಪತಿ** (ನಾ). ಪಟ್ಟೆಸಾಹಣದ ಅಧಿಕಾರಿ; ಶ್ರೇಷ್ಠವಾದ ಕುದುರೆಗಳ ಲಾಯದ ಅಧಿಕಾರಿ,—ಮುಖ್ಯಸ್ಥ : ಬಾಹತ್ತರನಿಯೋಗಾಧಿಪತಿ ಪಟ್ಟೆಸಾಹಣಾಧಿಪತಿ . . . ಪೇಯಿಯ ಸಾಹಣಿಯರುಂ (ಕೊಲ್ಹಾಶಾ. ೧೬-೩೯; 1189).

[ಪಟ್ಟೆಸಾಹಣ+ಅಧಿಪತಿ]

**ಪಟ್ಟೆಸಾಹಣಾಧೀಶ** (ನಾ). = ಪಟ್ಟೆಸಾಹಣಾಧಿಪತಿ : ಆಯತ ಕೀರ್ತ್ತಿವಿನೇತಶ್ರೀಯುಕ್ತಂ ಪಟ್ಟೆಸಾಹಣಾಧೀಶನೆನಲ್ ಪೇಯಿಯ ಸಾಹಣಿ (ಎಇ. XV, ೩೫-೧೬; 1189). [ಪಟ್ಟೆಸಾಹಣ+ಅಧೀಶ]

**ಪಟ್ಟೆಸಾಹಣಿ,** ಪಟ್ಟೆಸಹಣಿ (ನಾ). = ಪಟ್ಟೆಸಾಹಣಾಧಿಪತಿ : ಮಹಾಪ್ರಚಂಡದಂಡನಾಯಕಂ ಪಟ್ಟೆಸಾಹಣಿ ಬಮ್ಮದೇವಯ್ಯ ದಂಡನಾಯಕರ ಪಿರಿಯ ಮಗಂ ರೇಚರಸರು . . . ರಾಜ್ಯಂಗೆಯ್ಯುತ್ತ (ಎಕ. VII (s), ಶಿಕಾ. ೩೩೪-೯; 1100); **ಮಹಾಮಂಡಲೇಶ್ವರಂ ಕರಿತುರಂಗ ಪಟ್ಟೆಸಾಹಣಿ ಮಲ್ಲಿಯಂಣನ ಪ್ರಧಾನ ಕಂಚೀಗೊಂಡ ಪೈರದ** ಪೆಗ್ಗಡೆ ದಂಡನಾಯಕಂ (ಕಇಅ. ೧೮-೯-೬೧; 1127); ಬಲ್ಲಾಳದೇವನ ಪಟ್ಟೆಸಾಹಣಿಕಳುಂ ಅಯಿಬೆಯ ಸಾಹಣಿ ಶ್ರೀಮಲ್ಲಿಕಾರ್ಜ್ಜುನದೇವರ (ಎಕ. VII, ಶಿಮೊ. ೧೦೨-೩೩; 1215). **ಪಟ್ಟೆಸಹಣಿ :** ಸಮುಚಿತಾಸನದೊಳ್ ಕ್ರಮದಿಂ ಕುಳ್ಳಿರ್ದ ಪಟ್ಟೆಸಹಣಿಯರ ಪರಿವಿಡಿಯೊಳಂ (ಗಿರಿಕ. ೨-೧೦೫ ವ); ರಾಜವಾಜಿಗಳಂ . . . ಪಟ್ಟೆಸಹಣಿಗಳಿರ್ಕೆಲದೊಳ್ವಿಡಿದು ತಡೆಯದೆ ತರ್ಪಾಗಳ್ (ರಾಜಶೇ. ೧೩-೬೧ ವ). [ಪಟ್ಟೆ₃+ಸಾಹಣಿ]

**ಪಟ್ಟೆಸಾಳಿ** 'ಪಡಸಾಲೆ₂' ನೋ.

**ಪಟ್ಟೆಸು** 'ಪಟ್ಟಿಸ₁' ನೋ.

**ಪಟ್ಟೆಸೂತ್ರ** (ನಾ). ರೇಷ್ಮೆಯ ಎಳೆ,—ನೂಲು,—ದಾರ : ಪಟ್ಟೆಸೂತ್ರದೆರಡೆಳೆಯುಮಂ ಗಂಟಿಕ್ಕುವಂತೆ ಪರಂಪರಮುಂ ಪಱಿಮುಱಿವುಮಾದ ನಣ್ಪಂ ಪುನರ್ನವಂ ಮಾಳ್ಪ ಬಗೆಯಿಂ ಎನ್ನನಿಂತೆಂದಟ್ಟಿದನೆಮ್ಮರಸಂ (ಶಾಂತಿಪು. ೫-೩೨ ವ); ಚಿತ್ರಾವಱಿಯ ಪಟ್ಟಾವಱಿಯ ಪಟ್ಟೆಸೂತ್ರದ ಚಿತ್ರಸೂತ್ರದ ನೇತ್ರವಟ್ಟಣಿಗೆಯ ಪುಟ್ಟಿಗೆಗಳನೊಟ್ಟಿ ಬೆಟ್ಟಾಗಿ ಪುಂಜಿಸಿ (ಸುಕುಮಾ. ೧೦-೯೧ ವ); ಪಟ್ಟೆಸೂತ್ರಂಗಳೊಳು ಪೃಷ್ಠಾಪೃಷ್ಠಿ ಮುಖಮುಖವಱಿದು ಪೋಣಿಸಿ ಪೆಟ್ಟಿಗೆಯೊಳಿಹ ದಿವ್ಯರುದ್ರಾಕ್ಷಿಯ ವಿಭೂಷಣವ (ಶಂಕದಾ. ೫-೪೧). [ಪಟ್ಟೆ₃+ಸೂತ್ರ]

**ಪಟ್ಟೆಸೂತ್ರಬಿಸಿಗೆ** (ನಾ). ರೇಷ್ಮೆನೂಲಿನ ಒಂದು ತೂಕ; ಹತ್ತು ಪಲದ ತೂಕ : ಪಟ್ಟೆಸೂತ್ರಬಿಸಿಗೆಗೆ ವಿ ೧೦ ಸುಂಕದ ಪೇಱಿಂಗೆ ವಿ ೧೦ ಪತ್ತಿಯ ಮಳವೆಗೆ ವಿ ೨ ॥ . . . ಟಂಕಣಕಾರ ಬಿಸಿಗೆಗೆ ವಿ ೭ ॥ (ಕಇಅ. ೧೦೩-೮೦-೨೮; 1076). [ಪಟ್ಟೆಸೂತ್ರ+ಬಿಸಿಗೆ]

**ಪಟ್ಟೆಳಿ** 'ಪಟ್ಟವೞಿ' ನೋ.

**ಪಟ್ಟೆಳಿಗೆ₁,** ಪಟ್ಟಣಿಗೆ₁ (ನಾ). ಉತ್ತಮವಾದ ರೇಷ್ಮೆವಸ್ತ್ರ; ದುಕೂಲ; ಪಟ್ಟೆವಸ್ತ್ರ : ಮಲ್ಲಿಗೆಯ ಸೋಮರ್ಗುಡಿ ನಿಪ್ಪೊಸತಪ್ಪ ಮೌಕ್ತಿಕಂಗಳ ತೊಡವುಟ್ಟ ಪಟ್ಟೆಳಿಗೆ ದಂತಮರೀಚಿಗಳಿಂ ಬೆಳರ್ತ ಬಾಯ್ತ್ ಪಳಿಕಿನ ಪೆಣ್ಗೆ ಪಾಸಟಿಯೆನಿಪ್ಪ ವಿಲಾಸಮನೀಯೆ (ಪಂರಾಮಾ. ೩-೭೨); ಸೆಳೆಮಂಚವನೇಱುತ್ತಂ ಸೆಳೆದಂ ಮುಸುಕಿಟ್ಟ ಪಟ್ಟೆಳಿಗೆಯುಂ ಮುದದಿಂ (ವೀರವಿ. ೬-೬೮). **ಪಟ್ಟಣಿಗೆ₁ :** "ಹುಟ್ಟಿಗೆ, ದುಗುಲಂ, ಪಟ್ಟಣಿಗೆ, ಉಳ್ಳುಡಿಗೆ–ಈ ೪ ವಸನಕ್ಕೆ ಪೆಸರ್" (ಕಶಸಾ. ೬೩-೩೯೨); ಮುಸುಕಿಟ್ಟ ಪಟ್ಟಣಿಗೆಯುಂ ಪೊಜಪೊಣ್ಮುವ ಕಣ್ಣ ಬಿಳ್ಪುವೋಪರ ಮನದೊಳ್ ತೆಱಂಬೊಳೆವ ಬಾಳೆಗಳಂತಿರೆ . . . ಬಂದುದಂದೊಡನೆ ಸಜ್ಜನವೆಂಡಿರ ತಂಡಂ (ಆದಿಪು. ೧೧-೪೬ ಅಡಿಸದ್ಯ); ಯೌವನೋನ್ಮತ್ತೆಯರುಟ್ಟ ಪಟ್ಟಣಿಗೆಯ ನಿಱಿಯ ತುಱುಂಗಲಂ ನೆಗಪಿ ನುಣ್ದೊಡೆಯ ಚೆಲ್ವಂ ನೋಡಲೆಂದು ಸಿಡಿಮಿಡಿವರ್ಪ ಕಾತರ ವಿಟರ ಕಣ್ಗೆ ಪಾರಣೆಯಂ ಮಾಡಿಯುಂ . . . ಸಾಯಂತನಸಮಯಸವಿಾರಣಂ ಸೌಖ್ಯಸಾರಸರ್ವಸ್ವಮೆನಿಸಿದಾಗಳ್ (ಚಂದ್ರಪ್ರ. ೮-೪ ವ). [ಪಟ್ಟೆ₃+ಪಳಿಗೆ₂]

**ಪಟ್ಟೆಳಿಗೆ₂** 'ಪಡಲಗೆ' ನೋ.

**ಪಟ್ಟೆಳಿ₁** 'ಪಟ್ಟಡಿ₁' ನೋ.

**ಪಟ್ಟೆಳಿ₂** 'ಪಟ್ಟಡಿ₂' ನೋ.

**ಪಟ್ಟೆಳಿಕಂಭ** (ನಾ). ತೊಲೆಯನ್ನು ಹೊತ್ತಿರುವ ಕಂಭ; ತೊಲೆಗಂಬ : ಪಳಿಕಿನ ಬದ್ಧಭೂಮಿ ಮಣಿವೇದಿಕೆ ಪಚ್ಚೆಯ ಭಿತ್ತಿ ವಜ್ರದುಜ್ಜಳಿಪ ವಿತಾನಮಾ ಸಿಮಿರ್ದ ನೀಲದ ಪಟ್ಟೆಳಿಕಂಭಮಿಂಬುವೆತ್ತಳವಡೆ . . . ಮಂಡಿತಮಾಯ್ತು ವಿವಾಹಮಂಡಪಂ (ಶಾಂತೀಶ್ವ. ೨-೧೩೧).

[ಪಟ್ಟೆಳಿ₁(<ಪಟ್ಟಡಿ₁)+ಕಂಭ]

**ಪಟ್ಟೞಿ₁** (ಕ್ರಿ). ಸಂಪೂರ್ಣವಾಗಿನಾಶವಾಗು; ನಿಶ್ಶೇಷವಾಗು(?). **ಪಟ್ಟೞಿಪಾಯ್ವೊಂ** = ಸಂಪೂರ್ಣವಾಗಿ ನಾಶವಾಗುವಂತೆ ಹಾಯುವವನು,—ಮೇಲೆ ಬೀಳುವವನು : **ಕಾಮಕೋಡನ್**

ತಮ್ಮುತ್ತು ಮೂವರಾ ಪಾಶುಪಾತಂ ನವ್ವಾ್ರ ನೋವದೊರಾ ನಾಲಗೆಯನೆ ಕಿಳ್ವೊನ್ ಪಟ್ಟವೊಡೆಯಂಗೋ ಅ(ವ)ದೊರನ್ ಪಟ್ಟೆಟಿ ಪಾಯ್ವೊನ್ ಶ್ವೇತವಾಹನನುದಯಪುರಮಾನ್ ಪೊಗುವಲ್ಲಿ ಎಱಡು ಶ್ವರ್ಗಲಯ ಕ್ಕೇಱಿದೊನ್ (ಎಇ. IX, ೧೯–೧೧ ; 800). [ಪಟ್ಟ$_3$+ಆಟಿ$_1$]

**ಪಟ್ಟೆಟಿ$_2$** 'ಪಟ್ಟವಟಿ' ನೋ.

**ಪಟ್ಟಾ$_1$** 'ಪಟ್ಟೆಯ$_1$' ನೋ.

**ಪಟ್ಟಾ$_2$** 'ಪಟ್ಟೆಯ$_2$' ನೋ.

**ಪಟ್ಟಾಂಗ** 'ಪಟ್ಟಂಗ' ನೋ.

**ಪಟ್ಟಾಂಬರ** (ನಾ). ಪಟ್ಟೆವಸ್ತ್ರ ; ರೇಷ್ಮೆಯ ಬಟ್ಟೆ ; ಪಟ್ಟಾವಳಿ : ವಸುಧಾತರುಣಿ ನಿಱಿವಿಡಿದುಟ್ಟ ಪಟ್ಟಾಂಬರವಿದೆನೆ ಲವಣಾಬ್ಧಿ ಮಿಗೆ ರಂಜಿಸುವುದು (ಜೀನಂಚ. ೨–೧) ; ಸಲ್ಲಲಿತ ಜಂಗಮುವಶಂಗತನಾಗಿರೆಂದು ಪಟ್ಟಾಂಬರಾದಿಗಳನಿತ್ತು . . . ನಂಬ್ಯಣ್ಣಂಗೆ ಶಿವನೊಲ್ದು ಕೃಪೆಗೆಯ್ಯಲು (ಅರಾಚ. ೪–೬–೨೩). [ಪಟ್ಟ$_3$ + ಅಂಬರ]

**ಪಟ್ಟಾಂಶುಕ** (ನಾ). = ಪಟ್ಟಾಂಬರ : ವರಪಟ್ಟಾಂಶುಕರಾಶಿಯುಂ ಸಮದ ಹಸ್ತಿವ್ರಾತಮುಂ ಘೋಟಕೋತ್ಕರಮಂ ರತ್ನಸಮೂಹಮುಂ ಪತಿಗೆ ದೂತರ್ ತೋಱಿದರ್ (ಚಂದ್ರಪು. ೯–೪) ; ಉಜ್ಜ್ವಲವೆನಿಪ ಮಣಿ ಭೂಷಣಾಳಿಯು ಲಲಿತಪಟ್ಟಾಂಶುಕಸಮೂಹವನು . . . ದಣಿವಂದದಲಿ ವಿಪ್ರಾವಳಿಗೆ ಪಿರಿದೆನಲಂಬಿಕಾಸುತನಿತ್ತನೊಲವಿನಲಿ (ತಿಮ್ಮಕ್ರ. ೨–೨೭). [ಪಟ್ಟ$_3$+ಅಂಶುಕ]

**ಪಟ್ಟಾಕತ್ತಿ,** ಪಟ್ಟೆಕತ್ತಿ (ನಾ). ಖಡ್ಗದಂತಹ ಒಂದು ಬಗೆಯ ಆಯುಧ : ಕತ್ತಿ, ಸಾಣಾಕತ್ತಿ, ಫಿರಂಗಿಕತ್ತಿ, ಪಟ್ಟಾಕತ್ತಿ . . . ಮೊದಲಾದ ಆಯುಧಗಳನ್ನೂ ತಂದು (ಕೃಪಾಸ. ೧೧೮) ; ಹುಲ್ಲೇ ಚರ್ಮದಿಂದ ಮುಚ್ಚಲ್ಪಟ್ಟ ಪಟ್ಟಾಕತ್ತಿಯೂ ನಕುಲನ ಆಯುಧ (ಕೃಪಾವಿ. ೬೨). **ಪಟ್ಟೆಕತ್ತಿ :** ಅವರು ಗುರಾಣಿಗಳನ್ನೂ ಪಟ್ಟೆಕತ್ತಿ ಗಳನ್ನೂ ಧರಿಸಿದ್ದರು (ಭಾರವೀ. ೧). [ಪಟ್ಟಾ$_1$(<ಪಟ್ಟೆಯ$_1$) + ಕತ್ತಿ]

**ಪಟ್ಟಾಟ** (ನಾ). ಹಟ ಹಿಡಿಯುವಿಕೆ ; ಮೊಂಡುತನ : ಅವುಗಳ ಸ್ವಾಭಾವಿಕ ಪಟ್ಟಾಟದಲ್ಲಿ ಕಾರ್ಯಸಾಧನೆಯೇ ಮುಖ್ಯ ಗುರಿ. ವಿವೇಕ ಮತ್ತು ವಿವೇಚನೆ ಇಲ್ಲ . . . ಉದಾ : ನೊಣ ; ಕೈ ಎಷ್ಟೇ ಸಲ ಬೀಸಿದರೂ ಅವು ಮುಖದ ಮೇಲೆ ಹಾರಾಡಲು ಬರುತ್ತವೆ (ಕೀಟಬೆ. ೪). [ಪಟ್ಟು$_1$+ಆಟ]

**ಪಟ್ಟಾಡು** (ಕ್ರಿ). ಮೊಂಡು ಹಿಡಿ ; ಹಟ ಮಾಡು ; ಪಟ್ಟು ಹಿಡಿ: ಕೊಟ್ಟಾ ಭಾಷೆಗೆ ನೀನು ಪಟ್ಟಾಡದೀಗಲೆನ್ನ ಧಿಟ್ಟಾದಿಂ ಮಾರಿ ಹಣವ ಕೊಟ್ಟು ಕಳುಹು (ಹಮುಚ. ೯೦) ; ನಿನ್ನ ಮನೆ ಉಳಿಸಿ ಒಬ್ಬ ಮನುಷ್ಯ ನನ್ನಾಗಿ ಮಾಡಬೇಕೂಂತ ನನ್ನ ಮನಸ್ಸಿನಲ್ಲಿ ದೇವರು ಪ್ರೇರೇಪಿಸಿದ. ಅದಕ್ಕೋಸ್ಕರ ನಾನು ಪಟ್ಟಾಡಬೇಕಾಯಿತಪ್ಪಾ (ತಾಯಿಕ. ೨೪). [ಪಟ್ಟು$_1$+ಆಡು$_1$]

**ಪಟ್ಟಾಣಿ** 'ಪಠಾಣ' ನೋ.

**ಪಟ್ಟಾದಾರ್** (ನಾ). (ಕುಸ್ತಿ ಮಾಡಲು) ತಕ್ಕ ಶಿಫಾರಸು ಪತ್ರ ವನ್ನು ಹೊಂದಿರುವವನು ; ಪಟ್ಟೆಯನ್ನು ಹೊಂದಿರುವವನು ; ಅಧಿಕಾರ ಹೊಂದಿರುವವನು : ನಿನ್ನ ಉಸ್ತಾದ್ ಯಾರು ಪಟ್ಟಾದಾರ್ ? (ಭೀಮಸಾ. ೫೩). [ಪಟ್ಟಾ$_2$(<ಪಟ್ಟೆಯ$_2$) + <–ದಾರ$_4$]

**ಪಟ್ಟಾಧ್ವರ** (ನಾ). ಪಟ್ಟ ಕಟ್ಟುವ ಕಾರ್ಯ ; ಪಟ್ಟಾಭಿಷೇಕದ ಕಲಾಪ : ಸರ್ವಜನಮನದ ಹರುಷಪೂರದ ವೇದಮಂತ್ರೋಚ್ಚರಣ ಸಾರದ ನೃಪನ ಪಟ್ಟಾಧ್ವರವೆಸೆಯೆಲುತ್ಸವವನೆಸಗಿದನಸುರರಿಪು (ಕುಪ್ಯಾಗ. ೧೩–೫). [ಪಟ್ಟ$_3$ + ಅಧ್ವರ]

**ಪಟ್ಟಾಭಿಷಿಕ್ತ** (ನಾ). ಪಟ್ಟಾಭಿಷೇಕ ಮಾಡಿಸಿಕೊಂಡ ವ್ಯಕ್ತಿ : ದೇವೀ, ಕೃತಾಭಿಷೇಕಾಯಾಃ — ಪಟ್ಟಾಭಿಷಿಕ್ತಳಾದ ರಾಣಿಯ ಹೆಸರು (ಸಿದ್ಧಾಂತಿ. ೬೧). [ಪಟ್ಟ$_3$ + ಅಭಿಷಿಕ್ತ]

**ಪಟ್ಟಾಭಿಷೇಕ** (ನಾ). ರಾಜರನ್ನಾಗಲಿ, ಗುರುಗಳನ್ನಾಗಲಿ ಪೀಠ ಗಳ ಮೇಲೆ ಕುಳ್ಳಿರಿಸಿ, ಪವಿತ್ರಜಲ ಮುಂತಾದುವನ್ನು ಅವರ ತಲೆಯ ಮೇಲೆ ವಿಧ್ಯುಕ್ತವಾಗಿ ಅಭಿಷೇಕ ಮಾಡುವ ಕ್ರಿಯೆ ; ಪಟ್ಟಗಟ್ಟುವಿಕೆ: ಸಮಸ್ತಮುನೀಂದ್ರನಿಕರ ಮಹೀಶನನು ಪಟ್ಟಾಭಿ ಷೇಕಕೆ ಮನವನೊಡಬಡಿಸಿ . . . ಶುಭಗ್ರಹೋದಯ ಲೇಸೆನಲು ನೋಡಿದರು ಮಿಗೆ ಗಾರ್ಗ್ಯಾದಿ ಜೋಯಿಸರು (ಕುಪ್ಯಾಗ. ೧೩–೪) ; ಗುರು ವಸಿಷ್ಠಾದಿಗಳು ಮಾಡಿತು ಹರಗೆ ನಿಜಪಟ್ಟಾಭಿಷೇಕವ (ಕೌಶಿರಾ. ೪೪–೫೧) ; ಪಟ್ಟಾಭಿಷೇಕೋತ್ಕರುಷೆಯಾದುದು ಮೇಲೆ ವಸುಧೆಯ ನರಪತಿಗಳೈತಂದು ಕಂಡರು ರಾಘವೇಶ್ವರನ (ತೊರರಾ. ೧–೩–೨). [ಪಟ್ಟ$_3$ + ಅಭಿಷೇಕ]

**ಪಟ್ಟಾಭಿಷೇಚನ** (ನಾ). = ಪಟ್ಟಾಭಿಷೇಕ : ರಾವಣಾರಿ ಮೇಲೆ ತಾಳ್ದಂ ಶುಭಮುಹೂರ್ತದೊಳ್ ವಾರಿನಿಧಿ ಮೇರೆಯೊದವನಿಯಂ ಪಟ್ಟಾಭಿಷೇಚನದ ಕಾಲದೊಳ್ ಕಂಡರು ಸಮಸ್ತಮುನಿಗೀರ್ವಾಣ ವಾನರದನುಜಮನುಜರು (ಜೈಮಿಭಾ. ೧೮–೧೧). [ಪಟ್ಟ$_3$ + ಅಭಿಷೇಚನ]

**ಪಟ್ಟಾಯಿಲ,** ಪಟೀಲ, ಪಾಟೀಲ (ನಾ). ಗ್ರಾಮಾಧಿಕಾರಿಗಳಲ್ಲಿ ಮುಖ್ಯನಾದವನು; ಗೌಡ : ವಿಠಲದೇವನಾಯಕರ ನಿರೋಪಿತ ಪಟ್ಟಾ ಯಿಲಕಂಚಕಾಱ ರೇವಿಸೆಟ್ಟಿಯರು ಪ್ರಭುಮಾನ್ಯಸಮ[ಸ್ತ]ಪ್ರಜೆಗಳು . . . ಚಲವೊಂಗೆ ದತ್ತ ಕೊಳಕೆ ೧೯ ಪ ವ್ರಿತ್ತಿ (ಸೌಇಇ. XX, ೨೨೫–೮ ; 1304). **ಪಟೀಲ :** ಪಟೀಲನಿಗೆ–ಪಟೀಲ, ಗೌಡ, ನಾಡುಗೌಡ . . . ನಾಯಿಡು ವಗೈರೆ ಹೆಸರುಗಳುಂಟು (ಗ್ರಾಮಾಕ. ೧) ; ಪಟೀಲರು ಅಷ್ಟು ಹೊತ್ತು ಕಾದರು; ಇಷ್ಟು ಹೊತ್ತು ಕಾದರು. ಮಾಂಸವೂ ಇಲ್ಲ; ಸೊಂಬಯ್ಯನೂ ಇಲ್ಲ (ಮಗಮಾಂ.೨೭). **ಪಾಟೀಲ :** ಮಾಮಲೇದಾರರ ಕಂದಾಯದ ವಸೂಲಿ ಕೆಲಸಕ್ಕೆ ಪ್ರತಿಹಳ್ಳಿಯಲ್ಲಿ ಗೌಡನು (ಪಾಟೀಲ) ಸಹಾಯ ಮಾಡುವನು (ಕಾರಪ. ೬೬) ; ಆ ಊರ ಪಾಟೀಲರ ಮನೀಗೆ ಹೋಗಿದ್ದೆ (ತಿಡುಗು. ೫೭) ; ಊರ ಪಾಟೇಲರಾದ ಹೇಮಂತಗೌಡರೂ . . . ಬಾವಿಯ ಮಾರ್ಗವಾಗಿ ನಡೆದರು (ಹಬ್ಬಬ. ೮). [<ಪ್ರಾ. ಪಟ್ಟಇಲ, ಪಟ್ಟಇಲ್ಲ]

**ಪಟ್ಟಾವರಸೆ** (ನಾ). ಪಟ್ಟಾಕತ್ತಿಯ ವರಸೆ ; ಖಡ್ಗಯುದ್ಧದ ಪಟ್ಟು : ಎರಡೂ ಖಡ್ಗಗಳನ್ನು ಸೆಳೆಮಿಂಚಿನ ಹೊಳೆಪಿದೆಂಬಂತೆ ಈಳ್ದು ಕೊಂಡು ಪಟ್ಟಾವರಸೆ ತಿರುಗಿಸಲಾರಂಭಿಸಿರುವನು (ಬಿರುಗಂ. ೨೨–೮) ; ಪಟ್ಟಾವರಸೆಯಲ್ಲಿ ನೀನು ಅದ್ವಿತೀಯನೆಂದು . . . ಕಾಳಗಕ್ಕೆ ಕರೆದೆನು (ಆರ್ಯಕ. ೪); ಅತಿಚಮತ್ಕಾರವಾದ ಮತ್ತೊಂದು ವಿದ್ಯೆಯು ತಿಳಿದಿತ್ತು. ಅದು ಏನೆಂದರೆ ಪಟ್ಟಾವರಸೆ (ಚಿಂಗಾಳ್ವ. ೯೩). [ಪಟ್ಟಾ$_1$(<ಪಟ್ಟೆಯ$_1$) + ವರಸೆ(<ವರಿಸೆ)]

**ಪಟ್ಟಾವಳಿ** 'ಪಟ್ಟವಟಿ' ನೋ.

**ಪಟ್ಟಾವಟಿ** 'ಪಟ್ಟವಟಿ' ನೋ.

**ಪಟ್ಟಾವುಜ** 'ಪಟಾವುಜ' ನೋ.

**ಪಟ್ಟಾವೊಳಿ** 'ಪಟ್ಟವಟಿ' ನೋ.

**ಪಟ್ಟಾಳಿ** 'ಪಟ್ಟವಟಿ' ನೋ.

**ಪಟ್ಟಿ$_1$,** ಹಟ್ಟಿ$_1$ (ನಾ). ೧. ದನ, ಕುರಿ ಮೊದಲಾದುವುಗಳನ್ನು ಕೂಡುವ ಮನೆ ; ದೊಡ್ಡಿ ; ಕೊಟ್ಟಿಗೆ; ರೊಪ್ಪ : ಮಕ್ಕಣ್ಣ ಕತ್ತು ಮಣುಮ್ಮನೆಯುಮಾಱುಪ್ಪಟ್ಟಿಯುಂತ್ತರಕ್ಕುವ್ ಒಡೆಅನ್ (ಮೈಅರಿ. ೧೯೪೨. ೩೧–೫೪; ಸು. 610) ; ಬಟ್ಟೆಗಳೊಳ್ ದೇಗುಲದೊಳ್

ಪಟ್ಟಗಳೊಳ್ [ಪಾಠಾಂ. ಗೋಠಾಣದೊಳ್] ಬೀದಿಯೆಡೆಯೊಳಜವಟ್ಟಗೆಯೊಳ್ ನೆಟ್ಟನೆಯಿಱುಂಪೆಯೇಟಲ್ ಕೆಟ್ಟಪುದೂರ್ (ಲೋಕೋಪ. ೧೨-೪೩) ; ಪಿರಿಯ ಪಟ್ಟಯೆಲ್ಲಂ ತೀವಿ ಗೋಟ್‌ಮೇಳೆಂಬ ಮೃಗದ ಪಿಂಡಂನೇಮಿಕುಮಾರಂ ಕಂಡೀ ಮೃಗಸಮೂಹಮಿಲ್ಲಿಯೇಕಿ[ರ್ದಪೆಂ]ದು ಬೆಸಗೊಳೆ (ಬಂಹರಿ. ೧೩-೨೨ ವ) ; ಈ ಚತುಸ್ಸೀಮೆಯುವೊಳಗುಳ್ಳ ಬಾಳು ಬೆಟ್ಟುಮನೆ ಹಟ್ಟ ಕುಳ ಭಾವಿ . . . ಧಾರೆಯನೆಱದು ಕೊಟೆಉ (ಸೌಇಇ. IX-ii, ೪೩೦-೨೭ ; 1406) ; ಗೋವಳರು ತುಱುಗಳನು ತಿರುಹಿ ತಂತಮ ಪಟ್ಟಗಳ ಭರವಸದಿಂ ಕೂಡಿಕೊಂಡು (ಜೀನಂಸಾಂ.೮-೭೩). ೨. ಆಶ್ರಯ ಸ್ಥಾನ ; ಇಕ್ಕೆ ; ಹಕ್ಕೆ : ಕಾಡುಕೋಣಂಗಳ ಪಟ್ಟ ಪೆರ್ಬುಲಿಗಳ ಗೂಡು ಕರಡಿಯ ಜಂಗುಳಿಯ ಬೀಡು (ಕುರಾಸಾಂ. ೪-೮). ೩. ಗೊಲ್ಲರ ಹಳ್ಳಿ ; ಬಾಡ: "ಘೋಷಃ, ಆಭೀರಪಲ್ಲೀ-ಈ ೨ ತುಱುಕಾಱರ ಪಟ್ಟ" (ಹಲಾಯು. ೪೩-೧೦೬) ; ಎಮ್ಮ ಕಾಡುಗಳೆಡೆಯ ಪಟ್ಟಯನ್ ಮುಟ್ಟ ಎಮ್ಮ ಬೆಟ್ಟದ ಮೇಲೆ ಕೋಯಿಲನ್ ಕಟ್ಟ ಸೇವೆಯನ್ ಮಾಟ್ಪಂ (ಅಶ್ವತ್ಥಾ. ೪೯-೯೮೯); ಚಿಕ್ಕಪುಟ್ಟ ಖೇಡ-ಪಟ್ಟಗಳಿಗೆ ಕೂಡ ಎತ್ತರವಾದ ಸುತ್ತುಗೋಡೆಗಳೂ ಒಂದೊ ಎರಡೊ ಅಗಸೆಬಾಗಿಲುಗಳೂ ಇರುತ್ತಿದ್ದವು (ಕರ್ನಾಜ. ೨೩) ; ೫೦ ರಿಂದ ೧೦೦ ವರೆಗಿನ ಹಳ್ಳಿಗಳ ವಿಭಾಗಕ್ಕೆ ಗೊಂಡ ಜನರು ಪಟ್ಟ ಎಂದು ಹೇಳುವರು (ಕರ್ನಾಪೂ. ೮೯). ೪. ಒಂದು ಸ್ಥಳದ ಹೆಸರು; ☞ ಈಗಿನ ಶಿವಮೊಗ್ಗ ಜಿಲ್ಲೆಯ ನಗರತಾಲ್ಲೂಕಿನ ಹುಂಚ ಎಂಬ ಗ್ರಾಮದ ಹಳೆಯ ಹೆಸರು: ಪಟ್ಟಯೊಡೆಯೊನ್ಮೊವದೊರನ್ (ಎಇ. IX, ೧೯-೯; ಸು. 800). **ಹಟ್ಟ1** :೧. ಕರೆಸಿದನು ಕೀಲಾರಿಗಳನಾದರಿಸಿ ಹಟ್ಟಯ ತುಱುಗಳೆಲ್ಲವ ತರಿಸಿ ನೋಡಿದನು (ಕುವ್ಯಾಅ. ೧೭-೩೫) ; ಅಬಲೆಯ ಹಟ್ಟಯ ಗೊತ್ತಿನೊಳಗೆಯನವರತಂ ಕಟ್ಟ ಕಱೆವ ಸಗ್ಗದ ಹಸುವಲ್ಲವೆ (ಜಯಕಾ. ೧೪-೫೧) ; ಅವರ ಹಟ್ಟಯಲ್ಲಿ ಹತ್ತು ಎಮ್ಮೆಗಳಿದ್ದುವು (ಈಕಥೆ.೬೦). ೨. ದೇವರಾಜವಡಯರಯ್ಯನವರು . . . ದೇವರಿಗೆ ಕೊಟ್ಟ ಹಟ್ಟ (ಎಕ. XIV, ಮಳವ. ೧೪೭-೨೮ ; 1669) ; ಅವನು ತನ್ನ ಹಟ್ಟಗೆ ಮುಖಂಡನಾಗಿದ್ದ (ಜವಿಾನ್ದಾ. ೧೪). ೫. ಗುಡಿಸಿಲು : ನಾನು ಬದುಕಿ ಬಾಳಿದ್ದ ಹಟ್ಟಯೋ ! ಅಲ್ಲಿ ಕಿಟಕಿಗಳೇ ಇರಲಿಲ್ಲ (ಅನ್ನಪೂ. ೭೦); ಬೆಳೆಗಳನ್ನು ಕಾಡುಮೃಗಗಳಿಂದ ಕಾಪಾಡಿಕೊಳ್ಳಲು ಹೊಲಗಳ ಸುತ್ತ ಹಟ್ಟಗಳನ್ನು ಹಾಕಿಕೊಳ್ಳುವುದಲ್ಲದೆ ಹಗಲಿರುಳೂ ಬೆಂಕಿ ಉರಿಸುತ್ತಾರೆ (ಕವಿಕೋ. I, ೭೬೦). ೬. ಮನೆ : ಹಟ್ಟ[ಪಾಠಾಂ. ಪೊಟ್ಟೆ, ಹೂಟ್ಟೆ]ಯೊಳಿರಿಸಿ ತೂಪಿಱಿದು ಕೌಱಿನ ಹೊಗೆಗೊಟ್ಟೊದವಿದರು ಬಾಲಕನನು (ಶ್ರೀಪಾಲ.೨-೭೭) ; ಹಟ್ಟಹಟ್ಟ ತಿರುಗುವವಳ ತನ್ನ ಗಟ್ಟತನದಲಿ ಮಾಱುವುಲೆತವಳ . . . ಹುಟ್ಟು ಹುಟ್ಟಲಿ ಬಾಯೊಳು ಹೆಟ್ಟಬೇಕವಳ (ಪುರಂದ.೨-೧೪-೩) ; ಅವರೆಲ್ಲರ 'ದೇಖರೇಖಿ'ಯು ಪರಭಾರೆಯಾಗಿ ಅಜ್ಜಿಯ ಆ ರಾಜವಾಡೆಯ ಹಟ್ಟಯಲ್ಲಿ ನಡೆಯುತ್ತಿದೆ (ಕಂಬಹು. ೪೫). ೭. ಮನೆಯ ಮುಂಭಾಗ; ಅಂಗಳ: ಮದುವೆಮನೆಗಳಲ್ಲಿ ಚಪ್ಪರದ ಹಟ್ಟಯಲ್ಲಿ, ಕಾಲುಂಗುರಶಾಸ್ತ್ರ ಮಾಡುವಾಗ . . . ಎಲೆಅಡಿಕೆ ಕೊಡುವುದುಂಟು (ಕವಿಕೋ. I, ೨೧೨). ೮. "ನಾಲ್ಕಾರು ಮನೆಗಳ ಒಂದು ಆವರಣ" (ನಮ್ಮನು. ೨೪೧): ಕುರುಬರ ಹಟ್ಟಯ ಎಲ್ಲರೂ ಗ್ರಾಮದೇವತೆಯ ಹಬ್ಬದಲ್ಲಿ ಪಾಲುಗೊಂಡಿದ್ದರು (ರೂಢಿ).

ಹಟ್ಟಯ ಪೂಜೆ= (ದೀಪಾವಳಿಯಂದು ಮಾಡುವ) ದನದ ಕೊಟ್ಟಿಗೆಯ ಪೂಜೆ : ಹಟ್ಟಯ ಪೂಜೆ ಶುದ್ಧದ್ರಾವಿಡರದು (ಭಾಹಬ್ಬ. ೧೪೯). ಹಟ್ಟಯ ಹಬ್ಬ=ದನದ ಕೊಟ್ಟಿಗೆಯ ಪೂಜೆ ಮಾಡುವ ಹಬ್ಬ ; ದೀಪಾವಳಿ ; ದೀವಳಿಗೆ : ದೀಪಾವಳಿಯಲ್ಲಿ ದ್ರಾವಿಡ ಸಂಸ್ಕೃತಿಯೂ ಒಡೆದು ತೋರುತ್ತಿದೆ. ಕನ್ನಡನಾಡಿನಲ್ಲಿ ಇದಕ್ಕೆ ಹಟ್ಟಯ ಹಬ್ಬ ಎಂದು ಹೆಸರಿಸಿದೆ (ಭಾಹಬ್ಬ. ೧೪೮) ; ನಾಟಕವನ್ನು ಹಟ್ಟಯ ಹಬ್ಬದಲ್ಲಿಯೇ ಆಡಬೇಕೆಂದು ಇಚ್ಛೆಯಿದ್ದ ಮಾಸ್ತರರು . . .ಮುಂತಾದವರಿಗೆ ಇಚ್ಛೆ ಈಡೇರದ್ದಕ್ಕೆ ಅಸಮಾಧಾನವಾಯಿತು (ಗಂಗಾಸಾ. ೧೧೦). [ದೇ.॥ ತಮಿ. ಪಟ್ಟ, ಪಟ್ಟ, ಪಟ್ಟು ; ಮಲ. ಪಟ್ಟ ; ತುಳು. ಪಟ್ಟ, ಪಟ್ಟು ; ತೆಲು. ಪಟ್ಟು ; ಕೋತ. ಪಟ್ಯ್]

**ಪಟ್ಟ2**, ಪಟೆ1, ಪಟು5, ಪಾಟ3, ಹಟ್ಟೆ (ನಾ). ೧. ಗೆರೆ ; ರೇಖೆ ; ಪಟ್ಟೆ : ಹುಲಿಯ . . . ಮೈಮೇಲೆ ಅರಿಸಿನಬಣ್ಣದ ಕಿರಿಗೂದಲು ಇದ್ದೂ ನಡುನಡುವೆ ಕರೇಪಟ್ಟಗಳು ಇರುತ್ತವೆ (ಮುಂಬಯಿ. ೪-೩೫). ೨. (ಅಲಂಕಾರಕ್ಕಾಗಿ ಕಟ್ಟುವ) ಉದ್ದ ಹೆಚ್ಚಾಗಿ, ಅಗಲ ಕಿರಿದಾಗಿರುವ (ಬಟ್ಟೆ, ಕಾಗದ, ಮರ,ಲೋಹ ಮೊದಲಾದುವುಗಳ) ತುಂಡು : ಆದಕ್ಕೆ ಜರಿಯ ಕಾಗದದಿಂದ ಒಂದು ಪಟ್ಟಯನ್ನು ಮಾಡಿ ಕೊಡುತ್ತೇನೆ (ಶಾಲೆಮ. ೨೦೨). ೩. ಸ್ತ್ರೀಯರು ಸೊಂಟದಲ್ಲಿ ಧರಿಸುವ ಬೆಳ್ಳಿಯ ಅಥವಾ ಚಿನ್ನದ ಆಭರಣ ; ಡಾಬು : ಪಸ್ರುವರಳೋಲೆ ಪುಸ್ತಿ ಪಟ್ಟ ವೀರಮಂಟಿಗೆ . . . ನವರತ್ನಂಗಳ್ ತೀವಿದ ಪೆಂಡೆಯಂ ಮೊದಲಾದ ಸಕಲಾಭರಣಂಗಳನಾ ಶೌಂಡಿಕಂಗೆ ತೋಱಲ್ (ನನ್ನಚಾ. ೩-೧೧೧ ವ). 'ಗೆಜ್ಜೆಪಟ್ಟ' ಪರಾ. ೪. ವೀಳೆಯದ ಬೀಡ ; ವೀಡ : ಕರ್ಪೂರಮಿಶ್ರಚೂರ್ಣಮನೊರೆದು ಅತಿಶಯದಿಯೆಲೆ ಕಾಂಚಿನೊಳಗೆ ಕಸ್ತುರಿವರೆದ ಗುಳಿಗೆ ಕಾಯ್ಲವಂಗಪತ್ರೆ ಶತಪತ್ರಲಪನೆಯರು ಮಡಿಸಿ ಪಟ್ಟಯ ಕಟ್ಟ (ನವಮೋ. ೨೫-೨೯) ; ಖಾದರ್ ಒಂದೆರಡು ಪಟ್ಟೀ ತಗೋ (ದೀಪಹ. II, ೧೩೩). 'ಪಾನಪಟ್ಟ' ಪರಾ. ೫. (ಸಮಾರಂಭಗಳಲ್ಲಿ ಫಲತಾಂಬೂಲ ನೀಡುವಾಗ ಕೊಡುವ) ಅಡಕೆ, ವೀಳೆಯದೆಲೆಗಳ ಮಡಿಕೆ : ತಾಂಬೂಲ ಕೊಡಲು ವೀಳೆಯದೆಲೆ ತಂದು ಪಟ್ಟಗಳನ್ನು ಮಾಡಬೇಕು (ರೂಢಿ). ೬. ಜಮಿಾನಿನ ತುಂಡು,— ಸೀಳು : ಬೇಸಾಯದ ಪಟ್ಟಗಳೆಲ್ಲಾ ಅವನದೇ (ನನ್ನಜೊ. ೩). ೭. ವಂತಿಗೆ ; ವರ್ಗಣಿ : ಗಣೇಶೋತ್ಸವದ ಪಟ್ಟ ಕೂಡಿಸಲು ಹತ್ತು ಜನ ಹೊರಟಿದ್ದಾರೆ (ರೂಢಿ). ೮. ಸಂಬಳ ; ಪಗಾರ : (ಕಿ). ೯. ವಸ್ತುಗಳು, ವಿಷಯಗಳು ಮೊದಲಾದುವುಗಳ ಯಾದಿ; ತಖ್ತೆ: ಜನರು ಮಾಡಿದ ಪಾಪ ಪುಣ್ಯಗಳನ್ನು ಈ ಚಿತ್ರಗುಪ್ತರು ತಮ್ಮ ಪಟ್ಟಗೆ ಬರೆದುಕೊಳ್ಳುತ್ತಾರೆ (ಸೀತಿಚಿಂ. VI,೨೪); ನನ್ನ ಕೈಯಲ್ಲಿ ಹೆಸರುಗಳನ್ನು ಬರೆದುಕೊಂಡಿದ್ದ ಪಟ್ಟ ಮತ್ತು ರಾಯರ ಕೈಲಿ ಚೀಲ (ರಾಯಕ. ೬೧). ೧೦. ಗಾಯಗಳಿಗೆ ಸುತ್ತಿ ಕಟ್ಟುವ ಬಟ್ಟೆಯ ಉದ್ದನೆಯ ತುಂಡು : ನಾನಾವನ್ನು ಹಾಸಿಗೆಯಲ್ಲಿ ಮಲಗಿಸಿ ಗಾಯವನ್ನು ತೊಳೆದು ಪಟ್ಟ ಕಟ್ಟದರು (ಝಾರಾಣಿ. ೧೬). ೧೧. ಕರ ; ಸುಂಕ ;ತೆರಿಗೆ: "ಕರ . . . ಪಟ್ಟ, ವಂತಿಗೆ, ದಂಡ" (ಕಂನುಹು. ೮೧); ಸೀಮೆ ಪ್ರಜೆಗಳಲ್ಲಿ ವರಾಡ ಕಡ ವೆಚ್ಚಾ ವಂಚನೆ ಪಟ್ಟ ಲಂಚಾ . . . ಮುಂತಾದ್ದು ನಿಲ್ಲಿಸಿ (ಕೆಳವಂ. ೪೫-೨). 'ಮನೆಪಟ್ಟ' ಪರಾ. ೧೨. ಕೊಡಬೇಕಾದ ಹಣವನ್ನು ತೋರಿಸುವ ವಿವರವಾದ ಚೀಟಿ : ಕಾಸು ತಪ್ಪಿದರೆ ಪಟ್ಟ ಬಡ್ಡಿಕಾಸು ಬಿಡದೆ ಗಂಟುಕಟ್ಟ ದಾಸನೆಂದರೆ ಬಿಡ ಗಟ್ಟ ನಮ್ಮ ಕೇಸಕ್ಕಿ ತಿಮ್ಮಪ್ಪಸೆಟ್ಟ (ಪುರಂದ. ೧-೬೭-೯) ; ತಿಂಗಳ ಅಂತ್ಯದಲ್ಲಿ ಪಟ್ಟ ಬಂದಾಗ ನಿಮಗೆ ಹಣ ಕೊಡಲು ಕಷ್ಟವಾಗಬಹುದು (ಅಡುಸಾ. ೧೨೩). ೧೩. ಚಕ್ರದ ಹೊರಸುತ್ತು; ನೇಮಿ: ಆದಕಾಗ ತರಣಿ ಚಂದ್ರರೆ ಮೊಳೆಗಳಗ್ನಿಯೇ ಪಟ್ಟಯಾಯ್ತಾ ಚಕ್ರಮಂ ರುದ್ರನು ಕರದೊಳಗೆ ಪಿಡಿದಾ ಜಲಂಧರನ ಕಂಧರದ ಸರಿಸಕಿಡಲರಿದುದು (ಚೆಬಪು. ೨೬-೪೦). ೧೪. [ಸಂಗೀತ] ಒಂದು ಸ್ವರಗತಿಯ ವಿಶೇಷ (?) : ಕಾಳಸಿ ಬೈಸಿಕೆ ಪಟ್ಟ ಕಾಂತಿ . . . ಕಳೆಯೆಂಬಿವಂ

ಮೆಱೆದು ಬಾಜಿಸಿದಂ ಮುರವೈರಿ ವಾಸಮುಂ (ಜಗವಿ. ೫-೩). **ಪಟ್ಟಿ$_1$: ೧೫.** ದಾನ ಕೊಟ್ಟುದಕ್ಕೆ ಬರೆಸಿದ ದಾಖಲೆ; ದಾನಪತ್ರ : ಪೂರ್ವಮರ್ಯ್ಯಾದೆ ಎಂದು ಕೊಟ್ಟ ಧರ್ಮ್ಮಶಾಸನ ಪಟಿ (ಸೌಇಇ. IX-ii, ೪೬೩-೧೧ ; 1470). **ಪಟ್ಟು$_3$ :** ೧. ಪಟ್ಟು ಬರಹ ಚೀನಾಂಬರಗಳ ಬೆನ್ನೊಳಿಟ್ಟಾಗ ಗಜ ತುರಗಗಳು ಕಟ್ಟಿಸಕದೊಳಗಣಿತಜಲ ಕೇಳಿಗೆ ತೊಟ್ಟನೈತಂದುವರ್ತಿಯಲಿ (ಕಂನವಿ.೨೨-೧೯). **೧೫.** 'ಧರ್ಮ ಪಟ್ಟು' ಪರಾ. **೧೬.** ರೇಷ್ಮೆ ; ಕೌಶೇಯ : "ಕೌಶೇಯಂ= ಪಟ್ಟು" (ಕಾಶಕ್ಯ. ೧೯೩) ; ಭಕ್ತಸೌಮ್ಯನೆಂಬ ಭಕ್ತನೆಯ್ದೆ ಶೂದ್ರರೊಳ್ ಮೇಳವಾಗಿ ಕೀಟನಲ್ಲಿ ಪಟ್ಟು ಪುಟ್ಟಿದಂತೆ ತಾನೋಳಿಯಿಂದೆ ಜಾತನಾಗಿ ಯೊಪ್ಪುತಿರ್ದನಾಗಳುಂ (ಹಾಲಾಸ್ಯ.೩-೬-೨). **೧೭.** ರೇಷ್ಮೆಯ ಬಟ್ಟೆ; ಪೀತಾಂಬರ : ಪ್ರಭುಗಳು . . . ಎಳೆಯ ಹಳದಿಬಣ್ಣದ ಪಟ್ಟನ್ನುಟ್ಟು ಮೇಲೆ ನೀಲಿಯ ಕಟಿವಸ್ತ್ರದಿಂದ ಅಲಂಕೃತರಾಗಿದ್ದಾರೆ (ಶಾಂತಲಾ. ೩೪). **೧೮.** ತಲೆಯಲ್ಲಿ ಕೂದಲು ಉದುರಿ ಬೋಳಾಗಿರುವಿಕೆ : ಹಣೆಯ ಮೇಲಿಂದ ತಲೆಗೂದಲು ಉದುರಿ ಪಟ್ಟಾಗಿತ್ತು (ದೂಬೆಟ್ಟ. ೧೪೧). 'ಪಟ್ಟುದಲೆ' ಪರಾ. **ಪಾಟ್ಟಿ$_3$ : ೧೬.** ನೆಲನ ಸೋಂಕುವ ಪಾಟ ಪಾವಡೆ ರಥದೊಳು ತೊಳಗಿದುವತಿಮುದದಿಂದ (ಕಂನವಿ. ೬೩-೭೧). **ಹಟ್ಟಿ : ೧೬.** 'ಹಟ್ಟಿಗಾಱ$_2$' ಪರಾ.

**ಪಟ್ಟಾಪಟ್ಟಿ, ಪಟಾಪಟ$_1$**=೧. (ಬೇರೆ ಬೇರೆ ಬಣ್ಣಗಳ) ಉದ್ದುದ್ದವಾದ ಪಟ್ಟೆ ; ಪಟ್ಟೆಪಟ್ಟೆ : ಬಳ್ಳಿಮಿಂಚುಗಳಿಂದ ಕೂಡಿರುವ ಕಾಲಮೇಘದಂತಿರ್ಪ ಸರಿಗೆ ಪಟ್ಟಾಪಟ್ಟೆಗಳಿಂ ಬೆರೆದಿರುವ ಕಪ್ಪಾದ ಕಾಂಡಪಟ್ಟವಂ ಕಟ್ಟಿಸಿ (ಸೌಗಂಧಿ. ೪೮೭-೧೨) ; ಅವರ ಮನೆಯ ಕಿಟಕಿಗಳಿಗೆ ಪಟಾಪಟಿಯಾಗಿರುವ ಪರದೆಗಳನ್ನು ಹಾಕಿದ್ದಾರೆ (ರೂಢಿ). ೨. ಹೊರಮೈಯಲ್ಲಿ ಕಪ್ಪಾದ ಗೆರೆಗಳಿರುವ ಒಂದು ಬಗೆಯ ಕಬ್ಬು : ರಸದಾಳಿ, ಪಟ್ಟಾಪಟ್ಟಿ ಮತ್ತು ಚೇಣಿಕಬ್ಬಲ್ಲದೆ ಈಚೆಗೆ ಅನೇಕ ತಳಿಕಬ್ಬುಗಳನ್ನು ಪ್ರಚಾರಕ್ಕೆ ತಂದಿರುತ್ತಾರೆ (ವ್ಯವಮ. ೫೧). **ಪಟ್ಟಾಪಟ್ಟಿಕಬ್ಬು, ಪಟಾಪಟಿ ಕಬ್ಬು**=ಪಟ್ಟಾಪಟ್ಟಿ ೨ : ಪಟ್ಟಾಪಟ್ಟಿಕಬ್ಬು ಹೆಚ್ಚು ಸಿಹಿಯದಾಗಿರುತ್ತದೆ (ರೂಢಿ) ; ಪಟಾಪಟಿಕಬ್ಬನ್ನು ಪಟ್ಟಾವಳಿ ಕಬ್ಬು ಎಂದೂ ಕರೆಯುವರು (ರೂಢಿ). **ಪಟ್ಟಾಪಟ್ಟಿಸೀರೆ**=ಉದ್ದುದ್ದ ಗೆರೆಗಳಿರುವ ಸೀರೆ: ಪಟ್ಟಾಪಟ್ಟಿ ಸೀರೆಯನ್ನು ನೀಳವಾಗಿರುವವರು ಉಡುವುದಕ್ಕಿಂತ ಗಿಡ್ಡಾಗಿರುವವರು ಉಟ್ಟರೆ ಚೆನ್ನಾಗಿರುತ್ತದೆ (ರೂಢಿ). **ಪಟ್ಟಿ ಮಾಡು**=ಕ್ರಮವಾಗಿ ಬರೆದಿಡು ; ಯಾದಿ ತಯಾರಿಸು : ಹೊಸದಾಗಿ ಬಂದ ವಸ್ತುಗಳನ್ನು ಎಣಿಕೆ ಮಾಡಿ ತರುಣನು ಪಟ್ಟಿ ಮಾಡಿದನು (ಗೋಪುರ. ೨೨) ; ಅವನ ಮಹತ್ಕಾರ್ಯಗಳೆಲ್ಲವನ್ನೂ ಪಟ್ಟಿ ಮಾಡಿ ಹೇಳುವುದು ಸಾಧ್ಯವಿಲ್ಲ (ದೇಕನ್ನ. ೨೯).

[<ಸಂ. ಪಟ್ಟಿ]

**ಪಟ್ಟಿ$_3$** (ನಾ). ೧. ಮುಂದಲೆಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ. ೨. ಕೆಂಪುಅರಗಿನ ಮರ : "ಕ್ರಮುಕಃ, ಪಟ್ಟಿಕಾಖ್ಯಃ, ಪಟ್ಟೀ, ಲಾಕ್ಷಾಪ್ರಸಾದನಃ- ೪ ಕೆಂಪುಅರಗಿನ ಗಿಡ, ಕೆಂಪುಜಾಲಾರೀ ಗಿಡ, ಪದಕದ ಮರವೆಂದು ಕೆಲವರನ್ನುವರು" (ಸಿದ್ಧಾಂತಿ. ೧೨೧).

[ಸಂ. ಪಟ್ಟೀ]

**ಪಟ್ಟಿಕ** (ನಾ). ಪೀಠ; ಪಟ್ಟಿಕೆ ; ಆಸನ : ಕೃಷ್ಣದ್ವೈಪಾಯನನಂ ಕಂಡಜಾತಶತ್ರು ತನ್ನೇಱಿದ ಸ್ಫಟಿಕಶಿಳಾತಳದ ಪಟ್ಟಿ[ಪಾಠಾಂ. ಟ್ಟಿ]ಕದಿಂ ದಿಟಿದು . . . ಸಾಷ್ಟಾಂಗವೆಱಗಿ ಪೊಡಮಟ್ಟು (ಪಂಪಭಾ. ೭-೫೯ ವ).

[ಸಂ. ಪಟ್ಟಿಕಾ]

**ಪಟ್ಟಿಕಾಲೋಧ್ರ** (ನಾ). ಕೆಂಪುಅರಗಿನ ಮರ : "ಪಟ್ಟೀ-ಪಟ್ಟಿಕಾಲೋಧ್ರ" (ಓಷಧಿ. ೯೦). [ಸಂ.]

**ಪಟ್ಟಿಕಾಱ** (ನಾ). ಗ್ರಾಮಸೇವಕ : ಕಮ್ಮಾಱ ಆಳನು ಆ ಸಗರಯನು ಮಿಟ್ಟು ಪಟ್ಟಿಯ ಪಟ್ಟಿಕಾಱರುಂ ಆಯ್ಮಣೆ ಮಾಡಿ ಕಲ್ಲುಮುಂ××× (ಎಕ. III, ನಂಜನ. ೧೩೧-೧೯ ; 1077). [←ತಮಿ. ಪಟ್ಟಿಕ್ಕಾರ]

**ಪಟ್ಟಿಕೆ** (ನಾ). ೧. ಚಿನ್ನ, ಬೆಳ್ಳಿ ಮುಂತಾದುವುಗಳ ಪಟ್ಟಿ. ೨. ಒಂದು ಬಗೆಯ ಹಾರ : "ನೇವಳಂ ಪದಕ ಸರಪಳಿ ಪಟ್ಟಿಕಾದಿಗಳ್ ಗ್ರೈವೇಯಮುಕ್ಕು" (ಮಂಗರಾ. ೧೦೦-೨೫). ೩. ಯಾದಿ ; ತಖ್ತೆ ; ಪಟ್ಟಿ : ಪೆಸರ ಪಟ್ಟಿಕೆಯೆ ಸಾಲ್ಗುಂ ; ಹಗೆಗೆ ಹೊಳ್ಳುಗಳೆವುದು ಹೃದಯಮುಂ ! (ಶ್ರೀರಾಮಾ. ೫೫೯-೧೯೫). ೪. ಗಾಯಕ್ಕೆ ಸುತ್ತಿ ಕಟ್ಟುವ ಬಟ್ಟೆಯ ಪಟ್ಟಿ : ರಾಜಪುತ್ರನಿಗೂ ಮಂತ್ರಿಗಳಿಗೂ ಗಾಯಗಳಿಗೆಲ್ಲಾ ಪಥ್ಯವಾದ ಪಟ್ಟಿಕೆಗಳನ್ನು ಕಟ್ಟಿಸಿ, ಬೇಕಾದ ಹಾಗೆ ಉಪಚಾರ ಮಾಡಿದನು (ಕಸರಿ. ೧೯೧). ೫. ಮುಂದಲೆಯ ಆಭರಣ. ೬. ಬಟ್ಟೆಯ ತುಂಡು. ೭. ರೇಷ್ಮೆಯ ಬಟ್ಟೆ. ೮. ಶಿಲ್ಪಗಳನ್ನು ಕೆತ್ತಲು ಬಳಸುವ ಕಲ್ಲಿನ ಅಲಂಕಾರದ ಸಾಲುಪಟ್ಟಿ ; ಫಲಕ : ಅರ್ಧ ಕೆತ್ತಿದ ಪಟ್ಟಿಕೆಗಳು, ಕಂಭಗಳು, ಜಾಲಂಧ್ರಗಳು, ಬೋದಿಗೆಗಳು ಅಲ್ಲೊಂದು ಇಲ್ಲೊಂದು ಬಿದ್ದಿದ್ದುವು (ಸಪತಿ. ೭೮). ೯. ಬಾಗಿಲಿಗೆ ಅಡ್ಡವಾಗಿ, ಮೇಲೂ ಕೆಳಗೂ ಜೋಡಿಸಿರುವ ಮರದ ಪಟ್ಟಿ. ೧೦. ಹಲಗೆ ; ಮಣೆ ; ಪೀಠ : ಪಳಿಕಿನ ಪಟ್ಟಿಕೆಯಲ್ಲಿ ಪೊಂಬಾಳೆಯ ಸುಳಿಯಲ್ಲಿ ರತಿಯ ಕುಳ್ಳಿರಿಸಿ ನಳಿನಾಕ್ಷಿಯರೊಡತಿಯ ಕಾಲೆರಡುಮಾಂದಳಿರನು ಜಲದೊಳದ್ದಿದರು (ಮೋಹತ. ೯-೪೧). ೧೧. ವೇದಿಕೆ ; ಜಗಲಿ : ಪಳಿಕಿನ ಪಟ್ಟಿಕೆ[ಪಾಠಾ.ಂ ಗೆ] ನೀಲದ ನೆಲೆಕಟ್ಟು ಕುಲಿಶದ ಕೂಟ ಪಚ್ಚೆಗಳ ಪಳಯಿಗೆ ಪದ್ಮರಾಗದ ಪಟ್ಟಶಾಲೆ ಕಣ್ಗೊಳಿಸಲೆಸೆದುದಾ ನಿಳಯು (ಕುರಾಸಾಂ. ೩-೯೩). ೧೨. ಟಿಪ್ಪಣಿಗಳನ್ನು ಗುರುತಿಸಿಕೊಂಡ ಚೌಕಾಕಾರದ ಕಾಗದ ಅಥವಾ ಕಾರ್ಡು : ನಮ್ಮ ಕಚೇರಿಯಲ್ಲಿ ಲಕ್ಷಾಂತರ ಪಟ್ಟಿಕೆಗಳಿವೆ (ರೂಢಿ).

[ಸಂ. ಪಟ್ಟಿಕಾ]

**ಪಟ್ಟಿಗವಣೆ** (ನಾ). ಚಪ್ಪಟೆಯಾದ ತಳವುಳ್ಳ ಒಂದು ಬಗೆಯ ಕವಣೆ : ತಾವರೆಯ ನೂಲ ನುಲಿಯುಮರ್ದಾ ವನರುಹದಳದ ಪಟ್ಟಿಗವಣೆಯೊಳಧಟಂ ತೀವುತೆ ನೈದಿಲ್ಗೊಗ್ಗೆಯನಾ ವನಿತಾತತಿ ಶುಕಾಳಿಯಂ ಬಿಡದಿಡುಗುಂ (ವೃಷವಿ. ೪-೨೦). [ಪಟ್ಟಿ$_2$+ಕವಣೆ$_1$]

**ಪಟ್ಟಿಗಾಳೆಗ** (ನಾ). ಹೆಟ್ಟೆ ಹಟ್ಟಿಗಳ ನಡುವೆ ನಡೆಯುವ ಕಾದಾಟ : ನಾರಕರನನ್ಯಜನ್ಮದ ವೈರಮನೆಚ್ಚಱಿಸಿ ಪ[ಪಾಠಾಂ. ಜ]ಟ್ಟಿಗಾಳೆಗಮುಂ ಕಣ್ಣಾರೆ ಸಿರೀಕ್ಷಿಪ ತೆಱದಿಂದಾರುತ್ತಿರೆಯಿಸುತಮಿಾಕ್ಷಿಪರ್ ದನುಜರ್ಕಳ್ (ಪಾರ್ಶ್ವಪು. ೧೩-೬೪) ; ಪುಟ್ಟಿದ ನೀಱಿಯರಿಗೆಲ್ಲರಿಗೀ ಪರಿಪುಟ್ಟುವುದೊಡನೆ ರೋಗಗಳು ಪಟ್ಟಿಗಾಳೆಗದವರಂದದಿ ಕಡಿದರ ಮುಟ್ಟಿ ಮೂದಲಿಸಿ ಕಾದುವರು (ಪರ್ಥಚ. ೮-೧೦೩). [ಪಟ್ಟಿ$_1$+ಕಾಳೆಗ]

**ಪಟ್ಟಿಗೆ,** ಹಟ್ಟಿಕೆ, ಹಟ್ಟಿಗೆ$_2$ (ನಾ). ೧. ಕೊರಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ : ಜೋಗಿಯ ಕೊರಲೊಳ್ ಕರಮಿಂಬಾಗಿರ್ದು ಪೊಳೆವ ಪೊನ್ನ ಪಟ್ಟಿಗೆ (ಲೀಲಾವ. ೪-೭೨) ; ಪುಟ್ಟಿಗೆಯುಂ ಮಣಿಸರಮುಂ ಪಟ್ಟಿಗೆಯುಂ ರಕ್ಷೆಯುಂ ಪವಿತ್ರಾದಿಗಳಂ ಕಟ್ಟಿ ಕೊರಲೊಳ್ ವಿರಾಜಿಸೆ ಕಟ್ಟುಗೆ ಪಟ್ಟವ(ಂ) ಲಲಾಟಪಟ್ಟಾಂತರದೊಳ್ (ಅಶ್ವಶಾ. ೮-೧೬). ೨. ಡಾಬು ; ನಡುಪಟ್ಟಿ : ಪಟ್ಟಿಗೆ ಕಟಿಸೂತ್ರಮೆಂಬಿವು ಮನಂಗೊಳೆ ಮನ್ಮಥಚಕ್ರವರ್ತಿಗೀಕೆಗಳೆ ವಿನೋದದಾಕೆಗಳೆನಲ್ ಮೆಱೆದತ್ತು ವಿಳಾಸಿನೀಜನಂ (ಆದಿಪು. ೧೨-೧೨) ; ಪೊಸ ದೊಕುಲಂ ಬೆಡಂಗಮರ್ದ ಪ[ಪಾಠಾಂ. ಪೆ]ಟ್ಟಿಗೆ ಪೊನ್ನೊಱೆ ಸೇತವಾಲೆ ಎಣ್ಣಸರಮುದಾತ್ತಹಸ್ತಕಟಕಂ . . . ತಮಗೊಪ್ಪೆ (ಪರ್ಥಮಾ. ೮-೮೩) ; ಮೇರುಮಹೀಧರಂಗೆ ಕಟಿಸೂತ್ರದ ಪಟ್ಟಿಗೆಯಂತಿರೆ . . . ಎಸೆದಿರ್ಪುವು ಮೇಖಲೆ

ಕೂಡೆ ನಾಲ್ಕುವಿಸ್ತಾರಮನಾಳ್ದು ಪತ್ಕಕದಧಿತ್ಕಕದಂತರದಂತರಾಳದಾ (ಅನಂಪು. ೫-೪೫) ; ಮೂಗುತಿ ಸರಿಗೆ ಸಲೆ ಭುಜಕೀರ್ತಿ ಪಟ್ಟಿಗೆ ಥಳಥಳಿಸುವ ಕೊರಳೊಳು ತ್ರಿವಳಿ ನ್ಯಾವಳಿ ತಾಯಿತು . . . ತೂಗಲು (ವಿವಾಕ್ಯ. ೬೧-೨). **೩.** ಪರಿಧಿ ; ಸುತ್ತುಗೆರೆ : 'ನೇತ್ರಿವಟ್ಟಿಗೆ' ಪರಾ. **೪.** ಬೇಟೆಗಾರರು ಮುಂಗೈಗೆ ಕಟ್ಟುವ ತೊಗಲಿನ ಪಟ್ಟಿ ; ಗೋಧ ; ಕೈಪೊಡೆ : ತೊಂಗಲಿನಂತೆ ಪಗೆವನ ತಲೆಯಂ ಕೊಂಡು ಪಟ್ಟಿಗೆಯನ್ತೆ ಪಗೆವನ ಹಸ್ತವಂ ಕಟ್ಟಿ ಮೆಱೆವರುಂ (ಎಕ. VII, ಶಿಕಾರಿ. ೧೧೮-೫೩ ; 1054) ; ಪಿಡಿದ ಕರ್ಕಂಬುವವುಕರ್ಕೆವೆತ್ತ ಪುಲಿದೋಲ ಪಟ್ಟಿಗೆಯುಮೊಟ್ಟದ ಚುಚ್ಚುಂ ಕಟ್ಟದ ತೊಂಗಲುಂ ಬೆರಸು . . . ಇದಿರ್ಚಿನಿಂದ ಬಿಲ್ವಡೆಯ ಪೆಜಿಗೆ ಪಡೆನಾಯಕನಾಗಿ (ವರ್ಧಮಾ. ೪-೪೨ ಪ). **೫.** = ಪಟ್ಟಿಕೆ೯ : 'ಪಡಿವಟ್ಟಿಗೆ' ಪರಾ. **ಹಟ್ಟಿಕೆ : ೧.** "ಹಟ್ಟಿಕೆ —ಪಟ್ಟಿಕಾ = ಪಟ್ಟಿಗೆ (ತದ್ಭಕೋ. ೪೮) ; ಪಟ್ಟಿಕಾ—ಹಟ್ಟಿಕೆ (ಶಮದ. ೨೫೪ ಪ್ರಯೋ), **ಹಟ್ಟಿಗೆ$_2$: ೧.** ಕತ್ತುರಿಕಂಪು ಕೈಸುರಿಗೆ ಹೊಂನೊಱೆ ಹಟ್ಟಿಗೆ ಸಂಣ ಗಗ್ಗರಂ ಮುತ್ತಿನ ದಂಡೆ . . . ಮೆಯಿವೆತ್ತಿರೆ (ಎಕ. V, ಅರಸೀ. ೮೮-೧ ; 1184) ; ಪಟ್ಟಿಕೆ, ಹಟ್ಟಿಗೆ (ಶಬ್ದಾನು. ೧೪೫ ಪ್ರಯೋ).
[<ಸಂ. ಪಟ್ಟಿಕಾ]

**ಪಟ್ಟನಿ** (ನಾ). ಒಬ್ಬಾತನ ಹೆಸರು : ಶ್ರೀವೂಲನೂರ ಪಟ್ಟನಿ ಗುರವಡಿಗಳ ಶಿಷ್ಯರ್ ಉಗ್ರಸೇನ ಗುರವಡಿಗಳ್ ಒನ್ದು ತಿಙ್ಗಳ್ ಸನ್ಯಾಸನಂ ನೋನ್ತು ಮುಡಿಪ್ಪಿದಾರ್ (ಎಕ. II, ೨೫-೧ ; ಸು. 700). [ ? ]

**ಪಟ್ಟಪೊಂಬುಚ್ಚ** 'ಪಟ್ಟಪೊಂಬುಚ್ಚಿ' ನೋ.

**ಪಟ್ಟಪೊಂಬುಚ್ಚಿ, ಪಟ್ಟಪೊಂಬುಚ್ಚ, ಪಟ್ಟಹೊಂಬುಚ್ಚಿ** (ನಾ). ಒಂದು ಊರಿನ ಹೆಸರು; ℙ ಈಗಿನ ಶಿವಮೊಗ್ಗ ಜಿಲ್ಲೆಯ ನಗರ ತಾಲ್ಲೂಕಿನ ಹುಂಚ ಎಂಬ ಗ್ರಾಮದ ಹಳೆಯ ಹೆಸರು : ಪಟ್ಟಪೊಂಬುಚ್ಚಪುರವರೇಶ್ವರಂ ಪದ್ಮಾವತೀಲಬ್ಧ ವರಪ್ರಸಾದಂ...ಶ್ರೀಮತ್ ವೀರಸಾನ್ತರದೇವರ್ (ಮೈಆರಿ. ೧೯೩೧, ೭೪-೯ ; 1053 ?). **ಪಟ್ಟಪೊಂಬುಚ್ಚ :** ಪಟ್ಟಪೊಂಬುಚ್ಚಪುರವರಾಧೀಶ್ವರ . . . ಶ್ರೀಮನ್ಮಹಾಮಂಡಲೇಶ್ವರಂ ವೀರಸಾಂನ್ತರದೇವರ ವಿಜಯರಾಜ್ಯಂ (ಎಕ. VII, ತಿನವೊ. ೧೧೬-೫ ; 1173). **ಪಟ್ಟಹೊಂಬುಚ್ಚಿ :** ಪಟ್ಟಹೊಂಬುಚ್ಚಿ ಪುರವರೇಶ್ವರ . . . ಶ್ರೀಮದಣ್ಣಲದೇವ (ಎಕ. VII, ಶಿಕಾರಿ. ೫೩-೫ ; 1027). 'ಪಟ್ಟ$_1$' ಪರಾ. [ಪಟ್ಟ$_1$ + ಪೊಂಬುಚ್ಚಿ]

**ಪಟ್ಟಬದ** 'ಪಟ್ಟಬದ್ಧ' ನೋ.

**ಪಟ್ಟಬಳೆ** (ನಾ). ಮೇಲುಭಾಗದಲ್ಲಿ ಚಪ್ಪಟೆಯಾಗಿರುವಂತೆ ತಟ್ಟಿ ಮಾಡಿರುವ ಬಳೆ : ಪಟ್ಟಬಳೆ ಧರಿಸುವುದು ಈಚೆಗೆ ಫ್ಯಾಷನ್ನು ಆಗಿದೆ (ರೂಢಿ). [ಪಟ್ಟ$_2$ + ಬಳೆ$_2$]

**ಪಟ್ಟರ್** 'ಪಡು$_1$' ಪರಾ.

**ಪಟ್ಟರಿಸು** 'ಪಡು$_1$' ಪರಾ.

**ಪಟ್ಟಲ** (ನಾ). ಮಳೆಗಾಲದಲ್ಲಿ ನೀರಿನಲ್ಲಿ ಪೂರ್ಣವಾಗಿ ಮುಳುಗಿದ್ದು ಅನಂತರ ಒಂದು ಬೆಳೆಯಲ್ಲಿ ತುಂಬ ಉತ್ಪತ್ತಿ ಕೊಡುವ ಗದ್ದೆ(?): ಮುಂದಕ್ಕೆ ನಿಂಮ ಬಾಳಿಕೆಯಲು ಪಟ್ಟಲ ಬಿದ ಕಾರು ಬಿತು ಬಳ್ಳ ೩೦ಆದಲು ಮು ೬೧ ಮಕ್ಕಿ ಕಲ್ಲಿ ಮರು ಮು ೬ ಬೆಟ್ಟು ಮು ೫[೩] ಅ[೦]ನ್ತು ಮುಡಿ ತಾದೆ ಮು ೧೨೦ ಅಕ್ಕಾ[ರ]ದಲು ಮೂಡೆ ನೂರಯಿಪ್ಪತನ ನೀಉ ಬಾಳಿ . . . ಕಾಲಕಾಲಕ್ಕೆ ತಪ್ಪದೆ ನಡಸಿ ಬರುಹನೆಂದು ಕಟ್ಟಿ ಕೊಟ್ಟೆವು (ಸೌಇಇ. IX-ii, ೪೬೦-೧೬ ; 1465). [ ? ]

**ಪಟ್ಟವೀಳ್ಯ** (ನಾ). ತಾಂಬೂಲದ ವೀಡ,—ಬೀಡ ; ಪಾನ್‌ಪಟ್ಟಿ: ಪಟ್ಟವೀಳ್ಯಕ್ಕೆಂತ ಹೋಗಿ ಕುಟ್ಟಿಸಿಕೊಂಡು ಬಂದ (ಗಾದೆ); ಪಟ್ಟವೀಳ್ಯವಾದರೆ ಭಟ್ಟರಿಗಾಗದೆ ? (ಗಾದೆ). [ಪಟ್ಟ$_2$+ವೀಳ್ಯ(<ವೀಳೆಯ)]

**ಪಟ್ಟಿಶ**(ನಾ). ಬಹಳ ಹರಿತವಾದ ಮೊಳೆಯುಳ್ಳ ಬರ್ಜಿ,—ಈಟಿ : ಬಾಧಿಸುವ ಮುದ್ಗರ ಮುಸುಂಡಿ ಪಟ್ಟಿಶ ಶೂಲ . . . ಪರಶು ಮುಸಲಂಗಳಿಂದಾ ಧರಾನಾಥನಂ ಬಳಸಿ ನಾನಾ ಪರಿಯ ಮಳೆಗರೆವುತಾರ್ಭಟಿಯೊಳು (ವೆಂಕಾರಾ. ೩-೧೧-೧೧) ; ಥಟ್ಟನೆ ಪಟ್ಟಿಶವ ಕೊಂಡು ಸಚ್ಚರಿತನಾದ ಷಡ್ವದನನಂ ಪೊಯ್ಯಲ್ (ಮಲ್ಲಾರಿ. ೭-೩೧). [ಸಂ.]

**ಪಟ್ಟಿಶಕ** (ನಾ). = ಪಟ್ಟಿಶ : "ಯಷ್ಟಿಃ, ಪಟ್ಟಿಶಕಃ . . . ಚಕ್ರಂ— ಇವು ಮೊದಲಾಗುಳ್ಳುವು ಕೆಯ್ದುಗಳ ಭೇದಂಗಳ್" (ಹಲಾಯು. ೭೮-೩೨೨). [ಸಂ.]

**ಪಟ್ಟಿಸ$_1$, ಪಟ್ಟಸ$_1$, ಪಟ್ಟಿಸು** (ನಾ). ಮಲ್ಲಗಾಳಗದ ಒಂದು ವರಸೆ; ಕುಸ್ತಿಯಲ್ಲಿ ಒಂದು ಪಟ್ಟು : ಪಟ್ಟಿಸವೆಂಬ ಬಿನ್ನಣದೆ ಕೃಷ್ಣಂ ಗೆಲ್ದು ಪಿಂಗಾಲ್ಗಣಂ ಪಿಡಿದಾರ್ದೆತ್ತಿ ನಿಶಾಟನಂ ತಿರಿಪೆ (ಜಗವಿ. ೬-೬೯) ; ಜೊಕ್ಕರಂ ಚಡಿಕೆ ತುಳಾಡಿ ಪೊಟ್ಟಮುಂಡುಹಂ ಮುಹಡಂ ದಣುವಟ್ಟ ಪಟ್ಟಿಸಂ ಎಂದು ಮಲ್ಲವಾತಂ ಮಾಡಿ ಪೊಡೆವಟ್ಟು ಕುಳ್ಳಿರ್ದ ಜಗಜಟ್ಟಿಗಳ ಗೊಂದಣಂ (ಅನಂಪು. ೨-೨೭) ; ಪಟ್ಟಿಸದಿಂದಂ ಪ್ರತಿಮಲ್ಲನಂ ಕೆಡಹುವೆಂ (ಬಾಧಪು. ೧೬-೧೯) ; ಜೊಕ್ಕರ ಬಾಹುಸೀಸಕ ಪಟ್ಟಿಸ ಮೊದಲಿಕ್ಕಿ ಬಿನ್ನಣದಿ ಹೆಣಗಿದರು (ಸೊಬಸೋ. ೭-೪೨); ಹರಿ ಚಾಣೂರನೊಡನಗ್ಗಳಿಸಿ ಕಾದುತೆ ಪಟ್ಟಿಸದ ಸಂಕಳತೆಯಲಿ ಕಾಲ್ಕಿಡಿದು ಕೆಡಹಿದ ನಂತರಾಳದಲಿ (ಅಕ್ರೂಚ. ೭-೬೮). **ಪಟ್ಟಸ$_1$ :** ಪಿನ್ನೆಲೆಯಿಂದೊದವಿ ಬಂದು ಜೊಕ್ಕರವಾಯ್ದು ಪಟ್ಟಸ ನಾಗಬಂಧಾದಿ ಬಂಧಗಳಿಂದ . . . ಪೋರುತಿರ್ಪಲ್ಲಿ (ಕಗವಿ. ೭೯ ವಿಷ್ಣುಪುರಾಣಂ) ; ಪದಿನಾಱುಸಾಸಿರಾಳ್ಗಳ ಕೆಯ್ಯೊಳೀಟ್ಟ ಕುಂತಂಗಳಿಂ ಜಂತೆಗಳಂ . . . ಪ್ರಾಸ ಪಟ್ಟಸಂಗಳಂ . . . ಪಾಸುವಲಗೆಗಳಂ ಅಳವಡಿಸಿ (ಚಿಕಸಂ. ೫೪-೧೫). **ಪಟ್ಟಿಸು :** ಸಂದ ಕೊಕ್ಕಸ ಗುಂಡು ಗೋಣಿಯು ವಿಂದೆಪಟ್ಟಿಸು ಚೀಣಪಟ್ಟಿಸುವೆಂದೆನಿಪ ವಿಂದಾಣದಲಿ ಕಾದಿದರು ಜಟ್ಟಿಗಳು (ಸಾಳ್ವಭಾ. ೨೨-೭೨).
[ದೇ.‖ ತೆಲು. ಪಟ್ಟಿಸ, ಪಟ್ಟಿಸ]

**ಪಟ್ಟಿಸ$_2$** (ನಾ). = ಪಟ್ಟಿಶ : ಅಸಿ ಪರಶು ಪಟ್ಟಿಸ ಮುಸುಂಡಿ ಪ್ರಸರ ಧಾರಾಪಾತದಲಿ ಮೈ ಬಸಿಯೆ ರಕುತದ ಸಾರ ಸಾಲಿಡೆ ಬಲದೊಳೊಳಹೊಕ್ಕ (ಕುಮ್ಮಾದ್ರೋ. ೧೫-೬೩) ; ಇಟ್ಟಿಯಿಂದಿಱು ಶೂಲದಿಂದಿಡು ಮೆಟ್ಟಿ ಮುಂದೈತಪ್ಪ ಕಪಿಗಳ ಪಟ್ಟಿಸದಲಿಡು (ತೊರಾ. ೩೨-೨೨) ; ಆಯುಧಾವಳಿಗಳಿದ್ದವು . . . ಸುರಗಿ ಕರಾಚೂರಿ ಕಡಿತಲೆ ಪಟ್ಟಿಸ ಪರಶು ಕೊಡಲಿ ಶಕ್ತಿ ಡಾಣೆ (ಭರಚ. ೨೦-೧೩೪). [ಸಂ.]

**ಪಟ್ಟಿಸಭಂಡಾರ** (ನಾ). ರೇಷ್ಮೆವಸ್ತ್ರಗಳ ಭಂಡಾರ : ಎನ್ನ ಮಾಡಮೆನ್ನ ಪೊಟಲ್ . . . ಸುವರ್ಣಭಂಡಾರಂ ಪಟ್ಟಿಸಭಂಡಾರಮೆಂದಿವ ಱೆಳೊಳ್ ಮೋಹಿಸಿದ ಬುದ್ಧಿಯನೊಡೆಯನಾಗಿಯಾರ್ತಧ್ಯಾನದಿಂ ಸತ್ತು (ಪದ್ಮಾರಾ. ೧೪೦-೨೨) ; ರತ್ನತ್ರಯದ ಬಂಡಾರವಂ ತೆಱೆವಂತೆ ಪಟ್ಟಿಸಭಂಡಾರ× × ×ಸಮ್ಯಗ್ವ್ರತಂಗಳುವುಂ ತೆಗೆದುಕೊಳ್ವಂತೆ ವಿಚಿತ್ರ ವಸ್ತ್ರಂಗಳಂ ತೆಗೆದುಕೊಂಡು (ಸುಕುಮಾ. ೧೧-೮೩ ಪ) ; ಸಾರಂ ಸಮಸ್ತ ವಸುಧಾಧಾರಂ ಚಾಳುಕ್ಯಚಕ್ರಿಗಖ್ಯಯನಿಧಿಭಂಡಾರದ ಮನೆ ಪಟ್ಟಿಸ ಭಂಡಾರವಿಂದೆನಿಸುವುದು ಲೊಕ್ಕಿಗುಂಡಿಗ್ರಾಮಂ (ಎಇ.XV, ೩೫೫-೬೪; 1098); ವಣಿಗ್ವಂಶಜರ್ಕಳುಂ . . . ಚಕ್ರವರ್ತಿಗೆ ಯೋಗ್ಯಮಪ್ಪ ಪಟ್ಟಿಸ ಭಂಡಾರಮಂ ಕೊಂಡು ಮಗುಬ್ದು ಬಪ್ಪಾಗಳ್ (ಬಂಹು. ೧೧-೫೦ ಪ).
[ಪಟ್ಟಿಸ$_0$ (ℙ ← ಸಂ. ಪಟ್ಟವಾಸಸ್) + ಭಂಡಾರ]

**ಪಟ್ಟಹಾಕು** (ಕ್ರಿ). **೧.** ಪಟ್ಟ ಮಾಡು ; ಯಾದಿ ತಯಾರಿಸು : ಬರಿಯ ಅಲಂಕಾರಗಳನ್ನೇ ಪಟ್ಟಹಾಕುವ ಉದ್ದೇಶದಿಂದ ಹೊರಟವರು ಕೂಡ ಕಾವ್ಯದಲ್ಲಿ ಅವುಗಳ ಸ್ಥಾನವೇನೆಂಬುದನ್ನು ಮರೆಯದಂತಾಯಿತು (ಭಾರವಿಶಾ.೯). **೨.** ಸಾರ್ವಜನಿಕಕಾರ್ಯಕ್ಕಾಗಿ ತಲಾ ಇಷ್ಟೆಂದು

ನಿಗದಿ ಮಾಡಿದ ಹಣವನ್ನು ಕೊಡು; ವರ್ಗಣಿ ಕೊಡು; ಚಂದಾ ಕೊಡು : ಜನರು ಪಟ್ಟೀ ಹಾಕಿ ಹಣ ಕೂಡಿಸಿ ಕೊಡಹತ್ತಿದರು ಈ ಕುಟುಂಬದ ಚರಿತಾರ್ಥಕ್ಕೆ (ಸೀನಾಹ. ೨).

[ಪಟ್ಟಿ$_2$ + ಹಾಕು(< ಪಾಯ್ಯು$_1$)]

**ಪಟ್ಟಿಹೊಂಬುಟ್ಟಿ** 'ಪಟ್ಟಿಪೊಂಬುಟ್ಟಿ' ನೋ.

**ಪಟ್ಟಿಹೊಡೆ** (ಕ್ರಿ). ಸಸಿಗಳ ಸಾಲುಗಳ ಎರಡು ಮಗ್ಗುಲುಗಳಲ್ಲಿಯೂ ಹಾಯುವಂತೆ ಕುಂಟೆ ಹೊಡೆ; ಎಡೆಕುಂಟೆ ಹೊಡೆ: ಜೋಳ ಪಟ್ಟಿ ಹೊಡೆಯಲು ಬಂತು (ರೂಢಿ).

[ಪಟ್ಟಿ$_1$ + ಹೊಡೆ$_1$(< ಪೊಡೆ$_1$)]

**ಪಟ್ಟು$_1$** 'ಪಡು$_1$' ಪರಾ.

**ಪಟ್ಟು$_2$** (ನಾ). ೧. ಹಿಡಿದುಕೊಳ್ಳುವಿಕೆ; ಹಿಡಿತ; ಬಿಗಿತ : ಪಕ್ಷಿಯ ನುಡಿಗೆ ದಮಯಂತಿಯು ಆಶ್ಚರ್ಯವಂಟಪ್ಪು ಪಕ್ಷಿಯ ಮುದ್ದಾಡಿ ತಾನು ಹಿಡಿದಂತಾ ಪಟ್ಟು ಬಿಟ್ಟು ತೊಡೆಯ ಮೇಲೇರಿಸಿಕೊಂಡು ಯೇನೆನುತಿರ್ದಾಳು (ಯನಳ. ೨೩); "ಅಷ್ಟಿಷ್ಟು ಹಣವಲ್ಲ ನನಗೆ ಬೇಕಾಗಿರೋದು . . . ಇನ್ನೊಂದಷ್ಟು ಖರ್ಚಿನ ಬಾಬತ್ತಿದೆ"— ಪ್ರಾಣೇಶಾಚಾರ್ಯರು ಅವನ ಪಟ್ಟಿನಿಂದ ತಪ್ಪಿಸಿಕೊಳ್ಳಲಾರದೆ ಎಂದರು (ಸಂಸ್ಕಾರ.೧೨೫); ಗ್ರೀಕ್ ಪ್ರತಿಮೆಗಳಲ್ಲಾದರೋ ಬಾಹ್ಯರೂಪ ಮುಖ್ಯ; ನಮ್ಮ ಪ್ರತಿಮೆಗಳಂತೆ ಅವು ಶಾಸ್ತ್ರದ ಪಟ್ಟಿಗೆ ಸಿಕ್ಕಲಿಲ್ಲ (ಭಾರದ. ೫೧೮). ೨. ಛಲ; ನಿರ್ಧಾರ : ಎದ್ದು ಕಾಣುತ್ತಿದ್ದ ಆ ಇಳಿವಿವಾಸೆ ಹಿಡಿದ ಪಟ್ಟನ್ನು ಬಿಡದ ಒರಟುತನಕ್ಕೆ ಸಾಕ್ಷಿಯಾಗಿದ್ದವು (ರೂಪಸ. ೩). ೩. ಹಠ; ಮೊಂಡುತನ : ಯಾರು ಎಷ್ಟು ಬುದ್ಧಿವಾದ ಹೇಳಿದರೂ ಅವಳು ತನ್ನ ಪಟ್ಟನ್ನು ಬಿಡಲಿಲ್ಲ (ರೂಢಿ). ೪. ನೋವನ್ನು ನಿವಾರಿಸಲು ಗಾಯ, ಊತ ಮೊದಲಾದುವುಗಳ ಮೇಲೆ ಲೇಪಿಸುವ ಔಷಧಿದ್ರವ್ಯ : ಕೆಲವು ಪ್ರತಿವೀರರು . . . ಬಾಣಗಳಿಂದ ಜರ್ಝರಿತ ಗಾತ್ರರಾಗಿ ಅರ್ತಿಯನ್ನು ಪಟ್ಟು ಮಾಡತಕ್ಕಂಥಾದ್ದಿಲ್ಲದೆ ಸುಮ್ಮನೆ ಇದ್ದರು (ಕೃವಾಭೀ. ೧೫). ೫. ಹೊಂದಾಣಿಕೆ; ಸುಸಂಬದ್ಧತೆ : ನತ್ತಿ ಮಾತಾಡುವವನ ಮಾತು ಸುತ್ತಿ ತೊಳಲಿದರೆ ಪಟ್ಟು ಅದೀತೇ? (ಗಾದೆ). ೬. ನಿಶ್ಚಿತವಾದುದು; ಖಾತ್ರಿ; ಸ್ಪಷ್ಟ. ೭. ಚರ್ಮ ಮರಗಟ್ಟಿ ದಪ್ಪವಾಗುವಿಕೆ; ದಡ್ಡುಗಟ್ಟುವಿಕೆ; ಜಡ್ಡುಗಟ್ಟುವಿಕೆ : 'ಪಟ್ಟುಗಟ್ಟು' ಪರಾ. ೮. ಖಡ್ಗಯುದ್ಧ ಹಾಗೂ ಮಲ್ಲಯುದ್ಧಗಳಲ್ಲಿಯ ವರಸೆ,— ಹಿಡಿತ,— ಪೇಚು : ತಟ್ಟುವ ತಡೆವಣೆ ವಸಿಯಂ ಮುಟ್ಟುವ ಮಸೆಗೆಯ್ವ . . . ಬಹುವಿಧ ಭಣಿತೆಯ ಪಟ್ಟುಗಳೋರಣಿಸೆ ಪಳಚಿದರ್ ಬಿನ್ನಣದಿಂ (ಕಳಸ್ಸ. ೩-೪೦); ಈ ಇಷ್ಟು ಇಕ್ಕಟ್ಟಾದ ಗರಡಿಯಲ್ಲಿ ಜಟ್ಟಿ ತನ್ನ ಪಟ್ಟುಗಳನ್ನೆಲ್ಲ ತೋರಿಸುವುದು ಹೇಗೆ? (ಸಮಾಲೋ. ೧೭೫); ಇಬ್ಬರೂ ಸಮರ್ಥರಾದ ಜಟ್ಟಿಗಳು. ಯಾರೂ ಪಟ್ಟಿಗೆ ಸಿಕ್ಕರು (ರಾಜಸೂ. ೨೩); ಜಟ್ಟಿ ಬಿದ್ದರೂ ಅದೊಂದು ಪಟ್ಟು (ಗಾದೆ). ೯. ಬಣ; ಪಂಗಡ; ಪಕ್ಷ : ಪಟ್ಟುಶಬ್ದಃ ಪಕ್ಷವಚನಃ (ಶಬ್ದಾನು. ೪೪೧ ವ್ಯಾಖ್ಯಾ). 'ಗೌಡಪಟ್ಟು', 'ಪಟ್ಟುಕ' ಪರಾ. ೧೦. ಮೆಚ್ಚು; ಮೆಚ್ಚಿಕೆ : ಪಟ್ಟಿನಿಂ ತೊಟ್ಟು ತೊಡವಂ ಕಮ್ಮರೆಯನಿಟ್ಟು ಒಟ್ಟಿನಿಂ ಪೆಣ್ಣಿಳಣಿಯಾಯ್ತು (ಕಾಲೂರ. ೧೫೦-೩೨೪). ೧೧. (ಕರಾ) ಅಸ್ಪಷ್ಟವಾದ ಮಾತು. ೧೨. [ಸಂಗೀತ] ಆಯಾಯ ಸ್ವರಗಳನ್ನು ಶುದ್ಧವಾಗಿ ಹೊರಡಿಸಲು ಕೊಳಲಿನಲ್ಲಿ ರಂಧ್ರಗಳನ್ನು ಬೆರಳುಗಳಿಂದ ಕಾಲುಭಾಗ, ಅರ್ಧಭಾಗ, ಮುಕ್ಕಾಲುಭಾಗ ಅಥವಾ ಪೂರ್ತಿಯಾಗಿ ಮುಚ್ಚುವಿಕೆ. ೧೩. ಒಂದು ಬಗೆಯ ಲೇಪನದ್ರವ್ಯ (?) : ಮಿಂದು ದಳಿಂಬಮನುಟ್ಟುಂ ಚಂದನಮಂ ಪೂಸಿ ನೆರೆಯೆ ಪಟ್ಟಿನ ಬೊಟ್ಟಿಟ್ಟಂದು ನವಕುಸುಮದಾಕ್ಯತದಿಂದಂ ಬಾಸಿಂಗಮ ನಿಮಿರಿ ಕಟ್ಟಿದ ಬಟುಕಂ (ಜಟ್ಟಮ. ೯-೨೫).

ಪಟ್ಟಾಗಿ = ೧. ಸ್ಥಿರವಾಗಿ; ದೃಢಸಂಕಲ್ಪದಿಂದ ಕೂಡಿ : ಇಬ್ಬರೂ ಪಟ್ಟಾಗಿ ಕುಳಿತು ಲೆಕ್ಕ ಮಾಡುತ್ತಿದ್ದೆವು (ಅಲಹೂ. ೭೭); ಆ ಹಳ್ಳದಲ್ಲೇ ಪಟ್ಟಾಗಿ ನಿಂತುಕೊಂಡು ಕೆರೆಯ ಮುಂಗಟ್ಟನ್ನು ಅಗೆದಗೆದು (ಕಥಾಮಂ. iv, ೮). ೨. ಎಡೆಬಿಡದೆ; ಒಂದೇ ಸಮನೆ : ಮಾರನೆಯ ದಿನ ಜ್ವರ ಪಟ್ಟಾಗಿ ಮಲಗಿಸಿತು (ಅಲಹೂ. ೧೫೪). ೩. ಯಥೇಚ್ಛವಾಗಿ; ಚೆನ್ನಾಗಿ; ಗಡದ್ದಾಗಿ : ಚೆನ್ನಾಗಿ ಅಡುಗೆ ಮಾಡಿ ಪಟ್ಟಾಗಿ ಹೊಡೆದರು (ಪ್ರಪಾಜ. II, ೨೧೭); ಪಟ್ಟಾಗಿ ಅವಲಕ್ಕಿ ಮೊಸರು ತಿಂದ ವೆಂಕಮ್ಮ . . . ಮಲಗಿದರು (ಪದ್ಮಸ. ೨೩೨). ಪಟ್ಟಾಗು = ನಿರ್ಧಾರವಾಗಿ ತಿಳಿ; ಸ್ಪಷ್ಟವಾಗು; ಖಾತ್ರಿಯಾಗು: ಈಗಲ್ ನಿನಗೆ ಸೀತಾರಾಮರ್ಕಳ ಪುಟ್ಟು ಪಟ್ಟಾದುದೇ? (ಅದ್ಭುತ. ೩೨-೪). ಪಟ್ಟನಾಟ = ಇಸ್ಪೀಟಾಟದಲ್ಲಿ ಒಂದು ಬಗೆ : ಇಸ್ಪೀಟಿನಲ್ಲಿ ಯಾವ ಆಟ ಆಡುವಿರಿ? ಪರೇಲೋ? ಪಟ್ಟನಾಟವೋ? (ರೂಢಿ).

[ದೇ.॥ ತಮಿ. ಪಜ್ಜು; ತುಳು. ಪಟ್ಪ್; ತೆಲು. ಪಟ್ಟು]

**ಪಟ್ಟು$_3$** (ನಾ). ೧. ಸಲ; ಸರದಿ; ಬಾರಿ : ಈ ವಸಂತಕಂ ಪಲವುಂ ಪಟ್ಟೊರೆದ ಭೈರೂಪದ ಪಳಕುವಟ್ಟನಲ್ಲಿಯಮರ್ಚಿರವೇಟ್ಟುಂ (ಚಕವಿ. ೬-೨೩೫ ವ); ಕೆಲವರಿಗೆ ಒಂದೇ ಪಟ್ಟಿಗೆ ಹಳ್ಳಿಯನ್ನು ಉಜ್ಜಯಿನೀ ಪಟ್ಟಣವನ್ನಾಗಿ ಮಾಡಬೇಕೆಂದು ಇಷ್ಟ (ಹುಟ್ಟಹ. ೧೮೭). ೨. ಪಾಲು; ಮಡಿ : ಕಾಯಿಲೆಯ ನಷ್ಟ ಕೊಡಗಿದ ಲಾಭ ಮೂರು ಪಟ್ಟು (ನೆಲಮು. ೮೩-೧೮); ಬೀಜದ ಹತ್ತು ಪಟ್ಟು ಬೆಳೆಯಾಗುವುದಕ್ಕೆ ಸಂಶಯವಿಲ್ಲ (ಕೃಷಿಪ್ರ. ೬೨); ಸೂರ್ಯಗೋಳವು ಪೃಥ್ವಿಗಿಂತ ಸುಮಾರು ೧೭ ಲಕ್ಷ ಪಟ್ಟು ದೊಡ್ಡದಾಗಿರುವುದು (ಮುಂಬಯಿ. ೬-೫೯). 'ದುಪ್ಪಟ್ಟು' ಪರಾ.

**ಪಟ್ಟು$_4$** (ನಾ). ೧. ಊರು; ಹಳ್ಳಿ : ಶ್ರೀಕೃಷ್ಣರಾಜಒಡೆಯರು ಹರವು ಮುಂತಾದ ಪಟ್ಟುಗಳ ಪಾಳೆಯಗಾರರನ್ನು ಕಳನಲ್ಲಿ ಗೆದ್ದು ಆ 'ಶೃಂಗಾರಹಾರ' ಎಂಬ ಬಿರುದನ್ನು ಸಂಪಾದಿಸಿದರು (ಚಿಟ್ಟಅ. ೨೪-೧೧). 'ಪಾಳೆಯಪಟ್ಟು' ಪರಾ. ೨. ನೆಲೆ; ಸ್ಥಳ; ಸ್ಥಾನ : ಕಿಟ್ಟಿತಿನ್ನೇನಲ್ಲಿ ಪ್ರಬಲವು ಹುಟ್ಟಿತಿನ್ನೀಯಿಳೆಯು ನನಗಿಹ ಪಟ್ಟು ತೋರುವುದಿಲ್ಲ (ಜಿನಭಾ. ೩೪-೪೬). 'ಪಟ್ಟುಟು' ಪರಾ.

[ದೇ.॥ ತಮಿ. ಪಟ್ಟು]

**ಪಟ್ಟು$_5$** 'ಪಟ್ಟ$_2$' ನೋ.

**ಪಟ್ಟುಕ** (ನಾ). ಯಾವುದಾದರೂ ಒಂದು ಪಕ್ಷಕ್ಕೆ ಒಲಿಯುವವನು; ಪಕ್ಷಪಾತ ಮಾಡುವವನು : ಪಟ್ಟುಕ—ಪಟ್ಟುಶಬ್ದಃ ಪಕ್ಷವಚನಃ ತತ್ಕುರ್ವನ್ ಪಕ್ಷಪಾತೀತಿ ಯಾವತ್ (ಶಬ್ದಾನು. ೪೪೧ ವ್ಯಾಖ್ಯಾ).

[ಪಟ್ಟು$_2$ + –ಕ$_3$]

**ಪಟ್ಟುಕಂಥೆ** 'ಪಟ್ಟುಗಂಥೆ' ನೋ.

**ಪಟ್ಟುಕಾಜಿ,** ಹಟ್ಟಿಗಾಜಿ$_2$ (ನಾ). ರೇಷ್ಮೆವಸ್ತ್ರವನ್ನು ನೇಯುವವನು; ಪಟ್ಟೆಗಾರ : ಅಸುರದೊಳಿಂದ್ರಜಾಲದ ಕೂಸುಗಳಂ ಕಂಸನೊಗೆದನಜಿಯೊಳ್ಗೆತ್ತರ್ಸೂಸೆ ದೆಸೆದೆಸೆಗೆ ಕೆಂಪಿನ ಪಾಸಂ ಪಿಡಿದೊಗೆವ ಪಟ್ಟುಕಾ[ಪಾಠಾಂ. ಟ್ಟಿಗಾ]ಜಿನ ತೆಜದಿಂ (ಅರ್ಧನೇ. ೬-೩೧). **ಹಟ್ಟಿಗಾಜಿ$_2$** : ಹಟ್ಟಿಗಾಜಿರ ಅಟ್ಟಿತ್ರಸರ, ಸೂತ್ರಪ್ರವೇಷ್ಟನ (ನಾಚಿರಾ. ೩.).

[ಪಟ್ಟು$_5$(< ಪಟ್ಟ$_2$) + –ಕಾಜಿ]

**ಪಟ್ಟುಗಂಥೆ,** ಪಟ್ಟುಕಂಥೆ (ನಾ). ರೇಷ್ಮೆಯ ಹೊದೆಯುವ ವಸ್ತ್ರ : ಒರ್ವಂ ವೀರಮಾಹೇಶ ಚಿನ್ನದಿಂ ಸವೆದ ಕಂಥೆಯ ಧರಿಸಲವರ ಕರವನಜಸಂಭವರು ಚಿನ್ನದ ಕಂಥೆಯಂಶವೆಂಬರು . . . ಪಟ್ಟುಗಂಥೆಯಂ

ಧರಿಸಿದಯ್ಯನ ಶಿಷ್ಯರಾ ಪಟ್ಟುಗಂಥೆ ವರ್ಗಂ (ಗುರುಚಾ. ೩-೨೦).

**ಪಟ್ಟುಕಂಥೆ :** ಲಿಂಗಣಾರ್ಯಂಗೆ ಪುರಂಗಳ ಕೊಟ್ಟು ಚೆಲ್ವಿನ ತೊಡಂಗಳ ನೀವುತಂ ಪಟ್ಟುಕಂಥೆಯನಿತ್ತು (ಲಿಂಗಪು. ೩೬-೨೩).
[ಪಟ್ಟು$_5$(<ಪಟ್ಟ$_2$)+ಕಂಥೆ]

**ಪಟ್ಟುಗಟ್ಟು** (ಕ್ರಿ). ದಡ್ಡುಗಟ್ಟು ; ಜಡ್ಡುಗಟ್ಟು : (ಕ).
[ಪಟ್ಟು$_2$+ಕಟ್ಟು$_1$]

**ಪಟ್ಟುಡೆ** (ನಾ). ಪಟ್ಟೆವಸ್ತ್ರ ; ರೇಷ್ಮೆಯ ಬಟ್ಟೆ : ಗಟ್ಟಿಮಗುಟ್ಟುವ ಗಟ್ಟವಳ್ತಿಯರ ಪಟ್ಟುಡೆಯೊಳ್ ಕಟ್ಟುವಡೆದುಂ . . . ಪಶ್ಚಿಮಾನಿಲಂ ಮೈದೋಜಲ್ (ರಾಮಾಶ್ವ. ೨-೨೦). [ಪಟ್ಟು$_5$(<ಪಟ್ಟ$_2$)+ಉಡೆ$_2$]

**ಪಟ್ಟುದಲೆ** (ನಾ). ಕೂದಲು ಉದುರಿ ಬೋಳಾಗಿರುವ ತಲೆ ; ಬೋಳುದಲೆ : ಆನೆದಂತವ ಸುಟ್ಟು ಕರಿ ಮಾಡಿ ಎಣ್ಣೆಯಿಂದಲಾದರೂ ಜೇನುತುಪ್ಪದಿಂದಲಾದರೂ ನೆಲಗುಳ್ಳದ ಹಣ್ಣಿನ ರಸದಿಂದಲಾದರೂ ಅರೆದು ಲೇಪವಂ ಮಾಡಿಸಲು ಹೇನ ಕೆರೆ, ಪಟ್ಟುದಲೆ ಎಂಬ ರೋಗಂಗಳು ಶಮನವಹವು (ವೈದ್ಯಸಾ. II, ೧೪೬). [ಪಟ್ಟು$_5$(<ಪಟ್ಟ$_2$)+ತಲೆ$_1$]

**ಪಟ್ಟುನೂಲು** (ನಾ). ರೇಷ್ಮೆಯ ದಾರ : ಕಾಷ್ಠದಲ್ಲಿ ಬೊಂಬೆಯ ಮಾಡಿ ಪಟ್ಟುನೂಲ ಸೂತ್ರವ ಹೂಡಿ ತೆರೆಯ ಮಱೆಯಲ್ಲಿ ನಿಂದು ಸೂತ್ರಿಕನು ಕುಣಿಸಿದಡೆ ಕುಣಿಯುತಿರ್ಪುದಲ್ಲದೆ ಆ ಅಚೇತನಬೊಂಬೆ ತನ್ನ ತಾನೆ ಕುಣಿವುದೆ ಅಯ್ಯಾ (ಅಖಂಡೇ. ೩೦೭-೯೧).
[ಪಟ್ಟು$_5$(<ಪಟ್ಟ$_2$)+ನೂಲು$_2$(<ನೂಲ್$_2$)]

**ಪಟ್ಟುವಸ್ತ್ರ** (ನಾ). = ಪಟ್ಟುಡೆ : ಸಿಂಹಳನೃಪಂ ಕಟ್ಟರಸರೊಡನೆಮಗೆ ವೈಠಪೇಕೆಂದು . . . ಪಟ್ಟುವಸ್ತ್ರಗಳ ಗಜ ಹಯ ಮುಖ್ಯವಸ್ತುಗಳ ಕೊಟ್ಟೊಡನೆ . . . ತಿರುಗಿದಂ ಧರ್ಮವತಿಗೆ (ಭಾವಚಿಂ. ೫-೨೧) ; ವಾರಣಾಸಿ ಹಸ್ತಿನಾವತಿ ಕ್ಷೇತ್ರಗಳಿಂದ ಬಣ್ಣಬಣ್ಣದ ಪಟ್ಟುವಸ್ತ್ರ ಪೀತಾಂಬರಗಳೂ, ಕುದುರೆ, ಒಂಟೆ, ಆನೆಗಳ ಮೇಲೆ ಹೇರಿ ಹೇರಿ ಬಂದವು (ಶಾಂತಲಾ. ೧೦೦) ; 'ಮಸ್ಲಿನ್‌ಗಳು' ಎಂಬ ನವುರಾದ ವಸ್ತ್ರಗಳೂ ಪಟ್ಟುವಸ್ತ್ರಗಳೂ . . . ಹಿಂದೂದೇಶದಲ್ಲಿ ಬಹುಕಾಲದಿಂದ ತಯಾರಾಗುತ್ತಲಿವೆ (ಭೂಗೋಳ. ೩೯). [ಪಟ್ಟು$_5$(<ಪಟ್ಟ$_2$)+ವಸ್ತ್ರ]

**ಪಟ್ಟುಹ** 'ಪಟ್ಟಯ್ಯ$_1$' ನೋ.

**ಪಟ್ಟುಹಾಕು** (ಕ್ರಿ). ೧. ಊತ, ನೋವುಗಳಿರುವ ಜಾಗಕ್ಕೆ ಔಷಧಿ ಮೊದಲಾದುವನ್ನು ಲೇಪಿಸು,—ಬಳಿ,—ಸವರು : ಚಿಕ್ಕಮ್ಮನಿಗೆ ಆಮೇಲೆ ಸೊರೆಹಾಲು ಪಟ್ಟು ಹಾಕಿ, ಕಣ್ಣಿಗೆ ಅಂಜನ ಹಚ್ಚಿದೆವು (ಅಷಾಭೂ. ೧೪). ೨. (ಕುಸ್ತಿಯಲ್ಲಿ) ಪಟ್ಟನ್ನು ಪ್ರಯೋಗಿಸು,—ವರಸೆಯನ್ನು ಹಾಕು : ನಮ್ಮೂರಿನ ಜಟ್ಟಿಯು ಪಟ್ಟು ಹಾಕಿ ಒಂದೇ ಸಾರಿಗೆ ಎದುರಾಳಿಯನ್ನು ಬೀಳಿಸಿದನು (ರೂಢಿ).
[ಪಟ್ಟು$_2$+ಹಾಕು(<ಪಾಯ್ಕು$_1$)]

**ಪಟ್ಟುಹಿಡಿ** (ಕ್ರಿ). ೧. ನಿರ್ಧರಿಸು ; ದೃಢಸಂಕಲ್ಪ ಮಾಡು : "ನಾನಂತು ಸತಿಯಾಗುವುದು ಖಂಡಿತ. ಇದೊಂದನ್ನು ಬಿಟ್ಟು ಇನ್ನೇನಿದ್ದರೂ ಹೇಳು" ಎಂದು ಅತ್ತಿಮಬ್ಬೆ ಪಟ್ಟುಹಿಡಿದಳು (ದಾನಚಿಂ. ೧೫೭) ; ಆ ಇನ್‌ಸ್ಪೆಕ್ಟರು ಪಟ್ಟು ಹಿಡಿದು ಕುಳಿತು ನಿನ್ನೆಯ ದಿನದ ಲೆಕ್ಕ ಮುಗಿಸಿ ಕ್ಯಾಷ್ ಪ್ರೊಡ್ಯೂಸ್ ಮಾಡು ಅಂದಿದ್ದರೆ ಏನು ಮಾಡಬೇಕಿತ್ತೋ ದೇವರೇ ಬಲ್ಲ (ಮರಳಿ. ೧೫೬). ೨. ಹಟ ಹಿಡಿ ; ಮೊಂಡುತನ ಮಾಡು : ಸಭೆಯಲ್ಲಿ ಒಂದು ವಿಷಯ ಪಟ್ಟುಹಿಡಿದರೆಂದರೆ, ಬ್ರಹ್ಮ ಬಂದರೂ ಅವರನ್ನಲುಗಿಸಲಾರ (ಪುನರು. ೨೯೫). ೩. = ಪಟ್ಟುಹಾಕು ೨ : ಬೇರೆಯ ಊರಿನಿಂದ ಬಂದ ಆ ಪೈಲ್ವಾನನು ಪಟ್ಟುಹಿಡಿದು ಅವನನ್ನು ಉರುಳಿಸಿದನು (ರೂಢಿ).
[ಪಟ್ಟು$_2$+ಹಿಡಿ$_1$(<ಪಿಡಿ$_1$)]

**ಪಟ್ಟುಬಿಡು** (ಕ್ರಿ). ನೆಲೆಯನ್ನು ಬಿಟ್ಟು ಹೋಗು ; ಆಶ್ರಯ ತಪ್ಪು : ಪಟ್ಟುಬಿಡದು ಸಂಚರಿಪ ಬಾಳೆಯಂ . . . ಬಣ್ಣಿಸಲ್ ನೆಜೆಣವರಾರ್ಯೆ (ಶ್ರೀರಾಮ. ೩-೨೬). [ಪಟ್ಟು$_4$+ಉಬಿ$_1$]

**ಪಟ್ಟೆ$_1$** (ನಾ). ೧. (ಅಡಕೆ, ಬಾಳೆ ಮುಂತಾದುವುಗಳ) ತೊಗಟೆ,—ತಿಗುಡು,—ಸಿಪ್ಪೆ : ಕಾಯಿ ಸುಕ್ಕದಂತೆ ಅದಕೆ ಬಾಳೆಯ ಪಟ್ಟೆಯಂ ತುಂಬಿ ಸಂಭಾರವುದುರದಂದದೊಳು ನಾರ [ಸು]ಪಟ್ಟೆಯಂ ಸುತ್ತಿ ದುದನು ದಕಬೋನ ನೆಲಹಿನೊಳಿಕ್ಕಿ ಕಟ್ಟಿ ಹಸನಾಗಿ ಒಲೆಯಂ ಮಾಳ್ಪುದು (ಸೂಪಶಾ. ೫-೨೫). 'ಬಾಳೆಪಟ್ಟೆ' ಪರಾ. ೩. ಅಡಕೆಯ ಹಾಳೆ : ಹಳ್ಳಿಯ ಜನ ಅಡಕೆಪಟ್ಟೆಯಲ್ಲಿ ಊಟ ಮಾಡುತ್ತಾರೆ (ರೂಢಿ).
[ದೇ.॥ ತಮಿ. ಪಟ್ಟೈ ; ಮಲ. ತೆಲು. ಪಟ್ಟ]

**ಪಟ್ಟೆ$_2$** 'ಪಟ್ಟೆಯ$_1$' ನೋ.

**ಪಟ್ಟೆ$_3$** (ನಾ). ೧. (ಅಲಂಕಾರಕ್ಕಾಗಿ ಕಟ್ಟುವ) ಅಗಲ ಕಿರಿದಾಗಿದ್ದು ಉದ್ದವಾಗಿರುವ ಕಾಗದ, ಬಟ್ಟೆ, ರೇಷ್ಮೆ, ಚರ್ಮ, ಲೋಹ ಮೊದಲಾದುವುಗಳ ಪಟ್ಟಿ : ಅಲ್ಲಲ್ಲಿ ಕಟ್ಟದ ಪುಲ್ಲಿಯ ಪಟ್ಟೆಗಳ ಮೇಲೆ ಬಳಸಿದ ಮೇಘವಣ್ಣಿಗೆಯ ಚೌಕದ ವಿಳಾಸದ ಕಥಾಯಿಯ ಸುಚ್ಚವಿಯನೀವ ಪಚ್ಚೆಯ ಪಟ್ಟೆಗಳ . . . ಬಿರಕೆವೆಳಗು ಮಂಟಪದೊಳಗಂ ಪೊಱಗಂ ತೆಕ್ಕನೆ ತೀವೆ (ಗಿರಿಕ. ೧೦-೨೮ ವ) ; ಅಲ್ಲಲ್ಲಿ ಕಟ್ಟದ ಚೋಹಗಳಿಂ ನಿಡುಜಲ್ಲಿಗಳಿಂದ ಪಟ್ಟೆಗಳ ಪಲ್ಲವಕೋಟಿಗಳಿಂದಾ ಗಿರಿದುರ್ಗದಲ್ಲಿ ಶೂಲಗಳು ಮೆಱೆದುವು (ಕುರಾಸಾಂ. ೨೧-೧೩) ; ಕೊರಳಿಗೆ ಉಣ್ಣೆಯ ಪಟ್ಟೆಯನ್ನು ಅಳವಡಿಸಿ, ನೆತ್ತಿಯ ಮೇಲೆ ಪೇಟವನ್ನು ಒತ್ತಿ ಧರಿಸಿ . . . ಮಹಾಸಭೆಯನ್ನು ಎದುರಿಸಿ ನಿಂತೆ (ನಂಟರು. ೩೯). 'ಪಟ್ಟೆಮಂಚ', 'ಬಿರುದುಪಟ್ಟೆ' ಪರಾ. ೨. ಗೆರೆ ; ರೇಖೆ : ಪ್ರತಿಸ್ಥಾನಗಳಲ್ಲಿಯೂ ವಿಶಾಲಗಳಾದ ಶುಭ್ರವರ್ಣಗಳಾದ ಪಟ್ಟೆಗಳಿಂದ ಪ್ರಕಾಶಿಸುವ ಕುದುರೆಯು . . . ಪ್ರಸಿದ್ಧಿಯ ಪಡದಿರುವದು (ಸೌಗಂಧಿ. ೩೧೧-೧೮) ; ಹೆದ್ದಾರಿಯೊಳು ಮರವಿದ್ದರೆ ಕಡಿವರು ಸೊಪ್ಪಿಗೆ ಸೌದೆಗೆ ಜನರು ಬೆಳ್ಳನೆ ಕಪ್ಪನೆ ಪಟ್ಟೆಯನೆಳೆವರು ಬಣ್ಣದ ಚೀಟಿ ಹಚ್ಚುವರು (ಇಂಚಾಪ. ೧೧೫-೬೩). ೩. ನಾಯಿ, ಕುದುರೆ ಮುಂತಾದ ಪ್ರಾಣಿಗಳ ಕೊರಳಿಗೆ ಅಥವಾ ನಡುವಿಗೆ ಕಟ್ಟುವ ಬಟ್ಟೆಯ ಅಥವಾ ಚರ್ಮದ ಪಟ್ಟಿ; ಕಟ್ಟುಪಟ್ಟಿ : ಕಟ್ಟದ ಪಂಚವಣ್ಣಿಗೆಯ ಪಟ್ಟೆಯ ತೊಂಗಲೊಳಿಂದ್ರಚಾಪಮಂ ಪುಟ್ಟಿಸಿ . . . ಮೇರೆದಪ್ಪಿ ಕವಿತಂದುದು ರೌದ್ರರಸಂ ರಣೋರ್ವಿಯೊಳ್ (ಪಂಪಾಮಾ. ೧೩-೪೫) ; ಮೇಲುತರದ ಪಟ್ಟೆ ವರಸೂಪು ಸಕಲಾತಿ ಜೂಲುಗಳಿಂದೆ ರಂಜಿಸುವ ಕಾಲುವೇಗದ ಶುನಿವಿಡಿದ ಕಿರಾತರು ಸಾಲಿಟ್ಟು ನಡೆದರೊಗ್ಗಿನಲಿ (ಮೋಹತ. ೧೯-೧೦). ೪. ನಡುಪಟ್ಟೆ ; ಸೊಂಟಪಟ್ಟೆ ; ಡಾಬು. ೫. ಜಮೀನಿನ ಒಂದು ತುಂಡು,—ಸೀಳು. ೬. ಚಕ್ರದ ಸುತ್ತಲಿರುವ ಕಬ್ಬಿಣದ ಹೊರವಲಯ,—ಪರಿಧಿ ; ನೇಮಿ : ಎತ್ತಾನೆ ತರಿಸಯ್ಯ ಪಟ್ಟೇಯ ಬಿಗಿಸಯ್ಯ ತಟ್ಟಾನೆ ನಮ್ಮ ಕಳುಹಯ್ಯ ಕಣ್ಣೀರು ಇಟ್ಟಾಡುತೀದೆ ಮನದಲ್ಲಿ (ಹಳ್ಳಿಪ. ೧೧೬). ೭. ರೇಷ್ಮೆ ; ಕೌಶೇಯ : ತರತರದ ಶೃಂಗಾರತೋರಣ ಸುರುಚಿ ಪಟ್ಟೆಯ ಮೇಲುಗಟ್ಟನ ವಿರಚಿತಾಮಳ ಚಿತ್ರಭಿತ್ತಿಯ ಮದುವೆ ಮಂಟಪದ (ಕೌಶಿರಾ. ೨-೫೮) ; ವಾಣಿಯ ಧವನೆಂಬ ವ್ಯವಹಾರಿ ಹಟ್ಟೆಯ ಗೋಣಿಯೊಳ್ ತುಂಬಿದ ರತ್ನ ಓಣಿಯೊಳ್ ಚೆಲ್ಲಿದಂತಿದೆ ನಿನ್ನ ಕೃತಿಯೆಂಬ ಮಾಣಿಕ ಮನ್ಮನೋನಾಥ (ಮೋಹತ. ೧-೩೪) ; ಒಡನುಟ್ಟ ಪಟ್ಟೆಯ ಚಲ್ಲಣ ಮೋಹನವಡೆದ ಪದಕ ಪೈಠಣಿಯ ಕಡುಸೊಬಗಿನ ಬಲ್ವೇಟದ ಸುಕುಮಾರ ನಡೆದನು ಸಖರ ಮೇಳದಲಿ (ಕಂಸವಿ. ೧೦-೨೧) ; ಒಳ್ಳೆಯದಾದ ಒಂದು ಪಟ್ಟೆಯ ಕಣವನ್ನು ತರಿಸಿ ... ಕೊಟ್ಟನು (ಕವಿಕ.೫೫). ೮. ರೇಷ್ಮೆಯ ವಸ್ತ್ರ, ಸೀರೆ ಮುಂತಾದುವು : "ಕ್ಷೌಮಮೆನಲಾ ಸುಪಟಾವಳಿ ದುಕೂಲಮೆನೆ ಪಟ್ಟೆ" (ಮಂಗರಾ. ೧೦೧-೨೬) ; ಸಾಹಿಯಾಣದ ಚೀನದ

ಧವಳವಟ್ಟದ ಜೊಂಗದ ದೇವಾಂಗದ ಸಕಳಪಟ್ಟೆಗಳನೆ ಮೆಟ್ಟುವೆಡೆಗಳೊಳೆಲ್ಲಂ . . . ಸೂಸಿದಾಗಳ್ (ಆದಿಪು. ೪-೩೪ ವ); ಬೋನಮನೊಡೆದು ಹಲ್ಲೆಯ ಮಾಡುವ ಪಟ್ಟಿಯುಂ ಪಱಿದು ಚಂಡಂ ಮಾಡುವ ಕಟ್ಟಿಗ್ಗರಂತೆ ಶಾಶ್ವತಮಲ್ಲದ ಶರೀರಮಂ ಪಿಡಿದು ರತ್ನತ್ರಯಂಗಳಂ ಕಿಡಿಸುವುದು (ಧರ್ಮಾಮೃ. ೯-೧೭೨) ; ಪುದಿದುಪ್ಪುಚಿತ್ರದಿಂದೊಪ್ಪುವ ಪಟ್ಟಿಯಂ ಪದೆಪಿನಿಂ ಸತಿಗಿತ್ತು (ದಶಕು. ೪-೧೦೮) ; ಕರಿಯ ಪಟ್ಟಿಯನುಟ್ಟು ಕಣ್ಗೆ ಕಾಡಿಗೆಯಿಟ್ಟು . . . ಬರುವಳೋ ಮಾಯೆಯೆಂಬಂತೆ ಕಳ್ತಲೆಯದೇಂ ಕವಿದುದೋ ಭೂತಳವನು (ವೆಂಕಾರಾ. ೫-೨-೩೧) ; ಪಟ್ಟಿ ಉಟ್ಟಾರೇನು ಮುತ್ತು ಕೊಟ್ಟಾರೇನು ಹೊಟ್ಟೀಲಿ ಒಂದು ಫಲವಿಲ್ಲ (ಹಳ್ಳಿಯ. ೧೧೭). **೯.** ರಾಜಶಾಸನ ಮುಂತಾದುವುಗಳನ್ನು ಬರೆಯಲು ಉಪಯೋಗಿಸುವ ಲೋಹ ಮುಂತಾದುವುಗಳ ಪಟ್ಟಿಕೆ,—ಫಲಕ : ಕಟ್ಟಿಯೋ ಹರಿಸೇನೆ ನಡೆವಾ ಬಟ್ಟೆಯೋ ರಾಘವನ ವೀರದ ಪಟ್ಟಿಯೋ ಎನಲೊಪ್ಪುತಿದ್ದುದು ಜನದ ಕಣು ಮನಕೆ (ಕೌಶಿರಾ. ೧೬-೨೭). **೧೦.** ಒಂದು ಜಮೀನಿನ ನಿರ್ದಿಷ್ಟ ಅಳತೆ, ಸ್ವಾಮಿತ್ವ, ಕಂದಾಯ ಮುಂತಾದ ವಿವರಣೆಗಳನ್ನೊಳಗೊಂಡ ಸರ್ಕಾರಿ ಪತ್ರ,- ಅಧಿಕೃತ ದಾಖಲು ; ಸನ್ನದು : ಮೂಱಡಿ ಮಣ್ಣಿಗೆ ಆಱು ಹೊನ್ನ ತೆತ್ತು . . . ಪಟ್ಟಿಯ ಕೊಟ್ಟ ಮತ್ತೂರಗೂಡಿ ಹದಿರೆಯ ಬೇಡಿದೆಡೆ ನಾ ಕೊಡಲಿಲ್ಲ ನೀ ಕೊಟ್ಟ ಪಟ್ಟಿ ನಮ್ಮ ನಟ್ಟನಡುಮನೆಯ ಐದುಕಾಲ ನೆಲಹಿನಲ್ಲಿ ಕಟ್ಟಿಯದೆ (ಸರ್ವಜ್ಞ. ೧೦೪-೫೬೪) ; ಕಳಸಾಪುರದ ಸೂರಪ್ಪಗಳ ಪಟ್ಟಿಯ ವೊಳಗೆ ಬೆನಕನ ದಂಡಿಗೆಯುದ ಬೀಜವರಿ ೪ ೭ ದ ವ್ರಿತ್ತಿ ೧ (ಸೌಇಇ. IX–ii, ೪೩೬-೨೦; 1412) ; ಗ್ರಾಮದ ಸರ್ವೆನಂಬರು ಒಂದು ಒಬ್ಬನ ಹೆಸರಿಗೆ ಪಟ್ಟಿಯಿರುತ್ತಾ ದಾಖಲೆಯಿಲ್ಲದೆ ಒಳಅನುಭವದಾರರು ಅನೇಕಮಂದಿಯಿರುತ್ತಾರೆ (ಭೂಮಿಅ. ೩೬). **೧೧.** ಕ್ರಯ, ದಾನ, ಗುತ್ತಿಗೆ ಮೊದಲಾದ ವಿವರಗಳನ್ನುಳ್ಳ ದಾಖಲುಪತ್ರ ; ಪರವಾನಗಿ ಪತ್ರ : ನಂಮ್ಮ ಹೆಸರಲ್ಲೂ ನೀವು ಮಾಡಿದ ಸೋಮಶೇಖರಪುರದ ಅಗ್ರಾಹಾರದ ಬ್ರಾಂಹ್ಮರಿಗೆ ನೀವು ಬರಸಿ ಕೊಟ್ಟ ಪಟ್ಟಿ ಪ್ರಮಾಣ (ಎಕ. VII, ಶಿಮೊ. ಆ೧-೩೦ ; 1668) ; ನಮ್ಮ ಸಂತಾನ ನಿಮ್ಮ ಮಕ್ಕಳು ಮುಂತಾಗಿ ಪಾರಂಪರೆಯಾಗಿ ಸುಖದಿಂದ ಬಾಳ್ದು ಬಹರಿಯೆಂದು ಬರಸಿಕೊಟ್ಟ ಕ್ರಯಧಾರೆ ಪಟ್ಟಿ (ಎಕ. VI, ಮೂಡಗೆ. ಆ೩-೧೩ ; 1733) ; ಗುತ್ತಿಗೆ ನೇಮಕಾ ಮಾಡಿ ಪಟ್ಟಿ ಬರದು ಕೊಟ್ಟುಯಿದ್ದದ್ದರಿಮ್ದಾ ಯಿಾ ಬ್ರಾಂಹ್ಮಣನು . . . ವರುಷಂಪ್ರತಿಯಲೂ ಪಟ್ಟಿ ಮೇರೆಗೆ ಸರಕಾರಕ್ಕೆ ಸಲತಕ್ಕ ಹಣವಂನ್ನು ಸಮ್ದಾಯಾಮಾಡಿ ಕೊಡುತ್ತಾ ಬಂದು (ಮೈಆರಿ. ೧೯೨೯,೯೪-೧೫;1813). 'ದಾನಪಟ್ಟಿ', 'ನೆತ್ತರ್ಪಟ್ಟಿ' ಪರಾ. **೧೨.** ಚಪ್ಪಟೆಯಾದ ಸಮತಲ. **೧೩.** ಕರ ; ಸುಂಕ ; ತೆರಿಗೆ ; ಕಂದಾಯ : ನನ್ನ ಜಮೀನಿನ ಈ ಸಾಲಿನ ಪಟ್ಟಿಯನ್ನು ನಾನಿನ್ನೂ ಸರಕಾರಕ್ಕೆ ಕಟ್ಟಿಲ್ಲ (ರೂಢಿ). 'ಪಟ್ಟಿಗಾಣಿಕೆ' ಪರಾ. **೧೪.** ತಾಳೆ, ಅಡಕೆ ಮುಂತಾದ ಮರಗಳ ತೊಲೆ,—ದೂಲ : (ಶಿ). **೧೫.** ತಲೆಯಲ್ಲಿ ಪಟ್ಟಿಯಂತೆ ಕೂದಲನ್ನು ತೆಗೆದ ಜಾಗ,—ಸ್ಥಳ : (ಶಿ).

**ಪಟ್ಟಿಪಟ್ಟಾವಳಿ**=ರೇಷ್ಮೆಯ ಬಟ್ಟೆ,—ವಸ್ತ್ರ : ಸುರಂಗಿನ ಪಟ್ಟಿ [ಪಾಠಾಂ. ಟ್ಟೆ] ಪಟ್ಟಾವಳಿಯ ದಿಂಡುಗಳ . . . ಚಿತ್ರಾವಳಿಯ ಸತ್ತಿಗೆ ಹೇಮಘಟಸಂತತಿಯನೊಟ್ಟಿದರು (ಕುಪ್ಪಾಸ. ೫-೪೭); ಪಟ್ಟಿಪಟ್ಟಾವಳಿ ಬೇಡಲಿಲ್ಲ ನಾನು ಎನ್ನ ಗುಟ್ಟು ಅಭಿಮಾನಗಳ ಕಾಯೊ ನೀನು (ಪುರಂದ. ೧-೩೬-೨). **ಪಟ್ಟಿಪಾವುಡೆಯ ಊಳಿಗ**=ಅರಮನೆಯಲ್ಲಿ ರೇಷ್ಮೆ ಮುಂತಾದ ಬಟ್ಟೆಗಳನ್ನು ಸಿದ್ಧಮಾಡಿ ಒದಗಿಸಿ ಕೊಡುವ ಕೆಲಸ: ಅರಮನೆಯಲ್ಲಿ ಪ್ರತಿದಿನದಲ್ಲಿಯೂ ನಡೆಯುವಂತೆ ಕಟ್ಟುಮಾಡಿದ ಊಳಿಗಗಳ ವಿವರ . . . ಕುಂಚದ ಊಳಿಗ ಕೈಯಾಲುವಟ್ಟಿಗೆಯ ಊಳಿಗ ಪಟ್ಟೀಪಾವುಡೆಯ ಊಳಿಗ ವಿವರ (ಚಾಮಸಂ. ೪೫). **ಪಟ್ಟಿಯ ದಟ್ಟಿ**=ರೇಷ್ಮೆಯ ವಸ್ತ್ರ,—ಧೋತ್ರ : ಮಲಯಜದಣ್ಪು ಪೊಂದೊಡಿಗೆ ಪಟ್ಟಿಯ ದಟ್ಟಿ ಪಳಿಯ ಚಲ್ಲಣ . . . ಮೆಱೆಯೆ ಬಂದರಳವುಳ್ಳ ಮೈಗಾವಲವರು (ಕುಂರಾಸಾಂ. ೧೧-೩೭). **ಪಟ್ಟಿಯ ದಾರ**=ಭೂಮಿಯ ಒಡೆತನದ ದಾಖಲುಪತ್ರವುಳ್ಳವನು ; ಜಮೀನಿನ ಒಡೆಯ,—ಅಧಿಕಾರಿ : ವೆಂಕಟಪ್ಪನಾಯಕಂ ... ಸೀಮೆಗಳಂ ಸಾಧಿಸಿ ತತ್ತತ್ಪಟ್ಟಿಯದಾರರ್ಕಳಿಂ ಪಣಮಣಿಹಂಗೊಂಡು . . . ಸ್ಥಳಗಳಲ್ಲಿ ಪರಿಶೋಭಿಪ ಪರಿಸ್ತರಣಂಗಳಂ ರಚನೆಗೈಸಿದನು (ಕೆಳನೃ. ೫-೩೯). **ಪಟ್ಟಿಯ ಶಿಪಾಯಿ**=ನೌಕರಿಯ ಲಾಂಛನವಾಗಿ ಹೆಗಲಿನಿಂದ ಸೊಂಟದವರೆಗೆ ಅಡ್ಡ ಪಟ್ಟಿಯನ್ನು ಧರಿಸಿದ ಸಿಪಾಯಿ ; ಡವಾಲಿ : ಒಬ್ಬ ಪಟ್ಟಿಯ ಶಿಪಾಯಿಯು ಬಂದು, ಗುರುಗಳೆಲ್ಲಿ ಎಂದು ಕೇಳಿದನು (ಜಯಂತ. ೨೩). **ಪಟ್ಟಿಯ ಹುಲಿ**=ಮೈಮೇಲೆ ಪಟ್ಟೆಗಳನ್ನುಳ್ಳ ಒಂದು ಜಾತಿಯ ಹುಲಿ,—ವ್ಯಾಘ್ರ : ದೊಡ್ಡ ಪಟ್ಟಿಯ ಹುಲಿಗಳೇ ಹೆಚ್ಚಿಗಿರುವವು (ಬೆಟ್ಟಜೀ. ೧೯೩).

[ಸಂ. ಪಟ್ಟ. / ತಮಿ. ಪಟ್ಟಿ$_6$ ; ಮಲ. ಪಟ್ಟ ; ತುಳು. ಪಟ್ಟಿ, ಪಟ ; ತೆಲು. ಪಟ್ಟಿ, ಪಟ್ಟ ; ಕೊಡ, ಕೋಲಾ. ಪಟ್ಟಿ ; ನಾಯ್ಕಿ. ಕುಇ. ಪಟ ; ಪರ್ಜಿ. ಪೆಟ್ಟ ; ಕುರುಖ್. ಪಟ್ಟಾ]

**ಪಟ್ಟಿಕಂಬಳಿ** (ನಾ). ಉದ್ದಗೆರೆಗಳುಳ್ಳ ಕಂಬಳಿ : (ಶಿ).

[ಪಟ್ಟಿ$_3$ + ಕಂಬಳಿ]

**ಪಟ್ಟಿಕುಪ್ಪುಸ** (ನಾ). ರೇಷ್ಮೆಯ ರವಿಕೆ : ಪಟ್ಟಶಾಲಿಯನುಟ್ಟು ಪಟ್ಟಿಕುಪ್ಪುಸ ತೊಟ್ಟು ಬಟ್ಟಮುತ್ತಿನ ತಿಲಕಿಟ್ಟು ಮದುವಳಿಗೆದಿಟ್ಟೀರಾರೂತಿ ಬೆಳಗಿರೆ (ಲೋಕಗೀ. ೧೩). [ಪಟ್ಟಿ$_3$ + ಕುಪ್ಪುಸ (<ಕುಪ್ಪಸ)]

**ಪಟ್ಟಿ ಕೌಳುಡೆ** (ನಾ). ರೇಷ್ಮೆಯ ಮೆತ್ತೆ,—ದಿಂಬು : ಆ ಐಸಿರಿಯಾ ಪಟ್ಟಿಮಂಚದಾ ಅಂಚೆದುಪ್ಪುಟಿ ನಲ್ವಾಸಿನಾ ಪಟ್ಟಿಕೌಳುಡೆಯಾ ಪುಷ್ಪದಾ ಗಂಧದಾ ಸಿರಿಯ ಸುಖಾನುಭವಮನಿನ್ನೆಂತು ಮಱೆತಿರ್ಪೆನೋ ? (ರಾಮಾಶ್ವ. ೩೯-೨೬). [ಪಟ್ಟಿ$_3$ + ಕೌಳುಡೆ (<ಕವುಳುಡೆ)]

**ಪಟ್ಟಿ ಗಂಡೆಯ** (ನಾ). ಒಂದು ಬಗೆಯ ಕತ್ತಿ : ಅಸುರವ್ರಾತವನೆಲ್ಲ ಪಟ್ಟಿಗಂಡೆಯದೊಳುಂ ತಱಿಯಲೋಡಿದರ್ (ಪ್ರಭುಪು. ೫-೭೯).

[ಪಟ್ಟಿ$_2$(<ಪಟ್ಟಿಯ$_1$)+ಕಂಡೆಯ$_1$(<ಖಂಡೆಯ$_2$)]

**ಪಟ್ಟಿ ಗಾಣಿಕೆ** (ನಾ). ಒಂದು ಬಗೆಯ ತೆರಿಗೆ : ಈಚಲುಕಂದಾಯ ಬಾಲದೆರಿಗೆ ಹೊರಾದಾಯ ಚರಾದಾಯ ಜೋಡಿ ಬೇಡಿಗೆ ಹುಲ್ಲ ಹಣ ಬ್ರಾಹ್ಮಣನಿವೇಶನ ಶೂದ್ರನಿವೇಶನ ಹತ್ತಿ ಪೊಂಮು ಮಾರ್ಗಸುಂಕ ದೇವರಾಯವಟ್ಟ ಪಟ್ಟಿಗಾಣಿಕೆ ಮುದ್ರೆಗಾಣಿಕೆ (ಎಕ. III, ತಿರುಮ. ೬೩-೧೩೬೯ ; 1748) ; ಮಾರ್ಗಸುಂಕ ದೇವರಾಯವಟ್ಟ ಪಟ್ಟಿಗಾಣಿಕೆ ಚಿಲುವಾನ ಪೈರು ಮುಂತಾದ ಆ ಸಕಲಸ್ವಾಮ್ಯವು (ಬೆಟ್ಟಅ. ಪರಿ. ೨೪೦).

[ಪಟ್ಟಿ$_3$ + ಕಾಣಿಕೆ(<ಕಾಣ್ಕೆ)]

**ಪಟ್ಟಿಗಾರ** 'ಪಟ್ಟಿಗಾಱ' ನೋ.

**ಪಟ್ಟಿಗಾಱ**, ಪಟ್ಟಿಗಾರ (ನಾ). ರೇಷ್ಮೆವಸ್ತ್ರವನ್ನು ನೇಯುವವನು; ರೇಷ್ಮೆ ನೇಕಾರ : ಶ್ರೇಣಿ=ಸಾಲಿಗ ಪಟ್ಟಿಗಾಱಂ ಮೊದಲಾಗೊಡೆಯ ಸಮುಯಿಗಳುಂ (ಸೀಶಿಪಾ. ೨೧-೧೩) ; ಅಸುರದೊಳಿಂದ್ರಜಾಲದ ಕೂಸುಗಳಂ ಕಂಸನೊಗೆದನಱಿಯೊಳ್ನೆತ್ತರ್ಸೂಸೆ ದೆಸೆದೆಸೆಗೆ ಕೆಂಪಿನ ಪಾಸಂ ಪಿಡಿದೊಗೆವ ಪಟ್ಟಿಗಾ[ಪಾಠಾಂ. ಟ್ಟುಕಾ]ಱನ ತೆಱದಿಂ (ಅರ್ಥನೇ. ೭-೩೧). **ಪಟ್ಟಿಗಾರ :** ಅಟಕರಿ, ಬಣ್ಣಗಾರ, ಬಿಳಿಮಗ್ಗ, ದೇವಾಂಗ, ಜಾಡ, ನಗಲಿಕ, ಪಟ್ಟಿಗಾರ, ಸಾಲೆ, ಸೇಣಿಯ (ತುಳುನಾ. ೧೭೩).

[ಪಟ್ಟಿ$_3$ + -ಕಾಱ]

**ಪಟ್ಟೆಜಲ್ಲಿ**, ಪಟ್ಟೆರಝಲ್ಲಿ (ನಾ). ರೇಷ್ಮೆಯ ಕುಚ್ಚು,—ಗೊಂಡೆ : ಮುತ್ತಿನ ಪವಳದ ಲಂಬಣಗಳ ಬಲುಮೊತ್ತದಿಂ ಪಟ್ಟೆಜ[ಪಾಠಾಂ. ಝು]ಲ್ಲಿಗಳ ಸುತ್ತ ಕಟ್ಟಿದ ಕುಚ್ಚುಗಳ ಮೋಹರದಿಂದಿತ್ತುದು ಕಣ್ಗೆ ಕೌತುಕವ (ರಾಮವಿ. ೭-೨೫). **ಪಟ್ಟೆರ್ಝುಲ್ಲಿ :** ಹಲವು ದೀಪ್ತಿಯ ಪಟ್ಟೆರ್ಝುಲ್ಲಿ ನಾನಾವರ್ಣದಳಿದ ಚಿತ್ರಾಂಬರನಿಚಯ ಸುಲಲಿತದೇವಾಂಗವಸ್ತ್ರದೊಟ್ಟಿಲ ಸಾಲುಮಳಿಗೆಗಳಿರ್ದುವಿಕ್ಕೆಲದಿ (ಮೋಹತ. ៩-೨೮). [ಪಟ್ಟೆ$_3$ + ಜಲ್ಲಿ$_2$]

**ಪಟ್ಟೆರ್ಝುಲ್ಲಿ** 'ಪಟ್ಟೆಜಲ್ಲಿ' ನೋ.

**ಪಟ್ಟೆದಟ್ಟಿ** (ನಾ). ರೇಷ್ಮೆಯ ವಸ್ತ್ರ,—ಧೋತ್ರ : ತೊಟ್ಟು ಚಿನ್ನದ ಕಂಬಿ ಪಟ್ಟೆದಟ್ಟಿಯನು ಜಗಜಟ್ಟಿಗಳ ತೆರದಿಂದೆ ಮಲ್ಲಗಾಸೆಯು ಬಿಗಿದು . . . ಉಗ್ಗಡಿಪ ಭಟರು (ನವಮೋ. ೨೩-೫೫). [ಪಟ್ಟೆ$_3$ + ದಟ್ಟಿ$_1$]

**ಪಟ್ಟೆದಾರ** (ನಾ). ೧. ಜಮೀನಿನ ಒಡೆತನದ ಬಗ್ಗೆ ಸರಕಾರದ ದಾಖಲುಪತ್ರವನ್ನು ಉಳ್ಳವನು ; ಭೂಮಿಯ ಒಡೆಯ : ಅವರ ಮನೆತನಕ್ಕೆ ಪಟ್ಟೆದಾರರು–ಎಂಬ ಬಿರುದು ಬಹು ಹಿಂದಿನಿಂದಲೂ ಬಂದಿದೆ (ಗೊಂಡಾರ. ೧೮) ; ನಿಮಾನಿಮಿ ಕಂದಾಯವನ್ನು ಪಟ್ಟೆದಾರನಿಗೆ ಇತರ ಕುಳಗಳು ಕೊಡುವುದೆಂದು ಗೊತ್ತುಮಾಡಿಕೊಡುವುದಕ್ಕೆ ಅನುಕೂಲವಾಗಿರುವುದು (ಭೂಮಿಆ. ៩೭). ೨. ಗೇಣಿದಾರ ; ಗುತ್ತಿಗೆದಾರ : ಜಮೀನ್ ಹಿಡುವಳಿದಾರರಿಂದಲೂ ಪಟ್ಟೆದಾರರುಗಳಿಂದಲೂ . . . ಹಣವನ್ನು ತೆಗೆದುಕೊಳ್ಳಬಹುದು (ಗ್ರಾಮಾಕ. ៦೮). [ಪಟ್ಟೆ$_3$ + –ದಾರ$_4$]

**ಪಟ್ಟೆಪೀತಾಂಬರ** (ನಾ). ರೇಷ್ಮೆಯ ವಸ್ತ್ರ : ಪಟ್ಟೆಪೀತಾಂಬರವ ಸೊಬಗಿಂದುಟ್ಟು ಬೆರಳಿಗೆ ರತುನಮುದ್ರೆಯನಿಟ್ಟು . . . ಖಳ ಜಗಜಟ್ಟಿ ಧನಧಾನ್ಯಾದಿ ವಸ್ತುವ ತುಷ್ಟಿಬಡುವಂದದಲಿ ವಿಪ್ರರಿಗಿತ್ತು ಮನ್ನಿಸಿದ (ಕೌಶಿರಾ. ೩೭-೩) ; ದೊಡ್ಡದೊಡ್ಡ ಹರಿವಾಣಗಳಲ್ಲಿ ಪಟ್ಟೆಪೀತಾಂಬರ ಮುತ್ತುರತ್ನ . . . ಕಾಣಿಕೆಯಾಗಿ ಕೊಡಲು ಹೊತ್ತು ತರುತ್ತಿದ್ದರು (ಹೇಮಕೂ. ೧೪). [ಪಟ್ಟೆ$_3$ + ಪೀತಾಂಬರ]

**ಪಟ್ಟೆಪ್ರತಿ** (ನಾ). ಜಮೀನಿನ ವಿವರ, ಒಡೆತನಗಳ ಬಗ್ಗೆ ಇರುವ ಸರ್ಕಾರಿ ದಾಖಲುಪತ್ರದ ಕರಡು,— ನಕಲು : ಶ್ರೀವೀರವೆಂಕಟಪತಿದೇವಮಹಾರಾಯರೈಯ್ಯನವರು ಹರತೀ ವೀರಹೊಟ್ಟಿಣ್ಣನಾಯಕರಿಗೆ ಪಾಲಿಸಿದಂಥಾ ರಾಯಸದ ನಿರೂಪದ ಪಟ್ಟೇಪ್ರತಿ (ಎಕ. XII, ಪಾವುಗ. ೪೬-೪೮ ; 1670). [ಪಟ್ಟೆ$_3$ + ಪ್ರತಿ]

**ಪಟ್ಟೆಬಟ್ಟೆ** (ನಾ). ರೇಷ್ಮೆಯ ಬಟ್ಟೆ,—ವಸ್ತ್ರ : ಹೆಂಗುಸರು ತಲೆ ಬಾಚುವ ಸಾಹಸವನ್ನು ಮುಗಿಸಿ . . . ಪಟ್ಟೆಬಟ್ಟೆಯನ್ನುಟ್ಟರು (ಕಾಲೂರ. ೧೩ ಕಥಾಸಾರ). [ಪಟ್ಟೆ$_3$ + ಬಟ್ಟೆ$_2$]

**ಪಟ್ಟೆಮಂಚ** (ನಾ). ರೇಷ್ಮೆಯಿಂದ ಅಲಂಕೃತವಾದ ಮಂಚ : ಕು'ಕ್ಕು'(ಕ್ರ್ಯ)ರಂಗೆ ಪಟ್ಟೆಮಂಚ ಸುಪ್ಪತ್ತಿಗೆ ಅಮೃತಾನ್ನವನಿಕ್ಕಿ ಸಲಹಿದಡೂ ಹಡುವಿಂಗೆ ಚಿತ್ತವನಿಕ್ಕುವುದೇ ದಿಟ (ಸರ್ವವ. ೩೫-೧೭೫); ಗುರುಭಕ್ತಯ್ಯನಾ ಗುರುಗಳಿಗೆ ನಮಿಸುತ ಪಟ್ಟೆಮಂಚದ ಮೇಲೆ ಕುಳ್ಳಿರಲು (ಬಸವು. ೩೯-೪೨) ; ಪಟ್ಟೆಮಂಚ ತಿರುವಿಟ್ಟರೆ ಫಣಿಯೊಳು ಮೆಟ್ಟದ ಭ್ರಮಣೆಯು ಬಿಟ್ಟೀತೆ (ಪುರಂದ. ೧-೧೫೭-೨) ; ಆ ಏಸಿರಿಯಾ ಪಟ್ಟೆಮಂಚದಾ ಅಂಚಿದುಪ್ಪುಟ ನಲ್ಪಾಸಿನಾ . . . ಸುಖಾನುಭವಮನಿನ್ನೆಂತು ಮಱಿತಿರ್ಪೆನೋ ? (ರಾಮಾಶ್ವ. ೩೯-೨೭). [ಪಟ್ಟೆ$_3$ + ಮಂಚ]

**ಪಟ್ಟೆಮಡಿ** (ನಾ). ಪವಿತ್ರ ಕಾರ್ಯಾಚರಣೆಯ ಸಂದರ್ಭಗಳಲ್ಲಿ ಉಡುವ ರೇಷ್ಮೆಯ ಬಟ್ಟೆ,—ವಸ್ತ್ರ ; ಮಗುಟ : ಗಂಧವನ್ನು ಪೂಸಿಕೊಳ್ಳುತ್ತಿದ್ದ ಮೈತುಂಬ ಈಗ ಧೂಳು; ಬಹುಬೆಲೆಯುಳ್ಳ ಪಟ್ಟೆಮಡಿಗೆ ಬದಲು, ಈಗ ನಾರುಬಟ್ಟೆ (ವಚಭಾ. ೧೧೭) ; ಉಟ್ಟ ಪಟ್ಟೆಮಡಿಯಲ್ಲೇ ಪ್ರಾಣೇಶಾಚಾರ್ಯರು ಓಡುತ್ತ ಗರುಡಾಚಾರ್ಯನ ಮನೆಗೆ ಹೋಗಿ (ಸಂಸ್ಕಾರ. ೫). [ಪಟ್ಟೆ$_3$ + ಮಡಿ$_4$]

**ಪಟ್ಟೆಯ$_1$**, ಪಟ್ಟ$_2$, ಪಟ್ಟಾ$_1$, ಪಟ್ಟುಹ, ಪಟ್ಟೆ$_2$, ಪಟ್ಟೆಹ (ನಾ). ಖಡ್ಗದಂತಹ ಒಂದು ಬಗೆಯ ಆಯುಧ : ಉಟ್ಟ ಚಲ್ಲಣ ಕೈಯ ಪಟ್ಟೆಯ[ಪಾಠಾಂ. ಹ]ವಿಡಿದು ಗರುಡಿಯ ಕಟ್ಟ ಶ್ರವವ ಮಾಡುವಂತೆ ತನ್ನ ತಪ್ಪಿಸಿಕೊಂಡರೆ ಶಿವ ಮೆಚ್ಚುವನೆ (ಬಸವ. ៦೬೮) ; ಖಂಡೆಯ ಕೋದಂಡ ಪರಶು ಪಟ್ಟೆಯ ಪ್ರಮುಖ ಬತ್ತೀಸಾಯುಧಭಯಂಕರರ್ ಪರಿತಂದು (ಮಹಾನೀ. ೧೨-೩೩ ವ) ; ಉಕ್ಕಿನುರುಳಿಯೊಳಿಡುವ ಖಂಡೆಯ ದಿಕ್ಕಡಿಯ ಘಾಯಗಳ ಪಟ್ಟೆಯದಕ್ಕಜದ ಹೊಯಿಲೆಸೆಯೆ ಕಾದಿದವಾನೆ ಯಾನೆಯೊಳು (ಕುಮಾಭೀ. ೪-೭೫) ; ತೊಟ್ಟಿಲಯ್ಯನ ಪಟ್ಟೆಯದ ಕಡು ಗಾವಲಲ್ಲಿ – ಹಿಂಗಟ್ಟು ಮುಂಗಟ್ಟುಗಳಿಂದ ಕಟ್ಟುವಡೆದ ಮೂವರು ಬೆನ್ನೇಲಾಗಿ ಬಿದ್ದಿರುವರು (ಮಂತ್ರಶ. ೧೯೯-೨). **ಪಟ್ಟ$_2$** : ಆಗ ದೊರೆಗಳು ತಮ್ಮ ಸಾಧಕದ ಚಾತುರ್ಯದಿಂದ ಪಟ್ಟವನ್ನು ತಿರುಹಿ, ತಲೆಗಳನ್ನು ಹೊಡೆದು . . . ನಿರ್ಜೀವವಾಗುವಂತೆ ಕೆಡಹಿದರು (ಒಡೆಕ. ៩೦). **ಪಟ್ಟಾ$_1$**: 'ಪಟ್ಟಾಕತ್ತಿ' ಪರಾ. **ಪಟ್ಟುಹ:** ತುರಗಕುಲಮಂ ಬೆನ್ನೆವಾಯ್ದು ಸಿಡಿಲ ಸೆಕ್ಕೆಗಳಂತಿಟ್ಟಣಿಸಿದ ಪಟ್ಟುಹಂಗಳಂ ಪೆಗಲೊಳಿಟ್ಟು ಬಜಿಸಿಡಿಲ ಬಳಗಂ ಪೊಱಮಡುವಂತೆ . . . ನಡೆತಂದು (ಜೊಮ್ಮರ. ೧೭೫-೨೦). **ಪಟ್ಟೆ$_2$ :** ಹಿಟ್ಟುದೋಱಿತು ತೇರು ಬಳಿಕವಸಟ್ಟನಿಟ್ಟಿ ಮುಸುಂಡಿ ಮುದ್ಗರ ಪಟ್ಟೆ ಪರಿಘ ಪರಶ್ವಧಾದಿ ಮಹಾಯುಧಂಗಳಲಿ (ತೊರರಾ. ೭-೫-೨೬) ; ಕಕ್ಕಡ ಕಡಿತಲೆ ಪಟ್ಟೆ ವಂಕುಡಿವಿಡಿದೊಕ್ಕಯ್ಯ ಪಲಗೆ ಪೆರ್ಬಾಡಿಗೆ ಎಕ್ಕಟಿಗರ ಮೇಲೆ ಚಿಮ್ಮುವ ಚಮರವ ಲೆಕ್ಕವ ಮಾಡುವರಾರು (ಮೋಹತ. ៩೦-೧೫) ; ಗದೆ ಸಬಳ ಪಟ್ಟಿಸ ಪಟ್ಟೆ ಖಡ್ಗ ಕರವಾಳ . . . ಚಕ್ರ ಬಾಣಾದಿ ರಾಜಿಸುವ ಬತ್ತೀಸಾಯುಧಂಗಳಿಂದಿಱಿದು (ಚಿಜವು. ೫೬-៩೩). **ಪಟ್ಟೆಹ :** ಪಟ್ಟೆಹವನೊಳವೊಗಿಸುತಂ ಕೊರಳ್ಗಳೊಳಲ್ಲಿ ಅಮ್ಮಮ್ಮ ಕ್ರೂರದಿಂ ಕೊಯ್ದು ಬಿಸುಡುತ್ತಲ್ಲಿ (ಜೊಮ್ಮರ. ೧೭೬-೧೮) ; ಶರ ಮುಸಲ ಜಡಿವ ಪತ್ರದ ಪಟ್ಟೆಹ[ಪಾಠಾಂ. ಟ್ಟಸ]ದ ವೀರಭಟಕೋಟಿ ನಡದು ಧಾಳಿಡಲು (ಲಿಂಚಿಂ. ៩೬-೨೦) ; ಕತ್ತಿ ಚೂರಿ ಬಾಕು . . . ಪಟ್ಟೆಹಂಗಳಂ ವಲಂ ಮೊತ್ತದಿಂದೆ ತಾಳ್ದು ಮುದ್ಗರಾದಿ ಶಸ್ತ್ರವೃಂದಮಂ ಚಿತ್ತಜಾರಿಸೇನೆಯೆಯ್ದಿದ್ದು (ಹಾಲಾಸ್ಯ. ೨-೧೪-೩೩).

[ದೇ.॥ ತಮಿ. ಪಟ್ಟಯ ; ತೆಲು. ಪಟ್ಟೆಯು, ಪಟ್ಟೆಯ]

**ಪಟ್ಟೆಯ$_2$**, ಪಟೆಯ, ಪಟ್ಟಾ$_2$, ಪಟ್ಟಿಯ (ನಾ). ಕ್ರಯ, ದಾನ, ಗುತ್ತಿಗೆ ಮೊದಲಾದ ವಿವರಗಳನ್ನುಳ್ಳ ದಾಖಲುಪತ್ರ ; ಪರವಾನಗಿಪತ್ರ : ಆ ದೇವರ ಪಟ್ಟೆಯಕ್ಕೆ ಕೂಂಡಿಮೂಸಾಸಿರದೊಳಗೇನೇನು ಹೇಱಿದಡಂ ಗ್ರಾಸ ಕಾಣಿಕೆಯೆನ್ನದೆ ಸರ್ವನಮಸ್ಯವಾಗಿ ನಡೆವಂತು ಕೊಟ್ಟ ಶಾಸನ (ಮುಂಬರಾ. X, ೨೪೯-೭೭ ; 1219). **ಪಟೆಯ :** ಬರಗೆದೇವನಾಯಕವೊಡೆಯರು . . . ಚಿಕಸೋಮಂಣನಾಯಕರಿಗೆ ಕೊಟಪಡೆಬೆನಕನವೊರೆ ಗ್ರಾಮುಮುದೆ ತುಸಬುಕಚಿಕ್ಕೆರೆಯು ಸ್ತಳ ಸಹವಾಗಿ ಕೊಟ ಪಟೆಯ (ಇಆ. IX, ೯೯-೫ ; ?). **ಪಟ್ಟಾ$_2$ :** 'ಪಟ್ಟಾದಾರ್'ಪರಾ. **ಪಟ್ಟಿಯ:** ನಾಲ್ಕುದಿಕ್ಕಿನ ಐವತ್ತಾರುದೇಶದ ಯೆಂಟು ಬಗೆ ಪಲರು ಪಟ್ಟಕಾರರು ಕೂಡಿ ಧರ್ಮಶಾಸನದ ಪಟ್ಟಿಯವ ಬರೆಸಿ ಕೊಟ್ಟ ಕ್ರಮವೆಂತೆಂದರೆ (ಮೈಆರಿ. ೧೯೩೫, ೨೮-೧೫ ;1751).

**ಪಟ್ಟೆಯ ನಾಯಕತನ**=ಒಂದು ಅಧಿಕಾರ (?) : ಸನಕರಾಜವಡೆಯವರು ಮಕ್ಕಳು ತಿರುಮಲೆರಾಜವಡೆಯರಿಗೆ ಪಟ್ಟೆಯ ನಾಯಕತನಕ್ಕೆ ಪಾಲಿಸಿದ ವಸುಧಾರೆಯ ಸೀಮೆಯನು (ಎಕ. VI, ಚಿಕ್ಕಮ. ៩೦-೧೦ ; 1539). [<ಪಟ್ಟೆ$_3$]

**ಪಟ್ಟೆಯುಡು** (ಕ್ರಿ). ರೇಷ್ಮೆಯ ವಸ್ತ್ರವನ್ನು ತೊಡು,—ಧರಿಸು : ಪಟಂಗ ಪಟ್ಟೆಯುಟ್ಟುಕೊಂಡರೆ ಪಟ್ಟಕ್ಕೆ ಸಂದಾನೇ ? (ಗಾದೆ).

[ಪಟ್ಟೆ$_3$ + ಉಡು$_1$]

**ಪಟ್ಟೆವಣೆ** (ನಾ). ಸಿಂಹಾಸನ ; ಗದ್ದುಗೆ ; ರಾಜಪೀಠ : "ಬಿತ್ತರಿಗೆ ಪಟ್ಟೆವಣೆಯೆಂದುತ್ತಮುವಹ ಸಿಂಹವಿಷ್ಟರಂ" (ಕವಿಕಂ. ೧೪೯).
[<ಪಟ್ಟವಣೆ]

**ಪಟ್ಟೆವಸನ** (ನಾ). ರೇಷ್ಮೆಯ ವಸ್ತ್ರ : ನವರತ್ನಭೂಷಣದಾಟದಬಲೆ ಲತಾಂಗಿ ಮೆಱೆದಳು ಪಟ್ಟೆವಸನದಲಿ(ಸಿಭಾಗ.೧೧-೧-೨೯). [ಪಟ್ಟೆ$_3$+ವಸನ]

**ಪಟ್ಟೆವಸ್ತ್ರ** (ನಾ). =ಪಟ್ಟೆವಸನ : ಪಟ್ಟೆವಸ್ತ್ರಗಳನ್ನು ಕಾಣಿಕೆಯಾಗಿ ತಂದ ಶೈಲೇಯನೆಂಬ ಅರಸು . . . ಧರ್ಮರಾಯನ ಸಮುಖವನ್ನು ಸೇರಿದನು (ಕೃಪಾಸ. ೧೧೮) ; ನಂಜಮ್ಮ . . . ಉತ್ತಮವಾದ ಪಟ್ಟೆವಸ್ತ್ರಗಳನ್ನು ಹೆಕ್ಕಿ ತೆಗೆದಳು (ಹಾಹುತ್ತ. ೪೦). [ಪಟ್ಟೆ$_3$+ವಸ್ತ್ರ]

**ಪಟ್ಟೆವಾಲಾ** (ನಾ). ನೌಕರಿಯ ಲಾಂಛನವಾಗಿ ಬಣ್ಣದ ಬಟ್ಟೆಯ ಅಡ್ಡಪಟ್ಟೆಯನ್ನು ಹೆಗಲಿನಿಂದ ಸೊಂಟದವರೆಗೆ ಧರಿಸಿರುವ ನೌಕರ ; ಡವಾಲಿ ; ಚಪ್ರಾಸಿ : ಆ ದೇಶದಲ್ಲಿಯ ಬ್ಯಾಂಕುಗಳಲ್ಲಿ ಕಾಗದಗಳನ್ನು ಅತ್ತಿಂದಿತ್ತ ಒಯ್ಯುವ 'ಪಟ್ಟೇವಾಲಾ' ಜನರಿರುವುದಿಲ್ಲ . . . ನಮ್ಮ ಬ್ಯಾಂಕುಗಳಲ್ಲಿ ಮಾತ್ರ 'ಪಟ್ಟೇವಾಲಾ' ಜನರ ಹಾವಳಿ ಬಹಳ (ಬ್ಯಾಂಕಕ್ಕೆ. ೬೩) ; ಕಾಶೀಮ, ತಾನಿದ್ದ ಊರ ಮಾಮಲೇದಾರರ ಕಚೇರಿಯಲ್ಲಿ ಪಟ್ಟೇವಾಲಾ ಆಗಿ ಎಷ್ಟು ವರುಷಗಳಾದು ವೆಂಬುದನ್ನು ಹೇಗೋ ಲೆಕ್ಕ ಹಾಕಿ ಹೇಳುವುದರಲ್ಲಿಯೇ . . . ಕಾಶೀಮ ನಿವೃತ್ತವಾಗಲು ಬಂದಿದ್ದಾನೆಂದು ತಿಳಿದುಕೊಳ್ಳಬಹುದು! (ಜೀವರಂ.೧).
[←ಹಿಂ. ಮರಾ. ಪಟ್ಟೇವಾಲಾ]

**ಪಟ್ಟೆವುಲಿ,** ಪಟ್ಟೆಹುಲಿ (ನಾ). ಮೈಮೇಲೆ ಉದ್ದುದ್ದ ಗೆರೆಗಳಿರುವ ಹುಲಿ : ಉನ್ಮತ್ತರೋಷದಿಂ ಧಾವಿಸಿದನಾ ರಾಕ್ಷಸಾದ್ಭುತನ್ . . . ಪಟ್ಟೆವುಲಿ ಕೋವಿಯಾಳಂ ಸೀಳಲಬ್ಬರಿಸಿ ಕುಪ್ಪಳಿಸುವಂತೆ ವೋಲ್! (ಶ್ರೀರಾಮಾ. ೬೯೪-೪೩೩). **ಪಟ್ಟೆಹುಲಿ :** ನಮ್ಮ ಊರಲ್ಲಿ ಮೇಯಲು ಬಿಟ್ಟ ದನಕರುಗಳನ್ನು ಚಿಟ್ಟೆಹುಲಿಯೋ ಪಟ್ಟೆಹುಲಿಯೋ ಎತ್ತಿಕೊಂಡು ಹೋದದ್ದುಂಟು (ಮೂಕಜ್ಜಿ. ೫೧).
[ಪಟ್ಟೆ$_3$+ಹುಲಿ(<ಪುಲಿ)]

**ಪಟ್ಟೆವೊಯ್** (ಕ್ರಿ). (ಲೋಹವನ್ನು) ಡಾಬಿನಂತೆ ಮಾಡು : ಪಟ್ಟೆಯಂತೆ ಮಾಡು : ಮೇರುನಗವನೆ ಪಟ್ಟೆವೊಯ್ದಾ ವಾರಿರುಹ ಭವನಾ ಪುರಶ್ರೀ ಚಾರು ತೆರೆ ಸುತ್ತಿಟ್ಟನೆನೆ ಹೊಂಗೋಂಟೆ ರಂಜಿಪುದು (ಸಾಳ್ವಭಾ. ೨-೬). [ಪಟ್ಟೆ$_3$+ಪೊಯ್$_2$]

**ಪಟ್ಟೆಶಾಲು** (ನಾ). ರೇಷ್ಮೆಯ ಶಾಲು,— ಹೊದೆಯುವ ವಸ್ತ್ರ : ನಮ್ಮಜ್ಜಿಗೊಂದು ತಾಮ್ರದ ಚಿಕ್ಕ ಪೆಟ್ಟಿಗೆಯಿತ್ತು. ಅದರಲ್ಲಿ ಸುಬ್ಬಾಜೋಯಿಸರಿಗೆ ಬಹುಮಾನವಾಗಿ ಲಭಿಸಿದ ಪಟ್ಟೆಶಾಲಿನ ಅವಶೇಷಗಳಿದ್ದುವು (ಕುರುಕಾ. ೨೫). [ಪಟ್ಟೆ$_3$+ಶಾಲು]

**ಪಟ್ಟೆಶಾಲೆ** (ನಾ). ರೇಷ್ಮೆಯ ಸೀರೆ : ಪಟ್ಟೆಶಾಲೆಯುನಾಂತು ಗಟ್ಟಿ ಮುರವನುಟ್ಟು ಕಣ್ಣೆ ಮುಟ್ಟಾಳೆ ತಲೆಗಿಟ್ಟು ಬಳೆತೊಟ್ಟು ಹೊಂಗದಿರ ಕಳಕೆ ನಡೆತಂದ (ಜಾನಗೀ. ೨೮). [ಪಟ್ಟೆ$_3$+ಶಾಲೆ$_1$(<ಸೇಲೆ$_1$)]

**ಪಟ್ಟೆಸಾಲೆ** (ನಾ). ಗುಡಾರ ; ಡೇರೆ : ನಾಲ್ವರು ಸಚಿವರಿಂದೀ ಧಾರುಣೀಶರ ಕೇತನವು ವಿಸ್ತಾರದಿಂದಲಿ ಪಟ್ಟೆಸಾಲೆಗಳಾದಿ ಮೆರದಿಹವು (ಬಿಜ್ಜಪು. ೨೨-೨೯). [ಪಟ್ಟೆ$_3$+ಸಾಲೆ$_4$]

**ಪಟ್ಟೆಸೀರೆ** (ನಾ.). =ಪಟ್ಟೆಶಾಲೆ : ಆದರೆ ಹೋದರೆ, ಹತ್ತಿ ಬೆಳೆದರೆ, ಅಜ್ಜೀ, ನಿನಗೊಂದು ಪಟ್ಟೆಸೀರೆ (ಗಾದೆ). [ಪಟ್ಟೆ$_3$+ಸೀರೆ$_2$]

**ಪಟ್ಟೆಹ** 'ಪಟ್ಟೆಯ$_1$' ನೋ.

**ಪಟ್ಟೆಹಾವು** (ನಾ). ಮೈಮೇಲೆ ಪಟ್ಟೆಗಳನ್ನುಳ್ಳ ಒಂದು ಬಗೆಯ ವಿಷಪೂರಿತವಾದ ಹಾವು ; ದಾಸರಿ ಹಾವು : (ಕಿ).
[ಪಟ್ಟೆ$_3$+ಹಾವು(<ಪಾವು$_1$)]

**ಪಟ್ಟೆಹುಲಿ** 'ಪಟ್ಟೆವುಲಿ' ನೋ.

**ಪಟ್ಟೋತ್ಸವ**(ನಾ). ಪಟ್ಟಕಟ್ಟುವ ಸಮಾರಂಭ; ಪಟ್ಟಾಭಿಷೇಕ: ನಿತ್ಯರಾಮಾಯಣದ ರಾಮಂಗೆ ನಿಚ್ಚಮುಂ ನಡೆವ ಪಟ್ಟೋತ್ಸವ ಸ್ತೋತ್ರಮಂ, ಆಲಿಸದೊ ! (ಶ್ರೀರಾಮಾ. ೮೬೫-೨೦೪).
[ಪಟ್ಟೆ$_3$+ಉತ್ಸವ]

**ಪಟ್ಟೋಳಿ** 'ಪಟ್ಟವಟು' ನೋ.

**ಪಟ್ಟಾವಳಿ,** ಪಟಾವಳಿ, ಪಠಾವಳಿ$_1$, ಪಠ್ಠಾವಳಿ(ನಾ).**೧.** ರೇಷ್ಮೆ ; ಕೌಶೇಯ : ಪಟ್ಟಾವಳಿಯ ಗೊಂಡೆಯ ಝುಗಝುಗಿಸಿದುದು ರವಿಯ ರಥದುರುವಣಿಯ ತೇಜಿಯವೊಲು (ಕೊಲ್ಲಾಚ. ೩೨೯) ; ದಿವ್ಯತರದ ಪಟ್ಟಾವಳಿಯ ಮಗುಟಗಳ ಹೇರ್ಗಳನು ತಂದು ದೇಶಂಗಳಿಂದ (ಕೃಷ್ಣವಿ. ೨-೪೬). **ಪಟಾವಳಿ :** **೨.** ರೇಷ್ಮೆವಸ್ತ್ರ ; ಪಟ್ಟೆಮಡಿ ; ಪೀತಾಂಬರ : ದೇವರ ಮೂರ್ತಿಗೆ ಪಟಾವಳಿಯನ್ನು ಉಡಿಸಿದ್ದಾರೆ (ರೂಢಿ). **ಪಠಾವಳಿ$_1$ :** (ಕಿ). **ಪಠ್ಠಾವಳಿ : ೨.** ಮತ್ತಂ ಆಯುನ್ನಾರ್ವರು ಬಿಟ್ಟ ಧರ್ಮಮೆಂತೆನೆ ಆನೆ ಮಾಣಿಕ ಪಳಿ ಪಠ್ಠಾವಳಿ ಅಡಕೆ ಮೆಳಸು×××ಅ ಸ್ಥಳದಲು ವಿಕ್ರಯವಾದೊಡ ಹೊಂಗೆ ಕಾಣಿ|| (ಕಇ. V, ೩೩-೫೩ ; 1176) ; ಜಲಧರಬಣ್ಣದ ವರದೇವಾಂಗದ ಪುಲಿವಟ್ಟೆಯ ಪೊಂಬಟ್ಟೆಯ ಪಠ್ಠಾವಳಿಗಳ . . . ಜವಳಿಯ ತಡಗವ ಬೀಱಿದರು (ಜ್ಞಾನಚಂ. ೬-೭೩). [<ಪಟ್ಟವಟು]

**ಪಠ್ಠಿ** (ನಾ).(?): ವಂದು ಆಱಕೆ ವಂದು ದುಡ್ಡಿಗೆ ಕಾಸು ಅಱು ಮುಂದೆ ನಾಂ ಪೇಳ್ವೆ ಗಣುಕಾ ವಂದು ಏಳಕೆ ವಂದು ಪಠ್ಠಿಗೇಳು ಹುಂಜ ವಂದು ಯೆಂಟಕ್ಕೆ ವಂದು ಹಣವಿಂಗೆಂಟು ಬೇಳೆ ವಂದಱ ವಂಭತ್ತಱಕೆ ವಂದೆ ಪಾವಿಂಗೆ ಗದ್ಯಾಣ (ಭಾಸ್ಕರ. ೭೬-೭). [ ? ]

**ಪಠ್ಠಿಯ** 'ಪಟ್ಟೆಯ$_2$' ನೋ.

**ಪಟ್ಲಾಯಿ** (ನಾ). ಒಬ್ಬ ಕ್ಷುದ್ರದೇವತೆಯ ಹೆಸರು : ಜೊಳ್ಳು ಮತಿಯ ಕೊಡುವ ಜಂಪೆ ಜಡದೈವ ಬಳ್ಳಿ ಉಡಿಗೆ ಉಡುವ ಉಟ್ಟಿಗೆ ಪಟ್ಲಾಯಿ ಉಳ್ಳಿ ಮೆಲುವ ಹೀನ ಮದ್ಯಪಾನದ ಭಾಂಡ ಕೊಳ್ಳಿ ಪಚ್ಚಿಸಿ ಕೊಂಬ ದೀಪದ ಮಾರಾಯಿಾ . . . ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು ಪೊಳ್ಳಲ್ಲದೆ ಗತಿ ಇಲ್ಲವೊ ಎಂದಿಗೂ (ವಿಸಾಸು. ೫೮-೨). 'ಪಟಾಲಮ್ಮ' ಪರಾ. [?+ಆಯಿ$_2$]

**ಪಟ್ವಾರಿ** (ನಾ). ಗ್ರಾಮದ ಒಬ್ಬ ಅಧಿಕಾರಿ ; ಕುಲಕರಣಿ ; ಶ್ಯಾನುಭೋಗ : ಕಂದಾಯದ ಖಾತೆಯಲ್ಲಿ ಹಲವು ಅಧಿಕಾರಿಗಳಿದ್ದರು. (೧) ಕಾರ್ಕೂನ್ . . . (೩) ಪಟ್ವಾರಿ ಅಥವಾ ಮೊಖದ್ದಮ್ : ಇವನೇ ಗ್ರಾಮಾಧಿಕಾರಿ (ಇಸ್ಲಾಂಸಂ. ೭೧).
[←ಹಿಂ. ಪಟವಾರೀ, ಪಟವಾರ್ ; ಮರಾ. ಪಟವಾರೀ]

**ಪಠ** (ನಾ). **೧.** ಚಿತ್ರ ; ತಸವೀರು : ಅಲ್ಲಿರುವ ಪಠ ನೋಡಿದೆಯಾ ಭಾವ ? ಅದು ನನ್ನ ಮುಖದ ಹಾಗೇ ಇಲ್ಲವೇ ? (ಶ್ರೀಕಥೆ. ೧೧೨); ಅವರ ಮನೆಯ ಗೋಡೆಯ ತುಂಬಾ ದೇವರ ಪಠಗಳನ್ನು ಹಾಕಿದ್ದಾರೆ (ರೂಢಿ). **೨.** ಗಾಳಿಪಟ : ಆ ಹುಡುಗ ಪಠವನ್ನು ಆಡಿಸುತ್ತಿದ್ದಾನೆ (ರೂಢಿ). [<ಸಂ. ಪಟ]

**ಪಠಣ,** ಪಠಣೆ (ನಾ). ಓದುವಿಕೆ ; ಪಠಿಸುವಿಕೆ ; ವಾಚನ : ದೇವರು ಕರುಣಿಸಿದ ಸಂದೇಶಗಳನ್ನು ಹಜರತ್ ಮಹಮ್ಮದರು 'ಪಠಣ' ಮಾಡಿದರು. ಈ ಪಠಣವೇ ಇಂದಿನ ಪವಿತ್ರ ಕುರಾನ್ (ಮನೋನಂ. ೨೮೮). **ಪಠಣೆ :** ಪಠಣೆ ಮಾಡುವವರಿಗೆ ಅನುಕೂಲವಾಗಿರಲೆಂದು ಪೂರ್ತಿಯಾದ ಸುಳಾದಿಯನ್ನೂ ಇಲ್ಲಿ ಉದಹರಿಸಿದೆ (ಕಭವಿ. ೧೨೩).
[<ಸಂ. ಪಠನ]

**ಪಠಣೆ** 'ಪಠಣ' ನೋ.

**ಪಠನ** (ನಾ). ೧. ಓದುವಿಕೆ ; ವಾಚನ : 'ಪಠನಪದ್ಧತಿ', 'ಪಠನಾಗಾರ' ಪರಾ. ೨. ಕಂಠಪಾಠ. [ಸಂ.]

**ಪಠನಪದ್ಧತಿ** (ನಾ). ಓದಿ ಹೇಳುವ ಕ್ರಮ : ಬಹುಸಂಪ್ರದಾಯ ಬದ್ಧವೂ, ಪಾರಂಪರ್ಯವೂ ಆದ ಈ ಪಠನಪದ್ಧತಿಯಿಂದಾಗಿ (Method of oral transmission) ಹಿಂದುಗಳ ಧಾರ್ಮಿಕಸಾಹಿತ್ಯವು ಲೌಕಿಕ ಸಾಹಿತ್ಯಕ್ಕಿಂತ ಹೆಚ್ಚು ಪರಿಶುದ್ಧವುಟ್ಟದಲ್ಲಿ ಉಳಿದು ಬಂದಿತು (ಭಾರಪ. ೨೩). [ಪಠನ+ಪದ್ಧತಿ]

**ಪಠನಾಗಾರ** (ನಾ). ಓದುವ ಸ್ಥಳ ; ಪಾಠಶಾಲೆ : ಉದಯಕಾಲದೊಳು ಪಠನಾಗಾರಕ್ಕೆದಿ ಷಡ್ವದನನಂ ಗದ್ದುಗೆಯೊಳಿರಿಸಿ . . . ಎನ್ನ ಕೈವಿಡಿ ದರ್ಥಮಂ ಕೇಳ್ದೊಡೆ ಮೊದಲನ್ವಯಂಗೇಳ್ವ ಮಾತು ಲಘುವೆನಲೆನ್ನ ಗದಜುತ ಕಶಾದಂಡದಿಂ ಹೊಡೆದನಯ್ಯ (ಭಾವಚಿಂ. ೧-೩೪) ; ಸೆಟ್ಟಿ ಪಠನಾಗಾರದೊಳೋದುವಣುಗನಂ ತರಲೆಂದು ನಡೆಗೊಳ್ಳುದಱಂ ಮುನ್ನ ಮೆತತ್ತಾಪಸಂ ಸೌಮ್ಯವೇಷಂದಳೆದಾ ಚೀಲಾಳನಿರ್ದಲ್ಲಿಗೇಳ್ತಂದು . . . ಇಂತೆಂದಂ (ವೃಷವಿ. ೧೪-೩೬ ಪ). [ಪಠನ+ಆಗಾರ]

**ಪಠಾಕಿ** 'ಪಟಾಕಿ' ನೋ.

**ಪಠಾಕ್ಷಿ** 'ಪಟಾಕಿ' ನೋ.

**ಪಠಾಣ,** ಪಟಾಣಿ, ಪಟ್ಟಾಣಿ, ಪಠಾನ್, ಪಠಾನ (ನಾ). ೧. ಭಾರತ ಉಪಖಂಡದ ವಾಯವ್ಯಭಾಗ ಹಾಗೂ ಆಫ್ಘಾನಿಸ್ಥಾನಕ್ಕೆ ಸೇರಿದ, ಮುಸಲ್ಮಾನ ಮತೀಯರಾಗಿರುವ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದ ವ್ಯಕ್ತಿ : ಅಕ್ಬರನ ಕಾಲದಲ್ಲಿ ಒರಿಸ್ಸಾದೇಶವು ಪಠಾಣರ ವಶದಲ್ಲಿತ್ತು (ಬಂಕಿಮ. ೧೪೫) ; ಚೈತನ್ಯನ ಪ್ರಭಾವದಿಂದ ಅನೇಕ ಪಠಾಣರೂ ಆತನ ಶಿಷ್ಯರಾದರು. ಅವರಿಗೆ ಪಠಾಣ ವೈಷ್ಣವರೆಂದು ಹೆಸರು (ಭಾರದ. ೨೯೦) ; ಅರಬರು, ಬೆಲುಚಿಯರು, ಚೀನೀಯರು, ಮೊಗಲರು, ಪಾರ್ಸಿ, ಪಠಾಣರು, ಸೈಯದರು, ಶೈಕರು (ತುಳುನಾ. ೧೭೪). **ಪಟಾಣಿ** ೧. ನೆಜಿ ಗುಜ್ಜರಾತಿ ಕನ್ನೋಜಿ ಖುರೇಸಾನಿ ಬಿರುದಿನ ವರಪಟಾಣಿಗಳು (ಕಂಸವಿ. ೧೧-೯೮). ೨. ಪಠಾಣರಿಗೆ ಸಂಬಂಧಿಸಿದುದು : (ಕ). **ಪಟ್ಟಾಣಿ** : ೧. ಕಟ್ಟದ ಡೊಣೆಯಂಬು ಕೈಯ ಸಿಂಗಾಡಿಯ ಗಟ್ಟಿಯರಿವರಾರೊ ಮಂತ್ರಿ ಸೃಷ್ಟೀಶ್ವರ ಕಂಠೀರವ ಚಿತ್ತೈಸು ಪಟ್ಟಾಣಿಯತುಳ ರಾವುತರು (ಕಂಸವಿ. ೧೨-೬೫). **ಪಠಾನ್** : ೧. ಅವಳು . . . ಪಠಾನ್‌ಕುಲಭೂಷಣಪ್ರಾಯಳಾದ ರೂಪರಾಶಿ ನವಾಬನಂದಿನಿ ಆಯೇಷೆಯಂತೆ ತೋರಿದಳೆನ್ನಲೆ ? (ಪ್ರಣಸ.೧). **ಪಠಾನ** : ೧. ಈಚೆಗೆ, ಥಾಳಿಮಾಡುತ್ತಿದ್ದ ಪಠಾನರ ತೊಂದರೆ ಕಡಿಮೆಯಾಗಿದೆ (ರೂಢಿ). [←ಹಿಂ. ಪಠಾನ್ ; ಮರಾ. ಪಠಾಣ್]

**ಪಠಾನ್** 'ಪಠಾಣ' ನೋ.

**ಪಠಾನ** 'ಪಠಾಣ' ನೋ.

**ಪಠಾವಳಿ**$_1$ 'ಪಟ್ಟಾವಳಿ' ನೋ.

**ಪಠಾವಳಿ**$_2$ (ನಾ). ದಂಡು ; ಸೈನ್ಯ (?) : ಸಿರಿಗಿರಿನಾಥ ಒಡೆಯರು ಅರಗದ ರಾಜ್ಯವನು ಪಾಲಿಸುತ್ತಿಹ ಕಾಲದಲ್ಲಿ ಸಾತಳಿಗೆಯ ನಾಡ ಕೊಳವಳಿಗೆ ಪಠಾವಳಿ ಬಂದು ಕಾದಿದಲ್ಲಿ ಆ ಬೊಮ್ಮರಸಹೆಗ್ಗಡೆಯರ ಮಗ ಪುಟ್ಟಗದೆ ದಳವನು ಮುಱಿದು ಆ ರಣದೊಳಗೆ ಕುಮಾರ ರಾಮನಾಥನ ಪ್ರತಾಪವಾಗಿ ಅಂಬುಗೂಡಾಗಿ ಸ್ವರ್ಗವನು ಸೂಱೆಕೊಂಡ (ಎಕ. VIII, ತೀರ್ಥಹ. ೨೩-೫ ; 1432). 'ಪಟಾಲಂ' ಪರಾ. [ ? ]

**ಪಠಿತ** (ನಾ). ೧. ಓದಲ್ಪಟ್ಟುದು. ೨. ಹೇಳಲ್ಪಟ್ಟುದು : "ಅಗ್ನೇನಯ" ಇತ್ಯಾದಿ ಸನ್ಮಾರ್ಗಪ್ರವರ್ತಕಮಂತ್ರಗಳೂ ಸಂಹಿತೆಯ ಅನುಪೂರ್ವಿಯಲ್ಲಿರುವಂತೆಯೆ ಉಪನಿಷತ್ತುಗಳಲ್ಲಿಯೂ ಪಠಿತವಾಗಿವೆ (ಪುಸ್ವಾ. ೮೩ ಪೀಠಿಕೆ). [ಸಂ.]

**ಪಠಿಯಿಸು** 'ಪಠಿಸು' ನೋ.

**ಪಠಿಲ್** (ನಾ). ಒಂದು ಅನುಕರಣ ಶಬ್ದ : ಖಮ್ಮನೆ, ಘಟಿಲೆನೆ, ಛಿಲ್ಲನೆ, ಪಠಿಲೆನೆ (ಭಾಷಾಭೂ. ೧೧ ವೃತ್ತಿ).

**ಪಠಿಲ್ಲನೆ** (ಅ). 'ಪಠಿಲ್' ಎಂಬ ಸದ್ದಿನೊಂದಿಗೆ : ಅನುಕರಣಕ್ಕೆ—ಖಣಿಲ್ಲನೆ . . . ಪಠಿಲ್ಲನೆ, ಧಮ್ಮನೆ (ಶಸಂದ. ೧೪ ಪ್ರಯೋ). [ಪಠಿಲ್+ –ಅನೆ$_1$]

**ಪಠಿಸು,** ಪಠಿಯಿಸು (ಕ್ರಿ). ೧. ಓದು ; ವಾಚಿಸು : ಧರೆಯೊಳೀ ಕಣ್ಣಪ್ಪದೇವನ ಚರಿತೆಯಂ ಕೊಂಡಾಡಿದಡೆ ವಿಸ್ತರಿಸಿದಡೆ ಪಠಿಸಿದಡೆ ಬರೆದಡೆ ಹರನ ಕರುಣದಲಿ . . . ಸ್ಥಿರಮನೋರಥ ಸಿದ್ಧಿ ದೊರಕುಗು ನರರಿಗೆ (ಬಸವು. ೧೪-೧೦೬) ; ಆರಾಧ್ಯರು ಮಾರ್ಕಂಡೇಯಸ್ತುತಿಯಲ್ಲಿ ಸ್ವಲ್ಪ ಪದ್ಯಗಳನ್ನು ಪಠಿಸಿದರು (ಚೆಂಗಾಳ್ವ. ೩೨) ; ಪಠಿಸಿದಂಥಾ ಶಾಸ್ತ್ರಕ್ಕೆ ವಿವೇಕಕ್ಕೆ ಈ ಜಾರಮಾರ್ಗದಲ್ಲಿ ನಡೆವುದು ಉಚಿತವಲ್ಲಾ (ಬೆಟ್ಟಅ. ಪರಿ. ೨೪೧). ೨. ಹೇಳು ; ನುಡಿ ; ಉಚ್ಚರಿಸು : ಮತ್ತಿನ ಗಂಡರ್ಮೊಱೆಯಲ್ಲರೆಂದು ಮನದೊಳಗೆ ಬೞೀನೀರ್ಗುಡಿದ ಬದ್ದೆಯರೀ ಭವವಿಂತೆ ಪೋದುದು ಮಱುಭವದೊಳಾದೊಡಮಾತನೊಳೆ ಬೇಟಮಕ್ಕೆಂದು ಪಠಿಸಿ ಪರಿಚ್ಛೇದಿಸಿ ಕಾಮಾಗ್ನಿಯಂ ಪುಗೆಯುಂ (ಅರ್ಧನೇ. ೫-೨ ಪ) ; ಚೇತನದೊಳು ವಿಷ್ಣುನಾಮಚಿಂತನೆ ಶುಚಿರ್ಭೂತರಾದವನೀಸುರರು ಗೀತಾರ್ಥವ ಪಠಿಸುತ್ತ ಬಂದರು ಪ್ರಖ್ಯಾತಸತ್ರದ ಮನೆಗಳಿಗೆ (ಮೋಹತ. ೩-೪೬) ; ಇಂತಿವೆಲ್ಲಂ ಚೆನ್ನಬಸವಪೌರಾಣದಾದ್ಯಂತ ಸತ್ಕಥೆಯ . . . ಭಕ್ತಿಯಿಂ ಬರೆದೋದಿ ಪಠಿಸಿದರ್ಗೆ ಸಂತತಂ ಸಕಲಸುಖಮಂ ಸಕಲಭೋಗಮನನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವಂ (ಚಿಬಪು. ೧-೪೦). ೩. ಪುನರುಚ್ಚರಿಸು ; ಮತ್ತೆ ಮತ್ತೆ ಹೇಳು ; ಜಪಿಸು : ಸ್ವಾಮಿ ಅಂದು ಆಡಿದ ನುಡಿಯಿಂದನು ಪ್ರೇಮದಿ ಪಠಿಸುವರಿಂದಿಗು ಇದನು (ನನಲ್ಲ. ೧೦೦-೧೫). **ಪಠಿಯಿಸು** : ೧. ಏಕದಶಾಂಗ ಕನಕಂ ಲೌಕಿಕದಾಗಮನೆಲ್ಲ ಪಠಿಯಿಸಿ ನಿಚ್ಚಂ ಆಕಾರವ ಜಿನನಂತೆ ಕೈಕೊಂಡುಂ ನಿಜವ ನೋಡದವನೆಯಭವ್ಯಂ (ಭವ್ಯಾಮೃ. ೫೨). ೨. ಛಾಂದಸನದೊರ್ಬನು ಭೂಸುರೇಂದ್ರನು ಭಿಕ್ಷವಂ ಬೇಡಿ ರಸಿಕದಿಂ ಶ್ರೀರುದ್ರವಂ ಪಠಿಯಿಸುತ ಮನೆಗೆಯ್ತರಲು (ಬಸವು. ೫೩-೩೯). [ಪಠನ+ –ಇಸು$_3$]

**ಪಠ್ಠಾವಳಿ** 'ಪಟ್ಟಾವಳಿ' ನೋ.

**ಪಠ್ಯ** (ಗು). ೧. ಓದಬೇಕಾದ ; ಓದಲರ್ಹವಾದ ; ಅಭ್ಯಾಸಕ್ಕೆ ತಕ್ಕುದಾದ : 'ಪಠ್ಯಕ್ರಮ', 'ಪಠ್ಯಪುಸ್ತಕ' ಪರಾ. (ನಾ). ೨. ಓದುವಿಕೆ ; ವಾಚನ. ೩. ಓದಬೇಕಾದ ಭಾಗ : ಮೇಘಜಾಳವನೊಡನೆ ಯೌಠಾಣಮಾನಿತಂ ನವಠಾಣಮುಂ ಸಂಧಾನಮುಮರಂ ತಾಳಪಠ್ಯಮುನೂನಪತ್ರಂ ಪೊಟ್ಟವಣಿ ಸಾರಣಮುಲರ್ದಿರಲು (ಬಸವು. ೧೯-೮). [ಸಂ.]

**ಪಠ್ಯಕ್ರಮ** (ನಾ). ಓದಬೇಕಾದ ಭಾಗ ; ಅಭ್ಯಾಸಕ್ಕಾಗಿ ನೇಮಿಸಿದ ವಿಷಯ ; ಪಾಠಸೂಚಿಕೆ : ವಿಶ್ವವಿದ್ಯಾನಿಲಯಗಳ ಪಠ್ಯಕ್ರಮದಲ್ಲಿ ಜಾನಪದ(Folklore)ದ ಅಧ್ಯಯನಕ್ಕೆ ಯಾವಾಗಲೋ ಸ್ಥಾನ ದೊರೆಯಬೇಕಾಗಿತ್ತು (ಸುವರ್ಣ. ೧೭). [ಪಠ್ಯ+ಕ್ರಮ]

**ಪಠ್ಯಪುಸ್ತಕ** (ನಾ). ೧. ಅಧ್ಯಯನಕ್ಕಾಗಿ ಗೊತ್ತುಮಾಡಿದ ಪುಸ್ತಕ ; ಓದಲೇ ಬೇಕಾದ ಪುಸ್ತಕ : ಶೂನ್ಯಸಂಪಾದನೆ ಹುಟ್ಟಿದ ಸ್ವಲ್ಪಕಾಲದಲ್ಲಿಯೇ ವೀರಶೈವಧರ್ಮವನ್ನು ಅದರ ಪ್ರತಿಪಾದಕರ ಮಾತುಗಳಲ್ಲಿಯೇ ಬೋಧಿಸುವವರಿಗೆ ಮತ್ತು ತಿಳಿದುಕೊಳ್ಳುವವರಿಗೆ ಅನುಕೂಲವಾದ ಪಠ್ಯಪುಸ್ತಕವಾಗಿ ಪರಿಣಮಿಸಿರಬಹುದು (ಶೂನ್ಯಕು. ೧೨೪). ೨. ಶಿಕ್ಷಣಸಂಸ್ಥೆಗಳಲ್ಲಿ ಅಭ್ಯಾಸ ಮಾಡಿಸಲು ಗೊತ್ತುಮಾಡಿದ ಪುಸ್ತಕ : ಮೊದಮೊದಲು ಪಠ್ಯಪುಸ್ತಕಗಳ ರಚನಾಕಾರ್ಯದಲ್ಲಿ ಮಕ್ಕಳು

ಕಲಿಯತಕ್ಕ ವಿಷಯಗಳಿಗೆ ಮಾತ್ರ ಗಮನ ಕೊಡಲಾಗುತ್ತಿತ್ತು (ಕಪಪು. II, iii ಸೂಚನೆ). [ಪಠ್ಯ+ಪುಸ್ತಕ]

**ಪಠ್ಯಭಾಗ** (ನಾ). ಓದತಕ್ಕ ಭಾಗ : ಈ ಸಲದ ಪರೀಕ್ಷೆಗೆ ಈ ಪಠ್ಯ ಭಾಗವನ್ನು ಸೂಚಿಸಿದ್ದಾರೆ (ರೂಢಿ). [ಪಠ್ಯ+ಭಾಗ]

**ಪಠ್ಯವಸ್ತು** (ನಾ). ಅಭ್ಯಾಸ ಮಾಡಬೇಕಾದ ವಸ್ತು ; ಓದ ಬೇಕಾದ ವಿಷಯ : ಬೋಧಿಸಬೇಕಾದ ಪಠ್ಯವಸ್ತುವೂ ಅದರಲ್ಲಿ ಯಾವುದಕ್ಕೆ ಪ್ರಾಧಾನ್ಯ ಕೊಡಬೇಕೆಂಬ ಅಂಶವೂ ಶಿಕ್ಷಣತತ್ವದ ದೃಷ್ಟಿ ಯಲ್ಲೇ ನಿರ್ಧರವಾಗಬೇಕು (ಶಿಕ್ಷದ. ೬) ; ಮನೆ, ಶಾಲೆ, ಕ್ರೀಡಾಂಗಣ ಮತ್ತು ಸಮಾಜ – ಈ ಸನ್ನಿವೇಶಗಳಲ್ಲಿ ಬರುವ ದೃಶ್ಯ, ಪ್ರಸಂಗ, ಕಥೆ ಇವುಗಳನ್ನು ಪಠ್ಯವಸ್ತುಗಳನ್ನಾಗಿ ಆಯ್ದುಕೊಳ್ಳಲಾಗಿದೆ (ಕಪಪು. II, iii ಸೂಚನೆ). [ಪಠ್ಯ+ವಸ್ತು]

**ಪಠ್ಯವಿಷಯ** (ನಾ). = ಪಠ್ಯವಸ್ತು : ಮಕ್ಕಳಿಗೆ ಫಲಪ್ರದವಾದ ಶಿಕ್ಷಣ ವಾಗಬೇಕಾದರೆ ಪಠ್ಯವಿಷಯ ಜೀವನದ ಆವಶ್ಯಕತೆ, ದೃಷ್ಟಿಧ್ಯೇಯ ಮತ್ತು ಮಕ್ಕಳ ಮನೋವ್ಯಾಪಾರದ ಪರಿಚಯ–ಇವೆಲ್ಲವನ್ನೂ ಗಣನೆಗೆ ತೆಗೆದುಕೊಂಡೇ ರೂಪುಗೊಂಡಿರಬೇಕು (ಶಿಕ್ಷದ.೧೨೭). [ಪಠ್ಯ+ವಿಷಯ]

**ಪಡ**$_1$ 'ಪಡ್ಡೆ$_3$' ನೋ.

**ಪಡ**$_2$ 'ಪಡವು$_3$' ನೋ.

**ಪಡ**$_3$ (ನಾ). ಚಿಕ್ಕದೋಣಿ ; ನಾವೆ : ಅವರಿಗೆ ಮೊದಲಿನಿಂದಲೂ ಹಂಗಾರಕಟ್ಟೆ ಬಂದರಿನ ಭವಿಷ್ಯವನ್ನು, ಬಂದು ಹೋಗುವ ನಗ, ಮಂಜಿ, ಪತ್ತೆಮಾರಿ, ಮಚ್ವೆಗಳ ಹಾಯಿಗಳನ್ನು ನೋಡಿ ಹೇಳುವ ಗುಣ. 'ಓ ಇದು ಕೋಟೆ, ಇದು ಪಡ, ಇದು ಮಂಜಿ' ಎಂದು ಎಷ್ಟು ದೂರ ದಿಂದಲೇ ಗುರುತಿಸುತ್ತಾರೆ (ಮರಮ. ೪೯). 'ಪಡಂಗು' ಪರಾ. [←ತುಳು. ಪಡ]

**ಪಡ**$_4$ (ನಾ). ಬಟ್ಟೆ ; ವಸ್ತ್ರ: 'ಪಡವಳ$_2$', 'ಪಡಸಾಲೆ$_2$' ಪರಾ. [<ಪ್ರಾ. ಪಡ./ಸಂ. ಪಟ]

**ಪಡ**$_5$ 'ಫಡ$_1$' ನೋ.

**ಪಡಂಗು**, ಪಡಗು, ಪಡಹು, ಪಡಾವ, ಪಡಾವು$_1$, ಹಡಗ, ಹಡಗು, ಹಡಹು$_2$ (ನಾ). ೧. ಸಮುದ್ರದ ಮೇಲೆ ಪ್ರಯಾಣ ಮಾಡಲು ಉಪಯೋಗಿಸುವ ತೇಲುವ ಸಾಧನ; ದೊಡ್ಡ ನೌಕೆ: ನಿತ್ಯಬಿಂದುಗೆ—ಬೆಡಂಗು, ಕಡಂಗು . . . ಪಡಂಗು, ಸಿಡುಂಬು(ಶಮದ. ೩೬ ಪ್ರಯೋ) ; ಆ ಪೊಟಿಗಳಂ ಸಮುದ್ರಮಂ ದಾಂಟಲ್ ಪಡಂಗು ಪಱಿಗೋಲಾದಿಯುಸೀ ಮರ್ಯಾದೆಯೊಳ್ ಮಾಡಿಮೆಂದುಪದೇಶಿಸಿ (ಪೂರ್ವಪು. ೯) ; ಮನೋವಲ್ಲಭೆಯುಮಾಕೆಯ ದಾದಿಯುಮಾನುಮಿಂತು ಮೂವರುಂ ಪಡಂಗನೇಱಿ ನಡುವಗಲೊಳ್ ಬರ್ಪಾಗಳ್ (ದಶಕು. ೪–೪೫ ಪ) ; ನೀರ್ವಟ್ಟೆಯೊಳಗಿರದೆ ಚರಿಸುವ ಪಡಂಗುಗಳ ಗಡಣಮೊ ನರರ ಪರಿಕರಮೊ ಕಾಲಭೈರವನ ಬಹುರೂಪವೋಯೆನೆ ಚತುರ್ಬಲ ಮೆಯ್ದಿತು (ಪದ್ಮರಾ. ೬–೨೮) ; ವನಾಬ್ಧಿಯಲ್ಲಿ ಕಣ್ಗೊಳಿಪ ಪಡಂಗು ಮಾಮರಮದಾಗಿರೆ ಕೋಗಿಲೆ ನಟ್ಟಿಗೊಂಬಿನೊಳ್ ತಳೆದುದು ಕೂವಕಂಬ ದುದಿವತ್ತಿದ ನಾವಿಕನೊಂದು ಲೀಲೆಯಂ (ಶಬಶಂ. ೨–೪೪). **ಪಡಗು** : ೧. ಜಡಧಿವೊಲಿರೆ ಸುರಸೈನ್ಯಂ ಪಡಗುವೊಲಿರೆ ದಿವಿಜವಾರಣಂ ಜಿನಶಿಶು ಕೈಪಿಡಿವೊಲಿರೆ ಪುಣ್ಯಪಣ್ಯದ ಪಡಗಿನ ಸಾಂಯಾತ್ರಿಕಂಬೊಲಿರ್ದಂ ಶಕ್ರಂ (ಚಂದ್ರಪು. ೧೨–೭೪) ; ಈತ ಕಾಣಿರೆ ಘನಚರಾಚರಚೇತನತ್ವದಿ ವಿಹಿತ ಬೀಜವ್ರಾತವನು ತುಂಬಿದನು ಪಡಗಿನೊಳೌಕಿ ಬಾಲ್ಯದಲಿ (ಕುಪ್ಯಾಸ. ೯–೩೮) ; ಪರಿವ ಮಹಾರಥ ಪಡಗಾಗೆ ಮೆಱೆದುದು ಶರಧಿಯಂದದೊಳಾ ಸೇನೆ (ಚಂಪ್ರಸಾಂ. ೧೫–೮೮) ; ನಿರ್ಗ್ರಂಥರಥಕ್ಕೆ ಸಂದ ಯತಿ ಸೂರ್ಯಂ ಬೋಲ್ ಭವಾಂಭೋಧಿಯಂ ಕಡುವೇಗಂ ಪರಿಲಂಘಿಪಂ ಸುಕೃತ ಕೃದ್ರ್ಯಾಹರ್ಸ್ಥನುಂ ಧರ್ಮದಾ ಪಡಗಿಂ ಮೆಲ್ಲನೆ ದಾಂಟದೇ ಇರನಲಾ (ರತ್ನಾಶ. ೪೧). ೨. ನೆಲೆ ; ಆವಾಸ ; ಇರುವ ಜಾಗ : ಪೇಸು ಪತದ ಪಡಗಾಗಿಯುಮುಥ್ರುವಮುಪ್ಪೊಡಲನಿದಂ ನಚ್ಚುವನಬುಧಂ ವಿಬುಧ ನೆಂತುಮೇಂ ನಚ್ಚುವನೇ (ಶಾಂತೀಶ್ವ. ೧೫–೧೪೨). ೩. ಐಶ್ವರ್ಯದ ನೆಲೆ ; ಸಮೃದ್ಧಿಯ ಸ್ಥಾನ : ಕೊಡುಗೆಯ್ಯ ಸಿರಿವಂತ ಬೋಜಗನ ನೊಲಿಸಿದ ಮಡದಿಯ ಸೈಪನೇನೆಂಬೆ ಪಡ[ಪಾಠಾಂ. ಡೆ]ಗಾಕೆಯ ಮನೆ ಯದಱಿಂದ ಬಡವನ ಬಿಡುವುದಱಿಂದು ಬೆಲೆವೆಣ್ಣು (ಕುರಾಸಾಂ.೨೮–೬೬).

**ಪಡಹು**: ೧. ಹಕಾರಕ್ಕೆ ಗಕಾರಂ—ಸಿಂಹ–ಸಿಂಗ; ಹಡಹು (ಪಡಹು) —ಪಡಗು (ಶಮದ. ೨೬೩ ಪ್ರಯೋ). **ಪಡಾವ** : ೪. ಚಿಕ್ಕನಾವೆ ; ದೋಣಿ :. ಜಲಮಾರ್ಗದಿಂದ ಕಳುಹಿಸುವದಿದ್ದರೆ . . . ಹಡಗದ ತನಕ ಪಡಾವದಲ್ಲಿ ಮಾಲ ಹಾಕಿ ಕಳುಹಿಸಬೇಕಾಗುತ್ತದೆ (ಮುಂಬಮ್ಯಾ. ೨೪೧).

**ಪಡಾವು**$_1$ : ೧. ಈ ಪಾಡ್ದನದಲ್ಲಿ, ಕಡಲುತೀರದವರಿಗೆ ಪರಿಚಿತವಾದ ಪಡಾವು(ಹಡಗಿನಲ್ಲಿ)ಭೂತ ಬಂದಂತೆ ಚಿತ್ರಿತವಾಗಿದೆ (ಜಾನಗೀ. ೨೨).

**ಹಡಗ** : ೧. ನಿನ್ನಯ ಭಕ್ತರೀ ಸಮುದ್ರದೊಳು ಹಡಗಂ ಮುಳುಗು ತಿರೆ ಭಾಗ್ಯವೀ ಸಮಸ್ತಂ ನಿನಗೆ ಪಾಲೆನಲು ಕೈನೀಡಿ ಹಡಗನೆತ್ತಿದನು (ಗುರುಚಾ. ೩–೨೩) ; ಹಡಗವೋ ಭವಾಬ್ಧಿಗೆ ವಿಜಯವಿಠ್ಠಲರೇಯಾ (ವಿಪ್ರಸು. ೧೪–೩) ; ಗಾಳಿಗೆಷ್ಟು ಹರಿದೀತು ಹಾಹೆ ಹುಟ್ಟಿಲ್ಲದಾಗೆ-ಹಡಗ? (ಸೂರ್ಯಪಾ. ೩೩–೨) ; ಅವರ ಹಡಗವು ಇಂಗ್ಲಿಷ್ ಕಾಲುವೆಯನ್ನು ದಾಟ, ಬೊಲೋನ್ ಬಂದರಿನಲ್ಲಿ ತಂಗಿತು (ಮಾನಸಾ. ೩೭) ; ಕಡ ಸಿಕ್ಕೋದಾದರೆ ಹಡಗ ನನಗಿರಲಿ ಅಂದ (ಗಾದೆ). ೩. ತಂದೆ ಮಾಡಿದ ಮದುವೆಯ ಸಾಲಕ್ಕಾಗಿ ಆಸ್ತಿಯೆಲ್ಲ ಸಾಹುಕಾರ ಸಂಕಪ್ಪನ ಹಡಗಕ್ಕೆ ಸೇರಿಕೊಂಡಿತ್ತು (ಬೆಳುಮ.೨); ಅದು ಯಾವ ಕಾಲದಲ್ಲೊ ಸಾಹುಕಾರನ 'ಹಡಗಕ್ಕೆ' ಸೇರಿಕೊಂಡಿದ್ದ ಹೊಲ ಮನೆಗಳು (ಬೆಳುಮ. ೧೫೭).

**ಹಡಗು** : ೧. "ಪೋತಮಾ ಪ್ರವಹಣಂ ಭೈತ್ರಮೆನೆ ಹಡಗಕ್ಕು" (ಮಂಗರಾ. ೧೨೦–೪) ; ಎಡಬಿಡಸಿದಲ್ಲಿ ಶರಣಂ ಕಡೆಗಣಿಸುವೊಡಾರುಮಿಲ್ಲ ಸಂಸಾರಿಗೆ ತಾಂ ಕಡೆಯುಲ್ಲದಬ್ಧಿಮಧ್ಯದ ಹಡಗಂ ಬಿಟ್ಟಿರ್ದ ಪಕ್ಷಿಗೆಂತಂತೆ ವೊಲಂ (ಬಾಧಪು. ೫–೩೭) ; ಹಡಗು ಜಲಧಿಯೊಳೋಡಿ ಗಿರಿಗಳನೆಡಹಿ ನುಗ್ಗಾದಂತೆ ಸುಭಟರ ಗಡಣ ಗಜವನು ತಾಗಿ ತಾಗಿ ವಿಘಾತಿಯಲಿ ನೊಂದು (ಕುಪ್ಯಾದ್ರೋ. ೩–೨೮) ; ದುಡುಕು ಮಾಡಿ ಹಾಲುಮಡಕೆಗಳ ಒಡೆದು ಹಡಗನೇಱಿ ಬಂದು ಉಡುಪಿಲಿ ಇದ್ದನೆ ಮಂಗಳರೇಖೆ ಪಾದಂ ಗಳುಳ್ಳ ನಿಮ್ಮ ರಂಗ (ಪುರಂದ.೨–೩೨–೪); ಕಣ್ಣಿನಾ ಹಡಗಲು ಬೆಳಕನ್ನು ಪಡೆಯಲು ಹೊರಟಿಹುದು ಹುಡುಕಲು ಯಾವ ನಡುಗಡ್ಡೆಯಲೊ (ಮೂಕೀಶಾ. ೪೦–೪). **ಹಡಹು**$_2$ : ೧. ಹಕಾರಕ್ಕೆ ಗಕಾರಂ— ಸಿಂಹ–ಸಿಂಗ ; ಹಡಹು (ಪಡಹು)–ಪಡಗು (ಶಮದ. ೨೬೩ ಪ್ರಯೋ). [ದೇ.॥ ತಮಿ. ಮಲ. ಪಟಕು, ಪಟವು ; ತುಳು. ಪಡವು, ಹಡಗ, ಅಡಗ್ ; ತೆಲು. ಪಡವ]

**ಪಡಂಪು** 'ಪಡಪು$_1$' ನೋ.

**ಪಡಕಣ** (ನಾ). ಕಾಪು ; ರಕ್ಷಣೆ ; ಕಾವಲು : ಕನ್ನಮಂ ತದ್ಧರಾ ಕಾಂತಗೃಹಕಿಕ್ಕೆ ಪಡಕಣದ ಪಹರಿಯ ಸುಭಟರಂತದಂ ಕಂಡು ಹಿಡಗ ಯ್ಯಟ್ಟಿಯಾ ಕಾಲದಂಡನಿದ್ದೆಡೆಗೊಯ್ದರು (ಸಮ್ಯಕ್ತ್ವಾ. ೧೦–೧೧) ; ಧೀರಮಾರುತಿ . . . ತಳ್ಳಂಕಗೋಳಿಸಿ ತತ್ಪುರವ ರಾಜಾಲಯಕುಲ್ಲಸ ದಿಂದೆಯ್ದಿದನು ಅದನು ಕಂಡಾ ಪಡಕಣದಾಳ್ಗಳಾ ರಾಜಸದನದ ರಣ ಮಂಡಲಕೆ ಒದಗಿ ತುತ್ತುಱಬಾಗಿ ನಿಂದು ಬಾಗಿಲನಿಕ್ಕಲು (ನೇಮಿಸಂ. ೨೫–೬೫) ; ಪಾರಿ ಪಡಕಣದಾಳಿಂದ ವಾದ್ಯಗಳಿಂದ ಕೇರಿಕೇರಿಯೊಳು ತಿರುಗುವ ವೀರಭಟಾಳಿಯಿಂದೆಸೆದುದಾ ಕುಮ್ಮಟದಾರಭಟೆಯನೇನೆಂಬೆ (ಕುರಾಸಾಂ. ೩೮–೮೭). [<ಪ್ರಾ. ಪಡಿಕ್ಖಣ./ಸಂ. ಪ್ರತೀಕ್ಷಣ]

**ಪಡಕಾನೆ** 'ಪಡಖಾನೆ' ನೋ.

**ಪಡಕು$_1$** (ಕ್ರಿ). ಕುದುರೆಯನ್ನು ಸವಾರಿಗೆ ಸಿದ್ಧಮಾಡು; ಕುದುರೆಗೆ ಜೀನು ಏರಿಸು,—ತಡಿಹಾಕು: ಕಡುಗಾಳಿಗೆ ಬಿಟ್ಟಂಬಿಂಗೈದುವ ದಿಟ್ಟಿಗೆ ನಡೆವ ಮನಕ್ಕಿಮ್ಮಡಿ ಮೂವಡಿ ನಾಲ್ವಡಿ ಯೈವಡಿ ಜವದೊಳು ಬಲದೊಳು ಬೀದಿಯ ಸರಿಸದೊಳನುಪಮನಚಳಂ ಬಳಿಕೆಯೊಳು ತೊಡೆ ಮಡ ಕಿಸಿ[ಕಸೆ]ಕಂಬಿಯ ಸರಸನ್ನೆಗಳಾಟದ ತೊಡಕಂ ಹೊದ್ದದೆಯ್ದೆದೇಜಾದರನುವಾಯ್ತೆನೆ ಪಡಕಿದ ತುರಗಂಗಳು ನೆರೆದುವು ನಿಂದವು (ವೀರೇಚ. ೨-೨೯). [ ? ]

**ಪಡಕು$_2$**, ಪಡಿಕೆ$_1$, ಪಡುಕು, ಫಡಕು (ನಾ). ೧. ಬಾಗಿಲು, ಕಿಟಕಿ ಮೊದಲಾದುವುಗಳ ಕದ,— ರೆಕ್ಕೆ: ಒಂದು ಸಣ್ಣ ಹರಳ ನ್ನೆತ್ತಿ ಅವಳು ನಿಂತಿದ್ದ ಕಿಡಕಿಯ ಪಡಕಿಗೆ ಒಗೆದ (ಚೀನಬಾ. ೨೪೦); ಬಲವಂತನು . . . ಹೊರಬೀಳುವಾಗ ಅಂಗಡಿಯ ಮಳಿಗೆಯ ಪಡಕು ಗಳನ್ನು ಇಕ್ಕಿಕೊಂಡು ಭದ್ರವಾದ ಕೀಲಿ ಹಾಕಿದನು (ಅಂಬಿಕೆ. ೧೧); ಮುಂದೆ ಮಾಡಿದ್ದ ಪಡಕುಗಳನ್ನು ಸರಿಸುತ್ತ ಹೊರಗೆ ಬಂದು ನಿಂತು ಕೊಂಡಳು (ಹೇಮಂತ. ೨೪೬). **ಪಡಿಕೆ$_1$:** (ಕಿ). **ಪಡುಕು:** ೧. ಬಿಂಕವನ್ನು ತೃಪ್ತಿಯನ್ನು ಸೂಚಿಸುವ ಮುಗುಳುನಗೆ ತುಟಿಯ ಪಡುಕು ತೆರೆದು ಪ್ರಕಟವಾಗುವುದು (ಕನಕ. ೧೧೮). ೨. ಬಿರುಕು; ಸಂದು; ಸೀಳು: ಬಾಗಿಲ ಪಡುಕಿನಿಂದ ಒಳಗೆ ಉರಿಯುವ ಅಗ್ಗಿಷ್ಟಿಕೆ ಕಾಣುತ್ತಿತ್ತು (ವೀನಾದ. ೧೪). **ಫಡಕು:** ೧. ತರುಣಿಯೋರ್ವಳು ಬಾಗಿಲದ ಫಡಕಿನ ಮರೆಗೆ ನಿಂತು . . . ಮಂಜುಲವಾದ ಧ್ವನಿಯಿಂದ ಹೇಳಿದಳು (ತೊಳಸು. ೬೮); ಕಿಡಿಕೆಗಳ ಫಡಕುಗಳು ಗಟ್ಟಿಯಾಗಿ ಇಕ್ಕಿ ದ್ದವು (ಸ್ವಾಭಮಾ. ೬); ಪಾವಿತ್ರ್ಯಮುದ್ರೆಯಲ್ಲಿದ್ದ ಗೂಢ ತೆರೆದಿತ್ತು ತನ್ನ ಫಡಕು (ಅರಳು. ೧೮೨-೬). ೩. ಬಾಳೆ ಎಲೆಯ ತುಂಡು,— ಹಾಳೆ,—ಸೀಳು: ಬಸವಂತಿ . . . ಬಾಳೆಯ ಎಲೆಯ ಒಂದು ದೊಡ್ಡ ಫಡಕಿನಲ್ಲಿ, ಹಿತ್ತಲಲ್ಲಿಯ ಹೂ-ತುಳಸಿ ಹರಿದು ತಂದು, ದೇವರ ಮನೆಯ ಬಾಗಿಲಲ್ಲಿ ಪೂಜೆಗೆಂದು ಇರಿಸುತ್ತಾಳೆ (ದೀಪಹ. II, ೧೬೫); ಬಾಳೆಯ ಫಡಕಿನಲ್ಲಿ ಒಂದೆರಡು ದೊಡ್ಡ ಕರದಂಟನ್ನು ಹಾಕಿ ಅವನ ಎದುರಿ ಗಿಡುತ್ತ ಅಂದಳು (ಬಾಬಲ. ೧೯). [<ಸಂ. ಫಲಕ]

**ಪಡಕು$_3$** 'ಪಡಿಕೆ$_3$' ನೋ.

**ಪಡಕೆ$_1$** (ನಾ). "ಹಾಸಿಗೆ" (ಸಿಂಕೋ. ೩೧೨).

[ದೇ.॥ ತಮಿ. ಪಟುಕ್ಕೈ; ತೆಲು. ಪಡಕ, ಪಡುಕ]

**ಪಡಕೆ$_2$** (ನಾ). ಒಂದು ಬಗೆಯ ಚರ್ಮವಾದ್ಯ: ತೊವಲ ಗಿಲಿಗಿಲಿಕೆ ಯೆಸವ ನಾದಮಂ ತೊವಳನೆಳವರೆಯೊಳಾದ ನಾದಮಂ ಮೊಳಪ ಪಡಕೆಗಳ ಕಿಱುವಾ ನಾದಮಂ ಪೋಲ್ವೊಡಿಲ್ಲ ಮಟಿಯಿಂದ ಱಟ್ಟುಗಂ (ಱಟ್ಟಮ. ೮-೧೨). [←ತಮಿ. ಪಟಕ]

**ಪಡಖಾನೆ,** ಪಡಕಾನೆ, ಪಡ್ಕಾನೆ (ನಾ). ಹೆಂಡ, ಸಾರಾಯಿ ಮುಂತಾದುವುಗಳನ್ನು ಮಾರುವ ಸ್ಥಳ; ಮದ್ಯದ ಅಂಗಡಿ; ಗಡಂಗು: ಹೆಂಡಕುಡುಕರು . . .ಪಡಖಾನೆಯ ಬಳಿಗೆ ಓಡೋಡಿ ಹೋಗು ವಂತೆ, ಈ ಇಲಿಯೂ ಕೂಡ ಲೋಹದ ಹಲಗೆಯ ಬಳಿಗೆ ಆನಂದಾನು ಭವಕ್ಕಾಗಿ ಓಡೋಡಿ ಹೋಗುತ್ತದೆ (ಮನೋನಂ. ೩೨೨); ಅಧಿಕಾರಿಗಳು ದೇವಾಲಯದ ಮೂರ್ತಿಗಳನ್ನು ಅವುಗಳ ಪೀಠದಿಂದ ಎತ್ತಿ ಕೊಂಡೊಯ್ದು ತಮ್ಮ ಪಡಖಾನೆಗಳನ್ನು ಅಲಂಕರಿಸುವುದಕ್ಕೆ ಉಪಯೋಗಿಸಿಕೊಂಡರು (ರಘುರಾಣಿ. ೪೧೬); ಇಂದು ನಮ್ಮ ನಾಡು ಜಾತ್ರೆ, ಗಜಿಬಿಜಿ ಕಳೆದು ಪಡಖಾನೆಯಲ್ಲಿ ಪಟ್ಟ ಜನದ ಪಾಡು: ಬುಂಡೆ ತುಂಬಿದೆ ಹೆಂಡ; ಕೆಸರು ತುಂಬಿದೆ ಹೊಂಡ (ನಡಬಂ. ೧೦೦-೨). **ಪಡಕಾನೆ:** ರತ್ನ ಪಡಕಾನೇಗೆ . . . ಒಯ್ತಿದ್ದಂಗೆ ನಿಂತ! (ಕನ್ನಬಾ. ೧೨೩). **ಪಡ್ಕಾನೆ:** ಒಂದು ಸಲ ದಾಸನ ಪಡ್ಕಾನೆ ಬಿಡುವುದರೊಳಗೆ ಭಾರೀ ಮಳೆ ಬಂದಿತು (ನನ್ನೂರು. ೧೪೧); ಈಶ್ವರನ ಬೊಕ್ಕಸದಲ್ಲಿ ಗಟ್ಟಿ ಹೆಂಡ, ಹುಳಿಗಡಿಗೆ ಆಯ್ತಂತೆ. ಹೋಗಿ ಹೊತ್ಕೊಂಡ್ಬಂದ್ಬಿಡಬೇಕು. ಈ ಪಡ್ಕಾನೇಗೆ ಕಾಸು ಕೊಡ ಕಾಗ್ದು (ಶಿವರಾ. ೬೫).

[ಪಡ$_0$(ℙ←ತಮಿ. ಪಟು = ಮದ್ಯ)+ಖಾನೆ]

**ಪಡಗ** 'ಪಡಿಗ' ನೋ.

**ಪಡಗು** 'ಪಡಂಗು' ನೋ.

**ಪಡಚ** 'ಪಡ್ಚ' ನೋ.

**ಪಡಜಮೀನು** (ನಾ). ವ್ಯವಸಾಯ ಮಾಡದೆ ಹಾಳು ಬಿದ್ದ ಭೂಮಿ; ಬೀಳುನೆಲ: ಕಲ್ಲರ್ಭೂಮಿಗಳು, ಪಡಜಮೀನುಗಳು, ಕಾಯಿದೆಯಿಂದ ತೊಡಕಾಗಿ ಹೇಗೂ ಕೈಬಿಡುವ ಜಮೀನುಗಳು, ಇವೆಲ್ಲ ಅಲ್ಲಿ ದಾನದ ವಸ್ತುಗಳಾಗಿವೆ (ಮಣ್ಣಿಮ. ೨೧೩).

[<ಪಡು$_2$ + ಜಮೀನು]

**ಪಡಡಕ್ಕೆ,** ಪದಡಕ್ಕೆ, ಪರಡಕ್ಕೆ, ಪರಿಡಕ್ಕೆ (ನಾ). ಒಂದು ಬಗೆಯ ವಾದ್ಯ; ದೊಡ್ಡ ನಗಾರಿ: "ಆನಕಃ, ಪಟಹಃ — ಈ ೨ ಪಡಡಕ್ಕೆ" (ಹಲಾಯು. ೧೬-೯೬); ಸತ್ಯಭಾಮೆ ಚಾಮೀಕರಕಳಶ ಧ್ವನಿಚಾಮರ ಧವಳಾತಪತ್ರ ಪಡಡಕ್ಕಾದಿ ಶ್ರೀಮದ್ವಿಭವಯುತಂ ಪೌಲೋಮಿಯೆ ಬರ್ಪಂದದಂತೆ ಪೊಟಲಿಂ ಬಂದಳ್ (ಬಂಹರಿ. ೬-೬೨). **ಪದಡಕ್ಕೆ:** "ಪದಡಕ್ಕೆ (ಪಡಡಕ್ಕೆ)-ಪದಡಕ್ಕಾ" (ತದ್ಭಕೋ. ೨೪); ದಟದಟಾಸಿ ಮೊಟಗುವ ಜಯಮಂಗಳಘೋಷಮುಂ ಪೊಯ್ವ ಪದಡಕ್ಕೆ ಗಳುಂ . . . ಒಪ್ಪಿ ತೋಱೆ (ವರ್ಧಮಾ. ೪-೪೫ ವ); ಬೊಂಬುಳಿಯ ಪದ[ಪಾಠಾಂ. ಡೆ]ಡಕ್ಕೆ ಪಟಹಂಗಳಾವುಜ ಕರಡೆಗಳ ತಾಳ ಕಂಸಾಳರವ ದೊಳಗೆ ನಡೆದನಪ್ರತಿಮನಚಳಿತಸಿದ್ಧನು (ಸಿದ್ಧರಾ. ೬-೨೦). **ಪರಡಕ್ಕೆ:** ಪರಡಕ್ಕೆ[ಪಾಠಾಂ. ಕೆ]ಡೌಡೆ . . . ಕಂಸಾಳುಗಳ ನಿರವಧಿಧ್ವಾನಂ ಚತು ರ್ದಶಭುವನಮನಾ ಭರದಿಂದಲಾವರಿಸೆ (ಕುಮುರಾ. ೧೯-೮). **ಪರಿಡಕ್ಕೆ:** ಕರಡೆಯ ಡಕ್ಕೆಯ ಪವಳದ ಪರಿಡಕ್ಕೆಯಮರ್ದ ದನಿಗಳುಂ ಭೋರ್ಗರೆ ಯಲ್ (ಧರ್ಮಾಮೃ. ೧೩-೧೯). [<ಪಟಹ+ಡಕ್ಕೆ]

**ಪಡಢಕ್ಕೆ,** ಪಡೆಢಕ್ಕೆ, ಪದಢಕ್ಕೆ (ನಾ). = ಪಡಡಕ್ಕೆ: ಶತ್ರುರಾಜರಿಂದ ಗಂಗಾಯಮುನಾ ಪಾಳಿಧ್ವಜ ಪಡಢಕ್ಕಾ ಮಹಾಶಬ್ದಚಿಹ್ನಗಳನ್ನೂ ಮಾಣಿಕ್ಯ ಮತಂಗಜಾದಿಗಳನ್ನೂ ಕಸಿದುಕೊಂಡನು (ಕರ್ಣಾಅ. ೮೬). **ಪಡೆಢಕ್ಕೆ:** [ಪಡೆ]ಢಕ್ಕಾ ಪಾಳಿಮಹಾಧ್ವಜ ನಿತ್ಯಶ್ರೀಯಮೋಘವರ್ಷ [ದೇ]ವಸ್ಯ ತಸ್ಯ ಮಹಾ[ಸಾಮ]ನ್ತಃ . . . ಶ್ರೀಮ[ತ್ತುಪ್ಪೆ]ಯರಸ ಪ್ಪುರ್ಗರಿಗೆಱೆನಾಡನಾಳುತಿರೆ (ಸೌಇಇ. XI-i, ೧೨-೮; 867). **ಪದಢಕ್ಕೆ:** ದಕಾರಕ್ಕೆ ಡತ್ವಂ . . . ಪದಢ[ಪಾಠಾಂ. ಡ]ಕ್ಕೆ = ಪಡಢಕ್ಕೆ (ಶಮದ. ಸ. ೨೮೧ ಪ್ರಯೋ). [<ಪಟಹ+ಢಕ್ಕೆ]

**ಪಡಣ,** ಹಡಣ (ನಾ). ೧. ಅನಿಷ್ಟ; ಪೀಡೆ; ಕೇಡು; ದೌರ್ಭಾಗ್ಯ: ಮುನಿದೀಶಂ ತವೆ ಸುಟ್ಟು ಮುಂ ಕರುಣದಿಂದಿತ್ತಂ ಪುನರ್ಜನ್ಮಮಂ ನಿನಗೆಂದಾ [ರ]ತಿ ಪಾಪಮುಂ ಪಡಣಮುಂ ಪೋಪಂತೆ ಕಾಮಂಗೆ ಮಜ್ಜನಕೆಂದೆತ್ತಿದ ಚಂದ್ರಕಾಂತಘಟದೊಳ್ ತಂದಟ್ಟಿಯಿಂ ಪುಷ್ಪವಾಸನೆಗೆಂದಿಕ್ಕಿದ ನೀಳನೀರರುಹಮಂ ಪೋಲ್ದತ್ತು ಕಟ್ಟಿಂದುವಾ (ಪಂಪಭಾ. ೪-೫೧). ೨. ಅನಿಷ್ಟವ್ಯಕ್ತಿ; ಅಶುಭ ವ್ಯಕ್ತಿ: ಅವನನಪನೀತಿಭವನನನವಿವೇಕದೆ ಪೋದ ಪಡಣಮಂ ತಲೆವಿಡಿವಂತೆವೊಲಱಿಸಿ ಪೋಪುದಿದು ಮಿಟ್ಟುವನಱಿಯೆ ಪೋಪ ತೆಱನನಱುಪುಗುಮಲ್ತೇ (ಪಾರ್ಶ್ವಪು. ೪-೪೩). **ಹಡಣ:** ೧. ಹಡಣಂ ಪೋದತ್ತು ಕುತ್ತಂ ಕಟಿದುದು ಶನಿ ಪಿಂಗಿತ್ತು (ಸೂಕ್ತಿಸು. ೮-೪೫೫). ೨. ಈಕೆ ಹುಟ್ಟು ಗೆಟ್ಟ ಹುಟ್ಟಗೆಯಂತೆ ಹಡಣಂ (ಲೀಲಾವ. ೨-೧೧೬ ವ); ಬತ್ತಲೆಯ

ಬಾಳ್ವಿಣಂಗಳು ಸುತ್ತ ಮುತ್ತಿರಲು ಕತ್ತಲಿಪ ಹಾಳೊಡಲ ಹಡಣಗಳು ಕುಳ್ಳಿರಲು . . . ನಡುವೆ ನೆುಱಿದಂ ಧರ್ಮಸೇನಪಂಡಿತಂ (ವಾಗೀರ. ದೇ. ೨೫೫-೨). [?./ಪ್ರಾ. ಪಡಣ./ಸಂ. ಪತನ]

**ಪಡಣಿಗೆ,** ಹಡಣಿಗೆ(ನಾ). ಅವಲಕ್ಷಣವಾದ ಹೆಂಗಸು; ಅಮಂಗಳೆ: ಬಂಜೆಯಪ್ಪುದುಂ ಬಡತನಮಪ್ಪುದುಂ ಪಡಣಿಗೆಯೆಂದು ಗಂಡನೊಲ್ಲದೆ ಬಿಸುಟ್ಟುದುಮಶುಚಿಯೆಂದು ಪೆಜಮ್ಮಲ್ಲಟ್ಟದಿರ್ಪುದುಂ . . . ಎಲ್ಲಾ ಸ್ತ್ರೀಯರ್ಗಂ ಸಾಧಾರಣಂ (ಚಾವುಂಪು.೩೦೨). **ಹಡಣಿಗೆ :** "ದುರ್ಭಗಾ ಭರಣಮಿವ—ಹಡಣಿಗೆಯ ತೊಡವಿನಂತೆ" (ನೀತಿವಾ. ೩೦). [<ಪಡಣ]

**ಪಡತರ** (ನಾ). ವಸ್ತುವಿನ ಲಾಭಕರವಾದ ಬೆಲೆ,—ಕಿಮ್ಮತ್ತು : ಖರೀದಿಗೆ ಬರದಿರುವ ಮಾಲಿನ ಪಡತರ ಅಂದರೆ ಗಿಟ್ಟುವದು ನೋಡಿ ಯಾವ ಧಾರಣೆಯಿಂದ ಬದುಕು ಮಾರಬೇಕು ಇದು ತಿಳಿಯುವದಕ್ಕೆ ಅವರಿಗೆ ಬಹಳ ಕಠಿಣವಾಗುತ್ತದೆ (ಮುಂಬವ್ಯಾ. ೯ ಪ್ರಸ್ತಾವನೆ). [←ಹಿಂ. ಪಡತ, ಪಡತಾಲ್ ; ಮರಾ. ಫಡತಾರ್, ಫಡತಾಳ್]

**ಪಡಶೆ** (ನಾ). (?) : ಪಡತೆಯನಿಡು ಜೋಡಿಸಿ ಜಾಣ ಕೊಂಡಾಡಿ ಬೆಡಗಿ ನಂಚೆಯನಿದು ಗೆಲಬಲ್ಲ ಗಡಿದಾರನುಲಿದೊಳ್ಳಿದ ಬಗದರನೆಂದು ಮಡದಿ ಮಾಱುದಳಲ್ಲಿ ಪಜಮೆಯ (ಸೊಬಸೋ. ೧೮-೨೯). [ ? ]

**ಪಡದೆ** 'ಪರದೆ' ನೋ.

**ಪಡನೆಲ** (ನಾ). = ಪಡಜಮೀನು : ಹಿಂದುಳಿದ ದೇಶಗಳಲ್ಲಿ ಪಡನೆಲ—ಅಡವಿಯ ನೆಲವೇ ಹೆಚ್ಚು (ಮಾವಾದ. ೧೩೮). [<ಪಡು₂ + ನೆಲ]

**ಪಡಪ** (ನಾ). ಎಲೆಅಡಿಕೆಯ ಚೀಲ ; ಸಂಚಿ: 'ಪಡಪವಳ' ಪರಾ. [<ಅಡಪ]

**ಪಡಪಡ** (ನಾ). ಕೋಪ, ಹೆದರಿಕೆ ಮುಂತಾದುವುಗಳನ್ನು ಸೂಚಿಸುವ ಒಂದು ಅನುಕರಣ ಶಬ್ದ : ಏರ್ದ ಪಡಪಡ ಪಾರ್ದಪುದೇಕೆ ಕೆಳದಿ ತೋಳುಗಳಂ ಪಿಡಿ ಮೃದುಹಸ್ತತಳದಿ (ಕಾದಂಪೂ. ೪೮೨) ; ಪಡಪಡ ಪಾರ್ವರ್ದೆ ತಡಬಡಿಸುವ ನುಡಿ ಕಡುಗಂಪವೆತ್ತಂಗ (ಶಿವಗೀ. ೧೬೧-೮೩೨). 'ಪಡಪಡವಾಯ್', 'ಪಡಪಡಿಸು' ಪರಾ.

**ಪಡಪಡಪಾಯ್** 'ಪಡಪಡವಾಯ್' ನೋ.

**ಪಡಪಡವಾಯ್,** ಪಡಪಡಪಾಯ್ (ಕ್ರಿ). ಪಡಪಡ ಎಂದು ಹೊಡೆದುಕೊಳ್ಳು,— ತುಡಿದುಕೊಳ್ಳು : ಪಡಪಡವಾಯ್ವ ಮೆಲ್ಲೆರ್ದೆಗಳಂ ಕರಯುಗ್ಮದಿನೊತ್ತಿ . . . ಈಶನದೆಲ್ಲಿದನೆತ್ತವೋದನಾವೆಡೆಯನಧೀಶನೆಂದು ಪಲವಾಡಿದುದಂದಜಿತಾಂಗನಾಜನಂ (ಅಜಿಪು.೬-೧೨೧). **ಪಡಪಡಪಾಯ್ :** ಅಂತಾ ಬಾಲೆ . . . ಪುಲ್ಲೆಯಂತಿರೆರ್ದೆ ಪಡಪಡಪಾಯೆ . . . ಜೀವಂ ಜೀವಿತೇಶ್ವರನನಜಸಲ್ ಪೋದಂತೆಯುಂ ಇಚ್ಚೆಯಟಿದು ಮುಚ್ಚೆವೋಗಿರ್ಪುದುಂ (ಲೀಲಾವ. ೧೦-೭೧ ವ) ; ಪಡಪಡ[ಪಾಠಾಂ. ಪಡೆಪಡೆ]ಪಾಯ್ವ ಮೆಲ್ಲೆರ್ದೆಗೆ ಘರ್ಮಜಲಂ ಕೊನರ್ವಾನನಕ್ಕೆ . . . ಶೀಘ್ರಯಾನಮದುತಾ ನೆವಮಾದೊಡಮಾಗಳೇಂ ಪಿಸುಣ್ಗೆಡೆದು ತೆರಳ್ದುದಾ ಹರಿಯನೀಕ್ಷಿಪನೀಱಿಯ ಸೋಲ್ತ ಭಾವಮಂ (ಅನಂಪು. ೧೮-೨೭). [ಪಡಪಡ + ಪಾಯ್₁]

**ಪಡಪಡಿಸು** (ಕ್ರಿ). ಕೋಪದಿಂದ ಕೆರಳು ; ಪ್ರಜ್ವಲಿಸು : ಪಡಪಡಿಪ ನಡುನಯನದ ಮಡುವಿಡುವ ಜಲಧಿಯಂ ಕಡೆವ ಕಡೆಯೊಳ್ಮೂಡಿ ಘುಡುಘುಡಿಸಿ ಪಡೆಯ ಪಡಲಿಡೆ ಕೆಡಪುವುದ ತುಡುಕಿ ಪಿಡಿದೊಡನೆ ಪೊಸೆದು ಕೊರಳೆಡೆ ತೊಡೆದ ಹಂಪೆಯ ಮೃಡಂ ಬಿಡದೆ ಸಲಹುಗೆಮ್ಮ (ಹಚಕಾ. ೧-೨). [ಪಡಪಡ + -ಇಸು₃]

**ಪಡಪವಳ** (ನಾ). ತನ್ನ ಒಡೆಯನ ಎಲೆಯಡಕೆಯ ಚೀಲವನ್ನು ಹಿಡಿಯುವವನು ; ಅಡಪವಳ ; ಸಂಚಿಯವನು: ಅನುಪಮರಾಯ ಮುರಾರಿಯ ಮನದಂನನೆನಿಪ್ಪ ಸಚಿವನಂ ನೆಗಳ್ದ ಪಸಾಯ್ತನ[ನೊ]ಸೆದು ಪಡಪವಳರೊಡೆಯನನೊಲವಿಂ ಬಂಮ್ಮಿದೇವನಂ ಧರೆ ಪೊಗಳ್ಗುಂ (ಕಃಅ. ೭೫-೧೨-೩೩ ; 1170). 'ಅಡಪವಳ' ಪರಾ. [ಪಡಪ+-ವಳ]

**ಪಡಪಾಳಿ**₁, ಪಡೆಪಾಳಿ, ಹಡಹಾಳಿ (ನಾ). ೧. ಗಳಿಸುವವನು ; ಸಂಪಾದಿಸುವವನು ; ಗಳಿಸಾಳಿ : ಓದಾಳಿ, ಜೂದಾಳಿ, ಮಾತಾಳಿ, ಸಿಗ್ಗಾಳಿ, ಏಱಾಳಿ, ಪಡಪಾಳಿ (ಭಾಷಾಭೂ. ೧೮೩ ಉದಾ). ೨. ಜಾರ ; ವಿಟ : ಅಮರೇಜ್ಯಾಂಶದೊಳಿರೆ ಚಂದ್ರಮನರ್ಕಾದಿಗಳೆ ವೀಕ್ಷಿಪಂದಧಿಕ ಬಲಂ ಸಮರಕರಂ ಪ್ರಹಸನಶೀಲ ಮಂತ್ರಿ ಪಡ[ಪಾಠಾಂ. ದ]ಪಾಳಿಯಧಿಕ ಕಾಮಿಯೆನಿಕ್ಕುಂ (ಜಾತತಿ. ೨೦-೨೦). ೩. ಅದೃಷ್ಟಶಾಲಿ ; ಭಾಗ್ಯವಂತ : ಮಾಲಾಳಿಯುಮೋದಾಳಿಯುಮೇಱಾಳಿಯುಮಪ್ಪನಾಗಿ ಪಡ[ಪಾಠಾಂ. ಡೆ]ಪಾಳಿಯೆ ಕೇಳ್ ನೀಱಂ ಜೂದಾಳಿ ಕರಂ ನೀಱಂ ಮಾತಾಳಿ ಕರೆಯೆ ಸಿಗ್ಗಾಳಿಯಿವಳ್ (ಶಮುದ. ೨೦೩ ಪ್ರಯೋ ; ಕಾವ್ಯಾವ. ೩೫೩ ನೋ ).**ಪಡೆಪಾಳಿ:** ೧. ಲಾಭಸಂಸ್ಥಾನದೊಳ್ ವಿದಿತಾತ್ಮಂ ಪಡೆಪಾಳಿ ರಿಃಫದೊಳಸತ್ಯಂ ವಾಮನೇತ್ರಾಂಧಕಂ (ಜಾತತಿ. ೧೮-೮). ೩. 'ಪಡಪಾಳಿ' ಉಲ್ಲೇಖದ 'ಶಮುದ.' ಪ್ರಯೋಗದ ಪಾಠಾಂತರವನ್ನು ನೋಡಿ. 'ಪಡೆಪಾಳಿತನ' ಪರಾ. **ಹಡಹಾಳಿ :** ೧. ಹಡಹಾಳಿ ಸತ್ತ ಮನೆಯಂತೆ ಪ್ರಭು ಕೆಟ್ಟ ನಾಡಂತೆ ಸಂಸಾರದ ಶರೀರದ ಭೋಗದ ಮೇಲೆ ಬೇಸಟಿಂ (ಧರ್ಮಾಮೃ. ೫-೧೨೫) ; ಹಡೆದ ಹಲಬರು ಮಕ್ಕಳೊಳಗೊಬ್ಬನೆಂತಕ್ಕೆ ಹಡಹಾಳಿಯಹುದರಿದು (ಸೋಮಚ. ೧-೯೭). [ಪಡಪು₁ + -ಆಳಿ₃]

**ಪಡಪಾಳಿ**₂, ಹಡಪಾಳಿ (ನಾ). = ಪಡಪವಳ : "ಅಡಪವಳಂ ಪ[ಪಾಠಾಂ. ಹ]ಡಪಾಳಿ" (ಚತುಣಿ. ೬೦). 'ಅಡಪಾಳಿ' ಪರಾ. **ಹಡಪಾಳಿ :** ಕೇಳಿ ಬಂದಾರ ಜಱಿದಪೆಯೆನಲು ನಿನ್ನ ಹಡಪಾಳಿಯನ ದೇಕೆನ್ನನಱುದಱುದನಾಮಿಕಂಗಾಳಾದಪಾಯೆಂದು ನುಡಿದನಿಂತೆನಬಹುದೆ ಕೀಳುಮೇಲಂ ನೋಡದೆ (ಹಚಕಾ. ೧೧-೨೦). [ಪಡಪ+-ಆಳಿ₃]

**ಪಡಪು**₁, ಪಡಂಪು, ಪಡೆಪು, ಹಡಹು₁ (ನಾ). ೧. ಪಡೆದುದು ; ಗಳಿಕೆ ; ಸಂಪಾದನೆ ; ಪ್ರಾಪ್ತಿ : ಅನುವಿಪ ತಾಯ ಬಾರಿಸುವ ತಂದೆಯ ಕಾಯ್ಪಿನೊಳಿಕ್ಕೆಗುಟ್ಟುವಕ್ಕನ ಪಡಪೆತ್ತಿ ಬಯ್ವ ಕಿಱುದಂಗೆಯ . . . ತೀನಿಗೆ ಮೆಯ್ಯನೊಡ್ಡಿ (ಶಾಂತಿಪು. ೮-೧೦೫) ; ಗಂಡರ ಚಿತ್ತಮಂ ಪಡೆದೊಡಲ್ಲದೆ ಕೇಳ್ಪಡಪಿಲ್ಲ ಸೂಳೆಯೊಳ್ ಪೆಂಡಿರೊಳಲ್ಲದಿಲ್ಲ ಸುಖಮೆಲ್ಲಿಯುಂ (ಲೀಲಾವ. ೨-೯೯) ; ಗಟಪರೆಯೋಜರಾಗಿ ಆರೊರ್ವರೇನೊಂದಂ ತಂತಮ್ಮ ಪಡಪು ಕಾರಣಮಾಗಿ . . . ಇವರೆಂತವರೆಂತೆಂದವ ರಾಡಿದುದನಾಡುವುದುಂ ಇದು ಪುಸಿ ನನ್ನಿ ಗುಣದೋಷಮೆಂಬುದನಱಿಯದುದು (ಪಸಾರ.೪೫೯) ; ಇತ್ತ ಭಂಗದ ಪಡಪಿನೊಳು ರಿಪುವೊತ್ತ ತಿರುಗಿತು ಜವಗೆ ಬಾಣಸವಿತ್ತು ಫಲುಗುಣ ಮತ್ಸ್ಯನಾತ್ಮಜಸಹಿತ ನಡೆತಂದ (ಕುಪ್ಪಾವಿ. ಓಲಿಇ. ೯-೯೩ ಅಡಿಪದ್ಯ). ೨. ಲಾಭ ; ಪ್ರಯೋಜನ; ಫಲ : ಪಿರಿದಪ್ಪೀ ದ್ರವ್ಯಮಂ ಸಾರ್ಚಿ ಮೇದಿನಿಕಾಂತಾಪತಿಯಲ್ಲಿ ಮೆಚ್ಚುಗೊಳುವೆಂ ನಿಷ್ಕಾರಣಂ ಕೊಟ್ಟು ಕೆಮ್ಮನೆ ವಿಪ್ರೋನ್ನತನಲ್ಲಿ ಬರ್ಪ ಪಡಪೇನೆಂದಾ ದುರಾತ್ಮಂ ಮಹೀಶನನಾನಂದದಿನೆಯ್ದಿ ಪೇಟಿಕ್ಕೊಡೆ (ಧರ್ಮಾಮೃ. ೧೨-೧೮೬) ; ಕಂಡ ನೀನಿಲ್ಲದೆ ಪೇಟಿನಪ್ಪುದೀ ರಾಜ್ಯದ [ಪಡಪೆ] [ಪಾಠಾಂ.ಪಡಮೆ]ನಗೆ (ವರ್ಧಮಾ. ೫-೧೮) ; ವಿನಯನಿಧಿ ಮಾಳಿಯಕ್ಕಂ ಅನುಪಮಗುಣವಂತೆ ಬಾವಿಸೆಟ್ಟಿಗಳಂ ತಾಂ ಜಿನಭಕ್ತಿಯಿಂದೆ ಪಡೆದಳು ಜಿನಭಕ್ತರ್ಪ್ಪಡೆವ ಪಡಪು ಪೊಗಳಲುಂಬಂ (ಎಕ. XII, ಗುಬ್ಬಿ. ೫-೮; ಸು. 1200?) ; ನಿನಗೆ ಪಡಪಿಲ್ಲದೆಯೆ, ಬಱುದೆನ್ನನೇಕಿಂತು ನೋಯಿಪಯ್ ? (ಅಂತಿಗೊ. ೨೫-೫೨೭). ೩. ಹೆಚ್ಚಳ; ಆಧಿಕ್ಯ; ಬಹುಳತೆ : ದಿನಪನುದಯಾಚಳದ ಚಾವಡಿವನೆಗೆ ಬರೆ ಬಲವೆರಡು ಗಳಗರ್ಜನದಿ ಬಂದೊಡ್ಡಿದುವು ಕಳನೊಳು ಖತಿಯ ಪಡಪಿನಲಿ (ಕುಪ್ಪಾಭೀ. ೬-೮) ;

ನೀನು ಮನ ಬಂದಂತೆ ಮಾಡೆನಲಾ ನುಡಿಯ ಕೇಳುತ್ತ ಮೂಲಕ ದಾನವನು ತನ್ನೊಳಗೆ ಯೋಚಿಸಿ ಖತಿಯ ಪಡಪಿನಲಿ (ಮೂಲರಾ. ೧-೧೧). 'ಪಡಪುಗುಂದು', 'ಪಡಪುದೋಱು' ಪರಾ. **೪.** ಐಶ್ವರ್ಯ ; ಸಂಪತ್ತು ; ಧನ : ಅಣಲ ಪಡಪು ಬಸುರಿಯ ಪಣ್ಣಿಂಬಂತೆ ಸುದಂತಿಯನೇಗೆಯ್ದುಂ ಬಿಡಲಾಱದೆ ನೀಂ ಬೆಳಬೆಂಜನನಾಗಿ ಭೋಗಿಸುವೆನೆಂದು ಕೊಕ್ಕಱಗುದಿವೈ (ಧರ್ಮಾಮೃ. ೭-೨೨೯) ; ಒಡಲೊಳ್ಳಿತೆ ಚಿರಕಾಲವಿರದು ಆಯು ತಡವೊಳ್ಳಿತೆ ಸ್ಥಿರವಿಲ್ಲ ಪಡಪೊಳ್ಳಿತೆ ರಾಜ್ಯವಧಿಕನ ಸೊಮ್ಮದು ಬಿಡದೆಂತು ಜೀವಿಪೆ (ಅನಂಚ. ೪-೩೦). **೫.** ಹಿರಿಮೆ ; ಹೆಗ್ಗಳಿಕೆ ; ಅಗ್ಗಳಿಕೆ : ಆತಂ . . . ಬಿರುದರ್ಗರಿದೆನಿಸುವ ಬಾಧೆಯಂ ಮಾಡಿಸುವಂ ವೀರರ ಪಡಪಂ ಪಾಱಿಸುವಂ (ಧರ್ಮಾಮೃ. ೨-೬೬) ; ಚಾಮರದ ಧವಳ ಛತ್ರ ಪಟ ಪಳಹರದ ಪಡಪಿನಲೌಕಿ ನಡೆದುದು ಮುಂದೆ ಪಾಯದಳ (ಕುಸ್ಮಾಕ.೧೪-೩೩); ಲೋಕಂಗಳಂ ಪಡೆದೆನೆಂಬಗ್ಗಳಿಕೆ ನಮ್ಮೊಡನೆ ಸಲ್ಲದಾ ಪಡಪನುಳಿದೆಚ್ಚಱಿಕೆಯಿಂ ಕಾದು (ಚಿಬಪು.೪೯-೨೬). **೬.** ಉತ್ಸಾಹ; ಸಡಗರ ; ಸಂಭ್ರಮ : ಮಾರ್ಮುಗಿಲಾಡದಿಪ್ಪುದು ಬೊಜಂಗರ ಸಂದಣಿ ಪಟ್ಟಿತಟ್ಟಿಕಾಕರ್ಮದ ರತ್ನಭೂಷಣದ ಕಾಂತಿ ತಳಿರ್ತಪುದಿಂತು ಮಾಲಸೀ ಪೆರ್ಮೆಗೆ ನೋಂತಳೀ ಹರೆಯವಿಾ ಪಡಪೀ ಸೊಬಗೀ ವಿಳಾಸಮೇಂ ಕಾರ್ಮುಟಿಯೊಳ್ಪ ಸಂತಸಿವಳಂಗಳದೊಳ್ನೆಲೆಗೊಂಡುದಕ್ಕುಮೇಂ (ಅನಂಪು.೨-೧೯) ; ಮುಳಿಸಿನ ಬೆಳೆಸುವೆಜಗಿನ ವಿಪಂಚಿ ಪಡಪಿನ ಪಂಜರಂ . . . ಕುವರಿಯುಂ ಪರಿಯೆನಿಪುದಂಗಜನ ಘಾರಾಘಾರಿ ರಾಜಿಸುವ ಸೂಳೆಗೇರಿ (ಪದ್ಮರಾ. ೮-೮೬) ; ಒಡನೆ ತೆರಳಿತು ಭೀಷ್ಮ ಗುರು ಕೃಪ . . . ದುಶ್ಶಾಸನರು ಮೊದಲಾದ ಪಡೆ ಸಹಿತ ಕರಿರಥತುರಂಗದ ಪಡಪಿನತಿಸನ್ನಾಹದಲಿ (ಕೋಗಯು. ೧೭-೪೨). 'ಪಡಪುಗಾರ್ತಿ' ಪರಾ. **೭.** ಧೈರ್ಯ; ಧಿಟ್ಟತನ : 'ಪಡಪುಗೆಡು' ಪರಾ. **೮.** ಶೋಭೆ ; ಕಾಂತಿ : ಅಡರುವಜ್ಞಾನತಮಮಂ ತೆವರಿ . . . ಸುಜ್ಞಾನಚಕ್ಷುವೆನಿಪಾ ಪಡಪಿನ ಚಕೋರಿಗಳಿಗೊಳ್ಪುಣಿಸನೀವುತ್ತ ಮೃಡನಪ್ಪ ಶಾಂತಮಲ್ಲೇಶ್ವರನ ಶಾಂತಿಮಯವೆಡದಕ್ಷಿಯನ್ನ ಚಿತ್ಕಲೆಯ ಚಂದ್ರಮನಾಗಿ ಬಿಡದಮರ್ದುಗಱಿಯಲಣಿಶಂ (ವೀಶೈಪು. ೭-೧೦-೧). **ಪಡಂಪು : ೪.** ಸುರತಕಲೆಗಳ ಹೆಂಪು ಕಂದರ್ಪಕ ಪಡಂಪು ಪುರಿಯೇಱಿ ದಶದಿಶೆಯ ಪೊಂಪು ಜೊನ್ನದ ಹೊಂಪು ಮೆಱೆದುದು (ನಂದಿಮಾ. ೧೯-೧೦). **ಪಡೆಪು : ೧.** ಕಡು ತಪದಿಂದೆ ನಿನ್ನ ಪಡೆಪಾವುದೊ ಗಾವಿಲ ಸಗ್ಗಮಲ್ತೆ (ಪಂಪಭಾ. ೭-೯೩) ; ದರ್ಶನದೊಳಂ ದರ್ಶನದೆಂಟಂಗದೊಳಂ ಹೀನನಾಗಿ ಚಕ್ರವರ್ತಿಪದವಿಯುಮಂ ದೇವೇಂದ್ರಪದವಿಯುಮಂ ಮಹರ್ಧಿಕಪದವಿಯುಮಂ ಪಡೆವ ಪಡೆಪಂ ಕಿಡಿಸದೆ (ಧರ್ಮಾಮೃ. ೯-೩) ; ಈಯುಱಿಯೊಡಲಂ ಕಡು ಮೋಹದೆ ಮಚ್ಚಿರ್ದೊಡೆ ಪಡೆವೈ ನೀಂ ಮಚ್ಚುವೆತ್ತ ಕಳ್ಳನ ಪಡೆಪಂ [ಪಾಠಾಂ. ಕಡಪಂ, ಪಡಪುಂ] (ಜೀವಸಂ. ೧೨೫-೭) ; ಆ ಪಡೆಪುಮಂ ಕಂಡು ಬಿಗುರ್ತುಂ ಕೂರ್ತಂತೊಂದೆಡೆಗೊಯ್ದು ಸ್ಫಟಿಕಶಿಲಾಗ್ರಮನೇಱಿದೊಡಪೂರ್ವಲಾಭಮೆನೆ (ಬಂಹರಿ. ೮-೪೦ ವ) ; ಅಟಲ್ಕೆಯಪಮಾನಗಳ್ ನಿನ್ನ ಪಡೆಪು (ಬದ್ಧಪ್ರ. ೨೫-೫೩೬) ; ಗನ್ನಗತಕದಿನಾಳಿಯಿಂದೊಡಲ್ಪೊರೆದಿಂತು ಜೀವಿಪುದು ಪಡೆಪಾದುದೆನಗೆ (ಸಂಸಪ. ೨೪-೧೩). **೪.** ಅಡಿಗಡಿಗೆ ನಡೆವ ಪೆರ್ವಡಗುಗಳ ಬೆಡಗುಗಳ . . . ತಡಿತಡಿಗಡರ್ವ ಜಲದೊತ್ತುಗಳ ಮುತ್ತುಗಳ ಪಡೆ[ಪಾಠಾಂ. ಡ]ಪಿನಿಂ ಕಡಲೆಸೆದುದು (ಚಿಬಪು. ೨-೪). **೬.** ಡಾಳಿಸುವ ವಿವಿಧ ಚಮರಾಳಿಯಿಂ ಪಾಳಿಯಿಂ . . . ಥಳಿಳಿಡುವ ಬಹುವಿಧದ ವಾದ್ಯದಿಂ ಚೋದ್ಯದಿಂ ಪಡೆ ಪಡೆಪಿನಿಂ ನಡೆದುದು (ಚಿಬಪು. ೨೬-೧೦). **೯.** ಭಾಗ್ಯ; ಅದೃಷ್ಟ: 'ಪಡೆಪಾಳಿ' ಪರಾ. **ಹಡಹು$_1$ : ೨.** ಮನೆಯನೊಪ್ಪಿಸಿ ಕೊಟ್ಟವಂಗೆ ಹಿಂದೆಸೆಯ ಹಂಗೇಕೆ . . . ಗುಡಿಯ ಕಟ್ಟಿದ ಮತ್ತೆ ಹಡಹಿಲ್ಲದೆ ಅವರಡಿಯನಱಸಲೇಕೆ (ಸರ್ವವ. ೩೭-೧೮೩). **೪.** ಪಿರಿದೆಮಗೆ ಕಣ್ಣಾಗಿ ಗತಿಯಾಗಿ ಪೊಬ್ಬುಳ್ಳ ತರುಣ ನಿನ್ನನ್ನಗಲ್ದಿರಲಾಱೆವಾವಗಲದಿರು ಹಡಹು [ಪಾಠಾಂ. ವು] ಬೇಡ (ಸೋಮುಚ. ೧-೯೬). **೧೦.** ಸೂಳೆಗಾರಿಕೆಯಿಂದ ಬರುವ ಗಳಿಕೆ ; ಒತ್ತೆಹಣ : ಒರ್ವಳ್ . . . ಕಾಯ್ದಾಱಿದ ಪಾಲವೊಲ್ನನಿಯನಿನ್ನುಪಭೋಗಿಸಲಾರ್ಗೆ ಮಾಡಲೋ ಎಂದು ತನ್ನ ಮಗಳ ಮೇಲಪ್ಪ ಹಡಹಿಂಗೆ ಮುಯ್ಯಾಂತಳ್ (ಲೀಲಾವ. ೨-೯೦ ವ) ; ಪಡಿಗಳಂ ಕಣಜದೊಳಳೆಯಬೇಕೆಮ್ಮ ಮಣಿಹವನು ಕೆಡಿಸಿ ಹೋಗಲು ಬಾರದಿಂತೆರಡೆಡೆಯೊಳೋಲಗವೆಂತು ನಿನಗಳವಡುವುದಿದು ಬಾಣತಿಯ ಸೂಳೆಯ ಪಡಪಿಫಣದದಲಿ (ಬಸವು. ೫೩-೧೨) ; ಆಲಸ್ಯಂ ಗಡ ಹುಸಿ ಗಡ ಹಡಹಿನ ಮೇಲಣ ಚಿತ್ತಂ ಗಡಯೆನುತೊರ್ವಳ್ ಬಾಲಹರಿಣಲೋಚನೆ ನುಡಿದಳ್ (ಜಯಕಾ, ೧೪-೫೩); ಪಡೆವೆಟ್ಟೆ ನಿಂದೆ ತಡೆದು ಬಂದೆ ಪೆಸರ ಪಲ್ಲಡಿಸಿ ಕರೆದೆ ನೀನೆಂದು ಹಡಹಿನಾಸೆಗೆ ತಪ್ಪ ಹೊಱಿಸಿ ವಿಟರ ಜಡಿನುಡಿದಳವಳು ಬೆಲೆವೆಣ್ಣು (ಕುರಾಸಾಂ. ೨೮-೭೬).

**ಪಡಪಾಗು**=**೧.** ಲಾಭವಾಗು ; ಪ್ರಯೋಜನವಾಗು : ಜಾಣು ಜಗುಳಿತು ಹೊಯ್ಲು ಮೊನೆ ಮುಂಗಾಣಿಕೆಗೆ ಲಟಿಕಟಿಸಿದುದು ಬರಿ ರೇಣು ಜನನದ ಜಾಡ್ಯವೇ ಪಡಪಾಯ್ತು ಪಯಗತಿಗೆ (ಕುಸ್ಮಾಗ. ೬-೩೦). **೨.** ಕಾಂತಿಯುಕ್ತವಾಗು ; ಅಂದವಾಗು : ಸಂದಣಿಪ ಛತ್ರ ಧ್ವಜಾಳಿಯಿಂ ಧೂಳಿಯಿಂ ಕುಂದದೆಸೆವದ್ಭುತರಸಂಗಳಿಂ ಕಂಗಳಿಂ ನೋಡೆ ಪಡೆ ಪಡಪಾದುದು (ಚಿಬಪು. ೪೫-೨೩).

[ಪಡೆ$_1$ +-ಪು$_2$./ತಮಿ. ಪಟ್ಟಿಪ್ಪು ; ಮಲ. ಪಡಪ್ಪು ; ತೆಲು. ಪಡಪು]

**ಪಡಪು$_2$** (ನಾ). ತೋಟ : ಅದರಲ್ಲಿ . . . ಕಬ್ಬಿನ ಹಿತ್ತಿಲುಗಳು ಮತ್ತು ತೆಂಗಿನ ಪಡಪುಗಳು ಸೊಗಸಾಗಿ ಕಂಗೊಳಿಸುತ್ತಿದ್ದುವು (ಈಕಥೆ.೧).

[←ತಮಿ. ಪಟಪ್ಪು, ಪಟಪ್ಪೈ]

**ಪಡಪುಗಾರ್ತಿ,** ಪಡೆಪುಗಾರ್ತಿ (ನಾ). **೧.** ಹಣವನ್ನು ಸಂಪಾದಿಸುವ ಹೆಣ್ಣು ; ಗಳಿಸುವವಳು : "ಪಡಪುಗಾರ್ತಿಯೆಂದು ಗಱಿಸಾಳಿವೆಣ್" (ಕಶಸಾ. ೬೨-೩೪೦) ; "ಪಡಪುಗಾರ್ತಿಯೆನೆ ಗಱಿಸಾಳಿವೆಣ್ಣಕ್ಕು" (ಕಬ್ಬಿಕ್ಕೈ. ೨೮). **೨.** ಸಂಭ್ರಮವುಳ್ಳವಳು ; ಉತ್ಸಾಹದಿಂದ ಕೂಡಿದವಳು : "ಪಡಪುಗಾರ್ತಿಯುಮೆನುತ್ತೆಂದೊಡನೆಯೆ ತಾಂ ಹೊನಹುಗಾರ್ತಿಯೆನೆ . . . ಸಂರಂಭವತಿಗೆ ನಾಮವಿದೆಂಬರ್" (ಕವಿಕಂ. ೧೬೯). **೩.** ಠೀವಿಯುಳ್ಳವಳು ; ಗತ್ತಿನಿಂದ ಕೂಡಿದವಳು : "ಅಧಿಕ ಠೀವಿಯುಳ್ಳಾಕೆಯೊಳ್ ಪಡಪುಗಾರ್ತಿಯೆನಿಕ್ಕು" (ಕಶರ. ೫೯). **ಪಡೆಪುಗಾರ್ತಿ: ೧.** "ಗಱಿಸಾಳಿವೆಣ್ಣನಲು ಪಡೆ[ಪಾಠಾಂ. ಡ]ಪುಗಾರ್ತಿಯೆನಿಕ್ಕು" (ಶಬ್ದಮಂ. ೭೫).

[ಪಡಪು$_1$ +-ಗಾಜ(<-ಕಾಜ)+-ತಿ$_1$(<-ಇತ್ತಿ)]

**ಪಡಪುಗುಂದು** (ಕ್ರಿ). ಆಧಿಕ್ಯವಿಲ್ಲದಾಗು ; ಕುಗ್ಗು : ವರತಪದ ಪೆಂಪಿಂಗೆ ಧರಣಿ ಕಂಪಿಸೆ ಜಲಧಿ ಕರಮೆ ಕದಡಲ್ . . . ಸುರುಚಿರ ವಡಬವಹ್ನಿ ನೆಱೆ ಪಡಪುಗುಂದಲ್ (ಅರಾಚ. ೫-೨-೨೨).

[ಪಡಪು$_1$ + ಕುಂದು$_1$]

**ಪಡಪುಗೆಡು,** ಪಡೆಪುಗಿಡು (ಕ್ರಿ). **೧.** ಗಳಿಕೆಯು ತಪ್ಪು ; ಲಾಭವಿಲ್ಲದಾಗು. **೨.** ಧೈರ್ಯಗೆಡು ; ದಿಕ್ಕು ತೋಚದಂತಾಗು ; ಕಂಗೆಡು : ಪಡೆ ಪಡಪುಗೆಟ್ಟು ದೆಸೆದೆಸೆಗೋಡುತಿರ್ಪುದಂ ತಡೆತಡೆದು ಕಡುಗಲಿಗಳಡಗೆಡಹುತಿರ್ಪುದಂ . . . ಫಲುಗುಣಂ ನೋಡಿ ಖತಿಯಿಂದೆ ಘುಡುಘುಡಿಸಿ ಕಿಡಿಕಿಡಿಯಾದನು (ಜೈಮಿಭಾ. ೨೨-೪೪). **ಪಡೆಪುಗಿಡು: ೧.** ಬಡಿಯೊಳ್ ನಿಜತನಯನ ತಲೆಯೊಡೆವಿನೆಗಂ ಬಡಿದ ಕಾರಣಂ ಕೊಂಡುಯ್ದುರ್ ಪಡೆಪುಗಿಡುವಿನೆಗಮೆಂದಾ ಕಡುಲೋಭಂ ತನ್ನ ಕಾಲ್ಗಳಂ ಪಿಡಿದುಡಿದಂ (ಆದಿಪು. ೫-೨೦). [ಪಡಪು$_1$ + ಕೆಡು$_1$]

**ಪಡಪುದೋಱು** (ಕ್ರಿ). ಹೆಚ್ಚಳವನ್ನು ತೋರು ; ಅತಿಶಯವಾಗಿರು : ರುಂಡಮಾಲೆಗಳಿಂದೆ ಪಡಪುದೋಱುವ ನೀಲಕಂಠಲಿಂಗಂ **ಪೊ**ರೆಗೆ **ಪೊ**ಡಮಿಗಡಣಮುನಣಿಯುರಂ (ಅರಾಚ. ೩-೧೬-೧) ; ನಿಡಿದು ಮುವ್ವತ್ತುಯೋಜನವನಿತು ಯೋಜನವೆ ಗಡಿ ಹರಹಿಗುಚ್ಛ್ರೀದವೊಂದು ಯೋಜನವಿಂತು ಪಡಪುದೋಱುವ ಶ್ರೀಗಿರಿಯೊಳು . . . ಭ್ರಮರೆಯೊಡನೆ ಮಲ್ಲೇಶನಿರ್ಪಂ (ರಾಘಚ. ೧೭-೪೩). [ಪಡಪು$_1$ + ತೋಱು]

**ಪಡಪುೞಿ** (ಕ್ರಿ). ಗಳಿಕೆ ಇಲ್ಲದಾಗು ; ಸಂಪಾದನೆಯನ್ನು ಕಳೆದುಕೊಳ್ಳು : ನುಡಿ ನುಡಿಯೆಂ ಚಲಂ ಚಲಮೆ ಬೇಟ್ಟುದೆ ಬೇಟ್ಟುದದೇಕದಂತೆ ಚಃ ಪಡಪುೞಿದೆಲ್ಲರಂ ನಗಿಸಿಕೊಂಡಪೆ (ಸೂಕ್ತಿಸು. ೮-೪೪೩).
[ಪಡಪು$_1$ + ಉೞಿ$_1$]

**ಪಡಪೆ** (ನಾ). [ಅಶ್ವ] (?) : ಹೀನಧ್ರುವನುಂ ಪ್ರೋಥಸ್ಥಾನ ವಳಿತ್ರಯನುಮಳಿಪನುಂ ಪಡಪೆಯುಂ [ಪಾಠಾಂ. ಪಡೆಪೆಯುಂ, ಪೇಡಿಯುಮಪ್ಪಾ]ಮತ್ಯಾನತಸಿರನುಂ ಲಂಡಸ್ಥಾನಾವರ್ತನುಮದಾಱುವರ್ಷದೊಳೞಿಗುಂ (ಅಶ್ವಶಾ. ೬-೭). [ ? ]

**ಪಡಪೋಶಿ** 'ಪಡಪೋಸಿ' ನೋ.

**ಪಡಪೋಷಿ** 'ಪಡಪೋಸಿ' ನೋ.

**ಪಡಪೋಸಿ**, ಪಡಪೋಶಿ, ಪಡಪೋಷಿ, ಫಡಪೋಶಿ, ಫಡಪೋಸಿ (ಗು). ೧. ಕೆಲಸಕ್ಕೆ ಬಾರದ ; ನಾಡಾಡಿಯಾದ ; ತೀರ ಸಾಮಾನ್ಯವಾದ : ಕೋರಾಪಿಟ್ ಆಗೋದು ಯಾವ ಮಹಾಕಷ್ಟ ಅಂತ . . . ಪಡಪೋಸಿ ಪೆ **ಲ್ಯಾ**ನ್ನಿಗಾದ್ರೆ ಅದು ಕಷ್ಟ (ಭೀಮಕಾ.೨೦೭); ತೇಜಪ್ಪನದು 'ಪಡಪೋಸಿ' ವೆವಲ್ಲ, ಬೆಳಿಗ್ಗೆ ಎದ್ದರೆ ಸಂಜೆಯುವರೆಗೂ ದುಡಿಯುವನು (ಸಿಸಮ. ೨೦). (ನಾ). ೨. ಎಚ್ಚರಿಕೆಯಿಲ್ಲದಿರುವಿಕೆ ; ಅಲಕ್ಷ್ಯ ; ಅಜಾಗರೂಕತೆ : ಕೆಲಸ ಹಣ್ಣು ಮಾಡಬೇಕು ಮುತ್ತಮ್ಮ. ಪಡಪೋಸಿ ಮಾಡಿದರೆ ಆಗಾಕಿಲ್ಲ (ಶನಿಸಂ. ೧೫೨) ; ಯಾರ ಹತ್ರವೊ ನಿನ್ನ ಈ ಪಡಪೋಸಿ (ಮಲೆಮ. ೩೯೩). **ಪಡಪೋಶಿ :** ೧. ಏನು ನನ್ನನ್ನು ಪಡಪೋಶಿಜನ ಎಂದು ತಿಳಿದಿದ್ದಾರೆಯೇ ಈ ಹೆಂಗಸರು (ನಡೆದಾ. II, ೧೨೨೮);ನಮ್ಮ ಸಂಕಪ್ಪಗೌಡರು ತೀರ ಪಡಪೋಶಿ ಜನ ಅಲ್ಲವೇ ? (ಮುಗಿಯು. ೧೩). **ಪಡಪೋಷಿ :** ೩. ಬೆಲೆಯಿಲ್ಲದುದು ; ಕೀಳು ; ಕಳಪೆ : ಹಾಲಾಡಿಮೇಳದ ಆಟ ಅಷ್ಟೇನೂ ಪಡಪೋಷಿಯಲ್ಲ (ಸ್ವಪ್ನಹೊ. ४೦). ४. ಬೆಲೆಯಿಲ್ಲದ ವ್ಯಕ್ತಿ; ಕೀಳು ವ್ಯಕ್ತಿ : ನಿಮ್ಮನ್ನು 'ಬನ್ನಿ' ಎನ್ನುವುದು ಮನೆಯಲ್ಲಿ ಕಾಯಿಲೆಯಿದ್ದಾಗ ಮಾತ್ರ ಎಂದು ತಿಳಿದಿದ್ದೀರಾ ? ಅಷ್ಟು ಪಡಪೋಷಿಯೇ ನಾನು ? (ಜಾರುದಾ. ೨೧೮). **ಫಡಪೋಶಿ :** ೨. 'ಫಡಪೋಶಿತನ' ಪರಾ. **ಫಡಪೋಸಿ :** ೧. ಅಷ್ಟರಲ್ಲಿ ಲಕ್ಷ್ಮೀಪತಯ್ಯ ಫಡಪೋಸಿ ಬಾತ್ಮಿದಾರನೆಂದು ತಿಳಿದು ನಿರಾಕರಿಸಲ್ಪಟ್ಟಿದ್ದ (ಕೆಲನೆ. ೧೭೯). ೫. ಬುಟಾಳ; ಸುಳ್ಳ ; ಮಾತುಗಂಟಿ" (ಜಾನಕೋ. ೧೮). [← ತುಳು. ಪಡಪೋಸ್, ಪಡಪೋಸು, ಪಡ್ಪೊಸಿ, ಫಡ್ಪೋಸ್, ಫಡ್ಪೋಸಿ]

**ಪಡಬೀಳು** 'ಪಡುಬೀಳು' ನೋ.

**ಪಡಭೂಮಿ** 'ಪಡುಭೂಮಿ' ನೋ.

**ಪಡಮು** (ನಾ). ೧. ಚೀಲ, ಗುಡಾರ ಮೊದಲಾದುವುಗಳಿಗೆ ಉಪಯೋಗಿಸುವ ಒಂದು ಬಗೆಯ ದಪ್ಪವಾದ ಒರಟುಬಟ್ಟೆ: ಆ ಪಟಗಳನ್ನು ಕಾರವಿಯಿಂದಾಗಲಿ ಪಡಮುದಿಂದಾಗಲಿ ಮಾಡಿರುತ್ತಾರೆ (ಮುಂಬಯಿ. ೩-೧೧೩). ೨. ಗೋಣಿ ; ತಟ್ಟು : ಮನುಷ್ಯನು ಪಡಮುದ ಮೇಲೆ ಮಲಿಕೊಳ್ಳುವನು (ಕಭಾಗೆ. ೫೭).
[← ಹಿಂ. ಮರಾ. ಪಡಮು]

**ಪಡಮೂಲೆ** (ನಾ). ವ್ಯಾಪಾರದ ಸರಕುಗಳನ್ನು ಶೇಖರಿಸುವ ಸ್ಥಳ ; ಒಟ್ಟುಗಟ್ಟಲೆ ವ್ಯಾಪಾರವಾಗುವ ಸ್ಥಳ : ಧಾರವಾಡಜಿಲ್ಲೆಯಲ್ಲಿ ವ್ಯಾಪಾರದ ಮುಖ್ಯಗ್ರಾಮಗಳೆಂದರೆ ಪಡಮೂಲೆ ಹತ್ತು ಇರುತ್ತವೆ (ಕಭಾಗೆ. ३೦४) ; ಲಾಡಖಾನಪಟ್ಟಣವು ಕಾಳಿನ ಪಡಮೂಲೆಯ ಸ್ಥಳವು (ಮುಂಬಭೂ. ೬೧). [?]

**ಪಡಲ**$_1$, ಪಟಲ$_1$, ಪಟ್ಟಲು, ಪಡವಲ, ಪಡಳ, ಪಡುವಲ, ಪಡೋಲ, ಹಡಲ (ನಾ). ಒಂದು ಬಗೆಯ ತರಕಾರೀ ಬಳ್ಳಿ ಮತ್ತು ಅದರ ಕಾಯಿ : ಕುದಿಯಿಸುಗೆ ಸುಣ್ಣದಿಂ ಕೈಪೆದೊಂಡೆಯಂ ಕೋಕಿಲಾಕ್ಷಿವೆರಸು ಸಿತೇರಂಡದ ತೊಟ್ಟಯೆಲೆಗಳಿಂ ಪಡಲದ ಕಾಯುಂ ತೆಗಪುಗವಱಿ ಕೈಪೆಗಳೞಿಗುಂ (ಲೋಕೋಪ. ೮-೩೦) ; ಕಿಱುಕುಸಾಲೆ ಬೇವಿನೆಲೆ ಪಡಲಂ ಶರ್ಕರೆ ಪಾಚಿಸರ ಕಷಾಯಂ ಪರಿಹರಿಕುಂ ರಕ್ತಪಿತ್ತಮಂ ತಕ್ಷಣದಿಂ (ಕಲ್ಯಾಕಾ. ೫-೮) ; ಚಾರುತರದುಪದಂಶದೊಳಗೆ ಕೂಷ್ಮಾಂಡವಾ ಪಡಲ ಬದಣೆಗಳೊಳೆಸೆವಾ ಕಾರವಲ್ಲಿಗಳಲಾಬುಗಳು ಸೂಕ್ಷ್ಮ ಬೃಹತಿ . . . ಫಲವಿವು ಸೇವ್ಯ (ವೀಶೈಪು. ೭-೧೦-೭೫); ಹೀರೆ ಸೋರೆ ಮುಂತಾದುವಂ ಬಿತ್ತಿದ ಕಾಯ್ದೋಂಟದೊಳ್ಬೆಳೆದ ಪಡಲ ಹಾಗಲಂ ಮೊದಲಾದೊಳ್ಗಾಯ್ಗಳುಮಂ ಕಳೆವುದು (ಚಿಕಪಂ. ೧೧೦-೨). **ಪಟಲ**$_1$**:** ಕೆಂಡಗಾಯತ್ ಕುಸುರಿ ಬಜ್ಜಿಗಳ ವಿಗೆ ಸವಿವುತಂ ತೊಂಡೆದಾಳಿದ ಪಟಲದಾಳಿದಮಂ ಸವಿವುತಂ (ಲಿಂಗಪು. ೧೬-೧೬). **ಪಟ್ಟಲು :** ಹರಿವೆಯೊಣಗಿತು ಪಟ್ಟಲಿಟ್ಟಲ್ಲೆ ಪುಳವಾಯ್ತು ಮರಿಸೌತೆ ಮುಸರಾಯ್ತು ಹೀರೆ ನೀರೇರಿದುದು (ಪಲಾಂಡು. ೨೩). **ಪಡವಲ :** "ಪಟೋಲ—ಪಡವಲ"(ಬಾಹಟೀ. ೨-೨-೬೦ಪ); ಬದನೆ ಹೆಗ್ಗುಳ್ಳ ಪಡವಲ ಪಲಸು. . . ತೊಂಡೆಯು ಹಲವು ಫಲಕಂದಗಳ ಶಾಖಾವಳಿಯ ಸವಿಯೊಘ್ಘರಣೆ ಘಮಘಮಿಸಲಿಕೆ ಬಡಿಸಿದರು (ಅನಂರಾ. ೬-೨೫-೩೯).'ಕಹಿಪಡವಲ' ಪರಾ. **ಪಡಳ :** "ಪಡಳಂ ಪಟೋಳವದು ಕುಲಕಂ" (ಮಂಗರಾ. ४४-४४). **ಪಡುವಲ:** "ಪಡವಲ (ಪಡುವಲ)—ಪಟೋಲಿಕಾ" (ತದ್ಭಕೋ. ೨೩); "ಪಟೋಲ, ಪಟೋಲಿಕೆ, ಪಟೋಳ, ಪಟೋಳಿಕೆ—ಪಡುವಲಕಾಯಿ" (ಗಂಗಾಮ. ೧೯४). **ಪಡೋಲ :** (ಪಂಡಿತ. ೨೮೩). **ಹಡಲ :** "ಕೋಶಾತಕೀ, ಪಟೋಳೀ—ಈ ೨ ಹಡಲಂ" (ಹಲಾಯು.೩४-४೯); ಹಾಗಲ ಹಡಲಂ . . . ಬದಣೆಗಳಿಂ ಲೇಸಾಗಿರೆ ಮಾಡಿದ ಸಲೆ ಮೇಲೋಗರಮಂ ತಂದು ಬಡಿಸಿದರ್ ಮಾನಿನಿಯರ್ (ಧರ್ಮಪ. ೨-೫೮) ; ಕತ್ತರಿಗುಳ್ಳ ಹಡ[ಪಾಠಾಂ. ಮಾದ]ಲ ಹಾಗಲ ಕೂಗರಿ ಬದನೆ ಮೊದಲಾದ ಕಾಯ್ಗಳ ರಸಂಗಳ ತೆಗೆದು (ಸೂಪಶಾ. ೫-४೧).
[< ಪ್ರಾ. ಪಡೋಲ./ಸಂ. ಪಟೋಲ./ತಮಿ. ಪುಟಲ್, ಪುಟಲೈ, ಪುಟೋಲ್ ; ಮಲ. ಪುಟ್ಟಲ್, ಪಿಟ್ಟಲ್ ; ತುಳು. ಪಟ್ಲ ; ತೆಲು. ಪೊಟ್ಲ./ಮರಾ. ಪಡುವಳ್, ಪಡೋಳ್]

**ಪಡಲ**$_2$ (ನಾ). ೧. ತಟ್ಟೆ ; ಹರಿವಾಣ : ಅಲೆದಮೃತದೊಡನೆ ತಾರಾಲಲನೆಯರಡಿದಳಿರನೂಡಲೆಂದು ಪದಂಗೆಯ್ದಲತಗೆಯ ಪಡಲದಂತೆವೊಲಲೆದುದು ಪರಿಪಕ್ವಬಿಂಬಮಂ ವಿಧುಬಿಂಬಂ (ಲೀಲಾಪ.೨-೭). ೨. ಕಣ್ಣುಗುಡ್ಡೆಯ ಮೇಲಿನ ತೆಳುವಾದ ಪದರ,-ಪೊರೆ : ಪಡಲಂ ಕವಿದೊಳಪುಗೆ ಕಣ್ಗಡುವೊಡೆ ನೀರ್ ಸುರಿಯೆ ಪಕ್ಕು ಮೆತ್ತಿರೆ ಮುಷ್ಕಂ ಸಡಿಲಿರೆ ತುರಗಕೆ ಮರಣಂ ತಡೆಯದೆ ಸಮನಿಸುಗುಂ (ಅಶ್ವಶಾ. ೬-೩೯).
[< ಪ್ರಾ. ಪಡಲ./ಸಂ. ಪಟಲ]

**ಪಡಲಗೆ,** ಪಟ್ಟಳಿಗೆ$_2$, ಪಡಲಿಕೆ, ಪಡಲಿಗೆ, ಪಡಲ್ಗೆ, ಪಡಳಿಕೆ, ಪಡ್ಡಲಿಗೆ, ಹಡಲಗೆ, ಹಡಲಿಕೆ, ಹಡಲಿಗೆ, ಹಡಳಿಗೆ, ಹಡ್ಡಲಗೆ, ಹಡ್ಡಲಿಗೆ, ಹೆಡಲಿಗೆ, ಹೆಡಳಗೆ(ನಾ). ೧.(ಬಿದಿರಿನ)ಅಗಲವಾದ ತಟ್ಟೆ ; ಚಿಬ್ಬಲು : ಮುನ್ನಂ ಪೂಜಿಸಿ ಶರವಮಂ ರನ್ನದ

ಪಡಲಗೆಯೊಳಿಟ್ಟು ನಿಜಪರಿವಾರಂ ತನ್ನುಳ್ಳನಿತುಂಬೆರಸು ಭಯನ್ನಡುಕ ಮನೀಯೆ ಬಂದು ಕಂಡಂ ದಿವಿಜಂ (ಆದಿಪು. ೧೨-೧೧೦) ; ಎಡೆಯೆಡೆಯ ಪೊನ್ನ ರನ್ನದ ಪಡಲಗೆಗಳೊಳೊಗೆದ ಜಾಗದಡಕಿಲುಗಳುಂ (ವರ್ಧಮಾ. ೩-೮೬) ; ಮಾಲೆಗಾರ್ತಿಯರೆತ್ತಿದ ಬೆಲೆವೂವಿನ ಸರಂಗಳನಲರಂಬಂಗೆ ಪೊದೆಗೆದಱುವಂತೆ ಕೆದಱಿ ಪರಿಮಳಭಂಗಭಯಮನವಲ್ದಿರೊಳ್ ತಗುಳ್ಚಿ ಪಡಲಗೆಯುಂ ಮಗುಟಿ ಪುಗಿಯಿಸಿಯುಂ (ಚಂದ್ರಪು. ೮-೪ ಪ). **ಪಟ್ಟೆಳಿಗೆ$_2$ : ೨.** ಹೂಜಿ ; "ಕರಗ" (ಚತುಃ. ಕಿ. II, ೮೮); "ಪಟ್ಟಳಿಗೆ-ಪಟಲಕ" (ತದ್ಭಕೋ. ೨೩). **ಪಡಲಿಕೆ : ೧.** ರತ್ನದ ಪಡಲಿಕೆಯೊಳಗಿದ್ದ ಪರಮಾತ್ಮ ರತ್ನವರ್ಣನೆಯು ಶಾಸ್ತ್ರವನು ರತ್ನದ ಬೆಳಗಿನೊಳೋದಿದರಬಲಾರತ್ನಗಳಾನಂದದಿಂದ (ಭರಚ. ೧೮-೧೧೭). **ಪಡಲಿಗೆ: ೧.** ಪೊನ್ನ ಪಡಲಿಗೆಗಳೊಳೊಟ್ಟಿದ ದೇವಾಂಗವಸ್ತ್ರಂಗಳುಮನನೇಕ ವಿಧದ ತುಡುಗೆಗಳುಮನೆನಿತಾನುಂ ತೆಱದ ಸುಗಂಧದ್ರವ್ಯಂಗಳುಮನ ರಸಿಯರ್ಗಮರಸುಮಕ್ಕಳ್ಗಮಿತ್ತು (ಪಂಪಭಾ. ೫-೭೭ ವ) ; ಆರಳ ಪಡಲಿಗೆ ಥಾರೆವಟ್ಟಲು ಭರಣಿ. . . ಹಿರಿಯ ಚಿತ್ರದ ಭಿತ್ತಿಯಿಂ ಪೊಸಪರಿಯೆನಿಸಿ ರಾಜಿಸಿದಪುದು ಗಣಿಕಾನಿಕೇತನವು (ಬಸವು. ೧೧-೧೨) ; ಅತಿಥಿಗಳ ಬರವ ಕಾಣುತಾ ಕಾಂತೆ ಪೂಜಾದ್ರವ್ಯಮಂ ಪಡಲಿಗೆಯೊಳಿಟ್ಟು ಬಾಗಿಲೊಳ್ಬಂದು ನಿಲಲು (ಸಮ್ಯಕೌ. ೫-೩) ; ಇಳಿದರಗಿಳಿಗಳೆಳಸಿ ಪಾಯೆ ಕಂಕಣದುಲುಪಿಂದ ತೊಲಗಿಸುತವನು ತಳೆದಲೋರ್ವಳು ಪಕ್ವಫಲಗಳಿಂ ತೀವಿದ ತೆಳುವಳುಕಿನ ಪಡಲಿಗೆಯ (ಕುರಾಸಾಂ. ೭-೮೩). **ಪಡಲ್ಗೆ : ೧.** ಮಿಸುಗುವ ಪರ್ಣಶಾಲೆಯೊಳಪೊಕ್ಕು ಪಡಲ್ಗೆಯ ಪೂವನೊಕ್ಕು . . . ಪಲ್ಗಿರಿದೋಡಿ ಪಾಯ್ದು ಲಂಘಿಸಿ ತರುವೇಱಿ ತಾಪಸರ ಮಕ್ಕಳ ನೇಡಿಸಿತೊಂದು ಮರ್ಕಟಂ (ತ್ರಿಷುವಿ. ೧-೬೧). **ಪಡಳಿಕೆ : ೧.** "ಪಡಳಿಕೆಯೆನಲ್ ಚಿಬ್ಬಲದು" (ಮಂಗರಾ. ೬೧-೨೦). **ಪಡ್ಡಲಿಗೆ : ೧.** ತತ್ಪ ಣ್ಯಾಂಗನೆಯು . . . ಪಳೆ ಪೊಸ ಭುಜಂಗರ್ಕಳಾರಾರು ಮಾತನಾಡಿಸದಾದರಾಗ ಬಂಡಾರಚೀಲಂ ಪಡ್ಡಲಿಗೆ ಕರಡೆ ಬಂದು ತಿರಿದುಂಡಳಲ್ವಾವಧಿಯೊಳು (ಮಹಾಂತೇ. ೩೦-೧೯). **ಹಡಲಗೆ : ೧.** "ಹಡಲಗೆ(ಹಡಲಿಗೆ) —ಪಟಲಕ = ಪಡಲಗೆ" (ತದ್ಭಕೋ. ೪೮) ; ಟಕಾರಕ್ಕೆ ಡಕಾರಂ . . . ಪಟಲಕ—ಹಡಲಗೆ (ಶಮದ. ೨೫೫ ಪ್ರಯೋ). **ಹಡಲಿಕೆ : ೩.** (ವಿಶೇಷವಾಗಿ ಕೆಲವು ಪ್ರದೇಶಗಳಲ್ಲಿ) ಎಲ್ಲಮ್ಮನ ವಿಗ್ರಹವನ್ನು ಕೂರಿಸಿ ಹೊರುವ ಬುಟ್ಟಿ : "ಹಡಲಿಕೆ—ಪಡಲಿಗೆ, ಅಂಚುಳ್ಳ ಚಿಬ್ಬಲು, ಹರಿವಾಣ; ರೇಣುಕಾಭಕ್ತರು ಹೊರುವ ಹಡಲಿಗೆ" (ಕಸ್ತೂಕೋ. ೯೨೭). **ಹಡಲಿಗೆ : ೧.** ಕುಸುಮಸರನ ಪಸುರ್ಗಣೆಯ ಪೊದೆಗೆ ಪುರುಡಿಸುವ ಜಾಗದ ನೆಲೆಯ ಹ[ಪಾಠಾಂ.ಹೆ]ಡಲಿಗೆಗಳೊಳಂ . . . ಸಿರಿಗನ್ನಡಿಯ ತಳಿರ್ಗಳಶದ ವಿಳಾಸದೊಳಮಸದಳಮಾಗಿ (ವರ್ಧಪು. ೭-೩ ವ) ; ನವರತ್ನದ ಹ[ಪಾಠಾಂ.ಪ]ಡಲಿಗೆಯೊಳಳಕನಿವಹವನಿಟ್ಟು ನಾಲ್ದೆಸೆದ ದಿವಿಜರ ಜಾತ್ರೆಯೆಲ್ಲವು ಮುದದಿಂ ಪೋಗಿ ಸವಿಗಡಲೊಳು ಬಿಟ್ಟುದಾಗ (ಶ್ರೀಪಾಲ. ೧೪-೧೧೧) ; ಬಯಲ್ಗೆ ಬಂದ ಕಿತ್ತಲಿಯನಜೆಯಟ್ಟುವ ದಿಟ್ಟದ ಗೊತ್ತಿನ ಕೊತ್ತಿಗೆ ತಡೆಯ ಹಡಲಿಗೆಯೇಂ ಬಲ್ವೆಟ್ಟೆ ? (ರಾಮಾಶ್ವ. ೯೭-೨೯). **೩.** ಎಲ್ಲ ಸುಖದುಃಖಗಳ ಹಡಲಿಗೆಯು ಹೊತ್ತೇವು ಭಾರತದ ಭಂಡಾರ ಬೆಳೆಯಲಮ್ಮ (ನೆಲಮು. ೧೯-೧೩). **ಹಡಳಿಗೆ : ೧.** ಶ್ರುತಪೂಜೆ ಗುರುಪೂಜೆಯಂ ಮಾಡಿ ಬಳಿಕ್ಕ ಹದಿನಾಲ್ಕು ಹಡಳಿಗೆಯೊಳು ಪ್ರತ್ಯೇಕಮಾಗಿ ನಾಲ್ಕು ಬಗೆಯ ಭಕ್ಷ ಹದಿನಾಲ್ಕು ಬಗೆಯ ಫಲ (ನೋಂಪಿಕ. ೨೪-೪). **ಹಡ್ಡಲಗೆ : ೩.** ಸುಡುಗಾಡ ಸಿದ್ಧನಲ್ಲ ಶಂಖ ಜಂಗಯ್ಯನಲ್ಲ. . . ಶಿವಶಿವನೆ ಹಡ್ಡಲಗೆ ಹೊತ್ತ ಜೋಗ್ಯನಲ್ಲ (ಕನ್ನಜಾ. ೩೭೯). **ಹಡ್ಡಲಿಗೆ : ೩.** ಮಹಾತಾಯಿಯ ಹೆಸರಲ್ಲಿ ಭಕ್ತರು ಅವರಿಗೆ ಕೊಟ್ಟ ಹಡ್ಡಲಿಗೆಯ ದಕ್ಷಿಣೆಯನ್ನು ಹಾಗೆಯೆ ಸಂಗ್ರಹಿಸಿಕೊಂಡು ಅಮಾವಾಸ್ಯೆಗೆ ಊರಿಗೆ ಹಿಂತಿರುಗುತ್ತಾರೆ (ಹೂಬಿಸಿ. ೭೦). **ಹೆಡಲಿಗೆ : ೧.** ಹೂವಿನ ಹೆಡಲಿಗೆಗೆ ಮಾಲೆವೊಂದು (ಎಇ. XIX, ೩೪-೩೨; 1135). **ಹೆಡಳಗೆ : ೧.** ಮೇದರೊಕ್ಕಲುಗಳ್ ಹೂವಿನ ಕರಡಗೆ ಹೆಡಳಗೆ ಮತಕೆವೆ ×× ಕೆರಸಿಯುಮ್ ಸದಾಕಾಲಮ್ ನಡಸುವನ್ತಾಗಿ ಕೊಟ್ಟರ್ (ಎಇ. V, ೨೦-೭೦ ; 1161).

**ಹಡ್ಡಲಿಗೆ ತುಂಬು** = ದೇವರ ನೈವೇದ್ಯಕ್ಕಾಗಿ ಬಿದಿರಿನ ಚಿಬ್ಬಲು, ಹರಿವಾಣ ಮುಂತಾದುವುಗಳಲ್ಲಿ ಹಣ್ಣು, ಕಾಯಿ, ಆಹಾರ ಮೊದಲಾದುವನ್ನು ತುಂಬು : ನಮ್ಮೂರ ಆಕೆಯ ಒಕ್ಕಲೆನಿಸಿಕೊಳ್ಳುವ ಎಲ್ಲ ಜನರೂ ಅಲ್ಲಿಗೆ ಹೋಗಿ ಸಡಗರದಡಿಗೆ ಮಾಡಿ, ದೇವಿಗೆ ಕಾಯಿ—ಹಣ್ಣುಗಳನ್ನು ಮೀಸಲಿಟ್ಟು, ಹಡ್ಡಲಿಗೆ ತುಂಬಿ ಬರುವರು (ಹೂಬಿಸಿ.೭೦). [<ಪ್ರಾ. ಪಡಲಗ, ಪಡಲಯ, ಪಡಲಿಗ, ಪಡಲಿಯಾ./ಸಂ. ಪಟಲಕ]

**ಪಡಲಿಕೆ** 'ಪಡಲಗೆ' ನೋ.

**ಪಡಲಿಗೆ** 'ಪಡಲಗೆ' ನೋ.

**ಪಡಲಿಡಿಸು** 'ಪಡು$_1$' ಪರಾ.

**ಪಡಲಿಡು$_1$** 'ಪಡು$_1$' ಪರಾ.

**ಪಡಲಿರಿಸು** 'ಪಡು$_1$' ಪರಾ.

**ಪಡಲ್ಗೆ** 'ಪಡಲಗೆ' ನೋ.

**ಪಡಲ್ವಡಿಸು** 'ಪಡು$_1$' ಪರಾ.

**ಪಡಲ್ವಡು** 'ಪಡು$_1$' ಪರಾ.

**ಪಡವಂದ** (ನಾ). ನೇಯುವಿಕೆ ; ನೇಯ್ಗೆ : 'ಪಡವಂದಿಗ' ಪರಾ. [<ಸಂ. ಪಟಬಂಧ]

**ಪಡವಂದಿಗ** (ನಾ). ನೇಕಾರ : ಶಿಲ್ಪೀ—ಪಟಸಾಲಿಗಂ, ಪಡವಂದಿಗಂ, ಪತ್ತಳಿಗಂ, ತೆಲ್ಲಿಗಂ (ಭಾಷಾಭೂ. ೧೭೩ ಪ್ರಯೋ). [ಪಡವಂದ+-ಇಗ]

**ಪಡವಲ** 'ಪಡಲ$_1$' ನೋ.

**ಪಡವಲು** 'ಪಡು$_2$' ಪರಾ.

**ಪಡವಳ$_1$** 'ಪಡೆವಳ' ನೋ.

**ಪಡವಳ$_2$** (ನಾ). ಉಡುಗೆ, ತೊಡುಗೆಗಳ ಮೇಲ್ವಿಚಾರಕ : "ಪಸಾಯಿತಂ ಪಡವಳಂ" (ಚತುಃ. ೧೦೪). [ಪಡ$_4$+-ವಳ]

**ಪಡವಳತಿ,** ಪಡವಳಿತಿ, ಪಡವಳ್ತಿ, ಪಡೆವಳ್ತಿ, ಹಡವಳತಿ, ಹಡವಳ್ತಿ, ಹಡೆವಳತಿ (ನಾ). ಸೇನಾಧಿಪತಿಯ ಪತ್ನಿ ; ದಂಡನಾಯಕನ ಹೆಂಡತಿ : ಬಾಚಲದೇವಿಯ ಜನನಿಗೆ ಸರಿ ದೊರೆ ಸಮಾನಮೆನಲ್ಕೆ ಕೇಳವನಿಯೊಳ್ಪಡವಳತಿ××ಜನನಿಯಂ×××ಜನನಿಯರೆಣೆಯೆ (ಎಕ. VII, ಶಿಮೊ. ೯೭-೩೨ ; 1113). **ಪಡವಳಿತಿ :** ಆತನ ತಂಗೆ ಪಡವಳ ಕೀರ್ತ್ತಿಯಣ್ಣನ ಪಡವಳಿತಿ ಚಟ್ಟಿಕಬ್ಬೆಯುಂ . . ಯೊಡಡ ಕೆಟಿಯಂ ಕಟ್ಟಿಸಿ ಪರೋಕ್ಷವಿನೆಯಂಗಳಂ ಮಾಡಿ ಬೀರಗೂಳೆತ್ತಿ ಕಲ್ಲ ನಿಱಿಸಿದಳು (ಎಕ. VIII, ಸೊರಬ. ೪೭೮-೭ ; 1112). **ಪಡವಳ್ತಿ :** ಮನಸಿಜಸತಿಗಂ ಮಾವೇಥನಜನ ಸರಸತಿಗೆ ನೆಗಳ್ದರುಂಧ[ತಿ]ಗೆ ಸಮಂತನುಸಾರಿ ಪಾಟಿ ಪಾಸಟಿ ಎನಿಪಡೆ ಪಡವಳ್ತಿ ಜಕ್ಕಣಬ್ಬೆ ಕೃತಾರ್ತ್ಥೆ (ಎಕ. VIII, ಸಾಗರ. ೮೦-೩೨ ; 1096). **ಪಡೆವಳ್ತಿ :** ಮಡಿವಳ್ತಿ, ಸೆಜ್ಜೆವಳ್ತಿ, ಅಡಪವಳ್ತಿ, ಪಡೆವಳ್ತಿ (ಶಬ್ದಾನು. ೨೦೦ ಪ್ರಯೋ). **ಹಡವಳತಿ :** ಹಿರಿಯ ಹಡವಳಂ ಚಾವಿಮಯ್ಯನ ಸರ್ವಾಂಗಲಕ್ಷ್ಮಿ ಹಿರಿಯ ಹಡವಳತಿ . . . ಜಕ್ಕವ್ವೆಯರು (ಎಕ. V, ಹಾಸನ. ೫೭-೬೬ ; 1155). **ಹಡವಳ್ತಿ :** ಶ್ರೀಮನ್ಮಹಾಪ್ರಧಾನ ಸೇನಾಧಿಪತಿ ಹಿರಿಯ ಹಡವಳ ಬೋಕಯನ ಹಡವಳ್ತಿ . . . ದ್ವಿತೀಯ ಲಕ್ಷ್ಮೀಸಮಾನೆಯರಪ್ಪ ಹಿರಿಯ ಹಡವಳ್ತಿ ಕನಕವ್ವೆಯರು ದೋರಸಮುದ್ರದಲು ಕಾಲಂ

ಗೆಯ್ಕುಲು (ಎಕ. VI, ಚಿಕ್ಕಮ. ೬೬–೨; 1089). **ಹಡೆವಳಿತಿ :** ಪಡವಳ ಹೆಂಮಾಡಿ ತಂಮವ್ವೆ ಕಾಳವ್ವೆ ಹಡೆವಳಿತಿಯ ಹೆಸರಿಂ ಕಾಳೇಶ್ವರದೇವರ ದೇವಾಲಯಮಂ ಮಾಡಿಸಿದಂ (ಎಕ. VII, ಶಿಮೊ. ೫೫–೭೨ ; 1167).

[ಪಡವಳ$_1$(<ಪಡೆವಳ)+–ತಿ$_1$(<–ಇತ್ತಿ)]

**ಪಡವಳಿತಿ** 'ಪಡವಳತಿ' ನೋ.

**ಪಡವಳಿಸು** 'ಪಡುವಳಿಸು' ನೋ.

**ಪಡವಳ್ತಿ** 'ಪಡವಳತಿ' ನೋ.

**ಪಡವಳ್ಳ** 'ಪಡೆವಳ' ನೋ.

**ಪಡವಿ** (ನಾ). ಮಣೆ ; ಪೀಠ (?) : ಕೆಂಬಟ್ಟೆಯ ಮೃದುತಲ್ಪದೊಳೆಸೆದವಲಂಬಿಪ ಪೊನ್ನ ಪಡವಿಯರುಣಾಭ್ರಂ ಕೊಂಬಿನೊಳಿಟ್ಟ ಕದಂಬ ಮಣಿಯ ರುಚಿಯಾ ರಚನೆಯನಾಂತು ಇಂಬುವಡೆದ ಸುರಧನು ಮತ್ತಲ್ಲಿ ತೆಱಂಬೊಳೆದೊಪ್ಪುವ ಪೊಸ ಕುಡುಮಿಂಚುಮದೆಂಬಂದದಿನದನೇಱಿ ಕುಮಾರಂ ಕಣ್ಗೆ ವಿರಾಜಿಸಿದಂ (ಜಯಕಾ. ೮–೨೫). [ ? ]

**ಪಡವು$_1$** 'ಪಡು$_2$' ನೋ.

**ಪಡವು$_2$** (ನಾ). ಗಳಿಕೆ ; ಸಂಪಾದನೆ : ಉಡೆಯುಂ ನಡೆಯುಂ ನುಡಿಯುಂ ಪಡವಂ ತೊಡವಂ ಬೆಡಂಗನೆಡೆಯುಡುಗದೊಡಂ ಬಡು ಮನೊಡನಿಳಿಸಿ ಜಱೋಡಿಸಿ ಕಿಡುಕುಮೊಡಂಬಡದವಂಗೆ ತಾಯಿ ಮಗಳೊಲವಂ (ಮದತಿ. ೧೦–೫೯). [<ಪಡೆ$_1$+–ವು]

**ಪಡವು$_3$,** ಪಡ$_2$ (ನಾ). ೧. ಆಶ್ರಯ ; ನೆಲೆ ; ಮನೆ : ಪಾತಕಕೆ ಪಡವಾಗದಮಳಖ್ಯಾತಿ ನೋಯದೆ ವಿಜಯಸಿರಿ ರಾಗಾತಿಶಯದಲಿ ನಮ್ಮ ರಮಿಸುವ ದೆಸೆಯ ಬೆಸಸೆಂದ (ಕುಪ್ಯಾಗ. ೭–೪೫). ೨. ಮನೆಯ ಒಂದು ಭಾಗ (?) : ಪಡೆದುಣ್ಬ ಪೆಣ್ಗೊಳಿದಾರ್ಗಡಿನೊಪ್ಪಮೆ ಸಾಲ್ವುದುಱಿದುಮೊಳ್ಪಱಿಸುವನೇಂ ಕಡುಗಾಂಪನೊ ತಣ್ಣಾಗಟಂ ಪಡವಿನೊಳೆಲೆಗಟ್ಟೆ ಮುಟ್ಟೆ ಪಡೆದಱಿಸುವುದೇ (ಲೀಲಾವ. ೨–೧೧೫) ; ಪಡವಿನೆಡೆಯೊಳ್ ಕೊರಳಿ[ಪಾಠಾಂ. ಪದಪಿನರಳಿಗಳೊಳ್ ಕೊಯ್ದರಲೆ]ಗಳುಂ ನಾಂದುವ ಬೇವಿನ ಸರಳಿಗೆಗಳುಂ . . . ಪುಂಜಿಸುವ ಕಣಿಶಂಗಳುಮೆಸೆಯೆ . . . ಪಿರಿದುಂ ಕಳವಳಮನಪ್ಪುಕೆಯ್ದ ಪ್ರಸೂತಿಕಾಸದನಕ್ಕೆ ಶೃಂಗಾರಶೇಖರಂ ಬಂದು (ಲೀಲಾವ. ೭–೬೮ ವ). **ಪಡ$_2$** : ೧. ಪಾರಿವಮಂ ಪಡದಿಂ ಬಿಡೆ ಭೋರೆನೆ ಗಗನಕ್ಕೆ ನೆಗೆದು (ಪುಣ್ಯಾಸ್ರ. ೬–೪೫).

[<ಪಡು$_1$./ಹಿಂ. ಮರಾ. ಪಡಾವ್]

**ಪಡಶಾಲೆ** 'ಪಡಸಾಲೆ$_1$' ನೋ.

**ಪಡಸಾದ** 'ಪಡಿಸಾದ' ನೋ.

**ಪಡಸಾಲೆ$_1$,** ಪಟಶಾಲೆ, ಪಟಸಾಲೆ, ಪಟ್ಟಶಾಲೆ, ಪಟ್ಟಶಾಳೆ, ಪಟ್ಟಸಾಲೆ, ಪಡಶಾಲೆ, ಪಡಿಸಾಳ, ಪಡುಸಾಲೆ (ನಾ). ೧. ಮನೆಯ ಮುಖ್ಯವಾದ ಭಾಗ ; ಮೊಗಸಾಲೆ ; ಹಜಾರ : ಯಿಾ ದೇವಾಲ್ಯದ ಮುಂದಣ ಬಾಗಿಲ ಪಡಸಾಲೆ××× ಮಾಡಿಸಿ ಭೋಗ ಮಂಟಪವನೂ ಕಟ್ಟಿಸಿ (ಎಕ. XII, ಗುಬ್ಬಿ. ೨೯–೨೩ ; 1470) ; ಸುಮಲತೆಯ ಪಸಿರೆಲೆಯೊಳೆಸಗಿದ ವಿತಾನಮುಂ ವಿಮಲತರ ಪಡಸಾಲೆ ಕೋಣೆ ನಡುಮಂಗಳಂ . . . ಕಂಗೊಳಿಸೆ (ಭರಭ. ೫–೮೯); ಪಡಸಾಲೆಯ ಗಿಲಾಯಿ ಗೋಡೆಗಳಿಗೆ ಅಂದವಾದ ಬಣ್ಣವನ್ನು ಹಚ್ಚಲಾಗಿತ್ತು (ಜನಜೀ. ೩೪) ; ಪಡಸಾಲೆಯಲ್ಲಿ ರಾಯರು ಮಂಡಿತರಾಗಿದ್ದರು (ಕಂಬಹು. ೧೨೫). ೨. ಮನೆಯ ಮುಂದಿನ ಭಾಗ ; ಹೊರಚಾವಡಿ ; ಜಗಲಿ : ಅವರು ಒಂದುದಿನ ಪಡಸಾಲೆಯೊಳಗೆ ಆಡುತ್ತಿದ್ದರು (ಮುಂಬಯಿ. ೩–೮೦) ; ನಿರ್ಮಲಬಾಬುಗಳು ಹೊರಗೆ ಬಂದರು ; ಊರಿನವರೆಲ್ಲ ಪಡಸಾಲೆಯಲ್ಲಿ ಬಂದು ಕುಳಿತುದನ್ನು ನೋಡಿದರು (ಷೋಡಶಿ. ೧೪೭) ; ಪಡಸಾಲೆ (Verandah) : ಮನೆಯ ಮುಂದೆ ಮತ್ತು ಹಿಂದೆ ಪಡಸಾಲೆಗಳು ಇರುವುದು ಬಹಳ ಉಪಯೋಗಕರ (ಗೃಹವಿ. ೧೬೦). ೩. ದೇವಾಲಯದ ಹೊರಗೋಡೆಗೆ ಒಳಮಗ್ಗುಲಲ್ಲಿ ಹೊಂದಿಕೊಂಡಂತೆ, ಯಾತ್ರಿಕರಿಗಾಗಿ ಕಟ್ಟಿಸಿರುವ ಚಾವಡಿ : ಪ್ರಾಕಾರದ ಸುತ್ತಲೂ ಪಡಸಾಲೆ. ಪಡಸಾಲೆಯಲ್ಲಿ ಯಾತ್ರಿಕರಿಗೆ ವಸತಿ, ಓದುಗರಿಗೆ ಪಾಠಶಾಲೆಯ ಏರ್ಪಾಡು, ಇದೆಲ್ಲಾ ಇರಬಹುದು (ಭಾರದ. ೪೧೨). **ಪಟಶಾಲೆ :** ೧. ಪಳುಕಿನ ಜಗತಿ ಪಚ್ಚೆಯ ಲೋವೆ ಪವಳದ ಪೊಳೆವ ಜವಳಿಪಡಿಯಿಂಪ ಥಳಥಳಿಸುವ ರತ್ನದ ಪಟಶಾಲೆಯಿಂದಿಳಿಗತಿ ಚಲುವಾಗಿಹವು (ಅಂಜಚ. ೩–೧೦೨). ೨. ಗಂಡಪೆಂಡಿರ ಪಟ್ಟಬಾಸಿಗ ಬೆಂಬಚ್ಚಿದಂಡೆ . . . ಹೋಗಲೆಂದವ ಹೊಱಪಟಶಾಲೆಯೊಳು ಕೊಟ್ಟು ರಾಗದಿಂದೊಳಗೈದುವಾಗ ಬೇಗ ಗಂಗಾದೇವಿ ಸಿಂಧುದೇವಿಯರ್ಕೈದಿ ಬಾಗಿಲ ತಡೆದರರ್ತಿಯೊಳು (ಭರಚ. ೪೧–೪೦). **ಪಟಸಾಲೆ :** ೧. ಪಳುಕಿನಱಿಯ ಪಟಸಾಲೆ ಪಚ್ಚೆಯ ಲೋವೆ ಪೊಳೆವ ಪೊಂಬಾಗಿಲುವಾಡ ತಳತಳಿಸುವ ಬಹುಚಿತ್ರಗಳಿಂದಾ ನಿಳಯಮೊಪ್ಪಿದುದಾತನಿಗೆ (ಜೀವಂಸಾಂ. ೨–೬೯) ; ಅರಮನೆಯೊಳಗಾರುವಱಿಯದ ತೆಱನೊಳು ತರುಣಿಯ ಪಟಸಾಲೆಯನು ಧರಣೀಶರು ಪೊಕ್ಕು ಪೊಂಬಾಗಿಲೊಳಿರ್ದು ವರವಧುವನ್ನು ನೋಳ್ಪಾಗ (ಅಂಜಚ. ೮–೨) ; ಸಾಲುಸಾಲಲಿ ಮೆಱೆದವಗಣಿತ ಸೂಳೆಗೇರಿಗಳುನ್ನತದ ಪಟಸಾಲೆ ತೊಟ್ಟಿಗಳು (ಪ್ರಹ್ಲಾಚ. ೪–೪೨). ೨. ಪಟಸಾಲೆಯ ಮೇಲೆ ಕುಟಿಲಕುಂತಳೆ ನೆಱೆ ಪುಟಚಂಡನಾಡುವ ಭರಕೆ ನಟಿಸಲು ನೆಲೆಮೊಲೆಗಳು ನೋಡಿ ನಗುತಾಗ ವಿಟರು ಕೈತಾಳಪೊತ್ತುವರು (ಕಂನವಿ. ೨–೯೨). ೩. ಆ ಕಲ್ಲರಸಿಯಮ್ಮನೂ ಯಿಾ ದೇವರಿಗೆ ಸಿಖರ ಪಟಸಾಲೆಯನು ಕಟ್ಟಿಸಿ . . . ಕೊಟ್ಟಂತಾ ಕೊಡಿಗಿ (ಎಕ. XII, ಗುಬ್ಬಿ. ೨೯–೨೮ ; 1470). **ಪಟ್ಟಶಾಲೆ :** ೧. ಚೈತ್ಯಾಲಯದ ಪಟ್ಟಶಾಲೆಯ ಮುಂದಣ ಪರಿಸೂತ್ರದ ಸುತ್ತಣ ಸರೋವರಂಗಳೊಳ್ (ಪಂರಾಮಾ. ೭–೪೭ ವ) ; ಅಬ್ಬೆ ಜಾತಿಕ[ಯ್ತೆ]ಗಳಿಗೆ ಮರವೆಸದ ಪಟ್ಟಶಾಲೆಯುಮಂ . . . ಬಾವಿಯುಮನಲ್ಲಿಯ ಲೋಕಪಾಳರುಮಂ ತದೀಯ ಶುಭದಿನದೊಳ್ ಪ್ರತಿಷ್ಠೆಯಂ ಮಾಡಿ (ಸೌಇಇ.XI-ii, ೧೬೯–೨೦; 1119); ಮದಿಲೊಳು ಮಣಿವಾಡದೊಳು ಪೊಂಬಾಗಿಲ ತುದಿಯೊಳು ಪಟ್ಟಶಾಲೆಯೊಳು . . . ಪುರಸುದತಿಯರವನ ನೋಡಿದರು (ಶ್ರೀಪಾಲ. ೧೩–೩೪) ; ಹೊಂದಗಡಿನ ಹೊದಕೆಯ ಮನೆ ಬಹಳ ನೇರಂದವಡೆದ ಪಟ್ಟಶಾಲೆ (ಮೋಹತ. ೩–೩೪). **ಪಟ್ಟಶಾಳೆ :** ೧. ನಿರ್ಮಮರೆನಿಪ ಮುಮುಕ್ಷುಗಳುತ್ತಮರೊಪ್ಪುವ ರವಱ ಪಟ್ಟಶಾಳಾವಳಿಯೊಳ್ (ಚಂದ್ರಪು.೧–೧೨೩). **ಪಟ್ಟಸಾಲೆ:** ೧. ಆ ಚೈತ್ಯಾಲಯದ ಕೆಲದ ಪಟ್ಟಸಾಲೆಯ ಮುಂತೆ ನೇಱೆ ನಿಜಾಭಿಲಷಿತ ಕಾರ್ಯಸಿದ್ಧಿಯನೆ ಪಾರುತ್ತಮಿರ್ದಳ್ (ಆದಿಪು. ೩–೪೫ ವ) ; ಆತನ ಜನನಿ ನಾಗಿಯಕ್ಕನು ಏಚಿಯಕ್ಕನು . . . ಬಮ್ಮಾಳಿಗೆಯ ಹಳಲು ಪಟ್ಟಸಾಲೆಯ ಮಾಡಿಸಿ . . . ಧಾರಾಪೂರ್ವಕಂ ಮಾಡಿ ಕೊಟ್ಟರು (ಎಕ. II, ೧೪೧–೭೮ ; 1139) ; ಅವಱ ಘನಪಟ್ಟಸಾಲಾನಿವಹದೊಳುತ್ಕೃಷ್ಟ ಜೈನಮುನಿಗಳ್ ಭರದಿಂದವಗತಸಮಸ್ತಶಾಸ್ತ್ರರ್ ಪ್ರವರಗುಣಾವಾಸರಿರ್ಪರ್ (ಬಾಧಪು. ೧–೧೩೮); ಅದಱ ಮುಂದಣ ಪಟ್ಟಸಾಲೆಯಲಿ . . . ಸುಗ್ರೀವನೆಂಬವನೊಂದಿ ಪಲಬರು ರಾಜಸುತರಿಗೆ ವೀಣೆಗಲಿಸುತಿರೆ (ಸಾಳ್ವಭಾ. ೧೬–೪೫). ☞ ಸಂಸ್ಕೃತದ 'ಪಟಶಾಲಾ = ಗುಡಾರ' ಎಂಬ ಅರ್ಥದಿಂದ ಬೇರೆಯಾದ 'ಮೊಗಸಾಲೆ' ಎಂಬ ಅರ್ಥದಲ್ಲಿ ಉಪಯೋಗವಾಗಿರುವ ಈ ಟಕಾರಸಹಿತವಾದ ರೂಪಗಳು 'ಪಡಸಾಲೆ' ಎಂಬ ಶಬ್ದದಿಂದ ಪ್ರಭಾವಿತವಾಗಿರಬಹುದು. **ಪಡಶಾಲೆ :** ೧. ಊಟವಾದ ಮೇಲೆ ಪಡಶಾಲೆಯಲ್ಲಿ ತಾಂಬೂಲಕ್ಕೆ ಕುಳಿತಾಗ . . . ಜಿನೇಂದ್ರವಲ್ಲಭನಿಗೆ ಚಣಕಾಲ ಸ್ವರ್ಗಸುಖವನ್ನು ಉಂಡಂತಾಯಿತು (ದಾನಚಿಂ. ೮೮) ; ಗಿರಿಜ ಪಡಶಾಲೆಯ ಬಾಗಿಲು

ತೆರೆದು ಹೊರಬಂದಾಗ ಅವನಿಗೆ ಎಚ್ಚರವಿರಲಿಲ್ಲ (ಪದ್ಮಸ. ೪೦). **ಪಡಿಸಾಳ: ೩.** 'ಪಡಿಸಾಳ' ಎಂದರೆ ಪ್ರಾಚೀನ ಮಹಾರಾಷ್ಟ್ರದೊಳಗೆ, ಪಾಂಥಸ್ಥರಿಗಾಗಿ (ದೇವಸ್ಥಾನದಲ್ಲಿ) ಕಟ್ಟಿದ್ದ ತಂಗುಮನೆಗಳು ಎಂದರೆ ವಿಶ್ರಮಿಸುವ ಸ್ಥಾನಗಳು (ಕರ್ಣಾಟ. ೧೧೧). **ಪಡುಸಾಲೆ : ೧.** ಗೋವಿಂದರಾಯರು . . . ಪಡುಸಾಲೆಗೆ ಬಂದಾಗ ಮೇಲಿನ ಜಂತೆಗಳನ್ನು ಲೆಕ್ಕ ಹಾಕುವರು (ಬಾಳಿಗ. ೨೬) ; ಶ್ರೀಮಂತರೊಬ್ಬರೆ ತಮ್ಮ ಮನೆಯ ಪಡುಸಾಲೆಯಲ್ಲಿ ಶತಪಥ ಮಾಡುತ್ತಲಿದ್ದಾರೆ (ತಿಡುಗು. ३೧); ಪಡುಸಾಲೆ ಊಟ, ನಡುಸಾಲೆ ನಿದ್ರೆ (ಗಾದೆ).

[ದೇ.॥ ತಮಿ. ಪಟ್ಟಚಾಲೈ; ತುಳು. ಪಡಸಾಲೆ ; ತೆಲು. ಪಡಸಾಲ./ ಮರಾ. ಪಡಸಾಲ್, ಪಡಶಾಲಾ]

**ಪಡಸಾಲೆ$_2$**, ಪಟ್ಟಶಾಲಿ, ಪಟ್ಟಸಾಳಿ, ಪಡಸಾಳಿ (ನಾ). **೧.** ರೇಷ್ಮೆಯ ಸೀರೆ ; ಪಟ್ಟಾವಳಿ. **೨.** ನೇಕಾರರಲ್ಲಿ ಒಂದು ಪಂಗಡದ ಹೆಸರು: ಶ್ರೀ ಪ್ರಸಂನ ಅಂಜನೇಯಸ್ವಾಮಿಯವರಿಗೆ ಸರ್ಜಾಪುರದಲ್ಲಿರುವ ಪದ್ಮಸಾಲೆಯವರು ಪಡಸಾಲೆಯವರು ರಂಗಯ್ಯ ಸಂಜೀವಯ್ಯ ಮುಂತಾದವರು ಬರೆಸಿ ಕೊಟ್ಟ ದಾನಶಾಸನಕ್ರಮ (ಎಕ·IX (s), ಆನೇಕ. ೧೦೭-೪; 1802). **ಪಟ್ಟೆಶಾಲಿ : ೧.** ಪಟ್ಟಶಾಲಿಯನುಟ್ಟು ಪಟ್ಟೆಕುಪ್ಪುಸ ತೊಟ್ಟು . . . ಮದುವಳಿಗೆ ದಿಟ್ಟೀರಾರೂತಿ ಬೆಳಗಿರೆ (ಲೋಕಗೀ. ೧೩). **೨.** "ಪಟ್ಟಶಾಲಿ–ನೇಕಾರರಲ್ಲಿ ಒಂದು ಪಂಗಡ, ಪಟ್ಟಸಾಲಿ (೪)" (ಕಸ್ತೂಕೋ. ೫೭೦). **ಪಟ್ಟೆಸಾಳಿ : ೨.** ಪಡಸಾಳಿಗಳು ರೇಶಿಮೆಯ ವಸ್ತ್ರದ ಕೆಲಸ ಮಾಡುವ ಕಾರಣ ಅವರಿಗೆ ಈ ಹೆಸರು (ಪಟ್ಟಸಾಳಿ) ಬಂದದೆ (ಕಭಾಗೆ. ೧೬೦). **ಪಡಸಾಳಿ : ೨.** ಮೇಲಿನ 'ಪಟ್ಟಸಾಳಿ' ಉಲ್ಲೇಖದ 'ಕಭಾಗೆ' ಪ್ರಯೋಗವನ್ನು ನೋಡಿ. [ಪಡ$_4$+ಸಾಲೆ$_2$(<ಸೇಲೆ$_1$)]

**ಪಡಸಾಳಿ** 'ಪಡಸಾಲೆ$_2$' ನೋ.

**ಪಡಸು** (ಕ್ರಿ). (?) : ಕಿತಕಂ ದೇವತೆಗೇಕೆ ಪೇಟ್ಟರಸಿ ಗಂಡಂ ಬೇಡಿಕೊಂಡೆನ್ನ ಪೆಂಡತಿಗಿತ್ತ್ಯ ಪುಟಿಚಿತೊಂದು ಪೆಣ್ಣನಿದನೊಲ್ಲಳ್ನೀನೆ ಕೊಳ್ವಾದ ದಾವತಿಯುಕ್ಕುಂ ತುಱುಗಾಱರೇಂ ಪಡಸಿಕೊಂಡುಂಡಪ್ಪರೇಯೊಳ್ಪಿತ್ತೊಳ್ಪಿತು ಪೆಣ್ಣಾಸಿದು ಕಾಯಲೋ ಕಟಿಯಲೋ ಬೆನ್ನಟ್ಟಲೋ ಕಟ್ಟಲೋ (ಅರ್ಧನೇ. ೭–೫೦). [ ? ]

**ಪಡಹ** (ನಾ). (?) : ದೇವ ಮತ್ತವಮಾನಸಮದುದುಱಿಯೆ ಪಡಹದ ಪಿಳುಕುಱಿಯೆ ಕೊಳಂಬಿಯ ಕೂಕಂಬದ ಕೋಡಂಬಿಯ ಮುಡಿಗೆಯು ತಾಣಂಗಳೊಳ್ ಮೇದು ಮೆಯ್ಯೆರ್ಚಿ ಸೊವಡಿಂಗೆ ಸೋಲ್ತು ಕೂಡದೆ ಕವಲ್ದು ಮೇದು ತಣಿದು ಕೊಣಕಿಟ್ಟಾಡುವ ಮೃಗಂಗಳೊಳ್ (ಅನಂಪು. ೧೧–೩೯ ಪ). [ ? ]

**ಪಡಹು** 'ಪಡಂಗು' ನೋ.

**ಪಡಳ** 'ಪಡಲ$_1$' ನೋ.

**ಪಡಳಿಕೆ** 'ಪಡಲಗೆ' ನೋ.

**ಪಡಾವ** 'ಪಡಂಗು' ನೋ.

**ಪಡಾವಳ** 'ಪಡೆವಳ' ನೋ.

**ಪಡಾವು$_1$** 'ಪಡಂಗು' ನೋ.

**ಪಡಾವು$_2$** (ನಾ). **೧.** ವಶ ; ಅಧೀನ : ಮುಖದುಂಸಾಹೇಬ ಮೂದಿನಸಾಹೇಬ ಪಡಾವು ಶಿಕ್ಕರು ಸ್ವಲ್ಪ ಸರದಾರು ಶಿಪಾಯಿಗಳು ಪಡಾವು ಸಿಕ್ಕಿದರು (ಮದಚ. ೧೭–೧೧) ; ಚಂದಾಸಾಬರ ದಂಡು ಮುಳುಗಿಸಿದಾಗ ಅಲ್ಲಲ್ಲಿ ಪಡಾವು ಶಿಕ್ಕಿದ ಬಾರುತುಪಾಕಿಗಳನ್ನು ದರ ಮೂರು ನಾಲ್ಕು ರೂಪಾಯಿ ಮ್ಯಾರಿಗೆ ಕ್ರಯಕ್ಕೆ ತೆಗೆದು ಜವಾನರಿಗೆ ಕೊಡುತ್ತಾ (ಹೈದರ. ೬೯). **೨.** ಲಾಭ ; ಗಳಿಕೆ : ಕಣಹಂದಿ ಗುದ್ದಿಗೆ ಕೂಡಿಕೊಂಡಿದ್ದಾನೆ ಅಂತಾ ಕಾಣ್ತದೆ! ಹಾಂಗಾದ್ರೆ ಒಂದು ಒಳ್ಳೇ ಪಡಾವಾಯ್ತು! (ಕಾನೂರು. ३೯೦).

[<–ಮರಾ. ಪಡಾವ್ =ಯುದ್ಧದಲ್ಲಿ ಸೆರೆಸಿಕ್ಕವನು]

**ಪಡಾಳಿ$_1$** 'ಪಡ್ಡಳಿ$_1$' ನೋ.

**ಪಡಾಳಿ$_2$**, ಫಡಾಳಿ (ನಾ). **೧.** "ದೊಡ್ಡ ಅರಿವೆ; ವಸ್ತ್ರ" (ಜಾನಕೋ. ೧೩). **ಫಡಾಳಿ : ೨.** ಬಟ್ಟೆಯ ತುಂಡು ; ಅರಿವೆಯ ಚೂರು : ಇದು ಯಾರದೊ ಪತ್ತಲದ ಫಡಾಳಿಯಲ್ಲ, ನನ್ನದೇ ಬುಶ್ ಶರ್ಟಿನ (ದೇಕನ್ನ. ३೦). [<–ಮರಾ. ಪಡದಣೀ]

**ಪಡಿ$_1$** (ನಾ). **೧.** ಒಂದು ನಿರ್ದಿಷ್ಟ ಅಳತೆಯ ಪರಿಮಾಣ; ☞ 'ಪಡಿ'ಯ ಅಳತೆಯು ಪ್ರಾದೇಶಿಕವಾಗಿ ಭಿನ್ನವಾಗುತ್ತದೆ: ಒಂದು ಪಡಿಯುದಕದೊಳಗೊಂದು ಪಡಿಸಕ್ಕರೆಯನೊಂದಿಸಿದ ಬಳಿಕ. . . ಒಮ್ಮಾನ ಹಾಲ ಹುಯಿದು (ಸೂಪಶಾ. ೧–೪೦); **ಅಕಾಲ ಚಕ್ರಪಡಿ** ಅಡಕೆ ಪಡಿ ಮೆಣಸು (ಬೊಂಕಶಾ. ೧೯೪೦, ಸಿರಸಿ. ೭೫–೨೧ ; 1515) ; ಬಿಡದೆ ಒಂಟೆಯ ಮಾಡಿ ನಿಲಿಸ್ಯಾಳೊ ಒಂದು ಪಡಿ ಭತ್ತಕೆ ಬಾಯಬಿಡಿಸ್ಯಾಳಣ್ಣ (ಪುರಂದ. ೧–೧೮೨–೨); ನಿನಗೊಂದು ಪಡಿ ಬಿದಿರ ತಂಡುಲ ಮನಿಕ್ಕಿದ ಮಹತ್ತ್ವದಿಂ ಪೊಡವೀಶ ನಿನ್ನುದರದೊಳ್ ಬಂದೆ ನಾನು (ಜೆಬವು. ೫೨–೫೯) ; ಪ್ರತಿದಿನ ನನಗೆ ನೂರಿಪ್ಪತ್ತು ಜಂಬೀರದ ಹಣ್ಣು ... ಒಂದು ಪಡಿ ಮಹಾಶಾಲಿ ಅಕ್ಕಿ ಕೊಡುತ್ತಿದ್ದರು (ಪ್ರವಾಇ. I, ೨३೯). **೨.** ಅರ್ಧಸೇರಿನ ಅಳವನ್ನುಳ್ಳ, ಒಂದು ನಿರ್ದಿಷ್ಟ ಆಕೃತಿಯ ಅಳೆಯುವ ಸಾಧನ: ಪಡಿ. ಅಳೆಯುವ ಪಾತ್ರೆ, ಆ ಅಳತೆ. ಗೊತ್ತಾದ ಭತ್ಯ ಎಂಬ ಅರ್ಥವನ್ನು ಪಡೆದಿದೆ (ನಮ್ಮನು. ೧३೪); ಅಕ್ಕಿಯನ್ನು ಪಡಿಯಲ್ಲಿ ಅಳೆದು ಹಾಕು (ರೂಢಿ). **೩.** ಅಳತೆ ; ಪರಿಮಾಣ : ನಡುಮನೆಯಲ್ಲಿ ಸುರಿವಾಗ ಇಪ್ಪತ್ತೈದು ಕೊಳಗವಾಯಿತ್ತು ಪಡುವಣ ಕೋಣೆಯಲ್ಲಿ ಮಡಗಿರಿಸುವಾಗ ಪಡಿಯ ನೋಡಲಾಗಿ ಜಗಳವಾಗಿತ್ತು (ಪೋಳಮಾ. ೨೧೭–೭೭೧). **೪.** ತೂಕ ಮಾಡಲು ಬಳಸುವ ಬಟ್ಟು; ತೂಗುವ ಬಟ್ಟು : ಗಡಗಡನೆ ಪೊಡವಿ ನಡುಗಿತು ಪಡಿಯನೊಡವೆಯಂ ಸೆಳೆದ ತಕ್ಕಡಿಯಂತೆ (ವೈಶಾಖ. ೮೮–೭೭೯). 'ಪಡಿಕಲ್ಲು' ಪರಾ. **೫.** ಭೂಮಿಯನ್ನು ಅಳೆಯುವ ಒಂದು ಅಳತೆ : (ಕೈಸ್‌ಗೆ. II, ೫೫೮) ; ೧೭ ಪಡಿಗೆ ೧ ಕೊಡೊ (ಭೂಮಿಅ. ೧). **೬.** ದಿನಭತ್ಯವಾಗಿ ನೀಡುವ ಆಹಾರಸಾಮಗ್ರಿ: ಮೊಸರು ಬ ೧ ಅಳೆ ಬ ೧ ಅಡಕೆ ೨ ಎಲೆ ೪ ಆ ಪಡಿಯಲು ನಡಸುವನ್ನಾಗಿ ವೇದಪಾರಗರಪ್ಪ ಪದಿನಾಱು ಮಾನಸ ಬ್ರಾಹ್ಮಣರಿಗೆ ಚ್ಛತ್ರಕ್ಕೆ ಬಿಟ್ಟರು (ಸೌಇಇ. IX–i, ೨೪೫–३೪; 1146) ; ಆ ಬಸವರಸನಾ ಮಂದಿರಕೆ ನೀ ಹೋಗಿ ನಮಗೊಂದೊಂದು ದಿನದಲಿ ಕೊಡುವ ಪಡಿಯಂ ತಂದುಕೊಡು (ಬಸಪು. ೧೧–೨೦); ಎನ್ನ ಚತುರಂಗ ಬಲಕ್ಕೆ ಬೇಡಿದ ಪಡಿ ಕಂದಾಯಮಂ ಕೊಟ್ಟು ಕೊಟ್ಟು ನಷ್ಟವಾಗಿ ಎನಗೆ ಎರಡು ನಲವತ್ತೆರಡು ಲಕ್ಷದ ಭವಜ್ಞಾಟಾಳದ ಋಣ ಬಿದ್ದಿತು (ಫನಪ. ೧೧–೮) ; ಎಮ್ಮಂದಿಗರೆಂತಂತು ಪಸುಗೆಗೊಂಡುಂ ಪಡಿಯನೆ ಚರುಚಾರುಗಂಧಮಂ ಕವರ್ವನೆಂಬೊಂದು ಪುರುಡಿಂ ಜನ್ನಗೊಂಡದಬೇಳುರಿ ಚಟಚಟಿಸಿ ಕಿಡಿಕಿಡಿವೋಪುದುಂ (ರಾಮಾಶ್ವ. ४३–೧) ; "ಹವಿರ್ಭಾಗ" (ರಾಮಾಶ್ವ. ಕೋಶ); ಊಟ ಬೇರೆ, ಪಡಿ ಬೇರೆ (ಗಾದೆ). 'ಪಡಿಕೂಳು' ಪರಾ. **೭.** ನಿರ್ದಿಷ್ಟಪಡಿಸಿದ ಆಹಾರ; ಗೊತ್ತುಮಾಡಿದ ಉಣಿಸು: ಗಂಡಸಿಕ್ಕಿದ ಪಡಿಯನುಂಡು ಮನೆಗಡೆಯದಿಪ್ಪವಳು ಪತಿವ್ರತೆಯಲ್ಲದೆ ಗಂಡ ಸಿಕ್ಕಿದ ಪಡಿಯನೊಲ್ಲದೆ ಬೆಲ್ಲಗೂಳಿಗಾಸೆ ಮಾಡಿ ನೆರೆಮನೆಗೆ ಹೋಗುವ ಬಲ್ಲಾಳಗಿತ್ತಿಗೆ ಪತಿಭಕ್ತಿ ಅಳವಡುವುದೆ ಅಯ್ಯ (ಫನಪ. ೨೦–೧೭). **೮.** ಧಾನ್ಯರೂಪದಲ್ಲಿ ಹಂಚುವ ದಿನಗೂಲಿ: ಹೊಲೆಯರೆಲ್ಲ . . , ಯಜಮಾನರ ಹೊಲಗಳಲ್ಲಿ ಬೇಸಾಯ ಮಾಡಿ ಕೊಟ್ಟು, ದೊರೆತ ಪಡಿಯಿಂದ

ತಮ್ಮ ಜೀವನನಿರ್ವಾಹ ಸಾಗಿಸಬೇಕು (ಬೆಂದಯು. ೬೬) ; ಬೈರ ಸಿದ್ಧರಿಬ್ಬರೂ ಆ ದಿನ ಕೆಲಸಕ್ಕೆ ಹೋಗಿದ್ದ ಇತರ ಆಳುಗಳೊಡನೆ 'ಪಡಿ' ಇಸುಕೊಳ್ಳಲು ಮನೆಗೆ ಬಂದರು (ಕಾನೂರು. ೨೦೫) ; ಧನಿ ಕೊಟ್ಟರೆ ಉಂಟು, ಇಲ್ಲವಾದರೆ ಗೈಮೆಯ ಪಡಿಯೇ ಸೊನ್ನೆಯಾಗಬಹುದು ([illegible] ೧. ೬). **೯. ಹಣದ ರೂಪದಲ್ಲಿ ಕೊಡುವ ದಿನದ ಭತ್ಯ :** ನಂಬಿ [illegible]೦. . . ಸರಸರನೆ ನಡತಂದು ಮಾಹೇಶ್ವರರಿಂಗೆಬಿಗದೆ ಕೈಮುಗಿಯ ದೀಕ್ಷಿರನಿಳಯಮಂ ಪೊಕ್ಕು ಪಡಿಯಂ ಬೇಡುತಿರಲಾಗಿ (ಬಸವು. ೨೬-೧೪); ಕೆಱೆಯ ಪದ್ಮರಸಂ . . . ಮನಸಿಜಾರಿಯನೊಲಿಸಿ ಪನ್ನೆರಡು ಪೊಂಗಳಂ ದಿನದಿನಕೆ ಪಡಿಯಾಗಿ ಪಡೆದು ತದ್ದ್ರವ್ಯದೊಳಗೆನಿತು ಬಗುತರ್ ಬಂದೆರದೊಡವರ್ ಬೇಡಿದುದನಿಲ್ಲೆನ್ನದೀವಂ ಗಡ (ಪದ್ಮರಾ. ೯-೭). **೧೦. ನೈವೇದ್ಯ; ಎಡೆ :** ಯಿಂತೀ ನಾಲ್ಕುಗಡಿಯಿಂದ ಒಳಗುಳ್ಳ ಮೂವತ್ತು ಹಾನೆ ಗದ್ದೆಯನೂ ಪಾರ್ಶ್ವದೇವರ ಪಡಿಗೆ ಪಾಯಂಣಂಗಳು ಬಿಡುದೇವಸವಾಗಿ ಬಿಟ್ಟೆದು (ಕಇ. I, ೪೧-೩೧ ; 1417 ?). **೧೧. ದಾನವಾಗಿ ಕೊಡುವ ಆಹಾರಸಾಮಗ್ರಿ; ಭಿಕ್ಷೆ:** ಪಡಿ ಕೊಡೀಂತ ಅಮ್ಮಾವರನ್ನು ಬೇಡ್ಕೋಬೇಕಲ್ಲಾ ಭಿಕ್ಷುಕಿಯಾಗಿ (ನವಶೀ. ೪೭) ; ಪಡಿಗೆ ಬಂದವನಿಗೆ ಕಡಿ ಅಕ್ಕಿ ಆಗದೇ ? (ಗಾದೆ). **೧೨. ರೀತಿ ; ಕ್ರಮ ; ಮಾದರಿ :** ಆತನುವನ್ತಿಗೆಯ್ವೆನೆನ್ದು ಆಣೆ ಪತ್ರಮಂ ಕೊಟ್ಟು ತ್ರಿಪುರಾಂತಕದೇವರ ಬಳಿನೀರಂ ಕುಡಿದೀ ಪಡಿಯಲ್ ಶಾಸನಮಂ ಕುಂದುವನ್ತಾಗಿಯೊಡಂಬಟ್ಟು ಬಂದಂ (ಸೌಇಇ. IX-i, ೧೬೯-೨೬ ; 1104) ; ಒಡವುಟ್ಟಿದ ಬಿಸವಿಂದನಾಂ ಕಡೆನೂಂಕಲದೇಕೆ ಕೂಡಿ ನಡೆವೆನೆನುತ್ತಂದೊಡಲೊಳಗಿಂಬಿಟ್ಟೆಯ್ದುವ ಪಡಿಯೆನಲೊಪ್ಪಿದುದು ಲಾಂಛನಾಂಕಿತ ಚಂದ್ರಂ (ಗಿರಿಕ. ೪-೧೦೨) ; ಅಬುಜಜನ ಮಿಡುಕು ಕಂಠದೊಳಾಯ್ತು ಮಂಡಿಯ ಪಡಿಯ ಪದಪದ್ಧ[ಪಾಠಾಂ. ಪಡಿಪದದ ಪದ್ಧ, ಪಡಿಯ ಪಯಪದಹ, ಪಡಿಯ ಪಯಪದ್ಧ, ಸಡಿಯ ಪಯಪದ್ಧ]ತಿಗೆ ಫಣಿಪನ ಹೆಡೆ ನಿಱಿಲುನಿಟಿಲೆಂದುದೇನದ್ಭುತವೊ ರಣರಭಸ (ತೊರರಾ. ೪-೩-೮) ; ಅಕ್ಷರದ ಪಡಿಯನ್ನು ನೋಡಿದರೆ ಇದರ ಕಾಲ ಸು. ೧೫-೧೬ನೆಯ ಶತಮಾನವಾಗಬಹುದು (ಶಾಸಪ. ೪). **೧೩. ಕುದುರೆಯನ್ನು ಹತ್ತುವುದಕ್ಕಾಗಿ ಅದರ ಪಕ್ಕದಲ್ಲಿ ನೇತುಬಿಟ್ಟಿರುವ ಬಳೆ ; ಅಂಕವಣಿ ; ರಿಕಾಪು :** (ಕಿ). **೧೪. ಮೆಟ್ಟಿಲು ; ಹಂತ ; ಸೋಪಾನ :** ಅವಳೆಸಗಿದಾ ಮುಹಡಿಪಡಿ ಸದ್ದನೇ ಕೇಳ್ದು (ಸೌನಂದ. ೩-೭).

**ಪಡಿ ಬೇಡು** = ಶ್ರಾವಣಶನಿವಾರ ಮುಂತಾದ ದಿನಗಳಲ್ಲಿ ದೇವರ ಹೆಸರಿನಲ್ಲಿ ಭಿಕ್ಷೆ ಬೇಡು : ಅವನು ಪ್ರತಿ ಶ್ರಾವಣಶನಿವಾರವೂ ಪಡಿ ಬೇಡುತ್ತಾನೆ (ನುಡಿ). **ಪಡಿಯಕ್ಕಿ** = ೧. ಒಂದು ಪಡಿ ಅಳತೆಯ ಅಕ್ಕಿ : ಆನೆ ಕುದುರೆ ಬಂಡಿ ಭಂಡಾರವಿದ್ದಡೇನೋ ತಾನುಂಬುದು ಪಡಿಯಕ್ಕಿ ಒಂದಾವಿನ ಹಾಲು ಮಲಗುವದರ್ಧಮಂಚ (ಮೋಳಿಮಾ. ೧೭-೬೪). ೨. ಭತ್ಯವಾಗಿ ಕೊಡುವ ಅಕ್ಕಿ : ಪಡಿಯಕ್ಕಿಯಂ ತಂದು ತನ್ನ ಮಂತ್ರಿಯ ಕೈಯ ಕೊಡಲಾತನದನೊಂದು ವೃಷಭಂಗೆ ಮೇಯಲಿತ್ತೊಡನೆ ಬಳಿವಿಡಿದದಱ ಗೋಮಯವನೆತ್ತಿ ತಂದು (ಹಚಕಾ. ೧೧-೪೫). **ಪಡಿಯ ಬೀಯ** = ಆಹಾರಕ್ಕಾಗಿ ಮಾಡುವ ವ್ಯಯ,—ಖರ್ಚು : ನಡೆವಾಗ ದಾರಿತಪ್ಪಿಸಿ ತಿರುಹಿ ಕೆಲವು ದಿನ ಪಡಿಯ ಬೀಯ ಕ್ಕಾಣೆಯಿಟ್ಟಂತು ಕೆಲವು ದಿನ ಕೆಡಿಸಿ ನುಡಿದವಧಿಯಾಯ್ತೆಂದು ಧರೆಯ ಱಾಯೆ ನೃಪನಂ ಹುಸಿಕನೆನಿಸು (ಹಚಕಾ. ೯-೧೬).

[ದೇ.॥ ತಮಿ. ಮಲ. ಪಟ ; ತುಳು. ತೆಲು. ಪಡಿ]

**ಪಡಿ$_2$, ಹಡಿ$_1$ (ನಾ).** ೧. ಬಾಗಿಲಿನ ಕದ,—ರೆಕ್ಕೆ ; ಫಡಕು : "ಪಡಿಯೆಂದು ಕವಾಟಂ" (ಕಶಸಾ. ೬೦-೩೧೪) ; ತೆಱೆಯದೆ ಮುನ್ನ ಕೆತ್ತ ಪಡಿಗಳ್ ನವಸೌರಭಮುಣ್ಮೆ ಮೊಕ್ಕಳಂ ತೆಱೆದುವು . . . ಆತನ ಪುರಾತನಪುಣ್ಯಫಲಪ್ರಭಾವದಿಂ (ಆದಿಪು. ೨-೬೩) ; ತೆಱೆಯದೆ ಮುಚ್ಚಿದ ಪಡಿಗಳ್ ತೆಱೆದುವು ನೆಱೆ ಮೋಕ್ಷಗೃಹದ ಸೌಖ್ಯದ ಪಡಿಗಳ್ ತೆಱೆದವೆನೆ ದಿವದ ಪಡಿಗಳ್ ತೆಱೆದುವದೇನರಿದೆ ಜೈನಪದಸೇವನೆಯಿಂ (ಸುಕುಮಾ. ೯-೧೯); ಮುಗಳಂ ಮಾಱಿ ಮದುವೆಯಪ್ಪ ಪಡಿಯನೊಡೆದು ಮಣಯಂ ಮಾಡುವ . . . ಕಟ್ಟಿಗ್ಗನಂತೆ (ಧರ್ಮಾಮೃ. ೯-೧೬೨) ; ಸೇನೆಯೊಂದಿರವಂ ತಮತಮಗೆ ಸಂತಸದುರ್ಬಿನಿಂ ಕಾಂತೆಯರ್ ನೆಲೆವಾಡಮನೇಱಿಯುಂ . . . ಅರೆದೆಱೆದ ಪಡಿಯಲ್ಲಿ ಗವಾಕ್ಷದೊಳ್ ನಿಳ್ಕಿಯುಮಿಕ್ಷಿಸುತಿರ್ದರ್ (ರಾಮಾಶ್ವ. ೫೦-೧೩). ೨. ಬಾಗಿಲಿನ ನಿಲವು,—ಚೌಕಟ್ಟು ; ದ್ವಾರಬಂಧ : "ಸಾಮ್ಯದೊಳ್ ಕುಡುಬದೊಳ್ ದ್ವಾರಬಂಧದೊಳ್ ಪಡಿಯೆನಿಕ್ಕುಂ" (ಶಬ್ದಮಂ. ೯೬). ೩. ಬಾಗಿಲು ; ದ್ವಾರ : ಹಳೆಯ ಹಸ್ತಪತ್ರಿಕೆ ನನ್ನ ಸ್ಮೃತಿಮಂದಿರದ ಪಡಿ ತೆರೆಯುತ್ತದೆ (ಗಾಳಿಪ. ೭೧). 'ಪಡಿವಳ' ಪರಾ. **ಹಡಿ$_1$ :** ೧. ಹಡಿ ಎಡೆಯಲ್ಲಿ ಸಿಕ್ಕಿದ ತುಡುಗುಣಿನಾಯಂತೆ ಮೊಱೆ ಇಡುತ್ತಿದ್ದೇನೆ (ಮೋಳಿಮಾ. ೧೬೬-೩೧೮) ; ಪಾಡಲಾನತಿನಿಷ್ಠುರವದಾಗಿ ಕೇಳದೀ ಹೂಡಿರ್ದ ಹಡಿಯ ತೆಱದಂ ನಿಮ್ಮ ಸೊಗಸಪ್ಪ ಪಾಡಹತ್ತಂ ಮೋಹದಿಂ ಕೇಳಿ ಮೋಹರಿಸಿ ಕೊಂಡನೀ ಕದವನೀಶಂ (ವೀಶೈಪು. ೪-೯-೧೫).

[ದೇ.॥ ತಮಿ. ಪಟಲ್, ಪಟಲೈ ; ತುಳು. ಕೊಡ. ಪಡಿ]

**ಪಡಿ$_3$, ಪತಿ$_1$, ಪಳಿ$_5$, ಪಱಿ$_6$, ಹಡಿ$_2$ (ನಾ).** ೧. ಸಮಾನವಾದುದು; ಎಣೆಯಾದುದು ; ಸಾಟಿಯಾದುದು : "ಸರಿ, ದೊರೆ, ಪಡಿ, ಗೆಡೆ, ಪಾಟ, ಪಾಸಟಿ, ಎಣೆ . . . ಸಂಗಡಂ— ಈ ೧೮ ಸಮಾನಕ್ಕೆ ಪೆಸರ್" (ಕಶಸಾ. ೫೯-೨೯೧); ದುಃಕೀರ್ತಿರ್ಯನಾನ್ತ ಮತ್ತಿನ ಶಶದುರ್ಬೋಧರಪ್ಸೃಶ್ಯರೇಂ ಪಡಿಯೇ ಸದ್ಬುಧಸೇವ್ಯನಪ್ಪ ಬುಧಚಂದ್ರಖ್ಯಾತಯೋಗೀಂದ್ರನೊಳು (ಎಕ. VII, ಶಿಮೊ. ೪-೬೬ ; 1122) ; ತನಗಿಂದ್ರಾಣಿಯೆ ಸರಿ ಗೋವಿಂನಿಯೆ ಸಮಾನಂ ಸರಸ್ವತೀದೇವಿಯೆ ನೆಟ್ಟನೆ ಪಡಿ (ವರ್ಧಪು. ೧-೮೮) ; ಈ ಕಣ್ಗಾ ಕಣ್ಗಾ ಕಣ್ಗೀ ಕಣ್ಣೆರಡಕ್ಕವೆರಡೆ ಪಡಿ (ಗಿರಿಕ. ೧೦-೫೦) ; ಶಾರದೆಗೆ ಸಾಟಿಯಿಂದ್ರಾಣಿಗೆಣೆ ಸಿರಿಗೆ ಸರಿಯಾರತಿಗೆ ಪಡಿ . . . ಎನಿಪ್ಪ ಪುರವರ ಮಹಾಸತಿಯರು (ಚಿಬಪು. ೫-೧೬) ; ಈಶಾನ್ಯಭಾಗದೊಳಂಬರವನು ತುಡುಕುತ ಸರ್ವಸನ್ನಹದೆ ಕಡುಗಲಿ ದಳವಾಯ ಮೇರುವೆಯೊಪ್ಪಿತು ಪಡಿಯಾಗಿ ಕೈಲಾಸಗಿರಿಗೆ(ಕಂನವಿ. ೧೮-೬೯). ೨. ಪ್ರತಿಯಾದುದು ; ಬದಲು : ನಿಮ್ಮ ಹಿರಿಯತನಕೆ ಪಡಿಯುಂಟೆಯೆಂದವರನೊಡಗೊಂಡು ಬರುತವಿರೆ (ತಿರುರ. ದೇ. ೧೪-೩) ; ಸುಡುವ ನೆಲದೆಱಗೆ ಹಾಗ ಹೆಣದುಡುಗೆಯಂ ತಂದೆನಗೆ ಕೊಡುವುದಾ ತಲೆಯಕ್ಕಿಯಂ ನಿನ್ನ ಸಂಬಳಕ್ಕೆ ಪಡಿಯಾಗಿ ಕೊಂಡುಂಬುದು (ಹಚಕಾ. ೧೧-೩೬) ; ಎಲ್ಲ ಧಾನ್ಯವನೆಣಿಸೆ ಹದಿನೆಂಟಲ್ಲಿ ಪಡಿಯಿವರಂದದಿಂದವೆಯೆಲ್ಲ ಮೂವತ್ತಾಱೆ ಎನಿಸುಗು ಲೋಕ ಮೆಚ್ಚಲಿಕೆ (ಸಂಭಪ. ೫-೧೧೩) ; ತನ್ನಯ ಮಾಯವಿದ್ಯದಿಂದಿವನನಾಂ ಬಿಡದೆ ಮರ್ದಿಪೆನೆಂದು ನೆನದು ಕಲ್ಪಿಸಿದಳಾ ಮೃಡನರಸಿಯಿದಿರೊಳೈತಂದ ಮಹಿಷಾಸುರನ ಪಡಿಯಲಿಮ್ಮಡಿ ರೂಪನೂ (ನಸಮೋ. ೧೨-೮೩) ; ತಾನುಂ ಭಗವದ್ಭಕ್ತನಪ್ಪುದಱನವನೊಡನೆ ಪಾಡುತಂ, ಭಿಕ್ಷಾನ್ನಕೆ ಪಡಿಯಾಗಿ ಕೈಯೋಗರವಂ ತಾನೆ ತಂದೀವಂ (ಅದ್ಭುತ. ೧೬-೨೧). 'ಪಡಿನುಡಿ$_2$' ಪರಾ. ೩. ಬರಹದ ಮತ್ತೊಂದು ಪ್ರತಿ ; ಪ್ರತಿಲೇಖನ ; ನಕಲು : ಆ ಬಲ್ಲಾಳದೇವರು ಕಾರುಣ್ಯಂ ಮಾಡಿ ಕೊಟ್ಟ ತಾಂಬ್ರಶಾಸನದ ಪಡಿಯ ಸಿಲಾಶಾಸನ (ಎಕ. IX(s), ಕಾನಕಾ. ೯೨-೩೭ ; ಸು. 1300) ; ಬರಸಿದ ಪಡಿಯಂ ಬರಸಿತ್ತಂ (ಜೊಂಕಶಾ. ೧೯೩೩, ಕಾವೇರಿ. ೬೦-೩೯ ; ?). 'ಪಡಿಪತ್ರ' ಪರಾ. **ಪತಿ$_1$ :** ೧. ಪತಿಯ ಸುಖದುಃಖಂಗಳೇ ತನಗೆಂಬ ಪತಿವ್ರತೆಗೆ ಪತಿಯ

ಕಾಣೆನು ತ್ರಿಜಗದೊಳರುಂಧತಿಯಳಲ್ಲದೆ (ಶಂಕದಾ. ೨-೧೨). **ಪೞಿ$_5$** : **೨.** ಕಂದ ಶಂಕರನ ಶಿರಕೆನ್ನರಿದ ತಲೆರನ್ನದಿಂದ ಸತ್ಕರಿಸಬೇಕಯ್ಯ ಬೊಪ್ಪಯ್ಯ ನೀಂ ಸಂದೆಗಂ ಮಾಡಲನುಚಿತವೆನ್ನ ಮಸ್ತಕವ ಪಱಿದು ಪೞಿಗೀಯೆಂದನು (ಭಾವಚಿಂ. ೯-೮) ; ತಿರುಕೊಳನಾಚಿ ಮತ್ತುಸ್ತಂಗರಸನ ಋಗಂ ಸಾಟೆಯಿಗಾತಂಗೆ ಪೞಿಯೆನುತೆ ತನ್ನ ತಲೆಯಂ ಕೊಟ್ಟಳು (ಚಬಪು. ೫೫-೧೬) ; ಘಳಿಲನೆ ಪೞಿ ಪೊರ್ದದಮಳಚರಿತನಿದಿರ್ಗೆವಂದೆನ್ನ ಶಿರಮಿದಕ್ಕೆ ಪೞಿಯೆಂದು ತೋರ್ಪಂತೆ ಪಣೆವೆಱಿಯೊಳ್ ಕರಾಂಜಲಿಯಿನಮರ್ಚಿನಿಂದು (ರಾಜಶೇ. ೧೪-೧೪ ವ). ‘ಪಳಿಗೊಡು’ ಪರಾ. **ಪಱಿ$_6$** : **೧.** “ಸರಿ, ದೊರೆ, ಪಡಿ . . . ಪಱಿ, ಜೋಡು, ಸರಿಸ . . . ಸಂಗಡಂ—ಈ ೧೮ ಸಮಾನಕ್ಕೆ ಪೆಸರ್” (ಕಶಸಾ. ೫೯-೨೯೧) ; “ಪಡಿ ದೊರೆ . . . ಸಂಗಡಮುಂ ಪಱಿ ಜೋಡಿ ಬುಧರಿನಕ್ಕುಂ ಸಮನುಂ” (ಕವಿಕಂ. ೧೩೬). **೨.** ‘ಪಱಿಹತ್ತ’ ಪರಾ. **ಹಡಿ$_2$** : **೨.** ‘ಹಡಿಮುಖ’ ಪರಾ.

[<**ಪ್ರಾ.** ಪಡಿ./**ಸಂ.** ಪ್ರತಿ]

**ಪಡಿ$_4$** ‘ಪಱಿ$_5$’ ನೋ.

**ಪಡಿ$_5$** ‘ಪಡೆ$_3$’ ನೋ.

—**ಪಡಿ$_6$** (ಪ್ರ). ಭಾವನಾಮದ ಅರ್ಥವನ್ನು ಕೊಡುವ ಒಂದು ಕೃದಂತ ಪ್ರತ್ಯಯ : ‘ತಿದ್ದುಪಡಿ’, ‘ತೀರ್ಪಡಿ’ ಪರಾ.

**ಪಡಿಕಟ್ಟು$_1$** ‘ಪಡಿಗಟ್ಟು$_1$’ ನೋ.

**ಪಡಿಕಟ್ಟು$_2$** (ನಾ). ಮಾದರಿ ; ನಮೂನೆ ; ರೀತಿ : ಆ ಲೇಖನದ ಪ್ರಾರಂಭದ ಭಾಗವು ಅಮಲನ ಲೇಖನದ ಪಡಿಕಟ್ಟಿನಲ್ಲಿ ಕಾವ್ಯಾಡಂಬರದಿಂದ ಕೂಡಿದ್ದಾಗಿತ್ತು (ಇಪ್ಪಕ. ೨೫೨) ; ಇದೇ ಏನು ನಿನ್ನ ದುಷ್ಟನಿಗ್ರಹ-ಶಿಷ್ಟಪರಿಪಾಲನಗಳ ಪಡಿಕಟ್ಟು ! (ಕುಮುದಿ. ೮); ಇದು ಹೆಂಡಿರ ಕೃತಘ್ನತೆಯ ಪಡಿಕಟ್ಟಾಯಿತು ; ಇನ್ನು ಅವರ ಉದ್ಧಟತನದ ಪಡಿಕಟ್ಟನ್ನು ಸ್ವಲ್ಪ ನೋಡಬೇಕು (ಕುಟುಂಬ. ೩೩). [ಪಡಿ$_1$+ಕಟ್ಟು$_2$]

**ಪಡಿಕಟ್ಟು$_3$** ‘ಪಡಿಗಟ್ಟು$_2$’ ನೋ.

**ಪಡಿಕಮಣ** (ನಾ). [ಜೈನ] ಪ್ರಾಯಶ್ಚಿತ್ತಕ್ಕಾಗಿ ಮಾಡುವ ತಪಸ್ಸು ; ತನ್ನ ದೋಷಗಳನ್ನು ತಿಳಿದುಕೊಂಡು ಅವುಗಳನ್ನು ತೊರೆಯುವುದು: ‘ಪಡಿಕಮಣಂಗೆಯ್’ ಪರಾ.

[<**ಪ್ರಾ.** ಪಡಿಕ್ಕಮಣ./**ಸಂ.** ಪ್ರತಿಕ್ರಮಣ]

**ಪಡಿಕಮಣಂಗೆಯ್** (ಕ್ರಿ). [ಜೈನ] ಪ್ರಾಯಶ್ಚಿತ್ತಕ್ಕಾಗಿ ತಪಸ್ಸನ್ನು ಆಚರಿಸು : ಗುರುಗಳ್ಗೆ ತಮ್ಮುಕ್ಕೆವದಿಂ ತಪಂಬಟ್ಟುದನಾಳೋಚಿಸಿ ಪ್ರಾಯಶ್ಚಿತ್ತಂಗೊಂಡು ಪಡಿಕಮಣಂಗೆಯ್ದು [ಪಾಠಾಂ. ಕೇಳ್ದು] ಪರಮಾರ್ಥಯತಿವರರಾಗಿ ಪನ್ನೆರಡುವರ್ಷಂಬರಂ ಗುರುಗಳನಗಲದೆ ತಪಂಗೆಯ್ದು (ವಡ್ಡಾರಾ. ೬-೨೭). [ಪಡಿಕಮಣ+ಕೆಯ್$_1$]

**ಪಡಿಕಮಣಂಗೇಳ್** (ಕ್ರಿ). [ಜೈನ] ಪ್ರಾಯಶ್ಚಿತ್ತವನ್ನು ಕೇಳು : ಸುಕುಮಾರಸ್ವಾಮಿ . . . ತತ್ಪಾದಮೂಲದೊಳ್ ತಪಂಬಟ್ಟು ಪಂಚಮಹಾಬ್ರತಂಗಳನೇಱಿಸಿಕೊಂಡು ಪಡಿಕಮಣಂಗೇಳ್ದು ತದನಂತರಂ . . . ಸಂನ್ಯಸನಂಗೆಯ್ದು (ವಡ್ಡಾರಾ. ೨೮-೨೬).

[ಪಡಿಕಮಣ+ಕೇಳ್]

**ಪಡಿಕಮಣಂಪೇೞ್** (ಕ್ರಿ). [ಜೈನ] ಪ್ರಾಯಶ್ಚಿತ್ತವನ್ನು ಹೇಳು : ದೀಕ್ಷೆಯಂ ಕೊಟ್ಟು ಪಂಚಮಹಾವ್ರತಂಗಳನೇಱಿಸಿ ಪಡಿಕಮಣಂ[ಪಾಠಾಂ. ಪ್ರತಿಕ್ರಮಣಂ]ಪೇೞ್ದು ತದನಂತರಮಿಂ ಕಲ್ಪಿಸಿಮೆಂದೊಡೆ (ವಡ್ಡಾರಾ. ೬-೩). [ಪಡಿಕಮಣ+ಪೇೞ್]

**ಪಡಿಕರ** (ನಾ). ಒಂದು ಬಗೆಯ ಆಭರಣ; ತೋಳುಬಂದಿ: ಮುತ್ತಿನ ಬೊಟ್ಟು ಬುಗುಡಿಯ ಚಕ್ರ ನವರತ್ನ ಕೆತ್ತಿದ ತೋಳ ಪಡಿಕರವು ಉತ್ತಮ ಭುಜಕೀರ್ತಿ ತೋಳ ಭಾಪುರಿಗಳ ಬಿತ್ತರದಿಂದಳವಡಿಸಿ (ಶಾಂತೀಚ. ೩-೬೯). [?]

**ಪಡಿಕಲ್ಲು** (ನಾ). ತಕ್ಕಡಿಯ ತಟ್ಟೆಗಳನ್ನು ಸಮತೂಕಗೊಳಿಸುವುದಕ್ಕಾಗಿ, ಕಡಮೆ ತೂಕವಿರುವ ಕಡೆಗೆ ಇಡುವ ಕಲ್ಲು,- ಬಟ್ಟು; ಪೇರುಕಟ್ಟುವ ಕಲ್ಲು : (ಃ). [ಪಡಿ$_1$+ಕಲ್ಲು(<ಕಲ್$_3$)]

**ಪಡಿಕೂಳು** (ನಾ). ನಿರ್ದಿಷ್ಟ ಅಳತೆಯಷ್ಟು ಕೂಳು,— ಆಹಾರ : ನಿನ್ನ ಒಡೆಯ ಲಿಂಗಗೆಡೆಮಾಡದೆ ಪಡಿಕೂಳ ತಿಂದು ನೀ ಕುಡಿದೆ ನೀರ (ಲೋಕಗೀ. ೬೭). [ಪಡಿ$_1$+ಕೂಳು$_2$(<ಕೂೞ್$_1$)]

**ಪಡಿಕೆ$_1$** ‘ಪಡಕು$_2$’ ನೋ.

**ಪಡಿಕೆ$_2$** ‘ಪಡುಕೆ’ ನೋ.

**ಪಡಿಕೆ$_3$**, ಪಡಕು$_3$, ಫಡಿಕೆ (ನಾ). **೧.** ತುಂಡುಬಟ್ಟೆ ; ಚಿಂದಿ : “ಪಡಿಕೆ-ಹರಕ ಬಟ್ಟೆ ; ಚಿಂದರೆ ; ಸೀರೆಯ ತುಂಡು” (ಜಾನಕೋ. ೧೩) ; ಚಂಡಾತಕ – ಹೆಂಗಸರು ಉಟ್ಟುಕೊಳ್ಳುವ ಪಡಿಕೆ (ಗಂಗಾಸು. ೧೨೬). **ಪಡಕು$_3$** : (ಃ). **ಫಡಿಕೆ** : **೨.** ಒಂದು ಬಗೆಯ ಉಡುವ ವಸ್ತ್ರ; ಲುಂಗಿ ; ದಟ್ಟಿ : ಕ್ರಿಸ್ತೀ ಜನರ ಉಡಿಗೆಗಳು . . . ಅನುಕೂಲವಿದ್ದವರು ಇಜಾರುಗಳನ್ನು ಹಾಕಿಕೊಳ್ಳುವರು, ಇಲ್ಲವೆ ಫಡಿಕೆಗಳನ್ನು ಉಡುವರು (ಕಭಾಗೆ. ೨೪೮). [←**ಮರಾ.** ಫಡಕಾ]

**ಪಡಿಕೆನಾಱು** ‘ಪಡುಕೆನಾಱು’ ನೋ.

**ಪಡಿಗ,** ಪಡಗ, ಪಡುಗ (ನಾ). **೧.** ಉಗುಳುವ ಪಾತ್ರೆ ; ಪೀಕದಾನಿ : “ಪತದ್ಗ್ರಹಾಖ್ಯಂ ಪಡಿಗಂ” (ವಸ್ತುಕೋ. ೪೯-೨೬) ; ನಾರಾಯಣನುಮುದಾತ್ತನಾರಾಯಣನುಂ . . . ಮೊಗಸಾಲೆಯೊಳಿಟ್ಟ ಪೊನ್ನ ಪಡಿಗಂಗಳೊಳಮಿಕ್ಕಿದ ಪಱಿಯ ಸುಖಾಸನಂಗಳೊಳಂ ಕಟ್ಟಿದ ಚಿನ್ನದ ಬೊಂದರಿಗೆಯೊಳಮೆಸೆದಿರ್ದ ಮಣಿಮಯಪೀಠದೊಳೊಡನೇಱಿ ಕಿಱಿದು ಪೊಱ್ತು ಕುಳ್ಳಿರ್ದು (ಪಂಪಭಾ. ೪-೪೩ ವ) ; ಪಡಿಯಱಿವೆಸಗೆಯ್ವ ಪಡಿಗಮಂ ಸಾರ್ಚುವ ಮತ್ತಡಿಗುಟ್ಟುವ ಪಾವುಗೆಯಂ ಪಿಡಿದರ್ಪಿಪ ಬೆಸನೆ ದಿವಿಜಕಾಂತೆಯರ್ಗೆ ಬೆಸಂ (ಚಂದ್ರಪು. ೧೧-೧೩೬) ; ಮಣಿವುಪಕರಣತತಿ ಬಟ್ಟಲು ಪಡಿಗವಡ್ಡಣಿಗೆ. . .ಹಿರಿಯ ಚಿತ್ರದ ಭಿತ್ತಿಯಿಂ ಪೊಸಪರಿಯೆನಿಸಿ ರಾಜಿಸಿದಪುದು ಗಣಿಕಾನಿಕೇತನವು (ಬಸವು. ೧೨-೧೨); ಸುರಪುರದ ಸೂಳೆಯರ ಪಡಿಗವನಿರಿಸುವರು ಗಂಧರ್ವರು (ಕುವ್ಯಾಆ. ೨೧-೬೭). **೨.** ಪಾತ್ರೆ; ಭಾಂಡ : ನೆಲಕೆಲ್ಲವಿಟ್ಟ ಪಡಿಗಂ ನೆಲಕೆಲ್ಲಂ ಸಮೆದ ಪಚ್ಚವಡಮೆನೆ ಮತ್ತಂ ನೆಲನೆನಿತನಿತಱ ಮಯಿಲಗೆ ಬೆಲವೆಂಡತಿ ಬಗೆವೊಡಿಂತು ಕಿಸುಗುಳ ಮುಂಟೇ (ಪಸಾರ. ೨೯೯). **೩.** ತಟ್ಟೆ ; ತಳಿಗೆ ; ಹರಿವಾಣ : ಎಡೆವಟ್ಟಲ್ಗಡ್ಡಣಿಗೆಗೆ ಪಡಿಗಕ್ಕೆ ತಗುಳ್ದ ಪಱಿಯ ಬಿತ್ತರಿಗೆ ತಕ್ಕೆಡೆಯಱಿದು ಪಂತಿಕಾಱರನೆಡೆಯಱಿದು ವಿಲಾಸದಿಂದಮಿರಿಸಿದರಾಗಳ್ (ಸುಕುಮಾ. ೧೧-೨೬) ; ರಾಯನ ಮಡದಿಯರು ಹೊಂಗಳಸಜಲವನು ಪಡಿಗವನು ಹಿಡಿದಸುರರಿಪುವಿನ ಬರವ ಹಾರಿದರು (ಕುವ್ಯಾಉ. ೮-೩) ; ಹೊಂದಂಬಿಗೆಯುದಕವ ತಂದು ಚರಣಾರವಿಂದವ ಪಡಿಗದೆ ತೊಳೆದು ಗಂಧ ಕತ್ತುರಿಯಿಂದೆ ತಿಗುರಿಕ್ಕಿ ಪಾವುಡೆಯಿಂದೊರಸಿದರು ಸೌಖ್ಯದಲಿ (ಮೋಹತ. ೨೬-೩). **ಪಡಗ** : **೧.** ಆನು ನಿಮ್ಮ ಬಂಟರ ಬಂಟ ನಾನಯ್ಯಾ . . . ಆನು ನಿಮ್ಮ ತೊತ್ತಿರ ಪಡ[ಪಾಠಾಂ. ಡಿ,ಡು]ಗವ ತೆಗೆವ ಪಡಿದೊತ್ತಯ್ಯಾ (ಬಸವ. ಕ. ೧೦೫೭). **೨.** ವನಧಿಯೊಳೊಂದು ವಿಸ್ತೀರ್ಣ ಕಂದದ ಮಧ್ಯ ಕನಕಮಯ ಪಡಗದಂದದಿ ಸೊಗಸುವೆತ್ತು . . . ಸಲೆ ರಾಜಿಪುದು ದ್ವಾರಾವತಿಪುರವು (ನಪಮೋ. ೧೦-೮). **೪.** ದೊಡ್ಡ ಮಡಕೆ ; ಹರವಿ : ನಿನ ತೋೞ್ ಮೊಸರಿಲಿ ಮುಳುಗಿದೆ ಕಳ್ಳ ಎನಲು ನಮ್ಮಳೆಗರು ಮುಳುಗಿದೆ ಪಡಗದಿ ದಣಿ ಹುಡುಕಿದೆ ನಾ ತಿನಲಿಲ್ಲೆಂಬ (ಪ್ರಸಭಾ. ೧೭-೨೧) ; ಮೂಗೂತಿ ಮುರಿದಿತ್ತು ಮುಂಜೆರಗು ಹರಿದಿತ್ತು ಮಜ್ಜೀಗಿ ಪಡಗ ಒಡದಿತ್ತ (ಲೋಕಗೀ. ೧೨೬). **ಪಡುಗ** : **೧.** ಭಕ್ತರ ಪಡುಗ ಪಾದ ತ್ರಣು (ತೃಣ) ಪಹರೆ ಬಾಗಿಲು ಬೊಕ್ಕಸ ಬಿಯ್ಯಗ ಮುಂತಾದ

ಕಾಯಕವ ಮಾಡಿಕೊಂಡು (ಸರ್ವವ. ೧೪೯–೮೮೪) ; ನೀವೆದ್ದ ಉನ್ನತಿಯ ಪುರಕ್ಕೆ ಬಂದು ನಿಮ್ಮ ಪಡುಗ ಪಾದರಕ್ಷೆಯಂ ಪಿಡಿದು ನಿಮ್ಮ ಬಾಗಿಲ ಕಾಯ್ದಿಪ್ಪುದೇ ಎನಗೆ ಭಾಷೆ (ಭಸವ. ೫–೨) ; ನಿಮ್ಮ ಶರಣರು ಉಟ್ಟ ಮೈಲಿಗೆಯು ಬಟ್ಟೆ ಉಗುಳಿದ ತಾಂಬೂಲ ಒಕ್ಕು ಮಿಕ್ಕ ಪ್ರಸಾದವನೆ ಕರುಣಿಸಿ ಅವರ ಪಡುಗ[ಪಾಠಾಂ. ಪಡುಗಾವ]ಕಾಯ್ವಂತೆ ಪಾದರಕ್ಷೆಯನೆ ಹಿಡಿವುದಕ್ಕೆ ಯೋಗ್ಯನ ಮಾಡಿ ಅವರ ಕಡೆಯ ಬಾಗಿಲನೆ ಕಾಯುವಂತೆ ಮಾಡಯ್ಯ ಎನ್ನ (ಅಖಂಡೇ. ೮೧–೭೦). **೨.** ಅರು ಮೂರು ಪಡುಗಕೆ ಯಸರಿಕ್ಕಿದೆ ವಲೆಯಾನೆ ನಾವೂದಿದೆ (ಚಿದಾನ. ೭೪–೭), ಪಡುಗದೊಳು ಘೃತಮಂ ಸೋದಿಸುತ (ಲಿಂಗಪು. ೮–೨೧).

[<ಪ್ರಾ. ಪಡಿಗ್ಗಹ./ಸಂ. ಪತದ್ಗ್ರಹ]

**ಪಡಿಗಚ್ಚು** (ನಾ). (?) : ಅಂತಿದಿರಾಂತ ಮಾರ್ಪಡೆಯೆಲ್ಲಮಂ ಜವನ ಪಡೆಗೆ ಪಡಿಗ[ಪಾಠಾಂ. ಗೊ]ಚ್ಚಿಕ್ಕುವಂತಿಕ್ಕಿ ನಿಂದ ನರನಂದನನಂ ಕಂಡು . . . ಲಕ್ಕಣಂ ಮೊದಲಾಗೆ ನೂರ್ವರುಮೊಂದಾಗೆ ಬಂದು ತಾಗಿದಾಗಳ್ (ಪಂಪಭಾ. ೧೧–೯೪). P "ಪಡಿಗಂಚಿಕ್ಕುವಂತೆ ಎಂಬ ಪಾಠ ಇದ್ದಿರಬಹುದು" (ಪಂಪದೀ. ೪೧೩). [?]

**ಪಡಿಗಟ್ಟಳೆ** (ನಾ). ಸಮಾನ; ಎಣೆ : ತನ್ನಿಯ ತಿಣ್ಪನೇಳ್ಗೆ ಪಡಿಗಟ್ಟಳೆ ಯಾದುದು ಮಂದರಕ್ಕೆ ತನ್ನುನ್ನತಿ ಮೇರುವಿಂಗೆ ಮಣಿಚೂಣಿಯಾದುದು (ಸೌಇಇ. XI–ii, ೧೭೩–೩೬ ; 1124). [ಪಡಿ$_3$+ಕಟ್ಟಳೆ$_1$]

**ಪಡಿಗಟ್ಟು**$_1$, ಪಡಿಕಟ್ಟು$_1$, ಹಡಿಕಟ್ಟು(ಕ್ರಿ). **೧.** ಹೋಲಿಸು; ತಾಳಿ ನೋಡು : ಸುರವನಿತಾಜನಂಗಳ್ ಸುರೂಪವಿಳಾಸೆಯರೆಂದು ಬೀಗಿ ಧಿಕ್ಕರಿಸುವನಿಂದ್ರನೆಮ್ಮುವನವಂದಿರುವಂ ಪಡಿಗಟ್ಟಿ ನೋಡುಗೀ ಬರವಿ ನೊಳಾದ ಚೆಲ್ವು ವಿಗಿಲಿಲ್ಲಿಯೆ ಕಂಡಪನೆಂದು ತೋರ್ಪವೋಲ್ ನೆರೆದುದು ಪೆಂಡವಾಸದೆಳವೆಂಡಿರ ತಂಡಂ (ಪುಷ್ಪಪು. ೧೨–೨೧) ; ಬಡನಡುವಿನ ಬಾವನ್ನಗಂಪಿನ ಹೊಂಪಿಡಿದ ಹೊಂಬಳ್ಳಿಯೊಳೆಸೆವ ಕಡುಬಿಣ್ಪಿನ ಜಘನದ ಕಾಮಿನಿಗಿಂದು ಪಡಿಗಟ್ಟಿ ಪೇಳುವೆನೇನ (ಜೀವಂಸಾಂ. ೧೦–೨೫); ಮಡಿಗಳ ಕಾವ ಪುಳಿಂದಿನಿಯರ ರೂಪ ಪಡಿಗಟ್ಟ ಬಲ್ಲವರಾರು (ಮೋಹತ. ೨–೪೨). **೨.** ಸಮಾನವಾಗು ; ಸಾಟಿಯಾಗು : ಕಾದಿದರು ಬಿಡದೊಬ್ಬರೊಬ್ಬರೊಳೀ ದುರಾಗ್ರಹದಿಂದ ಸುಭಟರು ಮೇದಿನಿಯೊಳಿದಿರಲ್ಲ ಪಡಿಗಟ್ಟುವರೆ ಪಟುಭಟರು (ಕುವ್ಯಾಸ.ಒರಿಇ.೨–೧೩೪) ; ಅರಣ್ಯ ಮಧ್ಯದಲ್ಲು ಐತರುವ ಮತ್ತಗಜಗಳ ಸಮೂಹಕ್ಕೆ ತದ್ವಾಹನಾಲಂಕಾರ ಯುಕ್ತದಿಂ ಚಿತ್ರೈಸಿ ಕಂಠೀರವನವೋಲ್ ಪಡಿಗಟ್ಟಿ ಗಜಗಳೆಂಬ ಉಚ್ಚರಣೆಗೆ ನಾಣ್ನುಡಿ ಕಾಣಿಪಂತೆ (ಎಕ. I, ೩–೮ ; 1822). **ಪಡಿಕಟ್ಟು**$_1$ : **೧.** "ಸ್ತಂಭತೆ = ಪಡಿಕಟ್ಟದಪುದು" (ಕಾಶಕ್ಕ. ೧೧೬). **ಹಡಿಕಟ್ಟು** : **೩.** ಪ್ರತಿಯಾಗಿ ನಿಲ್ಲು ; ಎದುರಿಸು ; ಪ್ರತಿಭಟಿಸು : ಜಕ್ಕೆಯ ನಾಯಕಂ ಮೊನೆಯಿಟ್ಟಿಗೊಂಡನಾಯಕರ ಮೇಲೆವಾಯಲು ತಳಿಯ ಮಚಿವಿಡಿದು ಹಡಿಕಟ್ಟದಾಳೆಚ್ಚು ಗೂಡಂಬಗೊಂಡು ಕೆಡಹಲು (ಮೈಆರಿ. ೧೯೪೧, ೪೨–೧ ; 13ನೆಯ ಶತ). [ಪಡಿ$_3$+ಕಟ್ಟು$_1$]

**ಪಡಿಗಟ್ಟು**$_2$, ಪಡಿಕಟ್ಟು$_3$ (ನಾ). **೧.** ಸರಿಸಮಾನವಾದುದು ; ಸರಿದೊರೆಯಾದುದು: ನೆಟ್ಟನಧಿರಾಜೇಂದ್ರಪಟ್ಟದ ಕಟ್ಟುವೆನು ಕಮಲಾಂಬಕನ ಪಡಿಗಟ್ಟೆನಗ್ಗದ ರಾಮಚಂದ್ರಂಗೆಂದು ನಿಶ್ಚೈಸಿ (ತೊರರಾ. ೨–೧–೧೧). **ಪಡಿಕಟ್ಟು**$_3$ : **೨.** ಅಡ್ಡಿಪಡಿಸುವಿಕೆ ; ಪ್ರತಿಬಂಧನ: "ಷ್ಟಭಿ, ಸ್ಕಭಿ — ಪ್ರತಿಬಂಧೇ, ಪಡಿಕಟ್ಟನೊಳ್" (ಕಾಶಕ್ಕ. ೧೦೬). [ಪಡಿ$_3$+ಕಟ್ಟು$_2$]

**ಪಡಿಗಣಿಸು**(ಕ್ರಿ).(ಧಾನ್ಯ ಮೊದಲಾದುವನ್ನು) ಅಳೆದುನೋಡು ; ಪರೀಕ್ಷಿಸು : ಆ ಮೂಗಳವ ನಡುವೊಜಿದಲ್ಲಿ ಸುರಿಯೆ ಪಡಿಗಣಿಸುವಾಗ ಒಕ್ಕುಳವಾಯಿತ್ತು (ಮೋಳಮಾ. ೨೧೭–೭೭೧). [ಪಡಿ$_1$ + ಗಣಿಸು]

**ಪಡಿಗದ** (ನಾ). ಬಾಗಿಲಿನ ಕದ,—ರೆಕ್ಕೆ : ನಡುಮನೆಯೊಳರ್ಧವನ ಕೋಣೆಗೊಡಗೊಂಡೊಯ್ದು ಪಡಿಗದವನಿಕ್ಕಿ ಉಮ್ಮಳಿಸಿ[ಪಾಠಾಂ. ಪದಿಯ ನಿಕ್ಕುತ್ತ]ಲುರವಣಿಸಿ]ಸುಟ್ಟನೆ ಸುಯಿಯ್ದು (ಕಲಿರ. ದೇ. ೩೧೧–೨೪).

[ಪಡಿ$_2$+ಕದ(<ಕದವು$_1$)]

**ಪಡಿಗಯಿಸು** (ಕ್ರಿ). ಸಮಾನವಾಗಿಸು ; ಸಮಗೊಳಿಸು : ಅದಂ ಕಂಡು ಕಂಸಂ . . . ಘಟಶೂರ ಚಾಣೂರವಿಕ್ರಮದಿಂ ಸಮುಕರ್ತರಿಯ ನೆನ್ನಯ್ಯಂ ಕೊಂಡನೆಂದು ಪಡಿಗಯಿಸಲೊಡನೆ ಸಿಗ್ಗಾಗಿ ಬೇಗಮಾಗಿ ಮನಂಗೆಯ್ದು (ಅರ್ಥನೇ. ೮–೧೦೬ ವ).

[ಪಡಿ$_3$+ಕಯಿಸು(<ಕೆಯ್ಸು)]

**ಪಡಿಗಲ್ಲು** (ನಾ). ಬಾಗಿಲಿಗೆ ಕದವಾಗಿ ಇಟ್ಟ ಕಲ್ಲು : ಕೊಂದು ಖಳನನು ಬಳಿಕ ಬಾಲರ ವೃಂದವನು ಬಿಲಮುಖದಲತಿಕ್ರಪೆಯಿಂದ ನೆಗಹಿದ ನೆಲ್ಲರನು ಪಡಿಗಲ್ಲನೀಡಾಡಿ (ಸಿಭಾಗ. ೧೦–೩೨–೫೦).

[ಪಡಿ$_2$ + ಕಲ್ಲು(<ಕಲ್$_3$)]

**ಪಡಿಗವಿಡಿ** (ಕ್ರಿ). ಪೀಕದಾನಿಯನ್ನು ಹಿಡಿದು ಸೇವೆ ಮಾಡು : ನಾನಾಸಮುದ್ರಾಂತಚಕ್ರೇಶ್ವರರ್ ಬಹುಜನ್ಮದಾ ಸುಕೃತವೊದವಲೆಸಗಿದ ಯಜ್ಞಮುಖದೊಳೈತಂದಿವರ ಪಡಿಗವಿಡಿವ ದಾಸಿಯರೊಳೊಂದಿವಸಮಿಪ್ಪ ದಘುಟಿತವಪ್ಪುದು (ಚಿಬಪು. ೧೯–೪೫). [ಪಡಿಗ+ಪಿಡಿ$_1$]

**ಪಡಿಗಾಣ್**$_1$ (ಕ್ರಿ). ಎಣಿಸು ; ಲೆಕ್ಕಮಾಡು : ಹಿಡಿವಿಂಗನಕ್ಕಿಯ ತುಂಡುತುಂಡುಗಳನು ಸಡಿಲದೆ ಸೊಪ್ಪಿನೊಳ್ಪುದುಗಿ ದಡಿಗಿಕ್ಕಿ ಹೊತ್ತವ ರಣಿನಿತೆಂಬುದ ಪಡಿಗಾಣ್ಬೊಡೆ ಶಕ್ಯವಲ್ಲ (ಮೋಹತ. ೧೯–೮೬).

[ಪಡಿ$_1$+ಕಾಣ್]

**ಪಡಿಗಾಣ್**$_2$ (ಕ್ರಿ). ಸಮಾನವಾದುದನ್ನು ಕಾಣು : ಕಿಡಿಗಣ್ಣ ನೊಡ್ಡೋಲಗದಲ್ಲಿ ಸುರವೆಣ್ಣಡಿಕಿಱಿದಿಹುದು ನಿನ್ನೊರೆಗೆ ಪಡಿಗಾಣೆವು (ಮೋಹತ. ೨೬–೧೪); ಇವಳ ಪುಣ್ಯಕ್ಕೆ ಪಡಿಗಾಣೆವು (ಚತುಪು.೩–೩–೫೦).

[ಪಡಿ$_3$ + ಕಾಣ್]

**ಪಡಿಗಿಱು**, ಹಡಿಗಿಱು (ಕ್ರಿ). ಬಾಗಿಲನ್ನು ಮುಚ್ಚು ; ಕದವಿಕ್ಕು : ಊರೂರ ದೈವಂಗಳುಂ ಪಡಿಗೆತ್ತೋಡಿದುವೀಕೆಗಂಜಿ (ಲೀಲಾವ.೨–೧೦೨); ಇನದೀಪಂ ನಂದಿರೆ ಬಂದು ನಿಶಾರಾಕ್ಷಸಿ ಚರಾಚರೌಘಗ್ರಸನಾರ್ಥಿನಿ ಭುವನಭವನಮಂ ಭೋಂಕನೆ ಪಡಿಗೆತ್ತಂದವಾದುದಂದು ತಮಂಧಂ (ಜಗವಿ. ೧೬–೧೦೧) ; ಕಂಡುಕೆಂದು ತಂದು ಚಂಚಱಾವಿವರಕ್ಕೆ ಮಾಣಿಕದ ಮುದ್ರಿಕೆಯಂ ಪಡಿಗೆತ್ತು ಭಾರತೀದೇವಿ ನಿರಂತರಂ ಸವಿವಳಾತನ ನವ್ಯ ವಚೋವಿಳಾಸಮಂ (ಧರ್ಮನಾ.೧–೭೩); ತೆಗೆದ ಕಣ್ಗಳ ಬಾಗಿಲಿಂದವನನು ತಂದು ಪುಗಿಸಿ ಮರಳಿ ಪೋಗದಂತೆ ವಿಂಗೆ ತುಱುಗಿವೆ ಪಡಿಗೆತ್ತ [ಪಾಠಾಂ. ಪಡಿಗೆಳ್ತ, ವಡಿಗೆಳ್ತ]ಳೆಂಬಂತಾಗ ಮುಗಿದವು ಕಣ್ಗಳವಳಿಗೆ (ಕುರಾಸಾಂ. ೨೨–೧೫). **ಹಡಿಗಿಱು** : ಬೆದೆವೋದ ಸವಣನ್ನಡುಹುಳ್ಳ ಕಂಠಿಯನವಚಿ ಕೊಂಡೀಗ ನಾಚಿ ಹಡಿಗೆತ್ತಿರ್ದಪನೊ (ಸೋಮಚ. ೪–೪೫) ; ಚಂದ್ರನೊಡಲ ನೆಳಲಿನಿತು ಸೋಂಕಿದೊಡೆನ್ನ ಪತಿ ಮುನಿವನೆಂದು ಸಿರಿ . . . ಅಳ್ಳಿ ಮೇಣೆಸಳ ಹಡಿಗೆತ್ತುಕೊಂಡಳೆಂಬಂತಲರ್ದ ತಾವರೆಗಳುಡುಪನುದಯಕ್ಕೆ ಮುನ್ನವೆ ಮುಗಿದವು (ಚೀರಮ. ೭–೩೧); ವೇದಪುರುಷರೆಲ್ಲಾ ನಡೆತಂದು ಪೂಜಿಸುತ್ತಾರು ತೆಗೆಯದ ತೆಱಿದ ಹಡಿಗೆತ್ತು ಹೋದ ತದ್ಭ್ರಹ್ಮೇಶ ನಾಲಯದ ಎಡೆಗೆ ಬಂದು (ವೀಶೈಪು. ೪–೯–೧೧). [ಪಡಿ$_2$+ಕಿಱು$_1$]

**ಪಡಿಗುಂಜಿ** (ನಾ). (ತೂಕವನ್ನು) ಸರಿದೂಗಿಸಲು ಇಟ್ಟ ಗುಲಗುಂಜಿ : ವರುಣಗಿರಿ ಪೂರ್ವಾದ್ರಿಗಳ ಹೆಚ್ಚುಕುಂದಮಂ ಸರಸಿಜಭವಂ ನೋಳ್ಪೆನೆಂದು ತೂಗಲ್ ಸಮಂ ಬರದಿರಲ್ ಪೂರ್ವಾದ್ರಿಗಿಟ್ಟ ಪಡಿಗುಂಜಿಯೋ . . . ಚಂದ್ರಮಂಡಲಂ (ಚಿಬಪು. ೯–೧೭).

[ಪಡಿ$_1$ + ಗುಂಜಿ]

**ಪಡಿಗುಂಡು** (ನಾ). ೧. ಮತ್ತೊಂದು ಕಲ್ಲನ್ನು ಒಡೆಯಲು ಉಪಯೋಗಿಸುವ ದುಂಡಾದ ಕಲ್ಲು : (ಕ). ೨. ಕಟ್ಟಡದ ತಳಪಾಯಕ್ಕೆ ಬಳಸುವ ಕಲ್ಲು; ಅಡಿಗಲ್ಲು : (ಕ).
[ಪಡಿ$_3$+ಗುಂಡು]

**ಪಡಿಗೊಳ್** (ಕ್ರಿ). ಪ್ರತಿಯಾಗು ; ಸದೃಶವಾಗಿರು : ಪೊಣ್ಮಿ ಪಾಯ್ದು ಪೊಜಿಸೂಸಿ ಪೊದಟಿದ್ದಿಸೆವೊಳ್ಪದಿರ್ಗಳಂ ಮಣಿಮಯದೊಪ್ಪುವೊಂದು ತೊಡವಂ ಪಡಿಗೊಳ್ವುದು ಕಬ್ಬವೊರ್ಬನಾ (ಚಿಕವಿ. ೧-೧೦) ; ತಾಳ್ಮೆಯೊಳ್ ತಿರೆಯಂತಿರೆ . . . ಸಿಡಿಲ ಪೊಡರ್ಪು, ಕಡಲ ಗುಣ್ಪು, ಪಡಿಗೊಳೆ ದಶರಥಕುಮಾರಂ ರಾಜ್ಯಮನಾಳುತಿರ್ದಂ(ರಾಮಾಶ್ವ. ೭-೧೮).
[ಪಡಿ$_3$ + ಕೊಳ್$_1$]

**ಪಡಿಗೋಂಟೆ,** ಪಡಿಗೋಟೆ (ನಾ). ೧. ಇನ್ನೊಂದು ಕೋಟೆ ; ಮತ್ತೊಂದು ಕೋಟೆ : ಪಡಿಗೋಂಟೆಗೆಯ್ದು ಕಡುಪಂ ಪಡಿಯಗಟಿಗ್ಗಿಯ್ದಳವನಾರ್ಪು ಕಡುಗೂರ್ಪುಗಳಂ ಪಡಿವಡೆಗೆಯ್ದೊಂದವರೊಳ್ ಪಡಿಬರಿಸಿದರವುಮವು ವಿಷ್ಣುಜಿಷ್ಣುಗಳನ್ನರ್ (ಚಿಕವಿ. ೨-೪೫). ೨. (ಯುದ್ಧದ ಸಂದರ್ಭಗಳಲ್ಲಿ ನಿರ್ಮಿಸುವ)ಕೃತ್ರಿಮವಾದ ಕೋಟೆ,—ದುರ್ಗ: ನಡೆಸಾರಂ ಬದ್ದರಂ ಗೆಗ್ಗೆ ಡೆಂಕಣಿ ಗುಮ್ಮಂ ಪಡಿಗೋಂಟೆಯೆಂಬ ಬಹುಕೋಟಾಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ ಲಗ್ಗೆಗಾರ್ದು ವಸುಷೇಣಂ ಸಾರ್ದು ಸೂಳ್ಕೆಸಿದಂ (ಅನಂಪು. ೧೧-೮೩) ; 'ಪಡಿಗೋಂಟೆ' ಎಂದರೆ 'ಪ್ರತಿದುರ್ಗ',ಎಂದರೆ ರಚನೆ ಮಾಡಿದ ಕೃತ್ರಿಮದುರ್ಗ(ಕರ್ಣಾಜ. ೨೮). **ಪಡಿಗೋಟೆ** : ೧. ವಿಘಟಿಸಿಪ ಗಂಧರ್ವರೊಂದೇ ಕೋಟೆಕವಿದುದು ಕುರುಬಲಕೆ ಪಡಿಗೋಟೆಯಾದುದು ನೃಪತಿ ಸಿಲುಕಿದನವರ ವೇಡೆಯಲಿ (ಕುವ್ಯಾಭ. ೧೯-೫೦) ; ವಿಮಸುನಿಯೆರೆಕದಲೆಸೆವ ಪ್ರಾಕಾರ ಸಪ್ತಕಗಳಸುವೀವ ರನ್ನಗಳ ತೆನೆಗಳಂ ವೈಡೂರ್ಯವಸರಮೆನಲಾಳ್ವೀರ ನೀಲದಗಳಲ್ಲಲ್ಲಿ ಪಚ್ಚೆಗಳ ಪಡಿಗೋಟೆಯು (ನೇಂಕಾರಾ. ೫-೨-೪). ೨. ಆಸದಳದ ಪಡಿಗೋಟೆ ಪಡಿಯಗಳಸಮರಣಜೂಟಾಳಸೂತ್ರಪ್ರಸರದಲಿ ನೆಲಗೋಟೆ ಬಿದಟ್‌ಸಿತಮರಸಂತತಿಯ (ತೊರರಾ. ೬-೭-೫).
[ಪಡಿ$_3$ + ಕೋಂಟೆ]

**ಪಡಿಗೋಟೆ** 'ಪಡಿಗೋಂಟೆ' ನೋ.

**ಪಡಿಗ್ಗಹ** (ನಾ). ಹಿಡಿಯುವವನು ; ವಶಪಡಿಸಿಕೊಳ್ಳುವವನು : ರಿಪುರಾಯದಂಡುಗೆ ಪಡಿಗ್ಗಹನೆಂಬುರುವೀರದೇಟಿಗ್ಗೆ ತನ್ನೊಳೆ . . . ನೆಲಸಲ್ಕುದಾತ್ತನೆನೆ ಬಿಜ್ಜಳನಾಯಕನಿರ್ದನುಬ್ಬಿಯೊಳ್ (ಎಇ. XV, ೩೨೧-೪೪ ; 1172).
[<ಪಾಲಿ. ಪಟಿಗ್ಗಹ=ತೆಗೆದುಕೊಳ್ಳುವುದು./ಸಂ. ಪ್ರತಿಗ್ರಹ]

**ಪಡಿಚ** 'ಘಡ್ಚ' ನೋ.

**ಪಡಿಚಂದ,** ಪಡಿಛಂದ (ನಾ). ೧. ಪ್ರತಿಚ್ಛಾಯೆ; ಪ್ರತಿಕೃತಿ : "ಪಡಿಚಂದ-ಪ್ರತಿಚ್ಛಂದ=ಪ್ರತಿಚ್ಛಾಯೆ" (ತದ್ಭಕೋ.೨೩) ; ಅಣ್ಮಿನ ಪಡೆಮಾತದೊಂದೆ ನೆವಮಾಗಿರೆ ಕೆಯ್ದುವನಿಕ್ಕಿ ಸತ್ತ ಸಾವಿನ ಪಡಿಚಂದಮಾಗಿಯುಮಿದೇಂ ನಿಮಗಟ್ಟಿಯೊ ಗಂಡವಾತುಗಳ್ (ಪಂಪಭಾ. ೧೨-೪೧) ; ವಿದ್ಯಾಸಂದೋಹದೊಳಣ್ಣನ ಪಡಿಚಂದಂ ಚಕ್ರಾಯುಧಂಗೆ ಗುರು ಪೆಜಿನೊಳನೇ (ಶಾಂತಿಪು. ೧೦-೯೮) ; ಸುರೇಶ್ವರಭವನಕ್ಕೆ ತಾನೆ ಪಡಿಚಂದಮಿದೆಂಬಿನಮುಚ್ಚರಕ್ಕೆ ತಾಯ್ಗುರು ಕರುಮಾಡಮೊಪ್ಪುವುದಲಂಕೃತ ಸಪ್ತತಳಂ ನಿರಾಕುಳಂ (ಪುಷ್ಪಪು. ೨-೯೨) ; ಎರಡು ಪದಂಗಳಪಭ್ರಂಶಕ್ಕೆ . . . ಪ್ರತಿಚ್ಛಂದ—ಪಡಿಚಂದ (ಶಮದ. ೨೪೯ ಪ್ರಯೋ). ೨. ಶ್ರೇಷ್ಠವಾದುದು ; ಉತ್ತಮವಾದುದು : ಸಹಸ್ರಾಯುಧಂ ಜಿನೇಶ್ವರ ರೂಪಮಂ ತಾಳ್ದಿ ದುಶ್ಚರತಪಶ್ಚರಣಪರಿಣತವಿಹಾರನಾಗಿ ಮುನಿವೃಂದಕ್ಕೆ ಪಡಿಚಂದಮಾಗಿ ನೆಗಟುತ್ತಿರೆ (ಶಾಂತಿಪು. ೯-೨೯ವ) ; ಪೂರ್ಣ್ದೀ ಮಾತೆಮಾತಾಗೆ ತಾನಾವಂಗಂ ಪಡಿಚನ್ದಮಾದೆಸಕದೊಳ್ಪೆರ್ವ್ವಾಡಿಗಂಗೊಪ್ಪರೇ (ಎಕ. IV, ನಾಗಮಂ. ೫೧-೧೨ ; 972) ; ವಸುಧೆಗೆ ನಿತ್ಯಮಂಡಿತಜಿನಾಲಯಮಂ ಪಡಿಚಂದಮಾಗೆ ಕಣ್ಗೆಸೆದಿರೆ ನೂತ್ನರತ್ನಮಯಮಾಗಿರೆ ಮಾಡಿಸಿ (ಸುಕುಮಾ. ೧೦-೫೫) ; ಅಳಂಕರಣಮಿತ್ತೆಳ್ಗೆಯ್ಮನೆಯಿಟ್ಟ ಛತ್ರಮುವ್ವಿಗೆ ಪಡಿಚಂದಮಾದ[ವೆ]ನೆ ಧಾರ್ಮ್ಮಿಕ ಧರ್ಮ್ಮಾಜನೇಂ ಕ್ರಿತಾರ್ತ್ಥನೋ (ಸೌಇಇ. IX-i, ೧೬೧-೪೭ ; 1092) ; ಅಗಣಿತಮಪ್ಪ ಪಾಣ್ಡ್ಯನ ಬಲವರ್ ನೆಜೆ × × × ಧಾತ್ರಿಗೆ ಪಡಿಚನ್ದಮಾಗಿ (ಎಕ.XI, ಹೊಳಲ್ಕೆ. ೧೦೪-೨೮ ; 1228). **ಪಡಿಛಂದ** : ೨. ಮಣ್ದಲಕ್ಕೆಲ್ಲಂ ಪಡಿಛಂದಮಾಗೆ ಶಿಲಾಸ್ತಂಭಂ ಶಾಸನವಾಗೆ ನಟ್ಟಿಂ (ಎಇ. VI, ೨೧೭-೩೨ ; 1058). [<ಪ್ರಾ. ಪಡಿಚ್ಛಂದ./ಸಂ. ಪ್ರತಿಚ್ಛಂದ]

**ಪಡಿಚರ** (ನಾ). ೧. ಪ್ರತಿ ಸೇವಕ ; ಪಡಿದೊತ್ತು : ಅಡಕಿದರು ಪಡಿಚರರು ಕುಶಸಮಿಧೆಗಳ ಹೊಜೆಗಳನು (ಕೌರಾ. ೧-೬೦). ೨. ಸೇವಕನ ಕಾರ್ಯ; ಊಳಿಗ : ಮುಂದಣ ರಾಜಕಾರ್ಯವನೆಣ್ಣಿ ಪಡಿಚರದ ಜೋಡಿನವರಟ್ಟಿದನು (ಕೃಷ್ಣಾಕಾ. ೧೭-೩೦). [ಪಡಿ$_3$ +ಚರ]

**ಪಡಿಚಾಯೆ** (ನಾ). ಪ್ರತಿಬಿಂಬ ; ಪಡಿನೆಳಲು: 'ಪಡಿಚಾಯೆಗೊಳ್' ಪರಾ. [<ಪ್ರಾ. ಪಡಿಚ್ಛಾಯಾ./ಸಂ. ಪ್ರತಿಚ್ಛಾಯಾ]

**ಪಡಿಚಾಯೆಗೊಳ್** (ಕ್ರಿ). ಪ್ರತಿಬಿಂಬಿಸು ; ಮೂಡು : ಭಾವರಸಂ ಪಡಿಚಾಯೆಗೊಳ್ವಿನಂ ಪಡೆವುದು ಬಣ್ಣಗಬ್ಬಮದು ನಿರ್ಭರದೀಕಿವಿಗಳ್ಗೆ ಪರ್ಬಮಂ (ಚಿಕವಿ. ೧-೧೨). [ಪಡಿಚಾಯೆ + ಕೊಳ್$_1$]

**ಪಡಿಚಾರ** (ನಾ). = ಪಡಿಚರ ೧ : ಅವನ ಬಾಗಿಲಕಟ್ಟೆಗೆಯ ಪಡಿಚಾರರಿವನೊಡಹುಟ್ಟಿದರು ಸಹಭಂಗ ಬಿಟ್ಟರೆ ನರವೃಕೋದರರ ನಿಟ್ಟಿಸಲು (ಕೃಷ್ಣಾಕಾ. ೧೦-೩೦). [ಪಡಿ$_3$+ಚಾರ]

**ಪಡಿಛಂದ** 'ಪಡಿಚಂದ' ನೋ.

**ಪಡಿತನ** (ನಾ). ಪ್ರತಿಯಾಗಿರುವಿಕೆ ; ದ್ವೇಷ : ಸಂಧಿಸಲು ಲಗ್ನೇಶತಾ ರಿಪುಮಂದಿರದಿ ತಸ್ಥಾನನಾಯಕ ಹೊಂದೆ ಲಗ್ನವ ಶತ್ರು ಪಡಿತನವನು ತಿಳಿಯಂದ (ಕೇರಪ್ರ. ೯-೧೪). [ಪಡಿ$_3$ + -ತನ]

**ಪಡಿತರ** (ನಾ). ೧. (ದೇವಸ್ಥಾನ ಮುಂತಾದ ಕಡೆಗಳಲ್ಲಿ ಕೆಲಸ ಮಾಡುವವನಿಗೆ) ಧಾನ್ಯರೂಪದಲ್ಲಿ ಕೊಡುವ ದೈನಂದಿನ ಭತ್ಯ: ಶ್ರೀ ನಾರಾಯಣದೇವರಿಗೆ ಪಡಿತರಭೂಮಿಯ ಶ್ರೀವೈಷ್ಣವರು ಕೊಟ್ಟು ತಮ್ಮ ಕೈಂಕರ್ಯವಾಗಿ ನಡಿಸುವುದು (ಎಕ. XIV, ಶ್ರೀರಂಗ. ೮೭-೧೯ ; 1360 ?) ; ನಗರೇಶ್ವರಸ್ವಾಮಿಯವರಿಗೆ ಪಡಿತರ ದೀಪಾರಾಧನೆ ಅರ್ಚನಾವೃತ್ತಿ ಮೊದಲಾದ ದೇವತಾಶಾವೆಗೋಸ್ಕರವಾಗಿ . . . ಶ್ರೀರಾಮಚಂದ್ರಸ್ವಾಮಿಯವರಿಗೆ ಸಮರ್ಪಿಸಲಾಗಿ (ಎಕ. IX, ಬೆಂಗಳೂ. ೯೬-೮ ; 1402 ?) ; ಶ್ರೀನಂಜುಂಡೇಶ್ವರಸ್ವಾಮಿಯವರ ಮಹಾಸನ್ನಿಧಾನಕ್ಕೆ ಅಂತರಂಗವೈಭೋಗ ಪಡಿತರ ದೀಪಾರಾಧನೆ . . . ಮಹಾದಿಪೋತ್ಸವಾದಿ ಕಟ್ಟಳೆಗಳಿಗೋಸ್ಕರವಾಗಿ ವರ್ಷವರ್ಷವೂ ಸಲಿಗೆಯೊಪ್ಪಿಸುವ ದೇವದಾಯದ ಕಾಣ್ಕೆ (ಬಿರುಗಂ. ೨೭-೭) ; ವೀರಮಲ್ಲಣ್ಣಒಡೆಯನು, ೧ ಶಂಪಿಗೇ ಸಿದ್ಧೇಶ್ವರನ ಗುಡಿ . . . ಮುಂತಾದ್ದನ್ನು ಕಟ್ಟಿಸಿ, ಇವುಗಳ ಪಡಿತರ ದೀಪಾರಾಧನೆಗೆ ೧ ಮುಸಂಡಿಹಾಳು ೨ ಚಿಕ್ಕಪುರ, ಈ ಎರಡು ಗ್ರಾಮಗಳನ್ನು ಕೊಟ್ಟನು (ಚಿತ್ರಪಾ. ೩). ೨. ಸರ್ಕಾರದವರು ನಿಗದಿಯಾದ ಬೆಲೆಯಲ್ಲಿ ಸಾರ್ವಜನಿಕರಿಗೆ ಒದಗಿಸುವ ನಿರ್ದಿಷ್ಟಪ್ರಮಾಣದ ದಿನಸಿ ಮೊದಲಾದುವು : ಹಣದ ಮುಗ್ಗಟ್ಟು ವಿಪರೀತವಾಗಿತ್ತು. ಪೇಟೆಯ ಧಾರಣೆ ಇಳಿದಿದ್ದಾಗ ಸರ್ಕಾರೀ ಡಿಪೋಗಳಲ್ಲಿ ಸೊಸೈಟಿಗಳಲ್ಲಿ ಪಡಿತರ ದಿನಸಿ ಬಟ್ಟೆಬರೆಗಳ ಧಾರಣೆ ಎಂದಿನಂತೆಯೇ ಇತ್ತು (ಮರಳಿ. ೧೭೦). 'ಪಡಿತರಪದ್ಧತಿ' ಪರಾ.
[ದೇ.II ತಮಿ. ಪಟಿತ್ತರ ; ಮಲ. ಪಡಿತ್ತರ ; ತೆಲು. ಪಡಿತರ]

**ಪಡಿತರ ಪದ್ಧತಿ** (ನಾ). ಸರ್ಕಾರದವರು ನಿಗದಿಯಾದ ಬೆಲೆಯಲ್ಲಿ ಸಾರ್ವಜನಿಕರಿಗೆ ನಿರ್ದಿಷ್ಟ ಪ್ರಮಾಣದಲ್ಲಿ ದಿನಸಿಗಳನ್ನು ಒದಗಿಸುವ ಪದ್ಧತಿ,–ಕ್ರಸು: ಕ್ಷಾಮನಿವಾರಣೆಗೋಸ್ಕರಸಿದ ಕೆಲಸ ಪಡಿತರಪದ್ಧತಿ ನಿಲಿಸಿದ ದಿವಸ (ಕುಮಾಕೃ. XIII ಮೊದಲ ನುಡಿ). [ಪಡಿತರ+ಪದ್ಧತಿ]

**ಪಡಿತಳ** (ನಾ). ೧. ಮುನ್ನುಗ್ಗುವಿಕೆ; ಎದುರುಬೀಳುವಿಕೆ; ಆಕ್ರಮಣ : ಹೊಯ್ದುರೊಡ್ಡಿದ ರಣದ ಮೊನೆಯಲಿ ಹಾಯ್ದರೊಳಸುಳಿಯಿಂದ ಕಳೆದರು ಕಾಯ್ದು ಹೆಣಗಿದರುಪ್ಪರಕೆ ಜಾಱಿದರು ಪಡಿತಳಕೆ ಮೈದೆಗೆದರಡಹೊಯ್ಲಿನಲಿ (ಕುಪ್ಯಾಆ. ೭–೩೫); ಮುತ್ತಿತಾ ರಿಪುಸೇನೆ... ತಿತ್ತಿರಿಯ ತಂಬಟದ ಲಗ್ಗೆಯ ಮತ್ತವಾರಣ ಹಯದ ರಣರಥಪತ್ತಿಗಳ ಪಡಿತಳದ ಭಾರಿಯ ಘೋರಘೋಷದಲಿ (ತೊರರಾ. ೩–೬–೩). ೨. ಇಡಿಕಿರಿದುದು; ಒಟ್ಟಾಗಿರುವುದು : ಬರಬರಲು ತತ್ಪುರದ ಮಧ್ಯದ ಪರಿಸರದ ಪಡಿತಳದ ನಾನಾಪರಿಯ ಪಲ್ಲವಗಳ ಪತಾಕಾವಳಿಯ . . . ಹರ್ಮ್ಯವ ಕಂಡನಿದಿರಿನಲಿ (ತೊರರಾ. ೫–೩–೨).

ಪಡಿತಳವ ಬೀಸು = ಆಕ್ರಮಣವನ್ನು ಸಾರು,— ಘೋಷಿಸು : ಪಡಿತಳವ ಬೀಸಿದರೆ ಕಾಲಿಕ್ಕಡಿ ನಡುವ ತಾಗಿದರೆ ಮಂಡಲವುಡಿದು ಬಿದ್ದುದು ನಿಲುಕಿನುಪ್ಪರ ಶಿರವ ಮನ್ನಿಸದು (ಕುಪ್ಯಾಭೀ. ೪–೩೭).

[?. / ಸಂ. ಪ್ರತಿಸ್ಥಲ ?]

**ಪಡಿತಳಿಸು** (ಕ್ರಿ). ೧. ಮುನ್ನುಗ್ಗು; ಮೇಲೆ ಬೀಳು; ಆಕ್ರಮಿಸು : ಆನೆವಿಂಡಂ ಕಂಡು ಸಿಂಹಮೆಯ್ದುವ ತೆಱದೆ ಏನೆಂಬೆನಾ ಬಲ ಕ್ಕೊಬ್ಬನೆಯ್ದಿದನುಜದೆ ಎಯ್ದಲೆಯ್ದಿತ್ತೊಡನೆ ನಂದೀಶಗಣಕುಲಂ ಎಯ್ದುತ್ತು ಪಡಿತಳಿಸಿ ಘುಡುಘುಡಿಸುತಾ ಬಲಂ (ಕಲಿರ. ದೇ. ೩೦೬–೧೦); ಧುರವ ಗೆಲಿದನು ಪಡಿತಳಿಸಿ ಸಾವುರವಣಿಸಲಡಹಾಯ್ದು ನಮ್ಮನು ಹರನ ವರವುಂಟೆಂದು ತಡೆದನು ಸಿಂಧುಭೂಪಾಲ (ಕುಪ್ಯಾದ್ರೋ. ೮–೨೮); ತಱುಬಿ ಪಡಿತಳಿ[ಪಾಠಾಂ. ಬಲಿ]ಸುವ ಭಟಾಳಿಯನುಜುಬಿ ಬೀದಿಯಲಾನು ವಧಟರ ಹಱುಬ ಹಸರಿಸಿ ಹೊಕ್ಕರೀಶನ ರಾಜಮಂದಿರವ (ತೊರರಾ. ೪–೯–೩೧); ಇಂತು ಕಡುಗಲಿತನಂ ಕೈಮಿಕ್ಕು ಕಾದುವ ಧನುರ್ಧರರ ಕಡುಪಂ ಕಂಡು . . . ಒಡ್ಡುಗೊಂಡಡ್ಡಣಕಾಱರಾರ್ದು ಸಾರ್ದು ಸಂರಂಭಸಂಭ್ರಮಮಿಂಬುವಡೆಯೆ ತಡೆಯದೆ ಪಡಿತಳಿಸಿ ಗೊಂದಣಿಸಿ ನಿಂದು (ರಾಜಶೇ. ೬–೫೧ ವ). ೨. ಕವಿ; ಆವರಿಸು; ವ್ಯಾಪಿಸು : ಅಬ್ಬರಣೆ ಪಡಿತಳಿಸಿದುದು ಪರಬಲವನೀ ಕಪಿಬಲಮಹಾರ್ಣವವ (ತೊರರಾ. ೬–೧೩–೨). ೩. ಒಂದುಗೂಡು; ಒಟ್ಟಾಗು : ಕಲಿಗಳ್ ಕರತಳದಿ ನೊರೆಗಳೆದು ಕುರುಳ್ಚುವ ಕೈದುಗಳ ಬಳ್ಳಿವೆಳಗಿಂ ಗೊಂಚಲ್ಮಿಂಚುಗಳ್ ಸಂಚಳಿಸಿದಂತೆಯುಂ ಪಡಿತಳಿಸಿ ನಡೆಗೊಳ್ವ ಸಿಂಧುರಾರುಣಿತ ಗಂಧಸಿಂಧುರ ಸಂದೋಹದಿಂ ಸಂಧ್ಯಾರುಣಿತ ಪಶ್ಚಿಮಾಚಲಂ ಪಲವು ರೂಪಾಂತು ನಡೆಗೊಳ್ವಂತೆಯುಂ (ರಾಜಶೇ. ೧೩–೭೭ ವ). ೪. ಹಿಮ್ಮೆಟ್ಟಿಸು : ಅ ಪೊಟ್ಟುಂಗೆ ಮೂಡಿವರ್ಪ ಸೆಗಳಗದಿರನ ತೇಜಮಂ ಪಡಿತಳಿಸಿ ಕಡೆಗಣ್ಚುವ ಸಿರಿಮೊಗದ ಕಾಂತಿಯಿಂ . . . ಚೆಲ್ವಾದ ಭೂಸುರಂ . . . ಬರುತು ಮಿರ್ಪುದುಂ (ರಾಮಾಶ್ವ. ೭೫–೧೮). ೫. (?) : ತನುವಿದಂ ಕೈವಿಡಿಯದಿರು ನೆನೆಹಿಂದ ಮೆಲ್ಲನನನ್ಯಲಕ್ಷ್ಯವನು ತುಡುಕುತಿಹುದೆಡೆಗೆಟ್ಟುದೊಡೆ ಮುರಿದಡರಿ ಹಿಡಿಂದಡಿಗಡಿಗೆ ಬೆಂಬಿಡದೆ ಪಡಿತಳಿಸುತ್ತಲಿರುತಿಹುದೆಂದ ದೇಶಿಕನು (ಸದ್ಗುರು. ೨–೬). [ಪಡಿತಳ+–ಇಸು₃./ಮರಾ. ಪಡತಳಣೇ]

**ಪಡಿತಾಳ** (ನಾ). ಹೋಲಿಕೆ; ತಾಳೆ ನೋಡುವಿಕೆ: ಸನ್ ೧೮೭೨ನೇ ವರ್ಷದ ಖಾನೇಸುಮಾರಿಗೂ ೧೮೮೧ನೇ ವರ್ಷದ ಖಾನೇಸುಮಾರಿಗೂ ಪಡಿತಾಳ ನೋಡಲಾಗಿ, ವಿಜಾಪುರ ಜಿಲ್ಲೆಯಲ್ಲಿ ಸುಮಾರು ೨೪೪೮೮೧ ಜನ ಸತ್ತರೆಂತಲೂ . . . ತಿಳಿಯುತ್ತದೆ (ಕಭಾಗೆ. ೨೭೮).

[←ಮರಾ. ಪಡತಳ, ಪಡತಾಳಾ]

**ಪಡಿತುಳಿಲ್ಗೆಯ್ತು** (ನಾ). ಪ್ರತಿಯಾಗಿ ನಮಸ್ಕರಿಸುವಿಕೆ; ಪ್ರತಿನಮಸ್ಕಾರ : ಕನಕರತ್ನಪ್ರಚುರನಾನಾರಣಾಲಂಕಾರಂಪ್ರಭಯಾಕಾರಮಾ ವಿಪುಲವಪುವಂ ಮೆಚ್ಚಿ ನೋಡಿ, ಕುಳ್ಳಿರವೇಳ್ದು, ತಲೆಯೊಲೆತದಿಂ ಪಡಿತುಳಿಲ್ಗೆಯ್ತುಮಂ ಸಲಿಸಿ ತಾನುಂ ಕುಳಿತನಾ ಕುಬೇರಾರಿ (ಶ್ರೀರಾಮಾ. ೬೨೧–೧೦೩). [ಪಡಿ₃+ತುಳಿಲ್(<ತುಱುಲ್₁)+ಕೆಯ್ತು₁]

**ಪಡಿತೊತ್ತು** 'ಪಡಿದೊತ್ತು' ನೋ.

**ಪಡಿದಂಡಿ**(ನಾ). = ಪಡಿಚರ ೧: ಕೊಡಲೊಡಮೆಯು ಕಾಣದೆ ಮೋಹಕ್ಕೆ ಸಿಕ್ಕಿಯೆಡೆಯೆಡೆಗೈದಿ ಬಂದವನ ತೊಡೆ ಕೈಕಾಲನೊತ್ತಿ ಸಿಕೊಂಡು ನಿನ್ನಯ ಪಡಿದಂಡಿಯ ಮಾಡು ಮಗಳೆ (ಕಂಸವಿ. ೬–೧೫೮). [ಪಡಿ₃+ದಂಡಿ₅]

**ಪಡಿದಂಡಿತನ** (ನಾ). ಊಳಿಗ; ಸೇವಾವೃತ್ತಿ : ತಳಕಾಡವನ್ನೆಯನವರೊಳು ಗರ್ವಿಸಿ ಸ್ಥಳಕುಳವೆಲ್ಲವ ನೀಗಿ ತೆಲುಗರನೋಲೈಸಿ ಪಡಿದಂಡಿತನದಲಿ ನೆಲಸಿರುವುದ ನೀನಱಿಯ (ಕಂಸವಿ. ೧೮–೧೩೦).

[ಪಡಿದಂಡಿ+–ತನ]

**ಪಡಿದನಿ** (ನಾ). ಪ್ರತಿಧ್ವನಿ; ಮಾರ್ದನಿ : "ಪಡಿದನಿ—ಪ್ರತಿಧ್ವನಿ" (ತದ್ಭಕೋ. ೨೩); ಸಿಂಗಮಿರೆ ತನ್ನ ನೆಲೆಯೊಳ್ ಪೊಂಗುವ ಪಡಿದನಿಗೆ ಬೆದಱಿ ಮದಕರಿನಿಕರಂ ಬಂಗಂಬಡೆದೋಡುವ ಪೋಲ್ ಕೊಂಗಂ ನೀಂ ಬರ್ಪ ಮಾತಿನಿಂದಮೆ ಪರಿದಂ (ಚಿಕವಿ. ೫–೮೫); ಒಬ್ಬರಿಗೊಬ್ಬರು ಗುದ್ದಾಡುವ ಸದ್ದು ಬೆಟ್ಟಗಳೆಡೆ ಸುಳಿದು ಪಡಿದನಿ ಕೇಳಿಸತೊಡಗಿತು (ಭಾಸರ.೧೦); ಮೊದಲಿನ ತೆರದೊಳೆ ಪಡಿದನಿಯಾದುದು ಬೆಚ್ಚಿಸಿ ಬೆದರಿಸಿ ಬಾಲಿಕೆಯ (ನಲ್ಮೆ. ೧೧–೧೭). [ಪಡಿ₃+ದನಿ₁./ಸಂ. ಪ್ರತಿಧ್ವನಿ]

**ಪಡಿದನಿಗುಟ್ಟು** (ಕ್ರಿ). ಪ್ರತಿಧ್ವನಿಯನ್ನು ಕೊಡು; ಮಾರ್ದನಿಗೊಡು : ಕಿವಿಗಳಲ್ಲಿ ಅವಳು ಹಾಡಿದ ಗೀತೆಗಳು ಪಡಿದನಿಗುಟ್ಟಿದುವು (ಹಾಹುತ್ತ. ೭೨). [ಪಡಿದನಿ+ಕುಟ್ಟು₁]

**ಪಡಿದವಸ** (ನಾ). ಮಾಡಿದ ಕಾರ್ಯಕ್ಕೆ ಪ್ರತಿಫಲವಾಗಿ ದೊರಕುವ ದವಸ; ಭತ್ಯದ ಧಾನ್ಯ : ಪಟಂಗನ ಸಂಗಡ ಪಟ್ಯಾಂಗಕ್ಕೆ ಹೋದರೆ ಪಡಿದವಸ ಕೇಡು (ಗಾದೆ). [ಪಡಿ₁+ದವಸ]

**ಪಡಿದಟ** (ನಾ).ಅಧಿಕವಾದ ಸೈನ್ಯ; ಹೆಚ್ಚಿನ ದಳ : ಪಡಿದಟವಾಂತು ಬಂದ ಮಲೆನಾಡಿನ ಸಿಂಗಳರಾಯನಂ ಮೊಗಂಗಿಡಿಸಿ ಜಸಂ ಬೆಸಂಬಡೆಯೆ ಬಲ್ಲಿದನೀ ಪರಿ ಚಲ್ಲವಾಡಿದಂ (ಚಿಕವಿ.೨–೬೮); ತಳಕಾಡವರ ಮಳವಳ್ಳಿಯಂ ವೇಡೈಸಿ ಮುತ್ತಿ ಸುತ್ತುವೇಲಿಯಂ ಬಲಿದು ತಳಿಯನೊತ್ತರಿಸಿ ಪಡಿದಟಮಾಗಿ ಬಂದ ಜಗದೇವರಾಯನ ಪಡೆಯ ನೋಡಿಸಿಯೂರುಗರ್ಗೆ ಕವಲಂಬುಗೆಯನಿತ್ತು (ಚಿಕವಂ. ೫೩–೧೫). 'ಪಡಿಬಲ' ಪರಾ.

[ಪಡಿ₃+ದಟ]

**ಪಡಿದೆಗೆ** (ಕ್ರಿ). ಬಾಗಿಲನ್ನು ತೆಗೆ; ಕದವನ್ನು ತೆರೆ: ತಡೆದಸುಗೀಶಂ ಶಯ್ಯಾಸದನದ ಪಡಿದೆಗೆವನಿತಱಿಕೊಳಡಸಿದ ಮುನಿಸಿಂದುಡುಪಾನನೆ ಮಣಿಮಂಚದಿನೆಳ್ದು . . . ಕಾತರದಿಂ ಕೂಡಿದಳಾಗ (ಜಯಕಾ. ೧೪–೭೫).

[ಪಡಿ₂+ತೆಗೆ₁]

**ಪಡಿದೇಱು**, ಹಡಿದೇಱು (ಕ್ರಿ). = ಪಡಿದೆಗೆ : ಪಡಿದೇಱಿವಂದದಿಂದ ಮೆರ್ದೆಯುಂ ತೆಱಿದತ್ತು (ಪಂಪಭಾ. ೫–೧೫); ನಿಜೇಶಂ . . . ಬರ್ಪುದಂ ಕಂಡೆರ್ದೆ ಪಡಿದೇಱಿದಂತಾಗೆ ತಾಂ ಲಜ್ಜೆಯಿಂ ತೆಕ್ಕನೆ ಪೋದಳ್ ಕಾಂತೆ (ಲೀಲಾವ. ೭–೩೮); ಹಸುಳೆದುಂಬಿಗಳೆಚ್ಚಱದಂತೆ ತಾವರೆ ಎಸಳ್ವಡಿದೇಱಿದದಱಿಕೊಳಗೆ ಎಸೆವ ಪರಿಮಳವ ತಂದರಸಗೆ ಮೆಲ್ಲನೊಸೆದಿತ್ತುದುದಯಸಮೀರ (ಕುರಾಸಾಂ. ೨೭–೧೪೨); ಜಾರಚೋರರತ್ತಣಿಂ ಭೀತಿಯಣಂ ನಾಡೊಳಿಲ್ಲೆನೆ ಬಾಗಿಲಂ ಪಡಿದೇಱಿದು ಬೊಂಬಾಳಂಗಳನುರಿಯಿಸಿ ತಾಂ ನಿದ್ದೆವೋದ ಸಜ್ಜನರ ಸಜ್ಜುಗೊಂಡ ಬೀಡುಗಳ ಸಾಲ್ಗಳಿಂ . . . ಕೇರಿಗಳ್ ಸೊಗಯಿಸೆ (ರಾಮಾಶ್ವ. ೨೩–೨೦). **ಹಡಿದೇಱು** : ಹಡಿದೇಱು

ದಂಡವಾದ್ರುದೆದೆ ಪಾಂಡ್ಯನ ಚೋಳನ ಗಂಡವಾತು ನೂರ್ಮಡಿ ಕುಸಿದತ್ತು (ಎಕ. IV, ಹುಣಸೂ. ೧೩೭-೧೯ ; 1162) ; ಬರಲವನ ಚೇಷ್ಟೆಯುಂ ಕಾಣುತೆರ್ದೆ ಹಡಿದೆಱಿದು[ಪಾಠಾಂ. ಕಂಡು ಕಾಣುತ ಹೆದರ್ದು, ಕಾಣುತೆದೆ ಹಡಿದೆಱಿದು, ಕಂಡುಯೆರ್ದೆಹಡಿದೆಱದು]ಪರವೆಯೇ ನಾದಳೆಂತಿರ್ದಳೆನುತುಂ ಮಱಿಂದು ಕೇಳಲು (ನಂಬಿರ. ೧೭-೧೦೯); ಅಡಸಿದರುಹೋದಯದೊಳತ್ತೆ ಮಾವಂದಿರೆದೆ ಹಡಿದೆಱಿಯೆ ಹಡಿದೆಱಿದು ಹಿರಿಯ ಬಸದಿಯ ಜನನ ಕಳೆ ಬಳಿಕ ನಿಲಲಮ್ಮದೆ ನಡುಗಿ ಹುಲಿಗೆಱಿಯಿಂದ ಹೋಱವಡಲು (ಸೋಮಚ. ೨-೧೨೧). [ಪಡಿ$_2$ + ತೆಱಿ$_1$]

**ಪಡಿದೊಡೆ** (ನಾ). ತೊಡೆಯ ರಕ್ಷಣೆಯ ಒಂದು ಸಾಧನ (?) : ಮಡವ ವಿರಾಜಿಪ ಕಚ್ಚೆ ಮಂಡಿಯ ಪಡಿದೊಡೆಯ ತಲೆಮಟಿಯ ಹರಿಗೆಯ ಕಡಿತಲೆಯ ಕಲಿತಿತುಳುವಪಡೆ ಹೊಯ್ದಾಡಿತಿಳೆ ಹಿಳಿಯೆ (ಕುಮ್ಯಾಭೀ. ೪-೬೭). [ಪಡಿ? + ತೊಡೆ$_2$]

**ಪಡಿದೊತ್ತು**, ಪಡಿತೊತ್ತು (ನಾ). ತೊತ್ತಿನ ತೊತ್ತು ; ಆಳಿನ ಆಳು ; ಪ್ರತಿಸೇವಕ : ಈ ತೊತ್ತಿನ ತೊತ್ತಿನ ಪಡಿದೊತ್ತನೊಪ್ಪಿಸಿದಲ್ಲಿ ಭಕ್ತನಪ್ಪನೆ (ಬಸವ. ೮೩೦) ; ಏಳುನೂಱಿಪ್ಪತ್ತು ಅಮರಗಣಂಗಳನ್ನ ಗತಿಮತಿ ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರ ಪಡಿದೊತ್ತಯ್ಯ (ಆದವ. ೧೭-೪೦); ಬಾಡಿ ಬೇಡುವಡೀಯೆ ವಿಜಯವಿಠಲರೇಯ ಹೋಡಿ ನವ ನಾನಲ್ಲ ಪಡಿದೊತ್ತಿನ ತೊತ್ತಿನ ದಾಸ (ವಿಸ್ತೋ್ರಸು. ೬೨-೩) ; ಆ ಶಿವನಾಳಿಗೆ ಪರವೆ, ಸಂಕಿಲಿ ಇಬ್ಬರು ಪಡಿದೊತ್ತುಗಳು (ತುಂಗಭ.೯೧). **ಪಡಿತೊತ್ತು** : ಗಂಡುದೊತ್ತಿಗೆ ಪಡಿತೊತ್ತು ನಾನು (ತುಂಗಭ. ೯೧); ತೊತ್ತಿಗೆ ಒಂದು ಪಡಿತೊತ್ತು (ಗಾದೆ). [ಪಡಿ$_3$+ತೊತ್ತು$_1$(<ತೊಱು)]

**ಪಡಿದೊರೆ** (ನಾ). ಸರಿಸಾಟಿಯಾದವನು ; ಸಮಾನ : ಕೆಡಿಪುದಘವ ತಾಪವ ದೈನ್ಯವ ಗಂಗೆಯುಂಡುಪತಿ ಸುರತರುವಿರದೆ ಕೆಡಿಪರಾ ಮೂಱವ ಗುಣವ ಸಜ್ಜನರಿಗೆ ಪಡಿದೊರೆ ಯಾರು ಲೋಕದೊಳು (ರಾಮವಿ. ೧-೬೦). [ಪಡಿ$_3$ + ದೊರೆ$_2$]

**ಪಡಿಧರಣಿ** (ನಾ). ಇನ್ನೊಂದು ಭೂಮಿ; ಮತ್ತೊಂದು ನೆಲ : ಗಿರಿಗಳಾದುವು ದಂತಿಯಲಿ ಪಡಿಧರಣಿಯಾದವು ಛತ್ರ ಚಮರದಲರರೆ ನೂತನಸೃಷ್ಟಿಯಾಯ್ತು ವಿರಿಂಚಸೃಷ್ಟಿಯಲಿ (ಕುಮ್ಯಾಭೀ. ೧-೪೯). [ಪಡಿ$_3$ + ಧರಣಿ$_1$]

**ಪಡಿನಾಯಕ** (ನಾ). ಎದುರುಪಕ್ಷದ ಮುಖಂಡ ; ಪ್ರತಿನಾಯಕ: ರಾಯದಳವುಬ್ಬಿದ್ದುದೋ ಪಡಿನಾಯಕರಪ್ಪಳಿಸುವೆನು ರಿಪುವಾಯುಜನ ಗಾಢಣೆಯ ಗರ್ವಗ್ರಹವ ಕಳಚುವೆನು (ಕುಮ್ಯಾಕ. ೧೧-೫). [ಪಡಿ$_3$ + ನಾಯಕ]

**ಪಡಿನುಡಿ**$_1$ (ಕ್ರಿ). ೧. ಪ್ರತಿಯಾಗಿ ಮಾತನಾಡು ; ಉತ್ತರವನ್ನು ಕೊಡು : ಈ ಕಥೆಯನ್ನು ಹೇಳಿದಾಗ ಒಬ್ಬರು ಹೀಗೆ ಪಡಿನುಡಿದರು (ಸಮಜೀ. ೩) ; ಯಾರೂ ಈ ಸ್ಪಷ್ಟ ಪ್ರಮಾದಪೂರ್ಣ ವ್ಯವಹಾರದ ವಿರುದ್ಧವಾಗಿ ಪಡಿನುಡಿಯುವ ಸಾಹಸ ಮಾಡಲಿಲ್ಲ (ಬಾಣಛ. ೨೩೨) ; ಪೂವಮ್ಮ ಪಡಿನುಡಿಯದೆ ಗಂಡ ಹೊತ್ತಿಸಿ ಇರಿಸಿದ ಲಾಂದ್ರವನ್ನು ಎತ್ತಿಕೊಂಡು ಒಳಗೆ ಹೋದಳು (ನಡೆದ್ಮಾ. II, ೧೧೨೬). ೨. ಪ್ರತಿಧ್ವನಿಯನ್ನು ಕೊಡು ; ಪ್ರತಿಧ್ವನಿಸು: ಅದರ ಸದ್ದು . . . ಹೆಚ್ಚು ಹೆಚ್ಚು ಗಂಭೀರವಾಗಿ ಗಗನಭೇದಿಯಾಗಿ ಗುಡುಗಿ ಗರ್ಜಿಸುತ್ತ ಪಡಿನುಡಿಯುತ್ತಿದೆ (ಮಾಪಾದ. ೧೭೦) ; ಜ್ಞಾನಶಂಕರರ ವ್ಯಂಗ್ಯವಚನಗಳು ಜ್ವಾಲಾಸಿಂಹರ ಹೃದಯದಲ್ಲಿ ಇನ್ನೂ ಪಡಿನುಡಿಯುತ್ತಿದ್ದವು (ಪ್ರೇಮಾಶ್ರ. ೪೮). [ಪಡಿ$_3$+ನುಡಿ$_1$]

**ಪಡಿನುಡಿ**$_2$ (ನಾ). ೧. ಉತ್ತರ ; ಪ್ರತಿಮಾತು ; ಮರುನುಡಿ : ರಾಘವಂ ಪಡಿನುಡಿಯೊಳ್ ಭಕ್ತಿಯಿಂ—ಬಟ್ಟೆಯೊಳ್ ತಡೆವುದು ನ್ಯಾಯಮಲ್ಲೆಂದುಂ . . . ಪೇೞೆ (ಅದ್ಭುತ. ೩೨-೨೧) ; ಸಂಗಮಶರಣನು . . . ಮುಂಗುಳುನಗೆ ಸೂಸುತ್ತ ಜನಜಂಗುಳಿಗೆ ಪಡಿನುಡಿ ಹೇಳುವುದಕ್ಕೆ ಆರಂಭಿಸುತ್ತಾನೆ (ಬಾಳಬ. ೨೫). ೨. ಪ್ರತಿಧ್ವನಿ ; ಮಾರ್ದನಿ : ಈಗಲೂ ನನ್ನ ಕಿವಿಯಲ್ಲಿ ಕೇಳಿಸುತ್ತಿದೆ ಅವಳ ಮಾತಿನ ಪಡಿನುಡಿ (ನವಸೀ. ೯೩) ; ಶಿವಾಯ ನಮ ಓಂ ಬಯಲಿನಲ್ಲಿ ಪಡಿನುಡಿಯು ಸಿಡಿಯುತಿತ್ತು (ಹೃದಸ. ೭೩-೩). [ಪಡಿ$_3$ + ನುಡಿ$_2$]

**ಪಡಿನುಡಿಗುಡು** (ಕ್ರಿ). ಉತ್ತರವನ್ನು ಕೊಡು : ಎದುರು ಮಾತನ್ನು ಹೇಳು : ಪತಿಯ ನುಡಿಗೆ ಪಡಿನುಡಿಗುಡದೆ ರಾಜಕಾರ್ಯಂಗಳಲ್ಲಿ ಪತಿಗೆ ಕೇಳ್ಮಿಖ್ಯಮಂತ್ರಿಣಿಯೆನಿಸಿರು (ಶೀಷರಾ. ೨೫-೩) ; ನಾರದಂ ಪಡಿನುಡಿಗುಡುತೆ ನಾರಾಯಣನ ಸನ್ನಿಧಿಯೊಳ್ ತನಗೊದವಿದವಮಾನಮುಮಂ . . . ಪೇೞ್ದು (ಅದ್ಭುತ. ೨೨-೬). [ಪಡಿನುಡಿ$_2$ + ಕುಡು$_1$(<ಕೊಡು$_1$)]

**ಪಡಿನೆಳಲ್** 'ಪಡಿನೆಟಿಲ್' ನೋ.

**ಪಡಿನೆಳಲು** 'ಪಡಿನೆಟಿಲ್' ನೋ.

**ಪಡಿನೆಟಿಲ್**, ಪಡಿನೆಳಲ್, ಪಡಿನೆಳಲು (ನಾ). ಪ್ರತಿಬಿಂಬ ; ಪ್ರತಿಚ್ಛಾಯೆ ; ಪಡಿಬಿಂಬ : "ಮಾರ್ಪೊಳೆಪೆಂದುಂ, ಪಡಿನೆಟಿಲೆಂದುಂ ಪ್ರತಿಬಿಂಬಂ" (ಕಶಸಾ. ೭೦-೫೮೦) ; ಪಳಿಕಿನೆಡೆಗೋಡೆಯ ಮಱಿಯೊಳಿರ್ಪ ರಸಂಚಿವಱಿಯಂ ಪಿಡಿಯಲ್ಕೆ ನೀಡಿದ ಕೈ ಸೋಂಕದೊಡಂ ಪಡಿನೆಟಿಲಂ ಕಂಡಂಜಿಯದಿತ್ತಲುಮತ್ತಲುಂ ಪರಿಯುತ್ತಿರೆ (ಚಿಕವಿ. ೪-೮೯) ; ಪಡಿನೆಟಿಲಂ ಮಾಣಿಕಗನ್ನಡಿ ಪಡೆದವೊಲೊಡನೆ ಪಿಡಿದ ಪದ್ಮಾದಿಗಳಿಂ ಒಡೆಯನೆನೆ ಕುಱಿಹುದೋಱುತುಮೆಡೆಗೊಂಡುವು ಗೆಱೆಗಳಲ್ಲಿ ಪದ್ಮಾದಿಗಳಾ(ಪಸ್ತಪಂ. ೭೩). **ಪಡಿನೆಳಲ್** : "ಪ್ರತಿಬಿಂಬದೊಳ್ ಪಡಿನೆಳಲೆನಿಕ್ಕು"(ಕಶರ.೫೯) ; ಆ ಸುದತಿಯ ಪಡಿನೆಳಲೊಪ್ಪಿದುದು ಸುಧಾಸೂತಿಯ ತೊಡೆಯೊಱು ವಿರಾಜಿಪ ರೋಹಿಣಿಯೆಂಬಂತೆ (ಜಯಕಾ. ೫-೨೪) ; ಪಡಿನೆಳಲಂ ಮಣಿಕುಟ್ಟಿಮದೆಡೆಯೊಳ್ನಡೆನೋಡಿ ನೋಡಿ ದಾಯೆನುತಂ ಕೈದುಡುಕಲದು ತುಡುಕೆ ನಗೆ ನಗೆ ಕಡುಬಿನದಂಬಡೆವ ಕಂದನೆಂದಾದಪನೋ (ರಾಜಶೇ. ೩-೫೨). **ಪಡಿನೆಳಲು** : ಮಾರುತಿಯು ಪೋಗುತಿರೆ ನೆಳಲು ಪ್ರತಿಫಲಿಸಲಾ ನೀರಧಿಯೊಳಿರ್ದ ಸಿಂಹಿಕೆ ಕಂಡು ಮನದೊಳಗೆ ತೋರ ಸಂತಸಗೊಂಡು ಹಿಗ್ಗಿದಳ್ಪಡಿನೆಳಲ ಕಾಣುತಾಶ್ಚರ್ಯಗೊಂಡು (ವೆಂಕರಾರಾ. ೫-೧-೫೪) ; ಸಲಿಲದರ್ಪಣದಲ್ಲಿ ತನ್ನ ತಾಂ ದರ್ಶಿಸುತೆ ಬೆಚ್ಚಿದಳ್, ಪಡಿನೆಳಲ ಸೊಬಗಿಗಚ್ಚರಿವಟ್ಟು, ಕಯ್ಗಿನ್ನೆಡಾಹ್ಲಾದದಿಂ ! (ಚಿತ್ರಾಂಗ. ೩೩-೮೯೨) ; ಸುತ್ತಲಿನ ಶಾಂತತೆ ಅವನ ಜೀವನದ ಏಕಾಂತತೆಯ ಪಡಿನೆಳಲೆಂಬಂತೆ ಹಬ್ಬಿತು (ಕಮನೆ. ೩೫). [ಪಡಿ$_3$ + ನೆಟಿಲ್]

**ಪಡಿನೆಟಿಲ್ಗೊಳ್** (ಕ್ರಿ). ಪ್ರತಿಬಿಂಬಿಸು ; ಪ್ರತಿಚ್ಛಾಯೆಯನ್ನು ಪಡೆ : ನುಣ್ಬಱಿಗನ್ನಡಿಯೊಳ್ ಪಡಿನೆಟಿಲ್ಗೊಂಡುದ್ದಂಡನಾಭೀಪುಂಡರೀಕ ತತ್ಕರ್ಣಿಕೆಗಳಂತೆ ಕಣ್ಗೊಳಿಪೂರ್ಧ್ವಪುಂಡ್ರಶ್ರೀಚೂರ್ಣಂಗಳಿಂ (ಚಿಕಪಂ. ೩೩-೧೧). [ಪಡಿನೆಟಿಲ್ + ಕೊಳ್$_1$]

**ಪಡಿನೋಡು** (ಕ್ರಿ). ಹೋಲಿಸಿ ನೋಡು ; ತಾಳೆನೋಡು : ಪಡಿನೋಡಲ್ ಹಂಸೆಗಂ ಬೆಳ್ಮುಗಿಲತಿಧವಳಂ (ಜಗವಿ. ೧೨-೬೩). [ಪಡಿ$_3$ + ನೋಡು]

**ಪಡಿಪಚ್ಚ** 'ಪಡಿಪುಚ್ಚ' ನೋ.

**ಪಡಿಪಚ್ಚ** 'ಪಡಿಪುಚ್ಚ' ನೋ.

**ಪಡಿಪತ್ರ** (ನಾ). ಒಂದರ ಪ್ರತಿಯಾಗಿರುವ ಮತ್ತೊಂದು ಪತ್ರ ; ನಕಲು : ಹೋಗದೆಲೆ ಮಗನೆ ಇದು ಪಡಿಪತ್ರವೆಂದೆನುತೆ ಆಗಳೇ ಬುದ್ಧಿಗೊಟ್ಟಳು ತಮ್ಮ ಸತಿಯೆನುತೆ ತಮ್ಮರಸಿಯನಲ್ಲಿ ಪೊಗಳುತುಂ ಪಾಡುತುಂ (ನಂಬಿರ. ೭-೮೭). [ಪಡಿ$_3$+ಪತ್ರ]

**ಪಡಿಪದಾರ್ಥ$_1$** (ನಾ). ಆಹಾರಸಾಮಗ್ರಿ ; ಭೋಜನ ಪದಾರ್ಥ: ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದರೆ ಮುಂದೆ ಸಕಲಪದಾರ್ಥವನೀವನು (ಬಸವ. ೪೨೦). [ಪಡಿ$_1$ + ಪದಾರ್ಥ]

**ಪಡಿಪದಾರ್ಥ$_2$** (ನಾ). ಪ್ರತಿಯೊಂದು ವಸ್ತು ; ಪ್ರತಿಪದಾರ್ಥ : ನೀನೊಲಿದಡೆ ಕೊಜಡು ಕೊನರುವುದಯ್ಯಾ . . . ನೀನೊಲಿದಡೆ ಸಕಲ ಪಡಿಪದಾರ್ಥ ಇದಿರಲಿರ್ಪುವು (ಬಸವ. ೬೬) ; ಅದು ಬೇಕು ಇದು ಬೇಕು ಎಂದೆಂಬ ಎದೆಗುದಿಹತನ ಬೇಡ ಹದುಳಿಗನಾಗಿದ್ದರೆ ಸಾಕು ಪಡಿಪದಾರ್ಥ ತನ್ನಿದ್ದೆಡೆಗೆ ಬಹುದು (ಸಮಾವ. ೧-೩). [ಪಡಿ$_3$ + ಪದಾರ್ಥ]

**ಪಡಿಪದ್ಧತಿ** (ನಾ). = ಪಡಿತರಪದ್ಧತಿ : ಪಡಿಪದ್ಧತಿ ಕಾನೂನಾದೊಡನೆ ಅವನಿಗೆ ಆ ಆಫೀಸಿಗೆ ವರ್ಗವಾಗಿತ್ತು (ಭ್ರಮಾನ. ೧). [ಪಡಿ$_1$ + ಪದ್ಧತಿ]

**ಪಡಿಪಾಟ** 'ಪಡಿಪಾಡು' ನೋ.

**ಪಡಿಪಾಟಲ** 'ಪಡಿಪಾಟಲು' ನೋ.

**ಪಡಿಪಾಟಲು,** ಪಡಿಪಾಟಲ, ಪಡಿಪಾಟ್ಲು, ಪಡಿಪಾಟ್ಳು, ಪಡು ಪಾಟಲು, ಪಡುಪಾಟ್ಲು (ನಾ). = ಪಡಿಪಾಡು ೧ : ಶಿಶುಗಳ ಶಿಖ ವನು ಪಶುಗಳ ಬಾಲಕೆ ಹೊಸೆದು ಗಂಟನು ಮಿಸುಳಿಸಿ ಕಟ್ಟುವ ನಸುನಗಿ ಯಲಿ ನವಂಗುಸುರುವ ನಿಮ್ಮಯ ಹಸುಳರ ಪಡಿಪಾಟಲ ನೋಡೆನುವ (ಪ್ರಸಭಾ. ೧೭-೧೯) ; ತಮ್ಮಗಳನ್ನು ಅಗಲಿದ ಗಳಿಗೆಯಿಂದ ಹೊಟ್ಟೆಗೆ ಅನ್ನವಿಲ್ಲದೆ . . . ಇಲ್ಲದ ಪಡಿಪಾಟಲನ್ನೂ ಪಟ್ಟೆ (ಮುಸುಗ. ೧೮೭) ; ಮನೆಯಲ್ಲಿ ಹೆಣ್ಣು ದಿಕ್ಕಿಲ್ಲದಿದ್ದರೆ ಆಗುವ ಪಡಿಪಾಟಲಿನ ಪಂಚಯ ಆಗ ಆತನಿಗಾಯಿತು (ರಾಗಿಣಿ. ೬೩). **ಪಡಿಪಾಟಲ :** ಕೂಸು-ಕುನ್ನಿಗಳ ಪಡಿಪಾಟಲಕ್ಕಂತು ನೆಲೆಯಿಲ್ಲದಾಯಿತು (ಕುಮುದಿ.೧೮). **ಪಡಿಪಾಟ್ಲು :** ಅಕಿ ಗಂಡಂದಿಷ್ಟು ಅಡಾವುಡಿ ಆಗೇದ ಅಂತ ಇಷ್ಟು ಪಡಿಪಾಟ್ಲು ಬಡ ಬೇಕಾಗೇದ ಪಾಪ ! (ದಾಸಕೂ. ೮೧). **ಪಡಿಪಾಟ್ಳು :** ವೈನಾಗ ಬೇಕಂತಾನೇ ಇಷ್ಟೆಲ್ಲ ಪಡಿಪಾಟ್ಳು ಬೀಳೋದು (ದಿವಾಬ. ೬೬). **ಪಡುಪಾಟಲು:** ಈ ಬಡ ಆಚಾರ್ಯರ ಪಡುಪಾಟಲು ನೋಡುವುದೇ ಕಷ್ಟ (ಬೆಂಗಬ. ೭೨) ; ಜೀವನದಲ್ಲಿ ಕಷ್ಟಗಳು ಮತ್ತು ಜಂಜಾಟಗಳು, ಪಡುಪಾಟಲುಗಳು ಇವೆ(ರೂಢಿ) **ಪಡುಪಾಟ್ಲು** (♦) :

[ಪಡಿಪಾಟು(< ಪಡಿಪಾಡು) + -ಅಲು (< -ಅಲ್$_2$)]

**ಪಡಿಪಾಟು** 'ಪಡಿಪಾಡು' ನೋ.

**ಪಡಿಪಾಟ್ಲು** 'ಪಡಿಪಾಟಲು' ನೋ.

**ಪಡಿಪಾಟ್ಳು** 'ಪಡಿಪಾಟಲು' ನೋ.

**ಪಡಿಪಾಡು,** ಪಡಿಪಾಟ, ಪಡಿಪಾಟು, ಪಡುಪಾಟು, ಪಡುಪಾಡು (ನಾ). **೧.** ಅಧಿಕವಾದ ಕಷ್ಟ; ಅತಿಯಾದ ಬವಣೆ,-ತೊಂದರೆ: ಹೇಳಲಾರೆನು ಬೆಳೆದ ರೋಗಗಳೋಳಿಯಿಂದಲಿ ಬಳಲಿದಾ ಪಡಿಪಾಡ ಕಷ್ಟಗಳ (ಆಚಾವಿ. ೮-೨೦). **೨.** ಸಮಾನ ; ಸಾಟಿ : ಝಾಡಿಸಿದ ಬಲುವಿದ್ಯೆಯಲಿ ಪಡಿಪಾಡು ಭಾರ್ಗವಗೆನಲು (ಕೋಗಯು. ೨೦-೧೦). **ಪಡಿಪಾಟ :** ೧. ಹಿಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟಿ ಪಡಿಪಾಟ ಪಟ್ಟದ್ದು ಇನ್ನೂ ನೆನಪಿದೆ (ನಾಡಿಗೇ. ೮). **ಪಡಿಪಾಟು :** ೧. ಮುಪ್ಪಿನ ಗಂಡನ ಒಲ್ಲೆನು ನಾನು ತಪ್ಪದೆ ಪಡಿಪಾಟ ಪಡಲಾಱೆನಕ್ಕ (ಪುರಂದ. ೪-೯೩ ಅನುಪಲ್ಲವಿ) ; ದಮಯಂತಿ ನಳರಾಜರಿಬ್ಬಾರು ಬಾಳುವ ಪಡಿಪಾಟು ನೋಡು ನೀನೆಂದಾ (ಯನಳ.೬೦). **ಪಡುಪಾಟು:** (♦). **ಪಡುಪಾಡು :** ೧. ನೀಲಾ ವೆಂಕಣ್ಣನ ಪಡುಪಾಡು ನೋಡಿ ತಾನು ಕಛೇರಿ ಮಾಡುವುದಾಗಿ ಹೇಳಿದಳು (ನಟಸಾ. ೫೨೨).

[ಪಡಿ$_3$ + ಪಾಡು$_3$]

**ಪಡಿಪಾಸು** (ಕ್ರಿ). (ನಡೆಮಡಿಯಂತೆ) ಎದುರಿನಲ್ಲಿ ಹಾಸು : ಮಱಿಯೆ ಸುತಶೋಕಮಂ ಮನೆದೆಱಕದಿನಿದಿರ್ಗೋಗಿ ಯೋಗಿಪದತಳ ಮಿಳಿಯಂ ನೆಱಿ ಮುಟ್ಟಿದ ಮುಂ ದುಗುಲದ ಸೆಱಗಂ ಪಡಿಪಾಸಿ ಮೊಟಿಗ್ಗದಂ ಮುನ್ನಡಿಯೊಳ್ (ಚಂದ್ರಪು. ೫-೨೨). [ಪಡಿ$_3$ + ಪಾಸು$_1$]

**ಪಡಿಪುಚ್ಚ** 'ಪಡಿಪುಚ್ಛ' ನೋ.

**ಪಡಿಪುಚ್ಛ,** ಪಡಿಪಚ್ಚ, ಪಡಿಪಚ್ಛ, ಪಡಿಪುಚ್ಚ (ನಾ). **೧.** ಎದುರುನುಡಿ ; ಮರುಮಾತು. **೨.** ಸರಿಸಾಟಿಯಾದುದು ; ಎಣೆಯಾದುದು ; ಸದೃಶವಾದುದು : ಸೋಮೇಶ್ವರಲಿಂಗಕ್ಕೆ ಪಡಿಪುಚ್ಛವಿಲ್ಲ (ಬಬ್ಬಬಾ. ೩-೩) ; ನಡೆನುಡಿ ಸಿದ್ಧಾಂತವಾದ ಶರಣಂಗೆ ಪಡಿಪುಚ್ಛ[ಪಾಠಾಂ. ಚ್ಚ]ವಿಲ್ಲ ಗುಡಿಯೊಡೆಯ ಗುಮ್ಮಟನಾಥನ ಅಗಮ್ಯೇಶ್ವರಲಿಂಗದಲ್ಲಿ ಐಕ್ಯವಾದ ಶರಣಂಗೆ (ಮನುಗುಂ. ಕ. ೨೬೪-೬೯). **೩.** ಸಂಶಯ ; ಅನುಮಾನ ; ಸಂದೇಹ : ಅಚ್ಯುತಂಬಡೆವುದಕ್ಕೇನು ಕಾರಣವಿಂದೇನಚ್ಚರಿಯೆ ನಾನು ತಹುದಕ್ಕೆ ಈ ಪಂಥ ಪಡಿಪುಚ್ಛ[ಪಾಠಾಂ. ಚ್ಚ]ಮೇ ಕೊಡು ಮೀಳಿಯುವನು (ಸಮ್ಯಕೌ. ೧೧-೪೪). **೪.** ಪರಿಹಾರ ; ನಿವಾರಣೆ ; ಉಪಶಮನ : ಅಱಿದು ಮಾಡುವ ದೋಷಕ್ಕೆ ಪಡಿಪುಚ್ಛವಿಲ್ಲ (ಪ್ರಭೋಗ. ೭೩). **ಪಡಿಪಚ್ಚ :** ೧. ಆ ಸುರೇಶ್ವರ . . . ಈ ಹದಕೆ ಪಡಿಪಚ್ಚ[ಪಾಠಾಂ. ಚ್ಛ]ವಿಲ್ಲವಗಾಹಿಸಲ್ ಖಾಂಡವವ ಹುಲ್ಲೆಯ ಹೂಹೆಗಳು ಹೆಬ್ಬುಲಿಯ ಹಾಯ್ದುವೆನುತ್ತ ಗರ್ಜಿಸಿದ (ಕುವ್ಯಾಆ. ೨೦-೩೨). **ಪಡಿಪಚ್ಛ :** ೧. ಮೇಲಿನ 'ಕುವ್ಯಾಆ.' ಪ್ರಯೋಗದ ಪಾಠಾಂತರವನ್ನು ನೋಡಿ. **ಪಡಿಪುಚ್ಚ :** ೧. ಸರ್ವವ್ಯವಧಾನವ ತಿಳಿದು ತಾ ಹಿಡಿದ ಕ್ರಿಯೆಗೆ ಪಡಿಪುಚ್ಚವಿಲ್ಲದೆ (ಏಲೇಶ್ವ. ೧೬೦) ; ಇದ್ದೂ ಇದಿರಿಂಗೆ ಒಡಲಿಡೆಗೊಡದ ಅಗಮ್ಯಂಗೆ ಪಡಿಪುಚ್ಚವಿಲ್ಲ (ಸರ್ವಪ.೯೯-೫೪೧). **೩.** "ಪಡಿಪುಚ್ಚಮೆನಲು ಸಂಶಯ" (ಚತುನಿ. ೨೦೨) ; ಶ್ರೀವಂತಂಗೆ ಪಡಿಪುಚ್ಚಕ್ಕೆ ಬಂದಾಗವೇ ಆಚಾರಕ್ಕೆ ಭಂಗ (ಮೋಳಿಮಾ. ೬೩-೨೫೭); ಮುಚ್ಚುಮಱಿಯಿದೇಕೆನಗೀ ವಿರಹದ ಕಿಚ್ಚ ನಿರೀಕ್ಷಿಸಿ ನೋಡೆ ಆಚ್ಯೋತ್ತಿದಂತಿದೆ ನಿನ್ನ ಮೈಯೊಳು ಪಡಿಪುಚ್ಚವೇಕಿದನುಸುರಬಲೆ (ನೇಮಿಸಂ. ೧೯-೩೫) ; ನಿನ್ನ ದುರಾಗ್ರಹದಿಂದ ಪೊಚ್ಚತಂ ನಿನ್ನರಸುತನಕೆ ಕೇಡಹುದು ಪಡಿ[ಪಾಠಾಂ.ರಿ]ಪುಚ್ಚವೇಕಿದಕೆಯುದಱಿಂದ ನೃಪನೀತಿಯಂ ಮಾಱಬೇಡವನಿಪಾಲ (ಸಮ್ಯಕೌ.೧-೪೫). **೫.** ವ್ಯತ್ಯಾಸ ; ತಾರತಮ್ಯ : ಇಂತು ಆಚಾರಕ್ಕೂ ಅಱಿವಿಂಗೂ ಪಡಿಪುಚ್ಚವಿಲ್ಲವಾಗಿ ಆಚಾರವೆ ಕುಲ ಅನಾಚಾರವೇ ಹೊಲೆ ಇದಕ್ಕೆ ಒಲವರವಿಲ್ಲ (ಏಲೇಶ್ವ. ಕ. ೪೪೩-೬೦) ; ನಾನೊಡೆಯ ಇವನಡಿಗನೆಂದು ಪಡಿಪುಚ್ಚವ ಮಾಡುವನ್ನಕ್ಕ ಅದು ತುಡುಗುಣಿಯ ಸವಿತ (ಮೋಳಿಮಾ. ೧೮-೬೮). **೬.** ಪುನಃ ಪರಿಶೀಲಿಸುವಿಕೆ : ಪಡುವಣ ಕೋಣೆಯಲ್ಲಿ ಮಡಗಿರಿಸುವಾಗ ಪಡಿಯ ನೋಡಲಾಗಿ ಐಗಳವಾಗಿತ್ತು ಅದು ಬಿಡು ಬಿಸಿಲಿನಲ್ಲಿ ಒಣಗೆ ಪಡಿಪುಚ್ಚಕ್ಕೆ ಮೂಗಳವಾಯಿತು (ಮೋಳಿಮಾ. ೨೧೭-೭೭೧). **೭.** ಅಡ್ಡಿ ; ವಿರೋಧ : ನುಡಿವಲ್ಲಿ ಕಿಂಕಲವನಱಿ . . . ಮತ್ತೊಂದನೊಡಗೂಡುವಲ್ಲಿ ಒಡಗೂಡಿ ಬಿಡುವಲ್ಲಿ ಸರ್ವದಯಂಕ್ಕೆ ಪಡಿಪುಚ್ಚವಿಲ್ಲದಿರಬೇಕು (ಸರ್ವಪ. ೫೪-೨೮೯).

[< ಪ್ರಾ. ಪಡಿಪುಚ್ಛಾ./ಸಂ. ಪ್ರತಿಪೃಚ್ಛಾ]

**ಪಡಿಬಂಧ,** ಪಡಿವಂದ (ನಾ). ಪ್ರತಿಬಂಧ ; ಅಡ್ಡಿ ; ಅಡಚಣೆ : ಪಡಿಯೆಡೆಯು ಪಡಿಯುಱತಿಯುರ್ . . . ಮಾಣ್ ಮಾಣೆಮೆಂದು ಗದಱಲೊಡಮಾಂಜನೇಯಂ ಕಿನಿಸಿಂ—ಇಂತುಮೊಂದು ಪಡಿಬಂದಮೇಂ ? . . . ಎಂದಂ (ರಾಮಾಶ್ವ. ೧೨೧-೧೯). **ಪಡಿವಂದ :** ಅಟ್ಟದೆಲೆಯ ಮಾತನ್ನೆಟ್ಟನೆ ಕೇಳ್ದಿನ್ನು ದಟ್ಟಳ್ಸಿರಗುಂ ಬೆರಗುವಂ ಬಗೆಯದೆ ಕಟ್ಟಳ್ಸಿತ್ತ ನೆಱಿಯುಮ್ಮ ನೋಡವೆಳಗೆದಪ್ಪಿ ರೂಢಿಯೊಳಸೆದಿಪ್ಪ × × ನೀಂ ಪೊಗಟಿದೆ× × ತೆ ಪಡಿವನ್ದಮ್ಮಾಡಿ (ಸೌಇಇ. IX-i, ೩೧-೧೩ ; 966).

[< ಪ್ರಾ. ಪಡಿಬಂಧ./ಸಂ. ಪ್ರತಿಬಂಧ]

**ಪಡಿಬರಿಸು,** ಪಡಿಬಲಿಸು (ಕ್ರಿ). ಪ್ರತಿಭಟಿಸು; ಎದುರಿಸು; ಎದುರು ಬೀಳು : ನಡೆಯಿಂ ಚಿಕದೇವೇಂದ್ರಂಗಡಿಗೆಜಿಗಿಂ ತಡೆವಳಲ್ತು ಪಡಿಬರಿಸಿ ದೊಡಾನೊಡವರ್ಪೆನೆಂದು ಜೈತಜಿಯೊಡನಾಡಿದಳವನ ಮಡದಿ ಪೊಱ ಮಡುವೆಡೆಯೊಳ್ (ಅಪ್ರತಿ. ೭೭–೧೪); ಹರನ ಸಾಹಸಕಂಜದೆ ಪಲವಗಲು ಮುಪ್ಪುರ ಪಡಿಬರಿಸಿ ಪೋರಿದುದು ಪುರದೊಳಗಿರ್ಪ ಪುಣ್ಯಾಂಗನೆಯರ ಸಚ್ಚರಿತದ ಸಲಿಗೆಯಿಂದೈಸೆ (ಹದಿಬ. ೨–೪೮); ಪಡಿಗೋಂಟೆಗೆಯ್ದು ಕಡುಪಂ ಪಡಿಯಗಟ್ಟಿಗೆಯ್ದು ಳವನಾರ್ಪು ಕಡುಗೂರ್ಪಗಳಂ ಪಡಿವಡೆ ಗೆಯ್ದಂದವರೊಳ್ ಪಡಿಬರಿಸಿದರವುವು ವಿಷ್ಣು ಜಿಷ್ಣುಗಳನ್ನರ್ (ಚಿಕವಿ. ೨–೪೫); ಪಡಿಬರಿಸಿ ಖೇಚರನ ಬಲವೊಗ್ಗೊಡೆಯದೈತಂದಗಣಿತಾಸ್ತ್ರದಿ ಬಿಡದೆಸುತ(ದೇವೀಸು. ೨–೩೫). **ಪಡಿಬಲಿಸು :** ಮುರಿವುದಸುರರ ಸೇನೆ ಯೊರ್ಮೆ ದಿವಿಜರ ದಳಂ ಪೆಜಿದೆಗೆವುದೊರ್ಮೆ ಪಡಿ[ಪಾಠಾಂ. ಡೆ]ಬಲಿಸಿ ನೂಂಕುವುದೊರ್ಮೆ (ಚಿಬಪು. ೨೬–೧೯); ಪಡಿಬಲಿಸಿ ಸುರಭಟರ್ ಮುತ್ತುವರ್ ಕಡುಗಿ ರಾಕ್ಷಸಭಟರ್ ನೂಂಕುವರ್ ತಾಂಕುವರ್ (ಚಿಬಪು. ೪೨–೫೯). [<ಪ್ರತಿಭಟಿಸು]

**ಪಡಿಬಲ,** ಪಡಿಬಳ(ನಾ). ೧. ಅಗತ್ಯಕ್ಕೆ ಸಹಾಯಕವಾಗಿ ಬರುವ ದೊಡ್ಡ ಪಡೆ : ಪಡಿಬಲವ ಬರಲೀಯದನಿಲಜನೊಡನೆ ಸೈಂಧವ ಕಾದುತಿ ರಲಿಮ್ಮಡಿಸಿತಾಹವವಿತ್ತ ಮೋಹರಮುಢ್ಯರಂಗದಲಿ (ಕುಪ್ರಾದ್ರೋ. ೫–೬೬); ಬಲಿದುದನಿತಱ ಮೇಲೆ ರಣ ಕಡುಗಲಿಗಳಿಬ್ಬರಿಗೊಡನೆ ಪಡಿಬಲ ನಿಲುಕಿತು (ತೊರರಾ. ೬–೩೩–೩); ಭಾರಣೆಯ ಗಂಡಶೈಲಗಳೆಲ್ಲ ಗಮನದುರು ಮಾರುತನ ಗತಿವಿಡಿದು ಪಡಿಬಲವು ಮುಂಕೊಂಡು ಧಾರಿಣೀಶನ ಸುತ್ತಿ ಪೋಪಂತದೇಂ ಬೆಡಗ ತೋರುವುದೊ ತತ್ಸಮಯದಿ (ವೆಂಕಾರಾ. ೫–೧–೨೧); ಚಿತ್ರ ಚಿತ್ರಾಂಗ ಸಂಕೇತುಗಳ್ ಮುಂತಪ್ಪ ಸಂದ ಮಹಾರಥರುಮತಿ ರಥರುಂ ಜೋದರುಂ ನಿಚ್ಚದ ಕಾಹಿನ ಬಂಟರನುಱಿದು ಪಡಿಬಲಮಂ ಕೂಡಿ ತೆರಳ್ದರ್ (ರಾಮಾಶ್ವ. ೧೪–೨). ೨. ಪ್ರತಿಬಲ; ಎದುರು ಪಡೆ; ಶತ್ರುಸೈನ್ಯ : ಭಾಳಲೋಚನನಾದೊಡಂ ಕಾದಿ ತಂದಪೆವು ಎಂದು ಗದ್ದುಗೆವೊಯಿದು ನೆರೆದುದಾಕೆಯ ಕುಲಂ ಬಂದು ಕೂಡಿತು ಶಿವದ್ರೋಹಿ ಗಳ ಪಡಿಬಲಂ (ಇಹರ. ದೇ. ೩೭–೧೦); ನಾಡ ಕೋಂಟೆಯಂ ಬಾಗಿಲ್ಗಟ್ಟಿ ಮುಂಬರಿವ ಪಡಿಬಲದಿರವನಱಿತಾಗಳೆಣಿಯಿರ್ದ ರಾಯವೋಹರಂ ಮುಂ ದೊತ್ತಿ ತಾಗಿ ಕೋಲ್ಮಟಿಗಜಿದು ದೆಸೆಗಿಡುವಿನಂ ಕಾದುವುದುಂ (ರಾಮಾಶ್ವ. ೧೨೭–೨೦). ೩. ಬೆಂಬಲ; ಸಹಾಯ ; ನೆರವು : ಮುಗ್ಧೆಯ ಕಪೋಲದ ಕೋಪಂ ಕಣ್ಗಳ ಖಾತಿ ಮೊಗದ ಮುನಿಸು ಸುಯ್ಯ ಕಿ[ನ]ಂ ಪುಟ್ಟುವನುರಾಗಕ್ಕೆ ಪಡಿಬಲವಾಗೆ (ನಂಬಿರ. ೧೪–೫೮); ಎಲವೊ ಕರ್ಣಾತ್ಮಜನ ಹೊಯ್ದಗ್ಗಳಿಕೆಯಲಿ ಹೊರಿಯೇಱ ದಿರು ಪಡಿಬಲಕೆ ಕರಸಾ ಕೃಷ್ಣ ಪಾರ್ಥರ ನಿನ್ನಲೇನಹುದು (ಕುಪ್ರಾಕ. ೧೦–೪೪); ದುಂದುಭಿ ಮೊಳಗೆ ಬೆರಲ ತುಟಿಗಳ ದನಿಯಿಂದ ನಡೆವ ಕಾಲಾಳು ಮುಂದುವರಿಯೆ ಮೇಲವರು ಸಂಗಮದೇವ ಬಂದನು ಪಡಿಬಲ ವಾಗಿ (ಕುರಾಸಾಂ. ೧೩–೨೪). **ಪಡಿಬಳ : ೨.** "ಪಡಿಬಳ–ಪ್ರತಿಬಲ" (ತದ್ಭ ಕೋ. ೨೩). [ಪಡಿ$_3$+ಬಲ್ಯ$_3$./ಸಂ. ಪ್ರತಿಬಲ]

**ಪಡಿಬಲಿಸು** 'ಪಡಿಬರಿಸು' ನೋ.

**ಪಡಿಬಳ** 'ಪಡಿಬಲ' ನೋ.

**ಪಡಿಬಾಹಿರ** (ನಾ). ಅನಧಿಕಾರಿ ; ಅಯೋಗ್ಯ ; ತುಚ್ಛ : ನಾವು ಪಡಿಬಾಹಿರರು ಬೀಯದ ಸೇವಕರು ಸಮಹಂತಿಗಾಱರಿಗೀವುದೈ ವೃಥ ಮುದ್ರಿತಾಂತರ್ಮಾನಸಾಮ್ಯತವ (ಕುಪ್ರಾಅ. ೨೧–೪೪).

[<ಪ್ರಾ. ಪಡಿಬಾಹಿರ./ಸಂ. ಪ್ರತಿಬಾಹ್ಯ]

**ಪಡಿಬಿಂಬ,** ಪತಿಬಿಂಬ (ನಾ). ಪ್ರತಿಬಿಂಬ ; ಪ್ರತಿರೂಪ : ಎಲ್ಲ ನೃಪರಂತಲ್ಲ ಲಕ್ಷ್ಮೀವಲ್ಲಭನ ಪಡಿ[ಪಾಠಾಂ. ಪ್ರತಿ]ಬಿಂಬ ನಿನ್ನಲಿ ನಿಲ್ಲಬಲ್ಲನೆ ಕಲಿಪುರುಷನತಿಬೇಗ ತೆರಳಿದನು (ನಳಚ. ೯–೧೦). **ಪತಿಬಿಂಬ :** ಪುರ ಹರನ ಪ[ಪಾಠಾಂ. ಪ್ರ]ತಿಬಿಂಬವೆನಿಸಿದ ಶರಣರಂ ಧಿಕ್ಕರಿಸಿ ನಿಂದಿಸಿ ನರಕ ಭಾಜನರಾದಿರೀಶ್ವರದೂಷಕರು ನೀವು (ಬಸವು. ೫೭–೪೦).

[<ಪ್ರಾ. ಪಡಿಬಿಂಬ./ಸಂ. ಪ್ರತಿಬಿಂಬ]

**ಪಡಿಬೀಡಾರ** (ನಾ). ಸರಿಸಮಾನವಾದ ಬಿಡದಿಮನೆ; ಎಣೆಯಾದ ವಸತಿಗೃಹ : ಪಡಿಬೀಡಾರದಿಂದುಡುಗೊಱೆಯಿಂದ ಮೆಲ್ನುಡಿಯಿಂದ ವನನು ಸತ್ಕರಿಸಿ (ಕುರಾಸಾಂ. ೯–೭೯); ಹಿಮವಂತನು . . . ಅಂತ ರಂತರವಱಿದು ಬಂದ ನಿಬ್ಬಣಿಗರ್ಗನಂತವಾಗಿರ್ದ ಪಡಿಬೀಡಾರವಂ ತೋಱಿ ಸಂತಸದೊಳೀಶ್ವರಂ ಹರಿಯಜೇಂದ್ರಾದ್ಯರೊಡನೊಡ್ಡೋಲಗ ದೊಳೆಸೆದನು (ಚಿಬಪು. ೩೭–೬). [ಪಡಿ$_3$+ಬೀಡಾರ]

**ಪಡಿಬೀಡಾರಗೈಸು** (ಕ್ರಿ). ಸರಿಸಮಾನವಾದ ಬಿಡದಿಮನೆಯನ್ನು ಸಿದ್ಧಪಡಿಸು : ಗಮ್ಮನೀತಗೆ ಪಡಿಬೀಡಾರಗೈಸೆಂದು ಕಮ್ಮಗೋಲನು ಮಂತ್ರಿಗೊರೆದ (ಭರಚ. ೪೭–೧೨೩).

[ಪಡಿಬೀಡಾರ+ಗೈಸು(<ಕೆಯ್ಯು)]

**ಪಡಿಭತ್ಯ** (ನಾ). ಆಹಾರಧಾನ್ಯಗಳ ರೂಪದಲ್ಲಿ ಕೊಡುವ ಸಂಭಾವನೆ : ಅನವಶ್ಯಕವಾಗಿ ಈ ಬ್ರಾಹ್ಮಣರಿಗೆಲ್ಲಾ ಪಡಿಭತ್ಯವೇಕೆಂದು ಪ್ರಶ್ನಿಸಲಾರಂಭಿಸಿದನು. ಈ ಕಾರಣದಿಂದ ಇತರರೆಲ್ಲರಿಗೆ ಅದಂತೆ ಆನಂದ ದಾಸರ ಮನೆಗೆ ಸಲ್ಲುತ್ತಿದ್ದ ಉಪಾಯನವೂ ನಿಂತುಹೋಯಿತು (ಕಭವಿ. II, ೬೧೧). [ಪಡಿ$_1$+ಭತ್ಯ(<ಬತ್ತಾಯ)]

**ಪಡಿಮಟ್ಟೆಯ,** ಪಡಿಮಠೆಯ (ನಾ). [ಸಂಗೀತ] ಒಂದು ಬಗೆಯ ದೇಶೀತಾಳ : ಅವರವಸರಮಱಿದು ರಚ್ಛಿಯ ಮಟ್ಟೆಯ ಪಡಿಮಟ್ಟೆಯ ಝಂಪೆಯಮಡ್ಡ ತಾಳ ರೂಪಕಮೆಕ್ಕತಾಳಂಗಳೆಂಬ ಸಪ್ತ ತಾಳಂಗಳಂ ನಿವರ್ತನಗೆಯ್ದು (ಬಾಧಪು. ೯–೧೫). **ಪಡಿಮಠೆಯ :** ಬೀಗದಿ ಧ್ರುವಮಠೆಯವು ಪಡಿಮಠೆಯವು ಯೋಗ್ಯೆಯಲಡತಾಳಗಳು(ತರ್ಕಕಾ. ೭–೫೬). [<ಸಂ. ಪ್ರತಿಮಟ್ಠ]

**ಪಡಿಮಠೆಯ** 'ಪಡಿಮಟ್ಟೆಯ' ನೋ.

**ಪಡಿಮದ್ದಳೆ** (ನಾ). ಸರಿಸಮಾನವಾದ ಮದ್ದಳೆ (?) : ಎಲೆಲೆ ಹಾರುವನೇಕೆ ಹರಿಮೇಖಳೆಯ ಕೇಳಿಕೆಯೇಕೆ ಪಡಿ[ಪಾಠಾಂ. ಘಡ, ಬಡಿ] ಮದ್ದಳೆಯ ಬಡಿಕರ ಬಿಂಕ ಮೇಳವವಿಲ್ಲಲಾ ನಿನಗೆ . . . ಎನುತ ಬಾಣಾ ವಳಿಯ ನಿಮಿಷಕೆ ಕಡಿದು ಗುರುಜನನೆಚ್ಚನಾ ಭೀಮ (ಕುಪ್ರಾಕ. ೩–೨೨).

[ಪಡಿ$_3$+ಮದ್ದಳೆ$_1$(<ಮದ್ದಲೆ$_1$)]

**ಪಡಿಮದ್ದು** (ನಾ). ಪ್ರತಿಯಾದ ಔಷಧ ; ಬೇರೆ ಮದ್ದು.

**ಪಡಿಮದ್ದು ಅರೆ**=ಬೇರೆ ಉಪಾಯವನ್ನು ಮಾಡು : ನಮ್ಮ ಹೊಲದ ಬೆಳೆಯನ್ನು ಅವನ ಹೊಲಕ್ಕೆ ಸಾಗಿಸುತ್ತಿರಬೇಕು. ಇದಕ್ಕೆ ಏನಾದರೂ ಪಡಿಮದ್ದು ಅರೆಯಬೇಕು (ಜೆಳುಮು. ೫೮).

[ಪಡಿ$_3$+ಮದ್ದು(<ಮದ್ದು)]

**ಪಡಿಮಲ್ಲ**(ನಾ).ಸರಿಸಮಾನನಾದ ವೀರ,—ಪರಾಕ್ರಮಿ: ಬನ್ನಿತ್ತರ್ಥ ಮುಕ್ತಿಪ್ಪರುಳ್ಪರಿಯಾತಮಿಪ್ಪೆಕ್ಕಳ್ಳಿ ವಿಗ್ರಹದಣ್ಣೀರಸಿಂಹಾಸನಿಗ ಪಡಿಮಲ್ಲಂ ನೋಡಿ ಕೊಮರಮ ××× (ಎಕ. XI, ಚಳ್ಳಕೆ. ೮–೩; ಸು. 810 ?). [<ಸಂ. ಪ್ರತಿಮಲ್ಲ]

**ಪಡಿಮಾಟ** (ನಾ). ಪ್ರತಿಯಾಗಿ ಮಾಡುವ ಕ್ರಿಯೆ; ಬದಲಾಗಿ ಮಾಡುವ ಕಾರ್ಯ : ಒಡಲಂ ದುಃಖಿತಮುಂ ಚಂಚಲಮುಂ ಕೊಂಡು ಯ್ಯುದರೊಳ್ ಪಡೆಯಂ ಸೌಖ್ಯಮನನಿತುಂ ನಿಜದಿಂ ಪಡಿಮಾಟಂ ದುಃಖಕ್ಕೊಡ್ಡಿರೆ ದುಃಖಂ ಮುಡುಡಿದಿರ್ದೊಡೆ ಸುಖಮೆಂದದನೇ ಕಲ್ಪಿಸುಗುಂ (ಸೌನಂದ. ೯–೪೦). [ಪಡಿ$_3$+ಮಾಟ$_1$]

**ಪಡಿಮಾತು** 'ಪಡಿವಾತು' ನೋ.

**ಪಡಿಮಿಡಿ** (ಕ್ರಿ). ಪ್ರತಿಯಾಗಿ ಸ್ಪಂದಿಸು ; ಪ್ರತಿಸ್ಪಂದನವನ್ನು ನೀಡು : ಅದೊಂದು ರೀತಿಯಲ್ಲಿ ಆಂದಂದಿನ ಅನುಭವಕ್ಕೆ ಅನಾಯಾಸವಾಗಿ ಪಡಿಮಿಡಿದ ಪ್ರತಿಕ್ರಿಯಾರೂಪದ ಸಾಹಿತ್ಯ (ಪರಿಶೀ. ೮೫) ; ಕೆಲವು ಬಣ್ಣಗಳನ್ನು ಕಂಡೊಡನೇ ನಮ್ಮ ಕಣ್ಣು ಅರಳುತ್ತವೆ. ನಮ್ಮ ಇಂದ್ರಿಯಗಳು ಪಡಿಮಿಡಿಯುತ್ತವೆ (ಸೌಂದಸ. ೨). [ಪಡಿ$_3$ + ಮಿಡಿ$_1$]

**ಪಡಿಮುಖ ,** ಹಡಿಮುಖ (ನಾ). ೧. ಎದುರು ; ಅಭಿಮುಖ ; ಮುಂಭಾಗ : ಅಂಜುವೆವು ನಿಮಗರಸರೇ ಬಲಪಂಜರದ ಗಿಣಿ ನೀವು ನಿಮಗೀ ಮಂಜರನ ಪಡಿಮುಖಕೆ ನಿಲುವುದು ನೀತಿಯೇ ನಿಮಗೆ (ಕುಪ್ವಾಕ. ೧೧-೪೨) ; ಎಲೆಲೆ ರಾಯನ ಪಡಿಮುಖದೊಳಿಟ್ಟೆಳಸಿತೋ ಹಯ ಬದುಕಿನಾಸೆಯ ಬಳಿಯ ಬಿಡಿರೋ (ತೊರರಾ. ೬-೩೦-೩೪) ; ರಥವಳಿದು ಕೈದುವ ಬಿಟ್ಟು ಕಾಲಾಳಾಗಿ ಹರಿಯನು ಮುಟ್ಟಿ ಕಾದಲು ಬಂದನಾ ಕಡುಪಾಪಿ ಪಡಿಮುಖಕೆ[ಪಾಠಾಂ. ಕಡುಮುಳಿದು] (ನಿಭಾಗ. ೧೨-೫೧-೪೪). ೨. ಪ್ರತಿಪಕ್ಷ; ಎದುರುಪಕ್ಷ; ಶತ್ರುಪಕ್ಷ : ಹತ್ತುಸಾವಿರ ತುರಗ ಸರಿಸದಲೇಱಿದವು ಪಡಿಮುಖದ ಬಲ ಬೆದಱೆ (ಕುವ್ಯಾಕ. ೩-೩) ; ಪಡಿಮುಖದ ಹಳೆಗಲೆಯ ಕರುಳ್ಗಳನಡಸಿ ಬಸುಱಲಿ ಹೊಲಿದ ಹೊಲಿಗೆಯ ದಡಿಗರಕ್ಕಸರಾಯರಿದ್ದುದು ಕೋಟಿಸಂಖ್ಯೆಯಲಿ (ತೊರರಾ. ೩-೭-೫). ೩. ಅಭಿಮುಖನಾದವನು ; ಎದುರಾದವನು : ಕೊಡಬೇಡ ಕೊಳಬೇಡ ಸುರವಿಜಯ ವಿಠ್ಠಲನ್ನ ಅಡಿಗಳನ್ನು ನಂಬಿ ಪಡಿಮುಖನಾಗು ಗತಿಗೆ (ವಿಸಾಸು. ೮೯-೧). ೪. ಬೇರೆ ಕಡೆಗೆ ತಿರುಗಿಸಿದ ಮುಖ ; ವಿಮುಖ : ಭಾರಿಥನುವಿದೆ ಭಾಮಿನಿಯ ಮುಂದೆ ಎವಗೆ ತವಗಿದು ವಶವೆ ಬಾವನ್ನವನು ವೇಷ್ಟಿಸಿ ಭುಜಗವಿದೆಯೆಂದವನಿಪರು ಹೊಱಗುಂದಿದರು ಪಡಿ[ಪಾಠಾಂ. ಭಯ]ಮುಖದ ದುಗುಡದಲಿ (ಕುಪ್ವಾಆ. ೧೪-೨೫). **ಹಡಿಮುಖ :** ೨. ರಂಗಿಣಿಯ ಕೊಪ್ಪಲ್ಲಿ ತುರಕರ ಕೂಡೆ ಕಾದಿ ದಳವ ಮುಱಿಯಲಿಱಿದು ಹಡಿಮುಖದ ಘಾಯದಿಂದ ಸ್ವಾಮಿಕಾರ್ಯಕ್ಕೆ ದೇಹವನೊಪ್ಪಿಸಿ ಕೊಟ್ಟು ಚೆನ್ನಿಯ ನಾಯಕರು ಶ್ರೀವಯಿಕುಂಠವನು ಎಯಿದಿದರು (ಎಕ. XII, ತಿಪಟೂ. ೪೪-೬ ; 1295). [ಪಡಿ$_3$ + ಮುಖ]

**ಪಡಿಮೂಡಿಸು** (ಕ್ರಿ). ಪ್ರತಿಯಾಗಿ ಮೂಡಿಸು; ಪ್ರತಿಬಿಂಬಿಸು : ಪರಮಾಜರ ಮಹಡಿ ರಸಿಕನ ಜೀವನವನ್ನು ಪಡಿಮೂಡಿಸಿತ್ತು (ಬಾಬಲ. ೬೮) ; ಅಂತಹ ಅನುಭವವನ್ನು ಪಡೆದ ಇನ್ನೊಬ್ಬ ಕನ್ನಡ ರಸಿಕರು ಪಾಶ್ಚಾತ್ಯಸಮಾಜದ ಬಗೆಬಗೆಯ ಪದರುಗಳನ್ನು ಕನ್ನಡ ಸಾಹಿತ್ಯಕೃತಿಗಳಲ್ಲಿ ಪಡಿಮೂಡಿಸಿದ್ದಾರೆ (ಸಾಸಮಾ. ೧೪). [ಪಡಿಮೂಡು + -ಇಸು$_3$]

**ಪಡಿಮೂಡು** (ಕ್ರಿ). ಪ್ರತಿಯಾಗಿ ಮೂಡು ; ಪ್ರತಿಬಿಂಬವಾಗು : ತನ್ನ ಆನಂದವು ಅವರ ಮನ ಮೊಗಗಳಲ್ಲಿ ಪಡಿಮೂಡಬೇಕೆಂಬುದು ಅವನ ಮನೀಷೆ (ಎರಸಿ. ೧೦೧) ; ಅಲ್ಲಿ ಕಲೆತಿರುವ ಜನಗಳ ನೆರಳೂ ಪಕ್ಕದ 'ಘಡಿ'ಯೊಂದರ ಮೇಲೆ ಪಡಿಮೂಡಿ ಅಲುಗಾಡುತ್ತಿತ್ತು (ಬನಸಿ. ೨೫). [ಪಡಿ$_3$ + ಮೂಡು$_1$]

**ಪಡಿಮೆ,** ಪತುಮೆ, ಪ್ರತುಮೆ (ನಾ). ೧. ಪ್ರತಿಮೆ ; ಮೂರ್ತಿ ; ವಿಗ್ರಹ: ಹಾಲುಗಲ್ಲಲಿ ಕಡೆದ ಪಡಿಮೆಯನೆ ಕುಳಿತಿಹಳು (ಚಂದ್ರಸ.೮೩-೧೧). ೨. ಪ್ರತೀಕ ; ಸಂಕೇತ ; ಕುರುಹು : ಆ ಸಂಜೆಯಿಂದಾ ಬಂಡೆ, ಕಲ್ದವಸಿ, ಊರ್ವಿಳೆಗೆ ಮೇಣವಳ ಸಂಯಮಕೆ ಪಡಿಮೆಯಾದುದು (ಶ್ರೀರಾಮಾ. ೧೪೬-೧೧೯). **ಪತುಮೆ :** ೧. ಅವನ ಅಯ್ವತ್ತು ಗಂಜನದ ಪತುಮೆಯ ಕಟ್ಟಿ ತನ್ನ ಅಟ್ಟಿಗೆ ಕೊಟ್ಟ ರಾಜೇನ್ದ್ರಚೋಳನಾಟ್ಟರೆಯಂ (ಎಕ. IV (R), ಹುಣಸೂ. ೫-೨೦ ; 1020) ; ಚೆನ್ನಾಗಿ ಪುಳಿದೊಡೆ ದೊಪ್ಪವಿಕ್ಕಿದ ಚೊಕ್ಕ ಚಿನ್ನದ ಪತುಮೆಗಳಂತೆ ರನ್ನದ ಮುತ್ತ ಹಾರವನಿಟ್ಟು ಸುಗುಣಸಂಪನ್ನೆಯರಿರ್ದರಿಕ್ಕೆಲದಿ (ಮೋಹತ.೧೮-೩೬). **ಪ್ರತುಮೆ:** ೧. ಈ ಲೇಖೆಯ ಪ್ರತುಮೆಯ ಕಂಡರಿಸಿದ ಮಾಳವೆಯ ಮಲೆಯ (ಎಕ. XVI, ಗುಬ್ಬಿ. ೬೬-೧; 12ನೆಯ ಶತ) ; ಶ್ರೀ ಚಂದ್ರನಾಥನ ಚೈತ್ಯಾಲಯದಲೂ ತೊಳಹರ ಬಳಿಯ ಅನಕಸೆಟ್ಟಿಯ ಮಗ ಆದಿಸೆಟ್ಟಿಯಾಯೆರಗಿಸಿದ ಚತುರ್ವಿಂಶತಿ ತೀರ್ಥಂಕರರ ಪ್ರತುಮೆಯನುಯಿರಿಸಿ ಕ್ರುತಾರ್ತ್ಥನಾದೆನು (ಮೈಆರಿ. ೧೯೪೬, ೯-೨ ; ಸು. 14ನೆಯ ಶತ) ; ನಸುನಗು ತೀಶನಗಜೆಯೊಳ್ ಸರಸವಾಡುತ್ತೆ ಸರ್ವಾಂಗದೊಳ್ ನಿರ್ಮಳೋದಕವನಿರದೊತ್ತೆ ಚಂದ್ರಿಕೆ ಬಳಸಿ ನಿಂದ ನೀಲದ ಪ್ರತುಮೆಯಂದಮಂ ಪೋಲ್ತು (ಚೆಬಪು. ೪೫-೫೫). [<ಪ್ರಾ. ಪಟಿಮಾ, ಪಡಿಮಾ./ಸಂ. ಪ್ರತಿಮಾ. /ತಮಿ. ಪತಿಮ್ಮೈ, ಪತುಮ್ಮೈ ; ತೆಲು. ಪತಿಮ]

**ಪಡಿಮೆಚ್ಚು** (ನಾ). ತೀರ್ಮಾನವಾಗದುದು ; ಅನುಮಾನದಿಂದ ಕೂಡಿದುದು : "ಪಡಿಮೆ[ಪಾಠಾಂ. ಮು]ಚ್ಚೆನಲದು ಸಂಶಯಂ" (ಭಾರತಿ. ೬೦). [P ಇದು 'ಪಡಿಪುಚ್ಚ' ಎಂಬುದರ ಅಪಲಿಖಿತವಿರಬಹುದೆ ?]

**ಪಡಿಮೇಲ್** (ನಾ). ಪ್ರತ್ಯುಪಕಾರ : ಆದೊಡೀ ಮೇಲ್ಗೇಂ ಪಡಿಮೇಲೆನ್ನತ್ತಣಿನಪ್ಪುದಿರ್ಪುದು, ಅಂತದಂ ಸಲಿಸುತೆ, ನಿನ್ನೊಲ್ಮೆಯಂ ಪಡೆಯಲ್ತಕ್ಕುದದಱಿಂ ನಿನ್ನಯ ಬಯಕೆಯಂ ಕೂರ್ಮೆಯಿಂ ಬೆಸಸುವುದು (ಅದ್ಭುತ. ೨೫-೧೨). [ಪಡಿ$_3$ + ಮೇಲ್]

**ಪಡಿಮೊಗ,** ಹಡಿಮೊಖ (ನಾ). ೧. ಅಭಿಮುಖ ; ಎದುರು : "ಪಡಿಮೊಗ—ಪ್ರತಿಮುಖ = ಅಭಿಮುಖ" (ತದ್ಭಕೋ. ೨೩) ; ಹರಿಭೇದಂಗೆಯ್ಯೆ ಬಿರ್ದೋಪನ ಪಡಿಮೊಗದೊಳ್ ತುಂತುಱಂ ತೂಱಿ ಸುಯ್ಯಂ ಕರದಿಂದಾರಯ್ದು . . . ಶೋಕಾತುರೆ ದುಃಖೋದ್ರೇಕದಿಂದಂ ಬಸೆ ಪರವಸೆ ಬೀಸಿತ್ತು ಕರ್ಣಾಗ್ರದಿಂದಂ (ಲೀಲಾವ. ೮-೨೦); ಪಡಿಮೊಗಮಾಗಲೊಡಂ ಕನ್ನಡಿಯಂ ನೋಡುವರ ತೆಱದೆ ಮೆಯ್ಗುಂದುವರುಗ್ಗಡದರಸುಮಕ್ಕಳೆನೆ ಬಾಳ್ವಿಡಿದಾರ್ ಬಾಟ್ದುಪ್ಪರಾತನಿದಿರೊಳ್ ಪಗೆವರ್ (ಕಬ್ಬಕಾ. ೪೯) ; ಎಂದಿಗವನ ಪಡಿಮೊಗದೊಳು ಸಂದಪೆನೆಂದೆಡೆವಿಡದೆ ಜಾನಿಪಳು (ಹದಿಬ.೭-೨೯). ೨. ಪ್ರತಿಯಾದ ಮುಖ; ಪ್ರತಿಬಿಂಬ: ಕನ್ನಡಿಯಲ್ಲಿ ತನ್ನ ಪಡಿಮೊಗವನ್ನು ನೋಡಿದಾಗಲೆಲ್ಲ ಅವರ ಮನದೊಳಗೆ 'ಚುರುಚುರು' ಅನ್ನುತ್ತಿತ್ತು (ಚಿಗುಬ. ೧). ೩. ಶತ್ರುಪಕ್ಷ; ವಿರುದ್ಧಪಕ್ಷ: ಆ ಕಂಣಯನಾಯಕನ ತಂಮನು ಸ× × × × ಆಸೆಮಾಡುವ ಕುಮಾರರ ಗಂಡ ಹಡಿಮೊಖದ ಘಾಯವಿಲ್ಲದ [ವೀ]ರರ ಗಂಡ (ಮೈಆರಿ. ೧೯೩೮, ೫-೯ ; 13ನೆಯ ಶತ). 'ಪಡಿಮುಖ' ಪರಾ. [ಪಡಿ$_3$ + ಮೊಗ]

**ಪಡಿಯಗಳು** 'ಪಡಿಯಗಟ್ಟ್' ನೋ.

**ಪಡಿಯಗಟ್ಟ್,** ಪಡಿಯಗಳು (ನಾ). ೧. ಬೇರೆಯ ಅಗಳು ; ಮತ್ತೊಂದು ಕಂದಕ : ಪಡಿಗೋಂಟಿಗೆಯ್ದು ಕಡುಪಂ ಪಡಿಯಗಟ್ಟಿಗೆಯ್ದೆಳವನಾರ್ಪು ಕಡುಗೂರ್ಪುಗಳಂ ಪಡಿವಡೆಗೆಯ್ದಂದವರೊಳ್ ಪಡಿಬರಿಸಿದರಮವು ವಿಷ್ಣುಜಿಷ್ಣುಗಳನ್ನರ್ (ಚಿಕವಿ. ೨-೪೫). **ಪಡಿಯಗಳು :** ೧. ಕಳನ ಸವೆದರು ಮಾಱಯೋಜನ ವಳಯದಲಿ ಪಡಿಯಗಳು ಕೋಟಾವಳಯ ಸುಯ್ಧಾನದಲಿ ಹೊಯ್ದರು ರತ್ನಕಾಂಚನವ (ಕುಪ್ವಾಸ. ೬-೧೪). ೨. ಆಳವಾದ ಅಗಳು,— ಕಂದಕ : ಬೀಡಿನ ತೆಕ್ಕೆ ಬಿಗಿದುದು ಪಾಳೆಯದ ಬಲುಹೊದಕೆ ಹೊಱವಳಯದಲಿ ಕಲುಗೋಟೆ ಮೇಲೆ ಪಡಿಯಗಳಾಶ್ರಯಿಕೆ ಮುಳುವೇಲಿ ದೀಹದ ಸಿಂಹ ಶರಭ ವ್ಯಾಳ ಶಾರ್ದೂಲಾವಳಿಯ ಸುಯಿಧಾನವೊಪ್ಪಿದವು (ಕುಪ್ವಾಉ. ೧೧-೪೭) ; ಸುತ್ತ ಕತ್ತರಿವಾಣ ಪಡಿಯಗಳುತ್ತರಿಸಲಮರಾಳಿಗರಿದೆನೆ ಕೊತ್ತಳದ ಹುಲಿಮುಖದ ಹರಹಿನಲೆಸೆದುದಾ ದುರ್ಗ (ತೊರರಾ. ೬-೭-೧೬). [ಪಡಿ$_3$ + ಅಗಟ್ಟ್$_2$(<ಅಗುಟ್ಟ್$_3$)]

**ಪಡಿಯಚ್ಚು** (ನಾ). ೧. (ಮೂಲದ ಆಕೃತಿಗೆ) ಸರಿಸಮಾನವಾದ ಆಕೃತಿ ; ಪ್ರತಿರೂಪ : ತರು ಪಾಷಾಣಾದಿ ಕರ್ಮಾಂತರ ಪರಿಣತಿಯಂ ಪದ್ಮಜಂ ಲೋಕದೊಳ್ಚಿತ್ತರಿಸಲ್ವೇಟ್ಟುಂ ದಲೆಂದಿಂತಿದಱಿನೊಳ್ ಪಡಿಯಚ್ಚಾಗಿ ಮಾಡಿಟ್ಟನೆಂಬಂತಿರೆ . . . ಮಾಡಿಸಿದನೆಸೆಯೆ ದಣ್ಣಾಧಿಪಂ ಕೇಶಿರಾಜಂ (ಎಕ. VII, ಶಿಕಾರಿ. ೧೨೩-೫೨ ; 1179) ; ವೀರ್ಯ ಪರಾಕ್ರಮಗಳಲ್ಲಿ ಕೃಷ್ಣಪ್ಪನಾಯಕರ ಪಡಿಯಚ್ಚು ನೀನು ! (ಶ್ರೀರಾಯ. ೩೧೪) ; ಅವರ ಮಕ್ಕಳೇ ಎಂದು ಹೇಳಿದರು. ಮುಖವೂ ಸಹ ಅವರ ಪಡಿಯಚ್ಚಿನಂತಿತ್ತು (ಪತಂಗ. ೬). ೨. ಮರದಲ್ಲಿ ಅಥವಾ ಲೋಹದಲ್ಲಿ ಬೇಕಾದ ಆಕಾರವನ್ನು ಕೊರೆದು, ಅದರಲ್ಲಿ ಎರಕವನ್ನು ಅಥವಾ ಕರಗಿಸಿದ ದ್ರವವನ್ನು ಹೊಯ್ದು ಆ ಆಕಾರದ ಬಿಂಬವನ್ನು ಮಾಡಿಕೊಳ್ಳುವ ಸಾಧನ : ಈ ಮುದ್ರಣವಸ್ತುವು ಅಚ್ಚು ಮೊಳೆಗಳ ಸಮೂಹ, ಪಡಿಯಚ್ಚು ಮತ್ತು ಫಲಕಗಳು ಇವುಗಳಿಂದ ಕೂಡಿರುವುದರಿಂದ ಅದು ಅತಿ ಸುಲಭವಾಗಿ ಬಳಸಲನುಕೂಲವಾಗಿರುವುದಿಲ್ಲ (ಮುದ್ರಕ. ೨). ೩. ಒರೆಗಲ್ಲು ; ನಿಕಷ : "ಒರೆಗಲ್ಲ ಪೆಸರು ಪಡಿಯಚ್ಚೆಂಬುದಕ್ಕು" (ಕಶರ. ೫೮). [ಪಡಿ$_3$+ಅಚ್ಚು$_3$]

**ಪಡಿಯಚ್ಚುವಡೆ** (ಕ್ರಿ). ಪ್ರತಿರೂಪವನ್ನು ಹೊಂದು ; ಸಮಾನವಾದ ಆಕೃತಿಯನ್ನು ಪಡೆ : ಕದ್ದೈಸದೆ ನೋಡು ಸ್ಮರನ ಬಾಯೊಳ ಗುರ್ಚಿ ಬಿದ್ದಂತೆ ಪಡಿಯಚ್ಚುವಡೆದ ಮುಗ್ಧಾಸ್ಯದೆ ಕಮನೀಯರೂಪನನನಿರುದ್ಧನ ನೋಡು (ಮೋಹತ. ೩೦-೩೨). [ಪಡಿಯಚ್ಚು + ಪಡೆ$_1$]

**ಪಡಿಯಚ್ಚುವಿಡಿ** (ಕ್ರಿ). = ಪಡಿಯಚ್ಚುವಡೆ: ಕ್ಷಣಿಕೈಕಾಂತವಾದಮಂ ಪಡಿಯಚ್ಚುವಿಡಿದು ನುಡಿವ ಬೌದ್ಧನೇಕಾಂತಮಿಥ್ಯಾತ್ವಮುಂ (ಪಸಾರ. ೪). [ಪಡಿಯಚ್ಚು + ಪಿಡಿ$_1$]

**ಪಡಿಯಟ್ಟಣೆ** (ನಾ). ಪ್ರತಿಯಾಗಿ ನಿರ್ಮಿಸಿದ ಅಟ್ಟಣೆ : ನಡೆಗೋಂಟೆಗಳ ಮೊಗ್ಗರಂ ನೂಂಕಿದುವು ಪುರದ ಪೊಱಬಳಸಿನೊಳ್ ಪಡಿಯಟ್ಟಣೆಗಳೆದ್ದುವು (ಚೆಬಪು. ೪೨-೨೪). [ಪಡಿ$_3$+ಅಟ್ಟಣೆ$_1$(<ಅಟ್ಟಳೆ)]

**ಪಡಿಯದೆ,** ಹಡದಿ$_2$, ಹಡದೆ, ಹಡಿಯದೆ (ನಾ). ೧. ಒಂದು ಬಗೆಯ ಆದಾಯ ತೆರಿಗೆ (?) : ಗ್ರಾಮಾಸ (?)ರ್ವ ೨೦೦೦ ಮಗಿಲು ಗ್ರಿಹೇ ಹಸ್ತ ೪೦ ಘಾಣಾ ಹಟ್ಟಾ ಮುಲಾ ಪಡಿಯದೆ ಪಾರಿಕ್ಷಾಯ ಅಷ್ಟಭೋಗ ತೇಜಸಾಮ್ಯ ಸರ್ಬ ಮೂಲಿಕಾ ಭೂಮಿ ೨೦೦೦ . . . ಗ[ಗಾ]ಣ ೧ ಪಡಿಯದೆ ೧ ಹಟ್ಟಾ ೧ ಮಲಾ ೧ (ಇಆ.XIV, ೧೪೧-೨೫; ಸು. 12ನೆಯ ಶತ). **ಹಡದಿ$_2$** : ೨. ಗ್ರಾಮದ ಅಗಸ, ನಾಯಿಂದ ಮೊದಲಾದವರಿಗೆ ಗ್ರಾಮಸ್ಥರು ಕೊಡುವ (ಧಾನ್ಯರೂಪದ) ವರ್ಷಾವಧಿ ಸಂಭಾವನೆ,—ಪಡಿ : ಮಾಯಿ ಸರಿಯಾಗಿ ಹಡದಿ ಕೊಡುತ್ತಿರಲಿಲ್ಲ . . . "ನಿನ್ನ ಚೌರಕ್ಕೆ ಹಡದಿ ಬೇರೆ ದಂಡ" —ಈ ರೀತಿ ಹಂಗಿಸುತ್ತಿದ್ದಳು (ನನ್ನೂರು. ೨೩೫). **ಹಡದೆ** : ೧. ಸೂಲಿಗೆ ಗುಡ್ಡೆಯ ಆಯ, ಹಡದೆ, ಲಂಚಪಂಚೆ (ಬೆಟ್ಟಅ. ೧೫೫-೨೩). ೨. ತೋಟಿ ತಳವಾರ ಹೊರತು ಮಿಗಿಲಾದ ಜನಗಳಿಗೆ ಹಡದೆಯನ್ನು ನಿಬಂಧನೆಯ ಮೇರೆಗೆ ಕೊಡುವಂತೆಯೂ ನೇಮಕ ಮಾಡಿಸಿದರು (ಚಾಮುಪಂ. ೧೧೮) ; 'ಹಡದೆ'ಯು ಐದು ಬಳ್ಳದಿಂದ ಮೂರಕ್ಕೆ ಮುಟ್ಟಿತು (ಗರುಡಾ. ೧೧೬). ೩. ಪಡಿಯಾಗಿ ಕೊಡುವ ತೆನೆಯ ಹುಲ್ಲು: ಈ ಹಡದೇ(ಭತ್ತ ಸಹಿತವಾದ ಹುಲ್ಲು) ಹೊತ್ತುಕೊಂಡು ಬರುವವನಿಗೆ ಹಡದೇ ಒಕ್ಕಲೆಂದು ಹೆಸರು (ಹುಟ್ಟಹ. ೬೪). **ಹಡಿಯದೆ** : ೧. ಮದುವೆಯಾಯ ಮಾನೆಂಣ್ಣೆ ಹಡಿಯದೆ ತಿಪ್ಪೆ ಸುಂಕ (ಎಇ. XXiii, ೩೦-೬೧ ; 1265) ; ಶ್ರೀಮತು ಕೂಮಣೇಶ್ವರದ[ಲಚ]ಧ್ಯಾರ ಮನೆಯ ಸಿಲೆಯಣ ಗವುಂಡ ಹಡಿಯದೆ ಇಕ್ಕೊಳ ಜೋಳ (ಸೌಇಇ. XX, ೩೫೧-೩ ; 13ನೆಯ ಶತ). [ ? ]

**ಪಡಿಯರ** 'ಪಡಿಯಱ' ನೋ.

**ಪಡಿಯರತಿ** 'ಪಡಿಯಱತಿ' ನೋ.

**ಪಡಿಯರವಕ್ಕಿ** 'ಪಡಿಯಱವಕ್ಕಿ' ನೋ.

**ಪಡಿಯಲೆ** (ನಾ). ಪ್ರತಿದಿನ ಅರ್ಪಿಸಬೇಕಾದ ವೀಳೆಯದೆಲೆ : ಶ್ರೀಮದನಾದಿಯಗ್ರಹಾರಂ ತೊಣ್ಣನೂರ ನಡುವಣ×××ಯಾದ ಪಡಿಯಲೆಯ ವೀಳೆಯಕ್ಕ ಬಿಲ್ಕುಂಬಳಿಯ ತೋಟದಲು ಎಲೆಯಗುಳಿ ಇನೂರು ಗುಳಿಯಂ×××ಯ ಕುಳಿಯಗಾಡವಗದೆ ಮೂವತುಗುಳಿಯುಂ ಅನ್ತು ಇನ್ನೂರ ಎಂಭತು ಗುಳಿಯ ಪನ್ನಾಯಮಂ ಸರ್ಬಬಾಧಾಪರಿಹಾರವಾಗಿ ಧಾ××ರ್ವಕಂ ಮಾಡಿಕೊಟ್ಟರು (ಎಕ. XIV, ಶ್ರೀರಂಗ. ೬೧-೬ ; ಸು. 1175). [ಪಡಿ$_1$+<ಎಲೆ$_1$]

**ಪಡಿಯಳೆ** (ನಾ). ಒಂದು ಬಗೆಯ ಆದಾಯ ತೆರಿಗೆ : ಊರೊಡೆಯರ್ಗ್ಗೆ ಮಾನ್ಯದ ಕೆಯ್ಮತ್ತರಿನ್ನೂಱು ಮನೆಗೆಣ್ಣಯ್ಯಗಲವಿಪ್ಪರ್ತ್ತೈಗೈ ನೀಳದ ನಿವೇಶನಂ ಮೂರು ಸಾಶ್ವತ ಸುಂಕಂ ಗಾಣವೆಯಿಲಿಗೆ ಕೊಣ್ಡ ಮುಟ್ಟಗೆ ಪಡಿಯಳೆ ಯಜ್ಞದಲೊನ್ದು ಗದ್ಯಾಣಂ××× ಅಯ್ದು ಪಣಂ ಮದುವೆಯಲೆರಡು ಪಣಂ ಮಾಣಿಯಲೊನ್ದು ಪಣಂ (ಎಇ. XX,೬-೩೪; 1012). 'ಪಡಿಯದೆ' ಪರಾ. [ ? ]

**ಪಡಿಯಱ,** ಪಡಿಯರ, ಪಡಿಯಾಱ, ಪಡಿಹಱ, ಪಡಿಹಾಱ, ಪಳಿಯಱ, ಪಟಿಯಱ, ಹಡಿಯರ, ಹಡಿಯಱ, ಹಡಿಯಾಱ, ಹಡಿಹಾಱ (ನಾ). ೧. ಬಾಗಿಲು ಕಾಯುವವನು; ಪ್ರತೀಹಾರಿ; ದ್ವಾರಪಾಲಕ : "ದ್ವಾರನಿಯುಕ್ತಂ ತಾಂ ಪ್ರತಿಹಾರಂ ದೌವಾರಪಾಳಕಂ ದ್ವಾಸ್ಥಂ ದೌವಾರಿಕನೆನೆ ಪಡಿಯಱಂ" (ವಸ್ತುಕೋ. ೬೧-೫೫); ಮುಂದಣ ಮಾನಸರಂ ಪಡಿಯಱರ್ ತೊಲಗಿಸುತ್ತಂ ಬರೆ (ಪದ್ಮಾರಾ. ೮೦-೧೨) ; ಮೂಱನೆಯ ಬಾಗಿಲೊಳ್ ಬಂದಿರ್ದನಂತನ ಬರವಂ ಪಡಿಯಱಂ ಬಿನ್ನಪಂಗೆಯ್ಯೆ (ಪಂಪಭಾ. ೯-೨೯ ವ) ; ಉಲಿವ ಕೋಕಿಲಪಾಠಕರ . . . ಜಡಿವ ಕೊಳರ್ವಕ್ಕಿಗಳ ಪಡಿಯಱರ ಅಲರ್ದ ಹೊಂದಾವರೆಯ ನವಪರಿಮಳದ ಸಿಂಹಾಸನದಿ ಲಕ್ಷ್ಮೀಲಲನೆಯೋಲಗಶಾಲೆಯಂತಿರೆ ಮೆಱೆದುದಾ ಸರಸಿ (ಕುವ್ಯಾಗ. ೩-೩೮); ಮೈತ್ರಾವರುಣಿ ಶಿಷ್ಯಂಬೂಡಿ ಬರುತಮಿರ್ಪುದಂ ಕಟ್ಟದಿರೊಳ್ಕಂಡು ಪಡಿಯಱಂ ಚಚ್ಚರಮೆಯ್ದು . . . ಬಿನ್ನಯಿಸಿದಂ (ರಾಮಾಶ್ವ. ೧೦-೨೪). ೨. ಬಾಗಿಲು ಕಾಯುವ ಕೆಲಸ ; ಕಾವಲು : ಬನದ ಪಡಿಯಱನನಂಗಂ ನಿನಗಿತ್ತೊಡೆ ಪುಗಲಿಮೆಂಬುದೇಂ ದೋಷಮೆ ಚೀ ನೆನೆಯೆವದಂ ನಿನ್ನಿಂಚರಮನೆ ಮನದೊಳ್ ನೆನೆವೆವಾಗಳುಂ ಪರಭೃತಮೇ (ಆದಿಪು. ೧೧-೧೩೧) ; ಪಡಿಯಱನಿತ್ತಳೇ ನಿನಗೆ ಮತ್ಪ್ರಿಯೆಯಾಂ ಬರೆ ಬಾರಿಸೆಂದು ನೀಂ ಜಡಿದೆಡೆದೋಱುದೈ ಪ್ರಿಯೆಗೆ ಪೇೞ್ವೆನಿದಂ ಪರಿಭಾವಿಸೇಕೆ ನಿನ್ನೊಡನೆ ವಿರೋಧಮೋಪಳ ಮನಂಬಡೆವೆಂ ನಿನಗಿಂದೆ ಲಂಚಮುಂ ಕುಡುವೆನಪಾರಕೋರಕಮನೇಕೆ ಪುಗಿಲ್ಪುಗಿಲೆಂದಪೈ ಪಿಕಾ(ಲೀಲಾವ. ೧೪-೭೬). **ಪಡಿಯರ** : ೧. "ಪಡಿಯರ (ಪಡಿವಳ-ಯಾರ-ಹಾರ)—ಪ್ರತಿಹಾರ (ಪ್ರತೀಹಾರ) = ದ್ವಾರಪಾಲಕ" (ತದ್ಭಕೋ. ೨೪) ; ಪಾಡುವರ್ಗ್ಗೆ ಮತ್ತರು ೧೦ ವಂಸಕಾಱಂಗೆ ಮತ್ತರು ೫ ಪಡಿಯರಂಗೆ ಮತ್ತರು ೫ ಮಾಲಗಾರಂಗೆ ಮತ್ತ ೩ ಕುಂಬಾಱಂಗೆ ಮತ್ತರು ೨ (ಸೌಇಇ. IX-i, ೧೩೩-೩೧ ; 1068). **ಪಡಿಯಾಱ** : ೧. ಪಡೆವಳ್ಳರ್ ನೃಪಗುಣಮುಂ ಬಿಡೆ ನಾಳ್ಗಡಿಗಳೆವ ತೆಱದೆ ನಡೆನಡೆಯೆಂಬರ್ ಜಡಿವರಾ ಸಾಧೂಕ್ತಿಗಳಂ ನುಡಿವವರಂ ಮಾಣಿಪಂದದಿಂ ಪಡಿಯಾಱರ್ (ಕಾದಂಪೂ. ೫೫೬) ; ವೀರಬಲ್ಲಾಳರಾಯನ ದಿವ್ಯಶ್ರೀಪಾದಪದ್ಮೋಪಜೀವಿಯಪ್ಪ ಮಹಾಪ್ರಧಾನ ಹಿರಿಯ ಪಡಿಯಾರ××× ಮಾರಯ××× ಅನ್ವಯಮೆನ್ತೆಂದೊಡೆ (ಎಕ. VII, ಶಿವಮೊ. ೮೮-೧೯ ; 1203) ; ಪಡಿಯಾ[ಪಾಠಾಂ. ಹಾ]ಱನ ನೋಡಿ ಪೇಳ್ದನಾ ದಂಡೇಶ

(ಲೀಚಂ. ೩೭-೩೪). **ಪಡಿಹಱ :** ೧. "ಪ್ರತೀಹಾರಃ, ದ್ವಾರಪಾಲಃ, ದ್ವಾಸ್ಥಃ, ದ್ವಾಸ್ಥಿತಃ, ದರ್ಶಕಃ — ಈ ೫ ಪಡಿಹಱನು" (ನಾಚಿರಾ.೧೩೧) ; ಸೋಮನಾಥದೇವರ ಪಡಿಹಱ[ಸ್ತ ವರಂ]ಗೆ(ಬೊಂಕಶಾ. ೧೯೩೦, ಮುದ್ದೆಬಿಹಾಳ್. ೬೬-೩೩ ; 1181). **ಪಡಿಹಾಱ :** ೧. "ದ್ವಾಸ್ಸ್ಥಃ, ದೌವಾರಿಕಃ . . . ದ್ವಾರಪಾಲಃ, ಪ್ರತೀಹಾರಃ— ಈ ೮ ಪಡಿ(ಯ)ಹಾಱಂ" (ಹಲಾಯು. ೭೦-೨೭೦); ಶ್ರೀಮನ್ಮಹಾಮಂಡಳೇಸ್ವರಂ ಹಲ್ಲವರಸರ ಪಡಿಹಾಱ ನಾಗದೇವನಾಯ್ಕನ ಮಡವಳಗೆ ಚಾಕಮನು ... ಕೊಟ್ಟ ಮತ್ತರು ಒಂದು(ಕಇಅ.೧೨೨-೨೮-೧೪; 1151); ಗರುಡರ ಗಡಣ ಯಕ್ಷ ರಾಕ್ಷಸರ ಕಳವಳವ ಜಡಿಯುತ್ತಿರ್ಪ ಪಡಿಹಾಱರಿಂ . . . ಹರನ ಸಭೆ ಸುಖದ ಸೊಗಸಿನ ಜೊಮ್ಮುವಿಡಿದು ಮೆಱೆದಿರಲು (ಸಿದ್ಧರಾ. ೧-೨೩) ; ಇರುಳು ಗುಪಿತದಲವನಿಪತಿ . . . ಕರೆದು ಪಡಿಹಾಱಂಗೆ ಬಂದುದನಱುಹಲವದಿರು ಹೊಕ್ಕು ಸಮಯವನಱದು ಭೀಷ್ಮಂಗೀಹದನ ಬಿನ್ನಹವ ಮಾಡಿದರು (ಕುವ್ಯಾಭೀ. ೭-೧೪) ; ಪಡಿಹಾಱರ್ಕೈತಂದು ತಡೆಯದಾ ವೀರಸಂಗಯ್ಯನ ಪದಕೆ ನಮಿಸಿ (ಪ್ರೌಢರಾ. ೧೩-೨೩). **ಪಳಿಯಱ:** ೧. ಕುಳಿರ್ವೆಟ್ಟು ಮುನ್ನೀರ್ಗಟ್ಟಿಯ ನಡುವಣ ಇಳೆಯಾಣ್ಮರು ಬೇಗದಿಂದ ತಳರ್ದರೋಲಗಕೆ ಗಾಜಿನ ಬಾಗಿಲ ಬಲು ಪಳಿಯಱರನು ಮತಿಯಿಂದ (ಕುರಾಸಾಂ. ೧೮-೩೦). **ಪಱಿಯಱ :** ೧. "ಪಱಿಯಱಂ[ಪಾಠಾಂ. ಪಡಿಯಱಂ]ಪಡಿಯಱಂ" (ಸಂಜೀವ.೨೧). **ಹಡಿಯರ:** ೧. ಹಲರ ಬೆಸದಿಂದ ಹಡಿಯರ× ×ರಾಹುತ ಹೋಹಲ್ಲಿ ಮಾಡಿದ ವೀರತ್ವ (ಎಕ. VII, ಶಿವಮೊ. ೫೦-೧ ; ?) **ಹಡಿಯಱ :** ೧. ಶ್ರೀವಿಷ್ಣುವರ್ಧನದೇವರ ಹಿರಿಯ ಹಡಿಯಱ ರೇವಿಮಯ್ಯಂಗಳು (ಎಕ. VI, ಕಡೂರು. ೯೯-೩೬ ; 1143) ; ವೀರಬಲ್ಲಾಳರಾಯನ ಹಿರಿಯ ಹಡಿಯಱ× × ×ಮಾರಯಂ ತಂನ ತಮ್ಮಂ . . . ಮಹಾಪಸಾಯ್ತ ಬಲ್ಲಾಳದೇವನ ಪಾದಾರಾಧಕನಪ್ಪ ಪಡಿಯಱ ಚಿಕ್ಕತ× × × (ಎಕ. VII, ಶಿವಮೊ. ೮೮-೩೩ ; 1203). **ಹಡಿಯಾಱ :** ೧. ಆ ಹಡಿಯಾಱ ರೇವಿಮಯ್ಯನ ಕೆಱೆಯ ಹಿಂದೆ . . . ಬಿಟ್ಟ ಬೆದ್ದಲೆ ಮತ್ತರು ಒಂದು (ಎಕ. VI, ಕಡೂರು. ೯೯-೪೧; 1143). **ಹಡಿಹಾಱ:** ೧. ಇವರೆಲ್ಲರಂ ಆ ಮಂಚೇಶ್ವರದೇವರ ಸ್ಥಾನಿಕರಾಗಿ ಕಾಲಂ ಕರ್ಚಿ ಧಾರಾಪೂರ್ವಕಂ ಮಾಡಿ ಹಡಿಹಾಱ ಲಲಾಲದೇವನ ತಂಮ (ಎಕ. XII, ತಿಪಟೂ. ೧೨-೪೭ ; 1285).

[<ಪ್ರಾ. ಪಡಿಹಾರ./ಸಂ. ಪ್ರತೀಹಾರ]

**ಪಡಿಯಱಗಟ್ಟಿಗೆ** (ನಾ). ದ್ವಾರಪಾಲಕನ (ಕೈಯಲ್ಲಿರುವ) ಕೋಲು, —ದಂಡ : ಎಡಱದರನಟ್ಟಿ ಮೋದುವ ಪಡಿಯಱಗಟ್ಟಿಗೆಗಳ್ (ಶಮದ. ೮ ಪ್ರಯೋ). [ಪಡಿಯಱ+ ಕಟ್ಟಿಗೆ$_1$]

**ಪಡಿಯಱತಿ,** ಪಡಿಯರತಿ, ಪಡಿಯಱ್ತಿ (ನಾ). ಬಾಗಿಲು ಕಾಯುವವಳು ; ದ್ವಾರಪಾಲಕಿ : ಚಂಡಾಲಕನ್ಯೆಯನೊಡಗೊಂಡು ಬಾಯೆಂದು ಮುಂದಿರ್ದ ಪಡಿಯಱತಿಗೆ ಬೆಸಸುವುದುಂ (ಕಾದಂಉ.೭೬೦); ಕಡುಚೆಲ್ವಿನ ಮಂಡಪಂ ನಡೆನೋಡಲ್ ಬಂದು ಬಾಗಿಲೊಳ್ ಪುತ್ತಱಯಂ ಪಡಿಯಱತಿಯರೆಂದರೆಬರ್ ನುಡಿಯಿಸೆ ನುಡಿಯದೊಡೆ ನಾಣ್ಚಿ ನೆಲನಂ ನೋಟ್ಟಿರ್ (ಅನಂಪು. ೬-೪೨) ; ಮಾಣಿಕಗಂಡ ಬಡನಡುವಿನ ಭಾಮಿನಿ ತಳಿರ್ಗೈಯೊಳ್ ಪಿಡಿದಪರಂಜಿಯ ಸೆಳೆಯುಲರ್ವಿಲ್ಲನ ಪಡಿಯಱತಿಯ ಕೈಯೊಳಗೊಪ್ಪುವ ಸೆಳೆಯಂತೆ ವಿರಾಜಿಸಿತು (ಜಯಕಾ. ೨-೪೭) ; ಪಡಿಯೆಡೆಯ ಪಡಿಯಱತಿಯರ್ . . . ಕೆಯ್ಯ ಕಂಬಿಯೊಳ್—ಮಾಣ್ ಮಾಣೆಮೆಂದು ಗದಱಲೊಡಂ (ರಾಮಾಶ್ವ. ೧೨೧-೧೭). **ಪಡಿಯರತಿ :** ಪಡಿಯರತಿಯೊಲೆದೆಬಾಗಿಲ ಬಳಿ ನಿಂದಿರೆ ಸಿರಿಯು ತನುಮನ ನಡೆಸಲು ಸರಸತಿಯು (ಗಣೇಶ. ೫೬-೧೮) ; ಆವನ ಆಜ್ಞೆಯಂತೆ ಪಡಿಯರತಿಯು ಆ ಚಂಡಾಲಕನ್ಯೆಯನ್ನು ಮತ್ತೊಮ್ಮೆ ಕರೆತಂದು ಶೂದ್ರಕರಾಜನ ಮುಂದೆ ನಿಲ್ಲಿಸಲು (ನಾಗಕಾ. ೮೭) ; ಇಟ್ಟೆಯ ಪಡಿಯರತಿಯೊಬ್ಬಳು ತಲೆವಾಗಿ ಅಣತಿಯನ್ನು ಬೇಡಿದಳು (ಸವತಿ.೭). **ಪಡಿಯಱ್ತಿ :** ಒರ್ವಳ್ ಕನ್ನೆ ಚಂಡಾಲೆ ದರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ ಬಾಗಿಲೊಳ್ ಎಂದು ಪಡಿಯಱ್ತಿ ಬಿನ್ನವಿಸೆ (ಕಾದಂಪೂ. ೨೫) ; ಅಸಿಯ ಸೆಳೆ ತಳದೊಳತಿರಂಜಿಸೆ ಪುರ್ವವ್ವಳಿಸೆ ಪತ್ತೆ ಸಾರ್ವವರಂ ತರ್ಜಿಸಿ ಕಾಮನ ಪಡಿಯಱ್[ಪಾಠಾಂ. ಱ]ತಿವೊಲೆಸೆದಳ್ ಪೊಸದೇಸೆಕಾರ್ತಿ ಪೊಸಕಿಟ್ಟಳದೊಳ್ (ಅರ್ಧನೇ.೨-೧೬) ; ಅನ್ತೆನಿಸಿ ನೆಗಳ್ದ ಪಡಿಯಱ ಸಾವನ್ತ ಮಾರತಮ್ಮಲವಧು . . . ಪಡಿಯಱ್ತಿ ಚೀತಿಯಕ್ಕಂ ಮೆಱೆವಳ್ (ಮೈಆರ್. ೧೯೩೭,೨೬-೩೨ ; 1196). [ಪಡಿಯಱ+ -ತಿ$_1$(<-ಇತ್ತಿ)]

**ಪಡಿಯಱವಕ್ಕಿ,** ಪಡಿಯರವಕ್ಕಿ (ನಾ). ಕೋಗಿಲೆ ; ಪಿಕ; ℙ ವನದಲ್ಲಿ ಕೋಗಿಲೆಯು ಪಡಿಯಱನ(= ದ್ವಾರಪಾಲಕನ)ಕೆಲಸವನ್ನು ನಿರ್ವಹಿಸುತ್ತದೆ ಎಂಬುದು ಕವಿಸಮಯ : "ಪಡಿಯಱವಕ್ಕಿಯೆನಲ್ಕೆ ಕೋಕಿಲನಕ್ಕುಂ" (ರನ್ನಕಂ. ೯) ; "ಪಡಿಯಱವಕ್ಕಿ, ಪೋರ್ಕುಱವಕ್ಕಿ, ಕೆಂಗಣ್ಣಲರ್ವಕ್ಕಿ, ಸುಗ್ಗಿವಕ್ಕಿ, ಪರಪುಟ್ಟಂ—ಈ ೫ ಪಿಕಂ"(ಕಶಸಾ. ೫೫-೨೦೫) ; ವನಕೇಳಿಗುಜ್ಜುಗಂಗೆಯ್ದು ಪಡಿಯಱವಕ್ಕಿಯಂ ಕರೆದು ಸಖೀಜನಮಂ ಸಾಱ ಕರೆಯಿಮೆಂಬುದುಂ (ಲೀಲಾವ. ೧೩-೫೨ ವ) ; ಪೊಡೆಯಲರಣುಗನ ನಾಟಕಗೃಹದೊಳ್ ಪಡಿಯಱವಕ್ಕಿಯುಲುಹಿನುಗ್ಗಡಣೆಗೆ ಗಡಣದೆ ಕುಲಿಶ ಪಿನದ್ಧ ಮುರಜಮಂ ನುಡಿಸುವ ತೆಱನಾಯ್ತು (ಜಯಕಾ. ೧೧-೭) ; ಬಂದ ಸೀಮಾವಿನಳ್ಳೆಗೊಂಬಿನೊಳಿರ್ದು ಕಣ್ಮುಗಿದು ಕೊನರ ಕನಸ್ರ್ಗೋನೆಯಂ ಚಂಚೂಪುಟದಿನಡಿಗಡಿಗೆ ಮೇದೊಲ್ದು ಪುಯಲ್ವುವ ಪಡಿಯಱವಕ್ಕಿಗಳ ತಂಡದಿಂ . . . ಬನಂ ಮನಂಗೊಂಡುದು (ರಾಮಾಶ್ವ. ೫೪-೧೦). **ಪಡಿಯರವಕ್ಕಿ :** "ಕೋಗಿಲೆ ಪೆಸರು ಪರಪುಟ್ಟವೆಂದು ಪಡಿಯರವಕ್ಕಿಯೆಂದಪ್ಪುದು" (ಕಶರ. ೬೨) ; ಮಾವಿನ ಮರವು ವಸಂತರಾಜನಿಗೆ ತೇರು ಎನಿಸಿತು. ಕೋಗಿಲೆಯು ಆತನಿಗೆ ಪ್ರತಿಹಾರಿಯಾಗಿ 'ಪಡಿಯರವಕ್ಕಿ' ಎನಿಸಿಕೊಂಡಿತು (ಕಥಕ. ೨೯).

[ಪಡಿಯಱ+ಪಕ್ಕಿ]

**ಪಡಿಯಱವೆಣ್** (ನಾ). = ಪಡಿಯಱತಿ : ಅರಸನುಮರಸಿಯುಮಿಪರಿ ಸರಸಂ ಮಿಗೆ ಪೋದ ಪೊಟ್ತನಱಯದೆ ಕಳೆಯುತ್ತಿರೆ ಪಡಿಯಱವೆಣ್ಣೊರ್ವಳ್ ಭರದಿಂ ಬಂದೊಸಗೆಯೊಸಗೆಯೆಂದುಸಿರ್ವಿನೆಗಂ (ಚಕವಿ. ೪-೧೬) ; ಪಡಿಯಱವೆಣ್ಣೊರ್ವಳ್ ಸಡಗರದೊಳ್ ಬಂದು ತನ್ನ ಕೆಯ್ಯ ಪೊಂಬೆತ್ತದಿಂ ನೆಲಗಟ್ಟಿನ ಪಳಿಕಿನಱೆಯನೊಯ್ಯನೆ ಪೊಯ್ದು (ಚಕವಂ. ೧೪೬-೧೦). [ಪಡಿಯಱ + ಪೆಣ್]

**ಪಡಿಯಱವೆಸ** (ನಾ). ಬಾಗಿಲನ್ನು ಕಾಯುವ ಕೆಲಸ ; ದ್ವಾರಪಾಲಕ ವೃತ್ತಿ : ನಿಱಿಸಿದ ವಿಚಿತ್ರವೇತ್ರದ ತುಱುಗಲ್ ಪೊಸಲತೆಯ ಬೀಟಲಂ ಪೋಲ್ತಿರೆ ಕಣ್ಣಱದು ಮಹಾದೇವಿಗೆ ಪಡಿಯಱವೆಸನಂ ಕೆಲಬರಮರಿಯರ್ ಕೈಕೊಂಡರ್ (ಶಾಂತಿಪು ೯-೧೯೨) ; ನಿಯತಂ ಪಡಿಯಱವೆ[ಪಾಠಾಂ. ಬೆ]ಸನಾದಿಯಾಗೆ ಬೆಸನೆನಿತನಿತ್ತುಮಂ ಸಲೆ ಸುರಕಾಂತೆಯರೆ ತನಗೆಸಪರೆನೆ ತತ್ಪ್ರಿಯಕಾರಿಣಿಯಂತೆ ಕಾಂತೆಯನೆರ್ಗೋಂತವರಾರ್(ಪರ್ಧಪು. ೧೩-೫೪); ಬಿರಯಿಗಳ ಮೆಯ್ ಸುಯ್ಯ ಬೆಂಕೆ ಸೋಂಕೆ ಕಱೆಗಂದಿದಂತೆ ಕಪ್ಪುವಿಡಿದಂಗಮೆಸೆಯೆ ಕುಸುಮಶರಸಖನ ಪಡಿಯಱವೆಸಕೆ ಪಕ್ಕಾಗಿ ಪುಗಲ್ ಪುಗಲೆಂದು ಬಂಡಳಿಸಿ ತೊಂಡುಗೆಡೆವ ಗಂಡುಗೋಗಿಲೆಗಳುಂ (ಪುಷ್ಪಪು. ೨-೩೯ ವ). [ಪಡಿಯಱ + ಬೆಸ$_1$]

**ಪಡಿಯಱವೆಸಗೆಯ್** (ಕ್ರಿ). ಬಾಗಿಲುಕಾಯುವ ಕೆಲಸವನ್ನು ಮಾಡು; ದ್ವಾರಪಾಲಕ ವೃತ್ತಿಯನ್ನು ನಡೆಸು: ರಮಣಿಗೆ ಪಡಿಯಱವೆಸಗೆಯ್ವಮರಿಯರ ವಿಚಿತ್ರವೇತ್ರದಂಡಂಗಳವೇನಮರ್ದುವೊ ಮದನ

ಜಯಶ್ರೀರಮಣಿಯ ಕೆಳದಿಯರ ಕೆಯ್ಯ ಕರ್ಕಡೆಗಳವೋಲ್ (ಪುಷ್ಪ ಪು. ೯-೭೦). [ಪಡಿಯಱವೆಸ+ಕೆಯ್$_1$]

**ಪಡಿಯಱು** (ಕ್ರಿ). ರೀತಿಯನ್ನು ಅರಿ; ಕ್ರಮವನ್ನು ತಿಳಿ: ಎಡವಕ್ಕದ ಬಲವಕ್ಕದ ಪಡಿಯಱು ಪಡೆಯಱದು ನಡೆಯೆಪಿಂದ್ರನ ಪಲರುಂ ಪಡೆವಳರ ಜಡಿದು ನಡೆಯಿಪ ಪಡಿಯಱರುಲಿ ಗೆಲಿದುದುಲಿವ ಜಲನಿಧಿಯುಲಿಯಂ (ಪುಷ್ಪಪು. ೧೦-೪೦). [ಪಡಿ$_1$ + ಅಱು]

**ಪಡಿಯಱಿಕೆ, ಪಡಿಹಾಱಿಕೆ** (ನಾ). = ಪಡಿಯಱವೆಸ: ಪಡಿಯಱಿಕೆಯ ಸೀಗುರಿವಿಡಿವಡಪದ ಕನ್ನಡಿಯ ಪಡಿಗದಾಕೆಗಳೆಲ್ಲಂ ವಿಡುಕಲಣ ಮಱಿಯದಿರ್ದೆಡೆಯೊಳ್ ಬೆಜಗಾಗಿ ಮೂಗರಂದದಿನಿರ್ದರ್ (ಕಾದಂಪೂ. ೩.೯೯); ಮಲ್ಲಿಕಾರ್ಜುನದೇವರ ಭೂಮಿಯೊಳಗೆ ತಪ್ಪದ ಚಂಡೆಯ ನಾಯಕಂಗೆ ದೇವರ್ಗ್ಗೆ ಬೆಸೆಕೆಯ್ವುಪ್ಪ ಪಡಿಯ[ಱ]ಕೆಯ ಕೆಯಿಮತ್ತರು (ಕಇಅ. ೭೭-೧೨-೭೫; 1170); ಪಡಿಯಱಿಕೆಯ ಸುರವಧೂಟಿ ಕಟ್ಟಿಗೆವಿಡಿದಳ್ (ಅನಂಪು. ೪-೮೧). **ಪಡಿಹಾಱಿಕೆ**: ವೈರೋಚನಿಯ ಪಡಿಹಾಱಿಕೆ ಕಿರೀಟಿಯ ಮನೆಯ ಬಂಡಿಯ ಬೋವನಾದನು ವೀರನಾರಯಣ (ಕುಸ್ಕಾವ್ಯ. ೧-೪೫). [ಪಡಿಯಱ+-ಇಕೆ]

**ಪಡಿಯಱಿತಿ** 'ಪಡಿಯಱಿತಿ' ನೋ.

**ಪಡಿಯಾಳು$_1$** (ನಾ). ಧಾನ್ಯವನ್ನು ಕೂಲಿಯಾಗಿ ಪಡೆದು ಬದುಕುವ ಆಳು; "ಜೀತದ ಆಳು" (ಜಾನಕೋ. ೧೩).
[ಪಡಿ$_1$+ಆಳು$_3$(<ಆಳ್$_3$)./ತಮಿ. ಪಟಿಯಾಳ್]

**ಪಡಿಯಾಳು$_2$** (ನಾ). ಹೆಚ್ಚಿನ ಆಳು; ಸಹಾಯಕ್ಕೆ ಇರುವ ಸೇವಕ: ಕೇಳು ಗಂಡರ ಸೂರ್ಯ ಬಿಜ್ಜಣನಾಳು ಕುದುರೆಯ ವೋಹರಕೆ ಪಡಿಯಾಳ ನಿನ್ನಲಿ ಬೇಡೆನೊಂದಾಶ್ಚರ್ಯವನು ನೋಡ (ಕೊಲ್ಲಾ.ಚ. ೨೬೨). [ಪಡಿ$_3$ + ಆಳು$_3$(<ಆಳ್$_3$)]

**ಪಡಿಯಾಱ** 'ಪಡಿಯಱ' ನೋ.

**ಪಡಿಯಿಡು** (ಕ್ರಿ). ೧. ಸಮವಾಗು; ಸಾಟಿಯಾಗು: ಪಡಿಯಿಡೆ ನಿಮ್ಮನೆಮ್ಮವಯವಂಗಳನೇಡಿಸಿ ಕಾಡುತಿರ್ದುದಂ ಕಡುದಿಟಮೆಂದು ನೋಯದೊಡನಾಡಿದ ನಣ್ಪಿನೆ ನೋಟ್ಪುದೆಂಬಿನಂ ನುಡಿದನುನೈಸಿದರ್ ಕುಸುಮಕೋಮಳೆಯರ್ . . . ಚಂಪಕಂಗಳಂ (ಪುಷ್ಪಪು. ೧೩-೧೦೦). ೨. ಸರಿಸಮಾನಗೊಳಿಸು; ಪ್ರತಿಯಾಗಿಸು: ನುಡಿಯಂ ಕೋಕಿಲರುತಿಯೊಳ್ ಪಡಿಯಿಡಲೊಡನುಯ್ವೆ ತನುಯ ಜನಕಾತ್ಮಜೆಯಂ(ಪಂರಾಮಾ. ೬-೧೩). ೩. ಹೋಲಿಸು; ತಾಳೆನೋಡು: ಕಡುಗುಣ್ಪು ಪಂಪಿನಿಂದೆಣೆಯಾದಡೇನು ಪಾಲ್ಗಡಲು ದಿವಿಜರ ಕಯ್ಯಿಂದ ಕಡೆಯಿಸಿಕೊಂಡುದಾ ನೃಪಗಾನದನೆಂತು ಪಡಿಯಿಡುವೆನು ಗುಣದಿಂದ (ಕುರಾಸಾಂ. ೫-೫೨); ಅವನೆಡದ ಕಾಯಕಾ ಬಲ್ಲದ ಕಡೆಯ ಕಾಯವೆಣೆಯಲ್ಲದಿಂ ಪಡಿಯಿಡುವ ವಸ್ತು ವಿನ್ನೀಯಬುಜಭವಕೋಟಿ ಸೃಷ್ಟಿಯೊಳಗಿಲ್ಲ (ಚಬಪು. ೧೯-೨೧). ೪. ವಿರೋಧಿಸು; ಪ್ರತಿಭಟಿಸು: ಪಡಿಯಿಟ್ಟುದೊಂದುನಿವಿಷದೊಳು ಗಾಂಧರ್ವದಳ ಮುಡಿದುದಂಬರದೊಳು ಹಾಳು ಕಂಡು ನಡುಗಿ ಗಂಧರ್ವ ನೊಪ್ಪಿಸಿದ (ಪಾಂಡಚ. ೧೮-೧೬). [ಪಡಿ$_3$+ಇಡು$_1$]

**ಪಡಿಯುತ್ತರ** (ನಾ). ಪ್ರತ್ಯುತ್ತರ; ಮಾರುತ್ತರ; ಮರುಜವಾಬು: ಕಪಿ ತಲೆಗುತ್ತಿ ದೇವರಿಗಿನ್ನು ತಾ ಪಡಿಯುತ್ತರಕೆ ಪಾಸಟಯೆ ಪತಿಕರಿಸೆಂದು ಕೈಮುಗಿದ (ತೊರರಾ. ೪-೨-೪೯). [ಪಡಿ$_3$ + ಉತ್ತರ]

**ಪಡಿಯೊರೆ$_1$** (ನಾ). ಪ್ರತಿಹೇಳಿಕೆ; ಬದಲುನುಡಿ; ಪ್ರತ್ಯುತ್ತರ: ಆಗಳಾಸುರುಳ್ವ ಬಾಂಗಿಟ್ಟಿನೀ ಮೊರೆಯಂ—'ಏ ಸೊಡರನೆತ್ತಿ ವಿಧಿ ಬಳಿವಿಡಿಸಿತರಿಯೆಂ ಕತ್ತಲೆಯೊಳೆಡಹುತಿಹ ತನ್ನ ಹಸುಳೆಗಳಂ ?'-'ಅಂಧಮತಿ' ಎಂದು ಕೇಳಿಸಿತು ಪಡಿಯೊರೆಯಿಂ (ಗೀವಿಂ. ೧೨೦-೨೪). [ಪಡಿ$_3$ + ಒರೆ$_4$]

**ಪಡಿಯೊರೆ$_2$** (ನಾ). ಪ್ರತಿಯಾದ ಹೋಲಿಕೆ; ಸರಿಸಮ; ಸರಿಸಾಟಿ: ಮರುಳಲಾ ಪವಮಾನಸುತ ನಿನ್ನೊರೆಗೆ ಪಡಿಯೊರೆ[ಪಾಠಾಂ. ಒರೆಸರಿ]ತೂಕ ತೂಕಕೆ ಸರಿಸರಾವಿರೆ ಕನಕಗಿರಿಪರಿಯಂತ ಮಾತೇಕೆ (ಕುಪ್ಕಾವ್ಯ. ೧೦-೩೭). [ಪಡಿ$_3$+ಒರೆ$_7$]

**ಪಡಿರೂಪ** (ನಾ). ಪ್ರತಿರೂಪ; ಪ್ರತಿಕೃತಿ: ಮನಸಿಜನ ಪಡಿರೂಪ ನಿನ್ನಯ ಮನಕೆ ಬಂದ ಚಲುವನ (ಕರಿಕ. ೨೪-೧); ರಾಮನ ಮತ್ತು ಅವನ ಪರಿವಾರದವರ ಪಡಿರೂಪಗಳು ಸೃಷ್ಟಿಯಾದವು (ನಂಜುಂಡ. ೪೯). [ಪಡಿ$_3$ + ರೂಪ]

**ಪಡಿರೂಪು** (ನಾ). = ಪಡಿರೂಪ: ಭೂಚಕ್ರಾಧೀಶ್ವರನಂದನರೊಳಗೀ ಚಿತ್ರದ ಪಡಿರೂಪಂ ಧರಿಯಿಸಿದಾ ಚೆನ್ನಿಗನಲ್ಲದೆಯುಳಿದವರೆನ್ನಯ ಸೋದರರು (ಜಯಕಾ. ೩-೭೫); ಅವರನಾ ಮನೆಯೊಳಿರಿಸಿ ಮಂತ್ರಿಯೆಡೆಗಾ ದಿವಿಜನೆಯ್ತಂದು ಮತ್ತವರ ಹವಣಿನ ಪಡಿರೂಪ ತೋಱಿಸಲಾ ಮಂತ್ರಿತವೆ ನಲಿದನು ಮನದೊಳಗೆ (ಕುರಾಸಾಂ. ೩೬-೬೧).
[ಪಡಿ$_3$ + ರೂಪು]

**ಪಡಿಲಯ್ಯ** (ನಾ). ಒಬ್ಬಾತನ ಹೆಸರು: ಕೊಸಿಗಗೆಱೆಯ ಬಡಗಣ ಕಡೆಗೋಡ ತೋಣ್ಣ ಇನಿತು ಮಣ್ಣ ಬಿಡಿಸಿದ ಪ್ರಭುಗಳಂಕನಾವು ಬೂವಗಾವುಣ್ಣ ಪಡಿಲಯ್ಯ ಪದುಮಯ್ಯ ತಯ××ನ ಈ ಮಣ್ಣಂ ಅವಗೊಣ್ಡೋನು ಅಱಿದೋನುಂ (ಎಕ. V, ಅರಕ. ೨೪-೧೬; ಸು. 900).
[ ? + ಅಯ್ಯ$_1$]

**ಪಡಿಲೇಖಿಸು**(ಕ್ರಿ). ೧. ಪ್ರತಿಬಿಂಬವನ್ನುಂಟುಮಾಡು: ಮೆಟ್ಟಿದೊಡಕ್ಕುಂ ತ್ರಸಸಂಘಟ್ಟನಮೆಂದೋವುವಂತೆ ಮೆಲ್ಮೆಲನನಘಂ ದಟ್ಟಿಡಿಯಿಡೆ ಪಡನಖುರುಚಿಕುಟ್ಟಿಮದೊಳ್ ನಿಮಿರ್ದುವೊಡನೆ ಪಡಿಲೇಖಿಪವೋಲ್ (ಪುಷ್ಪಪು. ೧೨-೬೭). ೨. ಚೆನ್ನಾಗಿ ಶುದ್ಧಿಗೊಳಿಸು: ಸಂಯಮಜ್ಞಾನೋಪಕರಣಾದಿಗಳಂ ಕೊಳ್ವಲ್ಲಿಯುಂ ಬೈತಿಡುವಲ್ಲಿಯುಂ ನೋಡಿ ಪಡಿಲೇಖಿಸಿ ನೆಗಟ್ವುದು ಆದಾನನಿಕ್ಷೇಪಣಸಮಿತಿ (ತತ್ತ್ವಪ್ರ. ೩.೨೫); ನೋಡದೆ ಪಡಿ[ಪಾಠಾಂ. ಪ್ರತಿ]ಲೇಖಿಸದೆ ತಂತಮ್ಮ ಪುಟ್ಟಿರ್ಪ ಸಂಸ್ತರಮನಿಕ್ಕುವ ಅಪ್ರತ್ಯವೇಕ್ಷಿತಾಪ್ರಮಾರ್ಜಿತಸಂಸ್ತರೋಪಕ್ರಮಣಮುಂ . . . ಪ್ರೋಷಧೋಪವಾಸದತಿಚಾರಮಕ್ಕುಂ (ಪಸಾರ.೩೧೬; ಶಾಸ್ತ್ರಟೀ. ೬೨-೬ ನೋ).
[<ಪ್ರತಿಲೇಖಿಸು]

**ಪಡಿವಂದ** 'ಪಡಿಬಂದ' ನೋ.

**ಪಡಿವಟ್ಟಿಗೆ** (ನಾ). ಬಾಗಿಲುವಾಡ; ದ್ವಾರಬಂಧ: ಹೊಸಹಳದಿಯ ಮಾಣಿಕದ ಸರಮುಜ್ಜ್ವಲವಜ್ರದ ಪಡಿವಟ್ಟಿಗೆ ಮರಕತರತ್ನದ ಕೇರ್ ವೈಡೂರ್ಯದ ವರಫಲಕಂ ರಚಿಯಿಸಲೊಪ್ಪಿದುದಲ್ಲಿಯ ಮಂಗಲಸದನಂ (ಜಯಕಾ. ೮-೩). 'ದ್ವಾರಪಟ್ಟ', 'ದ್ವಾರವಾಟಿಕೆ' ಪರಾ. [ಪಡಿ$_2$ + ಪಟ್ಟಿಗೆ]

**ಪಡಿವಡೆ$_1$** (ಕ್ರಿ). ೧. ಭತ್ತವನ್ನು ಪಡೆ,—ಹೊಂದು: ಬಂದಾ ಸೌಂದರ ತಿರುಪತ್ತೂರನಾಥನ ಮಂದಿರಕಧಿಕಸಂಭ್ರಮದಿಂದೆ ವಂದಿಸಿ ತಾಳವಿಡಿದು ಪಡಿವಡೆದನು ನಂದಿಯುಂಡಿಗೆಯುಳ್ಳ ಪಡಿವೊನ್ನ (ತ್ರಿಭುತಿ. ೨೦-೯). ೨. ಅಂಗೀಕರಿಸು; ಒಪ್ಪಿಕೊಳ್ಳು; ಸಮ್ಮತಿಸು: "ಪಡಿವಡೆವುದೆನಲಿಕಂಗೀಕರಿಪುದರ ಪೆಸರ್" (ಕಶರ. ೬೨). [ಪಡಿ$_1$ + ಪಡೆ$_1$]

**ಪಡಿವಡೆ$_2$** (ನಾ). ೧. ಹೆಚ್ಚಿನ ಸೈನ್ಯ; ಅಧಿಕಸೈನ್ಯ: ಪಡಿಗೋಂಟಿಗೆಯ್ದು ಕಡುಪಂ ಪಡಿಯಗಟ್ಟಿಗೆಯ್ದಳವನಾರ್ಪು ಕಡುಗೂರ್ಪುಗಳಂ ಪಡಿವಡೆಗೆಯ್ದಂದವರೊಳ್ ಪಡಿಬರಿಸಿದರಮನು ವಿಷ್ಣು ಜಿಷ್ಣುಗಳನ್ನರ್ (ಚಕವಿ. ೨-೪೫). ೨. ಪ್ರತಿಪಕ್ಷದ ಸೈನ್ಯ; ಶತ್ರುದಳ: ಅರಿಕೇಸರಿಯೆಂಬಂ ಸುಂದರಾಂಗನತ್ಯಂತವಸ್ತುವಂ ಮದಕರಿಯಂ ಹರಿಯಂ ಪಡಿವಡೆಗುರ್ಚಿದ ಕರವಾಳನೆ ತೋಱಿ ನೃಪತಿ ಗೆಲ್ಲಂಗೊಂಡಂ (ಪಂಪಭಾ.೧-೧೯).
[ಪಡಿ$_3$+ಪಡೆ$_2$]

**ಪಡಿವರ್** (ಕ್ರಿ). ಸದೃಶವಾಗು ; ಸರಿಸಮವಾಗು ; ಹೋಲು : ಮಾರಲದೇವಿಯುಂ ಮನಮುಬ್ಬುಗೆ ವಿಭು ಬಲ್ಲೆಯಂಗೆ ಸತಿ ಮಾಡಿದ ನೊಪ್ಪೆ ವಿಧಾತ್ರನೆನ್ನೊಡೀ ಜಗದೊಳಗಿಂತು ದಂಪತಿಗಳಾರ್ ಪಡಿ ವರ್ಪ್ಪರೆಂ ನೋರ್ಪ್ಪಡಿವರ್ಪ್ಪರೊಳ್(ಎಕ.XII,ಚಿಕ್ಕನಾ. ೧೬-೩೪; 1194). [ಪಡಿ₃ + ಬರ್ (<ವರ್)]

**ಪಡಿವರಿಜು** (ನಾ). ಪ್ರತಿರೂಪ ; ಪ್ರತಿಕೃತಿ : ಕಂಗೊಳಿಪಚ್ಚೋಇದ ಸರಸಿಗೆ ಜನನಿವೆರಸು ಮಜ್ಜನಕ್ಕೆಂದು ನಡೆತಂದು ನೋಟ್ಪಲ್ಲಿ ಶಿಖರಿರಾಜನಂದಿನಿ ಪೂಜಿಸಲೆಂದು ತಟಶಿಲಾತಲದೊಳ್ ಬರೆದ ಮೃಡನ ಪಡಿವರಿಜಂ ಕಂಡು (ಕಾದಂಪೂ. ೬೨೧) ; ಒರ್ವ ತರುಣಿ ವಸಂತೋತ್ಸವ ಸಮಯದಲ್ಲಿ ಪೂಜಿಸಲೋಸುಗಂ ಅಲರಂಬನ ಪಡಿವರಿಜಂ ಬರೆಯ ಲ್ಬೋಗೆಂದು ಸಖಿಗೆ ಪೇಳೆ (ನರಚ. ೫೬-೧೩೪ ವೃತ್ತಿ) ; ತಾಂ ಮೂವರುಂ ಮೈಯಟ್ಟಿಲೊಡಂ ಬಗೆಯಲ್ಪಾರದ ಪಡಿವರಿಜುಗಳೆನೆ ಒಂದಚ್ಚಿನೊಳಿಜಕಂಬೊಯ್ದ ಮೂಜುಂ ಪೊಂಬಾಪೆಯೆನೆ ಮೂವರು ಮೊಂದೆ ರೂಪಿನೊಳೋಗಿದು ಮರಲ್ದುಟಿಜದೆಡೆಗೆಯ್ತಂದರ್ (ರಾಮಾಶ್ವ. ೬೯-೯). [ಪಡಿ₃ + ಪರಿಜು]

**ಪಡಿವಳ** (ನಾ). ಬಾಗಿಲು ಕಾಯುವವನು ; ದ್ವಾರಪಾಲಕ ; ಪ್ರತೀಹಾರಿ : "ಪಡಿವಳನೆಂದು ಪ್ರತೀಹಾರಂ" (ಕಶಸಾ. ೬೧-೩೪೭) ; ಕಳುಹಿದಳು ಕೃಷ್ಣಾಂಘ್ರಿಸನ್ನಿಧಿಗೊಲಿದು ವಿಪ್ರೋತ್ತಮನನು. . . ತಿಳಿದು ಕಾರ್ಯವಿಶೇಷವನು ಪಡಿವಳರು ಹೊಗಿಸಲು ಬಂದು ಕಂಡನು ಲಲಿತಸಿಂಹಾಸನದಲೆಸೆವ ಮುಕುಂದನಂಘ್ರಿಗಳ (ಸಿಭಾಗ. ೧೦-೫೮-೨೬) ; ಮಿಂಡೆಟ್ಟಿ ಪಡೆವಳರೆಲ್ಲರುರವಣಿಸಿ ಮುಂಬರಿದೊಡ್ಡಿ ನಿಂದರಾಗೆ ಕಾದಿ ಮೋದಿ ತಾಂ ತಮಗೆ ಜವಹುರದ ಪಡಿವಳರಾದರ್ (ರಾಮಾಶ್ವ. ೧೪೩-೨೯). [ಪಡಿ₂ + -ವಳ]

**ಪಡಿವಳಕಟ್ಟಿಗೆ** 'ಪಡಿವಳಗಟ್ಟಿಗೆ' ನೋ.

**ಪಡಿವಳಗಟ್ಟಿಗೆ, ಪಡಿವಳಕಟ್ಟಿಗೆ** (ನಾ). = ಪಡಿಯಜಿಗಟ್ಟಿಗೆ : ಮುಂದೆ ಪರಿವ ಪಡೆವಳಗಟ್ಟ[ಪಡಿವಳಗಟ್ಟಿಗೆ]ಯ ಪೀಲಿಯ ಕರಗ ದುಪ್ಪರಗುಡಿಯೊಜ್ಜರದ ರಾಜಸಿಂಧದ ಸಂಪಣಿಯುಮೆಸೆಯೆ (ಚಂದ್ರಪ್ರ. ೭-೮೦ ವ) ; ಮುಂದೆ ಪರಿವ ಕೊಲ್ಲಣಿಗೆಯ ಭಲ್ಲೆಯದ ಪಡ[ಡಿ]ವಳ ಗಟ್ಟಿಗೆಯ ಬಿರುದಿನ ಸಿಂದದ ಸಂದಣಿಯ ಕೋಳಾಹಳದ ರಭಸಮೆಸೆಯೆ (ಬಾಧಪು. ೧೪-೫೨ ವ). **ಪಡಿವಳಕಟ್ಟಿಗೆ :** ಕಟಿಾಲೆ ಬಳೆದ ಪೆರ್ವಿದಿರ ಸುವರ್ಣ ಪಡೆ[ಡಿ]ವಳಕಟ್ಟಿಗೆಯೂಗೆಯುಂ ಕಿಸುಗಣ್ಣಿವಿಡೆ ಜಡಿಯುತ್ತಿಪ್ಪ ಗಂಡಗೋಗಿಲೆಗಳೆ ಮಹಾಪ್ರಾತಿಹಾರ್ಯರಾಗೆಯುಂ (ವರ್ಧಮಾ. ೫-೪೧ ವ). [ಪಡಿವಳ + ಕಟ್ಟಿಗೆ₁]

**ಪಡಿವಳತನ** (ನಾ). ಬಾಗಿಲು ಕಾಯುವ ಕೆಲಸ ; ದ್ವಾರಪಾಲಕ ವೃತ್ತಿ: ಹೊಗುತ ಕಂಡನು ಬಾಗಿಲಲಿ . . . ಮಕರಕುಂಡಲದ ಜಗದ ಪತಿ ಪಡಿವಳತನದ ಲೀಲೆಗೆ ಸಮಾಹಿತನಾಗಿ ಕಂಬಿಯ ಹೆಗಲಲಿರಲೋರಂತೆ ಬಲು ಬೆಜಗಾಗಿ ನೋಡಿದನು (ಸಿಭಾಗ. ೮-೨೦-೩೨). [ಪಡಿವಳ + -ತನ]

**ಪಡಿವಾಘೆ** (ನಾ). ಕುದುರೆಯ ಮುಖಕ್ಕೆ ಕಟ್ಟುವ ಚರ್ಮದ ಪಟ್ಟಿ,—ಮುಖವಾಡ : ಸೆಳೆದು ಪಡಿವಾಘೆಯಲಿ ತುರಗಾವಳಿಯ ನನುಕೊಳಿಸಿದನು ಹರಿ ಕೈಚಳಕದಲಿ ತುಡುಕಿದನು ಫಲುಗುಣನತುಳ ಗಾಂಡಿವವ (ಕುಪ್ಯಾದ್ರೋ. ೧೦-೩೦) ; ನೆಲಕಿಳಿದು ಪಡಿವಾಘೆಯಂ ಪಿಡಿ ದರಸುಮಕ್ಕಳಂ ಬೀಳೆ ಹೊಯ್ದು ತತ್ತುರಗಮಂ ಕೊಂಡು ಜಿಗಿದ ನಾಗಸಕೆ ಸರದತ್ತಣಿಂದಂಚೆ ಬೆಳ್ದಾವರೆಯೆನಲ್ತಿಯಿಂ ಕಿತ್ತು ನಭಕೇಳ್ವಂತೆ ಮೇಘನಾದಂ ಭೀಮಕರ್ಣಜರ್ಜಿಜಗಾಗಲು (ಜೈಮಿಭಾ. ೪-೧೨). [ಪಡಿ₃ + ವಾಘೆ]

**ಪಡಿವಾತು, ಪಡಿಮಾತು** (ನಾ). ೧. ಪ್ರತಿಯಾದ ಮಾತು : ಬೇರೆ ಮಾತು ; ವಿರುದ್ಧವಚನ : ದಿಕ್ಪಾಲಕಶ್ರೇಣಿ ಸೀಂ ನೆರವಾಗೇಂ ಪಡಿವಾತೆಲೇ ರವಿಯಲೇ ಮಾದೇವಲೇ ಬೊಮ್ಮ ಕೇಳ್ದಿರೆ . . . ಎಂದು ಸಾಜುವವೊಲಾಯ್ತಾ ಪಾಂಚಜನ್ಯಸ್ವನಂ (ಜಗವ. ೧೩-೪೯) : ಬಡತನ ಮೆಂಬುದು ನಡುವಿನೊಳೆಡೆಗಿಜುವುದು ಬಿಗಿದ ಮೊಲೆಯೊಳತಿಕುಟಿಲತ್ವಂ ಮಡದಿಯರ ಕುರುಳೊಳಲ್ಲದೆ ಪಡಿವಾತೇಂ ಜನರ ದೆಸೆಯೊಳಿಲ್ಲಾ ನಾಡೊಳ್ (ಸೂಕ್ತಿಸು. ೪-೨೦). **ಪಡಿಮಾತು : ೧.** ಆ ಪದಕಂ ಬಂದೊಡೆ ಕೇಳೀಪೊತ್ತುಂ ಕೊಡಲೆವೇಟ್ಟುಮಟಾದೊಡೆ ನಿನ್ನಂ ಭೂಪತಿ ಕೊಲ್ಗುಂ ಕವರುಗುಮೇ ಪಡಿಮಾತದಜ ಪಂಬಲಂ ಬಿಡು ನಯದಿಂ (ಧರ್ಮಾಮೃ. ೨-೧೧೯) ; ಕುಡುವೆಡೆಯೊಳ್ ಸಂಪದಮಂ ಬಡತನಮಂ ಕುಲಮನಾದಿಯೊಳೆ ತಿಳಿದೊಲವಿಂ ಕುಡುವುದು ಕೊಟ್ಟ ಬಟಿಕ್ಕಂ ಪಡಿಮಾತಾಡುವುದು ನೀತಿಧರ್ಮವಿರೋಧಂ (ದಶಕು. ೮-೧೧೦) ; ಈತಂ ನರನಕ್ಕುಮೊ ಪಡಿಮಾತೇಂ ಮಗುಳ್ದಾನ್ ಶಬರನಪ್ಪೆನೊ (ಶಬಶಂ. ೪-೯೭); ಕಾರ್ಯಂ ಗೆಲುಂಬಡಿಯಲ್ಕೆಂದಘನಾಶನೀ ಸರಸಿಯುಂ ಮೇಣ್ಚಂದ್ರ ಮೌಳೀಶನಂ ಪಡಿಮಾತೇಂ ಭಜಕರ್ಗೆ ಮುಕ್ತಿಪದಮಂ ತೋರಲ್ಕದಂಗೈದಪಂ (ಎಕ. XVI, ಗುಬ್ಬಿ. ೬೨-೧೦ ; 1896). **೨.** ಬದಲುಮಾತು ; ಪ್ರತ್ಯುತ್ತರ : ದಡದಡಿಪಡಿ ಪಡಿಮಾತಂ ಪಡೆಯಲೊಡರ್ಚುವ ಮನಂ ತಡಂಬಡಿಪ ತಳರ್ನುಡಿ . . . ಇರೆ ನುಡಿದನಾಗಳಾ ಚರಮುಖ್ಯಂ (ರಾಜಶೇ. ೬-೩೩); ಬಾಲೆ ಪತಿಗೃಹಕೆ ಪೋಪುದ ಪೇಳಲ್ ವನವಾಸಬಂಧುವೀ ತರುವೃಂದಂ ಕೇಳುತನುಮತಿಸಿ ಕಲಕಂಠಾಲಾಪದ ನೆವದೆ ನುಡಿವುದಿದೊ ಪಡಿಮಾತಂ (ಶಾಕುಂತ. ೫೩-೮೮). [ಪಡಿ₃ + ಮಾತು₁]

**ಪಡಿವಾವಿ** (ನಾ). ಸಮಾನವಾದ ನಂಟು,—ಬಂಧುತ್ವ : ತಂಗಿಯ ಳಿದರ ತಂಗಿ, ಬಂಧುಗಳನು ಮರುಂಗಿ ಶೂನ್ಯಮಾದೆಡೆಯ ಪಡಿವಾವಿ ಕವಿತೆಯದೊಂದೆ ! (ಗಳಿವಿಂ. ೨೩-೩). [ಪಡಿ₂ + ವಾವಿ₂]

**ಪಡಿವಿಡಿ** (ಕ್ರಿ). ಅನುಸರಿಸು ; ಹಿಂಬಾಲಿಸು ; ಅನುಸರಣೆ ಮಾಡು : ಸಂಗ್ರಹಿಸಿತೆನ್ನಯ ಪುಣ್ಯಫಲದಿಂದದನೆ ಪಡಿವಿಡಿದುಮಹಿತ ನಿನ್ನಯ ಚರಣದರ್ಶನವಹುದಿದೆನ್ನಯ ಸುಕೃತಫಲದಿಂದುದಿಸಿದರೆ ಫಲ ವೇನು ತನಗೆ (ಕುವ್ಯಾಸ. ೬೨೮. ೭-೧೫) ; ಎಡೆವಿಡದಿನಿಯನಡಿಯ ನೆಳ ಲನು ಪಡಿವಿಡಿವ ಮಡದಿಯ ಮನ್ನಿಪುದು (ಹಪಿಬ. ೬-೪೫). [ಪಡಿ₃ + ಪಿಡಿ₁]

**ಪಡಿವೆದೆ** (ನಾ). ಬೇರೆ ಹೆದೆ ; ಮತ್ತೊಂದು ಬಿಲ್ಲಿನ ಹಗ್ಗ (?) : ಬಿಲ್ಲಂಬು ಬಿಗಿದ ಕೈಪೊಡೆ ಪಡಿವೆದೆಯುಡಿರ್ಚುಲ್ಲಿ ಬತ್ತಳಿಕೆ ಕಯ್ಯಂಬು ನಿಲ್ಲದೆಸೆಯೆ ಪೊಜಮಟ್ಟರು ರಾಯನ ಬಿಲ್ಲವರಂದು ಬಿಂಕದೊಳು (ಕುಠಾಸಾಂ. ೧೯-೧೯) ; ಉಡಿರ್ಚುಲ್ಲಿ ಕಟ್ಟಿದ ಸುರಗಿ ಕೈಪೊಡೆ ಪೊಂದೊ ಡಹದಂಬಿನ ಬತ್ತಳಿಕೆ ಪ[ಪಾಠಾಂ. ಪಿ]ಡಿವೆದೆ ಪಿಡಿದ ಬಿಲ್ಲೆಸೆಯೆ ಬಿಲ್ಲನರಲ್ಲಿ ಬಿಡದೆ ಮೆಚಿದರೊಗ್ಗಿನಲಿ (ಕುಠಾಸಾಂ. ೨೭-೨೭). [ಪಡಿ₃ + ಪೆದೆ]

**ಪಡಿವೆಸ** (ನಾ). ಸೇವೆಯ ಕೆಲಸ ; ಸೇವಾಕಾರ್ಯ ; ಪರಿಚಾರಿಕೆ: ಸುಪ್ರಣೀತೆಯುಂ ಯಶೋಧರೆಯುಂ . . . ಚಿತ್ರೆಯುಮೆಂಬೀ ದೇವರ ನಂಬಿಕೆಯ ಸೀಗುರಿಯ ಸಿರಿಮುಡಿಯ . . . ಅಡಿಯೂಟದ ಪಡಿವೆಸಕ್ಕೆ ಬೆಸಸಿದಂ (ಅನಂಪು. ೪-೭೭ ವ). [ಪಡಿ? + ಬೆಸ₁]

**ಪಡಿವೇಡು** (ಕ್ರಿ). ಧಾನ್ಯವನ್ನು ಬೇಡು,—ಯಾಚಿಸು ; ಭಿಕ್ಷೆ ಬೇಡು : ಧರಣಿಯೊಳು ಗುಡ್ಡವ್ವೆಯೆಂಬ ವಿಶ್ರುತಭಕ್ತೆ . . . ನಾವಿಟಕಿ ಯೆಂಬಾ ಪೊಳಲ್ಗೆಯ್ದಿ ಪಡಿವೇಡುತಿರಲು (ಆರಾಚ. ೧-೯-೧೨). [ಪಡಿ₁ + ಬೇಡು₁]

**ಪಡಿವೊತ್ತಿಸು** (ಕ್ರಿ). ಪ್ರತಿಯಾಗಿ ಹೊತ್ತಿಸು ; ಎದುರಾಗಿ ಉರಿಸು : ದವಾಗ್ನಿಗಿದಿರಗ್ನಿಯಂ ಪಡಿವೊತ್ತಿಸಲ್ ಮನಂದಂದು ನಡೆ

ವುದು ಪಳ್ಳಿ ಕೈಗೊಳ್ಳಿಗಳನಾಂತು ಕರಡವುಲ್ ಬೆಳೆದೋಣಗಿ ನಿಂದ ತುರು ಮೇವು ವಿಾಸಲ ಸಿರಿಯು ತಪ್ಪಲಿಗೆ (ಶ್ರೀರಾಮಾ. ೭೧೩-೧೧೧೧).

[ಪಡಿ$_3$+ಪೊತ್ತಿಸು]

**ಪಡಿವೊನ್,** ಪಡಿಹೊನ್ನು (ನಾ). ದಿನದಿನದ ಭತ್ಯವಾಗಿ ಪಡೆಯುವ ಹೊನ್ನು,—ಹಣ : ನಲವಿಂದೆ ಪಾಡುತುಂ ಪಡಿವೊಂಗಳಂ ಕೊಳುತುಂ ಶಿವನ ಸೆಜ್ಜೆಯಂತಿರ್ದ ತಿರುವಾರೂರ್ಗೆ ನಡೆತಪ್ಪಾಗಳು (ನಂಬಿರ. ೮-೭೪) ; ಬಂದಾ ಸೌಂದರ ತಿರುಪತ್ತೂರನಾಥನ ಮಂದಿರಕಧಿಕ ಸಂಭ್ರಮದಿಂದೆ ವಂದಿಸಿ ತಾಳವಿಡಿದು ಪಡಿವಡೆದನು ನಂದಿಯುಂಡಿಗೆಯುಳ್ಳ ಪಡಿವೊನ್ನ (ತ್ರಿಭುತಿ. ೨೦-೯). **ಪಡಿಹೊನ್ನು :** ಅದು . . . ರಾಜರನ್ನು ಹೊಗಳಿ ಮೆಚ್ಚಿಸಿ ಅವರಿಂದ ಪಡಿಹೊನ್ನು ಪಡೆಯುವುದಕ್ಕಾಗಿ ಬರೆದ ಕೀಳುಕಥೆ (ತುಂಗಭ. ೪೩). [ಪಡಿ$_1$+ಪೊನ್]

**ಪಡಿಸಣ$_1$** (ನಾ). ೧. ಪರೀಕ್ಷೆ; ಪರಿಶೀಲನೆ: "ಪಡಿಸಣಮೆ ಪರೀಕ್ಷೆ" (ಚತುಸಿ. ೧೫೪) ; ಕುಸುಮಕ್ಕೆ ಪರಿಮಳಂ ಪಡಿಸಣಮೆ ಅಮೃತಕೆ ಸ್ವಾದು ಸಂಕಲ್ಪಮೆ ಶರ್ವಂಗೆ ಪಾರ್ವತಿಯೆರವೆ (ಗಿರಿಕ. ೧೦-೨೬ಪ) ; ಹಡಪದನುಲೇಪನದ ಕುಸುಮಮಾಲೆಗಳ ಕನ್ನಡಿಯ ಸಿರಿಮುಡಿ ಪಡಿಸಣದ ಹಂತಿಯ ಹಲವು ತೊಡಿಗೆಗಳ . . . ವನಿತೆಯರ ನಡುವೆಸೆವ ನಾಯಕಸ್ತ್ರೀಯರನ್ನೀಕ್ಷಿಸುತ ಭೂಮಿಪಂ ನಡೆತಂದನು (ಹಚಕಾ. ೪-೩೯) ; ನೀ ಮರುಳೆ ವಿದುರ ಭವನಪ್ಪಚೋವಿಸ್ತರಕೆ ಪಡಿಸಣವುಂಟೆ ಶಿವಶಿವ ಯೆಂದನಾ ಭೂಪ (ಕುಪ್ಯಾಸ. ೧೨-೯೨) ; ಆಂ ಜವಂ. ಇಂತಿವಱಿಂದು ಪಡಿಸಣದುಜ್ಜುಗದಿನೆ ಬಂದೆಂ (ರಾಮಾಶ್ವ. ೧೪೧-೪). ೨. ರಾಜರು ಮುಂತಾದವರು ಆಹಾರವನ್ನು ಸೇವಿಸುವ ಮೊದಲು ಬೇರೆ ವ್ಯಕ್ತಿ ಅಥವಾ ಪ್ರಾಣಿಗೆ ಕೊಟ್ಟು, ಆಹಾರವು ವಿಷಮಿಶ್ರಿತವಾಗಿದೆಯೇಎಂದು ಪರೀಕ್ಷಿಸುವಿಕೆ: ಎನಗೆ ಪುತ್ರಂ ನೀನೆ ಎನಗೆ ಮಿತ್ರಂ ನೀನೆ ನಿನ್ನ ಪಡಿಸಣವೇ ಪಡಿಸಣ ನೋಡಿತೆಯೆನಗೆ ನಿನ್ನ ಮೊಗದಗ್ಗವಣಿಯೇ ಅಗ್ಗವಣಿಯೆನಗೆ (ಕಣ್ಣರ.ಪೇ.೧೪೯-೨೩); ವಿಷದುಷ್ಟದಿಂ ಬೇಗಂ ಪಕ್ವಫಲಮಾಗೆಯುದಂ ವನಪಾಲಕಂ ತಂದು ಅರಸಂಗೀಯೆ ಅದನೊರ್ವ ವೃದ್ಧಂಗೆ ಪಡಿಸಣಮಂ ಕುಡೆ ಮೆಲಿದವನಾಗಳೆ ಸಾಯೆ (ಧರ್ಮಪ. ೭-೪ಪ) ; ಗರುಡನಾರೋಗಣೆಯ ಬೋನಕೆ ಮರಳಿ ಪಡಿಸಣವೇಕೆ ನಾತಿನ ಮುರಿವುಗಳು ಗೆಲ್ಲವರೆ ನೀ ನೆಱೆ ನೋಡು ಕೈಗುಣವ (ಕುಪ್ಯಾದ್ರೋ. ೧೦-೫೩). ೩. ಆಹಾರ ; ಭೋಜನ : ಎನಗೆ ಪುತ್ರಂ ನೀನೆ ಎನಗೆ ಮಿತ್ರಂ ನೀನೆ ನಿನ್ನ ಪಡಿಸಣವೇ ಪಡಿಸಣ ನೋಡಿತೆಯೆನಗೆ ನಿನ್ನ ಮೊಗದಗ್ಗವಣಿಯೇ ಅಗ್ಗವಣಿಯೆನಗೆ(ಕಣ್ಣರ. ಪೇ. ೧೪೯-೨೩) ; ಮೊದಲ್ತೋಱಿದ ಪಡಿಸಣಮಂ ಮಮತೆಯೊಳೀಂಟುವ ಭಂಗಿಯ ವೊಲ್ ಸಂಭ್ರಮದಿಂ ಸವಿದುವು ಚಾರುಚಕೋರಂ ಚಂದ್ರಕರಂಗಳನು (ಜಯಕಾ. ೧೪-೧೪). 'ಪಡಿಸಣಿ' ಪರಾ.

**ಪಡಿಸಣದಾಳು**=ರಾಜನೇ ಮುಂತಾದವರು ಆಹಾರ ಸ್ವೀಕರಿಸುವ ಮೊದಲು ಅದನ್ನು ಸೇವಿಸಿ ಪರೀಕ್ಷಿಸುವವನು : ಓಗರದ ಪಡಿಸಣದಾಳು ಚೆನ್ನಯ್ಯಂ ಜಗತ್ರಯಪಾಲ ನಿಮ್ಮುವನುಣಬಡಿಸುವಳು ವೀರ ಚೋಳನ್ವೆ (ಬಸವು. ೯-೪೦). **ಪಡಿಸಣವಾಗು**=ಆಹಾರವಾಗು ; ಬಲಿಯಾಗು : ಮಗನೆ ನಂಬಿ ನಂಜಿ ಪಟ್ಟದಾನೆಗೆ ಪಡಿಸಣವಾದಾ ಎಂದು ಜೆಡೆಯ ನಾಯನಾರುಂ ಯಸ್ಯಜ್ಞಾಸಿವೇಣಿಯರುಂ ಪಳವಿಸಿ ಪಲುಂಬುತುಂ ಪರಿತಂದು (ನಂಬಿರ. ೨-೫೪). [<ಸಂ. ಪ್ರತೀಕ್ಷಣ]

**ಪಡಿಸಣ$_2$** (ನಾ). ೧. (ಯಜಮಾನನು) ಊಟ ಮಾಡಿದ ಸ್ಥಳದಲ್ಲಿಯೆ ಕುಳಿತು, ಅವನು ಬಿಟ್ಟ ಆಹಾರವನ್ನು ಊಟಮಾಡುವಿಕೆ : ಪಡಿಸಣಮನಾಚರಿಪಂ ಪಡಿಸಣಿಗಂ . . . ತದುಚ್ಛಿಷ್ಟ ಭೋಜನಂ ಪ್ರತಿಸ್ಥಾಪನಮುಚ್ಯತೇ ತದೇಪ ಪಡಿಸಣಂ ತದಾಚರನ್ ಪಡಿಸಣಿಗ ಇತಿ ಭುಜಿಷ್ಯ ಉಚ್ಯತೇ (ಶಬ್ದಾನು. ೪೦೭ ಪ್ರಯೋ). 'ಪಡಿಸಣಿಗ' ಪರಾ. ೨. ಯಜಮಾನನನು ಬಿಟ್ಟ ಊಟವನ್ನು ಭುಜಿಸುವ ಸೇವಕ : "ಪಡಿಸಣ—ಪ್ರತಿಸ್ಥಾನ=ಬಿಟ್ಟುದನ್ನುಣ್ಣುವ ಆಳು" (ತದ್ಭಕೋ.೨೪).

[<ಸಂ. ಪ್ರತಿಸ್ಥಾನ]

**ಪಡಿಸಣಂಗಳೆ** (ಕ್ರಿ). ಆಹಾರವು ವಿಷಮಿಶ್ರಿತವಲ್ಲವೆಂದು ಸಿದ್ಧಪಡಿಸು : ಮನೋಹರಿಯಂ ಪಡಿಸಣಂಗಳೆಯಲುಂ[ಪಾಠಾಂ. ಪಡಿಸಣವಂಗೆಯ್ಯಲುಂ] ಮಾಳತಿಯಂ ಬಡ್ಡಿಸಲುಂ ಉತ್ಪಳಿಕೆಯಂ ಕಯ್ಪಟ್ಟಿ ನೀಡಲುಂ . . . ಇಂತಿವು ಮೊದಲಾಗೆ ಪೆಱವು ಮಿಸುವೆಸಂಗಳನವರ್ಗವರ್ಗೆ ತಕ್ಕುವಂ ಪೇೞ್ದಾಗಳ್ (ಆಪಿಪು. ೭-೨೧ಪ). [ಪಡಿಸಣ$_1$+ಕಳೆ$_1$]

**ಪಡಿಸಣಗೈ** (ಕ್ರಿ). (ಆಘ್ರಾಣಿಸಿ) ಆಯ್ಕೆಮಾಡು ; ಪರೀಕ್ಷಿಸಿ ಆರಿಸು : ಚಾರುಕುಂಕುಮದ ಶೋಧಿಸಿದ ಕಾರಣೆಯ ಕಡವಲಿಗೈದ ಪೊಸಮುತ್ತುಗಳ ಪಡಿಸ[ಪಾಠಾಂ.ಪ]ಣಗೈದ ಧೂಪದ ಧೂಮಪವನದಲೆಸೆದುದಾ ನಗರ (ತೊರರಾ. ೨-೧-೧೬). [ಪಡಿಸಣ$_1$+ಗೈ(<ಕೆಯ್$_1$)]

**ಪಡಿಸಣಗೊಡು** (ಕ್ರಿ). ಆಹಾರವನ್ನು ನೀಡು ; ಆಹಾರದಾನ ಮಾಡು : ಪಡಿಸಣ[ಪಾಠಾಂ. ಡೆದಣ]ಗೊಡುತುಂಬರಂತೆ ಲೋಕಕೆ ಸುಖಗೊಡುತತಿಸುಖವ ಭೋಗಿಸುವ ಕಡುಸುಖ ನನ್ನೆದೆಯೊಳು ನಿಂದು ಸುಖವ ಸಂಗಡಿಸು ಚಿದಂಬರಪುರುಷಾ (ಭರಚ. ೪೮-೧೨೨).[ಪಡಿಸಣ$_1$+ಕೊಡು$_1$]

**ಪಡಿಸಣದೋಱು** (ಕ್ರಿ). ಶೋಧಿಸು ; ಸೋಸು (?) : ಎಳೆಯಲ್ಲಯಿಂಗುಳ್ಳ ಕರಿಬೇವು . . . ಕಸ್ತೂರಿಯ[ನು] ಬೆರಸಿ ಪನಿನೀರ ಹೊಯ್ದುಕೊಂಡು ತಿಳಿನೀರ ಸೆಱೆಯಳಗೆಗೆಱೆದು ಹಾಳೆಯ ಕಟ್ಟಿ ಬಳಿಕದಂ ಮಡಗಿ ಚೆನ್ನಾಗಿ ಪಾಕವ ಮಾಡಿ ಯಿಳಿಹಿ ಪಡಿ[ಪಾಠಾಂ. ಪಡೆದ, ವಡಿ]ಸಣದೋಱಲಂತದುವೆ ತಾನೊಂದು ತೆಱದೀರ ಪನಸಪಾಕ (ಸೂಪಶಾ. ೫-೭೪).

[ಪಡಿಸಣ$_1$+ತೋಱು]

**ಪಡಿಸಣಿ** (ನಾ). ಅಡಿಗೆಯವನು ; ಬಾಣಸಿಗ : ಭೂತಳೇಶನ ಮನೆಯೊಳಗಿರುಳತೀತವಾಗಲಿಕಾಗಳಾತನ ಪ್ರೀತಿಕರ ಪಡಿಸಣಿಯ ಕಂಡನು ಮುನಿಪ ಹಸಿದಿರುತ (ಸಂಭಪ. ೨೫-೧೨) ; ಮಲ್ಲ ಗೆದ್ದನು ಈ ಕ್ಷಣದಿ ಗೆಲವಿಲ್ಲ ವಲಲಸಿಗಾಯ್ತು ಹೋ ಹೋ ನಿಲ್ಲು ಪಡಿಸಣಿ ಗೆದ್ದನಾಗಲೆ ಗೆದ್ದನಾ ವಲಲ (ಕುಪ್ಯಾವಿ. ೬೦೯. ೪-೭೫). [ಪಡಿಸಣ$_1$+-ಇ$_3$]

**ಪಡಿಸಣಿಗ** (ನಾ). (ಯಜಮಾನನು) ಊಟ ಮಾಡಿದ ಸ್ಥಳದಲ್ಲೇ ಕುಳಿತು, ಅವನು ಬಿಟ್ಟ ಎಂಜಲನ್ನು ಊಟ ಮಾಡುವವನು ; ಪಡಿಸಣವನ್ನಾಚರಿಸುವವನು : ಪಡಿಸಣಿಗಂ, ಸುಂಕಿಗಂ (ಭಾಷಾಭೂ. ೧೭೪ ಉದಾ) ; ಪಡಿಸಣಮನಾಚರಿಪಂ, ಪಡಿಸಣಿಗಂ (ಶಬ್ದಾನು. ೪೦೭ ಪ್ರಯೋ). [ಪಡಿಸಣ$_1$+-ಇಗ]

**ಪಡಿಸಣಿಸು** (ಕ್ರಿ). ತಿರುಳನ್ನು ಕಂಡುಹಿಡಿ ; ಸಾಮರ್ಥ್ಯವನ್ನು ನಿರ್ಧರಿಸು,—ಪರೀಕ್ಷಿಸು : ಎಂಟುಸಾವಿರ ಸವಣರುಂ ಕೂಡಿ ಪಾಪಮಂ ಪಡಿಸಣಿಸಿ ನೋಳ್ಪಂತೆ ಆತ್ಮದ್ರೋಹಮನೊಡರ್ಚುವಂತೆ. . . ಪುಷ್ಪಾಂಜುಳಿಯೆಂಬ ನರಕಪರ್ವಮನುಪಕ್ರಮಿಸುತ್ತಿರೆ (ಜಿಾಸ್ಮರ. ೧೭೫-೧೬). [ಪಡಿಸಣ$_1$+-ಇಸು$_3$]

**ಪಡಿಸನ್ನೆ** (ನಾ). ಪ್ರತಿಯಾಗಿ ಮಾಡುವ ಸನ್ನೆ,—ಸಂಕೇತ : ಚೆನ್ನೆಯರ ಕುಡಿನೋಟದೊಡನಾಡಿ ಪಾಡುತಲ್ ನಲಿದು ಸನ್ನೆ ಪಡಿಸನ್ನೆಯಿಂ ಮುದದಿ ಕೇಳಿಯಾಡುವುದು (ವಿಸಂಗೀ. ೨-೬).

[ಪಡಿ$_3$+ಸನ್ನೆ$_2$]

**ಪಡಿಸರಲ್,** ಪಡಿಸರಳ್(ನಾ). ಇನ್ನೊಂದು ಬಾಣ; ಮತ್ತೊಂದು ಕಣೆ : ದನುಜಂ ಏಡಸಂ ಬಲಸಂ ಕಿರುಗಿಯುಂ ಸಾರ್ದುಂ ಪಡಿಸರಲಂ ಜೋಡಿಸಿಯುಂ ರಯ್ಯನೆ ಬರ್ಪ ಪಗೆಯ ಪೊಸ ಕಣೆಗಳಂ ಖಂಡಿಸಿಯುಂ ದೇಪರ್ಕಳ್ ಪೊಗಳ್ವಿನ್ನಂ ಸನುದಂಡಿಯೊಳ್ಪೋರ್ದಂ(ರಾಘನಾಸ್ತ್ರ. ೯೩-೫).

**ಪಡಿಸರಳ್ :** ಪೊಗರುಗುವ ಕಣೆಗಳ್ ಸಾರ್ತರ್ಪುದಂ ಕಾಣುತೆ ರಾಘವಂ ಪಡಿಸರಳಂ ತುಡುತೆ ಬಿಡದೋರೊಂದು ಪಗೆಗೋಲಂ ನಡುದಾರಿಯೊಳೆ ಇಕ್ಕಡಿಗೆಯ್ವಂ (ಅದ್ಭುತ. ೪೯-೨೨). [ಪಡಿ$_3$+ಸರಲ್$_1$]

**ಪಡಿಸರಳ್** 'ಪಡಿಸರಲ್' ನೋ.

**ಪಡಿಸಲಿಕೆ** (ನಾ). ಭತ್ಯವನ್ನು ನೀಡುವಿಕೆ : ಗೌಣ್ಡುಗಳು ಅಱುವತ್ತೊಕ್ಕಲುಮಿರ್ದ್ದು ಹನ್ನೆರಡು ಮತ್ತರು ಕೆಯ್ಯ ಜೀರ್ಣ್ಣೋದ್ಧಾರಕ್ಕಂ ಪಡಿಸಲಿಕೆ×××ಸಲಿಸುತ್ತಮಿರ್ಪ್ಪರು (ಸೌಇಇ. XX, ೩೨-೪೧; 1045); ಧಾರೆಯನೆಱೆದು ಹೆಗ್ಗಡೆಗೇತಣ್ಣನು ಸಿದ್ಧೇಸ್ವರದೇವರ್ಗ್ಗೆ ಪಡಿಸಲಿಕೆ ಭೋಗನಿವೇದ್ಯಕೆ ಬಿಟ್ಟ ದತ್ತಿ (ಎಕ. VII, ಶಿಮೊ. ೫೧-೧೮; 1108 ?).
[ಪಡಿ$_1$+ಸಲಿಕೆ$_1$(<ಸಲ್ಕೆ)]

**ಪಡಿಸಲಿಸು$_1$** (ಕ್ರಿ). (ದೇವಸ್ಥಾನದ ಜೀರ್ಣೋದ್ಧಾರ ಮೊದಲಾದುವುಗಳಿಗಾಗಿ) ಭತ್ಯವನ್ನು ಸಲ್ಲಿಸು ; ಪಡಿಯನ್ನು ನೀಡು : ರಾಜಮಾರಮ್ ಅಯ್ಮತ್ತಲ್ ಕೆಯ್ಯುಮ್ ಕೊಟ್ಟರ್ ಅದ ಮಾರಿದರ ಶಿರಿಪುರುಷಿನ ಮಗ ದೇವಾತಿ ಪಡಿಸಲಿಸಿಯುಣ್ಬೊನ್ (ಎಕ. VIII, ಸೊರಬ. ೮೫-೯ ; 876) ; ಕೊಟ್ಟ ಈಪ್ಪತ್ತು ಕಣ್ಣುಗದೊ[ಳೆ] ಪಡಿಸಲಿಸ[ಮತ್ತ] ಕೊಳಗುರ ದೇಗುಲಕ್ಕೆ ಕಣ್ಡಪೀಟ ಪಣೆಯವಟ್ಟಮಿನಿತುವಂ ಕೊಟ್ಟು ಪ್ರತಿಟ್ಟೆಗೆಯಿಸಿದ (ಸೌಇಇ. XI-i, ೩೫-೧೪ ; 933) ; ಚಿಲ್ಲುಕೇಶ್ವರ ದೇವರ್ಗೆ ತುಮ್ಬಿನ ಮೊದಲೊಳಱುಕಣ್ಡುಗ ಮಣ್ಣು ಕೊಟ್ಟರ್ ಪಡಿಸಲಿಸಿಯುಣ್ಬೊರ್ (ಎಕ. XII, ಶಿರಾ. ೯-೪೬ ; 1072).
[ಪಡಿ$_1$+ಸಲಿಸು]

**ಪಡಿಸಲಿಸು$_2$**, ಹಡಿಸಲಿಸು (ಕ್ರಿ). ೧. (ಪೂರ್ವಾಚಾರಕ್ಕನುಗುಣವಾಗಿ) ನಡೆಸಿಕೊಂಡು ಬರು : ಧರ್ಮ್ಮಮಂ ಪಡಿಸಲಿಸುತ್ತಿರೆ (ಇಎ. ೧೯೪೭, ಹಾನುಗಲ್. ೩೧೨-೧೪ ; 850) ; ಕೌಣ್ಡಿಲ್ಯಗೋತ್ರದ ಗಾವುಣ್ಡಸಾಮಿಗಳ ಮಗನ್ನಾಗಮ್ಮಯ್ಯ ಕಲ್ಲ ದೇಗುಲಮಮ್ಮಾಡಿಸಿ ಪಡಿಸಲಿಸಲೆನ್ದು ಕೊಟ್ಟ ಮಣ್ಣು ಒಕ್ಕಣ್ಡುಗ (ಎಕ. XIV, ಮಂಡ್ಯ. ೧೩-೧೦ ; 895) ; ಜಕ್ಕಗೋಸಿಯಂ ಕರೆದು ನೀನೆನಗೆ ಪುತ್ರನ ಸಮಾನವೆನ್ನ ಮಾಡುವ ಧರ್ಮ್ಮಕೆ ಸಹಾಯನಾಗಿ ಪಡಿಸಲಿಸುತ್ತುಮಿರೆನ್ದು ತಲೆಯೊಳ್ ಕಯ್ಯನಿಟ್ಟು (ಮೈಆರಿ.೧೯೩೦, ೬೬-೪೩; 1080); ಮುನ್ನಂ ದಡಿಗ ಮಾಧವರ್ಮ್ಮಾಡಿಸಿದ ಬಸದಿಯಂ ತಮ್ಮ ಗಂಗಾನ್ವಯದವರ್ಪ್ಪಡಿಸಲಿಸುತ್ತಂ ಬರಲು (ಎಕ. VII, ಶಿಮೊ. ೪-೬೯ ; 1122). ೨. ಮೊದಲಿದ್ದಂತೆ ಮಾಡು; ಜೀರ್ಣೋದ್ಧಾರ ಮಾಡು; ಪುನರ್ನಿರ್ಮಾಣ ಮಾಡು : ಸೋಮಸಿಂಘಭಳಾರರ ಕಾಲಂ ಕಚ್ಚಿಸಿ ಧಾರೆಯನೆಱೆಯಿಸಿ ಕೆಱೆಗೊಡಂಗೆಯ್ದ್ದಸವಂಧವಂ ಕೊಣ್ಡು ಕೆಱೆಗಳಂ ಪಡಿಸಲಿಸುವರ್ (ಸೌಇಇ. IX-i, ೮೦-೨೬ ; 1028); ಶ್ರೀಮನ್ಮಹಾಸಾಮನ್ತಂ ಮಾರ್ತ್ತಣ್ಡಯ್ಯಂ ತಮ್ಮ ಮುತ್ತಯ್ಯಂ ಮಾಡಿಸಿದ ಬಸದಿಯಂ ಪಡಿಸಲಿಸಿ ನಾಟಕಶಾಲೆಯಂ ಮಾಡಿಸಿ ತನ್ನ ಕೀರ್ತಿಶಿಳಾಸ್ತಂಭಮನಾಚನ್ದ್ರಾರ್ಕ್ಕತಾರಂಬರಂ ನಿಲಿಸಿದ (ಸೌಇಇ.XI-i, ೭೮-೮೬; ಸು.1045) ; ಪುಱಿಗೂರ ವೀರ ಜಿನಾಲಯಮುಮಂ ಕುಂದುರಗೆಯ ಜಿನಮಂದಿರಮುಮಂ ಪೊಸತಾಗೆ ಪೊಸತಾಗೆ ಪಡಿ[ಸಲಿಸಿ] (ಸೌಇಇ. XI-i, ೧೦೩-೩೫ ; ?). ೩. ಒಟ್ಟಾಗಿ ಕೂಡು ; ಜೊತೆಯಾಗಿ ಸೇರು : ಸತ್ವವೃದ್ಧಿಗಳಾವನೊಬ್ಬನ ತತ್ವವನು ಕಾಣಿಸಲು ನೆರೆಯಲು ಚಿತ್ತವೆಯ್ದುದು ವೇದಮಸ್ತಕದೊಡನೆ ಪಡಿಸಲಿಸಿ (ನಿಭಾಗ. ೬-೩-೨೫). **ಹಡಿಸಲಿಸು :** ೨. ಶ್ರೀಬಲೇಸ್ವರದೇವರ ದೇಗುಲವಂ ಹಡಿಸಲಿಸಲು ಬಡಗಿ ಮಲೋಜಗೆ ಆ ಕೆಯೊಳಗೆ ಮತ್ತರು ೬ (ಸೌಇಇ. XI-i, ೬೮-೨೬ ; 1033) ; ಐದು ದೇಗುಲಂಗಳ ಬಡಗಿವೆಸದೊಳ್ ಹಡಿಸಲಿಸುವ ಮಂಡಳಿಕ ಮಾಣಿಕಾಚಾರಿ ಹೊಂನೋಜ (ಎಕ.VIII, ಸಾಗರ.೧೦೦-೬೪ ; 1042). [ಪಡಿ$_3$+ಸಲಿಸು]

**ಪಡಿಸಾದ,** ಪಡಸಾದ (ನಾ). ಪ್ರತಿಧ್ವನಿ ; ಪ್ರತಿಶಬ್ದ : ವಿಧಿಯ ಯಾವ ವಿಲಾಸಲಾಸ್ಯವೊ ಕದಿಯುತಿದೆ ಹೃನ್ಮನದ ಬಿನದವ ; ಅದು ಅದೋ ದಿಕ್ಕೆಲ್ಲ ಒಂದೇ ನಾದ ಪಡಿಸಾದ (ಅರಳು. ೫೬-೧೮) ; ಏಳೊ ಏಳು ಗೆಳೆಯ, ಕೇಳು ಕರೆವ ತೂರ್ಯನಾದವ ; ಗೋಳಗುಮ್ಮಟದಂತೆ ಸೃಷ್ಟಿ ನುಡಿಸುವ ಪಡಿಸಾದವ (ಅರಳು. ೪೯೫-೧೦). **ಪಡಸಾದ :** ಅಂತಃಪುರದೊಳು ಕೇಳಿಸುತಿದೆ ನೂಪುರನಾದ. ಏತರ ಒಸಗೆಯು ಇದು ? ಯಾ ಹಿಗ್ಗಿನ ಪಡಸಾದ ? (ಹೃದಸ. ೮-೮).
[←ಮರಾ. ಪಡಿಸಾದ್, ಪಡಸಾದ್./ಸಂ. ಪ್ರತಿಶಬ್ದ]

**ಪಡಿಸಾರಿಕೆ** (ನಾ). ಜೊತೆಗೆ ಬರುವಿಕೆ; ನೆರವು : ಭಾರಿಯಂಕವು ದಳಪತಿಗೆ ಪಡಿಸಾರಿಕೆ[ಪಾಠಾಂ. ಗೆ]ಯ ಭಟರಿಲ್ಲಲಾ ಪರಿವಾರಕಿದು ಪಂಥವೆ ಎನುತ ಕುರುರಾಯ ಮೂದಲಿಸೆ (ಕುವ್ಯಾಕ. ೧೦-೪೩).
[ಪಡಿ$_3$+ಸಾರ್$_1$+-ಇಕೆ]

**ಪಡಿಸಾಳ** 'ಪಡಸಾಲೆ$_1$' ನೋ.

**ಪಡಿಸು** (ಕ್ರಿ). ೧. ಮಲಗಿಸು ; ಮಲಗುವಂತೆ ಮಾಡು : ಉದರವೆ ತೊಟ್ಟಿಲಾಗೆ ಭುವನತ್ರಯಮಂ ನೆಱೆ ತಾಳ್ದಿ ದೇಹಿವರ್ಗದ ಕೃತ ಪಾಪ ಪುಣ್ಯಫಲಮಂ ಸಲೆ ತೂಗುವ ಕರ್ಮಸಾಕ್ಷಿಯಂ ಪದುಳದೆ ತೊಟ್ಟಿಲೊಳ್ ಪಡಿಸಿ ತೂಗಿದರ್ ... ಲತಾಂಗಿಯರ್ (ಜಗವಿ. ೩-೨೮). ೨. ಬೀಳಿಸು; ಕೆಡಹು : ಕಡಸಿ ಕಾಮಾಟಗರಿಂಗಿಡುತರು ಅತಿಗಳ ಇಡಿಕಿರ್ದ ಗುಂಡುಗಳ ಪಡ[ಡಿ]ಸಿ ಕಲ್ಕುಟಿಗರಿಂ ಪಾತಾಳಗುಹೆಗಳ ಬಿಡದೆ ಹೂಳಿಸಿ ಸಮಗೊಳಿಸಿ (ಗೊಮ್ಮಚ. ೨-೧೩). ೩. ಉಂಟುಮಾಡು ; ಅನುಭವಿಸುವಂತೆ ಮಾಡು ; ಹೊಂದುವಂತೆ ಮಾಡು : ಈತಿಃ—ಡಿಂಬ, ಅತಿವೃಷ್ಟಿ ಮುಂತಾದ ಬಾಧೆ, ಎಳೇ ಮಕ್ಕಳು ಪಡಿಸುವ ವೇಥೆ, ಪರಸ್ಥಳವಾಸ (ಸಿದ್ಧಾಂತಿ. ೩೯೧). [ಪಡು$_1$+-ಇಸು$_3$]

**ಪಡಿಸೂಳು** (ನಾ). ಪುನಃ ಪುನಃ ಹೇಳುವ ಧ್ವನಿ; ಪುನರುಚ್ಚಾರ: ಮೇಳವದ ತನಿವೆಳಗುಗಳ ಮಣಿಮೌಳಿಮಂಡಿತರುಪ್ಪರದ ಪಡಿಸೂಳು ಪಾಯವಧಾರಿನಲಿ [ಪಾಠಾಂ. ರೆನಲು] ಹೊಕ್ಕರು ಸಭಾಸ್ಥಳವ (ಕುವ್ಯಾಸ. ೨-೧). [ಪಡಿ$_3$+ಸೂಳು$_1$(<ಸೂಳ್$_1$)]

**ಪಡಿಹರಿ** 'ಪಡಿಹಾಱಿ' ನೋ.

**ಪಡಿಹಜಿ** 'ಪಡಿಯಜಿ' ನೋ.

**ಪಡಿಹಱಿ** 'ಪಡಿಹಾಱಿ' ನೋ.

**ಪಡಿಹಾರಿ** 'ಪಡಿಹಾಱಿ' ನೋ.

**ಪಡಿಹಾಜಿ** 'ಪಡಿಯಜಿ' ನೋ.

**ಪಡಿಹಾಱಿ,** ಪಡಿಹರಿ, ಪಡಿಹಱಿ, ಪಡಿಹಾರಿ (ನಾ). ೧. ಬಾಗಿಲು ಕಾಯುವವನು ; ಪ್ರತೀಹಾರಿ ; ದ್ವಾರಪಾಲಕ : ಏಲೇಶ್ವರದ ಕೇತಯ್ಯ ದ್ವಾರಪಾಲನು ಶಿವ ನಿಮಗೆ ಪಡಿಹಾಱಿ ಬಸವಯ್ಯಂ ಮನೆಯ ಭಂಡಾರಿ ಬಲದೇವಂ ಮಧುವರಸನಾಲವಟ್ಟದವ (ಬಸಪು. ೯-೪೮) ; ಬಸವೇಶನಳ್ಕೆಯಿಂದಿರೆ ಮಾಚಿದೇವಂಗಳೊಸೆದಾಗ್ರಹಿಸಿಯುಸುವ ಬಿಡಲು ಪಡಿಹಾಱಿ ಬಂದುಸಿರೆ ಬಸವನ ಕಿನ್ನರನ ಹರಣಮಂ ಪಡೆದನಭವನಿಂ ಮಾಚಿದೇವಂ (ಪಾಸೋಪು. ೪-೮೮) ; ಈತನೇ ಪಡಿಹಾಱಿಯುತ್ತಣ್ಣನು (ಚೆಬಪು. ೫೬-೫೯). ೨. ಊಳಿಗ ; ಸೇವೆ : ಸಂಪನ್ನ ಮಂತ್ರೀಶ ಪಡಿಹಾಱಿ ವುತ್ತಣ್ಣನಂ ಕಳುಹಿ ಕರೆಸಿದಡೆ (ಲಶಿಚಿಂ. ೩೨-೬೫). **ಪಡಿಹರಿ :** ೧. "ಪಡಿಹರಿ (ಪಡಿಹಾರಿ)-ಪ್ರತೀಹಾರೀ" (ತದ್ಭಕೋ.೨೪). **ಪಡಿಹಱಿ:** ೧. ಆವ ಪಡಿಹಱಿಗಿಂತದ್ಯಶ್ಯಾಭಾವನತೆ ದೊರಕೊಂಬುದೇ ಜಿತಭಾವಜಂಗಲ್ಲದೆಯೆನುತ ಸಿಕ್ಷಿಸಿ ಮನಸಿನಲಿ (ಬಸಪು. ೫೩-೨೨). ೨. ಮಡದಿ ಗೌರಿಪುರಾತಿ ಪಾರ್ವತಿ ಪಡಿಹಱಿಯ ದಾಸವ್ವೆ ದುಗ್ಗಳೆ ಒಡರಿಸುವುದೇಂ ಕೇಳಿಕೆಯನೀ ನರ್ತನೋಚಿತಕೆ (ಬಸಪು. ೧೨-೪೨).

**ಪಡಿಹಾರಿ :** ೧. ನಂದಿಬಟ್ಟಿಲ ಹಿಡಿದು ಬಂದನಾ ಪಡಿಹಾರಿ. (ಕನ್ನಜಾ. ೨೬೯). ೩. ರಾಜನ ಬಳಿ ಇರುವ ವಿದೂಷಕ,—ಹಾಸ್ಯಗಾರ: (೬). 'ಪಡಿಯಱ' ಪರಾ. [<ಸಂ. ಪ್ರತೀಹಾರೀ]

**ಪಡಿಹಾಱುಕೆ** 'ಪಡಿಯಱುಕೆ' ನೋ.

**ಪಡಿಹೊನ್ನು** 'ಪಡಿವೊನ್' ನೋ.

**ಪಡು₁, ಹಡು₁** (ಕ್ರಿ). ಪಟ್ಟ₁ (ಭೂತಕೃ) ; ಪಟ್ಟು₁, ಹಟ್ಟು (ಭೂತನ್ಯೂ) ೧. ಮಲಗು ; ಒರಗು ; ಶಯನಿಸು : "ಪಡು—ಮರಣೇ, ಶಯನೇ ಚ" (ಶಮಧಾ) ; ಮರಲ್ದೆಸೆವ ತೂಗುಂದೊಟ್ಟಿಲೊಳ್ ಪಟ್ಟ ಪುತ್ರನ ವಕ್ತ್ರೇಂದುವನಂಜನಾಂಕಿತಮನಾನಿನ್ನೆಂದು ಪೇೞೆ ಕಾಣ್ಬೆನೋ (ಕಾದಂಪೂ. ೩೫೫) ; ಎರ್ಮೆಯೆಡೆಗೊಳೆ ತಾನುಂ ಪಟ್ಟು ಮೆಲ್ಕೊತ್ತುತಿರ್ಪ ಜವಹುರದ ಜಕ್ಕಂದೊಟಲಿಯಿಂ ಗೆಲೆವರ್ಪ ಕಾಟಿಕ್ಕೋಣ ವಳಗದಿಂದೆಯುಂ (ರಾಮಾಶ್ವ. ೩-೨೪) ; ಈ ಇರುಳ್ ನಡೆದುದೊಂದ ದ್ಭುತಂ ಪಟ್ಟ ಪಡೆ ಪಟ್ಟಂತೆ ಪೊಯ್ದುತ್ತು (ಅಶ್ವತ್ಥಾ. ೧-೧೨). ೨. ಬೀಳು; ಕೆಡೆ : ಸುಯೋಧನನ ಮಹಾದೇವಿ ಭಾನುಮತಿ ಬಾಯಱಿದು ಪುಯ್ಯು ಲಿಡುತುಂ ಬಂದು ಧರ್ಮನಂದನನ ಕಾಲ ಮೇಲೆ, ಕವಿದು ಪಟ್ಟು (ಪಂಪಭಾ. ೭-೩೩ ವ) ; ಕೆಟ್ಟ ದೇಗುಲಮಂ ಮಾಡಿಸಿ ಕೆಟ್ಟು ಪಟ್ಟ ಲಿಂಗ್ಗಮಂ ಪ್ರತಿಷ್ಠೆಗೆಯ್ದು (ಎಕ. IV, ಹೆಗ್ಗಡ. ೧೬-೫ ; 1021) ; ನಿಂದೆರಡು ಬಲುಪುರುಷಮೃಗಗಳನೊಂದೆ ಕೋಲಲಿ ತರುವುಳಿದು ಕೆಡ ವಂದದಿಂ ಪಡಲೆಸುವೆ ವಾಗುರೆ ನೋಡು (ಸಾಳ್ವಭಾ. ೫-೩೪) ; ಬಟ್ಟೆ ತುದಿಯನು ಹೇಗೆ ಮುಟ್ಟಲಾಪುದೆ ನೋಡು ! ಕಟ್ಟಕಡೆಗಿರಲಿ ಜಯ ! ಪಟ್ಟರಲಿ ಸೋಲು ! (ಕವಿಪು. ೨-೨೦). ೩. (ಸೂರ್ಯನು) ಮುಳುಗು ; ಅಸ್ತವಾಗು : ಇತ್ತ ನೇಸಱು ಪಟ್ಟೊಡೆ ಕಿತ್ತಯ್ಯಂ ಗಳ್ಗಾಸನ್ನಕಾಲಮಾದುದೆಂಬುದಂ ಭಟಾರರಱಿದು (ವಡ್ಡಾರಾ. ಳ೩-೧೦) ; ಅಂತಮೋಘಾಸ್ತ್ರ ಧನಂಜಯನೆಚ್ಚ ಶರಸಂಘಾತದಿನೊಗೆದ ರಣಗಟ್ಟಲೆಯೆ ಮೊಲಗಟ್ಟಲೆಯಂ ಮಾಡೆ ನೇಸಱ್ ಪಟ್ಟತ್ತು ವಿಜಯಂ ಸೋಲ್ತನೆಂದು ಕೌರವಬಲಮಾರ್ದೊಡೆ (ಪಂಪಭಾ. ೧೧-೧೪೪ ವ) ; ಪಗಲೆಲ್ಲಂ ಸಂತಸ ದಿಂದಿರ್ದು ನೇಸರ್ಪಟ್ಟೊಂದು ಜಾವಕ್ಕೆ ತೊಟ್ಟನೆ ಅಸದಳಮೆನಿಸುವ ತೀವ್ರದ ತೃಷೆ ಮೊಕ್ಕಳಮಾಗೆ (ಧರ್ಮಾಮೃ. ೧-೧೫೪) ; ಪುಡಿಯಡರೆ ನಿಮಿರ್ದ ಪುತ್ತಿನ ಪುಡಿ ಕೆಡೆದತ್ತಾಲಮೊಲೆದುದದಱಡಿಯೊಳ್ ತೂಂಕಡಿಪ ಮಿಗಂ ಮುಂದಣ್ಗೋರ್ಗುಡಿಸಿದುದೋ ಪಡುವ ಪಡುವ ಮೃಗಲಾಂಛನನಾ (ಲೀಲಾವ. ೩-೪) ; ಸೂರ್ಯನು ಮೂಡುತ್ತಾನೆ ಪಡುತ್ತಾನೆ-ಎಂಬುದು ಎಲ್ಲರ ಕಣ್ಣಿಗೆ ಕಾಣಿಸುವ ಸತ್ಯವಾದರೂ ಇದು ಭ್ರಾಂತಿಸತ್ಯ (ಸಂಶೋಧ. ೧೯೨). ೪. ಸಾಯು ; ಮರಣಹೊಂದು : "ಪಡು-ಮರಣೇ, ಶಯನೇ ಚ" (ಶಮಧಾ) ; "ಮರಣ ಶಯನಗಳೊಳು ಪಡು" (ಶಬ್ದಮಂ. ೯೩). ೫. ಸಂಭೋಗಿಸು ; ರಮಿಸು : ನೋಡೆ ಪ[ಪಾಠಾಂ. ಬ]ಟ್ಟೆಡೆಯೊಳು ನಖದಂತಹತಿಗಳ ಮಾಡನು ಕಲೆಯಾಗುವಂತೆ (ಭರತ. ೫-೯೨) ; ಇಂತು ಸತಿಪತಿ ಸಮುಚ್ಚಯದ ದೃಢವ್ರತ ಸಮಾಧಿಗಳ ನಿರ್ಮೂಲನಂಗೆಯ್ಯೆ ಪಡವಲಿಸೆ ಬಾಲವೃದ್ಧಂ ಜತಿಗಳಂ ಕೂಪಿ ತೊಡಗಿ ದರು ಪಡುಪೆಗ್ಗಮಂ (ಪ್ರಭುಪು. ೪-೩೭). ೬. (ಸ್ಥಿತಿಯನ್ನು) ಹೊಂದು ; ಪಡೆ ; ಅನುಭವಿಸು : ಈಯವಸರದೊಳ್ ವೈಶಂಪಾಯ ನನುಂ ಪತ್ರಲೇಖೆಯುಂ ಭೂಪರುಮಾನಿಯಂದದಿನಗಲಲ್ಕೆನಿತಾಯಸಮಂ ಪಡುವರೆಂದು ಚಿಂತಿಸುತಿರ್ದಂ (ಕಾದಂಪೂ. ೯೪೫) ; ನೆಲನಚ್ಚರಿಯಂ ಪಡೆಯಂಡಲೆದಂ ಚಿಕದೇವನಾ ಮರಾಟರ ಪಡೆಯಂ ಛಲದಿಂ ಕಾಣಿಸಿ ಕಡೆಯಂ (ಅಪ್ರತಿ. ೬-೧೨) ; ಪಟ್ಟ ಪಾಡೆಲ್ಲವು ಹುಟ್ಟು-ಹಾಡಾಗುತ ಹೊಸವಾಗಿ ರಸವಾಗಿ ಹರಿಯುತಿವೆ (ಸಖೀಗೀ. ೧-೭) ; ಅವನು ಸುಖ ವಾಗಿರಲೆಂದು ತಾನು ಅಪಾಯಕ್ಕೆ ಒಳಗಾಗಿ ಪಡಬಾರದ ಕಷ್ಟವನ್ನೆಲ್ಲಾ ಪಟ್ಟಳು (ಬಂಕಿಮ. ೨೦೧). 'ಓಳಿವಡು', 'ಕಷ್ಟಂಬಡು', 'ಸಂತಸಬಡು' ಪರಾ. **ಹಡು₁ :** ೫. ಪರಧನವನೊಲ್ಲದಿಪ್ಪುದೆ ವ್ರತ ಪರಸ್ತ್ರೀಯರ ಹ[ಪಾಠಾಂ. ಕೂ]ಡದಿಪ್ಪುವೆ ಶೀಲ (ತಿಪಮಂ. ೧೯೩-೭೪೮) ; ಶುಂಠಿ ಪಂಟಿಗೆ ಲೇಸು ದಂಟಿ ಕುಂಟಿಗೆ ಲೇಸು ಕುಂಟಿಯಾ ಹುಡುಗಿ ಹಡ ಲೇಸು (ಹಾಸ್ಯಮಂ. ೯) ; ಕಡಿ, ಹಡು ಮೊದಲಾದ ಧಾತುಗಳಿಗೆ ಉಕ ಪ್ರತ್ಯಯ ಬರುತ್ತದೆ. ಕಡಿಯುವವನು ಕಡುಕನು, ಹಡುವವನು ಹಡುಕನು (ಹೊಸಗ. ೭೪). ℙ ಧಾತುಗಳಿಗೆ 'ಎ' ಅಥವಾ 'ಅಲ್' ಪ್ರತ್ಯಯದ ಮುಂದೆ 'ಪಡು' ಸೇರಿ ಕರ್ಮಣಿ ಪ್ರಯೋಗವು ಸಿದ್ಧಿಸುತ್ತದೆ.

**ಪಟ್ಟಱೆ = ಪಡುಶಿಲೆ :** ಅನ್ತೆ ಬರೆ ಕುಡುಕುಱುಕೆ ಅನ್ತೆ ಬರೆ ಪುಣಿಸೆಬೆಯ ಕಗ್ಗಾಲ ಅನ್ತು ಬರೆ ಪಟ್ಟಱೆ ಇರ್ಪ್ಪ ಅದಱ ತದನಾನ್ತರ ಮಟಿಕ್ತಿಗಡವು (ಸೌಇಇ. IX-i, ೪೧-೨೦ ; 11ನೆಯ ಶತ). **ಪಟ್ಟಿರ್** = ಮಲಗಿರು ; ಒರಗಿರು : ಕುಮಾರನುಂ ಪಸಿವುಂ ನೀರೞ್ಕೆಯಿಂದ ಮಾದಂ ಬಾಧಿಸೆಪಟ್ಟು ಬಸಮಱಿದು ಪಿಡಿದೊಂದಾಲದ ಮರದ ಕೆಟಗೆ ಶಿಲಾತಳದ ಮೇಗೆ ಪಟ್ಟಿರ್ದಂ[ಪಾಠಾಂ. ನಿದ್ರೆಗೆಯ್ದಂ](ವಡ್ಡಾರಾ. ೫೬-೧೦) ; ಸೆಣಸುಳ್ಳುದ್ವೃತ್ತರಂ ತಳ್ತಿಱಯದೆ . . . ಒರ್ವಂ ಗುಣಮುಂಟೆಂದುಱಿದು ಪಟ್ಟಿರ್ಪನನಣಮೆ ನಿರುದ್ಯೋಗಿಯಂ ಭೂಪನೆಂಬರ್ (ಪಂಪಭಾ. ೪-೧೧) ; ಅದೆಲ್ಲಮನಲ್ಲಿ ಪಟ್ಟಿರ್ದ ವೃದ್ಧತಾಪಸಂ ಕಂಡು (ಪಂಚತಂ. ೭೪-೪). **ಪಟ್ಟಿರಿಸು** = ಮಲಗಿಸು ; ಒರಗಿಸು : ಕರ್ಬೊನ್ನ ಕೀಲ್ಗಳಂ ಕೊಂಡು ಬಂದು ಕ್ಷಮಾಂಗನಾಲಿಂಗಿತನಪ್ಪ ಮಹಾಮುನಿಯಂ ಮಲರ್ಚಿ ಪಟ್ಟಿರಿಸಿಯುರಃಸ್ಥಲಮಂ ನಾಭಿವರೆಗಂ ವಿದಾರಿಸಿ (ವಡ್ಡಾರಾ. ೫೧-೨೭) ; ಆ ಕುಮಾರಿಯಂ ದೇವಕಿಯ ಮುಂದೆ ಪಟ್ಟಿರಿಸಿ ಪೋದ ಬಂದ ವೃತ್ತಾಂತಮಂ ಪೇಟ್ದು (ಜಗವಿ. ೩-೧೧ ವ) ; ಪಾಸಿನ ಮೇಲೆ ಪಟ್ಟಿರಿಸಿ ಪಾಲೞದೆನ್ನೊಡಗೂಡಿ ಬಾಲಿಕಾಭ್ಯಾಸದಿನೆತ್ತಿ ಸತ್ತಿಗೆಯ ತಣ್ಣೆಳಲೊಳ್ ಬಳೆವಂತು ಮಾಡಿ (ಗಿರಿಕ. ೧-೧೦೭) ; ವರದುಕೂಲವನುಡಿಸಿ ವಸುಧಾಸ್ತರಣದಲಿ ಪಟ್ಟಿರಿಸಿ ಜಾಡ್ಯಸ್ವರುಪನೆಂದೂರೊಳಗೆ ಹರಹಿದರುದಯಕಾಲದಲಿ (ತೊರರಾ. ೨-೬-೨) ; ಪುತ್ರಚಿಂತಾಮಣಿಯ . . . ತೊಟ್ಟಿಲೊಳು ಪಟ್ಟಿರಿಸಿ ನಾಮಕರಣಂಗೆಯ್ಯೆ (ನನಮೋ. ೧೫-೩೪). **ಪಡಲಿಡಿಸು** = ಚೆಲ್ಲಾಪಿಲ್ಲಿಯಾಗಿ ಬೀಳುವಂತೆ ಮಾಡು ; ಅಸ್ತವ್ಯಸ್ತವಾಗಿ ಚೆದರಿ ಹೋಗುವಂತೆ ಮಾಡು ; ನಾಶಗೊಳಿಸು : ಕಾಳಶಂಬರನಾನೆ ಕುದುರೆ ರಥಾಶ್ವವನು ಪಡಲಿಡಿಸೆ (ಸಾಳ್ವಭಾ. ೨೯-೫೨) ; ಸರ್ವಾಂಗ ಸುಂದರದ ಮಡದಿಯ ಪಿಡಿದಡಕಿ ಪುಷ್ಪಕ ಜಡಿಯಲವರವರಾಪ್ತವರ್ಗವ ಪಡಲಿಡಿಸಿ ನಡೆದನು ದಶಾನನನಭ್ರಮಾರ್ಗದಲಿ (ಉರರಾ. ೭-೬೪). **ಪಡಲಿಡು** = ೧. ಚೆಲ್ಲಾಪಿಲ್ಲಿಯಾಗಿ ಬೀಳು ; ಅಸ್ತವ್ಯಸ್ತವಾಗಿ ಚೆದರಿ ಬೀಳು : "ಪಡಲಿಡು(ಪಡಲ್ + ಇಡು)-ವಿಕೀರ್ಣಪತನೇ(ಚೆದರಿ ಹೋಗು)" (ಶಮಧಾ) ; ನಿಚ್ಚಂ ಧರಾಧೀಶರಂ ಪಡಲಿಟ್ಟಂತಿರೆ ಮಾಟ್ಪಿನೋವದೆ ಪಯಿಂಛಾಸಿರ್ವರಂ ಯುದ್ಧದೊಳ್ (ಪಂಪಭಾ. ೧೦-೨೫) ; ಮಡುವಿಡುವ ಜಲಧಿಯಂ ಕಡೆವ ಕಡೆಯೊಳ್ಮೂಡಿ ಘುಡುಘುಡಿಸಿ ಪಡೆಯ ಪಡಲಿಡೆ ಕೆಡಪುವುದ ತುಡುಕಿ ಪಿಡಿದೊಡನೆ ಪೊಸೆದು ಕೊರಳೆಡೆ ತೊಡೆದ ಹಂಪೆಯ ಮೃಡಂ ಬಿಡದೆ ಸಲಹುಗೆಮ್ಮ (ಹಚಶಾ. ೧-೨) ; ಪಚ್ಚೆಯ ಪಾಸಱೆಯೊಳ್ ಭಾಸ್ವಚ್ಚಾರುಮರೀಚಿರಾಜಿ ಪಡಲಿಟ್ಟಾಗಳ್ ಬೆಚ್ಚರದಿಂ ಪುಟನೆಗೆದವೊಲಚ್ಚಿಗೆ ಸೊಬಗಿತ್ತುದಮರ್ದ ಕೆಂದೆನೆಗೊಂಚಲ್ (ಉದ್ಭಟ. ೩-೧೪) ; ಪಡಲಿಡೆ ತೇರ್ಗಳಂ ಪೊಡೆದು ಸಾರಥಿಯಂ ತಿವಿದು . . . ಇದಿರಾಂತ ತದ್ರಥಿಕರಂ ತಲೆಗೊಂಡನಖಂಡವಿಕ್ರಮಂ (ರಾಜಶೇ. ೬-೧೦೨). ೨. ನಾಶವಾಗು ; ಸಾಯು : ಪವನಜನಿಂದೆ ಕೌರವಕುಲಂ ಪಡಲಿಟ್ಟ ವೊಲಕ್ಕುಂ (ಪಂಪಭಾ. ೧೦-೬೩) ; ತನುಮಧ್ಯೆಯರ್ ಮನೋಜನೊಳದಿ

ರೊಡ್ಡಿ ಕಾದಿ ಪಡಲಿಟ್ಟವೊಲಿರ್ದರನೂನನಿದ್ರೆಯಿಂ (ದಶಕು. ೧೧–೧೧) ; ಕಡುಗುದುರೆ ಕೂರಾನೆಗಳ ದಳದೊಡನೆ ಕಾಳಯವನು ಜಗಳವನು ಕೊಡಲು ಪಡಲಿಟ್ಟವು ಮುರಾರಿಯ ಕೋಲ ಖುರಪುಟಿಕೆ (ಸಾಳ್ವಭಕ. ೨೩–೩೯) ; ಇಂತೀ ಸಪ್ತತಂತುವಿಂ ಪಂಚಪಾತಕಂಗಳುಮೊರ್ಮೊದಲೊಳೆ ಪಡಲಿಡುಗುಂ (ರಾಮಾಶ್ವ. ೧೪–೨೮). **ಪಡಲಿರಿಸು** = ಮಲಗುವಂತೆ ಮಾಡು ; ಮಲಗಿಸು : ನಿಜಸತಿಯೊಡಲನೊಯ್ಯನೆ ತನ್ನ ಕರಯುಗದಿಂದ ತೆಗೆದೆತ್ತಿ ತೊಡೆಯ ಮಂಚದೊಳೊಯ್ಯನೊಯ್ಯನೆ ಪಡಲಿರಿಸಿದನು (ಅಜಚ. ೩–೪೧). **ಪಡಲ್ಗೆಡೆ** = ಚೆದರಿ ಹೋಗು ; ಚೆಲ್ಲಾಪಿಲ್ಲಿಯಾಗಿ ಬೀಳು : ನಡುತುಂ ಮೊಗಮಂ ಪೇಚಕದೆಡೆಯಿಂದೊಂದೊಂದೆ ನಾರಚಂ ನುಸುಳೆ ಪಡಲ್ಗೆಡೆದುದಿಭಮಾಲೆ ಜೀವಮುಮೊಡಲಿಂ ಬೇಱಲ್ಲದಂತೊರ್ಮೆಯೆ ಧುರದೊಳ್ (ಜಗವಿ. ೧೨–೨೦). **ಪಡಲ್ದಾಣ** = ಮಲಗುವ ಸ್ಥಳ : ಊರೂರ್ಗಳ್ದಪ್ಪದೆ ಮಾದಾರಂ ಬೆಳೆವತ್ತರಂ ಪಡಲ್ದಾಣಮನಾಹಾರ್ಯಮ ಸಾರ್ವಜೆಯುಮನೀವಾರಿತವರ್ಮಾರ್ಕೀವರೆಂದುಮಾ ನಾಡವರ್ಗಳ್ (ವರ್ಧಮಾ. ೧೧–೮). **ಪಡಲ್ವಡಿಸು, ಪಡಲ್ಪಡಿಸು** = **೧.** ಮಲಗುವಂತೆ ಮಾಡು; ಮಲಗಿಸು : ತುಡುಕಿ ತುಱುಂಬನೀಟಿದ್ದಲೆಗೆ ಸಿಲ್ಕಿಧೆಯೆಂದಲರ್ವಾಸಿನೊಳ್ ಪಡಲ್ವಡಿಸಿ (ಚಕವಿ. ೬–೨೬೨). **೨.** ಚೆದರಿಸು; ಚೆಲ್ಲಾಪಿಲ್ಲಿಯಾಗುವಂತೆ ಮಾಡು; ದಿಕ್ಕುಗೆಡಿಸು; ದಿಕ್ಕಾಪಾಲಾಗಿಸು:ದೇವರನಡಿಗೆಜಗಿಸಿ ಸಕಳಾವನಿತಳದಟರಂ ಪಡಲ್ವಡಿಸಿದ ಶೌರ್ಯಾವಷ್ಟಂಭದೊಳಾನಿರೆ ಗೋವಳಿಗಂಗಗ್ರಪೂಜೆಯಂ ನೀನ್ ಕುಡುವಾ (ಪಂಪಭಾ. ೬–೪೭); ಹರಿ ಬಾಲಕನಾದೊಡಂ ಪಡಲ್ವಡಿಸನೆ ಗಂಧಸಿಂಧುರಘಟಾವಳಿಯಂ (ಪಂರಾಮಾ. ೪–೪೦) ; ಬಡಿವೆನಿಂದ್ರನ ತಡೆಗಡಿವೆನಗ್ನಿಯ ಪಡಲ್ವಡಿಪೆ [ಪಾಠಾಂ. ಲ್ವಿಡಿವೆನೆ]ಯಮನ ನೈರುತಿಯ ಕೊಡಹಿ ವರುಣನ ಕಂಗೆಡಿಸಿ ವಾಯುವ್ಯನ ಪಿಡಿದು ತಹೆನುವಹಿಲದಲಿ(ತ್ರಿಪುಸಾಂ ೧೧–೧೨೭); ಹರಿಮುಖ್ಯಾಮರರಂ ಪಡಲ್ವ[ಪಾಠಾಂ:ಲ್ವಿ]ಡಿಸಿ ಲೋಕಾನೀಕಮಂ ಪರ್ಬಿ. . . ದೇವಸತಿಯರ್ ಸೀಮಂತಸಿಂಧೂರರಾಗರಜಶ್ರೀಯನದೆಂತು ತಾಳ್ದಪರೊ (ರಾಜಶೇ. ೩–೩೯). **೩.** ಹಾಳುಮಾಡು; ನಾಶಮಾಡು : ಖಳಕರ್ಮಾಷ್ಟಕಮಂ ಪಡಲ್ವಡಿಸಿ ಸಂಸಾರಾಬ್ಧಿಯಂ ದಾಂಟಿ ನಿಶ್ಚಳಸೌಖ್ಯಾಸ್ಪದಮಂ ತ್ವದೀಯಜನಕಂ ಕೈಕೊಂಡೊಡೀ ದೇವಸಂಕುಳವಿಂದ್ರಂಬೆರಸಾಡಿದಪ್ಪುದು (ಆವಿಪು. ೧೭–೫೫) ; ತರಳವಿಶಾಲಲೋಚನದ ಬೆಳ್ಪು . . . ಕಣ್ಗೆವಂದಿರೆ ವಿಟರಂ ಪಡಲ್ವಡಿಸಲೆಂದು ಮನೋಜನ ದಾಟಿ ಬರ್ಪವೊಲ್ ಪರಮಜಿನೇಂದ್ರನೋಲಗಕೆ ಬರ್ಪ ವಿದಗ್ಧೆಯರೊಪ್ಪಿ ತೋಱಿದರ್ (ಧರ್ಮಾಮೃ. ೫–೪೮) ; ಲಯಕಾಲಾಭೀಳಭೈರವಾಕಾರದಿಂ ಪಡೆಯೆಲ್ಲಮಂ ಪಡಲ್ವಡಿಸುತುಂ ವೀರರಾಕ್ಷಸಾಕಾರದಿಂ ಬಲಮೆಲ್ಲಮಂ ಭಯಂಗೊಳಿಸುತ್ತುಂ (ಶಾಂತೀಶ್ವ. ೮–೧೦೧ ಪ) ; ಪೊದಲ್ದು ಪೊಯ್ ಪುಲಿಯನಿಟ್ಟೆಯೊಳಾನೆಯನಿಟ್ಟು ನೀಂ ಪಡಲ್ವಡಿಸು (ವಂಕಮು. ೪–೧೨). **೪.** ಕೆಡಹು ; ಬೀಳಿಸು : ಭುಜಬಳಗಂಗಪೆರ್ಮ್ಮಾಡಿ ಬರ್ಮ್ಮದೇವ ಬಳವದ್ವೈರಿಗಳಂ ಪಡಲ್ಪಡಿಸಿ ಗೆಲ್ದುಗ್ರಾಜಿಯೊಳು ಮಾಣ್ದನೇ (ಎಕ. VII, ಶಿಮೊ. ೫೭–೩೭ ; 1115) ; ಅರಿ ಹರಿಣಂಗಳಂ ಗ(ಜ)ಱಿ ಬೆರ್ಚಿಸಿ ವೀರ ವಿರೋಧಿಗಂಧಸಿಂಧುರಗಣಮಂ ಪಡಲ್ಪಡಿಸಿ . . . ವೀರಲಕ್ಷ್ಮಿಯೆಂಬುರುವನ ಸಿಂಹಿಯಂ ಸ್ವಭುಜಪಂಜರದೊಳ್ ಸೆಱೆಗೆಯ್ದನಾ ನೃಪಂ (ಪುಷ್ಪಪು. ೯–೩೭). **ಪಡಲ್ವಡು, ಪಡಲ್ಪಡು** = **೧.** ಚೆಲ್ಲಾಪಿಲ್ಲಿಯಾಗು: ಬಲ್ವರಿಕೆಯೊಳರಿನೃಪರ ಪಡಲ್ವಡೆ ತಳ್ತಿಱಿದು ರಣದೊಳಾ ವಿಕ್ರಮುಮಂ ಸೊಲ್ವಿನ ಮಾರ್ಜಿಸಿದಂ ನಾಲ್ವತ್ತೆರಡಱಿಕೆಗಾಳೆಗಂಗಳೊಳೀತಂ (ಪಂಪಭಾ. ೧–೨೫); ತುರಗದಳಂ ಪಡಲ್ವಡೆ ಕಡಂಗಿ ಘಟಾವಳಿ ತಾಗಿ ಮತ್ತೆ ನಿತ್ತರಿಸದೆ ಭೀತಿಯಿಂ ಪೆಳಱಿ ಬಾಯಿವಿಡೆ . . . ಸಂಗರರಂಗಭೂಮಿಯೊಳ್ಪರಿದುದು ಭಾಪ್ಪು ಭಾಪ್ಪು ಮಝು ಭಾಪ್ಪೆನಲಂಣನ ಗಂಧವಾರಣಂ (ಎಕ. VIII, ಸಾಗರ. ೧೦೯–೨೫ ; 1042) ; ಕೇರ ಗೊಟ್ಟಿ ಕರಂಜದ ಬೀಜಂ . . . ಪೂಸುಗೆ ಬೆಚ್ಚನೆ ಮಾಡಿ ನೀರ್ ಸೋರುತಿರ್ಪ . . . ಪುಣ್ಣಳ್ ಕ(ಖ)ಜ್ಜಿ ಕಜಂಗಿದ ತರ್ದುಗಳ್ ನೀರದಂ ಪವನಂಗೆ ಪಡಲ್ವಟ್ಟೋಡುವವೋಲ್ ಪರೆದೋಡುಗುಂ (ಅಶ್ವಶಾ. ೧೨–೨೨) ; ಆ ಪೊಟಿಲಂ ಬಳಸಿ ಬಲ್ಪೊಟಿ . . . ಪಡಲ್ವಡುವ ಪಲಪಕ್ಕಿಗಳ ಮೊತ್ತಮಂ ತುತ್ತಲೆಂದು ಸಿಡಿವ ಸೀರ್ವಿರ್ಪಾನ್ಗಳಿಂ . . . ಅತಿಭೀಕರಮೆನಿಸಿಯಲಂಘನೀಯಮಾಗಿರ್ಪುದು (ಚಿಕಪಂ. ೪–೧). **೨.** ಹಾಳಾಗು ; ಧ್ವಂಸಗೊಳ್ಳು : ಭೀಮನುಮೊತ್ತಿ ಕಿಟ್ಟಿ ಬೇರೊಡನೆ ಮಹೀಜಮೊಂದನಿಡೆಯುಂ ಬಿಡೆ ಪೊಯ್ಕೆಯುಮಾ ಬನಂ ಪಡಲ್ವಡುತಿರೆ ಕಲ್ಲೊಳಂ ಮರದೊಳಂ ಬಡಿದೊಯ್ಯನೆ ಜೋಲ್ದ ದೈತ್ಯನಂ ಪಿಡಿದು . . . ಸೀಳ್ದು ಬೀಸಿದಂ (ಪಂಪಭಾ. ೩–೧೫) ; ಕುರುನೃಪಾನೀಕಂ ಪಡಲ್ವಟ್ಟು ಜೀರಿಗೆಯೊಕ್ಕಲ್ಗೆಣೆಯಾಗಿ ಬಿದ್ದ ಭಟರಿಂ ಬಿದ್ದಶ್ವದಿಂ ಬಿದ್ದ ದಂತಿಗಳಿಂದಂ ಜವನುಂಡು ಕಾಱಿದವೊಲಾಯ್ತೆತ್ತಂ ಕುರುಕ್ಷೇತ್ರದೊಳ್ (ಗದಾಯು. ೩–೨) ; ನೇರ್ದಿಕ್ಕೆ ಸರ್ವಾಂಗಮಂ ಶರಜಾಲಂ . . . ಕೂಡೆ ಬಿಲ್ವಡೆ ಪಡಲ್ವಟ್ಟಿತ್ತು ಸಂಗ್ರಾಮದೊಳ್ (ಪಂರಾಮಾ. ೧೩–೪೭) ; ನೆಟ್ಟನೆ ನಡೆಯುತ್ತೆ ಪಡಲ್ವಟ್ಟರ ಪೇರಟ್ಟೆಗಳನೆ ಮೆಟ್ಟುಗೆಗೆಯ್ದಾ ತಿಟ್ಟನೊಳಿಟ್ಟೀಣಿಗಳಂ ಕಟ್ಟುಜದಿಂ ದಿಟ್ಟರಡರ್ದರಟ್ಟೆಳೆವರೆಗಂ (ಚಕವಿ. ೨–೧೦೯). **೩.** ಕುಗ್ಗು ; ಕುಸಿ; ಬಾಗು : ಕೆಡೆಮೆಟ್ಟ ತಜ್ಜನಾರ್ದನನದನೇಱಿ ಪಟ್ಟರೆ ಮಹೋರಗನ ರ್ವಿಸುವುರ್ವುಗೆಟ್ಟು ತೊಟ್ಟನೆ ಪೆಡೆಗಳ್ ಪಡಲ್ವಡಲೆ ಪೊಂಗಬಾದಿರ್ಪುದುಂ (ನೇಮಿಪು. ೬–೧೧೮) ; ತಳ್ತೈಕಿಲ ಭರದೆ ಪಡಲ್ಪ[ಪಾಠಾಂ. ಲ್ವ]ಟ್ಟು ಗೇಣಾಗಿ ಪಾಂಥರ್ತೊಡೆತೋಳ್ಗಳ್ಕೂಡೆ ಜಾನುಪ್ರಹಿತಶಿರರದೇನಿರ್ದರೋ ಶೀತಭೀತರ್ (ರಾಜಶೇ. ೯–೨೨). **೪.** ಸುರಿ ; ಚೆಲ್ಲು ; ಸೋರು : ಮಿನುಪ ತಟಿದ್ವಿಲೋಚನದ ಶಕ್ರಶರಾಸನಶೃಂಗದಂಬುದಸ್ವನಬಹುಹೂಂಕೃತೋನ್ನತಿಯ ಮೇಘಘಟೋಧ್ನಿಯನಿಂದ್ರಗೋಪನೊಯ್ಯನೆ ಕಱೆಯಲ್ಪಡಲ್ಪಡುವ ಪಾಲ್ಗಡಲ ಧಾರೆಯದೆಂಬ ಪಾಂಗಿನಿಂ ಘನತರಮಾದ ವೃಷ್ಟಿ ಸುರಿದತ್ತು ಧರಾತಳದೊಳ್ನಿರಂತರಂ (ಉದ್ಭಟ. ೯–೧೩೭). **ಪಡೆಪೊಯ್** = ಬೀಳುವಂತೆ ಹೊಡೆ; ಕೆಡೆಯುವಂತೆ ಏಟು ಕೊಡು: ಮುಳಿದಿದಿರಾದುದಾದೊಡಿದಿರಂ ಮುಳಿಸಿಂದಮನನ್ತಪಾಳನಾಗಳೆ × ×ಕೆಯ್ಯುಮಾಗಳೆ ಕಡಂಗುಗುಂ . . . ಆಗಳೆ ಪಡೆಪೊಯ್ಯುಮಾಗಳೆ ಪೊರಳ್ಚುಗುಮಾಗಳೆ ಕೊಂದು ಕೂಗುಗು (ಕಇ. V, ೧೪–೭; 1099). [ದೇ.॥ತಮಿ. ಪಟು ; ಮಲ. ತೆಲು. ಪಡು; ಕೊಡ. ಕೋಲಾ. ಪಡೆ]

**ಪಡು₂**, ಪಡವು₁, ಹಡು₂ (ನಾ). **೧.** ವ್ಯವಸಾಯ ಮಾಡದೆ ಪಾಳುಬಿದ್ದ ಭೂಮಿ ; ಸಾಗುವಳಿಯಿಲ್ಲದ ನೆಲ ; ಬೀಳುನೆಲ: ಚಕ್ರವರ್ತಿಗಳ ಸಿಂಹಪೀಠವು, ಜಗದ್ಗುರುಪೀಠನ, ಕಲ್ನಾಟಿಸಿದ ವೀರರಾಡಿದಾಡುಂಬೊಲವು, ಮಾಸತಿಯ ನಿಸದಿಗೆಯ ಭೂಮಿ, ಪಾಳ್, ಪಡು, ಬರಡು (ಉದ್ಯಾಲೆ.೬೫–೧೫). 'ಪಡುಬೀಳು' ಪರಾ. **೨.** (ಸೂರ್ಯನು) ಮುಳುಗುವ ದಿಕ್ಕು; ಪಶ್ಚಿಮದಿಕ್ಕು: ದಕ್ಷಿಣಸ್ಥಾನ್ದಿಶಿ ಪಡುವ ನೋಡಿ ಪೋದ ಪೇಱೊಜಿಪ್ಪೆಯೆ ಅನ್ತೆ ತುಟ್ದಲ ಪೇಱೊಜಿಪ್ಪೆಯೆ ಕೆಂಭರೆಯ ಗುಮಿ ಪುಣಸೆಯೆ (ಎಕ. XVI, ತಿಪಟೂ. ೧೪೦–೬೮ ; ಸು . 900); ನುಡಿವಳಿಗೆ ನರನ ರಥನಂ ಪಡುವೆಣ್ಣಾವುದುವರಂ ಸಿಡಿಲ್ವಿನಮೆಚ್ಚಚ್ಚುಡಿಯೆ ಭುಜಬಲದೆ ಹರಿಯುರವೆಡೆಯಂ ಬಿರಿಯೆಚ್ಚು ಮೆಱೆದನಳವಂ ಭೀಷ್ಮಂ (ಪಂಪಭಾ.೧೧–೨೦) ; ಪಡುವ ಮೊಗವಾಗಿ ರೋಮನುಂ ಗಡ ತಲೆಯಂ ಪೆಕ್ಕಲೊಡನೆ ಸಿರಿಯುಂ ಪೋದಂ ತೊಡನಾರು ನುಡಿಪರುಮಿಲ್ಲಡವಿಗೆ ಲಕ್ಷ್ಮಣನೆ ಪೋದನೆಂಬರ್ ಮೂಢರ್ (ಸಪುಪ.ಅನುಬಂಧ I, ೩೪೩–೪೭); ಜ್ವರ-ಜಾಪತ್ತು ಎಂಬುದಕ್ಕೆ ಮೂಡು ಪಡು ಎಲ್ಲವೂ ಒಂದೇ (ಮುರಸು. ೬೧). **ಪಡವು₁ : ೧.** ಹಾಳು ಬೀಳ

ಪಡವು ಬಂಜೆ ಹಕ್ಕಲೊಕ್ಕಲೆಲ್ಲವೂ ವ್ಯಾಪ್ತವಾಯ್ತು ಹೂವ ಹೂವ ರಾಸಲೀಲೆಗೆಲ್ಲವೂ (ಸಖೀಗೀ. ೮೧-೧೧). **ಹಡು$_2$ :** ೧. ನಿಡಿಲು ಹಕಲು ಹಡು ಸಹವಾಗಿ (ಸೌಇಎ. ೧೯೩೨, ಉಡುಪಿ. ೩೨೩-೨೪; 1364); ಗದ್ದೆ ಮನೆ ಹಕ್ಕಲು ಹಡು ಬೆಟ್ಟುವೆಂದು ಮರ ಫಲ ನಿಧಿ ನಿಕ್ಷೇಪ ಜಲ ಪಾಶಾಣ ಅಕ್ಷೀಣಿ ಆಗಾಮಿಕೆ ಸಿದ್ಧ ಸಾಧ್ಯಯೇನುಳ್ಳಂಥಾದು ಸಹಿತವಾಗಿ . . . ಧಾರಾಪೂರ್ವ್ವಕವಾಗಿ ಮೂಲವನುಯೆಜಿದು ಕೊಟೆರು (ಸೌಇಇ. IX-ii, ೪೪೯-೧೬ ; 1444). ೨. ಕೂಚಿಗೋಳನ ಹಿರಿಯ ಕೆಜಿೆಯ ಹಡುವ×××ರೆಯಾಗಿ ಬಡಗಣ ಮೂಡಣ ಕೋಣಿ ಅಂತು (ಸೌಇಇ.IX-i,೨೪೭-೪೪ ; 1147) ; ಹಡುವ ತೆಂಕಲಾಗಿ ಹಡುವ ಗೋಡಿಯೊಳ ನೂಜು ಕಂಭ ಬೆದ್ದಲು ಸಹಿತ . . . ಶ್ರೀಕೇಶವದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಹೆಗ್ಗಡೆಲಕುಮಯ್ಯಂ ಕೊಟ್ಟ ವ್ರಿತ್ತಿ (ಎಕ. V, ಹಾಸನ. ೬೬-೪೩ ; ಸು. 1170 ?).

**ಪಡುವಣ್** = ಸೂರ್ಯನು ಮುಳುಗುವ ದಿಕ್ಕು; ಪಶ್ಚಿಮ ದಿಕ್ಕು : ಮೇರು ಪಡುವಣ್ಗೆ ಸೀತಾತೀರಂ ತೆಂಕಣ್ಗೆ ನೀಲಗಿರಿ ಬಡಗಣ್ಗೆ . . . ಸೀಮೆಯೆನಿಕ್ಕುಂ(ಮಲ್ಲಿಪು.೨-೧೨). **ಪಡುವಣ, ಹಡುವಣ** = ೧. ಪಶ್ಚಿಮದಿಕ್ಕಿನ; ಪಶ್ಚಿಮಕ್ಕೆ ಇರುವ : ಹಳಮುಖನೆಂಬ ಪಾರ್ವಂ . . . ಬೆಟ್ಟದ ಪಡುವಣ[ಪಾಠಾಂ. ಪಕ್ಕಣ]ಕೆಯ್ಯನುಬಿಲ್ ಪೋಗುತ್ತಂ ತನ್ನ ಕೆಯ್ಯ ಸಾರೆ (ಪಡ್ಡಾರಾ. ೧೫೨-೧೭) ; ಅಬುಜಪ್ರತತಿಯುತ್ಸಹವಡಗೆ ಪಡುವಣ ಕಡಲೊಳಿನನಿಳಿದ (ಕುಪ್ಯಾಭೀ. ೧-೧೫) ; ಪಡುವಣ ಮನೆಗೆ ಮೂಡಣ ದೀಪ (ಗಾದೆ) ; ಮಾಣಿಕ ಓಜರ ಮೈಲಬೋವಂಗೆ ಕಟ್ಟಿಯ ತೆಂಕಣೇರಿಯಡಿಯ ಕಾಲ ಹಡುವಣ ಕೂಡಲಿಂ ಮೂಡಲಾ ಗಳೆಯ×××ಸರ್ವನಮಸ್ಯಂ ಮಾಡಿ ಕೊಟ್ಟನ್ (ಎಕ. VIII, ಸಾಗರ. ೧೦೯-೬೬; 1042) ; ಸಾವಿದೇವಿಯ ಕೆಜಿೆಯ ಬಡಗಣ ಕೋಡಿಯ ಕಲ್ಲಿದೇವರ್ಗ್ಗೆ ಗೌಡುಗಳು ಬಿಟ್ಟ ಗದ್ದೆ ಸ ೫ ಯಾ ಕೆಜಿೆಯ ಹಡುವಣ ಹಿರಿಯ ಕೆಯಿ ಒಂದು (ಎಕ.XII, ಚಿಕ್ಕನಾ. ೧೭-೭೫; 1215?). ೨. ಪಶ್ಚಿಮದಿಕ್ಕು : ಕರಣಸಹಿತಮಾಗಿ ಹವಿರಕ್ಷತ ಗಂಧಪುಷ್ಪಾದಿಗಳ್ಗೆ ಕರ್ಮ್ಮಗಳೂರಾ ಪಡುವಣ (ಇಆ. XI, ೭೦-೧೮ ; ಸು. 567) ; ನೀಲಾಚಲಕ್ಕೆ ತೆಂಕಣದು ಬೆಡಂಗೊಡರಿಪ ವಕ್ಷಾರಾದ್ರಿಗೆ ಪಡುವಣದು ಸುಜನನಿಲಯಮುಪಗತವಿಲಯಂ (ಆದಿಪು. ೧-೫೬) ; ಪಡುವಣಕೆ ಸಂದ ರವಿ ಮೂಡಣದಿ ಎದ್ದ (ನೆಲಮು. ೫-೧೮). **ಪಡುವಣಂ** = ಪಶ್ಚಿಮಕ್ಕೆ ಸಂಬಂಧಿಸಿದವನು; ಪಶ್ಚಿಮದವನು : ಅಣ್ಪ್ರತ್ಯಯದ ದಿಗ್ವಾಚಕಂ ಪುಲ್ಲಿಂಗಮಪ್ಪೆಡೆಯೊಳ್ ಅಕಾರಮಂ ಕೈಕೊಳ್ಗುಂ . . . ಮೂಡಣಂ, ತೆಂಕಣಂ, ಬಡಗಣಂ, ಪಡುವಣಂ (ಶಮದ.೧೧೧ಪ್ರಯೋ); ಮೂಡಲಾದಂ ಪುಟ್ಟಿದಂ ಮೇಣ್ ಮೂಡಣಂ. ಏವಂ ತೆಂಕಣಂ,ಪಡುವಣಂ. . . ಇತ್ತಣಂ (ಶಬ್ದಾನು. ೪೨೧ ಪ್ರಯೋ). **ಪಡುವಣ ಗಿರಿ** = ಪಶ್ಚಿಮಬೆಟ್ಟ ; ಪಶ್ಚಿಮಾದ್ರಿ : ತರಣಿಯಿಪ್ಪವ ಬಿಟ್ಟು ಕ್ಷಮೆದಾಳಿ ಪಡುವಣ ಗಿರಿಯತ್ತ ಸಾರಿದನಂದು (ಜೀವಂಸಾಂ. ೨-೭೩). **ಪಡುವಣ ಗೊಂಟು, ಹಡುವಣ ಗೋಟು** = ಪಶ್ಚಿಮ ದಿಕ್ಕು ವರುಣಃ = ಪಡುವಣ ಗೊಂಟೆ ನಾಳ್ದಂ (ಕಾಶಕ್ಯ. ೨೦೮) ; ಅಲ್ಲಿಂ ಪಡುವಲ್ ತೆಂಕಣ ಹಡುವಣ ಗೋಟಿನ ಮೇರೆ ಬೆದವಟ್ಟಿಯ ಹೊಲವೆರೆಯ . . . ಹೊರೆಯಣ ಕವಿಲೆಯ ಕಲ್ (ಕಇಆ. ೧೨-೭೬-೫೬ ; 1170). **ಪಡುವಣ ಬಡಗಣ ದೇಶ** = ವಾಯುವ್ಯದಿಕ್ಕಿನ ಪ್ರದೇಶ ; "ಪಶ್ಚಿಮೋತ್ತರ ದೇಶ" (ನಾಚಿರಾ. ೬). **ಪಡುವಣಿಗ** = ಪಶ್ಚಿಮದೇಶದವನು ; ಪಾಶ್ಚಾತ್ಯ; ಪಾಶ್ಚಿಮಾತ್ಯ : ನಮ್ಮ ಆಚಾರ್ಯರೊಡನೆ ಹೋಲಿಸಿದರೆ ಧರ್ಮದೃಷ್ಟಿ ಎರಡೂ ಕಡೆಗೆ ಇಲ್ಲದಿದ್ದರೂ ಪಡುವಣಿಗರಲ್ಲಿ ಎದ್ದು ಕಾಣುವ ಕೆಲವು ಸದ್ಗುಣಗಳನ್ನು ನಾವು ತಿಳಿದುಕೊಳ್ಳಬಹುದು (ಸಮಜೀ. ೧೫ ಪೀಠಿಕೆ).

**ಪಡುವಣ್ಣಾ ಸೀಮೆ** = ಪಶ್ಚಿಮದ ಸೀಮೆ : ಮನೆದಾಣಮುಂ ಪಲಗೆಗಣ್ಬಂ ಮೊದಲಾಗೆ ಕಟಿಸಿಯುಂ ವಡಗಣ್ಣಾ ಸೀಮೆ ಪೆರಮುಜಿ ಪಡುವಣ್ಣಾ ಸೀಮೆ ತಣ್ವಳ್ಳಿಗಾರ ಪಾಟಿ (ಎಇ. XXI, ೭೯-೧೨ ; ಸು. ೮ನೆಯ ಶತ). **ಪಡುವಲ್, ಪಡವಲು, ಪಡುವಲು, ಪಡೂಲು, ಹಡುವಲ್, ಹಡುವಲು** = ಪಶ್ಚಿಮ ದಿಕ್ಕು: "ಪ್ರತ್ಯಚ್ ಪ್ರತೀಚಿಯೆನೆ ಪಡುವಲ್ [ಪಾಠಾಂ. ವಣ]" (ಮಂಗರಾ. ೧೭-೧೯) ; ಬಡಗಲ್ ಮೂಡಲ್ ತೆಂಕಲ್ ಪಡುವಲ್ ವಿಪ್ರಾದಿ ವರ್ಣಗೃಹದೊಳ್ ಮುನ್ನಂ ನಡುವುದು ಕಂಭಮನೊಂದಂ (ಲೋಕೋಪ. ೩-೨೭); ಪಡುವಲ್ ಚಂದ್ರನ ಬೆಳ್ವೆಳಗೊಡರಿಸು ವರುಣೋದಯಾಂಶು ಮೂಡಲ್ ಕೈಕೊಂಡೆಡೆಯಣ ತಮವೊಪ್ಪಿದುದಿರುಳುಡುಗಿದ ಕತ್ತಲೆಯ ಬಟಿಯ ಮಜಿಗಳಿವೆಸಿಸಲ್ (ಅನಂಪು. ೮-೬೨) ; ಪಡವಲ ಗಡಿಯ ಕಡೆಯ ತರಣಿ ನೋಡಿ (ವಿವಾಕ್ಯ. ೭೫-೬) ; ಯಿಶಾಂನ್ಯ ಆದಿಹೊಳಲವಾಡಿಯ ಸೀಮೆ ದೇವರಾಯನ ಪುರದ ಚಿಕಯನ ಕೆಜಿೆಯ ಏರಿ ಮೊದಲಾಗಿ ಅಂಕವ್ವೆ ದೇವಿಯ ಪಾಲಪರಿಯಂತರ ಹಾಕಿದ ಸೀಮೆಗಲ್ಲಿಂದ ಪಡುವಲು ಸಲುಉದು(ಮೈಆರಿ. ೧೯೪೬, ೧೮-೧೨; 1488) ; ನಾಗರಸರು ಪುರದಿಂ ಪಡುವಲು ತೊಜೆಯ ಕೂಡಿದ ಹಳ್ಳ ಸೀರುವರಿ ಎ ಮೇರೆಯಾಗಿ ಮೇಗೆ ಕಲು ಕಟಗಗೆಜಿ ಬಸವಗೋಡಿ ಬಡಗಲು ಮೊಸರಗುತ್ತಿ ಎ . . . ಕೊಟ್ಟ ಸಾಸನ (ಎಇ. XXI, ೨-೬೭ ; 1260) ; ಬಿದ್ದುದಗಣಿತಸೇನೆ ಪಡುವಲು ಹೊದ್ದಿದನು ರವಿ (ಕುಪ್ಯಾಭೀ. ೭-೪) ; ಬಪ್ಪಣನು ಪ್ರಭಾಚಂದ್ರರಲ್ಲಿಗೆ ಹೋಗಿ ಸೂರ್ಯನು ಪಡುವಲ್ಲಿ ಬಿದ್ದ ಮೇಲೆ ಆ ಇಬ್ಬರೂ ಅರಮನೆಯಿಂದ ನೇರವಾಗಿ ಬರುವುದನ್ನು ಹೇಳಿದನು (ಸಪತಿ. ೨೦) ; ವಡ್ಡರಹಳ್ಳಿಯೊಳಗಾದ ಚತುಂಸೀಮದೊಳಗೆ ×××ರಿಡ ಪಡೂಲು ಹೊಯಸಣೇಸ್ವರದೇವರ್ಗ್ಗಂ ಬ್ರಂಮೇಸ್ವರದೇವರ್ಗಂ . . . ಧಾರಾಪೂರ್ವಕಂ ಮಾಡಿ ಬಿಟ್ಟ ದತ್ತಿ (ಎಕ. XVI, ಚಿಕ್ಕನಾ. ೫೪-೬ ; 1292) ; ಜಯದೇವಗಾವುಣ್ಡನೂರ ಮೂಡಲ್ ಬಿಟ್ಟ ಪುಣುಸೆ ಹಡುವಲಾಲದ ಮರಂ ಮೇರೆ (ಸೌಇಇ. XI-ii, ೧೨೮-೧೯ ; 1082 ); ಹಡುವಲಡ್ಡವಸುಗೆ ಮೇರೆ (ಎಇ. XIII, ೪೮-೭೮ ; 1112) ; ಅಲ್ಲಿಂದಂ ಹಡುವಲು ಸವಣನ ಕೆರೆಯ ತಾಯಿವಳ್ಳಂ ಮೇರೆ (ಎಕ. VII, ಶಿಮೊ. ೫೭-೬೮ ; 1115) ; ಬುಕ್ಕಜನ ಕೆಜಿಯಿಂದ ಹಡುವಲು ಬೆದ್ದಲು ಮತ್ತರು ಮೂಜು ೩ (ಕಇ. IV, ೧೩-೭೩ ; ಸು. 1165). [<ಪಡು$_1$]

**ಪಡುಂಕೆ** 'ಪಡುಕೆ' ನೋ.

**ಪಡುಕಿನಾರೆ** (ನಾ). ಪಶ್ಚಿಮದ ದಂಡೆ,— ತೀರ : ಮೇಲುಬಾಳಿನ ಆಸೆ ಹೊತ್ತು ತನ್ನಿರಿ, ಅಣ್ಣ, ಆಷಾಢದಲಿ ಕೊಳ್ಳಿದೆವ್ವದಂದ, ಪಡುಕಿನಾರೆಯ ಮಚ್ಚಿಲಗಗಳಿಂದ (ನಡೆಬಂ. ೬೩-೩).

[ಪಡು$_2$ + ಕಿನಾರೆ(<ಕಿನಾರ)]

**ಪಡುಕು** 'ಪಡಕು$_2$' ನೋ.

**ಪಡುಕುಳಿ,** ಹಡುಕುಳಿ (ನಾ). ಮಲಗುವುದೇ ಸ್ವಭಾವವಾಗಿರುವುದು ; ಸೋಮಾರಿಯಾದುದು : 'ಪಡುಕುಳಿಯೆತ್ತು' ಪರಾ. **ಹಡುಕುಳಿ** : "ಗಲಿತಃ = ಹಡುಕುಳಿಯಾದ" (ನೀತಿಪಾ. ೯-೨೧).

[ಪಡು$_1$ + -ಕುಳಿ$_3$]

**ಪಡುಕುಳಿಯೆತ್ತು** (ನಾ). ಮಲಗುವ ಸ್ವಭಾವದ ಎತ್ತು ; ಸೋಮಾರಿಯಾದ ಗೂಳಿ : ಪಡುಕುಳಿಯೆತ್ತು ಕಂಟಿಸುವ ಬಂಟನದೇನುಮನೇನನೆಂದೊಡಂ ಮಿಡುಕದ ತೊತ್ತು (ಸೂಕ್ತಿಸು. ೧೮-೩೨).

[ಪಡುಕುಳಿ + ಎತ್ತು$_2$(<ಎಟ್ಟು$_1$)]

**ಪಡುಕೆ,** ಪಡಿಕೆ$_2$, ಪಡುಂಕೆ, ಹಡಕಿ, ಹಡಕು, ಹಡಕೆ, ಹಡಿಂಕೆ, ಹಡಿಕಿ$_1$, ಹಡಿಕು, ಹಡಿಕೆ$_1$, ಹಡುಕು, ಹಡುಕೆ (ನಾ).

೧. ಕೆಟ್ಟ ವಾಸನೆ ; ದುರ್ಗಂಧ : ಮೊಡೆನಾರ್ಪ ಕೊಟಿದಗುರ್ವಿನ ಪಡುಕೆಗಳ್ (ಪರ್ಧಮಾ. ೫-೩೮) ; ದೆಸೆಗಳೆಲ್ಲಮಂ ಪಡುಕೆಯಿನಿಡಿದಿಡಿದು ತೀವಿದಂತಿರ್ದ ನಾರಕರ ಮೆಯ್ಯ ಪೂತಿಗಂಧಂಗಳುಂ (ಪರ್ಧಪು.೧೧-೪೭ವ). ೨. ಅಮೇಧ್ಯ ; ಮಲ : ಎನಿತೊಳವು ಕೊಟಿವ ಪಡುಕೆಗಳನಿತಱ ದುರ್ಗಂಧಮವರ ಮೆಯ್ಯ ನಿಸರ್ಗಾತ್ಯನುಪಮಘ್ರಾತಿಯ ಪಬುಗಟಿದ ನಾತಮಂ ಪೋಲವನರದೇಂ ಕಿಸುಗುಳರೋ (ಶಾಂತಿಪು. ೭-೧೦೦) ; ಸಮಾಧಿಗುಪ್ತಯತಿಪತಿಗಳಧ್ಯಯನಂ ನಿನಗನಿಷ್ಟಮಾದೊಡದಂ ಮಾಣಿಸ ಲೆಂದು ನಾಯ ಪಡುಕೆಯನಿಕ್ಕಿದೊಡವರ್ನಿನ್ನ ಪಾಪೋಪಶಯಮನಱಿದು ಬಗ್ಗಿಸಿದೊಡೆ ನೀಂ ಬೆರ್ಚಿ ಬೇಗಮದನೆಟಿದು ಕಳೆದು (ಚಾವುಂಪು. ೧೪). ೩. ಹೊಲಸು ; ಕೊಳಕು ; ಹೇಸಿಗೆ : ಒಡಲೆಲ್ಲ ಒಡೆದಾಗ ಕೀವು ರಕುತಗಳು ಬಿಡದೆ ಸುರಿವವು ದುರ್ಗಂಧ ಕಡುಬೇಗದಿಂ ಮನೆಯೆಲ್ಲವು ತುಂಬಲು ಪಡುಕೆಯ ನಾತಕೆ ಪೇಸಿ (ಜ್ಞಾನಚ. ೩೭-೨೪). **ಪಡಿಕೆ₂ : ೧.** ಚಂಡಾಲರ ಕಯ್ಯೊಳ್ ಬೀಟ್ಟು ತೋಲ್‌ಪಂಜರದ ಪಡಿಕೆಯೊಳ್ ನಿಲ್ವ ದುರ್ವಾರದುಃಖೋತ್ಕರಮೆಲ್ಲಂ ನೋಡಲೆನ್ನಿಂದ್ರಿಯನಿವಹದ ದೋಷಂ ದಲ್ (ಕಾದಂಬ. ೭೫೨). ೨. ಪ್ರಾಣಮುಮೊಳ್ಗುಣಂಗಳುಮು ಪೊರ್ಮೆಯೆ ಪೋದೊಡೆ ನಾಯ ಬಾಯ್ಗೆ ತಾಂ ಮಾಣದೆ ಬಂದೊಡಲ್ ಪಡಿ[ಪಾಠಾಂ. ಡು]ಕೆಯೆಂಬರಿದೇಂ ತನು ಕಷ್ಟಮಾದುದೋ (ಜೀವಸಂ. ೧೩೦-೨೪) ; ತೊಡೆಯೊಳಿಳಿದು ಬರುವ ಪಡಿಕೆಗೆ ಕೈಯ ಕಡುಲೋಭ ದಿಂದಿಕ್ಕಿಕ್ಕಿ (ಜ್ಞಾನಚ. ೧೪-೭೪). ೩. ಒಡಲಪ್ಪೊಡಕುಚಿ ನಿಲ್ಲದು ಪಡಿಕೆ ಕರಂ ಜಂತಿನಾಗರಂ ಪೆರ್ವೇಲಿರ್ಪೆಡೆ ಕ್ರಿಮಿಯ ರಾಶಿ ಮೂತ್ರದ ಮಡಕೆ ಯದಂ ನಂಬಿ ಚಪಳರೇಕೆಯೊ ಕಿಡುವರ್ (ಧರ್ಮಾಮೃ. ೭-೧೩೯). ೪. ಕಳಪೆಯಾದ ವಸ್ತು ; ತುಚ್ಛವಾದ ಪದಾರ್ಥ ; ಕಸ : ಪಡುಮಾವೆಂದೆಂದಡವಿಯ ಪಡಿಕೆ[ಪಾಠಾಂ.ಪಡುಕೆ (ಕಿ)]ಗಳಂ ತಂ(ತಿಂ)ದು ತಿಂದು ಜನ್ನದೊಳಾಡಂ ಕಡಿದಿಕ್ಕಿ ಮತ್ತೆ ಸಗ್ಗಂಬಡೆಯಲ್ಕಾಟಿಸುವ ಪಾರ್ವರೇಂ ಗಾವಿಲರೋ (ಚಾವುಂಪು.೨೪೦). **ಪಡುಂಕೆ : ೧.** ಎಜಗವು ಮೃಕ್ತಿಕಂ ಕುಸುಮಧೂಪಜವಾದಿ ಸುಗಂಧವಸ್ತುವಿಂಗೆಜಗುವಪೋಲ ಮೇಧ್ಯದ ಸುಗಂಧದ ಕೆಟ್ಟ ಪಡುಂಕೆಯತ್ತಲ್ (ಜೀವಸಂ. ಪರಿ. ೨೩೪). **ಹಡಕಿ : ೧.** ಹಡಕಿಯ ಕೊಳಕಿನ ತೊಗಲ ಹೊದಿಕೆಯ ಹೊಱಿ ಯೊಳಗೆ ಅಱಿಸಿ ಕಂಡಿಹೆನೆಂಬ ಕುಱುಕರ ನೋಡಾ (ಮೋಳಿಮಾ. ೩೩-೧೩೯). ೫. ತುಚ್ಛವಾದುದು : ಒಡೆಯ ಲಿಂಗಾರ್ಪಿತದೊಳು ಭಿಕ್ಷವೆನ್ನೆ ನಡೆಯಯ್ಯ ಮುಂದಕ್ಕೆಂಬುವೆ ಹಡಕಿ ಮನವೆ (ಪ್ರೈಲಾರ. ೧೯೭-೪). **ಹಡಕು : ೨.** ಹಡಕಿಗೆ[ಪಾಠಾಂ. ಡಿಕೆಗೆ] ಮೆಚ್ಚಿದ ಸೊಣಗ ಅಮೃತದ ಸವಿಯ ಬಲ್ಲುದೆ (ಬಸವ.೩೧೩). **ಹಡಕೆ : ೧.** ಸತ್ತ ಹೆಣನ ಮುಟ್ಟಿ ಮನೆಗಳೊಳಗೆ ಹೂಳಿ ಮತ್ತದರ ಹಡಕೆಯನ್ನು ನಿತ್ಯದಿ ಕುಡಿದು ಹೇಸದೆ ಕೂಳ ತಿಂಬುದು ಎತ್ತಲಿರ್ಪುದು ಹೊಲಗೇರಿ (ಭಕ್ತಿಬ. ೮೭). **ಹಡಿಂಕೆ : ೧.** ಜವ್ವಾದಿಯಾದಿ ಸುಗಂಧವಸ್ತುಗಳಂ ನೋಡದೆ ಯವಕ್ಕೆರಗದೆ ಅಮೇಧ್ಯದ ದುರ್ಗಂಧ ಕೆಟ್ಟ ಹಡಿಂಕೆಯತ್ತಲೆರಗುವವಾ ತೆರದಿ (ಧರ್ಮಾಮೃ. ೧೦-೧೯೯). **ಹಡಿಕಿ₁ : ೧.** "ಪೂತಿಃ = ಹಡಿಕಿ" (ಕಾಶಕ್ಯ. ೨೪೩). **ಹಡಿಕು : ೧.** 'ಹಡಿಕುನಾರು' ಪರಾ. **ಹಡಿಕೆ₁ : ೧.** ಅಮೇಧ್ಯದ ಹಡಿಕೆ [ಪಾಠಾಂ. ಮಡಕೆ] ಮೂತ್ರದ ಕುಡಿಕೆ ಎಲುವಿನ ತಡಿಕೆ ಕೀವಿನ ಹಡಿಕೆ (ಮಹಾದೇ. ಬ. ೪೬-೧೦೮) ; ಹಸಿದೊಡಲು ತಱಿದ ತಲೆ ಕೀಣಿವಲ್ಲುಂ ಹಡಿಕೆಯೆಸೆವ ಬಾಯುಟ್ಟ ತಟ್ಟುಂ (ರಾಘಚ. ೧೩-೪೬) ; ಅವನ ಬಾಯಿಂದ ಉಗುತ್ತಿದ್ದ ಸಾರಾಯಿಯ ವಾಸನೆ ಬೆರೆತ ಉಸಿರಗಬ್ಬು ಹಡಿಕೆಯನ್ನೂ ತುಟಿ ಪಿಟಕ್ಕೆನ್ನದೆ ಸಹಿಸಿ ಕೊಂಡಿದ್ದನು (ಮಲೆಮ. ೨೦೭). ೨. ಪಶುವಿನ ಹಡಿ[ಪಾಠಾಂ. ಪಡು]ಕೆಯ ನಾತಕ್ಕಲಸದೆ ಪರಿದೆಯ್ದಿ ಲಾಗಲೊಯ್ಯನೆ ನಡೆದಂಗಸಮುಸುಖಾಸ್ವದ ಮಕ್ಕುಂ (ಸಮುಪ. ೯-೬೪) ; ಹಂದಿ ಭಕ್ತನಾದರೆ ಹಡಿಕೆಯ ತಿಂಬುದ ಮಾಣ್ಬುದೆ (ಬಸವ. ೩೨-೮೬) ; ಹಡಿಕೆಯ ತಾಣಮೆಯ್ದೆ ಕೊಟಿನೆತ್ತರ ಕೀವಿನ ಭಾಜನಂ . . . ತನುವೆನ್ನದಿದೆಂದು ವಿವೇಕಿಸಂ ಜಡಂ (ಬಾಘಪು. ೫-೩೦) ; ಬಲುವೆಯಾಗಿಯೆ ಭ್ರಮೆಯೊಳೊಂದಿದ ಹೊಲೆ ಮನಕೆ ಹೋಲಿಕೆಯ ಪೇಳುವೆ ಕೊಳೆತು ನಾಱುವ ಹಡಿಕೆಗೆಳಸುವ ಹಳೆಯ ನಾಯಂತೆ (ಅಮೃತ. ೨-೪೨) ; ಹಂದಿ ಹಡಿಕೆಯ ನೆನೆಸಿ ಹಾಳಗೇರಿಗೆ ಹೋಗುವಂತೆ ಪ್ರಪಂಚಿನತ್ತ ಓಡಾಡುತಿರ್ಪುವಯ್ಯ ಎನ್ನ ದುರ್ಗುಣಂಗಳು (ಅಖಂಡೇ. ೯೭-೧೭). ೩. ಮನುಜರಾ ಶುಂಭತ್ವದಿಂ ಹಡಿಕೆಯಾದಂಗಮುಂ ನಾಡೆ ಸಿಂಗರಿಸುತಿರ್ಪರಕಟ (ವೀಸ್ವಪು. ೪-೨೧-೫೬). ೬. ಹೊಲಸು ವ್ಯಕ್ತಿ ; ಕೊಳಕ ; ಶ್ವಪಚ : ಧಾತುಗಾಣಿಸಿ ಕೊಳದ ಮಱಿಡು ಗಳೋತು ನೋಡಲ್ಬಹಳಗೊಱಿಡುಗಳಾತುರದ ಬಾಯ್ಜಡಿತೆಯರು ಹಡಿಕೆ ಯರು ಮೂರ್ತಿಗಳೆ (ದೇವಪು. ೬-೧೭). **ಹಡುಕು : ೨.** ಕೋಳಿಯ ತಂದು ಹಂಜರವ ಕೂಡಿ ಅಮೃತಾನ್ನವನಿಕ್ಕಿ ಸಲಹಿದಡೆ ಅದು ತಾನೆ ಮತ್ತೆ ತಿಂಬ ಹಡುಕಿಂಗೆ ಚಿತ್ತವನಿಕ್ಕುವದ ಮಾಣ್ಬುದೆ (ಬಸವ. ೩೨-೮೬). ೩. 'ಹಡುಕುನಾತ' ಪರಾ. **ಹಡುಕೆ : ೨.** ಹ[ಪಾಠಾಂ. ಪ]ಡುಕೆಯಕೆಲದೊಳ್ಗೋಹಳಿಯೆಡೆಯೊಳ್ ಭೋರೆಂದು ಸಕಳವಿಪ್ರಜನಂಗಳ್ ಬಿಡದೋದುವರೆಂತೋ ಶುಚಿಗೆಡೆಯಾಯ್ತಾ ವೇದಮುಪ್ಪಡಂತೋದುವರೇ (ಸಮುಪ. ೧೧-೧೫) ಅಡವಿಯೊಳಾಡು ಮೇವಡೆ ಹಿಡಿದೊಳ್ಳಿದಪಪ್ಪು ವೆಲ್ಲಮಂ ತಿನ್ನದೆ ತ್ರಾಂ ಬಡಮುಱಿಯೊಂದಂ ತಂದಡೆ ಹಡುಕೆಗೆ ನಾಯಿ ಬಪ್ಪ ತೆಱದಿ ದೇವತೆ ಬರ್ಪಳು (ಶ್ರಾವಕಾ. ೧೦೬-೧೨).

[ದೇ.॥ ತುಳು. ಪಡಿಕೆ, ಪಟಿಕೆ]

**ಪಡುಕೆನಾಱು,** ಪಡಿಕೆನಾಱು, ಹಡಿಕುನಾರು, ಹಡಿಕೆನಾಱು(ಕ್ರಿ). ದುರ್ಗಂಧವನ್ನು ಬೀರು ; ದುರ್ವಾಸನೆಯನ್ನು ಹೊರಸೂಸು : ಎಲ್ವಿನೊಳ್ ಮಾಡಿದ ಪಸಿಯ ತೊವಲೊಳ್ ಪೊದಯಿಸಿದ ಪಡುಕೆನಾರ್ಪ ಗುಡಿಸಿಲೊಳಿರಿಸಿದೊಡೆ (ಜೀವಸಂ. ೫೬-೩೬ ವ) ; ಯೋನಿಗಳಧೋವಕ್ತ್ರಂ ಗಳಾಗಿರ್ಕುಮಾನಗಮತ್ಯಂತಜುಗುಪ್ಸೆಯಿಂ ಪಡುಕೆನಾಱುತ್ತುಂ ಕ್ರಿಮಿ ಶ್ರೇಣಿಯಿಂ (ಶಾಂತೀಶ್ವ. ೯-೭೫) ; ಉಂಬರಕುಪ್ಪಂ ಮುಗಿದೊಡೆ . . . ಬಾತು ಕೀತೊಡದೆಲ್ಲಂ [ಪಿಂಬ]ರಿದು ಪಡುಕೆನಾಱುತ್ತಂ ಬೇಗಂ ಪುಟಿದು ಕೊಟಿದು ನವೆಯುತ್ತಿರ್ದಳ್ (ಬಂಹರಿ. ೧೩-೩೪). **ಪಡಿಕೆನಾಱು :** ಪುಣ್ಣಳ ಬಾಯಿಂ ಪಡಿಕೆನಾರ್ಪ ರಸಿಗೆಗಳೊಸರ್ಗುಂ (ಪರ್ಧಪು. ೧೧-೩೪). **ಹಡಿಕುನಾರು :** ಕುರೂಪಿಯ ಮೂರ್ಖನ ಹಡಿಕುನಾರುವನ ಕೀಳು ಜಾತಿಯವನ ರೋಗದವನ ಇಂತಿರ್ಪನ ಹೆಂಡರು . . . ಆಯಾ ಯತ್ನದಿಂ ಸಾಧ್ಯರಹರು (ಕಾಮಶಾ.೨೫೩). **ಹಡಿಕೆನಾಱು :** ಹರನ ದೇಗುಲದೊಳ ಗೆನಿತು ದಿನವಿರುತಲಿರ್ದೆಡೊ ಹಡಿಕೆನಾಱುತ ನರರಿಗಾರಿಗೆ ಸಾರ್ದು ಮುಟ್ಟಲು ಬಾರದೆಂದೆನುತ(ಬಸವು.೩೨-೫೪) ; ಅಡಗುನೆತ್ತರ ಹೊಯ್ಗಲ್ಲಿಂ ಮಿಡುಕುವಾತ್ತ ಸಸಿವಹದಿಂ ಹಡಿಕೆನಾಱುವೆ ಮಿದುಳಿಂದಾ (ಅನುಭ್ರೀ.೪೩); ಪಿಡಿದ ಶೂಲದಿ ಪೆಣ ಹಡಿಕೆನಾಱುವ ತಲೆ ಸುಡುಗಾಡಿನೊಳಗಿಹ ಬೂದಿ ಬಿಡದೆ ಅಂಗದಿ ಧರಿಸಿದ ಶಿವಯೆನ್ನಯ ಒಡೆಯನೆಂಬುದು ನಿನಗೇಕೊ (ಅಬ್ಬಲೂ. ೪-೨೩).

[ಪಡುಕೆ + ನಾಱು₁]

**ಪಡುಕೋಣೆ** (ನಾ). ಮಲಗುವ ಕೋಣೆ : ಪಡುಕೋಣೆಯಲ್ಲಿದ್ದ ಮಂಜರಿಗೆ ಕಾಮಾಕ್ಷಿ ಬಂದಿರುವ ವಿಚಾರ ತಿಳಿಯಿತು (ಪದ್ಮಸ. ೧೬೫).

[ಪಡು₁ + ಕೋಣೆ₂(<ಕೋಣ್)]

**ಪಡುಗ** 'ಪಡಿಗ' ನೋ.

**ಪಡುಗಡಲ್,** ಪಡುಗಡಲು (ನಾ). ಪಶ್ಚಿಮದಿಕ್ಕಿನ ಸಮುದ್ರ ; ಸೂರ್ಯನು ಮುಳುಗುವ ದಿಕ್ಕಿನ ಸಾಗರ : ಇಱಿದಂ ಕುಂದದೆ ಪಡುಗಡಲೊಳೊಪ್ಪು ಪಂಬುಜಮಿತ್ರಂ (ಉದ್ಭಟ.೫-೧೨) ; ಗಗನದೆ ಬರ್ಪ

ನಾರದನ ಕಾಣುತ ಸೂರ್ಯಭಗವಾನು ತನಗೊಬ್ಬರೊಡನೆ ಜಗಳವ ಗಂಟಿಕ್ಕದೆ ಬಿಡನೆಂದಂಜಿ ಹುಗಲೊಡರ್ಚಿದ ಪಡುಗಡಲ (ಮೋಹತ. ೧೧-೧೬) ; ಇಂತೀ ಯಾದವರ್ ಪಡುಗಡಲ ಮಡುವಿನೆಡೆಯೊಳಿಡಿದ ಕಡಲೊಡೆಯನ ಬೀಡಿನ ಪಡಿನೆಬಿಲಂತೆ ಕಡುಬೆಡಂಗುವಡೆದ ದ್ವಾರಾವತೀಪುರಮಂ ಪರಿಪಾಲಿಸುತ್ತುಮಿರ್ದು (ಚಿಕವಿ. ೧-೮೯). **ಪಡುಗಡಲು :** ದಿನನಾಯಕನಾಕ್ಷಣ ಪಡುಗಡಲೆಡೆಯು ಸಾರಿದನು (ಕಂಸವಿ. ೧೦-೮) ; ಪಡುಗಡಲಿನ ತೆರೆ ಮುದ್ದಾಡುವ ಕರೆ, ಹೊಳೆಹಾಲಿಳಿಯುವ ಘಟ್ಟಿದೆಡೆ (ಹೊಂಗಳು. ೧೧-೮). [ಪಡು$_1$ + ಕಡಲ್$_2$]

**ಪಡುಗಡಲು** 'ಪಡುಗಡಲ್' ನೋ.

**ಪಡುಗಡೆ** (ನಾ). ಪಶ್ಚಿಮ ದೆಸೆ ; ಪಡುವಣ ಭಾಗ : ರವಿಕೀರ್ತಿನೃಪಂ ಪಡುಗಡೆ ಗತತೇಜಂಬಡೆದ ಪಗಲ ಬಲ್ಲಹನಂದದೊಳಿರ್ದಂ (ಜಯಕಾ. ೭-೩೫) ; ಪಡುಗಡೆಯ ಕೋಂಟೆಯಂ ಕೊಂಡರವರೆಂದು ಸುರರುಲಿಯೆ ಕ್ಷಿತಿಯಿಂದಲಾಖಂಡಲಂ ಬಿಟ್ಟ ಸೂಟಿಯೊಳೈದಿದಂ ನೆರೆದ ಮಂತ್ರಿಗಳ ಗಡಣದಿಂದೆ (ಚಿಬಪು. ೨೪-೨೯) ; ಪಡುಗಡೆಗೆಯ್ದಿ ಮೋದಿ ಕೊಡಗಂ ಗುಡುಗಾಡಿಸಿ . . . ಬಲ್ಲಿದನೀ ಪರಿ ಚಲ್ಲವಾಡಿದಂ (ಚಿಕವಿ. ೨-೬೪). [ಪಡು$_2$ + ಕಡೆ$_3$]

**ಪಡುಗಣೆವಜ್ಜೆ?** (ನಾ). ಕುದುರೆಯ ಒಂದು ಬಗೆಯ ನಡಗೆ(?) : ಧೈರ್ಯವೆಂದೆನಿಪ ಚಮ್ಮಟಿಗೆನಿಡಿದು ಹರುಷದಿಂ ಪಚ್ಚೆಯ ತುರಂಗಮವನಡರಿ ಬಿತ್ತರದ ಪಡುಗಣೆವಜ್ಜೆ ದೂವ್ವಾಳಿ ಪೇರೆಯಂದ ಪರಿಯ ಕಾಣಿಸಿ ನಭೋಮಂಡಲವನೈದಿದನು ಚೀರಮಮಹೀಪಾಲನು(ಸೌಂದಪು.೧೯-೧೪). [ ? ]

**ಪಡುಗಲ್** (ನಾ). ಒಂದು ಸ್ಥಳದ ಹೆಸರು : ನೊಟಿವಬ್ಬವಾಡಿಯೊಳಯ್ಯಪದೇವ[ನ] ಮಗನಣ್ಣಿಗನ್ . . . ಪಡುಗಲ್ಲ ಕಾದುತಿರೆ (ಸೌಇಇ. IX-i, ೫೭-೮ ; 922) ; ನೊಟಿಂಬವಾಡಿಯಯ್ಯಪ್ಪದೇವನ ಮಗನಪ್ಪಣ್ಣಿಗನ್ ಪರಿಬನ್ದು ಪಡುಗಲ್ಲ ಮುತ್ತಿದೊಡೆ (ಸೌಇಇ. IX-i, ೫೪-೯ ; 922). [ಪಡು$_2$ + ಕಲ್$_3$]

**ಪಡುಗಾಳಿ** (ನಾ). ಪಶ್ಚಿಮದಿಕ್ಕಿನಿಂದ ಬೀಸುವ ಗಾಳಿ ; ಪಡುವಣ ಗಾಳಿ : ಪಡುಗಾಳಿ ಹಾಡಿತು ಗಿಡಬಳ್ಳಿ ಆಡಿತು ಹೊಲ-ಹುಲ್ಲು ನೋಡಿತು ಲೀಲೆಯೊಳೆ (ಸಪೀಗೀ. ೨೧-೨೪೨). [ಪಡು$_2$+ಗಾಳಿ$_1$]

**ಪಡುಗು** (ನಾ). ತೋಪು : ಕುಪ್ಪರಸನುವಿಟ್ಟು ಸತ್ತಿಯೂರ ಮಹಾದೇವರ್ಗ್ಗೆ ಬನದ ಭಳಾರಿಯ ಬಡಗಣ ದೆಸೆಯಲುಂ ಎರಡು ಖಣ್ದುಗವೆಡೆ ಗಟ್ಟಿದ್ದಿಯು ಮಾವಿನ ಪಡುಗಿನ ಬಡಗಣ ದೆಸೆಯಲು ಪನ್ನಿಮ್ಮತ್ತೆರ್ಬದ್ದಲೆಯು . . . ಧಾರಾಪೂರ್ವ್ವಕಂ ಮಾಡಿ ವಿಟ್ಟರ್ (ಸೌಇಇ. IX-i, ೯೯-೨೧ ; 1044). [ ? ]

**ಪಡುಗೆಂಪು**(ನಾ). ಸೂರ್ಯನು ಮುಳುಗುವಾಗ ಪಶ್ಚಿಮದಿಕ್ಕಿನಲ್ಲಿ ಉಂಟಾಗುವ ಕೆಂಪುಬಣ್ಣ ; ಸಂಜೆಗೆಂಪು : ಪಜ್ಜಳಿಸೆ ಪಡುಗೆಂಪು ಪಕ್ಕಿ ಪಕ್ಕೆಗೆ ಸಾರೆ ಜಜ್ಜರಿಯೆ ಜಕ್ಕವಕ್ಕಿಯ ಜೋಡು . . . ಪಶ್ಚಿಮಾಂಬುಧಿಯ ನಡುಮಡುವ ಹೊಕ್ಕನಾ ಪಗಲೊಡೆಯನು(ಸಮ್ಯಕಾ. ೧-೩೭) ; ಪಡುಗೆಂಪು ಚಂದ್ರಗಾವಿಯ ಸೀರೆ ಕೆಂಬಲ್ಲ ಗಡಣ ಕೆಂದಾರೆಗಳಾಗೆ ಮಡದಿಯೊರ್ವಳು ಬಾಗಿಲಲಿ ಸಂಜೆವೆಣ್ಣಿನ ಕಡುಚಲುವಿಕೆಯ ಬೀಱಿದಳು (ಕಂಸವಿ. ೬-೧೦೦) ; ರವಿ ಮುಳುಗಿ, ಮೂಡಣ ದೆಸೆಗೆ ಪಡುಗೆಂಪು ಪಸರಿಸುತ್ತಿರೆ (ಶ್ರೀರಾಮಾ. ೮೨೩-೩೦೭). [ಪಡು$_2$ + ಕೆಂಪು$_1$]

**ಪಡುಗೇರಿ** (ನಾ). ಪಶ್ಚಿಮಭಾಗದಲ್ಲಿರುವ ಕೇರಿ,—ಬೀದಿ : ಇಪ್ಪತ್ತು ಮತ್ತಕ್ಕೆಯ್ಯ[೦] ಸರ್ವ್ವಬಾಧಾಪರಿಹಾರವಾಗೆ ದಯೆಗೆಯ್ಯೆ ಪಡೆದು . . . ಪಡುಗೇರಿಯ ಮನೆಯುಮಂ ಧರ್ಮ್ಮದೊಳೆ ಯೋಜಿಸುವಂ (ಸೌಇಇ.XI-i,೭೩-೩೫ ; ಸು. 1040) ; ಅ ನಟಗುನ್ದದೊಳ್ಪಡುಗೇರಿಯ ವಿಪ್ರಸಮೂಹ×××[ನೋ]ದಿಗಳ್ಮನುಚರಿತ್ರರನಂಗಸಮಾನಗಾತ್ರರುರ್ವ್ವೀಸುತ×××(ಕಇ.V, ೧೧-೧೪; 1078). [ಪಡು$_2$ + ಕೇರಿ]

**ಪಡುಗೊಲೆ** (ನಾ). ಕ್ರೂರವಾದ ಕೊಲೆ ; ಕಡುಗೊಲೆ : ಪಡುಗೊಲೆಯನೇನೆಂಬೆವೀ ನೆರವಿ ನೋಡುತಿರೆ ಕೊಡಲಿಯಿಂದೀಯಾಂಡಿ ತಲೆಯನರಿದಂದೇವ (ಇಚಿರ. ದೇ. ೧೦೮-೨೫) ; ಪ[ಪಾಠಾಂ.ಕ]ಡುಗೊಲೆಯ ಕಾಲನು ಸಿಲಂ ನುಡಿವರ್ ತೆಂಗಾಳಿಯೆಂದು ಪಾಪಿಗಳಕಟಾಱಡಿಗಳ್ ಬೆಂಬತ್ತಿ ಪೀಮುಡಿಗನೊಳುಂ ಕೆಳದಿ ಲೇಸನಱಿಸಿದರುಂಟೆ (ತ್ರಿಪುವಿ. ೩-೧೦೮). [ಪಡು? + ಕೊಲೆ$_2$]

**ಪಡುಚ** (ನಾ). ಚಿಕ್ಕವನು; ಹುಡುಗ ; ಬಾಲಕ : ಕೋಪವಿನ್ನೇತಕೆ ಮಗನೆ ನಿನ್ನೊಳು ಕಾದಲಾಪರೆ ಸುರುನರೋರಗರು ಈ ಪಡುಚನ ಕೆಯ್ಯ ಕಾರ್ಯವೇನೆಂಬುದ ನೀ ಪರಿಕಿಸಿ ಕೇಳ್ದಱಿಯ (ಮೋಹತ.೧೨-೧೨). [←ತೆಲು. ಪಡುಚು]

**ಪಡುತರ್** (ಕ್ರಿ). (ಸೂರ್ಯನು) ಮುಳುಗು; ಅಸ್ತವಾಗು : ತಡದಿರಬಾರದು ನೇಸಱ್ ಪಡುತಂದುದು ಪೊಟ್ತು ಪೋಯ್ತು ಪೋದಪೆಂ (ಕಾದಂಪೂ. ೮೭೯). [ಪಡು$_1$ + ತರ್]

**ಪಡುದಳೆ** (ನಾ). ಪ್ರತಿಯಾದ ಹಗ್ಗ,—ಸಂಕೋಲೆ : ಮೌನವೆಂದೆನಿಸುವ ಘುಸ್ತಯಿದೆ ಸಹಿತಾಗಿ ಜ್ಞಾನ ಪಡುದಳೆಯಂ ಬಿಗಿಯುತ್ತಾ (ಚಿದಾಕೋ. ೫೪-೮). [<ಪಡಿ$_3$ + ತಳೆ$_3$]

**ಪಡುದೆಸೆ** (ನಾ). ಪಶ್ಚಿಮದಿಕ್ಕು ; ಪಡುವಲು : ಅನಿತಱಿೊಳಿಯೆ ಪಗಲ್ ಪಡುದೆಸೆಯೊಳ್ ಮಿನುಗುವ ಕೆಂಪು ಮುಗಿವ ನೂಱಿಸಳ್ಳೊ . . . ಕರಂ ಕಣ್ಗೊಳಿಸಿದುದು (ಜಯಕಾ.೧೧-೫೪); ವರುಣನರಮನೆಯ ನವಪದ್ಮರಾಗರತ್ನಮಯದೀಪ್ರಕಲಶಮಿದೆಂಬಂತಿರೆ ಪಡುದೆಸೆಯೊಳ್ದಿವಸೇಶ್ವರಬಿಂಬಂ ತೋರಿದತ್ತು ಸಂಧ್ಯಾರುಣಿತಂ (ಮರಾಚ. ೮-೫೦) ; ಪಡುದೆಸೆಯಲ್ಲಿ ಒಂದು ದ್ವೀಪವಿತ್ತು (ಮಣಿಸ. ೯೭).

ಪಡುದೆಸೆಗೊಡೆಯ = ಪಶ್ಚಿಮದಿಕ್ಕಿನ ಅಧಿಪತಿ ; ಅಷ್ಟದಿಕ್ಪಾಲಕರಲ್ಲಿ ಒಬ್ಬ ; ವರುಣ : "ನೇಣ್ಗಯ್ಯ ಮುನ್ನೀರೆಱಿಯ ಕರ ಮೆಸೆವ ನೆಗಟ್ದೀರ ಪಡು[ಪಾಠಾಂ. ಪಡುವ]ದೆಸೆಗೊಡೆಯನೆನೆ ವರುಣ ನಾಮಂ" (ಶಬ್ದಮಂ. ೧೪). [ಪಡು$_2$ + ದೆಸೆ]

**ಪಡುನೇಸರ್** 'ಪಡುನೇಸಱ್' ನೋ.

**ಪಡುನೇಸಱ್,** ಪಡುನೇಸರ್(ನಾ).೧. ಮುಳುಗುವ ಸೂರ್ಯ; ಅಸ್ತನಾಗುವ ಸೂರ್ಯ : "ಪಿಂಬೊಟ್ತಿಂದು ಪಡುನೇಸಱ್" (ಕಶಸಾ. ೫೭-೨೫೩) ; ಅರುಣಾಂಶುಗಳಿಂ ಪಶ್ಚಿಮಗಿರಿಕೂಟಮಶರ್ಕಪೂರ್ವಪಲ್ಲವಚಯದಿಂ ನೆರೆಪಿ ಪಡುನೇಸಱಿಸೆದುದು ಶರನಿಧಿನಾಥಂಗೆ ಬಿಡಿದ ಮಾಣಿಕಗೊಡೆವೋಲ್ (ಜಗವಿ. ४-೧೧೧) ; ಮಡುಗಟ್ಟೆ ಸುರಿವ ನೆತ್ತರ ಕಡಲೊಳ್ ತೇಂಕಾಡುತಿರ್ಪ ರಥದೊಳ್ ಗಾಯಂಬಡೆದೆನಸುಂ ಬಟಲು ತಿರ್ದಂ ಪಡುನೇಸಱ ತೆಱದೆ ರಾಜಹಂಸನರೇಂದ್ರಂ (ದಶಕು. ೨-೩೭). ೨. ಸೂರ್ಯಾಸ್ತವಾಗುವ ಸಮಯ ; ಸಂಜೆ : ಉರಿವರಿವ ಬಿಸಿಲ್ ಸುಡೆ ಸೀಕರಿಪೋದುವಿವೆನಿಸಿ ತುಂಬಿಯುಂ ಕೋಗಿಲೆಯುಂ ಮರಗಳೆಲೆವಱಿಗಳೊಳ್ ಮೆಯ್ಗರೆದುವು ಪಡುನೇಸಱಪ್ಪಿನಂ ಬೇಸಗೆಯೊಳ್(ಪಂರಾಮಾ. ೭-೮೯) ; ಒಱಿದುಗುವ ಬಾಷ್ಪವಾರಿಯಿನೆಱಂಕೆಗಳ್ ನಾಂದು ಮಗುಟಿ ವಿರಹಾನಳನಿಂ ನೆಱಿ ಬಱವಾಗಿರೆ ಪಡುನೇಸಱಿೊಳಿರ್ದುವಗಲ್ದು ಚಕ್ರವಾಕದ್ವಂದ್ವಂ (ಚಂದ್ರಪು.೮-೬). **ಪಡುನೇಸರ್: ೧.** ಪಡುನೇಸರೆಸೆವ ಆ ಪಡುವೆಟ್ಟದಂಚಿನಲಿ ಕಾಣಲ್ಲಿ ಶೋಭಿಸಿದೆ ಶುಭಚಿಹ್ನೆ (ಶ್ರೀರಾಮಾ. ೮೦೭-೧೭೪). [ಪಡು$_1$ + ನೇಸಱ್]

**ಪಡುಪಾಟಲು** 'ಪಡಿಪಾಟಲು' ನೋ.

**ಪಡುಪಾಟು** 'ಪಡಿಪಾಡು' ನೋ.

**ಪಡುಪಾಟ್ಲು** 'ಪಡಿಪಾಟಲು' ನೋ.

**ಪಡುಪಾಡು** 'ಪಡಿಪಾಡು' ನೋ.

**ಪಡುಬೀಳು,** ಪಡಬೀಳು, ಹಡುಬೀಳು (ಕ್ರಿ). ವ್ಯವಸಾಯ ಮಾಡದೆ ಪಾಳುಬೀಳು ; ಸಾಗುವಳಿಯಿಲ್ಲದೆ ಇರು; ಬೀಳಾಗು: ಇಷ್ಟೊಂದು ಒಳ್ಳೆಯ ಭೂಮಿಗಳು ಪಡುಬೀಳಬೇಕೆ ! (ಚಿಗುಕ. ೮೨) ; ಅಲ್ಪಸ್ವಲ್ಪ ಮಳೆಯಿಂದ ಅವರಿಗೆ ಬೆಳೆಯುವುದು ಸಾಧ್ಯವಾಗುತ್ತಿರಲಿಲ್ಲ. ಅವರ ಭೂಮಿಗಳೆಲ್ಲ ಪಡುಬೀಳುತ್ತಿದ್ದವು (ಮಣ್ಣಿ ಸ್ವ.೯೯). **ಪಡಬೀಳು:** ಒಳಗಡೆಯಲ್ಲಿ ಬಹು ಜನರು ಭೂಮಿಯನ್ನು ಬೇಡುತ್ತಿದ್ದಾಗ್ಯೂ ಪಡಬಿದ್ದ ಭೂಮಿಯಲ್ಲಿ ಅಡವಿಯನ್ನು ಬೆಳೆಸುವ ಉದ್ದೇಶವಿರುವ ಕಾರಣ ಬೇಡುವವರಿಗೆ ಭೂಮಿಯನ್ನು ಬಹುತರ ಕೊಟ್ಟಿಲ್ಲ (ಕಭಾಗೆ. ೩೯೫) ; ಮೇಲ್ವಿಚಾರಕರ ಮತ್ತು ಗುಮಾಸ್ತರ ಆಸಡ್ಡೆಯಿಂದ ಬಹಳ ಭೂಮಿ ಪಡಬಿದ್ದಿತು (ಪ್ರೇಮಾಶ್ರ. ೧೨೧) : ಅಪೀಲಿನ ನಿರ್ಣಯ ಹೊರಬೀಳುವವರೆಗೆ ತೋಟವು ಕಬಜೆ ತಕರಾರಿನ ಕಾರಣದಿಂದ ಪಡಬಿದ್ದಿತು (ಮನೆಬಿ. ೧೦). **ಹಡುಬೀಳು:** ಸಾಗುವಮಾಡದೆ ಹಡುಬಿದ್ದ ಭೂಮಿ ಅದು (ದೇಸಹಂ. ೫೯). 'ಹಡುಬೀಳಿಸು' ಪರಾ. [ಪಡು$_2$ + ಬೀಳು$_1$(<ಬೀೞ್$_1$)]

**ಪಡುಭೂಮಿ,** ಪಡಭೂಮಿ, ಹಡುಭೂಮಿ (ನಾ). ವ್ಯವಸಾಯವಿಲ್ಲದೆ ಪಾಳುಬಿದ್ದ ಭೂಮಿ; ಸಾಗುವಳಿ ಮಾಡದ ನೆಲ ; ಬೀಳು : ಸರಕಾರದ ಪಡುಭೂಮಿಯನ್ನು ನಾಲ್ಕೈದು ಎಕರೆಗಳ ತುಂಡುಗಳನ್ನಾಗಿ ಮಾಡಿ ಕೃಷಿಮಾಡಲು ಬಯಸುವ, ಹೊಸಬರಿಗೆ ಹಂಚುವ ನಿರ್ಣಯ ಮಾಡಿದರು (ಗೊಂಡಾರ.೨೦೮). **ಪಡಭೂಮಿ:** ಇಪ್ಪತ್ತಯ್ದು ಬಿಘೆ ಪಡಭೂಮಿ ತೆಗೆದುಕೊಂಡರೆ ಎರಡು ಎರಡೂವರೆ ಸಾವಿರದಲ್ಲಿ ಬಗೆಹರಿಯುತ್ತದೆ (ಪ್ರೇಮಾಶ್ರ. ೯೩). **ಹಡುಭೂಮಿ :** ಗಂಡು ಮಕ್ಕಳಾದರೆ ಸರಕಾರದಿಂದ ಹಡುಭೂಮಿಯನ್ನು ದರಖಾಸ್ತು ಪಡೆದು ಅಲ್ಲಿ ವ್ಯವಹಾರ ಮಾಡುವ ತಮ್ಮ ಗುರಿ . . . ಬಗ್ಗೆ ವಿವರವಾಗಿ ಹೇಳುತ್ತಲೇ ಇದ್ದರು (ದೇವಹಂ. ೧೨೨) [ಪಡು$_2$ + ಭೂಮಿ]

**ಪಡುಮಲೆ** (ನಾ). ಪಶ್ಚಿಮದಲ್ಲಿರುವ ಬೆಟ್ಟ ; ಪಶ್ಚಿಮಾದ್ರಿ ; ಪಡುವೆಟ್ಟ : ಪೊಳ್ತು ತನ್ನ ಪಾದಾಗ್ರಮಂ ಪಡುಮಲೆಯ ನೆತ್ತಿಯೊಳ್ ಮಡಗಿ ದಿನಮಣಿಯಾಗುತಿರ್ದತ್ತು (ಶ್ರೀರಾಪು. ೮೨೩-೩೧೭). [ಪಡು$_2$+ಮಲೆ$_5$]

**ಪಡುಮಾವು** (ನಾ). ಒಂದು ಬಗೆಯ ಮಾವು (?): ಪಡುಮಾವೆಂದೆಂದಡವಿಯ ಪಡುಕೆ(ಕಿ)ಗಳಂ ತಂ(ತಿಂ)ದು ತಿಂದು ಜನ್ನದೊಳಾಡಂ ಕಡಿದಿಕ್ಕಿ ಮತ್ತೆ ಸಗ್ಗಂಬಡೆಯಲ್ಕಾಟಿಸುವ ಪಾರ್ವರೇಂ ಗಾವಿಲರೋ (ಚಾವುಂಪು. ೨೧೦). [ಪಡು? + ಮಾವು]

**ಪಡುಮಿಗ** (ನಾ). (ಬೇಟೆಯಲ್ಲಿ ಸಿಕ್ಕಿ) ಬೀಳುವ ಪ್ರಾಣಿ. 'ಪಡುಮಿಗಂಗುಡು' ಪರಾ. [ಪಡು$_1$ + ಮಿಗ]

**ಪಡುಮಿಗಂಗುಡು** (ಕ್ರಿ). ಪ್ರಾಣಿಯು ತಾನಾಗಿ ಬೇಟೆಯಲ್ಲಿ ಸಿಕ್ಕಿಕೊಳ್ಳು : ಒಂದೊಂದೆಡೆಯ ಮುಳ್ಳುಗಳೊಳ್ ತೊಡರ್ದ ಮೆಯ್ಯನಿರ್ ಪಱುಗುಮೆಂದು ಮಿಡುಕಲೊಲ್ಲದಲ್ಲಿಯೆ ನಿಂದು ಬಿಲ್ಲರ್ಗೆ ತಮ್ಮಿಂ ತಾಮೆ ಪಡುಮಿಗಂಗುಡುವ ಚಮರೀಮೃಗಂಗಳುಂ (ಚಂದ್ರಪ್ರ. ೫-೭೫ ವ). [ಪಡುಮಿಗ + ಕುಡು$_1$(<ಕೊಡು$_1$)]

**ಪಡುವಣ್** 'ಪಡು$_2$' ಪರಾ.

**ಪಡುವಣ** 'ಪಡು$_2$' ಪರಾ.

**ಪಡುವಣಿಗೆ** (ನಾ). ಸಮಾನವಾದುದು ; ಸದೃಶವಾದುದು ; ಸಾಟಿಯಾದುದು (?) : ಮೊದೆನಾರ್ಪ ಕೊಱೆದಗುರ್ವಿನ ಪಡುಕೆಗಳೆನೇಳವನಿತು ಪೂತಂಗಳೆದೊಂದೊಡಲೊಡನಿರ್ದಾ ನಾತದ ಪಡುವಣಿಗೆಗೆ ಬಾರವಿಂತು ಕಿಸುಗುಳರೊಳರೇ (ವರ್ಧಮಾ. ೫-೩೮).

"ಆವಾಸಸ್ಥಾನ ; ನೆಲೆ (?)"(ವರ್ಧಮಾ. ಕೋಶ). [<ಪಡಿ$_3$ ?+-ವಣಿಗೆ]

**ಪಡುವನೆ** (ನಾ). ಮಲಗುವ ಮನೆ: ಪಡುವನೆಯೊಳಿರ್ಪವರ್ ಮಲಗಿರ್ಪರೆಂದೆಣಿಸಿ ಸಡಗರದಿ ಬರೆ ಬಿದ್ದಿನಂ ಕಣ್ಣ ತೆರೆದಂ (ಕಾಲೂರ. ೬೮-೧೧೯). [ಪಡು$_1$+ಮನೆ]

**ಪಡುವಯ್** 'ಪಡುವಾಯ್' ನೋ.

**ಪಡುವಲ** 'ಪಡಲ$_1$' ನೋ.

**ಪಡುವಳಿಸು,** ಪಡವಳಿಸು (ಕ್ರಿ). (?) : ಪಡುವಳಿಸಿ ಕಸ್ತೂರಿ ಬಾವನ್ನ ಕರ್ದಮದೊಳಿಡಿ ತಳಿರ ಕಕ್ಕಡಗೆ ಬಡಿ ವನಜಕೋರಕದ ಕಡುಸಬಳವೊನೆಯೊಳಗೆ ಇಱಿಯೆಂಬ ಮೋಹನಾಂಗಿಯುರಿಗಿದಿರಾಂತು(ಪ್ರಭುಪು.೪-೧೧೩). **ಪಡವಳಿಸು** : ದಡದಡಿಸಿದರುಮಿಂತು ಸತಿಪತಿಸಮುಚ್ಚಯದ ವ್ರತವ್ರತ ಸಮಾಧಿಗಳ ನಿರ್ಮೂಲನಂಗೆಯ್ಯೆ ಪಡವಳಿಸೆ ಬಾಲವೃದ್ಧಂ ಜತಿಗಳಂ ಕೂಡಿ ತೊಡಗಿದಿರು ಪಡುಪೆಗ್ಗಮಂ (ಪ್ರಭುಪು. ೪-೩೭). [? + -ಇಸು$_3$]

**ಪಡುವಾಯ್,** ಪಡುವಯ್ (ಗು). ಪಶ್ಚಿಮ ದಿಕ್ಕಿನ ; ಪಡುವಣದ : ಶ್ರೀವುರದಾ ದುಣ್ಣುಗಾಮುಣ್ಡರಾ ಕೋಣ್ಣದಾ ಪಡುವಾಯೊನ್ದು ಕೋಣ್ಣ ಶ್ರೀವುರದಾ ವಯಲುಳ್ಕಮ್ಮಗ್ಗಟ್ಟನಲ್ಲಿ ಇರ್ಕ್ಕಣ್ಡುಗಂ ಕಟಿಸಿ . . . ಬೆದೆ ಆದವು (ಎಕ. IV, ನಾಗಮಂ. ೮೫-೬೭ ; 776) ; ಪೆರ್ವಟ್ಟಿಯ ತೆಂಕಾಯೊಟ್ಟಿ ಪಡುವಾಯೊಟ್ಟಿಲಿಯೆ ಸನ್ದು ಪೆಗ್ಗೊಲ್ಲಿಯುಳ್ಕೂಡಿತ್ತು . . . ಸೀಮೆ (ಎಕ. IV, ಎಡತೊ. ೬೦-೭೫ ; ಸು. 890) ; ಮುತ್ತರಸಮ್ಮನೆಯಿಂ ಪಡುವಾಯ್ಮನೆಯುಂ ಮುತ್ತರಸರ ಊರುಂ ಇಱ್ದು (ಎಕ. III, ತಿರುಮ. ೧೧೫-೪ ; ಸು. 900). **ಪಡುವಯ್** : ತಸ್ಯ ಸೀಮೆ ಮೂಡಾಯ್ಪೆರ್ವ್ವಳ್ಳಮೆ ಪೊಟೆವಾಡಿಯ ಸೀಮೆಯುಳ್ ಕೂಡಿತ್ತು ಪಡುವಯ್ ಆಳರಿವದಿಯ್ಕೆಬ್ಬಳ್ಳಗಾಯ್ನೋಡಿ ನಡದುದು (ಎಕ. IV, ಹೆಗ್ಗಡ. ೪-೭ ; ಸು. 750) ; ತೆಱ್ಕೆ ಪೆಮ್ರ್ಗಿದ್ದಿಲ್ ಪೆಟ್ಟನನ್ದಿಯ ಕಿಱುನನ್ದಿಯ ಸೊಡಲಿಯದಾ ಮೂಱುಂ ಕುಡಿದಾ ಒಟ್ಟಿ ಪಡುವಯ್ನಡದು ಪಡಸೆ ಪಡುವಯಂಕೋಲೆ ಎವಡಗ್ಗೆ ನಡದು ಮಾಡದಿ ಮೂಡ್ಯೆಯ್ನೋಕ್ಕಿ ದಿಣ್ಣೆ (ಎಕ.X (S), ಚಿಕ್ಕಬ.೬೬-೧೮ ; ಸು. 850); ಮೂಡೈದೆಸೆ ಎಲವೆ ಕಿಱುವಣ್ಣಿಕ್ಕೆಱೆ ಎ ತೆಂಕಾ ಆದರುಳ್ಳಡುಗಲ್ಲೆ ಮುಚ್ಚನ್ದಿನ್ನಡುಗಲ್ಲೆ ಪಡುವಯಾಲೆ ತಾಯನ್ದಿ ಕೆಱೆಯೆ (ಎಕ. X (S), ಚಿಕ್ಕಬ. ೧೦೬-೬೪ ; 850). 'ತೆಂಕಾಯ್' ಪರಾ. [ಪಡು$_2$+-ಆಯ್$_2$]

**ಪಡುವೆಟ್ಟ,** ಪಡುವೆಟ್ಟು (ನಾ). ಪಶ್ಚಿಮದ ಬೆಟ್ಟ ; ಪಡುವಣಗಿರಿ ; ಪಶ್ಚಿಮಾದ್ರಿ ; ಅಸ್ತಾಚಲ : ಚಿತ್ರಲೇಖೆಯ ಮಾತ ಮನ್ನಿಸುವೊಡೆ ಕಂಜಮಿತ್ರ ತನ್ನಯ ವರರಥವ ಸತ್ರಾಣಿಸಿಕೊಂಡು ತೆರಳಿದ ವಿಘಳಿಗೆ ಮಾತ್ರದಿ ಪಡುವೆಟ್ಟದೆಡೆಗೆ (ಮೋಹತ. ೨೭-೨೦) ; ಪಡುನೇಸರೆಸೆವ ಆ ಪಡುವೆಟ್ಟದಂಚಿನಲಿ ಕಾಣಲ್ಲಿ ಶೋಭಿಸಿದೆ ಶುಭಚಿಹ್ನೆ (ಶ್ರೀರಾಮಾ. ೮೦೬-೧೬೪). **ಪಡುವೆಟ್ಟು** : "ಪಡುವೆಟ್ಟೆಂದು ಪಶ್ಚಿಮಾಚಲಂ"(ಕಶಸಾ. ೪೯-೫೧) ; ಅಱೆಯಟ್ಟ ಖಳರ ಖಂಡಿಸಿ ಬಿಸಿರಕುತ ಕೆಂದೊಱೆಯೊಳು ತೊಳೆದ ಚಕ್ರವನು ಒಱೆಯೊಳು ಕೃಷ್ಣ ಬೈತಿಡುವಂತೆ ಪಡುವೆಟ್ಟ ಮಱೆಗೊಂಡು ರವಿ ಮುಳುಗಿದನು (ಮೋಹತ. ೧೫-೩) ; ಪಡುವೆಟ್ಟನೆಡೆಯೊಳೊಪ್ಪುವ ಕಡಲೊಡೆಯನ ಮಡದಿ ತೀಧ ಸಿಂದೂರದ ಕೆಂಪಿಡಿದೆಸೆವ ಸಾಣೆಗಿರಿಯೆದೆನೆ ಬೆಡಂಗುವಡೆದಿರ್ದುದಸ್ತ ಭಾಸ್ಕರಬಿಂಬಂ (ರಾಜಶೇ.೧೧-೩). [ಪಡು$_2$ + ಬೆಟ್ಟ]

**ಪಡುವೆಟ್ಟು** 'ಪಡುವೆಟ್ಟ' ನೋ.

**ಪಡುಶಿಲೆ** (ನಾ). ಹಾಸುಗಲ್ಲು ; ಅಗಲವಾದ ಶಿಲೆ,— ಶಿಲಾಪಟ್ಟಕ : ಈ ಮುತ್ತಿನ ಪಡುಶಿಲೆಯೊಳ್ ದೇವ ಕುಳ್ಳಿರ್ಪುದು (ಶಾದಂಅು. ೧೪೭). [ಪಡು$_1$ + ಶಿಲೆ]

**ಪಡುಸಾಲೆ** 'ಪಡಸಾಲೆ' ನೋ.

**ಪಡುಸಿಲೆ** (ನಾ). = ಪಡುಶಿಲೆ : ಪಳಿಕಿನ ಪಾಸಱೆಗೆತ್ತು ಪಾಱಿ ಬಂದೆಱಗಿದ ಕಮಳಮನಗೆಯಿಡುವಂತೆ ಕಾಲನಿಟ್ಟಗಿದು ನೆಗೆದು ಕೆಲದ ಮುತ್ತಿನ ಪಡುಸಿಲೆ[ಪಾಠಾಂ. ಸೆಳೆ]ಗಳೊಳ್ ಮುಡಿಯ ಮುಂಗುಳನೀಡಾಡಿಯವತರಿಸುವ ವಿದಗ್ಧವಿದ್ಯಾಧರಿಯರುಮಂ (ಲೀಲಾವ. ೯-೫೨ ವ).

[ಪಡು₁+ಸಿಲೆ₁]

**ಪಡೆ₁**, ಹಡೆ₁ (ಕ್ರಿ). ೧. ಹೊಂದು ; ತಾಳು : ಪಡೆದೊಂ ಶ್ರೀಪುರುಷಯ್ಯಲಾಮ್ಮು ಮೊದಲೊಳ್ ಕಲ್ನಾಡನ್ (ಎಕ. III, ಮೈಸೂರು. ೬-೬ ; ಸು. 750) ; ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇೞ್ವೊಡೆ ಪಂಪನೆ ಪೇೞ್ಗುಮೆಂದು ಪಂಡಿತರೆ ತಗುಳ್ದು ಬಿಚ್ಚಟಿಸೆ ಪೇೞಲೊಡರ್ಚಿದೆನೀ ಪ್ರಬಂಧಮಂ (ಪಂಪಭಾ. ೧-೧೧); ಮೋಕ್ಷದ ಕಡೆಯಿಲ್ಲದ ಪರಮಸುಖಮನೀಗಳೆ ಪಡೆವೆಂ (ಸುಕುಮಾ. ೧೧-೮೧) ; ನಿಜದಿಂ ವರ್ಣಂಗಳ ಕಾರಾದ್ಯಾಪೂರ್ಣತೆಯಂ ಪಡೆವುವಾ ಳಕಾರಂ ಬರೆಗಂ (ಶಮದ. ೪) ; ಬಳಿಕ ಪರಮಾನಂದವನು ಪಡೆದಾ ಮಹಿಪನರವಿಂದನಾಭನ ಭಜಿಸಿದನು ನಿಜಭಾವಶುದ್ಧಿಯಲಿ (ತೊರರಾ. ೧-೪-೧೩) ; ಹಗೆಗೊಲೆಗೆ ತಾಯಿಯಾಶೀರ್ವಾದಮಂ ಪಡೆಯೆ ಪುರವನದ ನಡುವಿರ್ದ ಪರ್ಣಶಾಲೆಗೆ ಜವದಿರಯುಗತಿಯಿನೈತಂದನಾ ಇಂದ್ರಜತನೂಜಂ (ಚಿತ್ರಾಂಗ. ೭೪-೨೦೪೫). ೨. ಗಳಿಸು ; ಸಂಪಾದಿಸು ; ದೊರಕಿಸಿಕೊಳ್ಳು : "ಪಡೆ–ಉಪಾರ್ಜನೇ, ಬಲೇ ಚ (ಸೈನ್ಯ)" (ಶಮಧಾ) ; ಉದಿತ ಶ್ರೀಕಟ್ವಪ್ಪಿನುಳ್ಳೇರಿಷಿಗಿರಿಶಿಲೆ ಮೇಲ್ನೋನ್ತು ತನ್ದೇಹಮಿಕ್ಕಿ ನಿರವದ್ಯನ್ನೇಱಿ ಸ್ವರ್ಗ್ಗಂ ಶಿವನಿಲೆ ಪಡೆದಾನ್ಸಾಧುಗಳ್ಪೂಜ್ಯಮಾನನ್(ಎಕ. II, ೮೪-೨ ; ಸು.700); ಅರ್ಥರಾಶಿಯಂ ಪಡೆವವರೆಲ್ಲಮೋಗಡಿಸದೀವೊಡಮಾಜಿಯೊಳುರ್ಚಿ ಕೈದುವಂ ಪಿಡಿವವರೆಲ್ಲಮಣ್ಮುವೊಡವಿಾ ಯುಗಮೇಕೆ ಕನಿಷ್ಟಮಪ್ಪುದೋ (ಕಾವ್ಯಸಾ. ೪೨೩ ಶೂದ್ರಕ) ; ನಿನಗಮೆನಗಂ ಸಮಭಾಗಂ ಪುಣ್ಯಮೆಂದು ಸಿರೆ ನೀಮೇಕೆನಗಿಂದು ಸಮಭಾಗಮಿಾಯದಾದಿರೀ ಪುಣ್ಯಮನಾನಿಂದು ನಿಱಿಸಿ ಪಡೆವೆಂ [ಪಾಠಾಂ. ಕೈಕೊಳ್ವೆಂ] ನೀಂ ನಾಳೆ ನಿಱಿಸೆಂದು ನುಡಿದು (ಪಡ್ವಾರಾ. ೮೦-೬) ; ತೊಡರೆ ನೃಪನಾಪ್ತಪರಿಜನವೊಡವರೆ ಜಿನಪತಿಗೆ ಪೂಜೆಯಂ ಮಾಡಿ ಮಗುಟ್ದಡಿಗೆಱಗಲೊಡಂ ಪಡೆದಂ ಗಡಮವಧಿಯನಧಿಕ ಭಕ್ತರೇನಂ ಪಡೆಯರ್ (ಆದಿಪು. ೩-೨೯) ; ಭಕ್ತರೊಲವ ಪಡೆವೆನೆ ಭಕ್ತಿಯ ಪಥವನಱಿವೆನು (ಬಸವ. ೨೯೧) ; ನಾನೀಗ ಸಿದ್ಧರಸದೊಳು ಲೋಹವನದ್ದಿದಂತಾತ್ಮಸಿದ್ಧಿಯ ಪಡೆವೆನಿನ್ನೇನು (ಭರಚ. ೧-೨). ೩. (ದಾನ ಮೊದಲಾದುವನ್ನು) ತೆಗೆದುಕೊಳ್ಳು ; ಸ್ವೀಕರಿಸು ; ಸ್ವೀಕಾರಮಾಡು : ಚನ್ದಿಯಮ್ಮರಸರ್ದೇವಗ್ಗೆ ಮಣ್ಣವರ್ ಕೊಟ್ಟ ಸರ್ವಟ್ಗಲ್ನಾಡುಂ ಪಿಟ್ಟಗೆಱೆ ಪನ್ನೆರಡು ಗಾಮುಣ್ಡ ಪ್ರಜೆರ್ಸಕ್ಷಿಮೋವ ಕಾವಾಳಿಗ ಭಟಾರರ್ಪಡೆದೋಮ್ಮಣ್ಣವರ್ (ಎಕ. XI, ಚಿತ್ರದು. ೨೪-೨; ಸು. 500) ; ಮಱುಧರ್ಮ್ಮ ತುಸವನಿನ್ ಪಡೆದೆಪ್ಪಟ್ಟಾದು ಒಂದು ಗಾಣದುಳ್ ಒನ್ದು ಸೊಂಟಿಗೆ ತೇ(ತೈ)ಲಮಾಗೆ ಕೊಟ್(ಟ್ಟಾ)ರ(ರ್) (ಇಆ. VIII, ೨೮೫-೪ ; 706) ; ಕುಡವೇಟ್ಬಿನ ಕುಡುವನ ಕುಡೆ ಪಡೆವನ ಪೆಂಪೇಂ ನೆಗೞ್ತೆವಡೆಗುಮೊ (ಪಂಪಭಾ. ೬-೪೯) ; ಪಡೆಯೆಡೆಯ ಕಡೆಯ ಬಡವರ್ ಕುಡೆ ಪಡೆದನೊ ಚಕ್ರವರ್ತಿಯೊಳ್ ತೈಲಪನೊಳ್ ಪಡೆದಂ ಮಹಿಮೋನ್ನತಿಯಂ ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ (ಗದಾಯು. ೧-೩೭). ೪. ದೈವದತ್ತವಾಗಿ ಹೊಂದು ; ಪೂರ್ವಕರ್ಮಾನುಸಾರವಾಗಿ ಗಳಿಸು : ಕಡಲೇೞಿಂ ಮಗುೞ್ಚಟ್ಟೊಡಂ ಕಲಿಯೆ ನಾನಾಹೃದ್ಯವಿದ್ಯಂಗಳಂ ಪಡೆದಪ್ಪಲ್ಲದೆ ಬರ್ಪುದೇ (ಸೋಮೇಶ. ೨೭) ; ಮೃಡ ತಾಂ ಭಿಕ್ಷವ ಬೇಡನೇ. . . ಸುಡುಗಾಡಿಕ್ಕೆಗೆ ಭಂಟನಾಗನೆ ಹರಿಶ್ಚಂದ್ರಂ ನರರ್ ಪೂರ್ವದೊಳ್ ಪಡೆದಪ್ಪುಣ್ಣದೆ ಪೋಪರೆ (ಸೋಮೇಶ. ૩૨) ; ಎನ್ನ ಭಕ್ತರಿತ್ತ ಸೀರೆಯೊಗೆಯಲಾನು ಪಡೆದೆನೆನುತೆ ತನ್ನ ಮನದೊಳುತ್ಸವಂ ಬಡುತ್ತವಿಂತು ಸಂದೆನೆನುತೆ ಒಗೆವುತಿರ್ದನು (ತಿರುತೊಂ. ಪೇ. ೨೩೪-೭); ಪಡೆದು ದುಡಿದವ ಜಾಣ ವ್ಯಸ್ತನಾದವ ಕೋಣ ಆಗಬಾರದು ಹಿಂತೆ–ಮುಂತೆಯಾಗಿ (ಸೂರ್ಯಪಾ. ೯೧-೭). ೫. ಹೆರು ; ಜನ್ಮಕೊಡು : ಪಡೆದರ್ ತಾಯುಂ ತಂದೆಯುಮೊಡಲಂ ಪ್ರಾಣಮುಮನವರವವು (ಪಂಪಭಾ. ೯-೮೧) ; ಈ ಕೊಡಂ ತೀವಿದ ಸತ್ತುಗದ ಪುಡಿಯಂ ಪತ್ತು ಪಣವಿಂಗೆ ಮಾಱಿ ಪತ್ತಾಡಂ ಕೊಳ್ವೆಂ ಅವು ವರುಷಕ್ಕಿಮ್ಮೆ ಮಱಿಯಂ ಪಡೆವುವು (ಪಂಚತಂ. ೧೫೬-೬) ; ಪಡೆವೊಡೆ ಸಿಂಹಿವೊಲ್ಪಡೆವುದಾತ್ಮಜರಂ ಬಱದೇಕೆ ಮಕ್ಕಳಂ ಪಡೆದಪೆನೆಂದು ಹಿಗ್ಗುವರೊ (ಅನಂಪು. ೧೨-೬೩) ; ಗಾಂಧಾರಿ ನೆಱೆ ನೋಂಪಿಯಲಿ ಪಡೆದಳು ಕೌರವೇಶ್ವರನ (ಕುಮಾವ್ಯಾದ್ರೋ. ೨-೬೦) ; ಕೊಡವಾಲು ಪುಳಿವೆರೆದಳಿವುದಲ್ಲದೆ ಪಾಲ್ಗಡಲು ನಾಶವನೈದುವುದೆ ಬಡವಂಗೆ ಕೃತಿದೋಷವಲ್ಲದೆ ಬೊಮ್ಮನ ಪಡೆದಾತಗೇತಱ ದೋಷ (ಮೋಹತ. ೧-೩೦). ೬. ಸೃಷ್ಟಿಸು ; ನಿರ್ಮಿಸು ; ರಚಿಸು : ಪಡೆದಂ ಬ್ರಹ್ಮಂ ಜಗಮಂ ಪಡೆಯಲ್ ತಾನಾರ್ತನಿಲ್ಲ ಪೆಂಪಂ ನಿಮ್ಮಂ ಪಡೆದಲ್ತೆ ಪಡೆದನೆನಿಸಿದ ಕಡುಪೆಂಪಿನ ಮೊಱೆಗೆ ನೀವು ಮೊದಲಿಗರಾದಿರ್ (ಪಂಪಭಾ. ೬-೧೨) ; ಕಡಲಂ ಪೀರ್ದನಗಸ್ತ್ಯನೆಂಬ ಪುರುಡಿಂ ಮತ್ತೊಂದ ನಬ್ಧೋದ್ಭವಂ ಪಡೆದಂ ಪೆರ್ಗಡಲಂ (ಕಾದಂಪೂ. ೧೧೬) ; ಸುಡುವಂ ಜಗಮಂ ಮತ್ತಂ ಪಡೆವಂ ತ್ರಿಗುಣಾತ್ಮನೊಲ್ದು ತೆಱನಪ್ಪಂ ತಾನಡಿಗಡಿಗೆನುತಂ ಸುಖಮಂ ಕುಡುವನುವಿಾಯಂದದಿಂದಮುಕ್ಕ್ಯಮೆ ಪೊಗೞಲ್ (ಸಮುಪ. ೮-೫೬) ; ಕವಿತರ್ಪರಾತಿಚತುರಂಗಪತಾಕಿನಿಯಂ ಮುಕುಂದನೀಕ್ಷಿಸಿ ಮುಳಿದೆಚ್ಚನಾ ಪಡೆಗೆ ಮಾರ್ಪಡೆಯಂ ಪಡೆದೈಂದ್ರಬಾಣದಿಂ (ಜಗವಿ. ೧೮-೪೯) ; ಗರುಡನ ಮೂಗು ಕೊಂಕಿದೊಡೆ ತಿರ್ದಿದುದಿಲ್ಲ ಮುರಾರಿ ಚಂದ್ರನೊಳ್ ಪೊರೆದ ಕಲಂಕಮಂ ಕಳೆದುದಿಲ್ಲ ಮಹೇಶ್ವರನರ್ಕನಟ್ಟಱಿಂದರುಣನ ಕಾಲ್ಗಳಂ ಪಡೆದನಿಲ್ಲಮದೆಂತೆನೆ ಪುಣ್ಯಹೀನನೇ ದೊರೆಗಳನಾಸೆಗೆಯ್ದೊಡಮಗಲ್ವುದೆ ಪೂರ್ವದ ಕರ್ಮಬಂಧನಂ (ಕಾವ್ಯಸಾ. ೪೨೭). ೭. ಉಂಟುಮಾಡು ; ಒದಗಿಸು ; ದೊರಕಿಸು; ನೀಡು : ತಾಯ್ಗಂ. ತಂದೆಗಮೆಲ್ಲಾ ನಂಟರ್ಗೆಯುತ್ಸಾಹಮುಂ ಸುಖಮುಂ ವಿಭವಮುಮಂ ಪಡೆವುದಱಿಂದಮಾ ಕೂಸಿಂಗೆ ಭದ್ರಬಾಹುವೆಂಬ ಪೆಸರನೆಲ್ಲರುಂ ನೆರೆದಿಟ್ಟೊಡೆ (ಪಡ್ವಾರಾ. ೭೩-೧೮) ; ಕಡೆಗಣ್ಣಬೆಳ್ಪುಗಳ್ ಸೊಗಯಿಸುವ ಕುವಳಯದಳನಯನೆಯ ನೋಟಂ ತನ್ನ ಮನದೊಳಳ್ಕಾಟಮಂ ಪಡೆಯೆ (ಪಂಪಭಾ. ೪-೪೧ವ); ಕುಂದದ ನಿಪ್ಪೊಸತಪ್ಪ ಜವ್ವನಂ ತನಗೆ ವಿಲಾಸಮಂ ಪಡೆಯೆ ಭೋಗಿಸಿದಂ ಸುರಲೋಕಭೋಗಮಂ (ಸುಕುಮಾ. ೯-೪೪) ; ಉಡುಪತಿಯುಮನುಡುಗಣಮುಮನೆಡೆಯುಡುಗದೆ ತೋಱಿ ತೋಱಿ ಕಿಱುಗೂಸುಗಳಂ ನುಡಿಗಲಿಸಿದಂ ತೊದಲ್ನುಡಿ ಪಡೆವಿನೆಗಂ ಪಿತೃಯುಗಕ್ಕೆ ಕರ್ಣಾಮೃತಮಂ (ಪಂರಾಮಾ. ೧-೭೯) ; ತಮರೂರ್ಗೆಪೋಪ ಕುಲಜಾಂಗನೆಯರ್ ಕಮಲೋದರಂಗೆ ಪಡೆದರ್ ಮುದಮಂ (ಶಮದ. ೬೭ ಪ್ರಯೋ). ೮. ಗೆಲ್ಲು; ಜಯಿಸು; ವಶಪಡಿಸಿಕೊಳ್ಳು ; ಒಲಿಸು : ಮಡದಿ ಮನೋನಾಥನ ವಾಕ್ಯವ ಕೇಳಿಯೊಡಗೊಂಡು ಬಂದಳಾಲಯಕೆ ಸಡಗರದಿಂದುಪಚರಿಸುತೆ ಮೆಲ್ಲನೆ ಪಡೆದಳಾ ರತಿಯ ಚಿತ್ತವನು (ಮೋಹತ. ೧೦-೧೯) ; ಜನನುತ ಮಹಾಮಂಡಲೇಶ್ವರನನು ಪವಿತ್ರಗುಣಧಾಮನೀ ಭೂವನಿತೆಯನು ಪಡೆದಾಳು ಭೈರವರಾಯನಂದೆಸೆದ (ಸಾಳ್ವಭಾ. ೧-೨೫). ೯. ಸಮರ್ಥವಾಗು ; ಸಾಮರ್ಥ್ಯವನ್ನು ಹೊಂದು ; ಸಾಧ್ಯವಾಗು : ವಸುವೆಂಬರಸಂ... ಒಂದು ದಿವಸಮಿಂದ್ರನೋಲಗಕ್ಕೆ ಪೋಗಿ ಋತುಕಾಲಪ್ರಾಪ್ತೆಯಾಗಿರ್ದ ನಲ್ಲಳಲ್ಲಿಗೆ ಬರಲ್ ಪಡೆಯದೆ (ಪಂಪಭಾ. ೧-೬೮ ವ) ; ಒಡಲಂ ದಂಡಿಸಿ ತಪದೊಳ್ ನಡೆವ ತಪಸ್ವಿಗಳುಮೆಯ್ದೆ ಮನಮಂ ತ[ತೆ]ಗೆಯಲ್

ಪಡೆಯುರೆನೆ ಚಪಳರಕ್ಕಟ ಪಡೆದಪರೆ ಗೃಹಸ್ಥರೆಂತೊ ಸರ್ವಾವಸ್ಥರ್ (ಅಜಿಪು. ೨-೯೧) ; ದಿಙ್ಮುಖಂ ನಡುವಿರುಳಂತೆ ಕಟ್ಟಲಿಸೆ ಪಟ್ಟಪಗಲ್ ರಣಮಂ ನಿರೀಕ್ಷಿಸಲ್ಪಡೆಯದೆ ದೇವರುಂ ದಿವಿಜಕಾಂತೆಯರುಂ ಬೆಜಗಾಗೆ (ಪಂರಾಮಾ. ೧೩-೪೪) ; ಪುಷ್ಪಶರೋತ್ಕರಮೆಂದು ಮನ್ಮಥಂ ಮತಿಗಿಡುವಂ ಗೆಲಲ್ ಪಡೆಯದಾ ನಯಸೇನ ಮುಮುಕ್ಷುಮುಖ್ಯನಂ (ಚಂದ್ರಪು. ೧-೨೬).

**ಹಡೆ$_1$ :** **೧.** ಪಾಯಿಸಟ್ಟಯರು ಕೊಟ್ಟು ಹಡದ ಮತ್ತರಾಱು (ಸೌಇಇ. XX, ೨೦೨-೯೫ ; 1124) ; ಹಡೆವುದರಿದು ನರಜನ್ಮವ ಹಡೆವುದರಿದು ಗುರುಕಾರುಣ್ಯವ ಹಡೆವುದರಿದು ಲಿಂಗಜಂಗಮಸೇವೆಯ (ಮಹಾದೇ. ಬ. ೭೬-೧೯೨) ; ಮುಂತೆ ಕಾಣಿಸುವಿಷ್ಟಲಿಂಗದ ಚಿಂತೆಯಲಿ ಚಿರನಾಗಿ ತನ್ನಯ ಚಿಂತಿತಾರ್ಥವ ಹಡೆಯಬೇಹುದು (ಪ್ರಭುಲೀ. ೧೬-೫೦); ಸತತಂ ಸುಖಿಯಿಪ ಪಾರಿವವಕ್ಕಿಗೆ ರತಿವರನುಂ ರತಿಸೇನೆಯುವೆಂಬುನ್ನತಿಕೆಯ ಹೆಸರಂ ಹಡೆದು ಜನಿಸಿ ಬೆಳೆದುವು ನಿವ್ವೊತ್ತಿನೊಳು (ಜಯಕಾ. ೧೨-೬೮). **೨.** ಇನ್ತೀ ದಮ[ರ್]ವಂ ಸದರ್ಮದಿಂ ಪ್ರತಿಪಾಳಿಸಿದವರ್ಗ್ಗೆ . . . ಸಹಸ್ರವೇದಪಾರೆಗರಪ್ಪ ಬ್ರಾಹ್ಮಣರ್ಗ್ಗೆ ಕೊಟ್ಟ ಫಲವಂ ಹಡೆವರು (ಸೌಇಇ. XI-i, ೬೮-೭೦ ; 1033) ; ಗುರುಕರುಣದಿಂದ ದೀಯುತೆ ಎಂಬ ಸುಜ್ಞಾನವ ಹಡೆದು ಗುರುಪಾದೋದಕದಿಂದ ಕ್ಷೀಯತೆ ಎಂದು ಮಲತ್ರಯವ ಕ್ಷಯ ಮಾಡುವ (ಆದಪ. ೨೫-೭೩) ; ನಮ್ಮೊಡನೆ ಮೆಚ್ಚಿಸಿ ಬಳಿಕ ಹಡೆಯಿರೆ ಬಿರುದನೆನುತವೆ ಫಲುಗುಣನು ಕೈಯಿಕ್ಕಿದನು ಗಂಗಾಕುಮಾರನಲಿ (ಕುಪ್ರಾಭೀ. ೯-೩೦) ; ಕೂಸು ಕಾಸು ಹಡೆಯದು, ಜೋಗುಳ ಮುಗಿಲು ಮುಟ್ಟಿತು (ಗಾದೆ). **೩.** ಕೋಬೂರ ತಿಲ್ಲೆನಾಯಕರ ಮಗಂ ಶಿವ ಕಲ್ಯಾಣನಂಬಿ ಹಡದ ವೃತ್ತಿ (ಎಕ. XI, ದಾವಣ. ೬-೩೨ ; 1169) ; ಶ್ರೀಮನ್ಮಹಾಪ್ರಧಾನಂ ಹೆಗ್ಗಡೆ ಲಕುಮಯ್ಯಂ ಪೊಯ್ಸಳನಾರಸಿಂಹದೇವಂಗೆ ರಾಜ್ಯಮುಂ ನಿಷ್ಕಂಟಕಂ ಮಾಡಿ ಪ್ರತಿಷ್ಠಾಪಿಸಿ ಪ್ರಸಾದದಾನಂ ಧಾರಾಪೂರ್ವ್ವಕಮಾಗಿ ಹಡದು (ಎಕ. V, ಹಾಸನ. ೬೬-೪೦ ; ಸು. 1170 ?) ; ಸಾತೆಯನ ಹಳ್ಳಿಯ ಹರಿಹರೇಶ್ವರದೇವರ ಧರ್ಮ್ಮಪ್ರಸಂಗವಂ ಬಿನಪಂಗೆಯ್ದು ಆ ದೇವರ ಶ್ರೀಕಾರ್ಯಕ್ಕೆ ಹಡೆದ ವೃತಿ (ಕಇ. IV, ೧-೧೦೦ ; 1204); ಪ್ರಸಿದ್ಧ ಸೀಮಾಸಮನ್ವಿತಸಹಿತ ಶಿವಪುರವ ಮಾಡಿ ಸರ್ವ್ವನಮಸ್ಯವಾಗಿ ಧಾರಾಪೂರ್ವಕವಾಗಿ ಹಡದು (ಎಕ. XVI, ಗುಬ್ಬಿ. ೭೬-೧೩ ; 1252). **೫.** ಹಡೆದಿರ್ದ ಶಿಸುವ ಕೊಡಗೂಸ ಸುಂಗಿತ್ತ ಕಂಡೆ (ಆದಪ. ೩೪-೯೯) ; ಇನ್ನು ನಾನೆತ್ತ ಮಗನಂ ಹಡೆವುದೆತ್ತಲು (ಸಿದ್ಧರಾ. ೧-೪೧) ; ಹಾವು ಹಲವನು ಹಡೆದು ಲೋಕಕೆ ಸಾವ ತಹವೊಲು ನೂಱು ಮಕ್ಕಳನಾವ ಪರಿಯಲಿ ಹಡೆದು ಕೆಡಿಸಿದೆ ಭೂಮಿಭಾರಕರ (ಕುಪ್ರಾಉ. ೩-೮) ; ಹಡೆದ ತಾಯಿಲ್ಲ ತಾಯುಳ್ಳೊಡೆ ತಲೆ ಹೀಗೆ ಜಡೆಗಟ್ಟಿಕೊಂಡು ಮಾಸಿಹುದೇ (ಮೋಹತ. ೨೧-೨೫) ; ಹಡೆಯದ ಹೆಣ್ಣು ಗಂಡನ ಮನೆಗೆ ಬಾಡಿಗೆಯ ಎತ್ತು (ಕನ್ನಜಾ. ೧೦೩). **೬.** ನೀನು ಮುನ್ನಲಿ ನಿನ್ನ ತಾಮಸಗುಣದ ಮಾಯೆಯನು ಏನು ಕಾರಣ ಕಳುಹಿ ಭಾಷೆಗೆ ಹೀನವನು ನೀ ಹಡೆದೆ (ಪ್ರಭುಲೀ. ೮-೧೭). **೭.** ನರ್ತನದಿಂ ನವಶಕ್ತಿಯು ಹೊಮ್ಮಿ ಸೃಷ್ಟಿಸ್ಥಿತಿಲಯಚಕ್ರಂ ಚಿಮ್ಮಿ ಜಡಚೇತನರೂಪುಗಳಾಗೊಡೆದು ತೋರ್ಪುದು ಸುಖ ದುಃಖಗಳನು ಹಡೆದು ! (ಪಾಂಚಜ. ೧೯-೧೮). **೯.** ಎಡೆವಿಡದೆ ಬೇಡಿ ಕಾಡುವಿರಾದಡಿನ್ನು ಕೇಳ್ ಕಡೆಗೆನ್ನ ಸರ್ವರಾಜ್ಯವನಾದಡಂ ನಿಮಗೆ ಕೊಡಹಡೆವೆನ್ನೆ ಸಲ್ಲದೀಯೊಂದು ತೇಜಮಂ ಕೊಡೆನು (ಹಚಕಾ. ೮-೩೨) ; ಅಜ ಹರಿಗಳಾದ್ಯಂತಮಂ ಕಾಣ ಹಡೆಯರೀಶ್ವರನ ನಿಜಮಂ ಕಂಡು ಕೈವಲ್ಯದೊಡೆಯನಾದೆಂ ನಿಮ್ಮ ಕರುಣದಿಂದೆಂದರಸನಾ ಮುನಿಗೆ ಕೈ ಮುಗಿದನು (ಹಚಕಾ. ೧೪-೧೭). **೧೦.** ದೊರಕು; ಲಭಿಸು; ಸಿಗು; ಪ್ರಾಪ್ತವಾಗು: ಗಾಳಿ ಹಡದಲ್ಲೆ ತೂಱಿಕೊಳ್ಳಿರೇ . . . ಶಿವಶರಣೆಂಬುದೊಂದು ಗಾಳಿ ಹಡದಲ್ಲಿ ಬೇಗ ತೂಱಿಂದನಂಬಿಗರ ಚೌಡಯ್ಯ (ಲಿಂಗಲೀ. ೧೬೫-೨೨) ; ಮನವೆಯ್ದೆ ಮೇಲಾದ ತತ್ವದೊಳು ಹಡೆಯಲು ಪಟ್ಟ ಲಕ್ಷವುಳ್ಳದಾಗಿಯಡಗುತ್ತಿರ್ಪುದು (ವೀಶೈಪು. ೬-೩-೬೬).

**ಪಡೆದಪ್ಪ, ಹಡೆದಪ್ಪ** = **೧.** (ದೇವರ) ಅನುಗ್ರಹವನ್ನು ಹೊಂದಿದವನು ; ಪುಣ್ಯವಂತನಾದವನು ; ಭಾಗ್ಯವಂತ : ಎರೆಯುವೆನು ಬಾ ನಿನ್ನ, ನಮ್ಮ ಪಟ್ಟದ ಮರಿಯೆ ಸಕಲ ತೀರ್ಥದ ಕ್ಷೀರ ನೀರ ತಂದು ಬೆರಗಾಗಿ ಬೆರೆತು ಆ ಶಿವನಲ್ಲಿ, ದೇವನಲಿ 'ಪಡೆದಪ್ಪನಾಗು' ಎಂದು (ಸೂರ್ಯಪಾ. ೮೭-೪). **೨.** ಜನ್ಮ ಕೊಟ್ಟ ತಂದೆ; ಪಿತ; ಜನಕ: ಎಳ್ಳು ಬಿತ್ತಲಿಲ್ಲ ಎಳ್ಳು ಬೆಳೆಯಲಿಲ್ಲ ಎಳ್ಳುಹೂ ಸೀರೆ ಉಡಲಿಲ್ಲ ಹಡೆದಪ್ಪ ಒಳ್ಳೆಮನೆ ನೋಡಿ ಕೊಡಲಿಲ್ಲ (ಹಳ್ಳಬಾ. ೬೬) ; ಬಿಡವಲ್ಲ ಪಾದಗಳ ದೃಢದಿಂದ ಹಿಡಿದನು ಅಡಿಗಳ ಮೇಲೆ ಉರುಳಾಡಿ ಎಂದನು ಹಡೆದಪ್ಪ ನೀ ನನಗೆ ಅಗಲದಿರು (ಸಿದ್ಧಪು. ೫-೯೫). **ಪಡೆವಂ, ಹಡೆವಂ** = **೧.** ಗಳಿಸಿದವನು; ಧನವಂತ: "ವಿಂದನ್, ವಿತ್ತಃ, ವಿತ್ತವಾನ್–ಈ ೩ ಪಡೆವಂ" (ಕಾಶಕ: ೨೧೩). **೨.** ಗಳಿಸುವವನು ; ಸಂಪಾದಿಸುವವನು : ದೊರಕಿಸಿಕೊಳ್ಳುವವನು : "ಲಭಕಃ, ಲಾಭಕಃ, ಲಭಮಾನಃ—ಈ ೩ ಹಡೆವಂ" (ಕಾಶಕ. ೧೩೦). **ಹಡೆದ ತಾಯಿ** = ಜನ್ಮಕೊಟ್ಟ ತಾಯಿ; ಮಾತೆ ; ಜನನಿ : ತೊತ್ತುವೇಟಕೆ ಹಡೆದ ತಾಯನು ತೊಱಸಿದರೊ ಮೌಕ್ತಿಕದ ಮಣಿಗಣವ ಕೊಡಹಿ ಬಿಸುಟರೊ ದಾರಕೋಸುಗ . . . ಎನುತ ಮೊಱೆಯಿಟ್ಟಳಾ ತಾರೆ (ತೊರರಾ. ೪-೫-೧೧). **ಹಡೆದಬ್ಬೆ** = ಹಡೆದ ತಾಯಿ : ಹಡೆದಬ್ಬೆಗೆ ಬೇಡವಾದ ಮಕ್ಕಳು ನೀವು (ಮೂಕಜ್ಜಿ. ೧೫೮). **ಹಡೆದವನು** = ಪಡೆದಪ್ಪ **೨** : ಹಡೆದವ್ವನು ಹಡೆದವನಿಗೆ ಹಡೆಕೂಸನ್ನು ಹತ್ತು ದಿವಸದಲ್ಲಿಯೋ ತಿಂಗಳಲ್ಲಿಯೋ ತೋರಿಸುವ ವಿಧಾನವು ಬಂದಿರಬೇಕು (ಸಾಹಿಸಂ. ೧೩೧). **ಹಡೆದವರು** = ಜನ್ಮಕೊಟ್ಟವರು ; ತಂದೆ ತಾಯಿ : ಹಡೆದವರು ಹಣೇಬರಹ ತಿದ್ದುವರೇ ? (ಗಾದೆ); ಹಡೆದವರೇನು ಹಣೆಯಲ್ಲಿ ಬರೆಯುವರೇ ? (ಗಾದೆ). **ಹಡೆದವಳು** = ಹಡೆದ ತಾಯಿ : ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ ಹಡೆದವಳ ಎದೆ ಕೊರಳ ಕೊಯ್ವಂಥ ಚೂರಿ (ಪುರಂದ. ೧-೧೪೮ ಅನುಪಲ್ಲವಿ); ಹಡೆದವಳು ತೊಟ್ಟಿಯನ್ನು ಸೇರಿ ತೊಟ್ಟಿಲಲಿ ಮಗುವನ್ನಿಡುವ ದಿನ ತಂದೆಯೂ ಮಗನ ಮುಖವನ್ನು ನೋಡುತ್ತಿರಬೇಕು (ಸಾಹಿಸಂ. ೧೩೧). **ಹಡೆದವ್ವ, ಹಡದವ್ವ** = ಹಡೆದ ತಾಯಿ : ಹಡೆದವ್ವನು ಹಡೆದವನಿಗೆ ಹಡೆಕೂಸನ್ನು ಹತ್ತು ದಿವಸದಲ್ಲಿಯೋ ತಿಂಗಳಲ್ಲಿಯೋ ತೋರಿಸುವ ವಿಧಾನವು ಬಂದಿರಬೇಕು (ಸಾಹಿಸಂ. ೧೩೧) ; ಎನಗಿನಿತು ಸಂಪತ್ತು ಸಡಗರಂ ಬಂದುದೀ ಮಲ್ಲಮ್ಮನಿಂದೀಕೆಯೆನಗೆ ಹಡದವ್ವನಿವಳುಪಕಾರವ ಎಂದೆಂದು ಮರೆಯೆನು (ಮಲ್ಲಚ. ೧೮-೩).

**[ದೇ.॥ ತಮಿ. ಪಟ್ರು; ಮಲ. ತುಳು. ಪಡೆ; ತೆಲು. ಪಡಯು, ಪಡಯು]**

**ಪಡೆ$_2$,** ಹಡೆ$_2$ (ನಾ). **೧.** ಸೈನ್ಯ ; ಬಲ ; ದಂಡು : "ಪಡೆಯಲ್ಲಿಯುಂ ಕಟಕಮೆಂಬುದು" (ಹಲಾಯು. ೧೩೧-೪) ; ಪಡೆಯಱಿಯಲಾದೊಡ[ರಿ]ಯಂ ಕಿಡಿಸುಗುಮಂತಃಕಳಂಕ ನೃಪಮಂಡಲಮಂ ತಡೆಯದೆ ತಮಸ್ಸ್ವಭಾವಂ ಕಿಡಿಸುವವೋಲರಿದು ರಾಹು ಶಶಿಮಂಡಲಮಂ (ಕವಿರಾ. ೩-೧೪೭) ; ಆಕೆಗವಿಂತಪ್ಪುದೊಂದು ಬಯಕೆಯಾದಪುದು ಮೞೆಗಾಲದೊಳಾನೆಯನೇಱಿಯೆಲ್ಲಾ ಪಡೆಯೊಡನೆಯಡವಿಗೆ ಪೋಗಿಯಾಲದ ಮರದ ಪಣ್ಗಳಂ ಕೊಯ್ವಂತಪ್ಪ (ವಡ್ಡಾರಾ. ೧೫೭-೧೪); ಅಂತೆರಡುಂ ಪಡೆಗಳುಂ ಪಣ್ಣಪಣ್ಣನೆ ಪಣ್ಣಿ ಕಾಳೆಗಕ್ಕೆ ನಡೆಯಲೊಡರಿಸಿದಾಗಳ್ (ಪಂಪಭಾ. ೧೦-೫೦ ವ) ; ಕಾಳರಾತ್ರಿಯ ಕಟಕವೋ ಮೇಣ್ ಕಾಲರುದ್ರನ ಪಡೆಯೊ ದಾನವನಾಳಿನಗ್ಗಳಿಕೆಗಳ ಬಣ್ಣಿಸಬಲ್ಲ ಕವಿ ಯಾರು (ಕುಪ್ರಾದ್ರೋ. ೧೫-೪೭) ; ಒಡಸಿಕ್ಕೇರಿಯ ಸೆಳೆದಾಗ ತುರುಕರ ಪಡೆ ನಡೆದುದು ಕನ್ನಡಕೆ

(ಕಂನವಿ. ೧೧ ಸೂಚನೆ). **೨.** ಗುಂಪು ; ನೆರವಿ ; ಸಮೂಹ : ಸುರರ ಪಡೆ ನೆರೆದಿರಲು ಕರಿಗಳೆನಿತನಿತಜಕೊಳೆ ಖರಕರನವಿಾರಣಪದಾಂತಂ ಪುರ ಮಥನನಿದೆ[ರೆ] ಬಟುಕ ನೆರೆದು ಯತಿ ದಶಮದೊಳೆ ತರತರದಿನೊಪ್ಪಿ ನಿಲೆ ಸಂತಂ (ಭಂದೋಂಬು.೩-೨೦೫) ; ವಡಬಾನಲನ ಪಡೆಯಂತೆ ಕಾಲಾಗ್ನಿಯ ಮಾಲೆಯಂತೆ . . . ಭೈರವನ ಬಳಗದಂತೆ ಮುಂತಿರ್ದ ರಕ್ಕಸವಡೆಯ ನಡುವೆ ನಿಂದ ವೀರತಾರಕಾಸುರಂ (ಗಿರಿಕ. ೬-೫೫ ವ) ; ಕಡೆಯ ಪಂಡೆ ಯದ ನಟ್ಟುವರು ಮದ್ದಳೆಗರು ಗದಣೆಯ ತಾಳಧಾರಿಗಳು ಬಿಡಯವಿಲ್ಲದ ಗೀತವಾದ್ಯವಿದ್ಯಾಧಿಕಪಡೆಯಿರ್ದುದೊಡ್ಡೋಲಗದಿ (ಮೋಹತ. ೨೦-೩೭); ದಿನದಿನವೂ ಸುಳ್ಳುಸಾಕ್ಷಿಗಳ ಪಡೆಯು ಹೆಚ್ಚಾಗುತ್ತಾ ಬಂತು (ಪಂಚಾಮೃ. ೩೦). **ಪಡೆ$_2$ : ೧.** ವೇಲೇಜುವ ಬಗೆ ವಿಗೆ ತಿವುರಿನ ಹೊಂಬಳೆಗಳ ಭಾಳದ ಚಂದ್ರದ ಚಿತ್ರದ ಮೊಗರಂಬದ ಕೈದಾಳಿನ ಕಾಲ್ಗಾಪಿಂ ಪಡೆಯಂ ಹಣ್ಣಿದ ಕರಘಟೆ ನೆರೆದುವು ಬಲದೊಳಗೆ (ವೀರೇಚ. ೨-೨೮). **೩.** ವಂಶ; ಬಳಗ ; ಮನೆತನ : ಊರವರು "ಶಾನು ಭೋಗನ ಪಡೆ ಹಾಳಾಗ, ಇಸ್ಕೂಲು ಮಟೆ ಬಾಗಿಲು ಹಾಕಿಸಿದ" ಎಂಬುದಾಗಿ ಶಪಿಸುತ್ತಾರೆ (ಗರುಡಾ. ೧೦೬).

**ಪಡೆ ನೋಡೆ ಗಂಡಂ**=ಸೈನ್ಯದ ಎದುರಿನಲ್ಲಿ ಪರಾಕ್ರಮವನ್ನು ತೋರಿಸುವವನು : ಪಡೆ ನೋಡೆ ಗಣ್ಡಂ ಗಣ್ಡರ ಸಿಂಘಂ ಅಸಹಾಯ ಸಾಹಸಂ (ಎಇ. VI, ೨೪೯-೩ ; 975). **ಪಡೆ ಮೆಚ್ಚೆ ಗಂಡಂ**=ಸೈನ್ಯವು ಮೆಚ್ಚುವಂತಹ ಶೂರನಾದವನು ; ಪರಾಕ್ರಮಿ ; ಒಂದು ಬಿರುದು : ಗಂಡಗಾಡಿ ನೂರ್ಮಡಿ ಮಿಗಿಲಾದುದಾ ರಥಮನೇಟಿಲೊಡಂ ಪಡೆ ಮೆಚ್ಚೆ ಗಂಡನಾ (ಪಂಪಭಾ. ೮-೧೧೧) ; ಒಡನುಂಡಂಗೆ[ಡಱ] ದಿದೆ ಕಡುಂಗಲಿ ಕಡೆಗಣಿಸಲಾಗದೆಂದುತ್ಸವದಿಂ ಪಡೆ ಮೆಚ್ಚೆಗಂಡನಾಹವದೆಡೆ ಯೊಳ್ ಸಿತಗಗ್ಗೆ ಗಂಡನೆನಿಸಿದಂ ಮಸಣ (ಈಇ. IV, ೧೬-೧೧; 1166) ; **ಪಡೆಯಂಕಕಾಱ**=ಸೈನ್ಯದಲ್ಲಿ ಮಹಾಶೂರನಾದವನು: ಶ್ರೀಮತ್ಪಡೆ ಯಂಕಕಾಱ ನೊಟಂಬಾಧಿರಾಜಂ ಪೆರ್ಬೆಣ್ಣಯಂ ತಾ×××ಸೂರೆಕಾಱ ಕಾದಿಯಣ್ಣಂಗೆ ಕೊಟ್ಟೊಡೆ (ಎಕ. X, ಮುಳಬಾ. ೨೦೮-೯ ; 1000).
[ದೇ.‖ **ತಮಿ.** ಪಟ್ಟ್ ; **ಮಲ.** ಪಡ; **ತುಳು.** ಪಡೆ ; **ತೆಲು.** ಪಡವ]

**ಪಡೆ$_3$**, ಪಡ$_1$, ಪಡಿ$_5$, ಫಡಿ(ನಾ). **೧.**(ಕಲ್ಲುಬಂಡೆಗಳ) ಸಂದು,—ಬಿರುಕು : "ಪಡೆಯೆಂದು ಕಲ್ಲ ಮಱಿ" (ಕಶಸಾ. ೫೦-೬೬) ; "ಪಡೆ ಯೆನೆ ಕಲ್ಲ ಮಱಿಯುಮೆನಿಕ್ಕುಂ" (ಕವಿಕಂ. ೫೮) ; ಎಲ್ಲಿ ನೋಡಲು ಸರಿ ಜರಿ ಹಳ್ಳ ಬರೆಗಳು ಕಲ್ಲ ಪಡೆಗಳು ಗುಹೆಗಳು (ಕಂನವಿ. ೧೮-೪೩). **೨.** ಕಲ್ಲಿನ ಹಾಸು ; ಹಾಸುಗಲ್ಲು ; ಚಪ್ಪಡಿ : ಕಲ್ಲಿನ ಪಡೆಯ ಮೇಲಿಂದ ನೀರಿನ ಪ್ರವಾಹವು ಹರಿಯುತ್ತಿದ್ದರೆ, ಆ ಪಡೆಯು ನೀರಿನ ಘರ್ಷಣದಿಂದಲೂ ಅದರಲ್ಲಿ ಬಂದು ಹೋಗುವ ಹರಳು ಉಸುಬು ಗಳ ಘರ್ಷಣದಿಂದಲೂ ಸವೆದು ನುಣುಪಾಗುತ್ತದೆ (ಮುಂಬಯಿ.೬-೧೮೦). **ಪಡ$_1$ : ೩.** ಹಳ್ಳ ; ಕುಳಿ ; ತಗ್ಗು : ಈ ತಾವು ಪಡಾ ಬಿಟ್ಟೀ ಅಲ್ಲಾ . . . ಇಲ್ಲೆ ನೀರು ಹರಿಯೂದುಲ್ಲಾ ? (ಬಾಬಲ. ೧೨). **೪.** ಒಂದು ಮರದ ತುಂಡಿನ ತುದಿಯನ್ನು ಇನ್ನೊಂದು ಮರದ ತುಂಡಿನ ತುದಿಯಲ್ಲಿ ಕೂರಿಸಲು ತೋಡಿರುವ ಕುಳಿ,—ವೆಜ್ಜ ; ಕೂರು : (ಕ). **ಪಡಿ$_5$ : ೧.** ನಡೆವೆತ್ತ ನೀಲಾಚಲಶಿಖರದ ಕಲ್ಲ ಪಡಿ ಯೊಳಗಿದ್ದ ಕೆನ್ನೀರು ಒಡೆವಾಯ್ವಂತೆ ರೋಹಿತಧಾರೆ ಸುರಿದು ಕಿಗ್ಗದಲಿಲ್ಲಿ ವಾಹಿನಿಯಾಯ್ತು (ಮೋಹತ. ೧೨-೬೦). **ಫಡಿ : ೧.** ಕಿಡಿಕಿಯ ಹತ್ತಿ ರವೇ ಕಲ್ಲುಫಡಿಯೊಳಗಿಂದ ಒಂದು ಗಿಡವು ಬೆಳೆದಿತ್ತು (ಮೇದಿಮ. ೧೨೩). **೨.** ಚಿಕ್ಕ ಚಿಕ್ಕ 'ಫಡಿ'ಗಳನ್ನೇರಿ ಆತ ಮೇಲೆ ಬಂದ (ಬಸಿ. ೨೪); ಆ ಪ್ರದೇಶದಲ್ಲಿಯ ಜನರೆಲ್ಲರೂ ಅದನ್ನು 'ಸಾಕ್ಷಿಯ ಫಡಿ (ಕಲ್ಲು)' ಎಂದು ಕರೆಯುವರು (ಮೂಕನಾ. ೨). **೫.** ಕಲ್ಲುಗಳಿಂದ ಕಟ್ಟಿರುವ ಕಟ್ಟೆ ; ಘಟ್ಟ : ತಗ್ಗು, ದಿನ್ನೆ, ಕಟ್ಟೆ, ಫಡಿಗಳೆಲ್ಲವೂ ಅವಳಿಗೆ ಪರಿಚಿತವಾಗಿದ್ದವು (ಬಾಬಲ. ೧೧೧) ; ಕೆಳಗಿಳಿದು ಬಂದು ಅಲ್ಲಿಯೇ ಜುಳುಜುಳು ಹರಿಯು ತ್ತಿರುವ ಅಗಸರ ಫಡಿಯಲ್ಲಿ ನೀರಿನೊಡನೆ ಚೆಲ್ಲಾಟವಾಡುತ್ತಿದ್ದನು (ರಂಗರೋ. ೩೩) ; ಮಹಾರಾಜರ ದರ್ಶನಾಪೇಕ್ಷೆಯಿಂದ ಹರಗೋಲ ಫಡಿಯ ಹತ್ತರ ಸಮ್ಮಿಲಿತರಾದ ಜನರಿಗೆ ಮಾತ್ರ ಇದರಿಂದ ತೀವ್ರವಾದ ನಿರಾಶೆಯಾಯಿತು (ಗ್ರಾಮಾಯ. ೩೮೮). [**ದೇ.‖ತೆಲು.** ಪಡಕು, ಪಡುಕು]

**ಪಡೆ$_4$** (ನಾ). ಒಂದು ಬಗೆಯ ಭೂಮಿ : ಎರಿ ಮತ್ತು ಉಸುಕುಭೂಮಿ ಹಾಗೂ ಚೆಲೋ ಮಂಡು ಪಡೆಯಾದರೂ ಮಸಾರಿಯಾದರೂ ಕುರಿ ತರುಬಿ ವಿಶೇಷ ಗೊಬ್ಬರ ಹಾಕಿದರೆ ಮೆಣಸಿನ ಗಿಡಗಳನ್ನು ಹಚ್ಚಬೇಕು (ಕೃಷಿಪ್ರ. ೭೧). [ ? ]

**—ಪಡೆ$_5$** (ಪ್ರ). ಒಂದು ಕೃದಂತಭಾವನಾಮಪ್ರತ್ಯಯ : 'ತಿದ್ದು ಪಡೆ' ಪರಾ.

**ಪಡೆಕಳಿ** (ನಾ). "ಕಾಳೆಗದ ಆಟ ; ಅಣಕುಯುದ್ಧ" (ಹುಲಿಹಾ. ಕೋಶ): ತೆಂಗಿನ ಕಾಯಿಗೆ ಈಡು ಹೊಡೆಯುವುದನ್ನು, ಪಡೆಕಳಿಯಾಡು ವುದನ್ನು ನೋಡಲು ಪೂವಿಯೂ ಅಲ್ಲಿಗೆ ಬಂದಿದ್ದಳು (ಹುಲಿಹಾ. ೩೬).
[←**ಕೊಡ.** ಪಡೆಕಳಿ]

**ಪಡೆಗಲ್ಲು** (ನಾ). ಸಮೂಹವಾಗಿ ಬಿದ್ದಿರುವ (ಚಿಕ್ಕ ಚಿಕ್ಕ) ಬಂಡೆ: ಗಿರಿಯ ಪಡೆಗಲ್ಲಿವಕೆ ನಿಜಮಂದಿರವಣ್ಣಲೆ ಸಂಬಳವು . . . ಇವರ ಬಲ ದಲಿ ಧುರವ ಜಯಿಸುವುದರಿದು ದೇವರಿಗೆಂದರಾ ಚರರು (ತೊರಂ. ೬-೬-೩೬). [ಪಡೆ$_2$ + ಕಲ್ಲು(<ಕಲ್$_3$)]

**ಪಡೆಗವಿ** (ನಾ). ಕಲ್ಲಿನ ಗವಿ,—ಗುಹೆ: ಅಡವಿಯ ತೊಪ್ಪಲ ತರಿ ತಂದು ತಿಂದುಂಡು ಒಡಲ ದಂಡಿಸಿಕೊಂಡು ಪಡೆಗವಿಯೊಳಗೆ ತಪವನ್ನೆದಿಹೆ ನೆಂದು ಕಡುಹೆಮ್ಮೆಯಲಿ ನುಡಿವ ಅಣ್ಣಗಳು ನೀವು ಕೇಳಿರೊ (ಪಚಸಂ. ೬೧೭-೨೮). [ಪಡೆ$_3$ + ಗವಿ$_2$]

**ಪಡೆಗೆಯ್** (ಕ್ರಿ). ದಂಡೆತ್ತಿ ಹೋಗು ; ದಾಳಿಯಿಡು : ರಾಜಮಲ್ಲ ಪೆರ್ಮಾನಡಿ×××ಸದೊಳ್ ಕಜ್ಜುಯಾಮೇಗೆ ಪಡೆಗೆಯ್ದಾ ಕೊಯ್ದಾಳು ಕಾದು×××ಬಲ ಮೇಗೆ ಎಟ್ಟಿನ್ದವು (ಎಕ. X (S), ಬಾಗೆಪ. ೮೬-೫ ; ಸು. 820). [ಪಡೆ$_2$ + ಕೆಯ್$_1$]

**ಪಡೆಗೊಳ್ಳು** (ಕ್ರಿ). ಸೈನ್ಯವನ್ನು ಕೂಡಿಕೊಳ್ಳು ; ಸೇನಾಸಮೇತ ವಾಗು : ಮಲ್ಲರಾಯನನ್ನು ಬಗ್ಗುಬಡಿಯಲು ಕೃಷ್ಣದೇವರಾಯ ಪಡೆಗೊಂಡು ಮುನ್ನುಗ್ಗಿ, ಒಂದೇ ದಿನದ ದಾಳಿಯಲ್ಲಿ ಶಿವಸಮುದ್ರ ಕೋಟೆಯನ್ನು ಸ್ವಾಧೀನಪಡಿಸಿಕೊಂಡನು (ಅಳೌಕ. ೧೬).
[ಪಡೆ$_2$ + ಕೊಳ್ಳು$_1$(<ಕೊಳ್$_1$)]

**ಪಡೆಧಕ್ಕೆ** 'ಪಡಧಕ್ಕೆ' ನೋ.

**ಪಡೆದೋರ್ಕೆ** (ನಾ). ಸೈನ್ಯದ ತೋರಿಕೆ,—ಪ್ರದರ್ಶನ : ವಂಕದಾರ ದೆರಡುಂ ದೆಸೆಯೊಳಂ ತುರಗಾಸುರನ ಪಡೆದೋರ್ಕೆಯಂತಿರ್ದ ದಿವ್ಯಾಶ್ವಂ ಗಳ ಕಟ್ಟುವ ದೀರ್ಘಪಟಮಂಡಪಂಗಳಿಂದಂ (ಶಾಂತಿಪು. ೧೦-೧೪೭ ವ).
[ಪಡೆ$_2$ + ತೋರ್ಕೆ]

**ಪಡೆನುಡಿ** (ನಾ). ಜನಬಳಕೆಯ ಮಾತು ; ನುಡಿಗಟ್ಟು ; ಆಡುನುಡಿ : ಬ್ರಹ್ಮಶಿವನ 'ಸಮಯಪರೀಕ್ಷೆ'ಯಲ್ಲಿ . . . ಲೌಕಿಕವಾದ ಹೋಲಿಕೆ, ಗಾದೆಮಾತು, ಪಡೆನುಡಿಗಳನ್ನು ಸಮುಚಿತವಾಗಿ ಕವಿ ಬಳಸಿ ದ್ದಾನೆ (ಕಸಾಚ. ೧೯೮) ; ಈ ಇಂಗ್ಲಿಷ್‌ಪ್ರಭಾವವು ಎಷ್ಟೋ ಸಲ ವಾಕ್ಯರಚನಾಪದ್ಧತಿಯಲ್ಲೂ ಪಡೆನುಡಿಗಳಲ್ಲೂ ಕೂಡ ಕಂಡುಬರುತ್ತಿದೆ (ಭಾಷಾಶಾ. ೧೭೪); ನವ್ಯಕವಿಯು ಒಮ್ಮೊಮ್ಮೆ ಅನ್ಯಕವಿಗಳ ಇಂಥ ಶಬ್ದ ಸಮುಚ್ಚಯಗಳನ್ನಾಗಲಿ ಪಡೆನುಡಿಗಳನ್ನಾಗಲಿ ಬಳಸಿಕೊಳ್ಳುತ್ತಾನೆ (ನವ್ಯಕಾ. ೩೭). 'ಪಡೆವಾತು' ಪರಾ. [ಪಡೆ$_2$ + ನುಡಿ$_2$]

**ಪಡೆನೆರಪು** (ಕ್ರಿ). ಸೈನ್ಯವನ್ನು ಒಟ್ಟುಗೂಡಿಸು ; ದಂಡನ್ನು ಒಂದುಗೂಡಿಸು : ಆ ಯವನರನ್ ಮುರಿದು, ಆವರೂರ್ಗಳನ್ ಕೊಳಲ್ ಪಡೆನೆರಪಿ ತಾನತ್ತ ಪೋಗೆ ಮಗನ್, ಎನಗಿತ್ತ ತಪ್ಪದೆಯೆ ಇರುಳಿರುಳ್ ಸುಳಿಯುವುವು ಕನಸುಗಳ್ (ಪಾರಪ. ೯-೧೯೭).
[ಪಡೆ$_2$+ನೆರಪು$_1$]

**ಪಡೆನೋಡು** (ಕ್ರಿ). ಸೈನ್ಯವನ್ನು ನೋಡು; ದಂಡನ್ನು ಕಾಣು: ಪಿಡಿದಡಸಿ ತಿನಲ್ ಬಂದಿರ್ದಡೆಯೊಳ್ ನಿನಗಾಗಿ ಮದನನೆನ್ನನೆ ತಿನೆ ಕೇಳ್ ಪಡೆನೋಡಲ್ ಬಂದವರಂ ಗುಡಿವೊಱಿಸಿದರೆಂಬುದಾಯ್ತು ನಿನ್ನೆನ್ನೆಡೆಯೊಳ್ (ಪಂಪಭಾ. ೩-೧೫). [ಪಡೆ$_2$+ನೋಡು]

**ಪಡೆಪಾಳಿ** 'ಪಡಪಾಳಿ$_1$' ನೋ.

**ಪಡೆಪಾಳಿತನ** (ನಾ). ಗಳಿಸುವಿಕೆ ; ಸಂಪಾದನೆ ಮಾಡುವಿಕೆ : ಕುಂಟಣಿಯೊರ್ವಳ್ ತನ್ನ ಮಗಳ ಸೊಬಗಿನ ಸೊಂಪಿನ ಪಡೆಪಾಳಿತನಮುನೆ ನುಡಿವುದುಂ (ಅನಂಪು. ೮-೨೪ ವ). [ಪಡೆಪಾಳಿ(<ಪಡಪಾಳಿ$_1$)+-ತನ]

**ಪಡೆಪು** 'ಪಡಪು$_1$' ನೋ.

**ಪಡೆಪುಗಾತಿ** (ನಾ). ಗಳಿಸುವವಳು ; ಹಣವನ್ನು ಸಂಪಾದಿಸುವ ಹೆಣ್ಣು : "ಪಡೆಪುಗಾತಿ = ಗಳಿಸುವ ಹೆಣ್ಣು" (ಗಂಗಾಮ. ೧೯೫).
[ಪಡೆಪು(<ಪಡಪು$_1$)+-ಕಾತಿ$_5$]

**ಪಡೆಪುಗಾರ್ತಿ** 'ಪಡಪುಗಾರ್ತಿ' ನೋ.

**ಪಡೆಪುಗಿಡಿಸು** (ಕ್ರಿ). ಗಳಿಕೆಯನ್ನು ತಪ್ಪಿಸು ; ಲಾಭವನ್ನು ಕಸಿದುಕೊಳ್ಳು : ತನ್ನ ಮಗಂಗಿಟ್ಟಗೆಗೊಳ್ವ ಬೆಸನಂ ಪೇೞ್ದೊಡವನೊಂದುಮಂ ಕೊಳ್ಳದಿರೆ ಮುಳಿದವನ ತಲೆಯನೊಡೆಯೆ ಬಡಿದೆನ್ನ ಪಡೆಪುಗಿ[ಪಾಠಾಂ. ಪಡಪು ಗೆ]ಡಿಸಿಕೊಂಡು ಪೋದುದೆಂದು ತನ್ನ ಕಾಲ ಪಿಡಿವುದುಡಿವುದುಂ (ಚಾವುಂಪು. ೨೬).
[ಪಡೆಪುಗಿಡು(<ಪಡಪುಗೆಡು)+-ಇಸು$_3$]

**ಪಡೆಪುಗಿಡು** 'ಪಡಪುಗೆಡು' ನೋ.

**ಪಡೆವಾತು** 'ಪಡೆವಾತು' ನೋ.

**ಪಡೆವಾತುಗೇಳ್** (ಕ್ರಿ). ೧. ಸುದ್ದಿಯನ್ನು ಕೇಳು ; ಸಮಾಚಾರವನ್ನು ತಿಳಿ ; ವೃತ್ತಾಂತವನ್ನು ಅರಿತುಕೊಳ್ಳು : ಸೈಂಧವನವರಂ ಛಿದ್ರಿಸಲೆಂದು ಮೆಯ್ಗರೆದು ಬಂದು . . . ತೊಟ್ಟಗೆ ಪಾಂಚಾಳಿಯನೆತ್ತಿ ತನ್ನ ರಥದೊಳ್ ತಂದಿಟ್ಟುಕೊಂಡುಯ್ವನನ್ನೆಗಮಂತಾ ಪಡೆವಾತುಗೇಳ್ದತಿಬಳರ್ ಭೀಮಾರ್ಜುನರ್ . . . ಎಯ್ದಿದರ್ (ಪಂಪಭಾ. ೭-೩೧). ೨. ಪ್ರಸಿದ್ಧಿಯನ್ನು ಕೇಳು ; ಕೀರ್ತಿಯನ್ನು ತಿಳಿದುಕೊಳ್ಳು : ಅಡಿಗಡಿಗೆ ಬಗೆದು ಭಾವಿಸಿ ತೊಡರ್ವರ×ರಲ್ಕೆ ನಿನ್ನ ಕೂರಸಿಯೆಂಬೀ ಪಡೆವಾತುಗೇಳ್ವುದು ಗೋನುಗ ಪುಡುಕೆಯ ಮೊಲದಂತೆ××ಬುತಿಪ್ಪರ್ಮ್ಮಲೆಪರ್ (ಎಕ. VIII, ಸಾಗರ. ೧೦೯-೧೯ ; 1082).
[ಪಡೆವಾತು(<ಪಡೆವಾತು)+ಕೇಳ್]

**ಪಡೆವಾತುಗೊಳ್** (ಕ್ರಿ). ಸುದ್ದಿಯನ್ನು ಎತ್ತು ; ಸಮಾಚಾರವನ್ನು ಪ್ರಸ್ತಾಪಿಸು : ಕಿಡುವೊಡಲ ಕಿಡುವ ರಾಜ್ಯದ ಪಡೆವಾತುಗೊಳಲ್ಕವೆನ್ನ ಮೆಯ್ಯಗಿದಪುದೀಗಡೆ ಜೈನದೀಕ್ಷೆಯಂ ಕೊಂಡಡಿಗೆಜಗಿಸುವೆಂ ಸಮಸ್ತಸುರಸಮುದಯಮುಂ (ಆಪಿಪು. ೧೪-೧೨೭).
[ಪಡೆವಾತು(<ಪಡೆವಾತು)+ಕೊಳ್$_1$]

**ಪಡೆಯ**(ನಾ). ಆದಾಯ; ಗಳಿಕೆ (?) : ಭಟಾರರ ಶ್ರೀನಕ್ಷತ್ರದೊಳ್ಪನ್ನಿರ್ವ್ವರ ಪಾರ್ವ್ವರುಣ್ಬೋಂ ತಿಂಗಳ್ಗೆ ಏಕಭೋಗಂಮಿದಱಾ ಪಡೆಯಂ ವರ್ಷಕ್ಕೆ ಪತ್ತುಗದ್ಯಾಣಂ ತೆಱೆ (ಎಕ. IV, ಹೆಗ್ಗಡ. ೪-೬ ; ಸು. 750) ; ಕೆಸುಗೊಳವೊಡೆಯ ಮಹಾಜನಕ್ಕೆ ಪೆರ್ವ್ವಟ್ಟೆಯಊರುಂ ಮದೂರ್ರುಮುಂ ಬ್ರಹ್ಮಾದೇಯಂ ಪೊಯ್ದಂ ಅವಱಾ ಪಡೆಯಂ ಪೆರ್ವ್ವಟ್ಟೆಯಊರುನ್ದ ತೆಱೆ ಪೆನ್ನರ್ನ್ದು ಎರಡು ತೆಱುವುದು (ಎಕ. IV, ಹೆಗ್ಗಡ. ೪-೨೧ ; ಸು. 750) ; ಕೊಳಗುಪ್ಪೆ ಪೆಟ್ಟಿವಸಿ ಅರ್ಧಂ ಕಾನಸೊಪ್ಪಿನರ್ಧಂ ವಾರಲರ್ಧಂ ಕರ್ಸಪಿಣ್ಡಂ ನೂರಿಪ್ಪರ್ತ್ತೆಣ್ಬು ಕೊಂಬೆಗಾರೊಡಂ ಪಡೆಯಂಮೆಣ್ಬು ಮಲಾಡೆ ಜಮಳಿ ಒನ್ದು ಇದು ಗೋಪಾಲದೇವರಾ ದತ್ತಿ (ಎಇ. XXI, ೧೭೦-೧೫ ; ಸು. 8ನೆಯ ಶತ); ಉಪ್ಪವಳ್ಳಿಯ ಹವಿಗಂಗೆ ಕೊಟ್ಟ ಸ್ತಿತಿಕ್ರಮಮಾವುದೆಂದೊಡೆ ಅಮ್ಮೆಳೆಯ ಪತ್ತಣ್ಣ ತೆಱುವ ಅಯ್ನೂಱು ಭತ್ತ ಪಡೆಯಂ ಯಿದಕ್ಕೆ ಸಾಕ್ಷಿ ಮುಗುಳಿ ಚಣ್ಣಯೂರ ಪಲ್ಮಾಡಿ ಅಮ್ಮಾಳಿ (ಎಕ. VI, ಚಿಕ್ಕಮ. ೪೨-೧೮ ; 959). [<ಪಡೆ$_1$]

**ಪಡೆಯಿಲ** (ನಾ). ೧. ಸೈನಿಕ ; ಭಟ; ಯೋಧ : ಇಲ ಪ್ರತ್ಯಯಕ್ಕೆ -ಪಚ್ಚೆಯಿಲಂ, ಪಡೆಯಿಲಂ, ಗಾವಿಲಂ (ಶಸದ. ೨೦೫ ಪ್ರಯೋ). ೨. ಪೋಲೀಸು ; ಪೇದೆ : ಪೆಣ್ಗಳ್ಳರಿಯುವೆದೆಯಿಂದ ಪಡೆಯಿಲರ ಬರವಂ ಅಳ್ಳಿಯಂ ಕೊಳ್ಳಿಯಿಂದಿರಿವವೋಲ್ ಪೇಳಿದರ್ (ಕಾಲೂರ. ೧೫೮-೩೫೦). [ಪಡೆ$_2$+-ಇಲ]

**ಪಡೆಯಿಸು**, ಹಡೆಯಿಸು (ಕ್ರಿ). ಪಡೆಯುವಂತೆ ಮಾಡು ; ಹೊಂದುವಂತೆ ಮಾಡು ; ಉಂಟು ಮಾಡು : ಮಂತ್ರಸಿದ್ಧನ ವಿದ್ಯಂ ಸತ್ಯಮಪ್ಪುದಱೊಳ್ ಸಂದೆಯಮಿಲ್ಲದಱಿಂದೀ ಸಿಂಹಮಂ ಪ್ರಾಣಮಂ ಪಡೆಯಿಸಿ ನೋೞ್ಪ ವಿನೋದಮೆಂತುಂ ಬೇಡೆಂಬುದುಂ (ಪಂಚತಂ. ೨೫೧-೨೧); ಈಶ್ವರನಿಂ ಮುನ್ನವೆ ಮಣ್ಮಳಿಗೊಂಡ ಮದನಂಗಾಮಱುವುಟ್ಟಂ ಪಡೆಯಿಸಲೊದವಿದ ಜೀವನವಾಯುವಿದೆನೆ ಕಡುಚದುರರ ಚಿತ್ತಂಗೊಳಿಸಿದುದಾ ಬನದೊಳು ಸುಳಿವೆಳಗಾಳಿ (ಜಯಕಾ. ೧-೫೧). **ಹಡೆಯಿಸು** : ಕಡು ರಂಜಿಪ ಧರ್ಮಚಕ್ರಸಮನ್ವಿತ ನಡೆದು ನೆಲಕೆ ಸುಭಿಕ್ಷವನು ಹಡೆಯಿಸುತಾರ್ಯಖಂಡದ ಜನಪದಕಡರಿಸಿದನು ಧರ್ಮವನು (ನೇಮಿಸಂ. ೩೨-೧೨೪). [ಪಡೆ$_1$+-ಇಸು$_3$]

**ಪಡೆವಳ**, ಪಡವಳ$_1$, ಪಡವಳ್ಳ, ಪಡಾವಳ, ಪಡೆವಳ್ಳ, ಪಡೆವಾಳ, ಹಡವಳ, ಹಡೆವಳ (ನಾ). ೧. ಸೇನಾಧಿಪತಿ ; ದಂಡನಾಯಕ ; ಸೇನಾನಿ : "ಸೇನಾನಿ ವಾಹಿನೀಪತಿ ತಾನಕ್ಕುಂ ಪಡೆವಳಂ" (ವಸ್ತುಕೋ. ೬೧-೫೪); ಅಂತು ವಿರಾಟನಂದನನಂ ಧರ್ಮನಂದನಂ ಸೇನಾನಾಯಕನಂ ಮಾಡೆ ನಾಳೆ ಕಾಳೆಗಮೆಂದು ಪಡೆವಳರ್ ಪೋಗಿ ಸಾಱಮೆಂಬುದುಂ (ಪಂಪಭಾ. ೧೦-೩೪ ವ) ; ಪಡೆವಳರಾಕ್ಷಣದೊಳ್ ಕೈವೀಸಲ್ . . . ಆಬಲ್ವಡೆ ಎರಡುಂ ತಾಂಗಿದುವಾರುಬಟೆಯಿಂನದುಬುತಮಪ್ಪಂತೆ (ಜಯಕಾ. ೬-೨೮); ಹಂತಿಗೊಂಡು ತಿಂತಿಣಿಸಿ ತುಱುಲ್ಗೆಯ್ವ...ಪಡೆವಳರಂ ಘೋಟಾಯ್ಲರಂ ಝುಳಂಬಾಯ್ತರಂ ಪಸಾಯ್ತರಂ ಪ್ರೇಮದಿಂದವರವರಂತರವಱತು ಮಧುರೋಕ್ತಿಗಳಿಂ ಸಂತಸವಡಿಸುತ್ತ (ಚಿಕಪಂ. ೭೪-೯); ಮಾರಿಯ ಕೋಱೆವಲ್ಲಂ ಮುಱಿವ, ಭೈರವನ ನಿಡುಜಡೆಯಂ ಪಿಡಿವ, ಕಾಳರಕ್ಕಸಿಯ ಕೂರ್ವಾಳಂ ಸೆಳೆವ ಪಡೆವಳರೊಳರ್ (ರಾಮಾಶ್ವ. ೧೨-೭). **ಪಡವಳ$_1$** : ೧. ಮಣ್ಡಳೇಸ್ವರಂ ಪರಿಕ ನಡೆವರ ಪಡವಳ ಗು[ಗ್ಗ]ಯ್ಯನುಂ (ಇಎ. ೧೯೪೬, ಹಾನಗಲ್. ೨೫೦-೨೮ ; 993) ; ಆ ಪರಮೇಶ್ವರಿಗೆ ಜಗದ್ವ್ಯಾಪಕ ಶುದ್ಧೇಂದುಕೀರ್ತ್ತಿ ಪಿರಿಯ ಮಗಂ ಲಕ್ಷ್ಮೀಪತಿ ಸಮಗ್ರವಿಜಯಶ್ರೀಪತಿಯೆನೆ ಧರೆಗೆ ನೆಗಟ್ದ ಪಡವಳ ತೈಲಂ (ಸೌಇಇ. XI-i, ೫೨-೩೩ ; 1007) ; ಮಹಾಮಣ್ಡಳೇಸ್ವರಂ ಕೀರ್ತ್ತಿದೇವರ ಪಿರಿಯ ಪಡವಳ ಕೀರ್ತಿಯಣ್ಣಂ . . . ಕಪ್ಪಮಂ ತರಲು ಪೋದಲ್ಲಿ ಪಡವಳ ಕೀರ್ತಿಯಣ್ಣನ ಮಯ್ದುನ ಬಿಂಜಿಮಯ್ಯನ ಮಗ ವೇಮಣ್ಣಂ ಬಯಲ ಬವರದಲು ಮಾರ್ಬ್ಬಲಮನೆರದಾಳಿಂ ಮುಂನದಿಱದು ಸುರಲೋಕಪ್ರಾಪ್ತನಾದ (ಎಕ. VIII, ಸೊರಬ. ೪೬೮-೨ ; 1112) ; ಪಡವಳ ಬಂದಿದ್ದಾರೆ ಒಡೆಯರೆ (ಚಿಕರಾ. ೧೬೪). **ಪಡವಳ್ಳ** : ೧. ಅಂತೇಱು ನಡೆಯೆ ಸಂಧಿಸಿ ಪಡವಳ್ಳರ ಸಂತಾನ ಪಡಿಯಜರುಗಳ ತಿಂಥಿಣಿಯಡಪ

ವಳ್ಳರ ಕಬ್ಬಿಗರ ಬಲುಸಂತತಿ ಮುಂದೆಯ್ದಿದುದು (ಅನಂಚ. ೮-೬೨).
**ಪಡಾವಳ : ೧.** ಕದಂಬಕಣ್ಣೇರವಂ ಕೀರ್ತ್ತಿದೇವನ ಪಡಾವಳ ಗೊರವರ ಕಿತ್ತಿಗನ ಭಂಟಂ ಶಾಮನ್ತ ಕುಪ್ಪ×××ವಾಗದೊಳು ಪುಟ್ಟಿದ ಸೆಣುವಗೆಯಲೂ ಪುಟಿದ ಧೀವರಾ ಪಡಾವಳ ಭಿಲ್ಲ ಭರ್ಮ್ಮನ ಪುತ್ರ ಗೋತ್ರಪವಿತ್ರನುಮ್ (ಎಕ. VIII, ಸಾಗರ. ೭೧-೩; 1173 ?). **ಪಡೆವಳ್ : ೧.** ಪಡೆವಳ್ಳಂ ಗಡವಮಾ ಬಲಕ್ಕೆ ದಲೆ ಧೃಷ್ಟದ್ಯುಮ್ನನೆಂಬೊಳ್ಪಿ (ಪಂಪಭಾ. ೧೦-೪); ನೆಗಬ್ದಿತ್ತಿಮಬ್ಬೆಯ ತನಯಂ ಪಡೆವಳ್ತೈಲನಣ್ಣಿಗದೇವಂ ವಿನಯಾರ್ಣವನೂರ್ಜಿತಶೌರ್ಯನಿದಾನಂ ಚಕ್ರವರ್ತಿ ಸೈನ್ಯಾಧೀಶಂ (ಅಜಿಪು. ೧೨-೨೦); ಪಡೆವಳ್ಳಂ ಡಂಗುರಂಬೊಯ್ಸಿದಂ (ಅನಂಪು. ೯-೫೪); ಬಿಡು ಮಾಗಧನ ಗೆಲ್ವುದಾವ ಗಹನವೆಲೆ ಪಡೆವಳ್ಳ ಕೇಳ್ಮಂತ್ರಿ ಕೇಳು (ಭರಚ. ೨೪-೩); ಆ ವೇಳೆಗೆ ಅಂಬಿಗರ . . . ಕೈದುಗಾಜಿರ ಪಡೆವೆರಸು ಪಡೆವಳ್ಳರ್ ರಾವುತ್ತರ್ ಸಾದಿಗಳ್ ತೇರಾಳ್ಗಳ್ ದಂಡೆತ್ತಿ ಪೋದರ್ (ರಾಮಾಶ್ವ.೯೩-೨೯). **೨.** ಅಧಿಕಾರಿ; ಹೆಗ್ಗಡೆ: ಮಳೆಯರಾಜನ ಮನೆಯ ಪಡೆವಳ್ಳನೋ ಬಳಿಕ್ಕಿಳೆಯ ದಂಗುಡಿಮಾರನಣುಗಾಳೊ . . . ನೀನೆನುತ್ತೆ (ಅರಾಚ. ೨-೧೧-೨೭).
**ಪಡೆವಾಳ : ೧.** ಪಡೆವಾಳನಾಡಿದ ಮಾತನು ಕೇಳುತ ಕಡುಬೇಗದೊಳು ಪೋದನೋರ್ವ (ಜಿನರಾ. ೬-೩೩); ಪಡೆವಾಳ ನೀಂ ಮುಳಿಯಲೇಸು ಘನ ಮನುಜರಂ ತಡೆಗಡಿದು ಕುಟುಕುಗೊಂಬೆಸು ನಿಮುಷಮಾತ್ರದೊಳ್ ಕೊಡುಯೆನಗೆ ನೇಮಮಂತದನು (ಘೋರಾಸು. ೮).
**ಹಡವಳ : ೧.** ಜಯಕೇಸಿದೇವರಸರುಂ ತಂತ್ರಪಾಳ ಚಟ್ಟಮಯ್ಯನಾಯಕನುಂ ಹಡವಳ ಮಲ್ಲಿಯಣ ತೊಟ್ಟಗವುಂಡ ಎಚಿಭಟ್ಟನು (ಸೌಇಇ. XX, ೧೦೭-೪೨; 1138); ಶ್ರೀಮನ್ಮಹಾಪ್ರಧಾನಂ ಹಿರಿಯ ಹಡವಳಂ ಚಾವಿಮಯ್ಯನ ನೆಗತ್ತೆಯೆನ್ತೆಂದಡೆ (ಎಕ. V, ಹಾಸನ. ೫೭-೯; 1155); ಜಿಡ್ಡುಳಿಗೆ ಎಪ್ಪತ್ತಱ ಬಳಿಯ ಬಾಡ ಹಿರ್ಯ್ಯ ಸಕುಣವ ಕಾವದೇವನ ನಾಯಕ ಹಡವಳ ಮಾಚೆಯನಿಱಿದು ತುಱುವಂ ಕೊಣ್ಡು ಹೋಹಲ್ಲಿ (ಎಕ. VIII, ಸೊರಬ. ೩೦-೭; 1193); ಬೊಪ್ಪಗೌಡ ಗೋವಿಂದಗೌಡ ಹಡವಳ×××ಕಂ ಸಿದ್ಧೇಶ್ವರದೇವರ ದೇವಾಲ್ಯದ ಖಂಡಸ್ಫುಟಿತ ಜೀರ್ಣ್ನೋದ್ಧಾರಕ್ಕಂ (ಎಕ. VII, ಶಿವಮೊ. ೪೧-೬೬; 1203 ?). **ಹಡೆವಳ : ೧.** ಅಂತು ಹಡೆವಳನವರು ಹಡದ ಪೂರ್ವ್ವದ ಜನ್ಮಭೂಮಿಯುಗ್ಗ್ರಳು ಬಿದಿರೆಯಡವಿಗಾವೆ (ಎಕ. VII, ಶಿವಮೊ. ೫೫-೭೯; 1167); ಹಡೆವಳ ಗೊಗ್ಗಿ ತಾಂ ನೆಗಳ್ದ ರಕ್ಕಸಗಂಗನ ರಾಜ್ಯ ವಿಸ್ತರಕ್ಕಡುಗಲಿ ಗಂಡ ರಾಚಣನೂರ್ಜ್ಜಿತಕೀರ್ತ್ತಿವಿಳಾಸಮೂರ್ತ್ತಿಯಂ . . . ಪೊಗಳೆ ಮೂರ್ತ್ತಿಸಿದರಕ್ಕಸಪೃಥ್ವಿವಲ್ಲಭ (ಎಕ. VII, ಶಿವಮೊ. ೫-೨೧; 1218). [ಪಡೆ₂ +-ವಳ./ತೆಲು. ಪಡವಲ, ಪಡವಾಲು, ಪಡಾಲು]
**ಪಡೆವಳ್ತಿ** 'ಪಡವಳತಿ' ನೋ.
**ಪಡೆವಳ್ಳ** 'ಪಡೆವಳ' ನೋ.
**ಪಡೆವಾತು,** ಪಡೆಮಾತು, ಹಡೆಮಾತು (ನಾ). **೧.** ಜನಜನಿತವಾದ ಮಾತು ; ಪ್ರಸಿದ್ಧಿ ; ಕೀರ್ತಿ ; ಹೆಸರುವಾಸಿ : ಕಡುಗಲಿತನಮುಂ ಚಾಗದ ಪೊಡರ್ಪುಮೊಳ್ನುಡಿಯೊಳಾದ ಮಾನಸಿಕೆಯುಮುರ್ಕುಡುಗದ ಶೌಚಮುಮಾಯದ ಪಡೆವಾ[ಪಾಠಾಂ. ಮಾ]ತುಂ ಪೆರ್ಮೆವಡೆದುವವನಿಂದಿಳೆಯೊಳ್ (ಆದಿಪು. ೧೨-೧೦೪; ಕಾವ್ಯಾವ. ೩೪೪ ನೋ). **೨.** ವ್ಯರ್ಥವಾದ ಮಾತು ; ಅನಗತ್ಯವಾದ ನುಡಿ : ನಿನ್ನ ನಚ್ಚಿನ ಶರೀರಮೆ ಮುನ್ನಿನ ಮಾಟಿಕ್ಕೆಯಲ್ತದೇತೆಱ ಪಡೆವಾ[ಪಾಠಾಂ. ಮಾ]ತ ಪಾಯಮೆನಿಸಿರ್ದಪು ನಿನ್ನವೆ ಬೇಱವೆಲ್ಲವೆಂದಱಿದೆಲೆ ಭವ್ಯ ನಿನ್ನೊಡನೆ ಬಪ್ಪವನಪ್ಪಿಸು ಸುವ್ರತಂಗಳಂ (ಸಮಪ. ೫-೪೯); **೩೦.** ಪೋಗಿ ನುಡಿವೆನಪ್ಪೊಡೆ ತಾಂ ಪಿರಿದನುರಾಗಮಾಗಿ ಬಾರದೆ ಮಾಣ್ದಂದೇಂ ಪಡೆವಾತೊ ನಿನಗೀವೆಂ ಪೊನ್ನಂ ಲಕ್ಕಲೆಕ್ಕದಿಂ (ಜೀವಸಂ. ೧೧೬-೫೫); ಪಾಪಗ್ರಹಾಂಶಮುದಯಿಸಿ ಪಾಪಗ್ರಹಮುದಯಮಾಗೆಯುಂ ವೀಕ್ಷಿಸೆಯುಂ ವ್ಯಾಪಿಸುತೊಳ್ಪಱಿ ಕೊಂಡೊಡದೇಂ ಪಡೆವಾತೊಳ್ಪಿತೆಂದನೊಳ್ಪಿನ ಬಿಟ್ಟಂ (ಬಿಟ್ಟಸು. ೬-೨); ಪಡೆವಾತೇಂ ತನ್ನಾಣೆಯನಿಡೆ ತೊಟ್ಟನೆ ದುಷ್ಟಭೂಭುಜಂಗರ್ ಭಯದಿಂ ಪಡೆಯುಡುಗುವರಾಕ್ಷಣವೆಂದೊಡದೇಂ ಸನ್ಮಂತ್ರತಂತ್ರಸಿದ್ಧನೋ ಭೂಪಂ (ಧರ್ಮನಾ. ೩-೪೦). **ಪಡೆಮಾತು: ೧.** ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ (ಪಂಪಭಾ. ೧೨-೨೧೭); ಬಡಬಾನಲಂಗೆ ಸೆಡೆದಿಂಗಡಲೆ ಸರಣ್ಬೊಕ್ಕುದಮರಶೈಲಮನೆಂಬೀ ಪಡೆಮಾತಂ ನೀರ್ಗಾದಿಗೆ ಪಡೆಯುತ್ತುಂ ಪೊನ್ನ ಕೋಂಟೆಯಂ ಬಳಸಿರ್ಕುಂ (ಪಂರಾಮಾ. ೧-೧೧೩); ಒಮ್ಮೆ ಚಂದ್ರನ ಕವಿಯೆ ಧೂಮಕೇತು ಸ್ತಿಮಿತವಾಗಿಹುದದನ ಹಿರಿಯ ಪಡೆಮಾತು ! (ಪಯಣ. ೧೬-೧೦). 'ಪಡೆಮಾತುಗೇಳ್' ಪರಾ. **೨.** ಭೇದಿಸಲೆಂದೆದಲ್ ನುಡಿದರೆನ್ನದಿರೊಯ್ಯನೆ ಕೇಳ ಕರ್ಣ ನಿನ್ನಾದಿಯೊಳಬ್ಬೆ ಕೊಂತಿ ನಿನಗಮ್ಮನಹರ್ಪತಿ . . . ಪೆಱತೇಂ ಪಡೆಮಾತೊ ನಿನ್ನದೀ ಮೇದಿನಿ ಪಟ್ಟಮುಂ ನಿನತೆ ನೀನಿರೆ ಮತ್ತೆ ಪೆಱರ್ ನರೇಂದ್ರರೇ (ಪಂಪಭಾ. ೯-೬೪); ಕುಡುವುದು ಕಿಚ್ಚಂ ದೇವರ್ ತಡೆಯದೆ ಕತ್ತಿಗೆಯನೆಮಗೆ ಬೆಸಸುವುದಿನ್ನೇಂ ಪಡೆಮಾತೊ ತನಯರಿಲ್ಲದೆ ತಡೆದಿರ್ಪುದು ತಕ್ಕುದಲ್ತು ಭುವನಾಧಿಪತೀ (ಅಜಿಪು. ೧೦-೪೦); ಭೂಪತಿಗಳಂದು ಶೌರ್ಯಾಟೋಪದಿನರಿನೃಪಕಳಾಪಮಂ ಲೋಪಿಸಿ ಮತ್ತೇ ಪಡೆಮಾತೋ ತಪದೊಳಮಾ ಪುರುಷರ ತೇಜದಿನೆಸೆವರಾರೆನೆ ನೆಗೞ್ದರ್ (ನೇಮಿಪು. ೧೪-೧೩೭); ಪಡೆ[ಪಾಠಾಂ.ಡಿ]ಮಾತೇನಿದು ಕೃಷ್ಣನಾಜ್ಞೆಯೊಳೆ ವಿದ್ವಿಟ್ಸೇನೆಯಂ ಸುಟ್ಟು ಮಾಣ್ಬೊಡೆ ಮಾಣ್ಗುಂ ... ತತ್ಸಾಯಕಂ ಕಿಡಿಯುಂ ಕೇಸುರಿ ಸೂಸೆ ಬಂದಳುರ್ದು ಕೊಂದತ್ತಾ ಚತುಸ್ಸೈನ್ಯಮಂ (ಜಗವಿ. ೯-೩೩). **೩.** ಸುದ್ದಿ ; ಸಮಾಚಾರ; ವದಂತಿ: ಅಲ್ಲಿ ಪಾಂಡವರ ಪಡೆಮಾತಾವುದು ಧೃತರಾಷ್ಟ್ರ ಸುಯೋಧನರಿರ್ಪಂದಮಾವುದೆಂದು ಬೆಸಗೊಳೆ (ಪಂಪಭಾ. ೩-೩೧ ವ); ಸ್ವಾಗತಕುಶಲಸಂಭಾಷಣಾನಂತರಂ ಪಡೆಮಾತು ಮಾತುಗಳ್ ತಗುಳೆ ಮಾತುವಮಾತಾಗೆ ನಾರದನಿಂತೆಂದಂ (ಶಾಂತಿಪು. ೨-೨೧ ವ); ಈ ತೆಱನ ನಾತನೊಳ್ಪಡೆಮಾತಂ ಪೇೞ್ದಿನ್ನ ಸುಖದಿನಿರ್ಪೆನೆಂದ(?)ದಾ ತರುಣಿಯಿಂದೆ ಬೀೞ್ಕೊಂಡಾತುರದಿಂ ಪೊನ್ನ ಹಂಸೆ ಪೋದುದಲಂಪಿಂ (ನಳಚಂ. ೧೭೬); ಸಿವಡುಗಟ್ಟಿ ಜನವು ನಿಂತಲ್ಲಲ್ಲ ಅದೇ ಪಡೆಮಾತೇ (ಕನಕ. ೩೦). **೪.** ಪ್ರಸಂಗ ; ಪ್ರಸ್ತಾಪ ; ವಿಷಯ : ಒಡೆಯರಿವರೆಂಬ ಭಯಮುಮನೊಡವೆಯ ಲೋಭಮುಮನುಱಿದು ನಿಮ್ಮಭಿಮತಮಂ ನುಡಿದುಂ ಭಯಲೋಭಂಗಳ ಪಡೆಮಾತಱಿವಂಗಮೊಪ್ಪ ಮಲ್ತಿಱಿವಂಗಂ (ಅನಂಪು. ೧೩-೫೬); ಪೊಡರ್ಪತ್ಕುದ್ಧತರಾಜವಂಶವನಮಂ ನಿರ್ಮೂಲಿಸಲ್ ಪೋಪೆನೆಂಬೊಡದಂ ಮುನ್ನಮೆ ನಿಮ್ಮ ವಿಕ್ರಮದವಾಗ್ನಿಜ್ವಾಲೆ ತಳ್ತಿರ್ದುದಾ ಪಡೆಮಾತಿರ್ಕೆ . . . ಅನುಗ್ರಹಿಪುದೆನ್ನಂ ದೇವ ಕಾರುಣ್ಯದಿಂ (ಪುಷ್ಪಪು. ೫-೩). **೫.** = ಪಡೆನುಡಿ : ಅದರಲ್ಲಿ ಕನ್ನಡದ ಪಡೆಮಾತು ಪಡಿನೆಳಲಾಗಿ ತೋರಿದೆ (ತಪನಿ. ೭೧); ಕಂಬಡಿಯೊಳಗಿನ ಕುರುಬರ ಬಗೆಗಿನ ಗಾದೆ, ಪಡೆಮಾತುಗಳಿಂದ ಈ ಜನದ ಬಗೆಗೆ ಮೇಲಣ ಹಂತದವರೆಂಬ ಕರ್ನಾಟಕದಲ್ಲಿ ಇದ್ದ-ಇರುವ ಮನೋಭಾವವು ಬಯಲಿಗೆ ಬರುವುದು (ಕರ್ನಾಟ. ೩೪೭); ಇಲ್ಲಿ ಕನ್ನಡ ಪಡೆಮಾತಿನ ಬೆಡಗನ್ನು ಕಾಣಬಹುದು (ಕನ್ನಜಾ.೧೯೨). **೬.** ಚೌಕವಾದ ಮಾತು; ವೈಯಾರದ ಮಾತು : ಪಡೆಮಾತಿನ ಬಡಿವಾರದ ಮಿಂಡರ ಮೊದಲಿಗ! ಕುಸುಮಾಸ್ತ್ರನ ದೆಸೆಗಾರದ ಬೆಸೆಗಾರ ! (ಮಂತ್ರಶ. ೭೧-೪). **ಹಡೆಮಾತು : ೫.** ಬಸರೂರಿನ ಗಂಗೆ ಪ್ರವೀರಾಚಾರ್ಯರಿಗೆ ಒಲಿದಿದ್ದರೆ ಅವಳ ಮಗಳು ಪುಟ್ಟಿ ಶಾಮಭಟ್ಟರು ಪ್ರಸಂಗ ಮಾಡುವ ಶೀವಿ, ಅವರ ಹಡೆಮಾತಿನ ಚಮತ್ಕಾರಕ್ಕೆ ಸೋತಿದ್ದಳು (ಪ್ರಶ್ನೆ. ೧೩೫). [ಪಡೆ₂ + ಮಾತು₁]

**ಪಡೆವಾಳ** 'ಪಡೆವಳ' ನೋ.

**ಪಡೆವೆರಸು** (ಕ್ರಿ). ಸೈನ್ಯದೊಂದಿಗೆ ಕೂಡಿಕೊಳ್ಳು ; ಸೇನಾಸಮೇತನಾಗು : ಪಡೆವೆರಸಿ ನಡೆವುದು ಅಭಿಷೇಣನಮೆಂಬುದು (ಹಲಾಯು. ೭೬-೩೦೭). [ಪಡೆ$_2$ + ಬೆರಸು$_1$ (< ಬೆರೆಯಿಸು)]

**ಪಡೆವೋಗು** (ಕ್ರಿ). ಸೈನ್ಯದೊಂದಿಗೆ ಹೋಗು; ದಂಡೆತ್ತಿಹೋಗು: ಕಂಪಿಲ್ಲಿಲಿಗೆ ಪಡೆವೋದಲ್ಲಿ ಕೊಮಾಲರಾ ಮಗನ್ ಪಾಣ್ಡಪ್ಪನ್ ಕಾಳೆಗದೊಳ್ಸತ್ತಲ್ಲಿ (ಎಕ. X, ಮುಳಬಾ. ೨೫೫-೭ ; ಸು. 750).

[ಪಡೆ$_2$ + ಪೋಗು$_1$ (< ಪೋ$_1$)]

**ಪಡೋಲ** 'ಪಡಲ$_1$' ನೋ.

**ಪಡೋಸಿ** (ನಾ). ಪಕ್ಕದ ಮನೆಯವನು ; ನೆರೆಮನೆಯಾತ ; ನೆರೆಯವನು : ರಾತ್ರಿ ಮನೆಗೆ ಬಂದಾಗ ನಮ್ಮ ಪಡೋಸಿ ಮನೆಯ ಗಡಿಯಾರ 'ಢಣ್' ಎಂದಿತು (ನಾಡಿಗೇ. ೧೩೪).

[← ಹಿಂ. ಮರಾ. ಪಡೋಸೀ]

**ಪಡ್ಕಾನೆ** 'ಪಡಖಾನೆ' ನೋ.

**ಪಡ್ಚ** 'ಫಡ್ಚ' ನೋ.

**ಪಡ್ಡ** (ಗು). ಬಾಗಿದ ; ಡೊಂಕಾದ ; ವಕ್ರವಾದ (?) : ದೊಡ್ಡ ಹೊಟ್ಟೆಯ ಗೂನು ಬೆನ್ನಿನ ಅಡ್ಡಮೋಱೆಯ ಗಂಟುಮೂಗಿನ ಪಡ್ಡ [ಪಾಠಾಂ. ದೊಡ್ಡ, ಮೊಂಡು] ಕೈಕಾಲುಗಳ ಪುದುರಿದ ರೋಮವಿಸಾಸೆಗಳ ಜೆಡ್ಡುದೇಹದ ಗುಜ್ಜುಗೊರಲಿನ ಗಿಡ್ಡುರೂಪಿನ ಹಜ್ಜುಕುಗಡ್ಡದ ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ (ನಳಚ. ೬-೧೪). 'ಅಡ್ಡಪಿಡ್ಡಗೆ' ಪರಾ. [ ? ]

**ಪಡ್ಡಲಿಗೆ** 'ಪಡಲಗೆ' ನೋ.

**ಪಡ್ಡವ** (ನಾ). ಒಂದು ಬಗೆಯ ಖಾದ್ಯ (?) : ಇಡ್ಡಲಿಗೆ ದೋಸೆ ಹೂರಣಗಡುಬು ಸೇವಗೆಗಳೊಡ್ಡಿದೌಗಿನ ಸಣ್ಣ ಚೊಲ್ಲೆವಿಟ್ಟನ ಹುರಿಯ ದೊಡ್ಡ ತಂಬಿಟ್ಟ ಕೈದೊಡಕರಳಿನುಂಡೆಗಳ ಪಡ್ಡವದ ಸಸಿದಪ್ಪಯ ಅಡ್ಡಕೊಂಕಣ ಕಡುಬ . . . ಭೋಜನದಿ ಪಡ್ಡಳಿಪ್ರಿಯಗರ್ಪಿಸಿ (ಲಿಂಗಪು. ೮-೨೦). [ ? ]

**ಪಡ್ಡಳಿ$_1$**, ಪಡಾಳಿ$_1$, ಪಡ್ಡಳೆ, ಫಡ್ಡಳಿ (ನಾ). ಒಂದು ಬಗೆಯ ಗಿಡ ಮತ್ತು ಸುವಾಸನೆಯಿಂದ ಕೂಡಿದ ಅದರ ಹೂವು ; ಕಣಿಗಿಲೆ ; ಕರವೀರ : "ಪಡ್ಡಳಿಯೆಂದು ಕಣಿಗಿಲೆ" (ಕಶಸಾ. ೫೪-೧೮೪) ; ಬಿಳಿಯ ಕತ್ತುರಿ ತಾನೆನಿಸುವ ಪಡ್ಡಳಿಯುರಲಂ ತಿಱಿದಳ್ ಭವಾನಿ ಶಿವಪೂಜಾರ್ಥಂ (ಗಿರಿಕ. ೫-೫೬) ; ಒಂದರಳು ಇರವತಿಗೆ ಪಡ್ಡಳಿವೊಂದರಳು ಸೇವತಿಗೆ ಚಂಪಕ ಒಂದರಳು ಸುರಹೊನ್ನೆ ಬಂದುಗೆ ಒಂದರಳು (ಬಸವು. ೧೯-೬೫) ; ಪಾದರಿಯ ವನಸಂಪಗೆಯು ಪೊಂಗೇದಗೆಯು ಪಡ್ಡಳಿಯು . . . ಬಂದುಗೆಯಾದಿಯಾದ ಸಮಸ್ತ ಪೂಜೆಯೊಳೆಸೆದನಾ ಶಿವನು (ಶಂಕದಾ. ೨-೫೧) ; ಪಾದರಿಯ ಪಡ್ಡಳಿಯ ಗಿಡುಗಳ ಪಂತಿಗಳ್ ತೋಂಟದೊಳ್ ಪೂವೆಂದುಂ ಮುಡಿಯದೆಸೆವ . . . ಮುಷ್ಕಾತ್ರಮೋಪವನಂ ಸೀತೆಗೆ ಕಣ್ಗೆವಂದತ್ತು (ರಾಮಾಶ್ವ. ೪೩-೧೧). **ಪಡಾಳಿ$_1$ :** ಮಾವು ಮಾದಲ ನಿಂಬೆ ಕಂಚಿಯು ಬಾವನ್ನವು ಕಾಳಸಂಪಿಗೆ ತೀವಿ ಸುರಹೊನ್ನೆ ಪಡಾಳಿಯು ಪಾರಿಜಾತಗಳು (ನಂದಿಲೀ. ೮-೨೬). **ಪಡ್ಡಳೆ :** ಪಡ್ಡಳೆ ದಶವಪ್ಪಸಂಕುಳ ನಿಖಿಳವ ಪಡ್ಡಳೆ ಪುಷ್ಪಾರ್ಪಣವು (ದೇವಪು. ೭-೫೯) ; ಕಣಗಿಲು(-ಲೆ), ಕಣಿಗಿನ, ಕಣಿಗಳು, ಗಣಿಗಳು ಕರವೀರ, ಪಡ್ಡಳಿಗಿಡ (ವೃಕ್ಷಾ.ಪ. ೩೨). **ಫಡ್ಡಳಿ :** ಕರವೀರಾದಿ—ಫಡ್ಡಳಿ ಮೊದಲಾದ, ಸುಮನಃ—ಪುಷ್ಪಂ (ಪ್ರತಿಷ್ಠಾ. ೭-೨೪). 'ಪ್ರತೀಹಾಸ' ಪರಾ.

**ಪಡ್ಡಳಿ$_2$** 'ಪಜ್ಜತಿ' ನೋ.

**ಪಡ್ಡಳಿಗೆ** (ನಾ). = ಪಡ್ಡಳಿ$_1$ : ಕೆಂಜಾಜಿ ಪಾದರಿ ಪಚ್ಚೆ ಪಡ್ಡಳಿಗೆ (ರುಕ್ಮಾಂಗ. ೩-೨೮). [< ಪಡ್ಡಳಿ$_1$]

**ಪಡ್ಡಳಿಪ್ರಿಯ** (ನಾ). ಕರವೀರಪುಷ್ಪವು ಪ್ರಿಯವಾದವನು ; ಶಿವ; ಈಶ್ವರ : ಇಡ್ಡಲಿಗೆ ದೋಸೆ ಹೂರಣಗಡುಬು . . . ತುಪ್ಪಮಂ ಕಲಸಿ ಭೋಜನದಿ ಪಡ್ಡಳಿಪ್ರಿಯಗರ್ಪಿಸಿ (ಲಿಂಗಪು. ೮-೨೦).

[ಪಡ್ಡಳಿ$_1$ + ಪ್ರಿಯ]

**ಪಡ್ಡಳೆ** 'ಪಡ್ಡಳಿ$_1$' ನೋ.

**ಪಡ್ಡಾಗೆ** (ನಾ). ಒಂದು ಸ್ಥಳದ ಹೆಸರು : ಪಡ್ಡಾಗೆ ಕೊಯತೂರು ಪನ್ನಿಚ್ಛಾಸಿರ ಭೂಮಿಯಯನ್ ಆಳೆ (ಮೈಆರಿ. ೧೯೧೪, ೧೨-೧೩ ; 810).

[ ? ]

**ಪಡ್ಡಿಲಾಗ**(?) (?). (?) : ಚಿಳಪಿಳೆರಾಯಸ್ವಾಮಿಯ ಶ್ರೀಪಾದಕ್ಕೆ ಪದ್ಮಪೀಠ ರತ್ನಪಡಿ ಸಹ ತೂಕ ವರಹ ಪಡ್ಡಿಲಾಗ ೧೪೪ ೨ ೧ ತೂಕ ಮೈಸೂರ ರಾಜುವ ಸೇವೆ (ಮೈಆರಿ. ೧೯೪೦, ೩೮-೩ ; 1614). [ ? ]

**ಪಡ್ಡು** (ನಾ). ಒಂದು ಬಗೆಯ ಖಾದ್ಯ : ನಮ್ಮ ಮನೆಯಲ್ಲಿ ಇವತ್ತು ಪಡ್ಡು ಮಾಡಿದ್ದರು (ರೂಢಿ). 'ಪುಟ್ಟು$_4$' ಪರಾ. [< ಬಟ್ಟು$_1$ ?]

**ಪಡ್ಡೆ**, ಹಡ್ಡೆ (ನಾ). ೧. ಪ್ರಾಯಕ್ಕೆ ಬಂದಿರುವ ವ್ಯಕ್ತಿ ಅಥವಾ ಪ್ರಾಣಿ : ಈ ಜಂತುಗಳನ್ನು ಬೆದರಿಸಿ ಓಡಿಸಿ ಪೈರನ್ನು ಕಾಯಲು ಹತ್ತಿಪ್ಪತ್ತು ಜನ ಪಡ್ಡೆಯಾದ ಹುಡುಗರೆಲ್ಲಾ ಸೇರಿ ಹೊರಟೆವು (ಸುಮುಹ. ೩೦೩) ; ನಮ್ಮ ದೂರದ ಸಂಬಂಧದ ಒಂದು ಹೆಣ್ಣು ಇರಬಹುದು. ನಾನು ಎರಡು ವರ್ಷದ ಹಿಂದೆ ಮೆಳೆಯನ್ನುನ ಹಬ್ಬಕ್ಕೆ ಹೋಗಿದ್ದಾಗ ಸುಮಾರಾಗಿ ಪಡ್ಡೆ ಆಗಿತ್ತು (ನನ್ನೂರು. ೧೩೧). **೨.** (?) : ಆ ದುಃಖಜೀವಂಗಳು ಉದಧಿಗೆಣೆಯೆನಿಸಿದಾಯುಷ್ಯದ ಕಡೆವರಮೆಯ್ದೆ ಪಡ್ಡೆಗಳಾಗದ ವಂದಡಿನ ಶುಭಕರ್ಮದಾ ವೇಷದೆ ನೊರ್ವರಿಱಿದು ನವೆಯುತ್ತಿರ್ಪರು (ಶ್ರಾಪಕಾ. ೨೧-೧೮). **(ಗು). ೩.** ಪ್ರಾಯಕ್ಕೆ ಬಂದ; ಯೌವನಕ್ಕೆ ಕಾಲಿಟ್ಟ : ಅವರೆಲ್ಲಾ ಪಡ್ಡೆ ಹುಡುಗರು, ಉತ್ಸಾಹಿಗಳು (ಬೈಸರ್ವೇ. ೧೧೭) ; ರಾಮಲೀಲಾ ಉತ್ಸವಕ್ಕೆ ಮೂರುಜನ ಪಡ್ಡೆ ಹುಡುಗಿಯರನ್ನು ಕರೆದುಕೊಂಡು ಹೋಗಿದ್ದರು ದೊಡ್ಡಬಾಬು (ಸಾಹೇಬ್. ೧೨೦) ; ಬೇಟೆಯಲ್ಲಿ ಹಿಡಿದುಕೊಂಡು ಬಂದಿರುವ ಪಡ್ಡೆ ಹುಲಿಯನ್ನು ಪೆಟ್ಟಿಗೆಯಲ್ಲಿ ಹಾಕಿಸಿ . . . ಸುಖವಾಗಿದ್ದನು (ಕಥಾಮಂ. IV, ೫೩). **ಹಡ್ಡೆ : ೩.** ಕನ್ನಿಕೆ ಆಗಲಿ ಹಡ್ಡೆ ಹುಡುಗಿ ಆಗಲಿ ಕೈಹಿಡಿದುಕೊಂಡ ಹಾಗೆ ಕಂಡರೆ ಐಶ್ವರ್ಯ ಬರುವದು (ಸೌಗಂಧಿ. ೫೯೨-೧೪).

[ದೇ.॥ ತೆಲು. ಪಡ್ಡ]

**ಪಣ್$_1$** 'ಪಣ್ಣು$_1$' ನೋ.

**ಪಣ್$_2$**, ಹಣ್$_1$, ಹಣು$_1$, ಹಣ್ಣು$_2$ (ಕ್ರಿ). ಪಣ್ತು (ಭೂತಕೃ), ಪಣ್ತು (ಭೂತನ್ಯೂ), ಪಣ್ವ (ಭವಿಕೃ). **೧.** ಹಣ್ಣು ಬಿಡು ; ಫಲವನ್ನು ಕೊಡು : ಬೀಟಮೆಂಬೆಳಲತೆ ಕೂಟದೊಳ್ ಪದೆದು ಪಣ್ತೆರ್ದೆಗಿಂಪಿನಲಂಪನೀಯದೇ (ಆದಿಪು. ೧೨-೨೦) ; ಮತ್ತೌತ್ರನಾದನಖಿಳಜಗತ್ಪತಿ ಮರದಾವಗೊಂಬು ಪಣ್ತೊಡಮೇನೆಂದುತ್ಪನ್ನಾನಂದಂ ತ್ರಿಜಗತ್ಪೂಜ್ಯಂಗಿಱಿದು ಪೀಠದಿಂ ಪೊಡೆವಟ್ಟಂ (ಶಾಂತಿಪು. ೯-೨೪) ; ಪುದಿದಿರೆ ಪಣ್ತೊಂದುವ ಬಿಂಬದಾಲದಿಂ ಪಣ್ಗಳುದಿರ್ದುವೆನೆ ಸೊಗಯಿಸಿದತ್ತುದಯದೊಳೊದವಿದ ಕೆಂಪಿಂ ಪುದಿದೊಪ್ಪುವ ತಾರಕೋತ್ಕರಂ ಕೆಲಗೆಲದೊಳ್ (ಚಂದ್ರಪು. ೮-೨೮) ; ಅಲರ್ಗಳಿಂ ಫಲವನೆಯ್ದುವ ಮರಗಳನಂಡಲೆವುತ ಗಿಳಿನುಡಿಯಿಂದ ಸಲೆ ಮೆಱೆದವು ಪಣ್ತ ಬಕ್ಕೆವಲಸುಗಳ ಬಳಗವಾ ಬನದೆಡೆಯೊಳಗೆ (ಕುರಾಸಾಂ.೩-೪೭) ; ಆವ ಮರಮಿದು? ... ಸಕಲ ರಿತುವೊಳು ಪೂವ ಪಣ್ವ ಮರವೇನು ? (ಗಿಳಿವಿಂ. ೨೮-೧೪). **೨.** ಹಣ್ಣಾಗು ; ಪಕ್ವವಾಗು ; ಮಾಗು : "ಪಣ್ತುದೆಂದು ಪಣ್ತಾದುದು" (ಕಶಸಾ.

೫೫-೧೯೪) ; ಗೊಲೆಯೊಳ್ ಪಣ್ತುದು ಮ್ಯೆಂದವಾಱಿ ಪಥಿಕರ್ಬರ್ಕೆಂದು ಭೃಂಗಂಗಳಿಂದುಲಿವಂತಿರ್ದುದು ಪಣ್ತ ಬಕ್ಕೆ (ಆಪು. ೧೧-೬೬) ; ಭೂಲತಾಂಗಿ ತೆಗೆದೆತ್ತಿಟ್ಟ ರಸಕಳಶವ್ರೋಯೆನಿಸಿ ಪಣ್ತ ಚೆಂದೆಂಗೆಸೆದುದು (ಸೋಮಚ. ೨-೭೬) ; ರಂಜಿಪ ಚೈತ್ರನ ಕಾಣ್ಕೆಗೆ ಸಂಜನಿತಾಂಕುರದ ಪುಳಕವಾಂತು ವನಶ್ರೀ ತಾಂ ಜವದೆ ತಳೆದ ನೀಲದ ಮಂಜರಿಯೆನೆ ಪಣ್ತ ನೇಱಲೇನೊಪ್ಪಿದುದೋ (ಉದ್ಭ. ೯-೨೩) ; ಸಕ್ಕರೆಯ ಧಾರಾನೀಕ ಸುರಿವಂತೆ ರಸದಾಳಿ ಪಣ್ತೊಡೆದು ಸೋನೆಗಱೆವಂತೆ ಪಾಡಿದರು ಗಾಯಕಿಯರಿಗೆ ನಾಯಕಿಯರೆಂದೆನಿಸುವ ಮಾನಿನಿಯರುಗಳು (ಸೌಂದಪು. ೮-೪). **೩.** (ಎಲೆ ಮೊದಲಾದುವು) ಹಣ್ಣಾಗಿ ಜೀರ್ಣವಾಗು ; ಹಳತಾಗಿ ಬಣ್ಣಗೆಡು : ಕೊನೆಯೊಳ್ಕೊನೆಗೊಂಬಿನ ಸಂದಿನೊಳೆಲೆ ಪಣ್ತುದಿರ್ದು ಪೋದ ನೆಲೆಯೊಳ್ಕೊನರ್ಗಳ್ ಕೊನೆದೋಱೆ ಮದನನಲಗಿನ ಮೊನೆದೋಱದನೊಡನೆ ಬಿರಯಿಗೆಳಮಾವುಗಳೊಳ್ (ಪುಲ್ಲಪು. ೫-೧೧). **೪.** (ಆಲಂ) ಹೆಚ್ಚಾಗು ; ಅಧಿಕವಾಗು : ಮತ್ತಮೊರ್ವಳ್ ಇದು ನಿನ್ನೀಯೊಣ ನೆನ್ನೀಕ್ಷಣಕೆ ಸೆಣಸಿ ತಾಂ ಬೆರ್ಚಿ ನೋಱೆಪ್ಪೊಂದು ದರ್ಪಕ್ಕಿದು ನಿನ್ನೀಯೂ ಲವೆನ್ನೀಯಧರದಳದೊಳಾದೀರ್ಷೆಯಿಂ ಪಣ್ತು ಗರ್ವಕ್ಕಿದು ನೀನೆನ್ನಾಸ್ಯ ದೊಳ್ ಮಚ್ಚರಿಸುವ ಮಱುಕಕ್ಕೆಂದು ಕಾಲ್ಗಾಲೋಳೀವಂದದೆ ಚಂದ್ರಂ ಗುತ್ತಹಾರಂಗಳನೊದೆದೊಲವಿಂದುಯ್ಯಲಾಡುತ್ತುಮಿರ್ದಳ್ (ಲೀಲಾಪ. ೨-೪೬). **೫.** (ಧ್ವನಿಯು) ಮಧುರವಾಗು; ಇಂಪಾಗು ; ಹದವಾಗು : ನಲಿದು ನವಿಲ್ ಜಗುತರ್ದುದು ಪಿಕಧ್ವನಿ ಪಣ್ತುದು ಮಿಂಚು ಕಣ್ಗಳೊಳ್ ಮೊಳೆತುದು (ಅರ್ಧನೇ. ೪-೬೦) ; ಮತ್ತಮಾತಂ ಸರಿಯೊಳಾದೊಡಮಂಚೆಯೆಂಬುದಂ . . . ಚಪ್ಪರಣೆಯೊಳಾದೊಡಂ ಪಣ್ಣೆಂಬುದಂ ಸೈರಿಸಂ (ಕಬ್ಬಿಕಾ. ೧೪೮). ℙ ಇಲ್ಲಿ 'ಪಣ್$_1$' ಉಲ್ಲೇಖದಲ್ಲಿ ಬರುವ ಶೃಂಗಾರಮಾಡು ; ಸಿಂಗರಿಸು ; ಅಲಂಕರಿಸು ಎಂಬರ್ಥವೂ ಶ್ಲೇಷೆಯಾಗಿ ಬರುತ್ತದೆ. **೬.** ಕಾಂತಿಯುಕ್ತವಾಗು : 'ಪಣ್ಗಡಿ' ಪರಾ. **ಹಣ್$_1$ :** **೧.** ಕುವೆಂಪು ಅವರ 'ರಾಮಾಯಣದರ್ಶನ' . . . ಮತ್ತಿತರ ಕವಿತಾ ರಚನೆಗಳು–ಇವೆಲ್ಲ ಸ್ವಾತಂತ್ರ್ಯಪೂರ್ವದಲ್ಲಿಯೆ ಚೆನ್ನಾಗಿ ಬೇರುಬಿಟ್ಟು ಹೂತು ಹಣ್ತ ಹೊಸ ಕಾವ್ಯವೃಕ್ಷದ ಈಚಿನ ತನಿವಣ್ಣುಗಳು (ಸುವರ್ಣ. ೧೫೬). **ಹಣು$_1$ : ೩.** ಬೆಳೆದ ಕತ್ತಲೆ ಮುತ್ತು ಹಣಿತುದೋ . . . ಚಕೋರಿಗಳ ನಿರ್ಮಳಹರುಷ ಬೆಳೆಯಿತೋಯೆಂದೆಂಬ ಸಂದೇಹಕೊಳಗಾಗಿ ಚೌಪಟಂಬರಿದು ಪಸರಿಸಿತು ಬೆಳುದಿಂಗಳೆಲ್ಲಾ ದೆಸೆಯೊಳು (ಹಚಕಾ. ೩-೮೪). **ಹಣ್ಣು$_2$ :** **೧.** ಬ್ರಿಟಿಶರು ಅಂದು ಬಿತ್ತಿದ ವಿಷಬೀಜವು ಮೊಳೆತು ಮರವಾಗಿ ಹಣ್ಣಲು ೫೦ ವರುಷಗಳು ಬೇಕಾದುವು (ಯಕ್ಷಪ್ರ. ೯೮).

**ಪಣ್ತೆಲೆ** = ಹಣ್ಣಾಗಿ ಜೀರ್ಣವಾದ ಎಲೆ; ಹಳತಾಗಿ ಬಣ್ಣಗೆಟ್ಟ ಎಲೆ : ಮಲಯಾನಿಲನೊಯ್ಯನೆ ಪಣ್ತೆಲೆಯಂ ನೆಲೆಯಿಂ ಕಬಲ್ಚುಗುಂ ವಿಟಪಿಗಳೊಳ್ (ಕವಿರಾ. ೩-೫೪) ; ಇಱದೇಱಮೊಱಂ ಗಂಡರೊಳಳಿ ಪೆಂಬುದು ತನಗೆ ಮುತ್ತ ಮುದುಗೂಂಟಣಿ ತಾಂ ಕಱವಣ್ ಮುತ್ತದ ಪಣ್ತೆಲೆ ಪಱವಱಗೋಲ್ ಪಱದ ಭೇರಿ ನೀರ್ ತೆಗೆದ ಕೊಳಂ (ಸೂಕ್ತಿಸು. ೮-೩೮೨). [ದೇ.‖ ತಮಿ. ಮಲ. ಪಱು ; ತುಳು. ಪನ್ನ್ದ, ಪನ್ನಾದ್ದವು ; ತೆಲು. ಪಂಡು ; ಕುರುಖ್. ಪನ್ನಾ ; ಮಲ್ತೊ. ಪನೆ]

**ಪಣ್$_3$**, ಪಣ್ಣು$_2$, ಹಣ್$_2$, ಹಣು$_2$, ಹಣ್ಣು$_3$ (ನಾ). **೧.** ಪಕ್ವವಾದ ಫಲ ; ಮಾಗಿದ ಫಲ : ಮಧುಮದ್ಯಮಾಂಸಂಗಳುಮಯ್ದು ಪಾಲ್ಮರದ ಪಣ್ಗಳುಮಾಳುಂಬೆಯುಂ ಸಣಂಬಿನ ಪೂವುಮೆಂದಿವಂ ಸೇವಿಸುವರುಂ . . . ಏಱುಂ ನರಕಂಗಳೊಳ್ ಪುಟ್ಟಿ ದುಃಖಂಗಳನೆಯ್ದುವರ್ (ಪಡ್ಡಾರಾ. ೧೨೬-೧೭) ; ಚಾಗದೊಳ್ಪಿನಚ್ಚೊತ್ತದೆ ಮಾಣ್ದು ಬಾಳ್ವ ಪುಱುವಾನಸನೆಂಬನಜಾಂಡಮೆಂಬುದೊಂದತ್ತಿಯ ಪಣ್ಣೊಳಿರ್ಪ ಪುಱುವಲ್ಲದೆ ಮಾನಸನೇ (ಪಂಪಭಾ. ೫-೭೫) ; ಧರೆ ಬೀಜಂಗಳ ನುಂಗೆ . . . ತರುವೇ ಪಣ್ಗಳ ಮೆಲ್ಲೆ ಮಾತೆ ವಿಷಮಂ ಪೆತ್ತರ್ಭಕಂಗೂಡಿಸಲ್ ಹರ ಕೊಲ್ಲಲ್ ಪರ ಕಾಯ್ವನೇ (ಸೋಮೇಶ. ೨೯) ; ತುಱುಗಿದ ಕಾಯಿ ಪಣ್ಗಳ ಸಾಲವೃಕ್ಷವ ಮುಱಿದು ದೂಳಿಯ ಚೆಲ್ಲಿಕೊಳುತ ಸುರಿವ ಸೊಂಡಿಲ ಸೀರ್ಗಱೆಯುತ ಬಂದುದು ಬಿಱುಗಾಳಿ ಮದಗಜದಂತೆ (ಮೋಹತ. ೪-೩೭) ; ಪುಷ್ಪಗರ್ಭಿತ ನವವಸಂತದ ಲಸಲ್ಲತೆಗೆ ಪಣ್ ಬೀತು ಪೋದ ಮಾಗಿಯ ಮರದ ಸಾಮ್ಯಮೇಂ ? (ಚಿತ್ರಾಂಗ. ೭೪-೨೦೩೬). **ಪಣ್ಣು$_2$ :** **೧.** ಶುಕ ಶಂಖಂ . . . ಪೂವಣ್ಣು ವಿಪ್ರದ್ವಯಂ ಮುಕುರಂ ಮಾಂಸವು ಮದ್ಯ ತುಂಬಿದ ಕೊಡಂ ಪೆರ್ಗಿಚ್ಚನಾರ್ ಕಂಡೊಡಂ ಶಕುನಂ ಶೋಭನಕಾಸ್ಪದಂ (ಸೋಮೇಶ. ೬೭). **ಹಣ್$_2$:** **೧.** ಅತ್ತಿಯ ಹ[ಪಾಠಾಂ. ಪ]ಣ್ಣಂದದಿನೊಳ್ಪಿತ್ತಪ್ಪುದು ಪೊಱಗೆ ನೋಱೆಪ್ಪೆನಂಪೊಳಗಣದೊಳ್ಪಿತ್ತಲ್ತದನ್ಯಸಮಯದ ಪೊತ್ತಗೆಗಳ್ (ಸಮಪ. ೩-೭೨) ; ಕಾಳೆಗದೊಳು ನಿಸಾತ ಕರವಾಳಹತಕ್ಕೆ ಹತಪ್ರಭಮ್ಮರ್ಹೀಪಾಳ ಕರೋಡಿ ಪೊಕ್ಕು ಗಹನಾಂತರದೊಳು ಕ್ಷುಧೆಯೊಳುವೆ ವಂನ್ಯಭೂಜಾಳದೊಳಿರ್ದ್ದ ಹಣ್ಗಳನೆ ಹಣ್ಣೆನಲಮ್ಮದೆ ಕಾಯಿಕಾಯಿ ಬಲ್ಲಾಳನೃಪಾಳಯೆಂಬಿದನೆ ಪಂಬಲಿಸಿದುದು ವೈರಿಸಂಕುಳಂ (ಮೈಆರಿ. ೧೯೪೩, ೨೯-೧೮; 1174). **ಹಣು$_2$ :** 'ಹಣುಹಂಪಲು' ಪರಾ. **ಹಣ್ಣು$_3$ : ೧.** ಹಣ್ಣು ಮೆದ್ದ ಬಳಿಕ ಆ ಮರನ ಆರು ತಱಿದರೇನು (ಮಹಾದೇ.ಬ. ೪೯-೧೧೭) ; ಭೂಪಾಲ ಮುನಿಪನಂಘ್ರಿಯಲೆಱಗಿ ಯಿಾ ಹಣ್ಣನಲಿ ಹೊಟ್ಟೆಯ ಹೊಱೆಯ ಲಾಱೆನು ದನುಜಹರನೇ ಶಿವಶಿವಾಯ ನಮಶ್ಶಿವಾಯೆಂದ (ಕುಮಾರ. ಓರಿಇ. ೪-೨೪) ; ಎಳೆಯ ಹೂಮಿಡಿಗಳಂ ಸಱಿದು ಹಣ್ಣಂ ಮಾಡಲಳವೆ (ಚೆಬಪು. ೬-೯) ; ಹಣ್ಣು ಜಾರಿ ಹಾಲಲ್ಲಿ ಬಿದ್ದ ಹಾಗೆ (ಗಾದೆ). **೨.** ವಯಸ್ಸಾಗಿರುವಿಕೆ; ಮುಪ್ಪು ; ಮುದಿತನ: 'ಹಣ್ಣುಗರಡಿ' ಪರಾ. **೩.** ಕೈಗೂಡಿದುದು ; ಸಫಲತೆ ; ಗೆಲವು : ಹೋದ ಕೆಲಸ ಹಣ್ಣೋ ಕಾಯೋ ? (ರೂಢಿ).

**ಪಂಪಲ, ಪಣ್ಪಲ, ಪಣ್ಪಳ, ಪಣ್ಬಲ, ಹಂಪಲು** = ಹಣ್ಣು ; ಪಕ್ವವಾದ ಫಲ : ಹಾಲು ಅನಿಲ ಕಂದಮೂಲ ಪರ್ಣಂಬು ಪಂಪ(ಪಣ್ ಫ)ಲಾದಿಗಳನೇ ಆಹಾರವ ಕೊಂಡು ಮುಕ್ತರಾದೇವೆಂಬ ಅಣ್ಣಗಳು ನೀವು ಕೇಳಿರೆ (ಸರ್ವವ. ೨೦೦-೯೧೪) ; ಊರ ಬಿಟ್ಟಡವಿಯಾಶ್ರಯಿಸಿಯುಂ ಸತಿಸುತರನಾರೈದುದಂ ಕೆಡದು ಜಪ ತಪ ಸಮಾಧಿಯೊಳು ಪೂರಾಯವಾಗಿರ್ದು ಕಂದಮೂಲಂ ಪಂಪಲಾದಿಗಳ ಬಱ ಹಱಯದು (ಪ್ರಭುಪು. ೮-೧೮೬) ; ಆವಡವಿಗಳೊಳ್ ಪಣ್ಪಲಮಾವಗಮೊಳವಲ್ಲಿಗಱಿಸಿ ಪರಿಪರಿದು ಕರಂ ತಾವಡಿಗೊಳ್ವೀ ಭೀಮನ ಬೇವಸಮಿದು ನಿನ್ನ ಮನಮನೊನಲಿಸಿತಿಲ್ಲಾ (ಪಂಪಭಾ. ೭-೪೬) ; ಅನುದಿನಮೊರ್ವಳ್ ಗೀರ್ವಾಣನಾಥವಧು ನಾಕಲೋಕದಿಂ ಬಂದರ್ಜುನನಿಗೆ ನಂದನವನಗತ ವನಲತೆವೋಲ್ ತಂದು ನೀಡುಗುಂ ಪಣ್ಪಲಮಂ (ಶಾಂತಿಪು. ೯-೧೮೧) ; ಹಿರಣ್ಯರೋಮಂ ಬಿಲದಿಂ ಪೊಱಮಡಲೊಡಂ ವಾಯಸಂ ರಾಗರಸಮಯನಾಗಿ ಪಣ್ಪಳಂಗಳಂ ಮುಂದಿಟ್ಟು ಪೊಡೆಮಡಲು (ಪಂಚತಂ. ೨೯೭-೧೮) ; ಅಂತು ತೀವಿದ ಭಿಕ್ಷಾಪಾತ್ರದ ಪಣ್ಫ[ಪಾಠಾಂ. ಬ್ಬ]ಲಂಗಳಂ ತಂದು ಕುಡೆ (ಕಾದಂಪೂ. ೬೯೫) ; ಕೈಯೊಳ್ ಸಂಬಳವಿಲ್ಲದೆ ಮಱುಗಿ ಸೈರಿಸಲಾಱದೆ ಪಸಿವಿಂ ತಂತಮ್ಮ ಭೃತ್ಯರ್ಗೆ ಪೇರಡವಿಯೊಳ್ ಪಣ್ಬಲಂಗಳನಱಿಸಿ ತನ್ನಿಮೆಂದು ಪೇಟ್ದುದುಂ (ಧರ್ಮಾಮೃ. ೨-೧೮೩) ; ಕೆಂಪು ಹಂಪಲಿನೊಳಗೆ ಕೆಂಪು ಇಟ್ಟೆಯ ಹಣ್ಣು ಕೆಂಪುಂಟು ಒಳಗೆ ವಿಷವುಂಟು ದುರ್ಜನರ ಪೆಂಪು ಇಂತೆಂದ (ಸರ್ವಜ್ಞ. ೮೩೨). ℙ ಇದು ಒಂದೇ ಅರ್ಥದ ಎರಡು ಶಬ್ದಗಳಿಂದಾದ ಕೂಡುನುಡಿ. **ಪಣ್ಕಾಯ್, ಹಣ್ಣುಕಾಯಿ** = (ದೇವರಿಗೆ ನೈವೇದ್ಯ ಮಾಡುವ) ಹಣ್ಣು ಮತ್ತು ಕಾಯಿ ; ಬಾಳೆಹಣ್ಣು, ತೆಂಗಿನ

ಕಾಯಿ ಮುಂತಾದ ಫಲ : ಹೂವೆಲೆಯ ಚಿಲ್ಲಾಡಿ ಪಣ್ಣಾಯ ಕಾಣ್ಕೆಯಿಂದೋವಿ ನೇಸರ್ಪರೆಗಳಿಂ ಸೊಡರ ಬೆಳಗಿ (ಕಾಲೂರ. ೧೨೦-೨೫೨) ; ತನ್ನ ಮನೆದೇವರಿಗೆ ಹಣ್ಣುಕಾಯಿ, ಪೂಜೆ ಪುರಸ್ಕಾರ ಒಪ್ಪಿಸುವುದಲ್ಲದೆ . . . ಸೇವೆ ಸಲ್ಲಿಸುತ್ತಾನೆ (ಭಾರದ. ೬) ; ಇದು ಮಲೆದೈವದ ಕಾಟಪೆಂದೊಬ್ಬನು ಹರಕೆ ಕೊಡಲು ಹಣ್ಣುಕಾಯಿಗಳನ್ನು ಸಂಗ್ರಹಿಸಿದನು (ಕಾಲೂರ. ೬ ಕಥಾಸಾರ). **ಪಣ್ಣಾಗು, ಹಣ್ಣಾಗು**= ೧. (ಕಾಯಿ ಬಲಿತು) ಪಕ್ವಸ್ಥಿತಿಗೆ ಬರು ; ಮಾಗು ; ಫಲ ವಾಗು : ಎಳೆಗಜುಂ ಎತ್ತಾಗದೇ ಲೋಕದೊಳ್ ಮಿಡಿ ಪಣ್ಣಾಗದೇ (ಸೋಮೇಶ. ೩೫) ; ಕಾಯಿಗಳು ಬಲಿತು ಹಣ್ಣಾಗಲಿಕ್ಕೆ ಹೆಚ್ಚು ಕಡಿಮೆ ಎರಡು ತಿಂಗಳು ಬೇಕಾಗುತ್ತದೆ (ಮುಂಬಯಿ. ೪-೨೭). ೨. (ಕಾಲ ಮೊದಲಾದುವು) ಕೂಡಿಬರು ; ಹದವಾಗು : ಗಣ್ಯಾತೀತರ್ ಶಿವ ಲಾವಣ್ಯದೆ ಸರ್ವಾಂಗಭಸಿತದಿಂ ನರೆಯಿಂ ಕಾರುಣ್ಯದಿನತಿಧವಲಿಮದಿಂ ಪುಣ್ಯಂ ಪಣ್ಣಾದ ತೆಱದೆ ತಾಪಸರಿರ್ಪರ್ (ಗಿರಿಕ. ೧-೬೩) ; ಧರೆಗಧಿಕ ವೃದ್ಧಾಪ್ಯತೆಯನನುಕರಿಸಲೆಂದು ಧರಿಸಿದನೊ ನುತ ಪುಣ್ಯ ಹಣ್ಣಾಯ್ತೊ ಹೇಳೆನಿಸಿ ವರವೃದ್ಧವೇಷದೀಶ್ವರನಾದಿಮಯ್ಯನಿದ್ದಾಲದ ಮರಕೆ ನಡೆದನು (ಸೋಮಚ. ೩-೭೯) ; ನಮ್ಮ ವಿಷಯದಲ್ಲಿ ಮಾತ್ರ ಕಾಲ ಹಣ್ಣಾಗು ವುದು ಸ್ವಲ್ಪ ದೂರವೇ ಅನ್ನಿಸುತ್ತದೆ (ಮರಳಿ. ೮೮). ೩. (ಕಾರ್ಯ, ಬಯಕೆ ಮೊದಲಾದುವು) ಕೈಗೂಡು ; ಸಫಲವಾಗು : ತಾಯಿ ಬೇರು ಕಾಯಬೇಕು ಹಣ್ಣಾಗಲಿ ಹಂಬಲ (ನೆಲಮು. ೨೫-೧೨) ; ಅವನು ಬಯಕೆ ಹಣ್ಣಾಯಿತೆಂದು ತಿಳಿದು ಅವರಿಗೆ ಊಟಕ್ಕೆ ಬಡಿಸಿದ (ಸ್ಮೃತಿಚಿ. ೨೫) ; ಬಾಳ ಗೆಳತಿ ಎಂದು ಅನ್ನಲು ಇನ್ನೂ ವಿಚಾರ ಹಣ್ಣಾಗಿಲ್ಲ (ಕಪ್ಪುಹು. ೪೬). ೪. (ಮನಸ್ಸು) ಪಕ್ವವಾಗು ; ಪರಿಪಾಕ ಗೊಳ್ಳು ; ಪಳಗು : ನುರಿತ, ಪಳಗಿದ, ಹಣ್ಣಾದ, ಹದಕ್ಕೆ ಬಂದ, ಪಾಡಾದ (ಕಂನುಹು. ೮೭). ೫. ತೃಪ್ತಿಯನ್ನು ಪಡೆ; ತಣಿ ; ಸಂತೋಷಗೊಳ್ಳು : ಕಣ್ಣು ತಣಿಯೆ ಚಕ್ರಿ ಮಾಳ್ಪೊಸಗೆಯ ನೋಡಿ ಹಣ್ಣಾದುದತ್ತೆಯ ಚಿತ್ತ (ಭರಚ. ೪೦-೨೬). ೬. ಕಸುವನ್ನು ಕಳೆದು ಕೊಳ್ಳು ; ಜರ್ಜರಿತವಾಗು ; ನಿರ್ವಿಣ್ಣವಾಗು ; ಬಳಲು : ಅವನು . . . ಒಂದರ ಹಿಂದೊಂದರಂತೆ ದುಃಖಪರಂಪರೆಯನ್ನು ಅನುಭವಿಸಿ ಹಣ್ಣಾದನು (ಪಾಂಚಾಕ್ಯ. ೯೧); ಲೋಕಜ್ಞಾನ ವ್ಯವಹಾರ ಜ್ಞಾನ ಬರುವ ಮೊದಲೇ ಮನೆತನದ ಜವಾಬುದಾರಿಯೆಲ್ಲ ಮೈಮೇಲೆ ಬಿದ್ದು ಹಣ್ಣಾದವ (ಮೂರುದಾ. ೫೭) ; ಹಾಡಿ ಹಣ್ಣಾದಿ ನೀ ಜಗದ ಕಣ್ಣಾದಿ ನೀ ದುಡಿದು ಸಣ್ಣಾದಿ ನೀ ಗುರುದೇವಾ (ಸಖೀಗೀ. ೪೭-೧೫) ; ಅವನ ಮುಷ್ಟಿಪ್ರಹಾರದಿಂದ ಗುಡುಗಜ್ಜನು ಹಣ್ಣಾಗಿ ಹೋದನು (ಮಣಿಸ. ೫೮) ; ಹೊತ್ತಿಗೆ ಬಹು ಮುಂಚೆ ಹೋಗಿದ್ದು ದುಡಿವೆವು ಸಂಜೆಗೆ ಹಣ್ಣಾಗಿ ಬಹೆವು (ಇಂಚಾಪ. ೧೪೨-೧೦೦). ೭. ಕುಗ್ಗು ; ಸಂಕೋಚಗೊಳ್ಳು : (ತೀರ ಹಣ್ಣಾಗಿ ನಾಚಿಕೊಂಡು) ಯೆಜ್ಜಾ, ಅದನ್ನೇನ್ಮಾಡ್ತೀ ಬಿಡು (ಕಮ್ಮಟ. ೭). ೮. (ಕೂದಲು) ನರೆ ; ಬೆಳ್ಳ ಗಾಗು : ನನಗೀಗ ಎಷ್ಟು ವರುಷ ? ಕೂದಲು ಹಣ್ಣಾಗತೊಡಗಿದವು (ಹಳ್ಳಹಾ. ೭೨). ೯. (ಎಲೆ ಮೊದಲಾದುವು) ಹಳೆಯದಾಗು,— ವಿವರ್ಣವಾಗು : ಹಣ್ಣಾದ ಎಲೆ ಉದುರುತ್ತದೆ (ರೂಢಿ). ೧೦. (ಮನಸ್ಸು) ಮೃದುವಾಗು ; ಕಾಠಿಣ್ಯವನ್ನು ಕಳೆದು ಕೊಳ್ಳು ; ಸೋಲು : ಹೆಣ್ಣ ಬಣ್ಣಿಸಿದರಂತಿಂತು ಲೇಸೆಂದೆದೆ ಹಣ್ಣಾಗಿ ಕೇಳುವರುಂಟು (ಭರಚ. ೨-೪೭) ; ಜೋನ್ಸಳ ಈ ನುಡಿಯಿಂದ ಆ ಪಹರೆ ಯವನು ಹಣ್ಣಾದನು. ಅವನ ಬಾಯಿಗೆ ನೀರೊಡೆಯಿತು (ಅಂಜಿಕೆ.೧೦೦). ೧೧. ಪಗಡೆ, ಚೌಕಾಬಾರ ಮೊದಲಾದ ಆಟಗಳಲ್ಲಿ ಕಾಯಿ ಗುಡಿ ಸೇರು : ನನ್ನ ಮೂರು ಕಾಯಿಗಳು ಆಗಲೇ ಹಣ್ಣಾದವು (ರೂಢಿ).

**ಹಣುಹಗಿನು**= ಹಣ್ಣು ಹಂಪಲು : ಹಸಿದಳುವ ತನಯಂಗೆ ಹಣುಹಗಿನ ನಿತ್ತು (ಹಚಕಾ. ೯-೩೫); **ಹಣ್ಣಿಗೆ ತರು**= ೧. (ಮನುಷ್ಯ, ಪ್ರಾಣಿ ಮೊದ ಲಾದುವನ್ನು) ಬಗ್ಗಿಸು,–ಮಣಿಸು : ಮದೋನ್ಮತ್ತ ಗಜರಾಜನನ್ನು ಹಣ್ಣಿಗೆ ತರುವ ಅಂಕುಶವಾದರೂ ದೊಡ್ಡದಿರುವುದಿಲ್ಲ (ತುಳಸೀ. ೩೮) ; ಜಹಂಗೀರನ ಮಗನಾದ ಖುರಾಮನು ಅವನೊಡನೆ ಯುದ್ಧಮಾಡಿ ಕ್ರಿ.ಶ. ೧೬೧೪ರಲ್ಲಿ ಅಮರಸಿಂಗನನ್ನು ಹಣ್ಣಿಗೆ ತಂದನು (ಹಿಂದುಇ.೧೮೩); ಶಿವಾಜಿ ಮಹಾರಾಜನು ಈ ಆದಿಲಶಾಹಿಯನ್ನು ತೀರ ಹಣ್ಣಿಗೆ ತಂದನು (ವಿವರ್ಣ. ೧೦). ೨. ಪಗಡೆ, ಚೌಕಾಬಾರ ಮುಂತಾದ ಆಟಗಳಲ್ಲಿ ಕಾಯಿ ಯನ್ನು ಗುಡಿಯ ಹತ್ತಿರಕ್ಕೆ ತರು : ಬೇಗ ಬೇಗ ಕಾಯಿಗಳನ್ನು ಹಣ್ಣಿಗೆ ತರು (ರೂಢಿ). **ಹಣ್ಣಿಗೆ ಬರು**= ೧. (ಕಾಯಿಯು) ಹಣ್ಣಾಗ ತೊಡಗು ; ಹಣ್ಣುಮೆಟ್ಟು : ಬಾಳೇಕಾಯಿ ಬಲಿತು ಗೊನೆಯ ಮೇಲೇ ಹಣ್ಣಿಗೆ ಬಂದಿದೆ (ರೂಢಿ). ೨. ಪಗಡೆ, ಚೌಕಾಬಾರ ಮುಂತಾದ ಆಟಗಳಲ್ಲಿ ಕಾಯಿಯು ಗುಡಿ ಸೇರುವ ಹಂತಕ್ಕೆ ಬರು : ನನ್ನ ನಾಲ್ಕು ಕಾಯಿಗಳೂ ಹಣ್ಣಿಗೆ ಬಂದಿವೆ (ರೂಢಿ). **ಹಣ್ಣಿಗೆ ಹಾಕು**= ಕಾಯಿಗಳನ್ನು ಪಕ್ವಗೊಳ್ಳಲು ಅಡೆಹಾಕು ; ಮಾಗಲು ಇಡು : ಬಾಳೆಗೊನೆಯನ್ನು ಹಣ್ಣಿಗೆ ಹಾಕಿದ್ದಾರೆ (ರೂಢಿ). **ಹಣ್ಣುಕಾಯಿ ಮಾಡಿಸು**= ದೇವರಿಗೆ ಹಣ್ಣು ಮತ್ತು ತೆಂಗಿನ ಕಾಯಿಗಳ ನೈವೇದ್ಯವನ್ನು ಮಾಡಿಸು : ಕೋಳಿ ಕೂಗುವ ಹೊತ್ತಿಗೆ ಪಟೇಲನು ಎಲ್ಲರನ್ನೂ ಏಳಿಸಿ ದೇವರಿಗೆ ಹಣ್ಣುಕಾಯಿ ಮಾಡಿಸಿ . . . ಬೇಡಿಕೊಳ್ಳುವನು (ಹುಟ್ಟಹ. ೧೯). **ಹಣ್ಣು ತುಪ್ಪ**= ಬಾಳೆಯ ಹಣ್ಣನ್ನು ಬಿಲ್ಲೆಗಳಾಗಿ ಮಾಡಿ ತುಪ್ಪ, ಬೆಲ್ಲದ ಪುಡಿ, ತೆಂಗಿನ ತುರಿ, ಏಲಕ್ಕಿಗಳನ್ನು ಸೇರಿಸಿ ತಯಾರಿಸಿದ ತಿನಿಸು; ರಸಾಯನ: ದೇವಸ್ಥಾನದಲ್ಲಿ ಇಂದು ಹಣ್ಣುತುಪ್ಪವನ್ನು ಹಂಚಿದರು (ರೂಢಿ). **ಹಣ್ಣುತುಪ್ಪ ಮಾಡಿಸು**= (ದೇವರ ಹೆಸರಿನಲ್ಲಿ ಮೀಸಲಿಟ್ಟ ಬಾಳೆ ಗೊನೆಯಿಂದ, ಮಾಡಿಕೊಂಡ ಹರಕೆಯನ್ನು ತೀರಿಸಲು) ಹಣ್ಣುತುಪ್ಪವನ್ನು ತಯಾರಿಸಿ ದೇವರಿಗೆ ನೈವೇದ್ಯ ಮಾಡಿಸು : ಅವರು ದೇವಸ್ಥಾನದಲ್ಲಿ ಇಂದು ಹಣ್ಣುತುಪ್ಪ ಮಾಡಿಸಿದ್ದರು (ರೂಢಿ). **ಹಣ್ಣು ಮಾಡು**= ೧. ಕಾಯನ್ನು ಪಕ್ವಗೊಳಿಸು ; ಮಾಗಿಸು : ಕಾಯನ್ನು ಗುದ್ದಿ ಹಣ್ಣು ಮಾಡಿದ ಹಾ^ (ಗಾದೆ). ೨. ಹದ ಗೊಳಿಸು ; ಪರಿಪಾಕಗೊಳಿಸು ; ಮೆದುವಾಗಿಸು : ಆ ಅನುಭವ ಮನುಷ್ಯನ ಇಡಿಯ ಜೀವಮಾನವನ್ನೇ ಹಣ್ಣುಮಾಡುವ ಅನುಭವ (ರೂಪಸ. ೫). ೩. ಜರ್ಜರಿತಗೊಳಿಸು; ನೋಯಿಸು; ಬಳಲಿಸು: ಶನಿಯು ನಿಮ್ಮನ್ನು ಬಹಳ ಹಣ್ಣುಮಾಡಿದ್ದಾನೆ (ಗಾಳಿಗು. ೧೨) ; ಹೊಡೆದೂ ಬೈದೂ ಸದಾಶಿವನನ್ನು ಚೆನ್ನಾಗಿ ಹಣ್ಣುಮಾಡುತ್ತಿದ್ದ (ತ್ಯಾಗಮ. ೧೮೫) ; ಯಾವುದಾದರೂ ಅಪೂರ್ವವಾದ ಪೇಚನ್ನು ಹಾಕಿ, ಶತ್ರುವನ್ನು ಹಣ್ಣುಮಾಡಿ ಸೋಲಿಸುವುದು ಅವನ ವೈಶಿಷ್ಟ್ಯವಾಗಿತ್ತು (ಗ್ರಾಮಾಯ. ೫೨). **ಹಣ್ಣುಮೆಟ್ಟು**= ಹಣ್ಣಿಗೆ ಬರು ೧ : ನಮ್ಮ ಹಿತ್ತಲಗಿಡದ ಬಾಳೇಗೊನೆ ಹಣ್ಣುಮೆಟ್ಟಿದೆ (ರೂಢಿ). **ಹಣ್ಣುಹಂಪಲ್, ಹಣ್ಣುಹಂಪಲು**= ಹಣ್ಣು ಮೊದಲಾದುವು; ಫಲಪಕ್ವ : ಮಾಱುವ ಹೆಡಗೆಯ ಹಣ್ಣು ಹಂಪಲ್ ಬಾಡುಕಾಯ್ಗೆ ಹಿಡಿಬಾಡು ಹಿಡಿಹಣ್ಣ ಕೊಟ್ಟರ್ (ಎಇ. V, ೨೦-೭೯; 1161); ಅಡಸಿ ಗಿರಿಗಳ ನುಂಗುವನ ಬಾಯ್ಗ್ ಹಿಡಿಯ ದಿಹುದೇ ಹಣ್ಣುಹಂಪಲ ಬಡವಿರಾಟನನಾರು ಬಲ್ಲರು ದ್ರೋಣನಿದಿರಿನಲಿ (ಕುಮ್ಯಾದ್ರೋ. ೧೭-೪೦) ; ನೆರೆದುದೈ ನೋಟಕರು ನಗೆಗಳ ಹೊರಳಿಗಳ ಲಂಗಡಿಯ ಹಸರದ ಹುರಿಗಡಲೆ ಗುಡ ಹಣ್ಣುಹಂಪಲುಗಳನು ಹಾಯ್ಕು ತಲಿ (ತೊರರಾ. ೫-೫-೩೧); ಅವರ ತೋಟತುಡಿಕೆಗಳು ಹಣ್ಣು ಹಂಪಲು ಗಳಿಂದ ತುಂಬಿ ತುಳುಕಲಿ (ಹುಟ್ಟಹ. ೧೬೦). **ಹಣ್ಣುಹಣ್ಣಾಗು**=

ನೋಯಿಯು ; ಬಳಲು : ಮುದುಕಿಯೂ ಈ ವಿಪರೀತ ಸಂಗತಿಯಿಂದ ಹಣ್ಣುಹಣ್ಣಾದಳು (ಜಯಂತ. ೨೧೫). **ಹಣ್ಣು ಹಣ್ಣು ಮುದುಕ** = ತೀರ ಮುಪ್ಪಾದವನು; ಅತಿ ವಯಸ್ಸಾದ ವೃದ್ಧ : ಆ ಹಣ್ಣು ಹಣ್ಣು ಮುದುಕರಿಗೆ ಸ್ವಲ್ಪವೂ ಕಣ್ಣು ಕಾಣುವುದಿಲ್ಲ (ರೂಢಿ). **ಹಣ್ಣು ಹಣ್ಣು ಮುದುಕಿ** = ತೀರ ವಯಸ್ಸಾದ ಮುದುಕಿ; ಅತಿ ಮುಪ್ಪಾದ ವೃದ್ಧೆ : ಆ ಹಣ್ಣು ಹಣ್ಣು ಮುದುಕಿಗೆ ತಲೆ ನಡುಗುತ್ತಿದೆ (ರೂಢಿ). **ಹಣ್ಣುಹಾಗಲಕಾಯಿ ಆಗು** = ಹಣ್ಣಾದ ಹಾಗಲಕಾಯಿಯಂತೆ ಸುಕ್ಕುಗಟ್ಟಿರು; ಜೀರ್ಣವಾಗು : ಜೀವಾ ಅಂಬೋದು ಹಣ್ಣುಹಾಗಲಕಾಯಿ ಆಗಿಹೋಗಿದೆ (ತಿರುಗು. ೨೪).
[ದೇ.॥ ತಮಿ. ಮಲ. ಪಟಂ ; ತುಳು. ಪರ್ಂದ್ ; ತೆಲು. ಪಂಡು; ಕೋಲಾ. ಪನ್, ಪಂಡುಡ್; ನಾಯ್ಕಿ. ಪಂಡೆ ; ಪರ್ಜಿ. ಪಲ್ ; ಕುವಿ. ಪಂಡು ; ಕುರುಖ್. ಪಂಜ್ಕಾ./ಸಂ. ಫಲ]

**ಪಣ$_1$** (ನಾ). [ಗಣಿತ] ಐದು ಎಂಬ ಸಂಖ್ಯೆ : ಪಣ—ಅ ಸಿ ಆ ಉ ಸಾ ಎಂಬಯ್ದಕ್ಕರಮಂ ಚದು—ಅ ಸಿ ಸಾ ಹೂ ಎಂಬ ನಾಲ್ಕಕ್ಕರಮಂ (ಪಸಾರ. ೫೭೫) ; ಪಣತೀಸಂ ಸೋಳಸವಂ ಪಣ ಚದುದುಗಮೇಗಮೆಂದು ಪೇಳ್ವಾಗಮದಿಂ ಗಣಿಯಿಸುವಡೆ ಸವಿದಂ ಪ್ರಣುತ ಶ್ರೀಪದಮೆನಿಪ್ಪ ತತ್ಪಂಚಪದಂ (ಶ್ರೀಪದಾ. ೫). [<ಪ್ರಾ. ಪಣ./ಸಂ. ಪಂಚ]

**ಪಣ$_2$** 'ಬಣ್ಣ' ನೋ.

**ಪಣ$_3$** (ನಾ). **೧.** ಹಣ ಅಥವಾ ವಸ್ತುವನ್ನು ಬಾಜಿಯಾಗಿ ಒಡ್ಡಿ ಆಡುವ ಆಟ,-ಪಂದ್ಯ ; ಜೂಜು : "ದ್ಯೂತಃ, ಅಕ್ಷವತೀ, ಕೈತವಂ, ಪಣಃ— ೪ ಜೂಜಿನ ಹೆಸರು" (ಸಿದ್ಧಾಂತಿ. ೩೧೯). **೨.** ಜೂಜು, ಪಂದ್ಯಗಳಲ್ಲಿ ಒಡ್ಡುವ ಹಣ ಅಥವಾ ವಸ್ತು ; ಒತ್ತೆ : ನಂಬದುದಂ ನಂಬಿಸಲುಂ ನಂಬಿದುದಂ ಬಿಡಿಸಲುಮೊಳವುಗುವುದರ್ಕೆಡೆಮಾಡಲುಮೆಡೆಯಾಗದ ಮೃಗಮನವುಂಕಿಸಲುಮೊಲ್ದು[ಮೊಲ್ಲ]ದ ನಲ್ಲರಂತೆ ಮಿಡುಕಿಸಲುಂ ಪಣಮುಡಿದರಂತಡ್ಡಂಮಾಡಲುಮೆಸೆದ ದೆಸೆಗಳ್ಗೋಡಿಸಲುಂ ಕುಮಾರಸ್ವಾಮಿಯ ನಿಮ್ಮಡಿಯ ಕೆಲದೊಳಾನೆ ಬಲ್ಲೆಂ (ಪಂಪಭಾ. ೫-೪೩ ಪ) ; "ಪಣಮುಡಿದರಂತೆ = ಜೂಜಿನಲ್ಲಿ ಒತ್ತೆ ಸೋತವರ ಹಾಗೆ" (ಪಂಪದೀ. ೧೪೫) ; ಪಣವುಂಡೆಂ ಬಂದಿಯೊಳ್ಪಾಲಕನೆ ಪಲಗೆ ಜೂಜಾಡಿದೆಂ ಸೂಳೆಗೆಯ್ದೆಂ ಪಣಿದಂಬೊಯ್ದೆಂ ತೊಟಿಲ್ದೆಂ (ಅರ್ಥನೇ. ೫-೩೬) ; ಹೇಮಭಾರದ ವಿಮಲರತುನಸ್ತೋಮವಿದೆ ಪಣವೆನಲು ಕೌರವಭೂಮಿಪತಿ ಯೊಡ್ಡಿದನು ಧರ್ಮಜ ಹೆಸರಿಸಿದ ಧನವ (ಕುವ್ಯಾಸ.೧೩-೪೯) ; ತೀರಿತಿನ್ನೇನವನಿಪತಿ ಭಂಡಾರದೊಡವೆ ಸುವಸ್ತುವೆಲ್ಲವು ಸೇರಿತೆನಗಿಂದಿನಲಿ ಪಣವೇನಿನ್ನು ಪೇಳು (ನಳಚ. ४-३೧) ; ರಾಜೋಟಿ ಜೀವಾ ಪಣಕ್ಕ ಒಡ್ಡ ತಾನ (ದೀಪಹ. II, ೧೩೯) ; ಪ್ರಾಣವನ್ನೇ ಪಣಕ್ಕೆ ಹಚ್ಚಿದ ಶರಣೆ ಕಾಯಕಜೀವಿ ಲಕ್ಕಮ್ಮ (ಕರ್ನಾಕ. ೧೪೩) ; ಮಲ್ಲಯುದ್ಧವು ಏನಿದ್ದರೂ ಪ್ರಾಣವನ್ನು ಪಣವಾಗಿಟ್ಟು ಮಾಡಿದರೇ ಚೆನ್ನ (ನಡೆದಾ. II, ೧೪೩೪). 'ಪ್ರಾಣಪಣ' ಪರಾ. **೩.** ಪಂಥ ; ಜಿದ್ದು ; ಪಂದ್ಯ ; ಸ್ಪರ್ಧೆ : ಕಣ್ಣ ಕೆಂಪಂ ಮಾಡಲೇಕಕ್ಕ ನಿನಗೆ ಘನ ಕಣ್ಣುಂಟು ನನಗಿಲ್ಲದಾಯ್ತೆ ನೋಡಲ್ಬರಿದೆ ಬನ್ನಣೆಯ ಮಾತ ಬಿಡು ಹೇಳು ಪಣವೇನಿದಕೆ ನಿನಗೆನಗೆ ಶಪಥಂಗಳುಯೇನೆನಲು (ತುರಂಗ. ೩-೨೧) ; ಪಾಂಚಾಲರಾಜನು ರಾಜಧರ್ಮಾನುಸಾರವಾಗಿ ತನ್ನ ಮನಸ್ಸಿಗೆ ಬಂದಂಥ ಒಂದು ಪಣವನ್ನು ಇಟ್ಟು ಅದನ್ನು ಸಾಧಿಸಿದವನಿಗೆ ತನ್ನ ಮಗಳನ್ನು ಕೊಡುತ್ತೇನೆಂದು ಗೊತ್ತು ಮಾಡಿದನು (ಪಚಭಾ. ೫೭) ; ಅವನು ಒಡ್ಡಿದ ಪಣದಲ್ಲಿ ನಾನು ನಿನ್ನನ್ನು ಗೆದ್ದೆ (ಹಾಹುತ್ತ. ೭೯) ; ತಾನು ಮನಸ್ಸಿನಲ್ಲೇ ಕಟ್ಟಿಕೊಂಡ ಪಣವೂ ಸುಳ್ಳಾಗುತ್ತಿಲ್ಲ ! (ಮೂರುದಾ. ೧೭). **೪.** ಪ್ರತಿಜ್ಞೆ ; ಶಪಥ : ಗಣಪತಿ ತನ್ನ ಪಣ ಪೂರ್ತಿಗೊಳಿಸಿಕೊಂಡೇ ಇಂದು ಊರಿಗೆ ಮತ್ತೆ ಮೋರೆ ತೋರಿಸಿದ್ದ (ಹೊಸಕ್ಷಿ. ४೨) ; ತನ್ನ ಗುರುವಿನ ತತ್ತ್ವ-ಸಂದೇಶವನ್ನು ದೇಶದ, ವಿಶ್ವದ ಮೂಲೆಮೂಲೆಯಲ್ಲಿ ಪಸರಿಸುವ ಪಣವನ್ನು ತೊಟ್ಟ ಧೀರ ನರೇಂದ್ರ (ಧರ್ಮಸಾ. ४೭) ; ಯಾರು ನೀನು ದಿಟ್ಟೆ ? ಏನು ಪಣವ ತೊಟ್ಟೆ (ನಡೆದಾ. I, ४೨೯) ; ಅಲ್ಲಿಗೆ ಕಾಶ್ಯಾಬಾನ ಪಣ ಪೂರೈಸಿದ ಹಾಗಾಗಿ ಅವನು ಮತ್ತೆ ವಿಸಾಸೆ ಕಾಯತೊಡಗಿದ (ನಾಪೋಲೀ. ೭೫). **೫.** ಭತ್ಯ ; ವೇತನ ; ಕೂಲಿ : "ಕರ್ಮಣ್ಯಾ, ವಿಧಾ . . . ಮೂಲ್ಯಂ, ನಿರ್ವೇಶಃ, ಪಣಃ—೧೧ ಕೂಲಿಯ ಪೆಸರುಗಳು, ಮಜೂರಿಯ ಕಿಮ್ಮತ್ತು" (ಸಿದ್ಧಾಂತಿ. ೩೧೮). **೬.** ನಾಣ್ಯ ಅಥವಾ ಕವಡೆಗಳಿಂದ ಎಣಿಕೆ ಮಾಡುವ ಒಂದು ಮೊತ್ತ,—ಮೊಬಲಗು : (ಕ). **೭.** ನಾಲ್ಕು ಹಾಗ ಅಥವಾ ಗದ್ಯಾಣದ ಹತ್ತನೆಯ ಒಂದು ಭಾಗ (ನಾಲ್ಕು ಆಣೆ, ಎಂಟು ಕಾಸು) ಬೆಲೆಯ, ಚಿನ್ನ ಅಥವಾ ಬೆಳ್ಳಿಯ ಒಂದು ಚಿಕ್ಕ ನಾಣ್ಯ ; ಎಂಬತ್ತು ಕವಡೆಯ ಬೆಲೆಯ ನಾಣ್ಯ ; ಹಣ : ಪಣ ಮೂಜು (ಹ್ಯಅರಿ. ೧೯३೬, ೨೭-೫೧; 872) ; ಎಂಟು ದಮ್ಮದ ಪುಳ್ಳಿಯಂ ತಂದೊಡಮೊಂದು ಪಣ[ಪಾ. ದಮ್ಮ] ಮನಪ್ಪೊಡಂ ಪೆಜದೆ ಬಸಿರ್ಕೂಟ್ಟಿ ಮುಂಬಲಿಗಮೆಣ್ಣೆಗಂ ಕಟಿಗಂ ಕೊಟ್ಟು ಪೋಕುಂ (ವಡ್ಡಾರಾ. ೭೭-೨೧) ; ಸಂಶಯದಿಂ ನಾಳೆ ಬಪ್ಪ ಪೊನ್ನಿಂದ ಮಿಂದು ಬಪ್ಪ ಪಣಮೇ ಲೇಸು (ಮದತಿ. ೧-೫೮ ವ) ; ನಂದಾದೀವಿಗೆಯ ಸೊಡರೆಣ್ಣೆಗೆ ತಿಂಗಳಿಂಗೆ ಒಂದು ಪಣಮಂ ಬಿಟ್ಟರ್ (ಸೌಇಇ. XX, ೬೦-೨೭ ; 1088) ; ಪಾಗಂ ನಾಲ್ಕಕ್ಕೆ ಪಣಂ (ವ್ಯವಹಾ. ೫-೩೧) ; ನಿನ್ನಯ ಕಾಪ್ಪ ಭಾರಮಂ ಕೊಂಡಪೆವದಕ್ಕೆ ಕ್ರಯಂವೇನೆನಲ್ ಪಣ ಚತುರ್ಥಾಂಶಮೆನೆ (ಚೆಬಪು. ೫೨-೫೦) ; ಹತ್ತು ಪಣ ವೆಚ್ಚಮಾಡಿ, ಹೋಗಿ ಆ ಅರ್ಧ ಪಣವನ್ನು ಹಿಂದಕ್ಕೆ ತಂದನು (ಕಸಂ. ೨೭). **೮.** ಎರಡು ತೊಲ ಅಥವಾ ನಾಲ್ಕು ಹಾಗದ ತೂಕ : "ಸಿಕ್ಕ ಸಲ್ವೇಳೆಯೆರಡುಮನೊಂದು ಪಾಗಮವು ನಾಲ್ಕಾಗೆ ಪಣಮೆನಿಕ್ಕು" (ಮಂಗರಾ. ೧೦४-೧೧). **೯.** ಬೆಲೆ ; ಕಿಮ್ಮತ್ತು ; ಮೌಲ್ಯ ; ಕ್ರಯ. **೧೦.** ಹಣ ; ಧನ ; ದ್ರವ್ಯ : ತದ್ದರ್ಶನಮಾತ್ರದಿಂ ಗುಣ ಪಣಕ್ಕಾನಾವಗಂ ಮಾಜುವೋದೆನೊ (ಕಾದಂಉ. ೮೧) ; ಪಣವಿಲ್ಲದೆ ಯಟಮಟಿಸುವ ಬಣಗುಗಳಂ ನೆವವನಿಟ್ಟು ಬಿಟ್ಟು ಧನಿಕರೊಳ್ ಗುಣಮಂ ನೆಗಟ್ಟು ಕೂರ್ಮೆಯಿ[ಯ] ಪಣಮಂ ಸಾಧಿಸುವಳಾವಳವಳೇ ಬೆಲೆವೆಣ್ (ಉದ್ಭಟ. ೧೦-೬೬) ; ಉಣದುಡದೊಡಲ ದಂಡಿಸುವಾಯಸವಿಲ್ಲ ಪಣವ ವೆಚ್ಚಿಸುವ ಪಾಡಿಲ್ಲ ಗುಣವಂತೆಯರೆಸಗುವ ಪತಿಶುಶ್ರೂಷೆಗೆಣೆಯಹ ತಪವಿನ್ನೊಳವೆ (ಹದಿಬ. ೨-೨೨) ; ಪೆತ್ತ ಕೊಡಗೂಸಂ ಪಣಕೆ ಮಾಜುಗಾಡಿ ಒಡಲಂ ಪೊರೆವಬುಡಲಿಂಗೆ . . . ಕಣ್ಗೆ ಕಾಣಲ್ಬಾರದೊಂದು ಮೈಮೆವೆತ್ತು ನಿಂದಿರ್ಕುಂ (ರಾಮಾಶ್ವ. ೭४-३). **೧೧.** ವ್ಯಾಪಾರದ ವಸ್ತು,— ಸರಕು. **೧೨.** ವ್ಯಾಪಾರ ; ವ್ಯವಹಾರ : ವಾಣಿಜ್ಯ ; ಉದ್ಯಮ : ವಿಪುಳಸುಖದಂದದಿಂ ನಿಜವಪುವಿನೊಳಾತ್ಮನೆ ವಲಂ ಸ್ವಸಂವೇದ್ಯಂ ತೋರ್ಪುಪಚಿತ ಪಣಂಗದೊ[ಳ್ಗೊ]ಳ್ ಬುದ್ಧಪೂರ್ವಚರಿತಂಗಳಿಂ ಸಮಂತನುಮೇಯಂ (ಧರ್ಮನಾ. ೫-೧೧೮). **೧೩.** ಮಾರಾಟದ ಸ್ಥಳ; ಅಂಗಡಿ : "ಆ ಪಣಂ ವಿಪಣಿ ಪಣ್ಯವಂಗಡಿಯೆನಿಕ್ಕುಂ" (ಮಂಗರಾ. ೫೮-೮). **೧४.** ಒಂದು ನಿರ್ದಿಷ್ಟ ಅಳತೆ,—ಪ್ರಮಾಣ : "ಪಣಮೆನಲ್ಕೆ ಪ್ರಮಾಣಂ" (ಕಶರ. ೬३) ; ಭತ್ತ ನಾಲ್ಕಕೆ ವಂದಂ ಕಾಕಣ್ಯಮೆನಿಪುದದು ಮತ್ತೆ ಪಂಚಕಕೊಂದು ಪಣಮಕ್ಕುವು ಪಣ ಮೂವತ್ತೆನಿಸಲದು ನಿಷ್ಕ (ಭಾಸ್ಕರ. ೭४-೬). **೧೫.** (?) : ಯಿಾದುರ್ಘಟಂಗಳಾದ ಪಣಂಗಳಂ ಕುರಿಯುವಂತೆ (ಸೌಗಂಧಿ. ೧೭೭-೨೦); ಸೌಗಂಧಿಕಾದೇವಿಯರು ಕೆಲವು ಪಣಂಗಳಂ ಕುರಿತುಯಿರುವರು(ಸೌಗಂಧಿ. ೨೨೬-೨೦). **೧೬.** (?) : ಕುದುರೆಗೆ ಕಾಪಟ್ಟು ಎಚಿಯಪ್ಪೆನ ಪಣಮೆ

ಕಾದಿ ಸತ್ತ ನಾಗವರ್ಮ್ಮಕ××ಕೊಟ್ಟಾ×××ಮತ್ತಮ್ಮ ಅಜವರ್ಮ್ಮ ಗಂಗರ ಬೆಸದೆ×ಕ್ಕಾ ಚೇ×××ಗಜನೊಬಿಮ್ಮ ಕೆ ಕಾದಿ ಸತ್ತೊಡೆ (ಎಕ. XI, ಜಗಳೂ. ೧೯–೩ ; 907).

**ಪಣಕ್ಕಿಡು**=ಪಣವಾಗಿ ಒಡ್ಡು ; ಒತ್ತೆಯಾಗಿ ಇಡು : ಒಬ್ಬ ಸಾಮಾನ್ಯ ದಾಸಿಗಾಗಿ ನಿನ್ನ ಪ್ರಾಣಗಳನ್ನೂ ಪಣಕ್ಕಿಡಲು ಸಾಹಸ ನಿನ್ನಲ್ಲಿ ಇದೆಯೆ ? (ಬಾಣಅ. ೩೨೧) ; ಯಾವತ್ತು ಸಾಧನಗಳಿಂದ ಸರ್ವಸ್ವ ವನ್ನು ಪಣಕ್ಕಿಟ್ಟು ಫಿರಂಗಿಗಳನ್ನು ಹಿಂದುಸ್ತಾನದಿಂದ ಹೊರಗೆ ಅಟ್ಟುವು ದನ್ನು ನೋಡುವುದೇ ನನ್ನ ತೀವ್ರ ಇಚ್ಛೆಯಾಗಿದೆ (ಪ್ರಬಂಧ. ೫೭).

[ಸಂ.]

**ಪಣ$_4$** 'ಪಣಬು' ನೋ.

**ಪಣ$_5$** (ಪ್ರ). ಒಂದು ಭಾವವಾಚಕ ಪ್ರತ್ಯಯ : ಒಡ್ಡವಣೆ,ಚಡ್ಡಣೆ . . . ಎಂಬ ಶಬ್ದಗಳೂ ಅವುಗಳ 'ಣೆ' ಅಂತ್ಯವೂ ವೀರಪಣ, ಜಾಣಪಣ, ವಿಸ್ತಾರಪಣ ಈ ಭಾವನಾಮುಗಳಲ್ಲಿಯ 'ಪಣ' ಉಪಪದವೂ ಮರಾಠಿಯ ಕಂಡಿತವಾದ ಪ್ರಭಾವವನ್ನು ತೋರಿಸುತ್ತವೆ (ಕಸಾಚ. ೨೬೧). 'ಜಾಣ ಪಣ', 'ತತ್ತ್ವಪಣ' ಪರಾ.

**ಪಣಒಡ್ಡು** 'ಪಣವೊಡ್ಡು' ನೋ.

**ಪಣಂಕು** 'ಪಳುಂಕು' ನೋ.

**ಪಣಂಗುಳಿ** (ನಾ). ಜೂಜಾಡುವ ಸ್ವಭಾವದವನು; ಜೂದಾಳಿ : ಲಂಚಮಂ ಕೊಳ್ವಂ, ಲಂಚಂಗುಳಿ ಏವಂ ಸಾಲಂಗುಳಿ, ಅಟಂಗುಳಿ, ಪಣಂಗುಳಿ, ಪಣ್ಗುಳಿ, ಕಾಯ್ಗುಳಿ (ಶಬ್ದಾನು. ೪೧೪ ಪ್ರಯೋ).

[ಪಣ$_3$+–ಗುಳಿ$_2$(<–ಕುಳಿ$_3$)]

**ಪಣಂಚು** 'ಪಳಂಚು$_1$' ನೋ.

△**ಪಣಂಬೆ** 'ಬಣಂಬೆ' ನೋ.

**ಪಣಕಟ್ಟು$_1$** (ಕ್ರಿ). ೧. ಜೂಜಿನಲ್ಲಿ ಹಣ ಅಥವಾ ವಸ್ತುವನ್ನು ಒಡ್ಡು; ಬಾಜಿಕಟ್ಟು : ಪಣ ಕಟ್ಟುವವನ ಹತ್ತಿರ ಹೆಣಗಬಹುದು, ಹಣ ಕೊಡಿಸುವವನ ಹತ್ತಿರ ನಿಲ್ಲಲಾಗದು (ಗಾದೆ). ೨. ಪ್ರತಿಜ್ಞೆ ಮಾಡು ; ಪಣತೊಡು : ಮಾಡಿ ಮಡಿಯಲೆಂದು ಪಣ ಕಟ್ಟಿ ದುಡಿದ ಕೆಲವರಲ್ಲಿ 'ಬದುಕಿ ಉಳಿದವರ' ನೆರವೂ ಅವರಿಗೆ ಇದೆ (ಸಾಸಮಾ. ೧೬೮).

[ಪಣ$_3$+ಕಟ್ಟು$_1$]

**ಪಣಕಟ್ಟು$_2$,** ಪಣಿಕಟ್ಟು, ಫಣಕಟ್ಟು (ನಾ). ೧. ಜಾತಿ ಪದ್ಧತಿ,–ಕಟ್ಟಳೆ : (ಕ). ೨. ಗುಂಪು ; ಪಂಗಡ; ವರ್ಗ ; ಪಕ್ಷ : ಇದರ ವಿಚಾರಣೆಗೂ ಲೆಕ್ಕವನ್ನು ಬರೆವುದಕ್ಕೂ ಗುರಿಕಾರ, ಶ್ಯಾನಭಾಗ ಮುಂತಾದ ಆಯಾ ಪಣಕಟ್ಟಿನ ಜನಗಳನ್ನು ನೇಮಕ ಮಾಡಿ ದರು (ಮಹಾಪಂ. I, ೧೨೮) ; ಇವನಂತಹ ಸುಸಂಸ್ಕೃತನೂ ವೀರನೂ ಮನ್ನೋಪಾಯನಿಷ್ಣಾತನೂ ನಮ್ಮ ಅರಮನೆಯ ಪಣಕಟ್ಟಿನಲಿ ಬೇರಾರಿ ದ್ದಾರೆ ? (ಬೆಟ್ಟಅ. ೧೩೯–೭). 'ಬುಡಕಟ್ಟು' ಪರಾ. **ಪಣಿಕಟ್ಟು :** ೨. ಈ ಗ್ರಾಮದ ಪಣಿಕಟ್ಟಿ ಅಯಗಾರು ಶಾನಬೋಗ ಪುಟೆರಂಗಪ ತಳವಾರ ಪೋಬಾ ಬೇಗಾರ ದಾಸ ತಿಮ್ಮ ಅಯಗಾರ ಸಹ ನಮ್ಮ ಮೊಕ್ತ ನೀನು ಬಂದು ನಮ್ಮ ಸ್ಥಳದಲ್ಲಿ ಅಜುಕೆ ಮಾಡಿಕೊಂಡು (ಎಕ. XI, ಹಿರಿಯೂ. ೩೭–೧೫ ; 1533 ?). **ಫಣಕಟ್ಟು :** ೨. ನಾನಾ ಫಣಕಟ್ಟ ನವರು ಬರಶಿ ಕೊಟ ದಾನಶ್ಯಾಸನದ ಪತ್ರಾ (ಎಕ. XVI, ಗುಬ್ಬಿ. ೮೩–೮೫ ; ಸು. 1672) ; ಅನೆಕಲ್ಲುವುಭಯಪೇಟೆಯಲ್ಲಿಯಿರುವಂಥಾ ಸೆಟ್ಟಿ ವರ್ತಕರು ಮುಂತಾದ ಸಮಸ್ತ ಫಣಕಟ್ಟು ಜನರಿಗೆ ದೇಶದ ಪೇಟೆಯಲ್ಲಿ ನಂದಿಕೋಲು ಮೆರವಣಿಗೆ ನಿಮಿತ್ಯವಾಗಿ . . . ಕಲಹ ಬಂದು (ಎಕ.IX, ಹೊಸಕೋ. ೧೦೫–೯ ; 1693) ; ಮೂಗೂರ ಸೋಮರಾಜೈಯ್ಯ ಅರಶಿ ನವರ ಕುಮಾರರು ದೇವರಾಜೈಯ್ಯ ಅರಶಿನವರು ಫಣಕಟ್ಟಿನ ಉದ್ಯೋಗ ಸ್ತರ ಸುಸಂಮ್ಮತದ ಮೇಲೆ ನೇಮುಕಾ ಮಾಡಿಸಿದ ದಾನಶಾಸನದ ಕ್ರಮ ವೆಂತೆಂದರೆ (ಮೈಅರಿ. ೧೯೩೩, ೩೧–೨೯ ; 1737).

[ಪಣ$_2$(<ಬಣ್ಣ)+ಕಟ್ಟು$_2$]

**ಪಣಕಾಂತೆ** (ನಾ). ವೇಶ್ಯೆ ; ವಾರಸ್ತ್ರೀ : ಭಾವಂ ತಾಂ ತಳರ್ದು ಬೇಡೆ ಶಿವಗಣಚಿಂತಾಮಣಿ ಬಸವನೀವನಂಬರಮುನದಂ ಎನೆ ಕೇಳ್ದಾ ಪಣಕಾಂತೆ ದೂತಿಗೆ ಪಸಾಯಂಗೊಟ್ಟು (ವೃಷವಿ. ೮–೨೫). [ಪಣ$_3$+ಕಾಂತೆ]

**ಪಣಕ್ಕನೆ** (ಅ). ಒಂದು ಅನುಕರಣಾವ್ಯಯ ; ಪಕ್ಕನೆ; ಪುಣಕ್ಕನೆ: ಬೆಕ್ಕು, ಬದುಕಿದೆಯಾ ಬಡಜೀವವೇ ಎಂದು, ಬಲೆ ಬಿಚ್ಚಿ ತೋ ಇಲ್ಲವೋ, ಪಣಕ್ಕನೆ ನೆಗೆದು, ಅಲಷ ಮರದಲ್ಲಿ ಮರೆಯಾಯಿತು (ನಾಳೀಜಂ. ೪೮).

[ಪಣಕ್$_0$+–ಅನೆ$_1$]

**ಪಣಗೈ** (ಕ್ರಿ). ಪಣವಾಗಿ ಒಡ್ಡು; ಪಂದ್ಯದ ವಸ್ತುವಾಗಿ ಮಾಡು: ಮಾನಿನಿಯ ಶೀಲವನು ಪಣಗೈದು, ತಾಳಿ ಬಾಳಿ ಬದುಕಲು ಏಕೆ ರಾಜ್ಯ ವಾಳುವುದೇಕೆ ? (ನಡಿವಾ. I, ೪೨೬). [ಪಣ$_3$+ಗೈ(<ಕೆಯ್$_1$)]

**ಪಣಗೊಳ್** (ಕ್ರಿ). ಒತ್ತೆ ಹಣವನ್ನು ತೆಗೆದುಕೊಳ್ಳು ; ಒತ್ತೆ ಯಿಟ್ಟುಕೊಳ್ಳು : ಪಣಗೊಳ್ವಳ್ ಚೆಲ್ಲದಿಂದಂ ಚದುರನ ಚದುರಂ ಸೇಸೆ ಗೊಳ್ವಳ್ . . . ಇಂತೀ ಗಣಿಕಾಸಂದೋಹದೊಳ್ತೀಪೆಯೆ ಪುರುಷಗುಣ ಶ್ರೀಗಳಗ್ರಾಹಿಯಲ್ತೇ (ಲೀಲಾವ. ೨–೯೭). [ಪಣ$_3$+ಕೊಳ್$_1$]

**ಪಣತ,** ಪಣಥ, ಪಳಥ, ಬಣತ, ಬಳತ (ನಾ). ೧. ದವಸ ಧಾನ್ಯ ಗಳನ್ನುಸಂಗ್ರಹಿಸಲು(ಸಾಮಾನ್ಯವಾಗಿ ನೆಲಮಟ್ಟದಿಂದ ಮೇಲೆ) ಕಟ್ಟಿದ, ಮೇಲ್ಭಾಗದಲ್ಲಿ ಬಾಗಿಲುಳ್ಳ ಅಥವಾ ಹಂತಗಳಿಂದ ಕೂಡಿದ ಬಾಗಿಲುಳ್ಳ ಕೊಠಡಿ ; ಕಣಜ : ಭತ್ತದ ಪಣತದ ಮೇಲು ಹತ್ತೆಂಟು ಸೂಚನೆ ದಿಮ್ಮಿಸಾಲೆ (ಕಾಲಸಂ. ೭೮–೮) ; ಎಂಬತ್ತುನಾಲ್ಕು ಲಕ್ಷದ ಜೀವರುಗಳೆಂದೆಂಬ ಬೀಜವ ಸೃಷ್ಟಿಕರ್ತ ಮುಂಬೆಳಸಿಗೆ ಪಣತವ ಕಟ್ಟಿದಂದದಿ ಪೊಂಬೆಟ್ಟ ಕಣ್ಗೆ ರಂಜಿಸಿತು (ಮೋಹತ. ೨–೧೨) ; ಇಂತರ ಮನೆಯಂ ರಚನೆಗೈಸಿ ತದುಪಯುಕ್ತಮಾದ ಬೊಕ್ಕಸ ಭಂಡಾರ ಲಾಯ ಗಜಾಶ್ವಶಾಲೆಯುಂಗ್ರಾಣ ಪಣತ ಮುಂತಾದ ಮಹಲ್ಗಳಂ ನಿರ್ಮಾಣಂ ಗೈಸಿ (ಕೆಳನೃ. ೧–೧೦೫) ; ಅರಮನೆಯನ್ನು ಕಟ್ಟಿಸಿ ಬೊಕ್ಕಸ ಭಂಡಾರ ಪುಗ್ರಾಣ ಜಾನಶಾಲೆ ಪಣತ ಮುಂತಾಗಿ ಕಟ್ಟಿಸಿ (ಕೆಳವಂ. ೩೨–೨) ; ಮನೆಯ ಒಂದು ಪಕ್ಕದಲ್ಲಿ ಬಚ್ಚಲುಮನೆಯೂ ಇನ್ನೊಂದು ಪಕ್ಕದಲ್ಲಿ ಪಣತದ ಕೊಟ್ಟಿಗೆಯೂ, ಇದ್ದುವು (ಪಂಜಪಂ. ೧೫೪). **ಪಣಥ :** ೧. ಮನೆಯ ಹಿಂಭಾಗದಲ್ಲಿ ಹಸುಗಳ ಕೊಟ್ಟಿಗೆ, ಸ್ನಾನದ ಮನೆ(ಬಚ್ಚಲು ಮನೆ), ಸೌದೆಯ ಕೊಟ್ಟಿಗೆ, ಪಣಥ (ಕಣಜ) ಇವು ಮನೆಗೆ ಹೊಂದಿ ಕೊಂಡು ಇರುವುವು (ಮಲೆಮಂ. ೯). **ಪಳಥ :** ೧. ಕಳುವ ಸಾಯಣ್ಣ ನವರು ಅಗ್ರಹಾರವ ಮಾಡುವಲ್ಲಿ ಪಳಥ ಬಿಡುಗೊಡೆಯಾಗಿ ಬಿಟ್ಟ ಗ ೨೧೪ (ಎಕ. VI,ಕಡೂರು.೪೯–೩೩; 1291). **ಬಣತ :** ೧. ಅಲ್ಲಿ ಬಣತದ ಮನೆಯಲ್ಲಿ ಕುಳಿತುಕೊಂಡಾಗ, ನೀನು . . . ಅಂಜಿಕೊಳ್ಳ ಬಹುದು (ಮಹಾತ್ಮಾ. ೪೯). **ಬಳತ :** ೧. ಹಸಿರು ದೊರೆವಾಗ ಅದನ್ನು ಕೊಂಡಾಗಲೀ, ಬೆಳೆದಾಗಲೀ, ಕೆಡದಂತೆ ಮತ್ತು ಒಣಗದಂತೆ, ಬಳತಕ್ಕೆ ಹಾಕಿ . . . ಕಾಯ್ದಿರಿಸಿಕೊಳ್ಳಬೇಕಾಗುವುದು (ಗೋಗ್ರಾಸ. ೪೯). ೨. ಬಿದಿರಿನಿಂದ ಅಥವಾ ಚಾಪೆಯಿಂದ ಹೆಣೆದು ಮಾಡಿದ, ಧಾನ್ಯವನ್ನು ಸಂಗ್ರಹಿಸುವ ಸಾಧನ; ತೊಂಬೆ; ಗಳಗೆ. ೩. ತಳ್ಳಗಿರುವ ಗಳು ; ಬಿದಿರಿನ ಸೀಳು ; ದಬ್ಬೆ : ಯಾಕೋ, ಬಳತದ ಹಾಗೆ ಬಳುಕುತ್ತಿ ? (ರೂಢಿ). [?./ಮರಾ. ಬಳತ, ಬಳದ]

**ಪಣತಖಾನೆ** (ನಾ). =ಪಣತ ೧ : ಪಣತಖಾನೆಯಲ್ಲಿ ಹಾವು ಸೇರಿ ಕೊಳ್ಳುವ ಸಂಭವವಿರುವುದರಿಂದ ದೀಪವಿಲ್ಲದೆ ಕತ್ತಲಲ್ಲಿ ಅಲ್ಲಿ ಇಳಿಯು ವುದು ಅಪಾಯಕರ (ರೂಢಿ). [ಪಣತ+ಖಾನೆ]

**ಪಣತಿ₁** (ನಾ). ಹೆಂಗಸು ; ಸ್ತ್ರೀ : ಪಣತಿ ನಿನ್ನನು ಮತ್ಪ್ರರಕೊಯ್ವೆಣಿಕೆಯಿಂದಾ ಬಂದೆನೇತಕೆ ಬಣಗುಮರ್ತ್ಯನ ಭಜಿಪೆ ಮತ್ತ್ರಿಯೆಯಾಗು ನೀನು (ಅರಾಪೂ. ೩-೭-೩೬) ; ಶಂಖೆಯಿಲ್ಲಾದೆ ಆಳುವಂಥಾ ಬಿಂಕಾವಾದಾ ಧೊರೆಗಾಳಿವರೂ ಪಂಕಜಾಕ್ಷಿ ಕೇಳೂ ಯನ್ನುತಾ ಆ ನಳಾರಾಜಾ ಪೊಂಕದಿಂದಾ ಪೇಳ್ದಾ ಪಣತೀಗೆ (ಯನಳ. ೪೬). 'ಮಡದಿ' ಪರಾ. [ದೇ.॥ ತೆಲು. ಪಣಂತಿ, ಪಡಂತಿ]

**ಪಣತಿ₂** 'ಪಣಿತೆ' ನೋ.

**ಪಣತೀಸ** (ನಾ). ಮೂವತ್ತೈದು ಎಂಬ ಸಂಖ್ಯೆ : ಪಣತೀಸ–ಣಮೋ ಅರಹಂತಾಣಂ ಣಮೋ ಸಿದ್ಧಾಣಂ...ಣಮೋ ಲೋಏ ಸವ್ವಸಾಹೂಣಂ ಎಂಬೀ ಪಂಚಪದದ ಮೂವತ್ತಯ್ದಕ್ಕರಮುಂ (ಪಸಾರ. ೫೭೫) ; ಪಣತೀಸಂ ಸೊಳಸವಂ ಪಣ ಚದುದುಗಮೇಗಮೆಂದು ಪೇಳ್ವಾಗಮದಿಂ ಗಣಿಯಿಸುವಡೆ ಸವಿದಂ ಪ್ರಣುತ ಶ್ರೀಪದವೆನಿಪ್ಪ ತತ್ಪಂಚಪದಂ (ಶ್ರೀಪದಾ. ೫). [<ಪ್ರಾ. ಪಣತೀಸ./ಸಂ. ಪಂಚತ್ರಿಂಶತ್]

**ಪಣತೆ** 'ಪಣಿತೆ' ನೋ.

**ಪಣತೆಸೊಡರ್,** ಹಣತಿಸೊಡರು (ನಾ). ಮಣ್ಣಿನ ಅಥವಾ ಲೋಹದ ದೀಪದ ಬಟ್ಟಲಿನಲ್ಲಿ ಹಚ್ಚಿದ ದೀಪ,— ಜ್ಯೋತಿ : ಮಿಕ್ಕಕ್ಕರೆಗೆ ಪಣತೆಸೊಡರಂ ಪಿಡಿದು ನೋಡಿದಳಯೋನಿಜೆಯ ದೇವವಂದಿತ ರೂಪಮಂ (ತ್ರೀರಾಮಾ. ೧೩೬–೩೨೦).. **ಹಣತಿಸೊಡರು :** ಇರುಳು ಗಾಳಿ ಬೀಸುವಾಗ ಹಣತಿಸೊಡರು ಹೆದರಿದಂತೆ ತಾನು ತಣ್ಣಗಾದೇನೆಂದು ಚಳಿಚಳಿ ನಡುಗುತಲಿತ್ತ ಶುಭ ನುಡಿಯೆ ಶುಭ ನುಡಿಯೆ ಶಕುನದ ಹಕ್ಕಿ (ನಾದಲೀ. ೩–೧೧). [ಪಣತೆ(<ಪಣಿತೆ)+ಸೊಡರ್]

**ಪಣತೊಡು** (ಕ್ರಿ). ಪ್ರತಿಜ್ಞೆಮಾಡು : ದೃಢಸಂಕಲ್ಪವನ್ನು ಮಾಡು ; ದೃಢನಿಶ್ಚಯವನ್ನು ಹೊಂದು : ಕನ್ನಡನಾಡಿನ ದಂಪತಿಗಳೆಲ್ಲ ಗ್ರಂಥರಾಶಿಯನ್ನು ಉಳಿಸಲು ಹಾಗು ಬೆಳೆಸಲು ಪಣತೊಟ್ಟರು (ದಾನಚಿಂ. ೧೭೫) ; ಬೊಪ್ಪಣ . . . ಸ್ವಾಮಿಯ ಸೇವೆಯನ್ನು ತ್ರಿಕರಣಪೂರ್ವಕವಾಗಿ ಮಾಡುವೆನೆಂದು/ ಪಣತೊಟ್ಟ (ಶಾಂತಲಾ. ೧೪೧) ; ನಿರ್ದಯೆಯಿಂದ ಭೂಮಿಯನ್ನು ಸುಡಲು ಪಣತೊಟ್ಟ ಸೂರ್ಯನ ಕಿರಣಗಳ ಪ್ರಖರತೆಯಿಂದ ಅವಳಿಗೆ ಕಣ್ಣು ಮುಚ್ಚುವಂತೆಯೇ ಆಯಿತು (ಮಣ್ಣಿಮ. ೩) [ಪಣ₃+ತೊಡು₁]

**ಪಣಥ** 'ಪಣತ' ನೋ.

**ಪಣಬು,** ಪಣ₄ (ನಾ). ಚಿಕ್ಕ ಸೇತುವೆ ; ಸಾರ : [ಹಿ]ರಿಯಕುರ್ವ[ಯೆ]ಕ್ಕೇಕುರ್ವ ಕಲ್ಲೋನಾಯಕಿತ್ತಿಕುರ್ವ . . . ಆನುವು ಕಟಗೆ ಪಣಬಿನ ಹಜುಗೋಲವರು ಕೊಡುವ ತೆಜಿಗೆ ಸಹವಾಗಿ (ಸೌಇಇ. IV, ೨೫೫–೧೧ ; 1513) ; ನಾನು ಕುದುರೆಯಿಂದ ಇಳಿದು, ಅವರ ಸಂಗಡ ಅಲ್ಲಿದ್ದ ಒಂದು ಸಣ್ಣ ಪಣಬಿನ ಕೈಪಿಡಿ ಮೇಲೆ ಕುಳಿತು, ವಿಷಯವೇನೆಂದು ಕೇಳಿದೆ (ಕಲಸಿ. ೨೧೦). **ಪಣ₄ :** ಅಲ್ಲೊಂದು ನದಿ. ಅದನ್ನು ದಾಟುವುದಕ್ಕೆಂದು ಹಾಕಿದ್ದ ಪಣವನ್ನು ಕಿತ್ತು ಹಾಕಿದ್ದಾರೆ (ಘಾಟೀಮು. ೭೫). [?]

**ಪಣಭಾಮಿನಿ** (ನಾ). = ಪಣಕಾಂತೆ : ಪರಿಮಳಕೊಯ್ಕನಾವರಿಪ ತುಂಬಿ ಮುಗಿಲ್ಗಣಿಕಾವಿಲಾಸಮಂದಿರಚಲದಗ್ರಘಂಟಿಯುಲಿ ಮೇಘರವಂ ಪಣಭಾಮಿನೀವಿಲೋಲರುಚಿರಕರ್ಣಪತ್ರರುಚಿ ಮಿಂಚು ನವೋತ್ಪಲನಿರ್ಗಮತ್ಪಸೂನರಸಕಣಾಳಿ ವೃಷ್ಟಿಯೆನೆ ಕಾರವೊಲೊಪ್ಪಿದುದಲ್ಲಿ ತಣ್ಣೆಲರ್ (ಯಾದಚಂ. ೩–೭೮). [ಸಂ. ಪಣಭಾಮಿನೀ]

**ಪಣಮು** 'ಪಣವ₁' ನೋ.

**ಪಣರವಾಡಿ** (ನಾ). ಒಂದು ಸ್ಥಳದ ಹೆಸರು (?) : ಪಣರವಾಡಿಯ ರಟ್ಟಿಗಡನಣ್ಣಪಯ್ಯನ ಮಗ ಅಸಗಯ್ಯ (ಎಕ. V, ಚನ್ನರಾ. ೨೬೭–೧೨ ; 971). [?+ಪಾಡಿ₂]

**ಪಣವ₁,** ಪಣಮು (ನಾ). ಪ್ರಣವ ; ಓಂಕಾರ : "ಪಣವ–ಪ್ರಣವ= ಓಂಕಾರ" (ತದ್ಭಕೋ. ೨೪). **ಪಣಮು :** ಸೋಜಾನಕ ನೀ ನಡಿಯೆ ಸೊಬಗಿನ ಚಿಂತಾಮಣಿಯೆ ಓಮೆಂಬ ಪಣಮು ಒಳಗೆಲ್ಲ ಮುದ್ದುಮುಖದ ಮೋಹನ್ನಿ ದನಿಯ ಕೊಡ ಬಾರ (ಲೋಕಗೀ. ೧೦). [<ಸಂ. ಪ್ರಣವ]

**ಪಣವ₂** (ನಾ). ಒಂದು ಬಗೆಯ ಚರ್ಮವಾದ್ಯ : "ಡಿಂಡಿಮಃ, ಪಣವಃ—ಈ ೨ ಪಳ(ಬ)ಹಂ" (ಹಲಾಯು. ೧೭–೯೭) ; ಅನೇಕ ಶಂಖ ಕಾಹಳಭೇರೀಪಣವಝಲ್ಲರೀಮೃದಂಗತೂರ್ಯಂಗಳಂತಕಾಲಾಂತಕವಿಕಟಾಟ್ಟಹಾಸಂಗಳೆಂಬಂತೆ ಮೊಳಗೆ (ಪಂಪಭಾ. ೧೧–೩೩ ವ) ; ಒರ್ವ ಪಾಣಿಕನ ಪೆಗಲ ಪಣವಮಂ ತನ್ನ ಪೆಗಲೊಳ್ ತಗುಳ್ಚಿಕೊಂಡು . . . ಬಾಜಿಸುವ ವಾದ್ಯವಿದ್ಯಾಧರನ ವಾದನವೈದಗ್ಧ್ಯಗಂ ಮರುಳ್ಗೊಂಡು (ಅರ್ಧನೇ. ೬–೩೯ ವ) ; ಭೇರಿ ಪಟಹ ನಿಸ್ಸಾಣ ಕಾಹಳೀ ಮುರಜ ಪಣವ ಮೊದಲಾದ ವಾದ್ಯ (ಸೌಗಂಧಿ. ೨೩೦–೧೩) ; ಆನೆಯ ಮೇಲೆ ಘಂಟೆಯನ್ನೂ ಪಣವವನ್ನೂ ಬಾರಿಸುತ್ತ ಚೌಕಗಳಲ್ಲೆಲ್ಲಾ ನನ್ನ ಜಯವನ್ನು ಘೋಷಿಸಲಿ ! (ವಚಭಾ. ೨೧೯). [ಸಂ.]

**ಪಣವಕ** (ನಾ). [ಛಂದ] ಒಂದು ಬಗೆಯ ಛಂದಸ್ಸು ; ಪಂಕ್ತಿ ಎಂಬ ಹತ್ತನೆಯ ಛಂದಸ್ಸಿನಲ್ಲಿ ಹುಟ್ಟಿದ, ಪ್ರತಿಪಾದದಲ್ಲಿ ಮ ನ ಯ ಗಣಗಳು ಮತ್ತು ಒಂದು ಗುರುವಿನಿಂದ ಕೂಡಿದ ಹತ್ತು ಅಕ್ಷರಗಳಿರುವ ಒಂದು ಸಮವೃತ್ತ : ಭೂನಾಕಾಂತದೊಳಿರೆ ತೋಯೇಶಂ ತಾನೆಂದುಂ ಪಣವಕ ನಾಮಂ ಕೇಳ್ನೀನಿಂತೀ ತೆಜಿನಜಿದೋದೆಂದುಂ ಮೀನಾಕ್ಷೀ ಯತಿ ಗಿರಿಯೊಳ್ನಿಲ್ಕುಂ (ಛಂದೋಂಬು. ೧–೧೦೭). [ಸಂ.]

**ಪಣವಧು** (ನಾ). ಸೂಳೆ ; ವೇಶ್ಯೆ ; ಗಣಿಕೆ : "ದಾರಿಕೆ ಲಂಜಿಕೆ ಪಣವಧು ವಾರಾಂಗನೆ ಗಣಿಕೆ ವೇಶ್ಯೆಯೆನೆ ಬೆಲೆವೆಣ್" (ವಸ್ತುಕೋ. ೫೩–೭) ; ಪುರೂರವಸಂಗೂರ್ವಸಿ ಕೂರ್ತಪಳ್ ಪಣವಧೂಸ್ನೇಹವ್ಯಪೋಹಂಗಳಂ (ಅನಂಪು. ೮–೫೪) ; ಹರಿದಿಕ್ಪ[ಪಾಠಾಂ. ದೀಕ್ಷ]ಣವ[ಪಾಠಾಂ. ತ]ಧು ಬರೆ ಹಿಮಕರ ಖರಕರರೊಂದೆ ತೆಜದೊಳನುರಕ್ತತೆಯಿಂ ನೆರೆವಳ್ಗಡ ವಸುವಿತ್ತೊಡೆ ಸರಿ ಮೃದುಕರಿನರ್ಕಳಿರ್ವರುಂ ಗಣಿಕೆಯರೊಳ್ (ರಾಜಶೇ. ೧೨–೨೭). 'ಪಣವಧೂಗೇಹ' ಪರಾ. [ಸಂ. ಪಣವಧೂ]

**ಪಣವಧೂಗೇಹ** (ನಾ). ಸೂಳೆಯ ಮನೆ ; ವೇಶ್ಯಾಗೃಹ : ಗುರುಸೌರಭ್ಯಸಂದೋಹಭಾರಾಕಳಿತಂ ಬಂದೊಯ್ಯನೇನೂದಿದುದೊ ಪಣವಧೂಗೇಹದಿಂ ಗಂಧವಾಹಂ (ಚಂಪ್ರಪು. ೮–೪೫). [ಸಂ.]

**ಪಣವಧೂಟಿ** (ನಾ). = ಪಣವಧು : ಪಲ್ಲವ ಜಂಗಮುಂ ಪಣವಧೂಟಿ[ಪಾಠಾಂ. ಟೆ, ತಿ]ಯ ಗೇಹದೊಳಿರ್ದು ಬೀಯಕಿಂದಿಲ್ಲ ಧನಂಗಳಂ ಬಸಪ ನಿತ್ತಪನೀಗಳೆ ಬೇಡಿ ತರ್ಪುದೆಂದಲ್ಲಿಯ ಚೇಟಿಯುಂ ಕಳುಪೆ (ಸ್ವಪಪಿ. ೮–೨೦). [ಸಂ. ಪಣವಧೂಟೀ]

**ಪಣವಬಂಧ** (ನಾ). [ಕಾವ್ಯಮೀ] ಚಿತ್ರಕಾವ್ಯದ ಬಂಧಗಳಲ್ಲಿ ಒಂದು ಪ್ರಕಾರ: ಇದು ಪಣವಬಂಧಮುಂ ಗೋಮೂತ್ರಿಕೆಯುಮಕ್ಕುಂ (ಮದತಿ. ೧–೪೦ ವ). [<ಸಂ. ಪ್ರಣವಬಂಧ]

**ಪಣವು₁,** ಫಣ₁, ಹಣ, ಹಣವು (ನಾ). ೧. ದುಡ್ಡು ; ಧನ ; ದ್ರವ್ಯ : ರಕ್ಕಸಿಯುರಮನೆಯ ಬೆಲ್ಲದಂತೆ ಕಲ್ಲ ಬಿಡವೆಯೊಳಿರ್ದ ಪಣವಿನಂತೆ ಸಿಡಿಲೊಳಗಿರ್ದ ಸಕ್ಕರೆಯಂತೆ (ಧರ್ಮಾಮೃ. ೧೩–೧೮೫). ೨. ಒಂದು ನಿರ್ದಿಷ್ಟ ಬೆಲೆಯ ನಾಣ್ಯ ; ಪಣ ; ನಾಲ್ಕು ಹಾಗ : ಧಾನ್ಯಮನರ್ಘವಾದ ಕಾಲದೊಳೀ ಕೊಡಂತೀವಿದ ಸತ್ತುಗದ ಪುಡಿಯುಂ ಪತ್ತು ಪಣವಿಂಗೆ ಮಾಜು ಪತ್ತಾಡುಕೊಳ್ವೆಂ (ಪಂಚತಂ. ೧೮೬–೫) ; ಅಲ್ಲಿ ಕೊಯ್ಸಿದೆಲೆಯ ಪೇಜಿಂಗೆ ತಮ್ಮ ಪನ್ನಾಯದ ಸುಂಕದೊಳಗೆ ಬಿಟ್ಟ ವೀಸ ೧೦ ಪೊಜಿಗೆ ವೀಸ ೫ ಪ[ಣ]ವಿನೆಲೆಗೆ

**ವೀಸ** ೧(ಸೌಇಇ.XV,೫-೯; 1106) ; ಪದಿನೆಂಟು ಕೊಳಗದೊಬ್ಬಳಮುದು ಪಣವಿಂಗಾಗೆ ನೂಜಿ ನಾಲ್ಕಂಡುಗನುಂ ಪದಿನೆಂಟು ಕೊಳಗದೊಳ್ಕೂಡಿದ ಮೂಜು ಬಳ್ಳವಿರೆ ಪೊಂಗಳವೇಂ (ಭಾಸ್ಕರ. ೨೧-೮) ; ಆತನ ಬುದ್ಧಿ ಪೌರುಷಮುಂ ಮೆಚ್ಚಿ ನಾವಿಕಾದಶವಂದಂಗೊಟ್ಟೊಡಾ ಪಣವಿಂಗವರ ಪೊಕ್ಕ ದ್ವೀಪದೊಳ್ ಕೊಂಡು ಪೆಜಿತು ದ್ವೀಪವೊಳ್ ಮಾಜಿ (ಬಂಹರಿ. ೪-೧೩ ಪ). **ಫಣ**$_1$**: ೨.** ಪೂಗಿಫಲದ್ವಿಸಹಸ್ರಂ ಪಾಗಂಗೂಡಿದ ಫಣತ್ರಯ ವೀಸಕ್ಕುಂ ತಾನೆಸಿತಾಗಿರೆ ಮೂಜಿರ ಕ್ಷಕ್ಕೆ ಯಿಾಗಳೆ ತಾವೆಸಿತು ಪೊಂಗಳವು ತಾನೆನಿತಕ್ಕುಂ (ಭಾಸ್ಕರ. ೨೩-೭) ; ನಿಮ್ಮರಸಿ ಈಗ ಪೇಳಿ ಯಿರುವ ಎಂಟು ಫಣಮಂ ತರುವೆ (ಸಾಗಂಪ. ೯-೭೬). **ಹಣ : ೧.** ಹಣ ಬಂಗಾರ ವಸ್ತ್ರ ಕಪ್ಪಡ ಬಟ್ಟೆಯಲ್ಲಿ ನೆಟ್ಟನೆ ಬಿದ್ದಿರಲು ಕಂಡು ಕಾತರಿಸಿ ಕೈಮುಟ್ಟ ಎತ್ತದ ಭಾಷೆ (ಆದಸ.೨೧-೫೨) ; ಬಿರುದ ಹೊಗಳಿಸಿ ಕೊಂಡು ದಾತಾರರ ಹಣವ ಸಲೆ ತಿಂದು ಹೆಚ್ಚಿದ ಹಿರಿಯ ಡೊಳ್ಳಿನ ರಾವುತರ ಕೆಡಹಿದನು ನಿಮಿಷದಲಿ (ಕುಪ್ಯಾದ್ರೋ. ೧೦-೧೮) ; ಮುದ್ದು ಮಾತಿನಲಿ ಮೋಹವ ಬೀಜುಯವನೊಳಗಿದ್ದ ಹಣವ ತೆಗೆ ಮಗಳೆ(ಕಂಸವಿ. ೬-೧೫೧) ; ಯಾರಿಗೂ ಸಲ್ಲಬೇಕಾದ ಹಣವನ್ನು ಕೊಡದೆ ಉಳಿಸಿಕೊಳ್ಳ ಬಾರದು (ಆಡುಸಾ. ೧೨೪) ; ಹಣವೆಂದರೆ ಹೆಣವೂ ಬಾಯಿ ಬಿಡುತ್ತದೆ (ಗಾದೆ). **೨.** ಮೊಳಗಿರನಲ್ಲಿ ಗುಡಿಂ[ಗೆ] ಹೇಜುಂಗೆ ಅಡ್ಡ ಸೂರು ಗುಡಿಸ ಹೇಜುಂಗೆಹಸಾಬಿಡಿಗವೇಜುಗೆ ಹಣ ಒಂದು (ಕಇಅ. ೩೮-೫೧-೧೮ ; 1091); ಕಂಬವೊಂದಕ್ಕೆ ಹಣಂ ಮೂಜಿಜ ಮರಿಯಾದೆಯಲು . . .ಕಳದು ಕೊಂಡು ಧಾರಾಪೂರ್ವಕವಾಗಿ ಕೊಟ್ಟರು (ಎಕ. VI, ಕಡೂರು.೧೨-೩೭; 1233) ; ಆ ಕಾಲುವಳಿ ಗ್ರಾಮ ಅಣಿಯೂರು ಗ್ರಾಮವೊಂದಕೆ ನಾಲು ವತ್ತ ಎರಡು ಹೊಂನು ನಾಲುಕು ಹಣ (ಎಕ. XIV, ಗುಂಡ್ಲುಪೇ. ೧೨೯-೭೪;1521); ಒಂದು ಹಣದ ಉದ್ದು ಒಂದು ಹಣದ ತುಪ್ಪ (ಕಥಾಸಂ. IV, ೧೪). **೩.** ಒಂದು ದೇಶದಲ್ಲಿ ಚಲಾವಣೆಯಲ್ಲಿರುವ ನಾಣ್ಯ ಮತ್ತು ನೋಟು ; ಕರೆನ್ಸಿ : ವಸ್ತುಗಳ ಬೆಲೆಯನ್ನು ಅಳೆದು ಎಲ್ಲವನ್ನೂ ಬೇಕುಬೇಕಾದಂತೆ ಸಂಗ್ರಹಿಸಬಲ್ಲ ಧನದ ಪ್ರತಿನಿಧಿ—ಹಣ (ಹಣಪ್ರ. ೨). **ಹಣವು : ೧.** ಅಯ್ದು ಹಣವಿನ ಅಕ್ಕಿ ತುಪ್ಪದ ಬಿಟ್ಟ (ಎಕ. VI, ಚಿಕ್ಕಮ. ೬೧-೨೦ ; 1058 ?) ; ನಾರಸಿಂಹದೇವ ಸೋಮಯ್ಯ ಮುಂತಾಗಿ ಹಣವಿನ ಕೆಯ್ಯ ಕಾರುಣ್ಯಗೆಯ್ದರು (ಪ್ರೆಆರಿ. ೧೯೩೨, ೨೯-೧೦ ; 1169) ; ಕೆಟ್ಟ ಜಾತಿಯನಾರನಾದಡೆ ಮುಟ್ಟಿ ಕೊಂಬರು ಹಣವಿನಾಸೆಗೆ ಬಟ್ಟಗುತ್ತೆಯರಿಂತು ವಾರಪುರಂಧ್ರಿಯರು (ಬಸಪು. ೪೦-೫೬) ; ಜಜ್ಝಾರ ಮಾಸಾಳುಗಳು ನಿಜದಾತಾರನವಸರಕೊದಗಿ ಹಣವಿನ ಋಣನ ನೀಗಿದರು (ಕುಪ್ಯಾದ್ರೋ. ೧-೫೦). **೨.** ಮೊಸರ ಕೆನೆಯಂ ಹಣವಿನಗಲದೊಳು ಕತ್ತರಿಸಿಯದಜ ಸರಿಮೊಸರೊಳಗೆ ಕಲಸು ವುದು (ಸೂಪಶಾ. ೨-೧೧). [<ಸಂ. ಪಣ]

**ಪಣವು**$_2$ (ನಾ). (?) : ಯಿಾ ಪಣವಿನ ಗ್ರಾಮವಂನು ಸಿವಾರ್ಪಿತವಾಗಿ ಬಿಟು ಯಿಾ ಭೂಮಿಗೆ ಲಿಂಗ ಮುದ್ರೆ ಸಿಲಾಸ್ತಪಿತವ ಮಾಡಿಸುವಲಿಗೆ (ಎಕ. VII, ತಿಪಮೊ. ೧೭-೧೦ ; 1696). [ ? ]

**ಪಣವೊಡ್ಡು, ಪಣಒಡ್ಡು** (ಕ್ರಿ). ಜೂಜು ಅಥವಾ ಪಂದ್ಯದಲ್ಲಿ ಒತ್ತೆಯ ಹಣ ಅಥವಾ ವಸ್ತುವನ್ನು ಒಡ್ಡು ; ಪಣಕಟ್ಟು : ಹೆಂಡತಿಯನ್ನು ಪಣವಾಗಿ ಇಟ್ಟು ಯಾರಾದರೂ ಜೂಜಾಡುತ್ತಾರೆಯೇ? ರಾಜನು ಜೂಜಿನ ಮದದಿಂದ ಮೈಮರೆತಿದ್ದರೂ ಅವನಿಗೆ ಪಣವೊಡ್ಡುವು ದಕ್ಕೆ ಇನ್ನೇನೂ ಇರಲಿಲ್ಲವೇ ? (ಪಚಭಾ. ೯೬) ; ಈ ಹಲಗೆಗಳ ಹತ್ತಿರ, ಪಣವೊಡ್ಡುವವರು ನಿಲ್ಲಲು ಅನುಕೂಲವಾಗುವ ಎತ್ತರದ ಪೀಠ(ಸ್ಟೂಲ್) ಗಳಿವೆ (ಪ್ರಕಾಶ.೧೪೧). **ಪಣಒಡ್ಡು :** ನನ್ನದೆನ್ನುವ ಯಾವ ಪ್ರಾಣಿಯೂ ಇಲ್ಲ—ಜೂಜಾಟದಲ್ಲಿ ಪಣಒಡ್ಡಲು (ಬಂಗಾಹೆ. ೫೩). [ಪಣ$_3$ + ಒಡ್ಡು$_1$]

**ಪಣಸ** (ನಾ). ಬಣ ; ಪಂಗಡ (?) : ಯಿದಕೆ ಯರದರು ಅಡ್ಡಿ ಬನ್ದ ಕಾಶಿಯಲ್ಲಿ ಗೊಹತ್ಯ ಮಡಿದ ಪಪು ಬನ್ಧಿತೂ ಯನ್ನು ಸಿವಯಿತ್ತ ತವು ಕುಲ ಅದಿನೆಂಟು ಪಣಸದೊಳಿಲ್ಲಯವ್ನುವರ ಬಯಿರಿ ಕಥೆ (ಎಕ. XVI, ಗುಬ್ಬಿ. ೬೯-೩೭ ; ?). [ ? ]

**ಪಣಹ** (ನಾ). ಒಂದು ಬಗೆಯ ಚರ್ಮವಾದ್ಯ ; ಪಣವ : ಮೊಳಗಿದವು ನಿಸ್ಸಾಳ ಕೋಳಾಹಳಿಸಿದವು ಕಹಳೆಗಳು ಪರ್ವತ ಹಿಳಿಯೆ ಹೆಚ್ಚಿದ ಪಟಹ ಪಣಹ ಮೃದಂಗ ಡಿಂಡಿಮದ ಉಲಿಯ . . . ಕಳಗರ್ಚಾ ಯ್ತು ಕೌರವಸೈನ್ಯಶರಧಿಯಲಿ (ಕುಪ್ಯಾದ್ರೋ. ೯-೨೭) ; ಮುರಜ ತಂಬಟೆ ಪಣಹ ರಣಮಾವರಿಗಳಬ್ಬರಿಸಿದವು (ತೊರರಾ. ೬-೨೦-೪೪) ; ಚಂಬಕ ಪಟಹ ಪಣಹ ಡಿಂಡಿಮ ಡಮರು ಢಕ್ಕೆ . . . ಬೊಂಬುಳಿರವಂಗಳಿಂ ದಂಬುಜಭವಾಂಡಮದಿರೆ (ಚಿಬವು. ೩೮-೨೮). [<ಸಂ. ಪಣವ]

**ಪಣಾಂಗನೆ** (ನಾ). = ಪಣವಧು : ಶ್ವೇತನೆನಿಪ್ಪ ಪಾತಕಿ ಪಣಾಂಗನೆ ಗೆಂದರಲಂ ತರುತ್ತೆ ಧಾತ್ರೀತಳದಲ್ಲಿ ಬೀಳೆ ಗಿರಿಶಂಗೆ ಸಮರ್ಪಣಮೆಂದ ಸೈಪು (ರಾಜಶೇ. ೩-೯೩). [ಸಂ. ಪಣಾಂಗನಾ]

**ಪಣಾಚಾರಿಯ** (ನಾ). ವರ್ಗದ ಮುಖಂಡ : ಹೊಯ್ಸಣರಾಯ ಸಾಮ್ರಾಜ್ಯಲಕ್ಷ್ಮೀಹರಣ ಪ್ರಚಣ್ಡ ದೋರ್ದ್ದಣ್ಡ ಅರಿರಾಯ ಜಗ ದ್ಧುಂಪರುಂ ಪಣಾಚಾರಿಯ ಶ್ರೀರಾಯ ನಾರಾಯಣ ಪ್ರೌಢಪ್ರತಾಪ ಚಕ್ರವರ್ತಿ ಶ್ರೀವೀರರಾಮಚಂದ್ರರಾಯ (ಎಕ. XI, ದಾವಣ. ೫೯-೩೪; 1280). [ಪಣ$_2$(<ಬಣ್ಣ) + ಆಚಾರಿಯ]

**ಪಣಾಯಿತ** (ನಾ). **೧.** ಹೊಗಳಲ್ಪಟ್ಟುದು ; ಪ್ರಶಂಸೆಮಾಡಲ್ಪ ಟ್ಟುದು : "ಪಣಾಯಿತಂ ತಾಂ ಪಣಿತಂ" (ವಸ್ತುಕೋ. ೧೦೬-೫೨) ; "ಈಡಿತಂ, ಶಸ್ತಂ, ಪಣಾಯಿತಂ . . . ಈಳಿತಂ, ಸ್ತುತಂ—೧೨ ಹೊಗಳಲ್ಪಟ್ಟದ್ದು, ಕೊಂಡಾಡಲ್ಪಟ್ಟದ್ದು, ಬಣ್ಣಿಸಲ್ಪಟ್ಟದ್ದು"(ಸಿದ್ಧಾಂತಿ. ೩೫೨). **೨.** ಹೊಗಳಲ್ಪಟ್ಟವನು ; "ಕೊಂಡಾಡಿದವ" (ಗಂಗಾಮ. ೧೯೫). [ಸಂ.]

**ಪಣಾರ್ಪಣ** (ನಾ). **೧.** ಮುಂಗಡ ಕೊಡುವ ಹಣ ; ಅಗಾವು ; ಸಂಚಕಾರ : "ಪಣಾರ್ಪಣಂ ಸಂಚಕರಂ" (ವಸ್ತುಕೋ. ೬೨-೬೪) ; "ಪಣಾರ್ಪಣಂ ಸಂಚಕಾರಂ" (ಮಂಗರಾ. ೧೦೨-೧). **೨.** ಕರಾರು ಮಾಡಿಕೊಳ್ಳುವಿಕೆ; ಒಪ್ಪಂದ. [ಸಂ.]

**ಪಣಿ**$_1$**, ಹಣಿ**$_1$ (ಕ್ರಿ). **೧.** ಬಾಗು; ನಮಿಸು; ನಮಸ್ಕಾರಮಾಡು: ಪ್ರಣುತಗುಣಿಗಳ . . . ಮೇರುನಂದಿಗಳಾ ಪಣಿ[ಣಿ]ದಣುವ್ರತರಾಗಿಯುಂ ವರಗುಣಧರಪ್ರಾಯರೆ ದಲೆನಿಸುವ ಗುಣಸಮುದ್ರ ಸಮಂತಭದ್ರರ ಚರಣ ಕೆಜಗುವೆನು (ಸಾಳ್ವಭಾ. ೧-೨೧). **ಹಣಿ**$_1$ **: ೧.** ಕೊತ್ತಿ ಮಿಾಸಲ ಹಾಲ ಮತ್ತೆ ತಾ ಬಿಡುವುದೇ ಹೊತ್ತು ಬಂದಾಗ ಹಣಿವರ ಸಂಗವದು ಕತ್ತೆಗಳಿ ಗೆಂದ (ಸರ್ವಜ್ಞ. ೮೪೦). **೨.** ಜಗ್ಗು ; ಸಗ್ಗು ; ಬಗ್ಗು ; ಮಣಿ : ತುಬಾಕಿಯ ಗುಂಡಿಗೆ ಸಹ ಹಣಿಯುವುದಿಲ್ಲ (ಮುಂಬಯಿ. ೪-೧೨೮) ; ಹಣಿಯುವುದೇನು ದೇವರೂ ? ಅದರಮ್ಮ ಹಣಿದಾಳು (ತೊಳಮು. ೭೬) ; ಚುಚ್ಚುಮದ್ದಾಯಿತು. ಹಣೆಯ ಮೇಲೆ ತಣ್ಣೀರಿನ ಪಟ್ಟಿಯಾಯಿತು. ಆದರೆ . . . ಯಾವ ಹಂಚಿಕೆಗೂ ಜ್ವರ ಹಣಿಯಲಿಲ್ಲ (ಅಪಮಾ. ೫೫). **೩.** ತೃಪ್ತವಾಗು; ದಣಿ; ಸಂತೃಪ್ತಿಯನ್ನು ಹೊಂದು: ಅನುಲೇಪನ ಮಾಲ್ಯಾಂಬರ ರತ್ನಮಂಡನಗಳನಾಂತು ಕಾಂತಾಳಿಗೆ ಮನ ಹಣಿವಂತಿತ್ತು ಸೌಂದರಗಣನಾಥ ವನಭೋಜನಕುದ್ಯತನಾದ (ತ್ರಿಭುತಿ. ೧೫-೫೪).

[ದೇ.‖ ತಮಿ. ಮಲ. ಪಣಿ]

**ಪಣಿ**$_2$ (ಕ್ರಿ). **೧.** ಹೊಡೆ ; ಬಡಿ : ಸರಿ ಪಣಿ ಕಡಿ ಮಡಿ ತೊಜಿಯೆಜು . . . ಸುಡು ತಾಜುಂಬಜುಯೆಂಬಿವು ಪದದ ಮೊದಲೊಳಿರಲಶುಭಕರಂ (ಕವಿಜಿ. ೩-೩೨). **೨.** ತಾಗು ; ಘರ್ಷಿಸು : ಬೇಜಿವೇಜಿ ನಿಲೆ

ಕಾರಕದೊಳ್ ಕ್ರಿಯೆ ತಳ್ತು ಮುಂ ತೋಱಿ ಪೇೞ್ದವಗುಣಂ ಗುಣರೂಪದೆ ಪೊರ್ದುಗುಂ ಸಾಜುಗಾನೆಯವರೆಲ್ಲರುಮಂ ನೃಪ[ತಾ]ನೆ ಮತ್ತೇಱು[ವಂ] ಪಣಿದೊಡಾನೆಯನೆಂಬು[ದ]ದೂಷಿತಂ (ಕವಿರಾ. ೧-೧೩೪); ಬಿಗಿದು ಪುಗಲನುವಿಸುವ ಲವಲವಿಕೆಯುಂ ಕೂಡಿ ಕರಗಿಸಲ್ ಕಾಯ್ವರ ಕಾಯ್ಪುಂ ಬೆರಸಿ ಬೆಚ್ಚಂತಿರಲ್ ಬಯಸುವ ಬಗೆಯುಂ ಪತ್ತಿ ಪಣಿದಣಿಯಿಸುವಳಿಪುಂ ಅಳವಿಗಟಯಿ (ಲೀಲಾವ. ೧೦-೪೫ ಪ). 'ಹಣಿ₂' ಪರಾ.

**ಪಣಿ₃** (ನಾ). ಒಂದು ಬಗೆಯ ಮರ ; ಅಶ್ವತ್ಥ ; ಅರಳಿ : (ಕ).
[ದೇ.॥ ತಮಿ. ಪಣ್ಯ]

**ಪಣಿ₄** (ನಾ). ೧. ಹಾವು ; ಸರ್ಪ ; ಫಣಿ : ಫಣಿ-ಪಣಿ ; ಫಲಕ-ಹಲಗೆ (ಶಮದ. ೨೫೫ ಪ್ರಯೋ); ಶಶಿವಮೌಳಿ ತ್ರಿಪುರದ ನಿಮಿತ್ತದಿಂ ಕೀಲ್ಗೊತ್ತಿಯದು ಸಸಿನೆ ಪಣಿ ನಾರಿ ತೊಡರಿಸಿ ಬಾಗಿಸಲ್ಕೆ ಬಸದಿಂದ ಲಘುವಾದೆನಿನ್ನಾರಿಗಳ್ಕೆನೆಂದಾಗಳಕೆ ಬೆಳದಿರ್ಪುದು (ನವಮೋ. ೨-೧೩). 'ಪಣಿಗಡಗ' ಪರಾ. ೨. ರಾಹು : ಬೆಸಗೊಳ್ವವರ್ದೆಡೆಯೊಳಗೆಸೆದಿರ್ದೊಡಮಿಂದ್ರಚಾಪಮರ್ಕೇಂದುಗಳಂ ಮುಸಗಿ(ಯೆ) ಪಣಿ ಕೊಳ್ವೊಡೆಯುಂ ಕುಸುಮಾಸ್ತ್ರನ ಚಾಪಮೆಸೆವೊಡೊಳ್ಪಱೆಯಕ್ಕುಂ (ಜಟ್ಟಮ. ೧-೪೨). [<ಸಂ. ಫಣಿನ್]

**ಪಣಿ₅** (ನಾ). ೧. ರಾಕ್ಷಸರಲ್ಲಿ ಒಂದು ವರ್ಗದ ಹೆಸರು : ಪಣಿಗಳು ಗೋವುಗಳಲ್ಲಿ ಘೃತವನ್ನು ಮೂರು ಪ್ರಕಾರವಾಗಿಟ್ಟು ಅದು ರಹಸ್ಯವಾಗಿರುವಂತೆ ಮಾಡಿದರು (ಋಕ್ಸಾರ. ೧೯೮); ಋಗ್ವೇದದಲ್ಲಿ ಕಂಡು ಬರುವ ಒಂದು ಪಂಗಡವು ನಮ್ಮ ನಾಡಿನಲ್ಲಿದ್ದಂತೆ ಭಾಸವಾಗುತ್ತದೆ. ಇವರೇ ಪಣಿಗಳು (ತುಳುನಾ. ೧೩). ೨. ವ್ಯಾಪಾರ ಮಾಡುವ ಒಂದು ಜನಾಂಗದ ಹೆಸರು ; ವೈಶ್ಯ : ಕುರಿಗಳವರು ಕ್ಷುದ್ರಶೂದ್ರರಾಗಿಯೂ ಎತ್ತು, ದನಗಳುಳ್ಳವರು ಕೃಷಿ ವಾಣಿಜ್ಯ ಮಾಡುವ ಪಣಿ-ವಣಿಕ-ಬಣಂಜು-ವೈಶ್ಯರಾಗಿಯೂ ಮನೆಮಾರು ಬದುಕುಮಾಡಿಕೊಂಡು ಸ್ಥಿರವಾಗುತ್ತ ಬಂದರು (ಸಾಹಸಂ. ೧೩೦). [ಸಂ.]

**ಪಣಿಕಟ್ಟು** 'ಪಣಕಟ್ಟು₂' ನೋ.

**ಪಣಿಗಡಗ** (ನಾ). ಸರ್ಪದ ಆಕೃತಿಯನ್ನು ಹೊಂದಿರುವ ಕಡಗ,-ಕಂಕಣ : ಕೀಲಕಡಗ ಹಸ್ತಕಡಗ . . . ಗೌಳಸರದ ಪಣಿಗಡಗದ ಸೊಬಗಿನ ನೀಲಕುಂತಳೆಯರೊಪ್ಪಿದರು (ಕಂನವಿ. ೨೪-೩೯).
[ಪಣಿ₄ + ಕಡಗ₁]

**ಪಣಿಗೆ,** ಪಣಿಯೆ, ಹಣಿಗೆ, ಹಣಿಗೆ₂ (ನಾ). ೧. ತಲೆಯನ್ನು ಬಾಚುವ ಸಾಧನ ; ಬಾಚಣಿಗೆ : ಪಸರಿಸಿ ಪಂದಲೆಯಂ ಮೆಟ್ಟಿಸಿ ವೈರಿಯ ಪಲ್ಲ ಪಣಿಗೆಯಿಂ ಬಾರ್ಚಿ ಪೊದಱಿದ್ದಸಗೆಯಿನವನ ಕರುಳ್ಗಳೆ ಪೊಸವಾಸಿಗವಾಗೆ ಕೃಷ್ಣೆಯಂ ಮುಡಿಯಿಸಿದಂ (ಪಂಪಭಾ. ೧೨-೧೫೫); ಗರಗಸದಂತೆ ಮೆಯ್ಯಂ ಕೊಱೆವರ್ ಪಣಿಗೆಯಂತೆ ತಲೆಯಂ ಪತ್ತಿ ತೆಗೆವರ್ (ಧರ್ಮಾಮೃ. ೩-೬೩); ಮುಡಿವೂ ತೊಡವುದು ಸೀರೆ ಪಡಿಗ ಪಣಿ[ಪಾಠಾಂ. ಪವಣಿ]ಗೆಯವಸರದಾಳಿಯ್ಯದಿರೆ ನುಡಿಸಲ್ಕಾಣದೆ ಸಾರಿದರು (ಶ್ರೀಪಾಲ. ೨-೩೧). ೨. (ಬಾಳೆಯ) ಚಿಪ್ಪು : ಪಣ್ಣ ಪಣಿಗೆಯ ಬಿಣ್ಪು ತಿಣ್ಣಮಾದಂತೆ ಕೆಲದ ಕುಜಂಗಳೊಳೆಳದೋಳ್ಗಳನಿಱುಪುವ ಪೊಂಬಾಳೆಗಳುಂ (ಲೀಲಾವ. ೬-೭೦ ಪ). **ಪಣಿಯೆ** : ೨. ಒಲೆಯ ಬಳಿಯಲ್ಲೇ ಬಳಕ್ಕೆ ಕಟ್ಟಿದ ಕೆಲವು ಚೋಕು ಮೈಸೂರು, ಕದಲಿ, ಬೂದುಬಾಳೆಗೊನೆಗಳೂ ಅವರ ದೃಷ್ಟಿಗೆ ಬಿದ್ದುವು. ಮೇಲಿನ ಪಣಿಯೆಗಳಲ್ಲಿ ಇನ್ನೂ ಕಸುಕಾಯಿ (ಬಾಳಿ೧.೧೪೮). **ಹಣಿಗೆ:** ೧. "ಕಂಕತ(ಂ)ಃ, ಕೇಶಮಾರ್ಜನಂ-ಈ ೨ ಹಣಿಗೆ" (ಹಲಾಯು.೫೨-೧೫೭); ಅಡಿನ ಹಂಸೆಯ ಪಸುವಿನನ್ನರುತ್ತಮರ್ ಒಡೆದ ಕೊಡದ ಶುಕದ 'ಕಲ್ಲ ಮಣ್ಣಂದದವರ್ ಮಧ್ಯಮರ್ ಕೋಣನ ನೊಟಿ(ಣ)ವಿನ ಸಾರಣಿಯನ್ನರ್ ಕನಿಷ್ಠರ್ ಉರಗನ ಬೆಕ್ಕಿನ ಹಣಿಗೆಯ ಜಿಗುಟಿಯನ್ನರ್ ಅಧಿಕಕನಿಷ್ಠರೆಂದು ನಿರೂಪಿಸೆ (ಜೀವಸಂ. ೨೪೦ ಪರಿ. ೧); ಮಡಕೆ ದೈವ ಮೊಱ ದೈವ ಬೀದಿಯ ಕಲ್ಲು ದೈವ ಹಣಿಗೆ ದೈವ . . . ದೈವ ದೈವವೆಂದು ಕಾಲಿಡಲಿಂಬಿಲ್ಲಾ ದೈವನೊಬ್ಬನೆ ಕೂಡಲಸಂಗಮದೇವ (ಬಸವ. ೫೬೩); ತರುಣಿ ದುಶ್ಶಾಸನನ ನೊರೆನೆತ್ತರಲಿ ನಾದುವೆ ನಿನ್ನ ಮಂಡೆಯ ಕುರುಳ ಬಾಚುವೆನವನ ದಂತದ ಹಣಿಗೆಯಲಿ (ಕುಮ್ಯಾಸ. ೬೦೮. ೧೬-೪೮); ಕೂದಲುಗಳ ಮೇಲೆ ಹಣಿಗೆಯನ್ನೂ ಆಡಿಸಿರಲಿಲ್ಲ (ಚೆಂದುಟಿ. ೮೭). ೨. ಒಂದೊಂದು ಗೊನೆಯೊಳಗೆ ಹತ್ತು ಹದಿನೈದು ಹಣಿಗೆಗಳು ಇರುವುವು ; ಒಂದೊಂದು ಹಣಿಗೆಗೆ ಹತ್ತು ಹನ್ನೆರಡು ಕಾಯಿಗಳು ಇರುತ್ತವೆ (ಮುಂಬಯಿ. ೨-೮೭). ೩. ನೇಯ್ಗೆಯ ಎಳೆಗಳನ್ನು ಹಾಯಿಸುವ ಸಾಧನ ; ಮಗ್ಗದ ಅಚ್ಚು : ಜೋಡು ಹಣಿಗೆಯ ಕಾಜೊ, ಜೋಡು ಕಣ್ಣಿನ ನೋಟ (ಕನ್ನಜಾ. ೧೯೬). 'ಅಣಿಗೆ', 'ಬಾಚಣಿಗೆ' ಪರಾ. **ಹಣಿಗೆ₂ :** ೨. ಒಂದು ವಾಟೆಬಾಳೆಯ ಗೊನೆಯ ಎರಡು ಹಣಿಗೆ ಚೆನ್ನಾಗಿ ಕಳಿತು . . . ಕಂಗೊಳಿಸುತ್ತಿದ್ದುವು (ಮಲೆಮ. ೬೩೫).
[ದೇ.॥ ಮಲ. ಪನ್ಯಾ; ತುಳು. ಪಣ್ಣ, ಪಣ್ಯೇ; ತೆಲು. ಪನ್ನೆ; ಕೊಂಡ. ಪನೆ ; ಪೆಂಗೊ. ಪೆನಿಯ ; ಕುವಿ. ಪನಿಯ./ಪ್ರಾ. ಫಣಗ, ಫಣಿಹ]

**ಪಣಿಜ** (ನಾ). ಮುತ್ತಜ್ಜ : ನಿಮ್ಮ ತಂದೆ ಸತ್ತುದ ನೋಡುತ್ತಿದ್ದಿ ನಿಮ್ಮ ತಂದೆಯ ತಂದೆ ಸತ್ತುದ ಕಾಣುತ್ತಿದ್ದಿ ನಿಮ್ಮ ಅಜ್ಜ ಪಣಿಜ ಸತ್ತುದ ಕೇಳುತ್ತಿದ್ದಿ (ವಚಶಾ. I, ೨೪೯-೨೩). [<ಪಜ್ಜ]

**ಪಣಿಜಿ** (ನಾ). ಮುತ್ತಜ್ಜಿ : ನಿಮ್ಮ ತಾಯಿ ಸತ್ತುದ ನೋಡುತ್ತಿದ್ದಿ ನಿಮ್ಮ ತಾಯಿಯ ತಾಯಿ ಸತ್ತುದ ಕಾಣುತ್ತಿದ್ದಿ ನಿಮ್ಮ ಆಯಿ ಪಣಿಜಿ ಸತ್ತುದ ಕೇಳುತ್ತಿದ್ದಿ (ವಚಶಾ. I, ೨೪೯-೨೩). [ಪಣಿಜ + -ಇ₂]

**ಪಣಿತ** (ನಾ). ೧. ಹೊಗಳಲ್ಪಟ್ಟುದು ; ಗೌರವಿಸಲ್ಪಟ್ಟುದು : "ಪಣಾಯಿತಂ ತಾಂ ಪಣಿತಂ" (ವಸ್ತುಕೋ. ೧೦೬-೫೨); "ಈಡಿತಂ, ಶಸ್ತಂ, ಪಣಾಯಿತಂ, ಪನಾಯಿತಂ, ಪ್ರಣುತಂ, ಪಣಿತಂ . . . ಸ್ತುತಂ-೧೨ ಹೊಗಳಲ್ಪಟ್ಟದ್ದು,ಕೊಂಡಾಡಲ್ಪಟ್ಟದು,ಬಣ್ಣಿಸಲ್ಪಟ್ಟದ್ದು" (ಸಿದ್ಧಾಂತಿ. ೩೫೨). ೨. ಹೊಗಳಲ್ಪಟ್ಟವನು ; "ಕೊಂಡಾಡಿದವ" (ಗಂಗಾಪು. ೧೯೫). ೩. ಪಣ ; ಪಂದ್ಯ ; ಪಂಥ ; ಜೂಜು : (ಕ). ೪. ಪಣದಲ್ಲಿ ಒಡ್ಡಿದುದು ; ಬಾಜಿ ಕಟ್ಟಿದುದು : (ಕ).
[ಸಂ.]

**ಪಣಿತವ್ಯ** (ನಾ). ಕೊಂಡು ಮಾರುವ ವಸ್ತು ; ವಿಕ್ರಯದ ವಸ್ತು; ಮಾರಾಟದ ಪದಾರ್ಥ : "ಪಣಿತವ್ಯ= ಮಾರುವ ಒಡವೆ" (ಗಂಗಾಪು. ೧೯೫); "ವಿಕ್ರೇಯಂ, ಪಣಿತವ್ಯಂ, ಪಣ್ಯಂ—೩ ಮಾರತಕ್ಕ ವಸ್ತುವಿನ ಹೆಸರುಗಳು" (ಸಿದ್ಧಾಂತಿ. ೨೪೮). [ಸಂ.]

**ಪಣಿತಿ** 'ಪಣಿತೆ' ನೋ.

**ಪಣಿತೆ,** ಪಣತಿ₂, ಪಣತೆ, ಪಣಿತಿ, ಪ್ರಣತಿ₁, ಪ್ರಣತೆ, ಪ್ರಣಿತೆ, ಪ್ರಣುತೆ₁, ಹಣತಿ, ಹಣತೆ₁, ಹಣಿತೆ (ನಾ). ೧. ಬತ್ತಿಯ ದೀಪವನ್ನು ಹಚ್ಚಲು ಬಳಸುವ, ಸಾಮಾನ್ಯವಾಗಿ ಮಣ್ಣಿನ ಅಥವಾ ಲೋಹದ ದೀಪದ ಬಟ್ಟಲು ; ಸೊಡರು : ಪ[ಪಾಠಾಂ.ಪ್ರ]ಣಿತೆಯೂ ಇದೆ ಬತ್ತಿಯೂ ಇದೆ ಜ್ಯೋತಿಯು ಬೆಳಗುವಡೆ ತೈಲವಿಲ್ಲದೆ ಪ್ರಭೆ ತಾನೆಲ್ಲಿಯದೋ (ಅವಚಂ. ೧೯-೭೮); ಮೂಗಿನ ಕಪ್ಪು ಪಣಿತೆಯ ಕತ್ತಲೆ ಜ್ಯೋತಿಯೆಂಬರು (ಸರ್ವನ. ೭೨-೩೭); ಕಲ್ಯಾಣವೆಂಬ ಪಣಿತೆಯೊಳೆಲ್ಲಾ ಶಿವಶರಣರೆಂಬ ಭಕ್ತಿಯ ತೈಲಂ ಬಲ್ಲಿದ ಬಸವನೆ ಜ್ಯೋತಿಯುಳ್ಳಿರದೋಡುವದು ಕರ್ಮ ಕತ್ತಲೆಯೆಂಬುದು (?) (ಅನುಸಾಂ. ೫-೧೧೨). **ಪಣತಿ₂ :** ೧. ಒಂದಾನೊಂದು ದಿನವೆಣ್ಣೆ ದೀಪಕಿಲ್ಲದೆ ಧೈರ್ಯಂಗುಂದದೆ ಪಿರಿದಾಗಿ ಪಣತಿಯೊಳುದಕವನೆಱೆದು ಬತ್ತಿಯಂ ಹರಿಸದಿಂದಿಕ್ಕಿ

ಸೊಡರೆತ್ತಲು (ಸಿದ್ಧೇಪು. ೩-೨); ಭೂಪಾಲ ಎಣ್ಣೆ ಬತ್ತಿಯಿದ್ದ ಪಣತಿ ಮಾರಯ್ಯ ಜ್ಯೋತಿ (ಸೋಳಿಮಾ. ೫೭ ಪ್ರಸ್ತಾವನೆ); ಗೂಡು ಗೂಡಲಿ ಪಣತಿಯಿದ್ದುದು ದೃಷ್ಟಿಗೋಚರವಾಯಿತು (ಚಂದ್ರಮಾ.೨೩-೭); ಪಣತಿಯೊಳಗಿನ ಎಣ್ಣೆಯು ಇದೇ ಶಕ್ತಿಯ ಕಾರಣದಿಂದ—ಬತ್ತಿಯೊಳಗಿಂದ ಮೇಲಕ್ಕೇರಿ ಬಂದು ದೀಪಕ್ಕೆ ಮುಟ್ಟುತ್ತದೆ (ಮುಂಬಯಿ. ೫-೬೪). **೨.** ಮಣ್ಣಿನ ಅಥವಾ ಲೋಹದ ದೀಪದ ಬಟ್ಟಲಿನಲ್ಲಿ ಹಚ್ಚಿದ ದೀಪ,—ಜ್ಯೋತಿ: ಪುಟಪುಟದ ಕಾರಂಜಿ; ಹಳತು ಹೊಸತನು ಹಿಂಜಿ ಹೊಸೆದು ಹೊತ್ತಿಸಿ ಹಿಡಿದ ಶಾಂತಿಪಣತಿ (ನೆಲಮು. ೫೦-೧೨). **ಪಣತೆ :** **೧.** "ಪಣತೆ (ಪಣಿತೆ)—ಪ್ರಣೀತಾ" (ತದ್ಭಕೋ. ೨೪); ಸೋಮಣ್ಣನು ತಾನು ಮಾಡಿದ ಗಡಿಗೆ, ಹರವಿ . . . ಹೂಜಿ, ಪಣತೆ ಮೊದಲಾದುವುಗಳನ್ನು ಹೊಂದಿಸಿ ಇಟ್ಟಿದ್ದಾನೆ (ಕಪಪು. ೩-೬೧). 'ಪಣತೆಸೊಡರ್' ಪರಾ. **ಪಣಿತಿ :** **೧.** 'ಪೊಂಬಣಿತಿ' ಪರಾ. **ಪ್ರಣತಿ$_1$ :** **೧.** ಸಗ್ಗವೇ ಈ ಪ್ರಣತಿಯನು ಎಣ್ಣೆದುಂಬಿ ಜ್ಯೋತಿಗೊಳಿಸುತ್ತದೆ (ಪ್ರಪಾತೋ. ೧೨೨); ಕರದೊಳಿದೆ ಬರಿ ಹಣತಿ, ಎದೆಗಣ್ಣೊಳಿದೆ ಪ್ರಣತಿ, ಆರತಿಯು ಆರದಿದೆ, ತುಂಬು ಭರತಿ (ಅರಳು. ೨೫೫-೩). **೨.** ದೇವಗಿರಿಯ ಯಾದವರು ಹಚ್ಚಿದ ಸ್ವಾತಂತ್ರ್ಯದ ಪ್ರಣತಿಗೆ, ಕಂಪಿಲದವರು ತಮ್ಮ ಆತ್ಮಾರ್ಪಣೆಯ ತೈಲವನ್ನು ಎರೆದಿದ್ದರು (ರಾಜ್ಯೋದ. ೪೭); ಅವಳ ಕೈಯಲ್ಲಿ ಉರಿಯುವ ಪ್ರಣತಿಯಿತ್ತು (ಸ್ಮೃತಿಚಿ. ೭೭). **ಪ್ರಣತೆ :** **೧.** ಉಪ್ಪಿನ ಪೊಟ್ಟಣವನುದಕದಲದ್ದುವಂತೆ ಕರ್ಪುರದ ಪ್ರಣತೆ[ಪಾಠಾಂ. ತಿ]ಯಲ್ಲಿ ಜ್ಯೋತಿಯ ಬೆಳಗುವಂತೆ ಸಿದ್ಧಸೋಮನಾಥ ಲಿಂಗಗ್ರಾಹಿ ಅಗ್ರಾಹಿತಾ (ಸಕಪ. III, ೧೨-೨೪; ಶರಚ. ೩೩೪. ನೋ). **ಪ್ರಣಿತೆ :** **೧.** ಅನುದಿನಂಗಳೆಂಬವು ಪ್ರಣಿತೆಯಾಗಿ ವರುಷಂಗಳೆಂಬವು ಬತ್ತಿಯಾಗಿ ಜೀವಜಾತಿಯ ಬೆಳಗಿನ ಬೆಳಗ ಬೆಳಗಿನಲಡಿಸಬೇಕು (ಲಿಂಗಲೀ. ೮೬-೧೩). **ಪ್ರಣುತೆ$_1$ :** **೧.** ಕರ್ಪುರದ ಪ್ರಣುತೆಯಲ್ಲಿ ಬತ್ತಿಯ ಹಾಕಿ ಉರುಹಬಹುದೇ (ವಚಶಾ. I, ೧೦೫-೧೦). **ಹಣತಿ :** **೧.** ಪ್ರತಿಯೊಬ್ಬರ ಬಾಳ ಹಣತಿಯೂ ಎಣ್ಣೆ ತುಂಬಿ, ಬೆಳಕು ಕೊಟ್ಟರೆ ತಾನೇ ಸಾರ್ವತ್ರಿಕ ಪ್ರಕಾಶ (ಕನ್ನನು.೨-೫೯); ಕರದೊಳಿದೆ ಬರಿ ಹಣತಿ, ಎದೆಗಣ್ಣೊಳಿದೆ ಪ್ರಣತಿ, ಆರತಿಯು ಆರದಿದೆ, ತುಂಬು ಭರತಿ (ಅರಳು. ೨೫೫-೩). **೨.** ಆ ಹಿಂದಣ ಕಾಲೂರ ಚೆಲುವೆ ಬಂಗಾರದ ಹರಿವಾಣದಲ್ಲಿ ಹೂಗಳನ್ನು ಕೂಡಿರಿಸಿ ಉರಿಯುವ ಹಣತೆಯನ್ನಿಟ್ಟು ಬಂದು . . . ನೋಡಿದಳು (ಕಾಲೂರ. ೨೦ ಕಥಾಸಾರ); ನಂ ಗುಡಿಸ್ಲು ಬೆಳಗೂವಂಥ ಹಣತೀನ ದೇವ್ರು ಕೊಟ್ಟ (ಹಾಹುತ್ತ. ೬೦). **ಹಣತೆ$_1$ :** **೧.** ಪ್ರಣಿತ—ಹಣತೆ (ಶಪುದ. ೨೬೧ ಪ್ರಯೋ); ಮೃತ್ತಿಕೆಯ ಹಣತೆಯಲ್ಲಿ ಎಣ್ಣೆಯ ನೀಡಿ, ಬತ್ತಿಯ ಹಾಕಿ, ಅಗ್ನಿಯ ಮುಟ್ಟಿಸಿದರೆ ಬೇರೆ ಬೇರೆ ಉರಿವುದಲ್ಲದೆ, ಘನಸಾರದ ಹಣತೆಯಲ್ಲಿ ಬತ್ತಿಯ ಹಾಕಿ ಉರಿವುದಕ್ಕಾದೀತೇ? (ವಚಶಾ. I, ೧೦೫-೧೦ ಅರ್ಥ); ಇನ್ನೇನು ಕವಿದು ಬಹ ಕತ್ತಲೆಗಾಗಿ ಎದೆಯ ಹಣತೆಗೆ ಎಣ್ಣೆ ಬತ್ತಿಗಳನೊಡ್ಡಯಿಸಿ ಸೊಡರು ಹೊತ್ತಿಸಿಕೊಳುವ ಹೊತ್ತಾಗಲಿಲ್ಲೇನು, ಹೇಳಿ ಮುದುಕಯ್ಯ? (ಕೋಗಿಲೆ. ೭೦-೫); ಅಲ್ಲಾವುದ್ದೀನನ ಹಣತೆಯ ಭೂತದಂತೆ ಕೃಷ್ಣನ ಆಸೆ ದೊಡ್ಡದೇಹವನ್ನೂ ಭಯಂಕರರೂಪವನ್ನೂ ತಾಳಿ. . . ಎನ್ನುತ್ತಿದೆ (ರಾಮಾನಿ. ೫೦); ಯಾರು ಅಹಿತರು ನಿನಗೆ ಈ ಮೂವರೊಳಗೆ? . . . ಬಾಳ ಹಣತೆಯೊಳೆಣ್ಣೆಯಾಗಿ ಉರಿಯುವ ಹೆಣ್ಣೊ? (ಕಲ್ಲೋಲ.೨೩-೪). **೨.** ಮಿಸುನಿಯ ಕೋಟೆಕೊತ್ತಳ ದಿವ್ಯರತ್ನ ತೆತ್ತಿಸಿದ ಹೊಂಗಳಸವೆ ತನಗೆ ಸಸಿನಿಟ್ಟ ಹಣತೆ ಜ್ಯೋತಿಶ್ಚಕ್ರದಂತೆ ರಂಜಿಸಿತು ರಕ್ಕಸನ ಕಣ್ಮನಕೆ (ಮೋಹತ. ೧೧-೧೯); ದೇವರ ಮುಂದೆ ಎರಡು ಹಣತೆಗಳನ್ನಿಡು (ರೂಢಿ). **ಹಣಿತೆ :** **೧.** "ಹಣಿತೆ (ಹಣತೆ)—ಪ್ರಣೀತಾ = ಪಣತೆ" (ತದ್ಭಕೋ. ೪೮); ಹಣಿತೆಯೊಳ್ ಕೂಡಿ ಬತ್ತಿಯಿಂದೆಣ್ಣೆಯಿಂದಂ ಬೆಂಕಿಯಿಂದಂ ಬೆಳಗಿಂದಂ ಸೊಡರೆಂತೊಪ್ಪುಗುಂ (ಧರ್ಮಾಮೃ. ೧೩-೫); ಹಣಿತೆಣ್ಣೆ ಬತ್ತಿಯ ಹಂಗಗ್ನಿದೀಪಕೆ ಮಣಿದೀಪಕೇತಱ ಹಂಗು (ಭರಚ. ೬೬-೧೨೬).

[<ಸಂ. ಪ್ರಣೀತಾ./ಮರಾ. ಪಣತೀ]

**ಪಣಿದ$_1$**, ಹಣಿದ$_1$ (ನಾ). **೧.** (ಕಬ್ಬು, ಬಾಳೆ ಮುಂತಾದ) ಕಟಾವು ಮಾಡಬೇಕಾದ ಬೆಳೆ,—ಪೈರು: ಜಿನಭಾವನೆಯೆಂಬ ಬಡಬಾಗ್ನಿಯಿಂ ವಿಷಯಸಾಗರಮಂ ಪೀರದೆ ಜಿನಾಭಿಷೇಕಮೆಂಬ ಕೂರಲಗಿಂ ಕರ್ಮವೈರಿಯೆಂಬ ಪಣಿದಮನಿಱಿಯದೆ . . . ಶಾಶ್ವತಸುಖಂ ದೊರೆಕೊಳ್ಳದು (ಧರ್ಮಾಮೃ. ೭-೯೭). **೨.** ಕತ್ತರಿಸುವಿಕೆ; ಸಂಹರಿಸುವಿಕೆ: 'ಪಣಿದಂಬೊಯ್$_1$' ಪರಾ. **೩.** ಯುದ್ಧ; ಇರಿದಾಟ; ಕಾದಾಟ; ಕಾಳಗ: ಹಯದ ಮನಕ್ಕಮೇಱಿದನ ಬಿನ್ನಣಕಂ ದೊರೆಯಾಗಿಯುಂ ನೆಗಟ್ತೆಯ ಪಣಿದಕ್ಕೆ ಮಿಕ್ಕೆಸೆವ ತಕ್ಕಿನ ಬೀರರನಟ್ಟಿ ಕೊಲ್ವಳುರ್ಕೆಯ ತವಿಗೋಲವಿಲ್ಲದಿರೆಯುಂ ವಿಭುಗಟ್ತೆಯ ಸೆಂಡನಾಡಲಾನೆಯ ಪರಿ ನೋಡಲೆಂದೊಲೆದು ಮಾಡಿದ ವಾಹಳಿಗಳ್ ಮನೋಹರಂ (ಶಾಂತಿಪು. ೯-೧೪೪); ಪಿರಿದಪ್ಪ ಶಕ್ತಿ ತನಗುಳ್ಳೊಡಂ ಸುರಗಿಯಲ್ಲದೆ ಪಣಿದ[ದದ]ಗುರ್ವು ಪಱಿಯದಂತೆ ದೋಷವಿರಹಿತಮಪ್ಪ ಪರಮಾತ್ಮನ ಮತಮಂ ಪೊರ್ದಿದೊಡಲ್ಲದೆ ಸಮಸ್ತಕರ್ಮಂಗಳುಂ ನಿರ್ಮೂಲಮಾಗಲರಿಯವು (ಧರ್ಮಾಮೃ. ೭-೫೦). **ಹಣಿದ$_1$ :** **೨.** ಕಬ್ಬಿನ ಹಣಿದವನಾಡುವರಲ್ಲದೆ ಕಾಯದ ಹಣಿದವನಾಡುವರೆ (ಬಸವ. ೬೭೯); ತೃಣಮುಂ ತೆನೆವೋದ ಬಱಿಕ್ಕೊಣಗುವುದದಱಿಂದೆ ನರರ ಬಾಟೀ ಲಘುಕಾಲಂ ಹಣಿದದ ಪೊಯಿಲ್ಗೆ ಮೊದಲ್ನಡು ಕಣೆಯೆನ್ನದಿದೆಳವೆ ಜವ್ವನಂ ಮುಪ್ಪೆನ್ನಂ (ಅನಂಪು. ೩-೭೧); ಕಣೆವೆಯ್ಯ ಬಾಗಿಲ ಕಟ್ಟಿ ಕೊಂಡಾಕ್ಷಣ ಗುಣವಿಹೀನನ ಸರ್ವಬಲವ ಹಣಿದವನಾಡಿ ನಂಜೇಂದ್ರ ಚಂದ್ರಮನಾಗ ರಣಭೂತಗಳಿಗಿತ್ತ ಬಲಿಯ (ಕಂನವಿ. ೧೭-೧೮); ಹೊಣೆ ಬಾರುಗುತ್ತು ಕಬ್ಬಿನ ಹಣಿದಂ ಪಿರಿದೊತ್ತೆಗೊಂಬ ಸೂಳೆಯ ಸಂಗಂ ಕ್ಷಣದೊಳ್ ಕೊಲ್ಲದೆ ಮನುಜನ ತೃಣದಿಂ ಕಡೆ ಮಾಡದಿಹವೆ (ಸೀತಿಸಾ.೨೮೮). **೩.** ರಣದೊಳಾವುದು ಕೈದು ಹಿರಿಯುಬ್ಬಣವೊ ಪರಿಘವೊ . . . ಹಣಿದ ಕಾವುದು ಸದರವದಱಲಿ ಕೆಣಕಿ ನೋಡಾ ತನ್ನನೆಂದನು ಭೀಮ ಮಾಗಧನ (ಕುಪ್ಪಾಸ. ೨-೯೨); ಖಣಿಖಿಟಿಲು ದಡದೊಕ್ಕುಗಳ ಬಲುಕಣೆಯ ಶಸ್ತ್ರದ ಕೋಡುಗಲ್ಗಳ ಹಣಿದ[ಪಾಠಾಂ. ತೆ]ಗಳ ಹೆಮ್ಮರನ ಕಣೆಗಳ ಕಲಹ ದುಬ್ಬರದ ರಣರಭಸ ಹುಟ್ಟಿಸಿತಜಾಂಡದ ಹಣಿಗೆ ಬೇನೆಯನು (ತೊರರಾ. ೬-೧೩-೩೫). **೪.** ಕತ್ತರಿಸಿದ ಭಾಗ; ಖಂಡ; ಭೇದ: ಕುಱಿಯ ಹಣಿದದ ಕೋಳಿ ಕೋಣನ ಮುಱಿದಲೆಯ ಮಾಸಲಿನ ರಕುತದ . . . ಹೊಜಗೆ ಬಡಿಸಿದ ಭೂತಬಲಿ ಬೊಬ್ಬಿಱಿತದೊಡನುಬ್ಬೇಳ್ವ ಲಗ್ಗೆಯ ಹಱಿಗಳಬ್ಬರವಾಯ್ತು ಕರ್ಣನ ಶಸ್ತ್ರಪೂಜೆಯಲಿ (ಕುಪ್ಪಾಕ. ೮-೮). **೫.** ಕತ್ತರಿಸಿ ಬಿದ್ದ ರಾಶಿ,—ಸಮೂಹ: ಹೆಣನ ಬಗಿದಱಿಸಿದರು ಕರಿಗಳ ಹಣಿದದಲಿ ನೋಡಿದರು . . . ಅರುಣವಾರಿಯ ಕೆಣಕಿ ಕೂಡಱಿಸಿದರು ಚಾರರು ಕಳನ ಚೌಕದಲಿ (ಕುಪ್ಪಾಗ. ೪-೪೭). **೬.** ಪ್ರತಿಭಟನೆ; ಎದುರಿಸುವಿಕೆ: ರಣಭಯಂಕರನಹಿತಸುಭಟರ ಹಣಿದವನು ಹೊಯ್ದಾಡಿ ಸಾತ್ಯಕಿ ಕೆಣಕಿದನು ಕಲಕಿದನು ಕುರುಸೇನಾಮಹಾರ್ಣವವ (ಕುಪ್ಪಾಕ. ೩ ಸೂಚನೆ).

**ಹಣಿದವಾಡು** = **೧.** ಕತ್ತರಿಸು; ಮುರಿ; ಒಡೆ: ಕೆಣಕಿದನು ಮೈತ್ರೇಯನನು ನೃಪನಣಕಿಸಲು ಶಪಿಸಿದನು ತೊಡೆಗಳ ಹಣಿದವಾಡಲಿಯೆಂದನದು ತಪ್ಪುವುದೆ ಋಷಿವಚನ (ಕುಪ್ಪಾಗ. ೮-೩೩). **೨.** ನಾಶಮಾಡು; ಸಂಹರಿಸು: ಸೆಣಸ ಮಾಡಿದೆ ದೈವದಲಿ ಧಾರುಣಿಯ ಹುದುವಿನ ಸಿರಿಗೆ ಸೇರದೆ ಹಣಿದವಾಡಿದೆ ರಾಜವಂಶದ ಕಲ್ಪತರುವನವ (ಕುಪ್ಪಾಗ. ೩-೧೯); ರಣದೊಳಸುರರ ಕುಲದ ಹೆಸರುಳಿಯದಂತೆ ರಾವಣ

ಕುಂಭಕರ್ಣ ಮೊದಲಾದ ರಕ್ಕಸರನುಜ³ ಹಣಿದವಾಡಿದನುರವಣಿಸಿ ಧೂಳಿಗೋಟೆಯಂ ಕೊಂಡ ರಘುವೀರನಂದು (ಜೈಮಿಭಾ. ೧೮-೭) ; ಕೆಣಕಿ ಕೆಟ್ಟವರಂದನೇಕ ಕೃಷ್ಣನನವನೊಳಣಕ ಸಲ್ಲದುಯೆನಲ್ ಕುರುರಾಯನೆಂದನವನಣುರೇಣುತೃಣಕಾಷ್ಠದೊಳಗೆ ಪರಿಪೂರ್ಣನೆಂದರಿಯೆನೇಯೆನ್ನಲಿರ್ದು ಹಣಿದವಾಡಿದನು ಸಂಧಿಯನು ಸರ್ವರಲಿರ್ದು ಕುಣಿಸಿ ನಗಿಸುವ ನಾಟಕವ ಬೀರ್ವ (ಲಕ್ಷ್ಮೀಭಾ. ೫-೩-೪೧) ; ಪಾರುತ ನಭಕೆ ತನಗುಳ್ಳನಿತು ಶಕ್ತಿಯನಾಂತು ರಥವನು ಹಣಿದವಾಡುವೆನೆನುತ ರೆಕ್ಕೆಯೊಳೆರಗುತಪ್ಪಳಿಸೆ (ರಾಮಾಸಂ. ೩-೪-೧೮). **೩.** ಹೋರಾಡು ; ಕಾದಾಡು ; ಯುದ್ಧ ಮಾಡು ; ಹೊಡೆದಾಡು : ಕ್ಷಣದಿ ನಿನ್ನ ದೇಹಜಡವ ಹಣಿದವಾಡಿ ಓಡಿಸುವೆ (ಶಿವಗೀ. ೧೫೪-೭೯೧) ; ಅರ್ಥಪ್ರಾಣಾಭಿಮಾನ ವಂಚನೆಯುಳ್ಳನ್ನಕ್ಕ ಭಕ್ತನೇ ಹೊನ್ನು ಹೆಣ್ಣು ಮಣ್ಣು ಹಣಿದವಾಡಿದನ್ನಕ್ಕ ಭಕ್ತನೇ (ವಚಶಾ. I, ೧೯೭-೮೩). [<ಪಣಿ$_2$]

**ಪಣಿದ$_2$** 'ಪಂತ$_1$' ನೋ.

**ಪಣಿದಂಬೊಯ್$_1$,** ಹಣಿದಂಬೊಯ್ (ಕ್ರಿ). **೧.** ಕತ್ತರಿಸಿ ಹಾಕು ; ಸಂಹರಿಸು ; ನಾಶಮಾಡು : ಪಣಿದಂಬೊಯ್ದನ್ಯಸೈನ್ಯದ್ವಿಪಹಯಭಟಸಂದೋಹಮಂ ತನ್ನ ತೋಳೊಳ್ ಕುಣಿಯಲ್ಯುತ್ಸಾಹದಿಂದಂ ಜಯಸಿರಿ . . . ಎಡವರಿದೇವಂ ಜಗತ್ಸುತ್ಯನಾದಂ (ಎಕ. VII, ಚನ್ನಗಿ. ೩೯-೪೨ ; 1149) ; ಪಾಯ್ದು ಪೊಯೆ ಪಂದಿ ಬಾಳಿಂ ಪೊಯ್ದಂತಿರೆ ಕಡಿದು ಕೆಡೆಯೆ ಮಿಡಿ ತೊಡೆ ನಡುಗಳ್ ಕಾಯ್ದು ಕೃತಾಂತಂ ಪಣಿದಂಬೊಯ್ದಂತಿರೆ ಬೇಂಟೆಕಾಱರರೆಬಿರ್ದರ್ದರ್ (ಲೀಲಾವ. ೬-೧೧) ; ಪಸುವೆಂಬೇವದೆ ಕುದುರೆಯ ಮುಸೆಯಂ ಕಾದೊರ್ವರೊರ್ವರಂ ಪೊಯ್ದರ್ ಮಾಮುಸಕದೆ ಪಣಿದಂಬೊಯ್ವಂತಸಿಯಿಂ ಪಿಂಗದೆ ತುರಂಗಿಗಳ್ ಸಂಗರದೊಳ್ (ಚಂದ್ರಪು. ೧೦-೮೧). **೨.** ಕಲಹಮಾಡು ; ಜಗಳವಾಡು ; ಹೊಡೆದಾಡು : ಪಣವುಂಡೆಂ ಬಂದಿಯೊಳ್ಪಾಲಕನೆ ಪಲಗೆಜೂಜಾಡಿದೆಂ ಸೂಳೆಗೆಯ್ದೆಂ ಪಣಿದಂಬೊಯ್ದೆಂ ತೊಟಲ್ದೆಂ . . . ಎಂದುವುರ್ತಿರ್ದಂ (ಅರ್ಧನೇ. ೫-೩೬). **ಹಣಿದಂಬೊಯ್ :** **೧.** ಹಣಿದಂಬೊಯ್ಯಲ್ ಜವಂ ರಾಯರನೆ ಬಯಸಿ ಬರ್ಪಂತೆ ಸೋಮೇಶ್ವರಂ ತೆಂಕಣರಾಯಂ ಬಂದನಾಶಾಜಯಕೆ (ಸೂಕ್ತಿಸು.೧-೨೧).

[ಪಣಿದ$_1$ + ಪೊಯ್$_1$]

**ಪಣಿದಂಬೊಯ್$_2$** (ಕ್ರಿ). ಪಣವಾಗಿ ಕೊಡು,—ಒಪ್ಪಿಸು : ಕವರುಕತ್ತಿಗೆ ಕಡಿತಂ ಬಂದಂತಾಯ್ತು ಪ್ರದ್ಯೋತನಂಗೆ ಪದ್ಮಿನಿಯಂ ಪಣಿದಂಬೊಯ್ದಂತಾಯ್ತು ಮುಹೂರ್ತಮೆ ಶುಭಮುಹೂರ್ತಮೆಂದು ಮಂಡೋದರಿ ಬೆಕ್ಕಸಂಬೆಱಗಾಗಿ ನೋಡುತ್ತುಮಿರೆ (ಅರ್ಧನೇ.೬-೭೧ ಪ).

[ಪಣಿದ$_2$(<ಪಂತ$_1$) + ಪೊಯ್$_1$]

**ಪಣಿದಕಾಱ** (ನಾ). ಕತ್ತರಿಸುವವನು ; ಕಟಾವು ಮಾಡುವವನು: ಊರುಂ ಮೂಳೆಯುಂ ತಿಂಬಗುರು ಪಯುಗಱಿಯ ತನಿಗೊಂಬಂ ಬಳೆಗೊಯ್ಯಲ್ ಪೊಣ್ದು ತುದಿಯೊಳೋಡಿ ಪೋಪ ಭೀರುವಪ್ಪ ಪಣಿದಕಾಱನಂತೆ ವಜ್ರಾಯುಧನ ದಿಕ್ಕರಿಕರಾಕಾರ ಬಾಹುಪರಿಘಯುಗಳಮಂ ತಾಮರೆಯ ನೂಲೊಳಾನೆಗಟ್ಟುವಂತೆ ಕಟ್ಟಿ (ಶಾಂತಿಪು.೮-೪೯ಪ). [ಪಣಿದ$_1$ + -ಕಾಱ]

**ಪಣಿದರ** (ನಾ). ಸರ್ಪವನ್ನು ಧರಿಸಿದವನು; ಸರ್ಪಭೂಷಣ; ಶಿವ: ಕಣೆಕಣೆಯನುಗುಟ್ಟಿ ತೆಱದಿಂ ಕಣೆಕಣೆಯಂ ಕಱಿ³ವ ತೆಱದಿನೆಂಟುಂ ದೆಸೆಯೊಳ್ ಕಣೆಕಣೆಯನೀಂಬ ತೆಱದಿಂ ಪಣಿದರನಗಿದಳರೆ ಕವಿದುವಾಗಳ್ ಕಣೆಗಳ್ (ಕಬ್ಬಿಕಾ. ೩೦೫). [<ಸಂ. ಫಣಿಧರ]

**ಪಣಿಯವಟ್ಟ** (ನಾ). ಪಾಣಿವಟ್ಟಲು : ಕೊಳಗುರದೇಗುಲಕ್ಕೆ ಕಣ್ಡಪೀಟ ಪಣಿಯವಟ್ಟವಿನಿತುವಂ ಕೊಟ್ಟು ಪ್ರತಿಷ್ಟೆಗೆಯಿಸಿದ(ಸಾಇಇ. XI-i, ೩೫-೧೫ ; 933). [<ಪಾಣಿವಟ್ಟ]

**ಪಣಿಯಾರ,** ಪಣಿವಾರ, ಪಣ್ಯಾರ, ಪನಿವಾರ(ನಾ). **೧.** ಭಕ್ಷ್ಯ; ತಿಂಡಿ : ಒಂದುದಿನ ರಾತ್ರಿ ಕೀಚಕನ ಮನೆಯಲ್ಲಿ ವಿಶೇಷವಾದ ಪಣಿಯಾರಗಳನ್ನೂ ಮಧುಪಾನಗಳನ್ನೂ ತಯಾರು ಮಾಡಿ . . . ಕೊಟ್ಟಳು (ವ್ಯಾಸಪ. ೨೨೪). **ಪಣಿವಾರ :** **೨.** ದೇವರ ನೈವೇದ್ಯಕ್ಕಾಗಿ ಮಾಡುವ (ಕೋಸಂಬರಿ, ರಸಾಯನ, ಕೊಬ್ಬರಿಸಕ್ಕರೆ ಮೊದಲಾದ) ಚರಪು : ಆಗಾಗ್ಗೆ ದೇವರ ನಿವೇದನಕ್ಕಾಗಿ ಬೇಕಾದ ಪಣಿವಾರವನ್ನು ಜೋಯಿಸರ ಮನೆಯವರಿಂದ ಮಾಡಿಸಿ ಅಮ್ಮನವರ ಪ್ರಸಾದವೆಂದು ಆ ಊರಲ್ಲಿ ಮನೆಮನೆಗೂ ಗೃಹಪ್ರಾಪ್ತಿಯಾಗಿ ಕಳುಹಿಸುವುದು (ಸೂಪುರಾ. ೪೮). **ಪಣ್ಯಾರ :** **೧.** ಅವರಿಗೆಲ್ಲ ಮಂಗಳೆಯೇ ಅಡುಗೆ ಮನೆಯಿಂದ ಪಾನಕ ಪಣ್ಯಾರಗಳನ್ನು ಒದಗಿಸಿದಳು (ಸರ್ಪಮಂ. ೩೪೮) ; ರಮಣಿಗಳು ವಿಧವಿಧವಾದ ಪಣ್ಯಾರಗಳನ್ನು ಮಾಡಿದರು (ದೇವೀಚಾ.೭೩). **೨.** ಮನೆಯ ಸಾರಿಸಿ ರಂಗವಲ್ಲಿಯನಿಕ್ಕಿ ಭೋಂಕನೆ ಭಕ್ಷ್ಯಭೋಜ್ಯವ ಸವಿದು ನನೆಯಕ್ಕಿ ಕಡಲೆ ಪಣ್ಯಾರದಿ ನಿಖಿಲಾರ್ಚನೆಯ ವಸ್ತುಗಳ ಸಾರ್ಚದರು (ಮೋಹತ. ೧೮-೮೨). **ಪನಿವಾರ :** **೧.** ದಾರಿಗರನ್ನು ಕರೆಕರೆದು ಕೊಡುವ ತನಿವಣ್ಣು, ಎಳನೀರ, ಕಬ್ಬಿನ ರಸದ, ಪನಿವಾರಗಳ ಅರವಟ್ಟಿಗೆಗಳು (ಶಾಂತಲಾ. ೧೦೮). **೨.** ಶರಣಜನರೆಲ್ಲರಿಗುಮಾ ಶರತ್ಸಮಯದೋಳ್ ಪರಿಯುತಿಹ ಬೆಳ್ದಿಂಗಳ್ಹುಗ್ಗಿಯಂ ತಾ ಸವಿದು ನಿರುತದಿಂ ಪನಿವಾರಮಂ ಮಾಡಲು (ಅರ್ಚಾವಿ. ೧-೧೨೪) ; ಅಯ್ಯೋಗ್ಳ ಗುಡಿಯಲ್ಲಿ ಪನೇನು ಅಡ್ಗೆ ಊಟ ಉದ್ಬು ಮತ್ತೆ ಪನಿವಾರ ನೆನೆಯಕ್ಕಿ ನೆನೆಗಡಲೆ ಪನಿವಾರ ನಮ್ಮ ಮುದ್ದು ನರಸಿಂಹನ ಗುಡಿಯಾಗೆ (ಗರುಡಾ. ೬೩) ; ಜೋಡು ಕಾಯಿಗಳನ್ನು ಒಡೆದು ಪನಿವಾರ ಹಂಚಿದರು (ಮಣ್ಣಿಪ. ೩೫೬).

[ದೇ.॥ ತಮಿ. ಪಣಿಯಾರ ; ತುಳು. ಪನಿಯಾರೊ, ಪನಿವಾರೊ ; ತೆಲು. ಪಣ್ಯಾರ, ಪಣ್ಣಿರ, ಪಣ್ಣೀರ]

**ಪಣಿಯಾಲ,** ಫಣಿಯಾಲ (ನಾ). ಒಂದು ಬಗೆಯ ಮರ ; ಜಡೆಬಸರಿ ಮರ : ಆಲದ ಬೇರು, ಅತ್ತೀಬೇರು, ಅರಳೀಬೇರು, ಬಸುರಿಬೇರು, ಪಣಿಯಾಲದ ಬೇರು, ಈ ಐದು ಬಗೆ ಬೇರುಗಳ ಕೂಡಿ (ವೈದ್ಯಸಾ. II, ೧೪೮) ; ಆಲದಿಂ ತಳ್ತ ಕಂಚಾಲದಿಂ ಪುದಿದ ಪಣಿಯಾಲದಿಂ . . . ವಿವಿಧ ಕುಜಜಾಲದಿಂದತಿಶಯವಿಶಾಲದಿಂದಾ ಶಿವಾಲೀಲಾವನಂ ಮೆಱೆದುದು (ನಂದಿಮಾ. ೬-೫) ; ಒಂದು ಪಣಿಯಾಲದ ಮರವಿತ್ತು (ಸೀತಿಚಿಂ. VIII, ೧೦). **ಫಣಿಯಾಲ:** "ಗರ್ದಭಾಂಡಃ, ಕಂದರಾಲಃ, ಕಪೀತನಃ, ಸುಪಾರ್ಶ್ವಕಃ, ಪ್ಲಕ್ಷಃ—ಈ ಬಸರೀಗಿಡ, ಜಡೇಬಸರೀಮರ, ಇದನ್ನು ಫಣಿಯಾಲವೆನ್ನುವರು" (ಸಿದ್ಧಾಂತಿ. ೧೨೨) ; ನೆಗ್ಗಿಲ ಬೇರು, ಮಾವಿನ ಬೇರು, ಬೊಬ್ಬುಲಿ ಬೇರು, ಫಣಿಯಾಲದ ಬೇರು . . . ನೀರಿನಲ್ಲಿ ಹಾಕಿ ಕಷಾಯವ ಕಾಸಿ (ಸಕವೈ. ೩೯೧) ; ಎಲ್ಲಾರ ಹಟ್ಟೀಲಿ ಬೆಲ್ಲ ಬೇವಿನ ಮರವು ಪಲ್ಲಣಿಸಿ ಬೆಳೆವ ಫಣಿಯಾಲ ಮರದಡಿಗೆ ನಲ್ಲ ಕೂತವನೆ ಬರಹೇಳಿ (ಹಳ್ಳಿಯ. ೫೨). [ಪಣಿ$_3$ + ಆಲ$_1$]

**ಪಣಿಯೆ** 'ಪಣಿಗೆ' ನೋ.

**ಪಣಿವಾರ** 'ಪಣಿಯಾರ' ನೋ.

**ಪಣಸಿವಡು ?** (ಕ್ರಿ). (?) : ಪಣವೆ ದಿಟಕ್ಕೆ ಸೂಳೆಪನೆಗಲ್ಲದಪೆತ್ತ ಗುಣಂ ಧನಂಗಳಂ ಗಣಿಯಿಸದಿತ್ತು ಸಾರಸುಖಮುಳ್ಳೊಡೆಯಂತದು ಮಾತೆ ಕೂರ್ತವಂ ಪಣಿಸಿ[ಪಾಠಾಂ.ರಣಸಿ]ವಡುತ್ತೆ ಪತ್ತುವೊಡಮರ್ಥಿಗೆ ಕತ್ತಿಗೆ ಸೂಳೆ ಡಾಳೆ ಕೂಂಟಣಿ ತಣಿಯಂತೆ ಮತ್ತೆ ಮನೆ ತೀನ ತವರ್ಮನೆಯಂತು ಪತ್ತುವರ್ (ಲೀಲಾವ. ೨-೯೫). [ ? ]

**ಪಣುಂಕು,** ಪಣುಕು, ಹಣಿಕು$_2$, ಹಣಿಗು$_2$, ಹಣುಂಗು, ಹಣುಗು$_2$, ಹಳುಂಗು, ಹುಣಿಗು, ಹುಣುಗು (ಕ್ರಿ). **೧.** ಕುಗ್ಗು ; ಕುಸಿ : ತುಮುಟಿಲ್ಕೈರಾವತಂ ದರ್ಪಮನೆರ್ದೆಯೊಡೆ

ಯಲ್ಪುಂಡರೀಕಂ ಪಣುಂಕಲ್ ಕುಮುದಂ ... ಸುರುಳ್ದಂ ಸಮುದಿಂದ್ರಂ ವಹ್ನಿಕಾಲಂ ದನುಜನುದಧಿಪಂ ವಾಯುಯಕ್ಷಂ ತ್ರಿಯಕ್ಷಂ (ಲೀಲಾವ. ೬-೪). **ಪಣುಕು :** ೧. ಪಾಱಿ ಪಣುಕುತ್ತುಮೋರೊಂ[ಪಾಠಾಂ. ಪಣುಗುತ್ತನೊರ್ವಂ]ದಾಱಿಲನೋರೊರ್ವ ಬಿದ್ದವಿಱಿಯುತ್ತುಂ ನೀರ್ವೇಱಿದ ಮುಗಿಲೊಂದೊಡ್ಡಂ ಬೀಱಿದುದಿಂದ್ರಂಗೆ ಬಿನದಮಂ ನಾಗೇಂದ್ರಂ (ಮಲ್ಲಿಪು. ೧೨-೭೯). **ಹಣಿಕು$_2$ :** ೧. 'ಹಣಿಕಿಸು$_2$' ಪರಾ. **ಹಣಿಗು$_2$ :** ೨. ಬಾಗು ; ಬಗ್ಗು ; ಮಣಿ : ಮಣಿದು ಕೂಪದ ಜೀವನವ ಕಡೆಗಣಿಸದೇ ಘಟಿಯಂತ್ರ ಮೃಗರಿಪು ಹಣಿಗಿದರೆ ಹರಿಣಂಗೆ ಗೆಲವೇ (ಕುಮ್ಯಾಆ. ೮-೪೦) ; ಸಿಂಗರಿಸುವ ಬೆಲೆವೆಣ್ಗಳ್ ಬಿನದಕ್ಕಂಗಣಮಂ ಸಾರುವ ಬಿಡುವೆಣ್ಗಳ್ ಪಿಂಗದೆ ಹಣಿಗಿ ನಡೆವ ಬೆಸ ವೆಣ್ಗಳ್ (ಜಯಕಾ. ೧೨-೧೫). ೩. ಹಿಂಜರಿ ; ಹಿಂದೆಗೆ : ಎಸೆವುದಂ ಬಿಟ್ಟು ಹಣಿಗಿದನೆಂಬ ಗಾದೆಮ್ಮ ದೆಸೆಗಾಯ್ತು (ಸಿಂಗಿರಾ. ೧೪-೧೬). **ಹಣುಂಗು :** ೪. ಅಡಗಿಕೊಂಡು ನಿರೀಕ್ಷಿಸು ; ಹೊಂಚು ಹಾಕು : ಪೞತೊಂದೆಡೆಯೊಳೆಳವುಲ್ಲೆಗಳ ಪಾಱುಗೆಯ್ತಮಂ . . . ಅವಱ ಹಿಂದೆ ಹಿಂದೆ ನೆಲನಂ ಹತ್ತಿ ಹಣುಂ[ಪಾಠಾಂ. ಣ, ಣಿ, ಣು]ಗಿ ಜುಣುಗಿ ಜೂಜಾಡುವ ಕಿಱುವುಲಿಗಳುಮಂ . . . ಕಂಡು ಕಂಡು (ನಂಬಿರ. ೧೮-೯); ಮೆಳೆಯೊಳಗಿರ್ದು ಮೇವ ಮಿಗಮಂ ಮಿಗೆ ಪೆರ್ಬುಲಿ ಕಂಡು ಕಾಣದಂತಳವಿಗೆ ತರ್ಗಿ ಕುಗುರ್ತುಸಿರಿಕ್ಕದೆ ಬಂದು ಹಣುಂಗಿ ಪಾರ್ವ ತನ್ನಳವನಭೀಕ್ಷಿಸುತ್ತೆ (ರಾಜಶೇ. ೫-೯೪). **ಹಣುಗು$_2$ :** ೧. ಕುಸಿದ ತಲೆ ಹಣುಗಿದೊಡಲರಳ್ವ ಬಾಯ್ ಸುಗಿದ ಕಿವಿಯುಸುರಡಗದ ಮೂಗು (ಹಚಕಾ. ೫-೩೧) ; ಮನ ಹಣುಗಿ ತುಟಿಯೊಣಗಿ ನೋಟದ ಮೊನೆ ಮುಱಿದು ಝೊಂಪಿಸುತ ಮುಂದಣಿಗೊನೆದು ಬಿದ್ದನು ಭೀಮ ಪಾಂಡವ ಸೇನೆ ಕಳವಳಿಸೆ (ಕುಮ್ಯಾಕ. ೩-೨೬). ೪. ಹುಲಿಯ ಹಾರಯಿಸಿ ತಲೆ ದಡವಿ ತೋಱಿ ಹಾಸವ ತಿವಿದು ದೂರದಿಂ ಕಂಡು ಹಸರಿಸಿ ಹತ್ತಿ ಹಣುಗಿ ನೆಲಕೋರಂತೆಯಡಗಿ (ಹಚಕಾ. ೫-೩೦); ಕಳಚಿ ಹಾಸವನುಬ್ಬರಿಸಲವ್ವಳಿಸಿ ಕಂಠೀರವನ ಮೋಱೆಗೆ ನಿಲುಕಿದವು ಕದುಬಿದವು ಹಾಯ್ದವು ಹಣುಗಿ ತುಡುಕಿದವು (ಕುಮ್ಯಾಅ. ೧೩-೨೭). ೫. (ಭಯದಿಂದ) ಅಡಗು ; ಅವಿತುಕೊಳ್ಳು : ಹೆಣಗಳನು ಬಗಿಬಗಿದು ಕಪಿಗಳು ಹ[ಪಾಠಾಂ. ಜ, ಹು]ಣುಗಿದರು ಕೆಲರದ್ರಿಕುಜಸಂದಣಿಗಳೊಳು ಹುದುಗಿದರು (ತೊರರಾ. ೬-೩೫-೪೫). ೬. ಹೆದರು ; ಅಂಜು ; ಭಯಪಡು : ಹಣುಗಿ ಮಱೆಗೊಂಡೆಸುವ ಲುಬ್ಧಕರೆಣಿಕೆಯಲಿ ಕೈಮಾಡುವುದು ಭೂಪಣವೆ ಭಟರಿಂಗೆ (ತೊರರಾ. ೪-೪-೩೭) ; ಕುಣಿದು ಕುದಿದವು ಶರಧಿ ತಾರಾಗಣ ಗಳುಡಿದವು ಧರೆಗೆ ದಿವಿಜರು ಹಣುಗಿ ತನು ಕಂಪನದೊಳಿರ್ದುದು ಬೆರದ ಬೆರಗಿನಲಿ (ಅಂಬಿಕಾ. ೧೪-೩೪). **ಹಳುಂಗು :** ೧. ಕಂಠೀರವರವಮಂ ಕೇಳಲಾಗೆ ಬೆಳ್ಪಾಗಿ ಬಿಗುರ್ತು ರಾಗಮುಳಿದಗಿದು ಸುಗಿದು ಹಳುಂಗಿ [ಪಾಠಾಂ. ಹಣುಗಿ] ಹಮ್ಮದಂಬೋಗಿ . . . ತಡಂಗೆಡೆದಿರ್ಪ ಮಾತಂಗ ದಂಪತಿಗಳಿಂ (ಗಿರಿಕ. ೧-೧೨೮ ವ). **ಹುಣಿಗು :** ೭. (ಭಯದಿಂದ ಮೈಯನ್ನು) ಕುಗ್ಗಿಸು ; ಮುದುರಿಕೊಳ್ಳು : ಕಲಿಹನುಮನಂ ನೋಡಿದನು ಮೈ ಹುಣಿಗಿ ನಿಂದಿರ್ದನಾಜಿಯೊಳಗೆ (ತುರಂಗ. ೭೮-೩೫). **ಹುಣುಗು :** ೭. ವೈರಿ ಕರ್ಣನ ರಭಸಕಂಜಿದಂ ಭೀಮ . . . ರಥದ ಕಪಿವೀರ ಮೈಹುಣುಗಿದಂ ಕೃಷ್ಣಾರ್ಜುನರು ಜಪವ ಮಾಡಿದರು ತಾರಕ ವನು (ತುರಂಗ. ೬೯-೪೫).

**ಪಣುಕು** 'ಪಣುಂಕು' ನೋ.

**ಪಣೆ$_1$, ಫಣೆ$_1$,** ಹಣೆ$_1$ (ನಾ). ೧. ನೊಸಲು ; ಫಾಲ ; ಭಾಳ ; ಲಲಾಟ : "ಪಣೆ—ಫಣಾ = ಹಣೆ" (ತದ್ಭಕೋ. ೨೪) ; ತೆಕ್ಕನೆ ತೀವಿರೆ ತಾಪಕ್ಕಿಕ್ಕಿದ ಸಿರಿಗಂಪು ಪಣೆಯೊಳೆಸೆದುದು ಕೋಪಂ ಮಿಕ್ಕತನು ಬೆಸಸಿದೊಡೆ ನೊಸಲಕ್ಕರಮಂ ತೊಡೆಯುಲೆಂದು ಬಂದಿಂದುವವೋಲ್ (ಚಂದ್ರಪು. ೮-೮೬) ; ಕಸ್ತೂರಿತಿಲಕವೊಪ್ಪದೊಳೆಸೆವೆಱೆಯನ ಪಣೆ ಗೆಲ್ದುದೆನ್ನ (ಭರಚ. ೬-೪೪) ; ಘನವಾದ ಮಣಿಮಯಪದ್ಮಪೀಠದೊಳಾಗ ಜನನಾಥ ಚೂಡಾರತ್ನ ಮನಹರುಷದಲಿ ಮಂಡಿಸಿ ಕತ್ತುರಿನಾಮವನು ಪಣೆಗಳವಡಿಸಿದನು (ಕಂನವಿ. ೨೨-೬೧). ೨. ನೊಸಲಿನ ಮೇಲ್ಭಾಗ ; ನೆತ್ತಿ : ಅಡಿ ತೊಡೆ . . . ಕಟಿ ಮುಮ್ಮಡಂ ಪರಡು ಸಂದಿ ನೊಸಲ್ ಪಣೆ ಕಣ್ ಕದಂಪಿವೆಂಬೆಡೆಯನೆ ನಟ್ಟುವುರ್ಚಿದುವು ನೇರ್ದುವು ಸೀಳ್ದುವು ಪಾರ್ಥ ನಂಬುಗಳ್ (ಪಂಪಭಾ. ೧೧-೧೩೬). **ಫಣೆ$_1$ :** ೧. ಬಸದಿಗಾ ವೈಶ್ಯಕಾಂತೆ ಬಂದು . . . ಯತಿಪತಿಯ ನವನಳಿನೋಪಮಾಂಘ್ರಿದ್ವಯಕ್ಕೆ ಫಣೆಯಂ ಚಾಚಿ (ಸಮ್ಯಕೌ. ೫-೭); ಸರಸಿಜೋದ್ಭವನು ಫಣೆಯೊಳು ಬರೆದು ನಿರ್ಮಿಸಿದ ತೆಱನುಳಿದು ಬೇಱುಂಟೆ ತಾನಱಿದುದೆ (ಕನಕ. ೫೪-೧) ; ಪಾದೋದಕ ಪ್ರಸಾದಗಳ ಕೊಳ್ಳಿ ಬೂದಿಯ ಫಣೆಯೊಳು ಧರಿಸಿ (ಬಿಜ್ಜರಾ. ೨-೩೩). **ಹಣೆ$_1$ :** ೧. "ಭಾಳಮಳಿಕಂ ಲಲಾಟಂ ಹಣೆಯೆನಿಕ್ಕು" (ಮಂಗರಾ. ೯೪-೪) ; ಬರಬರ ಭಕ್ತಿಯುರೆಯಾಯಿತ್ತು ಕಾಣಿರಣ್ಣಾ ಮೊದಲ ದಿನ ಹಣೆ ಮುಟ್ಟೆ ಮಱುದಿನ ಕೈಯ ಮುಟ್ಟೆ ಮೂಱೆಂಬ ದಿನಕ್ಕೆ ತೂಕಡಿಕೆ ಕಾಣಿರಣ್ಣಾ (ಬಸವ. ೨೨೦) ; ರಣದೊಳೊಡ್ಡಿದರಾತಿಗಳನೀ ಹಣೆಯ ಪಟ್ಟದ ವೀರ ಜಯಿಸಲು ಹಣವಿಗಾನೋಲೈಸೆ ಮಾಡುವೆನಡವಿಯಲಿ ತಪವ (ಕುಮ್ಯಾಭೀ. ೧-೩೮) ; ಹಣೆಯೊಡೆದುಗುವ ರೋಹಿತಧಾರೆ ಕಮ್ಮ ಲರ್ಗಣೆಯುನ ಮೇಲೆ ಚೆಲ್ಲಿದುವು (ಮೋಹತ. ೧೨-೮೯) ; ಜನ್ನಗುದುರೆಯ ಹಣೆಯ ಉರವಣೆಯ ಒಕ್ಕಣೆಯ ಪಟ್ಟಲಿಖಿತದ ಕನಕದೋಲೆಯಂ ತಾನೋದಿ . . . ಐತಂದನಾ ಇಂದ್ರಜತನೂಜಂ (ಚಿತ್ರಾಂಗ. ೭೪-೨೦೪೧). ೨. "ನೀಚಿಕೀ, ಶಿರೋದೇಶಃ – ಈ ೨ ಹಣೆ" (ಹಲಾಯು. ೪೪-೧೧೨). 'ಫಣೆ$_2$' ಪರಾ.

**ಪಣೆಗೈಯಾಗು** = (ನಮಸ್ಕರಿಸುವುದಕ್ಕಾಗಿ) ಹಣೆಯ ಮೇಲೆ ಕೈಯನ್ನು ಇಟ್ಟುಕೊಳ್ಳು ; ಹಣೆಯವರೆಗೆ ಕೈಯೆತ್ತು : ದಿಗ್ಗನೆ ನಿಂದು ಪಣೆಗೈಯಾಗಿ ಮಣಿದುದು ಬಾಗಿ ಆಸ್ಥಾನ (ಶ್ರೀರಾಮಾ. ೬೭೩-೩೯). **ಹಣೆಗೆ ಗಟ್ಟಿಸಿಕೊಳ್ಳು** = ೧. (ದುಃಖ, ಉದ್ವೇಗಗಳಿಂದ) ಹಣೆಗೆ ಹೊಡೆದುಕೊಳ್ಳು : ಅವಳು ಹಣೆಗೆ ಗಟ್ಟಿಸಿಕೊಂಡು ಅತ್ತಳು (ರೂಢಿ) ೨. (ವ್ಯಂಗ್ಯಾರ್ಥದಲ್ಲಿ) ಉಪಯೋಗ ಮಾಡಿಕೊಳ್ಳು ; ಅನುಕೂಲ ಹೊಂದು : ಇಂಥವನು ಈ ಸಾವುಕಾರನ ಬದುಕು ತಕ್ಕೊಂಡು ಏನು ಹಣೆಗೆ ಗಟ್ಟಿಸಿಕೊಳ್ಳುವನೆಂಬುದನ್ನು ದಣಿಯರು ಆಲೋಚಿಸತಕ್ಕದಿತ್ತು (ಮುಂಬಯಿ. ೪-೧೭೦). **ಹಣೆಯ ಬರಹ, ಹಣೆಯ ಬರೆಹ** = ವಿಧಿಲಿಖಿತ ; ಅದೃಷ್ಟ : ಎಣಿಸಿ ಮಾಡುವುದೇನು ತಪ್ಪದು ಹಣೆಯ ಬರಹವು (ಕೌಶಿಂಪ. ೩೭-೪) ; ಸೃಷ್ಟಿಸಮಯದಿ ಬರೆದ ಹಣೆಯ ಬರಹವಿದೆಂಬ ನಷ್ಟಸತ್ತ್ವರ ತತ್ತ್ವ ದೂಡಿಬಿಡಿರೇಳಿ (ವಿಸೀಗೀ. ೪೨-೧೧) ; ಬೆಳ್ಳಿಯು ತನ್ನ ಹಣೆಯ ಬರೆಹವನ್ನೂ ದೂರಿ ನಡೆದುದನ್ನೆಲ್ಲ ಹೇಳಿ ಅತ್ತುಬಿಟ್ಟಳು (ಕಾಲೂರ. ೧೦ ಕಥಾಸಾರ). **ಹಣೆಹಣೆ ಚಚ್ಚಿಕೊಳ್ಳು** = **ಹಣೆಹಣೆ ಬಡಿದುಕೊಳ್ಳು** : ಅವಳು ಹಣೆ ಹಣೆ ಚಚ್ಚಿಕೊಂಡು ಅಳುತ್ತಿದ್ದಾಳೆ (ರೂಢಿ). **ಹಣೆಹಣೆ ಬಡಿದುಕೊಳ್ಳು** = ದುಃಖ, ಉದ್ವೇಗಗಳಿಂದ ಹಣೆ ಚಚ್ಚಿಕೊಳ್ಳು ; ಗೋಳಾಡು : ಆ ದುರಂತನನ್ನು ಕೇಳಿ ಆವರು ಹಣೆಹಣೆ ಬಡಿದುಕೊಂಡರು (ರೂಢಿ).

**ಪಣೆ$_2$,** ಹಣಿ$_4$, ಹಣೆ$_2$ (ನಾ). ೧. ಮರದ ಕಾಂಡದ ಮೇಲ್ಭಾಗ,- ಕವಲೊಡೆಯುವ ಭಾಗ : "ಪ್ರಘಾಣಃ, ಸ್ಕಂಧಂ – ಈ ೨ ಮರದ ಪಣೆ" (ಹಲಾಯು. ೩೦-೨೮) ; ತೀವಿರ್ದತ್ತು ಮೊದಲ್ ಮೊದಲ್ಗೆ ಪಣೆಯುಂ ಮೂಗಯ್ಯ ಮೂಗಯ್ಯನಿತ್ತಾ ವಕ್ಕೆಯ್ದು ಕವಲ್ ಕವಲ್ತು ಪಲವುಂ

ಕೊಂಬಾದುವೊಳ್ಗೊಂಬುಗಳ್ ಶೀರ್ಣಿಸಿರ್ದತ್ತು ತಳಿರ್ ಮೊದಲ್ ಪಣೆ ಕವಲ್ಗೊಂಬೆಂಬುವೀ ಕೆಂದಳಿರ ಮಾವಿಂಗಲ್ಲದೆ ಮಾವುಗಳ್ಗೆ ಪೆಱವಕ್ಕೆಂತೇಂ ಬೆಡಂಗಕ್ಕುಮೇ (ಆದಿಪು. ೧೧-೯೫) ; ಪಲಕಾಲದೊಳಱಿತಿರ್ದಾಮಲಕದ ಪಣೆಯಂ ಕುಠಾರದಿಂ ಸೀಳ್ದ ದಱಿಳ್ ತಿಲವಮಧುಘೃತಮಂ ಪೂರಿಸೆ ಫಲವಾ ಮರದೆಲೆಗಳಿಂದಮವು ಪಿರಿದಕ್ಕುಂ (ಲೋಕೋಪ. ೬-೩೯) ; ಕರಿಯ ಭೂಮಿಯೊಡಗೂಡಿ ಮೊದಲಿಂದಂ ಪಣೆ[ಣೆ]ಯಿಂದಂ ಪೆರ್ಗೊಂಬುಗಳಿಂದಂ [ಕಿಱುಗೊಂಬುಗಳಿಂದಂ] ಆಲದ ಮರನೆಂತೊಪ್ಪುಗುಂ (ಧರ್ಮಾಮೃ. ೧೩-೫); ಬನಮೆಂಬ ಮದನನ್ನ ಪನರಮನೆಯೊಳ್ ಪೊತ್ತಿಸಿದ ದೀಪಮಾಲೆಯ ಮಾಡಕ್ಕನುರೂಪಮಾಗಿ ಪಣೆಯಿಂ ಕೊನೆವರೆಗಂ ಪೂತುವರರೆ ಚಂಪಕನಿಕರಂ (ಚಂದ್ರಪು. ೬-೫೩). **೨. ಕಾಡುಮೃಗಗಳು** ಮಲಗಿಕೊಳ್ಳುವ ಸ್ಥಳ; ಮೃಗಗಳ ಹಕ್ಕೆ: ಇಂತು ಸಂತತ ಮೊಪ್ಪುವ ಕಾಂತಾರದಂತರಾಳದೊಳ್ ಬಿಯದರ್ ಬೇಂಟೆಯಾಡಲೆಂದು ಸಂಭ್ರಮಂ ಮಿಗೆ ಸರುವಿಡಿದು ಪಣೆಯಿರ್ಪೆಡೆಗೆಯ್ತಂದು ನಿಂದು (ಶಬಶಂ. ೩-೪೪ ವ). **೩.** ಉಳುವ ನೆಲ; ವ್ಯವಸಾಯದ ಭೂಮಿ; ಕೃಷಿ ಭೂಮಿ :(ಕ). **ಹಣೆ₁: ೧.** ಗುಲ್ಮ-ಹಣೆಯಿಲ್ಲದ ಮೆಳೆ ಬಳ್ಳಿ ಗಿಡುಗಳ್ (ನಾಚಿರಾ. ಕ). **ಹಣೆ₂ : ೨.** "ಹಣೆಯೆಂದು ಮಿಗದಿಕ್ಕೆ" (ಕಶಸಾ. ೫೧-೮೫) ; "ಹಣೆಯೆನಲ್ ಮಿಗಮಿರ್ಪ ತಾಣ" (ಶಬ್ದಮಂ. ೩೨) ; ಇಂತಸದಳಮೆಸೆವಾ ಪೇರಡವಿಯಂ ಬೇಂಟೆಯಾಡಲೆಂದು ಬಿಯದರ್ಸಂದಣಿಸಿ ಪೊಕ್ಕು ಮಿಕ್ಕು ಮಿಱು ಸಂಭ್ರಮಿಸಿ ಸರುವಿಡಿದು ಹಣೆ[ಪಾಠಾಂ. ಣಿ, ರಿ]ಯಿರ್ಪೆಡೆಗೆಯ್ತಂದು (ರಾಜಶೇ. ೫-೮೦ ವ); ಮಾನಿಸರ ಸುಳಿವಂತಿಳಿದೆಯ್ದೆ ಕಾಯ್ದುರವಣಿಸಿ ಹಣೆಯಿಂ ತೊಟ್ಟನೆ ಪೊರಮಟ್ಟಬ್ಬರಿಸುವ ಪೆರ್ಬುಲಿ ಮೊದಲಪ್ಪ ಕ್ರೂರಮೃಗಂಗಳನಲ್ಲಲ್ಲಿ ಕಾಣಲೊಡಂ (ಮರಾಚ. ೧೧-೩೧). **೪.** ಸಾಣೆ ಹಿಡಿಯುವ ಕಲ್ಲು; ಮಸೆಗಲ್ಲು : ಸಿಡುಗಣ್ಣ ನೋಟ ನವರಸಿಕರ ಗೆಲವಿನೋಟ ಕಡುತೆಳ್ಪುವಡೆದ ಹಣೆ ಕಾವನಲರ್ಗಣೆಗೆ ಹಣೆ . . . ಆ ದ್ವಿಜತನೂಜೆಯ ವಿಲಾಸಮನದೇನೆಂಬೆನು (ಸಮ್ಯಕ್ತ್ವಾ. ೬-೧೧).

[ದೇ.॥ ತಮಿ. ಪಣ್ಯೆ, ಪಣ್ಣೈ ; ಮಲ. ಪಣ]

**ಪಣೆ₃** (ನಾ). ದೊಡ್ಡ ಬಂಡೆಯಿಂದ ಕಲ್ಲನ್ನು ಎಬ್ಬಿ ತೆಗೆಯುವಲ್ಲಿ ಮಾಡಿದ ತೋಡುಹಳ್ಳ; ಬಂಡೆನೆಲೆ; ಕಲ್ಲುಗಣಿ. 'ಕಲ್ಪಣೆ₁' ಪರಾ. [ದೇ.॥ ಮಲ. ಪಣ; ತುಳು. ಪಣೆ]

**ಪಣೆ₄**, ಹಣೆ₃ (ನಾ). ನೀರನ್ನು ಎತ್ತುವ ಸಾಧನ; ಏತ : ಒಂದು ಬದಿಯಲ್ಲಿ ಗದ್ದೆಗೆ ನೀರು ಎಳೆಯಲು ಪಣೆ ಹಾಕಿರುವರು (ನಾಚಿಕೆ. ೪೮)
**ಹಣೆ₃ :** 'ಹಣೆಗುತ್ತಿ' ಪರಾ. [<-ತುಳು. ಪಣೆ]

**ಪಣೆ₅** (ನಾ). ಹಾವಿನ ಹೆಡೆ; ಫಣಿ. 'ನಾಗರು' ಪರಾ.
[<ಸಂ. ಫಣಾ]

**ಪಣೆಕಟ್ಟು** 'ಪಣೆಗಟ್ಟು' ನೋ.

**ಪಣೆಗಂಗಿಡಿ** (ನಾ). (ಶಿವನ) ಹಣೆಗಣ್ಣಿನ ಕಿಡಿ; ಹಣೆಗಣ್ಣುರಿ: ಕುಡಿವೆನೇಳಂಬುಧಿಯ ಸೆಣಸಿದೊಡೊದೆವೆನದ್ರಿಯ ಮೃಡನ ಪಣೆಗಂಗಿಡಿಯ ತಣ್ಣಿಸೆನಜನ ಫಾಲಾಕ್ಷರಕೆ ಮಶಿಯಿಡುವೆ (ಅನಂರಾ. ೧-೫-೩).
[ಪಣೆಗಣ್ + ಕಿಡಿ]

**ಪಣೆಗಟ್ಟು,** ಪಣೆಕಟ್ಟು, ಫಣೆಕಟ್ಟು, ಹಣೆಕಟ್ಟು (ನಾ). (ಅಲಂಕಾರಕ್ಕಾಗಿ) ಹಣೆಗೆ ಕಟ್ಟುವ ಪಟ್ಟಿ; ಹಣೆಪಟ್ಟಿ : ಪಿಡಿಕೆಯ್ ಶೀವಿದ ಕರ್ಗಣೆ ಮಡಕಾಲ್ಪರಮಲೆವ ಕಚ್ಚೆ ನಿಡಿಯ ಸಿಯೊಱಿ ಕರ್ಪಿಡಿದ ಪಣೆಗಟ್ಟು ಕೆಯ್ಪೊಡೆ ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಚ್ಚರ್ (ಪಂಪಭಾ.೧೦-೭೧); ತುಱುಬಿನ ಸುಳಿ ಪಣೆಗಟ್ಟು ಕೆನ್ನೆಯ ಗಱು ಹೆಱಿ ರವಿ ಮಸ್ತಕಮಣಿಯ ಮಿಱುಗುವ ಮುತ್ತಿನ ಬಲೆ ಜೋಳಯವ ಮನದೆಱಕದಿಂದಿತ್ತ ನಂದನಗೆ (ರಾಮವಿ. ೮-೪೯); ಪೆಱಿನೊಸಲುಱಿ ಪಣೆಗಟ್ಟು ಮುತ್ತಿನ ಬೊಟ್ಟು ಮಿಱುಪ ವಂಟಿಯ ವಜ್ರದೋಲೆ ತುಱುಬಿನ ಮುತ್ತಿನ ಬಲೆ ಚಿನ್ನಗೇದಗೆಗಱುಗಳಿಂ ಸಿಂಗರಿಸಿದಳು (ಕುರಾಸಾಂ. ೨೯-೯೭). **ಪಣೆಕಟ್ಟು :** ತೊಟ್ಟಿಕ್ಕುವಡಂ ಮರವಿಲ್ ಕಟ್ಟಿದ ಪಣೆಕಟ್ಟು ಬೇಂಟೆವೆಱಿ ದೊರೆಯೊಳೊಡಂಬಟ್ಟಸಿಯ ಸುರಗಿ ದಳಿವದ ತೊಟ್ಟಂಗಿಗೆ ತನ್ನೊಳಮುರೆ ಬೇಂಟೆಯನೊರ್ವಂ ಬಂದು (ಪಂಪಭಾ. ೫-೩೬) ; ಉಡೆದೋಲುಂ ಪಣೆಕಟ್ಟುಂ ಮಡಮೇಱುಸಿ ಮೆಟ್ಟಿದೆಕ್ಕವಡಮುಂ ಕಯ್ಯೊಳ್ ಪಿಡಿದಿರ್ದ ಕುಂಚಮುಂ ತನಗೊಡಂಬಡೆಯೆ ಲೇಖವಾಹಾಕೃತಿಯೊಳ್ (ವರ್ಧಮಾ. ೨-೪೫) ; ಪಣೆಕಟ್ಟೊಳ್ವೀಲಿಯಿಂದುಟ್ಟುದು ಪೊಸದಲಿರಿಂ . . . ಸ್ಥಾನಕಂ ದಂತಿದಾನೋಕ್ಷಣದಿಂ ಮೆಯ್ವೆತ್ತಿರಲ್ (ಪುಷ್ಪಪು. ೫-೧೦೧). **ಫಣೆಕಟ್ಟು :** ತಲೆಬೀದಿ ಮುಂದಲೆಗೆ ಸೊಗಯಿಸುವ ಮೌಕ್ತಿಕ ದಾವಳಿಯ ಫಣೆಕಟ್ಟನಮರಿಸಿದರಾ ಕುವರಿಗೆ (ನವಮೋ. ೨೩-೩೫). **ಹಣೆಕಟ್ಟು :** "ಹಣೆಕಟ್ಟು = ಎತ್ತಿನ ಹಣೆಯ ಅಲಂಕಾರ" (ಜಾನಕೋ.೫೨); ಎತ್ತಿಗೆ ಹೊಸ ಬಾಸಿಂಗ, ಹಣೆಕಟ್ಟು, 'ಮಗಡ' (ಮಗುಂಡ), ಸರುಹಗ್ಗಗಳ ಸಂಭ್ರಮವಾಗುವುದು (ಕನ್ನಜಾ. ೧೭೭). [ಪಣೆ₁ + ಕಟ್ಟು₂]

**ಪಣೆಗಣ್,** ಪಣೆಗಣ್ಣು, ಫಣೆಗಣ್ಣು, ಹಣೆಗಣ್ಣು (ನಾ). **೧.** ಹಣೆಯಲ್ಲಿರುವ ಕಣ್ಣು; ಶಿವನ ಮೂರನೆಯ ಕಣ್ಣು; ಫಾಲನೇತ್ರ: ಪಣೆಗಣ್ ನದಿ ಶಶಿ ಕೆಂಜೆಡೆ ಫಣಿಗಳ್ಕೆಱಿವೈದುಮೊಗದಿ ಶಸ್ತ್ರೌಘದ ಸಂದಣಿಯ ದಶಬಾಹುವಿಂ ವಾರಣಮುಖಪಿತನೋತು ಮೂರ್ತಿಯಿಂ ನಿಂದಿರ್ದಂ (ತ್ರಿಷವಿ. ೩೮-೭) ; ಬಾಂದೊಱಿ, ಪಣೆಗಣ್, ಕೊರಲ್ಕಱಿ . . . ಕಾಲ್ಗೆರೆ ಇತ್ಯಾದಿ (ಶಬ್ದಾನು. ೩೦೫ ವ್ಯಾಖ್ಯಾ) ; ಪಣೆಗಣ್ಕೆಱು ವೆಱಿ ಸುರನದಿ ಫಣಿಭೂಷಣಮಾಂತು ತಿಸುಳ ಮಿಗಮನ್ವಿತಭೀಷಣ ವಿಷಮಿಭಚರ್ಮಾಂಬರಮಣಿಯರಮರ್ದಸೆಯ ರೂಪುದೋಱು ದೆನಾಗಳ್ (ವೃಷವಿ. ೧೪-೧೦೭). 'ಪಣೆಗಂಗಿಡಿ', 'ಪಣೆಗಣ್ಣುರಿ' ಪರಾ. **೨.** ಹಣೆಯ ಕಡೆಗೆ ತಿರುಗಿದ ಕಣ್ಣು; ಮೇಲ್ಗಣ್ಣು : ಪೆಡತಲೆಯ ನರಂ ತೆಗೆದೊಡೆ ಮಿಡುಕದೆ ಸ್ಥೈರ್ಯ ಬಾಲಮಂ ಕೊರಲುಂ ಮತ್ತೆಡೆವಿಡಿ(ಡ)ದುಡಿರದೆ ಪಣೆಗಣ್ಣಡಸಿ ಕರಂ ಸುಯ್ಯೆ ಬಾಳಲಾಱದು ತುರಗಂ (ಅಶ್ವಶಾ. ೧೩-೨೫). **ಪಣೆಗಣ್ಣು : ೧.** ಗಿರಿಜೆಯಿಂ ಶೃಂಗಾರ ಭೂತಗಣದಿಂ ಹಾಸ್ಯ ಕರುಣಾರಸಂ ನಿಜಾಪಾಂಗದಿಂ ಪಣೆಗಣ್ಣಿನುರುತರಾದ್ಭುತವು . . . ರುದ್ರಗಣದಿರವಿನಿಂ ವೀರರಸಮೆಸೆಯೆ ನವರಸಭರಿತನಾಗಿ ಶಿವನೊಪ್ಪಿರ್ದನು (ಸೌಂದಪು. ೧-೩೭) ; ಕಂದರ್ಪನ ಸುಟ್ಟ ಪಣೆಗಣ್ಣು ಮುಂಚ್ಚದೆಂದಾದೊಡೆ ಮತ್ತೆ ತೆಱಿದು ಬೆಂದ ಪಾಪಿಯ ಬೇಯಿಸಬೇಡವೆಂದು ಸುಗಂಧಾಕ್ಷತೆಯ ಮೆತ್ತಿದನು (ಮೋಹತ. ೨೧-೨೮) ; ವಿಲಯಸ್ಮರಾಂತಕನ ಪಣೆಗಣ್ಣಿಂದೆ ಪೊಱಮಡುವ ದಳ್ಳುರಿಯ ತೆಱದೊಳೆಸೆವ ರಶ್ಮಿಗಳನುಗುಳ್ವಮೋಘದ ಬಾಣಮಂ ಪೂಡುತ (ಜೈಮಿಭಾ. ೨೦-೧೭) ; ಕಡುಗಲಿ ಕಾಲರುದ್ರನ ಪಣೆಗಣ್ಣಿನ ಕಿಡಿಗಳ ಗಡಣದಂದದಲಿ ಜಡಿವ ಬತ್ತೀಸಾಯುಧಗಳ ಸುಭಟರ ಬೆಡಗಿನ ನಿಕರಮೊಪ್ಪಿಹುವು (ಕಂಸವಿ. ೬-೫೯). **ಫಣೆಗಣ್ಣು : ೧.** ದೂಷಕದಕ್ಷನು ಯಾಗವ ಮಾಡೆ ಕಂಡೀಶನು ಫಣೆಗಣ್ಣ ತೆಱಿಯೆ (ಮಾದೇಸಾಂ. ೧-೯). **ಹಣೆಗಣ್ಣು : ೧.** ಹರನ ಹಣೆಗಣ್ಣಿನ ಮಹಾನಲನುರಿಯ ಹೊಯ್ಲಲಿ ಸಾಯಲಾಱದೆ ಪುರುಷತನವನು ಬಿಸುಟು ಮಂಡೋದರಿಯ ರೂಪಕವ ಧರಿಸಿದನೊ ಕಂದರ್ಪನೆನೆ ಸಿಂಗರದ ಸಾರೋದಯದ ಸೊಬಗಿನ ಶರನಿಧಿಯ ಮೌಕ್ತಿಕದವೊಲು ಮೆಱಿದಿರ್ದಳಾ ಕಾಂತೆ (ತೊರರಾ. ೫-೨-೭೭) ; ಬಿಡದೆ ಕೇಸರಿಯೆಂಬ ದೇವತೆ ಕಡುವಿಗಡದುಷ್ಪ್ರಾಶ್ವರೂಪದಿ ಕಡೆಯ ಕಾಲದ ಸಿಡಿಲ ದನಿಯೆನೆ ನೆಱಿ ಕೆರಳಿ ಬಂದೂ ಪೊಡೆಯರಲನೊಡವಾಯೆ ಹಣೆಗಣ್ಣೊಡೆಯೆ ತಿವಿದಡೆ ಕಾಱಿ ನೆತ್ತರ ಕೆಡೆದು ಬಿದ್ದೊದ್ದೋಡಿದುದು ಹರಿಯುಥಟನೇನೆಂಬೆ

(ಸಾಳ್ವಭಾ. ೨೧-೪೬) ; ಹಣೆಗಣ್ಣಿನ ದಳ್ಳುರಿಗಳು ನಾಲಗೆಯನ್ನು ಚಾಚಿ ಚಾಚಿ, ಲೋಕಕಚೆಲುವ ಕಾಮನನ್ನು ಹಾ ! ಅನ್ನುವದರೊಳಗೆ ನುಂಗಿಯೇ ಬಿಟ್ಟುವು (ಕನ್ನಜಾ. ೧೭೫). [ಪಣೆ$_1$+ಕಣ್]

**ಪಣೆಗಣ್ಣ,** ಹಣೆಗಣ್ಣ (ನಾ). ಹಣೆಯಲ್ಲಿ ಕಣ್ಣುಳ್ಳವನು ; ಮುಕ್ಕಣ್ಣ ; ಫಾಲನೇತ್ರ ; ಶಿವ : "ಪಣೆಗಣ್ಣನೆಂದು ಶಂಕರನೊಳ್" (ಕರ್ಣಾಸಿ. ೯೩) ; "ಪೆಱೆದಲೆಯಂ ಮಾದೇವಂ . . . ಪಣೆಗಣ್ಣಂ ತಱಿಸಂದುಮೆಯಾಣ್ಮನೆಂದು ತಿಳಿ" (ಛತುಸಿ. ೬) ; ಪಣೆಯೊಳು ಮನವ ನಿಟ್ಟಾತ್ಮನ ನೋಡುತ ಕ್ಷಣಕೆ ಕರ್ಮವ ಸುಟ್ಟಿರುಹನಾ ಪಣೆಗಣ್ಣನೆಂಬರು ಬಿಸಿಗಣ್ಣನೆಂಬರು ಗುಣನಾಮಗಳ ನೋಡುವಾಗ (ಭರಚ. ೬೬-೧೬೬) ; ಪಣೆಗಣ್ಣ ಪರಮಗುಣನಿಧಿ ಮಣಿಮಕುಟದ ಮಹಿಮನಮಳಚಿನ್ಮಯನಿರ್ದಂ ಗಣಸಭೆಯೊಳೊರ್ಮೆ ಸುಮನೋಗಣಸನ್ನುತ ಸಿದ್ಧರಾಮನಭಿನವಭೀಮಂ (ವೃಷವಿ. ೭-೧೮). **ಹಣೆಗಣ್ಣ :** ಶಿವನಿಗೆ ಹಣೆಯಲ್ಲಿ ಕಣ್ಣಿರುವುದರಿಂದ ಹಣೆಗಣ್ಣನೆಂಬ ಹೆಸರು ಬಂದಿತು (ಮಧ್ಯಮ. ೧೪೬). [ಪಣೆಗಣ್+-ಅ$_7$]

**ಪಣೆಗಣ್ಣು** 'ಪಣೆಗಣ್' ನೋ.

**ಪಣೆಗಣ್ಣುರಿ** (ನಾ). (ಶಿವನ) ಹಣೆಗಣ್ಣಿನ ಉರಿ,—ಜ್ವಾಲೆ : ಪೊಗೆದುದು ಪತ್ತಿದತ್ತು . . . ಮುಟ್ಟಿತು ಸುಟ್ಟಿತು ತಿಂದು ತೇಗಿದತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ (೧೦ಕ. ೮-೪೭) ; ಭವನ ಪಣೆಗಣ್ಣುರಿಯ ಬೆಳಗಿನಿಂ ತಮಮಿರದೆ ಜವದಿಂದಲೋಡುತಿರೆ (ಚಿಬಪು. ೪೬-೨೩). [ಪಣೆಗಣ್+ಉರಿ$_2$]

**ಪಣೆಗಣ್ದೆರೆ** (ಕ್ರಿ). (ಶಿವನು) ಹಣೆಯ ಕಣ್ಣನ್ನು ತೆರೆ,—ಹಣೆಗಣ್ಣನ್ನು ಬಿಡು : ಸ್ಮರನು ಗುರಿಗೊಂಡೆಚ್ಚ ಕಣೆಯೊಂದರಲಿ ಯೋಗವ ನುಳಿದು . . . ಐದರೊಳು ಪಣೆಗಣ್ದೆರದು ಕೋಪಾಗ್ನಿಯಲಿ ದಹಿಸಿದನ ಭವನಂಗಜನಾ (ಅನಂರಾ. ೧-೧೯-೧೬). [ಪಣೆಗಣ್+ತೆರೆ$_1$(<ತೆಱೆ$_1$)]

**ಪಣೆಗಿಚ್ಚು,** ಹಣೆಗಿಚ್ಚು (ನಾ). = ಪಣೆಗಣ್ಣುರಿ : ಬೆಮರ್ ತೋಱು ದುದು ಪಣೆಗಿಚ್ಚು ಕಾಱಿದುದು ಕಣ್ ನಟಣಮೇಱಿದುದು (ಚಿಬಪು. ೩೧-೪). **ಹಣೆಗಿಚ್ಚು :** ಹರನ ಹಣೆಗಿಚ್ಚೊಡಲುಗೊಂಡಂಕುರಿತವಾಯಿತೊ . . . ಎನಲಿರದೆ ಬೆಳೆದರು ದೈತ್ಯವಂಶೋದ್ಧರಣರಿಬ್ಬರು ತೀವ್ರತೇಜರುದಗ್ರಭುಜಬಲರು (ನಿಭಾಗ. ೩-೮-೮). [ಪಣೆ$_1$+ಕಿಚ್ಚು]

**ಪಣೆಗೊಳ್** (ಕ್ರಿ). ಹಣೆಯನ್ನು ಆವರಿಸು ; ಹಣೆಗೆ ಮುತ್ತಿಕೊಳ್ಳು : ಸುದತಿಯ ಮುಖಾಬ್ಜ ಮದು[ಧು]ಲೋಭದೆ ಪಣೆಗೊಂಡಿರ್ಪ ಪಱಿಮೆಮಱಿಗಳಿವೆನೆ ನುಣ್ಪೊದವಿದಳಕಾಳಿಗಿಕ್ಕಿದಳದೊರ್ವಳಾ ಚೆನ್ನ ಚಿನ್ನ ಪೂಗಳನಾಗಳ್ (ಶಾಂತೀಶ್ವ. ೪-೨೪೩). [ಪಣೆ$_1$+ಕೊಳ್$_1$]

**ಪಣೆಮಣಿ** (ಕ್ರಿ). (ನಮಸ್ಕಾರಾರ್ಥವಾಗಿ) ಹಣೆಯನ್ನು ಬಾಗಿಸು; ತಲೆಬಾಗು : ಮತ್ತೆ ಮೈಥಿಲಿಗೆ ಪಣೆಮಣಿದು ಕೈಮುಗಿದು ಬೀಳ್ಕೊಟ್ಟು ನಂಜನಾನಂದನಂ ಪ್ರತಿವಂದನಂಗೆಯ್ದಳಂ, ಪೂಜ್ಯೆ ರಘುನಂದನಾನಂದೆಯುಂ (ಶ್ರೀರಾಮಾ. ೮೩೪-೧೯೧). [ಪಣೆ$_1$+ಮಣಿ$_1$]

**ಪಣೆಮುಚ್ಚಿರ್**(ನಾ). ಹಣೆಯ ಮಡಿಕೆ,—ಸುಕ್ಕು (?) : ಕರಗಳನೂರಿ ಭೂಧರಕೆ ಗಾತ್ರವ ತೂಗುತ ಬಾರಿಬಾರಿಯುಂಬರವ ನಿರೀಕ್ಷಿಸುತ್ತ ಪಣೆಮುಚ್ಚಿರ್ಗಳಂ ಕುಣಿಸುತ್ತ ವಾಲವಂ ಶಿರದಲಿ ರಿಂಖಣಂಗೊಳಿಸಿ ಕರ್ಣಗಳೆತ್ತಿ ನಿಮಿರ್ಚಿ ಪರ್ಚಿ ಪಲ್ಗಿರಿದು ಸ್ವಜೀವಮಾರುತನ ಬಂಧಿಸಿ ಲಂಘಿಸಿದಂ ಸುವೇಗದೋಳ್ (ಹನುಮ. ೨೧). [ಪಣೆ$_1$+<ಮುಡಚು$_2$]

**ಪಣೆಮುಟ್ಟು** (ಕ್ರಿ). ೧. ಹಣೆಯನ್ನು ಸಮೀಪಿಸು; ಹಣೆಯವರೆಗೆ ಬರು. ೨. ಮರದ ಕಾಂಡದ ತುದಿಯವರೆಗೆ ಬರು,—ಉಂಟಾಗು. **೧, ೨ :** ನೆಱೆಯೆ ಪಣೆಮುಟ್ಟೆ ಕೈವಂದೆಱಗಿದುದಿದು ದೇವ ನಿನಗೆ ಹೃದಯಂ ತಾನೆತ್ತಱಿದುದೆನವೇಡ ಧಾರಿಣಿಯೆಱೆಯಂ ಗೆಱಗುವುದು ಚೋದ್ಯಮೇ ಧರಣೀಜಂ (ಚಂದ್ರಪು. ೭-೯೪).
[ಪಣೆ$_1$+ಮುಟ್ಟು$_1$ ; ಪಣೆ$_2$+ಮುಟ್ಟು$_1$]

**ಪಣೆಯಕ್ಕರ** (ನಾ). ಹಣೆಯ ಬರಹ ; ವಿಧಿಲಿಖಿತ ; ಅದೃಷ್ಟ : ಎಱಗಿದರಿಗೆ ಪಣೆಯಕ್ಕರ ನೆಲೆಯಿಗಾತಗೆಱಗದರಿಗೆ ತಲೆಬರಹ ನೆಱೆ ಲೋಪವೆಂದಜ ಬರೆದಂತೆ ಪೊಗರಿಂದ ಮೆಱೆವುದಂತಸಿಪತ್ರವವನ (ವರ್ಧಚ. ೬-೫೮); ಮತ್ತವರಾ ಬರೆದ ಪಣೆಯಕ್ಕರಗಳವೆ ಮಿಗೆ ನೆರೆದು ಪತ್ತಿದುವಕ್ಕುಮಲ್ಲದೊಡಿರದವರ ನೊಸಲಕ್ಕರಂಗಳು ಮಾಯವಾದವುದೇ (ಸಾಳ್ವಭಾ. ೨-೨೩) ; ಫಣಿಕುಲವನಾಕ್ರಮಿಸಿಕೊಂಡು ಬಹೆನಾ ಮಹಾಮಣಿಯಹುದೆಂದೊಡಜಹರಿಪಿನಾಕಿಗಳ ಹಣೆಯಕ್ಕರಂಗಳಂ ತೊಡೆವೆ ನೊರಸುವೆನಷ್ಟದಿಕ್ಪಾಲರಾಯುಗಳನು (ಜೈಮಿಭಾ. ೨೪-೨೯).
[ಪಣೆ$_1$+ಅಕ್ಕರ$_2$]

**ಪಣೆಯಕ್ಕಿ,** ಹಣೆಯಕ್ಕಿ (ನಾ). ೧. ಶವಸಂಸ್ಕಾರದ ಕಾಲದಲ್ಲಿ ಶವದ ತಲೆಯ ಬಳಿ ಇಡುವ ಅಕ್ಕಿ : ಸುಡುಗಾಡಿನೋಳ್ಮಾವಲಿಟ್ಟು ಪಣೆಯಕ್ಕಿಯುಂ ಪಡಿಗಳಂ ಮಾಡಿಟ್ಟುಕೊಂಡನಾ ವೀರಬಾಹುಕನಾ ಹರಿಶ್ಚಂದ್ರನಂ (ತುರಂಗ. ೩೨-೨೯). **ಹಣೆಯಕ್ಕಿ : ೧.** ಸುಡುವ ನೆಲದೆಱಿಗೆ ಹಾಗ ಹೆಣದುಡುಗೆಯಂ ತಂದೆನಗೆ ಕೊಡುವುದಾ ಹಣೆ[ಪಾಠಾಂ. ತಲೆ]ಯಕ್ಕಿಯಂ ನಿನ್ನ ಸಂಬಳಕ್ಕೆ ಪಡಿಯಾಗಿ ಕೊಂಡುಂಬುದು (ಹಚಕಾ. ೧೧-೩೬). **೨.** ಶುಭಸಂದರ್ಭಗಳಲ್ಲಿ ಆಶೀರ್ವದಿಸಿ, ತಲೆಯ ಮೇಲೆ ತಳಿಯುವ ಅಕ್ಷತೆ; ಮಂಗಳಾಕ್ಷತೆ : ಹಣೆಯಕ್ಕಿ ಒದಗಿ ಬಂದರ, ಹಡೆದವರನ್ನೂ ಕೇಳೂದಿಲ್ಲ ಅಂತ ಗಾದಿ (ಮಗಪು. ೧).
[ಪಣೆ$_1$+ಅಕ್ಕಿ$_1$]

**ಪಣೆಯಿಕ್ಕು,** ಹಣೆಯಿಕ್ಕು (ಕ್ರಿ). ೧. ತಲೆಯನ್ನು ಮೇಲು ಮಾಡಿ ಪಾರಿವಾಳ ಮೊದಲಾದ ಪಕ್ಷಿಗಳನ್ನು ಹಾರಿಸು : ಆರವೆಯ ಪೆರ್ಮರದ ನಟ್ಟಿಗೊಂಬಿನಿರ್ದೆಡೆಗಂ ಮೊಗಸುವ ಪಲತೆಱದ ಪಕ್ಕಿಗಳ ಕೋಡುಗಱಿಯ ಕಿಱುಗಾಳಿಯಂ ನಿಱಿಪುಗೆಯ್ದು ದೇವಕುಲದಾದಲೆಯ ನೆಲೆಯ ಕೋಣತಾಣಕ್ಕೆ ಪಾಱುವ ಪಾರಿವಂಗಳಂ ಪಾಱೆ ಪಣೆಯಿಕ್ಕೆಯುಂ ಪೊಂದಾವರೆಯ ರಜದಿಂ ಪುದಿದ ಪೂಗೊಳದ ತಡಿವಿಡಿದು ಸುೞಿಯುತ್ತಿರ್ಪಂಚೆಯ ತುಪ್ಪುಟಿಂಚೆಯುಂ ಪಳಂಚಲೆದುಂ . . . ಅಪರ ಸಾಂಧ್ಯಗಂಧವಹನೆಳಸೆ (ಮಲ್ಲಿಪು. ೭-೪). **ಹಣೆಯಿಕ್ಕು : ೨.** ಕಾಣಿಸಿಕೊಳ್ಳು ; ತಲೆಹಾಕು; ನಡುವೆ ಪ್ರವೇಶಿಸು: ಗೋವರ್ಧನನ ಮನಸ್ಸಿನಲ್ಲಿಯೂ ವಿಹ್ವಲತೆಯೂ ನಡುನಡುವೆ ಈಷತ್ ಆನಂದವು ಹಣೆಯಿಕ್ಕುತ್ತಿತ್ತು (ಎರಸೆ. ೭೬); ತಾರುಣ್ಯಸಹಜವಾದ ಶೃಂಗಾರವು ಎಲ್ಲ ಕತೆಗಳಲ್ಲೂ ಹಣೆಯಿಕ್ಕುವುದು (ಭೂವಿ:ತಾ. IV ಮುನ್ನುಡಿ) ; ಪುನರುಕ್ತಿ ಶೈಥಿಲ್ಯಗಳೂ ಅಲ್ಲಲ್ಲಿ ಹಣೆಯಿಕ್ಕುವೆ (ಕಸಾಚ. ೨೮೫). [ಪಣೆ$_1$+ಇಕ್ಕು]

**ಪಣೆಯಿಡು** (ಕ್ರಿ). ಹಣೆಯನ್ನು ಇಡು,-ಚಾಚು ; ನಮಸ್ಕರಿಸು : ಇದು ದೇವರ ಗುಡಿ ; ಪಣೆಯಿಡು, ಪೊಡೆವಡು, ಪಾವನವಪ್ಪುದು ನಿನ್ನ ಮುಡಿ (ಅಸಿಕೇ. ೫೦-೫). [ಪಣೆ$_1$+ಇಡು$_1$]

**ಪಣ್ಕಾಯ್$_1$** 'ಪಣ್ಗಾಯ್' ನೋ.

**ಪಣ್ಕಾಯ್$_2$** 'ಪಣ್$_3$' ಪರಾ.

**ಪಣ್ಕೆ** (ನಾ). ಮಾಡುವಿಕೆ ; ಸಿದ್ಧಪಡಿಸುವಿಕೆ : ಕಾಣ್ಕೆ, ಪೂಣ್ಕೆ, ಮಾಣ್ಕೆ, ಉಣ್ಕೆ, ಪಣ್ಕೆ (ಶಬ್ದಾನು. ೫೫೭ ಪ್ರಯೋ).
[ಪಣ್$_1$(<ಪಣ್ಣು$_1$)+-ಕೆ]

**ಪಣ್ಗಾಯ್,** ಪಣ್ಕಾಯ್$_1$, ಹಣ್ಣುಗಾಯಿ(ನಾ). ೧. ಹಣ್ಣಾಗುತ್ತಿರುವ ಕಾಯಿ; ಹಣ್ಣು ಮೆಟ್ಟಿರುವ ಕಾಯಿ; ಪಕ್ವವಾಗುತ್ತಿರುವ ಕಾಯಿ ; ದೋರೆಗಾಯಿ: ಪಣ್ಗಾಯ ತಳ್ತ ತುಱುಗಲ ಬಿಣ್ಪೊನೆಯಿಂ ತೂಗಿ ತೊನೆವ ಕೌಂಗಂ ತನ್ನತ್ತಣ್ಗೆ ಬರೆತೆಗೆವ ತೆಱದಿಂ ಕಣ್ಗೊಳಿಸಿದುದೆಳಸಿ ನಾಗಲತೆ ದಾಂಗುಡಿಯಿಂ (ಕಾವ್ಯಾವ. ೨೧೮) ; ಪಣ್ಗಾಯ ತೀವಿದ

ಬಾಟಿಸಿಯ ಬಿಣ್ಗೊನೆ ನಿಜಭರದಿನಿರದೆ ಬಾಟಿಸ್ವೀಲಿಯ ಪಿಂದಣ್ಗಾಗಿ ಜೋಲ್ದು ಪಥಿಕರ ಕಣ್ಗೊಳ್ಪಂ ಮನಕೆ ಬಯಕೆಯುಂ ಪುಟ್ಟಿಸುಗುಂ (ಚಂದ್ರಪ್ರ. ೧-೧೦೭) ; ತಾಯೊಡನುಂಬ ತಂದೆಯೊಳು ಭುಂಜಿಸುವ ಕಜ್ಜಾಯ ಪಣ್ಗಾಯ್ಗಳ ಮೆಲುವ ಕಾಯಕಾಂತಿಯ ಪಸರಿಸಿ ಬಳೆದನು ಕಂತುರಾಯನ ಸತ್ಕುಮಾರಕನು (ಮೋಹತ.೧೭-೭೩). **ಪಣ್ಕಾಯ್$_1$:** **೧.** ಅಲ್ಲಿ ಹುಲಿಯವನೊಂದು ಎತ್ತ ಹಿಡಿದುಂಡಿತ್ತು ಒಲ್ಲದಿಹ ಪಣ್ಕಾಯ್ಗೆ ಕಿನಿಸಾಂತುದೆನಲು (ಕಾಲೂರ.೪೦-೧೪೯). **ಹಣ್ಣುಗಾಯಿ:** **೧.** ಸೀಬೆಗಿಡದಲ್ಲಿ ತುಂಬ ಹಣ್ಣುಗಾಯಿಗಳಿವೆ (ರೂಢಿ). **೨.** ಹಣ್ಣಾದ ತೆಂಗಿನಕಾಯಿ ; ಬಲಿತ ತೆಂಗಿನಕಾಯಿ : ಹಣ್ಣುಗಾಯಿ ಕೊಬ್ಬರಿಯಾಗಲು ಒಂಬತ್ತು ತಿಂಗಳು ಬೇಕು (ರೂಢಿ). **೩.** ಹಣ್ಣಾದ ತರಕಾರಿ : (ಃ).

**ಹಣ್ಣುಗಾಯಿ ನೀರುಗಾಯಿ ಮಾಡು**＝ಹೊಡೆದು ಜರ್ಝರಿತಗೊಳಿಸು,–ತುಂಬ ಗಾಸಿಗೊಳಿಸು : ಭೀಮಾರ್ಜುನರು ಬಿಡದೆ ಅವನನ್ನು ಹಿಡಿದು ಹಣ್ಣುಗಾಯಿ ನೀರುಗಾಯಿ ಮಾಡಿ ಅವಮಾನಗೊಳಿಸಿ . . . ಬಿಟ್ಟರು (ವಚಭಾ. ೧೬೫) ; ಜೀವವನ್ನು ಹಣ್ಣುಗಾಯಿ ನೀರುಗಾಯಿ ಮಾಡಿ, ಒಮ್ಮೆ ಅದನ್ನು ನೀಗಿ ನಿರಂಬಳವಾಗಬೇಕೆನ್ನುವ ಮಟ್ಟಿಗೂ ಮಜಲು ಹೊಡೆದವು (ದೀಪಹ. II, ೧೪೪); ಇನ್ನು ಮಾತಾಡಿದರೆ ಹಣ್ಣುಗಾಯಿ ನೀರುಗಾಯಿ ಮಾಡಿ ಬೀದಿಗೆ ದಬ್ಬಿಸಿಬಿಡುತ್ತೇನೆ (ಅಷಾಭೂ. ೫೭). [ಪಣ್$_2$ + ಕಾಯ್$_4$]

**ಪಣ್ಗುಡಿ** (ನಾ). ಬಳ್ಳಿಯ ಕಾಂತಿಯುಕ್ತವಾದ ಕುಡಿ,—ಹೊಳೆಯುವ ತುದಿ,—ಚಿಗುರು : ಅಡಿ ಕೆಂದಳಿರಂ ತನುಲತೆಯಡಕೆಯ ಸಸಿಯುಂ ತಮಾಳದಳದೊಳ್ಕಪ್ಪಂ ಮುಡಿಯಧರಂ ಪವಳಂ[ಳದ] ಪಣ್ಗುಡಿ [ಪಾಠಾಂ. ದಣ್ಗುಟಿ, ಪಣ್ಗುಟಿ, ಪಣ್ಣುಡಿ, ಪಣ್ಣುಡೆ]ಯುಂ ಗೆಲೆ ಖಚರರಾಜನಂದನೆಯಾಗಳ್ ಜಿನಪೂಜೆಯುಂ ಮಾಡಲ್ ಸಿದ್ಧಕೂಟಕ್ಕೆ ಬಂದು (ಪುಣ್ಯಾಸ್ರ. ೧-೭೭). [ಪಣ್$_3$ + ಕುಡಿ$_2$]

**ಪಣ್ಗುಳಿ** (ನಾ). ಹಣ್ಣನ್ನು ತೆಗೆದುಕೊಳ್ಳುವವನು : ಸಾಲಂಗುಳಿ, ಆಟಂಗುಳಿ, ಪಣಂಗುಳಿ, ಪಣ್ಗುಳಿ, ಕಾಯ್ಗುಳಿ (ಶಬ್ದಾನು. ೪೧೪ ಪ್ರಯೋ). [ಪಣ್$_3$ + –ಕುಳಿ$_3$]

**ಪಣ್ಗೆಂಡ,** ಹಣ್ಗೆಂಡ(ನಾ). ನಿಗಿನಿಗಿ ಕೆಂಡ; ಪ್ರಜ್ವಲಿಸುವ ಕೆಂಡ; ಪೂರ್ತಿ ಕೆಂಪಾಗಿರುವ ಕೆಂಡ : ಪಣ್ಗೆಂಡದಚ್ಚಿಯುಂ ತಾಳ್ದ ಪಾವಿನ ಕೊರ್ಬು ನುಣ್ಗೊರಲ್ದೊಡೆದ ಗೋಡೆಯುಡರ್ದ ಪನ್ನೆರಲ್ ಕಣ್ಗಾಸೆ ಪೆತ್ತೆಸವ ತಲೆಸರಂದಳಿದೆಸೆವ ಹರುಸದಿಂ ಪೊರೆಗೆ ತನ್ನ (ನಂದಿಮಾ. ೨೧-೫೨). **ಹಣ್ಗೆಂಡ :** ಹಣ್ಗೆಂಡದ ಮೇಲೆ ರೊಟ್ಟಿ ಸುಟ್ಟರೆ ತಿನ್ನಲು ರುಚಿಯಾಗಿರುತ್ತದೆ (ರೂಢಿ). [ಪಣ್$_2$ + ಕೆಂಡ]

**ಪಣ್ಗೊಂಚಲ್** (ನಾ). ಹಣ್ಣಿನ ಗೊಂಚಲು ; ಫಲಗುಚ್ಛ : ಆ ನಂದನವನಂ . . . ಕಣ್ಗೊಂಡು ಮೆಱೆವ ತೋರಮಪ್ಪ ಪಣ್ಗೊಂಚಲಿಂದಂಚಿರಮಾದ ದ್ರಾಕ್ಷಾಮಂಡಪಂಗಳಿಂ . . . ಅತ್ಯಂತ ರಮಣೀಯಮಾಗಿರ್ದುದು (ಬಾಧಪು. ೧-೧೮ ವ). [ಪಣ್$_3$ + ಗೊಂಚಲ್]

**ಪಣ್ಗೊನೆ** 'ಪಣ್ಗೊಲೆ' ನೋ.

**ಪಣ್ಗೊಲೆ,** ಪಣ್ಗೊನೆ, ಹಣ್ಗೊನೆ (ನಾ). ＝ಪಣ್ಗೊಂಚಲ್ : ಳಂಪಿನೊಳ್ ನೆಱೆದ ರಸಂಗಳಂ ತಳೆದ ಪಣ್ಗೊಲೆಯುಂ (ಎಇ.XIII, ೩೩೧-೨೯ ; 929); ಅಲರ್ದಂಭೋರುಹಷಂಡಮುಳ್ಳಲರ್ದ ಚೆನ್ನೆಯ್ದಿಲ್ಗೊಳಂ ತೂಗಿ ಪಣ್ಗೊಲೆಯಿಂ ಬಳ್ಕುವ ಕೌಂಗು . . . ಎಸೆಗುಂ ವಿದ್ಯಾಧರೋದ್ಯಾನದೊಳ್ (ಆದಿಪು. ೧-೬೭) ; ಅಲರ್ದ ಕಮಲವನಷಂಡಂಗಳಿನುಳ್ಳಲರ್ದ ಕುಮುದವನರಾಜಿಗಳಿಂ ಪಣ್ಗೊ[ಲೆ] [ಪಾಠಾಂ. ನೆ]ಯಿಂ ಬಳುಕುವ ಕೌಂಗುಗಳಿಂ . . . ಆ ನಂದನವಮಾನಂದಮನೊದವಿಪುದು (ಕುಮುರಾ. ಪೀಠಿಕಾಸಂಧಿ. ೬೭). **ಪಣ್ಗೊನೆ :** ಫಳಭಾರದಿನುರ್ವಿಗಗುರ್ವು ಪರ್ವೆ ತಳ್ತೆಱಗಿದ ಬಾಟಿಸಿಪಣ್ಗೊನೆಗಳಿಂ ಗೊನೆಗೊಂಡ ಕವುಂಗುಕಾಯ್ಗಳಿಂ ತುಱುಗಿದ ತೆಂಗು ಶೋಭಿಪುದನಂಗನ ಮಂಗಳಗೇಹಮೆಂಬಿನಂ (ಸುಕುಮಾ. ೯-೪೭) ; ಪಸುರೇಱಿದ ಕಾಯ್ಗಳವೆಲ್ಲಿಯಲ್ಲಿ ಪಣ್ಗೊನೆಗಳವೆಲ್ಲಿಯಲ್ಲಿಯೆನೆ ಸೋಲಿಸುಗುಂ ಬಿಡದಾವನಂ ಬನಂ (ಕಬ್ಬಿಕಾ. ೩೨) ; ಚೆನ್ನ ಪಣ್ಗೊನೆಯ ಭರದಿಂ ಸನ್ನುತಮಾಗಿರ್ದ ಬಾಟಿಸಸಿಯೊಳ್ ಮಿಳಿಗರ್ಭಂ ತನ್ನ ಶಿಶುವಿಂಗೆ ಮೊಲೆಯುಂ ಮನ್ನಿಸಿ ಬಾಗಿರ್ದು ಕೊಡುವ ಬಾಲೆಯ ತೆಱದಿಂ (ಬಾಧಪು. ೧-೧೦೬). **ಹಣ್ಗೊನೆ :** ತೆಂಗುಗಳ ಫಲಭರದಲೊಪ್ಪುವ ಹಣ್ಗೊನೆಯ ಕದಳಿಗಳ . . . ಕಂಗೊಳಿಪ ಬಹುಫಲಕುಸುಮಗಂಧಂಗಳಿಗೆ ಬಳಿ ಸಲುವ ಪಾಡುವ ಭೃಂಗನಿಕರದಲೆಸೆವ ಗಿರಿಯನು ಕಂಡುದಮರಗಣ (ಿಭಾಗ. ೪-೩-೧೪). [ಪಣ್$_3$ + ಗೊಲೆ$_2$]

**ಪಣ್ಗೊಳ್,** ಹಣ್ಗೊಳ್ (ಕ್ರಿ). **೧.** (ಆಲಂ) ಸಫಲವಾಗು ; ಫಲಪ್ರದವಾಗು : ಮೊದಲ ಬೇಟದ ಮೊಳಕೆ ಪಣ್ಗೊಂಡ ಕಾನನಂ . . . ಮೊದಲ ಮಿಲನದ ಮತ್ತೆ ವಿರಹದ ಶಿವಾಲಯಂ ! (ಚಿತ್ರಾಂಗ. ೬೨-೧೬೯೪). 'ಪಣ್ಗೊಳಿಸು' ಪರಾ. **ಹಣ್ಗೊಳ್: ೨.** ಹಣ್ಣಾಗು; ಮಾಗು: 'ಹಣ್ಗೊಳಿಸು' ಪರಾ. [ಪಣ್$_3$ + ಕೊಳ್$_1$]

**ಪಣ್ಗೊಳಿಸು,** ಹಣ್ಗೊಳಿಸು, ಹಣ್ಣುಗೊಳಿಸು (ಕ್ರಿ). **೧.** ಸಫಲಗೊಳಿಸು; ಸಾರ್ಥಕಗೊಳಿಸು : ನುಣ್ಗದಪಿನೊಳು ಪೊನ್ನೋಲೆ ಡಾಳಿಸೆ ನಿಡುಗಣ್ಗದಗದಿಸಿ ಕಾತರಿಸೆ ಬಿಣ್ಗೊಂಡ ಮೊಲೆ ನಸುಬಿದುರೆ ನೋಟಪ್ಪಿನಿಯಂಗೆ ಪಣ್ಗೊಳಿಸುವುದು ಭಾಗ್ಯವನು (ಚಿಕವಿ. ೬ ಸಾಂಗತ್ಯ ೬೪). **ಹಣ್ಗೊಳಿಸು : ೨.** ಹಣ್ಣುಮಾಡು ; ಪಕ್ವಗೊಳಿಸು ; ಮಾಗಿಸು : ಕಾಡ ಅತ್ತಿ ಹಣ್ಗೊಳಿಸುವಂಥ ತಂಗಾಳಿ ಇದಿರು ಬಂದು ದೇವಗಿರಿಯ ಹ್ಞೀರಿಸುವದಣ್ಣ , 'ಬಿಜಮಾಡಿ ತಾವು' ಎಂದು. (ಮೇಘದೂ. ೧೧-೪೨). **ಹಣ್ಣುಗೊಳಿಸು : ೩.** (ಆಲಂ) ನಿಸ್ಸತ್ವಗೊಳಿಸು ; ನಿರ್ವಿಣ್ಣಗೊಳಿಸು : ರಾಘಪ್ಪನ ದೆವ್ವವು ಬಡೆದುಕೊಂಡೀತೆಂಬ ಭೀತಿ ಕೆಲ ದಿನ ಒಳಗಿಂದ ಅವಳನ್ನು ಹಣ್ಣುಗೊಳಿಸಿತು (ಗಂಪಾಯಿ. ೨೯೬). [ಪಣ್ಗೊಳ್ + –ಇಸು$_3$]

**ಪಣ್ಚು** (ಕ್ರಿ). ಹೊಂದಿಸು ; ಜೋಡಿಸು ; ಅಳವಡಿಸು ; ಅಣಿಗೊಳಿಸು : ಸೀನಾಗಳುಂ ತುಷ್ಟಿಯಿಂ ವಿಶ್ವಮುಂ ಪಣ್ಚುವಯ್ . . . ಹೇ ಕವಿ (ಸಂಸಪ. ೧೩-೧೪) ; ಬಗೆಯ ಅನ್ತರ್ಯದಲ್ಲಿ ನೆಲೆಗೊಳಿಸಿ ಎಡೆಗಿರಿದು ಪರಿಪೋಷಿಸಿಕೊಳ್ಳುತ್ತಿರುವ, ಕಾರ್ಯರೂಪಕ್ಕೆ ಪಣ್ಚದಿರಲಾರದ, ಆ ಮೂಲತಂತ್ರದಾಳೋಚನವನ್ನು ಕಿರುವರಯುದ ಅಕ್ಷಮತೆಯ ಕಾಯ್ಪು ನಿನ್ನ ನಾಲಗೆಗೆ ಗಳ್ಳನಿಳಿಹಿ, ನಿನ್ನನ್ನು ತೆರೆಗಿಡಿಸಿ ದ್ರೋಹಿಮಾಡಿ ಕೆಡಹಿಕೊಂಡು ತೊತ್ತಳಗುಣಿಯಿತು (ಬಿಟ್ಟಅ. ೧೬೭-೩). [ಪಣ್$_1$(<ಪಣ್ಣು$_1$) + –ಚು$_1$]

**ಪಣ್ಣಡಕೆ,** ಹಣ್ಣಡಕೆ, ಹಣ್ಣಡಿಕೆ (ನಾ). ಹಣ್ಣಾದ ಅಡಕೆ ; ಬಲಿತ ಕ್ರಮುಕ : ಕೋಕಿಳಧ್ವನಿ ಸರಮಾದ ಪಣ್ಣಡಕೆ ಬಾಯ್ದೆಱೆಯಾದೆಳವಳ್ಳಿಯೋಳೆ ನೂತನತನುವಾದ . . . ನಂದನವನಲಕ್ಷ್ಮಿ ಕಣ್ಗೆಸೆದು ತನ್ನನೆ ನೋಡಿಸಿದಳ್ ತದಾರ್ಯರಿಂ (ಶಾಂತಿಪು. ೭-೧೦) ; ಅಲ್ಲಿನ ಗಡುಗಳು ಪಿಂಗಾರ . . . ಪಣ್ಣಡಕೆ, ಗೋಟಡಕೆ, ಕರಿಗೋಟುಗಳನ್ನು ಉಳ್ಳವುಗಳಾಗಿದ್ದುವು (ಭಾಷಾಶಾ.೨೫೬). **ಹಣ್ಣಡಕೆ:** ಕಾರೆಲೆ ಹಣ್ಣಡಕೆ ಬಾಯೊಳಗಿಟ್ಟು ನಾಜೂವ ವ್ಯೆಯಿಗೆ ಮಲಿನದ ಸೀರೆಯನುಟ್ಟು ತಿನಲವಿಂದ ವಿಟರನು ಸಾರುತಿರ್ದರು ದಾಸಿಯರು(ಜೀಸಂಸಾಂ.೧೯-೧೫). **ಹಣ್ಣಡಿಕೆ:** ಸೂಳೆಸೂತಕನಾಗಿ ಪನ್ನೀರ ಮಡಿಯುಟ್ಟು ಹಣ್ಣಡಿಕೆಗೊನೆಯನೆ ಹಿಡಕೊಂಡು ಚಾಮುಂಡಿ ಸೇರು ಪಾವಡಕೆ ಬಿಳಿಎಲೆ ತಕ್ಕೊಂಡು ಭೋಗದ ನಂಜಯ್ಯ ಬರ ಹೇಳಿ (ನಾಪದ. ೧೦೧). [ಪಣ್$_3$ + ಅಡಕೆ$_1$]

**ಪಣ್ಣನೆ** (ಅ). ೧. ಒಂದು ಅನುಕರಣಾವ್ಯಯ; ಛಂಗನೆ; ತಟ್ಟನೆ: ಹೋಮದ ಕುಂಡದಿಂ ಕಡೆಸಿಡಿಲ್ದು ಪೊದಳ್ದಿರೆ ಕಂಡು ಕೆಂಡಮಂ ಕಾಮಿಸಿ ಗೀರ ಪಣ್ಣೆನುತೆ ಪಣ್ಣನೆ ಪೊರ್ದಿ ತುಡುಂಕೆ ಕೈ ಸುಡಲ್ ಭೂಮಿಗೆ ತರ್ಗಿ ಕುರ್ಗಿ . . . ಮುನಿಪುತ್ರರಂ ನಗಿಸಿ ಹಜಿಕ್ರೆನುತೇಡಿಸಿ ಕೊಂದು ಕೋಡಗಂ (ರಾಜಶೇ. ೧-೧೨೮); ಪಣ್ಣನೆ ನೆಗೆವ ಕುದುರೆಗಳ ಪಣ್ಣಿಸಿ ಘೋಟೀರಾಯ್ತು ರೇಖಾ ಮೆಚಿಕೆಯುವವರೊಟ್ಟಿಂ(ಮೈಸೂಮ. ೫-೮೨). ೨. ಮೆಲ್ಲನೆ; ಮಂದವಾಗಿ; ನಿಧಾನವಾಗಿ: "ಪಣ್ಣನೆಯೆಂದು [ಪಾಠಾಂ. ಪಣ್ಣಮೆಂದು]ಮೆಲ್ಲನೆ" (ಕಶಸಾ. ೭೦-೫೯೮); ಪಣ್ಣನೆ ತೊಟಿಲ್ದು ತೀಡುವ ತಣ್ಣೆಲರೊಳೆಲರ್ಚಿ ವನಚರವ್ರಜಮುದಜಿಕೊಳ್ ತಣ್ಣನೆ ತಣಿದಿರೆ ಬನದೊಳ್ ಪಣ್ಣನೆ ತಿನುತಿರ್ಪುವೆಳಸಿ ತರುಚರಕುಳಮುಂ (ಕಾವ್ಯಾವ. ೨೨೨); ತೆಂಕಣ ಗಾಳಿ ಬೀಸುತಿರೆ ಪಣ್ಣಲೆ ಪಣ್ಣನೆ ಬೀಟಿಕಿ (ಜಗವಿ. ೧೪-೨೨); ಕಪ್ಪುರಗಂಪನೆಣ್ದೆಸೆಗೆ ಸಾರಿಡೆ ಪಣ್ಣನೆ ಸುಯ್ಯಲರ್ . . . ಪಾಡಿದರ್ ನಲಿದು ಗಾಯಿನಿಯರ್ ನವಗೀತಜಾಳಮಂ (ಉದ್ಭಟ. ೩-೨); ಬೀಸಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಳಂ (ಮಹಾನೇ. ೭-೪೯); ಪಣ್ಣನೆ (ಪೊ)ಯ್ದುನುವಾಸಿಸಿದೆಣ್ದೆ ಮಹಾದಿವ್ಯಮುಲ್ತೆ ವಾತಾಪಹರಂ (ಅಶ್ವಶಾ. ೧೧-೬೨). ೩. ಚೆನ್ನಾಗಿ; ಹಸನಾಗಿ: ಬರ್ಕೆ ನಿನ್ನ ಪಿರಿಯಣ್ಣನೆ ಪಣ್ಣನೆ ನೋಟ್ಪಿಮಾತನೊಡ್ಡಟಿಯದ ಗಂಡವಾತಂ (ಪಂಪಭಾ. ೩-೧೬); ಇಂದಿದೇಂ ಮಗನೆ ಪ[ಪಾಠಾಂ. ನು]ಣ್ಣನೆ ನುಣ್ಗೊಗದಲ್ಲಿ ವಿಸಾಸೆಗಳ್ಮೂಡದ ಮುನ್ನ ನಿನ್ನ ಪೆಗಲೊಳ್ ಪೊಸ ಸೂಲವಿದೆಂತು ಮೂಡಿತೋ (ಅರ್ಧನೇ. ೫-೩೫). ೪. ಶೀಘ್ರವಾಗಿ; ಬೇಗನೆ.

**ಪಣ್ಣಪಣ್ಣನೆ** (ದ್ವಿರುಕ್ತಿ): ೧. ಮೆಲ್ಲಮೆಲ್ಲನೆ; ನಿಧಾನವಾಗಿ: ಗಿಳಿವೆಣ್ಣ ಕಾಲಂ ಪಿಡಿದು ಪಣ್ಣಪಣ್ಣನೆ ಪೊರ್ದಿ ಪಣ್ಣಿಂ ಬಾಯ್ವಾಯೊಳ್ ಕುಡುವ ನೆವದಿಂದಂ ಬಿಡಿಸಿ ಚುಂಬಿಸುವ ಕೀರಕಾಮುಕನುಮಂ(ಲೀಲಾವ. ೧೧-೫೫ ಪ). ೨. ಚೆನ್ನಾಗಿ; ಹಸನಾಗಿ: ಪಣ್ಣಪಣ್ಣನೆ ತುಪ್ಪದೊಳ್ಪುರಿದಚ್ಚಗಂಪಮರಲ್ . . . ಶ್ಲಕ್ಷ್ಣಮಾಂಸನಿಕಾಯಮೊಪ್ಪಿದುದಾಸುಚಕ್ರದೊಳ್ (ಉದ್ಭಟ. ೫-೬೬). ೩. ಶೀಘ್ರವಾಗಿ: ಅಂತೆರಡುಂ ಪಡೆಗಳುಂ ಪಣ್ಣಪಣ್ಣನೆ ಪಣ್ಣಿ ಕಾಳೆಗಕ್ಕೆ ನಡೆಯಲೊಡರಿಸಿದಾಗಳ್ (ಪಂಪಭಾ. ೧೦-೫೦ ಪ). [ಪಣ್$_0$+-ಅನೆ$_1$]

**ಪಣ್ಣಿಕ**(ನಾ).೧. ಸಜ್ಜುಗೊಳಿಸುವಿಕೆ; ಅಣಿಮಾಡುವಿಕೆ: "ಪಣ್ಣಿಕಮೆನಲ್ ಸಂವರಣೆ [ಪಾಠಾಂ. ಕೃತಂ, ತಿಲಂ]" (ಕಬ್ಬಿಕೈ. ೭೨); "ಪಣ್ಣಿಕಮೆನಲ್ ಸಂವರಣೆ" (ಶಬ್ದಮಂ. ೪೩). ೨. ಹಣೆಯಲ್ಲಿಟ್ಟುಕೊಳ್ಳುವ ಅಲಂಕಾರದ ಬೊಟ್ಟು; ತಿಲಕ: "ಪಣ್ಣಿಕಮೆಂದು ತಿಲಕಂ [ಪಾಠಾಂ. ತಿಲಂ]" (ಕಶಸಾ. ೭೦-೫೮೮); "ಸಲೆ ಪಣ್ಣಿಕ ತಿಲಕಮಕ್ಕು [ಪಾಠಾಂ. ತಿಲಮದಕ್ಕು] ಸತ್ಕವಿವರರಿಂ" (ಕವಿಕಂ. ೨೩೯); ನಿಟ್ಟಿಸುತ ಕನ್ನಡಿಯ ನೊಸಲ ನೇವರಿಸುತ್ತ ನಟ್ಟೆನಡುವಿನೊಳೊಂದು ಪಣ್ಣಿಕವನಿಟ್ಟು ಪಟ್ಟನಿಂ ತೊಟ್ಟು ತೊಡವಂ ಕಮ್ಮರೆಯನಿಟ್ಟು ಒಟ್ಟನಿಂ ಪೆಣ್ಣಳಣಿಯಾಯ್ತು (ಕಾಲೂರ. ೧೫೦-೩೨೮).

[<ಪಣ್ಣು$_1$./ತೆಲು. ಪನ್ನಿಕ]

**ಪಣ್ಣಿಕೆ** (ನಾ). ಸಿದ್ಧತೆ; ಸಜ್ಜು; ಅಣಿ: ಪಿಣ್ಣಾಕದೇವನಾಗಿರ್ದು ಗಾಣವ ಹೊಡದು ಕಣ್ಣ ಮೂಪರಿಗಿತ್ತು ಲಂಕಾಪುರಿಗೆ ನಡದು ಮಣ್ಣ ಪುತ್ಥಳಿಗೆ ಹರಣವ ಕೊಟ್ಟು ವೈವಾಹಪಣ್ಣಿಕೆಯೊಳೆಸೆದು ಜವದಿ (ಲಿಂಗಪು. ೨೬-೩). 'ಪಣ್ಕೆ' ಪರಾ. [ಪಣ್ಣು$_1$+-ಇಕೆ]

**ಪಣ್ಣಿಗ** (ನಾ). ಹಣ್ಣು ಮಾರುವವನು; ಹಣ್ಣಿನ ವ್ಯಾಪಾರಿ: ದವಸಿಗಂ, ದೂಸಿಗಂ, ಕಾಯಿಗಂ, ಪಣ್ಣಿಗಂ (ಶಬ್ದಾನು. ೪೦೫ ಪ್ರಯೋ).

[ಪಣ್ಣು$_2$(<ಪಣ್$_3$)+-ಇಗ]

**ಪಣ್ಣಿಗೆ** 'ಪಣ್ಣುಗೆ' ನೋ.

**ಪಣ್ಣಿಗೆವಿಡಿ** (ನಾ). ಅಲಂಕರಿಸಿದ ಹೆಣ್ಣಾನೆ; ಸಿಂಗರಿಸಿದ ಕರಿಣಿ: ಮತ್ತೊರ್ವಳ್ ಕೆಂದಳಿರ್ವೇಜಿಟದ ನವಮಾಕಂದದಿನೆಳಗೊಂಬು ನೆಲಕೆ ಫಳಭರದಿಂ ಜೋಲ್ವಂದದಿನಿಟಿದಳ್ ಕುಚಭರದಿಂದಂ ನಡು ಬಳ್ಕೆ ಪೊನ್ನ ಪಣ್ಣಿ[ಪಾಠಾಂ. ಣ್ಣು]ಗೆವಿಡಿಯಿಂ (ಜಗವಿ. ೧೪-೫೫).

[ಪಣ್ಣಿಗೆ(<ಪಣ್ಣುಗೆ)+ಪಿಡಿ$_3$]

**ಪಣ್ಣಿಸು$_1$**, ಹಣ್ಣಿಸು$_1$ (ಕ್ರಿ). ೧. ಸಿದ್ಧಗೊಳಿಸು; ಅಣಿಗೊಳಿಸು; ಸಜ್ಜುಮಾಡು: ಪ್ರಳಯಶಿಖಿಯ ದಳ್ಳುರಿಯ ಬಳ್ಳಿಯಂತೆ ವಿಳ್ಳಿಸುವ ಮಸಕದುರಿಯೆಣ್ಣೆಯಂ ಪಣ್ಣಿಸಿಯುಂ (ಪುಷ್ಪಪು. ೭-೬೯ ಪ); ಪಣ್ಣನೆ ನೆಗೆವ ಕುದುರೆಗಳ ಪಣ್ಣಿಸಿ ಘೋಟೀರಾಯ್ತು ರೇಖಾ ಮೆಚಿಕೆಯುವವರೊಟ್ಟಿಂ (ಮೈಸೂಮ. ೫-೮೨). **ಹಣ್ಣಿಸು$_1$**: ೨. ಒದಗಿಸು; ದೊರಕಿಸು; ಉಂಟುಮಾಡು; ಲಭ್ಯಗೊಳಿಸು: ಮೊಲೆಹಾಲಿನೊಡನೆ ಸರ್ವವನು ಹಣ್ಣಿಸಿದಂಥ ದೇವಸ್ವರೂಪ ತಾಯೇ! (ಕೃಷ್ಣಾ.ಕು.೭-೧೭). ೩. ರಚಿಸು; ನಿರ್ಮಿಸು: ಹೆಣ್ಣಿನ ಹೊನ್ನಿನ ಮಣ್ಣಿನ ಬಲೆಯನ್ನು ಹಣ್ಣಿಸಿ ಜಗವನದ ಟಿಕೊಳು ಹಿಡಿದ ಮುಕ್ಕಣ್ಣನ ನೋಡ (ಸರ್ವಜ್ಞ. ೨೦೮). ೪. ಹೊಂದಿಸು; ಜೋಡಿಸು; ಅಳವಡಿಸು: ಮುನ್ನ ಯೋಗವ ನಡರಿ ದಿಟ್ಟಿಯ ಹಣ್ಣಿಸುತೆ ನಾಸಾಗ್ರಕಂ ವಿತ್ಪನ್ನೆ ತನ್ಮುನಿಪನ ನಿರೀಕ್ಷಿಸದಲ್ಲಿ ತಪಸಿದಳು (ಕಾವೇಮ. ೧೯-೯). ೫. ಅಲಂಕಾರಗೊಳಿಸು; ಸಿಂಗರಿಸು (?): ಬಯಲ ಬಣ್ಣಿಸಿ ಮುಗಿಲ ಹಣ್ಣಿಸುವ ಈ ಕೊರಡು ಗಾಲಿಯಾಗಲು ಹೊರಟು ಬಂತು ತೇರು (ನೆಲಮು. ೨೨-೭).

[ಪಣ್ಣು$_1$+-ಇಸು$_3$]

**ಪಣ್ಣಿಸು$_2$**, ಹಣ್ಣಿಸು$_2$ (ಕ್ರಿ). ೧. ಹಣ್ಣಾಗುವಂತೆ ಮಾಡು; ಪಕ್ವಫಲವನ್ನಾಗಿ ಮಾಡು: ಚಿಗುರಿಸಿ ಹೂವಿಸಿ ಕಾಯಿಸಿ ಪಣ್ಣಿಸಿ ಬಣ್ಣಿಸು ಪೊಲು ಜೀವಪಲ್ಲಕಿಯಾ ಬಲ್ಲವ ಬಲ್ಲನು ಏಕತಾನದ ನಾದ ಜೀವನ ದುನ್ಮಾದ ಅನುಭವಿಯಾ (ಸಖೀಗೀ.೨೮-೫೧೭). **ಹಣ್ಣಿಸು$_2$**: ೧. ಮಿಡಿಗಾಯನೊತ್ತಿಟ್ಟು ಹಿಸುಕಿ ಹಣ್ಣಿಸಬಹುದೆ ? (ಭಾವಜೀ. ೨೯-೫೬೯). ೨. ಫಲಿಸು; ಸಫಲವಾಗು; ಈಡೇರು: ಆ ತಾಯಿಯ ಕರುಣೆ ಇದ್ದ ಮಟ್ಟಿಗೆ ಆ ಆಸೆ ಹಣ್ಣಿಸೀತು (ಸೂರ್ಯಪಾ.೪ ಸ್ಮರಣೆ). ೩. ಮಾಗಿಸು; ಮೃದುವಾಗಿಸು: ಹೆಣ್ಣಿನೊಡನೆ ಇನಿಯನಾಗಿ ನಲ್ಲನಾಗಿ ಗೆಳೆತನದಿಂದ ಬಾಳುವ ಕಲೆಯನ್ನು ಅರಿತುಕೊಳ್ಳುವ ಅವಶ್ಯಕತೆಯು ಗಂಡಿನ ಒಗರಿನ ಒರಟನ್ನು ಹಣ್ಣಿಸದೆ ಇರದು (ಯಕ್ಷಪ್ರ. ೧೫೭).

[ಪಣ್ಣು$_2$(<ಪಣ್$_3$)+-ಇಸು$_3$]

**ಪಣ್ಣು$_1$**, ಪಣ್$_1$, ಹಣ್ಣು$_1$ (ಕ್ರಿ). ೧. (ಯುದ್ಧಕ್ಕೆ) ಸಜ್ಜುಗೊಳಿಸು; ಅಣಿಗೊಳಿಸು; ಸಿದ್ಧಪಡಿಸು: ಪಣ್ಣಿದ ಜಾತ್ಯಶ್ವ ರಥಾಶ್ವಸಂಕುಳ ಖಲೀನೋದ್ಭೂತ ಲಾಲಾಜಲಂ ಕದಡೆಟ್ಟಿದ್ದತ್ತು ಮವುಂಕೆ ಬೇಟಿ ಪರಭಾಗಂಬೆತ್ತು ಲೋಕಕ್ಕೆ ಸನ್ನಿದಮಾಗಿರ್ದುವು ಕೌರವಧ್ವಜಿನಿಯೊಳ್ ಕಾಳಿಂದಿಯುಂ ಗಂಗೆಯುಂ (ಪಂಪಭಾ.೧೦-೩೧); ಪಣ್ಣಾನೆಯುಂ ಪಲ್ಲಣಿಸು ಕುದುರೆಯುಂ ಪೂಡು ತೇರಂ ಭಟರ್ ಕೈದುಗಳಂ ಕೈಕೊಳ್ಳಿಮೆಂಬೀ ಭಟರ ಕಳಕಳಂ ಕೇಳಲಾದತ್ತದೆತ್ತಂ (ಜಗವಿ. ೬-೭೫); ಕರಿಕುಳನುಂ ಪಣ್ಣುತ್ತ ಮ ತುರಗಂಗಳನಿರದೆ ನಾಡೆ ಪಲ್ಲಣಿಸನುವಿಂ ವರರಥತತಿಯಂ ಪೂಡಾಸುರದಾಯುಧಹಸ್ತರಾಗಲುಚಿತಂ ಕಲಿಗಳ್ (ಹವಿಪ್ಪಾರ.೩-೨೯); ವಾಜಿಗಳನಿರದೆ ಹಲ್ಲಣಿಸಿದರ್ ಮತ್ತಗಜರಾಜಿಗಂ ಪಂಚಿಕೆಯನಿಕ್ಕಿದರ್ ತೇರ್ಗಳುಮನೋಜೆಯಿಂ ಪಣ್ಣಿದರ್ ಜೋಡುಸೀಸಕವಿಕ್ಕಿ ಕಾಲಾಳ್ಗಳನುವಾದರು (ಚೆಬಪು.೨೩-೨೫). ೨. ಉಂಟಾಗು; ಒದಗು; ಸಂಭವಿಸು: ಐದಿದುಭಯಸೈನ್ಯಕ್ಕಂ ಕೈಗಲಸಿ ತುಮುಲಯುದ್ಧಂ ಪಣ್ಣಲ್ (ಕಳನ್ಯ. ೧-೮೨). ೩. (ಯುದ್ಧಕ್ಕೆ) ಸಿದ್ಧವಾಗು; ಸಜ್ಜಾಗು; ಅಣಿಯಾಗು: ಅಂತಾಯಿರುಳಂ ವಿಜಯಂ ವಿಜಯೋ

ದ್ಯೋಗದೊಳ್ ಕಳಿಯೆ ಬೆಳಗಪ್ಪ ಜಾವದೊಳ್ ಬೀಡುವೀಡುಗಳ್ಗೆಲ್ಲಂ ತೊಟಲ್ದೇಕಿರ್ಪಿರೇಱಿಂ ಪಣ್ಣಿಮೆನೆ (ಪಂಪಭಾ. ೧೦–೪೮ ವ); ಇದಿರಾದರ ಕೊಲುವಂಕದಾನೆಗಳೆಂದು ಕದನಕೆ ಪಣ್ಣಿ ನಡೆದವು (ಕುರಾಸಾಂ. ೧೧–೨೯); ಅಣ್ಣತಮ್ಮಂದಿರಿರ್ವರುಮುರಿಚತುರ್ಬಲಂ ಪಣ್ಣಿ ಬರೆ ಕಂಡು ಬಿಲ್ಗೊಂಡೆದ್ದು ಕೋಪದಿಂದಣ್ಣಿಕಲ್ಲಾಡಿದರ್ಪಟುಭಟರ ತಲೆಗಳಂ ಬಾಣಪ್ರಯೋಗದಿಂದೆ (ಜೈಮಿಭಾ. ೨೧–೧೨); ಯಥೋಚಿತ ನೈಪಥ್ಯಂದಳೆದ ಮಾತೃಸಮೇತಂ ಪಣ್ಣಿ ಬಂದಿಭೇಂದ್ರಮನೇಱಿ ಸಮರಸಮುಚಿತ ಸಂಭ್ರಮಂ ಮಿಗೆ ಶುಭಮುಹೂರ್ತದೊಳ್ ಶಿಬಿರಕ್ಕೆ ನಡೆತರ್ಪಾಗಳ್ (ರಾಜಶೇ. ೬–೧೧ವ). **೪.** ಮಾಡು; ನಡೆಸು; ಕೈಗೊಳ್ಳು; ನಿರ್ವಹಿಸು: "ಪಣ್ಣಿನೆ ಮಾಡೆಂಬ ವಾಚಿ" (ರನ್ನಕಂ. ೬); ಪಶುವಂ ಕೊಂದದನಟ್ಟು ಸುಟ್ಟು ಪಲರುಂ ತಿಂದೆಂಜಲಂ ತಿಂದು ಕೂಜಿಸುತಂ ತಾಂ ಪರಿವಂದಮೇಂ ಬಹುವಿಧಕ್ರವ್ಯಂಗಳಂ ತಂದು ಭಕ್ಷಿಸುವೊಂದಂದಮನೆಯ್ದೆ ಪಣ್ಣಿ [ಪಾಠಾಂ. ಪೂಣೆ]ಕಡೆಯೊಳ್ಮಾವನ್ನೆಗಂ ಕೂಡೆ ವಿಪ್ರಸಮಾಜಂ ನೆಗಟ್ವನ್ನೆಗಂ ತಗುಳ್ದು ವೇದಂ ಪೇೞ್ದುದೊಳ್ಪಿಲ್ಲದೋ (ಸಮುಪ. ಅನುಬಂಧ I, ೩೬೮–೧೯); ಪಿಡಿದೊಯ್ಯುದ್ದು ಮೆಟ್ಟುವೆಂ ಪೆರ್ಗೆಱೆಯೊಳ್ ಎಂದು [ರೌದ್ರಾಟೋಪಮಂ ಪಣ್ಣಿ ನಿಗ್ರಹಂಗೆಯ್ಯಲೆಂದಿರ್ಪುದುಂ ಒಳಗೆ ಪಱಿಯಂ ಪತ್ತಿರ್ದು] ಕೇಳ್ದು (ಧರ್ಮಾಮೃ. ೧೨–೨೩೦); ಪರಿಪರಿಯುಱೆಗವ ಪಣ್ಣಿ ತಣಿವಳು ಪರಮಾನಂದವಡುವಳು (ಹವಿಬ. ೭–೪೮). **೫.** ರಚನೆ ಮಾಡು; ರಚಿಸು; ನಿರ್ಮಿಸು: ಆಗಳಾಱುಂ ಋತುಗಳ ಪೂಗಳನೊಂದುಮಾಡಿ ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದೋಜನ ಸಾಲೆಯಿರ್ಪಂತಿರ್ದ ಪೂವಿನ ಸಂತೆಯೊಳ್ (ಪಂಪಭಾ. ೪–೮೦ವ); ಗುರು ಪಣ್ಣಿದ ಚಕ್ರವ್ಯೂಹರಚನೆ ಪೆಱರ್ಗರಿದು ಪುಗಲ್ (ಗದಾಯು. ೪–೫೫); ಚೈತ್ರಂ ಪಣ್ಣಿ ತಂದಂಗಜಂಗಿಳಿಯೊಳ್ ಸಾರ್ಚಿದ ತದ್ವರೂಥಮೆನೆ ಚೆಲ್ವಾದತ್ತು ಚೂತೋತ್ಕರಂ (ಕುಸುಮಾ. ೫–೩೫); ನಲ್ವಣ್ಣಿಗೆವಾಸಿಗಂಗಳ ಮರಲ್ವುಡಿಯಿಂ ಪಲವಣ್ಣಜೋಹಮಂ ಪಣ್ಣಿ ಪಳಂಚಿ ಸಂಚರಿಸಿ ನೋಡುತೆ (ಚಿಕವಿ. ೬–೩೪). **೬.** ಯೋಜಿಸು; ಏರ್ಪಡಿಸು: ಕೂಸಿಂಗೆ ಸ್ವಯಂಬರಮಂ ಪಣ್ಣುವಂ (ಪಡ್ಡಾರಾ. ೪೦–೨೭); ಅವನಿಯೊಳಱಸುತ್ತುಂ ಬಂದೀ ನಿನ್ನನ್ವಯಪ್ರಸಿದ್ಧಿಗಮಿಂತೀ ಸೌಂದರ್ಯಕ್ಕಂ ಪದೆದಾನೊಂದಿದ ಮನದಿಂದಮಿಂತಿದಂ ಪಣ್ಣಿರ್ದೆಂ (ನೇಮಿಪು. ೩–೧೮); ಪುಣ್ಯವುಳ್ಳವನಾವ ಕಾರ್ಯವ ಪ[ಪಾಠಾಂ. ನೆ]ಣ್ಣಿದೊಡೆ ಕೈಸಾರಿ ಬಪ್ಪುದು ತಿಣ್ಣವೇ ಕೃತಪುಣ್ಯನಾವೆಂದರಸನಂದವರ ಕಣ್ಣು ದಣಿವಿನ ನೋಡಿ . . . ಸುಖದೊಳಿರುತಿರ್ದ (ಸಾಳ್ವಭಾ. ೪–೨೪); ಮುಂದೆ ಗಜಪುರದೊಳು ಪಣ್ಣುವಧ್ವರಕೆ ನೀ ಬಂದು ಕನ್ನೈದಿಲೆಯ ಬಣ್ಣದ ಮುರಾರಿಯಂ ಕಂಡು ವಿಷವಧುತನದ ತಿಣ್ಣಮಂ ಕಳೆದೆನ್ನೊಳೊಡಗೂಡು (ಜೈಮಿಭಾ. ೧೬–೧೭). **೭.** ಶೃಂಗಾರಮಾಡು; ಸಿಂಗರಿಸು; ಅಲಂಕರಿಸು: ದ್ರುಪದನುಂ ಧೃಷ್ಟದ್ಯುಮ್ನನುಂ ಮುತ್ತಿನ ಮಾಣಿಕದ ಮಂಡನಾಯೋಗಂಗಳೊಳ್ ನೆಱೆಯೆ ಪಣ್ಣಿದ ಮದಾಂಧಗಂಧಸಿಂಧುರಂಗಳನೇಱಿ ಬರೆ (ಪಂಪಭಾ. ೩–೪೮ ವ); ಎರಡುಂ ಪಕ್ಕದೆ ಪಣ್ಣಿದೋಜೆವಿಡಿಯಂ ಕೈಗೆಯ್ದು ಬಂದೇಱಿ ಚಾಮರಮಂ ಕನ್ನೆಯರಿಕ್ಕೆ . . . ಬಂದಂ . . . ವಜ್ರಬಾಹುಮಹಿಪಂ (ಪಂರಾಮಾ. ೨–೧೧); ಸುರಕರಿಯಂತೆ ಕಣ್ಗೊಳಿಸಿ ಮುನ್ನಮೆ ಪಣ್ಣಿ ಸಮಂತು ತಂದ ಸಿಂಧುರಪತಿ ಪಟ್ಟವರ್ಧನಮನಾಗಳೆ ಸಾರ್ಚಿದೊಡೇಱಿ (ಕುಸುಮಾ. ೮–೭); ಪೊಂಬಚ್ಚಮಂ ಪಣ್ಣಿ ಬಣ್ಣಮಂ ಕೇಳ್ದಯರ್? (ರಾಮಾಶ್ವ. ೧೨–೨೪). **ಪಣ್**₁ : **೧.** "ಪಣ್-ಸಜ್ಜೀಕರಣೇ (ಸಿದ್ಧಮಾಡು), ಫಲೇ ಚ" (ಶಮಧಾ); ಮಾಣ್ಗೆ ನಿಮ್ಮಯ ಭಯಂ ಪೋಪವಿದೆ ಕಾಳೆಗಕೆ ಪಣ್ಣಜಾಶ್ವಮನೆನುತೆ ನಡೆದನಾ ಗರುಡವಾಹನ ಮಹಾಸತ್ತ್ವದಿಂದೆ (ಚೆಬಪು. ೩೧–೨೯). **೭.** ಅತಂ ಸರಿಯೊಳಾದೊಡಮುಂಚೆಯೆಂಬುದಂ . . . ಚಪ್ಪರಣೆಯೊಳಾದೊಡಂ ಪಣ್ಣೆಂಬುದಂ ಸೈರಿಸಂ (ಕಬ್ಬಿಕಾ. ೧೪೮). ℙ ಇಲ್ಲಿ 'ಪಣ್₂' ಉಲ್ಲೇಖದಲ್ಲಿ ಬರುವ "(ಧ್ವನಿಯು) ಮಧುರವಾಗು; ಹದವಾಗು; ಇಂಪಾಗು" ಎನ್ನುವ ಅರ್ಥವೂ ಶ್ಲೇಷೆಯಾಗಿ ಬರುತ್ತದೆ. **ಹಣ್ಣು**₁ : **೧.** ಸಜ್ಜಿತಃ, ಕಲ್ಪಿತಃ–ಈ ೨ ಹಣ್ಣಿದಾನೆ (ಹಲಾಯು. ೩೭–೬೮); ಹಣ್ಣಿ ಹನ್ನೆರಡಬ್ದವಾಯಿತು [ಪಾಠಾಂ. ಹನ್ನೆರಡುವರುಷಗಳು ಸಂದಲು] ಶೂನ್ಯಸಿಂಹಾಸನವನಕಟಾ ಎನ್ನ ಗುರುವಿನ್ನೆಂದು ಬಿಜಯಂಗೈದು . . . ಮನ್ನಿಸುವನೋ ಎನುತಲಾ ಬಸವಣ್ಣ ಚಿಂತಿಸಿದ (ಪ್ರಭುಲೀ. ೨೨–೩); ಅಣ್ಣನ ಮೊಗವನಯ್ಯನ ಮೊಗವನು ನೋಡಿ ಕಣ್ಣ ನೀರ್ಗಳುಗುಳನುಗುತ ಪೊಣ್ಣನೆ ಕಾಲ್ಗೆ ಬಿದ್ದರು ದೀಕ್ಷೆಯೆಂದಿನ್ನು ಹಣ್ಣಿವು ಕ್ಷಮಿಸೆಂದರಂಜಿ (ಭರಚ. ೪೫–೭೫). **೨.** ಬಳಿಕ ಸಂತೋಷದಲಿ ತನ್ನಯ ಸಲುಗೆ ಬಿನ್ನಹವೆಂಬ ಬೀಜದ ಬೆಳೆಗೆ ಹದವಳೆ ಹಣ್ಣಿ ಪಸರಿಸಿತೆನುತೆ ಹರುಷದಲಿ (ಪ್ರಭುಲೀ. ೮–೨೨). **೩.** ಗಜಘಟೆ ಹಣ್ಣಿವೆಯೇಳೆಲೆ [ಪಾಠಾಂ. ಗಳು ಹಲ್ಲಣಿಸಿವೆ] ಮಗನೆ ನಿಜಪರಿವಾರಕೆ ಬೆಸಗೊಡು ಮಗನೆ (ಹಚಕಾ. ೧೨–೩೦ ರಗಳೆ); ಆಳು ನೆರೆದುದು ನೆಲ ಕುಸಿಯೆ ರಥಜಾಲ ಜಡಿದುದು ಹಣ್ಣಿದಾನೆಯ ಸಾಲು ಮೆಱೆದುವು ಕುಣಿವುತಿದ್ದುವು ಕೂಡೆ ವಾಜಿಗಳು (ಕುಮ್ಯಾದ್ರೋ. ೧–೪೪); ಉದಯಮುಖದಲಿ ಲಗ್ಗೆವಱೆ ಮೊಳಗಿದವು ದುರ್ಗದ ಮೇಲೆ ಗಜ ಹಣ್ಣಿದವು ಹಯ ಹಲ್ಲಣಿಸಿದವು ರಥ ಹೂಡಿದವು ರಣಕೆ (ತೊರರಾ. ೬–೧೮–೩). **೪.** ಕಾಯುವ ದಂಡಿಸಿ ಆತ್ಮನಿಗ್ರಹವ ಮಾಡಿ ಬಟ್ಟಗುತ್ತತನವ ಹಣ್ಣಿ ತಗಹಿನಲ್ಲಿ ಕುಳ್ಳಿರ್ದು ಬೇಡಿಕೊಂಬ ತಪ ತಾನೇಕೆ (ಚನ್ನಪ. ಕ. ೩೨೫–೬೮೩); ಏನ ಹಣ್ಣಿದೆ ಬಸವಮಂತ್ರಿಯದೇನಿನಿತುಮಂ ತಿಳಿಯ ಪೇಳೆನಲು (ಬಸಪು. ೩೧–೧೭); ಹೆಣ್ಣ ಭೋಗಿಸ ಬಂದವನಲ್ಲ ಕದನವ ಹಣ್ಣಲೋಸುಗ ಬಂದವನು (ಮೋಹತ. ೩೫–೫); ಕಣ್ಣು ಸಣ್ಣದು ಆಗಿ ಹಣ್ಣದಿಹುದೊಂದಿಲ್ಲ ತಣ್ಣಗಿಹ ಮನವನುರಿಸುವದು ಇದನು ಕೊಂದಣ್ಣಗಳು ಯಾರು (ಸರ್ವಜ್ಞ. ೧೨೮೧); ಮನಸು ಮುರಿದು ಹರಿವರಾರು ಇವರು ಹಣ್ಣಿದಿಚ್ಛೆಯ? (ಪಲಾನ. ೪೫–೮). **೫.** ಸುಣ್ಣಸೊದೆಗಳ ಸಾರಣೆಯ ಕಾರಣೆಯ ಪಂಚವಣ್ಣಭರಿತದ ರಂಗ[ವಲ್ಲಿ]ಗಳ ವೀಧಿಯೊಳು ಹಣ್ಣಿರ್ದ ಮಕರತೋರಣ ರತ್ನಕಾಂಸ್ಯತೋರಣವೋರಣಂಗಳಾಗೆ (ಸಿದ್ಧರಾ. ೮–೫೫); ಹೆಂಗುಸಿವಳಿಂತೆಂದು ಬಗೆದಾ ಲಿಂಗ ನಾ ಮರುಳಲ್ಲ ಕೇಳಾವಂಗದಿಂ ಬಹುಕಥೆಗಳಂ ನೀ ಹಣ್ಣದಿರು (ಬಸಪು. ೨೪–೬೪); ಆ ಯುವತಿಯರು ಕಾರ್ಯಗಳ ನೆಱೆ ಬೀಯ ಮಾಳ್ಪರು ಕುಟಿಲವಿದ್ಯಾದಿ ಮಾಯೆಗಳ ಹಣ್ಣುವರು ನಿತ್ಯದಿ ಹುಸಿಯನಾಡುವರು (ನಳಚ. ೩–೨೩). **೭.** ದಾರಿದೆಗದವು ಮುಂದೆ ಹೂಡಿದ ತೇರುಗಳು ಹಣ್ಣಿದ ಮದಸ್ತಂಭೇರಮಾವಳಿ ಹಲ್ಲಣಿಸಿದ ಹಯಾಳಿ (ತೊರರಾ. ೨–೩–೫೧); ಲಕ್ಷ್ಮಣಂ ತುರಗ ಸಾರಥಿ ಕೇತನಂಗಳಿಂದೆ ಹಣ್ಣಿದ ವರೂಥಮಂ ತರಿಸಿ ಪೊಱಗಿರಿಸಿ . . . ಆ ಸೀತೆಗಿಂತೆಂದನು (ಜೈಮಿಭಾ. ೧೮–೬೦). **೮.** ಉಂಟುಮಾಡು; ಒದಗಿಸು: ಸತಿಯ ಬಿಡದೊಡೆ ರಾಮ ಖಳಕುಲತತಿಗೆ ಕೇಡನು ಹಣ್ಣದುಳಿಯನು (ಕೌಶಿರಾ. ೨೬–೧೦); ಕಡಲ ತಡಿಯೊಳು ವಿಮಾನವಿಳಿದು ಕಾಲ್ನಡೆಯೊಳು ಮಾಗಧರಾಜ ಒಡೆಯನೊತ್ತಿಗೆ ಬರುತಿರ್ದರಷ್ಟಱೊಳೊಬ್ಬ ಕೆಡುಕ ಹಣ್ಣಿದನೊಂದು ನೋವ (ಭರಚ. ೨೫–೫೧); ಯಾದವ ಪಾಂಡವರ ಬಿಂಕದ ಬಣ್ಣಮಂ ಕೆಡಿಸಿ ಕಾಳಗದೊಳುಬ್ಬಸವನುಱೆ ಹಣ್ಣಿಗಲ್ಲದೆ ಮಾಣೆನಹಿತರ್ಗೆ (ಜೈಮಿಭಾ. ೭–೨೯); ಎಣ್ಣಿದಂದದಿ ನುಡಿದು ಕಲಹವ ಹಣ್ಣಿದನು ದಾರುಕನು (ಕೃಷ್ಣಾಕಾ. ೧೫–೫೨). **೯.** (ಬಲೆ ಮೊದಲಾದುವನ್ನು) ಒಡ್ಡು; ಬೀಸು; ಹರಡು: ವ್ಯಾಧನು ಸೂಸಲ ಚೆಲ್ಲಿ ಜಂತ್ರವ ಹಣ್ಣಿ ಅಡಿಗಲ್ಲನೊಡ್ಡಿ ಹೋದ ಬಳಿಕ ಸೂಸಲ ಕಂಪಿಗೆ ಹೆಗ್ಗಣ ಬಂದು ಬಿದ್ದಂತೆ ಬಿದ್ದಿರಲ್ಲಾ ಮಾಯದ ಬಲೆಯಲ್ಲಿ (ಅಪಚಂ. ೧೫೯–೭೨೬); ಆ ಬಲೆಯೊಳ್ತವೆ ಸಿಲ್ಕಿದಂ ಸಮಂತಾಖುಗೆ ಪಣ್ಣಿ ಪೋದ

ಸಿಡಿಯೊಳ್ಕಿಗೆ ಬಿಟ್ಟ ಬಿಡಾಲನಂದದಿಂ (ಉದ್ಭಟ. ೬-೧೨೬); ಲಲನೆಯಾಲೋಕಂಗಳೋ ವಿಟಕುಲದ ಗಳಪಾಶಂಗಳೋ ಕೋಮಳೆಯ ನೇತ್ರಾಂಶುಗಳೊ ಪಣ್ಣಿದ ಬಲೆಗಳೋ ತಾವು (ಬಸವು. ४०-४); ಮಣ್ಣಿನಾನೆಯ ನಿಲಿಸಿ ಹಗ್ಗವ ಹಣ್ಣಿ ಹಸರಿಸಿ ಮುಚ್ಚಿದರ್ ಕರಿ ಹೆಣ್ಣನಪ್ಪುವೆನೆಂದು ಬಂದಾ ಕಳಿಯ ಬೀಳ್ವಂತೆ (ಸಭಾಗ. ೧೧-೧೪-೨೧). **೧೦.** ಹೂಡು; ಅಳವಡಿಸು : ಜೀವರಥಕೆ ಪ್ರಾಣದಶ್ವ ತಾವೆ ತಾವು ಹಣ್ಣಿವೆ ಎಲ್ಲ ಬೆಳಕು ಎಲ್ಲ ಬಯಲು ವಣ್ಣ ಕಣಕು ಕಣ್ಣಿವೆ (ಅರಳು. ४೫೫-೧೬). **೧೧.** ಬಣ್ಣಿಸು; ವರ್ಣಿಸು; ಹೊಗಳು : ತಾಯಿಮಹಿಮೆಯ ನೋಡಿರೆಂದೆಲ್ಲಾ ಬಣ್ಣಿಸಲು ಜಂಗಮರು ಆ ಬಸವಣ್ಣಗೀಕ್ಷೆಚ್ಚೆಂದು ಜಗವೇ ಹಣ್ಣುತಿರಲಿನ್ನಿತ್ತ ಬಸವನು ಬಂದನೋಲಗಕೆ (ಬಜ್ಜ ಪು. ४೦-೧೮).

**ಪಣ್ಣವೇೞ್**=ಸಿದ್ಧಪಡಿಸಲು ಹೇಳು; ಸಜ್ಜುಗೊಳಿಸುವಂತೆ ಹೇಳು: ಬರವೇಟ್ಪತ್ತಿಯನೆಯ್ದೆ ಪೂಡಿ ತರವೇಟ್ಸೀರೆಲ್ಲಮಂ ಪಣ್ಣವೇೞ್ ಕರಿಯಂ . . . ಬೀಡುವಿಡುವೆಂ ದೇವಾಚಳಪ್ರಸ್ಥದೊಳ್ (ಅರ್ಥನೀ. ೨-೫೩). **ಪಣ್ಣಿಕೊಳ್, ಹಣ್ಣಿಕೊಳ್ಳು**=**೧.** ಸಿದ್ಧಪಡಿಸಿಕೊಳ್ಳು; ಸಜ್ಜುಗೊಳಿಸಿಕೊಳ್ಳು; ಅಣಿ ಮಾಡಿಕೊಳ್ಳು : ಜಲನಿಧಿತಲ್ಪನುಂ . . . ಜಲದವರ್ಣನುಮೆಂಬುದನೀ ನಿದಾಘಮಂ ಕಳೆಯಲೆ ಪಣ್ಣಿಕೊಂಡ ನಸುರಾರಿ (ಜಗವಿ. ೧೭-೭೬); ಭರದೆ ಕೈಕೆಯ ತಂದೆ ಶುಭಮತಿಯಿರದೆ ರಥವಂ ಪಣ್ಣಿಕೊಂಡು ತ್ವರಿತದಿಂದೆಯ್ತಂದು ರಘುಪತಿಗೆಂದನಿಂತೆಂದು (ಕುಮುರಾ. ೨-೪೬). **೨.** ವ್ಯಾಪಿಸು; ಹಬ್ಬು; ಹರಡಿಕೊಳ್ಳು : ಪಂಚಮಲಂಗಳೆಲ್ಲೆಡೆಯೊಳಂ ನಲ್ವಿನಿಂ ಬಾಸಣಿಸಿ ಪಣ್ಣಿಕೊಂಡಿಹುದಿದೇನೆನಲಾಗಿ (ವೀಶೈಪು. ೬-೬-೧೧). **ಪಣ್ಣಿಡು**=ಸಿದ್ಧಪಡಿಸಿಡು; ತಯಾರಿಸಿಡು : ನಿಡಿಯರ್ ಬಲ್ಲಾಯದ ಬಲ್ಲಡಿಗರ್ ವಂದಿರ್ದರಯ್ವರಾಲದ ಕೆಟಿಗಿಂ ತೊಡರ್ದರ್ ನಮ್ಮಯ ಭಕ್ಷದೊಳಡು ಪಣ್ಣಿಡು ಪೋಗು ನೀನು ಮಾನುಂ ತಿಂಬಂ (ಪಂಪಭಾ. ३-೧೨). **ಪಣ್ಣಿ ಬರ್**=**೧.** (ಯುದ್ಧಕ್ಕೆ) ಸಿದ್ಧವಾಗಿ ಬರು; ಸಜ್ಜಾಗಿ ಬರು : ಚತುರಂಗಬಳಪ್ರಬಳಭಾರ ಭಗ್ನಭೋಗೀಂದ್ರಫಣಾಸಹಸ್ರಪೂತ್ಕಾರಮಂ ಕೇಳಲುತ್ಕಂಠನಾಗಿ ಪಡೆಯಂ ಪಣ್ಣಿ ಬರವೇಟಿಂದು ಬಳಾಧ್ಯಕ್ಷಂಗೆ ಬೆಸಸುವುದುಂ (ಮಲ್ಲಿಪು. ೮-೧३೦). **೨.** ಶೃಂಗಾರವಾಗಿ ಬರು; ಅಲಂಕೃತವಾಗಿ ಬರು; ಸಿಂಗರಿಸಿಕೊಂಡು ಬರು : ಅಲ್ಲಲ್ಲಿಗೆ ನೃಪನಂದನರಲ್ಲಲ್ಲಿಗೆ ಪಣ್ಣಿ ಬಂದ ಮದದಾನೆಗಳಂತಲ್ಲಲ್ಲಿಗೆ ಹಯಸಂಕುಳಮಲ್ಲಲ್ಲಿಗೆ ಬರ್ಪ ವಾರವನಿತಾನಿಕರಂ (ಧರ್ಮಾಮೃ. ೮-೨೧೮); ರಾಜಮಂದಿರದ್ವಾರದೊಳ್ ಪಣ್ಣಿ ಬಂದಿರ್ದ ಪಟ್ಟವರ್ಧನಗಂಧಸಿಂಧುರಸ್ಕಂಧಾರೂಢನಾಗಿ ಪುರಮಂ ಪೊಱಮಟ್ಟು (ಚಂದ್ರಪು.೨-೧೧೧); ಪಣ್ಣಿ ಬಂದ ಗಂಧಸಿಂಧುರದ ಪೂರ್ವಾಸನದೊಳ್ಗಂಗಾಂಬಿಕೆವೆರಸಿ ಮೂರ್ತಿಗೊಳಿಸಿ (ವೃಷವಿ. ४-೬ ವ).

[ದೇ.॥ ತಮಿ. ಮಲ. ಪಣ್ಣು; ತೆಲು. ಪನ್ನು]

**ಪಣ್ಣು**2 'ಪಣ್3' ನೋ.

**ಪಣ್ಣುಗೆ, ಪಣ್ಣಿಗೆ** (ನಾ). **೧.** ಸಿದ್ಧಪಡಿಸುವಿಕೆ; ಸಜ್ಜುಗೊಳಿಸುವಿಕೆ: ಗೆಲಾರಕ್ಕೆ-ಉಡುಗೆ, ಪಣ್ಣುಗೆ, ಪತ್ತುಗೆ (ಶಸುದ. ೨೧೧ ಪ್ರಯೋ). **೨.** ಅಲಂಕಾರ; ಶೃಂಗಾರ : ಪೊನ್ನ ಪಣ್ಣುಗೆಯ ಪಿಡಿಯನೇಱ . . . ರಾಜರಾಜಂ ಮದ್ರರಾಜನ ಮನೆಗೆ ಬರ್ಪುದುಂ (ಪಂಪಭಾ. ೧೨-೮೮ ವ); ಕರಿಗಳ್ ಪಣ್ಣಿದ ಪೊನ್ನ ಪಣ್ಣುಗೆಯವಂದೇಳೆಣ್ಬು ನೂಱು . . . ತೆರಳ್ದರೆ (ಎಕ. XV, ಅರಸೀ. ೨೧೬-೧೦; ಕ್ರಿ. 1195); ಗಾಂಧರ್ವದತ್ತೆಯುಂ ಪೊನ್ನ ಪಣ್ಣುಗೆಯ ಪಿಡಿಯನೇಱಿಸಿ ಚಾರುದತ್ತಂ ಮುಂದೆ ಗೊಂಡಾಕೆಯ ವಿದ್ಯಾಗರ್ವಮನೆ ಪೊಗೞುತ್ತಂ ಬಂದು (ಬಂಹರಿ. ४-೨ ವ). **ಪಣ್ಣಿಗೆ: ೨.** ಎಸೆದೊಪ್ಪಿರ್ದ ವಿಮಾನಮಾಲೆ ಖಚರಾನೀಕಕ್ಕೆ ಚಿಹ್ನಂಗಳಾಗಸದೊಳ್ ಪಣ್ಣಿದ ಪೊನ್ನ ಪಣ್ಣಿಗೆಯಿಭಂಗಳ್ ಚಿಹ್ನಮುರ್ವೀಚರಪ್ರಸರಕ್ಕೆ (ಶಾಂತಿಪು. ४-३೮); ಪಣ್ಣಿ [ಪಾಠಾಂ. ಣ್ಣು]ಗೆಯ ರತ್ನಚಯದಿಂ ಕಣ್ಣುಳ್ಕೆ ಜಗಂ ತಟಿಲ್ಲತಾಪ್ರಭೆಯಿಂದಂ ಪಣ್ಣಿಗೃಹಾಂಗಣತಟದೊಳ್ ಪಣ್ಣಿರ್ದುದು ಪಟ್ಟವರ್ಧನಂ ಭದ್ರಗಜಂ (ಜಗವಿ.೧೪-೪೮).

[ಪಣ್ಣು1+-ಗೆ]

**ಪಣ್ಣುದೋಱು** (ಕ್ರಿ). ಹಣ್ಣು ಬಿಡು; ಫಲಬಿಡು : "ಪಣ್ತುದನೆ ಪಣ್ಣುದೋಱಿದುದು" (ಶಬ್ದಮಂ. ೨३).

[ಪಣ್ಣು2(<ಪಣ್3)+ತೋಱು]

**ಪಣ್ಣೆ,** ಪಣ್ಣೆಯ1(ನಾ). **೧.** ಗುಂಪು; ಸಮೂಹ; ನೆರವಿ: ಹಲಬರು ಸುಕುಮಾರರವರು ತಮ್ಮೊಳು ತಾವು ಕೆಲಬರೊಂದೊಂದು ಪಣ್ಣೆಯಲಿ ನಲಿದಾಡುತಿಹರು (ಭರಚ. ೬३-४). **ಪಣ್ಣೆಯ1: ೨.** ವ್ಯವಸಾಯದ ಭೂಮಿ; ಸಾಗುವಳಿಯ ಜಮೀನು : (ಶ). 'ಪಣ್ಣೆ2' ಪರಾ.

**ಪಣ್ಣೆ ಪಣ್ಣೆ** (ದ್ವಿರುಕ್ತಿ) : ಬಣ್ಣಿಸಿ ಸುಪಾಕಮಾಡಿದ ಪಿಟ್ಟು ಪಾಯಸಂ ತಣ್ಣನೆಯ ಕಳಲು ಹಸಿಯಲ್ಲಮಂ ಬಡ್ಡಿಸಲ್ವಣ್ಣೆ ಪಣ್ಣೆಯೊಳು ಕುಳ್ಳಿರ್ದ ಪಂಕ್ತಿಯ ಕೊಳ್ಳುತ್ತಿರ್ದದಾ ಭೂಸುರಾಳಿ (ಸಮ್ಯಕ್ತಾ ೭-೨೪); ನುಣ್ಣಿದ ನುಡಿಯ ನೀಱೆಯರಾರತಿಯ ತಂದು ಪಣ್ಣೆ ಪಣ್ಣೆಯೊಳೆತ್ತಿತವಗೆ (ರಾಮವಿ. ೧೯-೮೧); ಪೆಣ್ಣಂಚೆಗಳು ಕೊಳದೊಳು ಸುಳಿವಂತೆಳೆವೆಣ್ಣುಗಳಾ ನೆಲದೊಳಗೆ ಪಣ್ಣೆ ಪಣ್ಣೆಯೊಳು ಸುಳಿದು ಭರತೇಶಗೆ ಕಣ್ಣ ಹಬ್ಬವ ಕಾಣಿಸಿದರು (ಭರಚ. ೧३-೨३); ಪಣ್ಣೆ ಪಣ್ಣೆಯೊಳಲ್ಲಲ್ಲಿ ನಿಂದಾಗೆಳೆವೆಣ್ಣುಗಳಾಡುತಲಿರಲು ಹುಣ್ಣಿಮೆಚಂದ್ರನ ಕಾಂತಿಯಿಂ ಮಿಗಿಲಾಗಿ ಪಣ್ಣಿರೆ ಹಗಲು ಬತ್ತಿಗಳು (ಜ್ಞಾನಚ. ३४-೧೭).

[ದೇ.॥ ತಮಿ. ಪಣ್ಣೈ]

**ಪಣ್ಣೆಯ**1 'ಪಣ್ಣೆ' ನೋ.

**ಪಣ್ಣೆಯ**2 (ನಾ). ವ್ಯಾಪಾರ; ವ್ಯವಹಾರ; ವೃತ್ತಿ : ನಿಚ್ಚಂ ಪಣ್ಣೆಯದಾ[ವಾ]ಗೆ ಜೂಜು ತನಗಾ ಜೂಜಾಟದಿಂ ಬಂದ ಭಾಸ್ವಚ್ಚಾವಿಹಾಕರದಿಂದೆ ಜಂಗಮಪದಾಬ್ಜಾರಾಧನಂಗೈಯುತುಂ(ಉದ್ಭಟ.೧೨-೯೨).

[<ಸಂ. ಪಣ್ಯ]

**ಪಣ್ಣೆಲೆ, ಹಣ್ಣೆಲೆ** (ನಾ). ಹಣ್ಣಾದ ಎಲೆ; ಪೂರ್ಣವಾಗಿ ಬಲಿತು ಬಣ್ಣಗೆಟ್ಟ ಎಲೆ;ಮುದಿಯೆಲೆ: ತೆಂಕಣ ಗಾಳಿ ಬೀಸುತಿರೆ ಪಣ್ಣೆಲೆ ಪಣ್ಣನೆ ಬೀೞೆ (ಜಗವಿ.೧೪-೨೨); ಒಕ್ಕರ್ಡಿತೆ ನೀರ್ಗೆ ಪಱಿಪಟ್ಟಿಕೆಯ ಪಣ್ಣೆಲೆಯ ಮುಱಗೆ ದೇಸಿಗರಂ ದೇವರ್ಕಳ್ಗೊಡೆಯರ್ ಮಾಟ್ಪುರೆ ನೀಟ್ಕರಿಸದೆ ನಿಮ್ಮ ದೊರೆಗೆ ಬೋಟಿಯರೊಳರೇ (ಶಮದ. ೨೪ ಪ್ರಯೋ). **ಹಣ್ಣೆಲೆ:** ಕೆಲಕೆಲವು ಗಿಡಮರಗಳಿಂದ ಹಣ್ಣೆಲೆಗಳು ಉದುರುತ್ತಿದ್ದುವು (ಬಾಣಅ. ೬೯); ಕೆಲವು ಹಣ್ಣೆಲೆಯಾಗಿ ಕೆಳಕ್ಕೆ ಉದುರುತ್ತವೆ (ರಾಮಾಸ. ೧೧४); ಹಣ್ಣೆಲೆ ಉದುರುವಾಗ ಚಿಗುರೆಲೆ ನಗುವುದು (ಗಾದೆ). [ಪಣ್3+ಎಲೆ1]

**ಪಣ್ತ** 'ಪಣ್2' ಪರಾ.

**ಪಣ್ತನ** (ನಾ). ಹಣ್ಣಿನ ಸ್ಥಿತಿ; ಮಾಗಿ ಪಕ್ವವಾದ ಸ್ಥಿತಿ; ಕಾಠಿಣ್ಯವನ್ನು ಕಳೆದುಕೊಂಡು ಮೆದುವಾಗಿರುವ ಸ್ಥಿತಿ : ದಶಗ್ರೀವನಾತ್ಮಮುಂ, ತನ್ನ ಕಸುಗಾಯ್ತನದೊಗರ್ ಕಳೆದು, ಪಣ್ತನಕ್ಕೆ ತಿರುಗುತಿರ್ಪೊಂದು ಸೂಚನೆ ತೋರುತಿಹುದೆನಗೆ(ಶ್ರೀರಾಮಾ.೭೦೬-೨೨೪).

[ಪಣ್3+-ತನ]

**ಪಣ್ತು** 'ಪಣ್2' ಪರಾ.

**ಪಣ್ದಲೆ** 'ಪಂದಲೆ' ನೋ.

**ಪಣ್ದೆನೆ, ಹಣ್ದೆನೆ** (ನಾ). ಹಣ್ಣಾದ ಧಾನ್ಯದ ಹೊಡೆ; ಮಾಗಿದ ಕದಿರು : ಬೆಳಸುಗಳ ಪಣ್ದೆನೆಗಳ ನಿಱಪ ಹೊಂಬಣ್ಣದ ಹರಿದ್ರಾನುಲೇಪನದ ಮೆಱೆವ ಮೈಸಿರಿಯ ಮಾಣಿಗಲ್ಕಿಂದ ಭೂದೇವಿ ನೆಱೆ ಶೋಭಿಸುವ ಶರತ್ಕಾಲದೊಳ್ಚಿರುಗಿತಧ್ವರಹಯಂ ಧರೆಯ ಮೇಲೆ

(ಜೈಮಿಭಾ.೨೫-೫). **ಹಣ್ದೆನೆ:** ರಾತ್ರಿ ಕಳ್ಳರು ಹಣ್ದೆನೆಗಳನ್ನು ಕೊಯ್ದು ಕೊಂಡು ಹೋಗಿದ್ದಾರೆ (ರೂಢಿ). [ಪಣ್$_2$ + ತೆನೆ$_1$]

**ಪಣ್ಪುರಸು(?)** (ನಾ). (?): ಪುರುಳಿ ಕುಳಿರ್ವಂ ನವಿಲ್ಕೇಕೊರೆಸಣಗಂ ಪಣ್ಪುರಸ ವಲೂರಲ್ ವಾವಲ್ ದುರಿಸೆ ಗಿಳಿ ಪರ್ದು ಪುರವಂ ಮರ ಕುಟಿಗಂ ಪುಜಿಲೆ ಬುಜುಗಿ ಹಸುಬಂ ಪುಣೆವುಲ್ (ಸೂಕ್ತಿಸು. ೩-೧೪೭). [ ? ]

**ಪಣ್ಪುಲ** 'ಪಣ್$_3$' ಪರಾ.

**ಪಣ್ಪುಸರ** (ನಾ). ಹಣ್ಣಿನ ಸಮೂಹ; ಫಲಗಳ ರಾಶಿ : ಉತ್ತುತ್ತೆ ಖರ್ಜೂರ ದ್ರಾಕ್ಷೆ ಸಕ್ಕರೆ ಜೆಲ್ಲ ಮೆತ್ತ್ಯೆಸಿದ ಕಾಯ ಭಾಗ ಒತ್ತದೆ ಕಳಿತ ಸಮಸ್ತ ಪಣ್ಪುಸರಂ[ಪಾಠಾಂ. ಪಣ್ಗೊನೆ]ಗಳಿತ್ತೆ ಬದಲಿ ಮಾಡುತಿಹವು (ಮೋಹತ. ೩-೨೦). [ಪಣ್$_3$ + ಪಸರ]

**ಪಣ್ಪು** 'ಪಂಪು$_1$' ನೋ.

**ಪಣ್ಬೇಟ** (ನಾ). ಹಣ್ಣಿನ ಮೇಲಿನ ಪ್ರೀತಿ,—ವ್ಯಾಮೋಹ: ಒಂದು ದೆವಸಂ ಕಣ್ಬೇಟಕ್ಕೆ ಪಕ್ಕಾದ ಕರೇಣುಗಳಂತೆ ಪಣ್ಬೇಟವಮಾದಾಟವೆ ನಿನ್ನಂ ವನಿವಂಗೆಯ್ವುದಂ (ಶಾಂತಿಪು.೪-೬೬೨).

[ಪಣ್$_3$ + ಬೇಟ$_1$(< ಬೇಂಟ)]

**ಪಣ್ಮರ** (ನಾ). ಹಣ್ಣು ಬಿಡುವ ಮರ; ಫಲವೃಕ್ಷ: ಪಣ್ಮರಗಳ ಪೂಮರಗಳ ತಣ್ಮಲೆದಲೆವೆಲರ ಮಿಡುಗಿಪರಳಲರೆ ಪೊದಟ್ದುಣ್ಬುವ [ಕಂ]ಪಿ ಕರಂ ಕೈಗಣ್ಮುವ ದಂಪತಿಯಲಂಪಿ ನಂದನವನದೊಳ್ (ಬಂಹರಿ. ೧-೨೨); ಕಾಡ ಕಾಯ್ಪಿನ ಬೋಳನಾ ಪಣ್ಗಳಂ ಕಂಡು ನಾಡ ಪಣ್ಮರದಡಿಯ ನರಿಯೆನಲ್ ಬಂದಂ(ಕಾಲೂರ.೧೨೬-೨೬೬).[ಪಣ್$_3$ + ಮರ$_1$]

**ಪಣ್ಯ** (ಗು). ೧. ಮಾರಾಟ ಮಾಡತಕ್ಕ; ವಿಕ್ರಯಿಸತಕ್ಕ; ಕೊಳ್ಳತಕ್ಕ ಅಥವಾ ಮಾರತಕ್ಕ: 'ಪಣ್ಯವಸ್ತು' ಪರಾ.(ನಾ). ೨. ಮಾರಾಟ ; ವಿಕ್ರಯ ; ವ್ಯಾಪಾರ : ಹೊನ್ನೆಂದು ಜಗದಿ ನೀಂ ಕೈಗೆ ಕೊಂಡುದನು ವಿಧಿ ಮಣ್ಣೆನುವನ್ ; ಅವನ ವರ ಮಣ್ಣೆನುವೆ ನೀನು ಭಿನ್ನವಿಂತಿರೆ ವಸ್ತುಮೌಲ್ಯಗಳ ಗಣನೆಯಿಾ ಪಣ್ಯಕ್ಕೆ ಗತಿ ಯೆಂತೊ ? (ಮಂಕುಕ. ೨೧) ; ಮನುಷ್ಯರ ಪಣ್ಯವನ್ನೂ ಬೇಗಾರ ಮತ್ತು ಅದೇ ರೂಪದ ಇತರ ಬಲಾತ್ಕಾರದ ದುಡಿಮೆಯನ್ನೂ ಪ್ರತಿ ಷೇಧಿಸಲಾಗಿದೆ (ಭಾಭಾಸ. ೧೫). ೩. ಮಾರಾಟದ ವಸ್ತು; ವ್ಯಾಪಾರದ ವಸ್ತು: "ವಿಕ್ರೇಯಂ, ಪಣಿತವ್ಯಂ, ಪಣ್ಯಂ-೩ ಮಾರತಕ್ಕ ವಸ್ತುವಿನ ಹೆಸರುಗಳು" (ಸಿದ್ಧಾಂತಿ. ೨೯೪) ; ಅತಿಶಯಮಪ್ಪ ಕಾರ್ತಿಕದ ಪುಣ್ಣಿಮೆಯೊಳ್ . . . ಬಿಲ್ಲನಂಬನಾಯತಗುಣಪಣ್ಯಮಂ ಪಿಡಿದು ಮಾಜಿದೊಡಾಜಿ ತಿಂಗಳಿಂಗಡುಂ ಸ್ಥಿತಿಗತಿಯಿಂದಮಯ್ವಡಿಯ ಲಾಭಮನೀಗು(ಗೆ) ಜಗಕ್ಕೆ ನಿಶ್ಚಯಂ (ಜಟ್ಟಸು. ೬-೩೪) ; ಅಲರಂಬಂ ಪೊಡೆಸೆಂಡುಗೊಂಡೆರ್ದೆಗೆ ಮಾಲ್ಕುಂಗೆಯ್ವ . . . ಮೇಣ್ ಜುಮ್ಮೆಂದು ತೆಂಗಾಳಿಯಿಂ ಪುಲಕಂದಾಳ್ದುವ ವಿಶ್ವನಾಟ್ಯಕೊಲೆವಾ ಪುಣ್ಯಂ ದಲೇಂ ಪಣ್ಯಮೇ ? (ಸಂಸಪ. ೧೦-೮). ೪. ಬೆಲೆ ; ಕ್ರಯ : "ಪಣಃ, ಪಣುಃ, ಪಣನಂ, ಪಣನೀಯಂ, ಪಣ್ಯಂ, ಈ ೫ ಬೆಲೆ" (ಕಾಶಕ್ಕ.೧೦೨). ೫. ವ್ಯವಹಾರ ; ನಡವಳಿಕೆ : ಹರಿಯನುಗ್ರಹ ಮತ್ತೆ ತಂದೆಯ ವರವು ನಿಜದಲಿ ವೀರನಳಗಿರೆ ತರುಚರೇಶ್ವರರೊಳಗೆ ಮತ್ಸರಪಣ್ಯ ಕೊನೆಯಾಯ್ತು (ಕಾಶಿಂರಾ. ೧೬-೮)., ೬. ಹೊಗಳತಕ್ಕುದು ; ಪ್ರಶಂಸೆ ಮಾಡಲು ಯೋಗ್ಯವಾದುದು. ೭. ಮಾರಾಟ ಮಾಡುವ ಸ್ಥಳ; ಅಂಗಡಿ: "ಪಣ್ಯಂ, ವಿಕ್ರಯಶಾಲಾ, ಅಪಣಃ, ವಿಪಣಿಃ—ಈ ೪ ಅಂಗಡಿ" (ಹಲಾಯು. ೪೦-೧೪೧) ; "ಅಪಣಂ ವಿಪಣಿ ಪಣ್ಯವಂಗಡಿಯೆನಿಕ್ಕುಂ" (ಮಂಗರಾ. ೫೮-೮).

**ಪಣ್ಯದ ಅಂಗಡಿ**=ಅರಮನೆಯ ಜೀತದವರು ವ್ಯವಹಾರ ನಡೆಸುವ ಅಂಗಡಿ : ಪಣ್ಯದ ಅಂಗಡಿಗೆ ಶ್ಯಾನಭಾಗನನ್ನೂ ವ್ಯಾಪಾರ ಮಾಡುವುದಕ್ಕೆ ಗೊಲ್ಲನನ್ನೂ . . . ನೇಮಕ ಮಾಡಿಸಿ (ಮಹಾಪಂ. I, ೧೨೭). **ಪಣ್ಯದ ಜನ**=ಅರಮನೆಯ ಜೀತದ ಜನ,—ವರ್ಗ : ಬಾಕಿ ಎತ್ತು, ಆಳು ಯಾವತ್ತು, ಸೀಮೆ ಹೆಣ್ಣುಗಂಡುಜನ, ಅರಮನೆ ಪಣ್ಯದ ಜನ ಎತ್ತು ಸಹಾ, ಜಮಾಯಿಸಿ, ಗಟ್ಟದ ಕೆಳಗೆ ಕಲ್ಲುಹಾಳೆ ಬಳಿಯ ಇದ್ದಂಥಾ ರಸದನ್ನು ಹೆಗ್ಗಳಕ್ಕೆ ತಂದು ಹಾಕುವಂತೆ ದೊರೆಗಳು ಅಪ್ಪಣೆ ಕೊಟ್ಟು ಸಾಗಿಸುತ್ತಾ ಇದ್ದರು (ರಾಜೇಂದ್ರ. ೧೪೫). **ಪಣ್ಯದ ತೋಟ**=ಅರಮನೆಯ ಜೀತದವರಿಗೆ ಸೇರಿದ ತೋಟ : ಗಡಿಗಳಲ್ಲಿ ರುವ ಅರಮನೆಯ ಪಣ್ಯದ ತೋಟಗಳಲ್ಲಿ ಉತ್ಪತ್ತಿಯಾದ ತೆಂಗು, ಹಲಸು . . . ಮುಂತಾದ ಹಸುರುವಾಣಿ ಜಿನಸುಗಳು ಚಿಕ್ಕ ಉಗ್ರಾಣಕ್ಕೆ ಬರುವಂತೆ ಗೊತ್ತು ಮಾಡಿದರು (ಮಹಾಪಂ. I, ೧೨೭). [ಸಂ.]

**ಪಣ್ಯಂಗೆಜಿ**<sup></sup> (ನಾ). ಒಂದು ಸ್ಥಳದ ಹೆಸರು : ತಸ್ಕ ಸೀಮಾನ್ತರಾಣಿ ಪೂರ್ವ್ವಸ್ಯಾಂದಿಶಿ ನೊಲಿ ಬೆಳದಾ ಬೆಳ್ಗಲ್ಮೊಬಿಡಿ ಪೂರ್ವ್ವದಕ್ಷಿಣಸ್ಯಾಂದಿಶಿ ಪಣ್ಯಂಗೆಜಿ (ಎಕ. IV, ನಾಗಮಂ. ೮೫-೬೧ ; 776). [ ? ]

**ಪಣ್ಯಂದ**(ನಾ). ಒಂದು ಬಗೆಯ ಹುಲ್ಲು : "ಪರ್ಜನಾ-ಪಣ್ಯಂದತೃಣ, ಮರದರಿಸಿನ" (ಓಷಧಿ. ೯೧) ; "ಫಣದ-ಪಣ್ಯಂದ ತೃಣ" (ಓಷಧಿ.೧೦೪).

[<ಸಂ. ಪಣ್ಯಂಧ]

**ಪಣ್ಯಕರ್ಮ** (ನಾ). ವ್ಯಾಪಾರದ ಉದ್ಯೋಗ ; ವಾಣಿಜ್ಯದ ಕಸುಬು : ವಣಿಗ್ವಂಶಕ್ಕೆ ಪಾಶುಪಾಲ್ಯ ಕೃಷಿ ಪ[ಪಾಠಾಂ.ಪು]ಣ್ಯ ಕರ್ಮಂಗಳುಮಂ . . . ಯಥಾಯೋಗ್ಯಮುಪದೇಶಂಗೆಯ್ದು (ಆದಿಪು. ೮-೬೪ ವ). [ಪಣ್ಯ+ಕರ್ಮ]

**ಪಣ್ಯಕಾವ್ಯ** (ನಾ). ಹಣದ ಆಸೆಗೆ ಬರೆದ ಕಾವ್ಯ : ಮಾನ್ಯ ವಾಲ್ಮೀಕಿಯಂತೆ ಧನ್ಯ ಶುಕನೊಲು ಹಾಡು, ಪಣ್ಯಕಾವ್ಯವು ಹಾಡೆ ? (ಗಹಿ. ೨೭-೧೨). [ಪಣ್ಯ+ಕಾವ್ಯ]

**ಪಣ್ಯದ್ರವ್ಯ** (ನಾ). ಮಾರಾಟದ ವಸ್ತು; ವಿಕ್ರಯಿಸತಕ್ಕ ವಸ್ತು; ವ್ಯಾಪಾರದ ಸರಕು : ದಾರಿಯಲ್ಲಿ ಅಡ್ಡಗಟ್ಟಿ ಪಣ್ಯದ್ರವ್ಯಗಳನ್ನು ಸೂರೆಗೊಳ್ಳಲು ತೊಡಗಿದರು (ಆರ್ಯಕೀ. ೬೨). [ಪಣ್ಯ+ದ್ರವ್ಯ]

**ಪಣ್ಯನಾರಿ** (ನಾ). ಸೂಳೆ ; ವಾರಸ್ತ್ರೀ ; ಗಣಿಕೆ : "ವಾರಸತಿ . . . ಪಣ್ಯನಾರಿಯೆನೆ ಗಣಿಕೆಯೆನೆ ಸೂಳೆಯುಕ್ಕು" (ಮಂಗರಾ. ೯೦-೫) ; ಅರಣ್ಯದೊಳು ಪಣ್ಯನಾರಿ . . .ಮಾನವ ಮಾರಿ ದಾರಿಗೊಂಡವರ ಸೂರೆ ಗೊಂಬಳು ಗುರುವೆ ಸೇರಿದೆನು ನಿಮ್ಮ (ಪ್ಪೈಲಾರ. ೪೩-೪೬).

[ಪಣ್ಯ+ನಾರಿ$_2$]

**ಪಣ್ಯವಧು** (ನಾ). =ಪಣ್ಯನಾರಿ : ವಿದಿತಂ ಪಣ್ಯವಧುವೊಂದೆ ತೆಬಿ ನಾಗಿರ್ಕುಂ (ಶೃಂಗಾರ. ೩-೨೧) ; ಮುನಿಸಾಪತ್ಯಸಂತಾನವಮಂ ತಕ್ಕು ಗೆಡಿಸಿ ರಾಜ್ಯಂಗೆಯ್ವನಾ ಪಣ್ಯವಧುವಾಟಯೊಳಗನಂಗಂ (ಉದ್ಭಟೇ. ೪-೧೬). [ಸಂ. ಪಣ್ಯವಧೂ]

**ಪಣ್ಯವನಿತೆ** (ನಾ). =ಪಣ್ಯನಾರಿ : ಮೃದುಪದಗತಿಯಿಂ ರಸಭಾವದ ಪೆರ್ಚಿಂ ಪ[ಪಾಠಾಂ.ಪು]ಣ್ಯವನಿತೆಯೊಳ್ ಕೃತಿಸೌಂದರ್ಯದ ಕಣಿಯೆನೆ ವಿದಗ್ಧಬುಧಜನದ ಮನಮನಲೆಯಲೆವೇಡಾ (ಆದಿಪು. ೧-೧೭) ; ನಿರ್ವ್ಯಸನ ದೊಳು ಪಾಲನೆಯೊಳು ಧನದೊಳಹಿಕಾಯದೊಳ್ ವ್ಯವಹಾರದೊಳ್ ಪಣ್ಯವನಿತೆಯೊಳು ಪಡೆಯೊಳತಿಸುಖದೊಳಂ ಭೋಗಮುಕ್ಕು (ಮಂಗರಾ. ೧೫೦-೫೦). [ಪಣ್ಯ + ವನಿತೆ]

**ಪಣ್ಯವಸ್ತು** (ನಾ). =ಪಣ್ಯದ್ರವ್ಯ: ಚತುರವ್ಯಾಪಾರಿಗಳಾದ ಗಂಗಪ್ಪ ನವರು ಜ್ಞಾನವಾಗಲಿ, ಕವಿತೆಯಾಗಲಿ, ಪಣ್ಯವಸ್ತುವಲ್ಲವೆಂಬುದನ್ನು ತಿಳಿದುಕೊಂಡಿದ್ದಾರೆ (ಸಾಸಮಾ. ೧೫೧) ; ಈ ಪಂಚವರ್ಣಗಳ ಸಂಗಮುವೇ ಆಹುದು ನಾಂದಿ ಕುಲದೈಕ್ಯ ಜೀವನಕೆ, ಅತಿನವ್ಯ ಚಿತ್ರಕಲೆಗೆ: ಮಣಿಯ ದಿರು ಪಣ್ಯವಸ್ತುವಿನ ಬೆಲೆಗೆ (ಚಿಂತನ. ೭೭-೨೨). [ಪಣ್ಯ + ವಸ್ತು]

**ಪಣ್ಯವೀಥಿ$_1$,** ಪಣ್ಯವೀಧಿ$_1$ (ನಾ). ವೇಶ್ಯೆಯರು ವಾಸಿಸುವ ಬೀದಿ ; ಸೂಳೆಗೇರಿ : ಆ ಪಣ್ಯವೀಥಿಯೊಳ್ ವಾಪಜಕಾಯ್ದ್ವಕ್ಷು ಚಾಪ ಕುಸುಮಾಸ್ತ್ರವನಾಂತು ಯೇಘೊತ್ತೆಸೆವ ನವ್ಯರೂಪು ಯೌವನ ಸತ್ಕಲಾಪವಿವರ ದೊರೆಗೆಡಿಸಿ (ಭೈರವೇ. ೨-೯೩). **ಪಣ್ಯವೀಧಿ$_1$:** ಅಂಗಸಂಭವನ ಬೀಡುಂದಾಣವೆನಲು ಬೆಡಂಗಾದುದಾ ಪಣ್ಯವೀಧಿ [ಪಾಠಾಂ. ಥಿ] (ಶ್ರೀಪಾಲ. ೯-೬) ; ಗಿಳಿಗಿನಿದು ನುಡಿಗಳಂ ಬರಿಸುತಂ... ಪಾಡುತಂ ನೋಡುತಂ ಬೆಲೆವೆಣ್ಗಳೆಸೆದಿರ್ದರಾ ಪಣ್ಯವೀಧಿಯೊಳು (ಚೆಬಪು. ೧೧-೪೦). [<ಸಂ. ಪಣ್ಯಾವೀಥೀ]

**ಪಣ್ಯವೀಥಿ$_2$** (ನಾ). ವ್ಯಾಪಾರ ನಡೆಯುವ ಬೀದಿ; ಅಂಗಡಿ ಬೀದಿ ; ಮಾರುಕಟ್ಟೆ : "ವಿಪಣಿ ಪಣ್ಯವೀಥೀ ನಾಮಂ" (ವಸ್ತುಕೋ. ೪೬-೭). [ಸಂ. ಪಣ್ಯವೀಥೀ]

**ಪಣ್ಯವೀಧಿ$_1$** 'ಪಣ್ಯವೀಥಿ$_1$' ನೋ.

**ಪಣ್ಯವೀಧಿ$_2$** (ನಾ). = ಪಣ್ಯವೀಥಿ$_2$: ವನ್ಯಮೃಗಗಳ ನಡುವೆ ಗೋವು ಬಂದೇನಹುದು ಪಣ್ಯವೀಧಿಯಲ್ಲಿ ತಾತ್ತ್ವಿಕನಿಗೇನಹುದು ? (ಮಂಕುಕ. ೩೦೯). [ಪಣ್ಯ+ವೀಧಿ (<ಬೀದಿ)]

**ಪಣ್ಯಾಂಗನಾಜನ** (ನಾ). ಸೂಳೆಯರ ಗುಂಪು ; ವಾರಸ್ತ್ರೀ ಸಮೂಹ : ಮತ್ತಿತ್ತ ಮಿಂಚಂ ತಟ್ಟ ಮೆಡಱಿದಂತೆ ಸುತ್ತಿಱಿದ ಕಾಲ್ಗಾಪಿನ ಕಡಿತಲೆಯ ಬಳಸಿದಗಣ್ಯಪಣ್ಯಾಂಗನಾಜನದ ನಡುವೆ ಮಣಿ ಮಯಪೀಠಂಗಳನೇಱಿ (ಪಂಪಭಾ. ೩-೫೫ ವ) ; ಭೃಂಗಕುಲನೀಲಾಳಕಂ ಗಳ ನಭಂಗಳ ಬೆಳಂಗಿಸುವ ಮಧುರವಚನಂಗಳರುಣಪ್ರವಾಳಂಗಳ ನಖಂಗಳ ಲತಾಂಗಿಯರೆನಿಪ್ಪ ಪಣ್ಯಾಂಗನಾಜನವೆಸೆದುದು (ಹಚಕಾ. ೪-೪೦) ; ಅಗಣ್ಯಲಾವಣ್ಯಪಣ್ಯಾಂಗನಾಜನದ ಭಾಗ್ಯದ ಸೌಭಾಗ್ಯದ ನಯದ ಬೀಯದ ಚಾಗದುಪಭೋಗದೆಸಕದೊಳಂ (ಪುಷ್ಪಪು. ೨-೭೭ ವ). [ಸಂ.]

**ಪಣ್ಯಾಂಗನಾವೀಧಿ**(ನಾ). = ಪಣ್ಯವೀಥಿ$_1$ : ಸೊಬಗುವೆತ್ತ ಪಣ್ಯಾಂಗನಾ ವೀಧಿಗಳೊಳಂದಂಬಡೆದಿರ್ದುಮತಿಮನೋಹರಮನಪ್ಪ ಕೆಯ್ದುರ್ವುದೆಂತೆಂ ಡೊಡೆ (ಜಗವಿ. ೨-೩೩ ವ) ; ಹಂತಿ ಹಂತಿಯ ಭವ್ಯಭವನಗಳನೀಕ್ಷಿಸುತ ಲಂತರಾಂತರದ ಮಣಿಮಾಡಗಳ ಸಾಲುಸಾಲಿಂ ತೋರ್ಕೆವಡೆದ ಪಣ್ಯಾಂಗನಾವೀಧಿಯೊಳು ಬರುತಿರಲು (ಭಕ್ತಾಚ. ೨-೬). [<ಸಂ. ಪಣ್ಯಾಂಗನಾವೀಥೀ]

**ಪಣ್ಯಾಂಗನೆ** (ನಾ). = ಪಣ್ಯನಾರಿ : "ರೂಪಾಜೀವಾ, ವೇಶ್ಯಾ, ಗಣಿಕಾ, ಪಣ್ಯಾಂಗನಾ, ಕ್ಷುದ್ರಾ – ಈ ೫ ಸೂ(ಟಿ)ಳೆ" (ಹಲಾಯು. ೮೦-೩೩೬) , ಪದ್ಮಾವತಿಯೆಂಬಚ್ಚರಸಿಯೆ ತತ್ಪುರದೊಳ್ ವಸಂತಸೇನೆ ಯೆಂಬ ಪಣ್ಯಾಂಗನೆಯಾಗಿರೆ (ಶಾಂತಿಪು. ೬-೮೬ವ); ಗೀತನೃತ್ಯಪ್ರಸೂತಿಕಾ ಸುತ ಪಣ್ಯಾಂಗನಾಪಾಪಕರ್ಮದೀನಾನಾಥಜನದಾನಶಾಲಾವಿವಾಹಾದಿ ಮಂಗಳಗೇಹವರ್ಜಿತಮುಂ . . . ಅಪ್ಪ ಭೈಕ್ಷಾಸಿದ್ಧಿಯೊಳು (ಅಜಿಪು. ೭-೧ ವ) ; ವಿಚಿತ್ರಮಹಿಮಂ ಕೆಲಬರ್ ಗಣೇಶ್ವರರಂ ಕರೆದು ನೀವೆಲ್ಲರುಂ ಮರ್ತ್ಯಲೋಕದೊಳು ಮಂಗಳವಾಡದ ಪಣ್ಯಾಂಗನೆಯರೊಳೊರ್ಬರುಳಿಯ ದಂತೆ ಎಲ್ಲರ್ಗಂ ಬೇಱಿಬೇಱಿಯೊತ್ತೆಗಳನಿತ್ತಲ್ಲಲ್ಲಿ ನೆರೆದಿಪ್ಪುದು ಎಂದು ಬೆಸಸಿ (ಬಸರ. ೧೨-೭೩) ; ಪಣ್ಯಾಂಗನೆಯತಿಶಯಲಾವಣ್ಯಮನವಳಂಗ ದಂದಮುಮನಾಕೆಯ ತಾರುಣ್ಯದ ಸೊಬಗಂ ಕಂಡಂ ಫಣ್ಯಧಿಪಾಭರಣ ಚರಣಸರಸಿಜಭೃಂಗಂ (ವೃಷವಿ. ೨೮-೧೭). [ಸಂ. ಪಣ್ಯಾಂಗನಾ]

**ಪಣ್ಯಾಕುಲ** (ನಾ). ವೇಶ್ಯೆಯರ ಗುಂಪು : ಮುಂತೆ ಮೆಱೆವ ಪಣ್ಯಾ ಕುಲದ ಕಂತು ಮೋಹನವೀಧಿ ವಿಸ್ತರಿಪಡರಿದು ಜಸದಿಂ, ತೇಜದಿಂ . . . ಶೋಭಿಸೆ ಕುತೂಹಲದೊಳುಂ ತಣಿವ ತಾಣಮೆನಲು (ಲಿಂಗಪು. ೧೧-೨೮). [ಸಂ.]

**ಪಣ್ಯಾಗಾರ** (ನಾ). ವ್ಯಾಪಾರ ಮಾಡುವ ಸ್ಥಳ; ಅಂಗಡಿ : ದಿಗವನಿನಭೋಭೋಗಾಭೋಗಂ ಮದನ್ವಯಮಾಗೆ ವಸ್ತುಗಳ ಬಟಿಯಂ ಪಣ್ಯಾಗಾರ ಸ್ವವಾಹನದೇವರೊಳ್ ಸೊಗಯಿಸೆ (ಶಾಂತಿಪು. ೧೧-೨೦). [ಪಣ್ಯ + ಅಗಾರ]

**ಪಣ್ಯಾಜೀವ** (ನಾ). ವ್ಯಾಪಾರದಿಂದ ಜೀವನ ನಡೆಸುವವನು ; ವ್ಯಾಪಾರಿ ; ವರ್ತಕ : "ಪಣ್ಯಾಜೀವಃ, ವಣಿಕ್, ಪ್ರಾಪಣಿಕಃ, ನೈಗಮಃ, ವೈದೇಹಃ – ಈ ೫ ಹರದಂ" (ಹಲಾಯು. ೯೩-೪೧೭) ; "ವೈದೇಹಕಃ, ಸಾರ್ಥವಾಹಃ, ನೈಗಮಃ, ವಾಣಿಜಃ, ವಣಿಕ್, ಪಣ್ಯಾ ಜೀವಃ, ಆಪಣಿಕಃ, ಕ್ರಯವಿಕ್ರಯಿಕಃ – ೮ ವರ್ತಕತನ ಮಾಡುವವನ ಹೆಸರು" (ಸಿದ್ಧಾಂತಿ. ೨೯೭). [ಸಂ.]

**ಪಣ್ಯಾಜೀವಿ** (ನಾ). = ಪಣ್ಯಾಜೀವ : ತೀವಿದರು ಹೊಱವಳಯದಲಿ . . . ಪಣ್ಯಾಜೀವಿ ವಾಮನ ಮೂಕ ಬಧಿರಾಂಧಾವಳಿಗಳೊಪ್ಪಿದರು ಸಕಲದಿಶಾಸಮಾಗತರು (ಕುಪ್ಯಾಆ. ೧೨-೨೧). [ಸಂ. ಪಣ್ಯಾಜೀವಿನ್]

**ಪಣ್ಯಾರ** 'ಪಣಿಯಾರ' ನೋ.

**ಪಣ್ಯೆ** (ನಾ). ೧. = ಪಣ್ಯನಾರಿ : ಸಕಳಮಹಿಳಾಪ್ರಪಂಚಂ ಸ್ವಕೀಯೆ ಪರಕೀಯೆ ಪಣ್ಯೆಯೆಂದಿಂತು . . . ಮೂಱುತೆಱನಾಗಿರ್ಕುಂ (ಶೃಂಗಾರ. ೨-೨೦) ; ಪ್ರಕಟತರ ನಾಯಿಕೆಯರಾ ಸ್ವಕೀಯೆ ಪರಕೀಯೆ ಪಣ್ಯೆಯೆನೆ ಮೂಱುತೆಱಂ (ರಸರ. ೩-೮೯) ; ತರಳಾಪಾಂಗಪ್ರಕಾಶಂ ಕೆದಱಿ ಮದನಬಾಣಂಗಳಂ . . . ಬಿಂಬಾಧರರಾಗಂ ರಾಗಮಂ ನೋಳ್ಪರೊಳೆ ಪಡೆವುತಂ ಪೋಯ್ತು ಪಣ್ಯಾ[ಪಾಠಾಂ. ಣ್ಯ]ಪ್ರತಾನಂ (ರಾಜಶೇ.೧೧-೭೮). **೨.** ಒಂದು ಬಗೆಯ ಸಸ್ಯ ; ಕಂಗೊಂಗೆ : "ಪಾರಾವತಾಂಘ್ರಿಃ, ಕಟಭೀ, ಪಣ್ಯಾ, ಜ್ಯೋತಿಷ್ಮತೀ, ಲತಾ – ೫ ಕಂಗೊಂಗೇಗಿಡ" (ಸಿದ್ಧಾಂತಿ. ೧೪೬) ; "ಅಗ್ನಿಬಳ್ಳಿ, ಇರುಂಬಳ್ಳಿ, ಎರುಂಬಳ್ಳಿ, ಚಟಕಿ ಹಂಬು, ಕಂಗು . . . ಪಣ್ಯೆ, ಮಿಂಚಿನ ಬಳ್ಳಿ" (ಸಸ್ಯನಿ. ೨೮). [ಸಂ. ಪಣ್ಯಾ]

**ಪಣ್ವ** 'ಪಣ್$_2$' ಪರಾ.

**ಪತ$_1$** 'ಪತ್ತ$_1$' ನೋ.

**ಪತ$_2$** (ನಾ). ದಾರಿ ; ಹಾದಿ ; ಮಾರ್ಗ : ಪಥ–ಪತ (ಶಮದ. ೨೫೫ ಪ್ರಯೋ) ; ಮಾರ್ಗ ಮೂಱಾಗಿರುತಿಹುವು ಸಂಪೂರ್ಣಧನ ಗುರುಪರಿ ಚರಿಯ ಪರಿವರ್ತನೆಗಳೆಂಬಿನಿತನತಿಗಳೆದು ತಿರುಗಿ ಬಂದೊಡೆ ನಾಲ್ಕನೆಯ ಪ[ಪಾಠಾಂ. ಮು]ತ ದೊರಕಲರಿಯದು ಕಳೆಗಳನು ಸಂವರಿಸುವ ನರೋ ತ್ತಮರುಗಳಿಗೆ (ಕುಪ್ಯಾಉ. ಓರಿಇ. ೪-೮೮). [<ಸಂ. ಪಥ]

**ಪತಂಗ$_1$** (ನಾ). **೧.** ಹಕ್ಕಿ ; ಪಕ್ಷಿ: "ಪತತ್, ಪತಂಗಃ, ಪತಗಃ . . . ವಾಜೀ, ದ್ವಿಜಃ – ಈ ೨೬ ಹಕ್ಕಿ" (ಹಲಾಯು. ೪೦-೮೪) ; ಕೊಂದು ಕಾಲಾಂತರಕೆ ಭೂಸುರವೃಂದವೈರಿಯು ಪರಶುರಾಮನ ಚಂದವಱಿಯದೆ ಬಂದು ಹಳಚಿದನಾ ಪತಂಗಗಳ (ಸಂಭಪ. ೨೬-೩೫). 'ಪತಂಗಾಧಿಪ' ಪರಾ. **೨.** ಹಾರುವ ಹುಳು ; ಮಿಡತೆ ; ಶಲಭ : "ಶಲಭಂ ಪತಂಗಮೆಂದಱಿಗಿವಱಿಱೊಳ್" (ವಸ್ತುಕೋ. ೪೩-೨೩) ; "ಶಲಭಮೆಂದೆನೆ ಪತಂಗಕ್ಕೆ ಪೆಸರದು" (ಮಂಗರಾ. ೫೨-೧೦) ; ತುಂಬಿ ಪತಂಗ ನೊಣ . . . ತೊನಸೆ ಮೊದಲಾದುವಕ್ಕೆ ಸ್ಪರ್ಶನ ರಸನ ಘ್ರಾಣಮುಮಕ್ಕು (ಶಾಸ್ತ್ರಟೀ. ೧೧೭-೬). **೩.** (ಬೆಳಕಿನಿಂದ ಆಕರ್ಷಿತವಾಗಿ ದೀಪಕ್ಕೆ ಮುತ್ತುವುದರಿಂದ ರೆಕ್ಕೆ ಉದುರಿ ಹೋಗುವ) ಒಂದು ಬಗೆಯ ರೆಕ್ಕೆಹುಳು ; ದೀಪದ ಹುಳು; ಈಚಲು ಹುಳು : ಅಂತು ತಾಗಿದ ಸಿಂಧುನಂದನನ ಕೋಪಶಿಖಿಶಿಖಾಕಳಾಪಂಗಳೊಳ್ ಪುಡುಪುಡನಬ್ಬಿ ಸಾಯಲೆಂದು ಪಾಯ್ವ ಪತಂಗಂಗಳಂತೆ ಸೋಮಕಶ್ರೀಜಯ ಪ್ರಮುಖನಾಯಕರೊಂದಕ್ಷೋಹಿಣೀಬಲಂಬೆರಸು ಭರಂಗೆಯ್ದಾಂತೊಡೆ

(ಪಂಪಭಾ. ೧೧-೩೯ ಪ) ; ಸರ್ಪನ ಸಂಯೋಗ ಜ್ಯೋತಿಯ ಪತಂಗನ ಬೆಸನದಂತೆ (ಬಸವ. ೮೧೨) ; ಪಣ್ಣಿಂದು ಭ್ರಮಿಸಿ ಪತಂಗ ದೀಪದಿ ಬಿದ್ದು ಕಣ್ಣುಗೆಡುವುದನು ಕಂಡು ಕಂಡಜೀಯ (ಪುರಂದ. ಧಾ. ೫-೯೫-೪) ; ನಿನ್ನಂಗರಮ್ಯತಾದೀಪಶಿಖಿ ಪಾರ್ಥನ ವಿರಾಗದ ಪತಂಗಮಂ. . . ಸೆಳೆದೆಳೆದು ಸುಟ್ಟುರಿಸಿ ಜಾಜ್ವಲ್ಯಮಪ್ಪಂತೆವೋಲ್ ನೆಗಳ್ದಪೆಂ (ಚಿತ್ರಾಂಗ.೨೯-೮೦೦). **೪.** ಮೈಯಲ್ಲಿ ಬೆಳಕನ್ನುಳ್ಳ ಒಂದು ಬಗೆಯ ಹಾರುವ ಹುಳು; ಮಿಂಚುಹುಳು ; ಹೊನ್ನೆಯ ಹುಳು ; ಮಿಣುಕುಹುಳು : ದ್ವಿರದಂ ಮತ್ಸ್ಯಕಂ ಪತಂಗಂ ಭ್ರಮರನಹಿಯೆನಿಪ್ಪಿಂತಿವೇಕೇಂದ್ರಿಯಾರ್ಥಂ ತಿರುಗುತ್ತಿರ್ದಪ್ಪುವು (ರಕ್ಷಾ.ಶ. ೨೪). **೫.** ಸೂರ್ಯ ; ರವಿ : "ರವಿ ಮಾರ್ತಾಂಡಂ ಪತಂಗಂ ತಪಿ ತಪನ . . . ತರಣಿ ಸಪ್ತಾಶ್ವನಾದಿತ್ಯ ನಕ್ಕುಂ" (ವಸ್ತುಕೋ. ೧೧-೬೪) ; ಪತಂಗನೂರ್ಧ್ವವಾಜಿಯ ಕಡೆವಾಯ್ಗ ಳಿಂದುಗುವ ಫೇನವಿತಾನದೊಳಾದಮೊಂದಿ ಸಂಶಯಮನೆ ಮಾಟ್ಟು ವಾತುರದ ತೂಳಿಲಗೊಂಬಿನ ತೂಲರಾಶಿಗಳ್ (ಕಾದಂಪೂ. ೧೨೧) ; ತಂಗದಿರನನಿಮಿಷ ತಾರಕೆಗಳು ಮಸಳಿಸೆ ಪತಂಗ ಪರ್ವತವ ಆಡರಿ ಬಂದನು (ಕನಕ. ೧೬೯ ಪಲ್ಲವಿ) ; ಜಂಗಮನಿರ್ಗಮನಪ್ರಣಿವರದ ಪತಂಗಮಹಿತಶಶಿ ವಸುನಯನಾ ಭವಭಂಗ ಮನೋಜ್ಞವಿಹಂಗಗಮನ ಸುತಾಂಗ ಮಹಂತ ಜಯ (ಉದ್ಭದೇ. ೨-೧). **೬.** ದುಂಬಿ ; ಭ್ರಮರ : ಶ್ರೀಮಹಿಳಾನನ ಮಂಜುಳತಾಮರಸಪತಂಗ ವಿಷ್ಣುಪದಭಕ್ತಿರಸೋದ್ದಾಮ ಪೃಥುವಂಶ ದೇಳ್ಗೆಯನಾ ಮೈತ್ರೇಯಂಗೆ ಶಕ್ತಿಸುತನಿಂತುಸಿರ್ದಂ (ವಿಷ್ಣುಪು.೧-೪-೧). **೭.** "ಒಂದು ತರದ ಭತ್ತ" (ಗಂಗಾಮ. ೧೯೬). **೮.** ಚಿಟ್ಟೆ ; ಪಾತರಗಿತ್ತಿ : ಪತಂಗಕ್ಕೂ ಹಾತೆಗೂ ವಿಶೇಷ ತಾರತಮ್ಯವಿಲ್ಲ. ಪತಂಗವು ವಿಶ್ರಮಿಸುವಾಗ ರೆಕ್ಕೆಗಳನ್ನು ಬೆನ್ನಿನ ಮೇಲೆ ನೆಟ್ಟಗೆ ಜೋಡಿಸಿ ಹಿಡಿಯುವುದು (ಬಾಲಪ್ರ. II, ೧೦೮೪). **೯.** ಬಾಣ ; ಅಂಬು ; ಶರ : "ಶಲಭಂ ಬಾಣ ವಿಹಂಗಮಂ ರವಿ ಪತಂಗಾಖ್ಯಾನ" (ನಾನಾರ. ೬೨). **೧೦.** ಕಾಗದದಿಂದ ಮಾಡಿದ ಒಂದು ಬಗೆಯ ಗಾಳಿ ಪಟ : (ಕಿ). **೧೧.** ಒಂದು ಪರ್ವತದ ಹೆಸರು : ತ್ರಿಕೂಟ ಕುರು ವಿಂದ ಪತಂಗ ರುಚಕ ನಿಷಧವೆಂಬೈದು ಗಿರಿಗಳೇ ತೆಂಕಣ ಗಂಧಮಾದನ ಶೈಲದ ಪಡುವಲ ವಿಪುಲಾದ್ರಿಯ ಮಧ್ಯಭಾಗದೊಳಗಿಹವು(ವಿವೇಕ.೨೧೪).

**ಪತಂಗದ ಹುಳು**=ಪತಂಗ **೩** : "ಪತಂಗಃ, ಶಲಭಃ-೨ ಪತಂಗದ ಹುಳುವಿನ ಹೆಸರುಗಳು" (ಸಿದ್ಧಾಂತಿ. ೧೬೨). [**ಸಂ.**]

**ಪತಂಗ₂**, ಪಾತಂಗ (ನಾ). **೧.** ಒಂದು ಬಗೆಯ ದೊಡ್ಡ ವೃಕ್ಷ ಮತ್ತು (ಕೆಂಪುಬಣ್ಣವನ್ನು ತಯಾರಿಸುವ) ಅದರ ತೊಗಟೆ : ಬೊಬ್ಬುಲಿ ಪಚ್ಚಾರಿ ಪತಂಗಮೆಕ್ಕೆ ಮೊದಲಾದುರ್ವೀರುಹಂ ರಾಜಿಕುಂ (ಯಾದಚಂ. ೪-೪೫) ; ಪತಂಗ, ಸಪ್ಪಂಗ (ಮೈಔಗಿ. ೧೫-೨೬೩) ; ಮೆಣಸು, ಅಡಿಕೆ, ಪತಂಗ, ಸಿಂಗಾಪುರಿ (ಮುಂಬಪ್ರಾ. ೧೧೪). **೨.** ಒಂದು ಬಗೆಯ ಗಂಧದ ಮರ ; ರಕ್ತಚಂದನ : "ಪತಂಗಃ— ಪತಂಗ, ರಕ್ತಚಂದನ" (ಒಷಧಿ. ೯೧) ; ಬೆಳಲಾಲಂ ಮತ್ತಿ . . . ಪತಂಗಂ ಪುಲಿಂಗಿಲ್ ತಮಾಲಂ ಮೊಳಗಾಚಂ ನೆಲ್ಲಿ ನೇಱಿಲ್ ತದುಕು ಪನೆಗಳೊಪ್ಪಿರ್ಕುಮಾ ಕಾಡೊಳೆತ್ತಂ (ಶಬಶಂ. ೩-೩೨). 'ಪತಂಗ₁', 'ಪತ್ರಾಂಗ' ಪರಾ. **ಪಾತಂಗ** : **೩.** ಒಂದು ಬಗೆಯ ಮರ : "ಪಾತಂಗ-ಆಲ" (ಒಷಧಿ. ೯೬) ; ಆತ ಚಿಕ್ಕಯ್ಯನಡಗುವಾರಣ್ಯದ ಜಾತಿವೃಕ್ಷವನೇನೆಂಬೆ ಭೂತಾಳಿ ಬೂರುಡೆ ಮಿಟ್ಟುಲಿಯ ದಿಂಡ ಪಾತಂಗ ಮುಗುಳಿಯ ಮರನು (ನಿಜಸಾಂ. ೧-೫೫).

[**ದೇ.?./ ತೆಲು.** ಪತಂಗಚೆಕ್ಕ./**ಹಿಂ. ಮರಾ.** ಪತಂಗ್]

**ಪತಂಗಮಂಡಲ** (ನಾ). ಸೂರ್ಯಮಂಡಲ : ಪತಂಗಮಂಡಲಮುಪರ ಗಿರಿತಟಮನೆಯ್ದುವುದುಂ (ಪಂಪಭಾ.೧೨-೮೮ ಪ). [ಪತಂಗ₁ + ಮಂಡಲ]

**ಪತಂಗಮಣಿದೀಪಿಕಾನ್ಯಾಯ** (ನಾ). [ನ್ಯಾಯ] ದೀಪದ ಹುಳುವು ನಿಜವಾದ ದೀಪವೆಂಬ ಭ್ರಮೆಯಿಂದ ಮಣಿದೀಪಕ್ಕೆ ಮುತ್ತುವುದರಿಂದ ಅಪಾಯವಿಲ್ಲದಿದ್ದರೂ ವ್ಯರ್ಥಪ್ರಯತ್ನ ವಾಗುವುದೆಂಬ ನ್ಯಾಯ : ಆತನು ಪುನಃ ಪುನಃ ಅಲ್ಲಿಗೆ ಹೋಗುತ್ತಿ ರುವುದು ಪತಂಗಮಣಿದೀಪಿಕಾನ್ಯಾಯವೆಂದೂ ಕರುವಿಯನ್ ಎಂಬ ಆತ ನನ್ನು ಎಚ್ಚರಿಸಿಬಿಡಬೇಕು (ಮಂತ್ರಶ. ೧೩೧-೨೦). [**ಸಂ.**]

**ಪತಂಗವೃತ್ತಿ** (ನಾ). **೧.** ದೀಪದ ಹುಳುವಿನ ನಡವಳಿಕೆ,— ವ್ಯವಹಾರ. **೨.** (ಅಲಂ) ಪೂರ್ವಾಪರವಿವೇಚನೆಯಿಲ್ಲದೆ ಮುನ್ನುಗ್ಗುವುದು : ಮತಿಹೀನರಪ್ಪ ಮನುಜರ್ ಪತಂಗವೃತ್ತಿಯನೆ ಕೊಂಡು ಕೊನೆಯುತ್ತಿರ್ಪರ್ ಸತತಮುದೆಂತುಂ ವಿಬುಧಪ್ರತತಿಗನಿಷ್ಟಂ ನಯಾಗಮುಕ್ಕೆ ವಿರುದ್ಧಂ (ಪಂಚತಂ. ೨೧೭-೨) ; ನಮ್ಮ ಭುಜಬಲದ ವಿಜಿಗೀಷುವೃತ್ತಿಯನೆ ಮುಂದಿಟ್ಟು ಪತಂಗವೃತ್ತಿಯನೆ ನೆಗಟ್ಟುದುಚಿತ ಮಲ್ಲದು ಸಮಯೋಚಿತಕ್ಕೆ ತಕ್ಕಂತೆ ನೆಗಟ್ಟುದೆ ಮಂತ್ರಂ (ಅನಂತ. ೧೩-೫೯ ಪ). [ಪತಂಗ₁+ವೃತ್ತಿ]

**ಪತಂಗಸೂತಜ** (ನಾ). ಸೂರ್ಯನ ಸಾರಥಿಯಾದ ಅರುಣನ ಮಗ ; ಜಟಾಯು : ಶೀವಿದುತ್ಸವದಿಂದ ವರರಾಜೀವಲೋಚನನೈದಿ ದನು ಪರಿಭಾವಶುದ್ಧಿಯ ಮನದ ತಪದ ಪತಂಗಸೂತಜನ (ತೊರರಾ. ೩-೧-೪೫). [**ಸಂ.**]

**ಪತಂಗಾಧಿಪ** (ನಾ). ಪಕ್ಷಿಗಳ ಒಡೆಯ ; ಪಕ್ಷಿರಾಜ ; ಗರುಡ : "ಪಿಂಗದೆಯೆಲರುಣಿವಗೆಯ ಪತಂಗಾಧಿಪ ಗರುಡನಕ್ಕು ಪಕ್ಕಿಗಳಾಣ್ಮಂ" (ಕವಿಕಂ. ೨೬). [ಪತಂಗ₁ + ಅಧಿಪ]

**ಪತಂಗಿ** (ನಾ). ಹಕ್ಕಿ ; ಪಕ್ಷಿ : "ಪತಂಗಿ ಪತ್ರಿ[ತ್ರಿ]ಯೆನಿಕ್ಕುಂ" (ವಸ್ತುಕೋ. ೪೪-೨೪). [**ಸಂ.** ಪತಂಗಿನ್]

**ಪತಂಗಿಕೆ** (ನಾ). **೧.** ಒಂದು ಬಗೆಯ ಸಣ್ಣ ಪಕ್ಷಿ. **೨.** ಒಂದು ಬಗೆಯ ಸಣ್ಣ ಜೇನುನೊಣ ; "ಬಿಳೀಜೇನುತುಪ್ಪ ಮಾಡುವ ನೊಣ" (ಗಂಗಾಮ. ೧೯೬). **೩.** ಬಿಲ್ಲಿನ ಹೆದೆ. [**ಸಂ.** ಪತಂಗಿಕಾ]

**ಪತಂಗಿಸು** (ಕ್ರಿ). **೧.** ಆವಿಯಾಗು ; ಹಬೆಯಾಗು : ಭೂಮಿಯ ಮೇಲಿನ ನೀರೇ ಸೂರ್ಯಕಿರಣಗಳಿಂದ ಪತಂಗಿಸಿ ಹೋಗಿ ಮೋಡವಾಗಿ ಮತ್ತೆ ಮಳೆಯಾಗಿ ಬರುವುದು (ನಡೆದಾ. II, ೧೫೫೩). **೨.** ಬಟ್ಟಿ ಇಳಿಸು ; ಸಾರವನ್ನು ತೆಗೆ : ಎರಡು ಸಾರಿ ಪತಂಗಿಸಿ ತೆಗೆದ ಕಟು ಮದ್ಯಸಾರ (ನಿಬಂಧ. II, ೧೭೯).

[ಪತಂಗ₀ (**P**←**ತಮಿ.** ಪತಙ್ಕ) + -ಇಸು₃./**ತೆಲು.** ಪತಂಗಿಂಚು]

**ಪತಕರಿಸು** 'ಪತಿಕರಿಸು' ನೋ.

**ಪತಗ** (ನಾ). **೧.** ಹಕ್ಕಿ ; ಪಕ್ಷಿ : "ಪತತ್, ಪತಂಗಃ, ಪತಗಃ, ಪತತ್ರೀ . . . ದ್ವಿಜಃ—ಈ ೨೬ ಹಕ್ಕಿ" (ಹಲಾಯು. ೪೦-೮೪) ; ಪದಪಿನಿಂ ಕ್ರಿಮಿಕೀಟಪತ[ಪಾಠಾಂ.ತಂ]ಗನಿಕರಕ್ಕೆ ಪಶುವಧಿಕ ಪಶುವಿಗೆ ಮನುಜನಧಿಕ (ಷತಿಲ. ೧೪-೪). **೨.** (ಬಣ್ಣಬಣ್ಣದ ರೆಕ್ಕೆ ಗಳನ್ನುಳ್ಳ) ಹಾರುವ ಕೀಟ ; ಚಿಟ್ಟೆ : ಆರಣ್ಯಕದ ಪುಷ್ಪಗಳ ಮೂಸುವವರಾರು ? ಅರಿಹರು ಪತಗದುಡುಪನು ಹುಡುಕಿ ಮೆಚ್ಚಲ್ ? ಬೇರೊಬ್ಬರೆಣಿಕೆಯಿಲ್ಲದೆ ಪ್ರಕೃತಿ ತನಗೆಂದೆ ಸ್ವಾರಸ್ಯವೆಸಗುವಳೊ ! (ಮಂಕುತ. ೫೬೬). [**ಸಂ.**]

**ಪತತಿ** (ನಾ). (?) : ಪ್ರಿಯ ಚೆಲ್ವ ಚೆಲ್ವ ಸಂಪನ್ನ ಕಲಜನವರ್ಜಿತನ್ ಧರೆಗೀಶಂಗೆ ಓವದೊರ ಪತತಿಯ ಅಱಿದು ಸುರಲೋಕಕ್ಕೆ ಏಱಿದನ್ (ಎಇ. IX, ೨೦-೧೦; ಸು. 800). [ ? ]

**ಪತತ್ಪ್ರಕರ್ಷ** (ನಾ). [ಕಾವ್ಯಮೀ] ವಾಕ್ಯದಲ್ಲಿ ಬರುವ ಪದದೋಷ ಗಳಲ್ಲಿ ಒಂದು ; "(ಅಲಂಕಾರವಾಗಲಿ ಬಂಧವಾಗಲಿ) ಮೊದಲು

ಉತ್ಕೃಷ್ಟವಾಗಿದ್ದು, ಅನಂತರ ಬರಬರುತ್ತ ಕೀಳಾಗುವುದು" (ಕೈಪಿಡಿ. ೨೨೮). [ಸಂ.]

**ಪತತ್ರ** (ನಾ). ಗರಿ ; ರೆಕ್ಕೆ ; ಪಕ್ಷ : "ತನೂರುಹಂ, ಗರುತ್, ಪತ್ರಂ, ಪತತ್ರಂ . . . ಪಕ್ಷಃ — ಈ ೯ ಎಱ(೦)ಕೆ" (ಹಲಾಯು. ೪೦-೮೬) ; ಎಬಲ್ವ ಪತತ್ರಮೆತ್ತಿ ನಸುನಿಡಿದ ಗೋಣ್ . . . ಒಪ್ಪೆ ನವಾಂಬುದ ಬಿಂದುಪ್ಪಂದಮಂ ಗಳಗಳನೀಂಟುತಿರ್ದುದು ಮನಂ ತಣಿವಂತಿರೆ ಚಾತಕೋತ್ಕರಂ (ಶಾಂತೀಶ್ವ. ೧೨-೯೬) ; ಘನಪಾಠೀನಪತತ್ರಕಂಪಿತಪಯೋಜಾತಂ ಪಯೋಜಾತಗಂಧನಿಕಾಯಾಶ್ರಿತವಾತಸಯುತಲಸನ್ಮತ್ತಾಳಿ (ತ್ರಿಷವಿ. ೧-೫೨). [ಸಂ.]

**ಪತತ್ರಿ** (ನಾ). ೧. ರೆಕ್ಕೆಯುಳ್ಳುದು ; ಹಕ್ಕಿ ; ಪಕ್ಷಿ: "ಪತತ್, ಪತಂಗಃ, ಪತಗಃ, ಪತತ್ರೀ . . . ದ್ವಿಜಃ—ಈ ೨೬ ಹಕ್ಕಿ" (ಹಲಾಯು. ೪೦-೮೪); ಗೃಹೀತಮಾಂಸಖಂಡಮುಳ್ಳ ಪತತ್ರಿ ತದರ್ಥಿಗಳಪ್ಪ ಪತತ್ರಿಗಳಿಂ ಪರಿಭವಮನೆಯ್ದುವವೋಲ್ ಪರಿಗ್ರಹನುಳ್ಳಂ ತದರ್ಥಿಗಳಪ್ಪ ಚೋರಾದಿಗಳಿಂ ಪರಿಭವಮುಮಂ ಸಾವುಮಂ ಎಯ್ದುಗುಂ (ತತ್ತ್ವಪ್ರ. ೨೭೨) ; ಚಾರುಪತತ್ರಂ ಪೊಕ್ಕಿರ್ದ ತಿತ್ತಿಯನೊಯ್ಯೆ ಶಾಕ್ಷಪತತ್ರಿಯಂ ಮಿಕ್ಕಿನ ಭೇರುಂಡಗಳ್ಕಂಡು (ಪುಣ್ಯಾಸ್ರ. ೪-೨೭ ವ) ; ದೇವಿ ನೋಡಿದೆ ಮುಂದೆ ಕನಕಗ್ರಾವದಂತಿದೆ ಖಗವಿದೊಂದು ಮಹಾವಿಚಿತ್ರಪತತ್ರಿ (ತೊರರಾ. ೩-೧-೩೪). ೨. ಬಾಣ ; ಅಂಬು ; ಶರ : ಚಕ್ರಿಯ ಚಕ್ರದೊಳಂ ತೊಡರ್ದಾಕ್ರಮಿಸಿದುದೆಚ್ಚ ನಿಜಪತತ್ರಿ ದಲೆನೆ ನಿಮ್ಮಾ ಕ್ರಮಕಮಲಕ್ಕೆಱಗದೆ ವಕ್ರಿಸಿ ಭೂಚಕ್ರದೊಳಗೆ ಬಾಳ್ವರುಮೊಳರೇ (ಪಂಪಭಾ. ೧೧-೩೦) ; ನೆಱೆ ಪತತ್ರಿಗಳಿವೆ ಪತತ್ರಿಯ ಮಱುವೆಸರು ನಿನಗಿವರ ಕೇಣಿಗೆ ತೆಱಹುಗೊಡು ನೀನೆಂದು ಮಾದ್ರೀತನುಜ ಮಗುಳೆಚ್ಚ (ಕುವ್ಯಾಗ. ೨-೨೮) ; ಅದ್ದನೋ ದಳಪತಿ ಪತತ್ರಿಯ [ಪಾಠಾಂ. ಪತತ್ರಯ, ಶರವ್ರಜ] ವದ್ದಳದ ವಾರುಧಿಯೊಳನುತೊಳಬಿದ್ದು ಹೊಕ್ಕುದು ಹನುಮ ಹರಿಹಯ ಸುತಸುತಾದಿಗಳು (ತೊರರಾ. ೬-೧೯-೫೬). ೧, ೨ : ಅಗಧರನ ಪದಾಬ್ಜಕ್ಕೆಱಗುಗೆ ನೃಪರೆಱಗದೊಡೆ ಶಾರ್ಙ್ಗಗುಣಮುಕ್ತ ಪತತ್ರಿಗಳೆಱಗುಗುಮೆಱಗೆ ಪತತ್ರಿಗಳುಂ ನಿಮ್ಮಯ ಕಳೇವರಪ್ರತತಿಗಳೊಳ್(ಜಗವಿ. ೮-೧೦೪).

**ಪತತ್ರಿ ಮಾಡು** = ಪಕ್ಷಿಯನ್ನಾಗಿ ಮಾಡು,— ಪರಿವರ್ತಿಸು : ಪೂರ್ಣಘನಂ ಲಯಸಮಯದ ಘನಾಘನದಂತೆತ್ತಿ ಬಂದಂಬರತಿಲಕಮಂ ಮುತ್ತೆ ಪುತ್ರನಂ ಪುತ್ರಿಯುಮಂ ವಿದ್ಯೆಯಿಂ ಪತತ್ರಿ ಮಾಡಿ ಪೊಱಮಡಿಸಿ (ಪಂರಾಮಾ. ೧೦-೭೭ ವ). [ಸಂ. ಪತತ್ರಿನ್]

**ಪತತ್ರಿಗೋತ್ರ** (ನಾ). ಪಕ್ಷಿಗಳ ಗುಂಪು ; ಹಕ್ಕಿಗಳ ಸಮೂಹ : ಇತ್ತಲಾದಿತ್ಯನಪರಗಿರಿಯನೆಯ್ದಲೊಡಂ ಪತತ್ರಿಗೋತ್ರಂಗಳೆಲ್ಲಂ ಬಂದಲ್ಲಿ ಪಾಯ್ದು ಬಲೆಯೊಳ್ ಸಿಲ್ಕಿ (ಪಂಚತಂ. ೨೯೦-೧). [ಪತತ್ರಿ+ಗೋತ್ರ$_1$]

**ಪತತ್ರಿಯುಗ್ಮ** (ನಾ). ಹಕ್ಕಿಯ ಜೋಡಿ ; ಎರಡು ಹಕ್ಕಿ : ಅತಿಥಿಯ ಸತ್ಕರಿಸಿದರ್ ಪತತ್ರಿಯುಗ್ಮ[ಪಾಠಾಂ. ಕ್ಕೆ]ಕ್ಕೆ ಸ್ವರ್ಗವನು ಗೂಡಿದರ್ ಸ್ಥಿತಿಯಂ ಕಥೆಯಂ ಕೇಳ್ (ನನ್ನಚಾ. ೬-೧೯೩). [ಪತತ್ರಿ+ಯುಗ್ಮ]

**ಪತದ್ಗ್ರಹ** (ನಾ). ಉಗುಳುವ ಪಾತ್ರೆ ; ಪೀಕದಾನಿ ; ಪಡಿಗ : "ಪತದ್ಗ್ರಹಾಖ್ಯಂ ಪಡಿಗಂ" (ವಸ್ತುಕೋ. ೪೯-೨೬). [ಸಂ.]

**ಪತನ** (ನಾ). ೧. ಕೆಳಗೆ ಹಾರುವಿಕೆ,-ಬೀಳುವಿಕೆ. ೨. ಕೆಳಗೆ ಇಳಿಬೀಳುವಿಕೆ ; ಜೋಲು ಬೀಳುವಿಕೆ. ೩. ಅವನತಿ ; ಕೀಳುದೆಸೆ ; ಅಧೋಗತಿ : ಅತಿಶಯದ ಸುಕೃತವನು ವಿರಚಿಸಿ ಗತಿವಡೆದು ಸ್ವರ್ಗಾದಿ ಭೋಗೋನ್ನತಿಕೆಯನು ಭೋಗಿಸಿದ ಸಮನಂತರದೊಳವನಿಯಲಿ ಪತನ ತಪ್ಪದು (ಕುವ್ಯಾಉ. ೪-೧೪) ; ಅವುಗಳ ವಶಕ್ಕೊಳಗಾಗಿ ನಾವು ಅತ್ತಿತ್ತ ತೂಗಾಡುತ್ತಾ ಪತನದಾಳದಲ್ಲಿ ಬಿದ್ದುಬಿಡುವ ಸಂಭವವಿರುತ್ತದೆ (ಅಶ್ರುಮ. ೧೦) ; ಪೂರ್ವವು ಪಶ್ಚಿಮದ ಅಂತ್ಯವನ್ನು ನೋಡುವುದು ಎಂದರೆ ಪೌರ್ವಾತ್ಯಪ್ರಪಂಚವು ಪಾಶ್ಚಾತ್ಯಜಗತ್ತಿನ ಪತನವನ್ನು ನೋಡುವುದು (ಜಗಸಂ. ೨೧). [ಸಂ.]

**ಪತನಕಾರಿ**(ನಾ). ಕೀಳುದೆಸೆಗೆ ತರುವಂಥದು; ಅವನತಿಯನ್ನುಂಟುಮಾಡುವಂಥದು : ಕಾನೂನುಸಮ್ಮತವಾದ ಈ ಅಪರಾಧಿಗಳ ಪತನಕಾರಿಯಾದ ಪ್ರಭಾವ ಅಧಿಕಪ್ರಮಾಣದಲ್ಲಿದ್ದರೂ ಪರಸ್ಪರ ಪ್ರೀತಿ ಸಹಾನುಭೂತಿಗಳಿಂದ ಬಾಳುತ್ತಿರುವ ಜನರಿರುವುದರಿಂದಲೇ ಸಮಾಜ ಮತ್ತು ಧರ್ಮಗಳ ಅಸ್ತಿತ್ವ ಸಾಧ್ಯವಾಗಿದೆ (ಪುನರು. ೫೯೨). [ಸಂ. ಪತನಕಾರಿನ್]

**ಪತನಕಾಲ** (ನಾ). ಅವನತಿಯ ಕಾಲ; ಅವಸಾನಕಾಲ; ವಿನಾಶದ ಸಮಯ : ನಡುಗಿತಿಳೆ ನಿರ್ಘಾತದಲಿ ಬಱಸಿಡಿಲು ಸುಳಿದುದು . . . ಹೆಮ್ಮರ ನಿವಾತದಲುಡಿದು ಬಿದ್ದವು ಕೌರವೇಂದ್ರನ ಪತನಕಾಲದಲಿ (ಕುವ್ಯಾಗ. ೮-೩). [ಪತನ+ಕಾಲ]

**ಪತನಗತಿ** (ನಾ). = ಪತನಮಾರ್ಗ : ಕುಲಗುರುವೆ, ಕೈಬಿಡದಿರೆನ್ನಂ ಪತನಗತಿಗೆ (ಶ್ರೀರಾಮಾ. ೫೦೪-೧೧೧). [ಪತನ+ಗತಿ]

**ಪತನಮಾರ್ಗ** (ನಾ). ಅವನತಿಯ ಹಾದಿ ; ವಿನಾಶದ ಮಾರ್ಗ : ಆತ್ಮವು ಪತನಮಾರ್ಗದ ಕಡೆ ಮುಂದುವರಿಯುವಾಗ ಅದನ್ನು ವಿರೋಧಿಸುವುದು ಕರ್ತವ್ಯವಾಗಿದೆ (ಅನಾಸ. ೧೯). [ಪತನ+ಮಾರ್ಗ]

**ಪತನಹೇತು** (ನಾ). ಬೀಳುವಿಕೆಗೆ ಕಾರಣವಾದುದು ; ಅವನತಿಗೆ ಮೂಲವಾದುದು: ನಿನ್ನೀ ಆಕಾಂಕ್ಷೆ ನಿನ್ನ ಪತನಹೇತುವಲ್ಲವೇ ? (ಹೇಮಕೂ. ೩). [ಪತನ+ಹೇತು$_2$]

**ಪತನಾಭಿಮುಖಿ** (ನಾ). ಅವನತಿಗೆ ಎದುರಾಗಿರುವವನು ; ಪತನಮಾರ್ಗಕ್ಕೆ ತಿರುಗಿದವನು:ಸೋದರ್ಯ ನೆತ್ತರ್ವೊನಲ್ ತತ್ತರಿಸುತಿಹೆನ್ ಪತನಾಭಿಮುಖಿ (ಶ್ರೀರಾಮಾ. ೭೭೦-೯೧) ; ತಾನು ಬಲೆಯಲ್ಲಿ ಬಂದಿಯೆಂಬುದನ್ನರಿಯದೆಯೆ, ಅವನು ಪತನಾಭಿಮುಖಿಯಾಗಿ ಪ್ರಪಾತಕ್ಕೆ ಧುಮುಕುತ್ತಿದ್ದನು(ಪುನರು. ೧೩೩). [ಪತನ+ಅಭಿಮುಖಿ]

**ಪತನೋನ್ಮುಖ** (ನಾ). ಪತನಕ್ಕೆ ಅಭಿಮುಖವಾದುದು; ಬೀಳುವ ಸ್ಥಿತಿಯಲ್ಲಿರುವುದು: ಶಿಖರದ ಮೇಲೆ ಹತ್ತುತ್ತಲೇ ಅವನ ಶರೀರದ ಭಾರದಿಂದ ಪತನೋನ್ಮುಖವಾಗಿದ್ದಾ ಸ್ತೂಪಶಿಖರವು ಭಗ್ನವಾಗಿ ಅತಿ ಘೋರಶಬ್ದದಿಂದ ನೆಲಕ್ಕೆ ಬಿದ್ದಿತು(ಕಪಾಕುಂ. ೨೮). [ಸಂ.]

**ಪತಮ** (ನಾ). "೧. ಚಂದ್ರ. ೨. ಹಕ್ಕಿ. ೩. ಮಿಡಿತೆ; ಶಲಭ" (ನಾನಾಶ. ೧೫೩). [ಸಂ.]

**ಪತಯಾಲು**, ಪತಯಾಳು(ನಾ). ೧. ಹಾರುವಿಕೆ. ೨. ಬೀಳುವಿಕೆ; ಪತನ ಹೊಂದುವಿಕೆ. ೩. "ಬೀಳುವವ" (ಗಂಗಾಮ. ೧೯೬).

**ಪತಯಾಳು:** ೩. "ಪತಯಾಳುಃ, ಪಾತುಕಃ—೨ ಬೀಳೋ ಸ್ವಭಾವ ಉಳ್ಳವನ ಹೆಸರು" (ಸಿದ್ಧಾಂತಿ. ೩೩೦). [ಸಂ.]

**ಪತಯಾಳು** 'ಪತಯಾಲು' ನೋ.

**ಪತರಗುಟ್ಟು** 'ಪತರುಗುಟ್ಟು' ನೋ.

**ಪತರು** 'ಪದಱು$_1$' ನೋ.

**ಪತರುಗುಟ್ಟು**, ಪತರಗುಟ್ಟು (ಕ್ರಿ). ಒದ್ದಾಡು ; ಚಡಪಡಿಸು ; ತಳಮಳಿಸು : ನೀನು ಹೇಳೋ ಮಾತು ನಿಜವಾದರೆ, ಪ್ರಪಂಚದಲ್ಲಿ ಮಕ್ಕಳಿಲ್ಲದ ಸಹಸ್ರಾರುಜನ ಸ್ವಾಮಿಗಳು ಬ್ರಹ್ಮಚಾರಿಗಳು ಸಾಧು ಸನ್ಯಾಸಿಗಳೆಲ್ಲಾ ಸತ್ತು ಪತರುಗುಟ್ಟುತ್ತಾ . . . ಪ್ರೇತಗಳಾಗುತ್ತಾರೆ (ಮಾಂಗಲ್ಯ. ೨೭). **ಪತರಗುಟ್ಟು** : ಒಂಟಿಹಕ್ಕಿ ಪತರಗುಟ್ಟೋ ಹಂಗೆ ಜೀವ ಬಾಳಾ ಒದ್ದಾಡುತ್ತದೆ (ಮಲ್ಲಿ. ೨೨೯) ; ಒಂದು ಜೀವ ಪಕ್ಷಿಯು ಪತರಗುಟ್ಟುವಿಕೆ ಕಿವಿಗೆ ಕೇಳಿಸಿದಂತಾಗುತ್ತಿದ್ದ ಆಕ್ರಂದನದ

ಧ್ವನಿ, ಎಲ್ಲವೂ ಅರ್ಥವಾಯಿತು (ಘಾಟೀಮು. ೧೨೪).
[ಪತರು(<ಪದಱು$_1$)+ಕುಟ್ಟು$_1$]

**ಪತಳ** (ನಾ). ವಿರಳವಾದುದು ; ತೆಳುವಾದುದು ; ಸಾಂದ್ರವಲ್ಲದುದು : "ಪತಳ=ತೆಳ್ಪನ ; ತಿಳುವಾದ, ಪ್ರವಾಹಿ" (ಜಾನಕೋ.೧೪); ಯಿದಕ್ಕೆ ಕಾರಣವಾದ ಮಾಯೆ ದಟ್ಟವೊ ಪತಳವೊ ಬಹುಪತಳವೆಂದು ತಿಳಿ (ಅರಸಾ. ೧-೧೯೪). 'ಪತ್ತಲ' ಪರಾ.
[<ಪ್ರಾ. ಪತ್ತಲ./ಸಂ. ಪಾತ್ರಟ]

**ಪತಳಿ** 'ಪತ್ತಳಿ$_1$' ನೋ.

**ಪತಾಕ$_1$** (ನಾ). ೧. ಧ್ವಜ ; ಬಾವುಟ ; ನಿಶಾನೆ: "ಕೇತು ಧ್ವಜಂ ಪತಾಕಂ ವೈಜಯಂತಿಯಾ ಕೇತನಂ ಹಟಿವಿಗೆಯೆನಿಕ್ಕುಂ" (ಮಂಗರಾ. ೮೫-೨೬) ; ಪರ್ವತಶೃಂಗದ ಮೇಲೆ ಕಾಣುವ ರಕ್ತಬಣ್ಣದ ಪತಾಕವನ್ನು (ಕೋಹಿನೂ.೪೫). ೨. ಒಂದು ಬಗೆಯ ಆಯುಧ: ಭಲ್ಲ ಪತಾಕ ಚಕ್ರ ಚಾಪ ಶಿಲೀಮುಖ ಗಜಾದಾಂಕುಶಾದ್ಯಾಯುಧ ನಿಶಿತಧಾರಾಚೂರ್ಣೀಕೃತ ಮಧುರಾಪುರೀ ಚೊಕ್ಕಲಿಂಗನಾಯಕ ಶಾಂದಮಂಗಲ ರಾಮಚಂದ್ರ ನಾಯಕ ವೇಲಾಪುರ ವೆಂಕಟನಾಯಕ . . . ಪರಾಕು(ಯಾದವಂ.೩-೧೧).
[ಸಂ. ಪತಾಕಾ]

**ಪತಾಕ$_2$** (ನಾ).[ನಾಟ್ಯ] ಇಪ್ಪತ್ತನಾಲ್ಕು ಅಥವಾ ಇಪ್ಪತ್ತೆಂಟು ಅಸಂಯುತಹಸ್ತಗಳಲ್ಲಿ ಒಂದು ; ಹೆಬ್ಬೆರಳನ್ನು ತೋರುಬೆರಳಿನ ಮೂಲಕ್ಕೆ ಇಟ್ಟು ಉಳಿದ ನಾಲ್ಕೂ ಬೆರಳುಗಳನ್ನು ಪತಾಕೆಯಂತೆ ನೇರವಾಗಿ ಎತ್ತಿ ನಿಲ್ಲಿಸುವುದು : "ಬೆರಳ್ಗಳು ಮಿಳಿತಗೈಯುತ ಕರವಂ ಸರಿಯಾಗಿ ಮುಂದೆ ಚಾಚೆ ಪತಾಕಂ" (ತತ್ತ್ವನಿ. ೪) ; ಅಂಗೈ ಮೇಗಾಗಿ ಪತಾಕಂಗಳ್ ಮೇಣ್ ಹಂಸಪಕ್ಷಮಾಗಿಯೆ ಬೇಗಂ ಪಿಂಗದೆ ಮುಂಗೈ ತಿರುಗಲ್ ಕಂಗೊಳಿಸುವ ರೇಚಿತಾಖ್ಯಹಸ್ತವೆನಿಕ್ಕುಂ (ಲಾಸ್ಯರಂ. ೨-೩೩) ; ಪತಾಕ ಅರ್ಧಚಂದ್ರ . . . ಶಿಖರಹಸ್ತ ಮೊದಲಾದ ನೂರಾರು ಹಸ್ತಮುದ್ರೆಗಳಿವೆ(ಬಾಲಪ್ರ. II, ೯೧೯).[ಸಂ.]

**ಪತಾಕಕರ**(ನಾ). = ಪತಾಕ$_2$ : ಲಲಿತಪತಾಕಕರಂಗಳ್ ಸಲೆ ಭುಜದಗ್ರಂಗಳಲ್ಲಿ ಮೊಳಕೈಗಳೊಳಂ ನೆಲೆಗೊಂಡ ಮುಡುಹಿನೊತ್ತಿನೊಳಲಪಲ್ಲವದಂತೆ ತಿರುಗಲಾವಿದ್ಧಮುಖಂ (ಲಾಸ್ಯರಂ. ೨-೫೧). [ಪತಾಕ$_2$+ಕರ$_3$]

**ಪತಾಕಹಸ್ತ** (ನಾ). = ಪತಾಕ$_2$ : ನಿತ್ಯಂ ಪತಾಕಹಸ್ತಂಗಳಂ ಸ್ವಸ್ತಿ ಕದೆ ಬಿತ್ತರಂಗೆಯ್ದು (ಲಾಸ್ಯರಂ. ೨-೫೦). [ಪತಾಕ$_2$+ಹಸ್ತ]

**ಪತಾಕಾಪಟ** (ನಾ). ಬಾವುಟಕ್ಕೆ ಕಟ್ಟಿರುವ ಬಟ್ಟೆ ; ಧ್ವಜದ ವಸ್ತ್ರ : ವ್ಯೋಮಂ ಚಿತ್ರಾತಪತ್ರಂಗಳಿನತುಳಪತಾಕಾಪಟಶ್ರೇಣಿಯಿಂ . . . ದಿಕ್ಸೀಮಾಪ್ರಾಂತಂಬರಂ ತಿಂತಿಣಿಯೆನಿಸಿರೆ ಕಾಕಂದಿಗೆಟ್ಟಂದ ನಿಂದ್ರಂ (ಪುಷ್ಪಪು. ೧೦-೮). [ಸಂ.]

**ಪತಾಕಾಭಂಗ** (ನಾ). ಧ್ವಜಸ್ತಂಭವು ಮುರಿಯುವಿಕೆ ; ಬಾವುಟವು ಮುರಿದು ಬೀಳುವಿಕೆ : ಇದೆ ಬಹಳ ಭೂಕಂಪವದುಭುತವಿದೆ ದಿಶಾವಳಿ ಧೂಮಕೇತುಗಳಿದೆ ಪತಾಕಾಭಂಗವಿದೆ ವಿಪರೀತಪರಿವೇಷ (ಕುಮಾರವ್ಯಾ. ೬-೩). [ಸಂ.]

**ಪತಾಕಾಸ್ಥಾನ** (ನಾ). [ಕಾವ್ಯಮೀ] "ನಡೆಯುತ್ತಿರುವ ಅಥವಾ ಮುಂದೆ ಬರುವ ವಿಷಯನ್ನು ಅನ್ಯೋಕ್ತಿ ಸಮಾಸೋಕ್ತಿಗಳಿಂದ (ಎಂದರೆ, ಒಂದೇ ವಿಧವಾದ ವೃತ್ತಾಂತಕಥನದಿಂದ ಅಥವಾ ಒಂದೇ ವಿಶೇಷಣಪ್ರಯೋಗಗಳಿಂದ) ಸೂಚಿಸುವುದು ಪತಾಕಾಸ್ಥಾನ" (ಕೈಪಿಡಿ. ೨೦೫ ಅಡಿಟಿ). [ಸಂ.]

**ಪತಾಕಾಹಸ್ತ** (ನಾ). = ಪತಾಕ$_2$ : ದಯೆಯಿಂ ಕೃಷ್ಣನಂಗುಷ್ಠಮಂ ಮೆಟ್ಟಿ ಪತಾಕಾಹಸ್ತದಿಂದಂ ನೆಗಪೆ ಮುಖಮುನಾ ಕುಬ್ಜೆ ಸೌಮ್ಯಾಂಗಿಯಾದಳ್ (ಜಗವಿ. ೬-೨೩). [ಸಂ.]

**ಪತಾಕಿ** (ನಾ). ೧. ಧ್ವಜವನ್ನು ಹೊರುವವನು : "ಪತಾಕೀ, ವೈಜಯಂತಿಕಃ -೨ ನಿಶಾನಿ ಹಿಡಿಯುವವನು, ಪತಾಕ ಉಳ್ಳವನು" (ಸಿದ್ಧಾಂತಿ. ೨೫೭). ೨. ಧ್ವಜ ; ಬಾವುಟ. [ಸಂ. ಪತಾಕಿನ್]

**ಪತಾಕಿಕೆ** (ನಾ). ಬಾವುಟ ; ಧ್ವಜ : ಮುಂದಕ್ಕೆ ಪೋಪುದು ತನುವಿದು ಪಿಂದೆಸೆಗೋಡುವುದು ಬಳಕೆಗೈದದ ಮನವೇನೆಂದಪೆನೊ ಪವನನಿದಿರೊಳ್ ತಂದ ಪತಾಕಿಕೆಯ ಚೀನವಸನವಿದೆಂಬೊಲ್ (ಶಾಕುಂತ. ೧೮-೩೪). [ಸಂ. ಪತಾಕಿಕಾ]

**ಪತಾಕಿನಿ** (ನಾ). ಸೈನ್ಯ ; ಬಲ ; ದಂಡು : "ಪೃತನಾ, ಸೇನಾ, ಧ್ವಜಿನೀ, ಪತಾಕಿನೀ . . . ಅನೀಕಂ—ಈ ೧೦ ಪಡೆ" (ಹಲಾಯು. ೭೫-೩೦೩); ಆಗಳ್ ಪಾಂಡವಪತಾಕಿನಿಯುಮಿರದೆ ಪೊಣಿಮುಟ್ಟಿರ್ಧಚಂದ್ರವ್ಯೂಹಮನೊಡ್ಡಿ ನಿಲೆ (ಪಂಪಭಾ. ೧೧-೮೫ ಪ) ; ಅಪರಿಮಿತಮೆನಿಪ ಚತುರಂಗಪತಾಕಿನಿ ತಮಗೆ ಕದನಕೇಳಿಗೆ ನೆರಮಲ್ಪುಪಕರಣಮೆನಿಪ ಕೋದಂಡಪಾಣಿಗಳ್ ದಂಡಪಾಣಿಗೆಣೆಯೆನೆ ತಳರ್ದರ್(ಪಂರಾಮಾ.೪-೫೧); ಇಳಿದು ಗಜಹಯರಥವ ಸುಭಟಾವಳಿ ಕೃತಾಂಜಲಿ ನೊಸಲೊಳಿರೆ ಕೆಲಬಲಕೆ ಸಾರ್ದರು ನೋಡಿದರು ಪಾಂಡವಪತಾಕಿನಿಯ (ಕುಮಾರವ್ಯಾಗ. ೬-೨). [ಸಂ. ಪತಾಕಿನೀ]

**ಪತಾಕಿನೀಪತಿ** (ನಾ). ಸೈನ್ಯದ ಅಧಿಪತಿ ; ದಳಪತಿ ; ಸೇನಾಪತಿ: ಆಗಳ್ ಪತಾಕಿನೀಪತಿಯ ನಿಯಮದಿಂ ಪೂರ್ವದಿಗ್ಭಾಗಸ್ಥಿತಮಂ ಮ್ಲೇಚ್ಛಖಂಡಮನಪ್ರತಿಹತಶಾಸನಾಂಕಿತಮಂ ಮಾಡಿ ಬರೆ (ಆದಿಪು. ೧೩-೮೧ ಪ).
[ಸಂ.]

**ಪತಾಕೆ** (ನಾ). ೧. ಧ್ವಜ ; ಬಾವುಟ ; ನಿಶಾನೆ : "ವೈಜಯಂತೀ, ಪತಾಕಾ, ಕೇತುಃ, ಕೇತನಂ, ಧ್ವಜಃ — ಈ ೫ ಪಟ(ಹಟ)ಯಿಗೆ" (ಹಲಾಯು. ೭೫-೩೦೪); ಹಿಮಧವಳಾತಪತ್ರಮನೆ ಪೋಲೆ ಮುಖೇಂದುವ ಬೆಳ್ಪು . . . ಪತಾಕೆಯೊಂದು ವಿಭ್ರಮಮನೆ ಪೋಲೆ ಪೂರ್ವಿನ ಪೊಡರ್ಪೊಳಕೊಂಡುದವಳ್ಗೆ ಗರ್ಭಚಿಹ್ನಂ (ಪಂಪಭಾ.೧-೨೦); ಮುಗಿಲಂ ಮುಟ್ಟುವ ಪತಾಕೆಯಿಂ ತೋರಣದೋಳಿಗಳಿಂ ರವಿಹಿಮಕರವೀಥಿಗಳಿಂದಂ ಪುರಮದೇಂ ಮನಂಗೊಳಿಸಿದುದೋ (ಜಗವಿ. ೨-೨೦) ; ಪತಾಕೆಗಳ ತಣ್ಣೆಲ ತಂಪಿನ ನಡುವೆ ಕಾಣಲಾಯ್ತು ಗಜಾಧಿಪತಿ ವಿಶ್ವಪತಿಯ ನಿಳಯದ ಕಳಸ ಕಣ್ಗೆ ಮಂಗಳವಾಗಲು (ಹಚಕಾ. ೧೦-೩೭). ೨. ಪುರುಷನ ಜನನೇಂದ್ರಿಯ : ಪುರುಷನ ಪತಾಕೆಯೊಜಗಿರೆ ಮಗುಳ್ದು ಮಲಗಿರ್ದ ಗುರುಕುಚೆಯತನುಗ್ರ ಹದೆರಡು ಕಡೆಯೊಳು ಪಿರಿದೊತ್ತಲು (ಜನಪ. ೯-೧೯). ೩. [ಕಾವ್ಯಮೀ] ಕಾವ್ಯ, ನಾಟಕಗಳಲ್ಲಿ ಬರುವ ವಿಸ್ತಾರವಾದ ಉಪಕಥೆ : ಪ್ರಾಸಂಗಿಕವೆಂದರೆ, ಮುಖ್ಯಕಥೆಗೆ ಅಂಗವಾಗಿ ಮಧ್ಯೆ ಬರತಕ್ಕ ಕಥೆ . . . ಪ್ರಾಸಂಗಿಕವು ದೊಡ್ಡದಾಗಿದ್ದರೆ ಅದಕ್ಕೆ 'ಪತಾಕಾ' ಎಂದೂ, ಸ್ವಲ್ಪವಾಗಿದ್ದರೆ . . . 'ಪ್ರಕರೀ' ಯೆಂದೂ ಹೆಸರು (ಕೈಪಿಡಿ. ೨೦೫) ; ಪ್ರಾಸಂಗಿಕ ಕಥಾಭಾಗಗಳೆಂದರೆ, 'ಪತಾಕಾ' ಮತ್ತು 'ಪ್ರಕರೀ' ಎಂಬ ಅರ್ಥಪ್ರಕೃತಿಗಳು (ಧ್ವನ್ಯಾಲೋ. ೧೭೭ ಅಡಿಟಿ). [ಸಂ. ಪತಾಕಾ]

**ಪತಿ$_1$** 'ಪಡ್ತಿ$_3$' ನೋ.

**ಪತಿ$_2$** (ನಾ). ೧. ಒಡೆಯ ; ಯಜಮಾನ ; ಸ್ವಾಮಿ : "ಪ್ರಭು ಪರಿವೃಢನೀಶಂ ಸ್ವಾಮಿ ಭರ್ತೃ ಪತಿ ನಾಥನಧಿಪನೀಶ್ವರನಿಂದ್ರಂ" (ನಸ್ತುಕೋ. ೯೯-೯) ; ಪತಿಯ ಜಯಸ್ತಂಭದ ಪರಿಣತಿ ದಲಿದಲ್ಲದೊಡೆ ಜಳಪಥಂ ಸ್ಥಳಪಥದಂತತಿಸುಗಮಮಾದುದೆನೆ ಪರಿದು ತೋಯರಾಶಿಯೊಳದೇಂ ರಥಂ ಸೊಗಯಿಸಿತೋ (ಆದಿಪು. ೧೨-೮೩) ; ಜಟಾಯು... ಪತಿ ಕಾಪುವೇಟ್ಟು ಪೋದಂ ಸತಿಯಂ ಕಳ್ದುಯ್ದಪಂ ಖಳಂ ಮಾರ್ಕೊಂಡುದ್ಧತನಂ ಮದೀಯ ತುಂಡಾಹತಿಯಿಂ ಶತಖಂಡಮಾಗೆ ಮಾಟ್ಪೆನೆ

ನುತ್ತುಂ (ಪಂರಾಮಾ. ೯–೧೦೩); ಪತಿಗಲ್ಲದೆ ಪೆಜರ್ಗೆಡೆಗುಡದ ತೆಜದೆ ನಡೆವಿಡಿದ ಬೆನ್ನ ಸಂಕಡಿ ಚಂಡಾಕೃತಿಯ ತೆಜನಜಿದು ನಿಮ್ನೋನ್ನತಿ ವೆತ್ತುದು ಚರಣಕಾಂಡಮಶ್ವಾಗ್ರಣಿಯಾ (ಕುಸುಮಾ. ೮–೫೩); ಕೌರವನ ರುಣ ಹಿಂಗೆ ರಣದಲಿ ಸುಭಟಕೋಟಿಯನು ತೀರಿಸಿಯೆ ಪತಿಯುವಸರಕ್ಕೆ ಶರೀರವನು ನೂಕುವೆನು (ಕುಪ್ವಾಉ. ೧೦–೨೦). **೨.** ಆಳುವವನು; ದೊರೆ; ಪ್ರಭು: ಆವನಲ್ಲಿಗೆ ಪತಿ ಯುಧಿಷ್ಠಿರದೇವನೋ ದುರ್ಯೋಧನನೊ (ಕುಪ್ವಾಆ. ೧೧–೪). **೩.** ಗಂಡ; ವಲ್ಲಭ: "ಕಾಂತಃ, ಕವಿತಾ, ಪತಿಃ . . . ಅನುಕಃ – ಈ ೧೪ ಗಂಡಂ" (ಹಲಾಯು. ೮೨–೩೪೩); ಜನಕಜೆಯನ್ತೆ ಪತಿಂಗೆ ನೆಗಟ್ದು ಶೀಲದಿಂ (ಎಕ. XIV, ಎಡತೊ. ೩೧–೩; ಸು. 900); ಸತಿಯಾನು ಪತಿ ನೀನು (ಬಸಪ. ೫೧೬); ಪತಿಯುಳ್ಳಿನಮದ್ಭುತ ದೇವತೆಯಂ ಸತಿ ಪೋಲ್ತು ಕರಮಗುರ್ವಾಗಿರ್ಕುಂ ಪತಿಯ ಪರೋಕ್ಷದೊಳೊಪ್ಪುವ ಸತಿ ತಾಂ ಚೌವಟದ ಪಣ್ತಮರದಂತಿರ್ಕುಂ (ಬಂಹರಿ. ೧೦–೨೯); ಪತಿಗಳೆನ್ನನು ಮಾಜಿ ಧರ್ಮಸ್ಥಿತಿಯ ಕೊಂಡರು (ಕುಪ್ವಾಸ. ೧೪–೧೦೪); ಪತಿಗಳೈವರಿದ್ದರೇನು ಸತಿಯ ಭಂಗಕೊದಗಲಿಲ್ಲ (ಪುರಂದ. ೨–೧೧೬–೧). **೪.** [ಶೈವ] ಪರಮಾತ್ಮ; ಶಿವ: ಬಳಿಕ ಸಕಲಾಗಮಂಗಳಲ್ಲಿಯೂ . . . ಪತಿ ಕುಂಡಲಿನಿ ಮಾಯೆ ಪಶು ಪಾಶ ಕಾಂಕ್ಷೆಯೆಂಬ ಷಟ್ಪದಾರ್ಥಂಗಳುಂ... ಪ್ರತಿಪಾದ್ಯಂಗಳಕ್ಕುಂ (ವಿವೇಕ. ೭೨); ಪತಿ–ಪಶು–ಪಾಶಗಳೆಂಬ ತತ್ತ್ವತ್ರಯಗಳೇ (ತ್ರಿಪದಾರ್ಥಗಳೇ) ಶೈವಾಗಮದ ಮೂಲತತ್ತ್ವಗಳು. ಜೀವನೇ ಪಶುವು, ಅವನನ್ನು ಆವರಿಸಿರುವ ಸಂಸಾರಬಂಧನವೇ ಪಾಶ, ಜೀವನ ಸಂಸಾರಪಾಶವನ್ನು ಕಳೆದು ಉದ್ಧರಿಸುವವನೇ ಪತಿಯಾದ ಪರಮೇಶ್ವರ (ಭಾರದ. ೭೩); ಈ ದರ್ಶನದಲ್ಲಿ ಪತಿ, ಪಶು, ಪಾಶವೆಂದು ಸಂಗ್ರಹವಾಗಿ ವಿಷಯವು ಮೂರು ವಿಧ–ಪತಿಯೇ ಪರಮಶಿವನು, ಪರಮಾತ್ಮನು, ಸರ್ವಶಕ್ತಿಸಂಪನ್ನನು (ಹಿಂದಸಾ. ೨೯೬).

**ಪತಿಗೇಕದೋಡಂ**=ಒಂದು ಬಿರುದು (?): ಚಲಕೆ ಬಲ್ಗಣ್ಡಂ ಶೌರ್ಯ್ಯಮಾರ್ತ್ತಣ್ಡಂ ಪತಿಗೇಕ[ದೋ]ಡಂ ಸಂಗ್ರಾಮಗರುಡಂ ಮನುಜಮಾನ್ಧಾತಂ ಕೀರ್ತ್ತಿವಿಖ್ಯಾತಂ (ಸೌಇಇ. XX, ೪೭–೭; 1074).

**ಪತಿ ಮೆಚ್ಚೆ ಗಂಡಂ**=ಒಡೆಯನು ಮೆಚ್ಚುವಂಥ ವೀರ; ತುಂಬ ಪರಾಕ್ರಮಶಾಲಿಯಾದವನು; ಒಂದು ಬಿರುದು: ಇನ್ತು ನನ್ನಿನಾರಾಯಣಂ ಸಮ್ಯಕ್ತ್ವರತ್ನಾಕರಂ ಪತಿ ಮೆಚ್ಚೆ ಗಣ್ಡನಾಳ್ದನ ಚಕ್ರಂ . . . ಶ್ರೀಮತ್ತಡೆವಳ್ಳ ತೈಲಪಯ್ಯಂ ಮಾಸವಾಡಿ ನೂಜನಾಳ್ತ್ತುಮಂ ಬೀಳವೃತ್ತಿಯಿನಾಳುತ್ತುಮಿರೆ (ಸೌಇಇ. XI–i, ೫೨–೩೫; ಮು. 1007); ಮಹಾಪ್ರಚಣ್ಡದಣ್ಡನಾಯಕಂ ಪತಿ ಮೆಚ್ಚೆ ಗಂಡಂ ಶ್ರೀಮದ್ದಣ್ಡನಾಯಕಂ ಕೇಶವಯ್ಯಂಗಳೆ ಬೆಳ್ವೊಲ ಮೂನೂಜುಂ ಪುಲಿಗೆಜೆ ಮೂನೂಜುಮಂ ಸುಖಸಂಕಥಾವಿನೋದದಿಂದಾಳುತ್ತಮಿಜ್ದು (ಎಇ. XX, ೬–೬; 1012). [ಸಂ.]

**ಪತಿಂವರೆ** (ನಾ). **೧.** ತನ್ನ ಗಂಡನನ್ನು ತಾನೇ ಆರಿಸಿಕೊಳ್ಳುವ ಅವಕಾಶವಿರುವ ಯುವತಿ; ಸ್ವಯಂವರದ ಅವಕಾಶವಿರುವ ಕನ್ಯೆ: ನಿಜವಿಜಯಶ್ರೀ ಪತಿಂವರಾಪರಿಣಯನೋತ್ಸವಾಲೋಕನ ಕುತೂಹಲಪ್ರಚಲಿತ ಸಮಸ್ತಸಾಮಂತಚಕ್ರಮುಂ (ಆದಿಪು. ೧೪–೯೧ ವ); ವರಮುಕ್ತಿಪ್ರಮದೆ ಪತಿಂವರೆ ಪುರುಷನನಜಿಸಿಕೊಳ್ವವೋಲ್ ವಿಜಯಮುನೀಶ್ವರನಂ ಕೆಯ್ಕೊಂಡಳ್ ದೇವರ ಪಲವುಂ ತೆಜದ ಪಜೆಗಳೊಡನೆಸೆವಿನೆಗಂ (ಶಾಂತಿಪು. ೫–೭೩); ಬರವೇಟ್ದು ಕೆಡಿರದೆ ಪತಿಂ (?) ವರೆಯಂ ಮುಂದಿಟ್ಟು ಖೇಚರಾಧೀಶ್ವರನಂ ಪರಿಣಯನೋತ್ಸವಮಂ ಮಾಡೆ ರಯ್ಯಮಪ್ಪಂತು ಮಾಟಿಪ್ಪಿಮಾಮುಂ ತಾಮುಂ (ವರ್ಧಮಾ. ೩–೬೮). **೨.** ವಿವಾಹಯೋಗ್ಯಳಾದ ಕನ್ಯೆ; ವಿವಾಹವಯಸ್ಕಳಾದ ಕನ್ಯೆ; ಉಪವರ ಕನ್ಯೆ: "ಮುನ್ನಂ ಕುಡಲಾದವಳ್ ಪತಿಂವರೆಯೆನಿಕುಂ" (ವಸ್ತುಕೋ. ೫೩–೧೦); ಕೃತಿ ಗಡ ಕೊಳ್ವಂ ಕುಡುವಂ ಕೃತಿ ಗಡ ಭಾವಿಸುವಡಾ ಪತಿಂವರೆಯುಂ ತಾಂ ಕೃತಿ ಗಡೆನಲ್ ಕೊಳ್ಕೊಡೆಯೇನತಿಶಯಮಾದುದೊ ಕೃತಾರ್ಥಮೆನೆ ಭುವನಜನಂ (ಪುಷ್ಪಪು. ೧–೬೮). [ಸಂ. ಪತಿಂವರಾ]

**ಪತಿಕರ**, ಪಯಿಕರ (ನಾ). **೧.** ಸ್ವೀಕಾರ; ಅಂಗೀಕಾರ; ಮಾನ್ಯತೆ: ಪತಿಯಾಜ್ಞೆಯಲ್ಲಿ ಚರಿಪ ಸತಿಗೇಕೆ ಪ್ರತಿಜ್ಞೆಯು ಪ್ರತಿಜ್ಞೆಯ ಪತಿಕರದಲ್ಲಿ ಮೋಪದಿರೆ (ಲೋಪವಿರೆ?) ಯಾತನೆಯಲ್ಲವೆ ಇವಳ ಲಿಂಗನಿಷ್ಠೆ ಇವಳಿಗೆ ನಮ್ಮ ನಿಷ್ಠೆ ಪತಿಯಾಜ್ಞೆಯಲ್ಲಿ ಕಾಣಾ (ಸರ್ವವ. ೧೯೪–೧೦). **೨.** ಕರುಣೆ; ಅನುಗ್ರಹ. **೩.** ಒಲವು. **೪.** ಹೊಗಳಿಕೆ; ಪ್ರಶಂಸೆ: 'ಪತಿಕರಿಸು' ಪರಾ. **ಪಯಿಕರ: ೨.** ಅಯ್ಯಾ ನಿನ್ನ ನಂಬಿದೆನೊ . . . ಪಯಿಕರವನು ತೋರೊ ಪತಿತರ ಸುರತರು (ಮೋಕ್ಷದೀ. ೧೪–೧). [←ಮರಾ. ಪತಕರ್, ಪತಕರಾ, ಪತಕಾರ್]

**ಪತಿಕರಣೆ** (ನಾ). **೧.** ಸ್ವೀಕಾರ; ಅಂಗೀಕಾರ: ನೇಮವಾಯಿತು ಮತ್ತೆ ನೃಪತಿಸ್ತೋಮವರ್ಜುನನೊಡನೆ ಕದನೋದ್ದಾಮರುಬ್ಬರಿಸಿದರು ಪತಿಕರಣೆಗೆ ಮಹೀಪತಿಯ (ಕುಪ್ವಾಕ. ೧೮–೧೦); ಪತಿಕರಣೆ ಪಲ್ಲವಿಸೆ ಶರಣಾಗತನ ರಕ್ಷಿಸಿ ರಾಮನಮರಾವತಿಗೆ ಬೀಳ್ಕೊಟ್ಟನು ಬಲಾಸುರ ರಿಪುಕುಮಾರಕನ (ತೊರರಾ. ೪–೪ ಸೂಚನೆ). **೨.** ಗೌರವಿಸುವಿಕೆ; ಆದರಣೆ: ಕಂಗಳಲಿ ಕುಡಿಮೇಳ ಹುಬ್ಬಿನ ಹೊಂಗಿನಲಿ ಭಂಜವಣೆ ಭಾವದ ಭಂಗಿಯಲಿ ಪತಿಕರಣೆ (ಕುಪ್ವಾಆ. ೧೩–೨೫). [ಪತಿಕರಿಸು + –ಅಣೆ$_4$]

**ಪತಿಕರಿಸು**, ಪತಕರಿಸು, ಪತ್ಕರಿಸು (ಕ್ರಿ). **೧.** ಅಂಗೀಕರಿಸು; ಸ್ವೀಕರಿಸು; ಒಪ್ಪಿಕೊಳ್ಳು: ಆಶೆಯ ಧಿಕ್ಕರಿಸಿ ನಿರಾಶೆಯ ಪತಿ[ಪಾಠಾಂ. ಪ್ರತಿ]ಕರಿಸಿದ ವೇಷವ ಕಂಡಡೆ ನೀ ಸರಿಯೆಂಬೆ (ಚನ್ನವ. ಕ. ೫೬೧–೧೨೨೮); ಘೃತ ತೈಲ ಜಲ ಚರ್ಮಪಾತ್ರೆಯೊಳಗಿರಲವಂ ಪತಿಕರಿಸಲಿಲ್ಲ ಶಿವಭಕ್ತನಾಗಿರ್ದವಂ(ದೀಕ್ಷಾಬೋ.೨೬–೪೭೦); ಇಂದು ನಿನ್ನಯ ಪಟ್ಟದರಸಿಯಲೆಂದು ಕೊಂಡಾಡುವೊಡೆ ಬಪ್ಪೆನು ಎಂದೆನಲು ಕಾಮಾತುರನು ತಾನಧಿಕತಾಪದಲಿ ಎಂದುದನು ಪತಿಕರಿಸಿ ಕೊಟ್ಟನು (ಸಂಭಪ. ೩–೨೦); ಎಲೆ ತಾಪಸವರ್ಯನೆ ನೀನೊಲವಿಂದೀ ನವ್ಯಮುಪ್ಪ ಪಟ್ಟಾವಳಿಯಂ ಸಲೆ ಪತಿಕರಿಸುವುದು (ತ್ರಿಪುವಿ. ೯–೪೯). **೨.** ಆದರಿಸು; ಸತ್ಕರಿಸು; ಉಪಚರಿಸು: ತರಿಸಿ ಸಾದು ಜವಾದಿಯನು ಕರ್ಪೂರದ ವೀಳೆಯವುಡುಗೊರೆಗಳಲಿ ಹಿರಿದು ಪತಿಕರಿಸಿದನು ಪರಿವಾರವನು ಕಲಿದ್ರೋಣ (ಕುಪ್ವಾದ್ರೋ. ೧೫–೨೦); ಭರತಾದಿಗಳ್ವೆರಸಿ ಕುಳ್ಳಿರ್ದ ಬಳಿಕ ಪತಿಕರಿಸಿ ಕಾಕುತ್ಸ್ಥನಂ ಕೊಂಡಾಡಿ...ಮುನಿವರನೊಯ್ಯನಿಂತೆಂದನು (ಜೈಮಿಭಾ. ೨೧–೫೨); ಅತಿಥಿಗಳಭ್ಯಾಗತರೊಡನಧವರ ಯತಿಯಾಚಕರೆಲ್ಲರನು ಪತಿಕರಿಸುವುದು ಬಳಿಕ ಸಂತಸದೊಳು ಸತಿಯರು ಸವಿವುದನ್ನವನು (ಹದಿಬ. ೮–೩೨); ಮಾಧವೀಮಂಟಪವು ಭೋಗ್ಯವಸ್ತುಗಳಿಂದ ಮನೋಹರವಾಗಿರುವ ಕಾರಣ ನಿಜವಾಗಿ ಕುಶಲಪ್ರಶ್ನಪೂರ್ವಕವಾಗಿ ನಮ್ಮನ್ನು ಪತಿಕರಿಸುವಂತಿದೆ (ಶಾಕುಂತ. ೮೪–೧೪). **೩.** ಕೃಪೆ ಮಾಡು; ಕರುಣೆ ತೋರಿಸು; ಅನುಗ್ರಹಿಸು: ಹರಪದಾರ್ಚಕರೊಪ್ಪಿಸುವರೇ ಶರಣು ಹೊಗೆ ನರರಾದಡಂ ಪತಿಕರಿಸಿ ಕಾವರು ಸಾವು ನೋವುಂ ಜೀವಿಗಳಿಗೆಲ್ಲ ಸರಿಯಲಾ (ಬಸವು. ೨೮–೧೨); ಹರ ಪತಿಕರಿಸಿ ನುಡಿದುದೆ ಪರಮಪಾವನ ಧರ್ಮತತ್ತ್ವವದು (ಕುಪ್ವಾಆ. ೧೬–೫೩); ಕಪಿ ತಲೆಗುತ್ತಿ ದೇವರಿಗಿನ್ನು ತಾ ಪಡಿಯುತ್ತರಕೆ ಪಾಸಟಿಯೆ ಪತಿಕರಿಸೆಂದು ಕೈಮುಗಿದ (ತೊರರಾ. ೮–೨–೪೯); ನೀ ಪತಿಕರಿಸೆ ಬಳಿಕಿನ್ನೇನು ಚಿಂತಿಸಲೇಕೆ ರಕ್ಷಿಸು (ಹರಿಸಾ. ೪೦). **೪.** ರಕ್ಷಿಸು; ಕಾಪಾಡು: ಇಂದು ನಿಮ್ಮಂಘ್ರಿಗಳ ಮಱೆವೊಗ

ಬಂದೆನೆನ್ನಲು ಪತಿಕರಿಸಬೇಕೆಂದು ಕೌರವನನುಜ ಬಿನ್ನಯಿಸಿದನು ಭೂಪತಿಗೆ (ಕುವ್ಯಾಭೀ. ೨-೩೮); ಶರಣು ಹೊಕ್ಕ ವಿಭೀಷಣನ ಪತಿಕರಿಸಿ ಲಂಕಾವನಿಯ ಜನಪದದರಸುತನವನು ಕೊಟ್ಟು ಮನ್ನಿಸಿದನು ರಘುಪ್ರಭವ (ತೊರರಾ. ೬-೩ ಸೂಚನೆ); ಶಿವಪೂಜೆಯ ಮಾಡೆ ದೀಕ್ಷೆಯೆನಗಿಲ್ಲ ಪಾಪಾತ್ಮನಂ ಪತಿಕರಿಸಿ ಕರುಣದಿಂ ಧರ್ಮಪಥಕೆ ಶಿಕ್ಷಿಸಿಡೆ (ಚೆಬಪು. ೫೧-೨೧). ೫. ಸಮರ್ಥಿಸು; ಸಾಧಿಸು: ಭಾಷೆಗಳ ಬಲ್ಲಹನು ಭಕ್ತನಿವಾಸಿ ಬಸವೇಶ್ವರನ ಭಾರಂ ಭಾಷೆಗಳನೆಲ್ಲಂ ಪತಿಕರಿಸಿ ನಿಮ್ಮ ಸಿವುಡಿಯಲಿ (ಬಸಪು. ೩೫-೫೩); ರೂಢಿಯೋಲೆಯಕಾಟಿನರ್ಜುನನಾಡಿ ಪತಿಕರಿಸುವನು (ಕುವ್ಯಾಕ. ೯-೧೫). ೬. ಒಲಿ; ಒಲವುತೋರು: ಬಳಿಕ ಕೇತಯ್ಯಂಗಳಾ ಗೋಕುಲವನೆಲ್ಲಂ ಪತಿಕರಿಸಿ ಕೈಕೊಳುತಿರಲ್ಕದನಱಿದು ಕಱುಗಳು ನಿಂದಱಚುತಿರಲು (ಬಸಪು. ೬೦-೩೫); ಕಟ್ಟಿದನು ನಿನ್ನವಗೆ ಲಂಕೆಯ ಪಟ್ಟವನು ಪತಿಕರಿಸಿ ರಘುಪತಿ ತೊಟ್ಟ ಬಾಣಕೆ ಬಂದ ಶರಧಿಯ ಹೂಳಿ ಶೈಲದಲಿ ಕಟ್ಟಿದರು ಸೇತುವನು ಕಪಿಗಳು (ತೊರರಾ. ೬-೬-೫೫). ೭. ಒಲಿಸು; ಮೆಚ್ಚಿಸು: ವರಮನೋರಥಸಿದ್ಧಿಯನು ಪತಿಕರಿಸಿ ಪಡೆವುದು ಕೇಳೆನುತಲಾದರಿಸಿ ಮಾಯೆಗೆ ಹೇಳುತಿರ್ದಳು ವಿಮಳೆ ವಿನಯದಲಿ (ಪ್ರಭುಲೀ. ೭-೩). ೮. ಹೊಗಳು; ಶ್ಲಾಘಿಸು; ಪ್ರಶಂಸೆಮಾಡು: ಹಿರಿಯ ಭಕ್ತರ ಮಹಿಮೆಗಳನೊರೆದೊರೆದು ಶಿವನಾಗಯ್ಯನಂ ಪತಿಕರಿಸಿ ಮೆಱೆದನು ಬಸವನಾ ಬಿಜ್ಜಳನ ಸಭೆಯೊಳಗೆ (ಬಸಪು. ೫೫ ಸೂಚನೆ); ಜಗದೊಳದ್ಭುತವೀರರಿವರೆಂದಗಧರನು ಪತಿಕರಿಸಿದನು ಪವನಜನ ಫಲುಗುಣನ (ಕುವ್ಯಾದ್ರೋ. ೧೫-೪). **ಪತಕರಿಸು :** ೧. ಆದರೆ ಈ ವೃತ್ತಿಯನ್ನು ಪತಕರಿಸುವಾಗ ನೀವು ಈ ವಿಚಾರವನ್ನು ತಿಳಿದುಕೊಳ್ಳಬೇಕಾಗಿತ್ತು (ರಂಗರೋ. ೫೪); ನಾನು ಒಂದು ಚೀಟಿ ಬಿಡುತ್ತೇನೆ. ಪತಕರಿಸೋಣವಾಗಲಿ (ಗಾಳಿಪ. ೫೨). **ಪತ್ಕರಿಸು :** ೧. ಯೋಗ್ಯ ಮನಃಸ್ಥಿತಿಯಲ್ಲಿದ್ದರೆ ನರಹರಿಯು ಸೇಟರೊಡನೆ ಸಂಭಾಷಣೆಯನ್ನು ಬೆಳಸುತ್ತಿದ್ದ. ಆದರೆ ಈಗ ಆ ಕೆಲಸವನ್ನು ಗಾಡಿಯಲ್ಲಿಯ ಉಳಿದ ಪ್ರಯಾಣಿಕರು 'ಪತ್ಕರಿಸಿ'ದ್ದರು (ಸಮುಜೀ. ೨೯೮); ನಮಗೆ ಹುಟ್ಟೋ ಮಕ್ಕಳ ಗತಿ ಏನು . . . ಅವರು ಮತ್ತೆ ಬೇರೆ ಜಾತಿ ಪತ್ಕರಿಸಬೇಕಾಗತ್ತೈತಿ (ರಕ್ತಧ್ವ. ೧೧೮). [ಪತಿಕರ + –ಇಸು$_3$]

**ಪತಿಕಾರ್ಯ** (ನಾ). ೧. ಒಡೆಯನ ಕೆಲಸ,—ಸೇವೆ; ಸ್ವಾಮಿಕಾರ್ಯ: ವಸುವಂ ದ್ವಿಜನ್ಮದಾನದೆ . . . ನಿನ್ನಸುವಂ ಪತಿಕಾರ್ಯದೆ ವರ್ಜಿಸಿದ್ಯೆ (ಗದಾಯು. ೫-೨೨); ಕ್ಷಿತಿಯೊಳಗೀ ಗೋವಿನ್ದನನಿತರ ಚಮೂನಾಥರೆನ್ತುಮೇಂ ಪೋಲ್ತಪರೆ ವಿತರಣದ ಗುಣದ ಸೌರ್ಯದ ಪತಿಕಾರ್ಯ್ಯದ ಚಲದ ಬಲದ ಮಹಿಮೋನ್ನತಿಯೊಳ್ (ಸೌಇಇ. XX, ೮೭-೧೯; ?). ೨. ಸ್ವಾಮಿಕಾರ್ಯದಲ್ಲಿ ಆಸಕ್ತನಾದವನು; ಒಡೆಯನ ಕೆಲಸದಲ್ಲಿ ನಿರತನಾದವನು: ಚತುರೋಪಾಯಂಗಳಂ ಬಲ್ಲವಂ ಪತಿಕಾರ್ಯಂ ವರಮಂತ್ರಿಯ್ಯೆ (ಸೋಮೇಶ. ೬೧).

[ಪತಿ$_2$ + ಕಾರ್ಯ]

**ಪತಿಕೆ** (ನಾ). ಒಂದು ಬಗೆಯ ಸಸ್ಯ: "ಪತಿಕಾ – ಬಂಗೆಲೆಹೊನ್ನೆ" (ಓಷಧಿ. ೯೧).

[ದೇ.॥ ತಮಿ. ಪತಿಕ, ಪತಿಯ = ಒಂದು ಬಗೆಯ ಸಸ್ಯ; ಅಂತರಗಂಗೆ]

**ಪತಿಗೃಹ** (ನಾ). ಗಂಡನ ಮನೆ,–ಗೃಹ: ಬಾಲೆ ಪತಿಗೃಹಕೆ ಪೋಪುದ ಪೇಳಲ್ ವನವಾಸಬಂಧುವೀ ತರುವೃಂದಂ ಕೇಳುತನುಮತಿಸಿ ಕಲಕಂಠಾಲಾಪದ ನೆವದೆ ನುಡಿವುದಿದೊ ಪಡಿಮಾತಂ (ಶಾಕುಂತ. ೫೩-೮೮).

[ಪತಿ$_2$ + ಗೃಹ]

**ಪತಿಘ್ನೆ** (ನಾ). ಗಂಡನನ್ನು ಕೊಲ್ಲುವವಳು,—ಕೊಲೆಮಾಡುವವಳು. [ಸಂ. ಪತಿಘ್ನೀ]

**ಪತಿತ** (ಗು). ೧. ಕೆಳಗೆ ಬಿದ್ದ; ಕೆಡೆದ; ಪತನ ಹೊಂದಿದ. ೨. ಯುದ್ಧದಲ್ಲಿ ಸೋತ; ಪರಾಜಯ ಹೊಂದಿದ: (೭). ೩. ನೀತಿಗೆಟ್ಟ; ಶೀಲಭ್ರಷ್ಟ: ಪತಿತ ದಲಿತವೆಲ್ಲ ಜನದ ನೋವು ನಲಿವು ನನ್ನವು (ಅಮತಂ. ೪೭-೧೭). ೪. ನೀಚನಾದ; ದುಷ್ಟನಾದ. (ನಾ). ೫. ಬಿದ್ದುದು; ಕೆಡೆದುದು; ಪತನ ಹೊಂದಿದುದು: "ಪತಿತಂ ಪ್ರಸ್ಕನ್ನಂ" (ವಸ್ತುಕೋ. ೮೨-೫); "ಪತಿತಮೆನೆ ಪನ್ನಮೆನೆ ಬಿದ್ದುದು" (ಮಂಗರಾ. ೧೩೨-೨೬). ೬. ಕೆಳಗೆ ಬಿದ್ದವನು. ೭. ನೈತಿಕವಾಗಿ ಪತನ ಹೊಂದಿದವನು; ಶೀಲಭ್ರಷ್ಟನಾದವನು: "ಸ್ಕನ್ನಂ ಗಳಿತಂ ಭ್ರಷ್ಟಂ ಪನ್ನಂ ಪತಿತಂ ಪರಿಚ್ಯುತಂ ವಿಗತಾರ್ಥಂ" (ವಸ್ತುಕೋ. ೧೦೬-೪೮); ದಿನಪನುದಯಕ್ಕೆ ನಿಲೆ ಪತ್ತನೆಯೆಡೆಯೊಳ್ ಸುಖಸಮನ್ವಿತಂ ರವಿ ಪನ್ನೊಂದನೆಯೆಡೆಯೊಳ್ ಧನಿ ಪನ್ನೆರಡನೆಯೆಡೆಯೊಳ್ ದಕ್ಷಿಣಾಕ್ಷಿರಹಿತಂ ಪತಿತಂ (ಜಾತತಿ. ೧೮-೪); ನಾನೂ ಪತಿತ. ಅವಳಂತೆಯೇ ನಾನೂ ಇಂಗ್ಲೆಂಡಿನಲ್ಲಿ ಬೇರೊಂದು ಹೆಣ್ಣಿನೊಡನೆ ಸಂಪರ್ಕವಿಟ್ಟುಕೊಂಡಿದ್ದೆ (ಸೋತುಗೆ. ೧೫೬). ೮. ನೀಚ; ದುಷ್ಟ; ಪಾಪಿ: ಪತಿತನವ ಮದ್ಯ ಮಾಂಸವನೆ ಭುಂಜಿಸಿದವಂ (ದೀಕ್ಷಾಬೋ. ೨೬-೪೭೨); ಪಾತಕನು ಪತಿತನು ಕೃತಘ್ನನು ಘಾತಕನು . . . ದೈವದ್ರೋಹಿಯೆಂಬುದು ಭೂತಳದೊಳೀ ನರಕ (ಕುವ್ಯಾಉ. ೪-೪೧); ಆತನವರಿಗೆ ಕೇಡಿಲ್ಲ ಅವ ಪಾತಕ ಪತಿತಸಂಗವ ಮಾಡ್ವನಲ್ಲ (ಪುರಂದ. ೧-೪೭-೩); ಪತಿತರ ಪಾವನವೆನಿಸುವ ಬಲ್ಮೆಯೊಳತಿಶಯವಡೆದ ತೀರ್ಥಗಳು ಸತಿಯರ ಪಾದಸಂಸ್ಪರ್ಶದಿಂ ತಮ್ಮ ದುಷ್ಕೃತವ ಕಳೆಯಲೆಳಸುವುವು (ಹದಿಬ. ೨-೬); ಸೋದರದ್ರೋಹದಿಂ ರಾಜವಿದ್ರೋಹದಿಂ ಪತಿತನಾಗಿಹ ಪಾಪಿ ಮರಣಮೆ ನಿನಗೆ ಶಿಕ್ಷೆ (ಶ್ರೀರಾಮಾ. ೨೮೨-೧೧೧). ೬, ೮: ಜಗದೊಳ್ಪುಶಾಸ್ತ್ರಪ್ರಕರಕೆ ಮೈಗೊಟ್ಟವಂ ಮಿಗೆ ಪತಿತನಾಗದಿರ್ದಪನೆ (ಜೈಮಿಭಾ. ೨೧-೨೧). ೯. ಹಾರಿದುದು; ಜಿಗಿದುದು. ೧೦. [ನಾಟ್ಯ] ಏಳು ಬಗೆಯ ಹುಬ್ಬಿನ ಭೇದಗಳಲ್ಲಿ ಒಂದು; ಹುಬ್ಬನ್ನು ಕೆಳಗಿಳಿಸುವುದು: ಸಹಜ, ಪತಿತ, ಉತ್ಕ್ಷಿಪ್ತ . . . ಚತುರ – ಈ ಏಳು ಹುಬ್ಬಿನ ಭೇದಂಗಳ್ (ಲಾಸ್ಯರಂ. ೩-೪೩ ಪ); ನಿಟಿಲದಿಂದಿಳಿದ ಪುರ್ಬ್ಬಂ ದಿಟದಿಂ ಕೇಳ್ ಪತಿತಮೆಂಬ ಪೆಸರಂ ಪಡೆಗುಂ (ಲಾಸ್ಯರಂ. ೩-೪೪). ೧೧. ಎಂಟು ಬಗೆಯ ಹಿಮ್ಮಡಿಯ ಭೇದಗಳಲ್ಲಿ ಒಂದು; ಪಾರ್ಷ್ಣಿಭೇದ: ಪಿರಿದುತ್ಕ್ಷಿಪ್ತಂ ಪತಿತಂ [ಪಾಠಾಂ. ಪ್ತಮ ಪತಿತಂ] ವಿರಚಿಪುತ್ಕ್ಷಿಪ್ತಂ ನೆಗಳ್ದ ರಾಜಿಪ ಪತಿತಂ . . . ವಿಯುಕ್ತಾಂಗುಲಿಸಂಗತಮಿಾಯೆಂಟುಂ ಸಮಂತು ಪಾರ್ಷ್ಣಿಯ ಭೇದಂ (ಲಾಸ್ಯರಂ. ೩-೧೦೯); ಉತ್ಕ್ಷಿಪ್ತ, ಪತಿತ [ಪಾಠಾಂ. ಅಪತಿತ], ಉತ್ಕ್ಷಿಪ್ತ ಪತಿತ, ಅಂತರ್ಗತ, ಬಹಿರ್ಗತ, ಮಿಥೋಯುಕ್ತ, ವಿಯುಕ್ತ, ಅಂಗುಲಿ ಸಂಗತ – ಈ ಎಂಟು ಪಾರ್ಷ್ಣಿಯ ಭೇದಂಗಳ್ (ಲಾಸ್ಯರಂ. ೩-೧೧೦ ಪ). ೧೨. ಏಳು ಬಗೆಯ ಕೈ ಬೆರಳುಗಳ ವಿನ್ಯಾಸಗಳಲ್ಲಿ ಒಂದು; ಹಸ್ತಾಂಗುಲಿ ಭೇದ: ಸಲೆ ಸಂಯುತ ವಿಯುತಂಗಳ್ ಸುಲಲಿತವಕ್ರಾಖ್ಯ ವಲಿತ ಪತಿತಾಖ್ಯಂಗಳ್ ಲಲನೇ ಕುಂಚನ್ಮೂಲಂ ಗೆಲೆವಂದ ಪ್ರಸೃತಮೆಂಧು ಭರತದೊಳೆಸೆಗುಂ (ಲಾಸ್ಯರಂ. ೩-೧೧೨); ಸಂಯುತ, ವಿಯುತ, ವಕ್ರ, ವಲಿತ, ಪತಿತ, ಕುಂಚನ್ಮೂಲ, ಪ್ರಸೃತ – ಈ ಏಳು ಹಸ್ತಾಂಗುಲಿಯ ಭೇದಂಗಳ್ (ಲಾಸ್ಯರಂ. ೩-೧೧೩ ಪ). [ಸಂ.]

**ಪತಿತತ್ವ** (ನಾ). ೧. ಕೆಟ್ಟತನ; ನೀಚತನ. ೨. ಅನೈತಿಕತೆ.

[ಸಂ.]

**ಪತಿತಪಾವನ** (ಗು). ೧. ಪಾಪಿಗಳನ್ನು ಉದ್ಧಾರಮಾಡುವಂಥ; ನೀಚರನ್ನು ಪರಿಶುದ್ಧಗೊಳಿಸುವಂಥ: ಪತಿತಪಾವನ ಪರ್ವತಾಶ್ರಮದಲಿಪ್ಪೆನುನ್ನುತ ಮಲ್ಲಿನಾಥನೆಂದೆನ್ನ ನಾಮಂ (ಸಿದ್ಧರಾ. ೭-೨೮);

ಪತಿತಪಾವನಮೂರ್ತಿಯಾಗಿಯೆ ಯತಿಗಳೊಳು ಯತಿಯಾದರಣೆಯಂ ಜತನದಿಂದಾಚರಿಸುತ (ಗಗತಾ. ೨೧-೧) ; ರಘುಪತಿ ರಾಘವ ರಾಜಾರಾಂ, ಪತಿತ ಪಾವನ ಸೀತಾರಾಂ(ಸಿಂತಿ.೫೧).(ನಾ). ೨. ಪಾಪಿಗಳನ್ನು ಪರಿಶುದ್ಧಗೊಳಿಸುವಂಥವನು,—ಮೇಲೆತ್ತುವವನು ; ಪರಮಾತ್ಮ : ಪತಿತ ಪಾವನನೆಂಬ ನಾಮ ಸಕಲಶ್ರುತಿತತಿಗಳಿಗೆಲ್ಲ ನಿಲುಕದೀ ನಾಮ (ಪುರಂದ. ಧಾ. ೩-೬೮-೧). [ಪತಿತ+ಪಾವನ]

**ಪತಿತಾಗ್ರ** (ನಾ). [ನಾಟ್ಯ] ನೃತ್ಯ ಮಾಡುವಾಗ ತೋರುವ ಆರು ಬಗೆಯ ಅಂಗಾಲಿನ ವಿನ್ಯಾಸಗಳಲ್ಲಿ ಒಂದು; ಪದತಳ ಭೇದ: ಪತಿತಾಗ್ರ, ಉಚ್ಛ್ರಿತಾಗ್ರ, ಭೂಮಿವಿಲಗ್ನ, ಉದ್ವೃತ್ತ, ಕುಂಚಸ್ಥಿತ, ತಿರಶ್ಚೀನ—ಈ ಆಱುಂ ಅಂಗಾಲ ಭೇದಂಗಳ್ (ಲಾಸ್ಯರಂ. ೩-೧೨೦ ಪ). [ಸಂ.]

**ಪತಿತೆ** (ನಾ). ನೈತಿಕವಾಗಿ ಪತನ ಹೊಂದಿದವಳು : ಅವಳು ಪತಿತೆ (ಸೋತುಗೆ. ೧೫೬). [ಸಂ. ಪತಿತಾ]

**ಪತಿತೋದ್ಧಾರ** (ನಾ). ನೈತಿಕವಾಗಿ ಪತನಹೊಂದಿದ ವ್ಯಕ್ತಿಯ ಉದ್ಧಾರ,—ರಕ್ಷಣೆ. [ಪತಿತ+ಉದ್ಧಾರ]

**ಪತಿತೋದ್ಧಾರಕ** (ಗು). ಪಾಪಿಗಳನ್ನು ಉದ್ಧಾರಮಾಡುವ,—ಮೇಲೆತ್ತುವ : ಸುಂದರ ಶುಭಕರ ಮೃತಸಂಜೀವಕ ಪತಿತೋದ್ಧಾರಕ ಚೇತನಮೇ! ಏಳೇಳ್ಕೆ ಮಹಿಮಾನ್ವಿತ ಬಾಲಕ ನಮೋ ನಮೋ ನಿನಗೋ ಶಿವಮೇ! (ಅಹಲ್ಯೆ. ೧೧೦-೨). [ಪತಿತ+ಉದ್ಧಾರಕ]

**ಪತಿತ್ವ** (ನಾ). ೧. ಒಡೆತನ; ಪ್ರಭುತ್ವ; ಸ್ವಾಮ್ಯ : "ಎಱೆ—ದ್ರವದ್ರವ್ಯದಾನೇ (ಸುರಿ), ಪತಿತ್ವೇ ಚ (ಒಡೆತನ)" (ಶಮಧಾ); 'ಯತಿಪತಿ' ಯತಿತ್ವಮುಂ ಪಳಿಯುತ್ತೆ, ಪಾರುತೆ ಪತಿತ್ವಮುಂ, ತನ್ನ ನಿಜಮುಂ ನುಡಿದನತಿಕಾತರತೆಯಿಂದೆ (ಚಿತ್ರಾಂಗ. ೩೫-೯೬೦). ೨. ಮದುವೆಯಾಗಿರುವಿಕೆ ; ವಿವಾಹಿತ ಸ್ಥಿತಿ : (೬). ೩. ಪತಿಯ ಭಾವನೆ ; ಗಂಡನೆಂಬ ಭಾವ : ಪತಿತ್ವಮನಾಳ್ವ ಚಾಟುನಿಸ್ವನಮೆರ್ದೆಗೊಳ್ವ ಚುಂಬನಕೆ ಬೆಂಬಱಿಯಿಂದಿದಿರ್ವಪ್ಪ ತನ್ನ ಚುಂಬನ[ಮೆ]ಣೆಯಾಗೆ ಕಾಂತೆ ಪುರುಷಾಯಿತದೊಳ್ ಕರಮೊಪ್ಪಿ ತೋಱಿದಳ್ (ಸೂಕ್ತಿಸು. ೧೪-೪೭). [ಸಂ.]

**ಪತಿದಾನ** (ನಾ). ಗಂಡನನ್ನು ದಾನವಾಗಿ ನೀಡುವಿಕೆ,—ಕೊಡುವಿಕೆ: ಆಕೆ ತನ್ನ ಪತಿಯನ್ನು ತನಗೊಪ್ಪಿಸುವಂತೆ ರಾಮಾನಂದನನ್ನು ಬೇಡಿದಳು. ಗುರು ಅವಳಿಗೆ ಪತಿದಾನವನ್ನು ನೀಡಿದನು (ಭಾರದ. ೨೯೨). [ಪತಿ$_2$+ದಾನ]

**ಪತಿದ್ರೋಹ** (ನಾ). ಗಂಡನಿಗೆ ಮಾಡುವ ದ್ರೋಹ,—ವಂಚನೆ; ಪತಿಯ ವಿಚಾರದಲ್ಲಿ ಮಾಡುವ ಅಪರಾಧ: ಅಮೃತಮತಿಯದು ಪತಿದ್ರೋಹವಾದರೆ ಚಂಡಶಾಸನನದು ಮಿತ್ರದ್ರೋಹ (ಕಾವ್ಯಸ. ೭೭). [ಪತಿ$_2$+ ದ್ರೋಹ]

**ಪತಿದ್ರೋಹಿ** (ನಾ). ಗಂಡನಿಗೆ ವಂಚನೆ ಮಾಡುವವಳು : ಅವಳು ಪತಿದ್ರೋಹಿ ಎಂದಿಗೂ ಅಲ್ಲ (ಮುತ್ತೈದೆ. ೨೨೪). [ಪತಿ$_2$+ದ್ರೋಹಿ]

**ಪತಿಧರ್ಮ** (ನಾ).[ವೀಶೈ]ಪರಮಾತ್ಮನನ್ನು ಕುರಿತು ಆಚರಿಸುವ ವಿಧಿ,–ನಿಯಮ: ಇಲ್ಲಿ ಯೋಗವೆಂದರೆ ಪತಿಧರ್ಮ. ಧರ್ಮಗಳಲ್ಲಿ ಪಶು ಧರ್ಮ, ಪತಿಧರ್ಮ ಎಂದು ಎರಡು ವಿಧ . . . ಶಿವವ್ರತ, ಶಿವಧ್ಯಾನ, ಶಿವಜ್ಞಾನ, ಶಿವಭಕ್ತಿ, ಶಿವಾರ್ಚನ ಇವು ಐದು ಪತಿಧರ್ಮಗಳು (ಭಾರದ. ೨೪೧). [ಪತಿ$_2$+ಧರ್ಮ]

**ಪತಿನಿಷ್ಠೆ** (ನಾ). ಹೆಂಡತಿಗೆ ಗಂಡನಲ್ಲಿರುವ ಶ್ರದ್ಧೆ: ನರ್ಮದೆಯ ಕರ್ತೃತ್ವಶಕ್ತಿ . . . ಪತಿನಿಷ್ಠೆಗಳು ರೇವತಿಯ ಚಿತ್ತಭಿತ್ತಿಯ ಮೇಲೆ ತೇಲಿ ತೇಲಿ ಬರಹತ್ತಿದುವು (ಮುತ್ತೈದೆ. ೨೬೮). [ಪತಿ$_2$+ನಿಷ್ಠೆ]

**ಪತಿಪರಾಯಣೆ** (ನಾ). ಗಂಡನಲ್ಲಿ ಶ್ರದ್ಧೆ ಹೊಂದಿದವಳು; ಪತಿನಿಷ್ಠೆಯುಳ್ಳವಳು : ಅವಳಂತಹ ಪತಿಪರಾಯಣೆಯನ್ನು ನಾನು ಈವರೆಗೂ ನೋಡಿಲ್ಲ (ಮುತ್ತೈದೆ. ೨೨೪). [ಸಂ. ಪತಿಪರಾಯಣಾ]

**ಪತಿಪೂಜೆ** (ನಾ). ಪತಿಯನ್ನು ಕುರಿತು ಮಾಡುವ ಪೂಜೆ : ಚಾರುಲತೆಯ ಲಕ್ಷ್ಯವನ್ನು ಆಕರ್ಷಿಸುವ ಸಲುವಾಗಿ ಸದಾ ಸರ್ವದಾ ಅವನು ಪ್ರಯತ್ನಪಡದೆ ಇದ್ದರೆಯೇ ತನ್ನ ಪತಿಪೂಜೆ ಚಾರುಲತೆಗೆ ಸಹಜ ಸಾಧ್ಯವಾಗುತ್ತಿತ್ತು (ಇಪ್ಪಕ.೨೮೬). [ಪತಿ$_2$+ಪೂಜೆ]

**ಪತಿಪ್ರಾಣತೆ** (ನಾ). ಗಂಡನನ್ನು ಪ್ರಾಣಕ್ಕೆ ಸಮವಾಗಿ ಪ್ರೀತಿಸುವಿಕೆ ; ಪತಿಯೇ ಪ್ರಾಣವೆಂಬ ನಂಬಿಕೆಯನ್ನು ಹೊಂದಿರುವಿಕೆ : ಅದರಲ್ಲಿ ಸೂರ್ಯಮುಖಿಯು ಕಮಲಮಣಿಗೆ ತನ್ನ ಪತಿಪ್ರಾಣತೆಯನ್ನು ತಿಳಿಸಿ ಪತ್ರ ಬರೆದ ಸ್ಥಳದಿಂದ ಓದಲು ಮೊದಲು ಮಾಡಿದನು(ಬಂಕಿಮ.೪೮). [ಸಂ. ಪತಿಪ್ರಾಣತಾ]

**ಪತಿಬಿಂಬ** 'ಪಡಿಬಿಂಬ' ನೋ.

**ಪತಿಬ್ರತಾಗುಣ** (ನಾ). ಹದಿಬದೆಯ ನಡವಳಿಕೆ,—ಆಚರಣೆ : ಆತನ ಕುಲವಧು ವಿನಯೋಪೇತೆ ಮಹಾಸತಿ ಪತಿಬ್ರತಾಗುಣದೆಡೆಯೊಳ್ ಸೀತೆಯನೆ ಪೋಲ್ತಳ್ (ಸೌಇಇ. XX, ೧೦೧-೩೬ ; 1129); ಆ ನೆಗಳ್ದ ಮದ್ದಿರಾಜನ ಮಾನಸಕಳಹಂಸೆಯೆನಿಪ ಮಾಕಾಂಬಿಕೆಗಂ ಭೂನುತ ಪತಿಬ್ರತಾಗುಣ ಜಾನಕಿ××× ಜನರ ಪುಣ್ಯದಿಂ ಪಡೆದಳ್ ಸುತರವ್ (ಎಕ.VI, ಕಡೂರು, ೫೧-೩೨ ; 1169). [<ಸಂ.ಪತಿವ್ರತಾಗುಣ]

**ಪತಿಬ್ರತಿಕೆ** (ನಾ). ಹದಿಬದೆತನ; ಪಾತಿವ್ರತ್ಯ: ರನ್ನನ ಸತಿ ಸತ್ಯಗುಣ ಸಂಪಂನ್ನೆ ಪತಿಬ್ರತಿಕೆಯೊಳು ಮಹಾಸತಿಯೆನಿಸುತ್ತ ××× ನೆಱೆ ಮೆದವಿಮರ್ಪ್ಪುನ್ನತಿಯಂ ಪಡೆದು ಪೆಂಪಿಂನಾಗಮುಮಾದಳು (ಕಇಅ. ೧೨-೪-೫೮ ; ಸು. 1093). [ಪತಿಬ್ರತೆ(<ಹದಿಬದೆ)+-ಇಕೆ]

**ಪತಿಬ್ರತೆ** 'ಹದಿಬದೆ' ನೋ.

**ಪತಿಭಕುತಿ** (ನಾ). ಗಂಡನಲ್ಲಿರುವ ಭಕ್ತಿ,—ಶ್ರದ್ಧೆ : ಪತಿಭಕುತಿಯುನ್ನತಿಕೆಯಲಿ ನಿಷ್ಠತೆಯಲಾ ಸಾವಿತ್ರಿಯಾಕೆಯ ನುತಚರಿತ್ರದವೋಲು ನಿಮ್ಮ ದ್ರೌಪದಾದೇವಿ ಹಿತವನಾಚರಿಪವಳು (ಕುಪ್ಯಾಅ. ೨೩-೨); ಪತಿಭಕುತಿ ಇಲ್ಲದಿಹ ಸತಿಯ ಸಂಗ ವ್ರತಗೆಟ್ಟು ಸುಖಪಡೆಯಲಿಲ್ಲವೋ ರಂಗ (ಪುರಂದ. ೪-೧೪೪ ಪಲ್ಲವಿ). [ಪತಿ$_2$+ಭಕುತಿ(<ಬಕುತಿ)]

**ಪತಿಭಕ್ತಿ** (ನಾ). =ಪತಿಭಕುತಿ: ನೆಗಱ್ತೆವೆತ್ತ ಪತಿಭಕ್ತಿಯ ಮೈಮೆಯ ಮಾನಸಿಕ್ಕೆಯಗ್ಗಲದ ಪೊಗಱ್ತೆ ತನ್ನದೆನೆ ಪೆಂಪು ಮನೋಹರಿಗಲ್ಲದಕ್ಕುಮೇ (ಆದಿಪು. ೧-೭೨); ಪತಿಭಕ್ತಿ ಭವದ್ವಯಕಂ ಹಿತಮೆಂಬುದ ನಱಿದು ವಿನಯದಿಂ ವಿಷ್ಣುಮಹೀಪತಿಯಂ ಮೆಚ್ಚಿಸುತೆ (ಎಕ. V, ಬೇಲೂರು. ೧೬-೨೦; ಸು.1120) ; ಪತಿಭಕ್ತಿಯೊಳರುಂಧತಿಗೆ ಸರಿ . . . ಹರಿಶ್ಚಂದ್ರನೃಪನರಸಿ ಚಂದ್ರಮತಿ ಭೂತಳದೊಳ್ (ಹಚಕಾ. ೧-೪೪). [ಪತಿ$_2$+ಭಕ್ತಿ]

**ಪತಿಭಕ್ತೆ** (ನಾ). ಗಂಡನಲ್ಲಿ ಭಕ್ತಿಯನ್ನುಳ್ಳವಳು; ಗಂಡನಿಗೆ ವಿಧೇಯಳಾಗಿರುವವಳು : ಮತಿವಂತೆಯ ಧರ್ಮಜ್ಞೆಯ ಪತಿಭಕ್ತೆಯ ಸಂದ ಶೌಚವಂತೆಯ ಸತ್ಯಾನ್ವಿತವಚನೆಯ ಕಥೆಯನೆ ಪೇೞ್ದ ತಿಶಯದಿಂ ತನ್ನ ವಧುಗೆ (ಸುದತಿ.೮-೧೮); ಪತಿಭಕ್ತೆಯಾದರೆ ತನ್ನ ಪತಿಗೆ ಸರ್ವೋಪಚಾರಂಗಳ ಮಾಡಿ . . . ಆತನುಂಡು ಮಿಕ್ಕುದನುಂಬುದೇ ಪತಿವ್ರತಾ ಭಾವ (ಸಿದ್ಧೇಪ. ೭೭-೨೨೬) ; ಪತಿಭಕ್ತೆ ಬಂದಳೆಂಬಾ ಸ್ಥಿತಿಯೆಲ್ಲಿಯು ಪರೆಯಲು (ನನ್ನಚಾ. ೩-೩೦). [ಪತಿ$_2$+ಭಕ್ತೆ]

**ಪತಿಭಾವ** (ನಾ). ಗಂಡನೆಂಬ ಭಾವನೆ ; ಪತಿ ಎಂಬ ಭಾವ: ನಿತ್ಯ ಪತಿಭಾವ ಶ್ರೀಲಕುಮಿದೇವಿಗಯ್ಯ ನಿತ್ಯ ಪುತ್ರಭಾವ ಬೊಮ್ಮ ಪ್ರಾಣರಿಗೆ (ಪುರಂದ.೫-೫೧ ಉಗಾಭೋಗ). [ಪತಿ$_2$+ಭಾವ$_2$]

**ಪತಿಭಿಕ್ಷೆ** (ನಾ). ಗಂಡನನ್ನು ಭಿಕ್ಷೆಯಾಗಿ ಬೇಡುವಿಕೆ; ಗಂಡನನ್ನು ಹೊಂದುವುದಕ್ಕಾಗಿ ಮಾಡುವ ಯಾಚನೆ: ನಾನು ತಮ್ಮಲ್ಲಿ ಸೆರಗೊಡ್ಡಿ ಪತಿಭಿಕ್ಷೆಯನ್ನು ಬೇಡುವವಳಾಗಿರುವೆನು (ಚೆನ್ನಬೇ. ೭೦). [ಪತಿ$_2$ + ಭಿಕ್ಷೆ]

**ಪತಿರಾಯ**(ನಾ). ಗಂಡ; ಪತಿ: ಹನ್ನೆರಡು ಹೆತ್ತರು ಒಲಿದಿಲ್ಲವಲ್ಲರಿ ಪತಿರಾಯರು (ಇಂಚಾಪ. ೧೫೮-೭೭); ಕಳೆದು ಹೋದ ಆಭರಣಗಳನ್ನು ಪತಿರಾಯನೇ ದೋಚಿಕೊಂಡಿರಬೇಕೆಂಬುದರಲ್ಲಿ ಆವಳಲ್ಲಿ ಸಂದೇಹವಿರಲಿಲ್ಲ (ಮುತ್ತೈದೆ. ೧೯೮); ಆಕಳಂಥಾ ಅತ್ತಿ ಗೋಕುಲದಂಥಾ ಮಾವ ಶ್ರೀಕೃಷ್ಣನಂಥಾ ಪತಿರಾಯನಿದ್ದರ ಸಾಕಿದಾ ತವರ ಮರತೇನ (ಗರತಿ.೭೧). [ಪತಿ$_2$ + ರಾಯ]

**ಪತಿರುಣ** (ನಾ). ಒಡೆಯನ ಋಣ ; ಸ್ವಾಮಿಯ ಹಂಗು : ಕೂಡೆ ವೈರಿಗಳ ಕೆಡಹಿ ಪತಿರುಣವ ನೀಗಾಡಿದರಧಟ ಬಿಲ್ಲವರು (ಕಂನವಿ.೧೯-೬೫). [ಪತಿ$_2$ + ರುಣ]

**ಪತಿವಂಚಕಿ** (ನಾ). = ಪತಿದ್ರೋಹಿ : ಪಂಚಪತಿಯರೊ ಮೇಣವರು ಪತಿವಂಚಕಿಯರೋ ಗ್ರೀಷ್ಮಕಾಲದ ಪಂಚತೆಯೊಳಾಲಿಂಗಿಸಿತು ದಿಗ್ವಧುಗಳೆಂಬುದವ (ಕುಪ್ಯಾಅ. ೧೯-೨೦). [ಪತಿ$_2$ + ವಂಚಕಿ]

**ಪತಿವಂತೆ** (ನಾ). ಗಂಡನನ್ನುಳ್ಳವಳು; ಸುಮಂಗಲಿ: ತನಗೆ ಕಠೋರ ಶಿಕ್ಷಣ ದೊರೆಯುತ್ತಿದ್ದ ಕಾಲದಲ್ಲಿಯೂ ತಾನು ಪತಿವಂತೆ ಎಂಬುದನ್ನು ಆವಳು ಮರೆತಿರಲಿಲ್ಲ (ಬಂಕಿಸು. ೨೮೯). [ಪತಿ$_2$ + -ವಂತೆ]

**ಪತಿವತ್ನಿ** (ನಾ). = ಪತಿವಂತೆ : "ಪತಿ(ವತ್ನೀ)ನಾಮೆ ದಲ್ ಭರ್ತೃಸಂಯುತೆ" (ವಸ್ತುಕೋ.೫೩-೬); "ಪತಿವ[ಪಾಠಾಂ.ಪ]ತ್ನಿಯೆನಲ್ಕೆದೆಯುಕ್ಕು" (ಮಂಗರಾ. ೮೯-೩). [ಸಂ. ಪತಿವತ್ನೀ]

**ಪತಿವ್ರತ** (ನಾ). ಸತಿಗೆ ಪತಿಯಲ್ಲಿರುವ ನಿಷ್ಠೆ,—ಭಕ್ತಿ; ಹದಿಬದೆತನ; ಪಾತಿವ್ರತ್ಯ : ಈ ಧರೆಯೊಳ್ ನೆಗಟ್ತುವಡೆದಿರ್ದ ಪತಿವ್ರತದುನ್ನತಿಕ್ಕೆ ತಾಂ ಸಾಧನೆವೋಯ್ತು ಮುಂ ನೆಗಟ್ದರುಂಧತಿಯೊಳ್ (ಎಕ. V, ಬೇಲೂರು. ೧೧೨ ; ಸು. 1220). [ಸಂ.]

**ಪತಿವ್ರತತ್ವ** (ನಾ). = ಪತಿವ್ರತ: ನಿನ್ನ. . . ನಿರ್ಭಿನ್ನತೆಯು ಪತಿವ್ರತತ್ವವನು ಪರಿಕಿಪೆನೆನುತ ನನ್ನಿಯಿಂ ಬರಿಸಿದೆನು (ನಪಮೋ.೯-೪೫). [ಸಂ.]

**ಪತಿವ್ರತಸ್ಥೆ**(ನಾ). ಪಾತಿವ್ರತ್ಯವುಳ್ಳವಳು; ಪತಿವ್ರತೆ; ಸಾಧ್ವಿ: ಎಸೆವ ಪತಿವ್ರತಸ್ಥೆ ದಮಯಂತಿ ಮನಃಪ್ರಿಯನಂ ವಿಚಾರಿಸಲ್ ದೆಸೆದೆಸೆಗಳ್ಗೆ ಭೂಸುರರ ವೇಷದ ಚಾರರನಟ್ಟಿದಳ್ (ನಳಚಂ. ೬೫೩). [ಸಂ. ಪತಿವ್ರತಸ್ಥಾ]

**ಪತಿವ್ರತಾಗುಣ**(ನಾ). = ಪತಿಬ್ರತಾಗುಣ : ದಿವ್ಯಮುನಿಪುಂಗವ[ರಂ] ಬಗೆದೀರ್ಪಿನಂ ನಿಜಾತ್ಯಂತಪತಿವ್ರತಾಗುಣದಿನರ್ಚಿಸಿ ಮೆಚ್ಚಿಸು ನೀಂ (ಪಂಪಭಾ. ೧-೧೧೮); ಸಂದ ಪತಿವ್ರತಾಗುಣವಿಭೂಷಣದಿಂ ನೆಗಟ್ದಬ್ಬಲಬ್ಬೆ ತಾಯಟ್ (ಅಜಿಪು.೧೨-೪೮). [ಸಂ.]

**ಪತಿವ್ರತಾಚರಣ** (ನಾ). ಪಾತಿವ್ರತ್ಯದ ಆಚರಣೆ; ಪತಿವ್ರತೆಯ ನಡವಳಿಕೆ : ಮಧುರೋಹಿಣಿ ಬೆನ್ನೊಳಂತೆ ಬಂದಂದಮನಾತ್ಮವಲ್ಲಭನೊಳಾದನುರಕ್ತತೆಯಂ ಮಹತ್ವಮುಂ ಸಂದ ಪತಿವ್ರತಾಚರಣಮುಂ ಋಜುವೃತ್ತಿಯುಮೆಂದು ಭಾವಿಸುತ್ತೊಂದುಮನೆಂದಳಿಲ್ಲ ಬಟೀಯಂ ಪಿರಿದುಂ ತನಗಾದ ಲಜ್ಜೆಯಿಂ (ಕಾದಂಬ.೮೧೫). [ಸಂ.]

**ಪತಿವ್ರತಾಧರ್ಮ** (ನಾ). ಪತಿವ್ರತೆಯ ಧರ್ಮ; ಹದಿಬದೆತನ: ಪತಿವ್ರತಾಧರ್ಮಮಂ ಕೈಕೊಂಡು, ನಿಯಮವಜ್ರದೊಳಿಂದ್ರಿಯಂಗಳಂ ಬಿಗಿದು ದೃಢಮನದಿ, ಸೇವಿಪೆ ನಿನ್ನನ್ (ಶ್ರೀರಾಮಾ.೮೮-೨೭೪). [ಸಂ.]

**ಪತಿವ್ರತಾಭಾವ** (ನಾ). = ಪತಿಬ್ರತಾಗುಣ : ನಿನ್ನ ಚರಿತವೆ ಪುಣ್ಯಚರಿತವು ನಿನ್ನ ನೆನೆದಂಗನೆಗೆ ಬಹುದು ಪತಿವ್ರತಾಭಾವ(ಕುಪ್ಯಾಅ.೧೬-೫೨); ಪತಿಭಕ್ತೆಯಾದರೆ ತನ್ನ ಪತಿಗೆ ಸರ್ವೋಪಚಾರಂಗಳ ಮಾಡಿ . . . ಅತನುಂಡು ಮಿಕ್ಕುದನುಂಬುದೇ ಪತಿವ್ರತಾಭಾವ (ಸಿದ್ಧೇಪ. ೭೭-೨೨೬): ಅನಸೂಯಾದೇವಿ ಪತಿವ್ರತೆಯಾಗಿ ಶಿವನ ಕೃಪೆಯ ಪಡೆದಳೆಂಬುದ ಅರುಂಧತಿ ಕೇಳಿ, ತಾನು ಪತಿವ್ರತಾಭಾವದಿಂದ ಶಿವನ ಪೂಜಿಸುತ್ತ ಹಿಮಾಚಲದಲ್ಲಿರಲು (ಭೈರಸೂ. II, ೬೬). [ಸಂ.]

**ಪತಿವ್ರತಾಲಿಂಗ** (ನಾ). [ಜೈನ] ಮುನಿಗಳ ಯೋಗಸಾಧನೆಯ ಒಂದು ವಿಧ : ಸ್ತ್ರೀಲಿಂಗಂ ಸರಸ್ವತಿಲಿಂಗಮೆಂದುಂ ಪತಿವ್ರತಾಲಿಂಗಮೆಂದುಂ ಕೇಶಪ್ರತಿಲಿಂಗಮೆಂದುಂ ಅರಿಂಜಯಲಿಂಗಮೆಂದುಂ ಚತುರ್ವಿಧಲಿಂಗಮಕ್ಕುಮವಱೊಳ್ . . . ಪತಿವ್ರತಾಲಿಂಗಂ ವಿಕಲ್ಪಯೋಗಸಾಧನಂ (ಚಾವುಂಪು. ೨೨೨). 'ಕೇಶಪ್ರತಿಲಿಂಗ' ಪರಾ. [ಸಂ.]

**ಪತಿವ್ರತಿಕೆ**, ಪತಿವ್ರತಿಕ್ಕೆ (ನಾ). = ಪತಿವ್ರತ : ಸತಿಯರ್ಪತಿವ್ರತಿಕೆಯಂ ನಂಬಿಯುಲಗನಿಕ್ಕಿ ತೊಱೆಯೆಯುಂ ಕುಂಟಣಿಯರ್ ಸೋಲ್ತ ಸವಿಗಂಡು ಬೇಟಕ್ಕೆ ಕಂಟಕರಾದೆವೆಂದು ನೀಕರಿಸೆಯುಂ (ಅರ್ಧನೇ. ೫-೨ ಪ).
**ಪತಿವ್ರತಿಕ್ಕೆ:** ಆಯುಂಗೆಟ್ಟು ಪತಿವ್ರತಿಕ್ಕೆಯುಳವಂ ತಾಂ ಸುಟ್ಟು . . . ಕಳಂಕಮಾಗೆ ಕುಲಮುಂ ಪೋದಂದದೇನೊಳ್ಳಿತೇ ಶ್ರೀಯುಂ ರೂಪುಮದೇವುದಯ್ಯ ಸಿರಿಗಂ ಶೀಲಕ್ಕಮೋನಂತರಂ (ಜೀವಸಂ. ೨೨೮-೩೮). [ಪತಿವ್ರತ + -ಇಕೆ]

**ಪತಿವ್ರತಿಕ್ಕೆ** 'ಪತಿವ್ರತಿಕೆ' ನೋ.

**ಪತಿವ್ರತೆ** (ನಾ). ಪತಿಸೇವೆಯೇ ವ್ರತವಾಗಿ ಉಳ್ಳವಳು ; ಗರತಿ; ಸಾಧ್ವಿ : "ಕುಲವಧು ಸಾಧ್ವಿ ಪತಿವ್ರತೆ ಕುಲಪಾಳಿಕೆ ಸತಿ ಚರಿತ್ರವತಿಯಕ್ಕುಂ" (ವಸ್ತುಕೋ. ೫೨-೪); ಅನಪತ್ಯೆ ಪತಿವ್ರತೆ ಕೈಯನೆತ್ತಿದಳ್ ತೊಡುಗೆಗಳ್ಗೆ ಕರಮರ್ಥಿನಿ ರೂಪಿನ ಕಣಿ ಸೂಚೀಕರ್ಮಾಯ್ತೆ ನಿಪುಣೆ ವಿಥುನಾಲಯಾದಿಮುದ್ರೇಕ್ಯಾಣಂ (ಜಾತತಿ. ೧೯-೭); ಪತಿಯಿಂ ಪಿಂಬಡಿನೊಳ್ ಪತಿವ್ರತೆಗೆ ಬೇಱೊಂದುಂಟೆ ಕೃತ್ಯಂ ವಿರಾಗತೆಯುಂ ಮೇಣ್ ತದನುಪ್ರಯಾಣವಿಧಿಯುಂ ತಾವಲ್ಲದೆ(ಕಾವ್ಯಾಪ.೭೦೬); ಪರಮಪತಿವ್ರತೆಗೆ ಗಂಡನೊಬ್ಬ (ಬಸವ. ೬೧೫). [ಸಂ. ಪತಿವ್ರತಾ]

**ಪತಿವ್ರತೆತನ**(ನಾ). ಸಾಧ್ವಿಯ ಗುಣ : ವರಸಂಪದದಿಂ ಸಿರಿಯಂ . . . ಪತಿವ್ರತೆತನದಿಂ ಸಿರುತಮರುಂಧತಿಯಂ ಪೋಲ್ದಿರುತಿರ್ಪಳ್ ಕೀರ್ತಿವೆತ್ತು ಚೆಂಗಳೆ ಮುದದಿಂ (ತ್ರಿಪುವಿ. ೧೦-೮). [ಪತಿವ್ರತೆ + -ತನ]

**ಪತಿಶುಶ್ರೂಷೆ** (ನಾ). ಗಂಡನ ಸೇವೆ,—ಉಪಚಾರ : ಪತಿಪಾದಭಕ್ತೆಯರೆನಿಸಿ [ಬಣ್ಣನೆ]ವೆತ್ತ ಸತಿಯರೊಲಿದು ಸಮನಿಸುವ ಪತಿಶುಶ್ರೂಷೆಯ ಬಗೆಯನಱಿತು ಸಂಗತಿಗೈದದನು ಬಣ್ಣಿಪೆನು(ಹದಿಬ. ೩-೩). [ಪತಿ$_2$ + ಶುಶ್ರೂಷೆ]

**ಪತಿಸದನ** (ನಾ). ಗಂಡನ ಮನೆ ; ಪತಿಗೃಹ : ಹೊಕ್ಕ ಪತಿಸದನದಲಿ ಸುಖ ಶಾಂತಿ ಇರದೆ, ಸೊಕ್ಕಿ ಕುಳಿತಳು ರೋಗರಕ್ಕಸಿಯು ಶಿರದೆ (ಕಎಪು. ೩೪-೨). [ಪತಿ$_2$ + ಸದನ]

**ಪತಿಸದ್ಮ** (ನಾ). = ಪತಿಸದನ : ಆ ಶಕುಂತಳೆ ಪತಿಸದ್ಮಕ್ಕೈದಿದಪಳಾಕೆಗನುಜ್ಞೆಯನೀವುದೆಲ್ಲರುಂ (ಶಾಕುಂತ. ೫೩-೮೬). [ಪತಿ$_2$ + ಸದ್ಮ]

**ಪತಿಸನ್ನಿಧಿ** (ನಾ). ಗಂಡನ ಸಮೀಪ,—ಹತ್ತಿರ: ಕನ್ನೆ ಪೆರನೊಡವೆಗಡ ಪತಿಸನ್ನಿಧಿಗಿಂದವಳ ಕಳುಹಿ ನಿರ್ಮಲವಾದತ್ತೆನ್ನಯ ಮಾನಸಮಾದಂತನ್ನಯ ಬಳಿಯಿಟ್ಟೊಡವೆಯ ಮಗುಳಿತ್ತನವೊಲ್ (ಶಾಕುಂತ. ೫೯-೧೦೦). [ಪತಿ$_2$ + ಸನ್ನಿಧಿ]

**ಪತಿಸೇವೆ** (ನಾ). ಗಂಡನ ಸೇವೆ,—ಉಪಚಾರ: ಪತಿಸೇವೆಯೊಳಂತು ಪಸಿದ ಪಾರ್ವನ ಮಱೆದತಿ ವಿಳಂಬವನಾಚರಿಸೆ ಸತಿಯರ ಧರ್ಮದ ಸಾರವನಱಿಯದೆ ಖತಿಗೊಂಡು ಮುನಿಗಳಪಿದನು (ಹದಿಬ. ೨-೩೯). [ಪತಿ$_2$ + ಸೇವೆ$_1$]

**ಪತಿಹಿತ**(ನಾ).೧.ಸ್ವಾಮಿಯ ಹಿತ; ಒಡೆಯನ ಒಳಿತು: ಬಸನಂ ಪತಿಹಿತದಲ್ಲಿಯೆ . . . ಬಸನಂ ನೋಂಪಿಗಳಲ್ಲಿಯೆ ಬಸನಂಗಳು ಶಾನ್ತಿದೇವಿಯೊಳು ಪೆಜಿಮೊಳವೆ (ಎಕ. V, ಹಾಸನ. ೧೧೬–೩೪ ; 1123); ಪತಿಹಿತಂ ಪೌರಜನದುತ್ಸವಂ ದೇಶದುನ್ನತಿ . . . ಪುಣ್ಯನೀತಿಸಂತತಿಗಳೆಲ್ಲಂ ನೆರೆದು ರೂಪಾದುದೆಂಬಂತೆ ಮತಿವಂತ ಸತ್ಯಕೀರ್ತಿಯೆನಿಪ್ಪನೇಕಪ್ರಧಾನನಾ ಭೂಮಿಪತಿಗೆ (ಹಚಕಾ.೧–೪೬). ೨.ಸ್ವಾಮಿಯ ಹಿತವನ್ನು ಬಯಸುವವನು; ಒಡೆಯನಿಗೆ ಒಳ್ಳೆಯದನ್ನುಂಟುಮಾಡುವವನು : ಪತಿಹಿತನಂಜನಾತನಯನಾ ಪವನಾತ್ಮಜನಿಂ ಖಗೇಶ್ವರಂ ಪತಿಹಿತನಾ ಮರುತ್ತನಯನಿಂ ಖಗರಾಜನಿನರ್ಕನಂದನಂ ಪತಿಹಿತನಾ ಮರುತ್ತನಯನಿಂ ಖಗರಾಜನಿನರ್ಕಜಾತನಿಂ ಪತಿಹಿತನೀತನೆಂದು ಪೊಗಟ್ಟಿಂ ಸಲೆ ಪರ್ಗನನುರ್ವರಾಜನಂ (ಪಂಚತಂ. ೩೧೨–೧); ನಾನಾಯುಧವಿಶಾರದನ ಭರಿತಧೈರ್ಯನ ಪತಿಹಿತನ. . . ಸೇನಾಪತಿಯ ಮಾಡುವುದು (ಕುಪ್ಯಾಉ.೪–೮೮).

**ಪತಿಹಿತಚರಿತ** = ಒಡೆಯನ ಹಿತವನ್ನು ಬಯಸುವವನು; ಒಂದು ಬಿರುದು:ಪರಸೈನ್ಯಜಳಧಿ ಸಂಜಾತ ಜಯಶ್ರೀಪತಿ ಪತಿಹಿತಚರಿತಂ ಶ್ರೀಪತಿ ದಣ್ಡಾಧಿನಾಥನೆಸೆದಂ ಧರೆಯೊಳ್ (ಸೌಇಇ. XX; ೭೪–೬ ; 1112). **ಪತಿಹಿತನಿಧಿ** = ಒಡೆಯನ ಹಿತವೇ ನಿಧಿಯಾಗುಳ್ಳವನು ; ಒಂದು ಬಿರುದು : ಪರಮಗುಣರತ್ನನೆನಿಸಿದ ಸಿರಿಪತಿ ದಣ್ಡಾಧಿನಾಥತಿಳಕನೆ ಸುಜನಾಭರಣನ ಮಯ್ದುನನೆಸೆದಂ ಪ[ತಿ]ಹಿತನಿಧಿ ನೆಗರ್ದ್ದನನ್ತದಣ್ಡಾಧೀಶ (ಸೌಇಇ.XX, ೭೪–೨೧. 1112). **ಪತಿಹಿತವೈನತೇಯ** = ಸ್ವಾಮಿಗೆ ಹಿತವನ್ನು ಬಯಸುವುದರಲ್ಲಿ ಗರುಡನಂತಿರುವವನು ; ಒಂದು ಬಿರುದು: ಮಹಾಪ್ರಚಣ್ಡದಣ್ಡನಾಯಕಂ . . . ಪತಿಹಿತವೈನತೇಯಂ ಶೌಚಾಂಜನೇಯಂ (ಸೌಇಇ. XX, ೪೬–೨೧ ; 1072) ; ಪ್ರತಾಪಸಹಾಯಂ ಪತಿಹಿತವೈನತೇಯಂ ಪಿಸುಣರ ಗಣ್ಡಂ . . . ನಾಮಾದಿ ಸಮಸ್ತಪ್ರಶಸ್ತಿಸಹಿತಂ ಶ್ರೀಮದ್ದಣ್ಡನಾಯಕಂ ಬರ್ಮ್ಮದೇವಂ (ಎಕ. VII, ಶಿಕಾರಿ. ೧೨೪–೧೪ ; 1077). [ಪತಿ$_2$ + ಹಿತ]

**ಪತಿಹಿತವ**(ನಾ). ಯಜಮಾನನಿಗೆ ಹಿತವನ್ನು ಬಯಸುವ ವ್ಯಕ್ತಿ: ಪತಿಹಿತವರೆನಿಪ ಸಚಿವರ ಸತಿಯರ್ ನಾಲ್ವರ್ ಮಹೋತ್ಸವಂ ಮಿಗೆ ದೈವಸ್ಥಿತಿಯಿಂ ಪುತ್ರರನೆರಡೆರಡು ತಿಂಗಳಿಂ ಹಿಂಚಿ ಪಡೆದರ್ (ದಶಕು. ೨-೭೫). [ಪತಿ$_2$ + ಹಿತವ]

**ಪತಿಹಿತವೆ** (ನಾ). ಪತಿಗೆ ಹಿತವನ್ನು ಬಯಸುವವಳು; ಪತಿವ್ರತೆ; ಸಾಧ್ವಿ: ಗಂಗೆ ಹೆಚ್ಚಿದಳು ನರಕಿಗಳು ತನ್ನೊಳಗೆ ತೊಳೆದ ದೋಷ ತವಿಲಾದುದಿಂದು ಪತಿಹಿತವೆಯಹ ಸುದತಿಯನ್ಯತವನಜಾಯದವನೀಶನುಭಯಕುಲಶುದ್ಧನಹ ಕುವರನೀ ಸ್ವಾಮಿಹಿತವನಹ ಮಂತ್ರಿಯ ನೋಂಕುತನಗೆ ಕೈಸಾರ್ದುದೆಂದು(ಹಚಕಾ.೧೦–೩೨). [ಪತಿ$_2$ + ಹಿತವೆ]

**ಪತಿಹಿತಾಚಾರೆ** (ನಾ). = ಪತಿಹಿತವೆ : ಜನಕಂ ತಾಂ ದಾಸಿರಾಜಂ ಜನನಿ ಪತಿಹಿತಾಚಾರೆ ದುಗ್ಗಬ್ಬೆ (ಸೌಇಇ. XX, ೧೪೪–೨೪ ; 1166). [ಪತಿಹಿತ + ಆಚಾರ + –ಎ$_2$]

**ಪತಿಹಿತಿಕ್ಕೆ** (ನಾ). ಸ್ವಾಮಿಯ ಹಿತವನ್ನು ಬಯಸುವಿಕೆ ; ಸ್ವಾಮಿಭಕ್ತಿ : ಅಳವಜಿವು ನನ್ನಿ ಪೆಂಪಸ್ಖಲಿತಗುಣಂ ಪತಿಹಿತಿಕ್ಕೆಯೆಂಬಿವು ಕನ್ನೊಳ್ಳಿಳದು ಪುದಿದಿರೆ ಸುಪುತ್ರಃ ಕುಳದೀಪಕನೆನಿಸಿ ಚಾವವೆಗ್ಗಡೆ ನೆಗಟ್ಟಂ (ಎಕ. V, ಮಂಜರಾ. ೪೫–೧ ; ಸು. 1030 ?). [ಪತಿಹಿತ + –ಇಕ್ಕೆ$_2$(<–ಇಕೆ)]

**ಪತಿಹಿತೆ** (ನಾ). = ಪತಿಹಿತವೆ : ಪತಿಯ ಕಳಂಕಮನಾತ್ಮದ್ಯುತಿಯಿಂದಪಹರಿಸಳೆನ್ದು ರೋಹಿಣಿಯಂ ಪತಿಹಿತೆ ಶಾನ್ತಲದೇವಿಯಸಿತಕೀರ್ತಿಜ್ಯೋತ್ಸ್ನ ಸಂತತಂ ನಗುತಿರ್ಕ್ಕು(ಎಕ. V, ಹಾಸನ. ೧೧೬–೩೫; 1123); ಪತಿಹಿತೆಯರೆನಿಪ ಸತಿಯವರತಿದುರ್ಲಭಮೆಂದುಮಿಂತುಮಲ್ಲದೆ ಕುಲಟಾತತಿಸುಲಭಂ ಸುಸ್ಪರ್ಶಮುದತಿದುರ್ಲಭಮಂತೆ ಕಾಜದೇಂ ದುರ್ಲಭಮೇ (ಪಾರ್ಶ್ವಪು. ೩–೧೦೯) ; ಪತಿಹಿತೆಯುಂ ರತಿಯೊಳಂ ಪತಿಯೊಳ್ ಪೆಣಗುವಂತೆ (ಷತಿಲ. ೫–೫೭). [ಪತಿಹಿತ + –ಎ$_2$]

**ಪತಿಹೀನೆ** (ನಾ). ಗಂಡನಿಲ್ಲದವಳು ; ಪತಿಯನ್ನು ಕಳೆದುಕೊಂಡವಳು : "ಮೋಚಿ = ಪತಿಹೀನೆ" (ಕಾಶಕ್ಯ. ೯೪). [ಸಂ. ಪತಿಹೀನಾ]

**ಪತುಮೆ** 'ಪಡಿಮೆ' ನೋ.

**ಪತೂರ,** ಪತೂರ್ಯ(ನಾ).ಒಂದು ಬಗೆಯ ಸಸ್ಯ ; ಹೊನ್ನಗನ್ನೆ : "ಪತೂರಃ, ಪತೂರ್ಯಃ—ಈಯೆರಡು ಹೊನ್ನಗನ್ನೆ" (ಓಷಧಿ. ೯೧). **ಪತೂರ್ಯ** : ಮೇಲಿನ ಪ್ರಯೋಗವನ್ನು ನೋಡಿ. [<ಸಂ. ಪತ್ತೂರ]

**ಪತೂರ್ಯ** 'ಪತೂರ' ನೋ.

**ಪತ್ಕರಿಸು** 'ಪತಿಕರಿಸು' ನೋ.

**ಪತ್ತ**$_1$, ಪತ$_1$ (ನಾ). ಪಾತ್ರೆ ; ಭಾಂಡ : ಯಾರ ಕಾಲನೊರಸುವೆ ಯಾರ ಹಾಸ ಹಾಸುವೆ ? ಯಾರ ಪತ್ತ ಚೀವರವೆತ್ತಿ ಹಿಡಿವೆ ? (ವೈಶಾಖಿ. ೭೭–೩೪೬). **ಪತ**$_1$ : ಇಲ್ಲೇ ಒಂದಿಷ್ಟು ಬೂಂದಿ, ಪಕೋಡ ಮಾಡಿಸಿ ಗೂಡೇಲಿ ತುಂಬಿಸಿ ತೆಗೆದುಕೊಂಡು ಹೋಗಬಾರದೇ ! ಅಲ್ಲಿ ಪತಗಳಿದ್ದೇ ಇವೆ. ತುಂಬಿದಾ ಇಟ್ಟ! (ದಿನಾರಿ. ೮೭). [<ಪಾ್ರ. ಪತ್ತ./ಸಂ.ಪಾತ್ರ]

**ಪತ್ತ**$_2$ 'ಪತ್ತರ$_1$' ನೋ.

**ಪತ್ತಂಡ** (ನಾ). ಒಬ್ಬಾತನ ಹೆಸರು (?) : ಅಮ್ಮಳಿಯ ಪತ್ತಣ್ಡತೆಜುವ ಅಯ್ಯುಜು ಭತ್ತ ಪಡೆಯಂ ಯಿದಕ್ಕೆ ಸಾಕ್ಷಿ ಮುಗುಳಿ ಚಣ್ಣಯೂರ ಪಲ್ಮಾಡಿ ಅಮ್ಮಾಳಿ ಕಿರಿಯ ಮುಗುಳಿ ಮುಟಿವಳ್ಳಿ ನಲ್ಲೂರು ಮಾಗುಣ್ಡ ತೇಗುರು ಆರಮುಣ್ಣಂ ಬಿಟ್ಟ (ಎಕ. VI, ಚಿಕ್ಕಮ. ೪೨–೧೭; 959). [ ? ]

**ಪತ್ತಣ** (ನಾ). ಪಟ್ಟಣ ; ನಗರ : ಹರಿಯ ಪತ್ತಣಕೆ ದೂರ್ವಾಸ ಬಂದು ಹರಿಯರಮನೆಗೆ ಬಿತ್ತರದಿ ಪೋಗಿ ಭಿಕ್ಷಾನ್ನವಂ ಯೋಜಿಸಲ್ (ಏಕೋಪು. ೧೧–೬೭). 'ಪಟ್ಟಣ' ಪರಾ. [<ಸಂ. ಪತ್ತನ]

**ಪತ್ತನ**(ನಾ). ನಗರ;ಪುರ ; ⊩"ಬಂಡಿಗಳಲ್ಲಾಗಲಿ ನಾವೆಗಳಲ್ಲಾಗಲಿ ಪ್ರಯಾಣ ಮಾಡಿ ಸೇರಬಹುದಾದ ಪುರ"(ಪಡ್ಡಾರಾ. ಟಿಪ್ಪಣಿ. ೧೯೯) ; "ಪತ್ತನಂ, ಅಧಿಷ್ಠಾನಂ, ನಿಗಮಃ . . . ಪುರಂ, ಪುರೀ— ಈ ೧೧ ಪಟ್ಟಣಂ" (ಹಲಾಯು. ೪೮–೧೩೦) ; ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೊರಾ ವಾರಣಾಸಿಗೆ ವಂದು (ಪಡ್ಡಾರಾ. ೧೦೨–೧೬) ; ಸಗರಚಕ್ರೇಶ್ವರಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖ ಸಂವಾಹನ . . . ಅಷ್ಟಾದಶವಿಷಯಭಾಷಾಸಮನ್ವಿತನಪರಿವೃತ ಷಟ್ಖಂಡಭರಿತಮಪ್ಪ ಭರತಮಂ ಭರತನಂತೇಕಚ್ಛತ್ರಚ್ಛಾಯಾಯ- -ಗುಂ ಆಜ್ಞಾವಿಧೇಯಮುಮಂ ಮಾಡಿ (ಅಜಿಪು. ೧೦–೧ ವ) ; ಖೇ[illegible]-ಟ ಮಟಂಬ ಪತ್ತನ ದ್ರೋಣಾಮುಖ ಸಂವಾಹನಿಚಯನಿಚಿತಮು- . . . ಮನೋಹರಮುಮೆನಿಸಿದ ಭರತಕ್ಷೇತ್ರದ ಮಧ್ಯದೊಳ್ ಮಧ್ಯದೇಶಮುಂಟು (ಜಗವಿ. ೨–೧ ವ) ; ವಿನುತ ಹಂಸಾವಳಿಯ ನದಿಗಳಿಂ . . . ಆಹಿತವಿಧುರಾಹುವೆನಿಪ ಬಿರುದಿನ ಕೇತುಮಯ ಪತ್ತನಂಗಳಿಂ ದೇಶಂ ನವಗ್ರಹಾತ್ಮಕವೆನಿಸಿತು (ಭಾಪಚಿಂ. ೨–೬). [ಸಂ.]

**ಪತ್ತನಾಜೆ** (ನಾ). (ಕರಾ) ಸೌರಮಾನದ ಎರಡನೆಯ ತಿಂಗಳಿನ ಹತ್ತನೆಯ ದಿನ ; ವೃಷಭಮಾಸದ ಹತ್ತನೆಯ ದಿನ : ಈ ವರುಷದ ಜಾತ್ರೆ ಮುಗಿದೊಡನೆ ಪತ್ತನಾಜೆಗೇ ನಮ್ಮ ಹೂವಯ್ಯನಿಂಪ ಗದ್ದೆಗಳನ್ನು ಬಿಡಿಸಿ ಥೋಮಸನಿಗೆ ಗೇಣಿಗೆ ಕೊಟ್ಟುಬಿಡುವ (ಪಂಪಾ. ೩೭). [←ತುಳು. ಪತ್ತನಾಜಿ, ಪತ್ತನಜೆ, ಪತ್ತನದ್ಯ]

**ಪತ್ತರ₁**, ಪತ್ತ₂, ಪತ್ತಿ₂ (ನಾ). ೧. ಓಲೆ ; ಪತ್ರ : ತಿಟ್ಟನ ಮೇಲೆ ಕುತುಕೊಂಡು (ಒಳ್ಳೆ) ಪತ್ತರ ಓದೋಣೇ . . . ನಮ್ಮೂರ ಗೋವಿನ ಸೆರೆಗಳ ಬಿಡಿಸಯ್ಯಾ (ನಾಪದ. ೧೩೫). **ಪತ್ತ₂ :** ೧. "ಪತ್ತ(ತ್ತಿ)—ಪತ್ರ=ಎಲೆ, ಓಲೆ"(ತದ್ಭಕೋ. ೨೪). ೨. ಎಲೆ ; ಪರ್ಣ: ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. **ಪತ್ತಿ₂ :** ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ.

[<ಪ್ರಾ. ಪತ್ತ./ಸಂ. ಪತ್ರ]

**ಪತ್ತರ₂** 'ಪತ್ತಿರೆ' ನೋ.

**ಪತ್ತಲ**, ಪತ್ತಲು, ಪಾತಳು (ನಾ). ಒಂದು ಬಗೆಯ ತೆಳುವಾದ ಸೀರೆ : ಬಿಳಿಯ ಪತ್ತಲವುಟ್ಟು ಕೆಂಪು ರವಕೆಯು ತೊಟ್ಟು ನೊಸಲಿನಲಿ ತಾರಗೆಯು ತಿಲಕವಿಟ್ಟು (ಕನಸಿ. ೧೬-೧) ; ಯಶೋದ ಬೇರೆ ಮಾತಿಲ್ಲದೆ, ಪತ್ತಲ ಕೂಡ ಬದಲಿಸದೆ ಚಿಕ್ಕಪ್ಪನನ್ನನುಸರಿಸಿದಳು (ವಾತ್ಸಲ್ಯ. ೩೮) ; ಉಡುವುದು ಬಿಳಿಯ ಹೊಳೆಹೊಳೆಯುವ ರೇಶಿಮೆ ಪತ್ತಲ (ಸಾಹೇಬ್. ೩೦). **ಪತ್ತಲು :** ಅಂದು ಗುಲಾಬಿ ಪತ್ತಲು ಉಟ್ಟಿದ್ದಳು (ಚಿಂದುಟಿ. ೬೬) ; ಖನ್ನಿ ಪಾರ್ವತಿದೇವಿಗೆ ಎಣ್ಣೆ ಪತ್ತಲುಡಿಸಿ ಸೋಬಾನ ಪಾಡ್ಯಾರಲ್ಲ (ಮಲ್ಲಿಗೆ.೫೬). **ಪಾತಳು:** ಓರಣವಾಗಿ ಗೌರವರ್ಣದ ಮೈಗೆ ಬಿಗಿಯಾಗಿ ಒರಗಿದ ಒಂದು ಪಾತಳು (ಮುಂಗಾಪು. ೩೦). [←ಮರಾ. ಪಾತಳ್]

**ಪತ್ತಲು** 'ಪತ್ತಲ' ನೋ.

**ಪತ್ತವಂದ** (ನಾ). ಒಂದು ಬಗೆಯ ಸಸ್ಯ : ಕಿ(ತಿ)ರುಳಿಗೆ ಕಾಗೆದೊಂಡೆ ಯಜಬದೊಂಡೆ ಪುನರ್ನವಿ ಪತ್ತವಂದವೀಶ್ವರಿ . . . ಕಾತರಿಕೆಯೆನಿಪ್ಪಿವಂ ಮಧುಯುಂತಂ ಘೃತಕರ್ಪಟ ಶುಲ್ಬ ನಾಗಲೋಹರಜಮನಟ್ಟಿ ಕಟ್ಟಿ ಕಳೆದಿಕ್ಕುಗುವಮಾವಗಮುಷ್ಟಿ ವೃದ್ಧಿಯಂ(ಲೋಕೋಪ.೯-೧೨೪);"ಪತಂಗದ ಮರನ ಬದನಿಗೆ" (ಲೋಕೋಪ. ಟೀಕ). [ ? ]

**ಪತ್ತಳ** (ನಾ). (?) : ಘಳವಳಿಯಂ ಕಟ್ಟ ಕಸ್ತುರಿ ಛಳಿಯ ಕುಂಕುಮ ನವ್ಯ ಶ್ರೀಖಂಡ ಪತ್ತಳವ ಮಿಶ್ರಿಸಿದ ಮಂಟಪಂ ಚೆಲ್ವಾಯ್ತು ಕೃತ್ತಿವಾಸನ ಚರಕ್ಕೆ (ಲಿಂಗಪು. ೧೫-೪೮). [ ? ]

**ಪತ್ತಳಕರಣ** 'ಪತ್ತಳಿಕರಣ' ನೋ.

**ಪತ್ತಳಿಕೆ₁**, ಬತ್ತಲಿಕೆ, ಬತ್ತಳಿಕೆ, ಬತ್ತಳಿಗೆ (ನಾ). ಬಾಣಗಳನ್ನಿಡುವ ಕೋಶ,—ಚೀಲ ; ತೂಣೀರ : "ಅಂಬಿನ ಪತ್ತಳಿಕೆ,ಕಲಾಪ, ತೂಣೀರ" (ನಾಚಿಂಅ. ಕಿ) ; ಕುಸುಮಶರಂ ತನ್ನ ಪುಷ್ಪಂಗಳೆಂಬ ಬಾಣಂಗಳಿಂ ತುಂಬಿದ ಪತ್ತಳಿಕೆಗಳನಲ್ಲಿ ತಂದಿರಿಸಿದನೆಂಬಂತೆ ಪಿರಿದಪ್ಪ ಪೂಗಳ ಬಳಗಮನೊಳಕೊಂಡಗುರ್ವುವಡೆದುರ್ವಿ ಕೊರ್ವಿ ಪರ್ವಿದ ಮತ್ತಲ್ಲಿಕಾವಲ್ಲೀವಲ್ಲರಿಗಳಿಂದತ್ಯಂತರಮಣೀಯಮಾಗಿರ್ದುದು (ಬಾಥಪು. ೧-೧೯೯ ಪ). **ಬತ್ತಲಿಕೆ :** ಭುಗುಭುಗು ಛಟಿಛಟಿಲೆಂದು ಲೋಚನದಿಂದೊಗೆದ ದಳ್ಳುರಿ ಸುತ್ತಿ ಸ್ಮರನ ಬಿಗಿದ ಬತ್ತಲಿಕೆ ಕರ್ವುವಿಲ್ಲು ಸಹಿತೆ ಸುಟ್ಟುಗಿದುದು ಉರಿ ನಭಸ್ತಳಕೆ (ಮೋಹತ. ೭-೩೯). **ಬತ್ತಳಿಕೆ :** ೧. ಮನ್ಮಥಭೂಪನು ತಿಳಿದು ಬಿಲು ಬತ್ತಳಿಕೆಗಳನಟಿಸೆ ತೊಂಡಗಿಳಿಗಳು ಚಂಚುವಂ ಮಸೆಯೆ ಮೂಡಿತ್ತು ಖತುಸಂಧಿ (ಹಚಕಾ. ೩-೧೪) ; ನೃಪತಿಲಕ ಬತ್ತಳಿಕೆಯಲಿ ಸೆಳೆದನು ಹೂಡಿದನು ಶರವ (ಕುಪ್ಯಾಕ. ೧೧-೪೩) ; ವಿಶಿಖಹತಿಯಲಿ ನೊಂದು ಹಲಬೊಜೆಟಿ ದಸುರನುಗಿದನು ಬತ್ತಳಿಕೆಯಿಂದಸಮನಯನ ಕಳಂಬವನು ಕಳವಳಿಸೆ ಸುರನಿಕರ (ತೊರಆ. ೩-೬-೬೭) ; ಮಿಾನಕೇತನ ಬಾಣದ ಬತ್ತಳಿಕೆಯನೇನುಳಿಯದೆ ತಳೆದಂತೆ ಮಾನಿನಿಯನುಪಮಜಾನು ಯುಗಳವಿಪ್ಪವು (ಅಂಜಚ. ೫-೧೨೫). **ಬತ್ತಳಿಗೆ :** ಬಿಲ್ಲು ತೀರು ಹೆದೆ ಬತ್ತಳಿಗೆ ಸೀಸಕ ವಜ್ರ ಕವಚ . . . ಮಯೂರಿ ಖೇಟಕ ಮುಂತಾದ ಶತ್ರು ಜಯಾತ್ಮರಕ್ಷಾದಿ ಸಾಧನವಿಶೇಷಂಗಳಿಂದಲುಂ (ವಿವೇಕ.೨೬೨).

[ದೇ.॥ ತೆಲು. ಬತ್ತಳಿಕ,ಬತ್ತಡಿಕ, ಬತ್ತಳಿ, ಬತ್ತಡಿ]

**ಪತ್ತಳಿಕೆ₂** (ನಾ). ಕಾಗದ ; ಪತ್ರಿಕೆ : "ಪತ್ತಳಿಕೆಯೆನಲು ಕಾಗದ ಮಕ್ಕು" (ಮಂಗರಾ. ೧೦೫-೧೫) ; "ಪತ್ತಳಿಕೆ (ಪತ್ತಳೆ)—ಪತ್ರಿಕಾ" (ತದ್ಭಕೋ. ೨೪). [ಪತ್ತಳೆ₁ +-ಇಕೆ]

**ಪತ್ತಳಿಗ** (ನಾ). ಕಾಗದ, ಪತ್ರಗಳಲ್ಲಿ ವ್ಯವಹರಿಸುವವನು : ಪಟಸಾಲಿಗಂ, ಪಡವಂದಿಗಂ, ಪತ್ತಳಿಗಂ, ತೆಲ್ಲಿಗಂ(ಭಾಷಾಭೂ. ೧೬೩ ಪ್ರಯೋ).

[ಪತ್ತಳೆ₁ +-ಇಗ]

**ಪತ್ತಳೆ₁**, ಪತಳೆ, ಪತ್ಥಳೆ₁ (ನಾ). ೧. ಎಲೆ ; ಪತ್ರಾವಳಿ ; ಹಚ್ಚಿದೆಲೆ : ಪರಿಪಾಕವಮಾದ ಮಾಂಸೋತ್ಕರಮನದಂ ಮುತ್ತದೆಲೆಯ ಪತ್ತಳೆಯೊಳಗಿಕ್ಕಿರದಾಗಳ್ ಮುಂದಿಟ್ಟಾ ಪರದಿಂದೆನ್ನವನೆ ಪಸಿದೆ ಉಣ್ಣೆನುತಿರ್ದಂ (ತ್ರಿಪುವಿ. ೨೭-೧೨೪). ೨. ಕಾಗದ ; ಪತ್ರ : 'ಪತ್ತಳಿಕೆ₂' ಪರಾ. ೩. ಅಧಿಕಾರಪತ್ರ ; ಶ್ರೀಮುಖ : ಕಾಮ ದೇವ ನಿತ್ತಂ ಮಧು ಪತ್ತನೀ ನೆಲನನಿಂತಿದು ಪತ್ತಳೆ[ಪಾಠಾಂ.ಪತ್ತೆಳೆ, ಪೆತ್ತಳೆ, ಪೆತ್ತಿಳೆ]ಯೆಂದು ಸಾಜುವಂದಂ ಮಿಗೆ ಕರ್ಚಿ ಪಾಜುದುವು ಕೆಂದಳಿರಂ ಗಿಳಿವಿಂಡಿನೋಳಿಗಳ್ (ಪಂಪಭಾ. ೫-೩೧) ; ಉದ್ಯಾನದೇಶಮನಾಳಲೆಂದು ಕಾಮನ ಕೆಯ್ಯೊಳ್ ತೊಳಗಿದ ಪತ್ತಳೆಯಂ ಕೊಂಡು ಜಾದಂ ತೊಡೆದಂತೆ ತಳರ್ತಶೋಕೆಗಳಿಂ (ಅರ್ಧನೇ. ೪-೬೪ ಪ). **ಪತಳೆ :** ೩. ಹಡುವಣ ಮುತ್ತೆರಿಸೀಮೆ ಆತನ ಮ××× ಪಯ್ಯನ್ತ ಸಲುವಂತಾಗಿ ಕೊಟ ಪತಳೆ (ಎಕ. II, ೪೦೭-೭ ; ಸು. 1250). **ಪತ್ಥಳೆ₁ :** ೩. ಸಮಸ್ತಪ್ರಧಾನರ ಶ್ರೀಮನ್ಮಹಾಮಂಡಳೇಶ್ವರಂ ಕುಮಾರಂ ಬಿಜ್ಜಳದೇವರಸರ ಸೌರಸದಿಂ ಪತ್ಥಳೆಸಹಿತಂ ಪಡೆದು ಬರೆದ ಶಾಸನಂ (ಕೊಲ್ಹಾಶಾ. ೮-೩೯ ; 1147). [<ಪ್ರಾ. ಪತ್ತಲ./ಸಂ.ಪತ್ರ]

**ಪತ್ತಳೆ₂**, ಪತ್ಥಳೆ₂ (ನಾ). ಒಂದು ಬಗೆಯ ತೆರಿಗೆ: 'ಪತ್ತಳೆಕರಣ' ಪರಾ. **ಪತ್ಥಳೆ₂ :** ಪ್ರಧಾನಮಲ್ಲಾಜಿನೆಯ ಪತ್ಥಳೆಯ ಗೋವಿಪಯ್ಯ ನಾಯಕನು (ಎಇ. XIII, ೩೨೨-೫೪ ; 1126). 'ಪತ್ಥಳೆಕರಣ'ಪರಾ.

[<ಪ್ರಾ. ಪತ್ತಲೀ]

**ಪತ್ತಳೆಕರಣ**, ಪತ್ತಳಕರಣ, ಪತ್ಥಳೆಕರಣ (ನಾ). ತೆರಿಗೆಯನ್ನು ವಸೂಲು ಮಾಡುವ ಉದ್ಯೋಗವುಳ್ಳವನು,—ಅಧಿಕಾರವುಳ್ಳವನು: ಶ್ರೀಮನ್ಮಹಾಪ್ರಧಾನಂ ಸಾವಾಸಿಗಳಧಿಷ್ಠಾಯಕಂ ಮನೆವೆರ್ಗ್ಗಡೆ ಪತ್ತಳೆಕರಣಂ ದಣ್ಣನಾಯಕ ಭೀವಣಯ್ಯಂಗಳು (ಎಇ. XVI, ೩೩-೧೩;1102). **ಪತ್ತಳಕರಣ :** ಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಪ್ರಧಾನಂ ಸೇನಾಧಿಪತಿ ಪತ್ತಳಕರಣಂ ದಂಡಾಯದ ಹೆರ್ಗ್ಗಡೆ ದಂಡನಾಯಕ ಮಹಾದೇವಯ್ಯಂಗಳುಂ (ಸೌಇಇ. XI-i, ೫೦-೨೩ ; 1138). **ಪತ್ಥಳೆಕರಣ :** ಲೋಕಸಹವಾಸಿಗಳಧಿಷ್ಠಾಯಕಂ ಪತ್ಥಳೆಕರಣಂ . . . ಶ್ರೀಮನ್ಮಹಾಪ್ರಧಾನಂ ದಣ್ಣನಾಯಕಂ (ಸೌಇಇ. XX, ೭೪-೧೮ ; 1112). [ಪತ್ತಳೆ₂ + ಕರಣ]

**ಪತ್ತಳೆಗೂಳು** (ನಾ). ಎಲೆಯಲ್ಲಿಟ್ಟ ಆಹಾರ ; ಎಡೆ : ಮನೆದೈವ ಮಪ್ಪ ಕೃತಾಂತನ ಪರ್ವದ ದಿನದೊಳಗಾ ಮೃತ್ಯುದೇವಿ ಮನಮೊಸೆದಿಟ್ಟ ವಿಾಸಲ ಪತ್ತಳೆಗೂಳನನುಕರಿಸಿದವು ಪಿಂಡಗಳು (ಶ್ರೀಪಾಲ. ೮-೧೪).

[ಪತ್ತಳೆ₁ + ಕೂಳು₂(<ಕೂೞ್₁)]

**ಪತ್ತಱುಗಾವುದ** (ನಾ). ಹದಿನಾರು ಗಾವುದ : ಸೆಜಿಕೋಲ್ ಸೆಜಿಕೋಲಿಂ ಪತ್ತಱುಗಾವುದ ಬಲದ ಪವಣನನಿತಿನಿತೆಂದಾನಜಿಯೆಂ (ಪಂಪಭಾ. ೧೦-೫೯). [ಪತ್ತು₃ + ಅಱುಗಾವುದ]

**ಪತ್ತಟಿ**(ನಾ).ಎಂಜಲು; ಉಚ್ಛಿಷ್ಟ: "ಎವುಟೆಂದುಂ, ತಿನ್ನಮೆಂದುಂ, ಪತ್ತಟಿಯೆಂದುಂ ಎಂಜಲ್" (ಕಶಸಾ. ೬೭-೫೦೮) ; "ಎವುಟೆಂಜಲು ಮೆನ್ನುತ್ತುಂ ತಾವೇನುಂ ಪತ್ತಟಿನ್ನಲುಚ್ಛಿಷ್ಟಕ್ಕಂ" (ಕವಿಕಂ. ೨೦೭).

[ ? ]

**ಪತ್ತಾನುಪತ್ತು** (ನಾ). ಕೈಯಿಂದ ಕೈಗೆ ಸಾಗಿಸುವ ರೀತಿ,—ವಿಧ(?):ಬರಿಯ ಕಾಗದವಾದರೆ ಪತ್ತಾನುಪತ್ತು ಆಗಿ ಅವರಿಗೆ ಮುಟ್ಟಿಸಬಹುದಿತ್ತು. ಇದು ರಿಜಿಸ್ಟ್ರಿ ಹೋಗಿ ದಸ್ಕತು ಪಡೆಯದ ಇರಲು ನಿರ್ವಾಹವುಂಟೇ ? (ಪ..ಯು. ೨೩). [?]

**ಪತ್ತಾಯ,** ಪತ್ತಾಯಿ (ನಾ). (ಕರಾ) ಧಾನ್ಯಗಳನ್ನು ತುಂಬುವ ಸಾಧನ ; ಕಣಜ ; ಗಳಗೆ : ಅವನು ನೆತ್ತಿಗೆ ಎಲೆವಸ್ತ್ರವನ್ನು ಸುತ್ತಿಕೊಂಡು ಪತ್ತಾಯದ ಮೇಲಿರಿಸಿದ್ದ ಬಾಳು ಮತ್ತು ಬುಟ್ಟಿಗಳನ್ನು ಎತ್ತಿಕೊಂಡ (ನಡೆದಾ. II, ೧೧೨೫). **ಪತ್ತಾಯಿ :** ಪತ್ತಾಯಿಯ ತುಂಬ ಕಾಳುಗಳಿವೆ (ರೂಢಿ).
[**ದೇ.**॥ **ತಮಿ. ಮಲ. ಕೊಡ.** ಪತ್ತಾಯ ; **ತುಳು.** ಪತಾಯಿ, ಪತ್ತಯ, ಪತ್ತಾಯ, ಪತ್ತಾಯಿ./**ಪೋರ್ಚು.** ಪತಯಾ]

**ಪತ್ತಾಯಿ** 'ಪತ್ತಾಯ' ನೋ.

**ಪತ್ತಾರ,** ಪತ್ತಾರಿ, **ಪೊತ್ತಾರ** (ನಾ). ೧. ಚಿನ್ನ, ಬೆಳ್ಳಿಯ ಕೆಲಸ ಮಾಡುವವನು; ಅಕ್ಕಸಾಲಿಗ : ಲೌಕಿಕದಲ್ಲಿ ಪಂಚಾಳಕುಲದಲ್ಲಿ ಒಬ್ಬ ಪತ್ತಾರನಿಗೆ ಒಂದು ಸನಗು ಮಾಡಿಕೊಡೆಂದು ಕೊಟ್ಟರೆ ಅವರು ಮಾಡಿಕೊಟ್ಟ ಸನಗು ತಮಗೆ ಪರಿಣಾಮವಪ್ಪಿದರೆ ಇಟ್ಟುಕೊಂಬುವರು ಪರಿಣಾಮವಿಲ್ಲದಾದರೆ ಮರಳಿ ಮತ್ತೊಬ್ಬ ಜಾಣ ಪತ್ತಾರನ ಕೈಯಿಂದ ಮಾಡಿಸಿ ಇಟ್ಟುಕೊಂಬುವರು (ವಚಸಂ. ೧೨೬-೧೦೭) ; ಆದರೆ ಕಿರೀಟ ಕೆಡಿಸದೆ ಪತ್ತಾರನ ಮೋಸವನ್ನು ಬೈಲಿಗೆ ಹಾಕುವ ಮಾರ್ಗವು ಅವನಿಗೆ ತೋರಲಿಲ್ಲ (ಮುಂಬಯಿ. ೫-೬೬) ; ನನ್ನ ನತ್ತು ಮುರಿದಿತ್ತು, ಟಿಳಕರು ಒಬ್ಬ ಪತ್ತಾರನನ್ನು ಕೂಡಲೆ ಕರೆದು ತಂದರು (ಸ್ಮೃತಿಚಿ. ೬೭). ೨. ಟಂಕಸಾಲೆಯ ಮೇಲ್ವಿಚಾರಕ,—ಅಧಿಕಾರಿ ; ನಾಣ್ಯಗಳ ಪರೀಕ್ಷಕ : ಬಳಿಕ ಪತ್ತಾರನು ಆ ಗಟ್ಟಿಗಳಲ್ಲಿ ವೊಂದನ್ನು ತಕ್ಕೊಂಡು ನಟ್ಟನಡುವೆ ಕಡಿದು, ವೊಂದು ರೂಪಾಯಿ ತೂಕ ತುಂಡನ್ನು ಕಡಿದುಕೊಂಡು . . . ಜಾಲಗಾರನ ಕೈಯಲ್ಲಿ ಕರಗಿಸಲಿಕ್ಕೆ ಕೊಡುವನು (ಕಭಾಗೆ. ೨೮೨) ; ಪತ್ತಾರ-ಈತನು ಬೇರೆ ಬೇರೆ ನಾಣ್ಯಗಳ ಪರೀಕ್ಷೆ ಮಾಡಿ ಬೆಲೆ ಗೊತ್ತುಪಡಿಸಲಿಕ್ಕೆ ಗೌಡನಿಗೆ ಸಹಾಯ ಮಾಡುವವನು (ಮಭಾರ. ೧೭೨). **ಪತ್ತಾರಿ :** ೩. ತೆರಿಗೆ ಹಣದ ಪರೀಕ್ಷಕ ಮತ್ತು ಸಾರ್ವಜನಿಕರ ದವಸ-ಧಾನ್ಯಗಳನ್ನು ಅಳತೆ ಮಾಡುವವನು : (ಕಿ). **ಪೊತ್ತಾರ :** ೪. ಬಣ್ಣದ ಕೆಲಸ ಮಾಡುವವನು ; ಗಾರೆಯವನು : ಗಣೇಶಚತುರ್ಥಿಯ ಪೂರ್ವದಲ್ಲಿ ದೊಡ್ಡ ಪಟ್ಟಣಗಳಲ್ಲಿ ಪೊತ್ತಾರರು, ಜೀನಗಾರರು ಮುಂತಾದವರು ಗಣಪತಿಗಳನ್ನು ಮಾಡುತ್ತಾರೆ (ಮುಂಬಯಿ. ೫-೨೪೭).
[**ದೇ.**॥ **ತಮಿ.** ಪತ್ತರ್; **ತೆಲು.** ಬತ್ತುಂಡು./**ಪ್ರಾ.**ಪತ್ತರಕ= ಆಭರಣ]

**ಪತ್ತಾರಿ** 'ಪತ್ತಾರ' ನೋ.

**ಪತ್ತಾರುವಸ್ತ್ರ** (ನಾ). ಒಂದು ಜೊತೆ ಬಟ್ಟೆ ; ಜೋಡಿ ವಸ್ತ್ರ : ಮನೆಯ ಯಜಮಾನ ಆ ಕೂಡಲೇ ಒಳಗೆ ಹೋಗಿ ಒಂದು ತಟ್ಟೆಯಲ್ಲಿ ಹಣ್ಣು ಹಂಪಲುಗಳನ್ನೂ ೨೫ ರೂಪಾಯಿಯನ್ನೂ ಒಂದು ಪತ್ತಾರು ವಸ್ತ್ರವನ್ನೂ ತಂದು ಸನ್ಮಾನಿಸಿದರು (ನಾಕಲಾ. ೧೯).
[ಪತ್ತಾರು$_0$(P←ತಮಿ. ಪತ್ತಾಱು)+ವಸ್ತ್ರ]

**ಪತ್ತಾಸು** (ನಾ). ೧. = ಪತ್ತಾಯ : ಈಗ ನಿಮ್ಮ ಚಾವಡಿಯಲ್ಲಿ ಅಕ್ಕಿ ಹಾಕಿರಿಸಲು ಒರಡು ಪತ್ತಾಸಿಲ್ಲವೇ ? ಪತ್ತಾಸಿಲ್ಲದೆ ಚಾವಡಿಗೆ ಲಕ್ಷಣವೇ ಇಲ್ಲ (ಪುರಮ. ೧೨೧). ೨. ಪೆಟ್ಟಿಗೆ ; ಪೆಠಾರಿ : ಇವರ ಸಮ್ಮುಖದಲ್ಲಿ ಪತ್ತಾಸಿನಿಂದ ದಫ್ತರುಗಳನ್ನು ಕೆಳಕ್ಕಿಳಿಸಿದರು (ನಂಜಿನಾ. ೨೩೧) ; ಆದರೆ ಆ ಸೀರೆಯನಿಟ್ಟಿದ್ದ ಪತ್ತಾಸೇ ಉರಿದು ಹೋಗಿತ್ತು (ಪೇಸಹೆಂ. ೭೦).
[←**ತುಳು. ಪತ್ತಾಸ್**]

**ಪತ್ತಿ**$_1$ 'ಪಟ್ಟಿ' ನೋ.

**ಪತ್ತಿ**$_2$ 'ಪತ್ತರ$_1$' ನೋ.

**ಪತ್ತಿ**$_3$ (ನಾ). ೧. ಚಲಿಸುವಿಕೆ ; ಚಲನೆ ; ನಡಗೆ : "ಪತ್ತಿಃ — ನಡಿಗೆ, ಕಾಲುನಡೆ ಜನ, ಸೇನಾಭೇದ" (ಸಿದ್ಧಾಂತಿ.೩೯೨). **೨.ಕಾಲಾಳು;** ಪದಾತಿ ; ಕಾಲುನಡೆಯ ಸೈನಿಕ : "ಪದಾತಿಃ, ಪತ್ತಿಃ . . . ಪಾದಚಾರೀ – ಈ ೮ ಕಾಲಾಳ್" (ಹಲಾಯು. ೬೬-೨೯೬) ; ಪೊಳೆವ ಮಿಂಚುಗಳಂತಿರೆ ಕೇತುಗಳ್ ಜಳದವೃಂದದವೋಲಿರೆ ಹಸ್ತಿಗಳ್ ಗಳಿತಧಾರೆಗಳಂತಿರೆ ಪತ್ತಿಗಳ್ ಬಳಸಿ ಕಾರ್ಗೆಣೆಯಾಯ್ತು ಮಹಾಹವಂ (ಕವಿರಾ. ೧-೧೪೪) ; ಪತ್ತಿಶತಂಗಳ್ ಕದನೋತ್ಪತ್ತಿಯ ಮಾತೆತ್ತಲೆಂಬಿನಂ ಗಜಘಟೆಯಂ ಪತ್ತಿ ನಡೆತಂದುವೆನೆ ಸಂಪತ್ತಿಗೆ ಕುಳಭವನಮೊಂದೆ ದಲ್ ಜಿನಸವನಂ (ಮಲ್ಲಿಪು. ೧೨-೭೫) ; ಗಣನಾತೀತಮದೇನದೇನೆಸೆದುದೋ . . . ವರೂಥಂಗಳಲ್ಲಣಶಸ್ತ್ರಾಸ್ತ್ರಗಭಸ್ತಿವಿಸ್ಫೃತವಿಯದ್ದಿಗ್ಭಿತ್ತಿಗಳ್ ಪತ್ತಿಗಳ್ (ಪುಷ್ಪಪು. ೫-೧೩). ೩. ಸೈನ್ಯದ ಒಂದು ಅತಿ ಚಿಕ್ಕ ಭಾಗ ; ಒಂದು ರಥ, ಒಂದು ಆನೆ, ಮೂರು ಕುದುರೆ ಮತ್ತು ಐದು ಕಾಲಾಳುಗಳ ಗುಂಪು : "ಒಂದು ಸಾಮಜಮೊಂದು ತೇರ್ ಮೂಱಶ್ವಮೆಯ್ದು ಕಾಲಾಳ್ಗಳ್ ಪತ್ತಿಯಕ್ಕುಂ" (ವಸ್ತುಕೋ. ೮೩-೮) ; ತದ್ಬಲಂಗಳ ಪ್ರಮಾಣಮೆಂತೆನೆ ಪತ್ತಿಯೆಂದುಂ ಸೇನೆಯೆಂದುಂ . . . ಅನೀಕಿನಿಯೆಂದುಮಪ್ಪ ಪ್ರಕಾರಂ (ಮಹಾಸೇ. ೧೧-೧೧೨ ವ). **[ಸಂ.]**

**ಪತ್ತಿ**$_4$ (ನಾ). ಹಿಸ್ಸೆ; ಪಾಲು; ಭಾಗ: ಬನೂಮಾಮಿಯ ಮೈಮೇಲಿನ ಬಂಗಾರವಿತ್ತು. ಸಾಂಗಲಿಯಲ್ಲಿ ಅದನ್ನು ಮಾರಿದ್ದರೆ "ಪತ್ತಿ"ನ ಪ್ರಶ್ನೆ ಬರುತ್ತಿತ್ತು (ಪೀಪಹ. I, ೨೩೬). 'ಪತ್ತಿಗ$_2$', 'ಪತ್ತಿಗಾರ' ಪರಾ.
[←**ಹಿಂ. ಪತ್ತೀ ; ಮರಾ. ಪಾತೀ**]

**ಪತ್ತಿ**$_5$ (ನಾ). ನಿವೇಶನ (?) : ಬಟಾಕ್ಕೆ ಪತ್ತಿ ಮೂವತ್ತೆರಡುಮನ್ತೆ ಪತ್ತಿಗರವಣಂ ಮೂಱು ಗದ್ಯಾಣಂ ಮಟ್ಟ ಪೊರಿಸಂ ಬಿಟ್ಟ ಮರ್ಯಾದೆ ಎಂಟನೆಯ ಶ್ರಾಹೆಗೆ ಪತ್ತಿಗೆ ಮೂಱು ಧರಣಂ ಮೂಱನೆಯ ಶ್ರಾಹೆಗೆ ತೆಱಿ ನೆಱಿದು ಮೂಱು ಗದ್ಯಾಣಮುಂ ಪತ್ತಿಗೆ ತಿಱುವರೆಲ್ಲಾ ಕಾಲಕ್ಕ ಬಿಡುವ ಮರ್ಯಾದೆ (ಸೌಇಇ. IX-i, ೭೭-೨೩ ; 992); ಶ್ರೀಪೆರ್ಗ್ಗಡೆಯರ ಮರುಳಿಮಯ್ಯಂ ದೇವರಂ ಪ್ರತಿಷ್ಠೆಮಾಡಿ ಶಿ[ವ]ನಾಗಯ್ಯಗೇರಿಯ ಶತದ ತರ್ಕ್ಕೆಲ್ಗೆಯ್ಯ ಮತ್ತರು ೩ ಮನೆ ಪತ್ತಿ ೩ ಮಂಕಯ್ಯಗೇರಿಯ ಶತದ ಕಿಸುಕಾಡು ತೋಂಟಂ ಮತ್ತ ೧ (ಕಇ. II, ೯-೧೯ ; 1075).
[?]

**ಪತ್ತಿಗ**$_1$, ಹತ್ತಿಗ(ನಾ). ೧. ಜೊತೆಯವನು; ಸಂಗಡಿಗ; ಸ್ನೇಹಿತ: ವ್ಯಾಪ್ತಿಯುಳ್ಳ ನಮ್ಮ ಮಡಿವಾಳ ಮಾಚಯ್ಯ ನಿನ್ನ ಪತ್ತಿಗರಿ[ಪಾಠಾಂ. ನಿನ್ನ ತೆತ್ತಿಗರಿ, ನಿನ್ನಾ ಪತ್ತಿಗಿಱು]ವರಯ್ಯಾ (ಬಸವ. ೬೫೧ ; ವಚಶಾ. I, ೨೨೦-೪ ನೋ). ೨. ನೆಂಟ ; ಬಂಧು : ಪೊರೆವರಾರ್ ಕೌಸಲ್ಯೆ ಸುಮಿತ್ರೆಯರ ಚಿತ್ತದಿರವರಿದು ಪೋಷಿಸುವವನಾರು ಮದ್ದಮನಸಂಭರಿತ ಹೃತ್ತಾಪದಿಂ ತೊಳಲುತಿಹರುಪಚರಿಪ ದ[ಪ]ತ್ತಿಗರದಾರಿರ್ಪರು (ವೆಂಕರಾರಾ. ೨-೧೧-೩೩). ೩. "(ನರ್ತನದಲ್ಲಿ) ಕುಣಿತದ ಜೊತೆ ; ಪತ್ತಿಗರು" (Couple. ಇಂಕನಿ). **ಹತ್ತಿಗ :** ೪. ಉಂಟುಮಾಡುವವನು: ಹೆತ್ತ ನಿನ್ನೊಡಲಿಂಗೆ ತಂಪಿನ ತೆತ್ತಿಗನೊ ಮೇಣ್ ಬಹಳ ತಾಪದ ಹತ್ತಿಗ[ಪಾಠಾಂ. ಮುತ್ತಯ]ನೊ ಕುರುರಾಯನೆಲೆ ಧೃತರಾಷ್ಟ್ರ (ಕುಪ್ಯಾದ್ರೋ. ೪-೨). [ಪತ್ತು$_2$+-ಇಗ]

**ಪತ್ತಿಗ**$_2$ (ನಾ). = ಪತ್ತಿಗಾರ : "ಪತ್ತಿಗ—ಕೋರುಕಾರ ; ಪಾಲಿಗ ; ಪರಿಚಯಸ್ಥ" (ಜಾನಕೋ. ೧೪). [ಪತ್ತಿ$_4$+-ಗ$_2$]

**ಪತ್ತಿಗಾರ** (ನಾ). ಪಾಲುದಾರ ; ಹಿಸ್ಸೇದಾರ : (ಕಿ).
[ಪತ್ತಿ$_4$+-ಗಾರ(<-ಕಾಱ)]

**ಪತ್ತಿಗೆ**$_1$ 'ಪತ್ತುಗೆ' ನೋ.

**ಪತ್ತಿಗೆ**$_2$ (ನಾ). ಸ್ನೇಹಿತೆ ; ಜೊತೆಗಾತಿ ; ಒಡನಾಡಿ : ಅತ್ತಿಗೆಯು ಹುದಕ್ಕನಹುದು ತಾಯಹುದಕ್ಕ ಗುತ್ತಿಗೆಗಾತಿ ನೀನಹುದು ಪತ್ತಿಗೆ ಪರಮಾನುಕೂಲೆ ಕೇಳೆಂದು ಕೈಯೆತ್ತಿ ಕೊಂಡಾಡಿದ ಕುಮರ (ಮೋಹತ. ೩೧-೫೭). [ಪತ್ತಿಗ$_1$+-ಎ$_2$]

**ಪತ್ತಿಗೆ**$_3$, ಹತ್ತಿಗೆ$_2$ (ನಾ). **೧.** ಕಾಗದ ; ಪತ್ರ ; ಓಲೆ : "ಪತ್ತಿಗೆ —ಪತ್ರಿಕಾ=ಕತ್ತಿಯ ಅಲಗು, ಓಲೆ" (ತದ್ಭಕೋ. ೨೪). **೨.** ಕತ್ತಿಯ ಅಲಗು ; ಧಾರೆ : (೬). **೩.** ಚಾಕು ; ಚೂರಿ : (೬). **ಹತ್ತಿಗೆ**$_2$ **:** **೧.** "ಪತ್ರಿಕೆ, ಹತ್ತಿಗೆ" (ಶಬ್ದಾನು. ೧೫೪ ಪ್ರಯೋ); "ಹತ್ತಿಗೆ—ಪತ್ರಿಕಾ =ಪತ್ತಿಗೆ" (ತದ್ಭಕೋ. ೪೮). [<ಸಂ. ಪತ್ರಿಕಾ]

**ಪತ್ತಿಗೆ**$_4$ (ನಾ). "ಹಿಸ್ಸೆ ; ಪಾಲು" (ಜಾನಕೋ. ೧೪). [<ಪತ್ತು$_4$]

**ಪತ್ತಿಗೆಯಾರಂಬ** (ನಾ). ಜೊತೆಯಾಗಿ ಮಾಡುವ ಉದ್ಯೋಗ ; ಒಟ್ಟಾಗಿ ಮಾಡುವ ಕಸುಬು : (೬).
[ಪತ್ತಿಗೆ$_1$ (<ಪತ್ತುಗೆ)+ಆರಂಬ]

**ಪತ್ತಿಸು** (ನಾ). (?) : ಕುಮಾರಗಾಣಿಕೆ ಪಣ ೮ ವಿಜಯವೀರವಣ ಪಣ ೪ ಕೊಡತಿವಣ ಪಣ ೧ . . . ಎಳ್ಳು ಸಲಗೆ ೩ ಕೊಳಗ ೧೯ ಕ್ಕಂ ಗದ್ಯಾಣ ೧ ಪಣ ೩ ಹಾ ಜೋಳಕಾರುಣ್ಯ ಬಿಟ್ಟಿಯ ಭಂಡಿ ಗದ್ಯಾಣ ೧ ಪಣ ೯ ಪತ್ತಿಸು ಪೊತ್ತರ ಪಣ ೪ ಹಾ (ಎಕ. V, ಬೇಲೂರು. ೭೪-೧೪೪; 1261). 'ಎತ್ತಿಲು' ಪಠಾ. [?]

**ಪತ್ತಿಯ ಮತ್ತಉರ** 'ಪಟ್ಟಿಯ ಮಟ್ಟಿವುರ' ನೋ.

**ಪತ್ತಿರ**, ಹತ್ತರ$_1$, ಹತ್ತಿರ$_1$, ಹತ್ತಿರು$_2$, ಹತ್ತಿರೆ$_1$, ಹತ್ತಿಲ, ಹತ್ರ$_1$ (ನಾ). ಸಮೀಪ; ಬಳಿ; ಮಗ್ಗುಲು; ಬದಿ : ಮರಳಿ ಪತ್ತಿರ ಶಿಷ್ಯನ ಶಿರದ ಮೇಲೆಯು ತಮ್ಮದಕ್ಷಿಣಕರವ ಚಾಚುತಲಿ(ಗಗತಾ.೨-೩೦). **ಹತ್ತರ**$_1$**:** ಕಾರವಾಡದ ಹತ್ತರದಲ್ಲಿ ಕಾಳೀನದಿಯ ಮುಖ . . . ಹೊನ್ನಾವರದ ಹತ್ತರದಲ್ಲಿ ಶರಾವತಿಯ ಮುಖ (ಕಭಾಗ. ೪) ; ಇರುಳಿನೊಳು ಪುಲಿ ಸಿಂಗ ಕರಡಿ ನರಿ ತೋಳಗಳ್ತಿರುಗುವವು ಹತ್ತರದೆ ಜೋಡಿಗೋರ್ವರುವಿಲ್ಲ (ಮಲ್ಲಚ.೧೭-೯); ಖರೇದಿ ಮಾಡುವ ಸ್ಥಳವು ದೂರ ಅಥವಾ ಹತ್ತರ ವಿದ್ದಂತೆ ಭಂಡೀಬಾಡಿಗೆ ಮುಂತಾದ ಖರ್ಚು ಹೆಚ್ಚು ಕಡಿಮೆ ಹತ್ತುವುದ ರಿಂದ ಖರೇದಿ ಕಾಲದಲ್ಲಿ ಹತ್ತಿದಷ್ಟು ಖರ್ಚು ಹಿಡಿಯಲಾದೀತು (ಮುಂಬವ್ಯಾ. ೬). **ಹತ್ತಿರ**$_1$ **:** ಹಸೆಯ ಮೇಲಣ ಮಾತ ಬೆಸಗೊಳಲಟ್ಟ ದನೆ ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು (ಮಹಾದೇ. ಬ. ೨೫-೪೮) ; ಹತ್ತಿರಕೆ ಪರಿದೆಯ್ದಿಯಲಗಂ ಕಿತ್ತು ತಾಂ ಜಡಿಜಡಿದು ಮೊನೆದೋರುತ್ತ (ಬಸವು. ೩೨-೫೮) ; ಗರುವರನು ಮಾನ್ಯರನು ರಣಧೀರರನು ದೂರದಲಿರಿ ಸುವರು ಹತ್ತಿರಕೆ ಕರೆವರು ಬಾಯಿಬಡಿಕರ ಜಗದ ಭಂಡರನು(ಕುಮ್ಯಾದ್ರೋ. ೧೫-೮) ; ಇತ್ತರೋಲೆಯನವದಿರವದಿರ ಹತ್ತಿರಕೆ ಕರೆದಯ್ಯನಿರವಿಗೆ ಚಿತ್ತದಲಿ ಶಂಕಿಸುತ ಹದನೇನೆಂದು ಬೆಸಗೊಳಲು (ತೊರರಾ. ೨-೬-೩). **ಹತ್ತಿರು :** ಶಿವನಂ ಸುತ್ತಿ ಸುತ್ತಿ ಬರುತ್ತ ನೋಡುತ ಹತ್ತಿರಿಗೆ ಬಂದು (ಬಸವು. ೧೪-೬೧) ; ಕಿವಿಯ ಹತ್ತಿರಿಗೆಯ್ದಿ ವಂದುಸಿರ್ದನಂತಿರ್ದು ರ್ವೊರ್ವ ಗೋಪಾಂಗನೆಯ ನಿಡುಗಣ್ಣಳು (ಭಕ್ತಾ.ಚ. ೩-೨೨) ; ಇತ್ತ ಲಣ್ಣಗೆ ಮಾಳ್ಕಿವಂತನು ಹತ್ತಿರಲಿ ಕೈಮುಗಿದು (ಅನಂರಾ. ೧-೬-೩೯). **ಹತ್ತಿರೆ**$_1$ **:** ಆಗಳತಿಸಾಕಾರರೂಪವದಾಗಿ ನಡನಡಗುತ್ತ ಹತ್ತಿರೆಗಾಗ ಕೈಸನ್ನೆಯಲಿ ಕರೆವುತ್ತ (ಬಸವು. ೨೬-೨೫) ; ದೊರೆಗೆ ಹತ್ತಿರೆಯಾಯ್ತು ಕಾಳೆಗವರಿದೆನಲು ನಿಸ್ಸಾಳಕೋಟಿಯ ಧರಧುರದ ದೆಖ್ಖಾಳದಲಿ ತಲೆ ದೋರಿದನು ಪಾರ್ಥ (ಕುವ್ಯಾಕ. ೪-೧೪). **ಹತ್ತಿಲ :** ಕಡುವೆಡೆಗಾದು ದೆಮ್ಮನಶಲಾದುದೆ ವಿತ್ತ ಮರಾತಿಯಂ[ಪಡಲ್ವೆಡೆ]ಪಡೆಗಾದುದೆಂಬ[ಜಾ೬ಪ] ಪೊತ್ತಿರಲಾದುದೆ ಕಯ್ದು ಸತ್ಯಮಂ ನುಡಿವೆಡೆಗಾದುದೆಂದುಸಿಯಲಾದುದೆ ನಾಲಗೆಯಿ ಹತ್ತಿಲದಿಂದು ಕೀರ್ತಿ ಪೊಂಗಡಿವಿಡೆ ರೋಚಿನೆಂಬಿಸಿನ ನಾಪ್ಪಿರ್ನ ಕೂಪ್ಪಿರ್ನ ಸತ್ಯದೇಳ್ಗಿಯಂ (ಕಇಅ. ೨೧-೬-೧೩ ; 1093). **ಹತ್ರ**$_1$ **:** ಸೊಸೆಗೆ ಬುದ್ಧಿ ಹೇಳಿ, ಅತ್ತೆ ಅಗಸನ ಹತ್ರ ಹೋದಂತೆ (ಗಾದೆ).

**ಹತ್ತಿರಾಗು**=ಸಮೀಪಿಸು ; ಸನಿಹವಾಗು ; ಹತ್ತಿರಕ್ಕೆ ಬರು : ಇತ್ತ ನಿಜಭಾಷೆಗೆ ಪರಾಭವ ಹತ್ತಿರಾಯಿತು ನರ ನಿಧಾನಿಸೆನುತ್ತ ಮುರ ರಿಪು ರಥವ ಬಿಟ್ಟನು ಕಡೆಯ ಮೋಹರಕೆ (ಕುವ್ಯಾದ್ರೋ. ೧೪-೨೫). **ಹತ್ತಿರಿಣ**=ಹತ್ತಿರದ ; ಸಮೀಪದ ; ಬಳಿಯ : ಬಡಗಲು ಈಶ್ವರ ಪುರದ ಊರ ಬಳಿಯ ಹತ್ತಿರಿಣ ಹುಣಿಸೆಮರ (ಎಕ. VII, ೩ವಮೊ. ೨೬-೨೫೦ ; 1524). [<ಪತ್ತು$_1$./ತುಳು. ಹತ್ತರ, ಹತ್ರ]

**ಪತ್ತಿರೆ**, ಪತ್ತರ$_2$, ಹತ್ತರ$_2$, ಹತ್ತಿರ$_2$, ಹತ್ತಿರೆ$_2$, ಹತ್ರ$_2$ (ಅ). ಸಮೀಪದಲ್ಲಿ ; ಸನಿಹದಲ್ಲಿ ; ಪಕ್ಕದಲ್ಲಿ : ಕರುವನ ಕೇರಿಯಾದಿತ್ಯ ದೇವರ ಕೆಯ್ಯಿಂ ಪತ್ತಿರೆ ಬಡಗ ತೋರಣಗಾವುಂಡಗೆಯಿ ನವಿಲಮತ್ತರು ಹತ್ತು . . . ಮತ್ತರು ಮತ್ತಮೋರ್ವಾಯ ಬಟ್ಟೆಯಿಂ ಪತ್ತಿರೆ ಮೂಡ ಮಣೆಯಗೆಯಿ ನವಿಲ ಮತ್ತರೇಳಜ ಭುಜಿ (ಸೌಇಇ. IX–i, ೧೯೭-೪೬ ; 1119) ; ದೇವರಿಂ ಪತ್ತಿರೆ ಬಡಗಲು ರಾಜಬೀದಿಯಿಂ ಪತ್ತಿರೆ ಮೂಡಲು (ಬೊಂಕಶಾ. ೧೯೩೦, ಬಾಗೆವಾ. ೧೦೩-೪೫ ; 1165) ; ರಾಜವಾಹನಂ ಸೋಮದತ್ತನಂ ತಟಿಕ್ಕ್ಯಸಿಕೊಂಡು ಪತ್ತಿರೆ ಕುಳ್ಳಿ ರಿಸಿ . . . ಬೆಸಗೊಳಲ್ (ದಶಕು. ೫-೧೨ ಪ). **ಪತ್ತರ**$_2$ **:** ಪತ್ತರಿದ್ದವ ರೆಲ್ಲ ಚೆಲ್ಲಿದರ್ದೆಸೆದೆಸೆಗೆ (ತುರಂಗ. ೫-೫೭). **ಹತ್ತರ**$_2$ **:** ನನ್ನ ಹತ್ತರ ಒಂದು ಆಣೆ ರೊಕ್ಕ ಅದೆ (ಮುಂಬಯಿ. ೪-೪೪) ; ಅದರ ಹತ್ತರ ಶಸ್ತ್ರಾಸ್ತ್ರ ಸಜ್ಜಿತನಾದ ಒಬ್ಬ ವೀರಯುವಕನು ನಿಂತಿದ್ದನು (ಮಂದಾಕಿ. ೧). **ಹತ್ತಿರ**$_2$ **:** ಹತ್ತಿರಾತನ ನಿಲಿಸಿ ಬಟ್ಟೆಲಲಿತ್ತು ವೀಳೆಯವನು ಸುಯೋಧನ ಕೆತ್ತುಕೊಂಡಿರೆ ನುಡಿಸಿದನು ಕಲಿಕರ್ಣನವನಿಪನ (ಕುವ್ಯಾದ್ರೋ. ೧-೧೫) ; ಸಂಶಯದಿಂದೆ ಭೂಪಾಲಕಂ ತನ್ನ ಹತ್ತಿರಿಹ ನಿಜಮಂತ್ರಿ ನಕುಲಕೇತುವ ನೀಕ್ಷಿಸಲ್ಕೆ (ಜೈಮಿಭಾ. ೨೫-೫೪). **ಹತ್ತಿರೆ**$_2$ **:** ಮಾವಿನ ಕೆಱೆಯ ಕೆಳಗೆ ಗುತ್ತೇಶ್ವರದೇವರಗದ್ದೆಯಿಂ ಬಡಗ ಹತ್ತಿರೆ ಒ(೦)ಮ್ಮೆರಿಯಲಿ(೦) ನ್ನೇಸಟಬಲು ಗದ್ದೆ ಕಂಮಂ ೧೧೦ (ಸೌಇಇ. IX–i, ೨೭೬-೫೦ ; 1183) ; ನಡೆದಿಹಃಪಗೆಯಾಂಡರೂರ ಹತ್ತಿರೆ ಬಂದು ಮೃಡಮೂರ್ತಿಪುರದ ಬಾಗಿ ಲ್ವಾಡದೊಳು ನಿಂದು (ಇಹರ. ದೇ. ೩೨-೫) ; ಲಗ್ನವಿದೆ ಹತ್ತಿರೆ(ಕುವ್ಯಾಅ. ೧೩-೮) ; ಹತ್ತಿರೆ ಕರೆದು ಕುಳ್ಳಿರಿಸಿಕೊಂಡಳು ಪ್ರಾಣಪತ್ತುಗೆಗಾತಿಯ ಮುಂದದಿ (ಮೋಹತ. ೨೭-೮). **ಹತ್ರ**$_2$ **:** ಛತ್ರಿ ಚಾಮರ ಢಾಳು ಎತ್ತಿ ಪಿಡಿದಿರುವವರು ಹತ್ರ ಚಿಮ್ಮುವ ಹಾಕು ಪಾವಡಿಗರು . . . ಎಡೆ ಯಾಡುವವರು ಲೆಕ್ಕವಿಲ್ಲ ಸಂದಣಿಯು (ಶರಲೀ. ೨೩೦-೩). [<ಪತ್ತಿರ]

**ಪತ್ತಿವರ್ಗ** (ನಾ). ಕಾಲಾಳುಗಳ ಗುಂಪು ; ಪದಾತಿ ಸೈನ್ಯ : ಉತ್ತರದೇಶದ ಪತ್ತಿವರ್ಗಂಗಳುಮವರು ಪಾಂಡ್ಯದೇಶದ ಪದಾತಿಗಳು (ಸೌಗಂಧಿ. ೧೩೦-೭). [ಪತ್ತಿ$_3$+ವರ್ಗ]

**ಪತ್ತಿಸು**, ಹತ್ತಿಸು (ಕ್ರಿ). **೧.** ಅಂಟಿಕೊಳ್ಳುವಂತೆ ಮಾಡು ; ಅಂಟಿಸು ; ಸೇರಿಕೊಳ್ಳುವಂತೆ ಮಾಡು ; ಲಗತ್ತಿಸು : ಒತ್ತಿದ ತಳ್ಕೆತ್ತಿದ ತಟಿ ಮುತ್ತಿನ ಪೊಸದುಡುಗೆ ತಳಿರ ಸೋರ್ಮುಡಿ ಮನಮಂ ಪತ್ತಿಸಿ ಜೊತ್ತಿಸೆ ಮದನೋನ್ಮತ್ತೆಯರವಯವದೆ ಬಂದರರಸಿಯರರೆಬರ್ (ಪಂಪಭಾ.೫-೫೯); ವನದೊಳ್ ನೇಜಾಳಿವಣ್ಣ ನಗ್ನಿ ಜೆ ಬಹುಪ್ರಖ್ಯಾತಿಯಿಂ ಪತ್ತಿಸಲ್ . . . ದೂಱಿರ್ ಪೋದುದೇ (ಸೋಮೇಶ. ೮೩) ; ಅದೆ ತನ್ನೇತ್ರಂ ಪದದೊಳ್ ಪತ್ತಿಸಿ ಬಾಳ್ದ ಭಾವುರೆ ವಿರೂಪಾಕ್ಷಂ ಲಲಾಟೇಕ್ಷಣಂ (ಪಂಪಾಶ. ೩೭). **೨.** ಸೇರಿಸು ; ಕೂಡಿಸು : ಗುಂ ಎಂಬುದರ್ಕೆ–ತೆಗಟ್ಟುಂ, ನೆಗಟ್ಟುಂ, ಪೊಗಟ್ಟುಂ, ಎಂಬಂತುಟುದು

ಪರ್ಕೆಲ್ಲಂ ಪತ್ತಿಸುವುದು (ಶಸುದ. ೪೪ ಪ್ರಯೋ) ; ಅತ್ತಣಿಮೆಂದು ನಿವಿಂಶರ್ವವರೆತ್ತಮದೆಂದುಸಿರ್ವ ಪಂಚವಿಂಯನಲ್ಲಿ ಕೆಲರ್ ಪತ್ತಿಸುವರ್ ಮೂದೆಜನಂ ಪೆತ್ತ ತೃತೀಯೆಯನೆಕಾರವಮಂ ಪರಿಹರಿಪರ್ (ಶಬ್ದಾನು. ೨೭೧ ವ್ಯಾಖ್ಯಾ). **೩.** ಅಳವಡಿಸು ; ಹೊಂದಿಸು : ಕತ್ತರಿಸಿ ಚಂದ್ರಕಳೆಯಂ ಪತ್ತಿಸಿದಂತೆಸೆವ ಸತಿಯ ಸುಲಿಪಲ್ (ಮಲ್ಲಿಪು. ೩-೭೫); ಕಳೆಯಂ ಪತ್ತಿಸಿ ಕೋಮಲಾಂಗುಲಿಗಳಿಂದಾ ತಂತಿಯಂ ಸೀವಿ ಸಿರ್ಮಳಮಂ ಮಾಡಿ . . . ಸುಕಂಠಿ ಬಾಜಿಸಿದಳಾ ಜಾಣಿಂ ಲಸದ್ವೀಣೆಯಂ (ಕುಸುಮಾ. ೧-೩೬) ; ವನಮಧ್ಯದ ತೆಱಿಂಬೊಳೆವ ತೆಱಪಿನೊಳಳವಟ್ಟ ಕೊಳವೇರ್ಗಳ ಕೇರ್ಗಳೊಳಗೆ ತಮಾಲದೆಳೆದಳಿರಂ ಕೊಱೆದು ಚಿತ್ರಪತ್ರಮಪ್ಪಂತೆ ಪತ್ತಿಸಿಸಟ್ಟ ಪೊಂಬಾಳೆಯ ಬಾಳ್ಗಂಬಂಗಳಿಂ (ರಾಜಶೇ. ೧೦-೩೧ ವ). **೪.** ಸೇರಿಸಿಕೊಳ್ಳು ; ಹೊಂದಿಸಿಕೊಳ್ಳು : ದುರ್ಯೋಧನಂ . . . ಗಳಿತಗರ್ವನಾಗಿ ಪಾಂಡವರ ಮೊಗಮಂ ನೋಡಲ್ ನಾಣ್ಚಿ ಮದಗಜಪುರಕೆ ಪೋಗಿ ಜೂದಿನೊಳ್ ಗೆಲ್ದ ನೆಲನಂ ನಯಜ್ಞನಾಗಿ ತನ್ನೊಳ್ ಪತ್ತಿಸಿ ದುಶ್ಶಾಸನನಂ ಯುವರಾಜನಂ ಮಾಡಿ ನಿರ್ವ್ಯಾಜಮರಸುಗೆಯ್ಯುತ್ತುಮಿರ್ದಂ (ಪಂಪಭಾ. ೭-೩೯ ವ). **೫.** (ದೀಪ, ಬೆಂಕಿ ಮೊದಲಾದುವು) ಹತ್ತಿಕೊಳ್ಳುವಂತೆ ಮಾಡು ; ಪುಟಮಾಡು ; ಹಚ್ಚು ; ಹೊತ್ತಿಸು : ಪತ್ತುಂ ಬೆರಲೊಳ್ ಸೊಡರಂ ಪತ್ತಿಸುವರ್ (ಸಮಪ. ೯-೧೨೩) ; ಶುದ್ಧಮನಾತ್ಮಪಾತ್ರಗತಮಂ ಸುಸ್ನಿಗ್ಧಮಂ ಚಿತ್ತವರ್ತಿಕೆಯಂ ಪತ್ತಿಸಿ ರಾಗದಿಂ ಬೆಳಗುವೆಂ ಬೋಧಾಮಲಜ್ಯೋತಿಯಂ (ಅರ್ಥನೇ. ೧-೧೧). **೬.** ಲೇಪಿಸು; ಬಳಿ; ಸವರು: ತಾವರೆಯ ನೂಲಿಂ ಸುತ್ತಿದ ಸಿರಿಕಂಡದುರುಳಿಯಂ ಪತ್ತಿಸಿದ ಮೃಣಾಳನಾಳವಲಯದಿಂ ಮುದ್ರಿಸಿದ ನಳಿನೀಪತ್ರಪುಟಮಂ ತೆಗೆದು (ಕಾದಂಬ. ೧೮೮) ; ಕರ್ಣಾವತಂಸದೊಳ್ ಕೀಲಿಸಿದ ನೀಲದುಮ್ಮಖಮಯೂಖಸಂಕುಳಂ ಕೊಡಂಕೆಯೊಳ್ ತಿಂಬಿತೆಂಬಂತೆ ಕೊಗ್ಗಿಯ ಕತ್ತುರಿಯಂ ಪತ್ತಿಸಿಯುಂ (ಚಂದ್ರಪ್ರ. ೬-೬೩ ವ). **೭.** (ಮನಸ್ಸನ್ನು) ತೊಡಗಿಸು ; ನಿಲ್ಲಿಸು ; ನೆಲೆಯಾಗುವಂತೆ ಮಾಡು : ಉತ್ತಮವಿದ್ಯೆಗಳ್ಗೆ ಗುಱಿಯಾದ ತನೂಭವರೆಯ್ದೆ ಚಿತ್ತಮಂ ಪತ್ತಿಸೆ ಪತ್ತಿದಂಗನೆಯರೊಳ್ ಬೆಸಕೆಯ್ವಮರೇಂದ್ರರಾಗಸಂಪತ್ತು ಮನಂಗೊಳುತ್ತುಮಿರೆ (ಆದಿಪು. ೮-೬೧) ; ವಿನಯದಿನವಳ ಶ್ರಾವಕತನಮಂ ಲೇಸಾಗಿ ಕಿಡಿಸಿ ತಿಳಿಪಿ ಬೞಿಕ್ಕಾ ವನಿತೆಯನೇಗೆಯ್ದುಂ ಮೆಲ್ಲನೆ ನಯದಿಂದೆನ್ನ ಧರ್ಮದೊಳ್ಪತ್ತಿಸುವೆಂ (ಧರ್ಮಾಮೃ. ೪-೧೯೪) ; ಒದವಿಸಿ ನಡೆನುಡಿ ನೋಟದ ಪದದಿಂ ಪೆಣ್ಗಳ್ಗೆ ಕಲಿಸುವರ್ ವೈಶಿಕಮಂ ಮುದುಪೆದಲೀ ಕುಂಟಣಿ ಮೆಯ್ಪುದುಳದ ಗೆಯ್ಮೆಯೊಳವಿಂತು ಪತ್ತಿಪಳಮಮಾ (ಚಿಕವಿ. ೬-೮೬). **೮.** ವಶಪಡಿಸಿಕೊಳ್ಳು : ಮೇಳದೊಳಪ್ಪುಕೆಯ್ದುಗೊಟ್ಟಯೊಳೊಳಪೊಯ್ದು ಪತ್ತಿಸುವ ಸೂಳೆಯರಂದಮನೆಯ್ದೆ ಪೋಲ್ವ . . . ಸೂಳೆಯರ ನೆಗೞ್ತೆ ನಾಡೆ ತನಗಾಯ್ತು (ಪಂಪಭಾ. ೪-೯೪) ; ಬೆಸನಕ್ಕಾಗರಮಾದಳೀಕಸೊಬಗಿಂ ಕೂರ್ತಂದದಿಂ ಮತ್ತೆ ಪತ್ತಿಸಲೆಂದಾಟಿಸಿ ಬಂದಪಂ (ಕಾವಂಬ. ೬೨). **೯.** ಕೈಗೊಳ್ಳುವಂತೆ ಮಾಡು ; ಹೇರು ; ಅಮರಿಸು : ಕ್ಷತ್ರಿಯಧರ್ಮವರ್ತಿಯಪ್ಪ ನಿನಗೆ ಯತಿಧರ್ಮಮಂ ಪತ್ತಿಸಿದಂ (ಪಂಚತಂ. ೧೧೪-೧೯). **೧೦.** ಉಂಟುಮಾಡು ; ಉತ್ಪತ್ತಿಮಾಡು ; ಹುಟ್ಟಿಸು : ಬಸನಂ ಕೈಗಣ್ಮೆ ತಮ್ಮೊಲ್ದರನೆ ಪಿಡಿದು ಬಲ್ಲಂದದಿಂ ನಲ್ಮೆಯಂ ಪತ್ತಿಸಿ ಚಿತ್ತಂಬೆತ್ತು ಮೆಚ್ಚಂ ಸಲಿಸಿ ಸಲುವ ತಾಣಂಗಳೊಳ್ ಜಾಣರಂ ಜೊತ್ತಿಸಿ (ಸಮಪ. ೫-೫೦). **೧೧.** ತೊಡಿಸು ; ಧರಿಸುವಂತೆ ಮಾಡು : ಚಿತ್ತಜನ ಪಿತನುತ್ತಮಾಂಗಕೆ ಪತ್ತಿಸಿದ ಮಕುಟಾಗ್ರಕೆತ್ತಿದ ಮುತ್ತಿನಂದದ ಸತ್ತಿಗೆಯೊಳೊಪ್ಪಿದನು ಭುಜಗೇಂದ್ರ (ಅನಂರಾ. ೧-೩-೪೦). **೧೨.** (ಏಟು) ತಾಗುವಂತೆ ಮಾಡು,— ಬೀಳುವಂತೆ ಮಾಡು : ಮಿಕ್ಕುದು ವಜ್ರಪಾತಮುಮನೆಂಬಿನಮುಬ್ಬಸಮಾದ ತೋರಹತ್ತಕ್ಕೆ ತಗುಳ್ದು ಪತ್ತಿಸುವ ಮಾನಸಗೋಳಮೆನಿಪ್ಪ ಡೊಕ್ಕರಕ್ಕಿಕ್ಕಿದ ವಜ್ರಲೇಪಮೆನೆ ಪತ್ತುವ ಲಗ್ಗೆಗೆ . . . ಬೆರ್ಚದನವಂ (ಚಂದ್ರಪ್ರ. ೫-೮೦). **೧೩.** ವ್ಯಯಿಸು ; ವೆಚ್ಚಮಾಡು ; ವಿನಿಯೋಗಿಸು : ಜಿನಪೂಜೋತ್ಸವಕೆಲ್ಲಿಯುಂ ಜಿನಕಥಾಳಾಪೋತ್ಸವಕೆಲ್ಲಿಯುಂ . . . ಜಿನಮಹಾದಾನೋತ್ಸವಕೆಲ್ಲಿಯುಂ ಧನಮಂ ಪತ್ತಿಸುತಿರ್ಪ ನೀನೆ ಪಿರಿಯ್ಯೆ ಶ್ರೀ ದಾನಚಿಂತಾಮಣೀ (ಅಜಿಪು. ೧೨-೧೬). **ಹತ್ತಿಸು : ೧.** ಚಂಡವಿಕ್ರಮಭೀಮನದ ಕೈಕೊಂಡು ತಾನವಿವೇಕದಲಿಯುದ್ದಂಡತನದಿಂ ತಂದ ಹತ್ತಿಸಲರಿದು ನಮಗೆಂದ (ಕುವ್ಯಾಅ. ೩-೧೮) ; ರತಿರೂಪ ಹರಿದು ಹತ್ತಿಸಿದಂತುಟೆಸೆವ ನಿನ್ನತಿಶಯದ ರೂಪುಗಂಡಿವಳನಾಳುವುದಿಲ್ಲವದಱಿಂದ ಕೊಡುವುದೆನಗೆ ಹಿತವಲ್ಲವೆಂದೆನಲ್ಕೆ (ಸಮ್ಯಕೌ. ೫-೧೬). **೩.** ಬೆಸಸಿದೂಳಿಗವನಾ ಪಡಿಹಾಱರಿಂದಲೊದಗಿಸಿ ಕಾರ್ಯಭಾಗವಿಡಿದರಸನಿಚ್ಛೆಯ ನಱಿದು ಬೆಸುಗೆಬಿಡಿದಂತೆ ಹತ್ತಿಸಿ (ಚೆಬಪು. ೭-೬) ; ಬತ್ತಿ ಹೆತ್ತುಪ್ಪನು ಹ[ಪಾಠಾಂ. ಹೊ]ತ್ತಿಸಿದ ಫಲವೇನು ಮತ್ತೊಂದು ದೈವಕೆಱಗುವನ ಶಿವಪೂಜೆ ಹತ್ತಿಗೇಡೆಂದ (ಸರ್ವಜ್ಞ. ೧೭೨); ಊದುಬತ್ತಿಯನ್ನು ಹತ್ತಿಸಿಟ್ಟ ದ್ವಾರೆ (ದೌಲತ್. ೯). **೫.** ಸತ್ತು ಪೋಗಿಹಯೆನ್ನ ಪುತ್ರಗೆ ಹತ್ತಿಸುವೆ ಅಗ್ನಿಯನುಯೆಂದರೆ ಹತ್ತಿ ಬೇಯ್ವುದುಯೆನಗೆ ವಡಲುರಿ (ಹಸುಚ. ೧೬೪). **೬.** ಕಣ್ಣಿವೆ ಬಿಳುಪೇಱೆ ಕಪ್ಪ ಹತ್ತಿಸಿ ಮುಖಕೆಣ್ಣೆಯ ಮಿಂಚುಗಳಿಕ್ಕಿ ಹುಣ್ಣುಗಲೆಯ ಸೀರೆಯಲಿ ಮಱಸಿಹ ಮುದಿಪಣ್ಯಾಂಗನೆಯರೊಪ್ಪಿದರು (ಕಂಸವಿ. ೬-೧೯೨) ; ಬೇರೆ ಬೇರೆ ಅಂಗಾಂಶಗಳ ಒಳಭಾಗಗಳಿಗೆ ಬಣ್ಣ ಹತ್ತಿಸುವ ಅನಿಲೀನ್ ಬಣ್ಣಗಳ ಅನೇಕಾನೇಕ ಬೆರಕೆಗಳಿಂದ ಆಮೇಲೆ ಈ ಕೊಯ್ತಗಳಿಗೆ ಬಣ್ಣ ಕಟ್ಟಬಹುದು (ಕವಿಕೋ. I, ೫೪). **೯.** ಅವನು ತನ್ನ ಕೆಲಸವನ್ನು ನನಗೆ ಹತ್ತಿಸಿದನು (ರೂಢಿ). **೧೦.** ಅವನು ಇಬ್ಬರ ನಡುವೆ ಜಗಳವನ್ನು ಹತ್ತಿಸಿದನು (ರೂಢಿ), ಸಿಹಿಪದಾರ್ಥ ಮಗುವಿನ ಬಾಯಲ್ಲಿ ರುಚಿ ಹತ್ತಿಸಿತು (ರೂಢಿ). **೧೪.** ಏರಿಕೊಳ್ಳುವಂತೆ ಮಾಡು ; ಏರಿಸು : ಡೊಂಬರವನು ಹುಡುಗನನ್ನು ಗಳೆಯ ಮೇಲೆ ಹತ್ತಿಸಿದನು (ರೂಢಿ). **೧೫.** (ಶಾಖ ಮೊದಲಾದುವನ್ನು) ಕೊಡು ; ಒದಗಿಸು : ಉಟ್ಟ ಸೀರೆಯ ಪೊಟ್ಟಣಂಗಟ್ಟಿ ಶೂಲಿಯಕ್ಷಿಗೆ ಬಾಯ ಶೇಖವನೋಳಿಯಿಂ ನಸು ಹತ್ತಿಸುತ್ತಿರೆ ಸೇಲೆಯೆಲ್ಲಂ ನನೆಯಲಚ್ಚರಿವಡುವನೊಡನೊಡನೆ (ಬಸಪು. ೧೮-೬೦). **೧೬.** (ಹೆದೆಯನ್ನು) ಬಿಗಿ ; ಸಿದ್ಧಗೊಳಿಸು : ಹತ್ತಿಸಿದ ಚಾಪಮಂ ಜೇಗೈದು ಕೂಡೆ ಮಸೆವೆತ್ತ ಕೂರಂಬುಗಳನಾರ್ದಿಸಲ್ಸೇನೆ ಮುಱಿದತ್ತವನ ಬಾಣಘಾತಿಗೆ (ಜೈಮಿಭಾ. ೪-೩೧).

**ಪತ್ತಿಸಿಕೊಳ್ಳು,ಹತ್ತಿಸಿಕೊಳ್ಳು = ೧.** ಏರಿಕೊಳ್ಳುವಂತೆ ಮಾಡು; ಏರಿಸಿಕೊಳ್ಳು : ಏಡಿ ಬರ್ದುಂಕಿದೆನೆಂದು ಮುಂದೆ ನಿಲೆ ನಿಜಕಂಠತಳಮಂ ಪತ್ತಿಸಿಕೊಂಡು ಶಿಲಾತಳಮನೆಯ್ದೆವರ್ಪುದುಂ (ಪಂಚತಂ. ೮೫-೩) ;. ಇವನು ನನ್ನನ್ನು ತನ್ನ ಹೆಗಲ ಮೇಲೆ ಹತ್ತಿಸಿಕೊಂಡನು (ಮುಂಬಯಿ ೩-೧೨೭). **೨.** ಲೇಪಿಸಿಕೊಳ್ಳು ; ಬಳಿದುಕೊಳ್ಳು : ಸೊಗಸಾಗಿ ಅಲಂಕಾರ ಮಾಡಿಕೊಂಡು, ಸುಗಂಧವನ್ನು ಹತ್ತಿಸಿಕೊಂಡು, ಒಬ್ಬರೊಡನೆ ಒಬ್ಬರು ಹುರುಡು ಮಾಡುತ್ತ ಎಲ್ಲ ರಾಜರೂ ಕುಳಿತಿದ್ದರು (ಪಚಭಾ. ೫೧) ; ಬಣ್ಣ ಹತ್ತಿಸಿಕೊಂಡ ಪದಾರ್ಥಗಳ ರಾಸಾಯನಿಕ ಗುಣಗಳನ್ನು ಆ ಬಣ್ಣಗಳು ಎಂದಿಗೂ ಸೂಚಿಸುತ್ತಿರಲಿಲ್ಲ (ಕವಿಕೋ. I, ೫೪). **೩.** (ಬೆಂಕಿ, ದೀಪ ಮೊದಲಾದುವು) ಹತ್ತಿಕೊಳ್ಳುವಂತೆ ಮಾಡು ; ಪುಟಗೊಳ್ಳುವಂತೆ ಮಾಡು : ಅವನು ಕತ್ತಲೆ ಕೋಣೆಯಲ್ಲಿ ಹಣತೆಯನ್ನು ಹತ್ತಿಸಿಕೊಂಡು ಓದುವನು (ರೂಢಿ).

[ಪತ್ತು$_1$ + -ಇಸು$_3$]

**ಪತ್ತ್ರೀಂದ್ರ** (ನಾ). ಕಾಲಾಳುಗಳ ಸೇನೆಯ ಅಧಿಪತಿ; ಪದಾತಿ ನಾಯಕ: ಗಗನಗಹನದೊಳೆ ಗಮಿಯಿಪ ಖಗಕ್ಕೆ ಪತ್ತ್ರೀಂದ್ರಧೀವರಂ ಬೀಸಿದ ರೇಣುಗಣನವಜಾಲಕೊಳಗಾಯ್ತೊ ಗುವಿಗೆಯಿಂದನಿಮಿಷಪ್ರತಾನಂ ಚಿತ್ರಂ (ರಾಜಶೇ. ೬-೪೩). [ಪತ್ತ್ರಿ₃+ಇಂದ್ರ]

**ಪತ್ತು₁**, ಹತ್ತು₁ (ಕ್ರಿ). ೧. ಅಂಟು; ಅಂಟಿಕೊಳ್ಳು: "ಪತ್ತು—ಸಂಶ್ಲೇಷೇ (ಹತ್ತಿಕೊಳ್ಳು), ಕಲಹ, ಸಂಖ್ಯಯೋಃ" (ಶಮಧಾ); "ಪಗಿಲ್ತುದು ಪತ್ತಿದಕ್ಕೆ ನಾಮಂ" (ಶಬ್ದಮಂ. ೨೨); ಅಲ್ಲಿಯೆ ಕಣ್ ಪಳಂಚೆ ಮನಮಲ್ಲಿಯೆ ಕೀಲಿಸೆ ನೆಚ್ಚು ಮೆಚ್ಚು ತಳ್ತಲ್ಲಿಯೆ ಸೋಲ್ತು ಪತ್ತೆ (ಆದಿಪು. ೨-೪೨); ನಡಪಾಡುವ ವನದೇವಿಯರಡಿಯುಗಿಡಲಕ್ತಕ ದ್ರವಂ ಪತ್ತಿದವೋಲ್ ಕಡುಗೆಂಪನಾಳ್ದುವೊಂದೊಂದೆಡೆ ವನಚರವಿದ್ಧ ಮೃಗಗಣಾರುಣಜಳದಿಂ (ಚಂದ್ರಪು. ೫-೪೯). ೨. ಸೇರು; ಕೂಡು: ತವೆ ಮಾಱಾಂತ ಬಲಂ ಕಱುತ್ತಿಱಿದು ತನ್ನಾಳ್ದಂ ಕರಂ ಮೆಚ್ಚೆ ಗೆಲ್ದವನಂ ಶ್ರೀವಧು ಪತ್ತುಗುಂ (ಪಂಪಭಾ. ೧೦-೧೪); ಪೇನಂತೆ ತಲೆಯಂ ಪತ್ತಿ ಪಲ್ಕುಡಿವರ್ ತೇರಣದಂತೆ ತಳವಂ ಪತ್ತಿ ಕತ್ತರಿಸುವರ್ (ಧರ್ಮಾಮೃ. ೩-೬೩); ಪಕ್ಷಾರ್ಥಮಂ ಪೇೞ್ವೆಕಾರಂ ಕಡೆಯೊಳಾಗು ಳ್ದೊಡೆ ಶಬ್ದಂ ಲಿಂಗತ್ರಯ ವಚನತ್ರಯ ಪುರುಷತ್ರಯಾನ್ವಿತಮಾಗಿ ಧಾತುವಿನ ಕಡೆಯೊಳ್ ಪತ್ತುಗುಂ (ಶಮದ. ೨೫೦ ವೃತ್ತಿ); ಹೊತ್ತ ದೇಹವ ಬಿಟ್ಟು ಮತ್ತೊಂದು ದೇಹವ ಪತ್ತದೆ ನಿಲ್ವುದು ಮುಕ್ತಿ (ಭರತೇ. ೧-೧೧೮). ೩. ಬೆಸುಗೆಯಾಗು; ಬೆಸೆದುಕೊಳ್ಳು: ತೆತ್ತುತನಕ್ಕೆ ತೆತ್ತುತನಮಂ . . . ಆಸೆಗಮಾಸೆಯನಾದಲಂಪಿನಿಂ ಪತ್ತಿದ ಮೆಯ್ಗೆ ಪತ್ತುಗೆಯನುಕ್ಕೆವಕುಕ್ಕೆವಗೆಯ್ತುಮಂ ಪೊಣರ್ಚುತ್ತುಮು ಪಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ(ಕಾವ್ಯಾಸಾ. ೯೮೫ ಶೂದ್ರಕ);ಕಂಭದೊಳ್ ಪತ್ತಿದ ಪೊನ್ನ ಪುತ್ಥಳಿ ತೊಡರ್ಚಿದ ಮುತ್ತಿನ ಸೂಸಕಂ (ಪುಷ್ಪಪು. ೪-೭೮). ೪. ಅಳವಡು; ಹೊಂದಿಕೆಯಾಗು: ಮುತ್ತಿನ ತೋರಣಂ ಗಜದ ನೆತ್ತಿಯ ಮುತ್ತುಗಳೆಲ್ಲ ಪಲ್ಗಳೊಳ್ಪತ್ತಿದ ಪೋಲ್ವೆಯಂ ಪಡೆವ ಗೋಪುರಪಂಚಕಮಾಸ್ಯಮಾಗೆ . . . ಪ್ರತಾಪಮಂ ಪೊತ್ತುದದೊಂದು ಸಿಂಹಪುರಮೆಂಬ ಪುರಂ ಘನಘೋಷಘೂರ್ಜಿತಂ (ಅರ್ಹನೇ. ೧-೬೭); ಕಂಬುನಿಭಕಂಠಿ ತನುಪುಳಕಂಬೂರಿಸೆ ಮಿಸುನಿ ರನ್ನಮಂ ಪತ್ತುವವೋಲ್ ಲಂಬಾಳಕತತಿ ಮದರೋಲಂಬಾಳಿಯನಿೞಿಸ ಲಪ್ಪಿದಳ್ವಲ್ಲಭನಂ (ಉದ್ಭಟ. ೮-೧೦೮). ೫. ಹಿಡಿ; ಹಿಡಿದುಕೊಳ್ಳು: ಅಂತು ಸತ್ತುಂ ನೆಲನಂ ಪತ್ತುವಿಡೆನೆಂಬಂತೆ ನೆಲನಂ ಪತ್ತಿ ಮೂರ್ಧಾಗತ ನಾಗಿರ್ದ ಕುರುಕುಳಚೂಡಾಮಣಿಯನೇನುಂ ಮಾಣದೆ ಕಿರೀಟ್ವರವೈರಿ ಮುಟ್ಟೆವಂದಾಗಳ್ (ಪಂಪಭಾ. ೧೩-೯೭ವ); ಉದ್ಯತ್ಕಾಂತಿ ಚಂಚನ್ನಖಗತ ತನುವೆಂತುಂ ಬಿಡಂ ಪತ್ತಿ ಕಾಲಂ ಸತಿ ಬೀೞ್ದುದ್ದರ್ಪ್ಪನಿಂತೀತನ ತೆಜನನಿದಂ ಕಾಣೆ ನೀನುತ್ಪಲಾಕ್ಷೀ (ಕಾದಂಪೂ. ೮೯೭); ತತ್ತಟಿಗುದಿದು ಕಾಯ್ದ ಕಾಯ್ಗೊಂಡದೆಣ್ಣೆಯೊಳಿರ್ದ ಬರ್ದಿಸುತ್ತುಮಾಪಾದಮಸ್ತಕಂಬರಂ ಮೃತ್ತಿಸಿ ಪತ್ತಿ ತಿದಿಯುಗಿಯುತ್ತೆ (ಅಜಿಪು. ೧೧-೧೦ ವ); ತನಿವಣ್ಣಳ ಸಾರಮಂಶುಕಾವಳಿ ಸಲೆ ಪತ್ತಿ ಸೀತ್ಕರಿಸಿ ಕಣ್ಗಳನಿಂತರೆಮುಚ್ಚಿ ಸೀರುತುಂ ವಿಳಸಿತಚುಂಬನಾಭಿನಯಮಂ ನೆಱೆ ತೋರ್ಪವೊಲಿರ್ದುದಾವ್ರುದೊಳ್ (ಕುಸುಮಾ. ೫-೪೯). ೬. ತಾಗು; ಸ್ಪರ್ಶಿಸು: ಆಗಸದೊಳಗೊಂದು ಮಹೀಭಾಗದೊಳಿನ್ನೊಂದು ದಾಡೆಯಾಗಿರೆ ಮನದಿಂ ಬೇಗಂ ಬರ್ಪಳ ದಿಟ್ಟಿಗಳಾಗಳೆ ಪತ್ತಿದುವು ಗೆಂಟಱೊಳ್ ಮಾರುತಿಯಂ (ಪಂಪಭಾ. ೩-೧೩); ಧರಣಿಯನೆಯ್ದೆ ಪತ್ತದೊಡೆ ನೀಳ್ದ ಮಡಂ . . . ಕೃಶಂ ತೊಡೆಯೆನಿಪ್ಪೊಡೆ ಪಾಪದ ಪುಂಜಮಂತವಳ್ (ಲೋಕೋಪ. ೧೧-೫೨); ಪಣ್ತ ಕಬ್ಬಿನಂತೆ ನೆಲನಂ ಪತ್ತಿ ಸೆಱೆಸಿಕ್ಕಿದನಂತುಮ್ಮಳಿಸಿ (ಧರ್ಮಾಮೃ. ೯-೧೬೮). ೭. ಒದಗು; ಉಂಟಾಗು; ಬರು: ಖಳಸಂತತಿಯಿಂ ಪತ್ತಿದ ಕಳಂಕಪಂಕಮನೆ ಚೆಚ್ಚರಂ ಭವ್ಯಜನಂಗಳ ವಚನಮೆಂಬ ನಿರ್ಮಳ ಜಳದಿಂ ಕರ್ಚುವುದು ಸೌಖ್ಯಮಂ ಬಯಸುವವಂ (ಸಮಪ. ೬-೧೦೮); ಎಸೆವಾ ವ್ರತಮಂ ಪ್ರತಿಪಾಳಿಸುತ್ತು ಮಿರ್ದಂಗದೊರ್ವೆ ಕರ್ಮದ ಬಸದಿಂ ನಸಿಗುತ್ತಂ ಪತ್ತಿ ವಿವರ್ಧಿಸುತಿರ್ದುದು ಬಂಧುಜನದ ಮನ ದುಮ್ಮಳಮಂ (ಪರ್ಧಪು. ೧೬-೫೬). ೮. ಆವರಿಸು; ಆಕ್ರಮಿಸು; ವ್ಯಾಪಿಸು: ಅಱುವುಗೆಡಿಸುತ್ತುಮೆಲ್ಲಾ ತೆಱದಿಂ ದೆಸೆಗೆಡಿಸದಿರದು ವಿಷಯ ಸಮೂಹಕ್ಕೆಱಗಿ ಬಿಡದಂತೆ ಪತ್ತುವ ಮಱುಕಂ ದಿಱ್ಕೋಹದಂದದಿಂ ಮಾನಿಸರಂ (ಕಾದಂಪೂ. ೫೩೮); ನರರಂ ಪತ್ತಿದ ಪಾಪಂ ಪ್ರಾಯಶ್ಚಿತ್ತಂ ಪೊಱಗಾಗಿ ವಚನದಿಂ ಪೋದಪುದೆ (ಸಮಪ. ೧೧-೮೬); ತಪನಂಗೊಗೆದುದು ಪೆರ್ಚಿದ ತಣ್ಪಗ್ಗಿಗೆ ಶೀತಂ ಪತ್ತಿತೇನನೆಂಬೆಂ ಹಿಮದೊಳ್ (ಗಿರಿಕ. ೯-೭೧). ೯. ಏರು; ಆರೋಹಣ ಮಾಡು; ಮೇಲಕ್ಕೆ ಹೋಗು: ಪತ್ತಿ ಪ್ರವಾದಫಲಕಮನತ್ಯುಗ್ರಗ್ರಾಹನಿವಹಸಂಕ್ಷೋಭಿತದೊಳ್ ಮತ್ತೀ ರತ್ನಾಕರದೊಳ್ ಪುತ್ರಿಕೆಯೆನೆ ಬಟ್ಟಲಿಂತು ಬಾೞ್ವುದೆ ಚೋದ್ಯಂ (ಕವಿರಾ. ೨-೩೬); ತೆಱಪುವಡೆದಂಗಜಂ ಕೆಯ್ಸೆಱೆಗೊಳೆ ನೋಟಕರ ಮನಮನಾಗಳ್ ಕೊಳದಿಂ ಪೊಱಮಡೆ ಜಿಗಿಲ್ತು ಪತ್ತಿದ ಕುಱುವಡಿಗಳೆ ಮೆಱೆದುವವರ ನಾಣ್ಗಳ ತೆಱಪಂ (ಪಂಪಭಾ. ೫-೬೭); ಮುಕ್ಕಳಂತೆ ವಿಮಾನಮಂ ಬಿಡದೆ ಪತ್ತುತುಂ ಮಹಾಮಂತ್ರಿಯಂತೆ ವ್ರತರಕ್ಷಣೋ ಪಾಯಮಂ ಚಿಂತಿಸುತ್ತುಂ (ಧರ್ಮಾಮೃ. ೩-೪೬); ಹಣವುಂ . . . ಪತ್ತುವಂದಣಮುಂ ಕೆಂಪಿನ ಪೂವನೆಣ್ಣೆದಲೆ ನೂತ್ನಾಗಾರಮುಂ ದೈತ್ಯರಂ ಕನಸೊಳ್ ಕಾಣಲು ಬಾರದೈ (ಸೋಮೇಶ. ೭೦). ೧೦. (ದೀಪ, ಬೆಂಕಿ ಮೊದಲಾದುವು) ಹೊತ್ತು; ಉರಿಗೊಳ್ಳು: ಸಂದಣಿಸಿ ಪತ್ತಿದುರಿ ಘುರಿಲೆಂದುರುಪಿಡೆ ಬೇಗದಿಂದೆ ಉರಿದಾಕ್ಷಣದೊಳ್ ಬೆಂದ ಸುಲಿಯಂತೆ ಮದನಂ ನಿಂದಿರೆ ಕಂಡಭವನೆಯ್ದೆ ಮುಳಿದಂ ತುಳಿದಂ (ಗಿರಿಕ. ೮-೫೨). ೧೧. ಬಳಿದುಕೊಳ್ಳು; ಲೇಪನವಾಗು: ಪಿರಿದಾಗಿ ಪತ್ತೆ ಕೆಂಪಳದಿಂ ಸಿನವಿರಿಸಿದಳೊ ಪರಿದು ಪೊದೆಯುಂ ರತಿ ತನ್ನ ರಸನಲಗುಗಳನೆಂಬಂತಿರೆ ಮುಗ ಮುಗಿಸುವುವು ಪೊಂಗಿ ಪೊಂಗೇದಗೆಗಳ್ (ಲೀಲಾವ. ೬-೧೨೪). ೧೨. ಸ್ನೇಹಮಾಡು; ಸಂಬಂಧವನ್ನು ಹೊಂದು: ಪದನಱಿದು ಪತ್ತುವ ಪತ್ತುಗೆಗಂ ಇಂಬಱಿದು ಸೇವಿಸುವ ಸೇವೆಗಂ ನೆರನಱಿದು ಪಾಡುವ ಪಾಟಕ್ಕಂ ಪೊಟ್ಟಱಿದು ಸಾರ್ವ ಸಾರ್ಕೆಗಂ ಮನಂಬೆಚ್ಚು ಪತ್ತೆ ಪೊಯ್ದಂ ತಾಗಿರೆ(ಶಾಂತಿಪು. ೩-೫೫ವ); ಮುತ್ತರ ಮುತ್ತರಿಂ ಘಡೆದ ವೃತ್ತಿಯನಿಟ್ಟುಳಿ ಗೊಳ್ವರೊಳ್ಕರಂ ಪತ್ತುವವೋಲ್ ವಿಚಾರಿ[ರ]ಪರರಲ್ಲದ ಮೂರ್ಖರ ದೊಂದು ದೆಯ್ವಮಂ ಪತ್ತಿಯುಮಂತದಂ ಪಱಿವರಂ ತಿಳಿಪಲ್ಕಣಮಾಱದಾ ಗಳಾರ್ದತ್ತಲೆ ಬರ್ಪರಂತದಱೊಳಾರ್ಹತರಲ್ಲದರತ್ತ ನೋಟ್ಪುದಂ (ಸಮಪ. ಅನುಬಂಧ. I, ೩೭೩-೪೬); ಪತ್ತಿದ ಗಂಡರ ಚಿತ್ತವ ಕಿಡಲೀಯದಿತ್ತುದೇ ಕೋಟಿ ತನಗೆಂಬ ಸೂಳೆಯ ಹಿತ್ತಿಲಲ್ಲಿರದೆ ಸುರಭೂಜ (ಲೀಲಾವ. ೨-೩೫). ೧೩. (ಬಿಸಿಲು, ಬೆಂಕಿ ಮೊದಲಾದುವು) ಹೆಚ್ಚಾಗು; ಪ್ರಖರವಾಗು; ಪ್ರಕರ್ಷವಾಗು: ಪತ್ತಿತು ಬಿಸಿಲುಱಿ ಕಾಲಂ ಮುತ್ತಿತು ನೋವು (ಗಿರಿಕ. ೨-೧೪). ೧೪. ಒಳಸೇರು; ಒಳಕ್ಕೆ ಸೇರಿ ಕೊಂಡಿರು: ಆಕೆಯ ಪತ್ತಿದ ಕಣ್ಣು ಮನಮುೞ್ಗಿದ ಮನಮುಮಂ ಜೋಲ್ದ ನಾಣುಮಂ ನೇಲ್ದ ಸರಮುಮನಱಿದು (ಪಂಪಭಾ. ೪-೪೦ ವ); ಪತ್ತಿದ ಬಸಿಱ್ ಪೋತಂದ ಕಣ್ . . . ಸರ್ಪಕನದ್ಭೂಷಣಭೀಷಣಂ ಭಯದ ಮಾಯ್ತಾ ರಾಕ್ಷಸೀರೂಪಕಂ (ಕಾವ್ಯಾವ. ೮೨೨); ನರೆತ ಮಂಡೆಯುಂ ನೀರೊ ಗುವ ಕಂಗಳು ಲೋಳೆ ಸುರಿವ ಬಾಯ್ ಸೆರೆಹೊಱಹಾದ ಕೊರಳು ಬೀಳಲು ಪಲ್ಲು ಪತ್ತಿದ ಗಲ್ಲದ ನೆಱೆ ವೃದ್ಧ ನಡಿಯಿಟ್ಟನೊಲಿದು (ಜೀವಂಸಾಂ. ೧೬-೩೦). ೧೫. ಬೆನ್ನಟ್ಟು; ಹಿಂಬಾಲಿಸು: ಅನುವಿಸೆ ಬೇಟಕಾಱ[ನೊ ಲವಿರ್ಮಡಿಯಪ್ಪುದು . . . ನೂಂಕೆ ಬೇಟಕಾಱನ ಮನವಟ್ಟೆ ಪತ್ತುವುದು

ಬೇಟವಿದೇಂ ವಿಪರೀತವೃತ್ತಿಯೋ (ಪಂಪಭಾ. ೯–೧೦೩); ಪತ್ತಿ ಜವನಂತೆ ರಿಪುಬಲಪತ್ತಿಯನಿಸೆ ಲಕ್ಷ್ಮಣಂ ವಿಯಚ್ಚರಸ್ಯೈನ್ಯಂ ಸತ್ತುದು ಪುಣ್ಪೆತ್ತುದು ಬೆನ್ನಿತ್ತುದು ಪೂಣ್ಪೆಟುವುದರಿದು ಗರುಡಧ್ವಜನೊಳ್ (ಪಂರಾಮಾ. ೯–೭೪); ಪತ್ತುತ್ತಂ ಹರಿಯಂ ಕೆಲರೊತ್ತುತ್ತಂ ನೀರೊಳಾಳ್ಕನಂ ಚಂದನದಿಂ ಮೆತ್ತುತ್ತಂ ಜೀರ್ಕೊಳವಿಯೊಳೊತ್ತುತ್ತಂ ರಾಗದಿಂದಮಾಡಿದ ರಾಗಳ್ (ಬಂಹಂ.೧೩–೭); ಪಸುಪಾಲನಾನೆ ಕಟ್ಟಿದ ಕಂಭಮಂ ಕಿತ್ತಿಟ್ಟು . . . ಪಿಂದಂ ಪತ್ತಿ ಬಪ್ಪ ಪಂದಿಯಂ ಕೊಂದು ಕೂಗುತ್ತ ಬರ್ಪಾಗಳ್ (ಪುಣ್ಯಾಸ್ರ. ೩–೨೨ ಪ). **೧೬.** (ದೆವ್ವ ಮೊದಲಾದುವುಗಳಂತೆ) ಮೆಟ್ಟಿಕೊಳ್ಳು: ಪುಗೆ ನೃಪಸಂಕುಳಂ ಮನಸಿಜಗ್ರಹವಾಗ್ರಹದಿಂದೆ ಪತ್ತಲಂದೊಗೆಯೆ ವಿಕಾರಚೇಷ್ಟೆ (ನೇಮಿಪು. ೯–೮೯). **೧೭.** ಅನುಸರಿಸು: ಅಂತಾ ಮಾರ್ಗಮಂ ಪತ್ತಿ ಪತ್ತುವಿಡದೆ ನಡೆದು ಜೀವಿತಾವಧಿಯೊಳ್ದೇವಗತಿಪಡೆದು (ಪಂರಾಮಾ. ೬–೮೯ ಪ); ಬಸವೇಶಂ ಮಾಚಿದೇವಂ ಮುಳಿದ ಬಗೆಯನಾಕರ್ಣಿಸುತ್ತುಂ ಮಹಾಸಾಧ್ವಸದಿಂ ಮುಂಗೆಟ್ಟು ಚಿತ್ತಂ ಕದಡೆ ನಡುಗಿ ತನ್ಮಾರ್ಗಮಂ ಪತ್ತಿ . . . ಕಾರ್ಪಣ್ಯಮಂ ಬೀಱುತಾಗಳ್ (ವೃಷವಿ. ೧೩–೭). **೧೮.** ತೊಡಗು; ಪ್ರಾರಂಭಿಸು; ಮೊದಲು ಮಾಡು: ಮನದೆ ನೆನೆದವರ ಕಿಡುಗುಂ ಜಿನಾಧಿಪಾ ನಿನ್ನ ಪಾಪನಿಚಯಂ ಗುಣಮಂ ಮುನಿಗಳುಮದಱಿಂ ತತ್ಸೇವನೆಯಿಂ ಕಿಡಿಪಲ್ಕೆ ಪತ್ತಿದರ್ ಸಂಸೃತಿಯಂ (ಕವಿಸಾ. ೧–೯೧). **೧೯.** ಆಲಿಂಗಿಸು; ಅಪ್ಪಿಕೊಳ್ಳು: ಘಟಾಸಲನೆ ಬರ್ಪನ್ನಂ ಕಂಡಟಲಿರ್ಪುದಿಯಾಗೆ ಪತ್ತಿ ಕೆಳೆಯನ ಕೊರಲಂ ಪಳವಿಸಿ ಕಪಿಂಜಳಂ ಬಾಯಬಾದಬ್ರಹ್ಮಣ್ಯಮೆಂದು ಬಿಡೆ ಪುಯ್ಯಲ್ಲಲ್ (ಕಾದಂಪೂ. ೯೧೪). **೨೦.** ಪ್ರಭಾವ ಬೀರು; ಪರಿಣಾಮಕಾರಿಯಾಗು: (ಕ). **ಹತ್ತು₁: ೧.** ಹತ್ತದಿರೆ ಫಲಬಳಕಲಾ ದೇವೋತ್ತಮನು ನಸುನಗುತ ನುಡಿದನು (ಕುಮಾರವ್ಯಾ. ಕಿರಾ. ೪–೪೪); ಮತ್ತದಕೆ ಹಾಲು ನೀರೆಱೆದು ಸಂಪಳಿಗೆಳಸಿಯತ್ತರದ ಮೇಲೆ ದೊನ್ನೆಯನಿರಿಸಿ ತುಪ್ಪವಂ ಹತ್ತದಂದದಿ ತೊಡೆದು ಹೊಯ್ದುಕೊಂಡದ ನಿದ್ದಲಿಗೆಯಂತೆ ಬೇಯಿಸುವುದು (ಸೂಪಶಾ. ೬–೭); ಹತ್ತಿದ ಮೆಯ್ದೊಳ ಕೊಡಹಿ ಕರವ ಹಿಡಿದೆತ್ತಿ ದಳಬುಜಾಯತಾಕ್ಷಿ (ಮೋಹತ. ೮–೨೬). **೨.** ಹೊತ್ತುವುದು ಸರಿಯಹುದು ನನೆಗುದಿಯಹುದು ತವುದು ಹ[ಪಾಠಾಂ.ತಡಹು]ತ್ತಿಹುದು . . . ನಸುಗಂಜಿ ಸುತ್ತಿಹುದುವೋಣಗಿಹುದು ದೋಷವಶನಕ್ಕೆಂಟು ತೆಱನಪ್ಪುದು (ಸೂಪಶಾ. ೩–೧); ದ್ರಾವಿಡ ಭಾಷೆಗಳಲ್ಲಿ ಪುರುಷವಾಚಕಸರ್ವನಾಮಗಳೇ ರೂಪಾಂತರಗೊಂಡು ಆಖ್ಯಾತ ಪ್ರತ್ಯಯಗಳೆಂಬ ಹೆಸರಿನ ಪುರುಷವಾಚಕಪ್ರತ್ಯಯಗಳಾಗಿ ಧಾತುಗಳಿಗೆ ಹತ್ತುತ್ತವೆಂಬುದನ್ನೂ ಗಮನಿಸಬಹುದು (ದ್ರಾವಿವಿ.೨೫೩); ಕೆರೆ, ಬಾವಿ, ಹಳ್ಳ, ಹೊಳೆ ಬತ್ತಿ, ಬೆನ್ನಿಗೆ ಹೊಟ್ಟೆಹತ್ತಿ ನೆಲವೆದ್ದು ಬಡಿಯುವಂತೆ! (ನೆಲಮು. ೧೪–೨೬). **೭.** ಒಡೆಯರ ಬರವಿಂಗೆ ಕುನ್ನಿ ಬಾಲ ಬಡಿವಕೆ ವೆಚ್ಚವೇನು ಹತ್ತುವದು (ಬಸವ. ೨೧೭); ಚಳಿ ಹತ್ತಿ ಮಳೆಯೊಳಗೆ ಘಾಸಿಯಾಗುತೆ ಬಂದು ನಡುಗಿ ಹಲು ಹಱಿಗುಟ್ಟಿ ಬಾಗಿಲೊಳು ನಿಂದಿರಲು (ಇಳೆರ. ದೇ. ೫೨–೮) ಕಳವಳಿಸುತಂ ಬಿದ್ದೊಱಲುವರು ತಲೆಗಳಂ ಸೆಕೆ ಹತ್ತಿ ದಹಿಸಲು ಜ್ವಲನನೇತ್ರನ ದೇಗುಲಂಗಳಿಗೆಯ್ದಿ ಬದುಕುವರು (ಬಸಪು.೫೬–೩೪). **೮.** ಚಾತುರಂಗವಮಂ ಜಾನಿಸಿ ನೋಡಿ ನೋಡಿ ಹೊಗೆ ಹ[ಪಾಠಾಂ.ಸು]ತ್ತಿದ್ದ ಪುತ್ತಳಿಯಂತೆ ಬಂದನುದ್ಯಾನವನೊಪ್ಪದಿಂ ಕಳಿದು ರಾಜಕುಮಾರನಪಾರಚಿಂತೆಯಿಂ (ನಂಬಿರ. ೭–೩); ಹರಿಹರಿ ಎಂದೊದಱೆ ಹತ್ತಿದ ಪಾಪಗಳಿಗೆ ಬೆದಱೆ (ಪುರಂದ.೨–೭೭–೧). **೯.** ಮುದನು ತಗತ್ತಿ ಕೊಡೆಯ ಹತ್ತಿ ಹೆಂಗಳಿರ್ಕ್ವಡೆ ಹೇಱಾಳವ ಮಾಡುತ್ತವಿರಲು (ಮೈ ಆರ್. ೧೯೨೨, ೧೫–೪; 12ನೆಯ ಶತ?); ಕಾಳೆಗದ ಭಂಡಿಯಂ ಹತ್ತಿ ಹೋಹಂ ರಥಿಕನಾ ಸ್ಯಂದನಾರೋಹನೆಂದೆನಿಕ್ಕುಂ (ಮಂಗರಾ. ೭೩–೨೬); ಅಲ್ಲಿಂದ ಬಡಗಲುಂ ಹರಿದು ಬಿಟ್ಟರು ಹತ್ತಿದರು ಬೇಸಬಿದೆ ಕಲುದರಿಗಳಲಿ ಬಹಳ ಶ್ವೇತಪರ್ವತವ (ಕುಮಾರವ್ಯಾಸ.೩–೫೭); ಹತ್ತಿದರೊರ್ವರೊಂದೊಂದು ಪಲ್ಲಕಿಯ ಮುತ್ತಿನ ಕುಚ್ಚುಗಳ್ ಮೆಚಿಕಿಯೆ (ಮೋಹತ.೨೪–೫). **೧೦.** "ಹತ್ತು— ಹೊತ್ತು; ಉರಿಯಿಸು" (ಜಾನಕೋ. ೫೩); ಒಲೆ ಹತ್ತಿಯನುರಿದೊಡೆ ನಿಲಬಹುದಲ್ಲದೆ ಧರೆ ಹತ್ತಿಯುರಿದೊಡೆ ನಿಲಬಾರದು (ಬಸವ. ೨೬); ಬೇಗೆ ಹತ್ತಿದಲ್ಲಿ ಹೊಗೆಗೆ ನಿಮಿತ್ತ ಕೇಳಬೇಕೇ? (ಗಾದೆ). **೧೧.** ಅವನ ಮುಖಕ್ಕೆ ಮಸಿ ಹತ್ತಿದೆ (ರೂಢಿ). **೧೨.** ಧಗಿಲು ಭುಗಿಲನೆ ಎದ್ದು ಹರಿದು ಹತ್ತುವನಲ್ಲ ನಿರವಯಕೆ ಚವುಪದವಿಲ್ಲ ನಾಲ್ಕನೆಂಟಕೆ ತಂದು ಎಂಟ ಹದಿನಾಱ ಮಾಡಿ ಸೃಷ್ಟಿಸಬಾರದ ಘನಶರಣನು(ಶಿವಗೀ.೧೦೪–೫೦೫). **೧೩.** ಬಿಸಿಲು ಹತ್ತಿದ ಮೇಲೆ ಹಪ್ಪಳ ಒಣಗಿಸಬೇಕು (ರೂಢಿ). **೧೪.** ಕರೂಪದ ಕೊಬ್ಬಿನವದಿರು ಹಿಂದೆ ಹತ್ತಿದರೆ ಮರಳ ಬಲ್ಲನೆ ಭೀಮನು (ಕುಮಾರವ್ಯಾಕ. ೩–೨); ಮತ್ತೆ ಚಿತ್ರಾಂಗದೆಯ ಜಾತನಂ ಧಾತನಂ ಹತ್ತಿ ಹರಿದುದು ಬಲಮಶೇಷಮುಂ ಘೋಷಮುಂ ಘೋರತರಸಂಗರದೊಳು (ಜೈಮಿಭಾ. ೨೨–೩೬). **೧೭.** ತರುಣಿ ಹರಿಣಿಯುಪದೇಶದಿಂದೆ ಗತಿ ಪಥ ಮುಕ್ತಿಯ ಪಡೆದು ಬಟ್ಟೆಯ ಹತ್ತನೆ ವಿನಾಶಕತ್ತ ರಾಯನು (ಬಸವ. ೬೫೬); ಮಕ್ಕಳು ಬುದ್ಧಿವಂತರಾಗಿ ಒಳ್ಳೆಯ ಹಾದಿಯನ್ನು ಹತ್ತಿದರೆ ಪೋಷಕರು ನಿಶ್ಚಿಂತರಾಗಿರಬಹುದು (ರೂಢಿ). **೧೮.** ಎಂಥಾ ದೊಡ್ಡ ಮಳೆ ಬರಹತ್ತಿತು (ಮುಂಬಯಿ. ಕಿ. ೧–೨೧); ಉದ್ಯಾನಗಳಲ್ಲಿ ಪುಷ್ಪಗಳು ಸುಗಂಧವನ್ನು ಬೀರಹತ್ತಿವೆ (ಮುಂಜುಕ. ೨); ಭಟ್ಟರು ಹೊದ್ದ ಧೋತರವನ್ನು ಟೊಂಕಕ್ಕೆ ಸುತ್ತ ಹತ್ತುವರು (ಹೊಸಂಸಾ.೫೩); ಈ ಎಲೀ ಹಚ್ಚೂ ಗ್ರಾಮೋದ್ಯೋಗದ ಮ್ಯಾಲ ಪ್ರಬಂಧ ಓದಲಿಕ್ಕೆ ಹತ್ತಿದೇನು? (ದೀಪಹ. II, ೪). **೨೦.** ಅವನಿಗೆ ಪೆಟ್ಟಿನ ಗುರುತು ಹತ್ತಿತು (ರೂಢಿ). **೨೧.** ಸುಕ್ಕು; ಸುರುಟು; ಬಾಡು: ಬತ್ತಿದ ಗಲ್ಲ ಹತ್ತಿದ ಮೊಲೆ . . . ಹೊತ್ತ ಬೆಳ್ನರೆಕೂದಲಾ ಮುದಿಸೂಳೆಯರ ಮೊತ್ತವೊಪ್ಪಿದುದಾಗಲ್ಲಿ (ಕಂಸವಿ. ೬–೯೮೦). **೨೨.** ಬೇಕಾಗು; ಅಗತ್ಯವಾಗು: ಆ ಕಟ್ಟಿಗೆ ಹತ್ತುವ ಧನವನೂ ಶ್ರೀಹರಿಹರದೇವರ ಬ್ರಾಹ್ಮರ ಪ್ರತಿಹಸ್ತವಾಗಿ ಬುಳ್ಳರಸರ ಕೈಯಲ್ಲಿ ಧಾರೆಯನೆಱದು ಕೊಟ್ಟು (ಎಕ. XI, ದಾವಣ. ೨೯–೧೭; 1424); ಅದರ ಬೆಳವಣಿಗೆ ಪೂರ್ಣವಾಗಲಿಕ್ಕೆ ಐದು ವರ್ಷ ಹತ್ತುವುದು (ಮುಂಬಯಿ. ೪–೪೮); ಮುಂದೆ ಕೋರ್ಟಿನಲ್ಲಿ ನಿರ್ಣಯವಾಗಬೇಕಾದರೆ ಎಷ್ಟು ವರ್ಷ ಹತ್ತೀತೆಂಬ ನಿಯಮವಿಲ್ಲ (ಗ್ರಾಮಾಯ. ೩೫೩). **೨೩.** (ಸುದ್ದಿ ಮೊದಲಾದುವು) ತಲುಪು; ಮುಟ್ಟು: ಮೊತ್ತದರಸುಗಳು ಕೂಡಿ ಬರ್ಪಾ ವಾರ್ತೆ ಹತ್ತಿತು ಭಂಭಾಪುರಕೆ (ಪ್ರಭಂಜ. ೨–೫೦). **೨೪.** (ನೆಲ ಮೊದಲಾದುವನ್ನು) ಆಶ್ರಯಿಸು: ಎದೆಯಲಗು ಕೊಂಡಂತಟಲೆಯಪನಿಯ ಹತ್ತಿ ಬಸವಳಿಯೆ (ಕುಮಾರವ್ಯಾದ್ರೋ. ಕಿರಾ. ೭–೧೧ ಅಡಿಪದ್ಯ). **೨೫.** ಒರಗು; ಬೀಳು: ಬತ್ತಿದ ಹರ್ಷಾಶ್ರು ಗಳಿಂದೆ ಧರಣಿಗೆ ಹತ್ತಿದಳಾಕೆ ಬೇಗದಲಿ (ಮೋಹತ. ೨೯–೨೦). **೨೬.** ಲೆಕ್ಕಕ್ಕೆ ಸಿಗು; ಗಣನೆಗೆ ಬರು: ಹತ್ತುಸಾವಿರದೇಳು ನೂಱಱುವತ್ತು ಗಜ ಹನ್ನೊಂದುಸಾವಿರ ಹತ್ತಿದವು ರಥವೆರಡು ಲಕ್ಕವ ನೆಣಿಸಿದರು ಹಯವ (ಕುಮಾರವ್ಯಾಶ.೨–೭). **೨೭.** (ಹಣ ಮೊದಲಾದುವು) ಉಳಿತಾಯವಾಗು; ದಕ್ಕು: ಊಟಾ–ಉಡಿಗಿ ಪರಭಾರೆ ಹೋಗಿ ಮ್ಯಾಲ ದಹಾ–ಬಾರಾ ರೂಪಾಯಿ ಕೈಗೆ ಹತ್ತತಾವ (ದೀಪಹ. II,೧೩); ಲೆಕ್ಕವಿಲ್ಲದೆ ಖೋಲು ಮಾಡಿದರೆ ಹಣ ಕೈಗೆ ಹತ್ತುವುದಿಲ್ಲ (ರೂಢಿ). **೨೮.** (ರುಚಿ ಮೊದಲಾದುವು) ತೋರು; ಉಂಟಾಗು; ಆಗು: ನಮ್ಮ ಹಾಲಿನ ಚಹಾ ಕಹಿ ಹತ್ತದೇನ (ದಾಸಹು. ೪೧). **೨೯.** ಎದುರಾಗು; ಕಾಣು: ಹೋಗಹೋಗುತ್ತ ದಾರಿಯಲ್ಲಿ ಒಂದು ಸಭಾ

ಮಂದಿರವು ಹತ್ತಿತು (ಅನ್ನ. ೧೯). **೩೦.** ಸಾಲು ; ಸಾಕಾಗು ; ಪೂರೈಕೆಯಾಗು : ನಿಜಗುಣಿಯು ತನಗೆ ಹತ್ತುವಷ್ಟು ರೊಟ್ಟೀ ಬುತ್ತಿ ಕಟ್ಟಿಸಿಕೊಂಡಿದ್ದನು (ಮುಂಬಯಿ. ೩-೧೨೧) ; ಬರುವ ಸಂಬಳದಲ್ಲಿ ತಿಂಗಳ ಖರ್ಚಿಗೇ ಹಣ ಹತ್ತುವುದಿಲ್ಲ (ರೂಢಿ). **೩೧.** (ನೆಲಕ್ಕೆ) ಅಂಟು ; ಬೇರೂರು : ಟೊಂಗೆಗಳನ್ನು ಹಚ್ಚಿದರೆ ಹತ್ತುವವು (ಮುಂಬಯಿ. ೨-೨೨). **೩೨.** (ಔಷಧಿ, ಆಹಾರ ಮೊದಲಾದುವು) ಶರೀರಕ್ಕೆ ಒಗ್ಗು ; ಒಂಟು : ಅವನಿಗೆ ಅನಾರೋಗ್ಯದಿಂದ ಆಹಾರ ಮೈಗೆ ಹತ್ತುತ್ತಿಲ್ಲ (ರೂಢಿ). **೩೩.** (ಬೆಲೆ ಮೊದಲಾದುವು) ಅಂದಾಜಿಗೆ ಬರು ; ಎಟುಕು ; ಗಿಟ್ಟು : ಇಂದಿನ ಸಂತೆಯಲ್ಲಿ ಅಡಕೆಯ ಧಾರಣೆ ಹತ್ತದಿದ್ದುದರಿಂದ ಮಾಡಿದ ಖರ್ಚೂ ಹತ್ತಲಿಲ್ಲ (ರೂಢಿ). **೩೪.** ಸಂಭೋಗಿಸು : ಚಿತ್ತವೃತ್ತಿಯನಱಿದು ಹತ್ತೆವಿಡಿದೋಲಯಿಸು ಚಿತ್ತವನು ಪಡೆದು ಮುದವಾಗೆ ಮೊಲ ನಾಯ ಹತ್ತಿದಂತಕ್ಕು (ಸರ್ವಜ್ಞ. ೬೩೧).

**ಪತ್ತಿಕೊಳ್, ಹತ್ತಿಕೊಳ್ಳು** = **೧.** ನೆಲೆಯಾಗಿರು; ಸ್ಥಿರವಾಗಿರು ; ಸ್ಥಿರವಾಗಿ ನಿಲ್ಲು : ಎಮ್ಮಂತಪ್ಪ ನಿಸ್ಪೃಹರ್ಗೆ ಕೂಱಿಂಗಾಟಿಸಿ ಮೈಸುಖಮಂ ಪಾಟಿಸಿ ಮನ್ನಣೆಗಾಸೆಗೆಯ್ದೊಂದೆಡೆಯೊಳ್ ಪತ್ತಿಕೊಂಡಿರಲಾಗದು (ಧರ್ಮಾಮೃ. ೬-೬೧). **೨.** ಅಪ್ಪಿಕೊಳ್ಳು : ಒಡಹುಟ್ಟಿದರ ಕಂಡು ಬಿಗಿಯಪ್ಪಿ ಸ್ನೇಹವ ಬಿಡದಿಹ ಸುಜನರಂದದಲಿ ಕಡುತವಕದೆ ಕಂಬುಕಂಠವ ಪತ್ತಿಕೊಂಡೊಡನೊಪ್ಪಿದುವು ಮುಕ್ತಾಳಿ (ಕಂಸವಿ. ೨೪-೩೩). **೩.** ಅಂಟಿಕೊಳ್ಳು ; ಸೇರಿಕೊಳ್ಳು : ಎತ್ತ ಹೋದರು ಮನವ ಹತ್ತಿಕೊಂಡೇ ಬಹದು ಮತ್ತೊಬ್ಬ ಮುನಿದುಕೊಳಲರಿಯ ಜ್ಞಾನದ ಬಿತ್ತು ಲೇಸೆಂದ (ಸರ್ವಜ್ಞ. ೩೨೦) ; ಪಚ್ಚಿಯು ತೀರ ನನ್ನನ್ನು ಹತ್ತಿಕೊಂಡು ಕುಳಿತಳು (ಮೇದಿಪು. ೧೪೬). **೪.** ಉಂಟಾಗು ; ಮೊದಲಾಗು ; ಸಂಭವಿಸು : ನನ್ನ ಮಗನ ದುರ್ಬುದ್ಧಿಯಿಂದ ಯುದ್ಧ ಹತ್ತಿಕೊಂಡಿತು (ವಚಭಾ. ೩೬೦). **೫.** ಆಶ್ರಯಿಸು ; ಅವಲಂಬಿಸು ; ಆಸರೆಗೊಳ್ಳು : ಹೆತ್ತ ತಾಯ್ನೆಱೆ ಮಡಿದು ದುಃಖವನೆತ್ತಲೇನೆಂದಱಿಯದೆನ್ನನೆ ಹತ್ತಿಕೊಂಡಿಹುದಧಿಕವಿಶ್ವಾಸದಲಿ ನೆಱೆ ನಂಬಿ (ಶಿಭಾಗ. ೫-೫-೩೪). **ಪತ್ತಿರ್**₁ = **೧.** ಅಂಟಿಕೊಂಡಿರು ; ಹತ್ತಿಕೊಂಡಿರು: ಕದಪಂ ಪತ್ತಿರ್ದ ಶಯ್ಯಾಕಮಲಕುಮುದಕಿಂಜಲ್ಕಮಂ ತಳ್ತ ರೋಮಾಂಚದಿನೀಡಾಡುತ್ತ (ಕಾದಂಉ. ೫೧೬) ; ಅರಿಚರಣಪಾಂಸು ಪತ್ತಿರೆ ಕರಾಗ್ರದಿಂ ತೊಡೆದು ಕಳೆದೆ ವಸ್ತ್ರಾಂಚಲದಿಂ (ಗದಾಯು. ೯-೨೬); ತೀರಮನಡರ್ದು ನಿಡುಗೇಸಂಗಳೊಳ್ ಸುರಿವ ನೀರನಾಱಿಸಿ ನಾಂದು ಕಾಯದೊಳ್ ಪತ್ತಿರ್ದ ಸೀರೆಯಂ ಕಳೆದು ನವವಸ್ತ್ರಭೂಷಣಕುಸುಮ ಪರಿಮಳದ್ರವ್ಯಂಗಳ ಓರಂತೆ ತೊಟ್ಟುಟ್ಟು ಮುಡಿದು ಲೇಪಿಸಿ (ಚಿಬಪು. ೪೫-೬೬). **೨.** ಸೇರಿಕೊಂಡಿರು ; ಕೂಡಿಕೊಂಡಿರು : ಒಡಲೊಳ್ಪತ್ತಿರ್ದಸುವಂ ಬಿಡೆ ಪೊಡೆ ನೋವೆಂತುಟಂತೆ ಮಿಥ್ಯಾತ್ವಮುಮಂ ಬಿಡಿಪೆಡೆಯೊಳಕ್ಕುಮದಱಿಂ ಬಿಡಲಱಿವನೆ ಲಬ್ಧಹೀನನೆಂತುಂ ಜೀವಂ (ಸಮುಪ. ೮-೨೩೫) ; ಪಲಬರವರೋಧಕಾಂತೆಯರೊಲವಿಂ ಪತ್ತಿರೆಯುಮಾಕೆಯೊಳ್ ನೃಪನನಿಶಂ ನಲಿದೊಂದಿರ್ಪಂ ತಾರಾವಳಿ ತಳ್ತಿರಲಿಂದುಚಂದ್ರಿಕೆಯೊಳೊಂದುವವೋಲ್ (ಪುಷ್ಪಪು. ೩-೬೨) ; ವಿಪ್ರರ್ ಎತ್ತಿದ ಸೇರೆಗೈಯೊಳ್ ಸಂಧ್ಯಾಮಂಡಪಮನಲಂಕರಿಸೆಯುಂ . . . ಬಾಲಕರ್ ಆಟ ಪಾಟಂಗಳಂ ಮಱೆದು ತಾಯ್ವಿರೊತ್ತಂ ಪತ್ತಿರೆಯುಂ, ಮುಚ್ಚಂಜೆ ಸೊಗಯಿಸಿದುದು (ರಾಮಾಶ್ವ. ೨೨-೨೨). **೩.** ಒದಗಿರು ; ಉಂಟಾಗಿರು : ಕೆಯ್ವತ್ತಿ ನಿಂದಿರೆ ಪತ್ತಿತ್ತು ಸಮಸ್ತ ಧಾತ್ರಿವಳಯಕ್ಕೆಂದುಂ ದಿಶಾದಂತಿಗಳ್ಪರೆಗಂ ತಂದೆಯ ಕೀರ್ತಿಯೇಂ ಬಳೆದುದೋ ಸತ್ಯಾಶ್ರಯಂ ಧನ್ಯನೋ (ಗದಾಯು. ೧-೧೨) ; ಪತ್ತಿರ್ದನಂತಭವಮುಮನಿತ್ತೆಯ್ದುಂ ವಿಷಯವೈರಿಗಳ್ಗಱಿದ್ಯೆ ನೀಂ ಮತ್ತಿನ್ನು ಕೇಳ್ ಪರತ್ರ ನಿಮಿತ್ತಂ ನಿನಗೊಂದು ಭವಮನೀಯಲ್ಕಾಗಾ (ಜೀಸಂ. ೮೧-೯). **೪.** ನೆಲೆಯಾಗಿರು ; ನೆಲಸು ; ಸ್ಥಿರವಾಗಿರು : ಒಂದೆಡೆಯೊಳ್ ಮೋಹೋದಯದಿಂದಂ ಪತ್ತಿರ್ಪನೆಂಬನುಂ ಸುಖಮಂ ಪೊಂದೆಂದುಂ ಪಾಟಿಸುತಿರ್ಪನುಮೆಂದುಂ ಸುರಲೋಕಮೆಯ್ದಲಾಱನ ಮೋಕ್ಷಂ (ಧರ್ಮಾಮೃ. ೬-೬೦) ; ಚಿತ್ತಸರೋರುಹದೆಡೆಯೊಳ್ ಚಿತ್ತಜನಿಭನುದ್ಭಟೋರ್ವಿಪನ ಮೂರ್ತಿ ಕರಂ ಪತ್ತಿರಲುನ್ನತವಿರಹದೆ ಪತ್ತಿಯಿನನವಳಿಡೆವಿಡಡೆ ಚಿಂತಿಸುತಿರ್ದಳ್ (ಉದ್ಭಟ. ೬-೩೪). **ಹತ್ತ ಕೆಡು** = ಪೂರ್ತಿಯಾಗಿ ಕೆಟ್ಟುಹೋಗು ; ಸಂಪೂರ್ಣವಾಗಿ ಹಾಳಾಗು : (*). **ಹತ್ತಗೊಡು** = **೧.** ಏರಲು ಅವಕಾಶ ಕೊಡು ; ಮೇಲೇರಲು ಅನುವುಗೊಡು : ಆ ತುಂಟಕುದುರೆ ಸವಾರರನ್ನು ಹತ್ತಗೊಡುವುದಿಲ್ಲ (ರೂಢಿ). **೨.** ಕೂಡು; ಸೇರು: ನಮ್ಮ ಜೆಣಿಗೂ ನನಗೂ ಕೈಗೆ ಕೈ ಹತ್ತಗೊಟ್ಟರ ಎರಡು ಹೊಡೆತದಾಗ ಅವನ್ನ ನೆಲಕ್ಕುರುಳಿಸಿ ಬಿಟ್ಟೇನು (ಮೇದಿಪು. ೧೩). **ಹತ್ತ ಬಡಿ** = "ಸದೆಬಡಿ; ಹಣ್ಣಿಗೆ ತರು" (ಜಾನಕೋ. ೫೨). **ಹತ್ತಿದರೆ ಮುರುಟುಹ** = ಮುಟ್ಟಿದರೆ ಎಲೆಗಳು ಮುದುರಿಕೊಳ್ಳುವ ಒಂದು ಬಗೆಯ ಸಸ್ಯ ; ಮುಟ್ಟಿದರೆ ಮುನಿ : "ಹತ್ತಿದರೆ ಮುರುಟುಹಂ ರಕ್ತಪದಿ ಶೀಘ್ರಿಯದು" (ಮಂಗರಾ. ೪೩-೪೩). **ಹತ್ತಿದವನು** = ಸಮೀಪದವನು ; ಸಂಬಂಧಿಕ ; ನೆಂಟ : ಅವನೇನು ಹತ್ತಿದವನೂ ಅಲ್ಲ, ಹೊಂದಿದವನೂ ಅಲ್ಲ(ರೂಢಿ). **ಹತ್ತಿ ಬರು** = **೧.** ಅನುಸರಿಸು ; ಹಿಂಬಾಲಿಸು : ಒತ್ತರಿಸಿ ಬಂದರಾಪತ್ತು ಸೇನೆಯೊಲು, ನಿತ್ತರಿಸಿ ಅಳುಕನುಳಿದಿದಿರಾಗುತವನು, ಹತ್ತಿ ಬಹ ನೆರಳಂತೆ ಮುತ್ತಿ ನಿಮಿಷದೊಳಡಗಿ ಎತ್ತಿ ಹೋಗುವುದದರ ಪಾಡೆಂದು ತಿಳಿದು (ಕಏಪು. ೫೨-೧೩). **೨.** ಹೊಂದಿಕೊಂಡು ಬರು; ಸಮೀಪದಲ್ಲಿರು: ನೇಮೋಜನ ಮನೆಯ ಹತ್ತಿ ಬನ್ದ ಬೀದಿಯೋ ಮೇರೆ (ಸೌಇಇ. XI-ii, ೧೪೦-೩೬ ; 1097). **೩.** ಹೆಚ್ಚಾಗು ; ಅಧಿಕವಾಗು : ಅಂಥವನ ವಿಚಾರಕ್ಕೆ ಸಣ್ಣಮಾತು ಕೇಳಬೇಕಲ್ಲಾ ಎಂತ ನನ್ನ ಆಳಲು ಹತ್ತಿ ಬರುತ್ತೆ (ಕುಸುಸಂ. ೧೦೧). **ಹತ್ತಿ ಬೀಳು** = **೧.** ಒತ್ತಾಯಿಸು ; ಬಲವಂತ ಮಾಡು ; ದುಂಬಾಲು ಬೀಳು : ನಾನು ಭಾವನಿಗೆ ಹತ್ತಿ ಬಿದ್ದು ಕೇಳಿದಾಗ ತಾನು ಆ ಗೊಂದಲಿಗನಿಗೆ ಕೊಟ್ಟಿದ್ದು ನಿಜವೆಂದು ಒಪ್ಪಿಕೊಂಡರು (ಸ್ಮೃತಿಚಿ.೯೬). **೨.** ಶಾಂತಿಯನ್ನು ಕಳೆದುಕೊಳ್ಳು ; ನೆಮ್ಮದಿಯನ್ನು ಕಳೆದುಕೊಳ್ಳು : ಧನ ಎಂಬ ಪದಾರ್ಥ ಒಳ್ಳೆಯದಲ್ಲ. ಧನದಿಂದ ಮನಸ್ಸು ಹತ್ತಿ ಬಿದ್ದುಹೋಗುತ್ತದೆ (ಇಪ್ಪಕ. ೨೦೯). **ಹತ್ತಿ ಹಿಡಿ** = ಬಿಗಿಯಾಗು ; ಅಂಟಿಕೊಳ್ಳು : ಸರ್ವಾಂಗ ತೊಯ್ದಿದ್ದ ಅವಳ ಪುಷ್ಟವಾದ ಅಂಗಾಂಗಗಳಿಗೆ ಉಟ್ಟ ಸೀರೆ, ತೊಟ್ಟ ರವಕೆಗಳು ಹತ್ತಿ ಹಿಡಿದಿದ್ದವು (ಒಡ್ಡಉ. ೪). **ಹತ್ತಿ ಹೊಂದು** = ಆಪ್ತವಾಗಿ ಹೊಂದಿಕೊಂಡಿರು ; ಸಮೀಪವರ್ತಿಯಾಗಿರು : ಇದು ನಿನ್ನ ಹತ್ತಿ ಹೊಂದಿದ ಮನೆ. ನಿನ್ನ ಮನಸ್ಸಿಗೆ ಬಂದಷ್ಟು ದಿನ ನೀನು ಇದ್ದುಕೊ (ಇಪ್ಪಕ. ೨೧೫). **ಹತ್ತಿ ಹೋಗು** = **೧.** ಹಿಂಬಾಲಿಸಿ ಹೋಗು ; ಓಡಿ ಹೋಗು : ಎಂದಾದರೂ ಒಂದು ದಿನ ಇವಳೂ ಯಾವನಾದರೊಬ್ಬನೊಡನೆ 'ಹತ್ತಿ' ಹೋಗುತ್ತಾಳೆ (ಕುಸುಸಂ. ೧೯೦). **೨.** ತಳಕ್ಕೆ ಅಂಟಿಕೊಳ್ಳು ; ಒಳಸೇರು ; ಬತ್ತು : ನಿತ್ರಾಣದಿಂದ ಅವನ ಕಣ್ಣುಗಳು ಹತ್ತಿ ಹೋಗಿವೆ (ರೂಢಿ). **ಹತ್ತೆಸರು** = ಕುದಿ ಹತ್ತಿ ಅನ್ನವನ್ನು ಹದಕ್ಕೆ ತರುತ್ತಿರುವ ನೀರು : (*). ☞ ಈ ಧಾತು ಅನೇಕ ಶಬ್ದಗಳ ಮುಂದೆ ಸೇರಿ ಸಂಯುಕ್ತ ಧಾತುವಾಗಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ.ಕೈಗೆ ಹತ್ತು, ಮೈಗೆ ಹತ್ತು, ನಿದ್ದೆ ಹತ್ತು ಇತ್ಯಾದಿ.

[ದೇ.॥ ತಮಿ. ಮಲ. ಪಱ್ಱು ; ತುಳು. ಪತ್ತು ; ತೆಲು. ಪಟ್ಟು, ಹತ್ತು ; ಕೊಡ. ಪರ್ಜಿ. ಪತ್ ; ಕೋತ. ತೊದ. ಪತ್]

**ಪತ್ತು$_2$** (ನಾ). ೧. ಅಂಟಿಕೊಳ್ಳುವಿಕೆ ; ಹತ್ತಿಕೊಳ್ಳುವಿಕೆ : "ಅದರು ಪೊರ್ದುಗೆ ಸಂಶ್ಲೇಷಗಳು ಪತ್ತು" (ಶಬ್ದಮಂ. ೯೮). ೨. ಸಂಬಂಧ; ಬೆಸುಗೆ ; ಕೂಡಿಕೊಳ್ಳುವಿಕೆ : ಕಣ್ಣಮೆಯಿಕ್ಕುವನಿತು ಪೊಟ್ತುಪ್ಪೊಡ ಮುಸಿರ್ ಪತ್ತಿ [ಪಾಠಾಂ. ಪತಿ, ಪನಿತಿ]ಲ್ಲದೆ ದುಃಖಂಗಳನನುಭವಿಸುವರ್ (ವಡ್ಡಾರಾ. ೯೭-೨) ; ಪಂಚಪ್ರಕಾರದುಃಖಂಗಳನನೇಕಪ್ರಕಾರದಿನನುಭವಿಸುತ್ತಮರ್ಧನಿಮಿಷಮಾತ್ರಮುಪ್ಪೊಡಮುಸಿರ್ಪ[ತ್ತಂ] [ಪಾಠಾಂ. ತಂ]ಬಡೆಯದೆ . . . ಅವಂದಿರ ವೈಕ್ರಿಯಕಶರೀರಂಗಳ್ ಪಾದರಸದ ಮಾರ್ಗದಿಂ ಪತ್ತುತ್ತುಮಿರ್ಕುಂ (ಸುಕುಮಾ. ೧೧-೪೭ ಪ). 'ಉಸಿರ್ಪತ್ತು' ಪರಾ. ೩. ಸಂಪರ್ಕ ; ಸಹವಾಸ ; ಸಂಗ : ಕೆರಳಿದ ಹರಿ ಸೊಕ್ಕಿದ ಕರಿ ದುರ್ಜನನೆರವಿ ಪತ್ತಿನೊಳಿರಲು (ತರ್ಕಕಾ. ೯-೫೧). ೪. ಆಶ್ರಯ: 'ಪತ್ತುಗುಡು' ಪರಾ. ೫. ಯುದ್ಧ ; ಕಲಹ : "ಪತ್ತು - ಸಂಶ್ಲೇಷೇ (ಹತ್ತಿಕೊಳ್ಳು), ಕಲಹ, ಸಂಖ್ಯಯೋಃ" (ಶಮಧಾ). [<ಪತ್ತು$_1$./ತಮಿ. ಮಲ. ಪಱ್ಱು ; ತೆಲು. ಪಟ್ಟು ; ಕೋತ. ಪತ್]

**ಪತ್ತು$_3$**, ಹತು, ಹತ್ತು$_2$ (ನಾ). ಒಂದು ಸಂಖ್ಯೆ ; ಒಂಬತ್ತರ ಅನಂತರ ಬರುವ ಸಂಖ್ಯೆ ; ದಶ : "ಪತ್ತು - ಸಂಶ್ಲೇಷೇ (ಹತ್ತಿಕೊಳ್ಳು), ಕಲಹ, ಸಂಖ್ಯಯೋಃ" (ಶಮಧಾ) ; ಪತ್ತು ಪಣನಂ (ಎಇ. XIV, ೧೯೧-೧೫ ; 725) ; ಕುದಿಕುದಿದತ್ತಣಿಂ ಕುದುರೆ ನೂಱು ಜಿರೊಳಾ ಬಲದಾನೆ ಪತ್ತು ತಾಗಿದುವೆನೆ ದೋಷಮಾ ಪಿರಿದು ಸಂಖ್ಯೆಯೊಳೇಕಬಹುತ್ವಸಂಗದಿಂ (ಕವಿರಾ. ೧-೧೨೦) ; ಮೊದಲಿಂದಂ ತುದಿಯೆಯ್ದೆ ಸಂದ ನರಕಾಯುಷ್ಯಾಬ್ಧಿ ಕೇಳೊಂದು ಮೂಱುದಱಿಂದಂ ಬಱಿಕೇೞು ಪತ್ತು ಪದಿನೇೞಿಪ್ಪತ್ತೆರಡುಂ ಮೂಱು ಪೆರ್ಚಿದ ಮೂವತ್ತೆನೆ . . . ಏಂ ದುಃಖಕ್ಕವನೋರ್ಗಂತರೋ (ಆದಿಪು. ೫-೯೩) ; ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತು ಬಾಣಂ . . . ನಡುವಾಗಳ್ಕೋಟಿಸೇನಾಂಗದೊಳ್ ಗಣನಾತೀತಮಿದೆಂದೊಡೇವೊಗಟ್ಟುದೋ ಬಿಲ್ಬಲ್ಮೆಯಂ ಪಾರ್ಥನಾ (ಗದಾಯು. ೩-೩). 'ಅಯ್ಪತ್ತು' ಪರಾ. **ಹತು :** ಸಲಗೆ ಎರಡು ಕೊಳಗ ಹತು (ಎಕ. VI, ಕಡೂರು. ೨-೧೪ ; ಸು. 1110). **ಹತ್ತು$_2$ :** ಒಬ್ಬಳೇ ಹೆಂಡತಿ ಮೂವರ್ ಪುತ್ರರ್ ಎರಡಾರ ಬೆವಸಾಯಂ ಹತ್ತು ಹಸು ಕಱೆಹ ಮಧ್ಯದೇಶದೊಳ್ ಸುಕ್ಷೇತ್ರಮಪ್ಪ ತಾಣದೊಳಿರ್ಪುದೇ ಸೇವ್ಯಂ (ಪಂಚತಂ. ೬೫-೧೪) ; ಆ ನಿಃಕಲವಪ್ಪ ಶಿವನ ನಿಃಕಲೆಯಪ್ಪ ಕುಂಡಲಿನಿಯ ಹತ್ತಱೊಳೊಂದಂಶದಲ್ಲಿ ಶಿವಸಾದಾಖ್ಯ ಜನಿಸಿತ್ತು (ಆದಪ. ೩-೧೧) ; ಹತ್ತುಂ ಕರಣಂಗಳು ನೆಱೆ ಹತ್ತುಂ ದೆಸೆಗೋಡಿ ಪೋದುವರಿಗಳವಾಜಿಯಂ ಪೊತ್ತಾನಲಾಱದುಳಿದುವು (ಮೈಆರಿ. ೧೯೪೦, ೧-೬೦ ; ಸು. 13ನೆಯ ಶತ) ; ಶ್ರೀಮಹಾಕಾಶಿಯೊಳು ತತ್ಪುರಧಾಮವಿಶ್ವೇಶ್ವರನನತಿಶಯನೇಮವಾಗಲು ತನ್ನ ಹತ್ತು ಬೆರಳ್ಗಳಂ ಕಡಿದು ಪ್ರೇಮದಿಂದರ್ಚಿಸಿ ಪಡೆದನಭಿರಾಮವೆನಲು (ಬಸಪು. ೫೩-೫೬) ; ಹತ್ತು ಶರದಲಿ ಧರ್ಮಜನನಿಪ್ಪತ್ತಱಿಂದಭಿಮನ್ಯುವನು . . . ಐವತ್ತು ಶರದಲಿ ಸಕಲ ರಥಿಕರನೆಚ್ಚು ಬೊಬ್ಬಿಱಿದ (ಕುವ್ಯಾದ್ರೋ. ೩-೩೨).

**ಹತ್ತುಹತ್ತು, ಹತ್ತತ್ತು** (ದ್ವಿರುಕ್ತಿ) : ಸೋಮೇ[ಶ್ವ]ರಂ ದೇವರ ನಂದಾದೀವಿಗೆಗಲಂದೆಯ ಮುದ್ರಾವಣದ ಸುಂಕದೊಳಗೆ ತಿಂಗಳ್ದಿಂಗಳ್ಗೆ ಹತ್ತುಹತ್ತು ದ್ರ[ವ್ಯಮಂ] ಬಿಟ್ಟಂ (ಎಇ. XXVIII, ೫-೫೬ ; ಸು. 1082) ; ಉತ್ತುಂಗ ಗವಯ ಶತಬಲಿ ಸುಷೇಣರ ಮೇಲೆ ಹತ್ತುಹತ್ತಂ ಬೊಡಲ್ಬುಗಲೆಚ್ಚಂ (ಜೈಮಿಭಾ. ೨೧-೧೯); ಆವರು ಹಬ್ಬದಲ್ಲಿ ಆಳುಗಳೆಲ್ಲರಿಗೂ ತಲಾ ಹತ್ತತ್ತು ರೂಪಾಯಿ ಕೊಟ್ಟರು (ರೂಢಿ). **ಪತ್ತನೆಯವತೆ** = ಹತ್ತನೆಯ ಅವಸ್ಥೆ ; ದಶಮಾವಸ್ಥೆ ; ಸಾವು : ಪತ್ತುದೇರ್ಪಸರಾಂತವಗೊಲ್ದು ಪುಟ್ಟಯಿರ್ಪತ್ತುತೋಳ್ ಶಿರ ಪತ್ತರವನ ಪತ್ತನೆಯವತೆಗಾನಿಸಿ ಲೋಕವ ಕಾಯ್ದ ಪತ್ತವತಾರ ಶ್ರೀರಂಗ (ಶತಸಾಂ. ೧೪-೭೭). **ಪತ್ತವತಾರ, ಹತ್ತವತಾರ, ಹತ್ತುಅವತಾರ** = ೧. ಹತ್ತು ಅವತಾರಗಳನ್ನು ತಾಳಿದವನು; ವಿಷ್ಣು : ಪತ್ತುದೇರ್ಪಸರಾಂತವಗೊಲ್ದು ಪುಟ್ಟಯಿರ್ಪತ್ತು ತೋಳ್ ಶಿರ ಪತ್ತರವನ ಪತ್ತನೆಯವತೆಗಾನಿಸಿ ಲೋಕವ ಕಾಯ್ದ ಪತ್ತವತಾರ ಶ್ರೀರಂಗ (ಶತಸಾಂ. ೧೪-೭೭). ೨. ವಿಷ್ಣುವು ತಾಳಿದ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ಎಂಬ ಹತ್ತು ಅವತಾರಗಳು ; ದಶಾವತಾರ : ಹತ್ತವತಾರವನೆತ್ತಿದ ನಮ್ಮ ಸತ್ಯಮೂರುತಿ ಪುರಂದರವಿಠಲರಾಯನು (ಪುರಂದ.ಧಾ. ೪-೨೫-೩); ದೇವರ ಹತ್ತವತಾರಗಳ ವರ್ಣನೆಯನ್ನು ಅವಕಾಶವಿದ್ದಲ್ಲೆಲ್ಲ ಭಕ್ತರು ಮಾಡಿದ್ದಾರೆ (ಕರ್ನಾಕ. ೩೫೨) ; ಅಡಿಗಡಿಗೆ ಹತ್ತು ಅವತಾರವ ಮಾಡಿದ ಕಡುಕಪಟಿಯಲ್ಲದೆ ಭಾರಿಗುಣದವನಲ್ಲ (ಪುರಂದ. ಧಾ. ೩-೯೧-೨). **ಪತ್ತುಗೈಯವ** = "ಹತ್ತು ಕೈಗಳುಳ್ಳವ ; ಶಿವ" (ಗಂಗಾಪು. ೧೯೬). **ಪತ್ತುದಿಶೆ** = ಹತ್ತುದಿಕ್ಕುಗಳು ; ದಶದಿಕ್ಕುಗಳು : ಪತ್ತುದಿಶೆ ನಾಲ್ಕುವಾರ್ಧಿ ವಿಯತ್ತಳಮೊಂದವನಿಯೊಂದೆ ಕುಳನಗವೇೞುಂ ಮತ್ತೆ ಪೆಱವೆಡೆಗಳಿಲ್ಲವಱತ್ತಡಗಿರಲೆನ್ನ ತಳದೊಳಿರ್ದನೆಯಲ್ತೆ (ನೇಮಿಪು. ೧೨-೬೨). **ಪತ್ತುದೆಸೆ** = ಪತ್ತುದಿಶೆ : ಸಂಖ್ಯೇಯಕ್ಕೆ—ಪತ್ತುದೆಸೆ, ಪತ್ತುದೆಸೆಗಳ್ (ಶಮದ. ೧೩೯ ಪ್ರಯೋ) ; ಪತ್ತುದೆಸೆಯುಂ ಬೆಳಗಿಸುವೆ ಪನ್ನೆರಡುರಾಶಿಗೊತ್ತಾಸೆಯಾಗಿರ್ಪೆ (ಜೈಮಿಭಾ. ೨೦-೪೨). **ಪತ್ತುಮಡಿ, ಹತ್ತುಮಡಿ** = ಹತ್ತರಷ್ಟು ; ಹತ್ತುಪಟ್ಟು : ಪದಿನಾಲ್ಕುಂ ಭುವನಂಗಳಿಂನೆಸೆವ ತದ್ಬ್ರಹ್ಮಾಂಡಮಂ ಬಾಹ್ಯದೇಶದೊಳಂತೊಂದಱನೊಂದು ಪತ್ತುಮಡಿಯಿಂ ಪೆರ್ಚಿರ್ಪವು (ವಿಷ್ಣುಪು. ೧-೧-೧೦೮) ; ಹೊಱಗೆ ರಥಿಕರು ರಾಹುತರು ಜೋಧರು ಪದಾತಿಗಳಿದ್ದುದಂದಿನ ಸಿರಿ ಸುರೇಂದ್ರನ ಪಾಡಿಗೈಮಡಿ ಹತ್ತುಮಡಿ (ಕುವ್ಯಾಸ. ೧೩-೩೨); ಬಲವಿರೋಧಿಸಹಾಯಶೌರ್ಯಕಲಿತನರಿನಕುಲದವನಿಪಾಲಕತಿಲಕರವರಿಂದೀ ಮಹೀಪತಿ ಹತ್ತುಮಡಿ (ತೊರರಾ.೧-೩-೨೦). **ಪತ್ತೆಂಟು, ಹತೆಂಟು, ಹತ್ತೆಂಟು** = ಕೆಲವು ; ಹಲವು : ಚಕ್ರೇಶ್ವರಂ ವಾರ್ಧಿಭೂತಲನಾಥಂಗನುರಾಗಮುಂ ಬಳೆಯಿಸಲ್ಕರ್ಘ್ಯಕ್ರಿಯಾತಂಡುಲಂಗಳಿವೆಂದಾದರದಿಂದೆ ಕೊಂಡನವಱೊಳ್ ಪತ್ತೆಂಟು ರತ್ನಂಗಳಂ (ಆದಿಪು. ೧೨-೧೨೦) ; ಇನ್ನಿವಱೊಳ್ ಇರದೆ ಪತ್ತೆಣ್ಬುವಳಯಂ ಚಾರಿಸದನ್ನಂ ಭೋಗ ಮಿಕ್ಕವನಲ್ಲನಿನ್ದ್ರರಾಜಂ(ಎಕ. II, ೧೩೩-೧೦೫ ; 982) ; ವ್ಯಾಳಿ ಪತ್ತೆಂಟು ದಿವಸಂ ಪೋದಿಂಬೞಿಯಂ ಮೆಲ್ಲನೆ ಕನ್ನೆಗಿಂತೆಂದಳ್ (ಧರ್ಮಾಮೃ. ೩-೧೨೫) ; ಬೆಟ್ಟಹಳಿಯೆಂಬ ಗ್ರಾಮಉ ಹಿಂದೆ ಹತೆಂಟುಕಾಲದಿಂದ ನಾಮನಷ್ಟವಾಗಿ ನಿರ್ನಾಮವಾಯಿತು (ಎಕ. IX (S), ಚನ್ನಪ. ೨೯೯-೧೧ ; 1387) ; ಕರ್ಣಾಟಕಪ್ರಕೃತಿಸ್ವರಲೋಪಕ್ಕೆ . . . ಉಕಾರಕ್ಕೆ — ಸುತ್ತೋಲೆ, ಹತ್ತೆಂಟು (ಶಮದ. ೫೨ ಪ್ರಯೋ) ; ಮಡದಿಯಗಲಿದ ಬಳಿಕ ಹತ್ತೆಂಟಡಿಯ ದಾಂಟುವ ಮರಳಿ ನಿಜಸತಿಯೆಡೆಗೆ ತಿರುಗುವ ಚಂದ್ರಬಿಂಬಾನನೆಯನೀಕ್ಷಿಸುವ (ನಳಚ. ೫-೧೮) ; ತುರಗ ಸಾಸಿರ ನಾಲ್ಕು ಗಜ ಹತ್ತು ಕಾಲಾಳ ನೆರವಿ ಹತ್ತೆಂಟುಸಾವಿರದ ವರಗಣನೆಯ ಮೋಹರವ ಖಾನನ ಪಿತ ಗರುವ ಪರಾತ ತೋಱಿದನು (ಕಂನವಿ. ೧೧-೮೩). **ಪತ್ತೆರಡು** = ೧. ಹತ್ತು ಮತ್ತು ಎರಡು ; ಹನ್ನೆರಡು. ೨. ಎರಡು ಹತ್ತುಗಳು ; ಇಪ್ಪತ್ತು : ಪತ್ತೆರಡುಯೋಜನಮನಱಿಸುತ್ತಲ್ಕಂತಲ್ಲಿ ಕಲ್ಲು ಕಾಣದೆ ತನಗಿರ್ಪತ್ತುಪವಾಸಮುದಾಗಲ್ ಚಿತ್ತದೊಳಂದಳ್ಕದಱಿಸುತಿರ್ದಂ ಭಕ್ತಂ (ತ್ರಿಪುವಿ. ೫೨-೧೫). **ಹತ್ತನೆ ಅವಸ್ಥೆ** = ಪತ್ತನೆಯವತೆ: ವರ್ಷೀಯಾನ್, ದಶಮೀ, ಜ್ಯಾಯಾನ್ - ೩ ಶತವೃದ್ಧ, ಬಹಳ

ಮುದುಕ, ಹತ್ತನೇ ಅವಸ್ಥೆ ಸಮೀಪವಾಗಿ ಉಳ್ಳವನು (ಸಿದ್ಧಾಂತಿ. ೧೮೦). **ಹತ್ತರ ಕೂಡ ಹನ್ನೊಂದು, ಹತ್ತರ ಕೂಡೆ ಹನ್ನೊಂದು, ಹತ್ತರಗೂಡ ಹನ್ನೊಂದು**=ಹತ್ತರೊಂದಿಗೆ ಹನ್ನೊಂದನೆಯದು ; ಸಾಮಾನ್ಯವಾದುದು ; ಮಹತ್ವವಲ್ಲದುದು : ಹತ್ತರ ಕೂಡ ಹನ್ನೊಂದು, ಪರಸೇ ಕೂಡ ಗೋವಿಂದ (ಗಾದೆ) ; ಹತ್ತರ ಕೂಡೆ ಹನ್ನೊಂದು ; ಪರಿಸೆ ಕೂಡೆ ಗೋವಿಂದ ! (ಅನಾಥೆ. ೧೬೩) ; ನಾನು ನನ್ನ 'ಹತ್ತರ ಗೂಡ ಹನ್ನೊಂದು, ಪರಿಶಿಯ ಕೂಡ ಗೋವಿಂದ' ತರಗತಿಯ ಆಯುಷ್ಯದಲ್ಲಿಯ ಪ್ರಸಂಗಗಳ ವಿಷಯ ಮಾತಾಡಿದೆನು (ದಾಸಹು.೧೦೧). **ಹತ್ತರಲ್ಲಿ ಹನ್ನೊಂದು** = ಹತ್ತರ ಕೂಡ ಹನ್ನೊಂದು : ಅವನ ಭಾಗಕ್ಕೆ ರೋಷನ್ ಹತ್ತರಲ್ಲಿ ಹನ್ನೊಂದಾಗಿರಲಿಲ್ಲ (ರೂಪಸ. ೧೩೦). **ಹತ್ತುಬುವರು** = ಹಲವರು : ಹಿತವರು ಹತ್ತುಬುವರು ತಮ್ಮೊಳು ಸನ್ಮತದಿಂ ಸಹಭೋಜನವಂ ಮಾಡಿದರ್ (ಯೋಗಾಂವಿ. ೫-೮). **ಹತ್ತುಟಿಗೊಳಗೆ ಹನ್ನೊಂದು**=ಹತ್ತರ ಕೂಡ ಹನ್ನೊಂದು : ಹತ್ತುಟಿಗೊಳಗೆ ಹನ್ನೊಂದಾಗಿ ನೀರ ತಾವರೆಯಂತಿಪ್ಪೆನು (ಮಹಾದೇ. ಬ. ೯೯-೨೩೦). **ಹತ್ತಾರು**=ಅನೇಕ ; ಸಾಕಷ್ಟು : ಕನ್ನಡದ ಡಕಾರಾಂತ ಧಾತುಗಳು ಕೃದಂತಭಾವನಾಮಗಳಾಗುವಾಗ ಡ>ಟ ಆಗುವುದಕ್ಕೆ ಹತ್ತಾರು ಉದಾಹರಣೆಗಳು ನಮ್ಮಲ್ಲಿ ಇವೆ (ದ್ರಾವಿವಿ. ೮೩); ಹತ್ತಾರು ಸಲ ನೀನು ಬಟ್ಟೆಯನಳೆದರು ಕತ್ತರಿಸುವುದೊಂದೆ ಸಲವೆ (ಇಂಚಾಪ. ೨೦೭-೨೧). **ಹತ್ತಿಪ್ಪತ್ತು**=ಹಲವು ; ಕೆಲವು : ನನ್ನಲ್ಲಿ ಹತ್ತಿಪ್ಪತ್ತು ಪುಸ್ತಕಗಳಿವೆ (ರೂಢಿ). **ಹತ್ತುಜನ**=೧. ಅನೇಕ ಮಂದಿ : ಹತ್ತು ಜನರ ಹಲ್ಲು ಕಡ್ಡಿ ಒಬ್ಬನ ತಲೆಹೊರೆ (ಗಾದೆ). **೨.**=ಹತ್ತುಮಂದಿ ೨ : ಹತ್ತು ಜನ ಎಂಬುವರು ಮುತ್ತಿನ ಸಮಾನ (ಗಾದೆ) ; ಹತ್ತುಜನರ ಮುಂದೆ ಮಾನ ಕಳೆಯಬೇಡ (ರೂಢಿ). **ಹತ್ತು ಪಟ್ಟು**=ಪತ್ತುಮಡಿ : ಅವನು ನನಗಿಂತ ಹತ್ತು ಪಟ್ಟು ಹೆಚ್ಚಿನ ಶ್ರೀಮಂತ (ರೂಢಿ). **ಹತ್ತು ಮಂದಿ**=೧. ಅನೇಕ ಜನ ; ಸಾಕಷ್ಟು ಜನ : ಅಕ್ಕಬಿಂದಲಿ ಹತ್ತು ಮಂದಿಯು ಕೂಡಿ ನಕ್ಕರು ಕೆಲೆದರು ತಮತಮಗೆ (ಮಹಾದೇ. ಬ. ೧೬೫-೩೬೩) ; ಮುಂದಿದ್ದ ಕೂಸನ್ನು ಒದ್ದಾಳೊ ಹತ್ತು ಮಂದಿಲಿ ಮಾನವ ಕೆಡಿಸ್ಯಾಳಣ್ಣ (ಪುರಂದ. ೧-೧೮೨-೩) ; ಹತ್ತು ಮಂದಿಯ ತಾಯಿ ಬೀದೀಲಿ ಬಿದ್ದು ಸತ್ತಳಂತೆ (ಗಾದೆ). **೨.** ಅನೇಕ ಜನ ಸಭ್ಯರ ಒಕ್ಕೂಟ ; ಸಮಸ್ತರು : ದುಷ್ಟೆ ಕರ್ಕಶಿಸ್ತ್ರೀಯಳ ಹೆಸರು ತೆಗೆಯಬಾರದು ಹತ್ತು ಮಂದಿಗಂಜದವನ ಸ್ನೇಹಿಸಬಾರದು (ಪುರಂದ. ೨-೫೪-೩) ; ಹತ್ತು ಮಂದಿಯ ಮಾತು ಮೀರಬೇಡ, ರಾಯರಿಗೆ, ದೇವರಿಗೆ ಸುಳ್ಳಾಡಬೇಡ (ಗಾದೆ). **ಹತ್ತು ಸಮಸ್ತರು**=ಹತ್ತು ಮಂದಿ ೨: ಅದು ಧಾರ್ಮಿಕವೇ ಅಗಲಿ, ಲೌಕಿಕವೇ ಅಗಲಿ ಅವುಗಳನ್ನು ಸುದರ್ಶನ ಭಟ್ಟರ ಅವಗಾಹನೆಗೆ ತರದೆ, ಅವರ ಸಲಹೆ ತೆಗೆದುಕೊಳ್ಳದೆ ಊರಿನ ಹತ್ತು ಸಮಸ್ತರು ನಿರ್ಣಯಿಸುತ್ತಿರಲಿಲ್ಲ (ರಾಜ್ಯೋದ. ೬). **ಹತ್ತೈದು**=ಕೆಲವು ; ಹಲವು : ಕುಮಾರಂ ತನ್ನ ಮನದನ್ನರಪ್ಪ ಹತ್ತೈದು ಸಖಿಗಳಂ ಕೂಡಿಕೊಂಡು ತುಂಬುರನಂ ಕರೆಯಿಸಿ (ನಂಬಿರ. ೪-೯೩) ; ಗಳಿಗೆ ಜಾವಂ ದಿನಂ ಪಕ್ಷ ಮಾಸಾಬ್ದತತಿಗಳ ಹಂಗು ಹೊದ್ದದೊಂದೆರಡುಸಂವತ್ಸರಂಗಳಲೆ ಹತ್ತೈದು ವರುಷದ ಹರೆಯವಂ ತಳೆದ ನನುಪಮಸ್ವಾತಂತ್ರನು (ಸಿದ್ಧರಾ. ೨-೧೧).

[**ದೇ.॥ ತಮಿ. ಮಲ.** ಪತ್ತು ; **ತುಳು.** ಪತ್ತ್ ; **ತೆಲು.** ಪದಿ ; **ಕೊಡ.** ಪತ್ತೀ; **ಕೋತ.** ಪತ್ ; **ತೊದ.** ಪೊತ್ ; **ಕೋಲಾ.** ಪದಿ, ಪದೀ ; **ಗೊಂಡಿ.** ಪದ್, ಪದಿ]

**ಪತ್ತು$_4$** 'ಪೊಟ್ಟು' ನೋ.

**ಪತ್ತು$_5$** (ನಾ). **೧.** (ವ್ಯವಹಾರದಲ್ಲಿ ಒಬ್ಬ ವ್ಯಕ್ತಿಯ ಪ್ರಾಮಾಣಿಕತೆಯ ಬಗ್ಗೆ ಇಡುವ) ನಂಬಿಕೆ ; ವಿಶ್ವಾಸ ; ಭರವಸೆ : ವ್ಯಾಪಾರಸ್ತರು ಸಹ ಸಾಲ ಮಾಡುವದುಂಟು. ಆದರೆ ಅವರ ಪತ್ತು ವೋಳತಾಗಿ ಇರುವುದರಿಂದ ಅವರ ಸಾಲದ ಬಡ್ಡಿಯ ದರವು ಹಗುರಾದದ್ದಿರುತ್ತದೆ (ಕಭಾಗೆ. ೨೮೬) ; ಇದರಿಂದ ಹಿಂದೂಜನರ ಪತ್ತು ಕೆಡಿಸಿಕೊಂಡನು (ಹಿಂಪುಸ. ೧೩೨) ; ಅತ ಕೇಳಿದಂತೆ ಎರಡುನೂರು ಮುನ್ನೂರು ರೂಪಾಯಿಗಳವರೆಗೆ ತನ್ನ ಪತ್ತಿನ ಮೇಲೆ ಸಾಲ ತಂದು ಕೊಟ್ಟಿದ್ದನು (ಜೀಪಪ್ರ. ೧೦೦). **೨.** ಘನತೆ ; ಗೌರವ ; ಹಿರಿಮೆ : ಅಹಿಂಸಾ ವ್ರತಿಗಳನ್ನು ಹಿಂಸಿಸಿದರೆ ಸಾಮ್ರಾಜ್ಯದ ಪತ್ತು ಹಾಳಾಗುವುದು, ಅಪ್ರೀತಿ ಬೆಳೆಯುವದು (ವಿಚಾಪುಂ. ೪೨). [←**ಮರಾ.** ಪತ್]

**ಪತ್ತು$_6$** (ನಾ). ಬಟ್ಟೆಯನ್ನು ಸುತ್ತಿ, ಎಣ್ಣೆಯಲ್ಲಿ ನೆನೆಸಿ ಹೊತ್ತಿಸಿದ ಪಂಜು : ಹತ್ತುತಲೆ ಕಟ್ಟಿಸಿಕೊಂಡು, ಬೀದಿ ಮೇಲೆ ತಮಟೆ ಹೊಡೆಸಿಕೊಂಡು, ಪತ್ತುಗಳಿಗೆ ಗುಗ್ಗುಳ ಹಾಕಿಸಿಕೊಂಡು . . . ಬಂದರೆ ಚಂದ ಅಂತ ಕಾಣಿಸಿತು (ನನ್ನೂರು. ೩೦೦). [ ? ]

**ಪತ್ತುಗಾರ** (ನಾ). ಚಿನ್ನ, ಬೆಳ್ಳಿಯ ಕೆಲಸ ಮಾಡುವವನು ; ಅಕ್ಕಸಾಲಿಗ : ಒಡವೆ ಮಾಡಿಸಲು ಬಂದವಳನ್ನು ಕೆಡಿಸಿದನೆಂದು ಅಪವಾದ ಹೊತ್ತು ಬಂದ, ಪತ್ತುಗಾರ (ಸಶೂರ. ೫೩). [<ಪತ್ತಾರ]

**ಪತ್ತುಗುಡು** (ಕ್ರಿ). ಹತ್ತಿಸು ; ಆಶ್ರಯಿಸುವಂತೆ ಮಾಡು ; ಹಬ್ಬಿಸು : ಲೋಕದೆ ಲೋಗರ್ ಕಾಡ ಬೀಟಂ ತಂದು ಊರ ಮರ ನೊತ್ತಿಗಿಡುವರುಂಟು. ನೋಡೆ ನಾಡೆಳೆವಳ್ಳಿಯಂ ಸಮಂತು ಕಾಡ ಕರ್ಮರನೊಳ್ ಪತ್ತುಗುಡುವರೊಳರೇ ! (ರಾಮಾಶ್ವ. ೬೮-೪).
[ಪತ್ತು$_2$+ಕುಡು$_1$(<ಕೊಡು$_1$)]

**ಪತ್ತುಗೆ,** ಪತ್ತಿಗೆ$_1$, ಹತ್ತಿಗೆ$_1$, ಹತ್ತುಗೆ (ನಾ). **೧.** ಸೇರಿಕೊಂಡಿರುವಿಕೆ; ಕೂಡಿಕೊಂಡಿರುವಿಕೆ : ಗೆಕಾರಕ್ಕೆ—ಉಡುಗೆ . . .ಪಣ್ಣುಗೆ, ಪತ್ತುಗೆ (ಶಮದ. ೨೧೧ ಪ್ರಯೋ) ; ಜರಾಯುಗಳ್ ಭೂಭೃತ್ತತಿಯುಂ ಜ್ಯೋತಿಯೊಡೆವೆರೆದ ಲೋಕಚಯುಂ ಪತ್ತುಗೆಯಿನಂಡಮಧ್ಯದೊಳೆತ್ತಂ ಸನರಾಮರಾಸುರರ್ ವರ್ತಿಸುಗುಂ (ವಿಷ್ಣುಪು. ೧-೧-೧೦೭). **೨.** ಹೊಂದಿಕೆ ; ಹೊಂದಾಣಿಕೆ: ಮುತ್ತ ಬಿಡುಗಣ್ಣವರ್ ನೆಲದ ಪೊಸ ನಲ್ಲರಂ ಪತ್ತುಗೆಯ ನೋಳ್ಪವೋಲರಿಲುಗಳ್ ಮಿನುಗೆ (ಕಾಲೂರ. ೬೫-೧೧೧). **೩.** ಸಂಬಂಧ ; ಸಂಪರ್ಕ : ಪೊಗಟಲ್ ದೇಸೆಗೆ ದೇವರಿಂದುಕಳೆಯುಂ ನಿಸ್ಸಾರಮಂ ತಮ್ಮ ಪತ್ತುಗೆಯಿಂದಂ ಪದಿನಾಟಿನಲ್ಲಿ ಸವಿವರ್ (ಮಲ್ಲಿಪು. ೨-೪೪) ; ಪಣದಾಸೆ ನಂಟುತನದ ಪತ್ತುಗೆ ನೇಹದೆಣಿಕೆಗಳಿಂದೆದೆಗರಗಿ ಗುಣ ಜವ್ವನ ಕುಲ ರೂಪುಗುಂದಿದ ನಡೆವೆಣಕೀಯಲಾಗದು ಪೆಣ್ಣ (ಹದಿಬ.೫-೧೭). **೪.** ದೇಹಸಂಬಂಧ ; ಸಮಾಗಮ; ಸಮ್ಮಿಲನ : ತೆತ್ತುತನಕ್ಕೆ ತೆತ್ತುತನಮುಂ . . . ಪತ್ತಿದ ಮೆಯ್ಗೆ ಪತ್ತುಗೆಯಸುಕ್ಕೆವಕುಕ್ಕೆವಗೆಯ್ತುಮಂ ಪೊಣರ್ಚುತ್ತುಮುಪಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೮೫ ಶೂದ್ರಕ) ; ಅಮರ್ಕೆಗೆಟ್ಟೊಡಲವೋಡಿದುದೆಂದಗಿವೆನ್ನ ನಿನ್ನ ಪತ್ತುಗೆಯ ತೊಡರ್ಪದಿಂದು ಪಚಿದತ್ತು ಮನಂ ಬಟೀಕೆಯ್ದಿ ಸೊರ್ಕಿದಾನೆಗೆ ಪರಿವಂತಿರಿಂದು ಪಚಿದತ್ತೆನಗಂ ನಿನಗಂ ತಳೋದರೀ (ಆದಿಪು. ೧೨-೩೭) ; ಪದನಟಿದು ಪತ್ತುವ ಪತ್ತುಗೆಗಂ ಇಂಬಟಿದು ಸೇವಿಸುವ ಸೇವೆಗಂ . . . ಮನಂಬೆಚ್ಚು ಪತ್ತೆಪೊಯ್ದಂತಾಗಿರೆ (ಶಾಂತಿಪು. ೩-೫೯ವ). **೫.** ಸ್ನೇಹ ; ಒಲವು ; ಗೆಳೆತನ : ಗುರುವುಂ ತಾನುಂ ಮನಂಗೊಂಡರಾ ನಖಮಾಂಸಸ್ಥಿತಿಯಪ್ಪ ಪತ್ತುಗೆಗಳಿಂ ಕ್ಷೇಮಂಕರಾಧೀಶನಂ (ಶಾಂತಿಪು. ೭-೧೨೧) ; ಎಮಗೆ ಪತ್ತುಗೆಯಂ ಮಾಡಿದಿರಪ್ಪೊಡೆ ಸುಖದೊಳ್ ನೆಲಸದೆ ತಿರಿವಿರೆಂದು ಪೇಟ್ದಂತೆ ಸಂಚಳಿಸುವ ಕಣ್ಗಳುಮಂ ನೋಡಿ ವೈರಾಗ್ಯಂ ಪೆರ್ಚೆ (ಧರ್ಮಾಮೃ. ೧೧-೯೦) ; ಸವಿ ತವದನ್ನೆಗಂ

ಮನದ ಪತ್ತುಗೆಗಳ್ ಕಿಡದನ್ನೆಗಂ ಪೆಱಂಗವಳೆಡೆಯಾಗದನ್ನೆಗಂ . . . ತವಿಪುದು ತನ್ನನೊಪ್ಪಿಸುವುದು (ಚಂದ್ರಪ್ರ. ೮-೮೧); ದೊಡ್ಡವರೊಡನೆ ಪತ್ತುಗೆಯನು ಪಡೆಯಬೇಕೆಂದು ಬಯಸಿದುದಕೆ ಇದು ಯೋಗ್ಯವಾದ ದಂಡ (ಇಂದಿರೆ. ೨೮). **೬.** ಉಂಟಾಗುವಿಕೆ ; ಒದಗುವಿಕೆ ; ಸಂಭವಿಸುವಿಕೆ : ಜಸದಱವಂ ಪರಾಭವದ ಪತ್ತುಗೆಯಂ . . . ಜನತಾಪವಾದವುಂ ವ್ಯಸನಿಗಳಾರುಮೆತ್ತಲಱವರ್ ವಿಷಯಾಸವಮತ್ತಚೇತಸರ್ (ಪಂಚಾಪ. ೧೪-೧೧೮). **೭.** ಹೊಂದುವಿಕೆ; ಪಡೆಯುವಿಕೆ : ನೆಗಟ್ದಭಯಘೋಷಚಕ್ರಿಯ ಮಗಳ ಮನೋರಮೆಯ ಮದುವೆಗಂ ರಾಜ್ಯದ ಪತ್ತುಗೆಗಂ ಗುರೂಪರೋಧಕ್ಕಗಿದು ಮನಂದಂದನೇಂ ಜಿತಾತ್ಮನೊ ಪುರುಷಂ (ಆದಿಪು. ೬-೨). **೮.** ಹೊಂದಿಕೊಂಡ ಭಾಗ; ಪಕ್ಕ ; ಸಮೀಪ : ಕುಂದರಾಜನ ತಂಗೆ ಬೀಚಬರಸಿಗೆ ಊರಿಂ ಮೂಡಣ ಭೇರುಣ್ಡೇಶ್ವರದ ತಳವೃತ್ತಿ ಪುಲ್ಲಿಯ ಬಯಲ ಮೂಡಣ ಪತ್ತುಗೆಯಲೆ ಭೇರುಣ್ಡಗಳೆಯಲ್ಕೊಟ್ಟ ಗಟ್ದಿಯ ಮತ್ತರ್ಪತ್ತು (ಎಕ. VII, ಶಿಕಾ೦. ೧೫೧-೮೧ ; 1047) ; ತಿಪ್ಪಗಾವುಂಡನ ಸಾತಿಗಾವುಂಡಂ ಆಗಸಗೆಱೆಯ ತಂನ ವಿಸಂಕಾಣಿಯ ಬಳದೊಳಗೆ ಗೂಗೆಯಬಾಗಿ ಪಡುವಣ ಪತ್ತುಗೆಯೊಳು . . . ಬಿಟ್ಟ ಎರೆಯ ಮತ್ತರೊಂದು (ಕೊಲ್ಹಾಶಾ. ೧೫-೮೧ ; 1186). **೯** ಆಶ್ರಯ ; ಆಧಾರ : ಸೊಗಯಿಪ ಸುರಭೂಜದ ಪತ್ತುಗೆಯಂ ನವಕಲ್ಪಲತಿಕೆ ಪಡೆದಂತಿರೆ ನೆಟ್ಟಗೆ ಖಚರಾಧಿಪನೆರ್ದೆವತ್ತುಗೆವಡೆದಳ್ ವಾಯುವೇಗವನಿತಾರತ್ನಂ (ಶಾಂತೀಶ್ವ. ೧-೧೫೬). **೧೦.** ನಿಷ್ಠೆ ; ತತ್ಪರತೆ ; ಏಕಚಿತ್ತ : ಎಡೆವಿಡದೆ ನೀಮವರ ಮಕ್ಕಳನ್ ಬಗೆ ಪೊರಳದೊಂದೆ ಪತ್ತುಗೆಯಿಂದೆ ಸೇವೆಗೆಯ್ದಿರ್ಪುದುವರ್ ಬಲ್ಲೆನ್ (ಅಂತಿಗೊ. ೯-೧೫೬). **೧೧.** ಸ್ಥಿರತೆ ; ಅಚಲತೆ ; ಶಾಶ್ವತವಾಗಿರುವಿಕೆ : ಮುಗಿಲೊಡ್ಡಿಂದ್ರನ ಧನು ಮಿಂಚುಗಳೇಳೆ ಬಳಿಕ್ಕ ವಾರಿವರಲಿಂದಂ ಪೆರ್ಚುಗೆಗೊಂಡ ಕಾಲಮದು ಪತ್ತುಗೆಯಂ ತಳೆದಿರ್ಪುದೆಯಳಿದತ್ತಾಕ್ಷಣದೊಳ್ (ವೀರವಿ. ೬-೧೫). **೧೨.** (ರಥದಲ್ಲಿ) ಸಂಬಂಧವನ್ನುಂಟುಮಾಡುವ ಭಾಗ ; ಅಡ್ಡಪಟ್ಟಿ ; ಅಚ್ಚು : ಅಡ್ಡವಂದ ನೞಗೊಂಬಿನ ಪತ್ತುಗೆ ಜೋಲ್ವ ಬಳ್ಳಿಗೊಂಬಿನ ಬಳಿ . . . ಕಣ್ಗೆ ಚೆಲ್ವನೆ ನಡೆತಂದು ವಂದಸುಗೆಯೆಂಬ ನೆಗೞ್ತೆಯ ತೇರ್ಗಳೆತ್ತಲುಂ (ಕಬ್ಬಿಕಾ. ೨೧೩). **ಪತ್ತಿಗೆ**[1] : ೧. 'ಪತ್ತಿಗೆಯಾರಂಬ' ಪರಾ. **೧೩.** ಹಿಡಿದುಕೊಂಡಿರುವಿಕೆ ; ಹಿಡಿತ : (ಕ). **ಹತ್ತಿಗೆ**[1] : **೩.** ಶೋಕದ ಹತ್ತಿಗೆಗೆ ಹೊರೆದೆಗೆದು ಮಱವೆಯ ಚಿತ್ತವನು ಚೇತರಿಸಿ ಮೆಲ್ಲನೆ ನುಡಿಸಿಧನು ಮುನಿಪ (ಕುವ್ಯಾಗ. ೧೧-೧೦); ಆತ್ಮನಲ್ಲಿ ಭಾವಲಿಂಗಸಂಬಂಧವ ತಿಳಿದುದಕ್ಕೆ ಜ್ಞಾನಕ್ರಿಯೆಗಳಲ್ಲಿ ಹತ್ತಿಗೆಯುಳ್ಳವನಾಗಿರಬೇಕು (ಮೋಳಿಮಾ. ೭೩-೨೮೮ ಅರ್ಥ). **೧೨.** ಬೆಚ್ಚಿದವು ರಥವಾಜಿ ಹತ್ತಿ[ಪಾಠಾಂ.ತ್ತು]ಗೆ ಬಿಚ್ಚಿ ರಥನುಗ್ಗಾಯ್ತು ಶೌರ್ಯದ ಕೆಚ್ಚು ಮುಱದುದು ಹಿಂಗಿದರು ಪಾಂಡವಕುಮಾರಕರು (ಕುಪ್ಯಾಕ. ೩-೩೧); ಮುಱದ ಬಲುಗುದುರೆಗಳ್. . . ಹತ್ತಿಗೆ ಹಱದ ಗಾಲಿಯ ರಥವ ಚಿನಕಡಿವಡೆದ ಕಾಲಾಳ ಅಱಹಿದರು ಭೂಪತಿಗೆ (ಕುವ್ಯಾಶ. ೨-೬). **೧೪.** ಹತ್ತಿಕೊಂಡಿರುವಿಕೆ ; ಅಂಟಿಕೊಂಡಿರುವಿಕೆ : ಹತ್ತಿಗೆಯ ಬಿಡಿಸಿ ಕೆದಱಸಿ ಬಿದಿರ ಸಟ್ಟುಗವನಿತ್ತಟ್ಟನೊಳು ಬೆಂದುದಂ ಹಿಡಿದು ತೆಗೆದಿರಿಸಿಯುತ್ತಮದ ಸಕ್ಕರೆಯನದ ಪದರೊಳು ತುಂಬಲದು ಬಿಚ್ಚುಪೇಣಿಯಾಯ್ತು (ಸೂಪಶಾ. ೧-೪೯). **ಹತ್ತುಗೆ** : **೧.** ಸುತ್ತುರ್ಝುಲ್ಲಿಯ ರ್ಝುಲ್ಲರಿಯ ಬಲುಹತ್ತುಗೆಯ ಬಿಱುಬುಗಳ ತೇರಿನ ಹತ್ತುಸಾವಿರ ಹೊದಱುದೆಗೆದವು ಶಲ್ಯನೆಡಬಲಕೆ (ಕುಪ್ಯಾಶ. ೨-೨೬) ; ದೇವಿಯಿದ್ದಳು ಬಾಗಿದೊಡಲಿನ ಕೈವೆರಳ ಹತ್ತುಗೆಯ ಕದಪಿನ ಜೀವನವನುದುಗಲಿಪ ನಯನದ ಮಣಿದ ಮಸ್ತಕದ (ತೊರಂಾ. ೫-೩-೩೩). **೩.** ತಮಿಳು—ಕನ್ನಡಗಳ ಹತ್ತುಗೆಯನ್ನೂ ಕನ್ನಡದೇಸಿಯ ವೆಗ್ಗಳಿಕೆಯನ್ನೂ ಪರೀಕ್ಷಿಸಿದಲ್ಲಿ ಕನ್ನಡಕ್ಕೆ ತನ್ನ ಕಾಲ ಮೇಲೆ ನಿಲ್ಲುವ ಮೂಲಶಕ್ತಿ ಇರುವುದೆಂದು ಊಹಿಸಬಹುದು (ತವನಿ. ೫೮); ಪಳ್ಳಿ, 'ಪಾಳ್ಯ—ಪಟ್ಟಿ' ಈ ನುಡಿಗಳಲ್ಲಿರುವ ಹತ್ತುಗೆಯು ವಿಮರ್ಶಾರ್ಹವಾಗಿದೆ (ಕರ್ಣಾಪೂ. ೩೦). **೫.** ಒತ್ತಿಗೈತಂದಾಗಲಭಿನಮಿಸುತ್ತ ಬಿನ್ನವಿಸಿದನು ತಂದೆಯ ಹತ್ತುಗೆಯ ಬುದ್ಧಿಗಳ ತುದಿ ಮೊದಲಾಗಿ ದಶಶಿರನು (ಉತ್ತಕ. ೧೦-೨೨). **೭.** ಆ ಮುನಿವರನು . . . ಉತ್ತಮವು[ದ] ಶ್ರುತಿಯಲಿ[ಲ್ಲಿ] ಭಕ್ತಿಯ ಹತ್ತುಗೆಯು ನಿನಗುಂಟೆಯೆಂದಾ ದ್ವಿಜನ ಕೇಳಿದನು (ತಿಮ್ಮಶಾಂ. ೭-೫೯). **೮.** ನಿಟ್ಟೂರ ಹೊಲದ ಹತ್ತುಗೆಯ ಹೊಲನವರ್ ಹುಲಿಗೆಱೆಯ ಗಡಿಮ್ಬದ ಗಳೆಯ ನೂಱು ಮತ್ತರ್ಕ್ಕೆಯ್ಯುಮ್ . . . ಪಾರಮೇಶ್ವರದತ್ತಿಯಾಗಿ ಪಡೆದು (ಎಇ. XVI, ೪೮-೫೩ ; 1147) ; ಗೂಗೆಯ ಬಾಗಿಂ ಬಡಗಲೆರೆಯ ಮತ್ತರೊಂದು ಮತ್ತಂ ಬಳ್ಳಿಹಾರದ ಬಡಗಣ ಹತ್ತುಗೆಯೊಳ್ಮತ್ತ(ಗೊಂ)ದು (ಕಇ. I, ೨೪-೨೧ ; 1148). **೯.** ಎತ್ತಿದವು ಶರಜಾಲ ಫಲುಗುಣನ ರಥ ಹಯ ಸಮಸ್ತಕಂ ಜೇನ ನೊಣದಂತೆ ಕವಿಯಲ್ಕೆ ಶರ ಹತ್ತುಗೆಗೆ ಪೊಗಲೆಡೆಯ ಕಾಣದೆ ಮುರಧ್ವಂಸಿಯಂ ನೋಡ್ದವಾಹಯಗಳು (ತುರಂಗ. ೬೮-೩೫). **೧೫.** ಸೇರಿಸುವಿಕೆ ; ಕೂಡಿಸುವಿಕೆ ; ಹೊಂದಿಸುವಿಕೆ : ತತ್ರನಲ್ ನಾದವದೞೊತ್ತಿನೊಳ್ ತ್ವಂಪದವೆ ಮತ್ತೆಸೆವ ಬಿಂದುವೆಂದಿಂತೆರಡನು ಹತ್ತುಗೆಯ ಮಾಳ್ಪಸಿಯೆ ಚಿತ್ತಂಬ ಬೆಳಗು (ಮನೋವಿ. ೨-೩೩). **೧೬.** ಹೊಡೆತ ; ಆಘಾತ : ಸತ್ವ ಸವೆಯದು . . . ತೆತ್ತ ಕೈ ಕಂಪಿಸದು ಮುಷ್ಟಿಯ ಹತ್ತುಗೆಗೆ ಮನ ರ್ಝೋಂಪಿಸದು ಮದವೆತ್ತಿ ಮೆಟ್ಟಿದರೊಬ್ಬರೊಬ್ಬರ ಮರ್ಮಘಾತದಲಿ (ಕುವ್ಯಾಸ. ೨-೧೧೧) **೧೭.** ನಂಟು ; ಮೊರೆ ; ಬಂಧುತ್ವ : ದೈತ್ಯರ ಮೊತ್ತ ಶಿಶುಪಾಲಾತ್ಮಜರು ಸಹಿತತ್ಯಧಿಕ ರಣಶೂರರೆನಿಸುವರವರಸಂಖ್ಯಾತ ಹತ್ತುಗೆಗೆ ವರದೃಷ್ಟಕೇತು ವರೋತ್ತಮರು ಸಹಿತವರ ಬಲ ಬಲುಮೃತ್ಯುವನು ಕೈಕೊಳ್ಳದವರಕ್ಷೋಣಿಯಿಹುದು (ಕೋಗಯ. ೨೦-೧೯). **೧೮.** ಮೇಲೆ ಬೀಳುವಿಕೆ; ಮುತ್ತುವಿಕೆ; ಆಕ್ರಮಿಸುವಿಕೆ: ಮುತ್ತಿತಾ ಬಲಜಲಧಿ ವಡಬನ ಮುತ್ತುವಂಬುಧಿಯಂತೆ ಬಳಿಕಾ ಹತ್ತುಗೆಯ ಹವಣಿನಲಿ ಹರಿಸುತನಿರ್ದನು (ತೊರಂಾ. ೫-೬-೮) ; ಬಿತ್ತರಿಸಲರಿದಾದಿವೀರರ ಹತ್ತುಗೆಯ ಹವಣುಗಳ ಸಂಗರವೆತ್ತ ನೋಡಲು ಕೊಲೆಗೆ ಮೇಲದು ಬಲುಹು (ತೊರಂಾ. ೬-೧೮-೧೧). [ಪತ್ತು[1] +-ಗೆ]

**ಪತ್ತುಗೆಗಾಱ** (ನಾ). ಸಮನಾದವನು ; ಅನುರೂಪ; ಹೊಂದಿಕೆಯಾಗುವಂತಹವನು : ತೆತ್ತಿಸಿ ನೋಡಲು ಕುವರಿಯ ರೂಹಿಂಗೆ ಪತ್ತುಗೆಗಾಱರಿಲ್ಲೆನುತೆ ಬತ್ತಿದ ಹರ್ಷಾಶ್ರುಗಳಿಂದೆ ಧರಣಿಗೆ ಹತ್ತಿದಳಾಕೆ ಬೇಗದಲಿ (ಮೋಹತ. ೨೯-೨೦). [ಪತ್ತುಗೆ+-ಕಾಱ]

**ಪತ್ತುಗೆಗುಂದು** (ಕ್ರಿ). ಸಂಬಂಧವನ್ನು ಕಳೆದುಕೊಳ್ಳು ; ಸಂಪರ್ಕವನ್ನು ಬಿಡು : ಪಗಲೆಂದುಂ ತಲೆಯೆತ್ತಲಣ್ಮೆನಸುಂ ಚಂದ್ರಂಗೆ ಕೂರ್ತಂತೆ ಪತ್ತುಗೆಗುಂದಳ್ ನಿಸೆಯುಪ್ಪುದುಂ ಪರಿದು ದುಗ್ಧಾಂಭೋಧಿಯೊಳ್ ಕೂಡುವಳ್ . . . ಕೌಮುದಿ (ಲೀಲಾವ. ೨-೫೨); ಕಡುಗೋರ್ಬಿ ಪರ್ಬಿದ ಮರ್ಬು ಮಿಗವಕ್ಕೆಗನೊಳಾದ ಪಗೆತನಮುಂ ಬಗೆಗೊಂಡು ತಜ್ಜನಕ ವನನಿಧಿಯಂ ಕನಲ್ದು ಸುತ್ತಮೊತ್ತರಿಸಿ ಮೊತ್ತಂಗೊಂಡು ಪತ್ತುಗೆಗುಂದದೊತ್ತಿ ಮುತ್ತಿದುದೆಂಬೊಪ್ಪಮನಪ್ಪುಕೆಯ್ದು (ರಾಜಶೇ. ೧-೧೦೨ ವ). [ಪತ್ತುಗೆ+ಕುಂದು[1]]

**ಪತ್ತುಗೆಗೆಡು** (ಕ್ರಿ). ಸಂಬಂಧ ತಪ್ಪು ; ಜೊತೆ ಕೆಡು : ಪತ್ತುಗೆಗೆಟ್ಟು ಮೊಂದುನುಡಿಗೊಂಬತನೆಂದೆರಡೆಂಟನೀಗಳಾನೆತ್ತಱವಂದಮೆಂಬ ತೆಱದಿರ್ದಪೆ (ಚಂದ್ರಪ್ರ. ೮-೭೯). [ಪತ್ತುಗೆ+ಕೆಡು[1]]

**ಪತ್ತುಗೆಗೊಳ್** (ಕ್ರಿ). ಹೊಂದಿಕೆಯಾಗು ; ಕೂಡಿಕೊಳ್ಳು ; ಸೇರಿಕೊಳ್ಳು : ಆವಗಂ ಮುದಂ ಜಗುಬದಿಭಂಗಳಾಂತ ಪೊರೆ ನಿಲ್ಲಳೆ ವಕ್ಷದ

ಲಕ್ಷ್ಮೀ ಕೂರ್ತು ಪತ್ತುಗೆಗೊಳೆ ತಳ್ತು ತೋಳೊಳಿಸೆದಲ್ ಧರಣೀವಧು ಪದ್ಮಭೂಪನಾ (ಪುಷ್ಪಪು. ೩-೪) ; ಧರೆಯಂ ಗಾಲಿಯುಸೆತ್ತಿ ವ[ಪ]ತ್ತುಗೆಗೊಳುತ್ತುಂ ತಾಗಿಸಲ್ ಲೋಕಮಂ ತುರಗಂಗಳ್ ಖುರಘಟ್ಟನೋಚ್ಚಳಿತ ಧೂಳೀಜಾಳದಿಂ ಪೊಟಲ್ . . ಭರದಿಂ ಬಂದಿದಿರಾಂತು ನಿಂದುವರ ದಂಗಳ್ (ಸುಜನೋ. ೧೨-೨೨೧) ; ಜಗದೇಕವೀರ ನರಪತಿ ಜಗದೀಶ್ವರನಂಶ ಮಕ್ಕುಮಲ್ಲದೊಡಿವನೊಳ್ ಪಗೆ ಪತ್ತುಗೆಗೊಂಡವರುಂ ಸೊಗವಾಳ್ವರೆ ದಿವ್ಯಭೋಗಭಾಗ್ಯೋದಯದೊಳ್ (ಅಪ್ರತಿ. ೫೭-೬).

[ಪತ್ತುಗೆ+ಕೊಳ್$_1$]

**ಪತ್ತುಗೆಗೊಳಿಸು** (ಕ್ರಿ). ೧. ಹೊಂದಿಸು ; ಕೂಡಿಸು ; ಸೇರಿಸು : ಅತ್ತಿಗೆ ನಾದಿನಿಯರೊಳಂತರಂಗವ ಪತ್ತುಗೆಗೊಳಿಸಿ ಬಾಳುವುದು (ಹದಿಬ. ೪-೨೧); ಆ ತನೂಜಾತರ್ಗೆ ಜಾತಕರ್ಮಮಂ ನೆಗೞ್ಚಿ . . . ಅನ್ವರ್ಥಂಗಳಾದ ನಲ್ಪೆಸರ್ಗಳನಿಟ್ಟು ಶಸ್ತ್ರಶಾಸ್ತ್ರವ್ಯುತ್ಪತ್ತಿಯಂ ಪತ್ತುಗೆಗೊಳಿಸಿ (ಚಕವಿ. ೨-೨೪). ೨. ಅಳವಡಿಸು ; ಜೋಡಿಸು : ಕತ್ತುರಿಯಿಂದೆ ಸಮ್ಮಾರ್ಜನೆಗೆಯ್ದು ಪೆರ್ಮುತ್ತುಗಳೊಡನೆ ಮಾಣಿಕವ ಪತ್ತುಗೆಗೊಳಿಸಿರ್ದ ದಯುರಂಗವಾಲಿಯು ಬಿತ್ತರಿಸಿದರು ತೀಕ್ಷಣದಿ (ನೋಹತ. ೨೧-೫).

[ಪತ್ತುಗೆಗೊಳ್+-ಇಸು$_3$]

**ಪತ್ತುಗೆವಿಡು** (ಕ್ರಿ). ಸಂಬಂಧವನ್ನು ಕಳೆದುಕೊಳ್ಳು ; ಬೇರ್ಪಡು; ಭಿನ್ನವಾಗು : ಸಂಪುಟಂ ಪತ್ತುಗೆವಿಟ್ಟೋರಂದದಿಂ ಸಿಂಪುಗಳುಗುೞೆ ಸಿಡಿಲ್ತಂದ ಮುಕ್ತಾಫಲಶ್ರೇಣಿಗಳಿಂದಂ ಪಶ್ಚಿಮಾಂಭೋಧಿಯ ಪುಳಿನಚಯಂ ಬೆಳ್ಪನಾಳ್ದುರ್ವಾಗಳ್ (ಕಾದಂಪೂ. ೧೪೨). [ಪತ್ತುಗೆ+ಬಿಡು$_1$]

**ಪತ್ತುಗೆವೆರಸು$_1$** (ಕ್ರಿ). ೧. ನಿಕಟಸಾಮೀಪ್ಯವನ್ನು ಪಡೆ ; ಸಂಬಂಧವನ್ನು ಹೊಂದು : ನಗೆಮೊಗದಿಂದ ಪೊಣ್ಮುವ ಸುಗಂಧದಿಂ ಘ್ರಾಣದಿಚ್ಛೆಯಂ ಸಲಿಸುವ ಪತ್ತುಗೆವೆರಸಿ ಬೆರಸಿಯೊಲಿಸುವ ನೆಗೞ್ತೆಯಿಂ ಮನವನೂನಸುಖಮಂ ಪಡೆಗುಂ (ಪಸಾರ. ೧೮೭). ೨. ಪ್ರೀತಿಯನ್ನುಗಳಿಸು ; ಆಪ್ತವಾಗು : ಅತ್ತೆ ನಾದಿನಿಯರೊಳಳುಕದೆ ಕಾದುವುನ್ಮತ್ತೆಯರೀ ಕೃತಿಗೇಳೆ ಉತ್ತಮಗುಣಗಳಿಂದೊಳಗುಗ್ಗೆದವರೊಳು ಪತ್ತುಗೆವೆರಸಿ ಬಾಳುವರು (ಹದಿಬ. ೧-೫೮).

[ಪತ್ತುಗೆ+ಬೆರಸು$_1$(<ಬೆರೆಯಿಸು)]

**ಪತ್ತುಗೆವೆರಸು$_2$** (ಅ). ಸಂಬಂಧವನ್ನು ಹೊಂದಿ; ಹೊಂದಿಕೆಯಿಂದ ಕೂಡಿ : ತಾಯ ಶಿಶುವಿನಂತೆ ಕಱುವಿನೆಳಗಂದಿಯಂತೆ ಲೋಭಿಯ ಪೊನ್ನಂತೆ ಪಂಚಪರಮೇಷ್ಠಿಗಳೊಳಪ್ಪ ಪತ್ತುಗೆವೆರಸು . . . ಪ್ರಭುಕೆಟ್ಟ ನಾಡಂತೆ ಸಂಸಾರದ ಶರೀರದ ಭೋಗದ ಮೇಲೆ ಬೇಸಱುಂ (ಧರ್ಮಾಮೃ. ೫-೧೨೫). [ಪತ್ತುಗೆ+ಬೆರಸು$_3$]

**ಪತ್ತುಗೆವೆಱು** (ಕ್ರಿ). ಸ್ನೇಹದಿಂದಿರು ; ಒಲಿದಿರು : ಆ ಕಾಂತೆಯೊಳಾ ಸಕಲಮಹೀಕಾಂತಂ ವಜ್ರಲೇಪದನುಬಂಧಮನಿತ್ತಾ ಕೃತಿಯಿಂ ಪತ್ತುಗೆವೆತ್ತೋಕುಳಿಯಾಡುವನನಂಗರಾಗಾಮೃತದೊಳ್ (ಮಲ್ಲಿಪು. ೩-೮೭).

[ಪತ್ತುಗೆ+ಪೆಱು$_1$]

**ಪತ್ತುಗೇಡು** (ನಾ). ನಂಬಿಕೆಯನ್ನು ಕಳೆದುಕೊಳ್ಳುವಿಕೆ.

ಪತ್ತುಗೇಡಾಗು = ನಂಬಿಕೆಯು ಹಾಳಾಗು : ಆ ಅಲಂಕಾರಗಳು ದೊರೆಯದಿದ್ದರೆ ಜನರಲ್ಲಿ ನನ್ನ ಪತ್ತುಗೇಡಾಗುವುದು (ಕಳ್ಳಕಾ. ೪೧). ಪತ್ತುಗೇಡು ಮಾಡು = ನಂಬಿಕೆಯನ್ನು ಹಾಳುಮಾಡು : ನಾನು ಹಲವು ಬಗೆಗಳಿಂದ ಅವನ ಪತ್ತುಗೇಡು ಮಾಡುವೆನು (ಕಮಲ. ೨೦).

[ಪತ್ತು$_5$+ಕೇಡು]

**ಪತ್ತುಗೊರಳ** (ನಾ). ಹತ್ತು ತಲೆಗಳನ್ನುಳ್ಳವನು ; ದಶಶಿರ ; "ರಾವಣ" (ಗಂಗಾಪು. ೧೯೬).

[ಪತ್ತು$_3$+ಕೊರಳು(<ಕೊರಲ್)+-ಅ$_7$]

**ಪತ್ತುಗೊಳ್** (ಕ್ರಿ). ೧. ಸೇರು ; ಕೂಡು : ಬಿತ್ತಿನ್ನದೆ ಬೇರೆನ್ನದ ನಿತ್ತುಂ ಭಾಗಂಗಳಿಂದೆಯುಂ ಕುತ್ತಗಳಂ ತುತ್ತುವ ಗಿಡುವವೊಲಕ್ಕುಂ ಪತ್ತುಗೊಳಲ್ಸಿರಿ ಪರೋಪಕಾರಿಗಳೆಡೆಯೊಳ್ (ನೀತಿಸಂ. II, ೧೭೭). ೨. ಹಿಡಿದುಕೊಳ್ಳು ; ವಶಪಡಿಸಿಕೊಳ್ಳು : ಆರೊಂದು ಹಯಮೆಂಬುದನಾರೈದು ಪೋಗದೆ ಪತ್ತುಗೊಳ್ವ ನೀಂ ಕಾಲುರಿಚನಕ್ಕುಂ, ಸಾಜಂ (ರಾಮಾಶ್ವ. ೮೬-೧೫). [ಪತ್ತು$_1$+ಕೊಳ್$_1$]

**ಪತ್ತುದಲೆಯ** (ನಾ). = ಪತ್ತುಗೊರಳ : ಪತ್ತುದಲೆಯನು ಕೀಚಕನು ಮನವಿತ್ತು ಪರವಧುವಿಂಗೆ ಬಾಳ್ವರೆ (ನಾಗಷ. ೧೮-೪೯).

[ಪತ್ತು$_3$+ತಲೆ$_1$+-ಅ$_7$]

**ಪತ್ತುವರಿಜ** (ನಾ). ಹತ್ತು ಅವತಾರಗಳನ್ನು ಎತ್ತಿದವನು ; ವಿಷ್ಣು : "ಎಲರುಣಿವಟಿಕ್ಕಗ ಪಾಜಿುಂಬಳಿಗೆಯ್ಕುಂ . . . ಹರಿಯೆಂದು ಪತ್ತುವರಿಜನೆನುತ್ತುಂ" (ಕವಿಕಂ. ೨೫). [ಪತ್ತು$_3$+ಪರಿಜು$_1$+-ಅ$_7$]

**ಪತ್ತುವಳಿ** (ನಾ). ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಳ್ಳುವಿಕೆ,—ಸ್ವಂತಕ್ಕೆ ಬಳಸಿಕೊಳ್ಳುವಿಕೆ,—ದಸ್ತುಮಾಡುವಿಕೆ; ಛಪಾವಣೆ: ಇದು ತಿಳಿದು ಪತ್ತುವಳಿ ಬಾಬತಿನಲ್ಲಿಯೂ ಬಲವಂತದಿಂದ ಬಿಟ್ಟಿ ಬೇಗಾರಿಯಲ್ಲಿ ಹೊಲ ಗದ್ದೆಗಳ ಮಾಡಿಸಿಕೊಂಡು ಯಿದ್ದಾಗ್ಯು ಸಹ . . . ಮಾಜಿ ಅಮಿಲಗೆ ಅವನ ಅಮಲ್‌ನಲ್ಲಿ ನಡೆದು ಇರುವ ವಿದ್ಯಮಾನಕ್ಕೆ ಮುಹಜರು ಬರೆದು ಕೊಡಬೇಕು(ಮುಹಾಪಂ.II,೫೯).

[ಪತ್ತು$_2$+-ವಳಿ$_1$]

**ಪತ್ತುವಿಡಿ** (ಕ್ರಿ). ದೃಢವಾಗಿ ಹಿಡಿದುಕೊಳ್ಳು ; ಅಂಟಿಕೊಂಡಿರು: ಗೊರವನ ಬೆಳ್ಗೊರಲೊಳಮರ್ದ ಹಾಲಾಹಲದ ಕರ್ವೆಳಗುವಱುಗಲ ಮಾಟಿಕೆಯಿಂ ಶಂಖಧವಳಕಂಠದೊಳ್ ಪತ್ತುವಿಡಿದೇಕಮುಖೀರುದ್ರಾಕ್ಷಮೊಂದು ಕೆಱಂಬೊಳೆಯೆ (ರಾಮಾಶ್ವ. ೪೦-೨೫). [ಪತ್ತು$_2$+ಪಿಡಿ$_1$]

**ಪತ್ತುವಿಡಿಸು** (ಕ್ರಿ). ಸಂಬಂಧವನ್ನು ತಪ್ಪಿಸು ; ಬೇರ್ಪಡಿಸು ; ಅಗಲಿಸು ; ದೂರ ಮಾಡು : ವನತರುಪತ್ರಂಗಳನೊಯ್ಯನೆ ನೆಲೆಯಿಂ ಪತ್ತುವಿಡಿಸಿ ಕಳಿಕೆಗಮುತ್ಪತ್ತಿನಿಮಿತ್ತಮಾಗಿ ಶಿಶಿರಮುಮಿನಿಸಿನಿಸನೆ ತನ್ನ ನೆಱನನಱಿಪಿದುದೀಗಳ್ (ಆದಿಪು. ೧೧-೪೯) ; ಎನಗಾದದೊಂದು ಪರಿಭವಮನಾರ್ಗೆ ದೂಱಿದಪೆನಾರ್ಗೆ ಪೇೞ್ದಪೆನಿದನಾಂ ನಿನಗುಸಿರ್ದನಂತರಂ ಸುಖದಿನೆನ್ನ ತನುವಿಂದೆ ಪತ್ತುವಿಡಿಸುವೆನಸುವಂ (ಕಾದಂಉ. ೨೯೮) ; ನಳಕೂಬರನೊಳ್ಕೂಡಿ ಸುಖಮಿರೆಂದಾಕೆಯ ದುಷ್ಪರಿಣಾಮುಮಂ ಪತ್ತುವಿಡಿಸಿ . . . ಮನ್ನಿಸಿ ಭಯಮಂ ಕಳೆದಿತ್ತಂ ಭೃತ್ಯಪದವಿಯಂ ದಶವದನಂ (ಪಂರಾಮಾ. ೧೦-೧೯೫ ವ) ; ಈತನ ಧನಮುಂ ಬುದ್ಧಿಯುಂ ವ್ಯಥೆಯಾಗದಂತೆನ್ನ ಬಲ್ಲ ಮಾರ್ಗದಿಂ ತಿಳಿಪಿ ಬೞಿಕ್ಕೀ ಧರ್ಮಮಂ ಪತ್ತುವಿಡಿಸಿ ಮದೀಯ ಧರ್ಮದೊಳ್ ಪತ್ತಿಸುವೆಂ (ಧರ್ಮಾಮೃ. ೧-೧೦೯). [ಪತ್ತುವಿಡು+-ಇಸು$_3$]

**ಪತ್ತುವಿಡು** (ಕ್ರಿ). ೧. ಸಂಬಂಧವನ್ನು ಬಿಡು,—ತೊರೆ,—ತ್ಯಜಿಸು : ಕುಲಜನುಮಲ್ಲಂ ನಣ್ಪಿನ ಬಲಮುಂ ತನಗಿಲ್ಲ ಕಣ್ಗಮೇಳಿದ ನಾರೊಳ್ ನೆಲಸಿರನೆಲ್ಲಿಯುಮ[ವನ]ಂ ಚಲವೆಂದುಂ ಪತ್ತುವಿಡದದೊಂದುಂಟು ಗುಣಂ (ಕವಿರಾ. ೩-೧೭೨) ; ಅಂತು ಸತ್ತುಂ ನೆಲನಂ ಪತ್ತುವಿಡೆನೆಂಬಂತೆ ನೆಲನಂ ಪತ್ತಿ ಮೂರ್ಛಾಗತನಾಗಿರ್ದ ಕುರುಕುಳಚೂಡಾಮಣಿಯನೇನುಂ ಮಾಣದೆ ಕಿವಿಮ್ಮಾರವೈರಿ ಮುಟ್ಟಿವಂದಾಗಳ್ (ಪಂಪಭಾ. ೧೩-೯೭ ವ) ; ಸಿಂಹಶರಭಶಾರ್ದೂಲವ್ಯಾಳಮೃಗಮಿಥುನಂಗಳ್ ಕಾಲಸ್ವಭಾವದಿಂ ಋಜುಸ್ವಭಾವಮಂ ಪತ್ತುವಿಟ್ಟು ವಿಷಮಸ್ವಭಾವಮನಪ್ಪುಕೆಯ್ವುದುಂ (ಪಂರಾಮಾ. ೧-೭೧ ವ) ; ಒಂದು ತಿಂಗಳು ಪ್ರಾಯೋಪಗಮನವಿಧಿಯಿಂದ ದೇಹವ ಪತ್ತುವಿಟ್ಟು ಒಂದುಕ್ಷಣದೊಳು ಸರ್ವಾರ್ಥಸಿದ್ಧಿಯೊಳಹಮಿಂದ್ರರಾಗಿರ್ದರ್ (ಶಾಂತೀಚ. ೫-೧೪೮).

೨. ಬೇರ್ಪಡು ; ಬೇರೆಯಾಗು ; ದೂರವಾಗು ; ಅಗಲು : ಶರಪಂಜರದೊಳೊಱಗಿಯುಂ ಮೊಡಲಿಂ ಪತ್ತುವಿಟ್ಟು ಪೋಪ ಜೀವಮಂ ಪೋಗಲೀಯದೆ ಸ್ವಚ್ಛಂದಮಿಬ್ಬುತ್ತವಪ್ಪುದಱಿಂದುತ್ತರಾಯಣಂ ಬರ್ಪನ್ನ ವಿೞರಿಸಿದಂ (ಪಂಪಭಾ. ೧೧-೪೭ ಪ) ; ಜಾತಿಜರಾಮರಣಾನಿಷ್ಟಸಂಯೋಗ ಮಿಷ್ಟವಿಯೋಗ ಸಹಜಸಮುದ್ಭವಶಾರೀರಮಾನಸಾಗಂತುಕದುಃಖದಿಂ ಪತ್ತುವಿಟ್ಟನಂತಚತುಷ್ಟಯಮಂ ಪೊರ್ದಲೆಂದು ತಪಂಬಟ್ಟಂ (ಅಜಿಪು. ೧೦-೪ ಪ) ; ಮತ್ತಹಸ್ತಿಗಳ ಮಸ್ತಕದಿಂ ಬಿದಿರಿಂ ಫಣೀಂದ್ರೋತ್ತಮಾಂಗ ದಿನಗುರ್ವಿಪ ಪಂದಿಯ ಕೋಟ್ಕಳಿಂ ಪತ್ತುವಿಟ್ಟಗನಿಕುಂಜದೊಳೊಕ್ಕಳ ಮುಂತ್ತನಾಯುತ್ತುಮಿರ್ಪ ಶಬರಪ್ರಿಯಕಾಮಿನಿಯರ್ಕಳಂ (ಕಾವ್ಯಾವ. ೧೯೯) ; ಒದೆದದ್ರಿಕ್ಷಿತಿಸಂಧಿ ಪತ್ತುವಿಡೆ ಭೈಭೈಯೆಂಬಿನಂ ಕಿಬ್ಬಿತ್ತು (ಶಮದ. ೫೩ ಪ್ರಯೋ). ೩. ಇಲ್ಲವಾಗು ; ಮರೆಯಾಗು; ಕಾಣದಾಗು: ಆಗಳ್ ತನ್ನ ರಾಗಮಂ ರಾಗಿಗಳ್ಗೆಲ್ಲಂ ಪಚ್ಚುಕೊಟ್ಟಂತೆ ಕೆಂಪು ಪತ್ತುವಿಟ್ಟಾಗಳ್ (ಪಂಪಭಾ. ೪-೫೦ ಪ). ೪. ನಿವಾರಣೆಯಾಗು ; ಪರಿಹಾರವಾಗು : ತಪದೊಳ್ ನಿಂದುಂ ನಿನ್ನ ನೆಲದೊಳ್ ನಿಂದೆವೆಂಬ ಮಾನಕಷಾಯಮುವರ್ಗಿನ್ನುಂ ಪತ್ತುವಿಟ್ಟುದಲ್ತದಱಿಂ ಕೇವಲಜ್ಞಾನೋತ್ಪತ್ತಿಯಾಗದಿರ್ದುದು (ಆದಿಪು. ೧೪-೧೪೩ ಪ) ; ಪಲವು ತೆಱದಿಂ ಸಂಜೀವಕನೊಳಾದ ಭಯಂ ಪತ್ತುವಿಡೆ ಸಂತಸಂಬಡೆ ನುಡಿದೊಡಂಗೊಂಡು ಬಂದು (ಪಂಚತಂ. ೫೭-೩) ; ಬೆಸಸಿಮಿದನೆನ್ನ ಮನದೊಂದು ಸಂಶಯಂ ಪತ್ತುವಿಡುವಿನಂ (ಸುಕುಮಾ. ೫-೭) ; ಆ ಕನ್ಯಾರತ್ನದ ಕರಸ್ಪರ್ಶನದಿಂ ಪವಿತ್ರಸುರಭಿಸಲಿಲಸೇಚನದಿಂ ಪತ್ತುವಿಡೆ ಮೂರ್ಛೆ (ಪಂರಾಮಾ.೧೪-೭೦); ಕೆಡುವ ಭಂಡದಂತೆ ಮಾಱುವೋಗದು ಪೇನಂತೆ ಪತ್ತುವಿಡದು ಬಣಗಿನಂತೆ ನೇರಿತಲ್ಲದು (ಧರ್ಮಾಮೃ. ೪-೧೭೫). ೫. ಕಳೆದುಕೊಳ್ಳು ; ನೀಗಿಕೊಳ್ಳು : ಧೈರ್ಯಮಂ ಪತ್ತುವಿಟ್ಟತಿಪ್ರಲಾಪಂಗೆಯ್ವ ಲಲಿತಾಂಗದೇವನಂ ಸಾಮಾನಿಕದೇವರ್ಕದೆವಂದು . . . ಎನೆ (ಆದಿಪು. ೩-೫ ಪ) ; ಅರಿಷಡ್ವರ್ಗಂ ಕಾಡುವಂತುಗಿಬಗಿ ಮಾಡಿ ಕಾಡುವಱುವರ ಕಾಟಕ್ಕಮಲಸದೆಯುಂ ಧೈರ್ಯಮಂ ಪತ್ತುವಿಡದೆಯುಂ ಇರ್ದ (ಶಾಂತಿಪು. ೪-೭೭ಪ). ೬. (ಬಾಲ್ಯ ಮೊದಲಾದುವು) ಮುಗಿ ; ಕಳೆದುಹೋಗು : ನಿಜಜನನೀಜನಕರ್ . . . ಪುತ್ರನಿಂದಗ್ಗಳಮಪ್ಪ ಪರಮಪ್ರೀತಿಯಿಂ ನಡಪುತ್ತಮಿರೆ ಕೆಲವು ದಿವಸದೊಳವಿದಿತಸ್ನೇಹಶೋಕಾಯಾಸಮಪ್ಪ ಶೈಶವಂ ಪತ್ತುವಿಡುವುದುಂ (ಕಾದಂಪೂ. ೭೧೮). ೭. ಅಗಲಿಸು ; ಬೇರ್ಪಡಿಸು ; ದೂರಮಾಡು : ತನಯರಿರ್ವರ ವಾರ್ತೆಯನತ್ತ ಕೇಳ್ವುದುಂ ಜೀವಮನಂತೆ ಪತ್ತುವಿಡುಗುಂ ತನುವಿಂದದಱಿಂದವಿಗಳ್ . . . ಸಂತಯಿಸು ಪೋಗಿ ಮನೋಀಶಮೆಯಂ (ಕಾದಂಉ. ೬೫೮). ೯. ನಿವಾರಿಸು ; ಹೋಗಲಾಡಿಸು ; ಪರಿಹರಿಸು : ಚಕ್ರಿ ಚಕ್ರಿಕಾವರ್ತಿಯಪ್ಪುದಱಿಂದಾ ವನಾಂತರಾಳಕ್ಕೆ ರ್ವನೆ ಬಂದು ಮಾಧವೀಮಂಟಪಮಂ ಪೊಕ್ಕು ಆವರಿರ್ವರ ನಾಣುಮಂ ನಡುಕಮಂ ಪತ್ತುವಿಟ್ಟು ನುಡಿದು (ಪಂಪಭಾ. ೫-೧೯ ಪ). ೧೦. (ಬಾಲ್ಯ ಮೊದಲಾದುವನ್ನು) ಮುಗಿಸು ; ಪೂರೈಸು; ಕಳೆ : ತತ್ಕುಮಾರನಂ ಕೈಕೊಂಡು ಬಾಲಜನೋಚಿತಕ್ರಿಯೆಗಳಂ ಮಾಡಿ ಜನ್ಮಾನುರೂಪಮಾಗೆ ಪುಂಡರೀಕನೆಂದು ಪೆಸರನಿಟ್ಟು ಶೈಶವಮಂ ಪತ್ತುವಿಡಲೊಡಮಖಿಳವಿದ್ಯಾಕಲಾಪದೊಳ್ ಪರಿಣತನಂ ಮಾಡಿ (ಕಾದಂಪೂ. ೭೬೫) ; ಪತ್ತುವಿಟ್ಟನಣಂ ಶೈಶವಮಂ ಸಮುಜ್ವಳನವಿದ್ಯಾಹೃದ್ಯಪೀಯೂಷಸೇವನೆಗೀಗಳ್ ನೆಱೆ ಯೋಗ್ಯಮಾದನೆಸೆವೀ ಕಂದರ್ಪದೇವಂ ದಲ್ (ಕುಸುಮಾ. ೭-೨೫) ; ಪರ್ವ್ಯತ್ಯಯ್ಯನೆಂಬ ನಾಮಮಂ ತಳೆದು ಶಯಿಶವಲೀಲೆಯಂ ಪತ್ತುವಿಟ್ಟು ಸಕಲಪ್ರಪಂಚತೆಯಂ ಲಘುತರಂ ಮಾಡಿ ತಾಂ ಗುರುತೆವೆತ್ತುದಱಿಂ (ಎಕ. XV, ಹೊಳೆನ. ೧೧೨-೧೪ ; 1282) ; ದಿನದಿನದೊಳ್ ತತ್ಕುಮಾರಿಯುಂ ನಡೆಗಲ್ತು ತೊದಳ್ ಪಿಂಗಿ ಶೈಶವಮಂ ಪತ್ತುವಿಟ್ಟು ಬೆಳೆದಿರ್ದಳ್ (ತ್ರಿಷವಿ. ೩೫-೫ ಪ). ೧೧. ನಿಲ್ಲಿಸು ; ನೆಲೆಗೊಳಿಸು , ಸ್ಥಿರಗೊಳಿಸು : ಶ್ರೀಪರಮಾತ್ಮಚಿಂತೆಯೊಳೆ ಚಿತ್ತಮನಾಗಳೆ ಪತ್ತುವಿಟ್ಟನನ್ನಾಸ್ಪದಸೌಖ್ಯಮಂ ಪಡೆವ ಪಣ್ಬುಪದಂಗಳನೋದುತರ್ತ್ಹಿಯಿಂ (ಎಕ. VIII, ನಗರ. ೪೪-೧೦ ; 1255). [ಪತ್ತು$_2$ + ಬಿಡು$_1$]

**ಪತ್ತೂರ** (ನಾ). ಒಂದು ಬಗೆಯ ಮರ ; ಕೆಂಪುಚಂದನ : "ಪತಂಗಂ-ಪತ್ತೂರ" (ಓಷಧಿ. ೯೧). [ಸಂ.]

**ಪತ್ತೆ$_1$**, ಹತ್ತೆ$_2$ (ಅ). ಸಮೀಪಕ್ಕೆ ; ಹತ್ತಿರಕ್ಕೆ ; ಬಳಿಗೆ : 'ಪತ್ತೆ ಸಾರ್' ಪರಾ. **ಹತ್ತೆ$_2$** : ಇತ್ತ ಬಾರಯ್ಯಾ ಇತ್ತ ಬಾರಯ್ಯಾ ಎಂದು ಭಕ್ತರೆಲ್ಲರೂ ಕೂರ್ತು ಹತ್ತೆ ಕರೆಯುತಿರೆ (ಬಸವ. ೨೪೫) ; ಹಾಱುವ ಹಂಸನ ಹತ್ತೆ ಕರೆವುದೊಂದು ಚಂದಮಾವು (ತಿಪನೀ. ೧೯೪-೯೭೨). 'ಹತ್ತೆಸಾರ್' ಪರಾ. [<ಪತು$_2$]

**ಪತ್ತೆ$_2$** (ನಾ). ೧. ಗುರುತು ; ಸುಳಿವು ; ಚಿಹ್ನೆ ; ಮಾಹಿತಿ : ಹದಿನೈದು ದಿನವಾದರೂ ಅವರ ಪತ್ತೆಯೇ ಇಲ್ಲ (ಸ್ಮೃತಿಚಿ. ೫೮) ; ಆ ಮಾಸ್ತರರ ತಮ್ಮ ಶ್ರೀಪಾದನ ಪತ್ತೆಯೇ ಇಲ್ಲ ! (ಕನಕ. ೩೦) ; ಏನೇ ಆಗಲಿ, ತನ್ನ ನಿಜವಾದ ಪತ್ತೇನ ಬಿಟ್ಟುಕೊಡಬಾರದು (ವೀರಂಗೋ.೮) ; ಬಹಳ ಸೂಕ್ಷ್ಮವಾಗಿ ನೋಡದಿದ್ದರೆ ಕೋಟನಲ್ಲಿ ಹೊಲಿದ ಪತ್ತೆ ಕಾಣಿಸಲಾರದು (ಭಾರತಿ. ೧೧೮). ೨. ವಿಳಾಸ ; ಅಡ್ರೆಸ್ಸು : ಎಲ್ಲ ಸುದ್ದಿ ತಿಳಿಸಿ ನೀ ಈವರೆಗೆ ಮೂರು ನಾಲ್ಕು ಪತ್ರ ಬರೆದೆ. ಇಲ್ಲಿಯ ನನ್ನ ಪತ್ತೆಗೆ ತಡವಾಗಿ ಆದರೂ ಅವೆಲ್ಲ ಮುಟ್ಟಿದುವು (ಅನ್ನ. ೪೫) ; ನಾನು ಒಬ್ಬರ ಪತ್ತೆ ಕೇಳಲು ಅಲ್ಲಿ ಮನೆಯೊಂವರ ಒಳಗೆ ಹೋದೆ (ಕೊಂದಯಾ. ೫೩).

**ಪತ್ತೆ ಕೊಡು** = ವಿಳಾಸವನ್ನು ಕೊಡು : ಪ್ರಭುರಾಯರು ಡ್ರಾಯಿವರನನ್ನು ತಮ್ಮ ಮನೆಗೆ ಕಳಿಸಿಕೊಡಲು ಹೇಳಿ, ತಮ್ಮ ಪತ್ತೆ ಕೊಟ್ಟು ಹಿಂತಿರುಗಿ . . . ಹೋದರು (ಕೊಂದಯಾ. ೫೨) ; ಸೆಟ್ಟರೆಂದರೆ ನಿಮ್ಮೂರ ಸೆಟ್ಟರಲ್ಲ . . . ಎಂದು ತಿಳಿಹೇಳಿ ಅವರ ಪತ್ತೆ ಕೊಟ್ಟರು (ಹುಚ್ಚುಹು. ೩೩). **ಪತ್ತೆ ಮಾಡು** = ಗೊತ್ತು ಹಚ್ಚು ; ಶೋಧಿಸು ; ಕಂಡುಹಿಡಿ; ತಲಾಶು ಮಾಡು : ಇನ್ನು ಯಾರಿಷರೊ ಅವರನಾದರು ಪತ್ತೆಮಾಡಿರಿ ಜವದಿ (ಯಚೋರ. ೮೨) ; ನಾನು ಆತನನ್ನು ಪತ್ತೆ ಮಾಡಿ ಧರ್ಮಸ್ಥಾನದಲ್ಲಿ ಶಿಕ್ಷೆಗೆ ಗುರಿಮಾಡುವೆನು (ಪಿಶಾಪ. ೬) ; ಸದಾಶಿವರಾಯರು ಕಳ್ಳತನವನ್ನು ಪತ್ತೆ ಮಾಡುವಾಗ ಅತ್ಯಂತ ಕ್ರೂರವಾಗಿ ವರ್ತಿಸುತ್ತಿದ್ದರು (ರಂಗಗೋ. ೨೨). **ಪತ್ತೆಯಾಗು** = ಗುರುತು ಸಿಕ್ಕು; ಶೋಧವಾಗು ; ಕಂಡುಹಿಡಿಯಲ್ಪಡು ; ಗೊತ್ತಾಗು : ಯಾರಿಗೂ ಪತ್ತೆಯಾಗದಷ್ಟು ದೂರ, ಬಹುದೂರ ಹೋಗಬೇಕೆಂಬ ಹಂಬಲವೇ ಆ ಯಾಚನೆಯಲ್ಲಿತ್ತು (ಹೊಸಕ್ಷಿ. ೩೩) ; ನಿಮ್ಮ ಕಳವಿನ ಮಾಲು ಪತ್ತೆಯಾಗಿದೆ (ಭಾರತಿ.೩೬) ; ಬೇಟೆಯಾಗದಿದ್ದರೆ ಊರಿಗೆ ಆಳುಗಳು ಬಂದದ್ದೇ ಪತ್ತೆಯಾಗುತ್ತಿರಲಿಲ್ಲ (ಹುಟ್ಟಹ. ೨೧). **ಪತ್ತೆ ಹಚ್ಚು** = (ರಹಸ್ಯ ವಿಚಾರಗಳನ್ನು) ಕಂಡುಹಿಡಿ; — ಶೋಧಿಸು : ಆಡುನುಡಿಯನ್ನೂ ಅದರ ಸ್ವರೂಪ—ಉಚ್ಚಾರಗಳನ್ನೂ ಪತ್ತೆ ಹಚ್ಚಲು ಇರುವ ಆಧಾರಗಳೇನು ? (ದ್ರಾವಿವಿ. ೭೬) ; ಸುಧಾಕರನು ಗುಪ್ತಚಾರನಾಗಿ ಮಾರುವೇಷದಿಂದ ನಮ್ಮ ಚಲನವಲನಗಳನ್ನು ಪತ್ತೆ ಹಚ್ಚಲು ಈಗಾಗಲೇ ತಿರುಗಾಡುತ್ತಿರುವನು (ದೇಶಧು. ೯೪) ; ಒಂದು ದಿನ ಮುನಿಯು . . . ದೈವ ತೋರಿಸಿದ ಹೆಣ್ಣನ್ನು ಪತ್ತೆ ಹಚ್ಚಿ, ಮಧ್ಯಸ್ತಗಾರರನ್ನು ಬಿಟ್ಟು ಚೆನ್ನಿಯನ್ನು ಮದುವೆ ಮಾಡಿಕೊಂಡು ಬಂದೇಬಿಟ್ಟ (ನಡೆದಾ. II, ೧೦೧೪). **ಪತ್ತೆ ಹತ್ತಿಸು** = ಪತ್ತೆ ಹಚ್ಚು : ಅದರಲ್ಲಿ ಯಾರಾದರೂ ಬಂದು ಅರೆ ಔತುಕೊಂಡು ಇದ್ದರೆ, ಪತ್ತೆ ಹತ್ತಿಸಿ ಹಿಡಿದು, ಅವರನ್ನು ಕಡುದು ಹಾಕುವದು (ರಾಜೇಂದ್ರ. ೨೪೫). [←ಹಿಂ. ಪತಾ ; ಮರಾ. ಪತ್ತಾ]

**ಪತ್ತೆದಾರ** (ನಾ). ರಹಸ್ಯವಾದ ಕೊಲೆ, ಕಳ್ಳತನ ಮೊದಲಾದುವನ್ನು ಗೊತ್ತುಹಚ್ಚುವವನು,—ಕಂಡುಹಿಡಿಯುವವನು : ದಿವಾ ನಿಶಿಯರು ಇದನ್ನು ಬಗೆಹರಿಸುವುದಕ್ಕೆ ಪತ್ತೆದಾರನನ್ನು ಕರೆಸಬೇಕೆಂದು ಸಲಹೆಮಾಡಿದರು (ಬಂಕಿಮು. ೨೭೯); ಈ ನಾಯಕನ ಪೇಟೆಯಲ್ಲಿಯೇ ಲೋಕಪ್ರಸಿದ್ಧನಾದ ಅರಿಂದಮನೆಂಬ ಪತ್ತೇದಾರನು ವಾಸವಾಗಿರುತ್ತಿದ್ದನು (ಪಿಶಾಪ. ೧), ಹರವಲ್ಲಭರಾಯನು ಇಂದು ಪತ್ತೇದಾರನಾಗಿ ಬಂದಿದ್ದಾನೆ (ದೇವೀಚೌ. ೧೪೨). [ಪತ್ತೆ$_2$+-ದಾರ್$_4$]

**ಪತ್ತೆದಾರಿ** (ನಾ). ರಹಸ್ಯವಾದ ಕೊಲೆ, ಕಳ್ಳತನ ಮೊದಲಾದುವನ್ನು ಗೊತ್ತುಹಚ್ಚುವಿಕೆ,— ಕಂಡುಹಿಡಿಯುವಿಕೆ,—ಪತ್ತೆಹಚ್ಚುವಿಕೆ : ಕೆಲವು ಕಾಲ ತಾಲ್ಲೂಕು ಪೋಲೀಸಿನ ಮುಖ್ಯಾಧಿಕಾರಿಯಾಗಿ ನಾನೇ ಅನೇಕ ಘಟನೆಗಳನ್ನು ಸ್ವತಃ ಪರಿಶೋಧಿಸಿ ಪತ್ತೆದಾರಿ ನಡೆಸಿದ್ದೇನೆ (ನಡೆವಾ. II, ೬೫೦); ಇಂತಹ ಒಬ್ಬಿಬ್ಬ ಕಕ್ಷಿಗಾರರು ಇರುವುದಾದರೆ, ನನ್ನ ಪತ್ತೇದಾರಿಯ ಕೆಲಸಕ್ಕೆ ಇಂದೇ ಜಲಾಂಜಲಿಯನ್ನು ಕೊಡಬೇಕಾದೀತು (ಪಿಶಾಪ. ೩). [<ಪತ್ತೆದಾರ]

**ಪತ್ತೆಪಾಯ್** (ಕ್ರಿ). ಸಮೀಪಕ್ಕೆ ಹೋಗು ; ಸಮೀಪಿಸು ; ಹತ್ತಿರಕ್ಕೆ ಬರು : ಕತ್ತಲೆಯೆಂಬ ಕಾರ್ಮುಗಿಲೊಳಗಣಿಂ ಪೊಳೆದು ಪಾಯ್ವೆಳಮಿಂಚಿನಂತೆ ಮೇಲ್ವಾಯ್ದು ಲತಾವೇಷ್ಟಿತದೊಳ್ ಪರಿಣತೆಯಪ್ಪುದಱಿಂ ಪತ್ತೆಪಾಯ್ವಂತೆ ಮುರಿದಡರ್ದು ಪತ್ತಿ . . . ಅಡಸಿ ಪಿಡಿದಾಗಳ್ (ಲೀಲಾವ. ೧೪-೧೦೫ ವ). [ಪತ್ತೆ$_1$+ಪಾಯ್$_1$]

**ಪತ್ತೆಪೊಯ್** 'ಪತ್ತೆವೊಯ್' ನೋ.

**ಪತ್ತೆವಿಡಿ,** ಹತ್ತೆವಿಡಿ, ಹತ್ತೆಹಿಡಿ (ಕ್ರಿ). ೧. ಬಿಗಿಯಾಗಿ ಹಿಡಿ ; ಒತ್ತಿಹಿಡಿ ; ಭದ್ರವಾಗಿ ಹಿಡಿದುಕೊಳ್ಳು : ಬಾಲೆಯೊರ್ವಳ್ . . . ಅರೆಜಾಱಿದ ಮೇಲುದುಮಂ ಸಮಂ ನೇವರಿಸುತುಂ ಪತ್ತೆವಿಡಿದುಡೆನೇಣನೊತ್ತು ಸೇರಿಸುತುಂ . . . ಪೊಂಬಟ್ಟಲನೆತ್ತಿ ಬರುತುಮಿರ್ದಳ್ (ರಾಮಾಶ್ವ. ೪೮-೨೭). **ಹತ್ತೆವಿಡಿ : ೨.** ಸಮೀಪದಲ್ಲಿರು ; ಪಕ್ಕದಲ್ಲಿರು ; ಜೊತೆಯಲ್ಲಿರು : ಚಿತ್ತವೃತ್ತಿಯನಱಿದು ಹತ್ತೆವಿಡಿದೋಲಯಿಸು (ಸರ್ವಜ್ಞ. ೭೬೧). **ಹತ್ತೆಹಿಡಿ : ೨.** ಏಕಾದಶಾಕ್ಷೋಹಿಣಿಯ ವಲ್ಲಭನ ಹತ್ತೆಹಿಡಿದೋಲಗಿಸುವರು ವರಮತ್ತಕಾಶಿನಿಯರುಗಳೀಗಳು ಸುತ್ತಮುತ್ತಿತು ಘೂಕ ವಾಯಸ ಜಂಬುಕವ್ರಾತ (ಕುಮಾರ.ಗ. ೧೨-೧೬). [ಪತ್ತೆ$_1$ + ಪಿಡಿ$_1$]

**ಪತ್ತೆವೊಯ್,** ಪತ್ತೆಪೊಯ್ (ಕ್ರಿ). ಒಂದಾಗಿಸು; ಬೆಸೆ : ಗಳಕಳರವಮಂ ಕೆದಱಿ ಬಲ್ಪಿನಿಂ ಬಾಯಿಂ ಬಾಯಂ ಬಿಡಿಸಿ ಬಾಯ್ಗೆ ಪಾಯ್ದು ಪತ್ತೆವೊಯ್ದಂತೆ ಪತ್ತಿ ತಬ್ಬಿ ತೋಳ ತೊಡಂಕಂ ತಪ್ಪಿಸಿ (ಲೀಲಾವ. ೭-೫೫ ವ). **ಪತ್ತೆಪೊಯ್ :** ಅವರ ಮನಮನಱಿದು ನುಡಿವ ನುಡಿಗಂ . . . ಪೊಬ್ಬಿಱಿದು ಸಾರ್ವ ಸಾರ್ಕೆಗಂ ಮನಂಬೆಚ್ಚು ಪತ್ತೆಪೊಯ್ದಂತಾಗಿರೆ (ಶಾಂತಿಪು.೩-೫೯). [ಪತ್ತೆ$_1$ + ಪೊಯ್$_2$]

**ಪತ್ತೆಸಾರ್,** ಹತ್ತೆಸಾರ್, ಹತ್ತೆಸಾರು (ಕ್ರಿ). ಸಮೀಪಿಸು ; ಸನಿಹಕ್ಕೆ ಸೇರು ; ಹತ್ತಿರಕ್ಕೆ ಬರು : ಪ್ರಾಣಪರಿತ್ಯಾಗಕ್ಕೆ ಪೂಣಿಸಿ ಪತ್ತೆಸಾರ್ದು ಸುರಿವ ಬಾಷ್ಪಬಿಂದುಗಳಿಂ ಕೋದೆಱಂಕೆಯ ಮೊದಲು ಗಳುಮಂ ಕಂಠದ ತುಪ್ಪುಟುಮಂ ನಾಂದುತ್ತುಮಿರ್ದ ನವವಿಪಂಚಿಯುಮಂ . . . ಇಂತೆಂದಳ್ (ಲೀಲಾವ. ೧೪-೧೨೦ ವ); ಅಂತಿರ್ದಿರವಂ ಕಂಡು ಕಳಭಾಷಿಣಿ ಪತ್ತೆಸಾರ್ದು . . . ನುಡಿಸಿದಳ್ (ಕುಸುಮಾ. ೧೩-೭೯ ವ) ; ಆ ಸಮಯದೊಳಾ ಮಹಾಸೇನಮಹಾರಾಜಂ . . . ನಿಜತಾಂಬೂಲಿಕ ನೊರ್ವಂಗೂಡಿ ಕರುಮಾಡಮಂ ಪತ್ತೆಸಾರ್ದು ನಿಲ್ವುದುಂ (ಬಾಳವು. ೨-೬೪ ವ) ; ಬಿಸುಸುಯ್ದು ಬಟಲ್ದು ಬೇವಸಂಗೊಳುತಿರೆ ಪತ್ತೆಸಾರ್ದ ನರಸಂ ಸರಸಂ ಮಿಗೆಯೆಂದಿನಂದದಿಂ (ಚಿಕವಿ. ೩-೨೮). **ಹತ್ತೆಸಾರ್ :** ಗಿರಿಸುತೆ ಬಂದು ಕಂಡು ಬೆಱಗಾಗಿ ಕೃಪಾಕರಚಿತ್ತೆ ಹತ್ತೆಸಾರ್ದು ರತಿಯ ಮೆಯ್ಯುಮಂ ಮೊಗಮುಮಂ ತಡವುತ್ತಿರೆ (೧೨ಕ. ೮-೭೪) ; ಹಲ್ಲಂ ಕಿರಿದರಂ ಕೊಲ್ಲದೆ ಬಿಟ್ಟು ಹುತ್ತವನಡರ್ದರಂ ಹತ್ತೆಸಾರದೆ . . . ಮಾರ್ಜಾಂತರಂ ತಾಱುತಟ್ಟಿಪ್ಪಿನಂ ಮಾಡಿ (ದಶಕು. ೫-೪೪ ವ) ; ನಂದಿನಾಥನ ಹತ್ತೆಸಾರ್ದಿರೆ ಮುಂದೆಯಾತಂ ತನ್ನ ಮನದೊಳಗೊಂದಿದೆಮ್ಮಂ ಕಂಡು ಸಂಭ್ರಮವೆತ್ತಿ . . . ದಂಡಪ್ರಣಾಮವನಿಕ್ಕಿ ವಂದಿಸುತ (ಬಸವು. ೨-೨೧) ; ವಿಪ್ರರೆಲ್ಲರಜಿಸುತ್ತಾ ಮಹಾಂತನೆನಿಸುವ ಸಿದ್ಧಲಿಂಗೇಶನಿರ್ಪ ಮಠನಂ ಕಂಡು ಹತ್ತೆಸಾರ್ದು . . . ಎಱಗಲು (ಸಿದ್ಧೇಶ್ವ. ೪-೪೦). **ಹತ್ತೆಸಾರು :** ಹತ್ತೆಸಾರಿದ ಮೃಗವ ತಾನೆಚ್ಚದೆ ನಾರಿ ಹಱಿದು ಬಿಲ್ಲು ಮುಱಿದು ಹುಲ್ಲೆ ಸತ್ತಿತ್ತು (ಅವಚಂ. ೧೪೫-೬೬೨) ; ಎತ್ತಲೀಯದೆ ತಲೆ ಕೈಗಳ ಬಿಲ್ಲವರೊತ್ತೊತ್ತೆಯಿಂದಾರ್ದಿಸುತ ಹತ್ತೆ[ಪಾಠಾಂ.ತ್ತ, ತ್ತಿ] ಸಾರಿದರು ಹತ್ತಿದರು ಕೋಟೆಯನು (ಕುರಾಸಾಂ. ೧೦-೩೩) ; ಸುತ್ತ ನೋಡುವಳೊಮ್ಮೆ ನೂಪುರವಲುಗದಂತೆ ಹತ್ತೆ ಸಾರುವಳೊಮ್ಮೆ (ಜೈಮಿಭಾ. ೩೦-೨೩). [ಪತ್ತೆ$_1$ + ಸಾರ್]

**ಪತ್ತೇವಮಾರಿ** 'ಫತ್ತೆಮಾರಿ' ನೋ.

**ಪತ್ತೊಂದಿ** (ನಾ). ಹತ್ತರಲ್ಲಿ ಒಂದು ಭಾಗ ; ಹತ್ತನೆಯ ಒಂದು ಭಾಗ ; ದಶಮಾಂಶ : ಭಟ್ಟಗ್ರಿಗೀ ಗಟ್ಟಿ ಒಡ್ಡಲಿ ಆ ಪತ್ತೊನ್ದಿ ವಿಟ್ಟಾರ್ (ಮೈಆರಿ. ೧೯೩೬, ೧೬-೧೬ ; ಸು. 450) ; ಅವಟಿಕೊಳಗಯ್ಗಣ್ಣಗಮ್ಮಣ್ಣುವ್ವತ್ತೊನ್ದಿಯನಿಕ್ಕ ಉಱ್ಪೊ ಉಟಿದ ಮೂವತ್ತುಗಳೊಳಮ್ಪುದುವಿನೊಳೆ ಪತ್ತೊನ್ದಿಯನಿಕ್ಕ ಊರ್ಗ್ಗೆ ಅಳವಿಯನಿಕ್ಕ ಉಱ್ಪೊ (ಎಕ. III, ಮಂಡ್ಯ. ೧೪-೭ ; 907) ; ಕಿಱುಪೆನ್ನಿರ್ವ್ವರ್ಕ್ಕ ಮ್ಪುನ್ಪುಲಮೆಲ್ಲ ಪತ್ತೊನ್ದಿ ವಿ× (ಎಕ. XIV, ತಿರುಮ. ೨೫೨-೫ ; ?) ; ಪತ್ತೊನ್ದಿ – ಹತ್ತರಲ್ಲೊಂದು ಭಾಗವೆಂಬ ಭಿನ್ನಾಂಶವನ್ನು ಈ ಪದವು ತೋರಿಸುತ್ತದೆ (ಸಂಭಾನಿ. ೨೦೬). 'ಅಯ್ದೊಂದಿ', 'ದಶವಂಥ' ಸರಾ. [ಪತ್ತು$_3$ + ಒಂದು$_3$ + -ಇ$_3$]

**ಪತ್ತ್ಯಂಗ** (ನಾ). ಒಂದು ಆನೆ, ಒಂದು ರಥ, ಮೂರು ಕುದುರೆಗಳು ಹಾಗೂ ಐದು ಕಾಲಾಳುಗಳಿಂದ ಕೂಡಿದ ಸೈನ್ಯದ ಒಂದು ಒಳ ವಿಭಾಗ : ಏಕೇಭ ಎಂದರೆ ಆನೆ ೧ ಏಕರಥ ಎಂದರೆ ರಥ ೧ ತ್ರ್ಯಶ್ವಯೆಂದರೆ ಕುದಿರೆ ೩ (ಮೂಱು) ಪಂಚಪದಾತಿಗಾ ಎಂದರೆ ಕಾಲಾಳು ೫ ಯಿವು ನಾಲ್ಕುಬಗೆಯ ಚತುರಂಗಬಲವೂ ಒಂದು ಪತ್ತ್ಯಂಗವೆನಿಸುವುದು (ವ್ಯಹಾ. ಅನುಬಂಧ ೧. ೯-೨೬). [ಪತ್ತಿ$_3$ + ಅಂಗ$_2$]

**ಪತ್ಥಳೆ$_1$** 'ಪತ್ತಳೆ$_1$' ನೋ.

**ಪತ್ಥಳೆ$_2$** 'ಪತ್ತಳೆ$_2$' ನೋ.

**ಪತ್ಥಳೀಕರಣ** 'ಪತ್ತಳೀಕರಣ' ನೋ.

**ಪತ್ನಿ** (ನಾ). ಹೆಂಡತಿ ; ಮಡದಿ ; ಸಹಧರ್ಮಿಣಿ : "ಸಹಚರಿ ಭಾರ್ಯೆ ಕುಟುಂಬಿನಿ ಸಹಧರ್ಮಿಣಿ ಪತ್ನಿ . . . ಸಜ್ಜನಕ್ಕೆ ಪೆಸರಿಂತಿನಿಸುಂ" (ಪಮ್ಮುಕೋ. ೫೨-೩) ; ಪ್ರಿಯ ಕೇಳುತ್ತವವಾರ್ತೆಯಂ ತನಯನಂ ಪೆತ್ತಳ್ ಗಡಂ ನಿನ್ನ ಪತ್ನಿ ಯಶೋದಾವಧೂ (ಜಗವಿ. ೩-೨೩); ಜಾರತ್ವ ಮಾಡೋ ಪತ್ನಿಯ ಕೂಡಿ ಆಳಬಾರದು (ಪುರಂದ. ೨-೫೮-೨). [ಸಂ. ಪತ್ನೀ]

**ಪತ್ನಿಕುಲ** (ನಾ). ಹೆಂಡತಿಯ ಕುಲ,—ವಂಶ : ಆ ಪತ್ನಿಕುಲ ಸಾವಿರವಾಗಲು ಗೋಪಾಲಬುಟ್ಟಿ ಹಿಡಿಸಿದಳಯ್ಯ (ಪುರಂದ. ೧-೯೫-೨). [ಪತ್ನಿ + ಕುಲ]

**ಪತ್ನೀತ್ವ** (ನಾ). ಹೆಂಡತಿಯಾಗಿರುವಿಕೆ : ಒಮ್ಮೆ ತಾಯಿಯಾದವಳು ಎಂದೆಂದಿಗೂ ತಾಯಿಯೇ. ಆವಳು ಪುನಃ ಕನ್ಯೆಯಂತೆ ಪತ್ನೀತ್ವವನ್ನು ಪ್ರಾರಂಭಿಸುವುದು ಹೇಗೆ ? (ವಂಶವೃ. ೨೫೪). [ಸಂ.]

**ಪತ್ನೀಭಾಗ** (ನಾ). ಹೆಂಡತಿಗೆ ಸೇರಬೇಕಾದ ಪಾಲು,—ಅಂಶ : ನೀವು ಊಟ ಮಾಡಿ, ಪತ್ನೀಭಾಗ ಅಂತ ನೀವು ಬಿಟ್ಟಿದ್ದು ನನಗೆ (ದೂರಸ. ೩೨೨). [ಸಂ.]

**ಪತ್ನೀಶಾಲೆ** (ನಾ). ರಾಣಿವಾಸ ; ಅಂತಃಪುರ : ಮಯನ ಮತದಲಿ ವಿಶ್ವಕರ್ಮನ ನಯವಿವೇಕದಲಿ . . . ಪತ್ನೀಶಾಲೆ ಜನವೇದಿಯ . . . ಬಹಿರ್ವೇದಿಗಳನಳವಡಿಸಿದರು ಪಹಿಲದಲಿ (ಕುಮ್ಯಾಸ. ೬-೨೪). [ಸಂ. ಪತ್ನೀಶಾಲಾ]

**ಪತ್ಮಂಗೆಱೆ** (ನಾ). ಒಂದು ಸ್ಥಳದ ಹೆಸರು : ಪತ್ಮಂಗೆಱೆಯೊಡೆಯ ವಚ್ಛಗೋತ್ರದ ಕಣ್ಣಮ್ಮಯ್ಯನ ಮಗ ನಿರುಗಮಯ್ಯನುಂ (ಎಕ. X, ಕೋಲಾರ. ೫೬-೬ ; 925). ☞ಇದು 'ಪದ್ಮಂಗೆಱೆ' ಎಂದಿರಬಹುದು. [?+ಕೆಱೆ]

**ಪತ್ಯ** (ನಾ). ೧. ಯೋಗ್ಯವಾದುದು; ಉಚಿತವಾದುದು : ಅಂತಾ ವಿಬುಧವೈರಿ ವಾನರರಿಗೆನಿತಾದರುಂ ಕಾವೆನಿಸದತಿಹಿತಂ ನುಡಿ ಪತ್ಯಮೆನ್ನಿಸದು(ಪಂಕಾರಾ. ೬-೧೭-೮). ೨. ಹಿತವಾದುದು; ಪ್ರಿಯವಾದುದು: ದೂಷಣೆ ಪತ್ಯವಾಗಿ ಮನದಾಶ್ರಯಕ್ಕೆ ತಂದಾತ ರೇಕಣ್ಣಪ್ರಿಯ ನಾಗಿನಾಥಾ ಬಸವಣ್ಣನಿಂದ ಬದುಕಿದೆ (ಸರ್ವಪ. ೪೫-೨೩೫). [<ಸಂ. ಪಥ್ಯ]

**ಪತ್ರ**(ನಾ).೧. ಎಲೆ; ಪರ್ಣ:"ಬರ್ಹಂ . . . ಪತ್ರಂ, ಪಲಾಶಂ, ಛದನಂ, ಛದಃ —ಈ ೭ ಮರದ ಎಲೆ" (ಹಲಾಯು. ೩೧-೩೧); ಲಳಿತವಿಚಿತ್ರಪತ್ರಫಲಪುಷ್ಪಯುತಾಟವಿ ಸೊರ್ಕಿದಾನೆಯಂ ಬೆಳೆವುದು (ಪಂಪಭಾ. ೧-೫೪); ವಿದಿತ ವಿಸ್ತೃತ ಸಾರತರಾಗ್ರಹಾರದಿಂ ನಾಗರಖಣ್ಡ ಪತ್ರಪರಿವೇಷ್ಟನದಿಂ ಜನನೇತ್ರಪುತ್ರಿಕಾರಾಗಮನಿತ್ತು (ಎಕ. VIII, ಸೊರಬ. ೨೮೬-೮ ; 1169) ; ನಯಮುಂ ತೋರ್ಕೆಯುಮಪೂರ್ವಮೋಡಿದ ನಿದಾಘಾಕ್ರಾಂತ ಭೂಜಾಳಿ ಶೌರಿಯ ಸಂಕಲ್ಪದೆ ಪತ್ರಪುಷ್ಪಫಲಭಾರಾಕ್ರಾಂತಮಾಗಿರ್ದು ಪೊರ್ಮೆಯೆ ವೃಂದಾವನಭೂಮಿಯೊಳ್ (ಜಗವಿ. ೩-೬೭). ೨. ದಳ; ಎಸಳು ; ಪಕಳೆ : 'ಶತಪತ್ರ' ಪರಾ. ೩. ಬೆಲ್ಲವೆತ್ತದ ಎಲೆ ; ಪತ್ರೆ : ಪ'ದ'(ರ)ವ ಪತ್ರವೆಂದೆಯಲ್ಲಾ ಪತ್ರಕ್ಕೆ ಗಣನಾಥನ ತಂದೆಯಲ್ಲಾ (ಸರ್ವಪ. ೩೦-೪೧). ೪. ಎಲೆಯ ಒಂದು ಭಾಗ ; ಎಲೆಯ ಹೊರತುದಿ,—ಅಂಚು : ಪತ್ರ: ಇದರ ಬಣ್ಣ ಹಸಿರು. ಇದು ಅಗಲವಾಗಿರುವ ಎಲೆಯ ಭಾಗ (ಸಸ್ಯಶಾ. ೩೪). ೫. ತಾಳೆ ಮರದ ಗರಿ ; ಓಲೆಗರಿ. ೬. ಒಂದು ಬಗೆಯ ಸಸ್ಯ ಮತ್ತು ಅದರ ಎಲೆ : "ಬಾಷ್ಪಕ – ಅಂಬಟಿ, ಇಂಗು, ಪತ್ರ, ಕಂಬರಾಜಗೀರೆ" (ಓಷಧಿ. ೧೦೪). ೭. ಲವಂಗ : "ತ್ವಕ್, ಪತ್ರಂ . . . ವರಾಂಗಕಂ — ೭ ಲವಂಗ" (ಸಿದ್ಧಾಂತಿ. ೧೪೩). ೮. ಬರೆದ ಕಾಗದ ; ಓಲೆ ; ಲೇಖ್ಯ : "ಓಲೆ ಪತ್ರಮದು ಲೇಖ್ಯಮಕ್ಕು" (ಮಂಗರಾ. ೧೦೫-೧೫) ; ಪತ್ರಮನಿದನವನೀಪತಿ ಸೂತ್ರಿಸಿದವೊಲುತ್ತಮಾಂಗದೊಳ್ ತಾಳ್ದಿ (ಪಾರ್ಶ್ವಪು. ೨-೭೮) ; ಪತ್ರ ಬರೆದು ಹಾಕಿ ಎಂದಾಗ ಮಾಸ್ತರರಿಗೆ ಎದೆ ತಿವಿದಂತಾಯ್ತು (ಕಾವೇರಿ. ೧೨). ೯. ಪುಸ್ತಕದ ಹಾಳೆ ; ಪಾನು. ೧೦. ದಾಖಲೆ ; ದಸ್ತಾವೇಜು : ಚಿತ್ರಗುಪ್ತರ ಕೈಯ ಪತ್ರವ ನಿಲಿಸಿತ್ತು ಗುಹೇಶ್ವರನೆಂಬ ಲಿಂಗೈಕ್ಯದ ನಿಲವು (ಅಪಚಂ. ೬೬-೨೮೯) ; ಇನ್ನಿವರ್ಗಾಳಪ್ಪೆನುಂಟುಂಟು ತಪ್ಪುವುದೆ ಇನ್ನೇನೊ ಇವರ ಪತ್ರಂ ಗೆಲ್ಲದಿರ್ದಪುದೆ ನೋಡುವೆಂ (ನಂಬಿರ. ೭-೬) ; ಅರಸಪ್ಪೊಡೆಯರ ಹೆಸರ ಅಡವು ಮೈಸಾಲದ ಪತ್ರಗಳು ನಮ್ಮ ದಾಸಿವಾಸದ ಸೀಮೆಯ ನಾಡವರ ಹೆಸರ ಪತ್ರಗಳೂ ಸಿಕ್ಕಿ ಇರಲಾಗಿ (ಎಕ. VI, ಕೊಪ್ಪ. ೫-೯ ; 1569) ; ಎಲ್ಲರೂ ಗೋಗರೆದು ಒಂದಕ್ಕೆರಡರಂತೆ ಮತ್ತೆ ಬೇರೆ ಬೇರೆ ಪತ್ರಗಳನ್ನು ಬರೆದು ಕೊಟ್ಟು . . . ನಾಯಕನ ಮನೆಯ ಸೆರೆಯಿಂದ ಬಿಡುಗಡೆಯಾದರು (ಹೇಮಕೂ. ೩೪). ೧೧. ವರ್ತಮಾನ ಪತ್ರಿಕೆ : 'ಪತ್ರಕರ್ತ' ಪರಾ. ೧೨. ಲೋಹದ ಫಲಕ ; ತಗಡು. ೧೩. ಹಕ್ಕಿ ; ಪಕ್ಷಿ. ೧೪. ಹಕ್ಕಿಯ ಗರಿ,—ರೆಕ್ಕೆ : "ತನೂರುಹಂ, ಗರುತ್, ಪತ್ರಂ . . . ಪಕ್ಷಃ – ಈ ೯ ಎಱ(೦)ಕೆ" (ಹಲಾಯು. ೪೦-೮೬) ; 'ಪತ್ರಿ' ಪರಾ. ೧೫. ಬಾಣದ ಗರಿ ; ಪುಂಖ. ೧೬. ಕುದುರೆ, ಒಂಟೆ, ರಥ, ಗಾಡಿ ಮುಂತಾದ ವಾಹನ : "ಪತ್ರಂ ವಾಹನ ಹೇತಿ ಪತತ್ರಂ" (ಪಸ್ತುಕೋ. ೧೩೩-೯೦) ; ಪತ್ರಂ ಭುಜಂಗಸಮಿತಿ ಕಳತ್ರಂ ವಳ್ಳುರಿ ವಿಭೂಷಣಾವಳಿ ಭೂಭೃತ್ಪುತ್ರಿ ಗವಾಧಿಪನಜಿನಂ ನೇತ್ರಂ ನಿಮಸನ ಮೆನಿಪ್ಪ ನೊಸಗೆಮಗಭವಂ (ಕಾವ್ಯಾವ. ೪೫೪). ೧, ೧೬ : ನುತಪುಂಡರೀಕ ವಿಲಸಿತವಾಗಿ ಕೊಳನಲ್ಲಮುತುಳಪತ್ರವಿರಾಜಮಾಗಿ ಮರನಲ್ಲ . . . ಎನಿಸಿ ಪಡೆ ನಡೆಗೊಂಡುದು (ಚಿಬವು. ೨೬-೯). ೧೭. ರಥಕ್ಕೆ ಹೂಡುವ ಕುದುರೆ : "ವಾಹನಂ, ಧೋರಣಂ, ಯುಗ್ಯಂ, ಯಾನಂ, ಪತ್ರಂ – ಈ ೫ ರಥವ ಹೂಡುವ ಕುದಿರೆ" (ಹಲಾಯು. ೭೪-೨೯೫). ೧೮. ಕತ್ತಿ ; ಖಡ್ಗ : "ಅಸಿಪುತ್ರಿಕಾ, ಅಸಿಧೇನುಃ, ಕ್ಷುರಿಕಾ, ಪತ್ರಂ, ಶಸ್ತ್ರಿಕಾ – ಈ ೫ ಸುಂಗಿ" (ಹಲಾಯು. ೭೮-೩೧೯). ೧೯. ಕತ್ತಿಯ ಅಲಗು ; ಧಾರೆ. ೨೦. ಗರಗಸ : "ಶಣುಃ–ಪತ್ರಂ" (ಕಾಶಕ್ಯ. ೩೪). ೨೧. ಹಗೆ ; ಶತ್ರು. ೨೨. ಅಗ್ನಿ. ೨೩. ಪರ್ವತ ; ಗಿರಿ : "ಯಾನ ರಿಪು ಖಡ್ಗ ಪರ್ಣ ಕೃಶಾನು ಗಿರಿಯಾಜು ಪತ್ರಶಬ್ದಂ" (ನಾನಾರ್ಥಂ. ೨೦). ೨೪. =ಪತ್ರಭಂಗ: 'ಮಕರಿಕಾಪತ್ರ' ಪರಾ.

ಪತ್ರದೊಡೆ=ಪತ್ರೊಡೆ : ಮೊಸರೊಡೆ ಪತ್ರದೊಡೆ . . . ಶಾಕ ಪಾಕವಂ ಸತಿಯರಱವಂತೊರೆವೆನು (ಸೂಪಶಾ. ೬ ಸೂಚನೆ). ಪತ್ರದ್ವಾರದಿಂದ=ಕಾಗದದ ಮೂಲಕವಾಗಿ,—ಮುಖಾಂತರವಾಗಿ : ನಮ್ಮ ಆಸಾಮಿಯವರಿಗೆ ಏನಾದರೂ ಶಂಕೆಯು ಬಂದಿದ್ದಾದರೆ ನಮಗೆ ಪತ್ರದ್ವಾರದಿಂದ ಕೇಳಬೇಕು (ಮುಂಬಪ್ಯಾ. ೨೮೨). [ಸಂ.]

**ಪತ್ರಕ** (ನಾ). ೧. ಎಲೆ ; ಪರ್ಣ : "ಪರ್ಣಂ–ಪತ್ರಕ" (ಓಷಧಿ. ೯೦). ೨. ವರ್ಣಲೇಪನದ ಆರು ವಿಧಗಳಲ್ಲಿ ಒಂದು : ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಕಮುದ್ವರ್ತನಂ ಚಿತ್ರಪ್ರವರ್ತಮೆಂಬಾಱುಂ ತೆಱದಣ್ಣೆಯುಮಂ . . . ಪರಿಭಾವಿಸಿ ನೋಡಿ (ಮಲ್ಲಿಪು. ೫-೩೨) ; ಪುಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಂ ಉದ್ವರ್ತನಂ ಚಿತ್ರವರ್ತಮೆಂಬಾಱುಮಣ್ಣೆಗಳೊಳಂ . . . ಅಪೂರ್ವಭಿತ್ತಿಯಂ ತಳೆದು(ಚಂದ್ರಪು. ೧೫-೬೫ ವ). ೩. ಒಂದು ಬಗೆಯ ಔಷಧಪದಾರ್ಥ ; ಚಾಳೀಸಪತ್ರೆ : "ಪತ್ರಕ, ಪತ್ರಕಾ–ಈ ಯೆರಡುಂ ತಾಳೀಸಪತ್ರೆ" (ಓಷಧಿ.೯೦); ಭದ್ರಮುಸ್ತೆ . . . ಪತ್ರಕ, ಕುಂಬಳದ ಬೀಜ, ಇಪ್ಪು ಔಷಧಗಳನ್ನು ಸರಿಯಾಗಿ ಕೂಡಿ ಚೂರ್ಣವ ಮಾಡಿ ಗ ೩ ತೂಕವನ್ನು ಜೇನುತುಪ್ಪದಲ್ಲಿ ಕಲಸಿ ಮಜ್ಜಿಗೆಯಲ್ಲಿ ಕದಡಿ ಕೊಡುವುದು(ವಿವೈವಿ.೪೪). ೪. =ಪತ್ರ ೧೦: "ಕರಾರು, ಪತ್ರಕ" (Bond. ಪಾರಿಸಿ. ೯). ೫. ಗುರುತಿನ ಚೀಟಿ; ಪಟ್ಟಿಕೆ ; ಕಾರ್ಡು : ಗ್ರಂಥಗಳ ಜನಾದರಣೀಯತೆಯನ್ನು ಸೂಚೀಕಾರನು ಅರಿತು ಆ ಹೆಸರಿನಲ್ಲಿ ಪತ್ರಕಗಳನ್ನು ಬರೆದರೆ ಸೂಚಿಯು ಉಪಯೋಗ ಹೆಚ್ಚು ಸಾರ್ಥಕವಾಗುತ್ತದೆ (ಗ್ರಂಥಾಲ. ೩೪). [ಸಂ.]

**ಪತ್ರಕರ್ತ** (ನಾ). ಪತ್ರಿಕೆಯ ಉದ್ಯಮದಲ್ಲಿರುವವನು : ಫ್ರಾನ್ಸಿನ ಪತ್ರಕರ್ತನೊಬ್ಬನು ಪ್ರಥಮ ಬಾರಿಗೆ ಇಂಥ ಸ್ಪರ್ಧೆಯನ್ನು ತೊಡಗಿದನು (ಬಾಲಪ್ರ. I, ೪೬೦). [ಪತ್ರ+ಕರ್ತ]

**ಪತ್ರಗುಚ್ಛ** (ನಾ). ಎಲೆಗಳ ಗೊಂಚಲು : ಸಾಲುಸಾಲಾಗಿ ನಿಂತಿದ್ದ ತಾಲವೃಕ್ಷಗಳು . . . ತುದಿಯಲ್ಲಿ ಕುಚ್ಚಿನಂತೆ ನಿಬಿಡವಾದ ಪತ್ರಗುಚ್ಛ (ಹಸುಹೊ. ೩೩೪). [ಪತ್ರ+ಗುಚ್ಛ]

**ಪತ್ರಚ್ಛದ** (ನಾ). [ಸಂಗೀತ] ನೂರೆಂಟು ತಾಳಗಳಲ್ಲಿ ಒಂದು : ಅವುಗಳೊಳು ಚಂಚತ್ಪುಟ ಚಾಚತ್ಪುಟ ಷಟ್ಪಿತಾಪುತ್ರಕ... ಪತ್ರಚ್ಛದ . . .

ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ.೨೩೪). [?]

**ಪತ್ರಚ್ಛೇದ** (ನಾ). ಎಲೆಗಳಲ್ಲಿ ಚಿತ್ರವನ್ನು ಬಿಡಿಸುವುದು : ಚಿತ್ರಕರ್ಮ ಪತ್ರಚ್ಛೇದ ಗ್ರಹಗಣಿತ ರತ್ನಪರೀಕ್ಷೆಗಳೊಳಂ . . . ಮುದ್ಗರ ಗದಾದಿ ವಿವಿಧಾಯುಧಂಗಳೊಳಮತಿಪ್ರವೀಣ[ನು]ಮಾರೂಢಸರ್ವಜ್ಞ ಮಹೇಂದ್ರಜಾಣ (?) [ನು]ಮಾಗಿ (ಪಂಪಭಾ. ೨-೩೪ ವ). "೬೪ ಕಲೆಗಳಲ್ಲಿ ಒಂದು, ಎಲೆಗಳ ಆಕಾರದಲ್ಲಿ ಕತ್ತರಿಸುವುದು ಇತ್ಯಾದಿ" (ಪಂಪವೀ. ೬೯) ; ಅಕ್ಷರಗಣಿತಗಾಂಧರ್ವಚಿತ್ರಕರ್ಮ ಪತ್ರಚ್ಛೇದಾದಿ ಸಪ್ತತಿಕಳೆಗಳೊಳಂ . . . ಪರಿಣಿತನಾಗಿ (ಧರ್ಮಾಮೃ. ೮-೧೦೭). 'ಚೌಷಷ್ಟಿಕಲೆ' ಪರಾ. [ಪತ್ರ+ಛೇದ]

**ಪತ್ರಚ್ಛೇದ್ಯ** (ನಾ). = ಪತ್ರಚ್ಛೇದ : ಹಸ್ತಕೌಶಲಕಲಿತಚಿತ್ರಕಳಾಪ ಪತ್ರಚ್ಛೇದ್ಯಾದಿ ಸಮುನ್ವಿತಮಪ್ಪ ಶಿಲ್ಪಮುಮಂ ಪಡೆದು (ಆದಿಪು. ೮-೬೪ ವ). [ಪತ್ರ+ಛೇದ್ಯ]

**ಪತ್ರಡೆ** 'ಪತ್ರೊಡೆ' ನೋ.

**ಪತ್ರನಾಡಿಕೆ** (ನಾ). ಎಲೆಯಲ್ಲಿರುವ ನಾರು,—ಎಳೆ. [ಸಂ. ಪತ್ರನಾಡಿಕಾ]

**ಪತ್ರಪಡಿ** (ನಾ). ಕಾಗದದ ನಕಲು,—ಪ್ರತಿ ; ಪತ್ರ : ಆಚಾರಿ ದೇವಣ್ಣನ ಕಯ್ಯುಲು ದೇವರು ಧಾರೆಯನೆಱದು ಸುಖ ಬಾಳುವಂತಾಗಿ ಕೊಟ್ಟ ತಾಂಬ್ರಶಾಸನದ ಪತ್ರಪಡಿ (ಎಕ. XII, ಗುಬ್ಬಿ. ೯-೩೨ ; 1306). [ಪತ್ರ+ಪಡಿ$_3$]

**ಪತ್ರಪರಶು** (ನಾ). ಅಕ್ಕಸಾಲಿಗನು ಉಪಯೋಗಿಸುವ ಒಂದು ಬಗೆಯ ನಯವಾದ ಅರ : "ವ್ರಶ್ಚನಃ, ಪತ್ರಪರಶುಃ—ಚೀರ್ಣದ ಹೆಸರು. ಅಗಸಾಲಿಗನ ಕೊರಮುಟ್ಟು" (ಸಿದ್ಧಾಂತಿ. ೩೧೬). [ಸಂ.]

**ಪತ್ರಪಾಲಿ,** ಪತ್ರಪಾಳಿ (ನಾ). ಬಾಣದ ಗರಿ. **ಪತ್ರಪಾಳಿ:** "ಪತ್ರಪಾಳೀ, ವಾಜಃ—ಈ ೨ ಗಱು" (ಹಲಾಯು. ೭೭-೩೧೪) ; "ಗಱು ಪತ್ರಪಾಳಿ ವಾಜಮೆನಿಕ್ಕು" (ಮಂಗರಾ. ೮೭-೩೪). [ಸಂ. ಪತ್ರಪಾಲೀ]

**ಪತ್ರಪಾಳಿ** 'ಪತ್ರಪಾಲಿ' ನೋ.

**ಪತ್ರಪುಟಿಕೆ** (ನಾ). ಎಲೆಗಳಿಂದ ಮಾಡಿದ ದೊನ್ನೆ ; ಎಲೆವಟ್ಟಲು: ವನಮುಹತ್ತರಂ ವಿಚಿತ್ರ ಪುಷ್ಪ ಫಲಹಸ್ತಂ ಬಂದು . . . ವಿವಿಧ ಪತ್ರಪುಟಿಕಾ ನಿಹಿತಂಗಳಂ ತಂದು ಮುಂದಿಱಿಪಿ(ಚಂದ್ರಪು.೨-೭೫). [ಪತ್ರ+ಪುಟಿಕೆ]

**ಪತ್ರಪುಟ್ಟಿಗೆ**(ನಾ). = ಪತ್ರಪುಟಿಕೆ : ಬೀಸುವ ಕರಾಗ್ರದ ಪತ್ರ ಪುಟ್ಟಿಗೆಯ[ಪಾಠಾಂ. ಪುಟಿಕೆಗಳ]ಜಡಲ ಡಗೆಯುಲಿ ತೋಱುತಭಿನವಮೃಡನ ವೊಲು ವಾಲಗಕೆ ಶಿಖರ ಗಡಣದಲಿ ನಡೆತಂದು ಕಂಡನು ಮುನಿಪನಚ್ಯುತನ (ನಿಭಾಗ. ೧೦-೫೪-೪). [ಪತ್ರ+ಪುಟ್ಟಿಗೆ$_1$(<ಪುಟ್ಟಿಕೆ)]

**ಪತ್ರಭಂಗ** (ನಾ). ಕಸ್ತೂರಿ, ಕುಂಕುಮಕೇಸರಿ, ಚಂದನ ಮುಂತಾದ ದ್ರವ್ಯಗಳಿಂದ ಸ್ತ್ರೀಯರು ತಮ್ಮ ಮುಖ ಹಾಗೂ ದೇಹದ ಮೇಲೆ ಚಿತ್ರಗಳನ್ನು ಬರೆದು ಮಾಡಿಕೊಳ್ಳುವ ಅಲಂಕಾರ ; ಮಕರಿಕೆ : ಪಟ್ಟಿದಕುಂತಳೆ ಪತ್ರಭಂಗಪಲ್ಲವಿತ ಕಪೋಲ ಪತ್ರೆ . . . ನೃಪೇಂದ್ರಕಾಂತೆ ನವಕಲ್ಪಲತಾಕೃತಿಯಿಂದಮೊಪ್ಪಿದಳ್ (ಶಾಂತಿಪು. ೯-೨೦೦) ; ಹರಿನ್ಮಣಿಭಿತ್ತಿ ಭಾಗದೊಳ್ ಪುರವನಿತಾಜನಂ ಬರೆಯುತಿರ್ಪುದಭಂಗುರಪತ್ರಭಂಗಮಂ (ಪಂಪರಾಮಾ. ೧-೧೧೭) ; ಚಿತ್ರಿಸಿದಳ್ ಸುಂದತಿಯ ಕಪೋಲದೊಳ್ ಸಮ್ಮದದಿಂ ಮೃಗಮದದ ಪತ್ರಭಂಗಮನೊರ್ವಳ್ (ಜಗವಿ. ೧೦-೧೨೨). [ಸಂ.]

**ಪತ್ರಭಾಜನ** (ನಾ). = ಪತ್ರಪುಟಿಕೆ : ಭಕ್ತ ಲಿಂಗಾರ್ಪಿತವ ಮಾಡಿದ ಪತ್ರಭಾಜನಮಂ ಶ್ವಾನ ಸೂಕರ ಗಾರ್ದಭ ಕುಕ್ಕುಟ ಮಾರ್ಜಾಲಂಗಳು ಮುಟ್ಟಿ[ಟ್ಟೆ]ದೊಡೆ ಅವಱ ಕೂಡೆ ಸಹಭೋಜನವ ಮಾಡಿದಂತೆ ಕಾಣೆರಣ್ಣಾ (ಚನ್ನವ. ೩೫-೨) ; ಘನನವಘೃತವ ತಂದೆಱೆದರು ಪತ್ರಭಾಜನ ತುಂಬಿ ಕಡೆಗೋಡಿವರಿಯೆ (ವೋಹತ. ೩-೫೪).[ಪತ್ರ+ಭಾಜನ]

**ಪತ್ರರಥ** (ನಾ). ಗರಿಗಳ ಸಹಾಯದಿಂದ ಚಲಿಸುವುದು ; ಪಕ್ಷಿ : "ಪತತ್ . . . ಪತ್ರರಥಃ . . . ದ್ವಿಜಃ—ಈ ೨೬ ಹಕ್ಕಿ" (ಹಲಾಯು. ೪೦-೭೪). [ಪತ್ರ+ರಥ]

**ಪತ್ರರೇಖೆ** (ನಾ). = ಪತ್ರಭಂಗ : ಮೃಗಮದಪತ್ರರೇಖೆಗಳನೇಕೆಗೆ ತಾಳ್ದಿ ರ[ದಾದು]ವೀ ಕದಂಪುಗಳ್ (ಪಂಪಭಾ. ೪-೬೨). [ಪತ್ರ+ರೇಖೆ]

**ಪತ್ರಲೇಖೆ** (ನಾ). = ಪತ್ರಭಂಗ: "ಪತ್ರಾಂಗುಲಿ ಪತ್ರಲೇಖೆ ಚರ್ಚಾನುಲೇಪನಂ ಸ್ಥಾಸಕಂ ಪ್ರಬೋಧನಮುಕ್ಕುಂ" (ವಸ್ತುಕೋ. ೭೬-೯) ; ವದನಾಮೋದಕ್ಕೆಱಗುವ ಮದಭೃಂಗದ ಕರ್ಣಪೂರಕೈರವದ ನೆಟಿಲ್ ಪುದಿದತ್ತು ಕಪೋಲದೊಳೆನೆ ಸುದತಿಗೆ ಮೃಗಮದದ ಪತ್ರಲೇಖೆಗಳೆಸೆಗುಂ (ಜಗವಿ. ೧೦-೧೨೩). [ಪತ್ರ+ಲೇಖೆ]

**ಪತ್ರವತಿ** (ನಾ). ಒಂದು ಬಗೆಯ ಸಸ್ಯ : "ಶಂಬೆ ಪತ್ರವತಿಯುಕ್ಕು" (ಮಂಗರಾ. ೪೫-೪೮). [ಸಂ. ಪತ್ರವತೀ]

**ಪತ್ರವಲ್ಲಿ** (ನಾ). = ಪತ್ರಭಂಗ :"ತೋಳ್ ಮೊಲೆ (ಕೆನ್ನೆ) ಕೊರಳ್ಗಳಲ್ಲಿ ಅನುಲೇಪನದಿಂದಂ ಬರೆದ ರೇಖೆ ಪತ್ರವಲ್ಲೀ ಎಂಬುದು" (ಹಲಾಯು. ೮೯-೩೮೪). [ಸಂ. ಪತ್ರವಲ್ಲೀ]

**ಪತ್ರವಾದ್ಯ** (ನಾ). ಎಲೆಯಿಂದ ಮಾಡಿದ ವಾದ್ಯ ; ಪೀಪಿ : ಮಧುರಸ್ವನಪತ್ರವಾದ್ಯನಿರತರ್ ಮನೋಜ್ಞಗೋಪಾಲವೇಣುವಾದನ ಸುಭಗರ್ (ಜಗವಿ. ೩-೭೬). [ಪತ್ರ+ವಾದ್ಯ]

**ಪತ್ರವಾಹಕ** (ಗು). ೧. ಕಾಗದವನ್ನು ಒಯ್ಯುವ,—ಸಾಗಿಸುವ : ಈ ಪತ್ರವಾಹಕ ವ್ಯಕ್ತಿಯಿಂದ ಯಾವ ಕೆಲಸಗಳು ಆಗಿವೆಯೋ ಅವೆಲ್ಲಾ ನನ್ನ ಅಜ್ಞೆಯಿಂದಲೇ ಮತ್ತು ರಾಷ್ಟ್ರದ ಹಿತಕ್ಕಾಗಿಯೇ ಆಗಿವೆ (ಯೋಧರು. ೧೩೨). (ನಾ). ೨. ಕಾಗದವನ್ನು ಒಯ್ಯುವವನು : ಮೊದಲು ಪತ್ರವಾಹಕ (Errand boy) ನಂತೆ ಕೆಲಸ ಮಾಡುತ್ತಾ ವಾರಕ್ಕೆ ಎರಡೂವರೆ ಷಿಲಿಂಗುಗಳಂತೆ ಸಂಪಾದಿಸತೊಡಗಿದನು (ವಿಜ್ಞಾಕ. ೭೭). [ಪತ್ರ+ವಾಹಕ]

**ಪತ್ರವಾಹನ** (ನಾ). ಪಕ್ಷಿಯನ್ನು ವಾಹನವನ್ನಾಗಿ ಉಳ್ಳವನು ; ವಿಷ್ಣು : ಧಾತ್ರಿಯಲ್ಲಱಿಯೆ ಶನಿತ್ರಯೋದಶಿಯೊಳು ಪತ್ರವಾಹನ ಪೋಪ ಭಾಳನೇತ್ರನೋಲಗಕೆಯ್ದೆ ಚಿತ್ರವ ತಿಳಿಯೈ (ಭೈರವೇ. ೫-೭೭). **ಪತ್ರವಾಹನನೇತ್ರ** = ವಿಷ್ಣುವಿನ ಕಣ್ಣನ್ನು ಹೊಂದಿದವನು ; ಶಿವ : ಪತ್ರವಾಹನನೇತ್ರ, ದಶಶತ ಪತ್ರಸಂಚಯ ಮಿತ್ರಮಂಡಲ . . . ಗುರುಸಿದ್ಧೇಶ ಮಾಂ ತ್ರಾಹಿ (ಬಸಪು. ೧೧-೫೯). **ಪತ್ರವಾಹನಪುತ್ರ** = ೧. ವಿಷ್ಣುವಿನ ಮಗ ; ಬ್ರಹ್ಮ. ೨. ಕಾಮ ; ಮನ್ಮಥ : ಪತ್ರವಾಹನಪುತ್ರವಿಗ್ರಹಗೋತ್ರ ಶತಕೋಟಿ ಪತ್ರವಾಹನ ಪುತ್ರಪುತ್ರಸ್ತೋತ್ರಪಾತ್ರ . . . ಮಾಂ ತ್ರಾಹಿ (ಬಸಪು. ೧೧-೫೬). **ಪತ್ರವಾಹನಪುತ್ರಪುತ್ರ** = ಬ್ರಹ್ಮನ ಮಗ; ನಾರದ: ಪತ್ರವಾಹನಪುತ್ರಪುತ್ರ . . . ಗುರುಸಿದ್ಧೇಶ ಮಾಂ ತ್ರಾಹಿ (ಬಸಪು. ೧೧-೫೬). [ಪತ್ರ+ವಾಹನ]

**ಪತ್ರವ್ಯವಹಾರ** (ನಾ). ಅಂಚೆಯ ಮೂಲಕ ನಡೆಯುವ ಕಾಗದಗಳ ವಿನಿಮಯ : ಇವನ ಕಾರ್ಯಕ್ಕೆ ಮೆಚ್ಚಿದ ಸರಕಾರವು ಇವನ ಪತ್ರವ್ಯವಹಾರಕ್ಕೆ ಅಂಚೆಯ ಕಟ್ಟನ್ನು ಕೂಡಾ ಹಾಕಲಿಲ್ಲ (ಪತ್ರಿಕಾ. ೧೪) ; ಪತ್ರವ್ಯವಹಾರದ ಮೂಲಕ ಶಿಕ್ಷಣ ಕೊಡುವ ಪದ್ಧತಿಯು ಈಗ ಜಾರಿಯಲ್ಲಿದೆ (ರೂಢಿ). [ಪತ್ರ+ವ್ಯವಹಾರ]

**ಪತ್ರಸಾಸನ** (ನಾ). ತಾಮ್ರಶಾಸನ ; ದಾಖಲೆ : ನಾಗಂಣ್ಣವೊಡೆಯರು ಆ ಪುರವರ್ಗ್ಗದ ಭಕ್ತರಿಗೆ ಕೊಟ ಪತ್ರಸಾಸನ (ಮೈಆರಿ. ೧೯೩೬, ೨೪-೩೯ ; 1359). [ಪತ್ರ+ಸಾಸನ]

**ಪತ್ರಾಂಕುರ** (ನಾ). = ಪತ್ರಭಂಗ : ಗುರುಕುಚತಟದೊಳು ಪತ್ರಾಂಕುರ ಮಂ ಬರೆದಳನಂಗನ ಯಂತ್ರವ ಬರೆದಂತಿರೆ ಮತ್ತೊರ್ವಳು ಸೀತೆಗೆ ಹರಿ ಕುಲಯುವತಿ ಲಾವಣ್ಯವತಿ (ಕುಪುರಾ. ೪-೮). [ಪತ್ರ + ಅಂಕುರ]

**ಪತ್ರಾಂಗ** (ನಾ). **೧.** ಒಂದು ಬಗೆಯ ಮರ; ಸಪ್ಪಂಗ. **೨.** ಕೆಂಪು ಶ್ರೀಗಂಧ ; ರಕ್ತಚಂದನ : "ತಿಲಪರ್ಣಿ, ಪತ್ರಾಂಗಂ, ರಂಜನಂ, ರಕ್ತಚಂದನಂ, ಕುಚಂದನಂ—೫ ಕೆಂಪುಬಣ್ಣದ ಚಂದನವೃಕ್ಷದ ಪೆಸರುಗಳು" (ಸಿದ್ಧಾಂತಿ. ೨೦೮). **೩.** ಭೂರ್ಜವೃಕ್ಷ. [ಸಂ.]

**ಪತ್ರಾಂಗುಲಿ,** ಪತ್ರಾಂಗುಳಿ (ನಾ). ಬೆರಳುಗಳಿಂದ ಹಣೆ, ಕೊರಳು ಮುಂತಾದುವುಗಳ ಮೇಲೆ ಸುಗಂಧದ್ರವ್ಯಗಳಿಂದ ಚಿತ್ರವನ್ನು ಬರೆಯುವುದು. **ಪತ್ರಾಂಗುಳಿ :** "ಪತ್ರಾಂಗುಳಿ ಪತ್ರಲೇಖೆ ಚರ್ಚಾನುಲೇಪನಂ ಸ್ಥಾಸಕಂ ಪ್ರಬೋಧನಮುಕ್ಕುಂ" (ಪಸ್ತುಕೋ. ೭೬-೯). [ಸಂ.]

**ಪತ್ರಾಂಗುಳಿ** 'ಪತ್ರಾಂಗುಲಿ' ನೋ.

**ಪತ್ರಾಂಜನ** (ನಾ). ಕಾಗದ ಬರೆಯಲು ಉಪಯೋಗಿಸುವ ಮಸಿ; ಶಾಯಿ. [ಪತ್ರ+ಅಂಜನ]

**ಪತ್ರಾಗಾರ** (ನಾ). ಸಾರ್ವಜನಿಕವಾದ ಕಾಗದಪತ್ರಗಳನ್ನು ಇಟ್ಟಿರುವ ಸ್ಥಳ; ದಫ್ತರಖಾನೆ : ಇವು ಟಿಬೆಟ್ ಮತ್ತು ಚೀನಾ ದೇಶಗಳ ಪತ್ರಾಗಾರ (archives) ಗಳಲ್ಲಿದ್ದು ಟಿಬೆಟಿನ ಭಾಷೆಗೋ ಅಥವಾ ಚೈನೀಭಾಷೆಗೋ ಅನುವಾದಿತವಾಗಿವೆ (ಭಾರಪ. ೩೮). [ಪತ್ರ+ಆಗಾರ]

**ಪತ್ರಾಢ್ಯ** (ನಾ). **೧.** ವಾಹನಸಂಪತ್ತಿನಿಂದ ಕೂಡಿದವನು. **೨.** ಖಡ್ಗಪ್ರಯೋಗದಲ್ಲಿ ನಿಪುಣನಾದವನು : ಮದನಕಳಾಗ್ರಂ ಪತ್ರಾಢ್ಯಂ ಕಂಜನಾಮಿ ಭುವನವರೇಣ್ಯಂ (ಹವಿಸ್ಮರ. ೮-೪). [ಪತ್ರ + ಆಢ್ಯ]

**ಪತ್ರಾನ್ವಿತ** (ನಾ). **೧.** ಎಲೆಗಳಿಂದ ಕೂಡಿರುವುದು. **೨.** ಗರಿಗಳಿಂದ ಕೂಡಿರುವುದು. **೧, ೨ :** ಹರಿಯ ಪರಿಯಂಕಮೆಂಬಂತೆ ಪತ್ರಾನ್ವಿತದಿ ನೆರೆವುದಯಾಚಲದಂತೆಯರುಣಫಲಭಾರದಿಂ . . . ಪರಮಯೋಗೀಶರಂ ತಿಶಾಂತಿಯಿಂದೊಪ್ಪವೆತ್ತೊಂದು ವಟವೃಕ್ಷವು (ನಪಮೋ. ೮-೩೮). **೩.** ವಾಹನದಿಂದ ಕೂಡಿರುವುದು : 'ಪರಮಪತ್ರಾನ್ವಿತ' ಪರಾ. [ಪತ್ರ + ಅನ್ವಿತ]

**ಪತ್ರಾಲಂಬನ** (ನಾ). ವಾದಕ್ಕೆ ಸಿದ್ಧವೆಂಬ ಘೋಷಣಪತ್ರವನ್ನು ಹಿಡಿದುಕೊಂಡಿರುವಿಕೆ ; ವಿವಾದಕ್ಕೆ ಆಹ್ವಾನ ನೀಡುವಿಕೆ; ವಾದಕ್ಕೆ ಕರೆನೀಡುವುದು : ವಿಜಯಜಿಹ್ವನೆಂಬನೊರ್ವ ವಾದಿ . . . ಅರಮನೆಯ ಬಾಗಿಲೊಳ್ ನಿಂದು ಪತ್ರಾಲಂಬನಂ ಮಾಡಿರ್ಪುದುಂ (ಸುಕುಮಾ. ೨-೧೪ ವ). [ಪತ್ರ + ಆಲಂಬನ]

**ಪತ್ರಾಲಿ** (ನಾ). ಎಲೆಗಳ ಸಮೂಹ,—ಗುಂಪು : ಸರಸೀಮಾಲೆಯೊಳೆಸೆದುವು ನವಪತ್ರಾಲಿಯು ತೆಜಿಪಿಂದೆ ಕೋರ್ಪ ಕಮಲದ ಮುಗುಳ್ಗಳ್ (ಜಗವಿ. ೪-೬೩). [ಪತ್ರ+ಆಲಿ$_4$]

**ಪತ್ರಾವಳಿ** (ನಾ). **೧.** ಎಲೆಗಳ ಸಮೂಹ,—ಗುಂಪು : ಸಾನುರಾಗದೊಳುಟ್ಟ ಪಸುರುಡಿಗೆಯೆನೆ ಧರಾಮಾನಿನಿಯ ಮೊಗದಾವರೆಯ ಮುಸುಕಿಕೊಂಡಿಹ ನವೀನಪತ್ರಾವಳಿಗಳೆನೆ ನಗರಮಂ ಬಳಸಿದುಪವನಂಗಳ್ಮೆಱೆವುವು (ಜೈಮಿಭಾ. ೩-೨೨) ; ಈ ಕೋಮಳೆ ಕಾಮಕ್ಲಿಷ್ಟೆ ಚಿತ್ತಕ್ಕಳಲನೊಲವುಮಂ ಪುಟ್ಟಿಪಳ್ ನೋಡೆ ಪತ್ರಾವಳಿ ಶೋಷಂ ಬೆತ್ತ ಚೈತ್ರಾಗಮಪವನಪರಿಸ್ಪೃಷ್ಟವಾಸಂತಿಯಾವೋಲ್ (ಶಾಕುಂತ. ೩೫-೬೧). **೨.** ಮುತ್ತುಗ, ಆಲ ಮುಂತಾದ ಬಿಡಿಎಲೆಗಳನ್ನು ಜೋಡಿಸಿ ಮಾಡಿದ ಊಟದೆಲೆ; ಇಸ್ತ್ರಿಎಲೆ; ಪತ್ರೋಳಿ : ಆಲದ ಎಲೆಗಳು ಹರವು ಇರುವುದರಿಂದ ಪತ್ರಾವಳಿಗೆ ಬರುತ್ತವೆ (ಮುಂಬಯಿ. ೨-೨೯) ; ಸಾಲುಸಾಲಾಗಿ ಪತ್ರಾವಳಿಗಳನ್ನು ಹಾಕಿದ್ದಾರೆ . . . ಕುಂಬಳಕಾಯಿಯ ಪಲ್ಲೆ ಬಡಿಸಿದೆ (ಹೊಸಕ್ಷಿ. ೨೦೪). **೩.** = ಪತ್ರಭಂಗ : ಸೌಂದರಿಯ **ಕದಪುಗಳೊಳೊರ್ವಳ್** ಸುರವಧು ಬರೆದಳ್ ವಿಚಿತ್ರಪತ್ರಾವಳಿಯಂ (ಪುಷ್ಪಪು. ೯-೭೮). [ಪತ್ರ + ಆವಳಿ$_1$ (= ಆವಲಿ)]

**ಪತ್ರಾಶ್ರಯ** (ನಾ). ಓಲೆ ಮೊದಲಾದ ಅಲಂಕಾರವಸ್ತುಗಳನಿಟ್ಟುಕೊಳ್ಳುವ ಕಿವಿಯ ಮೆದುವಾದ ತಳಭಾಗ ; ಹಾಲೆ : "ಹಾಲೆ ಪತ್ರಾಶ್ರಯಂ ಲಂಬಿಕಾಖ್ಯಂ" (ಮಂಗರಾ. ೯೪-೫). [ಪತ್ರ+ಆಶ್ರಯ]

**ಪತ್ರಿ** (ನಾ). **೧.** ಗರಿಗಳನ್ನುಳ್ಳುದು ; ಪಕ್ಷಿ : "ಪತತ್, ಪತಂಗಃ, ಪತಗಃ, ಪತತ್ರೀ, ಪತ್ರೀ . . . ದ್ವಿಜಃ – ಈ ೨೬ ಹಕ್ಕಿ" (ಹಲಾಯು. ೪೦-೮೪) ; "ಶಕುನಿ ವಿಹಗಂ ವಿಹಂಗಂ ಪತ್ರಿ . . . ಶಕುಂತಿಯೆನೆ ಪಕ್ಷಿ" (ಮಂಗರಾ. ೫೦-೧). **೨.** ಎಲೆಗಳನ್ನುಳ್ಳುದು ; ಮರ, ಗಿಡ ಮುಂತಾದುವು. **೩.** ಗಿಡುಗ; ಡೇಗೆ : "ಶಶಾದನಃ, ಪತ್ರೀ, ಶ್ಯೇನ – ೩ ಗಿಡಗನ ಹಕ್ಕಿ" (ಸಿದ್ಧಾಂತಿ. ೧೫೭). **೪.** ಬಾಣ ; ಕಣೆ ; ಅಂಬು : "ಕಂಕಪತ್ರಃ . . . ಪತ್ರೀ, ಖಗಃ, ಶಿಳೀಮುಖಃ, ರೋಪಃ– ಈ ೧೬ ಅಂಬು" (ಹಲಾಯು. ೭೭-೩೧೨) ; "ಚಿತ್ರಪುಂಖಂ . . . ಪತ್ರಿ . . . ಕಾಂಡಮೆಂದೆನಲ್ಕಂಬೆನಿಕ್ಕುಂ" (ಮಂಗರಾ. ೮೭-೩೪). **೫.** ಒಂದು ಬಗೆಯ ಮರ ; ತಾಳೆ : "ತಾಳಧ್ವಜದ್ರುಮಂ ಪತ್ರಿಯೆನೆ ತಾಳು" (ಮಂಗರಾ. ೩೪-೯). **೬.** ಬೆಟ್ಟ ; ಗಿರಿ. **೭.** ಉಕ್ಕಿನ ಲೆಕ್ಕಣಿಕೆ ; ಕಂಠ : "ಪತ್ರಿ[ಪಾಠಾಂ. ಪ್ರತಿ] ನಾರಾಚಮೆನೆ ಕಂಠಂ" (ಮಂಗರಾ. ೧೦೬-೧೫). **೮.** ರಥ. **೯.** ರಥಿಕ. [ಸಂ. ಪತ್ರಿನ್]

**ಪತ್ರಿಕ** (ನಾ). ಬರೆಯುವುದಕ್ಕಾಗಿ ಓಲೆಗಳನ್ನು ತಯಾರಿಸುವವನು : "ಓಲೆಗಳ ಮಾಟ್ಪವಂ ಪತ್ರಿಕಂ" (ಮಂಗರಾ. ೧೧೧-೨). [ಪತ್ರ + –ಇಕ]

**ಪತ್ರಿಕಾಕರ್ತ** (ನಾ). = ಪತ್ರಕರ್ತ : ಸುದ್ದಿಗಾರರು ಜಿಗುಳಿಯಂತಹ ಪ್ರಾಣಿಯೆಂದು ಸಾಮಾನ್ಯವಾಗಿ ಇಂಗ್ಲಿಷ್ ಪತ್ರಿಕಾಕರ್ತರು ಹೇಳುತ್ತಾರೆ (ಪತ್ರಿಕಾ. ೫೨). [ಸಂ.]

**ಪತ್ರಿಕಾಗೋಷ್ಠಿ** (ನಾ). ಪತ್ರಿಕೆಗಳ ಪ್ರತಿನಿಧಿಗಳನ್ನು ಕರೆಸಿ ನಡೆಸುವ ಸಭೆ : ಶ್ರೀಯುತರು ಪತ್ರಿಕಾಗೋಷ್ಠಿಯೊಂದರಲ್ಲಿ ತಮ್ಮ ನಿಲುವನ್ನು ಸಮರ್ಥಿಸಿಕೊಂಡರು (ರೂಢಿ). [ಸಂ.]

**ಪತ್ರಿಕಾವೃತ್ತಿ** (ನಾ). ವರ್ತಮಾನಪತ್ರಿಕೆಗಳ ಉದ್ದಿಮೆ,—ವೃತ್ತಿ : "ಪತ್ರಿಕೋದ್ಯೋಗ; ಪತ್ರಿಕಾವೃತ್ತಿ" (Journalism: ಪತ್ರಿನಿ. ೪೮). [ಸಂ.]

**ಪತ್ರಿಕಾವ್ಯವಸಾಯ** (ನಾ). = ಪತ್ರಿಕಾವೃತ್ತಿ : ಪತ್ರಿಕಾವ್ಯವಸಾಯಕ್ಕೂ ಮತ್ತು ವ್ಯವಸಾಯಿಗಳಿಗೂ ಇಂದಿನ ಹಾಗೆ ಒಂದು ನಿಶ್ಚಿತ ಸ್ಥಾನ ಬಂದುದು ೧೬೪೩ ರಲ್ಲಿ (ಪತ್ರಿಕಾ. ೯). [ಸಂ.]

**ಪತ್ರಿಕಾವ್ಯವಸಾಯಿ** (ನಾ). ವರ್ತಮಾನ ಪತ್ರಿಕೆಗಳ ವೃತ್ತಿಯಲ್ಲಿ ತೊಡಗಿರುವವನು : ಸಾಹಿತಿಗಳಾಗಲೀ ಪತ್ರಿಕಾವ್ಯವಸಾಯಿಗಳಾಗಲೀ ಒಬ್ಬರನ್ನೊಬ್ಬರು ಬಿಟ್ಟು ಸುತರಾಂ ಇರಲಾರರು (ಪತ್ರಿಕಾ. ೫೫). [ಸಂ. ಪತ್ರಿಕಾವ್ಯವಸಾಯಿನ್]

**ಪತ್ರಿಕಾಸ್ವಾತಂತ್ರ್ಯ** (ನಾ). ಪತ್ರಿಕಾವೃತ್ತಿಯಲ್ಲಿರುವವನಿಗೆ ತನ್ನ ಪತ್ರಿಕೆಯಲ್ಲಿ ಯಾವುದೇ ವಿಚಾರವನ್ನು ಕುರಿತು ಲೇಖನಗಳನ್ನು ಬರೆಯಲು ಇರುವ ಸ್ವಾತಂತ್ರ್ಯ : ಯಾವ ದೇಶದ ಸರಕಾರವೇ ಆಗಲಿ ಪತ್ರಿಕಾಸ್ವಾತಂತ್ರ್ಯವನ್ನು ಕಸಿದುಕೊಳ್ಳಬಾರದು (ರೂಢಿ). [ಸಂ.]

**ಪತ್ರಿಕುಲ** (ನಾ). **೧.** ಎಲೆಗಳ ಗುಂಪು. **೨.** ಬಾಣಗಳ ಸಮೂಹ,—ರಾಶಿ. **೧, ೨ :** 'ಪತ್ರಿಕುಲಚರಿತ್ರ' ಪರಾ. [ಪತ್ರಿ + ಕುಲ]

**ಪತ್ರಿಕುಲಚರಿತ್ರ** (ನಾ). ೧. ಎಲೆಗಳಿಂದ ಕೂಡಿರುವುದು. ೨. ಬಾಣಗಳಿಂದ ತುಂಬಿರುವುದು. ೧, ೨ : [ಪರಿಕಲಿತಶಿಲೀಮುಖವಾನರಚಿಹ್ನಂ ಪತ್ರಿಕುಲಚರಿತ್ರಂ] ರಿಪುಭೀಕರಮೆನಿಪಂತಕಕೃತ ನವತರುವಿರ್ಪಂತಿರ್ದುದಲ್ಲಿ ಗಾಂಡಿವಿಯ ರಥಂ (ಗದಾಯು. ೪-೩೪). [ಸಂ.]

**ಪತ್ರಿಕೆ** (ನಾ). ೧. ಬರೆಯುವ ಕಾಗದ. ೨. ಓಲೆ ; ಪತ್ರ : ನವಯುವತಿ . . . ಪತ್ರಿಕೆಯನು ತವಕದಿಂ ಬಿಟ್ಟು ಮುದ್ರೆಯನೋಸರಿಸಿ ತೆಗೆದು . . . ನಿಂದೋದಿಕೊಳುತಿರ್ದಳು (ಜೈಮಿಭಾ. ೩೦-೨೪). ೩. ವರ್ತಮಾನಪತ್ರ ಮುಂತಾದ ನಿಯತಕಾಲಿಕ : ಇಡೀ ಪತ್ರಿಕೆಗಳನ್ನು ಓದುವಷ್ಟು ಕೂಡ ವಿರಾಮವು ಅನೇಕರಿಗೆ ಇಂದಿನ ದಿವಸದಲ್ಲಿ ಇಲ್ಲ (ಪತ್ರಿಕಾ. ೪೬). ೪. ಬರೆದಿರುವ ಲೋಹದ ತಗಡು, ಓಲೆಯ ಹಾಳೆ ಮುಂತಾದುವು ; ಪಟ್ಟಿ : ರಘುನಾಥಂ ತುರಂಗಮಂ ಪೂಜೆಗೈದಿಳೆಯೊಳ್ಬರಿಸಲದಱ ಪಣೆಗೆ ತನ್ನಗ್ಗಳಿಕೆಯಂ ಬರೆದ ಪತ್ರಿಕೆಯನು ಅಳವಡಿಸಿ (ಜೈಮಿಭಾ. ೨೦-೪). ೫. ಕತ್ತಿಯ ಅಲಗು,—ಧಾರೆ : (೩). ೬. ಒಂದು ಬಗೆಯ ಸುಗಂಧವಸ್ತು ; ಜಾಯಿಪತ್ರೆ : ಲವಂಗಮುಂ ಜಾತಿಫಲ ಜಾತಿಫಲಮುಂ ಪತ್ರಿಕಾ ತಮಾಳಪತ್ರಮುಂ ಕರ್ಪೂರ ಪಚ್ಚೆಕರ್ಪೂರಮುಂ (ಪ್ರತಿಷ್ಠಾ. ೬-೧೧).

**ಪತ್ರಿಕಾಮುಖ** = ಕಾಗದದ ಮೂಲಕ,—ಮುಖಾಂತರ : ನಡಿಸಿದ ಪೌರಕಾರ್ಯವನ್ನು ಪತ್ರಿಕಾಮುಖದಿಂದ ತಿಳಿಸುವಂತೆ ನಾವು ಹೇಳಿದೆವೆಂದು ಮಂತ್ರಿಗೆ ತಿಳಿಸು(ಶಾಕುಂತ. ೮೩-೧೧). **ಪತ್ರಿಕಾಹೇಳಿಕೆ**= ವರ್ತಮಾನ ಪತ್ರಿಕೆಗಾಗಿ ಕೊಡುವ ಸಂದೇಶ : ಈ ವಿಷಯವನ್ನು ಅವರು ತಮ್ಮ ಪತ್ರಿಕಾಹೇಳಿಕೆಯಲ್ಲಿ ತಿಳಿಸಿದ್ದಾರೆ (ರೂಢಿ).

[ಸಂ. ಪತ್ರಿಕಾ]

**ಪತ್ರಿಕೆಹುಲ್ಲು** (ನಾ). ಒಂದು ಬಗೆಯ ಹುಲ್ಲು : ಸಣ್ಣ ಪುರಳೀಹುಲ್ಲು, ಪತ್ರಿಕೆಹುಲ್ಲು, ಕೋತಿಸುಬುತ್ತಿ ಹುಲ್ಲು (ಮೈಔಗಿ. ೩೪-೬೬೦).

[ಪತ್ರಿಕೆ$_0$ + ಹುಲ್ಲು (<ಪುಲ್)]

**ಪತ್ರಿಕೋದ್ಯಮಿ** (ನಾ). ವರ್ತಮಾನಪತ್ರಿಕೆಯ ಉದ್ಯಮದಲ್ಲಿ ತೊಡಗಿರುವವನು : ಅಲ್ಲಿ ತನ್ನಂತಿರುವ ಇತರ ಪತ್ರಿಕೋದ್ಯಮಿಗಳನ್ನು ಕೂಡಿಕೊಂಡ (ಒಂಟಿದ. ೧೯). [ಸಂ. ಪತ್ರಿಕೋದ್ಯಮಿನ್]

**ಪತ್ರಿಕೋದ್ಯೋಗ** (ನಾ). = ಪತ್ರಿಕಾವೃತ್ತಿ : "ಪತ್ರಿಕೋದ್ಯೋಗ ; ಪತ್ರಿಕಾವೃತ್ತಿ" (Journalism. ಪತ್ರಿನಿ. ೪೮). [ಸಂ.]

**ಪತ್ರಿಕೋದ್ಯೋಗಿ** (ನಾ). = ಪತ್ರಿಕೋದ್ಯಮಿ : ಆಮಂತ್ರಣಪತ್ರಿಕೆಯಲ್ಲಿ 'ಪತ್ರಿಕೋದ್ಯೋಗಿಗಳ ಭೇಟಿಗಾಗಿ' ಎಂದು ಸ್ಪಷ್ಟವಾಗಿ ಹೇಳಿದೆ (ಒಂಟಿದ. ೨). [ಸಂ. ಪತ್ರಿಕೋದ್ಯೋಗಿನ್]

**ಪತ್ರಿಪದ** (ನಾ). ಪಕ್ಷಿಯನ್ನು ವಾಹನವಾಗಿ ಉಳ್ಳವನು; ವಿಷ್ಣು.

**ಪತ್ರಿಪದಪುತ್ರ** = ವಿಷ್ಣುವಿನ ಮಗ; ಮನ್ಮಥ: ಪತ್ರಿಪದಪುತ್ರತನುಗೋತ್ರಸ್ವರು ಚಿತ್ರಕರ ಪತ್ರಿರಥನೇತ್ರ ಜಯ (ಗುರುಚಾ. ೬-೧). [ಸಂ.]

**ಪತ್ರಿರಥ** (ನಾ). = ಪತ್ರಿಪದ.

**ಪತ್ರಿರಥನೇತ್ರ** = ವಿಷ್ಣುವಿನ ಕಣ್ಣನ್ನು ಹೊಂದಿದವನು ; ಶಿವ : ಪತ್ರಿರಥನೇತ್ರ ಜಯ . . . ತ್ರಿಪುರಶತ್ರು ಜಯ ಸಿದ್ಧನಂಜ (ಗುರುಚಾ. ೬-೧). [ಪತ್ರಿ+ರಥ]

**ಪತ್ರೀಂದ್ರ** (ನಾ). ಹಕ್ಕಿಗಳ ರಾಜ ; ಗರುಡ.

**ಪತ್ರೀಂದ್ರವಾಹನ** = ಗರುಡನನ್ನು ವಾಹನವನ್ನಾಗುಳ್ಳವನು ; ವಿಷ್ಣು : ಪತ್ರೀಂದ್ರವಾಹನಂ ಬಳಿಕೈದೆ ಪಾಂಡವಧರಿತ್ರೀರಮಣರಿದಿರ್ಗೊಂಡರು (ಜೈಮಿಭಾ. ೨-೪೬). [ಪತ್ರಿ + ಇಂದ್ರ]

**ಪತ್ರೆ** (ನಾ). ೧. ಎಲೆ ; ಪರ್ಣ : ಬನ್ನಿಯೆಕ್ಕೆಯುತ್ತರಣೆಯ ಬೆಲ್ಲವತ್ತದ ಕೊಳಂಚೆಯ ಪತ್ರೆಯನೊಂದನಿತ್ತು ಚಿಚ್ಚರಮುಮರತ್ವಮುಂ ಪಡೆಯಿಂ (ಸಮುಪ. ೮-೧೨) ; ಕಾಡ ಪತ್ರೆಯ ನಾಡ ಕೀಡೆ ತಿಂದಿರವೆ (ಸಮೂವ. ೪. ೫೯೦-೬). ೨. ಬಿಲ್ವ, ಬನ್ನಿ, ತುಳಸಿ ಮುಂತಾದುವುಗಳ ಎಲೆ,—ದಳ : ಬಳಸಿದ ಪತ್ರೆಯಂ ಬರುತೆ ಕೆಪ್ಪಿನ ಕಾಲೊಳೆ ನೂಂಕಿ (ಸಮುಪ.೧೦-೮೦); ಹೊತ್ತಾರೆ ಎದ್ದು ಅಗ್ಘವಣಿ ಪತ್ರೆ[ಪಾಠಾಂ. ತ್ತರೆ]ಯ ತಂದು ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ (ಬಸವ. ೧೬೨) ; ಪತ್ರೆಯಿಂ ಪುಷ್ಪದಿಂ ಪೂಜೆಯಂ ಮಾಡುತಂ ಚಿತ್ತಜಹರಂಗೆ ಧೂಪಾರತಿಯನೆತ್ತುತಂ (ಕಣ್ಣ.ರ. ದೇ. ೧೪೧-೧೫) ; ಓಹಿಲನರಣ್ಯಕ್ಕೆಂದಿನಂದದೊಳೆಯ್ದಿ . . . ಪತ್ರೆಯಂ ಕೊಯ್ದು (ಬಸಪು. ೪೩-೮೩) ; ಬಟ್ಟೆಯ ಕಲ್ಲಿಂಗೆ ಒಟ್ಟಿ ಪತ್ರೆಯನಿಟ್ಟು . . . ಶರಣೆಂಬ ಭ್ರಷ್ಟರನು ನೋಡ (ಸರ್ವಜ್ಞ. ೨೦೨) ; ಪತ್ರೆ ಇಲ್ಲದ ಪೂಜೆ, ಪತ್ರವಿಲ್ಲದ ಸಾಲ (ಗಾದೆ). ೩. ಜಾಯಿಕಾಯಿ ಮುಂತಾದುವುಗಳ ಮೇಲಿನ ತೊಗಟೆ,—ಸಿಪ್ಪೆ : ಈಗ ಮಂಗಗಳು ಇವುಗಳ ಮೇಲಿನ ಪತ್ರೆಯನ್ನು ತಿಂದು, ಬರಿ ಕಾಯಿಗಳನ್ನೇ ಚೆಲ್ಲಿಬಿಟ್ಟಿರುತ್ತವೆ (ಮುಂಬಯಿ. ೫-೨೧೧). ೪. ಸುವಾಸನೆಯಿಂದ ಕೂಡಿದ ಒಂದು ಬಗೆಯ ಔಷಧಿಸಸ್ಯ ; ಮಂಚಿಪತ್ರೆ : "ಮಾಚೀ = ಪತ್ರೆಯುಂ, ದೇವಗಣಿಕೆಯುಂ, ಶರೀರವುಂ" (ಕಾಶಕ್ಕ. ೯೪). ೫. ಗಾಂಜಾ, ಹೊಗೆಸೊಪ್ಪು ಮುಂತಾದುವುಗಳ ಎಲೆ : ಅವನು ಈಚೆಗೆ ಪತ್ರೆ ಸೇದಲಾರಂಭಿಸಿದ್ದಾನೆ (ರೂಢಿ). ೬. ಲೋಹದ ತಗಡು,—ಹಲಗೆ : ಪತ್ರೆ ಅಂದರೆ ಕಾರೋಗೇಟೆಡ್ ಆಯರ್ನಶೀಟ್ ಇವುಗಳ ಬಗ್ಗೆ ಮಜೂರಿಯ ದರ (ಮುಂಬಪ್ಯಾ. ೧೬ ಪ್ರಸ್ತಾಪನೆ) ; ಕೆಲವರು ಅಲ್ಲಿಯೇ ಇರುವ 'ವೀರಶೈವ ಲಿಂಗಾಯತರ ಚಹಾ-ಕಾಫಿ-ಫರಾಳ ದುಕಾನ'ದ ಪತ್ರೆಗಳ ಕೆಳಗೆ ನಿಂತು ಹಸಿಗಳಿಂದ ಪಾರಾದರೂ ಒಳಗಿನ ಹೊಗೆ ಅವರ ಕಣ್ಣೊಳಗಿಂದ ನೀರು ತರಿಸಿತು (ಮುಗಿಮ. ೪).

**ಪತ್ರೆ ಹಾಕು** = ಪೂಜೆಗಾಗಿ ಮನೆಮನೆಗೆ ಬಿಲ್ವ ಮುಂತಾದ ದಳಗಳನ್ನು ತಂದುಕೊಡು,—ಒದಗಿಸು : ಕಿನ್ನರಿ ಬಾರಿಸಿಕೊಂಡು ಪಾತ್ರದವರ ಮನೆಗೆ ಪತ್ರೆ ಹಾಕೋದಕ್ಕೆ ಹೋಗುತ್ತೇನೋ(ಜೆಳುಮ.೮೦).

[ಸಂ. ಪತ್ರ]

**ಪತ್ರೊಡೆ**, ಪತ್ರಡೆ (ನಾ). (ಕರಾ) ಕೆಸುವಿನ ಎಲೆಯಿಂದ ಮಾಡುವ ಒಂದು ಬಗೆಯ ಖಾರದ ಕಡುಬು : ವನಜ . . . ಕೆಸವಿನ ಸೊಪ್ಪಿನ ಪತ್ರೊಡೆಯೊಂದಿಗೆ ಕಡಲೆಯ ಪಾಯಸ ಮಾಡಿ ಬಡಿಸಿದ್ದಳು (ದೇಪಹೆಂ. ೧೧೬) ; ನಾಲ್ಕು ಕೆಸುವಿನ ಎಲೆಗಳನ್ನು ತಂದು . . . ಪತ್ರೊಡೆಗಾರಂಭಿಸಿದರು (ಬಾಳಿಗಿ. ೨೩). **ಪತ್ರಡೆ** : ದಾರಿಯಲ್ಲಿ ಅಜ್ಜ ಮರಕೆಸ ಕಂಡು "ನೋಡಲ್ಲಿ ಪತ್ರಡೆಗೆ ಲಾಯಕ್ಕಾಗಿದೆ" ಎಂದರು (ಪ್ರಕ್ಷಿ. ೯೮). [←ತುಳು. ಪತ್ರೊಡೆ]

**ಪತ್ರೋರ್ಣ** (ನಾ). ೧. ಒಂದು ಬಗೆಯ ಮರ; ದಿಂಡಲು. ೨. ರೇಷ್ಮೆವಸ್ತ್ರ : "ಪತ್ರೋರ್ಣಂ. ಧೌತಕೌಶೇಯಂ—ತೊಳೆದ ಪಟ್ಟೇಸೀರೆ ಮುಂತಾದದ್ದು" (ಸಿದ್ಧಾಂತಿ. ೨೦೨). [ಸಂ.]

**ಪತ್ರೋಳಿ** (ನಾ). = ಪತ್ರಾವಳಿ ೨ : ಹತ್ತ ಪತ್ರೋಳಿ ಅನ್ನಾ ಹಾಕತಾರ ಅನ್ನೊ ಭರೋಸ ಅದ ನನಗ (ದೀಪಹ. II, ೫೩) ; "ಹಳೇ ಪತ್ರೋಳಿ", "ಹರಕುಮೊಚ್ಚೆ"ಗಳ ಮಾಲೆಯಲ್ಲಿಯೇ ಕಸಬರಿಗೆಯನ್ನೂ ಗಯ್ಯಾಳಿಯ ಬಾಯಿಯು ಪೋಣಿಸಿದರೆ ಏನಾಯಿತು? (ನಿರಾಭ. ೧೫೪).

[<ಪತ್ರಾವಳಿ]

**ಪತ್ವ** (ನಾ). [ವ್ಯಾಕ] 'ಪ' ಎಂಬ ಅಕ್ಷರ ; ಪಕಾರ : ನೆಗಬ್ದುರ್ದ ರೇಫ ಜಟಿ ನಾಂತ ಗಾಂತ ಸಾಂತೋತ್ವದಿದಿರ ವತ್ವಂ ಪತ್ವಂ ಪುಗುಗುಂ ದ್ವಿತ್ವಂ (ಶಮದ. ೨೩೨). [ಸಂ.]

**ಪಥ** (ನಾ). ಹಾದಿ ; ದಾರಿ ; ಮಾರ್ಗ : ನಿಷ್ಠೆಯಿಂದ ಲಿಂಗವ ಪೂಜಿಸಿ ಮತ್ತೊಂದು ಪಥವನರಿಯದ ಶರಣರು ಶರ್ವನ ಹೆಡೆಯ

ಮಾಣಿಕದಂತಿಪ್ಪರು ಭೂಷಣರಾಗಿ (ಬಸವ. ೭೪೫); ಪುಳಕದ ಹಾದಿಗೆಂದು ಪಥವಪ್ಪುದು ಕಣ್ಗಳ ಕೋಡಿಗೆಂದು ನೀರ್ಗಳ ಕಡೆಗಾಣ್ಬುದು(ಪಂಪಾಶ.೨); ವಿದುರನಟ್ಟಿದ ಖನಕ ಬಂದನುಯಿವರ ಸಜ್ಜೆಯ ಮನೆಯಲತಿಗುಪ್ತದಲಿ ನೆಲದೊಳು ಸವೆಸಿದನು ಪಥವ (ಸಂಭಪ. ೮-೮೬); ವಿಶ್ವಾನುಭವವೆ ವಿಶ್ವಾತ್ಮಾನುಭವಕೆ ಪಥ (ಮಂಕುಕ. ೪೦೦). [ಸಂ.]

**ಪಥಕ** (ನಾ). ೧. ಸೈನ್ಯದ ಒಂದು ತುಕಡಿ,—ದಳ: ಜರ್ಮನಿಯು ತನ್ನ ವಿರಾಟವನ್ನು ಜೋರಿನಿಂದ ಸಾಗಿಸಿದ್ದರಿಂದ ಇಲ್ಲಿಯ ಒಂದು ಪಥಕವನ್ನು ಫ್ರಾನ್ಸದೇಶಕ್ಕೆ ತೆಗೆದುಕೊಂಡು ಹೋಗುವುದು ನಿಶ್ಚಿತವಾಯಿತು (ಮೇದಿಮ. ೧೯೭). ೨. ತಂಡ; ಸಂಘ; ಗುಂಪು: ಮೆಂಬರಾದ ಮೇಲೆ ಅವರು ಮಾಡುವ ಯಾವುದೇ ಕನ್ನಡ ಚಟುವಟಿಕೆಗೆ ಶ್ರಿಪಪ್ಪಿ ಎಂಬ ಪಥಕದ ಹೆಸರಿಡಬೇಕು (ಮುಂಗಾಪು. ೬). [←ಮರಾ. ಪಥಕ, ಪತಕ]

**ಪಥಕಲ್ಪನೆ** (ನಾ). ಇಂದ್ರಜಾಲ; ಕಣ್ಕಟ್ಟು. [ಸಂ. ಪಥಕಲ್ಪನಾ]

**ಪಥಗೊಳಿಸು** (ಕ್ರಿ). ಪ್ರಯಾಣಕ್ಕೆ ಮೊದಲು ಮಾಡಿಸು; ಪ್ರಯಾಣ ಹೊರಡಿಸು: ಅರ್ಜುನನುಳಿದ ಸತಿಯರಂ ಶೋಕಗಳ ಹತಗೈಸಿ ದ್ವಾರಕಾಪುರಕೆ ದಾರುಕನೊಡನೆ ಪಥಗೊಳಿಸಿಯೆ ಕಳುಹಿ (ತುರಂಗ. ೯೦-೧೮). [ಪಥ + ಕೊಳ್$_1$ + -ಇಸು$_3$]

**ಪಥಪರಿಶ್ರಮ** (ನಾ). ಮಾರ್ಗಕ್ರಮಣದಿಂದ ಉಂಟಾದ ಬಳಲಿಕೆ,—ದಣಿವು: ನಾನಾವಿಧದ ಪದೆಪಿನೊಳ್ ಹರಿಗಾವಗಮಾಱುದುದು ಪಥಪರಿಶ್ರಮಮೆಲ್ಲಂ (ಪಂಪಭಾ. ೯-೨೮). [ಪಥ+ಪರಿಶ್ರಮ]

**ಪಥಪ್ರದರ್ಶಕ** (ನಾ). ಹಾದಿಯನ್ನು ತೋರಿಸುವವನು; ಮಾರ್ಗದರ್ಶಕ: ತಾವು ಈಗಲೂ ಕೂಡ ನನ್ನ ಆಪ್ತಮಿತ್ರರಾಗಿಯೂ ಪಥಪ್ರದರ್ಶಕರಾಗಿಯೂ ಇರಬೇಕು (ಪ್ರಜಲ. ೧೪೦). [ಪಥ+ಪ್ರದರ್ಶಕ]

**ಪಥಭೇದ** (ನಾ). ೧. ಮಾರ್ಗವನ್ನು ಬದಲಿಸುವ ಮಜಲು,— ಹಂತ: "ಪಥಭೇದದೊಳಗಂಚೆಯು" (ಶಬ್ದಮಂ. ೮೬). ೨. = ಪಥಸಂಖ್ಯೆ: "ಪಥಭೇದಂ ದಿವ್ಯ ಕ್ರೋಶಾಹ್ವಯಂ" (ನಾನಾರ. ೧೧೩). [ಪಥ+ಭೇದ]

**ಪಥಭ್ರಾಂತ** (ನಾ). ದಾರಿ ತಿಳಿಯದವನು; ಹಾದಿ ತಪ್ಪಿದವನು: ಪೂರ್ವಪರಿಚಿತವಿಲ್ಲದ ವನದಲ್ಲಿ ತಿರುಗುವುದಕ್ಕೆ ಹೋಗುವವರು ಒಂದು ಕ್ಷಣದಲ್ಲಿ ದಾರಿ ತಪ್ಪಿ ಪಥಭ್ರಾಂತರಾಗುವುದರಲ್ಲಿ ಸಂಶಯವಿಲ್ಲ (ಕಪಾಕುಂ. ೧೭). [ಪಥ+ಭ್ರಾಂತ]

**ಪಥಭ್ರಾಂತಿ** (ನಾ). ದಾರಿ ತಪ್ಪುವಿಕೆ; ದಿಕ್ಕು ತೋರದಿರುವಿಕೆ: ನವಕುಮಾರನಿಗೆ ಹಾಗೇನೆ ಪಥಭ್ರಾಂತಿಯುಂಟಾಯಿತು (ಕಪಾಕುಂ.೧೭). [ಪಥ+ಭ್ರಾಂತಿ]

**ಪಥಶಿಲ್ಪಿ** (ನಾ). ದಾರಿಯನ್ನು ಸಿದ್ಧಪಡಿಸುವವನು; ರಸ್ತೆಯನ್ನು ಮಾಡುವವನು: ಸೈನ್ಯದ ಚಲನೆಯು ಸುಗಮವಾಗಿರುವುದಕ್ಕಾಗಿ ಸಿದ್ಧಪಡಿಸಲು ಸೈನ್ಯಕ್ಕಿಂತ ಮುಂಚೆಯೇ ಪಥಶಿಲ್ಪಿಗಳು ತಮ್ಮ ಸಿಬ್ಬಂದಿ ಯೊಡನೆ ಹೋಗಿ . . . ಕೆಲಸವನ್ನು ಮಾಡಿಸುತ್ತಿದ್ದರು(ಕಶಾಅ. ೨೫೭). [ಪಥ+ಶಿಲ್ಪಿ$_1$]

**ಪಥಶ್ರಮ** (ನಾ). = ಪಥಪರಿಶ್ರಮ: ವೃದ್ಧತಾಪಸನಂ . . . ಅಲ್ಲಿಯ ಮೂಲಿಗನಪ್ಪ ಪಟ್ಟಸಾಲಿಗಂ ಕಂಡು ತನ್ನ ಮನೆಗೊಡಗೊಂಡು ಪೋಗಿ ಪರಮಭಕ್ತಿಯಿಂದಂ ಪಥಶ್ರಮಮನಾಱಿಸಿ (ಪಂಚತಂ. ೭೩-೧೦); ಮಿಗೆ ಬಾಂಬಟ್ಟೆಗರಿರ್ದು ಪಥಶ್ರಮದಟ್ಟುಳಿಯಂ ಕಳೆದು ಪೋಪರತಿ ಮುದದಿಂದಂ (ಹವಿಮ್ಮ್ಮಾರ. ೧-೬೨). [ಪಥ+ಶ್ರಮ]

**ಪಥಶ್ರಾಂತ** (ಗು). ೧. ಪ್ರಯಾಣದಿಂದ ಬಳಲಿದ,—ದಣಿದ (ನಾ). ೨. = ಪಥಪರಿಶ್ರಮ: ಆ ನದಿಯ ತೀರದೊಳ್ ಕುಳ್ಳಿರ್ದು ಪುಷ್ಪಕಳೆಯುಂ ಶೌಂಡಿಕನುಂ ಪಥಶ್ರಾಂತಮಂ ವಿಶ್ರಮಿಸಿಕೊಂಡು (ನನ್ನಚಾ. ೩-೧೧೧ ಪ). ೩. ಪ್ರಯಾಣದಿಂದ ಬಳಲಿದವನು: ಪುರಹರನು ನಿಟ್ಟೆಯು ಪಥಶ್ರಾಂತರ ತೆಱದಿ ವೈಶಿಕದ ನಿದ್ರೆಯೊಳಿರಲು (ಬಸಪು. ೨೪-೫೪); ಶ್ರೀಧರಭಟ್ಟನುಂ ನಾರಸಿಂಹಭಟ್ಟರೆಂಬ ಪಾರ್ವರಿರ್ವರುಂ ಪಥಶ್ರಾಂತರಾಗಿ ಬಂದುಮಾ ಪುಷ್ಪಕಳೆಯುಂ ಕಂಡು (ನನ್ನಚಾ. ೩-೧೨೧ ಪ). [ಪಥ+ಶ್ರಾಂತ]

**ಪಥಸಂಖ್ಯೆ** (ನಾ). ದೂರವನ್ನು ಅಳೆಯುವ ಒಂದು ಪ್ರಮಾಣ; ಹರದಾರಿ: "ದಿವ್ಯದಲ್ಲಿ ಪಥಸಂಖ್ಯೆಯಲಿ ಕ್ರೋಶಮಕ್ಕುಂ" (ಮುಂಗರಾ. ೧೪೪-೨೫). [ಪಥ+ಸಂಖ್ಯೆ]

**ಪಥಾರ್ತ**(ನಾ) = ಪಥಶ್ರಾಂತ ೩: ಬಳೆದಿನ್ನಾವಿನ ಬಾಟಿಯಾಳಿಗಳ ಪಣ್ಣಿಂ ಪಣ್ಣನೋರೊರ್ಮೆ ಮೆಲ್ದೊಳನೀರೀಂಟಿ ಪಥಾರ್ತರಿರ್ಪರಳಿಕೀರ ಧ್ವಾನದುದ್ಯಾನದೊಳ್ (ಜಗವಿ. ೯-೮೮). [ಪಥ+ಆರ್ತ$_2$]

**ಪಥಾಸನ** (ನಾ). [ಯೋಗ] ಒಂದು ಬಗೆಯ ಆಸನ: ಯೋಗ ಯೋಗ್ಯಾಸನಗಳಲ್ಲಿ ಪಥಾಸನ . . . ಅರ್ಧಾಸನಾದಿಯೆಂಬತ್ತಾಲ್ಕಾಸನ ಭೇದಂಗಳ್(ವಿವೇಕ. ೧೫೦). [ಪಥ?+ಆಸನ]

**ಪಥಿಕ** (ನಾ). ದಾರಿಗ; ಪ್ರಯಾಣಿಕ: "ಪಾಂಥಃ . . . ಪಥಿಕಃ— ಈ ೫ ಬಟ್ಟೆ ನಡೆವಾತಂ" (ಹಲಾಯು. ೫೯-೨೦೨); ಮೋಕ್ಷಪುರಪ್ರಸ್ಥಿತ ಭವ್ಯಪಥಿಕಪಾಥೇಯಮಪ್ಪ ಸಮ್ಯಕ್ತ್ವಮುಮಂ . . . ಭಗೀರಥ ಮಹೀಪತಿಕೆಯ್ಕೊಂಡುಂ (ಅಜಿಪು.೧೨-೧ ಪ); ಪಥಿಕರ್ ಗಿಳಿಸೋವಬಲಾ ಜನಂಗಳಂ ಕಣ್ಣೆಮೆಯಿಕ್ಕದೀಕ್ಷಿಸೆ (ಪಂರಾಮಾ. ೧-೧೧೭); ಅಸಮ ವೀರರು ಪಥಿಕರಾದರು ಗಗನಮಾರ್ಗದಲಿ (ಕುಪ್ಪಾದ್ರೋ. ೫-೧೫).[ಸಂ.]

**ಪಥಿಕಜನ** (ನಾ). ದಾರಿಯಲ್ಲಿ ಹೋಗುವ ಜನ; ಪಾಂಥಜನ: ಪಥಿಕಜನದ ಕಣ್ಗಂ ಮನಕ್ಕಂ ಪಸರಂಬಡೆದು ನೆಱೆ ಸೊಗಯಿಸುವ ಸರಸಸರಸೀರುಹಾಕರಂಗಳೊಳ್ (ಶಾಂತಿಪು. ೧-೫೭ಪ); ಎಲರಲೆಪದಿಂದುರುಳ್ದು ಪರಿದೆಸೆವ ಕುಸುಮರೇಣುಗಳೊಳಂ ಪಥಿಕಜನಂಗಳಿಂ ಪಸರಿಸಿದ ಲವಂಗಪಲ್ಲವದ ಪಾಸುಗಳೊಳಂ (ಕಾದಂಪೂ. ೯೭); ಅಮೃತಕಿರಣಬಿಂಬಾಯಮಾನಶೀತಳಚ್ಛಾಯಾಪರಿಪೀತಪಥಿಕಜನಶ್ರಮಜನಿತಸ್ವೇದ ಬಿಂದುಸಂದೋಹಮುಮಪ್ಪ ವಟವಿಟಪಿಯೆ ತನಗೆ ರಾಜಧಾನಿಯಾಗೆ (ಪಂಚತಂ. ೨೦೨-೧). [ಪಥಿಕ+ಜನ]

**ಪಥಿಶ್ರಮ** (ನಾ). = ಪಥಪರಿಶ್ರಮ: ಆತನ ಕೀರ್ತಿಪ್ರಮದೆ ಪಥಿಶ್ರಮದಿಂ ವಿಶ್ರಮಿಸಿದಳೀಲಾಲವಂಗಲವಲೀವನದೊಳ್ (ಶಾಂತಿಪು.೮-೫೫). [ಸಂ.]

**ಪಥಿಸು** (ಕ್ರಿ). ಹಿತವಾಗು; ಒಗ್ಗು; ಹಿಡಿಸು: ಉಳಿದ ಪುಷ್ಪದ ಪರಿಮಳವು ಪಥಿಸದಿರೆ ಸಂಪಗೆಯರಳ ಪರಿಮಳ ಪಥ್ಯವೇ ತುಂಬಿಗಳ ತಿಂತಿಣಿಗೆ (ಕುಪ್ಪಾದ್ರೋ. ೪-೪೩). [<ಪಥ್ಯ+-ಇಸು$_3$]

**ಪಥ್ಯ** (ಗು). ೧. ಯೋಗ್ಯವಾದ; ಉಚಿತವಾದ. ೨. ಹಿತವಾದ; ಪ್ರಿಯವಾದ.(ನಾ). ೩. ಯೋಗ್ಯವಾದುದು; ಉಚಿತವಾದುದು: ಬಿಡು ಕನ್ಯಾರತ್ನಮನೀಗಡೆ ಚಕ್ರಿಪದದ್ವಯಕ್ಕೆ ತಡೆದಿರದೆಱಗೇಪಡೆಮಾತೊ ಬಂದು ಕಾಣ್ ಕಂಡೊಡೆ ಪಥ್ಯಮಪಥ್ಯಮಿಾ ಕನಿಷ್ಠಾಚರಣಂ (ಶಾಂತಿಪು. ೩-೮೯); ಎಲೆ ಭೂಮೀಶ್ವರ ನಿನಗೆ ಪಥ್ಯಮಾವುದದಂ ಮಾಡು (ಯಶೋಚ. ೧-೬೫); ದುರುಳತನವಾರಿಂಗೆ ಪಥ್ಯವು ದಿಟ ವಿಚಾರಿಸಲು (ಕೌಶಿರಾ. ೩೮-೪). ೪. ಹಿತವಾದುದು; ಒಳ್ಳಿತಾದುದು: ಪರಿಣಾಮವೇ ಪಥ್ಯವಾಗಿ ಅಂತರಂಗಶುದ್ಧ ಪರಿಪೂರ್ಣವಾಗಿ ನಿಂದು ಸಂಸಾರಕ್ಕೆ ಸಿಕ್ಕದೆ . . . ಮಲ್ಲಿಕಾರ್ಜುನನಲ್ಲಿ ಸರ್ವಾಂಗದಲ್ಲಿ ನಿರ್ಲೇಪವಾದುದೇ ಶರಣಸ್ಥಲ (ವೋಳಿಮಾ. ೧೧೦-೩೯೭); ಸುಜನವಚನಪಥ್ಯಕ್ಕೆ

ತಾಂ ವಕ್ರಿಸುತ್ತುಂ (ರಕ್ಷಾಶ. ೨೬); ಮರಳಿ ತೊಡುತೊಡು ಬೇಗ ಕೌರವನರಸುತನವುಳಿವುದು ಕಣಾ ಹೇವರಿಸದಿರು ಹೇಳುವುದು ಪಥ್ಯವಿದು (ಕುಷ್ಕ್ಯಾಕ. ೨೫-೧೬); ನಾನು ನಿನಗೆ ಪಥ್ಯವಾದ ಒಂದು ಮಾತನ್ನು ಹೇಳಲೇಬೇಕು (ಪಚಭಾ. ೨೯೬). **೫.** (ರೋಗಿಯು) ಆಹಾರಕ್ರಮದಲ್ಲಿ ಅನುಸರಿಸುವ ನಿಯಮ,—ಕಟ್ಟುಪಾಡು : ಆಕೆಯು ಅನ್ನಪಾನಾದಿಗಳಲ್ಲಿ ಪಥ್ಯವನ್ನು ಮಾಡಬೇಕಾಗುವದು (ತೀಗಟ್ಟು. ೧೧); ಮಹಾವೈದ್ಯನಾಥಅಯ್ಯರ್ ಅವರು ಊಟದಲ್ಲಿ ಪಥ್ಯದಲ್ಲಿರುತ್ತಿದ್ದರು (ಸಂಗೀತ. ೪). **೬.** (ರೋಗಿಯು) ನಿಯಮದಂತೆ ತೆಗೆದುಕೊಳ್ಳುವ ಆಹಾರ, ಔಷಧ ಮುಂತಾದುವು; ಅನುಪಾನ: ಪಥ್ಯ ಮಜ್ಜಿಗೆಅನ್ನ . . . ಪಥ್ಯ ಮೊಸರ ಕೋವೆ ನೀರುಮಜ್ಜಿಗೆ (ವಿವೈವಿ. ೨); ಈ ಸನ್ನಿಪಾತಕ್ಕೆ . . . ಔಷಧಿಗಳಂ ಪ್ರಯೋಗಿಸಿ ಹುರಿಯಕ್ಕಿಗಂಜಿಯಂ ಪಥ್ಯಮನಿಕ್ಕುಸುವುದು (ಸಕವೈ. ೧೫೨); ಹತ್ತಿದ ರೋಗ ಹರಿಯಲಿಲ್ಲ, ಪಥ್ಯದ ಮಡಕೆ ಇಳಿಯಲಿಲ್ಲ (ಗಾದೆ). **೭.** ವ್ರತ (?) : ಇಷ್ಟಲಿಂಗವನರ್ಚಿಸದು ಪೂಜೆಯ ಮಾಡಿ ಪ್ರಾಣಲಿಂಗವನರ್ಚಿಸದು ಪಥ್ಯವ ಕೊಂಡು ಜಂಗಮವಾದೆವೆಂಬ ಮಿಥ್ಯತಥ್ಯದ ಅಣ್ಣಗಳು ನೀವು ಕೇಳಿರೋ (ಮೋಳಿಮಾ. ೧೯-೭೩).

**ಪಥ್ಯ ಮಾಡಿಸು**=ಅನುಪಾನದ ಮೇರೆಗೆ ಅನ್ನಾಹಾರಗಳನ್ನು ಸೇವಿಸುವಂತೆ ಮಾಡು : ಚಿಕ್ಕ ಮಕ್ಕಳಿಗೆ ಕಾಯಿಲೆ ಬಂದರೆ ಪಥ್ಯ ಮಾಡಿಸುವುದು ಕಷ್ಟ (ರೂಢಿ). **ಪಥ್ಯ ಮಾಡು**=ಪಥ್ಯದ ನಿಯಮಗಳನ್ನು ಅನುಸರಿಸು; ಕಟ್ಟುನಿಟ್ಟಾಗಿರು : ರೋಗಿಯು ವೈದ್ಯರು ಹೇಳಿದಂತೆ ಪಥ್ಯ ಮಾಡಬೇಕು (ರೂಢಿ). [ಸಂ.]

**ಪಥ್ಯಂಗೊಡು** (ಕ್ರಿ). ೧. ರೋಗಿಗೆ ಕಟ್ಟುಪಾಡನ್ನು ವಿಧಿಸು,—ಅನುಪಾನವನ್ನು ನಿಯಮಿಸು : ಅಟ್ಟ ವಾತದ ತೈಲವಂ ತಾಂ ಬೊಟ್ಟಿಡಿಸಿ ಲೇಪಿಸುತ ಪಥ್ಯಂಗೊಟ್ಟದಕೆ ತಕ್ಕನಿತು ಜೋಪಾಸನವನಾಚರಿಸಿ (ಬಸಪು. ೧೬-೮). **೨.** ಪಥ್ಯವಾದ ಆಹಾರವನ್ನು ಕೊಡು: (ಕ). [ಪಥ್ಯ+ಕೊಡು₁]

**ಪಥ್ಯಕಾರಿ** (ನಾ). ಹಿತಕರವಾದುದು ; ಒಳ್ಳೆಯದು : ಪಡವಲದ ಕಾಯಿ . . . ಆಡಿನ ಹಾಲು, ಮುಂತಾದಿವೆಲ್ಲಂ ಖಾಸ ಶ್ವಾಸ ಬಿಕ್ಕುಳು ರೋಗವುಂಟಾದವರಿಗೆ ಪಥ್ಯಕಾರಿಗಳೆಂದರಿವುದು (ಸಕವೈ. ೨೪೬).
[ಸಂ. ಪಥ್ಯಕಾರಿನ್]

**ಪಥ್ಯದ್ರವ್ಯ** (ನಾ). ಅನುಪಾನಕ್ಕೆ ತಕ್ಕ ಆಹಾರಪದಾರ್ಥ : ಹುರಳಿಕಟ್ಟು . . . ಚಿಲಿಕೀರೆಸೊಪ್ಪು ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕವೈ. ೧೦೨). [ಪಥ್ಯ+ದ್ರವ್ಯ]

**ಪಥ್ಯಾಹಾರ**(ನಾ).೧.ವ್ರತನಿಯಮಗಳಿಗೆ ತಕ್ಕುದಾದ ಆಹಾರ,—ಊಟ : ಅಲ್ಲಿಪ್ಪ ತಪೋಧನರ ಪಥ್ಯಾಹಾರವೋಷಧನಿಮಿತ್ಯಕವಾಗಿ . . . ಧಾರಾಪೂರ್ವಕಂ ಮಾಡಿ ಬಿಟ್ಟ ನೆಲಂ (ಸೌಇಇ. XX, ೨೧-೫೬; 1019). **೨.** ರೋಗನಿವಾರಣೆಗೆ ತಕ್ಕ ಆಹಾರ : ವೈದ್ಯರು ಪಥ್ಯಾಹಾರವನ್ನು ಹೇಳಿದ್ದಾರೆ (ರೂಢಿ). [ಪಥ್ಯ+ಆಹಾರ]

**ಪಥ್ಯೆ** (ನಾ). ಒಂದು ಬಗೆಯ ಮರ ; ಅಳಿಲೆಕಾಯಿ ಮರ : "ಹರೀತಕೀ, ಅಭಯಾ, ಪಥ್ಯಾ—ಈ ೩ ಅಣಿಲೆ" (ಹಲಾಯು. ೧೨೧-೪೬೪); ಎರದೆಳಗಾಯ್ಗೆ ಪಥ್ಯೆ ಲವಣಕ್ಕೆ ತೊಳಂಚೆ ವಿಷಾಪಹಾರಕಂ (ಲೋಕೋಪ. ೮-೨೬). [ಸಂ. ಪಥ್ಯಾ]

**ಪದ₁**, ಪದನ್, ಪದನ, ಪದನು, ಹದ, ಹದನ್, ಹದನ, ಹದನು (ನಾ). ೧. ಸರಿಯಾದ ಸ್ಥಿತಿ ; ಹವಣಾಗಿರುವ ಸ್ಥಿತಿ; ಹಾಳತ : (ಕ). **೨.** ಅವಸ್ಥೆ ; ನಿಲವು; ಸ್ಥಿತಿ ; ಪಾಡು : ನಿನ್ನನೀ ಪದಕ್ಕೆ ತಂದುದು ಮುನ್ನಿನ ಗೆಯ್ದ ದೋಷಮಿನ್ನಬಿಡದು ಜಿನೇಂದ್ರಧರ್ಮಜಲದಿಂ ಕಳೆ ಕರ್ಚಿ ಕಳಂಕಪಂಕಮಂ (ಆಪು. ೩-೪೦). **೩.** (ಸರಿಯಾದ) ಸಮಯ ; ವೇಳೆ; ಕಾಲ : ಕಡುಮುಳಿದು ನಿನ್ನ ತೊಡೆಗಳನುಡಿವೆಡೆಯೊಳ್ ಭೀಮಸೇನ ನಾನಾ ಪದದೊಳ್ ಪಿಡಿಯಲ್ಕೆಂದಿರ್ದಂ (ಪಂಪಭಾ. ೯-೫೯); ಅಲರಾಯ್ವ ಪದದೊಳೆರಡನೆಯಲರ್ಗಂ ಕೈ ಸೀಡಿ ಸೇದೆವಡುವರ್ ಸತಿಯರ್ (ಕಾದಂಪೂ.೧೦೦೫); ರಕ್ಕಸನಿದಿರೆದ್ದು ಕೊಲ್ವ ಪದದೊಳ್ (ಸುಕುಮಾ.೭-೧೬); ಸುರರ್ ತದನಂತರಂ ಸ್ವಕೀಯಾವಾಸಕ್ಕೆ ಪೋಪ ಪದದೊಳ್ (ನೇಮಿಪು. ೫-೨೪ ವ). **೪.** ರೀತಿ; ಕ್ರಮ; ಹವಣು ; ಬಗೆ: ಕೆಯ್ಯ ಮರಗಸಂ ಪುಲ್ಲಸಮೆಂಬೆರಡುಮಂ ಕಳೆದು ಪದದೊಳ್ ಬಿತ್ತದೊಡಂ ಮನದೊಳುಳ್ಳ ರಾಗದ್ವೇಷಮೆಂಬೆರಡುಮಂ ಕಳೆದು ಶುದ್ಧಚಾರಿತ್ರದೊಳ್ ಪತ್ತದೊಡವಾತಂಗೆ ಬೆಳಸುಮಾತಂಗೆ ಸುಗತಿಯುಮೆಂತಕ್ಕುಂ (ಜೀವಸಂ. ೪೭-೧೩ ವ). **೫.** (ಆಹಾರಗಳ ವಿಷಯದಲ್ಲಿ) ಪಕ್ವಗೊಂಡ ಸ್ಥಿತಿ ; ಪಕ್ವತೆ ; ಸರಿಯಾಗಿ ಬೆಂದಿರುವ ಸ್ಥಿತಿ : ಅಕ್ಕಿಯುನಿಂಬಾಗಿ ಮುಱು ಸೂಟಿ ಕರ್ಚಿ ಪೊಯ್ದೊಡೆ [ಕುದಿವೆ]ಸರೊಳುತ್ತಮಮಕ್ಕುಂ ಪದದೊಪ್ಪಲ್ ಸಮರಸನಾಗಿರ್ಕು ಕಟುಯನೆಱಿಯಲ್ಕನ್ನಂ (ಲೋಕೋಪ. ೮-೨). **೬.** ಕಳಿತುದು ; ಮಾಗಿದುದು: 'ಪದಗಾಯಿ', ಪದವಣ್' ಪರಾ. **೭.** ತೀಕ್ಷ್ಣ ; ಹರಿತ ; ಚೂಪು: 'ಪದಗೊಳಿಸು' ಪರಾ. **೮.** "ಆಯುಧಗಳಿಗೆ ಬಾಯ ಹರಿತ ಬರುವುದಕ್ಕೆ ಕುಡಿಸುವ ನೀರು" (ಪ್ರಭಣ್ಣ). **೯.** ತೇವ; ಆರ್ದ್ರತೆ : 'ಪದಂಗೊಳಿಸು' ಪರಾ. **೧೦.** ಸುರತದ್ರವ : ರಾಗವಿಲ್ಲದ ಸುಸಿಲಟ್ಕೆಱುಲ್ಲದ ಪದಂ ನೆವವಿಲ್ಲದ ಕಾಯ್ಪು . . . ಕರಂ ಚದುರರುಮಂ ಮನಂಗೊಳಿಪುದೇಂ ಕಡುಜಾಣೆಯರೋಲತಾಂಗಿಯರ್ (ಆದಿಪು. ೧೨-೪೫); ಶಯನಂ ಘರ್ಮಾಂಬುವಿಂ ನಾನೆ ಮುನ್ನಮೆ ನಾಣೊ[ಟ್ಟು]ಡಿವೋಗಿ ಸೂಸುವ ಪದಂ ಗಂಗಾಂಬುವಂ ಪೋಲೆ (ಪಂಪಭಾ. ೪-೧೦೯); ಪದಂ ಸೂಸಿ ಪಾಯ್ತರೆ ತಾಮಿಂತು ಸುಖಾಮೃತಾಬ್ಧಿ ವಳಿಯೊಳ್ ತೇಂಕಾಡಿದರ್ (ಶಾಂತೀಶ್ವ. ೫-೧೩೪); ಭಾವೆಯರೊಳ್ . . . ಇಂತೊಡಗೂಡೆ ಪದಂ ತುಳುಂಕುಗುಂ (ಮನ್ಮವಿ. ೩-೧೮). 'ನಾಣ್ಬದ' ಪರಾ. **೧೧.** ದಯೆ ; ಅನುಗ್ರಹ : "ಒಲುಮೆ ಪದವಕ್ಕು" (ಮಂಗರಾ. ೭೯-೬). **ಪದನ್ :** **೧.** ಹಳಮುಖನೆಂಬ ಪಾರ್ವಂ ತನ್ನ ಮೂಡಣ ಕೆಯ್ಯನುಟಿಲೆಂದು ಪೋಗಿ ಕೆಸಱಾದುದಂ ಕಂಡುಟಿಲ್ ಪದನಲ್ತೆಂದು . . . ಪೋಗುತ್ತಂ (ವಡ್ಡಾರಾ. ೧೫೨-೧೬). **೩.** ಪದನಂ ಕಾಣಿಸಿಕೊಳ್ವವಲ್ಲಿ ಮಟೆಗಳ್(ಆದಿಪು.೧-೫೧). **೪.** ತಪ್ಪದೆ ಗುರುವಚನಮುಮಂ ತಪ್ಪಲ್ ಬಸಸಿಗೆ ಮದೀಯ ಕೋಪದ ಪದನೇಂ ತಪ್ಪಿದುದೆ (ಶಾಂತಿಪು. ೬-೭೮); ನೋಡುವ ಮಾತಾಡುವ ಬಾಯುಗ್ಗಡುವ ಪದನಮೃತಮತಿಗೆ ಪೂರ್ವಸ್ಥಿತಿಯಿಂ ಪಾಡಟುಯುತ್ತಿರೆ (ಯಶೋಚ. ೨-೪೬); "ಗಗನಮುಖಂ ದುಷ್ಪ್ರವೇಶ್ಯಂ" ಎಂದು ಡಂಗುರ ಮಿರ್ಕುಂ; ಅದಱನೀಗಳೆ ಪೋಪುದು ಪದನಲ್ತು (ರಾಮಾಶ್ವ. ೧-೧೮). **೧೨.** ಯೋಗ್ಯವಾದುದು; ಉಚಿತವಾದುದು : ಪಾರ್ದಿರ್ದಪುವೆನ್ನು ದಯಮನಾನಿಂ ತಡೆದಿರ್ಪುದು ಪದನಲ್ತೆಂದು ದಿನಪನುದಯಂಗೆಯ್ದಂ (ಪಂರಾಮಾ. ೧೩-೯೪). **ಪದನ :** **೧.** ಕಡುಬಱೆತ ವದನದಿಂ ರದನದಿಂ ಪದನದಿಂಪಳಿದಧರದಮರನಿಕರಂ . . . ಚೀಱಿ ದೂಱಿ ತೋಱಿದ ರದ್ಬುತಾಕಾರನಂ(ಚಿಬಪು. ೩೧-೩೮). **ಪದನು :** **೩.** ಈ ಕಂದರ್ಪಂ ಶಸ್ತ್ರಾಭ್ಯಾಸದೊಳೆಂತುಂ ವಿಸ್ತೃತಮತಿಯಾಗಲಿದುವೆ ಪದನೆಂದು ನೃಪಂ ಬಗೆದು(ಕುಸುಮಾ. ೭-೫೬); ಆಂ ಸಂಧಿಪೊಡಿಂದಿನೀ ಪದನೆ ಲೇಸೆಂದಬ್ಧಿ ತನ್ನಾಶ್ರಿತಾದ್ರಿಗಳಂ ಕಾಣಿಸಲಿಂದ್ರನಲ್ಲಿಗೆ ತರುತ್ತಿರ್ಪ್ಪದೆಂಬಂತೆ ಮೇರುಗಿರೀಂದ್ರಾಗತದೇವಕೋಟಿಘಟಿಕೋಟೀಯೂಥಮೇನೊಪ್ಪಿತೋ(ಪುಷ್ಪಪು. ೧೧-೧೬). **೪.** ಪದನಿನುಣ್ಮುವ ಸುಯ್ಯೆಲರ್ಗಂಪುಗಳ್ ದಳಂಗಳನಧ

ವಾಸಿಸುತ್ತುಮಿರೆ ಘಟ್ಟಮಗುಟ್ಟುವುದಂಗನಾಜನಂ (ಚಂದ್ರಪ.೧-೩೦). **ಹದ : ೧.** ಹಾಲ ಹದದಲಿ ಹೆಪ್ಪನೆಚಿಕಿದರೆ ಮೇಲೆ ತುಪ್ಪವನುಂಬರು (ಪ್ರಭುಲೀ. ೧೭-೨೧). **೩.** ಒಬ್ಬಾನೊಬ್ಬ ಹಲಾಯುಧನು ಮಳೆಯ ಹದದಿ ಭೂಮಿಯು ಬೆದೆಯುನಱಿದು . . . ಧಾನ್ಯಗಳನ್ನು ಬಿತ್ತಿ(ಪಚಶಾ. II, ೭೬); ಶಿಶುಪಾಲ ಕಂಸನ ಮಾವನಿಂತಿವರ ಕೊಲುವಡಿದು ಹದ (ಕುಪ್ಯಾಸ. ೨-೭). **೪.** ಮಗನು ರಣದಲಿ ಮಡಿದ ಹದ ಬೀಡುಗಳೊಳಾದುದು ವಾರ್ತೆ(ಕುಪ್ಯಾದ್ರೋ.೭-೧); ನೀಲಿಯ ಮಾಡುವ ಹದವು ಬಹು ಸೋಜಿಗವಾದದ್ದು (ಮುಂಬಯಿ. ೬. ೪-೫೪); ಸರಕಾರದ ಆದಾಯ ವೆಚ್ಚಗಳಿಂದ ಪೇಟೆಯ ಹದ ಕೆಡುವುದು ಸಾಧ್ಯವಾಗದಂತೆ ವ್ಯವಸ್ಥೆ ಮಾಡಬೇಕು (ಹಣಪ್ರ. ೧೬೯). **೫.** ಸೊಜ್ಜಿಗೆಯ ಹಿಟ್ಟನೊಳು ಬೆಣ್ಣೆ ಸಕ್ಕರೆಯಿಕ್ಕಿ ಬಟ್ಟವಾಲೊಳಗಂಬಲಿಯ ತೆಜದಿ ಬೆರಸಿಯೊಲೆಯೊಳಗೆ ಗಾರಿಗೆಯ ಹದದೊಳು ತೊಳಸಿ (ಸೂಪಶಾ.೧-೨೦); ಪುತ್ರಜೀವಿ ತಿರುಳನ್ನು ಚೆನ್ನಾಗಿ ಕುಟ್ಟಿ . . . ಹದವ ನೋಡಿ, ಬಸಿದುಕೊಂಡು (ಸಕವೈ. ೭೦). **೭.** ಚಿಗುರುಗಳೆನುವ ಭಲ್ಲಗಳ ಅಲಗುಗಳಂ . . . ವಿರಹಿಗಳ ಹೃದಯವೆಂಬ ಮಡುವಿನಲ್ಲಿರುವ ಕೆಂಪಾದ ನೀರಿನಿಂದ ಹದಂಗಳಂ ಕೊಟ್ಟು (ಸೌಗಂಧಿ. ೪೭೩-೨೧); ಆ ಶಿಖಂಡಿಯು ಕತ್ತೀ ಹದವುಳ್ಳ ಅಂಬಿನಿಂದ ಪೆಟ್ಟು ಬಿದ್ದು (ಕೃಪಾಕ. ೭೭); ಮೊಂಡಪ್ಪನ ಕತ್ತಿ ಬೆಣ್ಣೆ ಕೊಯ್ಯುವಷ್ಟು ಹದವು (ಗಾದೆ). **೧೩.** ಅಳವು ; ಪ್ರಮಾಣ : ನೀನು ಸ್ವಲ್ಪ ಬೇಗ್ಗೇ ಬಂದರೆ ನಿನ್ನ ಹದದ್ದೇ ಹಿಟ್ಟು ಮಾಡಬಹುದಿತ್ತು (ಮೂರುದಾ. ೧೩೮); ಎಷ್ಟು ಹೂ ಹಾಕಬೇಕು . . . ಯಾವ ಹದದಲ್ಲಿ ಭಟ್ಟಯಿಳಿಸಬೇಕು (ಹುಹೊ. ೧೬೪). **೧೪.** ಜಾಣ್ಮೆ; ಕೌಶಲ : ಕಂಡ ಒಂದೊಂದು ಸಂಗತಿಯನ್ನು ತಟ್ಟನೆ ಪದಕ್ಕೆ ತಿರುಗಿಸುವ ಹದ ಅವರದು (ಷರೀಫ. II, ಮೊದಲ ಮಾತು). **೧೫.** (ಲೋಹದ ವಿಷಯದಲ್ಲಿ) ತಕ್ಕ ಗಡುಸು ಮತ್ತು ಸ್ಥಿತಿಸ್ಥಾಪಕತೆಗಳ ಗುಣ : ಸಾಮಾನ್ಯ ಉಕ್ಕನ್ನು ಕಾಯಿಸಿ ನೀರಲ್ಲಿ ಮುಣುಗಿಸಿದರೆ, ಅದರ ಹದವು ನಷ್ಟವಾಗಿ, ಅದು ಬಿರುಸೋ ಮಿದುವೋ ಆಗುವುದು. ಆದರೆ ಈ ಮೆಂಗನೀಸ್ ಮಿಶ್ರವಾದ ಉಕ್ಕಿನ "ಹದ"(Temper)ವು ಬದಲಾಗುವುದಿಲ್ಲ (ಬಾಲಪ್ರ. III, ೧೨೪೫). **ಹದನ್ : ೧೦.** ಹಧನಂ ಹಸ್ತಾಗ್ರದಿಂ ಘ್ರಾಣಿಸಿ ಬೆದೆವಿಡಿಯಂ ಮೆಚ್ಚಿ ಮೇತಕ್ಕೆ ಮೆಯ್ದ್ವಾಱದೆ . . . ಕಾಡೊಳ್ ಮದನವ್ಯಾಸಂಗದಿಂದಿರ್ದುದು ಗಿಡಿಗಿಡಿಜಂತ್ರಂಬೊಲಂದೊಂದಿಭೇಂದ್ರಂ (ಲೀಲಾವ.೮-೫). **೧೬.** ಸಂಗತಿ; ವರ್ತಮಾನ; ಸುದ್ದಿ : ಈ ಹದನನೆನಗಲ್ಲಿಯೆ ಪೇಟ್ದಿಯಪ್ಪೊಡೆನ್ನೆರ್ದೆಯನಾಗಳೆ ಕೊಂಡು ಬರ್ಪೆಂ (ಪಂಚತಂ. ೨೮೦-೯); ಗಿಳಿ ಜವದಿಂದೆಟ್ದು ಮುಂಚೀ ಹದನನಱುಪುವೆನೆಂದು ಪಾಱು ಬಂದಸುಕೆಯ ಪೊಸ ಬನಮಂ ಪೊಕ್ಕು (ಉದ್ಭಟ.೭-೧೨೬ ಪ); ಬಿನ್ನವಿಸಲೆಂದಿರ್ದ ಹದನಂ ಮುನ್ನಱಿದು ಪರಮೇಶ್ವರಂ ಹಿಮುಗುನ್ನಯನದಿಂ ನೋಡುವವಸರದೊಳ್ (ಬಸಪು. ೧-೫೫); ಅರಸನಿಂದು ಸಜೀವಿಯೋ ಸುರಪುರನಿವಾಸಿಯೊ ಹದನನೇನೆಂದಱಿಯೆನು (ಕುಪ್ಯಾಕ. ೧೪-೩೮). **ಹದನ : ೩.** ರಾಘವನಿಂದ ಬದುಕುವೆನೆನಲಭಾಗ್ಯಂಗಾದುದೀ ಹದನ ಎಂದು ಮನದೊಳಗಳಲಿ ವಿಭೀಷಣ ನೊಂದು (ತೊರರಾ. ೨೯-೧೯). **೪.** ಅರಸನಿಂ ಧನಮಿತ್ರಂ ಬೀಟ್ಕೊಂಡು ಬಂದು ಕಾರ್ಯದ ಹದನನೆನ್ನೊಳ್ ಪೇಟಲ್ (ದಶಕು. ೮-೧೫೧ ಪ); ಬರುತ ಕಳ್ಳರ ಹೆಜ್ಜೆ ಹದನಮಂ ನೋಳ್ಪಾಗಲರಸು ಮೆಟ್ಟುವ ಪಂಚರತ್ನಮಯಪಾದುಕಂ . . . ಕನ್ನದ ಬಾಯೊಳಿರೆ ಕಂಡು (ಸಮ್ಯಕೌ. ೨-೨೨); ಈ ಹುಮ್ಮಸದ ಕುದುರೆಯನು ಏರುವ ಹದನವನು ಕಲಿಸಯ್ಯಾ (ಅಂತರಾ. ೫೦). **೭.** ಹದನವಾಗಿಹ ಬಾಣವನ್ನಾ ಚದುರ ಧನ್ವಿಯು ಪೂಡಿ ಹೆದೆಯಲಿ (ರಘುವಂ. ೯೭-೫೭); ಅದರ ಉಗುರು ಬಹಳ ಹದನ (ಮುಂಬಯಿ. ೧-೩೮); ಹದನವಾದಗಲ ಕತ್ತಿ ಕೈಯೊಳಿದೆ (ನೆಲಮು. ೮೪-೧೧). **ಹದನು : ೨.** ಅವನಿಪತಿ ಪೂರಾಯದುಗುಡದಲಿ ನರನ ಹದನೇನೋ ವೃಕೋದರನಿರವು ತಾನೆಂತೆನುತ ಚಿಂತಾಭರಿತನಿದ್ದನು (ಕುಪ್ಯಾಅ. ೧೧-೨); ಏನ ಮಾಡುವೆನೇನು ದಿಕ್ಕೆನಗೇನು ಹದನೆಂದಳಲಿ ಬಳಲುವ ಹೀನಹೃದಯನನುಪಚರಿಸಲು ವಸಿಷ್ಠನೈತಂದ (ತೊರರಾ. ೧-೪-೪); ಆ ಸಮಯದಿ ಸದ್ಗುರುರಾಯ ನೆನೆದ ಪರಾಶರಮುನಿಗಾದ ಹದನ (ಮೋಹತ. ೫-೨೭); ಶೋಕಿನ ನಾಯಕಿಯರಿರ್ದರಾ ಕೇರಿಯೊಳ್ ಸೋಕಿದವರ ಹದನೇನು (ಕಂಸವಿ. ೬-೧೦೮). **೪.** ಸುಖವನನುಭವಿಸಿ ಆನು ಸುಖದ ಹದನನು ಕಂಡೆ ದುಃಖವನನುಭವಿಸಿ ಆನು ದುಃಖದ ಹದನನು ಕಂಡೆ (ಸಮಾಪ. ೯. ೫೯೭-೩೩); ದೇವ ನಮ್ಮದು ಧರ್ಮಯುದ್ಧವಿದಾವ ಹದನನು ಬೆಸಸಿದಿರಿ (ಕುಪ್ಯಾದ್ರೋ. ೧೪-೧೨); ರಜಕ ನಾಡಿದ ದೂಸಱಿಂ ನೆನೆದು ಕುಲಪತ್ನಿಯಂ ಬಿಡುವ ಹದನಾವುದು (ಜೈಮಿಭಾ. ೧೮-೫೩); ಒಳ್ಪಿಂಡಿರೀ ಧರ್ಮದ ಹದನಱಿತಾಚರಿಸುವುದು (ಹವಿಬ. ೧-೬೧). **೫.** ಹದನಾದ ಮಾಂಸಮಂ ಮುಂದಿಡುತ್ತ ಭವಂಗೆ ಮುದದಿಂದಮರ್ಪಿಸಿದನಾ ಪುಳಿಂದಂ (ಮಹಾವಿ. ೭-೪೪). **೧೨.** ಸದೆ ಕೂಡಿಸಲಿಕ್ಕೆ ತಿಳಿಯದವ ಹದನಾದ ಕೆಲಸ ಮಾಡ್ಯಾನೇ ? (ಗಾದೆ). **೧೬.** ಪರಮೇಶ್ವರಂಗೀ ಹದನನಱುಹಬೇಕೆಂದು ನಂದೀಶ್ವರನತಿತ್ವರಿತಗಮನದಿಂದೈತಂದು (ಚಬಪು. ೩೧-೨); ತಾಳಿಕೊ ಸಖಿ, ಅಂಜಿಕೆಯುಳಿ, ಪೇಳೇನೀ ಹದನು ? (ಅಹಲ್ಯೆ. ೭-೧೫). **೧೭.** ಕಾರಣ : ಎಮ್ಮ ಬರಿಸಿದ ಹದನದೇನು (ಕುಪ್ಯಾಅ. ೪-೯೭); ಮೋಹವಿಂತೇಕಿವರೊಳೆನಗೆಂಬಾ ಹದನನಱಿವೊಡೆ ಬಗೆದು ಜಿತಮೋಹಿಗಳನಾ ಚತುರನೆಳನಗೆ ತೊಳಗಲಿಂತೆಂದ (ಸಾಳ್ವಭಾ. ೪-೫೦). **೧೮.** ಹಂಚಿಕೆ; ಉಪಾಯ: ಇದಕ್ಕೆ ಹದನೇನು ? ಆಲೋಚಿಸಿ ಹೇಳು (ಭೀಷ್ಮಚ. ೧೪೭).

**ಪದ ಮಾಡು, ಹದ ಮಾಡು, ಹದನು ಮಾಡು = ೧.** ಚೂಪು ಮಾಡು ; ಹರಿತಗೊಳಿಸು : ಪದ ಮಾಡಿ ತಳುವಿಕ್ಕಿ ಪೊಳೆವ ಬತ್ತೀಸಾಯುಧವಿಡಿದಭ್ಯಾಸಿಗಳ . . . ಕಾದಿಸುವ ಕೋವಿದ ಶಿರೋಮಣಿ (ಮೋಹತ. ೧೭-೮೩); ನಾಲಗೆಯನು ಹದ ಮಾಡು ಜಡವನು ತೊರೆದೇಳು ಜಗ ನಿನಗಡಿಯಾಳು (ಇಂಚಾಪ. ೧೫೩-೫೨). **೨.** ಸರಿಮಾಡು ; ಅನುವುಗೊಳಿಸು : ಗಂಧಕುಂಕುಮರಸಭರಿತಗಂಧವ ಗಂಧೋದಕದಿಂದೆ ಹದಮಾಡಿ ಗಂಧವಟ್ಟಲನಿರಿಸಿದಳು (ಮೋಹತ. ೨೧-೯); ಈ ದಿವ್ಯದರ್ಶನಫಲ ಕೈಸೇರಬೇಕಾದರೆ ಸಾಧಕನು ತನ್ನ ಚಿತ್ತಕ್ಷೇತ್ರವನ್ನು ಶುದ್ಧಿ ಮಾಡಿ, ಸಂಯಮ ನಿಯಮಗಳಿಂದ ಹದ ಮಾಡಿ . . . ಕರುಣೆಗೆ ಕಾಯಬೇಕು (ಜಗದಾ. ೨೬); ಹಡೆದಮ್ಮ ನೀರಾ ಹದ ಮಾಡೀ ಏನಂದಾಳೂ (ಹುಟ್ಟಹ. ೧೭೬); ಅಂಕಿ ಅಂಶಗಳನ್ನು ಹದನು ಮಾಡಿ . . . ತರ್ಕಸಮ್ಮತವಾದ ಅನುಮಾನಗಳನ್ನು ಸ್ಥಾಪಿಸುವುದು ಸಂಖ್ಯಾಶಾಸ್ತ್ರದ ಕಾರ್ಯ (ಕವಿಕೋ. I, ೮). **ಹದಕ್ಕೆ ಬರು** = ಸರಿಯಾದ ಸ್ಥಿತಿಗೆ ಬರು : ಕುಟ್ಮಲಃ . . . ತತ್ಕಾಲದಲ್ಲಿ ವಿಕಸಿತವಾಗತಕ್ಕಷ್ಟು ಹದಕ್ಕೆ ಬಂದ ಹುವ್ವಿನ ಮಗ್ಗು (ಸಿದ್ಧಾಂತಿ. ೧೧೫); ಮರಮುಟ್ಟುಗಳ ಬೆಲೆ ಹದಕ್ಕೆ ಬರುವವರೆಗೆ ಆ ಕೆಲಸಕ್ಕೆ ಕೈಹಾಕುವಂಥ ಹುಚ್ಚನಲ್ಲ (ಯೋಧಪು. ೨೫). **ಹದದಡಿಕೆ** = ಚೆನ್ನಾಗಿ ಬಲಿತ ಅಡಿಕೆ : (ಕಿ). **ಹದನಾಗು, ಹದವಾಗು** = **೧.** ಸರಿಯಾದ ಸ್ಥಿತಿಗೆ ಬರು : ಅವರ ಮನಸ್ಸು ಈ ಕಾರ್ಯಸಾಧನೆಗಾಗಿ ಹದನಾಗುತ್ತಿತ್ತು(ಶ್ರೀವಿವ್ಯಾ.೧೫೯); ಅಧರರದನದೊಳಗಿಟ್ಟು ತಾ ಹದವಾಗಿಯೊದಗಿ ವಕ್ಷಸ್ಥಳಕಾಗ ಎದೆಗಳ ಹೂಡಿ ನಿನ್ನಯ ಮುನಿಸನು ಕಳೆವುದಕೆನ್ನಳವೆ (ಕಂಸವಿ. ೬-೧೭೧); ಕಂಠನಾದ ಹದವಾಗಲೆಂದು ಮನಸ್ಸಿನಲ್ಲೇ ಹರಸಿಕೊಂಡು ಮುಖವನ್ನು ತಮಟೆಯಂತೆ ಕೆಂಚಗೆ ಕಾಯಿಸಿದೆ (ನಂಟರು. ೩೮). **೨.** ತೀಕ್ಷ್ಣವಾಗು ; ಹರಿತವಾಗು : ಅದರ ಕೊಂಬುಗಳ ತುದಿಗಳು, ಎದುರು

ಬರುವ ಶತ್ರುಗಳನ್ನು ಒಂದೇ ಶಿವಿತಕ್ಕೆ ಸೀಳಿಬಿಡುವಷ್ಟು ಪದನಾಗಿದ್ದವು (ಬಂಗಾಹೆ. ೩೧). **೩.** ನಯವಾಗು ; ನುಣುಪಾಗು : ಕರುಗಳು . . . ಬೇಗನೆ ಮೈಗೂಡುತ್ತವೆ. ಮುಂಡದ ತೂಕ ಹೆಚ್ಚು, ಹದ ವಾಗುವ ಅಟ್ಟೆ ಭರ್ಜರಿ (ಕವಿಕೋ. I, ೨೨೨).

[**ದೇ.॥ ತಮಿ. ಮಲ. ಪತ ; ತೆಲು.** ಪದನು, ಪದುನು, ಹದನು ; **ಮಲ್ತೊ. ಪತೊ**]

**ಪದ**$_2$ (ನಾ). **೧.** ಚರಣ ; ಅಡಿ ; ಪಾದ : "ಚರಣಂ ಕ್ರಮಮಂಘ್ರಿ ಪದಂ" (ವಸ್ತುಕೋ. ೬೭-೨) ; ಅಲೆದುಂ ನೋಡಿ[ಯೊ]ಜಲ್ದುವಿಟ್ಟ ಪದಮುಂ ನೋಳ್ಪುಂ ಕಳಲ್ದುಂ ಪಳಂಚಲೆದುಂ ಮುಟ್ಟಿದ ಸೀಯನಪ್ಪ ದನಿಯುಂ ಮೇಲ್ವಾಯ್ದುಮೇವ್ಸೆಸಿಯುಂ ಪಿರಿದುಂ ಉಂದುವ ಬೇಟ ದೊಂದು ಸುಸಿಲುಂ ನೋಯಿಕ್ಕುಂ (ಆದಿಪು. ೧೨-೨೩) ; ಪದದಿಂ ನಾಥವರಂ ವಾತದ ತಾಣಂ (ಲೋಕೋಪ. ೯-೨) ; ಪದವಂ ಸುಖಾಶ್ರು ವಿಂದಂ ತೊಳೆದು (ತಿರುರ. ಹ. ೮-೨) ; ಅಂಬುಜಾಕ್ಷನ ಪದವ ಮಱೆದರೆ ಪಾತಕದ ದುರ್ಗದಲಿ ಕೆಡಹನೆ ನಮ್ಮನು (ಕುವ್ಯಾಸ.೫-೪೨). **೨.** ಹೆಜ್ಜೆ ; ದಾಪು : ಉದ್ಘ್ರಹೀತತಾಂಬೂಲಕರಂಕವಾಹಿನೀಸ್ಕಂಧವಿನ್ಯಸ್ತಹಸ್ತನು ವಾಗಿ ಕತಿಪಯಪದಂಗಳಂ ನಡೆದು (ಕಾದಂಪೂ. ೬೯). **೩.** ಹೆಜ್ಜೆಯ ಗುರುತು ; ಪಾದದ ಜಾಡು : ಪದಮುಮಸಿಂಬುಮನಣಮಱಿಯದ [ದೇವು]ದು ಬದ್ದೆ ಬೆಳ್ಗಂ ಪಜ್ಜೆ ದಲೆಂಬುದನೆರಡುಮನಱಿವಾತನೆ ಚದುರಂ (ಪಂಪಭಾ. ೫-೪೫). **೪.** ಹಾದಿ ; ಮಾರ್ಗ : 'ಪದಂಗೆಡು' ಪರಾ. **೫.** ಕುರುಹು ; ಸಂಕೇತ ; ಚಿಹ್ನೆ. **೬.** ಅಧಿಕಾರ ; ಪದವಿ ; ಹುದ್ದೆ ; ಸ್ಥಾನ : ವಿಪುಳಯಶೋವಿತಾನಗುಣಮಿಲ್ಲದನಂ ಪ್ರಭು ಮಾಡಿ ಪೂರ್ವಭೂಮಿಪರ ಪದಂಗಳಂ ಪುಗಿಸಿ (ಪಂಪಭಾ. ೧-೧೪) ; ಪದಂ ನಿನಗೆ ಮುಕ್ತಿಯೊಂದೆ ಕುಡುತಿರ್ಪೆ ನೀನಂತದಂ ಪದಾಶ್ರಿತರ್ಗೆ (ಚಂದ್ರಪು. ೧೪-೯೭) ; ಪದದ ದರ್ಪದಲಂಬುಜಾಕ್ಷನ ಪದವ ಮಱೆದರೆ ಪಾತಕದ ದುರ್ಗದಲಿ ಕೆಡಹನೆ ನಮ್ಮನು (ಕುವ್ಯಾಸ. ೫-೪೨) ; ನಿನಗೆ ಕೊಟ್ಟಪೆನು ಪುಸಿಯಲ್ಲ ಚತುರ್ವಿಧಪದಂಗಳನು (ಪ್ರಾಥಂ. ೬-೫೬) ; **೭.** ಸ್ಥಳ ; ಜಾಗ : ಉಡೆದೊವಲುಟ್ಟು ಕಾಳಿಕೆಯ ಕುಪ್ಪಸವಿಟ್ಟು ಪದಂಗಳಲ್ಲಿ ಮೆಲ್ಲಡಿಗಳ ಸಾರ್ಚಿಕೊಂಡು . . . ಚರಿಸುತಿರ್ದನದೊರ್ವ ಪುಳಿಂದನಾಯಕಂ (ಮಲ್ಲಿಕಾ. ೩-೨೦೨). **೮.** ಸದ್ಗತಿ ; ಮೋಕ್ಷ : ಗುರುಪಾದಕೆಱಗಿದರೆ . . . ಪರಿಣಾಮವಕ್ಕು ಪದವಕ್ಕು (ಸರ್ವಜ್ಞ. ೯೯). ಇದೆ ತುಳಸಿ ಸೇವಿಸಲು ಪೂರ್ವದಲಿ . . . ಒಬ್ಬ ಭೂಸುರ ಪದಕೆ ಪೋದ (ವಿವಾಳ್ಯ. ೯೮-೧೧). **೯.** ಅವಕಾಶ ; ಆಸ್ಪದ : ಮೊದಲೊಳ್ ತಮ್ಮನೆ ನೋಡಲಿತ್ತ ಪದದೊಳ್ ಕೈಕೊಂಡವರ್ (ಕಾದಂಪೂ. ೫೮೯). 'ಪದಂಬಡೆ' ಪರಾ. **೧೦.** ಮನೆ ; ಆಶ್ರಯ ; ಆವಾಸಸ್ಥಳ. **೧೧.** ವಸ್ತು ; ಪದಾರ್ಥ ; ದ್ರವ್ಯ. **೧೨.** ಕಾರಣ ; ಹೇತು ; ಮೂಲ **೧೩.** ನೆಪ ; ವ್ಯಾಜ. **೧೪.** ವ್ಯವಹಾರ ; ಕಾರ್ಯ ಭಾರ. **೧೫.** ರಕ್ಷಣೆ ; ಕಾಪು. **೧೬.** ವೇದಮಂತ್ರಗಳನ್ನು ಹೇಳುವ ರೀತಿಗಳಲ್ಲಿ ಒಂದು ಪ್ರಕಾರ : ಬ್ರಹ್ಮರಾಕ್ಷಸನಾಗಿ ಯೊಕ್ಕಲಿಗನೋರ್ವನಂ ಹಿಡಿದು ಬೋಧಿಸಿಕೊಂಡು . . . ನಖಮುಖ ಗಳಿಂ ಗಣನೆಯಿಂ ಗುಣಿಸಿ ಪದ ಪಾಳಿ ಸುಜಟಾಕ್ರಮಂ (ವೀಶೈಪು. ೪-೭-೨೧) ; ಉದಾತ್ತ . . . ಪದ ಕ್ರಮ ಜಟಿ ಚರ್ಚೆಯೆಂಬ ಮುಗ್ಧಜು ಸ್ವಾನಾಭಿಧಾನಮುಳ್ಳ ವೇದಶಾಸ್ತ್ರಂಗಳಂ ವಚಿಸುವೆಂದಡಾಭಾಸ ರೂಪವಾದವು (ದಶಾವ. ೨-೧೩ ವ) ; ಅವನು ಕಲಿಯಬೇಕಾಗಿದ್ದ ವೇದದ ಮಂತ್ರಭಾಗವನ್ನು ಜಟ, ಪದ, ಕ್ರಮಗಳ ರೀತಿಯಾಗಿ . . . ಒಪ್ಪಿಸಿದನು (ಭಾರದ. ೨೬೧). **೧೭.** ಕಿರಣ ; ಕದಿರು. **೬, ೧೭** : ಪದವುತ್ಕುತ್ತುಂಗಗೋತ್ರಾಚಳಶಿಖರದೊಳೊಪ್ಪುತ್ತಿರಲು . . . ಜಗದ್ವಂದ್ಯಮಾದತ್ತು ದಯಾದಿತ್ಯಪ್ರಭಾವಂ ಪ್ರಕಟಿತಭುವನಾಭೋಗ ತೇಜೋವಿಳಾಸಂ(ಎಕ. V, ಬೇಲೂರು.೧೭-೫೩ ; 1136). **೧೮.** ಅಳೆಯುವ ಒಂದು ಪ್ರಮಾಣ ; ಮನೆದಾಯ : ಮನೆಯಂಗಲದಿಂದೆ ಗುಣಿಯಿಸು ನೀಳಮಂ ಪದಮೆನಿಕ್ಕುಂ (ಲೋಕೋಪ. ೩-೨೦) ; ನಾಲ್ಕು ಪದವು ಪ್ರಮಾಣದಲ್ಲಿದೆ, ಆಗ ಆದ್ಯಂತ ಪದಗಳ ಗುಣಾಕಾರವು ಮಧ್ಯ ಪದದ ಗುಣಕ್ಕೆ ಸಮವಾಗಿದೆ (ಭೂಮಿಅ. ೫೨). **೧೯.** [ವ್ಯಾಕ] ಪ್ರತ್ಯಯಸಹಿತವಾದ ಶಬ್ದ ; ಮಾತು : "ಪ್ರಕೃತಿ ಪ್ರತ್ಯಯಂ ಗಳೆರಡುಂ ಕೂಡೆ, ಪದಮಕ್ಕುಂ" (ಶಮದ. ೩೫ ವೃತ್ತಿ) ; ಪದಮರ್ಥಪ್ರತಿಪಾದನಪ್ರವಣಮರ್ಥಂ. . . ರಸಪ್ರಸ್ಯಂದಿ ಮಾಟ್ಕುಂ ಮನೋಮುದಮಂ (ಮಲ್ಲಿಪು. ೧-೩೭) ; ಪದಮಂ ಪ್ರಾಸಮುಮಂ ತಪ್ಪದೆ ಬಲ್ಲಂ (ಅನಂಪು. ೧-೪೩) ; ಪದ ಪದದಕ್ಕರಕ್ಕರದ ವಾಕ್ಯದ ವಾಕ್ಯದ ವಿಶ್ರಮಂ ಲಯಂ ಪುದಿದ ಬೆಡಂಗಿನಿಂ . . . ರಸಂಗಳೋಜೆವಡೆದೋದುವನೀ ಚಿಕದೇವಭೂವರಂ (ಚಿಕವಿ. ೪-೯೬) ; ಪ್ರಕೃತಿಯೂ ಪ್ರತ್ಯಯವೂ ಕೂಡಿದರೆ ಪದವಾಗುತ್ತದೆ (ಸುಧ್ಯಮ. ೫). **೨೦.** [ಸಂಗೀತ] ಗೀತರಚನೆಯಲ್ಲಿ ಒಂದು ಪ್ರಕಾರ : ಭರತನಾಟ್ಯಕ್ಕೆ ವಿಶಾಸಲಾದ ಈ ಪದಗಳು ಶೃಂಗಾರರಸ ಪ್ರಧಾನವಾಗಿದ್ದು, ಭಗವಂತನ ಲೀಲಾವಿನೋದಪ್ರಸಂಗಗಳನ್ನು ಒಳಗೊಂಡ ಸಾಹಿತ್ಯದಿಂದ ಕೂಡಿರುತ್ತವೆ (ಸಂಗೀಚಂ. ೭೬) ; ನಿಬದ್ಧಗಾಯನದಲ್ಲಿ (೧) ಬರೀ ರಾಗಲಯಪ್ರಧಾನವಾದ ಪ್ರೌಢಬಂಧಗಳೂ (ಧ್ರುವ, ಪದ . . . ಜಾವಳಿ ಇತ್ಯಾದಿ) ಕೃತಿಗಳೂ ಸೇರುತ್ತವೆ (ಭಾರದ. ೫೪೨). **೨೧.** ಪದ್ಯ ; ಹಾಡು ; ಗೀತೆ : ಉದಯಕಾಲದೊಳೆದ್ದೊಲಿದಿಷ್ಟದೈವದ ಪದಗಳ ಪಾಡುವಂದದೊಳು (ಹರಿಬ. ೨-೧೫) ; ಮಗಳೇ, ಸಂಗಣ್ಣಗೆ ನಿನ್ನ ಪದಗಳನ್ನು ಕೇಳೋ ಆಸೆ ಆಗಿದೆ . . . ಎರಡು ಪದಗಳನ್ನು ಹೇಳವ್ವ (ಹಾಹುತ್. ೭೨) ; ಪದದಂತೆ ತಾಳ, ಮನದಂತೆ ಗರ್ವ (ಗಾದೆ). **೨೨.** ಪದ್ಯದ ಒಂದು ಪಂಕ್ತಿ,—ಸಾಲು. **೨೩.** [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಪದಯುಗಳಂ ಸಮ ಉಭಯಂ ಬಾಹುಕಿವಿಗಳೆರಡಜ ನಾಮಂ (ವ್ಯವಹಾ. ೯-೨).

ಪದವಾಕ್ಯಪ್ರಮಾಣಜ್ಞ = ವ್ಯಾಕರಣ, ತರ್ಕ ಮತ್ತು ಮೀಮಾಂಸೆಗಳೆಂಬ ಶಾಸ್ತ್ರಗಳನ್ನು ಬಲ್ಲವನು : ಪದವಾಕ್ಯ[ಪಾಂಶಂ.ಕ್ಯಾರ್ಥ] ಪ್ರಮಾಣಜ್ಞನೆಂದೆನ್ನ ಕೋವಿದರು ಕೊಂಡಾಡುವರು (ಕುರಾಸಾಂ. ೧-೭೩). **ಪದವಾಕ್ಯವಿದ** = ವ್ಯಾಕರಣ ಮತ್ತು ತರ್ಕಶಾಸ್ತ್ರಗಳನ್ನು ಬಲ್ಲವನು : ಪದವಾಕ್ಯವಿದರಾಗ ವಾದಗಡಣೆಯ ಬಿಟ್ಟು ಒದವಿಪರು ದಿಟದರಿವ (ಮಂಕುಕ. ೪೧). [ಸಂ.]

**ಪದಂಗಲಿ** (ನಾ). ಒಂದು ಸ್ಥಳದ ಹೆಸರು (?) : ಎವಂಜ್ಞಿಲ್ಲಳೊನ್ನು ದೇಗುಲಕ್ಕೆ ನೆಲನ ಕಟ್ಟಿಸಿ ಕೊಟ್ಟ ಪದ[ಙ್ಗ]ಲಿಗಂ ಒನ್ದು ನರಯಣನ ದಾನಗೊಟ್ಟ (ಸೌಇಇ. XI-i, ೩೫-೧೦ ; 933). [ ? ]

**ಪದಂಗಾಣ್,** ಪದಗಾಣ್ (ಕ್ರಿ). ಹದಗೊಳ್ಳು ; ಪಕ್ವವಾಗು : ಕನ್ನಡದೊಳ್ ಬಿಂದುವಿಕಲ್ಪಕ್ಕೆ . . . ಪದಂಗಂಡಂ—ಪದಗಂಡಂ [ಪಾಂಠಾಂ. ಪದಂಗೊಟ್ಟಂ, ಪದಗೊಟ್ಟಂ, ಪದಂಗೊಂಡಂ, ಪದಗೊಂಡಂ] (ಶಮದ.ಮ.೧೭೮ ಪ್ರಯೋ). **ಪದಗಾಣ್** : ಮೇಲಿನ ಪ್ರಯೋಗವನ್ನು ನೋಡಿ. [ಪದ$_1$ + ಕಾಣ್]

**ಪದಂಗಾಸು**$_1$, ಹದಗಾಸು (ಕ್ರಿ). **೧.** ಹದವಾಗುವಂತೆ ಕಾಯಿಸು ; ಪುಟವಿಕ್ಕು : ಉದಯಾದ್ರಿಯೊಳ್ ಪದಂಗಾಸಿದ ಪೊನ್ನ ಪುಂಜಿಯ ವೊಲಿರ್ದುದು ಕಣ್ಗೆ ಹಿಮಾಂಶುಮಂಡಲಂ (ಪಂಪಭಾ. ೩-೮೧). 'ಪಟಿಂಗಾಸು' ಪರಾ. **ಹದಗಾಸು : ೨.** ಪಕ್ವವಾಗುವಂತೆ ಬೇಯಿಸು ; ಹದಕ್ಕೆ ಬರುವಂತೆ ಅಡು : ನಿಮ್ಮ ವಿಸ್ರಸಾವೇಶದ ಅಂಗಜಾಗ್ನಿಯಿಂದ ಹದಗಾಸಿ ತನಿಪಾಕ ಮಾಡಿಕೊಂಡು ಸವಿನೋಡಿಯೇ ಬಿಡಬೇಕು (ಮಂತ್ರಶ. ೨೯-೧೪). [ಪದ$_1$ + ಕಾಸು$_1$]

**ಪದಂಗಾಸು$_2$** (ನಾ). ಪುಟವಿಟ್ಟುದು; ಕಾಸಿ ಶುದ್ಧಗೊಳಿಸಿದುದು: ಅನುವಿಸಿ ಕರೆದಟ್ಟುತ್ತಿಗೆ ಸೊರ್ಕಿನ ಸಿಂಧುರವುನಿಲಜವದ ವಾಜಿ ಪದಂಗಾಸಿನ ಪೊಂಗಳಲ್ಲದೀಯದೆ ನಿನಗೆಂತುಂ ಲೋಭಮುಂಟೆ ದಾನವಿನೋದ (ಲೀಲಾವ. ೪-೪೩). [<ಪದಂಗಾಸು$_1$]

**ಪದಂಗುಟ್ಟು** (ಕ್ರಿ). ಹೇಳು ; ನುಡಿ : ಪುಷ್ಪಶರವಶೀಕರಣಮಂತ್ರಮಂ ಪದಂಗುಟ್ಟದ ಕೋಗಿಲೆಗಳಿಲ್ಲ (ಪಂರಾಮಾ. ೧-೧೦೬ ವ); ಚತುರಚತು ರಿಕೆಯರೋದಿಸಿದ ಮದನಾಗಮಂಗಳಂ ಪದಂಗುಟ್ಟಿ ಪರಮಪಂಡಿತಂ ಗಳೆನಿಪ ಪಂಜರದ ಪಂಡಿತವಕ್ಕಿಗಳ್ (ಪುಷ್ಪಪು. ೨-೬೬ ವ) ; ಕುಸುಮ ಸಾಯಕ ಜನವಶ್ಯಮಂತ್ರಂಗಳನೊಸೆದು ಪದಂಗುಟ್ಟದಿರ್ಪ ಪಸುಳೆಪಾರಿವ ಗಳಾ ಬನದೊಳಗಿಲ್ಲ (ಕುಂರಾಸಾಂ. ೩-೨೨). [ಪದ$_2$+ಕುಟ್ಟು$_1$]

**ಪದಂಗುಡು** 'ಪದಂಗೊಡು' ನೋ.

**ಪದಂಗೆಡು** (ಕ್ರಿ). ಮಾರ್ಗ ತಪ್ಪು ; ಹಾದಿ ತಪ್ಪು : ಕಾಣದವಂ ಗುರ್ವಿದ ಮರ್ವು ದಿಗ್ಭ್ರಮೆ ಪದಂಗೆಟ್ಟಂಗೆ (ಕಾದಂಪೂ. ೮೦೩). [ಪದ$_2$+ಕೆಡು$_1$]

**ಪದಂಗೊಡು,** ಪದಂಗುಡು, ಪದಗುಡು, ಪದಗೊಡು, ಹದಗೊಡು (ಕ್ರಿ). ೧. ಸರಿಯಾದ ಸ್ಥಿತಿಗೆ ಬರುವಂತೆ ಮಾಡು ; ಹದಗೊಳಿಸು : ಕನ್ನಡತ್ವದೊಳ್ ವಿಕಲ್ಪಬಿಂದುವಿಂಗೆ . . . ಪದಂಗೊಟ್ಟಂ, ಪದಗೊಟ್ಟಂ [ಪಾಠಾಂ. ಪದಂಗಂಡಂ ಪದಗಂಡಂ, ಪದಂಗೊಂಡಂ, ಪದಗೊಂಡಂ] (ಶಮದ. ೬. ೧೬೬ ಪ್ರಯೋ). **ಪದಂಗುಡು :** (೬). **ಪದಗುಡು :** ೨. "ಅಲಗಿನ ಬಾಯಿಗೆ ನೀರು ಕುಡಿಸು" (ಪ್ರಭಣ್ಣ). **ಪದಗೊಡು :** ೧. ಮೇಲಿನ 'ಪದಂಗೊಡು' ಉಲ್ಲೇಖದ ಪ್ರಯೋಗವನ್ನು ನೋಡಿ. **ಹದಗೊಡು :** ೧. ಗಿಳಿ ಹಣ್ಣು ಕಡುಕಿ ನುಡಿ ಹದಗೊಡುವದು (ನೆಲಮು. ೨೩-೪). [ಪದ$_1$ + ಕೊಡು$_1$]

**ಪದಂಗೊಳ್,** ಪದಗೊಳ್, ಪದಗೊಳ್ಳು, ಹದಗೊಳ್ಳು (ಕ್ರಿ). ಸರಿಯಾದ ಸ್ಥಿತಿಗೆ ಬರು ; ಹದವಾಗು : ಕನ್ನಡದ ಅತ್ವದೊಳ್ ವಿಕಲ್ಪಬಿಂದುವಿಂಗೆ . . . ಪದಂಗೊಂಡಂ, ಪದಗೊಂಡಂ [ಪಾಠಾಂ. ಪದಂಗಂಡಂ, ಪದಗಂಡಂ, ಪದಂಗೊಟ್ಟಂ, ಪದಗೊಟ್ಟಂ] (ಶಮದ. ೧೬೬ ಪ್ರಯೋ). **ಪದಗೊಳ್ :** ಮೇಲಿನ ಪ್ರಯೋಗವನ್ನು ನೋಡಿ. **ಪದಗೊಳ್ಳು :** ಎಲೆ ಕಾಂತ ನಿನ್ನ ಸವಿವಚನವರುಷಂ ಗರೆಯೆ ನಲವಿಂದಲೆನ್ನ ಹೃದ್ಧರಣಿಯುತಿಪದಗೊಂಡು (ನಪಮೋ. ೬-೩). **ಹದಗೊಳ್ಳು :** ಕಂಡೆನೆನ್ನ ಮನೋರಥದ ಹದಗೊಂಡ ಹೊಂಬೆಳೆಗೈಯ ಹೊಂಬೆಳಸಿನ ಮಹೋದಯವ (ನಿಭಾಗ. ೧೦-೩೩-೩೬) ; ಒಸೆದು ಗುಣಸಲ್ಕೆ ಕಂಭವು ಸುಸರದಿ ಹದಗೊಳ್ಳೆ ಸಮದ ಚ ಕಮದಕ್ಕುಂ (ಕ್ಷೇತ್ರಗ. ೩೨-೧೯) ; ಕುದಿಯುವದು, ಮಿದಿಯುವದು, ಹೊಂದಿ ಹದಗೊಳ್ಳುವದು (ನೆಲಮು. ೩೨-೨೩). [ಪದ$_1$+ಕೊಳ್$_1$]

**ಪದಂಗೊಳಿಸು** ಪದಗೊಳಿಸು, ಹದಗೊಳಿಸು, ಹದನಗೊಳಿಸು, ಹದನುಗೊಳಿಸು (ಕ್ರಿ). ೧. ಹೊಂದಿಸು ; ಅಳವಡಿಸು : ಅಲರಂಬಿಂಗಣಸಂ ಮಣಿಕುಲದಿಂ ಸಮೆದಂಗಜಂ ಪದಂಗೊಳಿಸಿದವೋಲ್ ತಳತಳಿಸಿ ಪೊಳೆಯುತಿರ್ಕುಂ ಲಲನೆಯ ಪೆಂಪೆಸೆವ ಬೆರಳ ಮಣಿಮುದ್ರಿಕೆಗಳ್ (ದಶಕು. ೬-೬೦). ೨. ತೇವಗೊಳಿಸು ; ತೋಯಿಸು : ಇಳಿದಿಳಿಯಂ ಪದಂಗೊಳಿಸೆ ದಾನಜಳಂ ಜಳದಂಗಳಂತೆ ಮಂಜುಳಪೃಥುಕೂಟದಂತಿಸೆಯೆ (ರಾಜಶೇ. ೧೩-೬೬). **ಪದಗೊಳಿಸು :** ೨. ಪದಗೊಳಿಸುತ್ತೆ ದಾನ ರಸದಿಂ ರಸೆಯಂ . . . ಬಂದುದದೊಂದು ಸಿಂಧುರಂ (ಶಬಶಂ. ೩-೪೧). ೩. ಚೂಪು ಮಾಡು ; ಹರಿತಗೊಳಿಸು ; ತೀಕ್ಷ್ಣಗೊಳಿಸು : ಎಕ್ಕಲಂ ಚಳಿಗದಿರ್ಗಲ್ಲಿನೊಳು ದಾಡೆಯಂ ಮಸೆದು ಪದಗೊಳಿಸುವಣಿತಕ್ಕೆ ಜಾಯಿಲ ಕಂಡು ಪಾಯಲ್ (ರಾಘಚ. ೧೬-೬೨). **ಹದಗೊಳಿಸು :** ೪. ಸಿದ್ಧಗೊಳಿಸು ; ಅಣಿಮಾಡು : ಗವಿಸುವಸುವಿನ ಲೋಹಮಂ ಚಿದ್ಧಮನದಿಂ ಹದಗೊಳಿಸುವಾ ಕಮ್ಮಾರನುಂ ತಾನೆ (ಬಸಪು. ೨೧-೨೯) ; ಎದೆಗದಡದಜಗಳನು ಮುನ್ನವೆ ಹದಗೊಳಿಸಿ ಈ ರೀತಿಯಲಿ ನೀವೊದಗಿದೊಡೆ ನೀನೆಂದ ಕಾರ್ಯವದಹುದು (ಸಾಳ್ವಭಾ. ೧೬-೬೩) ; ಮಂದರತಿಯಿಂದ ಹದಗೊಳಿಸಿದನು ಹಸ್ತಿನಿಯ (ಭರಚ. ೧೫-೮೪) ; ಅಮ್ಮೈಯ್ಯನು ಅವರ ಅಣ್ಣೈಯ್ಯನವರ ಆರೋಗಣೆಗೆ ಹದಗೊಳಿಸುವುದಕ್ಕೆ . . . ಹೋಗಿದ್ದಿರಬೇಕು (ಚೆಂಗಾಳ್ವ. ೨೬೦). ೫. ಹದಮಾಡು : ಭೂಮಿಯನ್ನು ಹದಗೊಳಿಸುವ ಕೆಲಸದಲ್ಲಿ . . . ಮುಖ್ಯವಾದುದು ಉಳುಮೆ (ನ್ಯಪಮ. ೧೩) ; ಅವರೆಗು ಈ ಹೊಲದ ಬದುಕು ಹದಗೊಳಿಸೋಣ (ನೆಲಮು. ೧೮-೨೦). **ಹದನಗೊಳಿಸು :** ೫. ಇವುಗಳೊಳಗಿನ ಪ್ರತಿಯೊಂದು ಘಟನೆ ಸನ್ನಿವೇಶಗಳು . . . ನಮ್ಮ ಜೀವನವನ್ನು ಹದನಗೊಳಿಸಿಕೊಳ್ಳುವುದಕ್ಕೆ, ಪರಿಶುದ್ಧಗೊಳಿಸಿಕೊಳ್ಳುವುದಕ್ಕೆ ಸಹಾಯಕಗಳಾಗಿರುವುವು (ಪಾ೦ರಾಕ್ಯ.೧). **ಹದನುಗೊಳಿಸು :** ೩. ಹದನುಗೊಳಿಸಿದ ಕೋರೆಯಲಿ ಚಿಮ್ಮಿದಡೆ ಗಗನಾಂಗಣಕೆ ನೆಗೆದುಮ್ಮದವಳಿದು ಬಿದ್ದನು ರಸಾತಳ ವದುರೆ ಮೂರ್ಛೆಯಲಿ (ಅನಂರಾ. ೧-೪-೨೮). [ಪದಂಗೊಳ್ + -ಇಸು$_3$]

**ಪದಂದಪ್ಪು,** ಹದತಪ್ಪು (ಕ್ರಿ). ೧. ಸರಿಯಾದ ಸಮಯಕ್ಕೆ ಬರದಿರು : ಅಭೀಷ್ಟವೃಷ್ಟಿ ಕರೆಯುತ್ತಿರ್ಕುಂ ಪದಂದಪ್ಪದೆ (ಪುಷ್ಪಪು. ೨-೩). **ಹದತಪ್ಪು :** ೨. ಪಕ್ವವಾಗಿಲ್ಲದಿರು ; ಸರಿಯಾಗಿ ಪಾಕವಾಗದಿರು : ಮಹಾಕವಿ ಕೂಡ ಈ ಔಚಿತ್ಯನಿಯಮವನ್ನು ಮೀರಿದರೆ ಅವನ ಕೃತಿಪಾಕವು ಹದತಪ್ಪಿ ಹೋಗಬಹುದು (ಕಾವ್ಯಸ. ೫). [ಪದ$_1$+ತಪ್ಪು$_1$]

**ಪದಂದಿರಿ** (ಕ್ರಿ). ಹೆಜ್ಜೆಯನ್ನು ಬೇರೆ ಕಡೆಗೆ ತಿರುಗಿಸು,—ಹೊರಳಿಸು : ಅರ್ಕನ ವಾಜಿಗಳ್ ಪದಂದಿರಿಯೆ ಕಡಲ್ ಕಲಂಕೆ ಧರೆ ಕಂಪಿಸಲದ್ಭುತಮಾದುದಾಹವಂ (ಶಾಂತೀಶ್ವ. ೬-೬). [ಪದ$_2$ + ತಿರಿ$_1$]

**ಪದಂಪು** 'ಪದಪು' ನೋ.

**ಪದಂಬಡಿಸು,** ಪದವಡಿಸು (ಕ್ರಿ). ೧. ಅಣಿಗೊಳಿಸು; ಸಿದ್ಧಮಾಡು: ಆ ಜಿನಾಂಬಿಕೆಯ ಮುಂದೆ ಸಂಗೀತಕಮಂ ಸಂಗಳಿಸಿ ಪದಂಬಡಿಸುವೆಡೆಯೊಳ್ (ಶಾಂತೀಶ್ವ. ೧೩-೨೨೩ ವ). **ಪದವಡಿಸು :** ೧. ಸುಧಾಶನಾಧೀಶ್ವರನಿಯಮಿತ ನಿಳಿಂಪಪಲ್ಲವತತಿ ಪದವಡಿಪ ನವದಿವ್ಯಾನ್ನದೊಳಂ . . . ಪ್ರವರ್ಧಮಾನಮಾಗಿ ಬಳೆಯೆ ಬಳೆಯೆ (ಶಾಂತೀಶ್ವ. ೧೫-೧೪ ವ). ೨. ಹದಮಾಡು : ಅನ್ನದಾನಂ ... ನವವಿಧಮಕ್ಕುಂ ಅದೆಂತೆಂದೊಡೆ ಇದಿರ್ಗೊಂಡುಚ್ಚದೊಳಿರಿಸುವ ಪದಯುಗಮಂ ತೊಳೆವ ಪೂಜಿಪೆಚಿಪಂಗವ ಚೋಹೃದಯಾನ್ನಶುದ್ಧಿಯಂ ನೆಱೆ ಪದವಡಿಸುವ ಭೇದದಿಂದೆ ಪರಮಾಗಮದೊಳ್ (ಚಂದ್ರಪ್ರ. ೩-೩೦) ; ಕುಸುಮಕಾರ್ಮುಕನ ಪೊಡೆಗೆ ಪದವಡಿಸಿ ಕಾಸಿ ಕಂದಿಸಿದ ಸೆಲಗಿನಂಬಿನಲಗುಗಳೆನಿಸಿ ಕಡುಗಂದಿ ಸೂಸಿದ ಪಾಸಿದೆಳೆದಳಿರ್ಗಳುಂ (ವರ್ಧಪು. ೫-೬೩ ವ) ; ಮಣಿಮಯಭಾಜನಂಗಳೊಳ್ ತೀವಿದನರ್ಘ್ಯರತ್ನಂಗಳ ಪದವಡಿಸಿದ ಸುಗಂಧದ್ರವ್ಯಂಗಳ ಕರ್ಪೂರವಾರಿಗಳ (ಮಹಾನೇ. ೯-೪ ವ). ೩. ಉಪಶಮಿಸು ; ಶಾಂತಗೊಳಿಸು ; ಸಮಾಧಾನಪಡಿಸು : ಅವಳಂಬಿತಕುಲೀನಧೀರತಾಜಲದಿನೊಯ್ಯನೊಯ್ಯನೆ ತದುದ್ರೇಕಮಂ ಪದವಡಿಸಿ (ಶಾಂತಿಪು. ೩-೬೬ ವ) ; ಅಂತು ಕಂತುಸಂತಾಪಕ್ಕೆ ಪಕ್ಕಾಗಿ ಕುಕ್ಕುಟಗುದಿದುರ್ಕಡೊಳಗೊಳಗೆ ಬೇವ ಹೃದಯಮಂ ಪದವಡಿಸಲಾಱದೆ . . . ಕೆಳೆಯಂಗಿಂತೆಂದಂ (ಅನಂಪು. ೧೧-೨೯ ವ) ; ಅಱಿಯೆಯಾ, ನೀನ್, ಪ್ರಮಾತೃಕ್ಕ್ ಪದುಳಂಗೆಟ್ಟ ಮನಮನ್ ಪದವಡಿಪ ಒಳ್ನುಡಿಗಳೊಳವೆಂಬುದನ್ (ಜದ್ದಪ್ರ. ೨೧-೪೩೪). ೪. ನೆರವೇರಿಸು ; ಪೂರೈಸು ; ಪೂರ್ಣಗೊಳಿಸು :

ಅನುಕ್ರಮದಿಂ ನೀರ್ಗುಡಿಸಿ ಯಥಾಕ್ರಮದಿಂ ಪದವಡಿಸಿ ಪಾರಲೌಕಿಕ ವಿಧಿಯಂ (ಶಾಂತಿಪು. ೪-೫೮). **೫.** ವಶಪಡಿಸಿಕೊಳ್ಳು ; ಅಧೀನಕ್ಕೆ ಒಳಪಡಿಸು ; ಹತೋಟಿಗೆ ತರು : ಆತನಂ ಸಾಮದಿಂದಮುಳವಡಿಸಿ ನೋಡುವೆಂ ಸಾಮದೊಳಂ ಪದವಡದೊಡೆ ಬಱಿಕಿರ್ದಪುದಲ್ತೆ ಪದವಡಿಸ ಲೆನ್ನ ಬಯಕೆಯ ದಂಡಂ (ಆದಿಪು. ೧೪-೪೩) ; ಕೌಮುದೀಮಹೋತ್ಸವ ಮಂ ನೋಡುವಟ್ಟಿಯೊಳ್ ಅಕೃತಕಾರಾಮಸಂವರಣನನುಪಲಕ್ಷಿತ ಭಾಷಾಸಂಕೇತಜನಂಗಳ್ವಿಡಿದು ಬರ್ಪೊನಲ್ಲಿ ಫುಲ್ಲಶರನುಮಂ ಚಲ್ಲದೊಳ್ ಪದವಡಿಸಲುಂ (ಶಾಂತಿಪು. ೮-೭೨ ವ) ; ಅದಱಿಂದೊಡನೆ ಪೋರ್ದು ಬಲ್ಪಿಂ ಪದವಡಿಸಿ ವಶಕ್ಕೆದಂದು (ಮಹಾನೇ. ೪-೭೭).

[ಪದ$_1$ + ಪಡಿಸು]

**ಪದಂಬಡೆ** (ಕ್ರಿ). ಅವಕಾಶವನ್ನು ಹೊಂದು : ವಿಪಂಚಿಯ ನುಣ್ಚರ ಮೊಂದೆ ಪಾಡಿ ಕೋಮಲಮೆನೆ ಚಿತ್ರಮಂ ಬರೆದು ಕೋಱಿ ಪದಂಬಡೆ ದೆಯ್ದೆ ಮೇಳದೊಳ್ ನೆಲಸಿದ ಮಾತನಾಡಿ . . . ಓಲಗಿಸಿತ್ತೊಲವಿಂ ಸಖೀಜನಂ (ಚಂದ್ರಪು. ೩-೯೦). [ಪದ$_2$ + ಪಡೆ$_1$]

**ಪದಕ** (ನಾ). ೧. ಹಾರ ಮೊದಲಾದುವುಗಳ ಮಧ್ಯದಲ್ಲಿ ಅಳವಡಿಸುವ ಅಲಂಕಾರಯುಕ್ತವಾದ ಬಿಲ್ಲೆ ; ಸರದ ನಡುವಿನ ಬಿಲ್ಲೆ : ಸುರಗಿಯಲರ ಮುಗುಳ ಮುತ್ತಿನ ಮಾಲೆಯಿಂ . . . ಕುಂಕುಮದ ಕುಟ್ಮಲದ ಪದಕದಿಂ . . . ಅಲಂಕರಿಸಿ (ಕಾದಂಬ. ೭೮೪) ; ಆ ಪರದಂ . . . ಒಂದುದಿನಂ ವ್ಯಂತರದೇವಂ ಕೊಟ್ಟ ಪದಕಮಂ ಸತಿಗಿತ್ತಂ (ಧರ್ಮಪ. ೧೦-೮೧) ; ತಳಿತ ಚೂತದ ಸಸಿಗಳವನಿಗೆ ಮಲಗುವಂತಿರೆ ರಾಜಪುತ್ರರು ಹೊಳೆವ ಪದಕದ ಕೊರಳ ತಲೆಗಿಂಬಾದ ತೋಳುಗಳ . . . ದಳಿತದಂಷ್ಟ್ರಾನನದಲೆಸೆದರು ಸಾಲಶಯನದಲಿ (ಕುಪ್ಯಾದ್ರೋ. ೫-೭೯) ; ಶೃಂಗಾರವಾಗಿದೆ ಸಿರಿರಂಗನ ಮಂಚ . . . ಶಂಕರನ ಕೊರಳಿಗೆ ಪದಕವಾಗಿಹ ಮಂಚ (ಪುರಂದ. ಧಾ. ೧-೧೪-೫) ; ಮುತ್ತಿನ ಹಾರದ ನಡುವೆ ಇದ್ದ ವಜ್ರದ ಪದಕ ನಕ್ಷತ್ರದಂತೆ ಹೊಳೆಯುತ್ತಿದ್ದಿತು (ಹಾಹುತ್ತ. ೭೪). ೨. ಬಹುಮಾನವಾಗಿ ಅಥವಾ ಬಿರುದಾಗಿ ಕೊಡುವ ಬಿಲ್ಲೆ ; ಮೆಡಲು : ವಿಶ್ವವಿದ್ಯಾಲಯದ ಸ್ನಾತಕೋತ್ತರ ಪ್ರಶಸ್ತಿ ಪಡೆದ ವಿದ್ಯಾರ್ಥಿಗಳನ್ನೆಲ್ಲ ಬಹು ಹಿಂದೆ ಹಾಕಿ . . . ಬಂಗಾರದ ಪದಕಗಳನ್ನು ದೊರಕಿಸಿಕೊಂಡನು (ಸಸ್ಯಕ. ೧೧೫) ; ಶ್ರೀಯವರಿಂಸಿದ ಚಿನ್ನದ ಪದಕವು ನನ್ನ ನೀಳ್ಗವನಕೆ ಬಂತು (ಇಂಚಾಪ. ೨೯-೩೨). **೩.** ವೇದದ ಪದಪಾಠವನ್ನು ಅಭ್ಯಾಸ ಮಾಡಿದವನು. **೪.** ಒಂದು ಬಗೆಯ ಆಭರಣ. **೫.** ಒಂದು ಬಗೆಯ ಸಸ್ಯ : "ಕೇದಾರಜಂ – ಪದಕ" (ಓಷಧಿ. ೪೦). **೬.** (ಗ್ರಂಥದಲ್ಲಿ ಕೊಡುವ) ಅನುಕ್ರಮಣಿಕೆ ; ಸೂಚಿ : (ಕ). **೭.** [ಛಂದ] ಛಂದೋವೃತ್ತಗಳಿಗೆ ಸಂಬಂಧಿಸಿದುದು; ಛಂದೋಬದ್ಧವಾದುದು : (ಕ). [ಸಂ.]

**ಪದಕಟಕ** (ನಾ). ಕಾಲಿಗೆ ತೊಡುವ ಕಡಗ ; ಅಂದುಗೆ ; ಕಾಲುಬಳೆ : ಅರುಣಾಂಬುಜನಾಳಮನಾವರಿಸಿದ ನವಫೇನಪಿಂಡಮಾಲೆಯ ಚೆಲ್ವಂ ಪರಿಭವಿಸಿ ಮೆಱೆದುದೇಕಿಲ್ಲರಸಿ ಪದಾಗ್ರದೊಳೆ ಮೌಕ್ತಿಕದ ಪದಕಟಕಂ (ರಾಜಶೇ. ೩-೫೭). [ಪದ$_2$ + ಕಟಕ$_3$]

**ಪದಕವಾದ** (ನಾ). ಕೇವಲ ಶಾಬ್ದಿಕವಾದ ವಾದ ; ಶಬ್ದಾಡಂಬರದಿಂದ ಕೂಡಿದ ಮಾತು : ವೇದಾಗಮಂಗಳ ಮೂಲವಲ್ಲದಿದು ಪದಕವಾದಮಿದೆಂದು ನೀನುಸುರದಿರು (ಬಸವು. ೩-೭೮). [ಪದಕ+ವಾದ$_2$]

**ಪದಕವಿ** (ನಾ). ಹದ ತಿಳಿದ ಕವಿ; ಶ್ರೇಷ್ಠನಾದ ಕವಿ: ಸೊಂಕಿಲ್ಲದೆ ಬಿಱುನುಡಿಗಳನಂಕಿಸದೆ ಮನೋನುರಾಗ ಮೃದುಪದತತಿಯಂ . . . ಕೇವಣಿಸಲ್ಕಂ ಕರ ಕವಿರಸಿಕನೆಂಬರಾ ಪದಕವಿಯಂ (ಕವಿಜಿ. ೧-೫) ; ಮದಹಸ್ತಿಗಳ ಕೈಯ ನೂಕಿ ಬಂಧಿಸುವ ಪೆರ್ಗದ ವಜ್ರಲಾಳವಿಂಡಿಗೆಯ ಅಡಟನ ದ್ವಾರಾಷ್ಟಕವ ವರ್ಣಿಸುವೊಡೆ ಪದಕವಿಗಳಿಗಗೋಚರವು (ನೋಹತ. ೨೦-೧೩). [ಪದ$_1$ + ಕವಿ$_5$].

**ಪದಕವಿತೆ** (ನಾ). ಹಾಡುಗಬ್ಬ ; ಸಂಗೀತದ ಸಹಾಯದಿಂದ ಶ್ರವ್ಯವಾಗುವ ಕಾವ್ಯ : ಕೋವಿದರು ಕೊಂಡಾಡುವರೊಸೆದು ಚದುರರು ಪೇಳೆನಲೀ ಪದಕವಿತೆಯ ಮುದದಿಂದಾನುಸುರಿದೆನು (ಕುಂಾಸಾಂ. ೧-೭೩). [ಪದ$_2$+ಕವಿತೆ]

**ಪದಕೋಶ** (ನಾ). (ಪದಗಳ) ಅರ್ಥಕೋಶ ; ಶಬ್ದಕೋಶ ; ನಿಘಂಟು : ಆ ವೇಳೆಗಾಗಲೆ ಗೋಂಡಿಭಾಷೆಯ ವ್ಯಾಕರಣ ಮತ್ತು ಪದಕೋಶಗಳನ್ನು ಕುರಿತ ಕೃತಿಗಳು ಒಂದೆರಡಾದರೂ ಸಿದ್ಧವಾಗಿದ್ದುವು (ದ್ರಾವಿವಿ. ೧೫೦). [ಪದ$_2$+ಕೋಶ]

**ಪದಕ್ರಮ** (ನಾ). [ಸಂಗೀತ] ತಾಳಲಯದ ವಿನ್ಯಾಸದಲ್ಲಿ ಒಂದು ಪ್ರಕಾರ : ಸುರೀತಿ ರಕ್ತಿ ಪದಕ್ರಮಂ ವಳಿ ಸುರಂಗಿತಮಾಯತಂ ಮಣಿಕಂಪಿತಂ . . . ಇಂಪು ಲಯಾಸ್ಪದಂ(ವೃಷವಿ. ೧೧-೯). [ಪದ$_2$+ಕ್ರಮ]

**ಪದಗ$_1$** (ನಾ). = ಪದಕ ೧ : "ಪದಗಂ ಪದಕಾಭಿಧಾನದೊಳ್" (ಕರ್ಣಾನಿ. ೩೧). [<ಸಂ. ಪದಕ]

**ಪದಗ$_2$** (ನಾ). ೧. ಕಾಲುನಡಗೆ. ೨. ಪಾದಚಾರಿ. ೩. ಪದಾತಿ; ಕಾಲಾಳು : "ಪದಾತಿಃ, ಪತ್ತಿಃ, ಪದಗಃ . . . ಪದಿಕಃ – ೭ ಕಾಲುನಡೆಯ ಭಟರ ಹೆಸರುಗಳು" (ಸಿದ್ಧಾಂತಿ. ೨೫೭). [ಸಂ.]

**ಪದಗತಪಾತ** (ನಾ). [ಛಂದ] ವಿಚ್ಛಿತ್ತಿಚಿತ್ರಕಾವ್ಯದಲ್ಲಿ ಒಂದು ಬಗೆ ; ಪದ್ಯಪಾದಗಳಲ್ಲಿ ಅಕ್ಷರಗಳನ್ನೂ ಅನುಸ್ವಾರ, ವಿಸರ್ಗಗಳನ್ನೂ ಲೋಪ ಮಾಡಿರುವುದು : ಶರ ಶೂಲ ಚಾಪ ಚಕ್ರಾಸಿ ರೂಪಮಿಭ ರಥ ತುರಂಗ ಪದಗತಪಾತಂ ಮುರಜಂ ಗೋಮೂತ್ರಿಕೆ ಪುಷ್ಕರಮರ್ಧಭ್ರಮಣ ಸರ್ವತೋಭದ್ರಂಗಳ್ (ಕಾವ್ಯಾವ. ೫೭೯). [ಸಂ.]

**ಪದಗತಿ** (ನಾ). ೧. ಕಾಲುನಡಗೆ ; ಕಾಲ್ನಡೆ : ಮಂತ್ರಿಯ ಮಾತ ಕೈಕೊಂಡು ಸದಳವೆಲ್ಲವ ನಿಜನಿವಾಸಕ್ಕೆ ಬೀಳ್ಕೊಟ್ಟು ಪದಗತಿಗಳಲಿ ಗಮಿಸಿ (ಹಚಕಾ. ೪-೧). ೨. ಹೆಜ್ಜೆಯಿಡುವ ಭಂಗಿ, — ರೀತಿ : ಪದಗತಿ ಪಾಠದಕ್ಕರಮನುಗ್ಗಡಿಪಂತಿರೆ ತೂಕದೋಲೆ ಗೀತದ ಲಯಮಾನಮಂ ಪವಣಿಪಂತಿರೆ . . . ನರ್ತಿಪರಲ್ಲಿ ಕಾಂತೆಯರ್ (ಪರ್ವಪು. ೧-೭೧).

[ಪದ$_2$ + ಗತಿ]

**ಪದಗರ್ಭ** (ನಾ). [ಸಂಗೀತ] "ಪಲ್ಲವಿಗೆ ಪ್ರಥಮ ಮತ್ತು ದ್ವಿತೀಯ ಎರಡು ಅಂಗಗಳು. ಈ ಅಂಗಗಳು ಸಂಧಿಸುವ ಸ್ಥಳಕ್ಕೆ 'ಪದಗರ್ಭ' ಎಂದು ಹೆಸರು" (ಸಂಗೀಚಂ. ೯೧). [ಸಂ.]

**ಪದಗಾಣ್** 'ಪದಂಗಾಣ್' ನೋ.

**ಪದಗಾಯಿ,** ಹದಗಾಯಿ(ನಾ). ಹಣ್ಣಾಗಲು ಬಂದಿರುವ ಕಾಯಿ; ಬಲಿತ ಕಾಯಿ : ಕಾಯಿ ಪದಗಾಯಿ ದೋರೆವಣ್ಣುಗಳಿಂದೆಯತಿ ಪಕ್ವಮಾಂತ ರಸಮೊಸರ್ವ ಪರಿಪರಿ ಫಳಾವಳಿಗಳಿಂದೆ . . . ಒಪ್ಪಿದುದಾ ಬನಂ (ನಪಮೋ. ೮-೨೭) ; ಕಗ್ಗಾಯಿ ಬಲಿಬಲಿದು ಮ್ಯಾಲೆ ಮಧುರಕ್ಷಸ ಬೆರೆದು ಪದಗಾಯಿಯಾದಂತೆ (ನಪಮೋ. ೨೨-೩೪). **ಹದಗಾಯಿ :** ಆ ಮರದಲ್ಲಿ ಹದಗಾಯಿಗಳೇ ತುಂಬಿವೆ (ರೂಢಿ).

[ಪದ$_1$ + ಕಾಯಿ$_4$(<ಕಾಯ್$_4$)]

**ಪದಗಾರ್ತಿ** (ನಾ). ಹಾಡು ಹೇಳುವವಳು ; ಹಾಡುಗಾತಿ : ಅಲ್ಲಿದ್ದ ಇನ್ನೊಬ್ಬ ಪದಗಾರ್ತಿ—"ಶಾಸ್ತ್ರ ಮಾಡೋವಾಗ ಪದಾ ಹೇಳಾನವ್ವ . . . ಸಾಕು ಸುಮ್ನಿರು" ಎಂದು ಕೆಂಚಯ ಬಾಯ ಮೇಲೆ ಹೊಡೆದಳು (ಸುವಸಂ. ೫೦).

[ಪದ$_2$ + -ಕಾರ$_1$(<-ಕಾಱ) + -ತಿ$_1$(<-ಇತ್ತಿ)]

**ಪದಗುಡು** 'ಪದಂಗೊಡು' ನೋ.

**ಪದಗೆಂಪು,** ಹದಗೆಂಪು (ನಾ). ಹದವಾದ ಕೆಂಪುಬಣ್ಣ : ಘಟ್ಟಿಸಿದ ಕೀಟ ಘಟ್ಟಣೆಯೊಳ್ ಪೊಟ್ಟಗೊಡೆದ ತಾಳುಗೆಗಳ ರುಧಿರಜಳದೊಳ್ ಬೆರಸಿ ಪದಗೆಂಪನಾಳ್ದ ಜಾತ್ಯಶ್ವದ ಲಾಲಾಜಳದೊಳಂ ನೆಲದೊಳೊಗೆವ ರಜಂ ಮೊದಲಪ್ಪಾಲಂಗಿಡೆಯುಂ (ಪಂಪಭಾ. ೧೦–೭೦ ವ). **ಹದಗೆಂಪು :** ನಾಗಸ್ವರಂಗೇಳ್ದ ನಾಗರನ ತೆರನಾಗಿ ಹೆಡೆಮುಚ್ಚಿ ತೊಯ್ಯುತ್ತೊಯ್ಯನೆ ಮೊಗಳೆ ಹದಗೆಂಪು ಕಾಯ್ಪುತ್ತ ಮುಸಿಸು ಲಕ್ಷ್ಮಣಂ (ತ್ರೀಣಾಪೂ. ೮೩–೧೪೫). [ಪದ$_1$ + ಕೆಂಪು$_1$]

**ಪದಗೆಡಿಸು,** ಹದಗೆಡಿಸು (ಕ್ರಿ). ೧. ಹದವಿಲ್ಲದಂತೆ ಮಾಡು ; ಹಾಳುಮಾಡು ; ನಾಶಗೊಳಿಸು : ಎಮ್ಮ ಬೊಮ್ಮಬರಿಪಂ ಪದ ಗೆಡಿಸಿತ್ತು (ಅಪ್ರತಿ.೧೨೫-೭); ಪದಿನಾಱುಂ ಸಾಸಿರ್ಮರ ಪದಗೆಡಿಸಿದ ಚದುರಂ (ಚಿಕವಿ. ೬–೨೭೧). **ಹದಗೆಡಿಸು :** ೨. ರೀತಿಯನ್ನು ಕೆಡಿಸು; ವಿರೂಪಗೊಳಿಸು : ಆತ್ಮಕಥೆಯನ್ನು ಹದಗೆಡಿಸದೆ ಬರೆಯುವುದು ಕಠಿನ (ಸಮಾಲೋ. ೫೩); ಕೊಲ್ಲುವವನು ಜೀವಿಯನ್ನು ಹದಗೆಡಿಸಿ ನಾಶಗೊಳಿಸು ತ್ತಾನೆ (ಹಿಂಕಿರು. ೩೬) ; ಹಲವು ಸಮಗಾರರು ಕೂಡಿ, ತೊಗಲು ಹದಗೆಡಿಸಿದರು (ಗಾದೆ). [ಪದ$_1$ + ಕೆಡಿಸು$_1$]

**ಪದಗೆಡು,** ಹದಗಿಡು, ಹದಗೆಡು (ಕ್ರಿ). ೧. ಅವ್ಯವಸ್ಥಿತವಾಗು ; ಕ್ರಮಗೆಡು : ಪದಿನೆಂಟು[ಬಣ್ಣನೆ]ಯಿಂದು ಬವಣೆಗೊಂಡು ಪದಗೆಟ್ಟು ಬಯಲ ಬಣ್ಣಿಸದೆ . . . ಹದಿಬದೆಯ ಧರ್ಮವ ಬಣ್ಣಿಪೆನು (ಹದಿಬ. ೧–೪೬). **ಹದಗಿಡು :** ೨. "ಅನುಕೂಲದಪ್ಪು" (ಪ್ರಭಣ್ಣ). **ಹದಗೆಡು :** ೧. ಮದಕರಿಗಳು ಕಟ್ಟದ ಮಲ್ಲಗಂಭವನೊಡೆದು ಕೆಡಹಿ ಕೊಂಡಾಗ ಬೆದಱಿ ತಪ್ಪಿಚ್ಚಿಯೊಳಗೆ ದೆಸೆದೆಸೆಗೈದಿ ಹದಗೆಟ್ಟೋಡಿ ಯಾಡಿದುವು (ಕಂಸವ. ೧೫–೯೨) ; ತಾಲ್ಲೂಕಿನ ಆಡಳಿತ ಹದಗೆಟ್ಟು ಹೋಗಿತ್ತು (ಪಂಜಪಂ. ೧೪೦) ; ಒಂದಕ್ಕೊಂದು ಹದಗೆಟ್ಟಿದ್ದ ರಿಕಾರ್ಡು ಗಳನ್ನು ಸರಿಪಡಿಸಲು ಎರಡುದಿನ ಬೇಕಾಯ್ತು (ಕಾವೇರಿ. ೧೧೬). [ಪದ$_1$ + ಕೆಡು$_1$]

**ಪದಗೆಯ್,** ಹದಗೆಯ್, ಹದಗೈ (ಕ್ರಿ). ಸಿದ್ಧಗೊಳಿಸು; ವ್ಯವಸ್ಥೆ ಮಾಡು ; ಉಪಯೋಗಿಸುವುದಕ್ಕೆ ಹದಮಾಡು : ತನ್ನ ಸಖನಂ ಕರೆದು ಭರದಿನವಳೆಡೆಗೆಯ್ದಿ ಪೊನ್ನಂಟಿನಿತ್ತು ಪದಗೆಯ್ಯೆಂದು ಕಳುಪಲ್ (ಅರಾಚ.೨-೫-೧೦). **ಹದಗೆಯ್ :** ಹುರಿದ ಹೊಸಭಂಗಿ ಹದಗೆಯ್ದು ಪಿಸಿ ಕೂಟದೊಳ್ ಬೆರೆದಮಲ್ ಜಾಯಿಕಾಯ್ ಪತ್ರೆ . . . ಪರಿಪರಿಯ ಭೋಜನದ್ರವ್ಯಂಗಳಿಡಿದ ಭಂಡಿಗಳೈದೆ ಬರುತಿರ್ದುವು (ಚಿಬಪು. ೪೬–೮೫). **ಹದಗೈ :** ಹದಗೈದುಕೊಂಡೆಯ್ದಿ ಮಱುದಿನ ಕಂಡನು ಮದನನ ನಾಸ್ಥಾನದಲ್ಲಿ (ಭರಚ. ೧೮–೨). [ಪದ$_1$ + ಕೆಯ್$_1$]

**ಪದಗೊಡು** 'ಪದಂಗೊಡು' ನೋ.

**ಪದಗೊಳ್** 'ಪದಂಗೊಳ್' ನೋ.

**ಪದಗೊಳಿಸು** 'ಪದಂಗೊಳಿಸು' ನೋ.

**ಪದಗೊಳ್ಳು** 'ಪದಂಗೊಳ್' ನೋ.

**ಪದಗ್ರಹಣ** (ನಾ). ಪದವಿಯನ್ನು ಸ್ವೀಕರಿಸುವುದು : ರಾಷ್ಟ್ರಪತಿ ಯವರು ತಮ್ಮ ಪದಗ್ರಹಣದ ತಾರೀಖಿನಿಂದ ಐದುವರ್ಷಗಳ ಕಾಲ ರಾಷ್ಟ್ರಪತಿಪದದಲ್ಲಿರತಕ್ಕುದು (ಭಾಧಾನ. ೨೮). [ಪದ$_2$ + ಗ್ರಹಣ]

**ಪದಘಟ್ಟಣೆ** (ನಾ). ಕಾಲಿನಿಂದ ಮೆಟ್ಟುವಿಕೆ ; ಪದಾಘಾತ : ನವಸಹಸ್ರತುರಂಗ ಕಾಲಾಳವಗಡಿಸಿತ್ತೈವತ್ತುಸಾವಿರವವನಿತಳ ನುಗ್ಗಾಯ್ತು ಪದಘಟ್ಟಣೆಯ ಘಲ್ಲಣೆಗೆ (ಕುವ್ಯಾಕ. ೩–೭). [ಪದ$_2$ + ಘಟ್ಟಣೆ]

**ಪದಘಾತ**(ನಾ). = ಪದಘಟ್ಟಣೆ : ಪದಘಾತಕ್ಕಗಿದಳ್ಕಿ ಬಳ್ಕಿದುದಧೋ ಲೋಕಂ . . . ಭುವನಮುಂ ಪರ್ಯಾಕುಲಂ ಮಾಡಲಾರ್ತುದೋ ದುರ್ಯೋಧನ ಭೀಮಸೇನರ ಗದಾಯುದ್ಧಂ ತ್ರಿಧಾಭ್ರಾಂತಿಯಂ (ಗದಾಯು. ೮–೧೦) ; ಪದಘಾತೋದ್ಧೂತಧೂಳೀಪಟಲಮಹಿಮ ರುಗ್ಬಿಂಬಮಂ ನುಂಗಿ ರೋದೋಂತದೊಳಾದಂ ಧ್ವಾಂತಸಂತಾನಮ ನೊದವಿಸೆ . . . ನಡೆದತ್ತಾ ಜಗನ್ನಾಥಸೈನ್ಯಂ (ಜಗವಿ. ೧೫–೭೭) ; ಇದೆ ರಥದ ಪದಘಾತದಲಿ ಹೆಣಮೆದೆಯ ಪಾಯದಲೌಘ ಭೀಮನ ಕದನಪಥ ವಿದೆಯೆನುತ ನಗುತೈತಂದನಾ ದ್ರೋಣ (ಕುವ್ಯಾದ್ರೋ. ೧೩–೨) ; ಪದಘಾತಕ್ಕೆ ಧರಾತಳಂ ಕುಸಿಯೆ . . . ಯುದ್ಧಂಗೆಯ್ದುರೀಶಾರ್ಜುನರ್ (ಕಬಕಂ. ೪–೭೮). [ಪದ$_2$ + ಘಾತ$_2$]

**ಪದಚತುರೂರ್ಧ್ವ** (ನಾ). [ಛಂದ] ಒಂದು ವೃತ್ತದ ಹೆಸರು : ಕರಿ ದಿನಪ ರಾಜ ರಾವಣ ಕರ ಪರಿಸಂಖ್ಯಾಕ್ಷರಂ ಪೊದೞ್ದಿಸೆಯೆ ಗಣಾಂತರಿತಂ ಪದಚತುರೂರ್ಧ್ವಂ ಪರಿಸ್ಫುಟಂ ಬಗೆದು ಕೇಳ್ವುದು (ಛಂದೋಂಬು. ೩–೨೧೫). [ಸಂ.]

**ಪದಚತುಷ್ಟಯ** (ನಾ). ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯಗಳೆಂಬ ಮೋಕ್ಷದ ನಾಲ್ಕು ಪ್ರಕಾರಗಳು : ಎಡೆಯರಾಗಿ ಪದಚತುಷ್ಟಯವ ಕೂಡಿ (ಮನೋವಿ. ೧–೩೦). [ಪದ$_2$ + ಚತುಷ್ಟಯ]

**ಪದಚಾರಿ** (ನಾ). ೧. ಹೆಜ್ಜೆಯ ಗತಿ,—ಗಮನ ; ನಡೆ : ಪದಚಾರಿಗೆ ಪದಚಾರಿಯನೊದವಿಸುತುಂ ಗಜಕೆ ಗಜಮುತುಂ . . . ಕೃಷ್ಣ ದಾನವರ್ ಪೊಕ್ಕು ಪೊಯ್ದುರೊರ್ವರನೊರ್ವರ್ (ಜಗವಿ. ೯–೭೨). ೨. [ನಾಟ್ಯ] ಒಂದು ನಾಟ್ಯಭೇದ. [ಪದ$_2$ + ಚಾರಿ$_2$]

**ಪದಚ್ಛೇದ** (ನಾ). [ವ್ಯಾಕ] ವಾಕ್ಯವನ್ನು ಪದಗಳನ್ನಾಗಿ ವಿಂಗಡಿ ಸುವುದು : (ಕ). [ಪದ$_2$ + ಛೇದ]

**ಪದಚ್ಯುತ** (ಗು). ೧. ಸ್ಥಾನದಿಂದ ಬಿದ್ದ. (ನಾ). ೨. ಪದವಿ ಯನ್ನು ಕಳೆದುಕೊಂಡವನು ; ಸ್ಥಾನಭ್ರಷ್ಟ. [ಪದ$_2$ + ಚ್ಯುತ]

**ಪದಚ್ಯುತಿ** (ನಾ). ಪದವಿಯನ್ನು ಕಳೆದುಕೊಳ್ಳುವುದು ; ಸ್ಥಾನಭ್ರಷ್ಟತೆ: ಪದಚ್ಯುತಿಯ ಅಥವಾ ಇತರ ಕಾರಣದಿಂದ ಉಂಟಾದ ರಾಷ್ಟ್ರಪತಿಪದದ ರಿಕ್ತತೆಯನ್ನು ಪರಿಹಾರ ಮಾಡುವುದಕ್ಕಾಗಿ ನಡೆಯುವ ನಿರ್ವಾಚನವನ್ನು . . . ತಡವಾಗದಂತೆ ನಡೆಯಿಸತಕ್ಕುದು(ಭಾಧಾನ. ೩೧); ಏವುವುಂ ಎನ್ನಿಂದೆ ಎಂತಾನುಮೊತ್ತಿ ಪೊಱಮಡಿಸಲಾಱದಯ್, ವಿಧಿ ನಿಯತಮಪ್ಪವನ ಪದಚ್ಯುತಿಯಂ ತಪ್ಪಿಸುವ ಯುಕ್ತಿಯನ್ (ಬದ್ಧಪ್ರ. ೫೩–೧೧೫೦). [ಪದ$_2$ + ಚ್ಯುತಿ]

**ಪದಚ್ಯುತಿಗೊಳಿಸು** (ಕ್ರಿ). ಅಧಿಕಾರದಿಂದ ತೆಗೆದುಹಾಕು ; ಪದವಿಯಿಂದ ಕೆಳಕ್ಕಿಳಿಸು : ರಾಷ್ಟ್ರಪತಿಯವರನ್ನು . . . ಮಹಾಭಿ ಯೋಗದ ಮೂಲಕ ಪದಚ್ಯುತಿಗೊಳಿಸಬಹುದು (ಭಾಧಾನ. ೨೮) ; ಮೇಜರ್ ಗೋರ್ಡನ್‌ರು ಅವನನ್ನು ಪದಚ್ಯುತಿಗೊಳಿಸಿದ್ದರು (ಬೆಂಜನ್. ೮೪). [ಪದಚ್ಯುತಿ + ಕೊಳ್$_1$ + -ಇಸು$_3$]

**ಪದಜಾತ** (ನಾ). ೧. ಒಂದು ವರ್ಗಕ್ಕೆ ಸೇರಿದ ಶಬ್ದಗಳು. ೨. ಪದಗಳ ಗುಂಪು ; ಶಬ್ದಸಮೂಹ. [ಪದ$_2$ + ಜಾತ]

**ಪದಡಕ್ಕೆ** 'ಪಡಡಕ್ಕೆ' ನೋ.

**ಪದಡಿ** 'ಪದಡೆ' ನೋ.

**ಪದಡೆ,** ಪದಡಿ, ಹದಡಿ, ಹದಡೆ (ನಾ). ಒಂದು ಸ್ಥಳದ ಹೆಸರು ; ℙ ಈಗಿನ ದಾವಣಗೆರೆ ತಾಲ್ಲೂಕಿನ ಹದಡಿ : ಶ್ರೀಮನ್ಮಹಾನಿವೆರ್ಗ್ಗಡೆ ಪಲ್ಲವಾಭರಣ ಬ್ರಹ್ಮಾದಿರಾಜಪ್ಪರ್ಪದಡೆ ಪನ್ನೆರಡುಮನಾಳುತ್ತುಮಿರೆ (ಎಕ. XI, ದಾವಣ. ೧೨೬–೧೬ ; 1037). **ಪದಡಿ :** ಸಾಕ್ಷಿ ಪದಡಿಯ ಗಾವುಣ್ಡಂ ನಾಗಿಯಣ್ಣನುಂ (ಎಕ.XI, ದಾವಣ.೧೨೪–೪೯ ; ಸು.1042?). **ಹದಡಿ :** ಹದಡಿ ಚಾಳುಕ್ಯರ ಕಾಲದಲ್ಲಿ ಪ್ರಸಿದ್ಧವಾಗಿದ್ದರೂ ಈಗ ಅಲ್ಲಿ ಹಳೆಯ ದೇವಾಲಯಗಳಿಲ್ಲ (ಹೊಯ್ಸಪಾ. ೨೩೫). **ಹದಡೆ :** ಹದಡೆಯ

ಕುಱುಬ ಎಱಿಕಗೌಡ ಬಿನ್ನಲಗೆಱೆಯ ದನವ ಕೊಂಡುಹೋಹಲ್ಲಿ (ಎಕ. XI, ದಾವಣ. ೧೨೫-೨ ; ?). [ ? ]

**ಪದಥಕ್ಕೆ** 'ಪಡಥಕ್ಕೆ' ನೋ.

**ಪದತಲ,** ಪದತಳ (ನಾ). **೧.** ಕಾಲಿಡುವ ಸ್ಥಳ ; ಪಾದಪ್ರದೇಶ : ಪದತಲದೊಳಿದನರ್ಪಿಸುವೆ, ಹೇ ಸದಯ ಗುರುದೇವ (ವಿಸೀಗೀ. ೧-೧) ; ತನ್ನ ತನುರುಚಿರತೆಯ ಪದತಲದಿ ಪೂಜೆಗೈವಾತನನು ಕಾಣುತಂ ಕನಿಕರದಿ ಕರಗಿದಳ್ ಚಿತ್ರಾಂಗಿ (ಚಿತ್ರಾಂಗ. ೩೮-೧೦೩೦). **ಪದತಳ : ೨.** ಅಂಗಾಲು : ಪದತಳಮುಂ ದಳಮುಂ ನೋಯದೆ ಕಂದದೆ ನಲಿದು ನರ್ತಿಸುತ್ತಿರ್ಪ ಮರುತ್ಸುದತಿಯರ್ಗಿಂದ್ರನ ಹೃತ್ಪದ್ಮದೊಳಾಡುವ ಭಕ್ತಿಲಕ್ಷ್ಮಿ ಲಾಸಿಕೆಯಕ್ಕುಂ (ಚಂದ್ರಪು. ೧೨-೭೦) ; ಚೂತತಳಿರಂ ಪೋಲ್ವ ಪದತಳಂಗಳು (ಪ್ರಾಥಂಾ. ೯-೫) ; ಹೆಬ್ಬೆಟ್ಟುಗಳು, ಪದತಳಗಳು . . . ಶಿರಸ್ಸು ಮುಂತಾದ ಸ್ಥಾನಗಳೇ ಸ್ತ್ರೀಯರುಗಳಿಗೆ ಕಳಾಸ್ಥಾನಗಳೆನಿಸಿಕೊಂಬುವು (ಸಕವ್ಯೆ. ೬೦). [ಪದ$_2$ + ತಲ]

**ಪದತಳ** 'ಪದತಲ' ನೋ.

**ಪದತ್ಯಾಗ** (ನಾ). ಪದವಿಯನ್ನು ತ್ಯಜಿಸುವುದು ; ಅಧಿಕಾರವನ್ನು ಬಿಟ್ಟುಕೊಡುವುದು ; ರಾಜೀನಾಮೆ ನೀಡುವುದು : ರಾಷ್ಟ್ರಪತಿಯವರು, ತಮ್ಮ ಹಸ್ತಾಕ್ಷರದೊಡನೆ ಉಪರಾಷ್ಟ್ರಪತಿಯವರಿಗೆ ಪತ್ರ ಬರೆದು ತಮ್ಮ ಪದತ್ಯಾಗ ಮಾಡಬಹುದು (ಭಾಧಾನ. ೨೮). [ಪದ$_2$ + ತ್ಯಾಗ]

**ಪದತ್ಯಾಗಪತ್ರ** (ನಾ). ಪದವಿಯನ್ನು ಬಿಟ್ಟುಕೊಡುವಾಗ ಬರೆಯುವ ಪತ್ರ ; ರಾಜೀನಾಮೆ ಪತ್ರ : ಮೇಲಿನ . . . ಪರತ್ತಿನ ಖಂಡದ ಮೇರೆಗೆ ಉಪರಾಷ್ಟ್ರಪತಿಯವರಿಗೆ ಬರೆದ ಪದತ್ಯಾಗಪತ್ರದ ಸೂಚನೆಯನ್ನು . . . ಅಧ್ಯಕ್ಷರಿಗೆ ತಿಳಿಸತಕ್ಕುದು (ಭಾಧಾನ. ೨೮). [ಪದತ್ಯಾಗ + ಪತ್ರ]

**ಪದತ್ರಯ** (ನಾ). ಮೂರು ಹೆಜ್ಜೆ : ತದಶ್ವಮೇಧದೊಳೀತ ವಾಮನನಾಗಿ ಯಾಚಿಸಿದನು ಪದತ್ರಯವ (ಕುವ್ಯಾಸ. ೯-೪೫). [ಪದ$_2$ + ತ್ರಯ]

**ಪದತ್ರಾಣ** (ನಾ). ಪಾದರಕ್ಷೆ ; ಜೋಡು ; ಮೆಟ್ಟು : ಶಿರಸ್ತ್ರಾಣ ಮಧ್ಯತ್ರಾಣ ಪದತ್ರಾಣ . . . ಮುಂತಾದ ಶತ್ರುಜಯಾತ್ಮಕ ರಕ್ಷಾದಿ ಸಾಧನವಿಶೇಷಂಗಳಿಂದಲುಂ (ವಿವೇಕ. ೨೬೨). 'ಪಾದತ್ರಾಣ' ಪರಾ. [ಪದ$_2$ + ತ್ರಾಣ]

**ಪದದಪ್ಪು** (ಕ್ರಿ). ಮಾರ್ಗ ಬಿಟ್ಟುಹೋಗು : ಪದದಪ್ಪದೆಯುಂ ಬಗೆ ಬೆದಱದೆಯುಂ ಕತೆ ಕಿಡದೆಯುಂ . . . ಆ ಜಿನಚಂದ್ರಂ ಇಂತೆಂದಂ (ಶಾಂತಿಪು. ೫-೧೦). [ಪದ$_2$ + ತಪ್ಪು$_1$]

**ಪದದರುಶನ** (ನಾ). ಪಾದದರ್ಶನ : ನೆನಹದಲ್ಲದೆ ನಿನ್ನ ಪದದರುಶನದ ಭಾಗ್ಯವು ತನ್ನೊಳಾದುದು ಘನಮಹಿಮ ನಮೊಯೆನುತ ಕೈಮುಗಿದಿರ್ದಳಾ ಕಾಂತೆ (ತೊರರಾ. ೧-೧೨-೨೧). [ಪದ$_2$ + ದರುಶನ]

**ಪದದಲನ** (ನಾ). ಕಾಲಿನ ತುಳಿತ ; ಪಾದಾಘಾತ : ಲೋಕಕ್ರೋಧಮದಹಸ್ತಿ ಪದದಲನರೋಷದಾವಾಗ್ನಿಗಾಹುತಿಯಾಗಿ ಬಿಳ್ದ ನಿನ್ನಾ ಭಸ್ಮರಾಶಿಯಂ ತೊಳೆವುದಿದೊ ಕಣ್ಣಂಗೆ(ಶ್ರೀರಾಮಾ.೧೧೫-೮೨). [ಪದ$_2$ + ದಲನ]

**ಪದದಳಿತ** (ಗು). ಕಾಲಿನಿಂದ ಬಡಿದ,—ಮೆಟ್ಟಿದ : ವಿತತರಥಪದದಳಿತ ವಸುಧೋತ್ಪತಿತ ಧೂಳೀಪಟಲಪರಿಚುಂಬಿತ ದಿಶಾಮುಖನ್ಯೈದಿದನು ಕುರುರಾಯ ಮೋಹರವ (ಕುವ್ಯಾವಿ. ೫-೪೮). [ಪದ$_2$ + ದಳಿತ( = ದಲಿತ)]

**ಪದದೋಷ** (ನಾ). [ಕಾವ್ಯವಿ] ಪದಗಳ ರಚನೆ ಅಥವಾ ಪ್ರಯೋಗದಲ್ಲಿ ಕಂಡುಬರುವ ದೋಷ,—ತಪ್ಪು : ಪದದೋಷವು ಪದದ ಒಂದು ಭಾಗದಲ್ಲಿ ಮಾತ್ರ ಇರಬಹುದು ಅಥವಾ (ಅನೇಕ ಪದಗಳು ಸೇರಿ ಆಗುವ) ಒಂದು ವಾಕ್ಯದಲ್ಲಿ ಅಥವಾ ಅವುಗಳ ರಚನೆಯಲ್ಲಿ ಇರಬಹುದು(ಕೈಟಿಡಿ. ೨೨೬). [ಪದ$_2$ + ದೋಷ]

**ಪದಧಾರಿ** (ನಾ). ಯಾವುದಾದರೊಂದು ಸ್ಥಾನವನ್ನು ಹೊಂದಿರುವವನು ; ಅಧಿಕಾರಿ : ಧಾರ್ಮಿಕ ಅಥವಾ ಸಾಂಪ್ರದಾಯಿಕ ಸಂಸ್ಥೆಯ ಕಾರ್ಯಕಲಾಪಗಳ ಸಂಬಂಧದ ಯಾವನಾದರೂ ಪದಧಾರಿಯಾಗಲಿ . . . ಯಾವುದಾದರೂ ವಿಶಿಷ್ಟ ಸಂಪ್ರದಾಯಕ್ಕೆ ಸೇರಿದವನಾಗಿ ಇರಬೇಕೆಂದು ಉಪಬಂಧವನ್ನು ಮಾಡಿರುವ ಯಾವುದೊಂದು ವಿಧಿಯ ಅಮಲಿಗೂ ಬಾಧಕವಾಗತಕ್ಕುದಲ್ಲ (ಭಾಧಾನ. ೯). [ಸಂ. ಪದಧಾರಿನ್]

**ಪದಧೂಲಿ,** ಪದಧೂಳಿ (ನಾ). **೧.** ಪದಾಘಾತದಿಂದ ಮೇಲಕ್ಕೆ ಎದ್ದ ಧೂಳು : ಪದಧೂಲೀ[ಪಾಠಾಂ. ಳೀ]ಕ್ಷೋಭದಿಂ ದಿಗ್ಯುವತಿವದನಮಂ ಶ್ಯಾಮಳಂ ಮಾಡಿ . . . ಅತ್ಯುಗ್ರಾಸ್ತ್ರಶಸ್ತ್ರಪ್ರಕರಕಿರಣಸಂಘಾತತೀವ್ರಾತಪೋದ್ಯೋತದಿನರ್ಧಶ್ಯಾಮಳಂ ಮಾಡಿದುದು ದಿನಮುಮಂ ಕೂಡೆ ರಾಜೇಂದ್ರಸೈನ್ಯಂ (ಆದಿಪು. ೧೪-೮೮). **ಪದಧೂಳಿ : ೧.** ಪದಧೂಳೀಪೀತಪಾತಃಪ್ರತತಿ ನದಿಗಳಂ ತೀವುತುಂ (ವರ್ಧಪು. ೮-೬೭). **೨.** ಪಾದಧೂಳಿ ; ಪಾದರಜ : ಪದಧೂಳಿಯಲಿ ದೂಟದನಹಲ್ಯಾಸತಿಯ ದುಷ್ಕೃತವ (ತೊರರಾ. ೧-೨-೨೦) ; ಪುಣ್ಯವಹುದೆಮ್ಮ ಧರೆ ವಲ್ಲಭನ ಪದಧೂಳಿಯಿಂ (ಚಿತ್ರಾಂಗ. ೬೦-೧೬೪೨). [ಪದ$_2$ + ಧೂಲಿ]

**ಪದಧೂಳಿ** 'ಪದಧೂಲಿ' ನೋ.

**ಪದನ್** 'ಪದ$_1$' ನೋ.

**ಪದನ** 'ಪದ$_1$' ನೋ.

**ಪದನಖ** (ನಾ). ಕಾಲಿನ ಉಗುರು : ಪದನಖಮಣಿದರ್ಪಣದೊಳ್ವದನೇಂದುವನೀಕ್ಷಿಸುತ್ತುಮಿರೆ ಕೋಮಳೆ (ಮಲ್ಲಿಪು. ೪-೨೦) ; ಚರಣದಲಿ ಚಾಚಿದರು ಭೂಮೀಶ್ವರರು ಮಕುಟವನಂತತಾರಾಪರಿವೃತೇಂದುವಿನಂತೆ ಮೆಱೆದುದು ಹರಿಯ ಪದನಖವು (ಕುವ್ಯಾಉ. ೮-೫೫). [ಪದ$_2$ + ನಖ]

**ಪದನಖರ** (ನಾ). = ಪದನಖ : ಪದನಖರಾಳಿ ಬೇರ್ವರಿಯೆ . . . ಕೇಶಚಯಮಂಗಮನಾಪರಿಸುತ್ತೆ ತೋಱೆ ಪಿಂಗದೆ ಶಿವಲಿಂಗದಂಘ್ರಿಯನೆ ಜಾಸಿಸುತಿರ್ದನತೀವಭಕ್ತಿಯಿಂ (ವೃಷವಿ. ೨೨-೨೨). [ಪದ$_2$ + ನಖರ$_2$]

**ಪದನತ** (ಗು). **೧.** ಕಾಲಿಗೆ ಬಿದ್ದ,—ನಮಸ್ಕರಿಸಿದ. **೨.** ಕಾಲಿನವರೆಗೆ ಇಳಿದು ಬಂದ. **೧, ೨ :** ಮದಜಳಸೀಳಕಂಠಕಳಿತಂ ವಿಷಮಾನಳ ಭೀಮಲೋಚನಂ ಪದನತ ದಾನವಾರಿ ಗಿರಿಶಂ ಗಿರಿಜಾತವಿನೂತಕೇಳಿ ಕಣ್ಗೊದವಿದ ಶೋಭೆಯಂ ಕುಡುತಮಿರ್ಪುದು (ಪಾರ್ಶ್ವಪು. ೪-೧೩೨). [ಪದ$_2$ + ನತ]

**ಪದನಱು,** ಹದನಱು, ಹದವರಿ, ಹದವಱು (ಕ್ರಿ). **೧.** ವಿಷಯವನ್ನು ತಿಳಿ ; ಅಭಿಪ್ರಾಯವನ್ನು ತಿಳಿ : ಪದನಱಿದು ನುಡಿಯಲುಂ ನುಡಿದುದನಱಿದಾರಯಲುಮಾರ್ಪರಾ ನಾಡವರ್ಗಳ್ (ಕವಿರಾ. ೧-೩೮). **೨.** ಸರಿಯಾದ ಕ್ರಮವನ್ನು ತಿಳಿ : ಸ್ತಂಬಕರ್ಯಾದಿ ನಾನಾವಿಧ ಧಾನ್ಯಂಗಳಂ ಪದನಱಿದುಡುಗುವ ಕಳಂಮಾಡುವೊಕ್ಕುವಡಕುವ . . . ತೆಱನುಮನಱಿಯೆ ಪೇೞ್ದು (ಆದಿಪು. ೬-೭೭ ವ) ; ಮಾಗಿಯೊಳಬ್ದಕಾಲದೊಳ್ ಭೂಮಿಯೊಳಂ ಪದನಱಿತು ನೀರನೆತ್ತುಗೆ ಬಲ್ಲರ್ (ಲೋಕೋಪ. ೬-೮) **೩.** ಪ್ರಮಾಣವನ್ನು ತಿಳಿ : ಕ್ರಮದಿಂ ಪಾಲಂ ಕಾಸಿ ಹೆಪ್ಪನಿಟ್ಟು ಕಡೆದು ಬೆಣ್ಣೆಗೊಂಡು ಪದನಱಿದು ಕಾಸಿದಾಗಳ್ ತುಪ್ಪಮಕ್ಕುಂ (ಧರ್ಮಾಮೃ. ೯-೧೨೦). **೪.** ಸರಿಯಾದ ಕಾಲ ಅಥವಾ ಯೋಗ್ಯವಾದ ಸಮಯವನ್ನು ತಿಳಿ : ಪದನಱಿದು ಬಿತ್ತದ ಬೆಳಸುಂ . . . ಮುಯ್ಪಂ ನೋಡುವ ಮಾಸಿಸರುಂ ತುದಿಯೊಳ್ ಮಹಾದುಃಖಮನೆಯ್ದುವರ್ (ಧರ್ಮಾಮೃ. ೧೧-೪೨). **ಹದನಱಿ : ೨.** ಸಹಜಾನುಗ್ರಹಸ್ವಾಯತಸಂಬಂಧವ ಮಾಳ್ಪುದೀ ಹದನಱಿಯದನನುಗ್ರಹ ಸಲ್ಲ (ಶಿಪಗೀ. ೫೪-೨೫೫) ; ಹದನಱಿವ ತುರಗದ ವೈದ್ಯತತಿಯೆಚ್ಚಱಿಕೆಯಲಿ ಸಂತೈಸಿದರು ವಾಜಿಗಳ ವೇದನೆಯ

(ಕುಪ್ಯಾಭೀ. ೫-೩೯). ೪. ಹದನಱಿದು ಹರಗುವ ಬೆದೆಯನಱಿದು ಬಿತ್ತುವ . . . ಲೋಕಾಧಿಲೋಕಗಳ ಹಗೆಯ(ಹಗೆವು)ನಿಕ್ಕುವನಯ್ಯಾ (ಸರ್ವ. ೧೬೨-೭೬೮). **ಹದವರಿ :** ೨. ಕಚ್ಚಾ ಪದಾರ್ಥವನ್ನು ಹದವರಿತು ಉಪಯೋಗಿಸಿಕೊಳ್ಳುವಂತೆ ನಿರ್ದೇಶಿಸಲು . . . ವಿಜ್ಞಾನವನ್ನು ಬಲ್ಲ ಓವರ್‌ಸಿಯರುಗಳೂ ಬೇಕು (ಶಿಕ್ಷದ. ೧೯೫). **ಹದವಱಿ :** ೨. ಸುಭಕ್ಷ ಸುಪಕ್ವಫಲಗಳ ಮೋಕ್ಷುಂಗಳಿಗೆ ಹದವ[ಪಾಠಾಂ. ನ]ಱಿದಿಕ್ಕಿದನು (ಭರಚ. ೩-೯೧). [ಪದನ್ (<ಪದ$_1$)+ಅಱಿ]

**ಪದನಿಮಿತ್ತ** (ಅ). ಸ್ಥಾನದ ಕಾರಣವಾಗಿ; ಅಧಿಕಾರದ ಪ್ರಯುಕ್ತವಾಗಿ: ಭಾರತದ ಉಪರಾಷ್ಟ್ರಪತಿಯವರು ತಮ್ಮ ಪದನಿಮಿತ್ತ ರಾಜ್ಯಪರಿಷತ್ತಿನ ಸಭಾಪತಿಯವರಾಗಿರತಕ್ಕುದು (ಭಾಧಾನ. ೩೨). [ಸಂ.]

**ಪದನಿಮಿತ್ತ ಸದಸ್ಯ** (ನಾ). ಸ್ಥಾನದ ಬಲದಿಂದ ಸದಸ್ಯನಾಗಿರುವವನು : "ಅಧಿಕಾರ ಬಲದ ಸದಸ್ಯ, ಪದನಿಮಿತ್ತ ಸದಸ್ಯ" (Ex-officio member. ಪತ್ರಿನಿ. ೩೭). [ಪದನಿಮಿತ್ತ +ಸದಸ್ಯ]

**ಪದನಿವಾಸ** (ನಾ). ಪದವಿಯಲ್ಲಿರುವಾಗ ಸರ್ಕಾರವು ಪುಕ್ಕಟೆಯಾಗಿ ಕೊಡುವ ವಸತಿ: ಉಚ್ಚತಮ ನ್ಯಾಯಾಲಯದ ಪ್ರತಿಯೊಬ್ಬರು ನ್ಯಾಯಾಧೀಶರೂ ಬಾಡಿಗೆ ಕೊಡದೆಯೇ ಪದನಿವಾಸವನ್ನು ಉಪಯೋಗಿಸಲು ಹಕ್ಕು ಹೊಂದಿರತಕ್ಕುದು (ಭಾಧಾನ. ೨೪೭). [ಪದ$_2$ + ನಿವಾಸ]

**ಪದನಿಸು** (ಕ್ರಿ). ಅನುಗ್ರಹಿಸುವಂತೆ ಮಾಡು; ಆಕರ್ಷಿಸು; ವಶಪಡಿಸಿಕೊಳ್ಳು : ತದಾನನಾಂಬುಜದ ತುಂಬಿಗಳಂ ಸುರಪುಷ್ಪವೃಷ್ಟಿ ತಾಂ ಪದನಿಸಲಾರ್ತುದಿಲ್ಲ ನಿಜಗಂಧದಿನೇನದಱೊಳ್ಪಳುಂಬವೋ (ಪುಷ್ಪಪು. ೧೨-೨೦). [ಪದನ್(<ಪದ$_1$)+-ಇಸು$_3$]

**ಪದನು** 'ಪದ$_1$' ನೋ.

**ಪದನೋಟ** (ನಾ). ಹಿತವಾದ ದೃಷ್ಟಿ; ಪ್ರಿಯವಾದ ನೋಟ : ಮುದದಿ ಮೋಹಿಸಿ ಮುಂದುವರಿವೆನ್ನೆರ್ದೆಯಿರವಿದ ನೋಡೀ ಪರಿಯೆಂದು ಇದಿರಿಡುವಂತೆವೋಲೆಳನಗೆಗೂಡಿದ ಪದನೋಟವ ಪರ್ಬಿಸುವುದು (ಚಕವಿ. ೬-೧೫೭ ಸಾಂಗತ್ಯ). [ಪದ$_1$ + ನೋಟ]

**ಪದನ್ಯಸನ** (ನಾ). ಹೆಜ್ಜೆಯನ್ನು ಇಡುವಿಕೆ; ನಡಗೆ; ಪದವಿನ್ಯಾಸ: ರತಿಯೊಳ್ಪದನ್ಯಸನಮಂ ಕಲ್ತಂಚೆ ಶೀತಾಂಶು ತೀವಿದ ನೆಯ್ದಿಲ್ಗೊಳನಲ್ಲದಿಲ್ಲೆನೆ ಬನಂ ಚಿತ್ರೋತ್ಸವಾಲಂಬನಂ.(ಮಲ್ಲಿಪು.೨-೩೭). [ಪದ$_2$+ನ್ಯಸನ]

**ಪದನ್ಯಾಸ** (ನಾ). ೧. = ಪದನ್ಯಸನ : ಸ್ಮರಮಂತ್ರದೇವತೆಯವೋಲ್ ಬಾಹಾಲತಾಂದೋಳನಂ ಬಗೆಯಂ ಬಲ್‌ಸೆಱೆಗೆಯ್ಯೆ ಬಾಲೆ ಮೆಱೆದಳ್ ಲೀಲಾಪದನ್ಯಾಸಮಂ (ಪಂರಾಮಾ. ೫-೪೨). ೨. ಹೆಜ್ಜೆಯ ಗುರುತು; ಪಾದಚಿಹ್ನೆ: ಸುಹೃತ್ಪದ್ಮದೊಳಿಂಬುವೆತ್ತುದು ಪದನ್ಯಾಸಂ . . . ಶ್ರೀಪೂಜ್ಯಪಾದೇಶನಾ (ಪುಷ್ಪಪು. ೧-೨೪). [ಪದ$_2$+ನ್ಯಾಸ]

**ಪದಪದ್ಧತಿ** (ನಾ). ೧. ಹೆಜ್ಜೆಯ ಗುರುತು; ಪಾದಚಿಹ್ನೆ : ನಿನ್ನ ಪೆಡೆದುಱುಗಲೊಳೆನ್ನ ಪದಪದ್ಧತಿಗಳಿರ್ದಪುವು ಇವಂ ಕಂಡೊಡೆ ಪನ್ನಗವಿರೋಧಿಯುಂ ಕಾದು ಕಱಿಪುಗುಂ ಪೋಗು (ಜಗವಿ. ೩-೧೧೩ ವ). ೨. ಪದಗಳನ್ನು ಜೋಡಿಸುವ ಕ್ರಮ,—ರೀತಿ : ಉಚಿತ ಪುರಾಣ ಮಾರ್ಗ ಪದಪದ್ಧತಿ ಬಂಧುರಬಂಧಮೆಂಬಿನಂ ರಚಿಯಿಸೆ ವಾಚ್ಯವಾಚಕ ವಿಶೇಷ್ಯವಿಶೇಷಣ ಲಕ್ಷ್ಯಲಕ್ಷಣಪ್ರಚುರತೆ ಕಾಳಿದಾಸನುಮನೇೞಿಸಿತೀ ಕೃತಿ ನಾಗವರ್ಮನಾ (ಛಂದೋಂಬು. ೧-೭). [ಪದ$_2$ + ಪದ್ಧತಿ]

**ಪದಪದ್ಯ** (ನಾ). = ಪದಕವಿತೆ : ಗಗನಗಣಾಗ್ರದೊಳಂ ತಾಂ ಯಗಣಮನಿಡಲಶುಭಮುಬ್ಬ ಮುಖಿ ಕರ್ತಂಗಂದಗಣಿತಭಯ ಕೇಡಕ್ಕುಂ ಪಗೆವರ್ಗಂ ಪೇಳವೇಡ ಪದಪದ್ಯಗಳೊಳ್ (ಕವಿಜಿ. ೧-೨೭); ಇವನಿಗೆ ವಿನೋದದಲ್ಲಿ ಹೊತ್ತು ಹೋಗುವ ನಿಮಿತ್ತವಾಗಿ . . . ಪದಪದ್ಯಗಳ ನೋದುವ ಹೆಣ್ಣುಗಳ ಸಂಗಡಲೆ ಕಳುಹಿಸಿಬಿಡು (ಪಚಕಾ. ೬೨). [ಪದ$_2$+ಪದ್ಯ]

**ಪದಪಲ್ಲಟ** (ನಾ). ಪದಗಳ ಸ್ಥಾನ ಬದಲಾಗುವುದು : ಈ ಮೇಲಿನ ಪದ್ಯಗಳಲ್ಲಿ ಅಕ್ಷರಪಲ್ಲಟ, ಪದಪಲ್ಲಟ . . . ಕಂಡು ಬರುವುದನ್ನು ಗಮನಿಸಬಹುದು (ಕುಮಾಸಾಂ. ೯೩). [ಪದ$_2$ + ಪಲ್ಲಟ]

**ಪದಪಾಂಸು** (ನಾ). = ಪದಧೂಳಿ ೨: ಸಮಂತಭದ್ರಋಷ್ಯತರ ಪದಪಾಂಸು ಕಿಡಿಸುಗಘಪಾಂಸುಗಳಂ (ಮಲ್ಲಿಪು. ೧-೧೩). [ಪದ$_2$ + ಪಾಂಸು]

**ಪದಪಾಕ** (ನಾ). ಸಿದ್ಧವಾದ ಅಡುಗೆ; ತಯಾರಾದ ಅಡುಗೆ: ನಲಿನಲಿದು ಕಾಸಿ ಪದ[ಪಾಠಾಂ. ಪ್ರತಿ]ಪಾಕಮಂ ನೋಡುತಂ (ಕಣ್ವ.ರ.ದೇ. ೧೩೫-೨೪); ಪದಪಾಕಕ್ಕೊಳಗಾಗೆ ಬಾಗಿಸಿದ ರಾಜಾನ್ನಾನ್ನದೊಳ್ ಘಾಸಿಯಾಗದುದಂ ಸಜ್ಜು ಕವಾಲ ಘಟ್ಟ ಮೊಸರಂ ತಂದಿಕ್ಕಿ (ಮಹಾನೇ.೧೬-೪೯). [ಪದ$_1$ + ಪಾಕ$_1$]

**ಪದಪಾಠ** (ನಾ). ವೇದಪಠನದ ಒಂದು ಕ್ರಮ; ವೇದಸಂಹಿತೆಯನ್ನು ಪದವಿಭಾಗಪೂರ್ವಕವಾಗಿ ಅಧ್ಯಯನ ಮಾಡುವುದು : ವೇದದ ವಾಕ್ಯಗಳನ್ನು ಪದವಿಭಾಗ ಮಾಡಿ ಹೇಳುವ ರೂಢಿ ಬಂತು (ಪದಪಾಠ) (ಭಾರದ. ೩೨). [ಪದ$_2$ + ಪಾಠ$_2$]

**ಪದಪಾತ** (ನಾ). ೧. ಹೆಜ್ಜೆಯಿಡುವುದು. ೨. ಒದೆತ; ಪಾದಾಘಾತ; ತುಳಿತ; ದೋಹದವನ್ನು ತೀರಿಸುವ ಒಂದು ಬಗೆ : ದಯೆಗೆಯರ್ ಪದಪಾತಮನಸುಗೆಯೊಳಂತದು ತಳಿರ್ಗುಂ (ಚಂದ್ರಪು. ೭-೭೪); ವನಿತಾ ಪದಪಾತದಿನಾದನುರಾಗಂ ತನ್ನೊಳೊದವೆ ಸಾಸಿರ್ಮಡಿಯಾದನಿತಂ ಸೂಚಿಸುತಿರ್ದುದು ಬನದೊಳ್ ಮಿಸುಪಸುಗೆ ಮಿಸುಪ ಕೆಂದಳಿರ್ವೊಱೆಯಿಂ (ಕುಸುಮಾ. ೫-೯೩). [ಪದ$_2$ + ಪಾತ$_1$]

**ಪದಪೀಠ** (ನಾ). ಕಾಲಿಡುವುದಕ್ಕಾಗಿ ಮಾಡಿದ ಪೀಠ; ಕಾಲುಮಣೆ; ಪಾದಪೀಠ: ಪದಪೀಠದ ಸನ್ನಿಧಿಯೊಳ್ ಪದೆಪಿಂ ಕುಳ್ಳಿರಿಸಿಕೊಂಡು . . . ಬೆಸಗೊಂಡನಾ ನರೇಂದ್ರಮುಕುಂದಂ (ಕುಸುಮಾ. ೧೫-೧೩೨); ದೇವ ಮಾಱಿಪ್ಪೆದೆನ್ನಿಷ್ಟಮನೆಂದು ಬೇಟ್ಟಿ ಪದದೊಳ್ ಪದಪೀಠದ ಮಾತುಳುಂಗಮೇಂ ತುಷ್ಟಿಯನಿತ್ತುದೋ ಜಗುಟಿವಂದಿದಿರ್ಗೊಂಡು ಮನಕ್ಕಪೂರ್ವಮಂ (ಪುಷ್ಪಪು. ೩-೧೦೩). [ಪದ$_2$ + ಪೀಠ]

**ಪದಪು,** ಪದಂಪು, ಪದಪ್ಪು, ಪದುಪು, ಪದೆಪು, ಹದಹು (ನಾ). ೧. ಆಸೆ; ಇಷ್ಟ; ಬಯಕೆ; ಅಪೇಕ್ಷೆ : ಇದು ಸರ್ಗಕ್ಕೆಂದು ಪದೊಳ್ದಿವಂ ಸುದತೀರತ್ನಸಮೂಹಮಂ ಪದಪಿನಿಂ ಬೈಚಿಟ್ಟ ಭಂಡಾರಮಪ್ಪುದೆನಲ್ ಸಂದಣಿಸಿರ್ದ ಸುಂದರಿಯರಂ ಕಂಡಂ ನರೇಂದ್ರಾತ್ಮಜಂ (ಕಾದಂಪೂ. ೯೯೮); ಕೊಲ್ಲದ . . . ಪರವನಿತೆಯರ್ಗೆ ಪದಪಿಂ ಚಿತ್ತಂ ಸಲ್ಲದ ಪರಿಗ್ರಹಕ್ಕೆಳಿಪಿಲ್ಲದ ಸುವ್ರತಮಿವೈದುಮಲ್ಲವೆ ರತ್ನಂ (ಧರ್ಮಾಪ್ರ. ೧-೮೧); ಅದನೆ ಮಗುಳ್ದೊಂದು ಮತದಿಂ ಪದಪಿಂ ಪೇಳಲ್ಕೆ . . . ಭೇದಕಾತಿಶಯವಚನಂ (ನರಚ. ೩೩-೬೬); ಮದುವೆಗುರಲೊಟ್ಟಲಿರಬೇಕೆಂದು ಕೊಳ್ಳಿಗಳ ಪದಪಿನಿಂ ಬೆಳ್ಳಿಯೊಟ್ಟರ್ದಳ್ (ಕಾಲೂರ. ೧೮೨-೪೧೨). ೨. ಉತ್ಸಾಹ; ಸಡಗರ; ಸಂಭ್ರಮ : "ಪದಪೆಂದೆನೆ ಸಂರಂಭಂ" (ಚತುನಿ. ೪೪); ರೂಪಂ ಪದಪಿಂದಂ ಮಾಡಿಯುಂ ನೋಡಿಯುಂ ಮಸದೃಶದೊಳ್ ಗರ್ಹಿತಸ್ಪರ್ಶಸಂಭೋಗದೊಳಿಂತೀ ದುಷ್ಟಚಂಡಾಲರ ಕುಲದೊಳಗೇಗೈದನೋ ದುರ್ವಿವೇಕಂ(ಕಾದಂಪೂ.೫೦); ಪದಪಿನಿಂ ಪಶ್ಚಿಮಪಯೋಧಿಯೆಂಬಿಂದ್ರನೀಲದ ಪೀಠಮಧ್ಯದೊಳ್ ಮುಚ್ಚಂಜೆಯೆಂಬೋಜ

ನುದಿತ ಸಂಭ್ರಮದಿಂದೆ ನಿಱಿಸಿದುರುತರದ ನವಮಾಣಿಕದ ಲಿಂಗಂಬೊಲು . . . ಸಂಜೆಗೆಂಪೆಸೆಯೆ (ಉದ್ಭ.ದೇ. ೪-೭) ; **ಪೊಡೆವ** ತಂಬಟಪಟಹ ಭೇರಿಗಳ ಭೂರಿಗಳ ಪದಪಿಂದೆ ಪಡೆ ನಡೆದುದು (ಜೈಮಿಭಾ. ೨೦-೩೭). **೩.** ಪ್ರೀತಿ ; ಒಲುಮೆ ; ಮೆಚ್ಚುಗೆ : ಪದಪು ಮನಕ್ಕೆ ಸೊರ್ಕು ನಯನಕ್ಕೆಸೆಯುತ್ತಿರೆ . . . ಆಡಿಸಿದನಾತನನಂಗಜನೆಂಬ ನಟ್ಟುವಂ (ಆದಿಪು ೪-೧೫) ; ಮುನಿಸಿಂ ಬಯ್ಯದೆ ಪೊಲ್ಲಮೆಗೆ ಜಱಿಯಲಾರದೆ ಪದಪಿಂ [ಮಗನ ವಿನೋದಮಂ . . . ನೋಡುತುಮಿಂತಿರುತಿರ್ದರಿರ್ವರುಂ] (ಧರ್ಮಾಮೃ. ೨-೧೨) ; ಜಡೆಯನ್ನೆಸಾರು . . . ಸೌಂದರನಡಿಗಡಿಗೆ ಪದಪಿನಿಂದಪ್ಪಿ ಮುಂಡಾಡಿ . . . ನೋಡಿದರು ಮಗನೆಂಬ ಭಾವದಿಂದ (ಸೌಂದಪು. ೫-೪೦) ; ಪದಪಲಿ ತಳರ್ದಮುಚಿದ ಮುಱಿದುಂಬಿಯು ಹದನಂತೆ ಮೆಱೆದುದರ್ತಿಯಲಿ (ಕಂನವಿ. ೬-೧೧೬). **೪.** ಸಂತೋಷ ; ಹಿಗ್ಗು ; ನಲಿವು : ತ್ರೈಲೋಕ್ಯರಾಜ್ಯಾಭಿಷೇಕಮೆ ಕೈಸಾರ್ದುದಿವಳ್ಗೆನುತ್ತೆ ಪದಪಿಂದಾನಾಕೆಯುಂ ನೋಡಿದೆಂ (ಕಾದಂಪೂ. ೮೦೪) ; ಪದಪಿಂ ವಿಚಿತ್ರರತಕೇಳೀವಾರ್ಧಿಯೊಳ್ಮೂಡಿ ಮುೞ್ಕಾಡುತ್ತುಂ . . . ಪ್ರಿಯರಿಂತು ಪೊಟ್ಟುಗಳೆವರ್ನಿಚ್ಚಂ ಪುರೋದ್ಯಾನದೊಳ್ (ಪುಲ್ಲಿಪು. ೨-೩೮) ; ಪದಪಿನೊಳೇಱುವೆಂ ಸುರಗಜೇಂದ್ರಮಂ . . . ಎಂಬ ಮನಮುಳ್ಳೊಡೆ ಪೊರ್ದು ಜಿನೇಂದ್ರಧರ್ಮಮಂ (ಧರ್ಮಾಮೃ. ೬-೧೬೨); ತನ್ಮಜ್ಜನಾಂಬುವೊಳ್ ಪದಪಿಂ ಮುಳುಂಗಿ ಕುಷ್ಠಂ ನೀಗಿದೊಡಯಂಗೆಱಗಿ ಕರುಣಂಬಡೆಯನೇ (ಪದ್ಮರಾ. ೪-೬೦). **೫.** ಆದರ ; ವಿಶ್ವಾಸ : ಪದಪಿಂ ಧರ್ಮಮನೊಪ್ಪಿನಿಂದೆನಗಘಪ್ರಧ್ವಂಸನೋಪಾಯಸಂಪದಮಂ ತನ್ಮುನಿ ಪೇೞ್ದಣುವ್ರತಮನಾನೀಗಳ್ ಬಿಸುಟಪ್ಪೆಗಳ್ (ಸುಕುಮಾ. ೬-೫೦) ; ಪದಪಿಲ್ಲದ ದಾನಿಯುಂ ಜಿನೇಶ್ವರಪದಸೇವೆಯಿಲ್ಲದವನುಂ ನೆಱೆ ರಂಜಿಸಲಾಱರುರ್ವಿಯೊಳ್ (ಧರ್ಮಾಮೃ. ೧೩-೧೩೬) ; ಪದಪಿಂ ಮಾಡುವ ದಾನಶಕ್ತಿ ಶಿವಧರ್ಮಾಧಾರಕತ್ವಂ (ಕಇ. V, ೩೨-೪೦ ; 1215) ; ನೀನಾವ ತಾಣದೊಳಿರ್ದೊಡಾಯೆಡೆಗೆ ಪದಪಿಂದಲಾನು ಬಿಜಯಂಮಾಡಿ ಸೇವೆಯನು ಕೊಂಬೆ (ಸೌಂದಪು. ೧-೪೬) ; ಪದಪಿನಿಂದಿಪ್ಪ ಲಕ್ಕದ ಮೇಲೆ ತೊಂಬತ್ತಾರ್ಸಾಸಿರ ಸುಜಂಗಮವನು . . . ಕರೆತಂದು (ಚೆಬಪು. ೬-೧೬). **೬.** ಮನೋಹರತೆ ; ಚೆಲುವು ; ಸೊಗಸು : ಇದು ಶುಕ್ರಚಾಪಲತೆ ಪುಟ್ಟಿದ ತಾಯ್ಮನೆಯೆನೆ ವಿಚಿತ್ರಮಣಿಗಣರುಚಿಗಳ್ ಪುದಿದ ಲಹರೀಸಮಾಜದ ಪದಪಿಂ ರಾಜಿಪುದು ಲವಣಪಾರಾವಾರಂ (ಕುಸುಮಾ. ೧-೨೩) ; ರನ್ನದ ಘಟಂಗಳ ಕೈಕೈಗೆ ಮಿಗೆ ಕೊಡುವ ಕೊಂಭೊಂದು ಪದಪು ಕಂದುಕಕೇಳಿಯೆನೆ ತೋಱಿದುದು (ಸಾಳ್ವಭಾ. ೩೩-೬೦) ; ತಡಿತಡಿಗಡರ್ವ ಜಲದೊತ್ತುಗಳ ಮುತ್ತುಗಳ ಪದ[ಪಾಠಾಂ. ಡೆ]ಪಿನಿಂ ಕಡಲೆಸೆದುದು (ಚೆಬಪು. ೨-೪) ; ಬಿದಿಗಿ ಚಂದ್ರನು ಬೆಳೆದು ಹುದಗಿರುವ ಬೆಳಕನ್ನು ಪದಪಿನಲಿ ಸುತ್ತ ಚೆಲ್ವಂತೆ (ನಾಡಪ. ೧೩). **೭.** ಸುಖ ; ಕ್ಷೇಮ : ಅಬಲೆ . . . ಮನನೊಂದೆನಗಿವಸಿಂದ ಪದ[ಪಾಠಾಂ. ಡ]ಪು ಇಂದು ದೊರೆದುದಿಲ್ಲವೆನುತ ವಿಧಿಯ ಬೈಯುತಂದು ತದ್ಗೃಹಕ್ಕೈದಿದಳು (ಮೋಳಿಪು. ೧-೮೨). **೮.** ಭಕ್ತಿ ; ಶ್ರದ್ಧೆ : ಪದಪು ಜಿನೇಂದ್ರಪಾದಕಮಲಂಗಳೊಳಾವಗಮಾಗೆ . . . ಕುದಿದಪತ್ಯಷ್ಣೆಯಂ ಕುಸಿದು ಮಾಣಿಸುಮಯ್ಯುಮಣುವ್ರತಂಗಳಂ (ಆದಿಪು. ೬-೭) ; ಪದಪಿನಿಂ ಕೇಳ್ವಳ್ ಪುರಾಣಂಗಳಂ (ಕಾದಂಪೂ. ೩೬೮). **೯.** ಅಚ್ಚುಕಟ್ಟು ; ಒಪ್ಪ : ಗುರುಗುಂಜೆ ಪುನರ್ನವಿ ಪದ್ಮಪತ್ರಮೆಂಬಿನಿತುಮನಿಕ್ಕಿ ಸುಣ್ಣದೊಳವಂ ಪದಪಿಂ ತೆಗಪುತ್ತೆ (ಲೋಕೋಪ. ೮-೩೧) ; ಉಂಡೆಯೊಂದನೆ ತೆಗೆದು ಬಿದಿರ ನೇತ್ರದ ತೆಱಿದ ಗೇಣಗಲವಂ ಮಾಡಿ ಪದಪಿನಿಂ ಹಂಚಿನೊಳು ತುಪ್ಪವ ತಡಹಿ ಅಡಲು ಮಂಡಗೆಯೆನಿಸಿಕೊಂಡುದು (ಸೂಪಶಾ. ೧-೨೯) ; ನೋಡು ನನ್ನ ಬಾಳ ಪದಪ (ರಾಮನ. ೪೪). **ಪದಂಪು :** **೩.** ಅಡಿಗೆಱಗಿದ ಕೇಯೂರಕನನಿತ್ತ ಬಾಯೆನುತ ಪದಂಪೊದವೆ ತೆಗೆತೆಗೆದು ತೞ್ಕೈಸಿದನಾಗಳ್ ನೃಪತಿ ನಿಬಿಡನಿಜಭುಜಯುಗದಿಂ (ಕಾದಂಉ. ೩೬೦). **೬.** ತಂಗಾಳಿಯ ಪದಂಪು ಗಿಳಿಗಳ ರವದ ಸೊಂಪು . . . ಸಂಗಳಿಸಿತೆಲ್ಲೆಲ್ಲಿಯುಂ ಚೈತ್ರಾಗಮಂ ಬರಲ್ (ಚೆಬಪು. ೪೫-೧೫) ; ಈ ಪದಂಪು, ಈ ತಂಪು ದೂರದ ದಿವಮಂದಾರದ ಗಂಧದ ಗಣೆಯಿಂದ ಬಂತು (ನಡೆಬಂ. ೭-೨೧). **ಪದಪ್ಪು : ೩.** ಆತನ ನುಡಿಯೊಳ್ಪದಪ್ಪನಪವರ್ತಿಪುದಪ್ಪಿನದೊಂದು ನೇರ್ಪು ಚುಂಬನಮನವಜ್ಞೆ ಮಾಡುವುದು (ಚಂದ್ರಪ. ೮-೮೨). **ಪದುಪು : ೯.** ದಿವಭುವನವನು ಪದೆದು ಹಾಸುಹೊಕ್ಕಂತೆ ಪದುಪಿಂದಲೊಂದಿಸುತೊಂದೆ ಮಗ್ಗದಲಿ [illegible] ಕವಿತೆ ಶಬಲಾಂಶುಕವನುಡುತ (ಗಿಳಿವಿಂ. ೨೩-೬೮). **ಪದೆಪು : ೩.** ಉದಾತ್ತರಾಘವನ ಪದೆಪನಾವಂ ಪಡೆವಂ (ಪಂರಾಮಾ. ೧೨-೮೧) ; ಗೋಪಿಯರ್ ಪದೆಪಿಂ ಜಕ್ಕುಲಿಸೆ ಲಲಿತಾನನಾಂಬುಜಮಲರ್ದೆಸೆದುದು ಮಂದಹಾಸದಿಂ ಮುರಹರನಾ (ಜಗವಿ. ೩-೩೩) ; ಸೋಮಪ್ರಭಂ ಲೀಲೆಯಿಂದಿದಿರ್ವಂದಾನತರಾದ ಸುಪ್ರಭಮಧುಪ್ರಧ್ವಂಸರಂ ಹರ್ಷಬಾಷ್ಪದೆ ಮೆಯ್ವೆರ್ಚಿದಂ . . . ಇಕ್ಕಿದಂ ಪದೆಪಿನಿಂ ಬಾಯ್ತಾಯ ತಾಂಬೂಲಮಂ (ಅನಂಪು. ೧೪-೨೪). **೪.** ಕಿವಿಗಿಂಪಂ ಕೆ[ಳೆ] ಗೀತ. . .ತನಿಸೊಕ್ಕು ಮೆಯ್ಗೆ ಪದೆಪಂ ತಂದೀಯೆ ದೇವಾಂಗನಾನಿವಹಾಸಂಗದೆ ಸಿಂಹಕೇತು ಪಡೆದಂ ಪಂಚೇಂದ್ರಿಯಪ್ರೀತಿಯಂ (ವರ್ಧಮಾ. ೬-೫೦) ; ಧನಮಂ ಮರ್ಯಾದೆಯಿಂದಾರ್ಜಿಸಿ ವಿಷಯಸುಖಾಸ್ವಾದನಂ ದೋಷನಿಷ್ಪಾದನಮಲ್ತೆಂಬಂತೆ ಚಿತ್ತಕ್ಕೊದವಿಸೆ ಪದೆಪಂ (ಪಂರಾಮಾ. ೩-೧೬೧) ; ಲತಾನಿಕೇತನಾಂತದೊಳಾಗಳ್ ಪದೆಪು ಮಿಗೆ ಖಚರದಂಪತಿ ಮದನಸುಖಾಸ್ಪದಮನಾಂತ ಕುಸುಮದ ಪಸೆಯಂ ಭೋಂಕನೆ ಕಂಡು ನೋಟ್ಪನ್ನೆಗಂ (ನೇಮಿಪು. ೪-೨೮) ; ಪದೆಪಿಂ ಪೇೞ್ದಪೆಂ ರೀತಿ ಭಾವಂ ಛಂದೋಲಂಕಾರಸಾರಂ ಪುದಿದಿರೆ ಗಿರಿಜೋದ್ವಾಹಮಂ ಪ್ರೀತಿಯಿಂದಂ (ಗಿರಿಕ. ೧-೪೨). **೫.** ಇಂದೀವರನಯನೆ . . . ಗುಣನಿಳಯನನಂದಾಗಳ್ ನೋಡಿ ಪೋಗಲಾಱದೆ ಪದೆಪಿಂ ಸಾರೆ ಕುಳ್ಳಿರ್ದು (ಧರ್ಮಾಮೃ. ೧೦-೧೬೬) ; ರತ್ನಮಾಲೆಯನಿಂದ್ರಾಣಿಯುಮಿಂದ್ರನುಂ ಪದೆಪಿನಿಂ ಸಂತೈಸಿ (ಅನಂಪು. ೯-೭೯). **೬.** ಸಂತತಮಾ ಸುರಾಪಗೆಯ ಬೆಳ್ವೊನಲಂ ಪದೆಪಿಂದುಗುಟ್ಟಿ ಹೇಮಂತನಗೇಂದ್ರಮಂ ನೆನೆಯಿಸುತ್ತುಂ (ಕುಸುಮಾ. ೧೫-೨೦). **೧೦.** ಅತಿಯಾಸೆ ; ಮೋಹ : ಈ ಪರದನೆ ಸಖನೆನ್ನದೆ ಪಾಪಯುತಂ ಪೊನ್ನೊಳಾದ ಪದೆಪನೆ ಬಗೆದಂ (ಧರ್ಮಾಮೃ. ೧೨-೭೯). **೧೧.** ಸತ್ಕಾರ ; ಉಪಚಾರ ; ಶುಶ್ರೂಷೆ : ತೀವಿದ ಮಜ್ಜನದಿಂ ಸದ್ಭಾವದಿನೊಸೆದೆತ್ತಿದೊಂದು ಬೋನದೊಳಂ ನಾನಾ ವಿಧದ ಪದೆಪಿನೊಳ್ ಹರಿಗಾವಗಮಾಱಿದುದು ಪಥಪರಿಶ್ರಮಮೆಲ್ಲಂ (ಪಂಪಭಾ. ೯-೨೮) ; ವರ ಪಂಚಾಚಾರಮಂ ರಕ್ಷಿಸುವ ಪದೆಪು ಲೇಸಪ್ಪಿನಂ . . . ವರ್ತಿಸುತ್ತುಂ (ಬಾಧಪು. ೧-೩). **ಹದಹು : ೨.** ಅದನು ಕಂಡಾ ಧೀವರಂ ನಲಿಯುತೊಂದುದಿನದುದಯದೊಳಗಾ ಹಕ್ಕಿ ದೆಸೆದೆಸೆಗೆ ಮೇಂಬೊಲಕೆ ಹದಹು[ಪಾಠಾಂ. ವು] ಮಿಗೆ ಹಾಱಿಹೋದುದನಱಿತು (ಸಮ್ಯಕೌ. ೨-೩೨). [ಪದೆ$_{1}$ + -ಪು$_{2}$]

**ಪದಪುಂಜ** (ನಾ). ೧. ಪದಗಳ ಗುಂಪು,—ಸಮೂಹ : 'ಸತ್ಯಂ ಶಿವಂ ಸುಂದರಂ' ಎಂಬ ಪದಪುಂಜವನ್ನು ಕವಿ ರವೀಂದ್ರರು ತಮ್ಮ ಲೇಖನಗಳಲ್ಲಿ ಬಳಸಿ ಪ್ರಚುರಕ್ಕೆ ತಂದಿದ್ದಾರೆ (ಸೌಂದಸ. ೪೧೦) ; ಈ ಪದಪುಂಜಗಳಲ್ಲಿ ಬರುವ ಪೂರ್ವಪದವಾದ '**ಪೂರ್ವ**' ಎಂಬುದಕ್ಕೆ ಪೂರ್ವದಿಕ್ಕು ಎಂಬ ಅರ್ಥವನ್ನು ಅನ್ವಯಿಸಬಾರದು (ದ್ರಾವಿವಿ.೬ಹಿನ್ನೆಲೆ). ೨.[ವ್ಯಾಕ] (ಅಪೂರ್ಣವಾದರೂ) ಹೊಂದಿಕೆಯುಳ್ಳ ಅರ್ಥವನ್ನು ಕೊಡುವ ಪದಗಳ ಗುಂಪು ; ಸಮನ್ವಿತವಾದ ಶಬ್ದಗಳ ಸಮೂಹ ; ವಾಕ್ಯಾಂಗಭಾಗ ; ಪದಸಮುಚ್ಚಯ. [ಪದ$_{2}$ + ಪುಂಜ$_{3}$]

**ಪದಪುಗಾರ** (ನಾ). ಸೊಗಸುಗಾರ; ಒನಪುಗಾರ : ಗಡ್ಡ ಅಲಗಿಸುತ್ತ ಕೇಳಿದ ಈ ಪದಪುಗಾರ (ಬಿಳುಮ. ೯೨).

[ಪದಪು + -ಕಾರ$_1$ (<-ಕಾಱ)]

**ಪದಪುಗಾರ್ತಿ,** ಪದೆಪುಗಾರ್ತಿ (ನಾ). ೧. ಉತ್ಸಾಹದಿಂದ ಕೂಡಿರುವವಳು: "ಪದಪುಗಾರ್ತಿಯೆಂದುಂ, ಹೊನಹುಗಾರ್ತಿಯೆಂದುಂ, ಸಂರಂಭವತಿ" (ಕಿಶಸಾ. ೬೨-೩೮೧). **ಪದೆಪುಗಾರ್ತಿ : ೨.** ಸಂತೋಷ ವನ್ನು ಉಂಟುಮಾಡುವವಳು ; ಗಣಿಕೆ: "ಪದೆಪುಗಾರ್ತಿಯುಂ ಮೆಸಲ್ಕುಂದದು ತಾಂ ಗಟಱಸಾಱವೆಣ್ಣಿಗಳ್ಕುಂ ನಾಮಮಂ" (ಕವಿಕಂ.೧೬೪); ಇವನ್ನು ಅನುಗೆಯ್ದುಕೊಳ್ಳುತ್ತ ನೋಂತ ಭಾಗ್ಯರ ಉಪಭೋಗಕ್ಕಳವಡಿಸಿ ಯೊಪ್ಪಿಸುವ ತವಕಕ್ಕಾಗಿ ಪದೆಪುಗಾರ್ತಿಯರು ಸಿದ್ಧವಾಗಿರುವರು(ಬಿಟ್ಟಿಅ. ೮೩-೬). [ಪದಪು + -ಗಾಱ (<-ಕಾಱ) + -ತಿ$_1$ (<-ಇತ್ತಿ)]

**ಪದಪುಗೊಳ್** (ಕ್ರಿ). ಶೋಭಿಸು ; ಸೊಗಸಾಗು : ಮುಂದ ಕೊಂದೆಸಕಮಂ ಮೊಗದೋಱದೆ ನಿಂದುದೊಳ್ಕೈ ಪಿಱಱದ ಮೇಲದೇಂ ಪದಪುಗೊಂಬುವೆ ಪೆಣ್ಗಳ ಪಂಥ ಪಾಡುಗಳ್ (ಚಿಕವಿ. ೬-೨೦೯) ; ಅವರ ಪಾದಸ್ಪರ್ಶದಿಂದ ಪದಪುಗೊಂಡಿರುವ ಮಂಜುಲಮಾರ್ಗ ಯಾವುದು ? (ತ:ಂಗಥ. ೮೦). [ಪದಪು + ಕೊಳ್$_1$]

**ಪದಪೂರಕ** (ನಾ). ಪದ್ಯದ ಒಂದು ಸಾಲನ್ನು ಪೂರ್ಣಗೊಳಿಸಲು ಸೇರಿಸುವ ಪದ ; ಪಾದಪೂರಣಕ್ಕಾಗಿ ಸೇರಿಸುವ ಪದ : ವಿಯತಿ ಪದಪೂರಕಂ . . . ಕ್ರಿಯಾಲಂಕಾರಹೀನವೆನಿಪ್ಪ ಪೊಳ್ಳಂ ತೂಱ ಕಳೆದು (ಬಸಪು. ೧-೧೮). [ಪದ + ಪೂರಕ]

**ಪದಪೂರಣ** (ನಾ). = ಪದಪೂರಕ : ಪದಪೂರಣಮಂಸಣಂ ಪುಗಿಸದೆ ಕುದಿದು ವೃಥಾಕ್ಷರಂಗಳಂ ಪ್ರಾಸದೊಳಿಕ್ಕದೆ . . . ಪೂಣ್ಕೆಯಿನೋದು ವೇಟಿಸಿದ್ದಾಡಾರ್ ಮೆಚ್ಚರಿದಂ (ಜಾತತಿ. ೧-೧೨). [ಪದ$_2$ + ಪೂರಣ]

**ಪದಪ್ಪು** 'ಪದಪು' ನೋ.

**ಪದಪ್ರಹಾರ** (ನಾ). ಒದೆ; ಒದೆತ: ಬಳಿಕ ನೂಱಾನೆಯಲಿ ನಿನ್ನವನಳವಿಗೊಟ್ಟನು ಭೀಮಸೇನನ ಚಲಗತಿಯ ಚಾತುರಚಪೇಟಪದ ಪ್ರಹಾರದಲಿ (ಕುಪ್ಯಾಗ. ೪-೨೩). [ಪದ$_2$ + ಪ್ರಹಾರ]

**ಪದಬಂಧ** (ನಾ). ೧. ಪದಗಳ ಜೋಡಣೆ : ಸದಮಳಯುಕ್ತಿಗೆ ಯತ್ನಂ ಪದಬಂಧದ ಮಂತ್ರಶಕ್ತಿ ಕೃತಿರತಿರತ್ನಂ (ಹವ್ಯಾರ. ೧-೨೦) ; ಮೃದುಪದಬಂಧವನೆಸಗುವ ಸುದತಿಯ ನಿರ್ವರ್ತಿತ್ತಿದೊಂದು ಪುರ್ವಿಂ ಮೆರೆವೀ ವದನಂ (ಶಾಕುಂತ. ೩೪-೧). ೨. ಪದ್ಯದಲ್ಲಿ ಸಾಲುಗಳ ರಚನೆ : (ಚತುನಿ.ಕಿ. II, ೧೨೧). ೩. ಕಾಲಿನ ಆಭರಣ : ಅಂಘ್ರಿ ನಖಕಿರಣಾಚ್ಛಾರುಣಸಂಕಾಶಮೌಕ್ತಿಕಪದಬಂಧಂ ಆ ದೇವಂ ಶ್ರೀದೇವ ನಾಮಮಂ ತಾಳ್ದಿ (ಶಾಂತಿಪು. ೬-೧೩ ಪ). [ಪದ$_2$ + ಬಂಧ]

**ಪದಬಂಧನ** (ನಾ). = ಪದಬಂಧ ೧ : ವ್ಯಾಕರಣಾಂಶಗಳಲ್ಲಿ ಕಾಣುವ ಪದಬಂಧನ(Morphological Constructions)ಇತ್ಯಾದಿಗಳಲ್ಲಿ ಕಾಣುವ ಸಾಮ್ಯ ಮತ್ತು ಭೇದಗಳು (ಸುವರ್ಣ. ೩೩೫). [ಪದ$_2$ + ಬಂಧನ]

**ಪದಬರ** (ನಾ). (?) : ಶ್ರೀ ಕೇಸ(ಶ)ವೇಶ್ವರದೇವಗ್ಗೆ[F] ದೇವಪೂಜಾ ನನ್ತರಂ ಪದಬರದೊಳ್ ಧಾರಾಪೂರ್ವ್ವಕದಿನಾಚ[೦]ದ್ರಾರ್ಕತಾರಂ ಬರಂ ಬಿಟ್ಟರ್ (ಎಇ. XVI, ೮೫-೩೫ ; 1067). [ ? ]

**ಪದಬಲ** (ನಾ). ಕಾಲಾಳುಗಳ ಪಡೆ ; ಪದಾತಿಸೈನ್ಯ : ತರಣಿಕುಲ ರಥ ಘನ ಹರಿ ದ್ವಿರದಾತುಳ ವನಚರಾಗ್ರಪದಬಲದಿಂದಂ ಧರಣೀಶಂ ರಾಮನಪೊಲ್ ಸುರಗಣವರವರದ ಶರಧಿಕರಮೆಸೆದಿರ್ಕುಂ (ಹವ್ಯಾರ. ೧-೪೦). [ಪದ$_2$ + ಬಲ$_3$]

**ಪದಭಜಕ** (ನಾ). ಪಾದವನ್ನು ಸೇವಿಸುವವನು, — ಪೂಜಿಸುವವನು; ಪಾದಾರಾಧಕ : ಇದುವೆ ಚರದುಂದುಭಿಯಲಾ ಎರಡನೀಶ್ವರನ ಪದಭಜಕರಾ ಕಾಲವಱದು ಬಾಱಸಲಾಗಿ ಮದನಾರಿಯಾ ಘೋಷಣಕ್ಕೆ ಸಂತೋಷಿಸುತ್ತವರನಾ ಕೈಲಾಸದಾ ಸದನದೊಳಗಣ ಪದವ ಕೊಡಲಲ್ಲಿ ಸರ್ವಭೋಗದೊಳಿರ್ಪರು (ವೀಕ್ಷ್ಯಪು. ೭-೫-೫೩). [ಪದ$_2$ + ಭಜಕ]

**ಪದಭಾರ** (ನಾ). ಕಾಲಿನ ಭಾರ : ಐಳಬುಧಿ ಕಡೆಯಾದ ಸರ್ವರಾಜ್ಯ ಶ್ರೀಯು ಮೇಳದೊಳು ವೀರಸಿರಿಯಂ ವಿಜಯಸಿರಿಗಳಂ ತಾಳಲಾರ್ಪದಟುಳ್ಳ ಭುಜವನಾಮಿಕನ ಪದಭಾರಕ್ಕೆ ಬಸವಳಿವುದೇ (ಹಡಕಾ. ೧೧-೩೨).

[ಪದ$_2$ + ಭಾರ]

**ಪದಭ್ರಷ್ಟ** (ನಾ). ಅಧಿಕಾರವನ್ನು ಕಳೆದುಕೊಂಡವನು ; ಸ್ಥಾನ ಭ್ರಷ್ಟ : ಮಲ್ಲಿಕಾರ್ಜುನ ಪದಭ್ರಷ್ಟನಾದ (ಶಾಂತಲಾ. ೪೦೧).

[ಪದ$_2$ + ಭ್ರಷ್ಟ]

**ಪದಭ್ರಾಂತಿ** (ನಾ). ಶಬ್ದಗಳನ್ನು ತಪ್ಪಾಗಿ ಗ್ರಹಿಸುವುದು : ಪದಭ್ರಾಂತಿ : ಎರಡು ಶಬ್ದಗಳಿರುವ ಸಾಮಾನ್ಯ ಸಾದೃಶ್ಯವು ಅವುಗಳ ನಿರ್ದಿಷ್ಟ ವ್ಯತ್ಯಾಸವನ್ನೂ ಮರೆಸುವಂತಿದ್ದಾಗ ಒಂದನ್ನು ಮತ್ತೊಂದಕ್ಕೆ ತಪ್ಪಾಗಿ ಭಾವಿಸುವ ಸಾಧ್ಯತೆಯುಂಟು (ಭಾರಪ. ೬೦).

[ಪದ$_2$ + ಭ್ರಾಂತಿ]

**ಪದಮಂಜರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಸಮಸ್ತರಾಗಂಗಳೊಳಗೆ ರಾಮಕ್ರಿಯೆ . . . ಪದ[ಪಾಠಾಂ. ಪಳ, ಫಳ] ಮಂಜರಿ . . . ಮಧ್ಯಮಾವತಿಯೆಂಬ ಮೂವತ್ತಾಱು ರಾಗಂಗಳೇ ಮುಖ್ಯಮಾಗಿ ಬಳಕೆಯಿಂದಧುನಾತರಲ್ಲಿ ಪ್ರಸಿದ್ಧಗೊಂಡಿರ್ಪುವು (ವಿವೇಕ, ೨೩೪). 'ಫಲಮಂಜರಿ' ಪರಾ. [ಸಂ.]

**ಪದಮಧ್ಯಸಂಧಿ** (ನಾ). [ವ್ಯಾಕ] ಪ್ರಕೃತಿ ಮತ್ತು ಪ್ರತ್ಯಯಗಳು ಸೇರುವಾಗ ಉಂಟಾಗುವ ಸಂಧಿ: ಪ್ರಕೃತಿಪ್ರತ್ಯಯಂಗಳ ಮಧ್ಯಮುಂ ಪೂರ್ವಪದದ ಕಡೆಯುಂ ಪರಪದದ ಮೊದಲುಂ ಕೂಡೆ ಪದಮಧ್ಯಸಂಧಿ, ಪದಾಂತಸಂಧಿ ಎಂದು, ಸಂಧಿವಿಷಯಮಿರ್ತೆಱಂ (ಶಮದ. ೫೦ ವೃತ್ತಿ).

[ಪದ$_2$ + ಮಧ್ಯ$_1$ + ಸಂಧಿ]

**ಪದಮಸ್ತಕ** (ನಾ). ಬಾವಲಿ ; ಕಪ್ಪಟ : "ಪದ[ಪಾಠಾಂ. ಮದ] ಮಸ್ತಕಂ ಬಾವಲೆನಿಸಿಕ್ಕು" (ಮಂಗಾರಾ. ೫೨-೧೧). [ಸಂ.]

**ಪದಮಿಕ್ಕು** (ಕ್ರಿ). ಪದವನ್ನು ಜೋಡಿಸು ; ಪದವನ್ನು ರಚಿಸು : ಒಂದೆಡೆಯೊಳೊಂದು ಕಂದದ ಮೊದಲುಮಂ ವೃತ್ತದ ತುದಿಯುಮ ನೊಂದು ಮಾಡಿ ಪದಮಿಕ್ಕಿಯೋದಿ ಪಂಡಿತಿಕೆಗೆ ಮುಯ್ಯಾಂತುಂ . . . ದೆಸೆದೆಸೆಗೆ ಬೆಸೆವ ಪಚ್ಚ ಪಸಿಯೆಗ್ಗರುಮಂ ಕಂಡು (ಪಂಪಭಾ. ೪-೯೪ ವ).

[ಪದ$_2$ + ಇಕ್ಕು]

**ಪದಮಿಡು** 'ಪದವಿಡು' ನೋ.

**ಪದಮುಖ** (ನಾ). ಕಾಲಿನ ತುದಿ : ಪದಮುಖಕೆ ಮುಂಜೆಱಗ ಬಿಟ್ಟನು . . . ಕರ್ಣಾಭರಣ ಚರಣದ ಖಡೆಯದಲಿ ರಂಜಿಸಿದನಾ ಕರ್ಣ (ಕುಪ್ಯಾಕ. ೮-೧೭). [ಪದ$_2$ + ಮುಖ]

**ಪದಮೆಟ್ಟು** (ಕ್ರಿ). ಹಿಂಜರಿ ; ಹಿಂದೆಗೆ ; ಹಿಮ್ಮೆಟ್ಟು ; ಕುಗ್ಗು : ಪದಮೆಟ್ಟದ ಜೌವನದುರ್ಬುಗೊರ್ಬಿನಿಂದೊಡಲೊಡಲೊಂದೆ ಕೋಱಸು ವೆನೆನ್ನಯ ಪೆಣ್ತನದೊಂದು ಪೆರ್ಮೆಯಂ (ಚಿಕವಿ. ೬-೨೫೦).

[ಪದ$_2$ + ಮೆಟ್ಟು$_1$]

**ಪದಮೇಳ** (ನಾ). (ಸಂಗೀತ ಅಥವಾ ನೃತ್ಯದ) ಹಿತವಾದ ಸರಸವಾದ ಗೋಷ್ಠಿ : ಒದಱುವ ದನಿಗೊಳಗರುಡಿಯ ಪದಮೇಳಮನುಱದು ಬಾಗಿಲೆಡೆಗೇಟ್ಟಂದರ್ . . . ಬೆಲೆವೆಣ್ಗಳ್ (ಚಿಕವಿ. ೬-೧೨೧).

[ಪದ$_1$ + ಮೇಳ (= ಮೇಲ$_2$)]

**ಪದಮೈತ್ರಿ** (ನಾ). [ಕಾವ್ಯಮಿ] ಪದಗಳಿಗೆ ಇರುವ ಪರಸ್ಪರ ಹೊಂದಾಣಿಕೆ : ಪದಗಳಿಗೆ ಇರತಕ್ಕ ಅನ್ಯೋನ್ಯವಾದ ಮೈತ್ರಿಗೆ ಶಯ್ಯೆ

ಎಂದು ಹೆಸರು . . . ಶಯ್ಯೆಗೇ 'ಪದಾನುಗುಣ್ಯ'ವೆಂದೂ 'ಪದಮೈತ್ರಿ'ಯೆಂದೂ ಹೆಸರು (ಕೈಪಿಡಿ. ೨೨೪). [ಪದ$_2$ + ಮೈತ್ರಿ]

**ಪದಯಿದ** (ನಾ). ಪ್ರಿಯನಾದವನು ; ಇಷ್ಟನಾದವನು : ಪದಯಿಂದ ನೆಲ್ಲಿದಂ ಪರಮನೆಲ್ಲಿದಂ . . . ಎಲ್ಲಿದನೋ ಮನಃಪ್ರಿಯಂ (ಅಜಿಪು. ೬-೧೧೮) ; ನಾಯುಂಣ್ಣದ ದೋಣಿಯೊಳೂಡಿದೊಂಗೆ ಪದಯಿದನೆ ಕರಂ (ಸುಕುಮಾ.೨-೬೯). [<ಪದೆ+-ದ$_2$. P ಇದು 'ಒಳ್ಳಿದ' 'ಬಲ್ಲಿದ' ಎಂಬುವುಗಳ ಶಬ್ದಸಾಮ್ಯದಿಂದುಂಟಾದ ರೂಪವಿರಬಹುದು]

**ಪದಯಿಲ** (ನಾ). ಅಧಿಕಾರದಲ್ಲಿರುವವನು ; ಅಧಿಕಾರಸ್ಥ : ಗಾವಿಲಂ, ನಾವಿಲಂ . . . ಪದಯಿಲಂ, ಪಚ್ಚಯಿಲಂ (ಶಬ್ದಾನು. ೪೪೧ ಪ್ರಯೋ). [ಪದ$_2$+-ಇಲ]

**ಪದಯಿಸು** 'ಪದೆಯಿಸು' ನೋ.

**ಪದಯುಗ** (ನಾ). ಎರಡು ಪಾದ ; ಪಾದಯುಗ : ಎನಸುಂ ಮೂಣದೆ ಬಾಗಿದಂ ಪದಯುಗಕ್ಕಾರೂಢಸರ್ವಜ್ಞನಾ (ಪಂಪಭಾ.೩-೩೪) ; ಪದಯುಗರಮ್ಯನಪ್ಪ ಹರಿ ಮುನ್ನಳೆಯಲ್ಕೆ ತದಂಘ್ರಿಗಾದಮೆಯ್ದ್ದದ ನೆಲನೆಯ್ದಲಪ್ಪುದೆ ಚತುಶ್ಚರಣಾಂಚಿತದೀ ಹರಿಸ್ಪುರತ್ಪದನಿಕರಕ್ಕೆ (ಕುಸುಮಾ. ೮-೭೯) ; ಭೂತಳವನಲ್ಲಿಂದ ಬಳಿಕ ಪ್ರೀತಿಯಲಿ ಕಮಲಜಕಟಾಹೋದ್ಭೂತ ಚರಣದೊಳಳೆಯಲಾದುದು ಧರಣಿ ಪದಯುಗಕೆ (ಕುಪ್ಯಾಸ. ೯-೪೫) ; ತಮ್ಮ ಪದಯುಗ ನೆನಹೆ ಸಕಲೇಪ್ಸಿತವನೊದಗಿಸಲೆನಗೆ ಸಾಧನವೇಕೆ ಬೇರೆ (ಗಗತಾ. ೧೭-೬೨). [ಪದ$_2$ + ಯುಗ]

**ಪದಯುಗಳ** (ನಾ). = ಪದಯುಗ : ಪದಯುಗಳಂಗಳಂ ತೊಳೆದು ಪೂಜಿಸಿ ಬಂದಿಸಿ ಕಾಂತೆ ಕಾಯವಾಕ್‌ಹೃದಯವಿಶುದ್ಧಿಯಿಂದೆ ನಿರವದ್ಯ ಮನನ್ನಮನೀಯೆ (ವರ್ಧಪು. ೧೫-೫೭) ; ನದಿನದವನುತ್ತರಿಸಿ ಹರಿಹರಪದಯುಗಳಕಭಿನಮಿಸಿ . . . ನಡೆತಂದ (ಕುಪ್ಯಾಆ. ೧೯-೧೭). [ಪದ$_2$ + ಯುಗಳ( = ಯುಗಲ)]

**ಪದಯುಗ್ಮ** (ನಾ). = ಪದಯುಗ : ಮಲಯಾಳತಪೋನಿಧಿ ದೇವಸಿಂಗಿಜೀಯರ ಪದಯುಗ್ಮಮಂ ಪಡೆದು ಕಟ್ಟಿದರತ್ತಿರ್ಯಯೆ ಪುಣ್ಯಮೂರ್ತಿಗಳ್ (ಸೌಇಇ. XX, ೪೯-೫೮ ; 1076) ; ನಾಡೆ ನಿನ್ನ ಪದಯುಗ್ಮಕ್ಕೆ ಕಣ್ಣಿತ್ತ ಬೇಡ ನಗಧರರೀರ್ವರೊಳಗೆಯಾ ಕಣ್ಣಪಂ ಮಾಡಿದೆಂಬಲನೆ ನೀನುಂಬಗ್ಗಳವನಾತಗಿತ್ತೆ (ವೀಶೈಪು. ೫-೬-೧). [ಪದ$_2$ + ಯುಗ್ಮ]

**ಪದರ** 'ಪದರು$_3$' ನೋ.

**ಪದರಕ್ಷೆ** (ನಾ). ಮೆಟ್ಟು ; ಪಾದರಕ್ಷೆ : ತಲೆಗೆ ಪದರಕ್ಷೆಯಂ ನಾಣಿಲಿ ಕಟ್ಟಿಸಿಕೊಂಡ ತೆಱದೆ ಲೋಕವಿರುದ್ಧಂ (ಪಾರ್ಶ್ವಪು.೩-೬೪). [ಪದ$_2$ + ರಕ್ಷೆ]

**ಪದರಗಲ್ಲು** 'ಪದರುಗಲ್ಲು' ನೋ.

**ಪದರಚನೆ** (ನಾ). ೧. ಪದಗಳನ್ನು ಜೋಡಿಸುವುದು : ಪದರಚನೆ . . . ಮೃದುವೆನೆ ಪೊಸಬಗೆ ರಸಭಾವದೊಳೋಕುಳಿಯಾಡೆ ಪೇಟ್ದನಭಿನವಪಂಪಂ (ಮಲ್ಲಿಪು. ೧-೪೨) ; ಪದದ ತರುವಾಯ ಪದರಚನೆ ತಾನಾಗಿ ಹೊಂದಿ ಬಂದವು (ಇಪ್ಪಕ. ೧೧೦). ೨. ದೇಶೀಯವಾದ ಹಾಡಿನ ನುಡಿ : ಪಂಜಳವೆ ತನಗೆ ರಂಜಿಸುವಧರೋಷ್ಠವಾಗೆ ಪದರಚನೆಯೆ ತನಗೆ ಮ್ರಿದುಪವನವಾಗೆ ಅಂಬುವೆ ತನಗೆ ಕಂಬುಗ್ರೀವವಾಗೆ ಪೂರ್ಣರಾಗವೆ ತನಗೆ ಕರ್ಣಾಭರಣವಾಗೆ (ಕೊಲ್ಹಾಶಾ. ೧-೨೧ ; ?). [ಪದ$_2$ + ರಚನೆ]

**ಪದರಜ** (ನಾ). ೧. = ಪದಧೂಳಿ ೧ : ಪದರಜದಿಂ ಗಿರಿದುರ್ಗಂ . . . ಪುದಿದುತ್ತುಂಗಧ್ವಜದಂಡದಿನದು ವನದುರ್ಗಮೆನಿಸಿದುದು ನೃಪಸೈನ್ಯಂ (ಪಾರ್ಶ್ವಪು. ೮-೮೩) ; ಅಮಮ ಪದರಜ ರವಿಯ ತಿವಿದುದು ದಿವವನಳಿದುದು (ಕುಪ್ಯಾಭೀ. ೪ ಸೂಚನೆ). ೨. = ಪದಧೂಳಿ ೨ : ಅವಗೆ ಶಾಪವಿಮೋಚನವು ರಾಘವನ ರಾಣಿಯ ಪದರಜದ ಸೋಂಕವಗೆ ಘಟಿಸಲಿ ಕೆಂಬುದಿದು ತಾನತ್ರಿವಚನವಲ (ತೊರರಾ. ೨-೭-೯). [ಪದ$_2$+ರಜ$_1$]

**ಪದರಜ್ಜು** (ನಾ). ಕಾಲಿಗೆ ಕಟ್ಟುವ ಹಗ್ಗ,—ಸಂಕೋಲೆ : ಓರಿದು ವಾರಾಂಗನಾಕೈತವಂಗಳ್ ನಾಡೆ ನಿರುತದಿಂ ಬಲೆದೊಡಕುಗಳ್ . . . ವಿಟರ ಮನಮೆಂಬ ಕರಿಯ ಪದರಜ್ಜುಗಳ್ (ಆರಾಚ. ೨-೫-೪೧). [ಪದ$_2$+ರಜ್ಜು]

**ಪದರರೂಪ** (ನಾ). ಹಾಳೆಯಂತೆ ಅಗಲವಾಗಿರುವ ಆಕಾರ : ತುದಿ ಒಂದೇ ಕಡೆ ದಪ್ಪವಾಗಿ ತಟ್ಟೆಯಂತೆ ಅಗಲವಾಗಿದ್ದರೆ ಪದರರೂಪ (Lamellate) (ಕೀಟಜಿ. ೧೪). [ಪದರ(<ಪದರು$_3$)+ರೂಪ]

**ಪದರಾಗ** (ನಾ). ಅಂಗಾಲಿನ ಕೆಂಪುಬಣ್ಣ : ಪದರಾಗಂ ಪಲ್ಲವಂ. . . ಮೆಯ್ ಲತೆ ತೊಡೆ ಕದಳೀಸ್ತಂಭಮಾಗಲ್ಕೆ . . . ತತ್ಕಾಂತೆ ಕಣ್ಗೆಡ್ಡಮಾದಳ್ (ಲೀಲಾವ. ೬-೬೨). [ಪದ$_2$ + ರಾಗ]

**ಪದರಾಟ** (ನಾ). ಗಡಿಬಿಡಿ ; ಆತುರ : ಇದ್ದಕ್ಕಿದ್ದಂತೆ ಉದ್ಗಾರ, ಒದರಾಟ, ಪದರಾಟ (ಕಜಸಾ. XXiii, ಪೀಠಿಕೆ). [ಪದರು$_1$(<ಪದಱು$_1$)+ಆಟ]

**ಪದರಾಡು** (ಕ್ರಿ). ೧. ಕಂಗೆಡು ; ದಿಕ್ಕುಗೆಡು : ಪದರಾಡಿ, ಬಾಯ್ಬಿಟ್ಟು, ಮೇಲೆಮೇಲುರುಳ್ವರನ್ ಕೆಳಗೆ ಪಾತಾಳಂ ನುಂಗಿದುದು (ಪಾರಸಿ. ೧೯-೨). ೨. ಅಸಂಬದ್ಧವಾಗಿ ಮಾತನಾಡು : (ಕ). [ಪದರು$_1$(<ಪದಱು$_1$)+ಆಡು$_1$]

**ಪದರಿಸು** (ಕ್ರಿ). ಗದರಿಸು ; ಝುಂಕಿಸು : ಲೇಸೆನಿಪುದೈ ಸಾವು ಸಾಧುಸಜ್ಜನರೆಡೆಯೊಳು ಪಾತಕಿಯುದೆಂತಿರುವೆ ಪದರಿಸಲದೇನೊರೆವೆ (ವೆಂಕಾರಾ. ೪-೮-೨೪). [ಪದರು$_1$(<ಪದಱು$_1$)+-ಇಸು$_3$]

**ಪದರು$_1$** 'ಪದಱು$_1$' ನೋ.

**ಪದರು$_2$** 'ಪದಿರ್$_1$' ನೋ.

**ಪದರು$_3$**, ಪದರ (ನಾ). ೧. (ಮರ, ಬಟ್ಟೆ ಮುಂತಾದುವುಗಳ) ಮಡಿಕೆ ; ಪೊರೆ ; ಹಾಳೆ : ಆ ಹೋಳುಗಳ ನಡುವಳಿಯ ಕತ್ತಿಯೊಳು ಸೀಳಿಕೊಂಡಾ ಪದರಿಗಿಡಿದು . . . ನಾರಿಂದವಂ ಬಿಗಿವುದು (ಸೂಪಶಾ. ೫-೧೩) ; ಅಸುಗೆಯ ತಳಿರೊಳ್ಮಲಗಿಸಿ ಪಕ್ಷದ ಪದರೊಳಗಳವಡಿಸಿ . . . ಮಚ್ಚಾರಿಕೆ ಮಱುಗಿದುದು (ಜಯುಶಾ. ೨-೨೯) ; ಬೆಣಚುಗಲ್ಲಿನ ಒಂದು ಪದರು ಬೆಳಕಿಗೆ ಹೊಳೆಯುತ್ತಿತ್ತು (ಕುಡಿಕೂ. ೧೭) ; ನಭೋಮಂಡಲದಿಂದ ಕಾರ್ಮೋಡದ ಪದರಿಂದ ಮಿಂಚೊಂದು ಸುಳಿದು ಹೋಯಿತೇನು? (ಮಾಮನೆ. ೧). ೨. ಮಜಲು ; ಹಂತ ; ಸ್ತರ : ತುಳು ನಾಡಿನ ಸಾಮಾಜಿಕ ಪದರುಗಳಲ್ಲಿ ಪ್ರಾಮುಖ್ಯವಾದುವುಗಳನ್ನು. . . ವಿವೇಚಿಸಿದ್ದೇನೆ (ತುಳುನಾ. ೪) ; ಇನ್ನೊಬ್ಬ ಕನ್ನಡ ರಸಿಕರು ಪಾಶ್ಚಾತ್ಯ ಸಮಾಜದ ಬಗೆಬಗೆಯ ಪದರುಗಳನ್ನು ಕನ್ನಡಸಾಹಿತ್ಯ ಕೃತಿಗಳಲ್ಲಿ ಪಡಿಮೂಡಿಸಿದ್ದಾರೆ (ಸಾಸಮಾ. ೧೪). ೩. ಈರುಳ್ಳಿ ಮುಂತಾದುವುಗಳ ಮೇಲಿನ ಸಿಪ್ಪೆ : (ಕ). ೪. ಮೀನು, ಮೊಸಳೆ ಮುಂತಾದುವುಗಳ ಹೊರಕವಚ ; ಶಲ್ಕ : ಚರ್ಮದಲ್ಲಿ ಹೊರತೊಗಲು ಒಳತೊಗಲು ಎಂಬ ಎರಡು ಪದರುಗಳಿವೆ (ಸಸ್ಯಶಾ. ೬). ೫. ಸೆರಗು ; ಮಡಿಲು : ಅದರ ಸಂತೋಷದ ಮತ್ತಿನಿಂದಾ ತಮ್ಮ ದೌಲತ್ತಿನ ಪದರನ್ನು ಮಹಾದೇವನು ತುಂಬಿಸಬೇಕು (ರಾಜೇಂದ್ರ. ೨೨೫) ; ಭಾಗ್ಯವಿಧಾತನು ಅವನ ಪಾಲಿನ ಪಂಚಾಮೃತವನ್ನು ಅವನ ಪದರಿನಲ್ಲಿ ಸುರಿಯುವ ಮುಂದೆ ನಾನು ಬೇಡೆಂದು ನುಡಿಯಬಹುದೇ ? (ಜಯಂತ. ೯೧). ೬. ತೆರೆ ; ಪಟಲ : ಕೆಳಮುಖ ಮಾಡಿಕೊಂಡು ಕುಳಿತಿದ್ದಳು ಗಿರಿಜ. ಕಣ್ಣಲ್ಲಿ ನೀರಿನ ಪದರು ಬಂದಿತ್ತು (ಪದ್ಮಸ. ೩೪) ; ರಾಜನಿಗೆ ಕಂಬನಿಯ ಪದರು ಕಣ್ಣಲ್ಲಿ ಬಂದಂತಾಯ್ತು (ಕಾವೇರಿ. ೩೨). ೭. ರಕ್ಷಣೆ ; ವಶ ; ಅಧೀನ : ಈ ಮಗುವಿಗೂ ಅವರ ಪತಿಗಳಿಗೂ ಮಾನ ಬಹುಮಾನದಿಂದಾ ಕಾಪಾಡುವಂಥಾದ್ದು ತಮ್ಮ ದವಲತ್ತಿನ ಪದರಿಗೆ ಕೂಡಿ ಇದೆ (ರಾಜೇಂದ್ರ.೨೧೭);

ಪಂಚಮಕುಲದ ವೇಶ್ಯೆಯಾದ ರಂಗಿ ಪಾಳೆಯಗಾರರ ಪದರಿನಲ್ಲಿ ಬೀಳದೆ ಹೋಗಿದ್ದರೆ ರಂಗನಾಯಕಿಯಾಗುತ್ತಿರಲಿಲ್ಲ (ಶಿಲಾಸು. ೬೧); ನಿಮ್ಮ ಪದರಿನಲ್ಲಿ ಶ್ಯಾಮಕಿರಣನನ್ನು ಬಿಟ್ಟು, ಹೋದರೂ ನಿಮ್ಮಲ್ಲಿ ನನ್ನ ಮೇಲೆ ಸ್ವಲ್ಪಾದರೂ ಸಿಟ್ಟಿನ ಅಂಕುರ ತೋರಲೊಲ್ಲದು (ಜೀವಪ್ರ. ៩೮).

**ಪದರ:** ೧. ಆತ್ಮ ಪರಮಾತ್ಮನನರಿಯಬೇಕೆಂಬರು ಇಂತೀ ಆತ್ಮ ಭೇದವನರಿವುದಕ್ಕೆ ಪದರದ ಹೊಟ್ಟೆಯ ಅಟ್ಟಣೆಯ ಸಂದೆ (ಅಪರೀ.ಕ. ೨೫-೬೧); ಈ ಬಣ್ಣದ ಉರಿಯ ಪದರಕ್ಕೆ ವರ್ಣಮಂಡಲ (Chromosphere) ವೆಂದು ಹೆಸರು (ಜ್ಯೋತಿರ್ಷ. ೯೪). ೨. ದಕ್ಷಿಣದ ರಾಗಸ್ವರೂಪವು ಬರೀ ಕಿವಿಯ ಮೇಲೆ ಬೀಳುವುದಕ್ಕಿಂದ ಒಂದು ಪದರ ಹೆಚ್ಚಾಗಿ ಒಳಗೆ ಪ್ರವೇಶಿಸಬೇಕು (ಭಾರದ. ೫೪೩); ಅದರ ಒಂದೊಂದು ಪದರವೂ ಅವನ ಕಣ್ಣಿಗೆ ಕಟ್ಟಿದಂತಾಗಬೇಕು (ಕಗದ್ಯ. ೧೫೪).

**ಪದರದ ಚೀಲ** = ಹಲವು ಮಡಿಕೆಗಳಿಂದ ಕೂಡಿದ ಚೀಲ: (ಕ).

**ಪದರಿಗೆ ಬೀಳು** = ಆಶ್ರಯವನ್ನು ಪಡೆ; ಅಧೀನವಾಗು: ಹೀಗೆ ಬಿಕ್ಕೆ ಬೇಡುತ್ತ ಇವಳು ಯಾರದಾದರೂ ಪದರಿಗೆ ಬೀಳುತ್ತಾಳೆ(ಸ್ಮೃತಿ. ೨೮೦); ಅವರ ಪದರಿಗೆ ಬಿದ್ದು ಅವರ ಅನುಗ್ರಹಕ್ಕೆ ಪಾತ್ರಳಾಗಬೇಕೆಂದು ನಿರ್ಧರಿಸಿದಳು (ಕಥವಿ. ೪೧೩). **ಪದರಿಗೆ ಹಾಕಿಕೊಳ್ಳು** = ೧. ಮಡಿಲಿಗೆ ಸೇರಿಸಿಕೊಳ್ಳು. ೨. ತನ್ನದಾಗಿ ಮಾಡಿಕೊಳ್ಳು: ಆ ಶ್ರೇಯಸ್ಸನ್ನು ತಮ್ಮ ಪದರಿಗೆ ಹಾಕಿಕೊಳ್ಳುವ ಇಚ್ಛೆಯು ಸುಬ್ಬಣಾಚಾರ್ಯರಲ್ಲಿ ಪ್ರಬಲವಾಗಿತ್ತು (ಸಮಜೀ. ೪೪೫).

**ಪದರುಗಟ್ಟು** (ಕ್ರಿ). (ಮೊಸಳೆ ಮುಂತಾದುವುಗಳ ಚರ್ಮದಂತೆ) ಮಡಿಕೆಗಳಿಂದ ಕೂಡಿರು: ಮೊಸಳೆಯ ಬೆನ್ನು ಬಹು ದಪ್ಪವಾಗಿ ಪದರುಗಟ್ಟಿ ಕಲ್ಲಿನ ಹಾಗೆ ಗಟ್ಟಿಯಾಗಿರುತ್ತದೆ (ಮುಂಬಯಿ. ೪-೧೨೪). [ಪದರು$_3$ + ಕಟ್ಟು$_1$]

**ಪದರುಗಲ್ಲು,** ಪದರಗಲ್ಲು (ನಾ). ಸ್ತರಗಳಿಂದ ಕೂಡಿದ ಕಲ್ಲು; ಹಾಳೆಹಾಳೆಯಾಗಿರುವ ಕಲ್ಲು: (ಲೋಹ . . . ಪದರುಗಲ್ಲು, ಸಸ್ಯದ ಅಂಗವಸ್ತು, ಮೊ.ಗಳ) ತೆಳುತಗಡು (Lamina. ಇಂಕನ್ನ). **ಪದರಗಲ್ಲು:** ಗಾಳಿ, ಹರಿವ ನೀರು ಅಥವ ಸಮುದ್ರದಿಂದ ಪದರ ಪದರವಾಗಿ ಸೇರಿಸಲ್ಪಟ್ಟ ಪರ್ವತರಾಶಿಗೆ ಪದರಗಲ್ಲಿನ ಪರ್ವತಗಳೆಂದು ಹೆಸರು (ಭೂವಿ ೧೩೫). [ಪದರು$_3$ + ಕಲ್ಲು(< ಕಲ್$_3$)]

**ಪದರುಗುಂಡು** (ನಾ). = ಪದರುಗಲ್ಲು: ನೆಲದ ಹೊಟ್ಟೆಬದುಕ ನೋಡು—ಗಟ್ಟಿಗಲ್ಲು ಹಿಟ್ಟುಮುಟ್ಟೆ ಪದರುಗುಂಡು ದುಂಡಿಬಂಡೆ (ಮೂಶೀಕಾ. ೧೩-೩). [ಪದರು$_3$ + ಗುಂಡು]

**ಪದರುಪಚಾಲಿ** (ನಾ). ಒಂದು ಬಗೆಯ ಸಸ್ಯ: ಪಚ್ಚೇರಿ, ಪಚಾಲೆ, ಪದರುಪಚಾಲಿ (ಮೈಔಗಿ. ೨೮-೫೪೯). [ ? ]

**ಪದರುಬಂಡೆ** (ನಾ). = ಪದರುಗಲ್ಲು: ಒಂದು ಪದರಿನ ನಂತರ ಇನ್ನೊಂದು ಪದರು ಬೀಳುತ್ತ ಬರಲು . . . ಮೇಲಿನ ಭಾರದಿಂದ ಈ ಕಲ್ಲು, ಮಣ್ಣು, ಎಲುಬುಗಳೆಲ್ಲಾ ಬಂಡೆಗಳಾಗುವುವು. ಇಂಥವುಗಳಿಗೆ ಪದರುಬಂಡೆ (Stratified rock) ಗಳೆನ್ನುತ್ತಾರೆ (ಬಾಲಪ್ರ. I, ೧೩೯). [ಪದರು$_3$ + ಬಂಡೆ$_1$]

**ಪದರೇಚಿತ** (ನಾ). [ನಾಟ್ಯ] ಹೆಜ್ಜೆಯನ್ನು ತಿರುಗಿಸುವ ಕ್ರಮ; ☞ "ಹಿಂದಕ್ಕೂ ಮುಂದಕ್ಕೂ ತೂಗಾಡುವಂತೆ ಕಾಲ್ಬೆರಳು ಮತ್ತು ಹಿಮ್ಮಡಿಗಳ ಮೇಲೆ ಪುನಃ ಪುನಃ ನಿಂತುಕೊಳ್ಳುವುದು" (ಲಾಸ್ಯರಂ. ೨೮೬ ಗದ್ಯಾನುವಾದ); ಮಡತುದಿ ಬೆರಲ್ಗಳ ತುದಿಗಳ್ ಬಿಡದೇ ಪೊಐಮುಯ್ಯೊನೊಳಗುಮೆಯ್ಯಾಗಲ್‌ಕೇಳ್ ಕಡುನೀಳಿರಿಂಬರ ಶಿರೋಮ [ಣಿ]ಯೊಡರ್ಚೆ ಪದರೇಚ[ಕ]ಮುಮೆಂದೆನಿಸಿರ್ಕುಂ (ಲಾಸ್ಯರಂ. ೪-೨೦). [ಪದ$_2$ + ರೇಚಿತ]

**ಪದರೇಣು** (ನಾ). = ಪದಧೂಳಿ ೨: ಆನು ಪೇಳಿದ ಕೃತಿಯೊಳು ತಪ್ಪು ಪುದಿದಿಹುದಾಗಿ ಕೋವಿದರು ಹೃದಯದೊಳೆಳೆಯ್ಯದೆ ತಿದ್ದಿ ನಿಮ್ಮಯ ಪದರೇಣುವಾನಾದಪೆನು (ತ್ರಿಪುಸಾಂ. ೨-೨೧). [ಪದ$_2$ + ರೇಣು]

**ಪದಲಾಲಿತ್ಯ** (ನಾ). ಪದಗಳ ಮೃದುತ್ವ; ಮೃದುವಾದ ಪದ ರಚನೆ: ಕಾಲಿದಾಸನ ಉಪಮಾ, ಭಾರವಿಯ ಅರ್ಥಪುಷ್ಟಿ, ದಂಡಿಯ ಪದಲಾಲಿತ್ಯ ಈ ಮೂರುಗುಣಗಳೂ ಈ ಕಾವ್ಯದಲ್ಲಿವೆ (ಭಾರದ. ೪೫೨). [ಪದ$_2$ + ಲಾಲಿತ್ಯ]

**ಪದಲೋಚನ** (ನಾ). ಕಾಲಲ್ಲಿ (ವಿಷ್ಣುವಿನ) ಕಣ್ಣನ್ನು ಧರಿಸಿದವನು; ಶಿವ: ಪದಲೋಚನ ಭವಮೋಚನ . . . ಪರಿಪಾಲಿಸೆಮ್ಮನು (ಹಾಲಾಸ್ಯ. ೧-೫-೧೦). 'ಪಾದಾಕ್ಷ' ಪರಾ. [ಪದ$_2$ + ಲೋಚನ]

**ಪದಲ್ದಾಣ** (ನಾ). (?): ಕೋಸಿಗರಾ ಜಯಮಲ್ಲ ಎಮ್ಮೋನ್ ಗೋಸಾಸಿ ಪುದಾರುಂ ಬೆದೆ ಮತ್ತಲುಂ ಪದಲ್ದಾಣಮುಂ ಕೊಟ್ಟೋನ್ (ಎಕ. VIII, ಸೊರಬ. ೯೧-?; ಸು. 910). [ ? ]

**ಪದವಡಿಸು** 'ಪದಂಬಡಿಸು' ನೋ.

**ಪದವಡು** (ಕ್ರಿ). ೧. ಹದವಾಗಿರು; ಅಚ್ಚುಕಟ್ಟಾಗು; ಹೊಂದಿಕೆಯಾಗು: ಅಲರುತ್ತು ಮಿಸುಪ ಪದದೊಳ್ ಪದವಟ್ಟು ಪೊದಟ್ದು ತೋರ ಮಲ್ಲಿಗೆಯ ತುಱುಂಬು ರಾಹು ತವೆ ನುಂಗಿದ ಚಂದ್ರನನೊಯ್ಯನೊಯ್ಯ ನಂದುಗುಟ್ಟುವೊಲೊಪ್ಪಿರಲ್ ಬಲದೊಳುರ್ವಸಿ ದೇಸಿಗೆ ದೇಸಿಯಾಡಿದಳ್ (ಪಂಪಭಾ. ೬-೮೬); ಪದವಟ್ಟ ನಾರಿಬಿಂಕೆಗಳ, ಕಡಲ ಪಯಣದಾ ಕಪ್ಪಲ್ಗಳನ್ ನಾವಿಕರ್ಗೆಂದು ಮಾಡಿದೆನ್ (ಬದ್ಧಪ್ರ. ೨೫-೫೩೨). ೨. ಹಿತವಾಗು; ಅಮರಸಮಿತಿಪರಸೋಲಗಂಗೊಟ್ಟರ್ದಲ್ಲಿ ಮದೀಯ ಸಿಂಹಾಸನಾರ್ಧೈಕದೇಶಮನಳಂಕರಿಸಿ ಪದವಡೆ ಸೋಂಕಿ ಕುಳ್ಳಿರ್ದ ರೂಪುಮಂ (ಆದಿಪು. ೪-೯ ವ). ೩. ಸಮಯಕ್ಕೆ ತಕ್ಕುದಾಗು; ಹದಗಾಲವನ್ನು ಅನುಸರಿಸು: ಯಥೋಚಿತಮಾಗೆ ದಾನಮಂ ಕೊಟ್ಟ ನನಂತಮಪ್ಪ ಫಲಮಂ ಪಡೆಗುಂ ಪದವಟ್ಟು ಬಿತ್ತಿದಂ ಇಟ್ಟಳವಪ್ಪುದೊಂದು ಬೆಳಸಂ ಪಡೆವಂತೆ (ಸಮಪ. ೬-೬೩). ೪. ವಶವಾಗು; ಹತೋಟಿಗೆ ಬರು: ಅತನಂ ಸಾಮದಿಂದಮಳವಡಿಸಿ ನೋಡುವೆಂ ಸಾಮದೊಳಂ ಪದವಡದೊಡೆ ಬಟಾಕಿರ್ದಪುದಲ್ತೆ ಪದವಡಿಸಲೆನ್ನ ಬಯಕೆಯ ದಂಡಂ (ಆದಿಪು. ೧೪-೪೩). [ಪದ$_1$ + ಪಡು$_1$]

**ಪದವಡೆ** (ಕ್ರಿ). ಹದಗೊಳ್ಳು; ಪರಿಪಾಕವಾಗು: ಖಿಡೆಯ ಪೆಂಡೆಯ ದೊಡವಿನಿಂ ನಿಗ್ಗವದ ಬಡಿಕೋಲ್ಪದವಡೆದ ಬಿಲ್ಲಂಬು ಬಲೆವಿಡಿದಿಹರು ಬೀಯದರು (ಸಾಳ್ವಭಾ.೫-೭). [ಪದ$_1$ + ಪಡೆ$_1$]

**ಪದವಣ್** (ನಾ). ಸರಿಯಾಗಿ ಮಾಗಿರುವ ಹಣ್ಣು; ಪಕ್ವವಾದ ಹಣ್ಣು: ಕುಡಿ ತೋಳ್ ನಯಂ ನಯಂ ನೆಲೆ ನೆಲೆ ಭಂಗಿ ಭಂಗಿ ಪದವಣ್ ಬೆಳರ್ವಾಯ್ ಪೆಱತಲ್ಲದೆಂತೊ ಕೋಮಲಲತೆ ಪೇಱಮೆನ್ನಿನಿಯಳಂ ಮಱೆಗೊಂಡುದೊ ಸೂಱೆಗೊಂಡುದೋ (ಪಂಪಭಾ. ೫-೧೨), ಪದವಣ್ಣುದಿರೀಲೆ . . . ಬೇರಿಂ ತುದಿಮುಟ್ಟೆ ಕಾಯ್ತು ಪಲಸೆಂದಿವು ಕುಂದವು ನಂದನಂಗಳೊಳ್ (ಜಗವಿ. ೨-೧೫); ಪದವಣ್ ಪೇಱುರ್ದ ನಾರಂಗದ ತರು ತನಿವಣ್ ಪೇಱುದಿರ್ಮಾವು . . . ಪುರೋದ್ಯಾನದೊಳ್ ಕುಂದವೆಂದುಂ (ಸೂಕ್ತಿಸು. ೪-೩೮). [ಪದ$_1$ + ಪಣ್$_3$]

**ಪದವರ** (ನಾ). ಪದಗಳನ್ನು ಚೆನ್ನಾಗಿ ಬಳಸಬಲ್ಲವನು; ಹೊಗಳುಭಟ್ಟ (?): ಮಂಗಳಪಾಠಕಪ್ರಕರಧ್ಯಾನದೊಳಂ ಜಯ ಜೀಯ ಪಾಯವಧಾರೆಂದಡಿಗಡಿಗುಗ್ಗಡಿಪ ಪದವರರ ಕಳಕಳದೊಳ್ಪಂದನೇಕ ರಾಜಲೋಕಂಬೆರಸೊಳಗಂ ಪೊಕ್ಕು ನೋಳ್ಪನ್ನೆಗಂ (ತ್ರಿಪುವಿ. ೧೯-೪೨ ವ); "ವಂದಿ" (ತ್ರಿಪುವಿ. ಕೋಶ). [ ಸಂ.]

**ಪದವರ್ಣ** (ನಾ). [ಸಂಗೀತ] ಸಂಗೀತರಚನೆಯಲ್ಲಿ ಒಂದು ಪ್ರಕಾರ: ಪದವರ್ಣ . . . ಸಾಹಿತ್ಯ ಶೃಂಗಾರರಸಪ್ರಧಾನವಾಗಿದ್ದು (ಸ್ತೋತ್ರರೂಪದ ಸಾಹಿತ್ಯವೂ ಉಂಟು) ನಾಟ್ಯಕ್ಕೇ ವಿಾಸಲಾಗಿದೆ . . . ಪದವರ್ಣವನ್ನು ಚೌಕವರ್ಣವೆಂದೂ ಕರೆಯುವ ರೂಢಿಯುಂಟು (ಸಂಗೀಚಂ. ೭೨); ಪಟ್ಣಂ ಸುಬ್ರಹ್ಮಣ್ಯಅಯ್ಯರ್ ಅವರು . . . ಪದವರ್ಣಗಳು, ತಿಲ್ಲಾನಗಳು ಮತ್ತು ಜಾವಳಿಗಳನ್ನು ರಚಿಸಿದರು (ಸಂಗೀತ. ೨೮). [ಪದ$_2$ + ವರ್ಣ]

**ಪದವಳೆ** 'ಪದವಟಿ' ನೋ.

**ಪದವಟಿ**, ಪದವಳೆ, ಹದವುಳೆ, ಹದವಳೆ (ನಾ). ಕಾಲಕ್ಕೆ ಸರಿಯಾಗಿ, ಕೃಷಿಗೆ ಅನುಕೂಲವಾಗಿ ಬರುವ ಮಳೆ; ಸಂದರ್ಭೋಚಿತವಾದ ಹಾಗೂ ಅನುಕೂಲಕರವಾದ ಮಳೆ: ಅಂತು ಕೊಂಡ ಪದವಟಿಗಳೊಳ್ ಕಳಮುಷಷ್ಟಿಕಾವ್ರೀಹಿ . . . ವಿವಿಧ ಧಾನ್ಯ ಭೇದಂಗಳುಂ ಕಲ್ಪವೃಕ್ಷ ಪರಿಕ್ಷಯದೊಳ್ ಪ್ರಜಾಜೀವನೋಪಾಯಹೇತುಗಳಕ್ಕೃಪ್ಪ ಪಚ್ಯಂಗಳಾಗಿ (ಆಪಿಪು. ೬-೭೨ ವ); ಪದವಟಿ [ಪಾಠಾಂ. ಪುದದಳಿ, ಪುದವಳಿ]ಯಿಂ ಧಾರುಣಿ ಬೆಳೆವುದು ಭರದಿಂದಧಿಕವೃಷ್ಟಿಯಿಂ ಬೆಳೆಯದ ವೋಲ್ (ಪುದಶಿ. ೧೦-೮೭); ಪದವಟಿ ಕೊಳ್ಗೆ ಧಾತ್ರಿ ಪಿರಿದುಂ ಬೆಳಗುರ್ವರೆಯುಂ ಧರಾಧಿಪರ್ . . . ಪರಿಪಾಲಿಸುತಿರ್ಕೆ (ಪಂಚತಂ. ೩೧೨-೬); ಕೊಳೆ ಪದವಟಿಗಳ್ ಕರ್ವಿನ ಮಡಲಂತೆ ಕವಲ್ತುರ್ವಿದ ಕೆಯ್ವೊಲಗಳೆಸೆಗುಂ (ಕಾವ್ಯಾವ. ೨೦೭); ಪದವಟಿಯಾದುದಿಟ್ಟುದಯನಿತುಂ ಲಯುಮಾದುದಕ್ಕೃಪ್ಪ ಪಚ್ಯಮಾದುದು (ಅನಂಪು. ೬-೬೭). **ಪದವಳೆ** : ಈತನೆಲ್ಲಿದ್ರ್ದನಲ್ಲಿ ಪದವಳೆಯೆಂದುಂ ಕುಂದದಿಪ್ಪಂತು . . . ಮಾಳ್ಪುದು (ಕಇ. I, ೨೫-೩೦; ಸು. 1186). **ಹದವುಳೆ:** ರಾತ್ರಿ ಹದಮುಳೆಯಾಯಿತು (ರೂಢಿ). **ಹದವಳೆ:** ತನ್ನಯ ಸಲುಗೆ ಬಿನ್ನಹವೆಂಬ ಬೀಜದ ಬೆಳೆಗೆ ಹದವಳೆ ಹಣ್ಣ ಪಸರಿಸಿತೆನುತೆ ಹರುಷದಲಿ ನಲಿದು (ಪ್ರಭುಲೀ. ೮-೨೨); ಇದಿರಾಗುತಲುದಧಿಯ ಪತಿಸುತನಂದದಟ ನಿಲಿಸಿಸಿ ದಳೆನಿಪ ಹದವಳೆಯನು ಸುರಿಯಲು ಭೂಮಿಪಾಲರು ಹೆದಜು ಹಿಂದಕೆ ತೆರಳಿದರು (ಅಂಜಚ. ೧೧-೨೦). [ಪದ$_1$ + ಮುಟಿ]

**ಪದವಾಸನೆ** (ನಾ). ಹೆಜ್ಜೆಯ ವಾಸನೆ: ಒಡೆಯನಾವೆಡೆ ಸಾರ್ದನೆಂದು ಪದವಾಸನೆಯ ತಡಕಿ ಮೂಸುತ ಶುನಕನಲೆದಾಡುವಂತೆ (ಮುಂಕುಕ. ೨೨೩). [ಪದ$_2$ + ವಾಸನೆ]

**ಪದವಿ** (ನಾ). ೧. ದಾರಿ; ಮಾರ್ಗ; ಪಥ: "ಅಧ್ವಾ . . . ಪದವೀ, ಮಾರ್ಗಃ, ಪದ್ಯಾ, ನಿಗಮಃ—ಈ ೧೨ ಬಟ್ಟೆ" (ಹಲಾಯು. ೪೩-೧೦೫). ೨. ಸ್ಥಾನ; ಅಂತಸ್ತು: ಮಾಡಿದೆವು ಗುರುಸೇವೆಯ ಪರಿಂ ರೂಢಿಯೊಳಗೀ ಪದವಿ ಬಂದುದು (ಗಗತಾ. ೧೯-೩); ದೇಶದ ಹಣವ್ಯವಸ್ಥೆಯಲ್ಲಿ ಚಿನ್ನಕ್ಕೇ ಮೊದಲನೆಯ ಪದವಿ ಇರುವುದು (ಹಣಪ್ರ. ೨೦). ೩. ಅಧಿಕಾರ; ಹುದ್ದೆ: ಬೇಡಿದ ಪದವಿಯನೀವ ಕೂಡಲಸಂಗಮದೇವ (ಬಸವ. ೧೪೯); ಪದವಿಯ ರೂಪಿನ ಸೊಬಗಿನ ಮದಮುಂ ಮಾಡುವರ ಮೂಗಿನೊಳ್ ಪಾತ್ರಮನಾಡದೆ ಮಾಣನನಂಗಂ (ಯಶೋಚ. ೨-೬೨); ಬಲ್ಪನೆರಡನೆಯಿೀಶ್ವರಂ ಫಣಿತಲ್ಪ ನಿನ್ನಯ ಪದವಿಯಂ ಸಂಕಲ್ಪಿಸುವನೇ (ಬಸಪು. ೨-೧೯); ರಾಜಸೇವೆಯ ಪದವಿ ಪಾತಕಫಲವೆನುತ ನೂಕಿದರು ರಥವನು ಹಳಿವು ದರ್ಪದ ಹೇವಮಾರಿಗಳು (ಕುಪ್ಯಾದ್ರೋ. ೬-೨೫). ೪. ಮನ್ನಣೆ; ಮರ್ಯಾದೆ; ಗೌರವ: ತೊತ್ತಿಂಗೆ ಬಲ್ಲಹನೊಲಿದರೆ ಪದವಿಯ ಮಾಡದೆ ಮಾಣ್ಬನೆ (ಬಸವ. ೪೭೪); ದೇವರಾಜನು ದಿಲ್ಲಿಯ ಬಾದಶಹನಿಂದ ರಾಜನೆಂಬ ಪದವಿಯನ್ನೂ . . . ಸಂಪಾದಿಸಿದನು (ಮುಂಬಯಿ. ೪-೮೨); ನಿರಾಯಾಸವಾಗಿ ಪದವಿಯನ್ನು ಪಡೆಯಬಹುದು. ಆದರೆ ಪದವಿಯು ಕೀರ್ತಿಯಲ್ಲ (ಚಂಗಾಳ್ವ. ೩). ೫. ಸಂಪತ್ತು; ಐಶ್ವರ್ಯ: ಹದಗಡಕನಿಗೇ ಪದವಿ ಬಂದರೆ ಹಿಡಿಸಿದ ಹಗಲಲಿ ದೀವಟಗೆ (ಜನನಾ. ೯೧); ಪದವಿ ತಪ್ಪಿದ ಮೇಲೆ ನಂಟಂಪ್ಪರೆ ನಮಗೆ ಕಟ್ಟಟ್ಟ ಹಗೆ ಕಾಣ ಕೊನೆಗೆ (ಇಂಚಾಪ. ೯೨-೫೦). ೬. ವಿದ್ಯಾಪೀಠ, ವಿಶ್ವವಿದ್ಯಾನಿಲಯ ಮೊದಲಾದುವುಗಳ ಪರೀಕ್ಷೆಯಲ್ಲಿ ತೇರ್ಗಡೆಯಾದಾಗ ಕೊಡುವ ಪ್ರಶಸ್ತಿ; ಡಿಗ್ರಿ: ಪದವಿಯ ಓದಿಗೆ ಕನ್ನಡವನೆ ಆಯ್ದು (ಇಂಚಾಪ. ೨೫-೧೧). ೭. ಗೌರವಕ್ಕಾಗಿ ಕೊಡುವ ಬಿರುದು: ನಾವು ಅವರಿಗೆ ಜಹಗೀರುಗಳನ್ನು ಕೊಡಲಾಗುವುದಿಲ್ಲ. ಆದರೆ ಅದಕ್ಕೆ ತಕ್ಕ ಪದವಿಗಳನ್ನು ಕೊಡಬಹುದು (ರಾಣಿ. ೧೬೨). ೮. ಮೋಕ್ಷ; ಮುಕ್ತಿ: ಹಲವು ಕರ್ಮಗಳಿಂದ ಮೂತ್ರದ ಬಿಲಗಳಲಿ ಸಂಚರಿಸಿ ಪದವಿಯ ಫಲವ ಕಾಣದೆ ಹೊಲಬು ತಪ್ಪಿದೆನು (ಹರಿಸಾ. ೫೯). [ಸಂ.]

**ಪದವಿಡಿ** (ನಾ). ಬೆದೆಗೆ ಬಂದ ಹೆಣ್ಣಾನೆ: ಪದವಿಡಿಯನಜಿಸಿ ಪಾರಯ್ದುದವುದು ಕರಿ ಪೆಜವನೊಲ್ಲದದು (ಬಂಹರಿ. ೨-೪೩). [ಪದ$_1$ + ಪಿಡಿ$_3$]

**ಪದವಿಡು**, ಪದವಿಡು (ಕ್ರಿ). ೧. ಹೆಜ್ಜೆಯಿಡು; ಸಾಗು; ಮುಂದುವರಿ; ಗಮಿಸು: ಪದವಿಟ್ಟಳ್ನೆಯ್ದಲಿಂ ತಾವರೆಗೆ ಸಿರಿಲತಾಕೋರಕಗ್ರಂಥಿ ನೀರೇಜುದುವು. . . ಶಿಶಿರದೆಸಕಮುಂ ಮಿಕ್ಕುದಕ್ಕುಂ ಬಸಂತಂ (ಮಲ್ಲಿಪು. ೫-೩); ಹರನನರ್ಚಿಸಿದ ಪರಿಯಂ ನೆನೆದು ಪದವಿಡುತೆ ತಿರುಗಿ ತಮ್ಮರಮನೆಗೆ ಎಂದಿನಂದದಿ ಬರುತೆ (ತಿರುರ. ಪೀ. ೬-೭); ನಡದುದೆ ಮಾರ್ಗಂ ಪದವಿಡಲೊಡರಿಸಿದುದೆ ಭಂಗಿ ಕೇಶವಂಗಿದಿರುಂಟೇ (ಶಮದ. ೨೯೩ ಸಮಾಪ್ತಿ ವಾಕ್ಯಂಗಳ್); ನಳಿನಲೋಚನೆ ಕಂಡು ಪಕ್ಷಿಯ . . . ಹಿಡಿಯಬೇಕೆಂದೆನುತ ಗಮಿಸಿದಳು ಮೆಲ್ಲಮೆಲ್ಲನೆ ಪದವಿಡುತ [ಪಾಠಾಂ. ಅಡಿಯಿಡುತ] ಕರಪಲ್ಲವವ ಚಾಚಿದಳು (ನಳಚ. ೨-೩೩). ೨. (ಕೃತಿಯಾಗಿ) ಹೇಳು,—ಬರೆ; ಶಬ್ದರೂಪದಲ್ಲಿ ರಚಿಸು: ಪದವಿಡುವೆಡೆಯೊಳ್ ಪಲ್ಲವದೊಳ್ ಪದದೊಳುಭಯಗಣ ಸಮನಾಗಲ್ ಸಲ್ಲಲಿತಕೀರ್ತಿಯಾದಪುದಲ್ಲದೊಡಾ ಕೃತಿಗೆ ಹಾನಿ ತಪ್ಪದೆ ಬರ್ಕುಂ (ಛಂದೋಂಬು. ೧-೪೬ ಅಡಿಟ); ವೀರೇಶನ ಲೀಲಾಕಥನವ ಪದವಿಡುವೆನು ಚಿತ್ತೈಸುವುದು (ವೀರೇಚ. ೧-೭); ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ ಪದವಿಟ್ಟಳುಪದೊಂದಗ್ಗಳಿಕೆ . . . ಗದುಗಿನ ವೀರನಾರಾಯಣನ ಕಿಂಕರಗೆ (ಕುಪ್ಯಾಆ. ೧-೧೫); ಬರಹವನರಿಯೆನಾ ಪದವಿಟ್ಟು ಕಡಿತದೊಳ್ ಬರೆದು ಮಾಡಿದ ಕೃತಿಯಲ್ಲ (ಮೋಹತ. ೧-೨೧). **ಪದವಿಡು:** ೧. ಮೊದಲೊಳಿದೊಂದು ಪತ್ತು ತುಡುವಲ್ಲಿ ಶತಂ ಬಿಡುವಲ್ಲಿ ಸಾಸಿರಂ ಪದಮಿಡುವಲ್ಲಿ ವೈರಿಶರಸಂಹತಿಯಂ ತಜುವಲ್ಲಿ ಲಕ್ಷಮುಗ್ಗದ ಗತಿಯಲ್ಲಿ ಕೋಟಿ ಸಮರಾಂಕಣದೊಳ್ ಗಣನಾವಿಹೀನಮಪ್ಪುದು ರಿಪುವೃಂದಮಂ ತವಿಸಿ ನಿನ್ನೆಡೆಗೆಯ್ದುಗುವಿಾ ಮಹಾಶರಂ (ಶಬಶಂ. ೫-೫೧). ೨. ಪದಮಿಡಲಜುಯಂ ಗಡ . . . ಕುಕವಿ ನವರಸಾನುಭವದೆ ತನ್ನಂ ಪೆಜರನೆಂತೊ ಪೇಟ್ ತಣಿಸಿದಪಂ (ಪುಷ್ಪಪು. ೧-೪೬). [ಪದ$_2$ + ಇಡು$_1$]

**ಪದವಿದ್ಯೆ** (ನಾ). ವ್ಯಾಕರಣ ಶಾಸ್ತ್ರ: ಮತ್ತಂ ಸ್ವಯಂಭುವಾಭಿಧಾನ ಪದವಿದ್ಯಾಚ್ಛಂದೋವಿಚಿತ್ಯಲಂಕಾರಂಗಳೆಂಬ ಮೂಜುಂ ಪೆಸರ್ವಡೆದ ವಾಙ್ಮಯಮುಮಂ . . . ತನೂಜರ್ಗೆಲ್ಲಮುಪದೇಶಂಗೆಯ್ದಂ (ಆಪಿಪು. ೮-೬೦ ವ); ಪದವಿದ್ಯಾಮಾರ್ಗದೊಳ್ ವ್ಯಾಕರಣಪರಿಣತಾಳಾಪದೊಳ್ ಮಿಕ್ಕ ಪಟ್ಟರ್ಕದೊಳಾರ್ಗಂ ದುರ್ಗಮೆಂಬಂತಿರೆ . . . ಆಶ್ಚರ್ಯಮಂ ತಾಳ್ದಿ ನಿಂದಂ (ಸುಕುಮಾ. ೨-೧೫). [ಪದ$_2$ + ವಿದ್ಯೆ]

**ಪದವಿಧಿ** (ನಾ). [ವ್ಯಾಕ] ಸಮಾಸದಲ್ಲಿ ಪದಗಳನ್ನು ಜೋಡಿಸುವ ನಿಯಮ: ಬೆರಸಿ ಸಮಸಂಸ್ಕೃತಂಗಳ್ ಬರೆ ಕನ್ನಡದೊಳಗೆ ಸಮತೆಯಿಂದಂ ಸಲ್ಗುಂ ನಿರವದ್ಯಮಾಗಿ ಪದವಿಧಿ ವಿರುದ್ಧಮಕ್ಕುಂ ತದನ್ಯಥಾವೃತ್ತಿಗಳೊಳ್ (ಕಾವ್ಯಾವ. ೨೮೨); ಪದವಿಧಿ ಕನ್ನಡಕಂ ಸಕ್ಕದಕ್ಕ

ಮಿಲ್ಲಾದ್ಯರಿಂದೆ ಸಂದುವನಱದಿರ್ಪುದು ಬಿರುದಾವಳಿಯೊಳ್ ಪೇೞ್ವುದು ಪೆಱವಱೊಳಾಗದಿದು ವಿರುದ್ಧಸಮಾಸಂ (ಶಮದ. ೧೬೪). [ಪದ$_2$+ವಿಧಿ]

**ಪದವಿನತ** (ನಾ). ಪಾದಗಳಿಗೆ ನಮಸ್ಕರಿಸಿದವನು : ಆ ಜಿನ ಮುನಿಗಳೊಡನೆ ವಾದಿಸಿಯುವರು ಸೋಲ್ತು ಪದವಿನತರಾಗಲ್ಕೆ (ವೀಶೈಪು. ೪-೯-೧೬). [ಪದ$_2$+ವಿನತ]

**ಪದವಿನ್ಯಾಸ** (ನಾ). ೧. ಹೆಜ್ಜೆ ಇಡುವುದು ; ಹೆಜ್ಜೆ ಹಾಕುವುದು: ಪದವಿನ್ಯಾಸದ ತುಱುಗಲ್ ಪೊದಱೆ ಲಯಂಬೆರಸು ರಂಗಮಂ ಬಳಸಿದನಾ ತ್ರಿದಶಾಧಿನಾಥಂ (ಆದಿಪು. ೬-೧೧೯) ; ಪದವಿನ್ಯಾಸದಿನೆಯ್ದೆ ಕಂಪಿಸೆ ಮಹೀಚಕ್ರಂ . . . ಆ ಕೂರ್ಮಕಂಪದಿನಂಭೋಧಿ ಕಲಂಕಿದತ್ತೆನಿಸಿ ತೇನುಚ್ಚಂಡಮೋ ತಾಂಡವಂ (ಪುಷ್ಪಪು. ೧೨-೩೬) ; ತಾಳನಿರ್ಣಯ, ವೇಗ, ಪದವಿನ್ಯಾಸ ಇವು ಕಥಕ್‌ಪ್ರದರ್ಶನದ ನಿರ್ಣಯಾಂಶಗಳಾದವು (ಭಾರದ. ೫೫೮). ೨. ಶಬ್ದಗಳನ್ನು ಜೋಡಿಸುವುದು : ಪದವಿನ್ಯಾಸದ ದೇಸಿ ಮಾರ್ಗದ ವಿಲಾಸಂ ರೂಢಿವೆತ್ತಂಗಹಾರದಲಂಕಾರದ ಬಂಧ ಭಾವ ದೆಸಕಂ . . . ಎಸೆದತ್ತು (ಸೂಕ್ತಿಸು. ೬-೧೧೦). ೧, ೨ : ಪದವಿನ್ಯಾಸ ವಿಶೇಷದೊಳ್ ಪದವಿಲಾಸಂ ಸೊಂಪುವೆತ್ತಿರ್ದ ಕಾವ್ಯದ ಮೆಯ್ಯೊಳ್ ಸಮುದಾಯಶೋಭೆ . . . ಸನ್ನಿಧಿಯಾಗಿರ್ದ ಜಿನೇಂದ್ರವಾಗ್ವನಿತೆ ನಿಲ್ಕಸ್ಮನ್ಮುಖಾಂಭೋಜದೊಳ್ (ಅನಂಪು. ೧-೮). [ಪದ$_2$+ವಿನ್ಯಾಸ]

**ಪದವಿಭಾಗ** (ನಾ). ಪದ್ಯದ ಪದಗಳನ್ನು ಛಂದಸ್ಸು ಅಥವಾ ಅರ್ಥಾನುಸಾರವಾಗಿ ಬಿಡಿಸುವುದು : ಈ ಪದ್ಯವನ್ನು ಪದವಿಭಾಗ ಮಾಡಿ ಅರ್ಥ ಹೇಳು (ರೂಢಿ). [ಪದ$_2$+ವಿಭಾಗ]

**ಪದವಿಲ್**, ಹದವಿಲು, ಹದವಿಲ್ಲು (ನಾ). ಬಾಣಪ್ರಯೋಗಕ್ಕೆ ಹವಣಾದ ಬಿಲ್ಲು : ಮುನಿದೆರಡಂಬಿನೊಳ್ ರಥಮುಮಂ ಪದವಿಲ್ಲು ಮನೆಯ್ದೆ ಪಾರ್ದು ನೆಕ್ಕನೆ ಕಡಿದಿಂದ್ರನಂದನನಳುರ್ಕೆಯಿನಾರ್ದೊಡೆ (ಪಂಪಭಾ. ೧೧-೧೯) ; ಪದವಿಲ್ಲಂ ನನೆಯಂಬಿನ ಪೊದೆಯುಂ ಪಿಡಿದಿರದ ಪದದೊಳಾನೆರ್ೞೆಡಿದೊಡಂ ಮದನಂಗಂ ಮಾನಿನಿ ದಶವದನಂಗಂ ರೂಪ ಭೇದಮೇನಾದಪುದೇ (ಪಂರಾಮಾ. ೯-೧೬೬) ; ಬಳಿಯಂಬು ಪೂವಿನಂಬೆನೆ ತೊಳಗುವ ಪದವಿಲ್ಲೆ ನನೆಯ ಬಿಲ್ಲೆನೆ ಬೆನ್ನೊಳ್ ತಳೆದು . . . ಮನೋಜ ನಂತಿರೆ ನಡೆದಂ (ಲೀಲಾವ. ೫-೨೦) ; ಪದವಿಲ್ ಕಟ್ಟಿದ ಗೇಣ್ . . . ಪಾಶದ ವಿಶ್ವಕದ್ರು ದೇಸಿಯನೊದವಿಸಿ ನಡೆದತ್ತು ಬೇಂಟೆಗಾಱರ ತಂಡಂ (ಸೂಕ್ತಿಸು. ೩-೧೦೨) ; ಪದವಿಲ್ ಮೊನೆಯಂಬು ಲತಾಂತಮಾಲೆ ಮಂಜುಲ ಗಜದಂತದೊಳ್ವಳೆ ವಿರಾಜಿಸೆ ಕಣ್ಗೆಸೆದರ್ ಪುಳಿಂದಿಯರ್ (ಶಬಶಂ. ೩-೧೦). **ಹದವಿಲು :** ಬೋಳೆ ಕವಲಂಬುಗಳ ಹದವಿಲು ತಾಳಿಕೆಯ ಕುಪ್ಪಸದ ಬೇಂಟೆಯ ಮೇಳದಲಿ ಭೂಪಾಲ ಹೊಱವಂಟನು (ಕುವ್ಯಾಅ. ೪-೧೨) ; ಉರು ಹತ್ತಳದ ಕಟ್ಟಿಗೆ ಬೇಂಟೆಗಳ ಹದವಿಲು ತದೀಯ ಶರಾಳಿಗಳ ತಂದಿಳುಹಿದರು ಚರರು (ಕುವ್ಯಾಸ. ೫-೪೬). **ಹದವಿಲ್ಲು :** ಹದವಿಲ್ಲ ಬೆನ್ನ ಬತ್ತಳಿಕೆಗಳ . . . ಶಬರಿಯರು ಪದೆದು ಕುಸಿದಡಸಿ ತೋಹುಗಳಲ್ಲಿ ಹರಿವ ಹುಲ್ಲೆಗಳನೆಸುತಿರ್ದರು (ಹಚಕಾ. ೫-೪೬); ಹೊಯ್ದು ತಿರುವನು ಸೆಳೆದು ಕಿವಿವರೆಗೊಯ್ದನಿದು ಹದವಿಲ್ಲಲಾ ಬಿಲು ಹೊಯ್ದುದಕಟಾ ಬಱದೆ ಹೆದಱತು ಮಾಗಧಾದಿಗಳು (ಕುವ್ಯಾಆ. ೧೫-೨೮) ; ಭ್ರೂಲತೆಯ ಹದವಿಲ್ಲುಗಳ ಹೊಳೆವಾಲಿಗಳ . . . ಬೇಟೆಕಾತಿಯರೈದಿದರು ವನವ (ತೊರಂರಾ. ೧-೫-೩೯) ; ಮದಗಜವಿಂದು ಬಂದುದ ಕಂಡು ಸ್ಮರಸುತ ಹದವಿಲ್ಲ ಜೇವಡೆಗೆಯ್ದು (ಮೋಹತ. ೩೪-೬).

[ಪದ$_1$+ಬಿಲ್$_2$]

**ಪದವಿಸ್ತೃತಿ** (ನಾ). ಪದ್ಯದ ಪಾದದ ವಿಸ್ತಾರ : ನಿಯತಸ್ಥಾನಂ ಪದವಿಸ್ತೃತಿಯೊಳಾದ ವಿರಾಮಮಱಗೆ ಯತಿಯಕ್ಕುಂ (ಕಾವ್ಯಾವ. ೪೬೯).

[ಪದ$_2$+ವಿಸ್ತೃತಿ]

**ಪದವೀದಾನ** (ನಾ). (ಘಟಿಕೋತ್ಸವದಲ್ಲಿ ವಿಶ್ವವಿದ್ಯಾನಿಲಯವು ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ) ಯೋಗ್ಯತಾಪತ್ರವನ್ನು ಕೊಡುವಿಕೆ : ಕುಲಪತಿಗಳು ಪದವೀದಾನ ಸಮಾರಂಭದಲ್ಲಿ ವಿದ್ಯಾರ್ಥಿಗಳಿಗೆ ಹಿತವಚನ ಹೇಳಿದರು (ರೂಢಿ). [ಸಂ.]

**ಪದವೀಧರ** (ನಾ). (ವಿಶ್ವವಿದ್ಯಾನಿಲಯ ಮೊದಲಾದುವುಗಳಿಂದ) ಪದವಿಯನ್ನು ಪಡೆದವನು : ಅವನು . . . ಪದವೀಧರನಾಗಿ ಮೂರುವರ್ಷಗಳ ಕಾಲ ಗಣಿತಶಾಸ್ತ್ರ ಮತ್ತು ವಿಜ್ಞಾನಶಾಸ್ತ್ರವನ್ನು ಕಲಿಸುತ್ತಿದ್ದನು (ಸಸ್ಯಕ. ೬೧) ; ನೀವು ಈ ಪಿಶಾಚುಜೀವಿಶಾಸ್ತ್ರದಲ್ಲಿ ಪದವೀಧರರಾಗುವವರೆಗೂ ನಾನು ಕಾದಿದ್ದು ನಿಮ್ಮನ್ನೇ ಮದುವೆಯಾಗುತ್ತೇನೆ (ಹೊಸಕ್ತಿ. ೩). [ಸಂ.]

**ಪದವೀಪತ್ರ** (ನಾ). (ವಿಶ್ವವಿದ್ಯಾನಿಲಯವು ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಕೊಡುವ) ಯೋಗ್ಯತಾಪತ್ರ : ಆ ಪದವೀ ಪತ್ರವನ್ನು ಮೊದಲು ನಿಮ್ಮ ಪಾದಗಳ ಮೇಲಿಟ್ಟು ನಂತರ ಕೈಗೆ ತೆಗೆದು ಕೊಳ್ಳುತ್ತೇನೆ (ವಂಶವೃ. ೧೪೨). [ಸಂ.]

**ಪದವು** (ನಾ). (ಕರಾ) ಸಮತಲಭೂಮಿ ; ಪ್ರಸ್ಥಭೂಮಿ : ಮೇಲೆ ಪದವನ್ನು ಏರುವ ಎಂದು ಮುಂದುವರಿದ. ಚಿಕ್ಕಗುಡ್ಡವನ್ನೇರಿದರೆ ಮುಂದೆ ಬರುವುದೇ ಪದವು (ಸರಸ. ೮೦). [←ತುಳು. ಪದವು]

**ಪದವೆಂಕೆ** (ನಾ). ಹದವಾದ ಉರಿ ; ತೀವ್ರವಾದ ಉಷ್ಣತೆ : ಮೆಯ್ಯ ಸುಯ್ಯ ಪದವೆಂಕೆಗಳಂ ಬಿಗಿಯಪ್ಪಿದಪ್ಪುಗಳ್ ಕಳೆದುವು ನಾಣುಮಂ . . . ಚುಂಬನಂ ಕಳೆದುವು (ಪಂಪಭಾ. ೫-೨೬).

[ಪದ$_1$+ಬೆಂಕೆ]

**ಪದವೆಱು**$_1$ (ಕ್ರಿ). ಹದವನ್ನು ಪಡೆ ; ಹವಣುಹೊಂದು : ಪದವೆತ್ತಿರ್ದರ ಜೀವಮೊಂದೊಡಲೆ ಬೇಱೆಂಬಂತುಟಂ ಮಾಡಿದಂ ಮದನಂಗಾವುದು ದೋಷಂ (ಕಾವ್ಯಾವ. ೮೦೫) ; ಪದವೆತ್ತಿರ್ದ ಗಭೀರಭಾವ ಗುಣದಿಂ ಲಾವಣ್ಯಲೀಲಾವಿಲಾಸದಿಂ . . . ತತ್ಕಾವ್ಯಂ ಜಗತ್ಸೇವ್ಯಮಪ್ಪುದು (ಶೃಂಗಾರ. ೧-೧೦); ಶುಭಾಂಗಿ ಸರ್ವಮಂಗಳೆ ರತಿಕೋಟಿಯುಂ ಪಳಿವು ರಂಜಿಸಿದಳ್ ಪದವೆತ್ತ ಚೆಲ್ವಿನಿಂ (ಶಬಶಂ. ೧-೬೬).

[ಪದ$_1$+ಪೆಱು$_1$]

**ಪದವೆಱು**$_2$ (ಕ್ರಿ). ೧. ಸ್ಥಾನವನ್ನು ಪಡೆ; ಎಡೆಯನ್ನು ಹೊಂದು : ವಿದಿತ ವಿಶೇಷಣಪದಮುವು ಪೊದಲ ವಿಭಕ್ತಿಗಳನಾಂತು ವಾಕ್ಯದ ಮೊದಲೊಳ್ ಪದವೆತ್ತುವಗ್ರಕಾರಕ ಪದದ ವಿಭಕ್ತಿಯನೆ ತಳೆವುವನ್ವಯಮುಖದೊಳ್ (ಶಮದ. ೧೪೦). ೨. ಅವಕಾಶವನ್ನು ಪಡೆ ; ಆಸ್ಪದವನ್ನು ಹೊಂದು : ಪದವೆತ್ತನುರಾಗವಿಭ್ರಮಂ ಜನಿಯಿಸಲಾಗಳಾಕುಲತೆಯುಂ ತಳೆದೆನ್ನನೊಱಲ್ದು ನೋಡಿದಳ್ (ಕಾದಂಉ. ೩೧೪) ; ಒದೆದು ಕಲಂಕಿ ಪಾಯ್ವ ಪದದೊಳ್ ಪದವೆತ್ತು ಪುಡುಂಕುನೀರನರ್ದಿದಳುಱೆ ಮೋದಿ ಮುಂದಲೆಗೆ ಪಾಯ್ದು ಪೊರಳ್ಚಿದಳ್ . . . ಅವಳಾಱದೋವದವನಂ ವನಿತಾಜನಚಿತ್ತಚೋರನಂ(ಲೀಲಾವ. ೧೩-೨೨) ; ತಾಂ ಮೊಗಂಗುಡೆ ಪದವೆತ್ತು ಚುಂಬಿಸಿ (ಚಂದ್ರಪು. ೬-೮೨). [ಪದ$_2$+ಪೆಱು$_1$]

**ಪದಶಕ್ತಿ** (ನಾ). ಪದಕ್ಕೆ ಇರುವ ವಾಚ್ಯ, ವ್ಯಂಗ್ಯ ಮೊದಲಾದ ಅರ್ಥಗಳನ್ನು ತಿಳಿಸುವ ಸಾಮರ್ಥ್ಯ : ಪದಶಕ್ತಿಯಲ್ಲಿ ಮುಖ್ಯ ಗೌಣಗಳಲ್ಲದೆ ಪರಮುಖ್ಯವೆಂದೊಂದು ಸ್ವೀಕರಿಸಲ್ಪಟ್ಟು ಸಕಲಶಬ್ದವಾಚ್ಯತ್ವವೂ ಪರಮಾತ್ಮನಿಗೆ ಸ್ಥಾಪಿಸಲ್ಪಟ್ಟಿರುವುದು (ಹಿಂದಸಾ. ೨೬೬).

[ಪದ$_2$+ಶಕ್ತಿ]

**ಪದಶಬ್ದ** (ನಾ). ಕಾಲಿನ ಸಪ್ಪಳ ; ಹೆಜ್ಜೆಯ ಧ್ವನಿ : ಪದಶಬ್ದ ಕಿವಿಗೆ ಬೀಳುತ್ತಲೇ ಅವಳ ಮನಸು ಬಾಗಿಲ ಕಡೆಗೆ ಎಗರೆಗರಿ ಹೋಗತೊಡಗಿತು (ಇಪ್ಪಕ. ೨೬೨). [ಪದ$_2$+ಶಬ್ದ]

**ಪದಶಯ್ಯೆ** (ನಾ). ಪದಗಳ ಹೊಂದಾಣಿಕೆ ; ಪದಬಂಧ : ಸರಸಪದ ಶಯ್ಯಾಧ್ಯಥವ್ಯಾಕರಣಯುತಲಾಲಿತ್ಯನಿಯಮಾಕ್ಷರಸಲಕ್ಷಣಭಾವಮಾಗಿರೆ ರಚಿಸುವೆಂ ಕೃತಿಯ (ಬಸವು. ೧–೧೯). [ಪದ$_2$+ಶಯ್ಯೆ]

**ಪದಶಾಸ್ತ್ರ** (ನಾ). ವ್ಯಾಕರಣಶಾಸ್ತ್ರ : ವ್ಯಾಕರಣಶಾಸ್ತ್ರವನ್ನು ಪದ ಶಾಸ್ತ್ರವೆಂದೂ . . . ಪರಿಗಣಿಸುವಂತೆ ಮೀಮಾಂಸಾಶಾಸ್ತ್ರವನ್ನು (ವಾಕ್ಯ) ಪ್ರಮಾಣಶಾಸ್ತ್ರವೆಂದು ನಿಷ್ಕರ್ಷಿಸಿದೆ (ತತ್ತ್ವಪ್ರಾ. ೨೮೫). [ಪದ$_2$+ಶಾಸ್ತ್ರ]

**ಪದಶಿಲೆ** (ನಾ). ಅಡಿಗಲ್ಲು ; ತಳದ ಕಲ್ಲು : ಪೃಥ್ವಿಕುಳಮಂಟಪದ ಮೇಲೆ ಪ[ಪಾಠಾಂ. ಪಾ]ದಶಿಲೆ ಬಿಗಿದು ತಳಕಂಬ ಕಳಶದ ಮೇಲೆ ಕೆಸಜುಗಲ್ಲು (ಅವಚಂ. ೨೬–೧೧೨). [ಪದ$_2$+ಶಿಲೆ]

**ಪದಸಂಘಟ್ಟನ** (ನಾ). ಕಾಲಿನಿಂದ ಅಪ್ಪಳಿಸುವಿಕೆ,—ಹೊಡೆಯುವಿಕೆ ; ಪದಾಘಾತ : ಪದಸಂಘಟ್ಟನದಿಂದವೆಟ್ಟುವನಿಯುಂ ಪರ್ವಿದ ಕೆಂದೂಳಿ ದಿಗ್ರದನಿವ್ರಾತದ ಕುಂಭಮಂ ಪುದಿದು ತತ್ಸಿಂಧೂರದಂತಿರ್ದುದು (ನೇಮಿಪು. ೧೧–೧೪೧). [ಪದ$_2$+ಸಂಘಟ್ಟನ]

**ಪದಸಂಘಟ್ಟನೆ** (ನಾ). = ಪದಸಂಘಟ್ಟನ : ಪದಸಂಘಟ್ಟನೆಯಿಂ ಶಿಲೋಚ್ಚಯಕುಲಂ ನುರ್ಗಾಗೆ . . . ಮುತ್ತಿದನೊತ್ತಂಬದೆ ರಾಜಹಂಸ ಪುರಮಂ ಶ್ರೀಮಾಳವಕ್ಷೋಣಿಪಂ (ದಶಕು. ೧–೬೨).
[ಪದ$_2$+ಸಂಘಟ್ಟನೆ]

**ಪದಸಂಚಯ** (ನಾ). = ಪದಪುಂಜ ೧ : ಉಡುಗಿದುದೀಗಳೀಗಳಿನ ಕಬ್ಬದೊಳೊಟ್ಟಜೆ ಕೆಟ್ಟುದೀಗಡೀಗಡಿನ ಕವಿವ್ರಜಕ್ಕೆ ಪದಸಂಚಯಂ (ಶಾಂತಿಪು. ೧೨–೬೯). [ಪದ$_2$+ಸಂಚಯ]

**ಪದಸಂಚರಣೆ**(ನಾ). ಪದಗಳನ್ನು ಪ್ರಯೋಗಿಸುವ ರೀತಿ,—ಕ್ರಮ: ಪದಸಂಚರಣೆಯಲಿ ಲಿಪಿ ತಿರುಗಿ ನೋಡದ ಬಿರಿದು ಬೇಜಿ ಕುಮಾರ ವಾಲ್ಮೀಕಿಯ ವಚೋಲಹರಿ (ತೊರರಾ. ೧–೧–೧೦). [ಪದ$_2$+ಸಂಚರಣೆ]

**ಪದಸಂಧಾನ** (ನಾ). ಪದಗಳ ಹೊಂದಾಣಿಕೆ,—ಜೋಡಣೆ : ಮಾನಿತಪದಮಂ ಪದಸಂಧಾನಮನರ್ಥಪ್ರತೀತಿಯಂ ಕವಿಹೃದಯಸ್ಥಾನ ಮನಱಿದೋದದೆ ಕಣ್ಬೇನೆಯ ಕರಡಿಯವೊಲೂಟ್ಟಪಂ ವಾಚಕನೇ (ಛಂದೋಂಬು. ೧–೩೦ ಅಡಿಟ). [ಪದ$_2$+ಸಂಧಾನ]

**ಪದಸಂಪತ್ತು** (ನಾ). ಶಬ್ದಸಂಪತ್ತು : ಅವರು ಈ ಭಾಷೆಯ ಪದ ಸಂಪತ್ತನ್ನೂ ಪಟ್ಟಿ ಮಾಡಿಕೊಟ್ಟಿದ್ದಾರೆ (ದ್ರಾವಿವಿ. ೧೬೬).
[ಪದ$_2$+ಸಂಪತ್ತು]

**ಪದಸಂಯೋಜನೆ** (ನಾ). = ಪದಸಂಧಾನ : ಮಹೋನ್ನತವಾದ ಆಲೋಚನೆ ಸರಳ ಸಾಧಾರಣವಾದ ಪದಸಂಯೋಜನೆಯ ಮೂಲಕವೂ ಅಭಿವ್ಯಕ್ತಿಗೊಳ್ಳಬಲ್ಲದು (ಸೌಂದಸ. ೩೯೦). [ಪದ$_2$+ಸಂಯೋಜನೆ]

**ಪದಸೋಂಕು** (ನಾ). ಕಾಲಿನ ಸ್ಪರ್ಶ; ಪಾದಸ್ಪರ್ಶ: ದಳಸಿಳಯುವನು ಸಾರಿದು ಮುಂದೆ ಸಂದಿಪ ಹವಣನಱಿಯದೆ . . . ಸಾರುತಿರೆ ಪದಸೋಂಕಿಗಾ ಸತಿ ಕ್ರೂರವಾಯುಸಕಂಜಿ ಪತಿಯ ಶರೀರವನು ಬಿಗಿಯಪ್ಪಿ ತಾಚರಿಸಿದಳು ಭೀತಿಯಲಿ (ತೊರರಾ. ೨–೬–೧೦). [ಪದ$_2$ + ಸೋಂಕು$_2$]

**ಪದಸ್ಖಳನ** (ನಾ). ಹೆಜ್ಜೆ ತಪ್ಪುವಿಕೆ : ಪದಸ್ಖಳನಮಾದುದಂಚಿಗಿದಿರೊಳ್ಪಿಕಂ ವಕ್ರಮಂ ತೊದಳ್ನುಡಿದುದು (ಮಲ್ಲಿಪು. ೧೪–೩೯).
[ಪದ$_2$+ಸ್ಖಳನ(=ಸ್ಖಲನ)]

**ಪದಸ್ತ** (ನಾ). ಪದವಿಯಲ್ಲಿರುವವನು ; ಅಧಿಕಾರದಲ್ಲಿರುವವನು ; ಹುದ್ದೆದಾರ : ಸರಸದ ನಾಡು ವೈಸಿಕದ ಬೀಡು ಪದಸ್ತನ ಸೀಮೆ ಬೇಂಟದಾಗರಮುಪಚಾರದಿಕ್ಕೆಯೆನಲೊಪ್ಪುವುದಲ್ಲಿಯ ಸೂಳೆಗೇರಿಗಳ್ (ತ್ರಿಪುವಿ. ೧೬–೩೦) ; ಹಸ್ತಿವಾಹನನಾದಿಯಾದ ಸಮಸ್ತದೇವನಿಕಾಯದೊಳಗೆ ಪದಸ್ತ[ಪಾಠಾಂ. ಪ್ರಶಸ್ತ]ನಾವನು ನಿನ್ನವೋಲ್ (ಹಂಸಾ. ೨೬).
[<ಸಂ. ಪದಸ್ಥ]

**ಪದಸ್ತತನ** (ನಾ). ಹಿರಿಮೆ ; ಹೆಚ್ಚುಗಾರಿಕೆ ; ಘನತೆ : ಪೇಡತನವನು ಬಿಡಿಸಿ ಸಲೆ ಕೊಂಡಾಡಿ ಕಾಡಿದನಸುರಜಾತಿಯೊಳೋಡೆ ಪರಿಭವ ತನ್ನದೆಂಬ ಪದಸ್ತತನದಿಂದ (ಕುವ್ಯಾದ್ರೋ. ೧೫–೬೨). [ಪದಸ್ತ+-ತನ]

**ಪದಸ್ತೆ** (ನಾ). = ಪದಸ್ಥೆ ೨ : ಇದಕ್ಕೆಲ್ಲಾ ಕಟ್ಟಿ ಮಾಡೋವ ಮೊದಲು ತನ್ನ ಹೆಂಡತಿಗೆ ಮಾಡಲಿ, ನಾವು ಪದಸ್ತೇರು, ಗರತೀರು ಕೆಟ್ಟುಹೋದೆವೆ? (ಮುಸುಗ. ೬೮). [<ಸಂ. ಪದಸ್ಥಾ]

**ಪದಸ್ಥ** (ಗು). ೧. ಮೇಲ್ತರಗತಿಯ ; ಉತ್ತಮವಾದ : ಕಾಮಶಾಸ್ತ್ರಮಂ ನನ್ನಿಯಳೋದಲ್ . . . ಪದಸ್ಥಗಣಿಕಾಕುಲಮೊಲ್ದುಱಿಕೇಳ್ವುದಾವಗಂ (ಮಲ್ಲಕಾ. ೮–೫೧೨) ; ಗಾವಿಲ ಬಂದು ಪಟ್ಟಣದ ಪದಸ್ಥ ವೇಶ್ಯಾವನಿತೆಯರ ಕಂಡಂಜಿ ಭಾವಜಕೇಳಿಗೆ ಮೇಲಿಕ್ಕದಿರಲವನಾವ ಸತ್ಪುರುಷ (ಕುಮಾಸಾಂ. ೩೪). (ನಾ). ೨. = ಪದಸ್ತ : ಪದಸ್ಥನೆನೆ ಸತ್ಯಶೌರ್ಯಶೌಚಾದಿಗುಣಾಸ್ಪದನೆನೆ ನೆಗೞ್ದಹವಮಲ್ಲದೇವನಂ ಮನದೆಗೊಂಡನಣ್ಣಿಗದೇವಂ (ಅಜಿಪು. ೧೨–೨೩) ; ಘನನಲಾ ಭಗದತ್ತ ಕಾಂಭೋಜನು ಪದಸ್ಥನಲಾ (ಕುವ್ಯಾಸ. ೧೦–೪೮). ೩. [ಜೈನ] ಪದಸ್ಥ, ಪಿಂಡಸ್ಥ, ರೂಪಸ್ಥ ಮತ್ತು ರೂಪಾತೀತ ಎಂಬ ನಾಲ್ಕು ಬಗೆಯ ಧ್ಯಾನಗಳಲ್ಲಿ ಒಂದು ; ಪಂಚಪದವೆಂಬ ಮಂತ್ರಪೂರ್ವಕವಾದ ಧ್ಯಾನ; ಧರ್ಮಧ್ಯಾನದ ಭೇದ; ಪೂರ್ವಾಚಾರ್ಯರು ಪ್ರಸಿದ್ಧ ಸಿದ್ಧಾಂತದಲ್ಲಿ ಬರೆದಿರುವ ಮಂತ್ರಗಳ ಚಿಂತನೆ: ತಾರಗೆಯಂ ಕ್ಷೀರಾಬ್ಧಿಯ ವಾರಿಯೊಳಿರದೊರಸಿ ಕರ್ಚಿದಂತೆವೋಲೆಸೆವಾಕಾರದ ಪಂಚಪದಂಗಳನಾರಯ್ದು ತಿಶುದ್ಧಮನದೊಳಿರಿಸೆ ಪದಸ್ಥಂ (ಪಸಾರ. ೫೬೩).
[ಸಂ.]

**ಪದಸ್ಥಿಕೆ** (ನಾ). = ಪದಸ್ತತನ : ಪಾಡಿ ಮೆಚ್ಚಿಸಿದ ಕತದಿಂ ತ್ಯಾಗವಾಸತ್ತು ಬೇಡಿದುದಱಿಂ ದಾನ ಹವಣಿನ ಪದಸ್ಥಿಕೆಯ ಜೋಡಿಯುಂಟೆದಱೊಳುಪಕಾರ (ಹಚಕಾ. ೬–೧೨). [ಪದಸ್ಥ+-ಇಕೆ]

**ಪದಸ್ಥೆ** (ನಾ). ೧. ಪದವಿಯನ್ನು ಹೊಂದಿರುವವಳು; ಸ್ಥಾನವನ್ನು ಪಡೆದಿರುವವಳು : ಅಗ್ರಮಹಿಷೀಪದದಲ್ಲಿ ಪದಸ್ಥೆಯಾಗು (ಆದಿಪು. ೪–೫೬). ೨. ಜಾರೆ ; ಸೂಳೆ : ಆತನು ಬಂದಪೆನೆಂದೊಡನಾರನಾದೊಡಂ ತಡೆಯಿರಿರಿಯೆಂಬ ಗರ್ವದ ಪದಸ್ಥೆಯರಾ ಜೊತೆಯಲ್ಲಿಯೊಪ್ಪುಗುಂ (ಮಲ್ಲಕಾ. ೮–೫೧೩). [ಸಂ. ಪದಸ್ಥಾ]

**ಪದಹತ** (ಗು). ಪದಾಘಾತಗೊಂಡ : ಪದಹತಧೂಳಿಮಯವಾಕಾಶ ರಥತುರಗಾಳಿಮಯ ದಿಗುಜಾಲವೇನೆಂಬೆನು ಮಹಾದ್ಭುತವ (ಕುವ್ಯಾಭೀ. ೩–೨೪). [ಪದ$_2$+ಹತ]

**ಪದಹತಿ** (ನಾ). ಕಾಲಿನ ಹೊಡೆತ ; ಪದಾಘಾತ : ಪದಹತಿಯಿಂ ನೆಲಂನ್ನಡುಗೆ . . . ವಿರೋಧಿಯಂ ತುಳಿದು ಕೊಲ್ವುದು (ಸೌಇಇ. XI–i, ೧೦೩–೧ ; ಸು. 1070) ; ಬಿಜುನಡೆಯ ಪದಹತಿಗಳಿವ ಪಲತೆಱದ ಜೀವಿಗಳಿಗೆ ವಿಮೋಕ್ಷಂ ದೊರೆವುದು (ಬಸವು. ೩೪–೩೬) ; ಪದಹತಿಗೆ ಮಾಹೇಂದ್ರಶೈಲ ಭೂವಿಯ ತಳದಿ ಹುದುಗಿದುದು (ವೆಂಕಾರಾ. ೫–೧–೨೯). [ಪದ$_2$ + ಹತಿ]

**ಪದಹಾಡು** (ಕ್ರಿ). ೧. ಹಾಡನ್ನು ಹೇಳು : ಅಕ್ಕವ್ವ ತನ್ನ ಸವಿಯಾದ ದನಿಯಲ್ಲಿ . . . ಬಸವನ ಮೇಲಿನ ಪದ ಹಾಡುತ್ತಾಳೆ (ನನ್ನೂರು. ೨೨). ೨.(ಆಲಂ) ಮುಕ್ತಾಯ ಮಾಡು; ಮುಗಿಸು: ಅವನು ಆ ಕೆಲಸಕ್ಕೆ ಪದ ಹಾಡಿದ (ರೂಢಿ). ೩. ಹಿಂಸೆಗೆ ಒಳಗಾಗು ; ಸುಡು ; ಬಿಸಿತಾಗು : ಈ ಉರಿಬಿಸಿಲಲ್ಲಿ ಹೊರಟು ಚಪ್ಪಲಿಯೂ ಕಿತ್ತುಹೋಗಿ ಕಾಲು ಪದಹಾಡುತ್ತಿದೆ (ರೂಢಿ). ೪. ದುಃಖಿಸು ; ಗೋಳಾಡು : ಸದಾ ಕಾಲವೂ ಮಗನಿಗೆ ಕೆಲಸವಾಗಲಿಲ್ಲವೆಂದು ಅವನಿಗೆ ಪದಹಾಡುವುದೇ ಆಯಿತು (ರೂಢಿ). [ಪದ$_1$+ಹಾಡು$_1$(<ಪಾಡು$_1$)]

**ಪದಹೇಳಿಸು** (ಕ್ರಿ). **೧.** ಹಾಡನ್ನು ಹೇಳಿಸು : ಆ ಹೆಣ್ಣು ಅವನನ್ನು ಕರೆದು ತನ್ನ ಮನೆಯ ಹತ್ತಿರ ಕೂರಿಸಿ ಪದಹೇಳಿಸಿ ಭಿಕ್ಷೆ ಹಾಕಿದಳು (ಸಣ್ಣ ಕ. IV, ೬೬). **೨.** ಗೋಳುಗುಟ್ಟಿಸು ; ಅಳಿಸು : ಉರಿಬಿಸಿಲಿಗೆ ಕಾಲು ಚುರುಗುಟ್ಟಿ ಪದಹೇಳಿಸುತ್ತಾ ಇದೆ (ರೂಢಿ).
[ಪದಹೇಳು + -ಇಸು$_3$]

**ಪದಹೇಳು** (ಕ್ರಿ). **೧.** = ಪದಹಾಡು ೧ : ಪದಹೇಳಿದ ಮೇಲೆ ಅವಳು ಇವನಿಗೆ ಸ್ವಲ್ಪ ಎಲೆ ಅಡಕೆ ಕೊಟ್ಟಳು (ಸಣ್ಣ ಕ. IV, ೬೫) ; ಪದಹೇಳುವುದಕ್ಕಾಗಿಯೇ ಬೀಗುತಿಯಿಂದ ಆಹ್ವಾನಿತಳಾಗಿದ್ದ ಕೆಂಚಿ ಮುಂದೆ ಬಂದು ಹಾಡಲು ಸಜ್ಜಾಗಿ ಕುಳಿತಳು (ಸುಪಸಂ. ೫೦). **೨.** (ಆಲಂ) (ನೋವಿನಿಂದ)ಗೋಳಾಡು; ದುಃಖಿಸು : ಕೊಡದೇ ಪದಹೇಳ್ತ್ಯಾನು! ನಾ ಬಿಡ್ತೇನೇನು (ತಿಡುಗು. ೭೯). [ಪದ$_2$ + ಹೇಳು(<ಪೇೞ್)]

**ಪದಱು$_1$,** ಪತರು, ಪದರು$_1$ (ಕ್ರಿ). **೧.** ಕ್ಷೋಭೆಗೊಳ್ಳು ; ಕೆನಿಸು ; ಕೋಪಿಸು ; ಉದ್ವಿಗ್ನವಾಗು : ಪದಱಿ ಸಕಲಪ್ರಜೆಯ ನೋಯಿಸಲದು ನೃಪಗೆ ಲೇಸಲ್ಲ . . . ಪದುಳದಲಿ ಭೂಪ್ರಜೆಯು ಕೆಡದಂದದಲಿ ರಕ್ಷಿಪ ಬಗೆಯ ವಿರಚಿಸುವುದೆ ವಿಚಾರಿಸೆ ಧರ್ಮಸಾಧನವೆಂದನಾ ಭೀಷ್ಮ (ತಿಮ್ಮಶಾಂ. ೨-೮೮) ; ಬಱುದೊಡಂಬಡಿಕೆಗೊಳಗಾಗದಿರೆಯೆಳ್ದು ಪರಿದೆಯ್ದುವನಿತಱೊಳ್ ಪದಱಿವಂದು . . . ಸೆಜ್ಜೆವನೆಗೆಳೆದೊಯ್ವ (ಮಡಿಕ್ಯಾ. VI, ೧೬೩೦). **ಪತರು : ೨.** ಚಡಪಡಿಸು ; ಕಳವಳವನ್ನು ಹೊಂದು; ಒದ್ದಾಡು : 'ಪತರುಗುಟ್ಟು' ಪರಾ. **ಪದರು$_1$ : ೧.** ನೀನು ಅವರನ್ನು ಸಂಹಾರ ಮಾಡತಕ್ಕವನೇ ಸರಿ ; ಪದರಬೇಡ ; ತಾಳಿಕೊ (ಭೀಷ್ಮಚ. ೧೧೧). **೩.** ಅಸಂಬದ್ಧವಾಗಿ ಮಾತನಾಡು ; ಬಡಬಡಿಸು : ಪರಿಹಾಸ್ಯವನು ಮಾಡಿ ಪದರಲಾಗದು ಅಂತಃಕರಣ ನೀನಿಟ್ಟು ತೆರಳುವುದೆ ಸೌಖ್ಯ (ಶ್ರೀಕೃಪಾ. ೧೯) ; ತಾನೇನಾದರೂ ಪದರಿಬಿಟ್ಟರೆ ಅವಿವೇಕ. ಏನಾಗುವುದೋ ಎಂದು ಶಂಕಿಸಿ ಮಾತನ್ನೇನೂ ಆಡದೆ ಸರೋಜಳನ್ನು . . . ಕೂಡಿಸಿದನು (ಮಹಾಗ. ೨೭೦). **೪.** ಹೆದರು ; ನಡುಗು : ಸುದತಿಗಾ ನುಡಿ ನಿಶಿತ ಶೂಲಾಗ್ರದಲಿ ತಿವಿದಂತಾಗೆ . . . ಚಿಂತೆಯಲಿ ಪದರಿ ಹಮ್ಮನೆ ಹರದು ಕಂಗಳೊಳುದುರೆ ಜಲಬಿಂದುಗಳು (ಅನಂರಾ. ೬-೨೩-೨೧) ; ಕುಧರಂಗಳ್ಕೈತಂದ ಮಾಳ್ಕೆಯೊಳ್ ಬರೆ ಕಂಡು ಬೆದರಲನಿಮಿಷನಿಕರಮಾ ಪುರಂ ತಲ್ಲಣಿಸಿ ಪದರದೆ[ಪಾಠಾಂ. ಬೆದರದೆ] ನೃಪಾಗ್ರಣಿ ವಿದೇಹನಂದನನಿರ್ದನತಿಮನೋಹರ್ಷದಿಂದ (ವೆಂಕಾರಾ. ೧-೧೯-೬) ; ಪದರಿ ತಲ್ಲಣಗೊಂಡು ಪಶುಗಳು ಚೆದರಿ ಓಡಿಹೋದವು (ಗೋಹಾಡು. ೧೧-೫೧) ; ನಿನ್ನ ಮನೆಯಲ್ಲಿ ಯಾತಕ್ಕೇನು ಕಡಮೆ ? . . . ಯಾಕೆ ಪದರುತ್ತೀಯೆ ? (ಆದೂಟ. ೩೩). **೫.** ಅಲುಗಾಡು ; ಮಿಸುಕು ; ಚಲಿಸು : ಅದ ಕಂಡು ಪಕ್ಷಿಗಳು ಬೆದರಿ ಭೂಮಿಗೆ ಯಿಳಿದು ಪದರಾದೆ ಕುಳಿತಿರಲು ಕಂಡಾ ನಳನಾಗಾ (ಯನಳ.೧೪) ; ಬಿಳಿಯ ಮಂಜಿನ ಮುಸುಕು ಬಳಸಿದ ಮೆಳೆಯ ಪೊದರಲಿ ಪದರುತ . . . ಮಿನುಕುವ ಮಿಂಚುಹುಳವೆಂದೆಣಿಸಲೋ ! (ಇಂಗೀತ. ೧೩-೨). **೬.** ಚಂಚಲತೆಯನ್ನು ಹೊಂದು ;ಅಸ್ಥಿರವಾಗು : ಆ ಸಮಯದಲ್ಲಿ ಕಾದಂಬರಿಯ ನೀನು ಚಂದ್ರಾಪೀಡನ ಕಂಡು ಪದರಿ ಇದೇನ ತೊಡಗಿದೆ ಎಂದು ಲಜ್ಜೆಯು ನಿಗ್ರಹಿಸುತ್ತಲಿರುವುದು (ವಚಕಾ. ೬೨) ; ಯದುಕುಲಾಬ್ಧಿ ಚಂದ್ರನೆ ಪದರದಲೆ ತಾನಾಡೀದವಧಿಗೆ ಬಂದಾನೆ (ಶ್ರೀಕೃಪಾ. ೨೩).

ಪದಪದರು (ದ್ವಿರುಕ್ತಿ): ಬಳ್ಳಿಗೊಂಚಲಿನಂತೆ ತೀವಿ, ಹಬ್ಬಿದುದು ನಮ್ಮ ತೋಳ್ ಪದಪದರಿ ಬೆದರೆ ಆಥೆನ್ಸ್ ! (ಪಾರಸಿ. ೩೪-೭೭೩).

**[ದೇ.॥ ತಮಿ.** ಪತಱು ; **ಮಲ.** ಪದಱು, ಪದರು ; **ತೆಲು.** ಪದಱು, ಪದರು, ಪದುರು ; **ಮಲ್ತೊ.** ಪದ್ರರೆ, ಪದ್ಯರೆ]

**ಪದಱು$_2$** (ನಾ). ಉದ್ವಿಗ್ನತೆ; ಆತುರ : ಪದಱಿಂದೊಂದಿದ ಭೀತಿಯಿಂ ನಡುಕಮಂ ಪೆರ್ಚಿಕ್ಕುಮಂಗಕ್ಕೆ ಮಾಸಿದ ಮದ್ದೃಷ್ಟಿಗಳಂ ಕರಂ ಮಱುಸುಗುಂ ಹರ್ಷಾಶ್ರುವಿಂ (ಮಿತ್ರಗೋ. ೬೧-೯೨). [<ಪದಱು$_1$]

**ಪದಾಂತ** (ನಾ). ಪದದ ಕೊನೆಯ ಭಾಗ,—ಅಕ್ಷರ : ತಳೆಗುಮದಂತ ಪದಾಂತಂಗಳೆತ್ವಮುಮನಿತ್ವ ವೃತ್ತಿಯುಮನುತ್ವಮುಮಂ(ಶಮದ. ೨೭೮) ; ಪದಾಂತವಾದ ಣಕಾರಕ್ಕೆ ಪರವಾದ ನಕಾರಕ್ಕೆಣ್ ಆದೇಶವಾಗುತ್ತದೆ (ಕೈಪಿಡಿ. ೧೧). [ಪದ$_2$+ಅಂತ$_2$]

**ಪದಾಂತರ** (ನಾ). **೧.** ಮತ್ತೊಂದು ಹೆಜ್ಜೆ. **೨.** ಬೇರೆಯ ಶಬ್ದ ; ಇನ್ನೊಂದು ಪದ : ಮಱುಗುಂದು ಸೂಟಸುಂದನೆ ಪಿಱಿತಿನಿಯೆನೆ ಪೂಱಯೆನೆ ಪದಾಂತರದಿಂದಂ ನೆಱೆದು ನಿಲೆ ದುಷ್ಕೃತೀತಿಯ ನಱುವ ಪೆಱಪೆಱವುಮಿನ್ನವೇಗ್ರಾಮ್ಯಂಗಳ್ (ಕಾವ್ಯಾವ. ೪೪೬); ಇಂತಿದೆ ನೆಲೆನೆಲೆಯೆನಗೆಂದುಪದಾಂತರದಿಂದತನು ತನ್ನ ಪೆಸರನದರ್ಕಂ ಸಂತಸದಿನಿಟ್ಟನೆನೆ ಚೆಲ್ವಂ ತಳೆದ ವಿದೇಹನಾಮಮಾ ಮಹಿಗೆಸೆಗುಂ (ಚಂದ್ರಪು. ೧-೭೯). [ಪದ$_2$+ಅಂತರ]

**ಪದಾಂತರೀಕರಣ** (ನಾ). ಒಂದು ಪದಕ್ಕೆ ಬದಲು ಮತ್ತೊಂದು ಪದವನ್ನು ಸೇರಿಸುವುದು : ಪ್ರಣುತ ಪದಾಂತರೀಕರಣಮಂತದೆ ತಾಣದೊಳಾದೊಡಂ ಮಹಾಗುಣಮನೆ ತರ್ಕಮೇಕಬಹುಭೇದವಿಕಲ್ಪಮನಲ್ಲಿ ನೋಡಲಿಂ (ಕವಿಶಾ. ೧-೧೨೨). [ಸಂ.]

**ಪದಾಂತಸಂಧಿ** (ನಾ). [ವ್ಯಾಕ] ಒಂದು ಪದದ ಅಂತ್ಯವರ್ಣವು ಮುಂದಿನ ಪದದ ಆದಿವರ್ಣದೊಂದಿಗೆ ಸೇರಿ ಆಗುವ ಸಂಧಿ : ಪ್ರಕೃತಿ ಪ್ರತ್ಯಯಂಗಳ ಮಧ್ಯಮುಂ, ಪೂರ್ವಪದದ ಕಡೆಯುಂ ಪರಪದದ ಮೊದಲುಂ ಕೂಡೆ ಪದಮಧ್ಯಸಂಧಿ ಪದಾಂತಸಂಧಿ ಎಂದು ಸಂಧಿ ವಿಷಯಮಿರ್ತೆಱಂ (ಶಮದ. ೫೦ ವೃತ್ತಿ) ; ಪದಾಂತಸಂಧಿಯು ಈಗಿನ ಪದ್ಯರಚನೆಯಲ್ಲಿ ಅನಿತ್ಯವೆಂಬ ಅಭಿಪ್ರಾಯವನ್ನು . . . ತೋರಿಸುತ್ತವೆ (ಕಎಪು. ಪೀಠಿಕೆ). [ಪದಾಂತ+ಸಂಧಿ]

**ಪದಾಂತ್ಯ** (ನಾ). **೧.** = ಪದಾಂತ : ದೀರ್ಘಂ ಪೂರ್ವಪದಾಂತ್ಯದೊಳುತ್ತರಪದದ ಮೊದಲೊಳೊದವಿರೆ ಲೋಪಂ (ಶಮದ. ೨೯೩). **೨.** ಪದ್ಯದ ಪಾದದ ಅಂತ್ಯ,—ಕೊನೆ : ಬಿಂದು ವಿಸರ್ಗಂ ವ್ಯಂಜನಮೊಂದಿದ ದಡ್ಡಕ್ಕರಂ ಪದಾಂತ್ಯಂ ದೀರ್ಘಂ ಬಂದೊಡಱು ವನಜಮುಖಿ ಗುರುವೆಂದುಂ (ಛಂದೋಂಬು. ೧-೩೫). [ಪದ$_2$ + ಅಂತ್ಯ]

**ಪದಾಂತ್ಯಸಂಧಿ** (ನಾ). = ಪದಾಂತಸಂಧಿ : ಪದಾಂತ್ಯಸಂಧಿಗೆ : ಅವನ+ಆಳ್ತನಂ, ಅವನಾಳ್ತನಂ (ಶಮದ. ಸ. ೬೦ ಪ್ರಯೋ).
[ಪದಾಂತ್ಯ+ಸಂಧಿ]

**ಪದಾಕ್ರಾಂತ** (ನಾ). **೧.** (ಅಧಿಕಾರವು) ಆಕ್ರಮಣಕ್ಕೆ ಒಳಪಟ್ಟುದು : ಚಲುಕ್ಯರಾಜ್ಯಲಕ್ಷ್ಮಿಯು ಪಲ್ಲವರಿಂದ ಪದಾಕ್ರಾಂತವಾದ ಮೇಲೆ ವಿಕ್ರಮಾದಿತ್ಯನು ಹೇಗಾದರೂ ತನ್ನ ವಂಶದ ಕೀರ್ತಿಯನ್ನು ಕಾಪಾಡಬೇಕೆಂಬುದೊಂದೇ ಉದ್ದೇಶದಿಂದ . . . ಪ್ರಯತ್ನಪಟ್ಟನು (ಕರ್ಣಾಅ. ೭೧). **೨.** ಆಕ್ರಮಣಕ್ಕೊಳಗಾದ ವ್ಯಕ್ತಿ : ಮದನಂ ಮದಿರಾಕ್ಷಿಯರನೀ ಕ್ಷಣಮಾತ್ರದೊಳೆ ತನ್ನ ಪದಾಕ್ರಾಂತರಂ ಮಾಟ್ಪ ಮಿತ್ರನ ಚರಿತ್ರಕ್ಕೆ ಮೆಚ್ಚಿ (ಪಾರ್ಶ್ವಪು. ೮-೩೦ ಪ). [ಪದ$_2$ + ಆಕ್ರಾಂತ]

**ಪದಾಗಮಜ್ಞ** (ನಾ). ವ್ಯಾಕರಣದ ನಿಯಮಗಳನ್ನು ಬಲ್ಲವನು : ಅಸಮರ್ಥಮಪ್ರತೀತಂ . . . ನೀರಸಮೆಂದು ದೋಷಮಿವು ಸಮನಿಸುಗುಂ ಪದದೊಳ್ ಪದಾಗಮಜ್ಞರ ಮತದಿಂ (ಕಾವ್ಯಾವ. ೪೩೫).
[ಪದ$_2$+ಆಗಮಜ್ಞ]

**ಪದಾಘಾತ** (ನಾ). **೧.** ಒದೆತ ; ಪಾದಾಘಾತ : ಭೀಮಸೇನನ ಗದಾಘಾತದೊಳೂರುಭಂಗಮುಂ ಪದಾಘಾತದೊಳ್ ಮಕುಟಭಂಗ

ಮುವನಾಗೆ (ಗದಾಯು. ೯-೧೬ ಪ); ನಿಮ್ಮ ಪದಾಘಾತದಿಂದ ಈ ಕೊಡಗು ಸುಚ್ಚು ನೂರಾಗಿದೆ (ದೌಲತ್. ೩೩೫). [ಪದ$_2$+ಆಘಾತ]

**ಪದಾಜಿ** (ನಾ). ೧. ಕಾಲಾಳು ; ಪದಾತಿ : "ಪದಿಕಂ ಪತ್ತಿ ಪದಾತಂ ಪದಾತಿ ಪದಾತಿಕಂ ಪದಾಜಿಗೆ ನಾಮಮಂ" (ವಸ್ತುಕೋ. ೮೩-೧೦). ೨. ಕಾಲ್ನಡಿಗೆಯಲ್ಲಿ ಹೋಗುವವನು ; ಪಾದಚಾರಿ. [ಸಂ.]

**ಪದಾತ** (ನಾ). = ಪದಾಜಿ ೧ : "ಪದಿಕಂ ಪತ್ತಿ ಪದಾತಂ . . . ಪದಾಜಿಗೆ ನಾಮಮಂ" (ವಸ್ತುಕೋ. ೮೩-೧೦). [ಸಂ.]

**ಪದಾತಿ** (ನಾ). ೧. ಕಾಲುನಡೆಯ ಸೈನಿಕ; ಕಾಲಾಳು: "ಪದಾತಿಃ . . . ಪದಿಕಃ, ಪಾದಚಾರೀ – ಈ ೮ ಕಾಲಾಳ್" (ಹಲಾಯು. ೬೪-೨೯೬); ರಥವ್ರಜಮಯಮುಂ ಪದಾತಿಮಯಮುಂ ನೆಲಿಯಾದುದು ಕಾಡು ಕೋಡುಮಾರ್ ತ್ರಿಜಗದೊಳಾಂಪರೀ ಬಲಮನಿನ್ನೆನಿಸಿತ್ತು ಚತುರ್ಬಲಾರ್ಣವಂ (ಪಂಪಭಾ. ೯-೫೮); ನೆರೆದುದು . . . ನಿಜಭುಜಾಲಾಪದ ಪದಾತಿಯೊಡ್ಡುಗಳಲ್ಲಿ (ಇಹರ.ಹ. ೧೩೫-೨೪); ಚೂಣಿಯೊಳಿರದು ಬಲದ ಪದಾತಿ ಸವೆದುದು (ಕುವ್ಯಾಭೀ. ೪-೪೬). ೨. ಕಾಲುನಡಗೆಯವನು; ದಾರಿಗ. [ಸಂ.]

**ಪದಾತಿಕ** (ನಾ). = ಪದಾಜಿ ೧ : 'ಪಾದಾತಿಕ' ಪರಾ. [ಸಂ.]

**ಪದಾತಿನಿ** (ನಾ). ಕಾಲಾಳಿನ ಸೈನ್ಯ : ವಂಕದರದಿಂ ಪೊಱಮಟ್ಟಱ ವಾಳ್ಗಮಾಂಕೆಯೊಳ್ ಗಡಣಿಸೆ ಕಾದುತಿರ್ದುದು ಮಹೇಂದ್ರಪದಾತಿನಿ ಮುತ್ತಿ ಸುತ್ತಲುಂ (ಚಂದ್ರಪ್ರ. ೫-೧೦೬). [ಸಂ. ಪದಾತಿನೀ]

**ಪದಾತಿಪತನ** (ನಾ). ಕಾಲಾಳುಗಳ ಸೋಲು,—ನಾಶ : ಮಹಾರಥರು ಮೆದೆಗೆಡೆದುದುಳಿದ ಪದಾತಿಪತನವನಱಯೆ ನಾನೆಂದ (ಕುವ್ಯಾಗ. ೧-೩೮). [ಪದಾತಿ+ಪತನ]

**ಪದಾದಿ** (ನಾ). ೧. ಪದದ ಆರಂಭ. ೨. ಪದಾರಂಭದ ಅಕ್ಷರ : ಪದಾದಿಯ ಬಕಾರಕ್ಕೆ ಐತ್ವಂಬೆರಸಿದ ಭಕಾರವುಕ್ಕುಂ (ಶಮದ. ೨೭೫ ವೃತ್ತಿ). [ಪದ$_2$+ಆದಿ$_2$]

**ಪದಾಧಿಕಾರಿ** (ನಾ). ಅಧಿಕಾರದಲ್ಲಿರುವವನು ; ಅಧಿಕಾರಸ್ಥ : ಆವೇದನಪತ್ರದ ಮೇಲೆ ಆ ಪದಾಧಿಕಾರಿಯಿಂದ . . . ಅವನ ಹೆಸರು ರಿಜಿಸ್ಟರು ಮಾಡಲ್ಪಟ್ಟಿರುವ ಸಂದರ್ಭದಲ್ಲಿ (ಭಾಧಾನ. ೫). [ಪದ$_2$+ಅಧಿಕಾರಿ$_1$]

**ಪದಾಧ್ವ** (ನಾ). [ವೀಶೈ] ಮಹಾಲಿಂಗದಲ್ಲಿ ಉತ್ಪತ್ತಿಯಾದ ಸಾದಾಖ್ಯಗಳು ಜಗತ್ತಿನಲ್ಲಿ ಪ್ರಕಟವಾಗಲು ಸಹಾಯಕವಾಗಿರುವ ಆರು ಮಾರ್ಗಗಳಲ್ಲಿ ಒಂದು ; ತಿಳಿವಳಿಕೆಯನ್ನುಂಟುಮಾಡುವ ಪದಗಳ ದಾರಿ ; ಮಂತ್ರ, ಪದ, ವರ್ಣ, ಭುವನ, ತತ್ತ್ವ ಮತ್ತು ಕಲಾ ಎಂಬ ಆರು ಮಾರ್ಗಗಳಲ್ಲಿ ಒಂದು : ವರ್ಣಾಧ್ವ, ಪದಾಧ್ವ, ಮಂತ್ರಾಧ್ವ (ಇವು ಮೂರು ಶಬ್ದಾಧ್ವಗಳು) (ಶಿವಾಸೂ. ೨ ಅಡಿಟಿ). [ಪದ$_2$+ಅಧ್ವ]

**ಪದಾನತ** (ನಾ). ಪಾದಗಳಿಗೆ ನಮಸ್ಕರಿಸಿದವನು —ಬಾಗಿದವನು: ಇಂದ್ರನಂ ಕಂಡು ಪದಾನತನೆಂದಂ ದಶಮುಖನಪ್ರತಿಮಂ ಬಿನದರದೊಳಿದಿರ್ಚುವವರಾರವನಂ (ಪಂರಾಮಾ. ೧೦-೧೬೩); ಜರತ್ತೃಣಜುಗುಪ್ಸೆಯಿಂ ಬಿಸುಟಹೀಂದ್ರಮರ್ತ್ಯೇಂದ್ರನಿರ್ಜರೇಂದ್ರಪದಮುಂ ಪದಾನತರ್ಗೆ ಮತ್ತೆ ನೀನೀವುದೇಂ ಕರಂ ಬಗೆಯೆ ಚೋದ್ಯಮೋ (ಚಂದ್ರಪ್ರ. ೧೪-೯೩). [ಪದ$_2$+ಆನತ]

**ಪದಾನುಗುಣ್ಯ** (ನಾ). = ಪದಮೈತ್ರಿ: ಪದಗಳಿಗೆ ಇರತಕ್ಕ ಅನ್ಯೋನ್ಯವಾದ ಮೈತ್ರಿಗೆ ಶಯ್ಯೆ ಎಂದು ಹೆಸರು . . . ಶಯ್ಯೆಗೇ 'ಪದಾನುಗುಣ್ಯ'ವೆಂದೂ 'ಪದಮೈತ್ರಿ'ಯೆಂದೂ ಹೆಸರು (ಕೈಪಿಡಿ. ೨೨೪). [ಪದ$_2$+ಅನುಗುಣ್ಯ]

**ಪದಾಯುಧ** (ನಾ). ಕಾಲನ್ನು ಆಯುಧವನ್ನಾಗಿ ಉಳ್ಳುದು ; ಹುಂಜ : "ಕುಕ್ಕುಟಂ ತಾಮ್ರಚೂಡಂ ಪದಾಯುಧಂ ಕೃಕವಾಕು ಕೋಟುಯಕ್ಕುಂ" (ಬಿಂಗರಾ. ೫೧-೫); ಪದಾಯುಧ ಚಕ್ರವಾಕ ಕಳಿಂಗ . . . ಭರದ್ವಾಜಾದಿ ಪಕ್ಷಿಪ್ರಕರ ಬಿದ್ದುದು ಬಿಗಿದ ಕೇಸುರಕಣ್ಣಿವಲೆಗಳಲಿ (ಕುವ್ಯಾಅ. ೨೦-೫೨). 'ಚರಣಾಯುಧ' ಪರಾ. [ಪದ$_2$+ಆಯುಧ]

**ಪದಾರ್ತ** (ನಾ). ಅರ್ಪಿಸಿದ ದ್ರವ್ಯ,—ವಸ್ತು : ತಮ್ಮ ಭಕ್ತಿಯಿಂದ ತೋಂಟದ ಸ್ವಾಮಿಗೆ ಕಲ್ಲ ಮಟವ ಕಟ್ಟಬೇಕೆಂದು ಬಿಟ್ಟಗ ದೇವರಿಗೆ ಪದಾರ್ತಮಂ ನಮಸ್ಕಾರಮಂ ಮಾಡಲಾಗಿ ಭಕ್ತಿ ಪದಾರ್ತಮಂ ಕೈಕೊಂಡು . . . ಸಜ್ಜನ ಸತ್ಪುರುಸರು ಯಿ ಮಟದಲಿ ಯಿ ಪದಾರ್ತವ ಅನುಭವಿಸುವರು (ಎಕ. XVI, ಕುಣಿಗ. ೪೯-೩೦; ಸು. 1480?). [<ಸಂ. ಪದಾರ್ಥ]

**ಪದಾರ್ಥ** (ನಾ). ೧. ಪದದ ಅರ್ಥ,—ಅಭಿಪ್ರಾಯ : ಸುಕಥಾಳಾಪಮನೋತು ಪೇಟ್ಟುದು ಪದಾರ್ಥೋಕ್ತಿಯಿಂ (ಸುಕುಮಾ. ೧-೪೬) ; ಕಾವ್ಯಮಂ ಕೇಳ್ದು ಮಥಿಸಿ ಜನಿಸಿದ ಪದಾರ್ಥಮಂ ತಿಳಿದು ನೋಡದೆ ವಿನೂತನಕವಿತೆಯಿಂದು ಕುಂದಿಟ್ಟು ಜಱದೊಡೆ ಪೇಳ್ದವನೊಳಾವದೂಷಣೆಯುಂ (ಜೈಮಿಭಾ. ೧-೭). ೨. ವಸ್ತು ; ದ್ರವ್ಯ : ಇನಿವಿರಿದು ಪರಾಕ್ರಮಮುಳ್ಳ ನಿನಗೆ ತೀರದ ಪದಾರ್ಥಮಿಲ್ಲೆಂಬುದನಾಂ ನೆನೆನೆನೆದು ಲಜ್ಜೆಯಿಂ ಬೇಡೆನಲಱದಪೆನಿಲ್ಲ ನಿನ್ನನಿನ್ನುಂ ಬರವಂ (ಚಂದ್ರಪ್ರ. ೫-೮೪) ; ಉಪ್ಪು ಬಹಳ ಉಪಯುಕ್ತವಾದ ಪದಾರ್ಥವು (ಮುಂಬಯಿ. ೪-೧೯೮). ೩. ಸಾರು, ಹುಳಿ ಮುಂತಾದ ಮೇಲೋಗರ : ಹಸಿಯ ಬಿಸಿಲನೆ ಕೊಯ್ದು ಪದಾರ್ಥವ ಮಾಡಿ ಉಸಿರ ಎಸರಲ್ಲಿ ಬಾಗುತ್ತಿಪ್ಪರಯ್ಯ (ಅವಚಂ. ೫೪-೨೫೦). ೪. ಸಿದ್ಧಪಡಿಸಿದ ಆಹಾರವಿಶೇಷ : ಪ್ರಾಣಲಿಂಗಕ್ಕಯಱಂ ಪರಿಯಾಣದಲಿ ಪೊಸ ಪೊಸ ಪದಾರ್ಥಶ್ರೇಣಿಯುಂ ಲೇಸಾಗಿ . . . ನೀಡುತಿರಲು (ಬಸಪು. ೩೩-೧೧) ; ಉಣ್ಣುವ ಪದಾರ್ಥಗಳನ್ನು ಆಗಾಗ್ಗೆ ಬದಲು ಮಾಡುತ್ತಿರಬೇಕು (ಮುಂಬಯಿ. ೪-೨೫). ೫. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : ನವ ಪದಾರ್ಥ ರಂಧ್ರ . . . ನಾಟ್ಯಾಂಗ ಇಂತಿನಿತುಂ ೯ಕ್ಕೆ ಪೆಸರು (ವ್ಯಸಹಾ. ೧೧). ೬. ಏಳು ಎಂಬ ಸಂಖ್ಯೆಯ ಸಂಕೇತ: ಬಂದಿರೆ ಶಶಾಂಕ ದಿವಸೇಶ ಮರುದಿಂದ್ರರ್ . . . ಇಂದುವದನೇ ಯತಿಪದಾರ್ಥದೊಳೆ ನಿಂದಂದೆಂದುವಿದ ಕೇಳ ಪೆಸರಿಂ ವನಮಯೂರಂ (ಛಂದೋಂಬು. ೨-೧೯೪). ೭. [ನ್ಯಾಯ] ವಾದದ ಅಂಶಗಳನ್ನು ಒದಗಿಸುವ ವಿಭಾಗ,—ಪ್ರಕರಣ. ೮. = ಪದಾರ್ಥಸಪ್ತಕ : ವೇದೋಕ್ತಧರ್ಮವನ್ನು ಎಲ್ಲರೂ ಮಾಡಬೇಕು. ಆದರೆ ಮಾಡುವ ಕ್ರಮದಲ್ಲಿ ಕಾಲ ದೇಶ ಶಕ್ತಿ ಶುದ್ಧಿ ಅಶುದ್ಧಿ ಸಹಾಯ ಮೊದಲಾದ ಸಾಮಗ್ರೀಭೇದದಿಂದ ದ್ರವ್ಯ ಪದಾರ್ಥ ಆಮ ಪಕ್ವ ಮೊದಲಾದ ಪ್ರಭೇದಗಳೆಂದು ನಿರ್ಣಯವಿರುವುದು (ಹಿಂದಸಾ. ೧೬೨). ೯. [ಜೈನ] ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ, ಮೋಕ್ಷ, ಪಾಪ ಮತ್ತು ಪುಣ್ಯಗಳೆಂಬ ಒಂಬತ್ತು ಬಗೆಯ ತತ್ತ್ವಗಳು : ಸಮವಾಯಮಪ್ಪುದಲ್ತೆಂದು ಮನಂ ಬಸಮಾಡಿ ದೋಷವಿರಹಿತನಾಪ್ತಂ ಕ್ರಮದಾಪ್ತನೆ ಪೇಟ್ದುದದಾಗಮಮಾಗಮದರ್ಥಮಾವುದದುವೆ ಪದಾರ್ಥಂ (ಆದಿಪು. ೫-೫೪); ಜೀವಾದಿ ಪದಾರ್ಥಂಗಳೊಳಾವುದು ಸಂದಿಗ್ಧಮಾದೊಡಂ ಬಲಗೊಳೆ ಭವ್ಯಾವಳಿಗೆ ವಿದಳಮಕ್ಕುಂ (ಅಜಿಪು. ೫-೭೦). ೧೦. [ವೀಶೈ] ಹೆಣ್ಣು, ಹೊನ್ನು ಮತ್ತು ಮಣ್ಣುಗಳೆಂಬ ಮೂರು ಬಗೆಯ ಮೂಲದ್ರವ್ಯಗಳು : 'ತ್ರಿವಿಧಪದಾರ್ಥ' ಪರಾ.

**ಪದಪದಾರ್ಥ** (ದ್ವಿರುಕ್ತಿ): ಒಂದು ಲಕ್ಕದ ಮೇಲೆ ತೊಂಬತ್ತೊಂದು ಸಾವಿರ ಜಂಗಮಕ್ಕೆಂದಂದು ಮಾಡಿದ ಪದಪದಾರ್ಥಾವಳಿಗಳೆಲ್ಲವನು

ಒಂದು ವಿಭಳಿಗೆಯೊಳಗೆ ಸವೆಯಲು (ಬಸವು. ೮-೧೬) ; ಇನಿದೆನಿಪ ಮೃದುತರರಸರಸಾಯನಪದಪದಾರ್ಥಂಗಳಂ ಪಾವನದ ಪಾನಾದಿಗಳನೊದವಿಸಿ ಕೂಡೆ ಗಡಣಿಸುತ (ಬಸವು. ೩೩-೪). [ಸಂ.]

**ಪದಾರ್ಥಪ್ರಸಾದ** (ನಾ). [ವೀಶೈ] ಪ್ರಸಾದಗಳಲ್ಲಿ ಒಂದು ಪ್ರಭೇದ ; ಭೋಗಿಸುವ ವಸ್ತುಗಳನ್ನು ಮೊದಲು ಗುರುಲಿಂಗ ಜಂಗಮಕ್ಕರ್ಪಿಸಿ ಅವರು ಉಳಿಸಿದ ಶೇಷವನ್ನು ಪ್ರಸಾದರೂಪವಾಗಿ ತೆಗೆದುಕೊಳ್ಳುವುದು : ಗುರುಲಿಂಗಜಂಗಮಕ್ಕೆ ಸರ್ವಪದಾರ್ಥವ ಸರ್ವಭೋಗಂಗಳ ಭೋಗಿಸಲಿತ್ತು ಶೇಷಪ್ರಸಾದವ ಭೋಗಿಸುವುದು ಪದಾರ್ಥಪ್ರಸಾದ (ಉಶಿ.ಷ.ಕ.೧೧೮-೧೪೭). [ಪದಾರ್ಥ+ಪ್ರಸಾದ]

**ಪದಾರ್ಥಭಾವಿನಿ** (ನಾ). [ತತ್ತ್ವಶಾ] ಶಾಕ್ತಮತದಲ್ಲಿ ಮೋಕ್ಷಸಾಧನವೆಂದು ಹೇಳಿರುವ ಏಳು ಜ್ಞಾನಭೂಮಿಕೆಗಳಲ್ಲಿ ಆರನೆಯದು : ಪದಾರ್ಥಭಾವಿನೀ – ಹೊರಗಾಗಲಿ ಒಳಗಾಗಲಿ ಯಾವದೊಂದು ವಿಶೇಷಜ್ಞಾನವೂ ಆಗದಿರುವದು (ಅಮೃತ.೬-೬ ಟೀಕು) ; ಅನುಭವದಿಂದ ತಿಳಿಯತಕ್ಕ ಭೂಮಿಕೆಗಳು ಜ್ಞಾನಭೂಮಿಕೆಗಳು. ಅವುಗಳು "ವಿವಿದಿಷಾ" . . . "ಪದಾರ್ಥಭಾವಿನೀ" "ತುರ್ಯಗಾ" ಎಂದೇಳು (ಭಾರದ. ೨೨೭). [ಸಂ. ಪದಾರ್ಥಭಾವಿನೀ]

**ಪದಾರ್ಥಸಪ್ತಕ** (ನಾ). [ನ್ಯಾಯ] ಶಾಕ್ತಮತದಲ್ಲಿ ಮೋಕ್ಷಸಾಧನವೆಂದು ಹೇಳಿರುವ ವಿವಿದಿಷಾ, ವಿಚಾರಣಾ, ತನುಮಾನಸಾ, ಸತ್ತ್ವಾಪತ್ತಿ, ಅಸಂಸಕ್ತಿ, ಪದಾರ್ಥಭಾವಿನೀ ಮತ್ತು ತುರ್ಯಗಾ ಎಂಬ ಏಳು ಜ್ಞಾನಭೂಮಿಕೆಗಳು : ಕಾಣಾದವೆಂಬ ವೈಶೇಷಿಕಶಾಸ್ತ್ರವೇ ದ್ರವ್ಯ ಗುಣ ಕರ್ಮ ಸಾಮಾನ್ಯ ವಿಶೇಷ ಸಮವಾಯ ಅಭಾವಗಳೆಂಬ ಪದಾರ್ಥಸಪ್ತಕಮಂ ಪ್ರತಿಪಾದಿಪುದಱಿಂ ಪ್ರಪಂಚಸ್ವರೂಪಮಂ ವಿವರಿಸಿ ವಿಭಾಗಿಸುತಿರ್ಕುಂ (ವಿವೇಕ. ೧೦). [ಪದಾರ್ಥ+ಸಪ್ತಕ]

**ಪದಾರ್ಪಣ** (ನಾ). ಕಾಲನ್ನು ಇಡುವುದು ; ಹೆಜ್ಜೆ ಊರುವುದು: ಅವರ ಹೃದಯದಲ್ಲಿ ಭೀತಿಯು ಪದಾರ್ಪಣವಾಗಿತ್ತು (ಸರ್ವಮಂ. ೩೮).

**ಪದಾರ್ಪಣ ಮಾಡು** = ಹೆಜ್ಜೆಯಿಡು ; ಕಾಲಿಡು ; ನಡೆ : ಆತನು ಯಾವ ಅನ್ಯಾಯದ ಮಾರ್ಗದಲ್ಲಿಯೂ ಎಂದೂ ಪದಾರ್ಪಣ ಮಾಡಿಲ್ಲವೆಂದು ನಾನು ಶಪಥಮಾಡಿ ಹೇಳುವೆನು (ಚಿನ್ನಬೀ. ೭೩) ; ಹಳತಿಂದ ಹೊಸತಿಗೆ ನಾವು ಪದಾರ್ಪಣ ಮಾಡುತ್ತೇವೆ (ಆತ್ಮಾರ್ಪ. ೧೯೧). [ಪದ₂+ಅರ್ಪಣ]

**ಪದಾವಧಿ** (ನಾ). ಅಧಿಕಾರದ ಅವಧಿ,—ಕಾಲ : ರಾಷ್ಟ್ರಪತಿಯವರು ತಮ್ಮ ಪದಾವಧಿಯು ಸಮಾಪ್ತವಾದ ಮೇಲೂ ತಮ್ಮ ಉತ್ತರಾಧಿಕಾರಿಯವರು ಪದಗ್ರಹಣ ಮಾಡುವವರೆಗೂ ತಮ್ಮ ಸ್ಥಾನದಲ್ಲಿರತಕ್ಕುದು (ಭಾಧಾನ. ೨೮). [ಪದ₂+ಅವಧಿ]

**ಪದಾವನತಿ** (ನಾ). ಕಾಲುಗಳಿಗೆ ಬಾಗುವಿಕೆ,—ಎರಗುವಿಕೆ ; ನಮಸ್ಕಾರ : ವನಜಜ ಬನ್ನಿಮಿತ್ತ ಹರ ಕುಳ್ಳಿರಿಮುನ್ನತಪೀಠದೊಳ್ ಪದಾವನತಿಯಿನೇಟ್ ಮಹೇಂದ್ರ (ಜಗವಿ. ೩-೫೧). [ಪದ₂+ಅವನತಿ]

**ಪದಾವಾಸ** (ನಾ). = ಪದನಿವಾಸ : ರಾಷ್ಟ್ರಪತಿಯವರು ಬಾಡಿಗೆಯನ್ನು ಕೊಡದೆ ತಮ್ಮ ಪದಾವಾಸಗಳ ಉಪಯೋಗಕ್ಕೆ ಹಕ್ಕು ಹೊಂದಿರತಕ್ಕುದು (ಭಾಧಾನ. ೨೯). [ಪದ₂+ಆವಾಸ]

**ಪದಾವೃತ್ತಿ** (ನಾ). ಪದದ ಪುನರಾವರ್ತನೆ : ಸಮಗೊಂಡರ್ಥ ಪದಾವೃತ್ತಿ ಮತ್ತದಾವೃತ್ತಿಯೆಂಬ ಪೆಸರಂ ಪಡೆಗುಂ (ಕಾವ್ಯಾವ. ೬೫೨). [ಪದ₂+ಆವೃತ್ತಿ]

**ಪದಿ₁**, ಹದಿ₁ (ಕ್ರಿ). ೧. (ರತ್ನ ಮುಂತಾದುವುಗಳನ್ನು) ಕೂರಿಸು; ಕೆಚ್ಚು ; ಕುಂದಣಿಸು ; ಮೆಟ್ಟು : ಅಮೃತಲೋಕದ ಮಾತೆ, ಅಳಿಯದಲ್, ಬಾನ್‌ಬಾಳ ಪೆರ್ಮೆಗಳ ತಾಯಿ, ತಲೆಯಲ್ಲಿ ಪೊನ್ನ ಮುಡಿ, ಪದಿದರಿಲ ಪೆಂಪು, ಬೆಳ್ದಾವರೆಯ ಪೊಂಗಯಲ್ ! (ಹೊಂಗಳು. ೧೭-೧). **ಹದಿ₁ :** ೧. ಕೊರಳಿಗೆ ಮತ್ತು ಕಾಲಿಗೆ ಧರಿಸುವ ಆಭರಣಗಳಿಗೆ ವಜ್ರಗಳನ್ನು ಹದಿಯುತ್ತಾರೆ (ಪ್ರವಾಇ. II, ೧೩೬); **ಕೀಲಿ**, ಎದೆಯಲಿ ಹದಿಯಿರಿ–ಹೊಸ ಆಳ ಬಾಳಲಿ ಹುದಿಯಿರಿ (ಹೊಂಗಳು. ೨-೧೧). ೨. (ನೆಲಗಟ್ಟಿಗೆ ಹಾಕಲು) ಕಲ್ಲುಗಳನ್ನು ಅಥವಾ ಇಟ್ಟಿಗೆಗಳನ್ನು ಹಾಸು : ದಾರಿಯಲ್ಲಿ ಮತ್ತು ರಂಗದಲ್ಲಿ ಅಲ್ಲಲ್ಲಿ ಬಹಳ ಕಾಲದ ಹಿಂದೆ ಒರಟುಕಲ್ಲುಗಳನ್ನು ಹದ್ದಿದ್ದರು (ನನ್ನೂರು. ೧೧). ೩. ಹೂಳು ; ಹುಗಿ : ಕಪ್ಪದಲಿ ನೆರವಾಗಲೆಳಸುತ ಆಳಲನಿನ್ನೂ ಹದಿವೆವು (ಒಲುಮೆ. ೩೨-೨). ೪. ಅಗೆದು ತೆಗೆ : "ಹದಿ – ಖನನ ವಿವರಣೇ (ಹೂಳಿರುವುದನ್ನು ಅಗೆದು ಕಾಣಿಸು)" (ಶಮುಧಾ). [ದೇ.॥ ತಮಿ. ಪತಿ ; ಮಲ. ಪದಿ, ಪದಿಯುು]

**ಪದಿ₂**, ಹದಿ₂ (ನಾ). ೧. ವಾಸಸ್ಥಳ ; ಹಕ್ಕೆ : ಕಾಲುವಳಿಯ ಪದಿ ಸಹನಾಗಿ ನಿಮಗೆ ಸರ್ವಮಾನ್ಯವಾಗಿ ಕೊಟ್ಟೆವು (ಎಕ. XIV, ಗುಂಡ್ಲುಪೇ. ೧೩೨-೯ ; 1540). ೨. ನೆಲೆ ; ಆಶ್ರಯ : ಪಾದತೀರ್ಥವ ಸಲಿಸಿ ಪಾವನವಾಯಿತ ಜನ್ಮ ರೋಮರೋಮೆಲ್ಲ ರವಿಚಿನ್ನ ಗುರು ನಿಮ್ಮ ಪಾದದಲಿ ಕಂಡೆ ಪದಿಗೋಳು (ಗರತಿ. ೪೧). **ಹದಿ₂ :** ೧. ಊರ ಒಡೆಯನ ಹದಿಯಲು ಮನೆಭಾಗದಲು ತೆಱುವ ತೆಱು (ಸೌಇಇ. IX-ii, ೪೨೪-೫೨ ; 1401) ; ಪೊಳಮುಟನ ಹಳಿಯ ಹದಿಯ ಹಳ (ಎಕ. XIV, ಮಳವ. ೧೪೫-೨೦ ; ?). ೩. ಬುನಾದಿ ; ಅಡಿಪಾಯ; ತಳ : ಪದಪಿನಿಂ ಬಸದಿಗಳ ಕಿತ್ತು ಕೋಂಟೆಯ ಹದಿಗೆ ಹಾಯ್ಕಿ (ಸಿದ್ಧೇವು. ೭-೬೩) ; ಮನೆಯ ಹದಿಗೆ ಹಾಕಿರುವ ಕಲ್ಲುಗಳ ಪೊಟರೆಗಳಲ್ಲಿ ಕಿರಿಜೇನು, ದುಂಬಿಗಳು ಒಂದು ವಿಧವಾದ ಜೇನನ್ನು ಶೇಖರಿಸಿಡುತ್ತಿದ್ದುವು (ಹುಟ್ಟಿಹ. ೧೫೪) ; ಈ ಹದಿಯ ಮೇಲೆ ಸಂಘದ ಕಾರ್ಯಮಂದಿರವನ್ನು ಕಟ್ಟಿ ಬೆಳಸುವುದು ವಾಡಿಕೆ (ಹಣಪ್ರ. ೧೬೪). 'ತಳಹದಿ' ಪರಾ. [<ಪದಿ₁./ತಮಿ. ಪತಿ]

**ಪದಿ₃** 'ಪದಿನ್' ನೋ.

**ಪದಿಂಬು** (ನಾ). ಒಂದು ಬಗೆಯ ಮರ : ಸಿರಿಸಂ ಪದಿಂಬು ಕರ್ಮರ ಬೆರಸು . . . ಅಶನಿ ಕಡುಗಡಪೆಸಳ್ಗಳೆಂದೆಂಬೀ ಮರಂಗಳುಂ (ಜಟ್ಟಮ. ೧೧-೩೪). [ ? ]

**ಪದಿಕ** (ನಾ). ೧. ಕಾಲ್ನಡಿಗೆಯಿಂದ ಹೋಗುವವನು ; ಪಾದಚಾರಿ. ೨. ಪದಾತಿ ; ಕಾಲಾಳು : "ಪದಿಕಂ ಪತ್ತಿ . . . ಪದಾಜಿಗೆ ನಾಮಂ" (ವಸ್ತುಕೋ. ೮೩-೧೦). ೩. ಒಂದೇ ಒಂದು ವಿಭಾಗವನ್ನುಳ್ಳುದು. [ಸಂ.]

**ಪದಿಕೆ** 'ಪೊದಕೆ₂' ನೋ.

**ಪದಿಕೊಳ** 'ಪದಿರ್ಕೊಳ' ನೋ.

**ಪದಿಟಿ**, ಪದಿಷ್ಟೆ, ಪ್ರತಿಟ್ಟೆ, ಪ್ರದಿಟಿ, ಹದಿಟಿ (ನಾ). ೧. ದೇವತಾವಿಗ್ರಹವನ್ನು ಸ್ಥಾಪಿಸುವುದು ; ದೇವತಾಪ್ರತಿಷ್ಠೆ : 'ಪದಿಟಿಗೆಯ್' ಪರಾ. ೨. ಸ್ಥಾಪಿಸುವುದು; ಪ್ರತಿಷ್ಠಾಪನೆ : "ಪ್ರತಿಷ್ಠಾ – ಹದಿಟಿ, ಪದಿಟಿ" (ಶಮುದ. ೨೮೩ ಪ್ರಯೋ). ೩. ಗೌರವ ; ಘನತೆ ; ಹಿರಿಮೆ : "ಪದಿಟಿ–ಪ್ರತಿಷ್ಠಾ = ಗೌರವ" (ತದ್ಭಕೋ. ೨೪). **ಪದಿಷ್ಟೆ :** ೧. 'ಪದಿಷ್ಟೆಗೆಯ್' ಪರಾ. **ಪ್ರತಿಟ್ಟೆ :** ೧. 'ಪ್ರತಿಟ್ಟೆಗೆಯ್' ಪರಾ. ೪. ಒಬ್ಬ ವ್ಯಕ್ತಿಯ ಉಪಜೀವನಕ್ಕೆ ತಕ್ಕ ಏರ್ಪಾಡು ಮಾಡುವುದು : ಸುಕುಮಾರಪಣ್ಡಿತ ಪ್ರತಿಟ್ಟೆಯಂ ಮಾಡಿ (ಎಕ. XI, ಮೊಳಕಾ. ೨೪-೩ ; ಸು. 1290). **ಪ್ರದಿಟಿ :** ೨. ಮುಮ್ಮಾಡಿ ಚಿಕಪಗಾಡಯನವರ ಪ್ರದಿಟಿ ಹನುಮನ ದೊಣೆ (ಎಕ. XVI, ಮದ್ದಗಿ. ೧೧೬–

೭; ಸು. 1646). **ಹದಿಟೆ:** ೧. ಈಶಕೋಟಿತ್ರಯದ ಹದಿಟೆಗೆಯ್ದೊಲವಿಂ ವಿಧೀಷಣನ ಪಾಲಿಸಿದ (ರೇವಣ. ೨-೪). ೨. "ಪ್ರತಿಷ್ಠೆ ಹದಿಟಿ" (ಕರ್ಣಾಸಿ. ೪೯); ಸಾಮಾನ್ಯ ಕಾವ್ಯರೂಢಿಯಲ್ಲಿ ಇಲ್ಲದ ಹದಿಟಿ (ಪ್ರತಿಷ್ಠೆ)...ಮೊದಲಾದ ಅನೇಕ ತದ್ಭವಗಳು ಕಾರಣವಾಗಿವೆ(ತಪಸಿ.೧೯೭). ೩. (ಧನ ಮುಂತಾದುವನ್ನು) ಭೂಮಿಯಲ್ಲಿ ಹೂಳುವುದು: 'ಹದಿಟಿಗೆಯ್' ಪರಾ. ೬. ಅಹಂಕಾರ; ಸೊಕ್ಕು: ಕವಿತೆಯ ನಾದರಿಸದ ಹದಿಟೆಯ ಮೆರೆವನುಮರಿಯುಮೆಯಿಂ (ಸಂಸಪ. ೩೬-೯).

[<ಸಂ. ಪ್ರತಿಷ್ಠಾ]

**ಪದಿಟಿಗೆಯ್,** ಪದಿಷ್ಟೆಗೆಯ್, ಪ್ರತಿಟ್ಟೆಗೆಯ್, ಹದಿಟಿಗೆಯ್ (ಕ್ರಿ). ೧. ದೇವತಾವಿಗ್ರಹವನ್ನು ಸ್ಥಾಪಿಸು; ದೇವತಾ ಪ್ರತಿಷ್ಠಾಪನೆಯನ್ನು ಮಾಡು: ಲಿಂಗಮನುರುಭಕ್ತಿಯಿನಾ ಮಂಗಲದೊಳ್ಪದಿಟಿಗೆಯ್ದು ಪೂಜಿಸಿ (ಹಾಲಾಸ್ಯ. ೧-೩-೫). **ಪದಿಷ್ಟೆಗೆಯ್:** ೧. 'ಪದಿಷ್ಟೆಗೆಯ್ಸು' ಪರಾ. **ಪ್ರತಿಟ್ಟೆಗೆಯ್:** ೧. 'ಪ್ರತಿಟ್ಟೆಗೆಯಿಸು' ಪರಾ. **ಹದಿಟಿಗೆಯ್:** ೧. ಕೂರ್ಮೇಶ್ವರಾಖ್ಯತ್ವದಿಂ ವೇದಾತೀತ ಮಹೇಶನಂ ಹದಿಟಿಗೆಯ್ದಿಷ್ಟಾರ್ಥಮಂ ಸಾರ್ದಂ (ಹಮ್ಮಿರ. ೭-೨೮). ೨. (ಧನ ಮುಂತಾದುವನ್ನು) ನೆಲದಲ್ಲಿ ಹೂಳು: ಬಗ್ಗಿನೊಂದು ಸಿರಿಯಂ ಹದಿಟಿಗೆಯ್ವಂತು ದೇವಿಯನಿರಿಸಿ (ರಾಮಾಶ್ವ. ೧೪೯-೧೨). [ಪದಿಟಿ+ಕೆಯ್$_1$]

**ಪದಿತೂಪು** (ನಾ). ಧಾನ್ಯದ ಒಂದು ಅಳತೆ; ಹತ್ತು ಕೊಳಗ: ಮಂದುವೂರ ತೊಱುಕೊಳ್ವಲ್ಲಿ ವಿಟಿಕ್ಕೂರ್ ಪೆರಾಱ್ಕೋವರ್ ಅವಂಗೆ ಪದಿತೂಪು ಕಟಣಿ ನೆತ್ತಪಡಿ (ಎಕ. X, ಶ್ರೀನಿವಾ. ೨೦-೭; ಸು. 750). 'ಅಯ್ದೊಂಬು' ಪರಾ. [ಪದಿ$_3$(<ಪತ್ತು$_3$)+ತೂಪು(<ತೂಂಬು)]

**ಪದಿನ್,** ಪದಿ$_3$, ಪದಿರ್$_2$, ಪಧಿ, ಪನ್$_1$, ಪಯಿನ್$_2$, ಹದಿ$_3$, ಹದಿನ್, ಹನ್ (ಸಪೂರೂ). ಸಮಾಸದಲ್ಲಿ 'ಪತ್ತು' ಎಂಬ ನಾಮವಾಚಕಕ್ಕೆ ಬರುವ ಆದೇಶರೂಪ: ಕೈವರದೊಳ್ ಒನ್ದು ಮಾನ್ಯಂ ಮಣಮುಂ ಮೂಗಣ್ಡುಗಂ × ಮ್ಮಣ್ನುಮಿಪ್ಪತ್ತುಗಣ್ಡುಗಮುದುವುಂ ಪದಿನ್ಮೆಳಂ ಪಾಟುಂ ಇದಂ ಪಡೆದೋರೀಶ್ವರದಾಸರ್ (ಎಕ.X (s), ಚಿಕ್ಕಬ. ೧೦೬-೭೪; 850). **ಪದಿ$_3$:** ಒಂದೆರಡೆಂಬಿವು ಪದದೊಳ್ ಸಂದಿಸೆ ಪತ್ತರ್ಕೆ ಪನ್ನೆನಿಕ್ಕುಂ ರೂಪಂ ಮುಂದೆ ಪೆಱವೊಂದಿ ನಿಲೆ ಪದಿಯೆಂದಕ್ಕುಂ (ಶಾಪ್ಮಾವ. ೨೭೫); ಪತ್ತರ್ಕೆ ಪನ್ನೆನಿಕ್ಕುಮದುತ್ತರಕೊಂದೆರಡು ನೆಲಸೆ ಪದಿಯೆಂದಕ್ಕುಂ ಮತ್ತೊದವಿ ಮೂಱು ನಾಲ್ಕಿರೆ ಸುತ್ತೇಂ ಸ್ವರಮಿರೆ ನಕಾರವಿಧಿ ಮುಂದೆಲ್ಲಂ (ಶಮದ.೧೯೨). **ಪದಿರ್$_2$:** 'ಪದಿರ್ಕಂಡುಗ', 'ಪದಿರ್ಕೊಳ', 'ಪದಿರ್ಮಡಿ' ಪರಾ. **ಪಧಿ:** ಮೆಲೂರ ಕೆಱೆ ಕೀೞ್ ಪಧಿ ಕಣ್ಡುಗಂ ವ್ರೀಹಿಭೂಮಿ (ಇಅ. V, ೧೩೬-೨೬; 454). **ಪನ್$_1$:** ಮೇಲಿನ 'ಪದಿ$_3$' ಉಲ್ಲೇಖದ 'ಶಮದ' ಪ್ರಯೋಗವನ್ನು ನೋಡಿ. **ಪಯಿನ್$_2$:** ಸಾಸಿರಪಿರಿ ಮುಂದೊತ್ತಿ ಸಮಾಸದೊಳಕ್ಕುಂ ಪಯಿನ್ (ಶಾಪ್ಮಾವ. ೨೭೮); ಪತ್ತರ್ಕೆ ಪಯಿನ್ನೆಂದಾದತ್ತಾದೇಶಂ (ಶಮದ. ೧೯೧). **ಹದಿ$_3$:** 'ಹದಿಮೂಱು' ಪರಾ. **ಹದಿನ್:** 'ಹದಿನಯ್ದು' ಪರಾ. **ಹನ್:** 'ಹನ್ನೊಂದು', 'ಹನ್ನೆರಡು' ಪರಾ.

**ಪದಿಂಬರ್, ಪದಿಂಬರು, ಪಯಿಂಬರ್** = ಹತ್ತುಮಂದಿ,—ಜನ: ಪದಿಂಬರ್ ತರ್ಪ ಪೂಜೆಯನೊರ್ವನೆ ತರ್ಪಂ (ಪಡ್ಮಾರಾ. ೭೭-೩); ಸಂತಾಪನುಂ . . . ದುರಿತಾಸ್ತ್ರನುಮೆಂಬ ಪದಿಂಬರುಮೋರೋರ್ವರಂ ಗಱಸನ್ನೆಗೆಯ್ದು ಕಾದುವಲ್ಲಿ (ಪಂಪಾಪೂ.೧೩-೯೭ ವ); ತನಯರ್ ಪದಿಂಬರೆಸೆದರ್ (ಪರ್ಧಪು. ೧೫-೪೩); ಚಂಪಕ ಮೋಹಕರ್ ಮುಂತಪ್ಪ ಪದಿಂಬರ್ ಕುವರರ್ವೆರಸು ತಾನುಂ ಬದ್ಧದಿಂ ಯುದ್ಧಸನ್ನದ್ಧನಾದಂ (ರಾಮಾಶ್ವ. ೧೪೧-೨೮); ಪಂಚಾಣುತ್ತರೆಗಳೊಳ್ಪುಟ್ಟುವ ಪತ್ತು ತೆಱದ ಪದಿಂಬರು (ಶಾಸ್ತ್ರಟೀ. ೧೦೬-೯); ಪಯಿಮ್ಮೆ, ಪಯಿಂಬರ್ (ಶಬ್ದಾನು. ೩೬೩ ಪ್ರಯೋ). [<ಪತ್ತು$_3$]

**ಪದಿನಯ್ಗಣೆ** (ನಾ). ಹದಿನೈದು ಬಾಣ: ಪದಿನಯ್ಗಣೆಗಳಿಂ ಬಲನ ಕಾಯಮಂ ಸೀೞೆ (ಚೆಬಪು.೪೯-೧೩). [ಪದಿನ್ (<ಪತ್ತು$_3$)+ಅಯ್ಗಣೆ]

**ಪದಿನಯ್ಗೊಳ** (ನಾ). ಹದಿನೈದು ಕೊಳಗ; ಒಂದು ಅಳತೆ: ಬಸವಸೆಟ್ಟಿ ಪದಿನಯ್ಗೊಳ ನೀರ್ಮಣ್ಣು ಅಯ್ಗೊಳ ಪೂಂಬೊಲನುಂ ಪೊನ್ನಱ ಕೊಟ್ಟ ಮಣ್ಣಱಂ ಕೊಣ್ಡವರ್ (ಎಕ. IV, ಹೆಗ್ಗಡ. ೧೬-೯; 1021). [ಪದಿನ್ (<ಪತ್ತು$_3$)+ಅಯ್ಗೊಳ]

**ಪದಿನಯ್ದು,** ಪದಿನೈದು, ಹದಿನಯ್ದು, ಹದಿನೈದು (ನಾ). ಹತ್ತು ಮತ್ತು ಐದು ಸೇರಿ ಆದ ಸಂಖ್ಯೆ; ಪಂಚದಶ: ಪದಿನಯ್ದು ಕನಿಷ್ಟವರ್ (ಎಇ. XIV, ೧೯೦-೧; 725); ಸ್ವಸ್ತಿ ಸತ್ಯವಾಕ್ಯ ಪೆರ್ಮ್ಮನಡಿಗಳ ಪಟ್ಟಂಗಟ್ಟಿದ ಪದಿನಯ್ದು ವರಿಶದನ್ದು (ಎಕ. II, ೩೯೪-೫; 884?); ಇಂತು ಪ್ರಾಯೋಪಗಮನಂಗೆಯ್ದು ಪದಿನಯ್ದು ದಿವಸಂ ಮೆಯ್ಯಂ ತೊಱೆದಿರ್ದೋರ್ (ವಡ್ಡಾರಾ. ೧೦೧-೧೩); ಪದಿನಯ್ದು ಕೊಳಗ ಬೆದೆ ಗಟ್ಟಿದ್ದಯುಂ (ಎಕ. IV, ಹೆಗ್ಗಡ. ೧೬-೧೮; 1021). **ಪದಿನೈದು:** ಇಂತು ಬಾಟುತ್ತಂ ಪದಿನೈದು ಪದಿನಾಱು ವರುಷದ ಪ್ರಾಯದಾತನಾಗಿ (ಪಡ್ಮಾರಾ. ೭೬-೨೧); ಪದಿನೈದುದಿವಸಮರಸಂ ಮುದದಿಂ ಮೆಯ್ಯಱಿಯದುದಕ್ಕೆ ಪುರಜನಮೆಲ್ಲಂ ಗದಗದಗಂಪಂಗೊಂಡುದು (ಧರ್ಮಾಮೃ. ೯-೧೬೪). **ಹದಿನಯ್ದು:** ಹಂದಿ ಹದಿನಯ್ದು ಈದರೂ ಒಂದೂ ಹಯವಾಗಲಿಲ್ಲ (ಗಾದೆ). **ಹದಿನೈದು:** ಹದಿನೈದು ಕಂಗಳ ವಿಗಡರುದ್ರನು . . . ಭೀಮಪೆಸರಿನಲ್ಲೈದೆ ಜನಿಸಿದನು (ಕುಪ್ಮಾಆ. ೮-೧೨); ಕಾದಿದನು ಸಮಪಾಳಿಯಲಿ ಹದಿನೈದು ದಿನ ಪರಿಯಂತ (ತೊರರಾ. ೧-೮-೩೯).

**ಪದಿನಯ್ವರ್, ಪದಿನೈವರ್** = ಹದಿನೈದು ಜನ,—ಮಂದಿ: ಪದಿನಯ್ವರ್ (ಭಾಷಾಭೂ. ೯೦ ವೃತ್ತಿ); ಅಲ್ಲಿ ಚಿತ್ರಸೇನಾದಿಗಳಪ್ಪ ಪದಿನೈವರಿಂ ಪಿರಿಯನೆನಿಸಿ ಚಿತ್ರರಥನೆಂಬನೊರ್ವಂ . . . ಉದಯಿಸಿದಂ (ಕಾದಂಪೂ. ೭೦೮). **ಪದಿನೈದು ಕಣ್ಣುಳ್ಳ** = ಶಿವ; ಈಶ್ವರ: ಪುರವನಿಟ್ಟಿಸಿ ನೋಡುವೊಡೆ ನೆಱೆ ಮುಖಾಬ್ಜಗಳೊಳು ಪದಿನೈದು ಕಣ್ಣುಳ್ಳ ಗರಿದು ಮಿಕ್ಕವರ ಪಾಡೇನು (ಕಂಸವಿ. ೧೧-೧೪೯).

[ಪದಿನ್(<ಪತ್ತು$_3$)+ಅಯ್ದು$_2$]

**ಪದಿನಾಲ್ಕು,** ಹದಿನಾಕು, ಹದಿನಾಲ್ಕು (ನಾ). ಹತ್ತು ಮತ್ತು ನಾಲ್ಕು ಸೇರಿ ಆದ ಸಂಖ್ಯೆ; ಚತುರ್ದಶ: ಭದ್ರಬಾಹುವೆಂಬ ಮಾಣಿಯೊಂದು ಬಟ್ಟನ ಮೇಗೆ ಪದಿನಾಲ್ಕು ಬಟ್ಟನೊಂದೊಂದಱ ಮೇಗೋೞಿಯೊೞಟ್ಟಾಡುತ್ತಿರ್ಪನ್ನೆಗಂ (ಪಡ್ಮಾರಾ. ೭೩-೨೩); ಇಂತೀ ಪದಿನಾಲ್ಕು ಮನತ್ಯಂತಂ ದೃಢಹೃದಯನಾಗಿ ತಾಳ್ದಿರ್ದಂಗೆ (ಧರ್ಮಾಮೃ. ೧-೮೨); ಕೌಸಲೆಯ ಕುವರ ರಾಮಂಗೆ ಪದಿನಾಲ್ಕು ವರ್ಷಂಬರಂ ವಿಪಿನಯಾತ್ರೆ (ಶ್ರೀರಾಮಾ. ೬೫-೩೧೪). **ಹದಿನಾಕು:** ನೂಕಿತೊಂಡೇ ವಾಘೆಯಲಿ ರಥ ನಾಕುಸಾವಿರ ಬಲುಗುದುರೆ ಹದಿನಾಕುಸಾವಿರ (ಕುಪ್ಮಾಕ. ೨-೯). **ಹದಿನಾಲ್ಕು:** ಕಾದಿಹೆನು ಹದಿನಾಲ್ಕು ವರುಷವು (ತೊರರಾ.೨-೬-೩೩).

ಪದಿನಾಲ್ವರ್ = ಹದಿನಾಲ್ಕು ಮಂದಿ,—ಜನ: ಪದಿನಾಲ್ವರ್ ಪರಿವಿಡಿಯಿಂ ಮನುಗಳಾದರ್ (ಕಾಪ್ಮಾಪ. ೮).

[ಪದಿ$_3$(<ಪತ್ತು$_3$)+ನಾಲ್ಕು]

**ಪದಿನಾಲ್ಕುಜಗ**(ನಾ). ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನಲೋಕ, ತಪೋಲೋಕ ಮತ್ತು ಸತ್ಯಲೋಕ ಎಂಬ ಏಳು ಊರ್ಧ್ವಲೋಕಗಳು, ಅತಲ, ವಿತಲ, ಸುತಲ,

ರಸಾತಲ, ತಲಾತಲ, ಮಹಾತಲ ಮತ್ತು ಪಾತಾಲಗಳೆಂಬ ಏಳು ಅಧೋಲೋಕಗಳು ಕೂಡಿ ಒಟ್ಟು ಹದಿನಾಲ್ಕು ಲೋಕಗಳು : ಪದಿನಾಲ್ಕುಜಗದ ಜನಂಗಳು ಕರುಣಾನಿಧಿಯೆಂದು ನಿನ್ನ ಕೀರ್ತಿಪರು (ಮೋಹತ. ೮-೩೫). [ಪದಿನಾಲ್ಕು+ಜಗ]

**ಪದಿನಾಲ್ಕುಲೋಕ,** ಹದಿನಾಲ್ಕುಲೋಕ (ನಾ). = ಪದಿನಾಲ್ಕು ಜಗ : ಜೋಡಿಸಿ ನಭಕುಪ್ಪರಿಸಲ್ಕೆ ನಿಲ್ಲದಲ್ಲಾಡಿತು ಪದಿನಾಲ್ಕುಲೋಕ ಕೋಡಿ ಬಿದ್ದುವು ಸಪ್ತಶರಧಿ ದುಮ್ಮಾಳಿಯ ಮಾಡಿದ ಗರುಡ ವೇಗದಲಿ (ಮೋಹತ. ೪೨-೬) ; ಇವರಿಂದ ಅಧಿಕರಿನ್ನಿಲ್ಲಿಲ್ಲ ಪದಿನಾಲ್ಕುಲೋಕದೊಳ್ ಸತ್ಯ ಸತ್ಯಂ ಸತ್ಯವು (ಷತಿಲ. ೪-೯೮). **ಹದಿನಾಲ್ಕುಲೋಕ:** ಹಬ್ಬುಗೆಯ ಹದಿನಾಲ್ಕುಲೋಕದ ಮೊಬ್ಬುಗಳನೀಡಾಡಿ ನಭದೊಳಗೊಬ್ಬನೇ ರವಿ ತೊಳಗಿ ಬೆಳಗುವವೋಲು ಪಾಂಡವರ ಕೊಬ್ಬುಗಳ ನಿಲಿಸುವೆನು (ಕುಪ್ಯಾಅ. ೮-೯). 'ಚತುರ್ದಶಲೋಕ' ಪರಾ.
[ಪದಿನಾಲ್ಕು+ಲೋಕ]

**ಪದಿನಾಱು,** ಹದಿನಾರು, ಹದಿನಾಱು (ನಾ). ಹತ್ತು ಮತ್ತು ಆರು ಸೇರಿ ಆದ ಸಂಖ್ಯೆ ; ಷೋಡಶ : ಅರಸನುಮಾದಿವಸ ದಿರುಳ್ ಪದಿನಾಱುಂ ಪೊಲ್ಲ ಕನಸುಗಳಂ ಕಂಡಂ (ಪದ್ಮಾರಾ.೮೫-೨೧); ಪದಿನಾಱು ನೆಲೆಯ ಮಣಿಮಾಡದಿನೊಪ್ಪುವ ಪೊನ್ನ ರಥ (ಧರ್ಮಾಮೃ. ೮-೨೨೧) ; ಪದಿನಾಱು ದಿಡ್ಡಿ ಬತ್ತೀಸ ಬಿಲದ್ವಾರ ವಿಧುಮಿತ್ರದುಪಲದಿಂ ಬಿಗಿದ ರುಧಿರಾಪುರದಾಳುವೇರಿ (ಮೋಹತ. ೨೦-೧೪). **ಹದಿನಾರು :** ಕುಂಟಗೆ ಎಂಟು ಚೇಷ್ಟೆ, ಕುರುಡಗೆ ಹದಿನಾರು ಚೇಷ್ಟೆ (ಗಾದೆ). **ಹದಿನಾಱು :** ಇಂತೀ ಹದಿನಾಱು ತೆಱನ ಭಕ್ತಿಯನು ಚರಲಿಂಗಕ್ಕೆ ಕೊಟ್ಟು . . . ನಾನು ಪ್ರಸಾದಮುಂತಾಗಿ ಭೋಗಿಸುವೆನು (ಮಹಾದೇ. ಬ. ೯೦-೨೧೫) ; ಹದಿನಾಱಂಬು ಹಂದವು ಮತ್ತೆ ಬಳಿಸಲಿಸಿ (ಕುಪ್ಯಾಕ. ೪-೧೫) ; ಏಱಿದನು ನಡೆದು . . . ಹದಿನಾಱುಯೋಜನದುದ್ದದುಪ್ಪರಿಗೆಯನು (ತೊರರಾ. ೫-೩-೩).

**ಪದಿನಱುವರ್, ಪದಿನರುವರ್, ಪದಿನರುವರು, ಪದಿನಱುವರು** = ಹದಿನಾರು ಮಂದಿ,—ಜನ : ಸರ್ವ್ವಾಭ್ಯಂತರ ಸಿದ್ಧಿ ಅಂತಪ್ಪುದಂ ಪದಿನೆಣ್ಬರುಂ ಪದಿನಱುವರುಂ ಕಾವರ್ (ಸೌಇಇ. XI–i, ೩೮-೧೫ ; 950) ; ಜಿನಾಳಯಕ್ಕೆ ಪದಿನರುವಸ್ಸೆಟ್ಟಿಯರ ಮಹಾನಗರದ ಸಮುದಾಯದ ಸಂನ್ನಿಧಾನದೊಳ್ . . . ಕೊಟ್ಟ ಮೊಕ್ಕೆಯ ಪೊಸಪೊಂ ಗದ್ಯಾಣ ೩೫ (ಸೌಇಇ. XI–i, ೯೪-೮ ; 1059); ಪದಿನರುವರು (ಲೋಕಸ. ೧೫೩) ; ಧರ್ಮ್ಮಪ್ರೊಳಲ ಪದಿನಱುವರು(ವರ್)ಸ್ಸೆ(ಸ್ಸೆ)ಟ್ಟಿಗಳು (ಇಅ.X, ೧೮೬-೧೫ ; 1095). **ಹದಿನಾರಾಣೆ** = ಪೂರ್ತಿ; ಅಪ್ಪಟ : ಹದಿನಾರಾಣೆ ವ್ಯವಹಾರ—ಬುದ್ಧಿಯ ವ್ಯಕ್ತಿ (ಪಂಶಪ್ರ. ೨೫೪). **ಹದಿನಾಱು ಬಣ್ಣ, ಹದಿನಾರು ಬಣ್ಣ** = ಪೂರ್ಣ ; ಅಪ್ಪಟ : ತೋಱಿದನು ತಾ ಬಳಿಕವಗೆ ಹದಿನಾಱು ಬಣ್ಣದ ಪುಟದ ಚಿನ್ನಕೆ ನೂಱುಮಡಿಯೆನೆ ಹೊಳೆಹೊಳೆವ ರೂಪಕವ(ತೊರರಾ. ೩-೮-೧೪); ಹದಿನಾಱು ಬಣ್ಣದ ಸೊನ್ನೆಯ ಸರಳ್ಗಳ ಕುದಿಗಾಸಿ ನೀರೊಳಿಟ್ಟಂತೆ ಉದಿಸಿತು ಘುಳುಘುಳು ಘುಳುಘುಳು ಧ್ವನಿ ತಂಗೊಳದೊಳು ತನು ತಾಪದಿಂದೆ (ಮೋಹತ. ೯-೪೨) ; ಅವನು ಖಂಡಿತವಾಗಿಯೂ ಹದಿನಾರು ಬಣ್ಣದ ರಾಜಪುತ್ರವಂಶದವನೇ ಸರಿ (ಭಾರವೀ.೫೨).
[ಪದಿನ್(<ಪತ್ತು$_3$)+ಆಱು$_3$]

**ಪದಿನಾಱುಭಾವನೆ,** ಹದಿನಾರುಭಾವನೆ (ನಾ). [ಜೈನ] ತೀರ್ಥಂಕರತ್ವನಾಮಕರ್ಮದ ದರ್ಶನಶುದ್ಧಿ, ವಿನಯಸಂಪನ್ನತೆ, ಶೀಲವ್ರತೇಷ್ವನತಿಚಾರ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗ, ಶಕ್ತಿತಸ್ತ್ಯಾಗ, ಶಕ್ತಿತಸ್ತಪ, ಸಾಧುಸಮಾಧಿ, ವೈಯ್ಯಾವೃತ್ಯಕರಣ, ಅರ್ಹದ್ಭಕ್ತಿ, ಆಚಾರ್ಯಭಕ್ತಿ, ಬಹುಶ್ರುತಭಕ್ತಿ, ಪ್ರವಚನಭಕ್ತಿ, ಆವಶ್ಯಕಾಪರಿಹಾಣಿ, ಮಾರ್ಗಪ್ರಭಾವನೆ ಮತ್ತು ಪ್ರವಚನವತ್ಸಲತ್ವಗಳೆಂಬ ಹದಿನಾರು ಬಗೆಯ ಭಾವನೆಗಳು : ಪದಿನಾಱುಭಾವನೆಯಂ ಬಹುವಿಧಮಱಿದಹರ್ನಿಶಂ ಭಾವಿಸೆ (ಶಾಂತಿಪು. ೯-೧೧೬). **ಹದಿನಾರುಭಾವನೆ :** ಈ ತಿಂಗಳಲ್ಲಿ ಹದಿನಾರುಭಾವನೆಗಳನ್ನು ವ್ರತಸಹಿತ ಜಿನಮಂದಿರಗಳಲ್ಲಿ ಅಭ್ಯಾಸ ಮಾಡಲಾಗುತ್ತಿದೆ (ಜೈನಪ. ೫೬೦). [ಪದಿನಾಱು+ಭಾವನೆ]

**ಪದಿನೆಂಟು,** ಹದಿನೆಂಟು (ನಾ). ಹತ್ತು ಮತ್ತು ಎಂಟು ಸೇರಿ ಆದ ಸಂಖ್ಯೆ ; ಅಷ್ಟಾದಶ : ಪದಿನೆಂಟು ಧರ್ಮಶಾಸ್ತ್ರಂಗಳುಮಂ ಬಲ್ಲೊಂ ಸೋಮಶರ್ಮನೆಂಬೊಂ (ಪದ್ಮಾರಾ. ೭೩-೧೫) ; ಗದಾಯುದ್ಧಂ ಪಂಚ್ಛಿನ್ನಮಿಂತು ದಿನಂಗಳ್ ಪದಿನೆಂಟಱಿಂ ಸಮೆದುದಾ ರೌದ್ರಾಹವಂ ಭಾರತಂ (ಗದಾಯು. ೯-೩೬); ಭಕ್ತಂಗನ್ಯದೇವಸ್ಮರಣೆಯದು ಪದಿನೆಂಟು [ಪಾಠಾಂ. ಹದಿನೆಂಟು, ಇಪ್ಪತ್ತೆಂಟು]ಕೋಟಿ ವಿವರ ನರಕವಹುದು (ಬಸವು.೩-೭೩); ಪ್ರಚುರದಿ ಪದಿನೆಂಟು ರಚನೆಯ ಕಾವ್ಯಕೆ ರಚಿಸುವರಾನಂತು ಪೇಳೆ (ಭರಚ. ೧-೧೫). **ಹದಿನೆಂಟು :** ಹದಿನೆಣ್ಬು ವಿಷಯದ ದೇಸಿಯ ಕರೆದು (ಮೈಆರಿ. ೧೯೧೫, ೨೧-೧೦ ; 1047) ; ಕರ್ಣ . . . ಪವನಜನ ಘಾಯದಲಿ ಸೋಲಿದು ಬವರಮುಖದಲಿ ಹಿಂಗಿದನು ಹದಿನೆಂಟು ಸೂಳಿನಲಿ (ಕುಪ್ಯಾದ್ರೋ. ೧೩-೫೦).

**ಪದಿನೆಣ್ಬರ್** = ಹದಿನೆಂಟು ಜನ,—ಮಂದಿ : ಸರ್ವ್ವಾಭ್ಯಂತರ ಸಿದ್ಧಿ ಅಂತಪ್ಪುದಂ ಪದಿನೆಣ್ಬರುಂ ಪದಿನಱುವರುಂ ಕಾವರ್ (ಸೌಇಇ. XI–i, ೩೮-೧೫ ; 950) ; ಭೂರಮಣರಲ್ಲಿ ವಿನಿಯೋಗಮಂ ತಾಳ್ದು ಪದಿನೆಣ್ಬರ್ ಪ್ರಧಾನರೆನಿಕುಂ (ಮಂಗರಾ. ೮೧-೧೧)
[ಪದಿನ್(<ಪತ್ತು$_3$)+ಎಂಟು]

**ಪದಿನೆಂಟುದೋಷ,** ಹದಿನೆಂಟುದೋಷ (ನಾ). [ಜೈನ] ಮನುಷ್ಯನಿಗೆ ಉಂಟಾಗುವ ಕ್ಷುಧೆ, ತೃಷೆ, ಭಯ, ದ್ವೇಷ, ರಾಗ, ಮೋಹ, ಚಿಂತೆ, ಜರೆ, ರೋಗ, ಮೃತ್ಯು, ಖೇದ, ಸ್ವೇದ, ಮದ, ಅರತಿ, ವಿಸ್ಮಯ, ಜನ್ಮ, ನಿದ್ರೆ ಮತ್ತು ವಿಷಾದ ಎಂಬ ಹದಿನೆಂಟು ಬಗೆಯ ದೋಷಗಳು : ಪದಿನೆಂಟುದೋಷದಿಂ ಪಿಂಗಿದನಂತಚತುಷ್ಟಯಾತ್ಮಕಂ (ಅನಂಪು. ೩-೫೬) ; ಕಲಸಿಪ್ಪ ಪದಿನೆಂಟು ದೋಷದಿಂ ರೋಷದಿಂ ನೆಲಸಿಪ್ಪ ಸತಿಯರಂ ನೀತಿಯಿಂ ಪ್ರೀತಿಯಿಂ ಕೀರ್ತಿಪರ್ ಗುರುವೆ ನರರು (ಷತಿಲ. ೨-೫೨). **ಹದಿನೆಂಟುದೋಷ :** ಇವರಲ್ಲಿ ಕ್ಷುಧೆ . . . ವಿಷಾದ ಎಂಬ ಹದಿನೆಂಟು ದೋಷಗಳೂ ಇರುವುದಿಲ್ಲ (ಜೈನಪ. ೫೦೪). ℙ "ದೋಷ-೧೮ : (ಅ) ಅರ್ಹಂತರಲ್ಲಿರದ : ದಿಗಂಬರಸಂಪ್ರದಾಯದಂತೆ – ಕ್ಷುತ್ (ಹಸಿವು), ಪಿಪಾಸಾ (ನೀರಡಿಕೆ), ಜರಾ (ಮುಪ್ಪು), ಆತಂಕ (ರೋಗ), ಜನ್ಮ (ಹುಟ್ಟು), ಅಂತಕ (ಸಾವು), ಭಯ (ಅಂಜಿಕೆ), ಸ್ಮಯ(ಗರ್ವ). ರಾಗ, ದ್ವೇಷ, ಮೋಹ, ಚಿಂತೆ, ರತಿ, ನಿದ್ರೆ, ವಿಸ್ಮಯ, ವಿಷಾದ, ಸ್ವೇದ, ಖೇದ (ರತ್ನಕ.ದ.ಅ., ೬ ವ್ಯಾ). ಶ್ವೇತಾಂಬರಸಂಪ್ರದಾಯದಂತೆ ವೀರ್ಯಾಂತರಾಯ,— ಭೋಗಾಂತರಾಯ, ಉಪಭೋಗಾಂತರಾಯ, ದಾನಾಂತರಾಯ, ಲಾಭಾಂತರಾಯ, ನಿದ್ರಾ, ಭಯ, ಅಜ್ಞಾನ, ಜುಗುಪ್ಸಾ, ಹಾಸ್ಯ, ರತಿ, ಅರತಿ, ರಾಗ, ದ್ವೇಷ, ಅವಿರತಿ, ಕಾಮ, ಶೋಕ, ಮಿಥ್ಯಾತ್ವ (ರತ್ನಕ. ದ. ಅ, ೬ ವ್ಯಾ). (ಆ) ನಿಧನ, ನಿದ್ರೆ, ಚಿಂತೆ, ಲಜ್ಜೆ, ಕ್ಷುಧೆ, ತೃಷೆ, ವಿಷಯ, ಆಧಿ, ವ್ಯಾಧಿ, ದ್ಯೂತೋದ್ಯೋಗ, ದಾಹ, ಶೋಷ, ರತಿ, ಸ್ವೇದ, ಕೋಪ, ಶೋಕ, ಉದ್ಭ್ರಮೆ, ಭಯ (ಆದಯ್ಯ. ೨೬೧). (ಇ). ನೋ. ಕಾವ್ಯದೋಷಗಳು-೧೮" (ಶ್ರೀವತ್ಸ. ೨೧೩). 'ಅಷ್ಟಾದಶ ದೋಷ' ಪರಾ. [ಪದಿನೆಂಟು+ದೋಷ]

**ಪದಿನೆಂಟುವರ್ಣ** (ನಾ). ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಲಿಂಗವಂತ, ಬಣಜಿಗ, ಗಂಗಡಿಕಾರವೊಕ್ಕಲಿಗ, ಅಗಸ, ಕೆಲಸಿಗ, ಕುರುಬ, ಕುಂಬಾರ, ಕಟುಕ, ಬಡಗಿ, ಅಕ್ಕಸಾಲೆ, ತೊರೆಯ, ಉಪ್ಪಾರ, ಬೆಸ್ತ, ಹೊಲೆಯ ಮತ್ತು ಮಾದಿಗರೆಂಬ ಹದಿನೆಂಟು ಬಗೆಯ ಜಾತಿಗಳು : ಮಿಕ್ಕಿನ ಲೋಕದೊಳು ಪದಿನೆಂಟುವರ್ಣಾನೀಕರೆಲ್ಲಂ ಭಕ್ತಲೋಕವೆ ಕುಲವಲಾ ದಿಟಕೆ (ಬಸವು. ೫೫-೨೦). 'ಅಷ್ಟಾದಶ ಜಾತಿ' ಪರಾ. [ಪದಿನೆಂಟು + ವರ್ಣ]

**ಪದಿನೇೞ್**, ಪದಿನೇೞು, ಪನ್ನೇಳು, ಹದಿನೇಳು, ಹದಿನೇೞು (ನಾ). ಹತ್ತು ಮತ್ತು ಏಳು ಸೇರಿ ಆದ ಸಂಖ್ಯೆ ; ಸಪ್ತದಶ : ಅವರ ಮಗಂ ತಿಪ್ಪಯ್ಯನೆಪ್ಪೊ ಪದಿನೇೞ್ಮನಿಸಂ ಬೆರಸಿ ಕಾಳಗದೊಳ್ ಸತ್ತು (ಎಕ. V, ಅರಕ. ೬೧-೬ ; 920) ; ಮೊದಲಿಂದಂ ತುದಿಯೆಯ್ದೆ ಸಂದ ನರಕಾಯುಷ್ಯಾಬ್ಧಿ ಕೇಳ್ . . . ಪದಿನೇೞುಪ್ಪತ್ತೆರಡು ಮೂಱು ಪೆರ್ಚಿದ ಮೂವತ್ತೆನೆ (ಆದಿಪು. ೫-೯೩). **ಪದಿನೇೞು :** ನಕಾರಕ್ಕೆ-ಪದಿನೈದು ಪದಿನಾಱು, ಪದಿನೇೞು (ಶಮದ.೧೯೨ ಪ್ರಯೋ). **ಪನ್ನೇಳು :** ಗಡಿಂಬದ ಕೋಲೊಳ್ ಕೊಣ್ಡು ಕೊಟ್ಟ ಮತ್ತರೆರೆ ಪನ್ನೇಳು (ಸೌಇಇ. XI-i, ೯೭-೩೧ ; 1062). **ಹದಿನೇಳು :** ತ್ರೇತಾಯುಗ ಹದಿನೇಳು ಲಕ್ಷ ಇಪ್ಪತ್ತೆಂಟುಸಾವಿರ ವರುಷದಲ್ಲಿ ಸೇತುರಾಮೇಶ್ವರದೇವರು ಮೂಲಸ್ಥಾನ (ಅದಪ. ೪೬-೧೩೧) ; ಸೀಳಿದನು ಸೌಬಲನೊಳಿಪ್ಪತ್ತೇಳನಾ ಮಾದ್ರೇಶರೊಳು ಹದಿನೇಳನು (ಕುಮಾವ್ಯಾ.ದ್ರೋ. ೬-೪೬). **ಹದಿನೇೞು :** ವಿಷಮ ಪದಯುಗ್ಮಕ್ಕೆ ಸಸಿನೆ ಹದಿನೇೞು (ಛಂದೋಂಬು. ೬. ೫-೩೨೫). [ಪದಿನ್(<ಪತ್ತು$_3$)+ಏೞ್$_2$]

**ಪದಿನೇೞು** 'ಪದಿನೇೞ್' ನೋ.

**ಪದಿನೈದು** 'ಪದಿನಯ್ದು' ನೋ.

**ಪದಿವು** (ನಾ). (?) : ಈನ್ತಿವಱ ಪದಿವುಂ ಹಾರಣೆ ಮೊದಲಾಗೆ (ಬೊಂಕಶಾ. ೧೯೩೫, ರಾಣಿಬೆನ್ನೂರು. ೮-೨೧ ; 955). [ ? ]

**ಪದಿಮೂಱು**, ಹದಿಮೂರು, ಹದಿಮೂಱು (ನಾ). ಹತ್ತು ಮತ್ತು ಮೂರು ಸೇರಿ ಆದ ಸಂಖ್ಯೆ ; ತ್ರಯೋದಶ : ಅನಂತ ವೀರ್ಯನುಂ ರತ್ನಪ್ರಭೆಯುಂ ಧರ್ಮೆಯುಮೆಂಬ ಮೊದಲ ನರಕದ ಪದಿಮೂಱುಂದ್ರಕಂಗಳೊಳ್ . . . ಪುಟ್ಟಿದಂ (ಶಾಂತಿಪು. ೪-೧೧೯ ವ) ; ರತ್ನತ್ರಯಕ್ಕೆ ಕಾಪಾಗಿ ಬಳಸಿದ ಕೋಂಟೆಯಿದೆನಿಸಿರ್ಪ ಪದಿಮೂಱು ಚಾರಿತ್ರಮುಮಂ (ಧರ್ಮಾಮೃ.೧-೧೬೦). **ಹದಿಮೂರು :** ಈ ಪುಸ್ತಕದ ಬೆಲೆ ಹದಿಮೂರು ರೂಪಾಯಿ (ರೂಢಿ). **ಹದಿಮೂಱು :** ದಿವಸ ಹದಿಮೂ[ಪಾಠಾಂ. ನಾ]ಱಱಲಿ ಕೈಕಾಭವನನೊಡಬಡಿಸಿದರು (ತೊರರಾ. ೨-೬-೮).

**ಪದಿಮೂವರ್, ಹದಿಮೂವರ್** = ಹದಿಮೂರು ಜನ,-ಮಂದಿ : ಅವರೊಳು ತೀರಸರುಮೆನೆ ಬಿರಿದೆಸೆವ ಪದಿಮೂವರುಂ ತಾವೆಲ್ಲರಂ ನಿಲಿಸಿ (ಬಸವು. ೫೧-೬೦) ; ಆದಿಯಲರಸಿಯರು ಹದಿಮೂವ[ಪಾಠಾಂ.ಮುವ] ರಾದರು ಮರಮರೀಚಿಸುತಂಗೆ ದಕ್ಷಮುನೀಂದ್ರತನುಜೆಯರು (ತೊರರಾ. ೩-೧-೩೯). [ಪದಿ$_3$(<ಪತ್ತು$_3$)+ಮೂಱು]

**ಪದಿಮೊಗ** (ನಾ). ಹತ್ತುಮುಖಗಳು.

**ಪದಿಮೊಗದವಂ** = ಹತ್ತುಮುಖಗಳುಳ್ಳವನು ; ರಾವಣ : ಇವರೊಳ್ ಪಿರಿಯನೊರ್ವಂ ಸಾಸಿರಮೊಗದವಂ, ಕಿಱಿಯಂ ಪದಿಮೊಗದವಂ (ಅದ್ಭುತ. ೪೦-೨). [ಪದಿ$_3$(<ಪತ್ತು$_3$)+ಮೊಗ]

**ಪದಿಯಡಿ** (ನಾ). (?) : ಸತ್ಯಾಶ್ರಯದೊಳ ಸಗರಕ್ಕೊಲಲ್ಲಿ ತಳಱಱಿ ಪದಿಯಡಿಯೊನ್ದು ಬೋಮಟ್ಟಿ ಪದಿಯಡಿಯೊನ್ದು (ಕಇಇ.೮೬-೬೧-೪೬; ಸು. 932). [ ? ]

**ಪದಿಯರಕ್ಕ** (ನಾ). (?) : ಪದಿಯರಕ್ಕರ ಜೋಳಯ್ಯಗವುಣ್ಡರ ಮಗಂ ಪಲಯ್ಯಗವುಣ್ಡರ ತಂಗೆ ಮಣ್ಣಿಯಬ್ಬೆ (ಎಕ. IX, ಹೊಸಕೋ. ೧೦-೬ ; 1023). [ ? ]

**ಪದಿಯಳಿ** (ನಾ). ಒಂದು ಸ್ಥಳದ ಹೆಸರು (?) : ಸತ್ಯವಾಕ್ಯ ಪೆರ್ಮ್ಮಾನಡಿಗಳ ಪೃಥುವೀರಾಜ್ಯಂಗೆಯ್ಯ ಬೂತರಸ ತೊಱಿಕಾರಟ್ಟಿಯಂ ಪದಿಯಳಿಯಂ ನೆಲೆಗೂರು ಮೊಗಪೆ ಅಳಿಯುಮ ಬಿಟ್ಟ (ಎಕ. IV, ಗುಂಡ್ಲುಪೇ. ೯೪-೪ ; ಸು. 890). [ ? ]

**ಪದಿರ್**$_1$, ಪದರು$_2$, ಪದಿರು, ಪದುರು, ಹದರು$_1$, ಹದಿರ್$_1$, ಹದಿರು$_1$, ಹದುರು (ನಾ). ೧. ಎರಡರ್ಥವುಳ್ಳ ಮಾತು ; ದ್ವಂದ್ವಾರ್ಥದ ನುಡಿ : ಒರ್ವ ಜಾರೆ ಮನೆಯವರ್ಗಂಜಿ ಮಹೋತ್ಸಾಹದಿಂ ಪುದಿದ ತಮವಂ ಪದಿರಿಂ ಪಾಡಿದಳ್ (ಗಿರಿಕ. ೪-೬೦ ವ). ೨. ಒಗಟಿಯಂಥ ಮಾತು : ಯಮದಂಡನೆಂದಂ ದೇವಾ ನೀಂ ಗೆಲ್ದೆಯಾಂ ಸೋಲ್ತೆನುಂ ಸತ್ತೆನುಮೆಂದಿರ್ವರ್ ಪದಿರಿನಿಂ ನುಡಿವ ನೂಱ್ಮಾತುಗಳಂ ಕಾಪಿನವರುಂ . . . ಕೇಳ್ದು (ವಡ್ಡಾರಾ. ೧೨೫-೧೦). ೩. ಚಮತ್ಕಾರದ ಮಾತು ; ಜಾಣ್ಮೆಯ ನುಡಿ ; ಚತುರೋಕ್ತಿ : ಮದಮಾನಸಮೆಱಕಂ ಜಾಣ್ಮೆದಿರೆಂಬುವನಱದು ತನ್ನ ಕೊಡಗೆಳ್ಗಿಡೆಗುನ್ನದಕರಿಯುಂ ಬರ್ದಯಮಂ ಮುದದಿಂ ಶ್ರೀ ರೇಚನೃಪತಿ ಬಸವಮಾಗಿಸುವಂ (ಮುದತಿ.೧-೨೩) ; ಅಲಸಿಕೆ ನೋಟದೊಳ್ . . . ಪೊಲೆಗೆಳೆ ಸೋಲದೊಳ್ ಪದಿರೊಳೊತ್ತಿದಿರೊಳ್ ಪಲಮಾತು ಮಾನದೊಳ್ ಕಲಿತನಮಾಗದಂತಬಲೆ ವರ್ತಿಸಿದಳ್ ಕವಿತಾವಸಂತನೊಳ್ (ಅರ್ಧನೇ. ೫-೭೦) ; ಪದಿರನಾಡುವ ನೂಟ್ನುಡಿ ದುಷ್ಟಚೇಷ್ಟೆಯಂ ಮೆಱೆಯಿಪ ತಮ್ಮ ಭಂಗಿ ಮಱಿಮಾಟ ಮನೋಜಸುಖಕ್ಕೆ ಸಂತತಂ ಮಱುಗುವ ಚಿತ್ತದಿಂ ರಜನಿರಂಜನಮಾದುದು ಬಂಧಕೀಜನಂ (ಸೂಕ್ತಿಸು. ೮-೮೫) ; ರಾಗದೋವರಿ ಪದಿರ ಪಾಳೆಯಂ . . . ಎನಿಪು ದಂಗಜನ ಘಾರಾಘಾರಿ ರಾಜಿಸುವ ಸೂಳೆಗೇರಿ (ಪದ್ಮರಾ. ೮-೮೬). ೪. ಸಂಕೇತ ; ಸಂಜ್ಞೆ ; ಸೂಚನೆ : ಪದನಱವಂಯೂಱ ಲೇಖಾಚ್ಛಲನಂಗುಲಿ ಪ್ರಣಾಳಿಕೆಗಳೊಳ್ ತಿಳಿವಾಲ ಪೊನಲಂ ಬಿಟ್ಟು ಬಿನದದಂಚೆಗಳನಿಂಚರದ ಪದಿರೊಳ್ ಕರೆವ ಪದಪಯೋಜಲಕ್ಷ್ಮಿಯ ಮೃದುನಿನದ ಮೆನಿಸಿ (ಪರ್ಧಪು. ೭-೯ ವ). ೫. ಅನೇಕ ಬಗೆಯ ಧ್ವನಿಗಳು ; ನಾದವೈವಿಧ್ಯ : (೬). ೬. ಧ್ವನಿ ; ನಾದ : 'ಪದಿರಿಕ್ಕು' ಪರಾ.

**ಪದರು**$_2$ ೭. ಪರಸ್ಪರ ವಿರೋಧ ; ಇಬ್ಬಗೆ : ಬಯಲು ಬಯಲು ಬೆರೆದಲ್ಲಿ ಮೇರೆಯುಂಟೆ ಅಯ್ಯಾ ಕ್ಷೀರ ಕ್ಷೀರವ ಕೂಡಿದಲ್ಲಿ ಪದರುಂಟೆ ಅಯ್ಯಾ (ಅಖಂಡೇ. ೩೪೧-೫೬). **ಪದಿರು :** ೧. ಇವನಿಲ್ಲನಿಂದು ಬಾರಂ ಘನತಿಮಿರಮಿದಪ್ಪುದಕಟ ನೇಹಮದಿಲ್ಲಂ ಮನೆಯೊಳ್ಕೊಡರಿದೆ ಪೋದುದು ಜನರಹಿತಂ ನೆರೆಯಿದೆಂದು ಪದಿರಿಂ ನುಡಿದಳ್ (ರಾಜಶೇ. ೧೧-೩೨) ; ಸೀರೆಣಿಗೆ ಕಿವಿಯೋಲೆ ತಾಳಿ ಮೂಗುತಿಯೆನೆ ಅರೆನಲಿ ಪದಿರ ಪುರುಳರಿವು ದೊಡ್ಡಂಗೆ (ಕಾಲೂರ. ೫೨-೬೮). ೪. ಪದಿರಿನೋವರಿಯ . . . ಭಾವದ ಸುಗ್ಗಿಯಪ್ಪುದೆಲೆ ಸುದತಿಯಾಂ ಪೇಳ್ದ ಜನವಶ್ಯಮಿಳಿಗೆ (ಜನವ. ೧೩-೭೯) ; ಒರೆದಳ್ ಪದಿರಿಂದಂ ಕಡೆವರೆಯದ ಬರ್ದೊದವಿದ ಕಾಮಿನಿ ತಡೆಯದೆ ವಿಟರೊಡವೆಯೆನಿಪ ನಿಧಿಕನದಂಜನಮೆನೆ ಸುತೆಗೆ (ಉದ್ಭದೇ. ೪-೩೯). **ಪದುರು :** ೩. [ಇನ್ದಿ]ಗಿಲ್ಲಿಂದದಮೆ ಪರ್ವಿತೆಲ್ಲ ಜಗಕಂ ಜಾಣ್ಪೊಂಗಿದತ್ತಿತ್ತಣಿಂ ಪದುರೀ ತಾಣದೆ ಬಲ್ತುದು (ಚಿಕವಿ. ೬-೬೫).

**ಹದರು**$_1$ : ೩. ನಿಮಗೆ ಹೊತ್ತು ಹೋಗದೆ . . . ಎನ್ನ ಕೂಡೆ ಹದರು ಚದುರಿನಿಂದೆ ವೇಳೆಯವ ಕಳೆವರೆ ಹೇಳಾ (ಅಖಂಡೇ. ೩೨೬-೨೬). ೮. ವ್ಯಂಗ್ಯವಾದ ಮಾತು ; ಚುಚ್ಚುಮಾತು ; ಮೂದಲಿಕೆ ; ವಿಡಂಬನೆ : ಗುರುಹಿರಿಯರಂ ಕಂಡು ಕನಸಿನೊಳ್ನಮಿಸ ಕಟಕಿಯ ನಾಡುತಂ ಹದರಿನಿಂ ಪರಶಿವನ ಮಂತ್ರ ರುದ್ರಾಕ್ಷಿಯ ವಿಭೂತಿಯಂ

ಉರುಭಾಳ ಜಿಹ್ವೆಯೊಳ್ಧರಿಸನೊಮ್ಮೆಯುಂ (ಪ್ರಭುಪು. ೩-೬೭). **ಹದಿರ್**$_1$: **೩.** ಹಲವು ತೊಡಿಗೆಗಳ ಸೀಗುರಿಯ ಚಾಮರಂಗಳ ಹದಿರ ಹಾಡುವಾಡುವ ಸ್ತ್ರೀಯರ (ಹಚಕಾ. ೪-೩೯); ಸೊಕ್ಕುಜವ್ವನೆಯರಾಡುವ ಹದಿರ್ ಚದುರುಗಳ ಹಕ್ಕೆ ಮೋಹನದಿಕ್ಕೆಯೆನಿಪ ವೇಶ್ಯಾಶ್ರಯಂ ಮುಂದೆ ಕಡು ಚೆಲ್ವಾದುದು (ಚೆಬಪು.೧೧-೩೭). **೪.** ಪಶುಮೃಗಪಕ್ಷಿಜಾತಿಗಳಲಿಂಗಿತಮಂ ಹದಿರಂ ಸಮಂತು ಭಾವಿಸಿ (ಪುದಕಿ. ೧೧-೨೭); ಅರಲಂಬಿಂ ಗಜುಸನ್ನೆದೋಜುವನನಂಗಂ ಚಂದ್ರಮಂ ಕೂಂಕುವಂ ಕರದಿಂ . . . ನಲ್ಲನಗಲ್ದೊಡಿನ್ನುಗಿದು ತಾವೇಗೆಯ್ವೊಡಂ ಪಲ್ಲವಾಧರೆ ಕೇಳಂಜು ವಳಲ್ಲೆನೀ ಹದಿರನೋಪಂ ಕಾಣ್ಣುಮೆಂದಂಜುವೆಂ (ಅನಂಪು. ೮-೨೧). **ಹದಿರು**$_1$: **೩.** ಹದಿರು[ಪಾಠಾಂ. ಹಾದರೆ] ಸೂಳೆಗೆ ಕಟಕಿ ವಿದ್ಯಾ ವಂತಂಗೆ ಮುದ್ದುಮರ ಹಾವಡಿಗಂಗೆ ಗೆಲ್ಲ ಸೋಲದ ಮತ್ಸರ ಕೊಲ್ಲಟಿಗಂ ಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ (ಚನ್ನಪ. ಕ. ೧೬೫-೩೬೦); ಒಳಸರಿದು ಹದಿರನು ನುಡಿವ ಜಾರೆಯನರಸನೀಕ್ಷಿಸಿದ (ಜೀವಂಚ. ೧೭-೧೮); ಹದಿರು ಚದುರು ಗನ್ನಗತಕ ಬಯಲಡೊಂದು ಕದನಕರ್ಕಶವನು ಮಾಡಿ ಹೃದಯವ ಕರಗಿಸಿ ಧನವ ಸೆಳೆದುಕೊಂಬ ಚದುರೆಯುವರನೇನೆಂಬೆ (ಅಂಜಚ.೩-೧೨೭); ನಲಿದು ಬಂದೆನ್ನ ಕಾಲ್ಗೆಜಗಬೇಕೆಂದು ನಲ್ಲಳ ಕೂಡೆ ಹದಿರನಾಡಿದನು (ಭರಚ. ೧೪-೧೦೦); ಹದಿರು ಚದುರಿನಾಗರ ಠೌಳಿಯ ಪೇಟೆಯೊದವಿದ ಮೋಹನಶಾಲೆ ಮದನನ ಬೆಳ್ಮಾರವಲೆಯಂತೆ ರಾಜಿಸಿ ಸದನಗಳೆಹುವು ಸೂಳೆಯರ (ಕಂನವಿ. ೨-೮೭). **೪.** ಕಂಗಳೆಂದೆಂಬ ಬಲೆಗಳ ವಿಸರದಿಂ ಕಟಾಕ್ಷಂಗಳೆಂದೆಂಬ ಬಿಡುಬಾಣಂಗಳಿಂ . . . ಹಿಂಗದೆಳೆನಗೆಗಳೆಂದೆಂಬ ತೆರೆಯಿಂ ವೈಶಿಕಂಗಳೆಂದೆಂಬ ನಾನಾ ಹದಿರಿನಿಂ ವಿಟಜನಂಗಳೆಂಬ ನರಮೃಗ ಬೇಂಟೆಯಾಡುವ ವಾರಾಂಗನೆಯರೆಸೆದಿರ್ದರು (ತುರಂಗ. ೭-೨೧). **೭.** ದ್ರೋಹಚಿಂತನೆಯನ್ನು ರೇಮಟಿ ವೇಂಕಟಾದ್ರಿನಾಯಕನು ಮಾಡಿರು ವನೆಂದು ಅಲ್ಲಿಯ ಜನರಿಗೆ ಹೇಳಿ, ಹದಿರನ್ನು ಹುಟ್ಟಿಸಿ (ಸಂಗುಂ. ೮೭-೧೭). **೮.** ಮದನಹರ ಸೋಮಯ್ಯನೇನ ಬಂದಪನೆಂದು ಹದಿರೊಳ ಣಕದೊಳು ಕಟಕಿಯೊಳು ಗುಡಿಯಂ ಕಟ್ಟಿಸಿದ ಮಹಿಮರೇ (ಸೋಮಚ. ೪-೬೨); ಅಡಬಹುದೇ ಹದಿರ ಅರಸನೋಲಗದಲ್ಲಿ (ಪ್ರೌಢರಾ. ೧-೪೪); ಸದಮಲ ಮಲಪ್ರಹರಿ ಪರಿದು ಬೆಟ್ಟಕ್ಕಾಂತು ಹೋದಳೀ ದಕ್ಷಿಣದೆಸೆಗೆ ಪದವಿಡಲು ಬೆಟ್ಟದ ತುದಿಯಂ ಮಯೂರ ಕಂಡು ಹದಿರಿಂದ ಕೂಗಿತ್ತಹೋ ಗಂಗೆ ಬೆಟ್ಟಕ್ಕೆ ಹೆದಜು ಬೆಳುವಲದೇಶಮಂ ಪೊಕ್ಕಳೆಂದು (ಗುರುಚಾ. ೧-೧೬). **೯.** ರೀತಿ; ಬಗೆ: ಕುದುರೆಯ ಚದುರೆಯ ಹದಿರೆರಡು ಒಂದಯ್ಯ (ಸರ್ವಜ್ಞ. ೧೭೬೭). **೧೦.** ಚಮತ್ಕಾರ; ಜಾಣ್ಮೆ: ಹಿಡಿವ ಬಿಡುವೊಬ್ಬುಳಿಗೆ ತಹ ಬಲನೆಡಕೆ ಹಾಯ್ಕುವ ಸುತ್ತಲೊತ್ತುವ ತಡೆವ ನಡಸುವ ಸೆಳೆವ ತಿರುಹುವ ಹದಿರ ಜೋಕೆಯಲಿ ಗಡಣಿಸಿದನವನಿಭಪತಿ ಯನವಗಡಿಸಿ ನೂಕಿದೊಡೆ (ಕುಮ್ಮಾದ್ರೋ. ೩-೧೧). **ಹದುರು**: **೩.** ಹದುರಿನ ನೆಲ ಚದುರಿನ ಚಾರಚಾವಡಿ ಮುದದ ಮಂದಿರ ಮೋಹನದ ಸದನವೆನಿಪ ಸೂಳೆಗೇರಿಯಿತ್ತರದೊಳಗದ್ಭುತವಾಗಿರುತಿಹುದು (ಅಂಜಚ. ೩-೯೧); ಓರೋರ್ವರು ಸವಿಸವಿಯ ಚದುರ ಹದುರಿನ ಮಾತುಗೊಡುವ ಸುರತವ ನೋಡಿಪ್ಪು ತಡವಾಡಿ ಬಂದನೊಳರಸ ಮುಂಗುಳ್ನಗೆವೆತ್ತ (ನಾಗಕು. ೩೧-೧೨೯); ಹದುರಿನೆಡೆ ಗನ್ನಗತಕದ ಪಕ್ಕೆ . . . ರಾಗದ ಭೂಮಿಯಿದೆಯಲ್ಲದಿಲ್ಲೆಂಬ ಪಂಪಿಗಾಸ್ಪದವಾದುದಾ ಕೇರಿಕೇರಿಯೆಲ್ಲ (ರಾಘಚ. ೭-೨೫); ಚದುರತನಕೆ ತಾಣ ಹದುರಿನ ಹಸರ . . . ಬಿಂಕದ ವೀದಿಯಿಂ ಮೈಯ ಸದನದಿಂದೆಸೆವುದಾ ಕೇರಿ (ಕರಚಾ. ೬-೮). **೮.** ಮೋಳೆನಗೆಯ ಕಟಕಿಗಳ ಹದು[ಪಾಠಾಂ.ದಿ]ರಿನ ಹಳಿವುಗಳ . . . ವಿಬಾಸೆ ಯೊಳೀವ ಬೆರಳ್ಗಳ ಕರ್ಣ ಸ್ಪೆಂಧವ ಖಳತಿಲಕ ದುಶ್ಶಾಸನಾದಿಗಳಿದ್ದರೀಚೆ ಯಲಿ (ಕುಮ್ಮಾಸ. ೧೪-೨೯); ಕುಥವ ಬಿಜ್ಜಳ ಕೇಳು ಶಿವಶರಣರೊಳು ನೀನು ಹದುರ ನುಡಿದುದಱಿಂದಲಿಂತಾಯ್ತು ತಿಳಿದು ಸದುಹೃದಯ ದಿಂದಾತನಡಿದಾವರೆಗೆ ಮಣಿಯೆ ಪರಿಹರಿಪ ಪೋಗೆನಲು (ಪ್ರೌಢರಾ. ೧೦-೪೧); ಹಲ್ಲು ವಿಷಂ ಫಣಿಪತಿಗಂ ಎಲ್ಲ ವಿಷಂ ದುರ್ಜನಂಗದೆಂತೆನೆ ಪೇಳ್ವೆಂ ಹಲ್ಲಿಂ ಹದುರಿಂ ಸೊಲ್ಲಿಂ ಕೊಲ್ಲದೆ ಮಾಣ್ದಪನೆ (ನೀತಿಸಾ. ೫೧೬).

**ಪದಿರ ಪಟಿ** = ಯಾವುದಾದರೂ ಸಂಕೇತವನ್ನು ಸೂಚಿಸುವ ವಾದ್ಯ,—ಹರೆ: ಮತ್ತಂ ಸಸಂಭ್ರಮಪ್ರಚಳಿತ ಸಮದಗಜಘಟಾ ಘಂಟಾರವಂಗಳಿಂದಂ ತುರಂಗಮಹೇಷಿತಂಗಳಿಂದಂ ಮಹಾಸಾಮಂತರ ಪದಿರ [ಪ][ಪಾಠಾಂ. ವ]ಟಿಗಳಿಂದಮುಗುರ್ವಾಗೆ (ಪಂಪಭಾ.೯-೧೦೪ ವ); ಇತ್ತ ಚಕ್ರವರ್ತಿ ಕುಲಧನಂಗಳುಂ ರಾಜ್ಯಚಿಹ್ನಂಗಳುಮುಱುದುಱುದ ಮಣಿಕನಕಾದಿ ಸಾರದ್ರವ್ಯಂಗಳಂ ವ್ಯಯಸಾಧ್ಯಸಾಧುವಾದ ಪುಣ್ಯನಿಮಿತ್ತ ಮನೇಕಮಾಗಥವಂದಿಬೃಂದಾರಕಬೃಂದಕ್ಕಿತ್ತು ನಾನಾವಿಧದ ಪದಿರ ಪಟಿಗಳೆಸೆಯೆ . . . ಪೊಱಮಟ್ಟು (ಶಾಂತಿಪು. ೩-೧೦೭ ವ); ತಂತಮ್ಮ ಮೊನೆಯ ನಾಯಕರ ಬಿರುದಿನ ಬೀರವದ್ದಳೆಯ ಪದಿರ ಪಟಿಯ ಕಹಳೆಯ ಕಳಕಳಂ ಕಿವಿ ಶಬ್ದಂಗಿಡೆ (ಪಂರಾಮಾ. ೧೩-೩೪ ವ); ಅಗಳೆರಡುಮೊಡ್ಡು ಗಳ ಮೊನೆಗಳೊಳ್ ತಂತಮ್ಮ ಬಿರುದಿನ ಬೀರವದ್ದಳೆಯ ಪದಿರ ಪಟಿಗಳುಂ ನೆಲಂ ಮೊಬಗಿದಂತೆ ಮೊಬಗೆ (ನೇಮಿಪು. ೧೧-೧೪೮ ವ). **ಹದುರ ನುಡಿ** = ಚಮತ್ಕಾರದ ಮಾತು; ಚತುರೋಕ್ತಿ: ಸರಸನುಡಿ ಮುಂರುಕು ನುಡಿ ಹದುರ ನುಡಿಯು . . . ಟವುಳಿನುಡಿಗಳಿಂ ಪುರುಷರನು ಬೆಗಡು ಗೊಳಿಸುವ ಬನ್ನಣೆಯ ನುಡಿಯ ಭಾಮೆಯರು ಬರುತಿರ್ದರಿಕ್ಕೆಲದೊಳು (ನಪಮೋ. ೨೪-೧೫).

[ದೇ.॥ ತಮಿ. ಪುತಿರ್; ತುಳು. ಪದರ್; ತೆಲು. ಪದರು]

**ಪದಿರ್**$_2$ 'ಪದಿನ್' ನೋ.

**ಪದಿರಿಕ್ಕು**, ಹದರಿಕ್ಕು$_1$, ಹದಿರಿಕ್ಕು (ಕ್ರಿ). **೧.** ಧ್ವನಿ ಮಾಡು; ಸಪ್ಪಳು ಮಾಡು: ಬಟುಕ್ಕೆ ಪುಳಂದಂ ಮರಮುನಿಱುಕವಸರಮುನಾ ನಱುದು ಪದಿರಿಕ್ಕಲೊಡಂ ಪವನಜವದಿಂ ಗಗನಕ್ಕೆ ನೆಗೆದು ಪೋಗಿಮೆನೆ (ಪಂಚತಂ.೨೯೦-೧೨);"ಸೂಚಿಸು, ಸಂಕೇತದ ಮಾತುಗಳನ್ನಾಡು" (ಪ್ರಭಣ್ಣ). **ಹದರಿಕ್ಕು**$_1$: **೨.** ಮೂದಲಿಸು; ಕಡೆಗಣಿಸು: ಎಲ್ಲಿಗೆಲವೋ ಹೋಗದಿರು ಕಪಿ . . . ನಿಲ್ಲೆನುತ ಹದರಿಕ್ಕಿ ಹೆಡಕನು ಘಲ್ಲಿಸಲು (ತೊರರಾ. ೫-೧-೨); ದಿವಿಜರಿಪು . . . ಮಾಯಾಯುವತಿಯಂ ಹದರಿಕ್ಕಿ ನುಡಿದನು ಮನದ ಕಡುಹಿನಲಿ (ಅಂಬಿಕಾ. ೪೨-೧). **ಹದಿರಿಕ್ಕು**: **೨.** ರೋಷದ ಬಣಿತೆಯಂ ಹದಿರಿಕ್ಕಿ ಶಕ್ರನ ಗದರಿ ಗರ್ಜಿಸುತಿ . . . ಸಾರೆನುತ ತೆಗೆದೆಚ್ಚನಾ ದೈತ್ಯ (ಅಂಬಿಕಾ. ೨೦-೨೫).

[ಪದಿರ್$_1$+ಇಕ್ಕು]

**ಪದಿರು** 'ಪದಿರ್$_1$' ನೋ.

**ಪದಿರುಮಾತು**, ಹದಿರುಮಾತು (ನಾ). ಚತುರೋಕ್ತಿ; ಚಮತ್ಕಾರದ ಮಾತು: ಪದಿರುಮಾ[ಪಾಠಾಂ. ಸತಿಯ ಮಾ]ತುಗಳಾ ಪೊಸ ಗಾಡಿಯೆಂಬಿವಂ ಜಾಣಿಸಿ ಕಾಣ್ಬುದೇ ನರಕಮಲ್ತೆ (ಶಂಕಶ. ೬೯). **ಹದಿರುಮಾತು**: ಜಾಣಂ . . . ಲೋಲೆಯಂ ಹದಿರುಮಾತಿಂ ಜಟಿ ದನು (ಚೆಬಪು. ೧೦-೪೭ ಅ). [ಪದಿರು(<ಪದಿರ್$_1$)+ಮಾತು$_1$]

**ಪದಿರ್ಕಂಡುಗ** (ನಾ). ಹತ್ತುಖಂಡುಗ: ಸ್ವಸ್ತಿಶ್ರೀ ಅಪ್ಪೋಯಪ್ಪ ದಿವಕ್ಕುರ್ ಪದಿರ್ಕಣ್ಡುಗ ನಲ್ವತ್ತ××× (ಎಕ. VI, ಚಿಕ್ಕಮ. ೫೦-೬; ಸು. 480 ?); ದುಣ್ಣುಸಮುದ್ರದಾ ಮಯಲುಳ್ಳಿಱುದಾಟ್ಟಾಮೆಗೆ ಪದಿರ್ಕ್ಕಣ್ಡುಗಂ ಮಣ್ಣಂ (ಎಕ. IV, ನಾಗಮಂ. ೮೫-೬೬; 776); ಪೊಲ್ಲಯ್ಯನ ಮಾಡಿಸಿದ ದೇಗುಲಕ್ಕೆ ಕೊಟ್ಟ ಮಣ್ಣೊರಿಗಾಲಪ್ಪದಿರ್ಕ್ಕ ಣ್ಡುಗಂ ನೀರ್ಮಣ್ಣು (ಎಕ. IV, ಎಳಂದೂ. ೪೧-೩; 982).

[ಪದಿರ್$_2$(<ಪತ್ತು$_3$)+ಕಂಡುಗ(<ಖಂಡುಗ)]

**ಪದಿರ್ಕೞ** 'ಪದಿರ್ಕೊೞ' ನೋ.

**ಪದಿರ್ಕೊೞ,** ಪದಿಕೊಳ, ಪದಿರ್ಕೞ (ನಾ). ಹತ್ತು ಕೊಳಗ : ಶ್ರೀ ಶಿವಭೀಮಗ ಪ್ರತಿಷ್ಠೆಗೆ ಒಮ್ಬದಿಮ್ಬರುಂ ಬನ್ದು ಪದಿರ್ಕೊೞಂ ಕಟಿನಿ ಒಕ್ಕಣ್ಣುಗಂ ಕೆಮ್ಮ ಕೊಟ್ಟನ್ (ಎಕ. IX, ಬೆಂಗಳೂ. ೪೨-೨; ಸು. 820); ಒಕ್ಕಲೊಳೊನ್ದು ಪೊಱೆಯುಂ ಕೆಯುಂ ಪದಿರ್ಕೊೞಂ ಛತ್ರಮುಂ ವಿಾಸಲುಂಬಳಿವತ್ತಮುಂ ಸಲ್ವದು (ಎಕ. III, ನಂಜನ. ೧೮೩-೧೧; 977). **ಪದಿಕೊಳ :** ಮಹಾಜನ ಪದಿಕೊಳ ಕಟಿನಿ ಕೊಟ್ಟ (ಎಕ. IX, ಹೊಸಕೋ. ೯-೧೧; ಸು. 870). **ಪದಿರ್ಕೞ :** ಶ್ರೀಮತ್ ಬಿಜ್ಜೆಯ್ಯ ಸಾವಿಯಬ್ಬೇಸ್ವರಕ್ಕೆ ಬಿಟ್ಟ ಮಣ್ಣಾವುವೆನ್ದೊಡೆ ಶಿವರಾಯ ಕೆಱೆಯೊಳ್ಪದಿರ್ಕೞವೆಡೆ (ಎಕ. XIV, ಕೃಷ್ಣರಾ. ೩೩-೧೦; 1100?).

[ಪದಿರ್$_2$(<ಪತ್ತು$_3$)+ಕೊಳ$_1$]

**ಪದಿರ್ಕೊೞಗ** (ನಾ). = ಪದಿರ್ಕೊೞ : ತುಮಣ್ಣೊಳಗಣ ಮಣ್ಣದು ಬ್ರಮದಾಯ ರಾಜಮನ ಪದಿರ್ಕೊೞಗಾಟಿದ್ದಸೆಗೆ ಗುಣ್ಡಲಊರ್ ಆೞಯುಂ ಒಕ್ಕಲು ಸಲಿಪ್ಪೊ (ಎಕ. X, ಗೋರಿಬಿ. ೫-೪; ಸು. 900).

[ಪದಿರ್$_2$(<ಪತ್ತು$_3$)+ಕೊಳಗ$_1$]

**ಪದಿರ್ಮಡಿ** (ನಾ). ಹತ್ತರಷ್ಟು; ಹತ್ತುಪಟ್ಟು : ಚಂದ್ರಭುಕ್ತಂಗೆ ಪೃಥ್ವಿಯೆಲ್ಲಮನಾಳ್ವ ಲಕ್ಷಣಂಗಳೊಳವು ಈತಂಗರಸು ಮಾಡಿದಪೆಂ ನಿಮಗೆಲ್ಲ ಮಿಲ್ಲಿಯ ಬಾ[ಟಿಾನ್] ಪದಿರ್ಮಡಿ ಬಾಟಂ ಮಾಡುವೆನೆಂದು ಬೋಧಿಸಿ (ಪಡ್ಮಾರಾ. ೧೮೭-೩); ಕಾಳಬ್ಬೆಗಾವಿತಿಗೆ ಗುಜ್ಜಣಂ ಪುಟ್ಟೆ ತಂದೆಗೆ ಪದಿಮ್ಮಡಿಯಾಗಿ ಪೆಮ್ಮಾಡಿಗಾವುಣ್ಡನೆಂಬ ಪೆಸರಂ ಪಡೆದಂ (ಎಕ.VII, ಶಿಮೊ. ೧೦-೩೨; 1085); ಚೆಲ್ವಿಡಿದಲರ್ವಿಲ್ಲ ಸೋಮ್ಮಡಿ ಪದಿರ್ಮಡಿ ಸೋಗೆಗೆ ಪುರ್ವು ಕೊರ್ವು ಚೆಲ್ನಡೆಗೆ ನಖಂ ಮುಖಂ ಪತಿಗೆ ತೋಳ್ ಕರವಾಳ್ ಮದನಂಗೆ ಕಾಂಕೆಯಾ (ಪುಷ್ಪಪು. ೯-೪೩); ಚಂದ್ರಿಕಾಪಟಲದ ಶೈತ್ಯವರ್ಧವಗುಣಕ್ಕೆ ಪದಿರ್ಮಡಿಯಾಗಿ . . . ಎಸೆದಿರ್ಪುದಾ ಕೊಳಂ (ನಳಚಂ. ೧೨೨). [ಪದಿರ್$_2$(<ಪತ್ತು$_3$)+ಮಡಿ$_3$]

**ಪದಿರ್ಮಡಿಸು** (ಕ್ರಿ). ಹತ್ತುಪಟ್ಟಾಗು; ಹತ್ತರಷ್ಟಾಗು : ಈ ನೆಗಟ್ದ ಚಮೂತ್ರಿತಯ ಮದಾನೀಕಿನಿಯಕ್ಕುಮದು ಪದಿರ್ಮಡಿಸ ಲೊಡಂ ತಾನಕ್ಷೌಹಿಣಿಯಕ್ಕುಂ (ಪಂಪಾಪು. ೧೩-೮); ಆ ದೇವಿ ಮನೋಮುದದಿಂದನಂತನೊಳ್ ಕೂಡಿದಪಳ್ ಯೌವನಮುದಂ ಪದಿರ್ಮಡಿ ಸುವಿನಂ (ಜಗವಿ. ೮-೧೬); ಆ ಸರೋವರಂ ಜಲಕೇಳಿಯನೆಳಸುವ ಲಾವಣ್ಯವತಿಯರ ಲಾವಣ್ಯರಸಮಂ ತನ್ನ ಘನರಸದಿಂ ಪದಿರ್ಮಡಿಸಿಯುಂ . . . ಮೆಱೆವುದು (ನಳಚಂ. ೧೨೧ ವ); "ಹರಡಿಕೊಳ್ಳು ; ಹಬ್ಬು" (ಪ್ರಭಣ್ಣ). [ಪದಿರ್ಮಡಿ+-ಇಸು$_3$]

**ಪದಿಲ** 'ಪದುಳ' ನೋ.

**ಪದಿಷ್ಟೆ** 'ಪದಿಟೆ' ನೋ.

**ಪದಿಷ್ಟೆಗೆಯ್** 'ಪದಿಟೆಗೆಯ್' ನೋ.

**ಪದಿಷ್ಟೆಗೆಯ್ಸು,** ಪ್ರತಿಟ್ಟೆಗೆಯಿಸು (ಕ್ರಿ). ೧. ದೇವತಾವಿಗ್ರಹ ವನ್ನು ಪ್ರತಿಷ್ಠಾಪನೆ ಮಾಡಿಸು : ಸ್ವಸ್ತಿಶ್ರೀ ಬಿಜಯಿತನು ಮಂ ಯುಸೆಯೊಳ್ ಭಗವತಿಯುಂ ಪದಿಷ್ಟೆಗೆಯ್ಸಿದೊಡೆ (ಮೈಆರಿ. ೧೯೨೯, ೩೮-೪, 8ನೆಯ ಶತ). **ಪ್ರತಿಟ್ಟೆಗೆಯಿಸು :** ೨. ಸ್ಥಾಪನೆಯಾಗುವಂತೆ ಮಾಡು ; ನೆಲೆಗೊಳಿಸು : ಕೊಳಗುರದೇಗುಲಕ್ಕೆ ಕಣ್ಡಪೀಟ ಪಣೆಯ ವಟ್ಟವಿುನಿತುವಂ ಕೊಟ್ಟು ಪ್ರತಿಟ್ಟೆಗೆಯಿಸಿದ ಬಳ್ಳ[ಜ್ಜ] (ಸೌಇಇ. XI-i, ೩೫-೧೫; 933). [ಪದಿಷ್ಟೆಗೆಯ್ (<ಪದಿಟೆಗೆಯ್)+-ಸು$_1$]

**ಪದುಂಪಯ** (ನಾ). ಒಬ್ಬಾತನ ಹೆಸರು : ಪದುಮ್ಪಯ ಸಲಿಪದು . . . ಅಱಿಕ್ಕೆ ಸತ್ತ (ಎಕ. X, ಚಿಂತಾಮ. ೧೨೩-೨; 1010). [☞ಇದು'ಪದುಮಪ್ಪಯ್ಯ' ಎಂಬುದರ ಅಪಲಿಖಿತವಿರಬಹುದೆ?]

**ಪದುಗು,** ಹದಿಗು, ಹದುಗು$_1$ (ಕ್ರಿ). ೧. ಉಡುಗು ; ಕುಗ್ಗು ; ಸಂಕುಚಿಸು : ಪುದುಗಿತೆಣ್ದೆಸೆಯಾನೆ ಪ[ಪಾಠಾಂ. ಹ]ದುಗಿದಂ ಭೋಗಿಪಂ ಗದಗದಿಸಿತಾ ಸಾಯಕದ ಬಿಸಿಗೆ ಬ್ರಹ್ಮಾಂಡಮದನೇನ ಬಣ್ಣಿ ಸುವೆನು (ಜೈಮಿಭಾ. ೧೩-೪೭); ಪದಿನಾಱುಂ ಸಾಸಿರ್ವರ ಪದಗೆಡಿಸಿದ ಚದುರನೀಗಳೀ ಕೇರಿಯ ಪೊಕ್ಕಿದೆ ಕೊಳ್ ಕವರ್ತೆದತ್ತೇಂ ಪದುಗುತ್ತೇ ಕಾಂತಮಿಂತು ಪರಿದಪನಕಟಾ (ಚಿಕವಿ. ೬-೨೭೧). ೨. ಸುಳ್ಳಾಗು ; ತಪ್ಪು : ಸಿರಿಯರಸ ಸದಯನತಿಸತ್ಯಸಂಕಲ್ಪನಾತನ ಭಾಷೆ ಪದುಗುವುದೆ (ವೆಂಕಾರಾ. ೨-೩-೪). **ಹದಿಗು :** ೧. ಮದನನ ಕಡುಧಾಳಿಯಬ್ಬರ ಕೊಳಗಾಗಿ ಹದಿಗಿ ನೋಳ್ಪ ಕಾದಲರ ಉಡೆಗೋಟೆ ಕೋಳುಹೋದುದು (ಚಂಪ್ರಸಾಂ. ೯-೨೦೫). **ಹದುಗು$_1$ :** ೧. ಒದವಿ ಕೈಸೋಂಕಿದೊಡನೆ ಹದುಗುವ ಮೆಯ್ಯ . . . ಬೆಚ್ಚುವ ಮನದೆಳೆಯಳ ಎದೆಗರಗಿಪುದಿಚ್ಛೆ ಯಱಿತು (ಹವಿಬ. ೬-೩೬); ತರುಣರಪುಣನು ಬಯಕೆನೋಟಗಳನು ಸುಳಿಸುತಿರುವನು ನಾಚಿ ಹದುಗಿರುವ ಸತಿಯೆಡೆಗೆ (ಒಲುಮೆ. ೩೫-೩); ಹುಲಿಯನ ನಾಲಗೆಯೂ ಅದರ ಗಂಟಲಿನಲ್ಲಿ ಹದುಗಿ ಮೌನವಾಗಿತ್ತು (ಮಲೆಮ. ೨೫೧). ೩. ಸೆಡೆ ; ಹಿಂದೆಗೆ : ಹರಲೊತ್ತೆ ಹದುಗುವ ಹಜ್ಜೆ . . . ಸುರಿವ ಬೆಮರು ಸೂಸುವ ಸೇದೆಯಿಂದಾ ನರನಾಥರೆಯ್ತಂದರಾಗ (ನೇಮಿಸಂ. ೩೪-೧೧೯). ೪. ಬಾಗು; ಮಣಿ: ತಿರುನೀಲಕಂಠಕುಶವರು ಬಂದು . . . ತಲೆಗರೆದು ತಗ್ಗಿ ಹದುಗುತ್ತೆ ಕೈಮುಗಿದಿರ್ದು ಇರಲು (ತಿರುರ. ದೇ. ೧೫-೨೨). ೫. ಅಡಗು ; ಮರೆಯಾಗು : ಅಲ್ಲಲ್ಲಿ ನೋಡಿದರು ಬಾನ ಕರೆಯಲಿ ಹದುಗಿ ಕಾರ ಮುಗಿಲಂತಿಹವು ಬೆಟ್ಟ ಹಬ್ಬಿ (ಹೂಂಗಳು. ೫-೯); ಆ ಮರಗಳ ಮರೆಯಲಿ ನೋಡಲ್ಲಿ ಹದುಗಿದೆ ಕೈ ಹೆಂಚಿನ ಮನೆಗಳ ಬಡಹಳ್ಳಿ (ಕೋಗಿಲೆ. ೯೦-೯); ವಹ್ನಿ ಕುಂಡದೊಳು ಹದುಗುತ್ತ ಕಳೆಗುಂದಿ ಉತ್ಸಾಹವುಡುಗುತಿಹನು (ಅಹಲ್ಯೆ. ೩೩-೧೪). ೬. ಹಿಮ್ಮೆಟ್ಟು; ಹಿಂಜರಿ : ನಿಂತೇನು ನೋಡುತಿಹೆ ? ಹದುಗುವರೆ ಇಲ್ಲಿ ? ಮಸಣವಾಗಲಿ ಎಡೆಯು ರಣರಂಗದಲ್ಲಿ ! (ಪಾಂಚಜ. ೭-೧೦). ೭. ಒಳಸೇರಿರು; ಹುದುಗಿರು: ಮುನಿಯೊಳು ಹದುಗಿಹುದೈ ಸತಿಯಾಸೆ ಮಾಗಿಯೊಳಿರುವೊಲು ಬಸಂತದಾಸೆ (ಅಹಲ್ಯೆ. ೨೪-೧).

[ದೇ.‖ತಮಿ. ಪತುಙ್ಕು, ಪತುಕು ; ಮಲ. ಪದ, ಪದಿ, ಪದುಕ್ಕು ; ತುಳು. ಪದೆ, ಪದ್ದು]

**ಪದುದೆಯ್ಯ** (ನಾ). ಒಬ್ಬಾತನ ಹೆಸರು : ಇನಿತು ಮಣ್ಣ ಬಿಡಿಸಿದ ಪ್ರಭುಗಳಂಕನಾಮ ಭೂವಗಾವುಣ್ಡ ಪಡಿಲಯ್ಯ ಪದುದೆಯ್ಯ (ಎಕ. V, ಅರಕ. ೨೪-೧೬; ಸು. 900). [ ? ]

**ಪದುಪು** 'ಪದಪು' ನೋ.

**ಪದುಮ,** ಪದುವ (ನಾ). ಕಮಲ ; ತಾವರೆ : ಪದುಮ 'ಪಂಜಳ' (ಪಜ್ಜಳ) ವರ್ಣ ನೆಯಿದಲೆ (ನೈದಿಲೆ) ಯಾಗಿರ್ದಳವ್ವೆ (ಸರ್ಪಪ. ೬೯-೩೭೪); ಉಕಾರಕ್ಕೆ–ಅಲ್ಪ–ಅಲುಪ, ಪದ್ಮ–ಪದುಮ (ಶಮದ. ೨೫೪ ಪ್ರಯೋ). **ಪದುವ :** 'ಚೆಂಬದುವ' ಪರಾ. [<ಸಂ. ಪದ್ಮ]

**ಪದುಮಜ** (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ : ಉನ್ನತಿಯ ಪದುಮಜನು ಕಂಡನು ಮನ್ನಿಸಿದನಾ ಮನುಜವರ್ಗವನು (ಸಂಭಪ. ೫-೨೭). [<ಸಂ. ಪದ್ಮಜ]

**ಪದುಮಣ್ಣ** (ನಾ). ಒಬ್ಬಾತನ ಹೆಸರು : ಕುನ್ದಗೆಸೆವೆ ಕಲಿಯಮ್ಮ ಬೆಳ್ಮಣಿಯ ಪದುಮಣ್ಣನ್ . . . ಇನ್ತೀ ಎನೆಬರು ಶ್ರೀಕರಣಸಹಿತಂ ಬಿಟ್ಟಾರ್ (ಎಕ. VIII, ಸೊರಬ. ೧೦-೧೨; ಸು. 800).

[ಪದುಮ + ಅಣ್ಣ$_1$]

**ಪದುಮನಾಭ** (ನಾ). ಹೊಕ್ಕುಳಲ್ಲಿ ಕಮಲವುಳ್ಳವನು ; ವಿಷ್ಣು : ಪದುಮನಾಭನ ಚೋದಿಸುವ ರಥವೇಗದಿಂ ಪದ್ಮವ್ಯೂಹಮನೆಯ್ದೆವಂದು

(ಪಂಪಭಾ. ೧೧-೧೩೪ ಪ); ಉದರವೈರಾಗ್ಯವಿದು ನಮ್ಮ ಪದುಮನಾಭನಲಿ ಲೇಶ ಭಕುತಿಯಿಲ್ಲ (ಪುರಂದ. ೨-೨೫ ಪಲ್ಲವಿ). [<ಸಂ. ಪದ್ಮನಾಭ]

**ಪದುಮಭವ** (ನಾ). = ಪದುಮಜ : ಪದುಮಭವನೈಯ್ಯನು . . . ನಿಗಮವ ಪೇಳ್ದನೊಲವಿನಲಿ (ನಿಭಾಗ. ೧೧-೨೮-೬೨). [<ಸಂ. ಪದ್ಮಭವ]

**ಪದುಮಮಿತ್ರ** (ನಾ). ಕಮಲದ ಸ್ನೇಹಿತ ; ಸೂರ್ಯ : ಪದುಮ ಮಿತ್ರನ ಉದಯ ಹರಿಗಭ್ಯುದಯದಂತಿರೆ ರಾಮ ನಿದ್ರಿಸದುದಯದಿಂದುಪ ವಾಸವಟ್ಟನು ಮೂಜಾದಿನ ತನಕ (ತೊರ್ಾರ. ೧೫-೩೮). [ಪದುಮ + ಮಿತ್ರ]

**ಪದುಮರಾಗ** (ನಾ). ನವರತ್ನಗಳಲ್ಲಿ ಒಂದು ; ಮಾಣಿಕ್ಯ ; ಪದ್ಮರಾಗ : ಮುನಿಕುಮಾರರೋದುವ ವೇದವೇದಾಂಗಂಗಳಂ ತಪ್ಪು ವಿಡಿದು ಜಡಿದು ಬಗ್ಗಿಸುವ ಪದುಮರಾಗದ ಬಣ್ಣದರಗಿಳಿಗಳುಮಂ . . . ನೋಡಿ (ಪಂಪಭಾ. ೧-೧೧೫ ಪ). [ಪದುಮ+ರಾಗ]

**ಪದುಮಲೋಚನ** (ನಾ). ಕಮಲದಂತೆ ಕಣ್ಣುಳ್ಳವನು ; ವಿಷ್ಣು : ಇದು ಸಕಲ ವರ್ಣಾಶ್ರಮಕೆ ಕಡುಮುದವನೀವುದು . . . ಸ್ತ್ರೀ ಶೂದ್ರರಿಗೆ ಮೊದಲಾಗಿ ಸದರವಿದು ಮಾಡುವರೆ ಪೇಳಲೆ ಪದುಮಲೋಚನ ನಿಮ್ಮಡಿಯ ಶ್ರೀವದನದಲಿ ಪೇಳುವುದೆ ಮುಖ್ಯವಿದೆಂದನಾ ಭಕ್ತ (ನಿಭಾಗ. ೧೧-೩೨-೩೬). [ಪದುಮ + ಲೋಚನ]

**ಪದುಮವಿಟ್ಟರ** (ನಾ). ಕಮಲದ ಆಕಾರದಲ್ಲಿರುವ ಆಸನ,— ಪೀಠ : ಹೊಂಗೆಲಸದ ಪೊಚ್ಚ ಪದುಮವಿಟ್ಟರದೊಳು ಮಂಗಲಮಜ್ಜನಗೆಯ್ದು ಅಂಗಸುವಸ್ತ್ರಭೂಷಿತನಾಗಿ ಶಿವಪೂಜಾರಂಗಸ್ಥಳವ ಸಾರಿದನು (ನೇಹತ. ೨೧-೩). [ಪದುಮ + ವಿಟ್ಟರ$_2$]

**ಪದುಮವ್ಯೂಹ** (ನಾ). = ಪದ್ಮವ್ಯೂಹ ೨ : ನಾಲ್ಕುಂಯೋಜನದ ಪದುಮವ್ಯೂಹದೊಳಂಗರಾಜ ಶಲ್ಯ ವೃಷಸೇನ ಕೃಪ ಕೃತವರ್ಮಾಶ್ವತ್ಥಾಮರಂ ದುರ್ಯೋಧನಂ ಬೆರಸಿರಿಸಿ (ಪಂಪಭಾ. ೧೧-೧೩೨ ಪ). [<ಸಂ. ಪದ್ಮವ್ಯೂಹ]

**ಪದುಮಸಂಭವ** (ನಾ). = ಪದುಮಜ : ಪದುಮಸಂಭವ ನಾರದಗೆ ನಾರದನು ವಲ್ಮೀಕಜಗೆ . . . ಎನುತ ಪೂರ್ವಾಚಾರ್ಯಮಾರ್ಗವನನುಸರಿಸಿ ಗೀರ್ವಾಣಭಾಷಾವನಧಿಯೆನೆ ಶೋಭಿಸುವ ರಾಮಾಯಣದ ಸತ್ಕಥೆಯಾ . . . ಉಸುರ್ವೆನು (ಅನಂರಾ. ೧-೧-೧೩). [ಪದುಮ + ಸಂಭವ]

**ಪದುಮಸಖ** (ನಾ). = ಪದುಮಮಿತ್ರ : ಪದುಮಸಖ ಕೋಟಿ ಪ್ರಕಾಶನು . . . ನಿಗಮವ ಪೇಳ್ದನೊಲವಿನಲಿ (ನಿಭಾಗ. ೧೧-೨೮-೬೨). [ಪದುಮ + ಸಖ]

**ಪದುಮಾಕ್ಷ** (ನಾ). ಕಮಲದಂತೆ ಕಣ್ಣುಳ್ಳವನು ; ಕಮಲ ಲೋಚನ : ನರಹರಿಯುಂದುದುಭವಿಸಿದ ಮಾಸ ತಿಥಿಯು ಪುದಿದತಿ ಶುಭವಾರ ಸಂಜೆಯೊಳುದಿಸಿದ ಪದುಮಾಕ್ಷನೀತ ತಾನೈಸೆ (ಕಂಸವಿ.೧-೧೯). [<ಸಂ. ಪದ್ಮಾಕ್ಷ]

**ಪದುಮಾಕ್ಷಿ** (ನಾ). ಕಮಲದಂತೆ ಕಣ್ಣುಳ್ಳವಳು : ಚದುರಂಗ ವಾಡುವ ಬಾರೆಂದೊರ್ವನ ಪದುಮಾಕ್ಷಿ ಪಿಡಿದೆಳದೊಯ್ದು ಮದನಾಗಮ ದೊಳು ಮುಗ್ಗಿಸಿ ಹಣಗಳನುದಿರದೆಗೆದಳವನಿಂದ (ಕಂಸವಿ. ೨-೯೭). [<ಸಂ. ಪದ್ಮಾಕ್ಷೀ]

**ಪದುಮಾಲಯೆ** (ನಾ). ಕಮಲವೇ ಮನೆಯಾಗಿರುವವಳು ; ಲಕ್ಷ್ಮಿ : ಪಾಲಿಸೆ ಪದುಮಾಲಯೆ ನೀನೇ ಗತಿ (ವಿವಾಕ್ಯ. ೩೯ ಪಲ್ಲವಿ). [<ಸಂ. ಪದ್ಮಾಲಯಾ]

**ಪದುಮಾಸ್ತ್ರ** (ನಾ). ಮನ್ಮಥನ ಪಂಚಬಾಣಗಳಲ್ಲಿ ಒಂದು ; ಕಮಲದ ಬಾಣ : ಮದನ ವಿಯೋಗಿಗಳೆದೆಯ ಘಟ್ಟಿಸಿಗಿದೆಚ್ಚ ಪದುಮಾಸ್ತ್ರದಲಗಿನಗ್ರದಲಿ ಪುದಿದ ಕೆನ್ನೀರೆನಲಲತಿಗೆಯುಗುರ್ಗಳಿಂ ಪದವೆರಳೆಸೆದುವಂಗನೆಯ (ಕಂಸವಿ. ೯-೧೮). [ಪದುಮ + ಅಸ್ತ್ರ]

**ಪದುಮಿನಿ** (ನಾ). ೧. = ಪದುಮ : ಹೃದಯಂಗುಡದುದನಜಾಯದೆ ಪದುಮಿನಿಗಿರದಳಿಪಿ ಕೈಯನಿಕ್ಕುವ ಶಶಿಯಂ ಪದೆದೀಕ್ಷಿಸಿ ಮಿಗೆ ನಗು ವಂದದಿನಲರ್ದುದು ನೋಡೆ ನಾಡೆ ಕುವಲಯನಿವಹಂ (ಕುಸುಮಾ. ೮-೮೪). ೨. ಕಮಲವನ್ನು ಕೈಯಲ್ಲಿ ಹಿಡಿದಿರುವವಳು ; ಲಕ್ಷ್ಮಿ : 'ಪದುಮಿನಿವಲ್ಲಭ' ಪರಾ. ೩. [ಕಾಮಶಾ] ಸ್ತ್ರೀಯರ ನಾಲ್ಕು ಜಾತಿಗಳಲ್ಲಿ ಒಂದು ; ಪದ್ಮಿನಿ : ಹೊಲೆಯರೊಳು ಪದುಮಿನಿ ಹೆಣ್ಣು ಹುಟ್ಟಿದರೇನು (ಪುರಂದ. ಧಾ. ೫-೧೩೭-೧). [<ಸಂ. ಪದ್ಮಿನೀ]

**ಪದುಮಿನಿವಲ್ಲಭ** (ನಾ). ಲಕ್ಷ್ಮಿಯ ಒಡೆಯ ; ವಿಷ್ಣು : ಮೃದು ಮನದೊಳು ನಿಲ್ಲು ಪದುಮಿನಿವಲ್ಲಭ (ವಿವಾಕ್ಯ. ೬೦-೧). [ಪದುಮಿನಿ + ವಲ್ಲಭ]

**ಪದುಮೆ** (ನಾ). ಲಕ್ಷ್ಮಿ ; ಪದ್ಮಾವತಿ : ಪದುಮೆಯರಸ ಸನಂದ ನಾರ್ಚಿತ ಪದುಮಸಿರಿಧರ ಗೋಪಿನಾಥನು . . . ನಿಗಮವ ಪೇಳ್ದನೊಲವಿನಲಿ (ನಿಭಾಗ. ೧೧-೨೮-೬೨). [<ಸಂ. ಪದ್ಮಾ]

**ಪದುಯ್ಯ** (ನಾ). ಒಬ್ಬಾತನ ಹೆಸರು : ಬರೆದಂ ಪೆಗಂ ಖಣ್ಡರಿಸಿದಂ ಪದುಯ್ಯ (ಎಕ. VII, ಶಿಕಾರಿ. ೯-೧೮; 1021). [?]

**ಪದುರು** 'ಪದಿರ್$_1$' ನೋ.

**ಪದುವ** 'ಪದುಮ' ನೋ.

**ಪದುವಗೆರೆ** (ನಾ). ಒಂದು ಸ್ಥಳದ ಹೆಸರು : ಪದುವಗೆರೆಯಯ್ಯಾ ಜಿಜ ಭೋಗಪತಿ ಆಯ್ಯಪ ಮಂಗಳಮಂ ಪೂರ್ವ್ವಮರ್ಯ್ಯಾದೆಪ್ಪಿ ಆಕ್ರಮಂಗೆಯ್ಯೆ (ಎಕ. XI, ಹಿರಿಯೂ. ೧-೧೧; 925). [℗ ಇದು 'ಪಡುವಗೆರೆ' ಎಂಬುದರ ಅಪಲಿಖಿತವಿರಬಹುದೆ ?]

**ಪದುವಾರ** (ನಾ). (?) : ನಾಲ್ಕು ಬರಿಸ ಪರಿಯಾರಮು ಐದಾನೆ ವರಿಸ ಪದುವಾರಮುಂ ಮೇಣ್ಸೆಯು ಸತ್ರಿಗಮು ಇನಿತ್ತುಮಾ [ನ್] ಪ್ರಸಾದಂಗೆಯ್ದಾರ್ (ಸೌಇಇ. IX–i, ೫೦-೧೫ ; ಸು. 9ನೆಯ ಶತ ?). [ ? ]

**ಪದುಳ,** ಪದಿಲ, ಹದುಳ, ಹದುಳು (ನಾ). ೧. ಒಳಿತು ; ಸುಖ; ಕ್ಷೇಮ : ಸಂತವಿರ್ಪುದೆ ನವಗ್ರಹಮಾಶಾದಂತಿಗಳ್ ಪದುಳಮೇ (ಕಾವ್ಯಾವ. ೧೫೧) ; ಸಚಿವಂ ಬಂದು ಹರಭಕ್ತನಂ ಪದುಳದಿಂದೆ ಕಳುಪಿದೆ ನೆಂದು ಬಿನ್ನಯಿಸೆ ಸೇದಿರಾಜಂ ಸಂತಸಂಬಟ್ಟು (ಸೇವಿರ. ಜೇ. ೬೬-೬) ; ವಿಷ್ಣುಪದದಲಿ ಸದಮಳಾತ್ಮಕ ಶಿಂಶುಮಾರನು ಪದುಳದಲಿ ಸಕಲಕೆ ಸಲೆ ಯಾಧಾರವಾಗಿಹನು (ಕುಪ್ಪಾಆ. ೭-೬೮) ; ಬಂದಿರೆ ಪರಿಣಾಮವೆ ಮನೆ ಯೊಳಗಕ್ಕಂದಿರನುವೆ ಮಕ್ಕಳು ಪದುಳವೆ (ಜಮಕಾ. ೧-೨೦) ; ಪದುಳ ದಳಿಳೆಯಾಳುತಿರ್ದನಾ ನೃಪಚಂದ್ರಂ (ಮಂಗಚ.೬-೨೨). ೨. ನಿರಾತಂಕ; ಸಮಾಧಾನ ; ನೆಮ್ಮದಿ : ಕಾಯಜೀವಂ ಪದುಳವಿರಬೇಕಾಯಿತಾ ದೊಡೆ ನಿನಗೆ ಪೇಳ್ವೆನುಪಾಯವೊಂದಂ ಕೇಳು ನೀ ಶಿವಭಕ್ತಿಮಾರ್ಗದಲಿ (ಬಸವು. ೪೯-೨೭) ; ಪರಿದೂರ ಬೀದಿಬೀದಿಯ ಪಲವನೆಯೊಳು ತಿರುಗುವ ದಿಟ್ಟವೆಣ್ಗಳನು ಕರೆದು ಮುನ್ನಿಸದೇಕಾಂತವನಾಡದೆ ಪರಿಹರಿಪುದು ಪದುಳ ದೊಳು (ಹವಿಬ. ೮-೪೩); ಅದುವೇ ನವಿಮ್ಮ ಹೊನ್ನಿಯ ಪದುಳದ ಬಾಳುವೆ ತೋರೆಯಲಿ ಸುಳಿಯಾಯ್ತು (ನಳ್ಕ. ೧೦-೮). ೩. ಸಂತೋಷ; ಹಿಗ್ಗು : ಉದರಮ ತೊಟ್ಟಿಲಾಗೆ ಭುವನತ್ರಯಮಂ ನೆಜಿಕೆ ತಾಳ್ದಿ ದೇಹಿ ವರ್ಗದ ಕೃತಪಾಪಪುಣ್ಯಫಲಮಂ· ಸಲೆ ತೂಗುವ ಕರ್ಮಸಾಕ್ಷಿಯುಂ ಪದುಳವೆ ತೊಟ್ಟಿಲೊಳ್ ಪಡಿಸಿ ತೂಗಿದರ್ . . . ಲತಾಂಗಿಯರ್ (ಜಗವಿ. ೩-೨೮) ; ಅದು ಸುಕೃತಪ್ರಸಿದ್ಧಿಯ ತವರ್ಮನೆ ಜ್ಞಾನಮಹಾಬ್ಧಿ ತೀರಮಂ ಪದುಳದಿನೊಲ್ದು ತೋಜುಸುವ ಮಾರ್ಗಂ . . . ಎನಲ್ಕೆ ವಾರಣಸಿ ರಂಜಿಪುದಲ್ತೆ (ಪರಕು. ೯-೪) ; ಪಟ್ಟೆ ಫಲಬ್ರಹ್ಮಸಿರ್ಣಯವನತಿ

ಮುದದಿಂದ ಶಿವೆಗೆ ಶಿವನಱುಪಿದನದಂ ತಿಳಿದು ಪದುಳದಿಂದಡನೆ ಪೇಳ್ವಿಂ (ಲತಿಚಿಂ. ೪೮-೧); ಭೂರಮಣಂ ಸತ್ಯಧರ್ಮದಿಂದಂ ಪೊರೆಯಲ್ಕೀ ರಾಜ್ಯ ಮೆಲ್ಲಮುಂ ಪ್ರಜೆ ರಾರಾಜಿಕುಂ . . . ಪೆಂಡಿರ್ ಮಕ್ಕಳ್ವೆರಸು ಹರಿದಿನದ ಹಬ್ಬದ ಪರಿಪರಿಯುಂಕ್ಕೆವಮನೆಸಗಿ ಪದುಳದೊಳಿರ್ಕುಂ (ಚಿಕವಿ. ೩-೧೪೧). ೪. ಉತ್ಸಾಹ; ಹುರುಪು: ನಂಜಣಾರ್ಯವಿರಚಿತವಿುದಱಿಿಂ ಳಧಿಕ ತರ ಸತ್ಕಥಾವಿಸರರತ್ನಂಗಳಂ ಪದುಳದಿಂ ಸರಗೆಯ್ದು ಪಟ್ಟದಿಗಳ್ (ಏಕೋಪು. ೧-೬೭). ೫. ವಿಶ್ವಾಸ; ಪ್ರೀತಿ: ಅದಱಿಂದಲೆಮಗೆ ಕ್ಷೇಮವದೆಲ್ಲಿಯದೆಂದು ಪದುಳದೆ ಪ್ರಾಣಮಿತ್ರನೊಳು ಒದವಿದ ಚಿಂತೆ ಯನುಸುರೆ ಪ್ರಹ್ಲಾದನು ಮುದದ ತಳೆದು ನಸುನಗುತ (ಅಂಜಚ. ೫-೨೭); ಮುದಿಕುರುಡಿ ಹೊಂಗೆಯನು "ಬಾದಾಮಿ, ಕೋ" ಯೆನುತ ಪದುಳದಿಂ ಮೊಮ್ಮಂಗೆ ಕೊಡಲು ಸಿಹಿಯುಹುದೆ ? (ಮಂಕುಕ. ೮೬೩). ೬. ಶ್ರದ್ಧೆ; ಭಕ್ತಿ: ಹೃದಯದೊಳು ಧ್ಯಾನಿಸಿನೆ ಗುರುವಂ ಪದುಳದಿಂ ಶಿರವಾಗೆನೆ ಗುರುಪದಕೆ (ಬಸವು. ೪೫-೧೬); ಭೋಜಶಾಸ್ತ್ರ ದುದಧಿಸೌಂದರ ಗಣೇಶ್ವರ ಕೇಶಿರಾಜಂಗೆ ಪದುಳದಿ ನಮಸ್ಕರಿಸಿ (ಏಕೋಪು. ೧-೨೦). ೭. ಸೊಗಸು; ಅಂದ; ಚೆಂದ: ಶಕ್ರನೃತ್ಯದೊಳೊಡಂಬಡೆ ನರ್ತಿ ಸುವಲ್ಲಿ ಜತ್ತುವಟ್ಟದ ಮಣಿಯಂತದೇಂ ಪದುಳಮಾದುದೊ ದಿವ್ಯವಧೂ ಕದಂಬಕಂ (ಆಪಿಪು.೭-೧೨೫); ಉದಯಗಿರಿಯ ಮೇಲೆ ಮೆಱೆವ ಭಾನು ವಿಗೆ ಮತ್ತಿದಿರಾದ ಪ್ರತಿಸೂರ್ಯನಂತೆ ಪದುಳದುತ್ತುಂಗಸಿಂಹಾಸನ ವೇಱು . . . ಶೀವಿಯೊಳೆಸೆದನಾ ರಾಯ (ಭರತೇ. ೧-೩೦); ಪದುಳದೆ ಬಾಲಲೀಲೆಯ ತೋಱು ಸಕಲರ್ಗೆ ಚದುರಕುಮಾರರೊಪ್ಪಿದರು (ಕಂಸವಿ. ೪-೮೧). ೮. ಸ್ಥಿರಚಿತ್ತ; ದೃಢಚಿತ್ತ: ಆಯಿರವಿನೊಳ್ ಪದುಳನೊ ಪದುಳನಲ್ಲನೊ ಪರೀಕ್ಷಿಸುವೆನೆಂದು ಬಂದು (ಜೀವಸಂ. ೧೭೭-೧೨).

**ಪದಿಲ:** ೧. ನಿರ್ಮಳಹೃದಯರಿಂಗೆ ವಿಶ್ವಾಕೃತಿಯ ಸದ್ಭ್ರಹ್ಮಭಾವ ನವು ಪದಿಲದಿಂ ನೆಲೆಗೊಂಡು ಚಲನಾಸ್ಪದವಿಾಯದೆ ತುಂಬಿರಲು (ಗಗತಾ. ೧೭-೧೦); ಗೋಕರ್ಣಬುವೆಂಬ ಪಟ್ಟಣದಿ ಪದಿಲದಿಂದಲಿಯಾಳ್ವ ಭಾನು ವಂಶಾಢ್ಯ ಧರಣಿಚಂದ್ರಮನೆಂಬ ಧವಳಸೇನಂಗೆ . . . ಮಂತ್ರಿಗಳಾಗಿ ಇಬ್ಬರು ಇರಲು (ಸಾರಂಗ. ೨೯). ೯. ನಿರ್ಧಾರ; ನಿಶ್ಚಯ: ಮೊದಲೆನ್ನನೀ ತೆರದಿ ಮೊಂಡಾಗು ನೀನೆಂದು ಪದಿಲದಿಂದಲಿ ಬ್ರಹ್ಮ ಬರೆದು ಪುಟ್ಟಿಸಿದ (ಸಾರಂಗ. ೨೭).

**ಹದುಳ:** ೧. ಹದುಳವೇ ಪಾರ್ಥಂಗೆ ಹೇರಾಳದಲಿ ಕಾದಿದನಾ ಸುಶರ್ಮನ ಕದನ ಬೆಟ್ಟಿತು (ಕುವ್ಯಾಕ.೧೬-೧೧); ಮಱಗಳಂ ಹದುಳನಱುದೊಡನೆ ಕಟ್ಟಿಸಿ . . . ಸುಜಂಗಮವನು . . . ಕರೆತಂದು . . . ಅವರೀನ ಬೇಡಿದಡೀ ಸುವಸ್ತುಗಳನಿತ್ತು ಕಳುಪುವುದು (ಚಿಬಪು. ೬-೧೬); ಹದುಳಕೆ ಹೊಣೆ ಅವನಿರದಿರೆ, ತಿರೆ ಪೋಪುದು ಮಗ್ಗಿ! (ಅಹಲ್ಯ. ೨೦-೧೬). ೨. ನೋಡಿ ವಂದಿಸಿ ಹೋಹ ಶಿಷ್ಯಂಗೆ ನೀಂ ಕೃಪೆಯ ಮಾಡುವುದು ಹದುಳದಿಂ (ಹಚಕಾ. ೮-೧೧); ಹ [ಪಾಠಾಂ.ಪ] ದುಳದಿಂ ಪದ್ಮಾಸನಾಸೀನದಿರವಂ ಕಲಿವಂತೆ ಕುಳ್ಳಿಹನಿದುವೆರಡನೆಯ ಶಂಭು ವೃಷಭನು ತಾನೆಯೆಂಬವೊಲು (ಬಸಪು. ೩-೩೯). ೪. ಬಿಣ್ಣಿತ್ತಾದ ಲಜ್ಜೋಂಪದ ಕಂಪಂ ಹಣ್ಣು ಹದುಳದಿಂದಾಂತೆಳಸುತ್ತುಂ ತಣ್ಣನೆ ಪಣ್ಣನೆ ನುಣ್ಣನೆಗಂಪಿಂ ಸುಳಿಗೆಲರಾ ಬನದೊಳ್ (ಉದ್ಭದೇ.೨-೨೧). ೫. ಒಲವಿಂದ ನಡೆತಂದು . . . ಅಗ್ಗವಣಿಯನೊಲವಿಂದಿಳಿಪಿ ಸಂಗಮೇಶ್ವರನ ಹತ್ತಿರೆ ಹದುಳದಿಂದಿಳಿಪಿ (ಬಸರ. ೩-೪೨). ೬. ಹದುಳವಿಲ್ಲದ ದೇಹರಂ . . . ಪ್ರವರ್ಧನವಹುದೆ ಲೋಕದೊಳು (ಬಸಪು. ೩೭-೩೪). ೧೦. ಶುಭಕರ ವಾದುದು; ಮಂಗಳಕರವಾದುದು: ಒಗ್ಗದಿರೆ ನಾಲ್ಪಗೆಗೆ ಹುಡುಕಿ ಹದುಳದ ಪೊಳ್ತು (ಕಾಲೂರ. ೬೩-೧೩೩).

**ಹದುಳು:** ೧. ಹರಸಿ ಹದುಳನಲಿರಿಸಿ ನೀಡುವನ ಪಡೆಯುವವನ, ಎರಡುಗುಣದಿಂದ ಸುಕೃತಾರ್ಥ ವಹುದು (ಕವಿಪು. ೫೩). [ದೇ.॥ ತೆಲು. ಪದಿಲ]

**ಪದುಳಂ** (ಅ). ೧. ಕ್ಷೇಮವಾಗಿ; ಸುಖವಾಗಿ; ಒಳ್ಳಿತಾಗಿ: ಅವನೀಮಣ್ಡಳಮಂ ನಿರಂತರಿತವಮಾ ಹೇಮಾದ್ರಿಯಂ ದಕ್ಷಿಣಾಬ್ಧಿವರಂ ದೋರ್ವ್ವಳದರ್ಪ್ಪದಿಂ ಪದುಳಮಾ ಪೂರ್ವ್ವಾಬ್ಧಿಯಂ ಪಶ್ಚಿಮಾಬ್ಧಿವರಂ ಪಾಳಿಸಿದಂ . . . ಆಹವಮಲ್ಲಂ (ಸೌಇಇ. IX-I, ೧೨೬-೨: 1064); ಪದುಳಂ ಪಾಳಿಪನೆಳೆಯಂ . . . ಬಲ್ಲಾಳನೃಪಂ (ಎಕ. V, ಬೇಲೂರು. ೮೬-೨೨; 1177); ತನ್ನೊಂದು ಗರಗರಿಕೆಯ ಸೊಮ್ಮಿನಭ್ಯುದಯದೆ ಪದುಳಮರಸಾಳ್ವ ಬಸಂತರಾಯನುರ್ಕುಂ ಸೊರ್ಕುಂ ಸೋರ್ದು ಬಯಲಪ್ಪಿ ನೆಗಂ ದಾಟುಗೆಯ್ದು . . . ಗ್ರೀಷ್ಮರಾಜಂ ತಲೆದೋಱದಂ (ರಾಪಾಶ್ವ. ೫೧-೧೯). ೨. ನೆಮ್ಮದಿಯಾಗಿ; ನಿಶ್ಚಿಂತೆಯಿಂದ ಕೂಡಿ: ಪದುಳಂ ಕುಳ್ಳಿರ್ದಮಗಾಯದ ಮಾತಂ ತಗುಳೆ ಗಬಪಿ ಪೋದಂ ಸಂದಿರ್ದ ದಟರೊಳಿಜಾದಱಯಂ ತಪ್ಪದೆ ಕಮ್ಮಱಯೋಜನೆನಿಸಿದಂ ಬಿಲ್ಲೋಜಂ (ಗದಾಯು. ೨-೧೩); ಪದುಳಂ ಪೀಠಾಗ್ರದೊಳ್ಕುಳ್ಳಿರಲಱಯದುದುಮಂ ಕಣ್ಣ ನೀರಾಗಳುಂ ಸೋರ್ವುದುಮಂ . . . ಸದ್ವೈದ್ಯರಿಂ ನೋಡಿಸಿ ಪಱ ಪಡಿಸಿ ನಿಶ್ಚಯಂ ಬೇಗವಿಾಗಳ್ (ಸುಕುಮಾ. ೧೧-೩೪); ಮುದದಿಂ ತತ್ಪದಪಂಕಜಕ್ಕೆಱಗಿ ನೀಂ ನಿನ್ನನ್ವವಾಯೋರ್ವಿಯೊಳ್ ಪದುಳಂ ನಿಂದಿರು ಗೋತ್ರಮಿತ್ರಸಹಿತಂ (ನೇಮಿಪು. ೧೧-೧೦೪); ಅನುಮೆನ್ನೋಪಳುಂ ಪದುಳಂ ಕ್ರೀಡಿಸುತಿರ್ದವಂದು ವಿಲಸತ್ಕಲ್ಪದ್ರುಮೋದ್ಯಾನದೊಳ್ (ಪುಷ್ಪಪು. ೬-೨). ೩. ಜೋಪಾನವಾಗಿ; ಎಚ್ಚರಿಕೆಯಿಂದ ಕೂಡಿ: ಮೇನಾಸತಿ ನಿಜಸುತೆಯಂ ನೋಡಿ . . . ಪದುಳಂ ಪೋಗವ್ವ ಪೋಗೆಂದತಿ ಭಯರಸದಿಂ ಬುದ್ಧಿ ವೇಳುತ್ತುಮಿರ್ದಳ್ (೧೧ಶ. ೫-೧೨). ೪. ಚೆನ್ನಾಗಿ; ಸೊಗಸಾಗಿ: ಅವರ್ಕೆ ಪುಟ್ಟಿದ ಯುಗಳಂಗಳ್ . . . ಪೆಱವೇಟು ದಿವಸಕ್ಕೆ ತಳರ್ನಡೆ ನಡೆದುಂ ಪೆಱವೇಟುದಿವಸದೊಳ್ ಪದುಳಂ ನಡೆದುಂ . . . ತ್ರಿಪಲ್ಯೋಪಮಜೀವಿಗಳುಮಾಗಿ (ಆಪಿಪು. ೫-೪೧ ಪ); ಪದುಳಂ ನಿರ್ಝರವಾರಿಯಂ ತಳಿಯುತುಂ ಮಂದಾರಕಾಗಂಧಮಂ ಕೆದಱುತ್ತುಂ . . . ಆ ನಗೇಂದ್ರದ ಮಂದಾನಿಳನಾಱಿಸಿತ್ತು ನಯದಿಂ ದೇವಾಗಮ ಶ್ರಾಂತಿಯಂ (ಪುಷ್ಪಪು. ೧೦-೫೩). ೫. ಸ್ಥಿರವಾಗಿ; ದೃಢವಾಗಿ: ಪದುಳಂ ತ್ರಿಪ್ರಭೃತಿಗ್ರಹಂಗಳಿರೆ ತಂತಮ್ಮುಚ್ಚದೊಳ್ ಭೂಪವಂಶದವಂ ಭೂಪತಿಯಕ್ಕುಂ (ಜಾತತಿ. ೧೨-೧); ಪದುಳಂ ನಿಂದೆಡಗಯ್ಯೊಳೊತ್ತಿ ರಘುಜಂ ಕೊಪ್ಪಂ ಪದಾಂಗುಷ್ಠಮೂಲದೊಳೆಟ್ಟೇಱಸೆ ಕಾಲದಂಡ ನಿಭಮಂ ಕೋದಂಡಮಂ ಭೂತಳಂ ಪದುಳಂ ನಿಂದುದೆ (ಪಂರಾಮಾ. ೫-೮೭); ಅಂಗುಷ್ಠದ ಕೊನೆಯನೂಱ ನೆಲದೊಳ್ ಪದುಳಂ ನಿಂದಿರ್ದು ಮಾಟ್ಟಿನೊರ್ವಂ ತಪಮಂ (ಜಗವಿ. ೧೬-೬೦).

**ಪದುಳಂ ಮಾಡು** = ಕ್ಷೇಮವಾಗಿರುವಂತೆ ಮಾಡು; ಸುಖವಾಗಿರಿಸು: ಅಂತಾತ್ಮೀಯಭಾಗಿನೇಯನನಾ ರಾಜ್ಯದೊಳ್ ಪದುಳಂ ಮಾಡಿ ಮಹಾಸಾಮಂತಮಂತ್ರಿಮಂಡಳಕ್ಕಪ್ಪಯಿಸಿ ನಿಜವಿಜಯರಾಜ ಧಾನಿಗುತ್ತಳಬೀಟಕ್ಕೆ ವಂದು (ಆಪಿಪು. ೫-೨೧ ಪ). [<ಪದುಳ]

**ಪದುಳಂಗೆಡು** (ಕ್ರಿ). ನೆಮ್ಮದಿ ತಪ್ಪು; ಕ್ಷೋಭೆಗೊಳಗಾಗು: ಆಱುಯಿಯಾ, ನೀನ್, ಪ್ರಮಾತ್ಮಾಸ್, ಪದುಳಂಗೆಟ್ಟ ಮನಮನ್ ಪದವಡಿಪ ಒಳ್ನುಡಿಗಳೊಳವೆಂಬುದನ್ ? (ಬದ್ಧಪ್ರ. ೨೧-೪೩೩). [ಪದುಳ+ಕೆಡು$_1$]

**ಪದುಳಂಗೆಯ್** (ಕ್ರಿ). ನೆಮ್ಮದಿಗೊಳಿಸು: ಎಲ್ಲರುಂ ನೀಡುಂ ನೋಡಿ . . . ಹೃದಯಮಂ ಪದುಳಂಗೆಯ್ದು ನೆಲದೊಳಿರ್ದಳನೆತ್ತಿ ಪಾಸಿ ನೊಳ್ ಪಟ್ಟರಿಸಿ . . . ತಮ್ಮೊಳಿಂತೆಂದರ್ (ಲೀಲಾಪ. ೧೦-೬೪ ವ). [ಪದುಳ+ಕೆಯ್$_1$]

**ಪದುಳಂಗೊಳಿಸು,** ಪದುಳಗೊಳಿಸು (ಕ್ರಿ). ೧. (ಸೇವೆಗೆ) ನೀಡು; ಒದಗಿಸು; ದಯಪಾಲಿಸು: ಪದಕಮಲಮಂ ಪದುಳಂ

ಗೊಳ್ವುದು ನಲ್ಮೆಯಿನೊಲ್ದು ಸೇವೆಗೆಯ್ವರ್ಗೆ (ಪಸ್ತವಂ. ೧-೬).

**ಪದುಳಗೊಳಿಸು :** ೨. ಅಂದಗೊಳಿಸು ; ಚೆಲುವಾಗಿಸು : ಪದುಳಗೊಳಿಸಿ ಪಲಬಗೆ ಪಸದನಗಳ ಪುದುಗಿಸಿ ಪೊಂದೊಡಿಗೆಗಳ ಮದುವೆಗೆ ನೆಱೆದ ಪೆಣ್ಮಕ್ಕಳ ನಿಟ್ಟೆಪರೆದೆಗೊಳಿಪಂತೆಸಗುವುದು (ಹವಿಬ. ೫-೧೪). [ಪದುಳ+ಕೊಳ್₁+-ಇಸು₃]

**ಪದುಳಂಬಡಿಸು** (ಕ್ರಿ). ಸುರಕ್ಷಿತವಾಗಿರುವಂತೆ ಮಾಡು ; ರಕ್ಷಣೆಯನ್ನುಂಟುಮಾಡು : ಇಂತಿರ್ಕೆಱಿಯವರನಾಳ್ಗೊಂಡು ಪಡುಗಡೆಯಂ ಪದುಳಂಬಡಿಸಿ ದೆಸೆಗೆಲಲೆಂದು ಮೂಡ ಮದನಾರಿಯ ಭಾರಿಯ ಮಾರಿಗಿಕ್ಕಿ . . . ಬಂದಂ (ಚಿಕವಿ. ೫-೩೧ ಪ). [ಪದುಳ+ಪಡಿಸು]

**ಪದುಳಂಬಡೆ,** ಪದುಳವಡೆ (ಕ್ರಿ). ೧. ಸಮಾಧಾನಗೊಳ್ಳು : ಕದುಬಂ ಕಳೆ ಕಡುಚದುರೆ ಪದುಳಂಬಡೆಯೊಸಗೆಯೇನದಂ ಬಿತ್ತರಿಸು (ಚಿಕವಿ. ೪-೧೮). ೨. ಸಂತೋಷಗೊಳ್ಳು : ಒಲ್ದು ನೋಡಿ ಪದುಳಂಬಡೆದುರ್ವ ನೀಳೆ ರಕ್ಷಿಕೆಮ್ಮನವಿರತಂ ಷಟಾಕ್ಷರಸದಿಂ(ವಿಷ್ಣು.ಪು.೧-೧-೪). **ಪದುಳವಡೆ :** ೧. ಮೋಹಮೀ ಪರಿಯೊಳೆನ್ನ ಮುಂದುಗೆಡಿಸುತ್ತಿದೆ . . . ಬಱಿದೆಯುವನ ಬಳಿಯ ನಿಂದು ಪದುಳವಡೆಯಲೀಸದು(ಗೀತಗೋ. ೩೦-೧೫). [ಪದುಳ+ಪಡೆ₁]

**ಪದುಳಂಬೆಱು** (ಕ್ರಿ). ಬೆಳೆ ; ಅಭಿವೃದ್ಧಿಯನ್ನು ಹೊಂದು : ಈ ತಾವಿಂದೆ ಸಂದಿಚ್ಛಕಂ ಪದುಳಂಬೆತ್ತುದು ಮತ್ತಮೀಂ ಭವಸುಖಂ ಪೆಂಪಾದುದೀ ಬೀದಿಯಿಂ (ಚಿಕವಿ. ೬-೬೫). [ಪದುಳ+ಪೆಱು₁]

**ಪದುಳಂಬೋಗು,** ಹದುಳಹೋಗು (ಕ್ರಿ). ೧. ಸಮಾಧಾನ ಹೊಂದು,—ಪಡೆ : ಗುದಜನಿತಂ ಭಗಪಾತಕರೊದವಿದ ಕೆಲಸಕ್ಕೆ ನೀಂ ಸಹಾಯನಹೆಯಯ್ ಪದುಳಂಬೋ[ಪಾಠಾಂ. ಪೋ]ಗು ಬೃಹಸ್ಪತಿ ಮುದದಿಂದಂ ಪೇಳು ಕಂಡ ಕಾರ್ಯದ ಹದನಂ (ಗಿಂಕ. ೬-೩೮ ಅಡಿಪದ್ಯ). **ಹದುಳಹೋಗು :** ೨. ಕ್ಷೇಮವಾಗಿ ಹೋಗು ; ಸುಖವಾಗಿ ಹೋಗು: ನೀವಿಲ್ಲಿಂದಂ ಹದುಳಹೋದಡೆ ಸಾವಿರಮದುವೆಯ ಮಾಡಿದ ಸಂತಸಂ (ನಂಬಿರ. ೬-೭೯); ಹೃದಯವನು ತೋಱಿಸದೆಯಲ್ಲಮ ಹದುಳ ಹೋಹನೆ ಕಾಂಬೆನೆನುತಲಿ ಮದಮತಿಯಲಾ ಗಿರಿಜೆ ನುಡಿದೊಡೆ(ಪ್ರಭುಲೀ. ೨-೩೯). [ಪದುಳ+ಪೋಗು₁(<ಪೋ₁)]

**ಪದುಳಗೊಳಿಸು** 'ಪದುಳಂಗೊಳಿಸು' ನೋ.

**ಪದುಳಗೊಳು** (ಕ್ರಿ). ಸುಲಭವಾಗಿ ದೊರಕು,—ಪ್ರಾಪ್ತವಾಗು : ಎರವಿಲ್ಲದೇಕವೆನಿಸಿ ಧರ್ಮದೊಳು ಸಂಸರಿಸುವ ಸತಿಪತಿಗಳಿಗೆ ಪುರುಷೋತ್ತಮನಡಿಗಳ ಪೂಜೆಯಿಂದಿಹ ಪರಸುಖ ಪದುಳಗೊಳುವುದು (ಹದಿಬ. ೬-೫೦). [ಪದುಳ+ಕೊಳು(<ಕೊಳ್₁)]

**ಪದುಳತೆ** (ನಾ). ಸೌಖ್ಯ : ಇದುವೆ ಪಂಚಾಕಾಶತಾರಕವಿದನು ದೇಶಿಕನಿಂದ ಬಲ್ಲವ ಪದುಳತೆಯಲಾ ಪಂಚಬ್ರಹ್ಮದ ಪದವನೈದುವನು (ಗಗತಾ. ೨೦-೨೧). [ಪದುಳ+-ತೆ₃]

**ಪದುಳಮಿರ್,** ಪದುಳವಿರು, ಪದುಳಿರು, ಹದುಳವಿರು, ಹದುಳಿರ್ (ಕ್ರಿ). ೧. ಸುಖವಾಗಿರು ; ಹಾಯಾಗಿರು : ಅತ್ಯಾಂತರಂಗದೊಳ್ ಪದುಳಮಿರ್ಪ ವಲ್ಲಭನಿಧಾನಮಂ ಬಂಚಿಸಿ ಕೃತಾಂತಸಾಧಕಂ ನೆಗಪಿಕೊಂಡುಯ್ಕೆ ಕಲ್ಲನೆ ಕನಲ್ದು (ವರ್ಧಪು. ೯-೬೦ ಪ); ಪದುಳಮಿರ್ದಡೆ ಸಾಲ್ವುದು ಎಂದರಸಂ ನುಡಿಯೆ ಬಸವಣ್ಣಂ ಕೇಳ್ದು ನಸುನಗುತ್ತೆ (ಬಸರ. ೧೦-೫೩); ನೇಸರ್ವೆಱಿಗಳಿರಾ ನೀವಿನಾಸುದಿನಂ ಬವಣಿಗೊಂಡಿರಿಂ ಪದುಳಮಿರಿಂ (ಅಪ್ರತಿ. ೪೦-೧೬). **ಪದುಳವಿರು :** ೧. ನಿನ್ನ ನಿಜಭಕ್ತಾಳಿಗಂ ನೀನು ಪದುಳವಿಹುದೆಂದು ಕರುಣಂಗೆಯ್ದ ಪರಶಿವನ ಚರಣಾಂಬುಜಕ್ಕೆ ಶರಣು (ಲತಿಚಂ. ೭-೧೫) ; ಇಂದುಶೇಖರನು . . . ನಲವಿಂದವಿರ್ಪರು ಪದುಳವಿಪ್ಪಂತೆ ಗೆಯ್ವೆ ನಾನೆಂದು ಸಂತೈಸಿ ಪೋದಂ (ಸೌಂದಪು. ೧೪-೧೩). ೨. ಸಮಾಧಾನದಿಂದ ಕೂಡಿರು ; ನಿಶ್ಚಿಂತನಾಗು ; ಶಾಂತನಾಗು : ಎದೆಗೆಟ್ಟು ದೇವಿಯಂ ದೋಷಿಯೆಂಬರೆ ಜೀಯ ಪದುಳವಿಹುದೆಂದು ವಿನಯದೊಳಗ್ರಜಾತನಂ ಕದುಬಿ ನುಡಿದಂ ಭರತಂ (ಜೈಮಿಭಾ. ೧೮-೫೩). **ಪದುಳಿರು :** ೧. ಸೂನೃತವಾದ ನುಡಿಯಂ ನಂಬಿ ಪದುಳಿರು ಚಿಂತಿಸದಿರಿನ್ನು (ಬಸಪು. ೩-೨೦) ; ಜನಕ ಹಿಮವಂತ ಗಿರಿರಾಜನಾದಂ ... ಓಷಧಿಪ್ರಸ್ಥಪುರವರದೊಳಂ ಪದುಳಿರುತ್ತ (ಲತಿಚಂ. ೧೪-೩). ೨. ತನುವೆರಡಾತ್ಮನೊಂದಾಗಿರುತಿಹೆವಾ ತನುವನುಳಿದು ಜೀವನವು ಮನವೊಸೆದೆಡೆಗೆ ಪೋಪುದ ನೋಡಿ ಪದುಳಿಹುದನು ಚಿತವೆಲೊ ಪ್ರಹಸಿತನೆ (ಅಂಜಚ. ೫-೯೯). **ಹದುಳವಿರು :** ೧. ಏನಿ ಬಂದಿರಿ ಹದುಳವಿದ್ದಿರೆ ಎಂದರೆ ನಿಮ್ಮ ಮೈಸಿರಿ ಹಾಱಿಹೋಹುದೆ (ಬಸಪ. ೨೪೧). **ಹದುಳಿರ್ :** ೧. ಕೀಳಾರು ಮೇಲಾರು ಹದುಳಿಪ್ಪ ನಾನು ಚಾಂಡಾಳನೋ ಹುಸಿಯ ಹೊಲೆಯಂ ಹೊಱುವ ನೀನು ಚಾಂಡಾಳನೋ ಹೇಳೆಂದೊಡೆ (ಹಚಕಾ. ೧೧-೨೦). [ಪದುಳಂ+ಇರ್₁]

**ಪದುಳಮಿರಿಸು,** ಪದುಳವಿರಿಸು, ಹದುಳಿರಿಸು (ಕ್ರಿ). ಕ್ಷೇಮವಾಗಿರಿಸು ; ಸುಖದಲ್ಲಿರಿಸು : ಅಖಿಳಧರಾಭಾರಮಂ ತನ್ನ ವಿಶ್ರಾಂತದ ಬಲ್ಪ ತನ್ನ ಕೋಳೋಳ್ಪದುಳಮಿರಿಸಿದಂ ವಿಕ್ರಮಾದಿತ್ಯದೇವಂ (ಎಕ. VII, ಶಿಕಾರಿ. ೧೨೪-೧೧ ; 1077). **ಪದುಳವಿರಿಸು :** ಆ ರಾಜಸಿಖಾಮಣಿ ಪ್ರಿಥ್ವಿರಾಜ್ಯಂಗೆಯ್ದು ಧವಳಛತ್ರಾಧಾರತೆಯಿಂ ಸಕಳ ಮಹೀಭಾರಮುಮಂ ಪದುಳವಿರಿಸಿದಂ ನರಸಿಂಹಂ (ಎಕ.XIV, ನಾಗಮಂ. ೧೪೦-೧೬ ; ಸು. 1224). **ಹದುಳಿರಿಸು :** ಹದುಳಿರಿಸಿಕೊಂಡಿದ್ದ ಭಕ್ತನು ಮದಿಸಿ . . . ಎಮ್ಮುವನಿನಿತು ಬಗೆಗೊಳ್ಳ(ಬಸಪು. ೫೫-೫). [ಪದುಳಂ+ಇರಿಸು]

**ಪದುಳವಡೆ** 'ಪದುಳಂಬಡೆ' ನೋ.

**ಪದುಳವಿರಿಸು** 'ಪದುಳಮಿರಿಸು' ನೋ.

**ಪದುಳವಿರು** 'ಪದುಳಮಿರ್' ನೋ.

**ಪದುಳಿಕೆ** (ನಾ). ೧. ಸಮಾಧಾನ ; ಶಾಂತಿ ; ನೆಮ್ಮದಿ : ಕರಮೆ ಪದುಳಿಕೆಯಂ ಸೊಂಪಾವರಿಸಿದ ನಿಜಸದಯಹೃದಯಸದನದೊಳತ್ಯಾದರದಿಂ ಸಕಳತ್ಯಾಗಸ್ವರೂಪಸನ್ಯಸನದೈವಮಂ ಸ್ಥಾಪಿಸಿದಂ (ವರ್ಧಪು. ೩-೯). ೨. ದೃಢತೆ; ಸ್ಥಿರವಾಗಿರುವಿಕೆ : ಪದುಳಿಕೆಗುಂದದಿರ್ದ ಪೞತರಕದ ಚೆಲ್ವು ಸಡಿಲ್ದುದಿಲ್ಲ ಕರ್ಮದ ಬಿಗಿಪೊಯ್ಯನೊಯ್ಯನೆ ಸಡಿಲ್ದುದು (ಸುಕುಮಾ. ೯-೧೬) ; ಮರೀಚಿಯುಮದೃಢಮನಂ ವಿಗಳಿತಾರ್ಹತಬ್ರತಮಾರ್ಗಂ ಪದುಳಿಕೆಯನುೞಿದು ಕೌಪೀನದಂಡಮೌಂಜೀಶಿಖಾದಿ ವೇಷಮನಾಂತಂ (ವರ್ಧಪು. ೧೦-೪೪) ; ಮನದ ಪದುಳಿಕೆಗೆ ಕಂಟಕಮೆನಿಪ ಬಹಿರ್ವಿಷಯ ವಿಷಮದೇವುದೋ (ಪಸಾರ. ೪೫೩). ೩. ಹೆಸರುವಾಸಿ; ಪ್ರಸಿದ್ಧಿ : ಅದು ನೂಱ ನಾಲ್ವತೆಂಬೀ ಪದುಳಿಕೆಯಂ ತಳೆದು ಕಂಪಣ[ಂ] ಶ್ರೀಯಿ[ಂ]ದಭ್ಯುದಯ[ಂ] ಲಕ್ಷ್ಮೀನಿವಾಸಾಸ್ಪದವೆನಲೀ ಬ್ಯಾಸಪುರವರಂ ರಂಜಿಸುಗುಂ (ಕಇ. IV, ೧೦-೧೩ ; 1121). [ಪದುಳ+-ಇಕೆ]

**ಪದುಳಿಕೆವೆಱು** (ಕ್ರಿ). ಪ್ರಸಿದ್ಧಿಯನ್ನು ಪಡೆ,—ಹೊಂದು ; ಹೆಸರುವಾಸಿಯಾಗು : ದಯಾಪರನೆಂದು ಪುಣ್ಯಸಂಪದದೊದವಿಂದೆ ತಾನೆ ಗತಿ ಮಂತ್ರದಿ ತಂತ್ರದಿ ಬಲ್×ನೆಂಬುದಂ ಪದುಳಿಕೆವೆತ್ತ ಪುಣ್ಯನಿಧಿಯಂ ಸಲೆ ಬೇಡಿರೆ ಮಂತ್ರಿ ಘಟ್ಟಿಯಂ (ಎಕ.XII, ತಿಪಟೂ. ೧೨೮-೫೬;1202). [ಪದುಳಿಕೆ+ಪೆಱು₁]

**ಪದುಳಿಗ,** ಹದುಳಿಗ (ನಾ). ೧. ಕ್ಷೇಮದಿಂದಿರುವವನು ; ಸುಖವಾಗಿರುವವನು : ಚದುರನೆನಿಪ್ಪಂ ಮಿಥ್ಯಾತ್ವದ ಬಾರಿಗೆ ಪೋಗಿ ಬಿರ್ದು ಸಂಸಾರಸಮುದ್ರದೊಳರ್ದು ಕಿಡದೆ ಮುನ್ನಮೆ ಪದುಳಿಗನಾಗಱಿದು ಪಿಡಿವುದೀ ದರ್ಶನಮಂ (ಧರ್ಮಾಮೃ. ೬-೨೦೬) ; ಸಂತಂ ಸತ್ಕೃತಿಗೊಲ್ವನೀ

ಪದುಳಿಗಂ ಮುನ್ನಾಂತ ಸನ್ನಂಗಳಕ್ಕೆಂತುಂ ಪಾತ್ರನುದಾರನೆಂದುಸುರುತುಂ ತವಿಮ್ಮಲ್ಲಿ ಪೋದರ್ಜನರ್ (ನೈಸೂಮ. ೬-೧೫೨) ; ಮುದದಿಸೀವುತ ನಿನ್ನ ಸತಿಸುತ ಪದುಳಿಗರು ನೀಂ ಸೇವಿಸೆನೆ. ಭೂಸುದತಿಯಾಣ್ಮನ ಸಿಂಹಪೀಠದ ಮೇಲೆ ಕುಳ್ಳಿರಿಸಿ (ದೇವಪು. ೯-೪೪). **೨.** ಹಿತವನ್ನುಂಟುಮಾಡುವವನು ; ಹಿತಕಾರಿ : ಪ್ರಿಯಂವದಂ ಪದುಳಿಗ(ನ)ನೆಂತುಮೊಳ್ಳಿದನೆನಿಪ್ಪೊಡೆ ದೂತನ ಮಾತದುತ್ತಮಂ (ಲೋಕೋಪ. ೧೦-೫) ; ಸಚಿವಂ ಸುಬುದ್ಧಿಯೆಂಬವಂ . . . ಸಂತತಂ ಪ್ರಜೆಗಳಂ ಪ್ರೀತಿಯಿಂ ಪೊರೆದು ಪರಿಜನಕೆ ಪದುಳಿಗನಾಗಿ ಭೂಪನಂ ಪೋಷಿಸುವನು (ಜೈಮಿಭಾ. ೧೭-೧೩). **೩.** ಎಚ್ಚರಿಕೆಯುಳ್ಳವನು ; ಜಾಗರೂಕ : ಬಟ್ಟೆಯೊಳ್ ಭಯಮುಳ್ಳುದನಱಿದಂಜಿ ಕೆಯ್ದುವನೋಸರಿಸಿಕೊಂಡು ಪದುಳಿಗ [ಪಾಠಾಂ.ದ]ನಾಗಿ ನಡೆವಾತಂ ತನ್ನುದ್ದೇಶಿಸಿದೆಡೆಯ್ಗಂ ಬೇಗಮೆಯ್ದುವಂ (ಜೀವಸಂ. ೧೭೫-೫); ಪದುಳಿಗನಪ್ಪುದೋಜೆವೆರಸಿಪ್ಪುದು . . . ಲಘುಹಸ್ತನಪ್ಪುದು ವಿಶೇಷಗುಣಂ ಗಣಕಂಗೆ ಲಕ್ಷಣಂ (ಸೂಕ್ತಿಸು. ೧೬-೩೭). **ಹದುಳಿಗ : ೧.** ಹದುಳಿಗನು ದೇವೇಂದ್ರನಾತನ ಸುದತಿಯರು ಸುಖಜೀವಿಗಳು (ಕುಪ್ಪ್ಯಾಅ. ಓರಿಇ. ೧೨-೨೭) ; ಕುಶಲನೇ ಜನಕಕ್ಷಿತೀಶನು ಕುಶಪತಾಕನು ಹದುಳಿಗನೆ (ತೊರರಾ.೧-೧೬-೪); ತಂಗಿ ಬಂದೌ ತಾಯೆ ಲೇಸಾಯ್ತಂಗಜನಪಿತ ಹದುಳಿಗನೆ (ಕೋಗಯು. ೧೪-೧೮). **೨.** ಪ್ರಜೆಗಳಿಗೆ ಪ್ರಿಯನಾಗಿ ಪರಿಜನಕ್ಕೆ ಹದುಳಿಗನಾಗಿ ರಾಜನನ್ನು ಸುಬುದ್ಧಿ ಪೋಷಿಸುತ್ತಾನೆ (ಬಿದುರಿ. ೮೨). **೪.** ದೃಢವಾದ ಮನಸ್ಸಿನಿಂದ ಕೂಡಿದವನು ; ಸ್ಥಿರಚಿತ್ತ: ಹದುಳಿಗನಾಗಿ ಉಳಿದರೆ ಪದವಿಯನೀವ ಕಾಣಾ ಕೂಡಲಸಂಗಮದೇವ (ಬಸವ. ೬೬೦). **೫.** ಸಂತೋಷಚಿತ್ತ ; ತೃಪ್ತ : ಅದು ಬೇಕು ಇದು ಬೇಕು ಎಂದೆಂಬ ಎದೆಗುದಿಹತನ ಬೇಡ ಹದುಳಿಗನಾಗಿದ್ದರೆ ಸಾಕು (ಸಮಾಪ. ೧-೩) ; ಹದುಳಿಗರಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯ ನೀನು (ಮಹಾದೇ. ಬ. ೧೨-೯) ; ಹದುಳಿಗರು ದಾಸೋಹತನದಲಿ ವಿದಿತ ಕಾಮ ಕ್ರೋಧ ಲೋಭಾಸ್ಪದವಿರಹಿತರವರ್ಗಳಿರವಂ ಕೇಳು (ಬಸವು. ೨೩-೪೨). [ಪದುಳ + -ಇಗ]

**ಪದುಳಿದ,** ಹದುಳಿದ (ನಾ). **೧.** = ಪದುಳಿಗ **೧** : ಪದಯಿದನೆನೆ ಪದುಳಿದನೆನೆ . . . ನೆಗಟ್ದಾಹವಮಲ್ಲದೇವನಂ ಮನದೆಗೊಂಡನಣ್ಣಿಗದೇವಂ (ಅಜಿಪು. ೧೨-೨೩) ; ಧನಪತಿ ಪದುಳಿದನೂನಾಂಗಿ ನಿಪುಣಮತಿ ನಳಸಮುದ್ಭವಂ (ಜಾತತಿ. ೧೩-೧೨). **೨.** = ಪದುಳಿಗ **೨** : ಇದೇಂ ಪದುಳಿದನೆಂದು ಕೀರ್ತಿಪುದೊ ಗೋನುಗನಂ ಸಕಳಾವನೀತಳಂ (ಎಕ.VIII, ಸಾಗರ. ೧೦೮-೨೫ ; 1631). **೩.** ಸ್ಥಿರಮನಸ್ಸುಳ್ಳವನು; ದೃಢಚಿತ್ತ : ಪದುಳಿದನಲ್ಲದನಂ ಕಲಿಸಿದೊಡಂ ತಿಳಿಪಿದೊಡಮೇಂ ನಿಲಲ್ಕಱಿಗುಮೆ (ಸಮಪ. ೧೧-೧೪೯). **ಹದುಳಿದ : ೨.** "ವಿಸ್ರಬ್ಧಃ, ಸ್ಥಿರಃ -೨ ಹದುಳಿ(ಗ)ದಂ" (ಹಲಾಯು. ೬೧-೨೧೫). 'ಪದಯಿದ' ಪರಾ. [<ಪದುಳ]

**ಪದುಳಿರು** 'ಪದುಳಮಿರ್' ನೋ.

**ಪದುಳಿಸು,** ಹದುಳಿಸು (ಕ್ರಿ). **೧.** ಕಾಪಾಡು ; ಸುಖವಾಗಿರುವಂತೆ ಮಾಡು : ಮದವದರಿಸ್ತ್ರಿಪರನಾಜಿಯೊಳದಿರದೆ ಬೆಂಕೊಂಡು ಧರೆಯನುನ್ನತಶೌರ್ಯ್ಯಂ ಪದುಳಿಸಿ ಪಾಳಿಸಿ ಕೀರ್ತ್ತಿಯನೊದವಿಸಿದಂ ಗುಣವಿಭಾಸಿ ಮನ್ನೆಯ ಸೋಮ (ಎಕ. VII, ಚನ್ನಗಿ. ೩೮-೯;1149 ?); ಹರಿ ಪದುಮಭವ ರುದ್ರಾಖ್ಯರು . . . ಪದುಳಿಸುವ ಸೃಜಿಸುವ ಸಮಸ್ತವನೊದಗಿಸುವ ಸಂಹರಿಸುವಾ ಕರ್ಮದಲಿ ಸೇರಿದರಾ ಮಹಾಪುರುಷರ ನೇಮದಲಿ (ನಿಭಾಗ. ೬-೩-೩೫). **೨.** ಸಂತೋಷಪಡು ; ಹಿಗ್ಗು : ವರ್ತಿಸಿತು ಸದಪಿಸಿಂ ಜಯರವಂ ಲೋಕದೊಳ್ ನಾಕದೊಳ್ ಪದುಳಿಸಿದರಮರರ್ ಪ್ರಮೋದದಿಂ (ಚೆಬಪು.೪೦-೩೨); ಪದುಳಿಸಿದರನಿರುದ್ಧ ಸಾತ್ಯಕಿ ಪ್ರದ್ಯುಮ್ನ ಗದ ಸಾಂಬ ಕೃತವರ್ಮ ನಿಶಠಪ್ರಮುಖರಾದ ಯದುವೀರರು (ಜೈಮಿಭಾ. ೨೪-೬೯). **೩.** ತೃಪ್ತಿಹೊಂದು ; ತಣಿ : ತೊಱೆಯೊಳ್ ಪೋಪವಂಗೆ ತೆಪ್ಪವನಿಕ್ಕಿದಂತಿಕ್ಕಿದ ಗಟ್ಟಿಗೊಂಡ ಬಲ್ಮೊಸರಂ ಕೊಂಡು ಪದುಳಿಸಿ ನಿಂದ ಬಱಿಕ್ಕಂ (ಧರ್ಮಾಮೃ. ೧-೧೪೮). **೪.** ಸಮಾಧಾನಗೊಳ್ಳು ; ನೆಮ್ಮದಿಯನ್ನು ಹೊಂದು ; ಸಂತೈಸಿಕೊಳ್ಳು : ತನ್ನಂತಿರೆ ಬಗೆವುದು ಪೆಱರಂ ಪ್ರಾಣಹಿಂಸೆಯಂ ಮಾಡಲ್ವೇಡ . . . ಪದುಳಿಸಿ ಕೇಳ್ ಮಗನೆ ಹಿತಮಿದುಭಯಭವಕ್ಕಂ (ಯಶೋಚ. ೪-೩೫). **೫.** ಸಾವರಿಸಿಕೊಳ್ಳು ; ಚೇತರಿಸಿಕೊಳ್ಳು : ಆಗಳವರೆಂತಾನುಂ ಸಂತೈಸಿ ಪದುಳಿಸಿ ಮಗುೞೆ ಕುಳ್ಳಿರ್ದು ಮಗಧಪತಿ ಜರಾಸಂಧಂ ಶಿಶುಪಾಲ ಸಾಲ್ವ ದಂತವಕ್ತ್ರಾದಿಗಳ ಮೊಗಮಂ ನೋಡಿ (ಜಗವಿ. ೮-೮೩ ವ) ; ಅದನೀಕ್ಷಿಸಿ ನಳನರಪತಿಯಿದು ಮತ್ಸಖಿಯೆಂದೊಡಾಕ್ಷಣಂ ಕಡುಪಿಂದಂ ಹೃದಯದ ತಾಪಂ ಪೆರ್ಚಲ್ ಪದುಳಿಸಿಕೊಂಡಂ ಮಗುಟ್ದು ಧೀರೋದಾತ್ತಂ (ನಳಚಂ. ೭೩). **೬.** ಕುಗ್ಗು ; ಕಡಮೆಯಾಗು ; ಶಮನವಾಗು: ಸಿರಿಯಾಳಂ ಹೃದಯದಲಿ ಬೆದಬೆದನೆ ಕುದಿವುತ್ತ ಶೋಕಂ ಪದುಳಿಸದೆ ತಲೆವಾಗಿ ಲಜ್ಜಿಸಿಯಳಲುತಿಂತಿರಲು (ಬಸವು. ೨೪-೬೬). **೭.** ಸಮಸ್ಥಿತಿಗೆ ಬರು : ಪದುಳಿಸದಂಗಮೆಟ್ಟಿಱಿದ ಕಣ್ಮಲರ್ . . . ಗಂದೆಯೇಱಿದ ಕರಘಾತಮೊಪ್ಪೆ ಸುಸಿಲಿಂ ತಣಿದೊಯ್ಯನೆ ಜಾರೆ ಜಾಱಿದಳ್ (ಲೀಲಾವ. ೩-೧೫); ಪದುಳಿಸದ ತನು ಪುದಿದ ಪುಳಕಾಳಿವೆರಸಿ ಗುರುವಂ ನೋಳ್ಪ ತವಕದಿಂ ಸುರತಾಂತಕಾಂತೆಯರದೇಂ ಬಂದರೋ (ಪದ್ಮರಾ. ೩-೭೦); "ಪ್ರೀತಿಸು" (ಪದ್ಮರಾ. ಕೋಶ). **೮.** ಒದಗಿಸು ; ಉಂಟುಮಾಡು : ಹದನಾದ ನಾಣುದಾಣಕೆ ಲಿಂಗಯೋಗವ ಪದುಳಿಸುವಾಗ ಸ್ವರ್ಗವನು ವಿದಿಯದೆ ಗೇಣು ಚೋಟೆನೆ ತೋಱುತಿದ್ದುದು (ಭರಚ. ೪೧-೬೨). **ಹದುಳಿಸು: ೪.** ಮದನರಿಪು ತನ್ನೊಳಗೆ ಕಿನ್ನರನಸುವನಡಗಿಸಲು ಹೆದಱಿ ದಂಡಾಧೀಶ್ವರಂ ಮನಗದಡಿ ಬೊಮ್ಮಯ್ಯಗಳನೀಕ್ಷಿಸಿ ಹದುಳಿಸದೆ ನಿಬ್ಬರದ ಶೋಕಾಕ್ರಾಂತನಾಗುತ್ತ (ಬಸವು. ೩೬-೧) ; ತಾಯೆ ಹದುಳಿಸು ದೇವಲೋಕದಲಾಯದಲಿ ಸಲಿಸಾ ಕುಮಾರರನು (ಕುವ್ಯಾಗ. ೧೧-೧೪); ಹದುಳಿಸೆಲೆ ರಾಜೇಂದ್ರ . . . ನಿನ್ನ ಕುಲಸಂಪದದ ಸಿರಿಗಾಭರಣನಾದನು ಪುತ್ರನೆಂದೆಂಬ ಮುದವಿರಲುಬೇಕು (ತೊರರಾ. ೨-೫-೭) ; ದೇವ ನಿನ್ನ ಮುಖಾಬ್ಜವನು ಬಿಟ್ಟಾವ ಪರಿಯಲಿ ಹದುಳಿಸುವೆನು (ಅಕ್ರೂಚ. ೪-೭೮); ಹರಣ ಹದುಳಿಸೆ ವಿಪ್ರಸುತನಿಗೆ (ಉತ್ತಕ. ೪೭-೨೯). **೫.** ರಥದೊಳಗೆ ಮಾದ್ರೇಶನೀ ಸಮರಥನ ಸಂತೈಸಿದನು ಕವಳಪ್ರಥಿತಮಂತ್ರೌಷಧಿಗಳಲಿ ಹದುಳಿಸಿದನಾ ಕರ್ಣ (ಕುಪ್ಪ್ಯಾಕ. ೧೨-೩೨) ; ಕರಪುಟಮೇಳವಿಸಿ ವೈಯಿಕ್ಕಿ ಪರಮಕೃಪಾಳುವಿಗೆ ಬಿನ್ನೈಸಿದನು ಹದುಳಿಸುತ ನಾಗೇಂದ್ರ (ನಿಭಾಗ. ೧೦-೧೬-೫೩). **೯.** ತೃಪ್ತಿಪಡಿಸು ; ತಣಿಸು: ಭೂಮಿಪತಿ ಕೇಳಿಂದು ವರಲಕ್ಷ್ಮೀಮನೋಹರ ಧೌಮ್ಯಮುನಿಯೆನೆ ಪ್ರೇಮದಲಿ ಮುನಿನಿಕರವನೆ ಹದುಳಿಸಿದನೊಲವಿನಲಿ (ಕುಪ್ಪ್ಯಾಅ. ಓರಿಇ. ೪-೬೦). **೧೦.** ನಿಯಂತ್ರಿಸು ; ಹತೋಟಿಯಲ್ಲಿಡು : ನಾವು ವೃದ್ಧರು ನಮ್ಮ ಬಾಲವ ನಾವು ಹದುಳಿಸಲಾಱೆವು (ಕುಪ್ಪ್ಯಾಅ. ೧೦-೧೭) ; ಮದನಾತುರ ಕೈವಿಡಾಱದೊಡೆದೆಯೊಳೆ ಹದುಳಿಸಬೇಕಲ್ಲದಿಂತು ಇದಿರಿಗೆ ಕಾಣಿಪುದುಚಿತವೆ (ಕುರಾಸಾಂ. ೨೩-೯೩). **೧೧.** ಎಚ್ಚರಿಸು ; ಜಾಗ್ರತಗೊಳಿಸು : ಅದು ಶಿವೈಕ್ಯರ ಮನೆಗಳಾದಡೆ ಮುದದಿ ಹೆಸರಂ ಹೇಳಿ ವಂದಿಸಿ ಹದುಳಿಸುತ ಬಹನು . . . ಬೊಮ್ಮಯ್ಯ (ಬಸವು. ೩೧-೨೬).

**ಪದುಳಿಸಿಕೊಳು, ಹದುಳಿಸಿಕೊಳು** = **೧.** ಸಮಾಧಾನಮಾಡಿಕೊಳ್ಳು ; ಸಂತೈಸಿಕೊಳ್ಳು : ಭಾವದಲಿ ಮಿಗೆ ಕಳವಳಿಸಿ ಪದುಳಿಸಿಕೊಳುತ ಭೂಪತಿತಿಲಕ ಚಿಂತಿಸಿ ನೆನೆವುತಿದ್ದನು ವೀರನರಯಣನ

(ಕುಮ್ಯಾಸ. ೧–೯೪) ; ಧರಣಿಪಾಲಕುಮಾರನಾ ಹರಿಚರಣಕಮಲವಿಯೋಗ ಚಿಂತಾತುರನು ತನ್ನಲ್ಲಿ ತಾನೆ ಹದುಳಿಸಿಕೊಂಡು ನಿಜಮನವ . . . ಮರಳಿ ದನು ನಿಜಪುರಕೆ (ಶಿಭಾಗ. ೪–೮–೩೮). **೨. ಚೇತರಿಸಿಕೊಳ್ಳು** ; ಸಾವರಿಸಿಕೊಳ್ಳು : ಬಂದವೆಲ್ಲಿಂದಿಲ್ಲಿಗಾರೋ ತಂದು ಬಿಸುಟರು ನಮ್ಮ ನಿತ್ತಲು ಮಂದಿರಕೆ . . . ಎಂದು ವಿಸ್ಮಿತರಾಗಿ ಪ್ರಮಥರು ನೊಂದು ಹದುಳಿಸಿಕೊಳುತ ಗಮಿಸಿದರು (ಶಿಭಾಗ. ೧೦–೫೬–೧೩). [ಪದುಳ+–ಇಸು₃]

**ಪದೆ,** ಹದೆ, (ಕ್ರಿ). **೧.** ಬಯಸು ; ಆಸೆಪಡು ; ಇಷ್ಟಪಡು ; ಅಪೇಕ್ಷಿಸು: "ಪದೆ–ಈಪ್ಸಾಯಾಂ(ಅಪೇಕ್ಷಿಸು)" (ಶಮಧಾ); ಅಲಸದೆ ಪೀನಂ ಪದೆಯದೆ ಪಾಂಗಱಿದು ದೋಷಮಂ ಪಿಂಗಿಸಿ ತಪ್ಪದೆ ಬಗೆದು ಪೇೞ್ವು ದಾಗಮಮುದಾರನ್ನಪತುಂಗದೇವವಿದಿತಕ್ರಮದಿಂ (ಕವಿರಾ. ೧–೪೪) ; ಕನ್ನೆಯಂ ಪದೆದೊಡಗೊಂಡು ಪೋಗಿರದಿರೆಂದು ಗುಣಾರ್ಣವಭೂಭುಜಂಗೆ ಕಟ್ಟಿದಿರೊಳಿ ಬಟ್ಟೆದೋಱುವವೊಲಂದೊಗೆದಂ ಕಮಲೈಕಬಾಂಧವಂ (ಪಂಪಭಾ. ೪–೧೧೧) ; ದೊರೆಕೊಳ್ಳದುದಕ್ಕಧಿಕರ್ ವಿವೇಕಿಗಳ್ ಪದೆವರೆ (ಅನಂಪು. ೧೨–೬೫) ; ಕೌಸಲೆ ಕುಮಾರರ ಪದೆದು ಹಡೆದುದೆ ಸಫಲ (ಕುಮ್ಯಾಉ. ೮–೨೨) ; ಘನರಸಮಂ ಪದೆದೀಂಟುವ ವಿನುತಂ ಚಾದಗೆ ಕುಮಾರಿಯಂ ಕುಡಿವುದೆ (ಶಬಶಂ. ೧–೨೨) ; ನಿನ್ನ ಪದೆವಂದೆರೆದ ಬಡ ತಿರುಕರೆಲ್ಲಿ ? (೧೪ಶಿಂ. ೩೦–೮೨). **೨. ಉತ್ಸಾಹಿಸು; ಹುರುಪಿನಿಂದ ಕೂಡಿರು ; ಹುಮ್ಮಸ್ಸಿನಿಂದ ಕೂಡಿರು :** ಪದೆದಡಿಯಿಟ್ಟವೊಲ್ ಕುಸುಮದೊಳ್ ಮದನಾಯುಧಲಕ್ಷ್ಮಿ . . . ನವಯೌವನಲಕ್ಷ್ಮಿ ವಿಳಾಸಲಕ್ಷ್ಮಿಯಿಂದದಿನಡಿಯಿಟ್ಟುದೆಂದು ವಸುದೇವನ ಚೆಲ್ವದರ್ಪಂಗ ಯಷ್ಟಿಯೊಳ್ (ಅರ್ಧನೇ. ೪–೧೩೨) ; ಪದೆದು ಪೂರ್ಯಿಪ ಶಂಖಧ್ವಾನ ವಂದೊಗೆಯೆ (ಇಹರ. ದೇ. ೪೫–೪) ; ಮೃದುಮೃದಂಗಂ ಬಹಳ ಕಹಳಾ ರವದ ನಡುವೆ ಪದೆದು ಪೊಣ್ಮುವ ಶಂಖಭೇರೀರವದ ನಡುವೆ . . . ಅಂಗಜಹರಂಗೆ ಮುಕುರಂದೋಱು ವೈಯಿಕ್ಕಿ ನಿಂದು (ಬಸರ. ೩–೭೮). **೩. ಉತ್ಕಂಠೆಯಿಂದ ಕೂಡಿರು ; ಉದ್ವಿಗ್ನವಾಗು :** ಪವಣಿಲ್ಲದ ದೊಂದೌತ್ಸುಕ್ಯವನೊಳಕೊಂಡೆನ್ನ ಮನಮುಪಾರೂಢಮಹೋತ್ಸವಮಂ ಕೇಳಲ್ಪದೆದಪುದವನೀಶ ನಿವೇದಿಸು (ಕಾದಂಪೂ. ೩೮೮) ; ಪದೆದೆಯ್ದಿ ಜಾರೆ ಸಂಕೇತದ ಗೃಹದೊಳ್ಪ್ರಿಯನನಲ್ಲಿ ಕಾಣದೆ ಮನದೊಳ್ ಬೆದಱುತ್ತಂ . . . ಪೋಗುತ್ತಿರ್ದಳ್ (ತ್ರಿಪುವಿ. ೨೪–೧೩೦). **೪. ಒಲಿ ; ಮೆಚ್ಚು;** ಪ್ರೀತಿಸು : ಪದೆವ ಮನಂಬೆರಸೆಱಗಿದ ಪದದೊಳದೇಂ ಚೆಲ್ವುವಡೆದುವೋ ಜಿನಜನನಿಪದಪಲ್ಲವತಳದೊಳ್ ಸುರಸುದತೀಜಯದಲಕವಲ್ಲರೀಕುಸುಮಂಗಳ್ (ಆದಿಪು. ೭–೪) ; ಪದೆವೆರ್ದೆ ಬತ್ತೆ ಕೆತ್ತುವಧರಂ ದೆಸೆಗೆಟ್ಟಲರ್ಗಣ್ಣ ನೋಟಂ . . . ಈಕೆಯೊಳೀಗಳಾದುದಿಂತಿದು ಕುಸುಮಾಸ್ತ್ರನೆಂಬದಟ ನಿಕ್ಕಿದ ಸೋರ್ಕಿನ ಗೊಡ್ಡಮಾಗದೇ (ಪಂಪಭಾ. ೪–೬೦) ; ಪದಮಂ ಚಂದ್ರಮಂ . . . ಸೋಂಕಿನೊದವಂ ಮಂದಾನಿಳಂ ಕೊಟ್ಟ ವೊಲ್ಪದೆದೋರೊರ್ವರೊಳೊರ್ವರಂದು ಪಡೆದರ್ ಪಂಚೇಂದ್ರಿಯ ಪ್ರೀತಿಯಂ(ಪಲ್ಲಿಪು. ೩–೯೦) ; ಏಣವಿಶಾಲನೇತ್ರೆ ಪದೆದೆನ್ನ ಮನೋಹರ ವಕ್ತ್ರಪದ್ಮಮಂ ಕೂಣಿತದೃಷ್ಟಿಯಿಂದಡರ್ದು ನೋಡಲೊಡಂ (ದಶಕು. ೧೨–೩೬) ; ಆ ಮಂತ್ರಿವಮೌಳಿಮಣಿಗೆ . . . ಚೋಳಧರಾಭಾಮಾಧಿಪತಿ ಮನೋಜ್ಞಶ್ರೀಮಹಿತಂ ಪೃಥುಳಭಾಗ್ಯಮಂ ಪದೆದಿತ್ತಂ (ರಾಜಶೇ.೩–೨೫). **೫. ನಲಿ ; ಹಿಗ್ಗು ; ಸಂತೋಷದಿಂದಿರು :** ಇದಿರ್ಗೊಳ್ವುದು ಕಾಲ್ಗಳ್ಚುವುದು . . . ಪದೆದನ್ನಮನೀವುದೆಂಬ ನವವಿಧಪುಣ್ಯಂ ತಮಗೆ ದೊರೆಕೊಳೆ (ಆದಿಪು. ೪–೯೬) ; ನಲ್ಲನುತ್ಸವೋಕ್ತಿಗಳವತಂಸಮಾಗೆ ಪುಳಕಾಂಕುರಮೊರ್ಮೊದಲಾದುವಾ ಲತಾಂಗಿಗೆ ಪದೆ[ಪಾಠಾಂ. ದೆ]ದಾಳಿ ಸಲ್ಪಡೆವರಾರೊ ತನೂಭವಲಾಭವಾರ್ತೆಯಂ (ಪಲ್ಲಿಪು. ೪–೨೯) ; ಪದೆದ ಲದೆರ್ೂಡವಂ ಲತಿಕಾಸ್ಪದಮಂ ನೆಱೆ ಮಾಡಿ ಹರ್ಷದತಿಶಯಮಂ ಕೋರ್ವುದು (ಕುಸುಮಾ. ೧೨–೧೩೬) ; ಪಾಡಿದರ್ ಪದೆದು ಗಂಧರ್ವ ರಾನಂದದಿಂ (ಚೆಬಪು. ೪೦–೩೨). **೬. ಚೆಲುವಾಗಿರು; ಸೊಗಸಾಗಿರು:** ಇದು ಮಳಯಾಚಳಂ ಮಳಯಜಂ ಮಳಯಾನಿಳನೆಂದು ಪೆಂಪುವೆತ್ತುದು ಸಿರಿಕಂಡಮುಂ ಪ[ದೆ][ಪಾಠಾಂ. ಡೆ]ದು ತೀಡುವ ಗಾಳಿಯುಂ (ಪಂಪಭಾ. ೪–೨೧) ; ಪದೆದೊಳ್ಪಡೆಗಳ್ ಬಲಿದೊಪ್ಪಿದುವು . . . ಆ ಕುವರಂಗೆ ಶೈಶವಾತಿಕ್ರಮದೊಳ್ (ತ್ರಿಪುವಿ. ೧೭–೧೭೭). **೭. ಬೆಳೆ ; ವೃದ್ಧಿಸು ; ಹೆಚ್ಚಾಗು :** ಅತಿಬಹಳಜಲನ್ಧೀವಳಬ್ಧಾಸಮುದ್ರಂ ಪದೆದಾಯಾಸಕ್ಕೆ ಪಕ್ಕಾಗಿರೆ (ಎಕ. X, ಮುಳಬಾ. ೩೮–೨೦ ; ಸು. 890) ; ಬಳಸುವ ಬೇಟದೊಳ್ . . . ಗೊಲೆಗೊಂಡ ಬೇಟವೆಂಬೆಳಲತೆ ಕೂಟದೊಳ್ ಪದೆದು ಪತ್ತೆರ್ದೆಗಿಂಪಿನಲಂಪನೀಯದೇ (ಆದಿಪು. ೧೨–೨೦) ; ಪದೆದನು ತಾಪದಿಂ ತನು ಬೆಳರ್ತುದು (ಸೂಕ್ತಿಸು. ೧೫–೩೪). **೮. ಹೆಚ್ಚಾಗು ವಂತೆ ಮಾಡು ; ಬೆಳೆಸು :** ಅರಗಿನ ಮಾಡದೊಳ್ಪದ ಲಡ್ಡುಗೆಯೊಳ್ಕೊಲಲೆಂದು ಬಂಧುಮತ್ಸರದೊಳೆ ವೈರಮಂ ಪದೆದು ಭೀಮನನಿನ್ನಿ ನಿತರ್ಕೆ ತಂದ ನೀಂ ಮರುಳನೊ (ಗದಾಯು. ೪–೪೪). **೯. ಒಳಗೊಳ್ಳು ; ತಳೆ; ಹೊಂದು :** ಮೆಲ್ಲನೆ ತಣ್ಪಂ ತನಿಗಂಪುಮಂ ಪದೆದು ತೀಡಿತ್ತೊಂದು ಮಂದಾನಿಲಂ (ಸುಕುಮಾ. ೪–೪೫) ; ಪುದಿದ ತಣ್ಪನಾಲಿಂಗಿಸಿ ತಣ್ಣನೆ ಪದೆದು ಮಂದಗತಿಯಿಂದಂ ಪಣ್ಣನೆ . . . ಮಾರುತನೆಂಬ ಕಾಮುಕಂ ಸುಳಿಗುಮನಾರತಂ (ಸುಕುಮಾ. ೧೦–೫೫ ರಗಳೆ). **೧೦. ವ್ಯಕ್ತವಾಗು; ಪ್ರಕಟವಾಗು :** ಉದಯವಪ್ಪ ಸದಮಲಾಮೃತಕರನೊ ಎಂಬಂತೆ ಭೂತಳಕ್ಕುದಯಿಸಿದನಮೃತಕರನಾಗಿ ಸಕಲರು ನಲಿಯೆ ಪದೆದು ಕುವಲಯ ಲೋಕದಘತಿಮಿರವೋಡೆ ಕರಕಮಲಾಳಿ ಮುಗಿಯಲಂದು (ಸಿದ್ಧರಾ. ೬–೫೧) ; ಬಲಭಾರಕ್ಕೆ ಧರಾತಳಂ ಕುಸಿಯೆ . . . ಪದೆದೆಳ್ತಂದಂ ನರೇಂದ್ರಾತ್ಮಜಂ (ರಾಜಶೇ. ೧೩–೭೭). **೧೧. ಯತ್ನಿಸು ; ಪ್ರಯತ್ನಪಡು :** ಗುದದೊಳಗಪಾನಹರಿಯಿರ್ದು ಮಲಮೂತ್ರಮುಮನೊದವಲೀಯದೆ ವಿಸರ್ಜಿಸಿಯಧೋದ್ವಾರಮಂ ಪದೆದು ಬಲಿದನ್ನರಸಮಂ ವ್ಯಾಪ್ತಿಯಂ ಮಾಡುತಿಹುದನುದಿನಂ ಪುಱೆಯದೆ (ಚೆಬಪು. ೫೪–೨೩).

**ಹದೆ₁ : ೫.** ಸುದತಿಪುತ್ರಮಾತಾಪಿತರು ಹಿತರು ನಿತ್ಯವೆಂದು ಹದೆದು ಕುದಿದು ಕೋಟಲೆಗೊಂಬನ್ನಕ್ಕರ ಗುರುವೆಂದೇನಯ್ಯ (ಸಿದ್ಧೇವ.೭೫–೬).

**ಪದೆಪು** 'ಪದವು' ನೋ.

**ಪದೆಪುಗಾರ್ತಿ** 'ಪದವುಗಾರ್ತಿ' ನೋ.

**ಪದೆಪುಗೆಡು** (ಕ್ರಿ). ಸಂತೋಷವು ಹಾಳಾಗು,—ಇಲ್ಲವಾಗು : ಪದೆಪುಗೆಡ[ಲ]ಬ್ಬೆಯೊಡವುಟ್ಟಿದ ಮಾವನ ಮನೆಯೊಳುಂಡುಟ್ಟುಂ (ಸುಕುಮಾ. ೨–೬೯). [ಪದೆಪು(<ಪದವು)+ಕೆಡು₁]

**ಪದೆಪುದಂಡೆ** (ನಾ). ಸೊಗಸಾದ ಹಾರ,—ಮಾಲೆ : ಭಿತ್ತಿಯೊಳ್ ಪೊಱಮಟ್ಟ ಚಾವಡಿ ಮದನಕ್ಕೈಯೆತ್ತಿದ ಪದೆಪುದಂಡೆಗಳು . . . ರಂಜಿಸಿತು (ಮೋಹತ. ೨೨–೭). [ಪದೆಪು(<ಪದವು)+ದಂಡೆ₁]

**ಪದೆಯಿಸು,** ಪದಯಿಸು (ಕ್ರಿ). **೧.** ಬಯಸುವಂತೆ ಮಾಡು ; ಆಸೆಯನ್ನು ಹುಟ್ಟಿಸು : "ಪದೆಯಿಸು–ಈಪ್ಸಾಯಾಂ (ಆಶಿಸುವಂತೆ ಮಾಡು)" (ಶಸುಧಾ) ; ಪದೆಯಿಸೆ[ಪಾಠಾಂ. ಸಿ] ಸೋಂಕಿ ಸಂಕೆಗಿಡೆ ಮೇಳಿಸಿ . . . ಅಲಂಪಿನುಬ್ಬದಿಗಮನಾ ಲತಾಂಗಿಗೆ ನೃಪಂ ಪಡೆದಂ ನವಸಂಪ್ರಯೋಗದೊಳ್ (ಕಾವ್ಯಾಪ. ೮೦೦). **ಪದಯಿಸು : ೧.** ಪದಯಿಪ ಸೋಂಕು ಚುಂಬಿಸುವಲಂಪು . . . ಮೇರೆದಪ್ಪಿದುದೆನೆ ಕೂಡಿದರ್ ಪ್ರಿಯತಮರ್ (ಸೂಕ್ತಿಸು. ೧೪–೪೩). **೨.** "ಹದಗೊಳಿಸು" (ಲೀಲಾಪ. ಕೋಶ) : ಪದಯಿಸಿ ಪಿಂದುಗೆಯ್ದು ಸೆಳೆದುಳ್ಳುಡೆಯಂ ತೊಡೆಯಿಂದ ಜುಂಕಿ ಸೋಂಕಿದೊಡೆ . . . ಕಾಂತೆಯೇಂ ಪಡೆದಳೋ ಮನಕಾದ ಮುಲಂಪನೋಪನಾ (ಲೀಲಾಪ. ೧೩–೧೩). [ಪದೆ+–ಇಸು₃]

**ಪದೇಪದೇ** (ಅ). ಪುನಃ ಪುನಃ ; ಮತ್ತೆ ಮತ್ತೆ : ಮೋಹನನಿಗೂ ಅವರು ಪದೇಪದೇ ಒತ್ತಾಯ ಪಡಿಸುತ್ತಿದ್ದರು (ಪಂಜಪಂ. ೧೮೧) ; ಗಾಂಧೀಜಿ ... ಹಿಂಸಾಮಾರ್ಗ ಉಚಿತವಲ್ಲವೆಂದು ಪದೇಪದೇ ಹೇಳಿದರು (ಆತ್ಮಾಪ. ೧೪೪) ; ಪದೇಪದೇ ಹೇಳಿದರೂ ಸದೆ ಕೂಡಿಸೋದು ಬಿಡ (ಗಾದೆ). [ಸಂ.]

**ಪದೋದಕ** (ನಾ). ಕಾಲುಗಳನ್ನು ತೊಳೆದ ನೀರು; ಪಾದೋದಕ: ಕೈಯೊಡ್ಡಿ ಆ ಅಯ್ಯನ ಪದೋದಕಮಂ ಪ್ರಸಾದಮನನುಭವಿಸುತಂ ತತ್ತ ಗೋಷ್ಠಿಯೊಳಾ ಬಸವನಿರಲು (ಬಸವು. ೨೮-೮). [ಪದ$_2$+ಉದಕ$_2$]

**ಪದೋನ್ನತಿ** (ನಾ). ಪದವಿಯಲ್ಲಿ ಉಂಟಾಗುವ ಏರಿಕೆ,—ಬಡ್ತಿ : ಪದೋನ್ನತಿಗಳನ್ನು ಮತ್ತು ಒಂದು ಸೇವೆಯಿಂದ ಇನ್ನೊಂದು ಸೇವೆಗೆ ವರ್ಗಾವಣೆಗಳನ್ನು ಮಾಡುವುದರಲ್ಲಿ (ಭಾಧಾನ. ೧೮೬) ; ಆದರೆ ಕಂಡು ಬಂದಿತು, ಮೇಲಿನವನು ಪ್ರಸನ್ನನಾದರೆ ಒಂದೆರಡು ವರ್ಗಗಳನ್ನು ಜಿಗಿದು ಪದೋನ್ನತಿ ಪಡೆಯಬಹುದೆಂದು (ಇಪ್ಪಕ. ४೮४). [ಪದ$_2$+ಉನ್ನತಿ]

**ಪದ್ದಳಿ** 'ಪಜ್ಜತಿ' ನೋ.

**ಪದ್ದಿ** (ನಾ). ಒಂದು ಬಗೆಯ ಹಕ್ಕಿ (?) : ಕೊರದಿಂಬಾಗಿರೆ ಪದ್ದಿಯ ಗಱಿಯನದಂ ಗುಳಿಗೆ ಮಾಡಿ ಪುಣ್ಣೊಳಗಿಟ್ಟ ತೆಱದಿಂ (ಅಶ್ವವೈ.೧೬-೭೩). [?]

**ಪದ್ದು**$_1$ 'ಪರ್ದು' ನೋ.

△ **ಪದ್ದು**$_2$ 'ಹದ್ದು$_2$' ನೋ.

**ಪದ್ದುದೇರ** 'ಪರ್ದುದೇರ' ನೋ.

**ಪದ್ದುಪಾಡು** (ನಾ). "ಸುಖದುಃಖ" (ಪ್ರಭಣ್ಣ) : ಪದ್ದುಪಾಡಿಂಗಿಲ್ಲ ದಾಪ್ತನು ಇದ್ದು ಫಲಮೇನು (ಅಂಬಿಕಾ. ೨೧-೫೬). [ಪದ್ದು?+ಪಾಡು$_3$]

**ಪದ್ದ್ವಂದ್ವ** (ನಾ). =ಪದಯುಗ : ದುರದುಂಡಿ ಮುಂದಿರ್ದುದಂ ನೋಡಿ . . . ಕರೆತಂದು ಮೂರ್ತಿಗೊಳಿಸುತ್ತೆ ಪದ್ದ್ವಂದ್ವವಂ ತೊಳೆದು (ದುರವು. ೨೯-೬). [ಸಂ. (ಪದ್+ದ್ವಂದ್ವ)]

**ಪದ್ಧತಿ** (ನಾ). ೧. ಹೆಜ್ಜೆ ; ಅಡಿ. ೨. ಹೆಜ್ಜೆಯ ಗುರುತು,- ಚಿಹ್ನೆ : ಕಾಳಿಯನಂ ನೋಡಿ ನೀನಿಲ್ಲಿರಲ್ವೇಡ . . . ನಿನ್ನ ಪೆಡೆದುಱುಗ ಲೊಳೆನ್ನ ಪದಪದ್ಧತಿಗಳಿರ್ದಪುವು . . . ಪೋಗೆಂದು ಪೇಱು ಕಟುಪಿ (ಜಗವಿ. ೩-೧೧೪ ಪ). ೩. ಮಾರ್ಗ ; ದಾರಿ ; ಹಾದಿ : "ಅಧ್ವಾ, ಪಂಥಾಃ, ಪದ್ಧತಿಃ . . . ನಿಗಮಃ – ಈ ೧೨ ಬಟ್ಟೆ" (ಹಲಾಯು. ४೩-೧೦೫). ४. ಸಂಪ್ರದಾಯ ; ಆಚಾರ ; ರೂಢಿ : ಪದ್ಧತಿಯ ಮೇರೆಗೆ ಪುರೋಹಿತರ್ ನಾಮಕರಣಂಗೆಯ್ದು (ಶ್ರೀರಾಮಾ. ೧೬-४೨೯) ; ಅತಿಥಿಯನ್ನು . . . ಮಾತಾಡಿಸುವುದು ಅನೂಚಾನವಾದ ಪದ್ಧತಿ (ನಂಟರು. ४೧). ೫. ಕ್ರಮ ; ವಿಧಾನ ; ರೀತಿ : ಏನೆಂಬ ಸರ್ವ ನಾಮಂ . . . ಬಹುವಚನಾರ್ಥಮನಾನಲ್ ಸಾಲ್ದತ್ತು ಮತ್ತೆ ಕೃತಿ ಪದ್ಧತಿಯೊಳ್ (ಶಮದ. ೭೯). ೬. ವ್ರತನಿಯಮ. ೭. ಸಾಲು ; ಪಂಕ್ತಿ. [ಸಂ.]

**ಪದ್ಧತಿಕೆ** (ನಾ). [ಛಂದ] ಪಜ್ಝಟಿಕೆಯೆಂಬ ಮಾತ್ರಾಛಂದಸ್ಸು : ಪಲತೆಱದ ಪದ್ಯದಿಂದಂ ಲಲಿತವಚೋರಚನನಿಚಯಪದ್ಧತಿಕೆಗಳಿಂ ಸಲೆ ನಿಲೆ ಸಮೆದುದು ಸರಸಾಖಿಲವರ್ಣನಮಾದೊಡದುವೆ ಬಾಜನೆಗಬ್ಬಂ (ಕಾವ್ಯಾವ. ೯೫೫). 'ಪಜ್ಝಟಿಕೆ' ಪರಾ. [ಸಂ. ಪದ್ಧತಿಕಾ]

**ಪದ್ಮ** (ನಾ). ೧. ತಾವರೆ ; ಕಮಲ : "ಸಹಸ್ರಪತ್ರಂ . . . ಪದ್ಮಂ, ಪಂಕಜಂ – ಈ ೧೬ ತಾವರೆ" (ಹಲಾಯು. ೧೧೨-೫೮) ; ಹರಿಸಂದೋಹ ವಿರಾಜಿತಂ ವಿವಿಧಪದ್ಮಾಲಂಕೃತಂ ಹಂಸಸಂಚರಣಪ್ರೌಢ ಉದಾತ್ತ ವಿಕ್ರಮಗುಣೋದ್ಧೃತಪ್ಪುಂಡರೀಕಾಂಕಂ (ಎಕ. V, ಅರಸೀ.೩೯-೮; 1186). ೨. ಕನ್ನೈದಿಲೆ ; ಉತ್ಪಲ. ೩. ಆನೆಯ ಮೈ ಮೇಲೆ ಕಂಡು ಬರುವ ಬಿಳಿಯ ಅಥವಾ ಬಣ್ಣದ ಚುಕ್ಕೆ ; ಚಿಬ್ಬು : "ಆ ಬಿಂದು ಪದ್ಮಂ ಮೆಯ್ಯ ಚಿಬ್ಬಕ್ಕು" (ಮಂಗರಾ. ४೬-೨). ೧, ೩ : ಸ್ಥಿರಪದ್ಮ ವಕ್ತ್ರದಿಂದುರುತರವಂಶದಿಂದೆಸೆವ ದಾನದಿನೀ ನರಸಿಂಹಭೂಭುಜಂ ಪರಿಚಿತ ಭದ್ರಲಕ್ಷಣದಿನೊಪ್ಪುವ ಬಪ್ಪನ ಗನ್ಧವಾರಣಂ (ಎಕ. V, ಬೇಲೂರು. ೧೯೩-೫೧; 1161). ४. ಅಷ್ಟಫಣಿಗಳಲ್ಲಿ ಒಂದು : "ಫಣದನಂತಂ ವಾಸುಕಿ . . . ಪದ್ಮಂ ಕುಳಿಕನೆಂದು ನಾಗರ ಕುಲಂಗಳೆಂಟಕ್ಕೆ ನಾಮಂ" (ಮಂಗರಾ. ೧೯೯-४) ; ಇಂದ್ರಾಗ್ನಿ ಮೊದಲಾದೆಂಟುದಿಕ್ಕಿನ ಭೂಮಿಯಂ ಕ್ರಮದಿಂ ಪೊತ್ತು ಅನಂತ . . . ಪದ್ಮ ಕರ್ಕೋಟಕ ಕ್ರೋಡ ಕಾಳ ವೆಂಬಷ್ಟಕುಲಫಣಿಗಳಿರ್ಕುಂ (ವಿವೇಕ. ೧೫೦). ೧, ४ : ಚರಣಮುಂ ಬಾಸೆಯುಂ ಪದ್ಮಮಂ ಪದ್ಮಮುಮನಿರದೆ ಪೋಲ್ತಿರಲಲ್ಲಿ ಬಾಲೆಯರ್ . . . ಕಣ್ಗೆಸೆದರು (ಚೆಬಪು. ೧೦-४೪). ೫. ಚಂದ್ರ : ಸಾರಂಗ ಪದ್ಮಧರ ಜೀಮೂತಚಾರಮಣ . . . ಸಿದ್ಧನಂಜೇಶ ಪಾಲಿಪುದು (ಚೆಬಪು. ೬೩-೭೭ ಅ). ೬. ಸುಗಂಧಯುಕ್ತವಾದ ಒಂದು ಬಗೆಯ ಮೂಲಿಕೆ. ೭. ನೀರು ; ಜಲ. ೮. ಕಮಲದ ಆಕಾರದಲ್ಲಿ ರಚಿಸಿದ ಒಂದು ಬಗೆಯ ಸೇನಾವ್ಯೂಹ : 'ಪದ್ಮವ್ಯೂಹ' ಪರಾ. ೯. ಕೊಳ ; ಸರೋವರ. ೧೦. ಡೊಂಕು; ವಕ್ರತೆ. ೧೧. ಯತಿ; ಮುನಿ. ೧೨. ದಿಟ್ಟ; ಧೈರ್ಯಶಾಲಿ. ೧೩. ಒಂದು ಬಗೆಯ ಮರ : "ನಂದ್ಯಾವರ್ತಃ, ಸರಲಃ . . . ಪದ್ಮಃ, ಸ್ಯಂದನಃ, ಮೋಕ್ಷಃ– ಎಂಬಿವು ಮರಂಗಳುಮಪ್ಪುವು" (ಹಲಾಯು. ೧೩೫-೨೬). ೧४. ಒಂದು ನರಕದ ಹೆಸರು : ವಿಕರಾಳ ಪ್ರಕಂಪ ಪದ್ಮ ಸುವಕ್ತ್ರ ಕಾಲವೆಂಬೈದು ಮಂತ್ರಿನರಕಂಗಳಿಂದಾವರಿಸಿ ಅಘೋರವೆಂಬರಸುನರಕವಿಹುದು (ವಿವೇಕ. ೧೭೯). ೧೫. ಹದಿನೆಂಟು ಮಹಾಪುರಾಣಗಳಲ್ಲಿ ಒಂದು : ಪರಮಶೈವ . . . ಪದ್ಮಾಗ್ನೇಯ ಬ್ರಾಹ್ಮ ಬ್ರಹ್ಮಕೈವರ್ತ ಸಾಂಗ ದಿಂದಷ್ಟಾದಶಪುರಾಣಂಗಳೊಳೆಸೆವ ಭಸಿತಸೇವಾಸಂಗವಾಯಿತ್ತೆನ್ನ ಜನ್ಮವು ಸಫಲವಾಯಿತ್ತು (ಬಸವು. ४೩-೭೬). ೧೬. =ಪದ್ಮಮುದ್ರೆ ೨ : ಚಕ್ರಮುದ್ರೆಯಲ್ಲಿ ಹಿಂಕಾರನಾಮದಿಂದಲೂ . . . ಪದ್ಮದಲ್ಲಿ ಪ್ರಸ್ತಾವ ನೆಂಬ ಹೆಸರಿನಿಂದಲೂ . . . ಇರುವನು (ಹಸಾರ. ೮-೨೮ ತಾತ್ಪರ್ಯ). ೧೭. [ಗಣಿತ] ಒಂದು ಸಂಖ್ಯೆ ; ನೂರುಕೋಟಿ : ಏಕ್ಕಂ . . . ಪದ್ಮ . . . ಮಹಾಪರಿಮಿತ ಈ ४೦ ಸ್ಥಾನದ ಉಗ್ಗಡಣೆ (ವ್ಯವಹಾ. ೮-೨४) ; ಮೂಲಬಲ ಮುನ್ನೂಱುಪದ್ಮವ ಭಾಳಲೋಚನನಂತೆ ಲಯಿಸಿದನೆಂದು ರಘುರಾಯ (ಕೌಶಿಂ. ೩೭ ಪಲ್ಲವಿ) ; ನೆರೆದುದು . . . ಹರಿವ ರಥ ಶತಕೋಟಿ ವಿಂಶತಿಪದ್ಮ ಕಾಲಾಳು (ಮೈರಾಕಾ.४-೩೩) ; ಪಗೆಯನಾಡಿ ಸಾರಿಯನಿರಿಸುವ ರೇಖೆರೇಖೆಗೆ ಪದ್ಮಪದ್ಮ ದ್ರವ್ಯವ ಸೋತನು (ಭೈಲಸೂ. ೧೦೧); ಶ್ರೀ ಚೆಟ್ಟದ ಚಾಮರಾಜ ನಾಮದ ಮಹಿಮೆಗಳನ್ನು ಪದ್ಮ ಖರ್ವ ಮಹಾಭೂರಿ ಗಣನೆಯ ಗ್ರಂಥಗಳಲ್ಲಿ ಹಾಡುವೆನು (ಸುಗುಗಂ. ೭೦-೧೫). ೧೮. [ಯೋಗ] ಪೂಜೆ, ಧ್ಯಾನ ಮುಂತಾದ ಸಮಯದಲ್ಲಿ ಕುಳಿತುಕೊಳ್ಳುವ ಒಂದು ಭಂಗಿ : "ಕಮಲ ಯತಿ ಲಕ್ಷ್ಮಿ ಕೊಳ ಚಂದ್ರಮ ಸೀರ್ಪಾವಾನೆಮೊಗದ ಚಿಬ್ಬುಂ ಲೆಖ್ಖಂ ಕುಮುದಾಸನ ವ್ಯೂಹ ಭಟಂ ಕ್ರಮದಿಂ ಪದಿಮೂಱು ಪದ್ಮ ಶಬ್ದಂ" (ನಾನಾಕಂ.೮೮೨). 'ಪದ್ಮಾಸನ' ಪರಾ. ೧೯. ಕುಬೇರನ ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ (ಅಥವಾ ನಂದಕ), ನೀಲ, ವರ (ಅಥವಾ ಖರ್ವ) ಗಳೆಂಬ ಒಂಬತ್ತು ನಿಧಿಗಳಲ್ಲಿ ಒಂದು: ಮಹಾಪದ್ಮ ಪದ್ಮ . . . ವರವೆಂಬ ನವನಿಧಿಗಳಿಗಧಿಕಾರ ಮುಂಟಾಗಿ (ವಿವೇಕ. ೨೨೧). ೨೦. [ಜೈನ] ಚಕ್ರವರ್ತಿಯ ಕಾಳ, ಮಹಾಕಾಳ, ನೈಸರ್ಪ, ಪಾಂಡುಕ, ಪದ್ಮ, ಪಿಂಗಳ, ಮಾಣವಕ, ಶಂಖ, ಸರ್ವರತ್ನಗಳೆಂಬ ಒಂಬತ್ತು ನಿಧಿಗಳಲ್ಲಿ

ಒಂದು : ಅನುಕ್ರಮದಿಂ ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಅಜಿಪು. ೧೫-೩೭); ಕಾಳ ಮಹಾಕಾಳ ಪದ್ಮ . . . ಎಂಬೊಂಬತ್ತು ನಿಧಿಗಳುಮನನುಕ್ರಮದೊಳರ್ಚಿಸಿ (ಚಂದ್ರಪ್ರ.೬-೧೦೧೭). 'ನವನಿಧಿ' ಪರಾ. ೨೧. ಒಂದು ಕಾಲಗಣನೆ : ಎಂಬತ್ತುನಾಲ್ಕು ಮತ್ತು ಎಂಬತ್ತುನಾಲ್ಕು ಲಕ್ಷ ಗುಣಿತಕ್ರಮದಿಂದ ಕುಮುದಾಂಗ ಮತ್ತು ಕುಮುದ, ಪದ್ಮಾಂಗ ಮತ್ತು ಪದ್ಮ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಸ. ೩೦೬).

**ಪದ್ಮದ ಸುತ** = ತಾವರೆಯಲ್ಲಿ ಹುಟ್ಟಿದವನು ; ಬ್ರಹ್ಮ : ಪದ್ಮದ ಸುತನಖಿಳಕಳಾಸದ್ಮಂ (ಅರ್ಧನೇ. ೩-೮೯). **ಪದ್ಮದ ಹಾವು** = ಕೃಷ್ಣ ಸರ್ಪದಂತೆ ಹೆಡೆಯಲ್ಲಿ ಪದ್ಮದ ಚಿಹ್ನೆಯುಳ್ಳ ಒಂದು ಬಗೆಯ ಸಣ್ಣ ಜಾತಿಯ ವಿಷಸರ್ಪ : (೬). [ಸಂ.]

**ಪದ್ಮಕ** (ನಾ). ೧. ಆನೆಯ ಮೈಮೇಲೆ ಕಂಡುಬರುವ ಬಿಳಿಯ ಅಥವಾ ಬಣ್ಣದ ಚುಕ್ಕೆ : "ಬಿಂದು, ಪದ್ಮಕಂ—ಈ ೨ ಚಿಬ್ಬು" (ಹಲಾಯು. ೩೭-೬೬). ೨. ಒಂದು ಬಗೆಯ ಮರ ಮತ್ತು ಅದರ ಚೆಕ್ಕೆ : "ಪದ್ಮಕಂ-ಪದ್ಮಕ . . . ಕೋಷ್ಠ" (ಓಷಧಿ. ೯೦); ಮಧು ಜೀವನಿ ಪದ್ಮಕಂಗಳಂ ತಳ್ತೊಳ್ಪಾಗಧಸಹಿತಂ ಪ್ರತಿಪಾನದ ವಿಧಾನಮಂ ಶರವದಂದು ಮಾಳ್ಪನುನಯದಿಂ (ಅಶ್ವಶಾ. ೭-೮೩) ; ಪದ್ಮಕ, ಅಡು ಸೋಗೆಸೊಪ್ಪು . . . ತಾವರೆಗೆಣಸು-ಇವು ಪ್ರತ್ಯೇಕ ಗ ೨ ತೂಕ ಹಾಲಿನಿಂದ ಸಣ್ಣನಾಗಿ ಅರೆದು (ಸಕವೈ. ೧೩೯) ; ಬಟ್ಟಿಯೊಳ್ ಪಟ್ಟಣಿಗ ರುರಿಸಿದರ್ ಚಂದನಾಗರು ಸರಳ ಪದ್ಮಕದ ಚೂರ್ಣದಿಂದಲ್ಲಲ್ಲಿ ಧೂಪಮಂ ರಾಜಭಕ್ತಿಗೆ (ಶ್ರೀರಾಮಾ. ೧೧೯-೨೧೨). ೩. ಸುಗಂಧಯುಕ್ತವಾದ ಒಂದು ಬಗೆಯ ಮೂಲಿಕೆ ಮತ್ತು ಅದರಿಂದ ಮಾಡುವ ಸುಗಂಧ ದ್ರವ್ಯ : ಸಕುಟಲರಕ್ಷೆ ವಶ್ಯತಿಲಕಂ ಸಕಲೌಷಧಿ ಕಾಮಯಂತ್ರಮುದ್ರಿಕೆ . . . ಪದ್ಮಕಕ[ದ]ನುಲೇಪನಂ (ನಳಚಂ. ೩೦೯). ೪. ಒಂದು ಬಗೆಯ ಸರ್ಪ : ಬೆನ್ನಿನಲ್ಲಿ ರಕ್ತವರ್ಣವಾದ ಬಿಳಿದುಗಳುಳ್ಳದು ಪದ್ಮಕ ವೆನಿಸಿಕೊಂಬದು (ವಿಷಚಿ. ೨-೪). [ಸಂ.]

**ಪದ್ಮಕರ್ಣಿಕೆ** (ನಾ). ಕಮಲದ ಮಧ್ಯಭಾಗ,—ಬೀಜಕೋಶ : ಪದ್ಮನೇತ್ರಂ ಪದ್ಮಕರ್ಣಿಕಾನಾಸಿಕಂ . . . ಸಿರಿಯಿಂದೆ ಪದ್ಮೆಗೆಣೆಯಾಗಿ ಪದ್ಮಶ್ರೀವೆಸರನೆ ತಾಂ ಪಡೆದಳನ್ವರ್ಥದಿಂ (ಸಮ್ಯಕೌ. ೯-೩).

[ಪದ್ಮ+ಕರ್ಣಿಕೆ]

**ಪದ್ಮಕಾಷ್ಟ** (ನಾ). = ಪದ್ಮಕಾಷ್ಠ : ಸೂರ್ತಿ ಚವಾಳಾ ಮಣದ ಮೇಲೆ ಕಿಮ್ಮತ್ತು ಇಳತಕ್ಕ ಜಿನಸಗಳು. ೧, ಅಕ್ಕಲಕಾರ . . . ೧೨೪, ಪದ್ಮಕಾಷ್ಟ (ಮುಂಬವ್ಯಾ. ೧೨೬). [<ಸಂ. ಪದ್ಮಕಾಷ್ಠ]

**ಪದ್ಮಕಾಷ್ಠ** (ನಾ). ೧. ಒಂದು ಬಗೆಯ ಮರ : "ಪದ್ಮವೃಕ್ಷಂ, ಪದ್ಮಕಾಷ್ಠಂ—ಈ ಯೆರಡುಂ ಪದ್ಮಕ" (ಓಷಧಿ. ೯೩). ೨. ಪದ್ಮವೆಂಬ ಮರದ ಸುಗಂಧಮಯವಾದ ಸೌದೆ,—ಕಟ್ಟಿಗೆ. [ಸಂ.]

**ಪದ್ಮಕೇಸರ** (ನಾ). ತಾವರೆಯಲ್ಲಿರುವ ಕುಸುರು ; ಕಿಂಜಲ್ಕ : "ಪಂಚಸುಗಂಧಃ – ಶ್ರೀಗಂಧ . . . ಪದ್ಮಕೇಸರ, ತಾವರೆಯ ಕೇಸರ" (ಓಷಧಿ. ೯೩) ; ಸಾಮುದ್ರಲವಣ, ಪದ್ಮಕೇಸರ ಇವೆರಡನು ಸಮಾಂಶ ವಾಗಿ ತೆಗೆದುಕೊಂಡು ನೀರಿಂದ ಅರೆದು ಪಾನವ ಮಾಡಿಸಲು ಓತಿಯ ಎಲ್ಲಾ ವಿಷಗಳೂ ಶಮನವಹವು (ವೈದ್ಯಸಾ. II, ೨೨೦). [ಪದ್ಮ+ಕೇಸರ]

**ಪದ್ಮಕೇಸರಿ** (ನಾ). = ಪದ್ಮಕೇಸರ : ನಾಗಕೇಸರಿ, ಪದ್ಮಕೇಸರಿ, ತಾವರೆಗೆಡ್ಡೆ, ನೈದಿಲೆಗೆಡ್ಡೆ . . . ಖರ್ಜೂರ-ಇಷ್ಟನೂ ಸಮಭಾಗವಾಗಿ ಕೂಡಿ ಚೂರ್ಣವಂ ಮಾಡಿ (ಸಕವೈ. ೨೪೯).

[<ಸಂ. ಪದ್ಮಕೇಸರ]

**ಪದ್ಮಕೋಶ** (ನಾ). ೧. ತಾವರೆಯ ಮೊಗ್ಗು : ಪದ್ಮಕೋಶಸ್ತನೆ ಚಪಲಚಕೋರಾಕ್ಷಿ ನಿಂದಿರ್ದೊಡೆ (ರಾಜಶೇ. ೪-೧೩). ೨. [ನಾಟ್ಯ] ಹಸ್ತಮುದ್ರೆಗಳಲ್ಲಿ ಒಂದು ಬಗೆ : ಅಸಂಯುತಹಸ್ತಗಳು ಯಾವು ವೆಂದರೆ – ೧ ಪತಾಕ . . . ೧೨ ಪದ್ಮಕೋಶ (ಅಭಾಸ್ಯ. ೪೮).

[ಪದ್ಮ+ಕೋಶ]

**ಪದ್ಮಗಂಧಿ$_1$** (ನಾ). ಕಮಲದ ಹೂವಿನಂತೆ ಸುಗಂಧವುಳ್ಳವಳು ; ಪದ್ಮಿನೀಜಾತಿಯ ಸ್ತ್ರೀ : (೬). [<ಸಂ. ಪದ್ಮಗಂಧಾ]

**ಪದ್ಮಗಂಧಿ$_2$** (ನಾ). ಒಂದು ಬಗೆಯ ಮರ : "ಪದ್ಮಗಂಧಿ-ಹಿಪ್ಪಲಿ ಮೂಲ, ಪದ್ಮಕ" (ಓಷಧಿ. ೯೩). [ಸಂ.]

**ಪದ್ಮಗಣ** (ನಾ). [ಛಂದ] "ಮುಡಿಗಿಂತಲೂ ಅಕ್ಷರಪ್ರಮಾಣದಲ್ಲಿ ಉದ್ದವಾಗಿ, ಮುಕ್ತಾಯದ ಭಾವನೆಯನ್ನು ಅದಕ್ಕಿಂತ ಸಾವ ಕಾಶವಾಗಿ ತರುವ UUU ಲಕ್ಷಣದ ವಿಶೇಷಗಣಕ್ಕೆ "ಪದ್ಮಗಣ" ಎಂಬ ಹೆಸರು" (ಸಮಾಲೋ. ೨೧೩). [ಪದ್ಮ+ಗಣ]

**ಪದ್ಮಗದ್ದುಗೆ** (ನಾ). ಕಮಲದ ಆಕಾರದಲ್ಲಿ ರಚಿಸಿರುವ ಪೀಠ : ಶ್ರೀಕೃಷ್ಣಯತಿತೋಪದಿಂ ಪದ್ಮಗದ್ದುಗೆಯಡರೆ (ನವನೋ. ೧೦-೬೯).

[ಪದ್ಮ+ಗದ್ದುಗೆ$_2$ (<ಗದ್ದುಗೆ$_2$)]

**ಪದ್ಮಗರ್ಭ** (ನಾ). ಕಮಲದಲ್ಲಿ ಜನ್ಮ ತಾಳಿದವನು ; ಬ್ರಹ್ಮ : ಅಳ್ಕುಂ ನಿರಾಳಂಬಮಾ ಬನವಾಸಂ ರಸೆಗೆಂಬ ಶಂಕೆಯೊಳೆ ದೇವೇಂದ್ರಾ ಲಯಂಗಳ್ಗೆ ದೇವನಗಂ ಪೋಲ್ವುದು ಪದ್ಮಗರ್ಭನ ಕಿರೀಟಸ್ತಂಭಮಂ ಸ್ತಂಭಮಂ (ಅಜಿಪು. ೨-೩). [ಪದ್ಮ+ಗರ್ಭ]

**ಪದ್ಮಚಾರಿಣಿ** (ನಾ). ಒಂದು ಬಗೆಯ ಸಸ್ಯ ; ಬೆಟ್ಟದಾವರೆ : "ಅವ್ಯಥಾ, ಅತಿಚರಾ, ಪದ್ಮಾ, ಚಾರಟೀ, ಪದ್ಮಚಾರಿಣೀ-೫ ಕಾಶ್ಮೀರ ದೇಶದಲ್ಲಿರುವ ಬೆಟ್ಟದಾವರೆ ಹೆಸರು" (ಸಿದ್ಧಾಂತಿ. ೧೪೫).

[ಸಂ. ಪದ್ಮಚಾರಿಣೀ]

**ಪದ್ಮಜ** (ನಾ). = ಪದ್ಮಗರ್ಭ : ಜಗಮಂ ಮಾಡಿದ ಪದ್ಮಜಂ ಪಡೆದ ನಿಲ್ಲೀ ಕನ್ನೆಯಂ (ಪಂಪಭಾ. ೪-೭೫); ವಿಪುಲಶ್ರೀಯು ಪದ್ಮಜ ಸೋಮ ಧರ ನಾರಾಯಣರು ಕೊಡಲೆಂದು ಹರಸಿತು ಭೂಸುರವ್ರಾತ (ಕುಮ್ಮಾಅ. ೧೨-೪೦). [ಸಂ.]

**ಪದ್ಮಜನಿ** (ನಾ). = ಪದ್ಮಗರ್ಭ : ಮಂಡಿತಮತಿಯಿಂದೆ ಪದ್ಮಜನಿಯಂ . . . ಜಯಿಸಿರ್ದನುದಾತ್ತವೈಭವಂ (ರಾಜಶೇ. ೪-೧೧೧). [ಸಂ.]

**ಪದ್ಮಜಸೂನು** (ನಾ). ಬ್ರಹ್ಮನ ಮಗ ; ಜಾಂಬವಂತ : ಓಲಗ ನಡೆತಂದರಾ ಕಪಿಪಾಲ ಪದ್ಮಜಸೂನು ಕೇಸರಿ ಶೂಲಿಸಮಬಲ ಹನುಮ ಹರಿಸುತಸುತ ಸುಷೇಣಕರು (ತೊರರಾ. ೬-೧೦-೧೬). [ಸಂ.]

**ಪದ್ಮಜಾಂಡ** (ನಾ). ಬ್ರಹ್ಮಾಂಡ; ವಿಶ್ವ : ಒಡೆದುದೊ ಪದ್ಮಜಾಂಡಮ ವನೀವಳಯಂ ಪಿಳಿಗಿತ್ತೊ (ಚಂದ್ರಪ್ರ. ೬-೩೧) ; ದೆಸೆಯೂಗಸಗಳಾವೆಡೆ ಯೊಳೆಂದುಸುರಲ್ಕೆ ಬಾರದಾದುದು ಪದ್ಮಜಾಂಡಮದು ಬೆಸುಗೆ ಬಿಡದಿರ ದೆಂಬ ಮಾಳ್ಕೆಯಿಂ (ಶೋರಾಸು. ೭-೪). [ಪದ್ಮಜ+ಅಂಡ$_2$]

**ಪದ್ಮಜಾಪತಿ** (ನಾ). ಲಕ್ಷ್ಮಿಯ ಒಡೆಯ ; ವಿಷ್ಣು : ಹಿರಿಯ ಒಡೆಯನಲ್ಲವೆ . . . ಪದ್ಮಜಾಪತಿ ದೈತ್ಯನ ಕೊಂದು ವೇದ ಕಮಲೋ ದ್ಭವಗಿತ್ತು ಕಾಯಿದ ಕಾರಣದಿಂದ (ಪುರಂದ. ಧಾ. ೩-೧೨೨-೨). [ಸಂ.]

**ಪದ್ಮತಂತ್ರ** (ನಾ). [ಶೈವ] ಸ್ವಾಯಂಭುವಾಗಮದ ಮೂರು ಪ್ರಕಾರಗಳಲ್ಲಿ ಒಂದು : ಸ್ವಯಂಭೂತ ಪ್ರಜಾಪತಿಮತ ಪದ್ಮತಂತ್ರ ವೆಂದು ಸ್ವಾಯಂಭುವಾಗಮದ ತ್ರಿಭೇದಂಗಳು (ವಿವೇಕ. ೬೫).

[ಪದ್ಮ+ತಂತ್ರ]

**ಪದ್ಮನಾಭ** (ನಾ). ೧. ಹೊಕ್ಕುಳಲ್ಲಿ ಕಮಲವುಳ್ಳವನು ; ವಿಷ್ಣು : "ವಿಷ್ಣುಃ . . . ಪದ್ಮನಾಭಃ . . . ಗದಾಧರಃ—ಈ ೪೫ ನಾರಾಯಣನ

ಪೆಸರ್" (ಹಲಾಯು. ೫-೨೨); ಒಂದು ಧನುವಿಂಗೆ ಮೂಱಿಂಬ ಹಿಡಿದೆ ಒಂದು ಬಾಣವ ಬಿಡಲಾಗಿ ಪದ್ಮೋದ್ಭವನ ಸೃಷ್ಟಿಯು ಕಟ್ಟಿತ್ತು ಮತ್ತೊಂದು ಬಾಣವ ಬಿಡಲಾಗಿ ಪದ್ಮನಾಭನ ಹೆಡಗಯ್ಯ ಕಟ್ಟಿತ್ತು (ಸಕಪ. III, ೧೦೨-೯೯೧, ಗಾಣದ ಕಪ್ಪಣ್ಣನ ವಚನ); ಶೋಭನ ಶೋಭನವೆ . . . ಪದ್ಮನಾಭ ಶ್ರೀಪುರಂದರವಿಠಲಗೆ ಪದ್ಮಾವತೀಪ್ರಿಯ ಶ್ರೀನಿವಾಸಗೆ (ಪುರಂದ. ಧಾ. ೧-೧೫೭-೫). **೨.** [ಗಣಿತ] (?): ಮುಗ್ಗಿ ಗಣಿತ××× ಮಂಗುಳಿ ಅಳತೆ ರಾಜನೀತಿ ಬಣ್ಣಾಂತರ ಪದ್ಮನಾಭ . . . ತಗುಣಿ ಉತ್ಕಳಿತ ಗುಣಿಮುತ್ತಿನ ಚಿಲ್ವಿನ ಗುಣಿತವುಂ ಅಷ್ಟಾದಶಗುಣಿತಂಗಳು (ಕ್ಷೇತ್ರಗ. ೨-೪). [ಸಂ.]

**ಪದ್ಮನಾಲ,** ಪದ್ಮನಾಳ (ನಾ). ಕಮಲದ ದಂಟು,—ದೇಟು,—ಕಾವು. **ಪದ್ಮನಾಳ:** ಪದ್ಮನಾಳಪ್ರಶೋಭೆಯ ಸಮತೆಗೊಳದ ಕೋಮಲಿತ ಸದ್ಬಾಹುಯುಗದಿ . . . ಪದ್ಮವನದಂತೆ ರಸಿಕೌಘರೋಲಂಬ ನಲಿಯಲ್ ಸತಿಯರ್ಸೈತಂದರು (ನಂದಿಪೂ. ೪-೧೩). [ಪದ್ಮ+ನಾಲ$_1$]

**ಪದ್ಮನಾಳ** 'ಪದ್ಮನಾಲ' ನೋ.

**ಪದ್ಮಪತ್ರ** (ನಾ). **೧.** ತಾವರೆಯ ಎಲೆ; ಕಮಲಪತ್ರ: ಪದ್ಮಪತ್ರದ ಜಲಬಿಂದುವಿನಂತೆ ಚಲಿತಮಾದುದು ಚಿತ್ತಂ (ಪಂರಾಪೂ. ೯-೭೬); ಪದ್ಮಪತ್ರಂಗಳಿಂದೊತ್ತಿ ಸಿಕೊಳುತ್ತೆ ಕಾಮನಂಬಿಂ ಮುಮ್ಮಳಿಗೊಳುತ್ತೆ (ನಂಬಿರ. ೧೨-೧೧೭); ಪದ್ಮಪತ್ರದ ಗುಣ–ತಾವರೆಎಲೆಯಲ್ಲಿ ಊಟ ಮಾಡುವುದರಿಂದ . . . ಹೊಟ್ಟೆಯಲ್ಲಿ ಹುಟ್ಟುವ ಸಕಲರೋಗ ಸಮೂಹವನ್ನೂ ಹೋಗಲಾಡಿಸುವುದು (ಸಕವೈ. ೪೭). **೨.** ತಾವರೆಯ ದಳ; ಕಮಲದ ರೇಕು. **೩.** ಒಂದು ಬಗೆಯ ಸಸ್ಯ; "ಪುಷ್ಕರಮೂಲ" (ಪಂಡಿತ. ೨೪೪): "ಪೌಷ್ಕರಂ, ಕಾಶ್ಮೀರಂ, ಪದ್ಮಪತ್ರಂ–೩ ಪೌಷ್ಕರಮೂಲೇ – ತಾವರೇಗಡ್ಡೆ, ಕಾಶ್ಮೀರದಲ್ಲಿ ನೆಲತಾವರೇಗಡ್ಡೆ" (ಸಿದ್ಧಾಂತಿ. ೧೪೫).

ಪದ್ಮಪತ್ರಜಲ=ತಾವರೆಎಲೆಯ ಮೇಲಿನ ನೀರಿನ ಹನಿ: ಪೊಯ್ವ ಕಂತುಕದ ಚೆಂದಂ ಮಿಕ್ಕು ಮೇಲ್ಮುಖ್ಬಿತಂ ನಡೆದರ್ ನೋಳ್ಪೊಡೆ ಪದ್ಮಪತ್ರಜಳದಂತಲ್ಲಾಡದಾಶ್ಚರ್ಯದಿಂ (ತ್ರಿಷುವಿ. ೨೪-೨೬೬). [ಪದ್ಮ+ಪತ್ರ]

**ಪದ್ಮಪಾಣಿ** (ನಾ). **೧.** ತಾವರೆಯನ್ನು ಕೈಯಲ್ಲಿ ಹಿಡಿದಿರುವ ವ್ಯಕ್ತಿ. **೨.** ಲಕ್ಷ್ಮಿ. **೩.** ಪಾರ್ವತಿ. **೪.** ವಿಷ್ಣು. **೫.** ಬ್ರಹ್ಮ. **೬.** ಬುದ್ಧ. **೭.** ಸೂರ್ಯ. [ಪದ್ಮ+ಪಾಣಿ$_2$]

**ಪದ್ಮಪೀಠ** (ನಾ). **೧.** ಕಮಲದ ಪೀಠ: ಪದ್ಮಪೀಠದಗ್ರಭಾಗದೊಳ್ಕರಂ ವಿರಾಜಿಪಾ ಪದ್ಮಸದ್ಮೆಯಂತೆ ತೋರ್ಪ ಯಂತ್ರಮಧ್ಯದಲ್ಲಿ . . . ತತ್ಪದ್ಮನೇತ್ರೆಯೊಪ್ಪಿದಳ್ (ಉದ್ಭಟ. ೫-೫೫). **೨.** ಕಮಲದ ಆಕಾರದಲ್ಲಿ ರಚಿಸಿರುವ ಪೀಠ,–ಆಸನ: ಶಿವಾರ್ಚನೆಗುಪಯುಕ್ತವಾಗಿ ಅನಂತಪೀಠ...ಪದ್ಮಪೀಠ...ಪ್ರಣವಪೀಠಗಳ ಭಾವನೆಯೆಂದುಪಕಲ್ಪಿತವಾದ ದಿವ್ಯಮಂಟಪಮಧ್ಯಗತಸಿಂಹಾಸನಕ್ಕೆ (ವಿವೇಕ. ೧೦೪); ಪ್ರತಿಮೆಗಳಿಗೆ ಬೇಕಾದ ಪೀಠಗಳು ಅನೇಕವಿಧವೆಂದೂ ಅವುಗಳಲ್ಲಿ ಮುಖ್ಯವಾದುದು ಭದ್ರಪೀಠ, ಪದ್ಮಪೀಠ . . . ಶ್ರೀಕಾಮ್ಯವೆಂದೂ ಹೇಳಿದೆ (ಭಾರದ. ೫೧೭). [ಪದ್ಮ+ಪೀಠ]

**ಪದ್ಮಪುರಾಣ** (ನಾ). ಹದಿನೆಂಟು ಮಹಾಪುರಾಣಗಳಲ್ಲಿ ಒಂದು: ಬ್ರಹ್ಮಪುರಾಣ ಪದ್ಮಪುರಾಣ . . . ವೈಷ್ಣವಪುರಾಣ ಶೈವಪುರಾಣ . . . ಬ್ರಹ್ಮಾಂಡಪುರಾಣವೆಂಬವೇ . . . ಹದಿನೆಂಟು ಮೂಲಪುರಾಣಂಗಳು (ವಿವೇಕ. ೪); ಪದ್ಮಪುರಾಣವ ವಿಚಾರಿಸು ಮನುಜ ಅಲ್ಲಿ ಸ್ಪಷ್ಟವಾಗಿ ಪೇಳುವುದು ವಚವ (ಪುರಂದ. ೫-೧೬೧-೧೧೦). [ಪದ್ಮ+ಪುರಾಣ]

**ಪದ್ಮಪುಷ್ಕರ** (ನಾ). ಒಂದು ಬಗೆಯ ಸಸ್ಯ: ಪದ್ಮಪುಷ್ಕರ, ಪುಷ್ಕರಮೂಲ (ಮೈಔಗಿ. ೪೬-೯೧೬). [ಪದ್ಮ+ಪುಷ್ಕರ]

**ಪದ್ಮಪ್ರಭ** (ನಾ). **೧.** ಕಮಲದಂತೆ ಕಾಂತಿಯುಳ್ಳುದು. **೨.** [ಜೈನ] ಆರನೆಯ ತೀರ್ಥಂಕರನ ಹೆಸರು: ವೃಷಭ ಅಜಿತ . . . ಪದ್ಮಪ್ರಭ . . . ವರ್ಧಮಾನರೆಂಬಿಪ್ಪತ್ತುನಾಲ್ವರ್ ತೀರ್ಥಕರರ್ (ಚಾವುಂಪು. ೮೦೨). **೧೨:** ವದನಂ ಚಂದ್ರಪ್ರಭಂ ವಿಕ್ರಮಭುಜಮಜಿತಂ ಪಾಣಿ ಪದ್ಮಪ್ರಭಂ . . . ತಾನದಱಿಂ ಪ್ರತ್ಯಕ್ಷ ತೀರ್ಥೇಶ್ವರನೆನೆ ನೆಗೞ್ದಂ ಪದ್ಮನಾಭಪ್ರಧಾನಂ (ಅರ್ಹನೀ. ೧-೪೩). [ಸಂ.]

**ಪದ್ಮಬಂಧು** (ನಾ). ತಾವರೆಯ ಗೆಳೆಯ,—ಬಂಧು; ಸೂರ್ಯ. [ಪದ್ಮ+ಬಂಧು]

**ಪದ್ಮಬೀಜ** (ನಾ). **೧.** ತಾವರೆಯ ಬೀಜ. **೨.** ಒಂದು ಬಗೆಯ ಸಸ್ಯ: (ಮೈಔಗಿ. ೪೮-೯೪೯); (ಸಸ್ಯನಿ. ೭೮). [ಪದ್ಮ+ಬೀಜ]

**ಪದ್ಮಭವ** (ನಾ). **೧.** =ಪದ್ಮಗರ್ಭ: ಪದ್ಮಭವನ ಮತಿಗಂ ಹರಿ ನಿನ್ನ ಮಹತ್ವಂ ಪ್ರಥಿತಮಗಾಧಂ (ಜಗವಿ. ೩-೧೦೫); ಒಮ್ಮೆ ಬಗೆವನೆ ಪದ್ಮಭವ ನಿನ್ನ ಸ್ವಲ್ಪಪದವಿಯನು (ಬಸಪು. ೨-೧೯); ಬಿಡದೆ ಕಾದುವ ಗಂಡಪೆಂಡಿರನೇತಕೆ ಪಡೆದನಕಟ ಪದ್ಮಭವನು (ಹರಿಬ. ೬-೯). **೨.** [ಛಂದ] ಬ್ರಹ್ಮಗಣ: ಎರಡಱೊಳಾಱಿಂಬ ಸಂಖ್ಯೆಯೊಳ್ ಬರೆ ಪದ್ಮಭವನುಱುದುವು ಮೆಚ್ಚುವ ತೆಱದಿಂದಿರೆ ಮುಂದಣ ಪದಂ ಮುನ್ನಿನಂತಿರೆ ಕರಂ ಗೀತಿಕೆಯಿಂತಕ್ಕುಂ (ಛಂದೋಂಬು. ೫-೨೫೭). [ಪದ್ಮ+ಭವ]

**ಪದ್ಮಭವಾಂಡ** (ನಾ). =ಪದ್ಮಜಾಂಡ: ಪಾಯ್ದು ಪೊಯ್ದೊಡೆವರ್ ಪದ್ಮಭವಾಂಡಮಂ ಮೃಡನ ಭಕ್ತರ್ ಬಲ್ಲಿದರ್ಭೂವರಾ (ರಾಜಶೇ. ೬-೧೧೪). [ಪದ್ಮಭವ+ಅಂಡ$_2$]

**ಪದ್ಮಭೂ** (ನಾ). ಬ್ರಹ್ಮ: "ಬ್ರಹ್ಮಾ, ಸ್ರಷ್ಟಾ, ಧಾತಾ, ಪರಮೇಷ್ಠೀ, ಪದ್ಮಭೂಃ . . . ಕಮಲಾಸನಃ – ಈ ೨೦ ಬ್ರಹ್ಮನ ಪೆಸರ್" (ಹಲಾಯು. ೨-೬). [ಸಂ.]

**ಪದ್ಮಭೂಷಣ** (ನಾ). ಕಲೆ, ವಿಜ್ಞಾನ, ಸಮಾಜಸೇವೆ, ಆಟಪಾಟಗಳು ಮುಂತಾದ ಯಾವುದಾದರೂ ಕ್ಷೇತ್ರದಲ್ಲಿ ವಿಶೇಷ ಸಾಧನೆಯನ್ನು ಮಾಡಿದ ವ್ಯಕ್ತಿಗೆ ಭಾರತಸರ್ಕಾರದವರು ಕೊಡುವ ಒಂದು ದೊಡ್ಡ ಪ್ರಶಸ್ತಿ; P ಇದು 'ಪದ್ಮಶ್ರೀ'ಗಿಂತಲೂ ಮೇಲ್ಮಟ್ಟದ ಪ್ರಶಸ್ತಿ: ಪದ್ಮಭೂಷಣ, ಪದ್ಮಶ್ರೀಗಳು ಹಲ್ಕಾಜನರ ಸೊತ್ತಾಗ್ತಾ ಇವೆ. ಇದಕ್ಕೆ ಕಾರಣ – ನಮ್ಮ ಜನದ ಮೊದ್ದುತನ (ನಡೆದಾ. II, ೧೨೧೬). 'ಪದ್ಮವಿಭೂಷಣ' ಪರಾ. [ಸಂ.]

**ಪದ್ಮಮಂದಿರೆ** (ನಾ). ತಾವರೆಯೇ ಮನೆಯಾಗಿರುವವಳು; ಲಕ್ಷ್ಮಿ: "ಶರಧಿಸುತೆ ರಾಮೆ ಗೋವಿಂನಿ ಲಕ್ಷ್ಮಿ ಪದ್ಮಮಂದಿರೆ . . ಮನ್ಮಥಮಾತೆಯೆನಲು ಸಿರಿಗಕ್ಕು ನಾಮಂ" (ಮಂಗರಾ. ೬-೧೪). [ಸಂ. ಪದ್ಮಮಂದಿರಾ]

**ಪದ್ಮಮಣಿ** (ನಾ). ಒಂದು ಬಗೆಯ ಆಭರಣ (?): ಚೆಲ್ಲಣಂ ಬಾಲಗ್ರೈಪಂ . . . ಬಲ್ಲೆಯಂ ಚಕ್ರ ಗಿರುಗಟಿ ತೊಡಕುವಳೆ ವಂಕಿ ಕಲ್ಲಮಣಿ ಪದ್ಮಮಣಿ ಪುತ್ರಜೀವಿಯು ಹುಲ್ಲುಮಣಿ ಪಟಕವಣಿ ಭೂಷಣಂ (ಗುರುಚಾ. ೩-೫೦). [ಪದ್ಮ+ಮಣಿ$_3$]

**ಪದ್ಮಮಿತ್ರ** (ನಾ). ತಾವರೆಯ ಗೆಳೆಯ; ಸೂರ್ಯ: ಕೆಂಪೇಱಿತು ಮೂಡಣದೆಸೆ . . . ಸಕಳಜಗಂ ಪೆಂಪೇಱಿತು ಪದ್ಮಮಿತ್ರನುದಯಿಸುವಾಗಳ್ (ಗಿಂಕ. ೫-೪). [ಪದ್ಮ+ಮಿತ್ರ]

**ಪದ್ಮಮುಖಿ** (ನಾ). **೧.** ತಾವರೆಯಂತೆ ಮುಖವುಳ್ಳವಳು: ಪದ್ಮಮುಖಿ. . . ಪದ್ಮವ್ರಜಮಂ ಪದ್ಮಾಕರದಲ್ಲಿ ಕೊಯ್ದುಳುತ್ಸವದಿಂಗಂ (ತ್ರಿಷುವಿ. ೨೪-೭೭). **೨.** [ಛಂದ] ಪ್ರತಿಪಾದದಲ್ಲಿ ಹದಿನಾರು

ಅಕ್ಷರಗಳನ್ನುಳ್ಳ, ಅಷ್ಟಿಛಂದಸ್ಸಿನಲ್ಲಿಯ ಒಂದು ಸಮವಾದ ವೃತ್ತದ ಹೆಸರು : ಇಂದುಗಣಂ ಶರಸಂಖ್ಯೆಯೊಳೊಂದಿರೆ ಚಂದ್ರಧರಂ ಪಿಂದು ಪದಾಂತದೊಳಿರ್ದೊಡೆ . . . ಜಗದ್ವಂದಿತ ಪದ್ಮಮುಖೀ ನಿಜ ನಾಮದೆ ಪದ್ಮಮುಖೀ (ಛಂದೋಂಬು. ೨-೧೬೧). [ಸಂ. ಪದ್ಮಮುಖೀ]

**ಪದ್ಮಮುದ್ರೆ** (ನಾ). ೧. ಮಂತ್ರಶಾಸ್ತ್ರದಲ್ಲಿ ಹೇಳಿರುವ ಕಮಲದ ಆಕೃತಿಯುಳ್ಳ ಮುದ್ರೆ ; ವಿಶೇಷವಾಗಿ ಮಾಧ್ವರು ಹಣೆಯಲ್ಲಿ ಧರಿಸುವ ಮುದ್ರೆಗಳಲ್ಲಿ ಒಂದು : 'ಚಕ್ರಮುದ್ರೆ' ಪರಾ. ೨. ಧ್ಯಾನಕಾಲದಲ್ಲಿ ತೋರಿಸುವ ಮಂತ್ರಶಾಸ್ತ್ರಪ್ರಸಿದ್ಧವಾದ ಒಂದು ಬಗೆಯ ಹಸ್ತಮುದ್ರೆ : ಪದ್ಮಮುದ್ರೆ . . . ಸಂಹಾರಮುದ್ರೆಯೆಂಬಾದಿಯಾಗಿ ಸಕಲ ಮುದ್ರೋಪಮುದ್ರಾಬಂಧಲಕ್ಷಣಂಗಳಂ ಗುರುಮುಖದಿಂದಱಿತು (ವಿವೇಕ. ೧೧೦) ; ಪದ್ಮದಲಿ=ಪದ್ಮಮುದ್ರೆಯಲ್ಲಿ, ಪ್ರಸ್ತಾವ=ಪ್ರಸ್ತಾವನಾಮಕ ಪರಮಾತ್ಮನು . . . ಇರುವನು (ಹಸಾರ. ೮-೨೮ ಪದಾರ್ಥ). [ಪದ್ಮ+ಮುದ್ರೆ]

**ಪದ್ಮಯ** (ನಾ). ಒಬ್ಬಾತನ ಹೆಸರು : ಆತನ ಅನುಜ ಪದ್ಮಯನು ಆತನ ತಮ್ಮ ಚಿಕ್ಕತಮ್ಮಗೌಡರು (ಎಕ. VII, ಶಿಮೊ. ೧೧೪-೧೬ ; 950 ?). [ಪದ್ಮ+ಅಯ$_1$(<ಅಯ್ಯ$_1$)]

**ಪದ್ಮಯೋನಿ** (ನಾ). =ಪದ್ಮಗರ್ಭ : ಬರೆವೊಡೆ ಚೀರಘಟ್ಟಿ ಕರುವಿಟ್ಟಪನೆಂದೊಡೆ ಪದ್ಮಯೋನಿ ಕಂಡರಿಪೊಡೆ ವಿಶ್ವಕರ್ಮನಱಿಗುಂ ನೆಱೆಯಂ (ಪುಷ್ಪಪು. ೨-೯೨). [ಪದ್ಮ+ಯೋನಿ]

**ಪದ್ಮರಾಗ** (ನಾ). ೧. ಕಮಲದ ಬಣ್ಣ ; ಕೆಂಪುಬಣ್ಣ. ೨. ಕೆಂಪುಬಣ್ಣದ ರತ್ನ ; ಮಾಣಿಕ್ಯ : "ಶೋಣಾಶ್ಮ, ಪದ್ಮರಾಗಃ – ಈ ೨ ಮಾಣಿಕ್ಯಂ" (ಹಲಾಯು. ೨೯-೨೧) ; ಪಸುರ್ಪುವಡೆದ ನೆಲದೊಳ್ ಪದ್ಮರಾಗದ ಪರಲ್ಗಳಂ ಬಲಿಗೆದಱಿದಂತೆ ಉಪಾಶ್ರಯಂಬಡೆದಳಂಕರಿಸುವಿಂದ್ರಗೋಪಂಗಳುಮಂ . . . ಕಂಡು (ಪಂಪಭಾ. ೭-೨೫ ವ) ; ಓರೊಂದೆಡೆಯೊಳ್ ಪೊಳೆದುವು ರಾರಾಜಿಪ ಪದ್ಮರಾಗರುಚಿಮಂಜರಿಗಳ್ (ಪಂರಾಮಾ. ೧೨-೮೮) ; ಪದ್ಮರಾಗಂಗಳಂ ಮೌಕ್ತಿಕವ್ರಜಮನನುಮಾಡಿಕೊಂಡು ಮಂಗಳವಾಡದ ಬಸವನ ಮಹಮನೆಯ ಮುಂದೆ ಪೋಗಿರೆಂದು ಕುಬೇರನಂ ಕಳುಪುತಿರ್ದಂ (ಬಸರ. ೧೨-೩೪). [ಪದ್ಮ+ರಾಗ]

**ಪದ್ಮರಿಪು** (ನಾ). ಕಮಲದ ಶತ್ರು ; ಚಂದ್ರ : ವಿಶ್ರುತಯಶದಿಂದೆ ಪದ್ಮರಿಪುವಂ ರಿಪುವಂ ನಿಜತೇಜದಿಂದೆ . . . ಜಯಿಸಿರ್ದನುದಾತ್ತವೈಭವಂ (ರಾಜಶೇ. ೪-೧೧೧). [ಪದ್ಮ+ರಿಪು]

**ಪದ್ಮರೇಖೆ** (ನಾ). ೧. ಕಮಲದ ಆಕಾರದಲ್ಲಿ ಬರೆಯುವ ವಿನ್ಯಾಸ,— ರಂಗವಲ್ಲಿ : ವೃಕ್ಷಂ ಲತೆ ಸ್ವಸ್ತಿಕಂ ಪದ್ಮರೇಖೆ ಗೃಹಲಕ್ಷಣಮೆನಿಪ್ಪ ಬಂಧಂ ರಂಗವಾಲಿಯುಕ್ಕು (ಮಂಗರಾ. ೬೦-೧೪). ೨. [ಸಾಮುದ್ರಿ] ಅತುಳೈಶ್ವರ್ಯವನ್ನು ಪಡೆಯುವುದನ್ನು ಸೂಚಿಸುವುದೆಂದು ನಂಬಲಾದ ಅಂಗೈಯ ಒಂದು ರೇಖೆ,— ಗೆರೆ : ಹಸ್ತದಲ್ಲಿ ಪದ್ಮರೇಖೆಯಿರಲು ಕೋಟಿ ದ್ರವ್ಯಾಧಿಪತಿಯಾಗುವನು (ಸಾಮುಲ. ೫೫-೨೦) ; ಕರತಳದ ಪದ್ಮರೇಖಾಂಕಿತವ ನೋಡಿ ಗಿರಿವರತನೂಭವೆಯ ವದನಾಬ್ಜವೀಕ್ಷಿಸಿ . . . ಮೃದುಲತರ ಪರಿಯಂಕದಿಂ ಸಕಲಲೋಕಚೈತನ್ಯಾತ್ಮನುಪ್ಪವಡಿಸಿದ ಮುದದೊಳು (ನಂದಿಪೂ. ೨೪-೪). [ಪದ್ಮ+ರೇಖೆ]

**ಪದ್ಮಲತೆ** (ನಾ). ತಾವರೆಯ ಬಳ್ಳಿ : ಅಂತೊಂದೊಂದೆ ತನ್ನೀರಜಾಸ್ಪದಮೊಂದೊಂದಱೊಳೊಂದೆ ಪದ್ಮಲತೆ ಸಂದಿರ್ಕುಂ ಲಸತ್ಪತ್ರದಿಂ (ನೇಮಿಪು. ೮-೧೨೩). [ಪದ್ಮ+ಲತೆ]

**ಪದ್ಮಲಾಂಛನ** (ನಾ). ೧. ತಾವರೆಯ ಚಿಹ್ನೆಯನ್ನು ಹೊಂದಿರುವವನು. ೨. ಪದ್ಮರೇಖೆಯುಳ್ಳವನು ; ರಾಜ ; ದೊರೆ. ೩. ಬ್ರಹ್ಮ. ೪. ಕುಬೇರ. ೫. ಸೂರ್ಯ. [ಪದ್ಮ+ಲಾಂಛನ]

**ಪದ್ಮಲೇಶ್ಯೆ** (ನಾ). [ಜೈನ] ಕರ್ಮಸಂಬಂಧವಾದ ಬೂದು, ಕೃಷ್ಣ, ನೀಲ ಮೊದಲಾದ ಆರು ಲೇಶ್ಯೆಗಳಲ್ಲಿ ಒಂದು; P "ಕಮಲದ ಬಣ್ಣದಂತಿರುವುದು, ದಾನಶೀಲತೆ, ಭದ್ರಪರಿಣಾಮ, ಇಷ್ಟಾನಿಷ್ಟಉಪದ್ರವಸಹನೆ, ಮುನಿಗುರುಪೂಜಾಪ್ರೀತಿ – ಇವು ಇದರ ಲಕ್ಷಣ" (ಜೈನಕೋ. ೧೫೭) : ಗುರುಭಕ್ತಂ ಋಜು ಧರ್ಮಾನುರಾಗಿ ಭದ್ರಂ ಕ್ಷಮಾಗುಣಂ ತ್ಯಾಗಿ ದಯಾಪರನೆನಿಸುವ ನರನಿಂತಿಲ್ಲಿರವೊಪ್ಪಿರ್ದವನೆ ಪದ್ಮಲೇಶ್ಯೆಯ ಜೀವಂ (ಶ್ರಾವಕಾ. ೭೧-೧೭). 'ಲೇಶ್ಯೆ' ಪರಾ. [ಪದ್ಮ+ಲೇಶ್ಯೆ]

**ಪದ್ಮಲೋಚನ** (ನಾ). ೧. ಕಮಲದಂತೆ ಕಣ್ಣುಗಳುಳ್ಳವನು. ೨. ವಿಷ್ಣು : ಬಾರೆಲೆ ಪದ್ಮಲೋಚನನ ಮಯ್ದುನ ಪಾಂಡವ ನಿನ್ನ ಭಕ್ತಿವಿಸ್ತಾರಮಿದಿತ್ತುದೆನ್ನ ಬಗೆಗುತ್ಸವಮಂ (ಶಬಶಂ. ೫-೫೦). [ಪದ್ಮ+ಲೋಚನ]

**ಪದ್ಮಲೋಚನೆ** (ನಾ). ಕಮಲದಂತೆ ಕಣ್ಣುಗಳುಳ್ಳವಳು : ಪದ್ಮಮುಖಿ ಪದ್ಮಲೋಚನೆ . . . ಪದ್ಮವ್ರಜಮಂ ಪದ್ಮಾಕರದಲ್ಲಿ ಕೊಯ್ದುಳುತ್ಸವದಿಂದಂ (ತ್ರಿಪುವಿ. ೨೪-೬೭). [ಸಂ. ಪದ್ಮಲೋಚನಾ]

**ಪದ್ಮವಾಸೆ** (ನಾ). ಕಮಲದಲ್ಲಿ ವಾಸಿಸುವವಳು ; ಲಕ್ಷ್ಮಿ : "ಲಕ್ಷ್ಮೀಃ, ಶ್ರೀಃ . . . ಪದ್ಮವಾಸಾಃ . . . ಈ ೯ ಲಕ್ಷ್ಮಿಯ ಪೆಸರು" (ಹಲಾಯು. ೬-೩೨). [ಸಂ. ಪದ್ಮವಾಸಾ]

**ಪದ್ಮವಿಭೂಷಣ** (ನಾ). ಕಲೆ, ವಿಜ್ಞಾನ, ಸಮಾಜಸೇವೆ, ಆಟಪಾಟಗಳು ಮುಂತಾದ ಯಾವುದಾದರೂ ಕ್ಷೇತ್ರದಲ್ಲಿ ವಿಶೇಷ ಸಾಧನೆಯನ್ನು ಮಾಡಿದ ವ್ಯಕ್ತಿಗೆ ಭಾರತಸರ್ಕಾರದವರು ಕೊಡುವ ಒಂದು ದೊಡ್ಡ ಪ್ರಶಸ್ತಿ ; P ಇದು 'ಪದ್ಮಶ್ರೀ', 'ಪದ್ಮಭೂಷಣ'ಗಳಿಗಿಂತ ಮೇಲ್ಮಟ್ಟದ ಪ್ರಶಸ್ತಿ. [ಸಂ.]

**ಪದ್ಮವಿಷ್ಟರ** (ನಾ). =ಪದ್ಮಪೀಠ ೧ : ನಿಂದ ಶಿಲೆ ತಪನತಪ್ತವಿದೆಂದಂಬುಜನಿಳಯೆ ಪದ್ಮವಿಷ್ಟರಮಂ . . . ಅಕ್ಕತೇಜ್ಜಂಗೆ ಪಡೆದು ಪದೆಪಂ ಮೆಱೆದಳ್ (ಆದಿಪು. ೯-೮೫); ಪರಮಂಗೆ ಲಕ್ಷ್ಮಿ ಪರಮಾದರದಿಂದಂ ಗೂಢ ಪದ್ಮವಿಷ್ಟರಮಂ ತಂದಿರಿಸಲ್ (ಅಜಿಪು. ೭-೯). [ಪದ್ಮ+ವಿಷ್ಟರ]

**ಪದ್ಮವೃಕ್ಷ** (ನಾ). ಒಂದು ಬಗೆಯ ಮರ : "ಪದ್ಮವೃಕ್ಷಂ, ಪದ್ಮಕಾಷ್ಠಂ— ಈ ಯೆರಡುಂ ಪದ್ಮಕ" (ಔಷಧಿ. ೯೩). [ಪದ್ಮ+ವೃಕ್ಷ]

**ಪದ್ಮವೇದಿಕೆ**(ನಾ). ಕಮಲದ ಆಕಾರದಲ್ಲಿ ರಚಿಸಿರುವ ಜಗಲಿ: ಆ ಜಂಬೂದ್ವೀಪದ ನಟ್ಟನಡುವೆ . . . ಪದ್ಮವೇದಿಕಾಪರಿವೃತರತ್ನತೋರಣಾಂಚಿತಜಿನಭವನಪರಿವೃತಮುಂ (ಆದಿಪು. ೧-೪೯ ವ). [ಪದ್ಮ + ವೇದಿಕೆ]

**ಪದ್ಮವ್ಯೂಹ** (ನಾ). ೧. ಕಮಲಗಳ ಸಮೂಹ,—ಗುಂಪು. ೨. ಕಮಲದ ಆಕಾರದಲ್ಲಿ ನಿಲ್ಲಿಸಿದ ಒಂದು ಬಗೆಯ ಸೇನಾರಚನೆ : ಅಸಮಪದ್ಮವ್ಯೂಹವನು ಭೇದಿಸುವನಾವವನೆನಲು ಕೇಳಿದು ಶಿಶುತನದ ಲಾಹವಕೆ ನಡೆದನು ನಾವು ಬೇಡೆನಲು (ಕುಪ್ಯಾದ್ರೋ. ೮-೨೨) ; ಸುತ್ತ ಪದ್ಮವ್ಯೂಹಮಂ ರಚಿಸಿ ನಡುವೆ ನರನುತ್ತಮತುರಂಗಮುಂ ಕಟ್ಟಿ (ಜೈಮಿಭಾ. ೧೨-೧೦) ; ನನಗೆ ತಂದೆಯು ಪದ್ಮವ್ಯೂಹವನ್ನು ಭೇದಿಸಿ ಒಳಕ್ಕೆ ಹೋಗುವುದನ್ನು ಹೇಳಿಕೊಟ್ಟಿದ್ದಾನೆ (ಪಚಭಾ. ೨೮೩). ೧,೨ : ಕೆದಱಿದುದು ಶಿಲೀಮುಖಪಾತದಿಂದೆ ಶೋಣಿತಪರಾಗತತಿ ಪದ್ಮವ್ಯೂಹದೊಳೆನೆ ಕೃಷ್ಣಶರಾಘಾತದಿನೊಗೆದುದು ದೈತ್ಯಬಲದೊಳರುಣಜಲೌಘಂ (ಜಗವಿ. ೧೨-೧೩). 'ಚಕ್ರವ್ಯೂಹ' ಪರಾ. [ಪದ್ಮ+ವ್ಯೂಹ]

**ಪದ್ಮಶ್ರೀ** (ನಾ). ಕಲೆ, ವಿಜ್ಞಾನ, ಸಮಾಜಸೇವೆ, ಆಟಪಾಟಗಳು ಮುಂತಾದ ಯಾವುದಾದರೂ ಕ್ಷೇತ್ರದಲ್ಲಿ ವಿಶೇಷಸಾಧನೆಯನ್ನು ಮಾಡಿದ ವ್ಯಕ್ತಿಗೆ ಭಾರತಸರ್ಕಾರದವರು ಕೊಡುವ ಒಂದು

ದೊಡ್ಡಪ್ರಶಸ್ತಿ : ಇದರ ಕರ್ತೃ ಪದ್ಮಶ್ರೀ ಡಾ. ರಂಗನಾಥನ್‌ರು ಭಾರತದ ಅತ್ಯಮೂಲ್ಯ ಸೊತ್ತಾಗಿದ್ದಾರೆ (ಗ್ರಂಥಾಲ.೨೭); ಪದ್ಮಭೂಷಣ, ಪದ್ಮಶ್ರೀಗಳು ಹಲ್ವಾ ಜನರ ಸೊತ್ತಾಗ್ತಾ ಇವೆ. ಇದಕ್ಕೆ ಕಾರಣ— ನಮ್ಮ ಜನದ ಪೊದ್ದುತನ (ಸಪೆವಾ. II, ೧೨೧೬). 'ಪದ್ಮಭೂಷಣ', 'ಪದ್ಮವಿಭೂಷಣ' ಪರಾ. [ಸಂ.]

**ಪದ್ಮಷಂಡ** (ನಾ). ೧. ಕಮಲಗಳ ಸಮೂಹ,—ಗುಂಪು : ನೀಲೋತ್ಪಲಷಂಡಂ ಪದ್ಮಷಂಡಂ ಲಲಿತವನಲತಾಷಂಡಮುಂ ತಂಡತಂಡಂಗಳಿನೀ ಬಂದಪ್ಪುದೆಂಬಂತೆಸೆದುದು ಭರತಾಂತಃಪುರಸ್ತ್ರೀಸಮೂಹಂ (ಆದಿಪು. ೧೧-೧೩೫) ; ಪದ್ಮಷಂಡಂಗಳೊಳೆತ್ತಂ ಸುತ್ತುಗೊಂಡಿರ್ದಳಿಕುಳಂ (ಸುಕುಮಾ. ೧-೭೧). **೨.** ತಾವರೆಯ ಕೊಳ ; ಕಮಲಸರೋವರ: ಆ ಕುಂಡಮನೆ ಪದ್ಮಷಂಡಂ ಮಾಡಿಯಲ್ಲಿ ಸಹಸ್ರದಳಸುವರ್ಣತಾಮರಸಮುಮದರ ಕರ್ಣಿಕೆಯ ಮೇಲೆ ಸಿಂಹಾಸನಮುಮಂ ವಿಗುರ್ವಿಸಿ (ಪಂರಾಮಾ. ೧೬-೨೯ ವ). [ಪದ್ಮ+ಷಂಡ]

**ಪದ್ಮಸಂಭವ** (ನಾ). = ಪದ್ಮಗರ್ಭ. [ಪದ್ಮ+ಸಂಭವ]

**ಪದ್ಮಸಂಹಿತೆ** (ನಾ). ಆಗಮಶಾಸ್ತ್ರದಲ್ಲಿ ಒಂದು ಭೇದ : ಪ್ರಭೂತಾಗಮ ವೀರೋದ್ಭೂತಾಗಮ ಪಾರ್ವತೀತಂತ್ರ ಪದ್ಮಸಂಹಿತೆಯೆಂದು ಅಜಿತಾಗಮದ ನಾಲ್ಕು ಭೇದಂಗಳು (ವಿವೇಕ. ೬೫). [ಪದ್ಮ+ಸಂಹಿತೆ]

**ಪದ್ಮಸಖ** (ನಾ). = ಪದ್ಮಬಂಧು : ಪದ್ಮಸಖಕೋಟಿಗಳ ಕಾಂತಿ ತಾ ಕಾಂತೆಯ ರೂಪಾದವೊಲ್ . . . ಕಣ್ಗೆಸೆದಳ್ (ನಂದಿಮಾ. ೭-೮) ; ನೀಳ್ದ ಪತಾಕೆಗಳ ಪಸರಿಸಿದ ಪಟಪಟಲಂ ಪದ್ಮಸಖರುಚಿಯಂ ಪರಿಭವಿಸೆ (ರಾಜಶೇ. ೬-೧೧ ವ). [ಪದ್ಮ+ಸಖ]

**ಪದ್ಮಸದ್ಮ** (ನಾ). ೧. ಕಮಲವನ್ನೇ ಮನೆಯಾಗಿ ಉಳ್ಳವನು ; ಬ್ರಹ್ಮ : ತನ್ನ ಸಾಮರ್ಥ್ಯಮೆ ರೂಪಾದನ್ತೆ ನಾಭ್ಯಂಬುರುಹದಿನೊಗೆದಂ ಚಿನ್ಮಯಂ ಪದ್ಮಸದ್ಮಂ (ಎಕ. VII, ಶಿಕಾರಿ. ೧೨೩-೪ ; 1159) ; ತತ್ಪಿತೃದ್ವಂದ್ವದ ಮನಕೆ ಸಮಾಕಾರ ಸಂಪದ್ವರಾಲಾಭದುರಂತೋದ್ವೇಗಮುಂ ನೀಡಿದನತಿತರನಿರ್ಬಂಧದಿಂ ಪದ್ಮಸದ್ಮಂ (ಚಂದ್ರಪ್ರ. ೫-೯೭) ; ಮುರಹರಪದ್ಮಸದ್ಮಮುಖನಿರ್ಜರಕೋಟಿಯನೊಕ್ಕಲಿಕ್ಕಿ (ರಾಜಶೇ. ೧-೫) ; ತುಂಬಿ ತುಳ್ಕುವ ಮೊಗದ ಮೊಗಂಬಡೆದ ಸೊಬಗು ಪದ್ಮಸದ್ಮನ ಮೊಗಸಿರಿಯನೆಡವುತೆಡಂಮಾಡೆ (ರಾಮಾಶ್ವ. ೧೩೯-೧೧). **೨.** ತಾವರೆಯ ಕೊಳ : ಮಿಸುಪ ಪಿರಿಯ ವಿಮಾಂಗಳ್ ದಾಡೆ ತಾಮಾಗಿಳಾರಾಕ್ಷಸಿಯ ತೆಱಿದ ಬಾಯಂತಿರ್ದುದಾ ಪದ್ಮಸದ್ಮಂ (ಚಂದ್ರಪ್ರ. ೫-೪೧).

[ಪದ್ಮ+ಸದ್ಮ]

**ಪದ್ಮಸದ್ಮೆ** (ನಾ). ಕಮಲವನ್ನು ಮನೆಯಾಗಿ ಉಳ್ಳವಳು; ಲಕ್ಷ್ಮಿ : ಪದ್ಮಪೀಠದಗ್ರಭಾಗದೊಳ್ಮರಂ ವಿರಾಜಿಪಾ ಪದ್ಮಸದ್ಮೆಯಂತೆ ತೋರ್ಪ ಯಂತ್ರಮಧ್ಯದಲ್ಲಿ . . . ತತ್ಪದ್ಮನೇತ್ರೆಯೊಪ್ಪಿದಳ್ (ಉದ್ಭಟ.೫-೫೫).

[ಸಂ. ಪದ್ಮಸದ್ಮಾ]

**ಪದ್ಮಸಾಲೆ**, ಪದ್ಮಸಾಳಿ (ನಾ). ನೇಕಾರರಲ್ಲಿ ಒಂದು ಪಂಗಡ : ಶ್ರೀ ಪ್ರಸಂನಆಂಜನೇಯಸ್ವಾಮಿಯವರಿಗೆ ಸರ್ಜಾಪುರದಲ್ಲಿರುವ ಪದ್ಮಸಾಲೆಯವರು . . . ಬರೆಸಿಕೊಟ್ಟ ದಾನಶಾಸನಕ್ರಮ (ಎಕ. IX (s), ಆನೆಕ. ೧೦೭-೪ ; 1802). **ಪದ್ಮಸಾಳಿ :** ನೇಕಾರರು . . . ೧ನೇ ವರ್ಗದಲ್ಲಿ ಪದ್ಮಸಾಳಿ, ಸುಕಸಾಳಿ, ಸಕ್ಕುಲಸಾಳಿಯೆಂಬ ಮೂರು ವೊಳಜಾತಿಗಳಿವೆ (ಕಭಾಗೆ. ೧೩೯). [ಪದ್ಮ+ಸಾಲೆ$_2$(<ಸೀಲೆ$_1$)]

**ಪದ್ಮಸಾಳಿ** 'ಪದ್ಮಸಾಲೆ' ನೋ.

**ಪದ್ಮಹ್ರದ** (ನಾ). = ಪದ್ಮಾಕರ ೧: ಪದ್ಮಹ್ರದದಲ್ಲಿ ಪ್ರಭವಿಸಿದ ಕಾರಣಮಾ ಕೂಸಿಂಗೆ ಪದ್ಮಾವತಿಯೆಂಬ ಪೆಸರನಿಟ್ಟು (ಪುಣ್ಯಾಸ್ರ. ೨-೩೧ ವ). [ಪದ್ಮ+ಹ್ರದ]

**ಪದ್ಮಾಂಕಿತ** (ನಾ). ಕಮಲವನ್ನು ಲಾಂಛನವಾಗಿ ಉಳ್ಳುದು : ವರದಂ ಪದ್ಮಾಂಕಿತಂ ತೋಳಿರಡು ಸಿಶಿತವಜ್ರಪ್ರಭಾಭಾಸುರಂ ತೋಳಿರಡು (ಆದಿಪು. ೧-೭). [ಪದ್ಮ+ಅಂಕಿತ]

**ಪದ್ಮಾಂಗ** (ನಾ). [ಜೈನ] ಒಂದು ದೊಡ್ಡ ಸಂಖ್ಯೆ; ℙ"ಕುಮುದವನ್ನು ಎಂಬತ್ತನಾಲ್ಕರಿಂದ ಗುಣಿಸಿದಾಗ ಬರುವ ಲಬ್ಧ" (ಜೈನಕೋ. ೧೫೭) : ಎಂಬತ್ತುನಾಲ್ಕು ಮತ್ತು ಎಂಬತ್ತುನಾಲ್ಕುಲಕ್ಷ ಗುಣಿತಕ್ರಮದಿಂದ ಕುಮುದಾಂಗ ಮತ್ತು ಕುಮುದ, ಪದ್ಮಾಂಗ ಮತ್ತು ಪದ್ಮ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಪ. ೩೦೬).

[ಪದ್ಮ+ಅಂಗ$_2$]

**ಪದ್ಮಾಕರ** (ನಾ). ೧. ಕಮಲಗಳಿಗೆ ಆಶ್ರಯಸ್ಥಾನವಾದುದು ; ತಾವರೆಯ ಕೊಳ ; ಕಮಲಸರೋವರ : "ಪದ್ಮಾಕರಃ, ತಟಾಕಃ . . . ೨ ತಾವರೆಗಳುಳ್ಳ ಕೆರೆ ಹೆಸರುಗಳು" (ಸಿದ್ಧಾಂತಿ. ೮೫); ಬಳಸಿ ದುರ್ದಾನಮುದ್ಯಾನದೊಳೊದವಿದ ಪದ್ಮಾಕರಂ (ಸುಕುಮಾ. ೧-೭೧); ಶ್ರೀಕಾಂತೆ ತನ್ನುರಃಪದ್ಮಾಕರದೊಳ್ ಹಂಸಿಯಂತೆ ನೆಲಸಿರೆ (ಪುಷ್ಪಪು. ೩-೧) ; ಕಡುಪರಿಮಳದ ಪಸರದ ಸೊಗಸು ತೀವಿತು ವಿಮಳ ಪದ್ಮಾಕರದ ಪವಮಾನ (ಕುಪ್ಪಾಅ. ೨೩-೧೩). **೨.** ಲಕ್ಷ್ಮಿಯ ಕೈ. **೧, ೨ :** ಪದ್ಮಾಕರಾಬ್ಜಗ್ರಹಣಕಳಿತನಿತ್ಯೋದಯಂ ಲೋಕದೊಳ್ ಸುಸ್ಥಿರಮಕ್ಕೇ ದೋರ್ಯಶಶ್ರೀರತಭರತಭವದ್ಭಾಗ್ಯಚಂಡಾಂಶುಬಿಂಬ (ಎಕ. VI, ಚಿಕ್ಕಮ. ೧೬೦-೫೪ ; 1103). [ಸಂ. (ಪದ್ಮ+ಆಕರ ; ಪದ್ಮಾ+ಕರ)]

**ಪದ್ಮಾಕ್ಷ** (ನಾ). ೧. ಕಮಲದ ಬೀಜ ; ℙ ಇದನ್ನು ಜಪಸರದ ಮಣಿಯಾಗಿ ಉಪಯೋಗಿಸುತ್ತಾರೆ. ೨. ಕಮಲದಂತೆ ಕಣ್ಣುಳ್ಳವನು : ಉಷ್ಟ್ರಕರ ಶೃಂಗ ಪಿಂಗಳ ಪಾರಿಭದ್ರ ಸೌರಾಷ್ಟ್ರಕಂ ಶೈಲಭಿಧ್ವಜ್ರದಂತಾನಂಗಕೋಷ್ಠ ಪಿಂಜರಲೋಚಮಾನ ಪದ್ಮಾಕ್ಷ ಪಾರ್ಶಿಕ ಪುಂಗವಾಂಗ . . . ಕರ್ಣಪೂರ್ಣಂ ಮುಖ್ಯಗಣರ ಸಂದಳಿಯಿರ್ದುದು (ನಂದಿಮಾ. ೨೪-೨೫). **೩.** ಸೂರ್ಯ. [ಸಂ.]

**ಪದ್ಮಾಕ್ಷಿ** (ನಾ). = ಪದ್ಮಾಕ್ಷ ೧ : ರುದ್ರಾಕ್ಷಿಯು ಧರಿಸಲೊಲ್ಲದೆ ಪದ್ಮಾಕ್ಷಿ ತೊಳಸಿಯ ಮಣಿಯುಂ ಕಟ್ಟಿಕೊಂಬಿರಿ (ಸರ್ವಪ. ೧೭೯-೮೨೯).

[ಸಂ. ಪದ್ಮಾಕ್ಷೀ]

**ಪದ್ಮಾಗಮ** (ನಾ). ಆಗಮಶಾಸ್ತ್ರದಲ್ಲಿ ಒಂದು ಭೇದ : ಮಾತಂಗತಂತ್ರ ಯಕ್ಷಿಣೀಶಾಸ್ತ್ರ ಪದ್ಮಾಗಮ ಪೌಷ್ಕರ ಸುಪ್ರಯೋಗ ಹಂಸಾಗಮ ಸಾಮಾನ್ಯಾಗಮವೆಂದು ಪಾರಮೇಶ್ವರಾಗಮದೇಳು ಭೇದಂಗಳು (ವಿವೇಕ. ೬೬). [ಪದ್ಮ+ಆಗಮ]

**ಪದ್ಮಾಟ** (ನಾ). ಒಂದು ಬಗೆಯ ಮರ ; "ಚಕ್ರಮರ್ದ" (ಪಂಡಿತ. ೨೪೦) : "ಪ್ರಪುನ್ನಾಟಃ, ಏಡಗಜಃ, ದದ್ರುಘ್ನಃ, ಚಕ್ರಮರ್ದಕಃ, ಪದ್ಮಾಟಃ, ಉರಣಾಕ್ಷಃ . . . ೬ ತಗಚೇಗಿಡದ ಹೆಸರುಗಳು, ತಗಿಚಿ, ತಗ್ಗಚ್ಚಿ" (ಸಿದ್ಧಾಂತಿ. ೧೪೬). [ಸಂ.]

**ಪದ್ಮಾನಂದಿ** (ನಾ). ೧. ಕಮಲವನ್ನು ಸಂತೋಷಪಡಿಸುವವನು; ಸೂರ್ಯ. **೨.** ಲಕ್ಷ್ಮಿಯನ್ನು ಸಂತೋಷಪಡಿಸುವವನು ; ವಿಷ್ಣು. **೧, ೨:** ಹರಿ ಪದ್ಮಾನಂದಿ ಪೀತಾಂಬರೋಲ್ಲಸಿತಂ ಚಕ್ರಸಹಾಯನಾಕ್ರಮಿಸಿದಂ ಭೂಚಕ್ರಮಂ ಪಾದದಿಂ ರಸೆಗಾಗಳ್ ಬಲಿ ದುಸ್ತಮಂ ತಳರ್ವಿನಂ ದಾನಪ್ರಬದ್ಧಾಕುಳಂ (ಪುಷ್ಪಪು. ೮-೨೩).

[ಸಂ. ಪದ್ಮಾನಂದಿನ್]

**ಪದ್ಮಾನುಷಂಗಿತ್ವ** (ನಾ). ೧. ಕಮಲದೊಡನೆ ಕೂಡಿಕೊಂಡಿರುವುದು. **೨.** ಐಶ್ವರ್ಯದೊಂದಿಗೆ ಕೂಡಿಕೊಂಡಿರುವುದು. **೧,೨ :** ಸದಾಳಿಪ್ರಿಯಂ ವರದಾನೋನ್ನತಭದ್ರಲಕ್ಷಣಪದಂ ಪದ್ಮಾನುಷಂಗಿತ್ವಮಾಗಿರೆ ಪೆಂಪಚ್ಚರಿಯಾದ ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ (ಜಗವಿ. ೧-೫). [ಸಂ.]

**ಪದ್ಮಾಲಯ** (ನಾ). ೧. ಕಮಲಗಳಿಗೆ ಆಶ್ರಯವಾದುದು. ೨. ಐಶ್ವರ್ಯಕ್ಕೆ ನೆಲೆಯಾಗಿರುವುದು. ೧, ೨ : ತೋಯಜಾಕರ ದಂತೆ ಪದ್ಮಾಲಯಂ . . . ಕಾಯಜನ ಪಿತನಂತನಂತಮಣಿರಂಜಿತದೊಳರ ಮನೆ ವಿರಾಜಿಸಿದುದು (ಚಿಬಪು. ೫-೫೩). [ಪದ್ಮ+ಆಲಯ]

**ಪದ್ಮಾಲಯೆ** (ನಾ). = ಪದ್ಮವುಂದಿರೆ : "ಲಕ್ಷ್ಮೀ, ಪದ್ಮಾಲಯಾ, ಪದ್ಮಾ, ಕಮಲಾ, ಶ್ರೀ, ಹರಿಪ್ರಿಯಾ-೬ ಲಕ್ಷ್ಮೀದೇವಿಯ ಹೆಸರುಗಳು" (ಸಿದ್ಧಾಂತಿ. ೧೮); ಧರೆಯಂ ಸ್ಥಿರೆಯೆನಿಸಿದನಿಂದಿರೆಯಂ ಪದ್ಮಾಲಯಾಖ್ಯೆ ಯೆಂದೆನಿಸಿದಂ . . . ಅದೇಂ ಸಮರ್ಥನೊ ಪದ್ಮಂ (ಪುಷ್ಪಪು. ೩-೨). [ಸಂ. ಪದ್ಮಾಲಯಾ]

**ಪದ್ಮಾಲಿಂಗಿತ** (ನಾ). ೧. ಐಶ್ವರ್ಯದಿಂದ ಕೂಡಿದವನು. ೨. ಲಕ್ಷ್ಮಿಯಿಂದ ಆಲಿಂಗಿತನಾದವನು ; ವಿಷ್ಣು : ಪದ್ಮಾಲಿಂಗಿತನಂತ ಶ್ರೀಲೋಲತೆಗಂ ದೂರಮೆನಿಸಿದಂ ಕಿಱಿಯಂದುಂ (ಶಾಂತಿಪು. ೭-೧೧೬). [ಸಂ.]

**ಪದ್ಮಾವತಿ** (ನಾ). ೧. ಲಕ್ಷ್ಮಿ : ಶೋಭನ ಶೋಭನವೆ . . . ಪದ್ಮನಾಭ ಶ್ರೀ ಪುರಂದರವಿಠಲಗೆ ಪದ್ಮಾವತೀಪ್ರಿಯ ಶ್ರೀನಿವಾಸಗೆ (ಪುರಂದ. ಧಾ. ೨-೧೫೭-೫). ೨. [ಜೈನ] ಒಬ್ಬ ದೇವತಾಸ್ತ್ರೀ : ಇಳಾದೇವಿ ಸುರಾದೇವಿ ಪೃಥ್ವಿ ಪದ್ಮಾವತಿ . . . ಭದ್ರೆಯೆಂಬೆಣ್ಬರುಮಾಶಾವಧೂವರರ ನಾದಿಪುರುಷಾಂಬಿಕೆಗೆ . . . ವಿಚಿತ್ರಾತಪತ್ರಂಗಳಂ ಪಿಡಿಯಲುಂ . . . ಬೆಸಸುವುದುಂ (ಆದಿಪು. ೭-೩ ಪ), ಪದ್ಮಾವತೀಲಬ್ಧ ವರಪ್ರಸಾದಾಸಾದಿತ ವಿಪುಳತುಳಾಪುರುಷ ಮಹಾದಾನಹಿರಣ್ಯಗರ್ಭತ್ರಯಾಧಿಕದಾನ (ಎಕ. VIII, ನಗರ. ೩೫-೩, 1077). ೩. ಒಬ್ಬ ಯಕ್ಷಿಯ ಹೆಸರು ; ಇಪ್ಪತ್ತುಮೂರನೆಯ ತೀರ್ಥಂಕರನಾದ ಪಾರ್ಶ್ವನಾಥನ ಯಕ್ಷಿ.

**ಪದ್ಮಾವತಿಯ ಕಲ್** = ಪದ್ಮಾವತಿಯೆಂಬ ಜೈನದೇವತೆಯ ವಿಗ್ರಹ : ವಾಯವ್ಯದೊಳ್ ಪದ್ಮಾವತಿಯ ಕಲ್ (ಎಇ. XVI, ೫೬-೩೩ : 1053). [ಸಂ. ಪದ್ಮಾವತೀ]

**ಪದ್ಮಾಸನ** (ನಾ). ೧. ಕಮಲವನ್ನು ಪೀಠವನ್ನಾಗಿ ಉಳ್ಳವನು ; ಬ್ರಹ್ಮ : ಕಾಡಲಿರ್ಪಂ ಬಲದೇವನೆನ್ನನುಜೆಯಂ ದುರ್ಯೋಧನಂಗಾ ನೊಡಂಬಡೆನೀವಟ್ಟಿಯದಾಗಳುಂ ನಿನಗೆ ದಲ್ ಪದ್ಮಾಸನಂ ತಾನೆ ನೇರ್ಪ ಡಿಸಲ್ ಕೂಡಿದಂ (ಪಂಪಭಾ. ೫-೨೦) ; ಪಲರ್ಗಂ ಕಾಮಸುಖಾರ್ಥ ವಿತ್ತನನೊಳಿರ್ಪಂತುಂ ಸಮಂತಾರೊಳಂ ಚಲಮಂ ಕೋಪಿಯುಮಾಗ ದಂತೆ ಪಡೆದಂ ಪದ್ಮಾಸನಂ ವೇಶ್ಯೆಯಂ (ಮುದಿ. ೧೦-೧). ೨. [ಯೋಗ] ಧ್ಯಾನ, ಪೂಜೆ ಮುಂತಾದ ಸಂದರ್ಭಗಳಲ್ಲಿ ಕುಳಿತುಕೊಳ್ಳುವ ಒಂದು ಭಂಗಿ ; ಒಂದು ಬಗೆಯ ಯೋಗಾಸನ ; "ಮೊದಲು ಬಲದಡಿಯನ್ನು ಎಡಪಾದದ ಮೇಲೆ ಎತ್ತಿರಿಸಿ, ಬಳಿಕ ಎಡದಡಿಯನ್ನು ಬಲದೊಡೆಯ ಮೇಲಿಟ್ಟು, ಆಮೇಲೆ ಬಲಗೈಯಿಂದ ಎಡಗಾಲ ಹೆಬ್ಬೆರಳನ್ನೂ, ಎಡಗೈಯಿಂದ ಬಲಗಾಲ ಹೆಬ್ಬೆರಳನ್ನೂ, ಹಿಡಿದೆಳೆದು, ಆಯಾಸ್ಥಾನಗಳಲ್ಲಿ ಮೇಲ್ಮೊಗ ಮಾಡಿದ ಅಂಗಾಲುಗಳನ್ನು ಸರಿಯಾಗಿ ಅಳವಡಿಸಿ, ಅನಂತರ ಎದೆಯ ಬಳಿ ಅಂದರೆ ಅದರಲ್ಲಿನ ನಾಲ್ಕು ಬೆಟ್ಟಿನಷ್ಟು ಪ್ರದೇಶದಲ್ಲಿ ತಲೆ ತಗ್ಗಿಸುವುದರ ಮೂಲಕ ಗದ್ದವನ್ನು ಒತ್ತಿಟ್ಟು, ದಿಟ್ಟಿಯನ್ನು ಮೂಗಿನ ತುದಿಯಲ್ಲಿ ನೆಟ್ಟರಬೇಕು. ಇದೇ 'ಪದ್ಮಾಸನ'ದ ಭಂಗಿ" (ಯೋಗದೀ. ೧೦೫) ; ವರಪದ್ಮಾಸನದೊಳ್ ಕನನ್ಮಣಿಮಯಂ ಸಿಂಹಾಸನಂ ... ವಿಜ್ಞಾನದಿಂದಂ ಜಗದ್ಗುರುವಾದಂ (ಗದಾಯು. ೧-೩) ; ಬಲಿದ ಪದ್ಮಾಸನಂ ಮುಗಿದಕ್ಷಿ ಮುಚ್ಚಿದಂಜಲಿವೆರಸಿ ಗುರುವಸಿಷ್ಠಂಗೆಜಗಿ (ಹಚಕಾ. ೧೩-೧೮) ; ಸಿದ್ಧ ಪದ್ಮಾಸನದೊಳಿರ್ದು ವಿಶುದ್ಧತನು ತಾನಾಗಿ (ಬಸವು. ೩-೫) ; ರಣಮಂಡಲದೊಳಗೆ ಪದ್ಮಾಸನವನನುಕೊಳಿಸಿ ಯೋಗಾರೂಢನಾದನು ವರಸಮಾಧಿಯಲಿ (ಕುಮಾದ್ರೋ. ೧೮-೨೧). ೩. [ಕಾಮಶಾ] ಕರಣಗಳಲ್ಲಿ ಒಂದು ಬಗೆ ; ಪಂಕಜಾಸನ : ಪದ್ಮಿನಿ ಪದ್ಮಾಸನದಿಂ ನಾಗರಕಬಂಧದಿಂ ಚಿತ್ರಿನಿ ಶಂಖಿನಿ ವೇಣುದಾರಿತದೆ ಹಸ್ತಿನಿ ತಣಿಕುಂ ಸ್ಕಂಧಪಾದದಿಂ ಕೂಡುವಿನಂ (ಮನ್ಮವಿ. ೨-೮) ; ಮೆಲ್ಲನೆ ಮಲಗಿರ್ದ ಸ್ತ್ರೀ ತನ್ನೆರಡು ಕಿರುದೊಡೆಗಳಂ ಮೇಲಕ್ಕೆ ಎತ್ತಿ ಪಲ್ಲಟ ಮಾಡಿ ಎಡದ ಕಾಲ ಹೆಬ್ಬೆರಳಂ ಎಡಗೈಯಿಂ ಪಿಡಿದು ಇರೆ ರಮಿಸುವದು ಪದ್ಮಾಸನಮೆಂಬ ಕರಣಂ (ಕಾಮಶಾ. ೨೩೫). [ಪದ್ಮ+ಆಸನ]

**ಪದ್ಮಾಸನಸ್ಥೆ** (ನಾ). ಪದ್ಮಾಸನವನ್ನು ಹಾಕಿ ಕುಳಿತಿರುವವಳು : ಆಕೆ . . . ಗಂಟೆಗಳ ಕಾಲ ಪದ್ಮಾಸನಸ್ಥೆಯಾಗಿ ಧ್ಯಾನದಲ್ಲಿ ಕುಳಿತಳು (ಶಾಂತಲಾ. ೨೯೨). [ಸಂ. ಪದ್ಮಾಸನಸ್ಥಾ]

**ಪದ್ಮಾಸೀನ** (ನಾ). ಕಮಲದಲ್ಲಿ ಕುಳಿತಿರುವವನು,—ನೆಲಸಿರುವವನು : ಪದ್ಮಾಸೀನನಾದ ಬುದ್ಧನನ್ನು ಕುರಿತು ಹಾಡಿದ ಕವನದಲ್ಲಿ . . . ರಮಣೀಯವಾದ ದರ್ಶನವು ಚಿತ್ರಿತವಾಗಿರುವುದು (ಪ್ರಬಂಧ.೮೦). [ಪದ್ಮ+ಆಸೀನ]

**ಪದ್ಮಾಸ್ಯೆ** (ನಾ). ಕಮಲದಂತೆ ಮುಖವುಳ್ಳವಳು : ಪದ್ಮಾಸ್ಯೆಯರ್ ಭೃಂಗಕುಂತಳೆಯರ್ . . . ವರ್ತಿಸಿದರ್ ಕುಮಾರನ ಮನಶ್ರೀ ಸಾರಕಾಸಾರದೊಳ್ (ಪುಷ್ಪಪು. ೧೨-೧೧೨). [ಸಂ. ಪದ್ಮಾಸ್ಯಾ]

**ಪದ್ಮಿ** (ನಾ). ೧. ಕಮಲಗಳಿಂದ ಕೂಡಿದುದು : ವನಮಾಲಿಯಂದದಿಂ ಪದ್ಮಿ ಪದ್ಮಿಯವೋಲ್ಪುವನಕುಕ್ಷಿ . . . ಕುವಲಯಾಧಾರಿವೋಲ್ವನಮಾಲಿಯೆನಿಸಿ ರಂಜಿಸುವ ಕಾಸಾರಮಂ ಸರ್ವಮಂಗಳೆ ಕಂಡಳು (ಜೈಮಿಭಾ. ೧೫-೧೨). ೨. ಬಣ್ಣಬಣ್ಣದ ಚುಕ್ಕೆಗಳಿಂದ ಕೂಡಿದುದು. ೩. ಆನೆ : "ದಂತೀ, ದಂತಾವಳಃ, ಹಸ್ತಿನ್ . . . ಇಭಃ, ಸ್ತಂಬೇರಮಃ, ಪದ್ಮೀ – ೧೫ ಆನೆಯ ಹೆಸರುಗಳು" (ಸಿದ್ಧಾಂತಿ. ೨೪೬). ೪. ವಿಷ್ಣು : ವನಮಾಲಿಯಂದದಿಂ ಪದ್ಮಿ ಪದ್ಮಿಯವೋಲ್ಪುವನಕುಕ್ಷಿ . . . ಕುವಲಯಾಧಾರಿವೋಲ್ವನಮಾಲಿಯೆನಿಸಿ ರಂಜಿಸುವ ಕಾಸಾರಮಂ ಸರ್ವಮಂಗಳೆ ಕಂಡಳು (ಜೈಮಿಭಾ. ೧೫-೧೨). [ಸಂ. ಪದ್ಮಿನ್]

**ಪದ್ಮಿನಿ** (ನಾ). ೧. ತಾವರೆಯ ಬಳ್ಳಿ ಮತ್ತು ಅದರ ಹೂವು ; ಕಮಲ : "ನಳಿನೀ, ಬಿಸಿನೀ, ಪದ್ಮಿನೀ-೩ ಕಮಲಲತೆಗೆ ಹೆಸರುಗಳು" (ಸಿದ್ಧಾಂತಿ. ೮೯); ದಿನಕರನುನ್ನತದ್ಯುತಿಗೆ ಪದ್ಮಿನಿ ಚೈತ್ರಮಹೋತ್ಸವಕ್ಕೆ ನಂದನವನಲಕ್ಷ್ಮಿ . . . ಸಂತತಮಹೋತ್ಸವದಿಂ ಪೊರೆಯೇಱುವಂತೆ ತನ್ನಿನಿಯನ ಕಾಣ್ಕೆಯಿಂ ಸುದತಿ ನೂತನಕಾಂತಿಯನಾಂತುದೊಪ್ಪದೇ (ನಳಚಂ. ೭೩೬) ; ಇನವಿರಹಿಣಿ ಪದ್ಮಿನಿ ಕಾಂತನಗಲ್ಕೆಯನಾಂತರಸುಗೆ ಮುಳಿವ ಸಿತಾಕಾಂತನ ಕರಕೆ ಬೆರ್ಚಿ ಮುಚ್ಚಿದಳೆನೆ ಮೊಗವಂ ಮುಗಿವ ಪಂಕಜಂ ಕರಮೆಸೆಗುಂ (ರಾಜಶೇ. ೧೧-೧೦) ; ಸವತಿಯೊಂದು ಪಿಸುಣ್ಗೆ ಎಱೆಯಂ ಮಾಱುವೋದನೆಂಬೊಂದುಬ್ಬೆಗದಿಂ ಕೊರಗಿದಳೆನೆ ಪದ್ಮಿನಿ ನಾಡೆ ಬಾಡೆ (ರಾಮಾಶ್ವ. ೨೨-೧೦). ೨. ಕಮಲಗಳ ಸಮೂಹ,—ಗುಂಪು. ೩. ತಾವರೆಗಳಿಂದ ಕೂಡಿದ ಕೊಳ ; ಕಮಲ ಸರೋವರ : ಪದ್ಮಲದೇವಿ ರಾಜಿಸುತಮಿರ್ಪ್ಪಳು ಹುಳ್ಳರಾಜಾಂತರಂಗಮರಾಳಂ ರಮಿಯಿಪ್ಪ ಪದ್ಮಿನಿಯವೊಲು (ಎಕ. II, ೩೪೬-೧೧ ; ಸು. 1165). ೪. [ಕಾಮಶಾ] ನಾಲ್ಕು ಬಗೆಯ ಸ್ತ್ರೀಜಾತಿಗಳಲ್ಲಿ ಮೊದಲನೆಯದು ಮತ್ತು ಆ ಜಾತಿಗೆ ಸೇರಿದ ಸ್ತ್ರೀ : ತನುಮಧ್ಯಂ ಭ್ರಮರಾಳಕಂ . . . ಪಿಕಧ್ವನಿ ವಜ್ರದ್ವಿಜಮಾಗೆ ಪದ್ಮಿನಿಯವಳ್ (ಮುದಿ.೨-೧); ಜಲಜಾಸ್ಯಂ ತತ್ಸುಗಂಧಾಕ್ಯ ಶಿರತಿಸಲಿಲಂ ಶ್ರೀಫಲೋದ್ಯತ್ಕುಚಂ ಕೋಕಿಲನಾದಂ ಹಂಸಯಾನಂ ಮೃದುಲಘುತರಭ್ರೂಕರ್ಣ ಸತ್ಕುಂತಲಂ ಪಿಪ್ಪಲವರ್ಣಾಕಾರಗುಹ್ಯಂ ಚಕಿತಮೃಗದೃಶಂ ಲಜ್ಜೆ ಮೇಣ್

ಶ್ಯಾಮವರ್ಣಂ ತಿಲಪುಷ್ಪಘ್ರಾಣವಾ ಪಾಂಡುರಭರಣಮಯಂ ಪದ್ಮಿನೀ ನಾರಿಗಕ್ಕುಂ (ಮನ್ಮವಿ. ೨-೩); ಸರಸತರಲಾವಣ್ಯರಸದಿಂದುರಿ ಮಸಗೆ ಜನಹೃದಯದಲಿ ಮೈಪರಿಮಳದ ಪಸರದಲಿ ಪದ್ಮಿನಿ ಬಂದಳೊಲವಿನಲಿ (ಕುಪ್ಪಾವಿ. ೫-೩೪); ಬಿಳಿದುಡುವ . . . ಒಳಗುಗುಂಡದೋಜೆ ಕಂಗೊಳಿಸುತಿರ್ಪವಳೆ ಕೋಮಲೆ ಕೇಳು ಪದ್ಮಿನಿಯೆನಿಪ್ಪಳೆಳೆಗೆ (ಜನಪ. ೨-೧೧); ಮೂಡಲದು ಹಸ್ತಿನಿಗೆ . . . ತೆಂಕಲಿನ ಬೀಡು ಪದ್ಮಿನಿಗೆ (ಸರ್ವಜ್ಞ. ೧೬೨೦). [ಸಂ. ಪದ್ಮಿನೀ]

**ಪದ್ಮಿನೀಪ್ರಿಯ**(ನಾ). ಕಮಲಕ್ಕೆ ಪ್ರಿಯನಾದವನು; ಸೂರ್ಯ: ಉದಯಗಿರೀಂದ್ರವೇದಿಕೆಯನೇಱದನೊಯ್ಯನೆ ಪದ್ಮಿನೀಪ್ರಿಯಂ(ಕಾದಂಬ. ೪೩೦); ಅವನೀಶ್ವರಂ ಪುರುಷರಾರುಂ ಕಾಣದಂತಂಗನಾಜಯವಿರ್ದಲ್ಲಿಗೆ ಭೋಂಕನೆಯ್ದಿ ವಿಲಸತ್ತೇಜೋಮಯಂ ಪದ್ಮಿನೀಪ್ರಿಯನೆಂಬೊಂದು ವಿಳಾಸದಿಂ ನೆಲಸಿದಂ ಶೃಂಗಾರರಂಗಸ್ಥಳಂ (ಸಳಚಂ. ೨೬೯). [ಸಂ.]

**ಪದ್ಮಿನೀಮಿತ್ರ** (ನಾ). ೧. ಸೂರ್ಯ. ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ: ಅನಿಲಂ . . . ಮುಂದೆ ನಿಲಲ್ ಭೂತೇಶಂ ದೇವ ಕಡೆಯೊಳ್ ವಿಶ್ರಮಣೋದಯಂ ಪದ್ಮಿನೀಮಿತ್ರನೊಳ್ (ಛಂದೋಂಬು. ೨-೧೩೬). [ಸಂ.]

**ಪದ್ಮಿನೀವಲ್ಲಭ** (ನಾ). ಸೂರ್ಯ: "ಕರ್ಮಸಾಕ್ಷೀ, ಜಗಚ್ಚಕ್ಷುಃ, ಅಂಶುಮಾಲೀ, ತ್ರಯೀತನುಃ . . . ಪದ್ಮಿನೀವಲ್ಲಭಃ, ಹರಿಃ —೧೨ ಸೂರ್ಯನಾಮಂಗಳು" (ಸಿದ್ಧಾಂತಿ. ೩೨). [ಸಂ.]

**ಪದ್ಮಿನೀಷಂಡ** (ನಾ). ೧. ಕಮಲಗಳ ಸಮೂಹ,—ಗುಂಪು: ಮಿಹಿರಪ್ರದ್ಯೋತಿ ಸಂಧ್ಯಾಭವನಸಮಯದೊಳ್ ಪದ್ಮಿನೀಷಂಡದೊಳ್ ಪೊದಟ್ದು . . . ಮುಗುಳೊಳ್ ಸಿಲ್ಕಿ(ಸುಕುಮಾ. ೩-೧೫). ೨. ಪದ್ಮಿನೀ ಜಾತಿಯ ಸ್ತ್ರೀಯರ ಸಮೂಹ. ೧, ೨: ಚಂಡವಿರೋಧಿಸಾಧನ ತಮಸ್ತಮಮೋಡೆ ವಿಶಿಷ್ಟಪದ್ಮಿನೀಷಂಡಮರಲ್ದು ರಾಗದಿನೊಱಲ್ದಿರೆ (ಪಂಪಭಾ. ೧-೩). [ಸಂ.]

**ಪದ್ಮೆ** (ನಾ). ೧. ಲಕ್ಷ್ಮಿ: "ಲಕ್ಷ್ಮೀಃ, ಶ್ರೀಃ, ಕಮಲಾ, ಪದ್ಮಾ . . . ಈ ೯ ಲಕ್ಷ್ಮಿಯ ಪೆಸರು" (ಹಲಾಯು. ೬-೩೨); "ಶ್ರೀ ರಾಮೆ . . . ಪದ್ಮೆ . . . ದನುಜಾರಿಪ್ರಿಯೆಯೆಂದಿವಿಂದಿರಾನಾಮಂಗಳ್" (ಮಸ್ತುಕೋ. ೫-೨೬). ೨. ಒಂದು ಬಗೆಯ ಸಸ್ಯ; ನೆಲದಾವರೆ: "ಅವ್ಯಥಾ, ಅತಿಚರಾ, ಪದ್ಮಾ, ಚಾರಟೀ, ಪದ್ಮಚಾರಿಣೀ—೫ ಕಾಶ್ಮೀರ ದೇಶದಲ್ಲಿರುವ ಬೆಟ್ಟದಾವರೇ ಹೆಸರು" (ಸಿದ್ಧಾಂತಿ. ೧೪೫). ೩. ಒಂದು ಬಗೆಯ ಸಸ್ಯ; ಗಂಟುಭಾರಂಗಿ; "ಭಾರ್ಗಿ" (ಪಂಡಿತ. ೨೪೨); "ಹಂಜಿಕಾ . . . ಬ್ರಾಹ್ಮಣೀ, ಪದ್ಮಾ, ಭಾರ್ಗೀ . . . ಬರ್ಬರಃ, ವಂದಕಃ—೯ ಭಾರಂಗೀ ಹೆಸರುಗಳು. ಗಂಟುಭಾರಂಗೀ ಎಂಬುವ ಗ್ರಂಥಿಕದ್ರವ್ಯವು ಪ್ರಸಿದ್ಧವಾದದ್ದು" (ಸಿದ್ಧಾಂತಿ. ೧೩೨). ೪. ಲವಂಗ. [ಸಂ. ಪದ್ಮಾ]

**ಪದ್ಮೇಶ** (ನಾ). ೧. ಕಮಲಕ್ಕೆ ಒಡೆಯ; ಸೂರ್ಯ. ೨. ಸಂಪತ್ತಿಗೆ ಒಡೆಯ; ಅತ್ಯಂತ ಶ್ರೀಮಂತ. ೧, ೨: ಮನುಜನಿದಜೆಯೊಂದೆ ಕುವಲಯಮನೊಂದೆ ಪದ್ಮಮನುಮಾಧಿಪಂಗೇಱಸೆ ತೊಟ್ಟನೆ ಕುವಲಯಪತಿ ಪದ್ಮೇಶನಪ್ಪ ಪೂಗೊಳನೆ ಬನದ ಪೂಗೊಳನೆಲ್ಲಂ (ಜಗವಿ. ೧೬-೪೦). [ಪದ್ಮ+ಈಶ]

**ಪದ್ಮೋದರ** (ನಾ). ಹೊಟ್ಟೆಯಲ್ಲಿ ಕಮಲವನ್ನುಳ್ಳವನು; ಕಮಲನಾಭ; ವಿಷ್ಣು: ವರ ಸಂಧ್ಯಕ್ಷರದಂತಿರೆ ಗುರು ದೀರ್ಘಂ ಗೂಢಸಂಧಿಯೆನೆ ತೋಳ್ ನಾಲ್ಕುಂ ಕರಮೆಸೆದಿರ್ಕುಂ ಪದ್ಮೋದರಂಗೆ ಚಕ್ರಾಸಿ ಶಂಖ ಶಾರ್ಙ್ಗಸಮೇತಂ (ಕಾವ್ಯಾವ. ೧೪). [ಪದ್ಮ+ಉದರ]

**ಪದ್ಮೋದ್ಭವ** (ನಾ). = ಪದ್ಮಗರ್ಭ: ಪದ್ಮೋದ್ಭವೋದ್ಭಾವಕಂ ವಿದಿತಾರ್ಥಾನುಗನಾಮನಲ್ತೆ ವಿನಯಾದಿತ್ಯಾವನೀಪಾಲಕಂ (ಎಕ. III, ಮಳನ. ೩೧-೧೧; 1117); ಒಂದು ಧನುವಿಂಗೆ ಮೂಜೇಂಬ ಹಿಡಿದೆ ಒಂದು ಬಾಣವ ಬಿಡಲಾಗಿ ಪದ್ಮೋದ್ಭವನ ಸೃಷ್ಟಿಯ ಕಟ್ಟಿತ್ತು (ಸಕವ. III, ೧೦೨-೧೯೧, ಗಾಣದ ಕಣ್ಣಪ್ಪನ ವಚನ). [ಪದ್ಮ+ಉದ್ಭವ]

**ಪದ್ಮೋದ್ಭವತ್ವ**(ನಾ). ಬ್ರಹ್ಮನ ಪದವಿ,—ಸ್ಥಾನ: ಕಂತುವೆ ತಾಂ ಪದ್ಮೋದ್ಭವತ್ವಂಬಡೆದುಲಿದು ತಪಸ್ತಪ್ತನಾ ಕಾಂತೆಯಂ . . . ನಿರ್ವಿಗಿ ಜಯಿಸಿದಂ (ಪುಷ್ಪಕು. ೩-೨೩). [ಸಂ.]

**ಪದ್ಯ** (ಗು). ೧. ಪದಗಳಿಂದ ಕೂಡಿದ. ೨. ಪಾದಕ್ಕೆ ಸಂಬಂಧಿಸಿದ; ಪಾದಗಳಿಂದ ಕೂಡಿದ; ಸಾಲುಗಳುಳ್ಳ. (ನಾ). ೩. ಮೂರು, ನಾಲ್ಕು, ಆರು ಇತ್ಯಾದಿ ನಿಯತವಾದ ಸಾಲುಗಳುಳ್ಳ ಛಂದೋಬದ್ಧವಾದ ರಚನೆ: "ಶ್ಲೋಕಂ ಯಶವುಂ ಪದ್ಯಮುಂ . . . ತಾನಕ್ಕುಂ" (ಮಸ್ತುಕೋ. ೧೨೧-೨೦); ಪದ್ಯಂ ಸಮಸ್ತಜನತಾಹೃದ್ಯಂ ಪದವಿದಿತಪಾದನಿಯಮನಿವೇದ್ಯಂ (ಕವಿರಾ. ೧-೩೦); ಪದ್ಯಂಗಳ್ ನವರಸನಿರವದ್ಯಂಗಳ್ ಸುಜನಸಂಕುಳಕ್ಕೆ ನಿರಂತಂ ಹೃದ್ಯಂಗಳ್ (೧೦ಕ. ೧-೧೩); ಮರುಳುಹಾರುವ ಗದ್ಯಪದ್ಯದ ಸರಸವಿದ್ಯಗಳಲ್ಲದೀ ಸಂಗರದ ಕರ್ಕಶವಿದ್ಯೆ ನಿಮಗೇಕೆಂದನಾ ಕರ್ಣ (ಕುಪ್ಪಾವಿ. ೬-೧೧); ಪದ್ಯಂ ವಧ್ಯಂ ಗದ್ಯಂ ಹೃದ್ಯಂ (ರಾಮಾಶ್ವ. ೫-೧೪). ೪. ಭಗವಂತನ ಪಾದದಲ್ಲಿ ಹುಟ್ಟಿದವನು; ಶೂದ್ರ: "ಶೂದ್ರಃ, ಅಂತ್ಯವರ್ಣಃ, ವೃಷಲಃ, ಪದ್ಯಃ—ಈ ೪ ಶೂದ್ರಂ" (ಹಲಾಯು. ೯೬-೪೩೨); "ನೆಱೆ ಪಂಚಮಂ ಪದ್ಯನಕ್ಕು" (ಮಂಗರಾ. ೧೧೦-೬). 'ಗದ್ಯ' ಪರಾ. [ಸಂ.]

**ಪದ್ಯಕಾವ್ಯ** (ನಾ). [ಕಾವ್ಯಮೀ] ಕಾವ್ಯಗಳಲ್ಲಿ ಒಂದು ಪ್ರಕಾರ; ಪದ್ಯದಲ್ಲಿ ರಚಿಸಿದ ಕಾವ್ಯ: ಬಗೆಯದೆ ಸತ್ಪ್ರಣಾಳ್ಯವಹಾರಿಗಳುಸಿರ್ವರ್ಗದ್ಯಕಾವ್ಯದೊಳ್ ನಿರ್ಬಂಧಂ ಪುಗದೆಂದರೋಚಿಗಳದಂ ತೆಗಟಿಂದಾ ಗದ್ಯಪದ್ಯಕಾವ್ಯದೊಳಿಕ್ಕರ್ (ಶಮದ. ೬೦); ಸರೇಫಮಿದಿರಾಗೆ ಶಿಥಿಲಮಪ್ಪುದೆಂಬ ಸಂಧಿಯನಜ್ಞರ್ ಗದ್ಯಕಾವ್ಯದೊಳ್ಪೆಚ್ಚಿಕಮೆಂಬರ್; ಪ್ರಾಜ್ಞರದಂ ದೂಷ್ಯಮೆಂದು ಪದ್ಯಕಾವ್ಯದೊಳೆಂತಂತೆ ಗದ್ಯಕಾವ್ಯದೊಳಂ ಪ್ರಯೋಗಿಸರ್ (ಶಮದ. ೬೦ ವೃತ್ತಿ); 'ಪದ್ಯ' ಎಂಬುದನ್ನು ಲಾಕ್ಷಣಿಕರು ಪದ್ಯಕಾವ್ಯವೆಂಬ ಅರ್ಥದಲ್ಲೇ ಪ್ರಯೋಗಿಸಿರುವಂತೆ ತೋರುತ್ತದೆ (ಸಂಶೋಧ. ೧೨೪). 'ಗದ್ಯಕಾವ್ಯ' ಪರಾ. [ಪದ್ಯ+ಕಾವ್ಯ]

**ಪದ್ಯಗಂಧಿ** (ನಾ). ಪದ್ಯದ ಲಯ ತೋರುವ ಗದ್ಯ: ಸಂಸ್ಕೃತದಲ್ಲಿ 'ಚೂರ್ಣಿಕೆ'—ಮೊದಲಾದ ಪದ್ಯಗಂಧಿ ಗದ್ಯಗಳಿವೆಯಷ್ಟೆ (ನಾಡೋಜ. ೨೭೫); ತ್ರಿಪದಿಯು ಪದ್ಯಗಂಧಿಯಾಗಿರುವ ಗದ್ಯದಂತೆ ಕಾಣಿಸುವುದೆ 'ವಚನ' ಎನಿಸಲು ಕಾರಣವಿರಬಹುದು (ಸಂಶೋಧ. ೧೪೫). [ಸಂ.]

**ಪದ್ಯನಾಟಕ** (ನಾ). ಛಂದೋಬದ್ಧವಾದ ಸಂಭಾಷಣೆಗಳನ್ನು ಒಳಗೊಂಡಿರುವ ದೃಶ್ಯಕಾವ್ಯ: ಪದ್ಯನಾಟಕ . . . ಅಣಕುವಾಡು—ಎಲ್ಲವೂ ಇಂದು ಕನ್ನಡದಲ್ಲಿ ನೆಲೆಗೊಂಡಿವೆ (ನವ್ಯಕಾ. ೨೪). [ಪದ್ಯ+ನಾಟಕ]

**ಪದ್ಯರಚನೆ** (ನಾ). ಪದ್ಯವನ್ನು ಕಟ್ಟುವುದು; ಪದ್ಯದ ರಚನೆ,—ಬರೆವಣಿಗೆ: ಪದ್ಯರಚನೆಯೊಳ್ ಕಾಳಿದಾಸನುಂ ಗದ್ಯರಚನೆಯೊಳ್ ಬಾಣನುಂ . . . ನೆಗಟ್ದರ್ (ಗದಾಯು. ೧-೯). [ಪದ್ಯ+ರಚನೆ]

**ಪದ್ಯಾರ್ಧ** (ನಾ). ಪದ್ಯದ ಅರ್ಧಭಾಗ: ಪದ್ಯಾರ್ಧ ವಾಕ್ಯವೇಷ್ಟನದೆಡೆಗಂ ಸ್ಫುರದನುಕೃತಿಗಂ ಸ್ವರಮವು ಪರವಿರೆ ಋತ್ವಕ್ಕಮಂತೆ ಸಂಧಿವಿಕಲ್ಪಂ (ಶಮದ. ೬೧). [ಪದ್ಯ+ಅರ್ಧ]

**ಪದ್ಯೆ** (ನಾ). ಮಾರ್ಗ; ದಾರಿ; ರಸ್ತೆ: "ಅಧ್ವಾ . . . ಪದ್ಯಾ, ನಿಗಮಃ—ಈ ೧೨ ಬಟ್ಟೆ" (ಹಲಾಯು. ೪೩-೧೦೫); "ಅಯನಂ, ವರ್ತ್ಮನ್,

ಮಾರ್ಗಃ . . . ಪದ್ಯಾ, ವರ್ತನೀ, ಏಕಪದೀ – ೧೨ ದಾರಿಯ ಹೆಸರುಗಳು" (ಸಿದ್ಧಾಂತಿ. ೯೬). [ಸಂ. ಪದ್ಯಾ]

**ಪದ್ಮಂತಿಕೆ** (ನಾ). (?) : ಎಡೆಮಾರ್ಗದಿ ಪದ್ಮಂತಿಕೆಗಳಿಂದ ಥಳಥಳಿಸಿ ಬೆಳಗುತ ಭರದ್ವಾಜಮುನಿಪನಂ ಕಂಡು . . . ಸಮುಂದವೆತ್ತುಪಚರಿಸಿ (ಪರಶು. ೪೧–೨೯). [?]

**ಪದ್ಮಲಿ** (ನಾ). ಒಂದು ಬಗೆಯ ಸಸ್ಯ : ನೀಮುಂಟಾ, ಪರೀರಾ ಬೇರು, ಪದ್ಮಲಿ, ಪಾತ, ಕಾಡುಬಳ್ಳಿ (ಮೈಔಗ. ೨೧–೩೯೪). [?]

**ಪಧಿ** 'ಪದಿನ್' ನೋ.

**ಪನ್**₁ 'ಪದಿನ್' ನೋ.

**ಪನ್**₂, ಪಂ (ಸಪೂರೂ). ಸಮಾಸದಲ್ಲಿ 'ಪಸಿ' ಎಂಬ ನಾಮವಾಚಕಕ್ಕೆ ಬರುವ ಆದೇಶರೂಪ : 'ಪಂದಲೆ', 'ಪಂದೋಲ್' ಪರಾ. **ಪಂ :** 'ಪಂಬಸಲೆ' ಪರಾ. 'ಪೊಂ' ಹೋ. [<ಪಸಿ₃]

**ಪನ,** ಪನವು (ನಾ). ರಹಸ್ಯಸ್ಥಳ ; ಗುಟ್ಟಾಗಿ ಗೊತ್ತುಪಡಿಸಿದ ಪ್ರದೇಶ ; ಸಂಕೇತಸ್ಥಳ : "ಪನಂ=ಸಂಕೇತಸ್ಥಳಂ" (ಶಮದ. ಪಂ.೨); ಸಮರಸನ್ನದ್ಧತೆಯ ಸನ್ನಣದ ಸಂಭಾರಗಳನ್ನು ತಕ್ಕೆಡೆಯ ಪನದಲ್ಲಿ ಸಂಗ್ರಹಿಸಿಕೊಂಡು ಸಜ್ಜಾಗಿರುವನು (ಮಂತ್ರಶ. ೧೩೪–೬). **ಪನವು :** "ಸಂಕೇತಸ್ಥಳಕ್ಕೆ ಪನವೆಂದು ಕೊಂಬೆಂದು ಪೆಸರ್" (ಕಬ್ಬಿಕೈ. ೧೬೨) ; 'ಮಾಗಿಯ ಕಾಲಕ್ಕೆ ಹೇಗಿದ್ದೆ ಕೋಗಿಲ ?', 'ಹೋಗಿದ್ದೆ ಬನವಾಸಿ ಪನವಿನೊಳ್' (ಸಖೀಗೀ. ೧೪–೧೬೪). [**ದೇ. ಶ**]

**ಪನಂಬುಬಳ್ಳಿ** (ನಾ). ಒಂದು ಬಗೆಯ ಬಳ್ಳಿ : (ಮೈಔಗ. ೩೬–೭೪೧). [ಪನಂಬು₀+ಬಳ್ಳಿ]

**ಪನಟೆ** (ನಾ). ಒಂದು ಊರಿನ ಹೆಸರು (?) : ಗಂಗೆಸೆಟ್ಟಿ ಕಲಸ್ಯಟಿ ಪನಟೆಯ ತುರುಗೊಳೊಳ್ಕೊಣ್ಡು ಪುಯ್ಯಲ್ವೋಗಿ ಅನ್ಱಿಱದು ಸಗ್ಗ ಮೇಱಿದಂ (ಎಕ. X, ಕೋಲಾರ. ೨೪೫–೩ ; 966). [?]

**ಪನಪನ** (ನಾ). ಒಂದು ಅನುಕರಣ ಶಬ್ದ : ತನ್ನ ಸಹಜಕವಚಮಂ ನೆತ್ತರ್ ಪನಪನ ಪರಿಯೆ ತಿದಿಯುಗಿವಂತುಗಿದು ಕೊಟ್ಟೊಡೆ (ಪಂಪಭಾ. ೧–೧೦೨ ವ) ; ಅಂತು ಸಹಜಕವಚ ರತ್ನಕುಂಡಲಂಗಳಂ ನೆತ್ತರ್ ಪನಪನ ಪರಿಯೆ ತಿದಿಯುಗಿವಂತುಗಿದು ಕೊಟ್ಟುದರ್ಕೆ ಮೆಚ್ಚಿ (ಪಂಪಭಾ. ೯–೬೩ ವ).

**ಪನವು** 'ಪನ' ನೋ.

**ಪನಸ** 'ಪಲಸು' ನೋ.

**ಪನಸವಾಡಿ,** ಹನಸವಾಡಿ (ನಾ). ಒಂದು ಊರಿನ ಹೆಸರು : ಸರ್ವನಮಸ್ಯವಾಗೆ ಪನಸವಾಡಿಯಂ ಬಿಟ್ಟು (ಎಕ. VII, ಶಿಮೊ. ೧೦–೫೨ ; 1085 ?). **ಹನಸವಾಡಿ :** ಚಿಕ್ಕಕೂಡಲಿಯ ಹನಸವಾಡಿಯ ಪೂರ್ವ್ವಾಯ ಅಪೂರ್ವ್ವಾಯ ಆಳುಯನ್ನಾಯ ಯೇನೂಯಿಲ್ಲೆಂದು ಧಾರಾಪೂರ್ವ್ವ ಮಾಡಿದ ಧರ್ಮ (ಎಕ. VII, ಶಿಮೊ. ೬೮–೩ ; 1313). [ಪನಸ (<ಪಲಸು) + ವಾಡಿ₂]

**ಪನಸಾರೆ,** ಪಸಾರ₂, ಪಸಾರೆ (ನಾ). ೧. ಪಿಪ್ಪಲಿ, ಸರ್ಪಿ, ಸಿತ, ಕ್ಷೌದ್ರ, ಪಯಸ್ಸುಗಳೆಂಬ ಐದು ಬಗೆಯ ಸಾರಗಳು ; ಪಂಚಸಾರ : ಆ ಮೂಲಿಕೆಗೆ, ಕೆಲವು ಪನಸಾರೆ ಮದ್ದುಗಳನ್ನು ಬೆರಸಿ . . . ಮದ್ದನ್ನು ತಯಾರಿಸಿದ (ಹುಲಿಹಾ. ೪೪). **ಪಸಾರ₂ :** ೨. ಔಷಧ ದ್ರವ್ಯ ; ಗ್ರಂದಿಗೆದ್ರವ್ಯ : 'ಪಸಾರಿ' ಪರಾ. **ಪಸಾರೆ :** ೧. ಔಷಧಕ್ಕೆ ಪಸಾರೆ ಸಾಮಾನು ಬೇಕೆಂದು...ಹೊರಟು (ಮುಸುಗ. ೧೬೨). ☞'ಪನಸಾರ', 'ಪಂಸಾರ' ಎಂಬ ರೂಪಗಳೂ ಇದ್ದಿರಬಹುದು. ಪ್ರಯೋಗಗಳು ದೊರೆತಿಲ್ಲ. [<ಪಂಚಸಾರ]

**ಪನಸು** 'ಪಲಸು' ನೋ.

**ಪನಸೋಗೆ,** ಹನಸೋಗೆ (ನಾ). ೧. ಒಂದು ಸ್ಥಳದ ಹೆಸರು ; ☞ ಈಗಿನ ಹುಣಸೂರು ತಾಲ್ಲೂಕಿನಲ್ಲಿರುವ ಹನಸೋಗೆ : ಶ್ರೀರಾಜಕೇಸರಿವರ್ಮ್ಮಪೆರ್ಮ್ಮಾನಡಿಗಳ್ ನಿಲ್ಲದೆ ಪನಸೋಗೆಯ ಕಾಳೆಗದ ಲೊಟ್ಟಕೆಯ್ದಂ (ಎಕ. IX, ಕೊಡಗು. ೪೬–೫ ; ಸು. 1005). **ಹನಸೋಗೆ :** ೧. ಸ್ವಸ್ತಿಶ್ರೀ ಮೂಲಸಂಘ ದೇಶೀಯಗಣ ಪೊಸ್ತಕ ಗಚ್ಛ ಕೊಂಡಕುಂದಾನ್ವಯ ಹನಸೋಗೆಯ ಬಳಿಯ ಶ್ರೀಬಾಹುಬಲಿ ಮಲಧಾರಿದೇವ (ಎಕ. IV, ಹುಣಸೂ. ೧೪–೨; 1303) ; ಹನಸೋಗೆಯ ಆದಿಶ್ರೀ ಅಪ್ಪಗಳು (ಎಕ. I (R), ೧೯–೨೬ ; 1544). ೨. [ಜೈನ] ಯತಿಗಳ ಒಂದು ಶಾಖೆ : ಅನ್ವಯಗಳು : ಪೂರಳ್ . . . ಹನಸೋಗೆ, ಮೈಲಾಪ (ಕಶಾಅ. ೮೬). [?]

**ಪನಾಯಿತ** (ಗು). ೧. ಹೊಗಳಲ್ಪಟ್ಟ ; ಕೊಂಡಾಡಲ್ಪಟ್ಟ. (ನಾ). ೨. ಹೊಗಳಲ್ಪಟ್ಟುದು ; ಕೊಂಡಾಡಲ್ಪಟ್ಟುದು : "ಈಡಿತಂ, ಶಸ್ತಂ, ಪಣಾಯಿತಂ, ಪನಾಯಿತಂ, ಪ್ರಣುತಂ . . . ಈಳಿತಂ, ಸ್ತುತಂ—೧೨ ಹೊಗಳಲ್ಪಟ್ಟದ್ದು, ಕೊಂಡಾಡಲ್ಪಟ್ಟದ್ದು, ಬಣ್ಣಿಸಲ್ಪಟ್ಟದ್ದು" (ಸಿದ್ಧಾಂತಿ. ೩೫೨). [ಸಂ.]

**ಪನಾಳಿ**₁ 'ಪನ್ನಾಳ₁' ನೋ.

**ಪನಾಳಿ**₂ (ನಾ). ಬ್ರಿಟಿಷ್ ಆಡಳಿತಕ್ಕೆ ಮೊದಲು ಬಳಕೆಯಲ್ಲಿದ್ದ, ಪನಾಳವೆಂಬಲ್ಲಿ ಟಂಕಿಸಿದ ನಾಣ್ಯ ; ಹದಿನಾರು ಪ್ರಕಾರದ ನಾಣ್ಯಗಳಲ್ಲಿ ಒಂದು : ಬೆಳ್ಳಿಯ ನಾಣ್ಯಗಳು . . . ೧. ಶ್ರೀರಂಗಾಬಾದಿ . . . ೮. ಹೈದರಾಬಾದಿ ೯. ಪನಾಳೀ (ಕಭಾಗ. ೨೪೧). [<ಪನ್ನಾಳ₂ (<ಪನ್ನಾವಟಿ)]

**ಪನಿ**₁, ಹನಿ₁ (ಕ್ರಿ). ಪನಿತು, ಹನಿತು(ಭೂತನ್ಯೂ). ೧. ತೊಟ್ಟು ತೊಟ್ಟಾಗಿ ಬೀಳು; ತೊಟ್ಟಿಕ್ಕು; ಒಸರು; ಜಿನುಗು : ಆ ಕೂಸಿನ ತಲೆಯೊಳಿನಿಸಾನುಂ ವಿಷದಿಂದು ಪನಿತುದಱಿಂದಾತಂಗೆ ಬಿಂದುಸಾಗರನೆಂದು ಪೆಸರನಿಟ್ಟು (ವಡ್ಡಾರಾ. ೧೯೧–೬) ; ಕಿವಿಯೊಳಮರ್ದಿನ ಪನಿಪನಿವಿನಮೆಸೆದರರೆಬರಳೆಕುಳರುತಿಯಿಂ (ಆದಿಪು. ೧೧–೭೯) ; ಸೊನೆವನಿ ಚಂಚುವಿಂ ಪನಿಯೆ ಮಾಂಗೊನರಂ ನಸುಗರ್ಚಿ . . .ಪುಗಲ್ ಪುಗಲೆಂದುದು ಕೋಕಿಲವ್ರಜಂ (ಜಗವಿ. ೧೪–೩೮) ; ಸತಿಯ ನೊಸಲರ್ಧಚಂದ್ರಾಕೃತಿಯದಱಿಂ ಪನಿತ ಸುಧೆಯ ಬಿಂದುಗಳೆಂಬಂತೆ . . . ಪೊಸಮುಱುಕುತಿ ಮೆಱೆದತ್ತು (ನಳಚಂ. ೩೨೩). ೨. (ನೀರಿನ) ತೊಟ್ಟುಗಳಿಂದ ಕೂಡಿರು,—ಬಿಂದುಗಳಿಂದ ಕೂಡಿರು : ಮೇಘಂಗಳ್ ಪನಿತಡರೆ ಮೇಘಂ ಕುಂಭ(ದ)ಮೇಘಮೆಂಬವೊಲೆ ಮುಟಿ ಕೊಳ್ನಂ (ಬಟ್ಟಪು. ೮–೮೬). ೩. (ಮಳೆಯಂತೆ) ಸತತವಾಗಿ ಸುರಿ; ಧಾರೆಯಾಗಿ ವರ್ಷಿಸು : ಅಂತು ಸಹಜಕವಚರತ್ನಕುಂಡಲಂಗಳಂ ನೆತ್ತರ್ ಪನಪನ ಪನಿಯೆ ತಿದಿಯುಗಿವಂತುಗಿದು ಕೊಟ್ಟುದರ್ಕೆ ಮೆಚ್ಚಿ ದೇವೇಂದ್ರನಾತಂಗ ಮೋಘಶಕ್ತಿಯನಿತ್ತಂ (ಪಂಪಭಾ. ೯–೬೩ ವ) ; ಪನಿತುವು ಮುಂಗಾರೊಳ್ ಬಲ್ವನಿಗಳ್ (ಕುಸುಮಾ. ೬–೨೬) ; ಕಡುಗೆದಱಿದ ಕೇಶದಿಂದ ನೀರ್ವನಿಗಳು ಬಿಡದೆ ಪನಿತವೇನೆಂಬೆ(ಚಂಪ್ರಸಾಂ.೧೭–೨೧೯). **ಹನಿ**₁ **:** ೧. "ಹನಿ—ಬಿಂದುಪತನೇ"(ಶಮಧಾ); ಉರಿವ ಬಿಸಿಲು ತಾಗಿಯಾ ಮಂಡೆಯ ಬೆಣ್ಣೆ ಕರಗಿ ಕನಿತು ನೋಡುವವರ ಮಂಡೆಯ ಮೇಲೆ ಹನಿತು ಬೀಳಲು (ನೇಮಿಸಂ. ೭–೧೧೧) ; ಮಾನವತೆಯ ಪುಣ್ಯಗಂಗೆ ಹರಿವಂತಿಹುದು ಮಂಗಲತೆಯ ಹಿಮವು ಕರಗಿ ಹನಿವಂತಿಹುದು (ಕನಸಿ. ೧೯–೧೬). ೨. ಕಲ್ಲು ಕವಣೆಯ ನುಂಗಿಯಿಡುವಾತನ ಹಣೆ ತಾಕಿತ್ತು ಹಣೆ ಹನಿತು ಮುಱಿತು ಸೊನೆಯಾಯಿತು (ಮನುಗುಂ. ೮೩–೩) ; ಅವರ ಕಣ್ಣು ಹನಿಯಿತು (ಮುಗಿಮ. ೬). ೪. ಸೋರು ; ಹರಿದುಹೋಗು : ತನುವ ದಂಡಿಸುತುದಯಿಕೆ ತಂದರಾ ಕರ್ಮ ಹನಿತು ಹೋಹುದೆ ಕೃತಪಾಕಾ

(ಧರಚ. ೬೮-೭೫). **೫.** ಮಳೆಯು ಬೀಳು,—ಸುರಿ ; ವರ್ಷಿಸು : ಈ ವರ್ಷ ಸ್ವಲ್ಪವೂ ಹನಿತಿಲ್ಲ (ರೂಢ).

**ಹನಿದಿರು** = (ದ್ರವಬಿಂದುಗಳಿಂದ) ತುಂಬಿರು : ಕಳ್ಳಿಯೊಳು ಹಾಲು ಮುಳುಗಳ್ಳಿಯೊಳು ಹೆಜ್ಜೇನು ಎಳ್ಳಿನೊಳಗೆಣ್ಣೆ ಹನಿದಿರಲು ಶಿವಲೀಲೆ ಸುಳ್ಳೆನ್ನಬಹುದೆ (ಸರ್ವಜ್ಞ. ೧೯೪).

[**ದೇ.॥ ತಮಿ. ಮಲ.** ಪನಿ ; **ತುಳು.** ಪನಿ, ಪಣಿ; **ಕೊಡ.** ಪನ್ನ್]

**ಪನಿ$_2$**, ಹನಿ$_3$ (ನಾ). ೧. (ನೀರು ಅಥವಾ ಯಾವುದೇ ದ್ರವಪದಾರ್ಥದ) ತೊಟ್ಟು,—ಬಿಂದು : ತಱಿಸಂದಾ ಸಕ್ಕದಮುಮನಱಿಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್ ಕುಱಿತು ಬೆರಸಿದೊಡೆ ವಿರಸಂ ಮಱುಗುವ ಪಾಲ್ಗಳೆಯು ಪನಿಗಳಂ ಬೆರಸಿದವೋಲ್ (ಕವಿರಾ. ೧-೫೬); ಇನಿಯವು ಮೊದಲೊಳ್ ನಂಜಿನ ಪನಿ[ಪಾಠಾಂ. ಸವಿ]ವೋಲ್ ಬಱಿಕೆಯ್ದೆ ಮುಳಿದು ಕೊಂದಿಕ್ಕುವುವಿಂತೆನೆಯೆನೆ ವಿಷಯವಿಷಾಸ್ವಾದನದೊಳ್ ಲಂಪಟರಿದೇಕೆಯೋ ನರಪಶುಗಳ್ (ಆಪು. ೧೪-೧೨೫) ; ರುದ್ರನ ಬಾಣಹತಿಯಿನುಗುತರುತಿರೆ ದೈತ್ಯರ ನೆತ್ತರ ಪನಿಯೊಳ್ಪಾಸಿರವಪ್ಪದ್ಯೆತ್ಯರೆಂಬರಿನ್ನವು ಪುಸಿಗಳ್(ಸಮಪ. ೧೦-೬೮) ; ಚಾದಗೆ ಕಾಮುರ್ಗಿಲ್ಪನಿಯಂ . . . ಪಾರ್ವ ತೆಱದಿಂ (ದಶಕು. ೨-೬೭). **೨.** ಮಳೆ ; ವೃಷ್ಟಿ: ಪನಿಯಿಲ್ಲದೊಣಗಿರ್ಪ ಸಸ್ಯಾಳಿಗಂ ಮೇಘವನಿಯ ಕಂಡಂದದಿಂ (ವೆಂಕಾರಾ. ೫-೭-೨೫) ; ಬಾನಿಂದ ಪ[ಪಾಠಾಂ. ಹ]ನಿ ಬಿಟ್ಕೊಡದಲ್ಲದೆ ಮತ್ತಂತೆ ಪಸುಂಬುಲ್ತಲೆ ಕಾಣ್ಬುದರಿದು (ಕುಱಳ್. ೧-೨-೬). **೩.** ಮಂಜಿನ ಹನಿ ; ತುಷಾರ ಕಣ : ಬೆಳಗಪ್ಪ ಜಾವದಯ್ಕಾಲ್ ಕೊಳೆ ಶೀತಕ್ಕಾಱ ದಳ್ಕೆ ತೊಟ್ಟಿರ್ದ ಧರಾತಳಮೆಂಬ ಪೆಣ್ಣ ಪೊಸಕಂಚುಳಿಕೆಯ ಸೀಮುರ್ತ್ತಿನಂದಮಾದುವು ಪನಿಗಳ್ (ಕಾವ್ಯಸಾ. ೬೯೪ ಶೂದ್ರಕ). 'ಪನಿವುಲ್', 'ಪನಿಪೊಳ್ತು' ಪರಾ. **೪.** ತಂಪು; ಶೀತಲ: 'ಪನಿನೀರ್' ಪರಾ. **೫.** ಕಣ್ಣೀರು ; ಕಂಬನಿ : 'ಪನಿಗೊಳ್' ಪರಾ. **೬.** ಸುವಾಸನೆ ; ಪರಿಮಳ : 'ಪನ್ನೀರಳು', ಪನ್ನೀಱಳೆ' ಪರಾ. **ಹನಿ$_3$ : ೧.** "ವಿಪ್ರುಷಃ, ಬಿಂದುಃ-ಈ ೨ ಹನಿ" (ಹಲಾಯು. ೧೧೨-೫೫) ; ಹೊಸ ಹಾಲ ಹನಿಗಳಹಸಿದ ತೆಱದ ತೆನೆಗಳಂ ತಿಱಿತಿಱಿದು ತಂದು ತಂದು (ಸಿದ್ಧರಾ. ೨-೨೯) ; ಸ್ವಾತಿವರುಷಂ ಸುರಿಯಲೆಂತಹ ಹನಿಗಳಿಗೆ ಏಪರಿಯೊಳಂ ಕಱಿಗೊಳ್ಳದಂತಾಗಿದಱ ಪರಿ ಬೇಱೆ (ಬಸಪು. ೫೧-೨೪) ; ವರಸುಧೆಯ ಹನಿಯೊಂದು ಯಮುನೆಯ ಪರಿಯೊಳುಕ್ಕಿತು (ಸಂಭಪ. ೫-೫೬); ಹನಿ ಕೂಡಿದರೆ ಹಳ್ಳ, ತೆನೆ ಕೂಡಿದರೆ ಭತ್ತ (ಗಾದೆ). **೨.** "ಮಳೆ, ಸರಿ, ಸರವು, ಸೆಳಕು, ಸೋನೆ, ಹನಿ, ಸಿಡಿಸಲು" (ಕಂನುಹು. ೮೯) ; ಬಸವನೆಂದರೆ ಪಾಪ ದೆಸೆಗೆಟ್ಟು ಹೋಗುವದು ಬಿಸಿಲಿಂಗೆ ಹಸುರೊಳೆಸೆದಿರ್ಪ ಹನಿಯಾಱಿ ಹುಸಿದು ಹೋದಂತೆ (ಸರ್ವಜ್ಞ. ೨೯೪). **೭.** (ಅಲಂ) ಅತಿ ಸ್ವಲ್ಪ; ತೀರ ಕೊಂಚ ; ಲವಲೇಶ : ಮನೆಯಲ್ಲಿ ಹನಿ ಎಣ್ಣೆಯೂ ಇಲ್ಲ (ರೂಢ).

**ಪನಿಯ ಪೊಳ್ತಾರೆ** = ಮಂಜು ಬೀಳುವ ಬೆಳಗಿನ ಹೊತ್ತು ; ಮುಂಜಾವ : ಪನಿಯ ಪೊಳ್ತಾರೆ ಜಿನಪದ ಮೊಗವ ಕಂಡು ವನಿತೆಯರುಗಳಾದ ನಾವು ವಿನಯದಿಂದತ್ತೆಮ್ಮನವರ ಪಾದ ಕಂಡು ಮನದಕ್ಕರಿಂ ಶರಣೆಂದು . . . ತಮ್ಮೊತ್ತಿಗೆ ಬಹೆವು(ಜ್ಞಾನಚ. ೨೪-೧೦೪). **ಹನಿಯಾಗು** = (ಕಣ್ಣೀರಿನ) ತೊಟ್ಟುಗಳಾಗು : ಸುಡುವಳಲ್ ಹನಿಯಾಗಿ ನುಡಿಯಾಗಿ ನೆರವಾಗಿ . . . ನಿಂದಂ (ಕಾಲೂರ. ೧೦೯-೨೨೪).

[< ಪನಿ$_1$./ತಮಿ. ಮಲ. ನಾಯ್ಕಿ. ಪನಿ ; **ತುಳು.** ಪನಿ, ಪಣಿ, ಹನಿ ; **ತೊದ.** ಪೊನಿ ; **ಕೋಲಾ.** ಪನೀ]

**ಪನಿಗಿಱು** (ಕ್ರಿ). ಹನಿಯೆಂದು ಭಾವಿಸು,—ಎಣಿಸು : ನಡುನೆತ್ತಿ ಬಿರಿದು ಮುತ್ತುಗಳೊಡೆದುಚ್ಚಳಿಸುತ್ತೆ ಪಾಱೆ ಪನಿಗೆತ್ತು ನವಿಲ್ ತುಡುಕೆ (ರಾಜಶೇ. ೫-೪). [ಪನಿ$_2$ + ಗಿಱು]

**ಪನಿಗೊಳ್** (ಕ್ರಿ). ಕಣ್ಣೀರಿಡು ; ಕಂಬನಿದುಂಬು ; ದುಃಖಿಸು : ಜನನೀಯಗ್ರಜನಲ್ಲಿಗೆಯ್ದಿ ಬಹುಶಾಸ್ತ್ರಾರ್ಥೋಕ್ತಿಯಂ ಕಲ್ತುದಂ ಪನಿಗೊಂಡುಂಡುದನೋದಿ ಬಂದೊಡರಸಂ ಮಂತ್ರಿತ್ವಮಂ ಕೊಟ್ಟುದಂ ನೆನೆವೋ (ಸುಕುಮಾ. ೫-೨೫). [ಪನಿ$_2$+ಕೊಳ್$_1$]

**ಪನಿತ** (ಗು). ೧. ಹೊಗಳಿದ ; ಸ್ತುತಿಸಿದ. (ನಾ). ೨. ಹೊಗಳಲ್ಪಟ್ಟುದು ; ಕೊಂಡಾಡಲ್ಪಟ್ಟುದು : "ಈಡಿತಂ, ಶಸ್ತಂ, ಪಣಾಯಿತಂ, ಪನಾಯಿತಂ, ಪ್ರಣುತಂ, ಪಣಿತಂ, ಪನಿತಂ . . . ಈಳಿತಂ, ಸ್ತುತಂ -೧೨ ಹೊಗಳಲ್ಪಟ್ಟದ್ದು, ಕೊಂಡಾಡಲ್ಪಟ್ಟದ್ದು, ಬಣ್ಣಿಸಲ್ಪಟ್ಟದ್ದು" (ಸಿದ್ಧಾಂಶಿ. ೩೫೨). [ಸಂ.]

**ಪನಿತರ್** (ಕ್ರಿ). ಹನಿಯಾಗಿ ಬೀಳು ; ತುಂತುರಾಗಿ ಬರು : ಸುರಿವ ಮುಗುಳುಗಳ ಮಳೆಯೊಳು ಕೂಡಿ ಪನಿತರ್ಪ[ಪಾಠಾಂ. ಪ್ಪ] ಕುರುವಿಂದಮಣಿಮೌಕ್ತಿಕದ ಪರಲೊಪ್ಪಿದುವಾಲಿಕಲ್ಲಿಂದ್ರಗೋಪದ ದೊರೆಯೆನೆ ಕಣ್ಗಡ್ಡವಾಗಿ (ಶ್ರೀಪಾಲ. ೬-೮೪). [ಪನಿ$_2$+ತರ್]

**ಪನಿದಂದಲ್** (ನಾ). ಹನಿಹನಿಯಾದ ಮಳೆ; ತುಂತುರುಮಳೆ; ಸೋನೆ : ತೋರ ಬಾಷ್ಪದ ಪನಿದಂದಲಂ ಸುರಿಯುತುಂ ಕುಸುಮಾವಳಿದೇವಿ ನಾಡೆ ನೋಡಿದಳ್ . . . ಮದೀಯ ಮುಖಾರವಿಂದಮಂ (ಕುಸುಮಾ. ೧೨-೧೪೪). [ಪನಿ$_2$ + ತಂದಲ್]

**ಪನಿನೀರ್**, ಪನಿನೀರು, ಪನ್ನೀರ್, ಪನ್ನೀರು (ನಾ). **೧.** ತಂಪಾದ ನೀರು ; ಮಂಜಿನ ನೀರು ; ಶೀತಲವಾರಿ : ಸೇವಂತಿಗೆಯ ತೋಂಟದೊಳ್ ಮಿಾಂಟುವರಿವ ಪರಿಮಳದ ಪನಿನೀರ ಪಳ್ಳಮಂ ದಾಂಟಲಾಱದ ಬಾಲಮರಾಳಂಗಳಂ . . . ದಾಂಟಿಸುತಿರ್ಪ ರಾಜಹಂಸರಾಜಿಗಳಿಂ (೧ರಕ. ೨-೭೧ ವ) ; ಮಳಯರುಹದ ಕರ್ಪೂರದ ಪಳಿಕಿನ ಪನಿನೀರ . . . ಶೀತಳತೆಯಿನವನಿಪನನಾಪ್ತರುಜ್ಜೀವಿಸಿದರ್ (ಅನಂಪು. ೧೧-೬೮) ; ಚಿತಪಚ್ಚೆಯಂ ಪುಡಿಗೆಯ್ದು ಪನಿನೀರೊಳೊಡಗಲಸಿ ಕಣ್ಗಟ್ಟೆ (ಸೌಂದಪು. ೮-೧೯). **೨.** ಸುಗಂಧಯುಕ್ತವಾದ ನೀರು; ಸುವಾಸನೆಯ ನೀರು; ಪರಿಮಳೋದಕ : ಚಂದನರಸಮಂ ಪನಿನೀರೊಳ್ಮೇಳಿಸಿ ಸಂತಸದಣ್ಪಂಗೈದಂ ಲಸದಕ್ಷತೆಯಂ ತ್ರ್ಯಕ್ಷಂಗಿತ್ತು (ಉದ್ಭದೇ. ೩-೪೬) ; ಪೊನ್ನಗೊಪ್ಪರಿಗೆದೀವಿದ ಪುಣುಗು ಕತ್ತುರಿ ಜವಾದಿಗೂಡಿದ ಕುಂಕುಮರಸಂಗಳಿಂ ಬಿತ್ತರಂಬಡೆದ ಪನಿನೀರ್ (ಹಾಲಾಸ್ಯ. ೧-೬-೨೭ ವ). **ಪನಿನೀರು : ೨.** ಕಸ್ತೂರಿ ಕಾಶ್ಮೀರ ಪನಿನೀರು ಸಿರಿಖಂಡಾದಿಯಾದ ಸೌರಭ್ಯಲೇಪನಮುಮಂ ಧರಿಸಿ (ಸಮ್ಯಕ್ಚಾ. ೯-೩೪) ; ಕುಂಕುಮರಸ ಪನಿನೀರ ಬಟ್ಟ ಬಲ್ಮೊಲೆಗೆ ಸಿಂಪಿಸಲು ಇಟ್ಟ ಮಂಡಿಗೆಯ ಪೊಂಬುಜ್ಜಣಿ ತೈಲಸಂಘಟ್ಟದಿಂ ಪೊಂಗಿದಂತಾಯ್ತು (ಮೋಹತ. ೨೮-೧೮) : ಧರಣೇಶನ ಸಿರಿಮುಡಿಗಾಗ ನಾರಿಯರ್ ನೆಱೆ ಪನಿನೀರ ಸೂಸಿದರು (ಕಂನವಿ. ೨೨-೫೭). **ಪನ್ನೀರ್ : ೧.** "ಹಿಮವಾರಿ ಪನ್ನೀರೆನಿಕ್ಕುಂ"(ಮಂಗರಾ. ೯೯-೨೨), ಒಡನಾಡಿಗಳಡಿಗಡಿಗೆ ತಳಿವ ಪನ್ನೀರ ತುಂತುರ್ವನಿಗಳಿಂ ಪೊಸತಪ್ಪ ಕಾರ ಸಿರಿಯ ಪರಿಯಂ ಪಡೆದಂತಿರ್ಪುಳ್ (ಕಬ್ಬಿಕಾ. ೩೧೫). **೨.** ಪನ್ನೀರ ಪರಿಮಳದ ಪೂಗೊಂಡು ಮುಂದೆ ತೋಱುತ್ತಿರ್ಪ ಪೂಗಿಡುಗಳಂ ಕಂಡು (ಪುಷ್ಪರ. ಹ. ೫೨೪-೧೧); ಕಮ್ಮೆಣ್ಣೆಯಿಂ ಮರ್ದನಂ ಮಾಡಿಸಿ ಪನ್ನೀರಿಂ ಮಜ್ಜನಂಬುಗಿಸಿ (ಧರ್ಮಪ. ೨-೫೨ ವ) ; ಗಂಧಾದಿಗಳನೆಲ್ಲಂ ತೆಗೆದು ತೆಗೆದು ಪನ್ನೀರಿಂದ ಮೇಳಯಿಸಿ . . . ಮೃಗನಯನೆಗನುಲೇಪಿಸಿದರು (ಬಸಪು. ೪-೩೫) ; ಬೆರಸಿದರು ಪನ್ನೀರ ಹೊಂಗೊಪ್ಪರಿಗೆಯಲಿ (ನಳಚ. ೩-೬೪). **ಪನ್ನೀರು : ೧.** ಶೈತ್ಯ ಸೌರಭ್ಯ ಮಾಂದ್ಯಮೆಂಬ ತ್ರಿವಿಧಮದಸಮೃದ್ಧವಾದ ಪನ್ನೀರು . . . ಕರ್ಪೂರವೃಕ್ಷ ಹಿಮಾದಿ ಸಂಪರ್ಕದಿಂ . . . ಪ್ರೇಕ್ಷಣೀಯಮಾಗಿರ್ಕುಂ (ವಿವೇಕ. ೨೨೭). **೨.** ಕೇರಿಕೇರಿಯ ಬೀದಿಗಳ ಪನ್ನೀರ ಚಳೆಯದ . . .

ಸೂರವೀಧಿಯ ರಚನೆಯುಲಿ ರಚಿಸಿದರು ಪಟ್ಟಣವ (ಕುಪ್ಪಾಳ. ೧೨-೮); ಪಚ್ಚೆಗಪ್ಪುರ ಪನ್ನೀರು ಮೃಗನಾಭಿಮುಖ್ಯಲೇಪನದಿ ತಿಗುರನಿಕ್ಕಿದರಾಳಿಯರು (ಮೋಹತ. ೨೩-೧೨); ಪನ್ನೀರನೊಡನೊಡನೆ ತೊಡೆದೊಡದಕೆ ವಿಂಗೆ ಪೆಚ್ಚಿತುರಿಯೆಂದು ಮತ್ತೆ ಸಿಡಿವಿಡಿಗೊಂಡು (ಜೈಮಿಭಾ. ಖ೧-೨); ಪನ್ನೀರು ಕರ್ಪೂರವೀಳೆಯ ಮೋಹನವನುಲೇಪನಾದಿ ವಸ್ತುಗಳ. . . ಅನುಗೊಳಿಸಿದನು (ಕಂನವಿ. ೧೦-೩೯).

ಪನಿನೀರ ಗಿಂಡಿ, ಪನ್ನೀರ ಗಿಂಡಿ = ಪರಿಮಳಯುಕ್ತವಾದ ನೀರನ್ನು ಚಿಮುಕಿಸಲು ಬಳಸುವ ಗಿಂಡಿ; ಪನ್ನೀರುದಾನಿ: ಗಂಡುಗಳನು ದಿಂಡುಗೆಡಿಸುವ ಕುಸುಮಕೋದಂಡನ ರಾಣಿಯಂತೆಸೆವ ಪುಂಡರೀಕಾಕ್ಷಿಯು ಸಭೆಯೊಳು ಪನಿನೀರ ಗಿಂಡಿಯ ಪಿಡಿದೊರ್ಮಳಹಳು (ಚಂಪ್ರಸಾಂ. ೯-೨೦); ಅವರ ಮನೆಯ ಪನ್ನೀರ ಗಿಂಡಿ ತುಂಬ ಚೆನ್ನಾಗಿದೆ (ರೂಢಿ). ಪನ್ನೀರ ದಾನಿ = ಪನಿನೀರ ಗಿಂಡಿ: ನಮ್ಮ ಮನೆಯಲ್ಲಿ ಬೆಳ್ಳಿಯ ಪನ್ನೀರ ದಾನಿ ಇದೆ (ರೂಢಿ).

[ಪನಿ$_2$ + ನೀರ್./ ತಮಿ. ಪನಿನೀರ್, ಪನ್ನೀರ್; ಮಲ. ಪನಿನೀರ್; ತುಳು. ಪಳ್ನೀರ್; ಕೊಡ. ಪನ್ನಿರ್; ತೆಲು. ಪನ್ನೀರು, ಪನ್ನೀರಮು]

**ಪನಿನೀರು** 'ಪನಿನೀರ್' ನೋ.

**ಪನಿನೀರೆಱೆ** (ಕ್ರಿ). ಪನ್ನೀರನ್ನು ಧಾರೆಯಾಗಿ ಸುರಿ;—ಹಾಕು: ನಿಡುಗಂಬೆಳಗುಜೊನ್ನದೊಳು ಮುಳುಗಿಸಿ ತಮ್ಮ ಲಾವಣ್ಯಯೆಂಬ ಪನಿನೀರೆಱೆದು (ಸಾಳ್ವಭಾ. ೧-೬೨). [ಪನಿನೀರ್ + ಎಱೆ$_1$]

**ಪನಿನೀರ್ಗುಪ್ಪಿಗೆ** (ನಾ). ಪನ್ನೀರನ್ನು ತುಂಬಿಡುವ ಜಾಡಿ,—ಭರಣಿ: ಪನಿನೀರ್ಗುಪ್ಪಿಗೆ ಪುಡಿಗತ್ತುರಿಯ ತಟ್ಟೆ . . . ಕರ್ಪೂರದ ನಾಳಿಗಳ ಪಿಡಿದೊಡನೆ ನಡೆದರೊಲಿದು (ಪದ್ಮರಾ. ೮-೬).

[ಪನಿನೀರ್ + ಕುಪ್ಪಿಗೆ]

**ಪನಿನೀರ್ದಳಿ**, ಪನ್ನೀರ್ದಳಿ (ಕ್ರಿ). ಪನ್ನೀರನ್ನು ಚಿಮುಕಿಸು,—ಸಿಂಪಡಿಸು: ಸಿರಿಪಚ್ಚೆಗರ್ಪುರದ ಹಳಿಯನೊಡೆದಾ ಧೂಳಿಯಂ ಹರಹಿ ಮೇಲೆ ಪನಿನೀರ್ದಳಿದು ತನ್ನಿನಿಯನಂ ಕಳವಳಿಪ ಕಾಂತೆಯು ಮಲಂಗಿಸಿ (ಪದ್ಮರಾ. ೮-೪೨). **ಪನ್ನೀರ್ದಳಿ**: 'ಪನ್ನೀರ್ದಳಿಪ' ಪರಾ.

[ಪನಿನೀರ್ + ತಳಿ$_1$]

**ಪನಿಪುಲ್** (ನಾ). ಮಂಜಿನ ಹನಿಯನ್ನು ಹೊಂದಿರುವ ಹುಲ್ಲು; ಇಬ್ಬನಿಯಿರುವ ಹುಲ್ಲು: ಮಾನಸವಾಟಿಯೆಂಬುದು ಪನಿಪುಲ್ಲ ಮುಗಿಲ ಸಂಜೆಯೊಳೋರಂತಪ್ಪುದಱಿಂದದಾರ್ ಬಾರಿಸಿದೊಡಂ ನಿಲ್ವೆನಲ್ಲೆಂ (ಪಡ್ಮಾರಾ. ೪೬-೬); ಎನಿತಾನುಮಂಬುನಿಧಿಗಳನನೇಕ ನಾಕಂಗಳಲ್ಲಿ ಕುಡಿದುಂ ಪೋಯ್ತಿಲ್ಲನಗೆ ನರಭೋಗವೆಂಬೀ ಪನಿಪುಲ್ಲಂ ನಕ್ಕೆ ತೃಷ್ಣೆ ಪೇಟ್ ಪೋದಪುದೇ (ಆದಿಪು. ೯-೫೭); ಸಮುಜ್ಜ್ವಲ ತಾರಕಪುಂಜಮೆಂಬ ವಿಭ್ರಮಮನೆ ಬೀಱುತಿರ್ದುದೆನಸುಂ ಪನಿಪುಲ್ಲ ಪಯೋಕಣವ್ರಜಂ (ಕುಸುಮಾ. ೧೦-೮೦). [ಪನಿ$_2$ + ಪುಲ್]

**ಪನಿಪೊಳ್ತು**, ಪನಿಹೊತ್ತು, ಹನಿಹೊತ್ತು (ನಾ). ಇಬ್ಬನಿ ಬೀಳುವ ಸಮಯ; ಉಷಃಕಾಲ; ಬೆಳಗಿನ ಜಾವ: ಅಲರೇಱುವ ಶತಪತ್ರಂ . . . ಉಡುಗುವ ತಾರಾತತಿ ಸದಮಲವಡೆದಾಶಾಮುಖಮೊಪ್ಪಿದುದಾ ಪನಿಪೊಳ್ತಿನೊಳು (ಜಯಕಾ. ೧೨-೧); ಅಂಬುಜದೊಳು ಪಾಡುವ ಪಟಿಮೆವಱಿಗಳೆಸೆದುವು ಪನಿಪೊಳ್ತಿನ ಸಮಯದೊಳು (ಜಯಕಾ. ೧೪-೮೮). **ಪನಿಹೊತ್ತು**: ಇವಳನನುಮಾನಿಸದೆ ಪನಿಹೊತ್ತಿನೊಳ್ತರಿಸಿ ಇವಳು ನುಡಿದಾ ನಾಲಗೆಯನುತ್ತರಿಸಬೇಕು (ಸಮ್ಮುಕಾ. ೧೦-೫೯). **ಹನಿಹೊತ್ತು**: ಹನಿ[ಪಾಠಾಂ. ನೆ]ಹೊತ್ತಿನೊಳು ತಂದ ನೀರ ಕಳಸಿಗೆಯೊಳಾ ದಿನದ ಹಗಲಿರುಳು ವಾಳಿಗೆಯ ಮಚ್ಚಿನೊಳು . . . ಇರಿಸಿ (ನೂಪಶಾ. ೨-೪೧); ದೊರೆದೊರೆಗಳು ಹನಿಹೊತ್ತಿಗೆ ಮುನ್ನೆಳ್ದು ತುರಗವನೇಱಿ ಭೂವರನ ಪರಿವೇಷ್ಟಿಸಿದರು (ಶ್ರೀಪಾಲ. ೧೩-೮೩).

[ಪನಿ$_2$ + ಪೊಳ್ತು (< ಪೊೞ್ತು)]

**ಪನಿಯಾಲ** (ನಾ). ಒಂದು ಊರಿನ ಹೆಸರು: ಅನ್ತೆ ಬನ್ದು ಪನಿಯಾಲಕಾಲ ಬಡ (ಗ)ಣ ಬೇಲಿಯಿಂ (ಎಕ. III, ನಂಜನ. ೧೪೯-೧೫; 915 ?). [ ? ]

**ಪನಿವಾರ** 'ಪಣಿಯಾರ' ನೋ.

**ಪನಿಸಿರಿ** (ನಾ). ತಂಪಿನ ಹೆಚ್ಚಳ; ಶೀತಲತೆಯ ಆಧಿಕ್ಯ: ಪೂಸುವ ಸಿರಿಗಂಪ ಪಾಸುವ ತಳಿರ್ಗಳ ಸೂಸುವ ಪನಿಸಿರಿಯೆಳಪ ಓಸರಿಸದೆ ನೆಳಲುಗಳ ಸಾರುವ ದೇಶದೇಶದ ಜನಗಳೊಪ್ಪಿದರು (ಕಂನವಿ. ೯-೧೩). [ಪನಿ$_2$ + ಸಿರಿ]

**ಪನಿಸು**, ಹಣಿಸು$_2$, ಹನಿಸು (ಕ್ರಿ). ೧. ಹನಿಹನಿಯಾಗಿ ಬಿಡು; ತೊಟ್ಟುತೊಟ್ಟಾಗಿ ಹಾಕು: ನರಮೂತ್ರದೊಳರುಕಾಳದ ಪರಿಪಕ್ವಫಲಂ ಸಮುದ್ರಫಳಮೆಂಬೆರಡಂ ಬೆರಸರೆದು ಪನಿಸು ಮೂಗಿನೊಳುರಗಕುಳೋಗ್ರೋಗ್ರತರ ವಿಷಂಗಳ್ ಕಿಡುಗುಂ (ಖಮದ. ೭-೮). **ಹಣಿಸು$_2$**: ೨. ಸುರಿ; ಎರೆ; ಹಾಕು: ಆನೆಗಳು ಶುಂಡಿಲದೊಳಗೆ ನೀರು ತುಂಬಿ ತಂದು ಗಿಡಗಳಿಗೆ ಹಣಿಸುವುದು (ಮುಂಬಯಿ. ೫-೩೧೧); ಜೇನುತುಪ್ಪದಲ್ಲಿ ಹೊಯ್ನಾರ ಹಣಿಸಿದರೆ ಬೇವು ತನ್ನ ವಿಷವ ಬಿಡಲಿಲ್ಲ (ಕಜಾಗೀ. ೩೪); ಅಲ್ಲಿ ನೀರಂತೆ ಹಣಿಸಿದ ಮೂಳಿಯ ರಕ್ತವನ್ನು ನೋಡುವ ಕಣ್ಣೇ ಇಲ್ಲ! (ನವ್ಯಕಾ. ೩೩). **ಹನಿಸು**: ೧. ಗಾಯದ ಮೇಲೆ ಈ ರಸವನ್ನು ದಿನಕ್ಕೆ ಎರಡು ಸಲ ಹನಿಸು (ರೂಢಿ). ೨. "ಹನಿಸು—ರಸದಾನೇ (ಸುರಿ)" (ಶಮಧಾ); ಒಬ್ಬ ಕರ್ಪೂರವನಿರಿಸಿಲ್ಲಿ ಕೂಡೆ ಮತ್ತೊಬ್ಬ ತೈಲವನಿಲ್ಲಿ ಹನಿಸಿ ಇಬ್ಬರು ಹೋಗಿರ್‍ಯೆ (ಭರಜ. ೪೫-೬೨); ನಾಲ್ಕುಬಿಲ್ಲಿ ಒಂದು ಪಾಲು ಎಣ್ಣೆಯ ಹನಿಸಿ ಆ ಎಣ್ಣೆಗೆ ಸರಿಮೊಸರ ಹನಿಸಿ ಪಾಕವ ಮಾಡುವಲ್ಲಿ ಅದಕ್ಕೆ ಹಾಕುವ ಕಲ್ಕದ್ರವ್ಯ (ವೈದ್ಯಸಾ. I, ೨೨೭); ಹಳ್ಳದಿಂದ ನೀರು ತಂದು ವಿದ್ಯಾರ್ಥಿಗಳು ಕೈತೋಟಕ್ಕೆ ಹನಿಸುತ್ತಾರೆ (ಕಪಪು. ೫-೧). ೩. ಚಿಮುಕಿಸು; ಸಿಂಪಡಿಸು; ತಳಿ: ತಾರೆಗಳಾಚೆಯ ನೀಲಿಮೆಯಂತೆ ಹನಿಸದೆ ಬರಿ ಸುರಿಯುವವಳು (ಅರಳು. ೧೩-೬); ಮುಖದ ಮೇಲಿಷ್ಟು ನೀರು ಹನಿಸಿದ (ರಂಗಪ. ೪೩). [ಪನಿ$_2$ + -ಸು$_1$]

**ಪನಿಹೊತ್ತು** 'ಪನಿಪೊಳ್ತು' ನೋ.

**ಪನೆ$_1$**, ಹನೆ$_1$ (ನಾ). ಒಂದು ಬಗೆಯ ಮರ; ತಾಳೆ: "ತಳಮುಂ ತಾಳಮುಮೆನೆ ಪನೆ" (ಪಸ್ತುಕೋ. ೩೩-೪); ಬನ್ನಿ ಚಂಪಕ ಚೂತ ಪನೆ . . . ಅಗಿಲು ನಾನಾವರ್ಣದುತ್ತಮತರುಗಳಿಂದೆಸೆದುದು ಮಹೋದ್ಯಾನ (ಪ್ರಹ್ಲಾಚ. ೧೩-೪); ನೆಲ್ಲಿ ನೇಱಿಲ್ ತದುಕು ಪನೆ[ಪಾಠಾಂ. ಪರಿ]ಗಳೊಪ್ಪಿರ್ಕುಮಾ ಕಾಡೊಳೆತ್ತಂ (ಶಬಶಂ. ೩-೩೨); ಅಡಕೆಯ ಬಾಗಿಸಿ, ಪನೆ ಇಬ್ಬಾಗಿಸಿ . . . ತೆಂಕಣ ಗಾಳಿಯು ಕೊಂಕಣಸೀಮೆಗೆ ಬಂತೈ! (ಕಎಪು. ೨೮-೫). **ಹನೆ$_1$**: "ತುಂಗದ್ರುಃ—ಹನೆ" (ಓಷಧಿ. ೭೧); ಅಸುರನ ಹೆಣನನುತ್ಕಟರೋಷದಲಿ ತಿರುಹಿಟ್ಟನೊಪ್ಪುವ ಹನೆಯ ಕೊನೆಗಳಿಗೆ (ನಿಭಾಗ. ೧೦-೧೫-೩೨); ಅದು ಈ ಹನೆಗಳಿಗಳ ಕರೆಕರೆಯಲ್ಲಿ ಯಾರಾಗಾದರೂ ಕೇಳಿಸಬೇಕೆ? (ಮರಮ. ೧).

ಪನೆಯ ಮರ, ಹನೆಯ ಮರ = ಪನೆಮರ: "ಪುರುಷಃ—ಸೆಗುಡಿತೆ, ಸುರುಗಿ, ಹನೆಯ ಮರ" (ಓಷಧಿ. ೧೦೦); "ತುಂಗದ್ರುಮ—ತೇಗು, ಹನೆಯ ಮರ" (ಓಷಧಿ. ೭೦); ಹನೆಯ ಮರದ ಬನಮಿರ್ಕುಂ(ಚಿಕಬ. ೩೪).

[ದೇ. ‖ ತಮಿ. ಪನೈ; ಮಲ. ಪನ; ತುಳು. ಪನೆ, ಪಣೆ; ಕೊಡ. ಪನೆ]

**ಪನೆ$_2$**, ಹನೆ$_2$ (ನಾ). ೧. ಹೊಸದಾಗಿ ಹುಟ್ಟಿದ ಹಲ್ಲು; ಅದೇ ತಾನೆ ಮೊಳೆಯುತ್ತಿರುವ ಹಲ್ಲು; ಮೊಳೆಹಲ್ಲು: "ಪನೆಯೆಂದು ಮೊಳೆವಲ್" (ಕಶಸಾ. ೭೨-೬೪೨); ಪನೆಗಳ್ ತೋಱಿದ ಮಂದಹಾಸರುಚಿ ಮುದ್ದಂ ನಾಡೆಯುಂ ಬೀಱೆ (ಕಾದಂಪೂ. ೩೫೫);

ಪನೆ ವಿಜಬಗಲ್ ಮುಗುಳ್ನಗೆ ನಗುತ್ತೆ (ಜಗವಿ. ೩-೩೮) ; ನನೆದೋಱು ತ್ತದಿರ್ಗಂತಿ ಮುಂತೆ ಪನೆಗಳ್ ತೋರ್ಪಂತೆ (ಅನಂಪು.೬-೬೨). ೨. ಹಲ್ಲು: ಪಣೆ ಕಣ್ ಕಿವಿ ನೆತ್ತಿಯ ಕಣ್ಪನೆ[ಪಾಠಾಂ.ಕಣ್ ಪಣೆ]ಯೆಂಬಿವಱೊಳಗೆ ಬೇನೆಯಾಗಲ್ ಗರುಗಂ . . . ಎಣ್ಣೆಯ ಬೆರಸಿ ನಸ್ಯಗೆಯ್ಯಲ್ ಕಿಡುಗುಂ (ಲೋಕೋಪ. ೯-೧೬೬) ; ಆಹಾರವುನಗಿದೀವುವಲ್ತೆ ರಸನೆಗೆ ಪನೆಗಳ್ (ಸೀತಿಮಂ. I, ೨೭). 'ಕೊಂಕುಂಬನೆ' ಪರಾ. ೩. ಕೋರೆಹಲ್ಲು; ದಾಡೆ : 'ನಿಡುಪನೆ' ಪರಾ. **ಹನೆ**$_2$ : ೧. "ಹನೆ—[ಮೊಳೆವಲ್ಲು], ಹಲ್ಲು" (ಶಂಸುಹು. ೯೧).

**ಪನೆಕೋಡುಪಾದಿ** (ನಾ). (?) : ದೇಯು ತಾತ್ತದೀ ಪನೆಕೋಡುಪಾದಿ ಮೂಱು ಭಾಗಕೆ [ಕೈ] (ಇಇ. XIV, ೨೩೨-೫೪ ; 9ನೆಯ ಶತ). [?]

**ಪನೆಗರ್ಚು** (ನಾ). ಹಲ್ಲು ಕಚ್ಚುವುದು,—ಕಡಿಯುವುದು : ಪನೆಗರ್ಚಂ ಕುಡಿವಿಣಸೆ ಕೂಂಕೆ ಕುಣಿಯಲ್ (ಮೈಸೂಮೆ. ೮-೩೬).
[ಪನೆ$_2$ + <ಕರ್ಚು$_1$]

**ಪನೆಡ್ಗುಂಟೆ** (ನಾ). ಒಂದು ಸ್ಥಳದ ಹೆಸರು : ಉದಕಪೂರ್ವನ್ದತ್ತ ಪೊಲಮೇರೆ ಪ್ರಾಚೀದೆಸೆ ಪನೆಡ್ಗುಣ್ಟೆಯಿನ್ದೂಡಾಯಕಡೆ ಆಗ್ನೇಯದೆಸೆ ಪುಲ್ಲಾಯಜಿ (ಎಕ.X (s), ಮುಳಬಾ. ೩೨೮-೪೯ ; 650). [?]

**ಪನೆಬೆಲ್ಲ** (ನಾ). ತಾಳೆಮರದ ರಸದಿಂದ ತಯಾರಿಸಿದ ಬೆಲ್ಲ; ತಾಳೆಬೆಲ್ಲ. [ಪನೆ$_1$ + ಬೆಲ್ಲ$_1$]

**ಪನೆಮರ**, ಹನೆಮರ (ನಾ). ತಾಳೆಯ ಮರ; ತಾಲವೃಕ್ಷ : ದಾಳಿಂಬಂ ಬಕ್ಕೆವಲಸು ಪನೆಮರಂಗಳ್ ಎಡೆಯೆಡೆಯೊಳ್ ಮನೋಹರ ಮಾಗಿರ್ಪಂ (ರಾಮಾಶ್ವ. ೮-೨೫) ; ಮಾಮರಂ, ಪನೆಮರಂ ಮುಂತಪ್ಪ ಮರಂಗಳಾವಗಂ ಫಲಗಳಿಂ ತುಂಬಿರ್ಪಂ (ಅದ್ಭುತ. ೪೦-೧೬) ; ಕಾಮಾತ್ಮಕಂ ಮೇನಕೆಯನಾಟಿಸೆ ವಿಶ್ವಾವಸುವವನಂ ಕಾಲಿಂದವೊದೆದ ನಲೆ ಸಿಡಿಲಿಂದೆ ಪನೆಮರವನಂತೆ ಕಿನಿಸಿಂ (ಸೌನಂದ. ೭-೩೯). **ಹನೆಮರ:** ಬೆಳಗಿನ ಬಿಸಿಲು ತೆಂಗು, ಹನೆಮರಗಳ ಹನಿಯಿಂದ ತೊಯ್ದು ಹೆಡೆಗಳನ್ನು ಮುದ್ದಿಸುತ್ತಿತ್ತು (ಮರಸಂ. ೪೮) ; ಮಳೆಗಾಲ ಬಂದರೆ ಯಾರನ್ನಾದರೂ ಬೇಡಿ ಕಾಡಿ, ಇನ್ನೊಂದು ಹತ್ತು ಹನೆಮರದ ಗರಿಗಳನ್ನು ತಂದು ನಾಲ್ಕು ಸುತ್ತಲೂ ತೂಗಿಸುತ್ತಾನೆ (ಹಹಸ. ೭೬). [ಪನೆ$_1$ + ಮರ$_1$]

**ಪನ್ನ**$_1$, ಪನ್ನಿ, ಹನ್ನ$_1$ (ನಾ). ೧. ಸೊಕ್ಕು ; ಬಿಂಕ ; ಜಂಬ : "ಕಾಮುಕರ ಗಬ್ಬ ಬಿಂಕ ಪನ್ನಮುಮುರ್ಕೆನಲ್ ಗರ್ವವು"(ಶಬ್ದಮಂ.೩೯); ತನ್ನ ಪನ್ನಂ ಕಟಲ್ಗುಂ ಮನದೊಳ್ ತೊಟ್ಟಾಗ್ರಹಂ ಮದ್ವಿಭುಗವಿಭುವರಂ ಶೌರ್ಯಸಂಲಬ್ಧಮಕ್ಕುಂ (ಚಂದ್ರವು. ೯-೧೧೨ ವ). **ಪನ್ನಿ :** ೧. ಹಯ ಶಿಕ್ಷಾಕ್ರೀಡೆಯಂ ತೋಱುವ ಹರಿಸುತನೋ ತಾನೆನಿಪ್ಪಂದದಿಂ ಪನ್ನಿಯ ಸೊಂಕುಂ ಬಿಂಕಮುಂ . . . ನೂಂಕುವ ಬಿಡುವ ಪೊಡರ್ಪಂ ಪೊದ ಟಿಲ್ದೊಪ್ಪಿರಲ್ ನಾಡೆಯುಮಾ ಕಂದರ್ಪದೇವಂ ಸುರುಚಿರ ತುರಗಾರೂಢಿಯೊಳ್ ಪ್ರೌಢನಾದಂ (ಕುಸುಮಾ.೭-೬೫); ಹೊಸ ವಕೀಲನ ಪನ್ನಿ ಅನಕ ತಡಕೊಳ್ಳುವದೇ ಪ್ರಯಾಸ (ವಾಗ್ದೇವಿ. ೧೮೬) ; ಬನ್ನಿ ಎಂದರೆ ಪನ್ನಿ ಹೆಚ್ಚು (ಗಾದೆ). ೨. ಅಹಂಕಾರದ ಮಾತು ; ಜಂಬದ ಮಾತು ; ಸೊಕ್ಕಿನ ನುಡಿ : ಕಾಳಗದಿ ಕರ್ಣನಂ ಗೆಲಲರಿದು ನಿನಗಿಂದು ಬರಿ ಪನ್ನಿಯನ್ನಾಡಬೇಡೆಂದನು (ತುರಂಗ. ೭೪-೪೦) ; ಚನ್ನಿಗ ಕೇಳಿತ್ತಲು ನೀ ಹರಟದ ಪನ್ನಿಗಳೆಲ್ಲಿ ಪೇಳು (ಚಂದ್ರಾಸ. ೧೩). **ಹನ್ನ**$_1$ **:** ೧. ಅನ್ನೆಗಂ ಕೊಲೆಗೆ ಸಿಲ್ಕಿದ ಹಣ್ಣನಲ್ಲೆಂಬರತಿಗನ್ನಗದಿಕೆನಿಂದ ಹನ್ನದಿಂ ಹರುಷಗೆಡಿಸಿದರು (ಲಕ್ಷ್ಮಭಾ. ೩-೩೪). [ದೇ.॥ ತುಳು. ಪನ್ನ, ಪನ್ನಿ]

**ಪನ್ನ**$_2$ (ನಾ). ವೇದದ ಒಂದು ಭಾಗ : ನಮುಕ ಚಮುಕ ನಾರಾಯಣ ಪನ್ನವೋದುವಿ ಯೇನಂತವೋದಿದೆ ಕತ್ತೆ ಸಮನಿಸಲಿಲ್ಲ ವೇದಾಂತಾರ್ಥವು ನಿನಗೆ (ಚಿದಾಕೋ. ೨೨-೧).[←ತೆಲು.ಪನ್ನ./ಪ್ರಾ.ಪಣ್ಹ./ಸಂ.ಪ್ರಶ್ನ]

**ಪನ್ನ**$_3$, ಪರಣ$_1$, ಪರ್ನ, ಹನ್ನ$_2$ (ನಾ). ಎಲೆ ; ಪರ್ಣ : 'ಪನ್ನಗುಡಿ' ಪರಾ. **ಪರಣ**$_1$ **:** ಪರಣದ್ಹಾಸಿಗೆಯಲ್ಲಿ ಮಲಗಿದ ಶಿಶುವ ಸೂಪರಣಗಳು ನೋಡುತಾಗ ಕಿರಣ ಬೀಳದಲೆ ಸೂರ್ಯಗೆ ಮರೆಮಾಡುತ ತಮ್ಮ ರೆಕ್ಕೆ ಪಸರಿಸುತಾಗ (ಕನಾಠಕ. ೨೯೪). **ಪರ್ನ :** ತಱಾದರೆಯಂ ಪರ್ನಗಳ ಕಾಪ್ಪಕೆ ಮುಱಿದರಾ ಶಾಖೆಗಳ . . . ತರುತನುವ ತೆಱವಂತೆ ದೇಹದೊಳೊರೆದ ಗರ್ವವ ಬಿಟ್ಟು ಕೇಳ್ಳೆ ಪರರ ಕೆಲಸವ ಮಾಡದವನೇ ಪಾಪಯುತನೆಂದ (ನಿಭಾಗ. ೧೧-೧೩-೨೪). 'ಪರ್ನಕುಟಿ', 'ಪರ್ನಶಾಲೆ' ಪರಾ. **ಹನ್ನ**$_2$ : 'ಹನ್ನವಣಿಗ' ಪರಾ.
[<ಪ್ರಾ. ಪಣ್ಣ./ಸಂ. ಪರ್ಣ]

**ಪನ್ನ**$_4$(ಗು). ೧. ಕೆಳಕ್ಕೆ ಬಿದ್ದ ; ಪತಿತ. ೨. ಹೋದ ; ಚಲಿಸಿದ. ೩. ಪಡೆದ ; ಹೊಂದಿದ. (ನಾ). ೪. ಕೆಳಕ್ಕೆ ಬಿದ್ದುದು : "ಪನ್ನಂ, ಪತಿತಂ—ಈ ೨ ಬಿದ್ದುದು" (ಹಲಾಯು. ೧೨೬-೮೨) ; "ಪತಿತ ಮೆನೆ ಪನ್ನಮೆನೆ ಬಿದ್ದುದು" (ಮಂಗರಾ. ೧೩೨-೨೬). ೫. ಕೆಳಕ್ಕೆ ಬೀಳುವುದು. ೬. ದೂರ ಹೋದುದು : "ಪನ್ನಂ ಪತಿತಂ ಪರಿಚ್ಯುತಂ ವಿಗತಾರ್ಥಂ" (ಪನ್ನು ಕೋ. ೧೦೬-೪೮). ೭. ನೆಲದ ಮೇಲೆ ದೇಕುವುದು ; ತೆವಳುವುದು. [ಸಂ.]

**ಪನ್ನ**$_5$ 'ಪನ್ನಾ' ನೋ.

**ಪನ್ನಂಗ**$_1$ 'ಪಲ್ಲಂಗ' ನೋ.

**ಪನ್ನಂಗ**$_2$ (ನಾ). ಹಾವು ; ಸರ್ಪ : 'ಪನ್ನಂಗಧರ', 'ಪನ್ನಂಗಶಾಯಿ' ಪರಾ. [<ಸಂ. ಪನ್ನಗ]

**ಪನ್ನಂಗಧರ** (ನಾ). ಹಾವನ್ನು ಧರಿಸಿರುವವನು ; ಶಿವ : ಆದರ ಮ್ಯಾಗ ಪನ್ನಂಗಧರನ ಬರೆಯಿರೆ (ಲೋಕಗೀ. ೧೬) ; ಕನ್ನ ಬೇಟೆಯ ನಾಡಿ ಹೊನ್ನ ಬೆಟ್ಟವ ತಿರುಗಿ ಪನ್ನಂಗಧರಗೆ ಎಡೆಮಾಡಿ (ಕನ್ನಜಾ. ೧೩೪). [<ಸಂ. ಪನ್ನಗಧರ]

**ಪನ್ನಂಗಶಯನ** (ನಾ). = ಪನ್ನಂಗಶಾಯಿ : ಇನ್ನಾದರು ನಿನ್ನ ದಾಸಸಂಗವನಿತ್ತು ಮನ್ನಿಸಿ ದಯೆ ಮಾಡೊ . . . ಪನ್ನಂಗಶಯನ ಶ್ರೀಪುರಂದರವಿಠಲ (ಪುರಂದ. ಧಾ. ೨-೩೧-೨) ; ಕರಿಯಜಿನ ಪೊತ್ತವನೊ ಗೋಪಾಲಾ ನೆರೆದ ಭೂತ ತಂದವನೊ ಶರಧಿಶಯನ ನಿನ್ನ ಚರಣಪಂಕಜ ಭೃಂಗ ಪುರಂದರವಿಟ್ಠಲ ಪನ್ನಂಗಶಯನನೆ (ಪುರಂದ. ಧಾ. ೪-೩೮-೫).
[ಪನ್ನಂಗ$_2$ + ಶಯನ]

**ಪನ್ನಂಗಶಾಯಿ** (ನಾ). ಹಾವಿನ ಮೇಲೆ ಮಲಗಿರುವವನು ; ವಿಷ್ಣು : ಪನ್ನಂಗಶಾಯಿ ಹಯವದನನ ನಿಜಭಕ್ತ ನಿನ್ನ ಪೋಲುವರುಂಟೆ ಮಧ್ವಮುನಿರಾಯಾ (ವಾದಿಕೀ. ೨೭-೫). [<ಸಂ. ಪನ್ನಗಶಾಯಿನ್]

**ಪನ್ನಂಗಿ** (ನಾ). ೧. ಒಂದು ಬಗೆಯ ಗಿಡ ; ನೆಲಬೇವು : "ಗೌಂಗೊಟ್ಟಕ್ಕಿ ಪನ್ನಂಗಿಯೆನೆ ನೆಲಬೇವು" (ಮಂಗರಾ. ೪೪-೪೫). ೨. ಬಿದಿರಿನಲ್ಲಿ ಒಂದು ಬಗೆ : ಪನ್ನಂಗಿ, ಇಬ್ಬಿದಿರು (ಮೈಪಿಗಿ. ೫೯-೧೧೪೨).
[<ಸಂ. ಪನ್ನಗೀ]

**ಪನ್ನಂಬರ**, ಪೊನ್ನಂಬರ (ನಾ). ೧. "ಉಷ್ಣವಲಯದ ಸಮುದ್ರಗಳಲ್ಲಿ ತೇಲುತ್ತ ದೊರೆಯುವ, ಒಂದು ಜಾತಿಯ ತಿಮಿಂಗಿಲದ ಕರುಳಿನಲ್ಲಿ ಹುಟ್ಟುವ, ಮೇಣದಂತೆ ಮೆತ್ತಗಿರುವ ಸುಗಂಧ ದ್ರವ್ಯ" (Ambergis. ಇಂಕನಿ) : ತಿಮಿಂಗಿಲ ಸತ್ತ ಮೇಲೆ . . . ಹೊಟ್ಟೆಯನ್ನು ಬಗೆದು ಪನ್ನಂಬರವನ್ನೂ ಅದರ ತಲೆಯನ್ನು ಸೀಳಿ ಪೀಪಾಯಿಗಟ್ಟಲೆ ಎಣ್ಣೆಯನ್ನೂ ತೆಗೆಯುತ್ತಾರೆ (ಪ್ರಪಾಇ. II, ೪೫). **ಪೊನ್ನಂಬರ :** ೧. ಬೆಳ್ಳಗಿರುವುದನ್ನು ಪುವಂಬರ್ (ಪೊನ್ನಂಬರ) ಎಂತಲೂ, ಇದಕ್ಕೆ ಬಹಳ ಬೆಲೆಯೆಂತಲೂ ಹೇಳುತ್ತಾರೆ (ಪ್ರಪಾಇ. II, ೩೪೧). ೨. "ಬಡಾಯಿ ಕೊಚ್ಚಿಕೊಳ್ಳುವುದು" (ಅನಂನಾ). 'ಪನ್ನ$_1$' ಪರಾ. [←ತುಳು. ಪನಂಬರ, ಪನ್ನಾಂಬ್ರ]

**ಪನ್ನಕದಱ** ? (ನಾ). ಒಬ್ಬಾತನ ಹೆಸರು (?) : ಶ್ರೀಮದ್ದಿವ್ಯ ಶಕ್ತಿಪಣ್ಡಿತಭಟಾರರ ಮಯ್ದುಗಾವುಣ್ಡನುಂ ಪಾದಮೂಲಮುಂ ಪನ್ನಕದಱಗಿವುಣ್ಡ ಕ್ಕಳುಮಿಟ್ಟು (ಎಕ. X (೩), ಚಿಕ್ಕಬ.೨೬-೭; 9ನೆಯ ಶತ). [?]

**ಪನ್ನಕೇಣಿ** (ನಾ). ವೀಳೆಯದೆಲೆಯ ಮೇಲಿನ ಒಂದು ಬಗೆಯ ಸುಂಕ (?) : ಪನ್ನಕೇಣಿ ವಡ್ಡಲಾಗುಳದ ಸುಂಕವೆರ್ಗ್ಗಡೆ ಸಂಗಮಯ್ಯನುಂ ಬನವಾಸಿ ಪನ್ನಿಚ್ಛಾಸಿರದ ಸುಂಕವೆರ್ಗ್ಗಥೆ(ಡೆ) ಚಾವುಣ್ಡಮಯ್ಯನುಂ (ಎಇ. XVI, ೭೮-೩೨ ; 1037). ‘ಪನ್ನಾಯ’ ಪರಾ. [ಪನ್ನ$_3$ + ಕೇಣಿ?]

**ಪನ್ನಗ** (ನಾ). ೧. ಹಾವು ; ಸರ್ಪ : “ವಿಷಧರಃ . . . ಪನ್ನಗಃ, ನಾಗಃ . . . ಭುಜಂಗಮುಃ—ಈ ೨೫ ಪಾವಿನ ಪೆಸರ್” (ಹಲಾಯು. ೧೦೫-೧೮) ; ತನ್ನೊಳಗಣ ಪನ್ನಗನಂ ಮುನ್ನೀನ್ ಪಿಡಿದೊಗೆಯೆ ಕಾಯಲಾಱದೆ ಪಿರಿದುಂ ಬನ್ನದ ಕರ್ಪಸೆದುದು ತೊಱಗೆ (ಪಂಪಭಾ. ೫-೫೪) ; ಪರಿಪಂಥಿಪನ್ನಗವೈನತೇಯನೆನಿಪ ಬಿಜ್ಜಳಭೂಪನೊಪ್ಪಿಪ್ಪ ಸಮಯದೊಳು (ಬಸರ. ೬-೬೪) ; ಪನ್ನಗಂಗಳು ಸಾವಿರವಱೊಳಗುನ್ನತಪ್ಪ ಫಣೆಗಳೆನಲ್ಕೆ ಬಲಂ ನಿಗುರ್ದಪವೆಂಟುಜಾವಗಳಿಗೆ ಪತಿಗಳಾಗಿ (ಬಸಪು. ೪೬-೨೭) ; ಪನ್ನಗನ ಸಿರಿಮಂಚದಾತನು ಬೆನ್ನಲಿರಲೀ ಪಾಂಡುತನಯರಿಗಿನ್ನು ಮಂಗಳವೆನುತ ಸಂಜಯು ಬಂದನಿಭಪುರಿಗೆ (ಕುಪ್ವಾಲು. ೨-೪೮). ೨. ಕಶ್ಯಪನ ಪತ್ನಿಯಾದ ಕದ್ರುವಿನಲ್ಲಿ ಜನಿಸಿದ ಒಂದು ದೇವಸಂತತಿ; ಪಾತಾಳಲೋಕದ ನಾಗವಂಶ : ವಿದ್ವಿಷ್ಟವಿದ್ರಾವಣನ ಮೊನೆಯಂಬಿನಂಬೇಱಂಗಳ್ಕಿ . . . ವಿದ್ಯಾಧರರಧರರಾಗೆಯುಂ ಪನ್ನಗರ್ ಪನ್ನತಿಕೆಯಿಂ ಬಂದಾಂತೊಡೆ (ಪಂಪಭಾ. ೫-೮೮ ವ) ; ಪನ್ನಗ ಗರುಡಾಮರಕರೊಳಗಾರಾನುಂ ಮುನ್ನಿ[ನ] ರೋಷಭವತ್ಸಂಪನ್ನತೆಯಿಂದೊಯ್ದುರಕ್ಷ್ಯಮಾತ್ಮಾರ್ಭಕನಂ (ಬಂಹು. ೮-೭) ; ಇಲ್ಲ ನೋಡ ಜರ್ನನಗೆ ಪಡಿ ನರರಲ್ಲಿ ನಿರ್ಜರರಲ್ಲಿ ಪನ್ನಗರಲ್ಲಿ (ಕುಪ್ವಾಲು. ೫-೧೬).. ೩. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ಪಂಚವ್ರತ . . . ಪನ್ನಗ ಹರವಕ್ತ್ರ ಪಾಂಚಜನ್ಯ ಶುಕ್ಲ ಇಂತಿನಿತುಂ ೫ಕ್ಕೆ ಹೆಸರು (ವ್ಯವಹಾ. ೧೦-೨೨). [ಸಂ.]

**ಪನ್ನಗಕಟಕ** (ನಾ). ಹಾವನ್ನು ಕಡಗವನ್ನಾಗಿ ಧರಿಸಿರುವವನು; ಶಿವ : ಎನ್ನ ನಾಲಗೆಯು . . . ಮಹಾನುಭಾವಿಗಳ ಚರಣಕ್ಕಂ ಹೊನ್ನ ಹಾವಿಗೆಯು ಮಾಡೆಲೆ ಪನ್ನಗಕಟಕಾ (ಶಂಕರಂ. ೧-೩). [ಪನ್ನಗ + ಕಟಕ$_3$]

**ಪನ್ನಗಕನ್ನಿಕೆ** (ನಾ). ನಾಗಲೋಕದ ಹೆಣ್ಣು ; ನಾಗಕನ್ಯೆ : ಪನ್ನಗಕನ್ನಿಕೆಯರೆಯ್ತಂದು ಮಂಜುಳರೀತಿಯಲಿ ಪಾಡುತ್ತಿರಲು (ಬಸವು. ೨೭-೧೦). [ಪನ್ನಗ + ಕನ್ನಿಕೆ$_1$]

**ಪನ್ನಗಕನ್ಯೆ** (ನಾ). = ಪನ್ನಗಕನ್ನಿಕೆ : ಪನ್ನಗಕನ್ಯೆಯೊರ್ವಳುಪದೇಶಮನಿತ್ತಳೊ ನಾಗಬಂಧಮುಂ (ಕಾಪ್ಯಾಪ. ೫೩೭). [ಪನ್ನಗ + ಕನ್ಯೆ]

**ಪನ್ನಗತಳ್ಪ** (ನಾ). = ಪನ್ನಂಗಶಾಯಿ : ಪನ್ನಗತಳ್ಪಂ ಕಂಸಹರಂ ನಗಧರಂ (ಕಾಪ್ಯಾಪ. ೧೯೮). [ಪನ್ನಗ+ತಳ್ಪ (= ತಲ್ಪ)]

**ಪನ್ನಗಧರ** (ನಾ). = ಪನ್ನಂಗಧರ : ಎನ್ನ ಮಗಳ ಹರಣಮಂ ಕಾವುದೆಂದು ಬಿನ್ನವಿಸೆ ಪನ್ನಗಧರಂ ಕೇಳ್ದು (ನಂಬಿರ. ೧೨೭-೩೫) ; ಮುನ್ನ ಕೈಲಾಸದಲಿ ಪನ್ನಗಧರನಾಳು ಎನ್ನಯ ಪೆಸರು ಪುಷ್ಪದತ್ತನು (ಸರ್ವಜ್ಞ. ೩). [ಸಂ.]

**ಪನ್ನಗಧ್ವಜ** (ನಾ). ೧. ಹಾವಿನ ಚಿಹ್ನೆಯುಳ್ಳ ಧ್ವಜ. ೨. ತನ್ನ ಬಾವುಟದಲ್ಲಿ ಸರ್ಪವನ್ನು ಚಿಹ್ನೆಯಾಗಿ ಉಳ್ಳವನು ; ದುರ್ಯೋಧನ : ಬರೆಪಂ ಚಿತ್ರಿತ ಚಿತ್ರದಂತೆ ಮೃದುರೇಖಾಮಂಡನಾಡಂಬರಸ್ಫುರಿತಂ ಬಾಜನೆ ಪನ್ನಗಧ್ವಜಮಹೀಭೃತ್ಸೇನೆವೊಲ್ ಕರ್ಣಸೌಂದರಮುದ್ಯತ್ಕವಿತಾಗುಣಂ ಗಣಿಕೆವೊಲ್ ಭಾವಾದ್ಯಲಂಕಾರಬಂಧುರಮೆಂಬುನ್ನತಿಯಿಂ ಜಗಕ್ಕೆ ನೆಗಟ್ದಂ ವಾಕ್ಶ್ರೀಧರಂ ಶ್ರೀಧರಂ (ಜಾತತಿ. ೧-೭). [ಪನ್ನಗ+ಧ್ವಜ]

**ಪನ್ನಗಪತಾಕ** (ನಾ). = ಪನ್ನಗಧ್ವಜ ೨ : ಅಂತು ಮೂರ್ಛಾಪ್ರಸಂಗನಾದ ಪನ್ನಗಪತಾಕಂಗೆ ಶಿಶಿರೋಪಚಾರಕ್ರಿಯೆಗಳಂ ಮಾಡ್ಪ ಸಂಜಯನಿರವಂ ತತ್ಪರಿಜನಂ ಕಂಡು (ಗದಾಯು. ೩-೭೭ ವ). [ಪನ್ನಗ + ಪತಾಕ$_1$]

**ಪನ್ನಗಪತಿ** (ನಾ). ಹಾವುಗಳ ಒಡೆಯ ; ಆದಿಶೇಷ : ದೀಪದೊಳ್ ಪನ್ನಗಪತಿಯ ಫಣಾರತ್ನದೀಪಂ . . . ತುಱುಗಿದುವು (ಆದಿಪು. ೧೬-೨) ; ಪನ್ನಗಪತಿ ಗರುಡ ರುದ್ರ ಇಂದ್ರಾದ್ಯರಿಗೆ ಉನ್ನತಗುರುವಾಗಿ ವಿರಾಜಿಪ (ಪುರಂದ. ಧಾ. ೧-೭-೨). [ಪನ್ನಗ + ಪತಿ$_2$]

**ಪನ್ನಗಭೂಷಣ** (ನಾ). ಹಾವನ್ನು ಆಭರಣವನ್ನಾಗಿ ಧರಿಸಿರುವವನು ; ಶಿವ : ಪನ್ನಗಭೂಷಣ . . . ಚೆನ್ನಯ್ಯನೆನ್ನ ಮುತ್ತಯ್ಯನಜ್ಜನಪ್ಪನಯ್ಯಾ (ಬಸವ. ೩೪೭) ; ನಿನ್ನ ಮಗನ ಮಗನೊ ಗೋಪಾಲಾ ಪನ್ನಗಭೂಷಣನೋ ಧನ್ಯನಾಗಿ ಶ್ರೀರಾಮನಾಮವನು ಚೆನ್ನಾಗಿ ಚಿಂತಿಪನೊ (ಪುರಂದ. ಧಾ. ೪-೩೮-೪). [ಪನ್ನಗ + ಭೂಷಣ]

**ಪನ್ನಗರಾಜ** (ನಾ). ೧. = ಪನ್ನಗಪತಿ: ಸುರ ಖಚರ ರವಿ ಗರುಡ ವಿದ್ಯಾಧರ ಪನ್ನಗರಾಜವಂದಿತಂ (ಛಂದೋಂಬು. ೪-೨೩೬) ; ಅವಂದಿರಂ ಪನ್ನಗರಾಜಂ ಕೊಂದನೆಂಬುದಪಸಿದ್ಧಾಂತಂ (ಅಜಿಪು. ೧೨-೨೯) ; ಪನ್ನಗರಾಜನ ಸಿರಿಗಂ . . . ಎನ್ನ ಸಿರಿ ಮಿಗಿಲ್ (ಧರ್ಮಾಮೃ. ೧೪-೪೧). ೨. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : (೬). [ಪನ್ನಗ + ರಾಜ]

**ಪನ್ನಗಲೋಕ** (ನಾ). ಹಾವುಗಳ ಲೋಕ ; ನಾಗಲೋಕ : ಪನ್ನಗಲೋಕದ ಜೀವರಾಶಿಗಳ್ ಪೊತ್ತುವ ಮಾಟಿಕ್ಕೆಯಿಂ ತಿದಿಗಳಂ ಪೊಗೆದಪ್ಪರೊ ಘಿಲ್ಲರೆಂಬಿನಂ ಪುತ್ತನಗುಟ್ಟು ಪೆರ್ಗರಡಿಗಳ್ ಮೊಗಮಿಟ್ಟೆಸೆಗುಂ ವನಾಂತದೊಳ್ (ದಶಕು. ೨-೧೧೯) ; ಪನ್ನಗಲೋಕಮಂ ಬಿಡದೆ ಮೆಟ್ಟಿ ಮನುಷ್ಯರ ಲೋಕಮೆಲ್ಲಮಂ ತನ್ನಯ ಪಾದಸೇವನೆಯೊಳೊಂದಿಸಿ (ಜಾಧಪು. ೧-೬೬). [ಪನ್ನಗ + ಲೋಕ]

**ಪನ್ನಗವಿದ್ಯೆ** (ನಾ). ಹಾವಿನ ವಿಷಕ್ಕೆ ಮದ್ದುಮಾಡುವುದೇ ಮುಂತಾದ ವಿಷವೈದ್ಯ ವಿದ್ಯೆ ; “ಸರ್ಪವಿದ್ಯೆ (?)” (ಜೈನಕೋ. ೧೫೭) : ವಜ್ರಾವರ್ತ ಸಾಗರಾವರ್ತಂಗಳೆಂಬ ಬಿಲ್ಗಳಂ ಗಾಂಧಾರ ಪನ್ನಗವಿದ್ಯೆಗಳನಿತ್ತು ಪೋದಂ (ಚಾವುಂಪು. ೩೮). [ಪನ್ನಗ + ವಿದ್ಯೆ]

**ಪನ್ನಗವಿರೋಧಿ** (ನಾ). ಹಾವಿನ ಶತ್ರು ; ಗರುಡ : ನಿನ್ನ ಪಡೆದುಱುಗಲೊಳೆನ್ನ ಪದಪದ್ಧತಿಗಳಿರ್ದಪುವು . . . ಇವಂ ಕಂಡೊಡೆ ಪನ್ನಗವಿರೋಧಿಯುಂ ಕಾದು ಕೆಱುವುಗುಂ (ಜಗವಿ. ೩-೧೧೩ ವ). [ಪನ್ನಗ+ವಿರೋಧಿ]

**ಪನ್ನಗವೀಥಿ** (ನಾ). ನಾಗಲೋಕದವರು ಸಂಚರಿಸುವ ಮಾರ್ಗ : ಪನ್ನಗರು ಬರ್ಪ ಪನ್ನಗವೀಥಿಗಳ ನಡುವೆ . . . ಬರುತಿರಲು (ನಂಬಿರ. ೯-೮೮). [ಪನ್ನಗ + ವೀಥಿ]

**ಪನ್ನಗವೇಣಿ** (ನಾ). ಹಾವಿನಂತೆ ಉದ್ದವಾದ ಜಡೆಯುಳ್ಳವಳು ; ಮನೋಹರವಾದ ನೀಳಕೇಶರಾಶಿಯುಳ್ಳವಳು : ವಾಣಿ ನೀರಜಪಾಣಿ ಬ್ರಹ್ಮನ ರಾಣಿ ಪನ್ನಗವೇಣಿ . . . ವರಗೀರ್ವಾಣಿ ರಕ್ಷಿಸು (ನಳಚ. ೩-೬೩). [ಸಂ. ಪನ್ನಗವೇಣೀ]

**ಪನ್ನಗವೈರಿ** (ನಾ). ೧. = ಪನ್ನಗವಿರೋಧಿ : ಮನದ ಬಯಕೆಗೆ ಬಡತನಂಗಳೆ ಅನುವನಱಿದೈತರಲಿ ಪನ್ನಗವೈರಿಯೆಂದೆನಲು (ಕೌತಿರಾ. ೧೯-೫೬). ೨. “ನವಿಲು” (ಅನಂನಾ). [ಪನ್ನಗ+ವೈರಿ]

**ಪನ್ನಗಶಯನ** (ನಾ). = ಪನ್ನಂಗಶಾಯಿ : ಪನ್ನಗಶಯನನವತರಣೋದ್ಯೋಗದಿಂ ನಾಗೇಂದ್ರನಂ ನೋಡಿ (ಜಗವಿ. ೨-೫೭ ಪ) ; ಪನ್ನಗಶಯನನ ಕಣ್ಣಿನಿಂದಲಿ ಕಂಡು ಧನ್ಯನಾದೆ ನಾ (ಪುರಂದ. ೩-೮೨-೧) ; ಪನ್ನಗಶಯನನೆ ಕುಣಿಯೊಮ್ಮೆ ಕುಣಿಯೆಂದು ಕುಣಿಸಿ ನಗುವ ಪುಣ್ಯವೆಂತು ಪಡೆದಳಯ್ಯ (ಕನಕ. ೧೪೮-೨). [ಪನ್ನಗ+ಶಯನ]

**ಪನ್ನಗಶರಣ** (ನಾ). ಹಾವುಗಳಿಗೆ ಆಶ್ರಯಸ್ಥಾನವಾಗಿರುವುದು ; ಸಾಗರ ; ಸಮುದ್ರ: "ಪನ್ನಗಶರಣನುಕೂಪಾರಮುದಧಿ ಪಾರಾವಾರಂ" (ಪಸ್ತುಕೋ. ೨೨-೨). [ಪನ್ನಗ+ಶರಣ]

**ಪನ್ನಗಾಂತಕ** (ನಾ). ಹಾವನ್ನು ಕೊಲ್ಲುವುದು ; ಗರುಡ : (೬). [ಪನ್ನಗ+ಅಂತಕ]

**ಪನ್ನಗಾಧಿಪ** (ನಾ). = ಪನ್ನಗಪತಿ : 'ಪನ್ನಗಾಧಿಪಹಾರ' ಪರಾ. [ಪನ್ನಗ + ಅಧಿಪ]

**ಪನ್ನಗಾಧಿಪಹಾರ** (ನಾ). ಹಾವನ್ನು ಮಾಲೆಯಂತೆ ಧರಿಸಿರುವವನು ; ಶಿವ : ಪನ್ನಗಾಧಿಪಹಾರ ಹಾ ಎನಗಿನ್ನು ಗತಿ ನೀನೊಬ್ಬನೆ ಸುತಂ (ಬಸವು. ೧೪-೩೧). [ಪನ್ನಗಾಧಿಪ + ಹಾರ$_4$]

**ಪನ್ನಗಾಭರಣ** (ನಾ). = ಪನ್ನಗಭೂಷಣ : ಪನ್ನಗಾಭರಣನ ಪಸಿವನಾಱಿಸುವುದೆಂದು ಅಱುಪೆ (ಇಳೆರ. ದೇ. ೫೩-೨೨) ; ಪನ್ನಗಾಭರಣಂ ನಿಷೇಧವದೆನ್ನದಾರೋಗಿಸಿದನು (ಬಸವು. ೩೩-೧೬) ; ಪನ್ನಗಾಭರಣನಂ ನುತಿಗೆಯ್ದು (ಚೆಬಪು. ೪೭-೩). [ಪನ್ನಗ+ಆಭರಣ]

**ಪನ್ನಗಾರಿ** (ನಾ). = ಪನ್ನಗವಿರೋಧಿ : 'ಪನ್ನಗಾರಿಧ್ವಜ' ಪರಾ. [ಪನ್ನಗ+ಅರಿ$_2$]

**ಪನ್ನಗಾರಿಧ್ವಜ** (ನಾ). ೧. ಗರುಡಚಿಹ್ನೆಯುಳ್ಳ ಧ್ವಜ. ೨. ಧ್ವಜದಲ್ಲಿ ಗರುಡನ ಚಿಹ್ನೆಯುಳ್ಳವನು ; ಕೃಷ್ಣ : ಪನ್ನಗಾರಿಧ್ವಜನ ರಾಜಗೃಹಮಂ ಕಂಡು . . . ಪವನಜಂ ತಳರ್ದಂ (ಜೈಮಿಭಾ. ೬-೪೦) ; ಪನ್ನಗಾರಿಧ್ವಜನ ಮುಂದಲೆಯ ಕೊಯ್ದು ಸಂಪನ್ನನೆನಿಸುವ ಶಂಖುಕರ್ಣಗಣನಾಥನೇಕೋರಾಮಿತಂದೆಯೆಂಬ ಉನ್ನತದ ನಾಮದಿಂ . . . ಜನಿಸಿದ್ದ (ಗುರುಚಾ. ೨-೪೧). [ಪನ್ನಗಾರಿ + ಧ್ವಜ]

**ಪನ್ನಗಾಶನ** (ನಾ). ೧. ಹಾವನ್ನು ತಿನ್ನುವುದು ; ಗರುಡ : "ಗರುತ್ಮಾನ್, ಗರುಡಃ, ತಾರ್ಕ್ಷ್ಯಃ . . . ಸುಪರ್ಣಃ, ಪನ್ನಗಾಶನಃ— ಎ ವಿಷ್ಣುದೇವರ ವಾಹನವಾದ ಗರುಡನ ಹೆಸರುಗಳು" (ಸಿದ್ಧಾಂತಿ. ೧೮). ೨. ನವಿಲು. [ಪನ್ನಗ+ಅಶನ]

**ಪನ್ನಗುಡಿ,** ಪರ್ಣಕುಟಿ (ನಾ). ಎಲೆಮನೆ ; ಪರ್ಣಕುಟೀರ : ಮೈಥಿಲಿ ಪನ್ನಗುಡಿಯು ಕಣೆಯೆಲೆವಾಗಿಲಂ ತೆರೆದು ನೋಡಿದಳಹಾ ! (ಶ್ರೀರಾಮಾ. ೧೯೪-೧೧೭) ; ಪನ್ನಗುಡಿ ತಡಿಕೆಪಡಿಯಂ ಕೆಲಕ್ಕೋಸರಿಸಿ ಬಂದಳು ಬಯಲ್ಗೆ (ಶ್ರೀರಾಮಾ. ೪೮೭-೪೦). **ಪರ್ಣಕುಟಿ** : ನಿನಗೆ ಬಗೆಯೊಪ್ಪೆ ರಚಿಸುವೆನುತ್ತಮಂ ಪರ್ಣಕುಟಿಯಂ (ಶ್ರೀರಾಮಾ. ೧೯೬-೫೭). [<ಸಂ. ಪರ್ಣಕುಟೀ]

**ಪನ್ನಗೇಂದ್ರಾಭರಣ** (ನಾ). ನಾಗಭೂಷಣ; ಶಿವ: ಪನ್ನಗೇಂದ್ರಾಭರಣ ನಿಮುಗೆಂದುನ್ನಿಸಿದ ಚೆಲುವಕ್ಕಿಯವು (ಬಸವು. ೨೭-೧೮). [ಸಂ.]

**ಪನ್ನತ** (ನಾ). ಶೂರ ; ವೀರ ; ಪರಾಕ್ರಮಿ : ಪನ್ನತರ ನಡುವನುಡಿಯಲ್ಕೆನ್ನ ಭುಜಾರ್ಗಳಮೆ ಸಾಲ್ಗುಂ (ಪಂಪಭಾ. ೬-೨೬) ; ತನ್ನಂ ಬೇಯಿಪ ಶಶಿಯಂ ಪನ್ನತನೆಂದೆರ್ದೆಯ ಕಿಚ್ಚಿನೊಳ್ ತುಱುಕುವವೊಲ್ (ಲೀಲಾವ. ೧೧-೩೩) ; ಎನ್ನ ತನೂಜನನೊಯ್ದು ವರೆನ್ನರೊ . . . ಆ ಪನ್ನತರಳವೆನಿತಾದುದು (ಬಂಹರಿ. ೮-೬).

**ಪನ್ನತಿ** (ನಾ). = ಪನ್ನತಿಕೆ ೧ : ಅವನು ಪನ್ನತಿಯಿಂದ ಘೋರನೆ ಬಂದು (ಭೈರವೇ. ೧-೧೨೦). [<ಪನ್ನತ]

**ಪನ್ನತಿಕೆ** (ನಾ). ೧. ಶೌರ್ಯ ; ಪರಾಕ್ರಮ : "ಪನ್ನತಿಕೆ—ಪರಾಕ್ರಮಂ" (ಶಮದ. ಪರಿ. ೨) ; ಪನ್ನಗರ್ ಪನ್ನತಿಕೆಯಿಂ ಬಂದಾಂತೊಡೆ (ಪಂಪಭಾ. ೫-೮೮ ಪ) ; ಆ ರವಮನೆಯ್ದೆ ರುದ್ರಂ ಕೇಳ್ ಕೋಪದಿಂದೀ ರವಿಯ ನೋಡೆ . . . ಸೂರನುಱಿ ಬಿಲ್ದು ಪೊರಳುತ್ತಿರ್ದನಣಿಯರಂ ತನ್ನ ಪನ್ನತಿಕೆ ಜಾಱಿ (ಅರಾಚ. ೧-೬-೪೧) ; ಮೇಘಾಸ್ತ್ರಕ್ಕೆ ಪನ್ನತಿಕೆಯಿಂದೆ ವಾಯುವ್ಯಾಸ್ತ್ರಮಂ ಪೂಡಿ (ಚೆಬಪು. ೪೩-೨೬). ೨. ಯೋಗ್ಯತೆ; ಅರ್ಹತೆ ; ಸಾಮರ್ಥ್ಯ : ನನ್ನ ನುಡಿಯೊಳ್ ಬಣ್ಣಬಣ್ಣದಲಿ ಬಣ್ಣಿಸುವ ಪನ್ನತಿಕೆ ಬರುವನಕ ನನ್ನ ಬಾಳಿದು ನರಕ ! (ಭಾರಂಗ. ೧-೧೫). [ಪನ್ನತ$_{17}$+-ಇಕೆ]

**ಪನ್ನತಿಕೆವೆಱು** (ಕ್ರಿ). ಪರಾಕ್ರಮವನ್ನು ಹೊಂದು ; ಶೌರ್ಯದಿಂದ ಕೂಡಿರು : ಸಿಂಹಳೇಂದ್ರಂ . . . ತನ್ನ ಪನ್ನತಿಕೆವೆತ್ತ ಪಾರ್ಥಿವಕುಮಾರರೊಂದುಗೂಡಿ ಗಂಧಸಿಂಧುರಸ್ಕಂಧಾರೂಢನಾಗಿ ಕಡುವಹಿಲದಿನಿರ್ದಿರ್ಚಿ ಬರ್ಪಾಗಳ್ (ರಾಜಶೇ. ೬-೮೧.ಪ). [ಪನ್ನತಿಕೆ+ಪೆಱು$_1$]

**ಪನ್ನವಣ,** ಹನ್ನವಣ (ನಾ). ೧. ವೀಳೆಯದೆಲೆಯ ಮೇಲಿನ ಒಂದು ಬಗೆಯ ತೆರಿಗೆ : ಗಾತ್ರಿಗರುಂ ಪನ್ನವಣಮುಂ ಕೊಟ್ಟಲೆ [ಯ] ಹೇಱು ಅಂತು ಹೇಱಿಗೆ [ನಡೆ] ೨೦೦ (ಸೌಇಇ. XX, ೪೫-೨೫ ; 1071). **ಹನ್ನವಣ :** ೧. ಬೆಲ್ಲಂ ಭಣ್ಡಿಗೆ ೧೦ ಹೇಱಂಗೆ ೨ ಹನ್ನವಣದಲ್ಲಿ ಹೇಱಂಗೆ ಯೆಲೆ ೫೦ (ಸೌಇಇ. IX–i, ೧೬೨–೩೪ ; 1106). ೨. ಮಾರುಕಟ್ಟೆಯ ಸುಂಕದ ಅಧಿಕಾರಿ : ನಾನಾದೇಸಿ ಗಾತ್ರಿಗರು ಹನ್ನವಣರುಂ (ಎಇ. XII, ೩೩೦–೩೨ ; 1105). [ಪನ್ನ$_3$ + ಪಣ$_3$]

**ಪನ್ನವಳ** 'ಪನ್ನಾವಟಿಕೆ' ನೋ.

**ಪನ್ನಸ** 'ಪನ್ನಸು' ನೋ.

**ಪನ್ನಸಾದು** (ನಾ). ಕರ್ಪೂರ ಬೆರಸಿ ಮಾಡಿದ ಸಾದು,-ಬಟ್ಟು : ಪನ್ನೀರು ಪರಿಮಳ ಮೃಗನಾಭಿ ಭರಣಿಯ ಪನ್ನಸಾದಿನ ಕಂಪು ಎಸೆಯೆ (ಅಬ್ಬಲೂ. ೩-೬೪). [<ಪನ್ನ$_2$+ಸಾದು$_2$ (<ಸಾಂದು)]

**ಪನ್ನಸಿ** 'ಪನ್ನಸು' ನೋ.

**ಪನ್ನಸಿಗ,** ಹನ್ನಸಿಗ (ನಾ). ಪನ್ನಸು ಎಂಬ ತೆರಿಗೆಯ ಉಸ್ತುವಾರಿ ಮಾಡುತ್ತಿದ್ದ ಅಧಿಕಾರಿ : ಪನ್ನಸಿ [ಗ]ರ್ಗೆ ಮತ್ತರೆಡ್ಡಾ ಸಿರಮಂಪರ್ಗೆ ಮಾನ್ಯಮೆಂಟುನೂಱು ತೋಂಟಮೆಂಟು (ಸೌಇಇ. IX–i, ೭೭-೧೯ ; 992) ; ಪನ್ನಸಿಗ ತೀಮಯ್ಯನ ಕಯ್ಯೊಳ್ ಸಿರಿವುರದ ಪನ್ನಸಿನ ಇರ್ಪ್ಪತ್ತನಾಲ್ಕು ಮತ್ತರ್ಕೆಯ್ಯುಮಮ್ ಮಾಱುಗೊಣ್ಡು (ಎಇ. XV, ೩೩೫-೧೩ ; 1040) ; ಗಾವುಣ್ಡುಗಳುಂ ಪನ್ನಸಿಗರು ಮೊ [ಲಂ]ಬ×ಕೊ [ಳಂ]ಗೆಯಿ ವಾಡಂ (ಸೌಇಇ. XX, ೩೪-೨೭ ; 1058) ; ಪನ್ನಾಸು . . . ತೆರಿಗೆಯನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿಯನ್ನು 'ಪನ್ನಸಿಗ'ನೆಂದು ಕರೆಯುತ್ತಿದ್ದರು (ಕಶಾಅ. ೪೦೦). **ಹನ್ನಸಿಗ :** ದೇವರ್ಗ್ಗೆ ಎರ್ಕ್ಕಯ್ಯ ಮನೆಗಳ್ ೧೩ ಗಾಣ ೧ ಹನ್ನಸಿಗಂ ಪದ್ಮನಾಭ ××× ತ್ತರ್ ೧೨ ಗಟಿಕ್ಕೆ ಕಮ್ಮ ೪೫೦ (ಸೌಇಇ. XI–i, ೮೩-೪೩ ; 1050). [ಪನ್ನಸು+-ಇಗ]

**ಪನ್ನಸು,** ಪನ್ನಸ, ಪನ್ನಸಿ, ಪನ್ನಾಸು, ಪನ್ನೆಸೆ, ಪೆನ್ನಸ, ಹನಸು$_1$, ಹನ್ನಸು, ಹನ್ನಾಸಿ (ನಾ). ೧. ಶೇಕಡ ಐವತ್ತರಷ್ಟು ತೆರಿಗೆ ವಿನಾಯಿತಿಯನ್ನು ಕೊಟ್ಟ ಭೂಮಿ; ಅರ್ಧತೆರಿಗೆಯ ಜಮೀನು: ಇಱುವ ನೊಣಂಬಂ ಭಾಗೆ ಅಯ್ಗೊಳ ಕಟಣಿ ಪನ್ನಸು ಬಿಟ್ಟೊ (ಎಕ. X, ಚಿಂತಾಮ. ೫೦–೩ ; ಸು. 950) ; ಅಣ್ಣಯಭಟ್ಟಂಗೆ ಕೊಟ್ಟ ಪನ್ನಸು ಅಱುಗಣ್ದುಗಂ (ಎಕ. XII, ೩೦೩. ೯-೯೧ ; 1072) ; ಗವಜೀಶ್ವರದೇವಗೆಯಿಂ ಪಡುವ ಮಂನೆಯ ಪಂನಸು ತೆಂಕ ಭೂ ೧೪೦ ಹ ೨೩ (ಸೌಇಇ. IX–i, ೨೫೨-೪೦ ; 1148); ತೆಂಕಲು ಮೂತೆನೆಯ ಪಂನಸಿನ

ದಾರಿಯ ಪತ್ತಿರೆ (ಕೊಲ್ಹಾಶಾ. ೧೩-೩೧ ; 1166) ; 'ಪನ್ನಾಸ' ಪರಾ. **ಪನ್ನಸ :** ೧. ಶ್ರೀಮತ್ ಶೋಬುಮಹರಜನ್ಮೆಟ್ಟು ಬರ್ಪ್ಪರಿಗೆಯಿತ್ತ ಪನ್ನಸ ಪನ್ನಿರ್ಖಣ್ಡುಗದ ಬೆದೆ (ಸೌಇಇ. IX-i, ೪೦೧-೪ ; ?). **ಪನ್ನಸಿ :** ೧. ಪನ್ನಸೀ ಭೂಮಿ ೨೦೦ ಮೈಲಾರ ದೇವಾಭೂಮಿ ೨೦೦ (ಇಆ. XIV, ೧೪೨-೩೦ ; 12ನೆಯ ಶತ). **ಪನ್ನಾಸು :** ೨. ಶೇಕಡ ಐವತ್ತರಷ್ಟು ತೆರಿಗೆ ; ಅರ್ಧತೆರಿಗೆ : ಲೋಕೇಶ್ವರದಾ ನರಿಯಂಗಲ್ಲ ಪನ್ನಾಸುಗಳಾನಿತ್ತ ಸಮಯಮೊರ್ಮ್ಮತ್ತರ್ಗೆ ಇರ್ಕ್ಕುಳ ಜೋಳವರ್ ಕುಡುವುದು (ಇಆ. X, ೧೬೭-೩ ; 7ನೆಯ ಶತ); ಶ್ರೀತರುಣವಸನ್ತನ್ ಸಾಮನ್ತಕೇಸರಿಯಾ ಕೊಟ್ಟ ಪನ್ನಾಸು ಸಿಂಗುಟ್ಟಿಯಾ ಲಿಖಿತಂ ಬಲ್ಲವರಸರ ಸೂಬೂಜಿಕ್ಕು (ಸೌಇಇ. IX-i, ೪೭-೧೮ ; ಸು. 9ನೆಯ ಶತ); ಪನ್ನಾಸು . . . ಈ ತೆರಿಗೆಯನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿಯನ್ನು 'ಪನ್ನಸಿಗ'ನೆಂದು ಕರೆಯುತ್ತಿದ್ದರು (ಕಶಾಅ. ೪೦೦). **ಪನ್ನಸೆ :** ೨. ಅಯಿರಡಿ ಆಳ್ವ ವಿಕ್ರಮಾದಿತ್ಯರ್ಕೊಟ್ಟೊದು [ಪ]ನ್ನೆಸೆ ಉಳ್ಳಾರು ತಾಟಿಜಿಯರ್ಗೆ ಎರಿಕಾಡು ಇರ್ಪ್ಪತ್ತೈಮತ್ತರು (ಸೌಇಇ. IX-i, ೪೭-೬ ; ಸು. 9ನೆಯ ಶತ). **ಹನ್ನಸ :** ೧. ಪಾಣ್ಡ್ಯಗಾವುಣ್ಡಂ ತಮ್ಮ ಕೆಜಿಯೊಳ್ ಮಾಧವಯ್ಯಂಗೆ ಇರ್ಕಣ್ಡುಗ ಮಣ್ಣ ಪನ್ನಸ ಬಿಟ್ಟ (ಎಕ. XV, ಹೊಳೆನ. ೭೮-೮; 974). **ಹನಸು$_1$ :** ೨. ಗಾಉಂಡುಗ ××× ವತ್ತೊಕ್ಕಲುಂ ಹನಸುಂ ಕಿಜು ×××ಗೋಲ (ಸೌಇಇ. XI-ii, ೨೦೫-೧೭ ; ?). **ಹನ್ನಸು :** ೧. ನರಯಂಗಲ್ಲ ತೆಂಕಣ ಭಾಗದ ಹಿರಿಯ ಹನ್ನಸಿನ ತಿಪ್ಪಣಯ್ಯನಾಯಕರು ತಿಪ್ಪಣೇಶ್ವರದೇವರ್ಗ್ಗೆ ತನ್ನ ಹನ್ನಸಿನ ಬಳದೊಳಗೆ (ಸೌಇಇ. XV, ೪೨-೩೭ ; 950) ; ಗಂಜಿಗೆಜಿಯಿಂ ಬಡಗಣ ತೋ × × ಕಮ್ಮಬಿ ಹನ್ನಸು ಮ ೧೨ (ಸೌಇಇ. IX-i, ೧೬೬-೩೧ ; 1099). **ಹನ್ನಾಸಿ :** ೧.[ನೈ]ವೇದ್ಯಕ್ಕಂ ನಂದಾದೀವಿಗೆಗಂ ಬಿಟ್ಟ ಹನ್ನಾಸಿ×××ಮತ್ತರು ೧ (ಸೌಇಇ. IX-i, ೧೮೨-೮ ; 1110). [<ಸಂ. ಪಂಚಾಶತ್]

**ಪನ್ನಾ,** ಪನ್ನ$_5$ (ನಾ). (ಬಟ್ಟೆ, ಗೋಡೆ ಮೊದಲಾದುವುಗಳ) ಅಗಲ : ಅವರ ಹತ್ತಿಬಟ್ಟೆಗಳ ಪನ್ನಾ—ಅಗಲ ಮೂರು ಅಂಗುಲ (ಗಲಿಪ್ರ. ೭೫). **ಪನ್ನ$_5$ :** ಅವನಿಗೆ ಒಂದು ಸೂಟಿಗೆ ಆರು ಗಜ ಡಬ್ಬಲ್ ಪನ್ನ ಬಟ್ಟೆ ಇಲ್ಲದಿದ್ದರೆ ಆಗದು (ರಂಗಕ. ೨); ಬನಾತು ಬಟ್ಟೆ ಎಂಬುದು ಎಂಟು ಮೊಳ ಉದ್ದದ ಎರಡು ಪನ್ನಗಳನ್ನು ಸೇರಿಸಿ ಹೊಲಿದ ಹೊದಿಕೆ (ಪ್ರಸಾಇ. I, ೮೮ ಅಡಿಟಿ). [←ಹಿಂ. ಪನಹಾ ; ಮರಾ. ಪನ್ಹಾ]

**ಪನ್ನಾಡೆ** (ನಾ). ತಾಳೆ, ತೆಂಗು, ಅಡಕೆ ಮುಂತಾದ ಮರಗಳಲ್ಲಿ, ಸೋಗೆಗಳ ಬುಡದಲ್ಲಿರುವ, ಬಲೆಯಂತಹ ತೆಳ್ಳಗಿನ ಪೊರೆ : (*). [ದೇ.॥ ತಮಿ. ಪನ್ನಾಟ್ಟೈ ; ಮಲ. ಪನ್ನಾಡ]

**ಪನ್ನಾಯ** (ನಾ). =ಪನ್ನವಣ ೧ : ಮಾಳಿಕಬ್ಬರಸಿ ತುಂಬುರ ಬೆಳದ ಬೋಗಿನಲು ಎಡೆಯೂರ ಪೊಲದೊಳ್ ಬಿಟ್ಟ ಮತ್ತರ್ಪನ್ನೆರಡು ಪನ್ನಾಯ ಕೊಳಗಟ್ಟಿಯಂ ಬಿಟ್ಟಳ್ (ಎಕ. XI, ಮೊಳಕಾ. ೪೦-೭ ; 987) ; ಆ ತೋಂಟಕೆ ಸುಂಕಾ ಪಂನ್ನಾಯ ಸ(ಂ)ಮಸ್ತವುಂ ಮಂನ್ನಣೆ (ಸೌಇಇ. XI-i, ೬೯-೪೧ ; 1033) ; ಎಲೆಯಂ . . . ಪೇಜುನಲುಂ ತಲೆವೊಜಿಯಲ್ಲಿ ತಂದದಂ ದೇವರ್ಗ್ಗೆ ಪನ್ನಾಯದ ಸುಂಕಮುಮಂ ಪುರಿಗೆಜಿಯಲು ಮಾಜುವಲೆಯ ಪಂನಾಯಮುಮನತ್ತ ಸುಂಕವಿಕ್ಕಿ (ಎಇ. XVI, ೩೪-೩೮ ; 1102) ; ಆ ತೋಂಟದೆಲೆಯ ಪಂನ್ನಾಯದೆಲ್ಲಾ ಸುಂಕಮುಮಂ . . . ಬಿಟ್ಟು ಕೊಟ್ಟ (ಎಕ. VII, ಶಿಕಾರಿ. ೧೦೪-೫೨ ; 1156) ; ಪಟ್ಟಣದಲು ಮುಂನ ನಡುಉತಿರ್ದ್ದ ಪಂನಾಯಮುಮಂ ಧಾರಾಪೂರ್ವ್ವಕವಾಗಿ ಬಿಟ್ಟ ಶಾಸನ (ಸೌಇಇ. XV, ೬೧೧-೯ ; 1231). 'ಅಚ್ಚುಪನ್ನಾಯ', 'ಪಂಗ$_1$' ಪರಾ. [ಪನ್ನ$_3$+ಆಯ$_7$]

**ಪನ್ನಾಲೆ** (ನಾ). ಲಾಳಿಕೆ ; ಬುದ್ಧಿವಂತ : ಅಗಲ ಕಿರಿದಾಗುತ್ತ ಹೋಗುವ ಕೊಳವೆ . . . ಲಾಳಿಕೆ ; ಆಲಿಕಿ ; ಪನ್ನಾಲೆ (funnel. ಇಂಕನಿ) ; ಕಡಿಮೆಯಾದ ಆಳವನ್ನುಳ್ಳ ಪನ್ನಾಲೆಯ ಆಕೃತಿಯ ದೊಡ್ಡ ಮಡಂಗಳಿವು (ಜ್ಯೋತಿವಿ. ೮೯) ; ಈ ಹಲ್ಲು-ಕೊಂಡಿಗಳ ಮಧ್ಯೆ ಬಾಯಿತೆರೆ—ಗಲ್ಲದ ಪನ್ನಾಲೆ (Buccal funnel) . . . ಇದೆ (ಕೀಟಬಿ. ೮೧). 'ಪನ್ನಾಳ$_1$' ಪರಾ. [←ಇಂ. funnel]

**ಪನ್ನಾವಟಿ,** ಪನ್ನವಳ, ಪನ್ನಾಳ$_2$, ಪನ್ನಾಳೆ$_2$ (ನಾ). ಒಂದು ಊರಿನ ಹೆಸರು : ಪನ್ನಾವಟಿಯ ಕೋಟೆಯ . . . ಪಾಣ್ಡ್ಯನ್ನಾಳ ಲಾಳರಂ ಭುಜಬಳದಿಂ ಕ ××× [ಕೊಣ್ಡಾಳ್ದನು] (ಸೌಇಇ. XI-i, ೮೬-೧೦ ; 1050). **ಪನ್ನವಳ :** ವಂದನಮುಂ ಕಿಲಿಗಿಳಮುಂ ಚಂದನ ಚಾಣಕ್ಯ ಚೌಕ ಪನ್ನವಳಗೆಯಿಸನ್ದಣಿಗಡಗನಿಕರಮನೊನ್ದರಸಿಮಿಸಿದೆ ಕೊಣ್ಡ ವೀರಪಾಣ್ಡ್ಯ (ಸೌಇಇ. IX-i, ೧೧೮-೬೩ ; ಸು. 1057). **ಪನ್ನಾಳ$_2$ :** ಪನ್ನಾಳೋನ್ಮೂಳನಂ (ಎಇ. XVI, ೭೮-೨೬; 1037). **ಪನ್ನಾಳೆ$_2$ :** ಪನ್ನಾಳೆಯ ಕೋಟೆಯ ನೆಲೆವೀಡಿನೊಳ್ (ಎಇ. XV, ೭೮-೯ ; 1050). [ ? ]

**ಪನ್ನಾಸ** (ನಾ). ಒಂದು ಸಂಖ್ಯೆ ; ಐವತ್ತು : ತಿಂಗಳಾ ಪನ್ನಾಸ ಕೊಟ್ಟು ನನ್ನ ಹಸನನ ಇಲ್ಲಿ ಕಾವಲಿಟ್ಟಾರ (ರಕ್ತಧ್ವ. ೩೨೭). 'ಪನ್ನಸು' ಪರಾ.

[<ಪ್ರಾ. ಪನ್ನಾಸ, ಪಣ್ಣಾಸ./ಸಂ. ಪಂಚಾಶತ್./ಹಿಂ. ಪಚಾಸ್; ಮರಾ.ಪನ್ನಾಸ್]

**ಪನ್ನಾಸು** 'ಪನ್ನಸು' ನೋ.

**ಪನ್ನಾಳ$_1$,** ಪನಾಳಿ$_1$, ಪನ್ನಾಳಿ, ಪನ್ನಾಳೆ$_1$ (ನಾ). ೧. ನೀರು ಹರಿದುಹೋಗಲು ಮಾಡಿರುವ ಕೊಳವೆ ; ಹರಿನಾಳಿಗೆ ; ಮೋರಿ: ಹರಿತೆಗೆಯೊ ಸೂಜಿಯೊ . . . ರೊಟ್ಟಗೆಯೊ ನಾಳಮೋ ಪನ್ನಾಳಮೋ (ಕುಮುಂರಾ. ೧೩-೫೯). ೨. ಕೊಳವೆ ; ನಳಿಕೆ : 'ಪನ್ನಾಳಗಿಂಡಿ' ಪರಾ. **ಪನಾಳಿ$_1$ :** ೨. ತವರಿನ ಪನಾಳಿಯು ಕಲ್ಯೆ ಮಾಡಿಸಿದವುಗಳು (ಮುಂಬಪ್ಯಾ. ೧೭ ಪ್ರಸ್ತಾವನೆ). **ಪನ್ನಾಳಿ :** ೧. ಭೀಮೇಶ್ವರಸ್ವಾಮಿಯ ಪಂನಾಳಿ ಗಾರೆಯು ಜೀರ್ನವಾಗಿ (ಮೈಆರಿ. ೧೯೪೫, ೪-೨ ; 1903). **ಪನ್ನಾಳೆ$_1$ :** ೧. ಭೀಮೇಸ್ವರ ಸ್ವಾಮಿಯ ದೇವಸ್ಥಾನದ ಪಂನಾಳಿ ವಗ್ಯೆರೆ ಜೀರ್ನವಾಗಿ ಹೋದಂತಾದ್ದು (ಮೈಆರಿ.೧೯೪೫, ೩-೪ ; 1870). 'ಪನ್ನಾಲೆ' ಪರಾ.

[<ಪ್ರಾ.ಪಣಾಲ./ಸಂ.ಪ್ರಣಾಲ./ಮರಾ.ಪನಾಳ್,ಪನ್ಯಾಳ್,ಪನ್ಹಾಳ್]

**ಪನ್ನಾಳ$_2$** 'ಪನ್ನಾವಟಿ' ನೋ.

**ಪನ್ನಾಳಗಿಂಡಿ** (ನಾ). ಕೊಂಬು ಅಥವಾ ಸೊಂಡಿಲಿರುವ ಸಣ್ಣ ಪಾತ್ರೆ : ಪನ್ನಾಳಗಿಂಡಿ ನಡು ಮಧ್ಯ ಇಟುಕೊಂಡು ಅಂಗಳಕೆ ನ್ಯಾಯ ಹರದಾಳೆ (ಹಳ್ಳಿಯ. ೧೬೦). [ಪನ್ನಾಳ$_1$+ಗಿಂಡಿ]

**ಪನ್ನಾಳಿ** 'ಪನ್ನಾಳ$_1$' ನೋ.

**ಪನ್ನಾಳೆ$_1$** 'ಪನ್ನಾಳ$_1$' ನೋ.

**ಪನ್ನಾಳೆ$_2$** 'ಪನ್ನಾವಟಿ' ನೋ.

**ಪನ್ನಿ** 'ಪನ್ನ$_1$' ನೋ.

**ಪನ್ನಿಕ್ಕಂಡುಗ** 'ಪನ್ನೆರಡು' ಪರಾ.

**ಪನ್ನಿಚ್ಛಾಸಿರ** 'ಪನ್ನೆರಡು' ಪರಾ.

**ಪನ್ನಿತ್ತೆಜ** 'ಪನ್ನೆರಡು' ಪರಾ.

**ಪನ್ನಿನುಡಿ$_1$** (ಕ್ರಿ).ಗರ್ವದ ಮಾತನಾಡು; ಜಂಭ ಕೊಚ್ಚಿಕೊಳ್ಳು : ಮುನ್ನಿನವರ ಬಗೆಯ ಕಂಡು ಪನ್ನಿನುಡಿವೆ ಚೋರರಾಕ್ಷಸಾ(ಪುರಾಪ್ರ.೨೫). [ಪನ್ನಿ (<ಪನ್ನ$_1$)+ನುಡಿ$_1$]

**ಪನ್ನಿನುಡಿ$_2$** (ನಾ). ಗರ್ವದ ಮಾತು ; ಸೊಕ್ಕಿನ ನುಡಿ : ಕನ್ನಡಿಯ ಪೊಳಪಿನೊಳ್ ರತ್ನಮಂ ತೋರ್ದಂತೆ ಪನ್ನಿನುಡಿಯಂ ನುಡಿದು ನಾಕದ ಋಷೀಶ್ವರಂ ತನ್ನೆದೆಗೆ ತಾಡಮಂ ಬೀರಿ ತಾಂ ಜಾರಿದಂ (ಪರಶು. ೭-೨೫). [ಪನ್ನಿ(<ಪನ್ನ$_1$)+ನುಡಿ$_2$]

**ಪನ್ನಿಬ್ಬರ್** 'ಪನ್ನೆರಡು' ಪರಾ.

**ಪನ್ನಿಬ್ಬರು** 'ಪನ್ನೆರಡು' ಪರಾ.

**ಪನ್ನಿರಂಡು** 'ಪನ್ನೆರಡು' ನೋ.

**ಪನ್ನಿರುವರ್** 'ಪನ್ನೆರಡು' ಪರಾ.

**ಪನ್ನಿರ್ಕಂಡುಗ** 'ಪನ್ನೆರಡು' ಪರಾ.

**ಪನ್ನಿರ್ಕುಳ** 'ಪನ್ನೆರಡು' ಪರಾ.

**ಪನ್ನಿರ್ಕೊಳ** 'ಪನ್ನೆರಡು' ಪರಾ.

**ಪನ್ನಿರ್ಕೋಟಿ** 'ಪನ್ನೆರಡು' ಪರಾ.

**ಪನ್ನಿರ್ಕೋಲ್** 'ಪನ್ನೆರಡು' ಪರಾ.

**ಪನ್ನಿರ್ಚ್ಛಾಶಿರ** 'ಪನ್ನೆರಡು' ಪರಾ.

**ಪನ್ನಿರ್ಚ್ಛಾಸಿರ** 'ಪನ್ನೆರಡು' ಪರಾ.

**ಪನ್ನಿರ್ಛಾಸಿರ** 'ಪನ್ನೆರಡು' ಪರಾ.

**ಪನ್ನಿರ್ಕೆಟಿ** 'ಪನ್ನೆರಡು' ಪರಾ.

**ಪನ್ನಿರ್ಪಳ್ಳಿ** 'ಪನ್ನೆರಡು' ಪರಾ.

**ಪನ್ನಿರ್ಬರ್** 'ಪನ್ನೆರಡು' ಪರಾ.

**ಪನ್ನಿರ್ವತ್ತು** 'ಪನ್ನೆರಡು' ಪರಾ.

**ಪನ್ನಿರ್ವತ್ತರ್** 'ಪನ್ನೆರಡು' ಪರಾ.

**ಪನ್ನಿರ್ವರ್** 'ಪನ್ನೆರಡು' ಪರಾ.

**ಪನ್ನಿರ್ವರು** 'ಪನ್ನೆರಡು' ಪರಾ.

**ಪನ್ನಿರ್ಚ್ಛಾಸಿರ** 'ಪನ್ನೆರಡು' ಪರಾ.

**ಪನ್ನೀರ್** 'ಪನಿನೀರ್' ನೋ.

**ಪನ್ನೀರು** 'ಪನಿನೀರ್' ನೋ.

**ಪನ್ನೀರುಗುಲಾಬಿ** (ನಾ). ಒಂದು ಬಗೆಯ ಗುಲಾಬಿಯ ಗಿಡ ಮತ್ತು ಪನ್ನೀರಿನಂತೆ ಸುವಾಸನೆಯುಳ್ಳ ಅದರ ಹೂವು : ಅತ್ತರು ರೋಜಾಹೂ, ಪನ್ನೀರುಗುಲಾಬಿ (ಮೈಶಿಗಿ. ೬೬-೧೩೫). [ಪನ್ನೀರು(<ಪನಿನೀರ್)+ಗುಲಾಬಿ]

**ಪನ್ನೀರುದಾನಿ** (ನಾ). ಪನ್ನೀರನ್ನು ಹಾಕಿಡುವ ಪಾತ್ರೆ ; "ರಂಧ್ರಗಳಿರುವ ಮುಚ್ಚಳವುಳ್ಳ ಸುಗಂಧದ್ರವ್ಯಸಂಪುಟ; ಪನ್ನೀರುದಾನಿ; ಅತ್ತರುದಾನಿ" (Cassolette. ಇಂಕನಿ): 'ಅತ್ತರುದಾನಿ' ಪರಾ. [ಪನ್ನೀರು (<ಪನಿನೀರ್)+ದಾನಿ$_2$]

**ಪನ್ನೀರೆಲೆ** (ನಾ). ಪನ್ನೀರಿನ ಸುವಾಸನೆಯುಳ್ಳ ಒಂದು ಬಗೆಯ ಸಸ್ಯ ಮತ್ತು ಅದರ ಎಲೆ : ನಿತ್ಯಮಲ್ಲಿಗೆ ಮರುಗ ರಾಜಶೇಖರನಿಗೆ ಪನ್ನೀರೆಲೆ (ಸಿದ್ಧಪು. ೧೮-೪೯). [ಪನ್ನೀರು(<ಪನಿನೀರ್)+ಎಲೆ$_1$]

**ಪನ್ನೀರ್ಗಾಲ್ವೆ** (ನಾ). ಪನ್ನೀರಿನ ಕಾಲುವೆ,—ತೋಡು : ಪನ್ನೀರ್ಗಾಲ್ವೆಯೊಳಂ ಕುಂಕುಮದ ಮಡುಗಳೊಳಂ . . . ಕಂಪಿನ ಪೊಟಲೆಂಬ ಬೀಡು ಬಗೆಗೊಳಿಸುತಿರ್ಪುದು (ಕಬ್ಬಿಗಾ. ೧೧೮).
[ಪನ್ನೀರ್(<ಪನಿನೀರ್)+ಕಾಲ್ವೆ (<ಕಾಲ್ವಾಯ್)]

**ಪನ್ನೀರ್ಗೊಡ** (ನಾ). ಪನ್ನೀರು ತುಂಬಿರುವ ಕೊಡ : ಪದಂಗೊಳಿಸಿದ ಪನ್ನೀರ್ಗೊಡಂಗಳಿಂ ಮುತ್ತಿನ ರಂಗವಲ್ಲಿಗಳಿಂ (ರಾಜಶೇ. ೮-೫ ಪ). [ಪನ್ನೀರ್ (<ಪನಿನೀರ್)+ಕೊಡ$_2$]

**ಪನ್ನೀರ್ಚಳೆಯ** (ನಾ). ಪನ್ನೀರನ್ನು ಚಿಮುಕಿಸುವುದು,—ತಳಿಯುವುದು : ಕಮ್ಮಲರ್ಸರಿಯ ಪನ್ನೀರ್ಚಳೆಯದ ಪರಿಮಳಂ ಪರಿಕಲಿಸಿ ಮೊರೆವ ಮಱಿದುಂಬಿಗಳ ತೆಱನಱಿತು ಸುಳಿವೆಳೆಯ ಗಾಳಿ (ನಂದಿಮಾ. ೭-೩). [ಪನ್ನೀರ್ (<ಪನಿನೀರ್)+ಚಳೆಯ$_1$]

**ಪನ್ನೀರ್ದಳಿ** 'ಪನಿನೀರ್ದಳಿ' ನೋ.

**ಪನ್ನೀರ್ದಳಿಪ** (ನಾ). = ಪನ್ನೀರ್ಚಳೆಯ : ಪನ್ನೀರ್ದಳಿಪದಿಂ ಕಸ್ತೂರಿಯ ಸಾರಣೆಯಿಂ . . . ಕಂಗೊಳಿಸಿ (ವೃಷವಿ. ೫-೪೪ ಪ).
[ಪನ್ನೀರ್ದಳಿ (<ಪನಿನೀರ್ದಳಿ)+-ಪ$_2$]

**ಪನ್ನೀರ್ವರ್** 'ಪನ್ನೆರಡು' ಪರಾ.

**ಪನ್ನು** (ನಾ). ಒಂದು ಬಗೆಯ ತೆರಿಗೆ : ನಾಉ ಬಂದು ನಿಂ[ಮ]ನು ನಂಮ ಪೆನುಗೊಂಡೆಯ ಹ[ಟ್ಟ]ದೆರೆಯ ಕುಳದ ಒಕ್ಕಲು ನಂಮ ಕುಳದ ಪಂನು ತೆರಬೇಕುಯೆಂದು ನಿಂಮನು ಹಿಡಿಯಲಾಗಿ (ಸೌಇಇ. VIII, ೩೬೨-೬ ; 1507) ; ಅಗ್ರಹಾರದಲು × × × ಕೊಡುವ ಪಂನಿನ ರೊಕ್ಕವನು (ಸೌಇಇ. IX-ii, ೬೫೦-೧೧ ; 1553).
[ದೇ.॥ ತಮಿ. ತೆಲು. ಪನ್ನು]

**ಪನ್ನುವಕ (?)** (ನಾ). (?) : ಶ್ರೀಪುರುಷ × × ಹಾರಾಜರ್ ಪ್ರಿಥುವೀ X ಜ್ಯಂಗೆಯ ಮಾದಿಗೋ × × ಳ ಪನ್ನುವಕ ಸಹಳ್ಳಿಲ್ಲರಾಳಂ ಕಲ್ಯುನ್ದೋನ್ನವು ಒನ್ದು ಕೆಱುವುಜ × × ಮುಮನೆ ತಾಗಿಮು ಕೊಟ್ಟರ್ (ಎಕ. XIV, ತಿರುಮ. ೧೫೧-೪ ; ?). [ ? ]

**ಪನ್ನೆ$_1$** (ನಾ). ಕರ್ಪೂರ : "ಪ್ರಾಲೇಯಮೆನಲು ಘನಸಾರಮೆನೆ . . . ಪನ್ನೆಯಕ್ಕು" (ಮಂಗರಾ. ೯೯-೨೨) ; ಪಚ್ಚೆಕಪ್ಪುರ ಕೂರು ಒಂದಕ್ಕೆ ಹಾಗ ಪನ್ನೆ ಕುರು ಒಂದಕ್ಕೆ ಬೇಳೆ (ಎಕ. V, ಬೇಲೂರು. ೭೫-೮೦ ; 1382). [←ತಮಿ. ಪನ್ನೀ]

**ಪನ್ನೆ$_2$** (ನಾ). ಅಲಂಕಾರಕ್ಕಾಗಿ ಗಂಡಸರ ಕೆನ್ನೆಯ ಮೇಲೆ ವಿಶಿಷ್ಟರೀತಿಯಲ್ಲಿ ಕಿವಿಯ ಕೆಳನೇರದವರೆಗೆ ಕತ್ತರಿಸಿದ ಕೂದಲು : ಕತ್ತರಿಸಿದ ಪನ್ನೆಯೊತ್ತಿದ ಕೊನೆವಿಸಾಸೆ . . . ಕಣ್ಣೆಸೆಯೆ (ಕುರಾಷಾಂ. ೪೧-೯೨) ; ಕರ್ಣಾಭರಣದ ಕಾಂತಿಯೆಡೆಯಾಡಲವನ ಪನ್ನೆಯೊಳು ಗಡಣಿಸಿ ಕಾರ ಮುಗಿಲೊಳೆಡೆಯಾಡುವ ಕುಡುಮಿಂಚಿನಂತಿಹುದಲ್ತೆ (ಭರಚ. ೬-೫೦) ; ಪನ್ನೆಗಳ ಕೊನೆವಿಸಾಸೆಗಳ ಹೊಸಹೊನ್ನ ಜವ್ವನದವರುಗಳು . . . ನಡೆತಂದರೈ (ಪ್ರಹ್ಲಾಚ. ೧೭-೨೩) ; ಒತ್ತಿದ ಪನ್ನೆ ಬವರಿಗಡ್ಡ ಕೊರಳೊಳು ಸುತ್ತಿದ ಯಜ್ಞೋಪವೀತ (ಜ್ಞಾನಚ. ೩೫-೨೫), [←ತುಳು. ಪನ್ನೆ = ಕೆನ್ನೆ./ಹಿಂ. ಪನ್ನಾ = ಕುರಿಯ ಕೆನ್ನೆಯ ಮೇಲೆ ಕತ್ತರಿಸಿದ ಕೂದಲು]

**ಪನ್ನೆ$_3$** (ನಾ). ಕುರು ; ಬೊಬ್ಬೆ ; ಗುಳ್ಳೆ (?) : ಆ ಪನ್ನೆ ಪೊಡದುಯಿದ್ದರೆ ಅಳಲೆಕಾಯಿ ಚೂರ್ನ ಕಾಚಿನ ಚೂರ್ನವಂ ಕೂಡಿ (ಅಶ್ವವೈ. ೧೪-೮ ಟೀಕು) ; ಉಮ್ಮತ್ತದ ಸೊಪ್ಪು ಉಪ್ಪಂ ಹುರಿದು ಪುಡಿಮಾಡಿ ಇಕ್ಕುವುದು ಪನ್ನೆ ಮಾಣ್ಬುಂ (ಅಶ್ವಟೀ. ೧೧೪-೧೧). [ ? ]

**ಪನ್ನೆಗಪ್ಪುರ** (ನಾ). = ಪನ್ನೆ$_1$ : ಸಿರಿಪಚ್ಚೆ ಪನ್ನೆಗ[ಪಾಠಾಂ. ಕ]ಪ್ಪುರದ ರಾಶಿಗಳು . . . ಬಿನ್ನಾಣವಡೆದುವಲ್ಲಲ್ಲಿ (ಭರಚ. ೪೭-೧೪). 'ಪರ್ನಕರ್ಪೂರ' ಪರಾ. [ಪನ್ನೆ$_1$ + ಕಪ್ಪುರ]

**ಪನ್ನೆತಿದ್ದು** (ಕ್ರಿ). ಕೆನ್ನೆಯ ಮೇಲಿನ ಕೂದಲನ್ನು ಕತ್ತರಿಸಿ ಸರಿಪಡಿಸು : ಸೆಳೆದ ಕುಡಿವಿಸಾಸೆ ಕತ್ತರಿಗಡ್ಡ ಪನ್ನೆತಿದ್ದಿದ ವಿಶಾಲಮಲಫಣೆಯು (ನವನೋ. ೧೭-೫೫). [ಪನ್ನೆ$_2$ + ತಿದ್ದು$_1$ (<ತಿರ್ದು$_1$)]

**ಪನ್ನೆವಿಸಾಸೆ** (ನಾ). ಕತ್ತರಿಸಿದ ಕೆನ್ನೆಗೂದಲಿನವರೆಗೂ ಬೆಳೆದಿರುವ ವಿಸಾಸೆ : ಆ ಕೋಲುಮುಖದ ಗಲ್ಲಗಳಲ್ಲಿ ಹರಡಿಕೊಂಡು ಹೊರವಾಗಿ ಬೆಳೆದಿರುವ ಪನ್ನೆವಿಸಾಸೆ (ಬಿಳುಪು. ೧೫). [ಪನ್ನೆ$_2$+ವಿಸಾಸೆ]

**ಪನ್ನೆರಂಡು** 'ಪನ್ನೆರಡು' ನೋ.

**ಪನ್ನೆರಡಬ್ಬ** 'ಪನ್ನೆರಡು' ಪರಾ.

**ಪನ್ನೆರಡಿನ** 'ಪನ್ನೆರಡು' ಪರಾ.

**ಪನ್ನೆರಡು,** ಪನ್ನಿರಂಡು, ಪನ್ನೆರಂಡು, ಪನ್ನೆರಾಟ್ಟು, ಹದಿನೆರಡು, ಹನ್ನೆರಡು (ನಾ). ಒಂದು ಸಂಖ್ಯೆ; ಹತ್ತಕ್ಕೆ ಎರಡನ್ನು ಸೇರಿಸಿದ ಸಂಖ್ಯೆ ; ದ್ವಾದಶ : ಪಿಟ್ಟಗೆಱೆ ಪನ್ನೆರಡು ಗಾವುಣ್ಡ ಪ್ರಜೆರ್ ಸಕ್ಷಿ (ಎಕ. XI, ಚಿತ್ರದು. ೨೪-೧ ; ಸು. 500 ?) ; ಪನ್ನೆರಡು ಗದ್ಯಾಣ ದಣ್ಡ (ಮೈಆರಿ. ೧೯೪೨, ४೬-೨೧ ; ಸು. 790) ; ಪನ್ನೆರಡು ತಲೆಯಂ ಪಾವಂ ಕಂಡುದಱಿಂದಿಲ್ಲಿಂ ತೊಟ್ಟೀ ನಾಡೊಳ್ ಪನ್ನೆರಡು ವರ್ಷಂಬರಂ ರೌದ್ರ ಪಸವಮಕ್ಕುಂ(ವಡ್ಡಾರಾ.೮೬-೧೧);ಪನ್ನೆರಡು ವರುಷದವಧಿಯುವಿನ್ನೆಱಿ ಯಲ್ ಬ[ಂ]ದುದಹಿತನಿಳೆಯಂ ಕುಡಂ (ಪಂಪಭಾ. ೭-೬೪) ; ಪನ್ನೆರಡುಂ ಗಟ್ಟಿ ನೀರ್ಮಣ್ಣುಮಂ . . . ಕೊಟ್ಟರ್ (ಎಕ. IV, ಚಾಮರಾ. ೧೮-೧೪ ; ಸು. 1000 ?) ; ಪನ್ ಎಂಬುದರ್ಕೆ – ಪನ್ನೊಂದು, ಪನ್ನೆರಡು (ಶಬ್ದ. ೧೯೨ ಪ್ರಯೋ). **ಪನ್ನಿರಂಡು :** ಪನ್ನಿರಂಡು ಗಿಡ್ಡುಗೆಗೊಟ್ಟು (ಎಕ.X, ಚಿಂತಾಮ. ३४-३; 955). **ಪನ್ನೆರಂಡು :** ಪನ್ನೆರಡು ಪನ್ನೆರಣ್ಡ ಪರಿಹಾರ (ಎಕ. XVI, ಶಿರಾ. ೧೨೩-೧೪ ; 788). **ಪನ್ನೆರಾಟ್ಟು :** ಪಾಲ್ಕುರ್ಗೆ ಪನ್ನೆರಾಟ್ಟ×ಪಡ್ಡ×××ಸತಿ ಪನ್ನೆರಾಟ್ಟು ಕಿಱುದೆಱೆಯು (ಎಕ. XVI, ಶಿರಾ. ೧೨೩-೯ ; 788). **ಹದಿನೆರಡು :** ವೆಂಕಟನೆಂಬ ಕವಿಯು ಹದಿನೆರಡುಸಾವಿರ ಪದ್ಯಗಳ ರಾಮಾಯಣವನ್ನು ಬರೆದ ವೆಂಕಾ ಮಾತ್ಯನನ್ನು ಸ್ಮರಿಸಿದ್ದು ಕಾಣುತ್ತದೆ (ಯಕ್ಷಬ. ३४). **ಹನ್ನೆರಡು :** ಹಕ್ಕನಕೆಱೆಯ ಗದ್ದೆಯಿಂ ಮೂಡಲು ಕೆಯಿ ಮತ್ತರು ಹನ್ನೆರಡು (ಸೌಇಇ. XI-ii, ೧೨೨-೧೬ ; 1072) ; ಹನ್ನೆರಡು ಗಾವುದದಳತೆಯ ಸಮುನ್ನತಿಯ ಕಲ್ಯಾಣಪುರವಂ ಮುನ್ನವೇ ಸಿಂಗರಿಸವೇಳ್ಕು (ಬಸಪು. ೫-೧೩) ; ಪಾಂಚಾಲರಲಿ ಹನ್ನೆರಡುಸಾವಿರ ರಾಜಪುತ್ರರು ಜಱಿದು ಜೋಡಿಸಿತು (ಕುಮ್ಯಾದ್ರೋ. ೧೭-೩೯) ; ನವಿಲ್ನ ಪಡೆಯ ನೆರಹಲು ಸರಿದವವಧಿಗೆ ದಿವಸ ಹನ್ನೆರಡು (ತೊರರಾ. ४-೬-೨೯) ; ಹನ್ನೆರಡು ವರ್ಷ ಸಾಧಕ ಮಾಡಿ ಮನೆಯ ಮುದುಕಿ ಸೊಂಟ ಮುರಿದ ಹಾಗೆ (ಗಾದೆ).

**ಪನ್ನಿರ್ಕಂಡುಗ, ಪನ್ನಿಕ್ಕಂಡುಗ**=೧. ಹನ್ನೆರಡು ಖಂಡುಗದ ಪ್ರಮಾಣ : ಪನ್ನಿರ್ಕಂಡುಗದಕ್ಕಿಯ ಕೂಟಮು[ನ]ದರ್ಕೆ ತಕ್ಕ ಪರಿಕರ ಮುಮನೊರ್ವ ಮಾನಸಂ ಕೊಂಡು ಪೋಪಂ (ಪಂಪಭಾ. ३-२೫ ವ). ೨. ಹನ್ನೆರಡು ಖಂಡುಗದಷ್ಟು ಬೀಜವರಿಯುಳ್ಳುದು : ಪನ್ನಿರ್ಕಣ್ಡುಗವೆದೆನೆಲ್ಮಣ್ಣಿನ್ದೆನ್ದು (ಇಆ. V, ೧३೭-೧४ ; 454) ; ಪನ್ನಿರ್ಕಣ್ಡುಗ ಬೆದೆ ಮಣ್ಣೊಟ್ಟಾರ್ (ಮೈಆರಿ. ೧೯೪೪, ೬-३ ; ಸು. 808); ಶಿವಕೆಱೆಯೊಳ ಪನ್ನಿಕ್ಕಣ್ಡುಗ ಬಿಟ್ಟ ನಿಮ್ಮಣ್ಣು (ಎಕ. XIV, ಕೃಷ್ಣರಾ. ३४-೧೮ ; ?). **ಪನ್ನಿರ್ಕೊಳ**=ಹನ್ನೆರಡುಕೊಳಗದ ಪ್ರಮಾಣ : ಪನ್ನಿರ್ಕೊಳ ವಿಜಾರಿಯುಂ ಒರ್ಕೊಳ ತುಪ್ಪ (ಎಕ. III, ಮಂಡ್ಯ. ೧४-೧೧ ; 907). **ಪನ್ನಿರ್ಕೊಳ**=ಪನ್ನಿರ್ಕೊಳ : ತುರಂಗಲ್ಗೊಳ್ ಪನ್ನಿರ್ಕೊಳ ಗಟ್ಟಿ ಸಲ್ಗು (ಎಕ. X (s), ಬಾಗೇಪ. ೯३-೮ ; 10ನೆಯ ಶತ). **ಪನ್ನಿರ್ಕೋಟಿ**=ಹನ್ನೆರಡು ಕೋಟಿ : ವೇದವಿದರಂ ಪಂನಿ ರ್ಕ್ಕೋಟಿಯ ತೀರ್ತ್ಥದ ತಡಿಯೊಳು ಕೋಟಿಮಹಾದಿನದೊಳಳಿದ ಧರ್ಮ್ಮ ಮನಳಿದನು (ಎಕ. VI, ತರೀಕೆ. ೬೬-३೭ ; 1130). **ಪನ್ನಿರ್ಕೋಲ್**= ಹನ್ನೆರಡು ಕೋಲು,—ಗಳೆ (?) : ಪಱುಗೋಲ ಪನ್ನಿರ್ಕೋ [ಪಾಠಾಂ. ಕ್ಕೋ]ಲಿಂದಂ ದೋಣಿಯೊಕೋರ್ಲ್ ಲೇಸೆಂಬಂತೆ(ಧರ್ಮಾಮೃ. ೭-೧३೬). **ಪನ್ನಿರ್ಛಾಸಿರ, ಪನ್ನಿಚ್ಛಾಸಿರ, ಪನ್ನಿಚ್ಛಾಶಿರ, ಪನ್ನಿಚ್ಛಾಸಿರ, ಪನ್ನಿಛಾಸಿರ, ಹನ್ನಿಚ್ಛಾಸಿರ**=ಹನ್ನೆರಡು ಸಾವಿರ : ಮದ್ರರಾಜನಂ ಪನ್ನಿರ್ಛಾಸಿರಮಾನೆವೆರಸು . . . ನೀಳನೆಡೆಗೊಂಡು ತಾಗಿದಾಗಳ್ (ಪಂಪಭಾ. ೧೦-೧೦೮ ವ) ; ಲಕ್ಷ್ಮಣಂ . . . ಪನ್ನಿರ್ಛಾಸಿರ ವರ್ಷಮಂ ಜೀವಿಸಿ (ಪಂರಾಮಾ.೧೬-೬೨ ವ); ತಪ್ಪುದಂಡಕ್ಕೆ ಪನ್ನಿಚ್ಛಾಸಿರ ಹೊನ್ನಂ ಕೊಟ್ಟು (ಬಸರ. ೬-೮೬) ; ಬಾಣರವಾಡಿ ಪನ್ನಿಚ್ಛಾಶಿರದ ಬಳಂಜವೆಲ್ಲ ನೆರದು (ಎಕ. X (S), ಮುಳಬಾ. ३೦೬-३ ; ಸು. 950) ; ಬನವಾಸಿ ಪನ್ನಿಚ್ಛಾಸಿರಮುಮನಾಳುತ್ತಿರೆ (ಇಎ. ೧೯४೭, ಹಾನಗಲ್. ೨೧४-೧೮ ; 943) ; ಶುದ್ಧಪೃಥ್ವಿಗೆ ಪನ್ನಿಚ್ಛಾಸಿರ ವರ್ಷಂ (ಶಾಸ್ತ್ರಟೀ. ೨೭-४) ; ಲಡ್ಡುಗೆಯ ನೇಮಧಾರಿಗಳು ಪನ್ನಿಚ್ಛಾಸಿರ (ರಾಘಚ. ೮-३೧) ; ಲೋಕಟಿ ಬನವಸೆ [ಪ]ನ್ನಿಚ್ಛಾಸಿರಮುಮನಾಳೆ (ಸೌಇಇ.XX, ೧೫-೫ ; 904) ; ಪಾನುಂಗಲ್ಲಯ್ನೂಱು ಹಲಸಿಗೆ ಹನ್ನಿಚ್ಛಾಸಿರದ ಹೆಜ್ಜುಂಕ (ಇಎ. ೧೯४೭, ಹಾನಗಲ್. ೨೦೯-೨४ ; ?). **ಪನ್ನಿರ್ತೆಱ, ಪನ್ನಿತ್ತೆಱ**=ಹನ್ನೆರಡು ಬಗೆ,—ವಿಧ : ಪನ್ನಿರ್ತೆಱದ ತಪದೊಳುತ್ತರೋತ್ತರಂ ನೆಗಟ್ದು (ಧರ್ಮಾಮೃ. ೨-೨३೮) ; ಅಕ್ಷರಮಾಚಾರಾಂಗದಿ ಭೇದದಿಂ ಪನ್ನಿತ್ತೆಱನುಮಕ್ಕುಂ (ತಸೂವೃ. ೨೧). **ಪನ್ನಿರ್ಪಳ್ಳಿ**= ಹನ್ನೆರಡು ಹಳ್ಳಿಗಳು : ನಿರಟ್ಟೂರಾ ಪನ್ನಿರ್ಪಳ್ಳಿಯ . . . ಕೊಟ್ಟರ್ (ಎಕ. IX, ಹೊಸಕೋ. ೮೨-४ ; ಸು. 750) ; ಬಿಳಿಊಪ್ಪರ್ಪನ್ನಿರ್ಪ್ಪಳ್ಳಿ ಯುಮಂ . . . ಕೊಟ್ಟರ್ (ಇಆ. VI, ೧೦३-೮ ; 887). **ಪನ್ನಿರ್ಮತ್ತ, ಪನ್ನಿರ್ಮತ್ತರ್**=ಹನ್ನೆರಡು ಮತ್ತರಷ್ಟು ವಿಸ್ತೀರ್ಣವುಳ್ಳುದು : ಬಿಸಮರಸರ ದೇಗುಲಕೆ ಕೊಟ್ಟ ಕೆಯ್ಯು ಪನ್ನಿರ್ಮ್ಮತ್ತ (ಎಕ. XI, ಚಳ್ಳಕೆ. ३३-२३ ; ಸು. 815) ; ಪನ್ನಿರ್ಮ್ಮತ್ತರ್ಕ್ಕೆಯ್ಯುಂ ಮಾಱುಗೊಣ್ಡು ಬಿಟ್ಟನಾ ಪನ್ನಿರ್ಮ್ಮತ್ತರ್ಕ್ಕೆಯ್ಯುಂ ನಾಲ್ಕುಗೆಯ್ದು [ದೇವ]ಮನ್ಯ[ಗ್ಗಾ]ಗಿ ಬಾಟ್ಟುದು (ಸೌಇಇ. XI-i, ३४-೧೨; 925) ; ಕೂಸುಗಳ್ . . . ಪನ್ನಿರ್ಮ್ಮತ್ತರ್ ಪರ್ವಿದಾಲದ ಮರದ ಮೊದಲ್ಗೆ ವಂದು (ಪಂಪಭಾ. ೨-३೦ ವ). **ಪನ್ನಿರ್ವರ್, ಪನ್ನಿಬ್ಬರ್, ಪನ್ನಿಬ್ಬರು, ಪನ್ನಿರುವರ್, ಪನ್ನಿರ್ಬರ್, ಪನ್ನಿರ್ವರು, ಪನ್ನೀರ್ವರ್, ಹನಿಬ್ಬರು, ಹನ್ನಿಬ್ಬರ್, ಹನ್ನಿಬ್ಬರು, ಹನ್ನಿರ್ಬರ್, ಹನ್ನಿರ್ವರು**=ಹನ್ನೆರಡು ಜನ,—ಮಂದಿ : ಪನ್ನಿರ್ವ್ವರಾ ಏಟ್ವರಾ ಪೊಯ್ದು ಧರ್ಮ್ಮಂ (ಎಕ.IV, ಚಾಮರಾ.೬३-೯; ಸು.750); ನೀನಿಂದು ಪನ್ನಿರ್ವರ್ ಪಾರ್ವರ್ಗೆ ಸಾರಮಪ್ಪ ಕ್ಷೀರಭೋಜನಮಂ ಮಾಡಿಸಿದೆಯಪ್ಪೊಡೆ . . . ಮನೋರಥ ಸಿದ್ಧಿಯುಮಕ್ಕುಂ (ಪಂಚತಂ. ೧೫४-೧೦) ; ಪನ್ನಿರ್ವರ್ ಖೇಚರಕನ್ನೆಯರಂ ಮದುವೆನಿಂದು (ಪಂರಾಮಾ. ೧೦-३೯ ವ) ; ಮೇಲೆನಿಪ ಭಂಡಾರಿಗಳು ಪನ್ನಿಬ್ಬರ್ (ಬಸಪು. ೫-೧೮) ; ಬಸವಮಂತ್ರಿಯನು ಕರೆದು ಮನ್ನಣೆವೆತ್ತ ಪನ್ನಿಬ್ಬರು ಮಹಾಮಾತ್ಯರೊಳಗಗ್ರೇಶ್ವರನೆನಸಲು (ಬಸಪು. ೫-೬೫); ಪನ್ನಿರುವರುಂ ರಟ್ಟವಾಡಿ ಮೇಗೆ ದಣ್ಡುವೋದಲ್ಲಿ (ಎಕ. XII, ಮದ್ದಗಿ. ೯೨-೨ ; ಸು. 750); ಪನ್ನಿಬ್ಬರ್ ಚೌ[ವೇ]ದರುಮಂ . . . ಕವಿಲೆಯು ಮನಟಿದ ಮಹಾಪಾತಕಂ(ಸೌಇಇ.XI-i,४೦-೧೬; 965); ಅರಿಯೂರ ಪನ್ನಿರ್ವ್ವರು (ಎಕ. IV, ಗುಂಡ್ಲುಪೇ. ೮೯-೧ ; ಸು. 750) ; ಪನ್ನಿರ್ವರು ಮಹಾಪರಿಸೆಯು ಎಡೆನಾಡ ಮುವನ್ನಾಟ್ಗಾಮುಣ್ಡುಗಳುಂ ಸಕ್ಷಿ (ಎಕ. III, ನಂಜನ. ೧೫೫-೮ ; ಸು. 970 ?) ; ವರ ದಿವಾಕರರು ಪನ್ನೀರ್ವರುಂ . . . ಇರ್ದರೀಶನೊಡ್ಡೋಲಗದೊಳು (ಸಿದ್ಧೇಪು. ೧-३೯) ; ಹನಿಬ್ಬರು ನಾಯಕರು ಕೋಳಿಯೂರ ಕೋಟಿಯ ಮತ್ತಲು (ಎಕ.XIV, ಎಡತೊ. ೮೧-೫ ; ಸು.1125) ; ಶೂರರು ಹನಿಬ್ಬರಯ್ಯಾ (ಬಸವ. ೧೬) ; ಸೋಮೇಶ್ವರದೇವನೊಳಗಾಗಿ ಹಂನಿಬ್ಬರರಸುಗಳಂ (ಸೌಇಎ. ೧೯-४೦, ಸಿದ್ಧವಟ್ಟ. ೯-೧೬ ; 1160) ; ಗುತ್ತಿ ಹನ್ನಿಬ್ಬರ ಗಂಡ ಪಟ್ಟ (ಇಆ. V, ४೧-೬ ; 1586) ; ದೇವರ ಬ್ರಹ್ಮಪುರಿಯ ಹನ್ನಿಬ್ಬರ್ಗಂ ಸೂರ್ಯ್ಯಗ್ರಹಣದಲು ಧಾರಾಪೂರ್ಬ್ಬಕಂ ಮಾಡಿ ಕೊಟ್ಟರು (ಸೌಇಇ. IX-i, ೨೫೧-४३; 1149) ; ಮಹಾಜನಮುಂ ಹಂನಿಬ್ಬರುಂ . . . ನಡಿಸಿಕೊಟ್ಟ ಕೆಯಿ (ಕಇ. I, ३३-३೫ ; 1246) ; ದೇವಪುತ್ರಿಕರು ಹಂನಿರ್ವ್ವರಿಗೆ ಗದ್ಯಾಣವಿಪ್ಪತ್ತ ನಾಲ್ಕು (ಜೊಂಕಶಾ. ೧೯३३, ಹಾವೇರಿ. ३೦-೨೧ ; ?).

ಪನ್ನೆರಡಬ್ದ = ಹನ್ನೆರಡು ವರ್ಷಗಳ ಕಾಲ,—ಅವಧಿ : ಮತ್ತಮಿರ ವೇೞ್ಪುದು ಪನ್ನೆರಡಬ್ದಮಂ ಮನಂ ಮಱುಗೆ ಬನಂಗಳೊಳ್ (ಪಂಪಭಾ. ೮–೯೯). **ಪನ್ನೆರಡಿನ** = ಹನ್ನೆರಡು ಜನ ಸೂರ್ಯರು ; ದ್ವಾದಶಾದಿತ್ಯರು: ಪನ್ನೆರಡಿನರು ಪನ್ನೊಂದು ರುದ್ರರು . . . ನೆರೆದು ಭಜಿಸಲು (ಜಸಪು. ೧೧–೩೧). **ಹನ್ನಿಬ್ಬರ ಗಂಡ** = ದ್ವಾದಶಚಕ್ರವರ್ತಿಗಳಿಗಿಂತ ಹೆಚ್ಚು ಪರಾಕ್ರಮಿಯಾದವನು ; ಒಂದು ಬಿರುದು : ಕದನ ಪ್ರಚಂಡ ಹಂನಿಬ್ಬರ ಗಂಡ ಮಂಡಳಿಕಭೈರವಂ (ಸೌಇಇ. XX, ೨೨೧–೮; 1283). **ಹನ್ನಿರ್ಕಯಿ** = ಹನ್ನೆರಡುಮಾರುಗಳಷ್ಟು ವಿಸ್ತೀರ್ಣವುಳ್ಳುದು : ಹಂನಿರ್ಕಯಿಯುಗಲಮೆಯುಗಲವಾಗಿ ಬಿಟ್ಟ ಮಠದ ಮನೆ (ಕಇ. I, ೨೫–೮೨ ; 1186) ; ಹ[ತ್ತು]ಕಯಿ ಅಗಲ . . . ಹನ್ನಿರ್ಕಯಿ ಅಗಲದ ನಿವೇಶಣ (ಸೌಇಇ. XX, ೧೩೧–೧೧ ; ?). **ಹನ್ನಿರ್ಧಾನ್ಯ** = ಹನ್ನೆರಡು ಬಗೆಯ ಧಾನ್ಯಗಳು : ಶ್ರೀಭಂಡಾರದ ಹನ್ನಿರ್‌ಧಾನ್ಯಮುಂ . . . ಏಗಾದಿ ಏಗೋತ್ತರವಾಗಲು (ಎಕ. V, ಬೇಲೂರು. ೨೦–೪ ; 1180). [ಪನ್$_1$(<ಪತ್ತು$_3$) + ಎರಡು]

**ಪನ್ನೆರಳ್** 'ಪನ್ನೆರಟು' ನೋ.

**ಪನ್ನೆರಳ್ಕೋಟಿ** 'ಪನ್ನೆರಟು' ಪರಾ.

**ಪನ್ನೆರಳ್ಪರಿಸ** 'ಪನ್ನೆರಟು' ಪರಾ.

**ಪನ್ನೆರಳ್ಭೇದ** 'ಪನ್ನೆರಟು' ಪರಾ.

**ಪನ್ನೆಸೆ** 'ಪನ್ನಸು' ನೋ.

**ಪನ್ನೆರಟು**, ಪನ್ನೆರಳ್ (ನಾ). 'ಪನ್ನೆರಡು' ಎಂಬ ಸಂಖ್ಯಾವಾಚಿಗೆ ವ್ಯಂಜನಾದಿ ಶಬ್ದ ಸೇರಿದಾಗ ಉಂಟಾಗುವ ರೂಪ. **ಪನ್ನೆರಳ್** : ಅಸುರವೀರರಂ ಕಂಡೊಡನೆ ಪನ್ನೆರಳ್ನಯನದಿಂ ಕಿಡಿ ಸುರಿಯೆ . . . ಗುಹನೆಸೆದನು (ಚೆಬಪು. ೩೯–೧೮).

**ಪನ್ನೆರಟ್ತಪ** = ಹನ್ನೆರಡು ಬಗೆಯ ತಪಸ್ಸು : ಪನ್ನೆರಟ್ತಪದೊಳುತ್ತಮನಾತರ್ನ ಸಮಾಧಿವೆತ್ತು . . . ಪಡೆದಂ ಸುರರಾಜಪೂಜ್ಯಮಂ (ಶಾಂತಿಪು. ೯–೫೪). 'ದ್ವಾದಶತಪ' ಪರಾ. **ಪನ್ನೆರಟ್ಪರಿಸ**, **ಪನ್ನೆರಳ್ಪರಿಸ** = ಹನ್ನೆರಡುವರ್ಷಗಳ ಕಾಲ : ನೆಱಿದುವು ಪನ್ನೆರಟ್ಪರಿಸ [ಪಾಠಾಂ. ಟ್ವರುಷ]ಮುಗ್ರವಿರೋಧಿಜನಕ್ಕೆ ಮಿಟ್ಟುಗಳ್ ನೆಱಿವವೊಲ್ (ಪಂಪಭಾ. ೮–೯೯) ; ಮುನಿವರಂ ಪನ್ನೆರಳ್ಪರಿಸಕ್ಕೆ ಶಿವನ ಕೃಪೆಯೊದಗಿತೆನುತಿಂತೆಂದನು (ರಾಘಚ. ೧೦–೭೫). **ಪನ್ನೆರಳ್ಕೋಟಿ** = ಹನ್ನೆರಡುಕೋಟಿ : ಪನ್ನೆರಳ್ಕೋಟಿ ಚರಲಿಂಗಕೊಲ್ದು . . . ಪರಮಾನ್ನ ಮುಖ್ಯಂಗಳಂ ಹರಿಸದಿಂದೊಪ್ಪಿಸಿದೊಡೊಲ್ಲದಾಂ ಮನಮೊಸೆದು ಪರಮ ಪ್ರಸಾದಮಂ ಕೊಂಬುದಿಲ್ಲ (ಆರಾಚ. ೨–೧೩–೨೨) ; ಪನ್ನೆರಳ್ಕೋಟಿ ಭೈರವರ್ ಪೌಲಸ್ತ್ಯದೆಸೆಯ ಬಾಗಿಲ ಕಾದು ಸಂತತ ವಿಶಾಲ ಸೌಭಾಗ್ಯದಿಂದಿರ್ಪ ಭೀಷಣನಾಮ ಭೈರವ (ನಂದಿಮಾ. ೩–೧೨). **ಪನ್ನೆರಳ್ಭೇದ** = ಹನ್ನೆರಡು ಬಗೆ,—ರೀತಿ : ಕ್ರಮದಿಂದಂ ಪನ್ನೆರಳ್ಭೇದಮನೆ ತಳೆದ ತೇಜಸ್ಸಿಗಂ . . . ಕಮಲಾಕ್ಷಂಗಂ ತಮರ್ ತಾಮೆನುತ (ಶಾಕುಂತ. ೧೧೨–೧೯೦). [<ಪನ್ನೆರಡು]

**ಪನ್ನೆರಟ್ತಪ** 'ಪನ್ನೆರಟು' ಪರಾ.

**ಪನ್ನೆರಟ್ಪರಿಸ** 'ಪನ್ನೆರಟು' ಪರಾ.

**ಪನ್ನೆರಾಟ್ಬು** 'ಪನ್ನೆರಡು' ನೋ.

**ಪನ್ನೇರಲು** 'ಪನ್ನೇಱಳೆ' ನೋ.

**ಪನ್ನೇರಲೆ** 'ಪನ್ನೇಱಳೆ' ನೋ.

**ಪನ್ನೇರಳು** 'ಪನ್ನೇಱಳೆ' ನೋ.

**ಪನ್ನೇರಳುಮರ** 'ಪನ್ನೇರಳೆಮರ' ನೋ.

**ಪನ್ನೇರಳೆ** 'ಪನ್ನೇಱಳೆ' ನೋ.

**ಪನ್ನೇರಳೆಮರ**, ಪನ್ನೇರಳುಮರ (ನಾ). ೧. ಪನ್ನೇರಳೆ ಹಣ್ಣಿನ ಮರ : ಪನ್ನೇರಳೇಮರ ಅವಳ ಸಮಾಧಿಯ ಮೇಲೆ ನೆರಳನ್ನು ಹರಡಿತ್ತು (ನಾಲ್ಕುಮ. ೧೬೪) ; ಅವರ ಮನೆಯ ಕೈತೋಟದಲ್ಲಿ ದೊಡ್ಡ ಪನ್ನೇರಳೆಮರವಿದೆ (ರೂಢಿ). **ಪನ್ನೇರಳುಮರ** : ೨. ಹೂವುಗಳನ್ನು ಬಿಡುವ ಒಂದು ಬಗೆಯ ಮರ ; ಬಿಳಿಹೂವಿನ ಲಕ್ಕಿಮರ : (೬). [ಪನ್ನೇರಳೆ(<ಪನ್ನೇಱಳೆ) + ಮರ$_1$]

**ಪನ್ನೇರಿಳೆ** 'ಪನ್ನೇಱಳೆ' ನೋ.

**ಪನ್ನೇಳು** 'ಪದಿನೇೞು' ನೋ.

**ಪನ್ನೇಱಳೆ**, ಪನ್ನೇರಲು, ಪನ್ನೇರಲೆ, ಪನ್ನೇರಳು, ಪನ್ನೇರಳೆ, ಪನ್ನೇರಿಳೆ (ನಾ). ೧. ಒಂದು ಬಗೆಯ ಮರ ಮತ್ತು ಸುವಾಸನಾಯುಕ್ತವಾದ ಅದರ ಹಣ್ಣು : ಗುಚ್ಛದ್ರಾಕ್ಷೆ ಸೀಬಿ ಪನ್ನೇಱಳೆ . . . ತರುನಿಕರಂಗಳುಂ (ವಿವೇಕ. ೨೧೧) ; ಅತ್ತಿ ಪನ್ನೇಱಳೆ ನೆನೆಗಡಲೆಯು (ಪಾದಿಕೀ. ೧೯೯–೨). **ಪನ್ನೇರಲು** : ೧. 'ಗುಡ್ಡ ಪನ್ನೇರಲು' ಪರಾ. **ಪನ್ನೇರಲೆ** : ೧. ಪನ್ನೇರಲೆ ಕೆಕ್ಕರಿಕೆ ಮಿಣಿಕೆ . . . ಮುಂತಾದ ಮಧುರಫಲಂಗಳ್ (ಸೌಗಂಧಿ. ೩೭–೩) ; (ಮೈಔಗಿ. ೪೭–೯೩೦). **ಪನ್ನೇರಳು** : ೨. ಸುವಾಸನೆಯ ಹೂವುಗಳನ್ನು ಬಿಡುವ ಒಂದು ಬಗೆಯ ಮರ : "ಬಿಳಿಹೂವಿನ ಲಕ್ಕಿಮರ, ಪನ್ನೇರಳು" (ಸಸ್ಯನಿ. ೬೭) ; "ಪನ್ನೇರಳು, ಬೀಳಿಹೂವಿನ ಲಕ್ಕಿಮರ" (ವೃಕ್ಷಾಪ. ೧೧೭). 'ಪನ್ನೇರಳುಮರ' ಪರಾ. **ಪನ್ನೇರಳೆ** : ೧. 'ಪನ್ನೇರಳೆಮರ' ಪರಾ. **ಪನ್ನೇರಿಳೆ** : ೧. ಡೇರಾ, ನಂದಿಬಟ್ಟಲು ಗಿಡಗಳ ಮಧ್ಯೆ ಪನ್ನೇರಿಳೆ ಹಣ್ಣಿನ ಮರ (ಹೊಸಕ್ವಿ. ೧೨೩). ೨. ಇಲ್ಲಿ ಪನ್ನೇರಿಳೆ ; ಅಲ್ಲಿ ಹೊಂಗುಲಾಬಿ ಹಂತಿ . . . ಹೊಸತೆ ಬಂತೊ ತಾಯ ಹರಕೆ ಹೂವ ರೂಪ ತಾಳಿ ! (ಅನಿಕೇ. ೨೦–೯). [ಪನ್$_2$ + ನೇಱಳೆ(<ನೇಱಲ್)]

**ಪನ್ನೊಂದು**, ಹನ್ನೊಂದು (ನಾ). ೧. ಹತ್ತಕ್ಕೆ ಒಂದು ಸೇರಿದ ಸಂಖ್ಯೆ ; ಏಕಾದಶ : ಪತ್ತುಪವಾಸಂಗೆಯ್ದು ಪನ್ನೊಂದನೆಯ ದಿವಸದಂದು ಚರಿಗೆಪೊಕ್ಕಡಮಿಯಂ ತೊಟಲ್ವನ್ನೆಗಂ (ವಡ್ಡಾರಾ. ೮೯–೧೯) ; ಒಂದಾದಿಯಾಗೆ ಪನ್ನೊಂದುವರಂ ಗುಣವದ್ವ್ರತಚಿಹ್ನಂ ಗುಣಮಣಿಭೂಷಣಸೂತ್ರಮಮರ್ದುದವರ್ಗೆನ್ನಿಂದಂ (ಆದಿಪು. ೧೫–೨೪); ಅರ್ಜುನನ ರಥಮೆಸಪ ಪನ್ನೊಂದನೆಯದು ಸೂತಾವತಾರಮುಂ ಹರಿಗಾಯ್ತೇ (ಗದಾಯು. ೩–೪೪) ; ಮುನ್ನಿನ ಗುಣದೊಳ್ಮೂಡಿರ್ಪನ್ನೆಱಿಯುದ್ದಿಷ್ಟವಿರತ ಪನ್ನೊಂದನೆಯಂ (ಧರ್ಮಾಮೃ. ೫–೧೪೬) ; ಪನ್ ಎಂಬುದಕ್ಕೆ— ಪನ್ನೊಂದು, ಪನ್ನೆರಡು (ಶಮದ. ೧೯೨ ಪ್ರಯೋ). **ಹನ್ನೊಂದು** : ೧. ಅಲ್ಲಿಂ ಮೇಗೆ ಹನ್ನೊಂದು ಹನ್ನೆರಡನೆಯ ಕಲ್ಪಂಗಳ್ (ಅಜಿಪು. ೧೧–೨೬ವ); ಚಾಳುಕ್ಯ ವಿಕ್ರ[ಮ] × × × ಹನ್ನೊನ್ದನೆಯ ಕ್ಷಯಸಂವತ್ಸರದ..ಆದಿವಾರ[ದ]ಂದು(ಸೌಇಇ. XI-ii, ೧೩೨–೩೪ ; 1086) ; ಹತ್ತಱೊಳಗೆ ಹನ್ನೊಂದಾಗಿ ನೀರ ತಾವರೆಯಂತಿಪ್ಪನು (ಮಹಾದೇ. ಬ. ೯೯–೨೩೦) ; ಹನ್ನೊಂದು ಓದಿದ ಮೇಲೆ ಇನ್ನೊಂದು ಕೇಳಬೇಡ (ಗಾದೆ). ೨. (ಸತ್ತ) ಹನ್ನೊಂದನೆಯ ದಿವಸದ ಶ್ರಾದ್ಧದ ಭೋಜನ : ಪದಪಿನಿಂ ತಂದಿರ್ಪ ಬೇಳೆ ಬೆಲ್ಲಗಳನುಂ ಬದಿಗಿಕ್ಕಿ ಬರ್ಪ ಹನ್ನೊಂದ ಕಾಯುವೆನೆ (ಕಾಲೂರ. ೧೭೭–೩೯೯) ; ಹನ್ನೊಂದರೊಳ್ ನೆರವಿಯಂ ಬಳಗವೆರೆದು ಚೆನ್ನೆಯಂ ಪೆಸರೆತ್ತಿ ತಣಿದುಂಡು ಮರೆಯಾಯ್ತು (ಕಾಲೂರ. ೧೮೫–೪೨೧).

**ಪನ್ನೊರ್ವರ್**, **ಪನ್ನೊರ್ಬರ್**, **ಪನ್ನೋರ್ವರು** = ಹನ್ನೊಂದು ಜನ : ಶತಾನೀಕ ಶತದ್ಯುಮ್ನ ಶತಚಂದ್ರಂ ಮೊದಲಾಗಿ ಪನ್ನೊರ್ವರ್ ತಮ್ಮಂದಿರುಂ ಬೆರಸು (ಪಂಪಭಾ. ೯–೯೫ವ) ; ಶ್ರೀದಾಸಿಅಮ್ಮನ್

ಕಂಚಿಯೊಳ್ ಪನ್ನೊಬ್ಬ‍ರರನ್ ಎಱಿದು ಸ್ವರ್ಗ್ಗಿ ಆದನ್ (ಮೈಆರಿ. ೧೯೩೯, ೨೩-೮; ಸು. 740); ಅವ್ಯಾಬಾಧರು ಪನ್ನೊಂಸಾಸಿರದ ಪನ್ನೋರ್ವರು (ತಸೂವ್ಯ. ೧೭೬). [ಪನ್$_1$(<ಪತ್ತು$_3$)+ಒಂದು$_3$]

**ಪನ್ನ್ಯಾಲ** (ನಾ). ಪಾದದ ಅಡಿ,—ಕೆಳಭಾಗ : ವರ ಪನ್ನ್ಯಾಲಮನಾನ ನಾಬ್ಜ ಮನವರ್ಕಾಣಲ್ಕದೇನಾರ್ತರೇ (ರಾಜಶೇ. ೬-೧೦). [ಸಂ.]

**ಪಪಾಯಿ** 'ಪಪ್ಪಾಯಿ' ನೋ.

**ಪಪುಳ್ಳಿ** 'ಪೊಪ್ಪಳಿ$_1$' ನೋ.

**ಪಪುಳ್ಳಿ ಅಚ್ಚಡ** (ನಾ). ಬಣ್ಣ ಬಣ್ಣಗಳಿಂದ ಕೂಡಿದ ಹಚ್ಚಡ,—ದುಪ್ಪಟಿ : ವಡ್ಡರ ಯಿಾರನ ಬೋಯಿಗೆ ಕಡಗ ಸ ೧ . . . ಚಿಟಿಪಾಗು ೧ ಪಪುಳ್ಳಿ ಅಚ್ಚಡ ೧ ಸಹ ಯಿನಾಮು ಕೊಟ್ಟು (ಎಕ. XI, ಹಿರಿಯೂ. ೩೬-೧೪; 1533 ?). [ಪಪುಳ್ಳಿ(<ಪೊಪ್ಪಳಿ$_1$)+ಅಚ್ಚಡ$_0$(<ಪಚ್ಚಡ)]

**ಪಪ್ಪ** (ನಾ). ಸ್ತುತಿಪಾಠ ; ಹೊಗಳಿಕೆ ; ಸ್ತೋತ್ರ : ಬಗೆದಂದಮಪ್ಪ ತನು ಬಗೆವುಗೆಯುಂ ಬಗೆದಂದಮಪ್ಪ ಕೆಯ್ತುಂ ಚಿತ್ತಂಬುಗೆಯುಂ ಪಪ್ಪದ ದೇವರ್ ತೆಗೆದರ್ ಕಿಱಿಕಿಱಿದೆ ದುರಿತಹರಣನ ಬಗೆಯಂ (ಶಾಂತಿಪು. ೧೦-೧೪).

**ಪಪ್ಪವರ್** = ಸ್ತುತಿಪಾಠಕರು ; ಮಂಗಳಪಾಠಕರು ; ವೈತಾಳಿಕರು : ಗಡಣದ ಸಂಗಡಂ ಪೊಗಟ್ಟ ಪಪ್ಪವರುಂ (ಶಾಂತಿಪು. ೬-೬೪); ಪ[ಪಾಠಾಂ. ದ]ಪ್ಪವರ ಪರಿಹಾಸಕರ ರಾಜರಾಜವಲ್ಲಭರಂದಣದ ಗೊಂದಣಂ . . . ತಿಂತಿಣಿಗೊಂಡು (ಅನಂಪು. ೬-೯೪ ಪ); ಪಪ್ಪವರ ಮಂಗಲೋಕ್ತಿಯಿನುಪ್ಪವಡಿಸಿ (ಪುಷ್ಪವು. ೯-೧೦೫).

**ಪಪ್ಪಂಗಾಯಿ** 'ಪಪ್ಪಾಯಿ' ನೋ.

**ಪಪ್ಪಕ$_1$** 'ಪಂಪಕ' ನೋ.

**ಪಪ್ಪಕ$_2$** (ನಾ). ಪ್ರಾತಃಕಾಲದಲ್ಲಿ ರಾಜನನ್ನು ಎಚ್ಚರಿಸುವ ಮಂಗಳಪಾಠಕ ; ವೈತಾಳಿಕ : ಉಪ್ಪವಡಿಸುವುದುಮಱಿಕೆಯ ಪಪ್ಪಕರೊಡನಾಡಿಗಳ್ ಪ್ರಬೋಧಿಸಿದರ್ ಮೇಲಪ್ಪ ಪದರಚನೆಯಿಂ ದೊರೆಯುಪ್ಪ ಮಹಾಮಂಗಳಪ್ರಬೋಧನೆಯಿಂದಂ (ಶಾಂತಿಪು. ೫-೮೩). [<ಪಪ್ಪ]

**ಪಪ್ಪಕ$_3$** 'ಪಪ್ಪುಕ$_2$' ನೋ.

**ಪಪ್ಪಡ,** ಪಪ್ಪಳ, ಹಪ್ಪಳ, ಹಪ್ಪಟಿ (ನಾ). ಉದ್ದು ಮೊದಲಾದ ಹಿಟ್ಟಿಗೆ ಸಂಬಾರವಸ್ತುಗಳನ್ನು ಹಾಕಿ, ತೆಳ್ಳಗೆ ಲಟ್ಟಿಸಿ, ಒಣಗಿಸಿದ ನಂತರ, ಕರಿದು ಅಥವಾ ಸುಟ್ಟು ನಂಜಿಕೊಳ್ಳುವ ಒಂದು ಬಗೆಯ ವ್ಯಂಜನಪದಾರ್ಥ : ಯಥೇಷ್ಟ ಶಾಕ ಪಪ್ಪಡ ಪಳಿದ್ಯಾ ದಧಿ ವ್ಯಂಜನವು ತಂಡತಂಡದ್ದ ರಿವಾಣಗಳ ಚಷಕದೊಳಗೆ ತುಂಬಿಕೊಂಡು ಬಂದರು (ಪ್ರಸಭಾ. ೩೫-೫). 'ಪಪ್ಪಡಕಾರ' ಪರಾ. **ಪಪ್ಪಳ :** "ಪಪ್ಪಳ(ಡ) = ಪರ್ಪಟ" (ತದ್ಭಕೋ. ೨೪); ಪಪ್ಪಳ ಸಂಡಿಗೆ ಪಚ್ಚಡಿಯುಪ್ಪಿನ ಕಾಯ್ . . . ಮುಗಿದವು ಬೇಗಂ (ಹಾಲಾಸ್ಯ. ೧-೮-೨೦); ಶರ್ಕರೆಯು ಜೇನ್ತುರುಡೆ ಪಪ್ಪಳಂ ಶುಂಟಿ ಯಾಲಕ್ಕಿ ಕರೆಯು (ಪರಶು. ೧೫-೩೨).

**ಹಪ್ಪಳ :** "ಹಪ್ಪಳ . . . ಪರ್ಪಟ = ಪಪ್ಪಳ" (ತದ್ಭಕೋ. ೪೮); ಹಪ್ಪಳಂ ಕುಂಬಳದ ಸಂಡಗೆಯು ಸೇವಗೆಯೆನಿಪ್ಪವಿವು ಮೊದಲಾಗಿ . . . ತಂದೊಪ್ಪಿಸಿದಡೆ (ಸಿದ್ಧರಾ. ೮-೫೨); ತೆಗೆ . . . ಸಜ್ಜಿಗೆಯ ಗುಡ ಹಪ್ಪಳವ ಪುರಿಸಂಡಿಗೆಯ ಹೂರಿಗೆಯ (ತೊರರಾ. ೫-೮-೭೦); ತುಪ್ಪದೊಳಗೆ ಹದವಱಿದು ತಾಳಿಸಿದ ಕಮ್ಮನಪ್ಪ ಹಪ್ಪಳ ಸಂಡಿಗೆಗಳ . . . ಬಡಿಸಲು ಚಪ್ಪರಿದುಣುತಿರ್ದರು (ಗೋಮುಟೇ. ೨-೧೨೯); ಹಱಿಕು ಹೋಳಿಗೆ ಲೇಸು ಮುಱುಕ ಹಪ್ಪಳ ಲೇಸು (ಸರ್ವಜ್ಞ. ೧೧೩೦); ತರಗು ತಿನ್ನುವವನ ಮನೆಗೆ ಹಪ್ಪಳಕ್ಕೆ ಹೋದರು (ಗಾದೆ). △ **ಹಪ್ಪಟಿ:** ಪರ್ಪಟಂ, ಹಪ್ಪಟಂ (ಶಬ್ದಾನು. ೧೪೦ ವ್ಯಾಖ್ಯಾ).

**ಹಪ್ಪಳ ತುಪ್ಪಾನ್ನ** = ಹಪ್ಪಳವನ್ನು ಕರಿದು, ಚೂರು ಮಾಡಿ, ಸಂಬಾರವಸ್ತುಗಳೊಂದಿಗೆ ಅನ್ನದಲ್ಲಿ ಕಲಸಿ ಮಾಡುವ ಒಂದು ಬಗೆಯ ಕಲಸನ್ನ : ಅವರ ಮನೆಯಲ್ಲಿ ಹಪ್ಪಳ ತುಪ್ಪಾನ್ನ, ಕೇಸರಿಭಾತು ಮಾಡಿದ್ದರು (ರೂಢಿ). **ಹಪ್ಪಳದ ಎಲೆ** = ಹಪ್ಪಳದಂತಹ ಅಗಲವಾದ ದಪ್ಪ ಎಲೆಗಳುಳ್ಳ ಒಂದು ಬಗೆಯ ಸಸ್ಯ : (ಕ). **ಹಪ್ಪಳ ಹುರಿಯ ಅನ್ನ** = ಹಪ್ಪಳ ತುಪ್ಪಾನ್ನ : ಎನಗಿತ್ತ ಹಪ್ಪಳ ಹುರಿಯ ಅನ್ನ ಅದೆ ಕೊಡುವುದೀಗೆನಗೆ ಮಧುರಭೋಜನವಾ (ಕಎವು. ೨೫-೩).

[<ಪ್ರಾ. ಪಪ್ಪಡ./ಸಂ. ಪರ್ಪಟ./ಮರಾ. ಪಾಪಡ, ಪಾಪಡೀ/ತಮಿ. ಅಪ್ಪಳ; ಮಲ. ಪಪ್ಪಡ; ತುಳು. ಪಪ್ಪಡ, ಪಪ್ಪಳ, ಅಪ್ಪಳ, ಹಪ್ಪಳ; ತೆಲು. ಅಪ್ಪಡ, ಅಪ್ಪಳ, ಅಪ್ಪಲ]

**ಪಪ್ಪಡಕಾರ,** ಪಾಪಡಖಾರ, ಹಪ್ಪಳಕಾರ, ಹಪ್ಪಳಖಾರ (ನಾ). (ಹಪ್ಪಳವನ್ನು ತಯಾರಿಸುವಾಗ ಬಳಸುವ) ಒಂದು ಬಗೆಯ ಕ್ಷಾರ,—ಲವಣ ; "ಹಪ್ಪಳಕಾರ ಎಂಬ ವಸ್ತು" (ಅನಂನಾ).

**ಪಾಪಡಖಾರ :** ಪಾಪಡಖಾರ (ಹಪ್ಪಳಖಾರ) (ಮುಂಬವ್ಯಾ. ೧೨೦).

**ಹಪ್ಪಳಕಾರ :** ಸೋಡಿಯಂ . . . ಇದು ಉಪ್ಪು, ಸೈಂಧವಲವಣ, ಹಪ್ಪಳಕಾರ ಮುಂತಾದ ಲವಣಕ್ಷಾರಗಳಲ್ಲಿ ಇರುತ್ತದೆ (ಮುಂಬಯಿ. ೬-೧೭); ಹಪ್ಪಳಕಾರ (Baking Powder) ಎಂಬೊಂದು ಹುಡಿಯಿದೆ (ಬಾಲಪ್ರ. II, ೯೯೪). **ಹಪ್ಪಳಖಾರ :** ಪಾಪಡಖಾರ (ಹಪ್ಪಳಖಾರ) (ಮುಂಬವ್ಯಾ. ೧೨೦).

[ಪಪ್ಪಡ+ಕಾರ$_2$./ತಮಿ. ಅಪ್ಪಳಕ್ಕಾರಮ್]

**ಪಪ್ಪಯಿ** 'ಪಪ್ಪಾಯಿ' ನೋ.

**ಪಪ್ಪಲ** (ನಾ). (?) : ಪಪ್ಪಲದಲರ್ಗಳ್ ಸಂಬಳಮಪ್ಪಿನಮುಪವನಕೆ ನಿಚ್ಚವಯಣಂ ಬರುತುಂ ಪಪ್ಪಕವಾಗಿರೆ ಪಱಮೆಗಳುಪ್ಪಯಣಂಗೆಯ್ದುವಂದು ಪೊಸಮಲ್ಲಿಗೆಯೊಳ್ (ಅಜಿಪು. ೬-೨೧). [ ? ]

**ಪಪ್ಪಳ** 'ಪಪ್ಪಡ' ನೋ.

**ಪಪ್ಪಳಿ** 'ಪೊಪ್ಪಳಿ$_1$' ನೋ.

**ಪಪ್ಪಳಿಬಟ್ಟೆ** (ನಾ). ಚೌಕಳಿ ನಮೂನೆಯಾಗಿ ನೆಯ್ದ ಅಥವಾ ಅಚ್ಚೊತ್ತಿದ ಬಟ್ಟೆ : "ಚೌಕುಳಿಬಟ್ಟೆ; ಪಪ್ಪಳಿಬಟ್ಟೆ ; ಚೆಕ್ಕುಬಟ್ಟೆ" (Check. ಇಂಕನಿ). [ಪಪ್ಪಳಿ (<ಪೊಪ್ಪಳಿ$_1$)+ಬಟ್ಟೆ$_2$]

**ಪಪ್ಪಾಯಿ,** ಪಪಾಯ, ಪಪ್ಪಂಗಾಯಿ, ಪಪ್ಪಯಿ (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಪರಂಗಿ : ತೋಟದಲ್ಲಿ ಬಾಳೆ, ಪಪ್ಪಾಯಿ . . . ಬಗೆಬಗೆಯ ಹಲಸಿನ ಮರಗಳು ಅಲ್ಲಿದ್ದವು (ಶ್ಯಾಮಸುತಾ. ೧೧); ಎರಡು ದೊಡ್ಡ ಪಪ್ಪಾಯಿಹಣ್ಣು ತಗೊಂಡು ಮಾಸ್ತರ ಜತೇಲಿ ಹೋಗು (ಚಿರಸ್ಮ. ೯೮); ಮಾವು ಮತ್ತು ಪಪ್ಪಾಯಿ ಹಣ್ಣುಗಳಲ್ಲಿ 'ಎ' ಜೀವಾತು ವಿಶೇಷವಾಗಿದೆ (ಆಡುಸಾ. ೬೧).

**ಪಪಾಯ :** ಪರಂಗಿಹಣ್ಣು, ಪಪಾಯ (ಮೈಔಗಿ. ೧೪-೩೨೧).

**ಪಪ್ಪಂಗಾಯಿ :** (ಕ). **ಪಪ್ಪಯಿ :** ಪಪ್ಪಯಿ ಗಿಡಗಳನ್ನು ಹಾಗು ಮತ್ತೊಂದು ಕಡೆಗೆ ಕಬ್ಬನ್ನು . . . ಮಾಡಿಸಿ (ಕೃಷಿಪ್ರ. ೧೪೩).

[←**ಪೋರ್ಚು.** **ಸ್ಪ್ಯಾನಿಷ್.** Papaya, Papayo./**ಮಲ.** ಪಪ್ಪಾಯ; **ತುಳು.** ಬಪ್ಪಂಗಾಯ; **ತೆಲು.** ಪಪಯಿ, ಪಪ್ಪಾಯಿ./**ಹಿಂ.** ಪಪ್ಪೈಯಾ; **ಮರಾ.** ಪಪಈ, ಪಪಯಿಾ, ಪಪ್ಪೈಯಾ, ಪೋಪಈ, ಪೋಪಯಾ]

**ಪಪ್ಪು** 'ಪರುಪು' ನೋ.

**ಪಪ್ಪುಕ$_1$** 'ಪಂಪಕ' ನೋ.

**ಪಪ್ಪುಕ$_2$,** ಪಪ್ಪಕ$_3$, ಪೊಪ್ಪುಕ (ನಾ). ಬೇಟೆಯಲ್ಲಿ ಪೊದೆಗಳನ್ನು ಬಡಿದು ಬೇಟೆಯ ಪ್ರಾಣಿಯನ್ನು ಎಬ್ಬಿಸುವುದು ; ಸೋವುವುದು : "ಪಪ್ಪುಕಮೆನೆ ಸೊಪ್ಪುಗುಟ್ಟುವುದು" (ಕರ್ಣಾಸಿ. ೩೬);

ನಿಯತದ್ವಿತ್ವಕ್ಕೆ—ಪಪ್ಪುಕಂ, ಕಪ್ಪಡಿ (ಶಮದ. ೩೬ ಪ್ರಯೋ). **ಪೆಪ್ಪಕ**$_3$ : (೬). **ಪೊಪ್ಪಕ** : "ಪೊಪ್ಪಕಂ–ಸೊಪ್ಪುಗುಟ್ಟುಹಂ" (ಶಮದ. ಪಂ. ೨).

**ಪಪ್ಪುರಶುಂಠಿ** (ನಾ). ಒಂದು ಬಗೆಯ ಶುಂಠಿ : "ಷಡ್ಗ್ರಂಥಿಕಾ—ಪಪ್ಪುರಶುಂಠಿ" (ಓಷಧಿ. ೧೭೩). [ಪಪ್ಪುರ$_0$ + ಶುಂಠಿ$_2$]

**ಪಪ್ಪುಳಿ, ಪೊಪ್ಲಿ** (ನಾ). ಒಂದು ಬಗೆಯ ಸಸ್ಯ : ಪೊಪ್ಲಿ, ಪಪ್ಪುಳಿ (ಮೈಶಾಗ. ೭೭–೧೫೭೮). **ಪೊಪ್ಲಿ** : ಮೇಲಿನ ಪ್ರಯೋಗವನ್ನು ನೋಡಿ. [?./ತಮಿ. ಪಪ್ಪುಳಿ]

**ಪಬು,** ಹಬು (ನಾ). ಯಜಮಾನ ; ಒಡೆಯ ; ಸ್ವಾಮಿ : (೬). **ಹಬು** : "ಹಬು–ಪ್ರಭು—ಒಡೆಯ" (ತದ್ಭಕೋ. ೪೮) ; ಪ್ರಭು–ಹಬು (ಶಮದ. ೨೬೧ ಪ್ರಯೋ) ; ಪ್ರಭು, ಹಬು ; ಪ್ರಸರ, ಹಸರ (ಶಬ್ದಾನು. ೧೫೪ ಪ್ರಯೋ) ; ಕೊಟ್ಟಂ . . . ಹಬುಗಳ ನೆಟ್ಟನೆಯ ವಿಚಿತ್ರಮಾದ ತೊಡರ್ಗಳನೊಲವಿಂ (ಹಾಲಾಸ್ಯ. ೧–೧೩–೪೨).
[<ಪ್ರಾ. ಪಭು./ಸಂ. ಪ್ರಭು]

**ಪಬ್ಬ** 'ಪರ್ಬ' ನೋ.

**ಪಬ್ಬತಿ** (ನಾ). ಗಿರಿಜೆ ; ಪಾರ್ವತಿ : "ನಗನಾಥಾತ್ಮಜೆಯಲ್ಲಿ ಪಬ್ಬತಿಯೆನಲ್" (ಕರ್ಣಾಶ. ೯೭). [<ಸಂ. ಪಾರ್ವತೀ]

**ಪಯ**$_1$ 'ಪಯನ್' ನೋ.

**ಪಯ**$_2$ (ನಾ). ೧. ಅಡಿ ; ಪಾದ: ದತ್ವಕ್ಕೆ ಯತ್ವಂ ಪದ,—ಪಯ (ಶಮದ. ೨೬೭ ಪ್ರಯೋ); ಪದ, ಪಯ (ಶಬ್ದಾನು. ೧೬೦ ಪ್ರಯೋ). ೨. ಕಾಳಗದಲ್ಲಿಯ ಒಂದು ವರಸೆ ; ಯುದ್ಧದಲ್ಲಿ ಹೆಜ್ಜೆ ಹಾಕುವ ಒಂದು ಕ್ರಮ, – ತಂತ್ರ : ನೆಲನ ತಗ್ಗಿನಲುಪ್ಪರದ ಮೆಯ್ಯೊಲವಿನಲಿ ಪಾರಗದ ಬವರಿಯ ಸುಳುಹಿನಲಿ ಚಮ್ಮಟದ ಪಯವಂಚನೆಯಲಿ . . . ಕಾದಿದರು (ಕುವ್ಯಾದ್ರೋ.೧೪–೬); ಪಯ ಮೈಲುಳಿಯಲೊಲೆದರು ಪಾದರಸದಂದದಲಿ ಪಟುಭಟರು (ಕುವ್ಯಾಗ. ೭–೨). ೩. [ನಾಟ್ಯ] ಹೆಜ್ಜೆಯನ್ನು ಹಾಕುವ ರೀತಿ, – ಕ್ರಮ ; ಪದಗತಿ: ಪಾದದೊಳ್ಪಯಂ ಮೇಳಿಸಿ ಝುಂಕೆ ಬಿಂಕದೊಳೊಂಡಬಡೆ . . . ಭೂಪಾಳನ ಚಿತ್ರವಲ್ಲಭೆಗೆ ಸಂದುದು ರಂಭೆಯ ಲಾಸ್ಯವಿಭ್ರಮಂ (ಅನಂಪು. ೪–೯೦) ; ಪಯದ ಕರಾಭಿನಯದ ದೃಷ್ಟಿಯ ಕರಣದ ಭಾವದಂಗಹಾರದ ನಯಮಾಶ್ರಯಮಾಗೆಬೆಡಂಗಿಂಗಾಕೆಯನಾ ಭೂಪಾಳಬಾಳರಭಿವೀಕ್ಷಿಸುತುಂ(ಮಹಾನೇ. ೪–೫೬). 'ಪಯಪಾಡು' ಪರಾ. [<ಪ್ರಾ. ಪಯ./ಸಂ. ಪದ]

**ಪಯ**$_3$ (ನಾ). ೧. ನೀರು ; ಉದಕ : "ಅಮೃತೋದಕಮುಂ ಯೋಜಿಸಲೀಯರಡುನಾಮ ಪಯಶಬ್ದಂಗಳ್" (ನಾನಾಕಂ. ೧೦೦) ; "ಆಪಃ, ವಾಃ, ವಾರಿ,ಸಲಿಲಂ, ಕಮಲಂ; ಜಲಂ, ಪಯಃ . . . ಮೇಘಪುಷ್ಪಂ, ಘನರಸಂ–೨೭ ಉದಕದ ಹೆಸರುಗಳು, ಅಂದರೆ ನೀರು" (ಸಿದ್ಧಾಂತಿ. ೭೭) ; ಪಾಲಂ ಕೊಂಡು ಪಯಮನಿಳಿಕೆಯ್ವ ಮರಾಳಂ ಬೊಲು (ಜಯಕಾ. ೧–೨೨). ೨. ಹಾಲು ; ಕ್ಷೀರ : "ಊಧಸ್ಯಂ . . . ಪಯಃ, ಪೀಯೂಷಂ–ಈ ೬ ಪಾಲ್" (ಹಲಾಯು. ೪೬–೧೧೯); ಸಲೆ ವತ್ಸನುಣ್ಬದ ಪಯಂ ನೇಮವೆಂದಡಂ . . . ಕೋಡಿದನೆ ಕೊಂಕಿದನೆ (ಬಸರ. ೭–೬೨) ; ಸವಿವ ಪಯಂ ತವರಾಜಂ ತನಿವಣ್ಗಳು ಶಿವಾರ್ಪಿತವಲ್ಲದುದಂ ಸವಿದ ಶರಣನಂತೆ ನಾಲಗೆಯೇಟು (ನಂಬಿರ. ೧೬–೧೫). ೧, ೨ : ಉಚಿತವಹ ಸಮಯದಲನಾಯಾಸದಿಂ ಪಯವ ಸೃಜಿಸಿ ಜನರೆಲ್ಲರಿಗೆ ಹಂಚಿ ಕೊಟ್ಟು (ಧ್ವನ್ಯಾಲೋ. ೯೩). [ಸಂ. ಪಯಸ್]

**ಪಯಂಬಡೆ** (ಕ್ರಿ). ಪ್ರತಿಫಲವನ್ನು ಪಡೆ: ನಿಲ್ಲದಿರೀಯೆಡೆಯೊಳ್ ಪಸೆಯಲ್ಲಿಗೆ ನಡೆ ಶೌರಿಯಿಂ ಪಯಂಬಡೆದಾ××× ನಿಲ್ಲಿಗೆ ಬರ್ಪಂ (ಚಿಕವಿ. ೬–೨೬೮). [ಪಯ$_0$ (P←ತಮಿ. ಪಯ)+ಪಡೆ$_1$]

**ಪಯಃಕಣ** (ನಾ). ನೀರಿನ ಹನಿ,—ಬಿಂದು : ಆ ಕುರುತಿಲಕನ ಮೆಯ್ಯೊಳನೇಕಪಯಃಕಣಗಣಂ ಪೊಡಟ್ಟುದವು ಮುಕ್ತಿಶ್ರೀಕಾಂತೆಯಿತ್ತ ಮುತ್ತಿನ ವೈಕಕ್ಷದ ತೆಱದಿನಭಿಷವೋತ್ಸವವಿಧಿಯೊಳ್ (ಶಾಂತಿಪು.೧೦–೪೭); ಸಂಸಾರಸಮುದ್ರಮಂ ತೃಣಪಯಃಕಣದಿಂದಿಬಿಕೆಯದ್ದ (ಪಂಪಾಪು. ೧–೧೪) ; ಶಿಶಿರಪಯಃಕಣವೆರಸಿದ ಕುಶೇಶಯಚ್ಛದಮನಕ್ಷಿಗಳ್ ಬಾಷ್ಪಜಲಪ್ರಶವಿಂತರುಚಿಗಳ್ ಪೋಲ್ತಿರೆ (ಜಗವಿ. ೩–೮೭). [ಸಂ.]

**ಪಯಃಕಣಿಕೆ** (ನಾ). = ಪಯಃಕಣ : ಬಳಸಿದ ಬಂಬಲ್ಗುರುಳೊಳ್ ಪೊಳೆವ ಪಯಃಕಣಿಕೆ ಸಿಂಧುವಾರಲತಾಂತಾವಳಿಯೆನಿಸಿ ತುಱುಗೆ(ಶಾಂತಿಪು. ೧೦–೪೮). [ಸಂ. ಪಯಃಕಣಿಕಾ]

**ಪಯಃಕೇಲಿ,** ಪಯಃಕೇಳಿ (ನಾ). ನೀರಾಟ ; ಜಲಕೇಳಿ. **ಪಯಃಕೇಳಿ** : ಕುಂತಳಕೌಟಿಲ್ಯವೃತ್ತಿ ಪಿಂಗಿದುದಬಳಾಸಂತತಿಗೆ ಪಯಃಕೇಳಿಯೊಳ್ (ಚಂದ್ರಪು. ೭–೧೪೫). [ಸಂ.]

**ಪಯಃಕೇಳಿ** 'ಪಯಃಕೇಲಿ' ನೋ.

**ಪಯಃಪತಿ** (ನಾ). ೧. ನೀರಿನ ಅಧಿದೇವತೆ ; ವರುಣ. ೨. ಅಷ್ಟದಿಕ್ಪಾಲಕರಲ್ಲಿ ಒಬ್ಬ ; ಪಶ್ಚಿಮದಿಕ್ಕಿನ ಒಡೆಯ : ಅತಿಶಯಸಾಮವೇದಮದು ಗೋಪುರವಾಗಿ ವಿರಾಜಿಕುಂ ಪಯಃಪತಿದಿಶೆಯೊಳ್(ಶಬಶಂ. ೧–೬೭). [ಸಂ.]

**ಪಯಃಪಯೋಧಿ** (ನಾ). ಹಾಲಿನ ಸಮುದ್ರ ; ಕ್ಷೀರಸಾಗರ : ಪಯಃಪಯೋಧಿ ಫೇನಸಂಕಾಶದುಕೂಲಪ್ರಚ್ಛದಾಚ್ಛಾದಿತ ವಿಚಿತ್ರನೇತ್ರೋಭಯೋಪಧಾನ ಶಯ್ಯಾತಲದೊಳ್ (ಆದಿಪು. ೫–೨೨ ವ). [ಸಂ.]

**ಪಯಃಪೂರ** (ನಾ). ೧. ನೀರಿನಿಂದ ತುಂಬಿರುವುದು ; ಸರೋವರ. ೨. ಹಾಲಿನ ಪ್ರವಾಹ; ಹಾಲಿನ ಪೂರ : ಸಲಿಲಾಶಯುಂ ಪಯಃಪೂರಮನಾಂತುದೋ ದಿಟಕೆ ತಾನೆನಿಸಿತ್ತಮೃತಾಂಶುರಶ್ಮಿಯಿಂ (ಚಂದ್ರಪು. ೮–೩೯). [ಸಂ.]

**ಪಯಃಪ್ರತಾನ** (ನಾ). ಹಾಲಿನ ಮೊತ್ತ,—ಸಮೃದ್ಧಿ : ಆ ಕಳಮಧಾತ್ರಿ ಕಣಿಶಕುಚಾಕಲಿತ ಪಯಃಪ್ರತಾನದಿಂ ಬಳೆಯಿಸೆ . . . ರಾಜಶುಕಾನೀಕಶಿಶುಪ್ರತತಿ ಬಳೆವುದು (ಚಂದ್ರಪು. ೧–೯೩). [ಸಂ.]

**ಪಯಃಪ್ರವಾಹ** (ನಾ). = ಪಯಃಪೂರ ೧ : ಕ್ಷೀರವಾರಿಧಿವಾರಿಯೆಲ್ಲಮನೊರ್ಮೊದಲೊಳೆ ಪೊಯ್ವಂತೆ ಪೊಯ್ದು ಪಯಃಪ್ರವಾಹಮುಂ ಬಾಲಕನಬಲಂ ಸ್ಯೈರಿಸಂ (ಶಾಂತಿಪು. ೧೦–೪೨ ವ). [ಸಂ.]

**ಪಯಗತಿ** (ನಾ). ೧. ನಡೆಯುವ ರೀತಿ,—ಕ್ರಮ ; ಹೆಜ್ಜೆಯಿಡುವ ಬಗೆ: "ಪಯಗತಿ–ಪದಗತಿ = ಗಮನಕ್ರಮ" (ತದ್ಭಕೋ. ೨೪) ; ಪದಗತಿ–ಪಯಗತಿ (ಶಮದ. ೨೪೯ ಪ್ರಯೋ). ೨. ಕಾಳಗದ ಒಂದು ವರಸೆ ; ಯುದ್ಧದ ಒಂದು ಬಗೆಯ ತಂತ್ರ,—ಉಪಾಯ : ಚಾರಿಯನು ಚಾರಿಗಳ ಪಯಗತಿಯೋರೆಪೋರೆಯ ಬವರಿಗಳ ಸಂಚಾರಣೆಯಲಬ್ಬರಿಸಿ ತಿವಿದನು ರಾಘವೇಶ್ವರನ (ತೊರರಾ.೬–೨೮–೪೮). [ಪಯ$_2$ + ಗತಿ]

**ಪಯಗರಡಿ** (ನಾ). ಈದ ಕರಡಿ ; ಮರಿ ಹಾಕಿದ ಕರಡಿ : ಹರಿಸೀಳೋಪಳವುಂ ಪಯಗರಡಿಯುಮಿರೆ ಸೀಳಯುಗಳಮೊಂದೆಳಸೆ (ಶಾಂತಿಪು. ೨–೯೭) ; ಮರದಡಿಯೊಳ್ ಮುದುಡಿದ ಪಯ[ಪಾಠಾಂ. ಮುದು]ಗರಡಿಯ ಮೈಯಲ್ಲಿ ಪರಿಯೆ ಪರೆದೆಲೆಂಯೆಡೆಯಿಂ ತರುಣರವಿಕಿರಣತತಿ (ಲೀಲಾಪ. ೭–೧೧೪). [ಪಯ$_1$(<ಪಯನ್)+ಕರಡಿ$_1$]

**ಪಯಗರಿ** (?) (ನಾ). (?) : ಊರುಂ ಮಾಳೆಯಂ ತಿಂಬಗುರು ಪಯಗರಿಯ ತನಿಗೊಂಬಂ ಬಳೆಗೊಯ್ಯಲ್ ಪೂಣ್ದು ತುದಿಯೊಳೋಡಿ ಪೋಪ ಭೀರುವಪ್ಪ ಪಣಿದಕಾಜಿನಂತೆ (ಶಾಂತಿಪು. ೮–೪೯ ವ). [ ? ]

**ಪಯಗಱೆ**$^3$ (ಕ್ರಿ). ಹಾಲನ್ನು ಕರೆ,—ಹಿಂಡು : ಘನಕಾಮಧೇನುವ ಬರಿಸಿ ವಿನುತ ಪಯಗಱೆದು ವಲ್ಮೀಕವ ಕರಗಿಸಿ ಚಿನುಮಯಮೂರ್ತಿಯ

ಕಂಡ (ಕಂಠನವಿ. ೫-೩೧). [ಪಯ್ಯು$_3$+ಕಟು$_1$]

**ಪಯಗೂಡು** (ಕ್ರಿ). ಕಾಲಿನೊಳಗೆ ಸೇರು,—ಹೊಗು : ಹೂರಂ ತ್ರಿಕಟುಕಮಂ ಕಾಟ್ಟುವೆರೆ ಸುತಕ್ಕೋಲಘಟ್ಟಿ ಸಿತಜಲಧರಮುಂ ವಾರಿಯೊಳರಿದೀಂಟದುವೆ ನಿವಾರಿಕು ಪಯಗೂಡಿದೆಯ್ಯು ಮುಳ್ಳಿನ ವಿಷಮಂ (ಖಸುದ. ೨-೧೩೧). [ಪಯ್ಯು$_2$+ಕೂಡು$_1$]

**ಪಯಣ,** ಪೈಣ (ನಾ). ೧. ಪ್ರವಾಸ; ಪ್ರಸ್ಥಾನ; ಪ್ರಯಾಣ : "ಯಾತ್ರಾ, ಪ್ರಯಾಣಂ, ಪ್ರಸ್ಥಾನಂ—ಈ ೩ ಪಯಣಂ" (ಹಲಾಯು. ೭೪-೨೯೮); ಭೋಂಕೆನೆ ಪಯಣದೊಳೆಮ್ಮಂ ಸೋಂಕಿದ ಶರದೃತುವೆ ಬನದೊಳವತರಿಸಿದುದೋ (ಆದಿಪು. ೧೧-೮೭); ಪಯಣದೊಳಶೇಷಶಕುನಂ ನಯಮಂ ಕುಡೆ ಕಾರ್ಯಸಿದ್ಧಿ (ಲೋಕೋಪ. ೧೨-೫); ಮರುಳ ಪಯಣಕ್ಕೆ ತಜಗೆಲೆಯೆ ಸಂಗಡಿಗನೆಂಬಂತೆ (ಧರ್ಮಾಮೃ. ೧-೧೯೫); ಹಾದಿಯನು ಸವೆಯದರು ಯಮಪುರದತ್ತ ಪಯಣಕ್ಕೆ (ಕೌಶಿಂಶಾ. ೨೦-೧೭); ಆ ಸಂಜೆಯ ಸಮಯದಲ್ಲಿ ಪಯಣವನ್ನು ನಿಧಾನ ಮಾಡುವುದಕ್ಕೆ ಇಷ್ಟವಿರಲಿಲ್ಲ (ಕಳಹು. ೪). ೨. ಶತ್ರುಗಳನ್ನು ನಿಗ್ರಹಿಸಲು ಮಾಡುವ ಪ್ರಯಾಣ; ದಂಡಯಾತ್ರೆ: ನಿಶಾವಸಾನಸಮಯದೊಳ್ ಪಯಣದ ಸೂಟುಗಾಳೆಗಳಂ ಪಿಡಿದು ಬೀಡೆತ್ತಲುದ್ಯೋಗಂಗೆಯ್ವುದಂ ಕಂಡು (ಪಂಚತಂ. ೧೨೬-೧೨); ಅಖಿಳಸೇನಾತತಿಗೆ ಪಯಣಮಂ ಪೇಳ್ದನಾಗಳ್ (ಚಿಬಪು. ೨೫-೨); ಮುಂದಣ ಪಯಣದ ನಿರ್ಧರಗೈದಾಗ ಬಂದು ಬಿಟ್ಟನು ಹೊಱಬೀಡ (ಕಂಠನವಿ. ೧೧-೬೫); ಎಲ್ಲರೂ ಯುದ್ಧಕ್ಕೆ ಪಯಣ ಮಾಡಿ ಜಗನ್ನಾಥಸ್ವಾಮಿಯ ದೇವಸ್ಥಾನದ ಬಳಿಗೆ ಬಂದು ಸೇರಿದರು (ಆರ್ಯಕೀ. ೮೧). ೩. ಒಂದು ದಿನದಲ್ಲಿ ನಡೆಯುವ ಹಾದಿ,—ಮಾರ್ಗ; ಒಂದು ದಿನದ ಹಾದಿ: ಶ್ರೀವಿಜಯನುಂ ವಿಜಯನುಮುರ್ವರಾಸ್ಯತಿಲಕನುಮಂ ಜ್ಯೋತಿಃಪ್ರಭೆಯುಮಂ ಕಟಾಪಲ್ ಮೂಱು ಪಯಣಮೊಡವೋಗಿ (ಶಾಂತಿಪು. ೬-೨೦ ಪ); ಕೆಲವಾನುಂ ಪಯಣಂಗಳ್ ಸಲೆ ಸಮನಿಸೆ (ಕುಸುಮಾ. ೧೫-೮೮); ಉದ್ಭಟಭೂಮಿಪಾಲಕಂ . . . ಪಿರಿದುಂ ಪಯಣಂಗಳಿಂ ಸಮಂತೆಟ್ಟಿಂದಂ (ಉದ್ಭಟ. ೨-೧೦೨); ಭರದ ಪಯಣದ ಮೇಲೆ ಪಯಣದಲುರವಣಿಸಿ ನಡೆತಂದು . . . ಹರಿಹಿದವು ಗುಡಿ (ಉಪ್ಯಾಆ. ೨೨-೬). **ಪೈಣ :** ೧. ಶ್ರಮಸಾಧ್ಯವಾಗದಂತೆ ಪೈಣವಿತ್ತು ತಮೋರಜಗುಣದವರ ಬಾಧಿಯ ತಪ್ಪಿಸಿ ಉತ್ತಮ ಯಾತ್ರಿ ಮಾಡಿಸುವದು (ವಿಪ್ರಸು. ೨೪-೧); ಸುಗಂಧರಾಜೇಂದ್ರನು ಉದಯಕಾಲದೊಳ್ ಪೈಣವಂ ಮಾಡುವಾಯಂದು ಅಪ್ಪಣೆಯನ್ನಿತ್ತು (ಸೌಗಂಧಿ. ೩೫೭-೫); ಏಕಾಏಕಿ ಪೈಣ ನಡೆದು . . .ಕಾಶಿ ಪಟ್ಟಣವನ್ನು ಸೇರಿದರು (ಕಥಾಮಂ. IV, ೨೩); ಒಂದು ದಿನ ಮಧ್ಯಾಹ್ನದ ಪೈಣ ಆದ ತರುವಾಯ ನಮಗೆ ದಾರಿ ತಪ್ಪಿ ಹೋಯಿತು (ಸುಮಚ.೨೫೮).

**ಪಯಣಮಾಗು**=ಮುತ್ತಿಗೆಗಾಗಿ ಪ್ರಯಾಣಕ್ಕೆ ಹೊರಡು : ಬಂದೊದವಿದ ದೊರೆಗಳ ಪೌಜುಂ ಪದಪಿಂದಂ ಪಯಣಮಾದುದಾಡಂಬರದೊಳ್ (ಹವಿನ್ಮಾರ. ೩-೨೮). [<ಪ್ರಾ. ಪಯಾಣ./ಸಂ. ಪ್ರಯಾಣ]

**ಪಯಣಂಗೆಯ್,** ಪಯಣಗೈ (ಕ್ರಿ). ಪ್ರಯಾಣಮಾಡು; ಸಂಚಾರಕ್ಕೆ ಹೊರಡು : ಭೂಲೋಕದತ್ತಣಿಂ ಪಯಣಂಗೆಯ್ದ ನೃಪನ ಪುಣ್ಯಕೀರ್ತಿ ಯುವತಿಗೆ (ನರಚ. ೭೯-೨೦೫ ಪ). **ಪಯಣಗೈ :** ನವೀನದಂಪತಿಗಳಿರ್ವರುಂ ರಸದ ಹರಿಗಲನೇರಿ ಜೇನುಹೊಳೆಯಲಿ ತೇಲಿ ಪಯಣಗೈದರು (ಚಿತ್ರಾಂಗ. ೪೧-೧೧೨೭). [ಪಯಣ+ಕೆಯ್$_1$]

**ಪಯಣಂಬರ್** (ಕ್ರಿ). ಪ್ರಯಾಣ ಮಾಡಿ ಬರು,—ನಡೆತರು : ಅಂತು ಪುಂಡರೀಕಿಣಿಗಭಿಮುಖನಾಗಿ ಪಯಣಂಬಂದು . . . ಬೀಡಂ ಬಿಡಿಸಿದಾಗಳ್ (ಆಪಿಪು. ೪-೯೨ ಪ); ಕೆಲಕೆಲದೊಳ್ ರಾಜಸುತರ್ ಕೆಲಬರ್ ಬರೆ . . . ವಜ್ರಬಾಹು ಪಯಣಂಬಂದಂ (ಪಂಂರಾಮಾ. ೨-೧೨); ಒರ್ವಂ ದೂರದಿಂ ಪಯಣಂಬಂದು ನಾಡೆಯುಂ ಬಟಲ್ದು . . . ನಿದ್ರೆಗೆಯ್ಯುತ್ತುಂ (ಧರ್ಮಾಮೃ. ೨-೪೭). [ಪಯಣ+ಬರ್(<ವರ್)]

**ಪಯಣಂಬೋಗು** (ಕ್ರಿ). ಪ್ರಯಾಣಕ್ಕೆ ಹೊರಡು; ಸಂಚಾರಕ್ಕೆ ತೆರಳು : ಅವರ್ಗೆ ಲೋಚುಗೆಯ್ದು ಬ್ರತಂಗಳನೇಱಿಸಿ ಪಡಿಕವಣಂ ಬೇಟ್ಕೊಡಗೊಂಡುತ್ತರಾಪಥಕ್ಕೆ ಪಯಣಂಬೋಗಿ . . . ದೇಶಮನೆಯ್ದಿ (ವಡ್ಡಾರಾ. ೯೧-೨೫); ಪಾಂಡವರ್ . . . ಶಕುನಂಗಳೆಲ್ಲಮುತ್ತರೋತ್ತರಂ ತಿರ್ದುವಿನಮುತ್ತರಾಭಿಮುಖರಾಗಿ ಪಯಣಂಬೋಗಿ(ಪಂಪಭಾ.೩-೩೩ಪ); ಅಂಬರಚರರಾಜನಂಬರಚರಗೋಚರೋಚಿತಪ್ರಸ್ಥಾನದಿಂ ಪಯಣಂಬೋಗಿ (ಶಾಂತಿಪು. ೫-೩೭ಪ); ಪೊಟಲ ನಡುವಣ ಕ್ಷುಲ್ಲಕ ದ್ವಾರದಿಂ ಪೊಱಮಟ್ಟು ದಕ್ಷಿಣಾಭಿಮುಖರಾಗಿ ಪಯಣಂಬೋಪುದುಂ(ಪಂಂರಾಮಾ. ೬-೭ ಪ). [ಪಯಣ+ಪೋಗು$_1$(<ಪೋ$_1$)]

**ಪಯಣಗತಿ,** ಪೈಣಗತಿ (ನಾ). ಪ್ರಯಾಣದ ನಡೆ,—ಮಾರ್ಗ : ಆ ಮುಂದಣ ಪಯಣಗತಿಯ ಸಂಚುವಡೆಯುವ ಸಂಬಂಧಮಂ ಶರಣಮನದಲ್ಲಿ ತಿಳಿದು (ಭಸನ. ೪೯-೪೫); ಹರುಷಪುಳಕದ ಹರಿಹಿನಲಿ ಹಯಕರಿವರೂಥಪದಾತಿಬಲಸಹಿತರಿದಿಶಾಪಟವಿಲ್ಲ ಬಂದನು ಪಯಣಗತಿಗಳಲಿ (ತೊರರಾ. ೧-೬-೭); ಆ ಮಾಧವಂ ಪಯಣಗತಿಯಿಂದೆ ಗಜಪುರದ ಸೀಮೆಗೈತಂದು (ಜೈಮಿಃಭಾ. ೭-೧೩). **ಪೈಣಗತಿ :** ನಿನ್ನಯ ನೆನವೆ ಮುಕುತಿಪಥಕೆ ದಾರಿಗಿದೆ ಪೈಣಗತಿಗೆ ಕಟ್ಟಿದ ಬುತ್ತಿ (ಮೋಕ್ಷದೀ. ४೦-೩). [ಪಯಣ+ಗತಿ]

**ಪಯಣಗೈ** 'ಪಯಣಂಗೆಯ್' ನೋ.

**ಪಯಣನಡೆ** (ಕ್ರಿ). ಪ್ರಯಾಣಕ್ಕೆ ಹೊರಡು; ಸಂಚಾರಮಾಡು : ಕಲಿತು ನಾನವರೊಡನೆ ಪಯಣನಡೆವೆನು ಮುಂದೆ (ಇಂಗೀತ. ೯೩-೨೧). [ಪಯಣ+ನಡೆ$_1$]

**ಪಯಣಪರ** (ನಾ). ಪ್ರಯಾಣದಲ್ಲಿ ಆಸಕ್ತನಾದವನು : ದೇವದುಂದುಭಿ ಮೊಳಗೆ ಪರಮನು ಪಯಣಪರನಾದ (ಕೌಶಿಂಶಾ. ೪೪-೧೧). [<ಸಂ. ಪ್ರಯಾಣಪರ]

**ಪಯಣಲಗುನ**(ನಾ). ಪ್ರಯಾಣ ಮಾಡಲು ತಕ್ಕ ಮುಹೂರ್ತ,—ಒಳ್ಳೆಯ ಕಾಲ : ಬೇಟ್ಕೊಡಗೊಂಡುತ್ತರಾಪಥಕ್ಕೆ ಪಯಣಂಬೋಗಿ ಮುಟ್ಟಿನುರೆ ಸಾಕೇತಪುರಿಗಾಗಿ (ರಾಮಾಸಂ. ೧-೫-೧). [<ಸಂ. ಪ್ರಯಾಣಲಗ್ನ]

**ಪಯಣವೀಳೆಯ** (ನಾ). ಪ್ರಯಾಣಕ್ಕೆ ಹೊರಡುವ ಮೊದಲು ಕೊಡುವ ತಾಂಬೂಲ; ಬೀಳ್ಕೊಡುಗೆಯ ಸಮಯದಲ್ಲಿ ಕೊಡುವ ವೀಳೆಯ : ಪಯಣವೀಳೆಯವಾಗುವವರೆಗೆ ಈ ಯಿನಿಬರೂ ನಮ್ಮ ಅರಮನೆಯೊಳಗೇ ಗೌರವದ ರಾಜಮರ್ಯಾದೆಯ ಅತಿಥಿಗಳಾಗಿರಲಿ (ಬಿರುಗಂ. ೩೭-೭). [ಪಯಣ+ವೀಳೆಯ]

**ಪಯಣಸನ್ನದ** (ನಾ). ಯುದ್ಧೋದ್ಯೋಗಕ್ಕೆ ಸಿದ್ಧವಾಗುವಿಕೆ : ಪಲವುಂ ಗಡಿಗೋಂಟೆಗಳ ಬಲಮಂ ಪಯಣಸನ್ನದಂಗೆಯ್ವುದೆಂದು ರಾಯಸಂಗಳಂ ಕಳುಪಿ (ಚಿಕವಿ. ೫-೭೭). [<ಸಂ. ಪ್ರಯಾಣಸನ್ನದ್ಧ]

**ಪಯಣಿಗ,** ಪೈಣಿಗ (ನಾ). ಪ್ರಯಾಣಿಕ; ಪ್ರವಾಸಿ: ಕೂರ್ಮೆಯಿನೆಮ್ಮ ಜಾತ್ರೆವಯಣಿಗರ್ಗೆ ನೇರಿಟ್ಟಾಧಿವ್ಯಾಧಿಗಳಂ ಪರಿಹರಿಸಿ ಪೊರೆಯ್ಯೆ (ರಾಮಾಶ್ವ. ೭೮-೧೯); ಅದು ಒಬ್ಬ ಪಯಣಿಗನನ್ನು ಕುರಿತು ಬರೆದ ಕವಿತೆಯಾಗಿತ್ತು (ಬರಬಾ. ೬). **ಪೈಣಿಗ :** ಪೈಣಿಗರಾಗುವಡೆ ಮನೆಗೈದಿ ಬರಲವನಿಪನು ಕಲಿಕರ್ಣಾ ರಾಗವತಿ ನಡೆತಂದು ವಿನಯಿತಳಾಗಿ ನೀವೀಗಾರ ಕಾರ್ಯಕೆ ಹೋಗುವಿರಿ ಪ್ರಾಣೇಶಯೆಂದಳು ನಗುತ ಭಾನುಮತೀ (ಜಿನಭಾ. ೫೭-೪೬). [ಪಯಣ+-ಇಗ]

**ಪಯಣಿಸು** (ಕ್ರಿ). ೧. ಪ್ರಯಾಣ ಮಾಡು ; ಸಂಚರಿಸು : ಮಾವ ಅಳಿಯ ಮಂಗಳೂರಿಗೆ ಪಯಣಿಸಿದರು (ಒಡ್ಡಉ. ೪೨). ೨. ತಿರುಗು ; ಓಡಾಡು : ಶ್ವಾಸ ನಿಶ್ವಾಸದೊಳು ಒಳಹೊಕ್ಕು ಹೊರಬರುತ ಲೋಮದೊಳು ರಕ್ತಕಣದೊಡನೆ ಪಯಣಿಸುತ . . . ಕೊರಗುತಿರುವೆಲೆ ಅಹಂಭಾವ (ಮಲೆದೇ. ೩೩-೪). [ಪಯಣ+-ಇಸು$_3$]

**ಪಯಣೋದ್ಯೋಗ** (ನಾ). ೧. ಪ್ರಯಾಣಕ್ಕೆ ತೊಡಗುವಿಕೆ : ಮುನಿಪನು . . . ಪಯಣೋದ್ಯೋಗಮನನಾದನು ಸರಾಗದಲಿ(ತೊರರಾ. ೧-೧೨-೩) ; ಕಾಗದವೆಲ್ಲವ ಕೈಕೊಂಡು ಪಯಣೋದ್ಯೋಗವ ನೆನೆದಳಕ್ಕ ಯಲಿ (ಮೋಹತ. ೨೮-೩೮). ೨. ಪ್ರಯಾಣಕ್ಕೆ ತೊಡಗಿದವನು : ಅಯೋಧ್ಯಾಪುರಿಗೆ ಪಯಣೋದ್ಯೋಗರಾದರು ಜನಕನಾಜ್ಞೆಯಲಿ (ತೊರರಾ. ೧-೧೬-೧). [<ಸಂ. ಪ್ರಯಾಣೋದ್ಯೋಗ]

**ಪಯದಳ** (ನಾ). ಕಾಲಾಳುಗಳ ಸೈನ್ಯ ; ಪದಾತಿಬಲ : ಕೈಯ ಕೈದುವನಿಳುಹಿ ಪಯದಳ ಬೀಳುಗೊಂಡುದು ಖೇಚರೇಶ್ವರನ (ಕುವ್ಯಾಅ. ೧೯-೫೩) ; ತಳಪಟವ ತುಂಬಿತ್ತು ಪಯದಳ (ಕುವ್ಯಾದ್ರೋ. ೧೨-೮). [ಪಯ$_2$+ದಳ$_2$(=ದಲ)]

**ಪಯನ್,** ಪಯ$_1$, ಪಯಿನ್$_1$, ಹಯನ$_1$, ಹಯನು, ಹಯಿನು, ಹಯ್ನ, ಹಯ್ನು, ಹೈನ, ಹೈನು (ನಾ). ೧. ಈದ ಹಸು, ಎಮ್ಮೆ, ಹುಲಿ ಮುಂತಾದ ಪ್ರಾಣಿ : ತನ್ನ ಗೋಮಂಡಳದೊಳಗೊಳ್ಪುದುವಪ್ಪ ಪತ್ತು ಪಯನುಮಂ ಮೂಸಾಸಿರಗಂಡುಗ ಬತ್ತಮುಮಂ . . . ಕೊಟ್ಟೊಡೆ (ಪಡ್ವಾರಾ. ೨೨-೩) ; ಪಶುವೆಮ್ಮೆ ಕುಱಿಗಳೆಂಬಿವು ವಸುಧೆಗೆ ಪಯನ್ (ಸಮಪ. ೯-೧೧೬). **ಪಯ$_1$** : ೧. ಕೆಚ್ಚಲ ಬಾಹು ಪುಟ್ಟಿದುದು ತೊಟ್ಟನೆ ನಮ್ಮ ಪಯಕ್ಕೆ (ಪಸಾರ. ೪೬೮) ; ಪಡೆ ಪೊಡೆ ಪಯದಿಂ ಪಯಮಂ ತಡೆಯದೆ ಕೆಳೆಗೊಳ್ವರದಱ ಕಱುವಂ ಚದುರರ್ (ಸೀತಿಮು. I, ೩). **ಪಯಿನ್$_1$** : ೧. ಪಯಿನಂ ಕಂಡು ಕಱುವಂ ಬಿಡುವಂತೆ (ಧರ್ಮಾಪ್ರ. ೧೪-೧೭೦). **ಹಯನ$_1$** : ೨. ಹಸು, ಎಮ್ಮೆ ಮುಂತಾದುವುಗಳಿಂದ ದೊರಕುವ ಹಾಲು, ಮೊಸರು ಮುಂತಾದುವು : ಹಾಲ ಸಮುದ್ರಕ್ಕೆ ಹಯನವನ್ನು ಕೊಟ್ಟಂತೆ ಅವನ ಕೊಡುಗೆಯಾಗಿತ್ತು (ಕರ್ನಾಕ. ೧೩೯) ; ಹಯನಕ್ಕಾಗಿ ಕಟ್ಟಿದ ಆಕಳ ಹಿಂಡುವುದು (ಬಿಟ್ಟಹೊ. ೨೨). **ಹಯನು** : ೧. ಕಾಮಧೇನು ಮನೆಯಲಿರಲು ಬೇಱೆ ಹಯನನಱಸಲೇಕೆ (ಬಸವ. ೬೦೨) ; ಬಱಿಡಂ ಹಯನ ಮಾಳ್ಪರೆಂದು . . . ನುಡಿಯೆ (ಚಿಬಪು. ೬೨-೭೦); ಹಸುಮಕ್ಕಳ ಹಯನುಗಳ ಬಸವಳಿಸದೆ . . . ಬಗೆಯೊಸೆದುಚಿತದೊಳೋವುವುದು (ಹದಿಬ. ೪-೪೫) ; ಬಹಳಷ್ಟು ಬರಡು, ಒಂದೆರಡು ಹಯನು (ಚಂದ್ರಮಾ. ೧೭-೨). ೨. ಪಾಲ್ಗಡಲಿದಿರಲಿರೆ ಹಯನನಱಸುವರೆ (ನಂಬಿರ. ೧೩-೪) ; ಈ ಸುತನು ಜನಿಸಿದೊಡಿವಗೆ ಹಯನಿಲ್ಲ (ಸಂಭಪ. ೧೭-೪೨) ; ಕಟ್ಟಬೇಕು ಕಾಟದೆಮ್ಮೆ ಅದಱ ಹಯನ ಎಷ್ಟಾದರು ಉಣಬೇಕು (ಪುರಂದ. ೨-೫೫ ಪಲ್ಲವಿ) ; ಮನೆಯಲ್ಲಿ ಹಯನು ಇಲ್ಲ (ಅಶೋಕ. ೭೮). **ಹಯಿನು** : ೧. ನಡಿಯಿರಿ, ಹೊಲೆಯರಲ್ಲಿ ಹಯಿನು ಕಾದುಕೊಂಡಿದೆ (ನೊಸಂಸಾ. ೩೨). **ಹಯ್ನ** : ೨. ದನಕರುಗಳು ಬಹಳ ಇದ್ದವು. ಹಯ್ನವೂ ಸಮೃದ್ಧಿಯಾಗಿತ್ತು (ಮುಂಬಯಿ. ಕಿ. ೪-೨೨೦). **ಹಯ್ನು** : ೨. ಜೋಳದ ಬೋನಕ್ಕೆ ಬೇಳೆಯ ತೊಗೆಯಾಗಿ ಕಾಳೆಮ್ಮೆ ಕಱೆದ ಹಯ್ನಾಗಿ [ಪಾಠಾಂ. ಹಯನಾಗಿ] ಬೆಳವಲಮೇಳವ ನೋಡ (ಸರ್ವಜ್ಞ. ೧೬೧೭) ; ಆಕಳ ಹಯ್ನು ತುಸು ಆದಾಗ್ಯೂ ಬಹು ಆರೋಗ್ಯವು (ಮುಂಬಯಿ. ಕಿ. ೧-೨೧). **ಹೈನ** : ೧. ಕಱೆವ ಹೈನಂ [ಪಾಠಾಂ. ಹೈನು]ಗಳಲ್ಲದೆ ಬಂಜೆವಯ್ನಿಲ್ಲ (ಶ್ರೀಪಾಲ. ೧-೪೬); ಹೈನದ ಕೆಲಸ. . . ಮಕ್ಕಳ ಉಪಚಾರ—ಇವುಗಳಲ್ಲಿ ಬೇರೆಯ ವಿಚಾರಕ್ಕೆ ಅಸ್ಪದವೇ ದೊರೆಯುತ್ತಿರಲಿಲ್ಲ (ಜನಜೀ. ೩೮); ಕೈಗೊಬ್ಬ ಕಾಲಿಗೊಬ್ಬ ಆಳು. ಬತ್ತದ ಹೈನ (ಮಣ್ಣಪು. ೯). ೨. ಮಲ್ನಾಡದ ಆಕಳು ಜವಾರೀ ಆಕಳಿಗಿಂತ ಕಿರಿದಾದದ್ದು ; ಅದರ ಹೈನವೂ ಅಷ್ಟಕ್ಕಷ್ಟೆ (ಕಭಾಗೆ. ೫೭) ; ಎಮ್ಮೆ ಆಕಳುಗಳು ಹೈನದ ಸಲುವಾಗಿ ಉಪಯುಕ್ತವಾದವು (ಕಾರವ. ೩೬) ; ಹಾಲು—ಹೈನ ಹೊಟ್ಟೆಗೆ ಹೆಚ್ಚುಹೆಚ್ಚು ಹೋದಷ್ಟೂ ಸಂತಾನ ವೃದ್ಧಿಯಾಗದಿರುತ್ತದೆಯೆ ? (ಹೊಸಕ್ಷಿ. ೨೯). **ಹೈನು** : ೧. ಬರಡು ಹೈನಾಗಿರಲು ತನುಧರ್ಮಕ್ಕೆ ನೆಲೆಯುಂಟೆ (ವಿವೇಭ. ೧೦-೪೧); ಕಂದಯ್ಯ ಅತ್ತಾರೆ ಕಣಗೀಲು ಚಿಗತಾವು . . . ಬಾಲನ ಬರಡಾಕಳೆಲ್ಲ ಹೈನಾಗೆ (ಹಳ್ಳಿಬಾ. ೭೯). ೨. ದನಕರುಗಳ . . . ಹೈನು ಹೆಚ್ಚಾಗಿ ಲಭಿಸುತ್ತದೆ (ಕಎಪು. ೭-೧೪).

**ಪಯನಾಗು, ಹಯನಾಗು, ಹೈನಾಗು** = ಹಾಲನ್ನು ಕರೆಯುವ ಹಸುವಾಗು ; ಕರಾವಾಗು : ಪಯನಪ್ಪ ಪಸುವಂ ತಣಿಪಿನಯದಿಂ ಕಱೆದು ಪಾಲಂ ಕೊಳ್ವಂತೆ (ಜೀವಸಂ. ೨೧೮-೬) ; ನೀನೊಲಿದರೆ ಬಱಿಡು ಹಯನಾಗುವು[ಪಾಠಾಂ. ಹಯನಹು]ದಯ್ಯಾ (ಬಸವ.೬೬); ನಿನ್ನ ಶೀಲಂಗಂಡು ಸುರಭಿ ಹಯನಾಯಿತ್ತು (ಬಸರ. ೯-೮೨) ; ಬಱಿಡು ಹಯನಾಯ್ತು (ರೇವಣ. ೩೩-೫೪) ; ಹೇಱುವ ಗೊಡ್ಡು ಹಯನಕ್ಕೆ ಗುರುಕರುಣ ತೋಱುವ ದಿನಕೆ (ಸರ್ವಜ್ಞ. ೮೭); ಅಡ್ಡಡ್ಡ ಮಳೆ ಬಡಿದು ದೊಡ್ಡೊಡ್ಡ ಕೆರಿ ತುಂಬಿ ಗೊಡ್ಡಗಳೆಲ್ಲ ಹೈನಾಗಿ (ಕನ್ನಜಾ. ೧೫೩). **ಹೈನ ಮಾಡು** = ಪಶುಪಾಲನೆ ಮಾಡು : ಈ ಪರಗಣೆಗಳಲ್ಲಿಯ ಜನರು ಹೈನ ಮಾಡುತ್ತಾರೆ (ಗ್ರೇಟಬ್ರಿ. ೪) ; ಇವರಿಗೆ ಹೈನ ಮಾಡುವುದು ತಿಳಿದಿದ್ದಿತೆ (ಕರ್ನಾಟ. ೩೩೮).

[ದೇ.॥ ತಮಿ. ಪಯ=ಫಲ, ಲಾಭ, ಸವಿ./ಪ್ರಾ. ಪಯಾ= ಜನ್ಮ ನೀಡು./ಸಂ. ಪ್ರಜನನ=ಗರ್ಭಧಾರಣೆ, ಜನನ]

**ಪಯನಾವು** (ನಾ). ಈದ ಹಸು ; ಕರು ಹಾಕಿದ ಆಕಳು : ಆ ಮುನಿಪಂ ನೋಂತು ಬಡವಾಗಿ ವಿಕರಾಳಮಾದ ರೂಪುಮಂ ಕಂಡು ಕೆಂಗೋಲ್ಮಸಗಿದ ಪಯನಾವು ಪಱಿದಿಱುವುದುಂ (ಚಾವುಂಪು. ೧೪೧) ; ಆದೊಡವಂ ಕೊಟ್ಟು ಪಯನಾವಂ[ಪಾಠಾಂ. ನಾಕಳಂ]ಕೊಳ್ವಂ (ಪಂಚತಂ. ೧೮೬-೭) ; ಬರುತಿರ್ಪಾ ಮುನಿಪನ ಕೃಶಶರೀರಮಂ ಕಂಡು ಬೆರ್ಚಿ ಪಯನಾಟ[ವು] ಕರಂ ಪರಿತಂದು ಪಾಯೆ (ಶಾಂತೀಶ್ವ. ೭-೩೩). [ಪಯನ್+ಆವು]

**ಪಯನು** (ನಾ). ಸವಿ : ಇತ್ತಲು ಪರವೆಗೆ ನಂಬಿಗೆ ಪಲವು ಕಾಲದಗಲ್ಕೆ ಪಯನಾಗಿ [ಪಾಠಾಂ. ಯ ಹಯನಾಗಿ] ಪ್ರಣಯಕಲಹಂ ಕಾಲೂಱಿ ಸುಖದ ಮಳೆ ಕಱೆದು ನೇಹದ ಬಿತ್ತಂಕುರಿಸಿ ತವಕಂ ತಳಿರ್ತು ಸಮಾನುರಾಗವರಲ್ದು ಪ್ರೇಮಾಲಿಂಗನದೊಳ್ ಶಿವಾರ್ಪಿತಂ ಸಿಲ್ಕಿ ಸಫಲವಾಗಲ್ (ನಂಬಿರ. ೧೬-೯೬). 'ಪಯನ್' ಪರಾ. [←ತಮಿ. ಪಯ]

**ಪಯಪಾಡು,** ಪೈಪಾಡು (ನಾ). ೧. ಹೆಜ್ಜೆಯಿಡುವ ಕ್ರಮ,—ರೀತಿ : (ಕಿ). ೨. ಕಾಳಗದ ಒಂದು ವರಸೆ,—ಪಟ್ಟು; ಯುದ್ಧದಲ್ಲಿ ಹೆಜ್ಜೆಯಿಡುವ ಒಂದು ಬಗೆಯ ತಂತ್ರ : ಸುಳಿದರೆಡಬಲ ಚಾರಿಯಲಿ ಚಾಪಳದ ಪಯಪಾಡಿನಲಿ . . . ಭೀಮ ಕೌರವರು (ಕುವ್ಯಾಗ. ೬-೨೨) ; ಲುಳಿಯ ಪಯಪಾಡುಗಳ . . . ಲಾಘವದೊಳು ವಿಚಿತ್ರದ ವೀರರೊಪ್ಪಿದರಸಮಸಮರದಲಿ (ತೊರರಾ. ೬-೩೧-೨೨) ; ಪಯಪಾಡು ಮುರಿಪು ಮೈಲುಳಿ ಲಾಗುಲವಣಿ ಲಕ್ಷ್ಯಂಗಳಿಂ ಧುರದೊಳೇಱಿ ತೋಱಿ (ಚಿಬಪು. ೩೮-೩೮) ; ಖಳ ದನುಜಾಂತಕರು ಕಾದಿದರು ಪಯಪಾಡಿನಲಿ ಸಮವಾಗಿ (ಕೋಗಯ. ೧೦-೫೦). 'ಪಯಗತಿ' ಪರಾ. ೩. [ನಾಟ್ಯ] ಹೆಜ್ಜೆಯನ್ನಿಡುವ ಭಂಗಿ ; ಪದವಿನ್ಯಾಸ : ಪಯಪಾಡು ನಿಚ್ಚವಣೆ ಚಾಳಿಯುಂ . . . ಲುಳಿ ಪುದಿದೆಸೆವಿನಂ ಕರಂ ನರ್ತಿಸಿದಳ್ (ಧರ್ಮಪ.೨-೨೬);

ನೇಮನೆಲೆ ಪಯಪಾಡು . . . ತಿರುಪಿನಲಿ . . . ಮಾಯಾದೇವಿ ಮೋಹಿಸಿ ಪಾತ್ರವಾಡಿದಳು (ಪ್ರಭುಲಿ. ೪-೫೭). **ಪೈಪಾಡು :** **೩.** ಮೃಡನೊಲ್ದು . . . ವಿನೂತನದ ಪನ್ನೆರಡು ಪೈಪಾಡು ಪಿರಿದೆನಿಸು ವೈವತ್ತೊಂದು ಚಾಲಿಯಿಂದೆ ತಿರುಪುಗಳ್ಪತ್ತು ತೆಱದಿಂದೆ ನಾನಾತೆಱದ ಕರಣಂಗಳಿಂ ನರ್ತನಂಗೆಯ್ಯುತಿರೆ (ಪಾಸೋಪು. ೧-೪೮).

[ಪಯ್ $_2$ + ಪಾಡು $_3$]

**ಪಯಬಿಂದು** (ನಾ). ಹಾಲಿನ ಹನಿ,—ತೊಟ್ಟು : ಗಣನೆಯಿಲ್ಲದ ಜನನಿಯರು ಮೊಲೆಯುಣಿಸಲಾ ಪಯಬಿಂದುಗಳನದನೆಣಿಸಲಳವೇ (ಹಂಸಾ. ೬೨). [ಪಯ್ $_3$ + ಬಿಂದು]

**ಪಯವುಲಿ** (ನಾ). ಈದ ಹುಲಿ; ಮರಿ ಹಾಕಿದ ಹುಲಿ : ಪಯವುಲಿಗಳ್ ಮೊಲೆಯೂಡಿದುವಾ ಹರಿಣಂಗಳಂ (ಕಾವ್ಯಾಪ. ೮೨೬).

[ಪಯ್ $_1$ (<ಪಯನ್) + ಪುಲಿ]

**ಪಯಶ್ಚರ** (ನಾ). ೧. ನೀರಿನಲ್ಲಿ ಸಂಚರಿಸುವ ಮೊಸಳೆ ಮೊದಲಾದ ಜಲಜಂತು,—ಜಲಚರ : ಕುಪಿತ ಮರುತ್ಸುತರವಕಳ್ಕಿ ಪಯಶ್ಚರನಿಕರಸಂಭ್ರಮೋಲ್ಲಹರಿಕೆ ಭಾವಿಪೊಡೆ ಜನಕ್ಕೆ ಕೊಳಂ ಕಿಱುತ್ತಾಱುವಂತಾಯ್ತು ಕಮಲಜಾಂಡಂಬರೆಗಂ (ಗದಾಯು. ೭-೨೦). ೨. ಮೀನು : ಭಯಾಬ್ಧಿಯಲ್ಲಿ ಮುಂಕೊಂಡು ಮುಳುಂಗಿ ತೇಲ್ದವವನೀಕ್ಷಣಯುಗ್ಮಪಯಶ್ಚರದ್ವಯಂ (ಶಬಶಂ. ೪-೧೧೦). [ಸಂ.]

**ಪಯಸ್ಯ** (ನಾ). ಹಾಲಿನಿಂದ ಉತ್ಪನ್ನವಾಗುವ ಬೆಣ್ಣೆ, ಮೊಸರು ಮುಂತಾದುವು : "ಪಯಸ್ಯಂ ಆಜ್ಯ ದಧ್ಯಾದಿ—ಹಾಲಿನಿಂದ ಹುಟ್ಟುವ ತುಪ್ಪ, ಮೊಸರು, ಬೆಣ್ಣೆ ಮುಂತಾದ್ದಕ್ಕೆ ಪೆಸರು" (ಸಿದ್ಧಾಂತಿ. ೨೮೯). [ಸಂ.]

**ಪಯಸ್ವಿನಿ** (ನಾ). ೧. ಕರೆಯುವ ಆಕಳು ; ಹಯನು : ವಸುದೇವ ದೇವಕೀದೇವಿ ಬಲದೇವರ್ಗೆ ನಂದಗೋಪನುಂ ತತ್ಸತಿಯುಮನುಕ್ರಮದಿಂ ಪೊಡೆವಟ್ಟು ಪ್ರಚುರಪಯಸ್ವಿನಿಗಳಪ್ಪ ಪಶುಗಳಿಂದಱಂಬುಗಱೆಯಿಸಿದನಂತರಂ ಸಂಭಾಷಿಸುತ್ತಿರ್ಪುದುಂ (ಮಹಾನೇ. ೬-೩೭ಪ) ; ಒಮ್ಮೆ ಪಯಸ್ವಿನಿಯಾದ ಧೇನುವಿನಂತೆ ತೋರುವ ಉಷೆ ಮತ್ತೊಂದೆಡೆ ನವವಧುವಿನಂತೆ ಗೋಚರಿಸುತ್ತಾಳೆ (ಸೌಂದಸ. ೯೭). ೨. ನದಿ ; ಹೊಳೆ. ೩. ಒಂದು ನದಿಯ ಹೆಸರು. ೪. ಗಂಗಾನದಿ. ೫. ರಾತ್ರಿ; ಇರುಳು. ೬. ಆಡು. ೭. ಹದಿನಾಲ್ಕು ನಾಡಿಗಳಲ್ಲಿ ಒಂದು : ತರಳ ತಳಿ ನಾಡಿಗಳ ಚೌದಶಗಳಿಗೆ ನಾಮಗಳಾಯುರು ಸುಷುಮ್ನೆಯುಂ... ಪಯಸ್ವಿನಿ ಗಂಧವಾರಿಯು ವರಸೆದಪ್ಪದೆಯಿರುವವು (ಗಗತಾ. ೯-೧೨).

[ಸಂ. ಪಯಸ್ವಿನೀ]

**ಪಯಸ್ಸದ್ಮ** (ನಾ). ನೀರಿಗೆ ಆಶ್ರಯವಾಗಿರುವುದು ; ಸಮುದ್ರ: ಅಮಲ ಪಯಸ್ಸದ್ಮದಿಂ ಶುದ್ಧವೃತ್ತಂ (ಶಾಂತಿಪು. ೯-೩೧೦). [ಸಂ.]

**ಪಯಸ್ಸು** (ನಾ). ೧. ನೀರು ; ಉದಕ : ಪಯಸ್ಸು, ನಭಸ್ಸು, ರಜಸ್ಸು (ಶಬ್ದಾನು. ೬೯ ಪ್ರಯೋ). ೨. ಹಾಲು. [ಸಂ. ಪಯಸ್]

**ಪಯಳ** (ನಾ). "ಮೇಘದಲ್ಲಿ ತುಂಬಿದ ನಿರ್ಮಲಜಲ" (ವಿಸ್ತೋಸು. ೧೩-೫ ಅಡಿಟಿ) : ಸುಯತಿಗಳು ನುಡಿದ ಶಬ್ದಾ ಪಯಳಾಯಂತಿದೆ (ವಿಸ್ತೋಸು. ೧೩-೫). [ ? ]

**ಪಯಾಳ** (ನಾ). (?) : ಜಗತೀಶಂ ನೋಟ್ಪ ಕಣ್ಗಂ ನುಡಿವ ದನಿಗಮಿಂಬಾಗಿ ಕುಳ್ಳಿರ್ದರಂದೋಳಿಗಳಿಂ ದಂಡಾಧಿಪರ್ ಮಾಂಡಳಿಕರಧಿಕ ಸಾಮಂತರಂತರ್ನಿಯುಕ್ತರ್ ವಗೆಕಾಱರ್ ಗಾಯಕರ್ ಪಾಠಕರಡಪದವರ್ ನೆತ್ತಕರ್ ವಾಸಕಾಱರ್ ನಗೆಕಾಱರ್ ವಾದ್ಯಕರ್ ಚಿತ್ರಕರಣುಗಿನವರ್ ಸೂಳೆವಾಳರ್ ಪಯಾಳರ್ (ಅನಂಪು. ೨-೨೬) ; "ಕಾಲಾಳು" (ಪ್ರಭಣ್ಣ). [ ? ]

**ಪಯಿಂಛಾಸಿರ,** ಪಯಿಂಜಾಸಿರ (ನಾ). ಒಂದು ಸಂಖ್ಯೆ ; ಹತ್ತು ಸಾವಿರ : "ಎಕ್ಕಸರಂ . . . ಒಂಬಯ್ನೂಱು, ಪಯಿಂಛಾಸಿರಂ–ಇವು ಸಂಖ್ಯಾನಂಗಳ್" (ಕಶಸಾ. ೬೮-೫೨೯) ; ಪಯಿಂಛಾಸಿರಂ (ಭಾಷಾಭೂ. ೧೬೨ ಉದಾ) ; ಪತ್ತರ್ಕೆ—ಪಯಿಂಛಾಸಿರಂ (ಶಮದ. ೧೯೧ ಪ್ರಯೋ) ; ಪಯಿಂಛಾಸಿರಂ ಮತ್ತೆ ರಾಜಿಸುವ ವಿಖ್ಯಾತವೀರಗಣಾಳಿ ಇರ್ಪುದವರಾರೆಂಬೊಡಂ ಪೇಳ್ವೆವು (ಅರಾಚ. ೧-೧೩-೬೪) ; ಅಲರಿಚನಂಚೆಗೆಡೆಯಪ್ಪ ಪಯಿಂಛಾಸಿರೆಸಟ ಕೆಂದಾವರೆಗಳಿಂ ಕೂಡಿ ಕಿಚ್ಚಿನೊಲ್ ಬೆಳಗುತಿರ್ಪ ಪುಷ್ಕರವೊಂದಿರ್ಕುಂ (ಅದ್ಭುತ. ೩೯-೨೩). **ಪಯಿಂಜಾಸಿರ :** ಹೆಬ್ಬುಲಿಯನಡರಿ ಕೊಂಕಣಜೋಗಿಯಾ ಪಯಿಂಜಾಸಿರದ ಪಡೆಗೂಡಿ ಬರುತಿರ್ದೊಡೆ (ಚೇರಮ. ೯-೬) ; ಪಯಿಂಜಾಸಿರಂ, ಪತ್ತುಸಾಸಿರಂ (ಶಬ್ದಾನು. ೩೬೩ ಪ್ರಯೋ).

**ಪಯಿಂಛಾಸಿರ್ವರ್** = ಹತ್ತುಸಾವಿರ ಜನ,—ಮಂದಿ : ಸಿಚ್ಚಂ ಧರಾಧೀಶರಂ ಪಡಲಿಟ್ಟಂತಿರೆ ಮಾಟ್ಪೆನೋವದೆ ಪಯಿಂಛಾಸಿರ್ವರಂ ಯುದ್ಧದೊಳ್ (ಪಂಪಭಾ. ೧೦-೨೫) ; ಅಂತು ಭೀಷ್ಮಂ . . . ಮಹಾಪ್ರಳಯಭೈರವನಂತೆ ಮಸಗಿ ಪಯಿಂಛಾಸಿರ್ವರ್ ಮಕುಟಬದ್ಧರಂ ಕೊಂದಾಗಳ್ (ಪಂಪಭಾ. ೧೧-೪೦ಪ).

[ಪಯಿನ್ $_2$ (<ಪತ್ತು $_3$) + ಸಾಸಿರ]

**ಪಯಿಂಜಾಸಿರ** 'ಪಯಿಂಛಾಸಿರ' ನೋ.

**ಪಯಿಂಟು** 'ಪಾಯಿಂಟು' ನೋ.

**ಪಯಿಕ,** ಪಯಿಸಾಕ, ಪಯ್ಕ, ಪೈಕ (ನಾ). ೧. ಗುಂಪು; ಬಳಗ; ಪರಿವಾರ : ಬಾಚಿಗೌಡನ ವರಸುಜಾತನೆಂದೆನಿಸುವನು ಕೂಚಿಮಾರನು ತನ್ನ ಪಯಿಕದೊಡನಿರೆ ನಿಗಮಗೋಚರನು (ಮರುಚಾ. ೨-೫೩). ೨. ಒಂದು ವಿಶಿಷ್ಟವಾದ ಪರಿಚಾರಕವರ್ಗದ ಹೆಸರು : ಅಂತು ಪಯಿಕ ಮೂಱಕ್ಕಂ ಅಕ್ಕಿ ಹಾನೆ ನಾಲ್ವತ್ತಱಲೆ××× ಮೂಡೆ ನೂಱ ಮೂವತ್ತಱಯಿದು (ಸೌಇಇ. IX-ii, ೪೧೭-೩೯ ; 1377) ; ವಶಿಷ್ಟಗೋತ್ರದ ನೆಲಮನೆಯ ಪಯಿಕದ ಹೆಬ್ಬಲಿಗೆಯ ಗೋವಿಂದಅಧಿಕಾರಿಗಳ ಮಗದಿರೂ (ಎಕ. VIII, ನಗರ. ೧-೧೩ ; 1566) ; ಹಿಂದೆ ನಂಮ ಮೊರಸ ಪಯಿಕಕ್ಕೆ ನಡವ ಆಚಾರ ಕಟ್ಟಳೆ ಅಪುತ್ರಿಕವಿಲ್ಲ (ಎಕ. IX (s), ಮಾಗಡಿ. ೯೬-೨೪ ; ಸು. 1650) ; ಚನ್ನಕೇಶ್ವರಸ್ವಾಮಿಗೆ ನಿತ್ಯೋತ್ಸವ ಪಕ್ಷೋತ್ಸವ . . . ಮುಂತಾದ ಶೇವೆ ಪಡಿತರ ದೀಪಾರಾಧನೆ ಸಕಲವಿನಿಯೋಗ ಪಯಿಕಕೆ ಸಮರ್ಪಿಸಿದು (ಎಕ. IX, ದೇವನ. ೩೦-೧೪ ; 1729). ೩. ನಾಡಿನ ಒಂದು ವಿಭಾಗ ; ಕಂಪಣ : "ವಿಷಯಮೆನೆ ಕೊಟ್ಟಮೆನೆ ಪಯಿಕ [ಪಾಠಾಂ. ಪಯ್ಕ, ಪೈಕ]ಮೆನೆ ಕಂಪಣಕೆ ಪೆಸರೆನಿಕ್ಕುಂ" (ಮಂಗರಾ. ೫೬-೨) ; "ಪಯಿಕ—ಪದಿಕ = ಕಾಲ್ನಡೆ, ಪ್ರದೇಶ" (ತದ್ಭಕೋ. ೫೧). ೪. ಜಮೀನಿನ ಒಂದು ಭಾಗ,—ತುಂಡು : ಯಿಂತೀ ಪಯಿಕ ನಾಲ್ಕಱ ಬಾಳು ಮನೆ [ಉ]ಪ್ಪು ನಾಗರಕೆಱೆ ಬಾವಿ . . . ಬೆಟ್ಟು ಸಹಿತವಾಗಿ ಬಹ ಭತ್ತ ನಾಗಂಡುಗದ ಮೂಡೆ ನೂಱ ಇಪ್ಪತ್ತುನಾಲ್ಕು (ಸೌಇಇ. IX-ii, ೪೦೯-೨೩ ; 1365). **ಪಯಿಸಾಕ :** ೨. ಸುಂಕ ತಳವಾಱಕೆ ಮಣಿಹ ಪಯಿಸಾಕ ಸಹ ಸರ್ವಮಾನ್ಯವಾಗಿ ಸಮರ್ಪಿಸಿ ಕೃತಾರ್ಥನಾದನು (ಎಕ. XI, ದಾವಣ. ೧೮-೨೬ ; 1561). **ಪಯ್ಕ :** ೨. ದಳವಾಯಿ ಬೆಟ್ಟದ ಅರಸುವಿನ ಸಜ್ಜನಿಕೆಯನ್ನೂ ದುರುಪಯೋಗಪಡಿಸಿಕೊಂಡು ಧೂರ್ತರಾಗುತ್ತಿದ್ದ ಹಳೆಯ ಪಯ್ಕದವರನ್ನು . . . ನಿಗ್ರಹಿಸುವುದಕ್ಕೆ ಸಮರ್ಥನೊಬ್ಬನು ಬೇಕಾಗಿತ್ತು (ಸಂಸಕ. ೧೦೨). ೫. ಒಂದೇ ವರ್ಗಕ್ಕೆ ಸೇರಿದ ಅನೇಕ ವಸ್ತುಗಳು : (ಕ). **ಪೈಕ :** ೧. ಮೆಟ್ಟಿಕ್ಕೆಯಂ ಮೆಟ್ಟಿಯಾಯತವಾಯತವ ಕೇಳ್ದುತಕ್ಕೆರಡು ಪೈಕ ಸುಮುಹೂರ್ತಮೆನಲಱವವರ ಚರಣಾಂಬುಜಕ್ಕೆ ಶರಣು (ಲಶಿಚಂ. ೧೫-೨೫) ;

ನಿಮ್ಮ ಪೈಕಕೆ ಖುಲ್ಲತನ ಸಹಜ (ಕುವ್ಯಾವಿ. ೬-೫) ; ಅಳಿಯ ಮಕ್ಕಳ ಪೈಕ [ಪಾಠಾಂ. ಪಯಿಕ]ಭಾವ ಸಂಗಮದೇವನೊಳಗೆ ಸೇರಿತು ಪಕ್ಷ ವಱಿತು (ಕುಂರಾಸಾಂ. ೩೧-೫೮) ; ಕಲಿ ಸಾಲ ಖಚರರ ಪೈಕವನು ಕಲಕಿದನು ಕಲ್ಪಾನಳನ ಕಡುಹಿನಲಿ (ಅಂಬಿಕಾ. ೨೨-೮). **೨. ಬೆಟ್ಟದ** ಚಾಮೇಂದ್ರ ಸಾಕಿದ ಹಳೆಯ ಪೈಕದ ನಾಯಕರು ಒಳಹೊಕ್ಕು ವೈರಿ ಮಾರ್ಬಲವನು ಸದೆದು (ಕಂನವಿ. ೩-೬೯) ; ಸಕಲ ವಿನಿಯೋಗ ಪೈಕ ಸಹಾ ಸಮರ್ಪಿಸಿದ (ಎಕ. IX, ದೇವನ. ೩೬-೧೧ ; 1698) ; ಹಳೆಯಾ ಪೈಕ ಸಂದಣಿ ಅಂದಣದ ಎಡಬಲದಿ (ಶರಲೀ. ೫೪೨-೧) ; "ಪೈಕ" (ದಂಡಾಳು)ಯೆಂಬ ಶಬ್ದವಾದರೂ ಇದೇ ಅಭಿಪ್ರಾಯವನ್ನು ತಿಳಿಸುತ್ತದೆ (ಕಭಾಗ. ೧೮೧) ; ಪ್ರಾಚೀನಕಾಲದಲ್ಲಿ ಹಟ್ಟಿಕಾರರ ಈ ಒಳಪಂಗಡಕ್ಕೆ ಪತ್ತಿಗಳು, ಪದಾತಿಗಳು ಎಂದು ಹೆಸರಿತ್ತು. ಇವರೇ ಮುಂದೆ ಪಾಯಿಕರು, ಪೈಕರು . . . ಎಂದು ಮುಂತಾಗಿ ಕರೆಯಲ್ಪಟ್ಟಿದ್ದಾರೆ(ಕರ್ನಾಪೂ.೨೬). **೪.** ಬಡಗಲು ಪೈಕದ ಕೇರಿಯಲಿ (ಬೊಂಕಶಾ. ೧೯೩೮, ಇಂಡಿ. ೩೫-೨೮ ; ?). **೬.** ಬಣ ; ಪಂಗಡ ; ಪಕ್ಷ: ಏನ ಹೇಳುವೆ ನಿನ್ನವರ ಜಯಮಾನವನು ಘುತ್ತೊಂದು ಪೈಕದ ಮಾನಭಂಗಸ್ಥಿತಿಯನೆಲೆ ಜನಮೇಜಯಕ್ಷಿತಿಪ (ಕುವ್ಯಾಅ. ೧೬-೨); ಪೈಕವೆರಡ ವಿಷಮವೀರರ ವಿಗ್ರಹದ ಸರಭಸದ ಸೌರಂಭಾತಿಶಯ ನಡೆದುದು ಸುರಾಸುರರ (ತೊರರಾ.೬-೧೪-೧). **೭.** ಹೊನ್ನು ; ಹಣ ; ದ್ರವ್ಯ : ಹಿರಿಯರು ಸಮಧಾತು ಭಕ್ತಿಯ ನೆಱೆವರು ಭರವಸಕ್ಕೆ ಬಂದು ಭರಿತಘಟಿ ಪೈಕವ ಮತ್ತೆ ಧರಿಸದಂತೆ (ಶಿವಗೀ. ೮೧-೩೯೪); ತನ್ನರಮನೆಯ ಪೈಕದ ವಾಳಕದ ಭಂಗಾರವೊಡ್ಡಿತು ಕೋಟಿಸಂಖ್ಯೆಯಲಿ (ಕುವ್ಯಾಸ. ೧೪-೯).

**ಪೈಕದರು, ಪೈಕದವರು** (ಬಹುವ): ಗರುವ ಕೇಳಯ್ಯ ಪಾರ್ವತಿಯ ಪೈಕದರು ನಾವ್ (ಲಶಿಚಂ. ೩೬-೫೨) ; ಇವರು ದಿಲ್ಲಾಸುರನ ಪೈಕದವರು ಇವರು ಭಸ್ಮಾಸುರನ ಕುಲದವರು ಭಾವಿಸುವೊಡಿವರಂಧಕಾಸುರನ ಗೋತ್ರದವರು (ವೀಶೈಪು. ೨-೧೨-೨೯).

[<ಪ್ರಾ. ಪಯಿಕ್ಕ./ಸಂ. ಪದಿಕ./ತೆಲು. ಪಯಿಕ, ಪೈಕ./ಮರಾ. ಪೈಕಾ]

**ಪಯಿಕರ** 'ಪತಿಕರ' ನೋ.

**ಪಯಿಕಿ** 'ಪೈಕಿ' ನೋ.

**ಪಯಿತ್ರ,** ಪೈತ್ರ$_1$ (ನಾ). ಚೈತ್ರಮಾಸದಲ್ಲಿ ಆಚರಿಸುವ ಒಂದು ಉತ್ಸವ : ಧೂಪ ದೀಪ ನಿವೇದ್ಯ ಚೈತ್ರಪಯಿತ್ರಕ್ಕೆ ಸಲಿಸುವದು (ಕಇ. II, ೩೨-೧೧ ; 1204). **ಪೈತ್ರ$_1$** : ವರ್ಷಂಪ್ರತಿ ಚೈತ್ರಕ್ಕೆ ಹಾಗ ಮತ್ತಂ ಪೈತ್ರಕ್ಕೆ ಹಾಗಮುಂ ಬಿಟ್ಟರ್ (ಸೌಇಇ. XV, ೧೩೫-೫೪; 1179). 'ಚೈತ್ರಪವಿತ್ರ' ಪರಾ. [<ಸಂ. ಪವಿತ್ರ]

**ಪಯಿತ್ರಾರೋಪಣ** (ನಾ). ಶ್ರಾವಣಮಾಸದಲ್ಲಿ ದೇವರ ವಿಗ್ರಹಕ್ಕೆ ಯಜ್ಞೋಪವೀತವನ್ನು ತೊಡಿಸುವ ವಿಧಿ ಮತ್ತು ಆ ಸಮಯದಲ್ಲಿ ಆಚರಿಸುವ ಉತ್ಸವ: ಶ್ರಾವಣಶುದ್ಧ ಚತುರ್ದ್ದಸೆ ಸೋಮವಾರದಂದು ಪಯಿತ್ರಾರೋಪಣ ಸಮಯದಲು (ಎಕ. XI, ದಾವಣ. ೧೬೨-೧೫ ; 1265). [<ಸಂ. ಪವಿತ್ರಾರೋಪಣ]

**ಪಯಿನ್$_1$** 'ಪಯನ್' ನೋ.

**ಪಯಿನ್$_2$** 'ಪದಿನ್' ನೋ.

**ಪಯಿನ್ನೂಱು** (ನಾ). ಒಂದು ಸಂಖ್ಯೆ ; ಹತ್ತುನೂರು ; ಸಾವಿರ: ಪಯಿನ್ನೂಱು, ಪತ್ತುನೂಱು (ಶಬ್ದಾನು. ೩೬೩ ಪ್ರಯೋ).

[ಪಯಿನ್$_2$ (<ಪತ್ತು$_3$)+ನೂಱು$_2$]

**ಪಯಿಮ್ಮೆ** (ನಾ). ಹತ್ತು ಸಲ,—ಬಾರಿ: ಪಯಿಮ್ಮೆ, ಪಯಿಂಬರ್ (ಶಬ್ದಾನು. ೩೬೩ ಪ್ರಯೋ). [ಪಯಿನ್$_2$ (<ಪತ್ತು$_3$)+-ಮ್ಮೆ$_2$]

**ಪಯಿರ್,** ಪಯಿರು, ಪೈರು (ನಾ). **೧.** ಹೊಲ, ಗದ್ದೆಗಳಲ್ಲಿ ಬೆಳೆಯುವ ಬೆಳೆ : (*). **೨.** ಗಿಡ, ಮರ, ಬಳ್ಳಿ ಮುಂತಾದ ಸಸ್ಯ; ಹಸುರು ಬೆಳೆ : (*) 'ಪಸುರ್$_2$' ಪರಾ. **ಪಯಿರು : ೧.** ಪಯಿರ್ಕೆದದಿರೆ ಸುರಿವ ಮಳೆಯು ಸುರಿಸದಿದ್ದರೆ ಅವರೇತರದಲ್ಲಿ ನೀಡುವರಯ್ಯಾ (ದೇದಾವ. ೪೦-೬೮) ; ನಾನಾ ಜೀವಿಗಳ್ಗೆ ಸಂಪತ್ಸೌಖ್ಯವಪ್ಪಂತು ಸಕಲ ಫಲಮಂ ಪಯಿರಸಿಕ್ಕುವ ಮಹಾಪ್ರಜೆಗಳು (ಚಿಬಪು. ೨೯-೪೦) ; ಯೇಸುಂಟಾದ ಪಯಿರುಗಳನು ಆಗುಮಾಡಿ ನಿಂಮ ಪುತ್ರ ಪೌತ್ರಪಾರಂಪರೆಯಾಗಿ . . . ಅನುಭವಿಸಿಕೊಂಡು ಬಹಿರಿ (ಮೈಆರಿ. ೧೯೩೩, ೬೬-೧೬ ; 1598) ; ಮಳೆಯಿಲ್ಲದ್ದರಿಂದ ಪಯಿರುಗಳು ಹಾಳಾಗಿ ಜನಗಳು ಸತ್ತರು (ವ್ಯಾಸಪ. ೧೬೦). **ಪೈರು : ೧.** ಪೈರಿಗೆ ನೀರು ಬೇಡೆಂಬಲ್ಲಿ ಉಚಿತವನಱಿದು ಬಿಡಬೇಕು (ಸರ್ವ. ೧೦೬-೫೭೧) ; ಒಣಗಲ್ ಪೈರಿಗೆ ಬಾರದಿರ್ದ ಮುಗಿಲ್ ತಾಂ ಬಂದೇನು (ಸೋಮೇಶ. ೧೬) ; ಬೆಳೆದಿಹ ಪೈರುಗಳ ಬಿಟ್ಟು ಜನವಂಜಿ ಜಗುಳಿದರು (ಕಂನವಿ. ೧೧-೪೮); ದೇವಸ್ಥಾನಗಳಿಗೆ ಸಲ್ವ ಪೈರು (ಎಕ. III, ಶ್ರೀರಂಗ. ೧೦೦-೧೬೨ ; 1724) ; ಗದ್ದೆ ಕೋಗಿನಲಿ, ಹಳದಿಯ ಪೈರು ಬೆಳೆಬೆಳೆದು ಹಬ್ಬಿಯಿರೆ ಶಾಲಿವನ ವನಧಿಯ ಸುವಿಸ್ತೀರ್ಣ ಲಂಬಾಯಮಾನ ಸೈಕತವೇಲೆಯನು ಹೋಲಿ (ಚಿತ್ರಾಂಗ. ೫೨-೧೪೩೨).

**ಪೈರುಪಚ್ಚೆ** = ಬೆಳೆ ; ಫಸಲು : ಅರಣ್ಯಕ್ಕೆ ಎರಡು ಆನೆ ಬಂದು ಇದೆ. ರೈತರ ಪೈರುಪಚ್ಚೆ ಕರಡು ಮಾಡುತ್ತದೆ (ರಾಜೇಂದ್ರ. ೨೬೯) ; ಕೊಳವು ಕುಂಟೆಯು ಪೈರುಪಚ್ಚೆಯು ತಳೆದ ಮನೆ ಅಲ್ಲಿದ್ದವು (ಕವಪು. ೧೬-೧೦).

[ದೇ.॥ ತಮಿ. ಮಲ. ಪಯಿರ್; ತುಳು. ಪೈರ್ ; ತೆಲು. ಪಯಿರು, ಪೈರು]

**ಪಯಿರು** 'ಪಯಿರ್' ನೋ.

**ಪಯಿಲಾ,** ಪೈಲಾ (ಗು). (ಉಕ) **೧.** ಮೊದಲನೆಯ ; ಒಂದನೆಯ : 'ಪಯಿಲಾನಂಬರು' ಪರಾ. (ನಾ). **೨.** ಮೊದಲನೆಯದು ; ಪ್ರಥಮಸ್ಥಾನದಲ್ಲಿರುವುದು : ಆ ಸೆಟಿಗೋಡಿನ ಎತ್ತು ಲಡಾಯದಲ್ಲಿ ಗೂಳಿ ಹೋರಿಗಿಂತಲೂ ಪಯಿಲಾ ಆಗುವುದರಲ್ಲಿ ಸಂದೇಹವಿಲ್ಲ (ರೂಢಿ). **ಪೈಲಾ : ೩.** ಮೊದಲನೆಯವನು ; ಪ್ರಥಮಸ್ಥಾನದಲ್ಲಿರುವವನು : ಎಲ್ಲಾದರಾಗ ಪೈಲಾ ಬಂದಾನ ಅಪ್ಪಾ (ಮುಗಿಮು. ೬೪). **೪.** ಮೊದಲನೆಯ ತಾರೀಖು ; ಒಂದನೆಯ ತಾರೀಖು : ಎಷ್ಟು ಬೇಕೋ ಅಷ್ಟು ನಾನು ಕೊಡ್ತೀನಿ. ಪೈಲಾಕ್ಕೆ ಪರತು ಕೊಟ್ಟುಬಿಡುವಂತಿ (ದಾಕೂಟ. ೨೧) ; ಮಾರ್ಚ ಪೈಲಾಕ ಮನೀ ನಿರೋಪ ತಗೊಂಡರಂದರ ಆತು (ದೀಪಹ. II, ೨೩೦) ; ಸಾಮಾನು ಅಷ್ಟಕ್ಕಷ್ಟ ಅದ. ಪೈಲಾದ ತನಕ ಹೋಗತದ (ಗೀಚುಗೆ. ೧೮).

[<ಪ್ರಾ. ಪಹಿಲ./ಹಿಂ. ಪಹಲಾ, ಪಹಿಲಾ ; ಮರಾ. ಪಹಿಲಾ]

**ಪಯಿಲಾನಂಬರು,** ಪೈಲಾನಂಬರು (ನಾ). **೧.** ಮೊದಲನೆಯ ಸ್ಥಾನ: ಗಳಿಗಿ ಪುಸ್ತಕ ಹಿಡಿಯೂದಿಲ್ಲಾ ಮನ್ಯಾಗ, ಪರೀಕ್ಷದಾಗ ನೋಡಿದ್ಯಾ ಪಯಿಲಾನಂಬರು (ವೈನಿ. ೨೦). **ಪೈಲಾನಂಬರು : ೨.** ಶ್ರೇಷ್ಠದರ್ಜೆ ; ಉತ್ತಮಮಟ್ಟ : ಪೈಲಾನಂಬರ ವರಾ ಅವ (ತಿಡುಗು. ೫೯). [ಪಯಿಲಾ+ನಂಬರು]

**ಪಯಿಲ್ವಾನ್** 'ಪೈಲವಾನ' ನೋ.

**ಪಯಿಸರಿಸು** 'ಪೈಸರಿಸು' ನೋ.

**ಪಯಿಾಕ** 'ಪಯಿಕ' ನೋ.

**ಪಯೋಂಬುಧಿ** (ನಾ). = ಪಯೋಧಿ ೧ : ಒಗೆದವು . . . ಕೌಸ್ತುಭಾದಿ ನಾನಾವಿಧವಸ್ತುಗಳೊಡನೆ ಪಯೋಂಬುಧಿಯೊಳಗೆ (ಛಂದೋಂಬು.ಕಿ. ೧-೨೪). [ಸಂ.]

**ಪಯೋಜ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : ಪಯೋಜೋಪಮವಕ್ತ್ರೆ ತಳ್ಪ ತಳದಿಂದೊಸೆದೆಟ್ದು (ಶಾಂತಿಪು. ೯-೨೦೯) ; ಮುನಿಮಂಡಳೀಪದಪಯೋಜಶುಶ್ರೂಷೆಯಿಂ . . . ಕಳೆವನಿಂತು ಪೊಟ್ತುಂ ನೃಪಂ (ಕಾದಂಪೂ. ೨೨) ; ತಪ್ಪಿ ಯಾನನ ಪಯೋಜಮಂ ಕುಟ್ಮಳೀಕೃತಂ ಮಾಡಿದುದೇ (ಸುಕುಮಾ. ೯-೯೨) ; ಹೂನವಾಮರನತ ಪಾದ ಪಯೋಜನ ಸೇನೆ ಸಂಭ್ರಮ ವಿಜೃಂಭಿಸುತಿಹುದು (ತ್ರಿಪುಸಾಂ. ೧೧-೧೨೧). [ಸಂ.]

**ಪಯೋಜಜಂತು** (ನಾ). ನೀರಿನಲ್ಲಿ ವಾಸಿಸುವ ಮೀನು, ಮೊಸಳೆ ಮುಂತಾದುವು ; ಜಲಚರ. [ಸಂ.]

**ಪಯೋಜಜ** (ನಾ). ಕಮಲದಲ್ಲಿ ಜನಿಸಿದವನು ; ಬ್ರಹ್ಮ : ಇಂದು ಪಯೋಜಜಂಗೆ ಕೃತಕೃತ್ಯತೆ ಸಾರ್ದುದು (ಚಂದ್ರಪು. ೬-೭೯). [ಸಂ.]

**ಪಯೋಜನಾಭ** (ನಾ). ಹೊಕ್ಕುಳಲ್ಲಿ ಕಮಲವುಳ್ಳವನು; ವಿಷ್ಣು : ಪಯೋಜನಾಭನು ನಿರ್ಮಿಸನೆ ಚೌರಾಸಿದುರ್ಗಗಳ (ಬಸವಪು. ೫೪-೩೬). [ಸಂ.]

**ಪಯೋಜನ್ಮ** (ನಾ). ೧. ನೀರಿನಿಂದ ಹುಟ್ಟುವುದು ; ಮೋಡ. ೨. "ಕಮಲ" (ಅಸಂನಾ). [ಸಂ.]

**ಪಯೋಜಸಖ** (ನಾ). ತಾವರೆಯ ಗೆಳೆಯ ; ಸೂರ್ಯ : 'ಪಯೋಜಸಖಗೇಹ' ಪರಾ. [ಪಯೋಜ+ಸಖ]

**ಪಯೋಜಸಖಗೇಹ** (ನಾ). [ಜ್ಯೋತಿ] ಸೂರ್ಯನಿರುವ ರಾಶಿ; ಸಿಂಹರಾಶಿ : ಪಯೋಜಸಖಗೇಹಸ್ಥಾಯಿಯಾದಂದು ಸದ್ಭುವತೀನಾಯಕನಂಗನಾರ್ಜಿತಧನಂ ಮಂದಾತ್ಮಜಂ ತನ್ನರಂ (ಜಾತತಿ. ೧೬-೩೦). [ಪಯೋಜಸಖ+ಗೇಹ]

**ಪಯೋಜಸೂತ್ರ** (ನಾ). ಕಮಲದ ನಾಳ,—ದೇಟು : ಬಕುಳದ ಪೂವಿನಕ್ಷವಳಯಕ್ಕೆ ದುಕೂಲದ ಚೆಲ್ವನಪ್ಪ ಸಾಟಿಗೆಗೆ ಪಯೋಜಸೂತ್ರನವ ಮುಂಜಿಗೆ ನೇತ್ರದ ಕೋವಣಕ್ಕೆ ಮಿಕ್ಕಗುರುವ ಬೂದಿಗೊಡ್ಡೆ ತನುವಂ . . . ನಿಂದಳೊರ್ವಳಂ ಕಂಡು (ಶಾಂತಿಪು.೮-೯೦). [ಪಯೋಜ + ಸೂತ್ರ]

**ಪಯೋಜಿನಿ** (ನಾ). ತಾವರೆ ; ಕಮಲ : ಪಯೋಜಿನಿಗುಳ್ಳರಲಿಂಪುವೆತ್ತ ಸಂಪಗೆಗಲರ್ಜೊಂಪಮುಡ್ಗ ಮದಮಂಜರಿ ಪಾಟಳಿಗಾಗೆ ಬಂದಂ . . . ಮಾಧವಂ (ರಾಜಶೇ. ೧೦-೩). [ಸಂ. ಪಯೋಜಿನೀ]

**ಪಯೋದ** (ನಾ). ನೀರನ್ನು ಕೊಡುವುದು ; ಮೋಡ : ಸ್ತನಿತಘನಬೃಂಹಿತಂ ದುರ್ದಿನಮದಪೂರಂ ಪಯೋದಗಜಘಟೆ ಸುಟುದತ್ತು (ಚಂದ್ರಪು. ೪-೩೨) ; ಉಣ್ಮುವ ಮಿಂಚದು ದೀಪಮಾಲೆಯುಂತುತ್ತುಂಗ ಪಯೋದವಿಟ್ಟ ತೆರೆ . . . ಅಲಿವರಲೊಪ್ಪುವ ಮುತ್ತಿನ ಸೇಸೆಯಾಗೆ ಕಾರುಂ ಗಗನಸ್ಥಳೀರಮೆಯುಮೊಂದಿದರೊಂದು ವಿವಾಹಲೀಲೆಯಂ (ರಾಜಶೇ. ೮-೧೧೪). [ಸಂ.]

**ಪಯೋದಪಥ** (ನಾ). ಮೋಡಗಳು ಸಂಚರಿಸುವ ಮಾರ್ಗ ; ಆಕಾಶ : ನಿರವಧಿಪ್ರಕಾಶಮಯಂ ತಾನಾದುದು ಭಾವಿಸಿ ನೋಡೆ ಪಯೋದಪಥಂ ಪ್ರಥಿತಮಾದ ದೇವಾಗಮದೊಳ್ (ವರ್ಧಪು. ೧೩-೯೧). [ಪಯೋದ+ಪಥ]

**ಪಯೋದಮಾರ್ಗ** (ನಾ). = ಪಯೋದಪಥ : ಇದಿರ್ವಂದು ಪವನ ಪವನಂ ತದ್ವಿಮಾನಗತವದನಸ್ವೇದನವಜಲಕಣಗಣಾಂಭಮನಿನಿಸಾಱಿಸಿದುದು ಪಯೋದಮಾರ್ಗಾಗಮದೊಳ್ (ಶಾಂತಿಪು. ೩-೪). [ಪಯೋದ+ಮಾರ್ಗ]

**ಪಯೋದಾಗಮ** (ನಾ). ಮೋಡಗಳ ಬರುವಿಕೆ ; ಮಳೆಗಾಲ : ನವಿಲಾಟಂ ಸೊಗಯಿಸುಗುಂ ಸುವಿನೀಲಾಯತಗಳಂ ಪಯೋದಾಗಮದೊಳ್ (ಕವಿಕಾ. ೩-೭). [ಪಯೋದ+ಆಗಮ]

**ಪಯೋಧ** (ನಾ). ೧. ಮಳೆಯ ಮೋಡ ; ಕಾರ್ಮೋಡ : ಹರಿನೀಲದ ಭಿತ್ತಿಯೊಳಂಬುರುಹಾನನೆ ಕೂಡೆ ಕುಂಕುಮದ ಕಾರಣೆಯಂ ವಿರಚಿಸಿದಳರರೆ ಮುಂಗಾರ್ ಸಿರಿ ಸೆಳೆಮಿಂಚಂ ಪಯೋಧದೊಳ್ಪುಟ್ಟಿಪ ಪೋಲ್ (ರಾಜಶೇ. ೮-೪). ೨. ಸಮುದ್ರ. ೩. ಕೆರೆ, ಕೊಳ ಇತ್ಯಾದಿ. [ಸಂ. ಪಯೋಧಸ್]

**ಪಯೋಧರ** (ನಾ). ೧. ನೀರನ್ನು ಹೊಂದಿರುವುದು ; ಮೋಡ : "ಅಭ್ರಂ . . . ಪಯೋಧರಃ . . . ಬಲಾಹಕಃ— ಈ ೧೦ ಮುಗಿಲ ಪೆಸರ್" (ಹಲಾಯು. ೧೧-೫೪) ; ಚೆಲ್ವನಾವರಿಸಿದುವಂದು ಸಂದಣಿಸಿನೀಳ್ದ ಪಯೋಧರವಾರಿಧಾರೆಗಳ್ (ಜಗವಿ. ೪-೩೧); ಆ ಪಯೋಧರತಂಡ ಜಂಝಾಮಾರುತರೆನಿಸುತ . . . ಕೊತ್ತಳಾಳ್ವೇರಿ ದುರ್ಗಮ ಬಳಸಿ ಕೊಂಡಿರ್ಪರು (ನವಮೋ. ೨-೫೪). ೨. ಮೊಲೆ; ಸ್ತನ: "ಉರಸಿಜಂ... ಪಯೋಧರಃ, ಸ್ತನಃ—ಈ ೫ ಮೊಲೆ" (ಹಲಾಯು. ೮೭-೩೬೨) ; ಪಯೋಧರದ್ವಯಂಗಳ ತುದಿ ಕರ್ಗಿ ತೋಱುತಮಲೇಂದುವ ಲಾಂಛನ ದಂಡದಂತೆ (ಕಾವ್ಯಸಾ. ೩೬೦ ಶೂದ್ರಕ) ; ನೋಡಿದಂ . . . ಗುರುಜಘನ ಪಯೋಧರಯುಗಭರವಿಧುರೆಯಂ (ಕವಿರಾ. ೨-೫೬) ; ಎರಡುಮಹಲಂಗಳೆಡೆಯೊಳ್ ಪರಿವಮರನದೀಪ್ರವಾಹದಿಂದೆಸೆವ ವಸುಂಧರೆಯಂದದಿನಲಘು ಪಯೋಧರವಿಲಸಿತಹಾರಲತಿಕೆ ಸತಿ ಸೊಗಯಿಸಿದಳ್ (ಕಾದಂಪೂ. ೪೯೬). ೧,೨ : ದಿನನಾಥಂ ನವವರ್ಷಾವನಿತೆಯ ಪೀವರಪಯೋಧರಸ್ಪರ್ಶನದಿಂ ವಿನತಾಂಶುಕನಾದಂ (ಜಗವಿ. ೪-೧೧) ; ಸ್ಫುರಿತಪಯೋಧರಂಗಳೆ ಪಯೋಧರಮಂ ಮರಲೊತ್ತೆ . . . ಮುಖಾಬ್ಜ ಮದಬ್ಜಲೀಲೆಯಂತಿರೆ ಸುರಕಾಂತೆಯರ್ ಸಜಳಕಾಂತೆಯರೊಪ್ಪಿದರಾ ಪ್ರಯಾಣದೊಳ್ (ಪುಷ್ಪಪು. ೧೦-೩೪). ೩. ಸಮುದ್ರ ; ಕಡಲು. ೪. ಕಣ್ಣು ; ನಯನ : "ನಯನಂ ಮೇಘಂ ಉದಧಿ ಕುಚಂಗಳು ನಾಲ್ಕುಂ . . . ಪಯೋಧರ ಶಬ್ದಂ" (ನಾನಾರ್ಥಂ. ೨೧) ; "ನಯನಾಭ್ರ ಕುಚಾಂಬುಧಿಗಳ್ ಪಯೋಧರಂ" (ನಾನಾರ. ೭). ೫. ಕೆಚ್ಚಲು. ೬. ಬೆನ್ನೆಲುಬು ; ಕಶೇರು. [ಸಂ.]

**ಪಯೋಧರಕಾಲ** (ನಾ). ಮೋಡಗಳಿರುವ ಕಾಲ ; ಮಳೆಗಾಲ : ತಮಗಿದಿರಂ ಬರ್ಪಂತೆ ಬಂದ ಪಯೋಧರಕಾಲದೊಳೆರಡು ತಡಿಯುಮಂ ಪೊಯ್ದು ಪರಿವ ತೊಱೆಗಳುಮಂ . . . [ಜ]ರಿವೊನಲ್ಗಳುಮಂ ಕಂಡು (ಪಂಪಭಾ. ೭-೨೫ ವ). [ಪಯೋಧರ+ಕಾಲ]

**ಪಯೋಧರಶರ** (ನಾ). (ಮಳೆಯನ್ನು ಸುರಿಸುವ) ಮೋಡವನ್ನು ಸೃಷ್ಟಿಸುವ ಬಾಣ ; ವಾರುಣಾಸ್ತ್ರ : ವಿಯಚ್ಚರಾಧಿಪತಿಯೆಚ್ಚ ಕೃಶಾನುಪೃಷತ್ಕಮಂ ಪಯೋಧರಶರದಿಂ . . . ಎಚ್ಚು ತೂಳ್ದಿದಂ (ಚಂದ್ರಪು. ೬-೩೯). [ಪಯೋಧರ+ಶರ]

**ಪಯೋಧರಶಿಲೀಮುಖ** (ನಾ). = ಪಯೋಧರಶರ: ಪಯೋಧರಶಿಲೀಮುಖಮಂ ಮರುದುಗ್ರಬಾಣದಿಂ . . . ಎಚ್ಚು ತೂಳ್ದಿದಂ (ಚಂದ್ರಪು. ೬-೩೯). [ಪಯೋಧರ+ಶಿಲೀಮುಖ]

**ಪಯೋಧಾರೆ** (ನಾ). ನೀರಿನ ಧಾರೆ : ಸುಱಿದುದು . . . ಜಳದೇವೀಸಮುಱಹಂಬೊಲಂಭೋದಪಯೋಧಾರಾಳಿ ತಳ್ತೊಯ್ಯನೆಸೆದಿರುಕೊಳ್ ಜಾರನಾರೀಕದಂಬಂ (ಜಗವಿ. ೪-೨೯). [ಸಂ. ಪಯೋಧಾರಾ]

**ಪಯೋಧಿ** (ನಾ). ೧. ನೀರಿಗೆ ಆಶ್ರಯವಾದುದು ; ಸಮುದ್ರ; ಕಡಲು : ಪಯೋಧಿಗೊರ್ಮೆ ಜಿನಮಂದಿರಸುಂದರಮಂದಿರಕ್ಕೆ ಮತ್ತೊರ್ಮೆ ಮನುಷ್ಯಲೋಕ ಜಿನಪೂಜೆಗೆ ಪೋಗೆ (ಶಾಂತಿಪು. ೭-೩೫) ; ಶ್ರುತಪಯೋಧಿಯನೀಸಿದ ವರ್ಧಮಾನಭಟ್ಟಾರಕರಂ... ಅರ್ಚಿಪೆಂ (ಪಂಪಾಪ್ರಾ. ೧-೧೪) ; ಮುಱಿದು ಮಂದರಗಿರಿ ಪಯೋಧಿಯ ತೆರೆಗಳನು ತುಳಿವಂತೆ (ಕುಮಾರವ್ಯಾಸ. ೩-೧೪). ೨. [ಜೈನ] ಕಾಲದ ಒಂದು ಗಣನೆ;

ಸಾಗರ : ಅಮರರನೇಂ ನಿರ್ಮೂಳಿಸುವನೊ ವಿಧಿ ಪಯೋಧಿಯುಂಗಳಾವಧಿಯೊಳ್ (ಪಲ್ಲಿಪು. ೧೩-೧೧೦). [ಸಂ.]

**ಪಯೋಧಿಕೇಳಿ** (ನಾ). ನೀರಾಟ; ಜಲಕೇಳಿ : ತೀರದ ನೀರದಂ ನೆಗೆದು ಗರ್ಜಿಪುದೆಂದು ಪಯೋಧಿಕೇಳಿಯಂ ಸಾರಮರಾಳನೇನುಳಿದುದೆ (ರಾಜಶೇ. ೧೩-೧೯). [ಪಯೋಧಿ + ಕೇಳಿ$_3$(= ಕೇಲಿ)]

**ಪಯೋನಿಧಿ** (ನಾ). ೧. = ಪಯೋಧಿ ೧ : ಶ್ರೀಯನರಾತಿಸಾಧನ ಪಯೋನಿಧಿಯೊಳ್ ಪಡೆದುಂ ಧರಿತ್ರಿಯಂ ಜೀಯೆನೆ ಬೇಡಿಕೊಳ್ಳದೆ (ಪಂಪಭಾ. ೧-೧). ೨. ಹಾಲಿನ ಸಮುದ್ರ; ಕ್ಷೀರಸಾಗರ : ಪಯೋನಿಧಿಯಿಂದಂ ನಿಖಿಳಾವನೀಶ್ವರಭಯುಸ್ಥಾನಂ . . . ಸುಪುತ್ರನೊಗೆತರ್ಕುಂ ನಿಮ್ಮೊಳುರ್ವೀಶ್ವರಾ (ಪುಷ್ಪಪು. ೩-೧೨೨) ; ಪಯೋನಿಧಿಯ ಕೆನೆಯೊಪ್ಪಮಲ್ಲದೆ ನೀರ್ವೊಗೆಯುಲಿವ ಮೇಘಂಗಳಲ್ಲೆ ಸಿಸಿದುವು ಕಡಲೊಳು (ಜೈಮಿಭಾ. ೬-೬). [ಸಂ.]

**ಪಯೋಬಿಂದು** (ನಾ). ೧. ಹಾಲಿನ ಹನಿ, —ತೊಟ್ಟು : ಪರಿಯ ಪದಕಮಲಾಭಿಷೇಕದ ವರಪಯೋಬಿಂದುಗಳು. . . ಕಡಲಾಗಿ ಕೈಗೊಳಲು (ಕುವ್ಯಾಉ. ೮-೧೫). ೨. ನೀರಿನ ಹನಿ. [ಸಂ.]

**ಪಯೋಭೃತ್ತು** (ನಾ). ಮೊಲೆ; ಸ್ತನ : ರಜನೀಕಾಂತಾಪಯೋಭೃತ್ತಟಮಲಯಜಪತ್ರಂ . . . ಬೆಡಂಗಾಯ್ತು (ಚಂಪ್ರಪು. ೮-೩೪) ; ಪಯೋಭೃದ್ಭರನಮ್ರಾಂಗಾಂಗನಾಚಾಲಿತ ಚಮರರುಹದ್ವಂದ್ವಪಾರ್ಶ್ವಂ (ರಾಜಶೇ. ೩-೨೭). [ಸಂ. ಪಯೋಭೃತ್]

**ಪಯೋರಸ** (ನಾ). ೧. ನೀರು; ಜಲ : ಪಯೋರಸಂ ತೀಡುವ ತೆಂಬೆಲರ್ ಮನದೊಳುರ್ಕೆಗಳಂ ಸುರತಾವಸಾನದೊಳ್ ಮಾಡೆ (ಶಾಂತಿಪು. ೮-೧೦೦). ೨. ಹಾಲು : ಚಂದಳಿರ್ದಾಪಂ ಬಿಂಬದೊಳೊಂದಿದ ಕೆಂಪಂ ಪಯೋರಸದೊಳಮರ್ದಿಂಪಂ ಕುಂದದ ರನ್ನದಲಂಪಂ ತಂದೊಂದೆನಿಸಿದ ಪೊಲಧರಮೊಪ್ಪಿದುದವಳಾ (ರಾಜಶೇ. ೭-೫೩). [ಸಂ.]

**ಪಯೋರಾಶಿ** (ನಾ). ಸಮುದ್ರ; ಕಡಲು : ಪಯೋರಾಶಿತಟದೊಳಾತನ ಕೀರ್ತಿಪ್ರಮದೆ ಪಥಶ್ರಮದಿಂ ವಿಶ್ರಮಿಸಿದಳ್ (ಶಾಂತಿಪು. ೮-೫೫) ; ಪಯೋರಾಶಿಗಳಂ ಮುಟ್ಟಿತ್ತು ದಾನಪ್ಲವದೊಡನೆ ಪರಕ್ಷೋಣಿಪಾಲಾಂಗನಾದೃಗ್ಗಿಗಳದ್ಬಾಷ್ಪಾಂಬುಧಾರಾಪ್ರಸರಂ (ಅಜಿಪು. ೯-೧೭) ; ತರಣಿ ಪಶ್ಚಿಮಪಯೋರಾಶಿಗೈತಂದನು (ಹಚಕಾ. ೯-೩೭). [ಸಂ.]

**ಪಯೋರುಹ** (ನಾ). ನೀರಿನಲ್ಲಿ ಹುಟ್ಟಿದುದು; ತಾವರೆ; ಕಮಲ : ಮುನೀಶ್ವರರ್ಗಳೆ ದೈವಮೆಂದವರ ಪಾದಪಯೋರುಹಸೇವೆಯಲ್ಲಿ ತತ್ಪರರೆನಿಪರ್ಗೆ ಪೇಟ್ ಪಡೆಯಲಾಜದುದೇಂ (ಕಾದಂಪೂ. ೩೪೮) ; ಕೈಮುಗಿವ ಮಿಲ್ಲಿಂದೆ ಪಿತೃಪದಪಯೋರುಹಕೆ (ಶ್ರೀರಾಮಾ. ೧೫೯-೧೯೯). [ಸಂ.]

**ಪಯೋವಾರ್ಧಿ** (ನಾ). = ಪಯೋಧಿ ೧ : ಪಯೋವಾರ್ಧಿಗೆ ಚಂದ್ರಮನಂ . . . ತೋರ್ಪಂತಾ ವಿಮಳೆಗೆ ಗಿರಿಜೆಗೆ ಶಿವಲಿಂಗಮನಧಿಕಮನಃಪ್ರಮೋದದಿಂ ತೋಱುವುದುಂ (ಗಿರಿಕ. ೩-೫೩). [ಸಂ.]

**ಪಯೋವಿಕಾರ** (ನಾ). ಹಾಲಿನ ರೂಪಾಂತರವಾದ ಮೊಸರು, ಬೆಣ್ಣೆ, ತುಪ್ಪ ಮೊದಲಾದುವು : ಪಯೋವಿಕಾರದಿಂ . . . ಫಳಮಕ್ಕುಂ . . . ಮನುಜಂಗೆ ಚಂದ್ರದಶೆಯಪ್ಪಾ ರೋಹಿಗೇಹಂಗಳೊಳ್ (ಜಾತತಿ. ೯-೧೯). [ಸಂ.]

**ಪಯ್ಕು** 'ಪಯಿಕ' ನೋ.

**ಪಯ್ಕನೆ** (ಅ). ಬೇಗನೆ; ಕೂಡಲೆ : ಪಯ್ಕನೆ ರಥಂ ಪರಿದತ್ತು (ಶಬ್ದಾನು. ೨೮ ವ್ಯಾಖ್ಯಾ). [? + —ಅನೆ$_1$]

**ಪಯ್ತು** (ನಾ). (?) : ಶ್ರೀಕಾಂತಾಕಾಂತನಾತ್ಮೋದರಭವನದೊಳೊಂದರ್ಕ್ಕಟಿಂ ಬಯ್ತು ಪಯ್ತುಂ ಲೋಕಾಲೋಕಂಗಳಂ (ಸೌಇಇ. XV, ೩೨-೪ ; 1147).

**ಪಯ್ತುಮಾಗು** = (?) : ವಿದ್ಯೆಯಂ ಕೊಂಡು ಬಂದಪೆನಾನೀಗಳ್ ಬರ್ಪಿನಂ ಮನೆಗೆ ನೀನಿಂ ಪಯ್ತುಮಾಗೆಂದು ಪೇೞ್ದು ಪುರಾಭ್ಯಂತರದಿಂದ ಮುಂದು ಪೊಱಮಟ್ಟಂ ಸೂರ್ಯಮಿತ್ರದ್ವಿಜಂ (ಸುಕುಮಾ. ೩-೨೩). [ ? ]

**ಪಯ್ದುಗೆ** (ನಾ). ಒಂದು ಸ್ಥಳದ ಹೆಸರು : ಪಯ್ದುಗೆಯೆದೆ ಜನ್ನಯ್ಯ × × × ಮಗ ನರಸಿಂಗಯ್ಯಂಗೆ ಕೊಟ್ಟ ಸಶನ (ಎಕ. IV, ಗುಂಡ್ಲು ಪೇ. ೫೭-೫; ಸು. 900 ?) ; ಕಡೆಕೊಳಂ ಖಾರವುರಂ ಪಯ್ದುಗೆಯ ಮುಕಳ್ಳೂಡಲ್ತಿಜ್ಜಮೊಗದೆ ಪೋಗಿ (ಮೈಆರಿ. ೧೯೩೪, ೩೮-೬ ; 11ನೆಯಶತ). [ ? ]

**ಪಯ್ಯ$_1$, ಪೆಯ್ಯ** (ನಾ). ೧. ಹುಡುಗ; ಬಾಲಕ : ಸಯ್ಯಣ್ಣಗತ್ತೆಯೆಡೆಯೊಳ್ ಪಯ್ಯರ್ಬಿಲ್ಲಿಲ್ಪೆಡೆಯೊಳೆ ನೆಗಟ್ದವರ್ಗಳ್ ಕೆಯ್ಯಂಬಪ್ಪೊಡುರ್ಚಿ ಮೆಯ್ಯಂಬಂ ಕಿಟ್ಟು ಕೊಂಡು ಕೂಕಿಱದೆಚ್ಚರ್ (?) (ಬಂಹರಿ. ೧೨-೫೮) ; ಅಱಿದೆನದನೀ ಪಯ್ಯನಿನ್ (ಅಂತಿಗೊ. ೪೫-೯೩೪).

**ಪೆಯ್ಯ$_2$** : ೨. ಕರು ; ವತ್ಸ : ಹಾಲೆಂಜಲು ಪೆಯ್ಯ[ಪಾಠಾಂ. ಪೆಯ, ಪೇಯ]ನ ಉದಕವೆಂಜಲು ಮತ್ಸ್ಯದ . . . ಎಂತು ಪೂಜಿಸುವೆನಯ್ಯಾ (ಬಸವ. ೮೮೫).

[ದೇ.॥ತಮಿ. ಪೈಯ ; ತುಳು. ಪಯ್ಯ, ಪಯ್ಯೊ, ಪೈಯ್ಯೊ ; ತೆಲು. ಪರ್ಜಿ. ಗೊಂಡಿ. ಪೆಯ್ಯ]

**ಪಯ್ವಿಗುಂದುಪುರ** (ನಾ). ಒಂದು ಸ್ಥಳದ ಹೆಸರು; ℙ ಈಗಿನ ಹೊನ್ನಾವರ ತಾಲ್ಲೂಕಿನ ಹೈಗುಂದ : ಚಂಡಮಹಾಸೇನ ಪುತ್ರಸ್ಯ ಪಯ್ವಿಗುನ್ದುಪುರೇಶ್ವರಸ್ಯ ಪಲ್ಲವರಾಜೇನ ದತ್ತಃ (ಎಇ. XXI, ೨೯-೫; 8ನೆಯ ಶತ). [? + ಪುರ$_2$]

**ಪಯ್ವೆನಾಡು** (ನಾ). ಒಂದು ಸ್ಥಳದ ಹೆಸರು ; ℙ ಉತ್ತರಕನ್ನಡ ಜಿಲ್ಲೆಯ ಒಂದು ಸ್ಥಳ : ಬನವಾಸಿ ಪನ್ನಿರ್ಚ್ಛಾಸಿರಮುಮಂ ಪಯ್ವೆನಾಡುಮಂ (ಎಇ. XV, ೩೩೧-೬ ; 1028). [? + ನಾಡು]

**ಪಯ್ಸರ** 'ಪೈಸರ' ನೋ.

**ಪಯ್ಸರವೋಗು** 'ಪೈಸರಂಬೋಗು' ನೋ.

**ಪಯ್ಸರಿಸು** 'ಪೈಸರಿಸು' ನೋ.

**ಪರ್** (ನಾ). ಒಂದು ಅನುಕರಣ ಶಬ್ದ : ಮಗು ಪುಸ್ತಕವನ್ನು ಪರ್ ಎಂದು ಹರಿದು ಹಾಕಿತು (ರೂಢಿ).

**ಪರ$_1$** (ನಾ). ಪಕ್ಷ; ಕಡೆ.

**ಪರವಾಗಿ** = ೧. ಸಲುವಾಗಿ; ವತಿಯಿಂದ: ನನ್ನ ಪರವಾಗಿ ನೀನು ಎರಡು ಮಾತುಗಳನ್ನು ಆಡಬಾರದೆ ? (ಹಾಹುತ್ತ. ೨); ನೀನೇ ನನ್ನ ಪರವಾಗಿ ಅಲ್ಲಿಗೆ ಹೋಗಿ ಬಂದು ಬಿಡು (ರೂಢಿ). ೨. ಪಕ್ಷವಹಿಸಿ; ಪಕ್ಷಕ್ಕೆ ಸಹಾಯವಾಗುವಂತೆ : ಆ ಪಕ್ಷದ ಪರವಾಗಿ ನಿಂತಿದ್ದ ಅಭ್ಯರ್ಥಿಗೆ ಸೋಲಾಯಿತು (ರೂಢಿ). 'ಪರ$_3$' ಪರಾ. [ದೇ.॥ತಮಿ. ಪರ]

**ಪರ$_2$** 'ಪರ್ಬ' ನೋ.

**ಪರ$_3$** (ಗು). ೧. ದೂರದ; ಹತ್ತಿರವಲ್ಲದ. ೨. ಪ್ರತಿಯಾದ; ವಿರುದ್ಧವಾದ. ೩. ಮುಂದಿನ; ಎದುರಿನ. ೪. ಭವಿಷ್ಯದ. ೫. ಬೇರೆಯ; ಅನ್ಯ. ೬. ಶ್ರೇಷ್ಠವಾದ; ಉತ್ತಮವಾದ. ೭. ಪರಾಕಾಷ್ಠೆಯ; ತುಟ್ಟತುದಿಯ. ೮. ಶತ್ರುತ್ವದಿಂದ ಕೂಡಿದ; ಹಗೆಯನ್ನು ಸಾಧಿಸುವ. ೯. ತಲ್ಲೀನತೆಯನ್ನು ಹೊಂದಿದ; ಮಗ್ನವಾದ. (ನಾ). ೧೦. ದೂರವಾದುದು; ಹತ್ತಿರವಲ್ಲದುದು: "ವಿಪ್ರಕೃಷ್ಟಂ, ಪರಂ . . . ವ್ಯವಹಿತಂ — ಈ ೫ ದೂರಂ" (ಹಲಾಯು. ೧೧೫-೮); "ಪರಂ ದೂರಮೆನಿಸಿಪ್ಪುದು" (ನಂಗರಾ. ೧೨೭-೫). ೧೧. ಪ್ರತಿಯಾದುದು; ವಿರುದ್ಧವಾದುದು. ೧೨. ಎದುರಿನಲ್ಲಿರುವುದು; ಮುಂದುಗಡೆಯಲ್ಲಿರುವುದು : ಪರದ ಪವರ್ಗದ ನೆಲೆಗಳ್ಕುಂ ವತ್ತಂ (ಶಮದ. ೬೬). ೧೩. ಮುಂದೆ ಬರಲಿರುವ ಕಾಲ ; ಭವಿಷ್ಯತ್ತು: ಇರವುಂ ಪರವುಂ ತಿರುನಾಳಾದುದು (ತಿರುನಾ. ದೇ. ೨೧೬-೧೫);

**೧೪.** ಅನ್ಯವಸ್ತು; ಬೇರೆಯವರ ಪದಾರ್ಥ : ಶಂಭುವಿನ ಭಕ್ತರಂಗಳಿಳ ಸಂಗತ ವಿವರಣೆಯು ತಾ ನೈಜವಲ್ಲದೆ ಪರವೆ ಪರಿಕಿಸಲು (ಬಸವು. ೯-೫೩). **೧೫.** ಅನ್ಯ; ಬೇರೆಯವನು; ಪರಕೀಯ; ಹೊರಗಿನವನು: ಪರಗರ್ಪಕರಿಪೆಡೆಗಳ್ಗುಪಕರಣಂ ತನು ತೃಣದ ತೆಱದೆ ಲಘುಜೀವಿತಮೆಂಬೆರಡುಂ ಪಾವುಡಮಿಂತೀ ಬರವಿಂಗೆ (ಕಾದಂಉ. ೧೫೪); ಕಾಮಧೇನು ನಿಮ್ಮ ಸಾರಿರಲು ಪರರ ಬೇಡಲಾಟಿಸಯ್ಯಾ (ಬಸವ. ೨೬೧); ಹರ ಕೊಲ್ಲಲ್ ಪರ ಕಾಯ್ವನೇ (ಸೋಮೇಶ. ೨೯); ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಸರ್ವಜ್ಞ. ೬೦೩); ಮನೆಗೆ ಮಾರಿ ಪರರಿಗೆ ಉಪಕಾರಿ (ಗಾದೆ). **೧೬.** ಶ್ರೇಷ್ಠವಾದುದು; ಉತ್ತಮವಾದುದು: ಪರಕ್ಕೆ ಪರತರವೆನಿಪ ದೈವದ ಪರಮತತ್ತ್ವರಹಸ್ಯವನು ವರ್ಣಿಸಿದನು (ತಿಭಾಗ. ೧೦-೬೩-೧); ಪರಕೆ ಪರವೆನಿಪಾ ಕ್ಷರಾಕ್ಷರಪುರುಷರೀ ಪ್ರಕೃತಿಯಂ ತೋಱಲು (ಅಮೃತ. ೪-೫೬); ಗುರುವಿನಿಂದೆ ಪರವಿಲ್ಲವೆಂದು ಸಕಲಶ್ರುತಿಗಳು ಹೊಗಳುತಿಪ್ಪವು ನೋಡಾ (ಅಖಂಡೇ. ೧೭-೧). **೧೭.** ಶ್ರೇಷ್ಠನಾದವನು; ಉತ್ತಮ : "ಪರಂ ಪ್ರಧಾನಂ ಪ್ರವರಂ . . . ಅಗ್ರಗಣ್ಯಂ" (ವಸ್ತುಕೋ. ೯೮-೨). **೧೮.** ಪರಮಾತ್ಮ; ದೇವರು : ಪರವಿದ್ದು ಪ್ರಾಣನ ಪ್ರಕೃತಿಯು ಹರಿಯದ ಭೇದವ ನರರೆತ್ತ ಬಲ್ಲರೈ (ದೇದಾವ. ೫-೯); ಪರನಪರಂ ಭವನಭವಂ . . . ನಿನ್ನ ನಿಜವದೇಂ ಕೇವಳಮೋ (ಜಗವಿ. ೩-೯೭); ಪರನೆಂದರೆ ತ್ರಿಪಾದ್ವಿಭೂತಿಯಲ್ಲಿ . . . ಜ್ಞಾನಶಕ್ತಿ ಮೊದಲಾದ ಅನಂತಕಲ್ಯಾಣಗುಣವಿಶಿಷ್ಟನಾದ ಪರಬ್ರಹ್ಮ, ವಾಸುದೇವ ಮುಂತಾದ ನಾಮಗಳುಳ್ಳ ನಾರಾಯಣನು (ಭಾತತ್ತ್ವ. ೭೬೮). **೧೯.** ಅತ್ಯಂತ ಶ್ರೇಷ್ಠವಾದ ಪದವಿ ; ಮೋಕ್ಷ; ಕೈವಲ್ಯ : ಪರವು ಸಾಧ್ಯವಾಯಿತ್ತೆಂದು ಕ್ರೀಯೆಲ್ಲವ ಮಾಱಿ ನಡೆವೆನು (ಬಸವ. ೮೮೮). **೨೦.** ಪರಲೋಕ : ಇಹಮುಂ ಪರಮುಂ ಬಗೆದಂತೆ ಮಾಳ್ಪ ಸನ್ಮಹಿತ ಜಿನೇಂದ್ರಧರ್ಮಮಭಿವಾಂಛಿತದಾಯಿಯೆನಿಪ್ಪುದೊಪ್ಪದೇ (ಪುಷ್ಪಪು. ೧-೯); ಭಜಿಸು ನಿತ್ಯಾನಿತ್ಯವಸ್ತುವ ವಿಜಯನಹೆ ಇಹ ಪರಕೆ ತತ್ತ್ವದ ನಿಜವಿದೆಲೆ (ಕುಪ್ಯಾಉ. ೪-೧೦); ಸಿರಿಯುದಾರಿಂಗಾದೊಡಪ್ಪುದು ಇರದೆ ಬಹುದಾ ಪಾಪ ಪುಣ್ಯವುಂ ಪರಕೆವುಳಿವುದು ಕೀರ್ತ್ಯಕೀರ್ತ್ಯಗಳೆರಡು ಜಗದೊಳಗೆ (ಕೌತಿರಾ. ೨೩-೧೪); ಪರಕೆ ನಡೆಸುವ ಜಂಘೆ ಹರಿವ ಗಂಗೋತ್ತುಂಗೆ (ಪುರಂದ. ೨-೨೭-೩). **೨೧.** ಹಗೆ; ಶತ್ರು : "ಅರಿ . . . ಪರನಹಿತಂ. . . ವಿದ್ವಿಷ್ಟಂ" (ವಸ್ತುಕೋ. ೯೯-೧೦). **೨೨.** ನದಿಯ ಆಚೆಯ ತೀರ; ಎದುರುದಂಡೆ: "ಪಾರವೆನೆ ಪರವೆನಲು ನದಿಯಾಚೆಯೆನಿಸಿಕ್ಕು" (ಮಂಗರಾ. ೧೨೩-೧೨). **೨೩.** (?) : ಹಿತ್ತಿಲ ಚತುಸ್ಸೀಮೆಯ ವಿವರ . . . ಸೋವಣಸೆಟ್ಟಿಯ ಪರದ ಗಡಿಯಿಂದಂ (ಸೌಇಇ. IX–ii, ೪೬೪-೨೫; 1472).

**ಪರಮಾಗು, ಪರವಾಗು** = **೧.** ಮುಂದೆ ಬರು ; ಮುಂದುಗಡೆಯಲ್ಲಿರು : ಮಹಚ್ಛಬ್ದಕ್ಕೆ ಮಾ ಎಂಬಾದೇಶಮಕ್ಕುಂ. ಇವರ್ಕೆ ಸಂಸ್ಕೃತಪದಂ ಪರಮಾದೊಡಂ ದೋಷಮಿಲ್ಲ (ಶಮದ. ೧೭೫ ವೃತ್ತಿ). **೨.** ಪರಲೋಕಕ್ಕೆ ಹೋಗು; ಮರಣಹೊಂದು : ಪರವೆ ಪರವಾದಳೇನೆಂದೆಂಬೆನೆಲೆ ದೇವ ಪರವೆ ಕೈಲಾಸಕ್ಕೆ ಮುಂಕೊಂಡಳೆಲೆ ದೇವ (ನಂಬಿರ. ೧೭-೧೨೭). [ಸಂ.]

**ಪರಂಕಲಿಸು** 'ಪರಕಲಿಸು' ನೋ.

**ಪರಂಗ** 'ಫಿರಂಗಿ' ನೋ.

**ಪರಂಗಿ** 'ಫಿರಂಗಿ' ನೋ.

**ಪರಂಗಿ ಅಕ್ಕಿಹುಲ್ಲು** (ನಾ). ಹುಲ್ಲಿನಲ್ಲಿ ಒಂದು ಬಗೆ: ಮರಅಕ್ಕಿಹುಲ್ಲು, ಪರಂಗಿಅಕ್ಕಿಹುಲ್ಲು (ಮೈಔಗಿ. ೭೫-೧೫೩೦).
[ಪರಂಗಿ (<ಫಿರಂಗಿ) + ಅಕ್ಕಿಹುಲ್ಲು]

**ಪರಂಗಿಗಿಡ** (ನಾ). **೧.** ಪಪ್ಪಾಯಿಹಣ್ಣಿನ ಗಿಡ: ಅವರ ಮನೆಯಲ್ಲಿರುವ ಪರಂಗಿಗಿಡದಲ್ಲಿ ಹಣ್ಣುಗಳು ತುಂಬಿವೆ (ರೂಢಿ). **೨.** (ಕರಾ) ಒಂದು ಬಗೆಯ ಹಣ್ಣಿನ ಗಿಡ ; ಅನಾನಸು.
[ಪರಂಗಿ (<ಫಿರಂಗಿ) + ಗಿಡ (<ಗಿಡು)]

**ಪರಂಗಿಚೆಕ್ಕೆ** 'ಫಿರಂಗಿಚೆಕ್ಕೆ' ನೋ.

**ಪರಂಗಿಮಣೆ** 'ಫರಂಗಿಮಣೆ' ನೋ.

**ಪರಂಗಿಮೆಣಸಿನಕಾಯಿ** (ನಾ). ಮೆಣಸಿನಕಾಯಿಯಲ್ಲಿ ಒಂದು ಬಗೆ : (ಮೈಔಗಿ. ೧೭-೩೧೪).
[ಪರಂಗಿ (<ಫಿರಂಗಿ) + ಮೆಣಸಿನಕಾಯಿ]

**ಪರಂಗಿರೋಗ** 'ಫಿರಂಗಿರೋಗ' ನೋ.

**ಪರಂಗಿಹಣ್ಣು** (ನಾ). ಪಪ್ಪಾಯಿಗಿಡದ ಹಣ್ಣು : ಪರಂಗಿಹಣ್ಣು, ಪಪಾಯ (ಮೈಔಗಿ. ೧೮-೩೨೧) ; ಪರಂಗಿಹಣ್ಣು ಆರೋಗ್ಯಕ್ಕೆ ಒಳ್ಳೆಯದು (ರೂಢಿ). [ಪರಂಗಿ (<ಫಿರಂಗಿ) + ಹಣ್ಣು$_3$ (<ಪಣ್$_3$)]

**ಪರಂಗಿಹಲಸು** (ನಾ). **೧.** = ಪರಂಗಿಹಣ್ಣು : (ಕಿ). **೨.** ಅನಾನಸು ಗಿಡ ಮತ್ತು ಅದರ ಹಣ್ಣು : ತೋಟದಲ್ಲಿ ಬಾಳೆ, ಪಪ್ಪಾಯಿ, ಪರಂಗಿಹಲಸು . . . ಹೀಗೆ ಬಗೆಬಗೆಯ ಹಲಸಿನ ಮರಗಳು ಇದ್ದವು (ಶ್ಯಾಮತಾ. ೧೧). [ಪರಂಗಿ (<ಫಿರಂಗಿ) + ಹಲಸು (<ಪಲಸು)]

**ಪರಂಗಿಹುಣ್ಣು** 'ಫಿರಂಗಿಹುಣ್ಣು' ನೋ.

**ಪರಂಚಾಟ** (ನಾ). (ಕರಾ) ಗೋಣಗಾಟ ; ಆಕ್ಷೇಪ : ಅವನು ಕೆಲಸ ಹುಡುಕುವ ಕೆಲಸಕ್ಕೆ ಪ್ರಾರಂಭಿಸಿದನು . . . ಮನೆಯವರ ಪರಂಚಾಟ ಸಾಗಿದೆ (ಚಿಗುರು. ೭೨). [←ತುಳು. ಪರೆಂಚಾಟ, ಪರೆಂಚಣ]

**ಪರಂಜ** (ನಾ). **೧.** ಕತ್ತಿಯ ಅಲಗು ; ಧಾರೆ. **೨.** ಕತ್ತಿ ; ಖಡ್ಗ. **೩.** ತೈಲವನ್ನು ತೆಗೆಯುವ ಯಂತ್ರಸಲಕರಣೆ ; ಗಾಣ. **೪.** ನೊರೆ ; ಬುರುಗು. [ಸಂ.]

**ಪರಂಜಯ** (ನಾ). **೧.** ಶತ್ರುವನ್ನು ಜಯಿಸುವುದು,—ಗೆಲ್ಲುವುದು. **೨.** ನೀರಿನ ಅಧಿದೇವತೆ ; ವರುಣ. [ಸಂ.]

**ಪರಂಜಳ** (ಗು). ನಿರಾಳವಾದ (?).

**ಪರಂಜಳವಾಗು** = ಸ್ಪಷ್ಟವಾಗು (?) : ಅಂಜಿಸುವದೇನೊ ಪರಂಜಳವಾಗಿದೆ . . . ಕಿಂಜನನ ನಿನ್ನದು ನಿನಗಂಜಲ್ಯಾತಕೊ (ವಿದಾಕೃ. ೧೫೫-೧). [←ಮರಾ. ಪರಂಜಳ, ಪರಂಜಲ./ಸಂ. ಪ್ರಾಂಜಲ]

**ಪರಂಜು** 'ಪರಜು' ನೋ.

**ಪರಂಜೋತಿ** (ನಾ). = ಪರಂಜ್ಯೋತಿ : ಈ ತೆಱದ ರಕ್ತಭಿಕ್ಷದ ನೆವದೊಳಾ ಪರಂಜೋತಿ ವಿಶ್ವಾತ್ಮ ನಿಶ್ಚೈಸಿ . . . ಚರಿಸಲು (ವೀಶೈಪು. ೨-೩-೫). [<ಸಂ. ಪರಂಜ್ಯೋತಿಸ್]

**ಪರಂಜ್ಯೋತಿ** (ನಾ). ದಿವ್ಯವಾದ ತೇಜಸ್ಸುಳ್ಳವನು; ಪರಮಾತ್ಮ: ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ . . . ಪೇಟಲೊಡರ್ಚಿದೆನೀ ಪ್ರಬಂಧಮುಂ (ಜಗವಿ. ೧-೧೭) ; ಪರಂಜ್ಯೋತಿಯೆ ಪರೋತ್ತಮ ಕರುಣಿಸುವುದು (ಕುಪ್ಯಾಅ. ೬-೮೭) ; ಪರಮ ಪರಂಜ್ಯೋತಿ ಕೋಟಿ ಚಂದ್ರಾದಿತ್ಯಕಿರಣ ಸುಜ್ಞಾನಪ್ರಕಾಶ (ಭರಚ. ೧-೧).
[ಸಂ. ಪರಂಜ್ಯೋತಿಸ್]

**ಪರಂತಪ** (ಗು). **೧.** ಶತ್ರುಗಳಿಗೆ ತಾಪವನ್ನುಂಟುಮಾಡುವ : ಆ ಪರಂತಪ ಬಲಿಯು ಭವನದ ಕೈಪಱಿಯ ನಾರಿಯರ ವಚನಾಲಾಪ ಹಾಸ್ಯದ ಭಿಕ್ಷದವನಿವನಲ್ಲಲೇ (ತೊರರಾ. ೬-೧೦-೪೮). (ನಾ). **೨.** ಶತ್ರುಗಳಿಗೆ ತಾಪವನ್ನುಂಟುಮಾಡುವವನು ; ವೀರ ; ಪರಾಕ್ರಮಿ : ಇತ್ತ ವಿಕ್ರಮಾರ್ಜುನಂ ಪರಂತಪಂ ತಪೋನಿಯಮನಿಯಮಿತನಾಗಿ (ಪಂಪಭಾ. ೭-೭೭ ವ) ; ಪರಂತಪನಾ ಜಿನಚಂದ್ರಂ ಜೈನಪಾದನತಮುಕುಟ

ವರ್ತಿಯಂ ಬಿನ್ನವಿಕುಂ (ಶಾಂತಿಪು. ೬-೫೭) ; ನೀನು ಪರಂತಪ. ಪರರನ್ನು ತಪಿಸುವಂತೆ ಮಾಡಬೇಕಾದ ನೀನು ಪರರಿಗಾಗಿ ತಪಿಸುತ್ತಿದ್ದೀಯೆ (ಭಾರದ. ೧೧೨). [ಸಂ.]

**ಪರಂತಪನ** (ಗು). ಅತ್ಯಂತ ತಾಪವನ್ನು ಕೊಡುವ; ಘೋರವಾದ: ಅಪರಾಜಿತನಿತ್ತ ಪರಂತಪನ ತಪಶ್ಚರಣವೊಂದೆ ಪೊಟಗೆನೆ ನಿರ್ವೇಗಪರಾಯಣಂ ಮನಂಗೊಂಡು ಪವಿತ್ರಶ್ರಾವಕವ್ರತಂಗಳೊಳೊಣರ್ದಂ (ಶಾಂತಿಪು. ೧-೮೭). [ಸಂ.]

**ಪರಂತಿ,** ಪರತಿ₂, ಹರತಿ, ಹರತ್ತಿ (ನಾ). ಒಂದು ಸ್ಥಳದ ಹೆಸರು : ಮುಗುಳಿ ಪರನ್ತಿ ಮುಳ್ಳುನ್ದ ಏತೇಷಾಂ . . . ಮಧ್ಯಸ್ಥಿತೇ (ಇಆ. VII, ೨೨೦-೨೯ ; 658). **ಪರತಿ₂** : ಅನ್ತು ಮೂಱುಸ್ಥಾನಮುಂ ಪರತಿಯುಂ ಕಣಿಯುಂ ಮತ್ತಂ ಶ್ರೀಜಗದೇಕಮಲ್ಲದೇವರ್ಗ್ಗೆ ನಿವೇದಿಸಿ (ಸೌಇಇ. XI-i, ೬೪-೧೦ ; 1028). **ಹರತಿ** : ಶ್ರೀಮನ್ಮಹಾನಾಯಂಕಾಚಾರ್ಯ್ಯರಾದ ಹರತಿಯಿಮ್ಮಡಿಕೆಙ್ಗಪನಾಯಕರಯನವರು . . . ಕೊಟ್ಟಂತ ಗ್ರಾಮದ ದಾನಪಟ್ಟೆ ಕ್ರಮವೆಂತೆಂದರೆ (ಎಕ. XII, ತಿರು. ೧-೭ ; 1609) ; ಶ್ರೀಮನ್ಮಹಾರಾಜ ಶ್ರೀಹರತಿಸಂಮೇಟ ಸರಜ ರಂಗಪ್ಪ ರಾಜರವರ ಪೌತ್ರರಾದ ಕೃಷ್ಣಪ್ಪರಾಜರವರ ಪುತ್ರರಾದ ರಾಯಪ್ಪರಾಜರವರು. . . ಕೊಟ್ಟ ಭೂದಾನಧರ್ಮ್ಮಶಾಸನದ ದಾನಪಟ್ಟ (ಎಕ. VII(R), ನಾಗಮಂ. ೯೬-೨೩; 1680). **ಹರತ್ತಿ** : ಚೆರಿದು ಚಲ್ವರ ಗಂಡ ಹರತ್ತಿ ಯಿಂಮ್ಮಡಿ ರಂಗನಾಯ್ಕ (ಎಕ. XII, ತಿರು. ೮೪-೫ ; 1612). [?]

**ಪರಂತು** (ಅ). ೧. ಆದಾಗ್ಯೂ ; ಆದರೂ ; ಆದರೆ : ಪರಂತು ಯುದ್ಧದಲ್ಲಿ ಅವರಿಗೆ ಜಯವಾಗಲಿಲ್ಲ (ಭೀಷ್ಮಚ.೨೮); ಪರಂತು, ರಾಜ್ಯವು ಅನ್ಯಾಕ್ರಾಂತವಾಗಲಿಲ್ಲ (ಆರ್ಯಕೀ. ೩೪) ; ಪರಂತು, ಆಆ ನಿಶಾನಿಗಳೆರಡು ಸ್ಥಿರವಾದದ್ದು (ಭೂಮಿಅ. ೧೬). ೨. ಹೊರತು ; ಅಲ್ಲದೆ : ನಾವು ಈಶ್ವರಪೂಜೆ ಮಾಡಿದ್ದಕ್ಕೆ ಈ ದಿನ ವೀರಸ್ವರ್ಗವೇ ಪರಂತು ಎರಡನೇ ಮಾತೇ ಇಲ್ಲ (ಚಿತ್ರಪಾ. ೫೬). [ಸಂ.]

**ಪರಂಧಾಮ** (ನಾ). ೧. ಶ್ರೇಷ್ಠವಾದ ನೆಲೆ; ಸ್ವರ್ಗ. ೨. ಸ್ವರ್ಗವೇ ನೆಲೆಯಾದವನು ; ಪರಮಾತ್ಮ : ಪದ್ಮನಾಭನೆ ಪರಂಧಾಮನೆ . . . ನಿಮಗೆಯು ನಮೋ ನಮೋ (ಗೋಹಾಡು. ೨೦-೧೧೪) ; ಪಾಪಿಗಳನ್ನು ಆ ಪರಂಧಾಮ ಯಾವ ಯಾವ ರೀತಿಗಳಲ್ಲಿ ಶಿಕ್ಷಿಸಬಹುದು (ಎಮುಕ. ೬೬).

ಪರಂಧಾಮವನ್ನೈದು = ಸಾಯು ; ಮರಣ ಹೊಂದು : ಪತಿ ಪರಂಧಾಮವನ್ನೈದಿದ ಮೇಲೆ ಮಹಾದೇವಿಅಕ್ಕನವರು ಗಂಗರಾಜರನ್ನು ಮಹಾಸಚಿವಸ್ಥಾನಕ್ಕೂ ತಂದುಕೊಂಡರು (ಶಾಂತಲಾ. ೧೮) ; ಪಂಚನಮಸ್ಕಾರವನ್ನು ಜಪಿಸುವಾಗಲೇ ಲಲಿತಾಂಗ ಪರಂಧಾಮವನ್ನೈದಿದನು (ದಾನಚಿಂ. ೧೫). [ಸಂ.]

**ಪರಂಧಾಮರೂಪ** (ನಾ). ಪರಮಾತ್ಮನ ಸ್ವರೂಪಿಯಾದವನು : ಪರಂಧಾಮರೂಪಂ ವಿಪುಳ ಜ್ಞಾನಾಬ್ಧಿ ಸತ್ಯಂ . . . ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೮೫). [ಪರಂಧಾಮ+ರೂಪ]

**ಪರಂಪದ** (ನಾ). ಶ್ರೇಷ್ಠವಾದ ನೆಲೆ ; ಪರಮಪದ : ಕ್ಷುಲ್ಲಕರ ಕೂಡಾಡದಲೆ ಶ್ರೀವಲ್ಲಭನ ಸದ್ಗುಣಗಣಂಗಳ ಬಲ್ಲವರ ಕೂಡಾಡಿ ಸಂಪಾದಿಸು ಪರಂಪದವ (ಜಗದಾ. ೩.೩೧). [ಸಂ.]

**ಪರಂಪರ** (ಗು.) ೧. ಒಂದನ್ನೊಂದು ಅನುಸರಿಸುವ ; ಸಾಲಾಗಿರುವ ; ಕ್ರಮವಾಗಿರುವ. (ನಾ). ೨. ಸಾಲು ; ಪರಿವಿಡಿ ; ಪಂಕ್ತಿ : ಸುರದ್ರುಮವಂಕುರಿತ ಪಲ್ಲವಿತ ಕೋರಕಿತ ಪ್ರಸವಿತ ಫಲಿತ ಪರಂಪರದಾ ವಿವರದಿಂ ವರ್ಧಿಸಿತು (ಬಸಪು. ೩೬-೪೯). ೩. ಅನುಕ್ರಮ; ಪರ್ಯಾಯ : ಇಂತೆಮ್ಮ ವಂಶಪರಂಪರದಿ ಬಹುದು (ಬಸಪು. ೫೮-೨೬). [ಸಂ. ಪರಂಪರಾ]

**ಪರಂಪರಾಕ** (ನಾ). ಯಜ್ಞಯಾಗಗಳಲ್ಲಿ ಪ್ರಾಣಿಗಳನ್ನು ಬಲಿಕೊಡುವಿಕೆ : "ಪರಂಪರಾಕಂ, ಶಸನಂ . . . ೨ ವಧಾರ್ಥಕಂ, ಯಜ್ಞದಲ್ಲಿ ವೇದೋಕ್ತಪ್ರಕಾರವಾಗಿ ಮಾಡುವ ಪಶುವಿಶಸನವೆಂಬ ಶ್ರೌತ ಪಶುವಧೆ" (ಸಿದ್ಧಾಂತಿ.೨೨೧). [ಸಂ.]

**ಪರಂಪರಾಗತ** (ಗು). ೧. ಹಿಂದಿನಿಂದ ಬಂದಿರುವ : 'ಪರಂಪರಾಗತಪಾಠ' ಪರಾ. (ನಾ). ೨. ಒಂದಾದ ನಂತರ ಮತ್ತೊಂದು ಬರುವುದು ; ಕ್ರಮವಾಗಿ ಬರುವುದು : ಬಾಹುಬಲಿಯ ವೈರಾಗ್ಯದ ಕಥೆಗೆ ನಡುವೆ ಭರತಚಕ್ರವರ್ತಿಯ ಭೋಗವೈಭವ ಮಹತ್ವಾಕಾಂಕ್ಷೆಯ ಚಿತ್ರ ಪರಂಪರಾಗತವಾಗಿ ಚಿತ್ರಿತವಾಗಿದೆ (ಪರಿತೀ.೧೩೨). [ಸಂ.]

**ಪರಂಪರಾಗತಪಾಠ** (ನಾ). ಗ್ರಂಥದಲ್ಲಿ ಹಿಂದಿನಿಂದ ಬಂದಿರುವ ಲಿಖಿತಭಾಗ : (ಹಸ್ತಪ್ರತಿಗಳಿಗೆಲ್ಲ ಸಮಾನವಾದ) 'ಪರಂಪರಾಗತಪಾಠ'ವಾಗಲೀ (Transmitted Reading) . . . ಅರ್ಥಹೀನವಾಗಿ ಬಿಟ್ಟಿರುವುದು (ಭಾರಪ. ೭೭). [ಪರಂಪರಾಗತ + ಪಾಠ₂]

**ಪರಂಪರಾನುಗತ** (ನಾ). ವಂಶಕ್ಕೆ ಸೇರಿರುವುದು; ಕುಲಕ್ಕೆ ಸಂಬಂಧಿಸಿರುವುದು : ಪರಂಪರಾನುಗತವಾದ ಸತ್ಸಂತಾನದಿಂದಲೇ ಪಿತೃಕರ್ಮಗಳು ನಡೆಯಬೇಕು (ಭಾರದ.೧೧೨). [ಸಂ.]

**ಪರಂಪರಿತ** (ಗು). ಒಂದನ್ನು ಅನುಸರಿಸಿ ಮತ್ತೊಂದು ಬರುವ; ಒಂದರ ಹಿಂದೆ ಮತ್ತೊಂದು ಬರುವ: 'ಪರಂಪರಿತರೂಪಕ' ಪರಾ. [ಸಂ.]

**ಪರಂಪರಿತರೂಪಕ** (ನಾ). [ಕಾವ್ಯವಿ] "ಒಂದು ರೂಪಕಕ್ಕೆ ಮತ್ತೊಂದು ರೂಪಕವು ಕಾರಣವಾದರೆ ಅಂಥ ರೂಪಕಕ್ಕೆ ಪರಂಪರಿತ ರೂಪಕವೆಂದು ಹೆಸರು. ಲಕ್ಷ್ಯ–ಸನಕಾದ್ಯರ್ಕಳ ಮಾನಸಾಂಬುಜಮರಾಳಂ ನೀನೇ ವೇದಾಂತನಂದನ ಕೇಳೀರಸಲೋಲದಿವ್ಯಶುಕರಾಜಂ ನೀನೇ . . . ಶೈವಾಗಮೌಘನಭೋಮಧ್ಯ ಮನೋಜ್ಞ ಬಾಲಮಿಹಿರಂ ನೀನೇ ಭವಾನೀಧವಾ' (ಕೈಪಿಡಿ. ೨೬೪). [ಪರಂಪರಿತ+ರೂಪಕ]

**ಪರಂಪರಿತಹೇತು**(ನಾ). [ಕಾವ್ಯವಿ] ಮುಂದೆ ಸೂಚಿಸುವ ಕಾರಣಗಳಿಗೆ ಹಿಂದೆ ಸೂಚಿಸಿರುವುದನ್ನು ಕಾರಣವಾಗಿ ವರ್ಣಿಸುವುದು: ಪರಂಪರಿತಹೇತುಗೆ—ವಿನಯಮನಿತ್ತುದಿಂದ್ರಿಯಜಯಂ ವಿನಯಂ ಗುಣಸಂಪದಂಗಳಂ ಜನಿಯಿಸಿದತ್ತು (ಕಾವ್ಯಾವ. ೬೨೮). [ಪರಂಪರಿತ+ಹೇತು₂]

**ಪರಂಪರೆ** (ನಾ). ೧. ಒಂದರ ನಂತರ ಮತ್ತೊಂದು ಬರುವುದು ; ಸಾಲು ; ಪರಿವಿಡಿ ; ಓಳಿ : ಸರ್ವಜನಭವ್ಯಜನಂಗಳಭ್ಯುದಯಪರಂಪರಾದಿವೃದ್ಧಿಯನತ್ಯಧಿಕಂ ಮಾಡಿಯುಂ (ಅಜಿಪು. ೧೨-೪ ವ); ತತ್ಕಾಂತೆ ಚಿಂತಾಪರಂಪರೆಯಂ ತಾಳ್ದಿದಳ್ (ಮಲ್ಲಿಪು. ೩-೧೦೭); ಅವರ್ . . . ಪರಸಿ ಪರಮೋತ್ಸವಪರಂಪರೆಯನೆಯ್ದಿ ಸುಖಮಿರ್ಪುದುಂ (ಪುಷ್ಪಪು. ೮-೯೫ ವ) ; ೩೦೦ ರಿಂದ ಈಚಿನ ಕಾಲಗಳಲ್ಲಿ ಬ್ರಾಹ್ಮೀಲಿಪಿಯ ಮತ್ತು ಅದರ ಸಂತಾನಗಳ ಅವಿಚ್ಛಿನ್ನ ಪರಂಪರೆ ಇದೆ (ದ್ರಾವಿವಿ. ೫೪). ೨. ಅನೂಚಾನವಾಗಿ ಬಂದಿರುವುದು ; ಸಂಪ್ರದಾಯ; ರೂಢಿ : ವಾಲ್ಮೀಕಿಗೆ ಆದಿಕವಿಯೆಂಬ ಹೆಸರೂ ಪರಂಪರೆಯಿಂದ ಬಂದಿದೆ (ಭಾರದ. ೮೩); ಹಬ್ಬಕ್ಕೊಮ್ಮೆ ಹೊಸ ಬಟ್ಟೆ ತೊಡುವ ಪರಂಪರೆ ನಮ್ಮಲ್ಲಿ ಉಂಟು (ದೇಕನ್ನೆ. ೩೬). ೩. ಹಿಂದಿನ ಸನ್ನಿವೇಶ ; ಹಿನ್ನೆಲೆ : ಸಂಪ್ರದಾಯವು . . . ಇಂದು ಹುಟ್ಟಿ ಇಂದೇ ಬೆಳೆದು ಜನಾಂಗದಲ್ಲಿ ಬಂದಿಲ್ಲ. ಅದಕ್ಕೆ ದೊಡ್ಡ ಪರಂಪರೆಯುಂಟು (ಕನ್ನಜಾ. ೧೨೯). ೪. ಕುಲ; ವಂಶ; ಪೀಳಿಗೆ : ಅವರ ಪರಂಪರೆಯಲ್ಲಿ ಯಾರೂ ಇಂತಹ ಕೆಲಸಕ್ಕೆ ಕೈಹಾಕಿರಲಿಲ್ಲ (ರೂಢಿ). ೫. ಹಾನಿಮಾಡುವುದು ಕೇಡನ್ನು ಮಾಡುವುದು. ೬. ಕೊಲ್ಲುವುದು. [<ಸಂ. ಪರಂಪರಾ]

**ಪರಂಪೋಕು** 'ಪರಂಬೋಕು' ನೋ.
**ಪರಂಬರಿಕೆ** 'ಪರಾಮರಿಕೆ' ನೋ.
**ಪರಂಬರಿಸು** 'ಪರಾಮರಿಸು' ನೋ.
**ಪರಂಬೆ,** ಪೆರಂಬ, ಪೆರಂಬೆ, ಪೆರುಂಬೆ (ನಾ). ಒಂದು ಬಗೆಯ ಸಸ್ಯ : "ಖದಿರಾಹ್ವಯಃ-ಪರಂಬೆ" (ಒಷಧ. ४४). **ಪೆರಂಬ :** ಉತ್ತನ ಪತ್ನಿ . . . ಶುಂಠಿ, ತೆಂಗಿನಕಾಯಿ ಮತ್ತು ಪೆರಂಬಕೊಡಿಗಳನ್ನು ತಂದು ಮಡಗಿದಳು (ಹುಲಿಹಾ. ೧೮೭). **ಪೆರಂಬೆ :** ಮರಗಳು : ಹೆಸವ . . . ಪೆರಂಬೆ (ನಮ್ಮನು. ೨೩೬). **ಪೆರುಂಬೆ :** ಪುನ್ನೆ, ಪೆರುಂಬೆ (ಮೈಔಗಿ. ೬೪-೧೩೦೪). 'ಪಾರಂಬಿ', 'ಹಬ್ಬಿ₁' ಪರಾ.
[ದೇ.॥ ತಮಿ. ಪರಮ್ಪೈ, ಪಿರಮ್ಪು=ಬೆತ್ತ ; ಮಲ. ಪೆರಮ್ಪು, ಪುರಮ್ಪು=ಬೆತ್ತ ; ತೆಲು. ಪ್ರಬ್ಬ=ಬೆತ್ತ]
**ಪರಂಬೋಕು,** ಪರಂಪೋಕು, ಪೊರಂಬೋಕು (ನಾ). ಬಂಜರಾಗಿರುವುದರ ಕಾರಣ ಅಥವಾ ಸಾರ್ವಜನಿಕರ ಉದ್ದೇಶಕ್ಕಾಗಿ ಮೀಸಲಾಗಿರುವುದರಿಂದ ಕಂದಾಯ ಕೊಡಬೇಕಾಗಿಲ್ಲದ ಭೂಮಿ : ಸುಬ್ರಹ್ಮಣ್ಯದೇವಸ್ಥಾನ ಸ್ಥಾನಿಕ ಹೆಬ್ಬಾರರ ಮೂಲಿವರ್ಗ ನಂಬ್ರ ೩ ರಲ್ಲಿತ್ತು ; ಅದು ಅನಂತರ ಪರಂಬೋಕು ಆದುದು (ತುಳುನಾ. ೧೧೮) ; ಆ ಮನೆಯಿರುವ ಸ್ಥಳ ಪರಂಬೋಕು ಅಂತೆ (ಚಿಗುಬ. ४೮). **ಪರಂಪೋಕು :** (ರೈಸ್‌ಗ. II, ೫೫೮). **ಪೊರಂಬೋಕು :** ಈ ದಾರಿ ಪೊರಂಬೋಕಾಗಿ ವಿಂಗಡಿಸಲ್ಪಟ್ಟಿದೆಯೋ ಅಥವಾ ಭಟ್ಟರ ದರ್ಖಾಸ್ತಿಗೆ ಸೇರಿರುವುದೋ ? (ಮಣ್ಣನಂ. ೩೦).
[ದೇ.॥ ತಮಿ. ಪುರಮ್ಪೋಕ್ಕು ; ತೆಲು. ಪೊರಂಬೋಕು./ಮರಾ. ಪರಂಪೋಕ್]
**ಪರಕ** (ನಾ). ಕಣ್ಣಿಗೆ ಕಾಣದಿರುವುದು ; ದೃಷ್ಟಿಗೆ ದೂರವಾಗಿರುವುದು ; ಪರೋಕ್ಷ : "ಪರಕಂ=ಪರೋಕ್ಷಂ" (ಶಮದ. ಪರಿ. ೨) ; "ಪರಕಂ ಪರೋಕ್ಷದೊಳ್" (ಕರ್ಣಾನಿ. ೨೦); "ಪರಕಮೆಂದಾ ಪರೋಕ್ಷಂ" (ಕಬ್ಬಿಗೈ. ೮೩). [< ಸಂ. ಪರೋಕ್ಷ./ ಪ್ರಾ. ಪರೋಕ್ಖ]
**ಪರಕಯ್ಯ** (ನಾ). ಒಬ್ಬಾತನ ಹೆಸರು : ಕಳಿಂಗಬ್ಬೆಯ ಮಗಂ ಪರಕಯ್ಯಂ (ಎಕ. XI, ದಾವಣ. ೧೭-೯; 889).[ಪರಕ₀ + ಅಯ್ಯ₁]
**ಪರಕರ** 'ಪರಕಾರ' ನೋ.
**ಪರಕರಿಸು** 'ಪರಕಲಿಸು' ನೋ.
**ಪರಕರು** 'ಪರಕಾರ' ನೋ.
**ಪರಕರ್ತೃ** (ನಾ). [ವ್ಯಾಕ] ಬೇರೆಯವನು ಕರ್ತೃವಾಗಿರುವುದು; ಪ್ರೇರಕ ಕರ್ತೃ : ಧಾತುಗಿಸು ಕನ್ನಡಕ್ಕಾ ಹೇತುವಿನೊಳ್ ಸ್ವಪರಕರ್ತೃವೊಳ್ . . .ಇಸು ಜಾತಂ (ಶಮದ. ೨೩೧). [ಪರ₃ + ಕರ್ತೃ]
**ಪರಕರ್ತೃಕ** (ನಾ).=ಪರಕರ್ತೃ : ಕನ್ನಡದ ಧಾತುವಿಂಗೆ ಹೇತುವಿನೊಳಂ ಸ್ವಯಂಕರ್ತೃಕ ಪರಕರ್ತೃಕದೊಳಂ ಇಸುವಕ್ಕುಂ (ಶಮದ. ೨೩೧ ವೃತ್ತಿ). [ಸಂ.]
**ಪರಕಲ** (ನಾ). ಒಂದು ಸುಳಿಯ ಹೆಸರು (?) : ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ, ದಾವಣಿಸುಳಿ, ಪರಕಲಸುಳಿ . . .ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೆ ಸುಳಿ ಇರೋದ ತತ್ಕಾಲಾ (ಹುಟ್ಟಹ. ೧೬೫). [ ? ]
**ಪರಕಲಿಸು,** ಪರಂಕಲಿಸು, ಪರಕರಿಸು, ಪರಿಕಲಿಸು, ಹರಕರಿಸು, ಹರಕಲಿಸು, ಹರಿಕರಿಸು (ಕ್ರಿ). ೧. ವ್ಯಾಪಿಸು ; ಹರಡು ; ಆವರಿಸು : ಅಂತು ನೂರ್ವರೊಳೊರ್ವನಗುರ್ಬು ಪರ್ಬಿ ಪರ[ಪಾಠಾಂ. ರಿ]ಕಲಿಸೆ (ಪಂಪಭಾ. ೧-೧೩೧ ವ) ; ಕೋಡನೂಱು ಪಾಡಱುದು ಪರ[ಪಾಠಾಂ. ರಿ]ಕಲಿಸಿ ಕೆಡೆದ ಮದಾಂಧಸಿಂಧುರಂಗಳಡಿಯೊಳಡಂಗಿದನೆ ಗೆತ್ತು (ಗದಾಯು. ೬-೨೮ ವ) ; ಪಿರಿದು ಪರಕಲಿಸಿ ಮೇರುವನರುಹನ ಮಜ್ಜನಪಯಃಪ್ಲವಂ ಮುಸುಕಲೊಡಂ (ಅನಂಪು. ೫-೬೭) ; ಕಾವ್ಯವೆಂದೆಂಬ ಕಲ್ಪವಲ್ಲರಿಯ ಸಲಹುಗೆ ಕೃಪಾಮೃತರಸವನಿರದೆಱೆದು ಪರಕಲಿಸಿ ಪರ್ಬುವಂತೆ (ಸೌಂದಪು. ೧-೬). ೨. ಹೆಚ್ಚಾಗು ; ಅಧಿಕವಾಗು ; ಅತಿಶಯವಾಗು : ಮರಗಿ[ಡು]ವಿನ ಕತ್ತಲೆಯುಂ ಪರಕಲಿಸಿ ಪೊದಟ್ಟು ಶೋಣಮಣಿದೀಧಿತಿಯುಂ ನೆಱೆದಿಪ್ಪುದು (ವರ್ಧಮಾ. ೫-೫೫) ; ಅಲ್ಲಿಂ ನಡೆದು ಪರಕಲಿಸಿ ಪರಿವ ಕರ್ಪೂರರಸದ ಪರಿಕಾಲೊಳ್ ಕಾಲಂ ನೀಡಿ (ಲೀಲಾವ. ೧೧-೫೬ ವ) ; ಕಾಳಗತ್ತಲೆ ಲೋಕದೊಳು ಪರ್ಬಿ ಪರ[ಪಾಠಾಂ. ರಿ]ಕಲಿಸಿ ಮಡಲಿಱುದುದು (ಸೋಮಚ. ೨-೭) ; ಸಿದ್ಧನಂಜೇಶ ಹೇಳಿದಂ ಸರಸಮೃದುಮಧುರವಚನಾಮೃತಂ ಪರಕಲಿಸಿ ಹೊಱಸೂಸಲು (ಗುರುಚಾ. ४-४४). ೩. ವ್ಯಾಪಿಸುವಂತೆ ಮಾಡು ; ಹಬ್ಬಿಸು ; ವಿಸ್ತಾರಗೊಳಿಸು : ರಕ್ಷಾವಿಚಾರಮಂ ಪರಕಲಿಸಿ (ಚೇರಮ. ೧-೨४) ; ಚಂದ್ರಿಕೆಯ ಪರಕಲಿಸಿ ಚಂದ್ರನುದಯಂಗೆಯ್ದನು (ಪ್ರಾಥರಾ. ೯-೨೭). ४. ಹೆಚ್ಚುಮಾಡು ; ಅಧಿಕಗೊಳಿಸು : ವಿರಾಜಿಸುತ್ತಿಹುದು ಸುರಪುರದಂತೆ ವಿಬುಧಸಂಚಯಕೆ ಸುಖವ ಪರಕಲಿಸೆ . . . ತಿರುವಾವಲೂರು (ಸೌಂದಪು. ೨-೮). ೫. ತೊಡೆ; ಲೇಪಿಸು; ಬಳಿ : ತೊಳಪ ಬೆಳ್ಳಿಯ ಪಲಗೆಗೆ ಕತ್ತುರಿಯ ಮಿಸುಪ ರಜಮಂ ಪರಕಲಿಸುತ್ತ (ಜಯಕಾ. ೧೨-೫೨). **ಪರಂಕಲಿಸು:** ೧. ಗಱುಸನ್ನೆಗೆಯ್ದು ತೆಗೆನೆಱೆದೆಱಗಿ ಪರಂಕಲಿ[ಪಾಠಾಂ. ವಿ]ಸಿ ಪರ್ವಿ ಕೂಕಿಱುದಿಸೆ ಕೆಂಗಱಿಯ ಮೊನೆಯಂಬುಗಳ್ ಕಣ್ಡೆಱೆಯಿಸಿದುವು . . . ಕಡುವಿತ್ತಗರಂ (ಪಂಪಭಾ. ೧೦-೭೩). **ಪರಕರಿಸು :** ೨. ಪರಕರಿಸಿ ಹಂಜಿಯುಂ ಹಂಜರಿಸಿಯಿರುತಿರೆ ತೆರೆನೆಗೆಯೆ ಯಮಪುರದ ಸೋಪಾನವೆಂಬಂತೆ (ಪಿಂಡೋರ. ೨-೧೦) ; ಎರೆಗೊಂಡಡರ್ದವಲ್ಲಿಯ ಮರಂಗಳಂ ಬಿಗಿದು ಸುತ್ತಿ ಮೊಗವೆತ್ತಿದ ಸುಯಿ ಪರಕರ[ಪಾಠಾಂ. ಲಿ]ಸೆ ಗರಳಭಯದಿಂ ಚರಿಯಿಸರದಜಿಗ್ರಭಾಗದೊಳ್ ಖಚರರ್ಕಳ್ (ಮಹಾನೇ. ४-೭४). **ಪರಿಕಲಿಸು :** ೧. ಪಚ್ಚು ಪರಿಕಲಿಸಿ ಬೆನ್ನಂ ಮುಚ್ಚಿರೆ ಮುಡಿ ಕಳ್ಪಬೆಳ್ಪವಟ್ಟಲ್ ಬಾಯೊಳ್ ಬೆಚ್ಚಂತಿರೆ ಸತಿ ಶಶಿಯಂ ಕಚ್ಚಿ ನೆಲಕ್ಕಿಱಿದ ರಾಹುವಂ ನೆಱೆ ಪೋಲ್ತಳ್ (ಕಾವ್ಯಸಾ. ೯೬೬ ಶೂದ್ರಕ) ; ಚಕ್ರವರ್ತಿಯ ಪಡೆ ಗಂಗಾನದ್ಯುಭಯತೀರಂಗಳೊಳ್ ಪಚ್ಚು ಪರಿಕಲಿಸಿ ನಡೆದು (ಶಾಂತಿಪು. ೧೧-೭೦ ವ) ; ಜಳಕೇಳಿಲೋಲಭಾವನ ಲಳನಾಕುಚತಟವಿಲಿಖಿತಮೃಗಮದಪತ್ರಾವಳಿ ಪರಿಕಲಿಸಿ ತರಂಗಂಗಳೊಳೀವುದದರ್ಕೆ ಪೂರ್ವಜಳನೀಳಿಕೆಯಂ (ಚಂದ್ರಪು. ೧೫-೩४). ೨. ಪರೆದು ಪರಿ(ರ)ಕಲಿಸಿ ಕವಿವಾ ಪರೆಯಂ ತೆಗೆದರಿದು ಕಳೆದು (ಅಶ್ವಶಾ.೧೫-೧೨) ; ಪರಿಕಲಿಸಿದುರುಮೌಕ್ತಿಕವ ಸಂಚರಿಸುವಾನೆಯ ಮತ್ತಮದನಿರ್ಜರವ . . . ಅಸುರಸಭಾಂಗಣವ ಕಂಡ (ತೊರರಾ. ೫-೨-೬೨) ; ಕಾವ್ಯವಿನಚಂದ್ರಧರೆಗಳುಳ್ಳನ್ನೆಗಂ ಪರಿಕಲಿಸಿ ಮೆಱೆವುದು (ಭಾವಚಿಂ. ೧-೧೬). ೩. ಬಿರುದಿನ ಪಲ್ಲವಸತ್ತಿಗೆ ಮೆಱೆದುವು ಪರಿಕಲಿಸುತ ದಿವ್ಯಪ್ರಭೆಯ (ಕಂನವಿ. ೨೦-೨೧). ४. ಕೂಡು ; ಸೇರು : ತರುಣತಮೋರುಚಿ ಕಮಲಾಕರದೊಳ್ ನವಚಂದ್ರಕಿರಣಮುತ್ಪಲವನದೊಳ್ ಪರಿಕಲಿಸಿದಂತೆ ಕತ್ತುರಿ ಸಿರಿಗಂಧಗಳಪ್ಪು ರಾಮಕೃಷ್ಣರೊಳೆಸೆಗುಂ (ಜಗವಿ. ೬-೨೨) ; ಪರಮಜಿನ ದಿವ್ಯಾಂಗಗಂಧದಿ ಪರಿಕಲಿಸಿ . . . ಪಿರಿದು ನಿರ್ಜರವಾಗಿ ಪರಿವಾ ಪರಮಪಾವನಗಂಧಜಲವನು ಶಿರದೊಳಾಂತುದು ತಮತಮಗೆ ಭಕ್ತಿಯಲಿ ಸುರಸಿಕರ (ಸಾಳ್ವಭಾ. ೩೩-೬೯). ೭. ಗುಂಪುಗೂಡು ; ಒಟ್ಟಾಗು : ಧನುರ್ವಲಂ ತೆಗೆನೆಱೆದು ಪೊಕ್ಕು ಕೂಕಿಱು ದಾರ್ದು ಪರಿಕಲಿಸಿ ಬಂದೊಂದೆವುಲ್ಲೆಗಂಬುದೊಟ್ಟಂತೆಲ್ಲಮೊರ್ವನನೆ ಲಕ್ಷ್ಯಂ ಮಾಡಿ ಶರಾಸಾರದಿಂ ದೂರಪಾತಮಿಸುವುದುಂ (ಶಾಂತಿಪು. ४-೮ ವ). ೮. ಮೀರು ; ಅತಿಕ್ರಮಿಸು :

ಪರಿಕಲಿಸಿರೆ ತೋಳೆ ಕೊಂಬಂ ಕರಜಂಗಳೆ ಪೂಗಳಂ ತಳಂ ತಳಿರಂ ಪೋಲ್ತಿರೆ . . . ಕಲ್ಪತರುವನೆ ಪೋಲ್ತಂ (ಅಜಿಪು. ೪-೫೦). **ಹರಕರಿಸು :** ೧. ಬಲುಬೇಡವಡೆ ಕಡಗಿ ಹರಕರಿಸಿ [ಪಾಠಾಂ. ಪಡಿಸಲಿಸಿ] ನಡೆಯೆ (ಹಚಕಾ. ೫-೧೪). ೯. (ಆಲಂ) ಚಂಚಲವಾಗು ; ಹರಿದಾಡು: ಕರಣಸಂತತಿಗಳನು ಹರಕರಿಸ [ಪಾಠಾಂ. ಹರಕಲಿಸ]ಲೀಯದೆ ಪರಿಣಮಿಸಿ ಮಾಡೆ ಗುರುಭಕ್ತಿ ನೋಡಾ (ಶಿಪಗೀ. ೨೦-೭೮). **ಹರಕಲಿಸು :** ೧. ಕರೆದರ್ ಕಿವಿಯೊಳ್ ಹರಕಲಿಸಿತಂಗಲತೆಯೊಳ್ ಹರಣಂ ಸುಯ್ವ್ ನಿವಿಂದುರ್ ನಡೆದುದು (ಲೀಲಾಪ. ೧೦-೭೭). ೨. ಮಡಲಿಱಿದು ಹಬ್ಬಿ ಹರಕಲಿಸಿ ಬೆಳೆದೆಳಲತೆಗಳಿಡುಕುಱಿಂ (ಹಚಕಾ. ೩-೩೩). ೩. ಅಸುರದೊಳಾನೆದೊಗಲಂ ಬಿಚ್ಚಿ ಹರಕಲಿಸಿ ಹಾಸಿ (ಸೋಮಚ. ೫-೫೫). ೭. ತೆರಳುವ ತೇರು ಪತಾಕೆ ಹರಕಲಿಸಿದ ಭಟರಿಂದೊತ್ತಿ ಬರುತಿರ್ದ ಭರತೇಶ (ಭರಚ. ೩೨-೪೨). **ಹರಿಕರಿಸು :** ೩. ಹರಿಕರಿಸಿ ದಂತಚ್ಛವಿಯ ಬೆಳುದಿಂಗಳನು ಸುರಿವ ಕರಚೆಲುವ ಬಾಯ್ದೆಱೆಯ ಪರಮೇಶ್ವರ (ಪ್ರಭುಲೀ. ೨-೩೦). [< ಪರಿ$_1$ + ? + -ಇಸು$_3$]

**ಪರಕಳತ್ರ** (ನಾ). ಬೇರೆಯವನ ಹೆಂಡತಿ ; ಪರನಾರಿ ; ಪರಸ್ತ್ರೀ : ಪರಕಳತ್ರಮನಪ್ಪಿದುರಂಬೆರಸು ಖಳನ ತಲೆಯಂ ಕೊಳ್ವಂ (ಶಾಂತಿಪು. ೬-೭೮). [ಪರ$_3$ + ಕಳತ್ರ (= ಕಲತ್ರ)]

**ಪರಕಾಯ** (ನಾ). ಬೇರೆಯ ದೇಹ,—ಶರೀರ : ಪರಕಾಯದಿ ಪ್ರವೇಶ ಬಲ್ಲಾತನಾಗಿ ಕುಕ್ಕುರನೊಂದು ಸತ್ತು ಬಿದ್ದಿರಲದಱ ಕಾಯದೊಳು ಪೊಕ್ಕು (ಪ್ರೌಢರಾ. ೧೯-೨೦). 'ಪರಕಾಯಪ್ರವೇಶ' ಪರಾ. [ಪರ$_3$ + ಕಾಯ]

**ಪರಕಾಯಪ್ರವೇಶ** (ನಾ). ಅಲೌಕಿಕ ಸಾಧನೆಯಿಂದ ತನ್ನ ಪ್ರಾಣವನ್ನು ಬೇರೊಂದು ಶರೀರದಲ್ಲಿ ಪ್ರವೇಶಿಸುವಂತೆ ಮಾಡುವುದು; ಚೌಷಷ್ಟಿಕಲೆಗಳಲ್ಲಿ ಒಂದು : ಎಮ್ಮ ಗುಣಾಪಹಾರಾರ್ಥಂ ಬಂದೀ ಶ್ಯೇನ ಪಾರಾವತಂಗಳೊಳ್ ಪರಕಾಯಪ್ರವೇಶದಿಂ ನುಡಿವುದದು ಕಾರಣದಿನೀ ಪುರುಷಭಾಷಾನುವಾದಂಗಳೊಳವೆಂಬುದುಂ (ಶಾಂತಿಪು. ೯-೯೧ ವ); ಪರಕಾಯಪ್ರವೇಶ ... ಖಗೋಳಜ್ಞಾನ ಮೊದಲಾದುವುಗಳು ಅವಾಂತರ ಸಿದ್ಧಿಗಳು (ಭಾರದ. ೧೬೫).

**ಪರಕಾಯಪ್ರವೇಶ ಮಾಡು** = ತನ್ನ ಪ್ರಾಣವನ್ನು ಬೇರೆಯವರ ಶರೀರದಲ್ಲಿ ಹೊಗಿಸು,—ಪ್ರವೇಶಿಸುವಂತೆ ಮಾಡು: ಹುಡುಗರಿಗೆ ಬೋಧೆ ಮಾಡುವುದು ಪರಕಾಯಪ್ರವೇಶ ಮಾಡುವುದು ಎರಡೂ ಒಂದೇ (ಮಾಮರ. ೫೬). [ಪರಕಾಯ + ಪ್ರವೇಶ]

**ಪರಕಾರ,** ಪರಕರ, ಪರಕರು, ಪರಿಕರ$_2$, ಪರಿಕಾರ$_2$ (ನಾ). (ಉಕ) ಸಾಮಾನ್ಯವಾಗಿ ಚಿಕ್ಕಹುಡುಗಿಯರು ಧರಿಸುವ ಒಂದು ಬಗೆಯ ಉಡುಪು ; ಲಂಗ : ಶಾಂತಾ . . . ಪರಕಾರದ ಬದಲು ಸೀರೆ ಧರಿಸತೊಡಗಿದಳು (ಗಂಮಾಯಿ. ೨೨೪) ; ಅಕ್ಕನ ಮದುವೆ ನಿಶ್ಚಯವಾದಾಗ ನಾನಿನ್ನೂ ಪರಕಾರ ಉಟ್ಟುಕೊಳ್ಳುತ್ತಿದ್ದೆ (ವೈಸಿ. ೭). **ಪರಕರ :** ಥಾಯಲಂಡದ ಚಪ್ಪಟೆಮುಖದ ಪರಕರ ಉಟ್ಟ ಗಿಡ್ಡ ಹುಡುಗಿ . . . ನುಸುಳಿ ಹೋಗುವಾಗ (ಕ್ಷಿತಿಜ. ೮) ; ವಸೂ ಪರಕರದ ಪೋರಿಯಾಗಿ ಉಳಿಯದೆ. . . ಹೆಣ್ಣಾಗಿ ಬಂದಿದ್ದಳು (ದೀಪಹ. I, ೧೧೬). **ಪರಕರು :** ಮೈಮೇಲೆ ಷರ್ಟು, ಪರಕರು . . . ಸಾದಿನ ಬೊಟ್ಟು ಇಟ್ಟುಕೊಂಡ ಬಾಲಕಿಯರು—ಇವರೇ ತುಂಬಿಬಿಟ್ಟರು (ಮುಂಗಾಪು. ೨೬). **ಪರಿಕರ$_2$:** ಹೆಂಗಸರು ಪರಿಕರವನ್ನುಟ್ಟುಕೊಂಡು ಬಲಕ್ಕೆ ಶರಗು ಹೊದ್ದುಕೊಳ್ಳುವರು (ಕಭಾಗ. ೧೦೫). **ಪರಿಕಾರ$_2$ :** ಹೆಂಗಸರು ಪರಿಕಾರ ಉಟ್ಟುಕೊಂಡು ಮಾರವಾಡಿ ಹೆಂಗಸರಂತೆ . . . ಸೆರಗು ಹೊದ್ದುಕೊಳ್ಳುತ್ತಾರೆ (ಕಭಾಗ. ೧೦೮) ; ಅಜ್ಜಿ ಚಿನ್ನಮ್ಮನಿಗೆ ಪರಿಕಾರ ಬಿಡಿಸಿ ಕಿರಿಗೆ ಉಡಿಸಿದ್ದಳು (ಮಲಿಮ. ೯೩).

**ಪರಕಾರದ ಗೆಳತಿ** = ಬಾಲ್ಯದ ಸ್ನೇಹಿತೆ: ನಾವೀರ್ವರೂ ಪರಕಾರದ ಗೆಳತಿಯರು (ಭೂಮಿತಾ. ೨೩). **ಪರಕಾರದ ಹುಡುಗಿ** = ಎಳೆಯ ವಯಸ್ಸಿನ ಹುಡುಗಿ; ಬಾಲಕಿ : ಆಗ ಅವಳಿನ್ನೂ ಪರಕಾರದ ಹುಡುಗಿ (ಅಲ್ಪವಿ. ೧೩೨).

[← ಪಾರ. ಪರಕಾರ್ ; ಮರಾ. ಪರಕರ್, ಪರಕೋರ್]

**ಪರಕಾರ್ಯ** (ನಾ). ಪರೋಪಕಾರ ; ಪರಾರ್ಥ : ಕೃಷ್ಣನಲ್ಲಾ ನರನ ಸಾರಥಿಯಾಗನೇ ಪರಕಾರ್ಯದನುವಱಿದು (ಕುಪ್ವಾಕ. ೫-೨೫). 'ಪರಕಾರ್ಯನಿಷ್ಠ' ಪರಾ. [ಪರ$_3$ + ಕಾರ್ಯ]

**ಪರಕಾರ್ಯನಿಷ್ಠ** (ನಾ). ಪರೋಪಕಾರದಲ್ಲಿ ಶ್ರದ್ಧೆಯುಳ್ಳವನು; ಪರೋಪಕಾರಿ : ಸತ್ಪುರುಷರೇ ಪರಕಾರ್ಯನಿಷ್ಠರು (ಕುಪ್ವಾಕ. ೫-೨೫). [ಪರಕಾರ್ಯ + ನಿಷ್ಠ]

**ಪರಕಾಲ** (ನಾ). ೧. ಬೇರೆಯ ಸಮಯ : ಉಳ್ಳುದನಲ್ಲದಾರ್ಗಮಿಲ್ಲೆನಲ್ ಬಾರದುಳ್ಳುದುಂ ಪರದ್ರವ್ಯ ಪರಕ್ಷೇತ್ರ ಪರಕಾಲ ಪರಭಾವದಿಂದಮಿಲ್ಲದಿರ್ಕುಂ (ಶಾಂತಿಪು. ೮-೧೩೮ ವ). ೨. ಶತ್ರುಗಳಿಗೆ ಯಮನಂತಿರುವವನು. ೩. ತಮಿಳುನಾಡಿನ ವಿಷ್ಣುಪಂಥದ ಹನ್ನೆರಡು ಜನ ಆಳ್ವಾರರುಗಳಲ್ಲಿ ಒಬ್ಬರಾದ ತಿರುಮಂಗೈಆಳ್ವಾರರ ಹೆಸರು : ಶ್ರೀಕೃಷ್ಣ ಮಧುರಕವಿ . . . ಶ್ರೀಕೃಷ್ಣಮುನಿವಾಹನರ್ ಶ್ರೀಕೃಷ್ಣ ಪರಕಾಲರ್ (ಎಕ. V (R), ಮೈಸೂರು. ೪೯-೯ ; ?) ; ತಿರುಮಂಗೈಆಳ್ವಾರ್—ಪರಕಾಲ, ಕ್ರಿ.ಪೂ.೪೮೫೧ (ಭಾರದ.೨೫೭೮೮೧೬). 'ಪರಕಾಲಮಠ' ಪರಾ. [ಸಂ.]

**ಪರಕಾಲಮಠ** (ನಾ). ತಮಿಳುನಾಡಿನ ತಿರುಮಂಗೈ ಆಳ್ವಾರರಿಗೆ ಸಂಬಂಧಿಸಿದ ಮಠ : ಶ್ರೀಮದ್ಘಂಟಾವತಾರ ಪರಕಾಲಮಠಕ್ಕೆ . . . ಕೃಷ್ಣರಾಜವಡೆಯರವರು ಸಮರ್ಪಿಸಿದ ರತ್ನಪಡಿ ಶಠಗೋಪ (ಎಕ.V (R), ಮೈಸೂರು. ೨೫-೧ ; 1816). 'ಉತ್ತರಾಧಿಮಠ' ಪರಾ. [ಪರಕಾಲ + ಮಠ]

**ಪರಕಾಳೆ** (ನಾ). ೧. ಒಂದು ಬಗೆಯ ಬಟ್ಟೆ : ಗಾಂಧಾರಿಯು . . . ವತ್ತಾಗಿರುವ ಪರಕಾಳೆ ವಸ್ತ್ರವನ್ನು ಗಳಿಗೆ ಮಾಡಿ ಅದರಿಂದ ಕಣ್ಣುಗಳನ್ನು ಕಟ್ಟಿಕೊಂಡಿದ್ದಳು (ಕೃಪಾಅ. ೨೦೫). ೨. "ಪರಕಾರ" (ಜಾನಕೋ.೧೪).[← ಪಾರ. ಪರಕಾಲಾ; ಮರಾ. ಪರಕಳಾ, ಪರಕಾಳೀ, ಪರಕಾಳಾ./ತಮಿ. ಪಱಕ್ಕಾಳಿ ; ತುಳು. ಪರಕಳೆ, ಪರಕಾಳಿ]

**ಪರಕಿ** (ನಾ). ಒಬ್ಬಾಕೆಯ ಹೆಸರು : ಪರಕಿಯ ಮಗಳ್ ಕಳಿಂಗಬ್ಬೆ (ಎಕ. XI, ದಾವಣ. ೧೭-೮ ; ೩೮೯). [ ? ]

**ಪರಕೀಯ** (ಗು). ೧. ಹೊರಗಿನ ; ಅನ್ಯ : ಅದನ್ನೂ ಎರಡು ವಿಧವಾಗಿ ವಿಂಗಡಿಸಿರುವರು ; ಸ್ವಯಂಸಲಹೆ ; ಪರಕೀಯ ಸಲಹೆ (ಶಿಕ್ಷದ. ೫೫೩). ೨. ಶತ್ರುತ್ವದಿಂದ ಕೂಡಿದ ; ಹಗೆಯನ್ನು ಸಾಧಿಸುವ. (ನಾ). ೩. ಹೊರಗಿನ ವ್ಯಕ್ತಿ; ಅನ್ಯವ್ಯಕ್ತಿ: ನಾನು ನಿಮಗೆ ಅಷ್ಟು ಪರಕೀಯಳಾದೆನೇ ? (ನಿರ್ದೋಷಿ. ೧೫೯) ; ಲಲಿತೆಯು ಅವನಿಗೆ ಪರಕೀಯಳಂತೆ ಕಾಣತೊಡಗಿದಳು (ಪರಿಣೀ.೫೨) ; ಅಮ್ಮಾ ಪರಕೀಯನಾದ ಇವನಾವನು ? (ಶಾಕುಂತ. ೧೮೯-೬). [ಸಂ.]

**ಪರಕೀಯತೆ** (ನಾ). ಬೇರೆಯೆಂಬ ಭಾವ ; ಹೊರಗಿನದು ಎಂಬ ಭಾವ : ವೃತ್ತಗಳು ಮಾತ್ರ ತಮ್ಮ ಪರಕೀಯತೆಯನ್ನು ಮರೆಯಲಿಲ್ಲ (ಸಮಾಲೋ. ೧೭೧). [ಸಂ. ಪರಕೀಯತಾ]

**ಪರಕೀಯೆ** (ನಾ). ೧. ಬೇರೆಯವನ ಹೆಂಡತಿ ; ಪರಸ್ತ್ರೀ. ೨. [ಕಾವ್ಯಮೀ] ಮೂರು ಬಗೆಯ ನಾಯಕಿಯರಲ್ಲಿ ಒಬ್ಬಳು; ಬೇರೆಯವನಿಗೆ ಸೇರಿದವಳು ; ಅನ್ಯೆ : ಸ್ವಕೀಯೆ ಪರಕೀಯೆ

ಸಾವಸಾನ್ಯೆಯರೆಂಬ ತ್ರಿವಿಧನಾಯಕಿಯರಿಂ (ವಿವೇಕ. ೨೪೪).
[ಸಂ. ಪರಕೀಯಾ]

**ಪರಕುಲ** (ನಾ). ಬೇರೆಯ ಮನೆತನ,—ವಂಶ: ಪರಕುಲಕ್ಕೆ ಕಳುಹಿಸುವುದಕ್ಕಾಗಿ ನಮ್ಮನ್ನು ಪೋಷಿಸುವರು (ಹತ್ತುಮ.೨೫).
[ಪರ$_3$+ಕುಲ]

**ಪರಕೃತಿ** (ನಾ). ಬೇರೆಯವರು ರಚಿಸಿದ ಕಾವ್ಯ,—ಗ್ರಂಥ: ಇದು ಲೋಹಪಿನದ್ಧಮೊನಿಪ್ಪುದು ಪರಕೃತಿನುತಿಯೊಳಖಿಳಖಳಜನವಕ್ತ್ರಂ (ಚಂದ್ರಪ್ರ. ೧-೪೦). [ಪರ$_3$+ಕೃತಿ$_1$]

**ಪರಕೆ**$_1$, ಹರಕೆ$_1$, ಹರಿಕೆ$_1$ (ನಾ). ೧. ಆಶೀರ್ವಾದ; ಆಶೀರ್ವಚನ: ಪಾಂಡವರಯ್ವರುಂ . . . ಮಹಾಬ್ರಾಹ್ಮಣರ್ ಪರಸುವ ಪರಕೆಗಳುಮ ನಿಕ್ಕುವ ಸೇಸೆಗಳುಮನಾಂತುಕೊಳುತ್ತುಂ (ಪಂಪಭಾ. ೨-೯೩ ವ); ಸಾಸಿರ್ಬ್ಬರಿತ್ತ ಪರಕೆಯಂ ಕೈಕೊಣ್ಡು ಕಲ್ಲ ನಿಱಿಸಿದಂ (ಎಕ.VIII, ಸೊರಬ. ೨೪೮-೩; ಸು. 950 ?); ಗುರುಚರಣಂಗಳ್ಗೆಱಗದೆ ಪರಕೆಯನಾದರದಿ ನಾಂತುಕೊಳ್ಳದೆ ಮೋನಂಬೆರಸಿರ್ಪುದು ನಿನಗುಚಿತಮೆ (ಗದಾಯು. ೩-೪೦); ಪರಸುವ ಸಪ್ತಮಾತೃಕೆಯರ ಪರಕೆಯೊಳಂ . . . ಗಿರಿಜಾತೆ . . . ಬಳೆಯುತಿರ್ದಳ್ (ಗಿರಿಕ. ೩-೬೫ ವ). ೨. ತನ್ನ ಅಭೀಷ್ಟಸಿದ್ಧಿಗಾಗಿ ದೇವರಲ್ಲಿ ಮಾಡಿಕೊಳ್ಳುವ ಸೇವೆಯ ನಿರ್ಧಾರ,—ಸಂಕಲ್ಪ: ಬಳಾರಿಯ ಮನೆಯಂ ಪರಕೆಯ ಕುಱಿಯಂ ಪುಗಿಸುವಂತೆ (ಪಂಚತಂ. ೧೭೫-೧೦); ಕಾವುದೆಂದಾ ಪಾದಪೀಠದೊಳ್ ಪೊರಳ್ದು ಪರಕೆಯಂ ನುಡಿದು (ಲೀಲಾವ. ೧೧-೭ ವ); ಜನ್ನಿಗಿಯಾವಂ ಪರಕೆಯ ಪೊನ್ನಂ ಪರಿಯಣಮನುಯ್ವ್ಯ ಕಳ್ಳನನಂತಿಂತೆನ್ನದು ಗಡಮೆನೆ ದೈವದ ಸನ್ನಿಧಿಯಂ ನೋಡೆ ಮನೆಯ ಕುನ್ನಿ ವಿಶೇಷಂ (ಪದ್ಯಸಾ. II, ೮೨೧); ಆ ಪರಕೆ ಕೈಗೂಡಲು(ಜೈಮಿಭಾ. ೩-೨೨), ಪರಕೆಯ ನೋಂಪಿಯೆಂದು ಪಡೆದಬ್ಬೆಗೆ ಪರ್ಬಿದೆ ಬೇನೆಯೆಂದು . . . ಒರೆಯುತೆ(ಚಕವಿ.೬-೯೨). ೩. ಅಭೀಷ್ಟ ಸಿದ್ಧಿಗಾಗಿ ಸಂಕಲ್ಪ ಮಾಡಿಕೊಂಡು, ಅದು ಈಡೇರಿದ ಮೇಲೆ ದೇವರಿಗೆಅರ್ಪಿಸುವ ವಸ್ತು, ಪ್ರಾಣಿ ಮುಂತಾದುವು; ಮಿಾಸಲು; ಮುಡಿಪು: ಸಿಸಿರಮನೆ ಪಿಡಿದು ಪರಕೆಗೆ ಬಸಂತನಲರ್ಪೋದ ಮಾವಿನಡಿ ಮಂಚಿಕೆಯೊಳ್ ಕುಸುರಿದಱಿದಡಗಿನಂತೆವೊಲೆಸೆದುವು ತದ್ವನದೊಳುದಿರ್ದ ಮುತ್ತದ ಮುಗುಳ್ಗಳ್ (ಯಶೋಚ. ೧-೩೭); ಜಗದಂಬಿಕೆ ಯೆನಿಸುವ ದುರ್ಗೆಗೆ ಪರಕೆಯನೀವೆಂ (ದಶಕು. ೫-೯೦). **ಹರಕೆ$_1$:** ೧. "ಹರಕೆ—ಸ್ವಸ್ತಿ, ಆಶಿಸ್" (ನಾಚಿರಾ. ೬); ಹರಸಿ ಮಾಡುವುದು ಹರಕೆಯ ದಂಡ (ಬಸವ. ೨೨೪); ನಿಮ್ಮ ಹರಕೆಯದಿನಿತುಮಿಲ್ಲದೆ ಕಾಲ ಪವನಾಶನನ ಕೈದುತ್ತಾ ಹನಲ್ಲಾ (ಬಸವು. ೪೭-೩೭); ಹರಿಯ ಚರಣ ಕ್ಕೆಱಗಿ ವಿಜಯದ ಹರಕೆಗಳ ಕೈಕೊಂಡು (ಉಪ್ಪಾಲು. ೧೧-೩೭); ಶುಕ್ರಾಚಾರ್ಯ ಹರ ಕಮಲಜರ ಹರಕೆಗಳ ತಳೆದು . . . ಖಳದೇವ ಪೂಜಾ ಲಯಕೆ ನಡೆತಂದ (ತೊರರಾ. ೬-೨-೩). ೨. ಹಬ್ಬಕ್ಕೆ ತಂದ ಹರಕೆಯ ಕುಱಿ ತೋರಣಕ್ಕೆ ತಂದ ತಳಿರ ಮೇಯಿತ್ತು (ಬಸವ. ೧೨೯); ತಂದೆ— ತಾಯಂದಿರು . . . ಹೊರದಿದ್ದ ಹರಕೆಯಿರಲಿಲ್ಲ (ಕಂಬಹು.೫೫); ಸುಮ್ಮನೇ ಮುಂಂದಕ ಯಾಕ ಹಾಕಬೇಕು ದೇವರ ಹರಕೇನ? (ಗಂಗಾಸಾ. ೮೪). ೩. ಹಣ್ಣ ಹರಕೆಯದೆತ್ತ ನಿಮ್ಮಗರಣ್ಯದನುಭವವೆತ್ತ (ಉಪ್ಪಾಲ. ೦೮೮. ೪-೫೫); ಹೊಡೆಸಿದರು ಕುಱಿ ಕೋಣ ಕಾಟಿಯ . . . ಉಡಿದ ಕೈಗಳ ಮೃತ್ಯುದೇವಿಗೆ ಕೊಡುವ ಹರಕೆಯ ಕಂಡು ರಾವಣ ನೋಡಿ ಮೆಚ್ಚಿರ್ದ (ಕೌಂರಾ. ೨೧-೧೨); ಗುಣಪಡಿಸೆನ್ನಿನಿಯಳ ರುಜೆಯಿದನೆಂದೆ ಸಲಿಸುವೆ ಹರಕೆಯನೆಂದೆ (ಇಂಚಾಪ. ೪೯-೩೪). **ಹರಿಕೆ$_1$:** ೧. ಹರಕೆ ಯಿಲ್ಲದ ದಾನ . . . ಅನ್ನದ ಕರಕ ಸವಿದಂತೆ (ಸರ್ವಜ್ಞ. ೧೭೨೫); ಹಿರಿಯರ ಹರಿಕೆಯ ಕೈಕೊಂಡು ಜಿನದತ್ತ (ಜಿರಾನಾ. ೬-೧೩೯). ೨. ಎಷ್ಟೊ ಹರಿಕೆಗಳನ್ನು ಹೊತ್ತನು (ವಿಘಿನ್ಯ. ೧೫೫); ನರಕದಲ್ಲಿ 'ಬೀಳುವವನು ಹರಿಕೆ ಹೇಳಿದರೆ ತಪ್ಪೀತೇ ? (ಗಾದೆ). ೩. ದೇವಕಾರ್ಯಕ್ಕೆಂದು ಧಾರಾ ಪೂರ್ವ್ವಕವಾಗಿ ಕೊಟ್ಟ ಹರಿಕೆ (ಎಇ. XVIII, ೧೯-೩೫; 1274); ಇತ್ತರು ಸಕಲ ಹರಿಕೆಯನು (ಸಂಭಪ. ೧೭-೭೫).

**ಹರಕೆ ಮಾಡಿಕೊಳ್ಳು** = ಕಾರ್ಯಸಿದ್ಧಿಗಾಗಿ ದೇವರ ಸೇವೆಯ ನಿರ್ಧಾರವನ್ನು ಕೈಗೊಳ್ಳು: ಉಮ್ಮತ್ತೂರಿನ ನಾಯಕನು ಹರಕೆ ಮಾಡಿಕೊಂಡಿದ್ದಾನೆಂದೂ . . . ಮಹಂತರು ತಿಳಿಸಿದರು (ಶ್ರೀರಾಯ.೭). **ಹರಕೆಯ ಗೊಂದಲ** = ಹರಕೆಯನ್ನು ನೆರವೇರಿಸಲು ಅಂಬಾ ಭವಾನಿಯನ್ನು ಕುರಿತು ಮಾಡುವ ಒಂದು ಬಗೆಯ ಧಾರ್ಮಿಕ ವಿಧಿ: ನಮ್ಮಲ್ಲಿ ವಿಶೇಷ ಸಮಾರಂಭಗಳಲ್ಲಿ 'ಹರಕೆಯ ಗೊಂದಲ' ಗಳನ್ನು ಹಾಕಿಸುವ ರೂಢಿಯುಂಟು (ಕಥಕ. ೩).
[<ಪರಸು$_1$+-ಕೆ./ಮಲ. ಪರಿಕ್ಕ; ತುಳು. ಪರಕೆ, ಪರ್ಕೆ, ಹರಕೆ; ಕೊಡ. ಪರಕೆ]

**ಪರಕೆ**$_2$ 'ಪೊರಕೆ' ನೋ.

**ಪರಕೆಗಟ್ಟು**, ಹರಕೆಕಟ್ಟು (ಕ್ರಿ). ಕಾರ್ಯವು ಕೈಗೂಡಲೆಂದು ದೇವರಲ್ಲಿ ಸೇವೆಯ ಸಂಕಲ್ಪವನ್ನು ಮಾಡಿಕೊಳ್ಳು: ಡೆಯ್ಯಕೆ ಪರಕೆಗಟ್ಟುತ ಭ್ರಮೆಗೊಳುತಿರ್ದರು (ಜೀಸಂಸಾಂ. ೧೦-೭೦). **ಹರಕೆ ಕಟ್ಟು:** ಹರಕೆಕಟ್ಟಿ ಹತ್ತುವರ್ಷಗಳಾದರೂ ಇನ್ನೂ ತಿರುಪತಿಗೆ ಹೋಗಲು ಸಾಧ್ಯವಾಗಿಲ್ಲ (ರೂಢಿ). [ಪರಕೆ$_1$+ಕಟ್ಟು$_1$]

**ಪರಕೆಗುಡು** 'ಪರಕೆಗೊಡು' ನೋ.

**ಪರಕೆಗೈ** (ಕ್ರಿ). ಹರಸು; ಆಶೀರ್ವದಿಸು: ಕನ್ನೆರನ್ನೆಯರು ಪರಕೆಗೈಯಲಾ ಮನೆಯುನ್ನತಿವಡೆದೊಪ್ಪುವುದು (ಹದಿಬ. ೫-೨೫).
[ಪರಕೆ$_1$+ಕೈ$_1$ (<ಕೆಯ್$_1$)]

**ಪರಕೆಗೊಡು**, ಪರಕೆಗುಡು, ಹರಕೆಕೊಡು (ಕ್ರಿ). ಹರಕೆಯನ್ನು ಮಾಡಿಕೊಂಡ ಮೇರೆಗೆ ದೇವರಿಗೆ ಮಿಾಸಲನ್ನು ಒಪ್ಪಿಸು: ದೇವತೆಗೆ ಕುಡದೆ ಸತ್ತರೆ ತೀವಿದ ಮನೆಗಳನೆ ಪರಕೆಗೊಟ್ಟುಂ ಸತ್ತರ್ (ಸಮಪ. ೫-೧೧). **ಪರಕೆಗುಡು:** ಸೋಮಶರ್ಮನೆಂಬೊಂ . . . ಮಕ್ಕಳಂ ಬೇಡಿ ಸಂಬರನಾಗರಾಣಕ್ಕೆ ಪರಕೆಗುಡಲ್ ಪೋಪುದಂ . . . ಕಂಡು (ವಡ್ಡಾರಾ. ೧೨-೫); ದೇವತೆಗೆ ಪರಕೆಗುಡೆ ನಾನಾವಿಧ ರುಜೆ ಪಿಂಗಿ ಪೋಗೆ (ಸಮಪ. ೫-೧೧). **ಹರಕೆಕೊಡು:** ಹರಕೆಕೊಡಲು ಹಣ್ಣು ಕಾಯಿಗಳನ್ನು ಸಂಗ್ರಹಿಸಿದನು (ಕಾಲೂರ. ೬ ಕಥಾಸಾರ); ಹರಕೆ ಕೊಟ್ಟರೂ ಹರಿಯೋದು ನಿಲ್ಲಲಿಲ್ಲ (ಗಾದೆ). [ಪರಕೆ$_1$+ಕೊಡು$_1$]

**ಪರಕೆಗೊಳ್**, ಹರಕೆಗೊಳ್, ಹರಕೆಗೊಳ್ಳು (ಕ್ರಿ). ಆಶೀರ್ವಾದವನ್ನು ಪಡೆ,—ಹೊಂದು: ಎನ್ನ ಪೆತ್ತ ತಂದೆಯುಮಂ . . . ಕಂಡು ಪರಕೆಗೊಂಡಲ್ಲದಾಹಾರಂಗೊಳ್ಳೆಂ (ಅರ್ಧನೇ. ೨-೫೩ ವ); ಮುನಿಸಭೆಗೆ ವಂದಿಸಿ ಪರಕೆಗೊಂಡು . . . ಅರ್ಜುನಂ ಪೊಱಮಟ್ಟನು (ಜೈಮಿಭಾ. ೮-೧೧); ಅನತೆ ವಿರ್ಗೆಱಗಿ ಪರಕೆಗೊಂಡೆನಿಲ್ಲ ! (ರಾಮಾಶ್ವ. ೨೭-೨೭). **ಹರಕೆಗೊಳ್:** ಸದ್ಗುರು ದೇವಭಕ್ತರ ಹರಕೆಗೊಂಬುದು ಲೇಸು (ಬಸವು. ೧೩-೭); ಕಂದ ಗಮಿಸಿದನವರ ವಂದಿಸಿ ಹರಕೆಗೊಳಲೆಂದು (ಸಂಭಪ. ೧೭-೫೧). **ಹರಕೆಗೊಳ್ಳು:** ಚೌಡಯ್ಯಂಗಳಿಗೆ ವಂದಿಸಿದ ಬಾಲಕಿ ಹರಕೆಗೊಳ್ಳಲೆ (ಬಸವು. ೪೭-೪೩). [ಪರಕೆ$_1$+ಕೊಳ್$_1$]

**ಪರಕೆವಿಡಿ** (ಕ್ರಿ). = ಪರಕೆಗಟ್ಟು: ತನ್ನ ಸಂಗಡಿಯಗೊರ್ಲವಕ್ಕೆ ನುತ್ತೆ ಮಾರಿಗೆ ಪರಕೆವಿಡಿದೆತ್ತಿ ದಳ್ ಕುಲಟೆಯೊರ್ವಳ್ (ಚೆಬಪು. ೯-೧೧).
[ಪರಕೆ$_1$+ಪಿಡಿ$_1$]

**ಪರಕೆವೆಱು** (ಕ್ರಿ). = ಪರಕೆಗೊಳ್: ಆತನೊಳ್ಪರಕೆವೆತ್ತೊಡನೆ ಕಳುಹಿಸಿಕೊಂಡು (ಜೈಮಿಭಾ. ೨೯-೪೦). [ಪರಕೆ$_1$+ಪೆಱು$_1$]

**ಪರಕೊತ್ತಟು** (ನಾ). ಬೇರೆಯ ಗುಂಪು,— ಸಮೂಹ: ಪರದೇಸಂ, ಪರಕೊತ್ತಟು, ಪರವೆಣ್ (ಭಾಷಾಭೂ. ೧೩೨ ಉದಾ). [ಪರ$_3$ + ಕೊತ್ತಟು]

**ಪರಕ್ಷಿತೀಶ** (ನಾ). ೧. ಬೇರೆಯ ರಾಜ. ೨. ಶತ್ರುರಾಜ: ಸದಾಚಾರ ಚಕ್ಷುರಥವ್ಯಕ್ತಪರಕ್ಷಿತೀಶಗೃಹವೃತ್ತಂ ವೃತ್ತದೋರ್ಬಂಧುರಂ . . . ಪುಟ್ಟಿದಂ (ಪುಷ್ಪಪು. ೧೩-೧೦). [ಪರ$_3$ + ಕ್ಷಿತೀಶ]

**ಪರಕ್ಷೇತ್ರ** (ನಾ). ಬೇರೆಯ ಪ್ರದೇಶ,—ಸ್ಥಳ: ಉಳ್ಳುದುಂ ಪರ ದ್ರವ್ಯ ಪರಕ್ಷೇತ್ರ ಪರಕಾಲ ಪರಭಾವದಿಂದಮಿಲ್ಲದಿರ್ಕುಂ (ಶಾಂತಿಪು. ೮-೧೩೮ ಪ). [ಪರ$_3$ + ಕ್ಷೇತ್ರ]

**ಪರಕ್ಷ್ಮಾಪ** (ನಾ). = ಪರಕ್ಷಿತೀಶ ೨: ಈ ಪೊಟ್ಟಿ ಪೊಟ್ಟಾಗೆ ಪೋಗಿ ಪರಕ್ಷ್ಮಾಪರನಿಕ್ಕಿ . . . ನಿಷ್ಕಂಟಕಂ ಮಾಡುವೆಂ (ಶಾಂತಿಪು. ೬-೫೫); ಉದ್ರಿಕ್ತಪರಕ್ಷ್ಮಾಪ ಪ್ರತಾಪೋತ್ಕದಳಕಳಭನೀ ಬಂದನೀ ಬಂದನು (ರಾಜಶೇ. ೬-೧೭). [ಪರ$_3$ + ಕ್ಷ್ಮಾಪ]

**ಪರಗಣ** 'ಪರಗಣೆ' ನೋ.

**ಪರಗಣಹಾಕಿಮ್** (ನಾ). ಜಿಲ್ಲೆಯ ಆಡಳಿತಾಧಿಕಾರಿ: ಹನ್ನೆರಡು ಮಂತ್ರಿವರ್ಯರ ಸ್ಥಾನದಲ್ಲಿ ಒಬ್ಬ ಡೆಪ್ಯುಟಿಕಮಿಷನರ್ ಮತ್ತು ಒಂದೆರಡು ಪರಗಣಹಾಕಿಮ್ (Sub-divisional Officer) . . . ನಿಯುಕ್ತರಾದರು (ಝಾಂಸಿ. ೧೫೬). [ಪರಗಣ (< ಪರಗಣೆ) + ಹಾಕಿಮ್]

**ಪರಗಣೆ,** ಪರಗಣ, ಪರ್ಗಣ, ಪರ್ಗನ, ಪರ್ಗುಣ (ನಾ). ಹಲವು ತಾಲ್ಲೂಕುಗಳನ್ನು ಒಳಗೊಂಡ ನಾಡಿನ ಒಂದು ಭಾಗ; ಜಿಲ್ಲೆ: ಶಿಷ್ಯ ತೊರೆಸಾಲ ಪರಗಣೆಯ ಕೋಲಾರಪುರಕೆ ದೇಸಾಯಿ ನಾಡೆಜೋಯಿಸನಹ (ಪ್ರೌಢಕಾ. ೧-೨೫); ದೇವರಾಜನು . . . ಹೊಸಕೋಟೆಯ ಪರಗಣೆಯನ್ನು . . . ತನ್ನ ರಾಜ್ಯಕ್ಕೆ ಸೇರಿಸಿದನು (ಮುಂಬಯಿ. ೪-೮೨); ಅರಸಪ್ಪನಾಯಕನು . . . ಸ್ವಾದೀಪರಗಣೆಯ ಹದಿನಾರುಸಾವಿರವರಹದ ಸೀಮೆಯುನ್ನು ವಾದಿರಾಜರಿಗೆ ಧಾರೆಯೆರೆದನು (ಕಥವಿ. ೧೬೪). **ಪರಗಣ:** 'ಪರಗಣಹಾಕಿಮ್' ಪರಾ. **ಪರ್ಗಣ:** ಒಟ್ಟು ರಾಜ್ಯ ಪರ್ಗಣಗಳಾಗಿ ವಿಭಾಗವಾಗಿ, ಪ್ರತಿಯೊಂದು ಪರ್ಗಣಕ್ಕೂ ಒಬ್ಬ ಅಮಾರನೂ . . . ಇದ್ದರು (ಇಸ್ಲಾಂಸಂ. ೬೩). **ಪರ್ಗನ:** ಇದಕ್ಕೆ ೧೦ ರಿಂದ ೪೦ ಡಿಸ್ಟ್ರಿಕ್ಟಿನವರೆಗೂ ಸೇರಿತ್ತು. ಇಂಥಾ ಒಂದು ಪ್ರದೇಶಕ್ಕೆ ಮಹಲ್ ಅಥವಾ ಪರ್ಗನ ಎಂದು ಹೆಸರು (ಪಾಳಗಾ. ೧೨). **ಪರ್ಗುಣ:** ೨೪ ಪರ್ಗುಣಗಳು ("ಪರ್ಗುಣ" ಅಂದರೆ ಕೆಲವು ಗ್ರಾಮಗಳ ಮೊತ್ತ) (ಭೂಗೋಳ. ೪೩).

[← ಪಾರ. ಪರಗನಾ; ಹಿಂ. ಪರಗನ, ಪರಗನಾ; ಮರಾ. ಪರಗಣಾ, ಪರ್ಗಣಾ]

**ಪರಗತಿ** (ನಾ). ಶ್ರೇಷ್ಠವಾದ ನೆಲೆ; ಮೋಕ್ಷ; ಕೈವಲ್ಯ: ಹರಿಸ್ಮರಣೆ ಮಾಡೋ ನಿರಂತರ ಪರಗತಿಗೆ ಇದು ನಿರ್ಧಾರ (ಪುರಂದ. ೫-೮೫ ಪಲ್ಲವಿ); ಪರಸಂತಾಪದಮಂ ಪರಗತಿವಿಲಯಾಸ್ಪದಮಂ ಕಾರ್ಯಮನುದಾರಮತಿ ನೆಗಳ್ದಪನೇ (ರಾಜಶೇ. ೧೩-೧೨); ಈಯೆಸಕದೊಳಿರೆ ಶೂದ್ರರಾದೊಡಂ ಪರಗತಿಗೆ ತಾವಾಯಾಸವಿಲ್ಲದೇಱುವರು (ಹವಿಬ. ೯-೧೫). [ಪರ$_3$ + ಗತಿ]

**ಪರಗಮನ** (ನಾ). ಯಾವುದಾದರೊಂದು ವಿಷಯದಲ್ಲಿ ವಿಶೇಷವಾದ ಆಸಕ್ತಿಯನ್ನು ಹೊಂದಿರುವುದು; ಪೂರ್ಣಪಾಂಡಿತ್ಯ: "ಪರಗಮನಂ ಪಾರಾಯಣ ಪರಾಯಣೋಪಾಖ್ಯಮಱಿಗೆ ಸಾಕಲ್ಯಾರ್ಥಂ" (ಪಸ್ತುಕೋ. ೧೧೬-೩೧). [ಪರ$_3$ + ಗಮನ$_2$]

**ಪರಗಿ,** ಬರಗಿ, ಹರಗಿ (ನಾ). ಮುಳ್ಳುಗಳಿರುವ ಒಂದು ಬಗೆಯ ಹಣ್ಣಿನ ಗಿಡ; ಕರಮರಿಕೆ; ಕಮರಾಕ್ಷಿ: ಪರಗಿ (ಕರವಂದ).— ಸಣ್ಣ ಗಿಡ, ಕಂಟಿಯ ಜಾತೀದು (ಕಭಾಗೆ. ೪೩). **ಬರಗಿ:** ಬರಗಿ . . . ಇದರ ಹಣ್ಣು ಹುಳಿಯಾಗಿ ರುಚಿಕರವಿರುತ್ತದೆ (ಕಭಾಗೆ. ೪೩). **ಹರಗಿ:** ಒಂದೆಡೆಯಲ್ಲಿ ಕೆಂಪುಹರಗಿ, ಇನ್ನೊಂದೆಡೆಯಲ್ಲಿ ಸೊಕ್ಕಿ ನಿಂತ ಬದನೆಯ ಗಿಡಗಳು (ಪೂರುದಾ. ೨೮೬). [← ತೆಲು. ಪರಿಗೆ, ಪರಿಗಿಯು]

**ಪರಗು,** ಹರಗು$_1$ (ಕ್ರಿ). ೧. ಭೂಮಿಯನ್ನು ಹರತೆ ಹೊಡೆ,- ಕುಂಟೆ ಹೊಡೆ: ಧಾರಿಣಿಯಂ ಪರಗುವ ಬಿತ್ತುವ ಬಹುವಿಧ ಪರಿಕರದಿಂದುಣ್ಬುಪಾಯಮಮಂ ವಿಭು ಪೇಟ್ದಂ (ಸಪುಪ. ೨-೧೧); ಪ(ಬ)ರಗಲ್ ಕೇಳ್ ತ್ವರಿತದೆ ಶಾರ್ವರಿಯಲ್ ಪೋಪಾಗ (ಪಂದು)ವಾಯಸಂ ಯೆಡದೆಸೆಯೊಳ್ ಸರವಿಾಗೆ ಪೋಗೆ ಬೆಳಗುರ್ವರೆಯು(ಯಿ)ಂ ಬರ್ಪ್ಪ ಬಲನೊಳಧಿಕಂ ಬೆಳೆಗುಂ (ಜಟ್ಟಪು. ೯-೩೫); ಪೊಲವೆಲ್ಲಮಂ ಪರಗಿದ್ಪ ಕ್ಷಣದಲ್ಲಿ ಶಿವಾಮರೇಶ್ವರಾ (ಅಮಶ. ೯). ೨. ಕೀಳು; ಕಿತ್ತುಹಾಕು; ಮೂಲೋತ್ಪಾಟನ ಮಾಡು: ಕಾಯ್ದ ಕಬ್ಬಿಣ್ಣ ಸೂಜಿಗಳಂ ಬೆರಲ್ಗಳೊಳ್ ಬೆಟ್ಟುವರುಂ ನಟ್ಟು ಪರಗುವರುಂ (ಆದಿಪು. ೫-೮೫ ಪ); ನಟ್ಟು ಪರಗುವುದುಂ . . . ತಿಂದು ತೇಗುವುದುಂ ಎಂದಿವು ಮೊದಲಾದ ಪಲವುಂ ತೆಱದ ದಾರುಣೋದಗ್ರನಿಗ್ರಹವಿಗ್ರಹಕ್ಕೆ ತಮ್ಮ ವಿಗ್ರಹಂಗಳನೊಡ್ಡಿ (ಸುಕುಮಾ. ೧೧-೪೬ ಪ); ಒಕ್ಕಲಿಗನಂತೆ ಮೆಟ್ಟಿ ಪರಗುವರ್ (ಧರ್ಮಾಮೃ. ೩-೬೩); ಕುತ್ತಿ ಕೂರಲಗಿನೊಳ್ನಭಕೆತ್ತುವ ನಟ್ಟು ಕೋಪದಿಂ ಪರಗುವ (ಪಸಾರ. ೩೦೧). **ಹರಗು$_1$:** ೧. "ಹರಗು-ಸಸ್ಯಕ್ರಿಯಾಯಾಂ" (ಶಮುಧಾ); ಹಸನ ಮಾಡಿ ಹರಗಿ ಹೊಲದಲ್ಲಿ ಕಸವ ಬಿತ್ತುವ ಮರುಳರಂತೆ (ವಚಸಂ. ೧೨೯-೧೧೩); ಉತ್ತು ಹರ [ಪಾಠಾಂ. ರಿ] ಗಿದ ಹೊಲದೊಳಖಿಳಬೀಜಂಗಳಂ ಬಿತ್ತಿದಡೆ ಏನಾಯ್ತು (ದೀಕ್ಷಾಬೋ. ೩೬-೧೨); ಹರಗಿ ಹಸನಾದಿಳೆಯೊಳು . . . ಹುರಿಕರಿಯಾದ ಬೀಜವ ಬಿತ್ತುವವರಂತೆ (ಪ್ರಭುಲೀ. ೬-೧೦); ಉತ್ತೊಮ್ಮೆ ಹರಗುವದು ಬಿತ್ತೊಮ್ಮೆ ಹರಗಿ ಕಳೆದೆಗೆದರಾ ಬೆಳೆಯು ಎತ್ತುಗೈಯುದ್ದ (ಸರ್ವಜ್ಞ. ೧೩೫೮). ೩. (ಅಲಂ) ಸರ್ವನಾಶ ಮಾಡು; ಧ್ವಂಸಗೊಳಿಸು: ಇಟ್ಟೊರಸಿ ಕಳೆಯಲ್ಪಗೆದನವನ ಜನ್ನಮಂ ನೆಟ್ಟು ಹರಗಲ್ಪಗೆದನವನ ಕುಲವೆಲ್ಲಮಂ (ವೀರರ. ಹ. ೪೮೬-೪); ಹರಗಿ ಬರಿಕೈದಪೆನು ಬಿಡು ಪಡ (ಅಂಬಿಕಾ. ೪೧-೫). [ದೇ.॥ ತಮಿ. ಪರುಙ್ಕು, ಪಲುಕು]

**ಪರಗುಣ** (ನಾ). ೧. ಬೇರೆಯವರ ಸ್ವಭಾವ,—ಗುಣ: ಅಶೇಷ ಜನಂಗಳೊಳ್ ಪರಗುಣಾಸ್ತ (ಸ)ಹನನಲ್ಲದನಾತ್ಮಗುಣೋದಯಾಂಶು ಸರೂಪನ××× ಪಾರಪರಾಯಣಂ (ಕವಿರಾ. ೩-೨೨೨); ಪರಗುಣದೊಳ್ ಸಹನಂ ಮಚ್ಚರಮೆನಿಕುಂ (ಪಸ್ತುಕೋ. ೧೩೯-೧೨೪). ೨. ವೈರಿಯ ಗುಣ; ಶತ್ರುವಿನ ಸ್ವಭಾವ: ಪರಗುಣಗಣಮಂ ಸೈರಿಸುವರಮಗನಂ ಮನುಜರೊಲ್ವರ್ (ಅರ್ಧನೇ. ೪-೧೩೪). [ಪರ$_3$ + ಗುಣ]

**ಪರಗೃಹ** (ನಾ). ೧. ಬೇರೆಯವರ ಮನೆ; ಅನ್ಯಗೃಹ: ಮನುಷ್ಯನು . . . ಪರಾನ್ನಭೋಜಿಯೂ ಪರಗೃಹಶಾಯಿಯೂ ಆದರೆ, ಅದರ ದುಃಖಕ್ಕೆ ಕೊನೆ ಇರುವುದಿಲ್ಲ (ನಿಬಂಧ. II, ೩೦೬). ೨. ಬೇರೆಯವರ ಮನೆಯಲ್ಲಿರುವವನು: ಕುಟುಂಬವಿಲ್ಲದವಂ ಪರಗೃಹನೆಂಬುದು (ಕಾಮಶಾ. ೨೫೨). [ಪರ$_3$ + ಗೃಹ]

**ಪರಗೇಹ** (ನಾ). = ಪರಗೃಹ ೧: ಪರಗೇಹೋಪಾರ್ಜಿತಾರ್ಥಂ . . . ಚಾರುದೃಷ್ಟಿಗಮನಂ ಕನ್ಯಾನಿವಾಸೋದ್ಭವಂ (ಜಾತಕ. ೧೬-೬). [ಪರ$_3$ + ಗೇಹ]

**ಪರಘಾತ** (ನಾ). [ಜೈನ] ನಾಮಕರ್ಮದಲ್ಲಿ ಪಿಂಡಪ್ರಕೃತಿಯೆಂಬ ನಲವತ್ತುಮೂರು ಪ್ರಕೃತಿಗಳಲ್ಲಿ ಒಂದು; ಇನ್ನೊಂದು ಜೀವಕ್ಕೆ ಹಿಂಸೆಯನ್ನುಂಟುಮಾಡುವುದು: ಪಿಂಡಾಪಿಂಡಭೇದದಿಂದ್ಗತಿ ಜಾತಿ ಶರೀರ . . . ಅಗುರು ಲಘುಕ ಉಪಘಾತ ಪರಘಾತ ಉಚ್ಛ್ವಾಸ ಆತಪ . . . ತೀರ್ಥಕರನಾಮಮೆಂದಿಂತಲ್ಲಿ ಗತಿನಾಮಕರ್ಮಂ ಚತುರ್ವಿಧಮಕ್ಕುಂ (ಗೊಮ್ಮಸಾ. ೩-೬). [ಪರ$_3$ + ಘಾತ$_2$]

**ಪರಘಾಯ** (ನಾ). ಶತ್ರುವು ಕೊಡುವ ಪೆಟ್ಟು ; ಎದುರಾಳಿಯು ಕೊಡುವ ಪೆಟ್ಟು : ಬವರಿಯಲಿ ಪ್ರಸಂಸಿ ಪರಘಾಯವನು ವಂಚಿಸಿ ಭಟರ ಕೊಚಿದೆತ್ತುವರು . . . ಕೋಡಕೈಯವರು (ಕುವ್ಯಾಭೀ. ೪-೪೩). [ಪರ್$_3$ + ಘಾಯ (<ಗಾಯ)]

**ಪರಚಕ್ರ**(ನಾ). ೧. ಶ್ರೇಷ್ಠವಾದ ತಿಗುರಿ: 'ಪರಚಕ್ರಭ್ರಾಂತಿ' ಪರಾ ೨. ವೈರಿಗಳ ಪಡೆ ; ಶತ್ರುಸೈನ್ಯ : ಪರಚಕ್ರಂಗಳನಂಜಿಸಿದ ಪರಸೈನ್ಯಭೈರವನ ಮೇಗಿಲ್ಲದ ಬಲ್ಲಾಳ್ತನಮುಮಂ ಕಂಡುಂ ಕೇಳ್ದುಂ ನಿನಗೆ ಸೆಣಸಲೆಂತು 'ಬಗೆ ಬಂದಪುದು (ಪಂಪಭಾ. ೯-೫೨ ವ) ; ಪರಚಕ್ರಕ್ಕೀಗಳೀ ಪಲ್ಮೊರೆದನೆ ಜವಂ (ಪುಷ್ಪಪು. ೫-೧೧) ; ಆ ಪರಚಕ್ರವನು ಸಿರ್ಥಾಮುಥೂಮೋಪಕ್ರಮವನೆಚಿ ಮಾಡಿ (ಸಿಭಾಗ. ೧೦-೬೫-೪೬). ೩. ಶತ್ರುಗಳ ಆಧಿಪತ್ಯ,–ಆಡಳಿತ : ಪರಚಕ್ರಕ್ಕೈಡೆಮಾಡಿ ಭೂವಲಯಮುಂ . . . ತಪಕ್ಕೆ ಪೋಪುದನಯುಂ (ಪಂರಾಮಾ. ೨-೩೨). ೪. ಶತ್ರುರಾಜ್ಯ; ರಿಪುಮಂಡಲ : ಪರಚಕ್ರಭೂಪರಟ್ಟಿದ ಕರಿಗಳ್ಬಿಡು ತಪ್ಪ ಮದದ ಪೊನಲಿಂದೆತ್ತಂ . . . ಕೆಸಚುಕ್ಕುಂ (ಕವಿರಾ. ೩-೧೮೧) ; ಅರಸಂ ಪರಚಕ್ರಮಂ ಸಾಧಿಸಿ ಬಂದು ಮಗಂ ಕುರುಡಾದುದಂ ಕಂಡು (ಪದ್ಮರಾ. ೭೫-೨೨) ; ಪರಚಕ್ರಂಗಳನೊತ್ತಿ ಕೊಂಡದಟರಂ ಕೊಂದಿಕ್ಕಿ (ಪಂಪಭಾ. ೬-೧೭).

**ಪರಚಕ್ರಭಯಂಕರ** = ಶತ್ರುಸೈನ್ಯಕ್ಕೆ ಉಗ್ರವಾಗಿರುವವನು ; ಒಂದು ಬಿರುದು : ಚಕ್ರಂ ಪುಟ್ಟಲೊಡಂ ಪರಚಕ್ರಭಯಂಕರ ಬರಲ್ಕೆ ವೇಟ್ಟುದನಚುದೆಂ (ಆದಿಪು. ೧೨-೧೧೩). **ಪರಚಕ್ರಭೈರವ** = ಶತ್ರುಸೈನ್ಯಕ್ಕೆ ಭೈರವನಂತಿರುವವನು ; ಒಂದು ಬಿರುದು : ಮಣ್ಡಳಿಕ ಕಣ್ಠೀರವಂ ಪರಚಕ್ರಭೈರವಂ (ಸೌಇಇ. XX, ೪೭-೯; 1074) ; **ಪರಚಕ್ರವಕ್ರ** = ಪರಚಕ್ರಭಯಂಕರ : ಪರಚಕ್ರವಕ್ರಂ ನಾಮಾದಿ ಸಮಸ್ತಪ್ರಸಸ್ತಿಸಹಿತಂ (ಸೌಇಇ. XX, ೫೧-೧೩ ; 1077). [ಪರ್$_3$ + ಚಕ್ರ$_1$]

**ಪರಚಕ್ರಭ್ರಾಂತಿ** (ನಾ). ೧. ಶ್ರೇಷ್ಠವಾದ ತಿಗುರಿಯ ವೃತ್ತಾಕಾರವಾದ ಚಲನೆ. ೨. ಶತ್ರುಸೈನ್ಯವೆಂಬ ಭ್ರಮೆ. ೧, ೨ : ನೆರೆದ ವಿಸಂವಾದಂ ಪಂಜರಶುಕತತಿಯೊಳ್ಮಲಾಲಗೇಹಂಗಳೊಳಂ ಪರಚಕ್ರಭ್ರಾಂತಿಗಳಧ್ವರದೊಳೆ ನೆಗಟ್ದುಂ ಮಹಾಹವಧ್ವನಿನಿಯತಂ (ಕವಿರಾ. ೩-೧೧೧). [ಪರಚಕ್ರ + ಭ್ರಾಂತಿ]

**ಪರಚಿಂತೆ** (ನಾ). ಬೇರೆಯವರನ್ನು ಕುರಿತ ಕಳವಳ,—ದುಃಖ : ಪರಚಿಂತೆ ಎನಗೇಕಯ್ಯಾ ನಮ್ಮ ಚಿಂತೆ ನಮಗೆ ಸಾಲದೆ (ಬಸವ. ೫೨೦). [ಪರ್$_3$ + ಚಿಂತೆ]

**ಪರಚಿತ್ತ** (ನಾ). ಬೇರೆಯವರ ಮನಸ್ಸು : 'ಪರಚಿತ್ತಗ್ರಹಣ' ಪರಾ. [ಪರ್$_3$ + ಚಿತ್ತ]

**ಪರಚಿತ್ತಗ್ರಹಣ** (ನಾ). ಬೇರೆಯವರ ಮನಸ್ಸನ್ನು ತಿಳಿಯುವುದು : ಅಗ್ರಾಮ್ಯವಚನವೃತ್ತಿ . . . ಮಧುರಂ ನಿರ್ವ್ಯಗ್ರ ಪದವಿಸ್ಮೃತಿ ಪರಚಿತ್ತಗ್ರಹಣಸಮರ್ಥಂ (ಕಾವ್ಯಾವ. ೫೦೯) ; ಪರಚಿತ್ತಗ್ರಹಣ ವಿಧಾನದ ಮೂಲಕ ಪೋಲೀಸಿನವರು ತನ್ನನ್ನು ಪೀಡಿಸುತ್ತಿದ್ದ ಕಥೆಯನ್ನು ವಿವರಿಸಿದನು (ಪುನರು. ೪೪೯). [ಪರಚಿತ್ತ + ಗ್ರಹಣ]

**ಪರಚು** (ಕ್ರಿ). ೧. (ಉಗುರಿನಿಂದ) ಕೆರೆ ; ಗೀರು : ಕೂರುಗುರ್ಗಳಿಂ ಪರಚುತ್ತೆ . . . ಕಾಡಿದುವು ಬಾವಲಿಗಳ್ (ಚಂದ್ರಭ್ಯ. ೫-೧೧೦); ಈ ಕಡಲು ತನ್ನ ಬಂಧಿಸುವರೆಯು ದಡವನಲೆಪಂಜದಿಂ ಪರಚಿ—ಮೇಲೇರಿ ಬರಲೆಳಸಿ (ಗಣೇಶ. ೩೫-೩) ; ಒಬ್ಬರ ಮೇಲೊಬ್ಬರು ಬಿದ್ದು . . . ಪರಚಿ, ಕೂಗಿ; ಕಿರುಚಿಕೊಳ್ಳುತ್ತಿದ್ದವು (ಮಾರ್ಗದ. ೨೬). ೨. ಹರಿ ; ತರಚು : ಕೆಲವರು ತುಂಟರಾದ ರಾಕ್ಷಸರ ಹುಡುಗರು . . . ಹುವುಗಳಂ ಪರಚಿ (ಸೌಗಂಧಿ. ೪೦೯-೯).

**ಪರಚಿಕೊಳ್ಳು** = ಕೆರೆದುಕೊಳ್ಳು : ನನಗಂತೂ ಕೈಕಾಲುಗಳನ್ನು ಪರಚಿಕೊಳ್ಳುವ ಹಾಗಾಯಿತು (ಶಾಲಿಸು. ೬೫) ; ಕೈಲಾಗದವ ಮೈ ಪರಚಿಕೊಂಡ (ಗಾದೆ).

[ದೇ.॥ ತುಳು. ಪರಂಕು, ಪಂಕುರ್ಚ, ಪಕುರ್ಚ ; ಕೋಲಾ. ಪರ್ಸ್; ಪರ್ಜಿ. ಪರ್ಚ್; ಗದಬ. ಪಾರ್ಜ್; ಕುವಿ. ಪಚಲಿ]

**ಪರಚ್ಛಂದ**(ನಾ). ೧. ಬೇರೆಯವರ ಇಚ್ಛೆ,—ಅಪೇಕ್ಷೆ. ೨. ಬೇರೆಯವರ ಇಚ್ಛೆಯನ್ನು ಅವಲಂಬಿಸಿರುವವನು ; ಪರಾವಲಂಬಿ : "ಪರವಾನ್ . . . ಪರಚ್ಛಂದಃ, ಗೃಹ್ಯಕಃ—ಈ ೮ ಹೆಸರ ವಶದಾತಂ" (ಹಲಾಯು. ೫೬-೧೮೬) ; "ಪರವಶಂ . . . ಪರಚ್ಛಂದನೆನೆ ಪರರ ವಶದವನಕ್ಕು" (ಮಂಗರಾ. ೬೮-೭). [ಪರ್$_3$ + ಛಂದ$_2$]

**ಪರಜನ** (ನಾ). ಪರಕೀಯರು ; ಇತರರು : ಸಮನಿಸಿ ಬಳರ್ಚಂ ಕೇಮದ್ರುಮಯೋಗಸಮುದ್ಭವಂಗೆ ಪರಜನಭೃತಕತ್ವಮುಂ . . . ಧರಾಧೀಶವಂಶದೊಳ್ ಪುಟ್ಟ[ರೆಯುಂ] (ಜಾತಕ. ೧೪-೪); ದಿನನಾಥಂ . . . ನಿಲೆ ಕರ್ಕಿಯೊಳ್ ಪರಜನಪ್ರೇಷ್ಯಂ ಖಳಂ (ಜಾತಕ. ೧೭-೧೫). [ಪರ್$_3$ + ಜನ]

**ಪರಜಾತ** (ಗು). ೧. ಬೇರೆಯವರ ಪೋಷಣೆಗೆ ಒಳಗಾದ ; ಇತರರನ್ನು ಅವಲಂಬಿಸಿರುವ. (ನಾ). ೨. ಬೇರೆಯವರನ್ನು ಜೀವನಕ್ಕಾಗಿ ಅವಲಂಬಿಸಿರುವವನು : "ಪರಜಾತಃ, ಪರೈಧಿತಃ—ಈ ೨ ಹೊಚಕುಳ" (ಹಲಾಯು. ೫೮-೧೯೬). [ಪರ್$_3$ + ಜಾತ]

**ಪರಜಾತಿ** (ನಾ). ಬೇರೆಯ ಕುಲ ; ಅನ್ಯಜಾತಿ : ಪರಜಾತಿಯನು ರತಿಸದಂತಿಹ ಕುಲಂಗಳಲಿ ರತಿಸಲದಕೇನು (ದೀಕ್ಷಾಬೋ. ೪೫-೨) [ಪರ್$_3$ + ಜಾತಿ]

**ಪರಜಿ** (ನಾ). ( ? ) : ಭೂವರಂ ರಸಿಕ ನೀ ಪೋಗೆನಲು ಕೈಮುಗಿದು ಪೋದಂತೆ ಮಾಡಿ ಪರಜಿಯೊಳಡಗಲು (ಪ್ರಭುಪು. ೭-೧೬೪). [ ? ]

**ಪರಜು**, ಪರಂಜು, ಪರುಜು$_1$, ಫರುಜು (ನಾ). ೧. ಕತ್ತಿಯ ಅಲಗು,—ಬಾಯಿ; ಖಡ್ಗಧಾರೆ : "ಪರಜು(ಜಿ)—ಪರಂಜ(–ನ) = ಕತ್ತಿಯ ಬಾಯಿ" (ತದ್ಭಕೋ. ೨೪) ; ಸುಲಿಪಲ್ ಫಲಿಲ್ಲೆನುಗೆ ಬಾಳಿನ ಕೀಳ್ಪರ ಜಿಂದೆ ಮೋದದಿಪ್ಪರ್ನೆ (ಎಕ. XI, ದಾವಣ. ೪೨-೩೬;1162); ಹಚು ಯುದ ಕತ್ತಿಯೊಳ್ಮೊಚಿವರೆ ಮೂಗನು ಅಜಿಯದಿದೊಂದ ಮಾಡಿದರೆ ಇಚಿವರೆ ಪರಚಿ[ಜಿ]ಲ್ಲದಲಗಿಲಿ (ಅಮುಸಾಂ. ೬-೮೯); ಕತ್ತಿಯ ಪರಜಿನಿಂ ನೆತ್ತಿಯಂ ತಿವಿಯುತ್ತೆ (ಚಕಪಂ. ೪೨-೨೧). ೨. ಕತ್ತಿಯ ಹಿಡಿ,–ಹಿಡಿಕೆ: ವಿಭೂತಿಯುಂ ತಚ್ಚುರಿಕೆಗಂ ತಳೆದು ಲಿಂಗಾರ್ಚಿತಂಗೆಯ್ಯುತೆ ಅನುವಿನಿಂದ ದಜ ಪರಜಿನೊಳೊಲ್ದು ಕೈಯಿಕ್ಕೆ (ಅರಾಚ. ೪-೯-೪೮); ಪರಜಿರಲು ಪಿಡಿವ ಕಠಾರಿ ಮೊನೆ ಮೆಚಿವಂತೆ (ತಿಮ್ಮಶಾಂ. ೧-೨೨); ಕನಕರಚಿತಗಳಾಗಿ ದಂತದ ಪರಜುಗಳಿಂದ ಒಪ್ಪುತಲಿರುವ ಕತ್ತಿಗಳು (ಕೃಪಾಭೀ. ೧೫೧). ೩. ಕತ್ತಿ ; ಖಡ್ಗ : ತಲೆಯಿಲ್ಲದ ತನುವ್ಯಾತಕೆ . . . ಅಲಗಿಲ್ಲದ ಪರಜ್ಯಾತಕೆ(ಚಿದಾಕೋ. ೧೫೨-೯); ವೈರಿಯ ಪರಜಿನಲ್ಲಿ ಬಂಡಿಕೋಲಿನ ಪೆಟ್ಟು ಆವದು ಅದು ಅದಿರುಘಾಯಯೆಂದು ಹೆಸರು (ಖಡ್ಗಟೀ. ೫-೬೦). **ಪರಂಜು :** ೨. "ಪಾಳಿ ಪರಂಜುವೆನಲು ಮೋಹಳಮುಕ್ಕುಂ" (ಮಂಗರಾ. ೮೮-೩೬). **ಪರುಜು$_1$ :** ೨. ಶಲ್ಯನು ಸುವರ್ಣಮಯವಾದ ಪರುಜುಳ್ಳ ಖಡ್ಗವನ್ನೂ . . . ಹಿಡಿದು(ಕೃಪಾಸ. ೧೨೧). **ಫರುಜು :** ೨. ಗಜದಂತದಿಂದ ಮಾಡಲ್ಪಟ್ಟ ಫರುಜುವುಳ್ಳ ಒಂದು ಖಡ್ಗವನ್ನು ಕೈಯಲ್ಲಿ ಹಿಡಿದು (ಕೃಪಾಕ. ೩೦).

[<ಸಂ. ಪರಂಜ./ತಮಿ. ಪರಿಞ್ಞು ;ಮಲ. ಪರಿಞ್ಞು ; ತೆಲು. ಪರುಜು]

**ಪರಜ್ಞಾನ** (ನಾ). ಶ್ರೇಷ್ಠವಾದ ಜ್ಞಾನ : ಭಗವದನುಗ್ರಹದಿಂದ ತಾತ್ಕಾಲಿಕವಾದ ಪರಿಪೂರ್ಣ ಪರಬ್ರಹ್ಮ ಸಾಕ್ಷಾತ್ಕಾರವನ್ನು ಉಂಟು

ಮಾಡುವುದು, ಈ ಸಾಕ್ಷಾತ್ಕಾರವೇ ಪರಜ್ಞಾನ (ಹಿಂದಸಾ.೨೫೭).
[ಪರ$_3$+ಜ್ಞಾನ]

**ಪರಟ,** ಪರಟಿ$_2$ (ನಾ). ೧. ಕೆದರಿದುದು ; ಚೆದರಿರುವುದು: 'ಪರಟತಲೆ' ಪರಾ. **ಪರಟಿ**$_2$ : ೨. ಒರಟಾದುದು ; ಬಿರುಸಾದುದು : 'ಪರಟೆದಲೆ' ಪರಾ.
[ದೇ.॥ ತಮಿ. ಪರಟ್ಟೈ$_1$, ಪಜಟ್ಟೈ$_1$; ಮಲ. ಪಜು]

**ಪರಟತಲೆ,** ಪರಟೆದಲೆ (ನಾ). ೧. ಕೆದರಿದ ಕೂದಲುಳ್ಳ ತಲೆ : ಪರಟ–ತಲೆ, ಇದಕ್ಕೆ–ಪರಟತಲೆ (ಹೊಸಗ.೨೪). **ಪರಟೆದಲೆ** : ೨. ಒರಟುಕೂದಲಿನ ತಲೆ ; ಬಿರುಸುಕೂದಲುಳ್ಳ ತಲೆ: (ಕ).
[ಪರಟ+ತಲೆ$_1$./ತಮಿ. ಪಜಟ್ಟೈತ್ತಲೈ]

**ಪರಟಿ**$_1$ 'ಪರಟೆ$_1$' ನೋ.

**ಪರಟಿ**$_2$ 'ಪಲ್ಟಿ' ನೋ.

**ಪರಟೆ**$_1$, ಸರಟಿ$_1$, ಪರಡಿ$_3$, ಪರಡೆ$_1$ (ನಾ) ೧. ಮಡಕೆಯ ಓಡು; ಬೋಕಿ: ಕೈಯಲ್ಲೊಂದು ಪರಟೆ ಹಿಡಿದು ದೀನವಮುಖದಿಂದ ಭಿಕ್ಷುಕನು ಕೂಗಹತ್ತಿದ (ತಿಂಪುತ. ೮೮). ೨. (ತೆಂಗು ಮೊದಲಾದುವುಗಳ) ಚಿಪ್ಪು; ಕರಟ : ಮದ್ಯದ ಪರಟೆಗಳೆಲ್ಲ ಎಲ್ಲೆಲ್ಲಿಗೋ ಮುಖ ಮುಚ್ಚಿಕೊಳ್ಳಲು ಸರಿದಾಡಿದವು (ಗ್ರಾಮಾಯ. ೪೯೨); ಅಜಾಗರೂಕತೆಯಿಂದ ಬಿದ್ದ . . . ತೆಂಗಿನ ಜುಟ್ಟು ಪರಟೆ ತುಣುಕುಗಳೂ ದೇವಸ್ಥಾನದ ಪವಿತ್ರತೆಯನ್ನು ಹೀಗಳೆಯುತ್ತಿದ್ದವು (ರಕ್ತಧ್ವ. ೨೪೩); ಒಂದೇ ಒಳ್ಳೆಯ ಬಾವಿ . . . ಬೇಸಿಗೆಯಲ್ಲಿ ಅಲ್ಲಿಂದಲೂ ನೀರನ್ನು ಪರಟೆಯಿಂದ ಕೆರೆಯಬೇಕು (ಹಬ್ಬಬ.೧೪). ೩. ಚಮಚದ ಅಗಲವಾದ ಮುಂಭಾಗ : (ಕ). ೪. ತಟ್ಟೆ ; ಪರಾತ : (ಕ). ೫. ಗುದ್ದಲಿಯ ಚೂಪಾದ ಭಾಗ,—ಮೊನೆ : (ಕ). ೬. ಮೊಣಕಾಲಿನ ಮೇಲೆ ಚಿಪ್ಪಿನಂತೆ ಗಟ್ಟಿಯಾಗಿರುವ ಭಾಗ; ಮೊಣಕಾಲು ಚಿಪ್ಪು : ನಿಂಗನ ಎಡಗಾಲ ಪರಟೆಯ ಸಂದು ತಪ್ಪಿದ್ದರಿಂದ ಅದು ಇನ್ನೂ ವಾಸಿಯಾಗಿದ್ದಿಲ್ಲ (ಜೀವಪ್ರ. ೧೦೬). ೭. (ಆಲಂ) ದೇಹ; ಶರೀರ : ಎಂದಾದರೂ ಸತ್ತರೆ ಬಿಟ್ಟು ಹೋದ ಈ ಪರಟೆಯನ್ನು ಯಾರು ಎಳೆದು ಹಾಕುವರು (ಎರಸಿ. ೬೫).
**ಪರಟಿ**$_1$ : ೨. ತೆಂಗಿನಕಾಯಿಯಲ್ಲಿ ಎಲ್ಲಕ್ಕೂ ಮೇಲೆ ತೋಟ . . . ಅದರ ಕೆಳಗೆ ಪರಟಿ, ಅದರ ಕೆಳಗೆ ಕೊಬ್ಬರಿ (ಮುಂಬಯಿ. ೬–೨೪೭). ೬. ಅಣಸಿನ ಬಡಿಗೆಯಿಂದ ನಿಂಗನ ಮೊಣಕಾಲ ಪರಟಿಗೆ . . . ಹೊಡೆದನು (ಜೀವಪ್ರ. ೧೧೫). ೮. ಚಿಕ್ಕಪುಟ್ಟ ಪಾತ್ರೆ : ಕೈಯಲ್ಲಿ ಪಾತ್ರೆ ಪರಟ ಹಿಡಿದುಕೊಂಡೋ ಹೋಗುತ್ತಿದ್ದ . . . ನೆರವಾಗುತ್ತಿದ್ದನು (ಮಲೆಮ. ೬೧೮). ೯. (ಆಲಂ) ಭಿಕ್ಷಾಪಾತ್ರೆ : ನನ್ನ ಕೈಯಲ್ಲಿ ಪರಟ ಬರುವ ಭೀತಿಯುಂಟಾಗಿದೆ (ಮೊಪಾಸಾ. ೩೨). **ಪರಡಿ**$_3$ : ೮. ಸೇವಿಗೆಯ ಪಾಯಸವ ಪರಡಿಗಳಲಾಳಿಯರು ಬಡಿಸಿತು(ಕೌಶಿರಾ. ೨–೬೫); ಹೆಚ್ಚಿನ ಪಾತ್ರೆ ಪರಡಿಗಳು ಮನೆ ಸೇರಿಕೊಂಡಾವು (ಪರಾಸ. ೧೭೬); ಪಾತ್ರೆ–ಪರಡಿಗಳನ್ನೆಲ್ಲ ಹುಣಿಸೆಹಣ್ಣಿನಿಂದ ತಿಕ್ಕಿ ಲಕಲಕ ಮಾಡಿದಳು(ಮುತ್ತೈದೆ. ೨೩).
**ಪರಡೆ**$_1$ : ೯. ಮಕ್ಕಳ ಕೈಯಲ್ಲಿ ಪರಡೆಯು ಬಂದೀತು (ಭಾರತಿ. ೪೬).

**ಪರಟ ಕೊಡು** = ಭಿಕ್ಷಾಪಾತ್ರೆಯನ್ನು ಕೊಡು; ಭಿಕ್ಷೆ ಬೇಡುವಂತೆ ಮಾಡು : ಈಗ ಹೌದಲ್ಲೊ ಕೇಶ್ಯಾನ್ನ ಕೈಯಾಗ ಪರಟ ಕೊಟ್ಟು ಕಳಿಸೋದು ? (ಸಸುಜೀ. ೨೪). **ಪರಟೆ ಕುದುರೆ** = ಕರಟದ ಕಣ್ಣಿನಲ್ಲಿ ತೂತು ಮಾಡಿ ದಾರವನ್ನು ಪೋಣಿಸಿ, ಹೆಬ್ಬೆರಳು ಮತ್ತು ಅದರ ಪಕ್ಕದ ಬೆರಳಿನ ಮಧ್ಯದಲ್ಲಿ ತೂರಿಸಿ, ದಾರವನ್ನು ಕೈಯಲ್ಲಿ ಹಿಡಿದು ಕರಟದ ಮೇಲೆ ನಡೆಯುವ ಒಂದು ಬಗೆಯ ಆಟ ; ಚಿಪ್ಪು ಕುದುರೆ : ಇವು ಪರಟೆ–ಕುದುರೆಗಳನ್ನು ಮೆಟ್ಟಿ ಕಿಳ್ಳೆಕೇತತನಕ್ಕೆ ಹೊರಟ ಹರಟೆಗಳಲ್ಲ (ಗಾಳಿಪ. X ಮೆಟ್ಟಿಗೆಯ ಮಾತು). **ಪರಟೆ ಹಿಡಿ** = ಭಿಕ್ಷಾಪಾತ್ರೆಯನ್ನು ಹಿಡಿ ; ಚಿಪ್ಪು ಹಿಡಿ : ಮುಂದೆ ನನ್ನ ಮಕ್ಕಳು ಕೈಲಿ ಪರಟೇ ಹಿಡಿಯೋ ಹೊತ್ತು ಬರುತ್ತೆ (ಹಾಡುಹ. ೭೭) ; ನಿನ್ನ ಮಾತನ್ನು ಕೇಳಿ ಕೈಯಲ್ಲಿ ಪರಟೆ ಹಿಡಿಯುವ ಮನಸ್ಸು ನನಗಿಲ್ಲ (ಪುಣ್ಣಿಸ. ೨೩೯). [ದೇ.॥ ತೆಲು. ಪರಟ, ಪನಟ, ಪನಂಟ, ಪಂಟ]

**ಪರಟೆ**$_2$ 'ಪರಟ' ನೋ.

**ಪರಟೆ**$_3$ 'ಪರಡೆ$_4$' ನೋ.

**ಪರಟೆದಲೆ** 'ಪರಟತಲೆ' ನೋ.

**ಪರಡ** 'ಪರಡು$_3$' ನೋ.

**ಪರಡಕ್ಕೆ** 'ಪಡಡಕ್ಕೆ' ನೋ.

**ಪರಡಿ**$_1$ (ನಾ). (ಉಕ) ಸಾಮಾನ್ಯವಾಗಿ ಗೋದಿ ಹಿಟ್ಟು ಅಥವಾ ರವೆಯನ್ನು ಹದವಾಗಿ ಕಲಸಿ, ಹೊಸೆದು ಮಾಡಿದ ಸಣ್ಣ ಸಣ್ಣ ಚೂರು ಮತ್ತು ಅದರಿಂದ ಮಾಡಿದ ಪಾಯಸ : ಬೆಳ್ಳಿಯರ ವುಡಿಯಂತಿರೆಸೆವ ಸೊಜ್ಜಿಗೆಗುಟ್ಟಿ . . . ಮಾಡಿದರು ಪರಡಿ ಸರವಳಿಗೆಯ (ಸಿದ್ಧರಾ. ೮–೫೧); ಪರಡಿ ಕಿಜುಗೋದಿ ಸೇವಗೆ . . . ಪರಿವಡೆಯಲಣ್ಣೆವಾಲಿಂ ಬೆರಸಿದ ಸಕ್ಕರೆಯ ತುಯ್ಯಲಿಕ್ಕಿದರ್ (ನಳಚಂ. ೪೪೧); ಪರಡಿಯ ಶಾವಿಗೆಯ ಪರಿಪರಿಯ ಪಾಯಸದ . . . ನವಘೃತ ಸೂಪದಂಶಕದಲ್ಲಿ ನೋಡಲಿ ನಮ್ಮನೆಂದುದು ಧೂರ್ತವಟುನಿಕರ (ಕುಮಾವ್ಯಾ. ೧೫–೭); ವಡೆ ಪರಡಿ ಸೇವಿಗೆಯ ಸೂಸಲುಗಡುಬು . . . ಚಿತ್ರಾನ್ನಗಳ ಬಡಿಸಿದರು (ಅನಂರಾ. ೬–೨೫–೪೦).

**ಪರಡಿ**$_2$ 'ಪರಡು$_3$' ನೋ.

**ಪರಡಿ**$_3$ 'ಪರಟೆ$_1$' ನೋ.

**ಪರಡಿ**$_4$ 'ಪರಡೆ$_4$' ನೋ.

**ಪರಡಿ**$_5$, ಪರುಡಿ, ಪರೋಟು (ನಾ). ೧. ಮರವನ್ನು ಕಡೆಯುವ ಯಂತ್ರ : ಚರಕಿ: ಮಂಚದ ಕಾಲು ಮುಂತಾದುವನ್ನು ಪರಡಿಯಲ್ಲಿ ಕಡೆದು ಮಾಡುತ್ತಾರೆ (ರೂಢಿ). **ಪರುಡಿ:** ೨. ಹಲಗೆಗಳನ್ನು ಗರಗಸದಿಂದ ಕೊಯ್ದು ತೆಗೆಯುವಾಗ ಉಳಿಯುವ, ಉಪಯೋಗಕ್ಕೆ ಬಾರದ ಮರದ ದಿಮ್ಮಿಯ ಹೊರಭಾಗದ ತುಂಡು : ಕರಗಸದ ಗುಂಡಿಯಲ್ಲಿ ಹಲಗೆಗಳಾವುದೂ ಇಲ್ಲದಂತೆ ಮಾಡಿದ್ದರು. ಗಾರ್ಡನು ಬಂದು ಬರಿಯ ಪರುಡಿಗಳನ್ನು ನೋಡಿ ಮಹಜರು ಮಾಡಿಕೊಂಡು ಹೋದನು (ರೂಢಿ). **ಪರೋಟು:** ೨. ಕಳ್ಳರು ಪರೋಟನ್ನು ಮಾತ್ರ ಬಿಟ್ಟು ಹಲಗೆಗಳನ್ನೆಲ್ಲಾ ಕದ್ದೊಯ್ದಿದ್ದರು (ರೂಢಿ).
[←ತುಳು. ಪೋರೊಟು]

**ಪರಡಿಗೆ**$_1$ (ನಾ). = ಪರಡಿ$_1$ : ಅವುಗು ತಿಜುಸೇವಗೆಯುನು ಸರವಳಿಗೆ ಪರಡಿಗೆಯು ನಖುಮುತ್ತೆಲ್ಲ [ಪಾಠಾಂ. ಸರಳಿಗೆಯು ಪರಡಿಯುನು ನಖುವು ಮುಲ್ಲಕ್ತಿ, ಸರವಳಿಗೆ ಪರಡಿಗೆಯು ನಖುವುಲ್ಲತ್ತಿ] ಲಡ್ಡುಗೆಯುನು . . . ಗಡಣಿಸುತ್ತ (ಸಿದ್ಧರಾ. ೮–೮೫). [ಪರಡಿ$_1$ +–ಗೆ]

**ಪರಡಿಗೆ**$_2$ (ನಾ). ತಕ್ಕಡಿಯ ಎರಡು ಕಡೆಗಳಲ್ಲೂ ಅಳವಡಿಸಿರುವ ತಟ್ಟೆ; ಪರಡೆ : ಒಂದು ವ್ಯಕ್ತಿಯನ್ನು ಒಂದು ಪರಡಿಗೆಯಲ್ಲಿ, ಅನೇಕ ವ್ಯಕ್ತಿಗಳನ್ನು ಮತ್ತೊಂದು ಪರಡಿಗೆಯಲ್ಲಿ ಹಾಕಿ ತೂಗಲು (ಕುಟುಂಬ. ೨೨). [ಪರಡಿ$_4$ (< ಪರಡೆ$_4$)+–ಗೆ]

**ಪರಡು**$_1$, ಹರಡು$_1$ (ಕ್ರಿ). ೧. (ಬೆರಳು, ಉಗುರು, ಗುದ್ದಲಿ ಮುಂತಾದುವುಗಳಿಂದ) ಕೆರೆ; ಗೆಬರು : ನೆಲನಂ ಪೊಕ್ಕಡಂಗಿದ ಪಗೆವರನಗುಟ್ಟಿ ಕೊಲ್ವುದನುದಾಹರಿಸುವಂತೆ ದಕ್ಷಿಣಚರಣದೊಳ್ ನೆಲನಂ ಪರಡಿ ಗಂಭೀರನಿನಾದದಿಂ ಹೇಷಿತಂಗೆಯ್ವು ವಿಜಯಹಯಮುಂ ವಿಜಯನ ವಿಜಯಮನೆ ಸೂಚಿಸೆ (ಪಂಪಭಾ. ೯–೫೫ವ); ಪಡಿ ಕೊಟ್ಟರೂ ಪರಡೋದು ಬಿಡ (ಗಾದೆ). ೨. ಹುಡುಕು; ತಡಕಾಡು :

ಅದರ ಅವಶೇಷವು ಆ ಪ್ರಾಂತದಲ್ಲಿ ಈಗಲೂ ಇದೆಯೋ ಎಂದು ಪರಡು (ಹುಡುಕು)ತ್ತಾರೆ (ನಾಡೋಜ. ೨೧೯); ಅವನು ತಲೆದಿಂಬಿನ ಅಡಿಯಲ್ಲಿರಿಸಿದ ಕಡ್ಡಿಪೆಟ್ಟಿಗೆಯನ್ನು ತೆಗೆಯಲೆಂದು ಕೈಹಾಕಿ ಪರಡಿದ (ನಡಜಾ. II, ೧೧೨೩). **ಹರಡು₁** : ೧. "ಹರಡು–ಅಂಗುಲಿ ಖನನೇ (ಬೆರಳಿನಿಂದ ಕೆದಕು), ಪ್ರಸಾರಣೇ, ಗುಲ್ಫೇ ಚ (ಕಾಲಿನ ಹರಡು)" (ಶಮಥಾ). ೩. ಕೆತ್ತು ; ಕೀಳು : ಮೊದಲು ಒಂದಿಷ್ಟು ಗೆಣಸಿನ ಬುಡಗಳನ್ನು ಹರಡಿ ರಾಶಿ ಹಾಕಿದಳು (ಕುಡಿಕೂ. ೧೬೦).

[ದೇ.॥ ತಮಿ. ಪಜಿಣ್ಣು, ಪಜಿಾಣ್ಣು ; ಮಲ. ಪರಣ್ಣು]

**ಪರಡು₂**, ಹರಡು₂ (ಕ್ರಿ). ೧. ಅಗಲವಾಗಿ ಹಾಸು,—ಹರಹು : ಕುದಿಸಿ ಉದಕದೊಳಲುಬಿ ಬೀಸುತೊಗೆದು ಪರಡಿ ತೆಗೆತೆಗೆದು ಘಳಿಗೆಯ ನೊದಗಿಪುದು (ಬಸವು. ೩೬–೪೭). ೨. ಅಗಲವಾಗು ; ವಿಸ್ತಾರಗೊಳ್ಳು : ಪರಡಿಗೆ[ರೆ] ಸೋಗೆ ಗಿ[೦]ಡುಗೊರಲಿಂ ಶಿಖಿ ಮುಂದೆಜಿಗಿಪ್ಪಿನಂ ತೃಷಾ ? ಪರಿವೃತನಾಗಿ ಸೀರ್ಗುಡಿಯುತಿರ್ದುದನೊಯ್ಯನೆ ಬಂದು ಭೂತಳೇಶ್ವರನಿಸೆ (ಸೂಕ್ತಿಸು. ೩–೨೨೪). **ಹರಡು₂** : ೧. "ಹರಡು–ಅಂಗುಲಿ ಖನನೇ (ಬೆರಳಿನಿಂದ ಕೆದಕು), ಪ್ರಸಾರಣೇ, ಗುಲ್ಫೇ ಚ (ಕಾಲಿನ ಹರಡು)" (ಶಮಥಾ) ; ಒಗೆದೊಗೆದೊಂದನೊಂದಂ ಹರಡಿ ಗಳಿಗೆಯನೊಂದಿಸುತ್ತಾ ಮಡಿಗಳಂ ತೆಗೆದೊಟ್ಟಿ ಮಿಗೆ ಬಿಗಿದು (ಬಸವು. ೨೧–೮) ; ಹರಡಿದಂ, ಕದಡಿದಂ (ಶಬ್ದಾನು. ೪೪೭ ಪ್ರಯೋ). ೩. ಹಬ್ಬು; ವ್ಯಾಪಿಸು : ಊರ ಹೊರಗೆ ಹರಡದ ಹೆಸರಾತಗೆ (ನಲ್ಮ. ೩–೧೩). ೪. (ಆಲಂ) ಆಡಂಬರವನ್ನು ತೋರಿಸು,—ಪ್ರದರ್ಶಿಸು : ಒಂದೊಂದು ತಡವೆ ಅಂಗಡಿಯನ್ನು ಹರಡಬೇಕಾಗುವುದು. ಅದಕ್ಕೆ . . . ಒಂದೊಂದು ತಡವೆ ಅತಿ ಜಂಭವೂ ಬೇಕು (ದೇವೀಚೌ. ೬೭).

**ಹರಡಿಕೊಳ್ಳು** = ೧. ಅಗಲವಾಗು; ವಿಸ್ತಾರಗೊಳ್ಳು : ವಿಸ್ತೃತ್ವರಃ . . . ಹರಡಿಕೊಳ್ಳುವದು (ಸಿದ್ಧಾಂತಿ. ೩೩೧). ೨. ಚೆಲ್ಲಾಪಿಲ್ಲಿಗೊಳಿಸು; ಕೆದರು: ಮಗು ಆಟದ ಸಾಮಾನುಗಳನ್ನೆಲ್ಲಾ ಹರಡಿಕೊಂಡು ಕೂತಿದೆ (ರೂಢಿ). [ದೇ.॥ ತಮಿ. ಮಲ. ಪರತ್ತು ; ತುಳು. ಪರಡ್, ಹರಡು ; ಕೊಹ. ಪರತ್ ; ತೆಲು. ಪಜಚು]

**ಪರಡು₃**, ಪರಡ, ಪರಡಿ₂, ಪರಡೆ₂, ಹದಡ, ಹದಡು, ಹದರು₂, ಹದಿರು₂, ಹರಡಿ, ಹರಡು₃, ಹರಡೆ₁ (ನಾ). ೧. ಹಿಮ್ಮಡಿಯ ಗಂಟು ; ಗುಲ್ಫ : "ಪರಭಾಗಂ ಪಾರ್ಷ್ಣಿ ಮಡಂ ಪರಡುಗ[ಳ]ವೆ ಗುಲ್ಫ ಘುಂಟಿಕಾ ನಾಮಂಗಳ್" (ಪಸ್ತುಕೋ. ೬೭–೨) ; ಪರಡು ಸಂದಿ ನೊಸಲ್ ಪಣೆ ಕಣ್ ಕದಂಪಿವೆಂಬಿದೆಯನೆ ನಟ್ಟು ಪುರ್ಚಿದುವು. . . ಪಾರ್ಥನಂಬುಗಳ್ (ಪಂಪಭಾ. ೧೧–೧೩೬) ; ಪರಡು ನಿಗೂಢಂ ಲಲಿತಲತಾಂಗಿಯ ವರಜಂಘಾಯುಗಲಂಗಳ ಭಂಗಿಯನಜಿಾಯೆಂ ಪೊಗಟಲ್ (ಸುಕುಮಾ. ೫–೫೦ ರಗಳೆ); ಪರಡಿರ್ಬದಿ ತೋಳುರಂ . . . ಮಡಂಗಳೆಂಬೆಡೆಗಳಂ ನೆಜಿ ನಟ್ಟುವು ಬಾಣಕೋಟಿಗಳ್ (ಶಾಂತೀಶ್ವ. ೮–೬೭) ; ಪರಿವಿಡಿಯೊಳುಂಗುಟದೊಳಡಿಯೊಳು ಪರಡಿನೊಳು . . . ಕಚಭರದೊಳೀ ಪರಿಯಿಂದೆ ತತ್ತತ್‌ಸ್ಥಾನಕಳೆಗಳಲಿ (ಬಸವು. ೪೦–೧೯). **ಪರಡ** : ೧. ವಿಸ್ತರಗಂಗಳುಯರಡುಂ ಪಾದವು ಪರಡಗಳುಬ್ಬಿಹವು (ತ್ರಿಭುವೋ. ೭–೨೧). **ಪರಡಿ₂** : ೨. ಮುಂಗೈಗೆ ತೊಡುವ ಒಂದು ಬಗೆಯ ಆಭರಣ : ಕಂಕಣಂ ಚೂಡೆ ದೋರೆಯುಂ ಪರಡಿ ಪೊಂಬಳೆಯುಮಂ ಕರದ್ವಯದ ಮಣಿಬಂಧದಲಿ ಒಲವಿನಿಂದಿಟ್ಟರು (ನವಮೋ. ೨೩–೪೦). **ಪರಡೆ₂** : ೨. ನೂಪುರ ಕಡಗ ಪೆಂಡ್ಯೆ ಪರಡೆ (ವಿವಾಕ್ಯ. ೧೧–೧). **ಹದಡ** : ೩. ಕೈಯ ಮಣಿಕಟ್ಟು ; ಪ್ರಕೋಷ್ಠ : ಕಿಟ್ಟಿ ಎಷ್ಟು ಅಂಗಲಾಚಿದರೂ ಶಾಲಿಗ್ರಾಮವು . . . ಹದಡದ ಗುಂಟ ಹರಿದು ಬಂದು ಹೊರಕ್ಕೆ ಸಿಡಿದು ಹೋಯಿತು (ಗಂಮಾಯಿ. ೧೭೯). **ಹದಡು** : ೩. ಪಟುಭೀಕರ ವಿಷೋರಗವು . . . ಪೊಡವಿಯೊಡೆಯನ ಕೈಯ ಹದಡಂ ಕಡುವಿಷಂ ಮಿಗೆ ಕಚ್ಚೆ (ಬಸವು. ೪೬–೨೨) ; ಕರಭ—ಮುಂಗೈಯಿಂದ ಕಿರಿಬೆರಳಿನ ತನಕ ಇರುವ ಹದಡು (ಗಂಗಾಮು. ೭೨). **ಹದರು₂** : ೩. ಕಯ್ಯ ಹದರನೊಡೆಗಚ್ಚಿ ಜಡಿಯುತ್ತ ಭೋಂಕನೆ ಬಂದ ರೌದ್ರಸರ್ಪನನು ಕಂಡು ಹೆದಜಿ ಹವ್ವನೆ ಹಾಜಿ (ಹಚಕಾ. ೧೨–೯) ; ಕೊರಳ ಹದರಿನಲೌಕಿ ಹಿಡಿದೊಡೆ (ತೊರಂರಾ. ೬–೪–೨೮). **ಹದಿರು₂** : ೩. ನಗುತ ಲಕ್ಷ್ಮಣ ನಾಕೆಯ ಹೆಗಲ ಹದಿರಿನಲೌಕಿ . . . ಹೊಜವಡಿಸೆ (ತೊರಂರಾ. ೩–೪–೩೦). **ಹರಡಿ** : ೨. ದೋರೆಯ ಹರಡಿಯಿಾ ತಿರುಗುವ ಬಗೆಯು ದೃಢಗೆಡುತಿಹುದೆ ಮಾಯಾ (ಚಿದಾಕೋ. ೩೫–೧೧) ; ಹರಡಿ ಹಿಂಬಳೆ ಸಾಲ್ಬೆರಳ್ಕೈದರ ಮೇಲೆ ಸುರುಚಿರರೇಖೆ ಚಂದ್ರಮನ ಸೋಲಿಪ ನಖ (ವಿವಾಕ್ಯ. ೧೦೩–೧); ವಾಲೆ ಮೂಗುತಿ ಕಪ್ಪ ಬಂದಿ ಗೀರ್ಬಳೆ ಹರಡಿ (ಸಿದ್ಧಕಾ. ೧೧–೧೫) ; ದೋರೆಕಂಕಣವೆ ಹರಡಿಯೇ . . . ಮೂಗುತಿಯೆ ಎಂದು ನೆನೆದಿಂತು ಶೋಕಿಸಿದರು (ಮಲ್ಲಚ. ೭–೭). ೪. ಒಂದು ಬಗೆಯ ಆಭರಣ : ಪಂಕಜಾನನೆ, ಕಳದಿ ಹರಡಿಗಳು ಮೆರೆದಿಹವೆ ? (ಮಲ್ಲಾಂ. ೨–೩೨). **ಹರಡು₃** : ೧. "ಘುಂಟಿಕಾ, ಗುಲ್ಫಃ – ಈ ೨ ಹರಡು" (ಹಲಾಯು. ೮೫–೩೬೧) ; ಕುಲಗಿರಿ ಸಪ್ತಕುಲಪರ್ವತಂಗಳೂ ಶ್ರೀಗುರುವಿನ ಹರಡಿನಲ್ಲಿಹವು(ಆತ್ಮತ್ರಿ. ೫ ಟೀಕೆ); ಆ ಪದಯುಗಳವಂ ಪಿಡಿದು ಹರಡಿನ ಮೊದಲಿಗಿಕ್ಕಡಿಯಾಗಿ ಕಡಿಕಡಿದುರವಣಿಸುತಿರಲು (ಬಸವು. ೩೯–೩೪) ; ಹರಡುಗಳು ಬೆರಲು ಸಿರಿ ಗೂಢವಾ ಬಡನಡುವಿನುರುರಕ್ತಚರಣವಾ ಕೆಂಚಿಳಿಯ ಕಡೆಗಣ್ಣ ತರುಣಿ ಸುಖಿಯಹಳು (ವೀಶೈವೂ. ೪–೨೩–೩೨). **ಹರಡೆ₁** : ೧. "ಘುಂಟಿಕಾ, ಗುಲ್ಫಃ – ೨ ತದ್ಗ್ರಂಥೀ, ಆ ಪಾದದ ೨ ಪಕ್ಕಗಳಲ್ಲಿಯೂ ಯಿರುವ ಮೂಳೆ ಗೆಣ್ಣುಗಳ ಮೇಲೆ ಮಾಂಸಖಂಡದ ದಿಮ್ಮಿ ಚೀಲ . . . ಹರಡೆ" (ಸಿದ್ಧಾಂತಿ. ೧೮೯). ೫. ಆನೆ, ಕುದುರೆಗಳಿಗೆ ತೊಡಿಸುವ ಒಂದು ಬಗೆಯ ಆಭರಣ : ೪ ಆನೀನು ೨ ಹರಡೆ ೧ ತನಾಲು (ಎಕ. XIV, ನಂಜನ. ೨೯೩–ಪುಟ ೧೪೩ ; 1847). ೬. ಈಟಿ ಮುಂತಾದ ಆಯುಧಗಳಿಗೆ ಅಲಂಕಾರಕ್ಕಾಗಿ ಅಳವಡಿಸುವ ಲೋಹದ ಕಟ್ಟು ; ಅಣಸು : ಚಿನ್ನದ ಹರಡೆ ಬೆಳ್ಳಿಯ ಕಟ್ಟು ಮುತ್ತುಗಳುನ್ನತಕುಚ್ಚಿನಿಟ್ಟಿಗಳ ಸನ್ನಾಹದ ಬಲುಭಟರು . . . ಕಾದಿಹರು (ಕಂಸವಿ. ೧೧–೧೪೫).

**ಹರಡಿಕಂಕಣ, ಹರಡೆಕಂಕಣ** = ಒಂದು ಬಗೆಯ ಹಸ್ತಾಭರಣ : ಕರೆದೊಬ್ಬರಿಗೆ ಅನ್ನವಿಕ್ಕುವೆನೆಂತೆಂಬ ಹರಡಿಕಂಕಣವನಿಡೆ ನಿನ್ನ ಕೈಗೆ (ಕಥವಿ. ೧೯೫) ; ಹರಡೇಕಂಕಣ ಕಮಲಾದೇವೀ ಒಂಕಿ ಬಾಪೂರೀ (ಹುಟ್ಟಿಹ. ೧೪೩). **ಹರಡಿಗುಂಡು** = ಒಂದು ಬಗೆಯ ಒಡವೆ : ಪೌಂಚಿ, ಹರಡೀಗುಂಡು, ಗೆಜ್ಜೆ ... ಡಾಬು ಮೊದಲಾದ ಆಭರಣಗಳನ್ನು ಧರಿಸಿಕೊಂಡು . . . ಹೊರಟರು (ಮಲೆಮ. ೩೪).

[ದೇ.॥ ತಮಿ. ಪರಟು, ಪರಣ್ಡೈ ; ತೆಲು. ಅರಡಾ = ಕಂಠಾಭರಣ ; ಪಯಿಂಡಿ, ಪೈಂಡಿ = ಬಂಗಾರ]

**ಪರಡೆ₁** 'ಪರಟೆ₁' ನೋ.

**ಪರಡೆ₂** 'ಪರಡು₃' ನೋ.

**ಪರಡೆ₃**, ಹರಡೆ₂ (ನಾ). ೧. ಒಂದು ಬಗೆಯ ನೀರುಹಕ್ಕಿ : ಭೋರೆಂದೆಜಗಿ ಪೊಯ್ವ ಪರಡೆಗಳೆ ವಿಜಯಭೇರಿಗಳಾಗೆಯುಂ (ಪರ್ಥಮಾ. ೫–೪೧ವ) ; ಉಂಚಿಯ ಪರಡೆಯ . . . ಚದುರರು ತಂಡದಲ್ಲಿ ಹಿಂಡು ಮುಂಚಿಗೆ ಪಾಜಿಸುತಿಹರು (ಕುರಾಸಾಂ. ೪–೮೪) ; ಸಾಳ್ವಂ ಪಸುಂಬಂ ಪರಡೆ [ಪಾಠಾಂ. ಡಿ] ಶಿಖಿ ಶುಕಂ ತದ್ವನಾಂತಸ್ಥಮಿರ್ಕುಂ (ಶಬಶಂ. ೩–೩೩). ೨. ಶಕುನದ ಹಕ್ಕಿ; ಹಾಲಕ್ಕಿ : ಪರಡೆ ಪಸುಂಬಂ... ಶರಕಮಿವು ಪೋಗೆ ಶಾರುಂಬರೆಯೆಡಕೆಯುಂದೂರೊಳೊಳ್ಪುಂ (ಲೋಕೋಪ.

೧೨-೧೬). **ಹರಡೆ₂:** ೧. "ಕರ್ಕರೇಟುಃ, ಕರೇಟು—ಈ ೨ ಹರಡೆ" (ನಾಚಿ೨. ೧೧೪) ; ಶಬರನಿಕರಂ . . . ಹರಡೆ ಗೌಜು ಟಿಟ್ಟಿಭ . . . ರಾಗಧರನೆಂಬ ಪಕ್ಷಿಗಳ ದನಿಯಿಂ ಕರೆಯಲು (ಹಚಕಾ. ೫-೪೨); ಹರಡೆ ಗೀಜುಗ . . . ಕಪಿಂಜ ಗಿಂಚಲು ಗರಿಗ ಮೊದಲಾದಖಿಳಖಗಕುಲ ಬಿದ್ದು ದುರಿಯೊಳಗೆ (ಕುಪ್ಪಾಅ. ೨೦-೫೩) ; ಅರಸಿ ನೋಡೀಚೆಯಲಿ ಹುದುಗಿ ಹರಡೆ ಹಂಗ ಮಯೂರ . . . ಇವೆಯೆಂದ (ತೊರರಾ. ೩-೧-೩೨). ೨. ಹರಡೆ ವಾಮಾಸೆಯಿಂದಂ ಸರಂಗೆಯ್ಯಲದುಂ ಮೇಣ್ ನಟ್ಟೊಡಂ ಪಿಂಗಲಿಯುತಿಶುಭದಂ (ಖಮುದ. ೩-೮೬) ; ದೆಸೆವಿಡಿದು ಕೆದಱಿದವು ಹೊಲದಲಿ ಹಸುಬ ಹರಡೆ[ಪಾಠಾಂ. ಡಿ]ಗಳೀನನೆಂಬೆನು ಶಕುನಸೂಚಕವ (ಕುಪ್ಪಾಅ. ೧೩-೨೧) ; ಅರ್ಜುನನು ತಪಸ್ಸಿಗೆ ಹೊರಟ ಆ ಸೂರ್ಯೋದಯ ಸಮಯದಲ್ಲಿ ಹರಡೆ ಎಡಗಡೆ ಮಧುರಸ್ವರದಲ್ಲಿ ಉಲಿಯಿತು (ಭಾಮಣಿ. ೯೧). [ದೇ.॥ ತಮಿ. ಪರಣ್ಟೈ./ಸಂ. ವರಟಾ, ವರಟೀ]

**ಪರಡೆ₄,** ಪರಟಿ₃, ಪರಡಿ₄, ಪಾರಟ, ಪಾರಡೆ (ನಾ). ೧. ವಸ್ತುಗಳನ್ನು ತೂಗಲು ತಕ್ಕಡಿಯ ಎರಡು ಕಡೆಗಳಲ್ಲೂ ಅಳವಡಿಸಿರುವ ತಟ್ಟೆ,—ಬಟ್ಟಲು : ಚೀಟನೊಳು ಬೇಗ ಪಂಚಾಕ್ಷರಿಯ ಬರೆದು ತೀರ್ಥದ ತಟ್ಟೆ ಭಸಿತವೆರಸೊಂದೆಶೆಯೊಳು ಪೋಗೆ ವೈಷ್ಣವ ದ್ವಿಜರನೊಂದು ಪರಡೆಯೊಳಿರಿಸಿ ತೂಗಿ (ಗುರುಚಾ. ೧೦-೪೩); ಇಲ್ಲಿ ಎರಡೂ ಪರಡೆಗಳು ಸಾಟಿಯಾಗಿರುವವು (ಸಾಲಂಸಾ. ೩೭); ದೊರೆಗಳು ತಮ್ಮ ಪಕ್ಕದಲ್ಲಿ ಕುಳಿತಿದ್ದ ನೇತ್ರಾವತಿಯ ಸೌಂದರ್ಯವನ್ನೂ . . . ಸಂಜೆಯ ಸೌಂದರ್ಯವನ್ನೂ ತಮ್ಮ ರಸಿಕತೆಯ ಪರಡೆಯಲ್ಲಿ ತೂಗಿ (ತಿಲಾಮು. ೨೭). **ಪರಟಿ₃ :** ೨. ಮನೆಯ ಸುತ್ತಲೂ ಇರುವ (ತಗ್ಗಾದ) ಪೌಳಿಗೋಡೆ : (ಕ). **ಪರಡಿ₄:** ೧. ತ್ರಾಸು ಪರಡಿಯೊಳಿಟ್ಟು ಅಂಡಜ ಏಸು ಪರಿ ಶರೀರವನು ಕೊರದಿಡೆ ವಾಸರವು ತಾ ಹೆಚ್ಚೆ ಸವತಟ್ಟು ಅಂಡ ಬರದಲಿ (ನಂದಿಲೀ. ೧೪-೩೦) ; ಆ ಶಿಬಿರಾಯ ತಕ್ಕಡಿಯ ತರಿಸಿ ತನ್ನಯ ಮಾಂಸವಂ ಕೊಯ್ದು ಯಿಕ್ಕಿದನು ವಂದು ಕಡೆಗೆ ಹಕ್ಕಿಯಂ ಪರಡಿಯೊಳಗಿರಿಸಿ ತೂಗಲ್ಕೆ (ತುರಂಗ. ೩೧-೭) ; ರುಕ್ಮಿಣಿ ಬಂಗಾರವನ್ನೆಲ್ಲ ತೆಗೆಸಿ ಒಂದು ತುಲಸೀದಲವನ್ನಿಟ್ಟಳು. ತುಲಸೀ ದಲದ ಪರಡಿ ನೆಲಕ್ಕೇ ಕೂತಿತು (ಕರ್ನಾಕ. ೨೮೮). **ಪಾರಟ :** ೨. ಅ(ಆ) ಬಾದಾಮಿಯ ದುರ್ಗ್ಗವನು ಮೂಡಣ ಪಾರಟವನು ಚಾಮರಾಜ ರಚಿಸಿದನಾ ಮಂಗಳ ಮಹಾ ಶ್ರೀ ಶ್ರೀ ಶ್ರೀ (ಇಅ. X, ೯೩-೧೩ ; 1339). **ಪಾರಡೆ :** ೧. ೫೦. ಪಂಚಪಾತ್ರಗಳು. ೫೧. ಪಾರಡೆಗಳು (ತಕ್ಕಡಿ ಪಾರಡಿ) (ಮುಂಬಸ್ಪಾ. ೧೦೨).

[←ಮರಾ. ಪರಡೇ, ಪಾರಡೇ]

**ಪರಣ₁** 'ಪನ್ನ₃' ನೋ.

**ಪರಣ₂,**ಹರಣ₁(ನಾ).೧. ಎಲ್ಲ ಪ್ರಾಣಿಗಳಲ್ಲೂ ಇರುವ ಚಿದ್ವಸ್ತು; ಜೀವ ; ಪ್ರಾಣ : "ಪರಣಂ ಪ್ರಾಣಾರ್ಥದೊಳ್" (ಕರ್ಣಾನಿ.೮೩); ನಾ ಪರಣವ ಕೊಂಬೆ ನೋಡೆಂದು ದೈತ್ಯಚಮೂಪನನೆಚ್ಚು ಬೊಬ್ಬಿಱಿದ (ಮೋಹತ. ೧೨-೫೭) ; ಸತ್ತ ಕುವರಂಗೆ ಪರಣವಂ ಕೊಟ್ಟನು (ಚಿಬಪು. ೫೭-೧೫) ; ತಾಪಸೋತ್ತಮ ಮೂಱು ಝಾವದಯ್ಯನ ನೇಮವೇ ಪರಣವಾಗಿ ಗಮನಿಸದಂತೆ . . . ಸೂರೆಳಂ ವಿಜಾಜಿಲಸಮರ್ಥನಾಗಿ (ರಾಘಶ. ೧೪-೫೩). ೨. (ಅಲಂ) ಅತ್ಯಂತ ಪ್ರಿಯನಾದವನು : ಕನ್ಯಾಪತಿ ಪ್ರಸನ್ನವಿಜಯವಿಠ್ಠಲ . . . ಎನ್ನಯ ಪರಣ (ಮೋಕ್ಷದೀ. ೧೯-೧). **ಹರಣ₁ :** ೧. ಹರಣವುಳ್ಳನ್ನಕ್ಕ ನಿಮ್ಮ ಚರಣವ ನೆನೆವುದ ಮಾಣೆ ಮಾಣೆ (ಬಸವ. ೬೯೨) ; ತೇಜದೇಳ್ಗೆಗೆ ನಿನ್ನ ಹರಣಕ್ಕೆ ಕೇಡು ಬಂದಡೆ ಬರಲಿ ಮಿಗೆ ಸತ್ಯಮಂ ಬಿಟ್ಟು ಕೆಡದಿರು (ಹಚಕಾ. ೬-೫೭) ; ಮಡಿದಿರ್ದ ಪಶುಗಳ ಹರಣಮಂ ಕೊಟ್ಟಾರುಹತರಂ ಪೊರೆಯನೇ (ಬಸಪು. ೫೦-೬೧) ; ಮಕುಟಬದ್ಧರ ಹರಣದನಿಲಸಮೂಹ ಬೀಸಿತು ನಭಕೆ ಬಿಜುಬಿನಲಿ (ಕುಪ್ಪಾದ್ರೋ. ೧೦-೧೧) ; ದುರುಬುದ್ಧಿಗಳನೆಲ್ಲ ಬಿಡಿಸೊ ನಿನ್ನ ಕರುಣಕವಚವೆನ್ನ ಹರಣಕ್ಕೆ ತೊಡಿಸೊ (ಪುರಂದ. ೧-೯-೧) ; ನನ್ನ ಹರಣ ನಿನಗೆ ಶರಣ ಸಕಲಕಾರ್ಯಕಾರಣಾ ನಿನ್ನ ಮನನದಿಂದ ತನನವೆನುತಿದೆ ತನು ಪಾವನಾ (ಗ೨. ೧೧೩-೧).

**ಹರಣದ ಹರಣ** = ಪ್ರಾಣಕ್ಕೆ ಪ್ರಾಣದಂತಿರುವವನು ; ಅತ್ಯಂತ ಪ್ರೀತಿಪಾತ್ರ: ತರುಣ ಸಂತತಿಯೆನ್ನ ಹರಣದ ಹರಣವಾಗಿಹ ನಿನ್ನುವಂ ಬೋಸರಿಸಿ ಕೊಂಡಾಡುವೆನು (ಬಸಪು. ೧೫-೩೧). **ಹರಣದೆಱೆಯ** = ೧. ಜೀವದ ಒಡೆಯ : ಹರಣದೆಱೆಯನೆ ನೀನೆ ಬಲ್ಲೆಯೆಂದು . . . ಸಾಷ್ಟಾಂಗದಿಂದೆಱಗೆ (ಪದ್ಮರಾ. ೨-೨೫). ೨. ನಲ್ಲ ; ಕಾದಲ ; ಪ್ರಾಣೇಶ್ವರ : ಹರಣದೆಱೆಯ ಕೀಳಾದರೆ ಸ್ವಪ್ನದೊಳು . . . ನಾನಳುತಿದ್ದೆ (ಜೀಪಂಸಾಂ. ೪-೬೧) ; ಹರಣದೆಱೆಯ ಚಿತ್ತೈಸು (ಜಯಕಾ. ೧೨-೩೪). **ಹರಣದೊಡತಿ** = ಜೀವದ ಒಡತಿ ; ಸ್ವಾಮಿನಿ : ಶಾರದೆ ನಿಗಮವಂದಿತಳೆ ಹರಣದೊಡತಿಯೆನ್ನ ಹೃದಯದೊಳಗೆ ನಿಂದು ಸೇರಿಸು ನಿನ್ನ ಸುಮತಿಯ (ಅಬ್ಬಲೂ. ೧-೭).

[<ಪ್ರಾ. ಪರಾಣ./ಸಂ. ಪ್ರಾಣ]

**ಪರತ,** ಪರತು, ಪರ್ತ (ಅ). (ಉಕ) ಮರಳಿ ; ತಿರುಗಿ ; ಪುನಃ : ಇಂದು ಮನಿಯಾರ್ಡರ ಊರಿಂದ ಪರತ ಬಂದಿತಲ್ಲ (ಪ್ರಭಾ. ೫೧) ; ಹಣಾ . . . ಪರತ ಬಾರದ ಏನ ಮಾಡತದ ? (ಹೂಬಿಸಿ. ೩೧). **ಪರತು :** ಠೇವುದಾರನಿಗೆ ಹಣ ಪರತು ಸಿಗಲಾರದು (ಬ್ಯಾಂಕಕ್ಕೆ. ೧೧) ; ನಾನು ಕೊಡ್ತೀನಿ.ಪೈಲಾಕ್ಕೆ ಪರತು ಕೊಟ್ಟು ಬಿಡುವಂತಿ (ದಾಕೂಟ ೨೧); ತಾನು ಕಳುಹಿದ ಕಾಗದವೂ ಪರಪಾಟನಿಂದ ಪರತು ಬಂದಿತು (ತಿಂಮತ. ೧೦೦). **ಪರ್ತ :** ಹಬ್ಬಕ್ಕೆ ಮಗಳ್ನ ಕರೀಲಿಕ್ಕೆ ಬಂದಾಳ . . . ಹಬ್ಬ ಮುಗಿದ ಕೂಡಲೇ ಪರ್ತ ಕರಕೊಂಡು ಬಾ (ಜೀಸಪ್ರ. ೪೮).

**ಪರತ ಮಾಡು, ಪರತು ಮಾಡು** = ವಾಪಸು ಮಾಡು ; ಹಿಂದಿರುಗಿಸು: ನಿಮ್ಮ ಲೆಕ್ಕದ ಕಾಗದವನ್ನು ಪರತ ಮಾಡಲಾಗಿದೆ(ದೇಕನ್ನ.೬೦) ; ಪೋಲೀಸರು ನೋಟೀಸನ್ನು ಪರತು ಮಾಡಿದ್ದರು (ಪಾನಕ. ೭೭).

[←ಮರಾ. ಪರತ]

**ಪರತಂತ್ರ** (ನಾ). ೧. ಬೇರೆಯವರಿಗೆ ಅಧೀನವಾಗಿರುವಿಕೆ ; ಪರಾಧೀನತೆ : ಎಷ್ಟು ದಿನಗಳ ಕೆಳಗೆ ಹಾಕಿದೆವೋ ಏನೋ ಈ ಪರತಂತ್ರದ ಹಾಸಿಗೆಯನ್ನು (ಸಾಹಿಜೀ. ೮೬). ೨. ಬೇರೆಯದನ್ನು ಆಶ್ರಯಿಸಿರುವಂಥದು ; ಪರಾವಲಂಬಿಯಾದುದು : ಅವಂ ಅವಳ್ ಅವುದು ತಾನೆಂಬಿವು . . . ಪರತಂತ್ರಂಗಳ್ (ಶಮದ. ೧೪೩ ವೃತ್ತಿ). ೩. ಇತರರಿಗೆ ಅಧೀನನಾಗಿರುವವನು ; ಪರಾಧೀನ : "ಪರವಾನ್ . . . ಪರತಂತ್ರಃ, ಪರಾಯತ್ತಃ, ಪರಚ್ಛಂದಃ, ಗೃಹ್ಯಕಃ—ಈ ೮ ಹೆಜರ ವಶದಾತಂ" (ಹಲಾಯು. ೫೬-೧೮೬) ; ಪರತಂತ್ರನೆನಿಸಿದೆನಗಿನ್ನರಸೇವುದೊ ಹಾಸಮೆಂಬವೊಲ್ (ಲೀಲಾಪ. ೪-೪) ; ಇಂದಿನಿಂದ ನಾನು ಪರತಂತ್ರನಾದೆ (ಉದನ್ವೈ. ೮೭); ಇಂತೆಂದು ಮರುಮರುಗಿ ಬೊಂಕುತಲೆ; ಪರತಂತ್ರ ತಾಂ ತೋರದಿರೆ (ಕಎಪು. ೪೨-೪). ೪. ಬೇರೆಯವರ ತಂತ್ರ,—ಶಾಸ್ತ್ರ : ಇವರಲ್ಲಿ ಕೆಲವರು ಈ ಪರತಂತ್ರವನ್ನು ಬಹಳ ಚೆನ್ನಾಗಿ ಕೂಡಿಸಿಕೊಂಡು, ಐರೋಪ್ಯದೃಷ್ಟಿಯಿಂದ ಉತ್ತಮವೆನಿಸಿಕೊಳ್ಳುವಂಥ ಕಲಾಕೃತಿಗಳನ್ನು ನಿರ್ಮಿಸಿದ್ದಾರೆ (ಭಾರದ. ೫೩೩). [ಸಂ.]

**ಪರತಂತ್ರಜೀವನ** (ನಾ). ಬೇರೆಯವರನ್ನು ಅಥವಾ ಬೇರೆಯ ವಸ್ತುವನ್ನು ಅವಲಂಬಿಸಿ ನಡೆಸುವ ಜೀವನ : ಇದು ಪ್ರೌಢಾವಸ್ಥೆಯನ್ನು ಮುಟ್ಟುವ ಮೊದಲು ಕೆಲವು ಕಾಲ ಒಂದು ಜಾತಿಯ ಮೀನಿನ ದೇಹಕ್ಕೆ ಅಂಟಿಕೊಂಡು ಪರತಂತ್ರಜೀವನವನ್ನು ನಡೆಸಬೇಕು(ಪರಜೀ.೮).

[ಪರತಂತ್ರ + ಜೀವನ]

**ಪರತಂತ್ರಜೀವಿ** (ನಾ). ಬೇರೆಯವರನ್ನು ಅಥವಾ ಬೇರೆಯ ವಸ್ತುವನ್ನು ಆಶ್ರಯಿಸಿ ಬದುಕುವ ಪ್ರಾಣಿ; ಪರಾವಲಂಬಿ ಜೀವಿ : ಕೆಲವು ಜೀವಿಗಳು . . . ತಮ್ಮ ಆಹಾರಕ್ಕೆ ಇತರ ಜೀವಿಗಳನ್ನು ಆಶ್ರಯಿಸುತ್ತವೆ; ಇವಕ್ಕೆ ಪರತಂತ್ರಜೀವಿಗಳು (Parasitic) ಎಂದು ಹೆಸರು (ಪರಜೀ. ೨); ತಮ್ಮನ್ನು ಆಶ್ರಯಿಸುವ ಪರತಂತ್ರಜೀವಿ ಮತ್ತು ಕೊಳ್ಳೆಹೊಡೆಯುವ ಕೀಟಗಳಿಗೂ ಸಿಕ್ಕುವುದಿಲ್ಲ (ಕೀಟಬೆ. ೨೩). [ಪರತಂತ್ರ+ಜೀವಿ$_1$]

**ಪರತಂತ್ರಿ** (ನಾ). ಪರಾವಲಂಬನೆಗೆ ಒಳಗಾದವನು; ಸ್ವತಂತ್ರನಲ್ಲದವನು : ತನ್ನಿಂದರಿದೆನೆಂದಡೆ ಸ್ವತಂತ್ರಿಕೆ ಇಲ್ಲ ಇದಿರಿಂದರಿದೆನೆಂದಡೆ ಪರತಂತ್ರಿಯಲ್ಲ (ನೋಲಿಮಾ. ೯-೩೧). [ಸಂ. ಪರತಂತ್ರಿನ್]

**ಪರತಟ** (ನಾ). ಆಚೆಯ ದಡ; ಪಾರ :"ಪಾರಂ ಪರತಟಮುರ್ವಾಕ್ತೀರಮವಾರಾಖ್ಯಂ" (ವಸ್ತುಕೋ. ೨೪-೧೩). [ಪರ$_3$ + ತಟ$_3$]

**ಪರತತ್ತ್ವ** (ನಾ). ೧. ಶ್ರೇಷ್ಠವಾದ ತತ್ತ್ವ; ಮೋಕ್ಷತತ್ತ್ವ; ಪರಮಾರ್ಥ : ಪರತತ್ತ್ವವನಱಿದೆನೆಂಬನ್ನಕ್ಕ ಜ್ಞಾನಕಾಂಡಿಯಲ್ಲ (ಬಸವ. ೮೪೮); ಪ್ರತ್ಯೇಕತೆಯನ್ನು ಹೊಂದಿರುವ ಅನಂತಜೀವರುಗಳಿಗಿಂತಲೂ ಬೇರೆಯಾದ ಪರತತ್ತ್ವವೊಂದಿದೆ (ಮುಕ್ತಾರ. ೨೩೩). ೨. ಪರಮಾರ್ಥಸ್ವರೂಪವುಳ್ಳವನು; ಪರಮಾತ್ಮ : ಪ್ರಣವಮಯ ಪರತತ್ತ್ವ . . . ಶ್ರೀಮಲ್ಲಿಕಾರ್ಜುನ ಸಲಹು ಮೂಜಗವ (ಅಮೃತ. ೪-೬೨); ಗುರುವೆ ಪರತತ್ತ್ವವು ತಾನೆ ನೋಡಾ . . . ಗುರುವೆ ಪರಶಿವನು ತಾನೆ ನೋಡಾ (ಅಖಂಡೇ. ೧೭-೧). [ಪರ$_3$ + ತತ್ತ್ವ]

**ಪರತತ್ವ** (ನಾ). ೧. = ಪರತತ್ತ್ವ ೧ : ಪರತತ್ವವಿಚಾರದಿನಚ್ಚರಿಯಾಗೆ ಜಿನೇಂದ್ರಭಕ್ತಿಯಿಂ ಸಂದ ಮಹಾಪುರುಷರ ಕಥೆಗಳ ಕೇಳ್ಪೆಯಿಂ . . . ಮನದೊಳ್ ಚಿಂತಿಸಿ (ಧರ್ಮಾಮೃ. ೩-೨೧೭); ಮಥಿಸಿ ಮಥಿಸಲು ಉದ್ಭವಿಸುವುದು ಮತಿಯಲೇ ಪರತತ್ವಮುದರಿಂ ಮಥನವನೆ ಪೊರಗೊಳಗೆ ಲಂಬಿಸಿ ಸಿದ್ಧನಾಗು (ಗಗತಾ. ೧೭-೫೪); ಮತಮೆಲ್ಲಂ ಪರತತ್ವಮಂ ನಿರವಿಕುಂ (ಮೈಸೂಮ. ೮೧-೧೮೮). ೨. = ಪರತತ್ತ್ವ ೨ : ನಿಜವ ಬೆರಸುವ ವಿಗಡಂಗೆ ಪರತತ್ವ ಚಿನುಮಯರೂಪ ತಾನು (ಕುಮಾರ್ಯಭೀ. ೩-೫೭). [ಪರ$_3$+ತತ್ವ$_1$]

**ಪರತಪಾವತಿ** (ನಾ). ಯಾವುದಾದರೊಂದು ವಸ್ತುವನ್ನು ಪಡೆದುದಕ್ಕಾಗಿ ದಾಖಲೆಗಾಗಿ ಬರೆದುಕೊಡುವ ಪತ್ರ; ರಸೀತಿ : ಪೋಸ್ಟಮನ್ ಪಾಂಡೂ . . . ಪರತಪಾವತಿಯ ಮೇಲೆ ಸಹಿ ಮಾಡಿಸಿಕೊಂಡ (ದೀಪಹ. II, ೮೩). [ಪರತ+ಪಾವತಿ]

**ಪರತಿ$_1$** (ನಾ). ಚಂಡಾಲಸ್ತ್ರೀ; ಹೊಲತಿ : ವಸಿಷ್ಠನುಂ ಕಾಮದಿಂ ಪರತಿಯಾದಕ್ಷಮಾಲೆಯನೊಂದಿದಂ (ಸೌನಂದ.೭-೨೮).[←ತಮಿ.ಪಱತ್ತಿ]

**ಪರತಿ$_2$** 'ಪರಂತಿ' ನೋ.

**ಪರತು** 'ಪರತ' ನೋ.

**ಪರತೇಜ** (ನಾ). ಪರಕೀಯರ ತೇಜಸ್ಸು,—ಕಾಂತಿ : ಶಾಂತಿಪ್ರಧಾನಮುನಿಗಳ್ . . . ಪರತೇಜಂ ತಗುಳ್ದೊಡೆ ಸಲೆ ತೋರ್ಪರದಂ ತಾಂ ಸ್ಪರ್ಶಾನುಕೂಲ ರವಿಕಾಂತಂಬೊಲ್ (ಶಾಕುಂತ. ೨೩-೪೨). [ಪರ$_3$ + ತೇಜ$_1$]

**ಪರತ್ರ$_1$** (ನಾ). ಮೋಕ್ಷ; ಮುಕ್ತಿ : ಶತ್ರು ಮಿತ್ರರು ತಾವು ತಮ್ಮ ತಮ್ಮ ಕ್ಷೇತ್ರದೊಳಗಿರವುಳಿದು ಮುಂದೆ ಪರತ್ರವಿಲ್ಲದೆ ಪಾಱುತಿರೆ (ಬಸವು. ೩-೭). [ಸಂ.]

**ಪರತ್ರ$_2$**(ಅ). ೧. ಬೇರೆಲ್ಲಿಯಾದರೂ; ಬೇರೆ ಕಡೆಯಲ್ಲಿ. ೨. ಇನ್ನು ಮುಂದೆ; ಭವಿಷ್ಯದಲ್ಲಿ. ೩. ಬೇರೆಯ ಅಥವಾ ಮುಂದಿನ ಲೋಕದಲ್ಲಿ. ೪. ಬೇರೆ ಬಗೆಯಾಗಿ; ಅನ್ಯಥಾ. [ಸಂ.]

**ಪರತ್ರೆ** (ನಾ). = ಪರತ್ರ$_1$ : ಅರಸಂ . . . ಜಿನದೀಕ್ಷೆಯಂ ಕೈಕೊಂಡು ಪರತ್ರೆಯಂ ಸಾಧಿಸಿದೊಂ (ಪದ್ಮರಾ. ೬೫-೨೯); ಕುಲವಿಭ್ರಂಶೆಯರೊಳ್ಮನೋಜಸುಖಮಂ ಮಾಳ್ಪಂಗೆ . . . ಪರತ್ರೆಯಟಾಗುಂ ಶೌಚಂ ಕಿಲುಂಬಕ್ಕುಂ (ಮದತಿ. ೯-೧); ನೋಂತುಂ ಪಸಿದುಮಂತ್ಯದೊಳ್ ಸಂನ್ಯಸನದಿಂ ಪರತ್ರೆಯಂ ಸಾಧಿಸುವೆಂ (ಪಂರಾಮಾ. ೧೫-೬೯ ವ). 'ಇಹತ್ರೆ$_1$' ಪರಾ. [ಸಂ. ಪರತ್ರ]

**ಪರತ್ವ**(ನಾ).೧. ಸ್ಥಳ, ಕಾಲಗಳಲ್ಲಿ ಮೊದಲು, ಆದಿ ಎಂಬ ಸ್ಥಿತಿ: ಪರಿಸ್ಪಂದರೂಪಕ್ರಿಯೆ ಕ್ಷೇತ್ರಕೃತಂಗಳುಂ ಕಾಲಕೃತಂಗಳುಂ ಪರತ್ವಾಪರತ್ವಂಗಳಪ್ಪುವು (ತತ್ತ್ವಪ್ರ. ೨೪೧). ೨. ಪ್ರಭಾವ; ವರ್ಚಸ್ಸು. ೩. ಹಗೆ; ವೈರ. ೪. [ದ್ವೈತ]ನಲವತ್ತು ಗುಣಗಳಲ್ಲಿ ಒಂದು : ಪರಮಾತ್ಮ, ಲಕ್ಷ್ಮಿ . . . ಪರತ್ವ, ಅಪರತ್ವ . . . ಸೌಭಾಗ್ಯವೆಂದು, ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಸಾ. ೨೭೫). [ಸಂ.]

**ಪರದ$_1$**, ಹರದ$_1$ (ನಾ). ವ್ಯಾಪಾರಿ; ವರ್ತಕ; ವೈಶ್ಯ : "ಊರುಭವಂ ಭೂಮಿಸ್ಪೃಶನೂರವ್ಯಂ ವೈಶ್ಯನರ್ಯನೆನೆ ಪರದಂ" (ವಸ್ತುಕೋ. ೬೨-೬೨); ಪರದರ್ಗೆ . . . ಕುಡಿಯರಪ್ಪ ನಾಲ್ವರ್ಗಗಳ್ ಸ್ಥಿರಗೋಪಾಧ್ಯಾಯಕ್ಕಾಪರಿಪಾಲ್ಯಕ್ಷೇತ್ರಕರ್ಷಣಂಗಳ್ ಕ್ರಿಯೆಗಳ್(ಕವಿರಾ. ೧-೬೪); ಪೊಟಲ ಪಾರ್ವರ ಪರದರ . . . ಕಸವರಮೆಲ್ಲಮಂ ಕಳ್ದೊಡಂ (ಪದ್ಮರಾ. ೧೨೩-೧೭); ನಾಗದತ್ತನೆಂಬ ಪರದಂಗಮಾತನ ಪರದಿತಿ ವಸುದತ್ತೆಗಂ ಪುಟ್ಟಿದ . . . ಐವರ್ ತನಯರ್ (ಆದಿಪು. ೩-೩೩ ವ); ಪರದಪನ್ನಿರ್ವ್ವರು . . . ಸಾಕ್ಷಿಯಾಗೆ (ಎಕ. VI, ಮೂಡಗ. ೨೬-೧೧; ಸು. 950 ?). **ಹರದ$_1$** :"ಪಣ್ಯಾಜೀವಃ . . . ವೈದೇಹಃ—ಈ ೭ ಹರದಂ" (ಹಲಾಯು. ೯೩-೪೧೭); ಹರದರ್ಗೆ ಪೇಟ್ದು ಛಿದ್ರಿಸುವಳು (ಮದತಿ. ೧೦-೬); ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ ಹರದಕುಳ್ಳಿರ್ದ ನಮ್ಮ ಮಹದೇವಸೆಟ್ಟಿ (ಬಸವ. ೧೧೫); ನೀಂ . . . ಸ್ಫುರಿತರತ್ನಪರೀಕ್ಷೆಯಂ ತಾನಱಿದು ಕೈಕೊಂಬ ಹರದನಂದದಿ (ಬಸವು. ೮-೯); ಹರದನು ಲೆಕ್ಕ ತಪ್ಪಿಸಿ ಹೊಡೆವನಳತೆಯ ತೂಕ ತೊಲೆಗಳಲಿ ನಕ್ಕುನಂಬಿಸಿ ಹೊತ್ತುಗಳೆವಾ ಠಕ್ಕತನದಲಿ ತೆಗೆದುಕೊಂಬಾ (ಕಾಶಿರಾ. ೧೦-೨೪). [ಪರದು+-ಅ$_7$]

**ಪರದ$_2$** 'ಪರದೆ' ನೋ.

**ಪರದಗೆಱೆ** (ನಾ). ಒಂದು ಊರಿನ ಹೆಸರು : ಅಸ್ಯ ಗ್ರಾಮಸ್ಯ ಪೂರ್ವ್ವದಿಕ್ಸೀಮಾನಿ ದುತೂಂಬುಪ್ರ್ವಳ್ಳಂ ದಕ್ಷಿಣತಃ ಪರದಗೆಱೆ ಪಳ್ಳಂ (ಮೈಆರಿ. ೧೯೪೪, ೧೫-೪೦; ಸು. 725). [ಪರದ? + ಕೆಱೆ]

**ಪರದರ್ಶನ** (ನಾ). ಬೇರೆಯ ತತ್ತ್ವ,—ಸಿದ್ಧಾಂತ : ಒತ್ತರಿಪ ಸಿತಕೀರ್ತಿಯೊಳು ಪ್ರಭೆವೆತ್ತು ಪರದರ್ಶನದ ಮೂಗಿನ ಕತ್ತಿಯೆಂಬಾ ಕಿಕ್ಕೆಯವನಾ ಪುರದೊಳೆತ್ತಿಸಿದ (ಬಸವು. ೫೩-೫೭). [ಪರ$_3$+ದರ್ಶನ]

**ಪರದವಟ್ಟಿಗೆ** (ನಾ). (?) : ಮಗಳ್ ಗೌರಕ್ಕನ ಕೊಟ್ಟು ತಣ್ಣೆಯದ ಪರದವಟ್ಟಿಗೆಯುಮಂ ಪುಳುಮಾದಲು ಮುಟ್ಟಿವಾಳುಮಂ ಕೊಟ್ಟರ್ (ಮೈಆರಿ. ೧೯೩೬, ೫೫-೭; 1054). [ ? ]

**ಪರದಳ** (ನಾ). ಶತ್ರುಸೈನ್ಯ; ವಿರೋಧಿಬಲ.

**ಪರದಳವಿಭಾಡ** = ಶತ್ರುಸೈನ್ಯವನ್ನು ನಾಶಮಾಡುವವನು; ಒಂದು ಬಿರುದು : ಎಲ್ಲರ ಗಂಡಂದಿರು ಪರದಳವಿಭಾಡರು (ಸರ್ವವ. ೬೪-೩೪೧); ಕಾಮಿನೀಕನ್ದಪ್ಪನ್ . . . ಪರದಳವಿಬಾಡನ್ (ಎಕ. V (R), ತಿರುಮ. ೧೧೬-೩೭; 1720). [ಪರ$_3$+ದಳ$_2$(=ದಲ)]

**ಪರದಾ** 'ಪರದೆ' ನೋ.

**ಪರದಾಟ** 'ಪರಿ$_2$' ಪರಾ.

**ಪರದಾಡು$_1$** 'ಪರಿ$_2$' ಪರಾ.

**ಪರದಾಡು₂,** ಹರದಾಡು (ಕ್ರಿ). ವ್ಯಾಪಾರವನ್ನು ಮಾಡು,—ವ್ಯವಹರಿಸು : ನಂಬುಗೆಯಿಂ ಪರದಾಡುವಾಕೆ ಬಂದೊತ್ತೆಯನೇವಳೆಂದು ಕಿಱುದಂಗೆಯನಂಗನೆ ಚುನ್ನವಾಡಿದಳ್ (ಮಲ್ಲಿಪು. ೭-೮೦) ; ಕದ್ದು ಪರದಾಡುವಂ ಸುಂಕಿಗನ ಕಯ್ಯೊಳ್ . . . ಸಿಕ್ಕುವಂತೆ (ಧರ್ಮಾಮೃ. ೧೩-೧೪೫) ; ಜನಕನುಪಾರ್ಜಿಸಿಟ್ಟ ಧನಮೆಲ್ಲಮನಾಕೆ[ಗೆ] ತೀರ್ಚಿ ತಾಯುಮಂ ವನಿತೆಯುಮಂ ಬಿಸುಟ್ಟು ಪರದಾಡಿ ಧನಂಬಡೆಯಲ್ಕೆ ಪೋಗೆ (ಮಹಾನೀ. ೪-೧೧೭) ; ಚಂಡವೇಗನೆನಿಪ್ಪಂ ಪರದಾಡಿ ಪಲವು ಸೂಟಿಗೊಳ್ ಪಿರಿದರ್ಥಂ ನಷ್ಟವಾಗೆ ಬಡತನವಾಗಲ್ (ಧರ್ಮಪ. ೪-೧೨). **ಹರದಾಡು :** ಒಬ್ಬುಳ್ಳ ಮಗ . . . ಪರದಾಡಿ ಗಳಿಸಿದಹೆನೆಂಬುದನು ನಮ್ಮೊಡಲು ಹದುಳಿಪ್ಪಲ್ಲಿ ಕಂಡೆವು (ಸೋಮುಚ. ೧-೯೭). [ಪರದು+ಆಡು₁]

**ಪರದಾಯಿ** (ನಾ). (ಪೂರ್ವಕಾಲದಲ್ಲಿ ಬಳಕೆಯಲ್ಲಿದ್ದ) ಒಂದು ಬಗೆಯ ನಾಣ್ಯ : ಗೋವೆಯಿಂದ ವಿಜಾಪುರಕ್ಕೆ ಪ್ರತಿವರ್ಷ ಹತ್ತು ಸಾವಿರ "ಪರದಾಯಿ"ಯೆಂಬ ಚಿನ್ನದ ನಾಣ್ಯಗಳು ಸಲ್ಲುತ್ತವೆ (ಕಭಾಗ. ೩೫೦). [?]

**ಪರದಾರ** (ನಾ). ೧. ಬೇರೆಯವನ ಹೆಂಡತಿ ; ಪರವನಿತೆ ; ಅನ್ಯಸ್ತ್ರೀ : ಪರದಾರಾಭಿಗಮಕ್ಕೆ ಹೇತುವಪಿಂಗನ್ಯಸ್ವಮಂ ಕೊಳ್ವ ದುಶ್ಚರಿತಂಗಂ . . . ಪರಮೆಂಬೀ ನುಡಿಯಂ ವಿಚಾರಿಸದವಂ ಪಾಪಕ್ಕೆ ಪಕ್ಕಾಗನೇ (ಸಮಪ. ೫-೩೦) ; ಪರದಾರಾಭಿಗಾಮಿಯ . . . ಕೃಪಣನ ನರಕವಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ (ಕುಮ್ಯಾದ್ರೋ. ೮-೩೭) ; ಧಾರಾದತ್ತದಿಂ ಬಂದ ಸ್ತ್ರೀಯರೊಳು ವಿಹಾರಿಸೆ ಪಾಲುಂಬಂತೆ ಮೇರೆ ದಪ್ಪಿಯೆ ಪರದಾರದಿ ಚರಿಸಲಾರಯೆ ಸುರೆಯಿಂಟುವಂತೆ (ಜೀವಂಸಾಂ. ೧೪-೬೦). ೨. ಹಾದರ ; ವ್ಯಭಿಚಾರ : ಪರಮದ್ರೋಹಂ ಶೌರ್ಯಂ ಪರದಾರಂ ನೆಗಟೆ ತದ್ವಿಘಾತಮದುಗ್ರಂ (ಶೃಂಗಾರ. ೨-೪೯) ; ಪರದಾರದ ಬಿತ್ತರಮಂ ನಿನಗಾನೊರೆವೆಂ (ಜನವ. ೧೨ ಸೂಚನೆ).

**ಪರದಾರಸೋದರ** = ಅನ್ಯಸ್ತ್ರೀಗೆ ಒಡಹುಟ್ಟಿದವನಂತಿರುವವನು ; ಒಂದು ಬಿರುದು : ಇದು ಪರದಾರಸೋದರ ರಾಮನಾಥನ ಪದಕೃತಿ (ಕುರಾಸಾಂ. ೨-೧೦೮). [ಸಂ.]

**ಪರದಾರಗಮನ** (ನಾ). ಪರಸ್ತ್ರೀಯೊಂದಿಗೆ ಬೆರೆಯುವುದು ; ಪರಸ್ತ್ರೀಯ ಸಹವಾಸ ; ವ್ಯಭಿಚಾರ : ಆಯುತವೆ ಪಾರದರಿಗನ ಪಾಯಮನೆತ್ತಱುವನುಚಿತವಾಕ್ಯಾರ್ಥಂ ಕೊಳ್ಳೀಯೆ ಪರದಾರಗಮನವು ನಾಯಿಂಪುಷ್ಪಂ ತಮಮೆನಲ್ ಮನಂದಂದಪನೇ (ಶಾಂತಿಪು. ೫-೫೧) ; ಪರದಾರಗಮನಪರರೆನಿಪರದಾರ ಮನಕ್ಕೆ ವರ್ಪರ್ (ಪಾರ್ಶ್ವಪು. ೪-೩೩) ; ಪೂರ್ವದಲಿ ಕಮಲಾಯತಾಕ್ಷಿಯರುಂಟು ಹಲಬರು ವಾಯ್ದುಸಖ ಪರದಾರಗಮನವ ಮೆಚ್ಚಿದನು (ಕುಮ್ಯಾಸ. ೫-೧೩). [ಸಂ.]

**ಪರದಾರಪ್ರಿಯ** (ನಾ). ಪರಸ್ತ್ರೀಯಲ್ಲಿ ಆಸಕ್ತಿಯುಳ್ಳವನು ; ಹಾದರಿಗ : ಪರದಾರಪ್ರಿಯನಾದ ಪಾತಕನೆ ಯುದ್ಧಕ್ಕಳ್ಳಿ . . . ಮೆಯ್ಗುರೆದಿದೇನಂ ಜಾನಿಸುತ್ತಿರ್ದಪ್ಪೆ (ಪಂರಾಮಾ. ೧೪-೯೮). [ಪರದಾರ+ಪ್ರಿಯ]

**ಪರದಾರವಿದೂರ** (ನಾ). ಪರಸ್ತ್ರೀಯರಿಂದ ದೂರವಿರುವವನು : ಗುರುದೇವ ದ್ವಿಜಭಕ್ತಂ . . . ಪರೇಂಗಿತಜ್ಞನುದಾರಂ ಪರಿವಾರ ಕಲ್ಪವೃಕ್ಷಂ ಪರದಾರವಿದೂರನಖಿಲಭುವನಾಧಾರಂ (ಪಂಚತಂ. ೨೧೭-೨೪). [ಪರದಾರ+ವಿದೂರ]

**ಪರದಾರಶೀಲ** (ನಾ). ಪರಸ್ತ್ರೀವ್ಯಸನಿ; ವ್ಯಭಿಚಾರಿ : ಕ್ಷಿತಿಜನೊಳೊಂದಿದ ಗುರುವಿಂ [ನೇತಾರಂ] . . . ಭೃಗುಸುತನಿಂ ಪರದಾರಶೀಲನೆನಿಕುಂ ಮನುಜಂ (ಜಾತತಿ. ೧೫-೩). [ಪರದಾರ+ಶೀಲ]

**ಪರದಾರಸೂತಕಿ** (ನಾ). ಪರಸ್ತ್ರೀಯ ಸಹವಾಸದಿಂದ ಕಳಂಕಿತನಾದವನು : ಪಾತಕಿಗೆ ನುಡಿದ ಸೊಲ್ಲುಸಿಯಹುದು ಪರದಾರಸೂತಕಿಗೆ ನೆನೆದೆಣಿಕೆ ಬಯಲಹುದು (ಜೈಮಿಭಾ. ೪-೪). [ಪರದಾರ+ಸೂತಕಿ₂]

**ಪರದಾರಾತಿಕ್ರಮಣ** (ನಾ). ಪರಸ್ತ್ರೀಯ ವಿಷಯದಲ್ಲಿ ತಪ್ಪಿ ನಡೆಯುವುದು ; ಅತ್ಯಾಚಾರ : ಅಲ್ಲಿ ಪರಾನುಮೇಯಮಪ್ಪ ಬಾಹ್ಯಂ ನಿಷ್ಠುರಾಕ್ರೋಶನ ನಿಶಾತನ ವಧನ ತಾಡನ ಪೀಡನ ಪರದಾರಾತಿಕ್ರಮಣಾದಿ ಲಕ್ಷಣಮಕ್ಕುಂ (ಆಜಿಪು. ೮-೨೪ ವ). [ಪರದಾರ+ಅತಿಕ್ರಮಣ]

**ಪರದಾಸ್ಯ** (ನಾ). ಪರಕೀಯರ ಊಳಿಗ,—ಸೇವಾವೃತ್ತಿ; ಗುಲಾಮಗಿರಿ: ಕರ್ಮ ಹೊರೆ ಹೊರಿಸಿರುವ ಆಳು ಅಳುಕು ಪರದಾಸ್ಯ ಸಂಕಲೆಯ ಕಳಚುತ್ತ ಬಾಳು ತಿರುಗುವುದು (ದ್ರಾಕ್ಷಿಪಾ. ೩೨-೧). [ಪರ₃+ದಾಸ್ಯ]

**ಪರದಿ** (ನಾ). ವರ್ತಕನ ಹೆಂಡತಿ : ಇಂದ್ರದತ್ತನೆಂಬ ಸೆಟ್ಟಿಗಂ ಶ್ರೀಕಾಂತೆಯೆಂಬ ಪರದಿಗಂ ಮಗಳಭಯಮತಿಯೆಂಬೊಳ್ (ವಡ್ಡಾರಾ. ೧೬೫-೮); ದೇವಿಲನೆಂಬ ಪರದಂಗಂ ಬಂಧುಶ್ರೀಯೆಂಬ ಪರದಿಗಂ ನೀಂ ಶ್ರೀದತ್ತೆಯೆಂಬ ಮಗಳಾಗಿ ಪುಟ್ಟಿದ್ಯೆ (ಚಾವುಂಪು. ೨೦೦); ಎನ್ನ ಪರದಿ ತಾನುಂ ಸೊ[ಸೆ]ದಿರುಮಾತನಂ ಕಂಡಡೆ ಚಿಂತಿಸಿ ವಿಕಳೆಯರಾದರು (ಬಂಹರಿ. ೧-೫೪). [ಪರದ₁+-ಇ₂]

**ಪರದಿಕೆ,** ಹರದಿಕೆ (ನಾ). ವ್ಯಾಪಾರ ; ವಾಣಿಜ್ಯ : ಧನವಂ ತನುವಂ ಬೇಡಿದ ಮನುಜಂಗೆರಡಿಲ್ಲದೀವುದಿದು ಪರದಿಕೆಯೇ (ಬಂಹರಿ. ೪-೨೩). **ಹರದಿಕೆ :** "ಹರದಿಕೆ-ವಾಣಿಜ್ಯ, ವಣಿಜ್ಯ" (ನಾಚಿರಾ. ಕಿ); ಹರದಿಕೆಯ ಹರಿಬಕ್ಕೆ . . . ಭಾಸುರದ ರತ್ನಪರೀಕ್ಷೆಗಳೊಳು. ಪರಿಣತನ ಮಾಡಿದನಯ್ಯನಾದಯ್ಯನ (ಸೋಮುಚ. ೧-೯೩); ನಮಗುಳ್ಳ ಹರದಿಕೆಯ ವೆವಹಾರದುದ್ಯೋಗಕಿಕ್ಕದೇ . . . ನಿಜಜನನಿಜನಕರೋವೃತ್ತಿರ್ದರೀ ಪಾಪಿಯಂ (ಸಮ್ಯಕೌ. ೧೦-೭). [ಪರದು+-ಇಕೆ]

**ಪರದಿತಿ** (ನಾ). ೧. = ಪರದಿ : ಪರದಂ ಸಾಗರದತ್ತಂಗಮಾತನ ಪರದಿತಿ [ಪಾಠಾಂ. ಪರದಿ] ಧನವತಿಗಮುಗ್ರಸೇನನೆಂಬೊಂ ತನೂಜಂ (ಆದಿಪು. ೫-೧೪ ವ); ಸಾಗರದತ್ತನೆಂಬ ಪರದನಾತನ ಪರದಿತಿ [ಪಾಠಾಂ. ಪರದಿ] ಸುಮತಿಗಂ ನಂದ. . . ಜಯಸೇನನೆಂಬಯ್ವರ್ತನಯರ್ (ಚಾವುಂಪು.೧೮); ನಯದತ್ತನೆಂಬ ಪರದಂಗಮಾತನ ಪರದಿತಿ[ಪಾಠಾಂ.ಪರದಿ] ಸುನಂದೆಗಂ ಪ್ರಥಮಜನ್ಮದೊಳ್ ಧನದತ್ತನೆಂಬ ತನೂಜನಾಗಿ (ಪಂರಾಮಾ.೧೬-೩೬ವ). ೨. "ವರ್ತಕಿ ; ವ್ಯಾಪಾರಮಾಡುವವಳು" (ಪ್ರಭಣ್ಣ). [ಪರದ₁+-ಇತಿ₁(<-ಇತ್ತಿ)]

**ಪರದು,** ಹರದು (ನಾ). = ಪರದಿಕೆ : "ಸತ್ಯಾನೃತಮದು ಪರಬು" (ವಸ್ತುಕೋ. ೬೨-೬೪) ; ನಂದಿಮಿತ್ರನೆಂಬೊಂ ಸೆಟ್ಟಿ ಸಾರ್ಥಂಬೆರಸು ಪರದಿಂಗೆ ಪೋಗುತ್ತಿ[ಪಾಠಾಂ. ಪರದುವೋಗಿ]ರ್ದಾತನೆಡೆಯೊಳೊಂದೂರೊಳ್ ಬಿಟ್ಟಿರ್ದಂ (ವಡ್ಡಾರಾ. ೧೬೩-೨೩); ಲೋಭಿಯ ಕೋಡುಂ . . . ಲಾಭಮನಱಿಯದ ಪರದುಂ ಶೋಭಿಸಲಾರ್ತಪುವೆ (ಧರ್ಮಾಮೃ.೫.-೧೦೩); ಫಾಲ್ಗುನದ ಪೂರ್ಣಿಮೆಯೊಳ್ ಕುಱುಪಾಗೆ ಗಂಧಮಂ . . . ಕಂದ ಮೂಲಮಂ ಬಿಸುಡದೆ ಬಯ್ತು ಮಾಱಿದೊಡೆ . . . ಪರದಿರ್ಮಡಿಯಾಗೆ ಪೆರ್ಚುಗುಂ (ಜಟ್ಟಮ. ೬-೪೨). **ಹರದು :** "ವಣಿಜ್ಯಂ, ವಾಣಿಜ್ಯಂ, ವಣಿಕ್ಪ್ರಂ- ಈ ೩ ಹರದು" (ಹಲಾಯು. ೧೨೫-೭೭); ಮೊದಲುಗೆಡದ ಹರದೆನಗಾದುದಯ್ಯ (ತಿನಗೀ. ೮೪-೪೧೨); ಹರದಂ ಮಾಳ್ಪಡೆ ಪೋದ ಸೆಟ್ಟಿಗದಱಿಂ ಲಾಭಂಗಳಾಗಲ್ಕೆ (ನನ್ನಚಾ. ३-३४) ; ವಾರದಕ್ಕಿಯ ಹಾರವರು ಶೃಂಗಾರದೋದಿನ ವಿಟರು ಹರದಿಗೆ ದೂರದೇಶಕೆ ಬಂದವರು ನೆರೆದಿಹರು (ಕೊಲ್ಲಾಚ. ೯೫).

[ದೇ. ॥ ಕೊಂಡ. ಪೊರ್ = ಮಾರು; ಪೆಂಗು. ಪ್ರೊ = ಮಾರು; ಕುವಿ. ಪ್ರಾತ್]

**ಪರದುಂಗೈ** 'ಪರದುಗೆಯ್' ನೋ.

**ಪರದುಗೆಯ್**, ಪರದುಂಗೈ, ಪರದುಗೈ, ಹರದುಗೆಯ್, ಹರದುಗೆಯ್ಯು (ಕ್ರಿ). ವ್ಯಾಪಾರ ಮಾಡು ; ವ್ಯವಹಾರ ನಡೆಸು : ಪಿರಿದೆನಿಸಿದ ಕೊಳಗದಿಂದ ಮುಂ ತಾಂ ಕೊಂಡಂತಿರೆ ಪೆಜರ್ಗೆ ಕುಡುಗೆ ಕುಂದಿಸಿ ಪರದುಗೆಯಲ್ಸಲ್ಲದೆಂದು ನೆಗಳ್ವಂ ಜೈನಂ (ಸಮಪ. ೫-೪೭); ಪರದುಗೆಯ್ದುರ್ಥಮಂ ನ್ಯಾಯದಿಂದಂ ಪಡೆದರ್ಥಂ ದೇವತಾಪೂಜೆಗೆ. . . ನಿಚ್ಚಂ ಕುಡೆ (ಎಕ. V, ಅರಸೀ. ೧-೩೮; 1169); ಪರದುಗೆಯ್ಯದೆ ಸುಮ್ಮನಾಡಿಕೊಂಡಿರ್ಪುದು ಪರದರಿಗನುಚಿತವು (ನೇಮಿಸಂ. ೪-೧೦). **ಪರದುಂಗೈ:** ಹರದರು ರತ್ನದ ಹೇರಂ ಪರದುಂಗೈವಲ್ಲಿ ಪೋಗು (ಕಂದಕೊ. ೨೧೦). **ಪರದುಗೈ:** ಕೆಲವು ದಿವಸದಿಂ ಬಟಿಕಾ ಶ್ರೀಧರ ಸೆಟ್ಟಿ ಪರದುಗೈಯಲ್ ಭರದಿಂ ಜಲಮಾರ್ಗದಲ್ಲಿ ಪೋಪುದುಂ (ಧರ್ಮಪ. ೧೦-೭೫); ರೊಕ್ಕದಾಸೆಗೆ ಪರದುಗೈಯಲೆ ಪೋಪೆನು (ಸಾಳ್ವಭಾ. ೧೭-೫೯) ; ಆ ವಿಪಿನಾಂತರದ ಕತ್ತುರಿಯಿಂದು ನೃಪತಿ ಪರದುಗೈಯಲು ಬಂದೆ (ಸಾಗಕು. ೧೪-೮೯). **ಹರದುಗೆಯ್ :** ಒಂದುವುದಟಗ ಪ್ರತ್ಯಯ ಮಾಡುವ ದೀವಿಗೆವಿಡಿವ ಹರದುಗೆಯ್ವನಿಬರೊಳಂ (ಶಪದ. ೨೦೪). **ಹರದುಗೆಯ್ಯು :** ಹೊರನಾಡುಗಳಿಗೆ ಹರದುಗೆಯ್ಯಲು ಹೋದ ಹರದರು ಹಿಂದಿರುಗಿದೊಡನೆಯೆ . . . ಔತಣದ ಆಮಂತ್ರಣ ಬಂತು (ಛಾಸರ. ೬೫). [ಪರದು + ಕೆಯ್$_1$]

**ಪರದುಗೈ** 'ಪರದುಗೆಯ್' ನೋ.

**ಪರದುವೋಗು** (ಕ್ರಿ). ವ್ಯಾಪಾರಕ್ಕಾಗಿ ದೂರದೇಶಕ್ಕೆ ಪ್ರಯಾಣ ಮಾಡು : ನಂದಿಮಿತ್ರನೆಂಬೊಂ ಸೆಟ್ಟಿ ಪಿರಿದುಂ ಸಾರ್ಥಂವೆರಸು. ಪರದುವೋಗಿ (ಪಡ್ಡಾರಾ. ೧೬೩-೨೩); ಇರ್ವರ್ ವಣಿಕ್ಪುತ್ರರ್ ಪುದುವಿನೊಳ್ ಪರದುವೋಗಿ ಪಿರಿದಪ್ಪ ಪೊನ್ನಂ ಪಡೆದು ಮಗುಟ್ದು (ಪಂಚತಂ. ೧೭೦-೪); ಪರದುವೋಪೆನೆಂಬ ಬಗೆಯುಂ ತಂದು ಯಥೋಚಿತಮಪ್ಪ ಭಂಡಮಂ ಕೊಂಡು ಶುಭದಿನದೊಳ್ ಪೋಜವೀಡಂ ಬಿಟ್ಟು (ಧರ್ಮಾಮೃ. ೧-೯೪). [ಪರದು + ಪೋಗು$_1$(<ಪೋ$_1$)]

**ಪರದೆ,** ಪಡದೆ, ಪರದ$_2$, ಪರದಾ, ಫರದೆ (ನಾ). ೧. ತೆರೆ ; ಜವನಿಕೆ: ರೋಹಿಣಿಯು ಪರದೆಯ ಹಿಂದಿನಿಂದ ಅವರ ಮಾತನ್ನು ಕೇಳಿದ್ದಳು (ಬಂಕಿಮ. ೭೨); ಕೆಲವು ಚಿಕ್ಕ ಹೆಣ್ಣುಮಕ್ಕಳು ಸೊಗಸಾದ ಉಡುಪಿನಲ್ಲಿ ರಾಜನ ಎದುರಿಗಿದ್ದ ಸುಂದರವಾದ ಪರದೆಯ ಹಿಂದೆ ಇದ್ದರು (ಪ್ರಪಾಇ. II, ೧೬೫) ; ಸುರೇಶ . . . ಕಿಡಕಿಯ ಪರದೆಯನ್ನು ಸರಿಸಿ ಹೊರಗೆ ನೋಡಿದ (ಅಜೋಲೀ.೮೭). ೨. ಸೊಳ್ಳೆಗಳು ಬರದಂತೆ ಹಾಸುಗೆಯ ಸುತ್ತಲೂ ಕಟ್ಟುವ, ಸಣ್ಣ ಸಣ್ಣ ಕಂಡಿಗಳಿರುವ ಬಟ್ಟೆಯ ಸಾಧನ; ಮಚ್ಛರದಾನಿ : ರಾತ್ರಿಯ ವೇಳೆ ಪರದೆಯನ್ನು ಕಟ್ಟಿಕೊಳ್ಳದೆ ಮಲಗುವುದು ಅಶಕ್ಯವಾಗಿ ಪರಿಣಮಿಸಿದೆ (ಸಂಚಲ. ೪೨); ಇಲ್ಲಿ ತೂಗುತ್ತಿರುವ ನಯವಾದ ಪರದೆ ಕೈಮಾಡಿ ಕರೆಯುತ್ತಿದೆ (ನಪೆವಾ. III, ೨೦೭೨). ೩. ಸಿನಿಮಾದಲ್ಲಿ ಚಿತ್ರವನ್ನು ಮೂಡಿಸುವ ಪಟ ; ರಜತಪರದೆ : "ಚಲನಚಿತ್ರದ, ದೀಪಚಿತ್ರದ, ಛಾಯಾಚಿತ್ರದ, ತೆರೆ, ಪರದೆ" (Screen. ಇಂಕನ). ೪. ನಾಟಕಗಳಲ್ಲಿ ಬಳಸುವ ಬೇರೆ ಬೇರೆ ದೃಶ್ಯಗಳಿಗೆ ಸಹಾಯಕವಾದ (ಚಿತ್ರಗಳುಳ್ಳ) ತೆರೆ : ದೃಶ್ಯದ ಪರದೆಗೆ ಬದಲಾಗಿ ಅಂಕದ ಪರದೆಯೇ ಆತುರದಿಂದ ಬಿದ್ದಿತು (ರಂಗಸಾ. ೩). 'ಅಂಕಪರದೆ' ಪರಾ. ೫.(ಸಾಮಾನ್ಯವಾಗಿ ಮುಸಲ್ಮಾನ ಹೆಂಗಸರು ಧರಿಸುವ) ಮುಸುಕು ; ಅವಕುಂಠನ : ಮುಖದ ಮೇಲೆ ಪರದೆ, ಮುಸುಕು ಏನೂ ಇಲ್ಲವೇ ಆ ಹೆಣ್ಣುಮಕ್ಕಳಿಗೆ ? (ಸಾಹೇಬ್. ೨೭). **ಪಡದೆ :** ೧. ಅಲ್ಲಲ್ಲಿಗೆ ಜರತಾರಿಯ ಪಡದೆಗಳನ್ನು ಇಳಿಬಿಡಿಸಿದ್ದನು (ಮಂಜುಕ. ೧೮೮). ೪. ಪಾತ್ರ ಮಾತ್ರ ಪಡದೇದ ಹಿಂದಿಂದ ಮಾತಾಡ್ತಾವ (ಮುಚ್ಚಾಟ.೮೬); ಹನ್ನೆರಡೂವರೆ ಗಂಟೆಗೆ ಪಡದೆಯ ಹಿಂದೆ ಗಂಟೆ ಬಾರಿಸಿತು (ದೀಪಪ. II, ೩೮೮). ೬. ಹುಣಿಸೆಹಣ್ಣಿನ ಬೀಜದ ಸುತ್ತಲೂ ಇರುವ ಪೊರೆ,–ಪದರ : ಹಣ್ಣಿನ ಒಳಗೆ ಇರುವ ಪಡದೆಯು ಸಪೇತಿರಬೇಕು (ಮುಂಬಪ್ರಾ. ೪೫). **ಪರದ$_2$ :** ೧. ಬಣ್ಣ ಬಣ್ಣದ ಹೂವುಗಳಿಂದ ಕೂಡಿದ ಪರದಗಳನ್ನು ಬಾಗಿಲು, ಕಿಟಕಿಗಳಿಗೆ ಇಳಿಬಿಟ್ಟಿದ್ದರು (ದೂಫ). **ಪರದಾ :** ೪. ನಾಟಕಶಾಲೆಗಳಲ್ಲಿ ಚಿತ್ರಗಳನ್ನು ಬರೆದು ಪರದಾಗಳನ್ನು ಹಾಕಿರುವುದಿಲ್ಲವೆ ? (ಗಲಿಪ್ರ. ೧೫). **ಫರದೆ :** ೧. ಕಿಟಕಿ–ಬಾಗಿಲುಗಳಿಗೆ ಸಿಲ್ಕ್ ಫರದೆಗಳು (ನಟಸಾ. ೬೩೫) ; ಆ ಚಂದ್ರಶಾಲೆಗಳ ಮೇಲುಗಡೆ ಕನಾತಿನ ಫರದೆಗಳು . . . ಕಟ್ಟಲ್ಪಟ್ಟಿದ್ದವು (ಶ್ರೀರಾಮ. ೪೫). ೪. ಆದರಲ್ಲಿ ಫರದೆ ಇದೆ, ಸೀನರಿಯಿದೆ (ಸ್ವಪ್ನಹೊ. ೧೩೮) ; ಇಂತಹ ಕಂಪೆನಿಗಳ ಯೋಗ್ಯತೆಯನ್ನು ಜನ ಅಳೆಯುತ್ತಿದ್ದುದು ಅವರ ಹತ್ತಿರ ಎಷ್ಟು ಫರದೆಗಳಿವೆಯೆಂಬುದರ ಮೇಲೆ (ನಟಸಾ. ೧೧).

[← ಪಾರ. ಪರದಾ ; ಹಿಂ. ಪರದಾ, ಪರ್ದಾ ; ಮರಾ. ಪಡದಾ]

**ಪರದೇವತೆ** (ನಾ). ಶ್ರೇಷ್ಠವಾದ ದೇವರು,—ದೈವ : ಪತಿಯೊಳು ಪರಭಕ್ತಿಗೈವುದು ಲಕ್ಷ್ಮೀಪತಿಯಾಣತಿಯೆಂದು ಬಗೆದು ಪತಿಯನೆ ಪರದೇವತೆಯೆಂದು ಭಜಿಸುವ ಸತಿಯರ ಸನ್ನುತಿಸುವೆನು (ಹರಿಬ. ೨-೩).

[ಪರ$_3$ + ದೇವತೆ]

**ಪರದೇಶ** (ನಾ). ತನ್ನದಲ್ಲದ ದೇಶ ; ಬೇರೆಯ ದೇಶ ; ವಿದೇಶ : ಹೇಷಿತದಲಮರಾವಳಿಗೆ ಪರದೇಶವನು ಮಾಡುತ್ತ ವನವನು ಘಾಸಿ ಮಾಡುತ . . . ನಡೆತಂದನಂತಕನಂತೆ ಗೋಕುಲಕೆ (ನಿಭಾಗ. ೧೦-೩೨-೩) ನಿನ್ನನ್ನು ಪರದೇಶದಲ್ಲಿ ಮರಣದಿಂದ ತಪ್ಪಿಸುವವರು ಸಿಗಬಹುದು (ಮಣಿಸ. ೪೪). [ಪರ$_3$+ದೇಶ]

**ಪರದೇಶಸ್ಥ** (ನಾ). ಹೊರನಾಡಿನಲ್ಲಿ ನೆಲಸಿರುವವನು. [ಸಂ.]

**ಪರದೇಶಿ** (ಗು). ೧. ಹೊರನಾಡಿಗೆ ಸೇರಿದ ; ವಿದೇಶೀಯ : ಸ್ವದೇಶಿಯ ಹೆಸರಿನಲ್ಲಿ ಪರದೇಶಿ ಬಟ್ಟೆಯನ್ನು ಸುಡಲಾಗಿದೆ (ಫರ್ಮಾನ. ೬೨) ; ಲಿಪ್‌ಸ್ಟಿಕ್ ಇತ್ಯಾದಿ ಪರದೇಶಿ ವಸ್ತುಗಳ ಭೂಷಣವಿಲ್ಲದೆ ಆಕೆ ಎಂದೂ ಸಾಲೆಗೆ ಹೋಗುವುದಿಲ್ಲ (ಹಳ್ಳಿಪಾ. ೯೮). ೨. ಅನಾಥವಾದ; ದಿಕ್ಕಿಲ್ಲದ; ತಬ್ಬಲಿಯಾದ : ಪರದೇಶಿ ತಪಸಿಯ ಹೆಣನನಾ ಚವುಡಯ್ಯನಯ್ಯೋ ಕಾಣನೇ (ಬಸಪು. ೩೨-೫೩) ; ಎಷ್ಟಾದರೂ ತಂಗಿಯ ಮಗ, ಪರದೇಶಿ ಪೋರ ಎಂಬ ಆತ್ಮೀಯತೆ ಕನಿಕರದಿಂದಾಗಿ (ಹೊಸಪ್ಪೆ ೩೧). (ನಾ). ೩. ಹೊರನಾಡಿನವನು ; ಪರದೇಶಕ್ಕೆ ಸೇರಿದವನು : ಪರದೇಶಿ ದುರ್ಜನಂ. . . ಅತಿಪಾಪಿಯಲ್ಲದೆ ತುರಂಗನಿಕರಕ್ಕೆ ಗೋಪರಪ್ಪರೆ ಸತತಂ (ನಳಚಂ.೬೫೬) ; ಕಾರಿರುಳಿನಲಿ ಪರದೇಶಿ ಬಂದಿರಲುರಗನಾ ಊರೊಳಗೆ ಕೊಲುತಿರ್ಪುದು ನಿರಂತರವು (ಬಸಪು. ೫೫-೨೬). ೪. ದಿಕ್ಕಿಲ್ಲದ ವ್ಯಕ್ತಿ; ಅನಾಥವ್ಯಕ್ತಿ : ಪರದೇಶಿ[ಪಾಠಾಂ. ಶಿ] ವಿತ್ತಹೀನಂ ಕುತ್ತಂಗುಳಿಯುಕ್ಕೆ ಜೈನನೆನೆ ಜಿನನಿಳಯಕ್ಕೊಯ್ದೋವಿ ಲೇಸು ಪಾಷ್ಟನೆ ಜೈನಂ (ಸಮಪ. ೪-೩೧) ; ಪರಿಚಾರಕಜನಂಗಳಿಗುಳಿದ ಪರದೇಶಿಗಳಿಗೀ ದೇಗುಲದೊಳಗೆ ಹುಗಬಾರದು (ಬಸಪು. ೪೩-೪೫) ; ದ್ರೌಪದಿಯನ್ನು . . . ಕರ್ಣ ದುಶ್ಶಾಸನರು ದಿಕ್ಕುದೆಸೆಯಿಲ್ಲದ ಪರದೇಶಿಯನ್ನು ಕಂಡ ಹಾಗೆ ಕಂಡು (ಕೃಪಾಳು. ೧೫೧).

**ಪರದೇಶಿ ಅಯ್ಯ** = ಬೇರೆ ಸ್ಥಳದಿಂದ ಬಂದು ನೆಲಸಿದ ಸಂನ್ಯಾಸಿ: ರಂಗಸ್ವಾಮಿಯವರ ಸ್ಥಾನದಲ್ಲಿಯಿದ್ದಂಥಾ ಪರದೇಶಿ ಅಯ್ಯನವರು ಮೂವತ್ತೈದುವರುಷದಾರಭ್ಯ . . . ಭಿಕ್ಷಾವೃತ್ತಿಯಲ್ಲಿ ಮಾಡಿಸಿದ ದೇವಸ್ಥಾನ ವುಪರಿಗೆ ಬಾಗಿಲು ಮಹಾನವಮಿಮಂಟಪಕೆರೆಯೊಡನೆ ಸಹ ಸಮರ್ಪಿಸಿದ ಸೇವೆ (ಎಕ. XII, ತಿಪಟೂ. ೬೯-೫ : 1770).

[ಸಂ. ಪರದೇಶಿನ್]

**ಪರದೇಶಿತನ** (ನಾ). ನಿರ್ಗತಿಕವಾಗಿರುವ ಸ್ಥಿತಿ; ಅನಾಥವಾಗಿರುವಿಕೆ : ನನಗೆ ಚಿಕ್ಕಂದಿನಲ್ಲೇ ಪರದೇಶಿತನ ಬಂತು (ವೈನಿ. ೪೦೬).
[ಪರದೇಶಿ + -ತನ]

**ಪರದೇಸ** (ನಾ). = ಪರದೇಶ : ಪರದೇಸಂ, ಪರಕೊತ್ತುಬು (ಭಾಷಾಭೂ. ೧೩೨ ಉದಾ). [ಪರ$_3$ + ದೇಸ]

**ಪರದೇಸಿ** (ನಾ). ೧. = ಪರದೇಶಿ ೩ : ಪರದೇಸಿಯೆನ[ನೆ]ಮ್ಮವರೆಲ್ಲರುಮಂ ಮನಮಾರೆ ತೊಱೆದು . . . ಅಘಮಂ ಹಱಯಿಪೆನೆಂಬರ್ತಿಯಿಂದಮಿಲ್ಲಿಗೆ ವಂದೆಂ (ಧರ್ಮಾಮೃ. ೬-೩೦). ೨. = ಪರದೇಶಿ ೪ : ಪರದೇಸಿ ನಾನಿಂದತಿಕ್ಷುಧೆಯುಡಸಲು ಪರಿದೆಯ್ದಿದೆ ನಿನ್ನ ಬಳಿಗೆ(ಜೀವಂಸಾಂ. ೬-೧೮); ಕೆಳಗಾರಾದರೂ ಅರದೇಸಿ ಪರದೇಸಿಗಳಿದ್ದರೆ ಕರೆದು ಫಲವನ್ನು ಕೊಡ ಹೇಳಿ (ಬತ್ತೀಸ. ೩೬).

ಪರದೇಸಿಯಪ್ಪ = ಬೇರೆ ಸ್ಥಳದಿಂದ ಬಂದು ನೆಲಸಿದ ಸಂನ್ಯಾಸಿ: ಸ್ಥಾನಿಕ ಪರದೇಸಿಯಪ್ಪರಾದ ಮಸ×ಣ ಜೀಯರ×××ಯನ ಕೈಯಲು . . . ಕೊಟ್ಟ ದತ್ತಿ (ಎಕ. VII (R), ಮದ್ದೂರು. ೬೯-೩೩; 1261); ಶ್ರೀ ವಣ××ವ ದೇವರ ಸ್ಥಾನಾಪತಿ ಪರದೇಸಿಯಪ್ಪ×××ದಯಪ್ಪ ಜೀಯರು (ಎಕ. VII (R), ಮದ್ದೂರು. ೬೬-೧೪; 1278).
[<ಸಂ. ಪರದೇಶಿನ್]

**ಪರದೈವ** (ನಾ). ೧. ಬೇರೆಯ ದೇವರು; ಅನ್ಯದೈವ : ಛಲ ಬೇಕು ಶರಣಂಗೆ ಪರದೈವವನೊಲ್ಲೆನೆಂಬ (ಬಸವ. ೬೬೬); ಪರದೈವಗಳನವಿಚಾರದಿಂ ಮುಟ್ಟನು (ಬಸಪು. ೫೩-೫೦); ಹರಿಪಾದವಿರಲಿಕ್ಕೆ ಪರದೈವಂಗಳಿಗೆಱಗಲೇಕೆ (ಪುರಂದ. ೪-೧೪೬ ಪಲ್ಲವಿ). ೨. = ಪರದೇವತೆ : ನಿತ್ಯ ಪರದೈವ ಚಿಂತನೆಯೊಳ್ ಮುಳುಂಗಿ (ಅಮಶ. ೨೬). [ಪರ$_3$ + ದೈವ]

**ಪರದೈವತ** (ನಾ). = ಪರದೇವತೆ : ಎಲೆ ಕೃಷ್ಣ . . . ನೀಂ ಪರದೈವತ ಕಳಾಸ್ವರೂಪನಾಗಿ ತೋರ್ಪೆ (ಜಗವಿ. ೪-೬೯ ಪ). [ಪರ$_3$ + ದೈವತ]

**ಪರದ್ರವ್ಯ** (ನಾ). ೧. ಬೇರೆಯ ವಸ್ತು; ಅನ್ಯಪದಾರ್ಥ. ೨. ಇತರರ ಸಂಪತ್ತು; ಬೇರೆಯವರಿಗೆ ಸೇರಿದ ಆಸ್ತಿ : ಉಳ್ಳುದುಂ ಪರದ್ರವ್ಯ ಪರಕ್ಷೇತ್ರ ಪರಕಾಲ ಪರಭಾವದಿಂದಮಿಲ್ಲದಿರ್ಕುಂ (ಶಾಂತಿಪು. ೮-೧೩೮ ಪ); ಪರದ್ರವ್ಯ ಪರಸ್ತ್ರೀ . . . ಮಲತ್ರಯದಲ್ಲಿ ಮೋಹಿಸದೆ (ಮಡಿಮಾ. ೬೮-೧೦೦). [ಪರ$_3$ + ದ್ರವ್ಯ]

**ಪರದ್ರೋಹ** (ನಾ). ಇತರರಿಗೆ ಕೇಡನ್ನು ಬಗೆಯುವುದು : ಹುಸಿ ಪರದ್ರೋಹವು . . . ಆತ್ಮಸ್ತುತಿಯೆನಿಪ್ಪವನು ಬಿಸುಟು ತದ್ವಿಪರೀತದಲಿ ವರ್ತಿಸುವವನೇ ರಾಯನು (ಕುಪ್ಯಾಉ. ೩-೬೧); ಪರದ್ರೋಹವನ್ನು ಮಾಡಲೂ ಬಾರದು, ಚಿಂತಿಸಲೂ ಬಾರದು (ಆರ್ಯಧ. ೮೫).
[ಪರ$_3$ + ದ್ರೋಹ]

**ಪರಧನ** (ನಾ). = ಪರದ್ರವ್ಯ ೨ : ಪರಧನಹರಣಾರ್ಥಂ ನಿಜಗುರುವಧೆಯಂ ಮಾಟ್ಪ ದುಷ್ಟಬುದ್ಧಿಯ ಕಥೆಯಂ ನಿರುತಂ ನೋಡಲ್ ಬರ್ಪಂತಿರೆ ಬಂದಂ ಪೂರ್ವಗಿರಿಗೆ ಸರಸಿಜಮಿತ್ರಂ (ಪಂಚತಂ. ೧೬೫-೨೪೯); ಒಂದಕ್ಕಂಜುವೆ ಒಂದಕ್ಕಳುಕುವೆ ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ (ಬಸವ. ೪೪೬); ನಾಸ್ತಿಕನ ನಿಂದಾಕುಳನ ಪರಧನ ಬಾಧಕನ ದತ್ತಾಪಹಾರಕನ . . . ಪರಿದಳಿತ ಧರ್ಮನ ಗತಿಗಳಲಿ ತಾನಿಳಿವೆನಿಂದೇ ಕೊಲ್ಲದಿರ್ದರೆ ಸೂತನಂದನನ (ಕುಪ್ಯಾಕ. ೧೮-೬); ಪರಧನ ಪರಸತಿ ಪರನಿಂದೆಗಳುಕುತ ತೊಱೆಯೊಳು ಮಿಂದಿರೆ ದುರಿತ ಪೋಗುವುದೆ (ಪುರಂದ. ೪-೧೪೮-೬).
[ಪರ$_3$ + ಧನ]

**ಪರಧರ್ಮ** (ನಾ). ಬೇರೆಯ ಧರ್ಮ; ಅನ್ಯಧರ್ಮ : ಭಾರತ ಪರಧರ್ಮಸಹಿಷ್ಣುತೆಗೆ ಹೆಸರುವಾಸಿಯಾದ ದೇಶ (ಭಾರದ. ೩೨೫).
[ಪರ$_3$ + ಧರ್ಮ]

**ಪರನಾಡು** (ನಾ). = ಪರದೇಶ : ದಾಲ್ಚಿನ್ನಿಯು ಸಿಂಹಲದ್ವೀಪದಿಂದ ಪರನಾಡುಗಳಿಗೆ ಹೋಗುತ್ತದೆ (ಮುಂಬಯಿ. ೩-೬೪). [ಪರ$_3$ + ನಾಡು]

**ಪರನಾರಿ** (ನಾ). ಬೇರೆಯ ಹೆಂಗಸು; ಅನ್ಯಸ್ತ್ರೀ : ಪರನಾರಿಯ ಸಂಗವ ತೊಱೆಯಿಂ ಭೋ (ಬಸವ. ೬೪೪); ಪರನಾರಿ ಭೂರಿಸೌಖ್ಯ ನಿವಾರಿ ಕೇಡಿನ ದಾರಿ (ಕೌತಿರಾ. ೨೩-೨೮).

ಪರನಾರೀದೂರ = ಪರಸ್ತ್ರೀಯರಿಂದ ದೂರವಿರುವವನು; ಒಂದು ಬಿರುದು : ಪರನಾರೀದೂರ ನಲುವತ್ತನಾಲ್ವರ್ಮಣ್ಡಳಿಕರ ತಲೆಗೊಣ್ಡಗಣ್ಡ (ಎಕ. XII, ತಿರಾ. ೪೦-೩೧; 1040); ಪರನಾರೀದೂರಂ ಶರಣಾಗತಪ್ರಿಯಂ (ಕಇಅ. ೪೧-೫೯-೧೦ ; 1128). ಪರನಾರೀಪುತ್ರ = ಅನ್ಯಸ್ತ್ರೀಯರಿಗೆ ತಾನು ಮಗನೆಂದು ಭಾವಿಸಿರುವವನು; ಒಂದು ಬಿರುದು : ಪರನಾರೀಪುತ್ರ ಜಯಲಕ್ಷ್ಮೀನಿವಾಸ ಕೀರ್ತ್ತಿವಿಳಾಸನಭಿನವ ವಿಕ್ರಮಾದಿತ್ಯ (ಸೌಇಇ. XX, ೩೯-೧೯ ; 1064); ಪರನಾರೀಪುತ್ರನುಂ ಪಾರ್ಶ್ವದೇವಪಾದಾರಧಕನು(ಂ)ಮಪ್ಪ ಕಲುಕಣಿನಾಡಾಳ್ವ ಸಾವಂತ ಸೋವೆಯ ನಾಯಕಂ (ಎಕ. VII (R), ನಾಗಮಂ. ೧೬೯-೩೬; 1142). ಪರನಾರೀಪುತ್ರಕ = ಪರನಾರೀಪುತ್ರ : ಪರನಾರೀಪುತ್ರಕ ನಣ್ಬರ ತೊಟ್ಟು . . . ಗುಣ್ಡಚಕ್ರ ಚೆಡ್ದಗಂ (ಎಕ. II (R), ೪೩೪-೧; 10ನೆಯ ಶತ). ಪರನಾರೀಬ್ರತ = ಅನ್ಯಸ್ತ್ರೀಯರನ್ನು ಬಯಸುವುದಿಲ್ಲವೆಂದು ವ್ರತವನ್ನು ಹಿಡಿದಿರುವವನು; ಒಂದು ಬಿರುದು : ಪರಹಿತವ್ಯಾಪಾರನೇ ಖೇಚರಂ ಪರನಾರೀಬ್ರತಯುಕ್ತನೇ ಪವನಜಂ (ಎಕ. VI, ಕಡೂರು. ೩೮-೫೩ ; 1191). ಪರನಾರೀಸಹೋದರ = ಅನ್ಯಸ್ತ್ರೀಯರಿಗೆ ಒಡಹುಟ್ಟಿದವನಂತಿರುವವನು; ಒಂದು ಬಿರುದು : ವಿವೇಕಚಾಣಾಕ್ಯಂ ಪರನಾರೀಸಹೋದರಂ (ಸೌಇಇ. XX, ೪೬-೮ ; 1074); ಪರನಾರೀಸಹೋದರನಪ್ಪ ಗಂಗಣ್ಣನ ಲಿಖಿತ (ಎಕ. II (R), ೧೬೩-೧೦೬ ; 1145). [ಪರ$_3$ + ನಾರಿ$_2$]

**ಪರನಾರೀಸಂಗ** (ನಾ). ಅನ್ಯಸ್ತ್ರೀಯ ಸಹವಾಸ, —ಸಂಬಂಧ : ಪರನಾರೀಸಂಗದೋಷಂ . . . ಪೊರ್ದುಗುಮೆನಗೆ(ದಶಕು. ೧೦-೬೧). [ಸಂ.]

**ಪರನಿಂದಕ** (ನಾ). ಇತರರನ್ನು ದೂಷಿಸುವವನು, —ತೆಗಳುವವನು : ಕೇಳು ಪರನಿಂದಕನೆ ನಿಂದ್ಯನು (ಕುಪ್ಯಾಅ. ೨೩-೪೩).
[ಪರ$_3$ + ನಿಂದಕ]

**ಪರನಿಂದೆ** (ನಾ). ಇತರರನ್ನು ಕುರಿತು ಮಾಡುವ ದೂಷಣೆ, —ತೆಗಳಿಕೆ : ಆತ್ಮಸ್ತುತಿ ಪರನಿಂದೆಯ ಕೇಳಿಸದಿರಯ್ಯಾ ನಿಮ್ಮ ಧರ್ಮ (ಬಸವ. ೪೦೬); ಕರದಲಿ ಜಪಮಾಲೆಮಣಿಗಳನೆಣಿಸುತ ಪರನಿಂದೆ ಬಾಯಲಿ ಮಾಡುವರಯ್ಯ (ಪುರಂದ. ೪-೧೪೮-೨); ಪರನಿಂದಾ ಪರವಸ್ತುಜಾತ ಪರಕಾಂತಾಕಾಂಕ್ಷೆಯಂ ಮಾಣ್ದು . . . ಮೆಱೆವಾತಂ ತಾನೆ ಭಕ್ತೋತ್ತಮಂ (ನೃಪವಿ. ೩-೬೩); ಪರನಿಂದೆ ಗೃಹಕ್ಷಯ, ಯತಿನಿಂದೆ ಕುಲಕ್ಷಯ (ಗಾದೆ). [ಪರ$_3$ + ನಿಂದೆ]

**ಪರನಿಂದೆಗೆಯ್** (ಕ್ರಿ). ಇತರರನ್ನು ಹೀಯಾಳಿಸು, —ತೆಗಳು : ಪರನಿಂದೆಗೆಯ್ವ ಅವನು . . . ಇಳಿವ ನರಕದೊಳಗಿಳಿವೆನವಧಿಗೆ ನಿಮ್ಮ ಧನವನೀಯದಡೆ (ಹಚರಾ. ೮-೫೬). [ಪರನಿಂದೆ + ಕೆಯ್$_1$]

**ಪರನಿಮಿತ್ತ** (ನಾ). ಬೇರೆಯ ಉದ್ದೇಶ, —ಕಾರಣ; ಅನ್ಯನಿಮಿತ್ತ : 'ಪರನಿಮಿತ್ತಂಗೈ' ಪರಾ. [ಪರ$_3$ + ನಿಮಿತ್ತ]

**ಪರನಿಮಿತ್ತಂಗೈ** (ಕ್ರಿ). ಬೇರೆಯ ಕಾರಣವನ್ನು ಉಂಟುಮಾಡಿಕೊಳ್ಳು : ಬರೆ ನಾನಿದಿರೊಳ್ ನೋಟವ ತಿರುಪುತ್ತಂ ನಗೆಯ ಪರನಿಮಿತ್ತಂಗೈದಾ ತರುಣಿಯ ನಾಣಿಂ ಮದನಂ ನೆರೆಮರೆಯೆನಿಸಿಲ್ಲಮಂತೆ ಮೆರೆದನುಮಿಲ್ಲಂ (ಶಾಕುಂತ. ೨೫-೪೬).
[ಪರನಿಮಿತ್ತ + ಕೈ$_1$(<ಕೆಯ್$_1$)]

**ಪರನಿರ್ವೃತಿ** (ನಾ). ಲೋಕೋತ್ತರವಾದ ಸುಖ ; ಪರಮಾನಂದ: ಈ ಪುನರ್ಮಿಳನವೆ ಪರನಿರ್ವೃತಿ ಎನಲೀ ಸಂಲೀನತೆಯೇ ಭವವೃತಿ (ಗಣೇಶ. ೧೬-೪೦೧). [ಪರ₃+ನಿರ್ವೃತಿ]

**ಪರನೃಪ** (ನಾ). ಶತ್ರುರಾಜ : ಪರನೃಪರೋಲಗಿಸಿದ ಪದ್ಮರಾಗಮಣಿಯಿಂ . . . ಮಣಿದೀಪದ ಸರವೊಪ್ಪಿದುದು (ಅಜಿಪು. ೬-೫) ; ಪರನೃಪರಟ್ಟಿದ ಕಪ್ಪಕರಿಗಳ ಮದಜಳಮನುಂಡು ಕಂಪೇಱಿದ ತದ್ಧರಣೀಶ ಗೃಹಾಂಗಣದೊಳ್ ಪಱಿವಱಿಯಾಡುವುವು ಪಱಿಮೆವಱಿಗಳ ಬಳಗಂ (ಚಂದ್ರಪು. ೭-೩೩). [ಪರ₃ + ನೃಪ]

**ಪರನೃಪಮಂಡಳ**(ನಾ). ಶತ್ರುರಾಜ್ಯ: ಪರನೃಪಮಂಡಳಕ್ಕೆ ಭಯಮಂ . . . ಇತ್ತನೆಂದು ಬಿತ್ತರಿಸೆ ಸನತ್ಕುಮಾರ ನಳಕೂಬರ ಕಂತುನಿಭಂ ನೃಪಾತ್ಮಜಂ (ಪುಷ್ಪಪು. ೪-೭೦).

[ಪರನೃಪ+ಮಂಡಳ (=ಮಂಡಲ)]

**ಪರನ್ರಿಪತಿ** (ನಾ). =ಪರನೃಪ : ಪರನ್ರಿಪತಿಮಕುಟಘಟ್ಟಿತ ಚರಣಾರವಿಂದಯುಗಳಂ (ಸೌಇಇ. XX, ೪೧-೫; 1068). [ಪರ₃+ನ್ರಿಪತಿ]

**ಪರಪಂಚ** (ನಾ). ೧. ಜಗತ್ತು ; ವಿಶ್ವ: "ಪರಪಂಚ—ಪ್ರಪಂಚ" (ತದ್ಭಕೋ. ೨೪). ೨. ವ್ಯತ್ಯಾಸ; ಪಕ್ಷಪಾತ ; ಭೇದ: ಪಂಕ್ತಿಯೊಳ್ ಪರಪಂಚಮಂ ಮಾಡೆ ದೋಷಮೆಂದೆಲ್ಲರ್ಗೆ ಸರಿಯಾಗಿ ಬಡಿಸಲ್ (ಸಮ್ಯಕೌ. ೯-೪೩). [<ಸಂ. ಪ್ರಪಂಚ]

**ಪರಪಕ್ಷ** (ನಾ). ೧. ಇನ್ನೊಂದು ಪಕ್ಷ ; ಪ್ರತಿಪಕ್ಷ ; ವಿರೋಧ ಪಕ್ಷ : ಎಂದು ಪರಪಕ್ಷದೂಷಣಪುರಸ್ಸರಮನೇಕೋಪಪತ್ತಿಗಳಿಂ ಸ್ವಪಕ್ಷ ಸ್ಥಾಪನಂಗೆಯ್ದು (ಆದಿಪು. ೨-೨೨ ವ) ; ಪರಪಕ್ಷಾಪರಪಕ್ಷಂ ದೊರೆಕೊಂಡುದು ವಿಧಿಗೆನುತ್ತೆ ಬಯ್ದರ್ (ಹರಿವ್ಮಾರ. ೨-೮೨). ೨. ಶತ್ರುಗಳ ಸಮೂಹ,—ಗುಂಪು: ಪರಪಕ್ಷಮುಳ್ಳೆನಂ ತನಗಿರವುಬ್ಬಸಮುದಱಿನ [ಱಿ]ವುದದನೇಗೆಯ್ದುಂ (ಕವಿಮಾ. ೩-೧೫೮). ೩. ಶತ್ರು ; ಹಗೆ : "ಅಪಕ್ಷನೆನೆ ಪರಪಕ್ಷನೆಂದೆನಿಕ್ಕುಂ" (ಮಂಗರಾ. ೭೨-೨೨). [ಪರ₃+ಪಕ್ಷ]

**ಪರಪತಿ** (ನಾ). ಸಾಲ; ಕೈಗಡ : ಕಾಯಕವೆಂದು ಕಲ್ಪಿಸಿ ಮಾಡುವಲ್ಲಿ ತುಡುಗುಣಿಯಂತೆ ಮಡದಿ ಮಕ್ಕಳಿಗೆಂದು ಹೆಡಗೆ ಗಳಗೆಯಲ್ಲಿ ಹೊಯಿದು ಕಳ ಪರಪತಿ ಎಂದು ಕೊಟ್ಟಡೆ ಅದು ಗುರು ಪರ ಚರ ಈ ಮೂಱಱೊಡವೆಯಲ್ಲ (ಸರ್ವವ. ೭೨-೩೩೦).

[←ತೆಲು. ಪರಪತಿ, ಪರಪತ್ತಿ]

**ಪರಪತ್ನಿ** (ನಾ). ಬೇರೆಯವನ ಹೆಂಡತಿ ; ಪರಸ್ತ್ರೀ : ಪರಪತ್ನಿಯನ್ನು ಬಣ್ಣಿಸತಕ್ಕುದಲ್ಲ (ಶಾಕುಂತ. ೬೫-೭). [ಪರ₃+ಪತ್ನಿ]

**ಪರಪದ** (ನಾ). ೧. ಶ್ರೇಷ್ಠವಾದ ಸ್ಥಳ ; ಮೋಕ್ಷ: ಸ್ವಾತ್ಮಾರಾಮಸ್ವಾಮಿಯು ರಾಜಯೋಗ . . . ಪರಪದ . . . ತುರೀಯಾವಸ್ಥಾ ಇವುಗಳೆಲ್ಲ ಒಂದೇ ಅರ್ಥವೆಂದು ತಿಳಿಸಿರುತ್ತಾನೆ (ಭಾರದ. ೧೬೫). ೨. [ವ್ಯಾಕ] ಸಂಧಿ ಅಥವಾ ಸಮಾಸಗಳಲ್ಲಿ ಪೂರ್ವಪದಕ್ಕೆ ಮುಂದೆ ಬರುವ ಪದ: ಪರಪದಪೂರ್ವಂ ದ್ವಿತ್ವಾಕ್ಷರಮಾಗಿರೆ ಪೂರ್ವಪದದ ಚರಮಂ ಹ್ರಸ್ವಾಕ್ಷರಮಾಗೆ ಸಂಧಿದೋಷಂ (ಶಮದ. ೫೯).

[ಪರ₃+ಪದ₁]

**ಪರಪಮುದು** (ನಾ). ದೇವರ ನೈವೇದ್ಯಕ್ಕಾಗಿ ಕೊಡುವ ಬೇಳೆ : ಆ ಕೈಂಕರ್ಯಗಳ ದಾನಗಟ್ಟಳೆಯ ವಿವರ ಪ್ರತಿದಿನ ೧ಕ್ಕೆ ನಡವ ನಿತ್ಯಸಂಧಿ ೧ಕ್ಕೆ ಅಮೃತಪಡಿ ಖಂ ೧/೪ ಕೆ ತಳಿಗೆ ೬ ಅರ್ಥ ಪರಪಮುದು ಕಱಿಯಮುದು ನೈಯಮುದು ಚುರ:ಳೊಮುಂದು ಸಹ ವರ್ಷ ೧ಕೆ ಸಲುವುದು (ಎಕ. XIV, ಶ್ರೀರಂಗ. ೯೫-೨ ; 1535).

[ಪರಪು₃ (<ಪರುಪು) + ಅಮುದು (<ಅಮುರ್ದು). / ತಮಿ. ಪರುಪ್ಪಮುತು]

**ಪರಪರ** (ನಾ). ಬಟ್ಟೆ, ಕಾಗದ ಮುಂತಾದುವು ಹರಿಯುವುದನ್ನು ಸೂಚಿಸುವ ಒಂದು ಅನುಕರಣಪದ : ಮಗು ಪುಸ್ತಕವನ್ನು ಪರಪರ ಎಂದು ಹರಿದು ಹಾಕಿತು (ರೂಢಿ).

**ಪರಪಾಕ** (ನಾ). ಬೇರೆಯವರು ಮಾಡಿದ ಅಡುಗೆ : ಪರಪಾಕ ಪರವಸ್ತ್ರ . . . ಕಾಂಕ್ಷೆ ಮಲತ್ರಯದಲ್ಲಿ ಮೋಹಿಸದೆ (ಮಡಿಮಾ. ೬೮-೧೦೦); ನಿರತ ತಮ್ಮಯ ಸ್ವಜಾತಿಯ ಧರ್ಮವ ನಡಸುತ್ತ ಪರಪಾಕಮುಮನು ವರ್ಜಿಸಿ (ನಪವೋ. ೨-೩೩). [ಪರ₃ + ಪಾಕ₁]

**ಪರಪಾಟಕ** 'ಪರ್ಪಾಟಕ' ನೋ.

**ಪರಪಾಟು,** ಪರಿಪಾಟು₂ (ನಾ). ಪ್ರಮಾದ ; ಗೊಂದಲ : ನಿಮಗೆ ಮರೆತು ಹೋಗಿರಬೇಕು. ಪರಪಾಟು ಆಗಿರಬೇಕು (ದಿಪಾಬ. ೪೯) ; ಹುಬ್ಬಳ್ಳಿಯ ನಿಲ್ದಾಣದಲ್ಲಿ ಪರಪಾಟು ಆಗಿ ಧಾರವಾಡದ ಗಾಡಿಯನ್ನು ಬಿಟ್ಟು ಹಾವೇರಿಯ ಗಾಡಿಯಲ್ಲಿ ಹತ್ತಿದ್ದೇನೆ (ಹುಚ್ಚುಹು. ೧೯). **ಪರಿಪಾಟು**₂ : ಎಂದೂ ಇಲ್ಲದ ಪರಿಪಾಟು ಈ ದಿನವೇ ಆಗುತ್ತದೆಯೇ ಹೇಳು ? (ಮರಳ. ೭೨). [←ತೆಲು. ಪೊರಪಾಟು]

**ಪರಪಾಟ್ಲು** (ನಾ). = ಪರಪಾಟು : ನಂದು ಪರಪಾಟ್ಲು ಆತು (ಬೆಂಗಜ. ೧೪). [ಪರಪಾಟು+-ಅಲು(<-ಅಲ್₂)]

**ಪರಪಾರ** (ನಾ). ಆಚೆಯ ದಡ ; ಎದುರುದಂಡೆ : ಅಪಾರ ಪಾರಾವಾರ ಪರಪಾರಸಮುತ್ತಾರಿತ ಕುಂದೇಂದುಕುಮುದ್ವತೀ ತರಳತರ ತಾರಹಾರನೀಹಾರರೋಚಿರ್ಮಂಜರೀನಿಚಯವಿಶದಯಶೋರಾಶಿವಳಯನುಂ (ಶಾಂತಿಪು. ೧-೭೧ ವ). [ಪರ₃+ಪಾರ₂]

**ಪರಪಾಷ್ಟಕ** 'ಪರ್ಪಾಟಕ' ನೋ.

**ಪರಪಿಂಡಾದ** (ನಾ). ಬೇರೆಯವರಿಂದ ಆಹಾರವನ್ನು ಪಡೆಯುವವನು ; ಪರಾಧೀನ : "ಪರಾನ್ನಃ, ಪರಪಿಂಡಾದಃ – ಈ ೨ ಪೆಱರಿಕ್ಕಿದ ಕೂೞನುಂಬುವಂ" (ಹಲಾಯು. ೫೪-೧೯೬). [ಸಂ.]

**ಪರಪಿಂಡಿ** (ನಾ). ೧. =ಪರಪಿಂಡಾದ ೧ : "ಪೆಱರಾರಿ ತಿಂಬವಂ ಪರಾನ್ನಂ ಪಾರಧಿಕನಾ ಪರಪಿಂಡಿಯಕ್ಕು [ಪಾಠಾಂ. ಪರಪಿಂಡೆಯಕ್ಕು, ಪರಪಿಂಡಾದನಕ್ಕುಂ]"(ಮಂಗರಾ. ೬೯-೧೦). ೨. ಪರಾವಲಂಬಿ ಜೀವಿ: ಕಾಳಜ್ವರದ (ಕಾಲಾಅಜಾರ್) ಪರಪಿಂಡಿಯಿಂದ . . . ಕರುಳಲ್ಲಿ ಸೋಂಕಾದರೆ . . . ಹಲವಾರು ಬಗೆಗಳ ಜೀವಾಣುಗಳು ಹೊರಬೀಳಬಹುದು (ಕವಿಕೋ. I, ೮೨೬). [ಸಂ. ಪರಪಿಂಡಿನ್]

**ಪರಪೀಡನ** (ನಾ). ಇತರರನ್ನು ಹಿಂಸಿಸುವುದು,—ಕಾಡುವುದು : "ಪರಪೀಡನಂ ಸಪತ್ರಾಕರಣಮೆನಲು ಲೋಗರನು ಬಂಧಿಸಲು ನಾಮಂ" (ಮಂಗರಾ. ೧೩೪-೩೨). [ಪರ₃ + ಪೀಡನ]

**ಪರಪೀಡನೆ** (ನಾ). =ಪರಪೀಡನ : ಸದಾ ಪರಪೀಡನೆಯಲ್ಲಿಯೇ . . . ಉದ್ಯುಕ್ತರಾಗಿರುವವರು ಮೊದಲು ಸ್ವಲ್ಪ ಸುಖವುಳ್ಳವರಾಗಿ ತೋರಿದರೂ ಪರ್ಯವಸಾನದಲ್ಲಿ ಅವರ ಸರ್ವನಾಶ ಖಂಡಿತ (ಭಾರದ. ೯೮); ಪರಪೀಡನೆಯೆ ಪಾಪಕರವು (ಇಂಚಾಪ. ೧೮೦-೪೮). [ಪರ₃ + ಪೀಡನೆ]

**ಪರಪೀಡೆ** (ನಾ). = ಪರಪೀಡನ : ಪರಪೀಡಾಮುಖದುಷ್ಟದುರ್ಜನನಿಕಾಯಾತಂಕದಿಂ ಸದ್ಗುಣಾಕರಮಂ ಸದ್ರಸಭಾವಮುಂ ಸಮೆವುದಂ ಮಾಣಲ್ಕದೇಕಾಯ್ತೊ ಬಂಧುರಮಂ ಕಾವ್ಯನಿಬಂಧಮಂ (ಚಂದ್ರಪು. ೧-೪೫) ; ಪರಪೀಡೆಯನೆಸಗುವವಂ ನರಕವನುಂಡುಂಡು ದಣಿಯನೇತೆಱದಿಂದಂ (ನಳಚಂ. ೭೦೩). [ಪರ₃ + ಪೀಡೆ]

**ಪರಪು**₁, ಪರೆಪು₁, ಪರ್ಬು₁, ಪರ್ವು₁, ಹಂಬು₁, ಹಬ್ಬು₁, ಹರಗು₂, ಹರವು₁, ಹರಹು₁, ಹರುಹು₁, ಹರ್ಬು, ಹರ್ವು (ಕ್ರಿ). ೧. ವ್ಯಾಪಿಸುವಂತೆ ಮಾಡು ; ಹರಡು : ಪೊಳೆವಿನಕಿರಣಂ ೨ಳನಳುರೆ ಕನಲ್ದಗಿದು ಸೋಗೆಯಿಂ ಪರಪಿ (ಆದಿಪು. ೧೧-೪೫) ; ಪರಪಿದ

ಮಲ್ಲಿಕಾಮುಕುಳಮಾಲೆಯ ಪೂವಲಿ (ಕುಸುಮಾ. ೨-೧೨೩); ಸರಸೀಜಾತ ಸಖಂ ಸಹಸ್ರಕರದಿಂ ಸರ್ವೋರ್ವಿಯೊಳ್ ಕೆಂಡಮಂ ಪರಪುತ್ತಿರ್ದನೊ (ದಶಕು. ೪-೨೧); ಮಲ್ಲಿಗೆಯಲರ್ವಡಿಯು ತನಿಗಂಪ ನೆರವಿ ನೆರವಿಗೆ ತಂದೆಲರ್ಮೆಲ್ಲಮೆಲ್ಲನೆ ಪರಪುತಿರ್ದುದಾ ರಾಜಮಾರ್ಗದೊಳ್ಪುಸುಣರಂತೆ (ಜೈಮಿಭಾ. ೬-೧೨); ಚೆಂಬವಳದ ಸರದ ಪರಪಿದ ಪೊಂದಟ್ಟುಗಳಿಂ ರಂಜಿಸಿ (ರಾಮಾಶ್ವ. ೧೦೩-೮). **೨.** (ವದಂತಿಯಂತೆ) ಹಬ್ಬಿಸು ; ಪ್ರಚಾರ ಮಾಡು : ನೀರೊಳ್ಪೊಕ್ಕೆಣ್ಣೆಯಂತೆ ಪೆಱರ ದೋಷಮಂ ಪರಪದೆ (ಧರ್ಮಾಮೃ. ೫-೯೯). **೩.** ಚೆಲ್ಲಾಡು ; ಚೆಲ್ಲಾಪಿಲ್ಲಿ ಮಾಡು ; ತೂರು ; ಎಸೆ : ಪರಪಿದ ಕೂಟ್ಕೆ ಮುಸುಱು ಮಡಿದ ಮಕ್ಷಿಕಾದಿ ಜೀವಸಾವದ್ಯಮುಮಂ (ಶಾಂತಿಪು. ೫-೬೦ ಪ); ಉಟಜಾಂಗಣದೊಳ್ ಪರಪಿದ ಪಲತೆಱದ ಫಲಂಗಳಿಂ (ಕಾದಂಪೂ. ೨೨೩) ; ಚಿತ್ರಗ್ರೀವಂ ಸಪರಿಗ್ರಹಂ ಬಂದು ಪರಪಿರ್ದ ಕೂಟಂ ಕಂಡೆಱಗಲ್ (ಪಂಚತಂ. ೨೮೮-೧೬); ತುಱುಕಾರ್ತಿಯರ್ ತಿಱಿತಂದು ಪಾಱುತನಕ್ಕೆ ಪರಪೆ ಪರೆದು ಕೊರಗಿರ್ದ ಕರಿಯ ನೆಯ್ದಿಲ್ಗಳಿಂ (ಲೀಲಾವ. ೫-೬೬). **೪.** ವ್ಯಾಪಕವಾಗು ; ವ್ಯಾಪಿಸು : ಛಂದಂ ಪಿಂಗಳನಿನವನಿಯೊಳ್ ಪರಪಿದೊಡೆ (ಛಂದೋಂಬು. ೧-೩೦) ; ಪರಪೆ ಕೇಕಿಗಳ ತಾಂಡವಮಂ ನುಣ್ಚರದ ತಿಣ್ಪು ಘನಘೋಷಗಭೀರಂ (ಕಾವ್ಯಾವ. ೬೪). **೫.** ದೂರಕ್ಕೆ ಓಡಿಸು ; ದೂರವಾಗುವಂತೆ ಮಾಡು : ಪರಪುತ್ತಂ ಪುಲ್ಲೆಗುಂಪಂ ಪದಕೆ ತೊಡರ್ದ ಪೆರ್ಬುಳ್ಳಿಗಳ್ ಪಾಶದಂತೊಪ್ಪಿರೆ . . . ಸೋರ್ಚಂತಾನೆಯ್ತಂದಪುದು (ಶಾಕುಂತ. ೧೬-೩೩). **೬.** ಕೆದರಿಕೊಂಡಿರು ; ಅಸ್ತವ್ಯಸ್ತವಾಗಿರು : ಮರುಳಂತೆ ಮರುಳ್ ತಲೆಯಂ ಪರಪಿರದೆ ಮನೋಸುರಾಗದಿಂ ಮುಡಿ ಮುಡಿಯಂ (ಧರ್ಮಾಮೃ. ೩-೧೨೬). **೭.** ಚಾಚು ; ನೀಡು : ಕನ್ನೈದಿಲ್ವಾಸಿನೊಳಾ ಚೆನ್ನೆ ವಿರಾಜಿಸಿದಳ್ . . . ಚೆಂಬೊನ್ನದ ಕಾಂತಿಯಿನೊಡಲ್ ಪರಪಿ ತಾಪಿಸುತುಂ (ಉದ್ಭಟ. ೭-೫೧); ನೀಂ ಪೊರೆವುದೆಂದಾತ್ಮಾಂಗಮಂ ಧಾತ್ರಿಯೊಳ್ಪರಪುತ್ತುಂ (ವೃಷವಿ. ೨೬-೩೦). **೮.** ಆವರಿಸು ; ಕವಿ ; ಮುತ್ತು : ವಲ್ಲೀನಿವಾಸಂಗಳಂ ಪರಪುತ್ತುಂ ಮಳಯಾವನೀಧರಚರಂ ತಾಂ ಬಂದುದು . . . ಅಂಗಜಗಜಂ ಬರ್ಪಂತೆ ಚೈತ್ರಾನಿಳಂ (ಚಂದ್ರಪ್ರ. ೭-೩೮). **೯.** ಹರಡಿಡು ; ಅಗಲವಾಗಿಡು: ಧರಾಲತಾಂಗಿ ಪರಮರಾಮೇಶ್ವರಂಗೆಯುರುತರದುಲುಪಿಗಳತಂದು ಪರಪಿದಳೊ (ಏಕೋಪು. ೪-೧೭). **ಪರೆಪು$_1$ :** "೧. ಪರೆವು (ಪರವು)—ಪ್ರಸಾರೇ (ಹರಡು)" (ಶಮಧಾ) ; ಲತಾಂಗಿಯರ ಮೇಲ್ಪೊದೆದ ದುಕೂಲಮಂ ಮೋಹರಾಜನೆಂಬ ಬೇಂಟೆಗಾಱಂ ಪರೆಪಿದ ಬಲೆಯೆನ್ನದೆ ಕಾಮಧ್ವಜಮೆಂದೊಡಂ . . . ತನ್ನ ಕೇಡಂ ಬಗೆವನಲ್ಲದೆ ಸುಖಮಂ ಬಗೆಯಂ (ಧರ್ಮಾಮೃ. ೭-೧೫೫); ಶೀತಲಮಂ ಪರೆಪುತ್ತೆಣ್ದೆಸೆಯೊಳ್ಸಂಚರಿಸಿದುದೊಯ್ಯನೆ ಲಸತ್ಪ್ರಭಾತಸಮೀರಂ (ಉದ್ಭಟ. ೧೦-೧೧೮); ದಶದಿಶೆಯೊಳಿಂದುಕರರುಚಿಯುಶವಂ ಪರೆ[ಪಾಠಾಂ. ರ]ಪಲ್ (ರಾಜಶೇ.೧೩-೧೫). **೨.** ಈ ಪೊಲ್ಲವಾತಂ ಪರೆಪಿದೊಕ್ಕಲಿಗರ ನಾಲಗೆಯಂ ಕಿಟ್ತುಕ್ಕುವೆಂ (ಪಂಚಮಾ. ೧೫-೭೧ವ). **೩.** ಪಿಂಗಾಕ್ಷನ ವಕ್ಷಸ್ಥಳಮಂ ತನ್ನ ಗದಾಲಾಂಗೂಲದಿಂದಿರ್ಬಗಿಯಾಗೆ ಪೊಯ್ದು ಪರೆಪಲುಂ (ಗದಾಯು. ೬-೧೬ ವ). **೧೦.** ಮಾಡು ; ನೆರವೇರಿಸು : ಮದುವೆಯಂ ಭವನಾಂಗಣ ಬಾಲಚೂತದೊಳ್ಪರೆ[ಪಾಠಾಂ. ಳ್ವರ]ಪೊಲವಿಂದೆ ಮಾಧವಿಯೊಳ್ (ಕಾದಂಉ. ೫೯೦). **ಪರ್ಬು$_1$ :** **೪.** "ಪರ್ಬು—ವಿಸ್ತಾರೇ" (ಶಮಧಾ); ಅಂತು ನೂರ್ವರೊಳೊರ್ವನಗುರ್ಬು ಪರ್ಬಿ ಪರಕಲಿಸೆ ಸಂಪೂರ್ಣವಯಸ್ಕನಾಗಿ ಘೃತಘಟವಿಘಟನುಮಾಗಿ ಪುಟ್ಟುವುದುಂ (ಪಂಪಭಾ. ೧-೧೩೧ ವ); ಕೀರ್ತ್ಯಂಗನೆ . . . ಪರ್ಬಿದಳ್ ದಿಗ್ವನಿತಾಸಂದೋಹಮಂ ತಾಪಿನಂ (ಗದಾಯು. ೧೦-೧೧); ಪೊಗಟ್ಟೆಂ ಮನೋಜನಂ ಕೇಸುರಿಯಂತೆ ಪರ್ಬಿ ಪಟುವಾಗಿ ಪೊದಟ್ಟಿಳುರ್ದಂತರಂಗಮಂ ಕಾಸಿ ಕಪಾಲಿಯುಂ ಪಿಡಿದೊಱಲ್ದರೆವೆಣ್ಣನೆ ಮಾಡಿಬಿಟ್ಟನಂ (ಲೀಲಾವ. ೧-೮೫); ಕಣ್ಣನರೆ ಮುಚ್ಚಿ ಬಿಸಿಲ್ ಪರ್ಬಿರೆ ಕಾಯುತ್ತಿರ್ದುದು ಕೊರ್ಬಿದ ವೃಕ್ಷಾಗ್ರದಲ್ಲಿ ಮರ್ಕಟರಾಜಂ (ದಶಕು. ೨-೮೬); ಕಾಮೋಜ ಪಿಡಿದ ಸೂತ್ರದ ಕರ್ಗೆಱೆಯೆನೆ ರೋಮಾಳಿ ನಸುಪರ್ಬಿತೊಡಲ (ಮೋಹತ. ೨೩-೨೧). **೭.** ಸ್ಥಿರತರವಾಗಿ ಪರ್ಬಿದ ಸುಪರ್ವಶರಾಸನಮಾಳೆ . . . ವಿತಾನಮೆಂದೆನೆ ನಭೋಂಗಣಮಂ ನೆಱೆ ತಿಂಬುತಿರ್ಪುದುಪ್ಪರಿಗೆ ನಿರಂತರಂ ನಿಖಿಳರತ್ನಮರೀಚಿಕಳಾಕಳಾಪದಿಂ (ಕುಸುಮಾ. ೨-೧೨೪). **೮.** ಮೊದಲೊಳ್ ನೀಳ್ದು ಪೊದಟ್ಟು ಪರ್ಬಿ[ಪಾಠಾಂ ರ್ವಿ] . . . ಕೊಂದುದು ಕೃಷ್ಣಾಗರುಧೂಪಧೂಮನಿವಹಂ ಕೃಷ್ಣೋರಗಂ ಕೊಲ್ವವೋಲ್ (ಆದಿಪು. ೫-೨೩); ಘನಾಗಮಂ ಮೊದಲ್ಗಿಡೆ ಶರದಾಗಮಂ ನೆಱೆಯೆ ಪರ್ಬೆ ಸಮಸ್ತಮಹೀವಿಭಾಗಮಂ (ಪಂಪಭಾ. ೭-೬೯); ದಂತಕಾಂತಿನಿಕಾಯಂ ನಿಮಿರ್ದಾರ್ಪ ಸಭಾಜನಮನೆತ್ತಂ ಪರ್ಬೆ (ಕುಸುಮಾ. ೧೫-೬೫); ನಳನ ರಾಣಿಗೆ ಶೋಕ ಪರ್ಬಿದ ತೆಱದಿ ಕತ್ತಲೆ ಲೋಕವನು ಮುಸುಕಿದುದು ಭರಣಿಯ ಮುಚ್ಚಿದಂದದಲಿ (ನಳಚ. ೫-೧೪); ಬಲುತವಕಮುಂ ತಲೆದೋಱೆ ಕಾತುರ ಪರ್ಬಿ ವಿರಹಾಗ್ನಿ ಸಂತತ ಫಲನೋಱಿದುದು (ರಂನವಿ. ೯-೧೭೧). **೧೧.** (ಬಳ್ಳಿಯಂತೆ) ಹೋಗು,—ಹರವಿಕೊಳ್ಳು,—ಹರಡಿಕೊಳ್ಳು : ಬಳ್ಳಿ ಮೊದಲಾಗಿ ಮೊದಲೊಳಗೆಳ್ಳನಿತುಂ ಪೊನ್ನನಿಕ್ಕದೊಡೆ ಪರ್ಬದು ಪೊನ್ನುಳ್ಳ ನರನಿತ್ತೊಡಲ್ಲದೆ ಬೆಳ್ಳನೆ ಪರ್ಬುಗುಮೆ ಕೀರ್ತಿಲತೆ ದಿಕ್ತಟಮಂ (ಲೀಲಾವ.೧-೪೩); ಪರ್ಬುವ ಕನಲ್ಕೆಯೆಂಬ ಬಳ್ಳಿ ಕೊರದಂಟಾದಂತೆ ಪಿಡಿದ ಲಾಗುಳಮುಂ ಅಂಜಿಕೆಯಂ ಪುಟ್ಟಿಸೆ (ಕಬ್ಬಿಕಾ. ೩೧೦). **೧೨.** ಹತ್ತು; ಏರು : ದುರ್ಬಲನಾಗಿ ಮೋಹಾಸುರ ತ್ರಿಪುರದ ಪೆರ್ಬಾಗಿಲುಗಳನಿಡಿಸಿ ಅಬ್ಬರ ಪಿರಿದಾಗಲು ಪುರದೊಳು ಪೋಗಿ ಪರ್ಬಿದನೊಂದಟ್ಟೆಳೆಯನು (ತ್ರಿಪುಸಾಂ. ೨೨-೨೪೬); ಸೆಲದಿಪುಳುವಾ ಲಿಂಗತನುವಂ ಪರ್ಬುತಿರಲು (ಬಸಪು. ೧೩-೧೯). **೧೩.** ಅಧಿಕವಾಗು ; ಹೆಚ್ಚಾಗು : ಪರ್ಬಿದಾನಂದರೂಪೋನ್ನತನಿರ್ದಂ ಪ್ರಾಜ್ಞನಾಜ್ಞಾನಿಧಿ ಕಪಿಲಮುನೀಂದ್ರಂ (ಕುಸುಮಾ.೧-೧೧೯). **೧೪.** (?) : [ಚ]ನ್ದ್ರ [ಕುಳಾದ್ಯ]ವತೀಜ[ನ]ಮನೆಯ್ದೆ ಪರ್ಬಿದವೆರೆಸು(?)ದಹನಂ ಗುಣಗಣನಿಳಯರ್ (ಸಾಇಇ. XI-i, ೪೧-೪೩ ; 969). **ಪರ್ವು$_1$ :** ೧. ಓಂಕಾರವಪ್ಪ ಪ್ರಣಮವ ಪರಿಣಾಮಿಸಿ ವ್ಯಾಪಾರದ ಲತೆಯ ಬಳ್ಳಿಯ ಬೇರ ಕಿತ್ತು ಪರ್ವಿ ಪ್ರಕಾರದಿಂದ ಉರ್ವಿಯ ಸುತ್ತಿ ಮುತ್ತಿ . . . ಮಲ್ಲಿಕಾರ್ಜುನನಲ್ಲಿ ಸರ್ವಾಂಗದಲ್ಲಿ ನಿರ್ಲೇಪವಾದುದೇ ಶರಣಸ್ಥಲ (ಮೋಳಿಮಾ.೧೦೦-೩೯೬). **೪.** "ಮಡಲ್ತುದೆಂದು ಪರ್ವಿದುದು" (ಕಶಸಾ. ೫೪-೧೮೬) ; ಉರ್ವಿ ಪರ್ವಿ ಪರಿದತ್ತಾಶಾಂತರಕ್ಕಂ ವಿಯದ್ವಲಯಕ್ಕಂ ಕನಕಾದ್ರಿಕಂದರತಟಚ್ಛಾಚ್ಛೋಚ್ಛಲಚ್ಛೀಕರಂ (ಆದಿಪು.೭-೧೦೦); ಪರ್ವತಮಂ ನರೇಂದ್ರಸುತನೇಱಿ ವಿರಾಜಿತ ಕೇಶಪಾಶಮಂ ಪರ್ವಿದ ಮೋಹಪಾಶಮೊಡನೊರ್ವೊದಲೊಳ್ ಪಱಿದಿಕ್ಕಿದಂ ಜಸಂ ಪರ್ವುವಿನಂ ಜಗತ್ತ್ರಯಮುಂ (ಪಂರಾಮಾ. ೨-೨೩) ; ಸಮುನ್ನತರಾಜಲೀಲೆಯಂ ಬೀಱುತೆ ಪೂರ್ವಪಶ್ಚಿಮಕೆ ಪರ್ವಿದ ಪರ್ವತರಾಜನೊಪ್ಪುಗುಂ (ಗಿರಿಕ. ೧-೫೦) ; ಪದನಖಂಗಳು ಪರ್ವಿಯುರ್ವಿಯೊಳದಱ ಬೇರುಗಳೆಯ್ದೆ (ಬಸಪು. ೩೪-೫). **೬.** ಮುಂದೆ ತಮ್ಮ ಪಗೆ ಪರ್ವುವಂತೆ ಪನ್ನಿರ್ವರ್ಮಿತ್ತ್ರರ್ ಪರ್ವಿದಾಲದ ಮರದ ಮೊದಲ್ಗೆ ವಂದು (ಪಂಪಭಾ. ೨-೩೦ ವ). **೮.** ಆಕಾಶಮಂಡಳಮಂ ಪರ್ವಿದ ಬೆಳ್ಮುಗಿಲ್ (ಪಂಪಭಾ. ೭-೭೧); ಕಾಲದ ಮರ್ವು ಪರ್ವಿದ ಪೊಲಿರ್ದ ತಮಾಲವನಂಗಳಿಂದೆ (ಕಾದಂಪೂ. ೬೯೧); ಪರಿಯೆ ಪರ್ವಿದ ಮಂಜು ರಂಜಿಸುವಂತೆ ತಾವರೆ ನಾಡೆಯುಂ ಕೊರಗಿದಾನನಮಾಗಳ್ಗಳದೇನರಲ್ದುದೊ (ಮಲ್ಲಿಪು. ೪-೩೧). ೧೧."ಪರ್ವಿದುದೆನೆ ಕುಡಿವರಿದುದು" (ಚತುನಿ. ೪೯); ಶಿವಭಕ್ತಿಲತೆ ಪರ್ವು

ವಿನಂ ಧರ್ಮ್ಮಪ್ರಯುಕ್ತ ರತಿಮುದದಿಂದಂ . . . ದಿವ್ಯಶ್ರೀಪಾದಪದ್ಮಂಗಳ್ಗೆ . . . ಧಾರಾಪೂರ್ವ್ವಕ(ಂ)ಮ್ಮಾಡಿ (ಸೌಇಇ. IX–i, ೧೫೩-೫೨; 1083); ಬಸವನ ಪುಣ್ಯಕೀರ್ತಿಲತೆ ಬೇರ್ವರಿಯುತ್ತು ರಗೇಂದ್ರಲೋಕದೊಳ್ ದೆಸೆಗಳನಗ್ಗಳಂ ಮುಸುಕಿ ಪರ್ವಿದುದಾಗಳ್ ಮರ್ತ್ಯಲೋಕದೊಳ್ (ಬಸರ. ೧೨-೧); ಭಕ್ತಿ ಲತೆ ಪಲ್ಲವಿಸಿ ಪರ್ವಿ ಮಡಲಿಡೆ (ಪದ್ಮರಾ. ೨-೬); ತಡಂಬಡೆವಳ್ ನೀಹಾರಮಹೀಧರಮಂ ಪರ್ವಿದ ಶೃಂಗಾರಮರುಲ್ಲತೆಗೆ (ಉದ್ಭದೇ. ೪-೪೪). **೧೩.** ಫಳಭಾರದಿನುರ್ವಿಗಗುರ್ವು ಪರ್ವೆ ತಳ್ತೆಜಗಿದ ಬಾಟಿಸಜ್ಜೊನೆಗಳಿಂ (ಸುಕುಮಾ. ೯-೪೬); ಶಿವನ ಭಕ್ತರ್ಬರಲು ಸಂತಸಂ ಪರ್ವಿ ಪುಳಕಂಗಳೇಳುತ್ತಿರಲು (ಇಹರ. ದೇ. ೨೯-೧೪); ಹರನಿತ್ತಾಯುಷ ಮಂತು ಪರ್ವಿರಲುಂ . . . ಸೂರ್ವತ್ಸರಂ ಧಾತ್ರಿಯಂ ಪೊರೆದು(ಉದ್ಭಟ. ೧೨-೨೫); ಪರ್ವಿದ ಗರ್ವದಿನುರ್ವಿ . . . ಸಾಗಿದಂ (ಚಿಕವಿ. ೨-೨೦). **೧೫. ವಿಶಾಲವಾಗು ; ವಿಸ್ತಾರವಾಗು :** ಪೊಳೆವ ದಾಡೆಗಳ ಕೆಂಗಣ್ಣ ಪರ್ವಿದೊಡಲೊಳು ಪೊದಜುಗೊಂಡಿರ್ದ ವಜ್ರರೋಮದ . . . ಎಕ್ಕಲ ನಿರ್ದದೊಂದೆಡೆಯೊಳು (ಸೌಂದಪು.೧೮-೩೦). **೧೬. ಉಬ್ಬು ; ಹಿಗ್ಗು :** ಕುಣಿವುತಂ ಕುಕಿಲಿಡುವುತಂ ಪರ್ವಿ ಕೊರ್ವುತಂ ತ್ರಿಣಯನನ ಬೆಸನನಾಂ ಪಡೆದೆನೆನುತುರ್ವುತಂ (ಬಸರ. ೧-೬೭); ಪಾರ್ವತಿಯಂ ಪರ್ಪಮೇಚಿಕೆ ಬಿಜಯಂಗೆಯ್ವುತ್ತುರ್ವುತೆ ಕೊರ್ವುತೆ ಪರ್ವುತೆ[ಪಾಠಾಂ.ನಲವಿಂ] ಪರ್ವತ ರಾಜಂ ಪುರಕ್ಕೆ ತಿರುಗಿದಂ (೧೨ಕ. ೩-೧೧೨). **ಹೆಂಬು₁ : ೧೧.** ಮನದೊಳು ಚಿಂತಾಲತೆಯದು ಹಂಬುತ (ರತ್ನಾಕ. ೨೬); ಹಬ್ಬಳ್ಳಿ ಹಂಬುವ ತೆರದಿ ಹೆಮ್ಮರನ ಮೆಯ್ಗೆ ಕಲ್ಪದ್ರುಮದ ಗಾತ್ರಮಂ ತನ್ನ ನೀಳ್ವೆರ್ಬ್ಬೆದುಸೊಂಡಿಲ್ಗಳಿಂ ಸುತ್ತಿ (ಶ್ರೀರಾಮಾ. ೪೯-೫೭೧); ಲಾವಣ್ಯರಸ ಗಂಗೆಯು ಅಗ್ನಿ-ವರುಣದಿಕ್ಕಿನಲ್ಲಿ ಹಂಬಿ ನಿಂತಿರುವಳು (ಜಯಂತ. ೧೪೮).

**ಹಬ್ಬು₁ : ೧.** ಕಡೆದು ಬೇಯಿಸಿ ಕಲ್ಲು ಪೊಲೆ ಕಿಚ್ಚುಗಳ್ ದಣಿಯೆ ಸಡಗರದ ತಿನಿಸುಣಿಸು ಹಬ್ಬುತಿದೆ ಕಂಪು (ಕಾಲೂರ. ೭೧-೧೨೬). **೨.** ಬೀದಿಗಲಹದ ಕದಡು ಬೀಡಿನಲ್ಲೆದೆ ಹಬ್ಬಿತು (ಕುಪ್ಪಾಅ. ೮-೨); ಸದ್ಧರ್ವ್ಮಿಗಳು ಭರ್ವುಶರ್ಮರನ್ನು ಕೊಲೆ ಮಾಡಲು ನಿಶ್ಚಯಿಸಿದ್ದಾರೆಂಬ ಸುದ್ದಿಯೂ ನಗರದಲ್ಲಿ ಹಬ್ಬಿತ್ತು (ಬಾಣಅ. ೩೯೪). **೪.** ಹಬ್ಬಿದಾಲ ತಮಾಲತರುಗಳ ಮೊಬ್ಬುಗಳ ಹೆಮ್ಮೆಳೆಯ . . . ಕಾಂತಾರದೊಳಗಿವರಬ್ಬರಿಸುತೈದಿದರು (ತೊರರಾ. ೩-೧-೬); ಮಲೆಯ ಬೀಡಿನೆದೆಯ ಮೇಲೆ ದಟ್ಟಗಾಡು ಹಬ್ಬಿರೆ (ಅಶಿಕೇ. ೪೨-೬). **೮.** ವೀರಸೇನಾಪತಿಯು ಸನ್ನೆಗೆ ಭೂರಿಬಲ ಹಬ್ಬಿದುದು (ಕುಪ್ಪಾಭೀ. ೮-೧೧); ಹೊಗೆ ಚಡಾಳಿಸಿ ಹಬ್ಬಿತಂಬರವ (ಕೌಶಿರಾ. ೨೨-೩೫); ಕೋಂಟೆಯನು ತಡವಿನ್ನೇಕೆಯೆಂದು ಹಬ್ಬುತಿರ್ದುದರಿವಾಹಿನಿ (ಸಮ್ಯಕೌ. ೮-೫೪); ಹೊನ್ನಿನುರಿ ಹೊವಿಮ್ಮ, ತಣ್ಣಗೆ ಹಬ್ಬಿ . . . ಜೊನ್ನ ಸರಿ ಪ್ರವಹಿಸಿತು (ಚಿತ್ರಾಂಗ. ೨೦-೫೫೫). **೧೧.** ಶಿವನ ನೇಹಂ ಮನದೊಳಂಕುರಿಸಿದರ್ಕೆಲರು ಹರಪೂಜೆ ಹಸ್ತದೊಳು ಹಬ್ಬಿ ಬೆಳೆದರ್ಕೆಲರು (ತಿರುರ.ದೇ. ೧೪-೧೯); ಸಭ್ಯತಾಲತೆ ಹೂತು ಹಸರಿಸಿ ಹಬ್ಬಿ ಫಲವಾದಂತೆ ಕಾಯುವ ನಿಬ್ಬರದಲೀಡಾಡಿದಳು ಹರಿಪದಪಯೋಜದಲಿ(ಕುಪ್ಪಾಅ.೧೬-೩೪); ಮನಕೆ ಬಾರದ ಹೆಣ್ಣು ಮನೆಗೆ ಹಬ್ಬಿದ ಬಳ್ಳಿ ಗುಣವಿಲ್ಲದ ಮನುಜಸಂಗ ಸಮವೊ (ಪುರಂದ. ೧-೭೮-೫); ಬಳ್ಳಿಯನ್ನು ತಡಕೆಗಳ ಅಥವಾ ಕಂಭಗಳ ಮೇಲೆ ಹಬ್ಬಲು ಬಿಡಬಹುದು (ಆಡುಸಾ. ೧೨೯). **೧೬.** ಹಬ್ಬಿ ಹಾರೈಸಿ ತೀರ್ಬಿಸಿ ತೆಕ್ಕನೆ ತೀವಿ . . . ಸಂತೈಸಿಕೊಳಲಾಜದಲ್ಲಿ ಪರಿಪರಿದಾಡಿ (ಬಸರ. ೯-೨೭). **೧೭. ಪ್ರಕಟವಾಗು ; ಗೋಚರಿಸು :** ತನ್ನಾಳ್ದದೇವನ ಮಾರಪಿತ ಬಾಯಿನಲು ಹಬ್ಬಿದನಾಗ ಕಂಭದಲಿ (ಸಂಭಪ. ೮-೭೭).

**ಹರಗು₂ : ೧.** ಹಟ್ಟಿಗೆ ಸೊಪ್ಪನ್ನು ಹರಗುವಂತೆ ಆ ಎಲೆಗಳನ್ನು ತಂದು . . . ದಾರಿಯಲ್ಲಿ ಹಾಕಿದನು (ಈಕಥೆ. ೧೭); ಗೊಬ್ಬರ ಹರಗುವುದು ಬೇಲಿ ಕಟ್ಟುವುದು ಒಡ್ಡು ಹಾಕುವುದು (ಮಲೆಮ. ೭೨೭);

**ಹರವು₁ : ೨.** ಮೇದಾರ ಕೇತಯ್ಯ ಹೋದಿರುಳು ನೀಗಿದುದು ಚೋದ್ಯವೆಂದು ಸುದ್ದಿ ಮಂಟಪಕೆ ಹರವಿದನು (ಕನ್ನಜಾ. ೨೬೯). **೬.** ಅಲ್ಲಲ್ಲಿ ಉರುಟು ಉರುಟು ಬೆಣಚುಕಲ್ಲುಗಳು ಹರವಿ ಬಿದ್ದಿದ್ದವು(ಬೆಟ್ಟಜೀ.೧೩೮); ಸಿಗರೇಟಿನ ಬೂದಿ . . . ಟೇಬಲ್ಲಿನ ಆಸು-ಪಾಸು ರಂದಿ ಹರವಿದ್ದವು (ದೀಪಹ. II, ೨೯೭). **೯.** ಚಾವಣನು ನಕ್ಷೆಗಳನ್ನು ಹರವಿ ತಂದೆಯ ಮುಂದೆ ಇಟ್ಟನು (ಸಸತಿ. ೪೪); ಈ ಬಣ್ಣದ ಅಟಿಕೆಗಳನ್ನು ಎನ್ನ ಹಾದಿಯಲಿ ಹರವಬೇಡ (ಅಂತರಾ. ೨೮); ವಿನಾನಿನ ರಾಶಿಯನ್ನೇ ದಿನ ಸಂಜೆ ಮನೆಗೆ ತರುತ್ತಿದ್ದರು. ತಂದುದನ್ನು ಮರಳ ಮೇಲೆ ಹರವಿ ಒಣಗಿಸಿ ಮಾರುತ್ತಿದ್ದರು (ಮುಂಗಾಮು.೬೮). **೧೫.** ಇವಳ ಟೊಂಕವು ಅಷ್ಟೊಂದು ಹೇಡಿಯೆ? ಮುಖವನ್ನು ನೋಡಿಯೆ ತೀರುವೆನೆಂಬ ಹೆಮ್ಮೆಯಿಂದ ಹರವಿ ನಿಂತಿದೆ (ವೈದ್ಯರಾ. ೪೮). **೧೮. ವ್ಯಕ್ತಪಡಿಸು ; ಪ್ರಕಟಗೊಳಿಸು :** ರುಕ್ಮಿಣಿ ಬೆಳಗಿನಿಂದ ಮನಸ್ಸನ್ನು ಕೊರೆಯುತ್ತಿದ್ದ ಚಿಂತೆಯನ್ನು ಪುಟ್ಟಣ್ಣನ ಎದುರು ಹರವಿದಳು (ನಿಂಆತೆ. ೧೧೪).

**ಹರಹು₁ : ೧.** ಶಿವಭಕ್ತಿಯ ಧ್ವಜವನೆತ್ತಿಸಿ ಮರ್ತ್ಯಲೋಕದೊಳಗೆ ಹರಹಿದ ಭೇದವ ಭೇದಿಸಿ ನೋಡಿ ಆನು ಅಜಾದೆ (ಅಪಚಂ.೨೩೧-೧೦೪೬); ಪಚ್ಚೆಗರ್ಪೂರದ ಹಳಿಯನೊಡೆದಾ ಧೂಳಿಯಂ ಹರಹಿ (ಪದ್ಮರಾ. ೮-೯೨); ಹರಹಿದ ಹಸಿಯ ತೊಗಲಿನ . . . ವಿನಾನಂಗಡಿಯಲ್ಲೈತಂದ (ಕುಪ್ಪಾಅ.೧೫-೮); ಅಂಕುರವಡೆದ ಪೂಗಿಡು ವೃಕ್ಷಲತೆವೇರ್ಗೆ ಬೆಂಕಿಯ ಹರಹಿದಂತಾಯ್ತು (ಮೋಹತ. ೨೮-೨೦); ಆಡುತಿಹ ಗರಿಗಳನು ದೆಸೆದೆಸೆಗೆ ಹರಹುತ್ತ ನಿಂತ ತೆಂಗಿನ ಮೇಲೆ ಹರವು ದೆನ್ನ ಬಗೆ(ಪಲಿದೇ. ೪೨-೩). **೨.** ಉರಿಗಣ್ಣನಿಂದುರುಪುವ ಶಕ್ತಿಯಿಶ್ವರ ಗಿರುತಿರ್ದು ಸಕಲಬಲವನು ನೆರಪಿ ಯುದ್ಧವ ಮಾಡಿದನೆಂಬ ಮಾತನು ಹರಹಬಹುದೆ ಧರೆಯೊಳಗೆ (ತ್ರಿಪುಸಾಂ. ೩-೩೦); ಇರುಳು ಬೇಹಿನ ಚರರು ಪಾರ್ಥನ ನಿರುಪಮಿತ ಗಾಢಪ್ರತಿಜ್ಞಾ ಚರಿತವನು ಕೌರವನ ಸಭೆಯಲಿ ತಂದು ಹರಹಿದರು (ಕುಪ್ಪಾದ್ರೋ. ೮-೫೦); ಅಕಂಪನ ಮರಣವಾರ್ತೆಯ ನಸುರಚಕ್ರೇಶ್ವರನ ಸಭೆಯಲಿ ಹರಹಿದರು. ಹರಿಕಾಜರು (ತೊರರಾ. ೬-೧೯-೧). **೩.** ಮೈಗಳ ಕಡಿದು ಹರಹಿದಡೆ ಬಿಡೆನು ಬಿಡೆ ನಿಮ್ಮ ಚರಣವ (ಸಿದ್ಧವ. ಕ. ೧೮೯-೬೩೦); ಮುಜಾದಿಕ್ಕುಗೆ ಮಾರಿ ಭೈರವಂ ಹರಹುಗೆ ಮೇಳೆಯಂ ಮುಜಾಗೆ (ಲೀಲಾವ. ೨-೧೦೬); ಭಾರ್ಗವರಾಮ ನವರನು ಪರಶುಹತಿಯಿಂ ಕಡಿದು ಸೇನೆಯ ಹರಹಿದನು ಕಾಲಂಗೆ ಹೊಸತಿನ ಬೋನವೆಸೆವಂತೆ (ಸಂಭಪ. ೨೬-೧೦೬); ಕಾಗೆ ಹದ್ದಿಗೆ ಹರಹುವೆನು ಕಡಿದೀ ಚತುರ್ಬಲವ (ತೊರರಾ.೨-೬-೧೯); ಮಾರಾರಿಯೊಡನ್ನೆ ಕಾದುವೆನು ನರನ ಬೇರ ಕಿತ್ತು ಹರಹುವೆನು (ಪಾಂಡಚ. ೭೪-೨೦). **೪.** ವಿಮಲಾಶ್ರಮದ ವಿಪಿನೋಪಕಂಠದಲಿ ಹರಹಿದವು ಗುಡಿ (ಕುಪ್ಪಾಅ. ೨೨-೬); ರಾಜಿಯ ರೂಪಿನ ಕಿಟಕಿಯಿಂದ ಬೆಳದಿಂಗಳು ಮಂಚದ ಮೇಲೆ ಹರಹಿತ್ತು (ಭೀಮಸಾ. ೧೪೮). **೭.** ಧರಣಿಪತಿ ಹರಹಿದನು ನಿಜತನುವನಾ ಮುನಿಯ ಚರಣಸರಸಿಜದೆಡೆಯೊಳು (ಹಚಸಾ. ೫-೬೯); ಅವಯವವನವನಿಯೊಳು ಹರಹಿದಂ ಸೌಂದರಂ (ಸೌಂದಪು. ೧೭-೭೧); ನಿಜಗುರುಗಳಬಲೆ ನಿನ್ನಯ ದಿವ್ಯದೇಹವ ಬಜಾನೆಲದೆಡೆಯಲ್ಲಿ ಹರಹಿ . . . ನಾಗರಮಜಾಯಂತೆ ಹೊರಳಬೇಡ (ಮೋಹತ. ೩೩-೪೮). **೧೯. ಹಾಯಿಸು ; ಹರಿಯುವಂತೆ ಮಾಡು :** ಪಾತಾಳದ ಉದಕವ ತಂದು ಪಾಕೆಗೆ ಹರಹಿದ ಕೆಬನರತೆ (ಮೋಕಮಾ. ೧೦೪-೮೧೫). **೨೦. ಓಡಿಸು ; ದಬ್ಬು ; ನೂಕು :** ಗಾಳಿಸು ಗೆಲ್ವನಂ ಹರಹು ಹೂಡೆಗನಂ (ಲೀಲಾವ.೨-೧೦೭).

**ಹರುಹು₁ : ೧೫.** ಹರುಹಲಿರುವೆದೆ ಬರಿದೊ ಬರಿದು (ಉಯ್ಯಾಲೆ. ೧೨-೭).

**ಹರ್ಬು : ೪.** "ಅಲತೀತಿ ಹರ್ಬಿದಪುದೆಂಬುದು" (ಕಾಶಕ್ಕ.೪೭).

**ಹರ್ವು : ೪** ಹುಮ್ಮಿನ ಜನ್‍ — ವಿಶಿಷ್ಟರ ಹರ್ವ್ವಿದ ಬಡತನದ ಕೊರ್ವ್ವನುಡುಗಿಸುಂ (ಎಇ. V, ೧೭-.. ; 1142).

ಹಬ್ಬಿ ಹರಡು = ಹರಡಿಕೊಳ್ಳು ; ವ್ಯಾಪಿಸು : ಹಬ್ಬಿ ಹರಡಿದ ಕೋಟೆ (ನಲಮು. ೨೨-೧೭); ಈಗ ಸುಮಾರು ಮೂವತ್ತು ನಲವತ್ತು ವರ್ಷಗಳಿಂದಲೂ ನಮ್ಮ ಸಾಹಿತ್ಯ ನಾನಾ ಶಾಖೆಗಳಲ್ಲಿ ಮುಂಬರಿದು ಹಬ್ಬಿ ಹರಡುತ್ತಿದೆ (ಬಂಕಿಮ. IX, ಮುನ್ನುಡಿ). **ಹರಹಿಕೊಳ್ಳು** = ೧. ಹರಡಿಕೊಳ್ಳುವಂತೆ ಮಾಡು ; ಹರವು : ಹದನಾಗಿ ಕಾಯ್ದು ಹಾಲಿನ ಗಟ್ಟಿಕೆನೆ ತೆಗೆವುತದನೊಂದು . . . ತಳಿಗೆಯೊಳಗೆ ಹರಹಿಕೊಂಡು (ಸೂಪಶಾ. ೧-೫೯). ೨. ವ್ಯಾಪಕವಾಗು ; ವ್ಯಾಪಿಸು ; ಹಬ್ಬು : ತೂರ್ಯತೂರ್ಯರ್ಣಾತೀತವೆಂಬೆರಡು ಸರಸತರವಹ ಬಲೆಯ ಬೀಸಿಯೆ ಹರಹಿಕೊಂಡಿಹುದೀ ಮನಸ್ಸು (ಪ್ರಭುಲೀ. ೨೪-೯); ಇರಲಿ ಮೇಣ್ ದೂರದಲಿ ಹತ್ತಿರೆಯಿರಲಿ ತನ್ನವರೆಂದರತ್ತಲೆ ಹರಹಿ ಕೊಂಬನು ಕೃಷ್ಣನು (ಕುಮಾರವ್ಯಾ. ೨-೬೪). ೩. ಪ್ರದರ್ಶಿಸು ; ತೋರ್ಪಡಿಸಿಕೊಳ್ಳು : ಅರಿಯದ ವೈರಾಗ್ಯ ಹರಹಿಕೊಂಬುದಕಿಂತ ಅರಿತು ಮರೆಹೊಗಿರೋ ಗೋಪಾಲವಿಠಲನ್ನ (ಜಗದಾ. ೬೯).

[ಪರೆ$_1$ + -ಪು$_1$ / ತಮಿ. ಪರಪ್ಪು, ಪರಮ್ಪು, ಪರವು, ಪರೆಮ್ಪು ; ಮಲ. ಪರವು ; ತುಳು. ಪರವು, ಪರ್ಬು, ಪರಂಬು ; ತೆಲು. ಪರವು, ಪರ್ವು, ಪರುವು, ಪರಗು, ಪಱವು, ಪ್ರಬ್ಬು, ಪಂಬು, ಪಮ್ಮು ; ಪರ್ಜಿ. ಪರ್ಗ್ ; ಗೊಂಡಿ. ಪರ್‍ಹಾನಾ ; ಕುಇ. ಪ್ರಪ್ಪ]

**ಪರಪು$_2$, ಪರೆಪು$_2$, ಪರ್ಬು$_2$, ಪರ್ವು$_2$, ಹಂಬು$_2$, ಹಬ್ಬು$_2$, ಹರವು$_2$, ಹರಹು$_2$, ಹರಿಹು$_1$, ಹರುಹು$_2$, ಹೊಂಬು** (ನಾ). ೧. ಹರಡಿರುವುದು ; ವಿಸ್ತಾರ ; ವೈಶಾಲ್ಯ : ಜಲದದ ನೆಟಿಲುಂ ಪರಪುಂ [ಪಾಠಾಂ. ಪರಮಂ] . . . ನೆಲಸವು ಚಲಂಗಳಾದಂ ವಿಲಾಸಿನೀಜನದ ನಲ್ಮೆಯುಂ ಸಂಗಮುಮುಂ (ಕವಿರಾ. ೩-೯೭) ; ಪರಪಿನ ನೀಳದ ಕಡೆಯುಂ ಮರುಳಂ ತವೆ ನೋಡಲಾಱದಂಬರತಳಮಂ ಕರಿದೆಂಬಂತಿರೆ (ಪಂಪಭಾ. ೬-೨೦) ; ನಿರ್ಮಲಿನಮಪ್ಪ ಪರಪಿನ ಪೆರ್ಮಡುಗಳ ತೊಱೆಯ . . . ಸಂಚಲಿಸುವ ನೀರ್ಮಾನಸಲಹರಿ ಸರ್ವದೋಷಾಪಹರಂ (ಅಶ್ವಶಾ. ೭-೬೦); ಆ ಶೈಲದುದ್ದಮೊಂದೇ ಸಾಸಿರಂ ಪರಪದಯ್ನೂಱುಯೋಜನಂ (ಜೆಬವು. ೧೫-೧೭) ; ಹೆಲಸಿನಲಿ ಬಾಳ್ವಳೊಬ್ಬಳು : ಒಬ್ಬಳೀಕ್ಷಿಯ ಪರಪಿನೀ ಭೂಮಿಯಲಿ (ಪಾರಸಿ. ೯-೨೦೫). ೨. ವಿಸ್ತಾರವಾದ ಬಯಲು,- ಪ್ರದೇಶ : ಪಸಲೆಯೊಳ್ ಪಸುರೇಱೆ ಪರಪಿನೊಳ್ ಪೊರೆಯೇಱೆ . . . ಪರಿವ ಬರಿಪೊನಲೆಸೆದುವೋರೊಂದು ತಾಣದೊಳ್ (ಅನಂಪು. ೯-೧೭ ರಗಳೆ). **ಪರೆಪು$_2$** : ೧. ಪರೆಪನೆ ತೋಱು ಪೋಪ ಅಲದಂತೆ ಬಳಸನೆ ಸುತ್ತಿ ಪೋಗದೆ (ಧರ್ಮಾಮೃ. ೧೪-೪); ಪಿಟಿಲೆವಾಟೆಯ ಪರೆಪಿನಿಂದಕೋಕೆಯ ಪೊದಱಿಂ . . . ತೊಲಗದು ಬನದೊಳಗೆ ಬಳೆದ ಕತ್ತಲೆ ಪಗಲುಂ (ಕಾವ್ಯಾವ. ೩೨೦). ೩. ಹರಡುವಿಕೆ; ಹಬ್ಬುವಿಕೆ; ಪ್ರಸರ: ಮೊದಲೊಳ್ ನೀಳ್ದು ಪೊದಳ್ದು ಪರ್ವಿ ಪರೆಪಂ [ಪಾಠಾಂ. ಪದೆಪಂ, ಪರಪಂ] ಕೈಕೊಂಡು. . . ಕೊಂದುದು ಕೃಷ್ಣಾಗರುಧೂಪಧೂಮನಿವಹಂ ಕೃಷ್ಣೋರಗಂ ಕೊಲ್ವವೋಲ್ (ಆದಿಪು. ೫-೨೩) ; ಸರಿಗಮಪಧನಿಗಳ ನೇಮ ತಪ್ಪದೆ ಹರಣ ಭರಣದ ಪರೆಪು [ಪಾಠಾಂ. ಹೆಂಪು] ತಿರುಪುಗಳ . . . ರಚನೆಯುಲ್ಲಿ ಸನಾಮವೆನಿಸುವನವನೆ ಗಾಯಕನು (ಕುಮ್ಮಾಳು. ೩-೯೫). **ಪರ್ಬು$_2$** : ೩. ಪುರ್ಬುಗಳೋ . . . ಪುಣ್ಯಲತಾಪರ್ಬುಗಳೋ ಮದನವಿಭ್ರಮದ ಕೊರ್ಬುಗಳೋ (ಗಿರಿಶ. ೧೦-೪೯) ; ನಯನಾಂಶು ಗಗನಕೆ ತಟಲ್ಲತೆಯ ಪರ್ಬಂ ಪಡೆಯಲು . . . ಬರುತಿರ್ದರಖಿಳಸ್ತ್ರೀಯರು (ಜೆಬವು. ೫-೧೨). ೪. ಹರಿಯುವಿಕೆ ; ಪ್ರವಹಿಸುವಿಕೆ : ಲತಾಮಂಟಪಸ್ಥಾನದಿಂ ಪರಿಕಾಲ ಪರ್ಬಿಂ ಪೊದೋಂಟದ ಕೊರ್ಬಿಂ (ಗಿರಿಶ. ೨-೭೧ವ) ; ನಾನಾ ಪ್ರಕಾರದಿಂದೆ ಒತ್ತಿ ಭೋರ್ಗರೆವ ರವದುರ್ಬಿನಿಂ ಪರ್ಬಿನಿಂ ಹತ್ತೊಂದು ಗೂಡಿ ವಿಸ್ತೀರ್ಣದಿಂ ಪೂರ್ಣದಿಂ ತುತ್ತಿದುದು . . . ತಜ್ಜಲಮದೇನೆಂಬೆನು (ಜೆಬವು.೪೭-೨೯). ೫. ಹೆಚ್ಚಳ ; ಆಧಿಕ್ಯ : ಒಡರ್ವ ಮೊಲೆಗಳ ಕೊರ್ಬು ಭವನ ಹರುಷದ ಪರ್ಬು . . . ನುಡಿಯ ಮಾತಿನ ಮುದ್ದು ಶಿವನನೊಲಿಸುವ ಮದ್ದು ತಾನೆನಲ್ ಶಿವೆ ಮೆಱೆದಳು (ಜೆಬವು. ೩೭-೨೨). **ಪರ್ವು$_2$**: ೩. ಕ್ಷಿತಿಚಕ್ರಂ ತನ್ನ ಪರ್ವಿಂ ತೆರೆವುಸಗಿದ ವಾರಾಸಿಯಂ ಪೋಲ್ವಿನಂ . . . ನೆರೆದುದು . . . ದಿವ್ಯಾಶ್ವಸೈನ್ಯಂ (ಜಗವಿ. ೧೫-೬೫) ; ಎಲೆಯ ಪರ್ವಿಂ ಸುವರ್ಗೊಂಡು ಬಾಟಿಸ್ಸೀಲಿಯಾಗಿ ಬಳಸಿದ ಕೇತಕೀಪಂಕ್ತಿಗಳುಂ (ಚಂದ್ರಪ್ರ. ೧-೧೦೫ವ). ೫. ಸಿಂಧುರಘಟಾಸಂದೋಹದಿಂ ವಾಜಿವರ್ಗದ ಪರ್ವಿಂ . . . ಸೇನಾಚಕ್ರಮೇನೊಪ್ಪಿತೋ (ಪುಷ್ಪಪು. ೧೪-೪೭). **ಹಂಬು$_2$** : ೬. ಬಳ್ಳಿ ; ಲತೆ : "ಚಾರುವಲ್ಲಿ ಯಲೆಯ ಹಂಬು" (ಅಕಾಶಿ. ೧೦-೨೧) ; ಓಡ ಕುದುರೆಯ ಮೇಲೆ ಮಸಿಯ ಹಲ್ಲಣವ ಹಾಕಿ ಬಸಲೆಯ ಹಂಬ ಬಾಯಿಗೆ ಕಟ್ಟಿ (ಕೋಲಶಾಂ. ೨೪-೧೦) ; ಹಂಬು ಹರಿದುರುಳ್ವ ನರಗಿರದೆ ತಿಂಥಿಣಿಯ ಪೆರ್ಗೊಂಬು ಕೈಬಸಮಾದೊಲು (ಮದೇವು. ೩೦-೯) ; ಅಂಬುಜ ಅಡಕೆಯ ಬನದಿಂದ ಹಂಬು ಹಬ್ಬಿದ ನಾಗವಲ್ಲಿ (ಶರಲೀ. ೫೭೨-೮) ; ಎಲ್ಲಿಯೂ ಗೆಣಸಿನ ಹಂಬುಗಳು ಕಾಣುವುದಿಲ್ಲ (ಕುಡಿಕೂ. ೧೬೯). ೭. ವೀಳ್ಯದೆಲೆಯ ಬಳ್ಳಿ : ಹಂದಿನ ತುಂಡುಗಳನ್ನು ಗೊಬ್ಬರ ಹಾಕಿ ಸರಿಮಾಡಿರುವ ಗುಣಿಗಳಲ್ಲಿ ನೆಟ್ಟು ಹಂಬು ಹಬ್ಬುವುದಕ್ಕೆ ಅನುಕೂಲವಾದ ಗಿಡಗಳನ್ನು ಪಕ್ಕದಲ್ಲಿ ಬೆಳಸಬೇಕು (ವ್ಯವಮು. ೫೫) ; ಈ ಹಂಬನ್ನ ಹೇಗೆ ಬೆಳೆಸಿದ್ದೀನೆ. ಈ ಹಂದಿನಲ್ಲಿ ಈ ವರುಷ ಮುವ್ವತ್ತು ಕಟ್ಟು ಎಲೆ ತೆಗೀತೀನಿ (ತಿನರಾ. ೭). ೮. (ನೇಣು ಹಾಕುವ) ಹಗ್ಗ ; ಪಾಶ : ದೊಂಬಿಸಾಕ್ಷಿ ಹಂಬಿಗೆ ಕಾರಣ (ಗಾದೆ). **ಹಬ್ಬು$_2$** : ೯. ನೀಳ ; ಉದ್ದ : ಬೆಕ್ಕಿನ ಮೈ ಹಬ್ಬು (ಮುಂಬಯಿ. ೬. ೩-೩೦). **ಹರವು$_2$** : ೧. ಜಂಗಮದ ಹರಿದ ಹರವು ಜಂಗಮದನಿಂದ ನಿಲವು (ಬಸವ. ೪೨೮) ; ಅವನ ಹರವನ್ನ ಹಣೆಯೂ ಉದ್ದನ್ನ ಮೂಗೂ ಎದ್ದು ಕಾಣಿಸುತ್ತಿರುವವು (ಮುಂಬಯಿ. ೫-೩೦೪) ; ಆದಿಪಂಪನಿಂದ ಬಸವೇಶ್ವರನ ವರೆಗೆ ಈ ಯುಗದ ಹರವನ್ನು ಇಟ್ಟುಕೊಂಡಿದೆ (ಕಸಾಚ. ೭೭). ೩. ಕೇರಿಕೇರಿಯ ಬೀದಿಗಳ ಘನಸಾರಧೂಳಿಯ ಹರವುಗಳ ಪನ್ನೀರ ಚಳೆಯದೊಳೆಸೆದುದಾ ಪುರವು (ಜೀವಂಚ. ೭-೨೨). ೫. ನೆಗೆದಱಿದು ಬೀಳುವ ಕಪಿವೆಣಂಗಳ ಹರವಿ [ಪಾಠಾಂ. ಜುಬಿ]ನಲಿ ರೌಕುಳದ ಮಯವಾಯ್ತವನಿ ರಣಮಯದ (ತೊರರಾ. ೬-೩೫-೪೭). ೧೦. ಭೂಮಿಯ ಒಂದು ವ್ಯಾಪ್ತಿ ; ಕ್ಷೇತ್ರ ; ಪ್ರದೇಶ : ಅರಸ ಕೇಳೀ ಹರವು ಚಂಪಾಪುರವಿದಱ ಪತಿ ವಿಮಲವಾಹನ (ಸಾಳ್ವಭಾ.೧೭-೨); ಈ ಸಿದ್ಧರು ನಾಗತೀರ ಹರವಿನಲ್ಲಿಯೂ ಕಿನ್ನರಿಕಲ್ಲಿನಲ್ಲಿಯೂ . . . ಮಲಗಿರುತಾ ಯಾರೂ ಕಾಣದ ಹಾಗೆ ಮಾಯವಾದರಂತೆ (ಚಿತ್ರಪಾ.೧೫); ಎತ್ತರದ ಒಂದು ಹರವು. ಅಲ್ಲಿಂದ ನೆಲ ಇಳಿಜಾರಾಗಿ ತಗ್ಗಿ ತಗ್ಗಿ ಒಂದು ತಪ್ಪಲಿಗೆ ಮುಟ್ಟಿದೆ (ನಮ್ಮನು.೨೬೧). ೧೧. ಬಡಾವಣೆ ; ವಿಸ್ತರಣೆ; ಮೊಹಲ್ಲಾ : ನೀನು ಹದಿನಾಲ್ಕು ವರ್ಷದವಳಾದಾಗ ಚಾಮುಂಡಿ ಹರವಿನಲ್ಲಿ ನಿಮ್ಮ . . . ಹೊಸಮನೆಗೆ ಹೊರಟುಹೋದೆ (ಹೊಸಕ್ಷಿ.೨); ಇಂಗ್ಲಿಷ್ ಶಬ್ದಗಳ ಸ್ವೀಕರಣದ ನಾಲ್ಕನೆಯ ರೀತಿಯೆಂದರೆ, ಆ ಶಬ್ದಗಳನ್ನು ತದ್ವತ್ತಾಗಿ ಕನ್ನಡದಲ್ಲಿ ಭಾಷಾಂತರಿಸುವುದು . . . Extension ಹರವು, ವಿಸ್ತರಣ, ಬಡಾವಣೆ (ಭಾಷಾಶಾ. ೧೭೬) ; ಬರಿಯ ಹೆಸರಲ್ಲ ಸಿದ್ಧಿ ಸಾರಿರುವ ಹಿರಿಯ ಸಾಧನದ ಕೇರಿ ! ಚೆಲುವ ಸೂಸುತಿಹ ಹಸುರ ನುಟ್ಟಿರುವ ಹರವಿಗಿತ್ತಿ ಹರು ಕೋರಿ (ತಿಜದ. ೨೧-೧೦). **ಹರಹು$_2$**: ೧. ಅಮ್ಮಮ್ಮ ಹರಿನಿಕರ ಹರಹಿನಿಂ[ಪಾಠಾಂ. ಹರುಷದಿಂ]ದೊಪ್ಪಿರಲು (ಜಸರ. ೧-೧೮) ; ಕುರುಬಲದ ಬೆಳವಿಗೆಯ ಬೆಳಸಿನ ಹರಹನೀಕ್ಷಿಸಿ ಸರಳ ಬಿಡಲು (ಕುಮಾರವ್ಯಾ. ಶಲ್ಯ. ಸಂ. ೨೪೭) ; ಕೊತ್ತಳದ ಹುಲಿಮುಖದ ಹರಹಿನಲೆಸೆದುದಾ ದುರ್ಗ (ತೊರರಾ. ೬-೭-೧೭) ; ಬಡಪಾಯಿ ನದಿ ;

ನಮ್ಮ ಊರಿನ ಸಾಮಾನ್ಯನದಿಯ ಹರಹೂ ಅದಕ್ಕಿಲ್ಲ (ಅಪೂಪ. ೨೦). ೩. ಆಹವವಿಜಯವಾರ್ತೆಯ ಹರಹಿನಲಿ ಹೊರೆಯೇಱು ಹೊಂಪುಳಿಯೋದ ರಡಿಗಡಿಗೆ (ಕುಪ್ಯಾಭೀ. ೭-೩೪); ಹೊಂಬೆಳಕುಗಳ ಹರಹು [ಪಾಠಾಂ. ಹೊಗರು]ಗಳೊ ಸಿಡಿಲಿನ ಸುಳಿವೊ ಸರಳಬ್ಬರವೊ ತಾನೆನೆ ಮೆಱೆದ ನಿಂದ್ರಾರಿ (ತೊರರಾ. ೬-೩೫-೪೩). ೪. ಪೂವಳೆಯ ಪೂರದ ಹರಹಿನಲಿ ಜನ ಮುಳುಗಿತದ್ಭುತರಭಸವಳ್ಳಿಱಿದುದು ಜಗತ್ರಯವ (ಕುಪ್ಯಾಆ. ೧೫-೩೧); ಹರಿಕಟಿಕದುರವಣೆಗೆ ೧೧ ನೆಲ ಸರಿಸವಾದುದು ನದಿನದಂಗಳ ಹರಹು ನಿಂದವು (ತೊರರಾ. ೪-೯-೯). ೫. ಪರಿಭವಕೆ ಗುಱಿಯಾಗಿ ಹಾಸ್ಯದ ಹರಹಿನಲಿ ಹಳುವಾಗಿ ಪಾಂಡವರರಸನನು ಬೀಳ್ಕೊಂಡು ಹಸ್ತಿನ ಪುರಕೆ ಪೊಱಿವಂಟ (ಕುಪ್ಯಾಸ. ೧೧-೩೫); ಹರುಷಪುಳಕದ ಹರಹಿನಲಿ ನಿಜಶರಣನನು ಮೈದಡವಿ . . . ತೆರಳಿದನು (ತೊರರಾ. ೬-೧೪-೩೮). ೧೦. ಬ್ರಹ್ಮಾಂಡಮಧ್ಯದೊಳ್ ವಿಂಗೆ ಚೆಲ್ವನಾಂತಿರ್ದುದೈವತ್ತು ಕೋಟಿ ಯೋಜನದ ಹರಹು (ನಂದಿಮಾ. ೨-೩). **ಹರಿಹು$_1$ :** ೧೦. ಹಿರಿಯ ಕೆಱೆಯ ಪಡುವಣ ಹ[ರಿ]ಹಿನಲ್ಲಿ ರಾಮನಾಥದೇವರ ಭೂಮಿಯಿಂ ಪಡುವಲು (ಕಇ. IV, ೧-೧೦೦ ; 1204). **ಹರುಹು$_2$ :** ೧. ಅರು ಹಾಗಬೇಕು, ಹರುಹಾಗಬೇಕು ಬೀತುದಿಗೆ ಏಳಬೇಕು (ಅರಳು.೩೯-೧೯). ೧೦. ಮಾಯಿದೇವಗಳಿಗೆ ತೆಂಕಣಹಳ್ಳದ ಹರುಹಿನಲು ತೋಟಸ್ಥಳ (ಸೌಇಇ. IX-ii, ೪೪೦-೪೪ ; 1419). **ಹೊಂಬು :** ೬. ಪುನಃ ಓಡಿಬಿಟ್ಟಾನೆಂದು . . . ಕೈಗಳನ್ನು ಜೋಡಿಸಿ ಹೊಂಬಿನಲ್ಲಿ ಕಟ್ಟಿ ತರ ಬೇಕಾಯ್ತು (ಚಿಂಗಾಳ್ವ. ೬೭).

**ಹರವಾಗು**=೧. ವಿಶಾಲವಾಗು ; ವಿಸ್ತಾರವಾಗು ; ಅಗಲ ವಾಗು : ಇನ್ನೊಂದು ಹರವಾದ ಹರಿವಾಣಮಂ ನೀಂ ಕೊಡೆಂದೆನಲು (ಪಲ್ಲಚ. ೮-೩೨) ; ಬರಬರುತ್ತಾ ಕಾಲುದಾರಿಯು ಹರವಾಗುತ್ತ ಬಂಡಿಯ ದಾರಿಯಷ್ಟು ದೊಡ್ಡದಾಯಿತು (ಮೇದಿಮ. ೧೧೮) ; ಹರವಾದ ಎಲೆಗಳುಳ್ಳ ದೊಡ್ಡದೊಡ್ಡ ಮರಗಳು ಬೆಳೆಯುವವು (ಕಪಪು. ೭-೧೨). ೨. ಅನುಕೂಲವಾಗು : ಪ್ರಥಮಸ್ತಳಸಂಜಾತವಾದ ಹಳಿಕಾಱ ಹರ ವಾಗಿ ಗೌಡುಂಕೆಯಾಗಿ ಅರಮನೆ ತೆಱುಮಾರುಗಳನೂ ಉಂಡಿಗೆಯ ಕಿರುಕೊಳ ಸಲ್ಲ (ಸೌಇಇ. IX-ii, ೪೩೩-೫೬ ; 1408). **ಹರಹಿನ ಡುಣ್ಣ, ಹರಹಿನ ಡುಣ್ಣಗ**=ದೊಡ್ಡ ಜಾತಿಯ ಒಂದು ಬಗೆಯ ಬತ್ತ : ಕೊಡಗು ಮಳಲ ಕಂತೆ ಹರಹಿನ ಡುಣ್ಣಗಳೊಡನೆ . . . ಎಡೆವಿಡದೆಸೆದು ವರ್ತಿಯಲಿ (ಕಂಸವಿ. ೫-೭೦) ; ಈ ಬತ್ತಗಳಲ್ಲಿ ಅನೇಕ ಜಾತಿಯವುಗಳಿದ್ದುವು ; ಅವಾವುವೆಂದರೆ :– ಕಣಿವೆಯ ಸಣ್ಣ . . . ಹರಹಿನ ಡುಣ್ಣಗ, ಬೈರಾವಳಿ (ಕರ್ನಾಜ. ೧೫೪). [<ಪರಪು$_1$./ತಮಿ. ಪರಪ್ಪು, ಪರಮ್ಪು, ಪರವ್ವೈ; ತುಳು. ಪರವು ; ತೆಲು. ಪರವು, ಪಱಪು]

**ಪರಪು$_3$** 'ಪರುವು' ನೋ.

**ಪರಪುಟ್ಟ** (ನಾ). ೧. ಬೇರೆಯವರ ಪೋಷಣೆಗೆ ಒಳಗಾದವನು : "ಪರಪುಟ್ಟ–ಪರಜಿತ, ಪರಿಸ್ಪಂದ, ಪರಜಾತ, ಪರೈಧಿತ" (ನಾಚಿರಾ. ೬) ; ಜಾತಿಗೋವಳಿತಿ ರಕ್ಷಿಸೆ ನೀಂ ಪರಪುಟ್ಟನಾದೆ (ಜಗವಿ. ೧೭-೪೧) ; ನರಸಿಂಗ ಮೊನೆಯಾರು ಕೊಂಡರ್ತಿಯಿಂ ಪೊರೆದ ಪರಪುಟ್ಟನಿವನು (ಸಾಂದಪು. ೪-೭೨) ; ಚಂದಿರ ದೋಷಾಕರ ಪರಪುಟ್ಟನು ಕೋಗಿಲೆಯು ತರುಣಿಯ ನೋವನಿನ್ನಾರಿಗಱುಪುವೆನು (ಜೀವಂಸಾಂ. ೧೨-೬೯) ; ಪರಪುಟ್ಟನಾಗಿ ಪಟ್ಟಣದ ಬೀದಿಗಳೊಳಗೆ ತಿರುಗುತಿಹ ಬಾಲಕನ ರೂಪವಂ ಕಂಡು ಕರೆ ಕರೆದು (ಜೈಮಿಭಾ. ೨೮-೨೧). ೨. ಕೋಗಿಲೆ : "ಪಡಿಯಜವಕ್ಕ. . . ಪರಪುಟ್ಟಂ – ಈ ೫ ಪಿಕಂ" (ಕಶಸಾ.೫೫-೨೦೫) ; ಎಲೆ ಪರಪುಟ್ಟ ಕೇಳ್ (ಅಜಿಪು. ೬-೧೧೨) ; ಸೊರ್ಕಿ ನಿರಂತಂ ಕರೆದತ್ತು ಮಾವಿನೊಳ್ ಪರಪುಟ್ಟಂ (೧೧ಕ.೨-೪೨); ಪರಪುಟ್ಟಧ್ವನಿಯಿಂ . . . ಆವಗಂ ಪಿರಿದೊಪ್ಪಂಬಡೆದಿರ್ದ ಕೇಳಿವನಮುಂ . . . ಕರಂ ರಂಜಿಕುಂ (ತ್ರಿಷವಿ. ೨೮-೩೫) ; ಮೊರೆವ ತುಂಬಿಗಳಿಂದೆ ಪರಪುಟ್ಟನಿಂದೆ ಚಿತ್ತರಿಸಿ ಪಾಡಿಸಿ ಪೊಗಳಿಪಂತೆ ಪುರಮಂ ಬಳಸಿದುಪವನಂ ಕಣ್ಗೆಸೆದುದು (ಚಿಬಪು. ೧೧-೨೬).

[<ಸಂ. ಪರಪುಷ್ಟ]

**ಪರಪುರುಷ** (ನಾ). ೧. ಅನ್ಯಪುರುಷ ; ಪರಕೀಯ ; ಗಂಡನಲ್ಲ ದವನು : ಪರಪುರುಷಸೇವನಾಕೃತ ಸುರತವಿಕಾರಂಗಳೆಲ್ಲಮಂ ನಿಜಪತಿ ಯೊಳ್ ನೆರೆದಾಗಳ್ ಮಱೆಯಲ್ಬಗೆದಿರವದು ನಗಿಸಿತ್ತು ಪೀನಮುಖ ಸಾರಿಕೆಯಾ (ಕವಿರಾ. ೩-೧೯೬) ; ಪರಪುರುಷನೆನಿಪ್ಪ ದಿವಾಕರನ ಕರ ಸ್ಪರ್ಶನಕ್ಕೆ ಸೈರಿಸದೆ (ಕಾದಂಉ. ೧೯೯) ; ಪರಪುರುಷ ಸಮಕ್ಷದೆ ಕಚ ಭರಮಂ . . . ಬಿಟ್ಟು ಮುಡಿವಡೆ ನಿರುತಂ ನೀಂ ಪಾಣ್ಬೆಯೆಂದು ಬಗೆಗಾ ವಧುವಂ (ಮದತಿ. ೮-೩೯) ; ಪರಪುರುಷರ ಮುಖವ ನೋಡದಂತೆ ಮಾಡಾ (ಬಸಪ. ೫೦೧). ೨. ಅತ್ಯಂತ ಶ್ರೇಷ್ಠನಾದವನು; ವಿಷ್ಣು.

[ಪರ$_3$+ಪುರುಷ]

**ಪರಪುರುಷಗಮನ** (ನಾ). ಅನ್ಯಪುರುಷನ ಸಹವಾಸ : ಪರಪುರುಷ ಗಮನವನುಳ್ಳ ಸ್ತ್ರೀಯರ ನೆರೆವೆನೆಂಬ ಕಾತರತ್ವ . . . ಉರುತರ ಕಡೆಯತಿ ಚಾರ (ದ್ವಾದಶಾ. ೧೧-೧೬೪). 'ಪರಸತಿಗಮನ' ಪರಾ.

[ಪರಪುರುಷ+ಗಮನ$_2$]

**ಪರಪುಷ್ಟ** (ನಾ). ೧. ಅನ್ಯರಿಂದ ಪೋಷಿಸಲ್ಪಟ್ಟುದು : ಪುಕ್ಕ ಪರಪುಷ್ಟ . . . ಎಲೈ ಸೊಳ್ಳೆ ! ನನ್ನ ಮಾತು ಕೇಳು (ನಡದಾ. III, ೨೦೬೮). ೨. ಕಾಗೆಯಿಂದ ಸಾಕಲ್ಪಟ್ಟುದು ; ಕೋಗಿಲೆ : "ಅನ್ಯಭೃತಃ, ಪರಪುಷ್ಟಃ . . . ಪಿಕಃ – ಈ ೫ ಕೋಗಿಲೆ" (ಹಲಾಯು. ೪೧-೯೦) ; ಉದ್ಯಾನವನಂ ಮದೋತ್ಕಪರಪುಷ್ಟೋದ್ದಾಮಕೋಲಾಹಳಂ (ಆದಿಪು. ೫-೨೯) ; ಪಾಪರೂಪನಿದಂ ಪುಗಲ್ವೇಡೆಂಬಂತೆ ಪುಗಿಲ್ಪುಗಿಲೆನುತಿರ್ಪ ಪುಷ್ಪಪರಪುಷ್ಟಂಗಳುಮಂ (ಪಂಚತಂ. ೧೧೮-೪) ; ಪರಿವಾರ ಕಲ್ಪಲತೆ ಪತಿನಿರೀಕ್ಷಣಭ್ರಮರಮಲ್ಲಿಕಾಲತೆ ವಿದ್ವತ್ಪರಪುಷ್ಟಚೂತಲತೆಯೆನೆ ಸಿರಿದೇವಿಗವಲ್ತೆ ಸಾರ್ಥ ಪರ್ಯಾಯಂಗಳ್ (ಎಕ. XI, ದಾವಣ, ೩೫-೬೩ ; ಸು. 1160).

**ಪರಪುಷ್ಟವಾಗು**=ಬೇರೆಯವರ ಪೋಷಣೆಗೆ ಒಳಗಾಗು : ತೇಜ ವೊಡೆದು ಪರಪುಷ್ಟವಾದ ಗ್ರಹಮಾಲೆಯಾದ ಹಾಗೆ (ಹೃದಸ. ೫೦-೩).

[ಸಂ.]

**ಪರಪುಷ್ಟೆ** (ನಾ). ಹೆಣ್ಣು ಕೋಗಿಲೆ : ಎನಗೆ ಪುರಪುಷ್ಟೆಯೆ ಸದಾ ಪರಪುಟ್ಟೆ [ಪಾಠಾಂ. ಟ್ಟೆ] ದೊರಕುವುದೆ (ಬಸಪು. ೪೫-೪೪).

[<ಸಂ. ಪರಪುಷ್ಟಾ]

**ಪರಪೋಷ್ಯ** (ನಾ). ಮತ್ತೊಬ್ಬರ ಪೋಷಣೆಯಲ್ಲಿರುವುದು ; ಪರಾವಲಂಬನೆ : ಮಾನಂಗಳೆಲ್ಲಿರ್ಪುವೈ ಪರಪೋಷ್ಯಕ್ಕೊಳಗಾಗಿರಲ್ (ಸೋಮೇಶ. ೭೫). [ಪರ$_3$+ಪೋಷ್ಯ]

**ಪರಪ್ರಕಾಶ** (ನಾ). ೧. ಬೇರೆಯ ಒಂದು ವಸ್ತುವಿನ ಮೂಲಕ ಸ್ಪಷ್ಟವಾಗುವುದು : ಜ್ಞಾನ ಎಂಬ ಪ್ರಕಾಶವುಂಟು. ಆ ಪ್ರಕಾಶಕ್ಕೆ ಪ್ರಕಾಶವು ಬೇಕೇ ಅಥವಾ ಬೇಡವೇ ಎಂಬ ವಿಚಾರವೇ ಸ್ವಯಂಪ್ರಕಾಶ, ಪರಪ್ರಕಾಶವೆಂಬ ವಿವಾದ (ಹಿಂದಸಾ. ೫೩). ೨. ಅಲೌಕಿಕವಾದ ತೇಜಸ್ಸಿನಿಂದ ಕೂಡಿರುವವನು ; ಪರಮಾತ್ಮ : ಪರಿಪೂರ್ಣ ಪರ ಪ್ರಕಾಶನೊಳ್ ಪಶುಪತಿಯೊಳ್ . . . ಇದಿರ್ಚಿತೆಚ್ಚಾಡಿದನೇ (ಶಬಶಂ. ೪-೧೧೯). [ಪರ$_3$+ಪ್ರಕಾಶ]

**ಪರಪ್ರತ್ಯಯ** (ನಾ). ೧. ಬೇರೆಯವರ ಅಭಿಪ್ರಾಯ,—ಜ್ಞಾನ : ಯಾರೊ ಮಾಡಿಟ್ಟ ಹಾಡುಗಳನ್ನು ಪರಪ್ರತ್ಯಯ ನೇಯಬುದ್ಧಿಯಾಗಿ ಇದ್ದಂತೆ ಹಾಡುವ ದಾಸ್ಯವೃತ್ತಿಯೂ ಅವನಿಗೆ ಒಪ್ಪದು (ಗಾಳಿಪ. ೪೩).

೨. [ವ್ಯಾಕ] ಪದದ ಮುಂದೆ ಸೇರಿಸುವ ಪ್ರತ್ಯಯ : ಪ್ರತ್ಯಯ ಗಳಲ್ಲೂ ಅನೇಕ ಬಗೆಗಳುಂಟು. ಪೂರ್ವಪ್ರತ್ಯಯ (ಪ್ರಿಫಿಕ್ಸ್) ಪರ ಪ್ರತ್ಯಯ (ಸಫಿಕ್ಸ್) ಮತ್ತು ಅಂತಃಪ್ರತ್ಯಯ (ಇನ್‌ಫಿಕ್ಸ್) (ಕವಿಕೋ. I, ೬೮೫). [ಪರ$_3$ + ಪ್ರತ್ಯಯ]

**ಪರಪ್ರೇಷಿತ** (ನಾ). ಬೇರೆಯವರ ಸೇವೆಯಲ್ಲಿರುವವನು ; ಸೇವಕ; ಭೃತ್ಯ : ಉಡುರಾಜಂ ನಿಲೆ ಲಗ್ನದೊಳ್ ಕಿವುಡನುನ್ಮತ್ತಂ ಪರಪ್ರೇಷಿತಂ (ಜಾತತಿ. ೧೪-೬). [ಪರ$_3$+ಪ್ರೇಷಿತ]

**ಪರಪ್ರೇಷ್ಯ** (ನಾ). = ಪರಪ್ರೇಷಿತ : ಶನಿಗ್ರಹದೊಳ್ ಬುಧನಿರೆ ಖಣಿ . . . ಪರಪ್ರೇಷ್ಯನೆನಿಕ್ಕುಂ (ಜಾತತಿ. ೧೭-೨೫). [ಪರ$_3$+ಪ್ರೇಷ್ಯ]

**ಪರಬರಿಣಗೆಯ್** (ಕ್ರಿ). (?) : ಪ್ರತಿವೀರವ ಕಟ್ಟ ತ××ಳಂಗೆ ಪರ ಬರಿಣಗೆಯ್ದು (ಎಕ. IV, ಎಡತೊ. ೩೭-೧೫; 1034). [?+ಕೆಯ್$_1$]

**ಪರಬಲ,** ಪರಬಳ (ನಾ). ಶತ್ರುಸೈನ್ಯ ; ವೈರಿಬಲ : ಪರಬಲದ ನೆತ್ತರ ಕಡಲೊಳಗಣ ಜಿಗುಟಿಕಿ ಬಳೆವ ತೆಜದೊಳೆ ಬಳೆದಂ (ಪಂಪಭಾ. ೧-೪೭) ; ಪರಬಲದೊಳ್ ಪಾರ್ಥಂ ನಿಷ್ಕುರಬಾಹಾಬಳನಿರಲ್ ಜನಾಧಾರನೆ ನೀಂ ಪರಿಕಿಸದೆ ವೀರಪಟ್ಟಮನರಸಾ ತಾಳ್ದುವುದು (ನೇಮಿಪು. ೧೨-೧೪೩) ; ಅರೆದುದೋ ಪರಬಲವ . . . ಮಾರ್ಬಲದ ವೀರರು ಹರಿದುದೋ ಹವಣೆಲ್ಲ ದಂತಿಯ ಸಮರಸೌರಂಭ (ಕುಮಾರವ್ಯಾ. ದ್ರೋ. ೩-೧೭). **ಪರಬಳ :** ಪರಬಳದಾನವಸಂಹಾರಾರುಣಜಳಲಿಪ್ತ ಖಡ್ಗನನುನ್ನತತೇಜಂ (ಎಕ. VI, ಮೂಡಗೆ. ೨೨-೨೩ ; 1129).

**ಪರಬಲಕಾಲಭೈರವ** = ಶತ್ರುಸೈನ್ಯಕ್ಕೆ ಪ್ರಳಯಕಾಲದ ಶಿವ ನಂತಿರುವನು ; ಒಂದು ಬಿರುದು : ಈ ಪಂಕರುಹಮುಖಿ ಬೆಸಲಾದ ಳೊಂದೇ ವರುಷ ಗರ್ಭವ ಧರಿಸಿ ಪರಬಲಕಾಲಭೈರವನ (ಕುಮಾರವ್ಯಾ. ಆ. ೪-೯೮). **ಪರಬಲದುಂಪದೂಳಿ** = ಶತ್ರುಸೈನ್ಯವನ್ನು ನಿರ್ನಾಮಗೊಳಿಸು ವಂಥದು; ಒಂದು ಬಿರುದು: ಪರಬಲದುಂಪದೂಳೀ ಕರಿಗಳರಸ ಕಸ್ತುರಿ ರಂಗ ಮೊದಲಾದ ಬಿರುದಿನಾನೆಗಳೈದಿದುವು (ಕಂಠವಿ. ೩-೪೨). **ಪರಬಲ ಸಾಧಕ, ಪರಬಳಸಾಧಕ** = ಶತ್ರುಸೈನ್ಯವನ್ನು ಗೆಲ್ಲುವವನು; ಒಂದು ಬಿರುದು : ಪರಬಲಸಾಧಕ ಪರಾಶರ ಪರಮಭಟ್ಟಾರಕಲಬ್ಧ ವರಪ್ರಸಾದ (ಎಕ.III (R), ಗುಂಡ್ಲುಪೇ. ೨೩೩-೨೧ ; 1315); ಪರಬಳ ಸಾಧಕರು ಮಪ್ಪ ಕುಮಾರಮಾಧವದಂಣ್ಣಾಯಕರುಂ ಕೇಶವದಂಣ್ಣಾಯಕರುಂ . . . ಆಳುತ್ತಮಿರ್ದು (ಎಕ. III (R), ಹೆಗ್ಗಡ. ೮೧-೧೭; 1218). **ಪರಬಳ ಕೇಸರಿ** = ಶತ್ರುಸೈನ್ಯಕ್ಕೆ ಸಿಂಹಸದೃಶನಾದವನು ; ಒಂದು ಬಿರುದು : ಪರಬಳಕೇಸರಿ ವೈರಿಬಳಜಳಧಿಬಡವಾನಳಂ (ಎಕ. VII, ಶಿಕಾರಿ. ೨೦-೧೪ ; 1032). **ಪರಬಳಗೂಳಿ** = ಶತ್ರುಪಡೆಗೆ ಗೂಳಿಯಂತಿ ರುವವನು ; ಒಂದು ಬಿರುದು: ಪರಬಳಗೂಳೀ ರಣಮಂ ಹೊತ್ತು ... ತಳ್ತಿಱಿದು ಮೆಱೆದು ಸುರಲೋಕಪ್ರಾಪ್ತನಾದ (ಎಕ. VIII, ಸಾಗರ. ೮೬-೧೦ ; 1282). [ಪರ$_3$+ಬಲ$_3$]

**ಪರಬಲಾಂತಕ** (ನಾ). ವೈರಿದಳಕ್ಕೆ ಯಮಸ್ವರೂಪಿಯಾದವನು : ಪರಬಲಾಂತಕನೆದ್ದು ನಿಂದನು ಸಿಂಹನಾದದಲಿ (ಕುಮಾರವ್ಯಾ. ಆ. ೧೦-೩೪) ; ಪರಬಲಾಂತಕ ಪಾರ್ಥನಿ[ನ]ಟ್ಟೆಲೆಡಪಂಕದಲಿ ನೆರೆದು ಬಂದೋಡಿದಾ ಭೀಷ್ಮಭೂಪನ ಬಲವನರವರಿಸದಿಸುವಲ್ಲಿ ಕರ್ಣಾಂತ ಪೂರಿಸಿದ ತಿರುವ ತೊಲಗದ ಕೈಗಳು (ಸಾಳ್ವಭಾ. ೨೫-೨೨). [ಪರಬಲ+ಅಂತಕ]

**ಪರಬಲಾಪಹ** (ನಾ). ೧. ಶತ್ರುಸೈನ್ಯವನ್ನು ನಾಶಮಾಡುವವನು. ೨. ಶತ್ರುವಾದ ಬಲನೆಂಬ ರಾಕ್ಷಸನನ್ನು ನಾಶಮಾಡುವವನು. **೧, ೨** : ಸುರೇಂದ್ರನಂತೆ ಸಹಸ್ರನೇತ್ರಾಶ್ರಿತ ವಿಪುಳವಿಗ್ರಹಪರಬಲಾ ಪಹನುಂ (ರಾಜಶೇ. ೩-೯ ವ). [ಸಂ.]

**ಪರಬಳ** 'ಪರಬಲ' ನೋ.

**ಪರಬಳಕೃತಾಂತ** (ನಾ). = ಪರಬಲಾಂತಕ : ಪರಬಳಕೃತಾಂತಂ ಕರ ಹತ್ತ ಮಲ್ಲಂ ಮಲ್ಲೆಯಸಾಹಣಿಯರುಂ (ಕೊಲ್ಹಾಶಾ. ೧೭-೪೦ ; 1189) ; ಪರಬಳಕೃತಾನ್ತ ಸ್ವೀಕಾರಸಾರೋದಯ ಅನ್ನದಾನವಿನೋದ ಸುವರ್ಣ್ನ ದಾನಶೂರ (ಎಕ. V (R), ತಿರುಮ. ೮೮-೨೫ ; 1276). [ಪರಬಳ(= ಪರಬಲ)+ಕೃತಾಂತ]

**ಪರಬೊಮ್ಮ** (ನಾ). = ಪರಬ್ರಹ್ಮ : ಲೀಲೆಯದು ಪರಬೊಮ್ಮದ ಇಚ್ಛೆ (ಸಿದ್ಧಪ. ೯೯-೫೯೦) ; ಸಾಕಾರನಿಷ್ಠೆ ಭೂತಂಗಳೊಳಗನುಕಂಪೆ ತಾನೆ ಪರಬೊಮ್ಮವೆನಲು (ಸಿದ್ಧರಾ. ೯-೪೩) ; ಪರಬೊಮ್ಮ ನೀ ಮೈದೋ ಱುದೈ ತನಗೆ (ಕುಮಾರವ್ಯಾ. ಆ. ೨-೧೪) ; ನಿನ್ನಲಿ ನೆಮ್ಮದಧಿಕದ್ವೇಷವೀ ಪರ ಬೊಮ್ಮದಿದಿರಲಿ ಬಿಟ್ಟುದು (ತೊರಂರಾ. ೪-೪-೫೯) ; ಪರಬೊಮ್ಮನೆಂದು ಜನಂ ಆವುದನು ಕಾಣದೊಡಮಳ್ತಿಯಿಂ ನಂಬಿಹುದೊ ಆ ವಿಚಿತ್ರಕೆ ನಮಿಸೊ (ಮಂಕುತ. ೧). [ಸಂ. ಪರಬ್ರಹ್ಮನ್]

**ಪರಬೊಮ್ಮರಸಿಕ** (ನಾ). ಪರಬ್ರಹ್ಮದಲ್ಲಿ ಆಸಕ್ತಿಯುಳ್ಳವನು : ಪರಬೊಮ್ಮರಸಿಕನಪ್ಪಲವರು ನಮ್ಮ ಜನ್ಮವೆ ಜನ್ಮವೆಂದು . . . ಉಬ್ಬಿ ದರು (ಭರತೇ. ೬೦-೮೮). [ಪರಬೊಮ್ಮ+ರಸಿಕ]

**ಪರಬೊಮ್ಮಿಣಿ** (ನಾ). ಆದಿಶಕ್ತಿ : ಆ ಪರಬ್ರಹ್ಮನಂತೆ ಮಾಯಾವಿಸ್ತಾರ ವಾದೊಳು ಆ ಪರಬೊಮ್ಮ ಪರಬೊಮ್ಮಿಣಿಯವರಿಬ್ಬರಿಂದ ಪರೋಪರಿ ಪಸರಿಸಿತು (ಉದ್ಭೋಸ್ಪ. ೩-೧೧-೨೨). [<ಸಂ. ಪರಬ್ರಹ್ಮಿಣೀ]

**ಪರಬೋಧೆ** (ನಾ). ಬೇರೆಯ ಬೋಧನೆ : ಪರವಸ್ತ ಪರಬೋಧೆ ಪರದ್ರವ್ಯ . . . ಕಾಂಕ್ಷೆ ಮಲತ್ರಯದಲ್ಲಿ ಮೋಹಿಸದೆ (ಮಡಿಮಾ. ೬೪-೧೦೦). [ಪರ$_3$+ಬೋಧೆ]

**ಪರಬ್ಬಯರಶಿ** (ನಾ). ಒಬ್ಬಾಕೆಯ ಹೆಸರು : ಕುನ್ದತ್ತೂರ ಪರಬ್ಬಯರ[ಶಿ]ಯಕ್ಕುರ್ಕ್ನತ್ತೂರನಾಳುತ್ತಮಿರೆ (ಎಕ. IV (R), ಕೊಳ್ಳೇಗಾ. ೧೦-೫ ; ಸು. 10ನೆಯ ಶತ). [?]

**ಪರಬ್ರಹ್ಮ** (ನಾ). ಪರಮತತ್ತ್ವ ; ಪರಮಾತ್ಮ : ಘನಮಹಾಲಿಂಗ ವೆಂಬ ಪರಬ್ರಹ್ಮವು ಗುರುಕರುಣದಿ ಬಹಿಷ್ಕರಿಸಿ ಕರಸ್ಥಲಕ್ಕೆ ಇಷ್ಟಲಿಂಗ ವಾಗಿ ಬರಲು (ವಚಸಂ. ೩೬೧-೧೩೭); ವಿಮಲಿತ ಪರಬ್ರಹ್ಮವೆಂದಡೆ ಹರನ ನಾಮವಿವು (ಬಸವು. ೫೫-೩೯) ; ಆ ಅಂತರ್ಯಾಮಿ ಮೊದಲಾದ ಈಶ್ವರ ತ್ರಯಾಧಿಷ್ಠಾತೃ ಪರಬ್ರಹ್ಮ ಪರತತ್ತ್ವ . . . ಎಂಬಿವು ಮೊದಲಾದವೇ ಬ್ರಹ್ಮದ ಪರ್ಯಾಯನಾಮಂಗಳಕ್ಕುಂ (ವಿವೇಕ. ೨೯) ; ಗುರುವೆ ಪರ ಬ್ರಹ್ಮವು ತಾನೆ ನೋಡಾ (ಅಖಂಡೇ. ೧೭-೧). [ಸಂ. ಪರಬ್ರಹ್ಮನ್]

**ಪರಬ್ರಹ್ಮನಾಡಿ** (ನಾ). ದೇಹದ ನಾಡಿಗಳಲ್ಲಿ ಒಂದು : ಉತ್ತಮ ದಲುತ್ತಮವು ತ್ರ್ಯನಾಡಿಗಳಿರುವವವರೋಳ್ ಎರಡನತಿಗಳೆದುಳಿದಿರುವದೇ ಪರತರದ ಪರಬ್ರಹ್ಮನಾಡಿಯು (ಗಗತಾ. ೯-೧೧). [ಪರಬ್ರಹ್ಮ+ನಾಡಿ$_1$]

**ಪರಭಂಡ** (ನಾ). ಬೇರೆಯವರಿಗೆ ಸೇರಿದ ವಸ್ತು ; ಪರದ್ರವ್ಯ : ನಡೆ ಪರಭಂಡ[ಪಾಠಾಂ.ವರಬಂದ]ದಲಿ ಮನವೇಕಮಗೆ (ನಿಭಾಗ. ೧೧-೭೦-೨೯). [ಪರ$_3$+ಭಂಡ$_2$]

**ಪರಭಕ್ತಿ** (ನಾ). ಶ್ರೇಷ್ಠವಾದ ಭಕ್ತಿ : ಈ ಪರಭಕ್ತಿ ಭಗವತ್ಸಾಕ್ಷಾ ತ್ಕಾರವಾಗಬೇಕೆಂಬ ಉತ್ಕಟೇಚ್ಛಾರೂಪವಾದ ಅಭಿನಿವೇಶವನ್ನು ಉಂಟು ಮಾಡಿ . . . ಪರಿಪೂರ್ಣ ಪರಬ್ರಹ್ಮಸಾಕ್ಷಾತ್ಕಾರವನ್ನು ಉಂಟು ಮಾಡುವುದು (ಹಿಂದಸಾ. ೨೫೭) ; ಪರಮಾತ್ಮಪ್ರಾಪ್ತಿಗೆ . . . ತನ್ಮಯ ನಾಗಿ ಪ್ರವರ್ತಿಸುವಿಕೆಯೇ ಎರಡನೆಯ ಪರ್ವ ಪರಭಕ್ತಿ (ಭಾರದ. ೨೬೫). [ಪರ$_3$ + ಭಕ್ತಿ]

**ಪರಭಾಗ** (ನಾ). ೧. ಉತ್ತಮಿಕೆ ; ಮೇಲ್ಮೆ ; ಶ್ರೇಷ್ಠತೆ : ಚಿತ್ರಕರಂ ಬೋಲ್ಪರಭಾಗಭಾವವಿಲಸದ್ವರ್ಣಕ್ರಮಾವೃತ್ತಿಯಿಂ ಪ್ರಕಟಂಮಾಡಿರೆ (ಕವಿರಾ. ೧-೧೫೦) ; ತ್ರಿದಶಸ್ತುತ ನೋಡ ಪೊಡಬಿಟ್ಟೊದವಿದ ತಾಳೀ

ತವಾಳನೀಳದ ಕರ್ಪಿಂ ಪುದಿದು ಪರಭಾಗಮಂ ಪಡೆದಿದಱಿರಡುಂ ಕೆಲದೊಳೆಸೆವ ವನರಾಜಿಗಳಂ (ಆದಿಪು. ೧೧-೫೮); ಅಂಬರಚರಪುರಭಾಗಮೆ ಪರಭಾಗಮೆನಿಪುವುದ್ಯಾನಂಗಳ್ (ಶಾಂತಿಪು. ೨-೪೯). ೨. ಹಿಂಭಾಗ; ಹಿಂದುಗಡೆ: ಆ ದವಿತಾರಿಯ ಕೀರ್ತಿ ಲೋಕಮಂ ವ್ಯಾಳಿ ತೊಟಲ್ದು ತನ್ನಗಮನಶ್ರಮಮಂ ಕಳೆಯಲ್ಕೆ ತನ್ಮಹೀಪಾಳಶಿರೋಜರಾಜಿ ಪರಭಾಗಮ ನಾಶ್ರಯಿಸಿರ್ದಳೆಂದಿನಂ (ಶಾಂತಿಪು. ೩-೩೬); ಅಳವಡೆ ಪರಭಾಗಂಬಡೆದೆಳೆ ಯಳಪರಭಾಗದಲ್ಲಿ ಸೋಮರ್ಯಾಡಿ ಸೊಬಗಂ ತಳೆದೆಸೆದುದು ಕನಕಶಿಳಾತ ಳಾಗ್ರದೊಳ್ ಮುರಿದು ಪರಿದ ಜಗುನೆಯ ಪೊನಲಂ(ಚಂದ್ರಪು.೧೧-೧೦೦). ೩. ಶೋಭೆ ; ಸೌಂದರ್ಯ ; ಮನೋಹರತೆ : 'ಪರಭಾಗಂಬಡೆ' ಪರಾ. ೪. ಒಳ್ಳೆಯತನ ; ಸಜ್ಜನಿಕೆ : "ಪರಭಾಗಃ, ಗುಣೋ ತ್ಕರ್ಷಃ–ಈ ೨ ಒಳುಹು [ಒಳ್ಪು]" (ಹಲಾಯು. ೧೩೦-೧೦೧) : "ಪರ ಭಾಗಮೆನೆ ಗುಣೋತ್ಕರ್ಷಮೆನಲೊಪ್ಪಕ್ಕು" (ಮಂಗರಾ. ೧೩೪-೩೪). ೫. ಶ್ರೇಷ್ಠನಾದವನು ; ಉತ್ತಮನಾದವನು : ತ್ರಿಭುವನಭೂಷ ಣೋಪಮೆಗೆ ಸಂಗಮದೊಳ್ ಪರಭಾಗವಿ[ನೀ] ಸ್ವಯಂಪ್ರಭೆಗೆ ಲಲತ್ತ ಟತ್ಪ್ರಭೆಗೆ ಬಂಧುರಸಿಂಧುರ ನೀಲನೀರದಪ್ರಭನಭಯಂ ತ್ರಿಪೃಷ್ಠಂ (ಶಾಂತಿಪು. ೫-೨೮). [ಸಂ.]

**ಪರಭಾಗಂಬಡೆ** (ಕ್ರಿ). ೧. ಉತ್ಕರ್ಷವನ್ನು ಹೊಂದು ; ಮೇಲ್ಮೆ ಯಿಂದ ಕೂಡಿರು : ದೇವಮಾನವಸಭಾಸಂದೋಹದಿಂ ನಾಡೆಯುಂ ಪರಭಾಗಂಬಡೆದೇಂ ಬೆಡಂಗಿಡಿದುದೋ ತನ್ನಾಭಿರಾಜಾಲಯಂ (ಆದಿಪು. ೮-೨೦) ; ಬಿಜ್ಜನೆ ಬೀಗುವ ಪೊಸಸಿರಿವಂತನಂತೆ ವಾತಪೂರಣಂಗಳೊಳಂ ಪರಭಾಗಂಬಡೆದು (ಶಾಂತಿಪು. ೧೦-೨೧ ಪ). ೨. ಅತಿಶಯವಾದ ಶೋಭೆಯನ್ನು ಪಡೆ ; ಉಜ್ವಲಕಾಂತಿಯಿಂದ ಕೂಡಿರು : ರತ್ನದ ಕೇರ್ಗಳ್ ಜಾಗಂಬೊಯ್ದಂತಿರೆ ಪರಭಾಗಂಬಡೆದುವು ವಿವಾಹಗೇಹಾಂತರ ದೊಳ್ (ಆದಿಪು. ೪-೩೧) ; ಅಳವಡೆ ಪರಭಾಗಂಬಡೆದೆಳೆಯಳಪರಭಾಗದಲ್ಲಿ ಸೋಮರ್ಯಾಡಿ ಸೊಬಗಂ ತಳೆದೆಸೆದುದು ಕನಕಶಿಳಾತಳಾಗ್ರದೊಳ್ ಮುರಿದು ಪರಿದ ಜಗುನೆಯ ಪೊನಲಂ (ಚಂದ್ರಪು. ೧೧-೧೦೦).[ಪರಭಾಗ+ಪಡೆ$_1$]

**ಪರಭಾಗಂಬೆಱು** (ಕ್ರಿ). ೧.=ಪರಭಾಗಂಬಡೆ ೧ : ಧರೆಯೊಳು ಮುನ್ನುಳ್ಳ ವಿಪ್ರೋತ್ತಮರ ಚರಿತದೊಳ್ ತನ್ನ ಚಾರಿತ್ರಮೆತ್ತಂ ಪರ ಭಾಗಂಬೆತ್ತಿರಲ್ (ಎಇ. XV, ೩೫೨-೨೮ ; 1098). ೨. ಸೊಗಸಿ ನಿಂದ ಕೂಡಿರು ; ಶೋಭಿಸು : ಮದವದ್ದಂತಿಮದಾಂಬುಧಾರೆಗಳ್ . . .ರಥಾಶ್ವಸಂಕುಳಖಲಿನೋದ್ಭೂತಲಾಲಾಜಲಂ ಕದಡೆಟ್ಟಿದ್ದತ್ತಮುಪುಂಕೆ ಬೆಱೆ ಪರಭಾಗಂಬೆತ್ತು ಲೋಕಕ್ಕೆ ಸನ್ನಿದಮಾಗಿರ್ದುವು ಕೌರವಧ್ವಜಿನಿ ಯೊಳ್ ಕಾಳಿಂದಿಯುಂ ಗಂಗೆಯುಂ (ಪಂಪಭಾ. ೧೦-೩೧) ; ಪರಭಾಗಂ ಬೆತ್ತಿರೆ ಪದ್ಮರಾಗಮಣಿ ಪಾಣಿಪದ್ಮರಾಗದಿನೊರ್ವಂ ನರನಾಥಸುತಂ ಮೆಱೆದಂ ಕಿರೀಟಮಂ ತಿದ್ದರ್ವಂತೆ ಭುಜಶಾಖೆಗಳಿಂ (ಪಂರಾಮಾ.೫-೫೪); ಕಬರೀ ಭರದಿಂ ಪರಭಾಗಂಬೆತ್ತಾಕೆಯಪರಭಾಗಂ ಪತಿಯ ಮನಮನುಱೆ ಸೆಱೆವಿಡಿಗುಂ (ಜಗವಿ. ೧೦-೪೭). [ಪರಭಾಗ+ಪೆಱು$_1$]

**ಪರಭಾರಿ$_1$** 'ಪರಭಾರೆ$_1$' ನೋ.

**ಪರಭಾರಿ$_2$** 'ಪರಭಾರೆ$_2$' ನೋ.

**ಪರಭಾರೆ$_1$**, ಪರಭಾರಿ$_1$ (ನಾ). ೧. ತಮ್ಮ ವಶದಲ್ಲಿರುವ ವಸ್ತು, ಆಸ್ತಿ ಮೊದಲಾದುವನ್ನು ಬೇರೆಯವರಿಗೆ ಒಪ್ಪಿಸಿಕೊಡುವಿಕೆ : ವ್ಯವಸಾಯದ ಜಮೀನಿನ ವರ್ಗಾವಣೆ, ಪರಭಾರೆ ಮತ್ತು ವ್ಯವಸಾಯ ಸಂಬಂಧದ ಸಾಲಗಳು (ಭಾಧಾನ. ೨೪೯). ೨. ಪ್ರತ್ಯೇಕವಾದುದು ; ಹೊರಗಿನದು : ಅವರಿಗೇ ಎಂದು ಒಂದು ಪರಭಾರೆಯಾದ ಕೋಣೆಯ ಏರ್ಪಾಡಾಗಿತ್ತು (ಹಳ್ಳಿಹಾ. ೧೭). **ಪರಭಾರಿ$_1$** : ೧. ಪಿತ್ರಾರ್ಜಿತವಾದ ಅವರ ಆಸ್ತಿಯು ಇಂದು ಪರಭಾರಿ ಆಗುವ ಸ್ಥಿತಿಯಲ್ಲಿದೆ (ರೂಢಿ).

**ಪರಭಾರೆ ಮಾಡು**=ಆಸ್ತಿ, ವಸ್ತು ಮುಂತಾದುವನ್ನು ಬೇರೆ ಯವರ ವಶಕ್ಕೆ ಒಪ್ಪಿಸು,—ಅಧೀನಕ್ಕೊಳಪಡಿಸು : ಈ ದಿನ ಗದ್ದೆ ಮತ್ತು ರೂಪಾಯಿಗಳನ್ನು ಕೊಟ್ಟನೋ, ನಾಳೆಯೇ ಪರಭಾರೆ ಮಾಡಿ ಬಿಡುತ್ತಾನೆ (ರಂಗಕ. ೧೨೪) ; ಮೈನರ್ ಮಗನಿರುವಾಗ ತಂದೆಯು ಆಸ್ತಿಯನ್ನು ಯಾವ ರೀತಿಯಲ್ಲೀ ಆಗಲಿ ಪರಭಾರೆ ಮಾಡುವುದಕ್ಕೆ ಅಧಿಕಾರವೇ ಇಲ್ಲ (ಘಾಟೀಮು. ೨೮). **ಪರಭಾರೆಯಾಗಿ**=೧. ಪರೋಕ್ಷ ವಾಗಿ; ನೇರವಾಗಿ ಅಲ್ಲದೆ: ಬಂದವರು ಪರಭಾರೆಯಾಗಿ "ಬೆಟ್ಟಂಪಾಡಿಗೆ ಸುಬ್ರಾಯರು ಮರಳಿದ್ದಾರೆಯೇ" ಎಂದು ವಿಚಾರಿಸಿದಾಗ (ಕರುಕ.೨೬). ೨. ಪ್ರತ್ಯೇಕವಾಗಿ : 'ಹಾಡಿದವರ್ಯಾರು ? ಎಲ್ಲಿದ್ದಾರೆ ?' ಎಂದು ಪರಭಾರೆಯಾಗಿ ವಿಚಾರಿಸಿ, ಅರಮನೆಯನ್ನು ಸೇರಿದನು (ಕಭವಿ. ೬೧೩). **ಪರಭಾರೆಯಾಗು**=ಆಸ್ತಿ ಮುಂತಾದುವು ಪರಾಧೀನವಾಗು,— ಬೇರೆಯವರ ವಶಕ್ಕೆ ಒಳಪಡು : ಜಮೀನು ಪರಭಾರೆಯಾಗಿದ್ದರ ದುಃಖ ಅವನ ಮನಸ್ಸನ್ನು ಕೊರೆಯುತ್ತಿತ್ತು (ಗಂಗಾಳ. ೬೫) ; ಮುದುಕಿಯ ಆಸ್ತಿಪಾಸ್ತಿಯೆಲ್ಲ ಪರಭಾರೆಯಾಗುವಂತೆ ತಂತ್ರ ಹೂಡಿದ್ದ ವಕೀಲ . . . ಬಂದನು (ಪುನರು. ೨೯). [←ಮರಾ. ಪರಭಾರೀ]

**ಪರಭಾರೆ$_2$**, ಪರಭಾರಿ$_2$(ಅ). ೧. ಇನ್ನೊಬ್ಬರ ಮುಖಾಂತರವಾಗಿ; ಅಪರೋಕ್ಷವಾಗಿ : ಪರಭಾರೆ ಕೆಲಸ ಮಾಡಿಸಿಕೊಳ್ಳುವವರನ್ನು ಕಂಡರೆ ನಮಗೆ ಆದರ ಹೇಗೆ ಹುಟ್ಟೀತು? (ಗಾಳಿಪ.೧೮೪) ; ಮುನಸೀಪಾಲಿಟಿಯ ಅಧಿಕಾರದಲ್ಲಿದ್ದ ಜಾಗೆಯ ಬಾಡಿಗೆಯನ್ನು ಪರಭಾರೆ ಒಬ್ಬ ಸದಸ್ಯ ತೆಗೆದುಕೊಂಡು (ಅಪನಾ. ೨೨೩). ೨. ಹೊರಗಿಂದ ಹೊರಗೆ : ಕೆಲವು ಕೆಡುಕ ಮತ್ತು ಕೆಲವು ಚಲೋ ಹೀಗೆ ಮಾಲವನ್ನು ತುಂಬಿ ಪರಭಾರೆ ಸ್ಟೇಶನದ ಮೇಲೆ ಏರಿಸುತ್ತಾರೆ (ಮುಂಬವ್ಯಾ. ೯೫). ೩. ಬೇರೆ ಮಾರ್ಗವಾಗಿ ; ಬೇರೆ ರೀತಿಯಲ್ಲಿ : ಚಿತ್ರದುರ್ಗ ನಮಗೆ ಅಸಾಧ್ಯ ಫೌಜು ಭಾರಿಯಿದೆಯೆಂಥಾ ಪ್ರಸ್ತಾಪ ಮಾಡುತ್ತಾನೆಂದು ಪರಭಾರೆ ವರ್ತಮಾನಾ ಕೇಳುತ್ತಾ ಇದೇವೆ (ಪದಚ. ೭-೮) ; ಕೊತ್ತತ್ತಿಗ್ರಾಮದ ಬಳಿಯಲ್ಲಿ ಇಳಿದಿರುವ ಮರಾಟಿಯವರ ದಂಡಿನ ಬಳಿಗೆ ನೀವು ಪರಭಾರೆ ಹೋಗಿ (ಚಾಮವಂ. ೧೦೮) ; ಅಲ್ಲಿಂದ ಪರಭಾರೆ ಯಾರಿಗಾದರು ಉಪ್ಪು ತರಿಸುವದಿದ್ದರೆ . . . ಹಣವು ಕಳಿಸಬೇಕು (ಮುಂಬವ್ಯಾ. ೨೭). ೪. ಬೇರೆಯ ಸ್ಥಳದಲ್ಲಿ ; ಬೇರೆಯ ಕಡೆಯಲ್ಲಿ ; ಹೊರಗೆ : ಅವರ ಹಗಲಿನ ಊಟಗಳೆಲ್ಲ ಪರಭಾರೆ (ಮರಮ: ೫). ೫. ಪ್ರತ್ಯೇಕವಾಗಿ; ಬೇರೆಯಾಗಿ : ಊಟಾ-ಉಡಿಗಿ ಪರಭಾರೆ ಹೋಗಿ ಮ್ಯಾಲ ದಹಾ - ಬಾರಾ ರೂಪಾಯಿ ಕೈಗೆ ಹತ್ತತಾವ (ದೀಪಹ. II, ೧೩). **ಪರಭಾರಿ$_2$** : ೧. ಎಷ್ಟೋ ವರ್ಷಗಳಾದ ಮೇಲೆ ಊರಿಗೆ ಬಂದ ನಾನು ಅವರ ವಿಷಯ ವನ್ನು ಪರಭಾರಿ ತಿಳಿದುಕೊಳ್ಳಬೇಕಾಯಿತು (ರೂಢಿ).

[←ಮರಾ. ಪರಭಾರೇ, ಪರಭಾರಾ, ಪರಭಾರೀ]

**ಪರಭಾವ** (ನಾ). ೧. ಬೇರೆಯವರ ಇಂಗಿತ,—ಆಲೋಚನೆ. ೨. ಇನ್ನೊಂದು ಸ್ಥಿತಿ : ಉಳ್ಳುದನಲ್ಲದಾರ್ಗಮಿಲ್ಲೆನಲ್ ಬಾರದು ಳ್ಳುದುಂ ಪರದ್ರವ್ಯ ಪರಕ್ಷೇತ್ರ ಪರಕಾಲ ಪರಭಾವದಿಂದವಿಲ್ಲದಿರ್ಕುಂ (ಶಾಂತಿಪು. ೮-೧೩೮ ಪ). [ಪರ$_3$+ಭಾವ$_2$]

**ಪರಭಾವಜ್ಞ** (ನಾ). ಬೇರೆಯವರ ಇಂಗಿತವನ್ನು ತಿಳಿಯಬಲ್ಲ ವನು : ಪರಭಾವಜ್ಞಂ ಕೃತಜ್ಞಂ ರಸಿಕಂ . . . ಸಭೇಂದ್ರಂ (ಲಾಸ್ಯರಂ. ೧-೩೩). [ಸಂ.]

**ಪರಭಾಷೆ** (ನಾ). ಬೇರೆಯ ಭಾಷೆ; ಪರಕೀಯ ಭಾಷೆ : ದ್ರಾವಿಡ- ಕನ್ನಡರು ಇಂದು ಪರಭಾಷೆಯನ್ನಾಡುವ ಅನೇಕ ಪ್ರದೇಶಗಳನ್ನು ಆಕ್ರಮಿ ಸಿದ್ದರೆಂಬುದಕ್ಕೆ . . . ಸಂಬಂಧಪಟ್ಟ ಅಂಶಗಳಿವೆ (ಭಾಷಾಶಾ. ೧೯೩).

[ಪರ$_3$+ಭಾಷೆ]

**ಪರಭೂಪಾಲ** (ನಾ). ಶತ್ರುರಾಜ : ಪರಭೂಪಾಲದ್ವೀಪಾಂತರಾಳ ಕೇಳೀವನಂಗಳಂ ಕಿಬ್ತು (ಪಂಪಾಮಾ. ೩-೧೦೦) ; ಪರಭೂಪಾಲರ ಬಾಳಂ ಪರಿಹಾಸ್ಯಂ ಮಾಡುವಂತೆ ಹಸನಂಗೆಯ್ವಂ (ಹಮ್ಮಿರ. ೨-೨೭).
[ಪರ್$_3$+ಭೂಪಾಲ]

**ಪರಭೃತ** (ನಾ). ಅನ್ಯರಿಂದ ಪೋಷಿಸಲ್ಪಟ್ಟುದು ; ಕೋಗಿಲೆ : ಪರಭೃತಂಗಳುಲಿವ ರವಂಗಳ್ ಸಹಸಾ ತಳಮಳಗೊಳಿಸಿದವಹೋ . . . ವಿರಹಿಗಳಾ (ಕವಿರಾ. ೧-೫೪) ; ವಿರಹಿಗಳ ಸುಯ್ಯ ಬೆಂಕೆಯೊಳ್ . . . ಕರಿಮುರಿಕನಾದುವುನ್ಮದಪರಭೃತಷಟ್ಚರಣ ರಾಜಕೀರಕುಲಂಗಳ್ (ಪಂಪಭಾ.೫-೯೦); ನವಾಮ್ರದ ಪೂವಿಡಿಯಂ ಕರ್ದುಕಿದುದು ಪರಭೃತಂ ಪರಭೃತದಿಂ (ಸುಲ್ಲಿಪು. ೫-೩೮); ಪರಭೃತಂಗಳವೇಕೆ ಮುನಿದಹವಾ ತಳಿರು ಗಳಿಗೆ (ಬಸವು. ೪-೧೫) ; ಗತಿಗೆ ಕುಣಿದವು ಹಂಸೆ ಸಂಭಾಷಿತದ ಮೃದು ರವಕೊದಗಿದವು ಪರಭೃತವು (ತೊರರಾ. ೧-೫-೪೬). [ಸಂ.]

**ಪರಭೃತಿಕೆ** (ನಾ). ಹೆಣ್ಣು ಕೋಗಿಲೆ : ಮಾವಿನ ಚಿಗುರನ್ನು ನೋಡಿ ಪರಭೃತಿಕೆಯು ಉನ್ಮತ್ತೆಯಾಗುವುದಿಲ್ಲವೆ ? (ಶಾಕುಂತ. ೮೦-೧).
[ಸಂ. ಪರಭೃತಿಕಾ]

**ಪರಮ**(ಗು). ೧. ಬಹಳ ದೂರದ; ಸಮೀಪವಲ್ಲದ. ೨. ಮುಖ್ಯ ವಾದ ; ಪ್ರಧಾನವಾದ : ನೀನತ್ತ ಮಾವಂದಿರಂ ಸೇವಿಸುತ್ತಿಯೆಡೆಯೆ ಧರ್ಮಮಾಚರಿಸುತಿರ್ಪುದೆ ಪರಮಕರ್ತವ್ಯಂ (ಶ್ರೀರಾಮಾ. ೮೭-೨೫೪). ೩. ಶ್ರೇಷ್ಠವಾದ ; ಉತ್ಕೃಷ್ಟವಾದ : ಶ್ರೀಮಾಸೇನಪ್ರ್ರಮ ಪ್ರಭಾವರಿಷಿಯರ್ಕಟ್ವಪ್ಪಿನಾ ವೆಟ್ಟದುಳ್ಳೀಸಂಗಂಗಳ ಪೇಟ್ದ ಸಿದ್ಧ ಸಮಯನ್ತಪ್ಪಾದೆ ನೋನ್ತು (ಎಕ. II, ೨೭-೧ ; ಸು. 700); ಆ ಪರಮ ಕ್ಷತ್ರತೇಜೋರಾಶಿಗೆ ಮುನಿಸೆಂಬ ಕಿಚ್ಚನೊಳೆ ಬೆಂದು ನಿಲ್ಲದಂಬುಧಿಯ ನೋಡಿ ಪೊಕ್ಕರಿನೃಪಸಾಧನದಿರವಿನಂದಮೆಂತೆನೆ (ಶಾಂತಿಪು. ೯-೧೫೨ ವ) ; ಪರಮಕವೀಂದ್ರವೃಂದ ವಿನುತೋತ್ತಮವಾಣಿ ಸರಸ್ವತೀಸ್ವಯಂವರವರ ನೆಬ್ಬ ಜೋಪಮನಪಾಸ್ತರಜಂ (ಪಂಚತಂ. ೩-೨೧) ; ದ್ರಾವಿಡಭಾಷಾ ವಿಜ್ಞಾನಕ್ಷೇತ್ರದಲ್ಲಿ ಪರಮಪರಿಣತ ಪಂಡಿತರಲ್ಲಿ ಒಬ್ಬರಾದ ಥಾಮಸ್‌ಬರೊ . . . ಪರಿಶೀಲಿಸಿದ್ದಾರೆ (ದ್ರಾವಿವಿ. ೪೩). ೪. ಶುದ್ಧವಾದ; ಪವಿತ್ರ ವಾದ : 'ಪರಮಪಾವನ' ಪರಾ. ೫. ಕೊಟ್ಟಕೊನೆಯ; ಪರಾ ಕಾಷ್ಠೆಯ. ೬. ಹೆಚ್ಚಾದ ; ಅಧಿಕವಾದ : ಪರಮದಯಾನಿಧಿ ಯೆನಿಸಿದ ಪರಮನ ಸನ್ನಿಧಿಯೊಳುಷ್ಣಮುಂ ಪರಪೀಡಾಕರಮುಂ ತೋರಿದ ಬಾಲಾರ್ಕರಶ್ಮಿಯೆನಿಸಿದುವು ರತ್ನದೀಪಪ್ರಭೆಗಳ್ (ಮಲ್ಲಿಪು. ೧೨-೧೦೮). (ನಾ). ೭. ಶ್ರೇಷ್ಠವಾದುದು ; ಉತ್ಕೃಷ್ಟವಾದುದು : ಉತ್ತರ ರಾಮಚರಿತದ ಶ್ರೀರಾಮನು ಇದಕ್ಕೆ ಪರಮವಾದ ಉದಾಹರಣೆ (ವೀರಯೋ.V,ಮುನ್ನುಡಿ). ೮. ಪರಮಾತ್ಮ ;ದೇವರು: ಶಿರವ ಹರಿದಿಕ್ಕೆ ಪರಮನಿದ್ದೆಡೆಯು ಕಾಣದೇನಿಳೆಯಲ್ಲಿ (ಬಸವ. ೬೫೬) ; ಎಸೆವ ಪಂಚಾಕ್ಷ ರಿಯೆ ಪರಮನರಮನೆ ನೋಡ (ತಿರುರ. ದೇ. ೩-೪) ; ಫಣಿಯ ಮಂಚದ ಮೇಲೆ ಪವಡಿಸಿ ಪರಮನೆನಿಸಿದ ಲೀಲೆಯೆತ್ತಲು ಮನುಜಭಾವದ ನಟನೆ ತಾನೆತ್ತ(ಕೌಶಿರಾ. ೪೩-೪೫) ; ಪರಮನೊಳು ಪ್ರಾಣ ಬೆರೆದಿಪ್ಪ ಐಕ್ಯಂಗೆ ಚಿರಮುಕ್ತಿಯಹುದು (ಸರ್ವಜ್ಞ. ೧೪೮). ೯. [ಜೈನ] ಜಿನ; ಅರ್ಹಂತ : ಪರಮಂ ಬೆಸಸಿದನಾಗಳ್ ಭವ್ಯಪ್ರಸಾದಕರ ನಿಜವಚೋಂಶು ಗಳ್ ಬೆಳಗುವಿನಂ (ಆದಿಪು. ೫-೭೫) ; ಪರಮನ ಚರಮಕಲ್ಯಾಣಂ ಪರಿಪೂರ್ಣಮಾಗೆ (ಶಾಂತಿಪು. ೧೨-೩೭ವ) ; ಅಜಿತಂಜಯಂ ಚಕ್ರಧರ ಪುರಸ್ಸರಂ ಪರಮನ ಪದಪಯೋಜವಂದನಾನಂದದಿಂ ಬಂದು (ಚಂದ್ರಪು. ೭-೫ ವ) ; ಪರಮಂ ಪ್ರಾಣತಕಲ್ಪದಾರುಣವಿಮಾನೋದ್ದೇಶದಿಂ ಬಂದು ಬಂಧುರ ವಕ್ತ್ರಾಬ್ಜನಿವಿಷ್ಟನಾಶ್ರಯಿಸಿದಂ ರಾಮಾಂಬಿಕಾಗರ್ಭಮಂ (ಪುಷ್ಪಪು. ೯-೧೧೩). [ಸಂ.]

**ಪರಮಂಡಲ,** ಪರಮಂಡಳ (ನಾ). ೧. ಬೇರೆಯ ದೇಶ ; ವಿದೇಶ; ಪರದೇಶ : ಚರಗೃಹಮುಷ್ಟಮವಾಗಿರೆ [ಪರ]ಮಂಡಲ[ಪಾಥಂ. ೩] ದೊಳ್ . . . ಮಡಗುಂ (ಜಾತಕ. ೨೩-೩). 'ನಿಜಮಂಡಲ' ಪರಾ. ೨. ಶತ್ರುರಾಜ್ಯ ; ಶತ್ರುಮಂಡಲ : ಪರಮಂಡಲಕೆ ಪಯಣವ ಮಾಡುವೆವು ನಾವಳುಕಿದವರಲ್ಲ (ಕುಪ್ಯಾಉ. ೭-೨) ; ದಾಯಾದರಿಲ್ಲ ಮಾರ್ಮಲೆವ ಪರಮಂಡಲದ ನಾಯಕರ ಸುಳಿವಿಲ್ಲ (ಜೈಮಿಭಾ. ೨-೫೪). **ಪರಮಂಡಳ :** ೨. ಪ[ರ]ಮಣ್ಡಳೈಕರಾಮಶ್ಚಾಳುಕ್ಯಕುಳತಿಳಕಃ (ಕಇಅ. ೨೩-೮-೮ ; 9ನೆಯ ಶತ) ; ಅದಿರದ ಬೀಕರಕ್ಕೆ ಮಿಕ ಪೂಣಿಗ ರಂಜೆ(ಲೆ)ಗಣ್ಣನಿತ್ತು ಬಾಳದ ಪರಮಂಡಳಂ ತಿಬಿದ [ಕೊ]ಂಕಣಮಾಯದ ಮಾಳವಂ (ಕಇಅ. ೪-೨-೧೨೪ ; 1058).

**ಪರಮಂಡಳ ಸೂಱೆಕಾಱ**=ಶತ್ರುರಾಜ್ಯವನ್ನು ಕೊಳ್ಳೆ ಹೊಡೆ ಯುವವನು ; ಒಂದು ಬಿರುದು : ಸಂಸ್ತುತ್ಯವಂದಿಜನಂ ಪರಮಣ್ಡಳ ಸೂಱೆಕಾಱಂ (ಎಕ. I, ೬೨-೧೪ ; 1095) ; ಪರಮ[ಂ]ಡಳಸೂಱೆಕಾಱ ನಪ್ಪ ಶ್ರೀಮತು ಹಬ್ಬೆಯನಾಯಕಂ . . . ಸಂಪತ್ತಿಯಿಂ ಸುಖದಿನನುಭ ವಿಸುತ್ತಿರ್ದು (ಕೊಲ್ಹಾಶಾ. ೧೫-೬೫ ; 1186). [ಪರ್$_3$+ಮಂಡಲ]

**ಪರಮಂಡಲಿಕ,** ಪರಮಂಡಳಿಕ (ನಾ).೧. ಪರದೇಶದ ದೊರೆ,— ಅರಸು. **ಪರಮಂಡಳಿಕ :** ೨. ಶತ್ರುರಾಜ್ಯದ ಅಧಿಪತಿ,— ಮಾಂಡಲಿಕ: ಬಲುಹ ನೀ ನೋಡುವರೆ ಪರಮಂಡಳಿಕರನು ತಂದೊಡ್ಡು (ಕುಪ್ಯಾಭೀ. ೩-೪೦). [ಪರ್$_3$+ಮಂಡಲಿಕ]

**ಪರಮಂಡಳ** 'ಪರಮಂಡಲ' ನೋ.

**ಪರಮಂಡಳಿಕ** 'ಪರಮಂಡಲಿಕ' ನೋ.

**ಪರಮಕವೀಶ** (ನಾ). ಶ್ರೇಷ್ಠಕವಿ ; ಕವಿಪುಂಗವ : ಕನ್ನಡದೊಳ್ ಸಂತತಗುಣಮಂ ಕೈಕೊಳ್ವಂತಾಗಿರೆ ಬಗೆದು ಪೇಟ್ಗೆ ಪರಮಕವೀಶರ್ (ಕವಿರಾ. ೩-೧೫೩). [ಪರಮ+ಕವಿ$_5$+ಈಶ]

**ಪರಮಕವೀಶ್ವರ** (ನಾ). =ಪರಮಕವೀಶ : ಪರಮಕವೀಶ್ವರ ಚೇತೋ ಹರಮೆಂಬಿನವೆಸೆವ ಮಾಳವೀಮಾಧವಮಂ ವಿರಚಿಸಿದ ಕನ್ನಮಯ್ಯಂಬರ ಮಾಗಂ ಸುಕವಿ ಬಗೆವೊಡಿನ್ನುಂ ಮುನ್ನುಂ (ಪಂಚತಂ. ೫-೫).
[ಪರಮ+ಕವಿ$_5$+ಈಶ್ವರ]

**ಪರಮಕಾರಣಿಕ**(ನಾ). ಶ್ರೇಷ್ಠನಾದ ಕಾರಣಪುರುಷ : ಪರಮಕಾರ ಣಿಕ ನಮ್ಮ ಕೂಡಲ ಸಂಗಮದೇವ (ಬಸವ. ೫೬೪).[ಪರಮ+ಕಾರಣಿಕ]

**ಪರಮಕಾರುಣಿಕ** (ನಾ). ಅತ್ಯಂತ ಕರುಣೆಯುಳ್ಳವನು ; ಪರಮದಯಾಳು : ಪರಮಕಾರುಣಿಕನಪ್ಪನಪಾಕೃತದೋಷಂ (ಕವಿರಾ. ೩-೨೨೧). [ಪರಮ+ಕಾರುಣಿಕ]

**ಪರಮಕಾಷ್ಠಯುತ** (ನಾ). ಶ್ರೇಷ್ಠವಾದ ಗುರಿಯುಳ್ಳವನು : ಹುತ್ತು ಹೊಱಗೆ ಹೊಧಿಸಿದ ಪರಮಕಾಷ್ಠಯುತರಂ ತೋಱದಂ ವೃಶ್ಚಿಕಾರೂಢನು (ಸಿದ್ಧರಾ. ೩-೪). [ಸಂ.]

**ಪರಮಕಾಷ್ಠೆ** (ನಾ). ಆಧಿಕ್ಯ ; ಪರಾಕಾಷ್ಠೆ : ನಡುಗುತೆ ಬೆಮರ್ದು ಭೀತಿಯ ಪರಮಕಾಷ್ಠೆಯಿಂ ನುಡಿಯಲಱಯದೆ (ತಿರುರ. ದೇ. ೧೨-೧೫); ಪರಮಪಾತಕದ ಪರಮಕಾಷ್ಠೆ ಯಾವುದು . . . ಎಂದೆನೆ ಪೇಳ್ವರು ಪರ ವೆಣ್ಗಳೊಡನಾಟವೆಂದು (ಕುಮಾಸಾಂ. ೩೩-೧೦೮). [ಪರಮ+ಕಾಷ್ಠೆ]

**ಪರಮಕೂಳ** (ನಾ). ಒಬ್ಬಾತನ ಹೆಸರು : ಪರಮಕೂಳಮ್ರ್ಮಗನ್ದಿರರ ಕೇಶಿಗಳ್ . . . ಪ್ರಸಾದಂಗೆಯ್ದಾರ್ (ಎಕ, III, ತಿರುಪು. ೧-೭ ; 726).
[ ? ]

**ಪರಮಕೃಪೆ** (ನಾ). ಅಧಿಕವಾದ ದಯೆ,— ಕರುಣೆ : ಪರಮಕೃಪೆ ಯಿಂದೆ ಕುಲಚರಿಯರ ಭಕ್ತಿಗೆ ಚಾರುತರದ ಗಣಪದವಂ ಕೊಟ್ಟು (ತ್ರಿಪುವಿ. ೩೩-೮೯). [ಪರಮ+ಕೃಪೆ]

**ಪರಮಕೋಟಿ** (ನಾ). = ಪರಮಕಾಷ್ಠೆ : ಅಹಮಿಂದ್ರರ್ . . . ಪಾಪಹರಂಗೆಜಿಗುವರೆಸಿಸಿದ ಮಹಿಮೆಯಿಂ ಪಟಿಂಗಟಿಂದ ಪರಮಕೋಟಿ ಯೊಳಿರ್ಪರ್ (ಶಾಂತಿಪು. ೯-೧೨೪); ಅಕ್ಷೂಣಲಕ್ಷಣಲಕ್ಷಿತಂಗಳಪ್ಪ ಪುತ್ರ ನಂಗಪ್ರತ್ಯಂಗಂಗಳಂ ನೀಡುಂ ಭಾವಿಸಿ ನೋಡಿ ಸಂಸಾರಸುಖದ ಪರಮ ಕೋಟಿಯನೆಯ್ದಿದಂತಾಗಿ (ಚಂದ್ರಪು. ೩-೧೦೨ ಪ). [ಪರಮ+ಕೋಟಿ₁]

**ಪರಮಗತಿ** (ನಾ). ೧. ಅತ್ಯುನ್ನತವಾದ ಸ್ಥಾನ; ಮೋಕ್ಷ : ಪರಮ ಗತಿಯೆಂಬುದು ನೆರಮನೇ ಹಟ್ಟಿಯೋ ? (ಗಾದೆ). ೨. ಶ್ರೇಷ್ಠವಾದ ಆಶ್ರಯ,–ದಿಕ್ಕು : ನಾನು . . . ಅನುಭವದಿಂದ ಹೆಂಗಸರಿಗೆ ಪತಿಯೇ ಪರಮಗತಿಯೆಂದು ತಿಳಿದೆನು (ಕಪಾಕುಂ. ೧೨೦). ೩. ಮುಖ್ಯವಾದ ಗುರಿ ; ಮೂಲೋದ್ದೇಶ. [ಪರಮ+ಗತಿ]

**ಪರಮಗುಣ** (ನಾ). ಶ್ರೇಷ್ಠವಾದ ಗುಣ : ಪರಮಗುಣಪರೀತಕಾವ್ಯ ರತ್ನಾಕರದುರುಪಾರಮನೆಯ್ದುಗುಂ ಮಹಾತ್ಮಂ (ಕವಿಾ. ೩-೨೩೦); ಪರಮಗುಣಾಂಬುರಾಶಿ ಜಿನಧರ್ಮಮರುತ್ಪಥಶೀತರಶ್ಮಿ ಮಾಣ್ದಿರಿಸದೆ ವಜ್ರವೇದಿಕೆಯೊಳೊಂದೆಡೆಯಂ (ಧರ್ಮಾಮೃ. ೯-೨೩೩); ಪರಮಗುಣ ಮೊಂದೆ ಸಂಯಮಿಗೆ (ಪುಷ್ಪಪು. ೧೩-೫೨). [ಪರಮ+ಗುಣ]

**ಪರಮಗುರು** (ನಾ). ಶ್ರೇಷ್ಠನಾದ ಗುರು,–ಆಚಾರ್ಯ : ತದ ನಂತರಂ ಭೂಚರ ಪರಮಗುರು . . . ಇಂತೆಂದು ಬೆಸಸುಗುಂ (ಶಾಂತಿಪು. ೧೨-೬ ಪ); ಎನಗಜ್ಜ ಗರ್ಭ ನೀಂ ಗುರು ನಿನಗಂ ಪರಮಗುರು ವಿಷ್ಣು (ಜಗವಿ. ೧-೩೩) ; ಪತಿಯೆ ಪರಮಗುರು (ಹದಿಬ. ೩-೪).
[ಪರಮ + ಗುರು₂]

**ಪರಮಜಾತಿ**(ನಾ). [ಜೈನ]ಪಾರಿವ್ರಾಜಕ ಲಕ್ಷಣವಾದ ಜಾತಿಯ ನಾಲ್ಕುಪ್ರಕಾರಗಳಲ್ಲಿ ಒಂದು : ದಿವ್ಯಜಾತಿಯಿಂದಹಮಿಂದ್ರತ್ವಮುಂ . . . ಪರಮಜಾತಿಯಿಂದಮಾರ್ಹಂತ್ಯಮುಂ . . . ಪಡೆಯಲಕ್ಕುಂ (ಚಾವುಂಪು. ೨೨೮). [ಪರಮ+ಜಾತಿ]

**ಪರಮಜಿನ** (ನಾ). [ಜೈನ] ಶ್ರೇಷ್ಠನಾದ ಅರ್ಹಂತ : ಪರಮಜಿನ ಶಿಷ್ಯರಂ ಗಣಧರರಂ ಮಕುಟಾಗ್ನಿಯಿಂದಮಗ್ನಿಕುಮಾರರ್ ಸುರಪತಿಮತ ದಿಂದಂ ಸಂಸ್ಕರಿಸಿದರ್ (ಶಾಂತಿಪು. ೧೩-೩೮); ಪರಮಜಿನನೆಂಬ ಗುಣಗಣ ಸುರತ್ನನಿಧಿಗಿಂದ್ರರೆಂಬ ತರುಗಳ್ ಬೀಟಲ್ವರಿದಂತಿರ್ದುವು ತತ್ತತ್ಕರ ಶಾಖಾಕಳಿತಕಳಶಧಾರಾಕ್ಷೀರಂ (ಚಂದ್ರಪು. ೧೨-೧೨೬) ; ಪರಮಜಿನ ಪದಾಂಭೋಜಾತದೊಳ್ ಭೃಂಗಮಾಲಾಪರಿಕರಮೆನೆ ಕಣ್ಗಳ್ . . . ದೇವತಾನಿಷ್ಠನಾದಂ (ಅನಂಪು. ೪-೬೫). [ಪರಮ + ಜಿನ₂]

**ಪರಮಜಿನೇಂದ್ರ** (ನಾ). = ಪರಮಜಿನ : ಪರಮಜಿನೇಂದ್ರವಾಣಿಯೆ ಸರಸ್ವತಿ ಬೇಡಿದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು (ಆದಿಪು.೧-೯); ಪರಮಜಿನೇಂದ್ರಧರ್ಮಪರಿಪಾಲನಶೀಲಸಮರ್ಥನಂ . . . ಪಡೆವನ್ನೆಗಂ (ಸುಕುಮಾ. ೧೦-೩೦). [ಪರಮ+ಜಿನೇಂದ್ರ]

**ಪರಮಜ್ಞಾನ** (ನಾ). ೧. ಶ್ರೇಷ್ಠವಾದ ಅರಿವು,–ತಿಳಿವಳಿಕೆ : ಪರಮಜ್ಞಾನವೆಂಬ ಸಸಿಗೆ ಗುರುಭಕ್ತಿಯೆಂಬ ಭೂಮಿಯ ಮಣ್ಣ ತಂದು ಪಾತೆಯಂ ಕಟ್ಟಿದೆ (ಅಪಚಂ. ಕ. ೩೫೮-೯೭೯); ಬುದ್ಧನು . . . ಪರಮ ಜ್ಞಾನವನ್ನು ಕಂಡುಕೊಂಡ ದಿವಸ ವೈಶಾಖಶುಕ್ಲ ಪೂರ್ಣಿಮಾ (ರಾಮಂರಾ. ೬೯). ೨. [ಜೈನ] ಕೇವಲಜ್ಞಾನ : ಪರಮಜ್ಞಾನನಿಧಾನದೀಶ್ವರನೊ ಳಾಯುರ್ನಾಮಗೋತ್ರಂಗಳಂ ಸರಿಕಂಡಿರ್ದ ಮಹಾನುಭಾವರಿರೆ (ಅನಂಪು. ೧೪-೫೧). [ಪರಮ+ಜ್ಞಾನ]

**ಪರಮಜ್ಞಾನಿ** (ನಾ). ಶ್ರೇಷ್ಠವಾದ ಅರಿವುಳ್ಳವನು : ಪರಮ ಜ್ಞಾನಿಯೆ ವಿವೇಕವಿಕಳರವೋಲ್ ಬಾಲರ ತಲೆಯನರಿದು ತಂದೆಯೊ (ಗದಾಯು. ೯-೩೪) ; ಪರಮಜ್ಞಾನಿ ಮರಳ್ವನೇ ಪೆಜಿರ್ಗೆ (ಪುಷ್ಪಪು. ೧೩-೯೧). [ಪರಮ + ಜ್ಞಾನಿ]

**ಪರಮಜ್ಯೋತಿ** (ನಾ). ಅಲೌಕಿಕವಾದ ತೇಜಸ್ಸುಳ್ಳವನು ; ಪರಮಾತ್ಮ ; ಪರಂಜ್ಯೋತಿ : ಪುರುಷಾಕಾರತ್ರಯಮುದು ನಿನ್ನ ವಿಡಂಬಮಲ್ತೆ ಪರಮಜ್ಯೋತೀ (ಜಗವಿ. ೩-೧೦೫). [ಪರಮ+ಜ್ಯೋತಿ]

**ಪರಮತ** (ನಾ). ೧. ಬೇರೆಯ ತತ್ತ್ವ,—ಸಿದ್ಧಾಂತ : ಪರಮತ ರುಚಿಯಿಂ ವಿಷಯಾನುರಾಗದಿಂ . . . ಪರಿಪಾಲಿತಶೀಲವ್ರತವಿರಮಣ ದಿಂದಶುಭಕರ್ಮದಾಸ್ರವಮಕ್ಕುಂ (ಅಜಿಪು. ೬-೫೭); ಷಟ್ತ್ರಿಕೃಷಣ್ಮುಖರು ಪರಮತತಪತ್ವರಣನಿರತರು (ಸೌಇಇ. XX, ೪೬-೨೭ ; 1072) ; ಪರಮತ ದತ್ತ ಪೊಕ್ಕಜುಾವನೊಕ್ಕು (ಜೀವಸಂ. ೨೨೦-೧೮) ; ಪರಮತಗರ್ವ ಗಂಧಗಜಭಂಜನಕೇಸರಿ ಬಂದಂ (ನೃಪವಿ. ೧೯-೭). ೨. ಬೇರೆಯ ಜಾತಿ; ಅನ್ಯಮತ: 'ಪರಮತಸಹಿಷ್ಣುತೆ' ಪರಾ. [ಪರ₃+ಮತ]

**ಪರಮತತ್ತ್ವ** (ನಾ). ಶ್ರೇಷ್ಠವಾದ ತತ್ತ್ವ,—ಸಿದ್ಧಾಂತ : ಪರಮ ತತ್ತ್ವದ ನಿಜಸಂಯುಕ್ತರ ಅನು ನೀನೆಂಬ ಶಬ್ದಸುಖಿಗಳ ತೋಟಾ ಎನಗೆ (ಬಸವ. ೮೮೦) ; ಪರಮತತ್ತ್ವ ರಹಸ್ಯವನು ವಿಸ್ತರಿಸಿ(ಗಗತಾ. ೧-೧).
[ಪರಮ + ತತ್ತ್ವ]

**ಪರಮತತ್ವ** (ನಾ). = ಪರಮತತ್ತ್ವ : ಜಾಣನಲ್ಲಾ ಪರಮತತ್ವ ದೊಳ್. . . ಬಸವಣ್ಣ (ಬಸಪು. ೩೭-೪೯); ನರಗೆ ಬೋಧಿಸಿ ಪರಮತತ್ವವ ವರಠಹಸ್ಯವನೆಲ್ಲವನು ವಿಸ್ತರಿಸುತ (ಗಗತಾ. ೧೯-೪೩). [ಪರಮ + ತತ್ವ₁]

**ಪರಮತಪೋಧನ** (ನಾ). ಶ್ರೇಷ್ಠನಾದ ತಪಸ್ವಿ : ಪರಮತಪೋ ಧನರ್ ಪುಗುವರೆಂಬುದಸಂಭವಮಲ್ತೆ ಭೋಗಭೂಚರರ ನಿವಾಸಮಂ (ಆದಿಪು. ೫-೬೬); ಪರಮತಪೋಧನರ್ಗೆ ಬೆಸಕೆಯ್ವ ಮಹಾತ್ಮರೆ ಸೌಖ್ಯ ಭಾಜನರ್ ಧರಣಿಯೊಳ್ (ಧರ್ಮಾಮೃ. ೯-೧೬೬); ಪರಮ ತಪೋಧನನಂ ಬಲ್ಗರಡಿಯವೊಲೆಸುತ್ತೆ ಸುಡಿದ ಕಠದಿಂ ಧರೆಯೊಳ್ ಕರಡಿಗಳಾಗಿಂ ನೀಂ (ನೃಪವಿ. ೨೨-೨೬). [ಪರಮ + ತಪೋಧನ]

**ಪರಮತಪೋನಿಧಿ** (ನಾ). = ಪರಮತಪೋಧನ : ಪರಮತಪೋನಿಧಿ ಯೆನಿಸಿದ ಗುರುವಿಂಗಭಿವಂದಿಸುತ್ತೆ ಹಾರೀತಂ ಕುಳ್ಳಿರೆ(ಕಾದಂಪೂ.೨೬೪).
[ಪರಮ+ತಪೋನಿಧಿ]

**ಪರಮತವಾದಿ** (ನಾ). ಬೇರೆಯ ಮತದ ಪರವಾಗಿ ವಾದಿಸುವ ವನು : ಅಖಣ್ಡಿತಪ್ರತಾಪ ದಿವಾಕರಕಿರಣ ಪರಮತವಾದಿ ಮದನಿರಾಕರ ಣನುಂ (ಎಕ. VIII, ಸೊರಬ. ೨೬೬-೧೨; 1070). [ಸಂ. ಪರಮತವಾದಿನ್]

**ಪರಮತಸಹಿಷ್ಣುತೆ** (ನಾ). ಬೇರೆಯ ಮತದ ಬಗೆಗೆ ಇರುವ ತಾಳ್ಮೆ,—ಸಹನೆ: ಪರಮತಸಹಿಷ್ಣುತೆ ಈ ಔದಾರ್ಯದ ಫಲ (ಮುಕ್ಸಾ.ೞ. ೧೨೩ ಪೀಠಿಕೆ). [ಪರಮತ+ಸಹಿಷ್ಣುತೆ]

**ಪರಮತಾವಲಂಬನ** (ನಾ). ಬೇರೆಯ ಮತವನ್ನು ಆಶ್ರಯಿಸು ವುದು. [ಪರಮತ+ ಅವಲಂಬನ]

**ಪರಮತಾವಲಂಬಿ** (ನಾ). ಬೇರೆಯ ಮತವನ್ನು ಆಶ್ರಯಿಸು ವವನು. [ಸಂ. ಪರಮತಾವಲಂಬಿನ್]

**ಪರಮದರುಶನಿಕ**(ನಾ). [ಜೈನ]ಶ್ರೇಷ್ಠನಾದ ದಾರ್ಶನಿಕ; ಶ್ರಾವ ಕರ ಹನ್ನೊಂದು ವರ್ಗಗಳಲ್ಲಿ ಮೊದಲನೆಯ ವರ್ಗಕ್ಕೆ ಸೇರಿದ ವನು: ಅಪುನರ್ಭವನಾಪ್ತಂ ... ಪರಮದರುಶನಿಕನಂತವಂ ಪ್ರಾಥಮಿಕಂ (ಸುಕುಮಾ. ೬-೨೬). [< ಸಂ. ಪರಮದರ್ಶನಿಕ]

**ಪರಮದೀಕ್ಷೆ** (ನಾ). ಶ್ರೇಷ್ಠವಾದ ನಿಯಮ,—ವ್ರತ : ಅಂತು ಕ್ಷೇಮಂಕರಂ ದುರಿತಾರಿಸೈನ್ಯಮಂ ಬೆಂಕೊಳಲ್ ಬಗೆವಂತೆ ಪರಮದೀಕ್ಷೆ ಯಂ ಕೆಯ್ಕೊಳಲ್ ಬಗೆದು (ಶಾಂತಿಪು. ೮-೧೧೭ ಪ); ಪರಮದೀಕ್ಷೆಗುಪೇ ಕ್ಷಿಸಿದಂ ವಿವೇಕಿಯೇ (ಪುಷ್ಪಪು. ೧೩-೩೪). [ಪರಮ+ದೀಕ್ಷೆ]

**ಪರಮದ್ರೋಹ** (ನಾ). ೧. ಅತ್ಯಧಿಕವಾದ ದ್ರೋಹ,—ವಿಶ್ವಾಸ ಘಾತ. ೨. ಅತಿಯಾದ ದ್ರೋಹವನ್ನು ಬಗೆಯುವವನು :

ಪರಮದ್ರೋಹರೊಳೊಂದಿ ತನ್ನೊಳಿಱಿಯಲ್ಕೋವಿಂದರಂ ಬರ್ಪುದುಂ (ಅಜಿಪು. ೧-೩೬) ; ಪರಮದ್ರೋಹನನಾಂ ಪ್ರತಿಜ್ಞೆಯಿನೆಲೇ ಕೊಂದಪ್ಪೆಂ (ನೇಮಿಪು. ೧೨-೮೦). [ಪರಮ+ದ್ರೋಹ]

**ಪರಮಧನ್ಯ** (ನಾ). ಅತ್ಯಂತ ಪುಣ್ಯವಂತ : ಪರಮಧನ್ಯ ಕೃತಾರ್ಥನಾದೆನು (ಗಗತಾ. ೨೦-೩೮). [ಪರಮ+ಧನ್ಯ$_2$]

**ಪರಮಪಂಡಿತೆ**(ನಾ). ಶ್ರೇಷ್ಠಳಾದ ವಿದುಷಿ: ಕಯ್ಕೊಂಡ ಕಳಾಪರಿಣತೆಯೊಳ್ ಪಂಡಿತೆಯಿಂದಾಕೆ ಪರಮಪಂಡಿತೆಯಪ್ಪಾದಳ್(ಆದಿಪು. ೩-೨೧). [ಪರಮ+ಪಂಡಿತೆ]

**ಪರಮಪತಿವ್ರತೆ** (ನಾ). ಉತ್ತಮಳಾದ ಗರತಿ,—ಹದಿಬದೆ : ಪರಮಪತಿವ್ರತೆಗೆ ಗಂಡನೊಬ್ಬ (ಬಸವ. ೬೧೫); ಪರಮಪತಿವ್ರತೆಯರ ಕುಲಗುರು ಬಸವನ ಭಕ್ತಿಯಿಂದೆ ಮಾನೋನ್ನತಿಯೋಸರಿಸದೆ ಸಭೆಯೊಳ್ಮಹಿಮೆಯನಿರದಾಂತೇಳ್ತಂದು ದೇವಿ ಗೃಹಮಂ ಪೊಕ್ಕಳ್ (ವೃಷವಿ. ೮-೩೮). [ಪರಮ+ಪತಿವ್ರತೆ]

**ಪರಮಪತ್ರಾನ್ವಿತ** (ನಾ). ೧. ಶ್ರೇಷ್ಠವಾದ (ತಾವರೆ) ಎಲೆಗಳಿಂದ ಕೂಡಿರುವುದು ; ಕೊಳ. ೨. ಶ್ರೇಷ್ಠವಾದ ವಾಹನದಿಂದ ಕೂಡಿರುವವನು. ೧, ೨ : ಹರನಂತೆ ವಿಷಧಾರಿ . . . ಆ ಕರಕಮಲ ಸಂಗಿಯೊಲ್ ಪರಮಪತ್ರಾನ್ವಿತಂ ಪರಮಪತ್ರಾನ್ವಿತನೊಲಾ ಸರಸಿ ಕಣ್ಗೆಸೆದುದು (ಚಬಪು. ೪೫-೪೯). [ಪರಮ+ಪತ್ರಾನ್ವಿತ]

**ಪರಮಪದ** (ನಾ). ೧. ಅತ್ಯುನ್ನತವಾದ ಸ್ಥಾನ,—ಪದವಿ. ೨. ಮೋಕ್ಷ ; ಕೈವಲ್ಯ : ಪುರುಪರಮೇಶ್ವರನೈದಿದ ಪರಮಪದಂ ನಮಗಮದುವೆ ನೆಲೆ ಪೆಱತುಂಟೇ (ಆದಿಪು. ೧೬-೫೬) ; ಶ್ರೀಗೆ ನೆಲೆಯೆನಿಸಿ ವಿದ್ಯಾಶ್ರೀಗಾಶ್ರಯಮೆನಿಸಿ ಪರಮಪದಮಂ ಪಡೆವುದ್ಯೋಗದಿನೊಗೆದಂ . . . ಅಭಿನವಪಂಪಂ (ಮಲ್ಲಿಪು. ೧೨-೧) : ಪರಮಪದವೀವ ಪರಮಪುರುಷೋತ್ತಮನು ಬಂದನು (ಕುಪ್ರಾಉ. ೮-೫೩) ; ಮುಕ್ತರಾದ ಜೀವರುಗಳು ಲೋಕಾಕಾಶದಲ್ಲೇ ಸರ್ವೋರ್ಧ್ವಭಾಗದಲ್ಲಿ ಸಕಲಲೋಕಗಳ ಉಪರಿಸ್ಥಾನದಲ್ಲಿರುತ್ತಾರೆ. ಅದೇ ಪರಮಪದ (ಹಿಂದಸಾ. ೮೨). ೩. ಮೋಕ್ಷ ಸ್ವರೂಪನಾದವನು; ಪರಮಾತ್ಮ : ಪರಮಪದನಾತನಾ ಮುರಹರನನೊಡಂಬಡಿಪೊಡೆನ್ನ ನಣ್ಪಿನ ನುಡಿಯೊಳ್ ಪುರುಳಿಲ್ಲ (ಜಗವಿ. ೧೧-೨೬). [ಪರಮ+ಪದ$_2$]

**ಪರಮಪದವಿ** (ನಾ). =ಪರಮಪದ ೧ : ಅವಿತಥದಾನಿ ಗುಣಗಣದ ಪರಮಪದವಿಗೆ ಮೊದಲೆಂಬುದನೆನಿಸಿ ನೆಗೞ್ದುಮಾ ನೃಪನುದಾತ್ತಗುಣಗಣರ ತುತ್ತತುದಿಯೊಳನೂನಂ (ಶಾಂತಿಪು. ೧-೬೦) ; ಪರಮಪದವಿಯು ನಿಮ್ಮ ಕೊರಳಲ್ಲಿ ಕಟ್ಟಿಕೊಳ್ಳಿ, ಪರಮಪದವಿಯ ನಿಮ್ಮ ತಲೆಯಲ್ಲಿ ಹೊತ್ತುಕೊಳ್ಳಿ, ಎನಗೆ ನಿಮ್ಮ ತೊತ್ತುತನವೇ ಸಾಕು (ಗಜೇಪ. ಕ. ೨೦೩-೯೦). [ಪರಮ+ಪದವಿ]

**ಪರಮಪದಸ್ಥ** (ನಾ). ಪರಮಾತ್ಮ : ಕಸ್ತೂರಿಗಂಧಿಯರ್ ಬನದೊಳು ಬಹು ಫಲವಸ್ತುಗಳನು ಸೇಂದಿಕೊಂಡು ಮುಸ್ತೈದೆಯರಾಗಿ ಬಂದರು ಪರಮಪದಸ್ಥ ಶ್ರೀಕೃಷ್ಣನಿರ್ದೆಡೆಗೆ (ಮೋಹತ. ೪-೬೧). [ಸಂ.]

**ಪರಮಪವಿತ್ರ**(ಗು). ೧. ಅತ್ಯಂತ ಪಾವನವಾದ ; ಬಹಳ ಪೂಜ್ಯವಾದ : ಶುಭಪರಿಣಾಮದೊಳ್ ನೆಗೞ್ದ ಪರಮಪವಿತ್ರೋತ್ತಮಪಾತ್ರಕ್ಕೆ ಶ್ರೀಷೇಣಂ . . . ಪಾತ್ರದಾನಮನಿತ್ತಂ (ಶಾಂತಿಪು. ೯-೬೨ ಪ). (ನಾ). ೨. ಬಹಳ ಪಾವನನಾದವನು ; ಅತ್ಯಂತ ಪೂಜ್ಯನಾದವನು : ಪರಮಪವಿತ್ರನ ಕರಸರಸಿರುಹಪುಟಾಂತರದೊಳ್ . . . ಅತಿಮುದದಿಂ ಪರಮಾನ್ನಮನಿಕ್ಕಿದಂ (ವರ್ಧಪು. ೧೫-೨೧). ೩. ಬಹಳ ಶುದ್ಧನಾಗಿರುವವನು,—ಸ್ವಚ್ಛನಾಗಿರುವವನು : ಪರಮಪವಿತ್ರನಂತೆ ಧರೆ ನೀರಜಮಾದುದು (ಅನಂಪು. ೫-೩). [ಪರಮ+ಪವಿತ್ರ]

**ಪರಮಪವಿತ್ರೆ** (ನಾ). ಬಹಳ ಪೂಜ್ಯಳಾದವಳು ; ಅತ್ಯಂತ ಪಾವನೆ : ಪರಮಪವಿತ್ರೆ ಪುಲೋಮಪುತ್ರಿ ಪರಿವಾರದೇವೀಸಮನ್ವಿತೆ ಪೋಗಿ ಮಹಾದೇವಿಯ ಪ್ರಸೂತಿಕಾನಿಕಾಯಮಂ ಪೊಕ್ಕು (ಶಾಂತಿಪು. ೧೦-೫ ಪ). [ಸಂ. ಪರಮಪವಿತ್ರಾ]

**ಪರಮಪಾತಕ** (ನಾ). ೧. ಅತ್ಯಧಿಕವಾದ ಹೀನಕಾರ್ಯ,—ಪಾಪ : ಪ್ರಾಣರಕ್ಷಣಮೆ ಪರಮಧರ್ಮಂ ಪ್ರಾಣವಧೆಯೆ ಪರಮಪಾತಕಂ (ಪಂಚತಂ. ೫೦-೨೧); ಅರಸನಾದಡೆಯು ನಿರಪರಾಧಿಯನಿಂತು ಕೊಲುವನೆ ಪರಮಪಾತಕವಾಗದೇ (ಬಸಪು. ೨೮-೩೧). ೨. ಅತ್ಯಂತ ಹೀನ ಕಾರ್ಯ ಮಾಡುವವನು : ಅವನೊಬ್ಬ ಪರಮಪಾತಕ (ರೂಢಿ). [ಪರಮ+ಪಾತಕ]

**ಪರಮಪಾತಕಿ** (ನಾ). ಅತ್ಯಂತ ಘೋರವಾದ ಕಾರ್ಯವನ್ನು ಮಾಡಿದ ವ್ಯಕ್ತಿ ; ಮಹಾಪಾಪಿ : ಪರಮಪಾತಕಿಯಾದೆ ವೈಜೀಗೊರವನೆಲ್ಲಿಗೆ ಸಂದನೋ ಆಕರಿಸಿಕೊಳ್ಳದೆ ತೋಱು ನೀ (ಬಸಪು. ೫೨-೬). [ಪರಮ + ಪಾತಕಿ]

**ಪರಮಪಾವನ** (ಗು). ೧. ಬಹಳ ಪರಿಶುದ್ಧವಾದ ; ಅತ್ಯಂತ ಪವಿತ್ರವಾದ : ಮಿಥ್ಯಾಜ್ಞಾನಿ ಭವಸುಖಮನೊಲ್ವವೊಲೇನೊಲ್ಲುಮೆ ಪರಮಪಾವನಜ್ಞಾನಪರಂ (ಮಲ್ಲಿಪು. ೧೩-೧೬೩); ಪರಮಪಾವನ ವರಸಿದ್ಧ ಬೆಳೆದನು ಸುರಮ್ಯಶಿವನ ಲೀಲೆಯಲಿ (ಸಿದ್ಧಪು. ೩-೬೩). (ನಾ). ೨. ಬಹಳ ಪರಿಶುದ್ಧನಾದವನು ; ಅತ್ಯಂತ ಪವಿತ್ರನಾದವನು : ರಾಮನಾಥನನರ್ಚಿಸಿದವರು ಪರಮಪಾವನರು (ಬಸಪು. ೫೧-೬೦). [ಪರಮ + ಪಾವನ]

**ಪರಮಪಾವನೆ** (ನಾ). =ಪರಮಪವಿತ್ರೆ : ವರರೂಪವತಿ ತಾನೆಂದು ಪರಮಪಾವನೆಯೆಂದು ಬಱುದೆ ಬೆಱೆಯದನುಸರಿಸುವುದಾತ್ಮವಲ್ಲಭನ (ಹದಿಬ. ೩-೩೧). [ಸಂ. ಪರಮಪಾವನಾ]

**ಪರಮಪುರುಷ** (ನಾ). ೧. ಶ್ರೇಷ್ಠವ್ಯಕ್ತಿ ; ಬಹಳ ಉತ್ತಮನಾದವನು : ಸರಸಿಜಾನನೆ . . . ಕರ್ಪುರದ ವೀಳ್ಯಂಗಳ ಪರಮಪುರುಷಂಗಿತ್ತು . . . ಸಂತೋಷಶರಧಿಯೊಳಗೋಲಾಡುತಿರ್ದಳು (ತುರಂಗ. ೯೨-೧೩). ೨. ದೇವಾಧಿದೇವ; ಪರಮಾತ್ಮ : ಪರಮಪುರುಷತ್ರಯ ಪರತ್ರವಿಚಿತ್ರಚಾರಿತ್ರ ಪರಮಪರ ಪರಮಾತ್ಮ . . . ಚಿತ್ತೈಸು (ಬಸಪು. ೬೧-೪೫); ಪದುಮನಾಭ ಪರಮಪುರುಷ ಪರಂಜ್ಯೋತಿಸ್ವರೂಪ (ಪುರಂದ. ೪-೮೧-೧) ; ಇವನೇ ಪರಮಸಿದ್ಧನು, ಪರಮಯೋಗೀಶ್ವರನು, ಪರಮಪುರುಷನು (ಹಿಂದಸಾ. ೯೬). [ಪರಮ+ಪುರುಷ]

**ಪರಮಪುರುಷಾರ್ಥ** (ನಾ). ೧. ಮನುಷ್ಯನು ಸಾಧಿಸಬೇಕಾದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಗುರಿಗಳಲ್ಲಿ ಕೊನೆಯದು ಹಾಗೂ ಅತ್ಯಂತ ಶ್ರೇಷ್ಠವಾದುದು ; ಮುಕ್ತಿ : ಪರಮಪುರುಷಾರ್ಥಮಿರ್ದುದು ಚರಮದೊಳನ್ನೆವರಮುೞಿದ ಪುರುಷಾರ್ಥದೊಳಾಚರಿಸುವುದು ತಕ್ಕುದು (ಪಂರಾಮಾ. ೯-೧೨೯); ಪರಮಪುರುಷಾರ್ಥಮಂ ವಿಸ್ತರದಿಂ ಸಾಧಿಸುವೆಂ (ನೇಮಿಪು. ೧-೯೫); ಪರಮಾತ್ಮಪ್ರಾಪ್ತಿಯೇ ಪರಮಪುರುಷಾರ್ಥವೆಂದು ತಂತ್ರವಾರ್ತಿಕ ವ್ಯಾಕರಣಾಧಿಕರಣದಲ್ಲಿ ಕುಮಾರಿಲಭಟ್ಟಾಚಾರ್ಯರು ನಿರೂಪಿಸಿರುವರು (ಹಿಂದಸಾ. ೧೬೨). ೨. ದೊಡ್ಡಸಾಧನೆ; ಅತಿಮುಖ್ಯವಾದ ಸಿದ್ಧಿ: ವಿಶ್ವದ ಅನಂತತೆ – ಗಾಂಭೀರ್ಯಗಳನ್ನೂ ಅನುಭವಿಸಿ, ಆನಂದಿಸುವ ಭಾಗ್ಯವನ್ನು ಪಡೆಯಬೇಕು. ಈ ಆನಂದವೇ ಪರಮಪುರುಷಾರ್ಥ (ಮುಕ್ತಾರ. ೨. ಪೀಠಿಕೆ); ಶ್ರೀರಾಮಪ್ರೇಮದೊಳೆ ಕಂಡಳ್ ಜನಕಜಾತೆ ಜೀವನದ ಪರಮಪುರುಷಾರ್ಥಮಂ (ಶ್ರೀರಾಮಾ. ೫೪-೧೬). [ಪರಮ + ಪುರುಷಾರ್ಥ]

**ಪರಮಪ್ರಭಾವ** (ನಾ). ೧. ಅಧಿಕವಾದ ಹಿರಿಮೆ,—ಘನತೆ. ೨. ಬಹಳ ಘನತೆಯುಳ್ಳವನು: ಪರಮಪ್ರಭಾವರಂ ಶ್ರೀಧರದೇವರಂ . . . ಅಖಿಳಾವನೀತಳಂ ಕೀರ್ತಿಸುಗುಂ (ಸುಕುಮಾ. ೧-೨೧).
[ಪರಮ + ಪ್ರಭಾವ]

**ಪರಮಪ್ರಮಾಣ** (ನಾ) ೧. ಪರಮಾವಧಿ ; ಉನ್ನತ ಮಟ್ಟ : ಪರಮಪ್ರಮಾಣಮಱುಸಾಸಿರಂಬರಂ ಮತ್ತೆ ಮಧ್ಯಮಸ್ಥಿತಿ ನಾಲ್ಸಾಸಿರಮಧಮಮಾತ್ರಮಿರ್ಛಾಸಿರಂ ಶರಾಸನಮದು ಕ್ರಮಕ್ರಮದಿಂದಂ (ಶಾಂತಿಪು. ೬-೧೦೩). ೨. ಅತ್ಯಂತ ನಿರ್ಧಾರಕವಾದ ಆಧಾರ : ಅವರ ಮಾತನ್ನೇ ಪರಮಪ್ರಮಾಣವೆಂದು ಎಲ್ಲರೂ ಒಪ್ಪಿಕೊಂಡರು (ರೂಢಿ). [ಪರಮ+ಪ್ರಮಾಣ]

**ಪರಮಪ್ರಸಾದ**(ನಾ). ೧. ಅತ್ಯಧಿಕವಾದ ಅನುಗ್ರಹ,—ದಯೆ : ಕ್ಷೇಮಂಕರಮಹಾರಾಜಂ ಪರಿತೋಷಪ್ರಾದುರ್ಭಾವಚಿಹ್ನಭೂತಪರಮಪ್ರಸಾದಸ್ಮೇರಮುಖಂ ಪ್ರಿಯಾತ್ಮಜಾನನಾರವಿಂದನಿರೀಕ್ಷಣಾನಂತರಂ (ಶಾಂತಿಪು. ೮-೬೭೫). ೨. [ವೀಶೈ] ಪ್ರಸಾದಗಳಲ್ಲಿ ಒಂದು ವಿಧ : ಜೀವಭಾವದಲ್ಲಿ ಕೂಡಲಿಕ್ಕಾಗಿ ಪರಮಪ್ರಸಾದ ಆ ಪರಮಪ್ರಸಾದ ವ್ಯತಿರಿಕ್ತವಾಗಿ ಕಾಣಿಸಿಕೊಂಡಲ್ಲಿ ಪ್ರಸಾದವಾಯಿತ್ತು (ಸರ್ವಪ. ೧೧೬-೬೦೪);ಪರಮಪ್ರಸಾದಮಂ ಮಡ್ಡುಗರುವೆ ದಯಂಗೈವುದು(ಉದ್ಭಟ. ೫-೧೦೩). [ಪರಮ+ಪ್ರಸಾದ]

**ಪರಮಪ್ರಸಾದಿ**(ನಾ).[ವೀಶೈ]ಪ್ರಸಾದಿಗಳಲ್ಲಿ ಶ್ರೇಷ್ಠನಾದವನು: ಇಂತಪ್ಪ ಪರಮಪ್ರಸಾದಿಗಳ ಶ್ರೀಚರಣಕ್ಕೆ ನಮೋನಮಃ ಎಂಬೆನಯ್ಯ (ಅಖಂಡೇ. ೧೫೧-೧). [ಪರಮ + ಪ್ರಸಾದಿ]

**ಪರಮಪ್ರಿಯ** (ಗು). ೧. ಅತ್ಯಂತ ಪ್ರೀತಿಪಾತ್ರವಾದ : ಪರಮಪ್ರಿಯವಸ್ತುಗಳಂ ಪರಮಪ್ರಯುತಂಗಳಂ ಸಮಂತು ನಿಜಾಂತಃಕರಣದೊಳಣಮಲ್ಲೆಂಬಂತಿರುತಿರ್ಪ ಗಭೀರವೃತ್ತಿ ವಿಹೃತಮೆನಿಕ್ಕುಂ (ಶೃಂಗಾರ. ೨-೬೮). (ನಾ). ೨. ಅತ್ಯಂತ ಪ್ರೀತಿ,—ಮೆಚ್ಚುಗೆ : ಪರಮಪ್ರಿಯದಿಂ ವಿಶ್ವಂಭರಭೂಪಂ ತನ್ನನಿರದೆ ಬರವೇಟ್ಟನೆನಲ್ (ಕುಸುಮಾ. ೧೫-೧೩೭); ಪರಮಪ್ರಿಯದಿಂ ಶಚಿ ತನ್ನರಸನೆನಿಪಮರಪತಿಗೆ ತೋಱಿಸಿದತಿಬಂಧುರಮಣಿದರ್ಪಣಮೆಂಬಂತಿರಲೊಪ್ಪಿತ್ತು ದಯಭೂಧರದೊಳಿನಬಿಂಬಂ (ತ್ರಿಷವಿ. ೨೭-೧೦೯). ೩. ಬಹಳ ಪ್ರೀತಿಪಾತ್ರನಾದ ವ್ಯಕ್ತಿ : ಪರಮಪ್ರಿಯರೆತ್ತಾನುಂ ಪರಲೋಕಪ್ರಾಪ್ತರಾದರೊಡವರ ಪರೋಕ್ಷಾಂತರದೊಳೆ ಮಱುಗುವ ಮಱುಕಂ ಕರುಣಾತ್ಮಕವಿಪ್ರಲಂಭವೆನೆ ಪೆಸರ್ವಡೆಗುಂ (ಶೃಂಗಾರ. ೪-೪೯). [ಪರಮ+ಪ್ರಿಯ]

**ಪರಮಪ್ರೀತಿ** (ನಾ). ಅತ್ಯಂತ ಅನುರಾಗ ; ಅತಿಶಯವಾದ ಪ್ರೇಮ : ಪರಮಪ್ರೀತಿಯಿನತಿನಿರ್ಭರಭಕ್ತಿಯಿನಾ ಜಿನಾರ್ಚಕಕ್ರಮಯುಗಮಂ ಶಿರದೊಳ್ತಾಳ್ದೆ ಶಚೀಪತಿಕಿರೀಟಮಿತ್ತತ್ತು ಪಾದ್ಯಮಂ ನಿಜರುಚಿಯಿಂ (ಮಲ್ಲಿಪು. ೧೨-೫೦) ; ಪರಮಪ್ರೀತಿಯುನಪ್ಪುಕೆಯ್ದು ನಳಧಾತ್ರೀವಲ್ಲಭಂ ಸಿಂಹವಿಷ್ಟರದೊಳ್ ಕುಳ್ಳಿರಲ್ (ನಳಚಂ. ೭೬೯).
[ಪರಮ+ಪ್ರೀತಿ]

**ಪರಮಪ್ರೇಮ** (ನಾ). = ಪರಮಪ್ರೀತಿ : ಪರಮಪ್ರೇಮಂ ಜನ್ಮಾಂತರದಿಂದೊಡವಂದುದೆನಿಸಿ ಗೆಡೆ ಬೆಚ್ಚವೊಲಚ್ಚರಿಯಾಗೆ ರಾಮಲಕ್ಷ್ಮೀಧರರೊಳಮಾದತ್ತು ಭರತ ಶತ್ರುಘ್ನರೊಳಂ (ಪಂಪರಾಮಾ. ೩-೧೪೩); ಪರಮಪ್ರೇಮಾವಸ್ಥಾಂತರದ ವಿಭೇದಕ್ಕೆ ವಿವಿಧಮಧುರೋಕ್ತಿಗಳಿಂ ವಿರಚಿಸಿದ ನುದಾಹೃತಿಯಂ ಪರಿಣತಿಯೊಳ್ (ಶೃಂಗಾರ. ೪-೮೭).
[ಪರಮ+ಪ್ರೇಮ]

**ಪರಮಬ್ಬೆ** (ನಾ). ಒಬ್ಬಾಕೆಯ ಹೆಸರು : ಕೂರ್ಗ್ಗಲ್ಲ ಬೂತುಗನರಸಿ ಪರಮಬ್ಬೆಯಾಳುತ್ತಿರೆ ಕೂರ್ಗಲ್ಲಗಾವುಣ್ಡ ತಮ್ಮುತ್ತಿಬ್ಬೋರ್ ತುಱುಗೊಳೊಳ್ಯಾದಿ ಸತ್ತರ್ (ಎಕ. IV, ಹುಣಸೂ. ೯೨-೬ ; ಸು. 920).
[ಪರಮ + ಅಬ್ಬೆ$_1$]

**ಪರಮಬ್ರಹ್ಮ** (ನಾ). ಅತ್ಯಂತ ಶ್ರೇಷ್ಠನಾದ ಪರಮಾತ್ಮ; ಪರಬ್ರಹ್ಮ : ಪರಮಬ್ರಹ್ಮತನೂಭವರ್ ದ್ವಿಜವರರ್ ವರ್ಣೋತ್ತಮರ್... ಧರಾಮರರೀ ಬ್ರಾಹ್ಮಣರೆಂದು ಕೊಂಡುಕೊನೆದು (ಆದಿಪು. ೧೫-೨೧) ; ಪರಮಬ್ರಹ್ಮಶರೀರಪುಷ್ಟಿ ಜನತಾಂತರ್ದೃಷ್ಟಿ . . . ಸರ್ವಾಂಗಸುಂದರಿ ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಲೀರಂಗದೊಳ್ (ಪಂಪರಾಮಾ. ೧-೬) ; ಪರಮಬ್ರಹ್ಮನ ನಂದನಂ ಭರತಚಕ್ರಾಧೀಶದರ್ಪಾಪಹಂ ಚರಮಾಂಗಂ ಕುಸುಮೇಷು ಬಾಹುಬಲಿದೇವಂ (ಅನಂಪು. ೧೧-೧೧).
[ಪರಮ + ಬ್ರಹ್ಮ]

**ಪರಮಭಕ್ತಿ** (ನಾ). ಅತ್ಯಂತ ಶ್ರೇಷ್ಠವಾದ ಭಕ್ತಿ,—ಶ್ರದ್ಧೆ : ವರಶೈವವೈಷ್ಣವಾಗಮಗಳ ಚರ್ಚಿಸಿ ಸಂಬಂದ ಮತದಿ ಪ್ರವರ್ತಿಸಿ . . . ದೈವಜ್ಞನಾಗಿ ಶುಚಿಯೊಳಿರೆ ಪರಮಭಕ್ತಿಯು (ವೇದಾಂಪ. ೯) ; ಭಗವದಪರೋಕ್ಷವೆಂಬ ಸಾಕ್ಷಾತ್ಕಾರವಾದರೆ ಭಗವಂತನಲ್ಲಿ ನಿರಂತರ ನಿರವಧಿಕ ಪ್ರೇಮಪ್ರವಾಹವುಂಟಾಗುವುದು. ಇದೇ ಪರಮಭಕ್ತಿ (ಹಿಂದಸಾ.೨೯೨).
[ಪರಮ+ಭಕ್ತಿ]

**ಪರಮಭಟಾರಕ** (ನಾ). ಬಹಳ ಪೂಜ್ಯನಾದವನು ; ಒಂದು ಬಿರುದು : ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ (ಸೌಇಇ. XX, ೪೬-೩ ; 1072) ; ಮಹಾರಾಜಾಧಿರಾಜಪರಮೇಶ್ವರ ಪರಮಭಟಾರಕ ದ್ವಾರಾವತೀಪುರವರಾಧೀಶ್ವರ (ಎಕ. IX, ಮಾಗಡಿ. ೧೫-೨ ; 1315).
[ಪರಮ+ಭಟಾರಕ]

**ಪರಮಭಟ್ಟಾರಕ** (ನಾ). = ಪರಮಭಟಾರಕ : ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ (ಕಇಅ. ೫-೨-೧೬೯ ; 1058) ; ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರ × × × ನೂರ್ಮಡಿಚಕ್ರವರ್ತ್ತಿ ತ್ರೈಲೋಕ್ಯಮಲ್ಲದೇವರು ಕಲ್ಯಾಣಪುರದ ನೆಲೆವೀಡ × × × ಗೆಯ್ಯುತ್ತಮಿರೆ (ಕೊಶ್ಲಾಶಾ. ೧೧-೯ ; ?).
[ಪರಮ+ಭಟ್ಟಾರಕ]

**ಪರಮಯೋಗಿ** (ನಾ). ಶ್ರೇಷ್ಠನಾದ ಮುನಿ,—ಋಷಿ : ಪರಮಯೋಗಿಗೆ ಯೋಗನಿಯೋಗಘಾತಮಂ ಘಟಿಯಿಸೆ (ಶಾಂತಿಪು. ೯-೨೮).
[ಪರಮ+ಯೋಗಿ]

**ಪರಮರಹಸ್ಯ** (ನಾ). ಅತ್ಯಂತ ಗೌಪ್ಯ ; ಬಹಳ ಗುಟ್ಟು : ಪರಮರಹಸ್ಯಮಿದಂ ಸಾದರದಿಂದೇಕಾಂತದಲ್ಲಿ ಪೇಳ್ವೆಂ (ತ್ರಿಷವಿ. ೨೫-೧೮) ; ಪರಮರಹಸ್ಯಮಿಾ ಮತಮಹತ್ವಮಿದೆಮ್ಮ ಕುಬುದ್ಧಿಗಳ್ಗೆ ಗೋಚರಿಕುಮೆ. (ಪ್ರಪವಿ. ೩೯-೮೨). [ಪರಮ + ರಹಸ್ಯ]

**ಪರಮರ್ಷಿ**(ನಾ). = ಪರಮಯೋಗಿ : ಪರಮರ್ಷಿ ನಾರದಂ ತನಗೊರೆದು ಕೂಡೆ ತಾನುರಿಯೊಳ್ಪ್ರವೇಶಿಸಿದಂ (ಜೈಮಿಭಾ. ೫-೩೨).
[ಪರಮ + ಋಷಿ]

**ಪರಮವ್ರತ** (ನಾ). ೧. ಶ್ರೇಷ್ಠವಾದ ನೋಂಪಿ,—ವ್ರತ. ೨.[ಗಣಿತ]ಐದು ಎಂಬ ಸಂಖ್ಯೆಯ ಸಂಕೇತ: ಪುರಹರವಕ್ತ್ರಂ ಪಂಚಂ ಪರಮವ್ರತಭೂತಮಿಂದ್ರಿಯಂ ಇಷುಪತ್ರಂ . . . ಐದಱ ನಾಮಂ (ಪ್ರಪಹಾ. ೯-೫). [ಪರಮ + ವ್ರತ]

**ಪರಮಸುಖ**(ನಾ). ೧. ಅತಿಶ್ರೇಷ್ಠವಾದ ಸಂತೋಷ,—ಆನಂದ: ಪರಮಸುಖಪದ ಶ್ರೀಧರ್ಮಕಾಮಾರ್ಥಮೋಕ್ಷಸ್ಥಿರವಿಷಯವಿಶೇಷಾಖ್ಯಾನ ವಿಖ್ಯಾತ ತತ್ತ್ವಂ (ಕವಿರಾ. ೩-೨೧೦) ; ಒದವುವುದು ನಿಪ್ಪ್ರವೀಚಾರದಿನವರ್ಗೆ ಮನೋಜಪರಮಸುಖಮಿನ್ನವರಭ್ಯುದಯಮನದನಿನ್ನೇವೇಟ್ಟುದೊ

(ಶಾಂತಿಪು. ೯-೧೨೮); ನಿಮ್ಮ ನೋಟವನಂತಸುಖ ಕೂಟ ಪರಮಸುಖ (ಬಸವ. ೪೯೧); ಆ ದಯಾನಿಧಿಯಡಿಗೆ ಸಾರಿದೊಡಹುದು ಪರಮಸುಖ (ಕೌಶಿರಾ. ೨೩-೧೩). ೨. ಪರಮಾವಧಿಯಾದ ಆನಂದ; ಮೋಕ್ಷ; ಮುಕ್ತಿ: ಅದಱಿಂ ಸಕಲಕಳಾಗಮವಿದರಿಂದಂ ತಪ್ಪದಂತು ನೆಗಟ್ದಿಂ ನೆಗಟ್ದುಂದುದಿತೋದಿತ ಪರಮಸುಖಾಸ್ಪದಕ್ಕೆ ಬಗೆದಂತೆ ನೀಮೆ ಮೊದಲಿಗ ರಪ್ಪಿರ್ (ಆದಿಪು. ೧೫-೧೮). [ಪರಮ+ಸುಖ]

**ಪರಮಸುಖಿ** (ನಾ). ಅತಿಶ್ರೇಷ್ಠವಾದ ಆನಂದವನ್ನು ಹೊಂದಿದ ವ್ಯಕ್ತಿ: ಅನಾಯಾಸದಿಂದ ಮನೆಯ ಮಾಡಿ ನಿರಾಯಾಸದಿಂದ ಪರಮಸುಖಿ (ಬಸವ. ೯೧೬). [ಪರಮ+ಸುಖಿ]

**ಪರಮಸ್ಥಾನ**(ನಾ). [ಜೈನ](ಮೋಕ್ಷಕ್ಕೆಸಂಬಂಧಿಸಿದ) ಏಳುಬಗೆಯ ಉತ್ತಮ ಸ್ಥಿತಿಗಳು; ⊫ ಒಳ್ಳೆಯ ಜನ್ಮದಲ್ಲಿ ಹುಟ್ಟುವುದು, ಒಳ್ಳೆಯ ಶ್ರಾವಕನಾಗುವುದು, ಮನೆ ತೊರೆದು ತಪಸ್ವಿಯಾಗುವುದು, ದೇವೇಂದ್ರಪದವಿ, ಚಕ್ರವರ್ತಿಪದವಿ, ಅರ್ಹತ್ಪದವಿ ಮತ್ತು ಮುಕ್ತಿ ಎಂಬ ಮೋಕ್ಷಸಾಧನೆಯ ಏಳು ಹಂತಗಳು: ಸಜ್ಜಾತಿ ಸದ್ಗೃಹಿತ್ವ ಪರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣಮೆಂಬೇೞುಂ ಪರಮಸ್ಥಾನನಾಮಕ್ರಿಯಾನ್ವಯ ಕ್ರಿಯೆಗಳಂ . . . ಅಱಿಪಿ (ಆದಿಪು. ೧೫-೧೬ ಪ); ದರ್ಶನದಿಂ ಜ್ಞಾನದಿನೊಪ್ಪುವ ಪರಮಸ್ಥಾನಮನಾಂ ಪಡೆವೆನಕ್ಕೆ ಪಂಚಮಗತಿಯಂ (ಅಜಿಪು. ೨-೬೩). 'ಸಪ್ತಪರಮಸ್ಥಾನ' ಪರಾ. [ಪರಮ+ಸ್ಥಾನ]

**ಪರಮಸ್ನೇಹ**(ನಾ). ಉತ್ಕೃಷ್ಟವಾದ ಗೆಳೆತನ,—ಮೈತ್ರಿ: ಪರಮಸ್ನೇಹಾಮೃತಾರ್ದ್ರೇಕ್ಷಣರುಚಿನಿಚಯಂ ಸೇಸೆ ಸಂಭಾಷಣಂ ತೂರ್ಯರವಂ . . . ಒಲವು ಮೌಹೂರ್ತಮಾಗಲ್ ತದಲ್ಪೋದರಿಯೊಳ್ ವೈವಾಹವಪ್ಪನ್ನೆಗವಥಿನವವೈವಾಹದಿಂ ಕೃಷ್ಣನಿರ್ದಂ (ಜಗವಿ. ೧೧-೫೩); ಪರಮಸ್ನೇಹರಸಂ ರುಚಿಚ್ಛಲದಿನಾದಂ ನೇತ್ರದಿಂ ತಾಂ ಕಡಲ್ವರಿಯುತ್ತಿರ್ದಪುದೆಂಬವೋಲ್ ಪದೆದು ನೋಡುತ್ತುಂ (ಕುಸುಮಾ. ೧೦-೫೮). [ಪರಮ+ಸ್ನೇಹ]

**ಪರಮಹಂಸ** (ನಾ). ೧. ಪರಮಾತ್ಮ; ಪರಬ್ರಹ್ಮ: ಪರಮಹಂಸ ಪರಾತ್ಮ ಪರಮೇಶ್ವರ . . . ಪರೋತ್ತಮ ಕರುಣಿಸುವುದು (ಕುವ್ಯಾಆ. ೬-೮೭); ಪರಮಹಂಸಂ ಲಿಂಗ ಪದಿನಾಱು ಸ್ವರಗಳೇ ಗೋಮುಖ (ಶಂಕದಾ. ೪-೫೯). ೨. (ಧ್ಯಾನದಿಂದ ಇಂದ್ರಿಯನಿಗ್ರಹ ಮಾಡಿದ) ಶ್ರೇಷ್ಠವರ್ಗದ ಸಂನ್ಯಾಸಿ; ⊫ ಕುಟೀಚಕ, ಬಹೂದಕ, ಹಂಸ, ಪರಮಹಂಸರೆಂಬ ಸಂನ್ಯಾಸಿಗಳ ನಾಲ್ಕುಪ್ರಕಾರಗಳಲ್ಲಿ ಕೊನೆಯ ವರ್ಗ: ಅಸ್ಮನ್ಮನೋ[ಸ]ಬಳಂ(?) ತೀರ್ವಡೆ ತೀರ್ಗುಮಾ ಪರಮಹಂಸಸ್ವಾಮಿಯಿಂದೆಂದು ವಿಕ್ಲಬದಿಂ ತಾಂ ಬರವೇೞ್ಪುದುಂ ಪರಮಹಂಸಂ ಬಂದು ಕುಳ್ಳಿರ್ದೊಡೆ (ಸುಕುಮಾ. ೩-೬); ಯತಿಯು ಪ್ರವೃತ್ತಿಭೇದದಿಂ ಕುಟೀಚಕ ಬಹೂದಕ ಹಂಸ ಪರಮಹಂಸರೆಂದು ನಾಲ್ಕು ತೆಱನಾಗಿರ್ಪರು (ವಿವೇಕ. ೧೪೪); ನೂರಕ್ಕೆ ನೂರರಷ್ಟು ಒಳ್ಳೆಯವರಾಗಿರುವವರು ಪರಮಹಂಸರೆಂದೆನಿಸಿಕೊಳ್ಳುತ್ತಾರೆ (ಪಂಜಪಂ. ೧೨೧). ೩. ಒಂದು ಉಪನಿಷತ್ತಿನ ಹೆಸರು: ಶ್ರೀರುದ್ರ ಬೃಹದಾರಣ್ಯಕ . . . ಹಂಸ ಪರಮಹಂಸ . . . ಮುಂಡಕವೆಂಬಿವು ಮೊದಲಾದವೇ ಉಪನಿಷತ್ತುಗಳು (ವಿವೇಕ. ೪). [ಸಂ.]

**ಪರಮಹಿತವ** (ನಾ). ಬಹಳ ಒಳ್ಳೆಯದನ್ನುಂಟುಮಾಡುವವನು,—ಶುಭವನ್ನುಂಟುಮಾಡುವವನು: "ಆ ಪರಮಹಿತವಂ ತಕ್ಕಂ" (ಶಬ್ದಮಂ. ೪೮). [ಪರಮ+ಹಿತವ]

**ಪರಮಾ** (ನಾ). ಒಂದು ಬಗೆಯ ಗುಹ್ಯರೋಗ; ಮೇಹ; "ಒಂದು ಜನನೇಂದ್ರಿಯ ರೋಗ" (ಸಿಂಕೋ. ೩೧೮); "ಸ್ತ್ರೀ ಸಂಬಂಧದಿಂದ ಬಂದ ರೋಗ, ಗನೋರಿಯಾ" (ಕಸ್ತೂಕೋ. ೫೮೧). [←ಮರಾ. ಪರಮಾ./ಸಂ.ಪ್ರಮೇಹ]

**ಪರಮಾಂಡಳಿಕ**(ನಾ). ಬೇರೆಯ ಮಂಡಳಿಕ; ಅನ್ಯಪ್ರಾಂತವನ್ನು ಆಳುವವನು: ಪರಮಾಂಡಳಿಕರ್ ಭಯದಿಂ ಕರಂಗಳಂ ಮುಗಿದು ಕಪ್ಪಮಂ ತಂದೀವರ್ (ಧರ್ಮಾಮೃ. ೧೧-೧೩೪). [ಪರ₃+ಮಾಂಡಳಿಕ(=ಮಾಂಡಲಿಕ)]

**ಪರಮಾಕೃತಿ** (ನಾ). ಶ್ರೇಷ್ಠವಾದ ಸ್ವರೂಪ: ನಾಕಿಗಳಿಂದ್ರಾದ್ಯರ್ ಪರಮಾಕೃತಿ ದುರ್ಲಕ್ಷ್ಯವೆಂದೆನಲ್ ನಿನ್ನವತಾರಾಕೃತಿಯನರ್ಚಿಪರ್ (ಜಗವಿ. ೩-೧೦೭). [ಪರಮ+ಆಕೃತಿ]

**ಪರಮಾಗಮ** (ನಾ). ೧. ಪರಂಪರೆಯಿಂದ ಶ್ರೇಷ್ಠವಾದ ಅರಿವನ್ನು ಕೊಡುವ ಶಾಸ್ತ್ರಗ್ರಂಥ: ಪರಮಾಗಮಕೋವಿದನಪ್ಪುದು ಪೂರ್ವಕಾವ್ಯರಚನೆಗಳಂ ತಾಂ ಮೊದಲೊಳ್ಕಲ್ತಂಗಲ್ಲದೆ ಪದದೊಳ್ಪಾಱುಂ ಬೆಡಂಗುಮಕ್ಕುಮೆ ಕೃತಿಯೊಳ್ (ಕವಿರಾ. ೧-೯); ಅರಿದಿದು ಬಾಳಬಟ್ಟೆ ಪರಮಾಗಮಮಲ್ಲದೆ ಜಾರ ಚೋರ ವೀರರ ಕಥೆಯಂತೆ ಬಾಯ್ಸವಿಯ ಮಾತುಗಳಂ ಬಱಿಕೆಯ್ವ ಚರ್ಚೆಯಲ್ಲ (ಅನಂಪು. ೧-೩೬). ೨. [ಜೈನ] ಧರ್ಮಗ್ರಂಥ; ಜಿನಾಗಮ: ಉದಾತ್ತವೃತ್ತಿ ಪರಮಾಗಮಭಾವನೆ ವೃದ್ಧಸೇವೆ ಯೌನಂ ತ್ರಿಜಗದ್ಗುರುಪ್ರಣತಿಯಿಂದಿವನಾಗಳುಮೊಂದೆ ಕೀಲೆ ದಲ್ ಜಂತ್ರದ ಪಾಪೆಯಂತೊಡನೊಡರ್ಚುವನಿಂದ್ರನುಮಾ ಪ್ರತೀಂದ್ರನುಂ (ಶಾಂತಿಪು. ೭-೧೧೧); ಪರಮಾಗಮದಿಂದಲ್ಲದೆ ಪರತ್ರೆಯಂ ಪಡೆವುಪಾಯಮಿಲ್ಲ (ಧರ್ಮಾಮೃ. ೪-೫೬); ಪರಮಾಗಮಮೆಲ್ಲಮನುಚ್ಚರಿಸುವನಂತರ್ಮುಹೂರ್ತಕಾಲದೊಳೆಂಬಚ್ಚರಿವೆತ್ತ ವಾಗ್ಬಳಂ ಬಂಧುರಮಾದುದು ದುರಿತಬಳತಮೋದಿನಕರನೊಳ್ (ಚಂದ್ರಪು. ೧೪-೩೫). [ಪರಮ+ಆಗಮ]

**ಪರಮಾಚಾರ್ಯ**(ನಾ). ೧. ಶ್ರೇಷ್ಠನಾದ ಗುರು; ಪ್ರಾಚಾರ್ಯ: ಆ ಚಂದ್ರಪ್ರಭಜಿನನ ಮಹಾಚರಿತಪಯೋಧಿಪಾರಯಾನಕ್ಕಾನಾಲೋಚಿಸಿದೆಂ ಪ್ರಾಕ್ತನ ಪರಮಾಚಾರ್ಯಶ್ರುತಸೇತುಬಲದಿಂದೀಗಳ್ (ಚಂದ್ರಪು. ೧-೬೭). ೨. ಶ್ರೇಷ್ಠನಾದ ವಿದ್ವಾಂಸ; ಮಹಾಪಂಡಿತ: ಅರಿದಾದಂ ಕನ್ನಡದೊಳ್ತರಿಕೊಱಿಗೊಂಡಱಿಯೆ ಪೇೞ್ವೆನೆಂಬುದಿದಾರ್ಗಂ ಪರಮಾಚಾರ್ಯರವೊಲ್ಸಯ್ತಿರಲಱಿಯರ್ಕನ್ನಡಕ್ಕೆ ನಾಡವರೋಜರ್ (ಕವಿರಾ. ೧-೪೨). [ಪರಮ+ಆಚಾರ್ಯ]

**ಪರಮಾಣು**(ನಾ). ೧. ಅತ್ಯಂತ ಸಣ್ಣದಾದ ವಸ್ತು; ಅಣುವಿನಲ್ಲಿ ಅಣು: ಕರಿಗಂ ಪರಮಾಣುಗಮಂತರಮಾವುದೊ ನಿಮಗಮಸುರವೈರಿಗಮೇನಂತರಮಂತೆ ನಿಮ್ಮೊಳ್ಗದ ಪರಶುಧರಂ ಪೊಣರ್ದು ತಾನದಂದೇನಾದಂ (ಪಂಪಭಾ. ೧೦-೭); ಪರಮಾಣುಪ್ರಾಯಂ ಗುಣಮಿರೆ ಮೆಚ್ಚುವ ಸುಜನರಿಂದೆ ದುರ್ಜನರೆಮಗಿಂ ಗುರುಗಳ್ ದೋಷಲವಮುಮಿರೆ ಪರಿಹರಿಪಂತೊಱಿ ತೋಱಿ ನುಡಿವುದಱಿಂದಂ (ಪಾರ್ಶ್ವಪು. ೧-೮೧). ೨. ಕೊಂಚ; ಅತ್ಯಲ್ಪ: ಹೇಳುವರೆ ಪರಮಾಣು ಗುಣವಾಬಾಲವೃದ್ಧರೊಳಿಲ್ಲ ಕಕ್ಕಿನ ಕೌಳಿಕಾಱಿರು ಮಾಪ್ರದವರೆಲೆ ಶಲ್ಯ (ಕುವ್ಯಾಕ. ೯-೨೦). ೩. [ಜೈನ] ''ಪುದ್ಗಲದ್ರವ್ಯದ ಅತಿ ಸೂಕ್ಷ್ಮಾತಿಸೂಕ್ಷ್ಮಭಾಗಕ್ಕೆ ಪರಮಾಣುವೆನ್ನುವರು'' (ಜೈನಪ. ೩೦೭): ಅಂತು ಪರಮಾತಿಶಯರೂಪರಸಗಂಧಸ್ಪರ್ಶಗುಣವತ್ಪರಮಾಣುಪರಿವೃತಮೂರ್ತಿಯಪ್ಪ ಪರಮನ ಪರಿಪೂರ್ಣಯೌವನಶ್ರೀಯಂ ನಾಭಿರಾಜಂ ನೋಡಿ (ಆದಿಪು. ೮-೬ಪ); ಅಂತುಪವಾಸಕೃಶೀಕೃತಾಂಗರಾಗಿ ಶರೀರಕರ್ಮಪರಮಾಣುಗಳನೊಡನೊಡನೆ ತವಿಸಿ . . . ಉತ್ತರಾಶಾಭಿಮುಖರಾಗಿ ಪೋಗಿ (ಶಾಂತಿಪು. ೬-೭೦ಪ); ಪರಮಾಣುವಿನಲ್ಲಿ ರೂಪ, ರಸ, ಗಂಧ, ಸ್ಪರ್ಶ ಗುಣಗಳು ತಮ್ಮ ಪರ್ಯಾಯಗಳನ್ನನುಸರಿಸಿಯೇ ಇರುವುವು

(ಜೈನಧ. ೫೭). ೪. [ವಿಜ್ಞಾ] ವಿಭಜನೆ ಮಾಡಲು ಅಸಾಧ್ಯವಾದ ಅತಿಸೂಕ್ಷ್ಮ ಪರಿಮಾಣದ ಕಣಾಂಶ ; ಮೂಲವಸ್ತುವಿನ ಅತ್ಯಂತ ಸೂಕ್ಷ್ಮಾಂಶ ; ℙ 'Atom' ಎಂಬ ಇಂಗ್ಲ. ಪಾರಿಭಾಷಿಕ ಶಬ್ದವನ್ನು ಕೆಲವರು 'ಅಣು' ಎಂದೂ ಕೆಲವರು 'ಪರಮಾಣು' ಎಂದೂ ಭಾಷಾಂತರಿಸುತ್ತಾರೆ : ಈ ಪ್ರಕಾರದ ಪರಮಾವಧಿಗೆ ಮುಟ್ಟಿದಂಥ ಅತಿಸೂಕ್ಷ್ಮಕಣಗಳಿಗೆ ಪರಮಾಣುಗಳೆಂಬ ಹೆಸರು(ಮುಂಬಯಿ. ೫-೩೩); ಅವ್ಲ ಜನಕದ ಒಂದು ಪರಮಾಣು ಮತ್ತೊಂದು ಪರಮಾಣುವಿನ ಮೇಲೆ ಪ್ರಭಾವವನ್ನುಂಟುಮಾಡುತ್ತದೆ (ಜೀಪಾತ್ಮ. ೧೦೩); ಪರಮಾಣುವೆಂದರೆ ರಾಸಾಯನಿಕ ವಿಕ್ರಿಯೆಗಳಲ್ಲಿ ವಿಭಾಗ ಹೊಂದದೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವ ಅತ್ಯಂತ ಸಣ್ಣ ಮೂಲವಸ್ತುಭಾಗವೆಂದು ಹೇಳಬಹುದು (ಭೌತವಿ. ೨೮೧). [ಸಂ.]

**ಪರಮಾಣುಮಾರ್ಗ** (ನಾ). ಅತಿಸೂಕ್ಷ್ಮಘಟಕಗಳು ಚಲಿಸುವ ಹಾದಿ ; ಆಕಾಶ : ಜಡಿದುಯ್ದನಾ ಖಚರನಿರ್ವರುಮಂ ಪರಮಾಣುಮಾರ್ಗದಿಂ (ಪಂಪಭಾ. ೭-೩೩). [ಪರಮಾಣು+ಮಾರ್ಗ]

**ಪರಮಾತುಮ** (ನಾ). = ಪರಮಾತ್ಮ ೧ : ಆತುಮ ತುಂಬಿ ತುಂಬಿ ನೋಡಾ ಪರಮಾತುಮ ತುಂಬಿ ತುಂಬಿ ನೋಡಾ ಗುಹೇಶ್ವರನೆಂಬ ಲಿಂಗಕ್ಕೆಜಗಿ ನಿಬ್ಬೆಜಗಾಯಿತ್ತು ತುಂಬಿ ನೋಡಾ (ಅವಚಂ. ೬೯-೩೦೭) ; ಪ್ರತ್ಯಗಾತ್ಮನನಾತ್ಮರಿಗೆ ನಿಜಸತ್ಯವನು ಸತ್ಯಂಗಳಿಗೆ ಮತಿ ವೃತ್ತಿ ಲಕ್ಷಿಸಲಬಾವುದೈ ಪರಮಾತುಮನನು (ಸಿಭಾಗ. ೯-೩-೨೫).
[ಪರಮ + ಆತುಮ]

**ಪರಮಾತ್ಮ** (ನಾ). ೧. ಆತ್ಯಂತಿಕವಾದ ಚೈತನ್ಯ ; ದೇವರು ; ಪರಬ್ರಹ್ಮ : ನೆಗಟ್ದ ಮಹಾತ್ಮಂ ನರಸಿಂಹನಜಾವಿನೊಳ್ ಪರಮಾತ್ಮಂ (ಪಂಪಭಾ. ೧-೩೧) ; ಶುದ್ಧಾತ್ಮ ಪರಮಾತ್ಮರಿಬ್ಬರೂ ಒಂದು ರತ್ನಕ್ಕೆ ಹೆಣಗಾಟವನಾಡಿಹರು (ಬಸವ. ೯೦೫) ; ಪರಮಾತ್ಮ ಪರಮೇಶ್ವರ . . . ಪರಂಜ್ಯೋತಿಸ್ವರೂಪ ನಿರೂಪ ಚಿತ್ತೈಸು (ಬಸಪು. ೬೧-೪೫) ; ನಿಜ ನಿರ್ಮಳವೆನಿಪ ಪರಮಾತ್ಮ ಚಿನುಮಯರೂಪ ತಾನು (ಕುವ್ಯಾದ್ರೋ. ೩-೬೬) ; ಪವಡಿಸು ಪರಮಾತ್ಮನೆ ನೀನು ಭವರೋಗವೈದ್ಯ ಭಕ್ತರ ನಿಧಿಯೆ (ಪುರಂದ. ೩-೧೩೧ ಪಲ್ಲವಿ). ೨. [ಜೈನ] ಜಿನೇಶ್ವರ ; ತೀರ್ಥಂಕರ : ಪರಮಾತ್ಮಂ ನಿಷ್ಠಿತಾತ್ಮಂ ಜಿನಪತಿ ಪರಮಸ್ವಾಮಿ ಸದ್ಧರ್ಮಮಾರ್ಗಂ ಗುರುವಂದ್ಯಂ ವರ್ಧಮಾನವ್ರತಿಪತಿ ಸುಕುಮಾರಂ ಕಥಾನಾಯಕಂ (ಸುಕುಮಾ. ೧-೬೦) ; ಏದೊರೆಯನಾತ್ಮನೆಂದೊಡನಾದಿಯನಂತಂ ನಿರತ್ಯಯಂ ಚಿನ್ಮಯಂ ನಿಃಪ್ರಾದೇಶಿಕನೆಂದಾತನುಪಾದೇಯಂ ಮುಕ್ತಿಮುಕ್ತನುಂ ಪರಮಾತ್ಮಂ (ಯಶೋಚ. ೪-೨೬) ; ಜಿನನಿಗೆ ಅರ್ಹನ್, ಜಿನೇಶ್ವರ, ತೀರ್ಥಂಕರ, ಪರಮೇಷ್ಠಿ, ವೀತರಾಗ, ಪರಮಾತ್ಮ ಮೊದಲಾದ ಹೆಸರುಗಳುಂಟು (ಭಾತತ್ತ್ವ. ೨೨೭). ೩. ಸಿದ್ಧಿಯನ್ನು ಪಡೆದವನು ; ಸಿದ್ಧ ; ℙ "ಕೇವಲಜ್ಞಾನದಿಂದ ಲೋಕಾಲೋಕಗಳನ್ನು ಅರಿತವನು ಮತ್ತು ಆತ್ಮಾನುಭವದಿಂದುಂಟಾದ ಅತೀಂದ್ರಿಯಸುಖದಿಂದ ಸಂತೃಪ್ತನಾದವನು" (ಜೈನಕೋ.೧೫೯): ಯೋಗವರ್ತನವೊಂದುಂ ತಮಗೆಂದುಮಿಲ್ಲೆನಿಸಿಯುಂ ಸಿದ್ಧರ್ಕಳೆಂದೆಂಬ ಪೆಂಪಿನಮೂರ್ತರ್ ಪರಮಾತ್ಮರುದ್ಧರಿಸುಗೆಮ್ಮಂ ಸಿದ್ಧಿಯಪ್ಪನ್ನೆಗಂ (ಪುಷ್ಪಪು. ೧-೨) ; ಇಲ್ಲಿಂದ ಮುಂದಿನ ಆತ್ಮನು ತನ್ನ ಜ್ಞಾನದರ್ಶನಗಳಿಗೆ ಇಂದ್ರಿಯ ಮೊದಲಾದುವುಗಳ ನೆರವನ್ನು ಅಪೇಕ್ಷಿಸುವುದಿಲ್ಲ. ಅದರಿಂದ ಕೇವಲಿಯೆನ್ನಿಸಿಕೊಳ್ಳುವನು. ಇವನಿಗೇ "ಪರಮಾತ್ಮಾ"ಎಂಬ ಸಂಜ್ಞೆಯು ಸಲ್ಲುವುದು (ಜೈನಪ. ೨೮೭). ೪. [ದ್ವೈತ]ಜೀವಾತ್ಮಕ್ಕಿಂತ ಭಿನ್ನವಾದ ಆತ್ಮ ; ಇಪ್ಪತ್ತು ದ್ರವ್ಯಗಳಲ್ಲಿ ಒಂದು : ಪರಮಾತ್ಮ, ಲಕ್ಷ್ಮಿ, ಜೀವಾತ್ಮ . . . ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಹಿಂದಸಾ. ೨೭೫) ; ಪರಮಾತ್ಮ ಜೀವರು ಸಹಜವಾಗಿ ಭಿನ್ನರಾಗಿರುವರು (ಶಕ್ತಿವಿ. ೧೭). [ಸಂ. ಪರಮಾತ್ಮನ್]

**ಪರಮಾದರ** (ನಾ). ಬಹಳವಾದ ಆಸಕ್ತಿ : "ಅತೀವತ್ವರಿತಂ ವಿಭೂತಿ ಪರಮಾದರಮೆಂಬಿವು ಸಂಭ್ರಮಾಭಿಧಾಯಕಮಕ್ಕುಂ" (ವಸ್ತುಕೋ. ೧೩೨-೮೫) ; ಸಹಸ್ರಪುಸ್ತಕಪ್ರಸರಮನತ್ತ ಮಟ್ಟೆ ಪರಮಾದರದಿಂ ಬರೆಯಲ್ಕೆವೇಟ್ದ ಪೆಂಪಸದಳಂ (ಶಾಂತಿಪು. ಪರಿ. ೧-೨) ; ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ . . . ನಲಿದರೆ ವಲಿವೆ ನಿಮಗೆಂಬಾ ಸುಲಭನೋ ಹರಿ (ಹಸಾರ. ೨-೫). [ಪರಮ + ಆದರ]

**ಪರಮಾದೇಶ** (ನಾ).(ನ್ಯಾಯಕ್ಕೆ ಅನುಸಾರವಾದ) ಪರಮಾವಧಿಯಾದ ಅಪ್ಪಣೆ,—ಆಜ್ಞೆ : ಉಚ್ಚತಮನ್ಯಾಯಾಲಯದವರು ಆಯಾ ಸಂದರ್ಭದಲ್ಲಿ ಉಚಿತವಾಗಿರಬಹುದಾದಂತೆ, ೧ ಬಂದೀಪ್ರತ್ಯಕ್ಷೀಕರಣ, ೨ ಪರಮಾದೇಶ . . . ಉತ್ಪ್ರೇಷಣಸ್ವಭಾವದ ನಿರೂಪಲೇಖವೂ ಸೇರಿ ಯಾವ ನಿರ್ದೇಶವನ್ನಾಗಲಿ, ಆದೇಶವನ್ನಾಗಲಿ ಅಥವಾ ನಿರೂಪಲೇಖವನ್ನಾಗಲಿ ಸಾದರುಮಾಡಲು ಶಕ್ತರಾಗಿ ಇರತಕ್ಕದು (ಭಾಧಾನ. ೧೯).
[ಪರಮ+ಆದೇಶ]

**ಪರಮಾಧಿಕಾರ** (ನಾ). ಅತ್ಯುನ್ನತವಾದ ಆಡಳಿತ ನಡೆಸುವ ಹಕ್ಕು; ಸಂಪೂರ್ಣಾಧಿಕಾರ : ಅವನ ಸರ್ವೋದ್ಯಮ ಸರ್ವಪ್ರಯತ್ನಗಳ ಹಿಂಗಡೆಯಲ್ಲಿ ಪರಮಾಧಿಕಾರ ಸಂಪಾದನೆಯ ಮಹತ್ವಾಕಾಂಕ್ಷೆ ನೆಲಸಿದ್ದುದಾಗಿ ನೆಕ್ಲದೋವನಿಗೆ ಮನವರಿಕೆಯಾಗಿತ್ತು (ಪುನರು. ೫೩೬).
[ಪರಮ + ಅಧಿಕಾರ]

**ಪರಮಾನಂದ** (ನಾ). ೧. ಅತಿಶಯವಾದ ಸಂತೋಷ ; ಮಹಾನಂದ : ಆನಂದನಾಟಕಂ ಪರಮಾನಂದಮನಂದು ಮಾಡೆ (ಆದಿಪು. ೧೬-೫೪) ; ಪರಮಾನಂದರಸದೊಳವರ್ ತಮ್ಮೊಳೋರೊರ್ವರೊಂದೊಂದು ಮಾತಂ ತಮ್ಮ ಮನಕ್ಕೆ ತೋಚದಂತೆ ನುಡಿಯುತ್ತಿರಲ್ (ಜಗವಿ. ೩-೨ ವ) ; ಪರಮಾನಂದವಾಗಲು ನಳಿನನಾಭನು ಸೇನೆಸಹಿತಾ ಪುಷ್ಪಕವ ನಿಳಿದು ಸೆಳೆದು ಬಿಗಿಯಪ್ಪಿದನು ಭರತನ (ತೊರಾಂ. ೪೪-೪೫) ; ಕುಂದದ ಸುಕೃತಂ ಪರಮಾನಂದಂ ಸೌಭಾಗ್ಯಕೀರ್ತಿವಿಜ್ಞಾನಂಗಳ್ ಮಂದಕರನಾಟ್ಯಮಾರ್ಗದೊಳೊಂದಿದವಂಗಲ್ಲದಜ್ಞನೊಳ್ ಸಮನಿಪವೇ (ಲಾಸ್ಯರಂ. ೧-೨೪) ; ವಿಜಯೋತ್ಸವವೂ ಕುಮಾರಜನ್ಮೋತ್ಸವವೂ ಒಟ್ಟಿಗೇ ಆದ ಪರಮಾನಂದದಲ್ಲಿ ವಿಷ್ಣುವರ್ಧನನು . . . ದತ್ತಿಯನ್ನು ಬಿಡುತ್ತಾನೆ (ಸಪತಿ. VII, ಪ್ರಸ್ತಾವನೆ). ೨. ಪರಮಾವಧಿಯಾದ ಸಂತೋಷ ; ಲೋಕೋತ್ತರವಾದ ಆನಂದ ; ಮೋಕ್ಷ : ವೇದನಾತೀತ ತುರ್ಯಪರಮಾನಂದನಿರವಯಂ . . . ಬೆಳಗಿನೊಳಗಣ ಮಹಾಬೆಳಗಿನ ಬೆಳಗು ನಮ್ಮ ಕೂಡಲಸಂಗಯ್ಯ (ಬಸವ. ೯೫೫); ಸಕಲರಾಗಾದಿ ಕ್ಲೇಶಾವರಣವೂ ಜ್ಞೇಯಾವರಣವೂ ಹೋಗಿ ಸರ್ವಜ್ಞತ್ವವು ಬಂದು . . . ಬುದ್ಧಪದವಿಯು ಪ್ರಾಪ್ತವಾಗುವುದು. ಇದೇ ಪರಮಪದ. ಇದೇ ಪರಮಾನಂದ (ಹಿಂದಸಾ. ೪೧). ೩. ಆನಂದಸ್ವರೂಪನಾದವನು ; ಪರಮಾತ್ಮ; ದೇವರು : ತುರೀಯಪರಮಾನಂದನು ನಿರವಯಸೂರ್ಯಕೋಟಿ ಪ್ರಭೆಯ ಬೆಳಗಿನ ಸಹಸ್ರಕಿರಣದ ಅಗ್ರಪಟಲದ ಬೆಳಗು ಕೂಡಲಸಂಗಯ್ಯನು (ಬಸವ. ೯೫೪). ೪. ಶ್ರೇಷ್ಠರೀತಿಯ ಆಹ್ಲಾದವನ್ನು ಪಡೆದವನು : ದೇವರಂ ಬಂದಿಸಿ ಬಟಿಕ ಯಥಾಕ್ರಮದಿಂದಮಳಾರ್ಚನೆಗಳಿಂದಮರ್ಚಿಸಿ ಪರಮಾನಂದಂ ಕಡೆಯ ಜಿನೇಶ್ವರಮಂದಿರದೊಳು ಕಂಡನೊರ್ವನಂಬರಚರನಂ (ಶಾಂತಿಪು. ೫-೪). [ಪರಮ + ಆನಂದ]

**ಪರಮಾನು** 'ಫರ್ಮಾನು' ನೋ.

**ಪರಮಾನುಗ್ರಹ**(ನಾ). ಬಹಳ ಶ್ರೇಷ್ಠವಾದ ಕೃಪೆ; ಅತಿಶಯವಾದ ಕರುಣೆ : ಸಾರವಸ್ತುಗಳಿನೋಲಗಿಸಿ ಚಕ್ರವರ್ತಿಯ ಪರಮಾನು

ಗ್ರಹಾಮೃತಮನಾಸ್ವಾದಿಸಿ ಪೋಗೆ ಪಟ್ಟಂಡಭೂವಲ್ಲಭನಂ ಹಿಮವತ್ತಟಂ ಬಿಡಿದು ಮೂಡ ಮೊಗದೆ ಪಯಣಂಬರೆ (ಶಾಂತಿಪು. ೧೧-೫೮ ವ).

[ಪರಮ + ಅನುಗ್ರಹ]

**ಪರಮಾನ್ನ** (ನಾ). ೧. ಉತ್ಕೃಷ್ಟವಾದ ಆಹಾರ,—ಭೋಜನ. ೨. (ಅಕ್ಕಿ, ಹಾಲು, ಸಕ್ಕರೆ ಮುಂತಾದುವುಗಳಿಂದ ಮಾಡಿದ) ಒಂದು ಬಗೆಯ ಸಿಹಿ ಪದಾರ್ಥ : "ಕ್ಷೈರೇಯಂ, ಪಾಯಸಂ, ಪರಮಾನ್ನಂ—ಈ ೩ ತುಯ್ಯಲ್" (ಹಲಾಯು. ೫೩-೧೬೫); ಪರಮಾನ್ನ ಮೋಗರಂ ಸುರುಚಿರ ನಾನಾಭಕ್ಷ್ಯಮುಖ್ಯಭೋಜನವಸ್ತೂತ್ಕರಮುಂ ಕುಡುವುದು ತಡೆಯದೆ ಕರಮಂ ನೀಡಿದೊಡೆ ಭೋಜನಾಂಗಮಹೀಜಂ (ಶಾಂತೀಶ್ವ. ೬-೮೭); ಕೆಲಕೆ ಕಾಳೆಯ ತಳಿರವೊಟ್ಟಲು ಕಲರವಂಗೈವಂತೆ ಪರಮಾನ್ನವನು ಭುಜಿಸಿದರು (ಕೌಶಿಂ. ೨-೬೩); ಮಿಸುಪ ಕಾಂಚನ ಪಾತ್ರೆಯಲಿ ಪೂರಿಸಿದ ಪರಮಾನ್ನವನು . . . ಕರಯುಗದಿಸರು ಹದಿನೊಲಿದಿತ್ತುದಾ ನಿಜಮೂರ್ತಿ ದಶರಥಗೆ (ತೊರಂ. ೧-೭-೫೫). ೩. ಒಂದು ಬಗೆಯ ಪಾಯಸ : ದಧ್ಯಾನ್ನ ಗೂಡಾನ್ನ ಪರಮಾನ್ನ ಪಾಯಸಂ ಪಂಚಭಕ್ಷ್ಯಂ . . . ಫಲಾವಳಿಯ ಮುಖ್ಯಭೋಜನದ್ರವ್ಯವಾ ತರುಣಿಯರು ಪೊಸವಿಸುನಿಪರಿವಾಣದೊಳು ತೀವಿಯಿರದೆ ತಂದೀಯಲು (ನಸಮೋ. ೧೯-೨೯). [ಪರಮ + ಅನ್ನ$_3$]

**ಪರಮಾಯಿಷಿ** 'ಫರಮಾಷಿ' ನೋ.

**ಪರಮಾಯು** (ನಾ). ೧. ಬಹಳ ದೀರ್ಘವಾದ ಆಯುಷ್ಯ ; ಅತಿ ಹೆಚ್ಚಾದ ಜೀವಿತದ ಅವಧಿ : ಗ್ರಹಮೇಟುಂ ಜನನೋದಯ ಗೃಹಮುಂ ಬಲಯುಕ್ತಮೆನೆ ಪರಸ್ಪರಪೀಡಾರಹಿತಂ ಸ್ವಗೃಹಸ್ಥಂ ತದ್ಗ್ರಹಮೆನೆ ಪರಮಾಯುವಂ ಯಥೋಕ್ತಂ ಕುಡುಗುಂ (ಜಾತತಿ. ೮-೯); ಯುಗ ಹದಿನೆಂಟುಸಹಸ್ರ ಕೂಡೆ ಬ್ರಹ್ಮಂಗೆ ಪರಮಾಯು (ಮೋಳಮಾ. ೫-೧೮); ಆ ವರುಷಶತವೆಂಬುದೀ ಸುರಪತಿಗೆ ಪರಮಾಯುವು (ಹಚರಾ. ೨-೨೫); ಪಾಪಿಗೆ ಪರಮಾಯು, ಲೋಭಿಗೆ ಚಿರಾಯು (ಗಾದೆ). ೨. ಆಯುಸ್ಸಿನ ಪ್ರಮಾಣ; ಜೀವಿತಾವಧಿ: ಪರಮಾಯು ಮೂಱು ದಿವಸಂ ಚರಿತಂ ಚರಿತಾರ್ಥನಾ [ಗು ನೀ]ನೆಂಬವೊಲಾ ಪುರದೊಳಗೆ ಮೂಱು ಜಾವಂ ಪರಿವಡಿಸಿತ್ತೋತು ತನಗೆ ಪೇಟ್ದಂತಾಗಳ್ (ಸುಕುಮಾ. ೧೧-೮೩). ೩. [ಜೈನ] ಒಂದು ಪೂರ್ವಕೋಟಿಯಷ್ಟು ಪ್ರಮಾಣದ ಜೀವಿತದ ಕಾಲ,—ಆಯುಸ್ಸು : ತೊಲಗದು ಪುಬ್ಬಕೋಟಿ ಪರಿಸಂಖ್ಯೆವರಂ ಪರಮಾಯು . . . ಪಂಚಧನುಶ್ಶತಂ ಪವಣ್ ನೆಲೆ ನರರ್ಗೆಂದೊಡಿನ್ನಿವಿರೆ ಬಣ್ಣಿಸಲಾನಱಯೆಂ ವಿದೇಹಮಂ (ಆದಿಪು. ೧-೫೨); ಧರೆಯಂ ಪಾಲಿಸಿ ಪದ್ಮೋದರನೆಣ್ಬತ್ತೊಂದುಲಕ್ಕಬರಿಸಂ ಬಟ್ದಾ ಪರಮಾಯುವ ತೌಕಲೊಳರ್ಧರಾತ್ರದೊಳ್ ಕಟಿದು ಸಪ್ತಮಾವನಿಗಿಟಿದೊಂ (ಶಾಂತಿಪು. ೫-೭೧); ಲಕ್ಷ್ಮಣಂ ಸತ್ತನಲ್ಲದಾತಂಗೆ ಪರಮಾಯು ನೆಱೆಯೆ ಸತ್ತನಲ್ಲೆಂಬುದುಂ (ಪಂರಾಮಾ. ೧೬-೬೨ ವ). [ಪರಮ + ಆಯು$_2$]

**ಪರಮಾಯುಷ್ಯ** (ನಾ). ೧. ಆಯುಸ್ಸಿನ ಪರಮಾವಧಿ : ಪರಮಾಯುಷ್ಯಮದಯ್ದರುಳ್ವೆರಸು ನೂಱಿರ್ಪತ್ತುವರ್ಷಂ ನರದ್ವಿಗದಾಖಳ್ಕೆ (ಲೋಕೋಪ. ೧೧-೧೦೫). ೨. = ಪರಮಾಯು ೧ : ಪರಮಶಿವಲಿಂಗದರ್ಶನಮಾತ್ರದಿಂದೆ ಜಾತಿಸ್ಮರತ್ವ ಮಹದೈಶ್ವರ್ಯ ಪರಮಾಯುಷ್ಯ ಶುದ್ಧವಿದ್ಯಂಗಳು . . . ದೊರೆಕೊಂಬುವು ನೋಡಾ (ಅಖಂಡೇ. ೨೬-೨). ೩. = ಪರಮಾಯು ೩ : ಕೊಲೆಯಿಂ ಕರಮುಱಯೆಯುಂ ನೊಂದು ಪ್ರಾಣಮನೆಂತಾನುಂ ಪರಮಾಯುಷ್ಯಂಬರಂ ನಿಱಿಸಿ (ಶಾಂತಿಪು. ೭-೯೮ ವ). [ಪರಮ + ಆಯುಷ್ಯ]

**ಪರಮಾರಾಧ್ಯ** (ನಾ). ಪರಮಪೂಜ್ಯನಾದ ವ್ಯಕ್ತಿ : ಪರಮಾರಾಧ್ಯರಪ್ಪ ಶ್ರೀಮತ್ಪುರಾಣದ ದಿವಾಕರಭಟ್ಟೋಪಾಧ್ಯಾಯರ ಸರ್ವ್ವನಮಸ್ಯದಗ್ರಹಾರಂ (ಸೌಇಇ. XX, ೬೪-೯ ; 1100); ಪರಮಾರಾಧ್ಯ ಜಗತ್ರಯಾಧಿಪತಿಯ್ಯೆ ನೀಂ (ಅನಂಪು. ೬-೫೭). [ಪರಮ + ಆರಾಧ್ಯ]

**ಪರಮಾರ್ಥ** (ನಾ). ೧. ಮೋಕ್ಷಪ್ರದವಾದುದು : ಪರಮಾರ್ಥಮಪ್ಪುದಂ ಮಚ್ಚರಿಸದೆ ಕೋಪಿಸದೆ . . . ಒಂದೆ ಮನದಿಂ ನಿರುತಂ ಕೇಳ್ವವನೆ ಧರ್ಮದೊಳಗಂ ತಿಳಿಗುಂ (ಧರ್ಮಾಮೃ. ೧-೧೮೧). ೨. ನಿಶ್ಚಿತವಾದುದು; ನಿಜ; ಸತ್ಯ : ಭೂನುತನೆಬ್ಬಿ ಕರ್ಮಮೆಂಬಿದುಂ ಪರಮಾರ್ಥಂ (ನೇಮಿಪು. ೪-೧೦); ಮಡದಿ ಮಾಡಿದ ಪಾತಕವು ಪತಿಗೊಡಲಹುದು ಪರಮಾರ್ಥವಿದು ಪರಿವಿಡಿಯನಱಯದೆ ಕೆಡುವುದೀ ಜಗ (ಕುವ್ಯಾಉ. ೪-೧೯). ೩. ಮೋಕ್ಷತತ್ವ ; ಪರತತ್ವ : ಪ್ರಭುಗಳ ಧರ್ಮಶ್ರದ್ಧೆ ಇನ್ನೂ ಹೆಚ್ಚಿತು; ಪರಮಾರ್ಥವಿಚಾರಶಕ್ತಿ ಉದಯಿಸಿತು (ಶಾಂತಲಾ. ೨೧೩). ೪. ಅತಿಮುಖ್ಯವಾದ ಉದ್ದೇಶ,—ಗುರಿ : ಒಲುಮೆಗಿಂತಲೂ ಬೇರೆ ಪರಮಾರ್ಥವಿನ್ನಿಲ್ಲ ನರರ ಬದುಕಿನಲಿ (ಚಿತ್ರಾಂಗ. ೬೩-೧೭೯೧). ೫. (ಮನುಷ್ಯನು ಸಾಧಿಸಬೇಕಾದ) ನಾಲ್ಕು ಪುರುಷಾರ್ಥಗಳಲ್ಲಿ ಕೊನೆಯದು ; ಮೋಕ್ಷ : ಕಣ್ಣ ಮುಚ್ಚ ಕನ್ನಡಿಯ ತೋಱುವಂತೆ ಇರುಳುಹಗಲಿನ ನಿದ್ರೆ ಸಾಲದೆ ಬೆರಳನೆಣಿಸಿ ಪರಮಾರ್ಥವ ಹಡೆದರೆ ಚೋದ್ಯವಲ್ಲವೆ (ಬಸವ. ೫೮೨); ವಿಜ್ಞಾನವು ಜಗತ್ತಿಗಾಗಲಿ ಮಾನವನ ಜೀವಿತಕ್ಕಾಗಲಿ ಸಾಧಿಸಬೇಕಾದ ಪರಮಾರ್ಥವೊಂದಿದೆಯೆ ಎಂಬುದನ್ನು ಗಮನಿಸದೆ ಜಗತ್ತನ್ನು ಯಾಂತ್ರಿಕವಾದದಿಂದ ವಿವರಿಸಲು ಯತ್ನಿಸಿತು (ಮಕ್ಕಾರ. ೩೦ ಪೀಠಿಕೆ). ೬. ವಸ್ತುಸ್ಥಿತಿ; ಸತ್ಯಸ್ವರೂಪ : ನಾಕಿಗಳಿಂದ್ರಾದ್ಯರ್ ಪರಮಾಕೃತಿ ದುರ್ಲಕ್ಷ್ಯವೆಂದೆನಲ್ ನಿನ್ನವತಾರಾಕೃತಿಯನರ್ಚಿಪರ್ ಮಹಿಮಾಕರ ಪರಮಾರ್ಥವಾರ್ಗೆ ಲಕ್ಷ್ಯಂ ನಿನ್ನಾ (ಜಗವಿ. ೩-೧೦೭). ೭. ಅತಿಶ್ರೇಷ್ಠವಾದ ಪ್ರಯೋಜನವನ್ನು ಹೊಂದಿರುವುದು; ಉತ್ಕೃಷ್ಟವಾದ ಫಲವನ್ನು ಕೊಡಲು ಸಮರ್ಥವಾಗಿರುವಂಥದು : ಪರಮಾರ್ಥಂ ಪುಣ್ಯತೀರ್ಥಂ . . . ಒಪ್ಪಿತ್ತು ಶೈಲಂ ವರಕೂಟಂ ಶೃಂಗಮಾಟಂ ಮೃಗಧರಧರಜೂಟಂ ಕರಂ ಹೇಮಕೂಟಂ (೧೦ಕ. ೫-೨೧).

[ಪರಮ + ಅರ್ಥ]

**ಪರಮಾರ್ಥಂ** (ಅ). ನಿಜವಾಗಿ; ಸತ್ಯವಾಗಿ: ಶ್ರೀರೂಪಲೀಲಾಧನವಿಭವಮಹಾರಾಶಿಗಳ್ನಿಲ್ಲವಾರ್ಗ್ಗಂ ಪರಮಾರ್ತ್ಥಂ ಮೆಚ್ಚಿನಾನೀ ಧರಣಿಯುಳಿರವಾನೆನ್ದು ಸನ್ಯಾಸನಂಗೆಯ್ದುರುಸತ್ವನ್ನನ್ದಿಸೇನಪ್ರವರಮುನಿವರನ್ದೇವಲೋಕಕ್ಕೆ ಸನ್ದಾನ್ (ಎಕ. II, ೮೮-೩ ; ಸು.700); ಪಾರ್ಥಿವಗುಣಯುತಮಾಗಿಯುಮರ್ಥಿತಫಲದಾಯಿಯಾಗಿಯುಂ ಸಿನ್ದೊಳ್ತಾಂ ವ್ಯರ್ಥತೆಯಂ ಪಡೆಗುಂ ಪರಮಾರ್ಥವಚೇತನತೆಯಿಂದೆ ಕಲ್ಪಕುಜಾತಂ (ಕವಿರಾ. ೩-೪೪); ಈ ಲೋಕದೊಳೀತನೆ ಪರಮಾರ್ಥಂ ಸುಖಿಯೆಂದೊಸೆದರಸನವಂತಿಸುಕುಮಾರನೆಂದು ಪೆಸರನಿಟ್ಟಂ (ವಡ್ಡಾರಾ. ೨೭-೧೨); ಪರಮಾರ್ಥಂ ನಿಜಜನಕರ್ ಪರಸಿದ ಪರಕೆಗಳು ಬಯ್ದ ಬಯ್ಗುಳ್ ಮಕ್ಕಳ್ಗಿರದೆಯ್ದುಗುಂ (ಕಾದಂಉ. ೪೮೭); ದೇವ ಭವದೀಯ ಸುತರಂ . . . ಸಮಸ್ತನೃಪವಿದ್ಯಾವರರಪ್ಪಂತು ಮಾಡುವೆಂ ಪರಮಾರ್ಥಂ (ಪಂಚತಂ. ೧೮-೧೪). [ಸಂ.]

**ಪರಮಾರ್ಥಂಗೆಯ್** (ಕ್ರಿ). ನಿಶ್ಚಯಿಸು; ನಿರ್ಧಾರವಾಗಿಸು : ವಿಸ್ತರರೂಪದೊಳ್ ಸಂಸಾರ ತದ್ಧೇತುಬಂಧ ತನ್ನಿಮಿತ್ತ ಮೋಕ್ಷ ತತ್ಕಾರಣಪ್ರಪಂಚಮಂ ದಿವ್ಯಚಿತ್ತದೊಳ್ ಪರಮಾರ್ಥಂಗೆಯ್ದು ಪರಿನಿಷ್ಕ್ರಮಣಕಲ್ಯಾಣಾಭಿಮುಖನಾಗಿರ್ದ ಚಕ್ರವರ್ತಿಯ ಬಗೆಯನಱದು (ಶಾಂತಿಪು. ೧೧-೯೧ ವ). [ಪರಮಾರ್ಥ+ಕೆಯ್$_1$]

**ಪರಮಾರ್ಥಂಪಡೆ** (ಕ್ರಿ). ಮೋಕ್ಷವನ್ನು ಗಳಿಸು ; ಕೈವಲ್ಯವನ್ನು ಸಾಧಿಸು : ಶ್ರೀರೇವಮ್ಮನ ಅಣ್ಣನ್ ಕ್ರಿಗನ್ ನೆರದರೆಲ್ಲರಳದೊಳೆ ತಾಮ್ಪಿಟ್ಟು ಪರಮಾರ್ತ್ಥಮ್ಪಡೆದ (ಎಕ. XVI, ತುಮಕೂ. ೯೨-೨೫ ; ?).

[ಪರಮಾರ್ಥ + ಪಡೆ$_1$]

**ಪರಮಾರ್ಥತೆ** (ನಾ). ಪರತತ್ವದ ಪ್ರಾಪ್ತಿ ಮತ್ತು ಚಿಂತನೆ ; ಮೋಕ್ಷಸಾಧನೆ : ಪರಮಾರ್ಥತೆ ಹಿತಮಹಿತಮಪರಮಾರ್ಥತೆಯೆನ್ನದಾತ್ಮಜನಕಜ್ಞಾನಸ್ಥಿರತೆಯೊಡನೊಡನೆ . . . ಮುಂಡಕೌಶಿಕನಱಿದಂ (ಶಾಂತಿಪು. ೬-೨೬). [ಸಂ. ಪರಮಾರ್ಥತಾ]

**ಪರಮಾರ್ಥವಾದ** (ನಾ). ಮೋಕ್ಷಾವಸ್ಥೆಯಲ್ಲಿ ಆತ್ಮವ್ಯತಿರಿಕ್ತವಾದ ಮತ್ತಾವುದೂ ಇರುವುದಿಲ್ಲ ಎಂಬ ತತ್ವವನ್ನು ಪ್ರತಿಪಾದಿಸುವಿಕೆ ; ಪ್ರತಿಷೇಧವಾದ : ಈ ಮಾರ್ಗದಲ್ಲಿ ಬಹುಕಾಲ ಪರಿಶ್ರಮ ಪಟ್ಟವರು ಮೂರನೆಯ ಸೋಪಾನವೆಂಬ ಸುಷುಪ್ತ್ಯವಸ್ಥಾಸದೃಶವಾದ ಪರಮಾರ್ಥಾವಸ್ಥೆಗೆ, ಉತ್ತಮಾಧಿಕಾರಕ್ಕೆ ಅರ್ಹರಾಗುವರು. ಇದೇ ಪ್ರತಿಷೇಧವಾದ, ಪರಮಾರ್ಥವಾದ (ಹಿಂದಸಾ. ೧೯೧). [ಪರಮಾರ್ಥ + ವಾದ$_2$]

**ಪರಮಾರ್ಥವಾದಿ** (ನಾ). ಅತಿಶ್ರೇಷ್ಠವಾದ ಸತ್ಯವನ್ನು ಪ್ರತಿಪಾದಿಸುವವನು : ಅರಸಿ ಕೇಳೀ ಹೊನ್ನ ಸರಸಸಾಹಿತ್ಯದ ವರದೇವತೆ ತಾನೆಂದು ಪರಮಾರ್ಥವಾದಿಯುಳಸಿಂಗರಾರ್ಯನು ಪರಿಪರಿಯೊಳು ಬಣ್ಣಿಪನು (ಹವಿಬ. ೧-೨೩). [ಸಂ. ಪರಮಾರ್ಥವಾದಿನ್]

**ಪರಮಾರ್ಥಿ** (ನಾ). ಪರಮಾರ್ಥವನ್ನು ಬಯಸುವವನು : ಪರಮಾರ್ಥಿಯಾದಡೆ ಪರಮನ ಸಂಚವನಱಿಯಬೇಕು (ಸಕವ. I, ೪೦-೪೨). [ಸಂ. ಪರಮಾರ್ಥಿನ್]

**ಪರಮಾವಧಿ** (ಗು). ೧. ಅತಿಹೆಚ್ಚಿನ ; ಅತ್ಯಂತವಾದ ; ಪರಾಕಾಷ್ಠೆಯ : ಅನುವಂಶೀಯ ಗುಣಗಳು ಮಕ್ಕಳು ಪಡೆಯಬಹುದಾದ ಪರಮಾವಧಿ ಮಟ್ಟವನ್ನು ನಿರ್ಧರಿಸುತ್ತವೆ (೨ಕ್ಷದ. ೯೧); ಇದರಿಂದ, ಹುಲ್ಲಿನ ಪರಮಾವಧಿ ಪ್ರಯೋಜನವು ಆಗದೆ ಹೋಗುವದು (ಗೋಗ್ರಾಸ. ೧೦೪). (ನಾ). ೨. ಅತ್ಯಂತ ಕೊನೆಯ ಮಿತಿ,—ಎಲ್ಲೆ; ಚರಮಸೀಮೆ : ಸಹನಶೀಲತೆಯು ಪರಮಾವಧಿಯದು (ಹಳ್ಳಿಪಾ. ೧೧೬) ; ಅದು ಸುಖದ ಪರಮಾವಧಿ. ನಾನು ಅದಕ್ಕೆ ಅರ್ಹನಲ್ಲ (ಮಲೆನಾ. ೧೬೪); ಶಕುಂತಲೆಯ ದುರ್ದೈವದ ಪರಮಾವಧಿಯನ್ನು ಕಾಣಲು ನಾವು ಐದನೆಯ ಅಂಕಕ್ಕೆ ಹೋಗಬೇಕು (ಧರ್ಮಸಾ. ೬೧). ೩. ಅತಿಹೆಚ್ಚು ; ವಿಪರೀತ : ಚೀನಾದೇಶದ ಜನರಿಗಂತೂ ಅಫು ತಿನ್ನುವ ವ್ಯಸನವೂ ಸೇದುವ ವ್ಯಸನವೂ ಪರಮಾವಧಿಯುಂಟು (ಮುಂಬಯಿ. ೪-೪೦). ೪. [ಜೈನ] ಅವಧಿಜ್ಞಾನದ ಮೂರು ಭೇದಗಳಲ್ಲಿ ಒಂದು : ಪರಮಾವಧಿಯುಂ ಭವಮನಱಿದು ಯತಿಪತಿ ನುಡಿದಂ (ಆಪು. ೩-೩೭). ☞ "ಅವಧಿಜ್ಞಾನದಲ್ಲಿ ದೇಶಾವಧಿ, ಪರಮಾವಧಿ, ಸರ್ವಾವಧಿ ಎಂದು ಮೂರು ಭೇದಗಳಿವೆ. ಪರಮಾವಧಿ ಮತ್ತು ಸರ್ವಾವಧಿ ಜ್ಞಾನಗಳು ಚರಮಶರೀರಿಯಾದ ಅಥವಾ ತದ್ಭವಮೋಕ್ಷಗಾಮಿಯಾದ ಮುನಿಗಳಿಗೆ ಮಾತ್ರ ದೊರಕುತ್ತವೆ" (ಆಪು. ಪಾರಿಭಾಷಿಕ ಶಬ್ದಕೋಶ) ; ಸಂಯಮಮಂ ಕೈಕೊಂಡು ಚಾರಣಋದ್ಧಿಯುಮಂ ಪರಮಾವಧಿಯುಮಂ ಪಡೆದಂ (ಚಾವುಂಪು. ೬೫). [ಪರಮ + ಅವಧಿ]

**ಪರಮಾಶಿ** 'ಫರಮಾಯಿಷಿ' ನೋ.

**ಪರಮಾಶೀರ್ವಾದ** (ನಾ). ಉತ್ಕೃಷ್ಟವಾದ ಹರಕೆ : ಪರಮಾಶೀರ್ವಾದದಿಂ ಪರಸಿ ಮಗನಂ (ಕಾದಂಪೂ. ೪೯೧) ; ಪರಮಾಶೀರ್ವಾದನಾದಂ ಜನಿಯಿಸೆ ಪರಮೋತ್ಸಾಹಮಾಂಗಲ್ಯತೂರ್ಯೋತ್ಕರನಾದಂ ಪೊಣ್ಮಿರಾರಾಜಿಸೆ (ಪುಷ್ಪಪು. ೭-೧೮). [ಪರಮ + ಆಶೀರ್ವಾದ]

**ಪರಮಾಶೀರ್ವಾದನ** (ನಾ). = ಪರಮಾಶೀರ್ವಾದ : ಕರಕಮಳಮುಕುಳಯುತ ಕುನ್ತಳನಾಡ ಕುನ್ತಳನಾಥನಂ ಪರಮಾಶೀರ್ವ್ವಾದನಗಳಿಂದಂ ಕುಳ್ಳಿರ್ದ್ದು (ಸೌಇಇ. XX, ೪೬-೩೮ ; 1072). [< ಪರಮಾಶೀರ್ವಾದ]

**ಪರಮಾಶ್ಚರ್ಯ** (ನಾ). ಅತಿಯಾದ ಅಚ್ಚರಿ ; ಅತ್ಯಾಶ್ಚರ್ಯ : ಪರಮಾಶ್ಚರ್ಯಪರ್ಯಾಕುಲಿತಶಿರಃಕಂಪಂಬೆರಸು ಸುರಪತಿ ಕೆಯ್ಮುಗಿದು (ಶಾಂತಿಪು. ೧೦-೭೫ ವ). [ಪರಮ + ಆಶ್ಚರ್ಯ]

**ಪರಮಾಶ್ರಯ** (ನಾ). ಶ್ರೇಷ್ಠವಾದ ನೆಲೆ ; ಪರಮಾತ್ಮ : ಪರಮಾಶ್ರಯವೇ ತಾನಾಗಿ ಶತಪತ್ರಕಮಳಕರ್ಣಿಕಾಮಧ್ಯದಲ್ಲಿ ಸ್ವತಃ ಸಿದ್ಧನಾಗಿರ್ಪ ನಮ್ಮ ಕೂಡಲಸಂಗಮದೇವ (ಬಸವ. ೮೧೬). [ಪರಮ + ಆಶ್ರಯ]

**ಪರಮುಖ** (ನಾ). ಮೋಕ್ಷಾಪೇಕ್ಷಿಯಾದವನು ; ಮುಮುಕ್ಷು : ಶಂಕಿಪರೆ ಪರಮುಖರು ಶಂಬರಸುರೇಂದ್ರನೊಲಿದಂ ಕರುಣದಿಂದ ರಕ್ಷಿಸುತಾಯೆಯೆನಲು (ನಪಮೋ. ೧೨-೧೬). [ಸಂ.]

**ಪರಮುಖಜಾಣ** (ನಾ). ಇನ್ನೊಬ್ಬರ ಮುಖವನ್ನು ನೋಡಿ ಅವರ ಭಾವನೆಗಳನ್ನು ತಿಳಿಯಬಲ್ಲ ಚತುರ ; ಇಂಗಿತಜ್ಞ : ಪರಮುಖಜಾಣನೆ ಸ್ವಾಮಿ ನೀನಱಿಯದ ಸುರುಚಿರಕಲೆಗಳಿನುಂಟೆ (ಭರಚ. ೪೮-೬೪). [ಪರ$_1$ + ಮುಖ + ಜಾಣ]

**ಪರಮೆ$_1$** 'ಪಱಮೆ' ನೋ.

**ಪರಮೆ$_2$** (ನಾ). ೧. ಶ್ರೇಷ್ಠಳಾದ ದೇವತೆ ; ಶಿವೆ ; ಪಾರ್ವತಿ : ಪರಮೆಯಾಡಿದ ನುಡಿಯ ಪರಮೇಶ್ವರನು ಸಲಿಸುವ ಮುಂದಣುತ್ಸವವಱಿತು ವಾಗ್ದೇವಿಯೊಳು ಪಾರ್ಥನ ಗೆಲವನೆಣಿಸುತಿರೆ ಹರ ಹರಿಯ ಪೊಗಳಿದನು (ಕೃಷ್ಣಾರಾ. ೨೨-೫). ೨. [ಛಂದ] ಮೂರು ಅಕ್ಷರಗಳುಳ್ಳ ಮಧ್ಯಾಛಂದಸ್ಸಿನ ಒಂದು ಅಕ್ಷರವೃತ್ತದ ಹೆಸರು : ಸುರರ ನೆರವಿ ನೆರೆಯೆ ಪರಮೆ (ಛಂದೋಂಬು. ೨-೬೦). [ಸಂ. ಪರಮಾ]

**ಪರಮೆಮೊರೆ** (ನಾ). ದುಂಬಿಯ ಝೇಂಕಾರ ; ತುಂಬಿಯ ಧ್ವನಿ : ಪೊಸಗಂಪು ಪರಮೆಮೊರೆಯುಂ ಬಳಿಗೆ ಕರೆಯೆ (ಶ್ರೀರಾಮಾ. ೨೨೪-೨೯). [ಪರಮೆ$_1$ (< ಪಱಮೆ) + ಮೊರೆ$_3$]

**ಪರಮೇಶ** (ನಾ). ೧. ಶ್ರೇಷ್ಠನಾದ ಒಡೆಯ,—ಸ್ವಾಮಿ : ಪರಮೇಶಂ ಜೀವಿತೇಶಂ ತಮಗೆ ದಿಟದಿನೆಂದುರ್ವ ಕಾಂತಾಜನಂ ಮತ್ತರುಹಂ ರಾಜ್ಯಾರ್ಹನೆಂದೊಲ್ದಿಱಿಗೆ ಧರೆ (ಚಂದ್ರಪು. ೧೩-೫೬). ೨. ಶಿವ ; ಈಶ್ವರ : ಪರಮೇಶ ಭಕ್ತಜನಶಂಕರ ಶಂಕರ ನಿನ್ನ ಮಾತನಾಂ ಮನ್ನಿಸಿದೆಂ (ಜಗವಿ. ೧೮-೬೭) ; ಸುಮತಿಗಳು ಪರಮೇಶನೆಂದರೆ ರಮಣದಿಂ ಪರಮಾತ್ಮನೆಂದಡೆ ವಿಮಳಿತ ಪರಬ್ರಹ್ಮವೆಂದಡೆ ಹರನ ನಾಮವಿವು (ಬಸಪು. ೫೫-೩೯). ೩. ವಿಷ್ಣು ೪. ಇಂದ್ರ. ೫. ಚಕ್ರವರ್ತಿ : ಪುರುಪರಮೇಶನ ಹಿರಿಯ ಕುಮಾರನು ನರಲೋಕಕೊಬ್ಬನೆ ರಾಯ (ಭರಚ. ೧-೨೦). ೬. [ಜೈನ] ತೀರ್ಥಂಕರ ; ಜಿನ : ಪರಮೇಶಂ ಮಧ್ಯದ ಮಂದರದಂತಿರೆ ಸಮವಸರಣವಳಯಂ ವಿಳಸದ್ಗಿರಿಸಿಂಧುನದೀಪುರಭಾಸುರ ಜಂಬೂದ್ವೀಪಮೆಂಬಿನಂ ಸೊಗಯಿಸುಗುಂ (ಚಂದ್ರಪು. ೧೫-೩). [ಪರಮ + ಈಶ]

**ಪರಮೇಶ್ವರ** (ನಾ). ೧. ಬಹಳಶ್ರೇಷ್ಠನಾದವನು : 'ಕವಿಪರಮೇಶ್ವರ' ಪರಾ. ೨. ಚಕ್ರವರ್ತಿ ; ಸಾಮ್ರಾಟ : ಪುರುಪರಮೇಶ್ವರಪುತ್ರಂ ಭರತೇಶ್ವರಚಕ್ರವರ್ತಿ ಬಂದಿರ್ದಂ (ಆದಿಪು. ೧೨-೮೯) ; ಆ ಪುಣ್ಯಾಂಕುರಪಾಕಪ್ರರೋಹಾಯಮಾಣನುಮಪ್ಪ ಪರಮೇಶ್ವರಂಗೆ ಬಗೆಗೊಂಡರಸಿಯರವರಿರ್ವರ್ (ಶಾಂತಿಪು. ೯-೪೦) ; ಶ್ರೀಪೃಥ್ವೀವಲ್ಲಭಮಹಾರಾಜಾಧಿರಾಜ ಪರಮೇಶ್ವರ . . . ತ್ರೈಲೋಕ್ಯಮಲ್ಲದೇವರು ಕಲ್ಯಾಣಪುರದ ನೆಲೆವೀಡಿ × × × ಗೆಯ್ಯುತ್ತಮಿರೆ (ಕೊಶಾಶಾ. ೧೧-೯ ; ?). ೩. ಪರಶಿವ; ಈಶ್ವರ: "ಈಶಾನಃ, ಶಶಿಶೇಖರಃ . . . ಪರಮೇಶ್ವರಃ . . . ನೀಲಲೋಹಿತಃ—ಈ ೪೫ ಮಹಾದೇವರ ಪೆಸರ್" (ಹಲಾಯು. ೩-೧೧) · ಪಾರ್ವತಿ ಘನವೆಂಬೆನೆ ಪರಮೇಶ್ವರನ ಅರ್ಧಾಂಗಿಯಾದಳು (ಬಸಪ. ೮೬೬).

ಸರಸಿಜಾನನೆ ಹೋಗಿ ಪರಮೇಶ್ವರನ ದೇಗುಲಮಂ ಹೊಗಲು (ಬಸಪು. ೫೨-೨೬). ೪. ವಿಷ್ಣು. ೫. ಇಂದ್ರ. ೬. ಬ್ರಹ್ಮ. ೭. [ಜೈನ] ತೀರ್ಥಂಕರ ; ಜಿನ: ಅಂತು ಪುರಂದರನಾನಂದನೃತ್ಯಾವಸಾನದೊಳೀ ಪರಮೇಶ್ವರಂ ಧರ್ಮಾಮೃತವರ್ಷದಿಂ ಭವ್ಯಸಸ್ಯಸಮೃದ್ಧಿಯಂ ಮಾಡುವುದಱಿಂ ವೃಷಮೆಂಬುದು ಧರ್ಮಮದಱಿಂದೊಪ್ಪುವುದಱಿಂದಂ (ಆದಿಪು. ೭-೧೨೭ ವ) ; ಪರಮೇಶ್ವರನಂ ತ್ರಿಜಗದ್ಗುರುವಂ ನೆಗೞ್ದಜಿತ ನಾಥನಂ ತನ್ನ ತನೂದರದೊಳ್ ತಾಳ್ದಿದ ಪೆಂಪಚ್ಚರಿಯೆನಿಸಿದುದಾ ಸುರಾಂಗನಾಧ್ಯರ್ಚಿತೆಯಾ (ಅಜಿಪು. ೩-೧೮) ; ಪರಮೇಶ್ವರನಂ . . . ಮಣಿಮಯವಿಷ್ಟರದೊಳ್ ನೆಲಸಿರ್ದ ಭವ್ಯಚಿಂತಾಮಣಿಯಂ . . . ಕಂಡು (ವರ್ಧಪು. ೧೦-೭೭).

**ಪರಮೇಶ್ವರ ದತ್ತಿ** = ಚಾಲುಕ್ಯರಾಜರ ಹೆಸರಿನಲ್ಲಿ ಬಿಟ್ಟ ದತ್ತಿ: ಶ್ರೀಮದ್ಭುವನಯ್ಯ (ನೈಕ)ಮಲ್ಲದೇವರ್ಗ್ಗೆ ಬಿನ್ನಪಂಗೆಯ್ದು ಪರಮೇಶ್ವರ ದತ್ತಿ ಮಾಡಿ . . . ದೇಗುಲದ ಬೇಸಕ್ಕಂ ದೇವಪೂಜೆಗಂ . . . ಬಿಟ್ಟ ಬನವಸೆ ನಾಡ ಕಂಪಣಂ (ಇಆ.IV, ೨೦೯-೨೮; 1075). **ಪರಮೇಶ್ವರ ದೀಕ್ಷೆ** = ಜೈನಸಂನ್ಯಾಸವನ್ನು ಹೊಂದುವ ವ್ರತ; ಜಿನದೀಕ್ಷೆ: ಗುರುಪದಪದ್ಮಾಂತಿಕದೊಳ್ ಪರಮೇಶ್ವರದೀಕ್ಷೆಯಂ ಮನಂಬಿಡೆ ಕೊಂಡೀ ಧರೆಯಂ ಪೊಗೞಿಸಿದನಿದೇಂ ಪುರುಪರಮೇಶ್ವರಸುತರ್ ಪಂಚ್ಛೇದಿಗಳೋ (ಆದಿಪು. ೧೪-೧೩೯). [ಪರಮ + ಈಶ್ವರ]

**ಪರಮೇಶ್ವರಾವತಾರ** (ನಾ). ಶಿವನ ಅಂಶದಿಂದ ಹುಟ್ಟಿದವನು ; ಅಶ್ವತ್ಥಾಮ : ಪರಮೇಶ್ವರಾವತಾರನೆ ಪರಮಜ್ಞಾನಿಯೆ . . . ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ (ಗದಾಯು. ೯-೩೪).

[ಪರಮೇಶ್ವರ + ಅವತಾರ]

**ಪರಮೇಶ್ವರಿ** (ನಾ). ೧. ಶ್ರೇಷ್ಠಳಾದ ಒಡತಿ,—ಸ್ವಾಮಿನಿ: ನೀರದಮಂ ಕುಡುಮಿಂಚು ಪೊರ್ದಿ ಶೋಭಿಸುವವೊಲಾ ಸುರಾಧಿಪನನಾ ಪರಮೇಶ್ವರಿ ಪೊರ್ದಿ ನಾಡೆ ಕಣ್ಗೆಸೆದಳ್ (ಶಾಂತಿಪು. ೭-೨೯) ; ಪರಮೇಶ್ವರಿ ನಿಜಸುತಮುಖನಿರೀಕ್ಷಣದೊಳೊಡನೊಗೆದ[ಗೆ]ಪುಳಕಂಗಳಿನೇಂ ಕರಮೆಸೆದಳೊ (ಅಜಿಪು. ೪-೫) ; ಕುರುಕುಲಜೀವಾಕರ್ಷಣಪರಿಣತಮಿದು ಕಾಳಹಸ್ತಮಲ್ಲದೆ ಪರಮೇಶ್ವರಿ ಕೇಶಹಸ್ತಮಕ್ಕುಮೆ ಪರಾಭವಜ್ವಲನಧೂಮಕೃಷ್ಣಂ ಕೃಷ್ಣೇ (ಗದಾಯು. ೧-೬೭). ೨. ಪಾರ್ವತಿ ; ದುರ್ಗೆ: ನೇವುರದ ಕಳಧ್ವಾನಮೊಗೆದು ನಗಮಂ ಜಗಮಂ ಪರಿವೇಷ್ಟಿಸೆ ಬರುತಿರ್ದಳ್ ಪರಮೇಶ್ವರಿ ಚಂದ್ರಧರನಸೀಕ್ಷಿಪ ಭರದಿಂ (ಗಿರಿಕ. ೫-೩೦) ; ರಘುಪುಂಗವನ ನುಡಿಗೇಳ್ದು ಪರಮೇಶ್ವರಿಯಿಂತೆಂದಳ್ (ಅದ್ಭುತ. ೫೩-೧೭). ೩. ಅರುವತ್ತುನಾಲ್ಕು ಯೋಗಿನಿಯರಲ್ಲಿ ಒಬ್ಬಳು: ಬ್ರಾಹ್ಮಿ . . . ದೇವಿ ದಿವ್ಯಯೋಗಿನಿ . . . ಪರಮೇಶ್ವರಿ ಕ್ರೋಧಿನಿ... ಹುಂಕಾರಿಯರೆಂಬ ಚತುಷ್ಷಷ್ಟಿಯೋಗಿನಿಯರುಂ (ವಿವೇಕ. ೨೧೪).

[ಪರಮ + ಈಶ್ವರಿ]

**ಪರಮೇಶ್ವರಿನೋಟು** 'ಪ್ರಾಮಿಸರಿನೋಟು' ನೋ.

**ಪರಮೇಷ್ಠಿ** (ನಾ). ೧. ಶ್ರೇಷ್ಠದೈವ ; ಬ್ರಹ್ಮ; ಸೃಷ್ಟಿಕರ್ತ: "ಬ್ರಹ್ಮಾ, ಸ್ರಷ್ಟಾ, ಧಾತಾ, ಪರಮೇಷ್ಠೀ . . . ಕಮಲಾಸನಃ—ಈ ೨೦ ಬ್ರಹ್ಮನ ಪೆಸರ್" (ಹಲಾಯು. ೨-೬) ; ಸುರಭೂರುಹದಗೆಯಂ ಬಿತ್ತರದಿಂ ಪರಮೇಷ್ಠಿ ತಂದು ಮನುಜಾಕೃತಿಯಿಂ ವಿರಚಿಸಿ ಪುಟ್ಟಿಸಿದ ನೆನಲ್ ದೊರೆವೆತ್ತಂ ಬೀಲನಖಿಳಲಕ್ಷ್ಮೀಲೋಲಂ (ಶಾಪಮಂ. ೨೯೭-೧೪೫೯ ; 1151) ; ಪರಮೇಷ್ಠಿಯಂಚೆ ಕೃಷ್ಣನ ಗರುಡಂ . . . ಮುನ್ನೀಗಿರಿವರದೊಳ್ಪುಟ್ಟ ನೆಗೞ್ದವೆನಿಸುವು[ವನಿಶಂ] (ಸೂಕ್ತಿಸು. ೩-೧೪೭) ; ಬಳಿಕ ಹರಿದುದು ದೇವಕುಲ ಪರಮೇಷ್ಠಿಯಲ್ಲಿಗೆ (ಕುವ್ಯಾಕ. ೭-೧೭) ; ಪರಮೇಷ್ಠಿ ನಿಜಚಾತುರಿಯನಳಿಯೆ ಸಿರವಿಸಿದನೆರಡುಕೈಯಿಂದೆರಡು ಜಂತುಗಳ (ಮಂಕುಕ. ೧೯೩). ೨. ಶಿವ. ೩. ವಿಷ್ಣು. ೪. ಗರುಡ. ೫. ಅಗ್ನಿ. ೬. [ಜೈನ] ತೀರ್ಥಂಕರ; ಜಿನ: "ಪರಮೇಷ್ಠಿ ಪರಂಜ್ಯೋತಿಸ್ಸ್ವರೂಪನಾಪ್ತಂ . . . ತೀರ್ಥಕರಂ" (ನಸ್ತುಕೋ. ೨-೮) ; ಪೀಠತ್ರಯಾಗ್ರನಿಷ್ಠಿತನಂ ಪರಮೇಷ್ಠಿಯಂ ಪ್ರದಕ್ಷಿಣಂಗೆಯ್ದು (ಚಂದ್ರಪು. ೭-೫ವ) ; ದೇವದೇವ ಪರಮೇಷ್ಠಿ ದಯಾಶ್ರಯಶರಣವೆಂಬ ಸುರಕೋಟಿಯ ಕಳಕಳಮೆಸೆದುದು (ಪುಷ್ಪಪು. ೧೧-೪) ; ಜಿನನಿಗೆ ಅರ್ಹನ್, ಜಿನೇಶ್ವರ, ತೀರ್ಥಂಕರ, ಪರಮೇಷ್ಠೀ, ವೀತರಾಗ, ಪರಮಾತ್ಮಾ ಮೊದಲಾದ ಹೆಸರುಗಳುಂಟು (ಭಾತತ್ತ್ವ. ೨೨೭). ೭. ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸಾಧುಗಳೆಂಬ ಐದು ಜಿನ ಗುರುಗಳು: "ಸರಸಿಜವಾಸ ಪಂಚಪರಮೇಷ್ಠಿಗಳುಂ ಪರಮೇಷ್ಠಿ ಯೆಂದೆನಿಕ್ಕು" (ನಾನಾರ. ೧೫೧) ; ಅದೇ ಪರಮಪದ. ಆದುದರಿಂದಲೇ ಅವರಿಗೆ ಪರಮೇಷ್ಠಿಗಳೆಂದು ಪ್ರಸಿದ್ಧಿ (ಹಿಂದಸಾ. ೮೨). 'ಪಂಚಪರಮೇಷ್ಠಿ' ಪರಾ.

[ಸಂ. ಪರಮೇಷ್ಠಿನ್]

**ಪರಮೇಷ್ಠಿತನ** (ನಾ). ಪರಬ್ರಹ್ಮಪದವಿ; ಬ್ರಹ್ಮತ್ವ: ಬೇಡ ತನಗೆಲೆ ದೇವ ನಿಮ್ಮಡಿ ಮಾಡಿದೀ ಪರಮೇಷ್ಠಿತನದಿರವು (ತಿಭಾಗ. ೧೦-೧೪-೩೩).

[ಪರಮೇಷ್ಠಿ + -ತನ]

**ಪರಮೇಸೂರನೋಟು** 'ಪ್ರಾಮಿಸರಿನೋಟು' ನೋ.

**ಪರಮೇಸ್ವರ** (ನಾ). = ಪರಮೇಶ್ವರ ೨.

**ಪರಮೇಸ್ವರ ದತ್ತಿ** = ಪರಮೇಶ್ವರದತ್ತಿ : ಸುಧಾಕರ್ಮ[ದುಪ] ಭೋಗಕ್ಕಂ ಪಂಚೋಪಚಾರಪೂಜೆಗಂ ಪರಮೇಸ್ವರದತ್ತಿಯಾಗಿ (ಕಇಆ. ೧೦೩-೮-೨೨ ; 1076). [< ಪರಮೇಶ್ವರ]

**ಪರಮೈಶ್ವರ್ಯ** (ನಾ). ೧. ಆತ್ಯಂತಿಕವಾದ ಅಧಿಕಾರ ; ಪರಮಾಧಿಕಾರ. ೨. ಉತ್ಕೃಷ್ಟವಾದ ಸಂಪತ್ತು,—ಸಿರಿ: ಪ್ರೀತಿಂಕರ ವಿಮಾನದೊಳ್ ಮೂವತ್ತೊಂದುಸಾಗರೋಪಮಮುಮಮಿತವಿಕ್ರಮಾಧಿಧಾನಮುಮಹಮಿಂದ್ರಪರಮೈಶ್ವರ್ಯಮುಂ ದೊರೆಕೊಳೆ ಸುಖಾತ್ಮಸಿರೆ (ಶಾಂತಿಪು. ೯-೩೦ ವ); ಪರಮೈಶ್ವರ್ಯದಿನೆಸೆದಾ ಪುರದೊಳ್ . . . ಅಚ್ಯುತಸಮಾಖ್ಯಂ ಭಕ್ತಂ ಮೆಱೆವಂ (ತ್ರಿಷವಿ. ೫೪-೩). ೧,೨: ಉಮಾಕಾಮಿನೀಜೀವಿತೇಶಂ ಪರಮೈಶ್ವರ್ಯಾಸ್ಪದಂ ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ (ಜಗವಿ. ೧-೩). [ಪರಮ + ಐಶ್ವರ್ಯ]

**ಪರಮೋತ್ಕೃಷ್ಟ** (ಗು). ಬಹಳ ಶ್ರೇಷ್ಠವಾದ ; ಅತ್ಯುತ್ತಮವಾದ: ಅಂತು ಹುಂಡಸಂಸ್ಥಾನರುಂ ನಪುಂಸಕರುಮಪ್ಪ ನಾರಕರ ಜನ್ಮಭೂಮಿಗಳಾದೇೞಱೊಳಂ ನೆಲಸುವ ಜೀವಂಗಳ ಕರ್ಮತಾರತಮ್ಯಪರಮೋತ್ಕೃಷ್ಟಸ್ಥಿತಿ (ಶಾಂತಿಪು. ೭-೧೦೦ ವ). [ಪರಮ + ಉತ್ಕೃಷ್ಟ]

**ಪರಮೋತ್ಸವ** (ನಾ). ಅಧಿಕವಾದ ಸಂತೋಷ,—ಸಂಭ್ರಮ : ಸುಹೃಜ್ಜನಾಗ್ರಗಣ್ಯನಂ ಹಿರಣ್ಯನಂ ಸನ್ಮಾನಪೂರ್ವಕಂ ವಿಸರ್ಜಿಸಿ ಪರಮೋತ್ಸವದಿನಿರ್ದಂ (ಚಂದ್ರಪು. ೬-೪೨ ವ) ; ಪರಮೋತ್ಸವದಿಂ ನಡೆತಂದು . . . ಪದ್ಮಳಿಯರಲಂ ತಿಱಿದಳ್ ಭವಾನಿ ಶಿವಪೂಜಾರ್ಥಂ (ಗಿರಿಕ. ೫-೫೬).

[ಪರಮ + ಉತ್ಸವ]

**ಪರಮೋದನ** (ನಾ). = ಪರಮಾನ್ನ ೩ : ಮಡದಿಯರು ಮೂವರಿಗೆ ಮುನಿಕುಲಮೃಡ ವಸಿಷ್ಠನ ನೇಮದಲಿ ವಿಂಗಡಿಸಿ ಕೊಟ್ಟನು ನೃಪತಿ ಪರಮೋದನವನುಚಿತದಲಿ (ತೊರಾ. ೧-೭-೫೭). [ಪರಮ + ಓದನ]

**ಪರಮೋದಯ** (ನಾ). ೧. ಬಹಳವಾದ ಏಳಿಗೆ,—ಶ್ರೇಯಸ್ಸು : ಪರಿಚಿತಸನಾಥರಾಗಾಂಕುರಜಲಸೇಚಂ ವಿರೋಧಿತರುದವದಹನಂ ಪರಮೋದಯರವಿಗಗನಂ ಪರಾಕ್ರಮವಡೆನೆ ವಿಭಿನ್ನರೂಪಕಮಕ್ಕುಂ (ಕವಿರಾ. ೩-೨೨). ೨. ಅಧಿಕವಾದ ಉತ್ಕರ್ಷವನ್ನು ಹೊಂದಿದವನು ; ನೃಪತುಂಗನ ಒಂದು ಬಿರುದು : ಸತತಂ ಪರ್ಚುತ್ತು ನಿಜಾಯತಿ

ಯೊಡನೆ ಮಹಾವಿಭೂತಿ ಪರಮೋದಯನಾ (ಕವಿರಾ. ೩-೧೫೫).
[ಪರಮ + ಉದಯ]

**ಪರಮೋರ್ಧ್ವ** (ನಾ). ಬಹಳ ಎತ್ತರವಾದ ಸ್ಥಾನ ; ಊರ್ಧ್ವ ಲೋಕ : ಜೀವನದ ಮೂಲ ಮೇಲಿಹುದು ಪರಮೋರ್ಧ್ವದಲಿ (ಮಂಕುಕ. ೫೬೦). [ಪರಮ + ಊರ್ಧ್ವ]

**ಪರಮೋಶಿ** 'ಫರಾಮೋಷಿ' ನೋ.

**ಪರಮೌದಾರಿಕ** (ಗು). "ಘಾತಿಕರ್ಮ ನಾಶವಾಗಿ, ಅರ್ಹದವಸ್ಥೆಯಲ್ಲಿರುವ" (ಜೈನಕೋ. ೧೫೯) : ಪರಮೌದಾರಿಕ ದಿವ್ಯಮೂರ್ತಿ ವಸನಾಲಂಕಾರಮಂದಾರಶೇಖರರಮ್ಯಂ ಧೃತಯೌವನಂ (ಆದಿಪು. ೮-೫); ಪರಮೌದಾರಿಕದಿವ್ಯಶರೀರನುಂ . . . ಸುಂದರಾಕಾರನುಮಪ್ಪ ತೀರ್ಥಕರ ಕುಮಾರಂಗೆ . . . ಪ್ರಸಾಧನಪ್ರಾರಂಭಂಗೆಯ್ಯೆ (ಶಾಂತಿಪು. ೧೦-೫೬ಪ); ಪರಮೌದಾರಿಕದಿವ್ಯದೇಹ ಸಹಜಾಮೋದಂಗಳಿಂದಂ ಸರೋವರ ಗಂಗಾದಿ ನದೀಜಲಕ್ಕೆ ಮೆಚ್ಚಿದುಂ ಗಂಧೋದಕಾಖ್ಯಾನಂ (ಅನಂಪು. ೫-೭೭).
[ಪರಮ + ಔದಾರಿಕ]

**ಪರಮ್ಮಪುರುಷ** (ನಾ). ದೇವರು ; ಪರಮಾತ್ಮ : ಅನಂತಾನಂತ ಪರಮ್ಮಪುರುಷ ಪುರುಷೇಶ್ವರ (ಮೋಕ್ಷದೀ. ೨೭-೨). [<ಪರಮಪುರುಷ]

**ಪೆರಯ,** ಪರೆಯ$_2$, ಹರಯ, ಹರೆ$_6$, ಹರೆಯ (ನಾ). ೧. ತಾರುಣ್ಯ ; ಯೌವನ : "ಪೆರಯಮೆನೆ ಪ್ರಾಯಮಕ್ಕು" (ಕಶರ. ೧೨೬). **ಪೆರೆಯ**$_2$ **:** ೧. ಪೆರೆಯಂ ವರ್ಣವಳಂಕೆಗೊಂಡ ನಯುವತ್ವಾಶ್ಚರ್ಯಸೌಂದರ್ಯಮೊಂದಿರೆ ಭೇದಂ ಲಮವಿಲ್ಲದಾತ್ಮಜೆಯೆ ದಲ್ ತಾನಿಂತಿದೆಂಬಂತೆ ಬಿತ್ತರಿಸುತ್ತಿರ್ಪ ತದೀಯ ಚಿತ್ರಪಟಮಂ ನೋಡುತ್ತುಮಿರ್ದಂ . . . ಚಂದ್ರಧ್ವಜೋರ್ವೀಶ್ವರಂ (ಕುಸುಮಾ.೧೫-೭೦); ನೋಡೆನ್ನೋರಗೆ ವೆಣ್ಗಳ್ ಕೂಡೆ ಮನಂಗೊಳ್ವ ಮಕ್ಕಳಂ ಮುದದಿಂ ಮುದ್ದಾಡಿಸುತಿರ್ದರ್ಪರ್ ತಾಮೇಡಿಸುವಂತೆನ್ನ ಸಿರಿಯುಮಂ ಪೆರೆಯಮುಮಂ (ಪುಷ್ಪಪು. ೩-೮೦) ; ಆ ಲಕ್ಷ್ಮಿಯುಂ ರೂಪುಮಾ ಪೆರೆಯಂ ಬೇವಿನ ಸುಗ್ಗಿ ಪಾಟ್ಮನೆಯ ಚಿತ್ರಂ ಕಾಡ ಚಂದ್ರಾತಪಂ (ಕಾವ್ಯಸಾ. ೯೯೮). 'ಎಳವರೆಯ', 'ಮುಂಬರೆಯ' ಪರಾ. **ಹರಯ :** ೧. ಜಡಿದು ೧೪ ಸೋವ ಹರಯದ ಮಡದಿಯರ ಶರೀರವರ್ಣರೂಪಂ . . . ತಮ್ಮೊಳ ಮೆಡೆಗೊಂಡವೊಲಿರ್ಪ ನೆಲ್ಗಳೀನೊಪ್ಪಿದುವೋ (ದಶಕು. ೧-೩೧); ಪುರ್ಬುಗಳ್ ಕಾಮಕೋದಂಡಮಂ ದಂಡಿಸಿದುವಾ ಮುಖಂ ಮುಕುರದಿರವಂ ಪಳಿದುದು . . . ಎನಲೆಳೆಯ ಹರಯಮಮರ್ದುದು ಕುವರನ (ಚಿಬಪು. ೫-೪೪); ಹರಯದ ಹೊಸಲಿನಲ್ಲಿ ಕಾಲಿಡುತ್ತಿದ್ದ ಸೀತಾರಾಮುವಿನ ಬಾಳಿಗೆ ಉದಯವೇ ಇಲ್ಲದ ಕತ್ತಲು ಕವಿಯಿತು (ಕಳಹು. ೮೯). ೨. ವಯಸ್ಸು : ನಂದನರೆನ್ನಯ ಹರಯದ ಸೌಂದರಿಯರ್ಗಾದರಾಗರೆನಗೆನ್ನದಿರ್ (ಅರ್ಧನೇ. ೧-೧೦೬); ಸಾವ ಹರಯವೆ ಎನುತ ಗಗನದ ದೇವತತಿ ಮಱುಗಿತ್ತು (ಕುಷ್ಕಾದ್ರೋ. ೬-೬೩); ಮಕ್ಕಳಾದವು ಕಂಡು ಬದುಕುವೆನೆಂಬ ಹರಯದಲಿ ಅಕ್ಕಟೀ ವಿಧಿಯಾಯ್ತು ವನಿತೆಗೆ (ಶಿಭಾಗ. ೭-೨-೩೭). **ಹರೆ**$_6$ **:** ೧. ಬಿಲ್ಲು ಶಬರಗೆ ಲೇಸು ಚಲ್ಲಾಟ ಲೇಸು ಹರೆಯಲಿ ಸೂಳೆಗೆ ಗುಲ್ಲಾಟ ಲೇಸು (ಸರ್ವಜ್ಞ. ೧೯೦೪); ಕೋಲ್ಮಿಂಚು ಇಣಿಕಿಣಿಕಿ ಕಣ್ಮುಣಿಸಿ ಕೆಣಕೆಣಕಿ ಬಾ ಗೆಣೆಯ ಹೊರಗೊ ಎನುವಾಗ ಒಳಸೇರಿ ಹರೆವಿಸಾರಿಥ್ಥಾಂಗ ಕುಣಿತೇವೊ (ಉಯ್ಯಾಲಿ.೭೫-೧೨). **ಹರೆಯ:** ೧. ಹರನ ಮನೋಹರಂ ಗಿರಿಜೆಯಾ ನಡೆ . . . ಈ ಸುರುಚಿರಕಾಂತಿಯಾ ಹರೆಯವೀ ಸುಕುಮಾರತೆಯಾ ಸುಧಾಮಯಂ (ಗಿರಿಕ. ೪-೫೭) ; ಹರೆಯದ ಮೇಲೆ ಬರ್ಪುದೇ ಸದ್ವಿವೇಕಂ (ಪದ್ಮರಾ. ೨-೭೩); ಕರಮೆಸೆವ ರೂಪು ರೂಪಿಗೆ ತಕ್ಕ ಹರೆಯ(ಸೌಂದಪು. ೪-೧೫); ಇವಳ್ಗೆ ಹರೆಯದಿಂದಮೆ ಕುಬೇರಂ ದೊರೆದಿರ್ಕುಂ (ಚಿಕವಿ. ೬-೧೯೪ಪ) ; ಹರೆಯದಲಿ ಮುಪ್ಪಿನನುಭವ ಸೇರಲೆಂದು, ಜರೆಯೊಳಗೆ ಹರೆಯದುತ್ಸಾಹ ಇರಲೆಂದು . . . ಹರಸಿದೆವು (ಕಎಪು. ೧೬-೮). ೨. ಆರ ತನಯಂ ಪೆಸರಾವುದು ರೂಪದೆಂತುಟೋ ಹರೆಯಮದಿನ್ನೆಗಂ ತಡೆದೆ ನೀಂ ನುಡಿಯಾದುದೆ ನಿನ್ನೊಳಾತನೊಳ್ ಪರಿಚಯಮೆಂತು (ಕಾದಂಉ. ೨೯) ; ಚಂದ್ರಂಗೆ ಸಕಳಕಳೆಗಳ್ ನೆರೆವ ಮಾಳ್ಕೆಯಿಂ ಅಂದು ಹದಿನಾಱು ಹರೆಯಮದಾಗಲ್ (ನಂಬಿರ. ೩-೧೮) ; ಹರೆಯವೇ ಕಿಱಿದಲ್ಲದೇ ಎನಾತ್ಮ ಕಿಱಿದಲ್ಲ (ಬಸಪು. ೨೪-೧೩) ; ಸಾವ ಹರೆಯವೆ ಭರತ ಮರಳ್ಕೆ (ಕೌರಾ. ೪೪-೪೧) ; ತನಯಂ ಹುಟ್ಟುವ ಹರೆಯಂ ಬಾಲಿಕೆ ನಿನಗಿನ್ನುಂ ಸಾಲದು (ಜಯಕಾ.೨-೪೪); ಎರಡು ತಿಂಗಳ ಹರೆಯ-ಮಂಗಳ ಬರಲು-ತುಂಬಿತು ವತ್ಸಗೇ (ಕಎಪು. ೨೦-೩೪).

**ಹರಯದವ, ಹರೆಯದವ**= ೧. ಪ್ರಾಯಕ್ಕೆ ಬಂದವನು ; ತರುಣ ; ಯುವಕ : ಯುವಯುತಿ, ಕನಯುತಿ = ಹರಯದವನ ನುಡಿ ದಪಂ (ಕಾಶಕ್ಯ. ೨೯೨); ಹರೆಯದವನಂ ಭವಾನೀವರನ ಗಣಸ್ತ್ರೀಯರಿರ್ದ ಕಾವಿಂಗುಯ್ಕಲ್ (ದಶಕು. ೧೧-೩೮) ; ಕೂಸಿಗೆ ತಾಯಿಯಿರೆ ಲೇಸು ಹರೆಯದಗೆ [ಪಾಠಾಂ. ಹಿರಿಯರಿಗೆ]ವಿಸಾಸೆ ಲೇಸು (ಸರ್ವಜ್ಞ. ೧೧೩೨). ೨. ವಯಸ್ಸಿನವನು : ವಿಶ್ವೋತ್ತಮಂ ನಿನ್ನಯ ಹರೆಯದವಂ ಬಂದನೊರ್ವಂ ಕುಮಾರಂ (ಕಾದಂಉ. ೫೪೭). **ಹರೆಯದವಳು**= ಪ್ರಾಯಕ್ಕೆ ಬಂದವಳು ; ತರುಣಿ ; ಯುವತಿ : "ಯುವತಿ = ಹರೆಯದವಳು" (ಗಂಗಾಮ. ೨೬೮). [<ಸಂ. ಪ್ರಾಯ]

**ಪೆರಯಿಸು** 'ಪರೆಯಿಸು' ನೋ.

**ಪೆರರಾಜ** (ನಾ). ಶತ್ರುರಾಜ ; ಅರಿನೃಪ : ಪರರಾಜೋದಗ್ರತೇಜಂ ಕಿಡೆ ರಿಪುಕುಮುದಂ ಕುಂದೆ . . . ನಿತ್ಯಾಭ್ಯುದಯದಿನೆಸೆದಂ ಗೋಪಮಾರ್ತಾಂಡದೇವಂ (ಜಗವಿ. ೧೬-೧೪೦); ವಿಕ್ರಮಾದಿತ್ಯನು ಸಿಂಹಾಸನವನ್ನೇರುವವರೆಗೆ ಚಾಳುಕ್ಯರಾಜ್ಯವು ಪರರಾಜರ ಕೈಯಲ್ಲಿತ್ತು (ಕರ್ನಾಅ. ೬೮).

**ಪೆರರಾಜದರ್ಪದಲ್ಲಣ** = ಶತ್ರುರಾಜರ ಗರ್ವಕ್ಕೆ ಹೆದರಿಕೆಯನ್ನುಂಟುಮಾಡುವವನು ; ಒಂದು ಬಿರುದು : ಪರರಾಜದರ್ಪದಲ್ಲಣನೆಂಬ ಪೆಂಡೆಯವ ಚರಣದೊಳಗಳವಡಿಸಿ . . . ಪವಳದಾವುಗೆಯ ಮೆಟ್ಟಿ ಬರಲು (ಸೌಂದಪು. ೪-೨೫). [ಪರ$_3$ + ರಾಜ]

**ಪೆರರಾಜಕ** (ನಾ). ಶತ್ರುಗಳ ಸಮೂಹ : ತೇಜೋನಿಧಿಕರಹತ ಪರರಾಜಕನವದೋಷದಿಗ್ವಯಂ ಪದ್ಮರಜೋರಾಜಪ್ರತಾಪನುಪಮಿತತೇಜಸ್ವಿ ಖಚರರಾಜನವನೀತಲದೊಳ್ (ಶಾಂತಿಪು. ೩-೩೩). [ಪರ$_3$ + ರಾಜಕ]

**ಪೆರರಾಯ** (ನಾ). = ಪರರಾಜ : ಪರರಾಯರ್ಕಳ ಸೇನೆಯಂ ಗೆಲಿದು ಮತ್ತೇಭಂಗಳಂ ಸೀಳ್ದು ತನ್ನರಿಯೆಂದೆಂಬರನೊಕ್ಕಲಿಕ್ಕುವ ಭಟರ್ಗಂ ಗಂಜಿ ಕೀರ್ಟನಾಯ್ಗಳಂ ನಿರುತಂ ಭೋಜ್ಯವಿಶೇಷಮಿತ್ತು ಪೊರೆವರ್ (ಸೋಮೇಶ. ೭೫). [ಪರ$_3$ + ರಾಯ]

**ಪೆರರಾಷ್ಟ್ರ** (ನಾ). ೧. ಬೇರೆಯ ನಾಡು ; ಅನ್ಯದೇಶ. ೨. ಶತ್ರುರಾಜ್ಯ : "ಬೆಸಕೆಯ್ಯದಲ್ಲದಿದಿರಪ್ಪ ಸೀಮೆಗಳವೆಯ್ದೆ ಪರರಾಷ್ಟ್ರಮೆಂದೆನಿಕ್ಕುಂ" (ಮಂಗರಾ. ೫೬-೨). [ಪರ$_3$ + ರಾಷ್ಟ್ರ]

**ಪೆರಲ್,** ಪರಲು$_1$, ಪರಳ್, ಪರಳು, ಹರಲು, ಹರಳ್, ಹರಳು (ನಾ). ೧. ಕಲ್ಲಿನ ಚೂರು ; ಸಣ್ಣಕಲ್ಲು ; ನೊರಜು : ಅರಜನಿಯಂ ವಿರಜನಿಯಂ ಪರಾಜಿತಂ ಮಾಡಿ ಭಾವಿಸುತ್ತಿರ್ದಂ ಪನ್ನೆರಡುಮನುಪ್ರೇಕ್ಷೆಗಳಂ [೧೧] ನೆರೆಯದುವೆನೆ ಪರಲದೇಂ ನೆರೆದಪುದೇ (ಶಾಂತಿಪು. ೯-೯೯); ಕಡಕುಂ ಪರಲ್ಗಳುಂ ಮೆಲ್ಲಡಿಗಳನೆಡೆಯುಡುಗದೊತ್ತಿದೆಡೆಯಿಂ ನೆತ್ತರ್ಬಿಡದೆಚ್ಚು ಪಾಯೆ (ಸುಕುಮಾ. ೧೨-೧೮); ಎಡಪಿ ಪರಲ್ಗಳಂ ದೆಸೆಗೆ ಬೆರ್ಚುತೆ ಗೋವನ ಗಾಳಿಗೆಯ್ದೆ ಪಿಂಡಡಸುತೆ . . . ಬರ್ಪ ಪಲವಾಕಳ ನೀಕ್ಷಿಸಿದಂ ನರಾಧಿಪಂ (ಲೀಲಾವ. ೫-೧೦೩); ಅತಿನಿಷ್ಠುರತರ ವಾತಾಹತಿಗೆ

ಪರಲ್ಪಾಱುವಂದದಿಂದಮುದೇಂ ಪರ್ವತಮುಂ ಪಾಱುಗುಮೋ (ಪಾರ್ಶ್ವಪು. ೪-೧೪೩); ಪರಲೆಲ್ಲಂ ಮುತ್ತುಮಾಣಿಕಂ ಪಾಸಱೆಗಳ್ ಪರುಸಂಗಳ್ (ಶಮದ. ೬೯ ಪ್ರಯೋ). ೨. (ವಜ್ರ ಮೊದಲಾದ) ಬಹಳ ಬೆಲೆ ಬಾಳುವ ಮಣಿ ; ರತ್ನ : ಪದ್ಮರಾಗದ ಪರಲ್ಗಳಿಂ ಬಲಿಗೆದಱಿದಂತೆ ಉಪಾಶ್ರಯಂಬಡೆದಳಂಕರಿಸುವಿಂದ್ರಗೋಪಂಗಳುಮಂ (ಪಂಪಭಾ. ೬-೨೫ ವ); ನಡುವಣ ಕರ್ಣಿಕೆಯಿ ಕೇಪಣಂ ಕೇಪಣದೊಳ್ ತೊಡರ್ದಳಿ ನೀಲದ ಪರಲೆನೆ ಮೃಡರಿಪುಮುದ್ರಿಕೆವೊಲಾಯ್ತು ಕನಕಾಂಬುರುಹಂ (ಗದಾಯು. ೬-೪೨); ಪೊಂಗೇದಗೆಯ ಬಾಟಿಕ್ವೇಲಿಯನೊಳಪೊಕ್ಕಂತೆ ಪೊಡೆ ತನಿಗಂಪನುಂಡು ಬಿಡೆಯುಂ ಪೊಱಮಡುವ ಮಱಿದುಂಬಿಗಳಿಂ ರತ್ನಗರ್ಭ ನೀಲದ ಪರಲನುಗುಟ್ವ ಚೆಲ್ವು ನೆಲಸೆ ನೆಲಂ ಬಿರಿಯೆ ಬೇರಿಂ ಪಣ್ತ ಬಕ್ಕೆವಲಸುಗಳುಂ (ಲೀಲಾವ. ೬-೬೦ ವ); ಪರಲೊಳ್ಪರುಸಂಘೇನೂತ್ಕರದೊಳ್ಸುರಧೇನು . . . ಎಸೆವಂತಿರೆ ಸಲೆ ನಾಗರಖಂಡದೊಳೆಸೆವುದೆಸೆವ ಬಾಂಧವನಗರಂ (ಎಕ. VII, ಶಿಕಾರಿ. ೨೫-೩೭ ; 1204); ಮಿಡಿ ಪಚ್ಚೆಯ ಪರಲೆನೆ ಕೆಂಪಿಡಿದರೆವಣ್ಪದ್ಮರಾಗಮೆನೆ . . . ನೇಱಿಲೆಸೆದುದು ಬನದೊಳ್ (ರಾಜಶೇ. ೨-೪೭). 'ಕೆಂಬರಲ್' ಪರಾ. ೩. (ಆಲಿಕಲ್ಲು, ಕರ್ಪೂರ ಮುಂತಾದುವುಗಳ) ಚೂರು ; ಹಳುಕು ; ಶಕಲ . ಕಾಮಕಾಂತೆ ಬಱಿಯಂ ತನ್ನಿಚ್ಛೆಯಿಂ ಮೆಚ್ಚ ಬಣ್ಣವುರಂ ತೀವಿದ ಮಾಟಿಕ್ಕೆಯಾಯ್ತು ನವಿಲಿಂ ಕುಂದಂಗಳಿಂದಿಂದ್ರಗೋಪವಿಳಾಸಂಗಳಿನಾಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ (ಪಂಪಭಾ. ೭-೨೪) ; ಅರಮುಗನಿರ್ಪನೋಲಗದೊ ಳೋಲಗಕಾರ್ತಿಯರಬ್ಬಿ ಗಿಟ್ಟ ಕಪ್ಪುರದ ಪರಲ್ಗೆ ಬಿರ್ದರಲ್ಗೆ . . . ದರ್ಪಕಂ ತಿರಿಪುವ ಚಕ್ರದಂತೆ ತಿರಿಯುತ್ತಿರೆ ಮೇಲೆ ಮದಾಳಿಮಾಳೆಗಳ್ (ಅರ್ಧನೇ. ೨-೩೭); ಪರಲಾಗದಂತು ವಸ್ತ್ರಾಂತರದೊಳ್ ಸೋದಿಸಿದ ಸುಣ್ಣದೊಳಗರಿದಾಳಂ ಬೆರಸಿಯದನಟ್ಟು ಪೂಸುಗೆ (ಅಶ್ವಶಾ. ೧೨-೨೦) ; ಕಪ್ಪುರವರಲ ಸೇಸೆಗಳ ತಣ್ಗಂಪಿನಿಂ ಪರಿಗಳಂ ಕುವರರೆಯ್ದೆ (ಭಾವಚಿಂ. ೮-೪). ೪. ಹೀಚು ; "ಮಿಡಿ ; ಕಾಯಿ" (ಪ್ರಭಣ್ಣ). ಪರಲು, : ೨. ಪಲವು ಪರಲುಗಳ ತೆತ್ತಿಸಿ ಮೆಱೆವ ತಾಲಿಗಳ ಇತ್ತನು ವೀರಭಟಾಳಿಗೆ ಸಂತಸವೆತ್ತಾ ನೃಪಕುಲತಿಲಕ (ಚಂಪ್ರಸಾ. ೨೧-೫). 'ಪರಲುಗ' ಪರಾ. ಪರಳ್: ೨. 'ಕಂಕಳವರಳ್' ಪರಾ. ೪. ಪೊಸತಳಿರೊಂದೆಸೆ ಕುಸುಮಗಳೊಂದೆಸೆ ನಸುಪರಳ್ಮಿಡಿಗಾಯಿಗಳು ಪಸರಿಸಿದವು ಸತಿಯರಿಗಾದ ಸಂತಸದೆಸಕವ ನೋಡಿ ವೃಕ್ಷಗಳು (ಅಂಜಚ. ೧೨-೮೩). 'ಪರಳ್ಗಾಯಿ' ಪರಾ. ೫. ನೊರಜುಗಲ್ಲಿನ ಭೂಮಿ : ಮೋಗೆಯ ಮತ್ತರು ೫ ಭಟ್ಟವೃತ್ತಿ ನ್ಯಾಸದೆರೆ ಮತ್ತರು ೧೫ . . . ಪರಳ್ಮತ್ತ ೧೦ (ಸೌಇಇ. XX, ೩೦೦-೧೪ ; ಸು. 12ನೆಯ ಶತ). ಪರಳು : ೧. ಬಾಲೆಯರು . . . ನಡೆವೆಡೆಯೊಳು ಪರಳಡಿಯನೊತ್ತಲು ಪಾದವೊಡೆದು ರಕುತ ಧರೆಯೊಳಗೆ ಮಡುವೆನಿಸಿಯೆ ಪರಿಯಲು (ಅಂಜಚ. ೯-೮೭); ಪರಳೆಂಬರೆ ಸುರಮಣಿಯಂ ತರುವೆಂಬರೆ ಕಲ್ಪಭೂಜಮಂ (ತ್ರಿಪುವಿ. ೩೩-೯೭) ; ತಗ್ಗಿನಿಂ ತೆವರಿನಿಂ ಪರಳಿನಿಂ ಪುತ್ತದಿಂ . . . ಶಾಕಿನಿಯರಿಂ ಡಾಕಿನಿಯರಿಂದಮಾ ಪಥಂ ಬೆದಱಿಸುವುದು (ಚೆಬಪು. ೫೬-೨೩). 'ಪರಳೊತ್ತು' ಪರಾ. ೨. 'ಪರಳೋಲೆ' ಪರಾ. ೪. 'ಪರಳುಗಾಯಿ' ಪರಾ. ಹರಲು: ೨. ನೀಲದ ಹರಲೆಸೆಯೆ ಕರಂಡಕಮಂ ಪಿಡಿದೊರ್ವಳಬಲೆ ಕಣ್ಗೊಪ್ಪಿದಳು (ಜಯಕಾ. ೨-೧೭). 'ಹರಲುಗ' ಪರಾ. ಹರಳ್ : ೧. 'ಹರಳೊತ್ತು' ಪರಾ. ೫. ನ್ಯಾಸದೆರೆ ಮತ್ತರು ೧೫ ಹರಳ್ಮತ್ತರು ೧೦ (ಸೌಇಇ. XX, ೩೦೦-೧೩ ; ಸು. 12ನೆಯ ಶತ). ೬. (ಎಣ್ಣೆ ತೆಗೆಯುವ) ಬೀಜ ; ಬಿತ್ತ : ಮರುಷದಿಂದೊಳಗಾದ ಹತ್ತಿಯ ಹರಳ ರಸವ ಬೆರಸಿ ಕಾಸಿದೊಡೆ (ಸೂಪಶಾ. ೨-೧೮). ಹರಳು : ೧. ಎರಡುಂ ಪಳ್ಳದ ಮೊದಲ ಮೂಡಣಗೇರಿ ಕಲ್ಲ ಬಳಿಯ ಹರಳೆ ಅಂತಾ ಎರಡುಂ ಪಳ್ಳದ ನಡುವಣ ತೆವರೆ (ಎಕ. XI, ದಾವಣ. ೧೯-೧೯ ; 1043); ಅಳುಪೆಂಬ ಹರಳ[ಪಾಠಾಂ. ಳಂ]ಕಳೆದು ದಯಾಮೃತವೆಂಬ ಹಾಲಿನಲ್ಲಿ ಬೋನಮಂ ಮಾಡಿ (ಅಪಚಂ. ೨೭೭-೧೨೭೦) ; ಧರಣಿಪಾಲನು . . . ನಾಯಿಯ ಸಾಕುತಿರಲು ನರನೊಬ್ಬ ನೋಡಿ ಸ್ಯೆರಿಸದಲೆ ನಾಯಿಯ ಹರಳಲೆ ಹಾಕಲು (ವಿಸಾಸು. ೭೬-೩) ; ಅವಳು ಹಾಗೂ ಹೀಗೂ ಮಾಡಿ ಊಟವನ್ನೆಲ್ಲ ಸಾಗಿಸಿದಳಂತೆ. ಆದರೆ, ಕೊನೆಯ ತುತ್ತಿನಲ್ಲಿ ಹರಳು ಬರುವುದಿತ್ತು (ಭಾಷಾಶಾ. ೨೮) ; ಹಸಿಗೋಡೆಯಲ್ಲಿ ಹರಳು ನೆಟ್ಟಂತೆ (ಗಾದೆ). 'ಹರಳುಗಲ್ಲು' ಪರಾ. ೨. ಹರಳುಗಳ ಕೇಪಣದ ಮಂಗಳ ತರವೆನಿಪ ತೊಡಿಗೆಗಳ . . . ಪರಿಜನಂಗಳು ಕಮಲಭವಪುರದಲ್ಲಿ ನೆಲಸಿದರು (ಕಃಪ್ರಾಆ. ೭-೩೧); ಘಳಲನುಂಗುಟದಿಂದ ಮಿಡಿಯುತಿರೆ ಹೊಳೆವ ಹರಳನು ಮಿಡಿಯುವಂದದಿ (ಸಾಳ್ವಭಾ. ೨೧-೬೩) ; ಹರಳಿನ ಆ ಕಡಗ ಅಯ್ಯೋ ! ಮೊಳಕೈಗೆ ಹತ್ತುತ್ತಿದೆ ಕಾಣಿರಿ (ಸಸತಿ. ೨೦೫). ೩. ಆಲಿಕಲ್ಲ ಹರಳಿನಂತೆ ಅರಗಿನ ಪುತ್ತಳಿಯಂತೆ ತನು ಕರಗಿ ನೆರೆವ ಸುಖವ ನಾನೇನೆಂಬೆ (ಬಸವ. ೮೪೭) ; ಕೆಲವಂ ಗುಳ್ಳದೆಳೆಗಾಯ ಹರಳಂತೆ ಕತ್ತರಿಸಿಯೊಗರು ಹೋಹಂತುಕ್ಕರಿಸಿಕೊಂಡು . . . ಹಸನಂ ಮಾಳ್ಪುದು (ಸೂಪಶಾ. ೪-೩೨) ; ಅಮೋನಿಯಂ ಲವಣಗಳು, ಮ್ಯಾಗ್ನೀಸಿಯಮ್ ನಾಳಗಳಲ್ಲಿ ಸೂಕ್ಷ್ಮ ಹರಳುಗಳಂತಿವೆ (ಶೀಟಬಿ. ೩೫). ೬. ಹೊಂಗೆಯ ಹರಳೊಕ್ಕುಳಕಂ ಹಿಂಗದೆ ತಾಂ ಯೆಣ್ಣೆ ಮಾನಪಯ್ದಂ ಕೊಡುವರ್ (ಸ್ಯಪಹಾ. ಅನುಬಂಧ. I, ೧೭-೨೫). ೭. ಔಡಲ ಗಿಡ ಮತ್ತು ಅದರ ಬೀಜ : ಅರಿನ್ಯಪರನು ಕೊಂದು ಪುರವ ಪಾಳ್ಗೈದಾಗ ಹರಳ ಬಿತ್ತಿಸಿದರೇನೆಂಬೆ (ಕಂಸವಿ. ೩-೧೭); ಹರಳುಗಳಂ ಹಂದಿಗಳ ರಕ್ತವಸೆಗಳಲ್ಲಿಯೂ ಅಂಕೋಲೆ ತೈಲದಲ್ಲಿಯೂ ನೆನಸಿ ಬಿತ್ತಲು ಅದರಲ್ಲಿ ಹಾಗಲಕಾಯಿ ಹುಟ್ಟುವದು (ಸೌಗಂಧಿ. ೪೩೭-೧೪) ; ಹರಳು, ತೊಗರಿ, ಅವರೆ-ಇವುಗಳನ್ನು ಬೇರೆ ಬೇರೆ ಪೈರಾಗಿ ಬೆಳೆಯುವ ಪದ್ಧತಿ ನಮ್ಮಲ್ಲಿಲ್ಲ (ಸ್ಯಪಮ. ೪೪). 'ಹರಳೆಣ್ಣೆ' ಪರಾ.

ಪರಲ ದಿನ್ನೆ = ಕಲ್ಲಿನ ತಿಟ್ಟು,—ದಿಣ್ಣೆ : ಕಡಿಲವಾಗಿಲ ಹಲುಹಾಡಿಯ ಪ್ವೆಸಿಮೆ ಪರಲ ದಿನ್ನೆ ಪ್ರಾಪ್ಯ ತಥಾತು ದಕ್ಷಿಣ (ಇಆ. VIII, ೯೫ ; 444). ಪಳಕೆಯಿ, ಹರಳ ಕೆಇ, ಹರಳ ಕೆಯ್, ಹರಳ ಕೆಯಿ =೧. ನೊರಜು ಹೆಚ್ಚಾಗಿರುವ ಭೂಮಿ ; ಹರಳುಗದ್ದೆ (?): ದೇವರ ಮೂಡಣದೆಸೆಯಲ್ ಪಳಕೆಯಿ ಮತ್ತರು ೪ ತುಡುಕೆವಟ್ಟನಲ್ಲಿ ಆಱುಸಣದೇ ತುಣ್ಬದು ಮಣಲ ಕೆಯಿ ಮತ್ತ ೬ (ಸೌಇಇ. IX-i, ೧೨೦-೧೫ ; ಸು. 1058) ; ℙ ಇದು 'ಪರಳ ಕೆಯಿ' ಎಂಬುದರ ಅಪಲಿಖಿತವಿರಬಹುದು. ೨. ಔಡಲಗಿಡಗಳನ್ನು ಬೆಳೆದ ಹೊಲ : ಬೊಂಬಸಮುದ್ರದ ಹಿಂದಣ ಹರಳ ಕೆಇ ೧ (ಎಕ. XVI, ಚಿಕ್ಕನಾ. ೫೮-೨೮ ; 1260) ; ಊರ ಹಡುವಣ ಹರಳ ಕೆಯಲು ಮತ್ತರೊಂದು ೧ (ಮೈಆ. ೧೯೪೩, ೨೯-೪೪ ; 1174) ; ಕುಱುಂಬೆಟ್ಟದ ಮೂಲಿಗ ಹೊಲ್ಲಿಗೌಡ ಶ್ರೀಮಲ್ಲೇಸ್ವ(ಶ್ವ)ರ ದೇವರ ನಂದಾದೀವೀ(ವಿ)ಗೆಗೆ ತಂನ ಮಾಂನ್ಯದೊಳಗೆ ಕೊಟ್ಟ ಹರಳ ಕೆಯ ಕಂಭ ೧೦೦ (ಎಇ. XIX, ೨೬-೬೫ ; 1245) ; ಅರಗಿಲ್ವಾಳ ಹೊಲದ ಮೇರೆಯ ಮೂಡ ಹರಳ ಕೆಯಿ ಮತ್ತರು ೫ (ಸೌಇಇ. XI-ii, ೧೬೫-೨೪ ; 1113); ಹರಳ ಕೆಯಿ ಮತ್ತ ೧ ಕ(೦)ಮ್ಮಂ ೪೫೦ (ಸೌಇಇ. IX-i, ೨೭೬-೪೬ ; 1183). ಹರಳ ಕಮ್ಮ = ಔಡಲಗಿಡ ಬೆಳೆಯುವ ಭೂಮಿ : ಚಂಡಿಗೌಡನ ಬಾವಿಯಿಂಮೂಡ ಹರಳ ಕಮ್ಮವಿನ್ನೂಱು ಮತ್ತಂ (ಕಇ. I, ೨೪-೨೦ ; 1148). ಹರಳ ಕಾಯಿ = ಔಡಲ ; ಏರಂಡ : ತಲೆಯಲ್ಲಿ ಬೂದಿಯಂ ಪೊಯ್ದುಕೊಂಡು ಕೊರಳಲ್ಲಿ ಹರಳ ಕಾಯ ಕಟ್ಟಿಕೊಂಡು ನಾವು ಕರದಡೆ ಮಾತನಾಡದಿದ್ದಳು (ಭೈರಸೂ. ೧೪೭). ಹರಳ ಬೆಂಚೆ =

ಕಲ್ಲುಕಟ್ಟೆಯಿಂದ ಕೂಡಿರುವ ಕುಂಟೆ : ಪೊರಗಣ ಕಂನೇಶ್ವರ ದೇವರ್ಗ್ಗಂ ರಾಮನಾಥದೇವರ್ಗ್ಗಂ ಪರಳ ಬೆಂಚೆಯಿಂ ಮೂಡಲನಾದಿ ಕಾಲದಿಂ ನಡವುತ್ತಿರ್ದ್ದ ಮತ್ತರು ೨ (ಸೌಇಇ. IX-i, ೨೯೪-೬೮ ; 1196). **ಹರಳಾಗು**=ಕಲ್ಲಾಗು : ಶಿಲೆಯಾಗು : ಹರಳಾ[ಪಾಠಾಂ. ಕಲ್ಲಾ]ದಹಲ್ಯೆಯ ಶಾಪಹರಣವಿದು ಚರಣವಿದು (ಕುವ್ಯಾಅ. ೬೦೫. ೧೭-೩೬).

[ದೇ.॥ ತಮಿ. ಮಲ. ಪರಲ್ ; ತುಳು. ಪರೆಲ್ ; ಕೊಡ. ಪರ ; ಕೋತ. ಪರ್ಳ್]

**ಪರಲಾಲ** (ನಾ). ನೊರಜುಕಲ್ಲಿನ ಪ್ರದೇಶದಲ್ಲಿ ಬೆಳೆದಿರುವ ಆಲದ ಮರ (?): [ಯಿ][ಪ್ರ]ಳ್ಳದಿ[ನ್ದೆ] ಕೆಬಗಣ ಪರಲಾಲ ಆದಿಜ ಮೂಡಣ ಕೋವನ[ಕೆಱೆ] (ಎಕ. X, ೬೭-೨೪ ; 892). [ಪರಲ್+ಆಲ$_1$]

**ಪರಲು$_1$** 'ಪರಲ್' ನೋ.

**ಪರಲು$_2$,** ಪರ್ಲು (ನಾ). (ಉಕ) ಸಂಬಂಧ ; ಸಂಪರ್ಕ : ಅವನ ಉದ್ಧಟತನವನ್ನು ಕಂಡು ಅವನ ಪರಲು ಕಡಿದುಕೊಳ್ಳಬೇಕೆನಿಸಿತ್ತು (ತೊಳಮು. ೧೫೨). **ಪರ್ಲು :** ಅವರ ಪರ್ಲು ತಪ್ಪಿ ಬಹಳ ವರ್ಷಗಳೇ ಆದವು (ರೂಢಿ).

**ಪರಲು ಹರಿ. ಪರ್ಲು ಹರಿ** = ೧. ಸಂಬಂಧವನ್ನು ಕಡಿ ; ಋಣಾನುಬಂಧ ಇಲ್ಲವಾಗಿಸು : ಕೆಡಿಸಿದ ಹುಡುಗಿಗೆ ಅಸಾಧ್ಯ ಕರಾರಿನಿಂದ ಪರಲು ಹರಿಯಬೇಕೆನ್ನುವಿಯಾ ? (ರಕ್ತಧ್ವ. ೨೫೪). ೨. ಋಣವಿಮೋಚನವಾಗು ; ಹಂಗು ತೀರು : ನಿನ್ನ ಪರಲು ಹರಿಯಿತೆಂದು ಮಂದಾಕಿನಿ ಇಷ್ಟು ಹಣವನ್ನು ಕೊಟ್ಟಿದ್ದಾಳೆ (ಜೀವಿ. ೧೪೦) ; ಒಮ್ಮೆ ಮದ್ವೀ ಮಾಡಿಬಿಟ್ರೆ ಪರ್ಲು ಹರ್ದೋತು(ಕಿಡುಗು. ೨೭). **ಪರಲು ಹರಿದು ಕೊಳ್ಳು, ಪರ್ಲು ಹರಿದುಕೊಳ್ಳು**=ಸಂಬಂಧವನ್ನು ಕಡಿದುಕೊಳ್ಳು : ಇರುವ ಎರಡು ಹೊಲಗಳಲ್ಲಿ ಒಂದನ್ನು ಕೊಟ್ಟು ಪರಲು ಹರಿದುಕೊಂಡಳು (ಮಣ್ಣಿ ಮ. ೧೦೬) ; ಹೇಗಾದರೂ ಮಾಡಿ ಈ ಮದುವೆಯ ಪರಲು ಹರಿದುಕೊಂಡು ಅಲ್ಲಿಗೆ ಹೋಗಬೇಕೆಂಬ ಇಚ್ಛೆಯು ಪ್ರಬಲವಾಯಿತು (ಶ್ರೀಕಾಂತ. ೫) ; ನಿಮ್ಮ ಲೇಖನವನ್ನು ಪ್ರಕಟ ಮಾಡಿ ಒಮ್ಮೆ ನಿಮ್ಮ ಪರ್ಲು ಹರಿದುಕೊಳ್ಳಬೇಕು (ಮುಗಿಮ. ೮೦).

[?./ತುಳು. ಪರ್ಳ್=ಕತ್ತರಿಯಂತೆ ತೀಕ್ಷ್ಣವಾಗಿ ಕತ್ತರಿಸು]

**ಪರಲುಂಗುರ,** ಹರಳುಂಗುರ (ನಾ). (ವಜ್ರ ಮುಂತಾದ ಬೆಲೆ ಬಾಳುವ) ರತ್ನದ ಅಂಗುಳೀಯಕ ; "ರತ್ನಾಂಗುಲಿ, ರತ್ನ ವನ್ನು ಕುಂದಣ ಹಾಕಿದ ಉಂಗುರ" (ಪ್ರಭಣ್ಣ). **ಹರಳುಂಗುರ:** ಯುಧಿಷ್ಠಿರನೃಪನ ಹರಳುಂಗುರ ವಿಘಾತಿಯೊಳುಗಿದು ಬಿದ್ದುದಗಾಧ ಕೂಪದಲಿ (ಕುವ್ಯಾಅ. ೬-೩೭) ; ಹಸ್ತಕಟಕ ಹರಳುಂಗುರ ಹೊಂಬಳೆ ವಿಸ್ತಾರ ನವರತ್ನಹಾರ (ಶಾಂತೀಶ. ೩-೬೪). [ಪರಲ್+ಉಂಗುರ]

**ಪರಲುಗ,** ಹರಲುಗ (ನಾ). ಹರಳುಗಳ ವ್ಯಾಪಾರ ಮಾಡು ವವನು ; ರತ್ನಪಡಿವ್ಯಾಪಾರಿ : ಪೊನ್ನುಗಂ, ನಾರುಗಂ, ಪಾಲುಗಂ, ಪರಲುಗಂ (ಶಬ್ದಾನು. ೪೨೪ ಪ್ರಯೋ). **ಹರಲುಗ :** ಹೊನ್ನುಗನು, ಮಣ್ಣುಗನು, ಪಾಲುಗನು, ಹರಲುಗನು ಇತ್ಯಾದಿ (ಹೊಸಗ. ೮೪).

[ಪರಲ್+-ಉಗ]

**ಪರಲೂರ್** (ನಾ). ಒಂದು ಸ್ಥಳದ ಹೆಸರು : ಆಸೀದ್ವಿನಯನನ್ದೀತಿ ಪರಲೂರ ಗಣಾಗ್ರಣೀಃ (ಇಆ. XI, ೬೯-೧೨ ; 567) ; ಪರಲೂರಾ ಚೇದಿ ಯಬ್ಬಜಿ ಪ್ರಭಾಚನ್ದ್ರಗುರುವಾರ್ಪಡೆ[ದಾರ್] (ಸೌಇಇ. XX, ೯-೨೦; ಸು. 7ನೆಯ ಶತ). [ಪರಲ್+ಊರ್]

**ಪರಲೆ** (ನಾ). ಒಂದು ಬಗೆಯ ಔಷಧಿ ಸಸ್ಯ : ಇಬ್ಬನೆ, ಪರಲೆ, ಇಟ್ಟೀವು, ಯಿಸಗ, ಮದರಾಸ್ ಮಲ್ಲಿಗೆ (ವೈಔಗಿ. ೨೩-೪೧೪). [?]

**ಪರಲೊತ್ತು,** ಪರಳೊತ್ತು, ಹರಳೊತ್ತು (ಕ್ರಿ). ೧. (ಅಂಗಾಲಿಗೆ) ಕಲ್ಲು ಚುಚ್ಚು ; ಕಲ್ಲೊತ್ತು : ಪರಲೊ[ಪಾಠಾಂ. ಕೊ]ತ್ತೆ ಸೈರಿಸುತ್ತುಂ . . . ಸೀತೆ ನಡೆದು ಮೆಲ್ಲನೆ ನಡೆದಳ್ (ಪಂರಾಮಾ. ೭-೨೭). ೨. ಹರಳುಮೊಳೆ ಮೂಡು,—ಕಾಣಿಸಿಕೊಳ್ಳು : ಪೀನಕುಚಂ ಪರ ಲೊತ್ತುವ ದಿನದಿಂ ನೀನಲ್ಲದೆಯನ್ಯರನೇನಱಿಯದಳೆ (ಜಯಕಾ. ೧೪-೬೬).

**ಪರಳೊತ್ತು :** ೧. ಪರಳೊತ್ತಿ ನೊಂದುವವಮ್ಮಾಜಿ ಪಾದಗಳು (ನಾಗಕು. ೯-೧೫). **ಹರಳೊತ್ತು :** ೧. ಹಲವು ಹರಳೊತ್ತಿ ಬೊಕ್ಕೆ ಗಳು ಮೂಡಿ ನಡೆಗೆಟ್ಟು ಮೆಲ್ಲಡಿಯ ನಿಜವನಿತೆಯಂ ನೋಡಿ (ಹಹಕಾ. ೯-೨೯) ; ಹರಳೊತ್ತೆ ಸುಡುಗಾಡೊಳಗೆ ಮಲಗಿದನು (ಜೀಸಂಚ. ೫-೪) ; ಹರಳೊತ್ತಿ ಪಾದವು ಬೊಕ್ಕೆಯೊಡೆದು ಹಸ್ತಕೆ ದಾವತಿಯಲ್ಲ (ಅಮುಸಾಂ. ೬-೫). ೨. ಹರೆಯವೇಱಿದ ಮುನ್ನವೆ ಹರಳೊತ್ತುವ ಹರೆಯದ ರಾಜ ಪುತ್ರಿಯರು ವರಿಸುವ ನವಮೋಹನಾಂಗವಾ ಕುವರಗೆ ದೊರೆಕೊಂಡುದು ಮ (ಚಂಪ್ರಸಾಂ. ೨-೨೬). [ಪರಲ್+ಒತ್ತು$_1$]

**ಪರಲೋಕ** (ನಾ). ಮುಂದಿನ ಜಗತ್ತು ; ಪರತ್ರಿ ; ಸ್ವರ್ಗ : "ಪರ ಲೋಕಮಱಿಗೆ ಲೋಕಾಂತರಮಕ್ಕುಂ" (ವಸ್ತುಕೋ. ೫೯-೪೬) ; ಪರ ಲೋಕಿಯೆ ಮುನ್ನವಿಲ್ಲೆನೆ ಪರಲೋಕಮೆತ್ತಣಿಂ ಬಂದುದು (ಶಾಂತಿಪು. ೮-೧೨೫ ವ) ; ಜಂಗಮವೆನ್ನೊಡೆಯರೆಂದು ಒಕ್ಕುದ ಕೊಂಡು ಉದಾಸೀನವ ಮಾಡಿದರೆ . . . ಪರಲೋಕಕ್ಕೆ ದೂರ (ಬಸವ. ೪೨೨) ; ಇಹಲೋಕ ಪರಲೋಕಂಗಳಿಗೆ ಜಗದೇಕರಕ್ಷಕಶಿಕ್ಷಕನಲ್ಲದೆ ಬಳಿಕದಾರುಂಟು (ಬಸವು. ೨೮-೬೫) ; ಪಾಂಡುರಾಜನು . . . ಎಳೆಯ ಮಕ್ಕಳನ್ನೂ ಹೆಂಡತಿಯನ್ನೂ ಬಿಟ್ಟು ಪರಲೋಕವನ್ನೈದಿದನು (ವಚಭಾ. ೧೫) ; ಪಾಪಿಗೆ ಪರಲೋಕ ವಿಲ್ಲ, ಪಾಪೋಸಿಗೆ ಮಡಿಯಿಲ್ಲ (ಗಾದೆ).

**ಪರಲೋಕಯಾತ್ರೆ**=ಮುಂದಿನ ಲೋಕಕ್ಕೆ ಹೋಗುವುದು : ಯುಧಿಷ್ಠಿರನು ಸೋದರರು ಮತ್ತು ಪತ್ನಿಯೊಡನೆ ಪರಲೋಕಯಾತ್ರೆ ಹೊರಡುತ್ತಾನೆ (ಭಾರದ. ೧೦೩). [ಪರ$_3$+ಲೋಕ]

**ಪರಲೋಕಕ್ರಿಯೆ** (ನಾ). ಅಪರಕರ್ಮ ; ಉತ್ತರಕ್ರಿಯೆ : ಗಾಂಗೇಯನುಂ ಸತ್ಯವತಿಯುಮತ್ಯಂತಶೋಕಾನಲದಹ್ಯಮಾನಮಾನಸರ್ ಳಾಗಿ ಅತಂಗೆ ಪರಲೋಕಕ್ರಿಯೆಗಳಂ ಮಾಡಿ (ಪಂಪಭಾ. ೧-೮೦ವ).

[ಪರಲೋಕ+ಕ್ರಿಯೆ]

**ಪರಲೋಕದೂರ** (ನಾ). ಸ್ವರ್ಗಲೋಕದಿಂದ ತಿರಸ್ಕೃತನಾದ ವನು,—ಬಹಿಷ್ಕೃತನಾದವನು : ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ ಪರಲೋಕದೂರನ (ಬಸವ. ೬೪). [ಪರಲೋಕ+ದೂರ]

**ಪರಲೋಕಸುಖ** (ನಾ). ಬೇರೆಯ ಲೋಕದಲ್ಲಿ ಸಿಗುವ ಸಂತೋಷ ; ಸ್ವರ್ಗಸುಖ : ವ್ಯಥಾ ಪ್ರಾಣಿವಧೆಯಂ ಮಾಣು ಪರಲೋಕಸುಖಮಂ ಪಡೆದುಕೊಳ್ವುದೆ ಬುದ್ಧಿ (ಪಂಚತಂ. ೬೧-೧೦).

[ಪರಲೋಕ+ಸುಖ]

**ಪರಲೋಕಿ** (ನಾ). ಸ್ವರ್ಗಲೋಕಕ್ಕೆ ಸೇರಿದವನು ; ಸ್ವರ್ಗವಾಸಿ: ಪರಲೋಕಿಯೆ ಮುನ್ನವಿಲ್ಲೆನೆ ಪರಲೋಕಮೆತ್ತಣಿಂ ಬಂದುದು(ಶಾಂತಿಪು. ೮-೧೨೮ ವ). [ಸಂ. ಪರಲೋಕಿನ್]

**ಪರಲ್ಮೊಲೆ,** ಪರಳುಮೊಲೆ, ಪರಳ್ಮೊಲೆ (ನಾ). ಆಗ ತಾನೆ ಮೂಡುತ್ತಿರುವ ಮೊಲೆ ; ಸಣ್ಣ ಮೊಲೆ: ಮುಂಗುಳ್ಮೊಲೆಯ ಪರಲ್ಮೊ [ಪಾಠಾಂ. ಳ್ಮೊ]ಲೆಯ . . . ಬೆದರ್ದ ಕಣ್ಣ ನೋಟದ ಬಾಲೆಯರ್ (ಚೆಚಪು. ೧೦-೧೯). **ಪರಳುಮೊಲೆ :** ಪರಳುಮೊಲೆಗಳ ಪಿಡಿಯಲು ಸಿಟ್ಟಿಸಿ ನೋಳ್ಪ ತರಳೆವೆಣ್ಣುಗಳೊಪ್ಪಿಪರು (ಕಂಸವಿ. ೬-೧೭೫). **ಪರಳ್ಮೊಲೆ :** ಮುಚ್ಚುಮಱೆಯೆಂಬುದೆಳವೆಣ್ಗಳ ಪರಳ್ಮೊಲೆಯೊಳ್ . . . ಅಲ್ಲದಿಲ್ಲವಾ ದೇಶದೊಳಗೆ (ಉದ್ಭದೇ. ೨-೧೪). [ಪರಲ್+ಮೊಲೆ$_1$]

**ಪರಲ್ಬಿಲ್** (ನಾ). ಕಲ್ಲನ್ನು ಬೀಸಿ ಎಸೆಯುವ ಒಂದು ಬಗೆಯ ಸಾಧನ ; ಕವಣೆ : ಪಾಮರಿಯರ ಕುಡುವುರ್ವಿನ ಕೊನೆಮುಟ್ಟದ ತುಱುಗೆವೆಗಳ ನಡುವೆ ಕರಿಯಾಲಿಗಳೆಸೆದುವು ಚಿತ್ರಭವಂ ವಿರಹಿವಿಹಂಗ ವನಿಸುವ ಪರಲ್ಬಿಲ್ಲೆರಡು ಹೆದೆಯ ಮಧ್ಯದ ಹರಿನೀಲದ ಗೋಳಕವೆಂಬಂತೆ (ಜಯಕಾ. ೧–೪೦). [ಪರಲ್+ಬಿಲ್$_2$]

**ಪರವಂಚನೆ** (ನಾ). ಬೇರೆಯವರಿಗೆ ಮೋಸ ಮಾಡುವುದು ; ಇತರರನ್ನು ವಂಚಿಸುವುದು : ಪರವಂಚನೆ ವಿದ್ಯೆಯೆಂದು ಕಲ್ತಾ ಜನಗಳ ನುಡಿಗಳ್ ಪ್ರಮಾಣಮಲ್ಲವೆ ಜಗದೊಳ್ (ಶಾಕುಂತ. ೭೧–೧೨೫) ; ಹಗಲೆಲ್ಲ ಪರವಂಚನೆಯ ತಾಮಸ ತಿನಿಸನ್ನು ತಿಂದು . . . ರಾತ್ರಿಯಲ್ಲಿ ಆತ್ಮವಂಚನೆಯ ಘೋರನಿದ್ರೆಯೊಳಗೆ ಕಾಲಹರಣ ಮಾಡುವವರು, ಕರ್ತವ್ಯವೆಂದು ಹೇಳಬಂದಿದ್ದಾರೆ (ಉದಯ್ಯ. ೭೪). [ಪರ$_3$+ವಂಚನೆ]

**ಪರವಣಿಗೆ,** ಹರವಣಿಗೆ (ನಾ). ಕೆದರಿ ಬಿದ್ದಿರುವ ರೀತಿ ; ಚೆಲ್ಲಾಪಿಲ್ಲಿಯಾಗಿರುವ ಸ್ಥಿತಿ : ಆ ಪಡುವ ಪಲವು ಪಾಟುಗಳಾ ಪೋರಟಿಯಾ ಪೊರಳ್ಕೆಯಾ ಪುಯ್ಯುಗೆ ಮತ್ತಾ ಪರವಣಿಗೆಗಳಾ ಪಟುವಾ ಪೇಸಿಕೆಗೆಯ್ಯೆಯಿರವನೇವಗೆಯೊರೆವಂ (ಚಿಕವಿ. ೬–೧೪೫). **ಹರವಣಿಗೆ :** ಊರಿಂದ ಬಂದ ಮೇಲೆ ಮನೆಯ ಹರವಣಿಗೆಯನ್ನು ಸರಿಮಾಡುವಷ್ಟರಲ್ಲಿ ನನಗೆ ಸಾಕಾಯಿತು (ರೂಢಿ). [<ಪರಿ$_1$+-ವಣಿಗೆ]

**ಪರವಧು** (ನಾ). ಬೇರೆಯವನ ಪತ್ನಿ ; ಇನ್ನೊಬ್ಬನ ಹೆಂಡತಿ: ಪರವಧುದುರ್ವ್ಯಸನಂ ನಿನಗೆಂದಮುರ್ದಪ್ಪಿಸುವರ್ ಕೆಂಪೆಸೆಯೆ ಕಾಯ್ದುಯಃಪುತ್ರಿಕೆಯಂ (ಆದಿಪು. ೫–೮೭) ; ಪರವಧುಗಾಸೆಗೆಯ್ವುಧಿಕ ಪಾತಕಮೊಂದು ರಘುಪ್ರವೀರನೊಳ್ಪುರದೊಳಿದಿರ್ಚದೋಸರಿಸಿ ವಂಚಿಸಿ ಸೀತೆಯನುಯ್ವ ಭೀತಿಯೊಂದು (ಪಂಪರಾಮಾ. ೯–೪೧) ; ಕಂಗಳಿಚ್ಛೆಗೆ ಪರವಧುವ ನೆರೆವರು (ಬಸವ. ೧೦೬); ಬೇಟವೇ ಪರವಧುವಿನಲಿ ಕೈವಾಟವೇ ಪರವಿತ್ತದಲಿ (ಕುಮ್ಮಾವ್ಯ. ೨–೪೪). [ಪರ$_3$+ವಧು]

**ಪರವನಿತೆ** (ನಾ). = ಪರವಧು : ಪರವನಿತೆಗಳಿಪಿ ರಣದುರ್ಧರನೆನಿಸಿರ್ದಶನಿ ಘೋಷನಟಾದುದನಸುರೇಶ್ವರ ನೀನೇನಱಿಯದನೇ(ಪಂಪರಾಮಾ.೧೪–೧೨೪); ಪರವನಿತೆಯರನೊಮ್ಮೆಯುಂ ನೀ ನೋಡದಿರು (ಬಸಪು. ೪–೬೫). [ಪರ$_3$+ವನಿತೆ]

**ಪರವರಶಿ,** ಪರವರಸಿ, ಪರವರ್ಷ, ಪರವರ್ಷಿ, ಪರ್ವರ್ಷ, ಪರ್ವರ್ಷಿ, ಪರ್ವಷಿ (ನಾ). ೧. ಪಾಲನೆ ; ಪೋಷಣೆ ; ಸಂರಕ್ಷಣೆ : ಆ ಪರವರಶಿಯ ತಾರೀಖು ಯಾವ ಜಿಹ್ವೆಯಿಂದ ಮಾಡಬೇಕು (ರಾಜೇಂದ್ರ. ೨೨೨). **ಪರವರಸಿ :** ೧. ಸಣ್ಣವರಿಗೆ ದೊಡ್ಡವರಿಗೆ ಯಾವತ್ತರಿಗೂ ಪರವರಸಿ ಮಾಡುವ ಬಗ್ಗೆ, ತಮ್ಮನ್ನು ಮಹಾದೇವನು ಹೈದಾ ಮಾಡಿ ಇದ್ದಾನೆ(ರಾಜೇಂದ್ರ. ೨೧೧). **ಪರವರ್ಷ :** ೧. ಈ ದೌಲತ್ತು ಕೊಡುವಂಥಾದ್ದು ಸರಫರಾಜು ಮಾಡುವಂಥಾದ್ದು ಯಾವತ್ತು ತಮ್ಮ ಪರವರ್ಷ ಮೆಹರ್ಬಾನಗಿಯಿಂದಾ ಎಂಬದು ನಮಗೆ ನಿಶ್ಚಯವಿದೆ (ರಾಜೇಂದ್ರ. ೨೬೫). **ಪರವರ್ಷಿ :** ೧. ಸರ್ಕಾರಕ್ಕೆ ಅನುಕೂಲ, ಪ್ರಜೆಗೆ ಪ್ರಯೋಜನ, ರೈತಪರವರ್ಷಿ ಇವುಗಳ ಮೇಲೆ ಸಂಪೂರ್ಣದೃಷ್ಟಿಯಿಟ್ಟು . . . ಖಾವಂದರವರು ವಿಚಕ್ಷಣೆಯಿಂದ ಆಜ್ಞೆ ದಯಪಾಲಿಸಿದ ಕ್ರಮವು ವ್ಯಕ್ತವಾಗುತ್ತೆ (ಮಹಾವಂ. II, ೫೪). **ಪರ್ವರ್ಷ :** ೨. ಏಳಿಗೆ ; ಅಭಿವೃದ್ಧಿ : ಇಂಗ್ರೇಜ ಬಹಾದ್ದರ ಕುಂಪನಿ ದೊಡ್ಡ ಸರಕಾರದ ಆಶ್ರಯದ ಒಳಗೆ ಇದ್ದು ಅಬ್ರು ಹುರಮತ್ತಿನಿಂದ ಪರ್ವರ್ಷ ಆಗುತ್ತಾ ಇದ್ದೇವೆ (ರಾಜೇಂದ್ರ.೨೫೭). **ಪರ್ವರ್ಷಿ :** ೧. ಆ ಪರ್ವರ್ಷಿ ಹೊರ್ತು, ನಾವು ಮತ್ತೊಬ್ಬರ ಒಡವೆ ಮೇಲೆ ಅಪೇಕ್ಷೆ ಮಡಗುವದಿಲ್ಲಾ (ರಾಜೇಂದ್ರ.೨೫೭). **ಪರ್ವಷಿ :** ೧. ಛತ್ರ, ದೇವಸ್ಥಾನ . . . ಫಕೀರ್ ಪರ್ವಷಿ ಇವು ಮೊದಲಾದ ಮುಜರಾಯಿ ಬಾಬುಗಳನ್ನು ಖಾವಂದರವರು ವಿಚಾರಿಸಿ (ಮಹಾವಂ. II, ೫೭).

[←ಪಾರ. ಪರ್‌ವರಿಶ್, ಪರ್ವರಿಶೀ; ಹಿಂ. ಪರವರಿಶ್, ಪರ್ವರಿಶ್ ; ಮರಾ. ಪರ್‌ವಶೀ, ಪರ್‌ವಸ್, ಪರ್‌ವರೀಸ್, ಪರ್‌ವರ್ಶೀ]

**ಪರವರಸಿ** 'ಪರವರಶಿ' ನೋ.

**ಪರವರಿ,** ಹರವಡಿ, ಹರವರಿ$_2$, ಹರಾವರಿ, ಹರುಬರಿ(ನಾ). ೧. ನೆಲೆ ; ನಿವಾಸ ; ಗೊತ್ತು : ಹಸ್ತಿನಪುರಂ . . . ಭೂವನಿತೆಯ ಕರ್ಪೂರದ ಕರಂಡಗೆ ಸೌಖ್ಯದ ಪರವರಿ ಪೊಸವೇಟದಿರ್ಕೆ (ಶಾಂತಿಪು. ೯–೧೩೯) ; ಉರಿಯಂ ಕೆಂದಳಿರ್ಗಳ್ ಧೂಮರಾಜಿಯಂ ಭೃಂಗರಾಜಿ ಕಿಡಿಯಂ ಪರ್ಣ ಪೋಲ್ತಿರೆ ಕಾವಿಂಗೆ ಕಾವಾಗ್ನಿಯ ಪರವರಿಯೆನಿಸಿದುವು ಬಂದ ಮಾವಿನ ಮರಂಗಳ್ (ಆದಿಪು. ೬–೧೬) ; ಆ ನೆಲನನಿತುಂ ಸುರಚಾಪದ ಬೆಳಸಿನ ಪ[ಪಾಠಾಂ. ಹ]ರವರಿಯೆನಿಕುಂ ಪಂಚರತ್ನರುಚಿವಲ್ಲರಿಯಿಂ (ಪಂಪರಾಮಾ. ೧–೬೪). ೨. ಹೆಚ್ಚಳ ; ಅತಿಶಯ ; ಹೆಚ್ಚುಗಾರಿಕೆ : ಸರಸತೆ ಕೊರಗದ ವಿದ್ಯೆಯ . . . ಪರವಶತೆ ಪೊಣ್ಮದೊಲವಿನ ಪರವರಿ [ಪಾಠಾಂ. ಶಿ]ಯಂ ಬಲ್ಲನುಳ್ಳೊಡಾತನೆ ಬಲ್ಲಂ (ಲೀಲಾವ. ೪–೫೧). ೩. ಸಾಗುವಳಿ ಮಾಡುವ ಭೂಮಿ,—ಜಮೀನು,— ನಿವೇಶನ : ಕಿಟ್ಟಾನೇಶ್ವರದಾ ದೇವರ ಪರವರಿಯ ಭತ್ತಮುಂ ಕವಿಲೆಯ ಪಾಲುಂ ಎಟ್ಟುಂ ××× ದೇವಾನ್ವೀವನ ಪರಿಜನಮಲ್ಲಾಡೆ ಪೆಟನೊರ್ವನಾರು ಮುಂಕೊಂಡೊ ಮೆಣ್ಡೆ ಕಂ (ಎಕ. VI, ಕೊಪ್ಪ. ೩೭–೩ ; ಸು. 675 ?).

**ಹರವಡಿ :** ೪. ಪ್ರಕಟಣೆ ; ತೋರಿಕೆ ; ಪ್ರದರ್ಶನ : "ಪ್ರಕಟಕ್ಕೆ ಹರವಡಿ" (ಕಬ್ಬಿಗ್ಗೆ. ೫೧); "ಹರವಡಿಯೆನಲ್ ಪ್ರಕಟಂ" (ಕವಿಕಂ.೧೯೭) ; ನಾನು ಹೆಸರ ವೇಶ್ಯ ಸೂಳೆ ಎಂಬುದನ್ನು ಡಂಗುರಿಸಿ ಬೀದಿವಾತು ಮಾಡಿ ಹರವಡಿಯಿಂದ ಹರೆಹದಿದ್ದರೆ ... ಕೊಸವನನ್ನು ಕಣ್ಣರಿಹಿ ಮರುಳ್ಮಾಡಿ ಎಳೆತಂದೊಪ್ಪಿಸುವುದು ಹೇಗೆ ? (ಮಂತ್ರಶ. ೨೭–೧). ೫. ಪ್ರಸಿದ್ಧಿ ; ಖ್ಯಾತಿ ; ಕೀರ್ತಿ : "ಹರವಡಿ—ಪ್ರಸಿದ್ಧವಾದಂಥ"(ಗುವಿಮೋ. ೧೭೯).

**ಹರವರಿ$_2$ :** ೧. ದವಾಗ್ನಿಯ ಸತ್ರಂ ಹರಿಣಂಗಳ ಹರವರಿ ಕೇಸರಿಗಳ ಸರಿ ಪರ್ವಿದಡವಿ ಪಡೆದುದಗುರ್ವಂ (ಚಂದ್ರಪ್ರ. ೫–೪೭) ; ತಳರ ತಾಣಂ ಕುಸುಮಕುಲದ ನೆಲೆ . . . ಪುಳಿನಾಕೀರ್ಣ ಕೊಳನ ಹರವರಿ ನವಿಲ ನಂದನವೆನಿಪ್ಪ ಕೇಳೀವನಕ್ಕೆಯ್ತಂದನು (ಹರಿಕಾ. ೩–೨೭) ; ವಿರಹಿಜನದುರಿ ಮನಸಿಜನೈದಂಬಿನಲರ್ಗೆ ಹರವರಿ . . . ಎನಿಸಿರ್ಪಾತನ ಪರಿಪೊಸತಾಯ್ತು ಚೈತ್ರಭೂಪಾಲಕನಾ (ನಳಚಂ. ೫೫) ; ವರವಸಂತನ ಬೀಡೊ . . . ಚಂದ್ರಮನ ಹರ[ಪಾಠಾಂ.ರಿ]ವರಿಯೊ . . . ಎನೆ ನೆಱೆ ಮೆಱೆದುದಾ ಭೂಮಿ (ತೊರವೆ. ೧–೬–೯) ; ಜೊನ್ನದ ಹರವರಿಯೊ . . . ಎನೆ ತಿಳಿದ ಪೂಗೊಳನೊಂದು ಚೆಲುವಾಯ್ತು (ಸಾಳ್ವಭಾ. ೧೬–೮). ೨. ಹರಂ ಮಾಹೇಶ್ವರಜ್ವರವನಟ್ಟಿದಂ ಹರಣದೊಳು ಹರವರಿಯ ತಾಪಮಂ ಕಟ್ಟಿದಂ (ನಂಬಿರ. ೧೭–೧೧೭) ; ಚಿಂತೆಯ ಹಬ್ಬುಗೆಯ ಹರವರಿಯ [ಪಾಠಾಂ. ಸದ]ಳೇದದ ಮಬ್ಬಿನಲಿ ಹಣಗಿದರು ಪವನಜ ಫಲುಗುಣಾದಿಗಳು (ಕುಮ್ಮಾಸ. ೧೬–೫೭) ; ಕಡಲು ವಿಘೂರ್ಣಿಸುತಿಹುದು . . . ಮತ್ಸ್ಯ ಮಕರಾದಿಗಳ ಹರವರಿಯಿಂ ಶೀಕರಗಳಿಂ ನೊರೆಗಳಿಂ ಕರಮೆ ವಿರಾಜಿಸುತಿಹುದು (ನಾಗಕು. ೨–೭) ; ಹರವರಿಯ ಮೋಹದಿಂ ಹಿರಿದಾಗಿ ಹಿಗ್ಗುತ್ತ ಸಲಹುತಿರ್ದರು ಪುತ್ರನ (ರಾಘಚ. ೨–೪೬). ೩. ಹಡುವಣ ಡೊಂಗನ ಹರವರಿಯುಲ್ಲಿ ಮತ್ತರು ೧ (ಎಕ. VI, ಕಡೂರು. ३೦–೪೭ ; 1170) ; ತಂಮ ಹರವರಿಯ ಭೂಮಿಯ ಕಾರಗದ್ದೆಯೊಳಗೆ ಪೋಟೂರಗೊಕಂಡದ ವಿಶ್ವಾಮಿತ್ರಗೋತ್ರದ ಶಂಕರಭಟ್ಟಾಹಿತಾಗ್ನಿಗಳ ಮಕ್ಕಳು (ಎಇ. XXVII, ೨೮–೩೦ ; 1256) ; ಕಿಕುಂದದ ನಾಡ ಹರವರಿಗಳ ಒಳಗೆ ಗಿಣಿಕಲ್ಲು . . . ಚಿಕ್ಕಕೊಡನಾಡ ಒಳಗಣ ನಾರವೆ ಅಂತು ಹರವರಿಗಳು ೫ನು ಕುಳವ ಕಡಿದು ಸಮರ್ಪಿಸಿದೆಉು (ಮೈಆರ್. ೧೯೩೩, ೩೩–೪೮ ; 1380) ; ಕುಪ್ಪವಳ್ಳಿಯೊಳಗಣ ದೇವಿ

ಯಂಕ್ಕನ ಹರವರಿಯ ನಾಲ್ಕು ಹಣವಿನ ಕುಳದ ಭೂಮಿಯನು . . . ತಾಲು ಆ ನಾಗಂಣಗಳಿಗೆ ಧಾರೆಯನೆಱದು ಕೊಟ್ಟ ಶಿಲಾಶಾಸನ (ಮೈಆ೦. ೧೯೩೨, ೪೨-೮ ; ಸು. 1418). **೪.** "ಹರವರಿ [ಪಾಠಾಂ. ಪರಿವಡಿ, ಹರವಡಿ]ಯೆಂದು ಪ್ರಕಟಂ" (ಕಶಸಾ. ೬೬-೪೭೪). **೫.** ನರಸಿಂಗ ಮೊನೆಯರ ವಿಚಿತ್ರಾನುರಾಗಮುಂ ಹರವರಿಯ ನಂಬಿಯಣ್ಣನ ಸಕಲ ಭೋಗಮುಂ ಬಂದು ನೋಡಲು ನೆರೆದ ಸಕಲ ಸಾಮಂತರಿಂ (ನಂಬಿರ. ೫-೪೦) ; ಹರಿರಾಯನೆನಿಪ ನರಪತಿಯು . . . ಹರವರಿಯ ಸಕಲ ಸೌಭಾಗ್ಯಸಂದೋಹದಿಂ ರಾಜ್ಯವಾಳುತ್ತಲಿ (ಗುರುಚಾ. ೩-೧೦). **೬.** ವಿಹಾರಸ್ಥಾನ : ರಾಜವೀಥಿ ವಿಪಣಿಮಾರ್ಗ ಗಣಿಕಾವಾಟಸರಣಿ ಸಂತಾನಂ ವಸಂತವಲ್ಲಭನ ಹರವರಿಯಂತಿರ್ಪುದು (ಅನಂಪು. ೧-೧೦೫ ವ); ಕಾಲನ ಹರವರಿಯೊ ಹೆಬ್ಬೆಳಸ ಮುತ್ತುವ ವಿಹಗಸಂತತಿಯೊ . . . ಹಿಳುಕಟ್ಟರಿಸಿ ಗಬ್ಬರಿಸಿದುವು ದಿಗುತಟವನು ಶರವ್ರಾತ (ಕುಪ್ಯಾಭೀ. ೪-೧೫) ; ಜವನ ಹರವರಿಯೋ . . . ಕಪರ್ದಿಯ ಕವತೆಯೋ ಕಾಣೆನು ಸುರಾಸುರಕದನಕೇಳಿಯಲಿ (ತೊರಂ. ೬-೧೩-೪೦). **೭.** ಬಹಳವಾದ ವಿಸ್ತಾರ ; ಹೆಚ್ಚಾದ ವ್ಯಾಪ್ತಿ,—ಹರವು : ವರಸ್ವಪ್ನಕಲ್ಪಿತನೆ ಹರವರಿಯ ವಿಶ್ವನೆಂಬರು (ಮನೋವಿ. ೬-೨೨) ; ಕಿಱುಕಿಚ್ಚು ಹರವರಿಯ ಬಿಂಜದಡವಿಯ ನಿಮಿಷದೊಳ್ ದಾಮುದೂಮುಮಂ ಮಾಡದಿಹುದೇ (ಸಪ್ಯಕಾ. ೧-೪೮). **೮.** ಸಮೂಹ ; ಗುಂಪು : ದೆಸೆಗೆಟ್ಟೋಡುತಿಹ ನಿರ್ಜರರ ಹರವರಿಯನು ಸುರೇಶ್ವರ ನೋಡಿ ಖತಿಗೊಂಡ (ಉತ್ತರಾ. ೨೨-೧). **೯.** ಚೆಲ್ಲಾಪಿಲ್ಲಿ ; ಚೆದರಿ ಹೋಗಿರುವಿಕೆ : ಮರುತನ ಗತಿ ಜೀವಿತಬಿಂದುವಿನಂಕುರತರ ದೇಹವಹಂಗೆ ಮನಸ್ಸಿನ ಹರವರಿ ವೃತ್ತಿಯೆನಿಪ್ಪುದಱಿಂ ಕಾರಣರೂಪುಗಳಾಗಿ (ಯೋಗಾಂವಿ. ೨-೧೮). **೧೦.** ಚಲನೆ ; ಓಡಾಟ : ಪೂರ್ವನಗದಗ್ರದೊಳಗುದಯವಾದನಾ ತರಣಿ ಕಣ್ಯಾಲ್ಗೆ ಹರವರಿಯ ಸರಣಿ (ಭಾಪಚಂ. ೭-೧೪). **ಹರಾವರಿ :** **೨.** ಕೊಂಡುದು ಪ್ರಸಾದ ನಿಂದುದು ಓಗರವೆಂದು ಹರಾವರಿಯಿಂದನು ಭವಿಸದೆ (ಪಚಶಾ. I. ೩೭೪). **೩.** ಆ ಕ್ಷೇತ್ರದ ಚತುಃಸೀಮೆಯೊಳಗುಳ್ಳ ಹರಾವರಿ ಮುಂತಾದವರಲ್ಲಿ ಸಲುವ ಗೇಣಿ (ಇಆ. V, ೪೧-೧೬ ; 1586). **ಹರುಬರಿ : ೩.** ಕಾರೆಮುಕಿಯ ಹರುಬರಿಯೊಳಗೆ ಕಾರುಕದ ಮನ್ಯ ತುಂಡುಗದೆಯೊಳಗೆ ಬಿಟ್ಟ ದತ್ತಿ (ಮೈಆ೦. ೧೯೩೦, ೭೦-೧೩ ; 1568).

**ಹರವರಿಯಾಗು**=**೧.** ಹೆಚ್ಚಾಗು ; ಅಧಿಕವಾಗು : ಹರವರಿಯಾಗಿ ನುಡಿಯನು ಧೈರ್ಯದೊಳು ಮಂದರದಂತಿಹನು ರಾಜೇಂದ್ರ (ಭರಚ. ೨-೨೭) ; ಹಣಕಾಸಿನ ವೆಚ್ಚದ ಮೊಗ ನೋಡದೆ ಹರವರಿಯಾಗೀಯಲ್ಬಹುದು (ಭಕ್ತಿಸ. ೪-೧೨-೧೯). **೨.** ವಿಶಾಲವಾಗು ; ವಿಸ್ತಾರವಾಗು ; ವ್ಯಾಪಕವಾಗು : ಹರವರಿಯಾಗಿ ಹಲವು ದಿಙ್ಮುಖದೊಳ್ ಪರಕಲಿಸಲಿ ನಿನ್ನ ಯಶೋವಲ್ಲರಿ (ಜಯನೃಪ.೮-೩೯). **೩.** ದಟ್ಟವಾಗು ; ಒತ್ತಾಗು : ಹರವರಿಯಾದ ಪೇರಡವಿಯೊಳ್ ಕಡು ಕೊರ್ವಿದ ಬೆಳ್ಪ್ಪುಗಂಗಳಂ ಹರಿಹರಿದಿಟ್ಟಯಿಂ ತಿವಿದು (ನಳಚಂ. ೮೨). **೪.** ಚೆದರು ; ಕಲಕು ; ಅಸ್ತವ್ಯಸ್ತವಾಗು : ಹಱಿಹಂಚಾದುದು ಬಗೆ ಹರವರಿಯಾದುದಱಿವು ಬೀತುದು ಬಿಂಕದೇಳ್ಗೆ (ಶ್ರೀಪಾಲ. ೫-೭೧).

[<ಪರಿ$_1$ + ಪರಿ$_1$]

**ಪರವರಿಸು,** ಹರವರಿಸು (ಕ್ರಿ). **೧.** ದೊಡ್ಡದಾಗು ; ವಿಶಾಲವಾಗು : ನರಮುರ್ಚದೆ ನವಿರಿಲ್ಲದೆ ಪರವರಿಸದೆ ವೃತ್ತವಾದ ಜಂಘೆಗಳಿರೆ ಭೂವರವಧುವವಳ್ (ಹಾಲಾಸ್ಯ. ೧-೧೩-೨೮). **ಹರವರಿಸು : ೨.** ಆಕ್ರಮಿಸು ; ಮುತ್ತು : ಅರಿವರ್ಗವೆಂಬುದೆಡೆವಿಡದೆನ್ನ ಮುಂದೊತ್ತಿ ಹರವರಿಸಿ ಹಗೆಯಂತೆ ಕೊಂದು ಕೂಗುವುದು (ಕೈಕವ. ೧-೧೭-೪).

[ಪರವರಿ + -ಸು$_1$]

**ಪರವರ್ತನ** (ನಾ). ಆಮೇಲೆ ಆಗುವಂಥದು ; ಅನಂತರ ನಡೆಯುವುದು : ಅಹಿಂಸೆಯು ಹಿಂಸೆಗೆ ಪೂರ್ವಭಾವಿಯಾದ ವರ್ತನವಾದರೆ ಪಶ್ಚಾತ್ತಾಪವು ಪರವರ್ತನವು (ಆಯಾಧ. ೭೨). [ಪರ$_3$+ವರ್ತನ]

**ಪರವರ್ದಿಗಾರ್** 'ಪರವರ್ದಿಗಾರ' ನೋ.

**ಪರವರ್ದಿಗಾರ,** ಪರವರ್ದಿಗಾರ್ (ನಾ). ಸಂರಕ್ಷಿಸುವವನು ; ಪರಿಪಾಲಿಸುವವನು ; ದೇವರು : ಖುದಾವಂದ್, ಪರವರ್ದಿಗಾರ-ಎಲ್ಲಾ ಒಳ್ಳೇದು ಮಾಡುತ್ತದೆ (ಮಧುನ. ೬೫). **ಪರವರ್ದಿಗಾರ್ :** ಪರವರ್ದಿಗಾರ್ ! ನನ್ನ ತೋಳುಗಳಿಗೆ ಬಲ ಕೊಡು (ಅನ್ನಾಪ. ೨೧).

[←ಪಾರ. ಹಿಂ. ಮರಾ. ಪರ್ವರ್ದಿಗಾರ್]

**ಪರವರ್ಷ** 'ಪರವರಶಿ' ನೋ.

**ಪರವರ್ಷಿ** 'ಪರವರಶಿ' ನೋ.

**ಪರವಶ** (ಗು). **೧.** ಬೇರೆಯವರಿಗೆ ಅಧೀನವಾದ ; ಇನ್ನೊಬ್ಬರ ಇಚ್ಛೆಯನ್ನು ಅವಲಂಬಿಸಿದ. (ನಾ). **೨.** ಬೇರೆಯವರಿಗೆ ಅಧೀನವಾಗಿರುವಿಕೆ ; ಅಧೀನತೆ ; ಪರತಂತ್ರ : "ಪರವಶ [ಪಾಠಾಂ. ಸ]ಮೆಂಬುದು ಪಾರವಶ್ಯಮೆಂದೆನಿಪರ್ಥಂ" (ಚತುನಿ. ೧೧೯); ಪರವಶವಾದುದೆಲ್ಲವೂ ದುಃಖಕರ. ಆತ್ಮವಶವಾದುದುದೆಲ್ಲವೂ ಸುಖಾಸ್ಪದ (ಭಾಂಪ. ೫೪). **೩.** ತನ್ಮಯತೆ ; ಮಗ್ನತೆ : ಪರವಶದ ಭಕ್ತಿಯಿಂ ಬಂಧುರ ಲಿಂಗದ ಮುಂದೆ ಕುಣಿದು (ತ್ರಿಪುವಿ. ೪೪-೧೨). **೪.** ಮೈಮರೆವು ; ಅನ್ಯಮನಸ್ಕತೆ : ಒಡಲ ಹಿಡಿದಾಡದಿರು ನುಡಿಯ ಹೋಗಾಡದಿರು ನಡೆಯೊಳೆಚ್ಚಱವ ಬಿಡದಿರು ಪರವಶದಿ ದೃಢವನಗಲದಿರು (ಸರ್ವಜ್ಞ. ೩೦೦). **೫.** ಜ್ಞಾನ ತಪ್ಪುವುದು ; ಬವಳಿ ; ಮೂರ್ಛೆ : ಪರವಶದೊಳ್ ದುರ್ಯೋಧನಂ ಮೇಣ್ಪರಾರ್ಜಿತಪ್ರಾಣರಾದರೋ ದ್ರೌಪದಿಯಂ ಪರಿಭವಿಸುವಲ್ಲಿ ನೋಡುತ್ತಿರಲಕ್ಕುಮೆ ಪವನಸೂನುಗಂ ಪಾರ್ಥಂಗಂ (ಗದಾಯು. ೧-೬೧). **೬.** ಇನ್ನೊಬ್ಬರನ್ನು ಆಶ್ರಯಿಸಿರುವವನು; ಬೇರೆಯವರ ಅಂಕಿತದಲ್ಲಿರುವವನು ; ಉಪಜೀವಿ ; ಆಶ್ರಿತ : "ಪರವಾನ್, ಪರಾಧೀನಃ, ನಿಘ್ನಃ, ಪರವಶಃ . . . ಗೃಹ್ಯಕಃ—ಈ ಆ ಹೆಸರ ವಶದಾತಂ" (ಹಲಾಯು. ೫೬-೧೮೬); "ಪರವಶಂ ನಿಘ್ನಂ . . . ಪರಚ್ಛಂದನೆನೆ ಪರರ ವಶದವನಕ್ಕು" (ಮಂಗರಾ. ೬೮-೭). **೭.** ಮಾರುಹೋದವನು ; ಮರುಳಾದವನು : ಈ ಲೋಕಕ್ಕೆ ಪರವಶನಲ್ಲಂ ಹರವಶಂ (ನಂಬಿರ. ೮-೫೦). **೮.** ಮೂರ್ಛೆ ಹೋದವನು; ಜ್ಞಾನ ತಪ್ಪಿದವನು: ಧೊಪ್ಪನವನಿಗೆ ಕೆಡೆದು ಪರವಶನಾದನು (ಕುಪ್ಯಾಆ. ೨೩-೧೯) ; ಅರಸುಗಳು ಬಾಯ್ದೆಱೆಯದೇ ನೆಲನೆನುತ ಪರವಶರಾದರಲ್ಲಲ್ಲಿ (ತೊರಂ. ೧-೧೭-೪). [ಸಂ.]

**ಪರವಶಗೊಳಿಸು** (ಕ್ರಿ). ಮಾರುಹೋಗುವಂತೆ ಮಾಡು ; ಮರುಳಾಗಿಸು : ಪಾಶ್ಚಾತ್ಯ ವೈಜ್ಞಾನಿಕ ಸಂಸಿದ್ಧಿಗಳು . . . ವಿದ್ಯಾವಂತರನ್ನೆಲ್ಲ ಪರವಶಗೊಳಿಸಿದವು (ಪುರಸ್ಕಾರ. ೧೧೭ ಪುಟ).

[ಪರವಶ + ಕೊಳ್$_1$ + -ಇಸು$_3$]

**ಪರವಶತೆ** (ನಾ). **೧.** ಪರಾಧೀನತೆ; ಅಧೀನವಾಗಿರುವಿಕೆ ; ಅಂಕಿತದಲ್ಲಿರುವುದು. **೨.** ತನ್ಮಯತೆ; ತಲ್ಲೀನತೆ: ನಿರ್ಭರಪ್ರಣಯಪರವಶತೆಯಿಂ ನೆರೆವ ಕಾದಲರ ಕಾಮುಕೇಳೀಕೂಜಿತದೊಳ್ (ಚಂದ್ರಪು. ೮-೬೬ ವ); ಚಿಂತಾಪರವಶತೆಯಿನಿನಿಸಂ ತಡೆದಿದಿರೇಟದಾತ್ಮಪರ್ಯಂಕದೊಳಾ ಕಾಂತಂ ಕುಳ್ಳಿರೆ (ಪುಷ್ಪಪು. ೩-೬೦). **೩.** ಅರಿವು ತಪ್ಪುವಿಕೆ ; ಮೂರ್ಛೆ.

[ಸಂ. ಪರವಶತಾ]

**ಪರವಶತ್ವ** (ನಾ). **೧.** ಅಧೀನತೆ. **೨.** ಮೈಮರೆವು. [ಸಂ.]

**ಪರವಶವರ್ತಿ** (ನಾ). ಇನ್ನೊಬ್ಬನಿಗೆ ಅಧೀನನಾದವನು : "ಅಧೀನನಱಗಾಯತ್ತಂ ನಿಘ್ನಂ ಪರವಶವರ್ತಿ" (ವಸ್ತುಕೋ. ೧೦೧-೨೧).

[ಸಂ. ಪರವಶವರ್ತಿನ್]

**ಪೆರವಶೆ** (ನಾ). ೧. ಬೇರೆಯವರ ಅಧೀನದಲ್ಲಿರುವವಳು ; ಸ್ವಾತಂತ್ರ್ಯವಿಲ್ಲದಿರುವವಳು : ಶೀಳಮಂ ಮುನಿಶಕ್ತಿಯನಾಯಲೆಯೊಳ್ ಪರವಶೆಯೆನಿಪ್ಪುದುಮನಾದೊಡವಾಂ ಸೆಳೆಯಲ್ಕಾರೆಂ ವಲಮಾ ನಳಿನಾಂಬಕಿಯತ್ತಣಿಂದಮೆನ್ನೀ ಮನಮಂ (ಶಾಕುಂತ. ೩೧-೫೫). ೨. ಮೈಮರೆತಿರುವವಳು ; ತನ್ಮಯಳಾಗಿರುವವಳು : ಸ್ಮರಶರ ಸಂಧಾನಕ್ಕೆಂಬುರುಹೇಕ್ಷಣೆ ಲಕ್ಷ್ಯಮಾಗೆ ನಲ್ಲನನುಬೀಡಾ ಪರವಶೆ ತನ್ನೊಲ್ಲದನಂ ಕರೆದಳ್ ಬೆಟ್ಟೀಜು ಮಿಟ್ಟುಗರೆವಂತೀಗಳ್ (ಶಾಂತಿಪು. ೮-೮೨); ಪರವಶೆ ಪಾದರಿ ವಿಫಲೆ ವಿಹ್ವಲೆ ವಿಷಮ ವಿರಹ ... ತಾಮುಸಿಯೆನಿಪ ವನಿತೆಯರ ನಿಜಕ್ಕೆ ನಿಲಿಸಿ ನಿಶ್ಚೈಸಿದೊಡೆ ಬಳಿಕ ಬಳಲಿಕೆ ಬಾರದೆ (ಜೈಮಿಭಾ. ೫-೬೧). [ಸಂ. ಪರವಶಾ]

**ಪೆರವಸ,** ಹರವಸ (ನಾ). ೧. ಅಧೀನತೆ ; ಅವಲಂಬನೆ : "ಪರವಸ [ಪಾಠಾಂ.ಶ]ಮೆಂಬುದು ಪಾರವಶ್ಯಮೆಂದೆನಿಪರ್ಥಂ" (ಚತುಃ. ೧೧೯). ೨. ಪರವಶತೆ; ಮೈಮರೆವು : ಕರುಣದಿಂದಂ ಮನ್ಯು ಮಿಕ್ಕು ಪರವಸದಿಂದಂ ಕಣ್ಣೀರ್ಗಳ್ ಬಂದು (ಪದ್ಮಾರಾ. ೯-೨೬) ; ಅಂತು ಪರವಸ [ಪಾಠಾಂ.ಶ]ದೊಳ್ ಮನ್ಯುಮಿಕ್ಕು ಸೈರಿಸಲಾಜದೆ (ಸುಕುಮಾ. ೪-೬೨ಪ); ಬಗೆಯು ಬೆರಸದ ಪರವಸ[ಪಾಠಾಂ.ಶ]ದೊಳಾ ನಗೆಯೊಳೆಡೆಗೊಂಡಮಳ ಜನ್ಮದ ಮುಗುದ ಪಾಂಡವರೆಣಗಿದರು ಧೌಮ್ಯಾದಿಗಳು ಸಹಿತ (ಕುಮ್ಯಾಆ.೧೬-೩೧). ೩. ಬವಳಿ ; ಜ್ಞಾನ ತಪ್ಪುವುದು; "ಮೂರ್ಛೆ" (ಪ್ರಭಣ್ಣ). **ಹರವಸ :** ೧. ಪರವಶ-ಹರವಸ (ಶಮದ. ೨೫೮ ಪ್ರಯೋ); ಹರವಸದಿಂ ಹದಮಬೀವೇಂ ಕರುಣಾಳುಗಳೊಳರೆ ಕಾವುದಬೀಯದ ಮುನ್ನಂ ಎಂಬ ನುಡಿಯನಾಲಿಸುತ್ತೆ (ಚಿಕವಿ. ೬-೭೧). ೨. "ಹರವಸಮೆನಲ್ಕೆ ಮೈಮರೆಯುವಿಕೆಯಕ್ಕು" (ಕಶಶ. ೧೧೩); ಒಮ್ಮೆ ಹರವಸದಿಂ ಮೂರ್ಛೆಯಾಗುವೆಯಮ್ಮ (ಶಿವಗೀ. ೧೫೭-೭೫); ತನುವನೀ ಕಮ್ಮರಿಗೆ ಕುಡುವೆನೆಂದಾಡುತಿರೆ ಹರವಸಂ [ಪಾಠಾಂ. ಪರವಶಂ] ಕೈ ಮಿಕ್ಕುದು (ಸಿದ್ಧರಾ. ೨-೬೬) ; ತೊಡೆದನು ತರಣಿ ತನುಕಾಂತಿಯನೆನಲು ಹರವಸಕೆ ಹರಹಿನಲಿ . . . ಉದಯಾರುಣಿಮ ರಂಜಿಸಿತು (ಸಿಭಾಗ. ೧೦-೨೯-೪೧) ; ಸೊದೆಯಂ ಸವಿದೀಂಟುವಂತೆಯುಂ ಹರವಸದಿಂದೆ ಕಣ್ಗೊಳಿಸಿದಂ ಸುಕುಮಾರನನಾ ಕುಮಾರನಂ (ಚಿಕವಿ. ೪-೬೮). ೩. "ಹಮ್ಮದಂ, ಹರವಸಂ, ಮುಚ್ಚಿ-ಈ ೩ ಮೂರ್ಛೆ" (ಕಶಸಾ.೧೨-೨೩೨). ೪. ಮೋಹಾತಿರೇಕ: ಹರವಸಮೊಯ್ಯನಾಬಿ . . . ಪೋದ ಕೂಟಮಂ ಪರಿವಿಡಿಗೆಯ್ದೆ ಚಿತ್ತಮೆಳಸಿತ್ತು ರತಾಂತಸುಖಾಂತಮೋಪರಾ (ಚಂದ್ರಪು. ೮-೭೦) ; ಹರವಸದಿಂದೆ ಚುರ್ಚುರ್ವೆರ್ದೆಗಿಟ್ಟನ ಪೆರ್ಚುಗೆಯಿಂ ಕಟಿಲ್ಚುವರ್ ನರಪತಿಯೊಲ್ಪೊಣರ್ಕೆವಡೆದಾರೆಯ ರಾಯರ ರಾಣಿವಾಸಿಯರ್ (ಅಪ್ರತಿ. ೬೯-೧೯). ೫. ಆವೇಶ ; ಆವೇಗ : ಮೃಗಂಗಳೊಳಿಂದು ಪತ್ತಿಸಿದ ಹರಿಣನ ಗೋರಿಯ ಹರ್ಷದ ಹರವಸದ ಭಾವಪ್ರಪಂಚಮಂ . . . ಬಂದು ನೋಡಲ್ವೇಟ್ಟುಂ (ಅನಂಪು. ೧೧-೩೯ ಪ) ; ಹರವಸದಿಂ ನಿನಗಿದಿರಾದಗಿಯರೆನಿಪ್ಪಾರಾತಿಗಳ ಹರಣಂ ಹೌವನೆ ಹಾಜಿಲಿ (ಜಯಚಾ.೮-೩೯) , ಅತಿಕಾಯ ವೈರಿಯುಸಿರ್ದ ಸೊಲ್ಲನಾಲಿಸೆ ಬೀರದ ಹರವಸಂ ತೋಟುಗುಂ (ರಾಮಾಶ್ವ. ೩೪-೨೭). ೬. ಮರೆವು; ವಿಸ್ಮೃತಿ : ರಾಮನು ಪೊಡೆಯಲರನೆಂದ ಬೀಯಬಾರದೆ ನಿನಗೆ ಹರವಸವೆ (ತೊರರಾ. ೬-೫-೪೦). [<ಪರವಶ]

**ಪೆರವಸಂಗೊಳ್** (ಕ್ರಿ). ಆವೇಶಹೊಂದು ; ಉದ್ವೇಗಗೊಳ್ಳು : ಪಲ್ಗಳ ಬಣಂಬೆಗಳೊಳ್ ಪರವಸಂಗೊಂಡು ಮೆಟ್ಟಿಯುಂ ಅಟ್ಟಿಯ ಬೆಟ್ಟಿ ಘಟ್ಟದಿಟ್ಟೆಡೆಗಳೊಳ್ ನಿಟ್ಟಿಸಿಯುಂ . . . ದುರ್ಯೋಧನನಂ ಅಬಿಸಿ ಕಾಣದೆ (ಗದಾಯು. ೬-೨೮ ಪ). [ಪರವಸ+ಕೊಳ್₁]

**ಪೆರವಸತೆ,** ಹರವಸತೆ (ನಾ). ೧. ಮೈಮರೆಯುವಿಕೆ ; ಮಗ್ನತೆ ; ತಲ್ಲೀನತೆ : ಸುರತರುವಿನ ತಣ್ಣೆಳಲೊಳು ಸುರತದ ಪರವಸ[ಪಾಠಾಂ.ಶ]ತೆಯೊಳೊಬಗಿರ್ಪ ಗರುಡ ಗಂಧರ್ವ ಯಕ್ಷಾಮರಾಂಗನೆಯರಿಂ ಕರಮೆಸೆದು ಹುದಮರಾದ್ರಿ (ಕುಂಗಾಸಾಂ. ೨-೧೩). **ಹರವಸತೆ :** ೨. ಬಾಹ್ಯ ಪ್ರಚೋದನೆಗೆ ಮಾತ್ರ ಗಮನ ಕೊಡುವ, (ಕೃತಕವಾದ) ಗಾಢನಿದ್ರೆಯಂಥ ಸ್ಥಿತಿ : ಹರವಸತೆ (ಹಿಪ್ನೊಟಿಸಂ) : ಯುದ್ಧ ಸೆರೆವಾಸಿಗಳ ಶಿಬಿರದಲ್ಲಿದ್ದಂತೆ ಬೇಕಾದಷ್ಟು ಅರಿವಳಿಕ ವಸ್ತುಗಳು ಇಲ್ಲದಾಗಲೂ ಹಲ್ಲಿನ ಚಿಕಿತ್ಸೆಗಳಲ್ಲೂ . . . ಬಳಸಬಹುದು(ಕವಿಕೋ. I,೪೬೨).
[<ಪರವಶತೆ]

**ಪೆರವಸ್ತು** (ನಾ). ಅತ್ಯಂತ ಶ್ರೇಷ್ಠವಾದ ತತ್ತ್ವ ; ಪರತತ್ತ್ವ ; ಪರಮಾತ್ಮ : ಪ್ರಥಮದಲ್ಲಿ ವಸ್ತು ಅನಿರ್ವಾಚ್ಯವಾಗಿದ್ದಿತು. ಆ ಅನಿರ್ವಾಚ್ಯವಾಗಿದ್ದ ಪರವಸ್ತು ತನ್ನ ಲೀಲೆಯಿಂದ ತಾನೆ ಪರಬ್ರಹ್ಮವೆಂಬ ನಾಮವಾಯಿತು (ಅನಚಂ. ೪. ೨೮೩-೭೮೧) ; ಗುರುವೆ ಪರವಸ್ತುವು ತಾನೆ ನೋಡಾ(ಅಖಂಡೇ. ೧೬-೧) ; ಈಕೆ ಪರವಸ್ತುವಿನಲ್ಲಿ ಐಕ್ಯವಾಗುವ ಕಾಲ ಬಂದಿದೆ (ಶೂನ್ಯಕು. ೧೦೯) ; ಅರಿಸ್ಟಾಟಲಿನ ಪ್ರಕಾರ ಪರವಸ್ತುವೇ ಜಗತ್ತಿಗೆ ಆದಿ ಮತ್ತು ಅಂತ್ಯ (ಇಸ್ಲಾಂಸಂ. ೨೦೫). [ಪರ₃+ವಸ್ತು]

**ಪೆರವಾ** 'ಪರವೆ' ನೋ.

**ಪೆರವಾದಿ** (ನಾ). ಪರಮತದ ಪರವಾಗಿ ವಾದವನ್ನು ಮಾಡುವವನು ; ಪರಮತವಾದಿ : ಪರವಾದಿಗಳ ಮೊಗಂಗಳ್ ಕರಿಂಕುವರಿದಂತೆ ಕಂದಿ ಕುಂದಿರೆ (ಆದಿಪು. ೨-೨೩) ; ಪರವಾದಿಯಂ ದಾನಸನ್ಮಾನಾದಿಗಳಿಂ ಸಂತೋಷಂಬಡಿಸಿ (ಸುಕುಮಾ. ೨-೨೯ ಪ) ; ಬೇಡವೋ ಪರವಾದೀಗಳೆಹದಿರು (ಬಸವ.೫೬೯); ಪರವಾದಿಗಳ ಗರ್ವಮಂ ಮುಜಿದು ಜಯಿಸುತ್ತ (ಪ್ರೌಢರಾ. ೭-೨೨).

ಪರವಾದಿಗಜಮೃಗರಾಜ=ಪರಮತವಾದಿಯೆಂಬ ಆನೆಗೆ ಸಿಂಹಪ್ರಾಯನಾದವನು ; ಒಂದು ಬಿರುದು : ಜ್ಞಾನನಿಧಾನದೀಪವರ್ತಿಗಳುಂ ಮಂತ್ರವಾದಿಮುಕರಧ್ವಜರುಂ ಪರವಾದಿಗಜಮೃಗರಾಜರುಂ (ಕಇಆ. ೯೪-೩-೧೩ ; 1124). ಪರವಾದಿಜನಭಂಜನ=ಪರಮತವನ್ನು ವಾದಿಸುವ ಪ್ರತಿವಾದಿಗಳನ್ನು ಸೋಲಿಸುವವನು,—ಭಂಗಿಸುವವನು ; ಒಂದು ಬಿರುದು : ಪರವಾದಿಜನಭಂಜನನೆಂಬ ಬಿರುದಿನ ತೊಡರ್ಝಣಝಣಿಸಲೆಳ್ದು ವೀರಭಕ್ತಪರಿವೃತಂ ಸಂಪೂರ್ಣಸಂಭ್ರಮದಿಂ ತದಾಸ್ಥಾನಕ್ಕೆ ಬಂದು (ವೃಷವಿ. ೩೭-೬೭ಪ). ಪರವಾದೀಶರಭಭೇರುಂಡ=ಪರಮತವಾದಿಯೆಂಬ ಶರಭಕ್ಕೆ ಗಂಡಭೇರುಂಡದಂತಿರುವವನು ; ಒಂದು ಬಿರುದು : ಪರವಾದೀ[ಶರಭ]ಭೇರುಣ್ಡಾಪರನಾಮಧೇಯರಪ್ಪ ಶ್ರೀಮತ್ ಶ್ರೀನನ್ದಿಪಣ್ಡಿತದೇವರ್ (ಸೌಇಇ. XX, ೪೬-೨೭ ; 1072).
[ಸಂ. ಪರವಾದಿನ್]

**ಪೆರವಾನಗಿ,** ಪರವಾನಿಗಿ, ಪರವಾನಿಗೆ (ನಾ). ೧. ಅನುಮತಿ ; ಒಪ್ಪಿಗೆ ; ಸಮ್ಮತಿ : ಮುನಿಸಿಪಾಲಿಟಿಯ ಪರವಾನಗಿ ಸಿಗಬೇಕಾದರೆ ಎರಡು ವರ್ಷ ಕುಣಿಯಬೇಕಾಯಿತು (ಅಳಸಿ. ೨೫೦) ; ಅವನು ರಾವಜೀ ಕಾಕಾ ಅವರ ಪರವಾನಗಿಯನ್ನು ಪಡೆದಿರಲಿಲ್ಲ (ದೀಪಹ. II, ೮) ; ನಿನಗೆ ಧಾರವಾಡದಲ್ಲಿ ಇರಲಿಕ್ಕೆ ಪರವಾನಗಿ ಕೊಟ್ಟಿದ್ದೇ ತಪ್ಪಾಯಿತು (ಮುಕ್ತಿ. ೧೯೧). **ಪೆರವಾನಿಗಿ :** ೧. ನಮ್ಮ ಮಾಲು ಮಾರಾಟ ಮಾಡುವದಕ್ಕೆ ಪರವಾನಿಗಿ ಕೊಟ್ಟದ್ದು ಇನ್ನೂವರೆಗೂ ಯಾಕೆ ಮಾರಲಿಲ್ಲ?(ಮುಂಬಮ್ಮಾ. ೨೯ ಪ್ರಸ್ತಾವನೆ) ; ಶಿವ ಹೋದ ತನ್ನ ಕೈಲಾಸಕ ಶಿವದೂತರನಿಟ್ಟು ಬಾಗಿಲ ಕಾಯುವದಕ ಬಂದ ಮಂದಿ ಪರವಾನಿಗಿ ತಗೊಂಡ ಬಿಟಕೊಡ್ರಿ ಅಂದನೋಳಿ ಯಾಕ (ಕನ್ನಜಾ. ೧೫೦). **ಪೆರವಾನಿಗೆ :** ೧. ಈಗ ನಾಟಕ ಬರೆಯೋದಕೇ ನಿಂ ಪರವಾನಿಗೆ ತಕ್ಕೋಬೇಕೇನು ? (ನಡೆದಾ. I, ೩೩೨) ; ಇನ್ನೊಂದು ರೀತಿಯ ಪ್ರತಿಲೇಖನವು ಪರವಾನಿಗೆಯೇ ಇಲ್ಲದೆ ಅವ್ಯವಸ್ಥಿತವಾಗಿ ನಡೆಯುವಂಥದು (ಭಾರಪ. ೩೪) ; ಮೊದಲು ನಮಗೆ ಪರವಾನಿಗೆ

ಯಿಂದ ಸಮಿಪಾಪದ ಸ್ಥಳಗಳಿಗೆ ಕಾವಲಿನೊಡನೆ ಹೋಗುವ ಸವಲತ್ತು ಇತ್ತು (ಪೇಶ್ವೆಸು. ೧೭೪). ೨. ಯಾವುದಾದರೂ ವಸ್ತುವನ್ನು ಹೊಂದಿರುವ ಅಧಿಕಾರ: ನಿನಗೆ ಬಂದೂಕದ ಪರವಾನಿಗೆ ಇರುವದೋ? (ವಿನೋದ. ೯೮). ೩. ಅಧಿಕಾರಪತ್ರ ; ರಹದಾರಿ ; ಅಪ್ಪಣೆಚೀಟಿ; ಸನ್ನದು : ಸೈದುಮಹಮ್ಮದು . . . ಬರಸಿ ಕೊಟ್ಟ ಪರವಾನಿಗೆ ಕ್ರಮ (ಎಕ. IX, ಚನ್ನಪ. ೧೪೭-೬ ; 1763).

[<-ಪಾರ. ಹಿಂ. ಪರ್ವಾನಗೀ ; ಮರಾ. ಪರವಾನಗೀ, ಪರ್ವಾನಗೀ, ಪರವಾಣಗೀ, ಪರ್ವಾನಗೀ, ಪರ್ವಾಣಗೀ]

**ಪರವಾನಾ** 'ಪರವಾನೆ' ನೋ.

**ಪರವಾನಿಗಿ** 'ಪರವಾನಗಿ' ನೋ.

**ಪರವಾನಿಗೆ** 'ಪರವಾನಗಿ' ನೋ.

**ಪರವಾನು** 'ಪರವಾನೆ' ನೋ.

**ಪರವಾನೆ,** ಪರವಾನಾ, ಪರವಾನು, ಫರವಾನೆ (ನಾ). ೧. ಅಪ್ಪಣೆ ; ಅನುಜ್ಞೆ ; ಅನುಮತಿ : ಭೋಟಿಯ ಜಾತಿಯವರೆಂದು ಕರೆಯಲ್ಪಟ್ಟ ಯಜ್ಞೋಪವೀತಧಾರಿಗಳು ನಾರಾಯಣಶಾಸ್ತ್ರಿಯ ಮೇಲೆ ದೂರು ಹೇಳುವುದಕ್ಕೆ ಪರವಾನೆ ಕೇಳಿದರು (ಭೂರಾಣಿ. ೪೨). ೨. ಯಾವುದಾದರೂ ವಸ್ತುವನ್ನು ಹೊಂದಿರುವ ಅಧಿಕಾರದ ಪತ್ರ; ಅಪ್ಪಣೆಚೀಟಿ; ಸನ್ನದು ; ನಿರೂಪ : ಸೈದುಮಹಮ್ಮದು . . . ಬರೆಸಿ ಕೊಟ್ಟ ಪರವಾನೆಯ ಕ್ರಮ (ಎಕ. IX, ಚನ್ನಪ. ೧೪೮-೮ ; 1767); ಅಸಂಖ್ಯಾತ ವಿಷಯಗಳನ್ನು ಒಳಗೊಂಡಿರುವ ಅಧಿನಿಯಮಗಳನ್ನು ಅನೇಕ ಹೆಸರುಗಳಿಂದ ಕರೆಯುತ್ತಾರೆ. ಅವುಗಳನ್ನು . . . ಅಪ್ಪಣೆಚೀಟಿ ಅಥವಾ ಪರವಾನೆಗಳೆಂದೂ (ಲೈಸೆನ್ಸ್) . . . ಸೂಚನಾಪತ್ರಗಳೆಂದೂ (ಮಿನಿಟ್ಸ್) ಕರೆಯಬಹುದು (ಕವಿಕೋ. I, ೨೮೬); ಒಂದೆರಡು ದಿನಗಳಲ್ಲಿ ಅರಮನೆಯ ದೊಡ್ಡಮುದ್ರೆ ಒತ್ತಿರುವ ಪರವಾನೆಯೂ ಜ್ಞಾನಸಾಗರ ತೀರ್ಥರಿಗೆ ತಲ್ಪಿತು (ವಾಗ್ದೇವಿ. ೮೨) ; ಜೇಬಳಿಂದ ಒಂದು ಪರವಾನೆಯನ್ನು ತರಿಸಿ ತನ್ನ ಬೋಜೆಯೊಡನೆ ಅವಳನ್ನು ಕಳುಹಿಸಿದಳು (ಬಂಕಿಮ.೨೨೨).

**ಪರವಾನಾ :** ೧. ಪರವಾನಾ—ಪರವಾನೆ (ಹೊಸಗ. ೧೧೨). ೨. ಹೀಗೆ ವಿಲಾಯುತಿಯಿಂದ ಬಂದ ತಸರೀಫ್ ಪದಾರ್ಥಗಳನ್ನು . . . ಪರವಾನಾ ಸಮೇತ . . . ಪರಿಗ್ರಹಿಸಿದರು (ಮಹಾರಾಜಂ. II, ೧೧೪). **ಪರವಾನು :** ೨.'ಧರ್ಮಪರವಾನು' ಪರಾ. **ಫರವಾನೆ:** ೨. ಪಟ್ಣದಿಂದ ಖಂಡೇರಾಯರು ಫರವಾನೆಗಳು ತನ್ನ ಹೆಸರ ಪತ್ರಗಳ ಸಹಾ ಗಡಿಗಳಿಗೆಲ್ಲಾ ವೋಡಿಸಿ (ಹೈದರ. ೪೭). 'ಫರ್ಮಾನು' ಪರಾ.

[<-ಪಾರ. ಪರ್ವಾನಾ ; ಹಿಂ. ಪರವಾನಾ ; ಮರಾ. ಪರವಾನಾ, ಪರ್ವಾನಾ]

**ಪರವಾಸ** (ನಾ). ಬೇರೆಯದಾದ ವಾಸಸ್ಥಳ ; ಇನ್ನೊಂದು ವಾಸಸ್ಥಾನ,—ತಂಗುದಾಣ : ಪರದೇಶಕ್ಕೆ ಹೋದರೆ ಪರವಾಸ ತಪ್ಪದು (ಗಾದೆ) ; ಸೊಸೆಗೆ ಗೃಹಪ್ರವೇಶ, ಅತ್ತೆಗೆ ಪರವಾಸ (ಗಾದೆ).

**ಪರವಾಸ ಮಾಡು** = ಬೇರೆಯ ಸ್ಥಳದಲ್ಲಿ ನೆಲಸು ; ಇನ್ನೊಂದು ಜಾಗದಲ್ಲಿ ತಂಗು : ಪರವಾಸ ಮಾಡಿದರೂ ಸಹವಾಸ ಬೇಕು (ಗಾದೆ); ಪರವಾಸ ಮಾಡುವವನ ಭರವಸ ಸಲ್ಲದು (ಗಾದೆ). [ಪರ$_3$+ವಾಸ$_2$]

**ಪರವಾಸುದೇವ** (ನಾ). ಬಹಳ ಶ್ರೇಷ್ಠನಾದ ದೇವರು ; ಪರಮಾತ್ಮ : ಪರಮಪುರುಷನ ಪರವಾಸುದೇವನ ಪುರಂದರವಿಠಲನ ಅಡಿಸಿದಳೆಲೋದೆ (ಪುರಂದ. ೪-೧೬೬-೩) ; ಪರವಾಸುದೇವನನಿರವಂ . . . ನೆನೆದಂ (ಚಿಕವಿ. ೫-೧೧೩). [ಪರ$_3$ + ವಾಸುದೇವ]

**ಪರವಿ,** ಹರಬಿ, ಹರವಿ$_1$, ಹರಿಬಿ$_1$, ಹರಿವೆ$_1$, ಹರುವಿ, ಹರುವೆ$_1$ (ನಾ). ಕೊಡದಂತಿರುವ ದೊಡ್ಡ ಪಾತ್ರೆ ; ಪಾಸಾಲೆ : "ಪರವಿಕಾಯ ಗಜೋತ್ಕರಮುಂ ಘಟಾಂಕಿತಂ" (ನಾನಾರ. ೧೧೦) ; ಸಂತೋಷದಾಳಿಯರ್ ತೂಂತುವೋದ ಪರವಿಯಂತೆ ಬಿಟ್ಟು ಪರಿಯೆ (ಧರ್ಮಾಮೃ. ೪-೧೫೫) ; ಪರವಿಯೊಳ್ತೀವಿದ ಪಾಲೆಲ್ಲಂ ಇನಿಸಾನುಂ ಪುಳಿ ಪೊರ್ದಿದನಿತಜಿಳೊಳೆ ಮುನ್ನಿನ ಗುಣಮುಂ ಸವಿಯುಂ ಕಿಡುವಂತೆ (ಜೀವಸಂ. ೧೧೧-೧೧) ; ಪರವಿಯೊಳಗಿಕ್ಕಿ ಕಳಿಪುವುದರಸನ ನಿಕಟಕ್ಕೆ ಕೂಷ್ಮಾಂಡದ ಪಣ್ಣಂ ಪಿರಿದೊಂದಂ (ಪುಣ್ಯಾಸ್ರ. ೩-೩೨). **ಹರಬಿ :** ಎರಡುಕೈಗಳಿಂದಲೂ ಹೊಳೆನೀರನ್ನು ಒಂದು ಘಂಟೆಕಾಲ ತಳ್ಳಿ ಬಿಂದಿಗೆಯನ್ನು ತುಂಬುತ್ತಿರುವಾಗ ಶೂದ್ರರವಳು ಮೇಲೆ ಹರಬಿಯನ್ನು ನೀರಿಗೆ ಅದ್ದಿಬಿಡುತ್ತಾಳೆ (ಗರುಡಾ. ೧೪೭). **ಹರವಿ$_1$ :** "ಘಟಃ, ಕಲಶಃ—ಈ ೨ ಹರವಿ" (ಹಲಾಯು. ೫೩-೧೬೧) ; ತಾಳಮರದ ಕೆಳಗೆ ಒಂದು ಹಾಲ ಹರವಿಯಿರ್ದೊಡೆ ಅದ ಹಾಲ ಹರವಿಯೆನ್ನರು ಸುರೆಯ ಹರವಿಯೆಂಬರು (ಬಸವ. ೯೦) ; ಕೆಡೆಯದ ಹಾಂಗೆ ಹಿಡಿದನು ಬಸವನಾ ಗೊಲ್ಲತಿಯ ಹರವಿಯನು (ಬಸವು. ೧೦ ಸೂಚನೆ) ; ಹಾಲು ತುಪ್ಪದ ಹಲವು ಹರವಿಗಳ . . . ಕಳವೆಯಕ್ಕಿಯ ಕೂಳ ರಾಶಿಯ ಬಂಡಿ ಜೋಡಿಸಿತು (ಕುಮಾರ. ೧೦-೨೫); ಎರಡು ಬೂದುಗುಂಬಳಕಾಯಿಗಳಿದ್ದುವು. ಒಂದು ದೊಡ್ಡದು ; ಸಾಧಾರಣವಾಗಿ ಒಂದು ಹರವಿಯ ಗಾತ್ರವಿತ್ತು (ಚೆಂಗಾಳ್ವ. ೧೩೯). **ಹರಿಬಿ$_1$ :** ನೀರು ತರುವುದಕ್ಕೆ ಹರಿಬಿಗಳನ್ನು ತೆಗೆದುಕೊಂಡು ನಮ್ಮ ಜತೆಯಲ್ಲಿಯೇ ಬಂದರು (ಚೆಂಗಾಳ್ವ. ೭೬). **ಹರಿವೆ$_1$ :** ನಿನ್ನ ಕೈಯಲ್ಲಿರುವ ಮದ್ಯದ ಹರಿವೆಯನ್ನು ಕೈಯಲ್ಲಿ ಕೊಡು (ತ್ರಿಪದ.೨೧೩-೩); ಛಿದ್ರವುಳ್ಳ ಹರಿವೆಯಲ್ಲಿರುವ ನೀರಿನೋಪಾದಿಯಲ್ಲಿ ಆತನ ಪ್ರಜ್ಞೆಯು ಸ್ರವಿಸಿ ಹೋಗುವುದು (ಕೃಪಾಳು. ೪೭) ; ಪುಟ್ಟ ಮಣ್ಣಿನ ಕೊಡದಲ್ಲಿ ನೀರು ತಂದು ಹರಿವೆಗೆ ತುಂಬುವುದು (ಪಾತರ.೨೫); ಹಣೇಲುಂಡೆ, ಹರಿವೇಲುಂಡೆ, ನಿನ್ನಲ್ಲುಂಡೆ ತಿರುಕಸಾಲೆ (ಗಾದೆ). **ಹರುವಿ :** ತೈಲ ತುಪ್ಪ ಕರ್ಪೂರ ಹರುವಿಯನಿಟ್ಟು (ಕರಿಕ. ೧೩೪-೩). **ಹರುವೆ$_1$ :** ಐಳುದಿನದ ಗೋತ್ರ ಸಗಣೆಯು ಬರಬೇಕು ಹೇಳಿದನಾಗ ಶಂಕರನು ಆಲೋಚಿಸಿಕೊಂಡು ಹೊತ್ತರು ಹರುವೆಯ (ಮಾದೇಸಾಂ. ೨-೭೬).

**ಪರವಿತ್ತ** (ನಾ). ಬೇರೆಯವರ ಧನ; ಅನ್ಯರ ಹಣ : ಬೇಟವೇ ಪರವಧುವಿನಲ್ಲಿ ಕೈವಾಟವೇ ಪರವಿತ್ತದಲಿ (ಕುಮಾರವಿ. ೨-೪೪). [ಪರ$_3$ +ವಿತ್ತ]

**ಪರವಿದ್ಧ** (ನಾ). ಎದುರಿಗೆ ಇಲ್ಲದ ವಸ್ತು ಅಥವಾ ಮನುಷ್ಯನ ಚಿತ್ರಣ; ಪರೋಕ್ಷವಾದ ರೂಪಚಿತ್ರಣ : ಅಂತು ಪರವಿದ್ಧ ಪರಿಣತಿಯಂ ಮೆಱೆದಾ ಪಟಮಂ . . . ಮಣಿಭವನದೊಳಗೆ ನೆರಪಿ ಪೋಪುದುಂ (ಸಂಠರಾಮಾ. ೪-೮೫ವ) ; ಕ್ಷುತಿವಿದ್ಧಮಾತ್ಮವಿದ್ಧಂ ಪರವಿದ್ಧ ಮೆಂಬ ವಿದ್ಧಪದ್ಧತಿಯುಮಂ . . . ಭಂಗಿಯುಮಂ ಮೃದುರೇಖಾ ವಿಳಾಸನುಮಂ ಪರಿಭಾವಿಸಿ ನೋಡಿ (ಮಲ್ಲಿಪು. ೫-೪೨). 'ಆತ್ಮವಿದ್ಧ' ಪರಾ. [ಪರ$_3$ + ವಿದ್ಧ]

**ಪರವಿದ್ಯಾಭೇದಿನಿ** (ನಾ). [ಜೈನ] ಮತ್ತೊಬ್ಬರ ಮಾಯಾವಿದ್ಯೆಯನ್ನು ನಾಶಮಾಡುವ ಒಂದು ಬಗೆಯ ವಿದ್ಯೆ : ಇರ್ವರುಂ ವಿದ್ಯಾಧರರಲ್ಲಿಗೆ ವಂದೊಡವರೊಳೊರ್ವಂ ಪರವಿದ್ಯಾಭೇದಿನಿ [ಪಾಠಾಂ. ವಿದ್ಯಾನಿಧಿ]ಯೆಂಬ ವಿದ್ಯೆಯಿನಾ ವೈತಾಳಿಯಂ ಪ್ರಕಟಂಮಾಟ್ಟುದುಂ (ಚಾವುಂಪು. ೧೮೯) ; ಬಿಜ್ಜಳನು ಪರವಿದ್ಯಾಭೇದಿನಿಯಿಂದ ಬಸವಣ್ಣನನ್ನು ಜಯಿಸಿದನು (ಬಿಜ್ಜಪು. ೮ ಪ್ರಪೀಠಿಕೆ). [ಸಂ. ಪರವಿದ್ಯಾಭೇದಿನೀ]

**ಪರವಿದ್ಯೆ** (ನಾ). ಬಹಳ ಶ್ರೇಷ್ಠವಾದ ಜ್ಞಾನ,—ತಿಳಿವಳಿಕೆ ; ಆಧ್ಯಾತ್ಮವಿದ್ಯೆ : ಇನ್ನು ಪರವಿದ್ಯೆ. ಅದರಿಂದ ಆ ಅಕ್ಷರವನ್ನು ತಿಳಿಯುವದಕ್ಕಾಗುತ್ತದೆ . . . ಇಲ್ಲಿ ಪರವಿದ್ಯೆಗೆ ವಿಷಯವೆಂದು ಅಕ್ಷರವನ್ನು ಹೇಳಿರುತ್ತದೆ (ಬ್ರಹ್ಮಭಾ. ೩೨೧).

ಪರವಿದ್ಯಾಧಿಕ=ಅತ್ಯುತ್ತಮವಾದ ಜ್ಞಾನವನ್ನು ಪಡೆದವನು; ಪಂಡಿತ; ಒಂದು ಬಿರುದು : ಕುಮಾರದಿಕ್ಕುಂಜರಂ ಪರವಿದ್ಯಾ[ಧಿಕಂ] ಸಕಳಕಳಾಧರಂ (ಸೌಇಇ. XX, ೭೧-೧೧ ; 1109).

[ಪರ್$_3$+ವಿದ್ಯೆ]

**ಪರವೂರು** (ನಾ).೧. ಬೇರೆಯ ಪಟ್ಟಣ ; ಇನ್ನೊಂದು ಊರು : ಪರವೂರಿಂದ ಬಂದು, ನೆಲಸಿದವರಾದರೂ ಅವರಿಗೆ ರಂಗಾಪುರವೆಂದರೆ ಅಭಿಮಾನ (ಅಪನಾ. ೯೬); ನನ್ನ ಪರಮಮಿತ್ರರೊಬ್ಬರು ಒಮ್ಮೆ ಪರವೂರಿಗೆ ನನ್ನೊಡನೆ ಬಂದಾಗ (ಮುಂಗಾಪು. ೩೬). ೨. ಒಂದು ಊರಿನ ಹೆಸರು : ದುಗ್ಗೊನೆಲ್ಕಲ್ಲಿ ಗಟಙ್ಙವಾಗಿಲು ಸಱಮು ಎಟ್ಟುಣ್ಣೆ ಪರವೂರು ಕೂಡಲೆ ಇನಿತುಮಂ ಪೊಲಮೇರೆಸಹಿತಮಿತ್ತನ್ (ಎಕ. IX, ಬೆಂಗಳೂ. ೮೩-೧೪ ; ಸು. 890).

[ಪರ್$_3$+ಊರು$_2$ (<ಊರ್)]

**ಪರವೆ,**ಪರವಾ, ಪರಿವೆ, ಪರ್ವಾ (ನಾ). ೧. ಕಾಳಜಿ ; ಗೊಡವೆ ; ಚಿಂತೆ : ಕಂಡ ಕಂಡಾ ವಿಷಯಕೆ ಮನ ಜರಿವೆ ಅಂಡುಗೊಂಡಿದೆ ಅಜ್ಞಾನ ಮರವೆ ನಿನಗೇನು ಪರವೆ (ಚಿದಾಕೋ. ೩೧-೪) ; ಶರಧಿಯೊಳು ಮೀನೊಂದು ಪುಟ್ಟಲೇಂ ಸಾಯಲೇಂ ? ಪರವೆಯೇನಿಲ್ಲವೆಲೊ (ಮಂಕುಕ. ೫೭೨). ೨. ಎಚ್ಚರ ; ಗಮನ ; ಲಕ್ಷ್ಯ ; ನಿಗಾ : ನಮ್ಮ ವಾಕ್ಯದ ಪರವೆಯಿಂವಗಿಲ್ಲ (ಅನಂರಾ. ೧-೫-೩೪) ; ಓದುತ್ತ ಅವಳು ಅದರಲ್ಲಿ ತನ್ಮಯಳಾದಳು. ಮೈಮೇಲೆ ಪರವೆಯೇ ಇರಲಿಲ್ಲ (ಪ್ರತಿಬಿಂ. ೩೧) ; ಅವರೇ ಇಷ್ಟು ಪರವೆಯಿಲ್ಲದೆ ನಡೆದುಕೊಂಡರೆ ನಮಗೇನು ಅಡಗಾಣಿಸಿದೆ ? (ಸ್ಮೃತಿಚಿ. ೨೪). **ಪರವಾ :** ೩. "ಸಂಬಂಧ" (ಜಾನಕೋ. ೧೪). **ಪರಿವೆ :** ೧. ಬರಲಿ ಬರುವುದು ; ಸರಿಯುವುದೆಲ್ಲ ಸರಿಯಲಿ ; ನಿನಗೆ ಪರಿವೆಯೇನಿಲ್ಲೆಲವೊ (ಮಂಕುಕ. ೧೫೦); ಅವಳ ಅಮೋಘ ರೂಪಲಾವಣ್ಯಗಳ ಪರಿವೆಯೂ ಅವಳು ಮಾಯವಾದ ಮೇಲೆ ದ್ವಿಗುಣವಾಯಿತು (ಶ್ರೀರಾಯ. ೨೮೬). ೨. ನಿನ್ನ ಪರಿವೆಯೆ ಇಲ್ಲದಂದದೊಳು ತೊಲಗುತಿಹುದಿಲ್ಲಲಾ ನಿನ್ನ ಹೇವ ! (ಮಲೆದೇ. ೩೩-೧೦) ; ಅರಿವೆನು ಎನ್ನುವ ಮನದ ಪರಿವೆಯೇ ಅಹುದೋ ಇಲ್ಲವೋ ಎನಿಸುತಿರೆ (ಅರಳು. ೧೨೨-೩) ; ಅವರ ಸಂಗೀತದಲ್ಲಿ ಮಗ್ನಳಾಗಿ ನಾನು ಅನೇಕ ಸಲ ವೇಳೆಯ ಪರಿವೆ ಇಲ್ಲದೆ ಕೂತುಬಿಡುತ್ತಿದ್ದೆ (ಕುಂಕುಮ. ೨೮) ; ತಾಯಿ ಎಂಕಮ್ಮ ಊಟಕ್ಕೆಬ್ಬಿಸಿದರೂ ಅವನಿಗೆ ಪರಿವೇ ಇರುತ್ತಿದ್ದಿಲ್ಲ (ಒಡ್ಡಉ. ೪೩). **ಪರ್ವಾ :** (೬).

**ಪರವಾ ಇಲ್ಲ, ಪರವಾಗಿಲ್ಲ, ಪರವಾಯಿಲ್ಲ, ಪರ್ವಾ ಇಲ್ಲ, ಪರ್ವಾಗಿಲ್ಲ**=ಕಾಳಜಿ ಮಾಡುವ ಪ್ರಮೇಯವಿಲ್ಲ ; ಚಿಂತೆ ಇಲ್ಲ ; ಅಡ್ಡಿ ಇಲ್ಲ : ಪರವಾ ಇಲ್ಲ ; ನನಗೆ ನಿಂತಿರುವುದೇ ಇಷ್ಟ (ಅಳನಿ. ೩೫) ; ಬಿಗಳೂರಿನ ವರವಾದರೆ ಪರವಾ ಇಲ್ಲ (ಮನೆಬೆ. ೧೩೬); ಪರವಾಗಿಲ್ಲ ಒಳ್ಳೇ ಶಕುನ (ಉಡುಗೊ. ೫೪); ಪರವಾಗಿಲ್ಲ ಬಿಡಿ ಸಾರ್ (ನಡದಾ. II, ೧೦೨೫); ಇಂದು ಆಫೀಸಿಗೆ ತಪ್ಪಿದರೂ ಪರವಾಯಿಲ್ಲ (ಭಾರತಿ. ೨೮); ಪರವಾಯಿಲ್ಲ ಅವರಿಂದಾದ್ರೇನು, ನಮ್ಮಿಂದಾದ್ರೇನು (ರೂಪಸಂ. ೪೮); ಪರ್ವಾ ಇಲ್ಲ, ನನಗೆ ಅದರಿಂದ ಯಾವ ತೊಂದರೆಯೂ ಇಲ್ಲ (ರೂಢಿ); ಈಗ ಪರ್ವಾಗಿಲ್ಲ ಮುದ್ದಪ್ಪ (ಕಲಾಸಾ. ೬). **ಪರವೆ ಮಾಡು**=ಲಕ್ಷ್ಯ ಕೊಡು ; ಗಮನಿಸು : ಹತ್ತು ಹೆಜ್ಜೆ ಹೋಗುತ್ತಲೇ ಬೆಕ್ಕೊಂದು ಅಡ್ಡ ಬಂದಿತು. ಇವುಗಳ ಪರವೆ ಮಾಡದೆ ಮುಂದುವರಿದ (ಕುಡಿಕೂ. ೬).

[←ಪಾರ. ಪರ್ವಾ ; ಹಿಂ. ಪರ್‌ವಾಹ್, ಪರ್ವಾ ; ಮರಾ. ಪರವ, ಪರ್ವಾ]

**ಪರವೆಣ್,** ಪರಹೆಣ್ಣು (ನಾ).=ಪರವಧು : ತೊದಳ್ನುಡಿಯದಿರ್ಪ ಚಲಂ ಪರವೆಣ್ಣೊಳೋತೊಡಂಬಡದ ಚಲಂ(ಎಕ. II, ೧೩೩-೨೨; 982); ನೀಂ ಪರವೆಣ್ಗಳನಪ್ಪುವುದನೆ ಬಯಸುತಿರ್ಪೆ (ಸುಕುಮಾ.೧೧-೪೩); ಪರವೆಣ್ಣಂ ತಂದನೋ ತಂದನೊ ಪೆಸರ್ಗಿಡೆ ಪೆರ್ಮೋರಿಯುಂ ನಮ್ಮ ದುರ್ಗಕ್ಕರಸಂ (ಅನಂಪು. ೧೧-೮೧). **ಪರಹೆಣ್ಣು :** ಹೇಗೆ ಉದ್ಧಾರ ಮಾಡ್ಯಾನು . . . ಪರಹೆಣ್ಣು ಪರಹೊನ್ನು ಕರಗತವಾಯ್ತೆಂದು ಪರಲೋಕ ಭಯ ಬಿಟ್ಟು ತಿರುಗುವನ (ಪುರಂದ. ೧-೧೫೩-೨).

ಪರವೆಂಡಿರಣ್ಣ=ಅನ್ಯಸ್ತ್ರೀಯರಿಗೆ ಸಹೋದರನಂತಿರುವವನು ; ಪರನಾರೀ ಸೋದರ ; ಒಂದು ಬಿರುದು : ಶ್ರೀಪರವೆಣ್ಡಿರಣ್ಣ ನೀಸರಯ್ಯ (ಎಕ. II, ೪೪೫ ; 900). [ಪರ್$_3$+ಪೆಣ್]

**ಪರವೇಶ್ಮಸ್ಥ** (ನಾ). ಇನ್ನೊಬ್ಬರ ಮನೆಯಲ್ಲಿ ವಾಸಿಸುವವನು ; ಅನ್ಯರ ಗೃಹವಾಸಿ. [ಸಂ.]

**ಪರವೋಗು** (ಕ್ರಿ). ಬೇರೆಯ ಕಡೆ ಹೋಗು ; ದೂರದ ಸ್ಥಳಕ್ಕೆ ಹೋಗು : ಪರಚಕ್ರಮೆ ಕಯ್ಗೆವರಲ್ ಕರಚಕ್ರಂ ಪೂಣ್ದು ಪೋದ ಬೇಗದೊಳ್ ಪರಂ ಪರವೋದಂ (ಶಾಂತಿಪು. ೭-೧೫೬).

[ಪರ್$_3$+ಪೋಗು$_1$ (<ಪೋ$_1$)]

**ಪರವ್ಯಪದೇಶ** (ನಾ) [ಜೈನ]ಅತಿಥಿ ಸಂವಿಭಾಗವೆಂಬ ನಾಲ್ಕನೆಯ ಶಿಕ್ಷಾವ್ರತದ ಅತಿಚಾರಗಳಲ್ಲೊಂದು ; ಪಾತ್ರದಾನ ಮಾಡುವಾಗ ತನ್ನ ಶರೀರ ಸಂಬಂಧವಿಲ್ಲದವರಿಗೆ "ಅತಿಥಿಯನ್ನು ಕರೆದು ತನ್ನಿ" ಎಂದು ಹೇಳುವುದು : ಕ್ರಮದೆ ಪರವ್ಯಪದೇಶಂ ಸಮತ್ಸರತ್ವಂ . . . ಅತಿಕ್ರಮಮುಕ್ಕುಂ ಪಾತ್ರದಾನಮಂ ಕುಡುವೆಡೆಯೊಳ್ (ಸುಕುಮಾ. ೬-೨೨). [ಪರ್$_3$+ವ್ಯಪದೇಶ]

**ಪರವ್ಯಾಪಾದ** (ನಾ). ಬೇರೆಯವರ ವಿಷಯದಲ್ಲಿ ಮಾಡುವ ದ್ರೋಹ ಚಿಂತನೆ ; ಇನ್ನೊಬ್ಬರಿಗೆ ಕೇಡು ಬಯಸುವುದು: ಪರವ್ಯಾಪಾದವಾತ್ಮಸ್ತುತಿ . . . ನಿಜಾನ್ವಯಧರ್ಮಕರ್ಮಚ್ಯುತಿಗಳಿವು ದೋಷಾಂಕುರಂಗಳು (ಕುವ್ಯಾಅ. ೧೫-೧೪). [ಪರ್$_3$+ವ್ಯಾಪಾದ]

**ಪರವ್ಯೂಹ** (ನಾ). ಶತ್ರುಸೈನ್ಯ ; ವೈರಿಸೇನೆ : ಉಪಮಾತೀತದ ಬಿಲ್ಲಬಲ್ಮೆ ಸಮಸಂದೊಂದೊರ್ವರೊಳ್ ಪರ್ವೆ ಪರ್ವಿ ಪರವ್ಯೂಹಭಯಂಕರಂ ನೆಗೆದು ಪಾರ್ದಾರ್ದೆಚ್ಚೊಡೆ (ಪಂಪಭಾ. ೧೧-೧೭). [ಪರ್$_3$+ವ್ಯೂಹ]

**ಪರಶಕ್ತಿ** (ನಾ). ೧. (ಜಗತ್ತಿಗೆ ಮೂಲವಾದ) ಆದಿವಸ್ತು ; ಮೂಲಪ್ರಕೃತಿ : ಪರಮಗುಣ ಪರಶಕ್ತಿವಾಗೀಶ್ವರ . . . ಕರುಣಿಸುವುದು (ಕುವ್ಯಾಅ.೬-೮೭); ಪರಶಕ್ತಿಯುತನೊಳ್ ಪರತರಮಹಿಮನೊಳಾಂತಿದಿರ್ಚಿತೆಚ್ಚಾಡಿದೆನೇ (ಶಬಶಂ. ೪-೧೯೯) ; ಭೂಮಿ ಜಲ ಅಗ್ನಿ ಮರುತ್ ಆಕಾಶಕ್ಕೆ ಕ್ಷೇತ್ರಜ್ಞನೆಂಬಾರಕ್ಕೆ ಭೂತಾಂಗಸ್ವರೂಪವಾದ ಪರಶಕ್ತಿಯೇ ಕಾರಣವು (ಉದ್ಧಪಾ. ೧೩-೬). ೨. ಪಾರ್ವತಿ : ಪೊಳೆಪೊಳೆವ ಪರಶಕ್ತಿ ಯೌವನ ನೆಳಲೆನಿಸುತಿಹಳು . . . ಅವನನೀಶ್ವರನೆಂದು ಭಜಿಸೆಂದ (ಗಗತಾ. ೧೨-೭೯). ೩. ಶಕ್ತಿಯ ಅಧಿದೇವತೆ : ಹಾಲಾಸ್ಯ ಕದಂಬ ಪೀಠದೊಳ್ವಿರಾಜಿಪ ಪರಶಕ್ತಿ ಯಾವುದೆಂದು ವಿದ್ಯಾವತಿ ಕೇಳಲೊಡಂ (ಹಾಲಾಸ್ಯ. ೧-೫-೩೬ ಪ). [ಪರ್$_2$+ಶಕ್ತಿ]

**ಪರಶಿವ** (ನಾ). ಈಶ್ವರ ; ಪರಮಶಿವ : ಪರಶಿವನೆ ನಿಮ್ಮನಾಂ ಪ್ರಾರ್ಥಿಸುವೆಂ ಮದ್ಭಸವಗುರುವಿನಂತೆಮ್ಮ ನಿನ್ನೊಳಗಿರಿಸಿಕೊಳ್ಳಯ್ಯ (ಅರಾಚ. ೫-೧೦-೧೨); ಗುರುವೆ ಪರಶಿವನು ತಾನೆ ನೋಡಾ (ಅಖಂಡೇ. ೧೬-೧).

[ಪರ್$_3$+ಶಿವ]

**ಪರಶು** (ನಾ). ಗಂಡುಗೊಡಲಿ ; ಕುಠಾರ : "ಪರಶು ಕುಠಾರಾಭಿಖ್ಯಂ" (ಪಸ್ತುಕೋ. ೮೪-೧೫); ಕೂರಿ[ಸೆ]ಗುರು ಶುಶ್ರೂಷೆಯೊಳಾ ರಾಮನನುಗ್ರಪರಶುಪಾಟಿತರಿಪುವಂಶಾರಾಮನಂ (ಪಂಪಭಾ. ೧-೧೦೪); ಕೈಯ ಕರಾಳ ಪರಶುವನ್ನೆತ್ತಿ ನೆಲದಲಿ ಬೀಳ ಹೊಡೆದನು ಪಿತನ ತಲೆಯನು (ಜಸಪು. ೮-೧೩); ಖಳರು ಕಕ್ಕಡೆ ಪರಶು ಕೊಂತದಿ ಹೊಳೆವಡಾಯುಧ ಶೂಲ

ಶರದಲಿ ಹಳಚಿ ಕಾದಿತು (ಕೌಶಿರಾ. ೨೦-೧೫); ಹೆರರ ಕೊಲ್ಲಲು ಕತ್ತಿ ಪರಶು ತೋಮರ ಬೇಕು (ಪಾಂಚಜ. ೪೧-೫). [ಸಂ.]

**ಪರಶುಧರ** (ನಾ). ೧. ಕೊಡಲಿಯನ್ನು ಹಿಡಿದವನು. ೨. = ಪರಶುರಾಮ : ಪರಶುಧರಂ ಚಕ್ರಧರಂ ಸುರಪತಿ ಭೂಕಾಂತೆ ಕೊಂತಿಯೆಂದೀ ಪೇಟ್ದಯ್ವರ್ ಕೂಡಿ ನಿನ್ನ ಕೊಂದರ್ನರನೊರ್ವನೆ ಕೊಂದನಲ್ಲ ನಂಗಾಧಿಪತೀ (ಗದಾಯು. ೫-೨೬). ೩. ಗಣೇಶ : "ಪರಶುಧರಂ ಗಣಪತಿ . . . ವಿನಾಯಕಂ ಹೇರಂಬಂ" (ಪಸ್ತುಕೋ. ೪-೧೭); ಪರಶುಧರ ಗಣಪತಿ ವಿನಾಯಕ ಗಜಾಸ್ಯ ಜಯ (ನಳಚಂ. ೨೩೨ ರಗಳೆ). ೧,೨,೩: ಈ ಮಹಾಪುರುಷಂ . . . ಕ್ರೌಂಚಾರಾತಿಯಾಗಿಯುಂ ಷಣ್ಮುಖನಲ್ತು ಪರಶುಧರನಾಗಿಯುಂ ದ್ವಿರದಾಸ್ಯನಲ್ತು (ಜಗವಿ. ೮-೧೦೫). ೪. ಶಿವ. [ಸಂ.]

**ಪರಶುಧಾರ** (ನಾ). = ಪರಶುಧರ ೩ : ಗಜಮುಖನೆ ಮೆಱೆವೇಕದಂತನೆ ನಿಜಗುಣಾನ್ವಿತ ಪರಶುಧಾರನೆ . . . ತ್ರಿಜಗವಂದಿತ ಗಣಪ ಮಾಳ್ಪುದು ಮತಿಗೆ ಮಂಗಳವ (ಕುಪ್ಯಾಅ. ೧-೪). [ಸಂ.]

**ಪರಶುರಾಮ**(ನಾ). ಗಂಡುಗೊಡಲಿಯನ್ನು ಕೈಯಲ್ಲಿ ಹಿಡಿದವನು; ಜಮದಗ್ನಿಯ ಮಗ ; ವಿಷ್ಣುವಿನ ಹತ್ತು ಅವತಾರಗಳಲ್ಲಿ ಒಂದು: ಪರಶುರಾಮನನಂಜಿಸಿ ಬೀರಕ್ಕಾಗರಮಾದ ನದೀಜನೇದೊರೆಯನೇದೊರೆಯಂ (ಪಂಪಭಾ. ೭-೬೫) ; ಪರಶುರಾಮನು ಸಮುದ್ರಕ್ಕೆ ಗುಱಿಯಾದನು (ಬಸವ. ೫೭೧) ; ನರೇಶ್ವರರಂ ನೀಂ ತಱಿದೊಟ್ಟಿದೈ ಪರಶುರಾಮಾಕಾರದಿಂದಚ್ಯುತಾ (ಜಗವಿ. ೧-೬೦) ; ರಾಜನಿಕರಮಂ ತಱಿದೀಯನೇ ಪರಶುರಾಮನೀ ಧರೆಯನವನೀಸುರರ್ಗೆ (ಜೈಮಿಭಾ. ೨-೩೩). [ಪರಶು + ರಾಮ]

**ಪರಶುರಾಮಕ್ಷೇತ್ರ** (ನಾ). "ಸಮುದ್ರದಿಂದ ಬಿಡಿಸಿ ಕಶ್ಯಪನಿಗೆ ರಾಮನು ದಾನ ಮಾಡಿದ ಎರಡು ಕೊಂಕಣಸ್ಥಲಗಳು" (ಅನಂನಾ) ; P ಈಗಿನ ದಕ್ಷಿಣಕನ್ನಡ ಜಿಲ್ಲೆ : ಉತ್ತರ ಸಹ್ಯಾದ್ರಿ ಖಂಡವು ಪರಶುರಾಮ ಕ್ಷೇತ್ರದ ನಿರ್ಮಾಣದಿಂದ ಆರಂಭ(ತುಳುನಾ.೧೦೦). [ಪರಶುರಾಮ + ಕ್ಷೇತ್ರ]

**ಪರಶುಶರ** (ನಾ). "ಕೊಡಲಿಯಾಕಾರದ ಬಾಣ" (ಪಂಪದೀ. ೩೭೯) : ಪರಶುಶರನಿಕರದಿಂ ಕುಮ್ಮರಿಗಡಿದವೊಲೊಡನೆ ಕಡಿಯೆ (ಪಂಪಭಾ. ೧೦-೮೮). [ಪರಶು + ಶರ]

**ಪರಶೆ** 'ಪರಿಸೆ$_1$' ನೋ.

**ಪರಶ್ವಧ** (ನಾ). = ಪರಶು : "ಪರಶು ಕುಠಾರಾಭಿಖ್ಯಂ ಪರಶ್ವಧಂ ಸ್ವಧಿತಿಯೆಂಬುದಕ್ಕುಂ" (ಪಸ್ತುಕೋ. ೮೪-೧೫); ಶೂಲ ಪರಶು ಪರಶ್ವಧಾದಿಗಳಾಳುತೊಪ್ಪುವ ಕರಚತುಷ್ಟಯೆ ಪಾಲಿಸೆಮ್ಮನು(ಕುಪ್ಯಾವಿ.೧-೧೧); ಕೃತಾಂತನ ಪರಿಘ ದಂಡದ ಪಾಶಪಾಣಿಯನುರು ಪರಶ್ವಧ [ಪಾಠಾಂ. ತ, ರ, ವ]ದ ಹರನ ಮಿತ್ರನ ಗದೆಯ . . . ಸರಿಸದ ಕೈದುಗಳ ನೆಱೆ ಕಾಣಲಾಯ್ತಲ್ಲಿ (ತೊರಱಾ. ೬-೭-೨೨); ಧರೆಯ ನಿಃಕ್ಷತ್ರವನು ಮಾಡುತ ಪರಶುರಾಮನು ಮುನ್ನ ತೊಳೆತೊಳೆದುರುಪರಶ್ವಧವನು ತದ್ಗದ ರುಧಿರವಾರಿಯಲಿ (ನಿಭಾಗ. ೧೨-೭೩-೨). [ಸಂ.]

**ಪರಷೆ** 'ಪರಿಸೆ$_1$' ನೋ.

**ಪರಸ$_1$** 'ಪರಿಸೆ$_1$' ನೋ.

**ಪರಸ$_2$**, ಪರಿಸ$_2$ (ನಾ). ಒಂದು ಬಗೆಯ ಆಯುಧ : ಕುಂತಾಯುಧ ( ? ) : "ಪರಸ(ಪರಿಸ) ಪ್ರಾಸ ಒಂದು ಆಯುಧ" (ತದ್ಭಕೋ. ೨೪). **ಪರಿಸ$_2$** : ಪರಿಸ ಬೋಳೆಯ ಕೋಲೆಸೆವ ಹೆಱೆಸರಲೊಡನೆ . . . ಬತ್ತಳಿಕೆಗಳು ನೆರೆದಿರ್ದುವವರಲ್ಲಿ (ಸಾಳ್ವಭಾ. ೫-೧೪). 'ಪರಸು$_2$' ಪರಾ. [<ಸಂ. ಪ್ರಾಸ]

**ಪರಸಂಗ** (ನಾ). ಸಮಯ ; ಸಂದರ್ಭ : ನಮ್ಮ ಓಣಿ ಮರ್ಯಾದಿಗೆ ಧಕ್ಕೆ ಬರುವಂಥ ಪರಸಂಗ ಬಂದಾಗ (ಮನೆಬಿ. ೧೭) ; ದಣೀ ಮ್ಯಾಗ ಸೇಡು ತೀರಿಸಿಕೊಣ್ಣಾಕ ನಿನಗೊಂದು ಅಪರೂಪ ಪರಸಂಗ ಒದಗಿ ಬಂದರ ಹ್ಯಾಗಲೇ ? (ಮೇದಿಮ. ೧೩). [<ಸಂ. ಪ್ರಸಂಗ]

**ಪರಸಗಟ್ಟೆ** (ನಾ). ಉತ್ಸವ ಜರುಗುವ ವೇದಿಕೆ : ಕಲ್ಯಾಣದ ಶರಣರ ಪಾವಿತ್ರ್ಯವು ಒಂದು ಕಣದಷ್ಟಾದರೂ ಉಳಿದಿದೆಯೇ ಎಂದು ನಾನು ಕೇಳುತ್ತೇನೆ. ಬಸವಣ್ಣನ ಪರಸಗಟ್ಟೆಯು ಕಟುಕಕಂಗಡಿ ; ಕಲ್ಯಾಣವು ಕಟುಕಗೇರಿ (ಬಿಟ್ಟಹೊ. ೮೯). 'ಪಾದಗಟ್ಟೆ' ಪರಾ. [ಪರಸ$_1$ (<ಪರಿಸೆ$_1$)+ಕಟ್ಟೆ$_1$]

**ಪರಸತಿ** (ನಾ). = ಪರವಧು : ಛಲ ಬೇಕು ಶರಣಂಗೆ ಪರಸತಿಯನೊಲ್ಲೆನೆಂಬ (ಬಸವ. ೬೭೬) ; ಪರಸತಿಯಲ್ತು ಮತ್ಸತಿ ಪರಾರ್ಥಮದಲ್ತು ಮದೀಯ ವಿತ್ತಂ (ದಶಕು. ೧೨-೧೫೬) ; ಪರಸತಿಯ ಸೆಱೆಗೈಯೆ ಮುತ್ತಿತು ನೆರೆದು ಕೋಡಗವಿಂಡು (ಕುಪ್ಯಾವಿ. ೨-೩೩) ; ಪರಸತಿಯೊಲುವೆ ನಿನಗೆ ಒಪ್ಪಿತೊ ದೇವ (ಪುರಂದ. ೧-೧೬೩-೨). [ಪರ$_3$+ಸತಿ$_1$]

**ಪರಸತಿಗಮನ** (ನಾ). ಅನ್ಯಸ್ತ್ರೀಯ ಸಹವಾಸ : ಪರಸತಿಗಮನವ ತಾ ಮಾಡುವುದಿಲ್ಲ (ದ್ವಾದಶಾ. ೧೧-೧೫೬). [ಪರಸತಿ+ಗಮನ$_2$]

**ಪರಸತಿಮೇಳ** (ನಾ). ಅನ್ಯಸ್ತ್ರೀಯ ಸಂಸರ್ಗ ; ಪರಸ್ತ್ರೀಯೊಡನೆ ಸಹವಾಸ ; ವ್ಯಭಿಚಾರ : ಪರಸತಿಮೇಳ ಲೇಸಲ್ಲೆನುತ ಬೀಳ್ಕೊಟ್ಟಳು ನಿಜಾನುಜನ (ಕುಪ್ಯಾವಿ. ೨-೪೮). [ಪರಸತಿ+ಮೇಳ (=ಮೇಲ)]

**ಪರಸತ್ಯ** (ನಾ). ಅತಿಶ್ರೇಷ್ಠವಾದ ನಿಜತತ್ವ ; ಪರಮಸತ್ಯ : ಅನುಭವವೇ ಪರಸತ್ಯಕ್ಕೆ ಸತ್ಯತೆಯನ್ನು ನೀಡುವುದು (ಪರಪ. ೯೮). [ಪರ$_3$+ಸತ್ಯ]

**ಪರಸದನ** (ನಾ). ಇನ್ನೊಬ್ಬರ ಮನೆ ; ಅನ್ಯಗೃಹ : ಇವನನು ಪರಸದನದೊಳಗಿಟ್ಟು ಸಾಕಿದ ಗೋಕುಲದೊಳಗೇ (ಕನಾಕ. ೩೧೩). [ಪರ$_3$+ಸದನ]

**ಪರಸನ** (ನಾ). ಪ್ರಶ್ನೆ : ಪ್ರಶ್ನ, ಪರಸನ (ಶಬ್ದಾನು. ೧೪೭ ಪ್ರಯೋ); ಪ್ರಶ್ನ—ಪರಸನ (ಹೊನುಗ. ೧೧೫). [<ಸಂ. ಪ್ರಶ್ನ]

**ಪರಸನೆ** (ನಾ). = ಪರಸನ : ಹೊರಸಿನ ಪರಸನೆ ಇಲ್ಲ, ಜಗಕ್ಕೂ ಕೊರತೆ ಇಲ್ಲ ; ಆದರೆ ಒಬ್ಬಳೇ ಹೆಂಗ ಇರುತ್ತಾಳೆ ? (ಪ್ರೇಮಾತ್ರ. ೪೧). [<ಪ್ರಶ್ನೆ]

**ಪರಸನ್ನ** (ಗು). ೧. ಕೃಪೆಯುಳ್ಳ ; ದಯೆಯುಳ್ಳ ; ಪ್ರಸನ್ನವಾದ : ಪರಸನ್ನ ಹಯವದನ ಚರಣಸರಸಿಜ ಮಧುಕರನು (ವಾದಿಕೀ. ೭೯-೩). (ನಾ). ೨. ಪ್ರಸನ್ನವಾದ ವ್ಯಕ್ತಿ : ವಾಣಿ ಮೊದಲಾದ ದೇವಿಯರು . . . ವರಗಳನು ಪಾಲಿಪರೆ ಪರಸನ್ನರಾಗಿ ಸರಸಿಜಾಕ್ಷಿಯ ಮುಂದೆ ನಿಲಲ್ (ಹಮಚ. ೨೧೮). [<ಸಂ. ಪ್ರಸನ್ನ]

**ಪರಸನ್ಮೋಹನ** (ನಾ). ಮತ್ತೊಬ್ಬರನ್ನು ಮರುಳುಗೊಳಿಸುವುದು,—ವಶಪಡಿಸಿಕೊಳ್ಳುವುದು : ದ್ಯೂತಸಿದ್ಧಿಯ ಮಂತ್ರ ವರವಿದ್ಯಾತಿಶಯ ವಿಚ್ಛೇದ ರಕ್ಷವಿಧೂತ ರಿಪುಮತಿ ಯಂತ್ರ ಪರಸನ್ಮೋಹನೌಷಧಿಯ ಈತಗಳು ಮೇಳವಿಸಿದರು (ಕುವ್ಯಾಸ. ೧೩-೨೨). [ಪರ$_3$ + ಸನ್ಮೋಹನ]

**ಪರಸಮಯ** ( ನಾ ) ೧. ಬೇರೆಯ ಧರ್ಮ, ಅನ್ಯಮತ : ಪರಸಮಯದ ಪಿರಿದೆನಿಸಿದ ಪುರಾಣಮಂ ಜೈನರಲ್ಲಿ ವಾಕ್ಯಮದೊಂದಂ ಪರಿಕಿಸಿ ನೋಟ್ಪಾಗಳ್ (ಸಮಿಪ. ೩-೨) . ಪುಳಿಪ ಪರಸಮಯಂಗಳಂ ವೆಗ್ಗಳಿಸಿ ತಾಗುವ ಹರನ ನಿಟಿಲಾನಲನದುಗ್ರದ ತಗರು ಬಂದಿದೆ (ಬಸವು. ೨೯-೫) ; ಪರಸಮಯನಿರ್ಧೂಮಧಾಮ ನಿಷ್ಠೆಯ ನೇಮ (ವೀಶೈವು. ೮-೬-೨) ; ಖೂಳಕುಜ ಪರಶು ಪರಸಮಯವಾರಣಸಿಂಹ ಭಾಳಲೋಚನನ

ಮತರಿಪುಗೋತ್ರಜಂಭಾರಿ (ಪ್ರಾಥಚಾ. ೧೫-೩೪); ಪರಸಮಯದವನಾದಡೂ ಆಗಲಿ ಶಿವಸಮಯದವನಾದಡೂ ಆಗಲಿ ವರ್ಮಗೆಟ್ಟು ನುಡಿವ ಕರ್ಮಜೀವಿಗಳ ಬಾಯಲ್ಲಿ ಬಾಲ್ವುಳ ಸುರಿಯದೆ ಮಾಣ್ಬುವೆ (ಅಖಂಡೇ. ೨೬೭-೭). ೨. ಬೇರೆಯ ಧರ್ಮಕ್ಕೆ ಸೇರಿದವನು; ಅನ್ಯಮತದವನು : ಅನ್ಯದೈವಗಳೋದುವಂದದಿ ಪರಸಮಯಮುಖ ಬಾಡುವಂದದಿ . . . ತೆರಳಿದನು ನವಿಲೆಯ ಪುರಾಧೀಶಂ (ಶಂಕಪಾ. ೯-೧೧).

**ಪರಸಮಯಧ್ವಂಸಕ** = ಅನ್ಯಮತಗಳನ್ನು ನಾಶ ಮಾಡುವವನು; ಒಂದು ಬಿರುದು : ಶ್ರೀಮತ್ಕಲಿಗೊಳ್ಳದ ಅರಿಟ್ಟನೇಮಿ ಪಣ್ಡಿತರ್ ಪರಸಮಯಧ್ವಂಸಕ (ಎಕ. II (R), ೨೩೩-೨; ?).

[ಪರ$_3$ + ಸಮಯ$_1$]

**ಪರಸಮಯಿ** (ನಾ). ಬೇರೆಯ ಧರ್ಮಕ್ಕೆ ಸೇರಿದವನು; ಅನ್ಯಮತೀಯ : ಇದುವೆ ಪರಸಮಯಿಗಳಂ ಮುದದಿಂ ಪಥಕ್ಕೆ ತರಲಾರ್ಪುದು (ಸಮಪ. ೧-೬೧); ಮತ್ತೆಯುಂ ಪರಸಮಯಿಗಳು ಬಾಯೆತ್ತಲಂಜಿಂತೆಂದರು (ಬಸಪು. ೫೩-೬೧); ಬಿಜ್ಜಳನು . . . ಪರಸಮಯಿಗಳ ಚಾಡಿ ಕೇಳಿ ಬಸವೇಶ್ವರನೊಂದಿಗೆ ಲೆಕ್ಕ ವಿಚಾರಿಸಿ ಸೋತು ಹೋದನೆಂದು . . . ಹೇಳಿರುವಲ್ಲಿ (ಮೂರುಚು. ೯೦). [ಸಂ. ಪರಸಮಯಿನ್]

**ಪರಸಾಂಗು** (ನಾ). ಸುಮಾರು ಐದು ಮೈಲಿ : ಒಂದು ದ್ವೀಪಕ್ಕೂ ಮತ್ತೊಂದು ದ್ವೀಪಕ್ಕೂ ಮೂರು ನಾಲ್ಕು ಪರಸಾಂಗುಗಳಷ್ಟು ದೂರವಿರುತ್ತದೆ (ಪ್ರಪಾಇ. I, ೩೦೨). [←ಪಾರ. ಹಿಂ. ಫರ್‌ಸಂಗ್]

**ಪರಸಾದ** 'ಪಸಾದ' ನೋ.

**ಪರಸಿಗಲ್ಲು** 'ಫರಸುಗಲ್ಲು' ನೋ.

**ಪರಸು$_1$**, ಹರಸು$_1$ (ಕ್ರಿ). ೧. ಆಶೀರ್ವಾದ ಮಾಡು : ಪರಸುವೆನೆನ್ನದಾಂ ಪರಪೆನೆಂಬುದಿದಾಗದು ಚಿತ್ತನಾಥನೊಳ್ (ಕವಿರಾ. ೨-೧೦೭); ಕರ್ಮಕ್ಷಯಮುಮಕ್ಷಯದಾನಮುಮಕ್ಕೆಂದು ಪರಸಿ ಪೊಜಿಮಟ್ಟು ಬಸದಿಗೆ ಪೋಪಾಗಳ್ (ವಡ್ಡಾರಾ. ೭೮-೨೬); ಭರತೇಶ್ವರಚಕ್ರವರ್ತಿ ನಿಜಪ್ರಿಯಾನುಜನಂ ಬಾಹುಬಲಿಕುಮಾರನಂ ಪರಮಾಶೀರ್ವಾದದಿಂ ಪರಸಿ (ಆಪು. ೧೪-೪೬ ವ); ರಾಮ ಲಕ್ಷ್ಮಣರುಮಂ ಸೀತೆಯುಮಂ ಪರಸಿ ಗಗನಚಾರಣರ್ ಪೋಪುದುಂ (ಪಂರಾಮಾ. ೯-೧೫ ವ). ೨. ಒಳ್ಳೆಯದನ್ನು ಹಾರೈಸು; ಶುಭ ಕೋರು : ಈತನಂ ಭೋಂಕೆನೆ ಕಂಡು ಬೃತರ್ ನೋಟಂಬೆರಸು ಪರಸಿ ತಟ್ಟೈಸಿಕೊಂಡು (ಆದಿಪು. ೨-೨೦); ವೀರಶ್ರೀವಿಜಯನ ಕೆಯ್ಸಾರೆ ಸುರಾಂಗನೆಯರೊಸೆದು ಪರಸುವರವಮುಂ . . . ಎಸೆದುವಂಬರತಳದೊಳ್ (ಕಾವ್ಯಾವ. ೭೮); ಚೆನ್ನೆಯರ್ ತಂದಾರತಿಯನೆತ್ತಿ ಪರಸೆ (ಪದ್ಮರಾ. ೩-೭೬); ಪುರವರ ಮಹಾಸತಿಯರತಿ ಭಯಭರಂತ ಭಕ್ತಿಯಿಂದೆ . . . ಆರತಿಗಳಿಂ ನಿವಾಳಿಸಿ ಪರಸಿಸೇಸೆಯಂ ತಳಿದರಧಿಕೋತ್ಸವದೊಳು (ಚಿಬಪು. ೫-೧೬). ೩. ಹರಕೆ ಹೊರು, — ಮಾಡಿಕೊಳ್ಳು; ಹರಸಿಕೊಳ್ಳು; ಮುಡಿಪು ಕಟ್ಟು : ಅಸಿಮೇಪರ್ ನೂತನಪ್ರಸ್ತುತ ಸುರಭಿಸುಧಾಕ್ಷೀರಾಭಿಷೇಕಾರ್ಚನೆಯಂ . . . ಪ್ರತ್ಯಗಚಿಂತಾಮಣಿಯ ರಚನಾಶ್ಚರ್ಯಸಿಕ್ಕೇಪಭೂಷಾರ್ಚನೆಯುಂ ಸರ್ವಜಬಿಂಬಾವಳಿಗೆ ಪರಸಿದರ್ ಮಸ್ತಕನ್ಯಸ್ತಹಸ್ತರ್ (ಆದಿಪು. ೧೪-೧೧೪) ಈರ್ವರುಂ ಭೂತಂಗಳ್ಗೆ ಪರಸಿ ಮುಂಡಕೌಶಿಕನೆಂಬ ಮಗನಂ ಪಡೆದಿರ್ಪನಂ (ಚಾವುಂಪು. ೨೮೭); ಸಂತಾನಮಿಲ್ಲದುಬ್ಬೆಗದಿಂ ಪುತ್ರಾರ್ಥಿಗಳಾಗಿ ನಾಗಸ್ಥಾನದ ನಾಗರ್ಗೆ ಪರಸಲ್ಪೋದರ್ (ಸುಕುಮಾ. ೫-೪೪ವ); ಪಲವು ದೈವಕ್ಕೆ ಪರಸಿದೊಡಂ ತನ್ನನಿಕ್ಕಿದೊಡಂ . . . ದೊರೆಕೊಳ್ಳದು (ಧರ್ಮಾಮೃ. ೬-೧೬೬ ಅಡಿಟ). ೪. ಪ್ರಾರ್ಥಿಸು; ಧ್ಯಾನಿಸು : ಪರಸು ಪರಸೆಲವೊ ಕಾಶೀಪುರೇಶನಂ ನೀಡು ಗೋಣನೆಂಬಾಗಳ್ (ದಶಕು. ೯-೪೮). **ಹರಸು$_1$** : ೧. ನಾನು ನಿಮ್ಮ ಶಿಶುವೆಂದು ಚೆನ್ನಮಲ್ಲಿಕಾರ್ಜುನನ ಬೆರಸೆಂದು ಎನ್ನ ಹರ[ಪಾಠಾಂ.ರಿ]ಸುತ್ತಿಹುದು (ಮಹಾದೇ.ವ. ೩೧-೬೭); ಸರ್ವಸಾಮರ್ಥ್ಯಪಳವಡಲಿ ನಿನಗೆಂದು ಹರಸಿ ಹಾರೈಸಿ (ಸಿದ್ಧರಾ. ೧-೬೦); ಸಂಹರಿಸು ದೈತ್ಯನನೆಂದು ತಾಯ್ ಹರಸಿದಳು ನಂದನನ (ಕುವ್ಯಾಅ. ೧೦-೨೬); ಶ್ರೀಕೃಷ್ಣ ವಲ್ಲಭೆಗೊರ್ವ ಮೊಮ್ಮಗನಾಗಲೆನುತೆ ಹರಸಿದ (ನೇಮಿಚರಿತ. ೧೩-೪೯); 'ಮರಳಿ ಬಾರ, ಕಂದಾ, ನನ್ನುದರದಿ' ಎಂದು ತಬ್ಬಿ ಹರಸೆನ್ನ (೧೪ವಿಂ. ೪೭-೫): ಹ[ಪಾಠಾಂ. ಪ]ರಸಿ ಸೇಸೆಯನಿಕ್ಕಿದಳು ತನ್ನ ವಲ್ಲಭನ ಸಿರಿಮುಡಿಯೊಳು (ಸೋಮಚ. ೨-೧೨೦); ಹರಸುತಿರ್ದುದು ರಾಮರಾಜ್ಯದೊಳಖಿಳಜನನಿವಹ (ಕಾಶಿರಾ. ೪೪-೫೭); ಮಳೆ ಬಂದು ಬೆಳೆ ಬೆಳೆದು ಧರೆ ತಣಿಯಲೆಂದು . . . ಇಳೆಯೊಳಗೆ ಹರಸಿದೆವು ಬಾಲಕರು ಬಂದು (ಕನ್ನಬಾ. ೭೯). ೩. ಕಂಚಲದೇವಿಯರುಂ ಪದ್ಮಾವತಿದೇವಿಗೆ ಹರಸಿ ಪೆರ್ಮಾಡಿದೇವನಂ ಹಡೆದು (ಎಕ. VII, ಶಿವಮೊ. ೪-೯೨; 1122); ಹರಸಿ ಮಾಡುವುದು ಹರಕೆಯ ದಂಡ (ಬಸವ. ೨೨೮); ಪೊಡವೀಶ್ವರಂ ಹಿಂದೆ ಹರಸಿ ಹಾಳಂಬಟ್ಟು ಹಡೆದ ಸುತನೀತನು (ಹಚಕಾ. ೧೨-೪೨); ಹರಸೋದು ತಪ್ಪೋದಿಲ್ಲ, ತಿರಿದುಂಬೋದು ಹೋಗೋದಿಲ್ಲ (ಗಾದೆ). ೫. ಕೊಂಡಾಡು; ಸ್ತುತಿಸು; ಹೊಗಳು : ಓತು ಕೊಂಡಾಡುತಂ ಹಾಡುತಂ ಹರಸುತಂ ಹೊಸಹೊಸ ಪರಿಯ ಸಿರಿಯ ನೇಮದಚಲರ್ ಕೆಲರು (ಬಸರ. ೭-೮೨); ಮರುಳುಪಡೆಗಳು ಉಂಡು ಹರಸಿದವಂದು ರಾಘವನ (ಕಾಶಿರಾ. ೨೨-೪೯).

**ಹರಸಿಕೊಳು, ಹರಸಿಕೊಳ್ಳು** = ಹರಕೆ ಹೊರು; ಮುಡಿಪು ಕಟ್ಟು : ಮಹಾ ಮಹೇಶ್ವರರಿಗರ್ಚನೆಗೆಯ್ವೆನೆಂದಿರುಳು ಹರ[ಪಾಠಾಂ.ರಿ]ಸಿಕೊಳುತಿರ್ಪಳಂದು (ಸೋಮಚ. ೧-೭೮); ತೇರಸಗಣಂಗಳಿಗೆ ನವಿಲಿಸಿಯಪಾರ ಪರಿಯಲಿ ಹರಸಿಕೊಂಡಿಹೆವು (ಬಸಪು. ೪೮-೧೮); ಹರಸಿಕೊಂಡರು ಗಣಪ ಯಕ್ಷೇಶ್ವರಿ ಕಳಾವತಿ ದುರ್ಗಿ ಭುವನೇಶ್ವರಿಗಳಿಗೆ (ಕುವ್ಯಾಸ. ೧೩-೨೧).

[ದೇ.॥ ತಮಿ. ಪರಚು, ಪಟಿಚ್ಚು; ಕೋತ. ಪರ್ಟ್; ತೊದ. ಪರ್ತ್; ತುಳು. ಪರಸು = ಆಶೀರ್ವಚನ, ಹರಕೆ]

**ಪರಸು$_2$** (ನಾ). ಕೊಡಲಿ; ಕುಠಾರ : ಪರಸಿನೊಳೆರ್ದೆಯಂ ಸೀಳ್ದುಂ ಗಜಂಗಳಿಂದಿಕ್ಕಿ ಮೆಟ್ಟಿಸಿಯುಂ (ಧರ್ಮಾಮೃ. ೩-೭೩); ಕೊಂತ ಪರಸು ಕಕ್ಕಡಯಿಾಟ ಖಂಡೆಯ (ದೇವಾಂಪು. ೩-೨೦೨); ಆ ಜಾಗೀರದಾರ್ರು ನನ್ನ ಕರಿಸಿ ಕೊಲ್ಲು ಎಂದರ್ರಿ. ಹಾರ್ರ ಹುಡುಗ, ನಾ ಒಲ್ಲೆಂದೆ, ತಾವೇ ಪರಸು ತಗೊಂಡು ಇಕ್ಕರಿಸಿದರ್ರಿ (ಕನಕೆ. ೩೬). [<ಸಂ. ಪರಶು]

**ಪರಸುರಾಮ** (ನಾ). ಒಬ್ಬಾತನ ಹೆಸರು : ಪರಸುರಾಮನ್ ಎಱೆದು ಬಿಟ್ಟಿನ್ (ಸೌಇಇ. IX-i, ೪೦೦-೩; ಸು. 8ನೆಯ ಶತ). [<ಪರಶುರಾಮ]

**ಪರಸುರಾಮಯ್ಯ** (ನಾ). ಒಬ್ಬಾತನ ಹೆಸರು : ಇದ ಬರೆದೊಂ ಪರಸುರಾಮಯ್ಯ (ಎಕ. V, ಅರಕ. ೫-೮; ಸು. 915).

[ಪರಸುರಾಮ + ಅಯ್ಯ$_1$]

**ಪರಸೆ** 'ಪರಿಸೆ$_1$' ನೋ.

**ಪರಸೇನೆ** (ನಾ). ಶತ್ರುಗಳ ದಂಡು; ವೈರಿಸೈನ್ಯ : ಮುಂದಿರ್ದ ಭೂಪರು ಪರಸೇನೆಯಿಱಿವಲ್ಲಿ ಶೌರ್ಯಟೋಪದಿ ಮೆಱೆದರದ್ಭುತದಿ (ಪರ್ವಚ. ೭-೧). [ಪರ$_3$ + ಸೇನೆ]

**ಪರಸೇವೆ** (ನಾ). ಬೇರೆಯವರ ಚಾಕರಿ; ಅನ್ಯರಿಗೆ ಮಾಡುವ ಊಳಿಗ : ಸಂತಂ ಮೃಗಗಣ ವೃತ್ತಿಯನಿಂತಪ್ರಸ್ತುತಮನಱಿಪಿದಂ ಪರಸೇವಾಚಿಂತಾವಿಷಾದಿತಾಂತಸ್ಸ್ವಾಂತಂ ಸಂತೈಸಲೆಂದು ತನ್ನಂ ತಾನೇ (ಕವಿರಾ. ೩-೧೪೦); ನಾನು ಪರಸೇವೆಯ ಮಾಡುವೆನಯ್ಯಾ ಜಂಗಮದಾಸೋಹಕ್ಕೆಂದು (ಬಸವ. ೭೦೮); ಪರದಾಳುತನವೆಮಗಾಯ್ತು ಪರಸೇವಾಲಘುಸ್ಥಿತರೆಮ್ಮನೇತಕೆ ನುಡಿಸಿದಪೆ (ಕುವ್ಯಾಭೀ. ೨-೨೫).

[ಪರ$_3$ + ಸೇವೆ$_1$]

**ಪರಸೈನ್ಯ** (ನಾ). = ಪರಸೇನೆ : ಪರಸೈನ್ಯಜಳಧಿಸಂಜಾತಜಯಶ್ರೀಪತಿ ಪತಿಹಿತಚರಿತಂ ಶ್ರೀಪತಿದಣ್ಣಾಧಿನಾಥನೆಸೆದಂ ಧರೆಯೊಳ್ (ಸೌಇಶ. XX, ೭೪-೫; 1112).

**ಪರಸೈನ್ಯಭೈರವ** = ಶತ್ರುಸೇನೆಗೆ ಭಯಂಕರಸ್ವರೂಪನಾದವನು; ವೈರಿಸೈನ್ಯಕ್ಕೆ ರುದ್ರನಂತಿರುವವನು : ಪೊಕ್ಕನಾ ದ್ರುಪದ ಮಂದಿರಮಂ ಪರಸೈನ್ಯಭೈರವಂ (ಪಂಪಭಾ. ೩-೭೪).

[ಪರ$_3$ + ಸೈನ್ಯ]

**ಪರಸೊಮ್ಮು** (ನಾ). ಬೇರೆಯವರ ಸ್ವತ್ತು, — ಆಸ್ತಿ : ಕಟ್ಟಿದರೇನು ಕೊಟ್ಟು ಕಳುಹಿದರೇನು ಮುಟ್ಟುವರಲ್ಲ ಪರಸೊಮ್ಮನೆಂದಳು (ಶರಚ. ೩೦೪). [ಪರ$_3$ + ಸೊಮ್ಮು$_3$]

**ಪರಸ್ತ್ರೀ** (ನಾ). = ಪರವಧು : ಕೊಲೆಯಿಂದೊಂದನಸತ್ಯಮೆಂಬೆರಡನು . . . ಪರಸ್ತ್ರೀಯಿಂದು ನಾಲ್ಕಂದನಾಕುಲಮೆಂದಯ್ದನನಾಕುಳಂ ತೊಱೆ ದೊಡೇಂ ಹೃಲ್ಲಾಸಮೇ . . . ಸಂತಾಪಮೇ ಬೇವಸಂ (ಶಾಂತಿಪು. ೭-೫); ಒಂದಕ್ಕಂಜುವೆ ಒಂದಕ್ಕಳುಕುವೆ ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ (ಒಸವ. ೪೪೭); ಪರಿಜನಕೆ ದಯೆಯನು ಪರಸ್ತ್ರೀಯರಲಿ ಭೀತಿಯ . . . ನೀ ವಿರಚಿಪೆಯೋ ಬೇಸಜುವೆಯೋ ಭೂಪಾಲ ಕೇಳೆಂದ (ಕುಪ್ಯಾಸ. ೧-೫೭); ನನ್ನನ್ನು ಪರಸ್ತ್ರೀಯೆಂದು ತಿಳಿದುದರಿಂದ ನೀನು ಹೀಗಾಗಿರುವೆ (ಶಾಕುಂತ. ೬೯-೩). [ಪರ$_3$ + ಸ್ತ್ರೀ]

**ಪರಸ್ತ್ರೀಗಮನ** (ನಾ). ಮತ್ತೊಬ್ಬನ ಹೆಂಡತಿಯೊಡನೆ ಸಹವಾಸ ಮಾಡುವುದು ; ವ್ಯಭಿಚಾರ ; ಹಾದರ : (ಕಿ).

[ಪರಸ್ತ್ರೀ + ಗಮನ$_2$]

**ಪರಸ್ತ್ರೀಲೋಲ** (ನಾ). ಅನ್ಯಸ್ತ್ರೀ ಲಂಪಟ : ದನುಜೇಜ್ಯಂ ಕುಜಗೇಹ ದೊಳ್ ನಿಲೆ ಪರಸ್ತ್ರೀಲೋಲಂ (ಜಾತತಿ. ೧೭-೨೯).

[ಪರಸ್ತ್ರೀ + ಲೋಲ]

**ಪರಸ್ತ್ರೀವ್ಯಸನ** (ನಾ). ಪರಸ್ತ್ರೀಯರಲ್ಲಿ ಲಂಪಟತೆ ; ಜಾರತನ ; ಹಾದರಿಗತನ : ಪರಸ್ತ್ರೀವ್ಯಸನಪೇಯುವಸೂಯೆ . . . ಎನಿಪ್ಪವನು ಬಿಸುಟು ತದ್ವಿಪರೀತದಲಿ ವರ್ತಿಸುವನವನೇ ರಾಯನು (ಕುಪ್ಯಾಉ. ೩-೭೧). [ಪರಸ್ತ್ರೀ + ವ್ಯಸನ]

**ಪರಸ್ಥ** (ನಾ). ೧. ಬೇರೆಯವರಲ್ಲಿರುವುದು : ವಿವಿಧ ಕ್ರೋಧಾದ್ಯಾವೇಶದಿಂ ಆತ್ಮಸ್ಥಂಗಳುಂ ಪರಸ್ಥಂಗಳುಂ ಉಭಯಸ್ಥಂಗಳುಂ ಅಪ್ಪುದಱಿಂ (ತತ್ತ್ವಪ್ರ. ೨೬೦); ಹಾಸ್ಯವು ಅಥವಾ ನಗುವು 'ಆತ್ಮಸ್ಥ', 'ಪರಸ್ಥ' ಎರಡೂ ಆಗಬಹುದು (ಬಂಕಿಸು. ೩೫೧). ೨. ಬೇರೆಯ ಸ್ಥಳದವನು : ಪರಸ್ಥರು ಯಾವ ಪ್ರದೇಶದಿಂದಲೇ ಈ ಹವೆಯೊಳಗೆ ಬರಲಿ . . . ಆರೋಗ್ಯವೆನಿಸುತ್ತದೆ (ಕಭಾಗ. ೨೧). [ಸಂ.]

**ಪರಸ್ಥಲ**, ಪರಸ್ಥಳ (ನಾ). ಬೇರೆಯ ಪ್ರದೇಶ ; ಬೇರೆಯ ಊರು. **ಪರಸ್ಥಳ** : ಅಗ್ಗೆ ಸರಿಯಾಗಿ ಸುಲ್ತಾನ್‌ಬೇಗನು ಏನೋ ಕೆಲಸಕ್ಕಾಗಿ ಪರಸ್ಥಳಕ್ಕೆ ಹೊರಡಲೇಬೇಕಾದ ನಿರ್ಬಂಧ ಬಂತು (ಕಂಕಥೆ. ೧೮೮); ಪರಸ್ಥಳವ್ರೋ ಪರದಾಟವ್ರೋ (ಗಾದೆ). [ಪರ$_3$ + ಸ್ಥಲ]

**ಪರಸ್ಥಳ** 'ಪರಸ್ಥಲ' ನೋ.

**ಪರಸ್ಥಾನ** (ನಾ). ಪ್ರಯಾಣದ ದಿನ ಪ್ರಶಸ್ತವಲ್ಲದಾಗ, ಅದಕ್ಕೆ ಹಿಂದಿನ ಶುಭಕರವಾದ ದಿನದಲ್ಲಿ, ಪ್ರಯಾಣದ ವಸ್ತುಗಳನ್ನು ಮತ್ತೊಬ್ಬರ ಮನೆಗೆ ಸಾಗಿಸುವುದು ; ಹೊರಪ್ರಯಾಣ ಮಾಡುವುದು : ನಾಳೆ ನವಮಿ, ಆದ್ದರಿಂದ ಇವತ್ತೇ ಪರಸ್ಥಾನ ಮಾಡಿ ಬಾ (ರೂಢಿ). [<ಸಂ. ಪ್ರಸ್ಥಾನ]

**ಪರಸ್ಪರ** (ಗು). ೧. (ಇಬ್ಬರಲ್ಲಿ ಅಥವಾ ಕೆಲವರಲ್ಲಿ) ಒಬ್ಬೊಬ್ಬರಿಗೂ ಸಂಬಂಧಪಟ್ಟ. (ನಾ). ೨. ಒಬ್ಬೊಬ್ಬರಿಗೆ ಸಂಬಂಧಪಟ್ಟವರು : ಸ್ನೇಹಿತರು ಮುಂತಾದವರ ಭೆಟ್ಟಿಯನ್ನು ತಕೊಳ್ಳಬೇಕು. ಆದರಿಂದ ಪರಸ್ಪರರಲ್ಲಿ ಪ್ರೀತಿ ಹೆಚ್ಚಾಗುವುದು (ಮುಂಬಯಿ. ೪-೩೪). ೩. ಬೇರೆ ಬೇರೆಯಾಗಿರುವುದು: "ಪರಸ್ಪರಂ, ಮಿಥಃ, ಅನ್ಯೋನ್ಯಂ, ಇತರೇತರಂ — ಈ ೪ ಬೇಱೆವೇಱೆ" (ಹಲಾಯು. ೧೧೯-೩೫); "ಅನ್ಯೋನ್ಯಮಿತರೇತರ ಮಿಥಃ ಪರಸ್ಪರಮೆನಲು ಬೇಱೆಬೇಱೆಂಬುದನು ಸೂಚಿಸಿಕ್ಕುಂ" (ಮಂಗರಾ. ೧೨೯-೧೫). ೪. [ಕಾವ್ಯವಿಮ] ಒಂದು ಅರ್ಥಾಲಂಕಾರ ; ಅನ್ಯೋನ್ಯಾಲಂಕಾರ : ಜಾತಿಸಹೋಕ್ತಿ . . . ಪರಸ್ಪರಸಾರನಿಮಾಲನಂಗಳೆಂದೀ ತೆಱದಿಂದಮೊಂದಿ ನೆಗಟ್ಟುಂ ನೆಱೆ ವಾಸ್ತವಭೇದವೃತ್ತಿಗಳ್ (ಕಾಪ್ಯಾಪ. ೬೦೭); ಇತರೇತರಕಾರಕ ಸಂಪ್ರತಿಪತ್ತಿ ಪರಸ್ಪರಂ ಸಮುಹದೊಳೆಸೆವೊಂದತಿಶಯಗುಣದಿಂ ನಿರ್ಧಾರಿತ ಮಪ್ಪುದು ಸಾರಮೆಂಬ ಸದಲಂಕಾರಂ (ಕಾಪ್ಯಾಪ. ೬೫೮). [ಸಂ.]

**ಪರಸ್ಪರತೆ** (ನಾ). ಒಂದಕ್ಕೊಂದು ಪೂರಕವಾಗಿರುವಿಕೆ : ಸುಂಕ ಸಂಧಾನಗಳು ಆರಂಭವಾದಾಗ ಸುಂಕ ವಿನಾಯಿತಿಗಳ ಪರಸ್ಪರತೆಯ ನೀತಿಯಲ್ಲಿ ಮುಖ್ಯ ಬದಲಾವಣೆಯೊಂದನ್ನು ಹಿಂದುಳಿದಿರುವ ರಾಷ್ಟ್ರಗಳ ಹಿತದೃಷ್ಟಿಯಿಂದ ಮಾಡಲಾಯಿತು (ಅಂತಸಂ. ೧೮೨).

[ಸಂ. ಪರಸ್ಪರತಾ]

**ಪರಸ್ಪರಸಂಬಂಧ** (ನಾ). ಒಂದಕ್ಕೊಂದಕ್ಕಿರುವ ಬಾಂಧವ್ಯ ; ತಮ್ಮ ತಮ್ಮಲ್ಲಿರುವ ನಂಟುತನ : ಅವುಗಳ ಸ್ವರೂಪ ಲಕ್ಷಣ ಪರಸ್ಪರ ಸಂಬಂಧಗಳ ನಿರೂಪಣೆ . . . ಇವೇ ಮೊದಲಾದ ಅನೇಕ ವಿಷಯಗಳನ್ನೊಳಗೊಂಡಿದೆ (ದ್ರಾವಿವಿ. V, ಮುನ್ನುಡಿ); ಈಶ್ವರಸಂಹಿತೆಯಲ್ಲಿ ಪ್ರತಿಮಾಲಕ್ಷಣವನ್ನು ಹೇಳುವಲ್ಲಿ ಸಮಗ್ರಕೃತಿಯೊಂದಿಗೆ ಅದರ ಅಂಶಗಳು ಇರಬೇಕಾದ ಪರಸ್ಪರ ಸಂಬಂಧವನ್ನೂ ಪ್ರಮಾಣವನ್ನೂ ಹೇಳುವಾಗ ಸೌಂದರ್ಯ ಮತ್ತು ಲಾವಣ್ಯಗಳ ವಿಷಯವೂ ನಿರೂಪಿತವಾಗಿದೆ (ಸೌಂದಸ. ೧೨೬). [ಪರಸ್ಪರ + ಸಂಬಂಧ]

**ಪರಸ್ಪರಸಾಮ್ಯ** (ನಾ). ಒಂದಕ್ಕೊಂದಕ್ಕೆ ಇರುವ ಹೋಲಿಕೆ : ಪರಸ್ಪರ ಸಾಮ್ಯ ಕಂಡುಬಂದ ಮಾತ್ರಕ್ಕೆ ಅವುಗಳಿಗೆ ಸಂಬಂಧವೂ ಇದೆಯೆಂದು ಅರ್ಥವಲ್ಲ (ದ್ರಾವಿವಿ. ೩೮). [ಪರಸ್ಪರ + ಸಾಮ್ಯ]

**ಪರಸ್ಪರೋದೀರಿತ** (ಗು). ೧. ಒಬ್ಬರಿಗೊಬ್ಬರು ಹೇಳಿದ, — ನುಡಿದ. (ನಾ). ೨. [ಜೈನ] (ನಾರಕರು ಒಬ್ಬರಿಗೊಬ್ಬರು ಕೊಡುವ) ಐದು ಬಗೆಯ ದುಃಖಗಳಲ್ಲಿ ಒಂದು : ಅಂತು ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತಂಗಳೆಂಬಯ್ದುಂ ತೆಱದ ದುಃಖಂಗಳೊಳದರ್ಿ ನಿಮಿಷಮಾತ್ರಮಪ್ಪೊಡಮುಸಿರ್ ಪೊತ್ತಂ ಪಡೆಯದೆ (ಆದಿಪು. ೫-೮೮ ವ); ಶಾರೀರಂ ಮಾನಸಂ ಕ್ಷೇತ್ರಜಂ ಪರಸ್ಪರೋದೀರಿತಂ ಸಂಕ್ಲಿಷ್ಟಾಸುರೋದೀರಿತಂಗಳೆಂಬ ಪಂಚಪ್ರಕಾರದುಃಖಂಗಳನನೇಕ ಪ್ರಕಾರದಿನನುಭವಿಸುತ್ತಂ (ಸುಕುಮಾ. ೧೧-೪೭ ವ).

[ಪರಸ್ಪರ + ಉದೀರಿತ]

**ಪರಸ್ಮೈಪದ** (ನಾ). [ವ್ಯಾಕ] ಇನ್ನೊಬ್ಬನನ್ನು ಉದ್ದೇಶಿಸಿ ಉಪಯೋಗಿಸುವ ಪದ; ಮಾಡುವ ಕ್ರಿಯೆಯ ಫಲವು ಇತರರಿಗೆ ಸೇರಿದುದೆಂದು ಹೇಳುವ ಪದ. 'ಆತ್ಮನೇಪದ' ಪರಾ. [ಸಂ.]

**ಪರಸ್ವ** (ನಾ). ಬೇರೆಯವರ ಸೊತ್ತು ; ಅನ್ಯರ ಸಂಪತ್ತು : ಪರಸ್ವವನ್ನಪಹರಿಸುವುದಕ್ಕೆ ಹೋಗುವುದು ಅಪಾಯ (ಆರ್ಯಧ. ೩೭).

[ಸಂ.]

**ಪರಸ್ವತ್ತು** (ನಾ). = ಪರಸ್ವ : ಅದು ಎಷ್ಟು ಅಲ್ಪವಾದರೂ ಪರಸ್ವತ್ತಲ್ಲವೆ ? (ನೀತಿಚಿಂ. IV, ೨೮). [ಪರ$_2$ + ಸ್ವತ್ತು$_3$]

**ಪರಹತ್ತ** (ನಾ). ಬೇರೆಯವರ ಕೈ ; ಮತ್ತೊಬ್ಬರ ಹಸ್ತ : (ಕಿ).

[ಪರ$_3$ + ಹತ್ತ]

**ಪರಹಸ್ತ** (ನಾ). ೧. =ಪರಹತ್ತ : ಇದು ಪರಹಸ್ತವನ್ನು ಸೇರಿದ್ದರೆ ದುಃಖಪಡಿಸತಕ್ಕುದಾಗುತ್ತಿತ್ತು (ಶಾಕುಂತ. ೮೬-೧೬). **೨.** (ಆಲಂ) ಮತ್ತೊಬ್ಬರ ಕ್ರಿಯೆ,—ಕೆಲಸ : ಕದನದಲಿ ಕಯ್ಯಾರೆ ದೈತ್ಯರ ಸದೆದು ಭೂಭಾರವನು ಪರಹಸ್ತದಲಿ ಕಟ್ಟಿಸಿ . . . ಪಯಣವ ಮಾಡಿದನು ಮುರವೈರಿ ನಿಜಪುರಿಗೆ (ಕುವ್ಯಾ.ಗ. ೧೩-೧೩). [ಪರ$_3$ + ಹಸ್ತ]

**ಪರಹಿಂಸೆ** (ನಾ). ಇನ್ನೊಬ್ಬರನ್ನು ನೋಯಿಸುವುದು ; ಬೇರೆಯವರನ್ನು ಕಾಡುವುದು : ವೀರಶೈವನಾದಡೆ . . . ಎಂತೂ ಪರಹಿಂಸೆಯನೆಸಗದಿರಬೇಕು (ಚನ್ನಪ. ಕ. ೧೦೬-೨೩೯) ; ಕೊಲುವುದೇ ನೊಂದರಿದೆ ಟಕ್ಕರಿಗಳೆವುದೇ ಪರಹಿಂಸೆ ಲೋಗರ ಹಳಿವುದೇ ವಧೆ ಶಸ್ತ್ರವಧೆ ವಧೆಯಲ್ಲ (ಕುವ್ಯಾ.ಕ. ೧೭-೨೬). [ಪರ$_3$ + ಹಿಂಸೆ]

**ಪರಹಿತ** (ಗು). ೧. ಉಪಕಾರ ಬುದ್ಧಿಯುಳ್ಳ ; ಸ್ನೇಹಪರವಾದ. (ನಾ). **೨.** ಬೇರೆಯವರಿಗೆ ನೆಮ್ಮದಿಯನ್ನುಂಟುಮಾಡುವುದು ; ಪರೋಪಕಾರ : ನರಮಹಿತಾ ನಿನಗೇನಹಿತರುಮೊಳರೇ ಸತತ ಪರಹಿತಾಚಾರಪರಾ (ಕವಿಾ. ೧-೮೨) ; ಪರಹಿತಮಿದಾತ್ಮಹಿತಮೆಂಬೆರಡು ಮನುಬಿಾದಬಲನೆಮಗೆ ಮಾಡಿದವಂ ನಿತ್ತರಿಸಂ (ಕಾದಂಊ. ೪೮೪) ; ಪುರು[ಷಾ]ರ್ತ್ಥದ ನೆಲೆ ಸತ್ಯದ ಕರು ಪರಹಿತಲಕ್ಷ್ಮಿಗಿಕ್ಕೆದಾಣಂ (ಸೌಇಇ. XX, ೬೬-೨೭ ; 1118) ; ಪರಹಿತದೆ ನೆಗಟ್ಟ್ವೆ ನಾನಿಂ ಪರತ್ರೆಯಂ ಪಡೆವೆನೆಂಬ ಮುನಿಪಾ (ಜೀವಸಂ. ೩೫-೧೭) ; ಪರಹಿತದೊಳ್ ನಯಕ್ರಮದೊಳ್ . . . ನಿನಗಾರ್ ದೊರೆ (ಪುಷ್ಪಪು. ೧-೮೦) ; ಪರಹಿತ ಮಾಡಿ ತನ್ನ ಹಿತ ತಪ್ಪಿಸಿಕೊಂಡ (ಗಾದೆ). **೩.** ಬೇರೆಯವರಿಗೆ ನೆಮ್ಮದಿಯನ್ನುಂಟುಮಾಡುವವನು ; ಇತರರಿಗೆ ಸೌಖ್ಯ ನೀಡುವವನು ; ಪರೋಪಕಾರಿ : ಪರಹಿತನೆಂಬ ಸತ್ಯನಿಧಿಯೆಂಬ . . . ಗುಣಿಯೆಂಬ ಪೆಜರ್ನರಿರಾರ್ ಧರಿತ್ರಿಯೊಳ್ (ಮದಕ. ೧-೪೭) ; ಪರಹಿತರಿಲ್ಲ ಧರ್ಮಪರರಿಲ್ಲ ದಯಾನ್ವಿತರಿಲ್ಲ ಮರ್ತ್ಯರೊಳ್ (ಧರ್ಮಾಮೃ. ೧೪-೧೪೫) ; ಪರಹಿತರೊಲ್ದು . . . ಸಂವರಿಸಿದ ಜೀವನೋಚಿತಧನಂಗಳ ನೀಟ್ಟುಳಿಗೊಳ್ವ ತೀವ್ರನಪ್ಪರಸನ ಮಾಟಕ್ಕೆಯಿಂದಮೆ (ಪಾರ್ಶ್ವಪು. ೧೧-೬) ; ವೇದವಿದಂ . . . ಆಶೀರ್ವಾದಪರಂ ಪರಹಿತಂ ಪುರೋಹಿತನಕ್ಕುಂ (ಶಮದ. ೧೧೫ ಪ್ರಯೋ). [ಸಂ.]

**ಪರಹಿತಚರಿತ** (ನಾ). ಪರೋಪಕಾರವೇ ಸ್ವಭಾವವಾಗಿರುವವನು; ಇತರರಿಗೆ ನೆಮ್ಮದಿಯನ್ನುಂಟುಮಾಡುವುದೇ ತನ್ನ ಶೀಲವಾಗಿರುವವನು ; ಪರೋಪಕಾರಿ : ಪರಹಿತಚರಿತಂ . . . ವೈದ್ಯಾಂಬುರಾಸಿ ಕುಳತಿಳಕನೆನಿಸಿದಂ ಬಿಬ್ಬಣ್ಣಂ (ಸೌಇಇ. XI-ii, ೧೭೧-೧೫ ; 1072) ; ವರಗುಣಭರಿತಂ ಪರಹಿತಚರಿತಂ ಬೆಳ್ವಲನ ನೆಗಳ್ದ ದಂಡಾಧೀಶಂ (ಕಇಅ. ೭೪-೧೨-೨೪ ; 1170) ; ಪರಹಿತಚರಿತಂಗೆ ಜಗದ್ಗುರುಗೆ . . . ಮುಳಿದೆಯ್ದೆ ಖಳಂ (ಪಾರ್ಶ್ವಪು. ೧೫-೧೨೫). [ಪರಹಿತ + ಚರಿತ]

**ಪರಹಿತವ್ಯಸನಿ**(ನಾ). ಪರೋಪಕಾರದಲ್ಲಿಯೇ ಆಸಕ್ತನಾದವನು: ಪರಹಿತವ್ಯಸನಿಗಳಲ್ಲದೆ ದುರ್ವ್ಯಸನಿಗಳಲ್ಲ (ಅಜಿಪು. ೧-೨೧ ವ).
[ಪರಹಿತ+ವ್ಯಸನಿ]

**ಪರಹಿತಾರ್ಥ** (ನಾ). ಪರೋಪಕಾರದ ಉದ್ದೇಶ ; ಬೇರೆಯವರ ನೆಮ್ಮದಿಯ ಕಾರಣ,—ಗುರಿ : ಪರಹಿತಾರ್ಥಕೆ ಯನ್ನ ಕೋಮಲ ಶರೀರ ಶಿವನಾಜ್ಞೆಗಾಹುತಿಯಾದೊಡಾಗಲಿ (ನವನೋ. ೫-೩೫).
[ಪರಹಿತ + ಅರ್ಥ]

**ಪರಹೆಣ್ಣು** ‘ಪರವೆಣ್’ ನೋ.

**ಪರಹೊನ್ನು** (ನಾ). =ಪರವಿತ್ತ : ಪರಹೆಣ್ಣು ಪರಹೊನ್ನು ಕರಗತವಾಯ್ತೆಂದು ಪರಲೋಕ ಭಯ ಬಿಟ್ಟು ತಿರುಗುವನ(ಪುರಂದ.೧-೧೫೩-೨).
[ಪರ$_3$ + ಹೊನ್ನು$_1$ (<ಪೊನ್)]

**ಪರಳ್** ‘ಪರಲ್’ ನೋ.

△ **ಪರಳಿಗ** ‘ಹರಳಿಗ’ ನೋ.

**ಪರಳು** ‘ಪರಲ್’ ನೋ.

**ಪರಳುಗಲ್ಲು** ‘ಪರಳ್ಗಲ್ಲು’ ನೋ.

**ಪರಳುಗಾಯಿ** ‘ಪರಳ್ಗಾಯಿ’ ನೋ.

**ಪರಳುನೆಲ** (ನಾ). ನೀರಜನಿಂದ ತುಂಬಿ ಬಿರುಸಾಗಿರುವ ನೆಲ : ನಡುಮನೆಯ ಪರಳುನೆಲ ಮೈಯೊಳೊತ್ತಿ ನಿದ್ರೆಯ ಕೆಡಿಸಿತು (ತುರಂಗ. ೬-೨೮). [ಪರಳು(<ಪರಲ್)+ನೆಲ]

**ಪರಳುನೊಲೆ** ‘ಪರಲ್ನೊಲೆ’ ನೋ.

**ಪರಳೊತ್ತು** ‘ಪರಲೊತ್ತು’ ನೋ.

**ಪರಳೋಲೆ,** ಹರಳೋಲೆ (ನಾ). ರತ್ನಗಳಿಂದ ಮಾಡಿದ ಕಿವಿಯ ಆಭರಣ ; ಹರಳಿನ ಓಲೆ : ಪರಳೋಲೆ ಕಂಗೊಳಿಸಿದುವು ಕರ್ಣದಲಿ (ಕಂಸವಿ. ೨೪-೩೬). **ಹರಳೋಲೆ :** ಹರಳೋಲೆ ಮಕರಿಕಾಪತ್ರ ಮೂಕುತಿ ಸಣ್ಣಗೆರೆಯ ತಿಲಕ ಚವಿಚವಿಸೆ (ಭರತ. ೪೦-೫೩) ; ಹರಳೋಲೆ ಕುಣಿಯಲು ಜಡೆ ಬೆನ್ನನಲೆಯಲು (ಕಂಸವಿ. ೬-೧೨೩) ; ಹರಳೋಲೆಯನ್ನು ಧರಿಸಿರುವ . . . ನೀನು ಯಾರ ಮಗಳು (ಕೃನಾಅ. ೧೨೦).
[ಪರಳು (<ಪರಲ್)+ಓಲೆ]

**ಪರಳ್ಗಲ್ಲು,** ಪರಳುಗಲ್ಲು, ಪಳಗಲು, ಹರಳುಕಲ್ಲು, ಹರಳುಗಲ್ಲು (ನಾ). **೧.** ಕಲ್ಲಿನ ಚೂರು ; ಚೂರುಗಲ್ಲು : ಭೀಷಣಾರಣ್ಯದೊಳು ಪರಳ್ಗಲ್ಲು ಮುಳ್ಳು ಬಿಸಿಲೊಳ್ಗಾಯ್ದ ಬಟ್ಟೆಯೊಳ್ ಬಜಾಗಾಲಿಂ ಚರಿಸುವರವರು (ಶಾಂತೀಶ. ೪-೮೩). **ಪರಳುಗಲ್ಲು : ೧.** ಮೊನೆಗಲ್ಲು ಗುಂಡುಗಲ್ಲುಗಳರೆಗಲ್ಲುಗಳ್ ಘನವಾದ ಪರಳುಗಲ್ಲುಗಳು . . . ವನಮಾರ್ಗವ ತುಂಬಿಹುವು (ಕಂಸವಿ. ೧೮-೪೪). **ಪಳಗಲು : ೨.** ಕಲ್ಲು ತುಂಬಿದ ಭೂಮಿ ; ಹರಳು ಭೂಮಿ (?) : ಶ್ರೀಮನ್ನಾಗ್ಗಾವುಣ್ಡಂ ಚಾವುಣ್ಡಗಾವುಣ್ಡಂ ಮುಗುನ್ದದೊಳು . . . ಶ್ರೀಮತ್ಸಿರಿಯ ಗೋವರ್ಧನದೇವರ ಕಾಲಂ ಕರ್ಚ್ಚಿ ಗದ್ದೆಯುಂ ಪಳಗಲುಮುಂ ಬಿಟ್ಟಂ (ಸೌಇಇ. XI–i, ೭೮-೪೯ ; 1045); ☞ ಇದು ‘ಪರಳುಗಲ್ಲು’ ಎಂಬುದರ ಅಪಲಿಖಿತ ವಿರಬಹುದು. **ಹರಳುಕಲ್ಲು : ೩.** ಬೆಲೆಬಾಳುವ ಮಣಿ,—ರತ್ನ : ಚಿನ್ನ ಬೆಳ್ಳಿ ಮುಂತಾದವುಗಳಂತೆ ಕೆಲವು ಅಮೂಲ್ಯವಾದ ಹರಳು ಕಲ್ಲುಗಳು ಕಣಗಳಲ್ಲಿ ದೊರೆಯುತ್ತವೆ (ಮುಂಬಯಿ. ೪-೧೬೯). **ಹರಳುಗಲ್ಲು : ೧.** ಬಹಳ ಆಳವಾದ ಅದರ ಪಾತ್ರದಲ್ಲಿದ್ದ ಹರಳುಗಲ್ಲುಗಳು ಸಹ ಅಲ್ಲಾಡದೆ, ಇದ್ದ ಸ್ಥಳದಲ್ಲಿ ತೃಪ್ತಿಯಿಂದ ನಿಂತು ಮುತ್ತಿನಂತೆ ಹೊಳೆಯುತ್ತಿದ್ದುವು (ಯೋಧಪು. ೪೩) ; ಹರಳುಗಲ್ಲಿನ ಮೇಲೆ ಹರಿದಂತೆ ಹಿಮಗಡ್ಡೆಯ ಮೇಲೆ ರಟರಟನೆ ಸದ್ದು ಮಾಡುತ್ತ ಮೂರು ಕುದುರೆಯ ಗಾಡಿಯೊಂದು . . . ಬಂದು ನಿಂತಿತು (ಪುನರು. ೫೫೫).
[ಪರಳ್ (<ಪರಲ್) + ಕಲ್ಲು(<ಕಲ್$_3$)]

**ಪರಳ್ಗಾಯಿ,** ಪರಳುಗಾಯಿ (ನಾ). ಹೀಚು ; ಮಿಡಿ ; ಕಸುಗಾಯಿ : ಬನದೊಳು ಹಿಮವೆಂಬ ಚೋರ ಮೈದೋಜಿ ಪಾದಪಲಕ್ಷ್ಮಿ ಬೆದಜಾ ಸೂಜಿಗೊಟ್ಟಂದದೆ ಪರಳ್ಗಾಯಿ ಮುಂತಾದ ತಾಜಿಕಿ ನೆಲಕು ದುರಿದುವು (ನೇಮಿಜಿ. ೪-೪೩). **ಪರಳುಗಾಯಿ :** “ಮಿಡಿಯೆಂದೊಡೆ ಪರಳುಗಾಯಿ” (ಭಾರಸಿ. ೬೬).
[ಪರಳ್ (<ಪರಲ್) + ಕಾಯಿ$_4$ (<ಕಾಯ್$_4$)]

**ಪರಳ್ನೊಲೆ** ‘ಪರಲ್ನೊಲೆ’ ನೋ.

**ಪರಾಂಗನಾವಿರತಿವ್ರತ** (ನಾ). ಅನ್ಯಸ್ತ್ರೀಯರ ಬಗ್ಗೆ ಆಸಕ್ತಿಯನ್ನು ತಳೆಯದಿರುವ ನೋಂಪಿ,—ನಿಯಮ : ಶೋಕಂಗೆಯ್ವ ಸೀತೆಯಂ ದಶಾಸ್ಯನನಂತವೀರ್ಯಕೇವಲಿಗಳ ಚರಣೋಪಾಂತದೊಳ್

ಕೈಕೊಂಡ ಪರಾಂಗನಾವಿರತಿವ್ರತದ ಭಂಗಮಂ ಬಗೆಯದುಯ್ದ್ಂ (ಶಂರಾಮಾ. ೯-೧೧೩ ವ). [ಸಂ.]

**ಪರಾಂಗನೆ** (ನಾ). ೧. ಬೇರೆಯ ಹೆಂಗಸು ; ಅನ್ಯಸ್ತ್ರೀ : ಪುಸಿಯದುದು ಪರಾಂಗನೆಗಾಟಿಸದುದು . . . ಧರ್ಮಮದಜಿ ತಡೆವುದಧರ್ಮಂ (ಆದಿಪು. ೫-೭೯) ; ನಿಮ್ಮಲ್ಲಿ ಶ್ರೀಯ ಬೇಡುವೆನೆ ಪರಾಂಗನೆಯ ಪಾಪ (ಪಮಾಪ. ೯-೩೩). ೨. ಕೈವಲ್ಯವೆಂಬ ಸ್ತ್ರೀ : ತಂದೆ ಮಕ್ಕಳೆಬ್ಬರೂ ಪರಾಂಗನೆಯಂ ನೆರೆದು ಪರಾಪರವಸ್ತುವಾದುದನೇನೆಂಬೆನುಯ್ಯ (ಸಿದ್ಧೇಪ. ೩೬-೯೫). ೧, ೨ : ಪರಾಂಗನೆಗೆ ಮೆಯ್ಗೊಟ್ಟರ್ದುಮತ್ಯಂತಪಚ್ಚರಿತರ್ . . . ತಾಪಸರೆನಲ್ಕೇನೆಂಬೆನಾಶ್ಚರ್ಯಮಂ (ತ್ರಿಪುವಿ. ೧-೫೫).

ಪರಾಂಗನಾಪುತ್ರಕ = ಅನ್ಯಸ್ತ್ರೀಯರಿಗೆ ಮಗನಂತಿರುವವನು ; ಅನ್ಯಸ್ತ್ರೀಯರಿಗೆ ಮಗನಂತೆ ವರ್ತಿಸುವವನು ; ಒಂದು ಬಿರುದು: ಗೋತ್ರವಿಭೂಷಣಂ ಪರಾಂಗನಾಪುತ್ರಕಂ . . . ಶ್ರೀಮದಂತಃಪುರವೆರ್ಗ್ಗಡೆ ದಂಡನಾಯಕಂ (ಸೌಇಇ. XX, ೬೪-೫ ; 1100). [ಪರ೨ + ಅಂಗನೆ]

**ಪರಾಂಬರಿಕೆ** 'ಪರಾಮರಿಕೆ' ನೋ.

**ಪರಾಂಬರಿಸು** 'ಪರಾಮರಿಸು' ನೋ.

**ಪರಾಕ** (ನಾ). ೧. (ಯಜ್ಞ ಯಾಗಾದಿಗಳಲ್ಲಿ ಉಪಯೋಗಿಸುವ, ಒಂದು ಬಗೆಯ)ಕತ್ತಿ. ೨. ಒಂದು ಬಗೆಯ ಉಪವಾಸ ವ್ರತ ; ವೈಮರೆಯದೆ ಹನ್ನೆರಡು ದಿವಸಗಳು ಮಾಡುವ ಪ್ರಾಯಶ್ಚಿತ್ತರೂಪವಾದ ಉಪವಾಸವ್ರತ: 'ಪರಾಕಕೃಚ್ಛ್ರ' ಪರಾ. ೩. ದೂರ. ೪. ಒಂದು ಬಗೆಯ ರೋಗ. [ಸಂ.]

**ಪರಾಕಕೃಚ್ಛ್ರ** (ನಾ). = ಪರಾಕ ೨ : ಮಹಾಕಷ್ಟಂಗಳಾದ ತಪ್ತಕೃಚ್ಛ್ರ . . . ಪರಾಕ [ಪಾಠಾಂ. ಪರಾ, ಪರಾಕಾ] ಕೃಚ್ಛ್ರ ದೇವಕೃಚ್ಛ್ರ ಯಾವಕಕೃಚ್ಛ್ರಾದಿ ಕೃಚ್ಛ್ರಂಗಳಿಂ ಪಕ್ಷ ಮಾಸಾದಿಗಳಲ್ಲಿ ಅನ್ನಮಂ ಪೆಚ್ಚಿಸಿ ತಗ್ಗಿಸಿಕೊಂಬುದು ಮೊದಲಾದುದೇ . . . ತಪವೆನಿಸುವುದು (ವಿವೇಕ. ೧೨೨). [ಪರಾಕ+ಕೃಚ್ಛ್ರ]

**ಪರಾಕಾಷ್ಠ** (ನಾ). ಪರಮಾವಧಿ ; ತುತ್ತತುದಿ : ಹೀಗೆ ವಿದ್ಯಾವಿಷಯಕವಾದ ಪ್ರೇಮವು ಅದರ ಪರಾಕಾಷ್ಠ ಸ್ಥಿತಿಯನ್ನು ಮುಟ್ಟುವಂತೆ ಮಾಡಿಕೊಳ್ಳುವುದಕ್ಕೆ ಪ್ರತಿಯೊಬ್ಬನೂ ಆದಷ್ಟು ಹೆಣಗಬೇಕು (ನೀಗಟ್ಟು. ೭೯). [ಸಂ. ಪರಾಕಾಷ್ಠಾ]

**ಪರಾಕಾಷ್ಠತೆ** (ನಾ). = ಪರಾಕಾಷ್ಠ : ಇದೂ ಅಜ್ಞಾನದ ಪರಾಕಾಷ್ಠತೆಯೇ (ಜೀವಾತ್ಮ. ೧೦೬); ನಾಗರೀಕತೆಯ ಪರಾಕಾಷ್ಠತೆಯಲ್ಲಿದ್ದೆವು ನಾವು (ಸ್ವಾಮಿಸ್ಮೃ. ೧೧೨). [ಸಂ. ಪರಾಕಾಷ್ಠತಾ]

**ಪರಾಕಾಷ್ಠೆ** (ನಾ). = ಪರಾಕಾಷ್ಠ : ಪರಿತೋಷ ಪರಾಕಾಷ್ಠೆಯೊಳ್ ನಿಮ್ನಿತಾತ್ಮನಾಗುತ್ತುಂ (ಪುಷ್ಪ. ೧೦-೨೧ ವ) ; ದೋಷದ ಪರಾಕಾಷ್ಠೆಯಿಂದ ಗುಣದ ಪರಾಕಾಷ್ಠೆಯು ಜನಿಸುವುದು (ಗುರುಣಿ. ೯೪); ಈ ಕಣ್ಣೀರಿನಿಂದ ಅವನ ಆನಂದ ಪರಾಕಾಷ್ಠೆಯನ್ನು ಮುಟ್ಟುತ್ತಿತ್ತು (ಪುನರು. ೩೪೬). [ಸಂ. ಪರಾಕಾಷ್ಠಾ]

**ಪರಾಕಿ** (ನಾ). ಹನ್ನೆರಡು ದಿನ ಉಪವಾಸ ಮಾಡುವ ವ್ರತವನ್ನಾಚರಿಸುವ ವ್ಯಕ್ತಿ ; ಪರಾಕ ಕೃಚ್ಛ್ರವನ್ನು ಹಿಡಿದ ವ್ಯಕ್ತಿ : ಅಶನವ ಬಿಟ್ಟರೇನೋ ಪರಾಕಿಯಂತೆ ವಿಷಯವ ಬಿಟ್ಟರೇನೊ ಅಶಕ್ತ ನಪುಂಸಕನಂತೆ (ಉದಿಪ. ೧೨೨-೧೧೦) ; ಯತಿಗೆ ಪರಾಕಿಯಾಯಿತು ಮಾಯೆ (ಮಹಾದೇ. ಬ. ೧೮-೨೬); ಇತ್ತೊಡೆ ಬೇಟದಿನಾಯದೊಡೆ ಕಾಟಮದುಂ ಬೆಲೆವೆಣ್ಗೆ ಬಾಬುಕಂಬತ್ತುವ ಬೇಟಮಂ ಸುಡು ಪರಾಕಿಯ ನೋಂಪಿಯ ಗಂಡರಿರ್ಪರೊಳ್ ಕತ್ತುರಿ ಕಪ್ಪುರಂತೊಡಿಗೆ [ನಾಜು]ವದಂಬು ಲವಚ್ಛವಾಸಿಗಂ . . . ಸುಗ್ಗಿಯಲ್ಲವೇ (ಸೂಕ್ತಿಸು. ೮-೩೬೬) ; (ಅನಂಪು. ೮-೪೮ ನೋ). [ಸಂ. ಪರಾಕಿನ್]

**ಪರಾಕಿತನ** (ನಾ). ಪರಾಕಿಯೆಂಬ ವ್ರತದಲ್ಲಿರುವಿಕೆ ; ಪರಾಕಕೃಚ್ಛ್ರದ ವ್ರತಿಯಾಗಿರುವಿಕೆ : ಸುಭದ್ರೆಯುಂ ಸುಲಸೆಯರಿಂ ದಿರ್ವರ್ಮೊಣ್ಣೂ ಸುಗಳಾಗಿ ತರ್ಕವ್ಯಾಕರಣಂಗಳೊಳ್ಪರಿಣತೆವೆತ್ತಾ ವಿದ್ಯಾಗರ್ವದಿಂ ಕಿಱುಗೂಸುತನದೊಳ್ ಪರಾಕಿತನಮಂ ಕೈಕೊಂಡಿರುತ್ತಿರಲ್ (ಪುಣ್ಯಾಸ್ರ.೪-೨೯ ವ). [ಪರಾಕಿ+-ತನ]

**ಪರಾಕಿಸು** (ಕ್ರಿ). ಕಡೆಗಣಿಸು ; ಉಪೇಕ್ಷಿಸು : ಸಾಕ್ಕೆ ನಿಲ್ಲಿ ನಿಮ್ಮಣ್ಣಂದಿರೀಗೆಮ್ಮ ಹಾಕಿ ಹೋಗುವೆವೆಂದು ನೆನೆದ ಜೋಕೆಯ ಕಂಡುದಿಲ್ಲವೆ ಅವರೆನ್ನ ಪರಾಕಿಸಿ ಹೋಗರೆಯೆಂದ (ಭರತ. ೪೫-೧೦೪).

[ಪರಾಕು+-ಇಸು೩]

**ಪರಾಕು** (ನಾ). ೧. ಅಲಕ್ಷ್ಯ ; ಉಪೇಕ್ಷೆ ; ಉದಾಸೀನತೆ : ಕಾಪುರುಷರೈದಾಱು ಮಂದಿ ಸವಿಸಾಪದಲಿ ಕಾಡುವರು ಎನ್ನನು ನೀ ಪರಾಮರಿಸದೆ ಪರಾಕಾಗಿಹುದು ಲೇಸಲ್ಲ (ಹರಿಸಾ. ೬೪) ; ಓಲಗದೊಳಿರ್ದ ಮದನಂಗೆ ಬಿನ್ನೈಸಲ್ಪರಾಕಾದೊಡಿಂತೆಂದನು (ಜೈಮಿಭಾ.೩೦-೪೬); ಸುಲಿಂಗವ ಧರಿಸುವಾಗ ಪರಾಕುವಾದುದೊ (ಶಂಕದಾ. ೭-೧೪). ೨. ಲಕ್ಷ್ಯ ; ಗವುನ : ಅರಸೆ ನೋಡು ಪರಾಕಿನಲಿ (ಬಜ್ಜರಾ. ೧೦-೨೦) ; ನುಡಿಯಸೆ ಪರಾಕವಗವಿಸಿ ಮಾತಾಡ ವಂದಿಸನು ಯೋಗ್ಯರಿಗೆ (ಶಂಕದಾ. ೮-೫೬); ಅಂ ಪರಾಕಿನಿಂ ಕೇಳ್ದುದಿಲ್ಲ , ಆದೇನೆಂದವುದದಂ ಪೇಟಬ್ (ಮಿತ್ರಗೋ. ೨೫) ; ಊರಲ್ಲಿರುವ ಮಕ್ಕಳುಗಳೊಡನೆ ಮಕ್ಕಳಾಟಕೆಯ ಪರಾಕಿನಲ್ಲಿ ವಿದ್ಯಾಭ್ಯಾಸವು ಸಾಗದೆಂದು (ವಚಕಾ. ೭). ೩. ಎಚ್ಚರಿಕೆ; ಜಾಗರೂಕತೆ : ಮೆಟ್ಟಿಲುಗಳು ಇವೆ-ಎಂದು ಪರಾಕು ತಿಳಿಸದಿದ್ದರೆ ಅಪಾಯವಾಗುತ್ತಿತ್ತು (ಕಲನಿ. ೨೨೪). ೪. ಹೊಗಳಿಕೆ ; ಸ್ತುತಿ : ಜೋಕೆವಿಡಿದು ನೀಡುವೆಳೆಯ ಘಳಿಗೆಯ ಪರಾಕಿನೊಳಗೆ ಕೈಕೊಳುತ (ಭರತ. ೧-೩೮) ; ಇದು ಭೀಮನ ಪಾಲಿನ ಪರಾಕು (ಯಕ್ಷಬ.೪೫); ಜೈನ ಸಮಾಜದಲ್ಲಿ ಪದ್ಮಾವತಿದೇವಿ ಒಬ್ಬಳು ಆರಾಧ್ಯದೇವತೆ. ಅವಳ ಉತ್ಸವ ಪೂಜೆಗಳಲ್ಲಿಯೂ ವಾಡಿಕೆಯ ಪರಾಕುಗಳ ಪಠಣವಿದೆ (ಜಾನಗೀ. ೧೬). ೫. ಹಿರಿಯರನ್ನು ಸಂಬೋಧಿಸುವಾಗ (ಗಮನ ಸೆಳೆಯಲು) ಉಪಯೋಗಿಸುವ ಶಬ್ದ : ರಾಯ ಪರಾಕೆಂದು ಕೈವಾರಿಪ ತೊಂಡೆವಾಯ ಪಾಠಕಿಯರೊಪ್ಪಿದರು (ಮೋಹತ. ೪-೬) ; ಪುರಹರ ಪರಬ್ರಹ್ಮ ಮೂರುತಿ ಪರಾಕು (ನಂದಿಮಾ. ೫-೪೧); ಕೆಯ್ಯಂ ನೆಗಪಿ ವಂದಿಗಳ್ ಪರಾಕು ಪರಾಕೆಂದು ಬಿರುದಾವಳಿಯನುಚ್ಚರಿಸುತಿರ್ದರ್ (ಚಿಕ್ಕದೇ. ೧೩೪ ವ) ; ಇಕ್ಕೆಲದೊಳಂ ಜಿಯ್ಯ ಪರಾಕೆಂದು ನುಡಿದು (ನಸಮೋ. ೪-೩೮). ೬. ವೈಮರೆವು; ಅಜಾಗರೂಕತೆ :(೬).

ಪರಾಕು ಮಾಡು = ಪರಾಕಿಸು : ಪರಾಕು ಮಾಡದೆ ಪರಾಂಬರಿಸಿ ಎನ್ನ ಅಪರಾಧಂಗಳ ಕ್ಷಮಿಸೋ (ಪುರಂದ.೧-೬೩ ಪಲ್ಲವಿ); ಬೇಕಾದವರಾಲಿಸುವುದು ಬೇಡವಾಗೆ ಪರಾಕು ಮಾಡುವುದು (ಭರತ. ೮೦-೧೧೬); ವಾಕು ಕೇಳು ಪರಾಕು ಮಾಡದೆ (ವಿವಾಕ್ಯ. ೪೭ ಪಲ್ಲವಿ). **ಪರಾಕು ಹೇಳು, ಪರಾಕ್ ಹೇಳು** = 'ಪರಾಕು' ಎಂದು ಉಗ್ಘಡಿಸು : ಅರಸರು ನಾಟ್ಯಭವನಕ್ಕೆ ಬರುತ್ತಿದ್ದಾರೆಂಬುದನ್ನು ವಂದಿಮಾಗಧರು ಸಾರುತ್ತ ಮುಂದೆ ಮುಂದೆ ಪರಾಕು ಹೇಳುತ್ತ ನಡೆದಿದ್ದರು (ಕುಂಕುಮ. ೩೪); ಕೀರ್ತನೆಯ ಸ್ವಾರಸ್ಯಕ್ಕೆ ಭಂಗ ಬರಬಹುದೆಂದು ವಂದಿಮಾಗಧರು ಪರಾಕು ಹೇಳಲಿಲ್ಲ (ಶ್ರೀರಾಯ. ೬೨); ನಿಶಿವೆಣ್ಣಿಗೆ ಪರಾಕ್ ಹೇಳುತ್ತಾ ಬರುತ್ತಿರುವ ಆ ಹಿಂಡು ಯಾವ ಪ್ರಾಣಿಗಳದು? (ನಿಶಿಲು. ೧೭).

[<ಸಂ. ಪರಾಂಚ್/ತಮಿ. ಪರಾಕ್ಕು ; ತುಳು. ಪರಾಕು, ಪರಾಕೆ; ತೆಲು. ಪರಾಕು]

**ಪರಾಕ್ರಮ** (ನಾ). ೧. ದಂಡೆತ್ತಿ ಹೋಗುವುದು ; ಮೇಲೆ ಬೀಳುವುದು; ಆಕ್ರಮಣ. ೨. ಶೌರ್ಯ; ಕಲಿತನ: "ಸಾಹಸಂ ದಲವದಾನಂ

ವಿಕ್ರಾಂತಂ ಪರಾಕ್ರಮಂ . . . ವೀರ್ಯಂ" (ವಸ್ತುಕೋ. ೧೧೨-೮); ಅಯ ನಯ ಪರಾಕ್ರಮೋಪಾಶ್ರಯಂಗಳಂ ಶ್ರೀಗಡರ್ಪ್ಪ ಮಾಡಿದ ನಿಸ್ನಿಂದ್ರಿಯ ಜಯಮೆ ಕೂಡೆ ಲೋಕತ್ರಯದಿಂ ಪೊಗಟ್ಟುಸಿದುದು (ಪಂಪಭಾ.೯-೩೫); ಕಡು ಪರಾಕ್ರಮ ಪಿತ್ತ ನೆತ್ತಿಯ ಹಿಡಿದು ನೀ ಗಳಹಿದರೆ (ಕುಮ್ಮಾ.ಕ. ೯-೧೧). **೩.** ಶ್ರಮ ; ಪ್ರಯತ್ನ; ಉದ್ಯಮ : (?). **೪.** ಶೌರ್ಯವುಳ್ಳವನು ; ಬಲಶಾಲಿ ; ಪರಾಕ್ರಮಿ : ಉರ್ಬ್ಬಿಯೊಳ್ಸಕಲಮೊಳೊರ್ಬ್ಬನೆ ಗಣ್ಡ ಶ್ರೀಚನ್ನಮನೆನ್ದು ಮೊಳ್ಪಡೆಯನ್ ಗೊಣ್ದಿ ಸುತರಂ ಪರಾಕ್ರಮನ್ (ಎಇ. XXIV, ೨೬-೭ ; ಸು. 885).

**ಪರಾಕ್ರಮಧನ**=ಶೌರ್ಯವೇ ಧನವಾದವನು; ಬಹಳ ಶೂರ; ಒಂದು ಬಿರುದು : ರಿಪುಕುಳಪರ್ಬ್ಬತ ಕುಳಿಶಾಯುಧಂ ಪರಾಕ್ರಮ ಧನನೋ ಸೂರ್ಬ್ಬರ ಸಂನಾಹಂ ಸಕಳೊರ್ಬ್ಬರೆಯೊಳ್ ಜಟ್ಟಿಸೆಟ್ಟಿ ಬೀರರ ಬೀರಂ (ಕೊಲ್ಹಾ.ಶಾ. ೮-೫೮ ; 1147). **ಪರಾಕ್ರಮ ಧವಳ**= ಶೌರ್ಯದಿಂದ ಪ್ರಸಿದ್ಧನಾದವನು ; ಕೀರ್ತಿಹೊಂದಿದವನು ; ಒಂದು ಬಿರುದು : ಶ್ರೀಗೆ ಘಳಂ ಚಾಗಂ ವಾಕ್‌ಶ್ರೀಗೆ ಘಳಂ ಸರ್ವಶಾಸ್ತ್ರ ಪರಿಣತಿ . . . ಎಂದಿಂತಾಗಳುವಮಜಾವೆಸಗಿದಂ ಪರಾಕ್ರಮಧವಳಂ (ಪಂಪಭಾ. ೭-೧) ; ಆತನ ತತ್ಪುತ್ರಂ ನುಡಿದಂತೆ ಗಂಡ ಪರಾಕ್ರಮ ಧವಳಂ . . . ಮಹಾಸಾಮನ್ತಂ ಹುಳ್ಳಿಯ ನಾಯಕಂ (ಎಕ.VII (R), ನಾಗಮಂ. ೧೩೨-೪೬ ;ಸು. 1179). [ಸಂ.]

**ಪರಾಕ್ರಮಣ** (ನಾ). ಶತ್ರುಗಳ ದಾಳಿ ; ಅನ್ಯರ ಮುತ್ತಿಗೆ : ಪರಾಕ್ರಮಣ ತಟ್ಟಿ ಮಾಡಿ ಸಕಲ ಸಂಕ್ರಮಣಗಳಿಗೂ ವಿದ್ಯಾಕ್ಷೇತ್ರವನ್ನು ಹದವಮಾಡುವದು ಜಿಗುಟು ಶ್ರದ್ಧೆಯ ಕಾರ್ಯ (ನೆಲಮು. VI, ಮುನ್ನುಡಿ) ; ಕನ್ನಡದೇಶ ತನ್ನ ಭಾಷೆಯ ಮೇಲಿದ್ದ ಪರಾಕ್ರಮಣವನ್ನು ಬಿಡಿಸಿಕೊಂಡು ಬೆಳೆಯಬೇಕು (ಸೌಂದಸ. ೩೬೪). [ಪರ್‌₃+ಆಕ್ರಮಣ]

**ಪರಾಕ್ರಮಭೀಮ** (ನಾ). ಶೌರ್ಯದಲ್ಲಿ ಭೀಮನಂತಿರುವವನು ; ಮಹಾ ಪರಾಕ್ರಮಶಾಲಿ ; ಒಂದು ಬಿರುದು : ಶ್ರೀ ಮೈಳಾರ ಚಮೂಪಂ ಸಾಮಜರಿಪುವಿಕ್ರಮಂ ಪರಾಕ್ರಮಭೀಮಂ (ಕೊಲ್ಹಾ.ಶಾ. ೮-೫೨ ; 1147). [ಪರಾಕ್ರಮ+ಭೀಮ]

**ಪರಾಕ್ರಮಶಾಲಿ** (ನಾ). =ಪರಾಕ್ರಮಿ : ಯಾವ ಪುರುಷನು ತಾನೇ ನಿಮ್ಮಷ್ಟು ಪರಾಕ್ರಮಶಾಲಿಯಾಗಿರುವನು ? (ದೌಲತ್. ೧೪೯) ; ರಾಜ ಒಡೆಯರು ಅಪ್ರತಿಮ ಪರಾಕ್ರಮಶಾಲಿಗಳೆಂದು ಪ್ರಸಿದ್ಧಿಗೆ ಬರುತ್ತಿದ್ದರು (ಶ್ರೀರಾಯ. ೫). [ಸಂ. ಪರಾಕ್ರಮಶಾಲಿನ್]

**ಪರಾಕ್ರಮಹೀನ** (ನಾ). ಶೌರ್ಯವಿಲ್ಲದವನು ; ಹೇಡಿ : ತವ ಸೂನುವಿನ ಸುಭಟರು ಪರಾಕ್ರಮಹೀನರೇ (ಕುಮ್ಮಾದ್ರೋ. ೨-೨೯) ; ನೀನು ಈಗ ನಿಸ್ಸತ್ವನಾಗಿರುವೆ ! ಪರಾಕ್ರಮಹೀನನಾಗಿರುವೆ (ಶ್ರೀರಾಯ. ೨೯೧). [ಪರಾಕ್ರಮ+ಹೀನ]

**ಪರಾಕ್ರಮಿ** (ನಾ). ಶೌರ್ಯವುಳ್ಳವನು ; ಕಡುಗಲಿ ; ವೀರ : ರವಿಸುತನಂತೆವೋಲಧಿಕದಾನಿ ಪರಾಕ್ರಮಿ ಸಿಂಗದಂತೆವೋಲ್ (ಶಮ.ದ. ೨೧೪ ಪ್ರಯೋ.) ; ಮೇದಿನಿಯೊಳಾರಾದೊಡಂ ಮಿಡುಕುಳ್ಳೊಡುನ್ನತ ಪರಾಕ್ರಮಿ ತಡೆಯಲಿ ವಾಜಿಯನು (ಜೈಮಿಭಾ. ೨-೨೮) ; ಅವನು ರಾಮನಂತೆ ವೀರ . . . ಅರ್ಜುನನಂತೆ ಪರಾಕ್ರಮಿ ಎಂಬಿವೇ ಕನ್ನಡಿಗರ ಮನೆಮಾತುಗಳು (ಸಾಹಿಸ. ೧೫). [ಸಂ. ಪರಾಕ್ರಮಿನ್]

**ಪರಾಖ್ಯಾನ** (ನಾ). **೧.** ಬೇರೆಯವರ ವೃತ್ತಾಂತ. **೨.** [ಕಾವ್ಯಮಿ] ಹೋಲಿಸುವಾಗ ಪರಸ್ಪರ ಸಾಮ್ಯವಿಲ್ಲದ ವಿಶೇಷಣಗಳನ್ನು ಹೇಳುವ ಒಂದು ಅಲಂಕಾರ : ಉಪಮಾನ ಪ್ರತಿವಸ್ತುರೂಪಕ ... ಪರಾಖ್ಯಾನ ... ಎಂದುಪಮಾಭೇದಮಿವಕ್ಕುಂ (ಕಾವ್ಯಾವ. ೬೬೫). [ಪರ್‌₃+ಆಖ್ಯಾನ]

**ಪರಾಗ** (ನಾ). **೧.** ಹೂವಿನ ಹುಡಿ ; ಪುಷ್ಪಧೂಳಿ : "ಕುಸುಮದ ರಜಂ ಪರಾಗಂ" (ವಸ್ತುಕೋ. ೩೧-೧೧) ; ಪರಾಗರಾಗಮುದಿತಾಶಾಭಾಸಮುಂದ್ಯನ್ಮಧೂನ್ಮದಭೃಂಗಧ್ವನಿ ಮುಂಗಳಧ್ವನಿಯೆನಲ್ ಸಾಲ್ವನ್ನೆಗಂ ತಾನೆ ತಕ್ಕುದು ಕಾಮಂಗೆ ವಿವಾಹಮಂಟಪಮೆನಲ್ಕಾ ಮಾಧವೀ ಮಂಟಪಂ (ಪಂಪಭಾ. ೫-೬) ; ನೂಲ ದುಕೂಲಮನುಟ್ಟು ಪರಾಗದ ತಿಲಕವನಿಕ್ಕಿ (ನಂಬಿರ. ೧೦-೬೨) ; ನವಪರಾಗದ ತಿಲಕಮಂ ರಚಿಸಿ ಮಲ್ಲಿಗೆಯ ವಿವಿಧ ಮುಕುಳದ ಕಂಠಮಾಲೆಯಂ ತಳೆದು . . . ಮಂಜುಳಾಂಗಂ ಮೆರೆದನು (ಚೆಬಪು. ೩೫-೫) ; ಕೇಸರಗಳು ಪರಾಗವನ್ನು (Pollen-grains) ಕೊಡುತ್ತವೆ (ಸಸ್ಯಶಾ. ೪೯). **೨.** ಧೂಳು ; ಪುಡಿ ; ಚೂರ್ಣ : "ರಜದಲ್ಲಿಯುಂ ಪರಾಗಮೆಂಬುದು" (ಹಲಾಯು. ೧೩೫-೭೩). **೩.** (ಸ್ನಾನ ಮಾಡಿದ ನಂತರ ಉಪಯೋಗಿಸುವ) ಗಂಧ, ಬುಕ್ಕಿಟ್ಟು ಮುಂತಾದ ಸುಗಂಧದ ಪುಡಿ. **೪.** ಚಂದನ. **೫.** ಸೂರ್ಯ ಅಥವಾ ಚಂದ್ರಗ್ರಹಣ. **೬.** ಕೀರ್ತಿ ; ಖ್ಯಾತಿ. **೭.** ಸ್ವಾತಂತ್ರ್ಯ. [ಸಂ.]

**ಪರಾಗಕೇಸರ** (ನಾ). "ಹೂವಿನ ಗಿಡದ ಪುರುಷಾಂಗ" (ಅಸಂನಾ). [ಪರಾಗ+ಕೇಸರ]

**ಪರಾಗಕೋಶ** (ನಾ). ಹೂವಿನ ಧೂಳಿಯಿರುವ ಕೇಸರಭಾಗ : ಪುಷ್ಪಪೀಠದಿಂದ ಕೋಲಿನಂತೆ ಆರಂಭವಾಗುವ ಭಾಗವೆ ಕೇಸರದಂಡ (Filament). ಇದನ್ನು ಪರಾಗದಂಡವೆಂದೂ ಕರೆಯುವರು. ಅದರ ತುದಿಯಲ್ಲಿ ಎರಡು ಮಡಿಕೆಯಾಕಾರದ ಕೋಶವಿದೆ. ಇದೇ ಪರಾಗಕೋಶ (Anther)(ಸಸ್ಯಶಾ. ೫೮) ; ಪುಷ್ಪಪರಾಗವಿರುವ ಕೇಸರಭಾಗ ; ಪರಾಗಕೋಶ (Anther. ಇಂಕಸಿ). [ಪರಾಗ+ಕೋಶ]

**ಪರಾಗತಿ** (ನಾ). ಹಿಂದಕ್ಕೆ ಹೋಗುವುದು,—ಚಲಿಸುವಿಕೆ : ಪ್ರಗತಿಯಲ್ಲಿಯೇ ಪರಾಗತಿಯ ಕಾಲ್ತೊಡಕೂ ಇದ್ದುಬಿಟ್ಟಿದೆ (ಕರ್ನಾಪೂ. ೭). [ಸಂ.]

**ಪರಾಗಪಾಂಸು** (ನಾ). =ಪರಾಗ ೧ : ತಾವರೆಯೊಳ್ಪರಾಗಪಾಂಸುಗ [ಪಾಠಾಂ. ಸಳ, ಶುಳ]ಮೆಳದುಂಬಿಗಳ್ಕೊಟಿ ವಪ್ಪೊಪ್ಪದನೂಪುರಹೇಮ ಕಿಂಕಿಣೀಕಳರವಮುಣ್ಕೆ ಬಾಲೆಯರದೇಂ ಪೊಜಮಟ್ಟರೊ ನಾಟ್ಯಶಾಲೆಯಂ (ಮಲ್ಲಿಪು. ೮-೭೦) ; ಕುಸುಮತರುಗಳ್ ಮರುದಾಹತಿಯಿಂ ಪರಾಗಪಾಂಸುಪ್ರಸರಂಬೆರಸರಲಂ ಸುರಿದಪುವು (ಜಗವಿ. ೪-೭೦). [ಪರಾಗ+ಪಾಂಸು]

**ಪರಾಗಸ್ಪರ್ಶ** (ನಾ). (ಸಸ್ಯಗಳಲ್ಲಿ) ಗರ್ಭಾಧಾನಕ್ಕೆ, ಹೂವಿನ ಧೂಳಿಯನ್ನು ಶಲಾಕಾಗ್ರದ ಮೇಲೆ ಚಿಮುಕಿಸುವುದು : ಪರಾಗಸ್ಪರ್ಶವೆಂದರೆ ಪರಾಗಕೋಶದಲ್ಲಿ ಉತ್ಪತ್ತಿಯಾದ ಪರಾಗವನ್ನು ಅದೇ ಹೂವಿನ ಶಲಾಕಾಗ್ರದ ಮೇಲಾಗಲಿ ಅಥವಾ ಬೇರೆ ಹೂವಿನ ಶಲಾಕಾಗ್ರದ ಮೇಲಾಗಲಿ ಬೀಳಿಸುವುದು ಎಂದರ್ಥ (ಸಸ್ಯಶಾ. ೬೦) ; ಗಾಳಿ, ನೀರು ಮತ್ತು ಪ್ರಾಣಿಗಳು—ಈ ಮೂರು ಪ್ರತಿನಿಧಿಗಳಿಂದ ಪರಾಗಸ್ಪರ್ಶವಾಗುವದು (Pollination) (ಸಸ್ಯಶಾ. ೬೦). [ಪರಾಗ+ಸ್ಪರ್ಶ]

**ಪರಾಗ್ರೂಪ** (ನಾ). ಹೊರಗೆ ಕಾಣುವ ವಸ್ತು ; ಎದುರಿಗೆ ಬಹಿರಂಗವಾಗಿ ತೋರುವ ಆಕಾರ : ಆತ್ಮನು ಪ್ರತ್ಯಗ್ರೂಪನು ಎಂದರೆ ನಮ್ಮೊಳಗಿನ ಸ್ವರೂಪ; ಅನಾತ್ಮವು ಪರಾಗ್ರೂಪ ಎಂದರೆ ನಮಗೆ ಹೊರಗೆ ಎದುರಿಗೆ ತೋರುವ ವಸ್ತು (ಬ್ರಹ್ಮಭಾ. ೨-೧೬) ; ಐರೋಪ್ಯ ಜೀವನ, ಲಲಿತಕಲೆಗಳು ಪರಾಗ್ರೂಪದಲ್ಲಿ ಅಭಿವ್ಯಕ್ತವಾದರೆ ಭಾರತೀಯ ಜೀವನ ಲಲಿತಕಲೆಗಳು ಪ್ರತ್ಯಕ್ ರೂಪಿನಲ್ಲಿ ಅಭಿವ್ಯಕ್ತವಾಗಿವೆ (ಭಾರದ. ೫೭೭). [ಸಂ.]

**ಪರಾಙ್ಮುಖ** (ಗು). ೧. ಮುಖವನ್ನು ತಿರುಗಿಸಿದ ; ವಿಮುಖವಾದ. ೨. (ಬೆನ್ನು, ಮನಸ್ಸು ಇತ್ಯಾದಿಗಳನ್ನು) ಬೇರೆ ಕಡೆಗೆ ತಿರುಗಿಸಿದ. ೩. ಉಪೇಕ್ಷೆ ಮಾಡಿದ ; ಕಡೆಗಣಿಸಿದ : ಹೀನಮುಖ ಬಹುಮುಖ ಪರಾಙ್ಮುಖ . . . ಬಹಿರ್ಮುಖದ ಕಾರ್ಯದಲಿ ಆ ನರೇಂದ್ರನ ವರ್ತನಕೆ ದುಸ್ಥಾನವಾಗದೆ ಬಿಡದು (ಕುಸ್ಕ್ಯಅ. ೮-೩೭). ೪. ವಿರೋಧವಾದ ; ಪ್ರತಿಕೂಲವಾದ. (ನಾ). ೫. ಹಿಮ್ಮೆಟ್ಟುವುದು ; ಹಿಂದಿರುಗುವಿಕೆ ; ವಿಮುಖವಾಗುವುದು : ನಿಜೋಪನ್ಯಸ್ತಮಪ್ಪ ಕಾಪಿಲಸಿದ್ಧಾಂತಮುಮಂ ಯೋಗಶಾಸ್ತ್ರಮುಮಂ ತೋಱಿ ಲೋಕಮಂ ಸಮ್ಯಗ್‍ಜ್ಞಾನಪರಾಙ್ಮುಖಂ ಮಾಡಿರೆ (ಆದಿಪು.೯-೯೩ ಪ) ; ರಾವಣಂ ವಿಘ್ನವಿನಾಯಕಾಸ್ತ್ರದಿಂದಿಸುವುದುಮದಂ ಲಕ್ಷ್ಮಣಂ ಸಿದ್ಧಾರ್ಥವಿದ್ಯಾಶಿಲೀಮುಖದಿಂ ಪರಾಙ್ಮುಖಂಮಾಡುವುದುಂ (ಪಂಪರಾ.೧೪-೧೭೨ ಪ). ೬. ವಿಮುಖನಾದವನು : "ಪರಾಙ್ಮುಖಾ, ಪರಾಚೀನಃ—೨ ಅಭಿಮುಖವಾಗದೆ ಹಿಂದೆ ತಿರುಗಿದವನ ಪೆಸರುಗಳು" (ಸಿದ್ಧಾಂತಿ. ೩೩೧) ; ಅಂತು ವನಿತಾಸುಖಪರಾಙ್ಮುಖಂ ಪೊೞ್ತುಗಳೆವುತ್ತಿರ್ದೊಂದುದಿವಸಂ ಪ್ರಭಾತಸಮಯದೊಳೊಡ್ಡೋಲಗದೊಳಿರೆ (ಕಾದಂಪೂ. ೨೩) ; ಮುನ್ನಮೊರ್ಮೆ ದಶಮುಖಂಗೆ ರಣಮುಖದೊಳಿರ್ದಿರ್ಚಿದ ವರುಣನಂ ಪರಾಙ್ಮುಖಂ ಮಾಡಿ ಗೆಲ್ದು ಕುಡೆ (ಪಂಪರಾ. ೧೧-೧೦೩ ಪ) ; ಬಡತನಗಳಡಸಿದೊಡೆ ಬಂಧುಗಳೆಡಹಿ ಕಾಣರು ಭಂಟತಾನಾದೊಡೆಯು ಬಂದಾಪತ್ತಿನೊಳಗೆ ಪರಾಙ್ಮುಖನೆಯಾಗಿ ನುಡಿಸದವನೇ ಹಗೆ (ಕುಸ್ಕ್ಯಉ. ೩-೬೪) ; ಪುಣ್ಯದ ಆಶೆ, ಪಾಪದ ಅಂಜಿಕೆ ಅವನನ್ನು ನಿಯತಕರ್ಮದಿಂದ ಪರಾಙ್ಮುಖನನ್ನಾಗಿ ಮಾಡಿದೆ (ಭಾರದ. ೧೧೭). ೭. [ನಾಟ್ಯ] ಹಸ್ತಚಲನೆಯ ಉತ್ತಾನ, ಅಧೋಮುಖ, ಪಾರ್ಶ್ವತಳ, ಅಗ್ರತಳ, ಸ್ವಸಮ್ಮುಖತಳ, ಊರ್ಧ್ವಮುಖ, ಅಧೋವದನ, ಪರಾಙ್ಮುಖ, ಸಮ್ಮುಖ, ಪಾರ್ಶ್ವತೋಮುಖ, ಊರ್ಧ್ವಗತಮುಖ, ಅಧೋಗತಮುಖ, ಪಾರ್ಶ್ವಗತ, ಅಗ್ರಗತ, ಸಮ್ಮುಖಾಗತಗಳೆಂಬ ೧೫ ಬಗೆಗಳಲ್ಲಿ ಒಂದು : ಉತ್ತಾನ, ಅಧೋಮುಖ ಪಾರ್ಶ್ವತಳ, ಅಗ್ರತಳ, ಸ್ವಸಮ್ಮುಖತಳ, ಊರ್ಧ್ವಮುಖ, ಅಧೋವದನ, ಪರಾಙ್ಮುಖ . . . ಸಮ್ಮುಖಾಗತ — ಈ ಹದಿನೈದು ಕರತಳ ಭೇದಂಗಳ್ (ಲಾಸ್ಯರಂ. ೪-೪ ಪ). [ಸಂ.]

**ಪರಾಙ್ಮುಖತೆ** (ನಾ). ೧. ಮುಖವನ್ನು ಬೇರೆ ಕಡೆಗೆ ತಿರುಗಿಸುವುದು ; ವಿಮುಖವಾಗುವಿಕೆ. ೨. ಹೇವರಿಕೆ ; ಇಷ್ಟವಿಲ್ಲದಿರುವುದು ; ಜುಗುಪ್ಸೆ: 'ಧರ್ಮಪರಾಙ್ಮುಖತೆ' ಪರಾ.

[ಸಂ. ಪರಾಙ್ಮುಖತಾ]

**ಪರಾಙ್ಮುಖಿಸು** (ಕ್ರಿ). ಕಡೆಗಣಿಸು ; ಅಲಕ್ಷ್ಯ ಮಾಡು ; ತಿರಸ್ಕರಿಸು : ಆ ತೃಷ್ಣೆಗಳನೆಲ್ಲ ವೈರಾಗ್ಯದಿಂ ನಿಪ್ಪಟ ನಿರೋಧಿಸಿ ಪರಾಙ್ಮುಖಿಸಿ ನೀಗಿ ಬಿಸುಟವುಗಳಿಂ ನೆರೆ ಮುಕ್ತನಹುದೆ ದುಃಖನಿರೋಧವೆಂಬ ಮೂಱನೆಯಾರ್ಯಸತ್ಯ (ವೈಶಾಖ. ೮೪-೫೭೪).

[ಪರಾಙ್ಮುಖ + -ಇಸು$_3$]

**ಪರಾಚೀನ** (ಗು). ೧. ಬೇರೆಯ ಕಡೆಗೆ ತಿರುಗಿದ ; ವಿರುದ್ಧವಾದ ದಿಕ್ಕಿಗೆ ತಿರುಗಿಕೊಂಡ ; ವಿಮುಖವಾದ. ೨. ಪಶ್ಚಿಮದೇಶದಲ್ಲಿರುವ. (ನಾ). ೩. ಬೇರೆಯ ಕಡೆಗೆ ತಿರುಗುವುದು ; ವಿಮುಖವಾಗುವಿಕೆ : "ವಿಪರೀತಂ, ಪರಾಚೀನಂ—ಈ ೨ ಹಿಂದುಮುಂದಾಗುಹ"(ಪಲಾಯು. ೧೨೫-೭೨) ; "ವಿಪರೀತಂ ಪರಾಚೀನಮೆಂದೊಡದು ಹಿಂದುಮುಂದೆಂಬುದಕೆ ಪೆಸರೆನಿಕ್ಕುಂ" (ಮಂಗರಾ. ೧೩೦-೧೫). ೪. ವಿಮುಖನಾದವನು:"ಪರಾಙ್ಮುಖಃ, ಪರಾಚೀನಃ—೨ ಅಭಿಮುಖವಾಗದೆ ಹಿಂದೆ ತಿರುಗಿದವನ ಪೆಸರುಗಳು" (ಸಿದ್ಧಾಂತಿ.೩೩೧). [ಸಂ.]

**ಪರಾಜಯ**(ನಾ). ಸೋಲು ; ಅಪಜಯ: "ಪರಾಜಯಃ, ರಣಭಂಗಃ—ಕಾಳಗದಲ್ಲಿ ಸೋತುಹೋಗುವಿಕೆ" (ಸಿದ್ಧಾಂತಿ. ೨೭೧) ; ಸಲೆ ಪರಾಜಯ ಜಯವನೀಶ್ವರ ತಿಳಿವ (ಕೌಶಿರಾ. ೨೧-೨೫) ; ರಾಜಶೇಖರನುರಿಗಣ್ಣಿಂದ ಸ್ಮರಗೆ ಪರಾಜಯವಾಯ್ತು (ಮೋಹತ. ೮-೪) ; ಪರಾಜಯವಿದುವೆ ಪರಮಜಯವಿಂದೆನಗೆ ! (ಚಿತ್ರಾಂಗ. ೩೯-೧೦೫೨). [ಸಂ.]

**ಪರಾಜಿತ** (ಗು). ೧. ಸೋತ ; ಸೋತು ಹೋದ ; ಸೋಲಿಗೆ ಗುರಿಯಾದ : ಸರಸಿರುಹಮಿಂದುದೀಧಿತಿಪರಾಜಿತ ಶ್ರೀವಿಲಾಸಮಾಸಿನ್ನ ಮುಖಂ (ಕವಿರಾ. ೩-೭೧). (ನಾ). ೨. ಸೋತು ಹೋದ ವ್ಯಕ್ತಿ ; ಸೋತು ಹೋದವನು : "ಪರಾಜಿತಃ, ಪರಾಭೂತಃ—೨ ಸೋತು ಹೋದವನ ಹೆಸರುಗಳು" (ಸಿದ್ಧಾಂತಿ. ೨೭೧) ; ಈ ಅಂಬಿಗರ ಹುಡುಗಿಯಿಂದ ಪರಾಜಿತನಾದ ರಾಜಬಡೆಯನು ಯಾರೆಂಬುದು . . . ತಿಳಿದಿದ್ದರೆ ಸಾಕು (ಶ್ರೀರಾಯ. ೫) ; ಪರಾಜಿತನೆಂದರೆ ಹೆಣ್ಣಿನ ತಂದೆ ಎಂದು ಇಂದು ಮೊದಲ ಬಾರಿ ತಮ್ಮ ಅನುಭವದಿಂದ ಅವರು ಅರಿದಂತಾಗಿತ್ತು (ಹೊಸಕ್ತಿ. ೪೬). ೩. ವಾತೂಲಾಗಮದ ಹನ್ನೆರಡು ಭೇದಗಳಲ್ಲಿ ಒಂದು : ವಾತೂಲ ಉತ್ತರವಾತೂಲ ಕಾಲಜ್ಞಾನ ಪರಾಜಿತ . . . ವಿಶ್ವಾತ್ಮಕಾಗಮವೆಂದು ವಾತೂಲಾಗಮದ ದ್ವಾದಶಭೇದಂಗಳು(ವಿವೇಕ. ೭೨).

**ಪರಾಜಿತಂ ಮಾಡು** = ಸೋಲಿಸು : ಅರಜನಿಯಂ ವಿರಜನಿಯಂ ಪರಾಜಿತಂ ಮಾಡಿ ಭಾವಿಸುತ್ತಿರ್ದಂ ಪನ್ನೆರಡುಮನುಪ್ರೇಕ್ಷೆಗಳಂ (ಶಾಂತಿಪು. ೯-೯೯). [ಸಂ.]

**ಪರಾಜ್ಞಾನ** (ನಾ). ಶ್ರೇಷ್ಠವಾದ ಜ್ಞಾನ ; ಬ್ರಹ್ಮಜ್ಞಾನ : ನಿದ್ರೆಯೊಳಗಱಿಯದಿರ್ದ ಮಾನಿಸನನೆಬ್ಬಿಸುವ ಮಾಳ್ಕೆಯಿಂದಾ ಪರಾಜ್ಞಾನದೇಳ್ಗೆಯಿಂದೇ ನಂದಿ ಭೃಂಗೀಶಾದಿ ಗಣನಿಕರದೊಳಗೆಯಾನಂದದಿಂ ವರ್ತಿಸೂದ ಪರಸುಜ್ಞಾನವೈ (ವೀಶೈಪು. ೬-೬-೫೭). [ಸಂ.]

**ಪರಾತ**, ಪರಾತು, ಪರಾಯತ, ಬರಾತ$_1$ (ನಾ). ಅಗಲವಾದ ಹಾಗೂ ಅಂಚುಳ್ಳ ದೊಡ್ಡಮರಗೆಯಾಕಾರದ ಲೋಹದ ಪಾತ್ರೆ ; ಹರಿವಾಣ : ಒಂದು ದೊಡ್ಡ ಬೆಳ್ಳಿಯ ಪರಾತದಲ್ಲಿ ಉತ್ತಮವಾದ ಚೀನಾಂಬರ, ವಕ್ಷವಸ್ತ್ರ . . . ಎಲ್ಲವನ್ನೂ ತಂದು (ಶಾಂತಲಾ. ೩೫) ; ದೊಡ್ಡದೊಂದು ಪರಾತದಲ್ಲಿ ಹಿಟ್ಟನ್ನು ಸುರವಿಕೊಂಡಳು (ಮೊಪಾಸಾ. ೫) ; ಮತ್ತೊಂದೆಡೆ ದೊಡ್ಡ ಪರಾತದಲ್ಲಿ ದೊಡ್ಡ ದೊಡ್ಡ ಒಟ್ಟಿದ ಖಾರದಾಣಿಯ ರಾಶಿ ! (ವೈನಿ. ೧೫೩). **ಪರಾತು :** ಬಕ್ಕರಿ ಬಡಿಯುವ ಪರಾತಿನ ಮೇಲೆ ಪಟಪಟ ಹನಿಯುದುರಿಸುತ್ತ ಹಿಟ್ಟನ್ನು ನಾದಿದಳು (ಅನ್ನ. ೩೪) ; ಅಧಿಕಾರದಿಂದ ವಂಚಿತರಾಗುವ ದುಃಖದ ಭಾರ ನಮ್ಮ ಪಾಲಿಗೆ—'ಆವೇದನೆ, ನಿವೇದನೆಗಳ ಪರಾತನ್ನು ತಲೆಯ ಮೇಲೆ ಹೊತ್ತುಕೊಂಡಷ್ಟು ಭಾರವಾಗದು' ಎಂದು ನಾನು ಹೇಳಿದ್ದೆ (ನಿಬಂಧ. I, ೪೯೯). **ಪರಾಯತ :** ಆ ನೀರನ್ನು ಚೆಲ್ಲುವುದಕ್ಕೆ ಚಿನ್ನದ ದೊಡ್ಡ ಪರಾಯತಗಳನ್ನೂ ಸಿದ್ಧಪಡಿಸಿದರು (ಗುಣಸಾ. ೬೯). **ಬರಾತ$_1$ :** ದೊಡ್ಡ ದೊಡ್ಡಬರಾತಗಳಲ್ಲಿ ಅನ್ನಗಳ ತುಂಬಿಸಿ ವರಸೆಯಾಗಿ . . . ಇಡಿಸಿದನು (ಕಥಾಸಂ. IV, ೮೧).

[←ಹಿಂ. ಮರಾ. ಪರಾತ್]

**ಪರಾತು** 'ಪರಾತ' ನೋ.

**ಪರಾತ್ಪರ** (ಗು). ೧. ಅತ್ಯಂತ ಶ್ರೇಷ್ಠವಾದ ; ಪರಮ : ಸಾಕ್ಷಾತ್‍ಪರಾತ್ಪರ [ಪಾಠಾಂ. ಪರಾಪರ]ಸದಮಳಿತ ಶಿವಲಿಂಗಮಂ ತೋಱಿದಪೆನಿದೆ ಬನ್ನಿ (ಒಸಪು. ೫೧-೮೦). (ನಾ). ೨. ಅತ್ಯಂತ ಶ್ರೇಷ್ಠವಾದುದು ; ಪರಮಾರ್ಥ : ಪ್ರಸಾದವೇ ಗುರು ಪ್ರಸಾದವೇ ಲಿಂಗ ಪ್ರಸಾದವೇ ಜಂಗಮ ಪ್ರಸಾದವೇ ಪರಾತ್ಪರ (ಉರಿಶ. ೧೨೧-೧೦೯);

ಜಯ ಪರಾತ್ಪರವೆ ಜಯ (ಪ್ರಾರ್ಥನಾ. ೧-೫೨). **೩.** ಬಹಳ ಶ್ರೇಷ್ಠವಾದ ಸ್ಥಾನ ; ಮೋಕ್ಷ ; ಮುಕ್ತಿ : ಪರಾತ್ಪರ [ಪಾಠಾಂ. ಪರಾಪರ]ಕ್ಕೆ ಹೋಗಿ ಪರಮನ ಸುದ್ದಿಯ ಕೊಂಡು ಬರುತ್ತಿದ್ದನೊಬ್ಬ (ಬಸವ. ೯೨೬). **೪.** ಬಹಳ ಶ್ರೇಷ್ಠನಾದವನು ; ಪರಮಪುರುಷ : ಪರಮಭಟ್ಟಾರಕ ಪರಾತ್ಪರ [ಪಾಠಾಂ. ಪರಾಪರ] . . . ಪರಮಾತ್ಮ ಪರಮೇಶ (ಬಸವು. ೨-೧೬) ; ಬಿಂದು ಮಾಯೆಗಳಿಲ್ಲದಂದು . . . ಈ ತತ್ತ್ವಮಸ್ಯಾದಿ ವಾಕ್ಯಾರ್ಥವಿಲ್ಲದಂದು ಅಲ್ಲಿಂದತ್ತ ನೀನೇ ಪರಾತ್ಪರನು ನೋಡಾ (ಸಿದ್ಧೇಶ. ೬-೧೬). [ಸಂ.]

**ಪರಾತ್ಪರತೆ** (ನಾ). ಅತಿ ಶ್ರೇಷ್ಠಸ್ಥಾನ : ಮೋಹದ ಈ ಪರಾತ್ಪರತೆಯನ್ನು ನೀವು ಒಪ್ಪುತ್ತೀರಾ ? (ಸಮಜೀ. ೩೧೧).[ಸಂ. ಪರಾತ್ಪರತಾ]

**ಪರಾತ್ಮ** (ನಾ). ದೇವರು ; ಪರಮಾತ್ಮ : ಪರಮಹಂಸ ಪರಾತ್ಮ ಪರಮೇಶ್ವರ . . . ಪರೋತ್ತಮ ಕರುಣಿಸುವುದೆಂದ (ಕುಮಾ.ಆ. ೬-೫೭) ; ಸತ್ಯವಹ ಲಕ್ಷ್ಯಾರ್ಥವನು ಮಿಗೆ ತಥ್ಯ ಲಕ್ಷಣೆಯಿಂದ ಲಕ್ಷಿಸೆ ಪ್ರತ್ಯಗಾತ್ಮ ಪರಾತ್ಮರೈಕ್ಯವು ಸಿದ್ಧಿಸುವದೆಂದ (ಅಮೃತ. ೩-೨೨). [ಪರ<sub></sub>೩ + ಆತ್ಮ]

**ಪರಾಧಿ** (ನಾ). **೧.** ಬೇಟೆ; ಶಿಕಾರಿ. 'ಪಾರಧಿ' ಪರಾ. **೨.** ಅತಿಶಯವಾದ ಮಾನಸಿಕ ಕ್ಲೇಶ. [ಸಂ.]

**ಪರಾಧೀನ**(ಗು). **೧.** ಬೇರೆಯವರ ಅಂಕೆಗೆ ಒಳಪಟ್ಟ; ಮತ್ತೊಬ್ಬರ ಕೈಕೆಳಗಿನ ; ಅನ್ಯರಿಗೆ ಅಧೀನವಾದ. (ನಾ). **೨.** ಬೇರೆಯವರ ಅಧೀನದಲ್ಲಿರುವಿಕೆ ; ಪರಾಧೀನತೆ : "ವ್ಯಾಪಾರದಲಿ ಸಂತೋಷದಲಿ ಪರಾಧೀನದಲಿ . . . ಕ್ಷಣಾಖ್ಯಮಕ್ಕುಂ" (ಮಂಗರಾ. ೧೪೫-೩೦) ; ಮಾನವನು ಪರಾಧೀನವಾದ ಕರ್ಮವನ್ನು ಸಾಧ್ಯವಾದ ಮಟ್ಟಿಗೂ ತ್ಯಜಿಸಿ ಆತ್ಮಾಧೀನವಾದ ಕರ್ಮವನ್ನು ಪ್ರಯತ್ನಪೂರ್ವಕವಾಗಿ ಅನುಷ್ಠಾನ ಮಾಡಬೇಕು (ಭಾರದ. ೫೪). **೩.** ಬೇರೆಯವರ ಅಂಕೆಯಲ್ಲಿರುವವನು; ಅನ್ಯರ ಪ್ರಭುತ್ವಕ್ಕೆ ಒಳಪಟ್ಟವನು:"ಪರವಾನ್,ಪರಾಧೀನಃ . . . ಗೃಹ್ಯಕಃ—ಈ ೮ ಹೆಸರ ವಶದಾತಂ" (ಹಲಾಯು. ೫೬-೧೪೬) ; "ಪರವಶಂ ನಿಘ್ನಂ ಪರಾಧೀನನೆಂದೆನಲು . . . ಪರರ ವಶದವನಕ್ಕು" (ಮಂಗರಾ. ೬೪-೭) ; ಕುದುರೆವರಿಂಜಂ ತಳೆದು ಪರಾಧೀನನಾಗಿ ಪಲಕೋಟಲೆಗಳನನುಭವಿಸಿದೆ (ಕಾದಂಬ. ೭೨೯) ; ಪರಾಧೀನನಾದರೆ ನರಜನ್ಮ ಹೋದೀತೇ ? (ಗಾದೆ). **೪.** (ಆಸ್ತಿ ಮುಂತಾದುವುಗಳ) ವರ್ಗಾವಣೆ ; ಪರಭಾರೆ: ಇವತ್ತು ಶೀನಪ್ಪ ಸೇರೆಗಾರರ ಆಸ್ತಿ, ಆಸ್ತಿ ಎರಡೂ ಪರಾಧೀನವಾಗುತ್ತವೆ (ಹಹಸ. ೨೪). **೫.** [ಕಾಮಶಾ] ನಾಲ್ಕು ಬಗೆಯ ರತಿಭಾವಗಳಲ್ಲಿ ಒಂದು : ರತಿಭಾವಂ . . . ನಾಲ್ಕು ಪರನಿಜ ನಿರೋಧ ಪರಾಧೀನ ಸ್ವಾಧೀನ . . . ಆಲಿಂಗನ ಚುಂಬನಂಗಳ ಮಾಡಲ್ಕೆ ಮೆಲ್ಲಮೆಲ್ಲನೆ ಮೈ ಬಿಸುಪಾಗಿ ಬಿಸುಸುಯ್ಲಾಗಿ ಬೆಚ್ಚನೆಯ ಕಳೆಯಾಗಿ ಸ್ವಲ್ಪ ಸ್ರವಿಸಿದೊಡೆ ಪರಾಧೀನ ರತಿ (ಕಾಮಶಾ. ೨೩೧). [ಪರ<sub></sub>೩ + ಅಧೀನ]

**ಪರಾಧೀನತೆ** (ನಾ). ಬೇರೆಯವರನ್ನು ಆಶ್ರಯಿಸಿರುವುದು ; ಮತ್ತೊಬ್ಬರನ್ನು ಅವಲಂಬಿಸಿರುವಿಕೆ : ಸಲಹೆಯನ್ನು ಸ್ವೀಕರಿಸಲು ಮಕ್ಕಳ ಹುಟ್ಟುಗುಣವಾದ ಪರಾಧೀನತೆ ನೆರವಾಗುತ್ತದೆ (ಶಿಕ್ಷಣ.ಪ.೫೫೫). [ಸಂ. ಪರಾಧೀನತಾ]

**ಪರಾಧೀನೆ** (ನಾ). **೧.** ಬೇರೆಯವರನ್ನು ಅವಲಂಬಿಸಿರುವವಳು ; ಮತ್ತೊಬ್ಬರನ್ನು ಆಶ್ರಯಿಸಿರುವವಳು : ಆಕೆಯಾದರೋ ಪರಾಧೀನೆ ; ಅಲ್ಲಿ ಗುರುಜನಗಳೂ ಸಮೀಪದಲ್ಲಿರಲಿಲ್ಲ (ಶಾಕುಂತ. ೨೫-೧೪). **೨.** [ಕಾಮಶಾ] ಪರಾಧೀನವೆಂಬ ರತಿಭಾವವನ್ನು ಉಳ್ಳವಳು : ಪರಾಧೀನೆ ಕುಸುಮಬಾಣಾಸನಾಗಮಕೋವಿದೆ (ಜನವ. ೮-೩೬). [ಸಂ. ಪರಾಧೀನಾ]

**ಪರಾನ್ನ** (ನಾ). **೧.** ಬೇರೆಯವರು ಒದಗಿಸಿದ ಆಹಾರ ; ಮತ್ತೊಬ್ಬರು ನೀಡಿದ ಭೋಜನ : ಪರಧನ ಪರಾನ್ನ ಪರಸ್ತ್ರೀಯರಾಶೆ ಬಿಡದು (ಸಿಕವ. III, ೧೪೧) ; ವಾಚಿಸದೆ ವೇದಾರ್ಥನಿಚಯವನು . . . ಪರಾನ್ನಪೂರಿತ ತಪ್ತತನುವಾದ ನೀಚನಹ ಭೂಸುರನ ಕರುಳನು ತೋಚು ವಳಲೈ ಮೃತ್ಯು (ಕುಮಾ.ಉ. ೪-೯೮) ; ಪರಾನ್ನ ಅವರಿಗೆ ತಪ್ಪಿದ ದಿನವೆಂದು ? (ಹೊಸಕ್ರಿ. ೨೯). **೨.** ಬೇರೆಯವರು ನೀಡಿದ ಆಹಾರದಿಂದ ಜೀವಿಸುವುದು,—ಹೊಟ್ಟೆಹೊರೆಯುವುದು. **೩.** ಬೇರೆಯವರು ನೀಡುವ ಆಹಾರದಿಂದ ಜೀವಿಸುವವನು ; ಮತ್ತೊಬ್ಬರನ್ನು ಊಟಕ್ಕಾಗಿ ಆಶ್ರಯಿಸಿರುವವನು : "ಪರಾನ್ನಃ, ಪರಪಿಂಡಾದಃ—ಈ ೨ ಹೆಬಿರಿಕ್ಕಿದ ಕೂಟನುಂಬವಂ" (ಹಲಾಯು.೫೮-೧೯೬); "ಪೆಜಿರಾರಿಕ್ಕಿತಂ [ಪಾಠಾಂ. ಪೆಜಿರಾರಿ ತಿಂಬವಂ]ಪರಾನ್ನಂ ಪಾರಧಿಕನಾ ಪರಪಿಂಡಾದನಕ್ಕುಂ" (ಮಂಗರಾ. ೬೯-೧೦). [ಪರ<sub></sub>೩ + ಅನ್ನ<sub></sub>೩]

**ಪರಾಭವ** (ನಾ). **೧.** ಸೋಲು ; ಅಪಜಯ : ಎಯ್ದರೆ ಕಲಹದೊಳೆನ್ನಿಂ ಪರಾಭವಂಗಳವರ್ಗಳ್ (ಆದಿಪು. ೧೪-೨೭) ; ಗೋಗ್ರಹಣದಂದೇನಾದಿರಂ[ತಾ] ಪರಾಭವಮುಂ ಚಿಃ ಮಱೆದಿರ್ದಿರಪ್ಪೊಡಂ (ಪಂಪಭಾ. ೯-೫೬) ; ಪೂಜ್ಯನೆ ಪರಾಭವಂ ನಿನಗೆಂತೊ ? (ಶ್ರೀರಾಮಾ. ೨೬೦-೮೫೦). **೨.** ಅಪಮಾನ ; ಅವಮಾನ : ವಿಕಾಡಕಾಕ್ಷೋಹಿಣೀಪತಿಯಪ್ಪ ರಾಜಾಧಿರಾಜನಂ ಪರಾಭವಂಬಡಿಸದಿರೆಂದು ಬಲದೇವಂ ಬಾರಿಸೆ ವಾರಿಸೆ (ಪಂಪಭಾ. ೧೩-೯೭ ವ) ; ಕುರುಕುಲಜೀವಾಕರ್ಷಣಪರಿಣತಮಿದು ಕಾಳಹಸ್ತಮಲ್ಲದೆ ಪರಮೇಶ್ವರಿ ಕೇಶಹಸ್ತಮಕ್ಕುಮೆ ಪರಾಭವಜ್ವಲನಧೂಮ ಕೃಷ್ಣಂ ಕೃಷ್ಣೇ (ಗದಾಯು. ೧-೬೬). **೩.** ಅನಾದರ ; ತಿರಸ್ಕಾರ : "ಪ್ರ (ಅ)ತ್ಯಾಕಾರಃ, ಪರಿಭವಃ . . . ಪರಾಭವಃ . . . ತಿರಸ್ಕಾರಃ—ಈ ೭ ಪರಿಭವಂ" (ಹಲಾಯು. ೧೧೭-೧೯) ; "ನಿರಾಕಾರಂ ಪರಾಭವಮನಾದರಮೆನಲು ತಿರಸ್ಕಾರಂ" (ಮಂಗರಾ.೧೨೭-೬). **೪.** ಮರೆಯಾಗುವುದು ; ಅಗೋಚರವಾಗುವಿಕೆ. **೫.** ಬೇರೆ ಬೇರೆಯಾಗುವಿಕೆ ; ವಿಘಟನೆ. **೬.** ಅರುವತ್ತು ಸಂವತ್ಸರಗಳಲ್ಲಿ ಒಂದು ; ನಲವತ್ತನೆಯ ಸಂವತ್ಸರ : ಮತ್ತಮಾ ವರುಷವೇ ಪ್ರಭವ ವಿಭವ . . . ಪರಾಭವ ಪ್ಲವಂಗ . . . ಅಕ್ಷಯವೆಂದರುವತ್ತು ತೆಱನಾಗಿಹುದು (ವಿವೇಕ. ೩೨೧) ; ಪರಾಭವಸಂವತ್ಸರದ ಶ್ರಾವಣದ ××× [ಭೌ]ಮವಾರದಂದು (ಕೊಲ್ಹಾಶಾ. ೪೩-೧ ; ?). **೭.** ನಾಶ. **೬, ೭ :** ಪರಾಭವಂ ಸಂವತ್ಸರದೊಳ್ . . . ಪಂಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಾವಿ. ೨-೧ ವ). [ಸಂ.]

**ಪರಾಭವಿಸು** (ಕ್ರಿ). **೧.** ಸೋಲಿಸು ; ಅಪಜಯಗೊಳಿಸು : ಪರಾಭವಿಸಿದಂ ಗುಣಪ್ರಗುಣಚಂಡಕೋದಂಡದಿಂ . . . ಸುರೇಂದ್ರಧನು ಮೂಡಿದಂಬರಮನೆಂದು ಪೀತಾಂಬರಂ (ಪಂಚಾಸಾ. ೫-೧೧೧) ; ಹರಮಿತ್ರನಂ ಪರಾಭವಿಸಿ . . . ಮಹಾನಾಭನುಱಿ ಬೆಂಕೊಂಡನರಿಬಲವನು (ಚೆಬಪು. ೩೯-೧೬) ; ನನ್ನನ್ನೇ ದ್ವಂದ್ವಯುದ್ಧದಲ್ಲಿ ಪರಾಭವಿಸಿದನು (ಗುರುಚ. ೧೦೪). **೨.** ಅವಮಾನಗೊಳಿಸು ; ಗೌರವಕ್ಕೆ ಹಾನಿ ತರು : ದುರೋದರ ವ್ಯತಿಕರದೊಳ್ಪರಾಭವಿಸಿ ಕೃಷ್ಣೆಯನುಯ್ದು ಪರಾಧಿಯೆಲ್ಲಿದಂ (ಗದಾಯು. ೬-೨೯). [ಪರಾಭವ + -ಇಸು<sub></sub>೩]

**ಪರಾಭೂತ** (ಗು). **೧.** ಸೋತು ಹೋದ ; ಪರಾಭವ ಹೊಂದಿದ. **೨.** ತಿರಸ್ಕಾರದಿಂದ ಕಂಡ; ಕೀಳಾಗಿ ಕಂಡ.(ನಾ). **೩.** ಸೋತುಹೋದವನು ; ಪರಾಜಿತ : "ಪರಾಜಿತಃ, ಪರಾಭೂತಃ—೨ ಸೋತು ಹೋದವನ ಹೆಸರುಗಳು" (ಸಿದ್ಧಾಂತಿ. ೨೭೧). [ಸಂ.]

**ಪರಾಭೂತಿ** (ನಾ). ಸೋಲು ; ಪರಾಭವ : 'ಪರಾಭೂತಿವೆಱು' ಪರಾ. [ಸಂ.]

**ಪರಾಭೂತಿವೆಱು** (ಕ್ರಿ). ಅಪಜಯವನ್ನು ಹೊಂದು ; ಸೋಲು : ಪರ್ಬಿದತ್ತೆ ಜಡ್ಡೆಸೆಯೊಳ್ ನೆಗಳ್ದ ಪಯಶವಿಪಾ ಶಬರಣಿನೊಗೆದ ಪರಾಭೂತಿವೆತ್ತ ಕಾರಣದಿಂದಂ (ಶಬಶಂ. ೪-೯೫). [ಪರಾಭೂತಿ+ಪೆಱು$_1$]

**ಪರಾಭೇದ್ಯ** (ನಾ). ಬೇರೆಯವರಿಂದ ಜಯಿಸಲು ಅಸಾಧ್ಯನಾದವನು : ಶ್ರೀಕಾಳಿದಾಸಂ ಪರಾಭೇದ್ಯಂ ಮಹಳಲದೇವಿಗಂ ಮಧುವದಣ್ಣಾಧೀಶ್ವರಂಗಂ ಜಯಾಪಾದ್ಯಂ ಪುಟ್ಟಿದಂ (ಕಇಶಿ. ೮-೩-೨೭೧ ; 1062). [ಪರ$_3$+ಅಭೇದ್ಯ]

**ಪರಾಮರಿಕೆ,** ಪರಂಬರಿಕೆ, ಪರಾಂಬರಿಕೆ (ನಾ). ೧. ಪರಿಶೀಲನೆ; ಗಮನಿಸುವಿಕೆ ; ಪರಿಭಾವನೆ : "ಪರಾಮರಿಕೆ (ಪರಾಂಬರಿಕೆ)— ಪರಾಮರ್ಶಿಕಾ" (ತದ್ಭ ಕೋ. ೨೪). ೨. ಉಪಚಾರ; ಆರೈಕೆ : ಕೂಸಿನ ಪರಾಮರಿಕೆ ತೆಗೆದುಕೊಳ್ಳದೆ ಹಿಂಗೆ ಮೈಮರೆದು ಇರುತ್ತಾರೆ (ತಾತ್ವಿಸಿ. ೭೫-೨೫) ; ದಿನವಹಿ ಜಿಲ್ಲಾ ಸಾಹೇಬರ ಬಂಗಲೆಗೆ ಹೋಗಿ ಅಮ್ಮಾವರ ಪರಾಮರಿಕೆ ನೋಡಿಕೊಂಡರು (ದಾಕೂಟ. ೧೦); ಹೆಂಗರುಳಿನ ಪರಾಮರಿಕೆಯಲ್ಲಿ ಒಂದು ಹಿತವಿದ್ದರೂ ಅದೊಂದರಿಂದಲೇ ಎಲ್ಲ ಕೆಲಸವಾಗದು (ಸಾಹಿವಿ. ೭) ; ಶೇಷಣ್ಣ ಮಡಿ ಉಟ್ಟುಕೊಂಡೆ ಎಲ್ಲರ ಪರಾಮರಿಕೆ ಮಾಡುತ್ತಿದ್ದ (ವೈಸಿ.೧೮೩). ೩. ವಿಮರ್ಶೆ; ವಿವೇಚನೆ : ಆ ಪ್ರಸ್ತಾವದೊಳು ಬಸವರಾಜದೇವರ ಪರಾಮರಿಕೆಯನೇನೆಂಬೆ (ಶೂನ್ಯಸಂ. ೩೭೫-೩೮). **ಪರಂಬರಿಕೆ : ೩.** "ಚೀಕ, ಸೀಕ—ಅಮರ್ಷಣೇ, ಪರಂಬರಿಕೆಯೊಳ್" (ಕಾಶಕ್ಯ. ೨೯೬). **ಪರಾಂಬರಿಕೆ : ೧.** ಅಖಿಲಲೆಕ್ಕಪತ್ರಗಳೂ ಅಲ್ಲಿ ನಮ್ಮ ಪರಾಂಬರಿಕೆಗೆ ಸಿದ್ಧವಾಗಿರಬೇಕು (ವಿಗಡ. ೬-೨೪) ; ಮೂರು ಒಳ್ಳೆಯ ಆಭರಣದ ಪೆಟ್ಟಿಗೆಗಳು ಮಾರಾಟಕ್ಕೆ ಬಂದಿವೆ. ಕಳಟದಾಸನು ತಮ್ಮ ಪರಾಂಬರಿಕೆಗಾಗಿ ಕಳುಹಿಸಿದ್ದಾನೆ (ರಾಕ್ಷಸಮು. ४೧).

**ಪರಾಮರಿಕೆ ಮಾಡು, ಪರಾಂಬರಿಕೆ ಮಾಡು**=ಉಪಚಾರ ಮಾಡು ; ಯೋಗಕ್ಷೇಮ ವಿಚಾರಿಸು ; ಆರೈಕೆ ಮಾಡು : ಹೀಗೆ ತಮ್ಮ ಕೈಲೆ ಆದಷ್ಟು ಬಡವರ ಪರಾಮರಿಕೆ ಮಾಡಬೇಕು (ಮುಂಬಯಿ. ೨-೪೮) ; ಚಂಪಕ್ಕ ಮಾತ್ರ ಬಂದು ತುಸು ಪರಾಮರಿಕೆ ಮಾಡುತ್ತಿದ್ದಳು (ಗಂಪೂಯಿ. ೧೩೧) ; ಹುಬ್ಬಳ್ಳಿಯ ಶೇವಡೆಯ ಮನೆತನವು ಅವರನ್ನು ಇಂದಿನವರೆಗೂ ತಮ್ಮ ಮನೆಯವರೆಂದೇ ತಿಳಿದು ಅವರ ಪರಾಂಬರಿಕೆ ಮಾಡುತ್ತಿದೆ (ಸೇನಾಹ. ೬೯). [ಪರಾಮರಿಸು+-ಇಕೆ]

**ಪರಾಮರಿಸು,** ಪರಂಬರಿಸು, ಪರಾಂಬರಿಸು, ಪರಾಮ್ಮರಿಸು (ಕ್ರಿ). ೧. ಗಮನಿಸು ; ಲಕ್ಷಿಸು ; ಪರಿಶೀಲಿಸು : ಪರಾಮರಿಸಿ ಮನ್ನಿಪೆ[ಸೆ]ನ್ನಯ ಮಾತನೆಂದೆಯ್ದೆ ದೈನ್ಯದಿಂದಂ ನುಡಿದು ಕೊಂಡೊಯ್ದರೊರ್ವ ವಧು ತನ್ನ ಮೋಹದ ನಲ್ಲನ (ಸೌಂದಪು.೧೭-೪೩); ಪರಾಕು ಮಾಡದೆ ಪರಾಮರಿಸಿ[ಪಾಠಾಂ. ಪರಾಂಬರಿಸಿ]ಎನ್ನ ಅಪರಾಧಂಗಳ ಕ್ಷಮಿಸೊ (ಪುರಂದ. ೧-೬೩ ಪಲ್ಲವಿ) ; ಪರಾಮರಿಸು ಸ್ವಾಮಿ ಪರಾಕೆಂದು ಬಿನ್ನೈಸುವ ಅವಸರದ ಗುರಿಕಾರರ ಕೋಲಾಹಲ (ಸೌಗಂಧಿ. ೧೧-೮). ೨. ಉಪಚರಿಸು ; ಆದರಿಸು ; ಆರೈಕೆ ಮಾಡು : ಕಾರ್ಯದಲ್ಲಿದ್ದಾಗ ಕೆಲಸಗಾರರ ಅನ್ನ-ನೀರುಗಳ ಲಕ್ಷ್ಯ ಅವರಿಗಿರುವುದಿಲ್ಲ ; ಮುಗಿದ ಮೇಲೆ ಮಕ್ಕಳಂತೆ ಪರಾಮರಿಸುವರು (ಸೇನಾಹ. ೯೪) ; ಎತ್ತುಗಳಿಗೆ . . . ತಕ್ಕಂಥ ಆಹಾರಗಳನ್ನು ಅವುಗಳಿಗೆ ಯಥೇಷ್ಟವಾಗಿ ಕೊಟ್ಟು ವೇಳೆವೇಳೆಗೆ ಮೇವು ನೀರಿನಿಂದ ಪರಾಮರಿಸುತ್ತಿರಬೇಕು (ಕೃಷಿಪ್ರ. ೧೯). ೩. ವಿಮರ್ಶೆ ಮಾಡು ; ವಿಮರ್ಶಿಸು : ಸುಕಾವ್ಯರುಚಿರಸಾರಮಂ ವಿಮಳಮಾನಸಸತ್ಕವಿಯಂತೆವೋಲ್ ವಸುಂಧರೆಯೊಳದೇಂ ಪರಾಮರಿಸ ಬಲ್ಲನೆ ಕಲ್ಮಷಚಿತ್ತದುರ್ಜನಂ (ದಿವ್ಯಚ.೧-೩೩). ೪. ಪಾಲನೆ ಮಾಡು; ಪೋಷಿಸು : ಜನರು ಎಷ್ಟು ನೀಚರಾದಾಗ್ಯೂ ದೇವರು ಅವರನ್ನು ಪರಾಮರಿಸದೆ ಇರುವುದಿಲ್ಲ (ಮುಂಬಯಿ. ४-೧೪೦). **ಪರಂಬರಿಸು : ೧.** ಚದುರರಿಂತಿದನು ಪರಂಬರಿಸುವರೇ ಸದಮಲಬೋಧಸಯುತರು (ನೇಮಿಸಂ. ೩೨-४೩) ; ಗುರುವೆ ಬಿನ್ನಹ ಪರಂಬರಿಸು (ಜಿನರಾ. ४-४೬); ಭೂಪತಿಯೆ ಅನ್ಯಾಯ ನಿನ್ನದು ನೀ ಪರಂಬರಿಸು (ಕೃಷ್ಣಾಕಾ. ೭-೩४). **ಪರಾಂಬರಿಸು : ೧.** ತದನಂತರಂ ತನ್ನಿಂ ತಾನೆ ಪರಾಂಬರಿಸಿ ಈ ಪರಿಜುಮೂರ ರೂಪೆನೆ (ಪುಣ್ಯಾಸ್ರ. ೭-४४ ಪ) ; ಹಿಮವಂತ ದೇವರನೀತನು ಪರಾಂಬರಿಸಲೆ ನಮಿರಾಜಯೆಂದು ತೋಱುದರು (ಭರತೇ. ೩೮-೨೮) ; ಬಹುಚಿತ್ರಮಾಗಿರುವ ಮಂದಾರಮಾಲೆಯಂ . . . ಪರಾಂಬರಿಸಬೇಕು (ಸೌಗಂಧಿ. ೧೭೩-೨). ೨. ಇದರಿಂದ ನಿನ್ನ ವಂಶವು ಉತ್ತರೋತ್ತರವಾಗಿ ಬೆಳೆಯುವುದು ಎಂದು ರಾಯರನ್ನು ಪರಾಂಬರಿಸಿದರು (ಸಮಜೀ. ४೨). **ಪರಾಮ್ಮರಿಸು : ೧.** ತಾವೆಲ್ಲ ಪರಾಮ್ಮರಿಸಿ ಅದಂ ನೆರವೇರಿಸುವಂತೆ ಮಾಡಬಹುದು (ಸೌಗಂಧಿ. ೨೨೮-೨). [<ಪರಾಮರ್ಶಿಸು]

**ಪರಾಮರ್ಶ**(ನಾ). ೧. ಎಳೆಯುವಿಕೆ; ಸೆಳೆಯುವಿಕೆ. ೨. ಮುತ್ತಿಗೆ; ಮೇಲೆ ಬೀಳುವುದು. ೩. ಜ್ಞಾಪಕ; ನೆನಪು. ೪. ಪರಿಶೀಲನೆ ; ಚಿಂತನೆ : ಪರಾಮರ್ಶ, ಪರಿಭಾವನ (Consideration. ಪಾರಿಸಿ. ೨೧). ೫. ವಿಮರ್ಶೆ ; ವಿವೇಚನೆ. ೬. ತೀರ್ಪು; ನಿರ್ಣಯ : ಮುಖ್ಯ ನ್ಯಾಯಾಧಿಪತಿಯವರನ್ನು ಬಿಟ್ಟು ಇತರ ಯಾರೊಬ್ಬರು ನ್ಯಾಯಾಧೀಶರ ನಿಯುಕ್ತಿಯ ವಿಷಯದಲ್ಲೂ ಸರ್ವದಾ ಭಾರತದ ಮುಖ್ಯನ್ಯಾಯಾಧಿಪತಿಯವರ ಪರಾಮರ್ಶವನ್ನು ಕೇಳತಕ್ಕುದು(ಭಾಧಾನ. ೬೬). ೭. (ರೋಗಿಗಳು, ದರಿದ್ರರು, ಸ್ನೇಹಿತರು ಮುಂತಾದವರ) ಯೋಗಕ್ಷೇಮ ಅಥವಾ ಕುಶಲವನ್ನು ವಿಚಾರಿಸುವುದು. ೮. [ತರ್ಕಶಾ] ಅನುಮಾನ ಪ್ರಯೋಗದಲ್ಲಿ ಬರುವ ನಿಶ್ಚಿತವಾದ ತಿಳಿವಳಿಕೆ,—ಜ್ಞಾನ : ಈ ಪ್ರದೇಶವು ವಹ್ನಿವ್ಯಾಪ್ಯವಾದ ಧೂಮವನ್ನುಳ್ಳುದೆಂಬ ಜ್ಞಾನಕ್ಕೆ 'ಪರಾಮರ್ಶ' ಎಂದು ಹೆಸರು . . . ವ್ಯಾಪ್ಯವು ಪಕ್ಷದಲ್ಲಿರುವುದೆಂಬ ಜ್ಞಾನಕ್ಕೆ 'ಪರಾಮರ್ಶ' ಎಂದು ಹೆಸರು (ಭಾತತ್ತ್ವ.೨೭೧).

**ಪರಾಮರ್ಶ ಮಾಡು**=೧. ವಿಮರ್ಶೆ ಮಾಡು ; ವಿವೇಚಿಸು : ರಾಜ್ಯಗಳ ಉಚ್ಚನ್ಯಾಯಾಲಯಗಳ ನ್ಯಾಯಾಧೀಶರುಗಳೊಡನೆ ಪರಾಮರ್ಶ ಮಾಡಿದ ತರುವಾಯ . . . ನೇಮಕ ಮಾಡತಕ್ಕುದು (ಭಾಧಾನ. ೬೬); ಸರ್ವಪ್ರಕಾರವಾಗಿ ನಿಮ್ಮ ಪರಾಮರ್ಶ ಮಾಡಬೇಕೆಂದು ನನ್ನ ವಜೀರನಿಗೆ ಆಜ್ಞೆ ಕೊಡುವೆನು (ಕಗದ್ಯ. II,೧೫). ೨. ಆರೈಕೆ ಮಾಡು:"ಉಪಚರಿಸು—ಪರಾಮರ್ಶ ಮಾಡು" (ಗಂಗಾಪು.४३).[ಸಂ.]

**ಪರಾಮರ್ಶಕ** (ನಾ). ೧. ಪರಿಶೀಲಿಸುವವನು. ೨. [ಕಾವ್ಯಮೀ] ನೆನಪಿಗೆ ತಂದುಕೊಳ್ಳುವವನು : ಇಲ್ಲಿ ಪರಾಮರ್ಶಕನು ರಸಾವೇಶದಲ್ಲಿರುವವನು (ಧ್ವನ್ಯಾಲೋ. ೧೨೭ ಅಡಿಟಿ). [ಸಂ.]

**ಪರಾಮರ್ಶಿಸು** (ಕ್ರಿ). ಪರೀಕ್ಷಿಸು ; ಪರಿಶೀಲಿಸು : ಈಗ ನಾನು ತಮ್ಮಲ್ಲಿಗೆ ಬಂದಿರುವ ವಿಚಾರವನ್ನು ಪರಾಮರ್ಶಿಸಬೇಕೆಂದು ಪ್ರಾರ್ಥಿಸುತ್ತೇನೆ (ಹಿಂಕಿರು. ೬೩) ; ಭೂಮಿಯ ಹುಟ್ಟಿಗೆ ಸಂಬಂಧಿಸಿದ ನಮ್ಮ ಹೊಸಸಿದ್ಧಾಂತವು ಇನ್ನೂ ಒಂದು ಮೂಲವನ್ನೂ ಪರಾಮರ್ಶಿಸಿದೆ (ಭೂಹುಟ್ಟು. ೯೬) ; ಕಪಿಲನಾಗಿ ವಿಮರ್ಶಿಸಿದ ಭಗವಚ್ಛಕ್ತಿಯೇ ಶ್ರೀಕೃಷ್ಣನಾಗಿ ಪರಾಮರ್ಶಿಸುತ್ತಿದೆ (ಭಾರದ. ೧೧೩). [ಪರಾಮರ್ಶ+-ಇಸು$_3$]

**ಪರಾಮರ್ಶೆ** (ನಾ). ವಿವೇಚನೆ ; ಪರಿಶೀಲನೆ : ಗಮಕದೊಳಾಯೆಂಬುದು ಪೂರ್ವಪರಾಮರ್ಶೆಗಮೊದವುಗುಮಾ ರೂಢಿಗಂ ಕವೀಶ್ವರಮತದಿಂ (ಶಮದ. ೧೬೯) ; ರಾಜಸ ತಾಮಸರ ಮಾತಿರಲಿ . . . ಸೌಂದರ್ಯವನ್ನು ಶುದ್ಧ ಪರಾಮರ್ಶೆಯಿಂದ ಗ್ರಹಿಸಲಾರ (ಕಾವ್ಯಕು. ೧೩೨) ; ಆಡಿದ ಮಾತಿನ ಪರಾಮರ್ಶೆ ಮಾಡಿದರೆ ಅವಳು ನಡೆದದ್ದನ್ನೇ ಹೇಳುತ್ತಿದ್ದಳು (ಮೂಕಜ್ಜಿ. ೧೫೬). [ಸಂ.]

**ಪರಾಮೃಷ್ಟ** (ನಾ). ೧. ಹಾಳಾದುದು : ಅನಂತವೀರ್ಯನೀ ಕ್ಷೇತ್ರದೊಳನೇಕಕಾಲಂ ಪರಾಮೃಷ್ಟಮಾದ ಮುಕ್ತಿಮಾರ್ಗಮಂ ಮುನ್ನಮೆ ಸಮುಜ್ಜುವನೆಂಬಂತೆ ಮೋಕ್ಷಲಕ್ಷ್ಮೀವಲ್ಲಭನಾದಂ (ಆದಿಪು. ೧೦-೬೫ ಪ). ೨. ಹಾಳು ಮಾಡುವುದು; ಭಂಗಪಡಿಸುವಿಕೆ : ಕಾಕಿಣೀರತ್ನದಿಂದಲ್ಲಿ ಮುನ್ನಿರ್ದರೋಳ್ದು ಪ್ರಶಸ್ತಿಯಂ ಪರಾಮೃಷ್ಟಂ ಮಾಡಿ (ಶಾಂತಿಪು. ೧೧-೬೩ ಪ). [ಸಂ.]

**ಪರಾಮೋಶಿ** 'ಫರಾಮೋಷಿ' ನೋ.

**ಪರಾಮ್ಮರಿಸು** 'ಪರಾಮರಿಸು' ನೋ.

**ಪರಾಯಿ**, ಪರಾಯಿ, ಪರಾಯಿಾ (ಗು). ೧. ಬೇರೆಯ ; ಅನ್ಯ. (ನಾ). ೨. ಅನ್ಯ ವ್ಯಕ್ತಿ ; ಪರಕೀಯ ವ್ಯಕ್ತಿ : ತುಸು ನೋಡ್ರಿ ನಾರೀ ತಿರುವಿ ಪರಾಯರಲ್ಲ, ಪ್ರತ್ಯಕ್ಷ ನಿಮ್ಮ ಹೆಣ್ತಿ ನಾನು (ಜಾಂಡಾಯು. ೧) ; ಪತ್ತಲಾ ಉಟ್ಟಾಕ್ಷಣಕ್ಕೆ ಪರಾಯರಾಕಿ ಆಗಲಿಲ್ಲ (ಜಾಂಡಾಯು. ೮೦). **ಪರಾಯಿ :** ೧. ಇದಲ್ಲದೆ ಸ್ವಾದೆ ಅರಸುಗಳು ಪರಾಯಿ ಪೋರ್ಚುಗೀಸ್ ತಾಲೂಕು ಗೋವೆ ಒಳಗೆ ಇರುತಾರೆ (ರಾಜೇಂದ್ರ. ೨೧೩) ; ಪ್ರತಿವರ್ಷದಲ್ಲಿಯೂ ಸುಮಾರು ೧೪೫ ಕೋಟಿ ರೂಪಾಯಿಗಳ ಪರಾಯಿಪ್ರದೇಶದ ವರ್ತಕವು ನಡಿಯುತ್ತದೆ (ಭೂಗೋಳ. ೩೯). **ಪರಾಯಿಾ :** ೧. ಮತ್ತ ಪರಾಯಿಾ ಹುಡಿಗ್ಗೆ ಬೆದರಿಕಿ ಹಾಕೋ ಮಾತು ಆಡ್ತಾರ (ಜೂಜು. ೨೭).
[←ಹಿಂ. ಪರಾಯಾ, ಪರಾಈ ; ಮರಾ. ಪರಾಯ, ಪರಾಯಾ; ಪ್ರಾ. ಪರಾಯ./ಸಂ. ಪರಕೀಯ]

**ಪರಾಯಣ** (ಗು). ೧. (ಯಾವುದಾದರೊಂದು ವಿಷಯದಲ್ಲಿ) ಅತ್ಯಂತ ಆಸಕ್ತಿ ಹೊಂದಿದ; ತಲ್ಲೀನವಾದ ; ನಿರತವಾದ. (ನಾ). ೨.ಪ್ರಮುಖವಾದ ಉದ್ದೇಶ; ಪರಮ ಗುರಿ,—ಧ್ಯೇಯ. ೩. ಹೋಗುವಿಕೆ; ತೆರಳುವಿಕೆ. ೪. ಮೂಲವಸ್ತು,—ಪದಾರ್ಥ: ನೀನೇ ಈ ಸರ್ವಭೂತಗಳಿಗೂ ಪರಾಯಣವು (ಕೃಪಾಭೀ. ೧೦೭) ಆಕಾಶವೇ ಇವುಗಳಿಗಿಂತ ದೊಡ್ಡದು, ಪರಾಯಣವು (ಬ್ರಹ್ಮಭಾ. ೧೯೯). ೫. ಪರಿಪೂರ್ಣತೆ; ಪೂರ್ಣವಾದುದು : "ಪರಗಮನಂ ಪಾರಾಯಣ ಪರಾಯಣೋಪಾಖ್ಯಮುಚಿಗೆ ಸಾಕಲ್ಯಾರ್ಥಂ" (ವಸ್ತುಕೋ. ೧೧೬-೩೧). ೬. (ಯಾವುದಾದರೊಂದು ವಿಷಯದಲ್ಲಿ) ಬಹಳವಾಗಿ ಆಸಕ್ತನಾದವನು ; ತತ್ಪರನಾದವನು ; ನಿರತನಾದವನು : "ತತ್ಪರಃ, ಪರಾಯಣಃ—ಈ ೨ ಆಸಕ್ತಂ" (ಹಲಾಯು. ೫೮-೧೯೭) ; ಹಿಮವತ್ಪರ್ವತದೊಳ್ ತಪಶ್ಚರಣಪರಾಯಣರಾಗಿಂ (ಪಂಪಭಾ. ೧೩-೧೦೭ ಪ) ; ಸಿರಿಪತಿ ಪಂಡಿತಂ ಶಶಿವರೌಳಿ ಭಕ್ತಪರಾಯಣಂ (ಬಸವು. ೫೫-೨೪). ೭. ಪ್ರೀತಿಸುವವನು : "ಪ್ರೇಮಿ ಪ್ರಿಯಂ ಸಹಚರಂ ಪರಾಯಣನೆನಲ್ ಪ್ರೇಮುಗೈವನೆನಿಕ್ಕು" (ಮಂಗರಾ. ೬೮-೮). [ಸಂ.]

**ಪರಾಯಣತೆ** (ನಾ). ಆಸಕ್ತಿ ; ತತ್ಪರತೆ : ಇಂತಹ ಪರಾಯಣತೆಯಿಂದ ಅವನು ಮೋಕ್ಷಪ್ರಾಪ್ತಿಯ ಸಿದ್ಧಿಯನ್ನು ಪಡೆಯಬಲ್ಲನು (ಅನಾಸ ೫). [ಸಂ. ಪರಾಯಣತಾ]

**ಪರಾಯಣತ್ವ** (ನಾ). ಮೂಲವಸ್ತುವಾಗಿರುವಿಕೆ : ಪರಾಯಣತ್ವವೂ (ಎಲ್ಲಕ್ಕೂ) ಪರಮಕಾರಣವಾಗಿರುವುದರಿಂದ ಪರಮಾತ್ಮನಿಗೇ (ಆಕಾಶಕ್ಕಿಂತ) ಹೆಚ್ಚು ಒಪ್ಪುತ್ತದೆ (ಬ್ರಹ್ಮಭಾ. ೧೯೦). [ಸಂ.]

**ಪರಾಯಣಿ** (ನಾ) ರಕ್ಷಿಸುವವಳು ; ಆದಿಶಕ್ತಿ : ಆದಿನಾರಾಯಣಿ ಪರಾಯಣಿ ನಾದಮಯೆ ಗಜಲಕ್ಷ್ಮಿ (ಕುಪ್ವಾಅ.೧-೬).[ಸಂ.ಪರಾಯಣೀ]

**ಪರಾಯತ** 'ಪರಾತ' ನೋ.

**ಪರಾಯತ್ತ** (ಗು). ೧. ಬೇರೆಯವರಿಗೆ ಅಧೀನವಾದ ; ಪರತಂತ್ರವಾದ ; ಪರಾಧೀನವಾದ : ಪರಾಯತ್ತಕಾರಣಗಳಿಂದಾಗಿ ಆ ಕೆಲಸವಾಗಲಿಲ್ಲ (೮೦೩). (ನಾ). ೨. ಬೇರೆಯವರಿಗೆ ಅಧೀನವಾಗುವಿಕೆ ; ಪರಾಧೀನತೆ : ಸ್ತ್ರೀಯರು ಕೆಡಬೇಕಾದರೆ ಎರಡು ವಿಧವಾದ ಕಾರಣಗಳು. ಒಂದು ಪರಾಯತ್ತ. ಇನ್ನೊಂದು ಆತ್ಮಾಯತ್ತ (ಆರ್ಯಧ. ೧೬೧). ೩. ಬೇರೆಯರಿಗೆ ಅಧೀನನಾದವನು ; ಮತ್ತೊಬ್ಬರ ಅಂಕಿತಕ್ಕೆ ಒಳಪಟ್ಟವನು : "ಪರವಾನ್, ಪರಾಧೀನಃ . . . ಪರಾಯತ್ತಃ, ಪರಚ್ಛಂದಃ, ಗೃಹ್ಯಕಃ—ಈ ೮ ಹೆಸರ ವಶದಾತಂ" (ಹಲಾಯು. ೬೫-೧೪೬). [ಸಂ.]

**ಪರಾಯಿ** 'ಪರಾಯ' ನೋ.

**ಪರಾಯಿಾ** 'ಪರಾಯ' ನೋ.

**ಪರಾರಿ**$_1$ (ನಾ). ಕಳೆದ ವರ್ಷದ ಹಿಂದಿನ ವರ್ಷ : "ಸಮತೀತಾಬ್ದಂ ಪರುದಾಖ್ಯಮದಕ್ಕುಂ ತಾಂ ಪರಾರಿ ತತ್ಪೂರ್ವಗತಂ" (ವಸ್ತುಕೋ. ೧೬-೧೧). [ಸಂ.]

**ಪರಾರಿ**$_2$ 'ಫರಾರಿ$_1$' ನೋ.

**ಪರಾರ್ಜಿತ** (ಗು). ಅನ್ಯರ ಕೈವಶವಾದ ; ಬೇರೆಯವರಿಗೆ ಸಿಕ್ಕ : ಪರವಶದೊಳಿರ್ದರೋ ಮೇಣ್ಪರಾರ್ಜಿತಪ್ರಾಣರಾದರೋ ದ್ರೌಪದಿಯಂ ಪರಿಭವಿಸುವಲ್ಲಿ (ಗದಾಯು. ೧-೬೧). [ಪರ$_3$ + ಆರ್ಜಿತ]

**ಪರಾರ್ತಿಹರ** (ನಾ). ಬೇರೆಯವರ ವ್ಯಥೆಯನ್ನು ನಿವಾರಿಸುವವನು: ಪರಮಗುಣ ಪರಶಕ್ತಿವಾಗೀಶ್ವರ ಪರಾರ್ತಿಹರೇಶ . . . ಕರುಣಿಸುವುದು (ಕುಪ್ವಾಅ. ೬-೮೭). [ಸಂ.]

**ಪರಾರ್ಥ** (ನಾ). ೧. ಬೇರೆಯವರ ಹಿತ ; ಪರೋಪಕಾರ: ಅವನರ್ಥ ಪರಾರ್ಥದಲಿ ಸಂಜೀವನಿಯನೈದಿತು ಪರಾರ್ಥದೊಳಾವನಸು ನಿರ್ವಾಣ ಮಾಡುದು ಲೋಕ ಮೂಜಿರಲಿ ಆ ವಿರಿಂಚಿ ಪುರಂದರಾದಿಯ ದೇವತತಿಗಿ ವರಬ್ಬರೇ ಸಂಭಾವನೀಯರು(ಕುಪ್ವಾಅ.೧೦-೨೦); ಪರಾರ್ಥವಾಗಿ ಕಾಣುವ ಅರ್ಜುನನ ಮನೋಭಾವದಲ್ಲಿ ಎಂಥ ಸ್ವಾರ್ಥ ಹುದುಗಿದೆ(ಭಾರದ. ೧೧೭); ಲೋಕದಲ್ಲಿ ಬುದ್ಧಿಪೂರ್ವಕ ಪುರುಷರ ಪ್ರಯತ್ನ ಸ್ವಾರ್ಥ ಅಥವಾ ದಯೆಯಿಂದ ಪರಾರ್ಥ (ಹಿಂದಸಾ. ೬೨). ೨. ಮುಕ್ತಿ ; ಮೋಕ್ಷ(?) : ಪ್ರಸಿದ್ಧಾನಮಂ ಪಡೆದ ಪರಾರ್ಥಮಂ ಶಾಶ್ವತಮೆಂಬುದನುಕ್ತಸಿದ್ಧಮಲ್ಲದಂದಭಿಧಾನಂ ನಿರರ್ಥಕರಮುಮಾಧಾರರಹಿತಮುಕ್ಕುಮೆಂದುಮಿಲ್ಲದ ಪದಾರ್ಥಕ್ಕಭಿಧಾನಮನಿಡುವ ಮರುಳಾವೊಂ (ಶಾಂತಿಪು. ೪-೧೩೮ ಪ). **ಪರಾರ್ಥನಿಧಿ** = ಪರೋಪಕಾರವನ್ನೇ ನಿಧಿಯಾಗುಳ್ಳವನು ; ಪರೋಪಕಾರಿ; ಒಂದು ಬಿರುದು: ತೇಜಿರಾಜ ದಂಡಾಧಿಪನಂ ಪರಾರ್ಥನಿಧಿಯಂ . . . ಕೈಯಂ ಮುಗಿದು (ಕಇಅ. ೬೪-೧೨-೨೨ ; 1170). [ಪರ$_3$ + ಅರ್ಥ]

**ಪರಾರ್ಥಕಂಟಕ** (ನಾ). ಇನ್ನೊಬ್ಬರ ಹಿತಕ್ಕೆ ಉಂಟುಮಾಡುವ ಧಕ್ಕೆ,—ಅಡ್ಡಿ : ವ್ಯರ್ಥವಿದು ತಾ ಹೋಗಲಿನ್ನು ಪರಾರ್ಥಕಂಟಕವಾಗಲೇತಕೆ ತೀರ್ಥವೈಸಲೆ ಶಸ್ತ್ರಧಾರೆಯಿಂದೆಂದನಾ ಮಗಧ (ಕುಪ್ವಾಸ. ೨-೮೯). [ಪರಾರ್ಥ + ಕಂಟಕ]

**ಪರಾರ್ಥಚರಿತ** (ನಾ). ಬೇರೆಯವರಿಗೆ ಹಿತವನ್ನುಂಟುಮಾಡುವುದೇ ಆಚಾರವಾಗಿ ಉಳ್ಳವನು ; ಪರೋಪಕಾರಶೀಲ : ಜಿನಪೂಜೆಯಂ . . . ನೆಗಟಿಂದು ಪುರೋಹಿತಂಗೆ ಸಜ್ಜನಮಹಿತಂಗೆ ಪೇಟ್ದ ನಭಿರಾಮನಶೇಷಕಲಾಕಲಾಪಕೋಳಕನದಭವಂ ಪರಾರ್ಥಚರಿತಂ(ಪಂಪರಾಮಾ. ೧೫-೮೪). [ಪರಾರ್ಥ + ಚರಿತ]

**ಪರಾರ್ಥನಿಪುಣ** (ನಾ). ಬೇರೆಯವರ ದ್ರವ್ಯವನ್ನು ದೋಚುವುದರಲ್ಲಿ ಕುಶಲನಾದವನು : ವಕ್ರಪ್ಪರಾರ್ಥನಿಪುಣರೆನಿಪ್ಪೀ ನೀಚಮರ್ತ್ಯಪ್ಪರೆ ಕರಣವ ರೇಚಣನಂತಿಪ್ಪ ಜನಕವಾಶ್ರಿತಜನಕಂ (ಕೊಲ್ಹಾಶಾ. ೧೦-೨೧ ; 1151). [ಪರಾರ್ಥ+ನಿಪುಣ]

**ಪರಾರ್ಥಪರ** (ನಾ). ೧. ಇನ್ನೊಬ್ಬರ ಹಿತಚಿಂತನೆಯಲ್ಲೇ ಮಗ್ನನಾದವನು. ೨. ಬೇರೆಯವರ ಸಂಪತ್ತಿಗೆ ಆಸಕ್ತಿ ವಹಿಸುವವನು. ೩. ಮೋಕ್ಷದಲ್ಲಿ ಆಸಕ್ತಿಯುಳ್ಳವನು; ಮೋಕ್ಷವಿಚಾರಪರ. ೧, ೨, ೩ : ಮತ್ತಮಾ ನೃಪಂ ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗಸಂಗಿಯಲ್ಲು . . . ಪರಾರ್ಥಪರನಾಗಿಯುಂ ಪರಾರ್ಥಪರನಲ್ಲು (ಪುಷ್ಪಪು. ೯-೩೯ ಪ). [ಸಂ.]

**ಪರಾರ್ಥವ್ಯಸನಿ** (ನಾ). = ಪರಾರ್ಥಪರ ೧ : ಪರಾರ್ಥವ್ಯಸನಿಯೇ ಸಜ್ಜನನು ಸರ್ವಾಧೀಶ ಕೇಳೆಂದ (ಕುಸ್ಮಾಭ. ೧೩-೫೪). [ಪರಾರ್ಥ+ವ್ಯಸನಿ]

**ಪರಾರ್ಥಸಾಧಕ** (ನಾ). ಇನ್ನೊಬ್ಬರ ಹಿತಚಿಂತನೆ : ತೀರ್ಥವಿನ್ನೇಕ ತಿಥಿಯಿರಲು ಪರಾರ್ಥಸಾಧಕವೆಮಗೆ [ಪಾಠಾಂ. ಸಾಧನತನವೆ] ಪರಮ ಸ್ವಾರ್ಥವೆಂಬರು ಸುಜನರು (ಸಂಭಪ. ೩೭-೧೫). [ಪರಾರ್ಥ+ಸಾಧಕ]

**ಪರಾರ್ಥಸ್ಪೃಹೆ** (ನಾ). ೧. ಬೇರೆಯವರ ಐಶ್ವರ್ಯದ ಬಗ್ಗೆ ಇರುವ ಆಸಕ್ತಿ,—ಹಂಬಲ. ೨. [ಕಾವ್ಯಮೀ] ಇನ್ನೊಬ್ಬರ ಅಭಿಪ್ರಾಯವನ್ನು ತಾನು ಬಳಸಿಕೊಳ್ಳುವುದು,—ಸ್ವೀಕಾರ ಮಾಡುವುದು : ಭರತಕ್ಷೇತ್ರದ ಮಧ್ಯದೊಳ್ ಮಧ್ಯದೇಶಮುಂಟು ಅದಱ ಪೆಂಪನಭಿವರ್ಣಿಸುವೊಡೆ ವರ್ಣಸಂಕರಂ ಚಿತ್ರದೊಳ್ . . . ಪರಾರ್ಥಸ್ಪೃಹೆ ಗುಣವಿಶೇಷದೊಳ್ . . . ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ಪ). [ಪರಾರ್ಥ+ಸ್ಪೃಹೆ]

**ಪರಾರ್ಥಹರ** (ನಾ). ಶತ್ರುಗಳ ಸಂಪತ್ತನ್ನು ಅಪಹರಿಸುವವನು : ಸಂಜನಿತಪರಾರ್ಥನಾಗಿಯುಮುದಗ್ರಪರಾರ್ಥಹರಂ ಪ್ರದತ್ತಕಾಮನುಮೆನಿಸಿರ್ದು ಕಾಮಮಥನಂ . . . ಎನಿಸಿರ್ದನಹೀಂದ್ರಭೂಷಣಂ (ರಾಜಶೇ. ೧೪-೧೪೪). [ಸಂ.]

**ಪರಾರ್ಥಾನುಮಾನ** (ನಾ). [ನ್ಯಾಯ] ಬೇರೆಯವರ ಪ್ರಯೋಜನಕ್ಕಾಗುವ ತರ್ಕ : ಅನುಮಾನವು ಮತ್ತೊಬ್ಬರ ಉಪಯೋಗಕ್ಕಾದರೆ ಅದು 'ಪರಾರ್ಥಾನುಮಾನ' ಎನಿಸುವುದು (ಭಾತತ್ತ್ವ. ೨೭೩). [ಪರಾರ್ಥ+ಅನುಮಾನ]

**ಪರಾರ್ಥಾಪಹಾರ** (ನಾ). ಇನ್ನೊಬ್ಬರ ಸಂಪತ್ತನ್ನು ಕದಿಯುವುದು; ಬೇರೆಯವರ ಐಶ್ವರ್ಯವನ್ನು ಅಪಹರಿಸುವುದು : ಜೀವಘಾತಾನೃತವಚನಪರಾರ್ಥಾಪಹಾರಾನ್ಯನಾರೀಗಮ ಬಹ್ವಾರಂಭ ಪಾರಿಗ್ರಹ ಮೆನಿಸುವವಯ್ದುಂ ಮಹಾಪಾತಕಂಗಳ್ (ಸುಕುಮಾ. ೫-೪೩). [ಪರಾರ್ಥ+ಅಪಹಾರ]

**ಪರಾರ್ಥ್ಯ** (ಗು). ೧. ಬಹಳ ಶ್ರೇಷ್ಠವಾದ; ಅತ್ಯುತ್ತಮವಾದ: ಪರಮಜಿನಮಾಲೆ . . . ಮುನಿಮಾಲೆ ನಿರಂತರಮಿಾಗೆ ಭವ್ಯಮಾಲೆಗೆ ಪರಾರ್ಥ್ಯಗುಣರತ್ನಮಾಲೆಯಂ ದಯೆಯಿಂದಂ (ಆದಿಪು. ೧-೧೫); ಶಾಂತಿಜಿನಜನ್ಮಜಲಧಿಗೆ ಶಾಂತಿಪುರಾಣಮೆ ಪರಾರ್ಥ್ಯರತ್ನಮಿದಂ ಪೇೞ್ವೆಂತು ಕವಿಚಕ್ರವರ್ತಿಯೆ ನೋಂತಂ ಪೆಸರಿಂ ಪುರಾಣಚೂಡಾಮಣಿಯಂ (ಶಾಂತಿಪು. ೧-೧೨); ಪರಾರ್ಥ್ಯಮಣಿಮಂಡನಂಗಳುಮಂ ದಿವ್ಯವಸನಕುಸುಮಮಾಲಾನುಲೇಪನಂಗಳುಮನವಟ್ಟಿಸಿ ಕೆಳದಿಯುಂ ತಾನುಂ ಕೈಗೈದು (ಲೀಲಾವ. ೧೪-೨೨ಪ). (ನಾ). ೨. ಅತ್ಯಂತ ಶ್ರೇಷ್ಠವಾದುದು; ಅತ್ಯುತ್ಕೃಷ್ಟವಾದುದು : "ಪ್ರಧಾನಂ... ಪರಾರ್ಥ್ಯಂ, ಅಗ್ರ್ಯಂ . . . ಆಗ್ರಿಯಂ—೧೭ ಮುಖ್ಯವಾಗಿಯೂ, ಉತ್ತಮವಾಗಿಯೂ ಇತರರಿಂದ ಅಪೇಕ್ಷಿಸಲ್ಪಡತಕ್ಕದ್ದಾಗಿಯೂ ಇರುವ ಶ್ರೇಷ್ಠವಾದಂಥಾದ್ದರ ಹೆಸರುಗಳು" (ಸಿದ್ಧಾಂತಿ.೩೩೪); ಪರಿಹೃತದೋಷಂ ಸಗುಣಂ ಪರಾರ್ಥ್ಯಮುತ್ಪ್ರಭಮತರ್ಕ್ಯಸಾಮರ್ಥ್ಯಮಳಂಕರಿಸಿರ್ಕೆ . . . ಮದೀಯಮತಿಮಾನಿನಿಯಂ (ಚಂದ್ರಪು.೧-೬). [ಸಂ.]

**ಪರಾರ್ಧ** (ಗು). ೧. = ಪರಾರ್ಧ್ಯ ೧. (ನಾ). ೨. ಇನ್ನೊಂದು ಭಾಗ; ಎರಡನೆಯ ಅರ್ಧಭಾಗ; ಉತ್ತರಾರ್ಧ: ಪರಾರ್ಧದೊಳ್ಕುಮೃಗಾಕ್ಷಿ ಲಘುವೊಂದೆ ಬರ್ಕೆ ಗಡ ರಸವೆಡೆಯೊಳ್ (ಛಂದೋಂಬು. ४-೨೩೨). ೩. (ಬಹಳ ಹೆಚ್ಚಾದ) ಒಂದು ಸಂಖ್ಯೆ; ಕೋಟ್ಯನುಕೋಟಿ ಬ್ರಹ್ಮನ ಆಯುಃಪ್ರಮಾಣದಲ್ಲಿ ಅರ್ಧಭಾಗ : ಅಂಕೆಗಳ ಶ್ರೇಣಿ ಹದಿನೆಂಟರ ವರೆಗೂ ಹೋಗುತ್ತದೆ. ಈ ಹದಿನೆಂಟುಶ್ರೇಣಿಗಳು ಯಾವುವೆಂದರೆ : ಏಕಂ, ದಶಂ . . . ಅಂತ್ಯ ಮತ್ತು ಪರಾರ್ಧ (ಪ್ರವಾಇ. I, ೩೫೭). [ಸಂ.]

**ಪರಾರ್ಧ್ಯ** (ಗು). ೧. ಅತ್ಯುತ್ಕೃಷ್ಟವಾದ; ಶ್ರೇಷ್ಠದರ್ಜೆಯ : ಅಂತು ವರತನುವಿನ ಕೈಯೊಳಭೇದ್ಯಕವಚಮುಮಂ ಚೂಡಾರತ್ನಮುಮಂ ರತ್ನಕಟಕಂಬೆರಸು ಪಲವುಂ ಪರಾರ್ಧ್ಯ[ಪಾಠಾಂ. ರ್ಥ್ಯ]ರತ್ನಂಗಳಂ ಕೊಂಡು (ಆದಿಪು. ೧೩-೩ಪ); ಒಡವುಟ್ಟಿದ ತಳದಳಿಸುವ ತುಡುಗೆಯ ದುಗುಲದ ನಮೇರುದಾಮಕದೊಳ್ ಪಚ್ಚುಡಿದುದು ಪರಾರ್ಧ್ಯಕೊಟಿದ ಬೆಡಂಗೊಡಂಬಟ್ಟುದಿರ್ವರಹಮಿಂದ್ರರೊಳಂ (ಶಾಂತಿಪು. ೯-೧೩೦); ಪರಾರ್ಧ್ಯಗುಣಮಾಲೆಯಂ ಪಿಡಿವಂತಾ ವಸ್ತ್ರಮಾಲೆಯಂ ಪಿಡಿದು . . . ತಪೋವನಮಂ ಪುಗುವಂತಾ ಬನಮಂ ಪೊಕ್ಕು (ಸುಕುಮಾ. ೧೧-೮೩ ಪ). ೨. ಬಹಳ ದೂರವಾದ. (ನಾ). ೩. ಪ್ರಮುಖವಾದುದು : "ಅಗ್ರ್ಯಂ, ಪ್ರಧಾನಂ . . . ಪರಾರ್ಧ್ಯಂ . . . ಅಗ್ರಣೀಃ—ಈ ೧೩ ಮುಖ್ಯಂ" (ಹಲಾಯು. ೧೧೫-೫); "ಅಗ್ರಂ ಪ್ರಧಾನಂ ಪುರೋಗ್ರಂ ಪರಾರ್ಧ್ಯಂ . . . ಮುಖ್ಯಕ್ಕೆ ನಾಮಂ" (ಮಂಗರಾ. ೧೨೭-೪). [ಸಂ.]

**ಪರಾವರ್ತ** (ನಾ). ೧. ವಿಮುಖವಾಗುವಿಕೆ; ಹಿಂದಿರುಗುವಿಕೆ. ೨. ವಿನಿಮಯ. ೩. ಜೀರ್ಣೋದ್ಧಾರ; ಪರಿಷ್ಕರಣ.

**ಪರಾವರ್ತಗೊಳಿಸು** = ವಿಮುಖವಾಗುವಂತೆ ಮಾಡು; ಹಿಂದಿರುಗಿಸು : ರಾಘಪ್ಪ ಆಕೆಯನ್ನು ನಾಟಕಗಳಿಂದ ಪರಾವರ್ತಗೊಳಿಸಿದುದಕ್ಕೆ ಇದೊಂದೇ ಕಾರಣವಲ್ಲ (ಗಂಮಾಯಿ. ೧೪೬). [ಸಂ.]

**ಪರಾವರ್ತಕ** (ನಾ). (ಕಿರಣ, ಬಿಂಬ ಮೊದಲಾದುವುಗಳನ್ನು) ಪ್ರತಿಫಲಿಸುವ ಸಾಧನ : ಗೋಲಾಂತರ ಕಾಜಿನಂತೆ ಧಾತುಗಳ ಪಾತ್ರೆಗಳನ್ನು ಮಾಡಿರುತ್ತಾರೆ. ಅವುಗಳ ಒಳ ಮೈಯು ಕನ್ನಡಿಯ ಹಾಗೆ ನುಣುಪಾಗಿ ಹೊಳೆಯುತ್ತಿರುತ್ತದೆ. ಈ ಪಾತ್ರೆಗಳಿಗೆ ಪರಾವರ್ತಕಗಳೆಂಬ ಹೆಸರುಂಟು (ಮುಂಬಯಿ. ೬-೯೦). [ಸಂ.]

**ಪರಾವರ್ತನ** (ನಾ). ೧. ತಿರುಗುವುದು; ಸುತ್ತುವಿಕೆ: ಭವಪರಿಣಾಮ ಪರಾವರ್ತನದಿಂ ಬಂದು ವಿಂಧ್ಯಾಟವೀಮಧ್ಯದೊಳ್ ಸೋಮನಾಮಧೇಯ ತಾಪಸಸಂಗಂ ಶ್ರೀದತ್ತೆಗಂ ಸೋಮಿಲನೆಂಬೊಂ ಮಗನಾಗಿ (ಶಾಂತಿಪು. ೯-೯೧ ಪ). ೨. ಹಿಂದಿರುಗುವುದು; ವಿಮುಖತೆ; ಹಿಂದೆಗೆಯುವಿಕೆ. ೩. ಬದಲಾವಣೆ; ಪಲ್ಲಟ; ಪರಿವರ್ತನೆ: ಅಬ್ಬೆಯಿಂದ ವರ್ಗ್ ದೇವಿಯರಾ ಕೃತಿಯ ಪರಾವರ್ತನದಿಂ ಮಾನವಸ್ತ್ರೀರೂಪದಿಂ ಪ್ರಿಯಮಿತ್ರೆಯುಂ ನೋಡಲ್ಪಂದು (ಶಾಂತಿಪು. ೯-೧೦೧ ಪ); ಪಾಪಿಗಳ ಪರಾವರ್ತನಕ್ಕಾಗಿ ಅಲ್ಲದಿದ್ದರೆ ಸಾಧು ಇರಬೇಕಾದರು ಏಕೆ ? (ಕಗದ್ಯ. ೧೨೦). ೪. [ವಿಜ್ಞಾ] (ಬೆಳಕಿನ ಕಿರಣಗಳು ಪ್ರತಿಫಲಿತವಾಗಿ) ಹಿಂದಿರುಗುವಿಕೆ; ಮರುಕೊಳಿಸುವಿಕೆ : ಹನಿಯಲ್ಲಿ ಪ್ರಕಾಶಕಿರಣಗಳ ವಕ್ರೀಭವನದಿಂದಲೂ ಪರಾವರ್ತನದಿಂದಲೂ ಇಂದ್ರಧನುವು ಮೂಡುತ್ತದೆ (ಮುಂಬಯಿ. ೬-೧೪೭). ೫. [ಜೈನ] ಅಶುಭನಾಮಪ್ರಕೃತಿಗಳಲ್ಲಿ ಒಂದು : ಬಱಿಯಮಂತರ್ಮುಹೂರ್ತಕಾಲಂ ಪ್ರಮತ್ತಾಪ್ರಮತ್ತ ಪರಾವರ್ತನಸಹಸ್ರಂಗೆಯ್ದು . . . ಆಯುಃಕರ್ಮಮೆನುಱಿಪಿ (ಆದಿಪು. ೧೦-೧೪ ಪ); ಮತ್ತಾ ಪ್ರಮತ್ತಪರಾವರ್ತನಸಹಸ್ರಂಗಳನಂತರ್ಮುಹೂರ್ತದೊಳ್ ನಿರ್ವರ್ತಿಸಿ (ಚಾಧಪು. ೧೬-೧೨೭ ಪ). [ಪರ್ರ+ಆವರ್ತನ]

**ಪರಾವರ್ತನಗೊಳಿಸು** (ಕ್ರಿ). ವಿಮುಖಗೊಳಿಸು : ಮಗನ ಮುಂದೆ ಒಮ್ಮೆ ಎಲ್ಲ ಇತಿಹಾಸವನ್ನು ಹೇಳಿ ಅವನನ್ನು ಇದರಿಂದ ಪರಾವರ್ತನ ಗೊಳಿಸಬೇಕೆಂದು ಶ್ರೀನಿವಾಸನು ಅನೇಕ ಸಲ ಯೋಚಿಸಿದನು (ರಂಗರೋ. ೧೯೮). [ಪರಾವರ್ತನ+ಕೊಳ್₁ +-ಇಸು₃]

**ಪರಾವರ್ತನೆ** (ನಾ). ೧. = ಪರಾವರ್ತನ ೨ : ಅವನು ನೆವ ಹೇಳು ತ್ತಿದ್ದನು. ಓಸ್ಪರ್ನನು ಅವನನ್ನು ಅದರಿಂದ ಪರಾವರ್ತನೆ ಹೊಂದಿಸುತ್ತಿ ದ್ದನು (ಬೆಂಜನ್. ೬೨). ೨. = ಪರಾವರ್ತನ ೩ : ಈ ಭಾವನೆಗಳು ಜೀವಾಳದಲ್ಲಿ ಬೆರೆತು ಜೀವನದ ಕ್ಷೇತ್ರದಲ್ಲಿ ಪರಾವರ್ತನೆಯನ್ನು ಹೊಂದಿ ದಾಗ ಮಾತ್ರ ಶಾಸ್ತ್ರಕ್ಕೆ ವ್ಯಕ್ತಿತ್ವವು ಬರುವದು (ಗೊತ್ತುಗು. ೨೯). [ಪರ್ತ್₃+ಆವರ್ತನೆ]

**ಪರಾವರ್ತಿಸು** (ಕ್ರಿ). ಬದಲಾಯಿಸು ; ಮಾರ್ಪಾಟು ಮಾಡು : ಹೀಗೆ ಎಷ್ಟೋ ಮಾತುಗಳಿಗೆ ತಾನೆ ಹೊಣೆ ಏನೋ ಎನ್ನುತ್ತಿರುವಂತೆಯೂ ಆಗಾಗ ಅವನ ಮುಖಭಾವಗಳನ್ನು ಪರಾವರ್ತಿಸುತ್ತಿತ್ತು (ಅಪನಾ. ೪). [ಪರಾವರ್ತನ +-ಇಸು₃]

**ಪರಾವಲಂಬನ** (ನಾ). ಬೇರೆಯವರನ್ನು ಆಶ್ರಯಿಸಿರುವುದು ; ಮತ್ತೊಬ್ಬರನ್ನು ಆಸರೆಯನ್ನಾಗಿ ಮಾಡಿಕೊಂಡಿರುವಿಕೆ : ಆಶ್ರಯಜೀವನವು ಒಂದು ಬಗೆಯ ಪರಾವಲಂಬನ (ಸಸ್ಯಶಾ. ೧೦೬). [ಪರ್ತ್₃+ಅವಲಂಬನ]

**ಪರಾವಲಂಬಿ** (ಗು). ೧. ಬೇರೆಯವರನ್ನು ಆಶ್ರಯಿಸಿರುವ ; ಮತ್ತೊಬ್ಬರನ್ನು ಆಧಾರವನ್ನಾಗಿ ಉಳ್ಳ. (ನಾ). ೨. ಬೇರೆ ಯವರನ್ನು ಆಶ್ರಯಿಸಿರುವುದು ; ಉಪಜೀವಿ. ೩. = ಪರಾವ ಲಂಬಿ ಸಸ್ಯ : ಪಚ್ಚೆಯಿಲ್ಲದ ಸಸ್ಯಗಳಿಗೆ ಆಹಾರ ತಯಾರು ಮಾಡಲು ಶಕ್ತಿಯಿಲ್ಲ. ಇವು ಸಹಿತ ಪರಾವಲಂಬಿಗಳೆ (ಸಸ್ಯಶಾ. ೧೦೬); ಪಕ್ಕದ ಪೊದರುಗಳ ಕೆಳಗೆ ಒಂದು ಬಗೆಯ ಪರಾವಲಂಬಿ (Parasite) ಬೆಳೆಯು ತ್ತಿತ್ತು (ಹಸುಹೊ. ೧೫೨). ೪. ಪರಾಧೀನ ವ್ಯಕ್ತಿ : ನಾವು ಈ ತನಕವೂ ಪರಾವಲಂಬಿಗಳಾದುದು ಹೆಚ್ಚಾಯಿತು (ಕೈಲಾಕ. ೫೦); ಆರ್ಥಿಕವಿಷಯದಲ್ಲಿ ಮಹಿಳೆ ಪರಾವಲಂಬಿಯಾಗಿದ್ದರೂ ಸಂಯುಕ್ತ ಕುಟುಂಬವು ಅವಳಿಗೆ ಎಲ್ಲ ವಿಧದ ರಕ್ಷಣೆಯನ್ನು ಒದಗಿಸಿತ್ತು (ಕರ್ನಾಕ. ೩೦). [ಪರ್ತ್₃+ಅವಲಂಬಿ]

**ಪರಾವಲಂಬಿಸಸ್ಯ** (ನಾ). ಆಹಾರಕ್ಕಾಗಿ ಇತರ ಸಸ್ಯಗಳನ್ನು ಅವ ಲಂಬಿಸುವ ಸಸ್ಯ : ಇವನ್ನು ಪೂರ್ಣ ಪರಾವಲಂಬಿ (Complete—Parasite) ಸಸ್ಯಗಳೆಂದು ಕರೆಯಬಹುದು (ಸಸ್ಯಶಾ. ೧೦೬). [ಪರಾವಲಂಬಿ + ಸಸ್ಯ]

**ಪರಾವಾಕ್ಕು** (ನಾ). ಶಬ್ದೋತ್ಪತ್ತಿಯ ನಾಲ್ಕು ಅವಸ್ಥೆಗಳಲ್ಲಿ ಒಂದು; P ಪರೆ, ಪಶ್ಯಂತಿ, ಮಧ್ಯಮೆ, ವೈಖರಿಗಳೆಂಬುವು ನಾಲ್ಕು ಅವಸ್ಥೆಗಳು : ಪರಾವಾಕ್ ಪಶ್ಯಂತೀವಾಕ್ ಮಧ್ಯಮಾವಾಕ್ ವೈಖರೀ ವಾಕ್‌ಯೆಂದು ಚತುರ್ವಿಧಂ (ವಿವೇಕ. ೧೬೯). [ಸಂ. ಪರಾವಾಕ್]

**ಪರಾವಿದ್ಯೆ** (ನಾ). [ವೇದಾಂತ] ಎರಡು ಬಗೆಯ ವಿದ್ಯೆಗಳ ಲ್ಲೊಂದು ; ಆಧ್ಯಾತ್ಮ ವಿದ್ಯೆ; ಬ್ರಹ್ಮವಿದ್ಯೆ: ಭಾರತೀಯರು ಆಧ್ಯಾ ತ್ಮಿಕ ಸಾಧನೆಗೆ ಸಹಾಯಕವಾದುದನ್ನು ಪರಾವಿದ್ಯೆಯೆಂದೂ . . . ಕರೆದರು (ಭಾರದ. ೩೯೩) ; ವೈದಿಕವಾಙ್ಮಯಶಿಕ್ಷಣವು . . . ಪರಾವಿದ್ಯೆ ಯನ್ನು ಗಳಿಸುವ ತ್ಯಾಗಕ್ಕೆ ಸಿದ್ಧವಾಗಿದ್ದ ಬ್ರಾಹ್ಮಣಕುಟುಂಬದವರಿಗೆ ಮಾತ್ರವೇ ದೊರೆಯುವಂತಾಯಿತು (ಕ್ರಿಯಾಶಾ. ೯೧). [ಸಂ. ಪರಾವಿದ್ಯಾ]

**ಪರಾವೃತ್ತ** (ಗು). ೧. ಸುತ್ತ ತಿರುಗಿದ. ೨. ಹಿಂದಿರುಗಿದ ; ವಿಮುಖವಾದ ; ಹಿಮ್ಮೆಟ್ಟಿದ. (ನಾ). ೩. ಪ್ರತಿಫಲನ ; ಮರುಕೊಳಿಸುವಿಕೆ. ೪. ಸುತ್ತುವುದು :(೬). ೫. [ನಾಟ್ಯ] ಹತ್ತೊಂಬತ್ತು ಶಿರೋಭೇದಗಳಲ್ಲಿ ಒಂದು; P "ಹಿಂಭಾಗವನ್ನು ನೋಡುವಂತೆ ತಲೆಯನ್ನು ತಿರುಗಿಸುವುದು. ವಿ — ಕೋಪ, ನಾಚಿಕೆ, ಹಿಂದುಗಡೆ ನೋಡುವುದು, ಪರಾವೃತ್ತಾನುಕರಣ; ಇವುಗಳನ್ನು ತೋರಿಸುವಾಗ" (ಲಾಸ್ಯರಂ. ೨೨೨ ಗದ್ಯಾನುವಾದ) : ಧುತವಿಧುತಮುಂ . . . ಪರಾವೃತ್ತೋತ್ಕ್ಷಿಪ್ತದಧೋಮುಖಂ . . . ಕೇಳ್ ಸಮಂತು ಪತ್ತೊಂಬತ್ತು ಶಿರಭೇದಮೆಂದು ಪೇಳ್ವರ್ (ಲಾಸ್ಯರಂ. ೧-೭೭); ಹಿಂದಕೆ ತಿರುಗಿದ ಮೊಗಮಾದಂದದ ಶಿರಮದು ಪರಾವೃತ್ತಂ (ಲಾಸ್ಯರಂ. ೧-೮೪). ೬. ಮೂವತ್ತೆರಡು ಬಗೆಯ ಅಂಗವಿನ್ಯಾಸ ಗಳಲ್ಲಿ ಒಂದು : ಪರಾವೃತ್ತಂ . . . ಸ್ವಸ್ತಿಕ ರೇಚಿತಮಿಂತುಂ ವಿಸ್ತರ ಮಾದಂಗಹಾರ ಮೂವತ್ತೆರಡುಂ . . . ವಿರಚಿಸುವೆಂ (ಲಾಸ್ಯರಂ. ೫-೬). ೭. ಹತ್ತು ಬಗೆಯ ಜಂಘಾಭೇದಗಳಲ್ಲಿ ಒಂದು ; P "ಕಾಲನ್ನು ಹಿಂದಕ್ಕೆ ಮಾಡಿ ಮುಂಡಿಯನ್ನು ಊರಿ ಜಂಘೆಯನ್ನು ನೆಲದ ಮೇಲಿಡುವುದು" (ಲಾಸ್ಯರಂ. ೨೬೪ ಗದ್ಯಾನುವಾದ) : ಆವರ್ತಿತ, ನತ, ಉತ್ಕ್ಷಿಪ್ತ, ಉದ್ವಾಹಿತ, ಪರಿವರ್ತಿತ, ನಿಸ್ಸೃತ, ಪರಾವೃತ್ತ, ತಿರಶ್ಚೀನ, ಬಹಿರ್ಗತ, ಕಂಪಿತ – ಈ ಹತ್ತು ಜಂಘಾಭೇದಂಗಳ್(ಲಾಸ್ಯರಂ.೨-೧೪೪೮); ಮುಂದಕ್ಕೆ ನೀಡೆ ನಿಸ್ಸೃತಂ ಚಂದದಿ ಪಿಜಿಗೆಯ್ದಿ ಧರೆಯನೊಂದೆ ಪರಾವೃತ್ತ ಮೊಂದಿ ಬಹಿಃಪಾರ್ಶ್ವಂ ಧರೆಯಿಂದೆನಿಸುವ ಜಂಘೆಯೇ ತಿರಶ್ಚೀನಾಖ್ಯಂ (ಲಾಸ್ಯರಂ. ೨-೧೪೭). ೮. ಇಪ್ಪತ್ತುಮೂರು ವಿಧವಾದ ದೇಶೀಯ ಸ್ಥಾನಕಗಳಲ್ಲಿ ಒಂದು ; P "ಒಂದು ಕಾಲಿನ ಹಿಮ್ಮಡಿಯಲ್ಲಿ ಇನ್ನೊಂದು ಕಾಲಿನ ಹೆಬ್ಬೆರಳೂ, ಇನ್ನೊಂದು ಕಾಲಿನ ಹಿಮ್ಮಡಿ ಯಲ್ಲಿ ಮೊದಲ ಕಾಲಿನ ಕಿರುಬೆರಳೂ ಸೇರಿರುವಂತೆ ನಿಂತು ಕೊಳ್ಳುವುದು. [ಪಾದಗಳನ್ನು ಹಿಂದು ಮುಂದು ಮಾಡಿ ಕೂಡಿಸಿ ನಿಂತುಕೊಳ್ಳುವುದು.]" (ಲಾಸ್ಯರಂ. ೩೩೦ ಗದ್ಯಾನುವಾದ) : ಸ್ವಸ್ತಿಕ, ವರ್ಧಮಾನ, ನಂದ್ಯಾವರ್ತ . . . ಏಕಜಾನುಗತ, ಪರಾವೃತ್ತ . . . ವೃಷಭಾಸನ ಈ ಇಪ್ಪತ್ತಮೂಱು ದೇಶೀಯ ಸ್ಥಾನಕಂಗಳ್ (ಲಾಸ್ಯರಂ. ೬-೧೨ ಪ) ; ಪದಮೊಂದಱ ಮಡದೊಳ್ ಬಂದೊದವಿರೆ ಮತ್ತೊಂದು ಪಾದದಂಗುಟಮಿಂತಾ ಪದಮಡಕೆ ಮೊದಲ ಪಾದದೊಳು ದಿಸಿದ ಕಿಱುವೆರಲೆ ಪತ್ತಿರೆ ಪರಾವೃತ್ತಂ (ಲಾಸ್ಯರಂ. ೬-೪೨).

ಪರಾವೃತ್ತವಾಗು = ಹಿಂದಕ್ಕೆ ಹೋಗು ; ಹಿಂದಕ್ಕೆ ಚಿಮ್ಮಲ್ಪಡು : ಒಂದು ವರ್ಷದೊಳಗೆ ಭೂಮಿಯಿಂದ ಪರಾವೃತ್ತವಾಗಿ ಆಕಾಶಕ್ಕೆ ಹೋಗುವ ಸೆಕೆಯು ಸುಮಾರು ೨೮ ಘೂಟು ದಪ್ಪಾದ ಬರ್ಫದ ಕವಚವನ್ನು ಕರಗಿಸುವಷ್ಟು ಮಾತ್ರವುಂಟು (ಮುಂಬಯಿ. ೫-೨); ಧ್ವನಿಯ ತೆರೆಯು 'ಕ' ಪರಾವರ್ತಕದ ಮೇಲೆ ಅಪ್ಪಳಿಸಿ ಅಲ್ಲಿಂದ ಪರಾ ವೃತ್ತವಾಗಿ . . . ಹೋಗುತ್ತದೆ (ಮುಂಬಯಿ.೬-೯೧). [ಪರ್ತ್₃ + ಆವೃತ್ತ]

**ಪರಾವೃತ್ತತಲ** (ನಾ). [ನಾಟ್ಯ] ಮೂವತ್ತೈದು ವಿಧವಾದ ದೇಶೀಯ ಭೌಮಚಾರಿಗಳಲ್ಲಿ ಒಂದು; P "ಅಂಗಾಲನ್ನು ಮೇಲಕ್ಕೆ ಮಾಡಿ ಕಾಲನ್ನು ಹಿಂದಕ್ಕೆ ನೀಡುವುದು" (ಲಾಸ್ಯರಂ. ೩೭೧ ಗದ್ಯಾನುವಾದ) : ರಥಚಕ್ರ, ಪರಾವೃತ್ತತಲ, ನೂಪುರ . . . ಸಮಸ್ಖಲಿತ ; ಈ ಮೂವತ್ತೈದು ದೇಶೀಯ ಸಂಬಂಧದ ಭೌಮಚಾರಿಗಳು (ಲಾಸ್ಯರಂ. ೬-೧೭ ಪ) ; ಪದಮೊಂದಂ ಪೊಜಗೆ ನಿಮಿರ್ದೊದವಲ್ ತಲ ಮೂರ್ಧ್ವದಿಂ ಪರಾವೃತ್ತತಲಂ (ಲಾಸ್ಯರಂ. ೬-೬೩). [ಪರಾವೃತ್ತ+ತಲ]

**ಪರಾವೃತ್ತವದನ** (ನಾ). ೧. ಹಿಂದಕ್ಕೆ ತಿರುಗಿದ ಮುಖ. ೨. ಮುಖವನ್ನು ತಿರುಗಿಸಿಕೊಂಡಿರುವವನು ; ವಿಮುಖನಾದ ವನು: ಪೊಸಗೆಂಪು ಪಸರಿಸಿದ ಕಣ್ಗಳಿಂ ಬಲ್ಪಿಂ ಬರೆತೆಗೆದು ಮಾನವಮದನಂ ಪರಾವೃತ್ತವದನನಾಗೆ (ಲೀಲಾವ. ४-೧೪೬ ಪ). [ಪರಾವೃತ್ತ + ವದನ]

**ಪರಾವೃತ್ತಿ** (ನಾ). ಕೊಡುಕೊಳ್ಳುವಿಕೆ ; ವಿನಿಮಯ : "ಪರಾವೃತ್ತಾಖ್ಯಂ ವಿನಿಮಯಯನಂ" (ವಸ್ತುಕೋ. ೬೨-೬೪). [ಸಂ.]

**ಪರಾಶಕ್ತಿ** (ನಾ). ೧. ಮೂಲಶಕ್ತಿ; ಆದಿ ಪ್ರಕೃತಿ. ೨. [ವೀಶೈ] ಚಿಚ್ಛಕ್ತಿ, ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿಗಳೆಂಬ ಶಿವನ ಆರು ಶಕ್ತಿಗಳಲ್ಲಿ ಒಂದು: ತನ್ನಿಚ್ಛೆಯಿಂ ಶಿವಂ ನೆನೆಯಲಾಗಿ ಅವನ ಚಿಂತಾಶಕ್ತಿ ತೇಜದ ಸಹಸ್ರಾಂಶದ ವಿಮಲಪರಾಶಕ್ತಿಯುಂ ಸಹಸ್ರಾಂಶಭವಸುವಿಚಾರದಿಂದಾದಿಶಕ್ತಿಯಾಕೆಯ ಸಹಸ್ರಾಂಶದಿಂದಿಚ್ಛೆಯಾಯ್ತು (ವೀಶೈಪು. ೧-೮-೧೬) ; ಶಾಂತ್ಯತೀತ ಕಲೆಯೆಂಬ ಪರಾಶಕ್ತಿಯುಂ . . . ನಿವೃತ್ತಿ ಕಲೆಯೆಂಬ ಕ್ರಿಯಾಶಕ್ತಿಯುಂ ಎಂದು ಆರು ವಿಧವಾದ ಶಕ್ತಿಗಳಿರುವವು (ಶಿವಾನು. ४೦-೨೫ ಟೀಕೆ); ಈ ಶಕ್ತಿ ಪರಮಾತ್ಮನಂತೆಯೇ ಸಚ್ಚಿದಾನಂದರೂಪಿಣಿಯಾಗಿ ಪರಾಶಕ್ತಿ ಎನಿಸಿದೆ (ಶಕ್ತಿವಿ. ೨೦) ; ಆಗ ಶಿವನೊಳಿರುವ ಶಕ್ತಿಯು ಚಿಚ್ಛಕ್ತಿ, ಪರಾಶಕ್ತಿ . . . ಕ್ರಿಯಾಶಕ್ತಿ ಎಂಬ ಷಡ್ರೂಪದಿಂದ . . . ಷಡ್ಲಿಂಗಗಳನ್ನಾಶ್ರಯಿಸಿತು (ಭಾರದ. ೨೫೩). [ಸಂ.]

**ಪರಾಶರ** (ನಾ). ೧. (ಧರ್ಮಶಾಸ್ತ್ರವನ್ನು ಬರೆದ) ವ್ಯಾಸಮುನಿಯ ತಂದೆಯ ಹೆಸರು : ಸತ್ಯವತಿಗೆ ಪುನಃಕನ್ಯಾಭಾವಮಂ ದಯೆಗೆಯ್ದು ಪರಾಶರಂ ಪೋದಂ (ಪಂಪಭಾ. ೧-೬೯ ವ); ಮತ್ಸ್ಯಗಂಧಿನಿ ಬೆಳೆವುತಿರ್ದಳು ಸಂಗವಾಯ್ತು ಪರಾಶರವ್ರತಿಯ (ಕುಮ್ಯಾಆ. ೨-೨೩) ; ವರಪರಾಶರ ಭರದ್ವಾಜ . . . ಮುಖ್ಯಮುನಿಗಳಾ ಕ್ರತುವರದೊಳು (ಜೈಮಿಭಾ. ೩೩-೩೯). 'ಪರಾಶರಸ್ಮೃತಿ' ಪರಾ. ೨. ವ್ಯಾಸಋಷಿ : "ವೈಶಂಪಾಯನಂ ಸತ್ಯವಾದಿ ಪ[ಪಾಠಾಂ.ಪಾ]ರಾಶರಂ ವ್ಯಾಸನಕ್ಕುಂ" (ಮಂಗರಾ. ೭೬-೧೦) ; ಪರಾಶರ . . . ಉಪಮನ್ಯು ಮೊದಲಾದಷ್ಟಾಶೀತಿ ಸಹಸ್ರಋಷೀಶ್ವರರ್ಗನಂತಾಶ್ರಯಂಗಳುಂ (ವಿವೇಕ. ೧೬೪); ಯದುಕುಲ ವಂಶತಿಲಕ ಪರಾಶರಾನತ ದೇವ ರಕ್ಷಿಸು ನಮ್ಮನು (ಹರಿಸಾ. ೧೧). [ಸಂ.]

**ಪರಾಶರಪುರಾಣ** (ನಾ). ಪರಾಶರಮುನಿಯಿಂದ ರಚಿತವಾದ ಪುರಾಣ : ಸನತ್ಕುಮಾರಪುರಾಣ . . . ಸೌರಪುರಾಣ ಪ[ಪಾಠಾಂ.ಪಾ]ರಾಶರಪುರಾಣ . . . ಭಾರ್ಗವಪುರಾಣವೆಂಬವೇ ಆಯಾಯ ನಾಮಧೇಯಮುಳ್ಳವಱಿಂ ನಿರೂಪಿತಂಗಳಾದ ಹದಿನೆಂಟು ಉಪಪುರಾಣಂಗಳು (ವಿವೇಕ. ೯). [ಪರಾಶರ+ಪುರಾಣ]

**ಪರಾಶರಸುತ** (ನಾ). ಪರಾಶರಮುನಿಯ ಮಗ; ವ್ಯಾಸ : ಹಿಮಗಿರಿಯೊಳಿರ್ದ ಧನಮಂ ತರಿಸವೇಳ್ಪುದೆಂದು ಆ ಪರಾಶರಸುತಂ ನೇಮಿಸಿದೊಡೆ (ಜೈಮಿಭಾ. ೫-೭೦). [ಪರಾಶರ+ಸುತ]

**ಪರಾಶರಸ್ಮೃತಿ** (ನಾ). ಪರಾಶರಮುನಿಯಿಂದ ರಚಿತವಾದ ಸ್ಮೃತಿ : ಮನುಸ್ಮೃತಿ ಅತ್ರಿಸ್ಮೃತಿ . . . ಪರಾಶರಸ್ಮೃತಿ ವ್ಯಾಸಸ್ಮೃತಿ . . . ಎಂಬಿವೇ ಆಯಾಯ ನಾಮಧೇಯಮುಳ್ಳವಱಿಂದುಕ್ತಮಾದ ಹತ್ತೊಂಬತ್ತು ಧರ್ಮಶಾಸ್ತ್ರಂಗಳವಱೊಳಗೆ . . . ಕಲಿಯುಗದಲ್ಲಿ ಪರಾಶರಸ್ಮೃತಿಧರ್ಮವೇ ಮುಖ್ಯವಾಗಿಹುದು (ವಿವೇಕ. ೫) ; ಒಟ್ಟಿನಲ್ಲಿ ಕಲಿಯುಗಕ್ಕೆ ಪರಾಶರಸ್ಮೃತಿಯು ಹೆಚ್ಚು ಪ್ರಾಮಾಣಿಕವೆಂದು ಅಂಗೀಕೃತವಾಗಿದೆ (ಭಾರದ. ೫೩). [ಪರಾಶರ+ಸ್ಮೃತಿ]

**ಪರಾಶರಿ** (ನಾ). ೧. ಒಂದು ಕಡೆಯಲ್ಲಿ ನೆಲೆಯಾಗಿ ನಿಲ್ಲದ ಭಿಕ್ಷು,—ಸಂನ್ಯಾಸಿ ; ಪರಿವ್ರಾಜಕ. ೨. ತಪಸ್ವಿ ; ಸಂನ್ಯಾಸಿ : "ಪರಾಶರೀ, ಬ್ರತೀ . . . ತಾಪಸಃ—ಈ ೯ ತಪಸ್ವಿ" (ಹಲಾಯು. ೬೮-೨೫೫) ; "ತಾಪಸಂ . . . ಪರಾಶರಿ ತಪಸ್ವಿಯೆನಿಕ್ಕು" (ಮಂಗರಾ. ೭೬-೯). [ಸಂ. ಪರಾಶರಿನ್]

**ಪರಾಶ್ರಯ** (ನಾ). ಬೇರೆಯವರ ಆಸರೆಯಲ್ಲಿರುವಿಕೆ; ಪರಾಧೀನತೆ : ಅಲ್ಲಿ ಪರಾಶ್ರಯಂ ಪುಣ್ಯಬಂಧಸ್ವಾಶ್ರಯಂ ಸವಿಕಲ್ಪನಿರ್ವಿಕಲ್ಪ ಪೊಂದಿತ್ತೆಱಂ (ಪಸಾರ. ೧೧೬); ಸ್ವಾತಂತ್ರ್ಯವಿಲ್ಲದ ಪರಾಶ್ರಯ ಜೀವನಕ್ಕಿಂತ ಅಸಹ್ಯಕರವಾದ ಸನ್ನಿವೇಶವಿಲ್ಲವೆಂದು ಅವರ ಅಭಿಪ್ರಾಯ (ಪುಕ್ಸ್ವಾರ. ೧೧ ಪೀಠಿಕೆ). [ಪರ$_3$+ಆಶ್ರಯ]

**ಪರಾಶ್ರಿತ** (ಗು). ೧. ಬೇರೆಯವರ ರಕ್ಷಣೆಯಲ್ಲಿರುವ; ಮತ್ತೊಬ್ಬರ ಅಧೀನದಲ್ಲಿರುವ. (ನಾ). ೨. ಬೇರೆಯವರ ರಕ್ಷಣೆಯಲ್ಲಿರುವವನು ; ಪರಾಧೀನ : ತಾನು ಪರಾಶ್ರಿತನೆಂಬುದೇ ಒಂದು ಕೀಳರಿಮೆಯಾಯಿತು ಅವನಿಗೆ (ರೂಢಿ). [ಪರ$_3$+ಆಶ್ರಿತ]

**ಪರಾಷ** (ನಾ). ೧. ಹಾಸುಗೆ ಹಾಸುವ, ಕಸ ಬಳಿಯುವ ಮುಂತಾದ ಕೆಲಸಕ್ಕಾಗಿ ಶ್ರೀಮಂತರ ಬಳಿಯಿರುವ ನೌಕರ. ೨. ಸೇವಕ ; ನೌಕರ: ಚೋಪದಾರ, ಮಹಲದಾರ . . . ಪರಾಷರು, ಗೊಲ್ಲ, ಬೋಯಿ . . . ಮುಂತಾದವರು ಅಲಾಹಿದ ಷಾಗಿರ್ದಪೇಷಾಕಚೇರಿ ದಾಖಲ್ (ಮಹಾಪಂ. I, ೨೨೮). [←ಪಾರ. ಹಿಂ. ಫರಾಷ್ ; ಮರಾ.ಪರಾಸ್]

**ಪರಾಸನ** (ನಾ). ಕೊಲ್ಲುವುದು ; ಕೊಲೆ ; ವಧೆ: "ಪ್ರಮಾಪಣಂ, ನಿಬರ್ಹಣಂ, ನಿಕಾರಣಂ, ನಿಶಾರಣಂ, ಪ್ರವಾಸನಂ, ಪರಾಸನಂ . . . ವಧಃ – ಈ ३೦ ಕೊಲ್ಲುವುದಕ್ಕೆ ಹೆಸರುಗಳು, ಸಂಹಾರ ಮಾಡುವಿಕೆ" (ಸಿದ್ಧಾಂತಿ. ೨೬೨). [ಸಂ.]

**ಪರಾಸು** (ಗು). ೧. ಜೀವ ಹೋದ ; ನಿರ್ಜೀವವಾದ ; ಸತ್ತ. (ನಾ). ೨. ಮರಣಹೊಂದಿದ ವ್ಯಕ್ತಿ : "ಪರಾಸುಃ . . . ಸಂಸ್ಥಿತಃ, ಮೃತಃ—ಈ ೫ ಸತ್ತಾತಂ" (ಹಲಾಯು. ೧೦೪-೭) ; ಪುಟ್ಟಿದಾಗಳೆ ಮಾತಾಪಿತೃಯುಗಳಂಗಳ್ ಸೀಂತುಮಾಗುಳಿಸಿದುಂ ಪರಾಸುಗಳಾಗೆ (ಆದಿಪು. ೫-೪೧ ವ) ; ತತ್ಪತಿ ಪರಾಸುವಾದಳೆ ಗೆತ್ತು ಪರೇತಪಸಕ್ಕೆ ಕೊಂಡು ಪೋಪುದುಂ (ಸುಕುಮಾ. ೭-೮ ವ) ; ಅಂತಾ ಪರಾಕ್ರಮಧನಂ ಹರಿ ಪರಾಸುವಪ್ಪುದುಂ (ವರ್ಧಮಾ. ೫-೪ ವ). [ಸಂ.]

**ಪರಾಸ್ಕಂದ** (ನಾ). ಹೇಡಿ : "ಪರಾಜಿತಃ, ಪರಾಸ್ಕಂದಃ, ಪರಜಾತಃ, ಪರೈಧಿತಃ – ४ ಹೇಡೀ ಆಳ ಹೆಸರು" (ಸಿದ್ಧಾಂತಿ. ೩೧೨). [ಸಂ.]

**ಪರಾಸ್ಕಂದಿ** (ಗು). ೧. ಪರರ ಮೇಲೆ ಆಕ್ರಮಣ ಮಾಡುವ. (ನಾ). ೨. ಕಳ್ಳ ; ದರೋಡೆಕೋರ : "ಪರಿಮೋಷಿ . . . ಪರಾಸ್ಕಂದಿ ಖಳಂ . . . ಎನಿಪ್ಪನಕ್ಕುಂ ಸ್ತೇನಂ" (ವಸ್ತುಕೋ. ೬೫-೮೧) ; "ಆ ಪಾರಿಪಂಥಿಕಂ . . . ಪರಾಸ್ಕಂದಿ . . . ಮಲಿಮ್ಲುಚನೆನಲ್ ಕಳ್ಳಂಗೆ ನಾಮಮಕ್ಕುಂ" (ಮಂಗರಾ. ೬೭-४). [ಸಂ. ಪರಾಸ್ಕಂದಿನ್]

**ಪರಾಸ್ತ** (ಗು). ೧. ಎಸೆದ ; ಬಿಸಾಡಿದ. ೨. ಹೊರದಬ್ಬಿದ ; ಹೊರದೂಡಿದ. ೩. ಖಂಡಿಸಿದ ; ತಿರಸ್ಕರಿಸಿದ. ४. ಸೋತು ಹೋದ ; ಹಿಮ್ಮೆಟ್ಟಿದ. (ನಾ). ೫. ಹಿಮ್ಮೆಟ್ಟಿದವನು ; ಸೋತವನು : ದೇವಿಯ ಕೌಶಲದಿಂದೊಂದು ವಿನಾಡಿಯಲ್ಲಾ ಐನೂರು ಮಂದಿ ಕುಂಪಣಿಯ ಸಿಪಾಯಿಗಳೂ ಪರಾಸ್ತರಾಗಿ ಹೋದರು (ದೇವೀಚಾ. ೧೫೧). [ಸಂ.]

**ಪರಾಹ್ಣ** (ನಾ). ಹಗಲಿನ ಉತ್ತರಾರ್ಧ ಭಾಗ; ಅಪರಾಹ್ಣ ; "ಮಧ್ಯಾಹ್ನದಿಂದ ಸಂಜೆ ತನಕ ಇರುವ ಹೊತ್ತು" (ಗಂಗಾಪು. ೧೯೮). [ಸಂ.]

**ಪರಾಳ** 'ಫಲಾರ' ನೋ.

**ಪರಿ**$_1$ 'ಪಱಿ$_1$' ನೋ.

**ಪರಿ**$_2$, ಪಱಿ$_2$, ಹರಿ$_2$, ಹಱಿ$_2$ (ಕ್ರಿ). ೧. ಚಲಿಸು ; ನಡೆ ; ಸಾಗು : ಆತನಂ ಕಂಡು ಕರುಮಾಡದಿಂದಿೞಿದು ಪರಿದು (ಪದ್ಮರಾ. ೧೧೬-೨೧) ; ಅಂತು ಪೊಜಮಟ್ಟು ಮುಂದೆ ಪರಿವ ಧವಳಚ್ಛತ್ರಚಾಮರಂಗಳುಂ . . . ತನಗೆ ರಾಜರಾಜಕಬ್ಬಮನನ್ವರ್ಥಂ ಮಾಡೆ (ಪಂಪಭಾ. ೧೦-೨೬ ವ) ;

ನಿತ್ತರಿಸದೆ ಲಜ್ಜಿಸಿ ಪೊಳ್ಮಳ್ ಪರಿದು ಮಹಾಶ್ವೇತೆ ನಿಜಗುಹಾಭ್ಯಂತರಮಂ (ಕಾದಂಉ. ೬೬೯) ; ಕಾಲಿಲ್ಲದೆ ಪರಿವೆನೆಂಬ ಕೀಲಿಲ್ಲದೆ ಪಡಿದೆಱಿವೆನೆಂಬ . . . ಪಚ್ಚಪಸಿಯೆಗ್ಗನಂ ಪೋಲ್ಕುಂ (ಧರ್ಮಾಮೃ. ೧-೬೭) ; ಪರಿದೊಡೆ ಪರಿವ ನಿಲಲ್ ಚೆಚ್ಚರನೊಲ್ವಿಂ ನಿಲ್ವ ಜೋಕೆಯಿಂದಾಗಳ್ಗೋಪರ ಸನ್ನೆಯನೊಲ್ದಾಲಿಸುತಿರದೇಳ್ತರುತಿರ್ದುವಲ್ಲಿ ನೆಱೆ ಪೆರ್ದುಱುಗಳ್ (ತ್ರಿಪುವಿ. ೧೫-೨೧). **೨.** ಓಡು; ಧಾವಿಸು : ಪರಿದೆಯ್ದೆ ತಾಗಿದಂ ಭಾಸುರತರ ರಘುಕುಲಲಲಾಮನೊಳ್ . . . ದಶವದನಂ (ಕವಿರಾ. ೨-೯೩) ; ಪಿರಿದೊಂದುತ್ಪುಳಕಭಾವದಿಂ . . . ನೋಡಲೆಂದು ಪರಿದಳ್ ಚಕ್ರೇಶಸೌಂದರ್ಯಮಂ (ಆದಿಪು. ೧೧-೨೨) ; ಲಜ್ಜೆ ಪಿಂದೆ ನಿಲೆ ಮುಂದೆ ಮದಿಂದ್ರಿಯವರ್ಗಮಾವಗಂ ಪರಿಯೆ (ಕಾದಂಪೂ. ೮೯೩) ; ಪರಿವಂಬಂ ಪರಿದು ಪಿಡಿದು ಬೇಗಂ ತರ್ಪಂತಿರೆ ಪವನಜವದೆ ಪವನಜ ಪರಿದಂ (ಗದಾಯು. ೬-೨೮) ; ತಿರುಗಿ ಮುಂದೆಗೆ ಬರುತ ಪಶುಗಳು ನೆನೆದು ತಮ್ಮಾ ಕರುಗಳನ್ನು ಪರಿದು ಲಂಘಿಸಿ ಚಿಮ್ಮಿ ನೆಗೆಯುತ ಭರದಿ ಬಂದವು ದೊಡ್ಡಿಗೆ (ಗೋಹಾಡು. ೫-೨೨). **೩.**(ನೀರಿನಂತೆ)ಪ್ರವಹಿಸು : ಪರಿವ ತೊಱೆಗಳುಮಂ ತೊವಲ್ತು ಸೊಗಯಿಸುವಡವಿಗಳುಮಂ (ಪಂಪಭಾ.೭-೨೫ ವ); ಸರೋಜವನದಿಂ ಶಾಳಿವನಕ್ಕೆ ಪರಿವ ಪರಿಕಾಲ್ಗಳಂ ನೆರೆದು (ಸುಕುಮಾ. ೧೦-೫೭ ವ) ; ಗಿರಿಯ ಸಾನುಗಳಿಂದ ಪರಿವ ರಸದೊಜ್ಜರದ ಪರಿಕಾಲ ನೀರುಂಡು (ಸಿದ್ಧರಾ. ೧-೧೬) ; ಆದರಾಹಾ ಮರಳಿ ಜಡವಾಗಿ ಪರಿದಪಳ್ ಮತ್ತೆ ತಾಂ ಕಚಲೊಡಲಿಗೇಕಾಕಿನಿ ! (ಚಿತ್ರಾಂಗ. ೬೧-೧೬೭೯). **೪.** ಓಡಾಡು; ಸುತ್ತಾಡು ; ತಿರುಗಾಡು : ಆ ನರೇಂದ್ರನಂದನನ ಮುಂದೆ ಪರಿವ ಪಲತೆಱದ ಪಡೆಯ ಬಹಳಕೋಲಾಹಲಂಗಳುಂ (ಕಾದಂಪೂ. ೬೦೨) ; ರಾತ್ರಿಯೊಳುನ್ಮೀಲಿತದೃಷ್ಟಿಯಾಗಿ ಪುರದೊಳ್ ಪರಿದೆಂ (ದಶಕು. ೮-೨೨೦) ; ಕೇರಿಕೇರಿಯೊಳು ಪರಿದು ಲೂಟಿಯಾಡಿದರೂರು ಕಿಚ್ಚಿನ ಬೀಡಾಯ್ತು (ಕುರಾಸಾಂ.೧೦-೬೪). **೫.** ಹಿಮ್ಮೆಟ್ಟು ; ಹಿಂದಕ್ಕೆ ಓಡು ; ಪಲಾಯನ ಮಾಡು : "ಅಕ್ಕುಳಿಸಿತೆಂದುಂ, ಮೆಯ್ದೆಗೆದುದೆಂದುಂ . . . ಪರಿದುದೆಂದುಂ . . . ಪಾರಗೆಯ್ಕೆಂದುಂ—ಈ ೧೩ ಅಪಸರಣಕ್ಕೆ ಪೆಸರ್" (ಕಶಸಾ. ೭೨-೬೪೯); ಗೊ × ವೆಣ್ದೆ ಕದಿ ಸತ್ತ ಕಳ್ಳ ಪರಿಯೆ ಮರಂಗಲ್ಗೊಳ್ ಪನ್ನಿಕೊರ್ಕಳಗಟ್ಟಿ ಸಲ್ಗು (ಎಕ. X(S), ಬಾಗೇಪ. ೯೩-೬ ; 10 ನೆಯ ಶತ) ; ಅಂತು ನೆರೆದ ಖೇಚರರೆಲ್ಲಂ ಸಿಗ್ಗಾಗಿ ಪರಿದುಪೋಗೆಯುಂ (ಧರ್ಮಾಮೃ. ೮-೧೩೮) ; ಕಿರಣಾಳಿ ಪರಿಯಲು ಮುರಿದನಸ್ತಾಚಲಕೆ ದಿನನಾಥ (ಶಿಭಾಗ. ೧೧-೧೦-೩೪) ; ಮುರಿದನಿಂದ್ರನು ಪರಿದನನಲನು . . . ಭೀತಿಯಲಿ (ಅನಂರಾ. ೧-೫-೧೯). **೬.** ಹೋಗು ; ತೆರಳು : ಪಲವೇಳೆಯೊಳು ಪರಿಯದೆ ತಾಯ್ಮನೆಗಲ್ಲಿ ಪಲವಗಲಿದ್ದು ನೆಲಸದೆ (ಹದಿಬ. ೮-೪೦) ; ಪರಿದು ಖಿತಂಪಕ ಸಭೆಯೊಳ್ ಪಿರಿಯತ್ತರ್ಜಮೆನಿಸಿ ನೆಗಟ್ದ ಬುಧರಂತಿರಲಿಂ ಗುರುಕವಿಯಿದಿರಲ್ಲಿ ಕಲಾಧರತನಯಂ ವಿಬುಧರಿಂದೆಯುಂ ಬುಧನೆನಿಕುಂ (ಚಿಕವಿ. ೧-೭೯). **೭.** (ದೃಷ್ಟಿ, ಗಮನ, ಲಕ್ಷ್ಯ ಮುಂತಾದುವು) ಬೀಳು : ಪರಿವ ಕಟಾಕ್ಷಂಗಳನೋಸರಿಸುತ್ತುಂ ನಿಮಿರ್ವ ಸುಯ್ಗಳಂ ಕುಸಿಯುತ್ತುಂ ಶರಪಾಶಂಗಳ ನಡುವಣ ಹರಿಣಿಯವೋಲ್ ಮನದೊಳಾಗಳಾಕುಳೆಯಾದಳ್ (ಆದಿಪು. ೪-೫೦). **೮.** ವ್ಯಾಪಿಸು ; ಹರಡು ; ಹಬ್ಬು : ಕಾಂತಾರಮನೊಂದು ಬೇಗೆ ಪರಿವಂತೆ (ಪಂಪಭಾ. ೮-೯೮) ; ಸುರಿದಖಿರ್ಬರ ಮೇಲೆ ಹೂಮಳೆಗಳುರ್ವಿನಿಂ ಪರಿಪವೆಣ್ದೆಸೆಯ ಭೇರೀರವಂ ಕೊರ್ವಿನಿಂ (ಅಶೀರ. ದೇ. ೧೦೩-೧೦) ; ವಿಷಜ್ವಾಲೆಗಳೆನೆ ಪರಿದುವು ಶರಜಾಲಂ (ಉದ್ಭಟ. ೪-೯೦) ; ಚಂಬಕ ಪಟಹ . . . ಬುರುಗು ನಪಿರಿಯ ಞಂಬಿನ ರವವೆಂಟುದಿಕ್ಕಿನ ಹೊರಿಗೆಯ ಮುಂಬರಿದೊಡನೆ ಪರಿದುದು (ಕಂಸವಿ. ೧೧-೨೪). **೯.** (ಗುಂಪು, ಕೂದಲು ಮೊದಲಾದುವುಗಳಂತೆ) ಕೆದರು ; ಚೆದರು ; ಚೆಲ್ಲಾಪಿಲ್ಲಿಯಾಗು : ಪರಿದ ತಲೆ ಬಿಟ್ಟ ಬಾಯ್ . . . ಅರುಣಜಲದಿಂ ಪೊರೆದ ತನುವೆರಸು ಬೀಭತ್ಸರಸಮನಭಿನಯಿಸುತಿರ್ದರಿಲ್ಲಿ ಭಟರ್ಕಳ್ (ಗದಾಯು. ೪-೨೫) ; ದುರ್ಜನನ ನುಡಿಯಂತೆ ಕೊಂಕಿ ಪರಿದ ಜಡೆಗಳುಂ ಕುಟಿಲನ ಚಿತ್ತದಂತೆ ಬಹುಪ್ರಕಾರಮಾದ ಮೆಯ್ಯ ಬಣ್ಣಮುಂ (ಧರ್ಮಾಮೃ. ೪-೭೫). **೧೦.** ಹೊರಟು ಹೋಗು ; ಇಲ್ಲವಾಗು ; ಅಳಿದು ಹೋಗು ; ಮಾಯವಾಗು : ಪರಿಯೆ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋಱೆ . . . ಮಲ್ಲಿಗೆಗಳ್ ವಸಂತದೊಳ್ ಬಿರಿದೊಡೆ (ಆದಿಪು. ೧೧-೧೦೬) ; ಕಾಮನ ಸರದಿಂದೆ ಲಜ್ಜೆ ಪರಿಯಲ್ಪಡವೆತ್ತನುರಾಗವಿಭ್ರಮಂ ಜನಿಯಿಸಲಾಗಳಾಕುಲತೆಯಂ ತಳೆದೆನ್ನನೊಱಲ್ದು ನೋಡಿದಳ್ (ಕಾದಂಉ. ೩೧೪) ; ದೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಪರಿಯೆ (ಧರ್ಮಾಮೃ. ೨-೬೯). **೧೧.** (ಕಷ್ಟ, ದುಃಖ ಮುಂತಾದುವುಗಳಂತೆ) ನಿವಾರಣೆಯಾಗು ; ಕಳೆ ; ಪರಿಹಾರವಾಗು : ಸಂಸಾರಂಗೆ ಪರಿ[ಪಾಠಾಂ. ರೆ] ಗುಮಟಲ್ ಜಿನಪದಾಬ್ಜಮಂ ಪೊರ್ದಲೊಡಂ (ಸಮಪ. ೧-೧೪೦); ತೋಳ ನೆಗಹಿ ನೀರೆಱೆಯೆ ಗಳತೃಷ್ಣೆ ಪರಿದೊಡವಿಱಂಟುವ ನೆವದಿ ಹೆಂಗಳ ಮುದ್ದುಮೊಗವ ನೋಡುವರು (ಮೋಹತ. ೨-೩೦) ; ಗುರುಪಾದಸೇವೆ ತಾ ದೊರೆಕೊಂಡಿತಾದಡೆ ಪಿರಿದಪ್ಪ ಪಾಪ ಪರಿದಿಹುದು (ಸರ್ವಜ್ಞ. ೧೦೦) ; ಅರಣ್ಯದೊಳಿರುವ ಅರಳಿಯ ಮರನ ಸ್ವಕರದ್ವಯಂಗಳಿಂ ಮುಟ್ಟಿ ಸ್ಮರಿಸಿದೊಡೆ ನೂರೆಂಟುವೇಳೆಯು ಪರಿದು ಪೋಪುದು ಮೃತ್ಯು (ಗಗತಾ. ೪-೭೬). **೧೨.** (ಕಷ್ಟ, ದುಃಖ, ಆಯಾಸ ಮುಂತಾದುವುಗಳನ್ನು) ನಿವಾರಿಸು ; ನೀಗು ; ಪರಿಹಾರ ಮಾಡು : ಈ ಪಾಟಿಯ ಸಮರ್ಥಿಕೆಯಲ್ಲಿ ಬಲದ ಸಂತಾಪವ ಪರಿದನೆಂದೆನುತೆ ಶ್ರೀಪರಮೇಶ ರಮೇಶಂಗೆ ಮೆಚ್ಚಿ ಸಲ್ಲಾಪದಿಂ ಕೈವಾರಿಸಿದ (ಮೋಹತ. ೩೭-೫೯); ಜೀವನದೊಳಗೆಮ್ಮರಳನೊಂದಿಸಿ ನೆಱೆ ಸೇವಿಸಿದವರ ಶ್ರಮಗಳ ಗಾವಳಿಯನು ಪರಿದಪೆವೆಂದು ನಱುಗಂಪು ತೀವಿದ ಪಾಟಲಿಯಿಹುವು (ಕಂಸವಿ. ೭-೫೩) ; ಪಸಿವಲಸಿಕೆಗಳ ಪರಿದು ಕೆಲದೆ ನಿಂದು . . . ನಲವಿನೊಳು (ಹದಿಬ. ೩-೧೬) ; ಗುರುವರನು ಶಿಷ್ಯನ ಮನದ ಸಂಶಯಮರೆಯ ಪರಿಯುವೆನೆಂಬ ವಾತ್ಸಲ್ಯದಲಿ ಮೈದೋರೆ (ಗಗತಾ. ೧-೮). **೧೩.** ತೀರು ; ಮುಗಿ ; ಕೊನೆಗಾಣು : ಇರ್ಕೇರಿ ಬಸವಪಟ್ಟಣದುರ್ಕರಸಗೊಂದು ನೆವದೊಳಂದಿಂಗೆ ಪುಯಿಲ್ ಪೆರ್ಕಳಿಸಿ ಪರಿಯದಿರೆ ಭೃಶಕರ್ಕಶರಟಾಗೆಯ್ಮೆವಟ್ಟಿಗೊಡನಡಿಯಿಟ್ಟರ್ (ಚಿಕವಿ. ೨-೯೦). **೧೪.** (ಓಲಗ, ಸಭೆ ಮುಂತಾದುವು) ಮುಕ್ತಾಯವಾಗು ; ಬರಖಾಸ್ತು ಆಗು ; ವಿಸರ್ಜಿತವಾಗು : ಮಜ್ಜನಕ್ಕುಜ್ಜುಗಂಗೆಯ್ದೊಡ್ಡೋಲಗಮುಂ ಪರಿಯಲ್ಕೇಟಿಬ್ದಾಸ್ಥಾನಮಂಟಪದಿಂಮಹೀಪಾಲನೇಟ್ಟುದುಂ(ಕಾದಂಪೂ.೬೭). **೧೫.** ಬಿಡು; ತ್ಯಜಿಸು: ನಂಬು ಕೀಲ್ಮೇಲಾಗಲೆಂತೆಂದೆಂಬ ಸಂದೇಹವನು ಪರಿ (ಗಗತಾ. ೧೪-೨೬). **೧೬.** ಚಂಚಲವಾಗು ; ಅಸ್ಥಿರವಾಗು : ತಿರುಗುವ ತನು ಬೆರ್ಚುವ ಕಣ್ ಪರಿವ ಮನಂ ನಟ್ಟ ಕಿವಿಯುಡಂಗುವ ಸುಯ್ಯುಂ ಸರಳಂ ಮಿಱುತೆ ಹರಿಣಂ ಸರಳಿಸಿತಯ್ದಾಱನೇಳನೆಂಟೊಂಬತ್ತಂ (೧೦ಕ. ೧-೯೧). **೧೭.** (ಕೆಲಸ ಮುಂತಾದುವುಗಳಂತೆ) ತೃಪ್ತಿಕರವಾಗಿ ಸಾಗು ; ಅಭಿವೃದ್ಧಿಗೆ ಬರು ; ಮುಂದುವರಿ : (ಕಿ). **೧೮.** (ಸಾಲ, ಋಣದಂತೆ) ಬಿಡುಗಡೆಯಾಗು; ಋಣಮುಕ್ತವಾಗು : (ಕಿ). **೧೯.** ಚಿಗುರಿಡು ; ಕುಡಿಯಿಡು : "ಪರಿದುದೆನಲ್ ಕುಡಿಯಿಟ್ಟುದು" (ಕವಿಕಂ. ೭೧). **೨೦.** ಧಾಳಿ ಮಾಡು; ಮುತ್ತಿಗೆ ಹಾಕು : ಆನೆಯ ಮೇಲೆಯುಂ ಆಳ ಮೇಲೆಯುಂ ಕುದುರೆಯ ಮೇಲೆಯುಂ ಪರಿದುದೊಂದೆ ಗಜಂ ಭುವನೈಕರಾಮನಾ (ಶಮದ. ೧೨೦ ಪ್ರಯೋ). **೩, ೨೦ :** ತೊಱೆಯಂತಹೋರಾತ್ರಂ ಪರಿಯುತ್ತುಂ ಈ ಮಾರ್ಗದಿಂ ಬಾಧೆಯಂ ಮಾಡೆ (ಧರ್ಮಾಮೃ. ೨-೭೧). △ **ಪೞಿ$_2$** : **೨.** ಗೋದಾ

ವರಿಯಾ ಮುಣ್ಣಿಂ ರಿಶಿಫೊಳಲೊಳೆ ಪಱಿದು ಪುಳನ ಬಲಮುಟ್ಟಿ × × × ವನದನಾವಾಸವನಾಗಿ[ಟ್ಟಿ] ತೈಲನೇಪ್ಯೆಚ್ಚಿ ದನೊ (ಸೌಇಇ. XI-i, ೭೬-೧೦; ಸು. 1045). **ಹರಿ₂ : ೧.** ತಲೆಯಿಲ್ಲದ ಮೃಗ . . . ಹಜ್ಜೆಯಿಲ್ಲದೆ ಹರಿಯಿತ್ತು (ಅವಚಂ.೧೮೦-೮೧೧); ಮುಂದೆ ಹರಿದರು[ಪಾಠಾಂ. ದುದು] ಕೈಯ ಕಂಬಿಯ ಸಂದಣಿಯ ಪಡೆವಳರು (ಕುಮ್ಮಾಭೀ. ೧-೧೭); ಹರಿವ ಬೆಳ್ಳುಗಿಲೊಳು ತೋಱಿ ಮಱಸುವ ಚಂದಿರನೋ ಭಾಸ್ಕರನೋ (ಭರಚ. ೧-೫೭). **೨.** "ಹರಿ (ಪರಿ)—ಧಾವನೇ (ಓಡು)" (ಶಮುಧಾ); ಸುಡು ಸುಡು ಮನವಿದು ವಿಷಯಕ್ಕೆ ಹರಿವುದು (ಬಸಪ. ೩೪); ಹರಿದು ವಿಶ್ವಾಮಿತ್ರಮುನಿಗೆಱಗಿ ಚರಣಸರಸಿರುಹಮಂ ತೊಳೆದು (ಹಚಕಾ. ೩-೭); ಹರಿದುದು ಚಿತ್ತವಖಪಥಕೆ (ತೊರರಾ. ೨-೫-೧೧); ಚೀರುತ್ತ ಅಬ್ಬರಿಸುತ್ತ ನನ್ನನ್ನು ತಿನ್ನುವವರಂತೆ ಹರಿದು ಬಂದರು ನನ್ನ ಹಡೆದವ್ವ (ಸುಪಸಂ. ೧೪). **೩.** ತೆಂಕಣಕೋಡಿಯಿಂ ಪಡುವ ಮುಂದಾಗಿ ಹರಿದ ಪಳ್ಳವೆ ಮೇರೆ (ಎಕ. VII, ಶಿಕಾರಿ. ೩೨೩-೨೩; 1046); ಹರಿವ ನದಿಯ ತೆಱನ ಹೋಲ ಬಲ್ಲರೆ ಭಕ್ತಿ (ಬಸವ. ೫೨೫); ಉಕ್ಕಿದುದು ತನಿವೀರರಸ ಕುದಿದುಕ್ಕಿ ಹರಿದುದು ರೌದ್ರರಸ (ಕುಮ್ಮಾಕ. ೧೬-೨೭); ಹರಿವ ನೀರಿನ ತೀರದಿ ಕುಳಿತ ರೇನು ಬಕಧ್ಯಾನದಿ (ಪುರಂದ. ೧-೧೮೦-೨). **೪.** ಪಾದರಿ ಮಾವು ಹರಿಚಂದನ ದೆಡೆಗಳೊಳು ಹರಿದಱಸಿದೆವಮ್ಮ ಕಂತುಕ ಕಣ್ಗೆ ಗೋಚರಿಸಿದುದಿಲ್ಲ ವನದೊಳು (ಕುರಾಸಾಂ. ೩೨-೨೫). **೫.** ಆ ನರೇಂದ್ರನ ತಲೆ ಸಹಸ್ರ ವಿಧಾನದಲಿ ಬಿರಿದುದು ಸುಯೋಧನಸೇನೆ ಹರಿದುದು (ಕುಮ್ಮಾದ್ರೋ. ೧೪-೪೪); ಹರಿ ಹರಿದನಗ್ನಿ ಭಗ್ನೀಕೃತವಿಜಯನಾದಂ (ಚಬಪು.೪೧-೨೯); ಕಡೆಯೊಳುಱುಬೆಗೆಱಗದೆ ಹರಿಯದರಿದು ಕೊಳ್ಳೆನುತೆ ಕೋಲ್ಗಳ್ಗಜ್ ದೊಡೆ (ಜೈಮಿಭಾ. ೨೭-೩೪). **೬.** ಇವನ ದೃಷ್ಟಿಗಳೀಗ ಬೋನದ ಮೇಲೆ ಹರಿವವೊ ಎನುತ ಕೆರಹಿನಲಿ ಬೇಗದಿಂದಲೆ ಮುಚ್ಚಲು (ಬಸಪು. ೫೭-೨). **೮.** ಹರಿವನಿಲ ಅಗ್ನಿ ಜಲ ಮೊಳೆದೋಱದಂದು ಹುಟ್ಟಿದಳೆಮ್ಮವ್ವೆ (ಅವಚಂ. ೨೧೦-೯೪೩); "ಬೀಸು" (ಅವಚಂ. ಕೋಶ); ಕರ್ಣಪಾರಂಪರೆಯೊಳೀತನ ಹೆಸರು ಜಗದಲಿ ಹರಿದುದು (ಸಂಭಪ. ೧೪-೯೧); ಓಲಗಕೆ ಬಂದ ನೃಪಕೋಟಿಕೋಟೀರಪ್ರಭಾಲಹರಿ ಹರಿದು ಮುಸುಕಿತು ತತ್ಸಭಾಮಣಿಜ್ವಾಲೆಗಳ ನಿಕರಮಂ (ಜೈಮಿಭಾ. ೧೭-೨೪). **೧೦.** ಹರಿವು ತಿದೆಯರಿಸಿನದ ಸಿರಿ . . . ಓಸರಿಸುತಿದೆ ಮುತ್ತೈದೆತನವೆಲೆ ಸರಮೆ ಕೆಳುಹೌ ಬೇಗ ಪತಿಯೆಡೆಗೆಂದಳಾ ಸೀತೆ (ತೊರರಾ. ೬-೧೨-೩೪). **೧೧.** ಉಪಪಾತಕ ಮಹಾಪಾತಕಂಗಳ ಮಾಡಿದ ಕರ್ಮಂಗಳು ಕೋಟ್ಯನುಕೋಟಿ ಒಬ್ಬ ಶಿವಶರಣನ ಅಂಗಳವ ಕಂಡಲ್ಲಿ ಹರಿದು[ಪಾಠಾಂ. ಅಳಿದು] ಹೋಹವು ನೋಡಾ (ಅವಚಂ.೨೭೪-೧೨೬೧); ಎಂದಿಗೆನಗೀ ಪೀಡೆ ಹರಿಗು ಪುರಂತರಿರ ಹೇಳಿ (ಬಸಪು. ೪೫-೪೭); ಹರಿದುದಘಕುಲವೆನುತ ಪುಳಕೋತ್ಕರದ ಹರುಷದಲಾ ಧನಂಜಯ ಪರಮ ಗದುಗಿನ ವೀರನಾರಾಯಣನ ಕರುಣದಲಿ (ಕುಮ್ಮಾಅ. ಓಲಿಇ. ೭-೧೧೬); ಪರಮಪುರುಷನ ದೃಷ್ಟಿಪಾತದಿನಿರದೆ ಸಂಚಿತ ಸಕಲದುಷ್ಕೃತ ಹರಿ[ಪಾಠಾಂ. ರ, ರೆ]ದುದಿಸಿದಳು ಶಿಲೆಯು ಮಧ್ಯದೊಳಬಲೆ ಗೌತಮನ (ತೊರರಾ. ೧-೧೨-೧೯). **೧೨.** ದ್ವಯವಿದಿ ದುದಕ್ಕೆ ಎರಡಿಲ್ಲದೆ ವಿಾಱಲಿಲ್ಲವಾಗಿ ... ಸಂಸಾರದ ಹರಿವುದಕ್ಕೆ ನಿಃಕಳಂಕ ಮಲ್ಲಿಕಾರ್ಜುನನಲ್ಲದಿಲ್ಲವಾಗಿ(ಮೋಳಿಪಾ. ೧-೧); ತಾಪಸೋತ್ತಮ . . . ಪಾಪ ಹರಿವಿಷ್ಟಲಿಂಗದ ಪೂಜೆಗೆಯ್ಯುತಾ ರಾತ್ರಿಯಂ ಕಳೆದು (ಪ್ರೌಢರಾ. ೧೦-೪೯); ಯುಂಗಭಾಗ್ಯ ಹರಿವನ್ನ ಸಾವು ಬಾಳ್ಕೆಗಳಿತ್ತು ಬಗೆಯನುದ್ದೀಪಿಸುತೆ ಜ್ವಲಿಸುವಾತ (ವಿಸಿಗೀ. ೩೩-೧೭). **೧೩.** ಹಾಲಿನೊಳು ನೆಱೆ ತುಪ್ಪವಿಪ್ಪುದ ಹೇಳಿದರೆ ಹರಿಯದು (ಪ್ರಭುಲೀ. ೧೭-೧೧); ಹರಿಯದಿಲ್ಲಿಯ ಬವರ ರಾಯನನಱಸಬೇಹುದು (ಕುಮ್ಮಾಗ. ೨-೯). **೧೪.** ಗೋಷ್ಠಿ ಹರಿದಲ್ಲಿ ತಮ್ಮ ತಮ್ಮ ಇರವಿನ ಹಾದಿ (ಮೋಳಿಪಾ. ೬-೨೪); ಓಲಗ ಹರಿದ ಮರುಚಣದಲ್ಲಿ ಪ್ರಭುಗಳಲ್ಲಿ ಎಷ್ಟು ಜನ ಅಧಿಕಾರಿಗಳು . . . ನಿನ್ನ ಪರವಾಗಿ ವಾದಿಸಿದವರು ! (ಕಪಪು. ೬-೯೩). **೧೫.** ಪುರಾಣವನಱದಲ್ಲಿ ಪುಂಡರ ಸಂಗವ ಹರಿಯಬೇಕು (ಮೋಳಿಪಾ. ೧೬-೬೦). **೨೦.** ಬಿದಿರೂರ ರಕ್ಕಸ ಮೊನೆಯಾಳ್ವದೇವ ಈ ಯಾನೆಯ ಕುದುರೆಯ ದಳದಲು ಹರಿದಿಱಿಯದು ಕಯ್ಯ[ಂ]ಬು ತವಲು ದೇವಂಣಗೆ ಬಿನ್ನಪಂಗೆಯ್ಯಲು (ಮೈಅರಿ. ೧೯೩೨, ೩೨-೨; 1125). **೨೧.** ಸಾಧ್ಯವಾಗು ; ಶಕ್ಯವಾಗು : ಜಂಗಮವು ಲಿಂಗರೂಪವಹ ವಿವರವೆಂತೆಂದಡೆ ಮಾತಿನಲ್ಲಿ ನಾನು ಲಿಂಗರೂಪೆಂದಡೆ ಹರಿಯದು (ಅವಚಂ. ೧೬೦-೬೨೭); ತನಗೆ ಬೇಂಟೆಯುವೆರಡು ಮೂಱ್ ದಿನ ತನಕ ಹರಿಯದ ಡುಮ್ಮಳಿಸಿ ಮಱುದಿನ ಬಲೆಯನೊಯ್ದಿತ್ತಿ ಹಾಕಲು (ಬಸಪು. ೨೭-೨೨); ನಾಳಿನಾಹವ ಖಚರಕಿಂಪುರುಷರಿಗೆ ಅಸದಳವಚಲಬಲ ಗಾಂಡಿವಿಗೆ ಹರಿಯದು (ಕುಮ್ಮಾದ್ರೋ. ೯-೫); ಸರಸಿಜಾಸನ ತನ್ನ ಕೈಯಲಿ ಹರಿಯದೆನಲಲ್ಲಿಂದ ಕಂಡೆನು ಹರನ ಪದಯುಗವ (ಕೋಗಯು. ೧೧-೫೩); ವೀರ್ಯಗುಣವಿಲ್ಲದಿದ್ದರೆ ಅಂಥವನ ಕೈಯಲ್ಲಿ ಏನು ಹರಿದೀತು ? (ವಚಭಾ. ೭೭). **೨೨.** (ಹಾವು ಮೊದಲಾದುವುಗಳಂತೆ)ಮೆಲ್ಲನೆ ಸರಿ; ಹರಿದಾಡು: ಹರಿವ ಹಾವಿಂಗಂಜೆ ಉರಿಯ ನಾಲಗೆಗಂಜೆ . . . ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ (ಬಸವ. ೪೪೬); ಹರಿವ ಹಾವವನಾಣೆಯೆಂದೊಡೆ ಹರಿಯಲಮ್ಮದು (ಸಾಳ್ವಭಾ. ೪-೧೬); ಸಣ್ಣ ಹುಳದಂತೆ ಹರಿಯುತ ಇದ್ದನಾಗ (ಕಸಪು. ೧೧-೨). **೨೩.** ಇತ್ಯರ್ಥವಾಗು ; ಬಗೆಹರಿ : ಕವಿ . . . ಎಂದಿಗೂ ಹರಿಯದ ಜೀವನಸಮಸ್ಯೆಯನ್ನು ತಲೆಯಲ್ಲಿ ತುಂಬಿ ರಂಗಮಂದಿರದಿಂದ ಹೊರಗೆ ಕಳಿಸುವನು (ಕಾವ್ಯಸ. ೧); ಎಲ್ಲಿಗೂ ಹರಿಯದಿಹ ಸಂಶಯವೆ(ವಿಸಿಗೀ.೭೫); ಈ ರಹಸ್ಯವು ಮುಂದೆ ಹರಿಯಬೇಕು (ಜ್ಯೋತಿರ್ವಿ. ೧೨೫). △ **ಹಱಿ₂ : ೩.** ಎರಡು ಕೋಡಿಯಲುಂ ಖೀರು ಹಱದು ಗದ್ದೆಯ ಪಂಥವಾದ ಕಾವಿಂಗೆ ಆತತ್ತನವರು ತಂಮ ಬೆದ್ದಲಿಂಗೆ ಪ್ರತಿಕ್ಷೇತ್ರವನು ತಾಳಕೆಱೆಯಲ್ಲಿ ಕೊಂಬರು (ಎಕ. XII, ತಿಪಟೂ. ೨-೧೩; 1263).

**ಪರಿಪರಿ₁, ಪರಿಂಪರಿ, ಪರಿವರಿ, ಹರಿಹರಿ** (ದ್ವಿರುಕ್ತಿ) : ಪುಲಿಪುಲಿಪರಿಪರಿ ಪೋಪೋಗೆಲೆಎಲೆ ಪೆಱಪಿಂಗುಪಿಂಗು(ಕವಿಾ. ೨-೨೬); ಅವಡವಿಗಳೊಳ್ ಪಣ್ಪಲವಾವಗಮೊಳವಲ್ಲಿಗಱಸಿ ಪರಿಪರಿದು (ಪಂಪಭಾ. ೬-೪೬); ಸ್ವಸ್ತಿಶ್ರೀ ಮಹೇಂದ್ರಾಧಿರಾಜ ಗಂಗರ ಮೇಗೆ ಪರಿಂಪರಿಯೆ(ಎಕ. X, ಚಿಂತಾಮ. ೧೧೬-೨ ; ಸು. 890): ಧರಣೀಶಂ . . . ಪರಿವರಿದಲ್ಲಲ್ಲಿಗುರುಳು ತಿರ್ದಂ (ಧರ್ಮಾಮೃ. ೩-೨೦೫); ಗೋಪಾಲಕರು ತಮ್ಮೊಳಗೆರಡು ಬಗೆಯಾಗಿನಿತು ಗೆಲವಿಗೆ ಹರಿಹರಿದು ನಾವಾಡುವೆವು ಬನ್ನಿರೆ. . . ಎನುತ (ಬಸಪು. ೩೨-೧೭); ಅಟ್ಟಿ ಹರಿಹರಿದುಱೆ ಬಳಲ್ದು ಕಾಹುರದೆ ಕಂಗೆಟ್ಟು ಕೆಳೆಗುಂದಿ ಮೆಲ್ಲನೆ . . . ಪಶ್ಚಿಮಗಿರಿಯ ತಪ್ಪಲಂ ಸಾರ್ದನೆನೆ ರವಿ ಪಡುಗಡೆಯೊಳೆಸೆದನು (ಜೈಮಿಭಾ. ೨೬-೪). **ಪರಿದಾಟ, ಪರದಾಟ, ಹರಿದಾಟ**= **೧.** ಓಡಾಟ ; ಸುತ್ತಾಡುವುದು : ನಿನ್ನ ರಾಜಾಲಯಂ ಹೊಱತಾಗಿ ವಿಾಕ್ಕೆಡೆಯೊಳು ಹಾವಳಿಯ ಘನವವರ ಪರಿದಾಟ ಪಿರಿದು ವೇಶ್ಯಾವಾಟವಾದಿಯಾದಲ್ಲಿ ನಿಮ್ಮಂಘ್ರಿರಾಜೀವದಾಣೆಂದು ಬಿನ್ನವಿಸಿದಂ ಎನುತ (ಚೆಬಪು. ೭-೨೦); ದರ್ಪಣದ ಪ್ರತಿಬಿಂಬಕ್ಕೊಂದು ಚೇಷ್ಟೆಯುಂಟೆ ನೆಳಲಿಂಗೊಂದು ಹರಿದಾಟ ಉಂಟೆ (ಅವಸ. ೨೮-೮೦); ಬೇಹ ಮಂತ್ರಿಗಳೊಡನೆನಿಸದೆ ಕಾರ್ಯವ ನೀ ಹರಿದಾಟಕೆಳಸರೆ (ಕುರಾಸಾಂ. ೩೦-೩೫). **೨.** ತೊಳಲಾಟ ; ಬವಣೆ : ಕರಣೇಂದ್ರಿಯಾದಿಗಳ ಪರಿದಾಟಮಂ ಬಿಡಿಸಿ ಲಿಂಗಾಂಗಸಂಯೋಗದೊಳ್ ನಿಲಿಸುವ ಸಮಭಾಷೆ (ಪದ್ಮರಾ. ೪-೨೧); ವಿವಿಧ ಸುರಭಟರ ಪರಿದಾಟವಮಂ ನೋಟಮಂ

ವಿವರಿಸುವದೇನಮರರೋಡಿದರ್ ಕೂಡಿದರ್ ಸುರಪಾಲನರೆನೆಲೆಯನು (ಚಬಪು. ೪೩-೫); ದೋಣಿ ದೂರ ದೂರ ಹೋದಂತೆ ಹುಲಿಯನ ಪರಿದಾಟ ಹೆಚ್ಚಾಗಿ (ಮಲೆಪು. ೭೧೯); ಕೊಡುವುದರಲ್ಲಿ ತೆಗೆದು ಕೊಳ್ಳುವುದರಲ್ಲಿ ಎರಡು ಕಡೆಯವರಿಗೂ ಪರದಾಟವಾಗುತ್ತಲೇ ಇತ್ತು (ದೂಲಸ. ೧೫೫); ದುಡ್ಡಿದ್ದರೆ ಮರ್ಯಾದೆ; ಇಲ್ಲದಿದ್ದರೆ ಪರದಾಟ (ಅನಾಥೆ. ೧೪೨); ಪ್ರವಾಸಿಗರ ಸಂಖ್ಯೆಯ ಪ್ರಮಾಣದಿಂದ ಪತ್ರಿಕೆಗಳನ್ನು ಪೂರೈಸದಲ್ಲಿ ಕಚ್ಚಾಟ ಪರಿದಾಟಗಳು ಕಡಿಮೆಯಾದಾವು (ಗಾಂಪ. ೩೫). **ಪರಿದಾಡು, ಪರದಾಡು₁, ಹರಿದಾಡು**=೧. ಓಡಾಡು; ಸುತ್ತಾಡು; ಸುಳಿದಾಡು; ಅಲೆದಾಡು: ಪುಲಿಗಳ ಮಱಿಗಳೊಳ್ ಪರಿದಾಡುವ ತರುಣಹರಿಣಂಗಳುಮಂ (ಪಂಪಭಾ. ೧-೧೧೫); ಪರಿದಾಡುವ ಸುತನ ಪದಾಂಬುರುಹಂಗಳೊಳುಲಿವ ಪೊನ್ನ ಗೆಜ್ಜೆಯ ದನಿಯಂತಿರೆ ನಚ್ಚಿನ ವೀಣಾವೇಣುರವಂಗಳ್ಕಿವಿಯವಲ್ತೆ ಕರ್ಣಾಮೃತಮಂ (ಮಲ್ಲಿಪು. ೩-೧೧೯); ಎನ್ನ ಕಣ್ಣೊಳಗೆ ಪರಿದಾಡು ಕೂಡಲಸಂಗ (ಬಸವ. ೩-೯೭); ಚಿಂತೂರವರು . . . ಬರೀ ಪರದಾಡುತ್ತಿದ್ದರಲ್ಲದೆ, ಅವರಿಗೆ ಆಳಿಯಿಂದಿರ ಗೋಳೇ ಕೇಳದು (ಮಾಮನಿ. ೨೦೮); ಅರಸು ಬಂಟನ ಕೆಳಗೆ ಹರಿದಾಡುವವದ ಕಂಡೆ (ಮೋಳಿಮಾ. ೨೩೭-೮೧೯); ನಂದಮುದ್ರಿತಕಂಕಣಂಗಳ ಗೊಂದಣದ ಭೂಷಣಗಳಲಿ ಗೋವಿಂದ ರಾಮರು ಮೆಱೆದರಂಗಣದೊಳಗೆ ಹರಿದಾಡಿ (ತಿಭಾಗ. ೧೦-೮-೩); ಅಟ್ಟಿ ಹರಿದಾಡುವವದು ಬಟ್ಟೆಯಲಿ ಮೆಚ್ಚಿಯುವವದು . . . ಒಂದು ಸೆರೆ ಹಿಟ್ಟು ಕಾಣಿಯ್ಯ (ಸರ್ವಜ್ಞ. ೧೯೮೬). **೨.** ಪ್ರವಹಿಸು: ಮಂದಾಕಿನಿ ಮಾದೇವನ ಜಡೆಗಳ ಬಂಧದಿಂ ಬಿಡುಗಡೆಯೊಂದಿ ನಂದನದೊಳು ಬಂದು ಪರಿದಾಡುವ ಚೆಲುವಿಂದೆ ಕಾಲುವೆಗಳೊಪ್ಪಿದುವು (ಮೋಹತ. ೨೪-೫೭); ನೆಱೆ ತನ್ನ ಶುಭ್ರಕೆ ಸರಿಗಾಣೆನೆಂದಾಗ ಪರಿದಾಡುತಿಹಳು ಕಾವೇರಿ (ಕಂಸವಿ. ೫-೪೨). **೩.** ವ್ಯಾಪಿಸು; ಪಸರಿಸು; ಹರಡು: ಮೋಹನಂ ಪೋಹರಿಸಿ ಗಾಡಿ ಪರಿದಾಡೆ ಪೊಸದೇಸಿ ಸೂಸೆ . . . ಪಡೆದು ಕೃತಿಯಂ ಶಿವಾರ್ಪಿತವನೆಸಗುವ ನಿನ್ನ ಸ್ಮೃತಿಗೆ ಸಾಟಿಯುಂಟೇ (ಪದ್ಮರಾ. ೧-೩೧). **೪.** ತೊಳಲಾಡು; ಬವಣೆಪಡು: ಪರಿದಾಡಂ ನಿಜನಿಷ್ಠೆಯಂ ಮಱೆದು (ಶತಕ. ೩೪); ಮಿತ್ರಮಾವುತ ಬೆನ್ನಟ್ಟಿ ನೀರ್ಗುಡಿಹಿದ ಮತ್ತಗಜೇಂದ್ರ ಸೂಡಿಯಲಿ ಎತ್ತಲೆಂದರಿಯದೆ ಪರಿದಾಡುವಂತೆ ಕರ್ಗತ್ತಲೆ ತೀವಿರ್ಪುದಿಯಲಿ (ಮೋಹತ. ೧೮-೪); ಹೀಗೆ ಪರದಾಡುತ್ತಿದ್ದಾಗಲೇ ಅರ್ಧ ಗಂಟೆ ಕಳೆದು ಹೋಯಿತು (ಕಾಬರ್ಪೂ. ೮); ಹಾಗೆ ಮಾಡಿದರೆ ಮುಂದೆ ತುಂಬಾ ಪರದಾಡಬೇಕಾಗುತ್ತೆ (ಮರಳಿ. ೧೬೧). **೫.** (ಯುದ್ಧದಲ್ಲಿ) ಧಾವಿಸು; ಮುನ್ನುಗ್ಗು: ತಾಮ್ರಧ್ವಜಂ ಹರಿನಾದಮಂ ಮಾಡಿ ಹರಿದಾಡುತಿರೆ ಕೂಡೆ ಹರಿಣಾಂಕಕುಲಜಂ ವಿಹರಿಸಿದಂ ಬಾಣದಿಂ ಹರಿಕಿರಣಮಡಗುವಂತೆ (ಜೈಮಿಭಾ. ೨೫-೪೬). **೬.** (ದೇಹದಲ್ಲಿ ರಕ್ತದಂತೆ) ಚಲಿಸು; ಪ್ರವಹಿಸು: ಹರಿ ಹರ ಸಾಮ್ಯದ ವಿಚಾರಪ್ರಣಾಲಿ ಆ ಕಾವ್ಯದ ನರನರದಲ್ಲಿ ಹರಿದಾಡುತ್ತಿದೆ (ತಪಸಿ. ೧೬೦). **೭.** (ಹಾವು ಮುಂತಾದುವುಗಳಂತೆ) ಸರಿ; ಸರಿದಾಡು: ಹಲ್ಲಿ ಹಾವುಗಳು ಅವನ ಕಾಲ ಮೇಲೆ ಹರಿದಾಡಿದುವು (ಮಣಿಸ. ೯೨). **ಪರಿದೋಡು, ಹರಿದೋಡು**=೧. ಇಲ್ಲವಾಗು: ವೀತರಾಗನ ಸ್ಮರಣೆಗಳಾ ರೀತಿಯಜಿತು ಹಾಡಿದರು ಕೇಳ್ವರೆಲ್ಲರ ಪಾತಕ ಪರಿದೋಡುವಂತೆ (ಭರತ. ೧-೭೭). **೨.** ಧಾವಿಸಿ ಓಡು: ಸಾರಿದರೆ ನೂರಾಗಿ ಹರಿದೋಡುತಿಹನು (ಕಎಪು. ೧೧-೭). **ಪರಿವಡಿ₁**=ದಾಪುಗಾಲು; ದಾಟುಗಾಲು: ಭೀಮನು . . . ಶೀಘ್ರವಾಗಿ ಎದ್ದು ದಂಡೆಯುಕ್ಕಿ ಪರಿವಡಿಯಿಂದ ನಡೆದು ಬರಲು (ಕೃಪಾವಿ. ೪೪). **ಹರಿದಾಡಿಸು**=ಚೆದರಿಸು; ಚೆಲ್ಲಾಪಿಲ್ಲಿ ಮಾಡು: ಬರುತಿದೆ—ಸಡಲಿಸಿ ಮುಡದಿಯುರುಡಿಯನು ಮುಡಿಯನು, ಬಡಮುಡುಕರ ಕೊಡೆಗಂ ಹರಿದಾಡಿಸಿ (ಕಎಪು. ೨೮-೫). **ಹರಿಯ ಬಿಡು**=೧. ಅಲೆದಾಡಿಸು; ತಿರುಗಾಡುವಂತೆ ಮಾಡು: ಒಳ್ಳೆಯ ಪ್ರಶ್ನೆಗಳು ಬೇರೆ ವಿಷಯಗಳ ಕಡೆ ಮನಸ್ಸನ್ನು ಹರಿಯ ಬಿಟ್ಟು ಪಾಠದಲ್ಲಿ ವಿಮುಖರಾಗಿರುವ ಮಕ್ಕಳ ಅವಧಾನವನ್ನು ಪಾಠದ ಕಡೆ ಸೆಳೆಯಲು ನೆರವಾಗಬೇಕು (ಶಿಕ್ಷದ. ೨೭೭). **೨.** ಮುಂದುವರಿಯುವಂತೆ ಮಾಡು: ಬಮ್ಮಲದೇವಿ . . . ಪಿರಿಯರಸಿಯಾಗಿಯೇ ಇದ್ದರೂ ರಾಜಪೀಠಿಗೆಯನ್ನು ಹರಿಯಬಿಟ್ಟ ಮಕ್ಕಳು ಅವಳಿಗುಳಿಯಲಿಲ್ಲವಾದ್ದರಿಂದ ಅವಳು ಮರೆಯಾಗಿಯೇ ಉಳಿದಿರಬೇಕು (ಸವತಿ. VI, ಪ್ರಸ್ತಾವನೆ). **೩.** ಮುನ್ನುಗ್ಗಿಸು; ಧಾವಿಸುವಂತೆ ಮಾಡು: ವಾರುವನಾ ಕಳದೊಳಗೆ . . . ಸಾಗಿದುದೊಸೆದು ಹರಿಯ ಬಿಡಲವನು (ಕುರಾಸಾಂ. ೯-೧೧೧); ಧುರಕೆ ಕಂಪಿಲನೃಪ ಸಂಗಮದೇವನ ಹರಿಯ ಬಿಟ್ಟನು ಬೇಗದೊಳು (ಕುರಾಸಾಂ. ೧೩-೨೩). **೪.** ಮುನ್ನುಗ್ಗುವುದಕ್ಕೆ ಅವಕಾಶ ಕೊಡು: ನೀವಿನ್ನಱಿಯರೆಮ್ಮನು ಹರಿಯ ಬಿಡಿ ಸಾಕೆಂದನಾ ಭೀಮ (ಕುಪ್ವಾವಿ. ೯-೪೦). **೫.** ಪ್ರವಹಿಸುವಂತೆ ಮಾಡು: ಪರಮಾತ್ಮನ ಪಾದದೆಡೆಗೆ ಭಕ್ತನು ತನ್ನ ಭಾವಗಳ ಪ್ರೇಮಪ್ರವಾಹವನ್ನು ಹರಿಯ ಬಿಡುವನು (ಜಗದಾ. ೮). ℙ ಉಚ್ಚಾರಣಾ ಸಾದೃಶ್ಯದಿಂದ 'ಪರಿ', 'ಪಱಿ' ಈ ಎರಡು ಪದಗಳ ಅರ್ಥಗಳೂ ಮಿಶ್ರಣಗೊಂಡು ಈ ಶಬ್ದಗಳಿಂದ ವ್ಯುತ್ಪತ್ತಿಹೊಂದಿದ ಇತರ ಶಬ್ದಗಳಲ್ಲಿಯೂ ಅರ್ಥದ ಗೊಂದಲ ಉಂಟಾಗಿರುವುದು ಸಾಧ್ಯ.

[ದೇ.॥ ತಮಿ. ಪರಿ; ತುಳು. ಪರಿ, ಹರಿ; ತೆಲು. ಪರಗು; ಮಲ. ಪರ್ಕೆ, ಪರ್ಕ್ಕೆ]

**ಪರಿ₃, ಹರಿ₃** (ನಾ). ೧. ಚಲಿಸುವುದು; ನಡೆಯುವುದು: (೪). **೨.** ಓಟ; ಧಾವಿಸುವುದು: 'ನಿಡುವರಿ' ಪರಾ. **೩.** ರಭಸದಿಂದ ಮುಂದುವರಿಯುವಿಕೆ; ನುಗ್ಗುವುದು: 'ಅನೆವರಿ₁' ಪರಾ. **೪.** ಹರಿಯುವುದು; ಪ್ರವಾಹ; ನೀರಿನ ಹರಿವು: ತಿರಿದಾ ಕೂಟಂ ನೀರೊಳ್ ಗರಗರನಪ್ಪಂತು ಕರ್ಚಿ ಮೇಣುಂಡಪರೋ ಪರಿಯೊಳ್ ಪೋಣ್ಮಿಂದಪರೋ ಮರುಳೀತಂ ಶ್ರವಣರಾವ ತಪಮಂ ಕಂಡರ್ (ಧರ್ಮಾಮೃ. ೧-೧೦೬); ಕುಸುಮರಜಾನಿಳನಂ ಪಗರೆಯ ಪರಿಯುಂ ತಳರದ ಸಿರಿ ಬಲ್ಲಕುಂದೆನಾಳ್ಪೆಸೆದಿರ್ಕ್ಕುಂ (ಸೌಇಇ. IX-i, ೨೪೯-೧೬; 1147); ಆಗರದೊಳು ರಸದಾಳಿ ತೆಂಗಾಳಿಯಿಂ ತಾಗಲೊಂದಱಿಂ ಕೊಂದು ಹಳಚ ಮೇಗೋಲ್ಲಕೊಡೆದಿನಿರಸದ ಪರಿಯೊಳಿಕ್ಷುಸಾಗರ ತುಂಬಿದಂತಾಯ್ತು (ಮೋಹತ. ೨-೪೮). **೫.** (ದೂರದ ಅಳತೆಯನ್ನು ಸೂಚಿಸುವ) ಒಂದು ಪ್ರಮಾಣ: 'ಪರಿದಾರಿ' ಪರಾ. **೬.** ಓಡಾಡುವ ಸ್ಥಳ: ಆ ಗಜೇಂದ್ರಕ್ಕೆ ಸರಂದೋಱುವುದುಮಾ ಧ್ವನಿಗೇಳ್ದು ಕೋಪಾನಳನಿಂ ಕಣ್ಗಾಣದೆಯ್ತಪ್ಪಾನೆಗಾಸೆಗೊಟ್ಟು ಪರಿದು ಪರಿಯೊಳ್ ನಿಲ್ವುದೆ (ಬಂಹರಿ. ೨-೫೧೫). **೭.** ರೀತಿ; ಕ್ರಮ; ಬಗೆ; ಪ್ರಕಾರ: "ವ್ಯಾಕೂ(ಕೃ)ತಿ, ಭಂಗಿಃ—ಈ ೨ ಪರಿ" (ಹಲಾಯು. ೧೨೫-೭೭); ಕಾಸಕುಗುಪೆಯ ದಾಱಿಯಲಿ ××× ದೊಳಗೌಡಂ ಸತ್ತ ಪರಿಯಿಂತೆಂದಡೆ (ಎಕ. VIII, ಸೊರಬ. ೪೬೬-೮; ಸು. 960?); ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ ನಮ್ಮ ನಲ್ಲ (ಬಸವ. ೮೪೯); ಭೃಂಗೀಶ ನರ್ತನಕೆ ನಿಂದಾಗ ಹೊಸ ಪರಿಯ ಗತಿಗಳಂ ನಟಿಸಿ ತೋಱುತ್ತಮಿರೆ (ಬಸರ. ೧-೨೫); ಹಿಂದೆ ಗಳಹುವನಿವನು ಬಾಯಿಗೆ ಬಂದ ಪರಿಯಲಿ (ಕುಪ್ವಾಭೀ. ೧-೧೦); ಈ ಪರಿಯ ಸೊಬಗಾವ ದೇವರಲಿ ನಾ ಕಾಣೆ (ಪುರಂದ. ೨-೧೬೪ ಪಲ್ಲವಿ). **೮.** ಸ್ಥಿತಿ; ಪಾಡು: ಈಗಳ್ನೀನಿರ್ಪಿರವಿನ ಪರಿಯೇನೆಂದಾಂ ಸರೋಜ

ಮುಖರಿ ಮುಕುಳಿತಾಕ್ಷನಂ ಬೆಸಗೊಂಡೆಂ (ಕಾದಂಪೂ. ೮೪೧); ಹಾ ಫಣೀಂದ್ರಪತಾಕಾ ವಿಧಿವಶದೆ ನಿನಗವಿಹಾ ಪರಿಯಾಯ್ತೇ (ಗದಾಯು. ೯-೨೨); ತಿರುಗಿ ಕಂಡನು ಕೃಷ್ಣನೀತನ ಪರಿಯನಚ್ಚರಿದನು (ಕುಮ್ವ್ಯಾದ್ರೋ. ೩-೬೩); ಪೊಸಪೂಂಗೆಯ್ದ್ದು ಮತ್ತೊಮ್ಮೆ ಪೆಣ್ಣಂ ನೋಡಿ ಪೊಸಬಿದ್ದಿನ ಸರ ಮನೆಯ ಪರಿಗಳಂ ತಿಳಿದು ಸಸಿನವಾದೊಡೆ ಮದುವೆಯೊಸಗೆಯುಪ್ಪುದೆನಲ್ಕೆ (ಕಾಲುರ. ೫೬-೯೧). **೯.** ಸೇನೆ; ದಂಡು: ನನ್ನಿಯಗಂಗನ ಪರಿ ಬನ್ದು ಬೆಳ್ಗಿಱಿಯುಂ ಕುನ್ದೂರುಮನಿಱಿದು ಪೋಗೆ (ಎಕ. XII, ತಿಪಟೂ. ೫೫-೧; ಸು. 880); ಕರ್ಪೂರ ತುಱುವಂ ನೊಱಮ್ಬನ ಪರಿ ಬನ್ದು ಹೆಮ್ಮಾಗೆಯ ಪಳ್ಳಿಯೊಳ್ಕೆ (ಎಕ. XII, ತಿಪಟೂ. ೧೦-೬; ಸು. 930?); ಬೇಡರ ಬೀರಮ್ಮನ ಪರಿಯೊಳ್ನಲ್ಲೂರಟ್ಟವಿನೊ ××× ಪರಿಯಲ್ಲೊರಗವುಣ್ಣ ಕುದುರೆಯೊಳ್ ಪೆ ×× ಱಿದು ಸರ್ಗ್ಗಕ್ಕೆ ಸನ್ದನ್ (ಎಕ. V, ಹಾಸನ. ೨೪-೪; 985); ಬನವಸೆಯ ಚಟ್ಟಿ ನಾಗರಕಣ್ಣಕ್ಕೆ ಮುನಿದು ಪರಿಯನಟ್ಟಿದಡೆ ತೊದಳ್ಳಿಯನಿಱಿದು (ಎಕ. VIII, ಸೊರಬ. ೨೩೪-೮; 999). **೧೦.** ಅಧ್ಯಾಯ; ಪ್ರಕರಣ: ಒಂಬತ್ತು ಪರಿಗಳ ಒಂದು ಕಾದಂಬರಿ ಇದು (ಸಮಜೀ. ೧. ಪೀಠಿಕೆ). **೧೧.** ವಿಶೇಷ; ಹೆಚ್ಚಳ; ಆಧಿಕ್ಯ; ಅತಿಶಯ: ಪರಿಮೂತ್ರಂ ಭಿನ್ನಲಂಡಂ ಸುರಿಯೆ ಮದಜಳಂ ಮೆಯ್ಯೊಳ್ಳಾದೆ . . . ವಿಳಾಕುಂಜಮಂ ಪೊಕ್ಕೆವೆಮಿಡುಕದೆ ನಿಂದತ್ತು (ಮಲ್ಲಿಪು. ೧೦-೯೨). 'ಪರಿಗೊಳ್' ಪರಾ. **೧೨.** ಬೇಟೆಯಲ್ಲಿ ಪ್ರಾಣಿಗಳು ಸಿಗುವ ಜಾಗ,—ಸ್ಥಳ: 'ಪರಿಗೊಳ್' ಪರಾ. **೧೩.** ದಾರಿ; ಹಾದಿ; ಮಾರ್ಗ: 'ಪರಿಪಾರ್' ಪರಾ. **ಹರಿ$_3$: ೨.** "ಪ್ರವಹಣಂ, ಪಯನಂ—ಈ ೨ ರಥದ ಹರಿ" (ಹಲಾಯು. ೬೩-೨೧೧). **೪.** ಹರಿವ ಹೊಳೆಯ ನೋಡಿ ದುರುಳನು ಸ್ವೈರಿಸದಲೆ ತ್ವರಿತದಿಂದಲಿ ಪೋಗಿ ಬೆರಳಿಟ್ಟು ಮಧ್ಯದಲಿ ಭರದಿ ಪೋಗುವ ಹರಿಯ ತಿರುಹುವೆನೆಂದು (ವಿಸಾಸು. ೮೪-೬); ಧರೆಯ ವಸುಂಧರೆಯ ಬದುಕ ನೋಡು—ಹಳ್ಳ ಹೊಳೆಯ, ಝರಿಯ ಹರಿಯ ಸೆಳವು ಹೊಳವು ಹೊಳವು ನುಣುವು ರೂಪುಗೊಡುತಲಿಹುದು (ಮೂಕಿಗಾ. ೧೩-೯); ನೀರಿನ ಹರಿಯು ಚನ್ನಾಗಿ ಆಗುವಂಥ ಸಮತಳಭೂಮಿ (ಕೃಷಿಪ್ರ. ೫೪); ಗೀತೆಯು ದುಃಖದ ಕೊನೆಯ ಮೆಟ್ಟಲನ್ನಿಳಿದು ಕಣ್ಣೀರಿನ ಹರಿಯಲ್ಲಿ ಜಾರಿದಳು (ಕನಕ. ೫೧). **೫.** 'ಹರಿಯಂತರ' ಪರಾ. **೭.** ಇವರು . . . ವ್ಯಾಪಾರದ ಹರಿಯನ್ನು ಬಲ್ಲವರು (ಕಭಾಗ. ೨೫೭); ಅವನಿಗೆ ಬದುಕು ಮಾಡುವ ಹರಿಯು ಗೊತ್ತಾಗಲಿಲ್ಲ (ಗುರುಪ್ರ. ೩). **೯.** ಊರ ಹರಿ ಬನ್ದು ಕಾದೊ ಮಱಿಪೊಕ್ಕೋನಂ ಕಾದು ಕಱಿಪ್ಪಿ ವೈರಿಬಲಕ್ಕೆ ಇದಿರನ್ನಡೆದು ಸತ್ತು ಯಸವಂ ಪಡೆದಂ (ಎಕ. XI, ಚಳ್ಳಕೆ. ೬-೨; ಸು. 925); ನೀತಿ ಮಹಾರಾಜನ ಹರಿಯಲ್ಲಣ್ಣರ ದುಮ್ಮ ಕಾಟಯ್ಯನ ಹರಿಯಲ್ . . . ರಾಜಯನ ಮಗ ಮಾಚ . . . ಸತ್ತ (ಮೈಆರಿ. ೧೯೩೯, ೩೬-೨; ಸು. 1034). **೧೪.** ದೂತ; ಹರಿಕಾರ: ಕೃತಾಂತನ ಹರಿಯಂತೆ ಕವಿದು ಬೇಂಟೆಯೊಳೊರ್ವಗಂ ಬೀಡಂ . . . ಪಿಡಿದನಂತಾ ಪಿಳುಕಂ (ಯಶೋಚ. ೩-೩೫). **೧೫.** ನೀರು ಹರಿದು ಹೋಗಲು ಮಾಡಿದ ದಾರಿ; ಚರಂಡಿ; ಗಟಾರ: "ಮೋರಿ, ಬಚ್ಚಲು, ಗಟಾರು, ಹರಿ" (ಕಂನುಹು. ೮೧); ಹೊಲಸುನೀರು ಹರಿದು ಹೋಗಲಿಕ್ಕೆ ಹರಿಗಳನ್ನು ಮಾಡಿರುತ್ತಾರೆ (ಮುಂಬಯಿ. ೫-೩೭); ಅಲ್ಲರೊ, ಹುಚ್ಚುಗೊಟ್ಟಿಗೋಳಾ, ಮನಿ ಮುಂದ ಹರೀ ಯಾಕ ಕೆದರಾಕ ಹತ್ತೀರಿ ಅಂತ? (ಕಮ್ಮಟ. ೯). **೧೬.** "ಚಿಕ್ಕ ಚರಂಡಿಯಂತಹ ಹಳ್ಳ" (ಕಪಪು. ೬-೧೩೬): ಅವನಿಗಾಗಿ ರಸ್ತೆಯಲ್ಲಿ ಹರಿಗಳನ್ನು ಹಾಕಿದರು. ಆ ಹರಿಗಳಲ್ಲಿ ಕೋಲಾಡಿಸುತ್ತ ಲುಯಿ ಶಾಲೆಗೆ ಹೋಗುತ್ತಿದ್ದನು (ಕಪಪು. ೬-೧೩೨). **೧೭.** (ಮನೆಗಳ) ಸಾಲು: ಪಡುವಗೇರಿಯ ಪಡುವಣ ಹರಿಯೊಳ್ ಮನೆಯೊಂದು ಹಿರಿಯ ಮೂಡಗೇರಿಯ ಪಡುವಣ ಹರಿಯೊಳ್ (ಎಇ. XIII, ೨೧-೪೩; 1204). **೧೮.** ಹರಡಿರುವುದು; ಹರಹು: (೩). **೧೯.** ಗುಂಪು; ಸಮೂಹ; ರಾಶಿ: "ಜಂಗುಳಿ ತೆರಳ್ಕೆ . . . ಸಂತೆ ಹರಿ [ಪಾಠಾಂ. ರೆ] ಬಂಬಲ್ . . . ಜಾಳಿಗೆಯುಮೆನೆ ಶ್ರೇಣಿಕಾಖ್ಯಂ" (ಕಬ್ಬಿಕೈ. ೧೬).

**ಪರಿಪರಿ$_2$, ಹರಿವರಿ** (ದ್ವಿರುಕ್ತಿ) **೧.** ಬಹಳ ವಿಧ; ಅನೇಕ ರೀತಿ: ಮುನ್ನಿನ ಕಲಿಧೀರಧೀರರು ಕಾದಿದ ರಣಗಳನು ಪರಿಪರಿಯಲಿ ಬಣ್ಣಿಸಿ ಹೇಳಬಹುದಲ್ಲದೆ . . . ಕಾದಿ ತೋರಲು ಬಾರದು (ಬಸವ. ೬೭೮); ಪರಿಪರಿಯ ಕಾಯ್ಗಳಿರ ಕಾಯ್ದಾಯ್ತ್ ಹರ ಹರಾ ಎನಲಾಗದೇ (ಬಸಪು. ೪೫-೪೨); ಪರಿಪರಿಯ ಬಿನ್ನಾಣದೊಳಗರಗಿನ ಮನೆಯ ಮಾಡಿಸಿದ (ಕುಮ್ವ್ಯಾಆ. ೮-೬೧); ಪರಿಪರಿಯ ಸಿಂಧ ಸೀಗುರಿ ಪತಾಕಾವಳಿಯು . . . ದೊರೆಗಳ್ಳೆತಂದರು (ಜೈಮಿಭಾ. ೩೩-೨೬). **೨.** ಹರಿಯುವಿಕೆ; ಪ್ರವೃತ್ತಿ: ಮನದ ಹರಿವರಿ ಹೊನ್ನ ಮಣ್ಣಿನ ವನಿತೆಯರ ಮೇಲಿರದೆ ಸದ್ವರ್ತನೆಯಲಿರ್ದೊಡೆ ದೋಷವೇನು (ಪ್ರಭುಲೀ. ೧೩-೫೩). **ಪರಿಯ ತಾಣ**=ಬೇಟೆಯ ಪ್ರಾಣಿ ಸಿಗುವ ಅಥವಾ ಓಡಾಡುವ ಜಾಗ,—ಸ್ಥಳ: ನಾರಾಯಣನುಂ ಹನುಮಂತಃಪುರಪರಿವಾರಂಬೆರಸು ಬೇಂಟೆಗೆ ಪೋಣಮಟ್ಟು ಪರಿಯ ತಾಣಕ್ಕೆ ವಂದು (ಪಂಪಭಾ. ೫-೪೭ ವ); "ಗೊತ್ತಿನ ಸ್ಥಾನ; ಅನುಕೂಲ ಸ್ಥಾನ" (ಪ್ರಥಣ್ಣ). **ಪರೋಪರಿ**=ಹಲವು ರೀತಿ; ಅನೇಕ ಬಗೆ: ಶೋಧಿ ಹುಡಿಗಿ, ಪರೋಪರಿಯಿಂದ ಕಾಡ್ತದ (ಬಾಂಡಾಯ. ೨೩); ದಾಸಪ್ಪ ಸತ್ತರೂ ಲಕ್ಷ್ಮೀ ನೀಮಾಳಿಗೆ ಪರೋಪರಿಯಿಂದ ಮಾಡಿದಳು (ಬಾಬಲ. ೧೩೦).

[<ಪರಿ$_2$./ತಮಿ. ಮಲ. ತುಳು. ಪರಿ; ತೆಲು. ಪರಿ, ಪರುಗು, ಪರುವು, ಪಱು]

**ಪರಿ-$_4$** (ಉಪ). ನಾಮಪದ, ಕ್ರಿಯಾಪದಗಳ ಹಿಂದೆ ಅಧಿಕವಾಗಿ, ಚೆನ್ನಾಗಿ ಮುಂತಾದ ಅರ್ಥಗಳಲ್ಲಿ ಸೇರುವ ಸಂಸ್ಕೃತದ ಒಂದು ಉಪಸರ್ಗ. 'ದುರ್-' ಹೋ. 'ಪರಿವೇರಸು', 'ಪರಿವೆಸ' ಪರಾ. [ಸಂ.]

**ಪರಿಕಣಿ, ಹರಿಕಣಿ, ಹರಿಕುಣಿ, ಹರಿಕುಳಿ, ಹರುಕಣಿ** (ನಾ). **೧.** ಹರಿಯುವ ಜಾಡು: ದಕ್ಷಿಣೋತ್ತರಾಯಣಗತಿಯೊಳ್ ಪರಿವ ರವಿರಥದ ಗಾಲಿಯ ಪರಿಕಣಿಯೆನೆ ಪೊನ್ನ ಕೋಂಟೆ ಸೊಗಯಿಸಿ ತೋರ್ಕುಂ (ವರ್ಧಪು. ೧-೫೦). **೨.** (ನೀರು) ಪ್ರವಹಿಸುವ ಜಾಗ; ಕಾಲುವೆ: ಪರಿವೇಷದ ತೆಱದಿಂದನವರತಂ ಕರ್ಪೂರರಸದ ಪರಿಕಣಿ ಸುತ್ತಂ ಪರಿಯಲ್ (ಕಾದಂಉ. ೨೨೩). **ಹರಿಕಣಿ: ೩.** ಮರದ ಸುತ್ತಲೂ ನೀರು ನಿಲ್ಲುವಂತೆ ಕಟ್ಟಿದ ಕಟ್ಟೆ; ಪಾತಿ: "ಆವಾಲಂ, ಆಲವಾಲಂ —ಈ ೨ ಮರಕ್ಕೆ ನೀರೆಱೆವ ಹರಿಕಣಿ" (ಹಲಾಯು. ೩೦-೩೦). **ಹರಿಕುಣಿ: ೨.** ಎರಡು ಗಲ್ಲದ ನಯನವಾರಿಯ ಹರಿಕುಣಿಯ ನಿಲಿಸಿದನು ಸಂಜಯನರಸನನು ಕುಳ್ಳಿರಿಸಿ ಬೆನ್ನಿಗೆ ಚಾಚಿದನು ಮಲಗ (ಕುಮ್ವ್ಯಾಕ. ೧-೯). **೩.** "ಯಾನವೆಮನೆಲ್ಕೆ ಸಾರಚೆಯನಲ್ ನೀರ ಹರಿಕುಣಿಯೆನಿಕ್ಕುಂ" (ಮಂಗರಾ. ೧೨೫-೧೯). **ಹರಿಕುಳಿ: ೨.** ಹರಿವ ಹರಿಕುಳಿಯಲ್ಲಿ ಕೈಯನಿಕ್ಕಿ ನೋಡಿ ಅಡಗಿದ್ದಾವೆಯ ಹಿಡಿದೆ (ಸರ್ವಸ. ೬೦-೩೧೬). **ಹರುಕಣಿ: ೧.** ಕಂಪಿಕ ಮಂತ್ರಿಯ ಬೆಂಕೊಳೆ ಕಂಗೆಟ್ಟು ಹರುಕಣಿಯೊಳು ಸಾಗಿದನು (ಜ್ಞಾನಚ. ೧೪-೩೬). 'ಹರಿಕೇಣಿ' ಪರಾ. [ಪರಿ$_2$+ಕಣಿ$_5$]

**ಪರಿಕಥೆ** (ನಾ). [ಕಾವ್ಯವಿಾ] ಒಂದು ಗದ್ಯಕಥಾರೂಪ; "ಒಂದೇ ಪುರುಷಾರ್ಥದ ಪ್ರತಿಪಾದನೆಗೆ ಅನೇಕ ವರ್ಣನೆಗಳು ಬರುವುದು ಪರಿಕಥೆ" (ಧ್ವನ್ಯಾಲೋ. ೧೪೨ ಅಡಿಟ): ಸಂಸ್ಕೃತದಲ್ಲಿಯೂ ಹಿಂದೆ

ಗದ್ಯದಲ್ಲಿ—ಮುಖ್ಯವಾಗಿ—ಕಥೆಗಳನ್ನು ಬರೆದಿದ್ದಂತೆ ತೋರುತ್ತದೆ. ಇವು ಆಖ್ಯಾಯಿಕೆ . . . ಪರಿಕಥೆ, ಕಥಾನಿಕೆ ಎಂಬಂತೆ ಐದು ವಿಧವಾಗಿದ್ದಂತೆ ಅಗ್ನಿಪುರಾಣವು ತಿಳಿಸುತ್ತದೆ (ಕೈಪಿಡಿ. ೧೮೦). [ಸಂ. ಪರಿಕಥಾ]

**ಪರಿಕರ$_1$** (ನಾ). ೧. ಸುತ್ತುಮುತ್ತಲಿನ ಜನ; ಪರಿವಾರ; ಪರಿಜನ: ಪರಿಕರಜನ್ಯಕಾನಿಕರದೊಳ್ ಕಳಭಾಷಿಣಿ ಬುದ್ಧಿವಂತೆಯೂ ತರುಣಿ (ಕುಸುಮಾ. ೧೫-೩೩); ರಥ ಪರಿಕರ ಸಹಿತವಾತ್ಮಾನುರಾಗದಲಿ ಚಂಡತೇಜದಿ ನಡೆವುತಿರಲು (ಬಸಪು. ೫-೧೪); ಭೂಸುರರ ಸಚಿವರ ಪರಿಕರರ ಧೌಮ್ಯಾದಿ ಮಂತ್ರಿಗಳ . . . ಮಂದಿರಕೆ ಕಳುಹಿದನು (ಕುವ್ಯಾಆ ೨೩-೫೨). ೨. ಗುಂಪು; ಸಮೂಹ: ದೊರೆಕೊಳಿಸುಗೆ ನಿನಗೆ ತಡೆಯದಾ ಪುರುಪರಮೇಶ್ವರನ ನಿರತಿಶಯಗುಣಪರಿಕರಮುಂ ತತ್ಪ್ರಾತಿಹಾರ್ಯಮುಂ ಮಂಗಳಮುಂ (ಆದಿಪು. ೧೨-೫೩); ವಿಜೃಂಭಮಾಣ ನವನಳಿನ ಪರಿಕರಾಕೃಷ್ಟಮಧುಕರರಮಣೀಯ . . . ವನಮನೆಯ್ದಿವಂದು (ಪಂಪಭಾ. ೫-೧೦ಪ); ಮರವಾಯ್ವ ಪೊಣರ್ವ . . . ಇಭಪರಿಕರ ಮೆಸೆಗುಂ ಮುರಾರಿ ನೆಗಪಿದ ನಗದೊಳ್ (ಜಗವಿ. ೪-೯೩). ೩. ಆರಂಭ; ಮೊದಲಾಗುವಿಕೆ; ಪ್ರಾರಂಭ. ೪. ನಡುಕಟ್ಟು; ನಡುಪಟ್ಟಿ. ೫. ಹಾಸುಗೆ; ಶಯ್ಯೆ: "ಪರ್ಯಂಕಂ ಪರಿಕರಮೆನೆ ಪರ್ಯಸ್ತಿಕೆ" (ವಸ್ತುಕೋ. ೫೮-೩೬). ೬. ವಿವೇಚನೆ; ವಿಮರ್ಶೆ: ಆವರಿಸೆ ಜಿನೇಂದ್ರಭಕ್ತಿ ಪೊಜಪೊಣ್ಮೆ ದಯಾರಸಮುಂತು ನಾಡೆಯುಂ ಪರಿಕರದಿಂ ಮನಕ್ಕಜವು ಸಾರೆ . . . ಕಳೆಗುಂ ಖಲಕರ್ಮಬಂಧಮಂ (ಆದಿಪು. ೫-೫೩); ತತ್ವಮಸಿಯುಂದೆನ್ನಲದೆಂತಿಹುದು ಅರಿವ ಪರಿಕರವೆಂತು ಎನಗಿದನರುಹಿ ಕರುಣಿಪುದು (ಗಗತಾ. ೨೨-೪). ೭. ಸಹಾಯಕ; ಸಂಗಡಿಗ: × ಟಿಂಬಕುಲಾನ್ತಕ ಬೀರರ ಬಣ್ಣ ಪರಿಕರ ನಕಿಗಂ (ಎಕ. II (R), ೪೮; ಸು. 1000). ೮. ಸೇವಕ ವರ್ಗ: ಭೂಪಾಲ ಮಕರಧ್ವಜಂ ನಡೆಯೆ ತಡೆವೇಂಟಿಗೆ ಪರಿಕರದ ಪರಿವಾರವನುವಾಗಿ ವಿಪಿನದೊಳು ಹರೆದು ನಡೆಯಲ್ಕೆ (ಹಚಕಾ. ೬-೧). ೯. ಸಾಮಗ್ರಿ; ಸಲಕರಣೆ: "ಪರಿವಾರಃ, ಪರಿಕರಃ, ಪರಿಸ್ಪಂದಃ, ಪರಿಗ್ರಹಃ—ಈ ೪ ಪರಿಗ್ರಹಂ" (ಹಲಾಯು. ೫೧-೧೫೧); ಕೋಕಿಲನ ಕೊರಲ ಮಧುರಧ್ವನಿಯೊಂದೆ ಸಮರ್ಥಂ ಶೂಲಿಯ ತಪದೆಸಕಮನುಡುಗಿಸುವೊಡುಳಿದ ಪರಿಕರವೇಕಯ್ (೧ರಿಕ. ೭-೬೧); ಗ್ರಾಸವಸನಪರಿಕರವಿಲ್ಲದಿರೆ ಕಟ್ಟಾಸುರದೊಳು ಗಾಳುಗೆಡದೆ . . . ಬೇಸಱಸದೆ ಬಿನ್ನವಿಪುದು (ಹದಿಬ. ೩-೨೧); ಬಿಳಿಯ ಕಾಗದ, ನಾನಾಬಣ್ಣದ ಪೆನ್ಸಿಲ್ ಮೊದಲಾದ ಪರಿಕರಗಳು ಮೇಜಿನ ಮೇಲೆ ಜೋಡಣೆಗೊಂಡಿದ್ದುವು (ಪುಸರು. ೩೨). ೧೦. ಊಟಕ್ಕೆ ಸಹಾಯಕವಾದ ವ್ಯಂಜನ; ಮೇಲೋಗರ: ಪನ್ನಿರ್ಕಂಡುಗದಕ್ಕಿಯ ಕೂಟುಮ[ನ]ದರ್ಕೆ ತಕ್ಕ ಪರಿಕರಮುಮನೊರ್ವ ಮಾನಸಂ ಕೊಂಡು ಪೋಪಂ (ಪಂಪಭಾ. ೩-೨೫ ಪ). ೧೧. (ಪೂಜೆ, ಯಜ್ಞ ಮುಂತಾದ ಸಮಯಗಳಲ್ಲಿ ಬಳಸುವ ಪಾತ್ರೆ, ಹೂವು, ಧೂಪ ಮುಂತಾದ) ಉಪಕರಣ: ಚೈತ್ಯಾವಸಥಂಗಳ್ಕೂಡೆ ನಾನಾವಿಧ ಪರಿಕರದಿವ್ಯಾರ್ಚನಾನೀಕದಿಂ ತೀವೆ ಸುರೇಂದ್ರಂ ಸಂದ ನಂದೀಶ್ವರ ಮಹಿಮೆಯನಾನಂದದಿಂ ಮಾಡುತಿರ್ಪಂ (ಸುಕುಮಾ. ೧೧-೫೩); ನಗಾರ್ಚನ ಪರಿಕರಂಗಳಂ ನೆರಪುವ . . . ಘೋಷನಿವಾಸಿಗಳಿಂದಮಾಯ್ತು ಕಳಕಳನಿನದಂ (ಜಗವಿ. ೪-೮೦); ಮುನಿನಾಥನು . . . ಮರುತಮಿತ್ರಕಾರ್ಯದ ಪರಿಕರಂಗಳಂ ಸವಕಟ್ಟುತಿರಲು ಭೂಪತಿ ಕಂಡನು (ಹಚಕಾ. ೫-೫೪); ಮಖಪರಿಕರಮಂ ಮಾಡಿಟ್ಟರಾಗಳಾ ವೇದಿಕೆಯೊಳ್ (ತ್ರಿಪುವಿ. ೪-೮). ೧೨. = ಪರಿಕರಾಲಂಕಾರ; ⫽ ರೂಪಕಗಳಲ್ಲಿ ಮುಖಸಂಧಿಯ ಒಂದು ಅಂಗ. ಕಾವ್ಯಾರ್ಥದಲ್ಲಿ ಮುಖ್ಯಫಲಕ್ಕೆ ಕಾರಣಭೂತವಾದ ರತಿ, ಉತ್ಸಾಹಾದಿಗಳು ಇನ್ನೂ ವೃದ್ಧಿಹೊಂದುವುದು: ಸಮಾಸೋಕ್ತಿ ಪರ್ಯಾಯೋಕ್ತಿ . . . ಪರಿಕರ . . . ಉದಾತ್ತಾದ್ಯಲಂಕಾರಗಳೊಡಗೂಡಿ (ವಿವೇಕ. ೨೨೫). [ಸಂ.]

**ಪರಿಕರ$_2$** 'ಪರಕಾರ' ನೋ.

**ಪರಿಕರಣ** (ನಾ). ಸಲಕರಣೆ; ಸಾಮಗ್ರಿ: ಆಧುನಿಕ ಪರಿಕರಣಗಳನ್ನು ಪಯೋಗಿಸಿ, ಬೆಳೆಯ ಉತ್ಪನ್ನವನ್ನು ಹೆಚ್ಚಿಸಿಕೊಳ್ಳುವ ಕಾರ್ಯಕ್ಕೆ ಆತಂಕಗಳು ಇಲ್ಲದೇ ಇಲ್ಲ (ಶಿಕ್ಷದ. ೨೬); ಮನೆಯಲ್ಲಿ ಮಂಚ ಕುರ್ಚಿ ಮುಂತಾದ ಸಕಲ ಪರಿಕರಣಗಳು ಇದ್ದುವು (ಚಿತ್ರಕೂ. ೧೨೧). [ಸಂ.]

**ಪರಿಕರಣೆ** (ನಾ). ೧. ಏರ್ಪಾಡು; ಸಿದ್ಧತೆ: ಅರಸನಱಯದೆ ಬಿಟ್ಟಿಗೆಲಸದ ಪರಿಯಲಾಯಿತೆ ಎನ್ನ ಮಾಟದ ಪರಿಕರಣೆ ಫಲವೀಯಲಱಯದೆ (ಪ್ರಭುಲೀ. ೨೨-೪). ೨. ಗೌರವ; ಮರ್ಯಾದೆ; ಮನ್ನಣೆ: ಸೂಕ್ಷ್ಮ ನಿರಾಕರಣೆಯೆನ್ನದೆ ಪರಿಕರಣೆಯೆನ್ನದೆ ನಿತ್ಯ ನಿಜವಾದ ಪ್ರಸಾದಿ (ಚನ್ನಪ. ಕ. ೫೫೬-೧೨೧೫); ಮನ್ನಣೆಯೊಳಲ್ಪತೆಯ ನುಡಿಯೊಳ ಗುನ್ನತಿಯನೆಸಗುವುದು ಪರರಿಗೆ ತನ್ನವರಿಗುಗ್ಗಡದ ಪರಿಕರಣೆಯನು ಮಾತಿನಲಿ ಭಿನ್ನವನು ತೋಱುವುದು ರಾಯರ ಗನ್ನಗತಕ ಕಣಾ (ಕುವ್ಯಾಸ. ೧-೬೯). [ಸಂ. ಪರಿಕರಣ]

**ಪರಿಕರಶ್ಲೋಕ** (ನಾ). [ಕಾವ್ಯಮೀ] "ಕಾರಿಕೆಯಲ್ಲಿ ಹೇಳಿದ ವಿಷಯಕ್ಕೆ ಹೆಚ್ಚಿನ ಪರಿಷ್ಕಾರವನ್ನೊದಗಿಸುವ ಶ್ಲೋಕವೇ ಪರಿಕರಶ್ಲೋಕ" (ಧ್ವನ್ಯಾಲೋ. ೨೭ ಅಡಿಟ): ಇದನ್ನು ಸಂಗ್ರಹಿಸಿರುವ ಪರಿಕರಶ್ಲೋಕ ಕೆಳಗಿನದು (ಧ್ವನ್ಯಾಲೋ. ೨೭). [ಪರಿಕರ$_1$ + ಶ್ಲೋಕ]

**ಪರಿಕರಾಂಕುರ** (ನಾ). = ಪರಿಕರಾಂಕುರಾಲಂಕಾರ: ಎಸೆಯಲಭಿಪ್ರಾಯವು ವಿಶೇಷ್ಯದಲ್ಲಿಯೆ ತಾಂ ಹೊಸ ಪರಿ ಪರಿಕರಾಂಕುರವು (ಕುವಲ. ೫೩). [ಪರಿಕರ$_1$ + ಅಂಕುರ]

**ಪರಿಕರಾಂಕುರಾಲಂಕಾರ** (ನಾ). [ಕಾವ್ಯಮೀ] (ಅಭಿಪ್ರಾಯಗರ್ಭಿತವಾದ ವಿಶೇಷ್ಯಗಳನ್ನುಳ್ಳ) ಒಂದು ಬಗೆಯ ಅಲಂಕಾರ: ವಿಶೇಷ್ಯವು ಅಭಿಪ್ರಾಯಗರ್ಭಿತವಾಗಿ ಹೊಸಪರಿಯಿಂದ ತೋಱಲು ಪರಿಕರಾಂಕುರಾಲಂಕಾರವೆನಿಸುವುದು. ಬಿಸಜನಾಭನೆಂಬುದುದಾಹರಣ. ನಾಲ್ದೋಳನೆಂಬಂಥಾ ವಿಶೇಷ್ಯಪದದಲ್ಲಿ ಒಮ್ಮೆಯೇ ನಾಲ್ಕು ಪುರುಷಾರ್ಥಗಳನ್ನು ಕೊಡುವ ಸಾಮರ್ಥ್ಯವುಳ್ಳವನೆಂಬಭಿಪ್ರಾಯಗರ್ಭವಿಹುದು (ಕುವಲ. ೫೪); ವಿಶೇಷ್ಯವು ಸಾಭಿಪ್ರಾಯವಾಗಿದ್ದಲ್ಲಿ ಪರಿಕರಾಂಕುರಾಲಂಕಾರವೆನ್ನಿಸಿಕೊಳ್ಳುವುದು (ಕೈಪಿಡಿ. ೨೭೧). [ಪರಿಕರಾಂಕುರ + ಅಲಂಕಾರ]

**ಪರಿಕರಾಲಂಕಾರ** (ನಾ). [ಕಾವ್ಯಮೀ] ಒಂದು ಬಗೆಯ ಅರ್ಥಾಲಂಕಾರ: ವಿಶೇಷಣವು ಅಭಿಪ್ರಾಯಗರ್ಭಿತವಾಗಿ ತೋಱಲ್ಕೆ ಪರಿಕರಾಲಂಕಾರವೆನಿಪುದೆಂಬ ಲಕ್ಷಣಾರ್ಥ . . . ತಾಪನಾಶನದಲ್ಲಿ ಚಂದ್ರನ ದರ್ಶನವು ಶೀತಲತ್ವಾಭಿಪ್ರಾಯಗರ್ಭಿತವು (ಕುವಲ. ೫೨); ವಿಶೇಷಣವು ಸಾಭಿಪ್ರಾಯವಾಗಿದ್ದರೆ ಪರಿಕರಾಲಂಕಾರವೆನ್ನಿಸಿಕೊಳ್ಳುವುದು (ಕೈಪಿಡಿ. ೨೭೦). [ಪರಿಕರ$_1$ + ಅಲಂಕಾರ]

**ಪರಿಕರಿತ** (ನಾ). ಜೊತೆಗೂಡಿದುದು; ಹೊಂದಿದುದು: ಎರಡೆರಪಟ್ಟಳಿಗೆ ತರಂತರದಿಂದೊಂದೊಂದು ಗೋಪುರಂ ಪ್ರವಿರಾಜನ್ಮರಕತಮಣಿತೋರಣಪರಿಕರಿತಂ ಪುರವಧುಗೆ ವದನಮಿರ್ಪಂತಿರ್ಕುಂ (ಆದಿಪು. ೬-೧೦೬). [ಸಂ.]

**ಪರಿಕರಿಸು** (ಕ್ರಿ). ಸಿದ್ಧತೆ ಮಾಡು; ಸಜ್ಜುಗೊಳಿಸು; ಅಣಿಮಾಡು: ಅನಘ ದೇಶಿಕ ಕುಲೋತ್ತಮನ ಸಂಭ್ರಮಕೊಲ್ದು ವನಲಕ್ಷ್ಮಿ ಪರಿಕರಿಸಿ ಗುಡಿಗಟ್ಟಿದಳೊ . . . ಎನಿಸಿ ಸುಳಿವಿಡಿದಡಕೆ ಮೊದಲಾದವಱ ಸಸಿಗಳಿಂ ತೋಂಟಗಳ್ ಮೆಱೆದವು (ಪದ್ಮರಾ. ೬-೭೪). [ಪರಿಕರ$_1$ + -ಇಸು$_3$]

**ಪರಿಕರ್ಮ** (ನಾ). ೧. (ವಸ್ತ್ರ, ಪರಿಮಳ, ಲೇಪನ ಮುಂತಾದುವುಗಳಿಂದ) ದೇಹವನ್ನು ಅಲಂಕರಿಸಿಕೊಳ್ಳುವಿಕೆ : ಕುಶಲ ಪರಿಕರ್ಮದಿಂ ಶೃಂಗಾರಗೊಂಡು ಕಲೆ ಬಾಡಿರುವ ಮೊಗವೆತ್ತಿ ಬೇಡುತಿಹ ವರವೇ (ಮಲೆದೇ. ೨೫-೫). ೨. ಅಲಂಕಾರ ; ಭೂಷಣ : ನಿರ್ಮಲಾಂತಃಕರಣಕೃತ ಪರಿಕರ್ಮವಿಳಸಿತೆ ತಾಯೆ ಸೈರಿಪುದುಮ್ಮಳವು ಬೇಡ (ಕುವ್ಯಾಗ. ೧೧-೫೩). ೩. ಆರಾಧನೆ ; ಪೂಜೆ. ೪. ಶುದ್ಧಿಗೊಳಿಸುವಿಕೆ ; ಸ್ವಚ್ಛಗೊಳಿಸುವಿಕೆ. ೫. ಸೇವಕ ; ಆಳು. ೬. [ಗಣಿತ] ಒಂದು ಸಂಖ್ಯೆಯ ಮೊತ್ತವನ್ನಾಗಲಿ, ಬೆಲೆಯನ್ನಾಗಲಿ ಗುಣಾಕಾರ, ಭಾಗಾಕಾರ ಮೊದಲಾದುವುಗಳಿಂದ ವ್ಯತ್ಯಾಸಗೊಳಿಸುವ ಗಣಿತಕ್ರಿಯೆ : ಸಂಖ್ಯೆಗಳನ್ನು ಗುರ್ತಿಸುವ ವಿಧಾನವು ಸ್ಥಿರಪಟ್ಟ ಮೇಲೆ, ಅವುಗಳ ಮೇಲೆ ಪರಿಕರ್ಮಗಳನ್ನು ಮಾಡುವ ವಿಧಾನಗಳೂ ಏರ್ಪಟ್ಟುವು. ಸಂಕಲನ, ವ್ಯವಕಲನ, ಗುಣಾಕಾರ, ಭಾಗಾಹಾರ ಎಂಬವು ನಾಲ್ಕು ಪರಿಕರ್ಮಗಳು (ಕವಿಕೋ. I, ೨) ; ಎಷ್ಟು ದೊಡ್ಡ ಸಂಖ್ಯೆಯನ್ನಾದರೂ ಬರೆಯುವ ಕ್ರಮವು ಏರ್ಪಟ್ಟ ಮೇಲೆ, ಅಂಕಗಣಿತದ ನಾನಾ ಪರಿಕರ್ಮಗಳ (operations) ವಿಧಾನಗಳನ್ನು ಸುಲಭವಾಗಿಯೇ ಕಂಡುಹಿಡಿದಿರಬೇಕು (ಗಣಿಚ. ೬೪) ; ಗಣಿತವು ಎಣಿಕೆಯಿಂದ ಆರಂಭವಾಗಿ, ಅನೇಕ ವಿಧ ಹೊಸ ಸಂಖ್ಯೆಗಳನ್ನೂ ಅವುಗಳ ಪರಿಕರ್ಮಗಳನ್ನೂ (operations) ಕುರಿತು ಚರ್ಚಿಸುವುದು (ವಿಜ್ಞಾಕ. ೩). ೭. [ಜೈನ] ದೃಷ್ಟಿವಾದಾಂಗದ ಪರಿಕರ್ಮ, ಸೂತ್ರಕೃತ, ಪ್ರಥಮಾನುಯೋಗ, ಪೂರ್ವಗತ, ಚೂಲಿಕಾ ಎಂಬ ಐದು ವಿಭಾಗಗಳಲ್ಲಿ ಒಂದು ; ಲಿಪಿವಿಜ್ಞಾನ ಮತ್ತು ಗಣಿತಗಳನ್ನೊಳಗೊಂಡ ಭಾಗ : ಪನ್ನೊಂದಂಗಮುಮನೆರಡುಪರಿಕರ್ಮಮುಮಂ . . . ಯಥೋಚಿತ ವಿಧಿಯಿಂ ನೋಂತು (ಆದಿಪು. ೩-೪೦ವ) ; ಪರಿಕರ್ಮಂ ಸೂತ್ರಂ ವಿಸ್ತರಿತ ಪ್ರಥಮಾನುಯೋಗಮಾ ಪೂರ್ವಗತಂ ವರಚೂಳಿಕೆಯೆಂಬಿವು ಪನ್ನೆರಡನೆಯಂಗಕ್ಕೆ ತೋರ್ಕುಮಯ್ದುವಿಕಲ್ಪಂ (ಚಂದ್ರಪು. ೧೪-೪೭). [ಸಂ. ಪರಿಕರ್ಮನ್]

**ಪರಿಕರ್ಮಾಷ್ಟಕ** (ನಾ). [ಗಣಿತ] ಸಂಕಲನ, ವ್ಯವಕಲನ, ಗುಣಾಕಾರ, ಭಾಗಾಕಾರ, ವರ್ಗ, ಘನ, ವರ್ಗಮೂಲ ಮತ್ತು ಘನಮೂಲ ಎಂಬ ಎಂಟು ಬಗೆಯ ಗಣಿತ ಕ್ರಿಯೆ : ಈ ಅಧ್ಯಾಯಗಳಲ್ಲಿ ಕೋಷ್ಟಕಗಳು, ಸಂಖ್ಯೆಗಳು, ಪರಿಕರ್ಮಾಷ್ಟಕ . . . ಮುಂತಾದ ವಿಷಯಗಳು ಅಡಕವಾಗಿವೆ (ಗಣಿಚ. ೨೬೩). [ಪರಿಕರ್ಮ+ಅಷ್ಟಕ]

**ಪರಿಕರ್ಮಿ** (ನಾ). ಸೇವಕ ; ಆಳು : ನಿನ್ನನ್ನು ನನ್ನ ಬಳಿಯಲ್ಲೆ ನನ್ನ ಪರಿಕರ್ಮಿಯಾಗಿ ನೇಮಿಸುತ್ತೇನೆ (ಮಾರ್ಟಿನ. ೧೮).
[ಸಂ. ಪರಿಕರ್ಮಿನ್]

**ಪರಿಕಲಿತ,** ಪರಿಕಳಿತ (ಗು). ೧. ಚೆನ್ನಾಗಿ ಕೂಡಿದ,—ಸೇರಿದ : ಯುವರಾಜಕಂಠಿಕಾಪರಿಕಲಿತ ಕಂಠಲುಂಠನುಮಾಗಿ . . . ಗಾಂಗೇಯಂ ಸುಖದೊಳರಸುಗೆಯ್ಯುತ್ತಿರ್ಪನ್ನೆಗಂ (ಪಂಪಭಾ. ೧-೬೮ವ) ; ವ್ಯಾಳಂಬಿಸ್ವರ್ಣಘಂಟಾವಳಿಪರಿಕಲಿತೋತ್ತಾಳ ನಕ್ಷತ್ರಮಾಳಂ ಪೌಳೋಮೀಸ್ವಾಮಿಚಿತ್ತಂಬುಗೆ ಬಗೆಯಲೊಡಂ ಬಂದುದಂದಭ್ರಭಾಗಂ (ಪರ್ಧಮಾ. ೧೨-೩); ಪರಿಕಲಿತಕವಚಕಸ್ತ್ರೋದ್ಧುರಗಾತ್ರಂ ವೀರರಸಮನಾವರಿಸಿದನೀ ಧುರದೊಳ್ವಿಭು (ಶೃಂಗಾರ. ೧-೮೦). ೨. ಆವರಿಸಿದ ; ಸುತ್ತುವರಿದ : ಪರಿಕಲಿತ[ಪಾಠಾಂ. ಗಳಿತ]ಶಿಳೀಮುಖ ವಾನರಚಿಹ್ನಂ ಪತ್ರಿಕುಲಚರಿತ್ರಂ ರಿಪುಭೀಕರಮೆನಿಪಂತಕಕೃತ ನವತರುವಿರ್ಪಂತಿರ್ದುದಲ್ಲಿ ಗಾಂಡಿವಿಯ ರಥಂ (ಗದಾಯು. ೪-೩೪) ; ಪರಿಕಲಿತ ಗಂಡಶೈಲೋತ್ಕರಮಧ್ಯದೊಳಮರ್ದು ರಂಜಿಪಂಜನಗಿರಿಯಂ ಕರಿ ಪೋಲ್ತಿರೆ (ಪುಷ್ಪಪು. ೫-೮೩). (ನಾ). ೩. ಕೂಡಿದುದು ; ಸೇರಿದುದು : ಸುರಭಿನವಕುಸುಮ ಸೌಮನಪರಿಕಲಿತಂ ನಗವನಾಂತುಪವನಂ ನಯದಿಂದರಸನನಿದಿರ್ಗೊಂಡೊಯ್ದಂತಿರೆ ತೀವಿದುದು (ಪರ್ಧಮಾ. ೯-೨೯). **ಪರಿಕಳಿತ :** ೧. ಪರಿಕಳಿತ ಕಳಂಕಚ್ಛವಿವೆರಸುಜ್ಜ್ವಳಿಪರ್ಧಚಂದ್ರನಂ ಪೋಲದದೇಂ ವರಕಸ್ತೂರೀತಿಲಕದಿನುರುಶೋಭಾಘಾಟಮೆನಿಪ ನಿನ್ನ ಲಲಾಟಂ (ಕುಸುಮಾ. ೩-೪೭); ಪರಿಕಳಿತಾಪಹಹೃದ್ಯಂ ಪರಿಲಬ್ಧಭ್ರಮಣನಿಂದ್ಯಂ (ಶಾಂತೀಶ್ವ. ೫-೧೪೦). ೩. ಕಳೆ ಪರಿಕಳಿತಂ ಪೃಥ್ವಿ (ಪಸ್ತುಕೋ. ೧೩೩-೯೪) ; ಪರಿಕಳಿತಮಪ್ಪ ಧಸ್ತನ ಪರಿಣಾಮಂಗಳ್ವಿರಾಜಿತಾರ್ಥಸ್ಥಿತಸತ್ಪರಿಣಾಮಂಗಳ್ಸಮಮಾಗಿರಲಂತದಧಃಪ್ರವೃತ್ತಕರಣಮೆನಿಕ್ಕುಂ (ಶಾಂತೀಶ್ವ.೧೬-೧೬).[ಸಂ.]

**ಪರಿಕಲಿಸು** 'ಪರಕಲಿಸು' ನೋ.

**ಪರಿಕಲ್ಪ** (ನಾ). ಕ್ರಮ ; ಏರ್ಪಾಟು ; ವ್ಯವಸ್ಥೆ : ಕರಮೆಸೆದುವು ರತ್ನತ್ರಯ ಪರಿಕಲ್ಪದೆ ಪರಶುರಾಮಚರಿತಂ ಚಕ್ರೇಶ್ವರಚರಿತಮುಚಿತ ತೀರ್ಥೇಶ್ವರಚರಿತಂ ರತ್ನನಿಂದೆ ಭುವನತ್ರಯದೊಳ್ (ಅಜಿಪು. ೧೨-೪೪).
[ಸಂ.]

**ಪರಿಕಲ್ಪಂಗೆಯ್** (ಕ್ರಿ). ನಿಶ್ಚಯಿಸು ; ನಿರ್ಧಾರಮಾಡು : ಪರಿಕಲ್ಪಂಗೆಯ್ಯದನ್ನಂ ಕುಡಡಮರಕುಜಂ ಪರ್ಚು ಕುಂದುಳ್ಳುದಾಸಾಗರಂ (ಕುಸುಮಾ. ೨-೧೩೦). [ಪರಿಕಲ್ಪ+ಕೆಯ್$_1$]

**ಪರಿಕಲ್ಪನ** (ನಾ). ನಿಶ್ಚಯ ; ತೀರ್ಮಾನ (?) : ನವವಿಧ ವೈಶೇಷಿಕಗುಣೋಚ್ಛೇದಂ ಪುರುಷಂಗೆ ಮೋಕ್ಷಮೆಂಬ ಪರಿಕಲ್ಪನಮುಂ ಇಲ್ಲದುದೇ ಪ್ರದೀಪನಿರ್ವಾಣಕಲ್ಪಮಾತ್ಮನಿರ್ವಾಣಮೆಂಬುದು ತಮ್ಮಿಂದಮೆ ನಿರಾಕರಿಸೆಪಟ್ಟುದಱಿಂ (ತತ್ತ್ವಪ್ರ. ೫). [ಸಂ.]

**ಪರಿಕಲ್ಪನೆ,** ಪರಿಕಳ್ಪನೆ (ನಾ). ಯೋಜನೆ; ಏರ್ಪಾಟು; ವ್ಯವಸ್ಥೆ : ಇದರಂತೆ, ವಿಜ್ಞಾನ (consciousness)ವೆಂಬುದೊಂದೇ ಸತ್ಯ. ಕ್ಷಣಿಕ ಪ್ರಪಂಚವು(world of phenomena) ಇದರ ಪರಿಕಲ್ಪನೆ (projection) (ತತ್ವಪ್ರಾ. ೬೪೦). **ಪರಿಕಳ್ಪನೆ :** ಮುನ್ ಪಲವು ಸೂಳುವಾದೇವಿಯಿಂ ತಮ್ಮಭೀಪ್ಸಿತಸಿದ್ಧಿಯಾದುದಱಿನಾ ದೇವಿಗೆ ತಕ್ಕ ವೃತ್ತಿ ಪರಿಕಳ್ಪನೆಯುಂ ಮಾಳ್ಪ ಸಂಕಲ್ಪದಿಂ (ಶಾಸಪ. ೯೫-೧೬ ; 1179).
[ಸಂ. ಪರಿಕಲ್ಪನಾ]

**ಪರಿಕಲ್ಪಿತ** (ಗು). ನಿಶ್ಚಿತವಾದ ; ನಿಗದಿಮಾಡಿದ : ಕತಿಪಯ ಮುಹೂರ್ತಪರಿಕಲ್ಪಿತಸ್ನಾನ ದೇವತಾರ್ಚನಾದಿ ಕಲ್ಪರಚನಾವಿಧಾನೆಯುಂ (ಚಂದ್ರಪು. ೧೨-೧೩ವ) ; ಪರಿಕಲ್ಪಿತ ವ್ರತ ಸಮಾಧಿ ಸಲೆ ತೀರ್ಥಯಾತ್ರೆ ಜಪ ತಪ ನಿಷ್ಠೆ ಬೇಕೆಂಬ ವಿಲಗವಿಲ್ಲ (ಜೈಮಿಭಾ. ೫-೬೨). [ಸಂ.]

**ಪರಿಕಲ್ಪಿಸು** (ಕ್ರಿ). ನಿಶ್ಚಯ ಮಾಡು ; ತೀರ್ಮಾನಿಸು : ಜ್ಞೇಯಾಕಾರಪರಿಚ್ಛೇದಪರಾಙ್ಮುಖಮಪ್ಪ ಚೈತನ್ಯಂ ಮುಕ್ತಾತ್ಮಸ್ವರೂಪಮೆಂದು ಪರಿಕಲ್ಪಿಸುವರ್ (ತತ್ತ್ವಪ್ರ. ೫) ; ಇದಲ್ಲಿಯ ನೈಜಮುಕ್ಕುಮೆಂದಿಂತು ಮಹೀಶಕಂತು ಪರಿಕಲ್ಪಿಸುತುಂ ಪದೆಪಿಂದೆ ನೋಡಿದಂ (ಕುಸುಮಾ. ೧೩-೧೫). [ಪರಿಕಲ್ಪನ+-ಇಸು$_3$]

**ಪರಿಕಳಿತ** 'ಪರಿಕಲಿತ' ನೋ.

**ಪರಿಕಳ್ಪನೆ** 'ಪರಿಕಲ್ಪನೆ' ನೋ.

**ಪರಿಕಾಂಕ್ಷಿತ** (ಗು). ೧. ಬಹಳವಾಗಿ ಆಸೆಪಟ್ಟ ; ಅಧಿಕವಾಗಿ ಬಯಸಿದ. (ನಾ). ೨. ಭಕ್ತ ; ಆರಾಧಕ. [ಸಂ.]

**ಪರಿಕಾಂಕ್ಷೆ** (ನಾ). ಹಿರಿಯ ಆಸೆ ; ದೊಡ್ಡ ಬಯಕೆ.
[ಸಂ. ಪರಿಕಾಂಕ್ಷಾ]

**ಪರಿಕಾರ$_1$** (ನಾ). ೧. ಪರಿವಾರ ; ಪರಿಜನ : "ಪರಿವಾರಮಾ ಪರಿಸ್ಪಂದಂ ಪರಿಗ್ರಹಂ ಪರಿಕಾ[ಪಾಠಾಂ. ವಾ]ರಮುಕ್ಕು" (ಮಂಗರಾ. ೬೦-೧೫). ೨. (ಉಪ್ಪು, ಮೆಣಸು ಮೊದಲಾದ) ಒಗ್ಗರಣೆ ಸಂಬಾರ ; ಉಪಸ್ಕರ : "ವೇಶವಾರಃ, ಉಪಸ್ಕರಂ – ಈ ೨ ಊಟದ

ಪರಿಕಾರಂ" (ಹಲಾಯು. ೫೩-೧೬೬); ಅದರಲ್ಲಿಯೂ ಪರಿಕಾರ ಹಾಕಿದ ತುಪ್ಪದ ಪರಿಮಳವಂತೂ ಹೇಳ ತೀರದು (ನಸ್ನೂರು. ೯). **೩.** "ಹಾರ ವನ್ನು ಉಪ್ಪು, ಮೆಣಸು ಮುಂತಾದ ಸಂಬಾರಪದಾರ್ಥಗಳಿಂದ ಸಂಸ್ಕರಿಸುವುದು : (ಕ). [<ಸಂ. ಪರಿಕರ]

**ಪರಿಕಾರ$_2$** 'ಪರಕಾರ' ನೋ.

**ಪರಿಕಾಲ್** (ನಾ). ನೀರು ಹರಿಯುತ್ತಿರುವ ಕಾಲುವೆ, —ನಾಲೆ: ಆ ಲವಣಜಳಧಿಯಂ ಪರಿಕಾಲನೆ ಬಗೆವಂತೆ ಬಗೆದು (ಆದಿಪು. ೧೨-೮೧); ಮರಾಳ ಪರಿಕಾಲೊಳ್ ಕಾಲಾನಟ್ಟಿತ್ತು (ಅರ್ಧನೇ. ೨-೫೮); ಚಂದ್ರಕಾಂತರಸದ ಪರಿಕಾಲ್ಗಳಂ ದಾಂಟಿ (ಉದ್ಧಟ. ೫-೧೫); ತೀವಿ ಬಹ ಕೆನ್ನೀರಿಂ ಪರಿಕಾಲ್ವೆರಾಜಿಕುಂ (ಎಕ. XI, ದಾವಣ. ೨೯-೪೩; 1424). [ಪರಿ$_2$+ಕಾಲ್$_2$]

**ಪರಿಕಾಲುವೆ** 'ಪರಿಗಾಲುವೆ' ನೋ.

**ಪರಿಕಾಲ್ವೆ** 'ಪರಿಗಾಲುವೆ' ನೋ.

**ಪರಿಕಾಱ,** ಹರಿಕಾರ, ಹರಿಕಾಱ, ಹಱಕಾಱ$_2$ (ನಾ). **೧.** ಚುರುಕಾದ ವ್ಯಕ್ತಿ ; ಜೋರಾಗಿ ಓಡುವವನು; ವೇಗಶಾಲಿ : ಪರಿಕಾಱರೋಳೀತಂ ಕಾಲ್ವಲ್ಲಿದಂ. ಕಾದುವರೋಳೀತಂ ಮೆಯ್ಗಲಿ (ಶಮದ. ೧೩೩ ಪ್ರಯೋ). **೨.** ಓಡುತ್ತ ಹೋಗಿ ಸುದ್ದಿಯನ್ನು ಮುಟ್ಟಿಸುವವನು ; ಸಂದೇಶವಾಹಕ ; ಚಾರ ; ದೂತ : ಲತೆಯೆಂಬ ತುರಂಗಮುಮಂ ಪೊರ್ದಿ ಧೌತಾಂಬುತರಂಗಮೆಂಬ ಪರಿಕಾಱನನಟ್ಟಿ . . . ಸೋವುದು ಸವಿಾರಣವಾರಣಮಾ ಪ್ರದೇಶದೊಳ್ (ಕಾವ್ಯಾವ. ೬೮೯); ಬೇಗಮೊತ್ತರಿಸುತ್ತುಂ ಪರಿಕಾಱನಂ ತಿಮಿರಮಂ ಬೆನ್ನಟ್ಟಿ ಪಾದಂಗಳಿಂದೊರಸಿತ್ತೀನತಿಚೋದ್ಯಮೋ ವಿಧು ಮದೋನ್ಮತ್ತೇಭ ವಿಕ್ರೀಡಿತಂ (ಚಂದ್ರಪ್ರ.೮-೩೩); ಆಕಾಶಮಂಡಲದೊಳಗೆ ಲೋಕೇಶನ ಪಟ್ಟಣವಿರ್ಪುದು ನೋಡಾ ಆ ಪಟ್ಟಣಕ್ಕೆ ನಾಲ್ಕು ಬಾಗಿಲು . . . ಕೇರಿಗಳೊಳಗೆ ಪರಿಕಾಱರ [ಪಾಠಾಂ. ಪಾರಿಕಾರರ, ಪರಿವಾರದ]ಕಟ್ಟಳೆ ನೋಡಾ (ಅಖಂಡೇ. ೧೯೯-೨೬); ನಂಬುಗೆಯ ಪರಿಕಾಱನಾಗಿರ್ದು, ಆ ಪರಮನನ್ ಬೆಸಕೆಯ್ವು ಎಸಕದಿನ್, ಒಳ್ಪಿತ್ತ್-ದಿಟಂ, ಆ ಕೆಲದಱಿಗೆ ಕಟ್ಟುಗೊಳ್ವೆಸಕಂ (ಬದ್ಧಪ್ರ. ೫೧-೧೧೧೫). **೩.** (ಆನೆಯನ್ನು) ನಡೆಸಿಕೊಂಡು ಹೋಗುವವನು : ಪರಿಜನಮುಮಾಪ್ತಜನಮುಮಂ ಪರಿಕಾಱರುಮೋಜೆವಿಡಿಯುವೊಡವರೆ . . . ಅರಣ್ಯಮಂ ಮುಟ್ಟೆಪಂದನಂದು ನರೇಂದ್ರಂ (ಪಂಪಾರಾಮಾ. ೪-೧೧೮); ಆನೆಯ ಪರಿಕಾಱನಂತೆ ಪಲವಂ ಚಿಂತಿಸಿ . . . ಮೆಲ್ಲನಿಂತೆಂದಂ (ಧರ್ಮಾಮೃ. ೩-೩೫); ಆ ಕೈಟಭನೆಂಬ ಕಟ್ವಾನೆ . . . ಕ್ರೋಧಿನಿಯೆಂಬಯ್ದಾನೆಯ ಮದದೊಳ್ ಮದಕ್ಕೆವಂದ ಕೀನಾಶನಂತೆ ಮೂಮಸಕಂ ಮಸಗಿ ಬರೆ ಮುಂದೆ ಪರಿತಪ್ಪ ಪರಿಕಾಱರ್ ರಾಮಕೃಷ್ಣರಂ ತೊಲಗು ತೊಲಗೆನೆ (ಅರ್ಧನೇ. ೮-೮೪ ವ). **ಹರಿಕಾರ : ೨.** ಹರಿಕಾರ ಬೊಮ್ಮಣಹೆಗ್ಗಡೆ . . . ಕೊಟ್ಟ ಶಿಲಾಶಾಸನದ ಕ್ರಮವೆಂತೆಂದರೆ (ಎಕ. VI, ಶೃಂಗೇರಿ. ೩೩-೧೦ ; 1418); ಅವನ ಸಂಗಡ ಹರಿಕಾರರ ಕೂಡಿಸಿ ಕಳುಹಿಸಿದಲ್ಲಿ, ಹೈದರಲ್ಲಿಖಾನರು ಆ ಕಾಗದವನ್ನು ನೋಡಿ ಬಹಳ ಸಂತೋಷಪಟ್ಟು (ರಾಜೇಂದ್ರ. ೨೧); ಚಿನ್ನದ ಕೋಲಿನ ಹರಿಕಾರ ನನಗೆ ಬಂದು ಹೇಳಿ ಹೋದ (ಶಾಂತಲಾ. ೬); ದೇವತೆಗಳ ಹರಿಕಾರ ಹರ್ವಿಸ್ ಅಲ್ಲಿಗೆ ಬರುತ್ತಾನೆ (ಬದ್ಧಪ್ರ. XXI, ಪೀಠಿಕೆ). **೪.**ಪ್ರಯಾಣಿಕ ; ಪಾಂಥ : "ಪಾಂಥಃ, ಪಥಿಕಃ, ಪಂಥನ್ ಈ ೩ ಹರಿಕಾರಂ" (ಕಾಶಕೃ. ೨೫೮). **೫.** ಮುನ್ಸೂಚನೆ ; ಮೊದಲೆ ತಿಳಿಯಪಡಿಸುವಿಕೆ : ಈ ಹರ್ಷಭಾವನೆ ಯಾವ ಘಟನೆಗೆ ಹರಿಕಾರನಾಗಿರುವುದೋ, ಅದು ಯಾವಾಗ, ಯಾವ ರೂಪದಲ್ಲಿ ಬರಬೇಕೆಂದಿದೆಯೋ ಹಾಗೇ ಬರಲಿ (ಚಿತಂಬಾ. ೨). **ಹರಿಕಾಱ : ೧.** "ಜಂಘಾಳಃ, ಜವನಃ, ವೇಗೀ— ಈ ೩ ಹರಿಕಾಱಂ" (ಹಲಾಯು. ೫೯-೨೦೩); "ಹರಿಕಾಱಂ ವೇಗಾಯ್ಲು ಶೀಘ್ರಗಾಮಿಕನಕ್ಕುಂ" (ಕವಿಕಂ. ೧೧೨). **೨.** ಮಾಸಾಳ್ಗಳಂತೆ ಬೀಡೆನುತ್ತುಂ ಹರಿಕಾಱರಂತೆ ಕಾಸೆಸುತ್ತುಂ . . . ಈ ಮಾರ್ಗದಿಂ ಬಾಧೆಯಂ ಮಾಡೆ (ಧರ್ಮಾಮೃ. ೨-೬೧); ಓಲಗದೊಳಗಕಂಪನಮರಣವಾರ್ತೆಯನಸುರಚಕ್ರೇಶ್ವರನ ಸಭೆಯಲಿ ಹರಹಿದರು ಹರಿಕಾಱರೈತಂದು (ತೊರಂರಾ. ೬-೧೯-೧); ಹರಿಕಾಱರ ಖಂಡೆಯಕಾಱರ ಬಲು ಹರಿಗೆಕಾಱರ ಸಬಳಿಗರ . . . ವಾಹಳಿ ಪುರದ ಪೊಜಗೆ ಕಣ್ಗೆಸೆದವು (ಕುಂರಾಸಾಂ. ೪-೮೨).

△ **ಹಱಕಾಱ$_2$ : ೨.** ಹಱಕಾಱಗ್ರ್ಗ ಎ[ರೆ]ಮತ್ತರು ೩ (ಸೌಇಇ. XI-i, ೮೩-೩೬; 1050).

[ಪರಿ$_2$+-ಕಾಱ./ಪಾರ. ಹಿಂ. ಮರಾ. ಹರ್‌ಕಾರಾ]

**ಪರಿಕಿಸು,** ಪರುಕಿಸು, ಪರ್ಕಿಸು (ಕ್ರಿ). **೧.** ತಾರತಮ್ಯವನ್ನು ಕಂಡುಹಿಡಿ; ಶೋಧಿಸು; ಪರೀಕ್ಷಿಸು : ಪರಿಕಿಪೆನೀ ಮೃಗೋದ್ಭವದ ಕಂಪುಮನೀಕೆಯ ಸುಯ್ಯ ಕಂಪುಮಂ (ಪಂಪಭಾ. ೮-೬೦); ಪರಿಕಿಪೊಡಂ ವಿಕ್ರಾಂತ ಧನಂ ವಾಸುದೇವದಣ್ಣಾಧೀಶಂ (ಸೌಇಇ. XI-i, ೧೧೧-೧೭ ; 1068); ಪರಿಕಿಸಲು ಪರಮಾತ್ಮ ದಿನಕರ ಹರಿಹರ ವಿರಿಂಚಿಗಳು ಸೂರ್ಯನ ನೆರೆದು ಸುತಿ ಕೈವಾರಿಸುತ್ತಿರೆ (ಕುಪ್ರಾಆ. ೬-೬೧); ಸುರಪನಾ ಪವನಜನ ಪರಿಯನು ಪರಿಕಿಸಲು ನಿರ್ಮಿಸಿದನಾಕ್ಷಣ ಸುರಸೆಯನು (ತೊರಂರಾ. ೫-೧-೧). **೨.** ಆಲೋಚನೆ ಮಾಡು ; ಯೋಚಿಸು ; ಭಾವಿಸು : ಸರಸಿಜಸಂಭವಂ . . . ಆದಿವಿದ್ಧಮೆ ಜಿನೇಶ್ವರವಿದ್ಧಮಿದೆಂದು ಪೇಟ್ವುದಂ ಪರಿಕಿಸದೇಕೆ ಮೂಢಜನಮೂಳ್ವರೊ ನೂತನಮೆಂದು ಜೈನಮಂ (ಸಮಪ. ೨-೮); ಅಂಬರಕೆ ಪರಿಕಿಪಂದುಂಟೆ ಪಂಕಪ್ರಲೇಪಂ (ವರ್ಧಪು. ೧೯-೮೫); ಸರ್ವೋರ್ವರೆಯ ರಕ್ಷೆಗಾ ಶಿಕ್ಷೆ ಗುಳಿಜೆಲ್ಲದರ್ಕೆ ಪರಿಕಿಸಲ್ ನೀವಲ್ಲದಾರುಂಟು (ಪದ್ಮರಾ. ೪-೬); ಹರಿಹರ ಬ್ರಹ್ಮಾದಿಗಳನೆ . . . ಕಾಡುವೆನೆಂದು ನೀ ನುಡಿದೆ ಮರುಳೆ ನಿನ್ನನ್ನದಾರು ನಾನಾಪರಿಯಲಾಡಿಸುವವರು ನೀನಿದ ಪರಿಕಿಸದೆ ಗರ್ವದಲಿ ನುಡಿವರೆ (ಪ್ರಭುಲೀ. ೬-೬೧). **೩.** ಗಮನಿಸು ; ನೋಡು ; ಲಕ್ಷಿಸು : ಕರಣವಿಕಾರಮೊಂದಿ ಕುಸುಮಾವಳಿ ಮೂರ್ಛೆಯಾನೆಯ್ದಿದಂದಮಂ ಪರಿಕಿಸಿ ಭೀತಿವಟ್ಟು (ಕುಸುಮಾ. ೧೨-೧೧೩); ಬಂಧುಗಳಂ ಬಗೆಯದೆ ಪುರಜನಮಂ ಪರಿಕಿಸದೆ ಹರಭಕ್ತಿಯೊಳಾತುರದಿಂ ಬಾಗೆವಾಡಿಯಂ ಪೊಱಮಟ್ಟು (ಬಸರ. ೨-೪೬); ಬರುತಿರಲಿಕವರನುವನಾಗಳು ಪರಿಕಿಸಿದರಾ ರಾಹುಕೇತುಗಳಱಿದರಾ ಕ್ಷಣ ಬಿಟ್ಟು ಬಂದರು ದೈತ್ಯಪಂಕ್ತಿಯನು (ಸಂಭಪ. ೫-೧೨೪); ಸ್ಮರನು ಗುರಿಗೊಂಡೆಚ್ಚ ಕಣೆಯೊಂದರಲಿ ಯೋಗವನುಳಿದು . . . ನಾಲ್ಕರೊಳಚಲಸುತೆಯನು ಪರಿಕಿಸಿದನು (ಅನಂರಾ. ೧-೧೯-೧೬). **೪.** ಸ್ವಚ್ಛಗೊಳಿಸು ; ಶುದ್ಧಿಮಾಡು : ತಿಳಮಂ ಪರಿಕಿಸಿ ವಾಸಿಸು ಬಱಿಕ್ಕದಂ ಫುಲ್ಲಪುಷ್ಪಸಂಕುಲದಿಂದಂ ಪಿಱಿದೆಣ್ಣೆಯೊಳಾ ಪೂವಂ ಪಱಿಯಂದದೆ ವಾಸಿಸೆಣ್ಣೆಗಾ ಪೆಸರಕ್ಕುಂ (ಲೋಕೋಪ. ೬-೨೨). **ಪರುಕಿಸು : ೧.** ಪರುಕಿಸಿ ನೋಡಲೆಂದು ಭೂಪತಿಯು ಸ್ವಲ್ಪ ಸ್ವಲ್ಪ ಮಾತಿನ ಪೀಠಿಕೆ ಹಾಕಿದನು (ಇಪ್ಪಕ. ೨೬೬). **ಪರ್ಕಿಸು : ೧.** ಧರಣೀಂದ್ರಪುರಕ್ಕದೇ(ಂ) ತೆಱದಿಂದಂ ಪರ್ಕ್ಕಿಸಡೆ ಕಾರ್ತ್ತಿಕೇಯನ ಪುರವಧಿಕಂ ಕೊಟ್ಟಿತೊಣೆ ಸಮಸ್ತಾವನಿಯೊಳು (ಸೌಇಇ. IX-i, ೨೭೦-೨೮; 1169). [ಪರಿಕೆ$_2$+-ಇಸು$_3$]

**ಪರಿಕೀರ್ಣ** (ಗು). **೧.** ಚೆದರಿದ ; ಹರಡಿದ. **೨.** ತುಂಬಿದ ; ಭರ್ತಿಯಾದ. (ನಾ). **೩.** ಗುಂಪು ; ಸಮೂಹ: "ಭರಿತಂ ಪ್ರಪೂರ್ಣಮಚಿತಂ ನಿಚಿತಮಾಕುಳಂ ಪರಿಕೀರ್ಣಮಾಚ್ಛದನಮೆನಲು ಸಂದಣೆಯಕ್ಕು" (ಮಂಗರಾ. ೧೨೮-೯). [ಸಂ.]

**ಪರಿಕೋಟೆ** (ನಾ). **೧.** ಪಟ್ಟಣದ ಅಥವಾ ಕೋಟೆಯ ಬಾಗಿಲ ಬಳಿ

ಯಿರುವ ಅಡ್ಡಗಟ್ಟು,—ಕಟ್ಟೆ ; "ಕೋಟೆ ಬಾಗಿಲಿನ ಹತ್ತಿರ ವಿರುವ ಕಟ್ಟೆ" (ಅನಂನಾ). ೨. ದೊಡ್ಡಬಾಗಿಲು ; ಹೆಬ್ಬಾಗಿಲು: "ಹಸ್ತಿನಖಃ, ಪರಿಕೂಟ(೦)ಃ—ಈ ೨ ಹೆಬ್ಬಾಗಿಲ ಕಟ್ಟು" (ಹಲಾಯು. ೪೮–೧೩೩) ; "ಪರಿಕೂಟವೆಸಾ ಹಸ್ತಿನಖಮೆನಲು ಪೆರ್ಬಾಗಿಲಕ್ಕು" (ಮಂಗರಾ. ೫೭–೪). [ಸಂ.]

**ಪರಿಕೃತ** (ಗು). ೧. ಆವರಿಸಿದ ; ಸುತ್ತುಗಟ್ಟಿದ. (ನಾ). ೨. ಬಳ ಸಲ್ಪಟ್ಟವನು ; ಆವೃತನಾದವನು ; ಸುತ್ತುಗಟ್ಟಲ್ಪಟ್ಟವನು : ಒಂದುದಿವಸಮುಚಿತಂಜಯಮಹಾರಾಜಂ . . . ಸರ್ವಾವಸರಸಭಾ ಮಂಟಪದೊಳಂತಃಪುರಾಂಗನಾಜನಸಂಗತನಖಿಳಪ್ರಧಾನಪರಿವಾರಪರಿಕೃತ ನುಮಾಗಿರೆ (ಚಂದ್ರಪ್ರ. ೫–೨೫). [ಸಂ.]

**ಪರಿಕೆ**$_1$ (ನಾ). ಧಾಳಿ ; ಆಕ್ರಮಣ: 'ಬಲ್ಪರಿಕೆ' ಪರಾ. [ಪರಿ$_2$+–ಕೆ]

**ಪರಿಕೆ**$_2$ (ನಾ). ಪರಿಶೀಲನೆ; ಪರೀಕ್ಷೆ: "ಪರಿಕೆ ಪರೀಕ್ಷೆ" (ಕರ್ಣಾನಿ. ೪); ಪರೀಕ್ಷಾ—ಪರಿಕೆ (ಶಮದ. ೨೬೨ ಪ್ರಯೋ) ; ಗುತ್ತಿಗೆವಿಡಿದಂತೆ ನೆಱೆ ಸಾಧಿಸಿದಱುಪತ್ತುನಾಲುಕು ಬಿಜ್ಜೆಗುಱುಹ ವೃತ್ತಕುಚಾನ್ವಿತೆಯರ ಪರಿಕೆಯ ನೋಡು ಚಿತ್ತಯಿಸೆಂದರಂಗಜಗೆ (ನೇಮಿಹತ. ೧೬–೧೧) ; ಎಲೆ ಬೃಹಂದಳೆ ನಿನಗೆ ಕದನ ನಾಟ್ಯದ ವಿದ್ಯೆಗಳ ಪರಿಕೆಯಿದ್ದಲ್ಲಿ ನಿಲಲರಿಯೆ (ತುರಂಗ. ೩೭–೫೭) ; ನೊಸಲ ಪೊರೆಯಾಯ್ತು ಪಾಠದ ಭಾರ ಚಿಂತೆ . . . ಬಸವಳಿದು ಬರಿದೆ ಸೇರ್ದೆನು ಪರಿಕೆ ಸಂತೆ (ಪಂಜೆಕ. ೧೬೫–೨). [<ಸಂ. ಪರೀಕ್ಷಾ./ಪ್ರಾ. ಪರಿಕ್ಖಾ, ಪರಿಖ./ತಮಿ. ಪರಿಕ್ಕೈ ; ತುಳು. ಪರಿಕೆ]

**ಪರಿಕೆ**$_3$ (ನಾ). ೧. ಕಂದಕ ; ಕೋಟೆಯ ಅಗಳು : ಪರಿಖ—ಪರಿಕೆ (ಶಮದ. ೨೧೧ ಪ್ರಯೋ). ೨. ಕೊಳ ; ಹೊಂಡ : "ಪರಿಕೆ [ಪಾಠಾಂ. ಖೆ]ಯೆನೆ ದೀರ್ಘಿಕೆಯೆನಿಕ್ಕು" (ಮಂಗರಾ. ೧೨೩–೧೫). [<ಸಂ. ಪರಿಖಾ]

**ಪರಿಕೊಳೆ** (ನಾ). ಹರಿಯುತ್ತಿರುವ ಕೊಳೆ ; ಸೋರುವ ಕಶ್ಮಲ ; ಕೀವು, ರಕ್ತ ಮುಂತಾದುವು : ಪರಿಕಿಸಿಯಾ ನೀನಾ ಪಾಳ್ಮನೆಯಂ ಪರಿಕೊಳೆಗಿಂಬಂ ಪೆಣ್ಗೊಡಂಬಂ (ಸೌನಂದ. ೮–೪೭). [ಪರಿ$_2$+ಕೊಳೆ$_2$(<ಕೊೞೆ$_2$)]

**ಪರಿಕ್ರಮ** (ನಾ). ೧. ನಡೆಯುವಿಕೆ ; ತಿರುಗಾಟ ; ಸಂಚಾರ : "ಗತಿಃ, ವಿಂಖಃ . . . ಪರಿಕ್ರಮಃ—ಈ ೫ ನಡೆಹ" (ಹಲಾಯು. ೧೨೦–೪೧) ; "ವಿಂಖಂ ವಿಹಾರಂ ಪರಿಕ್ರಮಂ ಪರಿಸರ್ಪಮೆನೆ ನಡೆ" (ಮಂಗರಾ. ೧೩೦–೧೭). ೨. ತಿರುಗುವಿಕೆ ; ಸುತ್ತುವುದು : ಕರಣದ ಚಾರಿಯ ಚಲ್ಲಿಯ ಪರಿಕ್ರಮಕ್ರಮದ ಭಂಗಿಗಳ್ ನೆಗೞ್ದೆಡೆಯೊಳ್ ಸುರ ವಂದಿಗಳಿಂ ಹೋಹೋಯಿರೆಯೆನಿಸಿದುದಾಟದಿಂತು ನೀಲಾಂಜನೆಯಾ (ಆದಿಪು. ೯–೩೯) ; ಈ ಕೊನೆ ಇಲ್ಲದ ಪರಿಕ್ರಮದಲ್ಲಿ ವಸೌಲ್ಯದ ತಂತು ಕೆಲವು ವೇಳೆ ದುರ್ಬಲವಾಗಬಹುದು (ವಂಶವೃ. ೪೪೦). ೩. ಪ್ರದಕ್ಷಿಣೆ : ತ್ರಿಣಯನಕೃತಾಂಘ್ರಿಪರಿಕ್ರಮನೆ ಪರಮೇಷ್ಠಿ ವಂದ್ಯನೆ ಪರಮಗುಣನಿಧಿಯೆ (ನಿಭಾಗ. ೧೦–೬೧–೩೮). ೪. = ಪರಿಕ್ರಮಸಂಧಿ : ಆ ಸಂಧಿ ಯಾವು ವೆಂದೊಡೆ:—ಸಂಪ್ರದಾನ . . . ಪರಿಕ್ರಮ ಅರಿಪರದೂಷಣ ಸ್ಕಂಧೋ ಪನಯಮೆಂದು ಷೋಡಶವಿಧಮಕ್ಕುಂ (ಪಂಚತಂ. ೨೨೦–೫). [ಸಂ.]

**ಪರಿಕ್ರಮಣ** (ನಾ). = ಪರಿಕ್ರಮ ೨ : "ಪರಿಕ್ರಮಣ"ವೆಂದರೆ ಇನ್ನೊಂದು ವಸ್ತುವು ಕೇಂದ್ರವಾಗಿದ್ದು ಅದರ ಸುತ್ತಲೂ ಸುತ್ತುವುದು (ಜ್ಯೋತಿರ್ವಿ. ೨೯ ಅಡಿಟಿ). [ಸಂ.]

**ಪರಿಕ್ರಮಸಂಧಿ** (ನಾ). [ರಾಜನೀ] ವಿರೋಧಿಗಳೊಡನೆ ಮಾಡಿ ಕೊಳ್ಳುವ ಹದಿನಾರು ಬಗೆಯ ಒಪ್ಪಂದಗಳಲ್ಲಿ ಒಂದು ; ಕೋಶದ ಎಲ್ಲಾ ಸಂಪತ್ತು ಅಥವಾ ಅದರ ಅರ್ಧಭಾಗವನ್ನು ಶತ್ರುವಿನ ವಶಕ್ಕೆ ಕೊಟ್ಟು ಮಾಡಿಕೊಳ್ಳುವ ಸಂಧಾನ : ಭಂಡಾರ ಮನಕ್ಕೆ ಅದಱರ್ಧಮನಕ್ಕೆ ಕೊಟ್ಟು ದೇಶಪ್ರವೃತ್ತಿಯಂ ರಕ್ಷಿಸುವ ಸಂಧಿ ಪರಿಕ್ರಮಸಂಧಿಯೆಂಬುದಕ್ಕುಂ (ಪಂಚತಂ. ೨೨೦–೨೨). [ಪರಿಕ್ರಮ+ಸಂಧಿ]

**ಪರಿಕ್ರಮಿಸು** (ಕ್ರಿ). ಹೋಗು ; ತೆರಳು. [ಪರಿಕ್ರಮ+–ಇಸು$_3$]

**ಪರಿಕ್ರಿಯೆ** (ನಾ). ೧. ಸುತ್ತುವರಿಯುವುದು ; ಸುತ್ತುಗಟ್ಟು ವುದು : "ಪರಿಸರ್ಪಃ, ಪರಿಕ್ರಿಯಾ—೨ ಅಲ್ಲಿಯಲ್ಲಿ ತಿರುಗಿ ಬರುವಿಕೆ, ಸುತ್ತಿ ಬರುವಿಕೆ" (ಸಿದ್ಧಾಂತಿ. ೩೬೨). ೨. ಸುತ್ತಲೂ ಬೇಲಿ ಹಾಕು ವುದು ಅಥವಾ ಕಂದಕ ತೋಡುವುದು. [ಸಂ. ಪರಿಕ್ರಿಯಾ]

**ಪರಿಕ್ರುದ್ಧ** (ಗು). ಬಹಳವಾಗಿ ಕೋಪಗೊಂಡ ; ಹೆಚ್ಚಾಗಿ ಕ್ರೋಧ ಹೊಂದಿದ : ಭವಬದ್ಧವೈರಮಂ ತಿಳಿದು ವಿಭಂಗಜ್ಞಾನದಿಂದೆ ಪರಿಕ್ರುದ್ಧಮನರ್ ನವಖಂಡಮಾಗೆ ಮಾಟ್ಪರ್ ನವನಾರಕರಂ ಪುರಾಣ ನಾರಕರಾಗಳ್ (ಮಲ್ಲಿಪು. ೧೩–೧೩೫). [ಸಂ.]

**ಪರಿಕ್ಲಿನ್ನ** (ಗು). ತೊಯ್ದಿರುವ ; ಒದ್ದೆಯಾದ : ಉಚ್ಚಳಿಸಿದ ಪರಿ ಕ್ಲಿನ್ನಾಂಗಕ್ಕೆ ಪೇಸಿ ಮನೆಯಿಂ ಪೊಱಮಟ್ಟು ಪೋದೆ (ಶಾಂತಿಪು. ೪–೬೭ ವ). [ಸಂ.]

**ಪರಿಕ್ಲೇಶ** (ನಾ). ಕಷ್ಟ ; ಸಂಕಟ ; ನೋವು : ಹಿಂಸಕಪುರುಷಂ ಈ ಭವದೊಳ್ ವಧಬಂಧ ಪರಿಕ್ಲೇಶಾದಿಗಳಂ ಮಱುಭವದೊಳ್ ಅಶುಭ ಗತಿಯಂ ಪಡೆಗುಂ (ತತ್ತ್ವಪ್ರ. ೨೬೧) ; ವನವಾಸದ ಪರಿಕ್ಲೇಶಾನು ಸಂತಾಪವನು ಬೀಳ್ಕೊಡಿಸಿ . . . ದೇವ ಸಲಹುವುದು (ಕುಪ್ಪಾವಿ. ೧೦–೩೭). [ಸಂ.]

**ಪರಿಕ್ಷಯ** (ನಾ). ನಾಶ ; ಅವನತಿ : ವಿವಿಧಧಾನ್ಯಭೇದಂಗಳುಂ ಕಲ್ಪವೃಕ್ಷಪರಿಕ್ಷಯದೊಳ್ ಪ್ರಜಾಜೀವನೋಪಾಯಹೇತುಗಳಕ್ಕೃಷ್ಟ ಪಚ್ಯಂಗಳಾಗಿ ಬೆಳೆದಿರ್ದುದುಂ (ಆದಿಪು. ೬–೭೨ ವ). [ಸಂ.]

**ಪರಿಕ್ಷಯಿಸು** (ಕ್ರಿ). ನಾಶಮಾಡು ; ಇಲ್ಲವಾಗಿಸು : ಭವಸಂಯೋಜನ ಗಳನ್ನು ಪರಿಕ್ಷಯಿಸಿ ಸಮ್ಯಕ್‌ಜ್ಞಾನದ ಬಲದಿಂದ ವಿಮುಕ್ತಿಹೊಂದಿದ ಭಿಕ್ಷುಗಳು . . . ಪರಿಕ್ಕೆ ಹೋಗುವರು (ತೀರ್ಥಕ. ೧೩). [ಪರಿಕ್ಷಯ+–ಇಸು$_3$]

**ಪರಿಕ್ಷಿಪ್ತ** (ಗು). ೧. ಎಸೆದ ; ಕೆದರಿದ ; ಚೆಲ್ಲಾಪಿಲ್ಲಿಯಾದ. ೨. ಸುತ್ತುಗಟ್ಟಿದ ; ಬಳಸಿದ. (ನಾ). ೩. ಸುತ್ತುವರಿದುದು : "ನಿವೃತಂ, ವೇಷ್ಟಿತಂ . . . ಪರಿಕ್ಷಿಪ್ತಂ—ಈ ೫ ಸುತ್ತಲ್ಪಟ್ಟುದು" (ಹಲಾಯು. ೧೧೪–೨೭). [ಸಂ.]

**ಪರಿಕ್ಷೀಣ** (ನಾ). ೧. ನಾಶ ; ಅಳಿವು : ಕುರುಕುಲವೆಲ್ಲಾ ಪರಿಕ್ಷೀಣ ವಾದ ಮೇಲೆ ಹುಟ್ಟಿದ ಮಗುವಾದ್ದರಿಂದ ಅವನಿಗೆ "ಪರಿಕ್ಷಿತ್ತು" ಎಂದು ಹೆಸರಾಯಿತು (ವಚಭಾ. ೩೬೩). ೨. ಕಡಮೆಯಾಗುವಿಕೆ ; ಕುಂದುವಿಕೆ : ಆಗ ಮಿಲಿಂದರಾಜನು . . . ಆಯುಸ್ಸು ಪರಿಕ್ಷೀಣ ನಾದ ದೇವಪುತ್ರನಂತೆ ಭೀತನಾದನು (ಮಿಲಿಂದ ಪ. ಮಿಲಿಂದ. ೩೧). [ಸಂ.]

**ಪರಿಕ್ಷುಬ್ಧ** (ಗು). ಅಲ್ಲೋಲಕಲ್ಲೋಲವಾದ ; ಪ್ರಕ್ಷುಬ್ಧ ವಾದ : ಅವಿಧೇಯಕ್ಷತ್ರಸಂವರ್ತನಸಮಯಪರಿಕ್ಷುಬ್ಧವಾರಾಶೀವೀಚೀ ನಿವಹಂ ಮರ್ಯಾದೆಯಂ ದಾಂಟಿದುದೆನೆ (ಮಲ್ಲಿಪು. ೮–೧೩೪) ; ನೆಱೆ [ಱ] ನುರ್ಚಿ ಪಾಯ್ದು ನೆತ್ತರ್ತೊಱೆಗೆ ಪರಿಕ್ಷುಬ್ಧ ಬಲಜಲಧಿಯೊಳ್ಕೆಂಬಾವುಱೆ ಮೊಱೆದು ಪಱಿವ ತೆಱದಿಂ ಗಜೂಗಣ ನೆಱೆ ಮೊಱೆದು ಪಱಿದು ಪೆರದುಂ ಬಲದೊಳ್ (ರಾಜಶೇ. ೬–೪೭). [ಸಂ.]

**ಪರಿಕ್ಷೇಪ** (ನಾ). ೧. ಸುತ್ತಲೂ ಎಸೆಯುವಿಕೆ,—ಚೆಲ್ಲುವಿಕೆ. ೨. ಸುತ್ತುಗಟ್ಟುವಿಕೆ ; ಬಳಸುವುದು : ಪ್ರಬಳರಿಪುಬಳಭುಜಬಲ

ಪರಿಕ್ಷೇಪಪೂರ್ಣತಾರ್ಣಪ್ರಳಯಾರ್ಣವನುಂ (ಗದಾಯು. ೨–೧೫) ; ಏಳಾ ಲತೆಯ ವಿಳಾ[ಸ]ಭಿತ್ತಿಯಿಂ ದ್ರಾಕ್ಷಾಲತೆಯ ಪರಿಕ್ಷೇಪದಿಂದೊದವಿ ಲತೆಯ ಮಂಡಪದಿಂದಳಂಕರಿಸಿ ನಿಂದ ಸಹಕಾರಲತೆಯ ಬಾಳ್ದೊಂಪ ದೊಳ್ . . . ವಿಶ್ರಮಿಸಿದಾಗಳ್ (ಪರ್ಶಪು. ೮–೬೬ ವ). **೩.** ವರ್ತುಲ; ಮಂಡಲ ; ಪರಿಧಿ. **೪.** ಇಂದ್ರಿಯ. [ಸಂ.]

**ಪರಿಖಂಡಿತ** (ಗು). ನಾಶಮಾಡಿದ : ಚಂಡಗಜಗಮನೆ ಪರಿಖಂಡಿತಾ ಘಾಳಿಯಂ ಕಂಡಳೀರೆಂಟುಪೊಳ್ಗನಸಿನೆಸೆವ್ಹೋಳಿಯಂ (ಆದಿಪು. ೭–೨೭ರಗಳೆ).
[ಸಂ.]

**ಪರಿಖಚಿತ** (ಗು). **೧.** ಕೂಡಿಸಿದ ; ಕುಂದಣಿಸಿದ : ಅವಿಚ್ಛಿನ್ನಳಗಣ ಗಣನಾತೀತ ರಮ್ಯಮಣಿಕನಕರಜತಪರಿಖಚಿತಹರ್ಮ್ಯಪ್ರಾಕಾರ(೦ ಕರ) ಮೊಪ್ಪುಗುಂ (ಶಾಂತಿಪು. ೩–೬ ರಗಳೆ) ; ವ್ಯಕ್ತಾಮುಕ್ತಾಫಳಪ್ರಕರ ಪರಿಖಚಿತವಿಳಾಸಸೌಧಾಗ್ರ . . . ಗುಣಾಗ್ರಗಣ್ಯಸಮುದಯಸಮುಂಚಿತ ಮುಂ (ರಾಜಶೇ. ೧೪–೧೦೬ ವ). **೨.** ಕೂಡಿಸಿದ ; ಸೇರಿಸಲ್ಪಟ್ಟ ( ? ) : ಉತ್ತೋರಣ ಪರಿಖಚಿತಾದರ್ಶಬಿಂಬಾಸ್ಯ ವೇಲ್ಲತ್ಪರಿಖಾಂಬು ಕ್ಷಾಮೆ ಪಾಂಥಪ್ರತತಿಗೊದವಿಕುಂ ತತ್ಪುರೀಲಕ್ಷ್ಮಿ ಚೆಲ್ವಂ (ಚಂದ್ರಪು. ೩–೧೭). [ಸಂ.]

**ಪರಿಖಾಚಕ್ರ** (ನಾ). ಕಂದಕದ ವರ್ತುಲ ; ಮಂಡಲಾಕಾರವಾದ ಅಗಳು : ಅಂತತಿಗಂಭೀರಮಾದ ಪರಿಖಾಚಕ್ರದಿಂದೊಳಗೆ (ಜಗವಿ. ೨–೧೮ ವ). [ಸಂ.]

**ಪರಿಖಾತ** (ನಾ). **೧.** ಕಂದಕ; ಅಗಳು. **೨.** ಹಳ್ಳ ಬಿದ್ದ ಜಾಡು. **೩.** ಮಣ್ಣು ಅಗೆಯುವ ಸ್ಥಳ. **೪.** ಪುಷ್ಕರಿಣಿ ; ಕಲ್ಯಾಣಿ : "ವಾಪಿ ದೀರ್ಘಿಕೆ ಪರಿಖಾತಂ" (ವಸ್ತುಕೋ. ೨೪–೧೫) ; ಶ್ರೀತರುಣೀಕೇಳಿಗೃಹಂ ಭೂತಳವಿಭ್ರಾಜಿತಂ ಲಸಜ್ಜೀವನವಿಖ್ಯಾತಂ ತಾನೆಸೆವುದು ಪರಿಖಾತಂ ಪ್ರಭುಪುರುಷನಂದದಿಂದನವರತಂ (ಪರ್ಶಪು. ೧–೫೧). [ಸಂ.]

**ಪರಿಖೆ** (ನಾ). **೧.** (ಪಟ್ಟಣದ ಅಥವಾ ಕೋಟೆಯ ಸುತ್ತಲೂ ಅಗೆದಿರುವ) ಕಂದಕ ; ಅಗಳು : "ಪರಿಖಾಭಿಖ್ಯಂ ಖೇಯಂ" (ವಸ್ತುಕೋ. ೪೬–೬); ತಜ್ಜನಪದಮಧ್ಯಂಗಳೊಳ್ ಪರಿಖಾವಪ್ರಪ್ರಾಕಾರ ಗೋಪುರಾಟ್ಟಾಲಕಾಲಂಕೃತಂಗಳಪ್ಪ ರಾಜಧಾನಿಗಳುಮಂ (ಆದಿಪು. ೮–೬೩ವ) ; ಆ ಪುರಸ್ತ್ರೀಯ ರತ್ನಕಂಠಿಕಾಮಯೂಖಲೇಖಾವಿಲಾಸಮಂ ತಳೆದು ಪರಿಖೆಯ ತೆರೆವೊಯ್ಲಿಂದಂ ತೆರಳ್ದು ತಡಿವಿಡಿದು ತೆಕ್ಕೆಗಟ್ಟಿದ ಪೊಂದಾವರೆಯ ರಜದಂತೆ ನೃಪಮಂದಿರಮಂ ಬಳಸಿರ್ದ ಪೊಮ್ಮುಗಿಲ್ತೊ ಗಯಿಸುಗುಂ (ಮಲ್ಲಿಪು. ೨–೬೪) ; ಇರ್ಪುದಪ್ರತಿಮಕೋಟಾಚಕ್ರಮಂ ಸುತ್ತಿ . . . ಪರಿಖಾಂತರಂ (ಪುಷ್ಪಪು. ೨–೬೨) ; ಆ ಪರಿಖೆ ಕಲ್ಯಾಣ ದಲಿ ಕಂಗಿದಿರಾಯಿತಲ್ಲಮಗೆ (ಪ್ರಭುಲೀ. ೧೪–೯). **೨.** ಕೊಳ ; ಕಲ್ಯಾಣಿ : "ಪರಿಖಾ, ದೀರ್ಘಿಕಾ–ಈ ೨ ದೀರ್ಘಿಕೆ" (ಹಲಾಯು. ೧೧೧–೫೪) ; ರಮಣೀಯಮಾದ ವನವಳಯದಿಂದಮೊಳಗೆ . . . ಈ ನರನಾಥನೆನ್ನವೊಲೆನುತ್ತಂಭೋಧಿ ತಾಂ ಬಂದು ನಂದನೆಪುತ್ತಲ್ಲಿಯೆ ನಿಂದವೋಲ್ಪರಿಖೆ ಚೆಲ್ವಂ ಬೀಱ ಕಣ್ಗೊಪ್ಪುಗುಂ (ರಾಜಶೇ. ೨–೮೩).
[ಸಂ. ಪರಿಖಾ]

**ಪರಿಖೇದ** (ನಾ). ಬಹಳ ವ್ಯಥೆ ; ಅಧಿಕವಾದ ಕಳವಳ, —ದುಃಖ : ಇಂತೀ ಪರಿಖೇದಮೇತೆಱದಿನಾಯ್ತು ತ್ತಾನಪೀನಸ್ತನೀ (ಅನಂಪು. ೧೨–೫೫) ; ಹೇಳು ಮುರಹರ ಬುದ್ಧಿ ಕದಡಿ ಘಡಾಳಿಸಿತು ಪರಿಖೇದವೊಸಗೆಯ ಕೇಳಲಱಿಯೆನು ರಾಜವಾರ್ತೆಯನೆಂದನಾ ಪಾರ್ಥ (ಕುಮಾವ್ಯಾ. ೧೬–೧). [ಸಂ.]

**ಪರಿಖ್ಯಾತಿ** (ನಾ). ವಿಶೇಷವಾದ ಯಶಸ್ಸು, —ಪ್ರಸಿದ್ಧಿ. [ಸಂ.]

**ಪರಿಗ**$_1$ (ನಾ). =ಪರಿಘ **೨** : ಪರಿಗ ಮುಸಲ ಮುಸುಂಡಿಯ ಶಲ್ಯ ಮುದ್ಗರ ಕರದ್ವೈದು ಬಾಣದ ಹರಿಗೆ ಬೆರಸಿ ಹುಂಕರವೆದ್ದು ಕಡಿದಾಡಿ ರಗುತದಿ ಸರದಿಯುಭಯುಪಾಯದಳವು (ದೇವಾಂಪು. ೪–೫೨).
[<ಸಂ. ಪರಿಘ./ತಮಿ. ಪರಿಕ, ಪರಿಕೈ]

**ಪರಿಗ**$_2$ (ನಾ). (?) : ಈ ಬೆಸನಪ್ಪೊಡೆ ದೂತರ್ಗೆ ಭಟ್ಟರ್ಗೆ ಪರಿಗರ್ಗಲ್ಲದೆ ನೀಂ ಮಾಡಲ್ತಕ್ಕುದಲ್ಲ (ಪಂಚತಂ. ೪೨–೫). [ ? ]

**ಪರಿಗಣನ** (ನಾ). **೧.** ಖಚಿತವಾದ ಲೆಕ್ಕಾಚಾರ ; ನಿಖರವಾದ ಎಣಿಕೆ. **೨.** ಉದ್ದೇಶಪೂರ್ವಕವಾದ ವಿಚಾರ, —ಆಲೋಚನೆ : ಕವಿಕರ್ಮದಲ್ಲಿ ಲೋಕಭಾವಗಳು ತಮ್ಮ ಪರಿಗಣನಮೌಲ್ಯದಿಂದ ರಸ ಲೋಕದ ಮೌಲ್ಯಗಳಾಗಿ ಪರಿವರ್ತಿತವಾಗುತ್ತವೆ (ಸೌಂದಸ. ೪೨೧).
[ಸಂ ]

**ಪರಿಗಣನೆ** (ನಾ). **೧.** (ಉದ್ದೇಶ ಪೂರ್ವಕವಾಗಿ) ಗಮನಕೊಡು ವಿಕೆ, —ಪರಿಶೀಲನೆ : ಬರವಣಿಗೆಯ ವೇಗದ ಪರಿಗಣನೆ (ಶಿಕ್ಷದ. ೩೪೯). **೨.** ಲೆಕ್ಕಾಚಾರ ; ಎಣಿಕೆ : ನಿಮ್ಮನುಜ್ಞೆಯಲಿ ಚರಿಸುವೆನು ವನ ವಾಸದಲಿ ಗೋಚರಿಸುವೆನು ನೀವ್ ನುಡಿದ ವರುಷದ ಪರಿಗಣನೆ ಪರಿ ಯಂತವೆಂದನು ಕೈಕೆಗಾ ರಾಮ (ತೊರರಾ. ೨–೨–೫೦).
[ಸಂ. ಪರಿಗಣನಾ]

**ಪರಿಗಣಿತ** (ಗು). **೧.** ಗಣಿಸಿದ; ಎಣಿಸಿದ ; ಪರಿಭಾವಿಸಿದ ; ನಿರೀಕ್ಷಿಸಿದ : ಪರಿಗಣಿತ ಪರಮಾನ್ನ ಸಂಘಟಿಸಿದುದು ಭಾಗೆಯಲಿ (ತೊರರಾ. ೧–೭–೫೮). **೨.** ನಿಖರವಾಗಿ ಯೋಚಿಸಿದ, —ಆಲೋಚನೆ ಮಾಡಿದ : (ತ). (ನಾ). **೩.** ಎಣಿಕೆಗೊಂಡುದು ; ಪರಿಭಾವಿತವಾದುದು : ಮಾನವನು ಅನುಸರಿಸಬೇಕಾದ ನೈತಿಕತತ್ತ್ವ ಗಳೂ ಜಗತ್ತಿನ ಭೌತತತ್ತ್ವಗಳಿಗೆ ಅನುರೋಧಗಳೆಂದು ಪರಿಗಣಿತವಾದುವು (ಮುಕ್ತಾರ. ೩೦ ಪೀಠಿಕೆ) ; ಹಾಸ್ಯವು ನವರಸವೆಂದು ನಮ್ಮ ಲಾಕ್ಷಣಿಕ ರಿಂದ ಪರಿಗಣಿತವಾಗಿದ್ದರೂ . . . ಮಿಕ್ಕ ರಸಗಳ ಪ್ರಾಧಾನ್ಯವಿರಲಿಲ್ಲ (ಬಂಕಿಮ. ೩೪೯). **೪.** ಲೆಕ್ಕ ; ಎಣಿಕೆ : ದಾಯ ಬಂದುದು ನಮಗೆ ಹೋ ಲೇಸಾಯಿತೇಳು ವಿಶೋಕ ಸಾಕುಳಿದಾಯುಧದ ಪರಿಗಣಿತವನು ಹೇಳೆಂದನಾ ಭೀಮ (ಕುಮಾವ್ಯಾ. ೧೮–೧೯). **೫.** ಪರಿಭಾವಿತ ವ್ಯಕ್ತಿ : ಶ್ರೀದೇವಿಯು ಅವರ ಗುಂಪಿನಲ್ಲಿಯೇ ಒಬ್ಬಳಂತೆ ಪರಿಗಣಿತಳಾದಳು (ಶ್ರೀರಾಯ. ೨೧೯). [ಸಂ.]

**ಪರಿಗಣಿಸು** (ಕ್ರಿ). ಎಣಿಸು ; ಲಕ್ಷ್ಯಕ್ಕೆ ತಂದುಕೊಳ್ಳು; ಭಾವಿಸು; ಯೋಚಿಸು : ಪರಿಗಣಿಸಲಗ್ನೀಂದ್ರನಂದನರ್ . . . ನೆಗಳ್ವ ಭದ್ರಾಶ್ವ ಕೇತುಮಾಲ್ಯಾದಿಗಳ್ಗೆ ಧರೆಯನೊಂಭತ್ತು ಭಾಗಂ ಮಾಡಿ ಕೊಡಲು (ಚೆಬಪು. ೧೫–೧೫) ; ನನಗೆ ಏನು ಆಗುತ್ತಿದೆ ಎಂಬುದನ್ನು ಪರಿಗಣಿಸದೆ ಅವಳ ಕಿಟಕಿಯ ಬಳಿ ರಾತ್ರಿಯನ್ನೆಲ್ಲಾ ಕಳೆದಿದ್ದೇನೆ (ಮಲಿನಾ. ೧೬೬) ; ನಮ್ಮವನಿವನೆಂದು ಅನ್ಯನು ಅವನೆಂದು ಅಲ್ಪರು ಪರಿಗಣಿಸುವರು (ಇಂಚಾಪ. ೯೧–೪೨); ಈ ದಿನ ಒಂದು ಮಹಾಸುದಿನವೆಂದೇ ನಾವು ಪರಿ ಗಣಿಸಿದ್ದೇವೆ (ಪ್ರತಾಪ. ೫೦). [ಪರಿಗಣನ+–ಇಸು$_3$]

**ಪರಿಗತ** (ಗು). **೧.** ಸುತ್ತುವರಿದ ; ಬಳಸಿದ ; ಸುತ್ತುಗಟ್ಟಿದ : ಪರಿಗತ ನಿರ್ಝರಿಣಿಯೊಳಾ ಗಿರಿಯೊಳ್ . . . ಇರ್ಪುದಾ ಕಪಿಯುಗಳಂ (ಅರ್ಧನೇ. ೪–೧೨೫). **೨.** ಅಧಿಕವಾದ ; ಹೆಚ್ಚಾದ ; ಆವರಿಸಿದ ; ತುಂಬಿದ : ನರಪತಿತನಯುನನಾಯತ ತರಳಾಪಾಂಗದೊಳೆ ನೋಡಿ ಕೆಳದಿ ಯರೊಡನಾಂ ಪರಿಗತ ಹಾಸ್ಯದೊಳಿರ್ದೆಂ (ಕವಿಾ. ೧–೬೦) ; ಅದಱ ನವಿರಳವಾತೂಳಿಕಾಭ್ರಮಣಪರಿಗತತೂಳಿಕಾತಳಮಪ್ಪ ಮನಕ್ಕೆಂತಾನುಂ . . . ಪರಿಣಮಿಸಿದ ಸುಸ್ಥತೆಯಂ ವ್ಯರ್ಥಂ ಮಾಡದೆ (ಚಂದ್ರಪು. ೪–೧೮ ವ); ಮತ್ತಮಾ ವನಂ . . . ಪರಿಗತ ಶಬರೋಪಯುಕ್ತಮಾಗಿಯು

ಮವಿಗ್ರಹಸಮಗ್ರಸ್ಥಳಮುಂ (ರಾಜಶೇ. ೫–೭೪ ವ). **೩.** ತಿಳಿದ; ಅಱಿತುಕೊಂಡ. **೪.** ಹೊಂದಿದ ; ಪಡೆದ : ಧರಣೀವಲ್ಲಭ ತನ್ಮಾನಿನಿರೀಕ್ಷಣಕ್ಷಣದೊಳಲರ್ದ ಕಱವಿನ ಮರಗಳ್ ಪರಿಗತರೋಮಾಂಚತೆಯಿಂ ದೊರೆಮಾಡಿದುದೆನ್ನ ತನುವುಮಂ ನೆಱೆ ತನ್ನೊಳ್ (ಚಂದ್ರಪ್ರ. ೨–೯೯); ನಿಟಿಲನೇತ್ರನ ನಯನಶಿಖಿಯುಬ್ಬಟೆಗೆ ಸಮಜೋಡಿಸಿತು ಕರ್ಣನ ಚಟುಳವಿಕ್ರಮಪವನಪರಿಗತ ಬಾಣಶಿಖಿನಿಕರ (ಕುಮಾವ್ಯಾಕ. ೧೩–೩೯) ; ಮರದೊಳೆಸೆವೊಂದು ನೆವದಿಂ ಮರನಡರ್ದಂ ಶಿಖಿ ದಿವಾಕರಂ ನೀರ್ವೊಕ್ಕಂ ಪರಿಗತಬಿಂಬವ್ಯಾಜದಿನರರೆ ಹಿಮಾಗಮಮಹೀಶನೇಂ ಕಡುಗಲಿಯೋ (ರಾಜಶೇ. ೯–೧೧). **೫.** ಹೋದ ; ನಡೆದ. (ನಾ). **೬.** ಆವರಿಸಿರುವುದು ; ತುಂಬಿರುವುದು : ಪನಿವುಲ್ ಪಚ್ಚೆಯ ನೆಲಗಟ್ಟಿನ ಮುತ್ತಿನ ರಂಗವಲಿಯತೆಱನಂ ಮನದೊಳ್ ಜನಯಿಸೆ ಶಶಿ ಮಸುಳೆ ವಿನೂತನ ರವಿರಥಪಾಂಸುಪರಿಗತಂಬೋಲ್ ನಭದೊಳ್ (ಶಾಂತಿಪು. ೮–೧೧೨). **೭.** ಸೇರಿರುವುದು; ಕೂಡಿರುವುದು : ಅನ್ಯೋನ್ಯಪ್ರಣಯಸಂಜಾತಸಂಪತ್ಪರಂಪರಾಪರಿಗತಮಾಗಿ ನಿಳಿಂಪದಂಪತಿಯನೆ ಪೋಲ್ವ ತದ್ದಂಪತಿಗಳ್ಗೆ (ಸುಕುಮಾ. ೯–೯೬ ವ); ಸ್ಮರಣವಿಚಾರಾಮಂತ್ರಣಪರಿಗತವೆನಿಸಿರ್ಪುವೆಲೆಲೆ ಏ ಎಂಬಿವು (ಶಮದ. ೩೧೧). **೮.** ಹೋದುದು ; ನಡೆದುದು : ತುರಗವಿವು ನಾಳಿನಲಿ ಕುಂಡಿನಿಪುರಿಗೆ ಪರಿಗತವಾಗವು (ತೊರರಾ. ೩–೨–೧೯). [ಸಂ.]

**ಪಱಿಗಲಿತ,** ಪರಿಗಳಿತ (ಗು). ೧. ಮುಳುಗಿದ. ೨. ತಟ್ಟನೆ ಕೆಳಗೆ ಬಿದ್ದ,—ಉರುಳಿದ. **೩.** ಕರಗಿದ. **೪.** ಹರಿದ ; ಪ್ರವಹಿಸಿದ : ಶಶಿಮಣಿಪ್ರಾಸಾದಪರಿಗಲಿತ [ಪಾಠಾಂ. ಪರಿಮಳಿತ] ಸದಮಳಜಳಪ್ರವಾಹನಿಷ್ಪ್ರಯಾಸ ಪರಿವರ್ಧಿತಾನಲ್ಪಕಲ್ಪತರುಪಂಕ್ತಿಸಂತತದರದಳಿತ ಪರಿಮಳಭರಿತ ಕುಸುಮವಿಸರವಿಸರದ ಮಂದಮರಂದರಸ ಕದಂಬಕರ್ದಮಿತ ವಿಧುರವಿವೀಥಿಸನಾಥಮುಮಂ (ರಾಜಶೇ. ೧೪–೧೦೬ ವ). (ನಾ). **೫.** ಹರಿಯುವುದು ; ಪ್ರವಹಿಸುವುದು. **೬.** ದ್ರವ. **ಪಱಿಗಳಿತ :** **೭.** ಸೋರಿದ : ಕಂಗೊಳಿಸಿದರುರುಶರಹತಿಪರಿಗಳಿತಕ್ಷತಜಾತಕಲಿತಕಾಯರಜೇಯರ್ (ರಾಜಶೇ. ೬–೫೧). **೮.** ಹೊರಗೆ ಬಂದ ; ಹೊಮ್ಮಿದ; ಸೂಸಿದ : ಪರಿಗಳಿತ ಪೂತಿಗಂಧರ್ . . . ಭಲ್ಲನಿಕರ ನಿಷ್ಠುರನಿನದರ್ (ಶಾಂತೀಶ್ವ. ೯–೧೦೬). [ಸಂ.]

**ಪಱಿಗಳಿತ** ‘ಪರಿಗಲಿತ’ ನೋ.

**ಪಱಿಗಾಲುವೆ,** ಪರಿಕಾಲುವೆ, ಪರಿಕಾಲ್ವೆ, ಹರಿಗಾಲುವೆ (ನಾ). = ಪರಿಕಾಲ್ : ಭಾಗೀರಥಿದೇವಿಯರು ಸಾಸಿರಮೊಗವಾಗಿ ಸಾಗರವೆರೆದಂತೆ ರಾಗಿಪ ಪರಿಗಾಲುವೆ ಸಾಸಿರಮೊಗವಾಗಿ ಸದ್ವನವ ಸಾರಿದುವು (ಮೋಹತ. ೨–೩೯). **ಪರಿಕಾಲುವೆ :** ಕಾವೇರಿಯ ವಕ್ಷದ ಚಾರುಹಾರವೆಂಬಂತೆ ಅನೇಕ ಪರಿಕಾಲುವೆಗಳು ಊರನ್ನು ಬಳಸಿಕೊಂಡು ಹರಿಯುತ್ತಿರುವುವು (ಕರ್ಣಾಜ. ೧೫೪). **ಪರಿಕಾಲ್ವೆ :** ಪೆಣನ ಮಿದೆ ಮಾಂಸದೊಟ್ಟಿಲ್ ಬಸೆಯ ಪರಿಕಾಲ್ವೆ . . . ತದ್ರಣರಂಗದೆಲ್ಲೆಡೆಯೊಳುಂ ತೀವೆ (ಚಿಬಪು. ೪೮–೫೬). **ಹರಿಗಾಲುವೆ:** ಬಂದರು . . . ಹೊಳೆಯ ಹರಿಗಾಲುವೆಯ ಹರಹಿನ ಬೆಳೆದ ನಂದನದುಬ್ಬುಗೊಬ್ಬಿನ ಕಳಮೆ ಕದಳಿ ದ್ರಾಕ್ಷಿ ಧವಳೇಕ್ಷುಗಳನೀಕ್ಷಿಸುತ (ತೊರರಾ. ೩–೧೨–೨೫).

[ಪರಿ$_2$ + ಕಾಲುವೆ (<ಕಾಲ್ವಾಯ್)]

**ಪಱಿಗಿಡು** ‘ಪರಿಗೆಡು’ ನೋ.

**ಪಱಿಗೀತ** (ಗು). ಚೆನ್ನಾಗಿ ಹೇಳಿದ : ಪರಿ[ಪಾಠಾಂ. ರ]ಗೀತಾರ್ಥಂ ಪೂರ್ವಾಪರದೊಳ್ಪಗೆವಾಗಳೆಂದುಮೊಂದಱೊಳೊಂದುಂ ದೊರೆಕೊರಡೊಂದದೊಡದು ದುಷ್ಕರಮೆ ವಿರುದ್ಧಾರ್ಥಮೆಂಬುದಾದಂ ದೋಷಂ (ಕವಿರಾ. ೧–೮೦). [ಸಂ.]

**ಪಱಿಗೂಢ** (ಗು). ಅತ್ಯಂತ ಗುಪ್ತವಾದ ; ತಿಳಿಯಲಸಾಧ್ಯವಾದ: ರೂಢಿಗಚ್ಚರಿಯಾಯ್ತು ಲಾ ಪರಿಗೂಢ ಮೃಗಗಣವಿಲ್ಲವಿದೆ ನಿರ್ಮೂಢರನು ಹಿಡಿತರಿಸುಯೆಂದನು ದೂತನೊಡೆಯಂಗೆ (ಕುಮಾವ್ಯಾಅ. ೧೨–೧೬). [ಸಂ.]

**ಪಱಿಗೃಹೀತ** (ಗು). ೧. ತೆಗೆದುಕೊಂಡ ; ಸ್ವೀಕರಿಸಿದ : ಇವರ್ಗಂ ಪುಟ್ಟಿದೊಂ ಮೃಗಶೃಂಗನೆಂಬೊಂ ತಾಪಸಕುಮಾರನಾತಂ ಬಾಲಕಾಲಪರಿಗೃಹೀತತಾಪಸಾಚರಣಂ ತಪೋರೂಪಮಾರ್ಗಮಂ ಮೆಚ್ಚದೆ ಮಿಥ್ಯಾಂಧಕಾರಾವಕುಂಠಿತ ಸಮ್ಯಗ್ದರ್ಶನನಾಗೆ (ಶಾಂತಿಪು. ೭–೪೩ ವ) ; ಬಾಲ್ಯಕಾಲದೊಳ್ ತೊಡಂಗಿ ಪರಿಗೃಹೀತ ಬ್ರಹ್ಮಚರ್ಯವ್ರತಪರಿಣತನಾದೆಂ (ಗದಾಯು. ೫–೪೪ ವ). **೨.** ಹೊಂದಿದ ; ಪಡೆದ : ರತ್ನಮಂಡನಾಯೋಗಪರಿಗೃಹೀತ ಸುರೇಂದ್ರ ಕರೀಂದ್ರಪೃಷ್ಠಗತನಪ್ಪಮರೇಂದ್ರನನೆ ಪೋಲ್ತುಂ ಸೌಜನ್ಯಕಂದಾಂಕುರನಿರ್ಪುದುಂ (ಶಾಂತಿಪು. ೫–೯೪ ವ). **೩.** ಒಪ್ಪಿದ ; ಅಂಗೀಕರಿಸಿದ ; ಸಮ್ಮತಿಸಿದ. **೪.** ಮದುವೆಯಾದ. [ಸಂ.]

**ಪಱಿಗೆ,** ಹರಿಗೆ$_2$ (ನಾ). ೧. ಯುದ್ಧದಲ್ಲಿ ಸ್ವರಕ್ಷಣಾರ್ಥವಾಗಿ ಬಳಸುವ ಒಂದು ಬಗೆಯ ಸಾಧನ ; ಗುರಾಣಿ ; ಢಾಲು ; ಅಡ್ಡಣ : “ಅಡ್ಡಣಮೆಂದೆನಲ್ ಪರಿಗೆ” (ಕರ್ಣಾನಿ. ೧೮) ; ವೀರದೊಳ್ ಕೂಡಿ ಪರಿಗೆಯುಮಂ ಬಿಟ್ಟೀಱುಂ ಬೆರಸಿರ್ಪಂತೆ ಕ್ಷತ್ರಿಯಂಗೆ ಪುಟ್ಟಸಿಂಹಾಸನಮುಮಂ ಬೆಳ್ಗೊಡೆಯುಮಂ ಬೆರಸಿರ್ಪಂತೆ . . . ಕೊಲ್ಲದ ವ್ರತದೊಳಂ ಪುಸಿಯದ ವ್ರತದೊಳಂ ಬೆರಸಿರ್ಪುದು (ಧರ್ಮಾಮೃ. ೧೧–೨) ; ಪರಿಗೆಗಳಲ್ಲಿ ಕೀಲಿಸಿದ ಗೆಜ್ಜೆಯ . . . ಪರಿ ನಾಡೆಯುಮೊಪ್ಪಿದುದಿರ್ವಲಂಗಳೊಳ್ (ಕಬ್ಬಿಕಾ. ೨೬೩) ; ಮಡಿದ ಪೆಣಗಳ ಬಳಿಯೊಳೊತ್ತುವರ್ ಸುತ್ತುವರ್ ಪರಿಗೆಯಿಂ ದಿವಿಜಭಟರು (ಚಿಬಪು. ೪೨–೩೯) ; ಖರ ಖಡ್ಗಪ್ರಾಂಶು ವಿದ್ಯುದ್ಯುತಿ ಪರಿಗೆಗಳಂಭೋಧರಂಗಳ್ (ರಾಜಶೇ. ೬–೧೩). **೨.** ಒಂದು ಬಗೆಯ ವಾದ್ಯ : ಸುತಿ, ಮೌರಿ, ಡೋಲು, ತಂಬಟೆ, ಈರಣ, ಡಕ್ಕೆ, ಪರಿಗೆ, ಕೊಂಬು . . . ಮುಂತಪ್ಪ ಬದ್ದವಣಂಗಳ ಬಿರುಸರಂ ಎಲ್ಲೆಡೆಯೊಳಂ . . . ಮೊರ್ದನಿಗುಟ್ಟಿದುದು (ಅದ್ಭುತ. ೩೨–೧೦). **೩.** ಒಂದು ಸ್ಥಳದ ಹೆಸರು : ಪರಿಗೆಯ ಬನ್ದಿಗಿಯರ್ ಈ ಊರ್ಗೆ ಬನ್ದು ಅರಿದರೊಳ್ ಛಲವಿನೆ ನಾಲ್ಕೆಟ್ಟಿನ ಬಳನ ಕಿಡಿಸಿ ಆೞಿಟ್ಟು ಮಾಡಿ (ಎಕ. VIII, ಸೊರಬ. ೧೦–೧೦ ; ಸು. 800). **ಹರಿಗೆ$_2$ : ೧.** “ಖೇಟಕಂ, ಫಳಕಂ, ಚರ್ಮ, ಆವರಣಂ—ಈ ೪ ಹರಿಗೆ” (ಹಲಾಯು. ೭೬–೩೦೬) ; ಕಾಳಗದಿೞಿದಡೆ ತನ್ನಾಟ್ಟಂಗೆ ಹರಿಗೆಯಂನಿಕ್ಕಿ ಬಂದು ಕುದುರೆಯಂ ರಾಹುತನಂ ಕೊಂದು ಸ್ವರ್ಗ್ಗಸ್ತನಾದ (ಸೌಇಇ. IX–i, ೨೫೬–೯ ; ಸು. 1149); ಸರಸಿಜದೆಲೆಗೊಡೆಯಂ ಪಿಡಿದರಸನ ನೀರ್ವೊಯಿಸೆ ನಿಂದು ಕುನಿದಾಂತೊರ್ವಳ್ ಮರಕತದ ಹರಿಗೆಯೋಜೆಯನರಲಂಬನ ಮುಂದೆ ಮೆಱೆವ ರತಿಯವೊಲೆಸೆದಳ್ (ಅನಂಪು. ೭–೪೩); ಹರಿಗೆ ಖಡ್ಗ ಕಠಾರಿ ಕುಂತದ . . . ವರೂಥಾರೋಹಕರ ಮೋಹರದ ಮೇಳದಲಬ್ಬರಿಸುತೊಳಹೊಕ್ಕನತಿಕಾಯ (ತೊರರಾ. ೬–೩೪–೪೬). **೨.** ತಿಗಡಲೊದಱುವ ಹರಿಗೆಗಳ ಗೌಜಗಿವ ಹೆಗ್ಗಹಳೆಗಳ . . . ಮಹಾಧ್ವನಿ ಬಗಿದುದೈತಾವರೆಯ ತನಯನ ಕರ್ಣಕೋಟರವ (ಕುಮಾವ್ಯಾಭೀ. ೨–೪). **೩.** ನೊಕ್ಕವೆರ್ಗ್ಗಡೆ ಹರಿಗೆಯುಲೆತ್ತಿಸಿದನೆರಡು ಜಿನಮಂದಿರಮಂ (ಎಕ. VII, ಶಿಮೊ. ೧೦–೪೭ ; 1085 ?); ಹರಿಗೆಯ ನೆಲೆವೀಡಿನೊಳು ಸುಖದಿನಾಳುತ್ತಿರ್ದ (ಎಕ. VII, ಶಿಮೊ. ೬೪–೯೩ ; 1112 ?); ಹರಿಗೆಯ ಗ್ರಾಮದೊಳು ×××ಣಿ ಪಾದಪಂಕಜಸದಾಸಂಸೇವೆಯಂ(ಎಕ. VII, ಶಿಮೊ. ೮೭–೪೭; ಸು. 1245). **೪.** (ಅಲಂ) ಹರಿಗೆಕಾರರ ಸೈನ್ಯ : ಬಲಸಮುದ್ರದ ಬುದ್ಬುದಂಗಳೊ ತಿಳಿಯಲರಿದೆನೆ ಹರಿಗೆ ಮುಸುಕಿತು (ಕುಮಾವ್ಯಾಭೀ. ೪–೨೬).

**ಹರಿಗೆಯವ** = ಗುರಾಣಿಯನ್ನು ಹಿಡಿದಿರುವವನು: ಹರಿಗೆಯವರೊಂಬತ್ತು ಲಕ್ಷವು (ಕೌರವ. ೨೮–೩೧); ಬಿಗಿದುಟ್ಟ ದಟ್ಟಿಯ ಹರಿಗೆಯವರು ತಱುಬಿದರು (ಕುರಾಸಾಂ. ೧೧–೩೧); ಒಜ್ಜೊಬ್ಬ ಬಿಲ್ಲುಗಾರನಿಗೆ

ಏಳು ಏಳು ಮಂದಿ ಹರಿಗೆಯವನನ್ನು ಸವರಿಸಿ ವ್ಯೂಹಂಗಳನ್ನು ಒಡ್ಡುತ್ತಿದ್ದರು (ಕೃಷ್ಣಾಭೀ. ೨೩). [ದೇ.॥ ತಮಿ. ಪರಿಚೈ]

**ಪರಿಗೆಕಾಱ,** ಹರಿಗೆಕಾರ, ಹರಿಗೆಕಾಱ (ನಾ). ಗುರಾಣಿಯನ್ನು ಹಿಡಿದು ಯುದ್ಧಮಾಡುವ ಯೋಧ,—ಶೂರ : ಬಿಲ್ವಡೆ ಪಡಲಿಡೆ ಕಂಡಾರ್ದು ಪರಿಗೆಕಾಱರ ತಂಡಂ ನಡೆದು ಪಳಂಚಿದುದು (ಕಬ್ಬಿಗಕಾ.೨೭೧). **ಹರಿಗೆಕಾರ :** ಹರಿಕಾರರ ಖಂಡೆಯಕಾರರ ಹರಿಗೆಕಾರರ . . . ವಾಹಳಿಗಳೂ ಏರ್ಪಾಡಾಗುತ್ತಿದ್ದುವು (ನಂಜುಂಡ. ೧೩೨). **ಹರಿಗೆಕಾಱ:** ಕಟ್ಟುಬ್ಬಟೆಯ ಬಿರುದಿನ ಹರಿಗೆಕಾಱರ ಪರಿವೀಥಿಯೊಳಂ (ಗಿರಿಜ. ೬-೫೫ ವ); ಬಂದತ್ತು ಜದೆ ಮಱುಗೋಗಿಲೆಗಳೆಂಬಱುಕೆಯ ಪೆಸರ್ವೆತ್ತ ಹರಿಗೆಕಾಱರ ತಂಡಂ (ಕಬ್ಬಿಗಕಾ. ೨೧೪); ಅಸಮಾನದ ಬಿರುದೆಸೆವ ಹರಿಗೆಕಾಱರ್ ಮೆಱೆದರ್ (ದಶಕು. ೭-೫೮); ಹರಿಗೆಕಾಱರು ಹಲಗೆಯವರುಬ್ಬರದ ಡೊಂಕಣಿಕಾಱರಾಂತು ಕೃತಾಂತನಾಲಯುವ ಥರಥರದಿ ತೀವಿದರು (ಕುಮಾರಭೀ. ೪-೪೬); ಹರಿಕಾಱರ ಖಂಡೆಯಕಾಱರ ಬಲುಹರಿಗೆಕಾಱರ ಸಬಳಿಗರ . . . ವಾಹಳಿ ಪುರದ ಪೊಱಗೆ ಕಣ್ಗೆಸೆದವು (ಕುರಾಸಾಂ. ೪-೮೨); ಕೊಂತಗಾಱರ ಹರಿಗೆಕಾಱರ ಕೈದುಗಾಱರ ಪಡೆವೆರಸು . . . ತೇರಾಳ್ಗಳ್ ಪಂಡೆತ್ತಿ ಪೋದರ್ (ರಾಮಾಶ್ವ.೯೩-೨೮). [ಪರಿಗೆ+-ಕಾಱ]

**ಪರಿಗೆಡು,** ಪರಿಗಿಡು, ಹರಿಗೆಡು (ಕ್ರಿ). ೧. ರೀತಿ ಕೆಡು ; ಕ್ರಮ ತಪ್ಪು : ಅಱುನೀರ್ವಳ್ಳಂ ನೆಟಲ್ಗೊಂದಿದ ತರುನಿಚಯಂ ಧೂಳಿದರ್ದುರ್ಬಿನಿಷ್ಟಂ ಪರಿಗೆಟ್ಟಿರ್ಪಾಸೆ ನಿಶ್ಚೇಷ್ಟೆಯ ತನು (ದಶಕು. ೩-೧೨). **ಪರಿಗಿಡು :** ೨. (ಪ್ರವಾಹವು) ಹರಿಯುವುದು ನಿಂತುಹೋಗು ; (ಪ್ರವಾಹದ) ಹರಿವು ಕೆಡು : ತೊಱೆಗಳ್ ಪರಿಗೆಟ್ಟುವು ಬೆಳ್ವಯಲೊಳ್ ಸರಳಿಸಿದುವು ಮರುಮರೀಚಿಕಾವಾಹಂಗಳ್ (ಪಂರಾಮಾ. ೭-೮೬); ಪರಿಗಿಡೆ ಕಣ್ಣ ನೀರಱುತುದೆಕ್ಕಸರಂಗಳ ತೋರಮುತ್ತುಗಳ್ ಪರಿದವೊಲಾದುವು . . . ಆಕೆಯ ಮೆಯ್ಯಿಪ್ಪುಸುಪೇನಳುಂಬಮೋ (ಕಬ್ಬಿಗಕಾ. ೩೧೩). ೩. "ಪ್ರವಾಹಕ್ಕೆ ಅಡ್ಡಿಪಡಿಸು" (ಅನಂನಾ). **ಹರಿಗೆಡು :** ೪. ಚಲನೆಯಿಲ್ಲದಾಗು ; ಓಟವಿಲ್ಲದಾಗು : ಮರೆ ಹರಿದಾಡೆ ಹಂದಿ ಹರಿಗೆಟ್ಟಿರೆ . . . ಬೇಂಟೆವಱೆಯುಬ್ಬರಮುಬ್ಬರವಾಯ್ತು ರಣ್ಯದೊಳ್ (ಸೂಕ್ತಿಸು. ೩-೧೧೬). ೫. ಮುಗಿ ; ನಿರ್ಣಯವಾಗು ; ಬಗೆಹರಿ : ಅವರಿಬ್ಬರೂ ಮಾತಿಗೆ ಕೂತರೆ ಬೆಳಗಾದರೂ ಹರಿಗೆಡುವ ಹಾಗಿಲ್ಲ (ರೂಢಿ). [ಪರಿ$_3$ + ಕೆಡು$_1$]

**ಪರಿಗೊಳ್** (ಕ್ರಿ). ೧. ಓಡಿಹೋಗು ; ಓಡು ; ಪಲಾಯನ ಮಾಡು : ಎತ್ತಮೆತ್ತಿದ ಕುಡಿವಾಲಮುಂದೆಸೆಯೆ ಕರ್ಬುಸುಗಳ್ ಪರಿಗೊಂಡುವಾಜಿಯೊಳ್ (ಪಂಪಭಾ. ೮-೧೦೪). ೨. ಪ್ರವಹಿಸು ; ಹರಿ : ಕೊಂಕಿ ಪರಿಗೊಳ್ವ ನದೀನದಜಾಳದಿಂ ಮಹೀತಲಮುಹಿಲೋಕದಂತೆಸೆದುದಾ ಜಗತೀಪತಿಗೂರ್ಧ್ವಯಾನದೊಳ್ (ಅರ್ಥನೇ. ೬-೩); ಪರಿಗೊಂ [ಪಾಠಾಂ. ಕೊಂ]ಡತ್ತು . . . ಅಂಬಿಗನರ್ಾಮೆಯುಂ ಭರದಿಂದಿಕ್ಕದ ಮಾಟಿಕ್ಕೆಯಾಯ್ತು ನದಿಯೆಂದೆಂಬನ್ನೆಗಂ (ಪಾರ್ಶ್ವಪು. ೮-೧೭). ೩. ವ್ಯಾಪಿಸು ; ಹರಡು : ನನೆವಿಲ್ಲನ ಬೀರಮನೊಲ್ದು ಪೇಟ್ವನಾಂ ತಿಂಗಳ ಸೊಂಪು ಗುಂಪುವಡೆದೆಣ್ದೆಸೆಗಂ ಪರಿಗೊಂಡುದೆಂಬಿನಂ (ಕಬ್ಬಿಗಕಾ. ೧೭). ೪. ಅತಿಶಯವಾಗಿ ಹೊಂದು,—ಪಡೆ : ನೆಟಲವೊಲೊರ್ಮೆಯುಂ ಬಿಡದೆ ನೀನೆನಡಾಡೊಡೆಯುಂ ಮನೋಭವಾನಳನ ಪೊದಟ್ಟುವಸ್ಥೆಯನಿದಂ ಪರಿಗೊಂಡಳೆನಿಪ್ಪ ಭಂಗಿಯಂ ತಳೆದಿರುತಿರ್ಪುದರ್ಕಲಸೆ[ಸಿ]ಯುಂ ಕಳಭಾಷಿಣಿ ಬಿಟ್ಟು ಪೋದೆ (ಕುಸುಮಾ. ೧೩-೮೫). ೫. ಪ್ರಾಣಿಗಳು ಬೇಟೆಗೆ ಸಿಗುವಂತೆ ಮಾಡು : ಆಡಲಾಡಿಸಲ್ ಪಾಱಯಂ ನಿಱಿಸಲುಂ ಪರಿಗೊಳಲ್ ಕೊವಲಿಕ್ಕಲೊಳಗಂ ಬರಲ್ . . . ಹರಿಗ ಕೇಳಾನೆ ಬಲ್ಲೆಂ (ಪಂಪಭಾ. ೫-೪೧). [ಪರಿ$_3$ + ಕೊಳ್$_1$]

**ಪರಿಗ್ರಹ** (ನಾ). ೧. ಹಿಡಿಯುವುದು ; ಗ್ರಹಿಸುವುದು. ೨. ತೆಗೆದುಕೊಳ್ಳುವುದು ; ಸ್ವೀಕಾರ. ೩. ಪಡೆಯುವುದು ; ಹೊಂದುವುದು. ೪. ಮದುವೆ ; ಪಾಣಿಗ್ರಹಣ. ೫. ಹೆಂಡತಿ ; ಪತ್ನಿ. ೬. ಗಂಡ; ಪತಿ. ೭. ಮನೆತನ; ಕುಟುಂಬ; ಸಂಸಾರ: ನಿಮ್ಮೊಂದು ವಚನಮಾತ್ರದಿಂ ನಮ್ಮ ಪರಿಗ್ರಹಮೆಲ್ಲಂ ಪಲವು ಕಾಲಂ ಪಸಿಯದುಂಡು ಬಾಟ್ಟಂತರ್ಥಂ ಸಾರ್ದಪ್ಪುದು (ಪಂಚತಂ. ೧೭೨-೧೯). ೮. ಆಸ್ತಿ ; ಸಂಪತ್ತು ; ಐಶ್ವರ್ಯ. ೯. ಸಂಬಂಧ ; ಬಾಂಧವ್ಯ : "ಮುಖ್ಯದಲ್ಲಿ ಬಲುತಂತ್ರದಲಿ ಪರಿಗ್ರಹದಲ್ಲಿ . . . ತಂತುವದು" (ಮಂಗರಾ. ೧೫೪-೬೬). ೧೦. ಪರಿಜನ ; ಪರಿವಾರ : "ಪರಿವಾರಃ, ಪರಿಕರಃ, ಪರಿಸ್ಪಂದಃ, ಪರಿಗ್ರಹಃ—ಈ ೪ ಪರಿಗ್ರಹಂ" (ಹಲಾಯು. ೫೧-೧೫೧); ತನ್ನ ಸಂಗಡದವರುಂ ಪರಿಗ್ರಹಮುಮೆಯ್ತರಲಾಱದೆ ಪಿಂದೆ ನಿಲ್ವಿನಂ ಕಡುಪಿನೊಳಂದು ಬಿಟ್ಟಿನತೀಕ್ಷ್ಣದೆ ವಾಜಿಯನಾ ನೃಪೋತ್ತಮಂ (ಕಾದಂಪೂ.೬೨೦); ಕರಣದ ಲೋಕಣನುಂ [ಪೂಜದ ವಿಪ್ರೋ] ಕಣ್ನನುಂ ಚಿಕ್ಕಮಲ್ಲಿಯುಮಂ ಸಮಸ್ತಪರಿಗ್ರ[ಹ]ಮುಂ ಮಲೆಗುಳ ಪ್ರಭುಗಳುಂ ತಮ್ಮ ಧರ್ಮ್ಮವಾಗಿ (ಕಇಅ. ೧೩-೪-೯೭ ; 1093); ಪುತ್ರಕಳತ್ರ ಪರಿಗ್ರಹಗಾತ್ರಧನೈಶ್ವರ್ಯಮೆಂಬಿವಾರ್ಗಮನಿತ್ಯಂ (ಪುಷ್ಪಪು. ೧೩-೨೭). ೧೧. ಆಶ್ರಯ ಕೊಡುವುದು; ದಯೆ; ಅನುಗ್ರಹ. ೧೨. ರಕ್ಷಣೆಯನ್ನು ಪಡೆಯುವ ಜನ ; ಪೋಷಣೆಯನ್ನು ಪಡೆಯುವವರು ; ಆಶ್ರಿತ ಜನ : "ಪರಿಗ್ರಹಂ ಪೋಷ್ಯವರ್ಗಮುಂ" (ವಸ್ತುಕೋ. ೧೨೦-೧೭). ೧೩. ಗೌರವ ; ಮನ್ನಣೆ. ೧೪. ರಾಜ್ಯಭಾರ ; ಆಡಳಿತ. ೧೫. ಮಿಾಸಲುಪಡೆ ; ಹಿಂಚೂಣಿ ಸೈನ್ಯ : ರಸರು ಮಗುಳಿವನಲಿ ರೊದ್ದದ ಪರಿಗ್ರಹಂ ರಾಸಿನಾನೊರ್ವನುಂ ಲಕ್ಷಣವೆನ್ನು ಮಗುಱ್ದು ಹಲಂಬರನಿಱಿದು ಕಾಲಾಳೊಗ್ ಲಾಲವಿಣ್ದರೆ ಪರಿಚ್ಛೇದಿಗಣ್ಡ ಮಣ್ಡಳಿಕ ಮಾಚ ಸುರಲೋಕಪ್ರಾಪ್ತನಾದ (ಎಕ. XVI, ತುಮಕೂ. ೧೧೯-೧; 1163). ೧೬. ಜಯಿಸುವುದು ; ಗೆಲ್ಲುವುದು. ೧೭. ಅಂತಃಪುರ ; ರಾಣಿವಾಸ. ೧೮. ತಿಳಿದುಕೊಳ್ಳುವುದು ; ತಿಳಿವಳಿಕೆ. ೧೯. (ಆಸೆ, ದುಃಖ ಮೊದಲಾದುವುಗಳ) ವಿಸರ್ಜನೆ ; ತ್ಯಾಗ : ಪರಿಗ್ರಹವೆಂದರೆ ದುಃಖಪ್ರತಿಗ್ರಹವಿಲ್ಲದೆಯಿಹಣ (ಈಶ್ವಸ್ವ. ೨೧-೧೩). ೨೦. ಶಾಪ : "ಬಯ್ಗುಳ್—ಶಾಪ, ಪರಿಗ್ರಹ" (ನಾಚಿರಾ. ೬). ೨೧. ಮೂಲ ; ಬುಡ ; ಉತ್ಪತ್ತಿಸ್ಥಾನ. ೨೨. ಬೀಸಣಿಗೆ. ೨೩. ಸೂರ್ಯ (ಅಥವಾ ಚಂದ್ರ) ಗ್ರಹಣ : "ತ್ಯಜನಮುಂ ಕೀಲ್ವಡೆ ಸಂಶಯಂ ನುಚಿಸಮಾಖ್ಯಂ ಸೇನೆಯುಂ ದಾನಮುಂ ವ್ಯಜನಂಗಳ್ಗೆ ಪರಿಗ್ರಹಾಖ್ಯ" (ನಾನಾರ. ೧೬೭). ೨೪. ವಿಷ್ಣು. ೨೫. [ಜೈನ] ಮಮತೆ ; ವಾಂಛಲ್ಯ ; ᑭ ಮಮತೆಗೆ ಕಾರಣವಾದ ವಸ್ತುಗಳೂ ಸಹ ಪರಿಗ್ರಹವೆಂದೇ ಭಾವಿಸಲ್ಪಡುತ್ತವೆ. ಇದು ಬಾಹ್ಯ ಮತ್ತು ಅಭ್ಯಂತರ ಎಂದು ಎರಡು ವಿಧವಾಗಿದೆ. ಧನ, ಧಾನ್ಯ, ಬೆಳ್ಳಿ, ಬಂಗಾರ, ಮನೆ, ಹೊಲ ಮುಂತಾದುವು ಬಾಹ್ಯಪರಿಗ್ರಹಗಳು. ಮಿಥ್ಯಾತ್ವ, ಕ್ರೋಧಾದಿ ಕಷಾಯ, ಹಾಸ್ಯಾದಿ ನೋಕಷಾಯ ಮುಂತಾದುವು ಅಭ್ಯಂತರ ಪರಿಗ್ರಹಗಳು : ಎನಿತು ಪರಿಗ್ರಹದ ತೊಡರ್ಪನಿತೆ ಮನೋದುಃಖಮದಱ ಕುಂದೆನಿತು ಮನಕ್ಕನಿತೆ ಸುಖಮೆಂಬುದಂ ನೆಟ್ಟನೆ ತಿಳಿದಂ ಜನ್ಮಜಲಧಿಯೊಳ್ ಮುಳುಗುವನೇ (ಆದಿಪು. ೩-೬೨); ಕೊಲೆಯೆಂದಸತ್ಯಮೆಂದು . . . ಪಳಂಚಲೆವ ಪರಿಗ್ರಹಮೆಂದಿವಱೊಳಾದಪೇಕ್ಷೆಯನುಪೇಕ್ಷಿಸು (ಸುಕುಮಾ. ೭-೩೮) ; ತನ್ನ ಸಹಸ್ರಕುಂತಲಮುಂ ಪಂಚಮುಷ್ಟಿಯಿಂ ಪಱಿದುಕೊಂಡು ಬಾಹ್ಯಾಭ್ಯಂತರ ಪರಿಗ್ರಹಂಗಳಂ ಪರಿತ್ಯಾಗಂಗೆಯ್ದು (ಪಂರಾಮಾ. ೧೫-೫೬ ವ) ; ಸ್ತ್ರೀ, ಪುತ್ರ, ಧನ, ದ್ರವ್ಯ

ಮೊದಲಾದ ವಸ್ತುಗಳಲ್ಲಿ ಅವು ತನ್ನವೆಂದು ಮಮತ್ವವನ್ನು ಇಡುವುದರ ಪರಿಣಾಮವೇ ಪರಿಗ್ರಹವಾಗಿದೆ (ಜೈನಪ. ೪೬೬). **೨೬.** [ನಾಟ್ಯ] ಇಪ್ಪತ್ತು ಬಗೆಯ ಕರಕರ್ಮಭೇದಗಳಲ್ಲಿ ಒಂದು : ಧೂನನಮುಂ . . . ನಿಗ್ರಹಮುಂ ಪರಿಗ್ರಹೋತ್ಕೃಷ್ಟಂಗಳ್ (ಲಾಸ್ಯರಂ. ೪-೧೧); ಧೂನನ, ಶ್ಲೇಷ, ವಿಶ್ಲೇಷ, ಕ್ಷೇಪ, ರಕ್ಷಣ, ಮೋಕ್ಷಣ, ಪರಿಗ್ರಹ. . . ತರ್ಜನ – ಈ ಇಪ್ಪತ್ತು ಕರಕರ್ಮಭೇದಂಗಳ್ (ಲಾಸ್ಯರಂ. ೪-೧೩ ಪ). [ಸಂ.]

**ಪರಿಗ್ರಹಣ** (ನಾ). **೧.** ಹಿಡಿಯುವುದು ; ಗ್ರಹಿಸುವುದು : ಶಾಸ್ತ್ರದಲಿ ವಿದಿತವಾಕ್ಯಪರಿಗ್ರಹಣವಿಂತಿದಱ ಮೇಲಿಲ್ಲೆಂಬ ಮುನಿತರ್ಕದ ಘಡಾವಣೆ ಘಾಡಿಸಿದುದಾ ಯಜ್ಞಮಂಟಪವ (ತೊರೆರಾ. ೧-೬-೪೫). **೨.** ಸ್ವೀಕರಿಸುವುದು ; ತೆಗೆದುಕೊಳ್ಳುವುದು. **೩.** ತಿಳಿದು ಕೊಳ್ಳುವ ಶಕ್ತಿ ; ಗ್ರಹಣಶಕ್ತಿ : ಇಲ್ಲಿ ಕೂಡ ಅದರ ಶಕ್ತಿಯ ಅಂತಿಮರಹಸ್ಯವನ್ನು ನಮ್ಮ ವೈಯಕ್ತಿಕಪರಿಗ್ರಹಣದಲ್ಲೇ ಅರಸಬೇಕು (ಸಾಹಿಪ್ರ. ೫೮). [ಸಂ.]

**ಪರಿಗ್ರಹಪರಿಮಾಣವ್ರತ** (ನಾ). [ಜೈನ] ಮಮಕಾರವನ್ನು ಕಡಮೆ ಮಾಡಿಕೊಳ್ಳಲು ಮಾಡುವ ನೋಂಪಿ ; ವಾಂಛಲ್ಯವನ್ನು ತ್ಯಜಿಸಲು ಕೈಗೊಳ್ಳುವ ವ್ರತ : ಸ್ತ್ರೀ, ಪುತ್ರ, ಧನ, ದ್ರವ್ಯ ಮೊದಲಾದ ವಸ್ತುಗಳಲ್ಲಿ ಅವು ತನ್ನವೆಂದು ಮಮತ್ವವನ್ನು ಇಡುವುದರ ಪರಿಣಾಮವೇ ಪರಿಗ್ರಹವಾಗಿದೆ. ಈ ಮಮತ್ವಕ್ಕೆಂದು ಮಿತಿಯನ್ನಿಟ್ಟು ಕೊಳ್ಳುವುದೇ ಪರಿಗ್ರಹಪರಿಮಾಣವ್ರತವಾಗಿದೆ (ಜೈನಪ. ೪೬೬).
[ಪರಿಗ್ರಹ + ಪರಿಮಾಣ + ವ್ರತ]

**ಪರಿಗ್ರಹವಿರತ** (ನಾ). **೧.** [ಜೈನ] ಸ್ತ್ರೀ, ಪುತ್ರ, ಧನ ಮೊದಲಾದ ವಸ್ತುಗಳಲ್ಲಿ ಮಮಕಾರವನ್ನು ತ್ಯಜಿಸುವಿಕೆ : ಧನಧಾನ್ಯಾದಿಪರಿಗ್ರಹಗಳು ಬಂಧಕಾರಣವೆಂದು ಗ್ರಹಿಸಿ ಉತ್ಸಾಹಪೂರ್ವಕವಾಗಿ ಅವುಗಳ ತ್ಯಾಗ ಮಾಡುವುದು ಪರಿಗ್ರಹವಿರತಪ್ರತಿಮೆಯು (ಜೈನಧ. ೧೧೭). **೨.** ಸ್ತ್ರೀ, ಪುತ್ರ, ಧನ, ಧಾನ್ಯಾದಿ ವಸ್ತುಗಳಲ್ಲಿ ಮಮಕಾರವನ್ನು ತ್ಯಜಿಸಿದವನು ; ತನ್ನದು ಎಂಬ ಮೋಹವನ್ನು ಕಳೆದುಕೊಂಡವನು ; ತನ್ನ ಸಾಂಸಾರಿಕವ್ಯವಹಾರಗಳನ್ನೆಲ್ಲಾ ಮಗನಿಗೆ ಒಪ್ಪಿಸಿ ವಿರತನಾದವನು : ಇಂತು ದರ್ಶನಿಕಂ ವ್ರತಿಕಂ . . . ಆರಂಭಕಂ ಪರಿಗ್ರಹವಿರತಂ ಅನುಮತಿವಿರತಂ ಉದ್ದಿಷ್ಟವಿರತನೆಂದಿಂತು ಪನ್ನೊಂದು ವಿಕಲ್ಪಮನುಳ್ಳ ಶ್ರಾವಕರೊಳ್ (ಸುಕುಮಾ. ೬-೩೬ ಪ) ; ಮಕ್ಕಳು . . . ಸಮರ್ಥರಿರುತ್ತಾರೆಂದು ತಿಳಿಯಲು ಅವರಿಗೆ . . . ಕೌಟುಂಬಿಕಜನರನ್ನು ರಕ್ಷಿಸುವ ಭಾರವನ್ನು ಹೊರಿಸುವುದೂ ಆದ ಮೇಲೆ ಶ್ರಾವಕನು ಪರಿಗ್ರಹವಿರತನೆನಿಸುವನು (ಜೈನಪ. ೬೬೩); ಪರಿಗ್ರಹವಿರತ :—ತನ್ನ ಎಲ್ಲ ವ್ಯವಹಾರಗಳನ್ನೂ ತನ್ನ ಮಕ್ಕಳಿಗೊಪ್ಪಿಸುವನು (ಭಾರದ. ೧೮೪). [ಪರಿಗ್ರಹ + ವಿರತ]

**ಪರಿಗ್ರಹಿಸು** (ಕ್ರಿ). **೧.** ಸ್ವೀಕರಿಸು ; ತೆಗೆದುಕೊಳ್ಳು : ಇವರಿಂದಗ್ಗಳಮಾಂ ಪರಿಗ್ರಹಿಸನೆಂದಾ ಮಾರ್ಗದಿಂದಲ್ಲಿ . . . ನೋಡಲ್ಕೆ (ಸಮುಪ. ೫-೮೬) ; ಮಧುರತಾಂಬೂಲವ ಪರಿಗ್ರಹಿಸಿ . . . ಚೆಲ್ವಿಂದ ಲಿಸದಂ ಗಣವರೇಣ್ಯನಾ ನಂಬ್ಯಣ್ಣನು (ಸೌಂದಪು. ೬-೫೩) ; ಕಲೆಯುಱದಮಲಭಾವಜ್ಞರು ತಮ್ಮ ಕಾದಲೆಯರ ಕರೆವ ಸನ್ನೆಯಲಿ ಸಲೆ ಪರಿಗ್ರಹಿಸಿ ಶೋಭಿಸುತಿರ್ಪ ಲಲಿತಬೆಳ್ಳಿಲೆಗಳಂಗಡಿಗಳೊಪ್ಪಿದುವು (ಮೋಹತ. ೩-೧೩). **೨.** ಒಪ್ಪಿಕೊಳ್ಳು ; ಅಂಗೀಕರಿಸು : ಸೆಱೆಯಿಂದಿರ್ದ ಸೀತೆಯಂ ಪಾವಕನ ಮುಖದಿಂ ಪರಿಗ್ರಹಿಸಿ . . . ಅಯೋಧ್ಯಾಪುರಿಗೆ ದೂವಾಳಿಸಿದನು (ಜೈಮಿಭಾ. ೧೮-೮) ; ಗರ್ಭಚಿಹ್ನೆಯುಳ್ಳ ಈಕೆಯನ್ನು ನನ್ನ ಪತ್ನಿ ಯೆಂದು ಹೇಗೆ ತಾನೆ ಪರಿಗ್ರಹಿಸಲಿ ? (ಶಾಕುಂತ. ೬೭-೨೨).
[ಪರಿಗ್ರಹ + -ಇಸು₃]

**ಪರಿಗ್ರಾಹ್ಯ** (ಗು). **೧.** ಸ್ವೀಕರಿಸಲು ಯೋಗ್ಯವಾದ. (ನಾ). **೨.** ಸ್ವೀಕರಿಸಲು ಯೋಗ್ಯವಾದುದು. [ಸಂ.]

**ಪರಿಘ** (ನಾ). **೧.** (ಬಾಗಿಲನ್ನು ಭದ್ರಪಡಿಸಲು ಉಪಯೋಗಿಸುವ) ಮರದ ಅಥವಾ ಕಬ್ಬಿಣದ ಅಗುಳಿ ; ಲಾಳವಿಂಡಿಗೆ : "ಅರ್ಗಳಃ, ಪರಿಘಃ – ಈ ೨ ಅಗುಳು" (ಹಲಾಯು. ೫೦-೧೪೫) ; ಈ ಹೊಸ ಬಾಗಿಲುಗಳಿಗೆ ಲೋಹಪರಿಘಗಳನ್ನು ಹಾಕಿ ಬಿಗಿಸಿತ್ತಾದ್ದರಿಂದ, ಅವು ಆನೆಗಳ ದಾಳಿಯನ್ನೂ ತಡೆದುವು (ಶಾಂತಲಾ. ४೦೦). **೨.** ಕಬ್ಬಿಣದ ಒಂದು ಬಗೆಯ ಆಯುಧ ; ಕಬ್ಬಿಣದ ಮೊನೆಗಳಿಂದ ಕೂಡಿದ ಗದೆ : "ಪರಿಘಾತನಂ ಪರಿಘಮೆನೆ ಪಿಲ್ಲಣಿಗೆ" (ಮಂಗರಾ. ೮೮-೩೭) ; ಎರಡುಂಕೆಲನುಮನೆರಡುಂ ಕರಪರಿಘದಿನಡಸಿ ಗುರ್ದಿ (ಪಂಪಭಾ. ३-३೦); ಮಾಲಿಯ ಬಾಹಾಪರಿಘನಿಶಿತಾಸ್ತ್ರಹತಿಯಿಂ ಸುರಲೋಕಪ್ರಾಪ್ತನಾದನಾ ನಿರ್ಘಾತಂ (ಪಂರಾಮಾ. ೧೦-೧೩೧) ; ಪರಿಘದಲಿ ಕಾದಿದರು ಹೊಕ್ಕರು ಹಲಗೆ ಖಡ್ಗದಲಿ (ಕುಮ್ಮಾವಿ. ४-५೨) ; ಪರಿಘ ಎಂದರೆ ಕಬ್ಬಿಣದ ಮುಳ್ಳು ಗಳಿರುವ ಉದ್ದವಾದ ಗದೆ (ಸಾಳೀಜಂ. ४८). **೩.** ಗಾಜಿನ ಅಥವಾ ಮಣ್ಣಿನ ಪಾತ್ರೆ,—ಹೂಜಿ. **೪.** ಮನೆ ; ಗೃಹ. **೫.** ಕೊಲ್ಲುವುದು ; ವಧೆ. **೬.** ಹೊಡೆತ ; ಪೆಟ್ಟು. **೭.** ಗಾಯಗೊಳಿಸುವುದು. **೮.** ಅರಮನೆ, ಕೋಟೆ ಅಥವಾ ಪಟ್ಟಣದ ಬಾಗಿಲು,–ದ್ವಾರ. **೯.** ಪ್ರಾಕಾರ. **೧೦.** ಗೋಪುರ. **೧೧.** ಕೊತ್ತಳದ ಸುತ್ತಳತೆ. **೧೨.** ಅಳವಿನ ಪ್ರಭಾವದ ಕಕ್ಷೆ : ತಾನಾಗಿಯೇ ಯಾರ ಪರಿಚಯಕ್ಕಾಗಿ ಹಂಬಲಿಸುವವನಲ್ಲ ; ಆದರೆ ತಾವೇ ತನ್ನ ಪರಿಘದಲ್ಲಿ ಬಂದಾಗ, ತನ್ನ ಮನಸ್ಸಿಗೆ ಸರಿದೋರಿದರೆ ಅವರನ್ನು ಕೂಡಿಕೊಳ್ಳುವವನು (ಗಂಮಾಯಿ. ೭४) ; ನೂರು ತೇಜದ ಗೋಲ ತಿರುಗುತಿವೆ ಪರಿಘದಲಿ ಊರುಗೋಲಿಗೆ ಸಾಕ್ಷಿ ನಕ್ಷತ್ರವೀಥಿ (ನೆಲಘು. ೨೧-೨೩). **೧೩.** ಉದಯದಲ್ಲಾಗಲೀ ಅಸ್ತದಲ್ಲಾಗಲೀ ಸೂರ್ಯಬಿಂಬಕ್ಕೆ ಅಡ್ಡ ಲಾಗಿ ಕಾಣುವ ಮೋಡಗಳ ಸಾಲು : ಪರಿಘಂ ನಿರ್ಘಾತಮುಳ್ಕ (ಟ್ಕಂ) ಸುರಧನು ಬಡಪಂ ಪಶ್ಚವಾತಂ ತಮೌಘಂ . . . ಎಂಬ ಚಿಹ್ನಂ ನೆರೆಯಲ್ ಮಾಸಂಗಳೊಳ್ ಪುಣ್ಣಿಮೆಯೊಳಱುದು ಪೇಟರ್ಘಮಂ (ಜಟ್ಟಪು. ೬-೩೦). **೧೪.** [ಜ್ಯೋತಿ]ಇಪ್ಪತ್ತೇಳು ಯೋಗಗಳಲ್ಲಿ ಹತ್ತೊಂಬತ್ತನೆಯದು : ವಿಷ್ಕಂಭ ಪ್ರೀತಿ . . . ಪರಿಘ ಶಿವ . . . ಐಂದ್ರ ವೈಧೃತಿಗಳೆಂಬ ಇಪ್ಪತ್ತೇಳು ಯೋಗಂಗಳುಂ (ವಿವೇಕ. ३.೨೦) ; ಧ್ರುವ ಪರಿಘವೇಕಾದಶದ ಯೋಗಗಳು ಶುಭ (ಗಗತಾ. ४-६೯). [ಸಂ.]

**ಪರಿಘಾತ** (ನಾ). **೧.** ಹೊಡೆತ ; ಪೆಟ್ಟು. **೨.** ಕೊಲ್ಲುವುದು ; ವಧೆ. **೩.** ಒಂದು ಬಗೆಯ ಆಯುಧ ; ಪರಿಘ. **೪.** ತೆಗೆದು ಹಾಕುವುದು ; ತೊಲಗಿಸುವುದು ; ನಿವಾರಣೆ. **೫.** ಒಕ್ಕಿದ ಧಾನ್ಯದ ರಾಶಿ,—ಗುಡ್ಡೆ : "ಪರಿಘಾತಂ ಬಹುಲೀಭೂತರಾಶಿ" (ವಸ್ತುಕೋ. ೯೫-೨೦). [ಸಂ.]

**ಪರಿಘಾತನ** (ನಾ). **೧.** ಹೊಡೆತ ; ಪೆಟ್ಟು. **೨.** ಕೊಲ್ಲುವುದು ; ವಧೆ. **೩.** ಒಂದು ಬಗೆಯ ಆಯುಧ ; ಪರಿಘ : "ಪರಿಘಾತನಂ ಪರಿಘಮೆನೆ ಪಿಲ್ಲಣಿಗೆ" (ಮಂಗರಾ. ೮೮-೩೭) ; "ಪರಿಘಃ, ಪರಿಘಾತನಃ— ೨ ಕಬ್ಬಿಣದ ಕಟ್ಟು ಹಾಕಿದ ಮರದ ಗುದಿಗೆ" (ಸಿದ್ಧಾಂತಿ. ೨೬೫).
[ಸಂ.]

**ಪರಿಘೂರ್ಣಿತ** (ಗು). ಶಬ್ದ ಮಾಡುತ್ತಿರುವ ; ಘೋಷಿಸುತ್ತಿರುವ : ಸಾಹಸಿಕಂ ಮುರಾರಿ ಪುಗುತಂದಂ . . . ಪರಿಘೂರ್ಣಿತಗೀತವಾದ್ಯಸಂದೋಹಮಂ . . . ಶಸ್ತ್ರಗೇಹಮಂ (ಜಗವಿ. ೬-೨೮). [ಸಂ.]

**ಪರಿಘೂರ್ಣಿಸು** (ಕ್ರಿ). ಅತಿಶಯವಾಗಿ ಮೊರೆ,—ಶಬ್ದಮಾಡು : ನಿಸರ್ಗಮಾದ ಸಙ್ಗೀತರಸಾಬ್ಧಿ ಪೆರ್ಚಿ ಪರಿಲೋಚನಚಂದ್ರಿಕೆಯಿಂ ವಿಧೂ

ಮಯುಸ್ಫೀತಸುಧಾಬ್ಧಿಯಂತೆ ಪರಿಘೂರ್ಣಿಸುತಿರ್ದುದು ರಾಸಕೇಳಿಯೊಳ್ (ಜಗವಿ. ೫-೧೧). [ಸಂ. ಪರಿಘೂರ್ಣನ+-ಇಸು$_3$]

**ಪರಿಘೋಷ** (ನಾ). ೧. ಧ್ವನಿ ; ಶಬ್ದ : ಕುರುಕುಲಚೂಡಾಮಣಿ... ತದ್ಭುಟಗಳ ದೀರ್ಘೋಚ್ಛ್ವಾಸವೆ ಪರಿಘೋಷಮುಮಾಗೆ [ಪಾಠಾಂ. ಪರಿವೀಜನಮಾಗೆ] ಮೂರ್ಛೆಯಿಂದೆಚ್ಚತ್ತಂ (ಗದಾಯು. ೩-೮೪). ೨. ಅಯೋಗ್ಯವಾದ ಮಾತು ; ಅವಾಚ್ಯಶಬ್ದ . ೩. ಗುಡುಗು ; ಮೇಘಧ್ವನಿ. [ಸಂ.]

**ಪರಿಚಯ** (ನಾ). ೧. ಗುರುತು ; ಮಾಹಿತಿ : "ಸಂಸ್ತವಃ, ಪರಿಚಯಃ — ಈ ೨ ಮೊಗವಱಿತಂ" (ಹಲಾಯು. ೧೨೭-೮೮) ; ಪರಿಚಯಮಿಲ್ಲ ಕಂಡಱಿಯೆಯೋ ಸಖಿ ತೊಟ್ಟಿನಲಿಂತು ಬಿಟ್ಟು ಪೋಪರೆ (ಕಾದಂಪು. ೯೦೨) ; ಪರಿಚಯಮಾದೊಡಲ್ಲದವರಾಡುವ ಪಾಡುವರಲ್ಲ ಸೇವೆಯೊಳ್ ಚರಿಯಿಪರಲ್ಲ ನರ್ತಕಿಯರ್ (ಶಾಂತೀಶ್ವ. ೮-೨) ; ಅವನ ಪರಿಚಯವೇ ರಾಯರಿಗೆ ಆಗಲಿಲ್ಲ (ಕಂಬಹು. ೧೩೪) ; ಸಂಗೀತದಲ್ಲಿ ಪರಿಶ್ರಮವಿಲ್ಲದಿದ್ದರೆ ಹೋಗಲಿ, ಪರಿಚಯವಾದರೂ ಇಲ್ಲದಿದ್ದವನು ಹೇಗೆ ಸುಸಂಸ್ಕೃತನೆನ್ನಿಸಿಕೊಳ್ಳುವನು ? (ಭಾರದ. ೫೬೫). ೨. ಸಲಿಗೆ ; ಸದರ: ಪರಿಚಯದೊಂದು ಪೆರ್ಚುಗೆಯೊಳೀ ಶುಕನಾ ಕುಸುಮಾವಳೀತನೂದರಿಯ ಕುಚಾಗ್ರದಲ್ಲಿ ಪರಿತಂದೆಱಗಲ್ಕೆ (ಕುಸುನಾ. ೧೩-೨೬) ; ಅವಳಿಗೂ ನನಗೂ ಪರಿಚಯ ಬೆಳೆಯುತ್ತ ನಡೆಯಿತು (ಪ್ರಣಸ. ೪). ೩. ಅಭ್ಯಾಸ ; ವ್ಯಾಸಂಗ : 'ಪರಿಚಯಿಸು' ಪರಾ.

**ಪರಿಚಯ ಮಾಡಿಕೊಡು**=ಗುರುತು ಮಾಡಿಕೊಡು ; ಪರಿಚಯಿಸು : ಒಬ್ಬೊಬ್ಬರನ್ನಾಗಿ ಪರಿಚಯ ಮಾಡಿಕೊಟ್ಟರು (ಹತ್ತುಮ. ೧೩೪). **ಪರಿಚಯವಾಗು**=ಗುರುತಾಗು : ವಿಶ್ವಾಮಿತ್ರನಿಗೆ ಶಬಲೆಯ ಪರಿಚಯವಾಯಿತು (ಮಹಾಣ. ೧೨೯) ; ತನಗೆ ಒಬ್ಬೊಬ್ಬರ ಪರಿಚಯವಾದಾಗಲೂ ಅವರಿಗೆ ನಮಸ್ಕಾರ ಮಾಡುತ್ತಾ ಹಾಗೇ ಆಲೋಚಿಸಿದನು (ಪತ್ತುಮ. ೧೩೪). **ಪರಿಚಯ ಹತ್ತು**=ಗುರುತು ಸಿಗು : ತಾಯಿಯ ಧ್ವನಿಯನ್ನು ಗುರುತಿಸಿ ಅವಳಿಂದ ಮೈ ಸವರಿಸಿಕೊಂಡ ಮೇಲೆ, ಅವನಿಗೆ ಪರಿಚಯ ಹತ್ತಿತು (ಜಾನುವಾ. ೨೭೫). [ಸಂ.]

**ಪರಿಚಯಂಬಡೆ** (ಕ್ರಿ). ಸೇರು ; ಹೊಂದಿಕೆಯಾಗು : ಕತ್ತುರಿಯೊಳಂಟೆ ಪರಿಚೆಯುಂ ಪರಿಚೆಯೊಳ್ ಪರಿಚಯಂಬಡೆದ ಮದವಟ್ಟೆಯುಂ (ಆಪಿಪು. ೪-೪೧ ವ). [ಪರಿಚಯ+ಪಡೆ$_1$]

**ಪರಿಚಯಪತ್ರ** (ನಾ). ಒಬ್ಬರನ್ನು ಇನ್ನೊಬ್ಬರಿಗೆ ಪರಿಚಯ ಮಾಡಿಕೊಡುವುದಕ್ಕಾಗಿ ಬರೆದು ಕೊಡುವ ಪತ್ರ : ಕಿಟ್ಟಣ್ಣನಿಗೊಂದು ಕೆಲಸ ಕೊಡಿಸಲು ನೆರವಾಗಬೇಕೆಂದು ಪರಿಚಯಪತ್ರಗಳನ್ನು ಬರೆದುಕೊಟ್ಟಿದ್ದರು (ವಿದ್ಯಾಪಿ. ೮೫) ; ಈ ಪರಿಚಯಪತ್ರ ತರುವ ನಮ್ಮ ಮಿತ್ರರಿಗೆ ಕೂಡಲೆ, ಆದಷ್ಟು ಬೇಗ, ಅನುಕೂಲತೆ ಕಲ್ಪಿಸಿಕೊಡಬೇಕು (ಜಾನುವಾ. ೨೫೮). [ಪರಿಚಯ+ಪತ್ರ]

**ಪರಿಚಯಸ್ಥ** (ನಾ). ಪರಿಚಿತನಾದವನು ; ಗುರುತಿನವನು : ತುಸ ದೂರದಲ್ಲಿದ್ದ ಪರಿಚಯಸ್ಥರ ಮನೆಗೆ ನನ್ನ ಮಡದಿ ಏತಕ್ಕಾಗಿಯೋ ಹೋಗಿದ್ದಳು (ನಂಟರು. ೫೯) ; ಸಂತೆಯ ಮಾಳವನ್ನೆಲ್ಲಾ ಸುತ್ತುತ್ತಾ, ಪರಿಚಯಸ್ಥರೊಡನೆ ಹರಟುತ್ತಾ ಇರುವುದರಲ್ಲಿ ಹೊತ್ತು ಸಂಜೆಗೆ ತಿರುಗಿತ್ತು (ಸರ್ವಮಂ. ೪೭). [ಸಂ.]

**ಪರಿಚಯಿಸು** (ಕ್ರಿ). ೧. ಪರಿಚಯ ಮಾಡಿಸು ; ಗುರುತು ಮಾಡಿಕೊಡು : ಅನಿಲಾತ್ಮಜಂ . . . ಶಾಂತಿಯಿಂ ಪರಿಚಯಿಸಿದನು ದಶರಥಾತ್ಮಜಗೆ ಕಿಷ್ಕಿಂಧೆಯಂ (ಶ್ರೀರಾಮಾ. ೨೯೦-೧೪೪); ಸೆಲೆ ನೀನ್ ಹಳೆಯ ಮಿತ್ರನಿಗೆ ತನ್ನ ನೂತನದೃಷ್ಟಿಯನ್ನು ಪರಿಚಯಿಸಿಕೊಡಲು ಕುತೂಹಲಿಯಾಗಿದ್ದಂತೆ ನುಡಿದನು (ಪುನರು. ೩೬೯). ೨. ಅಭ್ಯಾಸ ಮಾಡು ; ಪರಿಶ್ರಮಿಸು : ಚಂದ್ರಾಯುಧದಿ ವಜ್ರಾಯುಧ ರವಿಹಾಸ ಚಂದ್ರಹಾಸದೊಳು ಸಾಧನೆಯಾ ಚಂದ್ರಾದಿತ್ಯರಂತಿರ್ವರಿರ್ವರು ಮನುಜೇಂದ್ರರು ಪರಿಚಯಿಸಿದರು (ಭರಚ. ೬೩-೬೪). ೩. ಕಲಿಸು ; ಹೇಳಿಕೊಡು : ಪರಿಪರಿಯ ಆಯುಧಾಭ್ಯಾಸವನವನಂದು ಪರಿಚಯಿಸಿದನು ದಯದೊಳು (ಕುಮಾರರಾಂ. ೨೮-೨). [ಪರಿಚಯ+-ಇಸು$_3$]

**ಪರಿಚರ** (ನಾ). ೧. ತಿರುಗಾಡುವುದು; ಸುತ್ತಾಟ. ೨. ಪರಿಚಾರಕ; ಸೇವಕ : ಆವ ತೆಱದಿಂದವಿನಾಗಳ್ ದೇವರ್ ತಾಮೇಕೆ ತಡೆಯದುಪ್ಪವಡಿಸರೆಂದಾವಱಿಯೆವೆಂದು ಪರಿಚರರಾವಳಿ ಮತಿವರ್ಧನಂಗೆ ತಮತಮಗುಸಿರ್ದರ್ (ಕುಸುಮಾ. ೧-೫೮) ; ಕೌಶಿಕನ ಪರಿಚರನು ಅವನ ಆಗಮನವನ್ನು ತಿಳಿಸಿದನು (ಮಹಾಣ. ೧೩). ೩. ಅಂಗರಕ್ಷಕ. ೪. ಸೈನ್ಯದ ಸುತ್ತಣ ಕಾವಲಿನವನು : "ಪರಿಧಿಸ್ಥಃ, ಪರಿಚರಃ — ೨ ದಂಡಿನ ಸುತ್ತಲೂ ಕಾದಿರುವ ಫೌಜು, ಕಾವಲ್ ಜನರ ಹೆಸರುಗಳು" (ಸಿದ್ಧಾಂತಿ. ೨೫೫). [ಸಂ.]

**ಪರಿಚರಣ** (ನಾ). ೧. ಸೇವೆ ; ಶುಶ್ರೂಷೆ ; ಪರಿಚರ್ಯೆ : ಸದಾ ವಿನಯದಿಂ ಶರಣಪರಿಚರಣಕ್ರಿಯೆಗಳೆಸೆಯೆ (ಬಸಪು. ೨೨-೪). ೨. ಸೇವಕ ; ಪರಿಚಾರಕ. [ಸಂ.]

**ಪರಿಚರಿಯ** 'ಪರಿಚರಿಯೆ' ನೋ.

**ಪರಿಚರಿಯೆ**, ಪರಿಚರಿಯ (ನಾ). ೧. ಸೇವೆ ; ಶುಶ್ರೂಷೆ : ತಾಯಿಗೆ ಪರಿಚರಿಯೆಯನು ಮಾಡುತಿರ್ದನು ಕಪಟಭಾವದಲಿ (ನಿಭಾಗ. ೬-೧೬-೨೬). **ಪರಿಚರಿಯ**: ೧. ಎಮ್ಮ ದೇವಾರ್ಚನೆಗೆ ವನಿತೆಯೊಬ್ಬಳನೀವುದಾ ಪರಿಚರಿಯದೆಡೆಗೆ (ಜಹರ. ದೇ. ೩೪-೧೮) ; ಅಖಿಳಮಾಹೇಶ್ವರರಿಗಿಷ್ಟಾರ್ಥಂಗಳಿಂದಾದರಿಸಿ ಪರಿಚರಿಯಂಗಳಿಂ ತಣಿಸುತ್ತ (ಬಸಪು. ೪-೪೭) ; ಪರಮಸತಿ ದಮಯಂತಿಯನು ನೀಂ ಪರಿಚರಿಯ[ಪಾಠಾಂ. ಯೆಳನುಪಚರಿಯ] ದಲಿಯೆನಗೊಲಿಯೆ ಮಾಡೆಂದುರುತರದ ವಸ್ತುಗಳನಿತ್ತ ಬಲೆಯರ ಬೀಳ್ಕೊಟ್ಟ (ನಳಚ. ೩-೧೪). ೨. ಪೂಜೆ ; ಆರಾಧನೆ ; ಉಪಾಸನೆ : ಪಂಚಾಗ್ನಿಯನು ಕ್ರಮದಿಂ ಪ್ರತಿದಿನಂ ಪರಿಚರಿಯ ಮಾಳ್ಪುದು ಲೇಸ ಬಯಸುವರೆ (ಕುಮಾರ. ೩-೩೭). [<ಸಂ. ಪರಿಚರ್ಯಾ]

**ಪರಿಚರಿಸು** (ಕ್ರಿ). ಅಭ್ಯಾಸ ಮಾಡು ; ವ್ಯಾಸಂಗಮಾಡು : ನಾನಾ ಕುಶಲಶಾಸ್ತ್ರವನು ವಿದ್ಯಾನೀಕವನು ಪರಿ[ಪಾಠಾಂ. ನೇಕಗಳನುಪ]ಚರಿಸಿ ಪರಿಣತೆಯಾಗಿ ಸುಖದಿಂದೆ ಆ ಕುಮಾರಿತಿಯಿರುತಿರಲು (ಪ್ರಭುಲೀ. ೩-೩೭). [ಪರಿಚರ+-ಇಸು$_3$]

**ಪರಿಚರ್ಯ** (ನಾ). ೧. ಸೇವೆ; ಶುಶ್ರೂಷೆ : "ಪರಿಚರ್ಯವೆನೆ ಸೇವೆಯಕ್ಕುಂ" (ಮಂಗರಾ. ೮-೨೭) ; ಅತಿಪ್ರಯತ್ನಪರಿಚರ್ಯಾರಂಭದಿಂ ಪುತ್ರ ಸೀತೆಯುಮಂ ರಾಮನುಮಂ ಸಮಾಹಿತಮನರ್ಮಾಡು (ಪಂರಾಮಾ. ೬-೧೭೬). ೨. ಬಾಂಧವ್ಯ ; ಸಲಿಗೆ ; ಸದರ : ರೆಕ್ಕೆಯು ಬರುವ ಪರಿಯಂತವು ನಮ್ಮ ಆಶ್ರಮದಲ್ಲಿ ಸಾಕಿಕೊಂಡಿದ್ದು ಬಿಟ್ಟು ಬಿಟ್ಟರೆ ತನ್ನ ಮನಸ್ಸು ಬಂದ ಬಳಿಗೆ ಹೋದೀತು; ಪರಿಚರ್ಯದಿಂದ ಇಲ್ಲಿಯಾದರೂ ಇದ್ದೀತು (ವಚಕಾ. ೪). [ಸಂ. ಪರಿಚರ್ಯಾ]

**ಪರಿಚರ್ಯೆ** (ನಾ). ೧. ಸೇವೆ ; ಶುಶ್ರೂಷೆ : "ವರಿವಸ್ಯಾ, ಪರಿಚರ್ಯಾ, ಶುಶ್ರೂಷಾ . . . ಉಪಚಾರಃ — ಈ ೧೧ ಬೆಸಕೆಯ್ವುದರ್ಕೆ ಪೆಸರ್" (ಹಲಾಯು. ೨೧-೧೨೯); ಶರೀರರಕ್ಷಣೆಗಂ ಪರಿಚರ್ಯೆಗಂ ಸಮಯೋಚಿತಕುಶಲರಪ್ಪ . . . ಜನಮಂ ಸಮರ್ಪಿಸುವುದುಂ (ಮಲ್ಲಿಪು. ೪-೯೩): ಸರಸಿಜಾನನೆಗಾಯ್ತು ಯತಿಪದಸರಸಿರುಹಪರಿಚರ್ಯೆ [ಪಾಠಾಂ. ಪರಿಚಯ] (ನಿಭಾಗ. ೧೦-೭೨-೭೩); ಪರಿಚರ್ಯೆ ಮನೆವಾಳ್ತೆಯೆಂದೆಂಬ ತಳ್ಳಿಯವಳಲ್ಲ (ಜೈಮಿಭಾ. ೧೦-೭೪). ೨. ಪೂಜೆ ; ಆರಾಧನೆ. [ಸಂ. ಪರಿಚರ್ಯಾ]

**ಪರಿಚರ್ಯೆಗೆಯ್ಯು** (ಕ್ರಿ). ಸೇವೆಮಾಡು ; ಶುಶ್ರೂಷೆಮಾಡು: ಸೀಂ ಪ್ರೀತಿಪರಿಚರ್ಯೆಗೆಯ್ಯುತಿರಲಾಂ ಶಾಂತಿಯಿಂ ಸೇರಿದಪೆನಧ್ಯಾತ್ಮಮಂ (ಶ್ರೀರಾಪಾ. ೨೭೬-೩೫೫). [ಪರಿಚರ್ಯೆ+ಕೆಯ್ಯು(<ಕೆಯ್$_1$)]

**ಪರಿಚಲನ** (ನಾ). ತಿರುಗುವಿಕೆ ; ಸಂಚಾರ ; ಚಲನೆ: ಬಲಿದ ಮಬಿವೆಯು ಕರಣವೃತ್ತಿಯು ಕಳವಳದ ಪಂಚೇಂದ್ರಿಯದ ಪರಿಚಲನಸಂಚದ ಶಿಥಿಲಮೂಲಾಧಾರ ಮಾರುತನ (ಕುಪ್ಯಾಗ. ೧೦-೨). [ಸಂ.]

**ಪರಿಚಲನೆ** (ನಾ). ೧. =ಪರಿಚಲನ : ಕಶಗಳ ಚಲನದಿಂದ ಸೀಲೆಂಟರಾನ್ ಅವಕಾಶದಲ್ಲಿ ದ್ರವಗಳ ಪರಿಚಲನೆಯಾಗುತ್ತದೆ (ಪ್ರಾಣಿಶಾ. ೧೦೪). 'ರಕ್ತಪರಿಚಲನೆ' ಪರಾ. ೨. ಉಪಯೋಗದಲ್ಲಿರುವಿಕೆ ; ಚಾಲನೆಯನ್ನು ಹೊಂದಿರುವಿಕೆ : ಗ್ರಂಥಗಳ ಸಂಗ್ರಹಕ್ಕೆ, ಪರಿಚಲನೆಗೆ . . . ಸಾಕಷ್ಟು ಸ್ಥಳಾವಕಾಶವಿರಬೇಕು (ಗ್ರಂಥಾಲ. ೬) ; ಗ್ರಂಥವಿಂಗಡಣೆ, ಪರಿಚಲನೆಗಳಿಗೆ ಇದು ತುಂಬ ಸುಲಭ ಸುಗಮ ಪದ್ಧತಿಯೆಂದು ಅನುಭವಕ್ಕೆ ಬಂದಿತು (ಗ್ರಂಥಾಲ. ೧೮). [ಸಂ. ಪರಿಚಲನ]

**ಪರಿಚಾಯ್ಯ** (ನಾ). ಪರಿಚಾಯ್ಯ, ಉಪಚಾಯ್ಯ, ಸಮೂಹ್ಯಗಳೆಂಬ ಮೂರು ಬಗೆಯ ಯಜ್ಞಾಗ್ನಿಗಳಲ್ಲಿ ಒಂದು; ಮಂಡಲಾಕಾರವಾಗಿ ಉರಿಯುವಂತೆ ರಚಿಸಿರುವ ಹೋಮಾಗ್ನಿ. [ಸಂ.]

**ಪರಿಚಾರ** (ನಾ). ೧. ಸೇವೆ ; ಪರಿಚರ್ಯೆ : ಪ್ರಾಣಲಿಂಗದ ಪರಿಚಾರವ ಮಾಡುವರನೊಬ್ಬರನು ಕಾಣೆ (ಚನ್ನಪ. ಕ. ೪೩೫-೯೨೨) ; ಸಾರಮತಿಯಲಿ ಕಂದಮೂಲಾಹಾರನಾಗಿಂತಲ್ಲಿಯೇ ಪರಿಚಾರವಂ ಮಾಡುತ್ತಮಿರಲ್ (ಬಸಪು. ೩೪-೭) ; ಗರತಿಗೆಲಸವೆಂದು ಗೆಲ್ಲಗೊಂಡುರ್ಬದೆ ಪರಿಚಾರವೆಂದು ಪಳಿಯದೆ . . . ನಿರವಿಸಿದುದನೆಸಗುವುದು (ಹರಿಬ. ೩-೩೩). ೨. ಸೇವಕ; ಆಳು : ಕಂಸಂ . . . ಪರಿಚಾರರಪಚಾರಮೆನೆ ನಾಕಿಗಳವಿವೇಕಮೆನೆ. . . ಪಾಸಟಿಯೊಳ್ ಕೂಸನಪ್ಪಳಿಸಿ (ಜಗವಿ. ೨-೫೩ ಪ). [ಸಂ.]

**ಪರಿಚಾರಕ** (ನಾ). ೧. =ಪರಿಚಾರ ೧ : ಇತರೇಂದ್ರರ್ ಪರಿಚಾರಕ ಪ್ರಭೃತಿಯಿಂ ಮುಂದಾಡೆ . . . ಸಂತತಮೇನೆಂದು ಜಿನಾರ್ಭಕಂಗೆಸೆದುದೋ ಜನ್ಮಾಭಿಷೇಕೋತ್ಸವಂ (ಆದಿಪು. ೭-೮೧). ೨. ಸೇವೆ ಮಾಡುವವನು ; ಪರಿಚಾರ; ಸೇವಕ : "ಪರಿಚಾರಕರ್ಗಚ್ಚುಳಾಯ್ತರೆಂದೆಂಬ ಪೆಸರ್" (ಕಬ್ಬಿಕೈ. ೩೫) ; ಅಂತು ಪ್ರಥಮನಾಕನಾಯಕಪ್ರಗ್ರಹಾಮರರ್ . . .. ಅವನತಮಣಿಮಕುಟರಾಗಿ ಪರಿಚಾರಕಕೃತ್ಯದೊಳ್ ನೆಗಟಿ (ಶಾಂತಿಪು. ೧೧-೯೯ ಪ) ; ಜಂಗಮವ ಪರಿಚಾರಕರೆಂಬ ಕೇಡಿಂಗೆ ಬೆಟಗಾದೆನಯ್ಯಾ (ಬಸವ. ೪೧೪); ವೈದ್ಯ, ಔಷಧ, ರೋಗಸ್ಥ, ಪರಿಚಾರಕ ಈ ನಾಲ್ಕೂ ಚಿಕಿತ್ಸಾಂಗವೆನಿಸಿಕೊಂಬುವುವು . . . ರೋಗಸ್ಥನಲ್ಲಿ ಪ್ರೀತಿಯುಳ್ಳವನಾಗಿಯೂ . . . ವೈದ್ಯನಲ್ಲಿ ಸ್ನೇಹ ಬಯಸುವವನಾಗಿರುವಂಥಾವನೇ ಪರಿಚಾರಕನೆನಿಸಿಕೊಂಬನು (ಸಕವೈ. ೭೩) ; ನಾನು ತಮ್ಮ ಸೇವಕ, ತಮಗೆಷ್ಟು ಮಂದಿ ಪರಿಚಾರಕರನ್ನು ಕರೆತರಲಿ ?(ಮಣಿಸ. ೩೦). [ಸಂ.]

**ಪರಿಚಾರಕತ್ವ** (ನಾ). ಸೇವಕತನ; ಊಳಿಗ: ಸಕಲಸುರಸಮಾಜಮಂ ಪರಿಚಾರಕತ್ವದೊಳ್ ಯೋಜಿಸಿಯುಂ (ಚಂದ್ರಪು. ೯-೫೫ ವ). [ಸಂ.]

**ಪರಿಚಾರಕಿ** (ನಾ). ಊಳಿಗವನ್ನು ಮಾಡುವವಳು ; ಸೇವಕಿ ; ದಾಸಿ : ಚಾಪುರದಡಪದ ಕನ್ನಡಿಯ ಪರಿಚಾರಕಿಯರಿಂ ಕೂಡೆ ಸಂದಣಿಸಿದ ಬಾಗಿಲೊಳ್ (ಕಾದಂಪೂ. ೮೭೦) ; ಪರಿಚಾರಕಿಯರನೊಪ್ಪಿರೆ ಕರಮಕ್ಕನ ಮನಮನಱಿದು ಬೆಸಗೆಯ್ವುದು ಚೆಚ್ಚರಮೆಂದು ಪೇಟ್ವಿಮಕ್ಕೋಽದರರ್ (ಧರ್ಮಾಮೃ. ೩-೫೬) ; ಚತುರ ಚತುರಿಕೆಯರಪ್ಪ ಪರಿಚಾರಕಿಯರುಂ . . . ಭಾನುಮತಿಯುಂ ಮಂಗಳವಸದನಂಗೊಳಿಸಲವಸರಂಬಡೆದು (ಪುಷ್ಪಪು. ೮-೫೩ ವ). [ಪರಿಚಾರಕ+-ಇ$_2$]

**ಪರಿಚಾರಗಿತ್ತಿ** (ನಾ). =ಪರಿಚಾರಕಿ : ಎಲ್ಲಾರ ಕೈಲೂ ದಂಡಿಸಿಕೊಳ್ಳೋಕೆ ನಾನೇನು ಪರಿಚಾರಗಿತ್ತೀನಾ ? (ಚಂದತೋ. ೨೩೨). [ಪರಿಚಾರ+-ಗಿತ್ತಿ]

**ಪರಿಚಾರಿಕೆ$_1$** (ನಾ). ಊಳಿಗ ; ಸೇವೆ ; ಪರಿಚರ್ಯೆ : ಎಲ್ಲಾಗರ್ೂ ಪರಿಚಾರಿಕೆ ಮಾಡೋದೇ ನಮ್ಮಕೇಬರಾ ಆಯ್ತು (ಚಂದತೋ. ೨೩೧). [ಪರಿಚಾರ+-ಇಕೆ]

**ಪರಿಚಾರಿಕೆ$_2$** (ನಾ). =ಪರಿಚಾರಕಿ: ಕುಂಚದಡಪದ ಡವಕೆಯ ಪರಿಚಾರಿಕೆಯರೆಲ್ಲರುಮಂ ಕಣ್ಗತ್ತಿ ಕಳೆದೇಕಾಂತದೊಳ್ ಕನ್ನೆಯನಿಂತೆಂದಳ್ (ಪಂಪಭಾ. ೪-೬೧ ವ) ; ಕೆಲದೊಳ್ ಪರಿಚಾರಿಕೆ ಪಿಡಿದಿರ್ದಾ ಸ್ವರವರ್ಧನ ಪೆಸರ ವೀಣೆಯಂ ತಾಂ ಕೊಂಡಳ್ (ಕುಸುಮಾ. ೧-೩೫) ; ಪರಿಚಾರಿಕೆಯರ್ಗೆರಸತಿಭರದಿಂದಂ . . . ಬರುತಿರ್ಪಾಗಳ್ (ತ್ರಿಷುವಿ.೨೯-೧೦). [ಸಂ. ಪರಿಚಾರಿಕಾ]

**ಪರಿಚಾರಿಣಿ** (ನಾ). =ಪರಿಚಾರಕಿ : ನಿಖಿಳ ಪರಿಚಾರಿಣೀಜನಂ ನಿಜ ನಿಯೋಗನಿಷ್ಠಾಪರತೆಯಿಂ ನಿರಂತರಮೋಲಗಿಸುತೊಪ್ಪುತಿರೆಯಿರೆ (ಕುಸುಮಾ. ೬-೬ ವ) ; ಪರಿಚಾರಿಣಿಯರು ತೊಡೆದು ನಾಟ್ಯಗೃಹವ ಸಿಂಗರಿಸಿದರು (ಭರಚ. ೧೨-೧೪೫); ಸಮ್ಮುಖದ ಪರಿಚಾರಿಣಿಯಾದ ಚತುರಿಕೆಗೆ ನೀನು ಆಜ್ಞಾಪಿಸಿ ಇರುವೆಯಷ್ಟೆ (ಶಾಕುಂತ. ೮೪-೬). [ಸಂ. ಪರಿಚಾರಿಣೀ]

**ಪರಿಚಾರಿಸು** (ಕ್ರಿ). ಸೇವೆ ಮಾಡು ; ಊಳಿಗ ಮಾಡು : ಅಲಸದೆ ಪರಿಚಾರಿಪುದಲ್ಲಿಗಲ್ಲಿ ಬಲ್ಲನಿತರೊಳಂ ಸರಸಪ್ರಸಂಗಗೈಯಲು ಸರಸಿಜಭವರಾಣಿಯೊಲಿಯದೇಂ ಮಾಣ್ದಪಳೇ (ನೀತಿಸಾ. ೨೩). [ಪರಿಚಾರ+-ಇಸು$_3$]

**ಪರಿಚಿತ** (ಗು). ೧. ಕೂಡಿದ ; ಸೇರಿದ : ಇಂದ್ರನಂತೆ ಪರಿಚಿತಸುರಥರಮ್ಯನಮೃತಾರ್ಚಿಯಂತೆ ವಿಸ್ತರಿತಕುವಲಯಂ (ಜೈಮಿಭಾ. ೨-೧೩). ೨. ತುಂಬಿದ ; ಭರ್ತಿಯಾದ : ಅನರ್ಘರತ್ನಮಣಿಮಕುಟಕಿರೀಟಮಯೂಖಮಾಲಿಕಾಪರಿಚಿತಪ್ರಭಾಕದಂಬಕಪ್ರತಿಬಿಂಬಿತ ವಿಮಾನಭಿತ್ತಿವಿತಾನಂ (ಶಾಂತಿಪು. ೭-೧೩ ಪ) ; ಕರಮೆಸೆದಿರ್ಪುದಾತತಗುಹಾದ್ವಯವಜ್ರಮಯಿೂದರೀಪ್ರಭಾಪರಿಚಿತಪಾರ್ಶ್ವಮಗ್ರನಿಭೃತಾಂಬುಧರಂ ವಿಜಯಾರ್ಧಭೂಧರಂ (ಚಂದ್ರಪು. ೬-೨). ೩. ಗುರುತುಳ್ಳ ; ಪರಿಚಯವಿರುವ : ಪರಿಚಿತ ಮರಗಿಡಗಳು, ಪ್ರಾಣಿಗಳು, ನಿಸರ್ಗದ ಆಗುಹೋಗುಗಳು — ಇವು ಆ ವಿಷಯದಲ್ಲಿ ಸೇರಿದ್ದುವು(ಶಿಕ್ಷದ. ೭೩೮). ೪. ಆಪ್ತವಾದ ; ಸಲಿಗೆಯುಳ್ಳ ; ಬಳಕೆಯಲ್ಲಿರುವ : ಪರಿಚಿತ ಸನಾಭಿರಾಗಾಂಕುರಜಲಸೇಚಂ ವಿರೋಧಿತರುದವದಹನಂ ಪರಮೋದಯರವಿಗಗನಂ ಪರಾಕ್ರಮವದೆನೆ ವಿಭಿನ್ನರೂಪಕಮಕ್ಕುಂ (ಕವಿರಾ. ೩-೨೨) ; ಪರಿಚಿತ ಚಕ್ರವಾಕಮಿಥುನಂಗಳನೊಯ್ಯನೆ ಸಿದ್ರೆಗೆಯ್ಸುವಳ್ (ಕಾದಂಬ. ೨೪) ; ಪರಿಚಿತ ಪರಿಜನಮಂ ಪರಿಹರಿಸಿ ಪರಿಸ್ಪಂದಮೊಂದುಮಿಲ್ಲೆನೆ ತನ್ನೊಳ್ ಪರಿನಿಷ್ಕ್ರಮಣಕ್ಕೆ ಮನಂ ಪರಿಯೆ (ಪುಷ್ಪಪು. ೧೩-೭೬). ೫. ತಿಳಿದ ; ಗೊತ್ತಿರುವ ; ಅರಿತ : ಪರಿಚಿತಾಶೇಷದೇಶಭಾಷನುಂ . . . ಪ್ರಸಿದ್ಧನುಮಪ್ಪ ಮಹತ್ತರನ ಕೈಯೊಳ್ ಸನ್ಮಾನದಾನಪುರಸ್ಸರಮಾಗೆ ಕೊಟ್ಟು (ಆದಿಪು. ೧೪-೪೩ ಪ). (ನಾ). ೬. ಪರಿಚಯವಿರುವಂಥದು ; ಗೊತ್ತಿರುವುದು : ಎಲ್ಲಿ ಪರಿಚಿತವಾದ ವಾದವೇದಧ್ವನಿಗಳಲ್ಲಿಗೊಯ್ಯದೆ ದಾರುದಾರುಣದ ಕಟ್ಟಡವಿಗಿಲ್ಲಿಗೇಕೈತಂದೆ ಸೌಮಿತ್ರಿ (ಜೈಮಿಭಾ. ೧೯-೧೧) ; ಈ ಮುಖವು ಪರಿಚಿತವಾದ ಮುಖದಂತಿದೆ (ಶ್ರೀರಾಯ. ೨೪೮). ೭. ಗುರುತುಳ್ಳ ವ್ಯಕ್ತಿ ; ಪರಿಚಯವುಳ್ಳ ವ್ಯಕ್ತಿ : ಹಿಂದಿನ ಪರಿಚಿತರ್ಯಾರ ಕಣ್ಣಿಗಾದರೂ ಬಿದ್ದರೆ ಪುನಃ ಸಂಕಟದಲ್ಲಿ ಸಿಕ್ಕಬಹುದೆಂದು ಭಯ (ಶ್ರೀರಾಯ. ೨೧೬) ; ಪ್ರೇಯಸಿಗೆ "ನೀನು ನನಗೆ ಜನ್ಮಾಂತರದಲ್ಲಿ ಪರಿಚಿತಳಾದಂತಿದೆ" ಎಂದು ಹೇಳುತ್ತೇವೆ

(ಶಿಬಂಧ. II, ೧೩೧). ೮. ಆತ್ಮೀಯ ವ್ಯಕ್ತಿ; ಆಪ್ತ: ತ್ರಿವೇದಿ, ಪಟೇಲ,ನಿಯೋಗಿಯವರನ್ನು ಕರೆಯಲು ಅವರವರ ಪರಿಚಿತರು ಬಂದಿದ್ದರು (ಸಮಜೀ. ೬೧೧). ೯. ತಿಳಿದವನು ; ಅರಿತವನು : ಸವ್ಯಾಪಸವ್ಯ . . . ಮಂಡಲಾವರ್ತನಾದಿಗಳಪ್ಪ ಮೂವತ್ತೆರಡು ಗದಾವಿಕ್ಷೇಪದೊಳ್ ಮತಿಪರಿಚಿತರಾಗಿ ಕಾದುವಾಗಳ್ (ಪಂಪಭಾ. ೧೩-೯೨ ವ) ; ವ್ಯಾಕರಣ ಪರಿಣತನಲಂಕಾರಪರಿಚಿತನನೇಕರಸನಿಪುಣನಭಿಧಾನಪ್ರವೀಣನು (ಹಚಕಾ. ೧-೧೨೪). [ಸಂ.]

**ಪರಿಚಿತಿ** (ನಾ). ಪರಿಚಯ ; ಗುರುತು : ಊರಿನಲ್ಲಿ ಹಸುಗೂಸು ಮೊದಲ್ಗೊಂಡು ಮುದುಕರವರೆಗೂ ಅವರಿಗೆ ಪರಿಚಿತಿ ಇತ್ತು (ರಾಯಕ. ೬೯) ; ತಮ್ಮ ಊರಿನ ಹುಡುಗ ಹುಡುಗಿಯರ ಪರಿಚಿತಿ ತನಗಿಲ್ಲವೇ ? (ತುಂಬಿಕೊ. ೭೫) ; ಕಲಾವಿದ ಬಳಸಿದ ಸಾಧನದ ಪರಿಚಿತಿ ಜನಕ್ಕೆ ಇರ ಬೇಕಾಗುತ್ತದೆ (ಕಲಿದ. ೧೧೭). [ಸಂ.]

**ಪರಿಚಿತೆ** (ನಾ). ಪರಿಚಯವಿರುವಾಕೆ ; ಗೊತ್ತಿರುವವಳು : ಪರಿಚಿತೆ ನೀಂ ತಳೋದರಿಗೆ ಮೆಯ್ಯೊಳಿಯಿಂ ಮನಮಂ ತೊಡಂಕೆ ನಾಂ ತ್ವರಿಪದಿ ನಿರ್ದು ನಿಂದಬಲನಾಱಸು (ಅನಂಪು. ೧೧-೯೭). [ಸಂ. ಪರಿಚಿತಾ]

**ಪರಿಚುಂಬಿಸು** (ಕ್ರಿ). ೧. ಮುತ್ತಿಡು; ಮುದ್ದುಕೊಡು : ಕಂಪಿನ ಪೆಂಪು ಪೊಂಪುಳಿಯೆನಲ್ ದೊರೆವೆತ್ತ ನಮೇರುಮಾಲೆಯಿಂಪಂ ಪರಿ ಚುಂಬಿಸಲ್ ಬಯಸಿ ಬರ್ಪಳಿಮಾಳಿಕೆಯಂತೆ (ಶಾಂತಿಪು. ೫-೩೩) ; ಪರಿ ಚುಂಬಿಸಿ ನವಕಳಿಕಾಧರರಸಮಂ ಪೀರೆ ಪರಭೃತಂ ಚೂತಲತಾತರುಣಿಗೆಸೆ ದತ್ತು ಶಾಖಾಕರಕಂಪಂ ತನ್ನಿನಾದನಿಭಸೀತ್ಕಾರಂ (ಲೀಲಾವ. ೯-೯೭). ೨. ಮುಟ್ಟು ; ಸೋಕು ; ಸ್ಪರ್ಶಿಸು : ಪದಾಘಾತಧೂಳೀಪಟಲ ಪರಿಚುಂಬಿಸಿದುದಂಬರವ (ಕುಪ್ಪಾಭ. ೧೪-೪೦).

[ಸಂ. ಪರಿಚುಂಬನ+-ಇಸು₃]

**ಪರಿಚೆ,** ಪರಿಜೆ (ನಾ). ಒಂದು ಬಗೆಯ ಸುಗಂಧದ್ರವ್ಯ,—ಲೇಪನ ವಸ್ತು : ತೀವಿದ ಕೊಗ್ಗಿಯ ಕತ್ತುರಿಯಿಂ ಕತ್ತುರಿಯೊಳಂಟೆ ಪರಿಚೆಯಿಂ ಪರಿಚೆಯೊಳ್ ಪರ್ಚಿಯಂಬಡೆದ ಮದವಟ್ಟೆಯಿಂ ಮದವಟ್ಟೆ ಯೊಳೊಡಂಬಟ್ಟ ವಿಪುಲಕಪೋಲತಲಲಿಖಿತವಿಚಿತ್ರಪತ್ರಲೇಖೆಯಿಂ (ಆದಿಪು.೪-೪೧ ವ); ಪರಿಚೆಯಂನೊಗ್ಗುಡಿಸುವ ಕತ್ತುರಿಯಿಂ ಮದವಟ್ಟೆದೆಗೆವ ಬೊಟ್ಟಿಡುವ ಕುಚಾಂತರದೊಳ್ ಹಾರಮನೆಳಸುವ[ಯ]ರವಿಂ ಸ್ವಾಧೀನ ಪತಿ ಕರಂ ಬಗೆಗೊಂಡಳ್ (ವರ್ಧಮಾ. ೮-೫೭). **ಪರಿಜೆ :** ಪರಿಜೆಯ ನಂಟು (?) ಕೆನ್ನೆಗಳನೊಯ್ಯನೆ ನೀವುವ ಚಿನ್ನಪೂವನೋಸರಿಸುವ . . . ಕೆಯ್ಯದೊಂದು ನೆವದಿಂ ಲಲಿತಾಂಗಿಯ ಶಂಕೆಯಂ ಭಯಂಬೆರಸಿದ ನಾಣುಮಂ ಕ್ರಮದೆ ಪಿಂಗಿಸು (ಪಂಪಭಾ. ೩-೭೭) ; ತೆಗೆಯುತ್ತುಂ ಮೇಲುದಂ ಪೆರ್ವೊಲೆಗೆ ಪರಿಜೆಯಂ ಹಸ್ತದಿಂದೊತ್ತುತುಂ . . . ಅಬಲೆಯರೋರೋರ್ವರೊಂದೊಂದು ಪಾಂಗಿಂ ಬಗೆಗೊಂಡೆಟ್ಟೆನ್ನೆಗಂ ತನ್ನೊಡನೆ ಹರಿ ವನಕ್ರೀಡೆಗೆಂದೆಟ್ದನಾಗಳ್ (ಜಗವಿ. ೧೪-೪೭). [?]

**ಪರಿಚೋದನ** (ನಾ). ಓಡಿಸುವುದು ; ನುಗ್ಗಿಸುವುದು : 'ಪರಿ ಚೋದಿಸು' ಪರಾ. [ಸಂ.]

**ಪರಿಚೋದಿಸು** (ಕ್ರಿ). ಓಡಿಸು; ನುಗ್ಗಿಸು : ಸ್ಯಂದನಾಶ್ವಂಗಳನೊಂದೆ ದೊರೆಯೊಳ್ ಪರಿಯೆ ಪರಿಚೋದಿಸಿ ಬಾಣಪಾತಪ್ರಮಾಣದೊಳ್ ನಿಱಸು ವುದುಂ (ಶಾಂತಿಪು. ೪-೧೦ ವ) ; ತನ್ನ ರಥಮಂ ಪರಿಚೋದಿಸವೇಟ್ಬು ರಾಮನೊಳ್ ತೊಡರಲೊಡರ್ಚಿ ಬರ್ಪ ಪವದೊಳ್ (ಪಂರಾಮಾ. ೧೪-೧೪೩). [ಪರಿಚೋದನ+-ಇಸು₃]

**ಪರಿಚ್ಛದ** (ನಾ). ೧. ಮುಸುಕು ; ಹೊದಿಕೆ ; ಆವರಣ : ಅಂಚೆಯ ದುಕೂಳಪರಿಚ್ಛದ ಚಾರುತಳ್ಪದಿಂ ಕಾಂಚನಮಂಚದಿಂ . . . ಮನಂಗೊ ಳಿಪ ಸೆಜ್ಜೆಗೆ ವಂದಳದೊಂದು ಲೀಲೆಯಿಂ (ಪಲ್ಲಿಪು. ೧೧-೧೦೨). ೨. ಹೊದೆಯುವ ವಸ್ತ್ರ ; ಮೇಲುಹೊದಿಕೆ : ಅದೇನೆಸೆದಿರ್ದನೊ ದೇಹದೀಪ್ತಿ ಚಂದ್ರಾತಪಮಂ ಪಳಂಚಲೆಯೆ ನೀಲಪರಿಚ್ಛದದಿಂ ಹಲಾ ಯುಧಂ (ಪಂರಾಮಾ. ೧೨-೧೧). ೩. ಪರಿಜನ ; ಪರಿವಾರ : ಕೇಶವನು ಮಾತ್ಮೀಯಗುರುವಿಯೋಗದೊಳ್ ಪರಿತ್ಯಕ್ತಸಕಲರಾಜ್ಯಪರಿಚ್ಛ[ಪಾಠಾಂ. ಚ್ಛೇ]ದಂ ಪ್ರವ್ರಜ್ಯಪದವಿಯೊಳ್ ಪರಿತ್ಯಕ್ತನುಮಾಗಿ ತದಚ್ಯುತ ಕಲ್ಪದೊಳ್ ಪ್ರತೀಂದ್ರನಾದಂ (ಆದಿಪು. ೬-೧೨ ವ) ; ವಿಜಿತಾಹಿತ ನರೇಂದ್ರಾತ್ಮೀಚ್ಛಾ ಸೇನಾಪರಿಚ್ಛದರಪ್ಪ ರವರವರಿರ್ವರೊಳಂ ಕೃತದಾರಪರಿ ಗ್ರಹನಿಂದ್ರಂ ಯುವರಾಜ್ಯಪದದೊಳ್ ನಿಂದು (ಶಾಂತಿಪು. ೬-೬೧ ವ). ೪. (ಗೃಹಕೃತ್ಯದಲ್ಲಿ ಬಳಕೆಯಾಗುವ ಪಾತ್ರೆ, ಪೀಠ ಮುಂತಾದ) ಉಪಕರಣ ; ಸಾಮಗ್ರಿ ; ಸಲಕರಣೆ : "ಪರಿಬರ್ಹಂ [ಪರಿವಾರಂ] ಪರಿಚ್ಛದಂ . . . ಬಿತ್ತರಿಸುವ ಗೃಹೋಪಕರಣೋತ್ಕರಂ" (ವಸ್ತುಕೋ. ೪೪-೨೧) ; ಅಂತು ಪ್ರಧಾನಪ್ರಕೃತಿಯಪ್ಪ ಕಾಮದೇವನಿಲ್ಲದೆ ತದೀಯ ಪರಿಪೂರ್ಣಪರಿಚ್ಛದಮಂ ಪೊತ್ತು ನಿಂದಳಂ ನೋಡಿ (ಶಾಂತಿಪು. ೮-೫೩ ವ) ; ಬಹುಪ್ರಕಾರ ಭಂಗುರಶೃಂಗಜಳಯಂತ್ರಾದಿ ಜಳಕೇಳೀವಿಳಾ ಸೋಪಯೋಗ್ಯಾತ್ಮುಚ್ಛಪರಿಚ್ಛದಂಗಳೊಳಂ . . . ಅಟವಟ್ಟು ದಿಟ್ಟ ಗೊಲವನೋಲಗಿಪ ಲೀಲಾಸರೋವರಮಂ ರಾಜಹಂಸಂ ಲೀಲಾವತೀಜನ ಸಮೇತಂ ಪುಗೆ (ಚಂದ್ರಪು. ೭-೧೧೯ ವ) ; ಕೃಷ್ಣಾಜಿನಂಗಳನುರುಪರಿಚ್ಛದ ಗಳನು ಕೊಡಿಸಿದನಾ ಮುನಿಪ್ರಜಕೆ (ಶಿಭಾಗ. ೧೦-೫೪-೨೯). [ಸಂ.]

**ಪರಿಚ್ಛನ್ನ** (ಗು). ೧. ಮುಚ್ಚಿದ ; ಮರೆಮಾಡಿದ ; ಹೊದಿಸಿದ. ೨. ಆವರಿಸಿದ ; ಸುತ್ತುಗಟ್ಟಿದ. [ಸಂ.]

**ಪರಿಚ್ಛಾದನೆ** (ನಾ). ೧. ಮುಚ್ಚುವಿಕೆ ; ಹೊದಿಸುವುದು. ೨. ಮುಸುಕು ; ಹೊದಿಕೆ. [ಸಂ. ಪರಿಚ್ಛಾದನ]

**ಪರಿಚ್ಛಿತ್ತಿ** (ನಾ). ೧. ನಿಶ್ಚಯ ; ನಿರ್ಣಯ ; ನಿರ್ಧಾರ : ಮುನ್ನ ಮಧೋಲೋಕವರ್ಣನದಲ್ಲಿ ರಜ್ಜು ಪರಿಚ್ಛಿತ್ತಿ ನಿರೂಪಣಾರ್ಥಂ ವ್ಯವಹಾರ ಪಲ್ಯಾದಿವಿಕಲ್ಪಂ ಪ್ರಸ್ತುತಗಾಥಾಸೂತ್ರಂಗಳಿಂ ನಿರೂಪಿಸೆ ಪಟ್ಟುದಂ (ತತ್ತ್ವಪ್ರ. ೧೭೬). ೨. ಮೇರೆ; ಸೀಮೆ. ೩. ವಿಯೋಗ. [ಸಂ.]

**ಪರಿಚ್ಛಿನ್ನ** (ಗು). ೧. ಎರಡು ತುಂಡು ಮಾಡಿದ ; ವಿಭಾಗಿಸಿದ. ೨. ಮೇರೆಯುಳ್ಳ ; ಮಿತಿಯನ್ನು ಹೊಂದಿದ ; ಎಲ್ಲೆಯನ್ನೊಳ ಗೊಂಡ : ಪೃಥಿವೀ ಮೊದಲಾದ ಸಮಸ್ತವಸ್ತುಗಳೂ ಕಾರ್ಯರೂಪ ವಾದುವು. ಈ ವಿಷಯದಲ್ಲಿ ಇವು ಪರಿಚ್ಛಿನ್ನ ಅಥವಾ ಅವಧಿಯುಳ್ಳ ವಸ್ತು ಗಳು ಎಂಬುದೇ ಪ್ರಮಾಣ (ಭಾತತ್ತ್ವ. ೬೦೯). (ನಾ). ೩. ಪರಿಮಿತ ವಾದುದು ; ಸೀಮಿತವಾದುದು : ಜೀವನ ಈ ಗುಣಗಳು ಅಪರಿ ಮಿತವಲ್ಲ—ವಿಭುವಲ್ಲ. ಮಿತ—ಪರಿಚ್ಛಿನ್ನವೆಂಬುದು ಸ್ವಯಂಸಿದ್ಧ ವಿಷಯ (ಜೀವಾತ್ಮ. ೫೨). ೪. ಖಚಿತತೆ ; ಖಡಾಖಂಡಿತ : ಸುಮ್ಮನೆ ಔಷಧ ಗಳನ್ನು ಯಾಕೆ ತರಿಸುತ್ತೀರಿ ? ನಾನು ಅವನ್ನು ಎಂದಿಗೂ ತಕ್ಕೊಳ್ಳುವು ದಿಲ್ಲ ಎಂದು ಪರಿಚ್ಛಿನ್ನವಾಗಿ ಹೇಳಿದನು (ಮುಂಬಯಿ. ೪-೭೬). ೫. [ನಾಟ್ಯ]ಮೂವತ್ತೆರಡು ಬಗೆಯ ಅಂಗಹಾರಗಳಲ್ಲಿ ಒಂದು : ಸಮನಖ ಛಿನ್ನಮ ಸಂಭ್ರಾಂತಮುವೆಂಬೀ ಮೂಱುಕರಣಮಂ ಮಾಡುತ್ತಂ . . . ನುತ ಕರಣಮಿಪ್ಪೊಂಬತ್ತುನ್ನತಿಯಿಂ ಕೂಡಲ್ಕೆ ಕೇಳ್ ಪರಿ [ಪಾಠಾಂ. ಚಟ] ಚ್ಛಿನ್ನಾಖ್ಯಂ (ಲಾಸ್ಯರಂ. ೫-೨೫). [ಸಂ.]

**ಪರಿಚ್ಛೇದ** (ನಾ). ೧. ಕತ್ತರಿಸುವುದು ; ತುಂಡುಮಾಡುವುದು : ಈಯುಪಾಯಕ್ಕೆ ವಂಚನೋಪಾಯಮಾವುದುಮಿಲ್ಲ ಎನಗೆ ಪರಿಚ್ಛೇದಮೇ ಕಾರ್ಯಂ (ಪಂಚತಂ. ೭೫-೯). ೨. ದೃಢನಿರ್ಧಾರ ; ನಿಶ್ಚಿತವಾದ ತೀರ್ಮಾನ, —ನಿರ್ಣಯ : ದರ್ಪಶಯನಸ್ಥನಾದ ನಿಜಪ್ರಾಣೇಶ್ವರನ ಪರಿಚ್ಛೇದಮನಱದು (ಪಂಪಭಾ. ೧೦-೪೪ ವ); ನಿಜಜನಕ ಗಮನ

ಪರಿಚ್ಛೇದಮನಜಾದು ಶಿಖಿಮುಖಕ್ಕೆ ವಂದ ಪಾದರಸದಂತೆ ನಿಜನಿಸರ್ಗ ಧೈರ್ಯಗುಣಂ ದೆಸೆದೆಸೆಗೆ ಪೋಗೆ (ಮಲ್ಲಿಪು. ೧೦-೨೬) ; ಬಂದಳ್ ಪರಿಚ್ಛೇದದಿಂ ಕಾರಿಕಾಲಮ್ಮೆ (ಕಾರಿಕ.ದೇ. ೨೮೮-೪೪). ೩. ಎಲ್ಲೆ; ಮೇರೆ; ಸೀಮೆ. ೪. ಪುಸ್ತಕದ ಒಂದು ಅಧ್ಯಾಯ,—ಸರ್ಗ; ಗ್ರಂಥದ ಒಂದು ಪ್ರಕರಣ: "ಕಾಂಡಃ=ಪರಿಚ್ಛೇದವುಂ, ಅಂಬುಂ, ನೀರುಂ" (ಕಾತಕ್ಕ. ೨೫೯) ; ಮುದ್ರಣಕ್ಕೆ ಸಂಬಂಧಪಟ್ಟ ದೋಷಗಳಲ್ಲಿ ಹೇರಳವಾಗಿರುವುವು ಯಾವುವೆಂದರೆ . . . ಅಶಾಸ್ತ್ರೀಯ ಪರಿಚ್ಛೇದ ವಿಭಜನೆ . . . ಸಾಲುಗಳ ಅಕ್ರಮ ಒಳಚಾಚುವಿಕೆ (ಮುದ್ರಕ.೩೦). ೫. ಅವಧಿ; ಮಿತಿ: ಅವಧಿಯನಿತಿಲ್ಲದೆಂದುಂ ತ್ರಿವಿಧಪರಿಚ್ಛೇದರಹಿತನಾದಂ (ವಿಷ್ಣುಪು. ೧-೪-೧೯). ೬. ವಿವೇಚನೆ: ಪಲವು ಉಪವಾಸಂ ಪತ್ತಿ ಚಿತ್ತದೊಳ್ಪರಿಚ್ಛೇದಬುದ್ಧಿಯಂ ನೆನೆದು (ತ್ರಿಷು. ೧೨-೨೫ ಪ). ೭. ಒಂದು ಅಳತೆ,—ಪ್ರಮಾಣ: "ಪರಿಚ್ಛೇದಮಂ ಮಾತ್ರೆಯೆಂಬುದು" (ಮಂಗರಾ. ೧೩೯-೬). [ಸಂ.]

**ಪರಿಚ್ಛೇದಂಗೆಯ್** (ಕ್ರಿ). ನಿಶ್ಚಯಿಸು; ತೀರ್ಮಾನ ಮಾಡು: ಪರಿಚ್ಛೇದಂಗೆಯ್ದನಿಬರುಂ ನಿತಂಬಿನಿಯರ್ ತಂತಮ್ಮ ಚೆಂಬೊನ್ನ ಮಾಡದ ನೆಲೆಯನೇಱಿ (ಅಜಪು. ೬-೧೧೦ ಪ). [ಪರಿಚ್ಛೇದ+ಕೆಯ್$_1$]

**ಪರಿಚ್ಛೇದನ** (ನಾ). =ಪರಿಚ್ಛೇದ. [ಸಂ.]

**ಪರಿಚ್ಛೇದಿ** (ನಾ). ದೃಢಸಂಕಲ್ಪದಿಂದ ಕೂಡಿದವನು; ನಿಶ್ಚಿತವಾದ ನಿರ್ಧಾರವನ್ನು ಮಾಡಿದವನು: ಪರಮೇಶ್ವರದೀಕ್ಷೆಯಂ ಮನಂಬಿಡೆ ಕೊಂಡೀ ಧರೆಯಂ ಪೊಗೞಿಸಿದನಿದೇಂ ಪುರುಪರಮೇಶ್ವರಸುತರ್ ಪರಿಚ್ಛೇದಿಗಳೋ (ಆದಿಪು. ೧೪-೧೩೯); ಕದನದೊಳ್ ಬೆಂಕೊಂಡು ಬಾಹಾಬಲೋನ್ನತಿಯಂ ಬೀಱುವೆನೆಂದು ಘೂರ್ಮಿಸಿದನೇಂ ಗಂಡಂ ಪರಿಚ್ಛೇದಿಯೋ (ಪಂಪರಾಮಾ. ೯-೧೪೪). [ಸಂ. ಪರಿಚ್ಛೇದಿನ್]

**ಪರಿಚ್ಛೇದಿಸು** (ಕ್ರಿ). ೧. ತುಂಡುಮಾಡು; ಕತ್ತರಿಸು: (ಕ). ೨. ದೃಢನಿರ್ಧಾರ ಮಾಡು; ನಿಶ್ಚಯಿಸು; ತೀರ್ಮಾನಿಸು: ಕೊಟ್ಟೊಬ[ನ] ಪೊಲ[ಮನ] ಕಾಡುವೆಮೆನ್ದು ಪರಿಚ್ಛೇದಿಸಿ ನಡವಾಗಳ್ದ ಬಟ್ಟೆಗೆಱೆ ನೆಱೆಮ್ಮೆ ಕಲಿಗಳ್ನೆಂಬೋ×××[ಱು]ಯ ಬಾೞೆನೆನ್ದು ಪರಿಚ್ಛೇದಿಸಿ (ಸೌಇಇ. XI-i, ೨೧-೭; 893) ; ಇಂದೆಮಗುಣಲ್ಕೆ ಬಗೆಯಿಲ್ಲುಪವಾಸಂಗೆಯ್ದಪ್ಪೆಮೆಂದು ಪರಿಚ್ಛೇದಿಸಿ ನುಡಿದೊಡೆ (ಪದ್ಮಾರಾ. ೮೧-೧೦) ; ತನ್ನ ನಲ್ಲನ ಕಳೇವರಮಂ ತಱಕೈಸಿಕೊಂಡು ತನ್ನ ಸಾವಂ ಪರಿಚ್ಛೇದಿಸಿ ಪಲ್ಲಂ ಸುಲಿಯುತ್ತುಮಿರ್ದ ಮಾದ್ರಿಯಂ ಕಂಡು (ಪಂಪಭಾ. ೨-೨೪ ಪ) ; ನೀನೆನ್ನ ಸೋಂಕಿದೊಡೆ ನಾಲಗೆಗಿಱಿ ಸಾವೆನೆಂದು ಪರಿಚ್ಛೇದಿಸಿ ನುಡಿಯೆ (ಪಂಪರಾಮಾ. ೯-೧೪೪ ಪ). ೩. ನಿವಾರಿಸು; ಪರಿಹರಿಸು: ಮನದ ಸಂಶಯಮಂ ಪರಿಚ್ಛೇದಿಸಿ ಕಾರ್ಯಾಂಶವಿಶೇಷಾರ್ಥಮಂ ನೆನೆದು ತಿಳಿದಾ ಧರಾಧೀಶ್ವರಂ ಮಂತ್ರಶಕ್ತಿಗೆ ಜನ್ಮಭೂಮಿಯಾದಂ (ಮಲ್ಲಿಪು. ೩-೧೧). [ಪರಿಚ್ಛೇದನ+-ಇಸು$_3$]

**ಪರಿಚ್ಯುತ** (ಗು). ೧. ಕೆಳಗೆ ಬಿದ್ದ; ಕಳಚಿದ. ೨. ಕಳೆದು ಹೋದ; ನಷ್ಟವಾದ. ೩. ಚೆಲ್ಲಿದ; ಸುರಿದ: ಉಗ್ರವೈರಿಸಂಘಾತಕರೀಂದ್ರಕುಂದ್ರ ಕಟಿಕೂಟಪರಿಚ್ಯುತಭೃಂಗಮಾಳಿಕಾಪೀತಮದಾಂಬುಕಂ . . . ಕದನಂ ಕದನತ್ರಿನೇತ್ರನಾ (ಪಂಪಭಾ. ೧೪-೩) ; ಯುವತಿಯರ ಕರಪರಿಚ್ಯುತಸಲಿಲಂಗಳ್ಕೊಳೆ ಬಿಡೆ ಕೆದಱುವ ಕಿಂಜಳ್ಕದಿನಾದುದು ಸರೋವರಂ ಕಪಿಶಜಳಂ (ರಮುದ. ೨೩೦ ಪ್ರಯೋ). (ನಾ). ೪. ಕೆಳಗೆ ಬಿದ್ದುದು: "ಪನ್ನಂ ಪತಿತಂ ಪರಿಚ್ಯುತಂ ವಿಗತಾರ್ಥಂ" (ವಸ್ತುಕೋ. ೧೦೬-೪೮). ೫. ಕೆಳಗೆ ಬಿದ್ದವನು: ದಿವಿಜವನಿತಾಸವಿಭ್ರಮಧವಳಾಪಾಂಗಮೆ ನಿಜಾಯುರಂಭೋನಿಧಿಯಂ ತವೆ ಪೀರ್ದುದೆನಿಸೆ ತೊಟ್ಟನೆ ದಿವದಿಂದಂ ಶ್ರೀಧರಂ ಪರಿಚ್ಯುತನಾದಂ (ಆದಿಪು. ೫-೯೯) ; ಅಂತಲ್ಲಿಂ ಪರಿಚ್ಯುತರಾಗಿ ಬಂದು (ಶಾಂತಿಪು. ೯-೩೪ ಪ). [ಸಂ.]

**ಪರಿಜನ** (ನಾ). ೧. ಸೇವೆಮಾಡುವ ಜನ; ಸೇವಕವರ್ಗ: ಪುರೋಹಿತನಂ ತಮ್ಮಂ ಮಱುದಿವಸಂ ಭದ್ರಿಸುವೆನೆನಲುಂ ಮುನ್ನಿನ ದಿವಸಮೊಳಗಣ ಪರಿಜನಮೆಲ್ಲಮಂ ಪಾರ್ವರನೂಡುವ ನೆವದೊಳೆ ಪೊಱಮಡಿಸಿ (ಪಂಪಭಾ. ೩-೪೭) ; ಪರಿಜನಸಂಭ್ರಮಕ್ಕೆ ತಹಿಮಕರಣದಿ ನೆಟ್ಟಿಱುತುಂ (ವರ್ಧಪು. ೯-೫೯) ; ಅವಾಂತರವಾದರೆ ಪರಿಜನರನ್ನು ಕರೆಯಲಿಲ್ಲವೇಕೆ? (ದ್ರಾಲತ್. ೧೧೦). ೨. ಸೇವಕ; ಪರಿಚಾರಕ. ೩. ದಾಸೀಸಮೂಹ; ಸಖೀಜನ: ಪರಿಜನಸಹಿತಂ ಮಂಡೋದರಿ ಬಂದು ಮುನೀಂದ್ರ ರಕ್ಷಿಸೆಂದೆಱಗುವುದುಂ (ಪಂಪರಾಮಾ. ೧೦-೧೭೬) ; ವಾರನಾರೀಪರಿಜನಪರೀತನುಂ . . . ವನಮಹತ್ತರಪುರಸ್ಸರನುಮಾಗಿ ಬರ್ಪಾಗಳ್ (ಚಂದ್ರಪು. ೭-೮೩ ಪ). ೪. ಸುತ್ತಲಿನ ಜನ; ಪರಿವಾರ: ಪರಿಜನಮುಮಂ ಸಖೀಜನಮುಮೆನ್ನನೆ ಚಿಂತಿಸದಂತು ತಂಗಿ ನೀನಿರು ಕರುಮಾಡದೊಳ್ (ಕಾದಂಬ. ೫೯೦) ; ಪರಿಜನದ ಭೂಪನಂತಃಪುರದಬಳಾಜನದ ನೆಗೆದ ಹಾಹಾರವಮೆಯ್ತರೆ ಕಿವಿಗೆ (ಪಂಪರಾಮಾ. ೩-೩೦) ; ಪರಿಜನಂಗಳು ಪುರಜನಂಗಳು ನೆರೆದು . . . ಅಳುತ್ತಿರೆ (ಬಸಪು. ೪೬-೩೫) ; ಅವಳನ್ನು ರಾಜಧಾನಿಗೆ ಕರೆದುಕೊಂಡು ಹೋಗಲು ಪರಿಜನರು ಬರುವರೆಂದು ಮಾತುಕೊಟ್ಟು (ಕಾವ್ಯಸ. ೪೬). ೫. ಪೋಷಣೆಗೆ ಒಳಪಟ್ಟವರು; ರಕ್ಷಣೆ ಹೊಂದಿದ ಜನ; ಆಶ್ರಿತ ವರ್ಗ: ಪರಿಜನಕ್ಕೆ ಡಱಾದೊಡೆ ಪೊರೆವುದುಂ . . . ಮೊದಲಾಗಿ ಮತ್ತಮುತ್ತಮಗುಣಂಗಳೊಳವು (ಪಂಚತಂ. ೨೧೪-೧) ; ಪರಿಜನಜೀವನಂ ಸಕಲದೇಶಸಮಾಹಿತವೃತ್ತಿ . . . ಎಂದಿನಂ ಕರಣಗಣಾಗ್ರತಸ್ಸರರ ಮಾಲೆ ಮನಕ್ಕೆಸಗಿತ್ತು ಲೀಲೆಯಂ (ಅನಂಪು. ೨-೨೪).

**ಪರಿಜನ ಪಾರಿಜಾತ**=ಪರಿಜನರಿಗೆ ಅಥವಾ ಸೇವಕವರ್ಗಕ್ಕೆ (ಕೇಳಿದುದನ್ನು ಕೊಡುವ) ಪಾರಿಜಾತವೃಕ್ಷದಂತಿರುವವನು; ಒಂದು ಬಿರುದು: ಚಾಳುಕ್ಯಾನ್ವಯಪ್ರಸೂತಂ ಪರಿಜನಪಾರಿಜಾತಂ ಭೂಪಮಾನ್ಧಾತಂ (ಸೌಇಇ. XX, ೭೧-೮; ಸು. 1109). [ಸಂ.]

**ಪರಿಜಪನ** (ನಾ). ಜಪ: 'ಪರಿಜಪನಂಗೆಯ್' ಪರಾ. [ಸಂ.]

**ಪರಿಜಪನಂಗೆಯ್** (ಕ್ರಿ). ಜಪವನ್ನು ಮಾಡು: ಪರಮನೊಳಗೊಳಗದೊಂದಂ ಪರಿಜಪನಂಗೆಯ್ಯೆಯುಂ ನೆಗಟ್ದವ್ಯಕ್ತಾಕ್ಷರದಿಂ ನಿಗೂಢತರನಿರ್ಝರರವ ಗುಂಜದ್ಗುಹಾತಳಕ್ಕೆಣೆಯಾದಂ (ಆದಿಪು. ೯-೮೬). [ಪರಿಜಪನ+ಕೆಯ್$_1$]

**ಪರಿಜು** (ನಾ). ೧. ರೂಪ; ಆಕಾರ; ಆಕೃತಿ: "ಪರಿಜೆಂದೆನೆ ರೂಪನಾಮದೊಳ್" (ಕರ್ನಾಶ. ೧೯) ; ಈ ಪರಿಜೀ ತನುಚ್ಛವಿಯನೀ ಪೊಸಜವ್ವನವೀ ಬೆಡಂಗನೀ ರೂಪುಮನೀ ವಿಳಾಸಮುಮನೇನೊಳಕೊಳ್ಳುಮೊ (ಆದಿಪು. ೩-೨೦) ; ಆ ಭಾವವಮಾ ಪರಿಜಾ ವಿಭ್ರಮಮಾ ಬೆಡಂಗು . . . ಏಂ ಮನಂಗೊಳಿಸಿತೋ ಚಾಳುಕ್ಯಕಂದರ್ಪನಾ (ಗದಾಯು. ೮-೫೦) ; ಅವನೊಂದೊದವಿದ ರೂಪುಮಂ ಬಯಸಲಾಗಳೆ ನಾಗನಿಳಿಂಪಯಕ್ಷವರ್ಗದ ಪರಿಜಂ ದಿಟಂ ಪಡೆವಂ (ಪುಣ್ಯಾಸ್ರ. ೭-೧೧) ; ಪರಿಜಿಂದೆಲ್ಲಂದದೊಳಂ ನರರಂ ಪೋಲ್ತಿರ್ಪ ಪರಕಟ ನೀಚರ್ (ನೀತಿಸಂ. ೨-೩೭೧). ೨. ಪ್ರತಿಮೆ; ವಿಗ್ರಹ; ಬೊಂಬೆ: ಪೊಸಮುತ್ತಿಂ ಕಡೆದಾ ಪರಿಜೆನೆ . . . ಕರಮೆಸೆದಂ ಭೂಪತಿ ಪುರಸತಿಯರ ಕಣ್ಗಳ ಕದಿರಿಂದ (ಜಯಂಕಾ. ೧೧-೫೬) ; ಮಿಸುನಿಯ ಪರಿಜೋ ಪೊಸಚಿನ್ನದ ಕರುವೊ (ಚಂಪ್ರಸಾಂ. ೭-೫೨) ; ಚಂದ್ರೋಪಳದ ಪರಿಜೆಂಬಂತೆ ಕಣ್ಗೊಪ್ಪುತಿರ್ದಳ್ (ರಾಜಶೇ. ೪-೧೨). ೩. ಚಿತ್ರಪಟ: ತರುಣಿ ನಲ್ಲನ ಪರಿಜನಿಲ್ಲಿ ತೋಱೆನಲು (ಸೌಂದಪು. ೧೭-೪೮). ೪. ರೀತಿ;

ಬಗೆ ; ಪ್ರಕಾರ : ಎರಡುಂ ಕರ್ಣದೊಳಂ ಪೊಳೆವ ರತ್ನಮಯಪತ್ರ ದಿಂದವಿನಬಿಂಬಯುಗಾಂತರಿತಮೆನಿಸಿಂದುಬಿಂಬದ ಪರಿಜಂ ಪರಿಭಾವಿಸ ದೇಕೆ ನಿನ್ನಯ ವದನಂ (ಚಂದ್ರಪು. ೩-೫೯); ಸುರಪತಿ ದಿಲೀಪ ರಾಮರ ಪರಿಜೊಂದಿರೆ ಗುರು ವಸಿಷ್ಠ ವಿಶ್ವಾಮಿತ್ರರ್ ಪೆರೆನೊಂದೆನಿಸಿದ ರೇನನುಸರಿಸಿದನಳಸಿಂಗರಾರ್ಯನದ್ಭುತಚರ್ಯಂ (ಚಕವಿ. ೩-೬೯); ಎರಡು ಪರಿಜಿನಳವೆರಡರಿಂ ತುಂಬಿ ಬಹುದೆಂದು: ವರಿಯ ತಿಂದಾಮೇಲೆ ಎಳೆ ಸವುತೆಯಂ ಮೆದ್ದು ಮೊರೆದು ದೊಂದುಳಿಯನ್ನು ಸಾರುತ್ತಲಿಹುದು (ಕಾಲೂರ. ೫೩-೮೧). ೫. ಭಂಗಿ ; ನಿಲವು ; ಠೀವಿ : ಇದು ಲೀಲಾಂದೋಳವಿಂದ್ದೋಳದ ದನಿ ನೆಜಿಗೊಳ್ವನ್ನೆಗಂ ಪಾಡಲೆಂದೇಱು ದಳಂ ತೂಗುತ್ತುಮಿರ್ದನ್ನಯ ಪರಿಜು (ಆದಿಪು. ೪-೯) ; ಶುಭ್ರಾಬ್ಜಮಂ ರಾಜಮರಾಳಂ ರಾಗದಿಂದೇಜುವ ಪರಿಜಿನ[ಪಾಠಾಂ. ಜದ] ಪೋಲ್ . . . ಸಿಂಹಾಸನಾಸೀನನಾದಂ (ಕುಸುಮಾ. ೩-೮೨). ೬. ಅವತಾರ : 'ಪತ್ತುವರಿಜು' ಪರಾ.

ಪರಿಜು ಮಾಡು = ಆಕೃತಿಯನ್ನು ಮಾಡು ; ಆಕಾರವನ್ನು ರಚಿಸು : ವಿನಯದಿಂ ಶಿವನೊಂದು ಪರಿಜು ಮಾಡಲ್ಕೆನೆಯಲನಿತಱೊಳೆ ರೂಪಾಗಿ ಶೂಲಿಗೆ ತುಳಿಲ್ಗೆಯ್ದು (ಅರಾಚ. ೧-೧-೯೧).

[ದೇ.॥ ತಮಿ. ಪರಿಚು ; ಮಲ. ಪರಿಚು; ತೆಲು. ಪರಸು, ಪರುಸು]

**ಪರಿಜುವಡೆ** (ಕ್ರಿ). ಆಕಾರವನ್ನು ತಳೆ ; ಆಕೃತಿಯನ್ನು ಹೊಂದು; ರೂಪವನ್ನು ಪಡೆ : ಶಿವಭಕ್ತಿಯೇ ಮೂರ್ತಿಗೊಂಡಂತೆ ರುದ್ರಯಜ್ಞವೆ ಪರಿಜುವಡೆದಂತೆ . . . ರೂಪು ವಿರಾಜಿಸಲ್ಕೆ ಬಂದಾ ಶಿವಬ್ರಾಹ್ಮಣಂ (ಸೌಂದಪು. ೧೫-೪೪); ತದಂಗನೆಯ ಭಾಸುರಮಾದ ವಿಶ್ವಾಸಮಣಿಯರಂ ಪರಿಜುವಡೆದುದೊ (ಅರಾಚ. ೧-೧೦-೬); ಶಶಿಕಳೆ ಭುವನದೊಳೀ ಕುವರವರಿಜುವಡೆದುದಯಿಸಿತೆಂಬವೊಲೆಸೆದು ಕಳೆಗಳೊಡವೆರೆಯೆ ವಿಳಾಸಂ ಬೆತ್ತು ಬಳೆದನವನಿಪತನಯಂ (ರಾಜಶೇ. ೪-೬೪).

[ಪರಿಜು+ಪಡೆ$_1$]

**ಪರಿಜುವೆರು** 'ಪರಿಜುವೆಱು' ನೋ.

**ಪರಿಜುವೆಱು**, ಪರಿಜುವೆರು (ಕ್ರಿ). ೧. = ಪರಿಜುವಡೆ : ವರವೀರ ಶೈವಪ್ರವರ್ತನಂ ಭಾವಿಸಲ್ ಪರಿಜುವೆತ್ತುವೊ ಶಾಂತಿದಾಂತ್ಯಾದಿಗಳ್ ನಾಡೆ ಪರಿಕಿಪೊಡೆ ರೂಪುವಡೆದುವೊ ಎಂದು ಭೂಜನಂ ಕೀರ್ತಿಸುತ್ತಿರೆ (ಅರಾಚ. ೧-೧-೨). **ಪರಿಜುವೆರು :** ೧. ಕಡುರಯ್ಯ ಪರಿಜುವೆತ್ತಿ ಡಿ ಕಿರಿದ ವಿಟಪಿಯಿಂ (ಏಕೋಪು. ೨-೧೯). ೨. ಮಹಿಮೆಯನ್ನು ಪಡೆ : ಸೀರ್ಮೂಗಳ ಗಂಡನಂ ಪೆಂಡತಿಯೊಲಾಳ್ದ ಪನ್ನತಿಕೆಯಿಂ ಪರಿಜುವೆತ್ತ ಬಿಸು ಗೊರಲ ರಕ್ಷಿಸು ಪೂಗುವರತತ್ತ್ರಿಯಂ (ಏಕೋಪು. ೩-೩).

[ಪರಿಜು+ಪೆಱು$_1$]

**ಪರಿಜುಸೊಡರ್** (ನಾ). ಚಿತ್ರದಲ್ಲಿ ಬರೆದ ದೀಪ : ಪರಿಜುಸೊಡ ರಂತವಂ ಬಿಕ್ಕು ನಿಕ್ಕುವಮಲ್ತು (ಸೌನಂದ. ೭-೪೮).

[ಪರಿಜು+ಸೊಡರ್]

**ಪರಿಜೆ** 'ಪರಿಚೆ' ನೋ.

**ಪರಿಜೆವಿಡು** (ಕ್ರಿ). ಉಂಬಳಿ ಕೊಡು ; ದತ್ತಿ ಬಿಡು : ಬಾಣಗಾವು ಣ್ಡಂಗಾ ಕೆರೆಯು ಬವರ ಪರಿಜೆವಿಟ್ಟರ್ (ಮೈಅರಿ. ೧೯೨೬, ೯೨-೭; ? ).

[ಪರಿಜೆ ?+ಬಿಡು$_1$]

**ಪರಿಜ್ಞಾನ** (ನಾ). ಸಂಪೂರ್ಣವಾದ ಜ್ಞಾನ ; ಕೂಲಂಕಷವಾದ ಜ್ಞಾನ : ಕಲ್ಪನಾಂಶ . . . ನಿಜವಾಗಿ ಶಕ್ತವೂ ತೀವ್ರವೂ ಆದ ಪರಿ ಜ್ಞಾನದ ಕಾರ್ಯ (ಸಾಹಿಪ್ರ. ೮); ಲೌಕಿಕ ಮತ್ತು ಪಾರಲೌಕಿಕ ವಿಷಯ ಗಳ ಪರಿಜ್ಞಾನ ಮಾಡಿಕೊಡುವರು (ಗ್ರಂಥಾಲ. ೨); ಸಮಯ ಸಂದರ್ಭ ಗಳ ಪರಿಜ್ಞಾನವು ಸಮಗ್ರವಾಗಿರಬೇಕು (ಆರ್ಯಧ. ೪). [ಸಂ.]

**ಪರಿಜ್ಞಾನತೆ** (ನಾ). ವಿಶೇಷವಾದ ಜ್ಞಾನ ; ಅಧಿಕವಾದ ತಿಳಿ ವಳಿಕೆ : ಲಾಭಾಲಾಭದೊಳು ಪರಿಜ್ಞಾನತೆಯುಂ ಪುಣ್ಯಾಪುಣ್ಯದೊಳು ವಿಚಾರಣಿಪುಣತೆಯುಂ . . . ಪೀತಲೇಶ್ಯಾಪರಿಣಾಮಮೆಂದಱಿವುದು (ಪಸಾರ. ೪೧೫). [ಪರಿಜ್ಞಾನ+-ತೆ$_3$]

**ಪರಿತವ** 'ಪರುತವ' ನೋ.

**ಪರಿತವಣೆ** 'ಪರುತವಣೆ' ನೋ.

**ಪರಿತವಿಸು** 'ಪರುತವಿಸು' ನೋ.

**ಪರಿಡಕ್ಕೆ** 'ಪಡಡಕ್ಕೆ' ನೋ.

**ಪರಿದೋಣಿ** (ನಾ). ನೀರು ಹರಿದು ಹೋಗಲು ಮಾಡಿರುವ ಕೊಳವೆ,-ದೋಣಿ : ನವಕಾಂಚನಕೇತಕೀದಳಂಗಳ ಪರಿದೋಣಿಯಿಂ . . . ಸಮೆದಾಡುವ ಜಲಾಟಳಂಗಳಂ (ಕಾದಂಬ. ೨೧೫).

[ಪರಿ$_2$+ದೋಣಿ$_2$(<ದೋಣಿ$_3$)]

**ಪರಿಣತ** (ಗು). ೧. ಬಾಗಿದ ; ಬಗ್ಗಿದ. ೨. ಕೊನೆಯ ಅವಸ್ಥೆಗೆ ಬಂದ ; ವಯಸ್ಸಾದ ; ಮುಪ್ಪಾದ : ಪರಿಣತದಿನಶಿರದಂತಿರೆ ಖರ ಕಿರಣಂ ಕಾಲಚಕ್ರಹತಿಯಿಂ ಕೆಡೆಯಲ್ ಸುರಿದು ಪರೆದರುಣಜಲದಂತಿರೆ ಪಸರಿಸುತಿರ್ದುದಪರಸಂಧ್ಯಾರಾಗಂ (ಲೀಲಾವ. ೧೦-೧೯). ೩. ಮಾಗಿದ ; ಹಣ್ಣಾದ : ಸೀಹಾರಶಕಲಧವಲಪರಿಣತ ಕಪಿತ್ಥಫಳಪರಿಮಳಮಧುರದಧಿ ಯುಮಂ . . . ಭರತೇಶನಾರೋಗಿಸಿದಂ (ಆದಿಪು. ೧೧-೨೬ ಪ); ಪರಿಣತ ಗಂಧಶಾಲಿವನಗಂಧದಿನುಲ್ಲಸಿತಾಂಬುಜಾಕರೋತ್ಕರನವಗಂಧದಿಂ . . . ದಿಶಾಪರಿಧಿಯನೆಯ್ದಿ ಬಾಸಣಿಸುತಿರ್ಪುದು ಸಾರ್ಥಕೆಯಂ ನಿಜಾಖ್ಯೆಯೊಳ್ ನೆರಪಿ ಸುಗಂಧಿಮಂಡಲಂ (ಚಂದ್ರಪು. ೩-೧೧). ೪. ಪರಿಪಕ್ವಸ್ಥಿತಿಗೆ ಬಂದ ; ಪ್ರೌಢವಾದ : ಕ್ಷಿತಿಪೂಜ್ಯಂ ಜಿತದುರಿತಂ ನುತಸಂಪ್ರತಿಭೂತ ಭಾವಿಪರಿಣತತತ್ತ್ವಂ (ಶಾಂತಿಪು. ೧-೧೮); ಪರಿಣತ ಪ್ರೌಢಿಗಳಿಗಂತಃಕರಣನೆನೆ ವುದು ಸುಜನರಿಗೆ ನಿಷ್ಠುರತೆಗಲ್ಲದೆ ಮನವಸೀಯದು ಮಹಿಯ ಮೂಢ ಜನ (ಕುಪ್ಯಾಉ. ೯-೪೫). ೫. ಬದಲಾಯಿಸಿದ ; ವ್ಯತ್ಯಾಸಹೊಂದಿದ. ೬. ನೈಪುಣ್ಯವುಳ್ಳ ; ನುರಿತ ; ಸಮರ್ಥವಾದ : ಅರಿನರ ಪತಿರೋದಳನಪರಿಣತೋಗ್ರಾಸಿಭಯಂಕರಕರರ್ (ಪಂಪಭಾ. ೧-೨೨) ; ಪರಿಣತಕವೀಂದ್ರವದನಾಜಿರದೊಳ್ . . . ರಂಜಿಸೆ ನರ್ತಿಪ ಸರಸ್ವತೀಲಾಸ್ಯ ಭೇದಮಂ ಜಡನಱಿಯಂ (ಮಲ್ಲಿಪು. ೧-೩೪); ಅನುಜರವಿವೇಕಿಗಳು ಪರಿಣತ ಜನರಲಧಿಕನು ನೀ (ಕುಪ್ಯಾಆ. ೨೩-೩೫). ೭. ಚೆನ್ನಾಗಿ ಬೆಳೆದ,— ವಿಕಾಸ ಹೊಂದಿದ. (ನಾ). ೮. ಪರಿಪಕ್ವವಾದುದು : ಆ ಭೂತಂ ಗಳುಂ ಕಾಯಾಕಾರಪರಿಣತಂಗಳಕ್ಕುಮೆಂದು ಪ್ರತ್ಯಕ್ಷಪ್ರಮಾಣಸಿದ್ಧಂ (ಶಾಂತಿಪು. ೮-೧೨೮ ಪ) ; ಪರಿಣತಮೆನಿಸಿರ್ದಂತಃಕರಣಚತುಷ್ಟಯ ಗುಣ ಸ್ವಭಾವಂಗಳಂ . . . ಅಭಿವರ್ಣಿಸುವೆಂ (ಶೃಂಗಾರ. ೧-೨೬). ೯. ಪ್ರೌಢ ನಾದವನು ; ಪರಿಪೂರ್ಣನಾದವನು : ಚತುರ್ಜ್ಞಾನನೇತ್ರರಂ ಭೋಂಕನೆ ಕಂಡು ರಹರಹ ಪರಿಣಾಮಪರಿಣತನಾಗಿ ಸಮುದಾಯಮಂ ಬಂದಿಸಿ (ಸುಕುಮಾ. ೮-೪೮ ಪ); ನರೇಂದ್ರಂ . . . ಪರಿನಿಷ್ಪ್ರ ಮಣಕ್ಕೆ ಮನಂ ಪರಿಯೆ ಪರಿಚ್ಛೇದಿಸಲ್ಕದೇಂ ಪರಿಣತನೋ (ಪುಷ್ಪಪು. ೧೩-೭೭). ೧೦. ವಯಸ್ಸಾದವನು ; ವೃದ್ಧ ; ಮುದುಕ : ಶಾಕುಂತಲವನ್ನು ಪುನಃಪುನಃ ಓದಬೇಕೆನ್ನಿಸುತ್ತದೆ . . . ಅದು ತರುಣ ರಿಗೆ ಪ್ರೇಮಕಥೆ ಪರಿಣತರಿಗೆ ಆತ್ಮಸಂಸ್ಕಾರ (ಧರ್ಮಸಾ. ೬೭). ೧೧. ನೈಪುಣ್ಯವುಳ್ಳವನು ; ನಿಷ್ಣಾತ ; ವಿಶಾರದ : ಅಂತವರ್ಗೆ . . . ಷೋಡಶಕ್ರಿಯೆಗಳಂ ಗಾಂಗೇಯಂ ತಾಂ ಮುಂತಿಟ್ಟು ಮಾಡಿ ಶಸ್ತ್ರ ಶಾಸ್ತ್ರಂಗಳೊಳತಿಪರಿಣತರಂ ಮಾಡಿ (ಪಂಪಭಾ. ೧-೮೭ ಪ) ; ಪರಿಣತನ ಪ್ಪುದಱಿಂ ವ್ಯಾಕರಣದೊಳವಯವದಿನವಱ ಶಬ್ದಾರ್ಥಮನಚ್ಚರಿವಟ್ಟು ಭಾವಿಸುತ್ತುಂ (ಧರ್ಮಾಮೃ. ೮-೩೩); ರಾವಣನ ಮಗನಿವನು . . . ಅವ

ಕೈದುಗಳಾವ ಶಸ್ತ್ರಾಸ್ತ್ರದಲಿ ಪರಿಣತನು (ಕೌಶಾ.೨೭-೧೨). **೧೨.** ತನ್ನ ಕೊಂಬಿನಿಂದ ಅಡ್ಡವಾಗಿ ತಿವಿಯುವ ಆನೆ: "ಅಡ್ಡವಿಱುವಾನೆ ಪರಿಣತಮೆಂಬುದು" (ಹಲಾಯು. ೬೭-೭೭). [ಸಂ.]

**ಪರಿಣತಪ್ರಜ್ಞೆ** (ನಾ). ಪರಿಪಕ್ವವಾದ ಜ್ಞಾನ ; ಪ್ರೌಢವಾದ ತಿಳಿವಳಿಕೆ,-ಅರಿವು : ನಾಸ್ತಿಯವರ ಕತೆಗಳಲ್ಲಿಯು ಪರಿಣತಪ್ರಜ್ಞೆ ಬೇರೆಲ್ಲಿಯೂ ಕಂಡುಬರುವುದಿಲ್ಲ (ಹೊಸಕ್ರಿ. ೨೭೭). [ಪರಿಣತ+ಪ್ರಜ್ಞೆ]

**ಪರಿಣತಮತಿ** (ನಾ).೧. = ಪರಿಣತಪ್ರಜ್ಞೆ. ೨. ಪ್ರೌಢವಾದ ಜ್ಞಾನವುಳ್ಳವನು : ಆ ನಾಡವರ್ಗಳ್ ಚದುರರ್ನ್ನಿಜದಿಂ ಕುಱಿತೋದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್ (ಕವಿರಾ. ೧-೩೮). [ಪರಿಣತ+ಮತಿ]

**ಪರಿಣತವಯಸ** (ನಾ). ವಯಸ್ಸಾದವನು ; ವೃದ್ಧ : ತರುಣವೃಷಂ ಕೆಲೆದು ತೊಟಲ್ತರೆ ಕಂಡುದಱಿಂದೆ ಜೈನದೀಕ್ಷೆಗೆ ಮೆಯ್ಯಂ ತರುಣಜನಂಗಳೆ, ತರ್ಪರ್ ಪರಿಣತವಯಸರ್ಕಳಪ್ಪವರ್ ಮೆಯ್ದಾರ್ದರ್ (ಆದಿಪು. ೧೫-೪೪); ಅಂತು ಪ್ರಿಯಪುತ್ರವಿಯೋಗವಿಹ್ವಲೀಭೂತಚೇತನೆಯಿಂ ಮೆಯ್ಯಂ ನಿಜಾಸಲಾಜಿದೆಯುಂ ಪರಿಣತವಯಸನಾಗಿಯುಂ ಬಾಳಮರಣಮನೆತ್ತಿಕೊಂಡು (ಶಾಂತಿಪು. ೬-೯೧ ವ); ಪರಿಣತವಯಸರೆವಿಕ್ಕಣ್ಣುರುಡರೆನೆಮಗಿಂಬುಕೆಯ್ಯುದುಚಿತಂ (ಗದಾಯು. ೪-೨). [ಸಂ. ಪರಿಣತವಯಸ್]

**ಪರಿಣತಿ** (ನಾ). ೧. ಬಾಗುವಿಕೆ ; ಬಗ್ಗುವಿಕೆ. ೨. ಪರಿಪಕ್ವತೆ ; ಪ್ರಬುದ್ಧತೆ : ಅಂತು ಮನದೊಳೊಗೆದ ಕಾರುಣ್ಯರಸಮೆ ಸೀತೆಯೊಳಾದನುರಕ್ತತೆಯಂ ಕರ್ಚಿ ಕಳೆವುದುಂ ಸ್ವಭಾವಪರಿಣತಿಯೊಳ್‌ನಿಂದು ಸ್ವಕೀಯಾಪ್ತಪುರುಷಪರಿಷಜ್ಜನಕ್ಕಿಂತೆಂದಂ (ಪಂರಾಮಾ. ೧೪-೧೧೩ ವ); ಸತ್ಕ್ರಿಯೆಗಳೊಳಿಹಂಗೆ ಗರ್ವಿಸಿ ನುಡಿದವಂಗಂ ಸಾಂಗವಹುದೇ ಭಕ್ತಿಪರಿಣತಿ[ಪಾಠಾಂ. ಣಯು] (ಬಸವಪು. ೨೪-೮೯). **೩.** ವ್ಯತ್ಯಾಸ ; ಬದಲಾವಣೆ ; ರೂಪಾಂತರ : ಕಲಲಘನಫೇನ ಬುದ್ಬುದಾದಿ ಪರಿಣತಿಯಿಂ ನವಮಾಸಾವಸಾನಸಮಯದೊಳ್ ಸ್ತ್ರೀಪುರುಷ ಯುಗಳಮೆಯಾಗಿ ಪುಟ್ಟುಗುಂ (ಆದಿಪು. ೫-೪೧ ವ) ; ಬಹುವಚನಸ್ಫುರಿತ ಕ್ರಿಯೆಗೇಕತೆ ನಿಜಪರಿಣತಿ[ಪಾಠಾಂ. ತೆ] ಮೇಣ್ ಧಾತುಗೇಕವಚನದೊಳತ್ವಂ (ಶಮದ. ೧೨೫). **೪.** ಸಫಲತೆ ; ಈಡೇರುವಿಕೆ : ಮನಕ್ಕೆಂತಾನುಂ ಕಾಲಲಬ್ಧಿವಶದಿಂ ನಿವೃತ್ತಿಪರಿಣತಿಯೊಳ್ ಪರಿಣಮಿಸಿದ ಸುಸ್ಥತೆಯಂ ವ್ಯರ್ಥಂ ಮಾಡದೆ (ಚಂದ್ರಪು. ೪-೧೮ ವ) ; ಪುಣ್ಯದ ಫಲದ ಪರಿಣತಿಯೆಂತುಟೋ (ನಿಭಾಗ. ೧೦-೧೫-೧೭). **೫.** ಫಲ ; ಪರಿಣಾಮ : ಕಲುಷಮತಿ ಶಬರನಾದಂ . . . ಲುಬ್ಧಕಂ ಬದ್ಧರೋಷದಿಂ ಬೆಕ್ಕಾದಂ ಅಂತು ಪರಸ್ಪರರೋಷಘಾತಪರಿಣತಿಯಿಂ (ಪಂರಾಮಾ. ೧೦-೯೬ ವ). **೬.** ಮುಕ್ತಾಯ ; ಕೊನೆ : ವೃಷಭನ ಅನಿಮಿತ್ತ ರೋಷಾವೇಶವಿಷಮತೆಗಮಾ ಜರಾದುರ್ಬಲಬಲೀವರ್ಧದುರ್ದಶಮರಣಾಯಾಸಪರಿಣತಿಗಂ ವಿಸ್ಮಯಂಬಟ್ಟು (ಚಂದ್ರಪು. ೨-೩೦). **೭.** ಮುಪ್ಪು ; ವೃದ್ಧಾಪ್ಯ. **೮.** ನೈಪುಣ್ಯ ; ಪ್ರೌಢಿ ; ಕುಶಲತೆ : ಶ್ರೀಗೆ ಫಳಂ ಚಾಗಂ ವಾಕ್ಶ್ರೀಗೆ ಫಳಂ ಸರ್ವಶಾಸ್ತ್ರಪರಿಣತಿ (ಪಂಪಭಾ. ೬-೧) ; ತರುಪಾಷಾಣಾದಿ ಕರ್ಮ್ಮಾಂತರಪರಿಣತಿಯಂ ಪದ್ಮಜಂ ಲೋಕದೊಳ್ಬಿತ್ತರಿಸಲ್ವೇಟ್ಟುಂ (ಎಕ. VII, ಶಿಕಾ. ೧೨೩-೫೨ ; 1158) ; ಅಶ್ವಾರೋಹಣಪರಿಣತಿಯಿಂ ಪರಿಶೋಭಿವಡೆದು (ರಾಜಶೇ. ೧೩-೮೨ ವ). [ಸಂ.]

**ಪರಿಣತಿದೋಱು** (ಕ್ರಿ). ನೈಪುಣ್ಯವನ್ನು ತೋರು ; ಪ್ರೌಢಿಮೆಯನ್ನು ಪ್ರದರ್ಶಿಸು : ಪರಿಣತಿದೋರ್ಪ ವಾಹಳಿತನಂ ಬಗೆಗೊಂಡುದು ಮಂತ್ರಿಪುತ್ರನಾ (ರಾಜಶೇ. ೧೩-೮೨). [ಪರಿಣತಿ+ತೋಱು]

**ಪರಿಣತಿವಡೆ** (ಕ್ರಿ). ೧. ಪರಿಪಕ್ವತೆಯನ್ನು ಹೊಂದು ; ಪರಿಪೂರ್ಣತೆಯನ್ನು ಹೊಂದು : ಗುರುಸನ್ನಿಧಿಯೊಳ್ಮನ್ನಂ ಪರಿಣತಿವಡೆದಿರ್ದ ಸಕಳವಿದ್ಯೆಯನೀಗಳ್ ಪರಿವಿಡಿಗೆಯ್ವಂತೆ ಕಳಾಧರನಾದಂ ಶ್ರೀಧರಂ (ಮಲ್ಲಿಪು. ೪-೧೩೪) ; ಪರಿಣತಿವಡೆದಂ ವಿದ್ಯಾಪರಿಕರದೊಳಮಾತ್ಮಸುತನುಂ (ಪುಷ್ಪಪು. ೪-೬೨). ೨. ನಿಪುಣತೆಯನ್ನು ಪಡೆ : ಅಗಳೊರ್ವಳಂತಃಪುರಕಾಂತೆ ವಯಃಪರಿಣತಿಯೊಡನೆ ಪರಿಣತಿವಡೆದ ವಚನಚಾತುರ್ಯಮಂ ಮೆಱೆಯಲರಸಿಗಿಂತೆಂದಳ್ (ಮಲ್ಲಿಪು. ೪-೮೧). [ಪರಿಣತಿ+ಪಡೆ$_1$]

**ಪರಿಣತಿವೆಱು** (ಕ್ರಿ). ಸಫಲತೆಯನ್ನು ಹೊಂದು ; ಸಿದ್ಧಿಯನ್ನು ಪಡೆ : ಪಲವು ಸುಕೃತಮಿಂತು ಪರಿಣತಿವೆತ್ತುದೊ . . . ಎನೆ ಕುಲವಧು ಕುಱುಹುಗೊಂಡಿಹಳು(ಪದಿಬ. ೨-೧೮). [ಪರಿಣತಿ+ಪೆಱು$_1$]

**ಪರಿಣತಿಸುಖ** (ನಾ). ಕಟ್ಟಕಡೆಯ ಸುಖ ; ಕೊನೆಯ ಆನಂದ : ಪರಿಣತಿಸುಖಮಂ ಭಾವಿಸೆ ಶರೀರಿಗರ್ಹತ್ಪ್ರವಚನಮಲ್ಲದೆ ಪೆಱತಿಲ್ಲ (ಚಂದ್ರಪು. ೨-೩೯). [ಪರಿಣತಿ+ಸುಖ]

**ಪರಿಣತೆ$_1$** (ನಾ).ನಿಪುಣೆ; ಚತುರೆ: ಚಿತ್ರಕರ್ಮಚತುರೆಯರುಂಸುಭಾಷಿತಪಠಣಪರಿಣತೆಯರುಂ ಎನಿಸಿದ ಕನ್ನಿಕೆಯರೊಡನೆ . . . ಬಿಜಯಂಗೆಯ್ದಂ (ಕಾದಂಉ. ೭೫) ; ವಿದ್ಯಾನೀಕವನು ಪರಿಚರಿಸಿ ಪರಿಣತೆಯಾಗಿ ಸುಖದಿಂದೆ ಆ ಕುಮಾರಿತಿಯಿರುತಿರಲು (ಪ್ರಭುಲೀ. ೩-೩೬). [ಪರಿಣತ+-ಎ$_2$]

**ಪರಿಣತೆ$_2$** (ನಾ). ೧. ನಿಪುಣತೆ ; ಪ್ರೌಢಿ ; ಚಾತುರ್ಯ : ಇಭಪರಿಣತೆಯೊಳಮಾನುಷವಿಭವದೊಳ್ (ಎಕ. XIII, ೩೩೦-೯ ; 929) ; ತರುಣತೆ ಪೋಗಿ ಜಿನಾಗಮಪರಿಣತೆ ನಿಮಗಾಗೆ (ಅಜಿಪು. ೨-೧೦೧) ; ಏನು ಪರಿಣತೆ ನಿನಗೆ ಬಾಣಸಿಯಾನು (ಕುವ್ಯಾವಿ. ೧-೨೨). ೨. ಪರಿಪಕ್ವತೆ; ಪ್ರಬುದ್ಧತೆ : ಪರಿಣತೆಗಿನ್ನುಮಿಲ್ಲಬಳೆ ತಾನಿದು ಮೈನೆರೆದೊಂದು ಸುಗ್ಗಿ ಬಿತ್ತರಿಸುಗುವಣ್ಣ ನಿಮ್ಮ ದೆಸೆಯಿಂ ಕಳೆಯೊಳ್ ಶ್ರವಮುಂಟು (ಸೂಕ್ತಿಸು. ೮-೪೨೮). [<ಸಂ. ಪರಿಣತಿ]

**ಪರಿಣದ್ಧ** (ಗು). ೧. ಸುತ್ತಿದ ; ಕಟ್ಟಿದ. ೨. ವಿಶಾಲವಾದ ; ಅಗಲವಾದ : ಲೋಕದ ಚೆಲ್ವೆಲ್ಲಮನೊಳಕೊಂಡು ರೇಖೆಗೊಂಡ ಲಾಟೇಲಲಾಮನ ಪರಿಣದ್ಧಕಂಧರಂ ಯುವರಾಜಕಂಠಿಕಾಭರಣಮಂ ಕಟ್ಟುವುದರ್ಕೆ ನೋಂತು ತನ್ನ ಚೆಲ್ವನಲ್ಲದೆ ಪೆಱರ ಚೆಲ್ವನಾಸೆವಡದಂತಾದುದು (ಪಂಪಭಾ. ೨-೩೯ ವ). [ಸಂ.]

**ಪರಿಣಮ** (ನಾ). ೧. ಮುಕ್ತಾಯ ; ಕೊನೆ : ಅನ್ನಮುಣ್ಣದ ಬ್ರತಮಂ ಪರಿಣಮಂ ಮಾಡಿ ದೇವರ ದಿಬ್ಯಶ್ರೀಪಾದಮಂ ಪೂಜಿಸುತ್ತಮಿರೆ (ಎಕ. XI, ದಾವಣ. ೧೫೫-೩೦ ; 1124). ೨. ಫಲ ; ಪರಿಣಾಮ : ನೆರೆವ ಧ್ವಿಟಂಕೃತಿಯ ದಶನಾದಗಳೆಂದೆಂಬ ಶರಧಿಯೊಳು ಮುಳುಗಿ ಮೈಮಱೆದ ಪರಿಣಮವೇ (ಕೈಕವ. ೪-೧೦-೧). [< ಸಂ. ಪರಿಣಾಮ]

**ಪರಿಣಮತೆ** (ನಾ). ಪ್ರಬುದ್ಧವಾಗುವುದು ; ಪ್ರೌಢತೆ : ಬಳಿಕಾ ಗರ್ಭದೊಳಗೆ ಮೂಱು ಪೊಱಗೆ ಮೂಱು ವರ್ತಿಸುವ ಜಾಯತೆ ಅಸ್ತಿತೆ ಪರಿಣಮತೆ [ಪಾಠಾಂ. ವಿಪರಿಣತೆ] . . . ವಿನಶ್ಯತೆ ಎಂಬಾ ಷಡ್ಭಾವವಿಕಾರಮುಳ್ಳಾತನೆನಿಸಿ (ವಿವೇಕ. ೨೫೭) ; ಊರ್ಮಿಭೂತಗಳಾರು, ಅಸ್ತಿ, ಜಾಯತೆ, ಪರಿಣಮತೆ . . . ವಿನಶ್ಯತೆ ಎಂಬ ೬ ತರಂಗಗಳಿಂದ ಕೂಡಿರುವುದು (ಹಸಾರ. ೭-೭ ಪದ್ಯಾರ್ಥ) ; ಪರಿಣಮತೆ = ಶೈಶವಾವಸ್ಥೆ ದಾಟುವುದು (ಹಸಾರ. ೭-೭ ತಾತ್ಪರ್ಯ). [< ಸಂ. ಪರಿಣಾಮತಾ]

**ಪರಿಣಮನ** (ನಾ). ಬದಲಾವಣೆ ; ಮಾರ್ಪಾಟು ; ರೂಪಾಂತರ : ನಿಜನಿರಂಜನಪರಮಾತ್ಮನಲ್ಲಿ ಸಂಯಮನಂ ಗಮನಂ ಪರಿಣಮನಂ . . . ಆದಿ ದ್ವಾದಶವಿಧಾನುಷ್ಠಾನಂ ತಪಮೆಂಬುದಕ್ಕುಂ (ತತ್ತ್ವಪ್ರ. ೨೪೮) ; ಕುಂಬಾರನ ಮಡಿಕೆ, ಕುಡಿಕೆಗಳಿಗೆ . . . ಪರಿಣಮನ ಕ್ರಿಯೆಗಾಗಿ ಒದಗಬೇಕಾಗುತ್ತವೆ (ಕಾವ್ಯಕು. ೬೬). [ಸಂ.]

**ಪರಿಣಮಿಸು** (ಕ್ರಿ). ೧. ಬಾಗು ; ವಂದಿಸು ; ನಮಸ್ಕರಿಸು : ಸೋಪಾನಪಂಕ್ತಿತ್ರಯರೂಪದಿನಂಬರಮೆ ಜಿನರಾಜಭಕ್ತಿಯಿಂ ಪರಿಣ [ಪಾಠಾಂ. ಣಾ]ಮಿಸಿದಂತೆ ಸೊಗಯಿಸಿರ್ದ ಸೋಪಾನಪಂಕ್ತಿಮಾರ್ಗಂಗಳೊಳ್ (ಆದಿಪು. ೭-೫೭ ಪ) ; ಆಹ್ಲಾದಮಾನಸರಾಗಿ ಭಕ್ತರು ಪರಿಣಮಿಸುತಿರಲು (ಬಸಪು. ೯-೧೮) ; ಅಲ್ಲಮಪ್ರಭು ಬರಲು ಮುಕ್ತಾಯಿಗಳು ಪರಿಣಮಿಸಿದರು ಭಕ್ತಿಯಲಿ (ಪ್ರಭುಲಿ. ೧೨-೪). ೨. ಬದಲಾವಣೆಯಾಗು ; ರೂಪಾಂತರ ಹೊಂದು ; ಮಾರ್ಪಾಟಾಗು : ನೀನೆಮಗಿದಿರಂ ಬಂದು ವಂದಿಸಿ ವಿಧಿಯಿಂದರ್ಚಿಸಲೊಡಂ ನಿಧಿಗಳಾಗಿ ಪರಿಣಮಿಸುವೆವೆಂದು ಪೇಳ್ದುದುಂ (ಪಂಚತಂ. ೧೯೧-೯) ; ಆಕೆಗೆ ರಾಮನಲ್ಲಿದ್ದ ಮೋಹವು ಕಡೆಗೆ ಕ್ರೋಧವಾಗಿ ಪರಿಣಮಿಸಿತು (ಕಲಾಧ. ೯೭) ; ಅಂಡಯ್ಯನ ಕೈಯಲ್ಲಿ ಕಾಮದಹನದ ಕಥೆಯು ಮನ್ಮಥವಿಜಯವಾಗಿ ಪರಿಣಮಿಸಿತು (ಸಾಹಿಸ. ೧೩೭). ೩. ಆಕಾರವನ್ನು ಪಡೆ ; ಮೈದೋರು; ರೂಪು ತಳೆ : ಹೈಮಾಚಲಮಂಭೋರೂಪದಿಂದಂ ಪರಿಣಮಿಸಿದುದು . . . ಎನಲ್ ಚೆಲ್ವದಾಯ್ತು ಬೃಷಂಡಂ (ಕಾದಂಪೂ. ೬೩೪) ; ಪರಿಣಮಿಸಿದುದಿಲ್ಲಿ ಜಳಸ್ವರೂಪದಿಂ ತಿಂಗಳ್ (ಚಂದ್ರಪು. ೧-೮೯) ; ಪರಿಣಮಿಸಿರ್ಕುಂ ಪ್ರಕೃತಿಸ್ವರೂಪದಿಂ ಮಧ್ಯಮೈಕವಚನಂ ವಿಧಿಯೊಳ್ (ಶಮದ. ೨೩೦) ; ಕನ್ನಡಿಯಲ್ಲಿ ಕಂಡ ಕನ್ನೆಯ ರೂಪಿನಂತೆ ಪರಿಣಮಿಸಿ (ಸೌಗಂಧಿ. ೩೯೦-೩೩). ೪. ಉಂಟಾಗು ; ಸಂಭವಿಸು : ಅಂತು ಸೂತ್ರಿಸಿದ ಸೂತ್ರ[ದ] ವೃತ್ತಿ ನಿಜಾತ್ಮವೃತ್ತಿವೋಲ್ ಪರಿಣಮಿಸಿತ್ತು (ಪಂಪಭಾ. ೨-೩೪) ; ಮನಕ್ಕೆಂತಾನುಂ ಕಾಲಲಬ್ಧಿವಶದಿಂ ನಿವೃತ್ತಿಪರಿಣತಿಯೊಳ್ ಪರಿಣಮಿಸಿದ ಸುಸ್ಥತೆಯುಂ ವ್ಯರ್ಥಂ ಮಾಡದೆ (ಚಂದ್ರಪು. ೪-೧೮ ಪ); ಅರಮೆ ಕಕಾರಂ ಡಟದಿಂ ಪರಿಣಮಿಕುಂ (ಶಮದ. ೨೫೭) ; ತಾಯಿಯ ಮುದ್ದು, ತಂದೆಯ ಕಾಠಿಣ್ಯ ಅನೇಕ ವೇಳೆ ಮಕ್ಕಳ ಪುರೋಭಿವೃದ್ಧಿಗೆ ಕುಂದಕಗಳಾಗಿ ಪರಿಣಮಿಸುತ್ತವೆ (ಚೆಂಗಾಳ್ವ. ೪). ೫. (ಗುಣದಂತೆ) ಪರಿಪಕ್ವವಾಗು ; ಪರಿಪೂರ್ಣವಾಗು : (ಕಿ). ೬. ಮುಪ್ಪಾಗು ; ವಯಸ್ಸಾಗು : (ಕಿ). ೭. ಫಲ ಕೊಡು ; ಫಲಿಸು ; ಪ್ರಾಪ್ತವಾಗು : ದೊರೆಕೊಳಿಸುವ ತತ್ಕ್ರಿಯೆಯೊಳ್ ಪರಿಣಮಿಸುವ ಫಳಮನಸ್ತ್ರಶಸ್ತ್ರತನುತ್ರೋತ್ಕರರಹಿತಂಗೆ . . . ದೊರೆಕೊಳಿಸುವವೋಲ್ (ಆದಿಪು. ೧೫-೧೭). ೮. ಹರ್ಷಗೊಳ್ಳು ; ಸಂತೋಷಿಸು ; ತೃಪ್ತಿಹೊಂದು : ವಿಮಳವ್ರತಿಗಳ್ ಸಲೆ ಕಂದಮೂಲಫಲದಿಂದೆ ತಣಿದು ಪರಿಣಮಿಸಿರ್ಪರ್ (ಗಿರಿಕ. ೧-೬೧) ; ಚೆನ್ನಮಡಿವಳನಮಳಚಾರಿತ್ರೋನ್ನತಿಗೆ ಭಕ್ತರು ಪರಿಣಮಿಸೆ (ಬಸಪು. ೨೧-೪೫) ; ಕಲಿಗಳ ದೇವನೀ ಕಪಿಯೆಂದು ಹೊಗಳಿದ ರಾವಣನ ಮಗ ಮತ್ಸರಂಗಳ ಬಿಟ್ಟು ಪರಿಣಮಿಸಿ (ತೊರೆರಾ. ೩೪-೪೩) ; ಕುಮತಿ ದುರ್ಜನರು ಪರಿಣಮಿಸದಿರಲೇನಾಯ್ತು (ಭಾಪಚಿಂ. ೧-೧೮). [ಪರಿಣಮನ+-ಇಸು$_3$]

**ಪರಿಣಯ** (ನಾ). ೧. ಮದುವೆಯಲ್ಲಿ ವಧೂವರರನ್ನು ಪವಿತ್ರವಾದ ಅಗ್ನಿಯ ಸುತ್ತಲೂ ನಡೆಸುವುದು. ೨. ಮದುವೆ ; ವಿವಾಹ : "ಉಪಯಾಮ ವಿವಾಹೋದ್ವಾಹ ಪರಿಣಯಂ ಪಾಣಿಪೀಡನಕ್ಯಾಖ್ಯೆ" (ವಸ್ತುಕೋ. ೫೩-೧೧) ; ಪರಿಣಯಕ್ಕೆಟ್ಟಿಂದೆಲ್ಲಾ ಪುರಜನ ಪರಿಜನಮುನಖಿಳವಸ್ತುಗಳಿಂ ಸತ್ಕರಿಸಿ (ಉದ್ಭಟ. ೮-೭೦) ; ಪರಿಣಯಮುಂ ನೆಗಳ್ದು ಸಮಾಪ್ತಿಯುಂ ಮಾಡಿ (ಬಸಪು. ೩೨-೩೯) ; ನರಚರಿತ್ರದ ರಾಮಭದ್ರಗೆ ಪರಿಣಯ ಮಾಳ್ಪುಜ್ಜುಗವ ನಿರ್ಧರಿಸಿ (ತೊರೆರಾ. ೧-೧೨-೩) ; ಗುರುಜನವೆಸಗಿದ ಪರಿಣಯವೇ ಸರಿ (ಶಾಕುಂತ. ೭೧ ಅಡಿಟಿ). [ಸಂ.]

**ಪರಿಣಯನ** (ನಾ). = ಪರಿಣಯ ೨ : "ಉಪಯಾಮಃ, ಪರಿಣಯನಂ . . . ಉದ್ವಾಹಃ—ಈ ೫ ಮದುವೆ" (ಹಲಾಯು. ೮೧-೩೪೧) ; ಪರಿಣಯನಾರ್ಥಂ . . . ಆದಿತ್ಯನನಾದರದಿಂದಂ ನೆನೆದು ಬರಿಸಿದಂ ಮುನಿಮುಖ್ಯಂ (ಪಂಚತಂ. ೨೫೭-೧೬) ; ಪರಿಣಯನ ನಿಮಿತ್ತಂ ದಶಶಿರನತ್ತಲ್ ಪೋಗೆ (ಪಂರಾಮಾ. ೧೦-೧೬೭) ; ಪರಿಣಯನವೇದಿಕಾಶೇಖರ ಪದಪಂಕರುಹರಾಗಿಸಲ್ಕೆಂದು ವಧೂವರರನೊಡಗೊಂಡು ಬಂದರ್ . . . ಕುಲವೃದ್ಧರ್ (ಶಾಂತೀಶ್ವ. ೪-೨೮೪). [ಸಂ.]

**ಪರಿಣಯನಗೃಹ** (ನಾ). ಮದುವೆ ಮನೆ ; ವಿವಾಹ ನಡೆಯುವ ಗೃಹ : ಪರಿಪೂರ್ಣೋತ್ಸವಮುತ್ಸವಮುರಜಧ್ವನಿಯಿಂದಮಾ ವಧೂವರರಂ ಪೋ ಬರವೇಟ್ಕೆಂಬಂತಿರ್ದುದು ಸುರವಾರಸ್ತ್ರೀವಿಲಾಸಪರಿಣಯನಗೃಹಂ (ಆದಿಪು. ೮-೧೯) ; ಅತಿಶಯಮಾದತ್ತು ಪರಮಪರಿಣಯನಗೃಹಂ (ಪುಷ್ಪಪು. ೮-೫೧). [ಪರಿಣಯನ+ಗೃಹ]

**ಪರಿಣಯನೋತ್ಸವ** (ನಾ). ಮದುವೆಯ ಸಮಾರಂಭ ; ವಿವಾಹ ಮಹೋತ್ಸವ : ಪರಿಣಯನೋತ್ಸವಂ ರತಿಗನಂಗನೊಳಾಗೆ (ಆದಿಪು. ೧೧-೧೧೩) ; ಪುಷ್ಪದಂತಪುರಾಣದೊಳ್ ಕುಮಾರಪರಿಣಯನೋತ್ಸವ ಪರಿವರ್ಣನಂ (ಪುಷ್ಪಪು. ೧೨-೧೧೪ ಪ). [ಪರಿಣಯನ+ಉತ್ಸವ]

**ಪರಿಣಯೋತ್ಸವ** (ನಾ). = ಪರಿಣಯನೋತ್ಸವ : ಪರಿಣಯೋತ್ಸವೋತ್ಸುಕನಾಗಿ ಶಿಶುಪಾಲದಾನವಂ ಬಂದಿರ್ದ ಭೀಷ್ಮಕಪುರಕ್ಕಭಿಮುಖನಾಗಿ (ಜಗವಿ. ೧೦-೫೩ ಪ). [ಪರಿಣಯ + ಉತ್ಸವ]

**ಪರಿಣಾಮ** (ನಾ). ೧. ಬದಲಾವಣೆ ; ರೂಪಾಂತರ ; ಮಾರ್ಪಾಟು : "ಪರಿಣಾಮಮದು ವಿಕಾರಂ" (ವಸ್ತುಕೋ. ೧೧೪-೨೨) ; ಕಾರಕಮುಖದಿಂ ವಿಭಕ್ತಿ ಪರಿಣಾಮಿಸುವುದಾಗಿ, ವಿಭಕ್ತಿಪರಿಣಾಮಕ್ಕೆ (ಶಮದ.ನ. ೧೫೭ ಪ್ರಯೋ); ಬೀಜಪುಷ್ಪಫಲಂಗಳ್ಗೆ ಮದಿರಾಭಾವದಿಂದಂ ಪರಿಣಾಮಮೆ (ಗೊಮ್ಮಸಾ. ೪-೪) ; ಪರಿಣಾಮವೆಂದರೆ ಬದಲಾವಣೆ ... ಈ ಪರಿಣಾಮವು ಪ್ರತಿಕ್ಷಣದಲ್ಲೂ ಪ್ರತಿವಸ್ತುವಿನಲ್ಲೂ ನಡೆಯುತ್ತದೆ (ಹಿಂದಸಾ.೩೫). ೨. ಕಾರ್ಯದ ಫಲ : ಕಿಜಾಯಾತಂ ನಿಸರ್ಗದಿಂ ವಕ್ರಗತಿಪರಿಣಾಮದಿನುದ್ವೃತ್ತಚಿತ್ತದಿನುನ್ಮತ್ತನಾದಂ (ಸುಕುಮಾ. ೨-೫೭ಪ) ; ಗಮನವಿಲ್ಲದೆ ಸುಳಿಯಬಲ್ಲಡೆ ನಿರ್ಗಮನಿಯಾಗಿ ನಿಲಬಲ್ಲಡೆ ಅದಕ್ಕದೆ ಪರಿಣಾಮ ಅದಕ್ಕದೆ ಸಂತೋಷ(ಅಪಚಂ. ೯-೪೪೭);ನಂದನಲಾಭವಾಂಛೆ ನಿನಗುಳ್ಳನೆಗಂ ಸಮನಿಸದಣಂ ವಿರತಿಪರಿಣಾಮಮಂ (ಚಂದ್ರಪು. ೩-೭೫) ; ಅರಿದ ಮುಂಡವ ನೋಡು ರಾಮನ ಕರದ ಚಾಪವಿದಹುದೆ ದಿಟ್ಟಸು ಹಿರಿದು ಸಂಶಯ ಬಿಟ್ಟುದೆ ಪರಿಣಾಮ ನಿನಗಾಯ್ತು (ತೊರೆರಾ. ೧೭-೫೨). ೩. ಪರಿಪಕ್ವತೆ; ಪ್ರೌಢತೆ: ಕರಿಗೆ ಕೇಸರಿ ವೈರಿ ದುರಿತಕ್ಕೆ ಹರ ವೈರಿ ಉರವಣಿಸಿ ಬರುವ ಸಂಸಾರದುಃಖಕ್ಕೆ ಪರಿಣಾಮ ವೈರಿ (ಸರ್ವಜ್ಞ. ೧೫೧೪) ; ಅಮ್ಮಾಜಿ, ನಿನ್ನ ಪರಿಣಾಮ ಸಾತ್ವಿಕವಾದುದು. ನಮ್ಮಂಥ ಯತಿಗಳೂ ನಿನ್ನ ದರ್ಶನ ಮಾಡಿ ಮಾರ್ಗದರ್ಶನ ಪಡೆಯಬೇಕು (ದಾಸಚಿಂ. ೧೭೭). ೪. ಕೊನೆ; ಮುಕ್ತಾಯ: 'ಪರಿಣಾಮಪಥ್ಯ' ಪರಾ. ೫. ಮುಪ್ಪು; ವೃದ್ಧಾಪ್ಯ. ೬. ಒಳಿತು ; ಕ್ಷೇಮ ; ಕಲ್ಯಾಣ : "ಕೀರ ಪರಿಣಾಮ ಸುಕ ಶಬ್ದ" (ಶಬ್ದಮಂ. ೭೯) ; ಬಂದಿರೆ ಪರಿಣಾಮವೆ ಮನೆಯೊಳಗಕ್ಕಂದಿರನುವೆ ಮಕ್ಕಳು ಪದುಳವೆ (ಜಯಕಾ. ೧-೨೦) ; ಗುರುಪಾದಕೆಱಗಿದರೆ ಶಿರಸು ತಾ ಪುಣ್ಯಕ್ಕು ಪರಿಣಾಮವಕ್ಕು ಪದವಕ್ಕು (ಸರ್ವಜ್ಞ. ೯೯) ; ಆ ಲಕ್ಷ್ಮಿಯ ದೌಲತ್ತಿನಿಂದಾಗಿ ಹಣ್ಣುಹಣ್ಣಾಗಿರುವೆನು. ಅದಕ್ಕಾಗಿ ನಾವು ಈಗಿಂದೀಗಲೇ ಉಪಾಯ ಯೋಚಿಸದಿದ್ದರೆ ಪರಿಣಾಮವಿಲ್ಲ ! (ಕೈಲಾಕ. ೩೮). ೭. ಫಲಿತಾಂಶ : ಮೊದಲನೆಯ ವಕೀಲಿಪರೀಕ್ಷೆಯನ್ನು ಮುಗಿಸಿ ಪರಿಣಾಮ ಈಗ ತಿಳಿದು ಬಂದಿತ್ತು (ಸಮಜೀ. ೮೬೯). ೮. ಬಾಗುವುದು ; ಬಗ್ಗುವಿಕೆ. ೯. ಸುತ್ತಲೂ ಹರಡುವಿಕೆ ; ಪ್ರಸಾರ. ೧೦. ವಿಸ್ತಾರ; ಹರಹು. ೧೧. ನಿರ್ಧಾರ ; ತೀರ್ಮಾನ: ನಗುತ ರಾವಣ ಪೊಡವಿಜೆಗೆ ಪರಿಣಾಮವಾಗಲಿ ತಲೆಯ ತಾಯೆಂದ (ತೊರೆರಾ. ೧೭-೪೮). ೧೨. ಆನಂದ ; ಹರ್ಷ ; ಸಂತೋಷ : ಲಿಂಗದೊಡವೆ ಲಿಂಗಕ್ಕೆ ಸಾರಿತ್ತಾಗಿ ಬಂದಿತ್ತೆಂಬ ಪರಿ

ಣಾಮವಿಲ್ಲ ಬಾರದೆಂಬ ದುಃಖವಿಲ್ಲ (ಬಸವ. ೨೨೯); ಸೋಮಲಾಂಛನ ಲಾಂಛನರು ಪರಿಣಾಮಮಂಕುರಿಸಲ್ಕೆ ಸುಖಗೋಷ್ಠಿಯ ಮಧುರವಚನಂಗಳಿಂ ಮಾತುಗಳನಾಡುತ್ತ (ಬಸವು.೨೫-೨); ಸುಭದ್ರೆ ನಡೆತಂದು ನೆಲಕೆ ದೊಪ್ಪನೆ ಕೆಡೆದು ಸಭೆಯಲಿ ಹಲುಬಿದಳು ಕೊಳುಗುಳಕೆ ಕಂದನ ಕಳುಹಿದವರಿಗೆ ಸಂದುದೇ ಪರಿಣಾಮವೆಂದೆನುತ (ಕುಮ್ಮಾದ್ರೋ. ೭-೧೩). **೧೩.** ಶಾಂತಿ; ಸಮಾಧಾನ: ಎಂದೋ ಮನದಲ್ಲಿ ಪರಿಣಾಮವಹುದೆನಗೆಂದೋ (ಬಸವ. ೨೨); ಎಲ್ಲ ಸಂದುದೇ ಪರಿಣಾಮವೇ ಇನ್ನು ಹೋಹೆನೇ ಮುನಿನಾಥ ಕರುಣಿಸಿದಿರೇ ಎಂದು (ಪಚಕಾ. ೯-೪). **೧೪.** ಪ್ರಭಾವ; ವರ್ಚಸ್ಸು. **೧೫.** ಪ್ರತಿಕ್ರಿಯೆ: ವೈದ್ಯರು ಕೊಟ್ಟ ಔಷಧಿಗಳ ಪರಿಣಾಮದಿಂದ ಅವರ ಆರೋಗ್ಯ ಸುಧಾರಿಸಿತು (ರೂಢಿ). **೧೬.** [ಕಾವ್ಯಮೀ] ಆರೋಪಿಸಲ್ಪಡುವ ವಸ್ತುವು (ವಿಷಯಿ), ಆರೋಪಕ್ಕೆ ವಿಷಯವಾದ ವಸ್ತುವಿನ ರೂಪವಾಗಿ ಬದಲಾವಣೆ ಹೊಂದಿ ಪ್ರಕೃತಕಾರ್ಯಕ್ಕುಪಯೋಗವಾಗುವ ಒಂದು ಬಗೆಯ ಅಲಂಕಾರ: ಸಮಾಸೋಕ್ತಿ . . . ಪರಿಣಾಮ . . . ಉದಾತ್ತಾದ್ಯಲಂಕಾರಗಳೊಡಗೂಡಿ (ವಿವೇಕ. ೨೨೫); ವರ್ಣಿಸುವ ವಸ್ತುವನುಪಮಾನವಸ್ತುವೆಂದೇ ದಿಟಂಗೊಳಿಸಿ ಅದಱಿಂದಪ್ಪ ಕಾರ್ಯಮುಮಂ ಪೇೞ್ವುದು ಪರಿಣಾಮಮೆನಿಪುದು (ಅಪ್ರತಿ. ೪೪-೫); ಉಪಮಾನವು ಉಪಮೇಯವಾಗಿ ಪರಿಣಮಿಸುವುದರಿಂದ ಪರಿಣಾಮವೆಂದು ಹೆಸರು (ಕುವಲ. ೧೯೭). **೧೭.** [ಗಣಿತ] ಸಿದ್ಧಾಂತವಾದ ಒಂದು ಪ್ರತಿಜ್ಞೆಯೊಡನೆ ಸೇರಿಸಿದ, ಆ ಪ್ರತಿಜ್ಞೆಯಿಂದ ಸುಲಭವಾಗಿ ಅನುಮಾನಿಸಬಹುದಾದ, ಮತ್ತೊಂದು ಪ್ರತಿಜ್ಞೆ; ಉಪಸಿದ್ಧಾಂತ: ರೇಖಾಗಣಿತಕ್ಕೆ . . . ಪ್ರಾಶಸ್ತ್ಯವು ಬಂದಿದ್ದಿತಾದರೂ ಜ್ಞಾನಭಾಗವನ್ನು ಆಧಾರವಚನ . . . ಪರಿಣಾಮ (Corollary) ಹೀಗೆ ವಿಂಗಡಿಸಿ ತರ್ಕ ಮಾಡಿ ಇದನ್ನು ಶಾಸ್ತ್ರದ ಮಟ್ಟಕ್ಕೆ ಎತ್ತಿ ಪರಮೋಪಕಾರ ಮಾಡಿದ ಮಹನೀಯ ಯೂಕ್ಲಿಡ್ (ಶಿಲ್ಪನಾ. ೮೮). **೧೮.** [ಜೈನ] ವಸ್ತುವಿನ ಶುಭ, ಅಶುಭ ಮತ್ತು ಶುದ್ಧ ಎಂಬ ಮೂರು ಬಗೆಯ ಭಾವ,—ಅವಸ್ಥೆ: ಪರಿಣಾಮಮಸಂಖ್ಯಾತಂ ಪರಿವರ್ತಿಸುತಿರ್ಪವಲ್ಲಿ ಶುಭಪರಿಣಾಮಂ ಬೆರೆಸೊಸೆದಿರ್ಕಾಗಳುಮರ್ತ ರೌದ್ರದೊಳ್ ಮೂಡಿ ಮುಮುಗುತಿರ್ಪುದೆ ಚದುರಂ (ಅಜಿಪು. ೧೧-೩೯); ಪರಿಣಾಮದ ಪೊಲ್ಲಮೆಗಳ್ ದೊರೆಕೊಳೆ ಬಿಡದೊದವಿ ಬರ್ಪ ಪಾಪಾಸ್ರವಮಂ ಬರಲೀಯದೆ (ಜೀವಸಂ. ೧೫೨-೧).

**ಪರಿಣಾಮ ಬೀರು**=ಪ್ರಭಾವವನ್ನುಂಟುಮಾಡು: ಇವುಗಳ ಫಲಿತಾಂಶ ವಿದ್ಯಾರ್ಥಿಗಳ ಕಲಿವಿನ ಮೇಲೆ ಪರಿಣಾಮ ಬೀರತಕ್ಕುವು (ಶಿಕ್ಷದ. ೩೦೨). **ಪರಿಣಾಮ ಮಾಡು**=ಪರಿಣಾಮ ಬೀರು: ನದಿಗಳು ನಾನಾವಿಧಗಳಲ್ಲಿ ಸಲ್ಲಿಸುವ ಸೇವೆ ಮಾನವನ ಮನಸ್ಸಿನ ಮೇಲೆ ಪರಿಣಾಮ ಮಾಡದೆ ಹೋಗಲಿಲ್ಲ (ನನದಿ. ೮). [ಸಂ.]

**ಪರಿಣಾಮಕಾರಿ** (ನಾ). ಫಲಕಾರಿಯಾದುದು; ಪ್ರಯೋಜನಕರವಾದುದು: ಅಗಸನನ್ನು ಬದಲಿಸುವುದೂ ಗೌಳಿಗನನ್ನು ಬದಲಿಸುವುದೂ ಅಷ್ಟೆ ಪರಿಣಾಮಕಾರಿಯೆಂದು ಅನುಭವಿಕರು ಬಲ್ಲರು (ಪೇಕನ್ಮೈ. ೩೭); ಈಗ ಆಚರಣೆಯಲ್ಲಿರುವ ಪದ್ಧತಿ ಕ್ರೂರತಮವಾದದ್ದು; ಪರಿಣಾಮಕಾರಿಯಾದದ್ದಲ್ಲ (ಪುನರು. ೪೩೦); ನೊಣಗಳ ಬೆಳವಣಿಗೆಯನ್ನು ಪರಿಣಾಮಕಾರಿಯಾಗಿ ತಡೆಯಬೇಕಾದರೆ ಅವುಗಳ ಜೀವನಚರಿತ್ರೆಯನ್ನು ಸರಿಯಾಗಿ ತಿಳಿದುಕೊಳ್ಳುವುದು ಅವಶ್ಯ (ಆಜುಸಾ. ೫೦). [ಸಂ. ಪರಿಣಾಮಕಾರಿನ್]

**ಪರಿಣಾಮಗುಣ** (ನಾ). [ಜೈನ] ಮೋಕ್ಷಕ್ಕೆ ಕಾರಣವಾದ, ಜೀವನ ಪರಿವರ್ತನೆಯಾಗುವ ಗುಣ (?): ಗಂ × × × ಂ ಚೌಡ್ಯಾಪಾದಿ ಪಾದಿ ಕೆಳೆಯೆಂಬಿನಿತು × × × ಮಾನಡೆಯಲಿದ್ದುರ್ಗ ತಡೆದ ದಱಿಂದ × × × ದೆಂದೀಕ್ಷೆ ಪರಿಣಾಮಗುಣಮುತ್ತವೇದೊರೆಯನೆಂದೊಡೆ . . . ಪಡೆದದ್ದಂ ಧರ್ಮ್ಮಬೀಯಕೊಡರಿಸದಿರ್ಪ್ಪಂದದಿರ್ಕ್ಕೆ ಪರಿಣಾಮಗುಣಂ (ಕೊಲ್ಹಾಶಾ. ೧-೨೨; ?). [ಪರಿಣಾಮ+ಗುಣ]

**ಪರಿಣಾಮಗೊಳಿಸು** (ಕ್ರಿ). ಪರಿವರ್ತಿಸು: ಕುಂಬಾರನು ಮಣ್ಣನ್ನು ಗಡಿಗೆಯಾಗಿ ಪರಿಣಾಮಗೊಳಿಸುವನು (ಭಾರದ. ೨೩೧). [ಪರಿಣಾಮ+ಕೊಳ್$_1$+-ಇಸು$_3$]

**ಪರಿಣಾಮಗೊಳ್ಳು** (ಕ್ರಿ). ಪರಮಾನಂದವನ್ನು ಹೊಂದು: ಸುರತಸಂಭ್ರಮದ ಚುಂಬನಂಗಳಿಂದೆ ಕೂಡಿ ಪರಿಣಾಮಗೊಳ್ಳಯ್ಯಾ ಎನ್ನ (ಅಖಂಡೇ. ೨೮೬-೪೧). [ಪರಿಣಾಮ+ಕೊಳ್ಳು$_1$ (<ಕೊಳ್$_1$)]

**ಪರಿಣಾಮಜಲ** (ನಾ). **೧.** ಸಂತೋಷದಿಂದುಂಟಾದ ಕಣ್ಣೀರು; ಆನಂದಬಾಷ್ಪ: ತನು ಉಬ್ಬಿ ಮನ ಕರಗಿ ಕಂಗಳಲ್ಲಿ ಪರಿಣಾಮಜಲ ಉಕ್ಕಿ ಕಡೆಗೋಡಿವರಿವುತ್ತ . . . ಆ ನಿಷ್ಕಲ ಪರಶಿವನೊಡನೆ ಬೆರೆದು (ಅಖಂಡೇ. ೨೦೬-೪೬). **೨.** [ವೀಶೈ] ಹತ್ತು ವಿಧವಾದ ಪಾದೋದಕಗಳಲ್ಲಿ ಒಂದು ಬಗೆ: ಚಿತ್‌ಪೃಥ್ವಿಹೃದಯಮಧ್ಯದಲ್ಲಿ ನೆಲಸಿಹ ಪರಿಣಾಮಜಲವ ಚಿದ್ಬ್ರಂಡದೊಳಗೆ ಪರಿಣಾಮಪಾವಡದಿಂದ ಶೋಧಿಸಿ (ಚನ್ನವ. ಕ. ೮೨-೧೭೭). 'ದಶವಿಧಪಾದೋದಕ' ಪರಾ. [ಪರಿಣಾಮ+ಜಲ$_2$]

**ಪರಿಣಾಮತೆ** (ನಾ). ಆನಂದ; ಸಂತೋಷ: ಕೂಡಿ ಸುಖಂಬಡೆವುದು ಜಂಗಮಲಿಂಗದ ವಿಷಯ ಸುಖಂಬಡೆದು ಪರಿಣಾಮತೆಯನೈದುವುದು ಪ್ರಸಾದಲಿಂಗದ ವಿಷಯ ಪರಿಣಾಮತೆಯನೆಯ್ದಿ ನಿಶ್ಚಯಬಡೆವುದು ಮಹಾಲಿಂಗದ ವಿಷಯ (ಆದವ. ೫-೧೨). [ಸಂ. ಪರಿಣಾಮತಾ]

**ಪರಿಣಾಮಪಥ್ಯ** (ನಾ). ಕೊನೆಯಲ್ಲಿ ಹಿತವಾದುದು; ಕಡೆಯಲ್ಲಿ ಮಂಗಳಕರವಾದದು: ಪರಿಣಾಮಪಥ್ಯಮಂ ಸುಖಪರಿಕರಮಂ ಮೆಚ್ಚದನ್ನರಾರೀ ಮಾತಂ ಸಿರಿಶಯರಸಮೇತಮಂ (ಕವಿರಾ. ೩-೧೫೨); ಪರಿಣಾಮಪಥ್ಯಮುಮಪ್ಪ ಕೃತ್ಯಮಂ ನಿಜಮನಶ್ಚತುರಸಚಿವ ಸಹಸಮಾಲೋಚದಿಂ ಕಂಡು (ಚಂದ್ರಪು. ೯-೧೨೬ ಪ). [ಪರಿಣಾಮ+ಪಥ್ಯ]

**ಪರಿಣಾಮಪ್ರಧಾನ** (ನಾ). ಮನಸ್ಸಿಗೆ ತಟ್ಟುವುದರಲ್ಲಿ ಮುಖ್ಯವಾದುದು; ಪರಿಣಾಮಕಾರಿಯಾದುದು: ಎಲ್ಲ ವಿಮರ್ಶೆಯೂ ಮೂಲಭೂತವಾಗಿ ವ್ಯಕ್ತಿನಿಷ್ಠವಾದುದು ಮತ್ತು ಪರಿಣಾಮಪ್ರಧಾನವಾದುದು (ಸಾಹಿಪ್ರ. ೩೦೦). [ಪರಿಣಾಮ+ಪ್ರಧಾನ]

**ಪರಿಣಾಮರಮಣೀಯ** (ನಾ). ಕೊನೆಯಲ್ಲಿ ಚೆನ್ನಾಗುವುದು: ಅವಿನೀತರಾಜಪುತ್ರನೊಳಾಲೋಚಿಸಿದ ಮಂತ್ರದಂತೆ ಪರಿಣಾಮರಮಣೀಯಮಾಗದೆ ಕಿಡೆಯುಂ (ಗದಾಯು. ೭-೨೬ ಪ). [ಪರಿಣಾಮ+ರಮಣೀಯ]

**ಪರಿಣಾಮರಮಣೀಯತೆ** (ನಾ). = ಪರಿಣಾಮರಮಣೀಯ: ಒಂದೇ ಒಂದು ಸಣ್ಣ ಚಿತ್ರ ಇದು. ಇದರಲ್ಲಿ ಅಣಕವಿದೆ . . . ಪರಿಣಾಮರಮಣೀಯತೆಯೂ ಇದೆ (ಸೌಂದಸ. ೩೧೩). [ಪರಿಣಾಮ+ರಮಣೀಯತೆ]

**ಪರಿಣಾಮವಡೆ** (ಕ್ರಿ). ಪರಮಸುಖವನ್ನು ಪಡೆ; ಪರಮಾನಂದವನ್ನು ಹೊಂದು: ಆ ಪಶುಕಾಯಮಂ ಕಳೆದು ಆನು ಪರಿಣಾಮವಡೆದವಳಯ್ಯಾ (ಸೀಲಪ. ಕ. ೨೬-೮೦); ನಿನ್ನಂ ಕಂಡು ಬದುಕಿದೆವು ಪರಿಣಾಮವಡೆದೆವು (ಸೋಸುಚ. ೨-೮೯). [ಪರಿಣಾಮ+ಪಡೆ$_1$]

**ಪರಿಣಾಮವಾದ** (ನಾ). **೧.** [ತತ್ತ್ವಶಾ] ಸಾಂಖ್ಯಮತದ ಪ್ರಕಾರ ಹೇಳುವ 'ರೂಪಾಂತರ' ತತ್ತ್ವದ ಮತ: ಕುಂಬಾರನು ಮಣ್ಣನ್ನು ಗಡಿಗೆಯಾಗಿ ಪರಿಣಾಮಗೊಳಿಸುವನು. ಮಣ್ಣಿನಲ್ಲೇ ಮರೆಯಾಗಿದ್ದ ಗಡಿಗೆಯು ಕುಂಬಾರನ ಪ್ರಯತ್ನದಿಂದ ಹೊರಪಡುವುದು

ಎಂದು ಸಾಂಖ್ಯವಾದ. ಇದನ್ನೇ ಪರಿಣಾಮವಾದವೆಂದೂ ಸತ್ಕಾರ್ಯವಾದವೆಂದೂ ಹೇಳುವರು (ಭಾರದ. ೨೩೧) ; ಈ ಪ್ರಪಂಚವನ್ನು ಸುವರ್ಣ ಪರಿಣಾಮವಾದ ಭೂಷಣದಂತೆ ಬ್ರಹ್ಮದ ಪರಿಣಾಮವೆಂದು ಕೆಲವರು ತಿಳಿಯುವರು... ಇವುಗಳಲ್ಲಿ ಒಂದು ಪರಿಣಾಮವಾದ, ಮತ್ತೊಂದು ಆರಂಭವಾದ (ಹಿಂದಸಾ. ೨೦೬). **೨.** [ವಿಜ್ಞಾನ] ಸಜೀವವಸ್ತುವು ಆದಿಕಾಲದಿಂದಲೂ ತಳೆದಿರುವ ರೂಪಾಂತರವನ್ನು ಕುರಿತವಾದ ; ವಿಕಾಸವಾದ ; "ಗರ್ಭಧಾರಣವಾಗುವುದರಿಂದ ಭ್ರೂಣವು ಹೊಸದಾಗಿ ಸೃಷ್ಟಿಯಾಗುವುದಿಲ್ಲವೆಂದೂ, ಹಿಂದಿನಿಂದ ಬಂದದ್ದೇ ವಿಕಾಸವಾಗುವುದೆಂದೂ ಹೇಳುವ ವಾದ: ವಿಕಾಸವಾದ'' (Theory of Evolution. ಇಂಕನಿ); ಖಗೋಳಜ್ಞರಿಗೆ ಭೂಗರ್ಭಶಾಸ್ತ್ರದ ಪರಿಚಯವೂ ಡಾರ್ವಿನ್ನನು ಪ್ರತಿಪಾದಿಸಿದ ಪರಿಣಾಮವಾದವೂ (Theory of Evolution) ಉಪಯುಕ್ತವಾಗಿದೆ (ವಿಜ್ಞಾಕ. ೧೦) ; ಶಾಕ್ತಸಂಪ್ರದಾಯವು . . . ಪರಿಣಾಮವಾದವನ್ನು ಅಂಗೀಕರಿಸುತ್ತದೆ (ಭಾರದ. ೨೨೬). [ಪರಿಣಾಮ + ವಾದ$_2$]

**ಪರಿಣಾಮವಾದಿ** (ನಾ). [ವಿಜ್ಞಾನ] ವಿಕಾಸವಾದವನ್ನು ಪ್ರತಿಪಾದಿಸುವವನು : ಈ ಸೃಷ್ಟಿಯ ಸಿದ್ಧಾಂತವನ್ನು ಕುರಿತು ದೃಷ್ಟಿಭೇದಗಳನ್ನು ಇಂದಿನ ಆರಂಭವಾದಿ, ಪರಿಣಾಮವಾದಿ . . . ಮುಂತಾದ ದಾರ್ಶನಿಕರು ಭಿನ್ನ ಭಿನ್ನ ಕೋನದಲ್ಲಿ ಈ ಸೃಷ್ಟಿಕ್ರಮವನ್ನು ಕುರಿತು ಸಾಪೇಕ್ಷವಾಗಿ ಹೇಳುತ್ತಿರಬಹುದು. (ಶರೀಫ. ೬೩ ಕವಿಕಾವ್ಯಪರಿಚಯ). [ಸಂ. ಪರಿಣಾಮವಾದಿನ್]

**ಪರಿಣಾಮಶುದ್ಧಿ** (ನಾ). [ಜೈನ] "ಮನಃಪರಿಪಾಕ" (ಆದಿಪು. ಸಂಗ್ರಹ. ಕೋಶ) : ಪರಿಣಾಮಶುದ್ಧಿ ದೊರೆಕೊಳೆ . . . ಭರತಂಗೆ ಶಾಸ್ತ್ರಲಕ್ಷಣಪರಿಕರದಿಂ ತೊಟ್ಟನವಧಿ ಪುಟ್ಟಿತ್ತಾಗಳ್ (ಆದಿಪು. ೧೫-೨೨) ; ಪರಿಣಾಮಶುದ್ಧಿಯಿಂದಮಾಹಾರದಾನಮನಿತ್ತು (ಶಾಂತಿಪು. ೯-೮೩ ವ) ; ನಿರ್ಭರಭಕ್ತಿಭರದಿನತ್ಯಾದರದಿಂ ಪರಿಣಾಮಶುದ್ಧಿಯಿಂ ವಂದಿಸಿದಂ (ಸುಕುಮಾ. ೪-೨೧). [ಪರಿಣಾಮ + ಶುದ್ಧಿ]

**ಪರಿಣಾಮಶೂಲೆ** (ನಾ). ಅಜೀರ್ಣವಾದ ಸಮಯದಲ್ಲಿ ಹೊಟ್ಟೆಯಲ್ಲಿ ಆಹಾರವು ತಳೆಯುವ ಮಾರ್ಪಾಟುಗಳಿಂದ ಉಂಟಾಗುವ ವೇದನೆ, — ನುಲಿತ ; ತೀವ್ರವಾದ ನೋವುಂಟುಮಾಡುವ ಅಜೀರ್ಣರೋಗ : ಬಜೆ, ಲವಣ ಸಹ ಕಲ್ಕವ ಮಾಡಿ ಕೊಟ್ಟು . . . ಸಾಸುವೆಯುಂ ಬಿಸಿನೀರಿಂದರೆದು ಕಲ್ಕವ ಮಾಡಿ ಕೊಡಲು ಆಮಾತಿಸಾರ, ಉದಾವರ್ತ, ಪರಿಣಾಮಶೂಲೆ ಸಹ ಮಾಣ್ಗುಂ (ಸಕವೈ. ೩೧೪). [ಪರಿಣಾಮ + ಶೂಲೆ$_1$]

**ಪರಿಣಾಮಾಲಂಕಾರ** (ನಾ). = ಪರಿಣಾಮ **೧೬ :** ಪರಿಣಾಮಾಲಂಕಾರಮೆಂತೆನೆ . . . ವರ್ಣಿಸುವ ವಸ್ತುವನುಪಮಾನವಸ್ತುವೆಂದೇದಿಟಂಗೊಳಿಸಿ ಅದಱಿಂದಪ್ಪ ಕಾರ್ಯಮುಮಂ ಪೇಱಿಯದು ಪರಿಣಾಮಮೆನಿಪುದು (ಅಪ್ರತಿ. ೪೪-೧). [ಪರಿಣಾಮ + ಅಲಂಕಾರ]

**ಪರಿಣಾಮಿ** (ಗು). **೧.** ಬದಲಾಯಿಸುವ ; ರೂಪಾಂತರ ಹೊಂದುವ. (ನಾ). **೨.** ಬದಲಾವಣೆ ಹೊಂದಿದುದು ; ರೂಪಾಂತರ ಹೊಂದಿದುದು : ಪರಿಭಾವಿಸೆ ಕಾಲತ್ರಯ ಪರಿಣಾಮಿಗಳೆನಿಸಿ ನೆಗಟ್ದ ಮೂಱುಂ ಕ್ರಿಯೆಯೊಳ್ ನಿರುತಂ ಪ್ರತಿಷೇಧಕ್ರಿಯೆ ಬರೆ ಭೂತಾರ್ಥದೊಳ್ ಸಲ್ವುದು (ಶಮದ. ೨೨೨) ; ಸತ್ವ, ರಜಸ್ಸು, ತಮಸ್ಸುಗಳುಳ್ಳ ವಿಶ್ವವೆಲ್ಲಾ ಪರಿಣಾಮಿ ಮತ್ತು ಅನಿತ್ಯವಾದುದು (ಭಾರದ. ೨೬೬) ; ಕೆಲವರು ಆತ್ಮ ಎಂಬ ವಸ್ತುವನ್ನು ಶಾಶ್ವತ, ನಿತ್ಯ, ಯಾವ ವಿಧವಾದ ಪರಿಣಾಮಿಯಲ್ಲವೆಂದು ಹೇಳುತ್ತಾರೆ. ಕೆಲವರು ಅದನ್ನು ಪರಿಣಾಮಿಯೆಂದು ತಿಳಿಯುವರು (ಹಿಂದಸಾ. ೩೫). **೩.** ಬದಲಾವಣೆ; ಮಾರ್ಪಾಟು. **೪.** [ವೀಶೈ] "ಲಿಂಗಾನಂದಾನುಭಾವಿ" (ಮೋಲಮಾ. ಕೋಶ) : ನಾನೇಕೆ ಬಂದೆ ಸುಖವ ಬಿಟ್ಟು, ಬಂದುದಕ್ಕೆ ಒಂದೂ ಆದುದಿಲ್ಲ ಸಂಸಾರದಲ್ಲಿ ಸುಖಿಯಲ್ಲ ಪರಮಾರ್ಥದಲ್ಲಿ ಪರಿಣಾಮಿಯಲ್ಲ (ಮೋಲಮಾ. ೩೬-೧೫೦); ನೀನು ಪರಿಣಾಮಿಯಾದೆ ಬಸವಾ ರೂಪು ನಿರೂಪುವಿಡಿದೆ ಬಸವಾ (ಸೀಲಪ. ಕ. ೧೧-೨೬); ಚೇತನಂ ತಾನಾಗಿಯುಂ ನಿಶ್ಚೇತನದ ಪರಿಣಾಮಿ . . . ಮಹಾನುಭಾವಪ್ರಜ್ಞಮಾನಸನು (ಬಸಪು. ೮-೧೨). [ಸಂ. ಪರಿಣಾಮಿನ್]

**ಪರಿಣಾಮಿದ್ರವ್ಯ** (ನಾ). ಬದಲಾವಣೆಯಾಗುವ ವಸ್ತು ; ಮಾರ್ಪಾಟಾಗುವ ಸ್ವಭಾವವುಳ್ಳ ಪದಾರ್ಥ : ಜೀವ ಪುದ್ಗಲಗಳೆರಡು ಕ್ರಿಯಾಶ್ರಯದ್ರವ್ಯಗಳು, ಪರಿಣಾಮದ್ರವ್ಯಗಳು (ಹಿಂದಸಾ. ೮೧). [ಪರಿಣಾಮಿ + ದ್ರವ್ಯ]

**ಪರಿಣಾಮಿಸು** (ಕ್ರಿ). **೧.** ಬದಲಾವಣೆಯನ್ನು ಹೊಂದು ; ರೂಪಾಂತರವಾಗು : ಇಂತರ್ಥವಶದಿಂ ವಿಭಕ್ತಿ ಪರಿಣಾ [ಪಾಠಾಂ. ಣ]ಮಿಪುವು (ಶಮದ. ೯೩ ಪ್ರಯೋ). **೨.** ಆನಂದವನ್ನು ಹೊಂದು ; ಹರ್ಷವನ್ನು ತಾಳು : ಶಿವಭಕ್ತರು ಪರಿಣಾಮಿಸಿದರೆ ಒಡನೆ ಶಿವ ಪರಿಣಾಮಿಸುವ ನೋಡಾ (ಮಹಾದೇ. ಬ. ೬೬-೧೬೫); ನಿನ್ನಾಚಾರಸದ್ಗುಣವೃಂದಮಂ ಕೇಳ್ದಾಗಳುಂ ಪರಿಣಾಮಿಸುತ್ತಿಹೆವು (ಬಸಪು. ೪-೬೧); ಅಖಿಲ ಸುರಜಾಲ ಪರಿಣಾಮಿಪರು (ನಪಮೋ. ೫-೧೮). **೩.** ವರ್ಧಿಸು ; ಅಭಿವೃದ್ಧಿಹೊಂದು : (ಕಿ). [ಪರಿಣಾಮ + -ಇಸು$_3$]

**ಪರಿಣಾಮೋದಕ** (ನಾ). = ಪರಿಣಾಮಜಲ **೨:** ಪರಿಣಾಮೋದಕ ನಿರ್ನಾಮೋದಕ ಇವೆರಡು ಬಟ್ಟಲೆತ್ತಿ ಸಲಿಸಿದಂತಹ ಜಂಗಮಪಾದೋದಕದಲ್ಲಿ ಸಂಬಂಧವು (ಚನ್ನಪ. ಕ. ೭೯-೧೬೪); ದಶವಿಧ ಪಾದೋದಕಗಳು :-ಇವು ಗುರುಪಾದೋದಕ . . . ಪರಿಣಾಮೋದಕ, ನಿರ್ನಾಮೋದಕ, ಸತ್ಕೋದಕ ಎಂದು ಹತ್ತು ಇರುತ್ತವೆ (ತಿಪಾಕೋ. ೧೦೪); ಆ ಬಟ್ಟಲಲ್ಲಿದ್ದ ತೀರ್ಥವನ್ನು ಮೂರು ಸಲ ಸ್ವೀಕರಿಸಿದ್ದೇ ಪರಿಣಾಮೋದಕ (ಕನಾಕ. ೧೩೬). 'ದಶವಿಧಪಾದೋದಕ' ಪರಾ. [ಪರಿಣಾಮ + ಉದಕ$_2$]

**ಪರಿಣಾಯ** (ನಾ). ಚದುರಂಗ, ಪಗಡೆ ಮುಂತಾದ ಆಟಗಳಲ್ಲಿ ಕಾಯಿಯನ್ನು ಚಲಿಸುವಂತೆ ಮಾಡುವುದು,-ನಡೆಸುವುದು : "ಪರಿಣಾಯಃ-ಪಗಡೆಕಾಯಿ ನಡಿಸುವುದು" (ಸಿದ್ಧಾಂತಿ. ೩೨೦). [ಸಂ.]

**ಪರಿಣಾಶಗೈ** (ಕ್ರಿ). ನಾಶಪಡಿಸು ; ಧ್ವಂಸಮಾಡು : ಮಹೋನ್ನತಿಯಂ ಪರಿಣಾಶ[ಶ]ಗೈದು ಮೇಣ್ ಶೋಭಿಪ ಸದ್ವ್ರತಾಚರಣೆಯಂ ಪರಿಭಂಗಿಸಿ ಕಾಡುತಿರ್ಪುದೀ ಲೋಭವಿದೆನ್ನನಾವಗಮಿದಂ ಸಲೆ ದೂಡು ಶಿವಾಮರೇಶ್ವರಾ (ಅಮಶ. ೪೧). [ಪರಿಣಾಶ$_0$ + ಗೈ(<ಕೆಯ್$_1$)]

**ಪರಿಣಾಹ** (ನಾ). **೧.** ಅಗಲ; ಹರಹು; ವಿಸ್ತೀರ್ಣ : "ಪರಿಣಾಹಃ, ವಿಶಾಲತಾ-ಈ ೨ ಸುತ್ತು" (ಹಲಾಯು. ೧೩೦-೧೦) ; ಅದು ಜಂಬೂದ್ವೀಪೋಪಮಾನ ವಿಸ್ತಾರಪರಿಣಾಹಪರಿಣಾಮಮಂ ಕೈಕೊಂಡು (ಆದಿಪು. ೬-೩೪ ವ); ಕುವಲಯಾಪೀಡೇಭಂ . . . ವಿಂಧ್ಯಭೂಭೃದಾಯಾಮದೊಳಂ ಮಹಾವರಾಹಪರಿಣಾಹದೊಳಂ . . . ಪವನವೇಗದೊಳಮಗುರ್ವುಮದ್ಭುತಮುಮೆನಿಸಿ (ಜಗವಿ. ೬-೩೫ ವ); ಪೆಸರಿಂದಂತದು ಸರ್ವಾರ್ಥಸಿದ್ಧಿ ಪರಿಣಾಹದಿಂದೆ ಜಂಬೂದ್ವೀಪಕ್ಕೆ ಸಮಂ (ಚಂದ್ರಪು. ೧೧-೨೮). **೨.** ವೃತ್ತದ ಆವರಣರೇಖೆ ; ಪರಿಧಿ. [ಸಂ.]

**ಪರಿಣಿಚಿತ** (ಗು). ತುಂಬಿದ ; ವ್ಯಾಪಿಸಿದ : ಪಾರಿಜಾತ ಸಂತಾನಕ ಹರಿಚಂದನ ವನಪರಿವೃತಪರಿಣ[ಣಿ]ಚಿತವಿಶಾಲಹರಿನೀಲರುಚಿರುಚಿರವಿರಚಿತ ನೀಲಾಭ್ರವಿಭ್ರಮಕುಟ್ಟಿಮದೊಳ್ (ಸುಕುಮಾ. ೧೨-೪೨ ವ). [ಸಂ.]

**ಪರಿಣೀತ** (ಗು). **೧.** ಸುತ್ತು ಬರಿಸಿದ ; ಪ್ರದಕ್ಷಿಣೆ ಬರುವಂತೆ

ಮಾಡಿದ. ೨. ಮದುವೆಯಾದ ; ವಿವಾಹವಾದ : ಒಂದುದಿವಸಂ ಪರಿಣೀ [ಪಾಠಾಂ. ಣ]ತಭಾರ್ಯನುಮಾಶ್ಚರ್ಯಸೌಂದರ್ಯನುಂ . . . ಆದ ಕುಮಾರನಂ . . . ಮಹಾರಾಜಂ ದೊರೆದೊಳೆ ಕಂಡು (ಚಂದ್ರಪು. ೪-೧೨ ಪ). ೩. ಪೂರ್ತಿಮಾಡಿದ ; ಮುಗಿಸಿದ. (ನಾ). ೪. ಮದುವೆಯಾದ ವ್ಯಕ್ತಿ ; ವಿವಾಹಿತವ್ಯಕ್ತಿ : ಯಮರಾಯ ಹೃದಯವಿಹೀನ . . . ನೂತನ ಪರಿಣೀತರನ್ನಗಲಿಸಿ ವಿರಹಯಾತನೆಗೆ ಗುರಿಮಾಡುವ (ಪರಿನ. ೫೨).

[ಸಂ.]

**ಪರಿತ**₁ (ಗು). ೧. ಹಿಡಿದ ; ಗ್ರಹಿಸಿದ. (ನಾ). ೨. ಆವರಿಸಿರುವುದು; ಬಳಸಿರುವುದು (?): ಪ[ಪಾಠಾಂ. ದು]ರಿತಮದೊಂ[ದೊಂ]ದೊಳಗಿರೆ ಪರಿವೇಷಂ ಕಲಹದೋಟಿ ಪರ್ವಸಮಕ್ಕುಂ ಪಿರಿದಕ್ಕುಮಿನ ಶಶಾಂಕರ ಪರಿವೇಷಂ ಬೆಳ್ಪನಾದೊಡಂ ಮಟಿ ಕಿಡುಗುಂ (ಜಟ್ಟಮ. ೫-೧೫). [<ಸಂ. ಪರೀತ]

**ಪರಿತ**₂ (ನಾ). ಒಂದು ಬಗೆಯ ಹಕ್ಕಿ : ಪರಿತ ಪಾಲ್ವಣ ಸ್ವೇತ ಸೋರೆಯುಂ ಪರಿವ ಗೀಜಗ ಮೆರೆದವು (ಗೋಹಾಡು. ೨೪).[?]

**ಪರಿತಂ** (ಅ). ೧. ಎಲ್ಲಾ ಕಡೆಗಳಲ್ಲಿಯೂ. ೨. ಅಭಿಮುಖವಾಗಿ.

**ಪರಿತಂ ಮಾಡು** = ಅಭಿಮುಖವಾಗಿಸು ; ಎದುರಾಗಿಸು : ಅಂತುದಾಸೀನಮಾನಸಂ ಮಸಕಮಿಲ್ಲದ ಸಾರ್ವಭೌಮಂ ಪೇರಡ್ಡಮಾಗಿ ಕೆಲದ ಚಕ್ರಾಯುಧನೊಳ್ ತಮ್ಮಂಗಬಾಹ್ಯವಸ್ತುವಂ ಪರಿತಂ ಮಾಡುತ್ತಿರೆ (ಶಾಂತಿಪು. ೧೦-೧೧೬ ಪ). [ಸಂ.]

**ಪರಿತಪನ** (ನಾ). ಅತಿಯಾದ ದುಃಖ ; ಬಹಳವಾದ ಕಳವಳ : 'ಪರಿತಪಿಸು' ಪರಾ.

[ಸಂ.]

**ಪರಿತಪಿಸು** (ಕ್ರಿ). ಅತಿಯಾಗಿ ದುಃಖಿಸು ; ಬಹಳವಾಗಿ ಕಳವಳಪಡು : ಹರಣವಳಿದು ಧರೆಗುರುಳಿದ ಪಕ್ಕಿಯ ಪರಿಯ ನಿಟ್ಟಿಸಿ ಪರಿತಪಿಸಿ (ಹವಿಬ. ೨-೩೫); ದಿನವೆಲ್ಲಾ ದುಡಿದರೂ ಹೊಟ್ಟೆ ತುಂಬದೆ ಪರಿತಪಿಸುವ ಬಡಜನಕೋಟಿಗೆ ನಮ್ಮಲ್ಲಿ ಬರಗಾಲವಿಲ್ಲ (ಕಣ್ಮಣಿ. ೫ ಮೊದಲಮಾತು); ತಮ್ಮನ್ನು ನಂಬಿ ಕೈಹಿಡಿದ ಜೀವ ಪರಿತಪಿಸುವುದನ್ನು ಕಂಡು ಹೃದಯವನ್ನು ಗರಗಸದಿಂದ ಕುಯ್ಯುತ್ತಿದ್ದ ಹಾಗಾಯಿತು ಅವರಿಗೆ (ರಂಗಪ. ೧೧೪). [ಪರಿತಪನ+-ಇಸು₃]

**ಪರಿತಪ್ತ** (ಗು). ೧. ಚೆನ್ನಾಗಿ ಕಾದ : ಸುಣ್ಣಣಲಂ ಮಣಲ್ದೀಂಟಿಗೆತ್ತ ಪಜಿ ಪರಿತಪ್ತ ಲೋಹರಜಸ್ಸಿಕತಿಳತಳದೊಳ್ ಮೆಯ್ಯುಸೀಡಾಡುವುದುಂ (ಶಾಂತಿಪು. ೭-೯೧ ಪ). ೨. ದುಃಖ ಹೊಂದಿದ ; ತಾಪ ಹೊಂದಿದ. (ನಾ). ೩. ತಾಪ ಹೊಂದಿದ ವ್ಯಕ್ತಿ ; ಸಂತಪ್ತ ವ್ಯಕ್ತಿ : ಹಸಿವಿನ ಬಾಧೆಯಿಂದ ಪರಿತಪ್ತರಾದವರು (ಶ್ರೀರಾಮ. ೨೩೦).

[ಸಂ.]

**ಪರಿತರ್**, ಪರಿತರು, ಪರಿತರ್, ಪರಿತರು (ಕ್ರಿ). ೧. ಓಡಿಬರು ; ಧಾವಿಸು ; ರಭಸದಿಂದ ಮುನ್ನುಗ್ಗು :ಕರುಮಾಡದಿಂದಿಟಿದು ಪರಿತರ್ಪನ್ನೆಗಂ (ಪದ್ಮಾರಾ. ೧೧೭-೧೩) ; ಪರಿಜನಮನಿತುಂ ತುರಿಪದೆ ಪರಿತಂದಿನ್ನೇವೆವೆಂದು ಕಪ್ಪುರದ ರಜಂಬೊರೆದ ಕರಕಾಂಬುವಂ ತಳಿದು (ಆದಿಪು. ೪-೧೭); ರೋಗದಿನಾಗಳು ನೀಡುಂ ಪರಿತಂದೋರ್ವಳು ನೋಡಿದಳೊಲ್ದು ರೂಪವಿದ್ಯಾಧರನಂ (ಸುಕುಮಾ. ೧೧-೧೩); ಶರ್ವಂ ಪರಿತಂದು ನಿಲ್ವನೆಂದೊಡೆ ಗಿರಿಜೆಯ ಸೌಭಾಗ್ಯದಿರವನಾರ್ ಬಣ್ಣಿಸುವರ್ (ಗಿರಿಕ. ೩-೯೪). ೨. ನಡೆದು ಬರು ; ಆಗಮಿಸು ; ಸಾಗಿ ಬರು : ಮನೋಭವನೊಡ್ಡಣದಂತೆ ತಂಡತಂಡದೆ ಪರಿತಂದು ಸೂಸಿದುದು ಸೇಸೆಯಂ ನಂದು ಪುರಾಂಗನಾಜನಂ (ಪಂಪಭಾ. ೪-೩೫); ಮದೀಯಾಂಬಿಕೆಯ ಮುಂದೆ ಪರಿತರ್ಪ ದೌವಾರಿಕೆಯರಿಂ . . . ಪರಿಚಾರಕಿಯರಿಂ ಕೂಡೆ ಸಂದಣಿಸಿದ ಬಾಗಿಲೊಳಂತಾನುಂ ನುಸುಳ್ದು ಪೋದಂ (ಕಾದಂಪೂ. ೮೭೦); ಜಗಂಗಳಂ ಬಗೆಯದೆ ನುಂಗಲೆಂದು ಪರಿತಂದಪುದಂತಕನಾಜ್ಞೆಯಿಂದಮಿಂ ಪಗೆವಡೆಗಿಲ್ಲ ಜೀವನಂ (ಪಂಚತಂತ್ರ. ೧೪-೧೫೯). ೩. ಪ್ರವಹಿಸು ; ಹರಿದು ಬರು : ಹಿಮಶೈಲಾಗ್ರದಿನಿಟಿ ತಂದಮರಾಪಗೆ ಕೆಟಗೆ ನಿಂದ ಜಿನಬಿಂಬದ ಮೇಲಮರ್ದಿರೆ ಪರಿತಂದುದಜಿಂದಮೆ ಪಾವನಮಾಯ್ತು (ಸಮಪ. ೨-೫೩) ; ಹುಣ್ಣಿಮೆಯ ಸಸಿಯ ಬಟ್ಟ್ಯೊಸರ್ದು ಪರಿತರ್ಪ ದಿವ್ಯಾಮೃತದ ತೊಱೆಯೊ (ಪದ್ಮರಾ. ೧-೩೦) ; ಕಣ್ಬನಿವೊನಲ್ಪರಿತರ್ಪವೊಲೊಪ್ಪೆ ವೃಷ್ಟಿ (ರಾಜಶೇ. ೧-೧೧೪).

**ಪರಿತರು** : ೧. ಮತ್ತೆ ಜೋಡಿಸಿ ಪರಿತರಲು ಮುರಿಯೆಚ್ಚು ಪುನರಪಿ ಹುರುಳುಗೆಡಿಸಿದನಜಿಸಿ ಹರಿದನು ಮತ್ತೆ ಪವನಜನ (ಕುಪ್ಯಾಕ. ೨೦-೧೫); ಅಲಘುಭುಜಬಲ ಹಲಗೆ ಖಂಡೆಯವಿಡಿದು ಪರಿತರಲು (ನಿಭಾಗ. ೧೧-೩೬-೧೬). **ಹರಿತರ್** : ೧. ನೆಱೆ ಕೇಳ್ದು ಹರಿತಂದು . . . ತರುಣಿಯರ ಹರಣಮಂ ಕಾಯ್ದು (ಸಿದ್ಧರಾ. ೧-೩೫); ಪಟುಭೀಕರವಿಷೋರಗವಾಗಳೊಂದುರವಣಿಸಿ ಹರಿತಂದು (ಬಸವು. ೪೬-೨೧). ೨. ಕಣಜಂಗಳಿಗೆ ಹರಿತಂದು ಪಡಿಗಳನಳೆವ ಬಾಚರಸಂಗೆ ಇಂತೆಂದ (ಬಸವು. ೫೩-೧೬). ೩. ನಿರ್ಝರಮೆನಲು ಗಿರಿಯ ತುದಿಯಿಂದೋಸರಿಸಿ ಹರಿತರ್ಪ ಹಳ್ಳಕ್ಕೆ ನಾಮಮುಕ್ಕುಂ (ಮಂಗರಾ. ೩೦-೨). **ಹರಿತರು** : ೧. ಮಡದಿಯರು ಹರಿತಪ್ಪ ಕಡುಸಂಭ್ರಮವನೇನೆಂಬೆ (ಬಸವು. ೫-೨೪) ; ಕಳವಳಿಸಿ ಸಾತ್ಯಕಿ ಘಟೋತ್ಕಚರುಲಿದು ಹರಿತರೆ (ಕುಪ್ಯಾದ್ರೋ. ೧-೬೩) ; ನಂದಾದಿ ಗೋಪರ ಮೊತ್ತವೀ ಪ್ರಳಯದ ಮಹಾಧ್ವನಿಯೆತ್ತಲೇನೇನೆನುತ ಹರಿತಂದು (ನಿಭಾಗ. ೧೦-೧೦-೩೪). ೨. ತೊಪ್ಪತೊಪ್ಪನೆ ಪಿರಿಯ ಕಲ್ಲೊಳು ತಪ್ಪಲಿಡುತಂ ಸೋಹುತಂ ಹರಿತಪ್ಪ ಕೆಲವಾಡುಗಳಂ ಬೊಬ್ಬುಲಿಯ ಮರಿಸಿಪ್ಪ ನೆಪ್ಪಿಗಾತನು ಹೊಡೆದು (ಬಸವು. ೨೦-೧೪); ಹರುಷ ಮಿಗೆ ಹರಿತಂದು ಬಂಡಿಯ ಶಿರದ ಹಲಗೆಯನಡರಿದನು (ಕುಪ್ಯಾಆ. ೧೦-೨೭) ; ಕಾಮಲತೆ ನೀನಿದಂ ಮುಡಿಗೆ ಮುಡಿಯೆಂದು ಕೊಡಲಾಗಲಾ ಮಾಲೆಯೇ ಹಾವಾಗಿ ಹರಿತಂದುದಂ ಕಂಡೆನು (ಸಪ್ತಕಾ. ೬-೪೭). ೩. ತಪ್ಪಿಸಿದ ಮೈಮೈಗಳಲಿ ಹರಿತಪ್ಪ ರಕ್ತವ ಸುಱಿದು ಕೆಂಧೂಳುಪ್ಪರಿಸಿದುದು (ಕುಪ್ಯಾಕ. ೨-೨೪).

**ಪರಿವರಿತರು, ಪರಿಪರಿತರ್** (ದ್ವಿರುಕ್ತಿ) : ಮಹಾದೇವಿಯ ತವರಾಸಿನ್ದರ ಪರಿವರಿತರೆ ನೆಲಪುಕ್ಕಳ್ಳಿಲದೆ ಸನ್ದು (ಎಕ. XVI, ಮದ್ದಗಿ. ೧೩೩-೨ ; ?) ; ಪರಿಪರಿತಂದು ಮೊಯ್ವಳರಡಿಲ್ಲಿನೆ ಪಕ್ಕದಿನಪ್ಪಿ . . . ಕಾಂತನೊಳ್ ನೆರೆದು ರಸಾಂಗಕಾಂತೆಯೆರ್ದೆಯಾಱುದುದಾದಮೆ ತತ್ತ್ವ ಭಾತದೊಳ್ (ಚಂದ್ರಪು. ೮-೧೦೧). [ಪರಿ₂+ತರ್]

**ಪರಿತರು** 'ಪರಿತರ್' ನೋ.

**ಪರಿತರ್ಪಿಸು** (ಕ್ರಿ). ತೃಪ್ತಿಗೊಳಿಸು ; ತೃಪ್ತಿಪಡಿಸು : ಧೂರ್ತಜನಂ ನಿಜವ್ಯಸನಮಂ ಪರಿತರ್ಪಿಸ [ಪಾಠಾಂ. ಪ್ಪಿಸ]ಲೆಂದಧರ್ಮದೊಳ್ ವರ್ತಿಸುವಂತು ಯೋಜಿಸುಗುಮಾಳ್ದರನೆಂದೊಡೆ (ಪಾರ್ಶ್ವಪು. ೩-೬೯).

[ಸಂ. ಪರಿತರ್ಪಣ+-ಇಸು₃]

**ಪರಿತಾಪ** (ನಾ). ೧. ಕಾವು ; ಉಷ್ಣ ; ಶಾಖ : ಪರಿತಾಪಂ ಕಿಡೆ ಪುಳಕಾಂಕುರನೊದವೆ ಲತಾಂಗದೊಳ್ . . . ಪಶ್ಚಿಮಾನಿಲಂ ಸೋಂಕಲೊಡಂ (ಪಂಚತಂತ್ರ. ೭-೧೪೦) ; ನವಘನವಾಲಾರವದಿಂದವಸೀದೇವಿಯ ನಿದಾಘಪರಿತಾಪಮಡಂಗುವವೋಲ್ (ಜಗವಿ. ೨-೭೦). ೨. ಜ್ವರ ; ತಾಪ : ಚಂದನರಸದಿಂದೆ ಮಾಗಿಯಾ ನೀರಿಂದಂ ನಂದದು ಪರಿತಾಪಾನಳ ನಿಂದಱಿಂದೆಂ ನಿನ್ನ ಮೆಯ್ಯ ಕಾಮಜ್ವರನುಂ (ಕವಿರಾ. ೩-೧೬೪). ೩. ಅತಿಯಾದ ದುಃಖ ; ಬಹಳವಾದ ಸಂಕಟ,—

ಬೇಗುದಿ : ಪರಿತಾಪಮನೆನಗೆ ನಿಶಾಕರನಾಗಿಸುಗುಂ . . . ಸುರಭಿ ಸಮಯೋದಿತಂ ಹಿಮಕರನಬಲಂ ಪಡೆವನೆಂಬುದಿದು ವಿಪರೀತಂ (ಕವಿಾ. ೩–೩೬) ; ರೌದ್ರಶಾಪಪರಿತಾಪ ವಿಳಾಪದೊಳಾ ಮಹೇಶ್ವರಂ . . . ಚಿಂತಿಸುತ್ತಂ ಪೊಬಿಲ್ಗೆ ಮಗುಳ್ದುವಂದು (ಪಂಪಭಾ. ೧–೧೧೨) ; ಒಡ ಹುಟ್ಟಿದರ ಕೈಯಾರ ಕೊಂದರೆ ಮುಟ್ಟದೇ ಕಡುಪಾಪ ಘನಪರಿತಾಪ ತನಗೆ (ಕುಮಾ.ಭೀ. ३–೨೬) ; ಕಾರ್ಯದವಿವೇಕಮಂ ಲೆಕ್ಕಿಸದೆ ಕಾರಣದ ಪರಿತಾಪಮಂ ಗಣಿಸಿ ಕ್ಷಮಿಸಿಮಪರಾಧಮಂ (ಚಿತ್ರಾಂಗ. ೬೬–೧೭೪೯). ೪. ಆಯಾಸ ; ದಣಿವು : “ದವಥುಃ, ಪರಿತಾಪಃ—ಈ ೨ ಬಟಲಿಕೆ” (ಹಲಾಯು. ೯೮–೪೪೩). ೫. ಭಯ ; ನಡುಕ. ೬. ಒಂದು ನರಕದ ಹೆಸರು. [ಸಂ.]

**ಪರಿತಾಪಪಡು** (ಕ್ರಿ). ಅತಿಯಾಗಿ ದುಃಖಪಡು ; ಬಹಳವಾಗಿ ಕಳವಳಗೊಳ್ಳು,—ಬೇಗುದಿಪಡು : ಗುರಿಯಿಲ್ಲದೆ ಅಲೆಯುವ ದ್ಯೂತಕಾರನ ಪತ್ನಿಯು ಅವನಿಂದ ತ್ಯಜಿಸಲ್ಪಟ್ಟವಳಾಗಿ ಪರಿತಾಪ ಪಡುತ್ತಾಳೆ (ಋಗ್ಸಾರ. ೩೦೯) ; ಮುಂದೆ ದುಷ್ಯಂತನು ಪರಿತಾಪ ಪಡುವಾಗ ಸಾನುಮತಿ . . . ಆ ವೃತ್ತಾಂತವನ್ನು ಶಕುಂತಲೆಗೆ ಮುಟ್ಟಿಸುತ್ತಾಳೆ (ಕಾವ್ಯಸ. ३६). [ಪರಿತಾಪ+ಪಡು$_1$]

**ಪರಿತಾಪಶ್ರಾಂತೆ** (ನಾ). ಬಹಳವಾದ ದುಃಖದಿಂದ ಬಳಲಿದವಳು; ಅತಿಯಾದ ಸಂಕಟದಿಂದ ನೊಂದವಳು : ಭವಿತವ್ಯತೆಗೇಕೀ ವ್ಯಥೆ ಓ ಪರಿತಾಪಶ್ರಾಂತೆ ! (ಅಹಲ್ಯೆ. ೧೧೧–೨೪).

[ಸಂ. ಪರಿತಾಪಶ್ರಾಂತಾ]

**ಪರಿತಾಪಿಕಿ** (ನಾ). [ಜೈನ] ಬೇರೆಯವರಿಗೆ ದುಃಖವನ್ನುಂಟು ಮಾಡುವುದು ; ಪಂಚವಿಂಶತಿಕ್ರಿಯೆಗಳಲ್ಲಿ ಒಂದು : ಪಂಚವಿಂಶತಿ ಕ್ರಿಯೆಗಳು — ೧. ಸಮ್ಯಕ್ತ್ವಕ್ರಿಯೆ . . . ೯. ಪರಿತಾಪಿಕಿ (ಪರದುಃಖೋತ್ಪಾದನ) (ಜೈನಧ. ६३). ‘ಪಂಚವಿಂಶತಿಕ್ರಿಯೆ’ ಪರಾ. [?]

**ಪರಿತಾಪಿತ** (ಗು). ಅಧಿಕವಾಗಿ ಕಳವಳಕ್ಕೆ ಒಳಗಾದ; ಬಹಳವಾಗಿ ಪೀಡಿತವಾದ : ತನ್ನ ನಾಜ್ಞಾಪನೆ ಬಗೆದತನುಪರಿತಾಪಿತಶರೀರನುಮಾಗಿ ಶಂತನು ಕರಂಗೆರ್ದೆಗಿಡೆ ತದ್ವೃತ್ತಾಂತಮೆಲ್ಲಮಂ ಗಾಂಗೇಯಂನಬಿಾದು (ಪಂಪಭಾ. ೧–೭೧ ವ). [ಸಂ.]

**ಪರಿತು** (ನಾ). ನೀರನ್ನು ದಾಟುವ ಒಂದು ಬಗೆಯ ಸಾಧನ; ನಾವೆ ; ತೆಪ್ಪ : ಹಂಜಮಾನರ ಹೆಂಣುಗಂಡುಸಹಿತ ಯೆಲರನು ದೋಣಿ ದುಗ್ಗಿ ಪರಿತಿನ ಮೇಲೆ ಹತಿಸಿ . . . ನಡದಲಿ (ಕಇ. I, ४೮–೧೪ ; 1427). [?]

**ಪರಿತುಷ್ಟ** (ಗು). ೧. ಪೂರ್ತಿಯಾಗಿ ತೃಪ್ತಿಗೊಂಡ,—ತಣಿದ; ಸಂತುಷ್ಟಿಗೊಂಡ : ಎಸೆಗುಂ ಸಹಕಾರಕೋಮಳಾಂಕುರಪರಿತುಷ್ಟಪುಷ್ಪ ಪರಪುಷ್ಟಗಳಧ್ವನಿ ನಂದನಂಗಳೊಳ್ (ಪಂಪಭಾ. ೨–೧೩) ; ಪರಿ ತುಷ್ಟಸುರತಸೌಖ್ಯಾಯಮಾನಮಾನಸರಾಗಿ (ಶಾಂತೀಶ್ವ. ೫–೧೩೪ ವ). ೨. ಸಂತೋಷಗೊಂಡ ; ಆನಂದಿಸಿದ. (ನಾ). ೩. ಸಂತೃಪ್ತಿ ಹೊಂದಿದವನು ; ಸಂತುಷ್ಟಿಗೊಂಡವನು : ಆ ಲಿಂಗಕ್ಕೆ ಮತ್ತೆ ಮತ್ತೆಬಗಿಯಾ ಪರಿತುಷ್ಟನಹ ನೃಪಗೆ ಮಂತ್ರಾಕ್ಷತೆಯನಿತ್ತು (ಹಚಕಾ. ೫–೮೩) ; ಪಂಡಿತರು ಪರಿತುಷ್ಟರಾದರು (ಕೌಶಿಾ. ೧–೬೩). [ಸಂ.]

**ಪರಿತುಷ್ಟಿ** (ನಾ). ಸಂತೃಪ್ತಿ ; ಸಂತುಷ್ಟಿ ; ಪರಿತೋಷ : ಜಾನಕಿ ನೋಡ ನಿನ್ನ ನಗೆಗಣ್ ಪರಿತುಷ್ಟಿ[ಪಾಠಾಂ. ತೃಪ್ತಿ]ಯನಪ್ಪು ಕೆಯ್ಕೊ ಲಂಕಾನಗರೀಬಹಿಃಪುರನಮೇರುವಿಲಾಸವನಂಗಳೇಟುಮಂ (ಪಂಪರಾ. ೯–೧೭೪). [ಸಂ.]

**ಪರಿತುಷ್ಟಿವಡೆ** (ಕ್ರಿ). ಸಂತೃಪ್ತಿಯನ್ನು ಹೊಂದು ; ಸಂತುಷ್ಟವಾಗು : ಅಮೃತಮತಿಮಹಾದೇವಿ . . . ಹರಪ್ರಸಾದಸುಧಾಸ್ವಾದನಂ ಗೆಯ್ದು ಪರಿತುಷ್ಟಿವಡೆದು (ರಾಜಶೇ. ४–೧४ ವ). [ಪರಿತುಷ್ಟಿ+ಪಡೆ$_1$]

**ಪರಿತುಷ್ಟಿವೆಱು** (ಕ್ರಿ). =ಪರಿತುಷ್ಟಿವಡೆ : ಪರಿತುಷ್ಟಿವೆತ್ತು ಸುರತದ ಪರಿಶ್ರಮಮನಾಱಿಸಲ್ ತದೀಯಲತಾಮಂದಿರದಿಂ ಪೊಱಮಟ್ಟರ್ (ಶಾಂತೀಶ್ವ. ೫–೧೩೫). [ಪರಿತುಷ್ಟಿ+ಪೆಱು$_1$]

**ಪರಿತೃಪ್ತ** (ಗು). ೧. ಸಂತೃಪ್ತಿ ಹೊಂದಿದ ; ತಣಿದ: ಪವನಂ ಜಯನಂ ಪಲ್ಲಣಿಸಿ ಪರಿತೃಪ್ತ ಬಳಾಹಾರನಂ ಮಾಡಿ (ಕುಸುಮಾ. ೧४–೫ ವ). (ನಾ). ೨. ಸಂತೃಪ್ತಿ ಹೊಂದಿದ ವ್ಯಕ್ತಿ : ಪರಮಸುಖಪೀಯೂಷ ಪರಿತೃಪ್ತರಾಗಿ ಕುಸುಮಾವಳೀದೇವಿಯುಂ ಕಂದರ್ಪದೇವನುಮಿರ್ಪುದುಂ (ಕುಸುಮಾ. ೧३–೧೧೧ ವ). [ಸಂ.]

**ಪರಿತೃಪ್ತಿ** (ನಾ). ಸಂತುಷ್ಟಿ ; ಸಂತೃಪ್ತಿ : ನರನಾಥಚಕ್ರಿ ಪಿರಿದುಂ ಪರಿತೃಪ್ತಿಯನೆಯ್ದಿಲೀಪ್ಸಿತಾರ್ಥಮನಿತ್ತಂ (ಕುಸುಮಾ. ೬–೧೧೨) ; ಗುಣ ದಿಂದ ಹುಟ್ಟಿದ್ದಕ್ಕೆ ಪರಿತೃಪ್ತಿಯಿಲ್ಲ (ಬಂಕಿಮ. ೬೧). [ಸಂ.]

**ಪರಿತೃಪ್ತಿವೆಱು** (ಕ್ರಿ). ಸಂತೃಪ್ತಿಯನ್ನು ಹೊಂದು ; ಸಂತುಷ್ಟವಾಗು : ಸುರತಟನೀನವೋದಕಮನೂಡಿ ಮನಂ ಪರಿತೃಪ್ತಿವೆತ್ತು (ಕುಸುಮಾ. ४–३೮). [ಪರಿತೃಪ್ತಿ+ಪೆಱು$_1$]

**ಪರಿತೋಷ** (ನಾ). ೧. ಆಸೆಯಿಲ್ಲದಿರುವಿಕೆ ; ವಿರಕ್ತಿ : ಅವನಲಿ ದೊರೆಕೊಂಬುದೀ . . . ಪರಿತೋಷವೀ ನಿರ್ವ್ಯಾಕುಲತೆ (ನಿಭಾಗ. ೧೧–೨–೩४). ೨. ಸಂಪೂರ್ಣವಾದ ತೃಪ್ತಿ ; ಸಂತುಷ್ಟಿ : ಕೌರವನ ಛಲ ಸಂದುದಿನ್ನ ಹಿತಾವನೀಶರಿಗಾಯ್ತು ಪರಿತೋಷ (ಕುವ್ಯಾಆ. ೨३–३३). ೩. ಅಧಿಕವಾದ ಆನಂದ,—ಸಂತೋಷ : ಕ್ಷೇಮಂಕರ ಮಹಾರಾಜಂ ಪರಿತೋಷಪ್ರಾದುರ್ಭಾವಚಿಹ್ನಭೂತಪರಮಪ್ರಸಾದಸ್ಮೇರ ಮುಖಂ ಪ್ರಿಯಾತ್ಮಜಾನನಾರವಿಂದನಿರೀಕ್ಷಣಾನಂತರಂ (ಶಾಂತಿಪು. ೮–೬೭ ವ).ಪರಿತೋಷಪರಾಕಾಷ್ಠೆಯೊಳ್ ನಿಷ್ಠಿತಾತ್ಮನಾಗುತ್ತುಂ (ಪುಷ್ಪಪು. ೧೧–೨೧ ವ); ಕರಣ ನಿರ್ಮಳವಾಯ್ತು ಮನವುಬ್ಬರಿಸಿತತಿಪರಿತೋಷದೇಳಿಗೆ ಪರಮಸುಖದಲಿ ತನುವ ಮಱೆದನು (ಕುವ್ಯಾಉ. ೮–೬). ೪. ಆಸೆ ; ಬಯಕೆ : ದ್ವೇಷಂ ವಿರಹಿಗಳೊಳ್ ಪರಿತೋಷಂ ಮಧುಮಾಸದೊಳಾಗೆ ಬಂದರ್ ಕೆಲರುಂ ಯೋಷಿಜ್ಜನಮಲರಂಬಿನ ವೇಷಂಗೊಂಡಂತೆ ನೆಱೆದು ಪೂದುಡುಗೆಗಳಿಂ (ಶಾಂತಿಪು. ೮–೨३). ೫. ಪಾರಿತೋಷಕ : ಪಾದ್ರಿ ಯಿಂದ ಅನೇಕಾನೇಕ ಪರಿತೋಷಗಳನ್ನು ಪಡೆದು, ಆತನಿಗೆ ತಾನು ಕ್ರೈಸ್ತಜಾತಿಗೆ ಸೇರುತ್ತೇನೆ ಎಂಬ ನಂಬುಗೆ ಬರುವಂತೆ ಮಾಡಿ (ಮಲಿಮ. ೫೬೦).

**ಪರಿತೋಷವಾಗು**=ಬಹಳ ಸಂತೋಷವಾಗು ; ಅಧಿಕವಾದ ಆನಂದವುಂಟಾಗು : ಕೌರವರಾಯನಾಳಲಿ ಪೊಡವಿಯನು ಪರಿತೋಷ ವಾಗಲಿ ನೃಪನ ಮಿತ್ರರಿಗೆ (ಕುವ್ಯಾದ್ರೋ. ३–೫೭) ; ಏತರಿಂದ ಅವನಿಗೆ ಪರಿತೋಷವಾಗುವದು ಎಂಬುದೇ ಅವರಿಗೆ ತಿಳಿಯಲಿಲ್ಲ (ಇಪ್ಪಕ. ೧೬೫).

[ಸಂ.]

**ಪರಿತೋಷಂಬಡೆ,** ಪರಿತೋಷವಡೆ (ಕ್ರಿ). ೧. ಬಹಳವಾದ ಸಂತೋಷವನ್ನು ಹೊಂದು ; ಅಧಿಕವಾದ ಆನಂದವನ್ನು ಪಡೆ : ಪರಿತೋಷಂಬಡೆದಗಜಾವರಸೋಮೇಶ್ವರನನರ್ಚಿಸುತ್ತ (ಉದ್ಭಟ. ೧೧–೧೧३). **ಪರಿತೋಷವಡೆ :** ೧. ಪರಿತೋಷವಡೆದು ಪ್ರಾಣೇಶನಂಘ್ರಿಗೆ ನಮಸ್ಕರಿಸಿ ಮೌನದಿ ನಿಂದಿರಲು (ಮೋಹತ. ४–೨೫). ೨. =ಪರಿತುಷ್ಟಿ ವಡೆ : ಸಿತ ರಾಜಾನ್ನ ಸದ್ಘೃತತೊವ್ವೆಗೂಡಿ ನಿರ್ವಿತವಾದ ತೋರ ದುತ್ತುಗಳ ಜತನದಪ್ಪದೆ ಕೈಕೊಂಡರು ಕೃಷ್ಣಾರ್ಪಿತವೆಂದು ಪರಿತೋಷ ವಡೆದು (ಮೋಹತ. ३–೫೫). [ಪರಿತೋಷ+ಪಡೆ$_1$]

**ಪರಿತೋಷವಡು** (ಕ್ರಿ). ಬಹಳವಾಗಿ ಸಂತೋಷಪಡು,—

ಆನಂದಿಸು : ಕಟ್ಟಾಣಿಸುಡಿಗೇಳಿ ಕಡುಮೆಚ್ಚಿ ಪರಿತೋಷಪಟ್ಟು (ಮೋಹತ. ೩೩-೫೩). [ಪರಿತೋಷ + ಪಡು₁]

**ಪರಿತೋಷವಡೆ** 'ಪರಿತೋಷಂಬಡೆ' ನೋ.

**ಪರಿತೋಷಾಶ್ರು** (ನಾ). ಬಹಳ ಸಂತೋಷದಿಂದುಂಟಾದ ಕಣ್ಣೀರು ; ಆನಂದಬಾಷ್ಪ : ಕರುಣಾಳು ಪರಿತೋಷಾಶ್ರುಪೂರ್ಣ ವಿಶಾಲಲೋಚನ ನೋಡಿದನು ತನ್ನ ಪರನೊಲವಿನಲಿ (ಕುವ್ಯಾಸ. ೧೧-೧೬). [ಪರಿತೋಷ + ಅಶ್ರು]

**ಪರಿತೋಷಿ** (ಗು). ೧. ತೃಪ್ತಿಗೊಂಡ ; ಸಂತುಷ್ಟಿ ಹೊಂದಿದ. ೨. ಆನಂದಗೊಂಡ ; ಸಂತೋಷ ಹೊಂದಿದ. (ನಾ). ೩. ಆನಂದವನ್ನು ಕೊಡುವವನು : ಶರಣಜನಪರಿತೋಷಿ ಕಾಲದ್ವೇಷಿ ನಿರ್ದೋಷಿ (ಬಸವು. ೬-೪). [ಸಂ. ಪರಿತೋಷಿನ್] -

**ಪರಿತೋಷಿತ** (ಗು). ೧. ಸಂತೋಷದಿಂದ ಕೂಡಿರುವ : ಪರಿತೋಷಿತಾತ್ಮವೃಂದಿಯೊಳಿರದತ್ಯಭಿಲಷಿತದಾನದಾನಂದೆಯೊಳಾ ನರಪಂ ಸುನಂದೆಯೊಳ್ ಪಿರಿಯರಸಿಯೊಳೊಡಗೂಡಿ ಸುಖದಿನಿರಲ್ (ಸುಪಾಸೇ. ೨-೩). (ನಾ). ೨. ಸಂತೋಷದಿಂದಿರುವವನು : ಒಗುವ ಕಂಬನಿಗಳಲಿ ಕಂಠವ ಬಿಗಿದ ಸೆರೆಗಳ ಸೇದುವಕ್ಕೆಯ ವಿಗತ ಪರಿತೋಷಿತನು ಪಾವನತರರಿಗಿಂತೆಂದ (ತೊರರಾ. ೧-೪-೬). [ಸಂ.]

**ಪರಿತ್ಯಕ್ತ** (ಗು). ೧. ಬಿಟ್ಟ ; ತ್ಯಜಿಸಿದ : ಪರ್ವತದೊಳಿರ್ದ ಶಾರ್ದೂಲಂ ಜಾತಿಸ್ಮರನಾಗಿ ಪರಿತ್ಯಕ್ತಾಹಾರಶರೀರನುಪಶಾಂತಸ್ವಾಂತನಿರ್ದುದೆಂಬುದಂ . . . ಅಱಿದು (ಆಪು. ೫-೧೧ ಪ). (ನಾ). ೨. ಬಿಡಲ್ಪಟ್ಟವನು ; ತ್ಯಜಿಸಲ್ಪಟ್ಟವನು : ಭಕ್ತರಲ್ಲಿ, ನೆರೆ ಮುಕ್ತರಲ್ಲಿ, ಸಲೆ ಪರಿತ್ಯಕ್ತರಲ್ಲು ಒಂದೆ ಉಕ್ತಿ (ನಿಬಸು. ೩೪-೧೬) ; ಕೊನೆಗೆ ಪ್ರಮಿಾಲೆಯಿಂದ ಪರಿತ್ಯಕ್ತನಾಗಿ ಕುಡಚಿ ಕಪಾಳದ ಮೇಲೆ ಹೊಡೆಯಿಸಿಕೊಂಡಾಗ (ಸಮಜೀ. ೧೦ ಪೀಠಿಕೆ). ೩. (ಆಸೆ ಮುಂತಾದುವನ್ನು) ಬಿಟ್ಟವನು; ತ್ಯಜಿಸಿದವನು: ಕೇಶವನುಮಾತ್ಮೀಯಗುರುವಿಯೋಗದೊಳ್ ಪರಿತ್ಯಕ್ತ ಸಕಲರಾಜ್ಯಪರಿಚ್ಛೇದಂ ಪ್ರವ್ರಜ್ಯಪದವಿಯೊಳ್ ಪರಿತ್ಯಕ್ತನುಮಾಗಿ ತದಚ್ಯುತಕಲ್ಪದೊಳ್ ಪ್ರತೀಂದ್ರನಾದಂ (ಆಪು. ೬-೧೨ ಪ). [ಸಂ.]

**ಪರಿತ್ಯಕ್ತೆ** (ನಾ). ೧. ತಿರಸ್ಕಾರಕ್ಕೆ ಪಾತ್ರಳಾದವಳು ; ಉಪೇಕ್ಷೆಗೊಳಗಾದವಳು : ಈ ಕವಿಪರಿತ್ಯಕ್ತೆಯರ ಪೈಕಿ ಯಾರಿಗೆ ಯಾರು ತಮ್ಮ ಹೃದಯದಲ್ಲಿ ಆಶ್ರಯ ಕೊಡುತ್ತಾರೆಂಬದು . . . ಅಭಿರುಚಿಯ ಮೇಲೆ ಹೋಗುತ್ತದೆ (ನಿಬಂಧ. II, ೩೫೩). ೨. ಗಂಡನಿಂದ ತಿರಸ್ಕೃತಳಾದವಳು ; ಗಂಡ ಬಿಟ್ಟವಳು. [ಸಂ. ಪರಿತ್ಯಕ್ತಾ]

**ಪರಿತ್ಯಜನ** (ನಾ). ಬಿಡುವುದು ; ತ್ಯಜಿಸುವುದು ; ಪರಿತ್ಯಾಗ : ಜೀವಂಗಳ್ . . . ನಾನಾಕಾರ ಶರೀರೋಪಾದಾನಪರಿತ್ಯಜನಪುರಸ್ಸರಂ ಪರಿಭ್ರಮಿಸುಗುಂ (ಆಪು. ೧೬-೫೭ ಪ). [ಸಂ.]

**ಪರಿತ್ಯಜಿಸು** (ಕ್ರಿ). ಬಿಟ್ಟುಬಿಡು ; ವರ್ಜಿಸು ; ತ್ಯಾಗ ಮಾಡು : ಐಹಿಕವನ್ನು ಪರಿತ್ಯಜಿಸಬೇಕೆಂದು ಎಲ್ಲಿಯೂ ಹೇಳಿಲ್ಲ (ಆರ್ಯಧ. ೪೨) ; ನನ್ನನ್ನೇ ನಂಬಿ ನನ್ನನ್ನು ಹಿಂಬಾಲಿಸಿರುವ ಈ ನಾಯನ್ನು . . . ನಾನು ಪರಿತ್ಯಜಿಸಲಾರೆನು (ಹಿಂಕಿರು. ೧೩). [ಪರಿತ್ಯಜನ + –ಇಸು₃]

**ಪರಿತ್ಯಾಗ** (ನಾ). = ಪರಿತ್ಯಜನ : ಆಗಳಾ ಸ್ವಯಂಬುದ್ಧಂ . . . ಬಾಹ್ಯಾಭ್ಯಂತರಪರಿಗ್ರಹಪರಿತ್ಯಾಗಪುರಸ್ಸರಂ . . . ಪ್ರತ್ಯಾಖ್ಯಾನಮಂ ಕೊಟ್ಟು (ಆಪು. ೨-೫೧ ಪ) ; ನೃಪನ ಮೂದಲೆ . . . ಪ್ರತಿಭಟರ ನಗೆ ಸೌಭಟಪರಿತ್ಯಾಗ . . . ಈ ಭೂಮಿಪರ ಮರೆಳಿಚಿತು (ಕುವ್ಯಾಗ. ೧-೨೩); ಕಾವೇರಿಯ ಪವಿತ್ರಜಲಗರ್ಭದಲ್ಲಿ ಈ ದೇಹವನ್ನು ಪರಿತ್ಯಾಗ ಮಾಡುತ್ತೇನೆ (ಶ್ರೀರಾಯ. ೨೦೮). [ಸಂ.]

**ಪರಿತ್ಯಾಗಿ** (ನಾ). ತ್ಯಾಗಮಾಡುವವನು ; ತ್ಯಜಿಸುವವನು : ಭವಿಸಂಸರ್ಗಪಥಸಂತತಪರಿತ್ಯಾಗಿ (ಬಸವು. ೨೧-೩). [ಸಂ. ಪರಿತ್ಯಾಗಿನ್]

**ಪರಿತ್ಯಾಜ್ಯ** (ಗು). ಬಿಡಲು ಯೋಗ್ಯವಾದ ; ವರ್ಜಿಸಲು ತಕ್ಕುದಾದ. [ಸಂ.]

**ಪರಿತ್ರಾಣ** (ನಾ). ೧. ರಕ್ಷಣೆಮಾಡುವುದು ; ಕಾಪಾಡುವಿಕೆ ; ಸಂರಕ್ಷಣೆ : "ಪರ್ಯಾಪ್ತಿಃ, ಪರಿತ್ರಾಣಂ, ಹಸ್ತವಾರಣಂ—೩ . . . ರಕ್ಷಿಸುವದಕ್ಕೆ ಪೆಸರುಗಳು" (ಶಿವಾಚಿ. ೩೫೫) ; ಹರಿಯ ಪರಮಾಂಶದಲಿ ನೀನವತರಿಸಿದೆಯಲಾ ತಂದೆ ಗೋದ್ವಿಜಧರಣಿಧರ್ಮಾಮರ ಪರಿತ್ರಾಣಾರ್ಥದಲಿ ತನುವ ಧರಿಸಿ (ನಿಭಾಗ. ೪-೧೩-೨೦) ; ಈ ಸಣ್ಣ ಭರಣಿಯೊಳಗೇ ಆ ಸ್ವಧರ್ಮಸಂಪತ್ತು ರಕ್ಷಿಸಲ್ಪಟ್ಟು ಪರಿತ್ರಾಣವನ್ನು ಪಡೆಯುತ್ತದೆ (ನಿಬಂಧ. II, ೧೯೮). ೨. ರಕ್ಷಣೆ ಮಾಡಲು ಉಪಯೋಗಿಸುವ ಸಾಧನ ; ಕಾಪಾಡಲು ಬಳಸುವ ಸಲಕರಣೆ. ೩. ಆತ್ಮರಕ್ಷಣೆ. [ಸಂ.]

**ಪರಿತ್ರಾಸ** (ನಾ). ಹೆದರಿಕೆ ; ಅಂಜಿಕೆ : ಅಂತು ಪರಿತ್ರಾಸನಿರ್ಯಾತಕಿರಾತಸಂಜಾತಮೊಡವರೆ ಪನ್ನತಿಕೆಯಿಂ ಬರ್ಪಾಗಳ್ (ರಾಜಶೇ. ೫-೧೨೦ ಪ). [ಸಂ.]

**ಪರಿದರ** (ನಾ). ಒಸಡಿನ ಚರ್ಮವು ಸುಲಿದು ಹೋಗಿ ರಕ್ತವು ಒಸರುವ ಬಂದು ಬಗೆಯ ರೋಗ : ಪರಿದರ ಎಂಬ ದಂತಮೂಲ ರೋಗದಲ್ಲಿ ಎಣರುಗಳು ಒಡೆದು ಆವಾಗಲೂ ಬಿಡದೇ ರಕ್ತ ಸುರಿವದು (ವೈದ್ಯಸಾ. II, ೧೨೫). [ಸಂ.]

**ಪರಿದಲಿತ,** ಪರಿದಳಿತ (ಗು). ೧. ಪೂರ್ತಿಯಾಗಿ ಅರಳಿದ ; ಸಂಪೂರ್ಣವಾಗಿ ವಿಕಸನ ಹೊಂದಿದ : ಪರಿದಲಿ[ಪಾಠಾಂ. ಳಿ]ತ ಕಮಲದ ಕಂಪುಗಳ . . . ವೆಗ್ಗಳಿಕೆ ರ್‍ಝಳಪಿಸಿ ಹೊಯ್ದು ಸೆಳೆದುದು ಜನದ ಕಣ್ಮನವ (ಕುವ್ಯಾಆ. ೫-೮). **ಪರಿದಳಿತ :** ೨. ಸೀಳಿದ : ಪವನಬಲಪರಿದಳಿತಕದಳೀನಿವಹದಲಿ ನಭ ಧಾತುಗೆಟ್ಟುದು (ಕುವ್ಯಾದ್ರೋ. ೩-೧೦) ; ಇಳಿದುದೀ ಕಣನೊಳಗೆ ದಿಗುಮಂಡಲದ ಸಂಧ್ಯಾರಾಗವೆನೆ ಪರಿದಳಿತ ಚದುರಂಗದಲಿ ಮಸಗಿದುದರುಣಜಲರಾಶಿ (ಕುವ್ಯಾದ್ರೋ. ೧೫-೨೬). [ಸಂ.]

**ಪರಿದಳಿತ** 'ಪರಿದಲಿತ' ನೋ.

**ಪರಿದಳಿತಧರ್ಮ** (ನಾ). ಧರ್ಮವನ್ನು ನಾಶಪಡಿಸುವವನು ; ಅಧರ್ಮಿ : ಶಿಶುಘಾತಕನ ಪರಿದಳಿತಧರ್ಮನ ಗತಿಗಳಲಿ ತಾನಿಳಿವೆನಿಂದೇ ಕೊಲ್ಲದಿರ್ದರೆ ಸೂತನಂದನನ (ಕುವ್ಯಾಕ. ೧೮-೬). [ಪರಿದಳಿತ ( = ಪರಿದಲಿತ) + ಧರ್ಮ]

**ಪರಿದಾನ** (ನಾ). ಅದಲು ಬದಲು ; ವಿನಿಮಯ. [ಸಂ.]

△ **ಪರಿದಾರಿ** 'ಹರಿದಾರಿ' ನೋ.

**ಪರಿದಿಟ್ಟಿ** (ನಾ). ಹರಿದಾಡುವ ದೃಷ್ಟಿ ; ಚಂಚಲವಾದ ನೋಟ : ತರುಣಹರಿಣಗಣಕ್ಕೆ ಸರಸೇಕ್ಷಣದ ಸವಿನೋಟಮನುಪದೇಶಿಪಂತೆ ದೆಸೆವಡೆದು ಮುಂರಿದಿಟ್ಟಿ ಪರಿದಿಟ್ಟಿ ನೆಜಿಕಿ ಮೆಜಿಕಿಯೆ (ರಾಜಶೇ. ೧-೧೩೫ ಪ). [ಪರಿ₂ + ದಿಟ್ಟಿ]

**ಪರಿದೇವ** (ನಾ). = ಪರಿದೇವನ : ಜಾತಿಕಾರಣವಾಗಿ ಜರಾ–ಮರಣ–ಶೋಕ–ಪರಿದೇವ . . . ಸಂಭವಿಸುವುವು (ಬುದ್ಧಪ. ಮಿಲಿಂದ. ೬೯). [ಸಂ.]

**ಪರಿದೇವನ** (ನಾ). ಪ್ರಲಾಪ ; ವಿಲಾಪ : "ಕ್ರಂದಿತಂ, ರುದಿತಂ, ವಿಲಾಪಃ, ಪರಿದೇವನಂ–ಈ ೪ ಅೞ್ಕೆ" (ಹಲಾಯು. ೧೦೫-೧೬); ಪರಿದೇವನಪ್ರಚುರಹಾಹಾರಾವಮುಂ ಶೋಕವಿಹ್ವಲದಿಂ ಕೂಟ್ಟುದಿಗೊಂಡುದಾ ಕುರುಕುಲಕ್ಷ್ಮಾಪಾಲನಂತಃಪುರಂ (ಗದಾಯು. ೧೦-೧೩) ; ಕುಟಿಲದಿಂ ಹಂಸೇನೆಯುಂ ನೋಡಲೈತಂದ ಚಟುಲವಿಕ್ರಮಶುಕನ ಪರಿದೇವನವ

ನೋಡಿ (ವೆಂಕಾರಾ. ೬-೬ ಸೂಚನೆ). [ಸಂ.]

**ಪರಿದೇವನಂಗೈ** (ಕ್ರಿ). ರೋದಿಸು ; ಗೋಳಾಡು : ದನುಜಾನ್ವಯದ ಪರಿಪಾಲನೆಯಂ ಸತ್ಕೀರ್ತಿ ನಿನಗಡಸವೇಳ್ಕೆನುತ ಪರಿದೇವನಂಗೈದನಾ ದೈತ್ಯಕುಲನಾಥನು (ವೆಂಕಾರಾ. ೬-೨೬-೨೪).
[ಪರಿದೇವನ+ಗೈ (<ಕೆಯ್$_1$)]

**ಪರಿಧಾನ** (ನಾ). ೧. (ವಸ್ತ್ರ ಮುಂತಾದುವನ್ನು) ಉಡುವುದು ; ಧರಿಸುವುದು. ೨. ವಸ್ತ್ರ ; ಉಡುಪು : "ಉಪಸಂವ್ಯಾನಂ, ಪರಿಧಾನಂ, ಅಂತರೀಯಂ, ನಿವಸನಂ—ಈ ೪ ಉಟ್ಟುದು" (ಹಲಾಯು. ೯೦-೬೯೨) ; ಕಂಬುಲತಾಸುಲಲಿತಲವಣಾಂಬುಧಿ ಪರಿಧಾನಮಾಗೆ ಚೆಲ್ವಂ ಪಡೆದೀ ಜಂಬೂದ್ವೀಪಪ್ರಭುಗಿದು ಪೊಂಬೆಸಡೊಳೆ ಸಮೆದ ಮಕುಟ ವಿರ್ಪಣಂತಿರ್ಪಂ (ಆದಿಪು. ೭-೬೨) ; ಪರಿಧಾನಖಂಡವಸ್ತ್ರಂ . . . ಕರದ ಕಮಂಡಲು ಶೋಭಿಸುತಿರೆ ನಾರದನಿಬಾದು ಬಂದು ನೀರದಪಥದಿಂ ಮುರರಿಪುವಂ . . . ಪರಸುತ್ತುಂ (ಮಹಾನೇ. ೭-೪೨) ; ಮಿಗದ ರೂಪಂ ತಾಳಿಯೋಡುತಿರ್ಪಾ ಹರಿಯ . . . ತೊಗಲ ತೆಗೆದುಟ್ಟನಾ ಪರಮೇಶ್ವರಂ ಶಂಕರಂ ಶಶಿಧರಂ ಬಗೆದಿವಂ ಪರಿಧಾನಮಂ ಮಾಡಿ (ಅಂಬಾಚ. ೩-೧೨-೮). ೩. ಮೇಲುಡುಪಿನ ಒಳಗೆ ತೊಡುವ ವಸ್ತ್ರ,—ಬಟ್ಟೆ ; ಒಳ ಉಡುಪು. ೪. ಖಡ್ಗದ ಒರೆ. ೫. ಉಪಾಯನ ; ಕಾಣಿಕೆ ; ಉಡುಗೊರೆ : ಜನ್ನೋಪಂತಂಗೆ ಪರಿಧಾನಮನಿತ್ತು ಒಳಗು ಮಾಡಿ ಕೊಂಡು ಶಿವಪ್ಪನಾಯಕನಂ ಕೈವಶವಮಂ ಮಾಡಿಕೊಳಬೇಕೆಂದು (ಕೆಳನೃ. ೬-೩೭) ; ಕೋಂಟೆಯಂ ವೇಢೈಸಿದ ಗುರಿಮಾನಿಸರ್ಗಂ ಮತ್ತಂ ಕೆಲಂಬರ್ಪಯೋಗಿಗಳ್ಗಂ ಪರಿಧಾನವನಿತ್ತು (ಕೆಳನೃ. ೭-೪೬). ೬. ಆವರಣ ; ಪರಿಧಿ: ಪರಿಧಾನದಿ ಸುರಿಯುತಿರೆ ತುಂಬುವೆರೆಯ ಕಿರಣರಾಶಿ (ಚಿಂತನ. ೩-೭). ೭. ನೋಟ; ದೃಶ್ಯ: ಬೆಳಗಾಗಲು ವಾರಿಧಿಯ ಹೊಂಬಸಿರನೊಡೆದು ಬರುವ ದಿವ್ಯಶರೀರಿ ದಿನಮಣಿ, ಕಣ್ಣುಕಟ್ಟಾದ ಪರಿಧಾನ—ಇವುಗಳನ್ನೆಲ್ಲ ನೋಡಿ ಮೊದಲೆಂದಿಗೂ ತೋರದ ಬಾಳಿನ ಹಿರಿಮೆಯೊಂದು ಅವನ ಮನದಲ್ಲಿ ಮನೆಮಾಡಿಕೊಂಡಿತು (ಸಮಜೀ. ೫೯೨). [ಸಂ.]

**ಪರಿಧಾನಕ** (ನಾ). ಉಡುಪು ; ವಸ್ತ್ರ : ಮಿಾನ ಚಿಪ್ಪಿನ ಲೋಹಬದ್ಧದ ಜೀನಗೆಲಸದ ಮೃಗನಖದ ಪರಿಧಾನಕದ ಪಾರಿಯದ . . . ಕೈನೆಗಹಿ ನುಬ್ಬಣದ ಚೂಂತಮಾನ ಕಕ್ಕಸದಸುರರಾವ್ತರು ಬಳಸಿದರು ಖಳನ (ತೊರರಾ. ೬-೨೯-೧೬). [ಸಂ.]

**ಪರಿಧಾನಿಸು** (ಕ್ರಿ). ಧಾರಣೆ ಮಾಡು ; ಧರಿಸು : ವಿಶ್ವಾತ್ಮಕನು ಸರ್ಪಗಳನ್ನು ರತ್ನಾಭರಣಗಳನಥವಾ ಮುಕುಟ ಪರಿಧಾನಿಸಿದರೇನು . . . ಸರ್ವೇಶ್ವರನ ರೂಪದ ಜ್ಞಾನವಾಗುವದೆ (ಪಾರ್ಪಪ. ೨-೭೯).
[ಪರಿಧಾನ+–ಇಸು$_3$]

**ಪರಿಧಾವನ** (ನಾ). ೧. ವೇಗವಾಗಿ ಓಡುವುದು ; ರಭಸವಾದ ಓಟ : ಸ್ವಕೀಯಪರಿಧಾವನವೇಗವಿಘಟಿತವೈರಿಬಾಲಕಶಕಟನೆಂಬ ಶಕಟನುಮಂ . . . ಕರೆದು (ಜಗವಿ. ೩-೨೨ ಪ) ; ಪರಿಧಾವನೋದ್ಧತ ಧೂಳಿ ಮುಸುಕಿತು ತರಣಿಮಂಡಲವ (ಕುಪ್ಪಾಕ. ೩-೩). ೨. ಬಹಳವಾಗಿ ಉಜ್ಜುವುದು. [ಸಂ.]

**ಪರಿಧಾವನೆ** (ನಾ). = ಪರಿಧಾವನ ೧ : ದುರಿಯೋಧನಾನುಜರು ತೇರ ಸೂತನ ಸೂಚನೆಯಿಂ ಚೀತ್ಕಾರ ಪರಿಧಾವನೆಯ ಧೂಳಿಯಲೋರಣದ ಭಾರಣೆಯಲ್ಲೈದಿದರನಿಲನಂದನನ (ಕುಪ್ಪಾಕ. ೧೯-೨೧). [ಸಂ. ಪರಿಧಾವನ]

**ಪರಿಧಾವಿ** (ನಾ). ೧. ಜೋರಾಗಿ ಓಡುವುದು. ೨. ಅರುವತ್ತು ಸಂವತ್ಸರಗಳಲ್ಲಿ ನಲವತ್ತಾರನೆಯದು : ಪರಿಧಾವಿ ಸಂವತ್ಸರದ ಆಷಾಢದ ಪೂರ್ಣಿಮಿ ××× ದಕ್ಷಿಣಾಯನಸಂಕ್ರಾಂತಿಯ ಪರ್ವ್ವದಲು ××× (ಕೊಲ್ಹಾಶಾ. ೧೦-೪೧ ; 1192). [ಸಂ. ಪರಿಧಾವಿನ್]

**ಪರಿಧಾವಿಸು** (ಕ್ರಿ). ಜೋರಾಗಿ ಓಡು : ಅವಾವ ದಿಕ್ಕಿನೊಳವಾವಗಂ ಬೆದರಿ ಜೀವ ಪರಿಧಾವಿಪವೊಲ್ (ಮಂಕುಕ. ೨೨೨).
[ಪರಿಧಾವನ+–ಇಸು$_3$]

**ಪರಿಧಿ** (ನಾ). ೧. ಗೋಡೆ, ಅಳ್ವೇರಿ ಮುಂತಾದ ಸುತ್ತುಗಟ್ಟಿರುವ ಆವರಣ : "ಪರಿಧಿ ಪ್ರಾಕಾರ ವಪ್ರನಾಮಂ" (ವಸ್ತುಕೋ. ೪೬-೬) ; ಪರಿಧಿಯ ಶಿಖರಂಗಳ ಪದ್ಮರಾಗರುಚಿ ಪುದಿದ ತತ್ಪುರೀವರದ ಪಯಃಪರಿಖಾ ವಳಯಂ ಮಿಗೆ ಬಿತ್ತರಿಪುದು ಪಗಲೊಳಮುದಭ್ರಸಂಧ್ಯಾಭ್ರಮಮಂ (ವಿಧಃಪು. ೧೩-೩೪) ; ಪೊಳೆವ ನೀಲದ ಭಿತ್ತಿ ಸ್ವರ್ಣಗಳೊಳಗೆ . . . ಸ್ಫಟಿಕದಲಿ ಪರಿಧಿಗಳಿಹವು ಒಂಭತ್ತು (ಬಿಜ್ಜಪು. ೧೨-೫೧). ೨. ಚಂದ್ರ ಅಥವಾ ಸೂರ್ಯನ ಸುತ್ತ ಇರುವ ಪ್ರಭಾಮಂಡಲ ; ಪರಿವೇಷ: "ಪರಿಧಿಃ, ಪರಿವೇಷಃ (ಸ್ಯಾತ್), ಮಂಡಲಂ, ಉಪಸೂರ್ಯಕಂ—ಈ ೪ ಪರಿವೇಷದ ಪೆಸರ್" (ಹಲಾಯು. ೮-೪೧) ; ವಳಯವೇಳಜಿ ಕೋಟಿ ಚಂದ್ರನ ಬಳಸಿ ತೋಱುವ ಪರಿಧಿಯಂತದೆ ನಿಳಯವವೆ ತಾರಾಗ್ರಹಂಗಳ ಬಹಳ ತೇಜದಲಿ (ತೊರರಾ. ೬-೫೪-೧೫). ೩. ವೃತ್ತದ ಆವರಣ ರೇಖೆ ; ಮಂಡಲದ ಸುತ್ತುಗೆರೆ. ೪. ಪವಿತ್ರವಾದ ಹೋಮಾಗ್ನಿಯ ಸುತ್ತಲೂ ಇಟ್ಟಿರುವ ಸಮಿತ್ತು. ೫. ಸುತ್ತಲಿನ ಮೇರೆ,—ಎಲ್ಲೆ : ನಾನೆನುವ ಕೇಂದ್ರದಿನೆ ಹೊರಟ ಸತ್ತ್ವದ ಪರಿಧಿ ಬಾನಾಚೆ ಹಬ್ಬಿಹುದೊ ? (ಮಂಕುಕ. ೧೩೪) ; ರಸಸ್ಥಿತಿಯಲ್ಲಿ ಈ ಇರವಿನ ಪರಿಧಿಗೆ ನಾವು ಸಲ್ಲುತ್ತೇವೆ (ಕಾವ್ಯಕು. ೩೭). ೬. ವೃತ್ತ ; ಮಂಡಲ : ವಿಗತ ದಿಗಿಭವಾಶಾದೇಶಮಸ್ತಂಗತಾರ್ಕಂ ಗಗನಪರಿಧಿ ಯಾತಪ್ರಾಣವಾತಂ ಶರೀರಂ ಸೊಗಯಿಸದವೊಲ್ (ಪಂಪಾಪೂ. ೬-೧೫೬) ; ಒಂದು ರೇಖೆಯಿಂದ ಸುತ್ತಲ್ಪಟ್ಟುಯಿರುವ ಪ್ರದೇಶವನ್ನು . . . ವರ್ತುಳ, ಪರಿಧಿ-ವ-ವೃತ್ತವೆಂದು ಹೇಳುವುದು (ಭೂಮಿಅ. ೯). ೭. ದಿಕ್ಕಿನ ತುದಿ ; ದಿಗಂತ ; ಕ್ಷಿತಿಜ : ವಿಶ್ವಪರಿಧಿಯದೆಲ್ಲೊ ಸೂರ್ಯಚಂದ್ರರಿನಾಚೆ ವಿಶ್ವಕೇಂದ್ರವು ನೀನೆ (ಮಂಕುಕ. ೧೩೬). ೮. ಚಕ್ರದ ಹೊರ ಅಂಚು ; ನೇಮಿ. ೯. ಮರದ ಕೊಂಬೆಯ ತುದಿ,—ಮೊನೆ : "ಶಾಖೆಯ ಶ್ಲಿಯಂ ಪರಿಧಿಯೆಂಬುದು" (ಹಲಾಯು. ೧೩೪-೨೧) ; "ವೃಕ್ಷಶಾಖಾಗ್ರಮಂ ಪರಿಧಿಯೆಂಬುದು" (ಮಂಗರಾ. ೧೪೦-೧೧). ೧೦. ಹೊದಿಕೆ ; ಆಚ್ಛಾದನೆ. ೧೧. ಮರ ; ವೃಕ್ಷ. ೧೨. ನೀರು ; ಜಲ : "ಭೂಜಮಂಭಸ ಸಾಲಂ ಪರಿವೇಷಮುಂ ಪರಿಧಿಯಕ್ಕು" (ನಾನಾರ. ೧೨೨). ೧೩. [ಗಣಿತ] ಸುತ್ತಳತೆ : ದಿನಗತಿಯನ್ನು ದ್ವಿಗುಣಮಾಡಿದರೆ ಸೂಚೀಪ್ರಕ್ಷೇಪ ಸೂಚೀಪ್ರಕ್ಷೇಪವರ್ಗವನ್ನು ೧೦ ರಿಂದ ಗುಣಿಸಿ ವರ್ಗಮೂಲವನ್ನು ತೆಗೆದರೆ ಪರಿಧಿಯು ಬರುತ್ತದೆ (ತತ್ತ್ವಪ್ರ. ೨೦೦) ; ಜಂಬೂದ್ವೀಪವು ಒಂದು ಲಕ್ಷಯೋಜನ ವ್ಯಾಸವುಳ್ಳ ವೃತ್ತದ ಆಕಾರದಲ್ಲಿದೆಯೆಂದೂ, ಅದರ ಪರಿಧಿ (ಸುತ್ತಳತೆ) . . . ಸ್ವಲ್ಪ ಅಧಿಕ ಎಂದೂ ಹೇಳಿದೆ (ಗಣಿಚ. ೬೩). [ಸಂ.]

**ಪರಿಧಿಗೊಳ್** (ಕ್ರಿ). ಸುತ್ತುಗಟ್ಟು ; ಬಳಸು : ಧಾರಿಣಿಯೆಂದೆಂಬ ವನಿತೆಯ ಮಧ್ಯದೆ ಸೇರಿದ ರತ್ನಮೇಖಲೆಯ ಚಾರುಶೃಂಗಾರದಂದದಲಿ ಪರಿಧಿಗೊಂಡು ಪಾರಾವಾರ ರಂಜಿಸಿತು (ಕಂಸವಿ. ೨-೩).
[ಪರಿಧಿ+ಕೊಳ್$_1$]

**ಪರಿಧಿಸ್ಥ** (ನಾ). ೧. ವೃತ್ತಾಕಾರದಲ್ಲಿ ನಿಂತಿರುವ ಪಹರೆಯವರ ಸಮೂಹದ ಒಬ್ಬಾತ : ಪರಿಧಿಸ್ಥಃ, ಪರಿಚರಃ,—೨ ದಂಡಿನ ಸುತ್ತಲೂ ಕಾದಿರುವ ಫೌಜು, ಕಾವಲ್‌ಜನರ ಹೆಸರುಗಳು" (ಸಿದ್ಧಾಂತಿ. ೨೫೫). ೨. ಯುದ್ಧದಲ್ಲಿ ರಾಜನ ರಕ್ಷಣೆಗಾಗಿ ಸುತ್ತಲೂ ನಿಲ್ಲುವ ಸೈನ್ಯದ ಸೈನಿಕ. ೩. ಮೈಗಾವಲಿನವನು ; ಅಂಗರಕ್ಷಕ.

೪. ಸೇನಾಪತಿಯ ಅಥವಾ ರಾಜನ ಆಜ್ಞೆಯನ್ನು ಇತರರಿಗೆ ತಲುಪಿಸುವುದು ಮುಂತಾದ ಕಾರ್ಯಗಳನ್ನು ಮಾಡಲು ಸಹಾಯಕನಾಗಿರುವ ಅಧಿಕಾರಿ. [ಸಂ.]

**ಪರಿಧೂತ** (ಗು). ನಿವಾರಿತವಾದ ; ಬಿಡಲ್ಪಟ್ಟ ; ಪರಿತ್ಯಕ್ತ : ಪರಿಧೂತಕೇಶುಧೀತಂ ಕುರಂಗನಪಹರಿಸಿ ಮುದವನೆಯ್ದುವಂ . . . ಚಂದ್ರಂ (ಅಸಂಪು. ೧–೧೦೫). [ಸಂ.]

**ಪರಿಧೌತ** (ಗು). ೧. ತೊಳೆದ; ಸ್ವಚ್ಛಗೊಳಿಸಿದ: ಪರಿಧೌತಪದಾಸ್ಯೆಯಾಗಿ ವಿಶ್ರುತೆ ಕಳಭಾಷಿಣಿ . . . ಪೊಱಮಟ್ಟಳಬ್ಜೆಯಿಂ (ಕುಸುಮಾ. ೧೨–೬). ೨. ಅತ್ಯಂತ ಶುದ್ಧವಾದ ; ಧವಳ. ೩. ಪವಿತ್ರವಾದ: ಪಸರಿಸಿದ ಪರಿಧೌತಕೀರ್ತಿಪ್ರಸರದಲಿ ಬೆಳುಪಾಯ್ತು ಜಗ (ಕುವ್ಯಾಅ. ೪–೫). (ನಾ). ೪. ಪವಿತ್ರವಾದುದು ; ಪುನೀತವಾದುದು : ಪ್ರಜ್ಞೆ ಶೀಲದಿಂದ ಪರಿಧೌತವಾಗುವುದು, ಪ್ರಜ್ಞೆಯಿಂದ ಶೀಲ ಪರಿಧೌತವಾಗುವುದು (ಬುದ್ಧಪ. ೧೨೬). [ಸಂ.]

**ಪರಿನರ್ತನ** (ನಾ). ವಿಶೇಷವಾದ ನೃತ್ಯ,—ನಾಟ್ಯ : ಪರಿನರ್ತನಂಗೆಯ್ವುತಿರೆ ನವಿಲು (ರಾಘಚ. ೧೬–೬೧). [ಸಂ.]

**ಪರಿನಾಳ** (ನಾ). ನೀರು ಹರಿದುಹೋಗಲು ಮಾಡಿರುವ ಕೊಳವೆ : ಕರೆಗಣ್ಮುವ ನಿಜಲಾವಣ್ಯರಸಂ ಪರಿನಾಳಮಿಕ್ಕಿದತ್ತೆನೆ ತಂದಳ್ಸುರಸುಂದರಿ ಚಂದನರಸಭರಿತಾಯತಕೇತಕೀದಳದ್ರೋಣಿಗಳಂ (ಪಂರಾಮಾ. ೧೬–೯೦). [ಪರಿ$_2$+ನಾಳ$_1$(=ನಾಲ$_1$)]

**ಪರಿನಾಳಿಕೆ** (ನಾ). =ಪರಿನಾಳ: ಅಪರಿಮಿತಂ ಪೊಣ್ಮುವ ಬಾಷ್ಪಪಯೋಧಾರಾಳಿ ಪರಿವ ಪರಿನಾಳಿಕೆಯೊಂದುಪಮೆಗೆ ಬಂದಿರ್ದುದು ಕರ್ಣಪೂರನವಕೇತಕೀದಳಂ ಕಾಮಿನಿಯಾ (ಕಾದಂಉ. ೨೨೪). [ಪರಿ$_2$ + ನಾಳಿಕೆ (=ನಾಲಿಕೆ)]

**ಪರಿನಾಳಿಗೆ,** ಹರನಾಳಿಗೆ, ಹರಿನಾಳಿಗೆ (ನಾ). =ಪರಿನಾಳ : (ಪ್ರಥಣ್ಣ). **ಹರನಾಳಿಗೆ:** "ಪ್ರಣಾಲ—ನೀರ ಹರನಾಳಿಗೆ" (ಗಂಗಾಮ. ೨೧೯) ; ಕಾರೋಗೇಟೆಡ್ ಆಯರ್ನ್‌ಶೀಟ್ ಹರನಾಳಿಗೆಯ ತಗಡುಗಳು (ಮುಂಬಪ್ರಾ. ೩೮ ಪ್ರಸ್ತಾವನೆ) ; ಹರನಾಳಿಗೆಯಿಂದ ನೀರು ಜೋರಾಗಿ ಬೀಳುತ್ತಿದ್ದುದನ್ನು ನೋಡಿ ಮಕ್ಕಳು ಕುಣಿಯುತ್ತಿದ್ದರು (ರೂಢಿ). **ಹರಿನಾಳಿಗೆ :** ಸುಮಾರು ವೊಂದು ಮೊಳ ಅರ್ಧವರ್ತುಲಾಕೃತಿಯ ಹರಿನಾಳಿಗೆಯಂತೆ ನೆಗ್ಗನ್ನು ಕಟ್ಟೆಯೊಳಗೆ ಬುಡದಿಂದ ಮೇಲಿನವರೆಗೆ ಹಾಕುವರು (ಕಭಾಗ. ೨೬) ; ಬಂಗಲೆ ಮಾತ್ರ ಸ್ವಲ್ಪ ಹಳೆಯ ತರದ್ದೆಂದೇ ಹೇಳಬೇಕು. ಕರಿಯ ಹರಿನಾಳಿಗೆಯಾಕಾರದ ಹಂಚುಗಳನ್ನೇ ಹೊಚ್ಚಿದ್ದಾರೆ (ಭೂಮಿತಾ. ೮೬). [<ಪರಿನಾಳಿಕೆ]

**ಪರಿನಿರ್ಮಲ** (ನಾ). ಬಹಳ ಸ್ವಚ್ಛವಾದುದು,—ಶುದ್ಧವಾದುದು: ಪರಿನಿರ್ಮಲವಾದ ಕನ್ನಡಭಾಷೆಯಲ್ಲಿ ವಿವರಿಸುವ ಕಲೆಗಾರಿಕೆ ಡಿ.ವಿ.ಜಿ. ಅವರಲ್ಲಿ ಸಿದ್ಧಿಯನ್ನು ಕಂಡಿದೆ (ಸುವರ್ಣ. ೨೧೬). [ಸಂ.]

**ಪರಿನಿರ್ಮಾಣ** (ನಾ). ಚೆನ್ನಾದ ರಚನೆ,—ನಿರ್ಮಾಣ : 'ಪರಿನಿರ್ಮಿಸು' ಪರಾ. [ಸಂ.]

**ಪರಿನಿರ್ಮಿತ** (ಗು). ೧. ಚೆನ್ನಾಗಿ ರಚಿಸಲ್ಪಟ್ಟ : ಮತ್ತಂ ಮಿಥ್ಯಾವಿರತಿಪ್ರಮಾದಕಷಾಯಯೋಗಾಭಿಧಾನಬಂಧಹೇತೂಚ್ಚನೀಚಕರ್ಮಪರಿನಿರ್ಮಿತಚತುರ್ಗತ್ಯುಪಲಕ್ಷಿತಂ (ಶಾಂತಿಪು. ೬–೪೯ ವ) ; ಜಿತವಿಶ್ವಕರ್ಮಪರಿನಿರ್ಮಿತಕೃತಿಯಂ ತ್ರಿಃಪ್ರದಕ್ಷಿಣಂಗೆಯ್ದು (ಶಾಂತಿಪು. ೮–೧೫೬). (ನಾ). ೨. ಚೆನ್ನಾಗಿ ರಚಿತವಾದುದು : ಬಾಹುಬಲಿಪಂಡಿತದೇವಪರಿನಿರ್ಮಿತಮಪ್ಪ ಧರ್ಮನಾಥಪುರಾಣದೊಳ್ . . . ಪರಿವ್ಯಾವರ್ಣನಂ (ಬಾಧಪು. ೧೬–೪೩೩ ವ). [ಸಂ.]

**ಪರಿನಿರ್ಮಿಸು** (ಕ್ರಿ). ರಚಿಸು ; ನಿರ್ಮಾಣ ಮಾಡು : ಪರಿನಿರ್ಮಿಸಿದತ್ತೊ ಪಂಚರತ್ನದಿನಮರೇಂದ್ರಚಾಪನಿಕುರುಂಬಕದಿಂ ಪೆಱದತ್ತೊ ಚಿತ್ರದಿಂತಿದು ಬಗೆಗೆಂಬಿನಂ . . . ಎಸೆದತ್ತು ಕೀರಪಿಕಹಂಸನಿನಾದವಿಡಂಬನಂಬನಂ (ಜಗವಿ. ೧೦–೫೫); ಪರಿನಿರ್ಮಿಪ ಮಾಱಾಡುವ ... ಶಿಲ್ಪದ ಮೂಲದ ನರನಂ ಪೇಟ್ವಲ್ಲಿ ಮಾಟ್ಯಗ ಪ್ರತ್ಯಯಮಂ (ಶಮದ. ೧೯೬); ಸುರಪುರಕಾಂಪೋಗಲೊಡಂ ಪುರವರಮಂ ನೀಂ ವನಾಂತರಾಳದೊಳಿದರೊಳ್ ಪರಿನಿರ್ಮಿಸಿರಿಂ (ಸೌನಂದ. ೧–೩೩). [ಪರಿನಿರ್ಮಾಣ+–ಇಸು$_3$]

**ಪರಿನಿರ್ವಾಣ** (ನಾ). ೧. [ಜೈನ] ಪಂಚಕಲ್ಯಾಣಗಳಲ್ಲಿ ಒಂದು; ಅರ್ಹಂತನ ದೇಹಾವಸಾನ: ಇತ್ತ ಚತುರ್ವಿಧದೇವನಿಕಾಯಮುಂ ಪುರುದೇವಪರಿನಿರ್ವಾಣಮಹಾಕಲ್ಯಾಣಪೂಜಾನಿರ್ವರ್ತನಾಭಿಲಾಷಿಯಾಗಿ (ಆದಿಪು. ೧೬–೫೧ ವ) ; ಪರಿನಿರ್ವಾಣಮನೆಯ್ದಿದರ್ಮದಡೆಪತ್ತೊಂಬತ್ತು ಮುಂ ತೀರ್ಥಕೃದ್ವರರ್ (ಪಾರ್ಶ್ವಪು. ೧೬–೧೬೩); ಪರಿನಿರ್ವಾಣನಿವಾಸಲಕ್ಷ್ಮಿಯ ವಿವಾಹೋತ್ಸಾಹಮಂ ತಾಳ್ದಿದೀಶ್ವರಂ . . . ನಿರಂತರಮೊಲ್ದೀಗೆ ವಿನೇಯಸಂತತಿಗೆ . . . ಜಗಚ್ಛ್ರೀಯಮಂ (ಅಸಂಪು. ೧೪–೭೩). ೨. [ಬೌದ್ಧ] ಬುದ್ಧನ ಇಹಲೋಕಪರಿತ್ಯಜನ,—ನಿರ್ಯಾಣ: ಇಂದು ರಾತ್ರಿಯಂತಿಮಯಾಮದಲಿ ತಥಾಗತನ ಪರಿನಿರ್ವಾಣವಾಗಲಿಹುದೆಂದರುಹಿ ಬಾರ ! (ವೈಶಾಖಿ. ೭೮–೩೮೯); ಅಜಾತಶತ್ರು ಪಟ್ಟಕ್ಕೆ ಬಂದ ಎಂಟನೇ ವರ್ಷದಲ್ಲಿ ಬುದ್ಧನ ಪರಿನಿರ್ವಾಣ ನಡೆಯಿತು (ಹತ್ತುಮ. ೭೦). [ಸಂ.]

**ಪರಿನಿರ್ವಾಣಕಲ್ಯಾಣ** (ನಾ). [ಜೈನ] ತೀರ್ಥಂಕರನಿಗೆ ನಡೆಸುವ ಪಂಚಕಲ್ಯಾಣಗಳಲ್ಲಿ ಕೊನೆಯದು ; ಅರ್ಹಂತನ ದೇಹಕ್ಕೆ ಮಾಡುವ ಅಂತಿಮಸಂಸ್ಕಾರ : ಆಗಳ್ ಪರಿನಿರ್ವಾಣಕಲ್ಯಾಣಸೂಚನಾಚಿಹ್ನಂಗಳ್ ತಂತಮ್ಮ ಲೋಕಂಗಳೊಳ್ ನೆಗೞೆ (ಶಾಂತಿಪು. ೧೨–೩೪ವ); ಅಮರನಿಕಾಯಂ ಸುವಿಧೀಶ್ವರಂಗೆ ಪರಿನಿರ್ವಾಣಕಲ್ಯಾಣಮಹಾಪೂಜೆಯಂ ಮಾಟ್ಪ ಭಕ್ತಿಯಿಂ ಬಂದು (ಪುಷ್ಪಪು. ೧೪–೫೩ ವ). 'ಪಂಚಕಲ್ಯಾಣ' ಪರಾ. [ಪರಿನಿರ್ವಾಣ+ಕಲ್ಯಾಣ]

**ಪರಿನಿರ್ವಾಣಕ್ರಿಯೆ** (ನಾ). [ಜೈನ]ತೀರ್ಥಂಕರನು ದೇಹತ್ಯಾಗ ಮಾಡಿದ ಸಂದರ್ಭದಲ್ಲಿ ಆತನಿಗೆ ಮಾಡುವ ಆರಾಧನೆ,–ಉತ್ಸವ: ಪರಿನಿರ್ವಾಣಕ್ರಿಯೆಯಂ ಪರಮೋತ್ಸವದಿಂದೆ ತೀರ್ಚಿ ಸಕಳವಿನೇಯೋತ್ಕರಮುಂ ನಯದೆ ನಿಜನಿಜಧರೆಗಳ್ಗಲ್ಲಿಂದೆ ತಳರ್ದು ಪೋಯ್ತು ಕೃತಾರ್ಥಂ (ಪರ್ಧಪು. ೧೬–೮೩). [ಪರಿನಿರ್ವಾಣ+ಕ್ರಿಯೆ]

**ಪರಿನಿರ್ವಾಣಕ್ಷೇತ್ರ** (ನಾ). [ಜೈನ] ತೀರ್ಥಂಕರನು ದೇಹತ್ಯಾಗ ಮಾಡಿದ ಸ್ಥಳ; ಪರಿನಿರ್ವಾಣ ಹೊಂದಿದ ಸ್ಥಳ: ತ್ರಿಜಗತ್ಪೂಜ್ಯನೆನಿಸಿದ ಶ್ರೀವಾಸುಪೂಜ್ಯಭಟ್ಟಾರಕರ ಪರಿನಿರ್ವಾಣಕ್ಷೇತ್ರಮಂ ಕಂಡು (ಸುಕುಮಾ. ೪–೪೬ ವ). [ಪರಿನಿರ್ವಾಣ+ಕ್ಷೇತ್ರ]

**ಪರಿನಿರ್ವಾಣಪಡೆ** 'ಪರಿನಿರ್ವಾಣವಡೆ' ನೋ.

**ಪರಿನಿರ್ವಾಣಪೂಜೆ** (ನಾ). =ಪರಿನಿರ್ವಾಣಕ್ರಿಯೆ : ವಿನಯಂಧರಯೋಗಿಗಳ ಪರಿನಿರ್ವಾಣಪೂಜೆಯಂ ಮಾಡಿ (ಆದಿಪು. ೩–೫೮ ವ); ಮಹೀಧರನುಂ. . . ಪಡುವಣದೆಸೆಯ ದೇವದಾರುವನದೊಳು ವಿನಯಂಧರಯೋಗಿಗಳ ಪರಿನಿರ್ವಾಣಪೂಜೆಯಂ ಮಾಡಿ (ಚಾವುಂಪು. ೨೦). [ಪರಿನಿರ್ವಾಣ+ಪೂಜೆ]

**ಪರಿನಿರ್ವಾಣಮಹೋತ್ಸವ** (ನಾ). =ಪರಿನಿರ್ವಾಣಕಲ್ಯಾಣ: ಸುರಲೋಕಾವತರೋತ್ಸವಂ . . . ಪರಿನಿರ್ವಾಣಮಹೋತ್ಸವಂ ಜಿನಕಲ್ಯಾಣಮಯ್ದುಂ ಸವಿಸ್ತರದಿಂದಿರ್ಪುವು ವರ್ಣಕಂಗಳಿವಱಿಂ ಭವ್ಯಾಂಗಮೇನೊಪ್ಪದೇ (ಅಜಿಪು. ೧–೯೫). [ಪರಿನಿರ್ವಾಣ + ಮಹೋತ್ಸವ]

**ಪರಿನಿರ್ವಾಣವಡೆ,** ಪರಿನಿರ್ವಾಣಪಡೆ (ಕ್ರಿ). ಮೋಕ್ಷವನ್ನು ಹೊಂದು: ತಥಾಗತಂ . . . ಈ ರಾತ್ರಿಯಂತಿಮಯಾಮದಲ್ಲಿ ಪರಿನಿರ್ವಾಣ

ಪಡೆದಪಂ (ವೈಶಾಖ. ೭೮-೩೯೬). **ಪರಿನಿರ್ವಾಣಪಡೆ :** ಬುದ್ಧನು ಪರಿನಿರ್ವಾಣಪಡೆದ ನೂರುವರ್ಷಗಳ ವೇಳೆಗೆ ಮೂಲಸಂಘವು ಎರಡಾಗಿ ಒಡೆಯಿತು (ಭಾರದ. ೨೦೪). [ಪರಿನಿರ್ವಾಣ+ಪಡೆ$_1$]

**ಪರಿನಿರ್ವೃತಿ** (ನಾ). =ಪರಿನಿರ್ವಾಣ **೧ :** ಸರ್ವಾಂಗಮಲಧರಂ ಪರಿನಿರ್ವೃತಿಸೌಖ್ಯೋನ್ಮುಖಂ . . . ಋಷಿಯಿರ್ದನಾತ್ತಗುರುಸೌಹಾರ್ದಂ (ಚಂದ್ರಪು. ೯-೨೦). [ಸಂ.]

**ಪರಿನಿರ್ವೃತಿಭೂಮಿ** (ನಾ). =ಪರಿನಿರ್ವಾಣಕ್ಷೇತ್ರ : ಅಗ್ರಮಂದಿರೋಪಾಂತಮನೆಯ್ದೆವಂದು ಪರಿನಿರ್ವೃತಿಭೂಮಿಯನಾ ಸುರೋತ್ತಮಂ ಸಂತಸದಿಂದೆ ಭಕ್ತಿವೆರಸಾಗಳ್ ಪೂಜಿಸಿ (ಸುಕುಮಾ. ೯-೩೧).

[ಪರಿನಿರ್ವೃತಿ+ಭೂಮಿ]

**ಪರಿನಿರ್ವೃತಿಸು** (ಕ್ರಿ). =ಪರಿನಿರ್ವಾಣಪಡೆ : ತಥಾಗತನೆಮ್ಮ ನಗರದೊಳೆ ಪರಿನಿರ್ವೃತಿಸಿದನಾದೊಡಮೆಮಗೆ ಅವನ ಪಶ್ಚಿಮದರ್ಶನಂ ಕಟಾ ಲಭಿಸಿಲ್ಲ ! (ವೈಶಾಖ. ೭೮-೩೯೮). [ಪರಿನಿರ್ವೃತಿ+-ಇಸು$_3$]

**ಪರಿನಿರ್ವೇಗ** (ನಾ). ೧. ಪೂರ್ಣವಾದ ವಿರಕ್ತಿ ; ಪರಮವೈರಾಗ್ಯ. ೨. ಪರಮವೈರಾಗ್ಯವನ್ನು ಹೊಂದಿದವನು ; ವಿರಕ್ತ : ಸಂಸಾರಶರೀರಭೋಗಪರಿನಿರ್ವೇಗಂ ತಪಃಪ್ರೀತಿಯಿಂ ತೊಟ್ಟಿಲ ಮಗಂಗೆ ಪಟ್ಟಂಗಟ್ಟಿ . . . ಜಿನದೀಕ್ಷೆಗೊಂಡಂ (ಪಂಪಾಪು. ೨-೩೬). [ಸಂ.]

**ಪರಿನಿಷ್ಕ್ರಮಣ** (ನಾ). [ಜೈನ] ತೀರ್ಥಂಕರರನು ಸಂಸಾರತ್ಯಾಗ ಮಾಡಿ ತಪಸ್ಸಿಗೆ ಹೊರಡುವಿಕೆ : ಕ್ಷೇಮಂಕರಂ ದುರಿತಾರಿಸೈನ್ಯಮಂ ಬೆಂಕೊಳಲ್ ಬಗೆವಂತೆ ಪರಮದೀಕ್ಷೆಯಂ ಕೆಯ್ಕೊಳಲ್ ಬಗೆದು ಪರಿನಿಷ್ಕ್ರಮಣೋದ್ಯುಕ್ತನಾದುದಂ . . . ಅಱಿದು (ಶಾಂತಿಪು.೮-೧೧೭ ವ); ಎನ್ನ ಪರಿನಿಷ್ಕ್ರಮಣದೊಳ್ ಪರಿಪಂಥಿಭಾವಮಂ ಪೊರ್ದದೊಡಂಬಡುವುದೆ ನಿನಗೆ ವಿನಯಂ (ಚಂದ್ರಪು. ೪-೧೮ ವ); ನರೇಂದ್ರಂ . . . ಪರಿನಿಷ್ಕ್ರಮಣಕ್ಕೆ ಮನಂ ಪರಿಯೆ ಪರಿಚ್ಛೇದಿಸಲ್ಕದೇಂ ಪರಿಣತನೋ (ಪುಷ್ಪಪು .೧೩-೮೭). [ಸಂ.]

**ಪರಿನಿಷ್ಕ್ರಮಣಕಲ್ಯಾಣ** (ನಾ). [ಜೈನ] ಪಂಚಕಲ್ಯಾಣಗಳಲ್ಲಿ ಒಂದು ; ತೀರ್ಥಂಕರರನು ವಿರಕ್ತನಾಗಿ ಸಂಸಾರತ್ಯಾಗ ಮಾಡಿ ಹೊರಡುವ ಸಂದರ್ಭದಲ್ಲಿ ಮಾಡುವ ಉತ್ಸವ : ತ್ರಿಭುವನಗುರು ಪರಿನಿಷ್ಕ್ರಮಣಕಲ್ಯಾಣಶರದಾಗಮನಪ್ರತೀಕ್ಷಣದಿವ್ಯಹಂಸರುಂ (ಆದಿಪು. ೯-೬೦ ವ) ; ಒಂದುದಿವಸಂ ಆದಿದೇವನ ಪರಿನಿಷ್ಕ್ರಮಣಕಲ್ಯಾಣಮಹೋತ್ಸವಮೆಂಬುದಂ ನಿಜಾವಧಿಯಿಂದಱಿದು (ಚಾವುಂಪು. ೩೭).

[ಪರಿನಿಷ್ಕ್ರಮಣ+ಕಲ್ಯಾಣ]

**ಪರಿನಿಷ್ಕ್ರಾಂತಿ** (ನಾ). =ಪರಿನಿಷ್ಕ್ರಮಣ : 'ಪರಿನಿಷ್ಕ್ರಾಂತಿಮಹೋತ್ಸವ' ಪರಾ. [ಸಂ.]

**ಪರಿನಿಷ್ಕ್ರಾಂತಿಮಹೋತ್ಸವ** (ನಾ). = ಪರಿನಿಷ್ಕ್ರಮಣಕಲ್ಯಾಣ : ಸುರಲೋಕಾವತರೋತ್ಸವಂ . . . ಪರಿನಿಷ್ಕ್ರಾಂತಿಮಹೋತ್ಸವಂ ಪ್ರವಿಮಲಂ ಕೈವಲ್ಯಬೋಧೋತ್ಸವಂ ಪರಿನಿರ್ವಾಣಮಹೋತ್ಸವಂ ಜಿನ ಮಹಾ ಕಲ್ಯಾಣಮಯ್ದುಂ ಸವಿಸ್ತರದಿಂದಿರ್ಪುವು ವರ್ಣಕಂಗಳಿವಱಿಂ ಭವ್ಯಾಂಗಮೇನೊಪ್ಪದೇ (ಅಜಿಪು. ೧-೯೫).

[ಪರಿನಿಷ್ಕ್ರಾಂತಿ+ಮಹೋತ್ಸವ]

**ಪರಿನಿಷ್ಠಿತ** (ಗು). ೧. ಪಾರಂಗತವಾದ ; ನಿಷ್ಣಾತವಾದ ; ಸಂಪೂರ್ಣವಾಗಿ ಅರಿತುಕೊಂಡ : ವೇದಶಾಸ್ತ್ರಪರಿನಿಷ್ಠಿತ ವಾಗ್ವಿಭವರ್ಕಳಾ ವಿಪ್ರಾಗ್ರಣಿ ದೊರೆಕೊಳ್ವುದೆಂಬುದಿದು ಪುಣ್ಯಫಳಂ ಕೃತಪುಣ್ಯ [ನೊಳ್] (ಸೌಇಇ. XI-i, ೪೫-೨೮ ; 900). (ನಾ). ೨. ಪಾರಂಗತವಾದುದು ; ನಿಷ್ಣಾತವಾದುದು : ವಿಶ್ವವನ್ನು . . . ಪರಿನಿಷ್ಠಿತವಾದ ವಿದ್ವದ್ದೃಷ್ಟಿಯಿಂದೊಮ್ಮೆ ಎಷ್ಟೆಷ್ಟು ವಿವೇಚಿಸಿದರೂ ಚಿತ್ತಕ್ಕೆ ಆಯಾಸವಾಯಿತೇ ಹೊರತು . . . ಸೌಖ್ಯ ದೊರೆಯಲಿಲ್ಲ ! (ಧ್ವನ್ಯಾಲೋ. XXVII ಪೀಠಿಕೆ). [ಸಂ.]

**ಪರಿನೀರ್, ಹರಿನೀರು** (ನಾ). ೧. ಹರಿಯುವ ನೀರು; ಪ್ರವಹಿಸುವ ನೀರು : ಪರಿನೀರೊಳಗಣ ನೆಲಲಂತಿರೆ ತನ್ನಂ ನೋಡಿ ನಡುಗೆ ಜಾನಕಿ (ಪಂಪಾರಾಮಾ. ೯-೧೭೨); ಪರಿನೀರ ನಡುವಣಱಿದಂತಿರೆ ಖಂಡಿಸಿ ಕುಸುರಿದಱಿಯೆ ಸಣ್ಣಿಸೆ ಪಟಿಯಂತಿರವಿಕ್ರಿಯಾಶರೀರಂ ದೊರೆಕೊಳ್ವುದು ನಾರಕರ್ಗೆ ಪಾಪದ ಫಲದಿಂ (ಮಲ್ಲಿಪು. ೧೩-೧೪೦) ; ಅದೇವಮಾತೃಕಃ =ಮಳೆಯಿಲ್ಲದೆಯುಂ ಕೆಱೆ ತೊಱೆ ಕಾಲುವೆಗಳ ಪರಿನೀರಿಂ ಬೆಳೆವುದುಂ (ಶಿತಿಪಾ. ೧೮-೮). ೨. ಕಾಲುವೆಗಳ ಮೂಲಕ ಹಾಯಿಸುವ ನೀರು; ಕಾಲುವೆನೀರು: ಸುರಿವ ದಾಳಿಂಬದ ಪಣ್ಗಳ ತನಿರಸದ ಪರಿವೊನಲೆ ಪರಿನೀರಾಗೆಯುಂಕುರವೊತ್ತಿ ಬೆಳೆಯುತ್ತಿರ್ದ ಕರ್ಬಿನ ಮಡಲ್ಗಳುಮಂ (ಪಂಚತಂ. ೧೧೭-೧೬); ಅಲ್ಲಿಂ ಮೂಡ ಮೊದಲ ಪಸುಗೆಯ ಪರಿನೀರ ತೋಂಟಿ ಮೂಡಲು ಪಳ್ಳವಾಯ್ಕಾಲು ತೆಂಕಲುದ್ದಿಯ ಕಾಲು ಪಡವಲು ನಾರಾಯಣಯ್ಯನ ಜೇಷ್ಠಾಂಶದ ಭೂಮಿ (ಕಇಅ. ೭೯-೧೩-೨೮;1088); ಮುದವೂರೊರಬಲಾಜನಕ್ಕೆ ಪರಿನೀರೂರೂರ ತೋಂಟಕ್ಕೆ . . . ಅತರ್ಕ್ಯ ಮದಱಿಂ ರಮ್ಯಂ ತದುರ್ವೀತಳಂ (ಕಾವ್ಯಾವ. ೨೮೯). **ಹರಿನೀರು:** ೧. ಕೊಳಲೆಲ್ಲೊ ಉಲಿಯೆ ಹರಿನೀರು ನಲಿಯೆ (ಸೂರ್ಯಪಾ. ೩೫-೨). ೨. ಪಿರಿಯ ಕೆಱೆಯ ಕೆಳಗೆ ಲಾಲಬಾಗಿನ ಹರಿನೀರಲ್ಲಿ ಬಿಟ್ಟಡಕೆ ತೋಂಟಕಂಮಂ ನೂಱೆಪ್ಪತ್ತು (ಸೌಇಇ. IX-i, ೨೩೭-೩೪; 1160). ೩. (ಮದುವೆಯ ಸಂದರ್ಭದಲ್ಲಿ) ಮುತ್ತೈದೆಯರು ತರುವ ಪವಿತ್ರ ಜಲ, - ಮಂಗಳೋದಕ : ಹತ್ತು ಮುಂದ್ಯಾಗ ಹರಿನೀರ ತರುವಂಥಾ ಮುತ್ತೈದಿತನವ ಕೊಡು ಶಿವನೆ (ಗರತಿ. ೧೨೬). [ಪರಿ$_2$+ನೀರ್]

**ಪರಿನ್ಯಸ್ತ** (ಗು). ೧. ಇಟ್ಟ ; ಇಡಲ್ಪಟ್ಟ : ನಿಜಮಸ್ತಕಪರಿನ್ಯಸ್ತಹಸ್ತನನು ಪ್ರಸ್ತುತಬುಧಸ್ತವನಭಾಜನಶಸ್ತನಂ . . . ನೋಡಿ (ಬಸವ. ೩೯-೫೪). ೨. ಹರಡಿದ; ಚಾಚಿದ. (ನಾ). ೩. ಇಟ್ಟಿರುವುದು ; ಜೋಡಿಸಿರುವುದು : ನಿಖಿಲೌಷಧಿಪುಂಜಿತಂ ಪರಿನ್ಯಸ್ತಮದೊಂದು ಪೂರ್ಣಕಲಶಂ ತಳೆದತ್ತತುಳಂ ವಿಳಾಸಮಂ (ಚಂದ್ರಪು. ೬-೫೩). [ಸಂ.]

**ಪರಿಪಂತಿ** (ನಾ). ಸಾಲು ; ಪಂಕ್ತಿ : 'ಪರಿಪಂತಿವಿಡಿ' ಪರಾ.

[ಪರಿ$_3$+ಪಂತಿ]

**ಪರಿಪಂತಿವಿಡಿ** (ಕ್ರಿ). ಸಾಲಾಗಿರು; ಪಂಕ್ತಿಗೊಳ್ಳು : ಸಾಲ್ವಿಡಿದು ಸರಸವಿಡಿದೋರಣಂಬಿಡಿದು ಪರಿಪಂತಿವಿಡಿದು . . . ಉಭಯವೀಧಿಗಳು ಮೆಱೆದವು (ಪಚಕಾ. ೧೦-೩೪). [ಪರಿಪಂತಿ+ಪಿಡಿ$_1$]

**ಪರಿಪಂಥಿ** (ಗು). ೧. ಎದುರಿಸುವ ; ಹಗೆಯಾದ; ವಿರೋಧಿಸುವ: ಕರ್ಬಿನ ಬಿಲ್ ತದಗ್ರದೊಳ್ ವಿಳಿರ್ದ ತಮಾಳಪಲ್ಲವದ ಚಾಮರದುಪ್ಪರವಟ್ಟಿಮೊಪ್ಪೆ ಬಂದಲೆದಿಸುವೊಂ ಬನಂಬಿಡಿದು ಪಾಂಥರನಾ . ಪರಿಪಂಥಿಮನ್ಮಥಂ (ಚಂದ್ರಪು. ೧-೧೧೧). (ನಾ). ೨. ಎದುರಾಳಿ ; ಶತ್ರು ; ಹಗೆ : "ಅಭಿಯಾತಿಃ, ಅರಾತಿಃ . . . ಪರಿಪಂಥೀ . . . ದ್ವಿಷತ್- ಈ ೨೪ ಹಗೆ" (ಹಲಾಯು. ೭೫-೩೦೧) ; ಪರಿಪಂಥಿಪನ್ನಗವೈನತೇಯನೆನಿಪ ಬಿಜ್ಜಳಭೂಪನೊಪ್ಪಿಪ್ಪ ಸಮಯದೊಳು (ಬಸರ. ೬-೬೩); ಬುದ್ಧನು ಆರ್ಯಸಂಸ್ಕೃತಿಯ ರಕ್ಷಕನೆ ಅಥವಾ ಪರಿಪಂಥಿಯೆ ಎಂಬ ವಿಷಯದಲ್ಲಿ ವಿಪ್ರತಿಪತ್ತಿಯಿದೆ (ಖಕ್ಸಾರ. ೧೦೫ ಪೀಠಿಕೆ) ; ತನ್ನ ಮನೋರಥದ ಮಾರ್ಗದಲ್ಲಿ ಪರಿಪಂಥಿಯಾಗಿರುವ ರಮಾಕಾಂತನನ್ನು ದೂರೀಕರಿಸುವ ದುರಾಲೋಚನೆಯಿಂದ. . .ಇಂದಿರೆಗೆ ಹೇಳಿದನು (ಇಂದಿರೆ.೧೭). ೩. ದರೋಡೆಕಾರ ; ಕಳ್ಳ : "ಪರಿಪಂಥಿ ಚೋರಕಂ ತಸ್ಕರಂ" (ಪದ್ಮಕೋ. ೬೫-೮೧). [ಸಂ. ಪರಿಪಂಥಿನ್]

**ಪರಿಪಂಥಿನಿ** (ನಾ). ಅಡ್ಡಿಯಾದವಳು : ಸುಖಪರಿಪಂಥಿನಿಯುಂ

ದುಃಖೈಕದಾನನಿಪುಣೆಯುಂ ಪರಹೃದಯಪೀಡಾಪೇಕ್ಷಣೆಯುಮಪ್ಪ ಲಜ್ಜೆಯಂ ಕಾಯಲುಜ್ಜುಗಂಗೆಯ್ದು (ಕಾದಂಉ. ೩೭೧).
[ಸಂ. ಪರಿಪಂಥಿನೀ]

**ಪರಿಪಂಥಿಭಾವ** (ನಾ). ವಿರೋಧಭಾವ; ಎದುರಾಗುವ ಮನಸ್ಸು: ಎನ್ನ ಪರಿನಿಷ್ಕ್ರಮಣದೊಳ್ ಪರಿಪಂಥಿಭಾವಮಂ ಪೊರ್ದದೊಡಂಬಡುವುದೆ ನಿನಗೆ ವಿನಯಂ (ಚಂದ್ರಪ್ರ. ೪-೧೪ ವ). [ಪರಿಪಂಥಿ+ಭಾವ$_2$]

**ಪರಿಪಕ್ವ** (ಗು). ೧. ಚೆನ್ನಾಗಿ ಬೆಂದ,--ಬೇಯಿಸಿದ. ೨. ಚೆನ್ನಾಗಿ ಮಾಗಿದ,-ಕಳಿತ; ಪೂರ್ಣವಾಗಿ ಹಣ್ಣಾದ: ಸುಜನೋತ್ತಮರಂತೆ ಭರದಿನೆಱಗಿದುವಮೇಯಪರಿಪಕ್ವಗಂಧಶಾಲಿವನಂಗಳ್ (ಶಾಂತಿಪು. ೧-೫೯); ಪರಿಪಕ್ವಫಲಪ್ರಕರಂ ಜರೆಯಂ ಕಿಡಿಸುವುದು (ಪಂಚತಂ. ೨೭೯-೧೧); ಮಣಿಕನಕರಜತಪಾತ್ರಂಗಳೊಳ್ ಪರಿಪಕ್ವ . . . ಫಳಕುಳಂಗಳುಂ ಸೊಗಯಿಪುವು (ಚಂದ್ರಪ್ರ. ೬-೫೪ ವ); ನಸುಬಿರಿದ ಪರಿಪಕ್ವಪಾಡಿಮವಸರದೊಳಗಿಱಿವಟ್ಟೆಗೆಯು ದರಹಸಿತಪಂಕಜಗಳಿತಮಕರಂದದ ತಟಾಕದಲಿ (ಕುಮಾವ್ಯಾಉ. ೭-೨೪). ೩. ಚೆನ್ನಾಗಿ ತಿಳಿದ; ವಿಶೇಷವಾದ ಅರಿವುಳ್ಳ; ಪ್ರೌಢವಾದ: ಪರಿಪಕ್ವಶಾಸ್ತ್ರಸಂಸ್ಕಾರಂ . . . ಈತನೆಂದು ಕೈವಾರದೆ ಬಣ್ಣಿಕುಂ ವಿಬುಧಮಂಡಳಿ ಪಂಡಿತ ನಾಗವರ್ಮನಂ (ವಸ್ತುಕೋ. ೧೧೭-೬೬); ಧ್ವನ್ಯಾಲೋಕ . . . ಆನಂದವರ್ಧನನ ಪರಿಪಕ್ವಪ್ರತಿಭೆಯ ಫಲವೆಂದು ಭಾವಿಸಲಡ್ಡಿಯಿಲ್ಲ (ಧ್ವನ್ಯಾಲೋ. XXVII ಪೀಠಿಕೆ). (ನಾ). ೪. ಚೆನ್ನಾಗಿ ಬೆಂದಿರುವುದು; ಹದವಾಗಿ ಬೇಯಿಸಿರುವುದು: ಪರಿಪಕ್ವಮಭಿನವಂ . . . ಎನಿಸಿರ್ಪಾ ನಿರವದ್ಯಾನ್ನ ಮನಶ್ಯಾದರದಿಂ ತನ್ಮುನಿವರರ್ಗೆ ನೃಪವರನಿತ್ತಂ (ಶಾಂತೀಶ್ವ. ೬-೫೪). ೫. ಚೆನ್ನಾಗಿ ಮಾಗಿರುವುದು,—ಕಳಿತಿರುವುದು: ಪರಿಪಕ್ವಮಾದ ಗರ್ದುಗಿನತಿರುಳುಂ ಶುಂಠಿಯುಮನರೆದು ನಸ್ಯಂಗೆಯ್ದು (ಲೋಕೋಪ. ೯-೧೦೦); ಪರಿಪಕ್ವಂ ಫಳರಾಜಿಸೌರಭನಿದಾನೋಜ್ಜೃಂಭಿತಂ ಪುಷ್ಪಮಂಜರಿ ನಾನಾಲತಿಕಾವಳೀವಿಪುಳಶಾಖಾಹಸ್ತದೊಳ್ ಶೋಭಿಸುತ್ತಿರೆ . . . ಚೆಲ್ವಾಯ್ತು ಚೈತ್ರಾಗಮಂ (ಪಾರ್ಶ್ವಪು. ೧೩-೫).

**ಪರಿಪಕ್ವವಾಗು** = ಪ್ರಬುದ್ಧವಾಗು; ಪ್ರೌಢತೆಯನ್ನು ಹೊಂದು: ಪರಿಪಕ್ವವಾದ ಮಾನವನ ಹೃದಯವೇ ನಿರ್ಮಲವಾದ ಸ್ನೇಹಕ್ಕೆ ಆಶ್ರಯಸ್ಥಾನ (ಭಾರದ. ೨೪೧). [ಸಂ.]

**ಪರಿಪಕ್ವಂಬೆಱು** (ಕ್ರಿ). ಚೆನ್ನಾಗಿ ಮಾಗು; ಪರಿಪಕ್ವತೆಯನ್ನು ಹೊಂದು: ಪರಿಪಕ್ವಂಬೆತ್ತ ಪಣ್ಣಂ ನಖದಿನಿಱಿದು ಸೋರ್ವಾ ರಸಾಸ್ವಾದನಂಗೆಯ್ದು . . . ಗಳಪಿದತ್ತಾಮ್ರದೊಳ್ ತಾಮ್ರತುಂಡಂ (ತ್ರಿಪುವಿ. ೨೪-೯೬). [ಪರಿಪಕ್ವ+ಪೆಱು$_1$]

**ಪರಿಪಕ್ವತೆ** (ನಾ). ಮಾಗಿರುವಿಕೆ; ಪರಿಣತಿ; ಪರಿಪಾಕ: ಇದು ತುಂಬುಜೀವನದ ಭಾವಾನುಭಾವಗಳ ಪರಿಪಕ್ವತೆಯ ಫಲ (ಸಾಹಿಸ. ೩೪); ಭಾವದ ಪರಿಪಕ್ವತೆಯನ್ನು ಕಾಣದ ಕವನಗಳು ವರ್ಣನೆಯಲ್ಲಿ ಜನ್ಮ ತಾಳತೊಡಗಿದವು (ರಂಗರೋ. ೧೩೨). [ಸಂ. ಪರಿಪಕ್ವತಾ]

**ಪರಿಪಟ್ಟೆ** 'ಪರಿವಟ್ಟ' ನೋ.

**ಪರಿಪಠನ** (ನಾ). ಚೆನ್ನಾಗಿ ಓದುವುದು,—ಪಠಿಸುವುದು: ಪ್ರವಚನಪರಿಪಠನಕ್ಷಮತೆ ವಾಣಿಯುಂ ತೀರ್ಥಯಾನದಕ್ಷತೆ ಪದಮಂ ಕಿವಿಯುಂ ಜಿನವರಚರಿತಶ್ರವಣಪಟುತೆ ಪಿಂಗದನ್ನಮಾರ್ಜಿಪೆನಜಿನಂ (ಚಂದ್ರಪ್ರ. ೪-೧೭). [ಸಂ.]

**ಪರಿಪಠಿತ** (ಗು). ಚೆನ್ನಾಗಿ ಪಠಿಸಿದ; ಚೆನ್ನಾಗಿ ಹೇಳಿದ,-ನುಡಿದ: ಸೌಧಾಗ್ರಪ್ರತ್ಯಗ್ರರತ್ನಪಂಜರಮಂಜುಳಶುಕಸಾರಿಕಾನಿಕುರುಂಬಪರಿಪಠಿತನಿಟಿಲನಯನಲೀಲಾಕಥಾಕಳಾಕರ್ಣನಕರ್ಣಕೌತುಕಾಂತರಂಗಸಂಗತ . . . ಗುಣಾಗ್ರಗಣ್ಯಸವುದಯಸಮುಂಚಿತಮಂ (ರಾಜಶೇ. ೧೪-೧೦೬ ವ).

[ಸಂ.]

**ಪರಿಪಡು** (ಕ್ರಿ). ಓಡು; ಧಾವಿಸು: ಪರಿಪಟ್ಟೋರಂತಾಕಾಶವರ್ಗದೆ ಬಂದು ಪಾಡಟಿಾದ ಸಖನಂ ಮುಂದಾಂ ಕಂಡೆಂ ಕಪಿಂಜಲನಂ (ಕಾದಂಉ. ೭೧೪). [ಪರ್$_3$ + ಪಡು$_1$]

**ಪರಿಪಣ** (ನಾ). ಮೂಲಧನ; ಬಂಡವಾಳ: "ನೀವೀ, ಪರಿಪಣಂ, ಮೂಲಧನಂ-೩ ಬಂಡವಾಳದ ಪಡಿವೆ" (ಸಿದ್ಧಾಂತಿ. ೨೯೭). [ಸಂ.]

**ಪರಿಪತ್ರ**$_1$ (ನಾ). (ಒಂದು ಕಡೆಯಿಂದ ಮತ್ತೊಂದು ಕಡೆಗೆ ಒಯ್ದು ಅನೇಕ ಮಂದಿಗೆ) ಪ್ರತಿ ಮಾಡಿ ಹಂಚುವ ತಿಳಿವಳಿಕೆಯ ಪತ್ರ; ಪ್ರಸಾರಣಪತ್ರ; ಸುತ್ತೋಲೆ: ಯುದ್ಧಗಳ ನಂತರ ಈ ರೀತಿ ಪರಿಪತ್ರಗಳ ಮೂಲಕ ಸುದ್ದಿಗಳನ್ನು ಮುಟ್ಟಿಸಲಾಗುತ್ತಿತ್ತು (ಪತ್ರಿಕಾ. ೭); ಪರಿಪತ್ರ, ಸುತ್ತೋಲೆ (Circular. ಪತ್ರಿಕಿ. ೧೬).
[ಪರಿ$_2$+ಪತ್ರ]

**ಪರಿಪತ್ರ**$_2$ (ನಾ). ಒಂದು ಬಗೆಯ ಔಷಧಿದ್ರವ್ಯ: "ಪರಿಣಾ-ಚವ್ಯ, ಗಜಹಿಪ್ಪಲಿ, ಪರಿಪತ್ರ, ತಾಳೀಸಪತ್ರ, ಲವಂಗಪತ್ರ" (ಔಷಧಿ. ೨೪).
[?]

**ಪರಿಪಥಿಕ** (ನಾ). ಅಡ್ಡಿಪಡಿಸುವವನು; ವಿರೋಧಿಯಾದವನು: ಮತಿಹೀನನಾದಂದು ಯುಕ್ತಾಯುಕ್ತಮನಱಿಯದೆ ಮಿಥ್ಯಾಜ್ಞಾನಲವೋದ್ಧತರಿಂ ಪರಿಪಥಿಕರಾಗಿ ಕಿಡುಗುಂ (ಚಾವುಂಪು. ೨೨೦).
[<ಸಂ. ಪರಿಪಥಕ]

**ಪರಿಪಾಂಡು** (ಗು). ಅಚ್ಚ ಬಿಳಿಯ; ಬಹಳ ಬಿಳುಪಾದ; ಕಡು ಬಿಳುಪಿನ: ಒಪ್ಪಿದುದು ಸುಧಾಪರಿಪಾಂಡುವರ್ಣದಿಂ ಸುರನರನಯನಚಕೋರಚಂದ್ರಬಿಂಬಮಳುಂಬಂ (ಪುಷ್ಪಪು. ೧೨-೭೪). [ಸಂ.]

**ಪರಿಪಾಂಡುರ** (ಗು). = ಪರಿಪಾಂಡು: ಆ ಪರಿಪಾಂಡುರಪ್ರತತಿಯಾದ್ಯುತಿ . . . ಈಗಳದೆತ್ತವೋದುದೆಂದಾ ಪೃಥಿವೀಶ್ವರಂ ಪಗಲ ತಿಂಗಳ ನಚ್ಚರಿವಟ್ಟು ನೋಡಿದಂ (ಚಂದ್ರಪ್ರ. ೯-೬); ಪರಿಪಾಂಡುರತನುಗೆ ನಿಶಾಕರಕರಪೀಡಿತೆಗೆ . . . ಕರದಿಂ ರವಿ ಸೋಂಕಿ ಹರುಷಮಂ ಪುಟ್ಟಿಸಿದಂ (ಪಾರ್ಶ್ವಪು. ೩-೨೯). [ಸಂ.]

**ಪರಿಪಾಂಸು** (ನಾ). ಸುತ್ತಲೂ ಎದ್ದ ಧೂಳು: ತುರಗಖುರಕ್ಷುಣ್ಣಕ್ಷೋಣೀತಳಪರಿಪಾಂಸುಪರಾಗಮಿಭಕಟಾಳಿಗಳೊಳ್ ಪಾಯ್ದುದೆ (ಶಾಂತಿಪು. ೧೧-೧೬). [ಸಂ.]

**ಪರಿಪಾಕ** (ನಾ). ೧. ಪೂರ್ತಿಯಾಗಿ ಬೆಂದುದು; ಸಂಪೂರ್ಣವಾಗಿ ಬೇಯಿಸಿದುದು. ೨. ಸಂಪೂರ್ಣವಾಗಿ ಮಾಗಿರುವುದು,-ಹಣ್ಣಾಗಿರುವುದು. ೩. ಆಹಾರವನ್ನು ಸಿದ್ಧಪಡಿಸುವಿಕೆ; ಅಡುಗೆಮಾಡುವುದು: ಪಂಚಭಕ್ಷ್ಯವನು . . . ಚದುರಿನಿಂದೆ ಪರಿಪಾಕಮಂಗೈದೊಲಿದು ವಂಚನಿಲ್ಲದೆಯಸುರದಂಪತಿಗಳಿಗೆ ನೀಡೆ (ನವನೋ. ೯-೫). ೪. ಪರಿಪೂರ್ಣತೆ; ಪರಿಪಕ್ವತೆ: ಶಿವನು ಜೀವಕೋಟಿಯ ಮೇಲಿರುವ ಕರುಣೆಯಿಂದ ಜೀವಾತ್ಮರುಗಳ ಪರಿಪಾಕಕ್ಕೆ ತಕ್ಕಂತೆ ಅನುಗ್ರಹಿಸುತ್ತಾನೆ (ಭಾರದ. ೨೧೫); ಗೀತಾಂಜಲಿಯ ಪದ್ಯಗಳಲ್ಲಿ ವೇದಾಂತದ ಪರಿಪಾಕವಿದೆ (ಧರ್ಮಸಾ. ೮೨); ನಮ್ಮ ಜೀವನ ಎಂಬುದು ಅನುಭವಗಳ ಪರಂಪರೆ ಮತ್ತು ಅದರಿಂದ ಒದಗುವ ಪರಿಪಾಕ (ಪರಿಶೀ. ೧೨). ೫. (ಕರ್ಮದ) ಫಲ; ಪರಿಣಾಮ: ಪನಿತ ಶೋಣಿತಬಿಂದುಗಳ್ ತನ್ನ ಮೆಯ್ಗೆ ಪಾಪಪರಿಪಾಕದಿಂ ತಣ್ಪಂ ಪಡೆಯೆ (ಆದಿಪು. ೨-೧೪ ವ); ಈ ಸಂಯಮ ಸಂಧಾನ ಸಮನ್ವಯಗಳ ಧರ್ಮವೂ ಆರ್ಯಸಂಸ್ಕೃತಿಯ ವೈಶಿಷ್ಟ್ಯದ ಪರಿಪಾಕ (ಭಾರದ. ೩೬೮). ೬. ಚಾತುರ್ಯ; ಕೌಶಲ. ೭. (ಸಸ್ಯದ) ಬೆಳವಣಿಗೆ; ಅಭಿವೃದ್ಧಿ: "ಪರಿಪಾಕಂ ಬೆಳಸು" (ವಸ್ತುಕೋ. ೯೫-೨೦). [ಸಂ.]

**ಪರಿಪಾಕಗೈಸು** (ಕ್ರಿ). ಆಹಾರವನ್ನು ಸಿದ್ಧಪಡಿಸು ; ಅಡುಗೆ ಮಾಡಿಸು : ಪರಮಾನ್ನಭಕ್ಷ್ಯಶಾಕಗಳ ಪರಿಪಾಕಗೈಸಿ (ಪ್ರೌಢಂ. ೧೪-೩೦). [ಪರಿಪಾಕ+ಕೈಸು (<ಕೆಯ್ಸು)]

**ಪರಿಪಾಕಗೊಳ್ಳು** (ಕ್ರಿ). ಹದಗೊಳ್ಳು ; ಮಾಗು ; ಪರಿಪಕ್ವವಾಗು: ಅವನ ಜೀವನ ಶೋಕದಿಂದಲೇ ಪರಿಪಾಕಗೊಂಡಿದೆ (ಸ್ವದೇಶ. ೩೧); ಶಾಂತರಸವು ಈ ಪುಣ್ಯಭೂಮಿಯಲ್ಲಿಯೇ ಮೊದಲು ಪರಿಪಾಕಗೊಂಡುದು (ಸಾಹಿಸ. ೧೫). [ಪರಿಪಾಕ+ಕೊಳ್ಳು$_{1}$ (<ಕೊಳ್$_{1}$)]

**ಪರಿಪಾಕಪಥ್ಯ** (ನಾ). ಫಲಿತಾಂಶದಲ್ಲಿ ಹಿತವಾದುದು ; ಪರಿಣಾಮದಲ್ಲಿ ಮಂಗಳಕರವಾದುದು : ಎನ್ನ ನುಡಿಯೆಂಬುದು ನಿನಗೆ ಪರಿಪಾಕಪಥ್ಯಂ (ಶಾಂತಿಪು. ೪-೯೮ ಪ). [ಪರಿಪಾಕ+ಪಥ್ಯ]

**ಪರಿಪಾಕಪಡೆ** (ಕ್ರಿ). ಹದಕ್ಕೆ ಬರು ; ಪರಿಪಕ್ವವಾಗು : ದೌರ್ಮನಸ್ಯದಲಿಂತು ಕಳಿದುದು ತಮ್ಮೊಳಗೆ ಹಲಕಾಲ ದಕ್ಷವಿಕರ್ಮಫಲ ಪರಿಪಾಕ ಪಡೆದಂದದಲಿ (ನಿಭಾಗ. ೪-೧-೧೫). [ಪರಿಪಾಕ+ಪಡೆ$_{1}$]

**ಪರಿಪಾಕವೆರು** (ಕ್ರಿ). ಚೆನ್ನಾಗಿ ಬೇಯು ; ಪರಿಪಕ್ವತೆಯನ್ನು ಹೊಂದು : ಪರಿಪಾಕವೆತ್ತ ಮಳಕಜ್ಞಾಯವಾ ಸೊಗಸಿನಿಂದೊಬ್ಬುಳಿಸಿ ಸವಿಸವಿದು ಮೆಲಲು (ನಸಮೋ. ೨೬-೪).

[ಪರಿಪಾಕ+ಪೆರು$_{1}$ (<ಪೆಱು$_{1}$)]

**ಪರಿಪಾಕಹೊಂದು** (ಕ್ರಿ). = ಪರಿಪಾಕಪಡೆ : ಅವರು ರೂಢಿಸಿಕೊಂಡಿದ್ದ ಸಾಹಿತ್ಯಜ್ಞಾನವೂ ಅದರ ತಳಹದಿಯಾದ ಲೋಕಾನುಭವವೂ ಇಂಗ್ಲೆಂಡಿನ ಹೊಸ ಆವರಣದಲ್ಲಿ ಪರಿಪಾಕಹೊಂದಿದುವು (ಸಮಾಲೋ. ೬೬) ; ಶಿಕ್ಷಣಸಂಸ್ಕಾರಗಳಿಂದ ಪರಿಪಾಕಹೊಂದಿದ ಸ್ತ್ರೀಯರ ಪಾತ್ರಗಳಿಗೆ ರಾಮಾಯಣದಲ್ಲಿ ಕೊರತೆಯಿಲ್ಲ (ಕನಾಕ. ೭).

[ಪರಿಪಾಕ+ಹೊಂದು$_{1}$ (<ಪೊರ್ದು)]

**ಪರಿಪಾಟ,** ಪರಿಪಾಟು$_{3}$ (ನಾ). ವಾಡಿಕೆ ; ರೂಢಿ ; ಅಭ್ಯಾಸ : "ಪರಿಪಾಟ = ರೂಢಿ" (ಗಂಗಾಮ. ೧೯೯) ; ಮಳೆಗಾಲಗಳನೆಣಿಸುವ ಪರಿಪಾಟವು ನನ್ನದು ನನಗಿದು ಹಿತವು (ಇಂಚಾಪ. ೬೧-೯೧) ; "ನನ್ನ ಗಂಡನ್ಯರೋಬಿಯಲ್ಲಿದ್ದಾನೆ" ಎಂದು ಹೇಳುವ ಪರಿಪಾಟವನ್ನು ಆಕೆ ಇಂದಿಗೂ ಬಿಟ್ಟಿರಲಿಲ್ಲ (ವಾತ್ಸಲ್ಯ. ೧೬೭). **ಪರಿಪಾಟು$_{3}$ :** ಇದೇ ಕಾರಣ ದೇಶದಿಂದ ಮಾಲಿನ ವಿಮಾ ಇಳಿಸುವ ಪರಿಪಾಟು ಇಲ್ಲೀ ಬಹಳ ಬಿದ್ದಿರುತ್ತದೆ (ಮುಂಬಪ್ರಾ. ೨೦೭). [ಪರಿ$_{3}$+ಪಾಟ$_{2}$]

**ಪರಿಪಾಟಲು,** ಪರಿಪಾಟ್ಲು (ನಾ). ಕಷ್ಟ ; ಬಾಧೆ : ಮಕ್ಕಳನ್ನು ಹೆತ್ತು ಹೊತ್ತು ಪರಿಪಾಟಲು ಪಡುವವರು ನಾವು (ನಾಡಿಗೇ. ೧೭೦). **ಪರಿಪಾಟ್ಲು :** ದುರುಳ ಮಾರನುಮೆನ್ನಯೆದೆಗೆ ಸರಳನೂಡಿ ಪರಿಪಾಟ್ಲ ಮಾಡಿದನಬಲೆ (ಕಂಸವಿ. ೮-೧೨೯). 'ಪಡಿಪಾಟಲು' ಪರಾ.

[ಪರಿಪಾಟು$_{1}$+-ಅಲು (<-ಅಲ್$_{2}$)]

**ಪರಿಪಾಟ$_{1}$** (ನಾ). ಸಮಾನತೆ ; ಸರಿಸಾಟಿ : ರವಿರಥತುರಗಮುಮುಚ್ಚೈಶ್ರವಮುಂ ಪರಿಪಾಟಿಯುಲ್ಲಮಿವಱೊಳ್ ರೋಮಚ್ಛವಿಗಮೆನಲ್ ಕಣ್ಗೆಸೆದಿರ್ದುವು ಪಳುಕಿನ ಮಂಡಪಂಗಳೊಳ್ ತುರಗಂಗಳ್ (ಜಗವಿ. ೯-೧೨೦). [ಪರಿ$_{4}$-+ಪಾಟ$_{1}$ (<ಪಾಟಿ$_{2}$)]

**ಪರಿಪಾಟ$_{2}$** (ನಾ). ೧. ರೀತಿ ; ಕ್ರಮ ; ವಿಧಾನ : ಸುರತರುಕುಡುವಂಬರದೊಳ್ಪರಿಪಾಟಚ್ಛಾಯೆ ನೆಯ್ಗೆ ನೂಲಿಂ ರಂಗಿಂ ದೊರೆಕೊಳ್ಳದೆನಿಪ ದಿವ್ಯಾಂಬರಂಗಳಿಂದೆಸೆವುವಲ್ಲಿ ದೂಸಿಗವಸರಂ (ಜಗವಿ. ೯-೧೧೧) ; ಸೇನಾನಿಕರದಾರ್ಯ್ಕೆಗಳು ಪಾಂಚಾಲಕನಿಗಾದುದು ರಂಜಿಸಿತು ಪರಿಪಾ[ಪಾಠಾಂ. ಬಾ]ಟಿಯೊಡ್ಡವಣೆ (ಕುವ್ಯಾಸ. ೭-೨೧) ; ಅಹಿಪತಿ ಕೂರ್ಮರಗ್ಗಳಿಕೆ ಪಾಟಗೆಡೆ ತೋಱಿಸಿದರೀ ಪರಿಪಾಟಿಯುಲಿ ಫಣಿಪತಿಗೆ ನಾಲಗೆ ನಾಟದೆಣಿಸಲು ಗಣನೆಯಿಲ್ಲದ ರಾಮಸೈನಿಕವ (ತೊರರಾ. ೪-೭-೨೫) ; ಆಳಸಿಂಗರಾರ್ಯರ್ಗಂ ಪ್ರೌಢೋಕ್ತಿಯೊಳ್ ಸಾಹಿತ್ಯಪರಿಪಾಟಿಯಿಂ ಪೇಳ್ದಂ (ಚಕವಿ. ೪-೫೦). ೨. ರೂಢಿ ; ಅಭ್ಯಾಸ ; ಪದ್ಧತಿ : ಬಾದವಾಡಿಗಿಯೆಂಬ ಗ್ರಾಮಕೀ ಶಿವಯೋಗಿ ಸಾದರದೆ ಪೋಪ ಪರಿಪಾಟಿಯುಂತಲ್ಲಿಗಂ ಪೋದೊಡನೆ . . . ಐತಂದರು (ಮಹಾಂತೇ. ೯-೩೧) ; ಸಾಂಪ್ರದಾಯಿಕರ ಸ್ನಾನದಲ್ಲಿ ಪವಿತ್ರತೀರ್ಥಗಳ ಹೆಸರನ್ನೋ ದೇವತಾಸ್ತೋತ್ರಗಳನ್ನೋ ಹೇಳಿ ರಾಗ ಎಳೆವ ಪರಿಪಾಟಿಯುಂಟು (ಗಾಳಿಪ. ೪೪) ; ನಮ್ಮ ಭರತಭೂಮಿಯಲ್ಲಿ . . . ಭಗವಂತನನ್ನು ಉಪಾಸನಾ ಮಾಡುವ ಕ್ರಮಗಳು ರೂಪುಗೊಂಡಿದ್ದವು. ಅವುಗಳ ಸಮ್ಮೇಳನವೇ ನಮ್ಮ ಜನಾಂಗದ ಪರಿಪಾಟಿಯಲ್ಲಿ . . . ಇಂದಿಗೂ ಸಜೀವವಾದ ಸಂಸ್ಕೃತಿಯಾಗಿ ಉಳಿದಿದೆ (ಭಾರದ. ೨೨೦). ೩. ಸಾಲು ; ಪಂಕ್ತಿ : ಕೋಟಾನುಕೋಟಿ ಭಕ್ತರ ಮನೆಗಳಲಿ ಪರಿಪಾಟಿಯಿಂದಱಿಸುತ್ತ ಗಂಗಾಜೂಟನಗ್ಗದ ಜಂಗಮಾಂಘ್ರಿಗೆ ನಮಿಸಿ (ಬಸಪು. ೩೫-೫೫) ; ಕೋಟಿಕೋಟಿ ಮನುಷ್ಯಮುಖ ಪರಿಪಾಟಿಯೊಳು ವೈವಿಧ್ಯಖಗಮೃಗಕೀಟನರದಾಂಪತ್ಯ ತೃಷೆಯಿವು ನೋಟ (ಶೀಸಾರಾ. ೪೭-೨೭೮). ೪. ಅನುಕ್ರಮ ; ಪರಿವಿಡಿ : "ಪರಿಪಾಟೀ, ಅನುಪೂರ್ವೀ . . . ವಿಶಾಯಃ- ಈ ೭ ಪರಿವಿಡಿ" (ಹಲಾಯು. ೧೨೨-೫೫) ; ವಂದಿಪೆ ಹಲಾಯುಧನೆ ಸಾಮವೇದಿಗೆ ಮಲಯರಾಜಂಗೆ ಪರಿಪಾಟಿಯಿಂ (ಚತುಪು. ೬-೭-೨). ೫. ಓರಣ ; ವ್ಯವಸ್ಥೆ : 'ಪರಿಪಾಟಿದಪ್ಪು' ಪರಾ. [ಸಂ.]

**ಪರಿಪಾಟಿದಪ್ಪು** (ಕ್ರಿ). ಓರಣ ತಪ್ಪು ; ಅಸ್ತವ್ಯಸ್ತವಾಗು : ಆ ಪ್ರಾಣವಲ್ಲಭೆಯ ಲಲಾಟಪಟ್ಟದೊಳ್ ಚಾಮರದ ಕೋಮಲಪವನಪರಿಯುಟನದಿಂ ಪರಿಪಾಟಿದಪ್ಪ [ಪ್ಪೆ] ಸುಳಿಗುರುಳೆಂಬ ತುಂಬಿಯ ಬಂಬಲಂ ತನ್ನ ಬೆಳ್ವೆಳಗನುಗುಟ್ವ ಸೆಳ್ಳುಗುರೆಂಬ ಪೊಂಗೇದಗೆಯ ಕುತ್ತುಂಗಱಿಗಳ್ ಪತ್ತೆಸಾರ್ಚಿ ಪಂತಿಗೊಳಿಸುವಿನೆಗಂ (ಅನಂಪು. ೬-೬೯ ಪ).

[ಪರಿಪಾಟ$_{2}$+ತಪ್ಪು$_{1}$]

**ಪರಿಪಾಟು$_{1}$** (ನಾ). ಕಷ್ಟ ; ಬಾಧೆ : ಪತಿವಿಯೋಗದಿ ಬಿದ್ದ ಪರಿಪಾಟುಮುಮನೆಲ್ಲ ನೆನೆಯದೆ ಸುತನ ನೋಡಿ (ನವಮೋ. ೧೫-೪೬).

[<ಪಡಿಪಾಡು]

**ಪರಿಪಾಟು$_{2}$** 'ಪರಪಾಟು' ನೋ.

**ಪರಿಪಾಟು$_{3}$** 'ಪರಿಪಾಟ' ನೋ.

**ಪರಿಪಾಟ್ಲು** 'ಪರಿಪಾಟಲು' ನೋ.

**ಪರಿಪಾಠ** (ನಾ). ೧. (ವೇದಗಳ) ಕಂಠಪಾಠ. ೨. ಅಭ್ಯಾಸ ; ಪದ್ಧತಿ ; ರೂಢಿ : ದೇವರ ಮೇಲಿನ ಹೂವು ತಪ್ಪೀತು, ಅವಳ ಈ ಪರಿಪಾಠವೆಂದಿಗೂ ತಪ್ಪಲಿಲ್ಲ (ಹೂಜಸಿ. ೧೬); ಸುಮಿತ್ರ ಹಾಸ್ಟೆಲಿನಲ್ಲಿ ಇದ್ದಾಗ ಬೆಳಗಿನ ಜಾವಕ್ಕೆ ಎದ್ದು ಸ್ನಾನ ಮಾಡಿ ಓದಿಕೊಳ್ಳುವ ಪರಿಪಾಠವಿಟ್ಟುಕೊಂಡಿದ್ದಳು (ವಿದ್ಯಾರಿ. ೨೧೩). [ಸಂ.]

**ಪರಿಪಾಠಿ** 'ಪರಿಪಾಡಿ' ನೋ.

**ಪರಿಪಾಡಿ,** ಪರಿಪಾಠಿ, ಪರಿಪಾಳಿ, ಪರಿಪಾಟಿ (ನಾ). ೧. ಅನುಕ್ರಮ ; ಪಾಳಿ ; ಪರಿವಿಡಿ : ಋಷಿಸಮುದಾಯಮಂ . . . ಪರಿಪಾಡಿಯಿಂದೊಸೆದು ಬಂದಿಸಿ (ಬಂಹರಿ. ೨-೫೯). ೨. ಸಿದ್ಧತೆ ; ಏರ್ಪಾಡು: ಬೇಡುವೆನು ಪೊಡವಂಟು ದೇವರು ಮಾಡುವುದು ಕಾರುಣ್ಯವನು . . . ಮಾಡಲಾಗ[ದು]ದು ಪರಿಣಯದ ಪರಿಪಾಡಿಯನು (ನಿಭಾಗ. ೧೦-೫೮-೪೧). ೩. ಸಿದ್ಧ ಮಾಡಿದುದು ; ರಚನೆ ; ನಿರ್ಮಿತಿ : ಜೋಡಿಸಿದ ಜಾಂಬೂನದದ ಪರಿಪಾಡಿ [ಪಾಠಾಂ. ಡು]ಗಳ ಪಲ್ಲವದ ಘಳಿಯ ಪವಾಡಗಳ ಕೇತನನಿಕೇತನವೆಸೆದವಲ್ಲಲ್ಲಿ (ತೊರರಾ. ೫-೨-೨೫). **ಪರಿಪಾಠಿ:** ೪. ರೂಢಿ ; ಅಭ್ಯಾಸ ; ಪದ್ಧತಿ : ಅದು ಮುಂದೆ ಒಂದು ಪರಿಪಾಠಿಯೇ ಆಗಿ ಹೋಗಿ ಕೆಲವೊಮ್ಮೆ ಗಂಡನಿರುವಾಗ ಅಭಾಸವಾದೀತೆಂಬ ಭಯ

ಆಳಿಗೆ (ಮಸಕೂ. ೫೨). **ಪರಿಪಾಳಿ :** ೨. ಭರತನಧಿಕಕ್ಕೆ ಪಾಳುವನು ಕಾಬುಜ್ಜುಗದ ಪರಿಪಾಳಿಯಿಂದ್ಯೆದಿದನು ಶೃಂಗೀವೇರಪುರವರವ (ತೊರರಾ. ೨-೬-೧೧). **೫.** ಸಾಲು ; ಪಂಕ್ತಿ : ತದ್ವಳಯದಲಿ ಪರಿಪಾಳಿ ಯಾಯಿತ್ತಖಿಳಭೂಜನಜಾಲಕ ವರವರುತ್ತ ಮಾಧಮಮಧ್ಯಮಂಗಳಲಿ (ತೊರರಾ. ೧-೧೩-೧). **೬.** ರೀತಿ ; ಕ್ರಮ : "ಪರಿಪಾಳಿ (ಪರಿಬಾಳಿ)-ಪರಿಪಾಟ(ಟೀ) = ರೀತಿ, ಅಭ್ಯಾಸಕ್ರಮ" (ತದ್ಭಕೋ. ೨೪) ; ಛಲಪದದ ಪರಿಪಾಳಿಯಿಂದುಪ್ಪವಡಿಸಿದನುಪ್ಪರದ ಗರ್ವದಲಿ (ತೊರರಾ. ೬-೧೦-೧) ; ಪರಮೇಶ್ವರನ ಲೋಲತರ ಪಂಚಮುಖದಿಂದೆ ಶೋಭಿಸುತೆ ಪರಿಪಾಳಿ ಯಿಂದಾಗಮಂಗಳ್ಗನನವಾದದಿರ್ಪತ್ತೆಂಟುಸಂಖ್ಯೆಯಿಂದೆ (ಪಾಸೋಪು. ೧೦-೧೨೧). **ಪರಿಪಾಟಿ :** **೫.** ಒಸಗೆಗಳಂದು ಬಿಟ್ಟ ಶುಕ ಶಾರಿಕೆಗಳ್ ನಲಿವಾಱುವಾಱ ರಾಗಿಸಿ ದವಿತಾರಿನಾವು ಪರಿಪಾಟಿಯನೋಳಿಯಿ ನೋದೆ (ಶಾಂತಿಪು. ೨-೪೮). **೬.** "ಪರಿಪಾಟಿಯೊಳಂ ಕ್ರಮಂ" (ವಸ್ತುಕೋ. ೧೩೮-೧೨೨). [<ಸಂ. ಪರಿಪಾಟ]

**ಪರಿಪಾತನ** (ನಾ). ಸಂಪೂರ್ಣವಾದ ನಾಶ : ಲಘುಕರ್ಮಪರಿಪಾತನ ಶಕ್ತಿಪ್ರಾಪ್ತಿನಿಮಿತ್ತಂ ದಂಡಕವಾಟಪ್ರತರಲೋಕಪೂರಣಕ್ರಿಯೆಗಳಂ ಪ್ರತಿ ಸಮಯಂ ಪ್ರಯೋಗಿಸಿ (ಪಂರಾಮಾ. ೧೬-೭೯ ವ). [ಸಂ.]

**ಪರಿಪಾರ್** (ಕ್ರಿ). ದಾರಿ ಕಾಯು ; ಹಾದಿ ನೋಡು : ಸರಸೀರು ಹಾಸ್ಯೆ ನೀನೀ ಪುರದೊಳ್ ಮಾಜುವಿನ[ಮಿಂತು] ನಾವಿಾ ಬನದೊಳ್ ಪರಿಪಾರುತಮಿರ್ದಪೆಂ (ಬಂಹರಿ. ೯-೭೯). [ಪರಿ$_3$ + ಪಾರ್$_1$]

**ಪರಿಪಾರ್ಶ್ವ** (ಗು). ಪಕ್ಕದಲ್ಲಿರುವ ; ಪಾರ್ಶ್ವದಲ್ಲಿರುವ. [ಸಂ.]

**ಪರಿಪಾಲ** (ನಾ). ಕಾಪಾಡುವವನು ; ರಕ್ಷಣೆ ಮಾಡುವವನು ; ಸಂರಕ್ಷಕ : ಸುರುಚಿರಾಗಮಶೈವಶಾಸ್ತ್ರಾವಿರಳಸಂಚಿತಧರ್ಮಮಾರ್ಗಾ ವಿರತಪರಿಪಾಲ ಪ್ರಮಥವರಪರಿಷದನುಕೂಲ (ಬಸಪು. ೩೮-೬೩). [ಸಂ.]

**ಪರಿಪಾಲಕ** (ನಾ). = ಪರಿಪಾಲ : ವಿಕಟಜಂಬೂದ್ವೀಪಪರಿಪಾಲಕರು ನಮ್ಮನಿಬರಿಗೆ ಸದರವೆ (ಕುಪ್ಯಾಸ. ೩-೭). [ಸಂ.]

**ಪರಿಪಾಲನ,** ಪರಿಪಾಳನ (ನಾ). ೧. ಕಾಪಾಡುವುದು ; ರಕ್ಷಣೆ ಮಾಡುವುದು ; ಸಂರಕ್ಷಣೆ : ಪರಮಾರ್ಥಂ ಪರಿಪಾಲನಕರದಿಂದಪ ರಾಜಿತಾಬ್ಜಮಿತ್ರಂ ಕಳೆದಂ ನರಪತಿವಿಗಮದೊಳೊಡನೊಗೆದರಸಿಯರ ಮುಖಾಬ್ಜಕೋಕಹಿಮಜಲಲವಮಂ (ಶಾಂತಿಪು. ೧-೯೫) ; ಅದಕ್ಕೆ ಅನುಕೂಲವಾಗಿ ಪ್ರವಚನಪರಿಪಾಲನ, ಸಂವರ್ಧನ, ಶುಶ್ರೂಷಣವೆಂಬ ವರ್ಣಧರ್ಮಗಳೂ ಇದ್ದುವು (ಹಿಂದಸಾ. ೨೬೧). ೨. ನಡೆಸುವುದು ; ನೆರವೇರಿಸುವುದು ; ಆಚರಣೆ : ವ್ರತಪರಿಪಾಲನದಿಂದುನ್ನತಸೌಖ್ಯಾವಾಪ್ತಿಯಕ್ಕುಂ (ಪಸಾರ. ೩೦೩) ; ಸತ್ಯಕ್ಕೆ, ಧರ್ಮಕ್ಕೆ, ಪಿತೃವಾಕ್ಯ ಪರಿಪಾಲನಕ್ಕೆ . . . ಹರಕೆಗೈ (ತ್ರೀರಾಮಾ. ೮೪-೧೫೮). **ಪರಿಪಾಳನ:** ೧. ಮತಿ(ಪರಿ)ಪಾಳನಂ . . . ಪ್ರಜಾಪಾಳನಮೆಂಬ ಪಂಚವಿಧದೊಳಲ್ಲಿ ಮತಿ(ಪರಿ)ಪಾಳನಮೆಂಬುದು ಹಿತಾಹಿತವಿವೇಕಮುಂ ಉಭಯಲೋಕ ಹಿತಮುಂ . . . ಧರ್ಮಾರ್ಥಶಾಸ್ತ್ರವಿಜ್ಞಾನಮುಮಕ್ಕುಂ (ಚಾವುಂಪು. ೨೨೦). [ಸಂ.]

**ಪರಿಪಾಲನೆ** (ನಾ). ೧. ಕಾಪಾಡುವುದು ; ರಕ್ಷಿಸುವುದು ; ಸಂರಕ್ಷಣೆ ಮಾಡುವುದು : "ವ್ಯವಹಾರ ಧನಾಹಿಕಾಯ . . . ಸೇನೆ ಪರಿಪಾಲನೆ ಕಾಮುಕಿಯಿಂತು ಭೋಗಮಕ್ಕು" (ನಾನಾರ. ೧೧೪). ೨. ಪಾಲಿಸುವುದು ; **ಪೋಷಣೆ.** **೩.** ಆಳುವುದು ; "ಆಳಿಕೆ, ರಾಜ್ಯಭಾರ" (ನಾನಾಶ. ೧೫೬). ೪. (ಯಾವುದಾದರೂ ಕೆಲಸವನ್ನು) ನಡೆಸುವುದು,—ನೆರವೇರಿಸುವುದು. [ಸಂ. ಪರಿಪಾಲನ]

**ಪರಿಪಾಲಿತ** (ಗು). **ಪೋಷಣೆ** ಮಾಡಿದ; ಸಲಹಿದ: ವಿನಿರ್ಜಿತನಿರವಶೇಷ ಶೀಂಪನಾಥಬಿಭವನುಮಪಾಕೃತ ಪ್ರಕೃಷ್ಟಾಪ್ಪ ಲೋಕಪಾಲ ಪರಿಪಾಲಿತ ಸಾಹಸನುಂ (ಶಾಂತಿಪು. ೧-೭೧ ವ). [ಸಂ.]

**ಪರಿಪಾಲಿಸು,** ಪರಿಪಾಳಿಸು (ಕ್ರಿ). ೧. ಕಾಪಾಡು ; ಸಂರಕ್ಷಣೆ ಮಾಡು; ಸಲಹು: ಲೀಲೆಯಿನದಱ ನೆಲಂ ಪರಿಪಾಲಿಸಿದುವು ಕಣ್ಗೆ ಸಾಡೆ ಮೌದ್ಗಂ ಮಾಷ್ಯಂ . . . ಯವ್ಯಂ (ಚಂದ್ರಪು. ೧-೯೧) ; ಭೋಜ ರಾಜನು . . . ಪ್ರಜೆಗಳನ್ನು ಸತ್ಯ ಧರ್ಮಗಳಿಂದ ಪರಿಪಾಲಿಸಿ ದಿಗಂತ ವಿಶ್ರಾಂತಕೀರ್ತಿಯನ್ನು ಪಡೆದನು (ಕಲಾಧ. ೭೯). ೨. ಆಳು ; ರಾಜ್ಯಭಾರ ಮಾಡು ; ಅಧಿಕಾರ ನಡೆಸು : ಧರಣಿಯನವಯವದಿಂದವೆ ಪರಿಪಾಲಿಸಲೆನ್ನ ಭುಜಮೆ ಸಾಲ್ವುದು (ಶಾಂತಿಪು. ೨-೧೩) ; ರಾಜವತಿಯಾಯ್ತು ಧರೆ ಕಿಂ ರಾಜರ್ ಪರಿಪಾಲಿಸುತ್ತುಮಿರೆ (ಅಜಿಪು. ೯-೮) ; ವಿಕ್ರಮಕೌರವನಾಮನವನಿಯಂ ಪರಿಪಾಲಿಸಿ ಪಡೆದಂ ನಿರ್ವಾಣವನು (ಜಯಕಾ. ೧ ಸೂಚನೆ) ; ಈತನ ತಾಯಿಯಾದ ದೀವಾಂಬಿಕೆಯು ರಾಜ್ಯವನ್ನು ಪರಿಪಾಲಿಸುತ್ತಿದ್ದಳೆಂದೂ ಆವನಿಶಾಸನದಲ್ಲಿ ಹೇಳಿದೆ (ನೊಳಂಬ. ೫೩). ೩. ನಡೆಸು ; ನೆರವೇರಿಸು : ಜಿನಸಮಯದುರು ಶಿರವನರಿವೆನು ಭಾಷೆಯಂ ಪರಿ[ಪಾಠಾಂ. ಪ್ರತಿ]ಪಾಲಿಸುವೆನು (ಬಸಪು. ೪೯-೧೩) ; ಆಜ್ಞೆಯನ್ನು ವಿಚಾರವಿಲ್ಲದೆ ಪರಿಪಾಲಿಸುವುದು ಪ್ರತಿಯೊಬ್ಬನ ಕರ್ತವ್ಯವಾಗಿತ್ತು (ರಾಜನ. ೩೮) ; ಪತಿಯ ಆಜ್ಞೆಯನ್ನು ಪರಿಪಾಲಿಸುವುದೇ ಹಿಂದೂಸತಿಯ ಪರಮಧರ್ಮ (ಹಿಂತಿರು. ೮೬). **ಪರಿಪಾಳಿಸು :** ೧. ಪಾಳಿಸುತ್ತಿರ್ಕೆ ವಿಪ್ಪು ಪರಿಪಾಳಿಕೆ ಚಿಪ್ಪುವಲಂಕರಿಪ್ಪು (ಶಮದ. ೨೨೯ ಪ್ರಯೋ). [ಪರಿಪಾಲನ+-ಇಸು$_3$]

**ಪರಿಪಾಲ್ಯ** (ನಾ). ನಡೆಸಲು ಅರ್ಹವಾದುದು ; ಅನುಸರಿಸಬೇಕಾದುದು : ಸನಾತನಿಗಳಲ್ಲಿ ಪಾತಿವ್ರತ್ಯವು ಸ್ತ್ರೀಗೆ ಸದ್ಧರ್ಮ, ಸ್ವಧರ್ಮ. ಧರ್ಮವಾದುದರಿಂದ ಪರಿಪಾಲ್ಯವು (ಆರ್ಯಧ. ೧೬೧). [ಸಂ.]

**ಪರಿಪಾಳನ** 'ಪರಿಪಾಲನ' ನೋ.

**ಪರಿಪಾಳಿ** 'ಪರಿಪಾಡಿ' ನೋ.

**ಪರಿಪಾಳಿಸು** 'ಪರಿಪಾಲಿಸು' ನೋ.

**ಪರಿಪಾಟಿ** 'ಪರಿಪಾಡಿ' ನೋ.

**ಪರಿಪೀಡನ** (ನಾ). ೧. ಹಿಸುಕುವುದು ; ಹಿಂಡುವುದು ; ಮರ್ದನ : ಗುರುಕುಚಪರಿಪೀಡನಪ್ರರೂಢಾಂಕುರಪುಳಕಾಹತಿಚಿಂತ್ಯಮಾನ ಚಿತ್ತೇಶ್ವರಪರಿರಂಭೆ ನಿಮಿರ್ಚ ಮೂರ್ಛೆವೋದಳ್ ಕುರವಕದಪ್ಪಿಗೆ ವಿಪ್ರಲಬ್ಧೆಯೊರ್ವಳ್ (ಲೀಲಾವ. ೧೩-೯೩). ೨. ಬಹಳವಾಗಿ ಹಿಂಸಿಸುವುದು ; ಚಿತ್ರಹಿಂಸೆ : "ಪರಿ[ಪಾಠಾಂ.ರ]ಪೀಡನಂ ಸಪತ್ರಾಕರಣಮೆನಲು ಲೋಗರನು ಬಂಧಿಸಲು ನಾಮಂ" (ಮಂಗರಾ. ೧೩೪-೩೨). [ಸಂ.]

**ಪರಿಪೀತ** (ನಾ). ಅಧಿಕವಾದ ಹಳದಿಬಣ್ಣ,—ಹೊಂಬಣ್ಣ ; ದಟ್ಟವಾದ ಬಂಗಾರದ ವರ್ಣ : ಪರಿಪೀತದೇಹದಿಂಬತೆವೆರಸಿಂತು ಪತ್ತಿತಿಶಯಂಗಳಿವೇಂ ಜಿನನೊಳ್ ಪೊದಟ್ಟುವೋ (ಆದಿಪು. ೧೦-೪೩) ; ಪರಿಪೀತವಾಯ್ತು ರತ್ನಾಕರನೀ ಕಳಶಜನಿನೆಂದವನ ಬಱಸಂದಂತಿರೆ ಬದ್ಧವೇಣಿ ಗೋದಾವರಿ ಬಂದವತರಿಸಿದುದು ತದಾಶ್ರಮಪದಮಂ (ಕಾದಂಪೂ. ೧೦೬). [ಸಂ.]

**ಪರಿಪು$_1$** 'ಪರುಪು' ನೋ.

**ಪರಿಪು$_2$** (ನಾ). ಒಂದು ಬಗೆಯ ತೆರಿಗೆ : ಪರಿಪುಂ ಪಾರಣೆಯುಂ ಮೊದಲಾಗಿ ಕಿರುಕುಳಬಾಧೆಯೊನ್ದುಮಿಲ್ಲದನ್ತಾಗಿ ಗಾವುಣ್ಡರ್ ಪ್ರತಿಪಾಳಿಸುವರ್(ಸೌಇಇ. XI–i, ೭೮-೫೬ ; 1045) ; ಪರಿಪು, ಪಾರಣೆ ಇವೆರಡೂ 'ಕಿಱುಕುಳ'ಗಳು, ಎಂದರೆ ಸಣ್ಣ ತೆರಿಗೆಗಳು (ಕಶಾಅ. ೪೦೦). [←ತಮಿ. ಪೊಱುಪ್ಪು]

**ಪರಿಪು₃** (ನಾ). ಅವಧಿ (?) : ಪೂಜಿಸಿ ಪೊಡವಟ್ಟೊಪ್ಪೆ ವಿರಾಜಿಸಿ (ಬೆ)ದೆಯನಱಿದು ಪರಿಪುಮಂ ದಾಂಟದೆ ನೀನೋಜೆಯ ಬಲ್ಲೆಟ್ಟುಗಳಂ ಯೋಜಿಸಿ ಸಲೆ ಪಿಡಿದು ಮೇಳೆ(ಣ)ಯುಂ ತತ್ಕ್ರಮದಿಂ (ಚಟ್ಟಪು. ೯-೨೯). [?]

**ಪರಿಪುಷ್ಟ** (ಗು). ೧. ಪಾಲನಗೊಂಡ ; ಪೋಷಣೆ ಹೊಂದಿದ : ಅದಾರವಂ ದೇವಿಯ ಕೃಪಾದೃಷ್ಟಿಪರಿಪುಷ್ಟಪುಣ್ಯಪಾತ್ರಂ ? (ಚಿತ್ರಾಂಗ. ೩೭-೯೮೯). ೨. ಅಭಿವೃದ್ಧಿಗೊಂಡ ; ಬೆಳವಣಿಗೆ ಹೊಂದಿದ ; ಚೆನ್ನಾಗಿ ಬೆಳೆದ : ಅಷ್ಟವಿಧಭಕ್ತಿಕ್ರಿಯಾಪರಿಪುಷ್ಟಸಚ್ಚೇತನನು (ಬಸಪು. ೩೩-೩). ೩. ಹೇರಳವಾದ; ವಿಪುಲವಾಗಿರುವ : ಮನಂ ಸಂತಸಂಬಡೆ ಪರಿಪುಷ್ಟಹರ್ಷೋತ್ಕರ್ಷಚಿತ್ತನಾಗಿ (ಶಾಂತಿಪು. ೧೦-೬೦ವ). (ನಾ). ೪. ಅಭಿವೃದ್ಧಿಯಾದುದು ; ಬೆಳವಣಿಗೆ ಹೊಂದಿರುವುದು ; ದೃಢವಾಗಿರುವುದು : ಕಾವ್ಯದ ಜೊತೆಜೊತೆಗೆ ಶಾಸ್ತ್ರವೂ ಬೆಳೆದ ಹೊರತು ಸಾಹಿತ್ಯ ಸರ್ವಾಂಗಪರಿಪುಷ್ಟವಲ್ಲ (ರಾಮರಾ. ೪೪); ತೋಳು ಗಳು ರಕ್ತ ಮಾಂಸಗಳಿಂದ ಪರಿಪುಷ್ಟವಾಗಿದ್ದು, ನೆಲ್ಲನ್ನು ಬಿದಿಯುವ ಒನಕೆಗಳಂತೆ ತೋರುತ್ತಿದ್ದುವು (ಕಪಪು. ೬-೬೪). [ಸಂ.]

**ಪರಿಪುಷ್ಟಿ** (ನಾ). ಅಭಿವೃದ್ಧಿ ; ಬೆಳವಣಿಗೆ : ಆಯಾ ಪಾತ್ರಗಳ ಪರಿಪುಷ್ಟಿಗೆ ಬೇಕಾದ ರಸಾವೇಶ, ಭಾವ . . . ಅಭಿನಯ ಇವು ಪ್ರತಿ ಯೊಬ್ಬ ವೇಷಧಾರಿಯಲ್ಲಿಯೂ ಕಾಣಬಂದಿತು (ಯಕ್ಷಗಾ. ೧೦) ; ರಸ ಭಾವಗಳ ಪರಿಪುಷ್ಟಿಯಿಲ್ಲದೆ ಕಾವ್ಯ ಅಳ್ಳಕವಾಗಿಲ್ಲ, ಸೀಕಲಾಗಿಲ್ಲ (ನಂಜುಂಡ. ೧೫೧). [ಸಂ.]

**ಪರಿಪೂಜಿಸು** (ಕ್ರಿ). ವಿಶೇಷವಾಗಿ ಆರಾಧಿಸು ; ಅಧಿಕವಾಗಿ ಪೂಜೆ ಮಾಡು : ನೀವೆ ಪೂಜ್ಯರಿರೆಮಗೆಂದು ದಿವ್ಯವಸನಪ್ರಸವಾ ಭರಣಂಗಳಿಂದಮಾದರಮುಮರ್ವಂತು ತದ್ಯುಗಳಮಂ ಪರಿಪೂಜಿಸಿದಂ ಸುರೇಶ್ವರಂ (ಆದಿಪು. ೬-೧೧೨) ; ನಿಜೇಷ್ಟಲಿಂಗಮಂ ಪಾತಕದೂರರಾಗಿ ಪರಿಪೂಜಿಸರ್ಚಿಪರನ್ಯದೈವಮಂ ಘಾತಕರಲ್ತಿವರ್ ಪರಮಲಿಂಗಿಗಳೆಂತು ಶಿವಾಮರೇಶ್ವರಾ (ಅಮಶ. ೨೫). [ಪರಿಪೂಜನ$_0$ +-ಇಸು$_3$]

**ಪರಿಪೂತ** (ಗು).೧. ಪೂರ್ಣವಾಗಿ ಶುದ್ಧಿಗೊಂಡ,-ನಿರ್ಮಲವಾದ: ಅರುಣಾತ್ಮರಶ್ಮಿಯಿಂ ಪಸರಿಸಿ ಚಿತ್ರವರ್ಣರುಚಿಗಳ್ ಪರಿಪೂತ ಖಗಪ್ರಸೂತಿ ರಾಜಿಸುವುದು ಚಾಪದಂತೆ ಭುವನಸ್ತುತ ದಕ್ಷಿಣಪಕ್ಷಿಮಾನಗಂ (ವರ್ಧಮಾ. ೬-೫೯) ; ಕೇತಿದೇವಂ ಬಸವರಾಜನು ಪ್ರೀತಿಯುಂ ಭೀತಿ ಯುವೆರಸಿ ಪರಿಪೂತಚೇತಸರಾಗಿ ಮಾಚಯ್ಯಂಗೆಜಗಲೊಡನೆ (ಬಸವು. ೩೬-೫೬). ೨. ಪವಿತ್ರವಾದ; ಪಾವನವಾದ : ತುರಗಂಗಳೇ ! ನೀಮುಂ ಧನ್ಯರ್ ; ಸೀತಾಕಟಾಕ್ಷವೀಕ್ಷಣಪರಿಪೂತಗಾತ್ರರಲ್ತೆ ! (ರಾಮಾಶ್ವ. ೨೯-೧೦). [ಸಂ.]

**ಪರಿಪೂರ** (ನಾ). ಪರಿಪೂರ್ಣತೆ ; ಸಂಪೂರ್ಣತೆ : 'ಪರಿಪೂರಿಸು' ಪರಾ. [ಸಂ.]

**ಪರಿಪೂರಿತ** (ಗು). ೧. ಪರಿಪೂರ್ಣವಾಗಿರುವ ; ತುಂಬಿರುವ : ಪರಿಪೂರಿತಾಮೃತಕಿರಣರುಚಿಯಂ ರುಚಿಸುವ ಚಕೋರ ಸೇರಿ ಮರ್ಬಿಂ ಗೆಳಸುವುದೆ (ಬಸಪು. ೧೧-೧೦). (ನಾ). ೨. ಆವರಿಸಿರುವುದು ; ತುಂಬಿರುವುದು : ತದುಜ್ಜ್ವಲರತ್ನದೀಪ್ತಿ ದಿಗ್ವಿವರನಭೋವಿಭಾಗ ಪರಿಪೂರಿತಮಾಗಿರೆ (ಆದಿಪು. ೮-೫೫). [ಸಂ.]

**ಪರಿಪೂರಿಸು** (ಕ್ರಿ). ಪೂರ್ತಿಯಾಗಿ ಆವರಿಸು ; ಪೂರ್ಣವಾಗಿ ತುಂಬು : ಸುರವಂದಿವ್ರಜಜಯಜೀಯರವಂ ಪರಿಪೂರಿಸಿದತ್ತಾಶಾಂ ಬರವಂ (ಚಂದ್ರಪು. ೪-೬೩). [ಪರಿಪೂರ +-ಇಸು$_3$]

**ಪರಿಪೂರ್ಣ** (ಗು). ೧. ಪೂರ್ತಿಯಾಗಿ ತುಂಬಿದ ; ಸಂಪೂರ್ಣವಾಗಿ ತುಂಬಿದ; ವೃದ್ಧಿಗೊಂಡ : ಪರಿಪೂರ್ಣೋತ್ಕಟದಾನಧಾರೆ ಕಟದಿಂ ಪಾಯ್ತುರ್ಪುದುಂ. . .ಚಕ್ರಿಯ ಮನಂಗೊಂಡಿತ್ತು ಮತ್ತದ್ವಿಪಂ (ಆದಿಪು. ೧೨-೫೮) ; ರುಚಿತಪದಪ್ರಸನ್ನಪರಿಪೂರ್ಣರಸೋಚಿತಂ . . . ಕಾಳಿದಾಸನುಮನೇಳಿಸಿತೀ ಕೃತಿ ನಾಗವರ್ಮನಾ (ಛಂದೋಂಬು. ೧-೬) ; ಪರಿಪೂರ್ಣಗರ್ಭಭರದಿಂ ಬರಲಾಜಿದೆ ನಿಂದೊಡ್ಡೈದಿ ನದಿಯಂ ಜಲಮಂ . . . ಎಱಿದುದು ಕರಣಿಯಿಂದೆ ಕರಣಿಗಿಭೇಂದ್ರಂ (ಚಂದ್ರಪು. ೯-೬೩) ; ತರುಣಶಶಿ ಪರಿಪೂರ್ಣಚಂದ್ರಮನಾಗಳಾದಂತೆ ಹರುಷದಲಿ ಹೊರೆಯೇಱಿ ಹಿಗ್ಗಿದಳರಸಿ (ಕೌಶಿರಾ. ೪೩-೧೨). ೨. ಪೂರ್ತಿಯಾದ ; ಸಂಪೂರ್ಣವಾದ; ಸಮಗ್ರ : ಪರಿಪೂರ್ಣೋತ್ಸವಮುತ್ಸವ ಮುರಜಧ್ವನಿಯಿಂದಮಾ ವಧೂವರರಂ ಪೋ ಬರವೇಟ್ಟಿಂಬಂತಿರ್ದುದು ಸುರವಾರಸ್ತ್ರೀ ವಿಲಾಸಪರಿಣಯನಗೃಹಂ (ಆದಿಪು. ೮-೧೯) ; ಅಂತು ಪ್ರಧಾನಪ್ರಕೃತಿಯಪ್ಪ ಕಾಮದೇವನಿಲ್ಲದೆ ತದೀಯ ಪರಿಪೂರ್ಣಪರಿಚ್ಛದಮಂ ಪೊತ್ತು ನಿಂದಳಂ ನೋಡಿ (ಶಾಂತಿಪು. ೮-೮೩ ವ). (ನಾ). ೩. ಪೂರ್ತಿಯಾಗಿ ತುಂಬಿದುದು; ಸಂಪೂರ್ಣವಾಗಿ ಭರ್ತಿಯಾದುದು : ಪರಿಪೂರ್ಣಂ ಕೋಶಗೃಹಂ . . . ಎನೆ ತನಗಾದೊರೆಯೆನೆ ವೈಶ್ರವಣನರಸುಗೆಯ್ಯುತ್ತಿರ್ದಂ (ಮಲ್ಲಿಪು. ೪-೧೫೧) ; ಬಯಲಂ ನಿಜಕೇಕರರುಚಿಯಿನಲರ್ಚೇಟ್ರಂದರಸಿ ಬಸಕ್ಕಂ ಬಟಿುಕ್ಕೆ ಸಿರಿ ಪರಿಪೂರ್ಣಂ (ಚಂದ್ರಪು. ೬-೬೨) ; ಕಂಗಳುಂ ಬಾಷ್ಪಾಂಬುಪರಿಪೂರ್ಣಂಗಳು (ಬಸಪು. ೪೦-೬೮). ೪. ಪೂರ್ತಿಯಾಗಿರುವುದು ; ಸಂಪೂರ್ಣವಾಗಿರುವುದು; ಸಮಗ್ರವಾದುದು : "ಪರಿಪೂರ್ಣಮಾಭೋಗಮೆನಲ್ಕೆ ನೆಱೆವಣಿಗೆ" (ಸುಂಗರಾ. ೧೩೪-೩೨) ; ಸತ್ತು ಚಿತ್ತು ಆನಂದ ನಿತ್ಯ ಪರಿಪೂರ್ಣ ಅಖಂಡವೆಂಬ ಆಱು ಲಕ್ಷಣಯುಕ್ತವಾದ ಮಹಾಲಿಂಗವೇ ಪತಿ (ಅಖಂಡೇ. ೨೩೪-೧). ೫. ಲೋಪದೋಷಗಳಿಲ್ಲದವನು ; ಶ್ರೇಷ್ಠನಾದವನು : ನಿತ್ಯಪರಿಪೂರ್ಣನಪ್ಪ ಪರಶಿವಚಿತ್ಕಾಣಶಕ್ತಿಯಿಂದ ಪರಮಜ್ಞಾನಶಕ್ತಿ ಉದಯಿಸಿದಳು ನೋಡಾ (ಸಿದ್ಧೇವ. ೧೬-೪೪) ; ಪರಿಪೂರ್ಣನನಘನದ್ವಯನುರುತರಮಹಿಮಾಂಕಂ (ವೃಷವಿ. ೩೬-೧೧೮) ; ನಿರುತ ಪರಿಪೂರ್ಣಂಗೆ ಪ್ರದಕ್ಷಿಣೆದಿರುಗಲೆಲ್ಲಿ (ಗಗತಾ. ೧೯-೩೮).

**ಪರಿಪೂರ್ಣನಾಗು** = ೧. ಲೋಪದೋಷವಿಲ್ಲದವನಾಗು ; ಉತ್ತಮವ್ಯಕ್ತಿಯಾಗು : ಓದಿನಿಂದ ಮನುಷ್ಯ ಪರಿಪೂರ್ಣನಾಗುತ್ತಾನೆ (ವಿಕಾಸ. VI ವಿಚಾರದರ್ಪಣ). ೨. ಮರಣ ಹೊಂದು ; ಸಾಯು : ಶ್ರೀವಿದ್ಯಾರಂಣ್ಯ ಶ್ರೀಪಾದಂಗಳು ಪರಿಪೂರ್ಣರಾದಲ್ಲಿ ಪಂಪಾಕ್ಷೇತ್ರದಲ್ಲಿ . . . ಶ್ರೀ ವಿದ್ಯಾರಂಣ್ಯಪುರವಾಗಿ ಮಾಡಿ ದಾನ ಧಾರಾಪೂರ್ವಕವಾಗಿ ಕೊಟ್ಟ ತಾಮ್ರಶಾಸನ (ಮೈಆರಿ. ೧೯೩೩. ೨೪-೩೬; 1387). **ಪರಿಪೂರ್ಣಮಾಗು, ಪರಿಪೂರ್ಣವಾಗು**=೧. ಪೂರ್ತಿಯಾಗು ; ಸಂಪೂರ್ಣವಾಗು : ಅಕ್ಷರಂಗಳಕಾರಂ ಮೊದಲಾಗಿ ಳಕಾರ ಪರ್ಯಂತಂ ಪರಿಪೂರ್ಣಮಾಗಿರ್ಪುವು (ಶಮದ. ೪ ವೃತ್ತಿ); ಇನ್ನೂ ಚಿಕಿತ್ಸೆಯ ಪರಿಣಾಮ ಪರಿಪೂರ್ಣವಾಗಿಲ್ಲ (ಕಾವೇ೦. ೨೦೦). ೨. ಕೊನೆಗೊಳ್ಳು ; ಮುಕ್ತಾಯವಾಗು; ಸಮಾಪ್ತವಾಗು : ಪರಮನ ಚರಮಕಲ್ಯಾಣಂ ಪರಿಪೂರ್ಣಮಾಗೆ (ಶಾಂತಿಪು.೧೨-೩೬ ವ). [ಸಂ.]

**ಪರಿಪೂರ್ಣಚಂದ್ರ** (ನಾ). ಸಂಪೂರ್ಣವಾಗಿ ವೃದ್ಧಿಗೊಂಡಿರುವ ಚಂದ್ರಬಿಂಬ ; ಹುಣ್ಣಿಮೆಯ ಚಂದ್ರ : ಪರಿಪೂರ್ಣಚಂದ್ರನಂ ತಿಗ್ಮರೋಚಿಯುಂ . . . ಅ ಕಾಂತೆ ನಿಶೆಯ ಕಡೆಯೊಳ್ ಕಂಡಳ್ (ಪುಷ್ಪಪು. ೩-೧೨೦). [ಪರಿಪೂರ್ಣ+ಚಂದ್ರ$_2$]

**ಪರಿಪೂರ್ಣತೆ** (ನಾ). ೧. ತುಂಬಿರುವಿಕೆ; ಸಂಪೂರ್ಣವಾಗಿರುವಿಕೆ; ಸಮಗ್ರತೆ : "ಆಭೋಗಃ, ಪರಿಪೂರ್ಣತಾ—ಈ ೨ ನೆಱೆವಣಿಗೆ" (ಹಲಾಯು. ೧೨೪-೬೦). ೨. ಲೋಪದೋಷಗಳಿಲ್ಲದಿರುವಿಕೆ; ಪರಿಪೂರ್ಣವಾಗಿರುವುದು : ಪರಿಪೂರ್ಣತೆಯುಂಮನಭವನ ನಿರತಿಶಯೈಶ್ವ

ರ್ಯಮಂ . . . ಬಿತ್ತರಿಪುದು ನಿಗಮಾಂತಚಯಮುಮಾಗಮತತಿಯುಂ (ನೃಪವಿ. ೩೫-೧೯) ; ದೇಶದ ಜನರಿಗೆ ಹೊಸಜೀವನವನ್ನು ಎರೆದು, ಅವರು ಪರಿಪೂರ್ಣತೆಯನ್ನೂ ಪರಮಾರ್ಥವನ್ನೂ ಪಡೆಯುವಂತೆ ಮಾಡುವುದೇ ಪ್ರೌಢಶಿಕ್ಷಣದ ಗುರಿ (ರಾಮರಾ. ೩೮) ; ಪರಿಪೂರ್ಣತೆಯೆಂಬುದು ಮಹಾದೇವನಿಗೆ ವಿಲಾಸಲೀಲೆಗಿರುವಂತಹುದು (ಶಕ್ತಿವಿ. ೧) ; ಪ್ರಕೃತಿಯೂ ಯಾವುದೋ ಪರಿಪೂರ್ಣತೆಯನ್ನು ಪಡೆಯುವ ಸಲುವಾಗಿ ಸಂತತವಾಗಿ ಯತ್ನಿಸುತ್ತಿದೆ (ಮಕ್ಸಾರ. ೨೯ ಪೀಠಿಕೆ). ೩. ಸಂತೃಪ್ತಿ.
[ಸಂ. ಪರಿಪೂರ್ಣತಾ]

**ಪರಿಪೂರ್ಣತೆವಡೆ** (ಕ್ರಿ). ಸಂಪೂರ್ಣತೆಯನ್ನು ಹೊಂದು,—ಪಡೆ : ನಾ ಪದಪಿಂದವನಂಗವ ಭೂಪತಿಗೇಳ್ದೊಯ್ಯನೆ ತಡಪಿದೊಡಾತ್ಮನೆ ಪರಿಪೂರ್ಣತೆವಡೆದುದು (ತ್ರಿಭುತಿ. ೧೯-೩೭). [ಪರಿಪೂರ್ಣತೆ+ಪಡೆ$_1$]

**ಪರಿಪೂರ್ಣತ್ವ** (ನಾ). ೧. = ಪರಿಪೂರ್ಣತೆ ೧ : ಅಪೂರ್ಣತೆಯಂ= ಪರಿಪೂರ್ಣತ್ವಮಂ (ಶಮದ. ೪ ಟೀಕೆ). ೨. = ಪರಿಪೂರ್ಣತೆ ೨ : ನೀನ ದನಜಿಸುವಾಗ ನಿನಗಾವಲ್ಲಿ ನಿಶ್ಚಯ ತೋರುತ್ತು ಅದೀಗ ನಿನ್ನ ಪರಿಪೂರ್ಣತ್ವದ ನೆಲೆ (ಅನಪಚಂ. ೧೬೫-೭೪೮) ; ನಿನ್ನ ಆದಿಮಧ್ಯಾವಸಾನ ಅಖಂಡಪರಿಪೂರ್ಣತ್ವವನರಿದ ಅವಿರಳಜ್ಞಾನಸಂಬಂಧಿಗಳಪ್ಪ ಗಣಾಧೀಶ್ವರರು ಇಲ್ಲದಂದು (ಸಿದ್ಧೇಪ. ೫-೧೪). [ಸಂ.]

**ಪರಿಪೂರ್ಣಶಶಿ** (ನಾ). = ಪರಿಪೂರ್ಣಚಂದ್ರ : ಪರಿಪೂರ್ಣಶಶಿಗೆ ಚಂದ್ರಿಕೆ ಪಿರಿದೆಸೆವಂತೊಲ್ದು . . . ಪತ್ನಿಯಿರ್ಪಳುತ್ಸವದಿಂದಂ (ತ್ರಿಪುವಿ. ೫೧-೪). [ಪರಿಪೂರ್ಣ+ಶಶಿ]

**ಪರಿಪೂರ್ಣಾಂಗಿ** (ನಾ). ಕುಂದಿಲ್ಲದ ಶರೀರವುಳ್ಳವಳು ; ಲೋಪದೋಷಗಳಿಲ್ಲದ ಅಂಗಾಂಗಗಳನ್ನು ಹೊಂದಿದವಳು : ಮಗಳ್ದಿರಜು ವರನಿಬರಿಂ ಪಿರಿಯ್ಕೆ ನೀಂ ಪರಿಪೂರ್ಣಾಂಗಿಯ್ಕೆ ಶ್ರೀದತ್ತೆಯೆಂಬ ಮಗಳಾಗಿ ಪುಟ್ಟಿದೈ (ಶಾಂತಿಪು. ೪-೭೬ ಪ). [ಸಂ. ಪರಿಪೂರ್ಣಾಂಗೀ]

**ಪರಿಪೂರ್ಣಾವಧಿ** (ನಾ). ಕೊನೆ ಮುಟ್ಟಿರುವ ವಾಯಿದೆ; ಪೂರ್ಣಗೊಂಡ ಅವಧಿ : ಪರಿಪೂರ್ಣಾವಧಿದಿವಸಸಾಯಂತನಸಮಯದೊಳ್ ಶ್ರೀವಿಜಯನಿರ್ಪ ಚಿತ್ರಶಾಲೆಯೊಳಗಣ ಸಿಂಹಾಸನದೊಳ್ . . . ವೈಶ್ರವಣಪ್ರತಿಮೆ ಶ್ರೀವಿಜಯನಾಸ್ಥಾನದೊಳಿರೆ (ಶಾಂತಿಪು. ೬-೨೮ ಪ).
[ಪರಿಪೂರ್ಣ+ಅವಧಿ]

**ಪರಿಪೂರ್ಣೇಂದು** (ನಾ). = ಪರಿಪೂರ್ಣಚಂದ್ರ : ಪರಿಪೂರ್ಣೇಂದುವಿನಿಂದಖಂಡಧರಣೀನಾಥಂ . . . ಸುತನಾದಪಂ ನಿನಗೆ ಪಂಕೇಜಾತಪತ್ರೇಕ್ಷಣೇ (ಪಾರ್ಶ್ವಪು. ೭-೬೩) ; ಪರಿಪೂರ್ಣೇಂದುವ ಗೆಲವಿಂ ದರಸ್ಮಿತಸ್ಮೇರವಕ್ತ್ರಶಶಿಯೊಳ್ ಮತ್ತೊಂದರರೆ ಕಲೆಯೆನಿಸಿತೆನೆ ಸುಂದರ ಮಾಯ್ತು ನ್ವರ್ಥಮಾಗಿ ಪೆಸರಿನೊಸಲವಳಾ (ಪುಷ್ಪಪು. ೩-೫೩).
[ಪರಿಪೂರ್ಣ+ಇಂದು$_3$]

**ಪರಿಪೂರ್ತಿ** (ನಾ). ೧. ಪರಿಪೂರ್ಣತೆ; ಪೂರ್ಣವಾದ ಅಭಿವೃದ್ಧಿ,—ಬೆಳವಣಿಗೆ : ಎಲ್ಲ ಕಡೆಗೆ ಕಥಾಬೀಜದ ಸತ್ವವು ತನ್ನ ಪರಿಪೂರ್ತಿಯನ್ನು ಪಡೆದು ಬೆಳೆಯುವಂತೆ ರಾಘವಾಂಕನು ಅದಕ್ಕೆ ತನ್ನ ಪ್ರಫುಲ್ಲವಾದ ಪ್ರತಿಭೆಯ ಎರಕ ಹೊಯ್ದಿದ್ದಾನೆ (ತಪಶಿ. ೧೧೮). ೨. ಮುಕ್ತಾಯ ; ಕೊನೆ : ಬಿಡದೆ ನಿಮ್ಮಯ್ಯಗಳವಸರವನೊಡನೆ ಪರಿಪೂರ್ತಿಗಳನೆಯ್ದಿಸಿ ತಡೆಯದೀಗಳೆ ಕಂಡ . . . ಕಡೆಯೊಳಾಂ ತಿಳುಹಿದಪೆನೆಲೆ ನೀ ನಿದ್ರೆಗೆಯ್ಯುತಿರು (ಬಸವ. ೪೭-೨೨). [ಸಂ.]

**ಪರಿಪೇಲವ** (ಗು). ೧. ಬಹಳ ಚಿಕ್ಕದಾದ,—ಸಣ್ಣದಾದ. ೨. ಬಹಳ ಸೂಕ್ಷ್ಮವಾದ,—ನಾಜೂಕಾದ. (ನಾ). ೩. ಸುಗಂಧಪೂರಿತವಾದ ಒಂದು ಬಗೆಯ ಸಸ್ಯ ; ಕೊನ್ನಾರಿಗೆಡ್ಡೆ : "ಕುಟನ್ನಟಂ, ದಾಶಪುರಂ, ವಾನೇಯಂ, ಪರಿಪೇಲವಂ . . . ಕೈವರ್ತೀ, ಮುಸ್ತಕಂ-ಆ ತುಂಗಮುಸ್ತದ ಹೆಸರುಗಳು" (ಸಿದ್ಧಾಂತಿ. ೧೧೨).
[ಸಂ.]

**ಪರಿಪೋಗು** (ಕ್ರಿ). ಧಾಳಿ ಮಾಡು; ಮುತ್ತಿಗೆ ಹಾಕು; ಮುತ್ತು : ನಿಧಿಮಲ್ಲಂ ಪರಿಪೋಗಿ ಕಾದೊಡೆ ಆತನ ತಮ್ಮಂ ಬೆನವಯ ಸಗ್ಗಿಯಾದರ್ (ಮೈಆರಿ. ೧೯೨೭, ೬೩-೩ ; ೨ನೆಯ ಶತ).
[ಪರಿ$_2$+ಪೋಗು$_1$ (<ಪೋ$_1$)]

**ಪರಿಪೋಷ** (ನಾ). ಅಧಿಕವಾದ ಪೋಷಣೆ : ಮಹಾಕಾವ್ಯದಲ್ಲಿ ಕಥಾನಿರೂಪಣೆಗಿಂತಲೂ ರಸಪರಿಪೋಷಕ್ಕೆ ಹೆಚ್ಚಿನ ಪ್ರಾಶಸ್ತ್ಯ (ಭಾವಗೀ. ೬) ; ವ್ಯಭಿಚಾರಿಗಳೇ ಅಂತರಿಕ ಪರಿಪೋಷ, ಅನುಭಾವಗಳೇ ಬಹಿರಂಗವ್ಯಾಪಾರ ಎಂದೂ ಹೇಳಬಹುದು (ಸಾಹಿವಿ. ೩). [ಸಂ.]

**ಪರಿಪೋಷಕ** (ನಾ). ಪೋಷಣೆ ಮಾಡುವವನು; ಪಾಲಿಸುವವನು; ಸಲಹುವವನು : ಕರ್ನಾಟಕದ ಇತರ ಹಲವು ಅರಸುಮನೆತನಗಳಂತೆಯೆ ನೊಳಂಬರೂ ಸರ್ವಧರ್ಮಪರಿಪೋಷಕರಾಗಿ ಬೆಳಗಿದವರೆಂದು ಹೇಳಬಹುದಾಗಿದೆ (ನೊಳಂಬ. ೭೪). [ಸಂ.]

**ಪರಿಪೋಷಣ** (ನಾ). ೧. ಸಲಹುವುದು ; ಪೋಷಿಸುವುದು ; ಸಂರಕ್ಷಣೆ. ೨. ಪೋಷಣೆ ಮಾಡುವವನು ; ಸಂರಕ್ಷಿಸುವವನು : ಪ್ರಣುತಸಲು ಗುರುಭಕ್ತಿ ಪರಿಪೋಷಣನತುಳಗುರುಭಕ್ತಿ ಗುಣಭೂಷಣನೆನಲು ಗುರುಭಕ್ತಿಯಲಿ ಗುರುಭಕ್ತನೊಪ್ಪುವನು (ಬಸವ. ೩೯-೨). [ಸಂ.]

**ಪರಿಪೋಷಣೆ** (ನಾ). ಬೆಳವಣಿಗೆ ; ಅಭಿವೃದ್ಧಿ : ನಿಸರ್ಗವರ್ಣನೆ ಮತ್ತು ಶೃಂಗಾರರಸಪರಿಪೋಷಣೆಯಲ್ಲಿ ಮಾತ್ರವಲ್ಲದೇ . . . ಲೋಕಾನುಭವವನ್ನು ನಿರೂಪಿಸುವದರಲ್ಲಿಯೂ ಈ ಕವಯಿತ್ರಿಯರು ತಮ್ಮ ಕೌಶಲ್ಯವನ್ನು ತೋರಿಸಿದ್ದಾರೆ (ಸಂಕಪ. ೯). [ಸಂ. ಪರಿಪೋಷಣ]

**ಪರಿಪೋಷಿತ** (ಗು). ಅತಿಯಾಗಿ ಬೆಳೆದ,—ವೃದ್ಧಿ ಹೊಂದಿದ : ಪರಿಪೋಷಿತಾಶಾಧೀನನಂ ದುಃಕೃತಯುತನನಪರಾಧದಶತನ ಎನ್ನನೇನಂ ಮಾಡಿಕೊಂಬೆನೊ (ಬಸವ. ೬೦-೫೬). [ಸಂ.]

**ಪರಿಪೋಷಿಸು** (ಕ್ರಿ). ಚೆನ್ನಾಗಿ ಪುಷ್ಟಿಗೊಳಿಸು,—ಪಾಲನೆ ಮಾಡು : ಪ್ರಾಣೋಪಹಾರದಿಂದಿಂದ್ರಿಯಸಮೂಹವೆಲ್ಲಂ ಪರಿಪೋಷಿಸಲ್ಪಡುವಂತೆ (ವಿವೇಕ. ೧೦೧). [ಪರಿಪೋಷಣ+-ಇಸು$_3$]

**ಪರಿಪ್ರಮಾಣ** (ನಾ). ಅಳತೆ ; ಪ್ರಮಾಣ : ಆ ನರಕಬಿಲಂಗಳೆಲ್ಲ ಮೆಣ್ಬತ್ತು ನಾಲ್ಕುಲಕ್ಷಪರಿಪ್ರಮಾಣವಾಗಿಯುಂ (ಸುಕುಮಾ. ೧೧-೪೧ ಪ); ಆ ವಿಷಮಾಹಿಯ ವಿಷಮುಖಪಾವಕನಿಂ ಪಾಱುತಿರ್ಪ ಕಿಗಳುಳಮುಂ... ಬೇವುದು ಯೋಜನಪರಿಪ್ರಮಾಣಾಂತರದೊಳ್ (ಜಗವಿ. ೩-೮೦) ; ಆ ಮಹಾಕಲ್ಯಾಣದ ವಿಸ್ತಾರ ಹನ್ನೆರಡುಯೋಜನ ಪರಿಪ್ರಮಾಣ (ಮೋಳಿಮಾ. ೨೩ ಪ್ರಸ್ತಾವನೆ). [ಸಂ.]

**ಪರಿಪ್ರಶ್ನ** (ನಾ). ಮತ್ತೆ ಮತ್ತೆ ಕೇಳುವ ಪ್ರಶ್ನೆ ; ಪುನಃ ಪುನಃ ಕೇಳುವ ಪ್ರಶ್ನೆ : ಪರಿಪ್ರಶ್ನವೆಂದರೆ ಬಾರಿಬಾರಿಗೂ ಕೇಳುವುದು (ಅನಾಸ. ೨೯). [ಸಂ.]

**ಪರಿಪ್ರಶ್ನೆ** (ನಾ). = ಪರಿಪ್ರಶ್ನ : ನಿಲ್ಲದೆ ಪರಿಪ್ರಶ್ನೆ ಮಾಡಲು ಶಿವಲಿಖಿತದಿಂದ ಹೇಳಿ ಅವರನ್ನು ನಿರುತ್ತರಗೊಳಿಸಿದನು (ರಾಘಚ. ೭೭ ಕಥಾಸಾರ); ಜ್ಞಾನಪ್ರಾಪ್ತಿಗೆ ಪ್ರಣಿಪಾತ, ಪರಿಪ್ರಶ್ನೆ, ಸೇವೆ ಎಂಬೀ ಮೂರು ಒಪ್ಪಂದಗಳಿರುವುವು (ಅನಾಸ. ೨೯). [ಸಂ. ಪರಿಪ್ರಶ್ನ]

**ಪರಿಪ್ಲವ** (ಗು). ೧. ಚಂಚಲವಾದ ; ಕ್ಷುಬ್ಧವಾದ ; ಅಸ್ಥಿರವಾದ. (ನಾ). ೨. ಅತ್ತಿತ್ತ ಚಲಿಸುವುದು,—ತಿರುಗಾಡುವುದು. ೩. ಅಲ್ಲಾಡುವುದು; ಅಲುಗಾಟ. ೪. ನಡುಗುವುದು; ಕಂಪಿಸುವುದು. ೫. ಚಂಚಲತೆ; ಅಸ್ಥಿರತೆ : "ಲೋಲಂ, ಚಪಳಂ . . . ಪರಿಪ್ಲವಂ . . . ಸಂಚಳಂ—ಈ ೧೦ ಸಂಚಳಂ" (ಹಲಾಯು. ೧೧೫-೧೦);

ಅನವಬೋಧಂ ವಿಷಯಪರಿಪ್ಲವಂ (ಮನೋವಚನಕಾಯನಿಯಮಂ ಪಾರಿಪ್ಲವ) ಮಿನಿತಿಲ್ಲದೆ ಮೂಱುಂ ಭುವನಮನೆಱಗಿಸುವ ಸಮತೆ ಸಮನಿಸಿದಪುದೇ (ಶಾಂತಿಪು. ೯–೧೧೯). ೬. ಈಜುವುದು. ೭. ತೇಲುವುದು. ೮. ತೊಂದರೆ ; ಕಾಟ ; ಹಿಂಸೆ : ಪರಿಹರಿಸಿ ಕೊಡುವೆನು ದುಷ್ಟಪಾಟಚ್ಚರ ಪರಿಪ್ಲವವ (ಕುವ್ಯಾಅ. ೧೯–೩). [ಸಂ.]

**ಪರಿಪ್ಲಾವಿತ** (ಗು). ೧. ತೇಲುತ್ತಿರುವ. ೨. ತಲ್ಲೀನವಾಗಿರುವ ; ಆವೃತವಾದ : ಅಮರಲೋಕದರ್ಶನಾನಂತರೋತ್ಪನ್ನ ರಾಗಸಾಗರೋದಾರಪೂರಪರಿಪ್ಲಾವಿತಾಂತರಂಗಂ . . . ಈಶಾನಕಲ್ಪದ ಚೈತ್ಯಾಲಯಂಗಳನರ್ಚಿಸಿ(ಆದಿಪು. ೨–೬೯ಪ); ಕರಟತಟಗಳಿತ ಮದಜಳಧಾರಾಪೂರಪರಿಪ್ಲಾವಿತ ಸಕಳಭೂತಳಮಪ್ಪ ನಾಲ್ಕುಲಕ್ಕ ಭದ್ರಹಸ್ತಿಯುಮನೊಂದು ಮಾಡಿ (ಪಂಪಭಾ. ೧೦–೫೭ಪ); ಅಂತು ದಿವ್ಯಸುಖಪರಂಪರಾಪರೀತಾಂಗನನಂಗರಾಗರಸಪೂರಪರಿಪ್ಲಾವಿತಾಂತರಂಗನಚ್ಯುತಾಮರೇಶ್ವರಂ ನಂದೀಶ್ವರದ್ವೀಪಕ್ಕೆ ಪರಿವಾರಾಮರೇಶ್ವರರ್ ಸಹಿತಂ ಪೋಗಿ (ಶಾಂತಿಪು. ೪–೧೧೫ಪ). [ಸಂ.]

**ಪರಿಪ್ಲುತ** (ಗು). ೧. ತುಂಬಿದ; ಒಳಗೊಂಡ. (ನಾ). ೨. ತುಂಬಿದುದು ; ಒಳಗೊಂಡಿರುವುದು : ಸಾಕಷ್ಟು ವಿಷಯಪರಿಪ್ಲುತವಾಗಿದ್ದರೂ ಈ ಗ್ರಂಥ ಸಂಪೂರ್ಣವಾಗಿಲ್ಲವೆಂಬುದನ್ನು ನಾನು ಬಲ್ಲೆ (ಭಾರದ. i ಮುನ್ನುಡಿ) ; ಈ ಪ್ರಶ್ನೆಗಳು ವಿಚಾರಪರಿಪ್ಲುತವಾಗಿದ್ದು ವಿಚಾರಮಂಥನಕ್ಕೆ ಎಡೆಮಾಡಿ ಕೊಟ್ಟವೆ (ದ್ರಾವಿವಿ. ೨೪೫). ೩. ತುಂಬಿದವನು; ಒಳಗೊಂಡವನು: ಚಿದಾಕಾಶದಲ್ಲಿ ಬಹ್ವಂಶ ಪರಿಪ್ಲುತನಾದ ರವಿಯಂಥ ಕವಿತಾರಕೆಗಳು ಬಹಳ ವಿರಳ (ಕಾವ್ಯಕು. ೫೭). [ಸಂ.]

**ಪರಿಪ್ಲುಷ್ಟ** (ನಾ). ಸುಟ್ಟುದು ; ದಗ್ಧವಾದುದು : ಕಷ್ಟಂ ದುಃಖಾನಳಪರಿಪ್ಲುಷ್ಟಂ ಚಃ ಗತಿಚತುಷ್ಟಯಂ ಪ್ರಾಣಿಗೆ (ಆದಿಪು. ೯–೫೧). [ಸಂ.]

**ಪರಿಬಂಧನ** (ನಾ).ತಡೆ ; ನಿರ್ಬಂಧನ : 'ಪರಿಬಂಧಿಸು' ಪರಾ. [ಸಂ.]

**ಪರಿಬಂಧಿಸು** (ಕ್ರಿ). ತಡೆ ; ನಿರ್ಬಂಧಿಸು : ಇಸೆ ಮುತ್ತಿ ಮುಸುಱಿ ಪರಿಬಂಧಿಸಿದುವು ನರರಥತುರಂಗಮಂಗಳಂ . . . ಅವನ ಸರಲ್ಗಳ್ (ಪಂಪಭಾ. ೧೨–೧೬೫). [ಪರಿಬಂಧನ+–ಇಸು$_3$]

**ಪರಿಬದ್ಧ** (ಗು). ಧರಿಸಿದ ; ಉಳ್ಳ ; ಕೂಡಿಕೊಂಡ : ಬಳಿಕ ಯೋಜನಗಂಧಿಯಲ್ಲಿಂದಿಳಿದನೆಭ್ರಶ್ಯಾಮನುರುಪಿಂಗಳಜಟಾಪರಿಬದ್ಧ ವೇದವ್ಯಾಸಮುನಿರಾಯ (ಕುವ್ಯಾಅ. ೨–೨೩). [ಸಂ.]

**ಪರಿಬರ್ಹ** (ನಾ). ೧. ಉಪಕರಣ ; ಸಲಕರಣೆ : "ಉಪಕರಣಂ, ಪರಿಬರ್ಹಃ, ಪರಿಚ್ಛದಃ–ಈ ೩ ಉಪಕರಣಂ" (ಹಲಾಯು. ೫೧–೧೫೧); "ಪರಿಬರ್ಹಂ ಪರಿಚ್ಛದಂ ನೆರಹಿದುಪಕರಣಮಕ್ಕು" (ಮಂಗರಾ. ೬೦–೧೫). ೨. ರಾಜಲಾಂಛನ ; ರಾಜಚಿಹ್ನೆ : ನಿಜಾನುಜಕನ್ಯಾನ್ವಿತಮುತ್ಸವಧ್ವಜದ ಕೋಟಿಪರಿಬರ್ಹವಿರಾಜಮಾನ ರಾಜಮಂದಿರಮಂ ಮುಟ್ಟಿ ಬಿಟ್ಟಳಿಸುತ್ತುಂ (ಶಾಂತಿಪು. ೪–೭೫ಪ). ೩. ಸೇವಕಜನ ; ಪರಿಜನ. [ಸಂ.]

**ಪರಿಬವಣಿಗೆ** (ನಾ). ತಿರುಗುವಿಕೆ ; ಸುತ್ತುವಿಕೆ : "ಪರಿಬವಣಿ(–ಗೆ)–ಪರಿಭ್ರಮಣ=ಸುತ್ತಾಟ" (ತದ್ಭಕೋ. ೨೪); ಕುಲಾಲಚಕ್ರದ ಪರಿಬವಣಿಗೆಯ ಪಾಡಿನಲಿ ಕಾತರಿಸುತವನಿಗೆ ಮೈಯನಿತ್ತನು ನೀಡಿ ಭುಜಯುಗವ (ಕುವ್ಯಾಅ. ೬–೭೯). [ಪರಿಬವಣಿ+–ಇಗೆ$_0$]

**ಪರಿಬವಣಿ** (ನಾ). ೧. ನಿರಂತರವಾದ ಸುತ್ತಾಟ,–ಅಲೆದಾಟ : ತುರಗ ರಥವೆಮಗಿಲ್ಲ ವಿಪಿನದ ಪರಿಬ[ಪಾಠಾಂ. ಭ]ವಣಿಗಿವರೇಕೆ ಬೆಸಗೊಳು ಭೀಮ ನೀನೆಂದ (ಕುವ್ಯಾಅ. ೧–೩). ೨. ತೊಳಲಾಟ ; ಕಳವಳ : ಧರೆಯೊಳಣುಮಾತ್ರ ಬೀಳಲ್ ನರಕಕೋಟಿಗಳ ಪರಿಬವಣಿಯ ಪುದದನಱಿದಾ ವಿಭೂತಿಯಂ ಧರಿಸಿ ತ್ರಿಪುಂಡ್ರದಿಂ ಸ್ನಾನಮಂ ಬಿಡದೆ ಮಾಳ್ಪುದು (ಲಿಚಿಂ. ೪೧–೧೩); ಅರಿಯದನೆ ನೀಂ ನಿನಗಿದೇಕೀ ಪರಿಬವಣಿ ಚಿತ್ತದಲಿ (ರಾಮಾಸಂ. ೩–೫–೨೭). [<ಸಂ. ಪರಿಭ್ರಮಣ]

**ಪರಿಬೃಢ** (ನಾ). ಮುಖಂಡ ; ಪ್ರಧಾನ ವ್ಯಕ್ತಿ : ಊರುಗಳನುಡಿವೆನೊದೆವೆಂ ಕೌರವಪರಿಬೃಢನ ಮಕುಟಮಂ (ಗದಾಯು. ೧–೮೦); ಪಂಚವದನಂಗಂ ಶಾಕ್ವರಪರಿಬೃಢನೆನಿಪಂಗಂ ವಿರಕ್ತಿಯಪ್ಪಂತು ಮಾಟ್ಪುದಿಂತಿದು ಕಜ್ಜಂ (ಪಂಚತಂ. ೬೯–೮). [ಸಂ.]

**ಪರಿಬ್ರಿಢ** (ಗು). ಸಾಂದ್ರವಾದ ; ದಟ್ಟವಾದ : ಶ್ರೀಮದಮರೇಂದ್ರರುಂದ್ರಶಿಖಾಮಣಿಗಣತರುಣಕಿರಣಪರಿಬ್ರಿಢಚರಣಂ (ಸೌಇಇ. XX, ೮೭–೧ ; ?). [< ಸಂ. ಪರಿಬೃಢ]

**ಪರಿಭಂಗ** (ನಾ). ೧. ಮುರಿಯುವುದು; ಭಂಗಿಸುವುದು. ೨. ಕೇಡು; ನಾಶ: ಪರಿಭಂಗಂಗಳೆಂದುಂ ಇಲ್ಲದಿಹ ನಿನ್ನ ಕಣ್ಣನೀಕ್ಷಿಸಿದವರು ಬಗೆವರೆ (ಬಸವು. ೧೮–೬೮). [ಸಂ.]

**ಪರಿಭಂಗಿಸು** (ಕ್ರಿ). ೧. ನಾಶಮಾಡು ; ಹಾಳುಮಾಡು : ಶೋಭಿಪ ಸದ್ವ್ರತಾಚರಣೆಯುಂ ಪರಿಭಂಗಿಸಿ ಕಾಡುತಿರ್ಪುದೀ ಲೋಭಮಿದೆನ್ನನು (ಅಮಶ. ೪೧). ೨. ಸೋಲಿಸು ; ಅಪಜಯವನ್ನು ಹೊಂದುವಂತೆ ಮಾಡು : ದುರುಳವೇದಾಂತಿ ಮತ್ತೋರ್ವಂ . . . ಪರಮಧರ್ಮವ ನಿರಾಕರಿಸುತಂ ಸಂಚರಿಸುತಿರುವದಂ ತಿಳಿದು ಸಭೆಗರೆದಾತನಂ ಕರಿಸಿ ಪರಿಭಂಗಿಸಿದನು (ಕುಮಾಪು. ೯–೩೨). [ಪರಿಭಂಗ+–ಇಸು$_3$]

**ಪರಿಭಂಬೆಱು** (ಕ್ರಿ). ನಾಶವಾಗು ; ಅಳಿವನ್ನು ಹೊಂದು: ತ್ರೈಪುರವೊರ್ವ್ವ ತಾಪಸನ ಕಿಂಚಿನ್ಮಾತ್ರಕೋಪಾಗ್ನಿಯಿಂ ಪರಿಭಂಬೆತ್ತುವು (ಕಇಅ. ೯೪–೩–೩೨ ; 1124). [P ಇದು 'ಪರಿಭವಂಬೆಱು' ಎಂಬುದರ ಅಪಲಿಖಿತವಿರಬಹುದು]

**ಪರಿಭವ** (ನಾ). ೧. ಗಮನ ಕೊಡದಿರುವುದು ; ತಿರಸ್ಕಾರ ; ಅನಾದರ : "ಪ್ರ(ಅ)ತ್ಯಾಕಾರಃ, ಪರಿಭವಃ . . . ತಿರಸ್ಕಾರಃ–ಈ ೭ ಪರಿಭವಂ" (ಹಲಾಯು. ೧೧೭–೧೯). ೨. ಅವಮರ್ಯಾದೆ ; ಅಗೌರವ ; ಅವಮಾನ : ಏನುಮನಱಿಯದೆ ಪರಿಭವಾ[ನಿ]ಲನಿಂ ಶೋಕಾನಲನಿರ್ಮಿಡಿಸೆ ನಡನಡುಗಿ ಕಾಯ್ಪಿನೊಳ್ [ಪಿ]ಡುಗಿ ತಳೋದರಿ ವೃಕೋದರನಲ್ಲಿಗೆ ವಂದು (ಪಂಪಭಾ. ೮–೭೦ಪ) ; ಅಸಹ್ಯಪರಿಭವಾನಲದಂದಹ್ಯಮಾನಗಾತ್ರೆಯುಮಾಗಿ (ಗದಾಯು. ೧–೫೫ಪ); ಆ ನರಿಗಳನು ಸಂಹರಿಸಿ ನಿನ್ನಯ ಪರಿಭವಾಗ್ನಿಯ ನಂದಿಸುವೆ ನಿಲ್ಲೆಂದನಾ ಪಾರ್ಥ (ಕುವ್ಯಾಅ. ೪–೩೧). ೩. ಸೋಲು; ಪರಾಜಯ : ಭೂಪತಿಗೆ ಕಪ್ಪವನಿತ್ತವನೀಶನತ್ತಣಿಂ ಪರಿಭವಮಂ ಕಟಲ್ಚುವುದು (ಕವಿರಾ. ೧–೧೧೪); ಪರಿಭವದ ಪೊಱೆಯನಾಂತಿರ್ದರಾತಿಗಳ್ಗಳ್ಕಿ . . . ಬಾಟ್ಪಂ ಗಂಡರೂಪಿನೊಳ್ ಗಂಡನಲ್ತು ಪೆಂಡತಿಯೆ ವಲಂ (ಆದಿಪು. ೧೨–೯೬); ಕಡಲ ನುಂಗಿದ ಕಪ್ಪಿನ ಪರಿಭವ ನವಸಾಸಿರ ಸಿಡಿಲು ಹೊಯ್ದು ಬಯಲಿಂಗೆ ಬಣ್ಣವುಂಟೆ (ಅಪಚಂ. ೯–೩೫) ; ಕೃಷ್ಣಭಕ್ತರ ಪರಿಭವವು ಜೀವಂಗೆ ಪಥ್ಯವೆ ಎಂದನಾ ಕರ್ಣ (ಕುವ್ಯಾದ್ರೋ. ೨–೬೩). ೪. ದುಃಖ ; ಕ್ಲೇಶ ; ಕಷ್ಟ : ಪ್ರಣಯಿನೀವಿಯೋಗಪರಿಭವಾನಲದಹ್ಯಮಾನಮಾನಸನಪ್ಪ ಶ್ರೀವಿಜಯನುಮಂ ಭಂಗಿಸಿ (ಶಾಂತಿಪು.೬–೩೬ ಪ) ; ಎನಗಾದೊಂದು ಪರಿಭವಮನಾರ್ಗೆ ದೂಱಿದಪೆಂ (ಕಾದಂಉ. ೨೯೮) ; ನಿಜಗೋಕುಲದ ಪರಿಭವವನಾ ಸಂಕ್ಲೇಶಸಂಸ್ಥಿತಿಯ ಶೋಕವನು ಕಾಣುತ್ತ . . . ಕೃಪಾಕರನು ದೈತ್ಯಾಪಹರಣಕೆ ಮಾಡಿದನು ಮನವ (ನಿಭಾಗ. ೧೦–೭–೧೧) ; ಎನ್ನ ಪರಿಭವವ ತಪ್ಪಿಸಿದ ಶ್ರೀಗುರುವಿಂಗೆ ನಮೋನಮಃ ಎಂಬೆನಯ್ಯಾ (ಅಖಂಡೇ. ೧೯–೭).

**ಪರಿಭವಮಾಗು, ಪರಿಭವವಾಗು**=೧. ಸೋಲಾಗು; ಅಪಜಯ

ವುಂಟಾಗು : ಎನ್ನ ಸನ್ನಿಗೀಗಳೆ ಪರಿಭವವಮಾಯ್ತೆಂದು ಧರ್ಮಜಂ ಚಿಂತಿಸಿದಂ (ಗದಾಯು. ೮-೨೯); ತರುಣ ಪರಿಭವವಾಯ್ತಲಾ ನೀ ಮರಳಿ ಹೋಗಂಗದನೆ ಬಾಲಿಯ ನೆರೆಗೆ ಹೋದನು ತಮ್ಮ ನಿನ್ನಯ ಪುರವನಾಯಕವು (ಕೌಶಿಂ. ೨೨-೬೨). ೨. ಅವಮಾನವಾಗು ; ಅಗೌರವವಾಗು : ಅರಸ ನೀ ಮುಂದಿರಲು ನನಗೀ ಪರಿಯ ಪರಿಭವ ವಾಯ್ತು (ಕೌಶಿಂ. ೩೮-೪೩). [ಸಂ.]

**ಪರಿಭವಂಗೆಯ್ಯು**, ಪರಿಭವಗೈ (ಕ್ರಿ). ೧. ಹೀಗಳೆ ; ಅಲ್ಲಗಳೆ : ಪರಿಭವಂಗೆಯ್ಯುತ್ತೆ ಕೋಟಿಸೂರ್ಯಪ್ರಭೆಯನುರುದರ್ಪಣಾಂತರದೊಳಗೆ ತನ್ನ ಪಡಿರೂಪು ಒಗಿದು ಪೊಳೆಯಲ್ಕೆ (ಅಂಬಾಚ. ४-६-೫). **ಪರಿಭವಗೈ**: ೨. ತಾತ್ಸಾರ ಮಾಡು; ತಿರಸ್ಕಾರವನ್ನು ತೋರು: ತರವಜಾಯದ ತಲೆಯೊಳು ಪೊತ್ತು ಲಾಲಿಸೆ ಪರಿಭವಗೈದು ಪಳಿವಳು (ಹದಿಬ. ೬-೨೯). [ಪರಿಭವ+ಗೆಯ್ಯು (<ಕೆಯ್$_1$)]

**ಪರಿಭವಂಬಡಿಸು** (ಕ್ರಿ). ಅವಮಾನಗೊಳಿಸು ; ಅವಮರ್ಯಾದೆ ಮಾಡು : ನಿನ್ನನಿನಿತು ಪರಿಭವಂಬಡಿಸಿದುದು ಸಾಲ್ಗುಂ (ಸಂಪಭಾ. ೨-೬೪ ವ). [ಪರಿಭವಂಬಡು+-ಇಸು$_3$]

**ಪರಿಭವಂಬಡು** (ಕ್ರಿ). ೧. ಅವಮಾನವನ್ನು ಹೊಂದು : 'ಪರಿಭವಂಬಡಿಸು' ಪರಾ. ೨. ಕಷ್ಟಪಡು ; ಕ್ಲೇಶವನ್ನು ಹೊಂದು : ನಾವಿನಾತನ ಕೆಯ್ಯೊಳಂದು ಪರಿಭವಂಬಟ್ಟೆಂದು ಮುಂ ಭಿಕ್ಷುಕಕ್ರಮದಿಂದೇಳಿದರಾಗಿ ಬಾರದ ಭವಂ ಬಂದಂದಮೇಂ ಪೇಳಿದೇ (ಸುಕುಮಾ. ४-೨೯). [ಪರಿಭವ+ಪಡು$_1$]

**ಪರಿಭವಂಬಡೆ** (ಕ್ರಿ). ಪರಾಜಯವನ್ನು ಹೊಂದು ; ಸೋಲು : ಮುಖಪಂಕ್ತಿಯಿಂದೆ . . . ಸುಧಾಕರಮಂಡಲಂಗಳಂ ಪರಿಭವಿಪಾಕೆಯರ್ ಪರಿಭವಂಬಡೆದರ್ ಕುಸುಮಾಸ್ತ್ರಪಾತದಿಂ (ಜಗವಿ. ೧೬-೮೪). [ಪರಿಭವ+ಪಡೆ$_1$]

**ಪರಿಭವಗೈ** 'ಪರಿಭವಂಗೆಯ್ಯು' ನೋ.

**ಪರಿಭವಿಸು** (ಕ್ರಿ). ೧. ಅಸಡ್ಡೆಯಿಂದ ಕಾಣು ; ಅನಾದರವನ್ನು ತೋರು ; ಅಲಕ್ಷಿಸು : ಕರ್ಮಕ್ಷಯಾರ್ಥಂ ತಪಂಬಟ್ಟಾತನನಿಳಿಸಿ ಪರಿಭವಿಸಿ ಮುಟ್ಟಿಗಿಡಿಸಿ ನುಡಿಯಲ್ವೇಡೆಂದು ಬಾರಿಸಿದೊಳಂ ಜಯಾವತಿ ಕಡ್ಕೆತ್ತಿ ಬಾರಿಸಿದೊಡೆ (ವಡ್ಡಾರಾ. ४೬-೧೩); ಬಿಸತಂತುವಿನೊಳ್ದೊರೆಯೆನಿಪೆಳಮನದೆನ್ನಂ ಪರಿಭವಿಪುದೆ ಕಂಡು ಕನ್ನೆಯಂ ಯುವರಾಜಂ (ಕಾದಂಉ. ೩೦೧) ; ಅಂತಿರ್ದೊಡದನೆ ದೋಷಂಗೆಯ್ದು ರೋಷಗ್ರಹಾವೇಶನಾಗಿ ನಿಷ್ಕಾರಣಂ ಪರಿಭವಿಸಿ ನೋಯಿಸಿದೆ (ಪಂಚತಂ. ೭೭-೧೦) ; ಪಾರ್ಥನ ಕೆರಳಿಚಿದರೋ . . . ಪ್ರಚಂಡಪ್ರಳಯಭೈರವನ ಪರಿಭವಿಸಿದರೊ (ಕುಮ್ಮಾಗ. ೧-೯). ೨. ಅಪಮಾನಗೊಳಿಸು ; ಅವಮಾನವಾಗುವಂತೆ ಮಾಡು : ಚಾಣಾಕ್ಯನೆಂಬ ಭಟ್ಟನಂ ನಂದಂ ಪರಿಭವಿಸಿ ನೂಂಕಿಯಟ್ಟಿ ಕಳೆಯಿಸಿದೊಡೆ (ವಡ್ಡಾರಾ. ೭೫-೭); ಅತನ ಮೇಲ್ವಾಯ್ದೊಡೆ ಪಡೆಮಾತೇಂ ಪರಿಭವಿಸಿ ಕಳೆದನುದ್ಧತನೆನ್ನಂ (ಪಂಪರಾಮಾ. ೯-೪೪) ; ಹೀನರಂ ಪರಿಭವಿಸಿದುದುಂ . . . ಎಂಬಿವು ಮೊದಲಾದುವೆಲ್ಲಂ ಪ್ರತ್ಯಕ್ಷೋಪಚಾರವಿನಯಮೆಂಬುದು (ಪಸಾರ. ೩೭೪) ; ಇವನು ತಮ್ಮುಯ್ಯನನು ನೆಚಿ ಪರಿಭವಿಸನೇ ಚಿಕ್ಕಂದು (ಕುಮ್ಮಾದ್ರೋ. ೧೯-೨೩). ೩. ಸೋಲಿಸು; ಅಪಜಯವನ್ನು ಹೊಂದುವಂತೆ ಮಾಡು: ಅವರಿನದಂ ಪರಿಭವಿಸುವೆನೆಂದು ಪೊಂಗುಗುಂ ಮಿಥ್ಯಾತ್ವಂ (ಸಮುಪ. ೫-೧೧೬); ಮಂಜೀರದ ಮಧುರಧ್ವನಿಯಿಂ ಘೋರತಪೋಮಯನನಭವನಂ ಪರಿಭವಿಪೆಂ (ಗಿರಿಕ. ೭-೬೬) ; ಅವರನೊಂದೇ ನಿಮಿಷದಲಿ ಪರಿಭವಿಸಿ ನಡೆತರೆ (ಕುಮ್ಮಾಕ. ೧४-೧४) ; ರವಿಸುತನ ಸೂನುವಂ ಪರಿಭವಿಸಿ . . . ಮಹಾರಥರನೊಂದೇ ರಥದೊಳಾ ಸುರಥನೊಡೆದುಳಿದನು (ಜೈಮಿಭಾ. ೧४-೫).

४. ವಿಸಾರು ; ಅತಿಕ್ರಮಿಸು : ಶಶಿರುಚಿಯಂ ಪರಿಭವಿಸಿ ನಭಮನಡರ್ದುವು ನರೇಂದ್ರತಾಪಸತಪೋಮಯಯೂಖಾವಳಿಗಳ್ (ಸಂಪಭಾ. ೮-೧೦); ಮುಖಪಂಕ್ತಿಯಿಂದೆ . . . ಸುಧಾಕರಮಂಡಲಂಗಳಂ ಪರಿಭವಿಪಾಕೆಯರ್ ಪರಿಭವಂಬಡೆದರ್ ಕುಸುಮಾಸ್ತ್ರಪಾತದಿಂ (ಜಗವಿ. ೧೬-೮೪) ; ಗರುಡನಂ ಪರಿಹಾಸಂಗೆಯ್ವ ಪವನನಂ ಪರಿಭವಿಸುವ...ಜಾತ್ಯಶ್ವಂಗಳ ಪಳಯುಮಂ ಸೋಂಕದ (ಗಿರಿಕ. ೬-೫೫ ವ) ; ಹರಿಯುರದೊಳೆಸೆವ ಕೌಸ್ತುಭದಿರವಂ ಪರಿಭವಿಸಿ ಮೆಚಿಕೆದುದದು (ರಾಜಶೇ. ೫-೨೭). [ಪರಿಭವ+-ಇಸು$_3$]

**ಪರಿಭಾಗಿಸು** (ಕ್ರಿ). ಪರಿಶೀಲನೆ ಮಾಡು ; ಪರ್ಯಾಲೋಚಿಸು : ಲೋಕದೊಳು ಶ್ರೀಗುರುಕರಸ್ಪರುಶನದಿ ಪರಿಭಾಗಿಸಲು ಕುಲಮೊಂದೆಯಲಾ (ಬಸಪು. ೫೭-೬೯). [<ಪರಿಭಾವಿಸು]

**ಪರಿಭಾಗೆ** (ನಾ). ಸರಿಯಾದ ವಿಭಾಗ,—ವಿಂಗಡಣೆ : ಚಿತ್ರಕ . . . ಹಿಂಗುಗಳನು ಪರಿಭಾಗೆಯು ಮಾಡಿಯಂದಿಲ ತಕ್ರದಿಂದಿರದೆ ಮರ್ದಿಸಿ (ಸಾಳ್ವಸಾಂ. ೯). [ಸಂ. ಪರಿಭಾಗ]

**ಪರಿಭಾವ** (ನಾ). ಆಲೋಚನೆ ; ವಿಚಾರ ; ಚಿಂತನೆ. [ಸಂ.]

**ಪರಿಭಾವಕತ್ವ** (ನಾ). ವಿಚಾರ ಮಾಡುವುದು ; ಆಲೋಚನೆ : 'ನಿಸ್ಸಂಗಪರಿಭಾವಕತ್ವ' ಪರಾ. [ಸಂ.]

**ಪರಿಭಾವನೆ** (ನಾ). = ಪರಿಭಾವ : ಎಲ್ಲ ಮಾನಸಿಕ ಪರಿಭಾವನೆಯ ಅನುಕರಣಗಳೇ (ಸೌಂದಸ. ೧೨೮) ; ರಾ. ನರಸಿಂಹಾಚಾರರ ವಿವರಣೆ ಪರಿಭಾವನೆಗೆ ಅರ್ಹವಾಗಿದೆ (ದ್ರಾವಿವಿ. ೨೮೩). [ಸಂ. ಪರಿಭಾವನ]

**ಪರಿಭಾವಿತ** (ಗು). ೧. ಆಲೋಚಿಸಿದ ; ಚಿಂತನೆ ಮಾಡಿದ : ಸಮುಚಿತಕೃತಿದೋಷದೂಷ್ಯ ಮಾರ್ಗಕ್ರಮಪರಿಭಾವಿತ ಚಿತ್ತಪ್ರವೃತ್ತಿ ಯುಪ್ಪೊಂಗಮಳಿನಕವಿತಾಗುಣೋದಯಶ್ರೀ ಸಮನಿಸುಗುಂ ಸತತಾಭಿಯೋಗದಿಂದಂ (ಕಾವ್ಯಾವ. ४೯೬). ೨. ತಾತ್ಸಾರಕ್ಕೊಳಗಾದ ; ಅವಮಾನಗೊಂಡ. ೩. ಹೊಂದಿರುವ ; ಒಳಗೊಂಡ. [ಸಂ.]

**ಪರಿಭಾವಿಸು** (ಕ್ರಿ). ೧. ಯೋಚಿಸು ; ವಿಚಾರ ಮಾಡು ; ಆಲೋಚನೆ ಮಾಡು : ಪರಿಭಾವಿಸಲೆನಗಿನ್ನಿದಪರಿಹಾರ್ಯಮೆನಿಪ್ಪುದೊಂದು ಮರಣಂ ಶರಣಂ (ಕಾದಂಪೂ. ೮೭೫); ತನ್ನ ಮನದೊಳ್ ಪರಿಭಾವಿಸಿದಂ ದಶಾನನಂ (ಪಂಪರಾಮಾ. ೧४-೮೧) ; ಪರಿಭಾವಿಸೆ ಯೋಗಬಾಹಮುಪ್ಪನಾಲ್ಕೆ ಪಲಂ (ಶಮದ. ೩೨) ; ಜೀವನತಿಮಲಿನಂ ಶಿಪಂ ಪರಿಭಾವಿಸುವಡತಿನಿರ್ಮಳಂ (ಬಸಪು. ೫೧-೨೭). ೨. ಗಮನ ಕೊಡು ; ಲಕ್ಷಿಸು : ಅವ್ಯಕ್ತಾವಯವದೊಳಂ ಕುಮಾರನುನ್ನತಿಕೆಯನುದ್ಭಾವಿಸುತಿರ್ದಪುಪ(ದೆಂ ಪರಿ)ಭಾವಿಸು ನೀಂ ಚಕ್ರವರ್ತಿಚಿಹ್ನೋತ್ಕರಮಂ (ಕಾದಂಪೂ. ೯೧೯) ; ದೇವಿಯ ಮೊಲೆವಾಲಂ ಪರಿಭಾವಿಸಲಾರಯ್ಯಳಂಜಳಕ್ಕಳ್ (ಗಿರಿಕ. ೩-೧೦೦); ಈ ವಿಜ್ಞಾಪನಮಂ ಪರಿಭಾವಿಸಿ ಸಂತಕ್ಕೆ ನಡೆ ಸಮುನ್ನತಸತ್ವಾ (ರಾಜಶೇ. ೬-೧೩೨). ೩. ಸೂಕ್ಷ್ಮವಾಗಿ ನೋಡು ; ಚಿಂತಿಸಿ ತಿಳಿ ; ಗ್ರಹಿಸು: ದೇವ ಭವಸ್ಥಿತಿಯಂ ಪರಿಭಾವಿಸಿಯುಂ ವಿರತಿಭಾವಮೆನಗಾದುದೇಂ (ಚಂದ್ರಪು. ೩-೭४) ; ಆರೆಯೊಳು ಬೈತೊಂದು ಚಾರುವಿಗ್ರಹವನು ವರಶಿಲ್ಪಿ ಪರಿಭಾವಿಸುತ್ತೆ ಕಡಿದೊಟ್ಟ ಸುತ್ತಣ ಹೆಚ್ಚಿನ ಶಿಲೆಯನು ಬಿಡಿಸಿ ಹೊರತೆಗೆವನು ಮತ್ತೆ (ಇಂಚಾಪ. ೧೭೮-೭೬) ; ರಾಮನು ಕವಿದೃಷ್ಟಿಯಿಂದಲೂ ಈ ದೃಶ್ಯವನ್ನು ಪರಿಭಾವಿಸಬಲ್ಲನು (ಸಮಾಲೋ. ೧೦೨). ४. ನೋಡು ; ಈಕ್ಷಿಸು : ಗಿರಿಶಭವನಮೊಂದಿರಲದನಾ ಹರಸುತನ ತೌತುಕ್ಯದಿ ಪರಿಭಾವಿಪೆನೆಂದು ಹರ್ಮ್ಯತಳದಿಂದಿಳಿದಂ (ತ್ರಿಷವಿ. ೬೩-೨). ೫. ಪರಿಗಣಿಸು ; ಎಣಿಸು : ಪರಿಜನಮೊಳಗೊರ್ವನೆಂದು ದೇವಿಯರೆನ್ನಂ ಪರಿಭಾವಿಪುದು (ಕಾದಂಉ. ೧೭೪) ; ಅವನು ವೈದಿಯಾಗಿ ಪರಿಭಾವಿಸಲ್ಪಟ್ಟನು (ಹಿಂಕಿರು. ४೬). ೬. ಶೋಧಿಸು ; ತನಿಖೆ ಮಾಡು : ಎಮ್ಮ ಕುಲಕ್ಕನುಕೂಲಮಾದ ಕನ್ಯಾರತ್ನವನೀ ಪಟ್ಟಣ

ಪ್ರಾಂತಪುರಂಗಳೊಳ್ ಪರಿಭಾವಿಸಿ ಬರ್ಪುದೆಂದು ಬೆಸಸೆ (ನಂಬರ. ೪–೫೧) ; ನಿಜಸ್ಥಿತಿಯನ್ನು ಪರಿಭಾವಿಸುವ ಅಪೇಕ್ಷೆಯಾಗಲಿ ವ್ಯವಧಾನವಾಗಲಿ ಅವನಿಗಿರುವದಿಲ್ಲ (ಭಾರಮಿಾ. ೧೫೦). ೭. ವಾಸನೆ ಕಟ್ಟು : ಬೋಟಿ ರಸಂ ಲಘುಪಿಕ್ಕೆಯಿಂಬಿವಂ ಬೆರಸಿ ಮನೋಹರವಾಗಿ ಧೂಪಮಂ ಕುಡೆ ಪರಿಭಾವಿಸಿ ಪುಷ್ಪಚಯದಿನದು ಸಾದಕ್ಕುಂ (ಲೋಕೋಪ. ೬–೫೭).
[ಸಂ. ಪರಿಭಾವನ + -ಇಸು₁]

**ಪರಿಭಾಷಣ** (ನಾ). ೧. ಚೆನ್ನಾಗಿ ಮಾತನಾಡುವುದು; ಸಂಭಾಷಣೆ: ಸ್ಫುರಿತಮಣಿಖಚಿತಹರಿವಿಷ್ಟರದೊಳಲಂಕರಿಸಿ ನೆಱೆದ ರಾಜಸ್ತಕಮಂ ದರಹಸಿತಮೃದುವಿಲೋಕನ ಪರಿಭಾಷಣದಿಂದಮಾದಮಾದರಿಸುತ್ತುಂ (ಆದಿಪು. ೯–೨). ೨. ಬಹಳ ಮಾತನಾಡುವುದು ; ಹೆಚ್ಚು ಮಾತನಾಡುವುದು. ೩. ಬುದ್ಧಿವಾದ ; ಹಿತವಚನ. ೪. ತಿರಸ್ಕಾರದ ನುಡಿ ; ನಿಂದೆ ; ತೆಗಳಿಕೆ. ೫. ನಿಯಮ ; ಕಟ್ಟಳೆ. [ಸಂ.]

**ಪರಿಭಾಷಿತ** (ಗು). ಹೇಳಿದ ; ವಿವರಿಸಿದ ; ನಿರೂಪಣೆಮಾಡಿದ : ಪರಮಜಿನಪತಿಪರಿಭಾಷಿತಮಪ್ಪ ಸಕಳಶ್ರಾವಕವ್ರತಂಗಳಂ . . . ಪಂಚ ಕುಹಾಕಲ್ಯಾಣಂಗಳುಮಂ ನಾಮೋದ್ದೇಶಂಗೆಯ್ದು (ಆದಿಪು. ೩–೪೮೨).
[ಸಂ.]

**ಪರಿಭಾಷೆ** (ನಾ). ೧. ಲಕ್ಷಣನಿರೂಪಣೆ ; ವ್ಯಾಖ್ಯೆ ; ವಿವರಣೆ. ೨. (ಕಲೆ, ಶಾಸ್ತ್ರ, ವಿಜ್ಞಾನ ಮುಂತಾದ) ತಾಂತ್ರಿಕವಿಷಯಗಳಿಗೆ ವಿಶಿಷ್ಟವಾದ ಪದವಿನ್ಯಾಸ ; ಪಾರಿಭಾಷಿಕ ನುಡಿಗಟ್ಟು : ಈ ವಿದ್ಯಾಧರಶ್ರೇಣಿಯ ಪರಿಭಾಷೆಗಳ್ ಬಿನ್ನವಾಗದೆ.(ಶಾಂತಿಪು. ೩–೯೩ವ); ತಾನು ಕೇಳಿದ್ದ ಯಾವುದೋ ವ್ಯಾಪಾರಗಾರರ ಮಾತಿನ ತನಗರ್ಥವಾಗದ ಪರಿಭಾಷೆಯನ್ನು ಪ್ರಯೋಗಿಸಿ ಒಪ್ಪಿಗೆ ಕೊಟ್ಟಿದ್ದನು (ಮಲೆಮ. ೭೮೨) ; ಕನ್ನಡದ ಹೆಮ್ಮೆಗೆ ಕೋಡು ಮೂಡಿದಂತೆ ಹೊಸ ಪರಿಭಾಷೆಯನ್ನು ಸೃಷ್ಟಿಸಿ ಕೃತಾರ್ಥರಾಗಿದ್ದಾರೆ (ಸಾಹಿಪ್ರ. XIII ಪ್ರಸ್ತಾವನೆ). ೩. ನಿಂದೆ; ತೆಗಳಿಕೆ ; ಅಪವಾದ: ಭರತಜರೊಳ್ಳಿನ್ನಿಲ್ಲದ ಪರಿಭಾಷೆಯನುಂಟುಮಾಡಿ ಪಿಜಗಡಿಯಿಟ್ಟಂ ಕುರುರಾಜಂ (ಗದಾಯು. ೬–೩೯).
[ಸಂ. ಪರಿಭಾಷಾ]

**ಪರಿಭಾಸಿ** (ಗು). ಹೊಳೆಯುತ್ತಿರುವ ; ಶೋಭಿಸುತ್ತಿರುವ ; ಪ್ರಕಾಶಿಸುತ್ತಿರುವ : ಆ ವಿಜಗೀಷುವ ಸೈನ್ಯಸಮಾವಾಸದಿನಧಿಕಮೊಪ್ಪಿ ತೋಱಿದುದು ಮರೀಚಾವಿಷ್ಕೃತಹಾರೀತವನಾವಳಿಪರಿಭಾಸಿ ಮಲಯಪರ್ವತಕಟಕಂ (ಶಾಂತಿಪು. ೧೧–೧೧). [ಸಂ. ಪರಿಭಾಸಿನ್]

**ಪರಿಭಿನ್ನ** (ನಾ). ಬೇರೆಯಾಗಿರುವುದು ; ವಿಭಿನ್ನವಾದುದು : ಆ ತೆಱನಂತೆ ಪರಿಭಿನ್ನವಾಗಿ ಸ್ವಸ್ಥಾನಂಗಳಲ್ಲಿ ಮುಟ್ಟಿ ವೇಧಿಸಿಕೊಂಬ ವಸ್ತು ಒಂದಾದಲ್ಲಿ ಅದು ಖಂಡನೆಯ ಪತ್ರದ ಚಂಡಿಕಾಕಿರಣದಂತೆ . . . ಲಿಂಗವು ಭಿನ್ನರೂಪನಲ್ಲ (ಸೋಲಮಾ. ೧೨೮–೪೯೫). [ಸಂ.]

**ಪರಿಭೂತ** (ಗು). ೧. ಅವಮಾನಗೊಳಿಸಲ್ಪಟ್ಟ ; ಉಪೇಕ್ಷೆಗೊಳಗಾದ ; ತಿರಸ್ಕರಿಸಲ್ಪಟ್ಟ. ೨. ಜಯಿಸಿದ ; ಮೀರಿದ : ಅಭರಣಪ್ರಭಾಪರಿಭೂತಪ್ರಭೂತಜ್ಯೋತಿಃಪ್ರಭೆಯಿಂ ಜ್ಯೋತಿಃಪ್ರಭೆಯುಂ ಪ್ರತೀಹಾರಂ ಜುಗಧಾಧಿರಾಜಾಭಿಮುಖಂ ಮಾಡಿ (ಶಾಂತಿಪು. ೫–೧೦೫ವ). (ನಾ). ೩. ಅವಮಾನಿತನಾದವನು; ತಿರಸ್ಕಾರ ಹೊಂದಿದವನು: ತಾಸಶುದ್ಧನಾಗಿ ಪೆಱಂ ಪರಿಭೂತನಕ್ಕುಂ (ಚಾವುಂಪು. ೨೩೮). [ಸಂ.]

**ಪರಿಭೂತಿ** (ನಾ). ಅನಾದರ ; ತಾತ್ಸಾರ ; ಅಸಡ್ಡೆ : "ಪರಿಭೂತಿ ನಿಕಾರಮನಾದರಂ ತಿರಸ್ಕಾರಂ" (ವಸ್ತುಕೋ. ೧೧೧–೨). [ಸಂ.]

**ಪರಿಭೃತ** (ಗು). ಕಾಪಾಡಿದ ; ಸಲಹಿದ ; ರಕ್ಷಿಸಿದ : ಪರಿಭೃತವಂಶನೂರ್ಜಿತನುದಾತ್ತಮನಂ . . . ನಮಗೆ ನಂದನನಾದಪಂ (ಅನಂಪು. ೪–೧೨೮). [ಸಂ.]

**ಪರಿಭೇದ** (ನಾ). ವ್ಯತ್ಯಾಸ ; ಅಂತರ : ಈತಗಳು ಕೌಂತೇಯ ಮಾದ್ರೇಯಾತಿಶಯ ಪರಿಭೇದರಹಿತಖ್ಯಾತರೆಂದರು (ಕುಮ್ವ್ಯಾಆ. ೪–೭೦).
[ಸಂ.]

**ಪರಿಭೋಗ** (ನಾ). ಸಂತೋಷಾನುಭವ : ತಱಗೆಲೆಯ ಪುಂಜಮಂ ಕಂಡುದಱಿಂದಮಮೃತ ಮಧುಜೀವನ ರುಜಾಹರಾದಿ ಸಾರದ್ರವ್ಯಂಗಳಲ್ಲದ ಅಸಾರದ್ರವ್ಯವಿಕಲ್ಪಂಗಳೆ ಮನುಷ್ಯರ್ಗುಪಭೋಗಪರಿಭೋಗಹೇತುಗಳಕ್ಕುಂ (ಚಾವುಂಪು. ೫೪) ; ಉಪ(ಸಂ)ಭೋಗಪರಿಭೋಗಂಗಳಂ ತೋಱಿ ಸೀತೆಯ ಮನಮಂ ರಂಜಿಸುವೊಡವರ್ಗಳುಪಭೋಗಾದಿ ವಸ್ತುಗಳಂ ಪೆಱರಿರುಳ್ಕನಸಿನೊಳಪ್ಪೊಡಂ ಕಾಣಲಪ್ಪರದು (ಚಾವುಂಪು. ಖ೦೩).
[ಸಂ.]

**ಪರಿಭ್ರಂಶ** (ಗು). ೧. ಬೀಳುವ ; ಪತನ ಹೊಂದುವ. (ನಾ). ೨. ಕೆಳಕ್ಕೆ ಬೀಳುವಿಕೆ ; ಪತನ : ಧರ್ಮಪರಿಭ್ರಂಶಕಾರಕಕಷಾಯೋದಯದೊಳ್ ಸ್ವಪರಧರ್ಮಪ್ರಚ್ಯವನಪರಿಪಾಲನಂ ಸ್ಥಿತೀಕರಣಂ(ತತ್ತ್ವಪ್ರ. ೨೬೫) ; ದಿವಸದೊಳಸಿತಾಬ್ಜವಿಕಾಸವುಮಂ ಶೇಫಾಲಿಕಾಪ್ರಸೂಬಿಂದು ಪರಿಭ್ರಂಶವುಮಂ ಪೇಟಲ್ಕಾಗದು ಸವವಾಯಂ ಸಮನಿಸಿರ್ದೊಡಂ ಸತ್ಕೃತಿಯೊಳ್ (ಕಾವ್ಯಾವ. ೮೭೫). ೩. ತಪ್ಪಿಸಿಕೊಳ್ಳುವಿಕೆ. [ಸಂ.]

**ಪರಿಭ್ರಮ** (ನಾ). ೧. ಅಲೆದಾಡುವಿಕೆ ; ಸುತ್ತಾಟ ; ತಿರುಗಾಟ : ಮೃಗಯಾಪರಿಭ್ರಮಶ್ರ[ಮೋತ್ಥ]ತಸ್ವೇದಜಲಲವಹಾರಿಯುಮಾಗಿ ಬಂದ ಮಂದಾನಿಲಕ್ಕೆ ಮೆಯ್ಯನಾಱುಸುತ್ತುಂ (ಪಂಪಭಾ. ೫–೫೩ವ). ೨. ಚಲನೆ ; ಅಲುಗಾಟ : ಬಾಹುಪರಿಭ್ರಮಂಗಳೊಳ್ ಬೆದಱದೆ ಶಕ್ರನೃತ್ಯದೊಳೊಡಂಬಡೆ ನರ್ತಿಸುವಲ್ಲಿ . . . ಅದೇಂ ಪದುಳಮಾದುದೊ ದಿವ್ಯವಧೂಕದಂಬಕಂ (ಆದಿಪು. ೭–೧೨೫). ೩. ಭ್ರಾಂತಿ ; ಮೋಹ.
[ಸಂ.]

**ಪರಿಭ್ರಮಣ** (ನಾ). ೧. ಅತ್ತಿತ್ತ ಓಡಾಡುವುದು ; ಸುತ್ತಾಡುವುದು ; ಅಲೆದಾಟ : "ಪರಿಭ್ರಮಣದೊಳು ಜಲಾವರ್ತದೊಳು ಸುಟಿಯೆನಿಕ್ಕುಂ" (ಶಬ್ದಮಂ. ೧೧೬) ; ನಿಜಪರಿಭ್ರಮಣದಿಂ ರಜಮುಪ್ಪುದೆಂದು ಭೂಭುಜನೊಲ್ದುನಿಲ್ಲ ರಥಮಂ ನೀರಜಮಪ್ಪ ನಿಜಮನೋರಥದ ನೆಱವಿಂದೆ (ಮಲ್ಲಿಪು. ೧೦–೨೩) ; ವೈರಾಗ್ಯಕ್ಕೆ ಮುಕ್ತಿಯಲ್ಲದೆ ಲಿಂಗವಿಲ್ಲ ಜ್ಞಾನಕ್ಕೆ ಪರಿಭ್ರಮಣವಲ್ಲದೆ ಲಿಂಗವಿಲ್ಲ (ಮಹಾದೇ. ಬ. ೧೩೧–೨೧೮) ; ಇರುಳು ನಾನಾಸ್ವಪ್ನಕಾನನಗಿರಿಪರಿಭ್ರಮಣಕ್ಕೆಚಿಂತಾಭರಿತನಾದೆನು (ಕುವ್ಯಾಸ.೧೩–೧೮). ೨. ಸುತ್ತುವುದು; ತಿರುಗುವುದು: ಈತಂ ಮಹಾಬಲನೆಂಬೊಂ ವಿದ್ಯಾಧರನನೇಕಭವಪರಿಭ್ರಮಣದಿಂ ಬಂದೀಶಾನಕಲ್ಪದೊಳ್ ದೇವನಾಗಿ (ಶಾಂತಿಪು. ೮–೧೫೧ವ) ; ಅನೇಕಭವಪರ್ಯಾಯಪರಿಭ್ರಮಣದಿಂ ಬಂದು ಪುಟ್ಟುತ್ತುಂ ಕಡೆಯೊಳುತ್ಕೃಷ್ಟಾಯುಷ್ಯಮನೆಯ್ದೆ ನೆಱೆಯಿಸುವ ನೆಱವಿ ಭವಪರಿವರ್ತನಮೆಂಬುದು (ಸುಕುಮಾ. ೬–೬ವ); 'ಪರಿಭ್ರಮಣ' ವೆಂದರೆ ತನ್ನ ಅಕ್ಷದಸುತ್ತಲೂ ತಾನೇ ತಿರುಗುವುದು(ಜ್ಯೋತಿವಿ. ೨೯ ಅಡಿಟಿ). ೩. ಭ್ರಾಂತಿ ; ಭ್ರಮೆ : ಹುಟ್ಟಿತಿಲ್ಲವೆ ನಿನಗೆಱಾವು ಧರ್ಮಸೂನು ಮತಿಗೆಟ್ಟಿಹನೆ ಶಿವಶಿವ ವೃಥಾ ಪರಿಭ್ರಮಣ [ಪಾಠಾಂ. ಭ್ರಮವೆ] ಹಿಮುಗಟ್ಟಿತೆಂದಮರೇಂದ್ರಸೂನುವಂ ಜಱೆದು ಸೌಭರಿ ನುಡಿದೊಡಿಂತೆಂದನು (ಜೈಮಿಭಾ.೧೦–೨೦). [ಸಂ.]

**ಪರಿಭ್ರಮಣಂಗೆಯ್** (ಕ್ರಿ). ಸುತ್ತು ಹಾಕು ; ತಿರುಗು : ಕ್ರಮದಿಂದಂ ಬಂದು ಪರಿಭ್ರಮಣಂಗೆಯ್ದು[ಪಾಠಾಂ. ಯ್ವಾ]ಲ್ಲಿ ಮುಂದರಾದ್ರಿಗೆ ರತ್ನೋತ್ತಮಕುಂಡಲಯುಗಮೆನೆ ಪೌರ್ಣಮಿಯಂದಿನ ಚಂದ್ರಸೂರ್ಯಮಂಡಲಮೆಸೆಗುಂ (ಅಜಿಪು. ೨–೪). [ಪರಿಭ್ರಮಣ+ಕೆಯ್₁]

**ಪರಿಭ್ರಮಿಸು** (ಕ್ರಿ). ತಿರುಗು ; ಸುತ್ತು : ಜೀವಂಗಳ್ . . . ನಾನಾ ಶರೀರೋಪಾದಾನಪರಿತ್ಯಜನಪುರಸ್ಸರಂ ಪರಿಭ್ರಮಿಸುಗುಂ (ಆದಿಪು.

೧೬-೫೭ ವ); ತಲೆಯಲ್ಲಿ ವಿಚಾರಚಕ್ರ ಪರಿಭ್ರಮಿಸುತ್ತಿತ್ತು (ಸೂರಜ. ೪೦).
[ಪರಿಭ್ರಮಣ+-ಇಸು$_3$]

**ಪರಿಮಂಡನ** (ನಾ). ವಿಶೇಷವಾದ ಶೋಭೆ; ಅಧಿಕವಾದ ಸೌಂದರ್ಯ: ಕಂಡು ಕಮಲಾಕ್ಷಿಯರು ಕೃಷ್ಣನಖಂಡಸೌಭಾಗ್ಯೋದಧಿಯ ಪರಿಮಂಡನದ ಮೂರ್ತಿಯನು ಮೆಚ್ಚಿದರು ಲೋಕವಿಭ್ರಮವ (ಶಿಭಾಗ. ೧೦-೫೯-೨೬). [ಸಂ.]

**ಪರಿಮಂಡಲ,** ಪರಿಮಂಡಳ (ನಾ). ೧. ವೃತ್ತ; ವರ್ತುಲ. ೨. ಸುತ್ತುಗಟ್ಟಿರುವುದು; ಪರಿವೇಷ: 'ಪರಿಮಂಡಲಗೊಳ್' ಪರಾ. **ಪರಿಮಂಡಳ**: ೧. 'ಪರಿಮಂಡಳಿಸು' ಪರಾ. [ಸಂ.]

**ಪರಿಮಂಡಲಗೊಳ್** (ಕ್ರಿ). ಸುತ್ತುಗಟ್ಟು; ಬಳಸು: ಕಂಡೆನೊಪ್ಪುದೊಂದು ಭಾಮಂಡಲ ಪರಿಮಂಡಲಗೊಂಡಾದಿಜಿನಗೆ (ಭರತ. ೬೬-೫೦). [ಪರಿಮಂಡಲ+ಕೊಳ್$_1$]

**ಪರಿಮಂಡಲಿಸು,** ಪರಿಮಂಡಳಿಸು (ಕ್ರಿ). ೧. ಸುತ್ತು ಹಾಕು; ತಿರುಗು: ಪರಿಮಂಡಲಿ[ಪಾಠಾಂ.೪]ಸಿದರು ಕಾಣದಲಿ ಜಂಘೆಯ ಲಾಳಿಯ ಲವಣಾಣದಲಿ ಮೆಚ್ಚಿದರು ಭೀಮ ಕೌರವರು (ಕುವ್ಯಾಗ. ೬-೨೨). **ಪರಿಮಂಡಳಿಸು**: ೨. ಆವರಿಸು; ಸುತ್ತುಗಟ್ಟು: ರಾವುತರು ಕೈನಿಲುಕಿದರು ಮುತ್ತಿದರು ಪರಿಮಂಡಳಿಸಿ ಬೊಬ್ಬಿಟ್ಟುದಾರಿದರು ಸಿಕ್ಕಿದನು ಹಗೆಯೆನುತ (ಕುವ್ಯಾದ್ರೋ. ೧೮-೪೪); ಬೆಳಗು ಬೆಳಗನು ತಿವಿದು ಪರಿಮಂಡಳಿಸೆ ಪರಮಕೃಪಾಳು ಜನವತ್ಸಲನು ವ್ಯೈದೋಟ್ಟಿದನು (ಶಿಭಾಗ. ೬-೪-೨೭). [ಪರಿಮಂಡಲ+-ಇಸು$_3$]

**ಪರಿಮಂಡಳ** 'ಪರಿಮಂಡಲ' ನೋ.

**ಪರಿಮಂಡಳಿತ** (ಗು). ವರ್ತುಲಾಕಾರವಾಗಿ ಮಾಡಿದ; ಚೆನ್ನಾಗಿ (ಎಳೆದು) ಬಗ್ಗಿಸಿದ: ಫಡ ಹೋಗೆನುತ ಪರಿಮಂಡಳಿತ ಕೋದಂಡ ನೆಚ್ಚನು ಕರ್ಣನರ್ಜುನನ (ಕುವ್ಯಾಕ. ೨೨-೩೪). [ಸಂ. ಪರಿಮಂಡಲಿತ]

**ಪರಿಮಂಡಳಿಸು** 'ಪರಿಮಂಡಲಿಸು' ನೋ.

**ಪರಿಮರ್ದನ** (ನಾ). ಜಜ್ಜುವುದು; ಕುಟ್ಟುವುದು: 'ಪರಿಮರ್ದಿಸು' ಪರಾ. [ಸಂ.]

**ಪರಿಮರ್ದಿಸು** (ಕ್ರಿ). ೧. ಜಜ್ಜು; ಕುಟ್ಟು: ಮರಿಚ ಶಿಖಿ ಕುಂಭಿ... ಸೈಂಧವಸಹಿತಂ ಪರಿಮರ್ದಿಸಿ ಕುಡು ವಾರಿಯೊಳರದಶನದ ಸೊಕ್ಕುಮಟ್ಟುವುದೊಂದಚ್ಚರಿಯೇ (ಖಸುದ. ೨-೧೩೩). ೨. ಹಿಂಡು; ಹಿಸುಕು; ಮರ್ದನ ಮಾಡು: ಪರಿಮರ್ದಿಸುವುದು ದುತ್ತೂರರಸಮನಿಂಬಾಗಿ ಪಿಟ್ಟುದು ನೆಲದೊಳ್ ಲವಣಂಬೆರಸೊರಸಿಕೊಂಡು ಪೂಸುಗೆ (ಕಾವ್ಯಾಪ. ೨೭೧). ೩. ಅರೆ; ನುಣ್ಣಗೆ ಮಾಡು: ಶಂಖದ ಬೂದಿಯನೊಳ್ಳಿತಾಗಿ ಪರಿಮರ್ದಿಸಿ ಸೀಸದಿನಂತದನೊಂದಿರೆ ಪೂಸಿದೊಡಂ ನರೆ ಕರಿಯವಾಗಿ ಸೊಗಯಿಸಿ ತೋರ್ಕುಂ (ಲೋಕೋಪ. ೯-೫೦). ೪. ನಾಶ ಮಾಡು; ಧ್ವಂಸ ಮಾಡು: ಸೃಗಾಲನಂ ನೀಂ ಧುರದೊಳ್ ಪರಿಮರ್ದಿಸೆ ನಿನಗಚ್ಯುತ ದೊರೆಕೊಂಡಪುದವನ ಸೂರ್ಯದತ್ತವರೂಥಂ (ಜಗವಿ. ೮-೨೧).
[ಪರಿಮರ್ದನ+-ಇಸು$_3$]

**ಪರಿಮಲ,** ಪರಿಮಳ (ನಾ). ೧. ಕಂಪು; ಸುವಾಸನೆ; ಸೌರಭ: ಪರಿಮಲದರ ಪಟ್ಟೆಗಾರರ ತಾಂಬೂಲಿಗರ ಶಿಲ್ಪಿಗರ ಗಂಧಿಗರ . . . ಅಂಗಡಿಯಿರ್ಪವಲ್ಲಿ (ತ್ರೀಪಾಲ.೧-೭೯). **ಪರಿಮಳ**: ೧. "ಆಮೋದಃ, ಪರಿಮಳಃ, ಸೌರಭ್ಯಂ, ಸುಗಂಧಿತಾ-ಈ ೪ ಕಂಪು" (ಹಲಾಯು.೧೪-೭೭); ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು . . . ನನೆಯೊಳಗಣ ಪರಿಮಳದಂತಿದ್ದಿತ್ತು (ಬಸವ. ೧); ನಿಶ್ವಾಸಪವನನಿಂ ಪರಿಮಳಮಂ ಬೀಱುವ ವಧೂವರರಾಗವಿಷಯವಲ್ಲರಿ ಫಲಿತಮಾದುದು (ಜಗವಿ.೨-೫೨ ವ); ಪರಿಮಳಮನೆಣ್ದೆಸೆಗೆ ಬಿತ್ತರಿಸುವ ನನೆಗಣೆಗಳಿಂದೆ . . . ಖಂಡಿಸುವೆಂ (೧೧೪. ೭-೭೦); ಗರಳಾಂಬುಜದ ಪರಿಮಳಕೆ ಗರುಡನು ತುಂಬಿಯಾದರೆ ಸೇರುವುದಲೇ (ಕುವ್ಯಾದ್ರೋ. ೯-೪೪). ೨. (ಸುಗಂಧದ್ರವ್ಯವನ್ನು) ಅರೆಯುವುದು: "ಸಮ್ಮರ್ದಃ, ಪರಿಮಳಃ-ಈ ೨ ಮಿದಿವುದು" (ಹಲಾಯು. ೧೨೭-೮೪); "ಸಮ್ಮರ್ದವೆನೆ ಪರಿಮಳವೆನಲು ಮಿದಿವುದಕ್ಕು" (ಮಂಗರಾ. ೧೩೪-೩೪). ೩. ಸುಗಂಧದಿಂದ ಕೂಡಿದ ವಸ್ತು; ಸುಗಂಧವುಳ್ಳುದು: ಹಲವು ತರುಮರಾದಿಗಳಿದ್ದು ಸಿರಿಗಂಧದ ಸನ್ನಿಧಿಯಲು ಪರಿಮಳವಾಗವೆ (ಬಸವ. ೧೫೧). ೪. (ಅಲಂ) ಸುವಾಸನೆಯಿಂದ ಕೂಡಿರುವ ಹೂವು: ಕಬ್ಬಿನ ಬಿಲ್ಲ ಮಾಡಿ ಪರಿಮಳದಲ್ಲಿ ಅಂಬ ಮಾಡಿ ನಿಲ್ಲೋ ಬಲ್ಲಾಳೆ (ಅಪಚಂ. ೨೩-೯೭).

**ಪರಿಮಳದುದಕ**=ಸುಗಂಧಪೂರಿತವಾದ ಜಲ; ಸುವಾಸನೆಯಿಂದ ಕೂಡಿದ ನೀರು: ಮರುಗ ಮಲ್ಲಿಗೆ ಪಚ್ಚೆ ಮುಡಿವಾಳಕ್ಕೆ ಪರಿಮಳದುದಕವನೆಱೆದವರಾರಯ್ಯ (ಮಹಾದೇ. ಬ. ೧೦-೩). [ಸಂ.]

**ಪರಿಮಲಿತ,** ಪರಿಮಳಿತ (ಗು). ಸುವಾಸನೆಯಿಂದ ಕೂಡಿದ; ಸುಗಂಧಪೂರಿತವಾದ: ತಾರುಣ್ಯವತಿ ಅತಿಮಧುರಪುರುಷಾಯುತ ನಿಧುವನಪರಂಪರಾಪರಿಮಲಿ[ಪಾಠಾಂ.೪]ತಮಾದ ಶರೀರದ ಸಹಜಸುರಭಿಗಂಧಮುಂ ಗಂಧವಹಂಗೊಚ್ಚತಂಗುಡುವಂತಿರೆ ಲಚ್ಚೆಯಿಂದಿರೆ ಕಂಡು (ಚಂದ್ರಪ್ರ. ೮-೭೧ ವ). **ಪರಿಮಳಿತ**: ಪರಿಮಳಿತಸೌಂದರಂ ಬಂಧುರಗಂಧಂ . . . ಈ ಮರುವಂ ಕರ್ಣಾಳಮುವಿರೆ ಮರುಳಲ್ಲವೆ ಕುಸುಮನಿಚಯದೊಳ್ ಪಾಯ್ವಳಿಗಳ್ (ಆದಿಪು. ೧೧-೧೨೭); ಪರಿಮಳಿತ ಪವಮಾನನಾಡುಂಬೊಲನೊ ಚಂದ್ರಮನ ಹರವರಿಯೊ (ತಿಪರಂ. ೧-೬-೯); ಪರಿಮಳಿತಪುಷ್ಪಾಪಚಯದಿ ದಾಮವ ರಚಿಸಿ (ಚಿತ್ರಾಂಗ. ೪೧-೧೧೩೬). [ಸಂ.]

**ಪರಿಮಸಕ** (ನಾ). ಹೆಚ್ಚಾದ ರಭಸ,—ಆವೇಗ: ಉಬ್ಬಿದ ಮದಮುಖನ ಪರಿಮಸಕ ಮುಟ್ಟಿದುದು ಗಿರಿತರುವ್ರಜವ (ಕುವ್ಯಾಆ. ೧೦-೮).
[ಪರಿ$_3$+ಮಸಕ$_1$]

**ಪರಿಮಳ** 'ಪರಿಮಲ' ನೋ.

**ಪರಿಮಳಂಬೋಗು** (ಕ್ರಿ). ಸುವಾಸನೆ ಹೋಗು; ಸುಗಂಧವು ಇಲ್ಲವಾಗು: ಪರಿಮಳಂಬೋದ ಬಳಿಕರಲ್ಗಳಂ ಮುಡಿಪೂದೆ ಪರಿಕಿಪೊಡೆ ನಾಡೆ ಧನಮಿಲ್ಲದವರೊಡನೆ ನೆರೆದಿರ್ಪುದಲ್ತು ಬೆಲೆವೆಣ್ಗೆ (ತ್ರಿಷಷ್ಟಿ. ೩೪-೧೫೨).
[ಪರಿಮಳ (=ಪರಿಮಲ)+ಪೋಗು$_1$ (<ಪೋ$_1$)]

**ಪರಿಮಳಕಟ್ಟು** (ಕ್ರಿ). ಸುಗಂಧದ್ರವ್ಯವನ್ನು ಸೇರಿಸು,—ಬೆರಸು; ವಾಸನೆ ಕಟ್ಟು: ರುಚಿಪ್ರದವಾಗಿರುವುದೇ ಪರಿಮಳಕಟ್ಟಿದ ಅಡಿಕೆಯ ಗುಣ (ಸಕವ್ಯ. ೬೩). [ಪರಿಮಳ (=ಪರಿಮಲ)+ಕಟ್ಟು$_1$]

**ಪರಿಮಳಗೊಳಿಸು** (ಕ್ರಿ). ಕಂಪುಗೊಳಿಸು; ಸುಗಂಧಿತವಾಗುವಂತೆ ಮಾಡು: ಬೊಗಸೆಯೊಳಿರೆ ಹೂವು ಕೈಗಳನೆರಡನು ಪರಿಮಳಗೊಳಿಸುವುದಲ್ತೆ (ಇಂಚಾಪ. ೬೯-೩೩).
[ಪರಿಮಳ (=ಪರಿಮಲ) + ಕೊಳ್$_1$ + -ಇಸು$_3$]

**ಪರಿಮಳದಳೆ** (ಕ್ರಿ). ಸುವಾಸನೆಯನ್ನು ಹೊಂದು; ಸುಗಂಧವನ್ನು ಪಡೆ: ಕಳಮಕ್ಷೇತ್ರದಿಕ್ಕೆಲದಲ್ಲಿ ಪರಿಮಳದಳೆದ ನೀಲಾಬ್ಜವ ಕಿತ್ತು (ಮೋಹತ. ೫-೨೮). [ಪರಿಮಳ (=ಪರಿಮಲ)+ತಳೆ$_1$]

**ಪರಿಮಳದಿರುಕ** (ನಾ). ಪರಿಮಳವನ್ನು ಆಯ್ದು ಸಂಗ್ರಹಿಸುವಂತಹುದು; ಭ್ರಮರ; "ತುಂಬಿ" (ಚತುನಿ. ೬. I, ೨೭).
[ಪರಿಮಳ (=ಪರಿಮಲ) + ತಿರುಕ (<ತಿರಿ$_1$)]

**ಪರಿಮಳದ್ರವ್ಯ** (ನಾ). ಸುಗಂಧದಿಂದ ಕೂಡಿದ ವಸ್ತು; ಸುವಾಸನೆಯನ್ನು ಉಂಟುಮಾಡುವ ಪದಾರ್ಥ; ಸುಗಂಧದ್ರವ್ಯ: ಪರಿಮಳದ್ರವ್ಯಗಳು ಪರನಾಡುಗಳಿಗೆ ಹೋಗುವವು (ಮುಂಬಯಿ.೮-೧೫೭);

ಪರಿಮಳದ್ರವ್ಯಗಳು, ಹಸನಾಗಡ ರೇಷ್ಮೆ, ತವರ (ಭೂಗೋಳ. ೯೫).
[ಪರಿಮಳ (=ಪರಿಮಲ)+ದ್ರವ್ಯ]

**ಪರಿಮಳಮೃಗ** (ನಾ). ಸುಗಂಧದ್ರವ್ಯವನ್ನು ಹೊಂದಿರುವ ಒಂದು ಬಗೆಯ ಜಿಂಕೆ; ಕಸ್ತೂರಿಮೃಗ: ಶೈತ್ಯ ಸೌರಭ್ಯ ಮಾಂದ್ಯ ಮೆಂಬ ತ್ರಿವಿಧಮದಸನ್ನುದ್ಧ ವಾದ ಪನ್ನೀರು . . . ದಿವ್ಯಮೂಲ ಪರಿಮಳಮೃಗ ಕರ್ಪೂರವೃಕ್ಷ ಹಿಮಾದಿ ಸಂಪರ್ಕದಿಂ . . . ಅಪೇಕ್ಷಣೀಯ ಪರಿಗಿರ್ಕೆಂ (ವಿವೇಕ. ೨೨೮). [ಪರಿಮಳ (=ಪರಿಮಲ)+ಮೃಗ]

**ಪರಿಮಳವಂತ** (ನಾ). ಸುಗಂಧದಿಂದ ಕೂಡಿದುದು: ಪರಿಮಳ ವಂತಮಪ್ಪ ತರುಗುಲ್ಮಲತಾಳಿಯ ಪೂಗಳೆಲ್ಲಮಂ ಸರಭಸದಿಂದೆ ತಂದು ವರಯೋಗಿಯುಗಾಂಘ್ರಿಸರೋಜಯುಗ್ಮಮಂ . . . ಪೂಜಿಸಿ (ಮಹಾನೀ. ೨-೨೫). [ಪರಿಮಳ (=ಪರಿಮಲ)+-ವಂತ]

**ಪರಿಮಳವಾರಿ** (ನಾ). ಸುಗಂಧದ್ರವ್ಯವನ್ನು ಬೆರಸಿದ ನೀರು; ಪನ್ನೀರು: ಪರಿಮಳವಾರಿಯಿಂ ಜಳಕಮಪ್ಪಗಿಪ . . . ದಿವ್ಯಚಾಮರಮನೆ ಬೀಸುವಗ್ಗದ ವಿದಗ್ಧೆಯರೊಪ್ಪಿರೆ ದೇವಿ ರಂಜಿಪಳ್ (ರಾಜಶೇ. ೪-೪೧).
[ಪರಿಮಳ (=ಪರಿಮಲ)+ವಾರಿ$_2$]

**ಪರಿಮಳವಾಸ** (ನಾ). ವಾಸನೆ ಕಟ್ಟಿದ ಬಟ್ಟೆ; ಸುಗಂಧದಿಂದ ಆವೃತವಾಗಿರುವ ವಸ್ತ್ರ: ಪರಿಮಳವಾಸದೊಳಗೆ ಮುಖ ಮೈ ಬಡಿ ತೊರೆಸಿ . . . ಪರಿಹರಿಪುದು ಪಥಶ್ರಮವ (ಕಂಸವಿ. ೬-೧೩೬).
[ಪರಿಮಳ (=ಪರಿಮಲ)+ವಾಸ$_2$]

**ಪರಿಮಳವೆರೆ** (ಕ್ರಿ). ಸುವಾಸನೆಯಿಂದ ಕೂಡು; ಸುಗಂಧದಿಂದ ಆವೃತವಾಗಿರು: ಪರಿಮಳವೆರೆದಿಂಪಿನ ದಿವ್ಯಪುಷ್ಪವ ಪರಿಕೊಂಡತಿಹರುಷ ದಲಿ ಸರಗಟ್ಟಿ ಬೆಲೆಗೆ ಮಾಜುವ ಮಾಲೆಗಾತಿಯರಿರವ ನಾನೇನ ಬಣ್ಣಿಪೆನು (ಕಂಸವಿ. ೨-೮೬). [ಪರಿಮಳ (=ಪರಿಮಲ)+ಬೆರೆ$_1$]

**ಪರಿಮಳವೆಱು** (ಕ್ರಿ). ಸುವಾಸನೆಯನ್ನು ಪಡೆ; ಸುಗಂಧವನ್ನು ಹೊಂದು: ನೆಲದೆ ನಿಡುವೇಣಿನೊಳು ಪರಿಮಳವೆತ್ತು ರಂಜಿಪ ಮುಡಿ ವಾಳವಸರವೊಪ್ಪಿದುವು (ಮೋಹತ. ೩-೧೬); ಕಡುಪರಿಮಳವೆತ್ತಿಹ ಜಾಜಿ ಸಂಪಗೆಯು ಮೊತ್ತದ ಪೂಮಾಲೆಯೋಲಗಶಾಲೆಯ ಸುತ್ತಲೊಪ್ಪಿದುವಶೋ ಕುಲಿ (ಕಂಸವಿ. ೮-೧೦). [ಪರಿಮಳ (=ಪರಿಮಲ)+ಪೆಱು$_1$]

**ಪರಿಮಳವೊಗು** (ಕ್ರಿ). ಸುಗಂಧವನ್ನು ಹೊರಸೂಸು; ಸುವಾಸನೆ ಯನ್ನು ಚೆಲ್ಲು,—ಬೀರು: ಅಂಗನೆಯರು . . . ಮುಗುಳಂಬನ ಮುಡಿಗಮರಿದ ಪರಿಮಳವೊಗುವ ಪೂದೊಂಬೆಯಂತಿಹರು (ಕಂಸವಿ. ೬-೯೯). [ಪರಿಮಳ (=ಪರಿಮಲ)+ಒಗು$_1$]

**ಪರಿಮಳಶಾಳಿ** (ನಾ). ಒಂದು ಬಗೆಯ ಸುಗಂಧಪೂರಿತವಾದ ಬತ್ತ,—ಸುವಾಸನೆಯಿಂದ ಕೂಡಿರುವ ನೆಲ್ಲು; ಗಂಧಶಾಲಿ: ಶಾಳಿಗಳಂ ಬಹುಪರಿಮಳಶಾಳಿಗಳಂ ನಿಕಟಕುಮುದಸೌಗಂಧ್ಯಕೃತಾ ಶಾಳಿಗಳಂ ರುಚಿನಿಚಿತದಿಶಾಳಿಗಳಂ ಬೆಳೆವ ನೆಲನೆ ಪೊಲನಾ ನೆಲದೊಳ್ (ಪುಷ್ಪದ. ೨-೧೪). [ಪರಿಮಳ (=ಪರಿಮಲ)+ಶಾಳಿ (=ಶಾಲಿ$_2$)]

**ಪರಿಮಳಾಂಬು** (ನಾ). =ಪರಿಮಳವಾರಿ: ಸುದತಿಯರಾ ಯುವತಿಗೆ ಮಾಡಿದರೊಲವಿಂ ಪರಿಮಳಾಂಬುವಿಂ ಮಜ್ಜನಮಂ (ರಾಜಶೇ. ೮-೧೨).
[ಪರಿಮಳ (=ಪರಿಮಲ)+ಅಂಬು$_3$]

**ಪರಿಮಳಿತ** 'ಪರಿಮಲಿತ' ನೋ.

**ಪರಿಮಳಿಸು** (ಕ್ರಿ). ಸುವಾಸನೆಯಿಂದ ಕೂಡಿರು; ಸುಗಂಧಪೂರಿತ ವಾಗಿರು: ಹಾಲು ಕಾಯವೂ ಪರಿಮಳಿಸವೋ ಹಾಲು ಕಡು ಬಿಸಿ ಯಾದವೋ (ಬಸವ. ೧೪-೮); ಒಗುವ ನಶ್ವಾಸದಲಿ ದಶದಿಕ್ಕುಗಳು ಪರಿ ಮಳಿಸುವವು (ತೊರವೆ. ೩-೮-೫೫); ಪರಿಮಳಿಸುವ ಸೇವಂತಿ ವರಪಾರಿಜಾತ ನಂದ್ಯಾವರ್ತ ಮೊದಲಾದರಲೊಪ್ಪಿದುವು ಬನದೊಳಗೆ (ಕಂಸವಿ. ೫-೯೯).

[ಪರಿಮಳ (=ಪರಿಮಲ)+-ಇಸು$_1$]

**ಪರಿಮಳಿಸುಹ** (ನಾ). ಸುವಾಸನೆಯಿಂದ ಕೂಡಿರುವುದು; ಸುಗಂಧಪೂರಿತವಾಗಿರುವುದು: ಶೀಲುಹ, ಪರಿಮಳಿಸುಹ . . . ಎಂಬಿವು ವಿಷಯಂಗಳು (ನಾಚಿರಾ. ೬).
[ಪರಿಮಳಿಸು+-ಹ$_2$ (<-ಪ$_2$)]

**ಪರಿಮಳೋದಕ** (ನಾ). =ಪರಿಮಳವಾರಿ: ಮಜ್ಜನದ ಮನೆಗೆ ಬಿಜಯಂಗೆಯ್ದು . . . ಪರಿಮಳೋದಕದಿಂ ಮಜ್ಜನಂಮಾಡಿ (ಸಂಬಿರ. ೧೦-೩೩). [ಪರಿಮಳ (=ಪರಿಮಲ)+ಉದಕ$_2$]

**ಪರಿಮಾಣ** (ನಾ). ೧. ಅಳೆಯುವುದು; ಅಳತೆ ಮಾಡುವುದು. ೨. ಅಳತೆ; ಪ್ರಮಾಣ: ತದ್ಗ್ರಹದಾಯುಷ್ಯದ ಪರಿಮಾಣಮೆ ತದ್ದತಾ ಪ್ರಮಾಣಮೆನಿಕ್ಕುಂ (ಜಾತಕ. ೯-೧); ನಿರಾವರಣಗಗನದೇಶಸ್ಥಿತಾವ ಧೃತಪ್ರಕಾಶಪರಿಮಾಣಪ್ರದೀಪಕ್ಕೆ ಶರಾವಮಾನಿಕಾವರಕಾದ್ಯಾವರಣ ವಶದಿಂ ತತ್ಪರಿಮಾಣತೆಯೆಂತಂತೆ . . . ಏಕತ್ವಮುಂಟು (ತತ್ತ್ವಪ್ರ. ೨೩೮); ಅಸಮಾನತೆಯೊಳ್ ನೆಲಸಿರ್ಪುದು ನಿಶ್ಚಿತನಾಮಂ ಪಂಚವರ್ಣಕೃತ ಪರಿಮಾಣಂ (ಶಮದ. ೭೬). ೩. ಮೊತ್ತ; ಗಾತ್ರ: ಬಹು ಹೆಚ್ಚಿನ ಪರಿಮಾಣದ ಚಿನ್ನವನ್ನು ಕಾವಲುನಿಧಿಯಾಗಿ ಮಾಡಿ ವ್ಯರ್ಥ ಮಾಡುವುದೇ ರೂಢಿ (ಹಣಪ್ರ. ೧೭೬). ೪. ಭಾರ; ತೂಕ: ಶಾಣಮೆಂದು ನಿಕಷಮುಂ ಪರಿಮಾಣಮುಮೆರಡುಂ (ವಸ್ತುಕೋ. ೧೨೫-೪೪). ೫. =ಪರಿಮಾಣ ಪರಿಗ್ರಹವ್ರತ: ಕಡುಮೋಹಮೊತ್ತಿ ಪುಗಲೆಂದೊಡರಿಸೆ ಪರಿಮಾಣ ಮೆಂಬ ಸುವ್ರತದೊಳ್ಪಂ ಪಡಿಮಾಡಿ ಕೆತ್ತು ನಿಲ್ವುದು (ಜೀವಸಂ. ೧೫೫-೯). [ಸಂ.]

**ಪರಿಮಾಣತೆ** (ನಾ). ಅಳತೆ; ಪರಿಮಾಣ: ನಿರಾವರಣಗಗನದೇಶ ಸ್ಥಿತಾವಧೃತಪ್ರಕಾಶಪರಿಮಾಣಪ್ರದೀಪಕ್ಕೆ ಶರಾವಮಾನಿಕಾವರಕಾದ್ಯಾ ವರಣವಶದಿಂ ತತ್ಪರಿಮಾಣತೆಯೆಂತಂತೆ . . . ಏಕತ್ವಮುಂಟು (ತತ್ತ್ವಪ್ರ. ೨೩೮). [ಸಂ. ಪರಿಮಾಣತಾ]

**ಪರಿಮಾಣಪರಿಗ್ರಹವ್ರತ** (ನಾ). [ಜೈನ] ಆವಶ್ಯಕತೆಗೆ ತಕ್ಕಷ್ಟು ಮಾತ್ರ ವಸ್ತುಗಳನ್ನು ಹೊಂದಿರಬೇಕೆಂಬ ವ್ರತ: ಇದೆ ಕುಪ್ಯ ನಿವೇಶನ ಧನ ವರಧಾನ್ಯ ಕ್ಷೇತ್ರಮುಖ್ಯಮೆಂಬಿವು ಪವಣಿಂದಿರದೇಱಿಸು ವುದು ಮತ್ತಂ ಪರಿಮಾಣಪರಿಗ್ರಹವ್ರತಕ್ಕತಿಚಾರಂ (ಸುಕುಮಾ. ೬-೧೭).
[ಪರಿಮಾಣ+ಪರಿಗ್ರಹ+ವ್ರತ]

**ಪರಿಮಾಣವಾಚಕ** (ಗು). ೧. ಪ್ರಮಾಣವನ್ನು ಸೂಚಿಸುವ: ಕೆಲವು, ಪಲವು ಎಂಬ ಪರಿಮಾಣವಾಚಕ ಶಬ್ದಗಳು ಬಹುತ್ವವನ್ನು ಸೂಚಿಸುವುದರಿಂದ ಅವುಗಳ ಪುಂಸ್ತ್ರೀರೂಪಗಳನ್ನು ಬಹುವಚನದಲ್ಲಿ ಮಾತ್ರ ನೋಡಬಹುದು (ಕೈಪಿಡಿ. ೩೪). (ನಾ). ೨. ಪ್ರಮಾಣವನ್ನು ಸೂಚಿಸುವುದು: ಹಲವು, ಎಲ್ಲವು ಮೊದಲಾದುವೂ ಇದೇ ಬಗೆಯ ಗುಣವಾಚಕಗಳು. (ಇವನ್ನು ಪರಿಮಾಣವಾಚಕಗಳೆಂದು ಕರೆಯುವು ದುಂಟು) (ಮಧ್ಯಮ. ೨೭). [ಪರಿಮಾಣ+ವಾಚಕ]

**ಪರಿಮಾಣವ್ರತ** (ನಾ). =ಪರಿಮಾಣಪರಿಗ್ರಹವ್ರತ: ಇನಿಚಱುಂದ ಗ್ಗಳಂ ಮಾಡೆನೆಂಬ ಪರಿಮಾಣ(ಕಾಮ?)ವ್ರತಮಂ ಕೆಯ್ಕೊಂಡು ನೆಗೞದ ಗೃಹಸ್ಥನ ಮೇಗೆಯುಂ . . . ಮೋಹರಾಜನುಂ ಪರಿಯದೇಕಿರ್ಪಂ (ಜೀವಸಂ. ೧೫೫-೧೩). [ಪರಿಮಾಣ+ವ್ರತ]

**ಪರಿಮಾಣಿಸು** (ಕ್ರಿ). ಅಳತೆ ಮಾಡು; ಪ್ರಮಾಣವನ್ನು ಕಂಡು ಹಿಡಿ: ಆ ಲಿಂಗದ ವೃತ್ತಮಂ ಬಳಸಿ ಸೂತ್ರದಿಂದಳೆದಾ ಸೂತ್ರಮಂ ಗೋಮುಖದ ತುದಿಗೆ ಲಿಂಗದ ಮಸ್ತಕಕ್ಕೆ ಪಿಡಿದು ಸರಿಗೊಂಡು ಮೇಲಾ ಸೂತ್ರದಿಂ ಶಕ್ತಿಯಥಃಪೀಠಮಂ ಪರಿ[ಪಾಠಾಂ. ಪ್ರ]ಮಾಣಿಸಿ (ವಿವೇಕ. ೧೦೧); ಅಳತೆ ಮಾಡು; ಪರಿಮಾಣವಾಗಿ, ಮೊತ್ತವಾಗಿ,—

ನಿರೂಪಿಸು ; ಪರಿಮಾಣಿಸು (Quantify. ಇಂಕನಿ).
[ಪರಿಮಾಣ + -ಇಸು$_3$]

**ಪರಿಮಾರ್ಜನ** (ನಾ). ೧. ಶುದ್ಧಿಗೊಳಿಸುವಿಕೆ ; ಸ್ವಚ್ಛಗೊಳಿಸುವಿಕೆ. ೨. ನಿವಾರಣೆ; ಪರಿಹಾರ : ಘೋರತರಸಂಸಾರರೋಗಕ್ಕೆ ಲಕಿತ ಭೇಷಜಮವನ ತಾಳಿಕನ್ನಸ್ತ ದುರ್ವರ್ಣತತಿಪರಿಮಾರ್ಜನಂ (ಅರಾಚ. ೧-೧೨-೭) ; ನನ್ನ ದುಷ್ಕೃತ್ಯದ ಪರಿಮಾರ್ಜನವನ್ನು ಮಾಡಿಕೊಳ್ಳಲು ಕೊಂದುಕೊಳ್ಳದ ಹೊರತು ನನಗೆ ದಾರಿಯಿಲ್ಲದಾಯಿತು (ಮೊಪಾಸಾ. ೮೦); ವೈಮನಸ್ಯವಿರಲಿ, ಆಗೀಗ ರಣಗರ್ಜನ. ಆದಕಿಹುದು ಪರಿಮಾರ್ಜನ (ಚಿಂತನ. ೬೮-೪). ೩. ರದ್ದುಮಾಡುವುದು ; ತೆಗೆದುಹಾಕುವುದು : ಪ್ರಿವಿಕೌನ್ಸಿಲ್ ಅಧಿಕಾರವ್ಯಾಪ್ತಿ ಪರಿಮಾರ್ಜನ ಅಧಿನಿಯಮವನ್ನು ಬಿಟ್ಟು ಉಳಿದ ಸಮಸ್ತ ಅಧಿನಿಯಮಗಳನ್ನೂ ಈ ಮೂಲಕ ನಿರಸನ ಮಾಡಲಾಗಿದೆ (ಭಾಧಾನ. ೨೪೧). ೪. ಜೇನುತುಪ್ಪದಿಂದ ತಯಾರಿಸಿದ ಒಂದು ಬಗೆಯ ಭಕ್ಷ್ಯ ; ಮಧುಮಸ್ತಕ.
[ಸಂ.]

**ಪರಿಮಾರ್ಜನೆ** (ನಾ). ೧. ನೀರನ್ನು ಚಿಮುಕಿಸುವುದು. ೨. ನಿವಾರಣೆ ; ಪರಿಹಾರ : ಆತ ಎಲ್ಲರ ಸಮಕ್ಷಮವಾಗಿ ಅನ್ಯಾಯ ಪರಿಮಾರ್ಜನೆಗೆ ಮೊರೆಯಿಡುತ್ತಾನೆ (ಗಾಳಿಪ. ೧೫೦); ಇದು ನಾನು ನಿನಗೆ ಮಾಡಿದ ಹಾನಿಯ ಪರಿಮಾರ್ಜನೆಯೆಂದು ತಿಳಿಯಬೇಡ (ಜಯಂತ. ೩೦೭).
[ಸಂ. ಪರಿಮಾರ್ಜನ]

**ಪರಿಮಿತ** (ಗು). ೧. ಅಳತೆಮಾಡಿದ ; ಅಳೆದ. ೨. ಮೇರೆಯುಳ್ಳ ; ಸೀಮಿತವಾದ; ಎಲ್ಲೆಯನ್ನು ಹೊಂದಿದ: ಪರ್ಯಟನಂ ತಾನೀರ್ಯಾಚರ್ಯಾರ್ಥಂ ಪರಿಮಿತಪ್ರತಿಷ್ಠಿತನಿಯಮಂ(ಪಸ್ತು ಕೋ. ೫೮-೩೬);ಅಂಬುಧಿವ್ರಜಪರಿಮಿತಾವನೀತಳದೊಳಾಡಂಬರದ ಕೀರ್ತಿಯಂ ತಳೆದ ನಾನಾ ಮುನಿಕದಂಬಾಧಿನಾಥ ವಿಶ್ವಾಮಿತ್ರಮುನಿಸುತೆಯರಂ . . . ಹರಿಶ್ಚಂದ್ರರಾಯಂ ತಂದನೆಂಬೊಂದು ತೇಜಮಂ ಕೊಡಬೇಹುದೆನಗೆ (ಹಚಕಾ. ೮-೩೦); ಪರಿಮಿತಯೋಗಯೋಗ್ಯತರಮಪ್ಪ ನದೀನದಮಧ್ಯಶೈಲಶೇಖರ ಶಿಲೆಯೊಳ್. . . ಇರ್ದು ಯೋಗಮಂ ನಿರವಿಸಿ (ಅನಂಪು. ೯-೧೧೩); ಪರಿಮಿತಾಕ್ಷರತತಿಯೊಳಪರಿಮಿತಾರ್ಥ ರಚನೆಯಲಿ ವಿರಚಿಸುವುದದು ಕವಿಯ ಚತುರತೆ (ಬಸಪು. ೧-೨೨). ೩. ಮಿತವಾದ ; ಹೆಚ್ಚಿಲ್ಲದ : ಭಾರತೀಪತಿ ಚತುರಪರಿಮಿತೋದಾರಗಂಭೀರಭಾಷಿತಂಗಳಿಂ ಬಿನ್ನಪಂಗೆಯ್ಯೆ (ಜಗವಿ. ೧-೬೬ವ); ಪರಿಮಿತ ವಾಜಿವಾರಣಪದಾತಿವರರೂಥಕದಂಬಕಾಮಿನೀಪರಿಚಿತ ರಾಜಪುತ್ರನಿಚಯಂ . . . ಈಕ್ಷಿಸುತ್ತೆ ಬರೆ (ಅನಂಪು. ೧೧-೪೦); ಪರಿಮಿತಪುರೋಹಿತಸಚಿವಹಿತಪರಿಕರಾವೃತನಾಗಿ ನಡೆತಂದು (ಬಸಪು. ೫-೫೨). ೪. ಹೊಂದಿಸಿದ ; ಜೋಡಣೆ ಮಾಡಿದ. (ನಾ). ೫. ಮೇರೆಯನ್ನು ಹೊಂದಿರುವುದು ; ಸೀಮಿತವಾದುದು : ನಿರುಪಮದಿಂದಂ ಪರಿಮಿತಮಪ್ಪಂತಿರೆ ಯತಿ ಋತುನಿಯತಂ ಬರೆ ತರಳಾಕ್ಷೀ ಧರೆಯೊಳದಿತ್ತಂ ಕರಮೆಸೆವಕ್ಕರಿಕೆ (ಛಂದೋಂಬು. ೫-೨೫೪); ಮಾನವನ ಇತಿಹಾಸದಲ್ಲಿ ಸಂಸ್ಕೃತಿಗಳ ಆಯುಸ್ಸೂ ಚಕ್ರಾತ್ಮಕ ಮತ್ತು ಪರಿಮಿತ (ಬುಕ್ಸಾರ. ೯೬ ಪೀಠಿಕೆ); ನಮ್ಮ ಶಕ್ತಿಗಳು ಪರಿಮಿತ (ಜೀಪಾತ್ಮ. ೫೨). ೬. ಮಿತವಾಗಿರುವುದು ; ಹೆಚ್ಚಾಗದಿರುವುದು : ಹಿತವನಾಗಿಯೆ ಬಂದು ನೀ ಪರಿಮಿತದಿ ಹೇಳಿದಡಾನು ಕೇಳುವೆ (ಕೌಶರಾ. ೧೪-೪೭); ಮೇಲೆ ಸಂತೈಸಿದನು ಧರ್ಮನೃಪಾಲನಲ್ಲಿಂ ಬಳಿಕ ಮುರಹರನಾಲಯಕೆ ಪರಿಮಿತದೊಳರ್ಜುನನೆನ್ನ ಕರೆಸಿದನು (ಕುವ್ಯಾಉ. ೫-೪). ೭. (ರಹಸ್ಯಸಮಾಲೋಚನೆಗೆ) ಮಿತವಾದ ಸಂಖ್ಯೆಯಲ್ಲಿ ಸೇರುವುದು : ಪರಿಮಿತಕೆ ತನ್ನಾಪ್ತಸಚಿವರ ಕರೆಸಿಕೊಂಡನು (ಕುವ್ಯಾಉ. ೧೧-೩೦); ಪರಿಮಿತಾಲಯಕೆಯ್ದಿ ಪರವಮಾನಂದಲೀಲೆಯಲಿ . . . ಭಕ್ತಿಯುಕ್ತಾದರಣೆಯಿಂನು ಕೈಕೊಳುತಲಿರ್ದನು (ಪ್ರಭುಲೀ. ೧೬-೨). ೮. [ಗಣಿತ] ಒಂದು ದೊಡ್ಡ ಸಂಖ್ಯೆ : ಏಕ್ಯಂ, ದಾಹಂ . . . ಪರಿಮಿತ, ಮಹಾಪರಿಮಿತ ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೮); ಸಾಗರ ಮಹಾಸಾಗರ ಪರಿಮಿತ ಮಹಾಪರಿಮಿತ . . . ಇವು ೩೨ ವುಭಡಣೆ ಹೆಸರುಗಳು (ಭಾಸ್ಕರ. ೧೨-೧).
[ಸಂ.]

**ಪರಿಮಿತಪರಿಗ್ರಹ** (ನಾ). = ಪರಿಮಾಣಪರಿಗ್ರಹವ್ರತ : ಕೊಲ್ಲದ ಪುಸಿಯದ ಕಳ್ಳದ ಸ್ವದಾರಸಂತೋಷಂ ಪರಿಮಿತಪರಿಗ್ರಹ ಮಿಂತಯ್ದುಮಣುವ್ರತಂಗಳಂ ಕೊಂಡಿಂ (ಸಡ್ಡಾರಾ. ೨೨-೧೭).
[ಪರಿಮಿತ + ಪರಿಗ್ರಹ]

**ಪರಿಮಿತವೃಷ್ಟಿ** (ನಾ). ಮಿತವಾಗಿ ಬರುವ ಮಳೆ; ಹೆಚ್ಚು ಕಡಮೆಯಿಲ್ಲದೆ ಸಾಧಾರಣವಾಗಿ ಬರುವ ಮಳೆ : ಪರಿಮಿತವೃಷ್ಟಿ ಭಾಗ-ಇಲ್ಲಿ ೪೦ರಿಂದ ೮೦ ಅಂಗುಲಗಳವರೆಗೂ ಮಳೆ (ಭೂವಿನ. ೨೫೩).
[ಪರಿಮಿತ + ವೃಷ್ಟಿ]

**ಪರಿಮಿತಾಯು** (ನಾ). ೧. ದೀರ್ಘವಲ್ಲದ ಆಯುಷ್ಯ ; ಅಲ್ಪಾಯುಷ್ಯ. ೨. ಅಲ್ಪಕಾಲದ ಆಯುಷ್ಯವನ್ನುಳ್ಳವನು ; ಅಲ್ಪಾಯುಷಿ : ಮನುಷ್ಯರ್ಪರಿಮಿತಾಯುಗಳಪ್ಪುದಱಿಂದ ಧರ್ಮಾರ್ಥಕಾಮಂಗಳನೊಡನೊಡನೆ ದೇಶಕಾಲಬಲೋಪಾಯದಿಂ ಸೇವಿಸುಗೆ (ಮುದಾ. ೧-೫೪ ವ).
[ಪರಿಮಿತ + ಆಯು$_2$]

**ಪರಿಮಿತಿ** (ನಾ). ೧. ಅಳತೆ ; ಪ್ರಮಾಣ. ೨. ಎಲ್ಲೆ ; ಮಿತಿ ; ಸೀಮೆ : ಕನ್ನಡದ ಉಪಭಾಷಾಪರಿವೀಕ್ಷಣೆಯನ್ನು ನನ್ನ ಪರಿಚಯದ ಪರಿಮಿತಿಯಲ್ಲಿ ನಡೆಸಿದ್ದೇನೆ (ದ್ರಾವಿ. ೩೮೩); ಈ ಹಿಂದುಮುಂದಿನ ಪರಿಮಿತಿಗಳಲ್ಲಿ ಹಿಂದಿನದು ನಿಶ್ಚಿತ, ಮುಂದಿನದು ಅನಿಶ್ಚಿತ (ಸಾಹಿಸ. ೧೫೨).
[ಸಂ.]

**ಪರಿಮಿತಿಗೊಳಿಸು** (ಕ್ರಿ). ಸೀಮಿತಗೊಳಿಸು ; ಮಿತಿಗೊಳಿಸು : ಭಾವಗೀತೆಯಾದರೋ . . . ತನ್ನ ಎಲ್ಲೆಯನ್ನು ಅಲ್ಲಿಗೆ ಪರಿಮಿತಿಗೊಳಿಸಿಕೊಳ್ಳುತ್ತದೆ (ಭಾಮಗೀ. ೧೪). [ ಪರಿಮಿತಿ + ಕೊಳ್$_1$ + -ಇಸು$_3$]

**ಪರಿಮಿಲಿತ,** ಪರಿಮಿಳಿತ (ಗು). ಸೇರಿದ; ಕೂಡಿದ: ಪರಮತತ್ವಕಳಾಪರಿಮಿಲಿ [ಪಾಠಾಂ.ಳಿ]ತ . . . ಪರಂಜ್ಯೋತಿಸ್ವರೂಪ ನಿರೂಪ ಚಿತ್ತೈಸು (ಬಸಪು. ೬೧-೪೫). **ಪರಿಮಿಳಿತ :** ಕಿನ್ನರಮಿಥುನಸುಖಪರಿಮಿಳಿತಗೀತಶ್ರವಣನನ್ನು ತಪುಳಿನಸುಪ್ತಮರಾಳವೆಸೆದುದು ಗಜಪುರೋದ್ಯಾನ (ಕುವ್ಯಾಉ. ೬-೨೭).
[ಸಂ.]

**ಪರಿಮಿಶ್ರ** (ನಾ). ಚೆನ್ನಾದ ಬೆರಕೆ,-ಮಿಶ್ರಣ : ಕುಂಕುಮಪರಿಮಿಶ್ರದ ನೀರಂ ಕರದಿಂ ಮೇಲೆ ಚೆಲ್ಲಿ (ಹರಿಮ್ಮಾರ. ೪-೨೫). [ಸಂ.]

**ಪರಿಮಿಶ್ರಿತ** (ಗು). ಚೆನ್ನಾಗಿ ಬೆರಕೆಯಾದ,-ಬೆರೆತ : ಕಡುಕೆಂಕಮಾದುದೊಂದೆಡೆ ನವಕುಂಕುಮದ್ರವದಿನರ್ವಿಪ ಕರ್ಪೂರದಿರ್ಪನಾಳ್ದುದೊಂದೆಡೆ ಪರಿಮಿಶ್ರಿತಾರ್ದ್ರ ಮಹಿಷೀರಸದಿಂ ಸರಸೀವಿಭಾಗದೊಳ್ (ಶಾಂತಿಪು. ೮-೨೯).
[ಸಂ.]

**ಪರಿಮಿಳಿತ** 'ಪರಿಮಿಲಿತ' ನೋ.

**ಪರಿಮುಕ್ತ** (ಗು). ಬಿಚ್ಚಿರುವ ; ಕಟ್ಟದಿರುವ : ಚಾಪಚ್ಯುತರನಪಗತವಾಹನರ ಪರಿಮುಕ್ತಕೇಶಿಗಳ ಗತಿವಿಹೀನರ . . . ಇಱಿವುದು ಧರ್ಮವೇ (ಕುವ್ಯಾಕ. ೨೩-೩೨).
[ಸಂ.]

**ಪರಿಮುತ್ತು** (ನಾ). ೧. ಆವರಿಸುವುದು : 'ಪರಿಮುತ್ತುಗೊಳ್' ಪರಾ. ೨. ಕಸಿದುಕೊಳ್ಳುವುದು ; ಸೆಳೆದುಕೊಳ್ಳುವುದು : "ಪರಿಮುತ್ತೆ[ತ್ತು]ಯೆನೆ ಸೆಳೆವುದಕ್ಕು" (ಕಬ್ಬಕ್ಕೈ. ೭೦) ; "ಕವರ್ದುದೀಱ್ದುದು ಸುಲಿದುದೆನಲು ಪರಿಮುತ್ತೆನಲವತರಂಕು ಸೆಳೆವುದಱ ಪೆಸರ್ಗೆ" (ಶಬ್ದಮಂ.೩೪).
[ಪರಿ$_2$ + ಮುತ್ತು$_2$]

**ಪರಿಮುತ್ತುಗೊಳ್** (ಕ್ರಿ). ೧. ಆವರಿಸು; ಆಕ್ರಮಿಸು; ಹಬ್ಬು : ಭೂಭುವನಮನಿತುಮಂ ಪರಿಮುತ್ತುಗೊಳ್ವ ಕತ್ತಲೆಯ ಭಯದಿಂ (ವರ್ಧಪು. ೬-೨೩ವ); ಅನುಪಮಸುಗಂಧಿವನಜಾನನಮಂ ಪರಿಮುತ್ತುಗೊಳ್ವ ತುಂಬಿಯು ರಕ್ಷಾವಿನಿಯೋಗಕ್ಕಿಕ್ಕಿದ ಕಾಂಚನಚಂಪಕಮಲ್ತೆ ಸತಿಯ ನಾಸಾಮುಕುಳಂ (ಪುಷ್ಪಪು. ೩-೪೯). ೨. ಮುತ್ತಿಗೆ ಹಾಕು; ಲಗ್ಗೆ ಹಾಕು : ಕಂದರ್ಪದೇವನಂ ಕಂಡು ಪರಿಮುತ್ತುಗೊಂಡು ಪೊಡರ್ವ ಕುಡುಪುರ್ವಿನಿಂ ಜಡಿದು(ಲೀಲಾವ. ೧೧-೮೮ವ); ಉಜಿದುದ್ವೃತ್ತರ... ದುರ್ಗಂಗಳಂ ಕುಜುಪಿಂದಂ ಪರಿಮುತ್ತುಗೊಂಡು ಪುರಮಂ ಕೆಯ್ಕೊಂಡು (ಪುಷ್ಪಪು. ೫-೫೧). ೩. ಸೋಲಿಸು; ತಿರಸ್ಕರಿಸು : ಕತ್ತರಿಸಿ ಚಂದ್ರಕಳೆಯುಂ ಪತ್ತಿಸಿದಂತೆಸೆವ ಸತಿಯ ಸುಲಿಪಲ್ಪೊಳಪಿಂ ಮುತ್ತಿನ ವಿಲಾಸಮಂ ಪರಿಮುತ್ತುಗೊಳಲ್ಕಾ[ಪಾಠಾಂ. ಗಳೊಳ್ಕಾ]ಲ್ದುದೆಂಬುದೊಂದಚ್ಚರಿಯೇ (ಮಲ್ಲಿಪು. ೩-೬೫). [ಪರಿಮುತ್ತು + ಕೊಳ್$_1$]

**ಪರಿಮುತ್ತೆ** (ನಾ). ಒಂದು ಬಗೆಯ ಹೂವು ; ಅದಿಮರ್ಯುತ್ತೆ ; "ವಸಂತದೂತಿಕೆ" (ಪ್ರಧಣ್ಣ). [ಪರಿ? + ಮುತ್ತೆ$_2$]

**ಪರಿಮೃತ** (ನಾ). ಸತ್ತು ಹೋದವನು ; ಮರಣ ಹೊಂದಿದವನು: ಪರಿಮೃತನಾದನೆ ವಿಶ್ರುತ ಬಹುಶ್ರುತೋದಾತ್ತಯಶಂ (ಸುಕುಮಾ. ೨-೧೨). [ಸಂ.]

**ಪರಿಮೃಷ್ಟ** (ನಾ). ಶುದ್ಧಮಾಡಿದುದು ; ಶುಭ್ರವಾದುದು : ಎಸೆವ ಶಶಿ ತಾರೆಗಳು ಕಾಂತಿಪ್ರಸರದಲಿ ಪರಿಮೃಷ್ಟವಾದುವು ದೆಸೆಗಳೆಂಟೇ ನೆಂಬೆನಚ್ಯುತನುದಯದುತ್ಸವದ (ಭಾಗ. ೧೦-೩-೩೧). [ಸಂ.]

**ಪರಿಮೇಯ** (ಗು). ೧. ಅಳೆಯಲ್ಪಡುವ. ೨. ಅಳೆಯಬೇಕಾದ. ೩. ಅತ್ಯಂತ ಅಲ್ಪವಾದ. ೪. [ಗಣಿತ] (ಮೊತ್ತ ಅಥವಾ ಪ್ರಮಾಣದ ವಿಷಯದಲ್ಲಿ) ಘಾತಮೂಲಚಿಹ್ನೆಗಳಿಲ್ಲದೆ ನಿರೂಪಿಸಬಹುದಾದ : ಸಮೀಕರಣಗಳ ಪರಿಮೇಯ (rational) ಮೂಲಗಳಲ್ಲಿ ಆಸಕ್ತಿ ಇದ್ದು, ದ್ವಿಘಾತದ ಸಾಮಾನ್ಯ ಅನಿರ್ಧಾರ್ಯ ಸಮೀಕರಣವನ್ನು ಸಂಪೂರ್ಣವಾಗಿ ಬಿಡಿಸುವುದರಲ್ಲಿ ಅವರು ಜಯ ಗಳಿಸಿದ್ದರು (ತತ್ವಪ್ರಾ. ೪೭೧). [ಸಂ.]

**ಪರಿಮೋಷ** (ನಾ). ಕಳ್ಳತನ; ಕಳವು. [ಸಂ.]

**ಪರಿಮೋಷಿ** (ನಾ). ಕಳ್ಳತನ ಮಾಡುವವನು ; ಕಳ್ಳ ; ಚೋರ: "ಏಕಾಗಾರಿಕಃ, ತಸ್ಕರಃ . . . ಪರಿಮೋಷೀ, ಪಾರಿಪಂಥಿಕಃ, ಸ್ತೇನಃ —ಈ ೧೦ ಕಳ್ಳಂ" (ಹಲಾಯು. ೫೬-೧೮೩); "ಪರಿಮೋಷಿ ದಸ್ಯು ... ತಸ್ಕರಂ ಮಲಿಮ್ಲುಚನೆನಿಪ್ಪನಕ್ಕುಂ ಸ್ತೇನಂ" (ವಸ್ತುಕೋ. ೬೫-೮೧). [ಸಂ. ಪರಿಮೋಷಿನ್]

**ಪರಿಮ್ಲಾನ** (ಗು). ೧. ಕಳೆಗುಂದಿದ ; ಕಾಂತಿಹೀನವಾದ : ಅರಸನರಸಿಯು ಪರಿಮ್ಲಾನಮುಖಕಮಲಮನತಿವಿಸ್ಮಯಸ್ಫಾರಿತ ವಿಲೋಚನನಾಗಿ ನೋಡಿ (ಮಲ್ಲಿಪು. ೪-೩). ೨. ಬಳಲಿದ ; ಆಯಾಸಗೊಂಡ : ಪರಿಮ್ಲಾನಸಖೀಮುಖಾಬ್ಜಮನಭೀಕ್ಷಿಪ ನಲ್ಲಳಪಾಂಗದಿಂಗಿತಂ ಮಾನಸದೊಳ್ತೊಡರ್ಚಿದುದು ತಣ್ಗೊಳದೊಳ್ ಜಳಕೇಳಿಯಾಂಪುದಂ (ರಾಜಶೇ. ೧೦-೬೦). ೩. ದುರ್ಬಲವಾದ ; ಬಲಗುಂದಿದ. [ಸಂ.]

**ಪರಿಮ್ಲಾನತೆ** (ನಾ). ೧. ಬಾಡಿರುವಿಕೆ; ಕಳೆಗುಂದಿರುವಿಕೆ : ಅಗಳಾಚಾರಧೂಪಗ್ರಹಣಾಂಜನಕ್ಲೇದಸಮಾಕುಲಾಕ್ಷಿಪರಿಮ್ಲಾನ (ತಾ) ಬೀಜಾಂಕು(ರೀಭೂತ)ರ. ಕರ್ಣಪೂರಪಾಟಳಗಂಡರೇಖಾಮುಖಮಂಡಳ ಜ್ಯೋತಿಃಪ್ರಭೆಯೊಂದು ಲೀಲಾಲಕ್ಷ್ಮೀಗಾವಾಸಮಾಗಿರೆ(ಶಾಂತಿಪು. ೬-೧೮ ವ). ೨. ಆಯಾಸ; ದಣಿವು; ಬಳಲಿಕೆ : ಪಥಿಕರ್ ಮಜಿದಿಲ್ಲೆನಲ್ ಪರಿಮ್ಲಾನತೆ ಸೈತು ಬಟ್ಟೆನಡೆಯಲ್ಪಡೆಯರ್ ವಿಷಯಾಂತರಾಳದೊಳ್ (ಮಲ್ಲಿಪು. ೨-೨೮); ಜಾನಕಿಯಿರ್ದ ಶೋಕೆಯ ಸಮೀಪದೋಳ್ . . . ಕುಜರಾಜಿಯನೋವದೆ ಕಿಟ್ಟನಿಲ್ಲ ರೂಕ್ಷಾನಿಲಪಾತದಿಂ ತಪನತಾಪದಿನಂದಿಕೆಗಗ್ಗಳಂ ಪರಿಮ್ಲಾನತೆಯುಕ್ಕುಮೆಂದುಬೆಸದಂ ಕೆಲವಂ ಪವನಂಜಯಾತ್ಮಜಂ (ಪಂರಾಮಾ. ೧೧-೧೨೮). [ಪರಿಮ್ಲಾನ + -ತೆ$_2$]

**ಪರಿಯ** (ನಾ). ಒಂದು ಬಗೆಯ ಮರ : ಪಾರಿಜಾತವು ಪರಿಯ ವೃಕ್ಷವು . . . ಕರಿಯ ಮಲ್ಲಿಗೆ ಪ್ರೇಮದೊಳ್ ವನಪೊಪ್ಪಿತು (ಗೋಹಾಡು. ೨೪). [?]

**ಪರಿಯಂಕ** (ನಾ). ೧. ಹಾಸುಗೆ; ಶಯ್ಯೆ : ವೇಸಿಯುಹ ಪರಿಯಂಕದಲಿ ನಿಜದಾಸಿಯುಹ ಶಿಶ್ರೂಷೆಯಲಿ ನಿರ್ದೋಷಿಯುಹ ಪತಿಭಕ್ತಿಯಲಿ ಮೋಹದಲಿ ತಾಯೆನಿಸಿ ಏಸು ಕಾರ್ಯಕೆ ಮಂತ್ರಿಯೆನಿಸುವ ಮೈಸಿರಿಯನುಳ್ಳವಳು ರಾಣೀವಾಸವೆಂದೆನಿಸುವಳು (ಕುಮ್ಯಾಉ. ೩-೮೦); ಅರುಣೋದಯದಲ್ಲಿ ರುಗುಮಿಣಿ . . . ಪರಿಯಂಕದಲ್ಲಿಯ ಶಿಶುವನು ಕಾಣದೆ ಪಿರಿದಲ್ಲಿ ಕಳವಳಿಸಿದಳು (ಕಾಮಕ. ೩-೧); ಭಾಳಲೋಚನನ ಸರ್ಪಾಭರಣಮಂ ನೀನು ಹರಿಯ ಪರಿಯಂಕವೆಂಬ ಬೀಳುಮಾತನು . . . ಕೇಳಿ (ಏಕೋಪು. ೧೩-೫). ೨. ಮಂಚ ; ಪಲ್ಲಂಗ : "ಶಯನಮಾ ಪರಿಯಂಕಮಾ ಶಯ್ಯೆಯೆನೆ ಮಂಚಮೆನಿಸಿಕ್ಕು" (ಮಂಗರಾ. ೬೦-೧೫); ಆಗಳೆಮ್ಮ ನುಡಿ ಪ್ರಮಾಣಮದಾಗೆ ಎಮ್ಮ ವಚನವೆ ಮೃದುತರಯೋಗವೇ ಪರಿಯಂಕಶೂಲವಿದಕ್ಕೆ ದೃಷ್ಟವಲಾ (ಬಸಪು. ೩೯-೬೧); ಸಾರಮಣಿಪರಿಯಂಕ ಪರಿಸಂಸ್ಕಾರದಲಿ ಮಲಗುವ ಮಹೀಪತಿ ನೀರೊಳಗೊಜಿಗುವನು (ಕುವ್ಯಾಗ. ೩-೪೦); ಪರಿಯಂಕರೂರ್ಜಿತ ಚೀತ್ಕೃತಂ . . . ಸುರುಚಿರೋಷ್ಠದ್ವಂದ್ವ ತಸ್ಸೀತ್ಕೃತಂ ಕರಮೊಪ್ಪಲ್ ಗಣಿಕಾಜನಂಗಳೊಲವಿಂ ಸಂಭೋಗಮಂ ತಾಳ್ದಿದರ್ (ತ್ರಿಪುವಿ. ೨೪-೧೮೧). ೩. ಪಲ್ಲಕ್ಕಿ ; ಮೇನೆ : "ಪರಿಯಂಕ-ಪರ್ಯಂಕ = ಮಂಚ, ಪಾಲಕಿ" (ತದ್ಭಕೋ. ೨೪). ೪. (ಅಲಂ) ವಾಹನ : ಹರಿಯ ಪರಿಯಂಕಮೆಂಬಂತೆ ಪತ್ರಾನ್ವಿತದಿ . . . ಪರಮಯೋಗೀಶರಂತತಿಶಾಂತಿಯಿಂದೊಪ್ಪುವೆತ್ತೊಂದು ವಟವೃಕ್ಷವು . . . ಎಸೆಯಲು (ನವಮೋ. ೮-೩೮). [<ಪ್ರಾ. ಪರಿಯಂಕ./ಸಂ. ಪರ್ಯಂಕ]

**ಪರಿಯಂತ** 'ಪರ್ಯಂತರ$_2$' ನೋ.

**ಪರಿಯಂತಂ** 'ಪರ್ಯಂತರ$_2$' ನೋ.

**ಪರಿಯಂತರ$_1$** 'ಪರ್ಯಂತರ$_1$' ನೋ.

**ಪರಿಯಂತರ$_2$** 'ಪರ್ಯಂತರ$_2$' ನೋ.

**ಪರಿಯಂತರಂ** 'ಪರ್ಯಂತರ$_2$' ನೋ.

**ಪರಿಯಂತ್ರ** 'ಪರ್ಯಂತರ$_2$' ನೋ.

**ಪರಿಯಟಣ** 'ಪರಿಯಟನ' ನೋ.

**ಪರಿಯಟನ,** ಪರಿಯಟಣ (ನಾ). ೧. ಚಲನೆ : ಪ್ರಾಣವಲ್ಲಭೆಯ ಲಲಾಟಪಟ್ಟದೊಳ್ ಚಾಮರದ ಕೋಮಲಪವನಪರಿಯಟನದಿಂ ಪರಿಪಾಟದಪ್ಪ[ಪ್ಪೆ] ಸುಳಿಗುರುಳೆಂಬ ತುಂಬಿಯ ಬಂಬಲಂ . . . ಪಂತಿಗೊಳಿಸುವಿನೆಗಂ (ಅನಂಪು. ೬-೬೯ ವ). ೨. ಸಂಚಾರ ; ತಿರುಗಾಟ ; ಅಲೆದಾಟ : ವಿಟನಂತೆ ಕಾಂತಾರತಲಸದ್ವಿಲಾಸಪರಿಯಟನ [ಪಾಠಾಂ. ಪರ್ಯಟನ]ದಿಂದೊಪ್ಪಿದುದು . . . ಮಹಾಧ್ವರತುರಂಗಮಂ (ಜೈಮಿಭಾ. ೨೫-೬). **ಪರಿಯಟಣ :** ೨. ಆ ಸಮಯದಲಿ ಬಂದನೊಬ್ಬನು ಭೂಸುರನು ಸಕುತೂಹಲನು ಬಹುದೇಶಪರಿಯಟಣಪ್ರವಾಸಾಭ್ಯಾಸಶಿಕ್ಷೆಯಲಿ (ಕುವ್ಯಾಆ. ೧೧-೨); ಲಂಕಾಪುರದ ಸಿರಿ ಸೇರಿರ್ದುದಾ ಶಾರ್ವರಿಯ ಪರಿಯಟಣ [ಪಾಠಾಂ. ಣಯನ, ಯಟನ] ಪ್ರಚಂಡ ಸುಮಾಲ್ಯವಂತಂಗೆ (ತೊರರಾ. ೧-೮-೨೫). [<ಸಂ. ಪರ್ಯಟನ]

**ಪರಿಯಟ್ಟು** (ಕ್ರಿ). ದಂಡೆತ್ತಿ ಹೋಗು (?) : ನಾಡ್ ಆಳಿ ನಿಜಮಿತ್ರನ್ ಪರಿಯಟ್ಟೆ (ಮೈಆರಿ. ೧೯೨೪. ೧೦೪-೨ ; ?). [ಪರಿ$_3$? + ಅಟ್ಟು$_2$]

**ಪರಿಯಣ** 'ಪರಿಯಾಣ₁' ನೋ.

**ಪರಿಯರ** 'ಪರಿಯಾರ' ನೋ.

**ಪರಿಯಷ್ಟಿ** 'ಪರ್ಯಷ್ಟಿ' ನೋ.

**ಪರಿಯಷ್ಟಿಗೆಯ್** 'ಪರ್ಯಷ್ಟಿಗೆಯ್' ನೋ.

**ಪರಿಯಳ** 'ಪರಿಯಾಣ₁' ನೋ.

**ಪರಿಯಾಣ**₁, ಪರಿಯಣ, ಪರಿಯಳ, ಪರಿವಾಣ, ಪರ್ಯಣ, ಪರ್ಯಾಣ₁, ಪರ್ಯಾಳ, ಹರಿಯಣ, ಹರಿಯಾಣ, ಹರಿವಣ, ಹರಿವಾಣ₁ (ನಾ). ೧. ತಟ್ಟೆ; ತಾಟು: ಆಗಳಾಗರ್ಭಸುಖಿಯ ಬೆನ್ನೊಳ್ ಪಿರಿಯ ಪರಿಯಾಣಮನಿಟ್ಟದಂ ತೆಕ್ಕನೆ ತೀವಿ ಬಡ್ಡಿಸಿದೊಡೆ (ಪಞ್ಚರಾ. ೬೪-೨೧); ದೇವರಾರೋಗಣೆಯ ಮಾಡಿದ ಮೇಲೆ ಮುಂದಿರ್ದ ಪರಿಯಾಣಮಂ ತೆಗೆದು ಇನ್ನೊಂದು ಪರಿಯಾಣಮಂ ತನ್ನಿ ಎಂಬ ಕಷ್ಟವ ನೋಡಾ (ಚನ್ನವ. ೪೨-೩); ಕನಕದಿಂ ಸಮೆದ ಪರಿಯಾಣದೊಳ್ ಮನವೊಸೆದು ಪೊಸ ಪೊಂಗಳಂ ತೀವಿ (ನಂಬಿರ. ೧೭-೧೬); ಪ್ರಾಣಲಿಂಗಕ್ಕೆಕ್ಕಟಿಂ ಪರಿಯಾಣದಲಿ ಪೊಸಪೊಸ ಪದಾರ್ಥಶ್ರೇಣಿಯಂ ಲೇಸಾಗಿ ಗಡಣಿಸಿ (ಬಸವು. ೩೩-೧೧); ಬೆಳ್ಳಿಯ ಪರಿಯಾಣದ ಮೇಲಿರಿಸಿದ . . . ಎಳ್ಳುಂಡೆಯು (ಜ್ಞಾನಚಂ. ೬-೭೬); ತಾನು . . . ಚಿನ್ನದ ಪರಿಯಾಣದಲ್ಲಿ ಪಂಚಾಮೃತವನುಣ್ಣುತ ಎನ್ನಂ ಕದವಿನ ಮುಚ್ಚಿಯಲ್ಲಿ ಕುಳ್ಳಿರಿಸಿ ಒಡೆದ ಓಡಿನಲ್ಲಿ ಅಂಬಲಿಯನೆರೆಯಲು (ಭಸವ. ೪೦-೩೪). ೨. ಕೊಳಗದಪ್ಪಲೆ ಮುಂತಾದ ಸಾಧನ; ಭಾಂಡ; ದೊಡ್ಡ ಬಾಯಿಯ ಪಾತ್ರೆ: "ಪುರುಪಾತ್ರಮೆನೆ ಪರಿಯಾ[ಪಾಠಾಂ. ವಾ]ಣ ಮಕ್ಕು" (ಪುಂಗರಾ. ೬೩-೨೫); ಮಹಾಘನವಪ್ಪ ಬೋನವನು ಒಂದನುವಿನ ಪರಿಯಾಣದಲ್ಲಿ ಹಿಡಿದು ಗುರುಲಿಂಗವು ಒಳಗಾದ ಲಿಂಗ ವಾರೋಗಣೆಯ ಮಾಡಿ ಮಿಕ್ಕುದು ಪ್ರಸಾದವೆ (ದೇದಾವ. ೫೦-೯೯). ೩. ನೈವೇದ್ಯ; ಎಡೆ: ಶಬ್ದ ಸ್ಪರ್ಶ ರೂಪ ರಸ ಗಂಧಂಗಳ ವಿವರಿಸಿ ಕಳೆದು ಪ್ರಾಣಲಿಂಗ ನಿಮಗೆ ಪರಿಯಾಣವ ಮಾಡಿದೆನೋ ಅಯ್ಯ (ಶಿವಗೀ. ೧೨೫-೬೨೦). **ಪರಿಯಣ**: ೧. ಪರೆದ ತಜಗೆಲೆಯೆ ಪರಿಯಣಮಾಗೆ ಪಣ್ಪಲಮೆತ್ತಿದ ಬೋನಮಾಗೆ ಸಿರಿಯ ಮಹಿಮೆಯಂ ಮೆಚ್ಚಿಯಲೇ ನಾಕರ್ಣದೊ ಬನದೊಳಿರ್ಪರವಾ ಪಾಂಡವರಾ (ಪಂಪಭಾ. ೭-೨೮); ಪರಿಯಣದ ಬಾಣಸಿನ . . . ಮಂಡವಿಗೆಯ ವಿಳಾಸನಿವಾಸಂಗಳಿಂದಂ (ಶಾಂತಿಪು. ೧೦-೧೪೭ವ); ಪರಿಯಾಣವೆ ಭಾಜನವೆಂಬರು ಪರಿಯಣ ಭಾಜನವಲ್ಲ (ಬಸವ. ೮೩೬); ಕೆಲಕೊತ್ತು ಚಿತ್ರಕೇ ಪರಿಯಣ[ಪಾಠಾಂ. ಳ]ಮಂ ನೃಪೇಶ್ವರಿಯನಾರೋಗಿಸಲ್ ಕರೆ ಮಂಜುಘೋಷೆಯಂ ದರಸಿಗೆ ಬೋನಮೆತ್ತಲುಲಿದತ್ತ ಮರೇಂದ್ರಮಹತ್ತರೀಜನಂ (ಅನಂಪು. ೪-೮೫). ೨. ಪರಿಯಣಂ ತಳಿಗೆ ಕನ್ನಡಿ ಗಿಣ್ಣಲಾದಿಯಾಗಿರ್ದ ನಾನಾ ತೆಱದ ಪರಿಯಣದ ಸಾಲಿನಿಂದ . . . ಕಂಚುಗಾಱರ ಪಸರವೊಪ್ಪಿದುದು (ಸೌಂದಪು. ೧೨-೩೩). ೪. ಮುಚ್ಚುವ ಸಾಧನ; "ಮುಚ್ಚಳ; ಶ್ರಾವೆ" (ಪ್ರಭಣ್ಣ). **ಪರಿಯಳ**: ೧. ತಳೆದನಿಮಿಷವಧುಗಳ್ ಕಜ್ಜೋಯಿಸಿದರ್ . . . ಸುವರ್ಣಮಯಪರಿಯಳಮಂ ಭಕ್ಷ್ಯೋಪದಂಶ ಚರುವಿಲಸಿತಮಂ (ಪಂರಾಮಾ. ೧೬-೯೧); ಕಪ್ಪುರದ ಮೌಕ್ತಿಕದ ತೊಡವನೊಳಕೊಂಡು ಪೊಳೆವ ಪಳುಕಿನ ಪರಿಯಳಂ[ಪಾಠಾಂ. ಣಂ]ಗಳುಂ (ವರ್ಧಪು. ೫-೬೩ವ); ಕೆಂಬರಲ ಪರಿಯಳಂ[ಪಾಠಾಂ. ಣಂ]ಗಳೊಳ್ಪೆಳಗಿದ ಮಂಗಳ ಮಣಿದೀಪಂಗಳ ಬೆಳಗು . . . ಪರಕಲಿಸಿದುದೆಂಬಂತೆ ಸಂಜೆಗೆಂಪು ರಂಜಿಸಿತ್ತು (ಪಾರ್ಶ್ವಪು. ೧೦-೧ ವ). ೩. ಜನ್ನಿಗೆಯಾವಂ ಪರಸಿದ ಪೊನ್ನಂ ಪರಿಯಳ[ಪಾಠಾಂ. ಣ]ಮನೊಯ್ವ ಕಳ್ಳರನಂತಿಂತೆನ್ನದು ಗಡ ಮನೆದೈವದ ಸನ್ನಿಧಿಕೆಯ ನೋಡೆ ಮನೆಯ ಕುನ್ನಿ ವಿಶೇಷಂ (ಪಸಾರ. ೯೩೩). **ಪರಿವಾಣ**: ೧. ಒಡೆಯರ ಸಹಪಂಕ್ತಿಯಲ್ಲಿ ಪರಿವಾಣ ಅಡ್ಡಣೆಯನಿರಿಸಿಕೊಂಡು ಉಂಬ ಸಮಗ್ರಾಹಕನಲ್ಲಯ್ಯಾ (ಸರ್ವವ. ೪೬-೨೪೫); ಕುಮಾರರಂ ಪಂತಿಯೊಳಿರಿಸಿ ಪಾಯಸಮಂ ಪರಿವಾ[ಪಾಠಾಂ. ಯಾ]ಣಂಗಳನಿಟ್ಟು ಬಡಿಸಿ (ಪುಣ್ಯಾಸ್ರ. ೩-೮ ವ); ಮಿಂಚುವ ಪರಿವಾಣ ಚಂಬು . . . ಪಂಚಾರತಿ ಗಂಟೆಗಳಿಂದ ಮೆಱೆದುವು ಕಂಚುಗಾಱರ ಪಸರಗಳು (ಕಂನವಿ. ೬-೬೯); ಮುಖ್ಯಭೋಜನದ್ರವ್ಯವಾ ತರುಣಿಯರು ಪೊಸ ಮಿಸುನಿ ಪರಿವಾಣದೊಳು ತೀವಿಱಿರದೆ ತಂದೀಯಲು (ಸದಮೋ. ೧೯-೨೯); ಬೀಸಿದನ್ ಪೊಗಳೆ ಮೋದಿ ಪರಿವಾಣಮಂ (ಶ್ರೀರಾಮಾ. ೧೦೦-೧೧). ೪. ಪರಿವಾಣ ಮುಚ್ಚಿದ ಕುಡಿಕೆಗಳಿಗೆ ಕಣಕದ ಲೇಪ ಹಾಕಿ ಬಾಯಿ ಮುಚ್ಚಿದೆ (ಇಪ್ಪಳ. ೨೮೧). **ಪರ್ಯಣ**: ೧. ಅಂತು ಪೊನ್ನಡ್ಡಣಿಗೆಗಳ ಮೇಲಳಂಕರಿಸಿದ ಚೆಂಬೊನ್ನ ಪಿರಿಯ ಪರ್ಯಣಂಗಳಂ ಪೊಂದಾವರೆಗೊಳನಲರ್ದಂತೆ ವಿರಾಜಿಸುತ್ತಿರ್ದ ಭೋಜನಲಕ್ಷ್ಮೀವಿಳಾಸ ಭವನಕ್ಕಾ ರಾಜಹಂಸನುಂ . . . ಬಿಜಯಂಗೆಯ್ದು (ಸುಕುಮಾ. ೧೧-೨೯ವ); ಸುವರ್ಣಪರ್ಯಣಂ[ಪಾಠಾಂ. ಪರಿಯಾಣ]ಗಳಿಂದುಸ್ಮಿತ ಮಯೂಖಮಾಣಿಕ್ಯದೀಪಕಿರಣಾರುಣಿತ ಮರಕತಮಣಿಪುತ್ರಿಕೆಗಳಿಂ (ಪಂರಾಮಾ. ೧೨-೨ವ). **ಪರ್ಯಾಣ**₁: ೧. ಹೊಲೆಯರೆಲ್ಲ ಚಿಕ್ಕ ದೊಡ್ಡವರೆನ್ನದೆ, ಪರ್ಯಾಣ ಹಿಡಿದುಕೊಂಡು ಗೌಡರ ಮನೆಬಾಗಿಲಿನಿಂದ ಹೋಳಿಗೆ ಹಾಕಿಸಿಕೊಂಡು ತೃಪ್ತರಾಗಿ ನಡೆದರು (ಗ್ರಾಮಾಯ. ೨೩೫). **ಪರ್ಯಾಳ**: ೩. ಶ್ರೀ ಬಾಳೇಶ್ವರದೇವರ್ಗ್ಗೆ ಗಾವುಂಡ ಅಱುವತ್ತೊಕ್ಕಲು ದೇವರ ಪರ್ಯ್ಯಾಳಕ್ಕೆ ಸೊಂದಗೊಲ ದೇವಗೌಡನ××ಲಿ ಬಿಟ್ಟ ಹಣ (ಸೌಇಇ. IX-i, ೧೬೩-೫೬; 1093). **ಹರಿಯಣ**: ೧. ಅಕ್ಕಿಯಂ ಹೂಸು ಯೆಣ್ಣೆಯನು ತೆಗೆಯುಟಕ್ಕೆ ಮಿಕ್ಕ ಹರಯಣವನುಡು ತೊಡು ಹಾವುಗೆಯನೆಂದು ಚಿಕ್ಕ ಹರೆಯದ ಬಾಲೆ ವಲ್ಲಭನನ ಗಲ್ದಳಲಿನಿಂದ ವಿಕಳತೆಗೊಂಡಳು (ಹಚಕಾ. ೪-೪೭); ಮರದ ಹರಿಯಣದೊಳುಂಡಂ (ಶಮದ. ೨೪೧ ಪ್ರಯೋ); ರಾಜಾನ್ನದಕ್ಕಿಯ ಸಾಲ ಹರಿಯಣದ . . . ವಿವಿಧ ಭಕ್ಷ್ಯಾವಳಿಯ ಬಾಣಸದೊಳಗೆ ಬಂದಳು ಮತ್ತಗಜಗಮನೆ (ಕುವ್ಯಾವಿ. ೩-೩೬); ಹೇಮದ ಸಾಲ ಹರಿಯಣಗಳ ಸುವರ್ಣದ ತಟ್ಟೆ ಬಟ್ಟಲುಗಳ . . . ಸಾಲೆಸೆದವಾ ಭವನಾಂತರಾಳದಲಿ (ತೊರರಾ. ೬-೫೫-೩೮); ಸೊಡರ ಸುಳಿಸಿದರು ಹರಿಯಣದಿ (ತುರಂಗ. ೩೭-೫೯). **ಹರಿಯಾಣ**: ೧. ಹರನ ಚೆಂಗಣಗಿಲೆಯ ಕೋಳ್ಮಾಲೆಯಂ ತರಿಸಿ ಹರುಷದಿಂದಂ ಹೊನ್ನ ಹರಿಯಾಣದೊಳಗಿರಿಸಿ (ನಂಬಿರ. ೯-೭೬); ಕ್ರಮವೆರಸಿ ಹೊಸ ಹೊನ್ನ ಹರಿಯಾಣಮನಳವಡಿಸಿ ಪಂಚ ಪಕ್ವಾನ್ನಮನಮಳದೇವಾನ್ನ ದಿಬ್ಯಾನ್ನಂಗಳಂ ಬಡಿಸಿ (ಬಸವು. ೮-೧೪); ಗಉಡು ಸೊಣ್ಣಪ್ಪನು ಕೊಟ್ಟ ಉಪಕರಣ ಹರಿಯಾಣ ಅಡ್ಡಣಿಗೆ (ಎಕ. IX, ಬೆಂಗಳೂ. ೯೦-೮; ಸು. 1400). **ಹರಿವಣ**: ೧. ಮಜ್ಜೆ ಮಾಂಸದ ಹೊರಳಿಯಲಿ ರಣಭೂತದುಣಿಸಿಗೆ ಹರಿವ[ಪಾಠಾಂ. ಯ]ಣವನಿಟ್ಟಂತೆ ಹೊಸ ಪರಿಯಾಯ್ತು ರಣಭೂಮಿ (ತೊರರಾ. ೫-೬-೧೬); ತರಿಸಿದನು ನವರತ್ನಖಚಿತದ ಹರಿವಣವ (ಕೋಗಯ. ೯-೭೪); ನಗುತ ಸುರಲಲನೆಯರು ಸಿಂಬೆಯ ಬಿಗಿದು ಹೊತ್ತರು ಹರಿವಣಂಗಳ (ಅಂಬಿಕಾ. ೪೫-೪೦). **ಹರಿವಾಣ**₁: ೧. ಅಗಮವೆ ಹರಿವಾಣವಾಗಿ ಪುರಾಣವೆ ಓಗರವಾಗಿ ಉಂಬಾತ ವೇದವಾಗಿ (ಕೋಲಶಾಂ. ೫-೧೨); ದೇವರಿಗೆ ಬೆಳ್ಳಿಯ ಹರಿವಾಣವನೂ ಕೊಟ್ಟು (ಎಕ. IX, ಚನ್ನಪ. ೬೫-೬; 1278); ಆರತಿಯ ಹರಿವಾಣ ಸುಳಿದುದು ಸಾಲು ಸೊಡರುಗಳ (ಕುವ್ಯಾಅ. ೭-೯೬); ಅವಳು ಹೊನ್ನ ಹರಿವಾಣದ ಮೇಲೆ ಮೃದುವಾದ ರೇಶ್ಮೆಯ ವಸ್ತ್ರವನ್ನು ಹಾಸಿದಳು (ಹಾಹುತ್ತ. ೪೦). ೩. ಇಷ್ಟಕೆ ಅವನೊಬನು ಪ್ರ××ಕೃತಿ ಮಾಡಿ ಆಳಿಪಿದಂಥವರು ಕಲಿದೇವರ ಹರಿವಾಣಕೆ ವಿಸವನಿಕ್ಕಿದು (ಎಕ. VII, ಚನ್ನಗಿ. ೫-೧೨; 1263 ?); ಯಿಾ ಧರ್ಮ್ಮಕ್ಕೆ ಬಿಟ್ಟ

ಸ್ವಾಸ್ತಿಗೆ ತಪ್ಪಿದರೆ ಯಿಾ ಸ್ವಾಮಿಗಳ ಹರಿವಾಣಕ್ಕೆ ವಿಷಪಸಿಕ್ಕಿದವರು (ಎಕ. XIV, ಶ್ರೀರಂಗ. ೧೪೮-೩೦ ; 1598). ೫. ನೈವೇದ್ಯಕ್ಕಾಗಿ ಕೊಡುವ ದಿನಸಿ ತುಂಬಿದ ತಳಿಗೆ : ಶ್ರೀರಂಗನಾಥದೇವರ ತಳಿಗೆ ಒಂಮು ಶ್ರೀ ಲಕ್ಷ್ಮೀದೇವಿಯ ಹರಿವಾಣ ಒಂದು (ಎಕ. XIV, ಶ್ರೀರಂಗ. ೨-೧೮ ; 1529) ; ಶಾಚಮನಾಯ್ಕಿತಿ × ತಂಮ್ಮ ಹರಿವಾಣಕ್ಕೆ ಕೊಟ್ಟ್ಮದು (ಎಕ. VII, ತಿಪನೊ. ೪೭-೭ ; 1688 ?). ೬. (?) : ಪಾಶ ಕರ ಗಣಕೆಯರ ವೀರರ ಹರಿವಾಣದಾಯದ ಲೆಂಕರ ಬಿಂಕದಂಕಕಾಚರ . . . ಪರ್ತಕರ ಮೊತ್ತದೊತ್ತರದ ತಿಂಥಿಣಿಯನೊತ್ತರಿಸಿ ಇಟ್ಟಿಣಿಸಿದ ಕಟ್ಟಣಕದಾಸ್ಥಾನದೊಳು (ಬಸರ. ೬-೨೧).

ಹರಿವಾಣದಾರತಿ = ತಟ್ಟೆಯಲ್ಲಿ ಮಾಡುವ ಆರತಿ : ಸುದತಿಯರ ಹರಿವಾಣದಾರತಿಗಳನು ಕೈಗೊಳುತ . . . ಒಪ್ಪಂಬಡೆದು (ಕುವ್ಯಾಅ. ೧೩-೨೮) ; ಅರಸ ರಥವೇಱಿದನು ನೃತ್ಯದ ತರುಣಿಯರ ಹರಿವಾಣದಾರತಿಗಳ ವಿಲಾಸದಲಿ (ತೊರರಾ. ೧-೧೬-೧೨).

[ಪರ್ಬ್ಯ + <ವಾಣ₁ ?. /ತಮಿ. ಅರುವಾಣ ; ತುಳು. ಹರಿಯಾಣೊ, ಹರಿಯಾಣೊ, ಹರಿವಾಣೊ, ಅರಿಯಾಣೊ, ಅರಿವಾಣೊ ; ತೆಲು. ಪರಿಯಲ, ಹರಿವಾಣ, ಅರಿವಾಣ. /ಪ್ರಾ. ಪರಿಅಲ, ಪರಿಅಲಿ]

**ಪರಿಯಾಣ₂** (ನಾ). ಜೀನು ; ತಡಿ : ಪನ್ನೆರಡುಸಾವಿರವರುಷ ಕ್ರೀಡೆ ಪೊಲಂ ಕವಣೆಯ ಮಣಿಯ ಪರಿಯಾಣದಿಂ ತೋರ್ಕೆವೆತ್ತುತ್ತರಿ ತಂಸೊಂದಾನೆಯಂ ಸೇವುಣ ನ್ರಿಪಬಳಮಂ ನೂಂಕಿ ಬೆಂಸಟ್ಟಿ ಕೊಂದಂ (ಸೌಇಇ. IX-i, ೩೪೦-೪ ; 1224). [<ಸಂ. ಪರ್ಯಾಣ]

**ಪರಿಯಾಣಪೀಠ** (ನಾ). ತಟ್ಟೆಯನ್ನಿಡುವ ಪೀಠ ; ಅಡ್ಡಣಿಗೆ : ತರಳೆ ಘಾಸು ಗದ್ದಿಗೆಯನುಕ್ಕಲಿನಿ ನೀ ಪರಿಯಾಣಪೀಠವನಿರಿಸು (ಅನಂಚ. ೫-೫೪). [ಪರಿಯಾಣ₁ + ಪೀಠ]

**ಪರಿಯಾಸ** (ನಾ). ಸಂಚಾರ ; ತಿರುಗಾಟ. [ಸಂ.]

**ಪರಿಯಾಪ್ತ** (ನಾ). ಸಾಕಷ್ಟಾದುದು : ಭವಭಯಸಾಗರಕೆ ತನ್ನಂಘ್ರಿ ಕಮುಲಪರಾಗಚಿಂತಾಪೋತವೇ ಪರ್ಯಾಪ್ತವು (ಸಿಭಾಗ. ೧೦-೨೫-೩೪). [<ಸಂ. ಪರ್ಯಾಪ್ತ]

**ಪರಿಯಾಪ್ತಿ** (ನಾ). ಸಂತೃಪ್ತಿ ; ತುಷ್ಟಿ : ಎನಗೆ ನಿಮ್ಮಡಿಗಳ ಕೃಪಾ ಲೋಕನವಲೇ ಪರಿಯಾಪ್ತಿ (ಕುವ್ಯಾಅ. ೬-೨೭). [<ಸಂ. ಪರ್ಯಾಪ್ತಿ]

**ಪರಿಯಾಯ** (ನಾ). ೧. ಅನುಕ್ರಮ ; ಸರದಿ ; ಪರಿವಿಡಿ : "ಆನುಪಾತ್ಯಕುಮುಂ . . . ಪರಿಯಾಯಮುನುಗತಿ ವಿಶಾಯಮೆನಲು ಸುಪರಿವಿಡಿಯೆನಿಕು" (ಮಂಗರಾ. ೧೩೦-೧೯) ; ಪರದೇಶಮಂಡಲವನಿರವ ನೊಂದನೆ ಮಾಡಿ ಪರಿಯಾಯಪರೀಕ್ಷೆಯನೊರೆದು ನೋಡುತ್ತ (ಚನ್ನಪ. ಕ. ೪೪೭-೫೪೭) ; ಮಾಯದಭಿರಂಜನೆಯ ರಚಿತೋಪಾಯದಲಿ ಗೋತ್ರ ಪ್ರವರಪರಿಯಾಯವಲಿ ಪಡಕೆಟಗಿದರು ಪಾವನತಪೋಧನನ (ತೊರರಾ. ೧-೫-೪೮). ೨. ರೀತಿ ; ಬಗೆ ; ಕ್ರಮ : ಗುರು ಲಿಂಗ ಜಂಗಮಕ್ಕೆ ದಾಸೋಹವ ಮಾಡುವ ಭಕ್ತನ ಪರಿಯಾಯವ ನೋಡಿರಯ್ಯಾ (ಸರ್ವವ. ೧೪೬-೭೧೪). ೩. ಬದಲು ; ವ್ಯತಿರಿಕ್ತತೆ : ಕಣ್ಣಾರೆ ಕಂಡುದಕೆ ಪರಿಯಾಯವೇ ಕುಟಿಲೆ (ಕೊಟ್ರೂಬ. ೯-೧೧). ೪. ಬದಲಿ ರೂಪ,— ಆಕಾರ ; ಪರ್ಯಾಯರೂಪ : ಬಯಲ ರೂಪಿನ ವಸ್ತು ಜೀವವದಕೆ ಗುಣನಿಯತದಿಂದಱಿವು ಕಾಣ್ಕೆಗಳು ನಯಗೆಟ್ಟು ನರಸುರರಾದಿಯಾದಾಕಾರ ಚಯಗಳದಱ ಪರಿಯಾಯ (ಭಸಿಚ. ೭೭-೧೨೩). [<ಸಂ. ಪರ್ಯಾಯ]

**ಪರಿಯಾರ,** ಪರಿಯರ (ನಾ). ತೆರಿಗೆಯಿಂದ ವಿನಾಯಿತಿ ; ಕಂದಾಯ ಕೊಡುವುದರಲ್ಲಿ ರಿಯಾಯಿತಿ : ಭೂತಶರ್ಮ್ಮಗ್ಗೆ ಶಾಲಿಗ್ರಾಮ ಸರ್ವ ಪರಿಯಾರ ಪರಿಗ್ರಹದಿನ್ತು ಪಾಣಿಗ್ರಹಣಂ ಕೆಯ್ದು ಕೊಟ್ಟಾರ್ (ಮೈಆರಿ. ೧೯೪೧, ೧-೩೨ ; 643 ?) ; ಕಾದು ರಣಸಾಗರ ನ್ಪರಿಯಾರಂ ಕೊಟ್ಟನ್ (ಸೌಇಇ. IX-i, ೩೯೨-೫ ; 8ನೆಯ ಶತ) ; ಪರಿಯಾರಮಾನ್ಕೆಡಿಸಿದೊನ್ಪಞ್ಚಮಾಹಾಪಾತಕನಕ್ಕೆ (ಎಕ. XIV, ತಿರುಮ. ೨೫೩-೮ ; ಸು. ೮೦೦) ; ಆರ ಮಣ್ಣಿಲ್ಲ ಪರಿಯಾರ ಇಲ್ಲ ಕೊಡಂಗೆಯಿಲ್ಲ (ಸೌಇಇ. IX-i, ೨೪-೫೦ ; 936). **ಪರಿಯರ :** ಮೊಱಿದಿಯ ಮೊದಲೊಳ್ಕೊಟ್ಟೊತ್ತ್ರೆಱೆವರಿಯರ ಮಾಳ್ವುದೆನ್ದು ಕೇರಿ ಸಮಸ್ತಂ ಕೆಱೆಗೆ ಪದಿನೇೞು ಮತ್ತರ್ (ಕಇ. II, ೪-೧೫ ; 918) ; ಮಾನ್ಯಕಾಱ ಮರ್ಯಾಱು ಶ್ರಾಹಿಗೆ ಪರಿಯರ ಗಧ್ಯಾಣವನ್ನಿಱುವರ್ (ಸೌಇಇ. IX-i, ೭೭-೨೯ ; 992) ; ಒಸೆದಿತ್ತ ಮರ್ಯ್ಯಾಜನವಿಪಾ ಬಸದಿಯ ಸೂಳೆಗೆ ವಿಶೇಷದಿಂ ಪರಿಯರಮ್ಮೆಂದಸತುದೆಱಿಮ್ಮೆಂದಿ ಕರವಡವಿಸಿವಾಕೂಳ್ಕಾಳ[ಗೈ]ಯ್ದು ತಳಭೋಗವಿವ (ಸೌಇಇ. XI-i, ೫೨-೭೭ ; 1007). [<ಸಂ. ಪರಿಹಾರ]

**ಪರಿಯಾರವಿಡು** (ಕ್ರಿ). ತೆರಿಗೆಯಲ್ಲಿ ವಿನಾಯಿತಿಯನ್ನು ತೋರಿಸು ; ಕಂದಾಯದಲ್ಲಿ ರಿಯಾಯಿತಿ ಕೊಡು : ಕೋಟಮು ಮಣ್ಣುಮ ಪಟ್ಟಿಯ ಬಟ್ಟನ್ತೆ ಪರಿಯಾರವಿಟ್ಟರ್ (ಎಕ. IV, ಎಡತೊ. ೬೦-೮೨ ; ಸು. 890). [ಪರಿಯಾರ + ಇಡು₁]

**ಪೆರಿಯಿಡು,** ಹರಿಯಿಡು (ಕ್ರಿ). ೧. ವೇಗವಾಗಿ ಹೋಗು,— ಧಾವಿಸು ; ಮುನ್ನುಗ್ಗು : ಜವಂಗಿಡಿಸಲಾ ಜವನಂ ಪರಿಯಿಟ್ಟು ಮುತ್ತಿದಂ (ಪಂರಾಮಾ. ೧೧-೧೬೨) ; ದಿವಿಜರಾಜನಿಂದೆನಗೆ ರಾಜರಾಜಾಭಿಷೇಕಮಂ ಮೆಱೆಯಿಸುವೆನಲ್ಲಿಗೀಗಳ್ ಪರಿಯಿಡುವೆನೆಂದು ತನ್ನೊಳ್ ನಿಶ್ಚಯಿಸಿ (ಜಗವಿ. ೮-೭೪ವ) ; ಭರದಿನರವನೆಗೆ ಪರಿಯಿಟ್ಟು ಕಟ್ಟಿದಾನೆಗಳ ದಂತಕಾಂತಿಯಂ ಕಿಟ್ಟು ಕಳೆದುಂ (ವರ್ಧಪು. ೬-೩೨) ; ಕೆಲರತಿವೇಗದಿಂದ ಪರಿಯಿಟ್ಟು ಕೆಲರ್ ನಡೆತಂದು ಮಂಟಪಸ್ಥಳದ ವಿಶಿಷ್ಟವಿಷ್ಟರದೊಳಿರ್ದುದು ರಾಜಿತರಾಜಸಂಕುಳಂ (ನಳಚಂ. ೩೦೮) ; ಭರದಿಂ ಚತುರಂಗಬಲಂ ಬೆರಸಥಟೆಂದುರ್ಬಿ ಕೊರ್ಬಿ ಪರಿಯಿಟ್ಟಾಗಳ್ ಧರೆ ಕಂಪಿಸೆ ಕಲಿಕಾಮನ ಪುರಮಂ ಮುಳಿಸಿಂದೆ ಮುತ್ತಿದಂ ಗಿರಿಶಸುತಂ (ತ್ರಿಪುವಿ. ೫-೭) ; ಪೊದಲ್ದು ಪಾಯ್ದು ಪರಿಯಿಟ್ಟುದು ವಾಯುರಯಂ ಹಯದ್ವಯಂ (ರಾಜಶೇ. ೧೩-೯೧). ೨. ಪ್ರವಹಿಸು ; ಹರಿ : ಅಶ್ರು ಪ್ರವಾಹಂ ಪರಿಯಿಡೆ ಪುಳಕಂ ಪೊಣ್ಮೆ (ರಕ್ಷಾಶ. ೬೦) ; ಬೆಮರ್ ಕರಂ ಪರಿಯಿಡೆ ಗದ್ಗದಂ ಸುೞಿಗೊಳುತ್ತಿರೆ (ಪಂರಾಶ. ೬). ೩. ಧಾಳಿ ಮಾಡು ; ಮುತ್ತಿಗೆ ಹಾಕು ; ದಂಡೆತ್ತಿ ಹೋಗು : ಪರಿಯಿಟ್ಟೀ ಬಪ್ಪನೀ ಬಪ್ಪನೆ ಕಡುಮುಳಿಸಿಂ ಗಂಗಪೆರ್ಮ್ಮಾಡಿರಾಯಂ ನಿರುತಂ ತಾನೆನ್ದು ಚೋಳಂ ಮದವನುಡುಗಿದಂ (ಸೌಇಇ. IX-i, ೧೧೮-೧೮ ; 1057) ; ಮೂಱನೆಯ ದಿವಸದಂದು ಶತ್ರುಘ್ನಂ ನಂದ್ಯಾವರ್ತಪುರಕ್ಕೆ ಪರಿಯಿಟ್ಟು ಪಲಂಬರರಸುಮಕ್ಕಳಂ ಕೊಂದು (ಪಂರಾಮಾ. ೮-೨೨ವ) ; ಪರಬಳಮಂ ಪರಾಕ್ರಮಿಸಲೆಂದೆರೆಗೌಡನುದಗ್ರಕೋಪದಿಂ ಪರಿಯಿಡೆ (ಎಕ. XI, ಚಿತ್ರದು. ೧೩-೧೭ ; 1124 ?). **ಹರಿಯಿಡು :** ೧. ಮೇಪುಗಾಡಿಂ ಹಕ್ಕಿದಲೆಗೆ ಹರಿಯಿಡುವ ಹರಿಣೀಗಣದ ಕಡೆವಾಯೊಳರೆಮೆಲ್ದುಱಿದೆಳೆಗಱುಂಕೆಯೆಸಟ್ಟಳಂ ಸೆಳೆದು ತಂದಾ ಬಯಲೊಳ್ ಬಳ್ಳಿವಸಲೆಯಂ ಪೊಸಯಿಸಿಯುಂ (ಚಂದ್ರಪು. ೮-೪ವ). ೩. ಶ್ರೀಮತ್ತ್ರಿಭುವನಮಲ್ಲ ಪೊಯ್ಸಳ ಬಿಟ್ಟಿದೇವ ತಳಕಾಡ ಹರಿಯಿಟ್ಟಡೆ ಆದಿಯಮನಿದಿರಾನ್ತು ಕಾದಿ (ಮೈಆರಿ. ೧೯೩೪, ೧೨-೪ ; 1117) ; ಕವಿದ ವಿದ್ಯಾಮದೋತ್ಪಾಟನಕ್ಕೆ ಹರಿಯಿಡುವ ಬಲವೋ (ಸಿದ್ಧರಾ. ೨-೪೦). [ಪರ್₃ + ಇಡು₁]

**ಪೆರಿಯಿಸು,** ಪರಿಸು, ಹರಿಯಿಸು, ಹರಿಸು₂ (ಕ್ರಿ). ೧. ಓಡುವಂತೆ ಮಾಡು ; ಓಡಿಸು ; ನುಗ್ಗಿಸು : ತದ್ರಥಮಂ ಹರಿ ವಾಯುವೇಗದಿಂ ಪರಿಯಿಸೆ ತಾಗಿದಂ ಹರಿಗನಂಕದ ಪೊಂಕದ ಸುಪ್ರತೀಕಮಂ (ಪಂಪಭಾ. ೧೧-೭೩) ; ನರಪತಿ ಕೈಲಸಂ ಬೆಸಸೆ ಘೂರ್ಜರಸೇನೆಗೆ ಸೂಚಿಯಾನೆಯಂ

ಪರಿಯಿಸಿ ಗೆಲ್ದಂ (ಗದಾಯು. ೨-೪೬); ತನ್ನ ರಥಮಂ ಲಂಕೇಶ್ವರ ನಿರ್ದೊಡ್ಡಣದತ್ತಲ್ ಪರಿಯಿಸಿದನಿದೇಂ ಪ್ರತಾಪಿಯೋ ಪವನಸುತಂ (ಪಂರಾಪು. ೧೩-೧೨೬); ಪರಿಯಿಸೆ ಕೀೞು ಪಾಯ್ವ ರಥಯೂಥ ರಥಾಂಗದ ನೇಮಿಘಾತದಿಂ ಧರಣಿ ಸುರುಳ್ದು ಕಂಪಿಸೆ (ಶಾಂತೀಶ್ವ. ೮-೭೮); ಪೆರ್ಬಾವು . . . ಬಂಡಿಯನು ಪರಿಯಿಸೆ ಘೀಲಸಿಕ್ಕಡಿಯಾದುದು (ಸಾಳ್ವಭಾ. ೨೦-೮೩). ೨. ಹರಿಯುವಂತೆ ಮಾಡು; ಪ್ರವಹಿಸುವಂತೆ ಮಾಡು: ಮೊಗೆಯಲ್ ಕೊಡಗೊಂಡು ತಿರ್ದಿ ಬಚ್ಚಲನೆಲೆದೋಂಟೆದೊಳ್ ಪರಿಯಿಸಲ್ . . . ಬಗೆದುದಂದು ಜನಂ ಘನಚಂದ್ರಿಕಾಂಬುವಂ (ಅಜಪು. ೬-೪೫); ಅಮೃತಾರ್ಣವಮನೆ ಮೇರುವಿನ ಮೇಖಳಾವನಕೆ ತಿರ್ದಿ ಪರಿಯಿಸಲಿಂದ್ರಂ ಸಮೆದೇರಿಪ್ಪೊಲ್ (ಪುಷ್ಪಪು. ೧೧-೯); ಮಸಿಗತ್ತಲೆಯ ಕೊಳದ ಕಟ್ಟನೊಡೆಯುತ್ತೆ ಕರ್ಬೊನಲ ಪರಿಯಿಸುವಂತೆ ತುರುಬು ಸಡಿಲಿಸಿ ಬೀಸಿದಳ್ ಕೇಶಪಾಶಮಂ (ಚಿತ್ರಾಂಗ. ೩೩-೮೯೭). **ಪರಿಸು**$_1$: ೧. ಸಿರಿಯೊಡೆಯಂ ಕೀೞ್ಪಾಳಾಗಿರಲರಿವನೆ ಪರಿಸುತಂ ಕಿರೀಟಿಯ ರಥಮಂ (ಸಮಪ. ೮-೧೪೪); ಕಮಲಾಸನಂ ಹಂಸೆಯಂ ಕಮಲಾಂಬಕಂ ಬೇಗದಿಂ ಗರುಡನ ಒತ್ತರಿಪ ಸಕಲ ಸಂರಂಭದಿಂದೇೞು ಪರಿಸುತ್ತಿರಲ್ (ಚೆಬಪು. ೧೬-೧೬); ಹರಿಹಯನಶ್ವದಂದದ ತೇಜಿಗಳನೇೞು ನೆೞ್ತೆ ತೊಲಗುಭಯವೀಧಿಗಳ ಪರಿಸುವ ಬಿರುದಿನ ರಾಯರಾವುತರ ಸಿಂಗರವಾಂತ ಕೇರಿಯೊಪ್ಪಿಹುವು (ಕಂಸವಿ. ೬-೫೮). ೨. ಪರಿಸುಗುಮಿಲ್ಲಿ ಭೋರ್ಗರೆವ ನೆತ್ತರ ಪೆರ್ಪೊನಲಂ (ಧರ್ಮಾಮೃ. ೪-೨೩೭); ಇಳೆಯನೀರಡಿಮಾಡಿದ ಪಾದ ಜತನ ಬಾಂಬೊಳೆಯ ಪರಿಸಿದಂಘ್ರಿ ಜತನ (ಮೋಹತ. ೧೪-೧೯); ರಕ್ತದ ಬಲುಗಾಲುವೆಯ ಪರಿಸಿದರು (ಕಂಸವಿ. ೧೫-೫೪). ೩. ಚಲಿಸುವಂತೆ ಮಾಡು; ಹೋಗುವಂತೆ ಮಾಡು; ನಡೆಯಿಸು; ಕಳುಹಿಸು: (ಅ). **ಹರಿಯಿಸು**: ೧. ಹರಿ ರಥಮಂ ಹರಿಯಿಸುತುಂ ತೆರಳ್ಚಿ ತತ್ತ್ವಮನೆ ಪೇೞ್ದು ಗಡ ಕಾದಿಸಿದಂ (ಸಮಪ. ೧೦-೧೬೨); ಆನೆಯಂ ಮಗುೞ್ಚಿ ××× ಹರಿಯಿಸಿ ಕಾದಿ ಮೇಲಾಳ್ಪ್ಪರ ಕೊಂಡು . . . ಜೋಳವಾಳಿಯ ನೆೞ್ತಿದ ಬಾಸಿ (ಮೈಆರಿ. ೧೯೩೪, ೧೨-೬; 1117). ೪. ಕಳೆ; ಇಲ್ಲವಾಗಿಸು; ನಿವಾರಿಸು: ಪಿಂತಾದ ದುಸ್ಸಹಾವಸ್ಥಾಂತರ ಸಂತತಿಯನಾಗಳನುಭವಿಸುತಮಿರ್ಪಂತಿರ್ದಳ ಚೈತನ್ಯಮನಂತಾಗಳೆ ಹರಿಯಿಸಿತ್ತು ಮೂರ್ಛಾವೇಗಂ (ಕಾದಂಪೂ. ೯೨೮); ನೆಗಟ್ಟಘಮಂ ಹರಿಯಿಪನೆಂಬರ್ತಿಯಿಂದಮಿಲ್ಲಿಗೆ ವಂದೆಂ (ಧರ್ಮಾಮೃ. ೬-೩೦); ಪರಧನಹರಣನ ಹರಣಮಂ ಹರಿಯಿಪ ಪರಿಣತೆಯನುರವಣಿಸಿ ಬೆನ್ನೊಳೆ ಪರಿದು (ವರ್ಧಪು. ೨-೪೮ ವ). ೫. ತಿರುಗಿಸು; ಹೊರಳಿಸು: ಅಲ್ಲಿಂದ ಎಡಕ್ಕೆ ನಮ್ಮ ಕಣ್ಣನ್ನು ಹರಿಯಿಸಿದರೆ ಮತ್ತೊಂದು ಸುಂದರ ತಾರಾಗುಚ್ಛವು ಕಂಗೊಳಿಸುತ್ತದೆ (ನಕ್ಷತ್ರ. ೮); ಪಾತ್ರೆಗಳ ಮತ್ತು ಇತರ ಸಲಕರಣೆಗಳ ಕಡೆಗೆ ಗಮನ ಹರಿಯಿಸಬೇಕು (ಅಡುಸಾ. ೩೨). **ಹರಿಸು**$_2$: ೧. ಕಳ್ಳರು ಕದ್ದು ಹರಿಸೆ ಹರಿಗಾಡಿನೊಳು ಪಶುನಿಚಯವಂ (ಸಾನಂಚ. ೩-೧೫೫); ಬಹಳಮದಗಂಧೇಭಮಂ ವಿಗ್ರಹಿಸುವನ ಮೇಲಕೆ ಹರಿಸಿ ನಿಗ್ರಹಿಸಿ ಕೊಲ್ಲು (ಬಸಪು. ೨೧-೩೮); ಧರ್ಮಜನೆಲ್ಲಿ ಮೋಹರದೆಗೆವನತ್ತಲೆ ರಥವ ಹರಿಸು (ಕುವ್ಯಾದ್ರೋ. ೨-೩೦); ಹರಿಸಿದಂ ಬೇಗದಿಂ ಮಣಿವರೂಥವಂ ಕೆಲಬಲದ ಮನ್ನೆಯರ ಗಡಣದಿಂದೆ (ಜೈಮಿಭಾ. ೪-೨೭). ೨. ಲೋಚನತಪ್ತವಾರಿಯನು ಭೂಚಕ್ರದೊಳು ಹರಿಸುವ ದುಕ್ಕೆಯ ಕಂಡು (ಮೋಹತ. ೧೦-೧೪). ೩. ಬರಪಾರದೆ ದೂದವಿಯರ ಹರಿಸದೆ . . . ಮನವೊಲ್ದಾಗಳ್ ನೆರೆಯಲ್ ದೊರೆಕೊಳ್ವರತಮೆ ಸಂಕಲ್ಪರತಂ (ಕಾದಂಉ. ೩೧೮); ಬೇಹ ಹರಿಸಿದರಖಿಳ ದೆಸೆದೆಸೆಗೆ (ಕುವ್ಯಾದ್ರೋ. ೮-೪೪); ಹರಿಸುತಂ ತನ್ನ ಮೋಹರವನಿಂತೈದೆ . . . ವರೂಥವಂ ಹರಿಸುತಂತಾ ಬಭ್ರುವಾಹನಂ ಖಾತಿಯಂ ಕೈಕೊಂಡು ಕಣೆಗಜೆೞಿಯುತೆ (ಜೈಮಿಭಾ. ೨೨-೨೫). ೪. ತಪದೊಳಾದ ಕಡುಚೆಲ್ವಿಂದಂ ತಾಂ ಸಂದಘಮಂ ಹರಿಸಿ ದಿಟಂ ಸುರಗತಿವಡೆದು ಭೋಗಿಪುದು ತತ್ಫಲಮಂ (ಧರ್ಮಾಮೃ. ೬-೩೨); ಹರಿಯ ಮದವಂ ಹರಿಸುವಂ ಗಡ (ಬಸಪು. ೨೩-೨೨); ಮಾಸವಾಚಿಕ್ಯಾತನಂಗದ ದೋಷ ಹರಿಸಲು ಬಳಿಕ ರಾಜ್ಯಮಹೀಶ ಮಾಡಿದನಖಿಳಭಾರತವಂಶಮಧ್ಯದಲಿ (ಸಂಭಪ. ಪರಿ. ೩೧೩-೪೪); ಎನ್ನ ತಾಪತ್ರಯಂಗಳಂ ಹರಿಸಿ ರಕ್ಷಿಸು (ಚೆಬಪು. ೧-೧); ಹರಿಸಲಪ್ಪುದೆ ನರರು ಮತ್ಸರಿಯ ಸಂಕಟವ? (ಮಂಕುಕ. ೨೦೧). ೫. ದ್ರಾವಿಡ ಭಾಷೆಗಳ ಕಡೆಗೆ ಒಂದು ತೌಲನಿಕ ದೃಷ್ಟಿಯನ್ನು ಕನ್ನಡ ಕವಿಗಳೂ ವಿದ್ವಾಂಸರೂ ಹರಿಸಲಿಲ್ಲ (ದ್ರಾವಿವಿ. ೧೩ ಹಿನ್ನೆಲೆ). ೬. ತೀರಿಸು; ಮುಟ್ಟಿಸು: ಆದರೆನ್ನ ಸಾಲವನ್ನು ಹರಿಸಲೊಂದುಪಾಯವುಂಟು (ದೇವೀಚಾ. ೧೨೭). [ಪರಿ$_2$ + -ಇಸು$_3$]

**ಪರಿಯುಕ್ತ** (ಗು). ಸೇರಿದ; ಕೂಡಿದ: ಪರಿಯುಕ್ತವಜ್ರಿಯಿಂ ಸುರಪುರದಂತೆ ವಿಭೂತಿಶೋಭೆಯಿಂದಾ ದಿವಿಜೇಶ್ವರನಂತೆ ಕಣ್ಗೆವಂದಚ್ಚರಿವೆತ್ತುದು ಸೂತಿಕಾನಿವಾಸದ್ವಾರಂ (ಕುಸುಮಾ. ೬-೭೩). [ಸಂ.]

**ಪರಿಯುಡುಗು** (ಕ್ರಿ). ಪ್ರವಹಿಸುವುದು ನಿಲ್ಲು; ಹರಿಯುವುದು ನಿಂತು ಹೋಗು: ಜಿನನಂ ಶಿರದೊಳ್ಸಲೆ ತಾಳ್ದಿ ದಾನಚಿಂತಾಮಣಿ ನಿರ್ಝರಗೋದಾವರಿಯಂ ಪುಗೆ ಪರಿಯುಡುಗಿದುದು (ಸೌಇ. IX-i, ೫೨-೨೧; 1007); ಪೆರ್ಪೊಳೆ ಪ[ಪಾಠಾಂ. ಪಿ]ರಿಯುಡುಗದ ಸಿರಿಯನೊಳಕೊಂಡು ಭೂಮಂಡಳಕ್ಕೆ ಮಂಡನಮೆನಿಸಿ ರಂಜಿಸಿರ್ಪುದು (ರಾಜಶೇ. ೬-೨೪ ವ). [ಪರಿ$_3$ + ಉಡುಗು$_1$]

**ಪರಿಯೋಗ** (ನಾ). ೧. ಚೆನ್ನಾಗಿ ಸೇರುವುದು: 'ಪರಿಯೋಗಿಸು' ಪರಾ. ೨. ಚುಚ್ಚುಮಾತನ್ನಾಡುವುದು; ಕೊಂಕುನುಡಿ: "ಪರಿಯೋಗವಮದುಪಾಲಂಭಮೆನೆ ಚುನ್ನವಾಡಿ ಬೆಸಗೊಂಬುದಕೆ ಪೆಸರೆನಿಕ್ಕುಂ" (ಮಂಗರಾ. ೨೭-೭). [ಸಂ.]

**ಪರಿಯೋಗಿಸು** (ಕ್ರಿ). ಚೆನ್ನಾಗಿ ಸೇರಿಸು,—ಕೂಡಿಸು: ಪೂಗಣೆಯವನ ಕಿಚ್ಚು ನೂರ್ಮಡಿಯಾಗಿ ಮುಂದೆಯುಪಾಯವಂ ಪರಿಯೋಗಿಸುವುದು (ಬಸಪು. ೪೫-೩). [ಪರಿಯೋಗ + -ಇಸು$_3$]

**ಪರಿರಂಜಿತ** (ಗು). ಬಹಳವಾಗಿ ಪ್ರಕಾಶಿಸುವ,—ಶೋಭಿಸುವ: ಶ್ರೀಸ್ತನಸುಕುಂಕುಮರಜಸ್ತತಿವಿಲೇಪನಗಭಸ್ತಿಪರಿರಂಜಿತ ನಿಜೋನ್ನತವಿಶಾಲೋರಸ್ಥಲಪರಿಸ್ಫುರಿತಕೌಸ್ತುಭವಿಭೂಷಣರುಚಿಸ್ತಬಕಿತಾಖಿಳನಭಂ . . . ಎಸೆದಂ ಫಣಿಪತಲ್ಪಂ(ಜಗವಿ. ೧-೫೦). [ಸಂ.]

**ಪರಿರಂಜಿಸು** (ಕ್ರಿ). ೧. ಅತಿಶಯವಾಗಿ ಶೋಭಿಸು: ಸಂಜೆ ಪರಿರಂಜಿಸುತಿರ್ದುದಪೂರ್ವಶೋಭೆಯಿಂ (ಪುಷ್ಪಪು. ೮-೯೮); ಲವಣಾಂಬುಧಿ ಚೆಲ್ವಂಬೆತ್ತುದು ಭೂಮಂಡಲಮೆಂಬಿಂದುವನೊತ್ತಿ ಬಳಸಿ ಪರಿರಂಜಿಪ ಪರಿವೇಷಂ ತಾನೆಂಬಂತೆ (ಜಯಕಾ. ೧-೨೯); ತೆರೆವೊಯ್ದಿಂ ಕಂಪಿಸದಱ ಪಡಿನೆಳಲ್ ಪರಿರಂಜಿಸೆಯುಂ(ರಾಜಶೇ. ೬-೨೪ ವ). ೨. ಅಧಿಕವಾಗಿ ಆನಂದವನ್ನುಂಟು ಮಾಡು,—ಆಹ್ಲಾದಕರವಾಗಿರು: ಪರಿರಂಜಿಸುತಿರ್ದುದನುರಾಗಮೆಂಬ ಬೆಳೆಸಿರಿ ಬೆಡಂಗಂ ಬೀಱಲು (ಸೌಂದಪು. ೧೪-೬). [ಪರಿ-$_4$ + ರಂಜಿಸು]

**ಪರಿರಂಭ** (ನಾ). ೧. ಅಪ್ಪುಗೆ; ಆಲಿಂಗನ: ಅಂತು ಸದ್ಯಸ್ಸಂತಾಪಿತಲೋಹಪುತ್ರಿಕಾಪರಿರಂಭಸಂಭವಪ್ಲೋಷಗಲಜ್ಜಾಂಗಲ . . . ಸಾಕ್ರಂದತ್ಸ್ವರಪರಿಗತರ್ ಸೈರಿಸಲಾಱದೆ ತಡದಡಿಸಿ ಪರಿತಂದು (ಆದಿಪು. ೫-೮೭ ವ); ಮಾರುತಿ ಮುಕುಳಿತಹಸ್ತಾಂಬುಜಂ ವೀರಲಕ್ಷ್ಮೀಪರಿರಂಭೋತ್ಸಾಹದಿಂದಾ ಬೆಸನನತಿಬಳಂ ತಂದೆಯಂ ಬೇಡಿಕೊಂಡಂ (ಪಂರಾಪು. ೧೦-೨೧೩); ಮೇಳದ ಚದುರಂತುಟೊಂದು ಪರಿರಂಭದ ಸಂಭ್ರಮಮಂತುಟೊಂದು ಕೂಟದ ಪರಿ ಸತ್ಯಭಾಮೆಯೊಡಗೂಡೆ ಮುರಾರಿಗೆ ಕೂಡಿತುತ್ಸವಂ

(ಜಗವಿ. ೧೧-೫೬). ೨. ಸಂರಂಭ ; ಸಂಭ್ರಮ ; ಸಡಗರ : ಭರತಾಗ್ರಜಗೆ ಯೌವರಾಜ್ಯಾಧಿಪತ್ಯಮಂ ವಿರಚಿಪೊಡೆ ಭೂಸುರರ ಬಾಂಧವರ ಬೆಸಗೊಳಲು ಹರುಷದಿಂದೆಲ್ಲರುತ್ತರಮಿತ್ತ ಪರಿರಂಭ ಚಿತ್ತಕ್ಕೆ ವಿದಿತಮಲ್ತೆ (ವೆಂಕಾರಾ. ೨-೧-೩೪). [ಸಂ.]

**ಪರಿರಂಭಂಗೆಯ್** (ಕ್ರಿ). ಅಪ್ಪು ; ಆಲಿಂಗಿಸು: ತದ್ವಾಗ್ವಧುವಂ ಪರಿರಂಭಂಗೆಯ್ದಿರ್ಪಂ ವಿರಿಂಚಿ (ತ್ರಿಪುವಿ. ೯-೪೧). [ಪರಿರಂಭ + ಕೆಯ್$_1$]

**ಪರಿರಂಭಣ** (ನಾ). = ಪರಿರಂಭ ೧ : "ಆಲಿಂಗನಂ, ಉಪಗೂಹನಂ, ಪರಿರಂಭಣಂ . . . ಕ್ರೋಡೀಕರಣಂ-ಈ ೭ ಅಪ್ಪಿಕೊಳುಹ" (ಹಲಾಯು. ೯೩-೪೧೪); ನಿಜಭುಜವಿಜಯಲಕ್ಷ್ಮೀಪರಿರಂಭಣಪ್ರಕಟನದಕ್ಷದಕ್ಷಿಣವಿಷಾಣವಿನ್ಯಸ್ತಹಸ್ತಮುಂ (ಆದಿಪು. ೧೪-೯೦ ವ); ಜೀವಂ ನಿನ್ನಯ ಪರಿರಂಭಣದೆ ಬಂದುದಲ್ತೆ (ಕಾದಂಉ. ೭೪೯); ಪರಿರಂಭಣಂ ಚುಂಬನಂ . . . ಪ್ರಹರಣಂಗಳು ರತಿಪ್ರಾರಂಭದೊಳು ಪಸರಿಸೆ (ಪಚಕಾ. ४-೩೫). [ಸಂ.]

**ಪರಿರಂಭಣಂಗೆಯ್**(ಕ್ರಿ). = ಪರಿರಂಭಂಗೆಯ್: ಉರದೊಳಿಳೆಮುತ್ತಿನೊಜ್ಜರವನೆಳಲಿಡುವಂತೆ ಪರಿರಂಭಣಂಗೆಯ್ದು (ಸೌಂದಪು. ೧೪-೪); ಶಬರಿ ಮುದದಿಂ ಗಾಢಪರಿರಂಭಣಂಗೆಯ್ದು ಮುತ್ತಿನೊಜ್ಜರವವನ ಪಿರಿಯುರದೊಳಿಟ್ಟೊಡನೆ . . . ಪೋದಳು (ರಾಘಚ. ೧೭-೭೧). [ಪರಿರಂಭಣ+ಕೆಯ್$_1$]

**ಪರಿರಂಭಿಸು** (ಕ್ರಿ). ಅಪ್ಪಿಕೊಳ್ಳು ; ಆಲಿಂಗಿಸು : ಕೃಪಾವಾರ್ಧಿಯೊಳಾಳಿ ಮುಳುಂಗಿಸಿ ಪರಿರಂಭಿಸಿ ಮುದ್ದಿಸಿ ತುತಿಸೆ (ಉದ್ಭದೇ. ೭-೩೦). [ಪರಿರಂಭಣ+-ಇಸು$_3$]

**ಪರಿರಕ್ತ** (ಗು). ಬಹಳ ಕೆಂಪಾಗಿರುವ : ಪರಿರಕ್ತದಿವಾಕರಭಾಸುರ ಬಿಂಬಮುದಿಂಬುವಡೆದುದು (ರಾಜಶೇ. ೧೨-೩೧). [ಸಂ.]

**ಪರಿರಕ್ಷ** (ನಾ). ಗವನ ; ಕಾಳಜಿ ; ನಿಗಾ : ಕೊಡುಗತ್ತುಕ್ತಮ ವಸ್ತ್ರವಂ . . . ಪರಿರಕ್ಷಮಾಗೆ [ಪಾಠಾಂ. ಪರಿರಕ್ಷೆ ಮಾಡೆ] ವನಿತಾಸಂಗಕ್ಕೆ ಭೂಪಾಲಕಂ (ಮದತಿ. ೮-೬೨). [ಸಂ.]

**ಪರಿರಕ್ಷಕ** (ನಾ). ೧. ಕಾಪಾಡುವವನು ; ಸಂರಕ್ಷಕ : "ಶರಣಂ ಪರಿರಕ್ಷಕನುಂ" (ವಸ್ತುಕೋ. ೧೩೭-೧೧೬). ೨. ಕಾವಲುಗಾರ. [ಸಂ.]

**ಪರಿರಕ್ಷಣ** (ನಾ). ೧. ಚೆನ್ನಾಗಿ ಸಲಹುವಿಕೆ,—ಕಾಪಾಡುವಿಕೆ: ವ್ರತಪರಿರಕ್ಷಣಂ ಶೀಲಂ ಸಾಕಾರ ನಿರಾಕಾರ ವಿರಹಿತಮುಪವಾಸಂ (ಶಾಂತಿಪು. ೬-೪೯ ವ); ಭಾರತಸಂವಿಧಾನದ ಮತ್ತು ವಿಧಿಯ ಪರಿರಕ್ಷಣ, ಸಂರಕ್ಷಣ ಮತ್ತು ಪ್ರತಿರಕ್ಷಣ ಮಾಡುತ್ತೇನೆಂದೂ . . . ಪ್ರತಿಜ್ಞೆ ಮಾಡುತ್ತೇನೆ (ಭಾಥಾನ. ೩೦). ೨. ಹಾದಿ ಕಾಯುವುದು; ಪ್ರತೀಕ್ಷೆ. [ಸಂ.]

**ಪರಿರಕ್ಷಿಸು** (ಕ್ರಿ). ಕಾಪಾಡು ; ಸಲಹು; ಪಾಲನೆಮಾಡು: ದುರ್ಗಸಿಂಹನನತುಲಪ್ರತಾಪಪರನಂ ಪರಿರಕ್ಷಿಸುತಿರ್ಕನಾರತಂ (ಪಂಚತಂ. ೨-೨೨); ಪರಿರಕ್ಷಿಸದೀ ಸ್ಥಾನಕ್ಕೆರಡಂ ಬಗೆದಳಿದವಂಗೆ . . . ಪಾಪಂ ಸಾರ್ಗುಂ (ಎಇ. XXVIII, ೫-೬೩ ; 1082); ಪರಿರಕ್ಷಿಸಿ ದೇವೇಂದ್ರನ ಶರಧಿ ಶರಾಸನ ತನುತ್ರತತಿಯಂ . . . ದುರ್ಲಂಘ್ಯಪುರದೊಳತಿಬಲನಿರ್ದಂ (ಪಂಂರಾಮಾ. ೧೧-೧೮೫); ಸತ್ಪಥದೊಳ್ಚರಿಯಿಸುವಲಘುಗುಣಪ್ರಾಭೇಂದುಪದಂ ನಮ್ಮಂ ಪರಿರಕ್ಷಿಸುಗೆ (ಜಯಕಾ. ೧-೯). [ಪರಿರಕ್ಷಣ +-ಇಸು$_3$]

**ಪರಿರಚಿಸು** (ಕ್ರಿ). ೧. ಉಂಟುಮಾಡು ಮುರಹರಂ ತನ್ನ ನೇಹದ ಪಿರಿಯ ಕರಿಯನತಿಭರದಿಂದೆ ಪಿಡಿದ ಮೊಸಳೆಯ ಕೂಡೆ ಸಾಸದಿಂ ಪರಿರಚಿಸಿಯುದ್ಧಮಂ ತಪ್ಪುದು (ಸೌಂದಪು. ೧೭-೭೫). ೨. ಅಲಂಕರಿಸು (?): ಉಚಿತದಲಿ ನಿಮ್ಮಡಿಗಳನು ಪರಿರಚಿಸಲಾವೊಲ್ಲೆಸುವೆವು (ಕುಪ್ಯಾಕ. ೬-೫). [ಪರಿ-$_4$ + ರಚಿಸು]

**ಪರಿರಮಿಸು** (ಕ್ರಿ). ಕ್ರೀಡಿಸು ; ಭೋಗಿಸು : ಸೌಂದರದಚ್ಚಜವ್ವನೆಯರೊಳು ಪರಿರಮಿಸುವನಿಗೆ ಮುಪ್ಪುಂಟೆ (ಭರಚ. ೭೬-೧೨). [ಪರಿ-$_4$ + ರಮಿಸು]

**ಪರಿರಾಜಿಸು** (ಕ್ರಿ). ಪ್ರಕಾಶಿಸು ; ಶೋಭಿಸು ; ಒಪ್ಪು : ನಡುವಿರುಳು ನವಿರಿದಿರೆದ್ದು ತನುವಿನೊಳು ಪರಿರಾಜಿಸಲು (ರಾಘಚ. ೧೭-೬೪). [ಪರಿ-$_4$ + ರಾಜಿಸು]

**ಪರಿರುಂದ್ರ** (ನಾ). ಬಹು ದೊಡ್ಡದು ; ಮಹತ್ತಾದುದು : ಪರಿರುಂದ್ರಂ ಭೂತಿಸಾಂದ್ರಂ ಕುಡುಗೆಮಗೆ ವಿತಂದ್ರತ್ವಮಂ ಶ್ರೀವೃಷೇಂದ್ರಂ (ರಾಜಶೇ. ೧-೯). [ಸಂ.]

**ಪರಿಲಂಬಿ** (ಗು). ನೇಲುತ್ತಿರುವ ; ತೂಗಾಡುವ : ವಿನೀಲಘನಾಘನಮನಳಚಿ ಪಡಿದುದು ಮುಕ್ತಾಜಾಲಪರಿಲಂಬಿಲೋಲದುಕೂಲಪತಾಕಾ ವಿರಾಜಮಾನವಿಮಾನಂ (ಆದಿಪು. ४-೮೫). [ಸಂ. ಪರಿಲಂಬಿನ್]

**ಪರಿಲಕ್ಷಿತ** (ಗು). ಲೆಕ್ಕ ಮಾಡಿದ ; ಎಣಿಕೆ ಮಾಡಿದ ; ಪರಿಗಣಿತವಾದ : ಅತಿಸಿತಮೇಕಲಕ್ಷ ಪರಿಲಕ್ಷಿತಯೋಜನದುದ್ದಮಾಳ್ದು ನೀಳ್ದತಿಕಯ ಸಾಮವೇದಮದು ಗೋಪುರಮಾಗಿ ವಿರಾಜಿಕುಂ ಪಯಃಪತಿದಿಶೆಯೊಳ್ (ಶಬಕಂ. ೧-೬೭). [ಸಂ.]

**ಪರಿಲಗ್ನ** (ಗು). ಚೆನ್ನಾಗಿ ಸೇರಿದ,—ಕೂಡಿದ : ಅವನಿಪಜನಕ್ಕೆ ವಂಶಮುನನ್ನಗುಣೋತ್ಕರದಿ ನೆನೆಯಿ ಜನನೀಕುಳವಂಶ[ವಿ]ಶ್ರಾಂತ ಪರಿಲಗ್ನ ಕೀರ್ತಿಯುದೆನ್ನೆನೆ ವಿಮುಳಾನ್ವವಾಯುಧಾಮುಂ ಭೀಮ (ಕಇಅ. ೫೦-೪೧-೩೬ ; 11ನೆಯ ಶತ). [ಸಂ.]

**ಪರಿಲಬ್ಧ** (ಗು). ಗಳಿಸಿದ; ಹೊಂದಿದ ; ಪಡೆದ: ಪರಿಲಬ್ಧಾಗಣ್ಯಪುಣ್ಯಪ್ರಚಯನುಪಚಿತಪ್ರಾಜ್ಯಸಾಮ್ರಾಜ್ಯರಾಗೋತ್ಕರಂ . . . ಒಪ್ಪಿರುತಿರ್ದಂ (ಶಾಂತೀಶ್ವ. ४-೨೯೬). [ಸಂ.]

**ಪರಿಲಿಪ್ತ** (ನಾ). ಚೆನ್ನಾಗಿ ಸವರಿದುದು,—ಬಳಿಯಲ್ಪಟ್ಟುದು : ಪರಿಲಿಪ್ತಂ ಹರಿಚಂದನಂ ಹರಿಯ ಚಿತ್ತಾಹ್ಲಾದಮಂ ಮಾಡಿ ತಾಳ್ದಿರೆ ತನ್ನಾಮುಮಂ (ಪಾರ್ಶ್ವಪು. ೧೪-೯೫). [ಸಂ.]

**ಪರಿಲುಲಿತ,** ಪರಿಲುಳಿತ (ಗು). ೧. ಪ್ರಕ್ಷುಬ್ಧವಾದ; ಕದಡಿದ; ಕಲಕಿದ. **ಪರಿಲುಳಿತ** : ೨. ಬೆರೆತ; ಕೂಡಿದ ; ಮಿಶ್ರಿತವಾದ : ಕರದ ಬಸುಚಿಾನ ಹೊಯ್ಲ ಕಜ್ಜಳಪರಿಲುಳಿತ ನಯನಾಂಬುಗಳ ಕಾತರಪಕಮಲಾಕ್ಷಿಯರು ನೆರೆದುದು (ಕುಪ್ಯಾಗ. ೧೧-೧೫) ; ಶರಣಾಂಘ್ರಿನಖರದರ್ಪಣಮಂಜುರುಚಿಯೊಳಗೆ ಪರಿಲುಳಿತಕಾಯನಾಗುತೆ ತೆಜಂಬೊಳೆವ ತಚ್ಚರಣಸಂತತಿಕೃಪಾಪಾತ್ರನಾಗುತ್ತೆ (ಅರಾಚ. ೧-೧-೭೪). ೩. ಸುರಿಯುತ್ತಿರುವ ; ಹೊಮ್ಮುತ್ತಿರುವ : ಪರಿಲುಳಿತ [ಘ]ರ್ಮಜಲ ಮಂಜರಿ . . . ಇವಳ ರೋಷಮಂ ವಕ್ತ್ರವಿದೆ ವಲಂ ಕನ್ನಡಿಕುಂ (ಕಾವ್ಯಾಪ.೬೯೦) ; ನೃಪಕುಮಾರನ ಹೃದಯದಂತಸ್ಸಾರವನು ನಾರದನು ಕೇಳುತ್ತ ಹರುಷಜಲಪರಿಲುಳಿತ ನೇತ್ರದಲಿ ಸದಮಳನನಪ್ಪಿದನು (ನಿಭಾಗ. ४-೭-೧) ; ಭಕ್ತಿರಸಪರಿಲುಳಿತಸ್ವಾಂತಂ ಸ್ತುತಿಗೆಯ್ದಂ ವಾಕ್ಯಾಂತಂ ಶ್ರೀ ವಿಷ್ಣುವಂ (ವಿಷು ಪು. ೫-೧-೩೯). [ಸಂ.]

**ಪರಿಲುಳಿತ** 'ಪರಿಲುಲಿತ' ನೋ.

**ಪರಿಲೂನ** (ಗು). ಕತ್ತರಿಸಿದ ; ತುಂಡರಿಸಿದ : ಪರಿಲೂನದೈತ್ಯಪ್ರಸರಗಳನಾಳೀವಿನಿಸ್ಸೃತರುಧಿರಬಂಧುಗಳ . . . ಕೊರಳೆಯ ತೊಂಗಲಿನೊಳಂದೆಸೆವ ಚಕ್ರವ ನೋಡಿದನು ದೈತ್ಯಾರಿ ಕೋಪದಲಿ (ಕುಪ್ಯಾಭೀ. ೬-೩೨). [ಸಂ.]

**ಪರಿಲೇಸು** (ನಾ). ಬಹಳ ಚೆನ್ನಾದುದು,—ಉತ್ತಮವಾದುದು : ಲೀಲೆ ಪರಿಲೇಸುವಡೆಯಲ್ಕೆ (ರೀವಣ. ೩-४೮). [ಪರಿ-$_4$ + ಲೇಸು$_1$]

**ಪರಿವಕ್ಕಿ** (ನಾ). ಒಂದು ಬಗೆಯ ಪಕ್ಷಿ: ಪರಿವಕ್ಕಿ ಕಿಪ್ಪ ಕೇಲುವ ಹಂಗ ಹರಡೆಯುು (ಅಬ್ಬಲೂ. ೩-೨೫). [ಪರಿ?+ಪಕ್ಕಿ]

**ಪರಿವಟ್ಟೆ, ಪರಿಪಟ್ಟ, ಪರಿವಟ್ಟು** (ನಾ). ೧. ಕೆಲವು ವಿಶೇಷ ಸಂದರ್ಭಗಳಲ್ಲಿ ಬಟ್ಟೆಯ ಪಟ್ಟೆಯನ್ನು (ಗೌರವಸೂಚಕವಾಗಿ ಭಕ್ತರ) ತಲೆಯ ಸುತ್ತ ಕಟ್ಟುವುದು,—ಸುತ್ತುವುದು : (?). ೨. "ಶಿರಸ್ತ್ರಾಣ, ರುಮಾಲು" (ಕಸೂ್ತಕೋ. ೫೮೭) : "ಪರಿವಟ್ಟ–ಪರಿಪಟ್ಟ=ತಲೆಪಾಗು" (ತದ್ಭಕೋ. ೨೪). **ಪರಿಪಟ್ಟೆ : ೨.** ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. **ಪರಿವಟ್ಟು : ೧.** ದಿವ್ಯ ಸ್ವಯಂವ್ಯಕ್ತಸ್ಥಳಂಗಳನ್ನೈದಲ್ಲಲ್ಲಿ. . .ದೇವಾದಿದೇವರ್ಕಳನ್ನತಿವಿನಯದಿಂ ನಮಿಸಿ ಸ್ತುತಿಸಿ ತೀರ್ಥಪ್ರಸಾದ ಪರಿವಟ್ಟುಗಳಂ ಪರಿಗ್ರಹಿಸಲು (ಅಚಾರ್ಯವಿ. ೧೯-೫೦ ಪ). [<ಪ್ರಾ. ಪಡಿವಟ್ಟಅ=ಒಂದು ಬಗೆಯ ರೇಷ್ಮೆ ವಸ್ತ್ರ./ಸಂ. ಪ್ರತಿಪಟ್ಟಕ./ಕವಿ. ತೆಲು. ಪರಿವಟ್ಟ]

**ಪರಿವಟ್ಟು** 'ಪರಿವಟ್ಟ' ನೋ.

**ಪರಿವಡಯು** (ನಾ). (?) : ತಂಮಡಿಭಾಗದ ಪರಿವಡಯು ಪ್ರಾದ ಮೂಲದ ಭೂಮಿಯಿಂದ (ಸೌಇಎ. ೧೯೩೦, ಮಂಗಳೂರು. ೫೨೬-೩೨ ; 1375). [?]

**ಪರಿವಡಿ**$_1$ 'ಪರ್ಿ$_2$' ಪರಾ.

**ಪರಿವಡಿ**$_2$ 'ಪರಿವಿಡಿ$_2$' ನೋ.

**ಪರಿವಡಿಗೆಯಲ್** 'ಪರಿವಿಡಿಗೆಯಲ್' ನೋ.

**ಪರಿವಡಿದಪ್ಪು** (ಕ್ರಿ). ಕ್ರಮ ತಪ್ಪು : ತ್ರಿಲೋಕೈಕವಂದ್ಯಂ ತ್ರಿಲೋಕಪ್ರಜ್ಞಪ್ತಿಯಂ ಪರಿವಡಿದಪ್ಪದೆ ಪರಿವಡಿಗೆಯ್ವುದುಂ (ಸುಕುಮಾ. ೧೧-೭೭ ಪ). [ಪರಿವಡಿ$_2$ (<ಪರಿವಿಡಿ$_2$)+ತಪ್ಪು$_1$]

**ಪರಿವಡೆ** 'ಪಡಿವಡೆ' ನೋ..

**ಪರಿವತ್ಸರ** (ನಾ). ೧. (ಮುನ್ನೂರ ಅರವತ್ತೈದು ದಿವಸಗಳಿರುವ) ಪೂರ್ಣವರ್ಷ ; ಅಧಿಕಮಾಸವಿಲ್ಲದಿರುವ ಸಂವತ್ಸರ : ಪರಿವತ್ಸ ರಾಧಿವತ್ಸರ ಕ್ಷಯವತ್ಸರಾದ್ಯನೇಕ ಪರ್ಯಾಯಮಾಗಿರ್ಪುದು (ವಿವೇಕ. ೩೨೧) ; ಸಂವತ್ಸರ ಪರಿವತ್ಸರ ಇತ್ಯಾದಿ ರೂಪಗಳಿಂದ ಪುನಃ ಪುನಃ ಪರಿಭ್ರಮಣವನ್ನು ಹೊಂದುತ್ತಿರುವ ಈ ಕಾಲಚಕ್ರದಲ್ಲಿ ಸಕಲಲೋಕಗಳೂ ನೆಲಸಿವೆ (ಋಕ್ಸಾರ. ೨೫೫). ೨. ಒಂದು ವರ್ಷದ ಹೆಸರು : ಇಡಾವತ್ಸರ, ಅನುವತ್ಸರ, ಪರಿವತ್ಸರ ಎಲ್ಲ ಅವ್ಯಕ್ತ ಪರಮಾತ್ಮನೊಬ್ಬನೇ ನಿತ್ಯಾನಿಮಿತ್ತಗಳ ಕಾರಣ (ಜೀದಾನ. ೭೨). [ಸಂ.]

**ಪರಿವರಿ** 'ಪರ್ಿ$_2$' ಪರಾ.

**ಪರಿವರಿಸು** (ಕ್ರಿ). ಬಳಸು ; ಸುತ್ತುಗಟ್ಟು : ನರಗೆ ಮೈಯಿಕ್ಕಿ ಪರಿವರಿಸಿ ಮಂಚದ ಕೆಳಗೆ ಕುಳ್ಳಿರ್ಪುದುಂ (ಸಾನಂತ. ೫-೨೦) ; ಪರಿವರಿಪ ಕಾಳ್ಕಿಚ್ಚು ಮುಂದುಗಡೆ ಕಾಲ್ಪಣ್ಣೆ ಕಪ್ಪು ಬಲಗಡೆ (ಸಮ್ಯಕೌ. ೨-೮೭) ; ಇಂದುವದನೆಯರು . . . ಗೋವಿಂದನನು ಪರಿವರಿಸಿ ನಿಂದರು ಕೂಡೆ ಸಮತಳಿಸಿ (ನಿಭಾಗ. ೧೦-೨೩-೨೭). [ಸಂ. ಪರಿವರಣ+–ಇಸು$_3$]

**ಪರಿವರ್ಜನ** (ನಾ). ೧. ಬಿಡುವುದು ; ತ್ಯಜಿಸುವುದು : 'ಪರಿವರ್ಜಿಸು' ಪರಾ. ೨. ಕೊಲ್ಲುವುದು ; ವಧೆ : "ಪ್ರಮಾಪಣಂ . . . ಪರಿವರ್ಜನಂ, ನಿರ್ವಾಸನಂ . . . ವಧಃ—ಈ ೨೦ ಕೊಲ್ಲುವದಕ್ಕೆ ಹೆಸರುಗಳು" (ಸಿದ್ಧಾಂತಿ. ೨೭೨). [ಸಂ.]

**ಪರಿವರ್ಜಿತ** (ಗು). ಬಿಡಲ್ಪಟ್ಟ ; ದೂರ ಮಾಡಿದ : ಸ್ತ್ರೀಪುನ್ನಪುಂಸಕಮೃಗಪಶುಪರಿವರ್ಜಿತ ವಿವಿಕ್ತಸ್ಥಾನಂಗಳೊಳ್ ನೆಲಸುವ ವಿವಿಕ್ತಾವಾಸಮೆಂಬುದ್ದೆನೆಯ ತಪದೊಳಂ ನೆಜಿದು (ಅಪು.೬-೩೦ಪ). [ಸಂ.]

**ಪರಿವರ್ಜಿಸು** (ಕ್ರಿ). ಬಿಡು ; ತ್ಯಜಿಸು : ಪಿರಿಯ ನಂಬಿಗಳ್ ನಿಜ ತನುವಂ ಪರಿವರ್ಜಿಸಿಯಾ ವ್ಯಾಜದೆ ಪರಧಾಮಕ್ಕೆಯ್ದೆ (ವಿಪ್ಮಚ. ೧೪-೨೩. [ಪರಿವರ್ಜನ+-ಇಸು$_3$]

**ಪರಿವರ್ಣನ** (ನಾ). ಸೊಗಸಾದ ವಿವರಣೆ ; ಉತ್ತಮವಾದ ಬಣ್ಣನೆ: ಆ ಪುರಾಣಕ್ಕಂ ಲೋಕಾಕಾರಕಥನಮುಂ . . . ನಗರ ಸಂಪತ್ಪರಿವರ್ಣನಮುಂ . . . ಎಂದಿಂತವಯವಂಗಳೆಂಟಕ್ಕುಂ (ಆದಿಪು). ೧-೪೨ವ). [ಸಂ.]

**ಪರಿವರ್ತ** (ನಾ). ೧. ಸುತ್ತುವುದು ; ಸುತ್ತಲೂ ಸಂಚರಿಸುವುದು; ತಿರುಗುವುದು. ೨. ಅಲೆದಾಟ ; ಸಂಚಾರ. ೩. ಬ್ರಹ್ಮಾಂಡದ ಅಂತ್ಯಕಾಲ ; ಪ್ರಳಯ : "ಸಂವರ್ತಃ, ಪರಿವರ್ತಃ . . . ಮಹಾಪ್ರಳಯಃ–ಈ ೯ ಪ್ರಳಯಕಾಲಂ" (ಹಲಾಯು. ೨೦-೧೧೭) ; "ಮಹಾಪ್ರಳಯಮೆಂದೆನಲು . . . ಸಂವರ್ತಮೆನಲು ಪರಿವರ್ತಮೆಂದೆನೆ ಜಗ ವಿನಾಶಮಕ್ಕುಂ" (ಮಂಗರಾ. ೨೧-೧೨). ೪. ಒಂದು ವರ್ಷ,—ಸಂವತ್ಸರ. ೫. =ಪರಿವರ್ತಿತ ೪ : ಒಗೆದುದ್ವೇಷ್ಟಿತಮುದು ತಾಂ ಬಗೆ ಪರಿವರ್ತಂ ಕನಿಷ್ಠದಿಂ ಪೊಜಿಮುಡಲುಂ (ಲಾಸ್ಯರಂ. ೪-೯). ೬. [ಜೈನ] ಆಹಾರವಿಷಯದಲ್ಲಿ ಅಧಃಕರ್ಮಾದಿಯಾದ ಹದಿನಾರು ದೋಷಗಳಲ್ಲಿ ಒಂದು. [ಸಂ.]

**ಪರಿವರ್ತನ** (ನಾ). ೧. ಸುತ್ತಲೂ ತಿರುಗುವಿಕೆ : ಇಂತಸಾರಸಂಸಾರ ಚಕ್ರಪರಿವರ್ತನದೊಳಗೆ . . . ಪುಟ್ಟಿ (ಸುಕುಮಾ. ೬-೩೫). ೨. ಅತ್ತ ಇತ್ತ ಚಲಿಸುವುದು ; ಚಲನೆ. ೩. ವಿಶ್ವದ ಅಂತ್ಯಕಾಲ ; ಪ್ರಳಯ : "ಸಂವರ್ತನದೊಳು ಪರಿವರ್ತನಮದೋರಂತೆ ಸಲುಗುಂ" (ಮಂಗರಾ.೧೪೦-೮). ೪. ವಿನಿಮಯ : ಅದಲುಬದಲು : (ಲೋಕಸ. ೧೨೫). ೫. ಬದಲಾವಣೆ ; ಮಾರ್ಪಾಟು : ಚತುರಶೀತಿ ಲಕ್ಷಪ್ರಮಾಣ ಯೋನಿಮುಖಂಗಳೊಳಾವರ್ತನ ಪರಿವರ್ತನದಿಂ ದುರಿತ ವರ್ತಿಯಾಗಿ ನಮೆವ ಸಂಸಾರಿಜೀವಕ್ಕೆ . . . ಮುನಿಪುಂಗವಂ ಪ್ರಸಾದಂಗೆಯ್ದು (ಸುಕುಮಾ. ೫-೩೨ಪ) ; ಶುಕ್ಲಪಕ್ಷಮಲ್ಲದೆ ಸಲೆ ಕೃಷ್ಣಪಕ್ಷ ಪರಿವರ್ತನಮಿಲ್ಲೆನಿಕುಂ ಪುರಾಂತದೊಳ್ (ಜಗವಿ. ೯–೧೦೪) ; ಪರಿವರ್ತನ ವೆಂದರೆ ಬದಲಾವಣೆ. ಇದು ಕಾಲದ್ರವ್ಯಕೃತ್ಯ (ಹಿಂದಸಾ. ೮೨) ; ಇದು ವರೆಗೆ ಬರಿಯ ಲತೆಯಾಗಿದ್ದ 'ಅದು', ಕವಿಯ ಅಂತರ್ಗತಪ್ರತಿಭೆಯ ಸ್ಪರ್ಶಮಾತ್ರದಿಂದ 'ಚೆಲುವೆ' ಯಾಗಿ ಪರಿವರ್ತನ ಹೊಂದಿದೆ (ಭಾವಗೀ.೮). ೬. ತಲೆಕೆಳಗು ; ಅವ್ಯವಸ್ಥೆ ; ಪಲ್ಲಟ : "ಚಲನಂ ಸಂವರ್ತಮುಂ ಪಲ್ಲಟಂ ವ್ಯಸನಂಗಳ್ ಪರಿವರ್ತನಾಖ್ಯ" (ನಾನಾರ. ೧೫೯). ೭. [ಜೈನ] ದ್ರವ್ಯ, ಕ್ಷೇತ್ರ, ಕಾಲ, ಭವ್ಯ, ಭಾವಗಳೆಂಬ ಐದು ಬಗೆಯ ಬದಲಾವಣೆಗಳನ್ನುಳ್ಳ ಸಂಸಾರ : ಸಂಸರಣಂ ಸಂಸಾರಃ ಪರಿವರ್ತನ ಮೆಂದೊಡೇಕಾರ್ಥಂ . . . ದ್ರವ್ಯಪರಿವರ್ತನಂ ಕ್ಷೇತ್ರಪರಿವರ್ತನಂ ಕಾಲ ಪರಿವರ್ತನಂ ಭವಪರಿವರ್ತನಂ ಭಾವಪರಿವರ್ತನಮೆಂದು ತತ್ಪರಿವರ್ತನಂ ಪಂಚವಿಧಂ (ತತ್ತ್ವಪ್ರ. ೮೬) ; ಸಂಸಾರದಲ್ಲಿ ಪರಿಭ್ರಮಣ ಮಾಡುವ ಜೀವಗಳಿಗೆ ದ್ರವ್ಯ . . . ಭಾವ ಎಂಬ ಐದುವಿಧದ ಪರಿವರ್ತನಗಳಾಗುತ್ತವೆ (ಜೈನಪ. ೩೦೬ ಅ೨ಟಿ). ೮. [ವಿಜ್ಞಾ] ವಿದ್ಯುತ್‌ಪ್ರವಾಹದ ಗತಿಯನ್ನು ಬದಲಾಯಿಸುವ ಸಲಕರಣೆ : ಪರಿವರ್ತನದಿಂದ (Commutator) ತಿರುಗಿದಾಗ ವಿದ್ಯುತ್ಪ್ರವಾಹದ ದಿಕ್ಕನ್ನು →→ಈ ಬಾಣಗಳು ಸೂಚಿಸುತ್ತವೆ (ತಿಲ್ಪಸಾ. ೨೩೬). [ಸಂ.]

**ಪರಿವರ್ತನಕರಣ** (ನಾ). [ಕಾಮಶಾ] ರತಿಕ್ರೀಡೆಯಲ್ಲಿ ಒಂದು ಬಗೆ : ತರುಣಿ ಮಗುಳ್ದೊಜಗಿರುತೆ . . . ಅಪ್ಪುತೆ ನೆರೆಯಲ್ ಪರಿವರ್ತನ ಕರಣಂ (ಜನಪ. ೯-೨೭) ; ಈ ಭಾವದಲ್ಲಿ ಸ್ತ್ರೀ ತನ್ನ ಎರಡು ತೊಡೆಗಳ ನಗಲಿಸಿ ಮಾಡುತ್ತಿರಲು ಹರುಷದಿಂ ರಮಿಸೆ ಪರಿವರ್ತನಕರಣಂ (ಕಾಮಶಾ. ೨೩೬). [ಪರಿವರ್ತನ+ಕರಣ]

**ಪರಿವರ್ತನಕಾಲ** (ನಾ). ಬದಲಾವಣೆ ಹೊಂದುವ ಸಮಯ :

ಒಂದು ಜೀವವು . . . ಹೆಚ್ಚುಕಾಲ ಅರ್ಧಪುದ್ಗಲಪರಿವರ್ತನಕಾಲದ ಒಳಗೆ ಅವಶ್ಯವಾಗಿ ತಿರುಗಿ ಸಮ್ಯಕ್ತ್ವವನ್ನು ಸಂಪಾದಿಸುವುದು (ಜೈನಪ. ೩೧೬).
[ಪರಿವರ್ತನ+ಕಾಲ]

**ಪರಿವರ್ತನಗೊಳ್ಳು** (ಕ್ರಿ). ಬದಲಾವಣೆಯಾಗು ; ಮಾರ್ಪಾಟು ಹೊಂದು : 'ಈ ದೆಸೆಯಿಂದ' ಎಂಬುದು ಆತ್ತಣಿಂ ಎಂಬ ರೂಪದ ಪರಿವರ್ತನಗೊಂಡ ರೂಪವೆಂದು ತೋರುತ್ತದೆ(ದ್ರಾವಿವಿ. ೨೨೮).
[ಪರಿವರ್ತನ+ಕೊಳ್ಳು$_1$ (<ಕೆಯ್ಕೊಳ್$_1$)]

**ಪರಿವರ್ತನಶೀಲ** (ಗು). ಬದಲಾವಣೆಯನ್ನು ಹೊಂದುವ ; ಮಾರ್ಪಾಡಾಗುವ : ನನ್ನ ಅಂಧತೆಯು ನನ್ನ ಕಣ್ಣಿಗೆ ಒಂದು ಅಂಜನ ತೊಡೆದುಬಿಟ್ಟು ನನ್ನನ್ನು ಈ ಪರಿವರ್ತನಶೀಲಸಂಸಾರದಿಂದ ಹೊರಗೆ ಕರೆದೊಯ್ದಿದೆ (ಇಪ್ಪಕ. ೨೧೨). [ಸಂ.]

**ಪರಿವರ್ತನೆ** (ನಾ). ೧. ಬದಲಾವಣೆ ; ಮಾರ್ಪಾಟು : ಮಾರ್ಗಮೂಟಾಗಿರುತಿಹವು ಸಂಪೂರ್ಣಧನ ಗುರುಪರಿಚರಿಯ ಪರಿವರ್ತನೆಗಳಿಂದಿನಿತನತಿಗಳೆದು ತಿರುಗಿ ಬಂದೊಡೆ ನಾಲ್ಕನೆಯ ಮತ ದೊರಕಲರಿವುದೆ ಕಲೆಗಳನು ಸಂವರಿಸುವ ನರೋತ್ತಮರಿಗೆ (ಕುಪ್ಯಾಉ. ೪-೮೮) ; ಕಾವೇರಿಯ ಮನಮಂದಿರದಲ್ಲಾಗುತ್ತಿದ್ದ ಪರಿವರ್ತನೆಗೆ ಮಿತಿಯಿರಲಿಲ್ಲ (ಕಾವೇರಿ. ೩೬) ; ಪೈರುಗಳ ಪರಿವರ್ತನೆಯ ವಿಷಯವಾಗಿ ಎರಡು ಮಾತುಗಳನ್ನು ಇಲ್ಲಿ ಹೇಳಬಹುದು (ವ್ಯವಸ. ೬೪). ೨. ಬಳಕೆ ; ಚಾಲ್ತಿ ; ಪ್ರವರ್ತನೆ : ಪಿಂದೆನಿಪ ನಾಟ್ಯಶಾಸ್ತ್ರದ ಪರಿವರ್ತನೆ ಧರೆಗೆ ಬಂದ ಪರಿಯಂ ನೀಂ ವಿಸ್ತರಿಸು (ಲಾಸ್ಯರಂ. ೧-೧೫).

**ಪರಿವರ್ತನೆಯಾಗು** = ಬದಲಾವಣೆ ಹೊಂದು ; ಮಾರ್ಪಾಟಾಗು : ಜೀವನದಲ್ಲಿ ವಿಜ್ಞಾನವನ್ನು ಅವಲಂಬಿಸಿರುವ ಕ್ಷೇತ್ರಗಳು ಅಷ್ಟೇ ವೇಗವಾಗಿ ಪರಿವರ್ತನೆಯಾಗುತ್ತಿವೆ (ಶಿಕ್ಷದ. ೨೯೩). [ಸಂ. ಪರಿವರ್ತನ]

**ಪರಿವರ್ತನೆಗೊಳಿಸು**(ಕ್ರಿ). ಬದಲಾವಣೆ ಹೊಂದುವಂತೆ ಮಾಡು ; ಮಾರ್ಪಡಿಸು : ತಂದೆಯ ವೇಸ್ಟ್ ಪೇಪರ್ ಬ್ಯಾಸ್ಕೆಟ್ಟ(Waste Paper basket)ನ್ನು ತಮ್ಮ ಹಡಗನ್ನಾಗಿ ನಿಮಿಷಮಾತ್ರದಲ್ಲಿ ಪರಿವರ್ತನೆಗೊಳಿಸಿಬಿಡುವರು (ಮೊಗ್ಗು. ೫೯).
[ಪರಿವರ್ತನೆ+ಕೊಳ್$_1$+-ಇಸು$_3$]

**ಪರಿವರ್ತನೆಗೊಳ್ಳು** (ಕ್ರಿ). ಬದಲಾವಣೆಯಾಗು ; ಮಾರ್ಪಾಟು ಹೊಂದು: ಮನುಷ್ಯನ ಸ್ವಭಾವವಾದರೂ ಹೀಗೇ ಪರಿವರ್ತನೆಗೊಳ್ಳುತ್ತದೆಂದು ನಿರ್ದಿಷ್ಟವಾಗಿ ಹೇಳುವುದು ಅಸಾಧ್ಯ (ಹಳ್ಳಿಹಾ.೧೦೭); ಕಾತ್ಯಾಯಿನಿಗೆ ತೃಪ್ತಿಯಾಗಿ ಹೃದಯ ಪರಿವರ್ತನೆಗೊಂಡು ಮತ್ತೆ ಕಾತ್ಯಾಯಿನಿಯಂತೆಯೆ ವರ್ತಿಸಬಹುದೆಂದು . . . ಯೋಚಿಸಿದ್ದನು (ಪುನರು. ೧೯೬).
[ಪರಿವರ್ತನೆ+ಕೊಳ್ಳು$_1$(<ಕೊಳ್$_1$)]

**ಪರಿವರ್ತಿತ** (ಗು). ೧. ಬದಲಾವಣೆಯಾದ ; ಮಾರ್ಪಾಟು ಹೊಂದಿದ. ೨. ಹಿಂದಕ್ಕೆ ತಿರುಗಿಸಿದ,—ಹೊರಳಿಸಿದ : ಪರಿವರ್ತಿತಾವಲೋಕನನಿರತಂಗಳ್ . . . ತುರಗರತ್ನಹೇಷಾರವಕ್ಕೆ ಮಾಣ್ದುವು ಹರಿಗಳ್ (ಶಾಂತಿಪು. ೧೧-೭೩). (ನಾ). ೩. ಬದಲಾವಣೆಯಾದುದು; ಮಾರ್ಪಾಟು ಹೊಂದಿದುದು : ಅಸಂಸ್ಕೃತವರ್ತನೆಗೆ ಪರಿವರ್ತಿತವಾದ ರಾಜ್ಯ ಸುಸಂಸ್ಕೃತಜೀವನವನ್ನು ಸಂಪಾದಿಸುವ ಸನ್ನಿವೇಶಗಳು ಕಲ್ಪಿತವಾದವು(ಮುಕ್ಸ್ವರ. ೧೧೪ ಪೀಠಿಕೆ) ; ಅವುಗಳಲ್ಲಿ ಗಮನಾರ್ಹ ವಿವರಣೆಯೆಂದರೆ, ತೆಲುಗುಭಾಷೆಯಲ್ಲಿ ಪೂರ್ವದ್ರಾವಿಡದ . . . ಮೂಲಸ್ವರಗಳು ಪರಿವರ್ತಿತವಾಗಿವೆ ಎಂಬುದು (ದ್ರಾವಿವಿ.೧೩೨). ೪. [ನಾಟ್ಯ] ನಾಲ್ಕು ಹಸ್ತಕರಣ ಭೇದಗಳಲ್ಲಿ ಒಂದು; ☞"ವ್ಯಾವರ್ತಿತಕರಣದಲ್ಲಿ ಬಗ್ಗಿರುವ ಬೆರಳುಗಳನ್ನು ಅದೇ ಕ್ರಮದಿಂದ ನೆಟ್ಟಗೆ ಮಾಡುತ್ತ ಕೈಯನ್ನು ಎದೆಯಿಂದ ಹೊರಕ್ಕೆ ತರುವುದು" (ಲಾಸ್ಯರಂ. ೨೮೬ ಗದ್ಯಾನುವಾದ) : ಆವೇಷ್ಟಿತ, ಉದ್ವೇಷ್ಟ, ವ್ಯಾವರ್ತಿತ, ಪರಿವರ್ತಿತ—ಈ ನಾಲ್ಕು ಹಸ್ತಕರಣಭೇದಂಗಳ್ (ಲಾಸ್ಯರಂ. ೪-೬ ಪ). ೫. ಹತ್ತು ಜಂಘಾಭೇದಗಳಲ್ಲಿ ಒಂದು ; ☞"ಪಕ್ಕಕ್ಕೆ ತಿರುಗದಂತೆ ಜಂಘೆಯನ್ನು ಅಡ್ಡಲಾಗಿ ಮಾಡುವುದು" (ಲಾಸ್ಯರಂ. ೨೬೪ ಗದ್ಯಾನುವಾದ) : ಆವರ್ತಿತ, ನತ . . . ಪರಿವರ್ತಿತ [ಪಾಠಾಂ. ನಿರ್ವರ್ತಿತ] . . . ಕಂಪಿತ—ಈ ಹತ್ತು ಜಂಘಾಭೇದಂಗಳ್ (ಲಾಸ್ಯರಂ. ೨-೧೪೪ ಪ) ; ಓಸರಿಸದೆಯಡ್ಡಮಾಗೆ ಪರಿವರ್ತಿತಮುಂ (ಲಾಸ್ಯರಂ. ೨-೧೪೬). [ಸಂ.]

**ಪರಿವರ್ತಿಸು** (ಕ್ರಿ). ೧. ಬದಲಾವಣೆಯಾಗು ; ಮಾರ್ಪಾಟು ಹೊಂದು: ದ್ರವ್ಯಕ್ಷೇತ್ರಕಾಲಭವಭಾವಂಗಳೊಳ್ ಮೞಿದಪ್ಪೊಡಂ ಪರಿವರ್ತಿಸದೆ ಬೇಱೆವೇಱೆ ಪರಿವಡಿದಪ್ಪದೆ ಪುಟ್ಟುವುದು ಚಕ್ರಪರಿವರ್ತನಮೆಂಬುದು (ಸುಕುಮಾ. ೬-೬ ಪ) ; ಸಿರಿಗೆ ದರಿದ್ರತೆ . . . ಯೌವನಕ್ಕಮಭಿಘಾತಮೆನುತ್ತಿರೆ ಕಂಡುಂ ಕೇಳ್ದುಂ ಗಡ ಪರಿವರ್ತಿಸರಾತ್ಮಹಿತದೊಳತಿದುರ್ಮತಿಗಳ್ (ಚಂದ್ರಪು. ೨-೩೭). ೨. ನಡೆ ; ಚಾಲ್ತಿಯಲ್ಲಿರು : ವನಧಿನಭೋನಿಧಿಪ್ರಮಿತಸಂಖ್ಯೆ ಶಕಾವನಿಪಾಳಕಾಳಮಂ ನೆನೆಯಿಸೆ ಚಿತ್ರಭಾನು ಪರಿವರ್ತಿಸೆ . . . ತಾಳ್ದಿದಂ ಜನನುತನಿನ್ದ್ರರಾಜನಖಿಳಾಮರರಾಜಮಹಾವಿಭೂತಿಯಂ (ಎಕ. II, ೧೩೩-೧೫೩ ; 982). ೩. ಒಂದಾದ ಮೇಲೊಂದರಂತೆ ಬರು ; ಅನುಕ್ರಮವಾಗಿ ಬರು : ಎರಡು ಯುಗವೊಂದೆ ಕಲ್ಪಂ ಶುಕ್ಲಕೃಷ್ಣಪಕ್ಷಂಗಳವೋಲ್ ಪರಿವರ್ತಿಸುಗುಂ(ಪಂಚಸೂ. ೧-೫೯). ೪. ವರ್ತಿಸು ; ಇರು ; ಉಳಿ : ಪುರುಷನಿಧಿ ದಾಸಿ ಮಾಡಿದ ವರಧರ್ಮ್ಮಂ ಚಂದ್ರಸೂರ್ಯ್ಯರುಳ್ಳನ್ನೆವರಂ ಪರಿವರ್ತ್ತಿಸುವನ್ನಾಗಿರೆ ಬರೆದಂ ಚಾಮುಂಡರಾಯನೀ ಶಾಸನಮಂ (ಸೌಇಇ. XI-i, ೯೨-೪೮ ; 1054). ೫. ಬದಲಾವಣೆ ಮಾಡು ; ಮಾರ್ಪಾಟು ಮಾಡು : ಮನುಷ್ಯರ ಸ್ವಭಾವ ಪರಿವರ್ತಿಸುವ ಯಂತ್ರವೆಲ್ಲಿಯಾದರೂ ಉಂಟೇ ? (ಹಳ್ಳಿಹಾ. ೧೧೪) ; ಕಳ್ಳನನ್ನೂ ಪರಿವರ್ತಿಸಬಹುದು (ದೇಶಧು. ೪೮) ; ಸೂರ್ಯಕಿರಣಗಳ ಕೇಂದ್ರೀಕರಣ, ಅವುಗಳನ್ನು ಶಕ್ತಿಯಾಗಿ ಪರಿವರ್ತಿಸುವುದು . . . ಮೊದಲಾದ ವಿಭಾಗಗಳಲ್ಲಿ ಅನೇಕ ವಿಜ್ಞಾನಿಗಳು ಸಂಶೋಧನೆ ನಡೆಸುತ್ತಿದ್ದರು (ಕಾಲಯಾ. ೯೧). ೬. ವಿನಿಮಯಮಾಡು : "ಅದಲು ಬದಲು ಮಾಡು ; ಪರಿವರ್ತಿಸು" (Commute. ಪತ್ರಿನಿ.೨೧). ೭. ಅನುವಾದ ಮಾಡು ; ಭಾಷಾಂತರಿಸು : ಈ ಗೀತಾಂಜಲಿಯನ್ನು ಆಂಗ್ಲಭಾಷೆಗೆ ಪರಿವರ್ತಿಸಿದಾಗ ಆಂಗ್ಲೇಯರು ಪಟ್ಟ ಉತ್ಸಾಹ, ಆನಂದ ವರ್ಣಿಸಲಸದಳ (ಧರ್ಮಸಾ. ೮೧). [ಪರಿವರ್ತನ+-ಇಸು$_3$]

**ಪರಿವರ್ಧಕ** (ನಾ). ೧. ಅಭಿವೃದ್ಧಿಯನ್ನುಂಟುಮಾಡುವುದು : ಸಂದಧಿಪತಿಯಂ ದೋಷಾಕರನಂತರ್ಮಲಿನನಾಗಿಯುಂ ಪೆರ್ಚಿಸುಗುಂ ಪರಿಣತಕಲಾಕಲಾಪಂ ಪರಿವರ್ಧ[ಕ]ಮಕ್ಕುಮತಿವಿರುದ್ಧಾತ್ಮಕ[ಮುಂ] (ಕವಿರಾ. ೩-೩೫). ೨. ಕುದುರೆಯನ್ನು ಸಾಕುವವನು ; ಕುದುರೆಯ ಪಾಲಕ ; ಕಾಸ್ತಾರ : ತತ್ಪ್ರಭಾಮಂಡಲಗಳಿತ ಹಿಮಸ್ಪರ್ಶದಿಂ ಲಬ್ಧಸಂಜ್ಞೆಯಾಗಿ ಮರುಳ್ಗೊಂಡಂತೆ ಇಂದ್ರಾಯುಧಮಿರ್ಪೆಡೆಗೆ ಪರಿತಂದು ಪರಿವರ್ಧಕಹಸ್ತದಿಂದದಂ ಕೆಗೆದು (ಕಾದಂಉ. ೬೦೩). [ಸಂ.]

**ಪರಿವರ್ಧಿತ** (ಗು). ೧. ಅಭಿವೃದ್ಧಿ ಹೊಂದಿದ ; ಬೆಳವಣಿಗೆಯಾದ: ಶಶಿಮಣಿಪ್ರಾಸಾದಪರಿಗಳಿತ ಸದಮಳಜಳಪ್ರವಾಹನಿಷ್ಪ್ರಯಾಸಪರಿವರ್ಧಿತಾನಲ್ಪಕಲ್ಪತರುಪಂಕ್ತಿಸಂತತದರದಳಿತ ಪರಿಮಳಭರಿತಕುಸುಮವಿಸರವಿಸರದ ಮಂದಮರಂದರಸ ಕದಂಬಕರ್ದಮಿತ ವಿಧು ರವಿವೀಥಿಸನಾಥಮುಂ (ರಾಜಶೇ. ೧೪-೧೦೬ ಪ). ೨. ಹೆಚ್ಚಾದ ; ವೃದ್ಧಿಯಾದ. [ಸಂ.]

**ಪರಿವರ್ಧಿನಿ** (ನಾ). = ಪರಿವರ್ಧಿನೀಷಟ್ಪದಿ : ಶರ ಕುಸುಮ ಭೋಗ ಭಾಮಿನಿ ಪರಿವರ್ಧಿನಿ ವಾರ್ಧಕಂಗಳೆಂದಾಱುತೆಱಂ (ಛಂದೋಂಬು. ೫-೨೫೯ ಅಡಿಟ) ; ಇದು ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ,

ವಾರ್ಧಕ ಎಂದಾರು ವಿಧವು (ಕೈಪಿಡಿ. ೯೫). [ಸಂ. ಪರಿವರ್ಧಿನೀ]

**ಪರಿವರ್ಧಿನಿಷಟ್ಪದಿ** (ನಾ). = ಪರಿವರ್ಧಿನೀಷಟ್ಪದಿ: ಪಾದಗಳೆರಡ ಱೊಳುತ್ತರದೆರಡುಂ ಪಾದದೆ ಷೋಡಶ ಷೋಡಶಮಾತ್ರೆಯು . . . ಕೇಳಿಂತಿದು ನಿಶ್ಚಯ ಪರಿವರ್ಧಿನಿಷಟ್ಪದಿಗೆ (ಛಂದೋಂಬು. ೫-೨೪ ಅಡಿಟ).
[ಪರಿವರ್ಧಿನಿ + ಷಟ್ಪದಿ]

**ಪರಿವರ್ಧಿನೀಷಟ್ಪದಿ** (ನಾ). [ಛಂದ] ಒಂದು ಷಟ್ಪದಿಯ ಹೆಸರು; "ಚತುರ್ಮಾತ್ರಾಗಣವು ಒಂದೆರಡು ನಾಲ್ಕಯ್ದನೆಯ ಪಾದ ಗಳಲ್ಲಿ ನಾಲ್ಕು ನಾಲ್ಕೂ, ಮೂರಾರನೆಯ ಪಾದಗಳಲ್ಲಿ ಆರಾರೂ ಒಂದು ಗುರುವೂ ಬಂದರೆ ಪರಿವರ್ಧಿನೀ ಷಟ್ಪದಿಯಾಗುವುದು" (ಕೈಪಿಡಿ. ೯೬). [ಸಂ. ಪರಿವರ್ಧಿನೀ ಷಟ್ಪದೀ]

**ಪರಿವರ್ಧಿಸು** (ಕ್ರಿ). ೧. ಬೆಳೆ; ಅಭಿವೃದ್ಧಿಯನ್ನು ಹೊಂದು: ಮುನ್ನವಿಾತನು ಮಾತೃಕಾಸ್ತನ್ಯದಿಂ ಪರಿವರ್ಧಿಸದೆ ಬಳಿಕ್ಕಿನಿತು ನವನೀತ ಮಂ ಹಸಿದಿಂದುಂಡು ಬಳೆಯದೆ (ಅರಾಚ. ೨-೮-೩೭). ೨. ಅಭಿ ವೃದ್ಧಿಗೊಳಿಸು: ಕನ್ನೆಯಿನೀ ವನಕ್ಕೆ ಮಧುಲಕ್ಷ್ಮಿಯೆನಗ್ಗದ ಲಕ್ಷ್ಮಿ ಯಾದುದೆಂಬನ್ನೆವರಂ ವಿಳಾಸರಸದಿಂ ಪರಿವರ್ಧಿಸುತುಂ ವನಾಳಿಯಂ . . . ದನುಜನಂದನೆ ಬಂದಳದೊಂದು ಲೀಲೆಯಿಂ (ಜಗವಿ. ೧೭-೧೦೦).
[ಪರಿವರ್ಧನ$_0$ + -ಇಸು$_3$]

**ಪರಿವರ್ಹ** (ನಾ). ೧. ಸುತ್ತುಗಟ್ಟುವ ವಸ್ತು; ಬಳಸಿರುವುದು. ೨. ಪರಿಜನ; ಪರಿವಾರ. ೩. ಉಪಕರಣ; ಸಲಕರಣೆ; ಸಾಧನ: "ಪರಿವ[ಪಾಠಾಂ. ಬ]ರ್ಹಂ ಪರಿಚ್ಛದಂ ನೆರಹಿದುಪಕರಣಮಕ್ಕುಂ" (ಮಂಗರಾ. ೬೦-೧೫). ೪. ರಾಜಲಾಂಛನ, — ಚಿಹ್ನೆ. ೫. ಸುಸಜ್ಜಿತ ವಾಗಿರುವುದು; ಓರಣ. ೬. ಸಂಪತ್ತು; ಆಸ್ತಿ; ಐಶ್ವರ್ಯ.
[ಸಂ.]

**ಪರಿವಹ** (ನಾ). ಆವಹ, ಪ್ರವಹ, ಉದ್ವಹ, ಸಂವಹ, ವಿವಹ, ಪರಿವಹ ಮತ್ತು ಪರಾವಹ ಎಂಬ ಏಳು ಬಗೆಯ ವಾಯುಗಳಲ್ಲಿ ಒಂದು; ನಕ್ಷತ್ರಗಳನ್ನು ಚಲಿಸುವಂತೆ ಮಾಡುವ ವಾಯು; ☞ ಗಗನ, ಸ್ಪರ್ಶನ, ವಾಯು, ಅನಿಲ, ಪ್ರಾಣ, ಪ್ರಾಣೇಶ್ವರ ಮತ್ತು ಜೀವ ಎಂಬ ಏಳು ಬಗೆಯ ವಾಯುಗಳೂ ಉಂಟು: ತಾರಾನಿವಹವ ನಡೆಯಿಪ ಪರಿವಹ ಪವನನ ಮಾರ್ಗವಿದು (ಶಾಕುಂತ. ೧೦೦-೧೬೯). [ಸಂ.]

**ಪರಿವಳಯ** (ನಾ). ಸುತ್ತಣ ಪ್ರದೇಶ: ಮುಖ್ಯಗಣನಾಯಕರು ತದ್ರೂಪಗಳನೆ ಧರಿಸಿ ಪಿಂತೆ ಪಿಂತೆಸೆದು ಪರಿವಳಯಮಂ ಕಾಯ್ವುತಿರ್ಪರ್ (ಲಚಿಂ. ೧೭-೭); ಚರು ತಿಲದ ರಾಶಿಗಳ . . . ಪರಿವಳ[ಪಾಠಾಂ. ಲೆ] ಯದಾಮಿಕ್ಷೆಗಳ ಪರಿಕರದ ವಿವಿಧದ್ರವ್ಯಮಯಬಂಧುರದಲೆಸೆದುದು ಯಜ್ಞ ವಾಟಿಕೆ ರಾಜಸೂಯದಲಿ (ಕುವ್ಯಾಸ. ೭-೩೦). [ಸಂ. ಪರಿವಲಯ]

**ಪರಿವಾಣ** 'ಪರಿಯಾಣ$_1$' ನೋ.

**ಪರಿವಾದ** (ನಾ). ೧. ನಿಂದೆ; ಬಯ್ಗುಳ; ತೆಗಳಿಕೆ: "ಪರಿವಾದ ಮದವರ್ಣವಾದಮದುಪಕ್ರೋಶಮೆನೆ ನಿಂದೆಯಕ್ಕುಂ" (ಮಂಗರಾ. ೨೭-೪): ಪರಿವಾದಂ ಪೈಶೂನ್ಯಂ ಪರಮರಹಸ್ಯಪ್ರಕಾಶಕರಣಂ ಕೂಟಾ ಕ್ಷರ[ನಿಧಿ]ನಿಕ್ಷೇಪಾದ್ಯಪಹರಣಂ ಸತ್ಯವ್ರತಕ್ಕತಿಕ್ರಮನುಕ್ಕುಂ (ವರ್ಧಮಾ. ೭-೯); ಆ ದುರಾಗ್ರಹಿ ಲೋಕಜನಪರಿವಾದಪದನಿರ್ಭೀತನಕ್ಷವಿನೋದ ಕರ್ದಮಮುಗ್ಗನೊಡ್ಡಿದನಾ ಧನಂಜಯನ (ಕುವ್ಯಾಸ. ೧೪-೧೪); ಆ ಮುರಹರನ ಪರಿವಾದಮಂ ಮಾಳ್ಪುದೇಕೆಂದು ದೇಶಿಕೋತ್ತಮನುಸಿರು ತಿರ್ದನೊಲವಿಂ (ಸಿದ್ಧೇಪು. ೬-೭); ಪರಪರಿವಾದಮಂ ನೆಗಳ್ವುದೇ ಜಪಂ . . . ಎನೆ ದುರ್ಜನತಾಪಸನೇಂ ಕೃತಾರ್ಥನೋ (ರಾಜಶೇ. ೧-೪೦). ೨. ದೂರು; ಅಪವಾದ; ಆರೋಪಣೆ: "ಅಪವಾದಃ, ಉಪಕ್ರೋಶಃ, ನಿರ್ವಾದಃ, ಅವರ್ಣವಾದಃ, ಪರಿವಾದಃ, ಗರ್ಹಾ, ನಿಂದಾ, ಜುಗುಪ್ಸಾ — ಈ ೮ ಅಪವಾದದ ನಾಮಂ" (ಹಲಾಯು. ೨೪-೧೪೭); ನೆಗಟ್ದ ಕುಲದ ಚಲದೊಳ್ಪಿನ ಭೂಪನನೆನಗೆ ತೀರನೆಸಗೆಂಡೊಡೆ ಸದ್ವಿನಯು ಮಮಿಱುದುರ್ಕೆ ಕುಲಹೀನನೆಂಬ ಪರಿವಾದವಿಾಗಳೆನಗಾಗಿರದೇ (ಪಂಪಭಾ. ೧೨-೫೪); ಪರಿವಾದಕ್ಕಂಜಿ ತಾಂ ಮಾನಸಿಕೆಯನಧಿಕಂ ತಾಳ್ದಿ ಮೇಲಾಗಿ ವಿಶ್ವಂಭರೆಯಂ ನಿಃಕ್ಲೇಶದಿಂ ತಾಳ್ದಿದ ಹರಿಯೆನಿಪಂ ವಿಕ್ರಮಾದಿತ್ಯದೇವ (ಎಕ. VII, ಶಿಕಾ. ೧೦೦-೧೦; 1129); ಆದಿಬೊಮ್ಮಕೆ ಮಗುವುತನ ಸಂಪಾದಿಸಿತುಯೆಂಬುದು ಮೃಷಾಪರಿವಾದವಿದು (ತೊರರಾ. ೧-೮-೭೪).
೩. ವೀಣೆ ಮುಂತಾದ ತಂತೀವಾದ್ಯಗಳನ್ನು ನುಡಿಸಲು ಉಪ ಯೋಗಿಸುವ ಸಲಕರಣೆ, — ಸಾಧನ. [ಸಂ.]

**ಪರಿವಾದಕ** (ನಾ). ೧. ಆರೋಪಣೆ ಹೊರಿಸುವವನು; ದೂರು ಹೇಳುವವನು. ೨. ವಾದ್ಯವನ್ನು ನುಡಿಸುವವನು. ೩. ಒಂದು ಬಗೆಯ ವಾದ್ಯ: ಆಗಳ್ ನಾಕಲೋಕವಾದ್ಯಂಗಳೊಳನೇಕಭೇದಂ ಗಳಪ್ಪ ಪವಾದಕ ಪರಿವಾದಕ ವಾದ್ಯಂಗಳೊಳ್ . . . ಗೀತಂಗಳನುಕ್ರಮ ದೊಳೆ ನೆಗಟೆ (ಆದಿಪು. ೭-೧೧೯ ವ). 'ಉಪವಾದಕ' ಪಠಾ. [ಸಂ.]

**ಪರಿವಾದಶೀಲ** (ನಾ). ನಿಂದಿಸುವ ಸ್ವಭಾವವುಳ್ಳವನು; ನಿಂದಕ: ವೇದಕರ್ಮವಿರೋಧಿಗಳು ಪರಿವಾದಶೀಲರು . . . ನಿನ್ನಂಗದೇಶದ ಸಿರಿಯ ಕೇಳೆಂದ (ಕುವ್ಯಾಕ. ೯-೩೭). [ಸಂ.]

**ಪರಿವಾದಿನಿ** (ನಾ). ೧. ಏಳು ತಂತಿಗಳನ್ನುಳ್ಳ ಒಂದು ಬಗೆಯ ವೀಣೆ: "ಪರಿವಾದಿನಿ ವಲ್ಲಕಿ ವಿಪಂಚಿ ವೀಣಾನಾಮಂ" (ವಸ್ತುಕೋ. ೭೯-೨೪); "ತಂತಿ ತಾವೇಱುರಲು ಪರಿವಾದಿನಿಯೆನಿಕ್ಕುಂ" (ಮಂಗರಾ. ೨೪-೭); ನೃತ್ಯಂ ನೆತ್ತ ಮೊಗಟು ಪರಿವಾದಿನಿನಾದಿತಮೆಂಬನೇಕಭೇದಪ್ರತರ ವಿನೋದದೊಳೆ ಸತಿಗೆ ಪೊತ್ತಂ ಕಳೆವರ್ (ವರ್ಧಮಾ. ೧೧-೫೧); ಮದನ ಪರಿವಾದಿನೀನಾದದಿನಗ್ಗಳಮೆನಿಪ ನಿನ್ನ ನುಣ್ನುಡಿ ಪೊಚಿಪೊಣ್ಮದೊಡೇ ಕಾಯುತ್ತಮದಾಗದೆ ಕಳರವಲಕ್ಷ್ಮಿ ಸಮದಕೋಕಿಲಕುಲದೊಳ್ (ಚಂದ್ರಪು. ೩-೬೧); ಬಳಿಕ ವಿಪಂಚಿಕೆ ಚಿತ್ರಿಕೆ . . . ಪರಿವಾದಿನಿ ಕಿನ್ನರಿ . . . ಕಾಲಕೀಯೆಂಬ ಮೂವತ್ತುಮೂಱು ತಂತ್ರೀವಾದ್ಯಂಗಳಲ್ಲಿ (ವಿವೇಕ. ೨೫೩); ನೂರುತಂತಿಗಳನ್ನು ಮೊಟ್ಟಮೊದಲಾಗಿ ಹೊಂದಿದ್ದ ವೀಣೆ, ತಂತಿಗಳ ಸಂಖ್ಯೆಯಲ್ಲಿ ಇಳುವರಿ ಹೊಂದುತ್ತಾ ಬಂದು ಎರಡು ತಂತಿ ಗಳ 'ನಕುಲ,' ಮೂರು ತಂತಿಗಳ 'ಕಿನ್ನರಿ', ಏಳು ತಂತಿಗಳ 'ಚಿತ್ರಾ' ಮತ್ತು 'ಪರಿವಾದಿನಿ', ಒಂಭತ್ತು ತಂತಿಗಳ 'ವಿಪಂಚೀ' ಎಂಬ ಹೆಸರು ಗಳಿಂದ ತಂತಿಗಳ ಸಂಖ್ಯೆಯಲ್ಲಿ ಏರುಪೇರು ತೋರುತ್ತದೆ (ಸಂಗೀಚಂ. ೩೧೧). ೨. ಅಪವಾದವುಳ್ಳ ಹೆಂಗಸು. [ಸಂ. ಪರಿವಾದಿನೀ]

**ಪರಿವಾಪ** (ನಾ). ೧. ಉಪಕರಣ; ಸಲಕರಣೆ. ೨. ಬಿತ್ತುವಿಕೆ; ಬಿತ್ತನೆ ಮಾಡುವುದು. ೩. ಜಲಾಶಯ; ಕೊಳ. ೪. ಕ್ಷೌರ; ವಪನ. ೫. ಸೇವಕ; ಪರಿಚಾರಕ. [ಸಂ.]

**ಪರಿವಾಪಿತ** (ಗು). ೧. ಕ್ಷೌರಮಾಡಲ್ಪಟ್ಟ; ಬೋಳಿಸಿದ. (ನಾ). ೨. ಕ್ಷೌರಮಾಡಲ್ಪಟ್ಟುದು; ಮುಂಡನ ಮಾಡಿದುದು: "ಮುಂಡಿತಂ, ಪರಿವಾಪಿತಂ-೨ ಬೋಳಿಸಲ್ಪಟ್ಟದ್ದು" (ಸಿದ್ಧಾಂತಿ. ೩೪೬).
[ಸಂ.]

**ಪರಿವಾರ** (ನಾ). ೧. ಸುತ್ತಲಿನವರು; ಅನುಯಾಯಿಗಳು; ಪರಿಜನ: "ಪರಿವಾರಃ, ಪರಿಕರಃ, ಪರಿಸ್ಪಂದಃ, ಪರಿಗ್ರಹಃ — ಈ ೪ ಪರಿ ಗ್ರಹಂ" (ಹಲಾಯು. ೫೧-೧೫೧); ಪರಿವಾರವಾರವನಿತಾಪರಿವೃತನರಮನೆ ಯೊಳರಸಂ . . . ಒಪ್ಪಿರೆ ವಿನೋದದಿಂದಿರುತಿರುತುದದಿಂ (ಕವಿವಾ. ೨-೧೦); ಪರಿವಾರಮುಮಂ ಪಡೆಯುಂಬೆರಸು . . . ಪೊಟಲಂ ಪೊಱಮಟ್ಟು ವಿಂಧ್ಯಾಟವಿಗೆ ಪೋಗಿ (ಪದ್ಮಾರಾ. ೧೪೯-೫); ಹರಿನೀವ ಕಾಲಕ್ಕೆ

ಸಿರಿಯುಂ ಬೆನ್ನಲಿ ಬರ್ಕು ಹರಿದು ಹೆದ್ದೊಡಬಿಯೆ ಕೆಬ್ಬಿ ತುಂಬಿದಂತಯ್ಯಾ . . . ಅರಸು ಪರಿವಾರ ಕೈವಾರ ನೋಡಯ್ಯಾ (ಬಸವ. ೧೬೯) ; ಪುರಜನವು ಪರಿವಾರ ಪರಿಜನ ಭರತ ಶತ್ರುಘ್ನರುಗಳರಸಿಯರುರಿಯ ಹೊಗುವುದ ನೆನೆದು ಮನದುಪಶ್ಮಳದಿ ಬೆಂದಿಹರು (ತೊರಂ. ೪೪-೩೭). ೨. ಸುತ್ತಲೂ ಇರುವುದು ; ಸುತ್ತಮುತ್ತ ಬಳಸಿರುವುದು : ಹೀಗೆ ಸೂರ್ಯನನ್ನು ಸುತ್ತುತ್ತಿರುವ ಗ್ರಹವೂ ಸೂರ್ಯನ ಪರಿವಾರದಲ್ಲಿದೆ (ನಕ್ಷತ್ರ. ೪೫). ೩. ಗುಂಪು ; ತಂಡ ; ಸಮೂಹ : ತಪೋಧನರ ವಿದ್ಯಾರ್ಥಿಮಾಣಿಗಳಾಹಾರದಾನಕ್ಕಂ ಪಾವುಳ ಪರಿವಾರದ ಜೀವಿತಕ್ಕಂ . . . ಕೊಟ್ಟ ಅಲ್ಲಿಯ ಘಳಿಯು ಮತ್ತರು ೫೦ (ನಾಂದೇಡ್. ೩-೨೨ ವ; 1047) ; ದ್ರಾವಿಡಭಾಷಾಪರಿವಾರ ಜಗತ್ತಿನ ಹಿರಿಯ ಭಾಷಾವರ್ಗಗಳ ಸಾಲಿನಲ್ಲಿ ಐದನೆಯ ಅಥವಾ ಆರನೆಯ ಸ್ಥಾನವನ್ನು ಪಡೆಯುತ್ತದೆ (ದ್ರಾವಿ. ೨ ಹಿನ್ನೆಲೆ). ೪. ಕುಟುಂಬ ; ಸಂಸಾರ : ಹೆಣ್ಣಿನ ಮೇಲೆ ಹೆಣ್ಣು ಹುಟ್ಟಿ ಪರಿವಾರವು ಬೆಳೆದು ಬಿಟ್ಟಿತ್ತು (ಪರಿಣೀ. ೧).

**ಪರಿವಾರ ಪರಿತೋಷಣ**=ಪರಿಜನಕ್ಕೆ ಸಂತೋಷವನ್ನುಂಟು ಮಾಡುವವನು; ಒಂದು ಬಿರುದು: ಪರಾಂಗನಾಪರಾಙ್ಮುಖಂ ವಿನಯವಿಭೂಷಣಂ ಪರಿವಾರಪರಿತೋಷಣಂ (ಸೌಇಇ. VI, ೫೭೧-೩೩ ; 1070). **ಪರಿವಾರ ಸಮುದ್ಧರಣೆ**=ಪರಿಜನರನ್ನು ಉದ್ಧಾರಮಾಡುವವಳು ; ಒಂದು ಬಿರುದು : ಕಲಿಕಾಲಸರಸ್ವತಿ ಪ್ರತ್ಯಕ್ಷಪಾರ್ವತಿ ಪರಿವಾರ ಸಮುದ್ಧರಣೆ (ಸೌಇಇ. XX, ೬೧-೮ ; 1094). [ಸಂ.]

**ಪರಿವಾರದೇವತೆ** (ನಾ). ೧. ಪ್ರಧಾನದೇವತೆಯ ಸುತ್ತ ಇರುವ ಇತರ ಅಧೀನ ದೇವತೆಗಳು. ೨. (ಅಲಂ) ದೊಡ್ಡ ಅಧಿಕಾರಿಯ ಸುತ್ತ ಮುತ್ತಿಕೊಂಡಿರುವ ಪ್ರಭಾವೀಜನ : ಅವನು ಮಂತ್ರಿಯಾದ ಮೇಲೆ ಅವನ ಪರಿವಾರದೇವತೆಗಳ ಸಂಖ್ಯೆ ಬೆಳೆದಿದೆ (ರೂಢಿ).
[ಪರಿವಾರ+ದೇವತೆ]

**ಪರಿವಾರದೇವಿ** (ನಾ). [ಜೈನ] ಕಲ್ಪಾದಿಗಳ ಇಂದ್ರರ ವಿಮಾನಗಳಲ್ಲಿ ಪರಿಚರ್ಯೆ ಮಾಡುವ ಸ್ತ್ರೀ : ಚಾರುವಿಲೋಲಕಟಾಕ್ಷಪಾತಸೌಂದರಪರಿವಾರದೇವಿಯರಿರಾ (ಆದಿಪು. ೩-೪). [ಪರಿವಾರ+ದೇವಿ]

**ಪರಿವಾರಮೂರ್ತಿ** (ನಾ). ಮುಖ್ಯದೇವತೆಯ ಪರಿವಾರದ ಮೂರ್ತಿ : ಪರಿವಾರಮೂರ್ತಿಗಳಾದ ಗರುಡ, ಆಂಜನೇಯ, ವೃಷಭ, ಮೊದಲಾದ . . . ಪ್ರತಿಮೆಗಳನ್ನು ಸಿದ್ಧಪಡಿಸಿದಾಗ (ಭಾರದ. ೮೦).
[ಪರಿವಾರ+ ಮೂರ್ತಿ]

**ಪರಿವಾರಾಂಗನೆ** (ನಾ). ಪರಿವಾರಸ್ತ್ರೀ; ಪರಿಚಾರಿಕೆ: ಪರಿವಾರಾಂಗನೆಯರ್ ಮನಃಪ್ರಿಯಸಖಂ ಮೇಧಾವಿಳಂ ಪಕ್ಕದೊಳ್ ಬರೆ (ಸುಕುಮಾ. ೯-೮೦) ; ಪರಿವಾರಾಂಗನೆಯರ್ . . . ಎತ್ತಲುಂ ಬಳಸಿ ತನ್ನಂ ಬರ್ಪನಂ ಬಂದಳಾ ಸ್ಮರಚಕ್ರೇಶನ ರಾಜ್ಯಲಕ್ಷ್ಮಿಯೆನಿಪನ್ನಂ ನಾಯಿಕಾಗೌರವಂ (ಅನಂಪು. ೨-೪೬) ; ಪರಿವಾರಾಂಗನಾಕರತಳಪರಿಕಲಿತವಿವಿಧಾರ್ಚನಾವಿಶೇಷಂಬೆರಸು ಪ್ರಮದವನಕ್ಕೆ ಪೋಗಿ (ಪುಷ್ಪಪು. ೩-೭೪ ವ).
[ಪರಿವಾರ+ ಅಂಗನೆ]

**ಪರಿವಾರಿಕೆ** (ನಾ).=ಪರಿವಾರದೇವಿ : ಸ್ವಯಂಪ್ರಭೆಗಂ ರಾಣೀವಾಸದ ಕನ್ನೆವಾಡದೊಳ್ ಪರಿವಾರಿಕಾ (ದೌವಾರಿಕಾ) ಸಮೇತಮಿರವಂ ಮಾಡಿ (ಶಾಂತಿಪು. ೫-೩೯ವ). [ಸಂ. ಪರಿವಾರಿಕಾ]

**ಪರಿವಾರಿತ** (ಗು). ಛಳಸಿದ ; ಆವರಿಸಿದ ; ತುಂಬಿದ : ಬಾಷ್ಪವಾರಿಧಾರಾಪೂರಪರಿವಾರಿತ ಪಲ್ಲವನೇತ್ರೆಯುಂ (ಗದಾಯು. ೧-೫೫ವ). [ಸಂ.]

**ಪರಿವಾರಿಸು** (ಕ್ರಿ). ಸೇವೆ ಮಾಡು ; ಪರಿಚರ್ಯೆ ಮಾಡು : ಅಟ್ಟಿಯಿಚ್ಚೆಯಬಿಡದುಂ ಪರಿವಾರಿಸಿ ಪಾಟಿಮೋದಲಚ್ಚರಸಿಯರಾಡಲಚ್ಚರಸಿಯರ್ ಮನದಿಚ್ಚೆಯನಿಚ್ಚೆಗೆಯ್ಯಲಚ್ಚರಸಿಯರೆಂದೊಡೇವೊಗಟ್ಟುದೋ ಜಿನಚಂದ್ರವಿಭೂತಿಲೀಲೆಯಂ (ಶಾಂತಿಪು. ೭-೭೫).
[ಪರಿವಾರ+-ಇಸು$_3$]

**ಪರಿವಾಸ** (ನಾ). ೧. ತಂಗುವಿಕೆ ; ವಾಸಮಾಡುವಿಕೆ. ೨. ಪರಿಮಳ; ಸುಗಂಧ : ಕೆದಱದ ಪಿಷ್ಟಾತಕದಿಂದೊದವಿದ ಪರಿ[ಪಾಠಾಂ. ಟಿ] ವಾಸಚೂರ್ಣದಿಂದಳವಡೆ . . . ಪದೆಪಂ ಪುಟ್ಟಿಸಿದುದಿಟ್ಟಳಂ ನೃಪಸದನಂ (ಪಂರಾಮಾ. ೪-೨೭). [ಸಂ.]

**ಪರಿವಾಹ** (ನಾ). ೧. ತುಂಬಿ ಹೊರಸೂಸುವುದು : ಲೌಹಿತ್ಯಮನಂಬುಧಿಪರಿವಾಹಮನವನೀಶನೇಱಿ ತತ್ತಟನೃಪಸಂದೋಹಮೆಱಗಿದುದಧೀಶಗಜಾಹತಕಾಲಾಗುರುದ್ರುಮಂಬೆರಸಾಗಳ್ (ಶಾಂತಿಪು. ೧೧-೭೮) , ಕದಪನಂಗೈಗಿತ್ತು ತಲೆಗುತ್ತಿದಳು ನಯನೋದಕದ ಪರಿವಾಹದಲಿ ನನೆದಳು ಮಹಿಳೆಯಿದ್ದಳು ಬಹಳಮೋನದಲಿ (ಕುಮ್ಯಾಗ. ೧೧-೪೬). ೨. ಕೆರೆ ಭರ್ತಿಯಾದಾಗ ಹೆಚ್ಚಿನ ನೀರು ಹೊರಗೆ ಹೋಗಲು ಮಾಡಿರುವ ಮಾರ್ಗ ; ಕೋಡಿ : "ಪರಿವಾಹಮೆನೆ ಜಲೋಚ್ಛ್ವಾಸಮೆನೆ ಕಡೆಗೋಡಿ" (ಮಂಗರಾ. ೧೨೩-೧೫). [ಸಂ.]

**ಪರಿವಾಹಿತ** (ನಾ). [ನಾಟ್ಯ] ಹತ್ತೊಂಬತ್ತು ಬಗೆಯ ಶಿರೋಭೇದಗಳಲ್ಲಿ ಒಂದು ; ನಿರ್ಲಜ್ಜೆ, ಮೌನ, ಹರ್ಷ, ವಿಚಾರ, ವಿಸ್ಮಯ, ಮುಗುಳ್ನಗೆ, ಪ್ರಿಯಾನುಕರಣ ಇತ್ಯಾದಿಗಳನ್ನು ಸೂಚಿಸುವಾಗ ತಲೆಯನ್ನು ಚಕ್ರದಂತೆ ಎಡಕ್ಕೂ ಬಲಕ್ಕೂ ಸುತ್ತಿಸುವುದು: ಚಂದದೆ ಚಕ್ರಂಬೋಲ್ ಸುತ್ತೊಂದಕ್ಕೆಡಬಲದ ಶಿರಮೆ ಪರಿವಾಹಿತಮುಂ (ಲಾಸ್ಯರಂ. ೧-೮೨). [ಸಂ.]

**ಪರಿವಿಡಿ$_1$** (ಕ್ರಿ). ನಿಯತವಾದ ಕ್ರಮವನ್ನು ಹಿಡಿ ; ವ್ಯವಸ್ಥಿತವಾದ ನಿಯಮವನ್ನು ಅನುಸರಿಸು : ವೇದೋಕ್ತಮಾರ್ಗಮಂ ಪರಿವಿಡಿದು . . . ಯಜ್ಞದೀಕ್ಷೆಯಂ ಕೈಕೊಂಡು (ಉದ್ಭಟ. ೪-೫೬ವ); ಪರಿವಿಡಿದು ನಳಚರಿತ್ರಂ ಪರಮಪವಿತ್ರಂ ನಿತಾಂತ ಪುಣ್ಯಶ್ಲೋಕಂ ವಿರಚಿಸುವನದಟನೀ ಚೌಂಡರಸಂ ಕರ್ಣಾಟವಂಶಶೃಂಗಾರರಸಂ (ನಳಚಂ. ೮); ತನಯ ಕೇಳ್ ತನುವೃತ್ತಿ ಜೀವೇಶ ಮೋಕ್ಷಂಗಳನು ನಿನಗೊರೆವೆನು ಪರಿವಿಡಿದು (ಕೈಕವ. ೧೪೮); ಮೂಲವನು ಪರಿವಿಡಿದು ನವಗದ ಹೇಳಬೇಕೆಂದೆನಲು (ಅಂಬಿಕಾ. ೩-೫೭); ಪರಿವಿಡಿದು ಪೇಳುವೊಡೆ ಸಾಲದು ಪಗಲ್ ಪತ್ತು (ಪಾರಸಿ. ೧೭-೩೮೩). [ಪರಿ$_3$ + ಪಿಡಿ$_1$]

**ಪರಿವಿಡಿ$_2$**, ಪರಿವಡಿ$_2$, ಹರಿವಡಿ (ನಾ). ೧. ನಿಯತವಾದ ಕ್ರಮ; ವ್ಯವಸ್ಥಿತವಾದ ಕ್ರಮ ; ಅನುಕ್ರಮ : "ಪರಿಪಾಟೀ, ಆನುಪೂರ್ವೀ . . . ವಿಶಾಯಃ –ಈ ೭ ಪರಿವಿಡಿ" (ಹಲಾಯು. ೧೨೨-೫೫); ದೇವವನಿತೆಯರೆ ಪರಿವಿಡಿಯೊಳಡಿ[ಪಾಠಾಂ. ಪರಿವಡಿಯೊಳಡಿ, ಪಡಿವಡಿಯಿನಡಿ] ಗುಟ್ಟಿಯುಂ ದೇವಗಣಿಕೆಯರೆ ಕೊಳೆ ಪಾಡೆ ದನಿಮುಟ್ಟಿಯುಂ (ಆದಿಪು. ೭-೨೭ ರಗಳೆ); ಇಂತಿವು ಪರಿವಿಡಿಯಿಂದಯ್ದತೀಚಾರಮಕ್ಕುಂ (ಸುಕುಮಾ. ೬-೧೪); ಅಕ್ರಮದೊಳೊಮ್ಮೆ ಪರಿವಿಡಿಯಿಂದಲೊಮ್ಮೊಮ್ಮೆ . . . ಅಚ್ಚಿಸುತ್ತ (ತಿರುರ. ದೇ. ೫-೭); ಪರಿವಿಡಿಯ ದಿನ ವೇಳೆದಪ್ಪಿಸದಿರು (ಬಸಪು. ೧೪-೩); ಅವರೊಳಗೊಬ್ಬನನು ನಮ್ಮೂರ ದಾನವನ ಪರಿವಿಡಿಯ ಭೋಜನಕೆ ತದ್ಭೂಸುರನ ತಾಯೊಟ್ಟಳು (ಕುಮ್ಯಾಆ. ೧೦-೨೮). ೨. ರೀತಿ ; ಬಗೆ ; ವಿಧ ; ಪ್ರಕಾರ : "ತರಃ -ಪರಿವಿಡಿ" (ಕಾಕ್ಕ. ೭೭); ವೈದಿಕಪರಿವಿಡಿಯಿಂದ ಮಧುಪರ್ಕಾದಿ ಪೂಜೆಗಳಿಂದ ಸತ್ಕರಿಸಿದರು ಸಚರಾಚರ ಜಗತ್ಪತಿಯ (ಕುವ್ಯಾಸ. ೮-೭); ಸುರಪಥದೊಳು ಚರಿಸುವ ದೇವಸ್ತ್ರೀಯರಿಗೆ ವಿಲಾಸವಿಭ್ರಮದ ಪರಿವಿಡಿಗಳನು ತಿಳಿವುವೆನೆಂಬಂದದಿ ತರುಣಿಯಾಡಿದಳುಯ್ಯಲೆಯ (ಜೀವಂಸಾಂ. ೧೮-೬೭); ಮುಗುಳ್ಗಣೆಯನ ಶಕ್ತಿಗಿಡಿಪ ಪರಿವಿಡಿಯಂ . . . ಆಗಮಮಂ ವ್ಯಕ್ತೀಕರಿಸುವುಪಾಧ್ಯಾಯರನಾಂ ಭಕ್ತಿಯಿನಭಿವಂದಿಸುವೆಂ (ಜಯಕಾ. ೧-೪); ಆಗಳುಮೆಮಗೆ ಜಿನಾಗಮ

ರಾಗಂ ಸಮುನಿಸುಗೆ . . . ಗುರುಜನರ ಪೇೞ್ದ ಪರಿವಿಡಿಯಿಂದಂ (ಶಬ್ದಾನು. ೨೬೪ ಪ್ರಯೋ); ಕಿರಣಸಯನಸಹಸ್ರವಿಲ್ಲದ ತರಣಿ ಸುರಪರ ಪರಿವಿಡಿಯೊಲುರುತರದ ವೀರರ ದೇವನಹುದೆಂದೆನುತ ಬೆರಗಾದ (ಕೋಗಯ. ೧೧-೨೩). **೩.** ಸಾಲು ; ಪಂಕ್ತಿ ; ಶ್ರೇಣಿ : ಸಮುಚಿತಾಸನದೊಳ್ ಕ್ರಮದಿಂ ಕುಳ್ಳಿರ್ದ ಪಟ್ಟಸಹಣಿಯರ ಪರಿವಿಡಿಯೊಳಂ (೧೮ಕ. ೨-೧೦೫ವ); ಸುಧಾಭಿತ್ತಿಗಳ ಪರಿವಿಡಿಗಳಿಂದುಭಯ ವೀಧಿಗಳು ಮೆಱೆದವು (ಹಚಕಾ. ೧೦-೩೪); ಬೆಳುಗೊಡೆಯ ಮಿಳಿರ್ವ ಪತಾಕೆಗಳ ಪರಿವಿಡಿಯ . . . ಸೌಧ ಗಳಲವನಿಯ ತೊಡಿಗೆಯೆನೆ ರಂಜಿಸಿತು ಪುರವು (ತೊರರಾ. ೧-೧೩-೪); ನಿಲ್ವ ಪೆಣ್ಬಡೆಯೆನಲ್ ಪರಿವಿಡಿಯ ತೋಂಟಗಳ್ ತಲೆದೂಗೆ ತೆಂಗುಗಳ್ ಮೆರೆವ ಶಾಲೂರು (ಕಾಲೂರ. ೪೭-೬೭). **೪.** ಪರಂಪರೆ : ಭರತ . . . ಪುರೂರವರಿಂದಮುನ್ನೆಗಂ ಪರಿವಿಡಿಯಿಂದೆ ಬಂದ ಶಶಿವಂಶಮದೀಗಳಿವಂದಿ ರಿಂದೆ ನಿಸ್ತರಿಸುವುದಕ್ಕುಂ (ಪಂಪಭಾ. ೭-೧೬); ಪರಿವಿಡಿಯ ಕೇಳರಸ ಮೊದಲಲಿ (ಕುಷ್ಮಾಳ. ೫-೧೫); ಸನತ್ಕುಮಾರನು ಸರಸಿರುಹಸಂಭವನ ಸಭೆಯಲಿ ಸುರಮುನೀಂದ್ರರ ಮಧ್ಯದಲಿ ನಿಮ್ನನ್ನಯಗತದ ಪರಿವಿಡಿಯ ರಘುವಂಶವನು ವಿಸ್ತರಿಸಿದನು (ತೊರರಾ. ೧-೫-೬). **೫.** ರೂಢಿ; ಬಳಕೆ ; ಅಭ್ಯಾಸ : ಪಿರಿಯರರಸಿಯ ಪಟವೇಟದ ಪರಿವಿಡಿ ಮಗುೞ್ದಂ ಕೊನರ್ದುದು (ಶಾಂತಿಪು. ೯-೫೨); ಪರಮಪುರುಷಾರ್ಥವಿರ್ದುದು ಚರಮ ದೊಳನ್ನೆವರಮುಟಾದ ಪುರುಷಾರ್ಥದೊಳಾಚರಿಸುವುದು ತಕ್ಕುದದಱಿಂ ಪರಿವಿಡಿಯಂ ತಪ್ಪಲಾರ್ಗಮೇಂ ಬಂದಪುದೇ (ಪಂಪಾಮಾ. ೬-೧೨೯). **೬.** ವರ್ಗ ; ದರ್ಜೆ : ಪರಿವಿಡಿಯಿಂದಮೆಂತಿವರಿವರ್ ಪೆಱಗಿರ್ಪುದೆನು ತ್ತುಮಾ ಮಹೀವರನಿರವೇೞ್ದು ನೇಮಿಸುತಿರಲ್ (ಕುಸುಮಾ. ೧೫-೮೩); ಅರಸನಖಿಳದಿಗಂತದವನೀಶ್ವರರನವರವರುಚಿತಮಾನ್ಯದ ಪರಿವಿಡಿಯಲುಡು ಗೊಱೆಗಳಲಿ ವಿನಯೋಪಚಾರದಲಿ ಹಿರಿದು ಮನ್ನಿಸಿ ಕಳುಹಿದನು (ತೊರರಾ. ೧-೭-೬೧). **೭.** ಗುಂಪು ; ಸಮೂಹ : ಉರುಳುವ ಶಿರದ ಬೀಳುವ ಭಟರ ಮೆದೆಗೆಡೆವಾನೆ ಕುದುರೆಗಳ ಪರಿವಿಡಿಯದಂತಿರಲಿ(ಕುಷ್ಮಾಕ. ೪-೨೯); ಮದಕರಿಯಿಪ್ಪತ್ತು ವರಧೀರರೆಂಟುಸಾಸಿರದ ಪರಿವಿಡಿಯುಹ ಪೌಜ ಖಾನಗೆ ತೋಱಿದ ನೆಱೆ ಕಲಿಯಬುದುಲ್ಲಖಾನ (ಕಂಠವಿ. ೧೧-೮೭). **೮.** ಅಚ್ಚು ಕಟ್ಟು ; ಓರಣ ; ಸೊಗಸು : "ಅಣಿ = ಪರಿವಿಡಿ" (ಕಾಶಕ್ಯ. ೩೩); ತದನಂತರಮಿರದಾಕೆಯನುದಾತ್ತಧಾತ್ರೀತನೂಜೆ ಪರಿವಿಡಿಯೊಳ್ ತಂದಿದಿ ರೊಳ್ ನಿಱಿಸಿ (ಶಾಂತಿಪು. ೫-೧೨೧); ನರರುಧಿರಮಾಂಸೋಪಹಾರದ ಪರಿ ವಿಡಿಯ ಪರಿಭಾವಶುದ್ಧಿಯ ಪರಮಭಕ್ತಿಯಲೊಲಿಸಿದನು ಶಸ್ತ್ರಾಧಿದೇವ ತೆಯ (ತೊರರಾ. ೬-೨೦-೪೦); ಕಳಿಂಗ ಸಿಂಹಳೇಶ್ವರರಿತ್ತ ಪಟ್ಟಾಂಶುಕ ಹಯ ಕರಿ ರತ್ನ ಮೊದಲಾದ ಕಪ್ಪವ ನೃಪನೀವ ಪರಿವಿಡಿಯೆಸೆದುದಾ ಸಭೆ ಯೊಳು (ತ್ರಿಭುತಿ. ೬-೨೨); ಸುರಪನಾಸ್ಥಾನಮಂಟಪದ ಶೃಂಗಾರದ ಪರಿ ವಿಡಿಯನು ಸೋಲಿಸುತ . . . ವರಚಿತ್ರಶಾಲೆಯೊಪ್ಪಿದುದು (ಕಂಠವಿ. ೭-೩೧). **೯.** (ಪುಸ್ತಕದಲ್ಲಿಯ) ಗ್ರಂಥ ವಿಷಯದ ಅನುಕ್ರಮಣಿಕೆ: ವಿಷಯ ನಿರ್ಣಯಿಸುವಾಗ ಗ್ರಂಥದ ಶಿರೋನಾಮ, ಮುನ್ನುಡಿ, ಪ್ರಸ್ತಾ ವನೆ, ಪರಿವಿಡಿ, ಆಧಾರಗ್ರಂಥಗಳ ಪಟ್ಟಿ . . . ಇತ್ಯಾದಿಗಳನ್ನು ಸೂಕ್ಷ್ಮ ವಾಗಿ ಅವಲೋಕಿಸುತ್ತಾನೆ (ಗ್ರಂಥಾಲ. ೧೬). **೧೦.** ಅಧ್ಯಯನ ; ವ್ಯಾಸಂಗ: ಪರಿವಿಡಿಗೆಯ್ದು ತಾಪಸಕುಮಾರಕರೊಳ್ ಸ್ಮೃತಿಯಾಥಮಂ ನಿರಂತರಮೊಡಗೂಡಿ ವಾದಮನೆ ತಪ್ಪದೆ ಮಾೞ್ಪುದು . . . ರಾಜ ಶುಕ[ಬಾಲಕ]ಜಾಲಕಂ (ಕುಸುಮಾ. ೧-೧೩೫). 'ಪರಿವಿಡಿಗೆಯ್' ಪರ್ಯಾ. **ಪರಿವಡಿ$_2$** : **೧.** ಕೆರನೂರ ಮಹಾಜನಂ ಆಯ್ವದಿಂಬಗ್ಗ೯ಂ ಇಪ್ಪತ್ತು ಗದ್ಯಾಣ ಪೊನ್ನೊಟ್ಟು ಪಡೆದರ್ ಎಚ್ಚಲೊಂನ್ದು ಪರಿವಡಿಯಂ (ಎಕ. X, ಕೋಲಾರ. ೫೭-೧೨; ಸು. 925); ಮುರಂಪುಗೆ ಸೂಱುಸೂಱೆಂಳೆ ಬರೆ ಕರದೊಳು ಶಂಖಚಕ್ರಮುದ್ಗರಪದ್ಮಂ ಪರಿವಡಿಯಿಂ ಪೆಸರ್ಗಳ್ಪೆತ್ತಿಪ್ಪಾ ದವು ಮೂರ್ತಿಭೇದಮಮಾ ವೈಷ್ಣವರೊಳ್ (ಸಮಸ. ೮-೧೩೮); ಗರುಡ ದೇವರು ಬಳಿಕ ನಾಗರ ಹಿರಿಯರೊಳು ಪರಿವಡಿಯ ನುಡಿದರು (ಸಂಭಪ. ೫-೬೦). **೨.** ಪರಹಸಿತಂ ಹಸಿತಂ ಸುಂದರ ಮನ್ಮನಲಸಿತಮುಚಿತರಂಗಿತ ಮೆಂದೀ ಪರಿವಡಿಯ ಬಾಲಕೇಲಿಯೆ ಕರಮೆ ಮರುಳ್ಗೊಳಿಸಿದುದು ತಾಯುಮಂ ತಂದೆಯುಮಂ (ಅದಿಪು. ೮-೩೮). **ಹರಿವಡಿ : ೧.** ಆಚಂದ್ರಾರ್ಕ್ಕ ಸ್ಥಾಯಿ ಮಾಡಿ ಹರಿವಡಿಗೆ ಬಿಟ್ಟು ಗ್ರಾಮಕ್ಕೆ ಪಾದಪೂಜೆಗೊಟ್ಟ ಗದ್ಯಾಣಂ ನಾಲ್ವತ್ತುರು (ಕಣ.IV, ೨೫-೨೧ ; 1054).

**ಪರಿವಿಡಿಯಂಕ** = ಕ್ರಮಬದ್ಧವಾದ ಹೋರಾಟ,—ಕಾಳಗ : ಪರಿವಿ[ಪಾಠಾಂ. ವ]ಡಿಯಂಕದಂತೆ ಪೊಱಮಟ್ಟದೆ ಸೂಱಾಱು ಪೊಕ್ಕುದಱ ಸಿಡಿಲ್ವರೆ . . . ಪೋರ್ದರ್ವಾನೆಗಳ್ (ವರ್ಧಪು. ೮-೫೩).

[<ಪರಿವಿಡಿ$_1$./ತೆಲು. ಪರುವಡಿ]

**ಪರಿವಿಡಿಗಾಱ** (ನಾ). ಸರದಿಯ ಪ್ರಕಾರ ಕಾವಲು ಮಾಡುವ ವನು ; ಪಹರೆಗಾರ : ಒಱೆಗಳನುಗಿದ . . . ಕತ್ತಿ ಬಾಕುಗಳ ಪರಿವಿಡಿ ಗಾಱರು ಚರಿಸುತಿರ್ದರು (ಕಂಠವಿ. ೧೧-೧೪೭). [ಪರಿವಿಡಿ$_2$ + -ಕಾಱ]

**ಪರಿವಿಡಿಗೆಯ್,** ಪರಿವಡಿಗೆಯ್ (ಕ್ರಿ). **೧.** ಅನುಕ್ರಮವಾಗಿ ಪಠಿಸು ; ಹೇಳು ; ಒಪ್ಪಿಸು ; ನಿವೇದಿಸು : ಪರಿವಡಿಗೆಯ್ಕೆ ಸೊಂದಿಗಿಳ ತಂದೆಯ ತಾಯ ಸವಿನಾಪದೊಳ್ ತನೂದರಿಯ ರಕ್ತೋಷ ಯುಕ್ತರುತಮಂ (ಶಾಂತಿಪು. ೮-೮೫; ರಸರ. ೪-೧೭೭ ಸೋ); ಜಿನರ ಮುಂದೆ ಜೈನಾಗಮಮಂ ಪರಿವಿಡಿಗೆಯ್ಯರೆ ಚಂದನದ ರಸದಿ ಚಂದನದ ದೇವರಂ ಪೂಜಿಸರೆ (ಅಜಿಪು. ೬-೮೧); ಪರಿವಿಡಿಗೆಯ್ಕೆ ರಾಜಶುಕನೋಪನ ಸಾಹಸ ಮಾಲೆಯಂ . . . ಬಾಷ್ಪದಿನಂದಭಿಷೇಕಪೂಜೆಯಂ ವಿರಚಿಸಿ ಭಾವಿತಾತ್ಮ ಮೆಱೆದಳ್ ಪತಿಗಂಗನೆ ತನ್ನ ನಲ್ಮೆಯಂ (ಶೃಂಗಾರ. ೩-೬೩). **೨.** ವ್ಯವಸ್ಥೆಗೊಳಿಸು ; ಕ್ರಮಪಡಿಸು : ಮುನ್ನಂ ಪರಿಣತಿವಡೆದಿರ್ದ ಸಕಳವಿದ್ಯೆಯನೀಗಳ್ ಪರಿವಿಡಿಗೆಯ್ವಂತೆ ಕಳಾಧರನಾದಂ ಶ್ರೀಧರಂ (ಮಲ್ಲಿಪು. ೪-೧೩೪). **೩.** ಪುನರಾವರ್ತನೆಗೊಳಿಸು ; ಮತ್ತೆ ಮತ್ತೆ ನಡೆಸು ; ಪುನರಾವರ್ತಿಸು : ಪೋದ ಕೂಟಮಂ ಪರಿವಿಡಿಗೆಯ್ಕೆ ಚಿತ್ತಮೆಳಸಿತ್ತು ರತಾಂತಸುಖಾಂತಮೋಪರಾ (ಚಂದ್ರಪು. ೮-೭೦). **೪.** ಅಧ್ಯಯನ ಮಾಡು; ವ್ಯಾಸಂಗ ಮಾಡು: ಸರ್ವಾಂಗ ಮಲಧಾರಿ ಗಳೊಂದು ಶಿಲಾತಳದ ಮೇಗಿರ್ದಾಗಮಮಂ ಪರಿವಿಡಿಗೆಯ್ಯುತ್ತು ಮ ರ್ಥಮಂ ಭಾವಿಸುತ್ತಂ ಸ್ವಾಧ್ಯಾಯದೊಳ್ ತಗುಳ್ದಿರ್ದೋರಂ . . . ಕರಿಯ ಮೃಗವಿರ್ದುದೆಂದು ಬಗೆದು (ವಡ್ಡಾರಾ. ೯೬-೩) ; ಸಕಲಶ್ರುತ ಮುಮಂ ಪರಿವಿಡಿಗೆಯ್ವಲ್ಲಿ ಶ್ರಮವಿಲ್ಲದುದು ವಾಗ್ಬಲಮೆಂಬುದು (ತಸೂಪ್ರ. ೧೧೮) ; ಶಸ್ತ್ರವಿದರೊಳ್ ಭರದಿಂ ನಿಜಶಸ್ತ್ರವಿದ್ಯೆಯಂ ಪರಿವಿಡಿ ಗೆಯ್ವ ರಾಜಸುತರೊಪ್ಪುಗುಮಾ ಪುರಗೋಪುರಂಗಳೊಳ್ (ಜಗವಿ. ೨-೧೭) ; ಗುರುಮುಖದೊಳಾ ಕುಮಾರಂ ಪರಿವಿಡಿಗೆಯ್ದುಪನತೀತಜನ್ಮಾ ಭ್ಯಾಸಸ್ಫುರದಖಿಳವಿದ್ಯೆಗಳಂ (ಪುಷ್ಪಪು. ೪-೫೭). **ಪರಿವಡಿಗೆಯ್ : ೧.** ತ್ರಿಲೋಕಪ್ರಜ್ಞಪ್ತಿ ಎಂಬುದಂ ಮೃದುಮಧುರಗಂಭೀರಸ್ವರದಿಂ ಭಟಾರರ್ ಪರಿವಡಿಗೆಯ್ದಾಗಳ್ (ವಡ್ಡಾರಾ. ೨೮-೧೧) ; ತ್ರಿಲೋಕವಂದ್ಯಂ ತ್ರಿಲೋಕಪ್ರಜ್ಞಪ್ತಿಯಂ ಪರಿವಡಿದಪ್ಪದೆ ಪರಿವಡಿಗೆಯ್ವುದುಂ (ಸುಕುಮಾ. ೧೧-೭೭ ವ) ; ಪಾಠಮಂ ಪರಿವಡಿಗೆಯ್ವ ರಾಜಶುಕವೊಲಾ ಮನೋಹರ ಯಾನದಿಂದೆ ಸಂಚರಿಪ ಮರಾಳವೊಲು . . . ಸೋಲ್ಪರ ಮನಮಂ ಪಳಂ ಚೆಲೆಯುತೀ ನಱುಗುನ್ನಮೆ ರಂಜಿಕುಂ (ಕಣ. V, ೨೬-೧೮ ; 1147).

[ಪರಿವಿಡಿ$_2$ + ಕೆಯ್$_1$]

**ಪರಿವಿಡಿಯಿಟಿಸು** (ಕ್ರಿ). ಕ್ರಮ ತಪ್ಪಿಸು ; ಅತಿಕ್ರಮಿಸು : "ಪರಿವಿಡಿಯಿಟಿಸಿದುದೆಯ್ದೆ ನೂಂಕಿದುದು" (ಕವಿಕಂ. ೧೩೮).

[ಪರಿವಿಡಿ$_2$ + ಇಟಿಸು]

**ಪರಿವಿಡು,** ಹರಿಬಿಡು, ಹರಿವಿಡು (ಕ್ರಿ). ೧. ಹೋಗಲು ಬಿಡು; ಹೋಗಗೊಡು: ಮೂಗರಿದು ಕೈಕಾಲ್ಗೆಟ್ಟು ಬಾಯ್ಬಿಟ್ಟರಂ ಪರಿವಿಟ್ಟು...ಶಿವಂ ಬಟ್ಟಾಡಿ ಬಿಟ್ಟೋಡಿದಂ (ಚಕವಿ. ೫-೨೨). **ಹರಿಬಿಡು:** ೨. ಏಕಾಗ್ರವಾಗಿಸು: ತನ್ನೆಲ್ಲ ಶಕ್ತಿಯನ್ನು ಕೃತಿನಿರ್ಮಾಣಕ್ಕೆ ಹರಿಬಿಟ್ಟಿದ್ದಾನೆ (ತಪನಿ. ೧೦೮). ೩. ಹಾಯಿಸು; ಹರಿಯಿಸು: ದೃಷ್ಟಿಯನ್ನು ಮುದುಕಿಯ ಮುಖದ ಮೇಲೆ ಹರಿಬಿಟ್ಟ (ಮಣ್ಣುಹ. ೪); ಬೆವರು ಒರೆಸಿಕೊಂಡು ಮತ್ತೊಂದು ಕಡೆಗೆ ವಿಚಾರ ಹರಿಬಿಟ್ಟ (ಅಪನಾ. ೨೫೪). ೪. ಮುಂದುವರಿಸು: ಅವನು...ಪ್ರಚಾರಕಾರ್ಯವನ್ನು ಪರಿಣಾಮಕಾರಿಯಾಗಿ ಹರಿಬಿಟ್ಟನು (ಭಾರತಿ. ೧೩). **ಹರಿವಿಡು:** ೧. ಕಡುವೇಗದಿಂದೊಂದು ಬಾಣಮಂ ಹರಿವಿಡಲ್ ಬೇಗದಿಂ ಬೆಂಬತ್ತಿ ಸರಳೆರಳೆಯಂ ಕೆಡೆಪಿತಾಕ್ಷಣದೊಳು (ಚೆಬಪು. ೩೨-೨೪).

[ಪರಿ$_2$+ಬಿಡು$_1$]

**ಪರಿವಿತ್ತಿ** (ನಾ). ತಾನು ಮದುವೆಯಾಗದೆ ಮದುವೆಯಾದ ತಮ್ಮನನ್ನುಳ್ಳ ಅಣ್ಣ: "ಪರಿವಿತ್ತಿಃ — ೧ ತಜ್ಜ್ಯಾಯಾನ್ — ಅಂಥಾ ಪರಿವೇತ್ತನೆಂಬ ಪಾಪಿಷ್ಠನ ಅಣ್ಣನ ಹೆಸರು" (ಸಿದ್ಧಾಂತಿ. ೨೩೩).

[ಸಂ.]

**ಪರಿವಿತ್ತು** (ನಾ). = ಪರಿವಿತ್ತಿ: ಪಿರಿಯರ್ಗೆ ಮುನ್ನಮೆ ಮದುವೆಯಾದ ಪರಿವೇತ್ತರುಂ ಪರಿವೇತ್ತರ್ಗೆ ಪಿರಿಯರಾದ ಪರಿವಿತ್ತುಗಳುಂ (ಭಾರಶಾಂ. ೩೪೨-೪೫). [<ಸಂ. ಪರಿವಿತ್ತ]

**ಪರಿವಿಷ್ಟ** (ಗು). ೧. ಸುತ್ತಲ್ಪಟ್ಟ; ಬಳಸಲ್ಪಟ್ಟ: ಪರಿವಿಷ್ಟಾಖಿಲರಾಜಲೋಕಮನಿತುಂ ದತ್ತಾನನಾತ್ರೇಯಬಿಂಬರುಮಾಗೀತನಭೂತಪೂರ್ವತರರೂಪಂ ನಾಡೆಯುಂ ನೋಡೆ (ಕುಸುಮಾ. ೧೫-೫೯); ಪರಿವಿಷ್ಟಸ್ಪಷ್ಟ ಕರ್ಮಾಷ್ಟಕಮಲದಳದಿಂ ಕೆಳ್ಪುಗಳ್ ಪೋಟ್ದುವಾದಂ ಚರಮಾಂಗವ್ಯಕ್ತಿಯಿಂದೊಯ್ಯನೆ ತನುತೆಗೆ ಪಕ್ಕಾಗಿ ಜೀವಸ್ವರೂಪಂ ಹರಿಸಂಬೆತ್ತೊಪ್ಪೆ (ಶಾಂತೀಶ್ವ. ೧-೨). (ನಾ). ೨. ಸುತ್ತಲ್ಪಟ್ಟುದು; ಬಳಸಲ್ಪಟ್ಟುದು: "ನಿವೃತಂ, ವೇಷ್ಟಿತಂ, ಪರಿವಿಷ್ಟಂ, ವಳಯಿತಂ ಪರಿಕ್ಷಿಪ್ತಂ— ಈ ೫ ಸುತ್ತಲ್ಪಟ್ಟುದು" (ಹಲಾಯು. ೧೧೮-೨೬). [ಸಂ.]

**ಪರಿವಿಸರ** (ನಾ). ಸಮೂಹ; ಗುಂಪು: ಎಸೆದುದಧ್ವರವೇರಹರಭಿಮುಖವಸತಿಯಭಿವಳಯದಲಿ ಸಂಪಾದಿಸಿದ . . . ಪರಿವಿಸರದಮಳ ಸುವರ್ಣಕುಂಭಪ್ರಸರದಲಿ ತದ್ವಿಧಿವಿಹಿತಯಜ್ಞೋಪಕರಣದಲಿ (ತೊರರಾ. ೧-೬-೩೩). [ಸಂ.]

**ಪರಿವಿಸ್ತರ** (ನಾ). ಹರಡುವಿಕೆ; ಹಬ್ಬುವಿಕೆ; ಪಸರಿಸುವಿಕೆ: ಕರ್ಪೂರದ ಪರಿಪರಿಯ ಕಡೆಸಾಲ ಪರಿವಿಸ್ತರದ ಧೂಪದ ಧೂಮಗಂಧೋತ್ಕರಸಮುದ್ರದೊಳದ್ದನೊಲ್ಲದೆ ಪಥವ ಪವಮಾನ (ತೊರರಾ. ೧-೧೩-೫).

[ಸಂ.]

**ಪರಿವೀಕ್ಷಣೆ** (ನಾ). ಪರಿಶೀಲನೆ; ಸಮೀಕ್ಷೆ: ಈ ಶತಮಾನದ ಪ್ರಾರಂಭದ ದಶಕದಲ್ಲಿ ಭಾರತದ ಭಾಷೆಗಳ ಪರಿವೀಕ್ಷಣೆ ನಡಸಿದ ಜಿ. ಎ. ಗ್ರಿಯೆರ್ಸನ್ ಪೆಂಗುಭಾಷೆಯನ್ನು ಕುಯಿಭಾಷೆಯೊಡನೆ ಸಮೀಕರಿಸಿದ್ದನು (ದ್ರಾವಿವಿ. ೧೬೨). [ಸಂ. ಪರಿವೀಕ್ಷಣಾ]

**ಪರಿವೀಕ್ಷಿಸು** (ಕ್ರಿ). ನೋಡು; ಪರಿಶೀಲಿಸು; ಸಮೀಕ್ಷಿಸು: ಅಕ್ಷೋಣರಥಂ ತ್ರಿಂಶಲ್ಲಕ್ಷಂ ಹರಿ ಷಷ್ಟಿಲಕ್ಷಮಾ ಪಾದಾತಂ ಲಕ್ಷಾಲಕ್ಷಮದಂ ಪ[ರಿ]ವೀಕ್ಷಿಸಲರಿದುಜಿದಿದಿರ್ಚಿ ಕಾದುವರೊಳರೇ (ಶಾಂತಿಪು. ೧೦-೧೦೬); ಪರಿವೀಕ್ಷಿಸುವುದು ನೀಮೆಂದರಸಂ ವಸುದೇವನಂ ಸ್ವಯಂವರಸದನಕ್ಕಿರದಾಗಳೊಯ್ದು ಸದ್ವಿಸ್ತರವಿಭವಂ ನೃಪತಿನಿಕರಪರಿವೃತನಿರ್ದಂ (ನೇಮಿಪು. ೩-೧೬೫). [ಪರಿವೀಕ್ಷಣೆ+-ಇಸು$_3$]

**ಪರಿವೀಜನ** (ನಾ). ಗಾಳಿ ಬೀಸುವುದು; ಗಾಳಿ ಹಾಕುವುದು: ಕುರುಕುಲಚೂಡಾಮಣಿ ನಿಜಗುರುಗಳ ನಯನಾಂಬು ತಳಿವ ಜಲಮಾಗಿರೆ ತದ್ಗುರುಗಳ ದೀರ್ಘೋಚ್ಛ್ವಾಸಮೆ ಪರಿವೀಜನ[ಪಾಠಾಂ. ಘೋಷಮು]ಮಾಗೆ ಮೂರ್ಛೆಯಿಂದೆಚ್ಚೆತ್ತಂ (ಗದಾಯು. ೩-೮೪). [ಸಂ.]

**ಪರಿವೀತ** (ಗು). ೧. ಸುತ್ತುಗಟ್ಟಲ್ಪಟ್ಟ. ೨. ಹರಡಲ್ಪಟ್ಟ.

[ಸಂ.]

**ಪರಿವು,** ಹರಿವು$_2$, ಹರಿಹು$_2$, ಹರುಹು$_3$ (ನಾ). ೧. ಹರಿಯುವಿಕೆ; ಪ್ರವಹಿಸುವಿಕೆ. ೨. ನೀರೋಟ; ಪ್ರವಾಹ: ಪಿರಿಯ ಪ[ರಿ] [ಪಾಠಾಂ. ರ]ವುಗಳ ಸುತ್ತಿದ ಪರಿಕಾಲ್ಗಳ ತುಱುಗಿದಣ್ಣಗಳ ತೀವಿದ ಪೊಕ್ಕರಣೆಗಳ ನೆಱೆದ ಕೆಱೆಗಳ ಸರೋವರಂಗಳ ಬೆಡಂಗಗುಂದಲೆ ಪುರದೊಳ್ (ಸುಕುಮಾ. ೯-೫೧); ಮೊಱೆಮೊಱೆದು ಘೂರ್ಮಿಸುವ ಪರಿವುಗಳ ಮುರಿವುಗಳ . . . ಗಂಗೆಗವನಿಜೆ ಬಂದಳು (ಜೈಮಿಭಾ. ೧೯-೫). **ಹರಿವು$_2$:** ೧. "ಸ್ರೋತಸ್ = ನದಿಯ ಹರಿವು" (ನಾಚಿರಾ. ೬); ಬಸಿಕಾಂತನ ಮನೆ ನೀರುಹರಿವಿಗೆ ಎದುರಾಗಿತ್ತು (ಏಳಜೀ. ೪೦); ನೀರಿನ ಹರಿವಿನಲ್ಲಿ ತೇಲ ಬಿಟ್ಟು ಅವುಗಳ ಸಾಗುವಿಕೆಯನ್ನೇ ಹಿಂಬಾಲಿಸುತ್ತಿದ್ದನು (ಒಡ್ಡಲು. ೨). ೨. ನೊರೆ ಮೊರೆಗಳನುಳಿದೇಳುತೆ ಉರುಳೇರುವ ತೆರೆಗಳಂತೆ ಹರಿವಿನೊಳೇ ನಿದ್ರಿಪಂತೆ ಮರೆ ಮರೆಸುತೆ ಹರಿವುದು (ವಿಸೀಗೀ. ೧೨-೧೯). ೩. ಧಾಳಿ; ಮುತ್ತಿಗೆ; ದಂಡೆತ್ತಿ ಹೋಗುವುದು: ಬೀರಬಯನಾಡ ಹರಿವಿನಲು ಕಾದಿ ಕಳ್ಪರಟ್ಟಿ ಬೀರಪದಕೆ ಸಂದರು (ಮೈಅರಿ. ೧೯೪೧, ೨೩-೩; 1051). ೪. ಸ್ಥಿತಿ; ಸ್ವರೂಪ: ತ್ರಿವಿಧಭಕ್ತಿಗೆ ನೀವೇ ಕಾರಣವಾಗಿ ಬಂದಿರಿ ಪ್ರಮಥರು ಸಹಿತ ಮುಟ್ಟಿ ಪ್ರಾಣಲಿಂಗದ ಹರಿವ ತೋಱಿಸಬೇಕೆಂಬ ನಿಮಿತ್ತ (ಚನ್ನಪ. ೨೦-೪೪). ೫. ಚಾಂಚಲ್ಯ; ಅಸ್ಥಿರತೆ: ಚಿತ್ತದಲಿ ಹರಿವಿಲ್ಲದಿಪ್ಪುದೆ ಭಕ್ತಿಯಿಲ್ಲದುದಲ್ಲದರ್ಥವದಿಲ್ಲದಿಲ್ಲದುದೇ ಹೆದಱಲೇಕೆ (ಬಸಪು. ೨೬-೨). **ಹರಿಹು$_2$:** ೬. ಚಲನೆ; ನಡೆ; ಓಟ: ಸ್ಯಂದನಂ ಶಕಟಂ . . . ಚಕ್ರಿಯೆಂದೆನಲ್ ಭಂಡಿಯಕ್ಕುಮಱ ಹರಿಹು ಪ್ರವಹಣಂ ಡಯನಮೆಂದೆನಿಕ್ಕುಂ (ಪಂಗರಾ. ೮೪-೨೩). **ಹರುಹು$_3$:** ೪. ಇವನು ಕಾಮುಕರ ಹರುಹನಂಗೀಕರಿಸಿ ನಮ್ಮನು ಕರಕರಿಸಲೈತಂದ ಮತಿ ಗೋಚರಿಸುತಿದೆ (ತೊರರಾ. ೩-೬-೩೧). 'ಪಱುವು' ಪರಾ. [ಪರಿ$_2$+-ವು]

**ಪರಿವುಪಯ್** (ಕ್ರಿ). ದಂಡೆತ್ತಿ ಬರು; ಧಾಳಿಮಾಡು: ಶ್ರೀನೊಲೆನಾಡ ಕುಡಲುರ ನಿಗಳಂಕಮಲ್ಲ ಚಂಗಾಳ್ವ ಪರಿವುಪಯ್ದನ್ದು (ಎಕ. IV, ಹೆಗ್ಗಡ. ೧೦೪-೬; 1037).

[೪ ಇದು 'ಪರಿವುಪಾಯ್' ಎಂಬುದರ ಅಪಲಿಖಿತವಿರಬಹುದೆ?]

**ಪರಿವೃಢ** (ಗು). ೧. ಶ್ರೇಷ್ಠವಾದ; ಪ್ರಮುಖವಾದ: ಪರಮಬ್ರಾಹ್ಮಪ್ರಭಾವಂ ಮನುಜ ಪರಿವೃಢಾಕಾರಮಂ ತಾಳ್ದಿತ್ತೆಂಬಂತಿರೆ (ಎಕ. V, ಬೇಲೂರು. ೧೬-೫೬; 1136); ಉರ್ವೀವಶ್ಯವಾತ್ಮಾವನಿಪರಿವೃಢಶಾನ್ತ್ಯರ್ಥ ಮಂತ್ರಂ (ಎಕ. VI, ಚಿಕ್ಕಮ. ೧೬೧-೧೧೯; 1137); ಹಸ್ತ್ಯಕಲಿತಸುದರುಶನೋರ್ಧ್ವಗಭಸ್ತಿ ಲವಶಮಿತಾರ್ಕಪರಿವೃಢವಿಸ್ತರಣ ಚಿತ್ರೈಸು (ಕುಪ್ಯಾವಿ. ೧೦-೩೪). (ನಾ). ೨. ಶ್ರೇಷ್ಠನಾದವನು; ಪ್ರಮುಖ ವ್ಯಕ್ತಿ: ನಳ ನೀಲ ಜಾಂಬವ ಹನುಮತ್ಪ್ರಮುಖ ನಿಖಿಲಖಚರಪರಿವೃಢರುಮಿರ್ಪುದುಂ (ಪಂರಾಮಾ. ೧೨-೧೬ ಪ). ೩. ಒಡೆಯ; ಪ್ರಭು: "ಆರ್ಯಃ, ಪರಿವೃಢಃ, ಸ್ವಾಮೀ . . . ಅಧಿಪತಿಃ— ಈ ೧೦ ಒಡೆಯಂ" (ಹಲಾಯು. ೫೬-೧೮೮); ತಾಂ ತನ್ನ ಕೈಯ್ಯೊಳೆ ಕಟ್ಟಿದಂ ಕುರುಪರಿವೃಢಂ ಕರ್ಣಂಗಾ ವೀರವಟ್ಟದ ಪಟ್ಟಮಂ (ಪಂಪಭಾ. ೧೨-೫೨); ಈ ಪರಿಯೊಳಗತಿಬಳನಾಗಿ ತ್ರಿಪುರವನಾ ಪರಿವೃಢನಾಳುತಿರಲು (ತ್ರಿಪುಸಾಂ. ೬-೬೪); ಜಂಗಮಪರಿವೃಢಪ್ರಾಣಾಂಗ ಹರಹರ ಜಂಗಮಾವಿರತಾರ್ಚಿತಪ್ರಾಣ (ಬಸಪು. ೩೬-೫೩): ಪ್ರಮಥಪರಿವೃಢಂ ಪಾತು

ಪೈಶೂನ್ಯದೂರಂ (ಹರಿಶ್ಚಂ. ೫-೬೬). [ಸಂ.]

**ಪರಿವೃತ** (ಗು). ೧. ಸುತ್ತುವರಿದ; ಬಳಸಿದ; ಸುತ್ತುಗಟ್ಟಿದ: ಪರಿವೃತಲವಣಾಬ್ಧಿಸರೋವರಮಧ್ಯಸ್ಥಿತವೆನಿಪ್ಪ ಜಂಬೂದ್ವೀಪಾಂಬುರುಹಕ್ಕೆ ತಾನೆ ಕರ್ಣಿಕೆಯಿರವಂ ತಳೆದೇಂ ಸುಮೇರು ಸಿರಿಗೆಡೆಯಾಯ್ತೋ (ಚಂದ್ರಪ್ರ. ೧೨-೮೫); ಪರಿವೃತವನಿತಾಲೋಚನಮರೀಚಿಚಂದ್ರಿಕೆಯು ಸೋಂಕಿನಿಂ ಸೋಪಾನಸ್ಫುರಿತೇಂದುಕಾಂತಮೊಸರಲ್ (ಕುಸುಮಾ. ೯-೮೨); ಪರಿವೃತಪ್ರಾಕಾರವಂ ಗೋಪುರವನೆತ್ತಿಸಿ . . . ಶಿವರಾತ್ರಿ ನೇಮವನು ಹರುಷದಿಂ ಸಲಿಸಿದನು (ಬಸವ. ೫೩-೩೦); ಕೃತ್ತಿಕೆಯ ತಿಂಗಳಲಿ, ವಿಪಿನಪರಿವೃತವಿಪುಲವಿಸ್ತರದ ಗದ್ದೆ ಕೋಗಿನಲಿ (ಚಿತ್ರಾಂಗ. ೫೨-೧೪೩೧). ೨. ಹರಡಿದ; ವ್ಯಾಪ್ತವಾದ; ಆವೃತವಾದ: ಪರಿವೃತ ನೃಪತುಂಗದೇವಮಾರ್ಗಂತರಗತಬೋಧವಿಶೇಷಯಾನಪಾತ್ರಂ (ಕವಿರಾ. ೩-೨೩೦); ಪರಿವೃತಪಲ್ಲವಾಂತರದೊಳುದ್ಗತವಲ್ಕಲಮಧ್ಯದೊಳ್ . . . ನಿಚಿತನೀಡನಿಕಾಯಮನೆಯ್ದೆ ಸುತ್ತಲುಂ ವಿರಚಿಸಿ ನಿರ್ಭಯಂ ಪಲವುಮಿರ್ಪವು ಕೀರಕುಳಂ ನಿರಾಕುಳಂ (ಕಾದಂಪೂ. ೧೨೬). (ನಾ). ೩. ಸುತ್ತುವರಿಯಲ್ಪಟ್ಟುದು; ಬಳಸಲ್ಪಟ್ಟಿರುವುದು: ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತವಾಗಿ (ಆದಿಪು. ೧-೪೮ ವ); ಭೋಗೀಶ್ವರನಂ ಉರಗಪತಿ ನೋಡಲೆಯ್ದಿ ದುರ್ಗದುಪರಿವೃತವಾದ ತೆಜಿದೋರ್ದುದು ಕೋಂಟೆ (ಹರಿಶ್ಚಂ. ೧-೫೯); ಮೆರೆದುದವನ್ನೆಗಂ ವನರಮ್ಯ ಗಿರಿಪಂಕ್ತಿಯಿಂದೆ ಪರಿವೃತಮಾಗಿ . . . ರಾಜಿಪ ಸರೋವರಂ ಮುಂದೆ (ಶ್ರೀರಾಮಾ. ೧೨೪-೯೬). ೪. ಹರಡಿರುವುದು; ವ್ಯಾಪ್ತವಾಗಿರುವುದು: ಪರಿವೃತವಾಗಿ ಬರ್ಪ ಬಲಯಾನಸಮುದ್ಭವರೇಣುಜಾಳಂ . . . ಬೆರಸು ದಿಶಾವಳೀ ಬಹುಗುಹೋದರಮಂ ಪುದಿದಾಕ್ಷಣಂ ಪುಗುತ್ತಿರೆ (ಶಾಂತೀಶ್ವ. ೧೦-೨೦೧). ೫. ಸುತ್ತುವರಿಯಲ್ಪಟ್ಟ ವ್ಯಕ್ತಿ: ವಿಂಗೆ ವಾತಗುಲ್ಮಪರಿವೃತರಾಗಿಯುಂ . . . ಸೊಗಯಿಪೇಕಾಕಿಗಳೆನಿಸಿ ಶಿವನನೊಲಿಸಿದ ಮುನೀಶ್ವರರು ಕಣ್ಗೆಸೆದರು (ಹಚೀಕಾ. ೬-೩೬); ಯಮುತನುಜನಧಿಕನು ಹಿಡಿಂಬಾರಮಣನತಿಬಲ್ಲಿದನು ಪಾರ್ಥನ ವಿಮಳವಿಗ್ರಹ ಲೇಸು ಸಕಲ ಮಹೀಶಪರಿವೃತರು ಯಮಳರಿರವತಿಚೆಲುವು (ಕುಪ್ಯಾಉ. ೮-೨೦); ಮೊಗಸಾಲೆಯೊಳ್ಕತಿಪಯಭಟಪಟಲಪರಿವೃತ ನೋಲಗಂಗೊಟ್ಟು (ರಾಜಶೇ. ೧೩-೬೧ ವ).

**ಪರಿವೃತರೇಫ**=ಸುತ್ತುವರಿದ ಅಕಾರದ ರೇಫ; 'ರ' ಕಾರ: ಪರಿವೃತರೇಫಲೋಪಕ್ಕೆ—ಕ್ರೇಣಿ-ಕೇಣಿ (ಶಸುದ. ೨೬೧ ಪ್ರಯೋ). [ಸಂ.]

**ಪರಿವೃತ್ತ** (ಗು). ೧. ತಿರುಗಿದ; ಸುತ್ತಿದ. ೨. ಹಿಂದಕ್ಕೆ ತಿರುಗಿದ; ಹಿಮ್ಮುಖವಾದ. ೩. ಸುತ್ತುವರಿದ; ಬಳಸಲ್ಪಟ್ಟ. ೪. ಗುಂಡಾದ; ದುಂಡಗಿರುವ; ವರ್ತುಲಾಕಾರವಾದ: ಒದವಿದ ಕರ್ಪನೆಯ್ದೆ ಪರಿವೃತ್ತಪಯೋಧರಚೂಚುಕಕ್ಕೆ ಮಾಡದೆ . . . ಬಳೆದೊಂದು ಗರ್ಭಮೆ ಮನಂಗೊಳಲಾರ್ತುದು ಮಂದಯಾನೆಯಾ (ಆದಿಪು. ೮-೪೬); ತುಜುಂಗಳ ಮೊತ್ತ ಮುಸುಕಿದವಧಿಕಹರುಷದಲಾಮುರಾಂತಕನ ಸುತ್ತಿ ನಿಂದಿದ್ದೀಕ್ಷಿಸುತ ಪರಿವೃತ್ತಲೋಚನಗಳಲಿ ಮೋಹನಮೂರ್ತಿಯನು (ಭಾಗ. ೧೦-೧೬-೧೩). ೫. ಕೊನೆಗೊಂಡ; ಮುಕ್ತಾಯ ಹೊಂದಿದ. ೬. ವಿನಿಮಯವಾದ; ಅದಲುಬದಲು ಮಾಡಿದ. (ನಾ). ೭. [ಛಂದ] ಪದ್ಯಗಳಲ್ಲಿ ಯಮಕಗಳು ಅಲ್ಲೊಂದು ಇಲ್ಲೊಂದು ಬಂದಿರುವುದು: ಪರಿವೃತ್ತಂ ಸಂದಷ್ಟಂ ನಿರಂತರಾವಳಿ ಸಮುದ್ಗಮೆಂಬಿವು ಮೊದಲಾಗಿರೆ ಯಮಕಭೇದಂ (ಕಾವ್ಯಾವ. ೫೪೬). ೮. [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು; ☞"ಕೈಗಳನ್ನು ಊರ್ಧ್ವಮಂಡಲದಿಂದ ಸುತ್ತಿ ಸುತ್ತಿ, ಸೂಚೀ ಪಾದದಿಂದ ಬದ್ಧ ಚಾರಿಯನ್ನು ಮಾಡಿ ಸುತ್ತುವುದು" (ಲಾಸ್ಯರಂ. ೩೦೧ ಗದ್ಯಾನುವಾದ): ಎರಡುಕರಮೂರ್ಧ್ವಗನುಂಡಲ ದೊರೆವಡೆದಿರೆ ಬದ್ಧಚಾರಿಯುಂ ಪದಸೂಚಿಯಿನುರುತರದೆ ಮಾಡಿ ತಿರುಗಿಸಿ ತಿರುಪಂಗೊಳಿತಾಂ ಸಮಂತು ಪರಿವೃತ್ತಮಿದುಂ (ಲಾಸ್ಯರಂ. ೪-೧೩೪). [ಸಂ.]

**ಪರಿವೃತ್ತಂಬೆಱು** (ಕ್ರಿ). ವರ್ತುಲಾಕಾರವನ್ನು ತಳೆ,-ಹೊಂದು: ಪರಿವೃತ್ತಂಬೆತ್ತ ಬಿಂಬಂ ಪಡುವಣ ಕಡಲೊಳ್ಪೊಂಬಿಸಲ್ . . . ಸತ್ಕಾಂಚನ ಡಮರುಗದಂತಿರ್ದನಂಭೋಜಮಿತ್ರಂ (ತ್ರಿಪುವಿ. ೨-೧೧೪).

[ಪರಿವೃತ್ತ+ಪೆಱು₁]

**ಪರಿವೃತ್ತತೆ** (ನಾ). ವರ್ತುಲಾಕಾರ; ದುಂಡಾಗಿರುವಿಕೆ: ಪರಿವೃತ್ತತೆಯಿಂ ನುಣ್ಪಿಂ . . . ಪರಿಪಕ್ವ ತಾಳಫಳದೊಳ್ ದೊರೆಯೆನಿಸುಗುಮವಳ ಘನಪಯೋಧರಯುಗಳಂ (ಕಾವ್ಯಾವ. ೬೬೪).

[ಸಂ. ಪರಿವೃತ್ತತಾ]

**ಪರಿವೃತ್ತರೇಚಿತ** (ನಾ). [ನಾಟ್ಯ] ಮೂವತ್ತೆರಡು ಬಗೆಯ ಅಂಗಹಾರಗಳಲ್ಲಿ ಒಂದು; ☞"ನಿತಂಬ, ಸ್ವಸ್ತಿಕರೇಚಿತ, ವಿಕ್ಷಿಪ್ತ, ಆಕ್ಷಿಪ್ತ, ಲತಾವೃಶ್ಚಿಕ, ಉನ್ಮತ್ತ, ಕರಿಹಸ್ತ, ಭುಜಂಗತ್ರಾಸಿತ, ಆಕ್ಷಿಪ್ತ, ನಿತಂಬ ಈ ಕರಣಗಳನ್ನು ಭ್ರಮರದೊಡನೆ ಎಂಟುದಿಕ್ಕುಗಳಲ್ಲೂ ಮಾಡಿ ಮೊದಲ ದಿಕ್ಕಿನಲ್ಲಿ ಕರಿಹಸ್ತ, ಕಟೀಛಿನ್ನ—ಈ ಕರಣಗಳ ಪಾದಗಳನ್ನು ಮಾಡುವುದು" (ಲಾಸ್ಯರಂ. ೩೦೪ ಗದ್ಯಾನುವಾದ): ನುತಿವಡೆದ ಭುಜಂಗತ್ರಾಸಿತಮಾಕ್ಷಿಪ್ತಾಖ್ಯಮೊಪ್ಪುತಿರ್ಪ ನಿತಂಬಂ ಸತಿ ಕೇಳ್ ಭ್ರಮರಾಖ್ಯದೊಳಂ ಯುಂತದಿಂದೆಣ್ದೆಸೆಗಳಲ್ಲಿ ಮಾಡುತ್ತಮಿರಲ್ . . . ಮೇಣ್ ಕಟೀಛಿನ್ನಮುಮಂ ಪದವಂ ಮಾಡಲ್ ಪೆಸರಂ ಪುದಿದುದು ಪರಿವೃತ್ತರೇಚಿತಾಖ್ಯಮಿದೆಂದುಂ (ಲಾಸ್ಯರಂ. ೫-೭೪). [ಸಂ.]

**ಪರಿವೃತ್ತಿ** (ನಾ). ೧. ತಿರುಗುವುದು; ಸುತ್ತುವುದು. ೨. ಹಿಂತಿರುಗುವುದು; ಮರಳುವುದು. ೩. ಸುತ್ತಿರುವುದು; ಬಳಸಿರುವುದು. ೪. ಕೊನೆ; ಮುಕ್ತಾಯ. ೫. ವಿನಿಮಯ; ಅದಲು ಬದಲು: "ಪರಿವೃತ್ತಿಃ, ವಿನಿಮಯಃ, ವೈಮೇಯಃ—ಈ ೩ ಗೂಜಾಡುಹಂ" (ಹಲಾಯು. ೯೪-೯೧೯); "ಪರಿವೃತ್ತಿ ವಿನಿಮಯಂ ಮಾಜಾಟಮೆಂದೆನಿಕ್ಕುಂ" (ಮಂಗರಾ. ೧೦೨-೨). ೬. ಬದಲಾವಣೆ; ರೂಪಾಂತರ; ಮಾರ್ಪಾಟು: ಯಾವುದಾದರೊಂದು ಭಾಷೆಯೇ ಆಗಲಿ ಅಳಿವು-ಉಳಿವುಗಳ ಮಧ್ಯೆ ಪರಿವೃತ್ತಿಯನ್ನು ಹೊಂದಿ . . . ಹೊಸಸಂಜ್ಞೆಯನ್ನೂ ಉಚ್ಚಾರವನ್ನೂ ಪಡೆಯುವುದು (ಭಾರದ. ೪೩೦); ಅಪಾರವಾದ ಕಾವ್ಯಪ್ರಪಂಚದಲ್ಲಿ ಕವಿಯೇ ಬ್ರಹ್ಮ. ಇವನ ಇಷ್ಟದ ಪ್ರಕಾರ ಈ ಇಡಿಯ ವಿಶ್ವವೇ ಪರಿವೃತ್ತಿಯನ್ನು ಪಡೆಯುತ್ತದೆ (ಧ್ವನ್ಯಾಲೋ. ೨೨೪); ಈ ಪರಿವೃತ್ತಿ ಹೊಸಗನ್ನಡದಲ್ಲಿ ಮಾತ್ರವಲ್ಲ, ಹಳಗನ್ನಡದಲ್ಲಿಯೂ ಇದೆ (ಸಂಶೋಧ. ೪೪). ೭. ಮತ್ತೆ ಮತ್ತೆ ಬರುವುದು; ಪುನರಾವೃತ್ತಿ: ಉಪಮಿತಾಕ್ಷರಮೆಲ್ಲಿಯುಮೇಕರೂಪಪರಿವೃತ್ತಿಯೊಳೊಂದಿದ ಮಾಟಿಯಿಂದುಪಚಿತಕ್ರಮಮಕ್ಕುಂ (ಕವಿರಾ. ೧-೧೪೬). ೮. ಕ್ರಾಂತಿ. ೯. (ನಾಟಕದಲ್ಲಿ ಥಟ್ಟನೆ ಆಗುವ) ವಸ್ತುಸ್ಥಿತಿ ವ್ಯತ್ಯಾಸ; ಪರಿವರ್ತನೆ: ರುದ್ರನಾಟಕದ ಆಕರ್ಷಣೆಯ ಅತ್ಯಂತ ಪ್ರಬಲಾಂಶಗಳಾದ ಪರಿವೃತ್ತಿಗಳು (Peripeties) ಮತ್ತು ಅನಜ್ಞಾನಗಳು (Anagnorisis) ವಸ್ತುವಿನ ಅಂಗಗಳೇ ಸರಿ (ಅರಿಕಾ. ೭೬); ನಾಟಕದಲ್ಲಿ . . . ಬದಲಾವಣೆಯೇ ಪರಿವೃತ್ತಿ (Peripety) ಎನ್ನಿಸಿಕೊಳ್ಳುತ್ತದೆ (ಅರಿಕಾ. ೮೪). ೧೦. [ಕಾವ್ಯಮೀ] ಅಲ್ಪ ಮತ್ತು ಅಧಿಕ ವಸ್ತುಗಳ ವಿನಿಮಯವನ್ನು ವರ್ಣಿಸುವ ಒಂದು ಬಗೆಯ ಅರ್ಥಾಲಂಕಾರ: ಪರಿವೃತ್ತಿಯೆಂಬುದಕ್ಕುಂ ನಿರುಪಮಮರ್ಥ

ಸ್ವರೂಪವಿನಿಮಯವಚನಂ (ಕವಿರಾ. ೩-೧೫೮) ; ಒಂದಂ ಕೊಟ್ಟೊಂದಂ ಕೊಳ್ವುದಂ ಪರಿವೃತ್ತಿಯೆಂಬುದಕ್ಕುಂ (ಕಾವ್ಯಾವ. ೬-೧೭); ನ್ಯೂನಾಧಿಕದಿಂ ಪರಸ್ಪರ ವಿನಿಮಯ ಪೇಳೆ ತಾನಾಗುವದು ಪರಿವೃತ್ತಿಯು (ಕುವಲ. ೧೦೨). ೧೧. ಅರ್ಥಕ್ಕೆ ಧಕ್ಕೆ ಬಾರದಂತೆ, ಒಂದು ಶಬ್ದದ ಬದಲು ಮತ್ತೊಂದು ಶಬ್ದವನ್ನು ಹಾಕುವುದು : 'ಪರಿವೃತ್ತಿಸಹತ್ವ' ಪರಾ. [ಸಂ.]

**ಪರಿವೃತ್ತಿಸಹತ್ವ** (ನಾ.) [ಕಾವ್ಯಮೀ] ರಚನೆಯಲ್ಲಿಯ ಒಂದು ಶಬ್ದವನ್ನು ತೆಗೆದು, ಅದೇ ಅರ್ಥವನ್ನು ಕೊಡುವ ಬೇರೆ ಶಬ್ದವನ್ನು ಉಪಯೋಗಿಸಿದಾಗ ಪ್ರಕೃತ ಅಲಂಕಾರಕ್ಕೆ ಬಾಧಕವಾಗದಿರುವಿಕೆ : ಮಮ್ಮಟನ ಮತದಲ್ಲಿ "ಪರಿವೃತ್ತಿಸಹತ್ವ"ವೇ ನಿರ್ಣಾಯಕ ; ಎಂದರೆ, ಯಾವುದಾದರೂ ಒಂದು ಕಡೆ ಇರುವ ಪದಗಳನ್ನು ಬದಲಾಯಿಸಿ ಅದೇ ಅರ್ಥ ಕೊಡುವ ಬೇರೆ ಪದಗಳನ್ನು ಹಾಕಿದಾಗ ಅಲ್ಲಿದ್ದ ಅಲಂಕಾರವು ಹೋಗಿ ಬಿಟ್ಟರೆ ಅದು ಶಬ್ದಾಲಂಕಾರಕ್ಕೆ ಗುರುತು ; ಆಗಲೂ ಹಾಗೇ ಉಳಿದರೆ ಅದು ಅರ್ಥಾಲಂಕಾರಕ್ಕೆ ಗುರುತು (ಕೈಪಿಡಿ. ೨೫೧). [ಸಂ.]

**ಪರಿವೃದ್ಧಿ** (ನಾ). ಬೆಳವಣಿಗೆ; ವೃದ್ಧಿ : 'ಪರಿವೃದ್ಧಿವೆಱು' ಪರಾ. [ಸಂ.]

**ಪರಿವೃದ್ಧಿವೆಱು** (ಕ್ರಿ). ಬೆಳವಣಿಗೆಯನ್ನು ಹೊಂದು ; ವೃದ್ಧಿಯಾಗು : ಪರಿವೃದ್ಧಿವೆತ್ತು ಬೀಟಲ್ವರಿಂದುದುರಸ್ಸ್ಪ್ಪಳದೋಳ್ ಮುನೀಂದ್ರನ ಹೃದಯಸ್ಫುರದಮಳಸತ್ವಮೆನೆ ಮುನಿವರನೊಳ್ ಯಜ್ಞೋಪವೀತತತಿ ಸೊಗಯಿಸುಗುಂ (ಜಗವಿ. ೧೦-೮). [ಪರಿವೃದ್ಧಿ+ಪೆಱು$_1$]

**ಪರಿವೆ** 'ಪರವೆ' ನೋ.

**ಪರಿವೆರಸು** (ಕ್ರಿ). ಜೊತೆಯಾಗಿರು ; ಹೊಂದಿಕೊಂಡಿರು; ಯುಕ್ತವಾಗಿರು : ಪದ್ಮದೊಳ್ಪರಿವೆರಸಿರ್ಪ ಭಾರತಿಯ ಸಾರತೆಯಂ ಗೆಡೆಗೊಂಡು . . . ವಿಸ್ತರಿಸುವ ಮಾಕಿಯಕ್ಕನ ಜಸಂ ವಸುಧಾತಳಸೇವ್ಯವಲ್ಲದೇ (ಎಕ. V, ಹಾಸನ. ೬೯-೩೫ ; 1155). [ಪರಿ-$_4$+ಬೆರಸು$_1$ (<ಬೆರೆಯಿಸು)]

**ಪರಿವೆಸ,** ಹರಿವೆಸ (ನಾ). ಪರಿಚರ್ಯೆ ; ಸೇವಾಕಾರ್ಯ : ಉಸುರೆ ದಿವಿಜೇಶ್ವರಂ ಪರಿವೆಸದಮರರ್ ದಾದಿಕಾಱಿವೆಸದಮರರದೇಂ ಬೆಸಗಲಿಗಳ್ ಬರ್ಪರೊ ಮಾನಸವೇಗರ್ ಪವನವೇಗರಿರುಳುಂ ಪಗಲುಂ (ಆದಿಪು. ೫-೭೬). **ಹರಿವೆಸ :** 'ಹರಿವೆಸಗೆಯ್' ಪರಾ. [ಪರಿ-$_4$+ಬೆಸ$_1$]

**ಪರಿವೆಸಂಗೆಯ್,** ಪರಿವೆಸಗೆಯ್, ಹರಿವೆಸಗೆಯ್ (ಕ್ರಿ). ಸೇವೆ ಮಾಡು ; ಪರಿಚರ್ಯೆ ಮಾಡು : ಸಕಳಾಮರರ್ ಪಯೋವಾಹಕರಮರಿಯರಲ್ಲಿ ಪರಿವೆಸಂಗೆಯ್ವರ್ (ಚಂದ್ರಪ್ರ. ೧೨-೧೩೪). **ಪರಿವೆಸಗೆಯ್ :** ಗುಣಾನ್ವಿತಾಮರರ್ ಪರಿವೆಸಗೆಯ್ವರೆಂಬಿನಱಯಿಂ ಪೊಗಟಲ್ ಸುರಲೋಕಸೌಖ್ಯಮಂ (ಆದಿಪು. ೩-೨) ; ವಿರಚಿಸುವಳ್ ಸಮಂತುಚಿತಮಂಗಳಮಂ ಶಚಿ ನಾಕಿನಾಯಕಂ ಪರಿವೆಸಗೆಯ್ವಂ (ಚಂದ್ರಪ್ರ. ೧೩-೪೭). **ಹರಿವೆಸಗೆಯ್ :** ಹರಿವೆಸಗೆಯ್ವರಚ್ಚರಸೆಯರ್ ಬಗೆದಾಗಳೆ ಕೂರ್ತು ಬರ್ಪರಚ್ಚರಸೆಯರಿಚ್ಚೆಯಿಂ ಸಲಿಸಿ ಮೆಚ್ಚಱು ದೋಲಗಿಸುತ್ತುಮಿರ್ಪರಚ್ಚರಸೆಯರ್ (ಸುಕುಮಾ. ೯-೩೭). [ಪರಿವೆಸ+ಕೆಯ್$_1$]

**ಪರಿವೆಸಗೆಯ್** 'ಪರಿವೆಸಂಗೆಯ್' ನೋ.

**ಪರಿವೆಸವೋಗು** (ಕ್ರಿ). = ಪರಿವೆಸಂಗೆಯ್ : ಪರಿವೆಸವೋಗಲಚ್ಚರಸಿಯರ್ ಶ್ರುತಿಯೊಳ್ ಸಮನಾಗೆ ಪಾಡಲಚ್ಚರಸಿಯರ್ . . . ಎಂದೊಡೇವೊಗಟ್ಟುದೋ ಜಿನಚಂದ್ರವಿಭೂತಿಲೀಲೆಯಂ (ಶಾಂತಿಪು. ೭-೭೫). [ಪರಿವೆಸ+ಪೋಗು$_1$<ಪೋ$_1$)]

**ಪರಿವೇಣ** (ನಾ). [ಬೌದ್ಧ] ವಿಹಾರಗಳಲ್ಲಿ ಭಿಕ್ಷುಗಳ ವಾಸಕ್ಕಾಗಿ ವಿಶಾಸಲಾದ ಕೊಠಡಿ : ಅವನು ಈಗ ಸಂಖ್ಯೇಯ ಪರಿವೇಣದಲ್ಲಿ ವಾಸಿಸುತ್ತಿರುವನು (ಬುದ್ಧಪ. ಮಿಲಿಂದ. ೨೪) ; ಒಂದು ದಿನ ಉಪಾಸಿಕೆ ಸುಪ್ರಿಯೆಯು ಆರಾಮಕ್ಕೆ ಹೋಗಿ, ವಿಹಾರದಿಂದ ವಿಹಾರಕ್ಕೂ, ಪರಿವೇಣದಿಂದ ಪರಿವೇಣಕ್ಕೂ ತಿರುಗಿ . . . ಭಿಕ್ಷುಗಳನ್ನು ಕೇಳಿದಳು (ಬುದ್ಧಪ. ೪೩). [<-ಪಾಲಿ. ಪರಿವೇಣ]

**ಪರಿವೇತೃ** (ನಾ). ಅಣ್ಣನು ಮದುವೆಯಾಗುವುದಕ್ಕಿಂತ ಮೊದಲು ಮದುವೆ ಮಾಡಿಕೊಂಡ ತಮ್ಮ : ಧರಣಿಯನಿದನ್ನು ನಾಂ ಧರಿಸಿದೊಡೆ ಜಗದಲ್ಲಿ ಪರಿವೇತೃವೆಂಬ ನಾಮವನಾಂಪೆನು (ಶ್ರೀರಾಚ. ೩-೧೭). [ಸಂ. ಪರಿವೇತೃ]

**ಪರಿವೇತ್ತ** (ನಾ). = ಪರಿವೇತೃ : "ಪರಿವೇತ್ತಾ . . . ಅಣ್ಣನು ಮದಿವೆ ಮಾಡಿಕೊಳ್ಳದೇ ಇರುವಾಗಲೇ ತಾನು ಮದಿವೆಯಾದ ತಮ್ಮನು ಪರಿವೇತ್ತನೆಂಬ ಪಾಪಿಷ್ಠನು" (ಸಿದ್ಧಾಂತ. ೨೩೩) ; ಹಿರಿಯಗ್ಗೆ ಮುನ್ನಮೇ ಮದುವೆಯಾದ ಪರಿವೇತ್ತರುಂ (ಭಾರಶಾಂ. ೩೪-೨೯೫). [ಸಂ. ಪರಿವೇತೃ]

**ಪರಿವೇದಕ** (ನಾ). = ಪರಿವೇತೃ. [ಸಂ.]

**ಪರಿವೇದನ** (ನಾ). ೧. ಅಣ್ಣನಿಗಿಂತ ಮೊದಲು ತಮ್ಮನ ಮದುವೆಯಾಗುವುದು. ೨. ಮದುವೆ; ವಿವಾಹ. ೩. ಸಂಪೂರ್ಣಜ್ಞಾನ. ೪. ಪರಿಪೂರ್ಣತೆ. ೫. ಲಾಭ ; ಪ್ರಾಪ್ತಿ. ೬. ಮನೆಯಲ್ಲಿ ನಡೆಯುವ ವೈದಿಕ ಕರ್ಮಗಳಿಗಾಗಿ ಬೆಂಕಿಯನ್ನು ಕಾಪಾಡಿಕೊಂಡು ಬರುವುದು ; ಗೃಹಾಗ್ನಿಸಂರಕ್ಷಣೆ. ೭. ಸುತ್ತಲೂ ಹಬ್ಬುವಿಕೆ. ೮. ಚರ್ಚೆ ; ವಿಮರ್ಶೆ. ೯. ವ್ಯಥೆ ; ನೋವು. [ಸಂ.]

**ಪರಿವೇದನೆ** (ನಾ). ವ್ಯಥೆ ; ವೇದನೆ ; ನೋವು : ಅಲಘುತರ ಪರಿವೇದನಾವಿಹ್ವಲಿತ ಕಂಠಗತಾತ್ಮನೂರ್ಧ್ವಸ್ಖಲಿತ ದೀರ್ಘಶ್ವಾಸನಿದ್ದನು ಕೌರವರ ರಾಯ (ಕುಪ್ರಾಗ. ೧೦-೨). [ಸಂ. ಪರಿವೇದನಾ]

**ಪರಿವೇದಿ** (ನಾ). ತಿಳಿದವನು ; ಅರಿತವನು : ಪರಿವೇದಿ[ಪಾಠಾಂ. ಹೃದಿ] ನಗರದೊಳ್ ನಾಗರಕಂ (ಅಸಂಪು. ೭-೯೨ ; ಸೂಕ್ತಿಸು. ೮-೩೦೮ ನೋ). [ಸಂ. ಪರಿವೇದಿನ್]

**ಪರಿವೇಲ** (ನಾ). ಒಂದು ಬಗೆಯ ಸಸ್ಯ : "ಗೋನರ್ದ—ಪರಿವೇಲ" (ಓಷಧಿ. ೫೧) ; "ವಲ್ಕಂ—ಪರಿವೇಲ" (ಓಷಧಿ. ೧೪೫). [ ? ]

**ಪರಿವೇಶ** (ನಾ). = ಪರಿವೇಷ ೬ : ಆದಿತ್ಯೇಂದುಗಳನಾವರಿಸಿತಾ ಪರಿವೇಶ[ಪಾಠಾಂ. ಷ]ವತಿನಿರ್ಭರದೊಳನಿಲಂ ಬೀಸಿದನು (ಬಸವಪು. ೬೧-೧೧). [ಸಂ.]

**ಪರಿವೇಷ** (ನಾ). ೧. ಸುತ್ತುವರಿದಿರುವಿಕೆ ; ಬಳಸಿರುವಿಕೆ. ೨. ಆವರಣ ; ಪರಿಧಿ ; ವಲಯ : "ಪರಿಧಿಯೆನೆ ಪರಿವೇಷಮಕ್ಕು" (ಮಂಗರಾ. ೧೧-೩) ; ಮಕುಟವ್ಯಾಲಗ್ನರತ್ನಪ್ರಭಾಪರಿವೇಷಂ ಲಲಿತಾಂಗ ಚಾಪರುಚಿಯಂ ಮಾಡಿತ್ತು ದಿಕ್ಚಕ್ರದೊಳ್ (ಆದಿಪು. ೭-೧೨೦) ; ಪರಿವೇಷದ ತೆಱದಿಂದನವರತಂ ಕರ್ಪೂರರಸದ ಪರಿಕಣಿ ಸುತ್ತಂ ಪರಿಯಲ್ (ಕಾದಂಉ. ೨೨೩) ; ವಿದ್ರುಮರತ್ನಬುದ್ಬುದಾಫೇನಂಗಳೋಳಿಯಿಂದೆಸೆವ ನೀರಾಕರಂ ಭೂಮಂಡಲಕ್ಕೆ ಪರಿವೇಷದಂತೆ (ಸಿದ್ಧರಾ. ೧-೧೩) ; ಪದರಜದ ಪರಿವೇಷದಲಿ ಹೊಳೆದುದು ನಭವೆಣ್ಡೆಸೆಯ . . . ವರವಧುಗಳನು ಪರಿವರಿಸಿ (ನಿಭಾಗ. ೧೦-೨-೬). ೩. ವರ್ತುಲ; ವೃತ್ತಾಕಾರ. ೪. ವರ್ತುಲದ ಸುತ್ತುಗೆರೆ,—ಆವರಣರೇಖೆ ; ವೃತ್ತದ ಸುತ್ತಳತೆ. ೫. ಮಕುಟ ; ಕಿರೀಟ : "ಪರಿವೇಷಂ ಮಕುಟೋತ್ತಮಾಂಗವಸನಂ ವೇಷ್ಟಾಭಿಧಾನಂ" (ನಾನಾರ. ೨೪). ೬. ಸೂರ್ಯ

ಅಥವಾ ಚಂದ್ರನ ಸುತ್ತ ಇರುವ ಬೆಳಕಿನ ವಲಯ,-ಪ್ರಭಾವಳಿ: "ಪರಿಧಿಃ, ಪರಿವೇಷಃ (ಸ್ಯಾತ್), ಮಂಡಲಂ, ಉಪಸೂರ್ಯಕಂ—ಈ ೪ ಪರಿವೇಷದ ಪೆಸರ್" (ಹಲಾಯು. ೮-೪೧) ; ಒಂದೇ ಗೃಹದೊಳ್ ನಿಂದಂದು ಸೌರೀಂದುಗಳ್ ಪರಿವೇಷಂ ದೊರೆಕೊಂಡೊಡಲ್ಲಿ ಮನುಜಂಗಕ್ಕುಂ ಕ್ಷಯವ್ಯಾಧಿ (ಜಾತತಿ. ೨೧-೨೩) ; ರವಿಬಿಂಬಮನೊಳಕೊಂಡು ಪೊಳೆವ ಪರಿವೇಷದವೊಲ್ (ಮಲ್ಲಿಪು. ೧-೬೨) ; ಕುದುರೆಗಳು ಮುಗ್ಗಿದವು ಪರಿವೇಷದಲಿ ಸಪ್ತಗ್ರಹದ ವಕ್ರತೆ ಸೂರ್ಯಮಂಡಲಕೆ (ಕುಮ್ಯಾಕ. ೮-೨೭) ; ತೋಱುತಾ ಕಪಿಸೇನೆ ಪರಿವೇಷದವೊಲರ್ಯಮನ (ತೊರರಾ. ೬-೩೭-೪). ೭. ಕೆಲವು ವೇಳೆ ಗ್ರಹಮಂಡಲದ ಸುತ್ತಲೂ ಕಂಡುಬರುವ ವೃತ್ತಾಕಾರವಾದ ಗುರುತು : ಗ್ರಹವಿರೆ ಪರಿವೇಷದೊಳಾ ಗ್ರಹಮಂ [ಕ್ರೂರಗ್ರಹಂ] ನಿರೀಕ್ಷಿಸುವೊಡರಿಪ್ಪ ಹರಂ (ಜಾತತಿ. ೭-೧೯). ೮. ವಾತಾವರಣ; ಪರಿಸರ; ಸನ್ನಿವೇಶ : ಸೆರೆಯಂಗಡಿಯ ಉನ್ಮತ್ತ ಪರಿವೇಷದಲ್ಲಿ ವರ್ಣದ್ವೇಷದ ಅಮಾನುಷಚಿತ್ರ ಅವನಿಗೆ ಕಾಣುತ್ತದೆ (ಹೊಸಕ್ಷಿ. ೨೯೦) ; ಅಕ್ಷಾಂಶ ೩೦° ಗಳಿಂದ ೪೫° ಗಳ ವರೆಗೆ ಇರುವ ಪ್ರದೇಶಗಳು ವಾಣಿಜ್ಯಮಾರುತಗಳ ಪರಿವೇಷ (Belts) ದಲ್ಲಿರುತ್ತವೆ (ಭೂವಿಸ. ೧೪೫). [ಸಂ.]

**ಪರಿವೇಷಂಗೊಳ್** (ಕ್ರಿ). ತೇಜೋವಲಯವನ್ನು ಹೊಂದು ; ಪ್ರಭಾವಳಿಯನ್ನು ಪಡೆ ; ಗುಡಿಗಟ್ಟು : ತರಳತರವೃತ್ತಮೌಕ್ತಿಕಪರಿಕರಮೇಕಾಂತಕಾಂತಮೆಕ್ಕಾವಳಿ ಕಂಧರದೊಳಮರ್ದಸೆಯೆ ಪೋಲ್ತುದು ಪರಿವೇಷಂಗೊಂಡ ಚಂದ್ರನಂ ಮುಖಚಂದ್ರಂ (ಆದಿಪು. ೪-೩೭) ; ನೆರೆದೋಲಗಿಪಮರನರೋತ್ಕರಜಲಧರವಳಯದೊಳಗೆ ಕಾಂತಿಯ ಪುದುವಿಂ ಪರಿವೇಷಂಗೊಂಡ ನಿಶಾಕರನಂ ಪೋಲ್ತಂ ಕುಮಾರನೊಡ್ಡೋಲಗದೊಳ್ (ಶಾಂತಿಪು. ೧೦-೮೬) ; ಅಂತು ಪೊಜವಟ್ಟು ಪರಿವೇಷಂಗೊಂಡ ಚಂಡಕಿರಣನಂತೆ ಕುಂಡಲಿತಕೋದಂಡನಾಗಿ (ಪಂರಾಮಾ. ೯-೬೨ವ); ಮಣಿನಿಕರಖಚಿತಮಕುಟಕೋಟಿಗಳ್ ಮೆಱೆಯೆ ಬಹುರತ್ನಕದಂಬಕಾಂತಿ ಮಂಡಳಿಸಿ ಪರಿವೇಷಂಗೊಂಡ ರವಿಮಂಡಲದ ಹಿಂಡುಗಳಂತೆ ತೆಕ್ಕನೆ ತೀವಿ ಕಿಕ್ಕಿಱಿಗಿಱಿದು ಕುಳ್ಳಿರ್ದ . . . ರಾಜಪುತ್ರರ ಪಂಕ್ತಿಗಳೊಳಂ (೧ರಿಕ. ೨-೧೦೫ವ). [ಪರಿವೇಷ + ಕೊಳ್$_1$]

**ಪರಿವೇಷಣ** (ನಾ). ೧. ಸುತ್ತುಗಟ್ಟುವುದು ; ಬಳಸುವುದು : ಸ್ಥಂಡಿಲ ಪರಿಸ್ತರಣ ಪರಿವೇಷಣ . . . ಮುಖಾಹುತ್ಯಾದಿಗಳಿಂ ಸಮರ್ಚಿತನಾಗಿ ದೇವಮುಖನೆನಿಸಿ (ವಿವೇಕ. ೧೩೭). ೨. ಊಟಕ್ಕೆ ಬಡಿಸುವುದು. [ಸಂ.]

**ಪರಿವೇಷ್ಟನ** (ನಾ). ೧. ಸುತ್ತುಗಟ್ಟುವಿಕೆ ; ಆವರಣವಾಗುವಿಕೆ: ಅಷ್ಟವಿಧಾಚಂದ್ರಾಕೃತಿಯೊಳಮಷ್ಟಮಂಗಳಪರಿವೇಷ್ಟನದೊಳಂ ನೆರೆದು (ಆದಿಪು. ೭-೭೩ವ). ೨. ವರ್ತುಲ ; ಮಂಡಲ : ಬಿಗೆ ವಿಸ್ತರದಿನೊಪ್ಪಂಬೆತ್ತಿಹುದು ಸಿಂಗರದ ಗೋಪುರ ಸಾಲಪರಿವೇಷ್ಟನಗಳಿಂದ ಮರ್ದು (ಶಂಕವಾ. ೧-೪೫). ೩. ಹೊದಿಕೆ ; ಆಚ್ಛಾದನೆ. [ಸಂ.]

**ಪರಿವೇಷ್ಟಿ** (ನಾ). ಸುತ್ತುವರಿದಿರುವುದು ; ಬಳಸಿರುವುದು : 'ಪರಿವೇಷ್ಟಿಗೊಳ್' ಪರಾ. [ಸಂ.]

**ಪರಿವೇಷ್ಟಿಗೊಳ್** (ಕ್ರಿ). ಸುತ್ತುವರಿ ; ಬಳಸು : ಅಧಿಕದುರ್ಗಮಂ ವನಧಿ ಪರಿವೇಷ್ಟಿಗೊಂಡಿರ್ಪಂತೆಯತಿಘಾತದಗುಳು ಕಂಗೊಳಿಸಿರ್ದುದು (ನಪಮೋ. ೨-೨೭). [ಪರಿವೇಷ್ಟಿ + ಕೊಳ್$_1$]

**ಪರಿವೇಷ್ಟಿತ** (ಗು). ೧. ಸುತ್ತುಗಟ್ಟಲ್ಪಟ್ಟ ; ಬಳಸಿದ : ಗಂಭೀರೋದನ್ವತ್ ಪರಿವೇಷ್ಟಿತಮೇದಿನಿಯೊಳ್ ವೆಣ್ಣಮಯ್ಯನಕಲಂಕಗುಣಂ (ಛಂದೋಂಬು. ೧-೧೪) ; ಪರಿವೇಷ್ಟಿತ ನೃಪಸಂಕುಲಕಿರೀಟಮಣಿಗಣಘೃಣಿಚ್ಛಟಾಂಚಿತಹರಿವಿಷ್ಟರನಾ ವಜ್ರಾಯುಧಭೂವರನಿಂತೋಲಗದೊಳಿರ್ದಂ (ಶಾಂತೀಶ್ವ. ೧೦-೧೪). (ನಾ). ೨. ಸುತ್ತುಗಟ್ಟಿರುವುದು ; ಬಳಸಿರುವುದು : "ವಳಯಿತಂ ವೇಷ್ಟಿತಂ ಪರಿವೇಷ್ಟಿತಂ ಪರಿಕ್ಷಿಪ್ತಮೆನೆ ಸುತ್ತಕ್ಕು" (ಮಂಗರಾ. ೧೨೯-೧೨). ೩. ಸುತ್ತುಗಟ್ಟಲ್ಪಟ್ಟಿರುವುದು ; ಬಳಸಲ್ಪಟ್ಟಿರುವುದು : ಕರಿಣೀಶತಂಗಳಿಂ ಪರಿವೇಷ್ಟಿತನಾಗಿ ತಿಳಿನೀರ ಕೊಳದೊಳಗೆ ಕ್ರೀಡಿಸುವ ಸೊರ್ಕಾನೆಯುಮಂ (ಪಡ್ಮಾರಾ. ೫೪-೧೩). ೪. ಸುತ್ತುಗಟ್ಟಲ್ಪಟ್ಟವನು : ಕುಲಾದ್ರಿಪರಿವೇಷ್ಟಿತನಂ . . . ಕಮಲಾಭಿರಾಮನಂ ಇಂತಪ್ಪ ಮಗನಂ ನೀನಮೋಘಂ ಪಡೆವೆ (ಪಂಪಭಾ. ೧-೧೪೧) ; ಕುಳಮಂತ್ರಿಪರಿವೇಷ್ಟಿತಂ ಸೌಜನ್ಯಕಂದಾಂಕುರಂ ಪೊಕ್ಕನಂತರಮಷ್ಟಾಹ್ನಿಕಮಹಾಮಹಿಮೆಯುಂ ಜಿನೇಶ್ವರಂಗೆ ನಿರ್ವತಿ್ಸಿ (ಶಾಂತಿಪು. ೪-೬೫ ವ) ; ಉಲೂಕಂ ವೇದಪಾರಾಯಣಂಗೆಯ್ವ ಸಚ್ಛಿಷ್ಯರಿಂ ಪರಿವೇಷ್ಟಿತನಾದಾಚಾರ್ಯನಂತೆ ಕಣ್ಗೊಳಿಸಿದಂ (ಅದ್ಭುತ. ೨೨-೧). [ಸಂ.]

**ಪರಿವೇಷ್ಟಿಸು** (ಕ್ರಿ). ಸುತ್ತುಗಟ್ಟು ; ಬಳಸು : ಅಂತು ಮೂವತ್ತಿರ್ವರಿಂದ್ರರಂ ಪರಿವೇಷ್ಟಿಸಿ ಬರೆ (ಶಾಂತಿಪು. ೧೦-೩ ವ) ; ಸೆರೆದುಜುಗಲ್ಯೆಯ್ಕೆಲ್ಲಮನಿರದಡರೆ ಜರಲ್ಲತಾವಿತಾನದಿನೆತ್ತಂ ಪರಿವೇಷ್ಟಿಸಿರ್ದ ಪರಿಣತಸುರತರುವಂ ಪೋಲ್ತು ಸೊಗಯಿಸಿರ್ದಂ ಮುನಿಪಂ (ಕಾದಂಪೂ. ೨೪೦) ; ಅಮೃತಾಂಶುಲೇಖೆ ನಕ್ಷತ್ರಮಾಲೆಯಿಂ ಬಳಸಿದಂತೆ ಪರಿವಾರವಧೂಸಮಿತಿ ಪರಿವೇಷ್ಟಿಸಿರೆ ತರುಣಿ ಮಾಡಿದಳ್ ನಯನಕುವಲಯಾನಂದಮಂ (ಮಲ್ಲಿಪು. ೩-೯೯) ; ದರಹಸಿತಸಹವಾದ ಮುಖರಸ ಪರಿದು ಬರುತ ಕುಚಾದ್ರಿ ತಡೆಯಲು ತಿರಿಗಿ ಬರುತಿಕ್ಕೆಲನ ಪರಿವೇಷ್ಟಿಸಿದುದೆಂಬಂತೆ . . . ತೋರಮುತ್ತಿನ ಸರದ ಸಮುದಯ ಸೊಗಸುತಿರ್ದುವು (ಪ್ರಭುಲೀ. ೪-೧೦). [ಪರಿವೇಷ್ಟನ+-ಇಸು$_3$]

**ಪರಿವೇಷ್ಟ್ರು** (ನಾ). (ಹವಿಸ್ಸು ಮೊದಲಾದುವನ್ನು) ಅರ್ಪಿಸುವವನು: ಮರುದ್ಗಣಂಗಳೇ ಋತ್ವಿಜರಾಗಿಯುಂ ಮರುತರೇ ಪರಿವೇಷ್ಟೃಗಳಾಗಿಯುಂ ನೆಲೆಗೊಂಡಿರ್ದರು (ಭಾರಶಾಂ. ೨೯-೧೯೬). [ಸಂ.]

**ಪರಿವೊನಲ್**, ಪರಿವೊನಲು, ಹರಿಹೊನಲು (ನಾ). ಪ್ರವಹಿಸುವ ನದಿ ; ಹರಿಯುವ ಹೊಳೆ : ಪರಿವ ಪರಿವೊನಲ ಹಿಮಶೀಕರಂಗಳೊಳ್ ಪುದಿದ ಮಂದಮರುತಂ (ಶಾಂತಿಪು. ೯-೭೯); ದಾಳಿಂಬದ ಪಣ್ಗಳ ತನಿರಸದ ಪರಿವೊನಲೆ ಪರಿನೀರಾಗೆಯುಂಕುರವೊತ್ತಿ ಬೆಳೆಯುತ್ತಿರ್ದ ಕರ್ಬಿನ ಮಡಲ್ಗಳುಮಂ (ಪಂಚತಂ. ೧೧೭-೧೬) ; ಪರಿವೊನಲಿಂ ಬಿಲಂಗಳಿನರಣ್ಯದಿನಲ್ಲಿಯ ತಳ್ಪಲೊಪ್ಪುಗುಂ (೧ರಿಕ. ೧-೭೦); ಪರೆದು ನೆಱೆಯುರ್ಬಿ ಪರಿವ ನೈಲ್ ಪರಿವೊನಲ್ ಪೊನ್‍ಮಾಟ್ಟಿ ನಾಡೆಲ್ಲದಱ ಬೆಳಸವನದಾದಪುವು (ಬದ್ಧಪ್ರ. ೪೫-೯೭೭). **ಪರಿವೊನಲು :** ಸುರುಚಿರಪಲ್ಲವಪಾಣಿಯು ತನುತನು ಪಿರಿದುಂ ನಡುಗಿ ಮನೋಹರವಾದುದು ಪರಿವೊನಲೊಳ್ಸಲ್ಕಿದ ನವಮೋಹನಲತೆ ಕಂಪಿಸುವಂತೆ (ಜಯುಕಾ. ೪-೨೦) ; ಹಂಗೆಗಳ್ ಮೇಘದೊಡ್ಡಣೆ . . . ವೀರರಸವೆ ಪರಿವೊನಲಾಗೆ ವರುಷದಂತಿರ್ಪರಣವಮಂ ಕಂಡು ವೀರರ ಮನಶ್ಚಾತಕಂ ನಲಿದುದು (ಚೆಬಪು. ೩೮-೩೭). **ಹರಿಹೊನಲು :** ಹರಿಹೊನಲಾದುದರುಣಜಲ (ಉತ್ತರಾ. ೭-೩೬) ; ಮೇಗರವಳ್ಳಿ ಸೀಮೆಯ ಜನಮನದ ಹರಿಹೊನಲಿನಲ್ಲಿ ಕಂತಿ, ಗುತ್ತಿ, ತಿಮ್ಮಿಯರ ನೆನಪೂ ಕೊಚ್ಚಿಹೋಯಿತು (ಮಲೆಮ. ೭೨೬). [ಪರಿ$_2$ + ಪೊನಲ್]

**ಪರಿವೊನಲು** 'ಪರಿವೊನಲ್' ನೋ.

**ಪರಿವ್ಯಾಥ** (ನಾ). ೧. ಒಂದು ಬಗೆಯ ಜಲಸಸ್ಯ ; ನೀರುಹಬ್ಬೆಗಿಡ : "ಪರಿವ್ಯಾಥಃ, ವಿದುಲಃ . . . ನಾದೇಯೀ, ಅಂಬುವೇತಸಃ—೪ ನೀರುಹಬ್ಬೇಗಿಡ" (ಸಿದ್ಧಾಂತಿ. ೧೧೮). ೨. ಬೆಟ್ಟದಾವರೆ ; ಕೊಸಗು : "ದ್ರುಮೋತ್ಪಲಃ, ಕರ್ಣಿಕಾರಃ, ಪರಿ

ವ್ಯಾಧಃ—ಈ ೩ ಕೊಸಗಿನ ಮರ" (ನಾಚಿರಾ. ೧೦೮); "ದ್ರುಮೋತ್ಪಲಃ, ಕರ್ಣಿಕಾರಃ, ಪರಿವ್ಯಾಧಃ—೩ ಬೆಟ್ಟತಾವರೇ ಹೆಸರುಗಳು" (ಸಿದ್ಧಾಂತಿ. ೧೨೫). [ಸಂ.]

**ಪರಿವ್ರಜನ** (ನಾ). ಸಂನ್ಯಾಸಿಯಾಗಿ ತಿರುಗಾಡುವುದು,—ಸಂಚರಿಸುವುದು: 'ಪರಿವ್ರಜಿಸು' ಪರಾ. [ಸಂ.]

**ಪರಿವ್ರಜಿಸು** (ಕ್ರಿ). ೧. ಸಂನ್ಯಾಸವನ್ನು ಸ್ವೀಕರಿಸು ; ಸಂನ್ಯಾಸಿಯಾಗು : ನನ್ನ ಸ್ವಾಮಿಯು ಪರಿವ್ರಜಿಸಿ ಸರ್ವಜ್ಞನಾದನು (ಬುದ್ಧಪ. ೧೧) ; ಹಲವರು ತಾವು ಪರಿವ್ರಜಿಸದಿದ್ದರೂ ತಮಗೆ ಧರ್ಮೋಪದೇಶ ಮಾಡಿದ ಪರಿವ್ರಾಜಕರನ್ನು ಗೌರವಿಸಿ ಪೂಜಿಸುತ್ತಿದ್ದರು (ತೀರ್ಥಂಕ. ೨೧). ೨. ಸಂನ್ಯಾಸಿಯಾಗಿ ಸಂಚರಿಸು. [ಪರಿವ್ರಜನ+-ಇಸು₃]

**ಪರಿವ್ರಜ್ಯೆ** (ನಾ). ೧. ತಿರುಗಾಡುವುದು ; ಪರ್ಯಟನ ಮಾಡುವುದು. ೨. ಸಂನ್ಯಾಸಿಯಾಗಿ ಜೀವನವನ್ನು ನಡೆಸುವುದು. ೩. ತಪಸ್ಸುಮಾಡುವಿಕೆ ; ತಪಶ್ಚರಣ ; ವ್ರತಿಧರ್ಮಾಚರಣೆ : "ಪರಿವ್ರಜ್ಯಾ, ವ್ರತಾದಾನಂ, ಪ್ರವ್ರಜ್ಯಾ, ಗತಿಃ—ಈ ೪ ತಪಂಬಡುಹ" (ಹಲಾಯು. ೧೨೮-೯೧). [ಸಂ. ಪರಿವ್ರಜ್ಯಾ]

**ಪರಿವ್ರಾಜ** (ನಾ). ೧.=ಪರಿವ್ರಜ್ಯೆ ೩ : "ಗತಿ ಪರಿವ್ರಾಜಂ ವ್ರತಂ ನಿಯಮವೆನೆ ತಪಂ" (ಮಂಗರಾ. ೧೩೫-೩೬). ೨.=ಪರಿವ್ರಾಜಕ. [ಸಂ.]

**ಪರಿವ್ರಾಜಕ** (ನಾ). ೧. ಸಂನ್ಯಾಸಿ ; ಚತುರ್ಥಾಶ್ರಮಿ : ಜಯಕೀರ್ತಿವೆಸರ ಮಗನಾಗಿ ರಾಜ್ಯಂಗೆಯ್ದು ಜನಕಸೂರಿಪಾರ್ಶ್ವದೊಳ್ ಪರಿವ್ರಾಜಕನಾಗಿ ಸಮಾಧಿವೆತ್ತಂ (ಪಂರಾಪೂ. ೧೧-೯೮ ವ). ೨. ಪರ್ಯಟನ ಮಾಡುವ ಸಂನ್ಯಾಸಿ ; ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಂಚಾರ ಮಾಡುವ ಸಂನ್ಯಾಸಿ,—ವಿರಕ್ತ : ಭಾರದ್ವಾಜನೆಂಬ ಮಗನಾಗಿ ಪುಟ್ಟಿ ಕನಕದಂಡಿಯೆಂಬ ಪರಿವ್ರಾಜಕಂಗೆ ಶಿಷ್ಯನಾಗಿ ನಾನಾದೇಶಂಗಳಂ ವಿಹಾರಿಸುತ್ತಂ (ವಡ್ಡಾರಾ. ೬೪-೯) ; ಪರಿವ್ರಾಜಕನಾದ ಮಾತ್ರಕ್ಕೇ ಸಿದ್ಧಿ ಲಭಿಸೀತೆ? (ಸಪತಿ. ೨೩) ; ಪ್ರತಿಯೊಬ್ಬರೂ ಮನೆ ಬಿಟ್ಟು ಪರಿವ್ರಾಜಕರಾಗಿ ಮುಕ್ತಿಯನ್ನು ಪಡೆಯುವುದು ಸಾಧ್ಯವಿಲ್ಲ (ಭಾರದ. ೨೦೫). [ಸಂ.]

**ಪರಿವ್ರಾಜಿಕೆ** (ನಾ). ೧. ಸಂನ್ಯಾಸಿನಿ ; ವಿರಾಗಿಣಿ : ಅನೇಕ ಪರಿವ್ರಾಜಿಕಾಸಮಾಜಂ ಸುತ್ತಮೋಲಗಿಸುತ್ತಿರಲ್ (ಕಾದಂಉ. ೧೬೭) ; ಭರತಪ್ರಸಂಗಮಂ ಮಾಳ್ಪ ಪರಿವ್ರಾಜಿಕೆಯರ ತ್ರಿಗ್ರಾಮಂಗಳಂ ಮುಟ್ಟೆ ಪಾಡುವ ನಾಯಿಕೆಯರ ಸಂಭ್ರಮದ ಸಂದಣಿಯೊಳ್ (ತ್ರಿಪುವಿ. ೧೭-೯೯೧ ವ). ೨. ಪರ್ಯಟನ ಮಾಡುವ ಸಂನ್ಯಾಸಿನಿ. [ಸಂ. ಪರಿವ್ರಾಜಿಕಾ]

**ಪರಿಶಂಕಿಸು** (ಕ್ರಿ). ಹೆದರು ; ಭಯಪಡು : ತಮ್ಮ ಮದಕ್ಕೆ ಸಿರ್ವರಾಕ್ರಮಿಸುತೆ ದುರ್ಜನಂಗೆ ಪರಿಶಂಕಿಸಲೇಕೆ ದುರುಕ್ತಿ ಭೀತಿಯಿಂ (ನಳಚಂ. ೭). [ಪರಿಶಂಕೆ+-ಇಸು₃]

**ಪರಿಶಂಕೆ** (ನಾ). ೧. ಅನುಮಾನ ; ಸಂಶಯ : ಗಿರಿವರಾತ್ಮಜೆಯರಸನಿರವನೆಲ್ಲವನಱಿದು ಪರಿಶಂಕೆಗೊಳದೆ ಮುಂದಕೆ ಸಾಗುತಿರೆ (ಪ್ರೌಢರಾ. ೭-೩೬). ೨. ಹೆದರಿಕೆ ; ಭಯ : ಗಂಧಶಾಲಿವನಮಂ . . . ಕಂಪಿನಾಸೆಗೆ ಮುಸುಂಕಿದ ಭೃಂಗಕದಂಬಕಂ ಕೃಷೀವಲತತಿ ಕೀರಪೋತ ಪರಿಶಂಕೆ[ಪಾಠಾಂ. ಸಂಕ್ಷಿ]ಯಿನಾವನ ನೀಲಚೇಲಸಂಕುಲದೊಳೆ ಕೂಡೆ ಬಾಸಣಿಸಿತೆಂಬಭಿಶಂಕೆಯನುಂಟುಮಾಡುಗುಂ (ಚಂದ್ರಪು. ೧-೯೪). [ಸಂ. ಪರಿಶಂಕಾ]

**ಪರಿಶಮನ** (ನಾ). ಉಪಶಮನ ; ನಿಗ್ರಹ : 'ಪರಿಶಮಿಸು' ಪರಾ. [ಸಂ.]

**ಪರಿಶಮಿಸು** (ಕ್ರಿ). ಉಪಶಮನಗೊಳಿಸು ; ನಿಗ್ರಹಮಾಡು : ಸರ್ವಕರಣದಿ ನಿಂತು ತಾಮಸೀವೃತ್ತಿಯನು ಪರಿಶಮಿಸಲು (ಮಲಿದೇ. ೫೯-೧೨). [ಪರಿಶಮನ+-ಇಸು₃]

**ಪರಿಶಾಸನ** (ನಾ). (ತನ್ನ ಆಜ್ಞೆಯನ್ನು ಇತರರು ಮೀರಲಾರದಂತಹ ಪ್ರಭಾವವುಳ್ಳ) ರಾಜ ; ಅರಸ : ಪರಿಶಾಸನನ ಸಂಜ್ಞೆಯಲಿ ಬಳಿಕಾ ಕೀಶಬಲ ಬರುತಿರ್ದುದಗಣಿತಭೂಮಿಯಗಲದಲಿ (ತೊರರಾ. ೪-೭-೮). [ಸಂ.]

**ಪರಿಶಿಷ್ಟ** (ಗು). ೧. ಉಳಿದ ; ಮಿಕ್ಕ. ೨. ಪೂರ್ತಿಯಾದ. ಮುಗಿದ. (ನಾ). ೩. ಉಳಿದಿರುವುದು ; ಮಿಕ್ಕಿರುವುದು : ಇಷ್ಟಕಾಚಯನದಿಂ ರಾಜಿಸಿತು ಬಳಸಿ ಪರಿಶಿಷ್ಟದಿಂದೊಪ್ಪಿದುವು ಪಲವು ವೇದಿಗಳು (ಜೈಮಿಭಾ. ೩೩-೩೭). ೪. ಮೂಲಗ್ರಂಥದಲ್ಲಿ ಬಿಟ್ಟುಹೋದ ಅಂಶಗಳನ್ನು ಸೇರಿಸಿದ ಗ್ರಂಥದ ಕೊನೆಯ ಭಾಗ : ಪರಿಶಿಷ್ಟ೨-ಪ್ರಯೋಗಸಾರಮೆಂಬ ಶಬ್ದಾರ್ಥನಿರ್ಣಯಂ (ಶಮದ. ಪರಿ. ೨) ; ಪರಿಶಿಷ್ಟ . . . ಮೂಲಗ್ರಂಥಕ್ಕೆ ಸೇರಿರಲಾರವೆಂದು ತೋರಿ ಬಂದಿರುವ ಪದ್ಯಗಳನ್ನು ಈ ಕೆಳಗೆ ಕೊಟ್ಟಿದೆ (ಶುಪ್ಯಾದ್ರೋ. ಪರಿ. ೨೭೫). ೫. ಮೂಲಗ್ರಂಥಕ್ಕೆ ಸಂಬಂಧಿಸಿದ ವಿಶೇಷ ವಿಷಯಗಳನ್ನು ನಿರೂಪಿಸುವ, ಗ್ರಂಥದ ಕೊನೆಯ ಭಾಗ ; ಅನುಬಂಧ ; ಅನುಸೂಚಿ : ಅದರ ಬಗ್ಗೆ ೧೯ನೇ ಪಾಸಿನಲ್ಲಿ ಮಾಹಿತಿ ದಾಖಲು ಅದೆ, ಅದರ ವಿಷಯಕ್ಕೆ ಪರಿಶಿಷ್ಟವು (ಪಾಸು. ೨೪೪, ೨೪೫, ಕಲಮು. ೨೪) (ಮುಂಬಮ್ಯಾ. ೪೦ ಪ್ರಸ್ತಾವನೆ). [ಸಂ.]

**ಪರಿಶಿಷ್ಟವರ್ಗ** (ನಾ). ಅನುಸೂಚಿಯಲ್ಲಿ ದಾಖಲಾದ ವರ್ಗ ; ಅನುಸೂಚಿತ ಪಂಗಡ : ನಮ್ಮ ಸರ್ಕಾರವು ಪರಿಶಿಷ್ಟವರ್ಗದವರಿಗೆ ಹೆಚ್ಚಿನ ಸವಲತ್ತುಗಳನ್ನು ನೀಡಿದೆ (ರೂಢಿ). [ಪರಿಶಿಷ್ಟ+ವರ್ಗ]

**ಪರಿಶೀಲಕ** (ನಾ). ಪರಿಷ್ಕಾರಗೊಳಿಸುವವನು ; ಪರಿಶೀಲನೆಮಾಡುವವನು : ಈಗ ಕರಡುಪ್ರತಿ ಓದುವವರು ಇರುವಂತೆ ಹಿಂದೆ ಪರಿಶೀಲಕರು (Revisers) ಇರುತ್ತಿದ್ದರು. . . ಪರಿಶೀಲಕರು ಹಸ್ತಪ್ರತಿಯನ್ನು ಮಾತೃಕೆಯೊಡನೆ ಹೋಲಿಸಿ ನೋಡಿ ಹಸ್ತಪ್ರತಿಯಲ್ಲಿಯೇ ವ್ಯತ್ಯಾಸವನ್ನೋ ತಿದ್ದು ಪಾಟುಗಳನ್ನೋ ಗುರುತಿಸುತ್ತಿದ್ದರು (ಭಾರಪ. ೩೦). [ಸಂ.]

**ಪರಿಶೀಲನ** (ನಾ). ಸೂಕ್ಷ್ಮವಾಗಿ ವಿವೇಚನೆ ಮಾಡುವುದು ; ಕೂಲಂಕಷವಾದ ವಿಚಾರಣೆ : "ಅವಲೋಕನ, ಪರಿಶೀಲನ, ಸಮೀಕ್ಷೆ" (Survey. ಪತ್ರಿನಿ. ೮೦). [ಸಂ.]

**ಪರಿಶೀಲನೆ** (ನಾ).=ಪರಿಶೀಲನ : ವಿಷ್ಣುವರ್ಧನನ ದಳದ ಪರಿಶೀಲನೆ ಎಂದರೆ ಸಾಮಾನ್ಯವಲ್ಲ (ಸಪತಿ. ೪೮). [ಸಂ. ಪರಿಶೀಲನ]

**ಪರಿಶೀಲಿಸು** (ಕ್ರಿ). ಸೂಕ್ಷ್ಮವಾಗಿ ನೋಡು ; ಪರಿಶೀಲನೆಮಾಡು : ಉತ್ತರಗಳನ್ನು ಪರಿಶೀಲಿಸಿ ಅವಕ್ಕೊಂದು ರೂಪು ಕೊಡುವಾಗಲೂ ಅಷ್ಟೇ ಚತುರತೆಯಿಂದ ವರ್ತಿಸಬೇಕಾಗುತ್ತದೆ (ಶಿಕ್ಷಪ. ೨೮೦) ; ಇವುಗಳಲ್ಲಿ ಯಾವುದನ್ನೂ ಇಲ್ಲಿ ವಿವರವಾಗಿ ಪರಿಶೀಲಿಸಲು ಅವಕಾಶವಿಲ್ಲ (ಸಮಾಲೋ. ೧೨೪). [ಪರಿಶೀಲನ+-ಇಸು₃]

**ಪರಿಶುದ್ಧ** (ಗು). ೧. ದೋಷವಿಲ್ಲದ ; ಪವಿತ್ರವಾದ : ಬುದ್ಧಿಪೂರ್ವಕವಿಲ್ಲದಿಹ ಬಾಲಕಂಗೆ ಪರಿಶುದ್ಧಸಾಲಗ್ರಾಮಶಿಲೆಯ ಸಂಸರ್ಗದಿಂದುದ್ಧತದ ಸಾಮ್ರಾಜ್ಯಪದವಿ ಕೈಸಾರ್ದುದು (ಜೈಮಿಭಾ. ೩೧-೭೪). ೨. ನಿರ್ಮಲವಾದ ; ಕಲ್ಮಷವಿಲ್ಲದ : ಪರಿಶುದ್ಧಪಕ್ಷದ್ವಯಂಗಳಿಂ ಸದ್ಯಶಃಸ್ಫುರಿತಾದಿ ಧಾವಳ್ಯದಿಂ ಸುಗತಿಯಿಂ . . . ಶೋಭಿದಳೆದ ವರರಾಜಹಂಸದಂದದಲಿ ತದ್ದೇಶದೊಳ್ ಧರಣೀಶರಾಜಹಂಸರ್ ವಿರಾಜಿಸುವರ್ (ನಂಪಿಪೂ. ೧೫-೩೧). ೩. ವಿಮೋಚನೆ ಮಾಡಿದ : ಬಿಡುಗಡೆ ಮಾಡಿದ. ೪. (ಸಾಲ ಮುಂತಾದುವನ್ನು) ತೀರಿಸಿದ ;

ಸಲ್ಲಿಸಿದ. (ನಾ). **೫.** ದೋಷವಿಲ್ಲದುದು ; ಶುದ್ಧವಾದುದು : ಪರಿಶುದ್ಧವಾಗಿರ್ಪುದೀ ತುರಗಂ (ಜೈಮಿಭಾ. ೩೪-೧೮) ; ತಥಾಗತನ ಮೆಯ್ವಣ್ಣವಿಂತೆರಡುಸೂಳಾನಂದ ಅವದಾತವಾಗುತಿದೆ, ಪರಿಶುದ್ಧವಾಗುತಿದೆ (ವೈಶಾಖ. ೬೩-೨೩೪). **೬.** ಶುದ್ಧತೆ ; ಪವಿತ್ರತೆ : ವಿಪ್ರವಧೆ ಮೊದಲಾದ ಬಹುಪಾಪಸಂಚಿತಂ ಕ್ಷಿಪ್ರದಿಂ ಪೋಗಿ ಪರಿಶುದ್ಧಮಹುದು (ಜೈಮಿಭಾ. ೩೪-೨೬). **೭.** ಪವಿತ್ರನಾದ ವ್ಯಕ್ತಿ ; ದೋಷದೂರನಾದ ವ್ಯಕ್ತಿ: ಮಧ್ವರಾಯರ ನೆನೆದು ಪರಿಶುದ್ಧರಾಗಿರೊ (ಪುರಂದ. ೧-೨೦೯ ಪಲ್ಲವಿ) ; ಪವಿತ್ರಃ, ಪ್ರಯತಃ, ಪೂತಃ—ಪವಿತ್ರನಾದವನ ಹೆಸರುಗಳು, ಪರಿಶುದ್ಧನು (ಸಿದ್ಧಾಂತಿ. ೨೨೯). [ಸಂ.]

**ಪರಿಶುದ್ಧಿ** (ನಾ). ಶುದ್ಧತೆ ; ಪವಿತ್ರತೆ ; ದೋಷದೂರವಾಗಿರುವಿಕೆ : ಭಕ್ತಿಯೊಳ್ ವಿಭಾವನೆ ಪರಿಶುದ್ಧಿಯೊಳ್ ತ್ರಿಕರಣಂ ಸಮಸಂದಿರೆ (ಶಾಂತಿಪು. ೭-೩೧). [ಸಂ.]

**ಪರಿಶುದ್ಧೆ** (ನಾ). ದೋಷವಿಲ್ಲದವಳು ; ಪವಿತ್ರಳಾದವಳು : ಸೀತೆ ಭೂತಳವಱಿಯೆ ಪರಿಶುದ್ಧೆ (ಜೈಮಿಭಾ. ೨೧-೬೩).
[ಸಂ. ಪರಿಶುದ್ಧಾ]

**ಪರಿಶುಷ್ಕ** (ಗು). ೧. ಚೆನ್ನಾಗಿ ಒಣಗಿದ ; ನಿರ್ದ್ರವವಾದ : ಪರಿಶುಷ್ಕಪರ್ಣವಸ್ತ್ರಾದಿ ರವಂ ಮರ್ಮರವೆನಿಕ್ಕುಂ (ವಸ್ತುಕೋ. ೮೧-೩೮). ೨. ಸೊರಗಿದ ; ಮುರುಟಿ ಹೋದ. [ಸಂ.]

**ಪರಿಶೆ** 'ಪರಿಸೆ₁' ನೋ.

**ಪರಿಶೇಚನ** (ನಾ). ೧. (ನೀರನ್ನು) ಚಿಮುಕಿಸುವಿಕೆ; ಸಿಂಪಡಿಸುವಿಕೆ. ೨. ಬ್ರಾಹ್ಮಣರು ಊಟಮಾಡುವ ಮೊದಲು ಊಟದೆಲೆಯ ಸುತ್ತಲೂ ಮಂತ್ರಪೂರ್ವಕವಾಗಿ ನೀರನ್ನು ಪ್ರೋಕ್ಷಿಸಿ ಸುತ್ತುಗಟ್ಟುವುದು : ಯಥಾವಿಧಿಯಾಗಿ ಅನ್ನವು ಶುದ್ಧಿಯಾಗಿ ಪರಿಶೇಚನವು ನಡೆದು ಕೇಶವಾಚಾರ್ಯರ ಊಟ ಸಾಂಗವಾಗಿ ನೆರವೇರಿತು (ಗರುಡಾ. ೭೯). [<ಸಂ. ಪರಿಷೇಚನ]

**ಪರಿಶೇಷ** (ನಾ). ಉಳಿದಿರುವುದು ; ಉಳಿಕೆ ; ಬಾಕಿ : ಆದ್ಯಕ್ಷರದಿಂ ಬರೆ ಪದಿನಾಲ್ಕುಂ ಸ್ವರಮಿಂ ಪರಿಶೇಷಂ ವ್ಯಂಜನಂಗಳರೆಮಾತ್ರಿಕೆಗಳ್ (ಕಾವ್ಯಾವ. ೬) ; ಪರಿಶೇಷಂ ರಾಜ್ಯಚಿಹ್ನಂ ತನಗೆನೆ ಮದವತ್ಸಿಂಧುರಶ್ರೇಣಿಯುಂ . . . ತಾನಿತ್ತಂ (ಶಾಂತೀಶ್ವ. ೫-೧೩) ; ಐದುಸಾವಿರ ತುರಗ ಪಯದಳವೆಂಟುಸಾವಿರವೆರಡುಸಾವಿರ ರಥವಿದರಿವೋಹರದ ಪರಿಶೇಷ (ಕುವ್ಯಾಗ. ೫-೪). [ಸಂ.]

**ಪರಿಶೋಕ** (ನಾ). ಅತ್ಯಂತದುಃಖ : ಸತ್ಯಭಾಮೂಲಿ ಮದಿಷ್ಟಮೂರ್ತಿಯೆ ಮಹಾಜನದುಕ್ತಿಗಳಂ ವಿನೋದದಿಂ ಕೇಳದೆ ಗೈವುತಿರ್ದೆ ಪರಿಶೋಕವ (ಅಮಶ. ೬). [ಸಂ.]

**ಪರಿಶೋಧ** (ನಾ). ತಿದ್ದುಪಾಟು ; ತಿದ್ದುಪಡಿ : ಪರಲೋಕದ ಸುಖಕ್ಕೆ ಕಾರಣವಾದ ಧರ್ಮ ನೀತಿಶಾಸ್ತ್ರಗಳನ್ನು ಕೆಲವರು ಕೈಕೊಂಡು ನಾನಾ ಪರಿಶೋಧಗಳನ್ನು ಮಾಡಿರುತ್ತಾರೆ (ಮುಂಬಯಿ. ೬-೪).
[ಸಂ.]

**ಪರಿಶೋಧಕ** (ನಾ). ೧. ಕಂಡು ಹಿಡಿಯುವವನು ; ಗೊತ್ತು ಹಚ್ಚುವವನು. ೨. ತಪ್ಪುಗಳನ್ನು ಪರಿಶೀಲಿಸಿ ತಿದ್ದಿ ಸರಿಪಡಿಸುವವನು : ಒಬ್ಬ ದೊಡ್ಡ ವಿದ್ವಾಂಸರು ಆ ಗ್ರಂಥಮಾಲೆಯಲ್ಲಿ ಪರಿಶೋಧಕರಾಗಿದ್ದಾರೆ (ಮೂಢ). [ಸಂ.]

**ಪರಿಶೋಧನ** (ನಾ). ೧. ಶುದ್ಧಗೊಳಿಸುವುದು ; ನಿರ್ಮಲಗೊಳಿಸುವುದು. ೨. ಶೋಧಿಸುವುದು ; ಸೋಸುವುದು. ೩. ಪರೀಕ್ಷೆ; ತನಿಖೆ. ೪. ತಿದ್ದುಪಡಿ; ತಿದ್ದುಪಾಟು. [ಸಂ.]

**ಪರಿಶೋಧನಿ** (ನಾ). ಪರಿಶುದ್ಧಗೊಳಿಸುವ ಸಾಧನ ; ಪೊರಕೆ : "ಸಮ್ಮಾರ್ಜನಿ ಪರಿಶೋಧನಿಯೆನಲ್ ಕಸಕಿಲೆನಿಸಿಕ್ಕು" (ಮಂಗರಾ. ೬೦-೧೫). [ಸಂ. ಪರಿಶೋಧನೀ]

**ಪರಿಶೋಧನೆ** (ನಾ). ಸಂಶೋಧನೆ : ವಿವರಗಳ ವಿಷಯದಲ್ಲಿಯೇ ಹೊಸ ಪರಿಶೋಧನೆಗಳು ಮೊದಲು ನಡೆಯಬೇಕು (ಭೌತವಿ. ೬).
[ಸಂ. ಪರಿಶೋಧನ]

**ಪರಿಶೋಧಿತ** (ಗು). ೧. ಶುದ್ಧಗೊಳಿಸಿದ ; ನಿರ್ಮಲಗೊಳಿಸಿದ. ೨. ಶೋಧಿಸಿದ ; ಸೋಸಿದ. ೩. ತಿದ್ದುಪಾಟುಮಾಡಿದ ; ತಿದ್ದುಪಡಿಯಾದ. ೪. ಹುಡುಕಿದ; ಶೋಧನೆಮಾಡಿದ. [ಸಂ.]

**ಪರಿಶೋಧಿಸು** (ಕ್ರಿ). ೧. ನಿರ್ಮಲಗೊಳಿಸು ; ಸ್ವಚ್ಛಮಾಡು. ೨. ಶೋಧಿಸು ; ಸೋಸು. ೩. ತಿದ್ದು ; ಸರಿಪಡಿಸು. ೪. ಸೂಕ್ಷ್ಮವಾಗಿ ಪರಿಶೀಲಿಸು : ಅದಕ್ಕೆ ಬಂದ ಪ್ರತ್ಯುತ್ತರವನ್ನು ಮತ್ತೊಂದು ಪ್ರಶ್ನೆಯ ಮೂಲಕ ಪರಿಶೋಧಿಸುವನು (ಸೋಕ್ರಮ. ೨೩); ಓದು ಬರಹ ಕಲಿಯಲು ನಾವು ಯೋಗ್ಯರೋ ಅಲ್ಲವೋ ಎಂದು ಪರಿಶೋಧಿಸತಕ್ಕವರು ವಿಜ್ಞಾನಿಗಳು (ಕಾಲಯಾ. ೪೮).
[ಪರಿಶೋಧನ+-ಇಸು₃]

**ಪರಿಶೋಭನ** (ನಾ). ರಮಣೀಯತೆ ; ಶೋಭೆ: 'ಪರಿಶೋಭಿಸು' ಪರಾ. [ಸಂ.]

**ಪರಿಶೋಭಿತ** (ಗು). ೧. ಸುಂದರವಾದ ; ರಮಣೀಯವಾದ. (ನಾ). ೨. ಶೋಭಿಸುವುದು ; ರಮಣೀಯವಾದುದು. ೩. ಶೋಭೆಗೊಳಿಸುವಂತಹುದು ; ಕಂಗೊಳಿಸುವಂತೆ ಮಾಡುವಂತಹುದು : ನಭದಂತೆ ಕುಜಯುತಂ ದ್ವಿಜನಂತೆ ವಂಶಪರಿಶೋಭಿತಂ . . . ಆಗಿ ತಚ್ಛೈಲಮೆಸೆದಿರ್ದುದು (ಜೈಮಿಭಾ. ೧೦-೫). ೪. ಶೋಭಿಸುವ ವ್ಯಕ್ತಿ : ಸಕಲದೇವದೀಕ್ಷಾಗುರು ಅನಂತದೇವಗಣಪರಿಶೋಭಿತಂ . . . ಶಿವಲಿಂಗದೊಳ್ ಪುಗಲ್ (ನಂಬಿರ. ೮-೩). [ಸಂ.]

**ಪರಿಶೋಭಿಸು** (ಕ್ರಿ). ಕಂಗೊಳಿಸು ; ಶೋಭಿಸು : ಭೂದೇವಕುಲದೊಳಗೆ ಎಸೆವ ವಿಪ್ರನದಾರು ಪರಿಶೋಭಿಸುವುದೈ ಬ್ರಾಹ್ಮಣ್ಯವೇತಱ ದೆಸೆಯೊಳು (ಕುವ್ಯಾಅ. ೧೩-೪೯) ; ಪರಿಶೋಭಿಸಿತು ಮುಂದೆ . . . ಕಮಲಕುವಲಯವಿರಾಜಿತಶ್ರೀಕರಂ ಪದ್ಮಾಕರಂ ಚೆಲ್ವಿನೆ (ಜೈಮಿಭಾ. ೧೫-೮) ; ಪರಿಶೋಭಿಸುವ ಪೀತಾಂಬರ . . . ವರಶಂಖಚಕ್ರಾಂಕಿತನಾದ ಲಕ್ಷ್ಮೀನರಸಿಂಹನ ಕಂಡಳಿಂತು (ಕಂಸವಿ. ೪-೫೧).
[ಪರಿಶೋಭನ+-ಇಸು₃]

**ಪರಿಶೋಭೆ** (ನಾ). ಸೌಂದರ್ಯ ; ರಮಣೀಯತೆ : ಆಯತರಂಗವಲ್ಲಿಪರಿಶೋಭೆಯುಂ . . . ಸುಂದರರಾಜಮಾರ್ಗಮುಂ ಶ್ರೀಯ ನಿವಾಸಮುಂ ಪುಗೆ ನೃಪೇಶ್ವರಕನ್ಯಕೆಯುಂ ಕುಮಾರನುಂ (ಶಾಂತಿಪು. ೬-೪). [ಸಂ. ಪರಿಶೋಭಾ]

**ಪರಿಶೋಭೆವಡೆ** (ಕ್ರಿ). ಚೆಲುವನ್ನು ಹೊಂದು ; ಅಂದವಾಗು : ಪಕ್ಕರ್ಝಲ್ಲಿಗಳಿಂ ಪರಿಶೋಭೆವಡೆದು ಪರಿವ ತುರಂಗಸಂಘದಿಂ (ರಾಜಶೇ. ೧೩-೭೭ ವ) ; ಕಮಲಕುಮುದದ ಲತಾಂತಂಗಳಿಂದೆ ಪರಿಶೋಭೆವಡೆದಿರ್ದುದಾ ಕಾಸಾರ ಕಂಗೊಳಿಸುತೆ . . . ಒಪ್ಪಿರೆ (ನಪಮೋ. ೮-೨೯).
[ಪರಿಶೋಭೆ+ಪಡೆ₁]

**ಪರಿಶೋಭೆವೆಱು** (ಕ್ರಿ). =ಪರಿಶೋಭೆವಡೆ : ಪರಿಶೋಭೆವೆತ್ತ ನಾಗೋತ್ಕರದಿಂದನವರತಮಲ್ಲಿ ಮಿಸುಗುವ ಸಸಿಯಿಂ ದೊರೆವೆತ್ತ ಗಂಗೆಯಿಂಧೀಶ್ವರನ ಜಟಾಜೂಟದಂತೆ ಜನಪದಮೆಸೆಗುಂ (ಪಾರ್ಶ್ವಪು. ೧೩-೧೦೦) ; ಮೌಕ್ತಿಕಲಸತ್ಕಲಶಂ ಪರಿಶೋಭೆವೆತ್ತು ಬಜ್ಜರದ ಕವಾಟಮೊಂದೆ ಕರವೊಪ್ಪಿದುದೀಶಸಭಾನಿಕೇತನಂ (ಶಬಶಂ. ೧-೭೦).
[ಪರಿಶೋಭೆ+ಪೆಱು₁]

**ಪರಿಶ್ರಮ** (ನಾ). ೧. ಬಳಲಿಕೆ; ದಣಿವು; ಆಯಾಸ: ಜಾದಿಯೊಳ್ ಮಸಗಿದ ಕಂಪು ಕಂಪನೊಳಕೊಂಡಲೆವೊಂದೆಲ[ರೆಂಬಿ]ವಂದು ಪಾಟಿಸುವುವುದಗ್ರ ವೀರಭಟರಾಹವಕೇಳಿಪರಿಶ್ರಮಂಗಳಂ (ಪಂಪಭಾ. ೧೧-೪); ಅರಸನುಪವಾಸಪರಿಶ್ರಮಮನರಮನೆಗೆ ವಂದಶ್ರಮದೊಳಿಕಳೆದು (ಶಾಂತಿಪು. ೭-೬೬); ಕಾಂಚನಖನಿಯ ಖನನಂ ವೃಥಾ ಪರಿಶ್ರಮವಲ್ತೆ ಸ್ಪರ್ಶಮಣಿ ಕರದೊಳಿರೆ? (ಚಿತ್ರಾಂಗ. ೪೦-೧೦೯೧). ೨. ಅನುಭವ; ತಿಳಿವಳಿಕೆ: ಕನ್ನಡ ಸಾಹಿತ್ಯದಲ್ಲಿ ತಕ್ಕಮಟ್ಟಿಗೆ ಪರಿಶ್ರಮವಿತ್ತು (ಕಳಹು. ೭೨). ೩. ಸತತವಾದ ಸಾಧನೆ; ನಿರಂತರವಾದ ಅಭ್ಯಾಸ: ಸಂಗೀತದಲ್ಲಿ ಪರಿಶ್ರಮವಿಲ್ಲದಿದ್ದರೆ ಹೋಗಲಿ, ಶ್ರದ್ಧೆಯುವಾದರೂ ಇಲ್ಲದಿದ್ದವನು ಹೇಗೆ ಸುಸಂಸ್ಕೃತನೆನೆಸಿಕೊಳ್ಳುವನು? (ಭಾರದ. ೫೩೫); ಅವರು ಪರಿಶ್ರಮ—ದಕ್ಷತೆಗಳಿಂದ ಇಲಿಗಳ ಸಂಖ್ಯೆಯನ್ನು ಮತ್ತೆ ಬೆಳೆಸಬಲ್ಲರು (ದೇಕನ್ಕ. ೪೨). [ಸಂ.]

**ಪರಿಶ್ರಾಂತ** (ಗು). ದಣಿದ; ಆಯಾಸ ಪಟ್ಟ: ಸೀತಾನದೀತರಂಗಾಲಿಂಗಿತ ಸಂತಾನಲತಾಲತಾಂತಸುರಭಿತರುಮಂದಾರವನವೀಧೀವಿಹಾರಪರಿಶ್ರಾಂತಪವಮಾನಸ್ಪರ್ಶನದಿಂ ಮದೀಯಾಂಗಸಂಗತಪರಿತಾಪವನಾಜಿಸುವೆಂ (ಆದಿಪು. ೨-೧೪೮). [ಸಂ.]

**ಪರಿಶ್ರಾಂತಿ** (ನಾ). ಬಳಲಿಕೆ; ಆಯಾಸ; ದಣಿವು. [ಸಂ.]

**ಪರಿಶ್ರಾಂತೆ** (ನಾ). ಬಳಲಿಕೆಯನ್ನು ಹೊಂದಿದವಳು; ಆಯಾಸ ಪಟ್ಟಿರುವವಳು: ಆ ಮುನೀಂದ್ರಪ್ರಭಾವದೂತಾಹೂತವಸಂತವಲ್ಲಭನವೀನಸಂಯೋಗದಿಂ ಪರಿಶ್ರಾಂತೆಯಾದುದ್ಯಾನಲಕ್ಷ್ಮಿಯ ನಿಜಸುಯ್ಯೆ ದೆನಿಸಿ ಪಸರಿಸುವ ತಂಗಾಳಿಯುಂ (ಚಂದ್ರಪು. ೨-೧೧೪೮).
[ಸಂ. ಪರಿಶ್ರಾಂತಾ]

**ಪರಿಶ್ರುತ** (ಗು). ೧. ಕೇಳಿದ; ಆಲಿಸಿದ. ೨. ಪ್ರಸಿದ್ಧವಾದ; ಪ್ರಖ್ಯಾತವಾದ. (ನಾ). ೩. ಪ್ರಸಿದ್ಧವಾದುದು; ಪ್ರಖ್ಯಾತವಾದುದು: ಈ ಪದ್ಧತಿ ಪರಿಶ್ರುತವಹುದು ಬಳಿಕೀ ಲೋಕದಲಿ ನಿನಗಹುದು ಕೀರ್ತಿ (ತೊರರಾ. ೧-೨-೧೭). [ಸಂ.]

**ಪರಿಷಂಚನೆ** (ನಾ). = ಪರಿಶೇಚನ ೨: ಎದ್ದುಬಿಡುವ ಎಂದರೆ ಪರಿಷಂಚನೆ ಕಟ್ಟಿಯಾಗಿದೆ (ಸಂಸ್ಕಾರ. ೧೩೭). [<ಸಂ. ಪರಿಷಿಂಚನ]

**ಪರಿಷಜ್ಜನ** (ನಾ). ಸಭೆಯಲ್ಲಿರುವ ಜನ; ಸಭಾಸದ ಜನ: ಅಂಜನಾಸುತನಿರೀಕ್ಷಣದಿಂ ರಘುಜಂಗೆ ಹರ್ಷಮಾದುದು ಪರಿಷಜ್ಜನಕ್ಕೆ ಪರಮೋತ್ಸವವಾದುದು (ಪಂರಾಮಾ. ೧೧-೧೬೨); ಭೂಭುಜನೊಂದು ಕೋಟಿಯುಂ ಮೆಚ್ಚದೀವನೆಂದು ಪರಿಷಜ್ಜನಮಂದುಲಿಯುತ್ತು ಮಿರ್ಪನಂ (ಮಲ್ಲಿಪ. ೫-೪೮). [ಸಂ.]

**ಪರಿಷತ್ತು** (ನಾ). ೧. ಸಭೆ; ಸಮ್ಮೇಳನ; ಗೋಷ್ಠಿ: "ಸಮಾಜಃ . . . ಪರಿಷತ್, ಸದಃ—ಈ ೬ ಸಭೆ" (ಹಲಾಯು. ೧೨೩-೬೦); ಸಂವೀಕ್ಷಣಂಗೈದು ನೆರೆದಿರ್ದ ಪರಿಷತ್ತು ನಿಶ್ಶಬ್ದತೆಯ ಕಡಲೊಳಳ್ದತ್ತು (ಶ್ರೀರಾಮಾ. ೪೭-೫೧೬). ೨. ಸಂಘ; ಸಂಸ್ಥೆ: ಈಚೆಗೆ ಗಮಕಕಲೆಗಾಗಿ ಒಂದು ಪರಿಷತ್ತು ಹುಟ್ಟಿಕೊಂಡಿದೆ (ರೂಢಿ). ೩. ಓಲಗ; ಒಡ್ಡೋಲಗ; ಆಸ್ಥಾನ: ಅಚ್ಯುತೇಂದ್ರಂ . . . ಅಂತರ್ಮಧ್ಯಬಾಹ್ಯಪರಿಷತ್ಪ್ರಕಟಿತವಿಭವನುಂ . . . ಆಗಿ (ಆದಿಪು. ೬-೧೩೮); ಅಂತರ್ಮಧ್ಯಬಾಹ್ಯ ತ್ರಿಃಪ್ರಕಾರ ಪರಿಷತ್ಪ್ರಕಾಶಕರನಾಗಿ ಪರಮೈಶ್ವರ್ಯಸ[ಂಪ]ನ್ನನಾದಂ (ಸುಕುಮಾ. ೯-೩೧೮); ಪರಿಷದ್ರಾಜಕದಂಬಮಂಬರವಿಭೂಷಾಶ್ಚರ್ಯಸೌಂದರ್ಯದಿಂ ಪಿರಿದುಂ ಭೇದಿಸಲಾರ್ತುದಿಲ್ಲಜಿಯದುದಾಗಳ್ ವೇದಿಕಾಭ್ಯರ್ಣದೊಳ್ (ಅನಂಪು. ೬-೬೨). ೪. ಗುಂಪು; ಸಮೂಹ. ೫. (ಪರಾಮರ್ಶಿಸಿ ಸಲಹೆ ಕೊಡುವವರ) ಮಂಡಲಿ; ಸಮಿತಿ. ೬. ಕೆಸರು; ಪಂಕ: "ಪರಿಷಜ್ಜಂಬಾಳ ನಿಷದ್ವರ ಕರ್ದಮಶಾದ" (ವಸ್ತುಕೋ. ೨೫-೨೦). [ಸಂ. ಪರಿಷದ್]

**ಪರಿಷದ್ವಲಯ** (ನಾ). ಸಭೆ; ಸಭಿಕ ಸಮುದಾಯ: ಹರಿಯಿಲ್ಲದ ಲೋಕಪಾಲಪರಿಷದ್ವಲಯಂ ಹರಿಯಿಲ್ಲದ ಕಾಂತಾರಂ ಹರಿ ನೀನಿಲ್ಲದ ಮಧೀಯ ಗೋಕುಲಮಫಲಂ (ಜಗವಿ. ೩-೯೪). [ಸಂ.]

**ಪರಿಷನ್ಮಂಡಲ** (ನಾ). = ಪರಿಷದ್ವಲಯ: ಪರಿಷನ್ಮಂಡಲಮಿಂತನಂತಪರಿನಿಷ್ಕ್ರಾಂತಪ್ರಬುದ್ಧಪ್ರಮೋದರಸಾವೇಶದಿ ನಿಂದುದು (ಅನಂಪು. ೯-೫೦). [ಸಂ.]

**ಪರಿಷಿಂಚನೆ** (ನಾ). = ಪರಿಶೇಚನ ೨: ಅವರು ಪರಿಷಿಂಚನೆ ಮಾಡಿ ಊಟಕ್ಕೆ ತೊಡಗಿದರು (ರೂಢಿ). [ಸಂ. ಪರಿಷಿಂಚನ]

**ಪರಿಷಿಕ್ತ** (ಗು). ಸುತ್ತಲೂ ಆವರಿಸಿರುವ,—ಹರಡಿರುವ: ದಾವಾನಳಶಿಖಿಶಿಖಾನಿಕರಪರಿಷಿಕ್ತ ನೀಳಾಚಳವರ್ಣಂ ಮೇಘವರ್ಣಂ ಮುಳಿದು (ಪಂಚತಂ. ೨೪೧-೩). [ಸಂ.]

**ಪರಿಷೆ** 'ಪರಿಸೆ$_1$' ನೋ.

**ಪರಿಷೇಕ** (ನಾ). ಚಿಮುಕಿಸುವುದು; ಸಿಂಪಡಿಸುವುದು; ಸಿಂಚನ: ಕುಂದದಳಧವಳನೃಪದಶನೇಂದುಜ್ಯೋತ್ಸ್ನಾಮೃತಾಚ್ಛಜಳಪರಿಷೇಕಂ ಮಾಂದಿಸುವಂತಾದುದು ನೃಪನಂದನೆಯೆರ್ದೆಯೊಳಗೆ ಬಳೆದ ಶೋಕಾನಳನಂ (ಆದಿಪು. ೩-೪೯); ಧರಣೀಶ್ವರ ವಚನಾಮೃತ ಪರಿಷೇಕದೆ ಗರ್ಭಭೂಮಿಯೊಳ್ ತೀರ್ಥಕರಾಂಕುರಮುದಯಿಸಿದಂತಾಗಿರೆ ಪರಮೇಶ್ವರಿ ಮಗನನಂದು ಪೆತ್ತಂತೊಸೆದಳ್ (ಅಜಿಪು. ೩-೧೫); ಸ್ಫುರದಾಶಾಜ್ವಳನಂ ದುರ್ಧರಸುತಪಸ್ತೀರ್ಥವಾರಿಪರಿಷೇಕದಿನೆಂತಿರೆ ಕಿಡುಗುಂ ಭೋಗಾಜ್ಯೋತ್ಕರಪಾತದಿನೆಂತುಮಂತದೇಂ ಮಟ್ಟುಗುಮೇ (ಚಂದ್ರಪು. ೨-೪೩). [ಸಂ.]

**ಪರಿಷೇಚನ** (ನಾ). ೧. = ಪರಿಶೇಚನ ೧. ೨. = ಪರಿಶೇಚನ ೨: ಶಾಸ್ತ್ರಿಗಳು ಪರಿಷೇಚನ ಮಾಡಿ ಊಟಮಾಡತೊಡಗಿದರು (ರೂಢಿ). [ಸಂ.]

**ಪರಿಷೇಚನೆ** (ನಾ). = ಪರಿಶೇಚನ ೨: ಇತರರು ಪರಿಷೇಚನೆ ಮಾಡಿ ಪ್ರಾಣಾಹುತಿಯನ್ನು ಹಾಕಿಕೊಳ್ಳುವುದಕ್ಕೆ ಮುಂಚೆ . . . ಹುಡುಗರು ಎಡೆಯನ್ನು ಮುಟ್ಟುವ ಪದ್ಧತಿ ಇಲ್ಲ (ಮಾಮರಾ. ೮೭).
[ಸಂ. ಪರಿಷೇಚನ]

**ಪರಿಷ್ಕರಣ** (ನಾ). ೧. ತಿದ್ದಿ ಸರಿಪಡಿಸುವಿಕೆ; ತಿದ್ದುಪಡಿ; ಪರಿಷ್ಕಾರ: ಆರ್ಯಸಂಸ್ಕೃತಿಯ ಪ್ರಸಾರವನ್ನು ಪ್ರಭಾವಯುತವನ್ನಾಗಿ ಮಾಡಲು ಇತಿಹಾಸ ಪುರಾಣಗಳ ಪರಿಷ್ಕರಣ ಬಹುಮಟ್ಟಿಗೆ ನಡೆಯಿತು (ಪುಕ್ಸಾರ. ೧೦೭ ಪೀಠಿಕೆ); ಸಂಪಾದಕನು ಮಾಡಬೇಕಾದ ಕಾರ್ಯ ನಾಲ್ಕು ಬಗೆಯಾಗಿರುತ್ತದೆ: ಸ್ವೀಕರಣ (Acceptance), ಸಂದೇಹ (Doubt), ವರ್ಜನ (Rejection), ಪರಿಷ್ಕರಣ (Alteration) ಎಂದು (ಕನ್ನಸಂ. ೧೭೭). ೨. ತಿದ್ದುಪಡಿ ಮಾಡಿದುದು; ಪರಿಷ್ಕರಿಸಿದುದು: ಶೂನ್ಯಸಂಪಾದನೆಯ ಪರಿಷ್ಕರಣಗಳು (ಶೂನ್ಯಕು. ೩೫). ೩. ಸುಧಾರಣೆ: ಬ್ರಹ್ಮಸಮಾಜವನ್ನು ಸೇರಿ, ಅವರ ಮತವನ್ನಂಗೀಕರಿಸಿ ಇಂದಿರೆಯೂ ಸುಂದರೇಶನೂ ವಿವಾಹ ಮಾಡಿಕೊಂಡರು. ಪರಿಷ್ಕರಣದಲ್ಲಭಿರುಚಿಯುಳ್ಳ ಅನೇಕ ಶ್ರೀಮಂತರೂ ಪ್ರಭುಗಳೂ ವಿವಾಹಕ್ಕೆ ಕರೆಯಲ್ಪಟ್ಟಿದ್ದರು (ನಿಭಾಗ್ಯ. ೧೦೨); ಸ್ತ್ರೀಯು ಪುರುಷನ ಅರ್ಧಾಂಗಿಯೆಂದು ಸಾರಿ, ಸಮಾಜಪರಿಷ್ಕರಣಕ್ಕೆ ಪ್ರಾರಂಭಮಾಡಿದನು (ಪೈಗಂಬ. ೧೫೪). ೪. ಸಂಸ್ಕಾರದಿಂದ ಶುದ್ಧಮಾಡುವುದು. [ಸಂ.]

**ಪರಿಷ್ಕರಣಗೊಳಿಸು** (ಕ್ರಿ). ಸುಧಾರಣೆ ಮಾಡು; ತಿದ್ದು: ಬುದ್ಧಿಯನ್ನು ವಿದ್ಯೆ ಪರಿಷ್ಕರಣಗೊಳಿಸುತ್ತದೆ (ಗ್ರಂಥಾಲ. ೧).
[ಪರಿಷ್ಕರಣ + ಕೊಳ್$_1$ + -ಇಸು$_3$]

**ಪರಿಷ್ಕರಣಗೊಳ್ಳು** (ಕ್ರಿ). ಸುಧಾರಣೆ ಹೊಂದು : ಸದ್ಭಾವನೆಗಳಿಂದ ಪರಿಷ್ಕರಣಗೊಂಡ ಅಂಥ ಸಮಾಜ ವ್ಯಕ್ತಿಗಳಿಗೆ ಅತ್ಯುತ್ತಮವಾದ ಶಿಕ್ಷಣವನ್ನು ಕೊಡಬಲ್ಲದು (ಶಿಕ್ಷದ. ೬೩).
[ಪರಿಷ್ಕರಣ+ಕೊಳ್ಳು$_1$ (<ಕೊಳ್$^1$)]

**ಪರಿಷ್ಕರಿಸು** (ಕ್ರಿ). ೧. ತಿದ್ದು ; ಪರಿಷ್ಕಾರವಾಗುವಂತೆ ಮಾಡು: ನಮ್ಮ ಜೀವನ ತತ್ವವನ್ನೇ ಪರಿಶೀಲಿಸಿ, ಪರಿಷ್ಕರಿಸಿ ಜೀವನದ ಪ್ರಗತಿಗೂ ನಾಡಿನ ಸಂಪದಭಿವೃದ್ಧಿಗೂ ನೆರವಾಗುವಂತೆ ಮಾರ್ಪಡಿಸಿಕೊಳ್ಳುವುದು ನಮ್ಮ ಧ್ಯೇಯವಾಗಿರಬೇಕು (ಶಿಕ್ಷದ. ೨೪) ; ಇವನು . . . ಅರಿಸ್ಟಾಟಲಿನ ಚರಿತ್ರೆಯ ಅರಬ್ಬೀಭಾಷಾಂತರವನ್ನು ತಿದ್ದಿ ಪರಿಷ್ಕರಿಸಿದ್ದಾನೆ (ಇಸ್ಲಾಂಸಂ. ೨೧೪). ೨. ಸಿದ್ಧಗೊಳಿಸು ; ತಯಾರುಮಾಡು. ೩. ಶೃಂಗಾರಮಾಡು ; ಅಲಂಕರಿಸು. ೪. ಪೂರ್ಣಗೊಳಿಸು ; ಮುಗಿಸು. ೫. ನಯಮಾಡು ; ಮೆರುಗುಕೊಡು. ೬. ಸ್ಫುಟವಾಗು ; ಸ್ಪಷ್ಟವಾಗು : ಅರುಣೋದಯಕ್ಕೆ ಕತ್ತಲೆ ಹರಿದು ಬೆಳಕು ಪರಿಷ್ಕರಿಸಿದಂತೆ ಸಮ್ಯಕ್ ಜ್ಞಾನೋದಯವಾಗಿ (ವಚರ. ೩೬-೧೩೪).
[ಪರಿಷ್ಕರಣ+-ಇಸು$_3$]

**ಪರಿಷ್ಕಾರ** (ನಾ). ೧. ತಿದ್ದುಪಡಿ ; ಸುಧಾರಣೆ ; ಪರಿಷ್ಕರಣ : 'ಪರಿಷ್ಕಾರಗೊಳ್ಳು' ಪರಾ. ೨. ಅಲಂಕರಿಸುವಿಕೆ ; ಶೃಂಗಾರ ಮಾಡುವಿಕೆ. ೩. ಅಲಂಕಾರ ; ಭೂಷಣ : "ಪರಿಷ್ಕಾರಃ, ಭೂಷಣಂ—ಈ ೨ ಅಲಂಕಾರಂ" (ಹಲಾಯು. ೮೯-೩೮೬). ೪. ಮುಗಿಸುವುದು ; ಪೂರ್ಣಮಾಡುವುದು. ೫. ನಯಗೊಳಿಸುವಿಕೆ ; ಮೆರುಗು ಕೊಡುವಿಕೆ. ೬. [ಬೌದ್ಧ] ಭಿಕ್ಷುಗಳು ಉಪಯೋಗಿಸಬಹುದಾದ ನಾಲ್ಕು ಅತ್ಯಾವಶ್ಯಕ ವಸ್ತುಗಳು : (೧) ಬಟ್ಟೆ, (೨) ಊಟ, (೩) ಮಲಗಿ ಕುಳಿತುಕೊಳ್ಳುವ ಆಸನ, ಮತ್ತು (೪) ಕಾಯಿಲೆ ಬಂದಾಗ ಬೇಕಾದ ಔಷಧಿ—ಎಂಬ ಈ ನಾಲ್ಕು ಅತ್ಯಾವಶ್ಯಕವಾದ ವಸ್ತುಗಳಿಗೆ 'ಪರಿಷ್ಕಾರ'ಗಳೆನ್ನುವರು (ತೀರ್ಥಕ. ೧೧೯).

**ಪರಿಷ್ಕಾರ ಮಾಡು**=೧. ತಿದ್ದು ; ಪರಿಷ್ಕರಿಸು : ಗ್ರಂಥವನ್ನು ಪರಿಷ್ಕಾರ ಮಾಡಿದೆ ; ಹೊಸ ಟಿಪ್ಪಣಿಗಳನ್ನು ಸೇರಿಸಿದೆ (ಧ್ವನ್ಯಾಲೋ. XV ಸಂಪಾದಕರ ಮಾತು). ೨. ಮುಗಿಸು ; ಇತ್ಯರ್ಥಗೊಳಿಸು : ನನಗೂ ನಿನಗೂ ಒಂದು ವಿವಾದವಿರುವುದು ; ಅದನ್ನು ಪರಿಷ್ಕಾರ ಮಾಡಿಕೊಂಡು ನೀನು ವಿವಾಹವನ್ನು ಮಾಡಿಕೊಳ್ಳಬಹುದು (ಭೂಾವಿ. ೨೪).

**ಪರಿಷ್ಕಾರವಾಗು**=ಒಪ್ಪವಾಗು ; ಓರಣ ಹೊಂದು : ಈ ವಿಷಯಗಳು ಆಕೆಯ ಮನಸ್ಸಿಗೆ ತಟ್ಟನೆ ಹೊಳೆದವು. ಅಷ್ಟೇ ಬೇಗನೆ ವಿಷಯಗಳೂ ಪರಿಷ್ಕಾರವಾದವು (ಶಾಂತಲಾ. ೩೬೬). [ಸಂ.]

**ಪರಿಷ್ಕಾರಕ** (ನಾ). ತಿದ್ದುಪಡಿ ಮಾಡುವವನು ; ಪರಿಷ್ಕರಿಸುವವನು : ಇವಕ್ಕೆ ಹಸ್ತಪ್ರತಿಯ ಲಿಪಿಕಾರರೋ ಇಲ್ಲವೆ ಪರಿಷ್ಕಾರಕರೆಂದು ಕರೆಸಿಕೊಳ್ಳುವ ವ್ಯಕ್ತಿಗಳೋ ಕಾರಣ (ಭಾರಪ. ೩೩). [ಸಂ.]

**ಪರಿಷ್ಕಾರಗೊಳ್ಳು** (ಕ್ರಿ). ಸುಧಾರಣೆಯಾಗು ; ತಿದ್ದುಪಡಿ ಹೊಂದು : ಆಧುನಿಕ ಭಾಷಾವಿಜ್ಞಾನದ ಸೂತ್ರಗಳಿಂದ ಪರಿಷ್ಕಾರಗೊಂಡು, ಆ ಭ್ರಮೆ ನಿರಸನಗೊಂಡಿದೆ (ದ್ರಾವಿವಿ. VI ಮುನ್ನುಡಿ).
[ಪರಿಷ್ಕಾರ+ಕೊಳ್ಳು$_1$ (<ಕೊಳ್$^1$)]

**ಪರಿಷ್ಕೃತ** (ಗು). ೧. ತಿದ್ದುಪಡಿ ಮಾಡಿದ; ಸುಧಾರಣೆಗೊಳಿಸಿದ: ಮೇಲಿನ ಪ್ರಶ್ನಾವಳಿಗಳ ಜೊತೆಗೆ ಇತರರು ಪರಿಷ್ಕೃತ ಪ್ರಶ್ನಾವಳಿಗಳನ್ನೋ ಹೊಸ ಪ್ರಶ್ನಾವಳಿಗಳನ್ನೋ ರೂಪಿಸಿದ್ದಾರೆ (ಶಿಕ್ಷದ. ೬೦೫). 'ಪರಿಷ್ಕೃತ ಮುದ್ರಣ' ಪರಾ. ೨. ಶೃಂಗಾರ ಮಾಡಿದ; ಅಲಂಕರಿಸಿದ : ಅಪೂರ್ವಪ್ರವಾಳಾಂಕಮಧೂಕಮಾಲಾ(ಭಾ)ಪರಿಷ್ಕೃತ ಚಂಚತ್ಪಂಚರತ್ನಮಯದಾಮಾಭಿರಾಮ ಭಾಸ್ವಜ್ಜನಚಂದ್ರಪ್ರಭೆಗೆ ಜ್ಯೋತಿ ಸೋಲ್ವಂತೆ ಜ್ಯೋತಿಃಪ್ರಭೆ ಸೋಲ್ತು (ಶಾಂತಿಪು. ೫-೧೫೫ವ). ೩. ಸುತ್ತುವರಿದ ; ಬಳಸಿದ. ೪. ಸಿದ್ಧಪಡಿಸಿದ ; ತಯಾರು ಮಾಡಿದ. ೫. ಒಪ್ಪಗೊಳಿಸಿದ ; ನಯಮಾಡಿದ. ೬. ಶುದ್ಧಿಗೊಳಿಸಿದ ; ಪರಿಶುದ್ಧ ಮಾಡಿದ. (ನಾ). ೭. ಅಲಂಕೃತನಾದವನು: "ಮಂಡಿತಃ, ಪ್ರಸಾಧಿತಃ, ಅಲಂಕೃತಃ, ಭೂಷಿತಃ, ಪರಿಷ್ಕೃತಃ—೫ ಅಲಂಕರಿಸಲ್ಪಟ್ಟವನ ಹೆಸರುಗಳು" (ಸಿದ್ಧಾಂತಿ. ೧೯೪); ರಣವಿಜಯನವವಸನಮಣಿಭೂಷಣಪರಿಷ್ಕೃತನಾಗಿ ತಿರುವಿನ ಗೋಷ್ಠಿಯವನು ನೇವರಿಸಿದನು ಸಂತೈಸಿ ಸಂಹನನ (ಕುಮ್ಯಾಕ. ೩-೪೮). ೮. ಸುಧಾರಣೆ ಹೊಂದಿದವನು : ಭಾರತದ ದಿವ್ಯಸಂಸ್ಕೃತಿಯ ಸಂದೇಶದಿಂದ ಪರಿಷ್ಕೃತರಾಗಿ ವಿಶ್ವಪ್ರೇಮವನ್ನು ಬೆಳೆಸಿದರೆ . . . ಕಲ್ಯಾಣಕಾರಕವಾಗುವುದರಲ್ಲಿ ಸಂದೇಹವಿಲ್ಲ (ಮುಕ್ತಾರ. ೪೪ ಪೀಠಿಕೆ). ೯. ಶುದ್ಧನಾದವನು ; ಪವಿತ್ರನಾದವನು : ಅನುಸಂಧಾನದಿಂದ ಪರಿಷ್ಕೃತನಾಗಬೇಕು. ಅಗ ಚಿತ್ತತ್ವವು ವಿಕಸಿತವಾಗುತ್ತದೆ (ಭಾರದ. ೨೧೫). [ಸಂ.]

**ಪರಿಷ್ಕೃತಮುದ್ರಣ** (ನಾ). ತಿದ್ದಿ ಮತ್ತೊಮ್ಮೆ ಅಚ್ಚು ಮಾಡಿದುದು ; ಶೋಧಿಸಿ ಮುದ್ರಿಸಿದುದು : ಸಂಪಾದಕನು ಪರಿಷ್ಕೃತ ಮುದ್ರಣದ ಕೆಲಸಕ್ಕೆ ಬಳಸುವ ವಿಮರ್ಶೋಪಕರಣಗಳ ವಿವರಣೆಯೊಂದಿಗೆ ಈ ವಿಷಯವನ್ನು ಆರಂಭಿಸಬೇಕು (ಭಾರಪ. ೯೪).
[ಪರಿಷ್ಕೃತ+ಮುದ್ರಣ]

**ಪರಿಷ್ಕೃತಿ** (ನಾ). ಅಲಂಕಾರ ; ಭೂಷಣ : ಚಂದ್ರಕಾಂತಿಯಂ ಕನಕಪರಿಷ್ಕೃತಿದ್ಯುತಿಕೃತಾತಪೆ ನೀಂ ತಡೆಯೆಂದರಾಳಿಯರ್ (ರಾಜಶೇ. ೭-೭೮). [ಸಂ.]

**ಪರಿಷ್ವಂಗ** (ನಾ). ೧. ಅಪ್ಪುಗೆ ; ಆಲಿಂಗನ : "ಆಲಿಂಗನಂ, ಉಪಗೂಹನಂ, ಪರಿರಂಭಣಂ, ಪರಿಷ್ವಂಗಃ . . . ಕ್ರೋಡೀಕರಣಂ—ಈ ೭ ಅಪ್ಪಿಕೊಳುಹ" (ಹಲಾಯು. ೯೩-೪೧೪) ; ಆತ್ಮಜಪರಿಷ್ವಂಗಾಮೃತಾಸ್ವಾದಸೌಖ್ಯಮದೆಂತುಂ ದೊರೆಕೊಂಡಿತಿಲ್ಲ (ಕಾದಂಪೂ. ३४೬) ; ಅಂತು ರಾಮಲಕ್ಷ್ಮಣರ್ ತನೂಭವರಂಗಪರಿಷ್ವಂಗಸುಖಾನುಭವದಿಂ ತಣಿದು (ಪಂರಾಪೂ. ೧೬-೨೨ ವ) ; ಕಳಾನಿಲಯಂ ಮಾಡಿದನೊಲ್ದು ಚುಂಬನಪರಿಷ್ವಂಗಪ್ರಪಂಚಂಗಳಂ (ಜಗವಿ. ೧೦-೧೪೦). ೨. ಸೋಂಕು; ಸ್ಪರ್ಶ : ಆ ತಣ್ಣೆಲರ್ . . . ಮೃದುಪರಿಷ್ವಂಗದಿಂ ಪರಿಶ್ರಮಮನಿನಿಸು ತೊಲಗಿಸೆ ತರುಣೀಜನಮೆಯ್ದೆವಂದಾ ಕೊಳನ ತಡಿಯೊಳ್ ನೆರೆದು ನಿಲೆ (ಲೀಲಾವ. ೧೩-೧೧೩ ವ). [ಸಂ.]

**ಪರಿಷ್ವಂಗಿಸು** (ಕ್ರಿ). ಆಲಿಂಗಿಸು ; ಅಪ್ಪಿಕೊಳ್ಳು : ಊರ್ಮಿಳೇಶಾಗ್ರಜಂ . . . ಪರಿಷ್ವಂಗಿಸಿದನಾಂಜನೇಯನ ಪವಿತ್ರ ಗೋಪುರಗಾತ್ರಮಂ (ಶ್ರೀರಾಪಾ. ೫೩೪-೨೮೧). [ಪರಿಷ್ವಂಗ+-ಇಸು$_3$]

**ಪರಿಸ$_1$** 'ಪರುಸ' ನೋ.

**ಪರಿಸ$_2$** 'ಪರಸ$_2$' ನೋ.

**ಪರಿಸಂಖ್ಯಾಲಂಕಾರ** (ನಾ). [ಕಾವ್ಯಮೀ] ಅರ್ಥಾಲಂಕಾರದಲ್ಲಿಯ ಒಂದು ಭೇದ ; ಒಂದು ವಸ್ತು ಅಥವಾ ವಿಷಯವನ್ನು ಒಂದುಕಡೆ ನಿಷೇಧಿಸಿ ಅದನ್ನು ಮತ್ತೊಂದು ಕಡೆ ನಿಯಂತ್ರಿಸಿ ಹೇಳುವುದು : ಒಂದು ವಸ್ತುವಂ ಒಂದರಲ್ಲಿ ನಿಷೇಧಮಂ ಮಾಡಿ ಮತ್ತೊಂದರಲ್ಲಿ ಆ ವಸ್ತುವಿನ ಸಂಧಾನಮಂ ಮಾಡಲ್ಕೆ ಪರಿಸಂಖ್ಯಾಲಂಕಾರವೆನಿಸುವದು (ಕುವಲ. ೧೧೪) ; ಒಂದೆಡೆಯಲ್ಲಿ ಒಂದಾನೊಂದು ಪದಾರ್ಥವಿರುವುದೆಂದು ತೋರಿಸಿ ಅಲ್ಲಿ ಅದೇ ಪದದ ದೋಷರೂಪವಾದ ಅರ್ಥವಿಲ್ಲವೆಂದು ನಿಷೇಧಿಸುವುದೇ ಪರಿಸಂಖ್ಯಾಲಂಕಾರವೆನ್ನಿಸಿಕೊಳ್ಳುವುದು (ಕೈಪಿಡಿ. ೨೮೫). [ಸಂ.]

**ಪರಿಸಂಖ್ಯೆ** (ನಾ). ೧. ಎಣಿಸುವುದು ; ಗಣನೆ ; ಎಣಿಕೆ :

ಪರಿಸಂಖ್ಯಾತೀತಮೆನಲ್ ಸುರಪತಿ ವಿಕ್ರಿಯೆಯಿನಾದ ಭುಜಕೋಟಿ ಗಳಿಂದಿರದಾಂತುಕೊಂಡು ಪೋಲ್ತಂ ಸುರತರು ಷಣ್ಡಂದಮಂ ಸುರೇಂದ್ರಾ ಚಳದೊಳ್ (ನೇಮಿಪು. ೮-೧೪೦). **೨. ಒಟ್ಟು ಸಂಖ್ಯೆ ; ಮೊತ್ತ :** ತೊಲಗದು ಪುಬ್ಬಕೋಟಿ ಪರಿಸಂಖ್ಯೆವರಂ ಪರಮಾಯು (ಆದಿಪು. ೧-೫೨); ಕರಿದಿನಪರಾಜರಾವಣಕರಪರಿಸಂಖ್ಯಾಕ್ಷರಂ ಪೊದಟ್ದಿಸೆಯೆ ಗಣಾಂತರಿತಂ ಪದಚತುರೂರ್ಧ್ವಗಂ ಪರಿಸ್ಫುಟಂ (ಛಂದೋಂಬು. ೩-೨೧೫). **೩. ಆವೃತ್ತಿ; ಬಾರಿ:** ಕ್ಷಿತಿಯೊಳಗುಳ್ಳ ಭೂಭುಜರ ದಿತ್ತು ಮೊದಲ್ಗಿಡೆ ಮುನ್ನಮೇಕವಿಂಶತಿಪರಿಸಂಖ್ಯೆಯಿಂ ತವಿಸಿ (ಪಂಪಭಾ. ೨-೪೫). **೪.** = ಪರಿಸಂಖ್ಯಾಲಂಕಾರ : ಸಮಾಸೋಕ್ತಿ ಪರ್ಯಾಯೋಕ್ತಿ . . . ಪರಿಸಂಖ್ಯೆ ವಿಕಲ್ಪ . . . ಉದಾತ್ತವೆಂಬ ಅಙವತ್ತೈದಲಂಕಾರಂಗಳಿಂ ದೊಡಗೂಡಿ (ವಿವೇಕ. ೧೭೯); ಒಂದರಲಿ ಜರಿದಂತಹ ವಸ್ತು ಮತ್ತೊಂದರಲಿ ಸಂಧಿಸಿ ಪೇಳೆ ಪರಿಸಂಖ್ಯಾ (ಕುವಲ. ೧೦೪).

[ಸಂ. ಪರಿಸಂಖ್ಯಾ]

**ಪರಿಸಂಗ,** ಹರಿಸಂಗ (ನಾ). ೧. = ಪರಿಷ್ವಂಗ ೧ : ಈಶ್ವರ—ಈಸರ, ಪರಿಷ್ವಂಗ-ಪರಿಸಂಗ (ಹೊಸಗ. ೧೧೫). **ಹರಿಸಂಗ : ೧.** ಪರಿಷ್ವಂಗ—ಹರಿಸಂಗ (ಶಬ್ದಾನು. ೧೫೧ ಪ್ರಯೋ). ೨. = ಪರಿಷ್ವಂಗ ೨ : "ಹರಿಸಂಗ—ಪರಿಷ್ವಂಗ = ಆಲಿಂಗನ, ಸ್ಪರ್ಶ" (ತದ್ಭಕೋ. ೪೯).

[<ಸಂ. ಪರಿಷ್ವಂಗ]

**ಪರಿಸಂಭ್ರಮ** (ನಾ). ಸಡಗರ ; ಉತ್ಸಾಹ : ತೋಳ ನಖವ್ರಣಕೆಙಗಿದ ಬಾಳೆಗಳಂ ನೋಟ್ಪ ಬಾಳೆ ಕಣ್ಣೇನೆಂಬಾಳೋಳಮನೊಡರಿಸೆ ಸಲೆ ನೃಪಮಾಳೆಗೆ ಪಡೆದಳ್ ಮೃಗಾಕ್ಷಿ ಪರಿಸಂಭ್ರಮಮಂ (ಶಾಂತಿಪು. ೮-೪೩).

[ಸಂ.]

**ಪರಿಸಂಸ್ಕಾರ** (ನಾ). ಚೆನ್ನಾಗಿ ಸಜ್ಜುಗೊಂಡುದು : ಸಾರಮಣಿ ಪರಿಯಂಕಪರಿಸಂಸ್ಕಾರದಲಿ ಮಲಗುವ ಮಹೀಪತಿ ನೀರೊಳೊಜಿಗುವನು (ಕುಮಾರವ್ಯಾಸ. ೩-೪೦). [ಸಂ.]

**ಪರಿಸನ** 'ಪರುಸನ' ನೋ.

**ಪರಿಸಮಾಪ್ತ** (ಗು). ೧. ಚೆನ್ನಾಗಿ ತಿಳಿದುಕೊಂಡ,—ಗ್ರಹಿಸಿಕೊಂಡ : ಆ ಮಹಾಬಳಂ ಬಾಲಕಾಲದಿಂ . . . ಪರಿಸಮಾಪ್ತಸಕಲ ಕಲಾವಿಜ್ಞಾನನುಮಧಿಗತಾಶೇಷಶಾಸ್ತ್ರನುಂ ಪರಿಣತ ಸಕಲಶಸ್ತ್ರನುಮಾಗಿ (ಆದಿಪು. ೧-೬೩ ವ). (ನಾ). **೨. ಕೊನೆಗೊಂಡುದು; ಮುಗಿದುದು:** ಪರಿಸಮಾಪ್ತ [ಪಾಠಾಂ. ಪ್ತಿ] ಸಮನಾರ್ಚನಸ್ತವನಸಮಯಾನಂತರಂ (ಆದಿಪು. ೭-೧೦೬ ವ); ಎರಡುಂ ಕಾಲಮುಮನೀ ಮಾರ್ಗದಿಂ ಸಮಯೋತ್ತರವೃದ್ಧಿಯಿಂ ಪರಿಸಮಾಪ್ತಮಾಗೆ ನೆಙಮೆಯ್ದಿಸುವುದು ಕಾಲಪರಿವರ್ತನಮೆಂಬುದು (ಸುಕುಮಾ. ೬-೬ ವ) ; ನನ್ನ ಜೀವನವೆಂಬ ನಾಟಕವು ಇಲ್ಲಿಗೆ ಪರಿಸಮಾಪ್ತವಾಗಲೇಬೇಕು (ಗುರುಣ. ೮೦). [ಸಂ.]

**ಪರಿಸಮಾಪ್ತಿ** (ನಾ). ಕೊನೆ ; ಮುಕ್ತಾಯ : ಅಂತೇಂದ್ರನಾನಂದ ನೃತ್ಯಮನಾಡಿದ ಪರಿಸಮಾಪ್ತಿಯೊಳ್ (ಶಾಂತಿಪು. ೧೦-೬೫ ವ) ; ಅಙಿಯ ದಾರಂಭಿಸಿದೆವಿದಙಲಿ ಪರಿಸಮಾಪ್ತಿಯ ಕಂಡೆ ನೆಙೆ ಕೃತಾರ್ಥರು ವಿಘ್ನ ಶತವಡ್ಡೈಸದಿರವು (ಕುಮಾರವ್ಯಾಸ. ೯-೧೧); ನನ್ನ ಕಥೆಯು ಸುಖಾಂತವಾಗಿತ್ತು. ಹಲಧರನದು ದುಃಖಾಂತ. ಆದರೆ ಪರಿಸಮಾಪ್ತಿ ಮಾತ್ರ ಒಂದೇ ಆಗಿತ್ತು (ಕಲಕ. ೩೩). [ಸಂ.]

**ಪರಿಸರ** (ನಾ). ೧. ಎಲ್ಲೆ ; ಮೇರೆ ; ಸರಹದ್ದು. **೨.** ಇರವು ; ಸ್ಥಿತಿ. **೩.** ಸುತ್ತಲೂ ಇರುವ ಸನ್ನಿವೇಶ, ಆವರಣ, ಪ್ರದೇಶ, ಜನ ಮುಂತಾದುವು: ಗುಣಾರ್ಣವಂ . . . ಹಂಸಧವಳಶಯ್ಯಾತಳದೊಳ್ ಗಂಗಾನದೀಪುಳಿನಪರಿಸರಪ್ರದೇಶದೊಳ್ ಮಙಿದೊಙಗುವೈರಾವತದಂತೆ ಪವಡಿಸಿ (ಪಂಪಭಾ. ೪-೧೧೦ ವ) ; ಪರಮಪತಿವ್ರತೆಯಿದ್ದ ಬಙಿಯೊಳಾ . . . ಸರಸತಿ ಸಾವಿತ್ರಿ ಗಾಯತ್ರಿಯರುಮಾ ಪರಿಸರದೊಳು ಬಳಸಿಹರು (ಹವಿಬ. ೨-೧೭) ; ಕಡುಗಲಿ ಚಿಕದೇವೇಂದ್ರ ಪಡೆವಳರಾವೆಡೆಗೆ ನಡೆವರಾ ಪರಿಸರದೊಳ್ ಪೊಡವಿ ಪೊಙೆಯಿಟುಪಿ ಸೊಗಮಂ ಪಡೆವೆಂ ತಾನೆಂದು ಪೆರ್ಚಿ ಪೆಂಪಿಡಿದೆಸೆಗುಂ (ಅಪ್ರತಿ. ೧೧೨-೨೨) ; ಸಾಂಸ್ಕೃತಿಕ, ಸಾಹಿತ್ಯಿಕ ಮತ್ತು ಧಾರ್ಮಿಕಪರಿಸರದಲ್ಲಿ ಕನ್ನಡವು ಸಂಸ್ಕೃತಜನ್ಯವೆಂದು ಕಲ್ಪನೆಯಾಗಿದ್ದರೆ ಆದರಲ್ಲಿ ಆಶ್ಚರ್ಯವೇನೂ ಇಲ್ಲ (ಭಾಷಾಶಾ. ೪೫). **೪.** ಹತ್ತಿರ; ಸಾಮೀಪ್ಯ ; ಸನಿಹ : "ಗ್ರಾಮಾಂತಿಕಂ, ಉಪಶಲ್ಯಃ, ಪರ್ಯಂತಃ, ಪರಿಸರಃ ಕ(ಪ)ಟಃ—ಈ ೫ ಊರ ಹೊ(ಙೆ)ರೆ" (ಹಲಾಯು. ೪೩-೧೦೪) ; ವಿಲಾಸಮಂದಿರಪರಿಸರನಂದನಲತಾನಿಕೇತನಂಗಳಿರ್ದಂತೆ (ಆದಿಪು. ೮-೩೨ ವ) ; ಆಲೋಕಪುರದ ಪರಿಸರದ ಪರ್ವತದ ಮೇಲೆ . . . ಮುನಿಗಣ ಪೂಜ್ಯರ್ ಪೂಣ್ದು ನಾಲ್ಕುತಿಂಗಳನಿರ್ದರ್ (ಪಂಚಮಾ. ೧೫-೪೭ ವ); ಯಮುನಾಹ್ರದದ ಪರಿಸರಪ್ರದೇಶದೊಳಕ್ರೂರಂ ನಿಜವರೂಥಮಂ ನಿಲಿಸಿ (ಜಗವಿ. ೫-೧೦೨ ವ) ; ವರಧನು ಷ್ಕೋಟಿಯಲಿ ಮಿಂದೀಶ್ವರಪದಾಂಬುಜಕೆಙಗಿ ತತ್ಪರಿಸರದ ಪಂಚ ತಟಾಕದಲಿ ಘನ ಮಕರರೂಪದಲಿ ಸುರವಧುಗೇರಲವರ ಶಾಪವ ಪರಿಹರಿಸಿ (ಕುಮಾರವ್ಯಾಸ. ೧೯-೧೫). **೫.** ಹರಹು ; ವಿಸ್ತೀರ್ಣ. **೬.** ನಿಯಮ ; ವಿಧಿ. **೭.** ಸಾವು ; ಮರಣ.

**ಪರಿಸರ ಮಾಲಿನ್ಯ** = ಜನರು ವಾಸಿಸುವ ಸ್ಥಳದ ಸುತ್ತಮುತ್ತಣ ಪ್ರದೇಶ, ವಾಯು, ಜಲಾಶಯ ಮುಂತಾದುವುಗಳಲ್ಲಿ ಉಂಟಾಗುವ ಕಲ್ಮಷ,—ಕೊಳೆ : ಕೈಗಾರಿಕೆಗಳು ಹೆಚ್ಚಿದ ನಗರಗಳಲ್ಲಿ ಪರಿಸರಮಾಲಿನ್ಯವು ಅಧಿಕವಾಗಿರುತ್ತದೆ (ರೂಢಿ). [ಸಂ.]

**ಪರಿಸರಣ** (ನಾ). ೧. ಓಡುವುದು ; ಓಟ; ಧಾವಿಸುವುದು. **೨.** ಚಲನೆ ; ಪ್ರಸರಣ. **೩.** ಸನ್ನಿವೇಶ ; ಪರಿಸರ : ಮನೋಹರವಾದ ಪರಿಸರಣ . . . ಶಿಷ್ಯರೊಂದಿಗೆ ಹಾಸ್ಯರಂಜಿತವಾದ ಸಲ್ಲಾಪ—ಇದರಲ್ಲಿ ಗುರುಗಳು ಮಗ್ನರಾಗಿದ್ದಾರೆ (ನಂಟರು. ೨೮) ; ಈ ಋಷಿಗಳು ಕಲೆಯನ್ನು ಮತ್ತು ಚೆಲುವನ್ನು ತಮ್ಮ ಸುತ್ತಣ ಪರಿಸರಣದಲ್ಲಿಯೇ ಗುರುತಿಸಿ . . . ತಮ್ಮ ಅನುಭವಕ್ಕೆ ಉಕ್ತಿಯನ್ನು ನೀಡಿದರು (ಸೌಂದಸ. ೧೦೨) ; ತಾನು ಬೆಳೆದು ಬಂದ ಪರಿಸರಣದ ಹಳೆಯ ರೀತಿಗಳನ್ನೆಷ್ಟೋ ಇನ್ನೂ ಉಳಿಸಿಕೊಂಡು ಬಂದಿದೆ (ತತ್ವಪ್ರಾ. ೫೭೪). [ಸಂ.]

**ಪರಿಸರ್ಪ** (ನಾ). ೧. ನಡೆಯುವುದು ; ಚಲಿಸುವುದು : "ಗತಿಃ, ವಿಂಖಃ, ವಿಹಾರಃ, ಪರಿಸರ್ಪಃ, ಪರಿಕ್ರಮಃ—ಈ ೫ ನಡೆಹ" (ಹಲಾಯು. ೧೨೦-೪೧) ; "ವಿಂಖಂ ವಿಹಾರಂ ಪರಿಕ್ರಮಂ ಪರಿಸರ್ಪಮೆನೆ ನಡೆ" (ಮಂಗರಾ. ೧೩೦-೧೬). **೨.** ಸುತ್ತುಗಟ್ಟುವುದು ; ಬಳಸುವುದು. **೩.** ಅನುಸರಿಸುವುದು ; ಹಿಂಬಾಲಿಸುವುದು. **೪.** ಹುಡುಕುವುದು ; ಅರಸುವುದು. [ಸಂ.]

**ಪರಿಸರ್ಪಣ** (ನಾ). = ಪರಿಸರ್ಪ ೧: "ಪರಿಸರ್ಪಣಂ ವಿಹಾರಂ ಪರಿಕ್ರಮಂ ವಿಂಖಂ" (ಮಸ್ತುಕೋ. ೧೧೨-೯). [ಸಂ.]

**ಪರಿಸರ್ಯೆ** (ನಾ). ೧. ನಡೆದಾಡುವುದು; ಸಂಚಾರ: "ಪರಿಸರ್ಯಾ, ಪರೀಸಾರಃ—೨ ತಿರುಗುವಿಕೆ" (ಸಿದ್ಧಾಂತಿ. ೩೬೩). **೨.** ಬಳಿಸಾರುವುದು; ಸಮೀಪಿಸುವುದು. **೩.** ಸೇವೆ ; ಕೈಂಕರ್ಯ ; ಪರಿಚರ್ಯೆ.

[ಸಂ. ಪರಿಸರ್ಯಾ]

**ಪರಿಸೀಮೆ** (ನಾ). ಎಲ್ಲೆ ; ಗಡಿ : ಜಯಪಾಲನ ಕಪಟಕಾರಸ್ಥಾನವನ್ನು ತಿಳಿಯದೆ ಅವನ ಸ್ವಭಾವಪ್ರವಾಹಕ್ಕೆ ಬಲಿಬಿದ್ದು ಲಗ್ನದ ಪರಿಸೀಮೆಗೆ ಬಂದು ಮುಟ್ಟಿದ್ದರು (ಜಯಂತ. ೨೯೪) ; ಸಾಹಿತ್ಯದ ಶಾಂತಿರಸವು ಅದರ ಪರಿಸೀಮೆ (ಸಾಹಿವಿ. ೩೬). [ಸಂ. ಪರಿಸೀಮಾ]

**ಪರಿಸು** 'ಪರಿಯಿಸು' ನೋ.

**ಪರಿಸುಪ್ತಿ** (ನಾ). ನಿದ್ರೆ; ನಿದ್ದೆ: ಸುರತಶ್ರಾಂತಿಯೋಳೀಷತ್ ಪರಿಸುಪ್ತಿಯನೆಯ್ದಿ ಸುಖದೊಳಾಸಿರೆ (ಗಿರಿಕ. ೮-೭೦). [ಸಂ.]

**ಪರಿಸೂತ್ರ** (ನಾ). (ದೇವಸ್ಥಾನದ) ಸುತ್ತಲೂ ಇರುವ ಆವರಣ; ಪ್ರಾಕಾರ; ಪೌಳಿ: ಕಲಿಯಮ್ಮರಸಂ ನಂದಾದೀವಿಗೆಗೆ ಬಿಟ್ಟ ಪರಿಸೂತ್ರದ ಮನೆಗಳ್ ಮೂವತ್ತು (ಎಇ. XIX, ೧೮೨-೩೩; 1045); ಗದ್ದೆಯ ಕಮ್ಮ ಮೂವತ್ತು ದೇವರ ಪರಿಸೂತ್ರದಾಗ್ನೇಯದ ಗೋಟಂ ತೆಂಕ (ಕಇಆ. ೧೩-೪-೧೨೨; 1093); ಚೈತ್ಯಾಲಯದ ಪಟ್ಟಶಾಲೆಯ ಮುಂದಣ ಪರಿಸೂತ್ರದ ಸುತ್ತಣ ಸರೋವರಂಗಳೊಳಲರ್ದ ತಾವರೆಯ ತನಿಗಂಪಂ ತಟ್ಟೈಸಿ ತೀಡುವ ತಣ್ಣಾಳಿಯ ಸೋಂಕಿಂ (ಪಂರಾಮಾ. ೭-೯೭ ವ); ದೇವ ನಿಮ್ಮರಮನೆಯ ಪರಿಸೂತ್ರದೊಳೊರ್ವ ಸಂಕಿಲಿನಾಚಿಯರೆಂಬನರ್ಘ್ಯರತ್ನಮಂ ಕಂಡೆಂ (ಸಂಚರ. ೧೨-೭೦). [ಸಂ.]

**ಪರಿಸೆ**$_1$, ಪರಶೆ, ಪರಷೆ, ಪರಸ$_1$, ಪರಸೆ, ಪರಿಶೆ, ಪರಿಷೆ, ಪರುಷೆ, ಪರುಸೆ (ನಾ). ೧. (ಉತ್ಸವ, ಜಾತ್ರೆ ಮುಂತಾದ ಸಂದರ್ಭಗಳಲ್ಲಿ ಸೇರುವ) ಜನಸಂದಣಿ; ಜನರ ಗುಂಪು: ವನತತಿಗಳುಂ ಮಾರ್ಗಸಂದೋಹಮುಂ ತಿಂಬಿ ಮನಮೊಲ್ದು ಬರುತಿರ್ದ ಪರಿಸೆಗಳ ನೆಱಿ ನೋಡುತೆ (ಅಂಬಿಚ. ೫-೩-೪); ಪರಿಸೆ ಬಹಳವಿಲ್ಲ ಕಿಱಿದು ಕೂಡಿದುದು ಪನ್ನೆರಡುಲಕ್ಷದೊಳಿದ್ದುದಾಗ (ಭರಚ. ೧೬-೧೧೭); ಶ್ರೀಶೈಲಕ್ಕೆ ಪೋಪ ಪರಿಸೆಯೊಡನೆ ಒರ್ವ ಜಂಗಮಮೂರ್ತಿ ಬಂದು (ಭೈರಸೂ. I, ೨೩೫); ಧುನಿರಾಣಿ ಗಂಗೆಯೆ ನಿನಗೆ ನೆನಪಿಹುದೇನಾ ಶುಭಗಳಿಗೆ ಇಳಿದಂದು ನಿನ್ನಯ ದಡದಿ ಮುನ್ನಮೆಮ್ಮ ಪರಿಸೆಯ ಸರಣಿ? (ಗಿಳಿವಿಂ. ೧೧-೪). ೨. ಜಾತ್ರೆ; ಉತ್ಸವ: ಮುಳುವಾಯ ಮೂಡಣ ಪರಿಸೆಯ ಹನುಮಂತದೇವರವರ ಗುಡಿಯ ದಕ್ಷಿಣಭಾಗದಲಿ (ಎಕ. X, ಮುಳಬಾ. ೩-೧; 1521); ಅರಸ ಒಳ್ಳೆವರಂತ ವಿರಸವಾಡಲಿ ಬೇಡ ವರುಷದ ಮಾತು ಮನದಾಗೆ ಇಟುಕೊಂಡು ಪರಿಸೆಗ್ಹೋದಲ್ಲಿ ತೆಗೆದಾರು (ಹಸುಪ. ೧೯); ಅಲರ ಪರಿಸೆಯಲಿ ನಿನ್ನ ನಾ ಪಾರ್ವನೊಸಗೆಯನುದಿನ! (ಗಿಳಿವಿಂ. ೩೯-೩); ಗುಡಿಯ ಆ ಮಾಳ ಒಂದು ಪರಿಸೆಯಂತೆ ಕಂಡಿತು (ಸಸತಿ. ೭೮). **ಪರಶೆ:** ೨. ಪರಶೆ ಸೇರುವುದು ಇನ್ನೂ ಮೂರುದಿವಸವಿತ್ತು (ಚಿಂಗಾಳ್ವ. ೩೪೪). **ಪರಷೆ:** ೨. (ಎಸಮೈ. I, ೨೩). **ಪರಸ**$_1$: ೨. 'ಪರಸಗಟ್ಟಿ' ಪರಾ. **ಪರಸೆ:** ೧. "ಪರಸೆ (ಪರಿಸೆ(ಶೆ))—ಪರಿಷತ್" (ತದ್ಭಕೋ. ೫೧); ಹತ್ತಿರ ಕೂಡ ಹನ್ನೊಂದು, ಪರಸೇ ಕೂಡ ಗೋವಿಂದ (ಗಾದೆ). ೨. ಈ ಪರಸೆಯನ್ನು ನೋಡುವುದಕ್ಕೆ ಕೃಷ್ಣಾರ್ಜುನರೂ ಹೋದರು (ಪಚಭಾ. ೭೦). **ಪರಿಶೆ:** ೨. ಈ ಸಲ ಶೆಟ್ಟಿಕೆರೆಯಲ್ಲಿ ಇಪ್ಪರಲ್ಲೇ ಪರಿಶೆ ಆಗುವುದಿದೆ (ದೂರಸ. ೭೫). ೩. ಗುಂಪು; ಸಮೂಹ: ಹರಿಮಯದಿ ಹರಮಯದಿ ಸರಸಿಜತರಳಮಯ ಶಿವಮಯದಿ ಸರ್ಪನ ಪರಿಶೆಯಂತೆವು ರೋಹಣದ ತೆರನಾಗಿ ಗೋಮಯದಿ ಮೆರೆವ ವೇಳಾವನದ ಸೊಂಪಿನ ತೆರನ ಮಿತ್ರರಿಗಾಗ ರಘುಪ್ರಿಯಕರದಿ ಪೇಳುತಲಿರುವ ಸಮಯದೊಳು (ಜಿಂರಾಮಾ. ೪೦೮-೨೧). **ಪರಿಷೆ:** ೧. ಬಸವತೀರ್ಥಕ್ಕೆ ಪ್ರೀತಿಯಿಂದೆಯ್ದುವ ಪರಿ[ಪಾಠಾಂ. ರು]ಷೆಯೆನೆ ಭೂತಳಂ ಬೆಸಲಾದುದೆಂಬ ವಿಭಾತಿಯಲಿ ನೆಱಿ ತೀವಿ ಸಂದಣಿಸುತ್ತ ಬಪ್ಪವರು (ಬಸವು. ೬-೧೩); ಅಂತರದೊಳು ದೊರೆ ಮಂತ್ರಿಮಾನ್ಯರು ಬರೆ ಪಿಂತೆ ಬಂದಿಳಿದುದು ಪರಿಷೆ (ಗೊಮ್ಮಚ. ೩-೯೨). ೨. ಓಹೋ—ಶ್ರೀಶೈಲದ ಪರಿಷೆ! ಬೊಮ್ಮಯ್ಯನ ಮೈಯಲ್ಲಿ ಮಿಂಚಿನ ಸಂಚಾರವಾಯಿತು! (ಶರಚ. ೮೩); ಹಳ್ಳಿಯ ಹೃದಯವನ್ನು ತುಂಬಿಕೊಡುವುದಕ್ಕಾಗಿ ಉಪಯುಕ್ತ ಸಂದರ್ಭ ಪರಿಷೆ (ನಿಬಂಧ. I, ೪೧೪). ೪. ಪರಿಷತ್ತು; ಸಭೆ; ಸಮಿತಿ: ಅಧಿಕಾರವುಳ್ಳ ಸಂಸ್ಥೆಗಳು . . . ಐನೂರಾಳರು ಇತ್ಯಾದಿ, ಪರಿಷೆ, ಅಧ್ಯಕ್ಷ, ಬಾಳಿಕೆಯವರು (ತುಳುನಾ. ೨೭೧). ೫. [ಬೌದ್ಧ] ಭಿಕ್ಷುಗಳು, ಭಿಕ್ಷುಣಿಯರು, ಉಪಾಸಕರು ಮತ್ತು ಉಪಾಸಿಕೆಯರೆಂಬ ನಾಲ್ಕು ವರ್ಗದವರ ಸಭೆ: ನಾನು ಪರಿಷೆಗೆ ಬಂದು ತಲೆಯ ವೇಷ್ಟನವನ್ನು ತೆಗೆದರೆ, ಅದನ್ನು ನಾನು ಶಿರಸಾ ಮಾಡಿದ ಅಭಿವಾದನವೆಂದು ಸ್ವೀಕರಿಸಬೇಕು (ಬುದ್ಧಪ. ೧೨೯); ಆ ಪರಿಷೆಯಲ್ಲಿ ರೋಹಣನು ಮಾತ್ರ ಇಲ್ಲದುದನ್ನು ಕಂಡು, ಅಶ್ವಗುಪ್ತನು ಆತನನ್ನು ಸಮಾಧಿಯಿಂದ ಕರೆಯಿಸಿದನು (ಬುದ್ಧಪ. ಮಿಲಿಂದ. ೨೧). **ಪರುಷೆ:** ೧. ವೃಷಭಧ್ವಜದ ಗಾಢದಿಂ ಶ್ರೀಪರ್ವತದ ಪರುಷೆ ಬರುತಿರ್ದುದು (ಸಿದ್ಧರಾ. ೨-೩೪); ನಿಟಿಲಲೋಚನ ಬಹ ಪರುಷೆಯುತ್ಕಟದ ದೊಂದಣಿಗಲಸಿ ಬಂದೈಸಿರಿಗಿರಿಯೊಳಿರದೆ (ಬಸವು. ೧೮-೯); ಘನವೈಭವಂಬೆತ್ತು ಸಡಗರಿಪ ಪರುಷೆಯೊಳ್ ವಿನುತೆಯೊರ್ವಳ್ ಶರಣೆ ಸಿದ್ಧೇಶನಡಿಗಂಡು . . . ನಮಿಸುತೆ (ಮಹಾವಿ. ೧೪-೯೯). **ಪರುಸೆ:** ೧. ಬರುತಿರ್ದ ಪರುಸೆಯಂ ಕಂಡು ಸತ್ಕರಿಸಿ (ಸೌಂದಪು. ೧೧-೩೪); ಸಕಲದೇಶದ ಪರುಸೆಯೆಲ್ಲವೈತಂದು ಸಿದ್ಧಂಗೆ ವಂದಿಸಿ (ಸಿದ್ಧೇಪು. ೧೬-೩). ೨. ವಿರೂಪಾಕ್ಷಲಿಂಗನ ತೇರ ಪರುಸೆಗೆಂದಾಗಳಾ ಪದ್ಮಾವತಿಯೆ ತನ್ನ ಪುರುಷನಂ ಕೂಡಿಕೊಂಡೈತಂದು (ಚೆಬಪು. ೬೩-೩೪).

[<ಪ್ರಾ. ಪರಿಸಾ./ಸಂ. ಪರಿಷದ್./ತಮಿ. ಪರುಚೈ; ತುಳು. ಪರಶೆ, ಪರಸ್, ಪರಿಶೆ, ಪರ್ಶೆ; ತೆಲು. ಪರಸ, ಪರುಸ]

**ಪರಿಸೆ**$_2$ (ನಾ). ಒಂದು ಸ್ಥಳದ ಹೆಸರು (?): ಬಮ್ಮೆಯನಾಯಕರು ಪರಿಸೆಯ ಮೇಲೆ ಬಂದಾಗ ದೇವಯನ ಮಗ ಹರಗಾವುಣ್ಡ ಪಲರನಿಱಿದು (ಮೈಆರಿ. ೧೯೨೮, ೯೧-೩; ?). [?]

**ಪರಿಸೆನಡೆ** (ಕ್ರಿ). (ಬೇಟೆಯ ಜನರ) ಗುಂಪಿನೊಡನೆ ಹೋಗು: ಒರ್ಮೆ ಯಶೋಮತಿ ಮೃಗಯಾನರ್ಮಮನಂ ಪರಿಸೆನಡೆದು ಮೃಗಮಂ ಪಡೆದು (ಯಶೋಚ. ೩-೫೭). [ಪರಿಸೆ$_1$ + ನಡೆ$_1$]

**ಪರಿಸೆನೋಟ** (ನಾ). ಉತ್ಸವದ ನೋಟ,–ದೃಶ್ಯ: ಪರಿಸೆ ನೋಟವೊ, ಹೋಳಿಯಲೂಟವೊ . . . ಎಲ್ಲ, ಎಲ್ಲಾ ಮಾಯವಾದುವು (ಇಂಗೀತ. ೭೭-೪). [ಪರಿಸೆ$_1$ + ನೋಟ]

**ಪರಿಸೇಕ** (ನಾ). ಚಿಮುಕಿಸುವುದು; ಸಿಂಚನ: 'ಪರಿಸೇಕಂಗೆಯ್' ಪರಾ. [<ಸಂ. ಪರಿಷೇಕ]

**ಪರಿಸೇಕಂಗೆಯ್** (ಕ್ರಿ). ಚಿಮುಕಿಸು; ತಳಿ: ಕ್ಷೀರರಸಂ ಪರಿಯಲ್ಕೀಯದೆ ಬಱಿಯಂ ಪರಿಸೇಕಂಗೆ(ಯ್ಗೆ) ಪಾಲೊಳಂ ತುಪ್ಪದೊಳಂ (ಅಶ್ವಶಾ. ೧೨-೧೧). [ಪರಿಸೇಕ + ಕೆಯ್$_1$]

**ಪರಿಸೇಕಂಗೆಯ್ಯಿಸು** (ಕ್ರಿ). ಚಿಮುಕಿಸುವಂತೆ ಮಾಡು; ತಳಿಸು: ಗುರುಗಳ್ ಬಂದು ಶಿವಾಂಘ್ರಿವಾರಿ ಪರಿಸೇಕಂಗೆಯ್ಸಿ . . . ಬಾಲಂಗೊಲ್ದು ಮಾಹೇಶ್ವರಾವರಣರ್ ಮಾಡಿಸಿದರ್ ಮಹೋತ್ಸವದಿನೊಪ್ಪಲ್ ಜಾತಕರ್ಮಂಗಳಂ (ರಾಜಶೇ. ೪-೫೭). [ಪರಿಸೇಕಂಗೆಯ್ + –ಸು$_1$]

**ಪರಿಸೇಕಿಸು** (ಕ್ರಿ). = ಪರಿಸೇಕಂಗೆಯ್: ಸುರಧೂಪದ ಬಣ್ಣಂ ಮೇಣರ(ರೆ)ನೇಱಿಲ ಪಣ್ಣ ಬಣ್ಣವಾದೊಡೆ ಪುಣ್ಣಂ ಪರಿಸೇಕಿಪ್ಪುದು ವೈಶ್ವಾನರಚೂರ್ಣಮನಿಡಲ್ವೇಡ ತದನಂತರದೊಳ್ (ಅಶ್ವಶಾ. ೧೨-೧೨). [ಪರಿಸೇಕ+–ಇಸು$_3$]

**ಪರಿಸ್ಕಂದ** (ನಾ). ೧. ಸೇವಕ; ಆಳು: "ಪ್ರೇಷ್ಯಃ, ಪರಿಸ್ಕಂದಃ— ಈ ೩ ಕೂಲಿಕಾಜಂ" (ಹಲಾಯು. ೬೧-೨೧೪); "ಕೂಲಿಕಾಜಂ ಪರಿಸ್ಕಂ[ಪಾಠಾಂ. ಸ್ಪಂ]ದನಕ್ಕುಂ" (ಪಂಗಂರಾ. ೭೦-೧೫). ೨. ದಾಸ್ಯ; ಸೇವಕತನ: ಅವರ್ಗೆ ಬಹು ವ್ಯಾಪಾರಮುಮವರ್ಗೆ ಪರಿಸ್ಕಂದಮುಮಂ ಪರಿಗ್ರಹಮುಂ ಬೇಡವರಂ ಸಂಕುಚಿತದೆ ಸಂತವಿಡಿಸಿ ಸಂತುಷ್ಟರಾಗೆ ಮಾಟ್ಟುದು ನರಪಂ (ಮುದಕಿ. ೮-೬೫). [ಸಂ.]

**ಪರಿಸ್ಖಲನ** (ನಾ). ಅಪ್ಪಳಿಸುವಿಕೆ: ಸುಭಟಾರೂಢ ತುರಂಗಮವೇಗ

ಬಲಪತಿತ ಖುರಖುರಟಂಕಪರಿಸ್ಖಲನಕಲಿತವಿಷಮವರಭೇರೀಣಿ[ಸ್ವನ]ಮುಂ (ಪಂಪಭಾ. ೧೩-೫೧೭). [ಸಂ.]

**ಪರಿಸ್ಖಲಿತ,** ಪರಿಸ್ಖಳಿತ (ಗು). ಜಾರಿ ಬಿದ್ದ : ಆ ಪೃಥುನಿತಂಬಭರ ಪರಿಸ್ಖಲಿ[ಪಾಠಾಂ.ಳಿ]ತ ಪದವಿನ್ಯಾಸದಿಂದಂಚೆಯುಂ ಪಳಂಚಲೆದ ತಣ್ಪುಬಾಲ ತಾಣಮುಮಂ (ಪಂರಾಮಾ. ೯-೧೨೦ ವ); ನಡುಗುತೆ ನೀನಿರಲ್ಕೆ ಭಯದಿಂದೆ ಪರಿಸ್ಖಲಿತಾಂಶುಕಾಂತೆಯಾಗೆಡೆಗಳನೆಲ್ಲ ದಿಕ್ಕುಗಳ ತೀವಿರೆ ದೈನ್ಯದೊಳಾ ವಿಲೋಕನಂ ಬಿಡದೆಯೆ ಸುಟ್ಟನಗ್ನಿ ದಯೆಯಿಲ್ಲದೆ (ಧ್ವನ್ಯಾಲೋ. ೧೨೮). **ಪರಿಸ್ಖಳಿತ :** ಮೇಲಿನ 'ಪಂರಾಮಾ' ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ಪರಿಸ್ಖಳಿತ** 'ಪರಿಸ್ಖಲಿತ' ನೋ.

**ಪರಿಸ್ತರಣ** (ನಾ). ೧. ಸುತ್ತಲೂ ಹರಡುವುದು,—ಹಾಸುವುದು: ಸಮಿತ್ ಪರಿಸ್ತರಣಂ . . . ದೂರ್ವಾಯವ ಹಸ್ತಬಂಧನಾದಿ ಸತ್ಕ್ರಿಯೆಗಳಿಂ ಹೋಮಮುಮಂ ಮಾಡುತಿರ್ದ (ಗಿರಿಕ. ೧೦-೯೭ ವ); ತೋಳತೋಳಗಿ ಶಸ್ತ್ರಾಸ್ತ್ರಸೂತ್ರಾವಳಿಪರಿಸ್ತರಣಗಳ ದೆಸೆಯುಜ್ಜ್ವಲಿಸೆ ಪರಬಲಧಿಗೆ ಶಿಖಿಯುತ್ಪಾತದಂದದಲಿ (ಸಿಭಾಗ. ೧೦-೪೭-೨೦). ೨. ಸುತ್ತಲಿನ ಪ್ರದೇಶ; ಪರಿಸರ: ಕೋಣತ್ರಯದ ಕುಂಡದಲಿ ಅಸುರವಿಪ್ರಾವಳಿ ಯಥರ್ವಣವೆಸೆವ ಮಂತ್ರಾಗಮದಿ ಸಂಸ್ಥಾಪಿಸಿದನಸ್ತ್ರಾವಳಿ ಪರಿಸ್ತರಣದಲಿ ಹುತವಹನ (ತೊರವಾ. ೬-೪೨-೮); ವೆಂಕಟಪ್ಪನಾಯಕರಂ ಕಡಿತದ ಚಾವಡಿಯೊಳ್ ಕುಳ್ಳಿರಿಸಿ ಪೊರಗೈದದಂತೆ ಪರಿಸ್ತರಣಕವಾಟಂಗಳಂ ಬದ್ಧಂಗೈಸಲು (ಕೆಳನೃ. ೬-೪೭); ಕಟ್ಟಿಸಿದವರ ಮನಸ್ಸೂ ಹೃದಯ ವಿಶಾಲತೆಯೂ ಎಷ್ಟು ಸುಂದರವೊ, ಎಷ್ಟು ದೊಡ್ಡದೊ, ಅಷ್ಟು ಸುಂದರ ಆ ದೇವಾಲಯ ; ಅಷ್ಟು ವಿಶಾಲ ಅದರ ಪರಿಸ್ತರಣ (ಶಾಂತಲಾ. ೧೨೫). ೩. ಹೋಮಾಗ್ನಿಯ ಸುತ್ತಲೂ ಇಟ್ಟ ದರ್ಭೆ: ಮಂಟಪದ ನಡುವಣ ವೇದಿಕೆಯ ಹೋಮದ ಪರಿಸ್ತರಣದ ಸುತ್ತುಂ ಕುಳ್ಳಿರ್ದ ವಿಪ್ರ ಸಂಕುಳದಿಂ (ನಂಬಿರ. ೬-೩೩); ಪರಿಸ್ತರಣಗಳ ಮೇಲೆ ದರ್ವಿ, ಸಮಿತ್ತು, ಆಜ್ಯಪಾತ್ರೆ, ಅರ್ಘ್ಯಪಾತ್ರೆ ಇವುಗಳನ್ನಿಟ್ಟು (ಶಾಂತಲಾ. ೧೦೭). ೪. ಹೋಮಾಗ್ನಿಯ ಸುತ್ತಲೂ ದರ್ಭೆಯನ್ನು ಇಡುವುದು: ಸ್ಥಂಡಿಲ ಪರಿಸ್ತರಣ . . . ಅಭಿಮುಖೀಕರಣ ಮುಖಾಹುತ್ಯಾದಿಗಳಿಂ ಸಮರ್ಚಿತನಾಗಿ (ವಿವೇಕ. ೧೩೭). ೫. ಕಾರಣೆ; ಮೇಜುಕಟ್ಟು: ಕಸ್ತುರಿ ಜವಾದಿಗಳ ಸಾರಣೆಯ ಕುಂಕುಮಪರಿಸ್ತರಣದ . . . ಸಭೆ ಸಮಸ್ತಸೌಭಾಗ್ಯದಿಂದೊಪ್ಪುತಿರಲು (ಜೈಮಿಭಾ. ೧೭-೨೭). ೬. ಕದ; ಬಾಗಿಲು : ಅಳ್ಳನಳಿಯೆ ಮಿಗಿಸುವಳಲ್ಲ ದೇಹವ ಪರಿಸ್ತರಣವನಗಿಸ ಹೇಳೆಂದು ಪೇಳಿದಳು (ಮೋಹತ. ೩೪-೪). [ಸಂ.]

**ಪರಿಸ್ತೋಮ** (ನಾ). ೧. ಹೊದಿಕೆ; ಆಚ್ಛಾದನೆ. ೨. ಆನೆಯ ಬೆನ್ನಿನ ಮೇಲೆ ಅಲಂಕಾರಕ್ಕಾಗಿ ಹೊದಿಸುವ ಬಣ್ಣದ ಬಟ್ಟೆ : "ವರ್ಣಃ, ಪರಿಸ್ತೋಮಃ, ಕುಥಃ, ಕುಥಾ, ವಮತಂ—ಈ ೫ ಪರಿಸ್ತೋಮಂ" (ಹಲಾಯು. ೫೧-೧೫೩). [ಸಂ.]

**ಪರಿಸ್ಥಿತಿ** (ನಾ). ಇರವು; ಸ್ಥಿತಿ; ಅವಸ್ಥೆ: ಪದ್ಮಸರೋವರದ ಕಡೆಯಿಂದಲೇ . . . ಚೀತ್ಕಾರ ಕೇಳಿದಾಗ ಮನೆಯ ಪರಿಸ್ಥಿತಿಯೇ ಬದಲಾಗಿ ಹೋಯ್ತು (ಪದ್ಮಸ. ೧೮೩); ಇಲ್ಲಿಯ ಪರಿಸ್ಥಿತಿಯೇ ಬೇರೆಯಾಗಿ ಪರಿಣಮಿಸಿತು (ಮೂಲಾನ. ೮೨). [ಸಂ.]

**ಪರಿಸ್ಪಂದ** (ನಾ). ೧. ಮಿಡಿತ; ಕಂಪನ. ೨. ಚಲನೆ; ಅಲುಗಾಟ : ಶುಭಾಶುಭಮನೋವಾಕ್ಕಾಯಪರಿಸ್ಪಂದಹೇತುಕವಾಗಿ ಬರ್ಪ ಕರ್ಮದ ಬರವಾಸ್ರವಮೆಂಬುದು (ಅಜಿಪು. ೧೨-೩೩ವ); ಪರಿಸ್ಪಂದ ರೂಪಕ್ರಿಯೆ ಕ್ಷೇತ್ರಕೃತಂಗಳುಂ ಕಾಲಕೃತಂಗಳುಂ ಪರತ್ವಾಪರತ್ವಂಗಳಪ್ಪುವು (ತತ್ತ್ವಪ್ರ. ೨೪೧); ಎಲ್ಲ ಕ್ರಿಯೆಗಳೂ ಪರಿಣಾಮ ಪರಿಸ್ಪಂದಗಳೂ ಇದರಿಂದಲೇ ಸಾಧ್ಯ (ತತ್ವಪ್ರಾ. ೨೭೨). ೩. ಪರಿವಾರ ; ಪರಿಜನ : "ಪರಿವಾರಃ, ಪರಿಕರಃ, ಪರಿಸ್ಪಂದಃ, ಪರಿಗ್ರಹಃ—ಈ ೪ ಪರಿಗ್ರಹಂ" (ಹಲಾಯು. ೫೧-೧೫೧); ಮರದೊಳಗಣ ಕಿಚ್ಚು ಮರವನು ಸುಟ್ಟು ಇದಿರನು ಸುಟ್ಟು ಪರಿಸ್ಪಂದಕ್ಕೆ ಹರಿಯಿತ್ತು (ವಚಸಂ. ೩೯೫-೧೬); ಅನುಂ ಪ್ರಲಂಬಪ್ರಸೂದನನುಂ ಯಾದವಪರಿಸ್ಪಂದಮುಮಂ ಮುಂದಿಟ್ಟೊಡಗೊಂಡು ಪೋದೆವು (ಜಗವಿ. ೯-೮೪ ವ). ೪. ಸಾಧನ; ಸಲಕರಣೆ : "ಪರಿಬರ್ಹಂ . . . ಪರಿಸ್ಪಂದಂ ಬಿತ್ತರಿಸುವ ಗೃಹೋಪಕರಣೋತ್ಕರಂ" (ವಸ್ತುಕೋ. ೪೮-೨೧). [ಸಂ.]

**ಪರಿಸ್ಪಂದನ** (ನಾ). ಅದಿರುವಿಕೆ; ಕಂಪನ : ನಿಜದಕ್ಷಿಣಾಕ್ಷಿ ದಕ್ಷಿಣಭುಜಪರಿಸ್ಪಂದನಮೊಗೆಯೆ . . . ಎಯ್ದಿದಂ ಗೋಕುಲಮಂ (ಜಗವಿ. ೫-೭೬). [ಸಂ.]

**ಪರಿಸ್ಫುಟ** (ಗು). ೧. ಸ್ಪಷ್ಟವಾದ; ವ್ಯಕ್ತಗೊಂಡ. (ನಾ). ೨. ಸ್ಪಷ್ಟವಾದುದು ; ವ್ಯಕ್ತವಾಗಿರುವುದು : ಅಚ್ಚರಸೆಯರಾದಿ ಸಂಧ್ಯಂಗಗತನೃತ್ಯಾಂಗರಸಭಾವಾಭಿನಯಂಗಳನಿಂದ್ರಂ ಶ್ರೀದೇವಂಗೆ ನೋಡಿಕೊಳ್ಳೆಂಬಂತೆ ಪರಿಸ್ಫುಟಂ ಮಾಡಿ (ಶಾಂತಿಪು. ೭-೩೨ ವ); ಕರದಿನಪರಾಜರಾವಣಕರಪರಿಸಂಖ್ಯಾಕ್ಷರಂ ಪೊದಟ್ಟಿಸೆಯೆ ಗಣಾಂತರಿತಂ ಪದಚತುರೂರ್ಧ್ವಂ ಪರಿಸ್ಫುಟಂ (ಛಂದೋಂಬು. ೩-೨೧೫); ಒಯ್ಯನೆಯೆನೆ ನೆಟ್ಟನೆಯೆನೆ ನೆಟ್ಟಗೆಯೆನೆ ಬಂದು ನಿಲ್ಕುಮಿವಜಿಕೊಳ್ ಪರಿಸ್ಫುಟಾರ್ಥವಿಧಾನಂ (ಶಮದ. ೩೦೭). [ಸಂ.]

**ಪರಿಸ್ಫುಟಂ** (ಅ). ಸ್ಪಷ್ಟವಾಗಿ ; ವ್ಯಕ್ತವಾಗಿ : ಪಂಪನ ಪೊನ್ನನ ಪೇಟ್ದ ಕಬ್ಬದೊಳ್ ನೆಱೆಯೆ ಪರಿಸ್ಫುಟಂ ನೆಱೆಯದಿರ್ದುದುಮಂ ನುಡಿದೆಯ್ದೆ ಬಲ್ಮೆ ಕಣ್ಡೆಱೆಯೆ ನೆಗಟ್ದುದಂ ಕವೀಚತುರ್ಮುಖನಾಗಮವೇದಿಯಪ್ಪುದಂ (ಅಜಿಪು. ೧೨-೩೩). [ಸಂ.]

**ಪರಿಸ್ಫುರಣ** (ನಾ). ೧. ನಡುಗುವಿಕೆ; ಕಂಪನ. ೨. ಮೊಗ್ಗು ಬಿಡುವಿಕೆ; ಮೊಗ್ಗಾಗುವಿಕೆ. ೩. ಮೇಲಕ್ಕೆ ಚಿಮ್ಮುವಿಕೆ. [ಸಂ.]

**ಪರಿಸ್ಫುರಿತ** (ನಾ). ೧. ಅಲುಗಾಟ; ಚಲನೆ: ಪರಿಸ್ಫುರಿತದಿನೊರ್ಮೊದಲ್ ನೆಗಟಿ ಕಾಂಚಿಯ ಸುಣ್ಣರಂ . . . ಎತ್ತಲುಂ ನಲಿದು ನರ್ತಿಸಿದತ್ತು ವಿಲಾಸಿನೀಜನಂ (ಚಂಪ್ರಪು. ೩-೯೫). ೨. ಹೊರಹೊಮ್ಮಿದುದು : ಮಂಜೀರಕ ಮಂಜುಳಮ್ರದುಸಿಂಜಪರಿಸ್ಫುರಿತ ಮೆಸೆಯೆ (ಶಾಂತಿಪು. ೭-೩೩). ೩. ಹೊಳೆಯುವಿಕೆ; ಪ್ರಕಾಶಿಸುವಿಕೆ : ಖರಶಾಣಕಷಣದಿಂ ಮಣಿ ಗುರುತೇಜೋವೃತ್ತಿ ನೆಗಟ್ಟವೋಲಕ್ಕುಂ ನಿಷ್ಠುರವಾಕ್ಪ್ರಾಷಾಣಪರಿಸ್ಫುರಿತಂ ಕೃತಿರತ್ನದೊಳ್ ಸಮುಜ್ಜ್ವಲಭಾವಂ (ಚಂಪ್ರಪು. ೧-೪೪). [ಸಂ.]

**ಪರಿಸ್ಫುಲಿಂಗ** (ನಾ). ಬೆಂಕಿಯ ಕಣ; ಕಿಡಿ: ಬೆಸಸಿದನು ಚಕ್ರವನು ಧಾರಾವಿಸರಧೂತ ಪರಿಸ್ಫುಲಿಂಗಪ್ರಸರತೇಜಃಕಣಪರಿಸ್ಫೃತ ನವ್ಯಶತಭಾನು ದೆಸೆದೆಸೆಗೆ ದುವ್ವಾಳಿಸುವ ಬೆಳಗೆಸೆಯೆ ಬಂದು ಸುನೀತ ಕಂಠದ ಬೆಸುಗೆ ಬಿಡಲೆಜಗಿದುದು ಹಾಯ್ದುದು ತಲೆ ನಭಸ್ಥಳಕೆ (ಕೃವ್ಯಾಸ. ೧೦-೭೭). [ಸಂ.]

**ಪರಿಸ್ಯಂದ** (ನಾ). ೧. ಸ್ರವಿಸುವುದು ; ಜಿನುಗುವುದು. ೨. ಪ್ರವಾಹ. ೩. ಪರಿವಾರ; ಪರಿಜನ. ೪. ಕೇಶಾಲಂಕಾರ. [ಸಂ.]

**ಪರಿಸ್ರವಣ** (ನಾ). ೧. ಹರಿಯುವುದು ; ಪ್ರವಹಿಸುವುದು. ೨. ಜಿನುಗುವುದು ; ತೊಟ್ಟಿಡುವುದು. [ಸಂ.]

**ಪರಿಸ್ರವಣೆ** (ನಾ). ಮಾದಕ ಪಾನೀಯ : ಮದ್ಯ : "ಮೈರೇಯಂ . . . ಪರಿಸ್ರ [ಪಾಠಾಂ.ಶ್ರು]ವಣೆ ಕಲ್ಯಮೆನೆ ಕಳ್ಳೆಸಿಕ್ಕು" (ಮಂಗರಾ.

೬೫-೮). [ಸಂ. ಪರಿಸ್ರವಣೀ]

**ಪರಿಸ್ರುತ** (ಗು). ಜಿನುಗಿದ; ಸ್ರವಿಸಿದ. [ಸಂ.]

**ಪರಿಸ್ರುತೆ** (ನಾ). = ಪರಿಸ್ರವಣಿ: "ಮಧು . . . ಪರಿ(ಸ್ರು)ಶ್ರುತಾ, ಮದಿರಾ . . . ಮಧು — ಈ ೨೪ ಕಳ್ಳು" (ಹಲಾಯು. ೫೫-೧೭೪). [ಸಂ. ಪರಿಸ್ರುತಾ]

**ಪರಿಹರ** (ನಾ). ನಿವಾರಣೆ; ಪರಿಹಾರ: ಎನ್ನ ದುಃಖಕೆ ಮತ್ತೆ ಪರಿಹರವಾವುದೋ (ಬಸಪು. ४೫-೩೮); ಮುಳ್ಳುಕೊಗ್ಗೆಯಂ ಕಷಾಯ ವಿಟ್ಟು ನಾಲ್ಕುವರಹತೂಕ ಶುಂಠಿಯ ಚೂರ್ಣವಂ ಹಾಕಿ ಕೊಡಲು ಗ್ರಹಿಣೀ ಪರಿಹರ (ಸಕವ್ಯೆ. ೩೩೬); ಶಂಕೆಗೈವರಿಗಿಂತು ದ್ವೈತದ ಶಂಕೆ ದೋರುತ್ತಿಹುದು ಪರಿಹರಮಂ ಕಟಾಕ್ಷದಲರುಹಬೇಕು (ಗಗತಾ. ೧೩-೪೬).

**ಪರಿಹರವಾಗು** = ನಿವಾರಣೆಯಾಗು; ಕಳೆ: ನಿನ್ನ ದರುಶನ ಮಾತ್ರದಿಂದಲಿ ನಾನು ಪೂರ್ವದಿ ತಂದ ಫಲವು ಇಂದು ಪರಿಹರವಾಯಿತು (ಗೋಹಾಡು. ೨೦-೯೭). [<ಸಂ. ಪರಿಹಾರ]

**ಪರಿಹರಗೈಸು** (ಕ್ರಿ). ನಿವಾರಣೆಮಾಡು; ಕಳೆ: ಅಡವಿಯಲಿ ಬಿತ್ತದಲೆ ಬೆಳೆದಿಹ ಗಿಡದ ಮೂಲಿಕೆ ಸಕಲಜೀವರ ಒಡಲೊಳಿಪ್ಪಾಮಯವ ಪರಿಹರಗೈಸುವಂದದಲಿ (ಜಗದಾ. ೩೭೦). [ಪರಿಹರ + ಕೈಸು (<ಕೆಯ್ಸು)]

**ಪರಿಹರಣ** (ನಾ). ೧. ನಿವಾರಿಸುವುದು; ತಪ್ಪಿಸುವುದು; ತಡೆಯುವುದು. ೨. ಬಿಡುವುದು; ತೊರೆಯುವುದು; ತ್ಯಜಿಸುವುದು: 'ಪರಿಹರಿಸು' ಪರಾ. [ಸಂ.]

**ಪರಿಹರಣೀಯ** (ಗು). ೧. ತೊರೆಯಬೇಕಾದ; ದೂರ ಮಾಡಬೇಕಾದ. (ನಾ). ೨. ತೊರೆಯಬೇಕಾದುದು; ದೂರ ಮಾಡತಕ್ಕುದು: ಕರಣೀಯಮಿಷ್ಟಕರಣಮಕರಣೀಯಮನಿಷ್ಟಕರಣಮೆಂಬೀ ನಯಮಾದರಣೀಯಮಲ್ಲದುದು ಪರಿಹರಣೀಯಂ ಭೂಮಿಪಂಗೆ (ರಾಜಶೇ. ೧೩-೧೩). [ಸಂ.]

**ಪರಿಹರಿಸು** (ಕ್ರಿ). ೧. ನಿವಾರಿಸು; ನೀಗು: "ಪರಿಹರಿಸೆನಿಪ್ಪದಕ್ಕೆ ತೀರ್ಚೆಂಬ ನುಡಿಯುಕ್ಕು" (ಕಬ್ಬಕೈ. ೬೭); ಬಾಟ್ಕೆಯೊಳಾದ ತೃಷ್ಣೆಯಂ ಪರಿಹರಿಸಲ್ಕುಮಾರ್ಗಮರಿದಾಗಿಯುಂ (ಕಾದಂಪೂ. ೯೪೮); ಎತ್ತಲಾನುಮರ್ಥಮಿಲ್ಲದಿರ್ದೊಡಂ ತನಗೆ ಬಂದನರ್ಥಮಂ ಪರಿಹರಿಸಲ್ ಬಹುದು (ಪಂಚತಂ. ೫೪-೧೬); ಸೋಕಿದವರ ದುರಿತವ ಪರಿಹರಿಸುತ ಶ್ರೀ ಕಾವೇರಿಯೊಪ್ಪಿಹಳು (ಕಂಸವಿ. ೨-೧೭). ೨. ಬಿಡು; ತ್ಯಜಿಸು; ತೊರೆ: ಆನರಸುಗೆಯ್ವ ಪಟ್ಟುವಗೆಯನದಂ ಪರಿಹರಿಸಿದೆನಾತನನೀ ಕಿರೀಟ ಗೆಲ್ದನಗೆ ಪಟ್ಟವಂ ಮಾಡುವನೇ (ಪಂಪಭಾ. ೧೨-೧೨೯); ಪರಿಹರಿಸಿ ಪೋಗಲಕ್ಕುಮೆ ಕರುಣಿಸದೊರ್ವಳನನಾಥೆಯಂ ಭಕ್ತೆಯಂ (ಕಾದಂಪೂ. ೯೨೩); ಸಂಜೀವಕನಂ ಪರಮಸ್ನೇಹಿತನಂ ಪರಿಹರಿಸುವನಲ್ಲೆಂ ಸಮಸ್ತಗುಣಸಂಯುತನಂ (ಪಂಚತಂ. ೧೦೨-೧೯); ಕುರುಕುಲೋದ್ಧಾರಕನು ಮಾದ್ರೇಶ್ವರನೆನಿಪ ವಿಖ್ಯಾತಿ ಬಂದುದು ಪರಿಹರಿಸದಿರು ಮಾವ ಎಂದೆಜಗಿದನು ಚರಣದಲಿ (ಕುಪ್ಯಾಕ. ೫-೩೫). ೩. ದೂರಮಾಡು; ದೂರಸರಿಸು: ಪರಿಜನಮುಮಂ ಕೆಲಬಲದೊಳಿರ್ದ ಪಸಾಯಿತರುಮಂ ಪರಿಹರಿಸಿ (ಅನಂಪು. ೧೧-೮೭ ಪ); ಮಾರುತಸುತನು ಕೌರವರಾಯನನುಜರ ಸೀಳಿದನು ಕಳಶಜನ ಪರಿಹರಿಸಿ [ಪಾಠಾಂ. ನವಘಟಿಸಿ, ಪರಿಭವಿಸಿ] (ಕುಪ್ಯಾದ್ರೋ. ೧೨ ಸೂಚನೆ); ಪಾಡುವಡಿಪರೆಂದು ಪರಿಹರಿಸಪೆ ಚುನ್ನವಾಡದೆ ಮನೆವಾಳ್ತಿಯನು ಮಾಡುವುದವರ ಸಮ್ಮತದಿಂದ (ಹಪಿಬ. ४-೧೩); ವಿದ್ಯೆಯ ಶೃಂಗಾರವಿದ್ದರು ಖಳರನು ದೂರದೊಳಿಡಿ ನೀವು ನಮಿಸಿ ಹೆಡೆಯೊಳು ರತ್ನವೆ ಇದ್ದರು ಹಾವನು ನಲಿವಂತೆ ನಾವು ಪರಿಹರಿಸಿ (ಇಂಚಾಪ. ೬೫-೧೪). ४. ತಡೆಗಟ್ಟು; ನಿಲ್ಲಿಸು; ತಪ್ಪಿಸು: ಪರಲೋಕಾಲೋಕನಮಂ ಪರಿಹರಿಸಿದೆವಲ್ತೆ ನೋಡಿಮೆಂದೀಗಳು ದಾಹರಿಸುವ ತೆಱದಿಂ ಪಿಡಿಯುಪೆರರಸುಗಳೆಡೆವಿಡದೆ ಮೇಘಡಂಬರತತಿಯಂ (ಕಾದಂಪೂ. ೫೫೫); ಪರಿಹರಿಸಿ ಪಾಟಿಯಂ ಪಾಪಿ . . . ನಿಜಸುತನಂ ಕರುಮಾಡಂಬುಗಿಸಿದಪಳ್ ಕರುಣಂಗೆಟ್ಟಾಕೆ ಕ್ಕೈಕೆ ಕಲ್ಲೆರ್ದೆಯಕ್ಕುಂ (ಪಂರಾಮಾ. ೬-೧೬४); ಉರಗನರದಿವಿಜಾದಿಗಳಿಗಿದು ಪರಿಹರಿಸಲಳವಲ್ಲ . . . ಮರಣ ಜನಿಸಿದ ಬಳಿಕ ತಪ್ಪದು (ಕುಪ್ಯಾದ್ರೋ. ೭-೨೯). ೫. ತೆಗೆದುಹಾಕು; ತೆಗೆದುಬಿಡು: ಪರಿಹರಿಸೆಯವರ್ಣಮನಾ ಸ್ವರಂಗಳವು ನಾಮಿಯೆಂಬುವಕ್ಕುಂ (ಕಾಪ್ಯಾಪ. ೧೨); ಕರಮೆಸೆಯೆ ಮುನ್ನಿನ ದಿನಂ ಶಂಕರನನರ್ಚಿಸಿ ಮಱುದಿವಸ ಪರಿಹರಿಸಿದಾ ಪತ್ರೆಯನಿನಿತನಾವೋಹಿಲನು ತಂದು ನಿರತದಿಂದದನೇ ಪ್ರಸಾದಸ್ಫುರಣ ಭಾವದಿನನುಭವಿಸುತಿರೆ (ಬಸಪು. ४೩-೬೭). ೬. ಕಳೆ; ಮುಗಿಸು: ಮಱುದಿವಸ ವೇದಾವತಿಯ ಸಾರ್ದರು ಬಳಿಕ್ಕವರಲ್ಲಿ ರಜನಿಯ ಪರಿಹರಿಸಿ ದಾಂಟಿದರು ನದಿಯನು (ತೊರರಾ. ೨-४-೯). ೭. ನಾಶಮಾಡು; ಧ್ವಂಸಮಾಡು: ನೀಮಿವರಂ ಪರಿಹರಿಸಿ ಬಾಟ್ಟುದೆಂದಱಿಪೆ (ಚಾವುಂಪು. ೧೦); ಪಡರಿಗಳಂ ಪರಿಹರಿಪ ಭಾಷೆ ಶಿವೈಕ್ಯಭಕ್ತಿಯನಲರಿಸುವ ಭಾಷೆ (ಬಸಪು. ೬-೬); ಉ(ವು)ರಿ ಕೋಶದೊಳುದಯಿಸಿದೊಡೆ ಕರಗುಗು ಮುಳ್ಳರ್ಥವೆಲ್ಲಮೆರಡುಂ ರಂಧ್ರಾಂತರಮುರಿದೊಡಾಳ್ದನಂ ಪರಿಹರಿಸುಗುಮಾ ತುರಗರತ್ನಂ (ಅಶ್ವಶಾ. ४-೬೭); ಧುರದ ಪ್ರಳಯಕೃತಾಂತನನು ಪರಿಹರಿಸಿದೆವು (ಕುಪ್ಯಾದ್ರೋ. ೬-೬೬); ಹರಿಗೆ ಮಿಥ್ಯತ್ವದಾಮಯ ಕುಂದೆ ಮೃಗಕುಲ ಪರಿಹರಿಸಿದವು ವೈರಿಗಳ (ಪರ್ಣಚ. ೮-೫೭). ೮. ಮೀರು; ಉಲ್ಲಂಘಿಸು: ಪರಿಹರಿಪೆಯೆಮ್ಮ ನುಡಿಯಂ ಗುರುವಚನಮುಲಂಘನೀಯಮೆನ್ನದೆ (ಯಶೋಚ. ೩-೧೯). ೯. (ಸಾಲದಂತೆ) ತೀರಿಸು; ಸಂದಾಯ ಮಾಡು: (ಕಿ). ೧೦. ತೆಗೆದುಕೊಳ್ಳು; ಕಸಿದುಕೊಳ್ಳು: (ಕಿ). ೧೧. ನಿವಾರಣೆಯಾಗು; ಪರಿಹಾರವಾಗು; ಇಲ್ಲವಾಗು: ಪರಿಹರಿಸಿ ಪೋಗೆ ಮಾಯಾಸ್ವರೂಪ ಮಳವಱಿದಸಿಲ್ಲ ಖೇಚರಪತಿ (ಪಂರಾಮಾ. ೧೦-೩೧); ದುರಿತತಿಮಿರ ಪ್ರಭಾವಂ ಪರಿಹರಿಪುದು ದೇವ ನಿನ್ನ ಮುಖಚಂದ್ರಮನಿಂ (ಧರ್ಮಾಮೃ. ೧-೬೩); ಗರುಡಮತದಲಿ ಸರ್ಪವಿಷ ಪರಿಹರಿಸುವುದು ದುರ್ಜನ ವಚೋನಿಷ್ಠುರಮಹಾವಿಷಕಾವ ಗಾರುಡವಾವ ಮಂತ್ರಮುಖ (ಕುಪ್ಯಾಕ. ೯-೨೩). ೧೨. ಪಾರುಮಾಡು; ರಕ್ಷಿಸು: ಇರದೆ ಹರಿತಂದಳು ಜಯದ್ರಥನರಸಿ ನೃಪತಿಯನಱಿಸಿ ನೃಪತಿಯ ಹೊರೆಗೆ ನೀ ಪರಿಹರಿಸಬೇಹುದು ಪತಿಯನೆಂದೆಜಗಿದಳು ಚರಣದಲಿ (ಕುಪ್ಯಾದ್ರೋ. ಓರಿಇ. ೮-೫೦ ಅಡಿಟಿ); ನನ್ನನ್ನು ಈ ಬೇನೆಯಿಂದ ಪರಿಹರಿಸಬೇಕು (ಪಣಿಸ. ೧೭). ೧೩. ಬಗೆಹರಿಸು; ಇತ್ಯರ್ಥಮಾಡು: ಮರಣ ಸೈಂಧವಗಲ್ಲದಿದ್ದರೆ ಮರಣ ಪಾರ್ಥಂಗಲ್ಲದೆಡೆಯಲಿ ಪರಿಹರಿಸುವುದ ಕಾಣೆವೆಂದರು ಚರರು ಭೂಪತಿಗೆ (ಕುಪ್ಯಾದ್ರೋ. ೮-೫೦).

**ಪರಿಹರಿಸಿಕೊಳ್, ಪರಿಹರಿಸಿಕೊಳ್ಳು** = ೧. ನಿವಾರಣೆ ಮಾಡಿಕೊಳ್ಳು: ಹರಣದಳಲುಮಂ ಪರಿಹರಿಸಿಕೊಂಡು [ಪಾಠಾಂ. ಹಸರಿಸಿಕೊಳುತಂ] . . . ಕೊಂಡು ಕೊನೆವುತ್ತಿರ್ಪ ತಾಯ್ತಂದೆಗಳಂ ಕಂಡು (ನಂಪಿರ. ೨-೫೮); ಸಿನ್ನೊಂದು ಪೆಸರ ಪೋಲ್ವೆಯೊಳಂದಜಾಮಿಳಂ ತನ್ನ ಪಾತಕಕೋಟಿಯಂ ಪರಿಹರಿಸಿಕೊಂಡಂ (ಜೈಮಿಭಾ. ೧೫-೩೭). ೨. ತಪ್ಪಿಸಿಕೊಳ್ಳು: ತರಹರಿಸು ಬಿಲುಗಾಱನಾದರೆ ಪರಿಹರಿಸಿಕೊಳ್ಳೆನುತ ಪವನಜ ಬಿಱುಗಣೆಯಲಿರದೆಚ್ಚನಹಿತನ ಧನುವ ಸಾರಥಿಯ (ಕುಪ್ಯಾದ್ರೋ. ೧೩-೩೬) [ಪರಿಹರಣ + -ಇಸು₃]

**ಪರಿಹರ್ತವ್ಯ** (ಗು). ೧. ದೂರಮಾಡಬೇಕಾದ; ನಿವಾರಣೆಯಾಗಬೇಕಾದ. (ನಾ). ೨. ಬಿಡಬೇಕಾದುದು; ತ್ಯಜಿಸ

ಬೇಕಾದುದು : ಯೂಕಾಭೀತಿಯಿಂದಂಬರಂ ಪರಿಹರ್ತವ್ಯಮೆ ಮೇಣ ಜೀರ್ಣಭಯದಿಂ ಪ್ರಾಜ್ಯಾಜ್ಯಮೇಂ ತ್ಯಾಜ್ಯಮೇ (ಚಂದ್ರಪ್ರ. ೧-೪೫). [ಸಂ.]

**ಪರಿಹಸಿತ** (ಗು). ಅಪಹಾಸ್ಯಕ್ಕೆ ಈಡಾದ; ನಗೆಪಾಟಲಿಗೆ ಗುರಿಯಾದ : ಸ್ವಕೀಯ ಮಹನೀಯಗಾಂಭೀರ್ಯಪರಿಹಸಿತಸುಧಾಶರಧಿಪುರಶ್ರೀವೇಃಖಲಾಕಲಿತ ಪರಿಖಾವಲಯವಲಿತ . . . ರವಿವೀಥಿ ಸನಾಥಮುಂ (ರಾಜಶೇ. ೧೪-೧೦೭ ಪ). [ಸಂ.]

**ಪರಿಹಾರ** (ನಾ). **೧.** ತೊರೆಯುವುದು ; ತ್ಯಜಿಸುವುದು. **೨.** ದೂರ ಸರಿಸುವುದು ; ದೂರ ಮಾಡುವುದು. **೩.** ಕಳೆಯುವುದು ; ಹೋಗಲಾಡಿಸುವುದು ; ನಿವಾರಣೆ : "ಪ್ರತಿಕ್ಷಿಪ್ತವೆನಲು ಪರಿಹಾರಮುಕ್ತು" (ಮಂಗರಾ. ೧೨೮-೯) ; ಪಾತಕ ಮಹಾಪಾತಕವ ಮಾಡಿದವನು ಸದ್ಭಕ್ತರ ಮನೆಗೆ ಹೋಗಿ ಅವರೊಕ್ಕ ಪ್ರಸಾದವನಾಯ್ದುಂಡರೆ ಸಕಲಬ್ರಹ್ಮಹತ್ಯಾದಿ ಪಾತಕ ಪರಿಹಾರವು (ಬಸವ. ೪೬೯); ಎನ್ನ ಭಕ್ತಿವಿಹೀನತೆಗೆ ಪರಿಹಾರವೆಂತಹುದೋ (ಬಸವು.೬೦-೫೭) ; ಅಜೀರ್ಣಪರಿಹಾರಕ್ಕೆ ಸುಲಭಯುಕ್ತಿ (ಮುಂಜಯಿ. ೪-೧೧೮) ; ಎಲ್ಲಾ ದೋಷ ಬೆಲ್ಲದಲ್ಲಿ ಪರಿಹಾರ (ಗಾದೆ). **೪.** ದ್ರವ್ಯಸಹಾಯ : ಬೆಂಕಿಯ ಅಪಘಾತದಲ್ಲಿ ಸತ್ತವರಿಗೆ ಸರ್ಕಾರ ಪರಿಹಾರ ನೀಡಿತು (ರೂಢಿ). **೫.** ಉತ್ತರ ; ಸಮಾಧಾನ : ಶಾಸನಗಳಿಂದ ಈ ಸಮಸ್ಯೆಗೆ ಪರಿಹಾರ ದೊರಕುವುದಿಲ್ಲ (ದ್ರಾವಿ. ೮೫) ; ಜಗತ್ತಿನ ಅತ್ಯಂತ ದೊಡ್ಡ ಸಮಸ್ಯೆಯೊಂದಕ್ಕೆ ರಾಜೂರವರ ಹೊಗೆರಹಿತ ಒಲೆ(ಚೂಲಾ)ಯು ಕ್ರಿಯಾತ್ಮಕ ಪರಿಹಾರವನ್ನೊದಗಿಸುತ್ತದೆ (ಅಡುಸಾ. ೧೯). **೬.** ನಷ್ಟವನ್ನು ತುಂಬಿಕೊಡುವಿಕೆ ; ನಷ್ಟಭರ್ತಿ : (Compensation. ಪತ್ರಿಸಿ. ೨೧). 'ಪರಿಹಾರದ್ರವ್ಯ' ಪರಾ. **೭.** ಅಪರಾಧದ ನಿವಾರಣೆಗಾಗಿ ಮಾಡುವ ಕ್ರಿಯೆ ; ಪ್ರಾಯಶ್ಚಿತ್ತ. **೮.** ತೆರಿಗೆಗಳಿಂದ ದೊರೆಯುವ ವಿನಾಯಿತಿ : ಎಲೆಯ ಹೊಟಿ ಪರಿಹಾರ ೫೦ ಹಸುಂಬೆ ಪರಿಹಾರ ೫೦ (ಎಕ. VII, ಶಿಮೊ. ೮೮-೪೬; 1203). **೯.** ಅನಾದರ ; ತಿರಸ್ಕಾರ; ಅವಜ್ಞೆ. **೧೦.** ದಾನ; ಕೊಡುಗೆ. **೧೧.** ಔಷಧಿ; ಮದ್ದು : ಅವರ ಮನೋರೋಗಕ್ಕೆ ಪರಿಹಾರವೇ ಇಲ್ಲ (ರೂಢಿ). **೧೨.** [ಜೈನ] "ಪ್ರಾಯಶ್ಚಿತ್ತಭೇದ—ಕೆಲವು ಕಾಲಾವಧಿಯಿಂದ ಸಂಘದಿಂದ ಬೇರೆ ಮಾಡುವುದು" (ಜೈನಕೋ. ೧೬೨).

**ಪರಿಹಾರಂ ಮಾಡು**= ಇಲ್ಲದಂತೆ ಮಾಡು ; ವಿನಾಯಿತಿಯನ್ನುಂಟುಮಾಡು : ಸಾಸಿರಪೇಜುವೆತ್ತಿಂಗೆ ಪೆಜ್ಜುಂಕ ಬಿಲ್ಕೊಡೆ ವಡ್ಡರಾವುಳವೊಳಗಾಗಿ ಸುಂಕವೆಲ್ಲಂ [ಪ]ರಿಹಾರಂ ಮಾಡಿ ಬಿಟ್ಟಿಂ (ಎಇ. XXVIII, ೫-೫೧; 1082). **ಪರಿಹಾರವಾಗು**= **೧.** ನಿವಾರಣೆಯಾಗು : ಗಂಗೆಯಲ್ಲಿ ಸ್ನಾನಮಾಡುವುದರಿಂದ ಪಾಪ ಪರಿಹಾರವಾಗುತ್ತದೆ ಎಂದೂ ಹಿಂದೂಗಳ ನಂಬಿಕೆ (ನನದಿ. ೧೨). **೨.** ಬಗೆಹರಿ ; ಇತ್ಯರ್ಥವಾಗು: ಆದರೆ ಸಮಸ್ಯೆ ಇಷ್ಟರಿಂದಲೇ ಸುಲಭವಾಗಿ ಪರಿಹಾರವಾಗುವುದಿಲ್ಲ (ದ್ರಾವಿ. ೨೬೧). [ಸಂ.]

**ಪರಿಹಾರಕ** (ನಾ). **೧.** ನಿವಾರಣೆಮಾಡುವಂತಹುದು ; ಪರಿಹರಿಸುವುದು : ಸಾಕ್ಷಾತ್ಕಾರವು ಆನಂದಮಯವು, ಆನಂದಪರಿಪೂರ್ಣವು, ಸರ್ವಸಂಶಯಪರಿಹಾರಕವು (ವಚರ. ೩೯). **೨.** ನಿವಾರಣೆ ಮಾಡುವವನು ; ಪರಿಹರಿಸುವವನು. **೩.** ತೋಳುಬಂದಿ ; ಬಾಹುಪುರಿ. [ಸಂ.]

**ಪರಿಹಾರಕ್ರಿಯೆ** (ನಾ). = ಪರಿಹಾರವಿಶುದ್ಧಿ : ಪರಮಾಲೋಚನದೊಳ್ . . ಪರಿಹಾರಕ್ರಿಯೆಯೊಳ್ . . . ನಿಬಿಡಕಾಯೋತ್ಸರ್ಗದೊಳ್ ಶುದ್ಧಿ ತಳ್ತಿರೆ ದೋಷಪ್ರತಿಕಾರಸಾರತಪಮಂ ತತ್ತ್ವಾಪಸಂ ತಾಳ್ದಿದಂ (ಸುಕುಮಾ. ೪-೧೫). [ಪರಿಹಾರ+ಕ್ರಿಯೆ]

**ಪರಿಹಾರದ್ರವ್ಯ** (ನಾ). **೧.** (ಪ್ರವಾಹ, ಕ್ಷಾಮ, ಯುದ್ಧ ಮೊದಲಾದುವುಗಳಿಂದುಂಟಾದ ನಷ್ಟಗಳಿಗಾಗಿ) ಪರಿಹಾರ ರೂಪವಾಗಿ ಕೊಡುವ ನಿಧಿ ; ನಷ್ಟವನ್ನು ತುಂಬಿಕೊಡುವ ಹಣ ; ನಷ್ಟಭರ್ತಿ ಹಣ : ಮೊದಲ ಯುದ್ಧದ ತರುವಾಯ ಸೋತ ಜರ್ಮನಿಯ ಮೇಲೆ ಹೇರಲಾದ ಪರಿಹಾರದ್ರವ್ಯ (Reperations) ತೀರುವೆಯ ಸಂದರ್ಭದಲ್ಲಿ . . . ಬ್ಯಾಂಕು ಒಂದನ್ನು ಸ್ಥಾಪಿಸಬೇಕೆಂದು ಶಿಫಾರಸು ಮಾಡಿತು (ಅಂತಸಂ. ೧೪೪). **೨.** ಸರ್ಕಾರ ಮುಂತಾದ ಸಂಸ್ಥೆಯು ಬೇರೊಬ್ಬರ ಭೂಮಿ, ವಸ್ತು ಮುಂತಾದುವುಗಳನ್ನು ವಶಪಡಿಸಿಕೊಳ್ಳುವಾಗ ಪ್ರತಿಯಾಗಿ ಅವುಗಳ ಒಡೆಯನಿಗೆ ಕೊಡುವ ದ್ರವ್ಯ : ನಮ್ಮ ಜಮೀನಿನ ಮೂಲಕ ರಸ್ತೆ ಹಾದುಹೋದುದರಿಂದ ಸರ್ಕಾರದಿಂದ ನಮಗೆ ಐದು ಸಾವಿರ ರೂಪಾಯಿ ಪರಿಹಾರದ್ರವ್ಯ ದೊರೆಯಿತು (ರೂಢಿ). [ಪರಿಹಾರ+ದ್ರವ್ಯ]

**ಪರಿಹಾರವಿಶುದ್ಧಿ** (ನಾ). [ಜೈನ] ಪ್ರಾಣಿವಧೆ, ಮಿಥ್ಯಾತ್ವ ಮೊದಲಾದುವುಗಳನ್ನು ಪರಿಹರಿಸಿಕೊಳ್ಳುವುದರಿಂದ ಉಂಟಾಗುವ ಸಮ್ಯಗ್ದರ್ಶನದ ವಿಶುದ್ಧಿ ; ಚಾರಿತ್ರ್ಯಶುದ್ಧಿ : ಸಾಮಾಯಿಕಚ್ಛೇದೋಪಸ್ಥಾಪನಾಪರಿಹಾರವಿಶುದ್ಧಿ . . . ಅಸಂಯಮವಿಕಲ್ಪದಿಂ ಸಂಯಮಮಂ ಸಪ್ತವಿಧಂ (ತತ್ತ್ವಪ್ರ. ೧೭). [ಪರಿಹಾರ+ವಿಶುದ್ಧಿ]

**ಪರಿಹಾರಶುದ್ಧಿ** (ನಾ). = ಪರಿಹಾರವಿಶುದ್ಧಿ : ಸಾಮಾಯಿಕಚ್ಛೇದೋಪಸ್ಥಾಪನಾಪರಿಹಾರಶುದ್ಧಿ ಸೂಕ್ಷ್ಮಸಾಂಪರಾಯ ಯಥಾಖ್ಯಾತ ಚಾರಿತ್ರಭೇದದಿಂ ಪಂಚವಿಧಂ (ಆದಿಪು. ೧೦-೬೩ ಪ). [ಪರಿಹಾರ+ಶುದ್ಧಿ]

**ಪರಿಹಾರ್ಯ** (ಗು). **೧.** ಬಿಡಬೇಕಾದ; ತೊರೆಯಬೇಕಾದ. **೨.** ತಪ್ಪಿಸಿಕೊಳ್ಳಬೇಕಾದ. **೩.** ಒಯ್ಯಬೇಕಾದ ; ತೆಗೆದುಕೊಂಡು ಹೋಗಬೇಕಾದ. **೪.** ಬೇರೆ ಮಾಡಬೇಕಾದ ; ಪ್ರತ್ಯೇಕಿಸಬೇಕಾದ. (ನಾ). **೫.** ತ್ಯಜಿಸಬೇಕಾದುದು ; ಬಿಡಬೇಕಾದುದು : ಗ್ರಾಮ್ಯಾಳಾಪಂಗಳ್ ಮಾರ್ಗಯುಗಳ ಪರಿಹಾರ್ಯಂಗಳ್ (ಕವಿಮಾ. ೨-೮೨) ; ಪರಿಹಾರ್ಯಂ ದಿನದೊಳ್ ಸಮಸ್ತಶುಭಕಾರ್ಯಕ್ಕಂ ವ್ಯತೀಪಾತಮಾ ಪರಿಘಂ ವೈಧೃತಿ (ಲೋಕೋಪ. ೧-೨೪). **೬.** ಕೈಯಲ್ಲಿ ಧರಿಸುವ ಒಂದು ಬಗೆಯ ಆಭರಣ : ಕೈಬಳೆ ; ಕಂಕಣ : 'ಪಾರಿಹಾರ್ಯ' ಪರಾ. [ಸಂ.]

**ಪರಿಹಾಸ** (ನಾ). **೧.** ವಿನೋದ ; ಸರಸ ; ಹಾಸ್ಯ : ಭೀಮಸೇನನನುಮತದೊಳ್ ನರ್ಮಸಚಿವನುಂ ಪರಿಹಾಸಕೇಳೀಶೀಲನುಮೆನಿಸಿದ ವಿದೂಷಕನೆಂದಂ (ಗದಾಯು. ೨-೮ ಪ) ; ಪರಿಹಾಸಮೊಪ್ಪಮಾದರಮೆಲೆಗೀತಮಕ್ಕರಗೊಟ್ಟಿಯಲ್ಲದಿರೆ ನಾಡಕೋಟಲೆಯು ಕೊಟ್ಟರವದು ಸೋಲೆವನೆಯಲ್ತು (ಲೀಲಾವ. ೨-೪೧) ; ಪರಿಹಾಸವಿವಿಧಕೇಳೀಪರಿಣತಮತಿ ವಿಪ್ರವಂಶಸಂಭೂತಂ ನೋಡೆ ರಸಾರ್ಥವಾಣಿ ಸಾಧುಸ್ವರೂಪನೆನಿಪಂ ವಿದೂಷಕಾಖ್ಯನುನಾಲ್ಕುಂ (ಶೃಂಗಾರ. ೪-೧೦) ; ಪರಿಹಾಸಚರ್ಚೆಗೆಲ್ಲಾ ಶರಣರ್ ನಗುತಿರ್ದರ್ (ತ್ರಿಪುವಿ. ೪೯-೧೨). **೨.** ಅಣಕ ; ಕುಚೋದ್ಯ : ಲಕ್ಷ್ಮಣಂ ಮುಳಿಸುವೆರಸಿದ ಮುಗುಳ್ನಗೆ ಪಸರಿಸೆ ಪರಿಹಾಸವಚೋವಿಳಾಸದಿನಿಂತೆಂದಂ (ಪಂಪಾರಾ. ೧೮-೨೩೧ ಪ) ; ನಿತಾಂತ ವಸಭ್ಯಸಂಗದಿಂ ದ್ಯೂತವಿನೋದವಸ್ಥಿರಗುಣಂ ಪರಿಹಾಸವಚಃಪ್ರವೃತ್ತಿ ದುರ್ನೀತಿ ದುರಾಗ್ರಹಂ ಹೃದಯದೊಳ್ ನೆಲಸಿತ್ತು ನಳಕ್ಷಿತೀಶನಾ (ನಳಚಂ. ೫೦೨). **೩.** ವಿನೋದ ಮಾಡುವುದು ; ನಕಲಿ ಮಾಡುವುದು. **೪.** ಅಪಹಾಸ್ಯಮಾಡುವುದು ; ಅಣಕಮಾಡುವುದು. **೫.** ಉಲ್ಲಾಸ ; ಹರ್ಷ : ಪರಿಹಾಸಹೇತುಭಾವನೆ ದೊರೆಕೊಳೆ ಚಿತ್ತಕ್ಕೆ ಹಾಸ್ಯಮೆಂಬ ರಸಂ (ಶೃಂಗಾರ. ೧-೬೬). **೬.** ನಗು ;

ನಗೆ. **೭.** ಹಾಸ್ಯಗಾರ; ವಿದೂಷಕ: "ಪರಿಹಾಸಃ, ದ್ರವಃ, ನರ್ಮ—ಈ ೩ ಮೇಳದಾತಂ" (ಹಲಾಯು. ೭೧-೨೭೮); ತನ್ನಯ ಮೊಗವ ಡೊಂಕಿಸಿ ನಕ್ಕು ಪರಿಹಾಸನನ್ನಿಗರನು ನಗಿಪಂತೆ (ಭರತ. ೬೭-೧೭೨). **೮.** [ಕಾವ್ಯವಿಮ] ಸ್ಥಾಯಿಭಾವಗಳಲ್ಲಿ ಒಂದು; ಹಾಸ್ಯರಸದ ಸ್ಥಾಯಿಭಾವ: ರತಿ ಪರಿಹಾಸಂ . . . ವಿಸ್ಮಯಾಶ ಯತ್ವಂ ಪ್ರತಿನಿಯತ ಸ್ಥಾಯಿಭಾವಮಿವು ತಾಮುಕ್ಕುಂ (ಕಾವ್ಯಾವ. ೭೯೪). [ಸಂ.]

**ಪರಿಹಾಸಕ** (ನಾ). **೧.** = ಪರಿಹಾಸ **೭**: "ಸಬ್ಬವಕಾಟ ಪರಿಹಾಸಕಂ" (ಶಬ್ದಮಂ. ೪೯); ಪರಿಹಾಸಕರಿಗೆಜಿ ದಶ್ವಗಜಸಾಹಣಿಗಳಿಗೆ ಎಜಿಕಿದು (ಬಸವು. ೫೯-೨೮); ಕರಣಿಕರು ಮಾಂತ್ರಿಕರು . . . ಪರಿಹಾಸಕರು ವೈತಾಳಿಕರು ರಂಜಿಸಿತು (ಕುಮಾರವು. ೨-೨೬); ವಾದಿ ವಾಗ್ಮಿಕ ಭಟ್ಟ ಪರಿಹಾಸಕ . . . ಗಾಯಕ ನಟವರಿಂದೆಸೆದುದೊಡ್ಡೋಲಗಂ (ಪ್ರಾಭಂಶಾ. ೧೪-೫); ಅವನ ಜೊತೆಗೆ, ಅವನ್ನೆಲ್ಲ ಪ್ರತ್ಯೇಕ ಪ್ರತ್ಯೇಕವಾಗಿ ತೋರಿಸಿ ವಿವರಿಸಿ ಹೇಳುವ ಪರಿಹಾಸಕರೂ ಇದ್ದರು (ನಾಗಶಾ. ೪೬). **೨.** ವಿನೋದ; ಹಾಸ್ಯ: ತರುಣಿ ನೀನೆಂತು ಕರೆದೆಯೆಂದು ಸಭೆಯೆಲ್ಲ ಪರಿಹಾಸಕವ ಮಾಡಿದರು (ಜೀವಂಸಾಂ. ೩-೩೦); ಜಗದೀಶ್ವರನು ಪ್ರಯಾಸವಿಲ್ಲದೆ ಮನುಷ್ಯರನು ಪರಿಹಾಸಕವ ಮಾಡುತಲಿದ್ದಾನೆ (ವಚಕಾ. ೨೬). [ಸಂ.]

**ಪರಿಹಾಸಕೇಳಿ** (ನಾ). ವಿನೋದದಿಂದ ಕೂಡಿದ ಆಟ,—ಲೀಲೆ: ಪರಿಹಾಸಕೇಳಿ ಕೂರ್ಪನ ಬರವಂ ನೆನೆಯುತ್ತು ವಿರ್ಪುದಭಿಲಾಷೆ (ಶೃಂಗಾರ. ೪-೭೧); ಪರಿಹಾಸಕೇಳಿಯತಿಕುಶಲಕಳಾಕೇಳಿಯು . . . ದಿನದದೊಳಿ ಸತಿಯನವರೊಸೆಯಿಸಿದರ್ (ಪುಷ್ಪಪು. ೯-೮೨).

[ಪರಿಹಾಸ+ಕೇಳಿ$_2$(=ಕೇಲಿ)]

**ಪರಿಹಾಸಗೈ** (ಕ್ರಿ). ವಿನೋದ ಮಾಡು; ಹಾಸ್ಯಮಾಡು: [ಬಣ್ಣನೆ]ವಾತಾಡುವ ಪರಿಹಾಸಗೈವ ಗಾಡಿಕಾತಿಯರು ಗಣನೆಯಿಲ್ಲದೆ ಜೋಡುಗೂಡಿರುವರು ಕೂರ್ಮೆಯೊಳು (ಹವಿಜ. ೧-೧೭).

[ಪರಿಹಾಸ+ಗೈ(<ಕೆಯ್$_1$)]

**ಪರಿಹಾಸಗೋಷ್ಠಿ** (ನಾ). ವಿನೋದಕ್ಕಾಗಿ ಕೂಡಿದ ಗೋಷ್ಠಿ; ವಿನೋದಗೋಷ್ಠಿ: ಪರಿಹಾಸಗೋಷ್ಠಿಗೆಳಸನು ಹರವರಿಯಾಗಿ ನುಡಿ ಯನು ಧೈರ್ಯದೊಳು ಮಂದರದಂತಿಹನು ರಾಜೇಂದ್ರ (ಭರತ. ೨-೭೭).

[ಪರಿಹಾಸ+ಗೋಷ್ಠಿ]

**ಪರಿಹಾಸಿ** (ನಾ). ಹಾಸ್ಯಮಾಡುವಂತಹುದು: ನಿನ್ನ ಸಕಳಕಳಾಧರ ಮಂಡಲೋಪಮಾನ ಗಂಡಭಿತ್ತಿ ಗೀತನ ದಿಙ್ನಾಗಕಪೋಲಫಲಕಪರಿಹಾಸಿ ಯೆನಿಸಿದ ಕಪೋಲಯುಗಳೋದಯಾಚಳಮ . . . ದೊರೆ (ಶಾಂತಿಪು. ೫-೧೨೬ ವ). [ಸಂ. ಪರಿಹಾಸಿನ್]

**ಪರಿಹಾಸ್ಯ** (ಗು). **೧.** ಹಾಸ್ಯಾಸ್ಪದವಾದ; ಅಣಕಕ್ಕೆ ಪಕ್ಕಾಗುವ. **೨.** ಹಾಸ್ಯ ಮಾಡುವ; ಅಣಕ ಮಾಡುವ: ಪರಿಹಾಸ್ಯಪಂಡಿತರು ಪುಣ್ಯಶಾಸ್ತ್ರೀಕರು ಪೌರಾಣಿಕಜನರು (ಕರಿಕ. ೭-೧೦). (ನಾ). **೩.** ವಿನೋದ; ಹಾಸ್ಯ: ಪರಿಹಾಸ್ಯವಾಗಿ ನುಡಿಯಲು, ಹುಡುಗಿಯ ರೆಲ್ಲರೂ ಕಿಲಕಿಲನೆ ನಕ್ಕರು (ಬೊಗ್ಗು. ೪೧).

**ಪರಿಹಾಸ್ಯಂ ಮಾಡು, ಪರಿಹಾಸ್ಯ ಮಾಡು** ಅಣಕಮಾಡು; ಗೇಲಿಮಾಡು: ಪರಭೂಪಾಲರ ಬಾಳಂ ಪರಿಹಾಸ್ಯಂ ಮಾಡುವಂತೆ ಹಸನಂಗೆಯ್ವಂ (ಕವಿಮಾರ. ೨-೨೭); ಒಮ್ಮೊಮ್ಮೆ ಆ ಜೈಚಿಟ್ಟ ನಿಜದ ವೇದನೆಯು ತಾನೆ ತಾನಾಗಿ ನಿಂತು ಆತನನ್ನು ಕೆಣಕಿ ಪರಿಹಾಸ್ಯ ಮಾಡು ತ್ತಿತ್ತು (ಚಿತ್ರಸ. ೧೦೬).

[ಸಂ.]

**ಪರಿಹೃತ** (ಗು). **೧.** ಬಿಟ್ಟ; ತ್ಯಜಿಸಿದ: ಪರಿಹೃತಸಪ್ತವ್ಯಸನಂ ನಿರಂತರೋಪಾಸ್ಯಮಾನಶಾಸ್ತ್ರವ್ಯಸನಂ (ಪಂಚತಂ. ೨೧-೧೯): ಪರಿಹೃತ ಜಳಮಾಗಿ ಜಳಾಕರಮಲ್ಲಿಗೆ ಬಂದುದೆಂಬ ತೆಜದಿಂ ಮಣಿಗಾಜಿರ ಪಸರ ಮೆಸೆವುದಾ ಪುರವರದೊಳ್ ನವರತ್ನಕಾಂತಿಸಂತತಿಯಿಂದಂ (ಶಾಂತೀಶ್ವ. ೧-೧೨೨). **೨.** ಹೊರದೂಡಿದ; ದೂರಮಾಡಿದ: ಪರಿಹೃತಸಾರಿಕಾ ಶುಕಶಿಶುವ್ರಜಂ . . . ಎನಿಪ ಮಂತಣಸಾಲೆಗೆ ಬಂದಂ (ಜಗಪು. ೧೫-೪೬). **೩.** ನಿವಾರಣೆ ಮಾಡಿದ; ಪರಿಹರಿಸಿದ; ಕಳೆದ: ಪರಿಹೃತತೃಷ್ಣಮಾಹಿತರಸಂ ದ್ವಿಜಸನ್ನಿಹಿತಂ . . . ಎಂದಿನಂ ಸುರುಚಿರ ಮಾದ ಸನ್ಮುನಿಯ ಮಾನಸದೊಳ್ ನೆಲಸಿರ್ದ ಹಂಸಿಯಂತಿರೆ (ಕಾದಂಪೂ. ೨೫೦); ಪರಿಹೃತನತಜನದರಿದ್ರ ಶೂರಗುಣಶೃಂಗಾರಹಾರ (ಬಸವು. ೩೬-೩೭). **೪.** ನಿವಾರಣೆ ಮಾಡಿಕೊಂಡ; ಪರಿಹರಿಸಿಕೊಂಡ. **೫.** ತೆಗೆದುಕೊಂಡು ಹೋದ; ಒಯ್ದ. **೬.** ಅಪಹರಿಸಿದ. **೭.** ಹಿಡಿದ. **೮.** ನಿರಾಕರಿಸಿದ; ತಳ್ಳಿಹಾಕಿದ. **೯.** ನಾಶ ಗೊಂಡ; ಧ್ವಂಸವಾದ: ಗಿರಿಸುತಾಕಾಂತನಂ ಪರಿಹೃತಕೃತಾಂತನಂ . . . ಪೂಜಿಸಿದನೊಲ್ಮೆಯಿಂ (ರಾಜಶೇ. ೧೩-೫೧ ರಗಳೆ). (ನಾ). **೧೦.** ನಿರಾಕರಣೆ; ತಿರಸ್ಕಾರ: "ಪರಿಹೃತಂ ಪ್ರತ್ಯಾಖ್ಯಾತಮಪವಿದ್ಧಮೆನೆ ನಿರಾಕೃತಿ" (ಮಂಗರಾ. ೧೨೮-೯). **೧೧.** ನಿವಾರಣೆಯಾದುದು; ಪರಿಹಾರವಾದುದು: "ಪ್ರ(ತ್ಯಾ)ಖ್ಯಾತಂ . . . ಪರಿಹೃತಂ-ಈ ೭ ಪರಿಹರಿಸಲ್ಪಟ್ಟುದು" (ಹಲಾಯು. ೧೧೭-೧೮). [ಸಂ.]

**ಪರಿಹೃತಿ** (ನಾ). **೧.** ದೂರ ಮಾಡುವುದು; ತೊಲಗಿಸುವುದು. **೨.** ತೆಗೆದುಹಾಕುವುದು; ನಿವಾರಿಸುವುದು. **೩.** ನಾಶ; ಧ್ವಂಸ: ಪರಿಹೃತಿಯೆ ಕರ್ತವ್ಯವೆನುತುಚ್ಚರಿಸಿದನು ವರ್ಗಾರ್ಪಿನಿನಾದಸ್ಫುರಿತ ವಿಮಲಪ್ರಣವಮುಖಶರಸೂಕ್ತಸಂತತಿಯ (ಕುಮಾರಭಾ. ೨೦-೨೮). [ಸಂ.]

**ಪರಿಹೃತಿಗೆಯ್** (ಕ್ರಿ). ತಪ್ಪಿಸು; ತಡೆಹಾಕು: ಅಡ್ಡಿಪಡಿಸು: ಕರಿವಕ್ತ್ರ ಷಣ್ಮುಖರೆ ತಂದೆ ಬಿಸಂಗೊಳೆ ನೋಡುತಿರ್ಪುದೇ ಪರಿಹೃತಿ ಗೆಯ್ಯದೆ (ವೃಷಪು. ೯-೪೪). [ಪರಿಹೃತಿ+ಕೆಯ್$_1$]

**ಪರೀಕ್ಷಕ** (ಗು). **೧.** ಪರೀಕ್ಷಿಸುವ; ಎಚ್ಚರಿಕೆಯಿಂದ ಪರಿಶೀಲನೆ ಮಾಡುವ; ತನಿಖೆ ಮಾಡುವ. (ನಾ). **೨.** ಪರೀಕ್ಷೆ ಮಾಡುವವನು; ಎಚ್ಚರಿಕೆಯಿಂದ ಪರಿಶೀಲನೆ ನಡೆಸುವವನು; ತನಿಖೆ ಮಾಡುವ ವ್ಯಕ್ತಿ: "ಪರೀಕ್ಷಕಃ. ಕಾರಣಿಕಃ—ಈ ೨ ವಿಚಾರಪಂ ತಿರ್ದುವಾತಂ" (ಹಲಾಯು. ೬೪-೨೩೫); ರತ್ನಪರೀಕ್ಷಕನಾಂ ಕೃತಿರತ್ನ ಪರೀಕ್ಷಕನೆನೆಂದು ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನ ಮುಮಂ ಪೇಟಿಲ್ ಪರೀಕ್ಷಿಸಂಗೆಟ್ಟಿರ್ದೆಯೇ (ಗದಾಯು. ೧-೪೪); ಒಮ್ಮೊಯಂತೂ ಮುಕ್ತಾಯಕ್ಕನೇ ಪರೀಕ್ಷಕಳಾಗುತ್ತಾಳೆ, ಅಲ್ಲಮನೇ ಪರೀಕ್ಷಿತನಾಗುತ್ತಾನೆ (ಶೂನ್ಯಸಂ. ೧೨೨). **೩.** (ಶಿಕ್ಷಣಸಂಸ್ಥೆಗಳಲ್ಲಿ) ಪರೀಕ್ಷಾರ್ಥಿಗಳ ಅರ್ಹತೆಯನ್ನು ನಿರ್ಣಯಿಸುವವನು: ಪರೌಲ್ಯ ಮಾಪಕ: ಆಗ ಪರೀಕ್ಷಕರ ಭಿನ್ನತೆಗಳು ಸುಳಿಯುವಂತೆಯೇ ಇಲ್ಲ (ಶಿಕ್ಷಣ. ೩೫೨). [ಸಂ.]

**ಪರೀಕ್ಷಣ** (ನಾ). ಜಾಗರೂಕತೆಯಿಂದ ಪರೀಕ್ಷಿಸುವುದು; ಎಚ್ಚರಿಕೆಯಿಂದ ಪರಿಶೀಲಿಸುವುದು: "ಉಪಧಾ. ಪರೀಕ್ಷಣಂ—ಈ ೨ ಆರಯ್ಕೆ" (ಹಲಾಯು. ೧೭೫-೭೨); ನಮ್ಮ ಜೀವನದ ಸಮಸ್ಯೆಗಳ ಬಗೆಗೆ ಆಳವಾದ ಪರೀಕ್ಷಣ ತಲೆದೋರಿ, ಇನ್ನೂ ಮೇಲ್ಮಟ್ಟದ ಕಾದಂಬರಿ ಗಳನ್ನು . . . ಕೊಡಲಿ (ಸಾಸಮಾ. ೧೭೨). [ಸಂ.]

**ಪರೀಕ್ಷಾಕೇಂದ್ರ** (ನಾ). ಶಿಕ್ಷಣಸಂಸ್ಥೆಗಳಲ್ಲಿ ಪರೀಕ್ಷೆಗಳನ್ನು ನಡೆಸಲು ಗೊತ್ತಾದ ಸ್ಥಳ: ನಮ್ಮ ಹಳ್ಳಿಯ ಪ್ರೌಢಶಾಲೆ ಪರೀಕ್ಷಾ ಕೇಂದ್ರವಾಗಿದೆ (ರೂಢಿ). [ಸಂ.]

**ಪರೀಕ್ಷಾಧಿಕಾರಿ** (ನಾ). ಶಿಕ್ಷಣಸಂಸ್ಥೆಗಳಲ್ಲಿ ನಡೆಯುವ ಪರೀಕ್ಷೆಗಳಲ್ಲಿ ಅಧಿಕಾರವನ್ನು ವಹಿಸಿಕೊಂಡ ವ್ಯಕ್ತಿ,—ಅಧಿಕಾರಿ : ಈ ವರ್ಷ ಅವರು ಪರೀಕ್ಷಾಧಿಕಾರಿಯಾಗಿ ನೇಮಕಗೊಂಡಿದ್ದಾರೆ (ರೂಢಿ). [ಸಂ. ಪರೀಕ್ಷಾಧಿಕಾರಿನ್]

**ಪರೀಕ್ಷಾರ್ಥಿ** (ನಾ). ಶಾಲಾ ಕಾಲೇಜುಗಳಲ್ಲಿ ನಡೆಸುವ ಪರೀಕ್ಷೆಗಳಲ್ಲಿ ಭಾಗವಹಿಸುವ ವಿದ್ಯಾರ್ಥಿ : ಆ ಶಾಲೆಯಿಂದ ನಲವತ್ತು ಜನ ಪರೀಕ್ಷಾರ್ಥಿಗಳು ಬಂದಿದ್ದಾರೆ (ರೂಢಿ). [ಸಂ. ಪರೀಕ್ಷಾರ್ಥಿನ್]

**ಪರೀಕ್ಷಿತ** (ಗು). ೧. ಪರೀಕ್ಷೆಗೆ ಒಳಗಾದ; ಪರಿಶೀಲನೆಗೆ ಗುರಿಯಾದ : ಇಲ್ಲಿ ಪರೀಕ್ಷಕನೂ—ಪರೀಕ್ಷಿತ ವಸ್ತುವೂ ಎರಡೂ ಒಂದಾಗಿ ಸೇರಿಕೊಂಡು ಬಿಡುತ್ತವೆ (ಜೀವಾತ್ಮ. ೪೩). (ನಾ). ೨. ಪರೀಕ್ಷೆಗೆ ಗುರಿಯಾದ ವ್ಯಕ್ತಿ; ವಿಮರ್ಶೆಗೆ ಈಡಾದ ವ್ಯಕ್ತಿ : ಒಮ್ಮೆಯಂತೂ ಮುಕ್ತಾಯಕ್ಕನೇ ಪರೀಕ್ಷಕಳಾಗುತ್ತಾಳೆ, ಅಲ್ಲಮನೇ ಪರೀಕ್ಷಿತನಾಗುತ್ತಾನೆ (ಶೂನ್ಯಕು. ೧೨೨). ೩. ಲೋಹಗಳನ್ನು ಪರೀಕ್ಷಿಸಲು ಉಪಯೋಗಿಸುವ ಕಲ್ಲು; ಒರೆಗಲ್ಲು; ನಿಕಷ: “ಪರೀಕ್ಷಿತಂ ವೇತ್ತಿಯೆನಲೊರೆಗಲ್ಲು” (ಮಂಗರಾ. ೧೦೫–೧೪). [ಸಂ.]

**ಪರೀಕ್ಷಿಸು** (ಕ್ರಿ). ೧. ಜಾಗರೂಕತೆಯಿಂದ ಪರಿಶೀಲಿಸು; ಪರೀಕ್ಷೆ ಮಾಡು: ಆತನ ಬುದ್ಧಿಯಂ ಪರೀಕ್ಷಿಸಲ್ವೇಡಿ ಭಟ್ಟಮಂಡಪದೋಳೀ ಶ್ಲೋಕಮಂ ಬರೆದು ಪೋದಂ (ವಡ್ಡಾರಾ. ೧೮೪–೮); ಧರ್ಮಪುತ್ರನಾ ಮನೆಯಂ ಪರೀಕ್ಷಿಸಿ ನೋಡಲೊಡಂ (ಪಂಪಭಾ. ೩–೩ ವ); ಗುಣದೋಷಮಂ ನಿಕಷಮಿಟ್ಟು ಪರೀಕ್ಷಿಸಿ ನೋಡೆ ತಾವೆ ಪೇಟಿವೆ (ಗದಾಯು. ೧–೪೭); ಹೂನೋಂಟಗಳನುಚಿ ಹೊಕ್ಕು ಚೆಲುವನಾಗಿ ಪರೀಕ್ಷಿಸುತ್ತಂ (ಬಸವು. ೨೨–೭). ೨. (ಶಿಕ್ಷಣ ಕೇಂದ್ರಗಳಲ್ಲಿ ಪರೀಕ್ಷಾಧಿಕಾರಿಯು) ಪರೀಕ್ಷಾರ್ಥಿಗಳ ಅರ್ಹತೆಯನ್ನು ಪರಿಶೀಲಿಸು; ಮೌಲ್ಯಮಾಪನ ಮಾಡು: ಪ್ರಾಥಮಿಕಶಾಲೆಗಳಲ್ಲಿ ಸಂಬಂಧಪಟ್ಟ ಅಧ್ಯಾಪಕರೇ ವಿದ್ಯಾರ್ಥಿಗಳನ್ನು ಪರೀಕ್ಷಿಸುತ್ತಾರೆ (ರೂಢಿ). [ಪರೀಕ್ಷೆ+-ಇಸು$_3$]

**ಪರೀಕ್ಷಿಸುಹ** (ನಾ). ಜಾಗರೂಕತೆಯಿಂದ ಪರಿಶೀಲಿಸುವುದು; ಪರೀಕ್ಷೆ ಮಾಡುವುದು : ಉಪಕ್ರಮ—ಧರ್ಮಾದಿಗಳಿಂದ ಅರಸು ಮಂತ್ರಿಗಳ ಚಿತ್ತಮಂ ಪರೀಕ್ಷಿಸುಹಂ (ನಾಚಿರಾ. ೬). [ಪರೀಕ್ಷಿಸು+-ಹ$_2$(<-ಪ$_2$)]

**ಪರೀಕ್ಷೆ** (ನಾ). ೧. ಆಳವಾದ ಪರಿಶೀಲನೆ; ತಪ್ಪುಒಪ್ಪುಗಳ ವಿಮರ್ಶೆ,—ವಿವೇಚನೆ : “ಪುಚ್ಚವಣಮೆಂದೊಡೆ ಪರೀಕ್ಷೆಯುಂ ಮಣ್ಮುಮುಕ್ಕುಂ” (ಕಬ್ಬಿಗ. ೮೨); ಅದುಮಂ ನೀಮೆ ಪೇಟಿಮೆಂದವರೊಳ್ ಪರೀಕ್ಷಾಕ್ಷಮೋದಾರವೀರವಾಕ್ಯಂಗಳಂ ನುಡಿಯುತ್ತುಂ (ಶಾಂತಿಪು. ೪–೧೦೨ ವ); ವೇದವಿಪ್ರರ ವಿಚಾರಿಸಿ ನೋಡಲು ಉಪದೇಶ ಪರೀಕ್ಷೆ ನಾಯಕನರಕ ಎಂದುದು ಕೂಡಲಸಂಗನ ವಚನದ ಸೂಚನೆ (ಬಸವ. ೯೧); ಲಕ್ಷಿತವಾದ ವಸ್ತುವಿಗಾ ಲಕ್ಷಣಮುಂಟೋ ಇಲ್ಲವೋ ಎಂದು ವಿಚಾರಂಗೆಯ್ವುದೇ ಪರೀಕ್ಷೆಯಕ್ಕುಂ (ವಿವೇಕ. ೨೦). ೨. ಶಿಕ್ಷಣಸಂಸ್ಥೆಗಳಲ್ಲಿ ಪ್ರಶ್ನೆಪತ್ರಿಕೆಯ ಮೂಲಕ ಅಥವಾ ಮೌಖಿಕವಾಗಿ ವಿದ್ಯಾರ್ಥಿಯ ತಿಳಿವಳಿಕೆಯ ಮಟ್ಟವನ್ನು ಕಂಡುಹಿಡಿಯುವುದು; ಮೌಲ್ಯಮಾಪನ ಕ್ರಮ : ಈಚೆಗೆ ಎಲ್ಲ ದೇಶಗಳಲ್ಲೂ ಪರೀಕ್ಷೆಗಳನ್ನು ಪುನರ್ವ್ಯವಸ್ಥೆಗೊಳಿಸುವ ಯತ್ನ ನಡೆಯುತ್ತಿದೆ (ಶಿಕ್ಷಣ. ೩೬೫). ೩. ರೋಗವನ್ನು ಅದರ ಚಿಹ್ನೆಗಳಿಂದ ಗೊತ್ತುಮಾಡುವಿಕೆ; ರೋಗನಿದಾನವನ್ನು ತಿಳಿಯುವಿಕೆ : “ನಿದಾನ, ಪರೀಕ್ಷೆ” (Diagnosis. ಪಾರಿಶ. ೨೯); ಬಿಡುಮನಸ್ಸಿನಲ್ಲಿ ಮೊದಲು ನಿಮ್ಮ ಪರೀಕ್ಷೆ ನಡಸುತ್ತೀನಿ (ಮನೋನಂ. ೧೩೭). ೪. [ನ್ಯಾಯ] ಅನೇಕ ಬಗೆಯ ಕಠಿಣಪ್ರಯೋಗಗಳ ಮೂಲಕ ಮಾಡುವ ವಿಚಾರಣೆ,—ತನಿಖೆ.

**ಪರೀಕ್ಷೆ ಕೊಡು**=೧. ವಿಚಾರಣೆಗೊಳಗಾಗು : (೬). ೨. ವಿಚಾರಣೆಯಲ್ಲಿ ಜಯಪ್ರದವಾಗಿ ತೇರ್ಗಡೆ ಹೊಂದು; ಪರೀಕ್ಷೆಯಲ್ಲಿ ಯಶಸ್ವಿಯಾಗಿ ಉತ್ತೀರ್ಣವಾಗು : (೬). **ಪರೀಕ್ಷೆ ತೆಗೆ**= ಪರೀಕ್ಷೆ ಮಾಡು : (೬). **ಪರೀಕ್ಷೆ ಮಾಡಿಸು**=ತಪಾಸಣೆ ನಡೆಯುವಂತೆ ಮಾಡು : ಆಗಿಂದಾಗ್ಗೆ ದವಾಖಾನೆಗೆ ಬಂದು . . . ಪರೀಕ್ಷೆ ಮಾಡಿಸಿಕೊಂಡು ಹೋಗುತ್ತಿದ್ದರು (ಮನೋನಂ. ೧೩೪). **ಪರೀಕ್ಷೆ ಮಾಡು**=೧. ಪರೀಕ್ಷಿಸು; ಪರಿಶೀಲಿಸು; ವಿಮರ್ಶೆ ಮಾಡು : ಪರೀಕ್ಷಕ—ಪರೀಕ್ಷೆ ಮಾಡುವವನು (ಗಂಗಾಮ. ೨೦೦); ಸಾಹಿತ್ಯಭಾಗವನ್ನು ಯಾಂತ್ರಿಕವಾಗಿ ಪರೀಕ್ಷೆ ಮಾಡುವುದು ಕಷ್ಟ (ಶಿಕ್ಷಣ. ೩೬೧). ೨. ರೋಗನಿದಾನವನ್ನು ತಿಳಿ,—ತಪಾಸಣೆ ಮಾಡು : ಮಗುವನ್ನೆತ್ತಿ ಪರೀಕ್ಷೆ ಮಾಡಲೋಸುಗ ನನ್ನ ತೊಡೆಯ ಮೇಲೆ ಮಲಗಿಸಿಕೊಂಡೆ (ಮನೋನಂ. ೧೩೫). [ಸಂ. ಪರೀಕ್ಷಾ]

**ಪರೀಕ್ಷೆಗಾರ** (ನಾ). ಪರಿಶೀಲಿಸುವವನು; ಪರೀಕ್ಷಕ; ತಜ್ಞ : (೬). [ಪರೀಕ್ಷೆ+-ಗಾರ (<-ಕಾಜ)]

**ಪರೀಕ್ಷೆವಂತ** (ನಾ). ಪರೀಕ್ಷಿಸಿ ನೋಡುವವನು; ಒರೆ ಹಚ್ಚಿ ನೋಡುವವನು : ಸಮರತಿ ಸಮಕಳೆ ಸಮಸುಖ ಸ್ವಾನುಭಾವ ಹಿರಿದು ಕಿಱಿದಾದುದನಾರೂ ಅಱಿಯರು ಪಾಷಾಣಪರೀಕ್ಷೆವಂತನಂತೆ ಗುರುವಿಲ್ಲದವರಂತಿರಲಿ ಕೂಡಲಸಂಗಮದೇವಯ್ಯಾ ಗುರುವುಳ್ಳವರ ನಿಜವಿಂತುಟು (ಬಸವ. ೯೨೭); ಸುವರ್ಣಮನೊರೆದುಂ ಕಡಿದುಂ ಕಾಸಿಯುಂ ಪೊಯ್ದುಂ ನೋಡಿ ಪರೀಕ್ಷೆವಂತರ್ಪರೀಕ್ಷಿಸಿ ಕೊಳ್ವಂತೆ ದೇವರಂ ತಪಮಂ ಧರ್ಮಮಂ ಪರೀಕ್ಷಿಸಿ . . . ಕೈಕೊಳ್ವುದುಂ (ಧರ್ಮಾಪ. ೧೦–೩೯ ವ). [ಪರೀಕ್ಷೆ+-ವಂತ]

**ಪರೀತ$_1$** (ಗು). ೧. ಕಳೆದ; ತೀರಿಹೋದ; ಗತಿಸಿದ. ೨. ಅಗಲಿದ; ಹೊರಟುಹೋದ. ೩. ಸುತ್ತುವರಿದ; ಬಳಸಿದ : ವನಧಿಪರೀತಭೂತಳದೊಳೀತನೆ ಸೋಲದ ಗಂಡಂ (ಪಂಪಭಾ. ೧–೨೭); ಪರೀತೋದ್ಯಾನೋದ್ಯದ್ದುಮಕೃತಕರತ್ನಾದ್ರಿನಿಜಯಸ್ವರೂಪಂಗಳ್ ತನ್ನೊಳ್ ಪೋಳೆಯೆ . . . ತದ್ವಪ್ರಮೆಸೆಗುಂ (ಚಂದ್ರಪು. ೧೧–೬೪); ಅಂಬುಧಿಪರೀತ ವಸುಮತಿಯನಾಳುವ ನೃಪಕದಂಬಕೋಟೀರಮಂಡಿತಪದಂ (ಭಾಪಚಂ. ೩–೩೬); ಚತುರಂಭೋಧಿಪರೀತಭೂತಳದ ಭೂಪರ್ ಕಪ್ಪಮಂ ತರ್ಪರ್ (ರಾಜಶೇ. ೬–೩೫). ೪. ಆವರಿಸಿರುವ; ವ್ಯಾಪ್ತವಾದ : ಮತ್ತಮಧುಕರನಿಕರಝಂಕಾರಪರೀತದಿಗಂತರಾಳದೊಳ್ (ಶಾಂತಿಪು. ೧೦–೭೭ ವ). ೫. ಸುತ್ತಲೂ ಇರುವ : ಪರೀತನವಪೂಗನಾಗವನಕರ್ಬುರಾಶೋತ್ಕರಂ (ಚಂದ್ರಪು. ೫–೯೩). ೬. ವಶಪಡಿಸಿಕೊಂಡ; ಸ್ವಾಮ್ಯ ಪಡೆದ. (ನಾ). ೭. ಕೂಡಿರುವುದು; ಹೊಂದಿರುವುದು : ಬಹಿರಂತರ್ಜಗತೀತಳಪ್ರತಿಷ್ಠಾಪಿತಾಷ್ಟಮಂಗಳನವನಿಧಿಪರೀತಮುಂ (ಚಾವುಂಪು. ೪೪). ೮. ಆವೃತನಾದವನು; ಸುತ್ತುವರಿದವನು: ಸಾಮಾನಿಕತ್ರಯಸ್ತ್ರಿಂಶಲ್ಲೋಕಪಾಲಪಾರಿಷದಾತ್ಮರಕ್ಷಕಾಭಿಯೋಗ್ಯಕಿಲ್ಬಿಷಿಕಾದಿ ಪರಿವಾರಪರೀತರಾಗಿ . . . ಬರೆವರೆ (ಶಾಂತಿಪು. ೧೦–೩ ವ); ಆತ್ಮರಕ್ಷಕಾಭಿಯೋಗ್ಯಪ್ರಕೀರ್ಣಸಂಮಾನಿತಾಮರಾದಿ ಪರಿಜನಪರೀತನುಂ (ಚಂದ್ರಪು. ೪–೬೮ ವ). ೯. ಹಿಡಿತಕ್ಕೆ ಒಳಗಾದವನು : ಭೀತನನುಗ್ರಪಾವಕಪರೀತನಂ . . . ಧರಿತ್ರೀತಳನಾಥರಕ್ಷಿಸೂಲವಿಂ ಶರಣಾಗತವಜ್ರಪಂಜರಾ (ನಳಚಂ. ೫೯೩); ದನುಜನಾಗೋವಿಪ್ರವರವಧೆ ತನಗೆ ಹಿತವೆಂದೇ ನಿರಂತರ ನೆನವುತಿರ್ದನು ಮೃತ್ಯುಪಾಶಪರೀತನೆಂದೆನಿಸಿ (ನಿಭಾಗ. ೧೦–೪–೪೭). [ಸಂ.]

**ಪರೀತ$_2$** (ನಾ). ದೋಣಿ ; ನಾವೆ : "ಪರೀತಂ ಡೋಣಿ" (ಮಂಗರಾ. ೭೩-೨೬) ; "ಜೋಗಂ ಪರೀತಂ . . . ದೋಣಿಯೆಂದೆನಲ್ ನಾವೆಯಕ್ಕುಂ" (ಮಂಗರಾ. ೧೨೦-೪). [?]

**ಪರೀತಾಪ** (ನಾ). ಪರಿತಾಪ ; ಕಳವಳ : "ದವಥು ಪರೀತಾಪಂ" (ವಸ್ತುಕೋ. ೭೩-೩೪). [ಸಂ.]

**ಪರೀಧಾವಿ** (ನಾ.) ಅರುವತ್ತು ಸಂವತ್ಸರಗಳಲ್ಲಿ ಒಂದು : ಆ ವರುಷವೇ ಪ್ರಭವ . . . ಪರೀಧಾವಿ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೧). 'ಪರಿಧಾವಿ' ಪರಾ. [ಸಂ. ಪರೀಧಾವಿನ್]

**ಪರೀಭಾವ** (ನಾ). ತಿರಸ್ಕಾರ ; ತಾತ್ಸಾರ ; ಅನಾದರ : "ಅನಾದರಃ, ಪರಿಭವಃ, ಪರೀಭಾವಃ, ತಿರಸ್ಕ್ರಿಯಾ . . . ಅಸೂರ್ಕ್ಷಣಂ . . . ೯ ತಿರಸ್ಕಾರದ ಪೆಸರುಗಳು" (ಸಿದ್ಧಾಂತಿ. ೬೪). [ಸಂ.]

**ಪರೀರಂಭಣ** (ನಾ). ಆಲಿಂಗನ ; ಅಪ್ಪುಗೆ : 'ಪರೀರಂಭಣಂಗೈ' ಪರಾ. [ಸಂ.]

**ಪರೀರಂಭಣಂಗೈ** (ಕ್ರಿ). ಆಲಿಂಗಿಸು ; ಅಪ್ಪು : ಪುನರಪಿ ಪರೀರಂಭಣಂಗೈವುತಲಿ ಶಿರದಗ್ರವಾಘ್ರಾಣದಿಂದ ಸಂಭ್ರಮಗೊಂಡಳಮಿತಾಹ್ಲಾದದಿಂದ (ವೆಂಕರಾರಾ. ೨-೧೦-೩೫). [ಪರೀರಂಭಣ+ಕೈ$_1$(<ಕೆಯ್$_1$)]

**ಪರೀವರ್ತ** (ನಾ). ಬದಲಿ ವ್ಯಾಪಾರ ; ವಿನಿಮಯವ್ಯವಹಾರ : "ಪರಿದಾನಂ, ಪರೀವರ್ತಃ, ನೈಮೇಯಃ, ನಿಯಮಃ—೪ ಒಂದು ಬಗೇ ಜಿನಸು ಕೊಟ್ಟು ಅದಕ್ಕೆ ಬದಲಾಗಿ ಮತ್ತೊಂದು ಬಗೇ ಜಿನಸು ತೆಗೆದುಕೊಳ್ಳುವಿಕೆ" (ಸಿದ್ಧಾಂತಿ. ೨೯೭). [ಸಂ.]

**ಪರೀವಾದ** (ನಾ). ಅಪವಾದ ; ನಿಂದೆ ; ದೂರು : "ಅಪವಾದಂ ಕ್ಷೇಪಂ ನಿಂದೆ ಪರೀವಾದಂ ವಿಗರ್ಹಣಂ ಕುತ್ಸಾರ್ಥಂ" (ವಸ್ತುಕೋ. ೮೦-೩೪) ; ಆ ಕಲ್ಪಿತವೇದನೆಗಿಂತ ಈ ಪರೀವಾದದಿಂದ ಮುಕ್ತನಾಗುವುದು ಯೋಗ್ಯವಲ್ಲವೆ? (ಅಪವಾ. ೨೦). [ಸಂ.]

**ಪರೀವಾಹ** (ನಾ). ೧. = ಪರಿವಾಹ ೧. ೨. = ಪರಿವಾಹ ೨: "ಪರೀವಾಹಃ, ಜಲೋಚ್ಛ್ವಾಸಃ—ಈ ೨ ಕಡೆಗೋಡಿ" (ಹಲಾಯು. ೧೧೨-೫೫). [ಸಂ.]

**ಪರೀಷಹ** (ನಾ). ೧. ತಾಳಿಕೊಳ್ಳುವಿಕೆ ; ಸಹಿಸುವುದು. ೨. ತಡೆ; ಅಡ್ಡಿ ; ಎಡರು: ತ್ರಿಪುರದ ಸುತ್ತುವಳಯದೊಳಲ್ಲಲ್ಲಿ ಚಿತ್ರದಿಂದ ಪರೀಷಹ [ಪಾಠಾಂ. ಪರಿವೇಷ]ವೆನಿಸುವ ಕೊತ್ತಳಗಳು ರಾಜಿಪುವು (ತ್ರಿಪುಸಾಂ. ೪೪). ೩. [ಜೈನ] ಸಮ್ಯಕ್‌ಜ್ಞಾನಾರ್ಜನೆಗೆ ಇರುವ ಇಪ್ಪತ್ತೆರಡು ಬಗೆಯ ಅಡ್ಡಿ,—ಉಪದ್ರವ : ಪಸಿವುಂ ನೀರಟ್ಟೆ ಮೊದಲಾಗೊಡೆಯ ಇಪ್ಪತ್ತೆರಡು ಪರೀಷಹಂಗಳುಮಂ ಸೈರಿಸಿ (ಪದ್ಮಾರಾ. ೧-೮) ; ಅಳುರ್ವ ಪರೀಷಹಾನಳಶಿಖಾವಳಿಗಳ್ ಕೊಳೆ ಧೈರ್ಯಮಂ (ಆದಿಪು. ೨-೫೯) ; ಪರೀಷಹ[ಭ]ಟರಂ ಬಂಚಿಸುವಂತೆ ಕಾಪಿನ ಬಂಟರಂ ಬಂಚಿಸಿ (ಸುಕುಮಾ. ೧೧-೮೩ ವ) ; ತೂಳ್ದಿ ಪರೀಷಹಂಗಳಂ ಮೇಳಿಸಿದಂ ಜಯಾಂಗನೆಯನೇಕವಿಹಾರದೊಳಾ ಮುನೀಶ್ವರಂ (ಪಂರಾಮಾ. ೧೬-೬೧) ; ಧೈರ್ಯಂ ಘೋರತಪಃಪರೀಷಹಸಮೂಹಪ್ರಾಪ್ತಿಯೊಳ್ (ಚಂದ್ರಪು. ೧-೩). 'ದ್ವಾವಿಂಶತಿಪರೀಷಹ', 'ಪರೀಷಹಜಯ' ಪರಾ. [ಸಂ.]

**ಪರೀಷಹಜಯ** (ನಾ). [ಜೈನ] ತಪಸ್ಸಿಗೆ ವಿಘ್ನಗಳಾಗಿ ಬರುವ ಇಪ್ಪತ್ತೆರಡು ಬಗೆಯ ಉಪದ್ರವಗಳನ್ನು ಗೆಲ್ಲುವುದು ; ತೀವ್ರವಾಗಿ ಹಸಿವು, ನೀರಡಿಕೆ ಮೊದಲಾದ ಬಾಧೆ ಉಂಟಾದರೂ ಶಾಂತವಾಗಿ ಅವುಗಳನ್ನು ಸಹಿಸುವುದು; ☞ "೧. ಹಸಿವು ಸಹಿಸುವುದು. ೨. ಬಾಯಾರಿಕೆ ತಡೆಯುವುದು. ೩. ಚಳಿ ಸಹಿಸುವುದು. ೪. ಬಿಸಿ ತಡೆಯುವುದು. ೫. ಸೊಳ್ಳೆ, ನೊಣ ಮೊದಲಾದವುಗಳ ಕಡಿತವನ್ನು ತಡೆದುಕೊಳ್ಳುವುದು. ೬. ಬಟ್ಟೆಯಿಲ್ಲದೆ ಬೆತ್ತಲೆಯಿರುವುದರಿಂದಾಗುವ ತೊಂದರೆಗಳನ್ನು ಸಹಿಸುವುದು. ೭. ಅರತಿ-ಅಪ್ರೀತಿಯ ಬಾಧೆಯನ್ನು ಸಹಿಸುವುದು. ೮. ಹೆಂಗಸರಿಂದಾಗುವ ಬಾಧೆಯನ್ನು ತಡೆದುಕೊಳ್ಳುವುದು (ಸ್ತ್ರೀ ಸಹವಾಸ ಬಿಡುವುದು). ೯. ಒಂದೇ ಕಡೆ ಹೆಚ್ಚುಕಾಲ ನಿಲ್ಲದೆ ಸಂಚರಿಸುತ್ತಿರುವುದು ; ಆಗ ಉಂಟಾಗುವ ಬಾಧೆಗಳನ್ನು ಸಹಿಸುವುದು. ೧೦. ಮಲಗುವ ಕಡೆ ಆಗುವ ತೊಂದರೆಯನ್ನು ಸಹಿಸುವುದು. ೧೧. ಕುಳಿತಿರುವಾಗ ಆಗುವ ತೊಂದರೆಗಳನ್ನು ತಡೆದುಕೊಳ್ಳುವುದು. ೧೨. ಬೈಗುಳನ್ನು ಸಹಿಸಿಕೊಳ್ಳುವುದು. ೧೩. ಹೊಡೆತವನ್ನು ಸಹಿಸುವುದು. ೧೪. ಯೋಚನೆಯಲ್ಲಿ ಆಗುವ ಕಷ್ಟನಿಷ್ಠುರಗಳನ್ನು ಸಹಿಸಿಕೊಳ್ಳುವುದು. ೧೫. ಬೇಡಿ ಭಿಕ್ಷೆ ಸಿಕ್ಕದಿದ್ದರೆ ಖೇದಪಡದೆ ಸಹಿಸುವುದು. ೧೬. ತನ್ನ ತಪಸ್ಸಿಗೆ ತಕ್ಕ ಮಹಿಮೆಗಳು ಕಾಣಿಸಿಕೊಳ್ಳದಿದ್ದರೂ ಅದನ್ನು ಸಹಿಸುವುದು. ೧೭. ರೋಗ ಬಂದರೆ, ದೇಹದ ಅನಿತ್ಯತೆಯನ್ನು ಭಾವಿಸಿ ಚಿಕಿತ್ಸೆ ಮಾಡಿಕೊಳ್ಳದೆ ಬಾಧೆಯನ್ನು ಸಹಿಸುವುದು. ೧೮. ಮುಳ್ಳು ಕಲ್ಲು ತಾಕಿದ ನೋವನ್ನು ಸಹಿಸುವುದು. ೧೯. ತನ್ನ ಪ್ರಜ್ಞೆಗೆ ಅಹಂಕಾರ ಪಡದೆ ಇರುವುದು. ೨೦. ತನಗೆ ಇನ್ನೂ ಉತ್ತಮ ಜ್ಞಾನ ಬರಲಿಲ್ಲವಲ್ಲಾ ಎಂದು ತನ್ನ ಅಜ್ಞಾನಕ್ಕೆ ಕೊರಗದಿರುವುದು. ೨೧. ಸೂಕ್ಷ್ಮಪ್ರಾಣಿಗಳಿಗೆ ತೊಂದರೆಯಾದೀತೆಂದು ಮೈತೊಳೆಯದೆ ಅದರಿಂದಾದ ಬಾಧೆಯನ್ನು ಸಹಿಸುವುದು. ೨೨. ಜನ ತನಗೆ ಪುರಸ್ಕಾರ ಮಾಡದಿದ್ದರೆ ತಾಳಿಕೊಳ್ಳುವುದು" (ಆದಿಪು. ಸಂಗ್ರಹ. xxxiii, ಪೀಠಿಕೆ): ನಿಯತಿಯನಾರ್ ಮಿಱಿದಪರ್ ಭಯಮೇವುದೊ ಮುಟ್ಟಿದೆಡೆಗೆ ಸೈರಿಸುವುದೆ ಕೇಳ್ ನಯವಿದೆ ಪೆತ್ತ ಪರೀಷಹಜಯಮೆ ತಪಂ ತಪಕೆ ಬೇಱೆ ಕೋಡೆರಡೊಳವೆ (ಯಶೋಚ. ೧-೪೯); ಗುರಿ ಸಾಧಿಸುವಾಗ ಬರುವ ಹಸಿವು, ಬಾಯಾರಿಕೆ ಮೊದಲಾದ ತೊಂದರೆಗಳು ಪರೀಷಹಗಳು. ಅವನ್ನು ಗೆಲ್ಲುವುದೇ ಪರೀಷಹಜಯ (ಆದಿಪು. ಸಂಗ್ರಹ. xxxiii, ಪೀಠಿಕೆ). [ಪರೀಷಹ+ಜಯ]

**ಪರೀಷ್ಟಿ** (ನಾ). ೧. ಪರೀಕ್ಷೆ; ತನಿಖೆ. ೨. (ಶ್ರಾದ್ಧಭೋಜನಕ್ಕಾಗಿ ಬ್ರಾಹ್ಮಣನನ್ನು) ಶ್ರದ್ಧೆಯಿಂದ ಹುಡುಕುವಿಕೆ,–ಅನ್ವೇಷಿಸುವಿಕೆ : "ಪರ್ಯೇಷಣಾ, ಪರೀಷ್ಟಿಃ, ಅನ್ವೇಷಣಾ, ಗವೇಷಣಾ—೪ ಶ್ರಾದ್ಧಾದಿಗಳಲ್ಲಿ ನಿಮಂತ್ರಣಕ್ಕೆ ಯೋಗ್ಯನಾದ ಬ್ರಾಹ್ಮಣನನ್ನು ಶ್ರದ್ಧೆಯಿಂದ ಹುಡುಕುವಿಕೆ" (ಸಿದ್ಧಾಂತಿ. ೨೨೪). ೩. ಗೌರವ ; ಮರ್ಯಾದೆ. ೪. ಇಷ್ಟ ; ಒಲವು. ೫. ಉಪಚಾರ ; ಪರಿಚರ್ಯೆ ; ಸೇವೆ : "ಪರಿವಸ್ಯಾ, ಪರಿಚರ್ಯಾ . . . ಪರೀಷ್ಟಿಃ, ಸೇವಾ . . . ಉಪಚಾರಃ—ಈ ೧೧ ಬೆಸಕೆಯ್ವುದರ್ಕೆ ಪೆಸರ್" (ಹಲಾಯು. ೨೧-೧೨೯). [ಸಂ.]

**ಪರೀಸಾರ** (ನಾ). ಸುತ್ತಾಡುವುದು; ತಿರುಗಾಡುವುದು; ಸಂಚಾರ: "ಪರಿಸರ್ಯಾ, ಪರೀಸಾರಃ–೨ ತಿರುಗುವಿಕೆ" (ಸಿದ್ಧಾಂತಿ. ೩೬೩). [ಸಂ.]

**ಪರೀಹಾರ** (ನಾ). (ತೆರಿಗೆಯಲ್ಲಿ ತೋರುವ) ವಿನಾಯಿತಿ : 'ಪರೀಹಾರಲೇಖ' ಪರಾ. [ಸಂ.]

**ಪರೀಹಾರಲೇಖ** (ನಾ). (ತೆರಿಗೆಯಿಂದ) ವಿನಾಯಿತಿ ಮಾಡಿರುವುದನ್ನು ಸೂಚಿಸುವ ದಾಖಲೆ : ಪರಿದಾನಲೇಖಗಳು ; ಪರೀಹಾರಲೇಖಗಳು . . . ಇವು ಇನ್ನೂ ಕೆಲವು ಶಾಸನಪ್ರಭೇದಗಳಾಗಿವೆ (ಕಶಾಅ. ೪೫). [ಪರೀಹಾರ+ಲೇಖ]

**ಪರೀಹಾಸ** (ನಾ). ವಿನೋದ; ಪರಿಹಾಸ: "ದ್ರವಃ, ಕೇಳಿಃ, ಪರೀಹಾಸಃ . . . ನರ್ಮನ್-೬ ಸ್ತ್ರೀ ಪುರುಷರ ಪರಿಹಾಸಕ್ಕೆ ಹೆಸರುಗಳು" (ಸಿದ್ಧಾಂತಿ. ೬೮). [ಸಂ.]

**ಪರು**$_1$ (ನಾ). ೧. ಕಬ್ಬು, ಬಿದಿರು ಮುಂತಾದುವುಗಳ ಗೆಣ್ಣು; ಪರ್ವ: "ಗ್ರಂಥಿ, ಪರ್ವ, ಪರುಃ—೩ ಬಿದಿರು ಗೆಣ್ಣುಗಳ ಪೆಸರುಗಳು" (ಸಿದ್ಧಾಂತಿ. ೧೫೦). ೨. ಸ್ವರ್ಗ. ೩. ಪರ್ವತ. ೪. ಸಾಗರ. [ಸಂ.]

**ಪರು**$_2$ (ನಾ). [ಸಂಗೀತ] ಹಾಡಿನ ಒಂದು ಬಗೆ: ದರು ಪರ್[ರು] ವಿಕೃತಿ ವಿಂದಾಣವೆಂಬ ಚತುರ್ವಿಧದಂಡಿಯಲ್ಲಿ ರಂಗುರಕ್ತಿ ರೀತಿದೋಱು . . . ಪಾಡಿ ಮೋಹಿಸುವ ಗಾಯಕರಿಂ (ವಿವೇಕ. ೧೯೦). 'ದರು$_1$' ಪರಾ. [?]

**ಪರು**$_3$ (ನಾ). ಒಂದು ಪ್ರದೇಶದ ಹೆಸರು; ℙ ಆಂಧ್ರಪ್ರದೇಶದ ಹಿಂದೂಪುರ ತಾಲ್ಲೂಕಿನ ಒಂದು ಪ್ರದೇಶ: ಪರುವಿಷಯೇ ಪೆರಟಿ ಭೋಗೇ ಕುರಉೂರನಾಮಗ್ರಾಮೋ ದತ್ತ (ಮೈಆರಿ. ೧೯೧೫, ೧೮-೧೬; 400). [ℙಇದು 'ಪರುವಿ' ಎಂಬುದರ ಅಪಲಿಖಿತವಿರಬಹುದು]

**ಪರುಕಿಸು** 'ಪರಿಕಿಸು' ನೋ.

**ಪರುಜು**$_1$ 'ಪರಜು' ನೋ.

**ಪರುಜು**$_2$ (?) (ನಾ). (?): ಸಿಂಧುವಿನಪೋಲ್ಘೋರವೃತ್ತಿತಂದುದುಭಯ ಬಲ ನಿಂದು ಪರುಜುಂ ಮಾಡಿ ದಳ ಚಲನವಾಯ್ತು ಸುರವೃಂದ ನೋಡುತ್ತಿರಲ್ಕಭದೊಳು (ತುರಂಗ. ೪೩-೩೩). [?]

**ಪರುಟವ** 'ಪರುಠವ' ನೋ.

**ಪರುಟವಣೆ** 'ಪರುಠವಣೆ' ನೋ.

**ಪರುಟವಿಸು** 'ಪರುಠವಿಸು' ನೋ.

**ಪರುಠವ,** ಪರಿಠವ, ಪರುಟವ (ನಾ). ೧. ವಿಸ್ತಾರ; ವಿಶಾಲತೆ; ಹರಹು: "ಪರುಠವಮೆನೆ ವಿಸ್ತರಂ" (ಭಾರತಿ. ೧೪). ೨. ಅತಿಶಯತೆ: ಮುರಿಮುರಿದ ಕೊತ್ತಳದ ಸಾಲಿನ ಪರುಠವದ ಹುಲಿಮುಖದ ಬಾಗಿಲ . . . ಕಾಂತಿ ರಂಜಿಸಿತು (ನಳಚ. ೧-೨೦). ೩. ಹೆಚ್ಚಳ; ಆಧಿಕ್ಯ; ಸಾಂದ್ರತೆ: ಪಾತಕದ ಪರು[ಪಾಠಾಂ.ರಿ]ಠವದ ಮುಖದ ಮಹೀತಳಾಧಿಪ ಸುಯ್ದು ನೊಂದನು (ಕುಪ್ಯಾಆ. ೪-೧೬). ೪. ಹಿರಿಮೆ; ಶ್ರೇಷ್ಠತೆ: ಮೇಲೆ ನಿಮ್ಮಾತ್ಮಜರಿಗವನಿಯ ಪಾಲನೆಯ ಪರುಠವದ ಪಟ್ಟವ ಪಾಲಿಸುವರು (ಕುವ್ಯಾಸ. ೬೦೫. ೧೭-೭೭); ನೆರೆ ಚತುರ್ದಶಲೋಕಲೋಕದ ಹಿರಿಯರಿಮ್ಮೈಹೇಳ್ಕೆ ಕೇಳ್ಕೆಯ ಪರುಠವದೊಳ್ಯತಂದ ವಿತರಣಮಂತ್ರಿ ವಿತರಣನು (ಅಂಬಿಕಾ. ೧೨-೧೨). ೫. ಭದ್ರತೆ; ದೃಢತೆಯನ್ನು ಹೊಂದಿದುದು: ಮತ್ತೆ ಮದವಂಕುರಿಸಿ ಪಲ್ಲವಿಸಿತ್ತು ದಕ್ಷಂಗರಸುತನದ ಪದಸ್ಥಿಕೆಯ ಪರುಠವದ ಸಿದ್ಧಿಯಲಿ (ನಿಭಾಗ. ೪-೧-೧೬). ೬. ಸಿದ್ಧತೆ; ಏರ್ಪಾಟು; ತಯಾರಿ: ಕರೆಸು ಧೌಮ್ಯಾದಿಗಳನಿಲ್ಲಿಯ ಪರುಠ[ಪಾಠಾಂ.ಟ]ವವ ಮಾಡೆಂದು (ಕುವ್ಯಾಸ. ೭-೧೪); ತನ್ನಯನಾಗಿ ನೃಪಸಿದ್ದಿರವನಾ ಪೂಜಾವಿಧಾನದ ಪರಿವಿಡಿಯ ಪರುಠವವನೆಲ್ಲವ ಮಱೆದು ಕುಳ್ಳಿರ್ದ (ನಿಭಾಗ. ೫-೫-೧೫); ಪರುಠವವೊಳಗೊಳಗೆ ಪುಟ್ಟಿದುದು ಗಾಲವಮುನಿಪನಾಜ್ಞೆಯಲಿ (ಅಂಬಿಕಾ. ೪೮-೧೩). ೭. ಹೇಳಿಕೊಟ್ಟುದು; ನಿರೂಪಿಸಿದುದು: ಪಾಂಡವರರಸಿ ಬೆಸಗೊಳಲೀಕೆ ಪಾರ್ಥನ ಪರುಠವದ ಮಾತುಗಳನೆಂದಳು ನಗೆಯ ಮೊಳೆ ಮಿನುಗೆ (ಕುವ್ಯಾಆ. ೧೯-೪೮). **ಪರಿಠವ:** ೩. ನಾರಿಯರು . . . ಹೆಣನಲಿ ಹೊರಳಿದರು ವಿವಿಧಪ್ರಳಾಪದ ಪರಿ[ಪಾಠಾಂ.ರು]ಠವವನೆಂತಱುದರೋ ವರ್ಣಿಸುವಡರಿದು (ಕುವ್ಯಾಗ. ೧೨-೬). ೮. ಠೀವಿ; ಸೊಗಸು; ಬೆಡಗು: ವಾಹಳಿಯೊಳ್ ವಳಯಕ್ಕೆ ಸಾರ್ದು ಮುಂ ಪರಿಠವದೊಳ್ ಪ್ರಸಿದ್ಧಮೆನಿಸಿರ್ದ ತುರಂಗದ ಭಂಗಿಯಿಂದವಾ ಹರಿಯ ಮನಕ್ಕೆ ತನ್ನ ಗತಿ ಮಾಡೆ ಮಹೋತ್ಸವಮಂ ತುರಂಗವಂ (ಮಹಾನೇ. ೬-೧೩೦).
**ಪರುಟವ:** ೧. ವಿದ್ಯೈಶ್ವರ್ಯಮಪ್ಪಗುಣ ಕೇಸರದ ಪರುಟವದೊಳು ಸ್ಥಾಪಿತಂ (ಲಚಿಂ. ೨೭-೨೭). ೩. ತಾಯ ಗರ್ಭದಿನಯ್ದುಡಿಯ ಪರುಟವದ ರಕ್ಷೆಯಂತಿರೆ (ರೇವಣ. ೧೦೧-೫೪). ೮. ಮಹಾ ಪರಿಜನಂ ವರಮಂತ್ರಿಮುಖ್ಯರ್ಪಸಾಯತರು ಬಾಹತ್ತರಂ ನಿಯೋಗ ಪರುಟವದೊಳೆದಬಲದಿ ಮುಂದೆ ಪಿಂದೆಸೆವುತಿರೆ (ಲಚಿಂ. ೩೧-೩೪). ೯. ರೂಢಿ; ರೀತಿ; ಬಗೆ: ನರರ ಪರುಟವದ ಭಾಷಾಂಕಿತ ಬರಹವಲ್ಲ ಕರ ಹೊಸತು ದೇವಲಿಪಿಯಹುದು (ಲಚಿಂ. ೩೧-೪೮); ನಿಮ್ಮೊಳೀ ಮಾನುಷರ ಪರುಟವವಿಲ್ಲ [ಪಾಠಾಂ.ನೀವು ದಿಟ ಮಾನಿಸರ ಪರುಠವವಲ್ಲ] ನೀವಾರು (ಕುವ್ಯಾಆ. ೧೬-೩೧); ಪರರುಪಮಾನ ಪರರೊಡ್ಡವದ ಪರುಟ[ಪಾಠಾಂ.ಠ]ವದ ಹರಹು ಹೊಗದಗ್ಗಳಿಕೆ (ತೊರರಾ. ೧-೧-೧೦).

[<ಪ್ರಾ. ಪರಿಟ್ಠವ./ಸಂ. ಪರಿಸ್ಥಾಪನ./ತೆಲು. ಪರಿಥವ]

**ಪರುಠವಣೆ,** ಪರಿಠವಣೆ, ಪರುಟವಣೆ (ನಾ). ೧. ವಿಸ್ತಾರ; ವ್ಯಾಪ್ತಿ: ಸಂಧ್ಯಾರಾಗದ ದೇವಾಂಗದ . . . ಪದ್ಮರಾಗದ ಪಾವುಡದ ಪರುಠ[ಪಾಠಾಂ. ಟ]ವಣೆ ಪಸರಿಸೆ . . . ಪರಿದು ನೆರೆದು ತರಂಗೊಂಡ ತುರಗಸಂಘಾತದಿಂ (ರಾಜಶೇ. ೬-೧೧ ವ). ೨. ವಿಶದ; ವಿವರ: ನಾಯಕನು ಪರುಠವಣೆಯಾಗಿ ಹೇಳಲಾರಂಭಿಸಿದನು (ಮಲ್ಲಿ. ೨೫೮). ೩. ಸಿದ್ಧತೆ; ಏರ್ಪಾಟು; ವ್ಯವಸ್ಥೆ: ಆ ಮಂದಿರನಿಕಾಯಕೆ ಬಾಗಿಲೊಂದು . . . ಹೊಜಗೆ ಮುದ್ರಿಸಿ ಕಿಚ್ಚ ಚುಚ್ಚುವ ಪರುಠವಣೆಯಲಿ ಖಳ ಪುರೋಚನನಂದು ನಿರ್ಮಿಸಿದ (ಕುವ್ಯಾಆ. ೮-೭೦); ಸಚರಾಚರರಿಗಿರಲಳವಡಿಕೆ ಮಾಡಿದ ಪರುಠವಣೆ ಚೆನ್ನಾಯ್ತು ಚತುರಾನನನ ಚದುರಿನಲಿ (ಪ್ರಭುಲೀ. ೨-೩); ಅವನೀಶ್ವರರ ಮಾನ್ಯತೆಯ ಪರುಠ[ಪಾಠಾಂ. ಟ]ವಣೆ ವಿಜಯಂಗೆ ಸೇರಿತು (ತೊರರಾ. ೧-೬-೨೪); ಪಿರಿದು ಪೂಜೆಗೆ ಅಸ್ತ್ರಶಸ್ತ್ರದ ಪರುಠವಣೆ ನಿಷ್ಠೆಯಲಿ ಕುಳಿತ ದುರುಳ ಮೈರಾವಣನ ಕಾಣುತಲಿ (ಉತ್ತಕ. ೩೪-೩೩). ೪. ಪದ್ಧತಿ; ಕ್ರಮ: ಇರಲಿ ಲೌಕಿಕ ವೈದಿಕಂಗಳ ಪರುಠವಣೆಯಿಹಪರಗಳೆರಡಱ ಪರಿಯ ಸದ್ಗತಿಗಳನು ಸಂಗ್ರಹಿಸಲಿ ಕುಮಾರಕನೆ (ಉತ್ತಕ. ೪-೨೮) ೫. ಸಡಗರ; ಆಡಂಬರ: ವೈದಿಕಕರ್ಮನಿಷ್ಠರ ಪದವಿಗಳ ಪರುಠವಣೆಯನು ಕಲಿಪಾರ್ಥ ನೋಡದು (ಕುವ್ಯಾಆ. ೭-೮೦); ಬಂದನು ರಾಮನೃಪ ತನ್ನ . . . ಬಾಂಧವರಾ ಪರುಠವಣೆಯಲಿ (ರಾಮಚ. ೨೮-೯೯); ತಾನೂ ಅರಳೀಕಟ್ಟೆಗೆ ಹೋಗುತಾ ವಿಶೇಷವಾದ ಪರುಠವಣೆಯಿಂದ ತಾನೂ ಒಬ್ಬನೇ ಇದ್ದು ಮರಕ್ಕೆ ಪೂಜೆ ಮಾಡುತಾ (ಮಾಪುರಾ. ೧೩೯); ಪದ್ಮಾಸನನ ಸಭೆಯ ಪರುಠವಣೆ ಎಣೆಯಿಲ್ಲದ್ದು (ರಾಜಸೂ. ೭). ೬. ಅಚ್ಚುಕಟ್ಟು; ಅಣಿ; ಒಪ್ಪ: ಇವಳಿಂದ ವರ್ಣಿಸಲ್ಪಟ್ಟ ಅಡಿಗೆ ಊಟದ ಪರುಠವಣೆಯನ್ನು ಕೇಳಿ ಅಲ್ಲಿ ಸೇರಿದ್ದ ಹೆಂಗಸರಲ್ಲಿ ಕೆಲವರು . . . ನಗುತಿದ್ದರು (ಅದೂಟ. ೧೧೪); ಊಟ,ತಿಂಡಿಗಳ ವಿಷಯದಲ್ಲಿ ಅವರಿಗೆ ಪರುಠವಣೆ ಹೆಚ್ಚು (ರೂಢಿ). **ಪರಿಠವಣೆ:** ೩. ಅನ್ನು ದೇವರ ದೇಸಿಯ ಬೀಯದ ಪರಿಠವಣೆ ಗದ್ಯಾಣವಯ್ದು (ಸೌಇಇ. XX, ೧೦೧-೫೨; 1129); ಸೈನ್ಯವನ್ನು ಕಳುಹಿಸುವ ಪರಿಠವಣೆಯೇಕೆ? (ಶ್ರೀರಾಯ. ೧೫೧). **ಪರುಟವಣೆ:** ೩. ಪರಿಕರದ ಪರುಟವಣೆಯಲಿ . . . ನಿಯೋಗಿಗಳಾಪ್ತಜನಸಹಿತೈದಿದರು ವನವ (ಕುವ್ಯಾಆ. ೧-೨೧). ೫. ಒಂದೆಡೆಯೊಳ್ ಪರುಟವಣೆಯ ಗಾನದ ನಚ್ಚಣೆಯ . . . ದೇವಾಂಗನೆಯರ ಗೊಂದಣಂ (ರಾಮಾಶ್ವ. ೭೬-೨೮); ಹಬ್ಬದ ಪರುಟವಣೆಯಿಂದ ಅಕ್ಕಪಕ್ಕದ ಗೆಳತಿಯರನ್ನು ವಿಾರಿ ಶೋಭಿಸ

ಬೇಕೆಂದು ಹೆಂಗಸರು ಬಗೆಬಗೆಯ ಆಹಾರಸಾಮಗ್ರಿಗಳನ್ನು ಸಜ್ಜುಗೊಳಿಸುತ್ತಿರುವರು (ಜಿನ್ನಜೀ. ೩).

**ಪರಿಠವಣಂ ಮಾಡು** = ಸಜ್ಜು ಮಾಡು ; ಸಿದ್ಧಗೊಳಿಸು : ಹಿರಿಯಪಳ ಮನೆಯೊಳೆಲ್ಲಾ ಪರಿಠವಣಂ ಮಾಡೆ ಪೇಟ್ಟು ಕಳುಪಿ (ಧರ್ಮಪ. ೨-೪೮). [ಪರುಠವ+-ಅಣ್$_4$]

**ಪರುಠವಿಸು,** ಪರಿಠವಿಸು, ಪರುಟವಿಸು (ಕ್ರಿ). ೧. ತೋರಿಸು ; ಕಾಣಿಸು : ಮಾಹೇಶ್ವರವಿಸರವನೇಕಪ್ರಕಾರದ ನಾಟಕಂಗಳಂ ಪರುಠವಿಸಿ . . . ತ್ವರಿತದಿಂ ತೋರ್ಪರ್ (ಪದ್ಮರಾ. ೬-೬೩) ; ಪರಿಪರಿಯ ಶಿವಲಿಂಗ ಭಕ್ತಿಯ ಪರುಠವಿಸಿ ಕಾಲನ ನಿವಾರಿಸಿ ಹರನನೊಚ್ಚತಗೊಂಡ ಶಿವಶರಣರಿಗೆ ಶರಣಾರ್ಥಿ (ಪ್ರಭುಲೀ. ೧-೭). ೨. ನೆರವೇರಿಸು ; ನಡೆಸು : ಸುರಮುನಿಯ ನುಡಿವಿಡಿದು ಲಗ್ನವ ಪರುಠ[ಪಾಠಾಂ. ಟ]ವಿಸಿದರು (ತೊರಾರಾ. ೧-೧೬-೩೪) ; ವಂದಿಸುತೆ ಪೂಜೆಯಂ ಪರುಠವಿಸಿ ಶಿಶುವ ಮುಂದದಿಂದೆ ಪದದೆಡೆಗೆ ಸಾರ್ಚಿ (ರಾಘಚ. ೨-೩೫). ೩. ಉಂಟುಮಾಡು ; ಒದಗಿಸು : ನಿಜಸುಖಮನಿರ್ದೆವನೆಯೊಳ್ ಪರುಠವಿಸುವ ಸುಜ್ಞಾನದ ತಿರುಳೆನಲೆಸೆದತ್ತು ಮೂರ್ತಿ ಪಂಪಾಂಬಿಕೆಯಾ (ಉದ್ಭಟ. ೩-೪೦); ವರುಷ ಹದಿನಾರರಲಿ ಮೃತ್ಯುವ ಪರುಠ[ಪಾಠಾಂ. ಟ]ವಿಸಿದುದು ಕರ್ಮಗತಿ (ಕುಮ್ಮಾಅ. ೧೪-೧೭) ; ಅಜಹುವಜಹುಗಳನಾ ಮಂಗಲೆಯ ಚಿತ್ತದೊಳು ಪರುಠವಿಸಿ (ಸೌಂದಪು. ೮-೬೧) ; ಮಿತ್ರನೆನಗೆಂದೆನಿಸುವೀ ಮೃಗಪುತ್ರನನು ಬೇರ್ಪಡಿಸಿ ತನಗೆ ಪರತ್ರಗತಿಯನು ಪರುಠವಿಸಿದ್ಯೆ (ಸಿಭಾಗ. ೫-೫-೪೩). ೪. ವಿಸ್ತರಿಸಿ ಹೇಳು ; ವಿವರಿಸು : ನೀ ಪರುಠವಿಸು ನಿರ್ಜರರಿಗೆ ಬಂದ ಸಂತಾಪವಿದೇನು (ಮೋಹತ. ೫-೧೪) ; ನೃಪನ ಸಭೆಯೊಳಗೆ ಪರುಠವಿಸಿ ನೀವೆಂದ ಮಾತನು ವರಸಭಾಮಧ್ಯದಲಿ ನುಡಿಯಲ್ಕೆ (ನಳಚ. ೮-೧೯). ೫. ಆವರಿಸು ; ಮುತ್ತು : ಮಹಾಪಾತಕನೆನ್ನ ಪೊಳಲ ತಾ ಪರುಠವಿಸಿಕೊಂಡತುಳಯುದ್ಧವನು ನಾನಾಪರಿಯೊಳು ಮಾಡುತಿರಲು (ಅಂಜಚ. ೧೩-೨೬೯). ೬. ಏರ್ಪಾಟು ಮಾಡು ; ವ್ಯವಸ್ಥೆ ಮಾಡು ; ಅಣಿಗೊಳಿಸು : ಕರೆದು ಭೀಮನ ನಕುಳನನು ಸಂಗರಕೆ ಧೃಷ್ಟದ್ಯುಮ್ನ ದ್ರುಪದರ ಪರುಠವಿಸಿ ಕಳುಹಿದನು ಸೌಭದ್ರಂಗೆ ಪಡಿಬಲವ (ಕುಮ್ಮಾದ್ರೋ. ೫-೬೨) ; ತುಂಬುರಮಂತ್ರಿಯುಲುಪೆ ಬೀಡಾರ ಮುಂತಾದವಂ ಪರುಠವಿಸಿ (ಸೌಂದಪು. ೧೧-೩೪) ; ಕದನಕೆ ಸುರಪತಿಯ ಚತುರಂಗಬಲಗಳ ಪರುಠವಿಸಿ ಕಳುಹಿದನು (ಉತ್ತಕ. ೬-೨೪). ೭. ಸಿದ್ಧವಾಗು ; ತಯಾರಾಗು : ಮಧ್ಯರಾತ್ರಿಯೊಳಿಜಾತದಂಘವಣೆಯಲಿ ಪರುಠವಿಸಿದನು ಗುರುಸೂನು (ಕುಮ್ಮಾಗ. ೯-೧೪). ೮. ನೇಮಕ ಮಾಡು ; ಗೊತ್ತು ಮಾಡು; ನಿಯಮಿಸು: ದೇವಕಿಯಂ ತರಿಸಿ ಕಾವುವೇಟ್ದಾರಿಸಿ ಹಿತರುಮಹಿತರುಮಪ್ಪ ಪರಿಚಾರಕಿಯರಂ ಪರುಠವಿಸಿ (ಅರ್ಥನೇ. ೭-೨೮ಪ) ; ಪರುಠವಿಸಿದರೆ ಸದಸ್ಯರ ಗುರುವೆನಲುದ್ದಾತ್ತಜಟಗಳಂ ಋತ್ವಿಜರಂ (ಕುಸುಮಾ. ೪-೧೩೦) ; ಕರೆದು ಪಡುವಲು ಕಲಿಸುಷೇಣನ ಪರುಠ [ಪಾಠಾಂ. ಟ]ವಿಸಿದನು (ತೊರಾರಾ. ೪-೮-೧೨) ; ಕಾವಲ್ಗೆ ರಥ ಮತ್ತಗಜ ಹಯ ಪದಾತಿಗಳ ಸಂದೋಹಮಂ ಸುತ್ತಲುಂ ಪರುಠ [ಪಾಠಾಂ. ಟ]ವಿಸಿ (ಜೈಮಿಭಾ. ೫-೨೦). ೯. ರಚಿಸು ; ಕಟ್ಟು : ಮುಂಗಡೆಗೆ ಚಪ್ಪರವನತ್ಯಂತವಿಸ್ತಾರದಿಂ ಪರುಠವಿಸಿ (ಸೌಂದಪು. ೧೩-೨೭); ಪರುಠ[ಪಾಠಾಂ. ಟ]ವಿಸಿದರು ವಿವಿಧ ದ್ರವ್ಯದ ಸರಸಿಗಳ ಸಂವೇಶದಲಿ ಕೊಪ್ಪರಿಗೆ ಯಂತ್ರದ್ರೋಣಿಗಳ ಜಾಟಾಳಸೂತ್ರಗಳ (ತೊರಾರಾ. ೧-೭-೮); ನನ್ನನುಜೆಯರ್ಗೆ . . . ರನ್ನ ಚಿನ್ನದೊಳು ಪೊನ್ನುಯ್ಯಲ ಪರುಠವಿಸು (ಭರಚ. ೪೪-೨೫) ; ಹೋಳಿಯ ಹಬ್ಬದ ಕಾಲಕ್ಕೆ ಓದಲಿಕ್ಕೂ ಹಾಡಲಿಕ್ಕೂ ಅನುಕೂಲವಾಗುವಂತೆ 'ಪಾಡುಗಬ್ಬ' ವನ್ನಾಗಿ 'ಪರುಠವಿಸಿರ'ಬಹುದೇ (ಕರ್ನಾಜ. ೪೫). ೧೦. ಹುಟ್ಟಿಸು ; ಸೃಷ್ಟಿ ಮಾಡು ; ಉತ್ಪತ್ತಿಮಾಡು : ಧರೆಯೊಳಗೆ ತರುಲತೌಷಧಿ ವೀರುಧಂಗಳ ಪರುಠವಿಸಿದನು (ಸಿಭಾಗ. ೬-೪-೭) ; ದುರುಳದುರ್ಯೋಧನರ ನೂರ್ವರಂ ಪರುಠವಿಸಿ ಧರೆಯೊಳಗೆ (ತುರಂಗ. ೭-೬೧). ೧೧. ಸಲ್ಲಿಸು ; ಒಪ್ಪಿಸು ; ಸಂದಾಯ ಮಾಡು : ಎಮ್ಮ ಗೃಹದೈವಕೆ ಪರಕೆಯಂ ಪರುಠವಿಸುವೆಂ (ಮಹಾವಿ. ೬-೪). ೧೨. ಪುರಸ್ಕರಿಸು ; ಮನ್ನಿಸು : ಉಗ್ರಸೇನತನೂಭವನುತ್ಸಾಹರಸವಶಗತನಾಗಿ ತನ್ನ ಮಲ್ಲವಲ್ಲಭರ್ ನಾಲ್ವರುಮಂ ಪೋಷಣಮುಂ ಕೊಟ್ಟು ಪರುಠವಿಸಿ (ಮಹಾನೇ. ೬-೬೬ಪ), ತರಿಸಿದನು ಪೊಂಗಳಸವಾರಿಯ ಪರುಠವಿಸಿ ತನ್ನಾತ್ಮಸತಿಯಳ (ಸಂಭಪ. ೧೦-೨೩) ; ಹಿರಿಯೊಸಗೆವೇಟ್ದು ರಾಣಿಯ ಪರಿಚಾರಿಕೆಗಿತ್ತು ರನ್ನಪೊನ್ನೊಡವೆಗಳಂ ಪರುಠವಿಸಿ ಕಳುಪಿದಂ (ಚಿಕವಿ. ೪-೪೬). ೧೩. ರಂಜಿಸು ; ಶೋಭಿಸು : ಅರಸ ಬಂದನು ಮಣಿಖಚಿತಕೇಸರಿಯ ಪೀಠವ ನಡರಿದನು ನಿಜಚರಣಸೇವೆಯುಲೆಸೆದರೊಡಹುಟ್ಟಿದರು ಪರುಠ[ಪಾಠಾಂ. ಟ]ವಿಸಿ (ಕುಮ್ಮಾವಿ. ೧೦-೬) ; ಕಣಿಗಿಲೆ ದವನ ಬಿರಿದ ಕೆಂಜಾಜಿಯೆಂಬುವ ಪುಷ್ಪದಂಗಡಿ ಪರುಠವಿಸಿರ್ದುದೇನೆಂಬೆ (ಮೋಹತ. ೩-೧೫). ೧೪. ಫಲಿಸುವಂತೆ ಮಾಡು : ತನ್ಮುನಿಶಾಪಶಕ್ತಿಯ ಪರುಠವಿಸಲಿಚ್ಛೆಯಲಿಯಾ ಮುರಹರನ ಮಾಯೆಗೆ ಸಿಲುಕಿ ಮಡಿದರು ಸಕಲ ಯಾದವರು (ತಿಮ್ಮಪು. ೧-೬೨). ೧೫. ವಿಜೃಂಭಿಸು : ಸುರಪದವನಾ ನಹುಷರಾಯನು ಪರುಠವಿಸಿ ಕೈಕೊಂಡನು (ತಿಮ್ಮಶಾಂ. ೭-೪೭). ೧೬. ಪೀಠವನ್ನಾಗಿ ಮಾಡಿಕೊಳ್ಳು : ರಕ್ಕಸನಗೆ ಖಗರಾಜಂಗೆ ಪೇಳ್ದ ಪೆಣ್ಮಕ್ಕಳು ಭೀತಿಸದಂತೆ ಚೊಕ್ಕಟವಾಗಿ ನೀ ತಳರೆಂದು ಬಳಿಕವೆ ಪಕ್ಕೆಯ ಪರುಠವಿಸಿದನು (ಮೋಹತ. ೪೨-೬). **ಪರಿಠವಿಸು :** ೫. ವಡಬಾಗ್ನಿ . . . ನೆಟಿ ಪಸಿದಜಾಂಡದಲ್ಲಿ ಪರಿಠವಿಸಿ ತುಂಬಿ ಮಂಡಲಿಜಾದ ಕತ್ತಲೆಗಡಲನುರುರೌದ್ರದಿಂ ಪೀರ್ದು (ಏಕೋಪು. ೪-೪೫). ೬. ಸಮುದ್ರವಿಜಯಮಹಾರಾಜಂ ಸ್ವಾತ್ಮೀಯ ಸಾಮಂತ ಮಹಾಸಾಮಂತ ತದಾಯಿತ ಪಸಾಯಿತ ಪ್ರಭೃತಿ ಪರಿವಾರಕ್ಕುಚಿತಾಗಾರಂಗಳಂ ಪರಿಠವಿಸಿ (ಮಹಾನೇ. ೬-೧೩೬ ಪ) ; ಆ ದೇವರ ಅಮೃತಪಡಿಗೆ ದಾರೆಯ ನೆಟಿದು ಪರಿಠವಿಸಿ ಕೊಟ್ಟ ಪಡಿಅಕ್ಕಿ (ಎಕ. IX, ಚನ್ನಪ. ೬೫-೧೨ ; 1278). ೮. ಚಿತ್ರೆ ಕಾಂಚನಚಿತ್ರೆ ತ್ರಿದಿವೆ ಸುತ್ರಾಮೆಯೆಂಬ ನಾಲ್ವರ್ದೇವಿಯರಂ ದೀಪಂಗಳಿಗೆ ಪರಿ[ಪಾಠಾಂ. ರು]ಠವಿಸಿಯುಂ (ಪುಣ್ಯಾಸ್ರ. ೧೦-೧೪ ಪ). ೧೨. ವಿನೋದವಿಷಯರಪ್ಪ ಕುಬ್ಜ ವಾಮನ ಬಧಿರ ಕಿರಾತಾದಿ ಜಡಜನಂಗಳುಮಂ ಪರಿಠವಿಸಿ . . . ಅಳವಿಗರಿದೆನಿಸಿ ಬಟಿವಟಿಗೊಟ್ಟು (ಮಹಾನೇ. ೯-೧೧೪ ಪ). **ಪರುಟವಿಸು :** ೨. ವನದೊಳ್ ಶಿವಲಿಂಗಾರ್ಚನೆಯಂ ಪರುಟವಿಸಿ ಪರಮೋತ್ಸಾಹದಿಂ ನಿಜಪುರಮಂ ಪೊಕ್ಕು (ಹಮ್ಮಿರ. ೪-೩೬ ಪ). ೩. ಸಲ್ಲಲಿತ ರತ್ನಪ್ರಭೂಷಣಗಳ ಪರುಟ[ಪಾಠಾಂ. ಠ]ವಿಸಿದಂ ಕನಕಗಿರಿಗೆ ಕನಕಾರ್ಪಣವ ವಿರಚಿಸುವನಂತೆಯಾ ನಂದಿ ಸದ್ಭಕ್ತಿಯಿಂ ಪುರಹರಗೆ (ನಂದಿಮಾ. ೧೭-೪೩). ೪. ಹೋಗಬೇಡಲ್ಲಲ್ಲಿಯಾಯತವಾಗಿ ಬೇಗದಿ ದೇವನೊರ ತಾನಾಗುತಿದೆಯೆಂದೊಂದಜಾದರು ಪಡಿಯಜರು ಪರುಟವಿಸಿ (ಶಂಕದಾ. ೨-೪೮). ೮. ಸತತಂ ಕುಬೇರನನು ನಚ್ಚಿನ ಕೊಟಾರಿಕೆಗೆ ಪರುಟವಿಸಿಕೊಂಡಾಂ ಬರುತ್ತೊಡಗೊಂಡು ಬಹೆನು (ಸೋಮಚ. ೧-೫೩); ಬೀಡಿವರಿಗಿದು . . . ಕರುಮಾಡವಿವರಿಗಿದೆಂದು ಪರುಟ[ಪಾಠಾಂ. ಠ]ವಿಸಿದನು ಪಾಂಚಾಲ (ಕುಮ್ಮಾಅ. ೧೨-೭) ; ಶಿಲ್ಪರ ಪರುಟ[ಪಾಠಾಂ. ಠ]ವಿಸಿ ಕಳುಹಿದನು ಪಾವುಡಸಹಿತ ಪಾರ್ಥಿವರ ಪುರಗಳಿಗೆ (ತೊರಾರಾ. ೧-೭-೯). ೯. ಮನೆಯನು ಅರಗಿನಲಿ ಪರುಟವಿಸಿ ಕೊಟ್ಟು (ಕೃಷ್ಣಾಕಾ. ೧೦-೧೫). ೧೨. ಮರುಳುಶಂಕರಗೈಕ್ಯಪದವಿಯ ಪರುಟವಿಸಿ ಕೊಟ್ಟೊಲವಿನಿಂದಲಿ

(ಪ್ರಭುಲಿ. ೧೬-೨). **೧೭.** ಹಬ್ಬುವಂತೆ ಮಾಡು; ಹರಡು; **ವಿಸ್ತರಿಸು:** ಧರೆಯೊಳರಸೆನಿಪವಂ ಸಪ್ತಾಂಗರಾಜ್ಯಮಂ ಪರುಟವಿಸಿ . . . ಸಿಂಹಾಸನಾಸೀನನಾಗಿರ್ಪ ಪರಿಯೊಳ್ (ಲಶಿಚಂ. ೫-೮); ಪರಮಶ್ರೀ ಗುರುನಿರಂಜನಲಿಂಗನವನಿಯಂ ಪರಿರಕ್ಷಿಸಲ್ಕೆಂದು ಬಂದಖಿಳಮಹಿಮೆಯಂ ಪರುಟವಿಸಿ ತೋಱು (ಸಿದ್ಧೇಪು. ೨೫-೨೧). **೧೮.** ಅಭ್ಯಾಸ ಮಾಡಿಸು; ಕಲಿಸು: ವರುಷವಿವಳಲಿ ನಾಟ್ಯವಿದ್ಯೆಯ ಪರುಟವಿಸಿದೆನು (ಕುವ್ಯಾವಿ. ೧೦-೨೬). [ಪರುಶವ+-ಇಸು₃]

**ಪರುಡಿ** 'ಪರಡಿ₅' ನೋ.

**ಪರುಪು, ಪಪ್ಪು, ಪರಪ್ಪು₃, ಪರಿಪು₁, ಪೊಪ್ಪು** (ನಾ). **೧.** ಒಡೆದ ಕಾಳು; ಬೇಳೆ. **೨.** ಒಂದು ಬಗೆಯ ಧಾನ್ಯ; ತೊಗರಿ: ಉಭಯಂ ಹರಿವಾಣಯುರಡಕ್ಕೆ ಅಕ್ಕಿ ಇಕ್ಕುಳ ಪರುಪುಪದಾರ್ಥ ತುಪ್ಪ (ಎಕ. XIV, ಶ್ರೀರಂಗ. ೨-೧೮; 1528). **೩.** ತೊಗರಿ ಮುಂತಾದ ಬೇಳೆಗಳಿಂದ ಮಾಡಿದ ಒಂದು ಬಗೆಯ ಮೇಲೋಗರ; ತೊವ್ವೆ: ಪರುಪಿಗೀ ರುಚಿಯೆತ್ತಣಿಂ ಬಂದುದೋ (ಚೆಬಪು. ೫-೬೨); ಜೊಕ್ಕೆಯೊಳಗಣ ಕಸುರ ಪರುಪಿನಗೆ ನೀಡೆ (ಕಂಕ. ೬೯-೮೦). **ಪಪ್ಪು: ೧.** ಎಳ್ಳಿಗೆ ಕಡಲೆಯ ಪಪ್ಪು ಹಾಕುತ್ತಾರೆ (ರೂಢಿ). **೪.** ಬೀಜ: 'ಗೇರುಪಪ್ಪು' ಪರಾ. **ಪರಪ್ಪು₃: ೩.** ಮುದದಿ ಹಪ್ಪಳ ಸಂಡಿಗೆಯುಪ್ಪಿನ ಕಾಯಿ ಪದಪು ಪರಪು ರಾಜಾನ್ನಗಳ (ದೇವಾಂಪು. ೫-೨೨೭); **ಪರ್ಪು:** ಪರಪ್ಪು, ಅವರೆ ಒಡಕಲಿನಿಂದ ಅಂದರೆ ಬೇಳೆಯಿಂದ ಮಾಡುವ ತೆಳ್ಳನೆಯ ಸಾರು (ನನ್ನೂರು. ಟಿಪ್ಪಣಿ). **ಪರಿಪು₁: ೩.** ಕಡಲೆಯ ಪರಿಪನುಂಬನೇ ಸುಖಿ ಜಗದೊಳು (ಲಿಂಗಪು. ೮-೨೬). **ಪೊಪ್ಪು: ೧.** ಮಗುವಿಗೆ ಕಡಲೆಯ ಪೊಪ್ಪು, ಬೆಲ್ಲ ಕೊಡು (ರೂಢಿ).

[ದೇ.॥ ತಮಿ. ಪರುಪ್ಪು, ಪಪ್ಪು; ಮಲ. ಪರಿಪ್ಪು; ತೆಲು. ಪಪ್ಪು]

**ಪರುವ** 'ಪರ್ಬ' ನೋ.

**ಪರುವಡಿ** (ನಾ). (?): ವರ ಧನುರ್ವಿದ್ಯೆಯೊಳು ತರಪ್ಪೆಸರದ ಲಾಗಿನ ಬವರಿಯೊಳು ಮೈಸಿರಿಯ ಪರುವಡಿ ಚಾಳಿಯೊಳು ನೆರೆ ಸೂಳು ಪಾಳಿನೊಳು ಧುರದೊಳೀರ್ವರು ಗದೆಯ ಗದೆಯಿಂದೆರಗಿ ಕಾದಿದರು (ಅನಂರಾ. ೬-೨-೨೯). [?]

**ಪರುವತ** 'ಪರ್ಬತ' ನೋ.

**ಪರುಶ** 'ಪರುಸ' ನೋ.

**ಪರುಶನ** 'ಪರುಸನ' ನೋ.

**ಪರುಷ₁** 'ಪರುಸ' ನೋ.

**ಪರುಷ₂** (ಗು). **೧.** ಗಡುಸಾದ; ಒರಟಾದ; ಬಿರುಸಾದ: ಪರುಷ ಗ್ರಾವಚಯಂ ಶರ್ಕರೋಪಳಂ ಕೀಟಕಂಟಕಪ್ರಕರಂ ತದ್ಧರೆಯೊಳಿನಿತ್ತಿಲ್ಲದ ಪೋಲ್ ಮರುದಮರರ್ಸಮಱಿ ಭಕ್ತಿಯಂ ನೆಱೆ ಮೆಱೆದರ್ (ಪಾರ್ಶ್ವಪು. ೧೬-೧೫೩). **೨.** ಕರ್ಕಶವಾದ; ಕಠೋರವಾದ; ನಿಷ್ಠುರವಾದ: ಪರುಷಸ್ತನಿತಮನಚಿರಾಂಶುರುದ್ಧಮಂ . . . ಪುಷ್ಕರ ಧರಶರಮಂ ಪುಷ್ಕರಾಕ್ಷನೀಕ್ಷಿಸಿ ಕಂಡಂ (ಜಗವಿ. ೧೩-೧೦೪); ಅತಿಪರುಷ ಘನನಿನದಯುಕ್ತಮಾಗಿಯುಂ ಅಸಾರ್ದ್ರತಾನುವಿದ್ಧಮಲ್ತು (ಚಂದ್ರಪು. ೪-೫೨ ಪ). **೩.** ಕ್ರೂರವಾದ; ನಿರ್ದಯವಾದ; ಕರುಣೆಯಿಲ್ಲದ. **೪.** ತೀಕ್ಷ್ಣವಾದ; ಹರಿತವಾದ. **೫.** ಭೀಕರವಾದ; ಘೋರವಾದ: ನಿಷ್ಠುರಚೀರೀರವಮುಖರ ಪರುಷಶಾನನಪವಮಾನನ ಸೋಂಕ ನಾಸೆಗೆಯ್ಯಲ್ ಬಗೆದೈ (ಪಂರಾಮಾ. ೬-೧೦). 'ಪರುಷಾಟವಿ' ಪರಾ. **೬.** ಗಂಟುಗಂಟಾದ; ಜಟಿಲವಾದ. **೭.** ಕೊಳೆಯಾದ; ಅಶುದ್ಧವಾದ. **೮.** (ಬಣ್ಣಬಣ್ಣದ) ಚುಕ್ಕೆಗಳಿಂದ ಕೂಡಿರುವ; ಶಬಲವಾದ. (ನಾ). **೯.** ಬಿರುಸಾದುದು; ಗಡುಸಾದುದು: "ಪರುಷಂ, ಅಸ್ನಿಗ್ಧಂ-ಈ ೨ ಬೆಟ್ಟಿತ್ತು" (ಹಲಾಯು. ೧೨೯-೯೮); ಬೆರಸಿರೆ ಕನ್ನಡದೊಳ್ ಬಂಧುರವಾಗದು ಕಾವ್ಯರಚನೆ ಪೇ(ಟ್ಟೊ)ಡೆ ಪೀನಂ ಪರುಷತರಮಕ್ಕುಮೊತ್ತುಂಗರಡೆಯು ಮದ್ದಳೆಯ ಜರ್ಝರಧ್ವನಿಗಳವೋಲ್ (ಕವಿರಾ. ೧-೫೩). **೧೦.** ಶತ್ರು; ಹಗೆ. **೧೧.** ಕಳ್ಳತನ; ಚೌರ್ಯ. **೧೨.** ಧೈರ್ಯ; ಸಾಹಸ; ದಿಟ್ಟತನ. **೧೩.** ಹೊನ್ನು; ಬಂಗಾರ. **೧೪.** ನೈರ್ಮಲ್ಯ; ಸ್ವಚ್ಛತೆ: "ಧೈರ್ಯದೊಳು ಹೊನ್ನಿನೊಳು ಕ್ರೂರದೊಳು ಪೀತ [ಪಾಠಾಂ. ಪೀಠ, ವೀರ] ದೊಳು ಚೌರ್ಯದೊಳು ಶುದ್ಧದೊಳು ಪರುಷವಕ್ಕು" (ಮಂಗರಾ. ೧೫೫-೫೧). **೧೫.** ದೊಡ್ಡ ಶಬ್ದ; ಗಟ್ಟಿಯಾದ ಧ್ವನಿ: "ಪರುಷಂ ಕಠೋರ ಮಹಾರುತಂ" (ಪಸ್ತುಕೋ. ೮೦-೩೦). **೧೬.** [ಕಾವ್ಯಮೀ] ಓಜೋಗುಣವ್ಯಂಜಕವಾದ ಮಹಾಪ್ರಾಣಾಕ್ಷರ, ರೇಫ ಮೊದಲಾದ ವರ್ಣಗಳನ್ನು ಒಳಗೊಂಡ ಅನುಪ್ರಾಸ: ರಸ 'ಅಲೌಕಿಕ'ವಾದುದರಿಂದಲೇ ಅರ್ಥಕ್ಕೆ ಉಪಯೋಗಿಗಳಲ್ಲದ ಲಲಿತ, ಪರುಷ ಮುಂತಾದ ಅನುಪ್ರಾಸಾದಿಗಳು ರಸಕ್ಕೆ ವ್ಯಂಜಕವಾಗುತ್ತವೆ (ಧ್ವನ್ಯಾಲೋ. ೫೦). **೧೭.** [ವ್ಯಾಕ] ಕ, ಚ, ಟ, ತ, ಪ ಮೊದಲಾದ ಅಘೋಷವ್ಯಂಜನಗಳು: ತಮಿಳುಭಾಷೆಯ ವರ್ಣಮಾಲೆಯಲ್ಲಿ ಇರುವುದು ಪ್ರತಿವರ್ಗದಲ್ಲೂ ಮೊದಲನೆಯ ಮತ್ತು ಕೊನೆಯ ವರ್ಣಗಳು ಮಾತ್ರ; ಅಂದರೆ ಪರುಷ ಮತ್ತು ಅನುನಾಸಿಕಗಳು ಮಾತ್ರ (ದ್ರಾವಿಡಿ. ೨೫೫). [ಸಂ.]

**ಪರುಷಕಣೆ** 'ಪರುಸಗಣೆ' ನೋ.

**ಪರುಷಣ** 'ಪರುಸನ' ನೋ.

**ಪರುಷಣಂಗೆಯ್** (ಕ್ರಿ). ಮುಟ್ಟು; ಸೋಕು: ಪರುಷಣಂಗೆಯ್ದು ದೀಕ್ಷಾರ್ಥಿಗಳನಲ್ಲಿ ಚಿತ್ತರುಣಿ ವಿಸ್ಫುರಿಸೆ (ಭಾವಚಿಂ. ೧-೩).

[ಪರುಷಣ(<ಪರುಸನ)+ಕೆಯ್₁]

**ಪರುಷನ** 'ಪರುಸನ' ನೋ.

**ಪರುಷರಸ** (ನಾ). ಮುಟ್ಟಿದುದನ್ನೆಲ್ಲಾ ಚಿನ್ನವನ್ನಾಗಿ ಮಾಡುವುದೆಂದು ಭಾವಿಸಲಾದ ಒಂದು ಬಗೆಯ ರಸ; ಸಿದ್ಧರಸ: ಪರುಷರಸದಂತೆ ಮಾಟಕ್ಕೊಳಗಲ್ಲ ಅದು ಮುಟ್ಟಿ ಲೋಹ ಶುದ್ಧವಲ್ಲದೆ ಪುನರಪಿ ಶುದ್ಧವಾದುದಿಲ್ಲ (ಶವಸಂ. ೫. ೧೮೯-೨೦); ಎಲ್ಲಿ ನೋಡಿದಡಲ್ಲಿ ಪರುಷರಸದೊಱತೆಯಿಂದೆ . . . ಕಣ್ಗೆ ಮಂಗಳವನೀವ ಮೇರುವ ನೋಡುತ್ತೈತಂದನು (ಭಿಕ್ಷಾಚ. ೧-೧೭). [ಪರುಷ₁(<ಪರುಸ)+ರಸ]

**ಪರುಷವಾಕ್ಯ** (ನಾ). **೧.** ಒರಟಾದ ಮಾತು; ಬಿರುಸಾದ ನುಡಿ: ನನ್ನಿಂದ ತಾವು ಆ ಖಳನ ಪರುಷವಾಕ್ಯಗಳನ್ನು ಕೇಳಬೇಕಾಯಿತು (ಶಾಂತಲಾ. ೧೪೨). **೨.** ಒರಟಾಗಿ ಮಾತನಾಡುವವನು: ಕನಕಂ . . . ವೃಷತೌಲಿಯೊಳ್ ನಿಲೆ ಸುವೇಷಂ . . . ಪರುಷವಾಕ್ಯಂ ಪಂದೆ ಪಾಣ್ಬಂ ನರಂ (ಜಾತತಿ. ೧೭-೧೮). [ಪರುಷ₂+ವಾಕ್ಯ]

**ಪರುಷವೃತ್ತಿ** (ನಾ). [ಕಾವ್ಯಮೀ] ವೃತ್ತಿಗಳಲ್ಲಿ ಒಂದು; ಓಜೋಗುಣವನ್ನು ವ್ಯಕ್ತಗೊಳಿಸುವ ವರ್ಣಗಳಿಂದ ಕೂಡಿದ ಪದರಚನೆ: ಮಾಧುರ್ಯ ಓಜಸ್ಸು ಕೋಮಲತೆಗಳನ್ನು ವ್ಯಕ್ತಗೊಳಿಸುವ ವರ್ಣಗಳಿಂದ ಕೂಡಿದ ಪದರಚನೆಗಳನ್ನು ಕಾವ್ಯಪ್ರಕಾಶಕಾರನು ಕ್ರಮವಾಗಿ 'ಉಪನಾಗರಿಕವೃತ್ತಿ', 'ಪರುಷವೃತ್ತಿ', 'ಕೋಮಲವೃತ್ತಿ' ಗಳೆಂದು . . . ಹೇಳುತ್ತಾನೆ (ಕೃಪಿಡಿ. ೨೨೩). 'ಕೋಮಲವೃತ್ತಿ' ಪರಾ. [ಪರುಷ₂+ವೃತ್ತಿ]

**ಪರುಷವೇದಿ** 'ಪರುಸವೇದಿ' ನೋ.

**ಪರುಷವ್ಯಾಹರಣ** (ನಾ). **೧.** =ಪರುಷವಾಕ್ಯ₁. **೨.** ಕರ್ಕಶವಾದ ಶಬ್ದವನ್ನು ಮಾಡುವುದು. **೩.** ಕಠೋರವಾದ ಮಾತು

ಗಳನ್ನಾಡುವವನು. ೨, ೩ : ವೃಥಾ ಪರುಷವಾಕ್ಯಹರಣಂ ಪರಾರ್ಥಚರಿತಚ್ಯಾಯಯಾತಿದೂರಂ ದ್ವಿಜಾವರಸೇವ್ಯಂ ತೃಣರಾಜನಿರ್ದುದು (ಮಲ್ಲಿಪು. ೧೦-೫೮). [ಸಂ.]

**ಪರುಷಶರೀರ** (ನಾ). ಒರಟಾದ ದೇಹ : ಕಡುಗಲಿಯುರವಂದಿರ್ ಪರುಷಸ್ವರ ಪರುಷನಯನ ಪರುಷಶರೀರರ್ (ಕಾವ್ಯಾವ. ೮೬೬). [ಪರುಷ$_2$ + ಶರೀರ]

**ಪರುಷಸ್ವರ** (ನಾ). ಕರ್ಕಶವಾದ ಧ್ವನಿ : ಕಡುಗಲಿಯುರವಂದಿರ್ ಪ[ಪಾಠಾಂ. ಪು]ರುಷಸ್ವರ ಪರುಷನಯನ ಪರುಷಶರೀರರ್ (ಕಾವ್ಯಾವ. ೮೬೬). [ಪರುಷ$_2$+ಸ್ವರ$_2$]

**ಪರುಷಾಕ್ಷರ** (ನಾ). = ಪರುಷ$_2$ ೧೭ : ತಮಿಳುಭಾಷೆ ಮಾತ್ರ ಬಹುಶಃ ೧೨-೧೩ನೆಯ ಶತಮಾನದವರೆಗಾದರೂ ಪರುಷಾಕ್ಷರವನ್ನೇ ಪಡೆದಿದ್ದಿತೆನ್ನಬಹುದು (ದ್ರಾವಿವಿ. ೨೬೩). [ಪರುಷ$_2$ + ಅಕ್ಷರ]

**ಪರುಷಾಟವಿ** (ನಾ). ಭೀಕರವಾದ ಅಡವಿ; ಘೋರವಾದ ಅರಣ್ಯ : ಪರುಷತರಶರಭಕೇಸರಿ ವಿರಾವದಿಂ ಕಿವುಡುವಡಿಸುತುಂ ದೆಸೆಗಳನಾ ಸರಸಿಯ ತಡಿವಿಡಿದಿರ್ದುದು ಪರುಷಾಟವಿಯೆಂಬ ಪೆಸರರಣ್ಯಮಗಣ್ಯಂ (ಚಂದ್ರಪ್ರ. ೫-೪೬). [ಪರುಷ$_2$ + ಅಟವಿ$_2$]

**ಪರುಷೆ** 'ಪರಿಸೆ$_1$' ನೋ.

**ಪರುಷೇಕ್ಷಣ** (ನಾ). ೧. ಕ್ರೂರವಾದ ನೋಟ; ಭಯಂಕರವಾದ ದೃಷ್ಟಿ. ೨. ಕ್ರೂರವಾದ ನೋಟವನ್ನುಳ್ಳವನು : ಅಟ್ಟಾಸುರರಧಿಕಕೋಪಪಾಟಳಪರುಷೇಕ್ಷಣರೆನಿಸಿ ದೃಷ್ಟಿಯುದ್ಧಂಗೆಯ್ದರ್ (ಗದಾಯು. ೮-೨). [ಪರುಷ$_2$ + ಈಕ್ಷಣ]

**ಪರುಷೋಕ್ತಿ** (ನಾ). = ಪರುಷವಾಕ್ಯ ೧. [ಪರುಷ$_2$ + ಉಕ್ತಿ]

**ಪರುಷೋಕ್ತೆ** (ನಾ). ಕಠಿನವಾದ ಮಾತುಗಳನ್ನಾಡುವವಳು : ಅತಿಪರುಷೋಕ್ತೆ . . . ದುಸ್ಥಿತಿಯುತೆ ಮಾರುತಪ್ರಕೃತಿಯುಕ್ಕುಮವಳ್ (ಮದತಿ. ೫-೫). [ಸಂ. ಪರುಷೋಕ್ತಾ]

**ಪರುಸ,** ಪರಿಸ$_1$, ಪರುಶ, ಪರುಷ$_1$, ಸ್ಪರುಶ, ಸ್ಪರುಷ (ನಾ). ೧. ಸ್ಪರ್ಶ; ಸೋಂಕು : "ಪರುಸ(ಷ)-ಸ್ಪರ್ಶ" (ತದ್ಭಕೋ. ೨೫); ಸ್ಪರ್ಶ-ಪರುಸ (ಶಮದ. ೨೬೨ ಪ್ರಯೋ). ೨. ತನ್ನನ್ನು ಸೋಕಿದ ಇತರ ಲೋಹಗಳನ್ನು ಚಿನ್ನವನ್ನಾಗಿ ಪರಿವರ್ತಿಸುವುದೆಂದು ಭಾವಿಸಲಾದ ಒಂದು ಬಗೆಯ ಶಿಲೆ; ಸ್ಪರ್ಶಮಣಿ : ವಿಶ್ರುತಮುನಿರೂಪದ ಪರುಸಂ (ಎಕ. V, ಬೇಲೂರು. ೧೯೨-೪೨; ಸು. 1185); ಸಿರಿ ಪರುಸ ಕಲ್ಪತರು ಸುರಧೇನುಗಳು ಬಂದ ಹರುಷದಿಂ ನೂರ್ಮಡಿಯೆನಿಪ್ಪ ಸಂತಸದಿಂದ . . . ಒಲಿದು ಮಾಳ್ಪೆನಾ ಕಜ್ಜಮಂ ಎನೆ (ತಿರುರ. ದೇ. ೧೧-೭); ಪರಲೆಲ್ಲಂ ಮುತ್ತುಮಾಣಿಕಂ ಪಾಸಟಿಗಳ್ ಪರುಸಂಗಳ್ (ಶಮದ. ೬೯ ಪ್ರಯೋ); ಪರುಸ[ಪಾಠಾಂ. ಷ]ವಿಲ್ಲದ ಭೂಮಿ . . . ಹೊಂದಾವರೆಗಳಿಲ್ಲದ ತಿಳಿಗೊಳಂಗಳವಿಲ್ಲ ಮತ್ತಲ್ಲಿ (ಸಾಳ್ವಭಾ. ೧-೫೮). **ಪರಿಸ$_1$** : ೨. ಪರಿ[ಪಾಠಾಂ. ರು]ಸದೊರೆಗಲ್ ಸುವರ್ಣಕ್ಕೊರೆಪಕ್ಕೆಡೆಯಾಗಿ ತೋರ್ಪವೊಲ್ ಕವಿಗಂ . . . ನಿರಪೇಕ್ಷಮೆನಿಸೆ ನೆಱೆದಿರವೇಡಾ (ಚಂದ್ರಪ್ರ. ೧-೪೬); ಒಗೆದ ಭೂಸುರರ್ಗಿಂದವಿಪಾ ಪರಮಪಾವನನೆ ಮಿಗುವ ಕುಲವೆಂತೆನಲ್ ಪರಿಸ [ಪಾಠಾಂ. ರುಷ] ಸೋಂಕಿದ ಲೋಹದಂತೆ (ಆರಾಚ. ೧-೧೩-೨೬); ಆ ಲೋಹವೊಮ್ಮೆ ಪರಿಸಕ್ಕೆ ತಾಗಿ ಪಡೆಯುವುದು ಸ್ವರ್ಣರೇಖೆ (ಮುಕ್ತಕಂ. ೧೬-೧೫). **ಪರುಶ** : ೨. ಪರುಶ ಕಬ್ಬಿಣಕ್ಕ ಸ್ಪರುಷ ಮಾಡಿಥಾಂಗ (ಮೂರ್ತಿಕಾ. ೪೭-೧೩). **ಪರುಷ$_1$** : ೧. ಇವರ ನೋಟಪರುಷದಿಂದ ಮಾದಲಾಂಬಿಕೆ ತಾಯಿಯವರು ನರದೇಹವಾದಾರು (ಕಾಲಸಂ. ೧೧೪-೧); ಬಾನು ಸುರಿದ ಮಳೆಯ ಹನಿಯು ಪರುಷವು ತಾನೆ ನೆಲಕೆ ತಂದ ರೋಮಹರುಷವು (ಬಾಸಿಗ. ೩೧-೭). ೨. ಆದ್ಯರ ವಚನ ಪರುಷ ಕಂಡಯ್ಯಾ (ಬಸವ. ೧೭೧); ಪರುಷಂ [ಪಾಠಾಂ. ರಷುಂ] ಪೊರ್ದಿದ ತತ್ಸಿದ್ಧರಸಂ ರಸಯಿಸಿದ ಲೋಹದೊಂದಂದಮನೇಂ ಧರಿಯಿಸಿದನೊ . . . ವಿಪ್ರಂ (ಪರ್ಧಪು. ೧೬-೨೧) : ಲೋಹದ ಗುಣವನಱಸುವುದೆ ಪರುಷಂ (ಬಸಪು. ೩೦-೨೭); ನಿರ್ದೈವರಂಗೈತಳಕೆ ಬಂದರೆ ಪರುಷ ಪಾಷಾಣ (ಕುಮ್ಯಾದ್ರೋ. ೧೪-೪೬); ಪರುಷಂ ಮುಟ್ಟೆ ಸುವರ್ಣವಾದ ಬಳಿಕಂ ಕಾರ್ಬೊನ್ನದೆಂದೆಂಬರೇ (ತ್ರಿಪುವಿ. ೪೩-೯). **ಸ್ಪರುಶ** : ೧. ರೂಪದಲಿ ಕಂಗಳು ಶ್ರೋತ್ರ ಶಬ್ದದಲಿ ಸ್ಪರುಶದಲಿ ತ್ವಚವಿರಲು (ಸಿಭಾಗ. ೨-೧-೪೭); ಆ ಸ್ಪರುಶವೆ ಮೃದುವಾದಿ ಸುಪದಾರ್ಥವು (ಚೆಬಪು. ೬೧-೫೬). **ಸ್ಪರುಷ** : ೧. ಪರುಶ ಕಬ್ಬಿಣಕ್ಕ ಸ್ಪರುಷ ಮಾಡಿಥಾಂಗ (ಮೂರ್ತಿಕಾ. ೪೭-೧೩). ☞ ಸಕಾರಯುಕ್ತವಾದ ಈ ರೂಪಗಳು ಅಪರೂಪದ ತದ್ಭವರೂಪಗಳಾಗಿವೆ.

**ಪರಿಸದ ಮೊರಡಿ** = ಸ್ಪರ್ಶಶಿಲೆಯ ಗುಡ್ಡ; ಪರುಷದ ಬೆಟ್ಟ : ಪರಿಸದ ಮೊರಡಿ ಪರಿವ ಸಿದ್ಧರಸದ ಬಲ್ದೊಱೆ . . . ಮೆಱೆಗುಮಾ ಗಿರಿತಟದೊಳ್ (ಶಬಶಂ. ೩-೩೦). **ಪರಿಸದ ಶಿಲೆ** = ಸ್ಪರ್ಶಮಣಿ : ಪರಿಸದ ಶಿ[ಪಾಠಾಂ. ರುಷದ ನೆ]ಲೆ ಸಿದ್ಧರಸದ ನಿರ್ಜರ . . . ಸುರಭಿಯ ಹಿಂಡಿನ ಮೃಗವಿರಲೊಪ್ಪಿತಾ ಸುರಶಿಖರಿ (ತ್ರೈಪಾಲ. ೧-೩೭). **ಪರುಷದ ಪುತ್ಥಳಿ** = ಸ್ಪರ್ಶಶಿಲೆಯ ವಿಗ್ರಹ; ಸ್ಪರ್ಶಮಣಿಯ ಪ್ರತಿಮೆ : ಪರುಷದ ಪುತ್ಥಳಿಗೆ ಕಬ್ಬುನದ ಆಭರಣಗಳುಂಟೇ ಅಯ್ಯಾ (ಅವಚಂ. ೧೫೪-೬೦೪). **ಪರುಷವಾಗು** = ಸ್ಪರ್ಶಮಣಿಯಾಗು : ಗುರುಚರಣವ ಪೂಜಿಸಿ ಎನ್ನ ಹಸ್ತಂಗಳು ಪರುಷವಾದುವು . . . ಗುರುಚರಣವ ನೆನೆದು ಎನ್ನ ಮನ ಪರುಷವಾಯಿತು (ಅಖಂಡೇ. ೨೩-೧೮). **ಪರುಸದ ಕಣಿ, ಪರುಶದ ಕಣಿ, ಪರುಷದ ಕಣಿ** = ಪರಿಸದ ಶಿಲೆ : ಕಲ್ಲೆಲ್ಲಂ ಪರುಸದ ಕಣಿ . . . ಉದಕಮದೆಲ್ಲಂ ಕೇಳ್ ನೃಪತಿ ಪಂಪೆಯೊಳ್ ಸಿದ್ಧರಸಂ (ಉದ್ಭಟ. ೩-೫೮); ಪರುಶದ ಕಣಿಯೆನಿಪರುಭಯ ಕೇತಗೌಂಡಂಗಳು (ಎಕ. VI, ತರೀಕೆ. ೬೧-೪೨; 1154 ?); ಶರಣರ ಪರುಷದ ಕಣಿಯಾಗಿ ನಿತ್ಯಸುಖಿಯಾಗಿ . . . ಇರ್ಪುದು (ಬಸರ. ೪-೫೩); ಎನ್ನ ಪರುಷದ ಕಣಿಯೆ ಗುಣಿಯೇ . . . ನೀನಿಂದು ಬಯಲಾದ್ಯೆ (ಬಸಪು. ೩೬-೨); ಎಸೆವ ಪರುಷದ ಕಣಿಗಳಗ್ಗದ ವೀಧಿವೀಧಿಯಲಿ (ಕೌಶಿರಾ. ೩೯-೬). **ಪರುಸದುಪಲ** = ಪರಿಸದ ಶಿಲೆ : ಈಡಾಡಿದನು ಮುನಿಪತಿಯಿಂದ್ರನೈರಾವತವ . . . ಬಿಳಿಯ ಹಯವನು ಪರುಸದುಪಲವನು (ಸಂಭಪ. ೫-೬೮).

[<ಸಂ. ಸ್ಪರ್ಶ./ಪ್ರಾ. ಪರಿಸ, ಫರಿಸ]

**ಪರುಸಕಲ್ಲು** 'ಪರುಸಗಲ್' ನೋ.

**ಪರುಸಗಣಿ,** ಪರುಷಕಣಿ (ನಾ). = ಪರುಸ ೨ : ಸುರಭೂಜಾರಾಮದಿಂದಂ . . . ಪರುಸಗಣಿಗಳಿಂದಂ ಮಹಾಶೋಭೆಯಂಬೆತ್ತಿರದಾದಂ ರಾಜಿಸಿತ್ತಾ ನಿರುಪಮವರಶೈಲಂ (ಉದ್ಭಟ. ೧೨-೧೨೧). **ಪರುಷಕಣಿ** : ಮಱುಜವಣಿ ಪರುಷಕಣಿ . . . ಸಿದ್ಧಲೇಪಾದಿ ಸುವಸ್ತುಗಳನೇಕವಾಗಿ ಅಲ್ಲಿಯಣ ಶಿವಭಕ್ತರಿಗೆ ಸುಕೃತಾನುರೂಪದಿಂದಾನಂದಕರಗಳಾಗಿರ್ಕುಂ (ವಿವೇಕ. ೨೧೦). [ಪರುಸ + ಕಣಿ$_2$]

**ಪರುಸಗಲ್,** ಪರುಸಕಲ್ಲು, ಪರುಸಗಲ್ಲು (ನಾ). = ಪರುಸ ೨ : ಅದೊಂದು ನೀಲಪರ್ವತಂ . . . ಸಿದ್ಧರಸದ ಮಡುವಿಂ, ಪರುಸಗಲ್ಗಳಿಂ, ಮನೋಜ್ಞಂ (ರಾಮಾಶ್ವ. ೭೨-೨೯). **ಪರುಸಕಲ್ಲು** : "ಪರುಸಕಲ್ಲು-ಸ್ಪರ್ಶಶಿಲಾ, ಸ್ಪರ್ಶಮಣಿ, ಸೋಂಕಿದುದನ್ನು ಚಿನ್ನವನ್ನಾಗಿಸುವ ಕಲ್ಲು" (ಕಸಾ್ತಕೋ. ೫೯೦). **ಪರುಸಗಲ್ಲು** : ಒಂದೊಂದೂ ಮಣ್ಣಿನ ಕಣ ಪವಿತ್ರವಾಗಿವೆ; ಬಂದವರನ್ನೂ ಹೊನ್ನಾಗಿ ಮಾಡುವ ಪರುಸಗಲ್ಲು

ಗಳಾಗಿವೆ (ಸವತಿ. ೧೨೦). [ಪರುಸ+ಕಲ್₃]

**ಪರುಸಗಲ್ಲು** 'ಪರುಸಗಲ್' ನೋ.

**ಪರುಸನ,** ಪರಿಸನ, ಪರುಶನ, ಪರುಷಣ, ಪರುಷನ, ಸ್ಪರುಶಣ, ಸ್ಪರುಶನ (ನಾ). ೧. ಸೋಂಕು; ಸ್ಪರ್ಶ: ಪರು[ಪಾಠಾಂ.ರಿ]ಸನ ನೇಮಮನೆಸಗುತ್ತುರುತರ ಮುದದಮಾಳ್ದು ಶರಣನಡಿದಾವರೆಗಾದರದಿಂ ನಸುಬಾಗುತೆ ಸಿಂದಿರೆ (ವೃಷವಿ. ೪೧-೨೪). **ಪರಿಸನ:** ೧. "ಪರಿಸನ–ಸ್ಪರ್ಶನ" (ತದ್ಭ ಕೋ. ೨೪); ನಿನ್ನ ಶಿವಲಿಂಗಮೂರ್ತಿಯನಮರಕುಲ ಮೆಲ್ಲಮುಂ ತಮ್ಮ ಕರದಿಂದೆ ಪರಿಸನಮನೊಲವಿನಿಂ ಮಾಡಿ ಪೂಜಿಸಿ (ಅರಾಚ. ೧-೩-೧೫). **ಪರುಶನ:** ೧. ಪ್ರಥಮದಲ್ಲಿ ಪರುಶನ[ಪಾಠಾಂ. ಪರುಷ, ಸ್ಪರ್ಶನ]ವೆಂಬ ಪರುಶನಗುಣದಿಂದ ಪಾದೋದಕ (ಚನ್ನಪ.ಕ. ೬೪೧-೧೪೪೧); ಗೌರೀವಲ್ಲಭಾಯ ನಮೋಯೆನುತ ಮೂಜುಸೂಳು ಕೈಮುಟ್ಟಿ ಪರುಶನವನಾಚರಿಸಿ ವಂದಿಸಿ (ಬಸಪು. ೮-೮); ಬೆವರ ಬಿಂದು ಗಡಣಂಗಳವುಮೊಡನೆ ದರುಶನ ಪರುಶನದಿನೊಗೆಯೆ (ಸಿದ್ಧೇಪು. ೨೩-೩೦); ಲಿಂಗವೇ ದರುಶನವು ಲಿಂಗವೇ ಪರುಶನವು (ಸರ್ವಜ್ಞ. ೧೫೦). **ಪರುಷಣ:** ೧. 'ಪರುಷಣಂಗೆಯ್' ಪರಾ. **ಪರುಷನ:** ೧. ಪರುಷನದಿಂ ಶೀತೋಷ್ಣವನಱಿದು ಇಚ್ಛೆಯ ಕಾಲವನಱಿದು ಪರುಷನದಿಂ ಲಿಂಗ ಪರುಷನಕ್ಕೆ ಅರ್ಪಿತವ ಮಾಡುವಲ್ಲಿ ಸ್ಪರ್ಶನೋದಕವು (ಉರಿಪ.ಕ. ೧೧೭–೧೪೭); ಪರುಷನದ ದೇವರನು ಬಳಸಿ ಬಳಸಿ ಬರುತ್ತ . . . ನಲಿವು ತಾವುಗಳೆರಲು (ಬಸವು. ೬೦-೩೨); ಪರುಷವೆಂತಂತೆ ಶಿಷ್ಯಂಗೆ ಗುರುವಿನ ಪರುಷನವೆ ಮೋಕ್ಷ (ಸರ್ವಜ್ಞ. ೯೬). **ಸ್ಪರುಶಣ:** ೧. ಹರಿಕರ ಸ್ಪರುಶಣದೊಳಿದ್ದನುಜನಂ ನೋಡಿ (ತುರಂಗ. ೬೪-೩೮). **ಸ್ಪರುಶನ:** ೧. "ರಣಮುಂ ಮುಟ್ಟೆ ಪೂದುಂ ತಾಂ ಸ್ಪರುಶನಮೆನಿಕುಂ" (ನಾನಾರ. ೧೫೬). ೨. [ವೀಶೈ] ಗುರುವು ಶಿಷ್ಯನಿಗೆ ಕೊಡುವ ದೀಕ್ಷೆಗಳಲ್ಲಿ ಒಂದು: ಶಿಷ್ಯಮಸ್ತಕದೊಳಂ ದಕ್ಷಿಣಹಸ್ತಮಂ ಮಡಗುತ ವರಶಿವನನಾವಾಹನಂ ಮಾಡುವಾ ದೀಕ್ಷೆ ಸ್ಪರುಶನಂ (ವೀಶೈಪು. ೬-೬-೬೫). [<ಸಂ. ಸ್ಪರ್ಶನ]

**ಪರುಸವೇದಿ,** ಪರುಷವೇದಿ (ನಾ). ೧. ತನ್ನನ್ನು ಸೋಕಿದ ಇತರ ಲೋಹಗಳನ್ನು ಚಿನ್ನವನ್ನಾಗಿ ಪರಿವರ್ತಿಸುವುದೆಂದು ಭಾವಿಸಲಾದ ಒಂದು ಬಗೆಯ ಶಿಲೆ; ಸ್ಪರ್ಶಮಣಿ: ಮೇರು[ವ] ಪೊನ್ . . . ಪರುಸವೇದಿಯ ಕಣಿ ಭಂಡಾರದೊಳುಂಟೆನೆ ಕುಡುವನಿವಾರಿತ ದಾನಕ್ಕೆ ಪೋಲ್ವರಾರ್ ಬದ್ದೆಗನಂ (ಪಂಪಭಾ. ೧-೨೪); ಮಾಸಿದ ಪರುಸವೇದಿಯಂತೆ (ಶೀವಣ: ೫-೫೦). **ಪರುಷವೇದಿ:** ೧. "ಪರುಷವೇದಿ – ಸ್ಪರ್ಶವೇದಿ = ಲೋಹವನ್ನು ಚಿನ್ನ ಮಾಡುವ ಕಲ್ಲು" (ತದ್ಭ ಕೋ. ೨೫); ಕಬ್ಬುನ ಪರುಷವೇದಿಯಾದರೇನು ಕಬ್ಬುನ ಹೋಗದೊಡಾ ಪರುಷವದೇಕೊ (ಬಸವ. ೮೮೦); ಪರಮಪವಿತ್ರನಂ ಪರುಷವೇದಿಯ ತೊಟ್ಟಿಲೊಳಿಟ್ಟು . . . ಜೋಗುಳಮಂ ಶ್ರುತಿಗೂಡಿ ಪಾಡಿದರ್ (ಅನಂಪು. ೬-೩); ವರಕರತಳಸ್ಪರ್ಶನಂ ವಿಸ್ತರಿಸುವಡೆ ತಾಂ ಪರುಷವೇದಿಗಳೆರವನಘನಂಪ್ರಸಂಗತಿ ಮುಕ್ತಿಗಾಗರವು (ಬಸವು. ೩೧-೧೯). ೨. ಇತರ ಲೋಹಗಳನ್ನು ಚಿನ್ನವನ್ನಾಗಿ ಪರಿವರ್ತಿಸುವ ಸಿದ್ಧಿಯ ಸಾಧನೆ: ಪರುಷವೇದಿಯ ಸಾಧಿಸಹೋದರೆ ದಾರಿದ್ರ್ಯ ಘನವಾಯಿತ್ತು (ಅವಚಂ. ೧೧೧-೪೫೬); ಪರುಷವೇದಿಯ ಬಲ್ಲ ಪಿರಿಯ ಸಿದ್ಧರಿಗತಿಪಿರಿಯ ನೆನಿಸುವ ಖರ್ಪರನು (ಭೈರಸೂ. I, ೩೨೫). [<ಸಂ. ಸ್ಪರ್ಶವೇದಿನ್]

**ಪರುಸೆ** 'ಪರಿಸೆ₁' ನೋ.

**ಪರೂಷಕ** (ನಾ). ೧. ಒಂದು ಬಗೆಯ ಹಣ್ಣಿನ ಮರ. ೨. ಒಂದು ಬಗೆಯ ಬೆತ್ತ; ವಾನೀರ; ಹಬ್ಬೆ: "ಪರೂಷಕಾಹ್ವಯಂ ಶಾಖಾಳಂ" (ವಸ್ತುಕೋ. ೩೪-೧೦). [ಸಂ.]

**ಪರೂರ್** (ನಾ). ಒಂದು ಊರಿನ ಹೆಸರು: ಪರೂರ ಎಪ್ಪಿದಿಮ್ಬುರು ಸಲಿಸುವ್ಪೋರ್ (ಎಕ. III, ನಂಜನ. ೬೮-೬; ಸು. 870?). [?+ಊರ್]

**ಪರೆ₁,** ಹರೆ₁ (ಕ್ರಿ). ೧. ಹರಡು; ವ್ಯಾಪಿಸು; ವಿಸ್ತರಿಸು: "ಪರೆ–ಪ್ರಸಾರಣೇ (ಹರಡು), ಕಾಲ್ಕೇ ಚ (ಬೆಳಗಾಗು)" (ಶಮಧಾ); ಪರೆದಿರೆ ರಾಗಂ ತನ್ನೊಳ್ನಿರಂತರಂ ಗಗನವಿವರಮೊಪ್ಪಿತ್ತಾದಂ ವರಪಾರಿಜಾತಕುಸುಮೋತ್ಕರ ಸಾಂದ್ರಪರಾಗನಿಸರ ಪಿಂಜರಿತಂಬೋಲ್ (ಕವಿರಾ. ೧-೧೦೨); ವೀಱಿನ ಸಾವು ಕತೆಯಾಗಿ ಪರೆದುದು ಮೂಱುವೀ ಲೋಕದೊಳಗೆಲ್ಲ (ಸೌಇಇ. IX-i, ೩೧-೧೫; 966); ಪುಸಿನುಡಿಯುಂ ಮದೀಯಜನಕಂ ನುಡಿದಂದು ಜನಾಪವಾದವೆತ್ತೆಸೆಗಮನರ್ಗಳಂ ಪರೆಗುಂ (ಪಂರಾಮಾ. ೬-೧೧೪); ಹರನ ಶರಭಂಗಳು ನರಲೋಕ ದೇವೇಂದ್ರರು ನೆರೆದು ಪರೆದು ಬಿಜ್ಜಳನ ಪುರದ ಪಲವು ರಾಜವೀಥಿಗಳೊಳು ಸುಳಿತಪ್ಪಾಗಳು (ಬಸರ. ೮-೬೦). ೨. (ಬಳ್ಳಿ ಅಥವಾ ಬೇರಿನಂತೆ) ಹಬ್ಬಿಕೊಳ್ಳು; ಹಬ್ಬು: ಪವಳದ ಬಳ್ಳಿಯು ತುಱುಗಲ್ಪವಣಿಲ್ಲದೆ ತಳ್ತು ಬೆಳೆದು ಕುಡಿವಿಟ್ಟ ಪರಾರ್ಣವತಟದೊಳ್ಪರೆದಪುದೆಂಬವೊಲೆಸೆದತ್ತು ಸಾಂದ್ರಸಂಧ್ಯಾರಾಗಂ (ಕಾದಂಪೂ. ೨೬೩); ಸಭಾಂತರಾಳಮಂ ಸುರಭಿಶರಾಂಗದೀಪ್ತಿ ಪುದಿಯಲ್ ಯಮುನಾನದಿಯೊಳ್ ಸುಶೈವಲಂ ಪರೆದವೊಲೊಪ್ಪಿ ತೋಱಿತೆ (ನೇಮಿಪು. ೮-೨); ದೆಸೆಯೆಂಟಂ ಪಿಟ್ಟಿಸುತ್ತಗ್ಗಳಮೆನೆ ಪರೆದಿರ್ಪಳ್ಳಿಗೊಂಬೇಟಿಗೆಯಿಂದಾಗಸಮಂ ಪೊತ್ತಿರ್ಪ ಮೇಲ್ಗೊಂಬಿನ . . . ವಟಭೂಜಾತಮಂ ಕಾಂತೆ ಸಾರ್ದಳ್ (ದಶಕು. ೨-೪೬); ಥಳಥಳಿಸಿ ಬಳೆದು ಬಳ್ಳಿವರಿದು ಪರೆದು ಪಸರಿಪ ಕಟಾಕ್ಷರುಚಿರರುಚಿಯೆಂಬ ವದನವಿಧುವಿಮಳಪ್ರಭಾಪಟಲಂ (ರಾಜಶೇ. ೭-೧೭೫). ೩. ಚೆದರು; ಹರಿ: ನೃತ್ಯವಾದ್ಯಗೀತಾತೋದ್ಯಂಗಳೊಳ್ ಕಿಱಿದುಂ ಬೇಗವಿರ್ದೋಲಗಮುಮಂ ಪರೆಯಲ್ವೇಟ್ಟು (ಪಂಪಭಾ. ೩-೮೧೫); ಪರಭೂಪಾಳಾನ್ಧಕಾರಂ ಪರೆಯೆ (ಸೌಇಇ. I X-i, ೧೧೪-೧೯; ಸು. 1057); ಪೇರೋಲಗಮುಂ ಪರೆಯೆವೇಳ್ದಿಲ್ಲರಂ ಕಳುಪಿ (ಬಸರ. ೬-೩೭); ನಿಜಪಿತನ ಜನನತಿಮಿರಂ ಪರೆಯೆ . . . ಸೌಂದರಗಣಾಧೀಶ ನೆಂದೆಂಬ ದಿನಮಣಿ ವಿರಾಜಿಸುತ್ತಿರ್ದಂ (ಸೌಂದಪು. ೫-೪೨). ೪. ಇಲ್ಲವಾಗು; ಹೊರಟುಹೋಗು: ನಿನ್ನ ಮರುಳತನಕ್ಕೆ ಮುನ್ನಮೆ ಬೇಸತ್ತು ಬಿಟ್ಟು ಪರಿಗ್ರಹಮೆಲ್ಲಂ ಪರೆದು ಪೋದುದು (ಪಂಚತಂ. ೧೩೧-೪); ನಿಷಧನಗದ ನೆಗೆದ ಕೆಂಬೊಳಪಿನೊಳ್ ಪಳಂಚಿ ರಂಜಿಸಿದ ಸಂಜೆ ಪರೆಯೆ (ಪಂರಾಮಾ. ೧-೬೧ ವ); ಕಱಿದ ಸುಖಂಗಳಂ ಪರೆದ ಜವ್ವನಮಂ ದೊರೆಕೊಳ್ಳದರ್ಥಮಂ . . . ಮಗುಟಿದಾಸೆ ಮಾಡಿಯುಮ್ಮಳಿಸುವರೇಕೆ ದುರ್ಮತಿಗಳ್ (ದಶಕು. ೧೮-೨೬); ಬಿಸಿ ವಡೆದಾ ಸರೋವರದಲ್ಲಿ ವಿಹಂಗಳು ಬಿಸಿ ತಾಗಿ ಬಾಯ್ಬಿಡುವುದನು ಅಸಿಯಳು ಮಱುಕದಿಟ್ಟಿಯಲಿ ನೋಡಲ್ಕಾಗ ಪಸಿ ತಾಪ ಪರೆದುದಾ ಕ್ಷಣದಿ (ಮೋಹತ. ೯-೪೫). ೫. ನಾಶವಾಗು; ಅಳಿ: ಮಲಹರಾಣುಸ್ಮರಣಮಂ ನೆಗಳ್ದೊಡಲ್ಲದಾ ಕಲುಷಂ ಪರೆಯದು (ಪದ್ಮರಾ. ೧೧-೧೪); ಅಸುರರ ಸಂತತಿಯುಂ ಮುಂ ಶೀವಿದ ಕೃತಕಧ್ವಾಂತಮುಮಾ ಜಯಭೂಪತಿ ದಿನಕರಶರಮಂ ಬಿಡಲೊಡನೆ ತಾಂ ತೆಕ್ಕನೆ ಪರೆದತ್ತು (ಜಯಕಾ. ೭-೩೩). ೬. ಕೆದರು; ಅಸ್ತವ್ಯಸ್ತವಾಗು; ಹರಡಿಕೊಳ್ಳು: ಪೊದಟ್ಟಿ ಕಬರೀಭರಂ ಪರೆದು ಪರ್ವೆ (ಅವಿಪು. ೧೨-೧೪); ಲಲಾಟದೊಳ್ಪರೆದ ಕುರುಳ್ಗಳಂ ವಿರಹವಿಹ್ವಲೆಯಾಗಿ ಲತಾಂಗಿ ತಾಳ್ದುವಳ್ (ಕಾದಂಉ. ೩೩೩). ೭. ಕಲಸಿಕೊಳ್ಳು; ಕದಡಿಹೋಗು: ಬರೆದ ವಿಚಿತ್ರಪತ್ರನಿಚಯಂ . . . ಶಶಿಕಾಂತದ ಕೇರ್ಗಳ ಸೀರ್ವೊನಲ್ಗಳಿಂ ಪರೆಯೆ (ಪಂರಾಮಾ. ೧-೧೧೭); ಪರೆದ ತಿಳಕಮನೆ ಕಂಡೆಸೆದಿರೆ ಕೊಟ್ಟುದ್ದಂಡಪಾದದುರ್ಗರ್ಗನ್ನಡಿಯೊಳ್ ತರಳಾಕ್ಷಿ ತಿರ್ದಿದಳ್ ಚೆಚ್ಚರದಿಂ – ಮತ್ತೊಂದು ಪಾದ

ದುಂಗುಟದಿಂದಂ (ಅರ್ಥನೇ. ೩-೧೦೧); ಬರೆಪದೆ ಬಣ್ಣವು ಪರೆಯೆ ಕಪೋಲದಿಂದುರುಳಿದ ಕಂಬನಿಗುರುತಿದೊ ತಿಳಿಯಾ (ಶಾಕುಂತ. ೮೯ ಅಡಟ). **೮. ಚೆಲ್ಲಾಪಿಲ್ಲಿಯಾಗಿ ಬಿದ್ದಿರು ; ದಿಕ್ಕಾಪಾಲಾಗಿರು:** ಕರುಣದಿಂದೆ ಕುಂಚದ ಕೋಲೊಳ್ ಪರೆದಿರ್ದ ಪಣ್ಗಳಂ ಕೂಸಿನ ಮುಂದೆ ಸಾರ್ಚುತ್ತಂ (ವಡ್ಡಾರಾ. ೯-೧೯); ಬೀರರ ಚೆನ್ನರ ಸಂದ ಚೆನ್ನಪೊಂಗರ ತಲೆ ತಾಟಪಟ್ ಕೆದಱದಂತೆ ನಿರಂತರಮಮಜಿರಂಗದೊಳ್ ಪರೆದಿರೆ (ಪಂಪಭಾ. ೮-೧೦೬); ತುಱುಕಾರ್ತಿಯರ್ ತಿಱಿದು ತಂದು ಪಾಱುತನಕ್ಕೆ ಪರಪೆ ಪರೆದು ಕೊರಗಿರ್ದ ಕಱಿಯ ನೆಯ್ದಿಲ್ಗಳಿಂ (ಲೀಲಾವ. ೫-೫೫ ಪ); ನೆತ್ತರ್‌ವೆರಸಿ ಪರೆದ ಮುತ್ತುಗಳು ತನ್ನ ಬರವಿಂಗೆ ವನದೇವತೆಯಿಟ್ಟ ರತ್ನಾಂಜಲಿಗಳಂತಿರೆ. (ನಂಬಿರ. ೧೮-೨೨); ಪರೆದಿರ್ಪ ನವಗ್ರಹಮಂ ಕರದೊಳ್ತಳೆದಿಳೆಗೆ ತಂದು ಬಲ್ಪಂ ತೋರ್ಪಂ ತರಲಾತನಂಗುಲಿಗಳೊಳ್ ಪಿರಿದುಂ ನವರತ್ನದುಂಗುರಂ ಸೊಗಯಿಸುಗುಂ (ತ್ರಿಷವಿ. ೧೮-೪೭). **೯. ಅಗಲವಾಗು; ಅರಳು ; ಬಿಚ್ಚಿಕೊಳ್ಳು:** ಕೂಡಿ ಮಣಿಭೂಷಣ ಧ್ವನಿಗಾಡುವ ಸೋಗೆಗಳ ಪರೆದ ಪೀಲಿಯ ಕಣ್ಣಿಂ ಮಾಡವೆ ಕನ್ಯಕೆಯಂ ನಡೆ ನೋಡಲ್ ಕಣ್ದೆಱೆದುದೆಂಬಿನಂ ಸೊಗಯಿಸುಗುಂ (ಕಾದಂಬ. ೩). **೧೦. ಮುಂದಕ್ಕೆ ಸರಿ,—ಚಲಿಸು :** ಚಾರುದತ್ತನೊಡವಂದ ಪರದರಂ ಪರೆಯಲೀಯದೆ ನೆರಪಿಕೊಂಡು ಬರೆ (ನೇಮಿಪು. ೪-೭೦ ಪ); ತವ ನಯನಸರೋಜಾತದಿಂ ಕ್ಷೀರಧಾರಾಕಾರಂ ಕಾಂತಿಪ್ರವಾಹಂ ಪರೆದು ಬರುತಿದೋ ಓಡಿಕುಂ ಪಾಪಮಂ ಮೇಣ್ (ಮೈಸೂಮ. ೨-೬೧). **೧೧. ಕೂಡು ; ಸೇರು ; ಒಂದಾಗು :** ಪರಿವಿಡಿಯಿಂದಂ ಸಂಸ್ಕೃತ ರರಗುವರರ್ ಬಿಜ್ಜೆಗಲ್ತರೊಳ್ ಮತ್ತವರೊಳ್ ನೆರೆದಂ ಕಾಮದೆ ನಂದಂ ಪರೆಯಂ ಸರ್ವಾರ್ಥಸಿದ್ಧನದರೊಳಗೆಂದುಂ (ಸೌನಂದ. ೨-೬೩). **೧೨. ಬೆಳಗಾಗು ; ನಸುಕು ಹರಿ:** "ಪರೆ-ಪ್ರಸಾರಣೇ (ಹರಡು), ಕಾಲ್ಯೇಚ (ಬೆಳಗಾಗು)" (ಶಮಧಾ); ದುರಿತಘನತಿಮಿರಮೆತ್ತಂ ತೆರಳ್ದು ಜಿನಸವನಮಂಗಲಕ್ಕಗಿದಾಗಳ್ ಪರೆವಂತಾದುದು ಕಾಲಾಗರುಧೂಪಶ್ಯಾಮ ಧೂಮಮಾತ್ತವ್ಯೋಮಂ (ಆದಿಪು. ೭-೭೯). **ಹರೆ₁ : ೧.** ಹರೆದು ಮೋಹಿಸುವೀ ಚರಾಚರ ನೆರೆದು ನಿಮ್ಮಯ ರೋಮಕೂಪದ ಹೊರೆ ಯೊಳಗೆ ಹೊಳೆದಾಡುತಿಹುದು (ಕುಪ್ಯಾಭೀ. ೩-೬೨); ರಾಜಾಧಿರಾಜರ ರಾಜಸಭೆಯೊಳಗೆ ಹರೆ[ಪಾಠಾಂ.ರ]ದುದೀ ವೃತ್ತಾಂತವು (ತೊರಂಾ. ೨-೧-೨೧); ಹರೆಯಬೇಹುದು ಕೀರ್ತಿ ಭುವನಾಂತರಗಳಲಿ ದೆಸೆಗಳಲಿ (ಸಿಭಾಗ. ೧೦-೭೮-೩೪). **೩.** ಸಾರಿದ್ದ ಬ್ರಹ್ಮನೋಲಗ ಹರೆ [ಪಾಠಾಂ. ರ]ಯಿತ್ತು (ಅನಹಂ. ೫೫-೨೩೫); ದೆಸೆಯರೆಲ್ಲರ ಹರೆಯವೇಳ್ದಂ ಸನ್ನೆಯಿಂದೋಲಗವಂ (ಕುಮುರಾ. ೩-೧೮); ಹರನ ಬೀಳ್ಕೊಂಡಖಿಳ ದಿವಿಜರು ಹರೆದುದು (ಕುಪ್ಯಾಕ. ೮-೧); ಹರೆದುದೋಲಗವಾ ಸಮಯದಲಿ (ತೊರಂಾ. ೪-೭-೨೭). **೪.** ಗೊಹೇಶ್ವರನ ಶರಣರ ನಿಲವ ಕಂಡ ಬಳಿಕ ಮಱಿಹು ಬೆಳಗ ಕಂಡ ಕತ್ತಲೆಯಂತೆ ನೋಡ ನೋಡ ಹರೆವುದು (ಅವಚಂ. ೨೨೮-೧೮೩೪), ಆತಂಗೆ ತಾಂ ತನಿಲೆಡಱು ಬಡತನ . . . ಹರೆವುದು (ಪಚಕಾ. ೭-೧೨); ಗುರು ಬರ್ಪುದಂ ನೋಡಿದೊಡೆ ಕಣ್ಣ ಪಾಪವದು ಹರೆವುತದೆ (ಪದ್ಮರಾ. ೮-೭೦); ಹರುಷ ಬಲಿದುದು ಮನದ ಸಂಶಯ ಹರೆದುದು (ಕುಪ್ಯಾಭೀ. ೭-೩೪); ಹರೆದುವು ತಾರೆಗಳ್ನೆರೆದುವು ಕೋಕಗಳು (ಕಂಸವಿ. ೯-೨೦೮). **೧೩. ಹೊಟ್ಟೆ ಎಳೆದುಕೊಂಡು ಚಲಿಸು ; ದೇಕು ; ತೆವಳು :** ಇನ್ನು ಬಗ್ಗಿಕೊಂಡು ಹರೆಯಬೇಕು . . . ಎದ್ದು ನಿಲ್ಲಬೇಡಿ (ಸ್ವಪ್ನಕೊ. ೨೯). **೧೪. ದೂರವಾಗು ; ದೂರಕ್ಕೆ ಹೋಗು :** ಹರೆ[ಪಾಠಾಂ.ರ]ದು ನಡೆ ಬಲೆಯ ಹಸರಿಸು (ಪಚಕಾ. ೫-೨೪). [ದೇ.॥ ತಮಿ. ಮಲ. ಕೊಡ. ಪರ]

**ಪರೆ₂, ಹರೆ₂ (ನಾ). ಬೆಳಗಿನ ಜಾವ; ನಸುಕು; ಅರುಣೋದಯದ ಕಾಲ :** ಪರೆಯ ಭಾನೂದಯದೊಳ್ಕರ್ತೃಗಳೆಯುನ್ನಿರೆ ರಿಪುಗಳ್ಕರ್ತೃಗಳೆ ವೆಸರಾದು ದಾತನೊಕ್ಕಲ್ವೆಸರುಂ (ಸೌಇಇ. XI-i, ೪೫-೫; 980). **ಹರೆ₂:** ಇತ್ತ ಮುದದಿಂದ ಬಂಧುಶ್ರೀಳರಂ ಹರೆಯ ಹೊತ್ತ ಚೆಕೊಳಗೆಳ್ದು . . . ಮನೆಗೆ ಪೋಗಿ (ಸಮ್ಯಕೌ. ೫-೪೯); ಆಸೆಯನುದಿನಮೇತವೆನ್ನ ತೀವುತೆದೆಯಂ ಸಂಜೆಯುನ್ನ, ಇರುಳೊಳಾಡಿಸಿ ಹರೆಯ ಮುನ್ನ ಬರಿಯ ಮರಿಗೆಯನಿಳಿಪುದು ! (ಗಿಳಿವಿಂ. ೬೮-೩); ಬಾಳ್ ಬಂಜೆಯಾಗಿಹುದು ; ಹರೆಯು ಬೆಳಗುವ ಮುನ್ನ ಸಂಜೆಯಾಯ್ತು (ಪಯಣ. ೯೯-೨೨).

[<ಪರೆ₁]

**ಪರೆ₃** 'ಪಱಿ₁' ನೋ.

**ಪರೆ₄** 'ಪೊರೆ₅' ನೋ.

**ಪರೆ₅, ಹರೆ₅ (ನಾ). ೧. ಮರದ ಕೊಂಬೆ,-ರೆಂಬೆ :** ಪೆರ್ಮರಂ ಪರೆ ಮುರಿದುರುಳ್ದುವಯ್ (ಶ್ರೀರಾಮಾ. ೪೦೩-೧೪). **ಹರೆ₅ : ೧.** "ಶ್ಲಾಖಾ=ಮರದ ಹರೆ" (ಕಾಶಕ್ಯ. ೯); ಹೂವಿನ ಆಸೆಗೆಂದೀ ಮರವೇರಲು ಸಂಪಿಗೆ ಹರೆ ಗಟ್ಟಿಯಲ್ಲ (ಚಂದ್ರವೀ. ೫೪-೧೪); ಮುಖಕ್ಕೆ ಹರೆ ಗೀರಿ ನೆತ್ತರು ಸೋರಿದ್ದುದು ಅವನಿಗೆ ಗೊತ್ತೇ ಇರಲಿಲ್ಲ (ಮಲಿಮ. ೫೬೩); ಆದರ ದೃಷ್ಟಿ ದೂರದಲ್ಲಿ ಒಂದು ಮರವನ್ನೇರಿ ಮರದ ಹರೆಯನ್ನು ಕಡಿಯುತ್ತಿದ್ದ ವ್ಯಕ್ತಿಯೊಬ್ಬನ ಮೇಲೆ ಬಿದ್ದಿತು (ಪಂಜಪಂ. ೨೩). **೨. (ಕರಾ) ಬಿದಿರಿನ ಗಂಟುಗಳಲ್ಲಿಯ ಟಿಸಿಲು :** ಬೇಲಿಗೆ ನಿಲ್ಲಿಸುವ ಹರೆಯನ್ನು ಪೂರ್ಣ ಸವರಬಾರದು (ರೂಢಿ).

**ಪರೆ₆ (ನಾ). ಪರಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀ ಎಂಬ ನಾಲ್ಕು ವಾಙ್ಮಯರೂಪಗಳಲ್ಲಿ ಒಂದು :** ಪರೆಯೇ ಮಾನಸ ಭಕ್ತಿ ಚಾಕ್ಷುಷಪದಂ ಪಶ್ಯಂತಿಯೇ (ಶತಕ. ೧೩೫-೯೩). [ಸಂ. ಪರಾ]

**ಪರೆಕಟ್ಟು (ಕ್ರಿ). (ಹಣೆಯನ್ನು) ವ್ಯಾಪಿಸುವಂತೆ ಕಟ್ಟು :** ತಪಶ್ರೀ ನಲವಿಂದೆ ತಾನೆ ಪರೆಕಟ್ಟಿದ ಪಟ್ಟವಿದೆಂಬಿನಂ ತ್ರಿರೇಖಾನಿಚಿತಂ ವಿಭೂತಿಯೆಸೆದತ್ತು ಮುನೀಂದ್ರವಿಶಾಲಫಾಲದೊಳ್ (ಕುಸುಮಾ. ೧-೨೨). [ಪರೆ₁ + ಕಟ್ಟು₁]

**ಪರೆಗಡಿ, ಹರೆಗಡಿ (ಕ್ರಿ). ೧. ಕತ್ತರಿಸಿ ಚೆಲ್ಲು; ತುಂಡರಿಸಿ ಹರಡು :** ವರುಣೋದ್ಭವನೆಚ್ಚ ಸರಲ ಸಂದೋಹವ ಪರೆಗಡಿದಾ ಖೇಚರನು ಪುರಹರ ತ್ರಿಪುರವನೆಸಲೆಂದು ನಿಂದಾ ಪರಿಯೊಳೆಸೆದನಾಜಿಯೊಳು (ಅಂಜಚ. ೬-೧೪೫); ನಿಮಿಷದೊಳ್ಪರೆಗಡಿದನನಿತು ಚತುರಂಗಮಂ (ಜೈಮಿಭಾ. ೨೦-೧೩). **ಹರೆಗಡಿ : ೧.** ಭಗದತ್ತನಬಿಬರ ಹರೆಗಡಿದು ಹೊಗರಂಬ ಸುರಿದನು (ಕುಪ್ಯಾದ್ರೋ. ೩-೩೧); ಹರೆಗಡಿದು ಬೊಬ್ಬಿರಿದು ಸವರಿದಂ ಸೀಳಿದಂ (ತುರಂಗ. ೫೨-೧೫). **೨. ನಾಶಮಾಡು :** ಶತ್ರುವನು ವಹ್ನಿಜ್ವಾಲೆಯನು ರೋಗವನು ತತ್ತತ್ಕಾಲದಲಿ ಹರೆಗಡಿಯದಿದ್ದರೆ ಬಳಿಕಸಾಧ್ಯವಲಾ (ಸಿಭಾಗ. ೧೦-೪-೪೩): [ಪರೆ₁ + ಕಡಿ₂]

**ಪರೆಗಣ್ಣು (ನಾ). ಕಣ್ಣುಗುಡ್ಡೆಯ ಮೇಲೆ ಪೊರೆ ಬರುವ ಒಂದು ಬಗೆಯ ರೋಗ :** ಮಂಗರವಳ್ಳಿ, ಕಸ್ತೂರಿ, ಅರಸಿನ ಇವಂ . . . ಜೇನುತುಪ್ಪದಿ ಹಚ್ಚಲು ಪರೆಗಣ್ಣು ಮಾಣ್ಗುಂ (ವಿವೈವಿ. ೧೩೫); ಅಳಿಗಣ್ಣೊ ಪರೆಗಣ್ಣೊ (ಕುಪಾವು. ೪-೨೪೨).

[ಪರೆ₄ (<ಪೊರೆ₅) + ಕಣ್ಣು (<ಕಣ್)]

**ಪರೆಗಳಚು** 'ಪೊರೆಕಳಚು' ನೋ.

**ಪರೆಗಳೆ** 'ಪೆರೆಗಳೆ' ನೋ.

**ಪರೆಗುಡು (ಕ್ರಿ). (ತಮಟೆಯಂತೆ) ಧ್ವನಿಯನ್ನು ಮಾಡು ; ನಾದ ಹೊಮ್ಮಿಸು :** ಗಾಳಿತೇರು ರೆಕ್ಕೆಗಳ ಬೀಸಿ ಪರೆಗುಡುವ ಜಯ ವಿಲಾಸ (ಅರಳು. ೨೧೬-೬).

[ಪರೆ₃ (<ಪಱಿ₁) + ಕುಡು₁ (<ಕೊಡು₁)]

**ಪರಿಪದಿಭಟ್ಟ** (ನಾ). ಒಬ್ಬಾತನ ಹೆಸರು : ಆರೀದಗೋತ್ರಂ ಪರಿಪದಿಭಟ್ಟರ್ಗ್ಗೆ ಕೊಳನೆಲ್ಲೂರ ಬ್ರಹ್ಮದೇಯಂ ಕೊಟ್ಟವರ್ (ಎಕ. IV, ಎಡತೊ. ೬೦-೬೮ ; ಸು. 890). [?+ಭಟ್ಟ]

**ಪರಿಪು**$_1$ 'ಪರಪು$_1$' ನೋ.

**ಪರಿಪು**$_2$ 'ಪರಪು$_2$' ನೋ.

**ಪರಿಪೊತ್ತುಱ್** (ನಾ). ಬೆಳಗಿನ ಹೊತ್ತು ; ಮುಂಜಾವ ; ನಸುಕು : ಡಂಗುರಮಂ ಪೊಯ್ಯುವ ತೆಱದಿಂ ಪರಿಪೊತ್ತುಱೊಳೆದ್ದು ಬೇಂಟೆವಱಿಯಂ ಪೊಯ್ವರ್ (ಸಮುಪ. ೩೮೨-೩೯, ಅನುಬಂಧ. I). [ಪರಿ$_2$+ಪೊತ್ತುಱ್ (<ಪೊಟ್ರುಱ್)]

**ಪರಿಬಿಡು** 'ಪೊರೆವಿಡು' ನೋ.

**ಪರಿಯ**$_1$ 'ಪಱಿಯ' ನೋ.

**ಪರಿಯ**$_2$ 'ಪರಯ' ನೋ.

**ಪರಿಯಿಸು,** ಪರಯಿಸು, ಹರಿಯಿಸು (ಕ್ರಿ). ೧. ವ್ಯಾಪಿಸುವಂತೆ ಮಾಡು ; ಪ್ರಚುರಪಡಿಸು : ಸಲೆ ಪುರಾಣಚೂಡಾಮಣಿಯೆಂದುಪ ಶಮದಿಂ ಬರೆಯಿಸಿ ಮಲ್ಲಪಯ್ಯನುಂ ಪುನ್ನಮಯ್ಯನುಂ ಪರಿಯಿಸಿದರ್ (ಶಾಂತಿಪು. ೧-೩೮) ; ತಮ್ಮುತ್ತಿರ್ವರುಂ ಪೊನ್ನಿಗನಿಂ ಬರೆಯಿಸಿದರ್ ಸಕಳೊರ್ವಿಗೆ ಪರಿಯಿಸಿದರ್ ಸಲೆ ಪುರಾಣಚೂಡಾಮಣಿಯಂ (ಅಜಿಪು. ೧-೩೪). ೨. ಇಲ್ಲವಾಗಿಸು ; ನಿವಾರಣೆ ಮಾಡು : ಸಂಧ್ಯಾ ಪ್ರದೀಪಸಂಜನಿತಸಿದ್ಧಾಂಜನಮಿದೆನಿಸಿ ಕೌಶಿಕಂಗಳ ಕಣ್ಗಳ ತಿಮಿರಮಂ ಪರಿ [ಪಾಠಾಂ. ರ]ಯಿಸೆಯುಂ (ಪರ್ಶಪು. ೬-೨೯ ವ) ; ಪರಿ[ಪಾಠಾಂ. ಹರಿ]ಯಿಸಿದಂ ಪುಂವೇದದ ಪುರಾಣಸತ್ಕರ್ಮದೊಡನೆ ನೋಕರ್ಮಮನಕ್ಷರ ಪರಿಣಾಮಯುತಂ ಹಾಸ್ಯರತ್ಯರತಿಶೋಕಭಯಜುಗುಪ್ಸಾಹ್ವಯಮಂ (ಪಾರ್ಶ್ವಪು. ೧೫-೧೫೦). ೩. ಚೆದರಿಸು : ತುಂಬಿಗಳ ಬಂಬಲ್ಗಳ್ಪಂ ಕಣ್ಬಟ್ಟು ನೋಡುವ ಕಾಂತೆಯರ ಕಡೆಗಣ್ಣ ಬೆಳಗಿಂ ಪರಿಯಿಸಲುಂ (ದಶಾವ. ೨-೯ ವ). **ಪರಯಿಸು:** ೧. ಸುರಧೇನುವ ತೊರೆದಭೀಷ್ಟಮಂ ಕಱೆದುದೆನಲು ಧರೆಗಿತ್ತು ವಿತ್ತಮಂ ತಾಂ ಪರಯಿಸಿದಂ ಜನಮನಗ್ರಜಂ ಹರಿಯಂಣಮಂ (ಸೌಇಇ. IX-i, ೨೪೯-೩೯ ; 1147). ೪. ಮುಗಿಸು ; ಬರಖಾಸ್ತು ಮಾಡು ; ಮುಕ್ತಾಯ ಮಾಡು : ತೋಟವಾಳಂಗೆ ಪಸಾಯಮನಿತ್ತು ಪಟ್ಟವಣೆಯಿಂದೇಳ್ದೋಲಗಮಂ ಪರ[ಪಾಠಾಂ. ರಿ] ಯಿಸಿ (ರಾಜಶೇ. ೧೦-೫ ವ). **ಹರಿಯಿಸು:** ೨. ದುರಿತಮನುಸುರಿಯ ದೈನ್ಯ ಮನೊಂದೊಂದನೆ ಸುರನದಿ ವಿಧು ಸುರಭೂಜ ಹರಿ [ಪಾಠಾಂ. ರ]ಯಿಪವಲ್ಲ ದೊಳ್ಳಿದರಂತಿವೆಲ್ಲವ ಪರಿಹರಿಸಲು ನೆರೆದಪವೆ (ಕುರಾಸಾಂ. ೧-೪೯). [ಪರಿ$_1$+-ಇಸು$_3$]

**ಪರಿಯುಚ್ಚು** 'ಪೊರೆಯುರ್ಚು$_1$' ನೋ.

**ಪರೀಂಗಿತ** (ನಾ). ೧. ಬೇರೆಯವರಿಗೆ ಸೂಚನೆ ಕೊಡುವುದು ; ಮತ್ತೊಬ್ಬರಿಗೆ ಸನ್ನೆ ಮಾಡುವುದು. ೨. ಬೇರೆಯವರ ಮನೋಗತ,-ಅಭಿಪ್ರಾಯ : ಸಾಧುಸಮಾಧಿ ಪರೀಂಗಿತಬೋಧಂ ನಿರ್ವಾದಮಪ್ಪುದಂತದು ಸೂಕ್ಷ್ಮಂ (ಕಾವ್ಯಾವ. ೬೩೪). [ಪರ$_3$+ಇಂಗಿತ]

**ಪರೀಂಗಿತಜ್ಞ** (ನಾ). ಬೇರೆಯವರ ಅಭಿಪ್ರಾಯವನ್ನು ಊಹಿಸಿ ತಿಳಿಯುವ ವ್ಯಕ್ತಿ ; ಮತ್ತೊಬ್ಬರ ಆಶಯವನ್ನು ಅರಿಯುವ ವ್ಯಕ್ತಿ : ಗುರುದೇವ ದ್ವಿಜಭಕ್ತಂ ತರುಣವಯಸ್ಕಂ ಪರೀಂಗಿತಜ್ಞನುದಾರಂ (ಪಂಚತಂ. ೨೧೬-೨೨); ಪರೀಂಗಿತಜ್ಞಳಲ್ಲದ ಇಂದ್ರಾಣಿ ಅದನ್ನು ಅರಿತರಲ್ಲವೆ ? (ಹೊಸಕ್ತಿ. ೨೦). [ಸಂ.]

**ಪರೀಂಗಿತೆ** (ನಾ). [ಸಂಗೀತ] ಒಂದು ಶ್ರುತಿಯ ಹೆಸರು : ಭೃಂಗ ಜಾತಿ ಪರೀಂಗಿತೆ [ಪಾಠಾಂ. ಪರಂಗೀತೆ] ಎಂಬಿರಡು ಶ್ರುತಿಗಳೇ ಗಾಂಧಾರ ಸ್ವರದಿಂದುದಿಸಿದವು (ವಿವೇಕ. ೧೮೬). [?]

**ಪರೇಡ್** 'ಪರೇಡು' ನೋ.

**ಪರೇಡು,** ಪರೇಡ್, ಪೆರೇಡ್, ಪೆರೇಡು (ನಾ). ಸೈನ್ಯ, ಪೋಲೀಸು ಮುಂತಾದವರು ಮಾಡುವ ಪ್ರದರ್ಶನ : ನಾನು ಹೊರಡುತೀನಿ. ಪರೇಡಿಗೆ ಹೊತ್ತಾಗುತ್ತದೆ (ನಾಪೂ:ಲೀ. ೨೬). **ಪರೇಡ್ :** ಪರೇಡ್ ಜಾಗವೆಲ್ಲಾ ಜನರಿಂದ ತುಂಬಿ ಹೋಗಿ, ಪರೇಡ್ ನಡೆಯುವುದೇ ಕಷ್ಟವಾಯಿತು (ಬಿಲ್ಲಿಪ. ೪೩). **ಪೆರೇಡ್ :** ಮಿಲಿಟರಿ ಪೆರೇಡ್ ನಡೆದಾಗ ಆ ಹೆಂಗಸು . . . ಶೃಂಗಾರ ಮಾಡಿಕೊಂಡು ಹೊರಟಿದ್ದಳು (ಗೋಪುರ. ೮೬) ; ಅವನು ಪೆರೇಡ್ ಮೈದಾನದಲ್ಲಿ ಸೈನಿಕನು ನಿಲ್ಲುವಂತೆ ನಿಂತುಬಿಟ್ಟ (ಜೀಪ್ರಾತ್ಮ. ೨೦೫). **ಪೆರೇಡು :** ಶಾಲೆಯ ಮಕ್ಕಳೆಲ್ಲ ಪೆರೇಡಿಗೆ ಸಂಭ್ರಮದಿಂದ ಹೊರಟರು (ರೂಢಿ). [←ಇಂ. Parade]

**ಪರೇತ** (ಗು). ೧. ಸತ್ತ ; ಗತಿಸಿದ. ೨. ಅಗಲಿದ ; ದೂರವಾದ. (ನಾ). ೩. ಹೆಣ ; ಶವ : "ಪ್ರೇತಃ, ಪರೇತಃ, ಕುಣಪಃ, ಶವಃ—ಈ ೪ ಪೆ(ಹೆ)ಣಂ" (ಹಲಾಯು. ೧೦೪-೬). ೪. ಸತ್ತವನು; ಮರಣ ಹೊಂದಿದವನು : "ಪ್ರೇತಂ ಮೃತಂ ಪರಾಸು ಪರೇತಂ" (ವಸ್ತುಕೋ. ೫೯-೪೫). ೫. ಭೂತ ; ಪಿಶಾಚಿ ; ಪ್ರೇತ : ಆತು ಮರೆಬಿದು ಹಿಂದ ನೋಡಿ ಪರೇತವಿಭವವಲಾ ಎನುತ ಛಲಚೇತನನು ಸಲೆ ಚಂಡಿಯಾದನು ಕಳನ ಚೌಕದಲಿ (ಕುಪ್ಯಾಗ. ೩-೧೫) ; ಲಯಕಾಲ ಸೈದಿದನುಳಿದದೂತಪರೀತಗಣಸಹಿತ (ತೊರರಾ. ೬-೫೩-೪೨) ; ಜೀವನ ರಸವರತು ಹೋಗಿ ಜೀವಿ ಬರಿ ಪರೇತವಾಗಿ ಸಾನುಭೂತಿಯಾಗಿರು! (ಅನಿಕೇ.೧೪-೧೩). [ಸಂ.]

**ಪರೇತಕೃತ್ಯ** (ನಾ). ಸತ್ತ ವ್ಯಕ್ತಿಗಾಗಿ ಮಾಡುವ ವಿಧಿ ; ಅಂತ್ಯಕ್ರಿಯೆ,-ಸಂಸ್ಕಾರ : ಐವರು ಸುತರು ಸಹಿತೀ ಕುಂತಿ ಮಿಂದು ಪರೇತಕೃತ್ಯವನು . . . ಮಾಡಿಸಿ (ಕುಪ್ಯಾಆ. ೫-೨೫) ; ತಂದೆ ನಮ ಗೀತನು ಕಣಾ ವಿಧಿಯಿಂದ ವಿಹಿತಪರೇತಕೃತ್ಯವ ಮಾಡಬೇಕು (ತೊರರಾ. ೩-೧೨-೧೦). [ಪರೇತ+ಕೃತ್ಯ$_2$]

**ಪರೇತಪತಿ** (ನಾ). ಸಾವಿನ ಒಡೆಯ ; ಯಮ : ಶಿವನಂ ಭಜಿಸು ತೊಲಿಸಿ ಪರೇತಪತಿಯಂ ಗೆಲಿದು ಕಾಮ್ಯಾರ್ಥಂಗಳಂ ಪಡೆದ (ಬಸಪು. ೪೧ ಸೂಚನೆ) ; ವೀತಿಹೋತ್ರ ಪರೇತಪತಿ ಪುರುಹೂತ ವರುಣಾದಿಗಳು ಕಾಂಡವ್ರಾತದಲಿ ತೊಳೆದರು ಮನೋರಥಕಲಿತಕರ್ದಮವ (ಕುಪ್ಯಾಆ. ೧೧-೩೧) ; ಪರೇತಪತಿ ಶಂಕರ ವಿರಿಂಚಾದಿಗಳಿಗಸದಳದ ಯಾತುಧಾನನ ರಾಜಧಾನಿಯಲಾ ತವಿಸ್ರಿಯಲಜಿಸಿ ಕಂಡನು ಮಾತೆಯನು (ತೊರರಾ. ೫-೯-೨೨). [ಸಂ.]

**ಪರೇತವನ** (ನಾ). ಹೆಣಗಳನ್ನು ಸುಡುವ ಜಾಗ ; ಮಸಣ ; ಶ್ಮಶಾನ : ಎನ್ನ ಮೆಯ್ಯ ದುರ್ಗಂಧಕ್ಕೆ ಪೇಸಿ ಕಂಡವರೆಲ್ಲಮೆಚಿದು ಕಳೆಯೆ ಪರೇತವನಭೂಮಿಯೊಳ್ ಜೀರ್ಣಶೀರ್ಣಚೀರಂಗಳಿಂದಂ ಪುದಿದಿರಿಸಿ ಪೋಗಿ (ಆದಿಪು. ೩-೩೪ ವ) ; ಹೊಲಗೇರಿ ಪರೇತವನವಸಗವನೆ . . . ಎಂಬೆಡೆಗಳುಚಿತವೋಸಱಗೀಳಲ್ (ಲೋಕೋಪ. ೧೨-೫೩) : ವಿಚಳಚ್ಚಿತಾನಳಶಿಖಾವಳಿವಿದ್ರುಮವಲ್ಲಿ ಪರ್ವುವಂತಿರೆ . . . ಆ ಪರೇತವನ ಮಂಬುಧಿಯಂತಿರೆ ಭೀಕರಂ ಕರಂ (ಅರ್ಧನೇ. ೫-೨೧) ; ನಿಧಿಯಂ ಲಯ ಸನ್ನಿಧಿಯೆಂದು ತನ್ನ ಕೇಳೀವನಮಂ ಪರೇತವನಮೆಂದವನೀಶನವಂ ಸಮಂತು ಸಂಭಾವಿಸಿದಂದು ಭಾವಿಸದನೊಂದನೆ ದಂದುಗದಿಂದಗಲ್ದುದಂ (ಚಂದ್ರಪು. ೯-೧೬). [ಸಂ.]

**ಪರೇತವಿಭು** (ನಾ). = ಪರೇತಪತಿ : "ಯಮುನರ್ಕಸುತಂ . . . ಪರೇತವಿಭು ದಂಡಧರಂ . . . ಅಂತಕಂ ಕೀನಾಶಂ" (ವಸ್ತುಕೋ. ೮-೪೧). [ಸಂ.]

**ಪರೇತಾಧಿಪ** (ನಾ). = ಪರೇತಪತಿ : ಪರೇತಾಧಿಪತುಲಾಪಾದಪಾಲಂ

ಬನಾಪಘನನಪ್ಪನೇ ಕಾಪಾಲಿಯೋ ಬಲ್ಲನು (ಭಾಪಚಿಂ. ೯-೭). [ಸಂ.]

**ಪರೇಲ್** (ನಾ). ಇಸ್ಪೀಟಿನ ಆಟದಲ್ಲಿ ಒಂದು ಬಗೆ; ಮೂರೆಲೆ ಆಟ: ಪರೇಲ್ ಆಟದ ಪ್ರಸಾದ್ ಬಂದ (ಬೆಂಗಬ. ೧೩೫). [?]

**ಪರೇಶ** (ನಾ). ಪರದೈವ; ಪರಮೇಶ್ವರ: ಪರಮಪುರುಷನನಾ ಪರೇಶನನುದರಕು ಹರದಲಿ ಧರಿಸಿ ಮೆಚಿ ವರವಿಂದವದನೆಯು ಸಿರಿಯ ಬಣ್ಣಿಪನೇನು (ಕೌಶಿಂರಾ. ೧-೭೫); ರಕ್ಷಿಸು ರಂಗ ಶನ ಗಶಯನ ಪರೇಶ (ಶತಸಾಂ. ೧೦-೫೬). [ಪರ$_3$+ಈಶ]

**ಪರೇಶ್ವರ** (ನಾ). = ಪರೇಶ: ಗಣೇಶ್ವರಾಯ ಮುನೀಶ್ವರಾಯ ಪ[ಪಾಠಾಂ. ಸು]ರೇಶ್ವರಾಯ ನಮೋ (ಬಸಪು. ೬೧-೪೬). [ಪರ$_3$+ಈಶ್ವರ]

**ಪರೇಷ್ಟುಕೆ** (ನಾ). ಹಲವು ಸಲ ಈದ ಹಸು; ಮತ್ತೆ ಮತ್ತೆ ಕರು ಹಾಕಿದ ಹಸು: "ಹಲವು ಸೂಟಿಯಾಕಳು ಪ[ಪಾಠಾಂ. ವ]ರೇಷ್ಟುಕೆ ಯೆನಿಕ್ಕು" (ಮಂಗರಾ. ೫೪-೪). [ಸಂ.ಪರೇಷ್ಟುಕಾ]

**ಪರೈಧಿತ** (ನಾ). ೧. ಬೇರೆಯವರಿಂದ ಪೋಷಣೆ ಹೊಂದಿದ ವ್ಯಕ್ತಿ: "ಪರಜಾತಃ, ಪರೈಧಿತಃ—ಈ ೨ ಹೊಜಿಕುಳಿ" (ಹಲಾಯು. ೫೮-೧೯೬). ೨. ಸೇವಕ; ಆಳು: "ಪರಾಚಿತಃ, ಪರಿಸ್ಕಂದಃ, ಪರಜಾತಃ, ಪರೈಧಿತಃ—೪ ಹೇಡೀ ಆಳ ಪೆಸರು" (ಸಿದ್ಧಾಂತಿ. ೩೧೨). ೩. ಕೋಗಿಲೆ. [ಸಂ.]

**ಪರೋಕ್ಷ** (ಗು). ೧. ಕಣ್ಣಿಗೆ ಕಾಣದ; ಅಗೋಚರವಾದ; ದೃಷ್ಟಿಯ ಅಳವಿಗೆ ಮೀರಿರುವ. (ನಾ). ೨. ಕಣ್ಣಿಗೆ ಕಾಣದಿರುವುದು; ಅಗೋಚರವಾಗಿರುವುದು; ದೃಷ್ಟಿಗೆ ದೂರವಾಗಿರುವುದು: ಸಚಿವಸಮೂಹಂ ಮಚ್ಚಿ ಸಮಾಲೋಚನಗೋಚರ ಚರಾಚರಂಗೆ ಪರೋಕ್ಷಮೆ ಪ್ರತ್ಯಕ್ಷಮಲ್ತೆಯೆಂದು ಪರಮಾನಂದದಿಂದಭಿವಂದಿಸಿ (ಶಾಂತಿಪು. ೨-೭೦ ವ); ನಿನ್ನಿಂದಂ ಪರೋಕ್ಷದೊಳ್ ಬಾಚಿನೆಂಬರ್ (ಪುದತಿ. ೧೦-೭೫); ತಮ್ಮನ ರಣಮಂ ನಿರೀಕ್ಷಿಸಲಪೇಕ್ಷಿಸಿ ಪೋಗೆ ಪರೋಕ್ಷದೊಳ್ ದಶಾನನನೆಟಿತಂದನಾಂ ಜನಕನಂದನೆಯಂ (ಪಂರಾಸೂ. ೯-೧೯೧); ಮತ್ಪರೋಕ್ಷದಲಿ ಕುಲವ ನೀನುದ್ಧರಿಸು (ಕುಪ್ಪಾಅ. ೨೧-೫೫). ೩. ಕಣ್ಣಿಗೆ ಮರೆಯಾಗಿರುವ ಪದಾರ್ಥ; ಇಂದ್ರಿಯಗೋಚರವಲ್ಲದ ವಸ್ತು: "ಅತೀಂದ್ರಿಯಮಪ್ಪುದು ಪರೋಕ್ಷಂ" (ವಸ್ತುಕೋ. ೭೧-೨೪); ನಮಗಿಂತ ಬೇರೆಯಾದ ವಸ್ತುಗಳು ಕಾಲದಿಂದಲಾಗಲಿ ದೇಶದಿಂದಲಾಗಲಿ ಬಹುದೂರವಾಗಿ ಮರೆಯಾಗಿದ್ದರೆ ಅವಕ್ಕೆ ಪರೋಕ್ಷಗಳೆಂದು ಹೆಸರು (ಬ್ರಹ್ಮಭಾ. ೨-೧೯). ೪. ಸಾವು; ಮರಣ: ದೀವಳಬ್ಬಾಸಮುದ್ರಂ ಮನುಚರಿತಂ ಮಹೇನ್ದ್ರನೃಪನಿನ್ದೆ ಪರೋಕ್ಷದೊಳಾ ಮಹಾತ್ಮನಾ ಜನನಿ ಮಹೇನ್ದ್ರನಾಮದೆ ಕೊಳಂ... ಮುಕುನ್ದಭವನಂಗಳನಿಂಬಿನೆ ಮಾಡಿ (ಎಕ. X, ಮುಳಬಾ. ೩೮-೨೭; ಸು. 890); ದತ್ತನುಂ ನಂದಿಷೇಣನುಂ ಎಂಬರ್ ತಂದೆಯ ಪರೋಕ್ಷದೊಳ ಕ್ಷೂಣಕನಕರಾಶಿಯಂ ಬಸನಕ್ಕೆ ತವಿಸಿ ಬಿಯಂ ನಡೆಯದಿರೆ (ಶಾಂತಿಪು. ೯-೯೦ ವ); ಅಳಿದರಳಿವೆ ಭವತ್ಪರೋಕ್ಷದೊಳುಳಿವೆನೇ ನಿನ್ನರಸಿ ಧರೆಗಾನಳುಪುವೆನೆ (ಕುಪ್ಪಾಅ. ೨೧-೫೬). ೫. ಗುಟ್ಟು; ರಹಸ್ಯ: ಶೋಕನಿವೃತ್ತಿ ಮಾಡುವದೆ ಅಜ್ಞಾನರಹಿತವಾದ ಪರೋಕ್ಷವೆನಿಸುವದು (ಸಾನಾಗು. ೨೮-೧೮). ೬. [ಜೈನ] ಎರಡು ಬಗೆಯ ಪ್ರಮಾಣ ಜ್ಞಾನಗಳಲ್ಲಿ ಒಂದು; "ಮನಸ್ಸು, ಇಂದ್ರಿಯಗಳ ಸಹಾಯದಿಂದ ಉಂಟಾಗುವ ಜ್ಞಾನ" (ಜೈನಕೋ. ೧೬೩): ಪರೋಕ್ಷಪ್ರತ್ಯಕ್ಷಾಭಿಧಾನ ದ್ವಿವಿಧಪ್ರಮಾಣಮಕ್ಕುಂ (ತತ್ತ್ವಪ್ರ. ೫೩); ಪ್ರಮಾಣವು ಪ್ರತ್ಯಕ್ಷ, ಪರೋಕ್ಷವೆಂದು ಎರಡು ವಿಧ. ಮೊದಲನೆಯದು ನಿರ್ಮಲವಾದ ಸ್ಪಷ್ಟವಾದ ವಿಶದವಾದ ಜ್ಞಾನ. ಅವಿಶದವಾದ ಜ್ಞಾನ ಪರೋಕ್ಷ (ಹಿಂದಸಾ. ೮೫). ೭. [ವಿಶಿಷ್ಟಾ] ನಾಲ್ಕು ಬಗೆಯ ಜ್ಞಾನಗಳಲ್ಲಿ ಒಂದು; ಇಂದ್ರಿಯಕ್ಕೆ ವೇದ್ಯವಾಗದುದು: ವಿಷಯಸಂಬಂಧದಿಂದ ಸಂಶಯ ನಿಶ್ಚಯ ಪ್ರತ್ಯಕ್ಷ ಪರೋಕ್ಷ ಮೊದಲಾದ ವಿಭಾಗವನ್ನು ಹೊಂದುವುದರಿಂದ ದ್ರವ್ಯವೆಂದೂ ಕ್ಷಣಿಕವೆಂದೂ ಹೇಳಲ್ಪಡುವುದು (ಹಿಂದಸಾ. ೨೩೯). [ಸಂ.]

**ಪರೋಕ್ಷಕ್ರಿಯೆ** (ನಾ). ಅಪರಕ್ರಿಯೆ; ಸಂಸ್ಕಾರ: ಮಾಚಣ್ಣ ××ಪರೋಕ್ಷಕ್ರಿಯೆಯಂ ಗೆಯ್ದು ಕಲ್ಲ ನಿಱಿಸಿದನ್ (ಎಕ. IV (R), ಪಿರಿಯಾ. ೧೪೪-೭; 1008). [ಪರೋಕ್ಷ+ಕ್ರಿಯೆ]

**ಪರೋಕ್ಷಜ್ಞಾನ** (ನಾ). ೧. ಅಪ್ರತ್ಯಕ್ಷವಾದ ತಿಳಿವು; ಪರೋಕ್ಷವಾದ ಅರಿವು: ಆತ್ಮನ ಅಸ್ತಿತ್ವಮಂ ಪೇಳ್ವ ಶ್ರುತ್ಯಾಚಾರ್ಯವಾಕ್ಯ ವಿಶ್ವಾಸದಿಂ ಪ್ರತ್ಯಗಾತ್ಮನುಂಟೆಂದು ತಿಳಿವುದೇ ಮೊದಲ ಅಸತ್ವಾವರಣ ನಿವರ್ತಕವಾದ ಪರೋಕ್ಷಜ್ಞಾನವೆನಿಸುವುದು (ವಿವೇಕ. ೪೩). ೨. = ಪರೋಕ್ಷ ೬: ಸ್ಪಷ್ಟವಲ್ಲದ ಜ್ಞಾನವು ಪರೋಕ್ಷಜ್ಞಾನವೆನಿಸುವುದು (ಜೈನಧ. xi, ಮುನ್ನುಡಿ); ಮನಸ್ಸು, ಇಂದ್ರಿಯಗಳ ಸಹಾಯದಿಂದ ಉಂಟಾಗುವ ಜ್ಞಾನವು ಪರೋಕ್ಷಜ್ಞಾನವು (ಜೈನಪ. ೨೯೭). [ಪರೋಕ್ಷ+ಜ್ಞಾನ]

**ಪರೋಕ್ಷಪ್ರಮಾಣ** (ನಾ). ೧. ಪ್ರತ್ಯಕ್ಷವಲ್ಲದ ಸಾಕ್ಷಿ,—ಆಧಾರ: ಅಪರೋಕ್ಷವಾದ ಆತ್ಮಾನುಭೂತಿಯನ್ನು ಪರೋಕ್ಷಪ್ರಮಾಣಗಳಿಂದ ಅಳೆದು ನೋಡುವ . . . ವಿಮರ್ಶನಾಸಕ್ತಿ ಕ್ರಿ. ಪೂ. ಆರನೆಯ ಶತಮಾನದ ಸುಮಾರಿಗೆ ಆರಂಭವಾಗಿರಬೇಕು (ಭಾರದ. ೧೨೧). ೨. = ಪರೋಕ್ಷ ೬: ಪರೋಕ್ಷಂ—ಪರೋಕ್ಷಪ್ರಮಾಣಂ (ತತ್ತ್ವಪ್ರ. ೫೩). [ಪರೋಕ್ಷ+ಪ್ರಮಾಣ]

**ಪರೋಕ್ಷವಿನಯ** (ನಾ). [ಜೈನ] ಪೂಜ್ಯವ್ಯಕ್ತಿಗಳ ಮರಣಾನಂತರದಲ್ಲಿ ಅವರಿಗೆ ಸಲ್ಲಿಸುವ ಗೌರವ: ಧನುಕೀರ್ತಿಭಟಾರರ್ ಪರೋಕ್ಷವಿನಯಂ ಮಾಡಿಸಿದರ್ (ಎಕ. XII, ಗುಬ್ಬಿ. ೫೬-೧೨; 979); ಬೀಚಗವುಡ ಪರೋಕ್ಷವಿನಯಂ ನಿಸಿಧಿಗೆಯ ಕಲ್ಲ ನಿಱಿಸಿದಂ (ಎಕ. IV (R), ಹುಣಸೂ. ೪೩-೮; 1013); ಅಣ್ಣಂದಿರಂ ಸಂಸ್ಕಾರಿಸಿ ಜಳದಾನ ಕ್ರಿಯೆಯಂ ಪರೋಕ್ಷವಿನಯಮುಮಂ ಮಾಡಿ ಯಿಬ್ಬರ್ಗ್ಗಂ ಕಲ್ಲಂ ನಿಱಿಸಿದಲ್ಲಿ (ಎಕ. VIII, ಸೊರಬ. ೧೬೫-೨೧; 1156); ವಿಷ್ಣುವರ್ಧನ ಹೊಯ್ಸಳನು ತನ್ನ ತಮ್ಮ ಉದಯಾದಿತ್ಯದೇವನ 'ಪರೋಕ್ಷವಿನಯ'ಕ್ಕಾಗಿ ಕೆಲ್ಲವತ್ತಿ ಎಂಬ ಊರನ್ನು ಅಗ್ರಹಾರವಾಗಿ ಮಾಡಿ . . . ಬ್ರಾಹ್ಮಣರಿಗೆ ಧಾರಾಪೂರ್ವಕವಾಗಿ ಕೊಡುತ್ತಾನೆ (ಕಶಾಅ. ೨೧೦). [ಪರೋಕ್ಷ+ವಿನಯ]

**ಪರೋಕ್ಷವಿನೆಯ** (ನಾ). = ಪರೋಕ್ಷವಿನಯ: ಪರೋಕ್ಷವಿನೆಯಾರ್ತ್ಥವಾಗಿಸಿದ ಬೀರಗಲು (ಎಕ. II (R), ೫೫೪-೬; 13ನೆಯ ಶತ). [ಪರೋಕ್ಷ+ವಿನೆಯ]

**ಪರೋಕ್ಷವಿನೆಯಂಗೆಯ್** (ಕ್ರಿ). [ಜೈನ] ಪೂಜ್ಯವ್ಯಕ್ತಿಗಳಿಗೆ ಅವರ ಮರಣಾನಂತರದಲ್ಲಿ ಗೌರವವನ್ನು ಸಲ್ಲಿಸು: ತಮ್ಮ ಮಾತಾಪಿತೃಗಳಿರ್ಪ್ಪತೊಂದ ಕುಲದ ಪರೋಕ್ಷವಿನೆಯಂಗೆಯ್ದು ದೇವರ್ಗ್ಗೆ ಕೊಟ್ಟ ಭೂಮಿಣಲದೊ××ವೆ ನೂಱು ಬತ್ತದ ಮಣ್ಣಂ (ಎಕ. III (R), ಗುಂಡ್ಲುಪೇ. ೫೬-೮; 1049). [ಪರೋಕ್ಷವಿನೆಯ+ಕೆಯ್$_1$]

**ಪರೋಕ್ಷಸಾಕ್ಷ್ಯ** (ನಾ). = ಪರೋಕ್ಷಪ್ರಮಾಣ: ಗ್ರಂಥವಿಮರ್ಶಕನು . . . ಪಾಠರೂಪವನ್ನು ಬಾಹ್ಯ ಅಥವಾ ಪರೋಕ್ಷಸಾಕ್ಷ್ಯಗಳಿಂದ ತಿಳಿಯುತ್ತಾನೆ (ಭಾಗಪ. ೪೩). [ಪರೋಕ್ಷ+ಸಾಕ್ಷ್ಯ]

**ಪರೋಟಾ** (ನಾ). (ತುಪ್ಪ ಹಚ್ಚಿ ಬೇಯಿಸಿದ) ಒಂದು ಬಗೆಯ

ಗೋಧಿರೊಟ್ಟಿ : ಬಿಸಿನೀರಿನಲ್ಲಿ ಸ್ನಾನ ಮಾಡಿದೆವು. ಅನಂತರ ಪರೋಟಾ ಭೋಜನವಾಯಿತು (ಅಜೂಬ. ೫೭).

[←ಹಿಂ. ಪರಾಠಾ, ಪರೌಠಾ]

**ಪರೋಟು** 'ಪರಡ್ಡಿ' ನೋ.

**ಪರೋತ್ತಮ** (ನಾ). ಅತ್ಯಂತ ಶ್ರೇಷ್ಠನಾದವನು ; ಪರದೈವ : ಪರಶಂಕರ ಪರಂಜ್ಯೋತಿಯೆ ಪರೋತ್ತಮ ಕರುಣಿಸುವುದು (ಕುಪ್ಪಾಅ. ೬-೮೭). [ಪರ$_3$+ಉತ್ತಮ]

**ಪರೋನ್ನತಿ** (ನಾ). ಬೇರೆಯವರ ಉತ್ಕರ್ಷ ; ಇನ್ನೊಬ್ಬರ ಅಭಿವೃದ್ಧಿ : ಮುಳಿಸು ವಿಘೂರ್ಣನಂ ತಿಳಿವುದಂಬು ಪರೋನ್ನತಿ ತತ್ತರಂಗಸಂಕುಳವು . . . ಎನೆ ಮೇರೆದಪ್ಪಿದ ರತಾಮೃತವಾರ್ಧಿಯನೀಸಿ (ಶಾಂತಿಪು. ೬-೨೨೦). [ಪರ$_3$+ಉನ್ನತಿ]

**ಪರೋಪಕಾರ** (ನಾ). ಬೇರೆಯವರಿಗೆ ಮಾಡುವ ನೆರವು,— ಸಹಾಯ : ಪರೋಪಕಾರಕಾರಣಪರನಪ್ಪನಂ ಮನದೆ ಮೆಚ್ಚದರಾರಭಿಮಾನಿಯಪ್ಪನಂ (ಕವಿರಾ. ೧-೧೨೩) ; ·ಪರೋಪಕಾರವಿಭೂತಿ ಶಿವಭೂತಿ ಕರುಣಾರಸಾರ್ದ್ರಹೃದಯಂ (ಪಂಚತಂ. ೧೧೦-೧೫).

[ಪರ$_3$+ಉಪಕಾರ]

**ಪರೋಪಕಾರಿ** (ನಾ). ಬೇರೆಯವರಿಗೆ ನೆರವು ನೀಡುವವನು ; ದಯಾಪರ : ನೃಪತೀ ಪರೋಪಕಾರೀ . . . ರಿಪುವರ್ಗಮನಲೆದು ಗೆಲ್ವೆಯಾಗಾಹವದೊಳ್ (ಕವಿರಾ. ೨-೨೪). [ಸಂ.ಪರೋಪಕಾರಿನ್]

**ಪರೋಪಜೀವಿ** (ನಾ). ಬೇರೆಯ ಆಶ್ರಯವನ್ನು ಅವಲಂಬಿಸಿ ಬದುಕುವ ಜೀವಿ; ಪರಾವಲಂಬನದಿಂದ ಜೀವಿಸುವ ಮನುಷ್ಯ, ಸಸ್ಯ, ಪ್ರಾಣಿ ಮುಂತಾದುವು: ಕೀಟಗಳು . . . ಪರೋಪಜೀವಿಗಳಂತೆ ಒಂದೇ ಆಶ್ರಯಜೀವಿಯನ್ನು ಅನುಸರಿಸುವುದಿಲ್ಲ (ಕೀಟಬಿ. ೪).

[ಪರ$_3$+ಉಪಜೀವಿ]

**ಪರೋಪದೇಶಪಾಂಡಿತ್ಯ** (ನಾ). ತಾವು ಆಚರಿಸದೆ ಬೇರೆಯವರಿಗೆ ಮಾತ್ರ ಬೋಧನೆ ಮಾಡುವ ಪಾಂಡಿತ್ಯ,—ವಿದ್ವತ್ತು : ಈ ಪರೋಪದೇಶಪಾಂಡಿತ್ಯವನ್ನು ಹೇಳಲು ಎಲ್ಲರಿಗೂ ಬರುತ್ತದೆ (ರಂಗರೋ. ೫೪). [ಪರ$_3$+ಉಪದೇಶ+ಪಾಂಡಿತ್ಯ]

**ಪರೋಷ್ಣೀ** (ನಾ). ಜಿರಲೆ ; ಜೊಂಡಿಗ : "ಪರೋಷ್ಣೀ, ತೈಲಪಾಯಿಕಾ—೨ ಹೆಂಡೇಮೂಗಕ್ಕಿಯ ಹೆಸರುಗಳು" (ಸಿದ್ಧಾಂತಿ. ೧೬೧).

[ಸಂ.ಪರೋಷ್ಣೀ]

**ಪರ್ಕಟಿ** (ನಾ). ಒಂದು ಬಗೆಯ ಮರ ; ಕರಿಬಸುರಿ ಮರ : "ಪರ್ಕಟಿಯೆನಲು [ಪಾಠಾಂ. ಪರ್ಪಟಿಕೆನಲು] ಬಸುರಿಯಕ್ಕು" (ಮಂಗರಾ. ೩೭-೨೦). [ಸಂ.ಪರ್ಕಟೀ]

**ಪರ್ಕಿಸು** 'ಪರಿಕಿಸು' ನೋ.

**ಪರ್ಗಣ** 'ಪರಗಣೆ' ನೋ.

**ಪರ್ಗನ** 'ಪರಗಣೆ' ನೋ.

**ಪರ್ಗಾಣ** 'ಪರಗಣೆ' ನೋ.

**ಪರ್ಚಿಸು$_1$** (ಕ್ರಿ). ಚಾಡಿಹೇಳು ; ದೂರುಹೇಳು : ಎನ್ನಯ ಸೊಬಗಂ ಗೆಲ್ದಳ್ ಕನ್ನೆ ದಲೆಂದೆಂದು ರತಿಯೆ ಪರ್ಚಿಸುತಿರ್ಪಳ್ ತನ್ನಯ ನಲ್ಲನಂ (ಚಂದ್ರಪ್ರ. ೫-೧೩೫). [ಪರ್ಚುರ್$_1$+-ಇಸು$_3$]

△ **ಪರ್ಚಿಸು$_2$** 'ಪಚ್ಚಿಸು$_2$' ನೋ.

**ಪರ್ಚುರ್$_1$**, ಪಚ್ಚು$_2$, ಪಚ್ಚು (ಕ್ರಿ). ೧. ಗುಟ್ಟಾಗಿ ಕಿವಿಯಲ್ಲಿ ಹೇಳು; ಪಿಸುಮಾತಾಡು ; ಪಿಸುಗುಟ್ಟು : "ಪರ್ಚುರ (ಅರ್ಚುರ)—ಅವ್ಯಕ್ತಧ್ವನೌ (ಪಿಸುಗುಟ್ಟು)" (ಶಮಧಾ) ; ಅವತಂಸಾಶೋಕನವಪ್ರವಾಳರುಚಿ ಮುಳಿಸೆ ರೂಪುಗೊಂಡವೊಲೆರಡುಂ ಕಿವಿಗಳೊಳಮಾಯೆಮಂ ಪರ್ಚುವಕಿಳ್ಪಿ ಪ ತೆಱದಿನೆಸೆದು ದಾಸ್ಯಾಯಿಕೆಯೊಳ್ (ಶಾಂತಿಪು. ೩-೬೭) ; ಉದ್ಧತನಾಗಿರ್ದ ಕಂಸಂ ಪಡಿಯಜನಂ ಕರೆದು ಕಿವಿಯೊಳ್ ಪರ್ಚುವುದುಂ (ಅರ್ಧನೇ. ೮-೭೩ ಪ) ; ಸಿಂಗಾರಮ್ಮ :—(ಬಾಗಿ, ಅತನ ಕಿವಿಯಲ್ಲಿ ಪರ್ಚುತಿರುವಳು) (ಪಟ್ಟಅ. ೧೭-೧೯). ೨. ಚಾಡಿ ಹೇಳು ; ಪಿಸುಗಾಡು : ಮೆಲ್ಲನೆ ಮೇಳಿಸಿ ಪರ್ಚುವ ಲಲ್ಲಯಿಸುವ ಪಜಿರನಟ್ಟಿ ದೂಱುವ ಪಲವುಂ ಪೊಲ್ಲಮೆಯುಂ ಕಲಿಸುವ ಮುನಿಯಲ್ಲಿ ಜಿನೋಕ್ತಿಯನೆ ಕೇಳಲಾಗದು ಚತುರಂ (ಧರ್ಮಾಮೃ. ೬-೨೧೨) ; ಏಕಾಂತದೊಳ್ಪಾರದಂ ಬಳಕ್ಕಪ್ಪನ್ನಗರ್ವತಂಸದಂತೆ ಕಿವಿವೊಕ್ಕೇನಾನುಮಂ ಪರ್ಚಿದಂ (ಅನಂಪು. ೧೩-೪೦). ೩. ಗುಜುಗುಡು ; ಕಿಚಿಕಿಚಿ ಎಂದು ಶಬ್ದಮಾಡು : ಅಱಿಚುವ ಶಿವಗಣಂಗಳ ಪರ್ಚುವ ಮಂಕಡರಾರ್ವ ಮಾಲಿನಿಯರ . . . ನಲಿವ ಬೇತಾಳಂಗಳ ಕೋಲಾಹಲಂ ಬಿಱುಸಾಗಲ್ (ರಾಮಾಶ್ವ. ೧೩೨-೨೨). **ಪಚ್ಚು$_2$** : ೧. ಚಚ್ಚನೆ ಗುಜುಗುಜು ಲೋಗರೊಳಚ್ಚೊತ್ತಿದ ತೆಱದಿ ನೆರವು ತೊಟ್ಟಿರೊಳಾಗಲ್ ಪಚ್ಚುವ [ಪಾಠಾಂ. ಪರ್ಚಿದ] ಕಾಮಿನಿ ತಪ್ಪಲೊಡರ್ಚುವಳಟ್ಟಿಟ್ಟ ಪಜಿರೊಳಾದೊಡೆ ನಿರತಂ (ಸೂಕ್ತಿಸು. ೮-೧೧೧ ; ಮದತಿ. ೮-೩೭ ನೋ) ; ಅರಸಿ ಮದನವೀಣೆಯ ಕಿವಿಯಂ ಪಚ್ಚುವುದುಂ (ಚಂದ್ರಪ್ರ. ೭-೯೨ ಪ) ; ಕರೆಯಲ್ಕಣ್ಮದೆ ಪೀಠಮರ್ದಕನುಮೆನ್ನಂ ಪಚ್ಚುವಂ (ಅನಂಪು. ೭-೮). △ **ಪಚ್ಚು** : ೨. ಅದಾನಟಱೋರೂ ಅಟಿವಿಲ್ವಟ್ಟಿದೋರ್ ×× ಮನದೆ ನೆನೆವೋರುಂ ಅಟಱಮೆನೆನ್ದು ಪಾದೇಸಂ ಕೊಡುವೋರುಂ ಪಚ್ಚುಮಹಾಪಾತಕಸಂಯುಕ್ತರಪ್ಪೊರ್ (ಎಕ. VI, ಕೊಪ್ಪ. ३೮-८ ; ಸು. 675 ?).

**ಪರ್ಚಿ ಪೇೞ್, ಪಚ್ಚಿ ಪೇಳ್** = ಕಿವಿಯಲ್ಲಿ ಗುಟ್ಟಾಗಿ ಹೇಳು,— ರಹಸ್ಯವಾಗಿ ಹೇಳು : ಪಗೆವರಂ ನಾಳೆ ಕಾದಿ ಗೆಲ್ವುದೆಂದು ಹಿತೋಪದೇಶಂಬೆರಸು ಜಳಮಂತ್ರೋಪದೇಶಮಂ ಕಿವಿಯೊಳ್ ಪರ್ಚಿ ಪೇೞ್ದು ಕುರುಪಿತಾಮಹಂ ಸಂಜಯನಂ ಧೃತರಾಷ್ಟ್ರನಲ್ಲಿಗೆ . . . ಅಟ್ಟಿ (ಪಂಪಭಾ. ೧೩-೭೦ ಪ) ; ತೊಟ್ಟನೆ ಭೂಕಾಂತೆಗೆ ಪರ್ಚಿ ಪೇೞ್ವ ತೆಱನಾಯ್ತೋ ರಂತೆ ಪುಷ್ಪೋಪಹಾರನಿಕಾಯಕ್ಕೆಱಗಿರ್ದ ಮಾದ್ಯದಳಿನೀಝುಂಕಾರಸಾರಸ್ವನಂ (ಶಾಂತೀಶ್ವ. ೩-೧೨೨) ; ನಳಂ ನಿನಗಿಂದನಳಂ ದಿಟಕ್ಕೆನಲ್ ಮದನದವಾಗ್ನಿಯೊಳ್ ತನುವನಾಗಳೆ ನೀಗುವಳೆಂದು ಪರ್ಚಿ ಪೇೞದೆ ಸಖಿಯರ್ ಸಮಂತು ದಮಯಂತಿಗೆ ಮಾಟ್ಪರನೇಕಶೈತ್ಯಮುಮಂ (ನಳಚಂ. ೧೯೬) ; ಉಂಬ ತಾಣವಿದೆಂದು ಕಿವಿಯಲಿಪ [ಪಾಠಾಂ. ಪ, ಪು, ಪು]ಚ್ಚಿ ಪೇಳ್ವಂತೆ ಶಂಭು ಪಂಚಾಕ್ಷರಿಯ ನೇಮಿಸಿ . . . ಹೋದನು ದೇವ (ಪ್ರಭುಲಿ. ೯-೧೪). **ಪಚ್ಚಿವಚ್ಚಿ** = ಪಿಸುಮಾತಿನಲ್ಲಿ ಹೇಳಿ ; ಗುಟ್ಟಾಗಿ ಹೇಳಿ: ಎಲ್ಲಿಲ್ಲದ ಸುರಗಣಿಕೆಯರೆಲ್ಲಿಲ್ಲದ ದೇವಿಯರ್ಕಳಗಲರುಸಿರ್ಪುತ್ತಿಲ್ಲ ನಮಗವರೆ ಜಗತೀವಲ್ಲಭನಂ ಪಚ್ಚಿವಚ್ಚಿ ಮೆಚ್ಚಿಸಿಕೊಂಡರ್ (ಅಜಿಪು. ೬-೧೦೦).

△ **ಪರ್ಚುರ್$_2$** 'ಪಚ್ಚು$_3$' ನೋ.

**ಪರ್ಚುರ್$_3$**, ಪಚ್ಚು$_4$ (ನಾ). ಗುಟ್ಟುಮಾತು ; ಕಿವಿಮಾತು ; ಪಿಸುಮಾತು : ಸುಕರಂ ಭಾವಿಸಿ ನೋಡೆ ದೇವ ಪಿಜಿತೇಂ ಸಂಜೀವಕಂ ದಾವಪಾವಕನಾದಂ ಭವದಿಪ್ಪಸೇವಕಗಣಕ್ಕೇಂ ಪರ್ಚುವೇಂ [ಪಾಠಾಂ. ಪಚ್ಚಮೇಂ]ಮಂತಣಂ (ಪಂಚತಂ. ೯೬-೨೩) ; ಪಕ್ಕಿಗಳ ನೆರವಿಯೊಳ್ ಬೆರ್ಚುರ ಠಕ್ಕಿಸುವ ಮಂತ್ರದೊಳೆ ಪರ್ಚುರ (ಬಂಪು. ೧-೧೯). **ಪಚ್ಚು$_4$**: ವಿರೋಧಿ ಬೆಗರ್ತುಗೊಂಡೆನಸುಮುಱಿದೆಯ್ತಂದಂ ಕಾದಲ್ಕೆ ಪೊಣ್ದು ಪೊಡರ್ಪಿನಿಂದೆನೆ ಬಱ[ಕ]ದಕ್ಕೇ ಪ[ಚ್ಚು] [ಪಾಠಾಂ. ಚ್ಚಂ] ಮಂತಣಂ ತೊಡೆದೆನ್ನನೀಯ[ನುವರದೊಳೇಂ] ಬಿಟ್ಟಿಕ್ಕಾಂ ಸಾಲ್ವೆನಾರ್ ನೆರೆದಾನೆಯುಂ (?) (ಪರ್ಧಪು. ೪-೨೭) : ಶನಿಯಂ ನೋಡೆ ಶುಭೇತರಗ್ರಹಗಣಂ ವರ್ಪಕ್ಕೆ ತಲ್ಲಗ್ನಜಾತನರಂ ಸಂದೆಯಮೇನೊ ಪೊಂದುಗುಮು

ದಕ್ಕೆಣ ಪಚ್ಚ [ಪಾಠಾಂ. ಪಂಚ]ದೇಂ ಮಂತಣಂ (ಜಾತಕ. ೬-೧೬).
[<ಪರ್ಚು₁]

**ಪರ್ಚುರ್ಕೊಳ್** 'ಪಚ್ಚುಗೊಳ್' ನೋ.

**ಪರ್ಚುರ್ಗುಡು** 'ಪಚ್ಚುಗೊಡು' ನೋ.

**ಪರ್ಚುರ್ಗೂಂಟೆ** 'ಪಚ್ಚುಗೂಟ' ನೋ.

**ಪರ್ಚುರ್ಗೊಡು** 'ಪಚ್ಚುಗೊಡು' ನೋ.

**ಪರ್ಚುರ್ಗೊಳ್** 'ಪಚ್ಚುಗೊಳ್' ನೋ.

**ಪರ್ಜನಿ** (ನಾ). ಒಂದು ಬಗೆಯ ಸಸ್ಯ; ಮರದರಿಸಿನ: "ಪೀತದ್ರುಃ, ಕಾಲೇಯಕಃ . . . ದಾರುಹರಿದ್ರಾ, ಪರ್ಜನೀ—೭ ಮರದರಿಸಿನ, ಕಸ್ತೂರಿಅರಿಸಿನವೆಂದು ಕೆಲವರನ್ನುವರು" (ಸಿದ್ಧಾಂತಿ. ೧೩೫). [ಸಂ.ಪರ್ಜನೀ]

**ಪರ್ಜನ್ಯ** (ನಾ). ೧. ಮಳೆಯನ್ನು ಸುರಿಸುವ ಮೋಡ, —ಮೇಘ: ದಂತಕಾಂತಿಯುಂ ಗೊಂಚಲ್ಮಿಂಚೆಂದು ಗರ್ಜನೆಯಂ ಪರ್ಜನ್ಯಜನ್ಯಧ್ವನಿಯೆಂದು ಮುಂದುಗೆಟ್ಟು ತೊಟ್ಟನೆ . . . ಬೆಗಡುಗೊಂಡು ತಳರ್ವ ತರುಣಮರಾಳಂಗಳಿಂ (ರಾಜಶೇ. ೧-೧೦೨ ಪ). 'ಪರ್ಜನ್ಯಗರ್ಜನ' ಪರಾ. ೨. ಗುಡುಗಿನ ಶಬ್ದ; ಮೇಘಧ್ವನಿ: "ಅಭ್ರಗರ್ಜನೆಯ ಪರ್ಜನ್ಯವೆಂದೆಂಬುದು" (ಮಂಗರಾ. ೧೪೧-೧೬). ೩. ಮಳೆ; ವರ್ಷ: ಅಮರಸರಿತ್ಪದ್ಮಪತ್ರೋದನೀಲೀನಿವಹಂ ಪರ್ಜನ್ಯದೋಹಕ್ಷಮಬಹುಮಹಿಷೀಸಂಕುಲಂ ಯಾಮಿನೀಸಂಭವಶುಂಭನ್ಮಂದಿರಂ ಸಿಂದುದು ಪಿಕರುಚಿರೋತ್ತಾಳಮಂಭೋದಜಾಳಂ (ಅನಂಪು. ೯-೭). ೪. ಮಳೆಯ ಅಧಿದೇವತೆ; ಇಂದ್ರ: "ಇಂದ್ರಃ . . . ಗೋಪತಿಃ . . . ಪರ್ಜನ್ಯಃ . . . ಮೇಘವಾಹನಃ—ಈ ೩೯ ದೇವೇಂದ್ರನ ಪೆಸರ್" (ಹಲಾಯು. ೧೦-೫೨); ಸೂರ್ಯಪುತ್ರಿಯಾದ ಶ್ರದ್ಧೆಯು ಪರ್ಜನ್ಯನಂತೆ ಬಲಶಾಲಿಯೂ ಪೂಜ್ಯನೂ ಆದ ಸೋಮನನ್ನು ದ್ಯುಲೋಕದಿಂದ ತಂದಳು (ಋಕ್ಸಾರ. ೫೨). ೫. ಪರಮಾತ್ಮ; ವಿಷ್ಣು: 'ಪರ್ಜನ್ಯಃ ಪರಮಸ್ಯ ಜನ್ಯಮಸ್ತೀತಿ ಪರ್ಜನ್ಯಃ'—ಜನನವಾಗುವ ಪದಾರ್ಥಕ್ಕೆ ಜನ್ಯವೆಂದು ಹೆಸರು. ಪರಮನ ಸೇವಾರ್ಥ ಹುಟ್ಟುವ ಪದಾರ್ಥಗಳುಳ್ಳವನಿಗೆ ಪರ್ಜನ್ಯನೆಂದು (ಪರಮಾತ್ಮನೆಂದು) ಹೆಸರು. ಈ ಪರ್ಜನ್ಯಗತರೂಪವು ವಾಸುದೇವನು (ಹಸಾರ. ೬-೩ ತಾತ್ಪರ್ಯ). ೬. ದ್ವಾದಶಾದಿತ್ಯರಲ್ಲಿ ಒಬ್ಬ: ಧಾತಾ ಅರ್ಯಮಾ ಮಿತ್ರ ವರುಣ ಇಂದ್ರ ವಿವಸ್ವಾನ್ ಪರ್ಜನ್ಯ ಪೂಷ ಅಂಶುಮಾನ್ ಗಭಸ್ತಿಮಾನ್ ತ್ವಷ್ಟೃ ವಿಷ್ಣುಗಳೆಂಬವರೇ ಕ್ರಮದಿಂ ದ್ವಾದಶಾದಿತ್ಯರು (ವಿವೇಕ. ೨೧೮). [ಸಂ.]

**ಪರ್ಜನ್ಯಗರ್ಜನ** (ನಾ). ಮೋಡದ ಗರ್ಜನೆ; ಗುಡುಗಿನ ಶಬ್ದ: ಅಗಳವನ ಗರ್ವಗರ್ಭಂಗಳಪ್ಪ ನಿರ್ಭರೋಕ್ತಿಗಳಂ ಕೇಳ್ದು ಕುಮಾರಂ ಪರ್ಜನ್ಯಗರ್ಜನಮಂ ಕೇಳ್ದ ಕೇಸರಿಕುಮಾರನಂತು ಕೆಳರ್ದು (ಚಂದ್ರಪು. ೫-೭೪ ಪ). [ಪರ್ಜನ್ಯ+ಗರ್ಜನ]

**ಪರ್ಜನ್ಯಜಪ** (ನಾ). ಮಳೆಗೋಸ್ಕರವಾಗಿ ಮಳೆಯ ಅಧಿದೇವತೆಯನ್ನು ಕುರಿತು ಮಾಡುವ ಜಪ, —ಪ್ರಾರ್ಥನೆ: ಸಕಾಲದಲ್ಲಿ ಮಳೆ ಬರದಿದ್ದರೆ ಪರ್ಜನ್ಯಜಪ ಮಾಡುವುದರಿಂದ ಮಳೆ ಸುರಿಯುವುದೆಂಬ ನಂಬಿಕೆ ಜನರಲ್ಲಿದೆ (ರೂಢಿ). [ಪರ್ಜನ್ಯ+ಜಪ]

**ಪರ್ಜನ್ಯಾಸ್ತ್ರ** (ನಾ). ಮಳೆಯ ಅಧಿದೇವತೆಯನ್ನು ಅಭಿಮಂತ್ರಿಸಿ ಬಿಡುವ ಅಸ್ತ್ರ; ಮೇಘಾಸ್ತ್ರ; ವರುಣಾಸ್ತ್ರ: ಅರ್ಜುನನು . . . ಪರ್ಜನ್ಯಾಸ್ತ್ರದಿಂದ ಮೇಘಗಳನ್ನು ಬರಿಸಿ ವಾಯವ್ಯದಿಂದ ಗಾಳಿಯನ್ನು ಎಬ್ಬಿಸಿದನು (ವಚಭಾ. ೨೩). [ಪರ್ಜನ್ಯ+ಅಸ್ತ್ರ]

**ಪರ್ಜಿ** (ನಾ). ದ್ರಾವಿಡಭಾಷೆಗಳಲ್ಲಿ ಒಂದು ಮತ್ತು ಆ ಭಾಷೆಯನ್ನಾಡುವ ಒಂದು ಜನಾಂಗ: ಪರ್ಜಿಭಾಷೆ ಅಸಂಸ್ಕೃತ ಅಥವಾ ಶ್ರಾವಣಭಾಷೆಗಳ ಗುಂಪಿಗೆ ಸೇರಿದ ಒಂದು ಸ್ವತಂತ್ರ ಅಥವಾ ಪ್ರತ್ಯೇಕ ಪರಿಗಣನೆಗೆ ಅರ್ಹವಾದ ಭಾಷೆ (ದ್ರಾವಿವಿ. ೧೮೨).

**ಪರ್ಣ** (ನಾ). ೧. ರೆಕ್ಕೆ; ಪಕ್ಷ; ಗರಿ: 'ಪರ್ಣತನು' ಪರಾ. ೨. ಎಲೆ; ದಳ; ಪತ್ರ: "ಬರ್ಹಂ, ಪರ್ಣಂ, ದಳಂ, ಪತ್ರಂ, ಪಲಾಶಂ, ಛದನಂ, ಛದಃ—ಈ ಏಳು ಮರದ ಎಲೆ" (ಹಲಾಯು. ೩೧-೩೧); ಅಯುತತರಂಗವಲ್ಲಿಪರಿಶೋಭಿಯನಂಚಿತಚಾರುಕೀರ್ಣಪರ್ಣಯುಧಪಾಳಿತೋರಣವಿರಾಜಿತಮಂ. . . ಅನಿಂದಿತಸುಂದರರಾಜಮಾರ್ಗಮಂ ಶ್ರೀಯ ನಿವಾಸಮಂ ಪುಗೆ ನೃಪೇಶ್ವರಕನ್ಯಕೆಯುಂ ಕುಮಾರನುಂ (ಶಾಂತಿಪು. ೬-೪); ವಸ್ತುವಿಪ್ಪ ಭೇದವ ಬಲ್ಲೆನೆಂದರೆ ಪರ್ಣದೊಳಗಿಪ್ಪ ಪಚ್ಚೆಯಂತೆ . . . ಅದು ನೆಪ್ಪಿಗೆ ಬಾರದು (ಮೋಳಿಮಾ. ೬-೨೦); ನಾಗವಲ್ಲಿಯ ಹಿಂದು ಮುಂದನು ನೀಗಿ ಕಳೆಯದೆ ಚೂರ್ಣಪರ್ಣತ್ಯಾಗವಿಲ್ಲದೆ ದಂತಧಾವನಪರ್ಣವನು ಸವಿದು ಭೋಗಿಸುವೊಡೆ . . . ಅವನನು ನೀಗಿ ಕಳೆವಳು ಭಾಗ್ಯವಧು (ಕುವ್ಯಾಉ. ೩-೫೯). ೩. ವೀಳೆಯದೆಲೆ; ನಾಗವಲ್ಲಿ: ಸ್ಥೂಲವಡಿಕೆಯಾದಂತೆ ಸೂಕ್ಷ್ಮ ಪರ್ಣವಾದಂತೆ ಕಾರಣ ಚೂರ್ಣವಾದಂತೆ ಮೂಱು ಕೂಡಿದ ಮತ್ತೆ ಬಣ್ಣವಾಯಿತ್ತು ರಜ (ಮೋಳಿಮಾ. ೧೦೮-೪೩೦); ಪೊಂಬರಿಯಣದಿ ಪೊಳ್ಳಣಿಮಯವಡೆದಿರ್ದ ಸಂಬಳಿಗೆಯ ಪರ್ಣಚೂರ್ಣ ಕೊಂಬ ಕರ್ಪೂರಕರಂಡವ ಸ್ಮರನ ತಲೆಗಿಂಬಿನೊಳ್ ತಂದಿರಿಸಿದರು (ಪೋಹತ. ೧೬-೨೭). ೪. ಮುತ್ತುಗದ ಮರ; ಪಲಾಶ: "ಪಲಾಶಃ, ಕಿಂಶುಕಃ, ಪರ್ಣಃ, ವಾತಪೋತಃ—೪ ಮುತ್ತುಗದ ಗಿಡ" (ಸಿದ್ಧಾಂತಿ. ೧೧೮). ೫. ಒಂದು ಬಗೆಯ ಕ್ರಿಮಿ (?): ಕುಂಥು ಘುಣ ಮತ್ಕುಣ ದಂಶ . . . ಇಂದ್ರಗೋಪ ಪರ್ಣ ವೃಶ್ಚಿಕ ಸಪಾದ ಕ್ರಿಮಿಕೀಟಕಾದಿ ತ್ರೀಂದ್ರಿಯಂಗಳ್ ಸ್ಪರ್ಶನ ರಸನ ಘ್ರಾಣೇಂದ್ರಿಯಬೋಧಕಲಿತಂಗಳಪ್ಪುವು (ತತ್ತ್ವಪ್ರ. ೯೮). [ಸಂ.]

**ಪರ್ಣಕುಟಿ** (ನಾ). ಎಲೆ, ಹುಲ್ಲು, ಗರಿ ಮೊದಲಾದುವುಗಳಿಂದ ನಿರ್ಮಿಸಿದ ಮನೆ; ಪರ್ಣಶಾಲೆ; ಎಲೆವನೆ: ಶಿಷ್ಯರನವರವರ ಪರ್ಣಕುಟಿಗಳ್ಗೆ ಕಳುಹಿ (ಶ್ರೀರಾಮಾ. ೧೪೩-೩೧); ತಾನೂ ಲಕ್ಷ್ಮಿಯೂ ಸಂಧ್ಯಾಸಮಯದಲ್ಲಿ ತಮ್ಮ ಪರ್ಣಕುಟಿಯ ಬಳಿ ಕುಳಿತಿದ್ದಂತೆ . . . ಕನಸು ಕಂಡಳು (ಶಾಂತಲಾ. ೨೩೭). [ಪರ್ಣ+ಕುಟಿ₂]

**ಪರ್ಣಕುಟೀರ** (ನಾ). =ಪರ್ಣಕುಟಿ: ಪರ್ಣಕುಟೀರದೊಳ್ ತಳಿರತಳ್ಪದೊಳಿರ್ದು . . . ಸುಖಸನಾಥಿಯನಾಂತೆಸೆದಂ ಮುನೀಶ್ವರಂ (ದಶಕು. ೮-೫೪); ಅವಳ ಅಪರಿಮಿತವಾದ ಪರಿಶ್ರಮದಿಂದ ಗುಡಿಸಿಲಿನ ಎದುರು ಸುಂದರ ಕೈತೋಟವು ಏರ್ಪಟ್ಟು ಮಹಾಶ್ವೇತೆಯ ಪರ್ಣಕುಟೀರದಂತೆ ಕಾಣುತ್ತಿತ್ತು (ಹೇಮಂತ. ೯೧). [ಪರ್ಣ+ಕುಟೀರ]

**ಪರ್ಣಗೃಹ** (ನಾ). =ಪರ್ಣಕುಟಿ: ಕಿಕ್ಕಿರಿಯುವಂತೆ ಕವಿದುವು ಕಡಲ ತೀರಮಂ ಪರ್ಣಗೃಹಗಳ್ ಚತುರ್ಥಾದಿತಂ (ಶ್ರೀರಾಮಾ. ೫೪೪-೧೧೭). [ಪರ್ಣ+ಗೃಹ]

**ಪರ್ಣತನು** (ನಾ). ಗರಿಗಳಿಂದ ಕೂಡಿದ ಶರೀರ; ರೆಕ್ಕೆಪುಕ್ಕಗಳಿರುವ ಮೈ; ಪಕ್ಷಿಯ ದೇಹ: ಕಪಿಗೋಷ್ಠಿ . . . ಪರ್ಣತನುವಾಗಿ, ಹರಿಪರ್ಯಾನಂ ಪೆರಸಿ ಮಿರುಮಿರುಗಿ ಬರುತಿರ್ದನಂ ಗರಿಮೆಯ್ಯನಂ ಕಂಡು ಸಂತೋಷಿಸಿತು ಶಕುನಮಂಗಳಕೆ (ಶ್ರೀರಾಮಾ. ೩೯೨-೮೩೧). [ಪರ್ಣ+ತನು]

**ಪರ್ಣದ್ರುಮ** (ನಾ). ಮುತ್ತುಗದ ಮರ; ಪಲಾಶ: ಏರಿದನು ಸೌಮಿತ್ರಿ . . . ವಿರಳಪರ್ಣದ್ರುಮದ ಪುಷ್ಪಿತಶಿರೋಗದಾ ಸ್ವರ್ಗಚುಂಬಿತ ಸಾಲದುನ್ನತಶಿರದ ಕರದ ಗೋಪುರಕೆ (ಶ್ರೀರಾಮಾ. ೧೫೭-೧೪೬). [ಪರ್ಣ+ದ್ರುಮ]

**ಪರ್ಣಪುಟ** (ನಾ). ಎಲೆಯಿಂದ ಮಾಡಿದ ದೊನ್ನೆ; ಪತ್ರಪುಟ:

ಮುನಿಕುಮಾರಂ ಕೃತಸ್ನಾನನಾಗಿ . . . ಎನ್ನಂ ಪರ್ಣಪುಟದೊಳ್ ತಳೆದು ನಿರ್ವರ್ತಿತ ನಿಯಮರಪ್ಪ ಮುನಿಕುಮಾರರ್ ಬೆರಸು ನಿಜಾಶ್ರಮಕ್ಕೆ ಪೋಗೆವೋಗೆ (ಕಾದಂಪೂ. ೨೧೪). [ಪರ್ಣ+ಪುಟ$_3$]

**ಪರ್ಣಪುಟಿಕೆ** (ನಾ). = ಪರ್ಣಪುಟ: ಪರಪುಷ್ಪದಂತೆ ಪುಗಲೆಂಬರ ಮಾತಂ ವಿಾಱಿ ಲಕ್ಷ್ಮಣಂ ಪೊಕ್ಕು ಸರೋವರಮಂ ಮೊಗೆದಂ ಜಲಮಂ ಸರೋಜವಿಸ್ತೀರ್ಣಪರ್ಣಪುಟಿಕಾಹಸ್ತಂ (ಪಂಂರಾಮಾ. ೬-೧೦೫). [ಪರ್ಣ + ಪುಟಿಕೆ$_2$]

**ಪರ್ಣಭವನ** (ನಾ). = ಪರ್ಣಕುಟಿ: ರಘುಭೂಪಾಲಕನು ರಿಪು ವಿಜಯವಿಭವದ ಲೀಲೆಯಲಿ ನಿಜಪರ್ಣಭವನಕೆ ಬರಲು (ತೊರರಾ. ೩-೬-೧). [ಪರ್ಣ + ಭವನ]

**ಪರ್ಣಭೋಜನ** (ನಾ). ೧. ಎಲೆಯನ್ನು ತಿನ್ನುವುದು. ೨. ಗಿಡದ ಎಲೆಗಳನ್ನೇ ಆಹಾರವಾಗಿ ಹೊಂದಿರುವ ಮೇಕೆ, ಆಡು ಮುಂತಾದುವು. [ಪರ್ಣ+ಭೋಜನ]

**ಪರ್ಣಮಂದಿರ** (ನಾ). = ಪರ್ಣಕುಟಿ: ತೊರವೆಯ ಶ್ರೀನೃಸಿಂಹನು ಬಂದು ಹೊಕ್ಕನು ಪರ್ಣಮಂದಿರವ (ತೊರರಾ. ೩-೧-೪೮). [ಪರ್ಣ + ಮಂದಿರ$_2$]

**ಪರ್ಣಮಾಲೆ** (ನಾ). ಎಲೆಗಳನ್ನು ಪೋಣಿಸಿ ಮಾಡಿದ ಸರ,— ಹಾರ: ನಮ್ಮ ಮನೆಯಲ್ಲಿಯ ಗೂಟ, ಬೋದು, ಕಿಡಕಿ, ಮಾಡ, ಜಂತಿಯ ಈ ತುದಿಯಿಂದ ಆ ತುದಿ, ನಾವು ಸಂಗ್ರಹಿಸಿದ ಈ ಪರ್ಣ ಮಾಲೆಯಿಂದ ಅಲಂಕೃತವಾಗಿರುತ್ತಿದ್ದವು (ದೀಪಹ. II, ೨). [ಪರ್ಣ + ಮಾಲೆ]

**ಪರ್ಣಲಘು** (ನಾ). [ಜೈನ] (ಮೇಲಿನಿಂದ ಬೀಳುವಾಗ ಪೆಟ್ಟು ತಾಗದಂತೆ) ಶರೀರವನ್ನು ಎಲೆಯಷ್ಟು ಹಗುರಗೊಳಿಸುವ ವಿದ್ಯೆ: ನೊಂದು ನಿತ್ತರಿಸಲಾಱದೆ ಭೋಂಕನೆ ಬಿಟ್ಟು ತಾಂ ಮಹೀತಳಕೆ ಬೀೞುತ್ತುಂ ನಮ್ಮ ನೋವಿಂಗಾಱದೆ ಪರ್ಣಲಘುವೆಂಬ ವಿದ್ಯೆಯಂ ಬೆಸಸುವುದುಂ (ಶಾಂತಿಪು. ೪-೯೬ ವ); ಪ್ರಜ್ಞಪ್ತಿ ಕಾಮರೂಪಿಣಿ . . . ಪರ್ಣಲಘು . . . ಅಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಚಾವುಂಪು. ೧೯೬). [ಪರ್ಣ + ಲಘು]

**ಪರ್ಣಲಘುವಿದ್ಯೆ** (ನಾ). = ಪರ್ಣಲಘು: ತನ್ನ ಕರ್ಣಕುಂಡಳಮಂ ಬಾಳಕನ ಕರ್ಣಯುಗಳಂಗಳೊಳಮರ್ಚಿ ಪರ್ಣಲಘುವಿದ್ಯೆಯಿನೀಡಾಡಿ ಪೋಪುದುಂ (ಪಂಂರಾಮಾ. ೪-೧೯ ವ). [ಪರ್ಣಲಘು + ವಿದ್ಯೆ]

**ಪರ್ಣವಿಕ್ರಯಿ** (ನಾ). ವೀಳೆಯದೆಲೆಯನ್ನು ಮಾರುವವಳು: ನರ್ತಕಿಯ ನಾಪಿತೆಯ ಪರ್ಣವಿಕ್ರಯಿಯ . . . ಸೈರಂಧ್ರಿಯ ಕರ್ತವ್ಯ ದಿಂದಿನಿಬರೊಡನಾಡಿದೊಡೆ ಬಾಲೆಯರ್ತವೆ ದುರಾಚಾರಮಂ ಕಲಿವರು (ಜೈಮಿಭಾ. ೫-೫೮). [ಸಂ. ಪರ್ಣವಿಕ್ರಯಿನ್]

**ಪರ್ಣಶಾಲೆ** (ನಾ). = ಪರ್ಣಕುಟಿ: "ಯತಿಕುಟೀರಕ್ಕನುದು ಪರ್ಣ ಶಾಲೆ" (ವಸ್ತುಕೋ. ४೮-೨೦); ಮೆಲ್ಲನೆ ನಿನ್ನ ಪರ್ಣಶಾಲೆಗೆ ಮುನಿ ಬಿಜಯಂಗೆಯ್ (ದಶಕು. ೮-೫೮); ಚಿತ್ರಮಯವಾಗಿ ಕಟ್ಟಿತು ಪರ್ಣಶಾಲೆ ಶತಪತ್ರಲೋಚನೆಗೆ (ಜೈಮಿಭಾ. ೧೯-೪೨). [ಪರ್ಣ+ಶಾಲೆ$_3$]

**ಪರ್ಣಾಸ** (ನಾ). ೧. ಒಂದು ಬಗೆಯ ಸುವಾಸನೆಯ ಸಸ್ಯ; ಕಾಮಕಸ್ತೂರಿ: "ಪರ್ಣಾಸಃ, ಕಠಿಂಜರಃ, ಕುಟೇರಕಃ— ೩ ಕಗ್ಗೊಲೇಗಿಡದ ಹೆಸರು, ಕಾಮಕಸ್ತೂರೀ ಗಿಡ" (ಸಿದ್ಧಾಂತಿ. ೧೩೦). ೨. ತುಳಸಿ. [ಸಂ.]

**ಪರ್ಣಾಹಾರ** (ನಾ). = ಪರ್ಣಭೋಜನ. [ಪರ್ಣ+ಆಹಾರ]

**ಪರ್ತ** 'ಪರತ' ನೋ.

**ಪರ್ತಿ** 'ಪಟ್ಟಿ' ನೋ.

**ಪರ್ದಲ** 'ಪರ್ದಿಲ' ನೋ.

**ಪರ್ದಿಲ,** ಪರ್ದಲ, ಪಟ್ಟಿಲ (ನಾ). ೧. ಒಬ್ಬಾತನ ಹೆಸರು: ನರಯಣನ ದಾನಗೊಟ್ಟ ಪಟ್ಟಿಲ ದೇವಯಾನ ದೇಗುಲಕ್ಕೆ ಕೊಟ್ಟ ನನ್ದಿ ಮಕರ ಪ್ರತಿಮೆಗಳನರಪಟ್ಟಿಗವೊನ್ದು (ಸೌಇಇ. XI-i, ೩೫-೧೦; 933). **ಪರ್ದಲ:** ೨. ಒಂದು ಸ್ಥಳದ ಹೆಸರು; ಈಗಿನ ಧಾರವಾಡ ಜಿಲ್ಲೆಯ ಹದಲಿ: ಶ್ರೀಭೈರವರಕ್ಷಣೀಯದುರ್ದ್ಧಷ್ಟ ನಿಗ್ರಹ ವಿಶಿ(ಶಿ)ಷ್ಟಪ್ರತಿಪಾಳಕರಪ್ಪ ಶ್ರೀಮತ್ಪರ್ದ್ದಲನಾಲ್ನೂಱರ್ಪ್ಪರ್ ದಿವ್ಯರ್ (ಇಆ. XII, ೯೨-೧೨; 1084). **ಪಟ್ಟಿಲ:** ೨. ಲೋಕ ದೊಳ್ ನೆಗಟ್ದ ಪಟ್ದಲ ಸದ್[ದಿ]ವಿಜರೇಂ ಕೃತಾರ್ತ್ಥರೊ (ಇಆ. XIII, ೯೨-೧೪; 1084). [?]

**ಪರ್ದಿಷ್ಟ** (ನಾ). ಸಂಪ್ರದಾಯ; ಪದ್ಧತಿ: ಇದು ಪೂರ್ವಿಕರಿಂದ ಬಂದ 'ಪರ್ದಿಷ್ಟ' (ನಮ್ಮೂರ. ೧೭೬). [?]

**ಪರ್ದು,** ಪದ್ದು$_1$, ಹದ್ದು$_1$, ಹರ್ದು (ನಾ). ೧. ಒಂದು ಬಗೆಯ ಹಕ್ಕಿ; ಗೃಧ್ರ: "ಪರ್ದೆನೆ ಗೃಧ್ರಂ" (ಕವಿಕಂ. ೬೮); ಸುಭದ್ರೆಯಪ್ಪ ವ್ಯಂತರದೇವತೆ ವಿಭಂಗಜ್ಞಾನದಿಂದಱಿದು ಚಿಲಾತ ರಿಸಿಯರಂ ಕಂಡು ಪಗೆಯಂ ನೆನೆದು ಪರ್ದಿನ ರೂಪಂ ಕೈಕೊಂಡು ಬಂದು ನೆತ್ತಿಯ ಮೇಗಿರ್ದು ಕಣ್ಗಳಂ ತೋಡಿ ತಿನೆ (ವಡ್ಡಾರಾ. ೧೬೮-೪); ನಿನ್ನಂ ಕೊಂದನ ಬಸಿಱಂ ನಿನ್ನಂ ತೆಗೆಯದೆಯುಮವನ ಕರುಳಂ ಪರ್ದಿಂ ಮುನ್ನಂಗಿಸಿ ನೋಡದೆಯುಂ ಮುನ್ನಮೆ ಯುವರಾಜ ನಿನ್ನನಾಂ ನೋಡಿದೆನೇ (ಪಂಪಭಾ. ೧೩-೫೭); ತೊಡರ್ದರಿಸೈನ್ಯಂ ಬೆನ್ನಿತ್ತೊಡೞ ಯೆನಾಂತೊಡದನ್ನೆಱೆ ಪರ್ದಿಂಗೆ ಬಿರ್ದನಿಕ್ಕುವೆನೀಗಳ್ (ಚಂದ್ರಪ್ರ. ೧೦-೮೮); ಹರಣಂ ಹಮ್ಮೈಸಿ ಪರ್ದೆಱಗಿದುರಗಿಯಂತೆ ಮಿಡುಮಿಡನೆ ಮಿಡುಕಿ (ರಾಜಶೇ. ೧೩-೧೦೪ ವ). ೨. ಗರುಡ; ಗರುತ್ಮ: "ಪಕ್ಷಿಗಳಾಣ್ಮಂ" ಎಲರುಣಿವಗೆಯುಂ, ಪರ್ದು— ಈ ೩ ಗರುತ್ಮಂಗೆ ಪೆಸರ್" (ಕಶಸಾ. ४೭-೧೨); ಕೊಳಗುವ ಸಂಕುಂ ಪಾಱುಂಬಳ ನೇರ್ಪಡೆ ಪರ್ದನೇಱ ಬಂದೊಲವಿಂ ಪಜ್ಜಳಿಪ ಮುಗಿಲೆಡೆ ಯೊಳಿರ್ದಂ ತಳತಳಿಸುವ ತೊಡವನಾಂತು ಸಿರಿವೆಣ್ಣರಸಂ (ಕಬ್ಬಿಗಕಾ. ೨೯೨); ಅಂಬುಜನಾಭನ ಪರ್ದು ಕಾರ್ತಿಕೇಯನ ನವಿಲ್ . . . ವಿಂಧ್ಯವಾಸಿನಿಯ ಮೃಗಾರಿ ನಾಯಿಂಗರಿದಲ್ಲವು ಸಾಹಸಮಲ್ಲದೇವನ (ಸೂಕ್ತಿಸು. ೩-೧೨೩). 'ಪರ್ದುದೇರ' ಪರಾ. **ಪದ್ದು$_1$:** ೧. "ದಾಕ್ಷಾಯ್ಯಃ, ಗೃಧ್ರಃ—ಹದ್ದಿನ ಹೆಸರುಗಳು, ಪದ್ದು" (ಸಿದ್ಧಾಂತಿ. ೧೫೯); ದೈತ್ಯನ ಪೃಥುಕಿರೀಟಾಗ್ರದೊಳ್ ಪದ್ದು ಕುಳ್ಳಿರಲುಮವಿತಥಮೆಂದು ತಿಳಿಯದೆ ತೆರಳ್ದನಸುರಂ ಮರಣಕಥನಮಂ ತಿಳಿಯಲೀವುದೆ ಮನದಹಂಕೃತಂ (ಚಬಪು. ४೮-೬); ಪದ್ದು ಕಾಗೆಗಳೆಂತೊ ಸಾತ್ವಿಕಮಪರ್ಣೆಯ ತಪೋಬನ ದೊಳು (ಜೈಮಿಭಾ. ೧೫-೧೯); ಮುಳಿದು ಪದ್ದಿಸಿಂದಾ ಪರಶುಪಾಣಿಯುಂ ಮುಂದೆಸಗಿ ನಡದಾ ಪ್ರಯಾಗದೆಡೆಗೆ (ಪರಶು. ೩೯-೨೬). ೨. 'ಪದ್ದುದೇರ' ಪರಾ. **ಹದ್ದು$_1$:** ೧. "ಪಕ್ಷಿಜ್ಯೇಷ್ಠಂ ಗೃಧ್ರಮೆನೆ ಹದ್ದು" (ಮಂಗರಾ. ೫೨-೯೧); ಅಂಬರಾಂತರದಲಾಡುವ ಹದ್ದಿನಲೊಂದು ಕಣ್ಣುವಂ ನೋಡಿಧವರ್ಗ್ಗೆ ಶಂಕೆ ಮಿಗಿಲೆಚ್ಚ ನೆಗಳ್ತೆಯ ಮಯಿಜಭೂಮಿಪಂ (ಎಕ. VI, ತರೀಕೆ. ೬೧-೨೦; 1154 ?); ಆಕಾಶದಲಾಡುವ ಹದ್ದ ನೊಂದು ಸರ್ಪ ನುಂಗಿತ್ತ ಕಂಡೆ (ಆದವ. ೩೫-೧೦೦); ಹದ್ದು ಕಾಗೆಯ ಮನೆಗೆ ಬಾಣಸವಿದ್ದುದೋ ಗಜವೆನುತ ಬೊಬ್ಬಿಡುತಿದ್ದುದರಿಬಲ (ಕುಮಾರವ್ಯಾ. ದ್ರೋ. ೩-४೩); ಮೇಳವಿಸಿದವು ಧೂಮಕೇತು ದಿಶಾಳಿಯಲಿ ರಥಕೇತುದಂಡದ ಮೇಲೆ ಹದ್ದೆಱಗಿದವು ಕಲಿ ಖರದೂಷಣಾದಿಗಳ (ತೊರರಾ. ೩-೫-೮); ಹಾವು ಹೊಡೆದು ಹದ್ದಿಗೆ ಹಾಕಿದ ಹಾಗೆ (ಗಾದೆ).

೨. ಹದ್ದು ಎನ್ನ ವಾಹನವಂತೆ ಹಾವು ಎನ್ನ ಹಾಸಿಗೆಯಂತೆ ಕದ್ದು ಬೆಣ್ಣೆಯ ನಾ ತಿಂದೆನಂತೆ (ಪುರಂದ. ೨-೧೯-೫). **ಹರ್ದು:** ೧. 'ಹಡೆಹರ್ದು' ಪರಾ.

**ಹದ್ದಿನ ಕಣ್ಣು** = ೧. ಸೂಕ್ಷ್ಮದೃಷ್ಟಿಯನ್ನುಳ್ಳ ಕಣ್ಣು; ದೂರದೃಷ್ಟಿಯನ್ನುಳ್ಳ ಕಣ್ಣು: ಅವನ ಕಣ್ಣು ಹದ್ದಿನ ಕಣ್ಣಿನ ಹಾಗೆ (ಮುಂಬಯಿ. ೪-೪೨); ತನ್ನ ಮನಸ್ಸಿನ ಭಾವನೆಗಳನ್ನು ಎಷ್ಟು ಬೇಗ ಈತ ಗ್ರಹಿಸಿದನಲ್ಲ! ನಿಜವಾಗಿಯೂ ಅವನದು ಹದ್ದಿನ ಕಣ್ಣೇ! (ಬನಸಿ. ೫೭). ೨. ಕೆಟ್ಟದೃಷ್ಟಿ: ಅಲ್ಲಲ್ಲಿ ಭೂಗತರಾದ ದೇಶ ಪ್ರೇಮಿಗಳು ಸರಕಾರದ ಹದ್ದಿನ ಕಣ್ಣಿಗೆ ಬೀಳದೆ ಕಿರುಕುಳವನ್ನೆಸಗುತ್ತಲೇ ಬಂದರು (ಕುರುಕಾ. ೧೫೦); ಮೊದಲಿನಿಂದಲೂ ಈ ಹೊಲಗಳ ಮೇಲೆ ಸತ್ಯನಾಥರಾಯರ ಹದ್ದಿನ ಕಣ್ಣು ಕುಳಿತಿತ್ತು (ಮಣ್ಣಿ ಮ. ೭). **ಹದ್ದಿನ ದೃಷ್ಟಿ** = ಹದ್ದಿನ ಕಣ್ಣು ೨: ಸಿದ್ಧಬಸಪ್ಪನ ಹದ್ದಿನ ದೃಷ್ಟಿ ಆ ಬಡವನ ಮೇಲೆ ಬಿತ್ತು (ನಾಪೂರಿ. ೧೨೭). **ಹದ್ದಿನ ಪಾಲಾಗು** = ಸಾಯು; ನಾಶವಾಗು: ನಮ್ಮ ಯಜಮಾನನು ರಾಜಾಜ್ಞೆಯನ್ನು ಪಡೆದು ಈ ಕಡೆಯೇ ನೋಡುತ್ತಿರುವನು. ಆದುದರಿಂದ ನೀನು ಹದ್ದಿನ ಪಾಲಾಗುವೆ (ಶಾಕುಂತ. ೭೭-೬). [ದೇ. ॥ ತಮಿ. ಪರುನ್ತು; ಮಲ. ಪರುನ್ತು, ಪರನ್ತು; ತೆಲು. ಬಂದು; ಕೊಡ. ಪದ್ದಿ; ಕೋತ. ಪದ್]

**ಪರ್ದುದೇರ,** ಪದ್ದುದೇರ (ನಾ). ಗರುಡನನ್ನು ವಾಹನವಾಗಿ ಉಳ್ಳವನು; ಗರುಡವಾಹನ; ವಿಷ್ಣು: "ಅರಲ್ವೊಡೆಯಂ, ಎಲರುಣಿವಟ್ಟೆಗಂ, ಪಾಜಂಬಳಿಗ್ಗೆಯಂ, ಪರ್ದುದೇರಂ . . . ಕಾವನುಮ್ಮಂ—ಈ ೧೨ ವಿಷ್ಣುಗೆ ಪೆಸರ್" (ಕಶಸಾ. ೪೭-೯); ಪರ್ದುದೇರನ ನೇಮದಿಂದ ಮೃಗಣ್ಣವಂ ಪದ್ದಿನಂತೈತಂದು ಕಾಣ್ಬಂತೆ ಜನಕನಂ ಪೊದ್ದಿ ವಂದಿಸಿ . . . ಗದ್ದುಗೆಯನಡರೆ (ವೆಂಕಾರಾ. ೧-೨೦-೩೩). **ಪದ್ದುದೇರ:** ಶುದ್ಧಾಂಗನಾಗಿ ಭಸಿತಾಕ್ಷಮಾಲೆಯ ಧರಿಸಿ ಪದ್ದುದೇರನ ನಲ್ಲನೊಂಬತ್ತು ಪದ್ಯದಿಂ ನುತಿಸುತ (ಪ್ರೌಢರಾ. ೨-೪೫).
[ಪರ್ದು+ತೇರ್$_2$+-ಅ$_7$]

**ಪರ್ದುವೇರ್** (ನಾ). ಒಂದು ಬಗೆಯ ಬೇರು; ಗರುಡಪಾತಾಳದ ಬೇರು.

**ಪರ್ದುವೇರ್ ಕಲ್ಕ** = ಗರುಡಪಾತಾಳದ ಬೇರಿನಿಂದ ತಯಾರಿಸಿದ ಒಂದು ಬಗೆಯ ಮಂದವಾದ ಔಷಧ: ಮಲೆಯೋಜ ರೊದವಿದರ್ ಪರ್ದುವೇರ್ ಕಲ್ಕಮಂ ನಲವಿನಿಂ ತಿವಿರಿದರ್ ನಂಜಿಳಿಯ ಲೆಂದು (ಕಾಲೂರ. ೧೦೪-೨೧೦). [ಪರ್ದು+ಬೇರ್]

**ಪರ್ನ** 'ಪನ್ನ$_3$' ನೋ.

**ಪರ್ನಕರ್ಪೂರ** (ನಾ). ಪಚ್ಚಕರ್ಪೂರ: ಪಸುರುಳಿದ ನಾಗವಲ್ಲಿಯ ಪರ್ನಕರ್ಪೂರದೆಸೆವ ಚೂರ್ಣಪ್ಪ ಭಾಗದ ಕ್ರಮುಕಮುಮ ಪೊನ್ನ ಸಂಬಳಿಗೆ ಯೊಳಗೆ ತೀವಿ (ನವಮೋ. ೧೪-೧೭). 'ಪನ್ನೆಗಪ್ಪುರ' ಪರಾ.
[ಪರ್ನ(<ಪನ್ನ$_3$)+ಕರ್ಪೂರ]

**ಪರ್ನಕುಟಿ** 'ಪನ್ನಗುಡಿ' ನೋ.

**ಪರ್ನಶಾಲೆ** (ನಾ). ಎಲೆವನೆ; ಪರ್ಣಕುಟಿ: ಪರಿವಾ ಸರಸ್ವತಿಯ ದಿಂಬದೋಳ್ ಪರ್ನಶಾಲೆಯ ರಚಿಸಿಕೊಂಡು ತಪಸಂ ಮಾಡುತಿರುತಿರ್ದರು (ತುರಂಗ. ೮೪-೭). [ಪರ್ನ(<ಪನ್ನ$_3$)+ಶಾಲೆ]

**ಪರ್ಪಟ** (ನಾ). ೧. ಹಪ್ಪಳ; ಪಪ್ಪಡ: "ಪಪ್ಪಳ(ಡ)-ಪರ್ಪಟ" (ತದ್ಭಕೋ. ೨೪). ೨. ಕಹಿರುಚಿಯ ಎಲೆಗಳನ್ನುಳ್ಳ ಒಂದು ಬಗೆಯ ಔಷಧಿಸಸ್ಯ: "ಪರ್ಪಟ-ಹವುಣ" (ಪಂಡಿತ. ೨೦೫).
[ಸಂ.]

**ಪರ್ಪಟಕ** (ನಾ). = ಪರ್ಪಟ ೨: ಕೃತ್ತಿ ಕಂಟಕಿ ಪಾಂಸು ಪರ್ಪಟ [ಪಾಠಾಂ.ಟ]ಕವಕ್ಕ" (ಮಂಗರಾ. ೪೨-೩೮); ತೆಗೆಪಿ ಕುಡಿಯಿಸುಗೆ ಶಿವೆ ಕಳವಿಗೆ ಬಾಳಂ ಕಕ್ಕೆ ಮುಸ್ತೆ ಪರ್ಪಟಕಂ ಮುಟ್ಟಗೆಯೆಂಬಿವಿನಿತುಮಂ ಪೈತ್ತಿಗಜ್ವರಂ ದಾಹಮುಂ ಪ್ರಳಾಪಮುಮುಡುಗುಂ (ಲೋಕೋಪ. ೯-೧೮).
[ಸಂ.]

**ಪರ್ಪಟಿ** (ನಾ). ೧. ಒಂದು ಬಗೆಯ ಮರ: "ಬಸರಿ ಪರ್ಪಟೀ ಪ್ಲಕ್ಷಾಹ್ವಂ" (ವಸ್ತುಕೋ. ೩೩-೨). ೨. ಒಂದು ಬಗೆಯ ಸುವಾಸನೆಯ ಮಣ್ಣು. [ಸಂ.ಪರ್ಪಟೀ]

**ಪರ್ಪರ** (ನಾ). ಕರ್ಕಶ; ಕಠೋರ; ಗಡುಸು: "ಪರ್ಪರಮೆನೆ ಕರ್ಕಶದೊಳ್" (ಕರ್ಣಾನಿ. ೩೬). 'ಪರ್ಪರಿಕೆ' ಪರಾ. [?]

**ಪರ್ಪರಿಕೆ** (ನಾ). ಕರ್ಕಶತೆ; ಕಠೋರತೆ; ಗಡುಸುತನ: "ಪರ್ಪರಿಕೆ=ಕರ್ಕಶತೆ" (ಶಮದ. ಪರಿ. ೨); ಬಂದಿರದವರ್ಗಿದಿರಂ ನಡೆ ತಂದೀತಂ ತಮ್ಮನಾತನಣ್ಣಂ ತಾಂ ನೋಡೆಂದು ನಿಜಸೂತನಮುಪೆ ಮುಂಕುಂದನ ಪರ್ಪರಿಕೆ ಮುನಿಸನೊದವಿಸೆ ಮನದೊಳ್ (ಶಾಂತಿಪು. ೪-೯೧); ತೇಜಿಟ್ಟೇರನೊಂದು ಪೊರ್ದಿರ್ಪಿನ ಪರ್ಪರಿಕೆಯಿಂ ರೋಸದ ಬೀರದ . . . ಸಡಗರದ ದಟವುಟದಿಂ ಬಂದು ಮುತ್ತಿಮುತ್ತಿ ಅಜಿಗುಳಿಜೀವಾ ತ್ಮನಂ ಸೆಜೆವಿಡಿದತ್ತು (ರಾಮಾಶ್ವ. ೭೯-೨೦); ಜೀಯಾ ಅದೇನಾಯಸಂ ಮುಳಿಸೇಂ ಕೀಟರ ಕೈಯ ಪರ್ಪರಿಕೆಯಿಂದೇನಾಯ್ತೊ ನೀಂ ಮನ್ನಿಸೈ (ಮೈಸೂಮ. ೪-೪೧). 'ಪರ್ಪರಿಕೆಗಿಡು' ಪರಾ.
[ಪರ್ಪರ+-ಇಕೆ]

**ಪರ್ಪರಿಕೆಗಿಡು** (ಕ್ರಿ). ಕರ್ಕಶತೆ ಇಲ್ಲವಾಗು; ಕಠೋರತೆಯನ್ನು ಕಳೆದುಕೊಳ್ಳು: ಪರ್ಪರಿಕೆಗಿಡದೆ ಕಲಿವಿಷಖರ್ಪರನಿದಿರಾಂತೊಡಾಂತು ವಲಲಂ ತಳಮಂ ಮಾರ್ಪೊಸೆದು ತಳ್ತು ಕ[ಣ್ಣಿ]ರಿತರ್ಪಿನೆಗಮುವುಂ[ಕಿ] ಸಿಂಹನಾದದಿನಾರ್ದಂ (ಪಂಪಭಾ. ೮-೫೮).
[ಪರ್ಪರಿಕೆ+ಕಿಡು(<ಕೆಡು$_1$)]

**ಪರ್ಪರೀಕ** (ನಾ). ೧. ಸೂರ್ಯ. ೨. ಅಗ್ನಿ. ೩. ಕೊಳ, ಕೆರೆ ಮುಂತಾದ ಜಲಾಶಯ. [ಸಂ.]

**ಪರ್ಪಾಟಕ,** ಪರಪಾಟಕ, ಪರಪಾಷ್ಟಕ, ಪರ್ಪಾಷ್ಟಕ (ನಾ). ಒಂದು ಬಗೆಯ ಔಷಧಿ ಸಸ್ಯ; ಪರ್ಪಟಕ: "ಚರಕಃ-ಪರ್ಪಾಟಕ" (ಓಷಧಿ. ೫೪); ಬಳ್ಳಿದುಮುಚೆ ನೆಲಬೇವು ಮುಸ್ತೆ ಪರ್ಪಾಟಕದಿಂ ಕುದಿದಿಟುಪಿ ಕಟುಕರೋಹಿಣಿಯುದಟಿತೂಳಗಿರೆ ಕೆಡಿಕುಮಲ್ತೆ ಪಿತ್ತಜ್ವರಮಂ (ಕಲ್ಯಾಕಾ. ೩-೩೨); ಪರ್ಪಾಟಕದ ಕಷಾಯಮದೊಪ್ಪುವರುಷ್ಕರ ದೊಳಾದ ಶೋಥೆಯಮುಂತಾ ದರ್ಪಮನಾಗಳೆ ತೊಲಗಿಪುದೊಪ್ಪುವ ಮುತ್ತದ ಕಷಾಯಮುಂ ಮೇಣ್ ಕಳೆಗುಂ (ಖಮದ. ೨-೧೧೧); ಭದ್ರಮುಸ್ತೆ, ನೈದಿಲ ಗೆಡ್ಡೆ . . . ಶ್ರೀಗಂಧ, ಪರ್ಪಾಟಕ, ಇವಿಟ ಕಷಾಯವ ಕೊಡಿಸಲು ಪಿತ್ತಜ್ವರ ಹರ (ವೈದ್ಯಸಾ. I, ೫೮). **ಪರಪಾಟಕ:** ಸೊಪ್ಪುಗಳು: ಆಗಸೆ . . . ತುಂಬೆ, ಚಟಿಗಿನ, ಪರಪಾಟಕ, ದೊಡ್ಡ ಗೋರ (ನಸ್ಸುನಂ. ೨೩೭). **ಪರಪಾಷ್ಟಕ:** (ಕಿ). **ಪರ್ಪಾಷ್ಟಕ:** ದ್ರಾಕ್ಷಿ ಹಣ್ಣು, ಅಮರದ ವಳ್ಳಿ, ಪರ್ಪಾಷ್ಟಕ, ಭದ್ರಮುಸ್ತೆ, ಕಟುಕರೋಹಿಣಿ, ಕಕ್ಕೆಹಣ್ಣು ಇವಂ ಸಮಾನ ಕಷಾಯವಿಕ್ಕಿ ಕೊಡೆ ಹಳೆಯ ಜ್ವರ, ಪ್ರಲಾಪ, ಮೂರ್ಛೆ, ನೀರ ದಾಹ ಮುಂತಾಗಿ ಮಾಣ್ಗುಂ (ಸಕವೈ. ೧೨೩).

**ಪರ್ಪಾಟಕದ ಚೂರ್ಣ** = ಪರ್ಪಾಟಕದಿಂದ ತಯಾರಿಸಿದ ಭಸ್ಮ: ಪರ್ಪಾಟಕದ ಚೂರ್ಣ- ಬಿಳಿಗಣಿಜೆ, ಜೀರಿಗೆ ಸಹ, ಹಳೇನೀರಿನಲ್ಲರೆದು ಕದಡಿ ಕುಡಿಯೆ ಮೂರುದಿನಕ್ಕೆ ದಾಹಜ್ವರ ಬಿಡುವುದು (ಸಕವೈ. ೭೭).
[<ಸಂ.ಪರ್ಪಟಕ]

**ಪರ್ಪಾಣಿ** (ನಾ). ಒಂದು ಬಗೆಯ ಸಸ್ಯ: "ಕುಂಡಲಿ—ಸರ್ಪ . . . ಪರ್ಪಾಣಿ, ಹೇರಾಚಿ" (ಓಷಧಿ. ೩೫). [?]

**ಪರ್ಪಾಷ್ಟಕ** 'ಪರ್ಪಾಟಕ' ನೋ.

**ಪರ್ಬ,** ಪಬ್ಬ, ಪರ್ವ₂, ಪರುವ, ಹಬ್ಬ (ನಾ). **೧.** ಸಂಕ್ರಮಣ, ಹುಣ್ಣಿಮೆ ಮುಂತಾದ ಪುಣ್ಯಕಾಲ ; ಪರ್ವಕಾಲ: ಉತ್ತರಾಯಣ ಸಂಕ್ರಾಂತಿಯೊಳ್ ಕೂಚಿಭಟ್ಟಾರರ ಕಾಲಂ ಕರ್ಚ್ಚಿ ಧಾರೆಯೆನೆಱೆದು ಬಿಟ್ಟುಕೊಟ್ಟರ್ ಪಿಡಿವತ್ತ ಪರ್ಬ್ಬದಕ್ಕಿ (ಎಕ. IV, ಚಾಮರಾ. ೧೮–೧೭; 1000); ಉತ್ತರಾಯಣಸಂಕ್ರಾಂತಿಯ ಪರ್ಬ್ಬನಿಮಿತ್ತದಿಂ ಮೂಲಸ್ಥಾನ ನಂದಿಕೇಶ್ವರದೇವರ ದೇವಾಲ್ಯಕ್ಕಂ ಜೀರ್ಣೋದ್ಧಾರಂ ಮಾಡಿ (ಎಕ. VII, ಶಿಕಾರಿ. ೧೨೫–೨೭ ; 1019); ಸೋಮಗ್ರಹಣಪರ್ಬ್ಬನಿಮಿತ್ತಂ ಪುರಾಣದ ಭಟ್ಟವೃತ್ತಿಗೆ ಸರ್ಬ್ಬನಮಸ್ಯವಾಗಿ ಪಡೆದ ರೇವದಾಸಭಟ್ಟರ ಕೆಯ್ಯಂ ಬಡಗ ಬಿಟ್ಟ ಪಿರಿಯ ಕೋಲ ಮತ್ತ[ಱ] ಮನೆಯ ನಿವೇಶನ ೧ (ಸೌಇಇ. XX, ೭೨–೧೦ ; 1111). 'ಪಂಚಪರ್ಬ' ಪರಾ. **೨.** (ಸಂತೋಷದ ಸಂದರ್ಭಗಳಲ್ಲಿ ಆಚರಿಸುವ) ಉತ್ಸವ; ಸಮಾರಂಭ: "ಪರ್ಬ(ಬ್ಬ)—ಪರ್ವ=ಉತ್ಸವ" (ತದ್ಭಕೋ. ೨೫) ; ಬರಿಸದ ಪರ್ಬ[ಪಾಠಾಂ.ರ್ವ]ದೊಳಂ ಪರಿಹರಿಸಿದೊಡಂ ಪುಣ್ಯಮೆಂಬ ರಿಂದೊಡೆ ಸಲೆ ಕೊಕ್ಕರಿಸಿ ಮಧುಮಾಂಸಮಂ ಪರಿಹರಿಸಿದ ಪುಣ್ಯಾಧಿಕಂಗೆ ಸರಿಯೇ ಕುಲಜರ್ (ಸಮಪು. ೬–೯೦) ; ಅತಿಶಯದೊಳೊಪ್ಪುವಳ್ಳಿಯ ಪರ್ಬಮಂ ಕರಂ ಪ್ರತಿವತ್ಸರಂ ಮಾಡುತಿರ್ಪನಿಂತಿದು ಭರಂ ನೇಮವೆನಲು (ಬಸರ. ೧೧–೨೦೭) ; ಅಂಗಜಾಂತಕಭಕ್ತರಲಿ ಪರ್ಬಂಗಳಾದಡೆ ತಲೆಗಳೊಳು . . . ಲಿಂಗವಂತರ ಪಾದರಕ್ಷಾಸಂಗವಾಗಿಹ ಕುಣಿಕೆಗಳನತಿಸಾಂಗಮಾಗಲು ಧರಿಸಿ ಸಿತಭಸಿತಾಂಗರಂಗದಲಿ (ಬಸವು. ೫೬–೪) ; ಆ ಸಮಯದೊಳೊರ್ವಂ ವಿಟಂ ವೇಶ್ಯಾಲಯದ ಪರ್ಬಕ್ಕೆ ಪಥಿಸಲ್ತಕ್ಕ ಬಲ್ಲುಡುಗೆಯಂ ಬಿಲ್ತುಕೊಂಡು ಪುರವೀಥಿಯೊಳ್ಪರ್ಬಾಗಳ್ (ಸ್ವಪವಿ. ೧೭–೮ ಪ). **೩.** (ಆಲಂ) ಸಂತೋಷ ; ಆನಂದ ; ತೃಪ್ತಿ : ಕೊರ್ಬಿದ ಶಾಕ್ವರನಂ ಭುಜಗರ್ಬದೆ ಪಿಡಿದಡಸಿ ಸೀಳ್ದು ನಿಜಗರ್ಬದಗುರ್ಬುರ್ಬಿರೆ ಕೊರ್ಬಿರೆ ಕೊಂದಾಂ ಪರ್ಬಂ ಮಾಡೆನೆ ಸೃಗಾಲ ನಾಳೆಯೆ ನಿನಗಂ (ಪಂಚತಂ. ೧೩೨–೯) ; ಘನದ ಮನ್ನಣೆವೆತ್ತ ಮಾತ್ರಕ್ಕಂ ವಿನುತಿಸಲು ಜಿಹ್ವೆಗಳ ಪರ್ಬವು ಅನಘನಂ ನೋಡಿದಡೆ ಕಂಗಳ ಪರ್ಬವಾಯ್ತೆಮಗೆ (ಬಸವು. ೫–೫೦) ; ಪಡೆವುದು ಬಣ್ಣಗಬ್ಬಮದು ನಿರ್ಭರದೀ ಕಿವಿಗಳ್ಗೆ ಪರ್ಬಮಂ (ಚಿಕವಿ. ೧–೧೨). **ಪಬ್ಬ : ೧.** ಬಂದಪುದ್ಯುಗಾದಿ ದೀವಳಿಗೆ ಸಂಕ್ರಮಣಂಗಳೆಂದು ಪಬ್ಬವನೆಸಗಿ ಮಿಂದುಂಡು ಸುಖಿಯಪ್ಪೆಂ (ವೆಂಕಟಾ. ೧–೩೩–೧೭). **೩.** ಬೊಳ್ಳೆಸಿ ತೆತ್ತು ಕಾವನ ಕೇಳಿಯೊಳನುವೆತ್ತು ಪೊರೆವ ಪುರುಳಿಗನಂ ತಾಂ ಮೇಳೈಸುವ ದೂದುಗನಿಂ ಸೂಳೆಗಮುವರಟ್ಟೆಯರ್ಗ ಮಪ್ಪುದು ಪಬ್ಬಂ (ಚಿಕವಿ. ೬–೧೧೭). **ಪರ್ವ₂: ೪.** ಪರ್ವಕಾಲ, ಉತ್ಸವ ಮತ್ತು ಸಂತೋಷದ ಸಂದರ್ಭಗಳಲ್ಲಿ ಅವುಗಳ ಅಂಗವಾಗಿ ಮಾಡುವ ಔತಣ; ಸಮಾರಾಧನೆ: ಹೋದ ಶಿವರಾತ್ರೀಲಿ ಪರ ಮಾಡಿದಾಗ ನನ್ನನ್ನು ಕರೆದಿದ್ದಿರಾ ? ನೀವು ನೀವೇ ಆಟ್ಟುಕೊಂಡು ಉಂಡಿರಿ ! (ನನ್ನೂರು. ೭೮) ; ಬರಗೆಟ್ಟ ದೇವರಿಗೆ ಪರ (ಔತಣ) ಮಾಡಿದಂತೆ (ಸುವರ್ಣ. ೭೮). **೫.** ಗ್ರಂಥಿ ; ಗಂಟು ; ಗಿಣ್ಣು : "ಪರುವ(ಪರ)—ಪರ್ವ(-ನ್) = ಗ್ರಂಥಿ" (ತದ್ಭಕೋ. ೨೮). **ಪರುವ : ೨.** ಬಾಗಿಲ ಬಿಡುವಾಗ ಏನಂದ ಮಲಸಜ್ಜ ಬಾಗಿಲ ಬರವು ನಮು ಶರಣು ಉಳಿದು ಬಂದ್ರಿ ಹೇರಿನ ಪರುವ ನಿಮಗಂದ (ಲೋಕಗೀ. ೨೦೩). **ಹಬ್ಬ : ೧.** "ಹಬ್ಬ–ಪರ್ವ(-ನ್) = ಪರ್ಬ" (ತದ್ಭಕೋ. ೪೮) ; ಹಬ್ಬಕ್ಕೆ ತಂದ ಹರಕೆಯ ಕುಱಿ ತೋರಣಕ್ಕೆ ತಂದ ತಳಿರ ಮೇಯಿತ್ತು (ಬಸವ. ೧೨೯) ; ಸಂಗ್ರಾಮಮುಖದಲಿ ಬಿಲ್ಲ ಹಬ್ಬದ ತುಷ್ಟಿ ನಿನಗೇಕೆ (ಕುಮ್ಯಾದ್ರೋ. ೧೩–೬೩) ; ಹಬ್ಬ ತಪ್ಪಿದರೆ ಹೋಳಿಗೆ ತಪ್ಪಿತೇ ? (ಗಾದೆ). **೨.** ಪುತ್ರ ಹುಟ್ಟಿದ ದಿವಸ ಹಾಲಿನೂಟದ ಹಬ್ಬ ಮತ್ತೊಬ್ಬ ಮಗನ ಉಪನಯನ ನಾಳೆ ಆರ್ತಿಯಾಗಿದೆ ಬದುಕು ಸಾಯ ಲಾಱೆನು (ಪುರಂದ. ೨–೬೧–೪); ಒಬ್ಬರಿಬ್ಬರಿಗಲ್ಲ ತವಗೆಲ್ಲ ಹೊಸತೊಂದು ಹಬ್ಬ ಬಂದಂತೆ ನಲಿದರು ಹಬ್ಬವೇನಧಿಕವಂತಿರಲೊಂದು ಮದುವೆಯ ದಿಬ್ಬಣವೆನೆ ರಾಗಿಸಿದರು (ಭರತೇ. ೩–೭೯). **೩.** ನಡೆ ಜೀಯ ತಡವೇಕೆ ಕಣ್ಗೆ ಹಬ್ಬವ ಮಾಡುವೆಡೆಯ ತೋಱುವೆವು (ಹರಿಕಥಾ. ೫–೭) ; ಒಪ್ಪಂಬಡೆದಲ್ಲಿ ಹರ್ಮ್ಯತತಿ ಮಾಳ್ಪುದು ನೋಟ್ಪರ ಕಣ್ಗೆ ಹಬ್ಬಮಂ (ಬಾಳಪು. ೧–೧೪೪) ; ಉಬ್ಬಿದಲ್ಯೆ ಮಧುರವಚನದ ಹಬ್ಬದಲಿ ನಿನ್ನಾತನು (ಕುಮ್ಯಾಶ. ೧–೨೮) ; ನೋಡು ನಾರದ ನಿನ್ನ ಕಣ್ಣ ಹಬ್ಬವನಿಂದು ಮಾಡುವೆನಾಹವದೊಳಗೆ (ಮೋಹತ. ೩೭–೫೩). **೪.** ಸಾರಥಿಯ ಶಿವ ಕೊಟ್ಟನಾದೊಡೆ ಮಾರಿ ಗುಬ್ಬಸವಾಗದಂತಕನೂರು ತುಂಬದೆ. . .ಹಬ್ಬವಾಗದೆ ಭೂರಿಬೇತಾಳರಿಗೆ ಹೋಹುದೆ ಬಱಿದೆ ರಣವು (ಕುಮ್ಯಾವಿ. ೫–೨೫) ; ಇಂದು ಮಾರಿಗೆ ಹಬ್ಬವಾಯಿತು ಕಪಿಗಳಡಗುಗಳ ತಿಂದು ಭೂತಪ್ರೇತ ದಣಿಯಲಿ (ತೊರಿಂರಾ. ೧೯–೭೨). **೬.** (ಆಲಂ) ಶಿಕ್ಷೆ; ಶಾಸ್ತಿ : ಗಡಣಿಸುವ ಸಾರಥಿಯನೊಬ್ಬನ ಪಡೆದೆನಾದೊಡೆ ಕೌರವೇಂದ್ರನ ಪಡೆಗೆ ಹಬ್ಬವ ಮಾಡುವೆನು ತೋಱುವೆನು ಕೈಗುಣವ (ಕುಮ್ಯಾವಿ. ೫–೨೪) ; ಆ ದುಷ್ಟ ಮತ್ತೆ ಬಂದರೆ ಅವನಿಗೆ ಸರಿಯಾಗಿ ಹಬ್ಬ ಆಗಬೇಕು (ರೂಢಿ).

**ಹಬ್ಬದೂಟ, ಹಬ್ಬದ ಊಟ** = ಉತ್ಸವ, ಸಂತೋಷದ ಸಂದರ್ಭಗಳಲ್ಲಿ ಮಾಡುವ ಸಿಹಿ ಊಟ : ನಾನು ಹಬ್ಬದೂಟ ಮಾಡಿಕೊಂಡು ಬರುವುದು ತಡವಾಯಿತು (ರೂಢಿ) ; ಹಬ್ಬದ ಊಟ, ಹರಿವಾಣದ ವೀಳ್ಯ (ಗಾದೆ). **ಹಬ್ಬ ಮಾಡು** = **೧.** ಹಬ್ಬವನ್ನು ಆಚರಿಸು ; ಉತ್ಸವವನ್ನು ನಡೆಸು : ಎಲ್ಲರನು ಕರೆಕರೆದು ಹಬ್ಬ ಮಾಡು (ನೆಲಮು. ೨೨–೨೪) ; ಹಾಲಿದ್ದಾಗಲೇ ಹಬ್ಬ ಮಾಡು (ಗಾದೆ). **೨.** ಶಿಕ್ಷಿಸು ; ಶಾಸ್ತಿಮಾಡು ! ಮನೆಗೆ ಬಾ, ಅಮ್ಮ ನಿನಗೆ ಹಬ್ಬ ಮಾಡುತ್ತಾಳೆ (ರೂಢಿ). **ಹಬ್ಬ ಹರಿದಿನ** = ಪರ್ವಕಾಲ, ಪೂಜೆ, ಉತ್ಸವ ಮೊದಲಾದ ಸಂತೋಷದ ದಿನ : ಹಬ್ಬಹರಿದಿನಗಳಲ್ಲಿ ಏಕಾಸನದಲ್ಲಿ ಕುಳಿತು ಏಕಪಾತ್ರದಲ್ಲಿ ಮಧುಪಾನ ಮಾಡೋಣ (ಆರ್ಯಕ. ೮೦) ; ಅನೇಕ ಹಬ್ಬಗಳು ಮರೆತೇಹೋಗಿವೆ. ಕೆಲವು ಹಬ್ಬಹರಿದಿನಗಳು ನಡೆಯುತ್ತವೆ (ನನ್ನೂರು. ೩೧೭). **ಹಬ್ಬ ಹಾಡಿ** = ಹಬ್ಬ ಹರಿದಿನ : ಹಬ್ಬ ಹಾಡಿಯ ದೆಡೆಯೊಳುಂಡೆವೆ ಉಟ್ಟೆವೇ ನಿನ್ನಯ ಮನೆಗೆ ಬಂದು (ಬಸವು. ೪೦–೩೫). **ಹಬ್ಬಹುಣ್ಣಿಮೆ** = ಹಬ್ಬಹರಿದಿನ : ಕಾಡುಮೇಡುಗಳಲ್ಲಿ ವಾಸಿಸುವ ಸೋಲಿಗರು ಹಬ್ಬಹುಣ್ಣಿಮೆಗಳಲ್ಲಿ ಹಾಡುವ ಹಾಡುಗಳನ್ನು ಸಂಗ್ರಹಿಸುವುದು ತೀರ ಅಗತ್ಯ (ದ್ರಾವಿವಿ. ೪೦೦).

[<ಸಂ.ಪರ್ವ./ಪಾಲಿ.ಪಬ್ಬ]

**ಪರ್ಬತ,** ಪರುವತ (ನಾ). ದೊಡ್ಡಬೆಟ್ಟ ; ಪರ್ವತ ; ಗಿರಿ : "ಪರ್ಬತ—ಪರ್ವತ" (ತದ್ಭಕೋ. ೨೫); ಪಸರಿಸಿ ಪರ್ಬ್ಬಿ ಗೊಂದಳಿಸಿ ನಿಂದ ತಮಸ್ತಮಮಂ ತೆರಳ್ಚಿ ಬಂದೊಸೆವಿನನೇಱುವಂತುದಯಪರ್ಬ್ಬತಮಂ . . . ಸಿಂಘವಿಷ್ಟರಮನೇಱಿದನಾ ಜಯಸಿಂಘವಲ್ಲಭಂ (ಎಕ. VII, ಶಿಕಾರಿ. ೧೨೫–೧೫ ; 1019) ; ವರರದನಾಳದಿಂ ದಿಗಮಳಚ್ಛದದಿಂದುಡುಕೇಸರಂಗಳಿಂದುರುಘನಸ್ಬ್ಯಂಗದಿಂ ಕನಕಪರ್ಬ್ಬತಕರ್ಣ್ಣಿಕೆ ಕೂರ್ಮ್ಮವೃಂತದಿಂ ಪರವೆನೆ ನೆಯ್ದಿಲಂತೆಸೆವ ಧಾತ್ರಿಯನಾದಿವರಾಹರೂಪದಿಂ ಧರಿಸಿದನಾವನಾ ಹರಿಹರಂ ಪರಿಪಾಲಿಸುಗೀ ಸುಧರ್ಮ್ಮಮಂ (ಎಕ. XI, ದಾವಣ. ೫೯–೬; 1280) ; ಪಟು ತಳೆ ವಜ್ರಾಸ್ತ್ರ ತಿಮಿರದ ಹಬ್ಬುಗೆಗೆ ರವಿಬಾಣ ಹಾವುಗಳೊಬ್ಬುಳಿಗೆ ಗರುಡಾಸ್ತ್ರವನು ಗಂಧರ್ವಪತಿಯೆಚ್ಚ (ಕುಮ್ಯಾಅ. ೧೯–೩೫). **ಪರುವತ :** ಪಾವನವ ಪರುವತವ ಪರುವತವ ಪಾವನವ ನಿಮಿಷಮಾತ್ರದಿ ಮಾಳ್ಪ (ಅಷ್ಟಾಸ್ತೋ. ೧೧೮).

[<ಸಂ.ಪರ್ವತ]

**ಪರ್ಬತಾವಳಿ** (ನಾ). ೧. ಪರ್ವತಗಳ ಸಮೂಹ,—ಸಾಲು. ೨. ಕಾಳಾಮುಖರ ಒಂದು ಶಾಖೆಯ ಹೆಸರು : ಪರ್ಬ್ಬತಾವಳಿ ವಿಳಸಿತಧರ್ಮ್ಮಕೀರ್ತ್ತಿಲಕಿಕಾಕಂದರಪ್ಪ ಶ್ರೀಮತುರುದ್ರಶಕ್ತಿ ಪಂಡಿತರ ಶಿಷ್ಯರು ದಸಧರ್ಮ್ಮನಿರ್ಮ್ಮಿತರಪ್ಪ ಶ್ರೀಸೋಮೇಶ್ವರಪಂಡಿತರ ಶಿಷ್ಯರು (ಸೌಇಇ. XI-ii, ೧೯೮-೧೨ ; 1123). [<ಸಂ. ಪರ್ವತಾವಲಿ]

**ಪರ್ಬಿಸು** 'ಪರ್ವಿಸು' ನೋ.

**ಪರ್ಬು**$_1$ 'ಪರವು'$_1$ ನೋ.

**ಪರ್ಬು**$_2$ 'ಪರವು$_2$' ನೋ.

**ಪರ್ಬುಗೆ** 'ಪರ್ವುಗೆ' ನೋ.

**ಪರ್ಬುಗೆಡು** 'ಪರ್ವುಗೆಡು' ನೋ.

**ಪರ್ಬುಗೊಳ್** 'ಪರ್ವುಗೊಳ್' ನೋ.

**ಪರ್ಯ** (ನಾ). "ಬೆತ್ತದಿಂದ ಮಾಡಲ್ಪಟ್ಟ ಒಂದು ಗುರಾಣಿ" (ಹುಲಿಹಾ. ಕೋಶ) : ಕುಳಿತಿದ್ದವ ಎದ್ದುನಿಂತು ಎಡಗೈಯಲ್ಲಿ ಪರ್ಯವನ್ನು ಹಿಡಿದು, ಬಲಗೈಯಲ್ಲಿ ಪಾತುರೆಕೋಲನ್ನು ಎತ್ತಿ ಕುಣಿಯಲಾರಂಭಿಸಿದ (ಹುಲಿಹಾ. ೧೨೬). [←ಕೊಡ. ಪರ್ಯ]

**ಪರ್ಯಂಕ** (ನಾ). ೧. ಮಂಚ ; ಪಲ್ಲಂಗ : "ಪರ್ಯಂಕಃ, ಶಯನಂ, ಶಯ್ಯಾ—ಈ ೩ ಮಂಚಂ" (ಹಲಾಯು. ೫೧-೧೫೨) ; ಕಹ್ಲೋಳಸಿರ್ದಂ ಪಾದಪೀಠಾಂಕಿತ ಮಣಿಮಯಪರ್ಯಂಕದೊಳ್ ವಿಕ್ರಮಾಂಕಂ (ಶಾದಂಪೂ. ೨೬) ; ಲಲನೆಯಂ ಪರ್ಯಂಕದೊಳಗೆ ಕುಳ್ಳಿರಿಸಿ ತಾಂ ನಲವು ಮಿಗೆ ಬೋಳೈಸಿ (ಹಚಕಾ. ಪರಿ. ೨೧೦). ೨. ಹಾಸುಗೆ; ಸುಪ್ಪತ್ತಿಗೆ. ೩. ಪಲ್ಲಕ್ಕಿ. ೪. ಸೊಂಟಕ್ಕೆ ಸುತ್ತಿಕೊಳ್ಳುವ ಬಟ್ಟೆ ; ಕಟಿಬಂಧ. ೫. ಆಶ್ರಯ ; ಅವಲಂಬನೆ : ಸಕಳೋರ್ವೀಶ್ವರ ನಾಕಿನಾಯಕಶಮೂಪರ್ಯಂಷ್ಟಿಪಾತ್ರಂ ತ್ರಿಸಾಕ್ಷಿಕನಾಗಳ್ ಬಲಗೆಯ್ ಸೊಸಲ್ಗೆಡದ ಕೆಯ್ ಪರ್ಯಂಕಮಪ್ಪಂತು ಸಾರ್ಚ (ಶಾಂತಿಪು. ೮-೧೨೩). ೬. [ಯೋಗ] ಒಂದು ಬಗೆಯ ಆಸನ ; ℙ ಬಲ ಪಾದವನ್ನು ಎಡತೊಡೆಯ ಮೇಲೂ ಎಡಪಾದವನ್ನು ಬಲ ತೊಡೆಯ ಮೇಲೂ ಇಟ್ಟು ಕೂಡುವುದು: ಅರಲ್ದ ಮುಖಪದ್ಮಮುಂ ನಿಬಿಡಬದ್ಧಪರ್ಯಂಕದೊಳ್ ಮರಲ್ದ ಕರಪಲ್ಲವದ್ವಿತಯಮುಮಂ ಬೆಡಂಗಪ್ಪಿಸಂ ನಿರಂತರವಿರೋಧಿ ಕೂಡಿರೆ ಚತುರ್ವಿಧಾರಾಧನಾಪುರಸ್ಸರತೆಯಿಂ ಸಮಾಧಿವಿಧಿಗೇಂ ಮನಂದಂದಳೋ (ಸುಕುಮಾ. ೯-೧೫). 'ಪರ್ಯಂಕಾಸನ' ಪರಾ. [ಸಂ.]

**ಪರ್ಯಂಕಾಸನ** (ನಾ). = ಪರ್ಯಂಕ ೬ : ತತ್ಸಮೀಪಸ್ಥಿತರತ್ನಕೋಕಮಹೀರುಹತಳವಿಶಾಳಶಿಲಾಪಟ್ಟಕದೊಳ್ ಉತ್ತರಾಭಿಮುಖನಾಗಿ ಕುಳ್ಳಿರ್ದು ಸಮುತ್ಸಾರಿತವಸ್ತ್ರಾಭರಣನಾಗಿ ಪರ್ಯಂಕಾಸನಪರಿಗ್ರಹದಿಂ . . . ಜಿನಶ್ರೀದೀಕ್ಷೆಯಂ ತಾಳ್ದಿದಂ (ಶಾಂತಿಪು. ೮-೧೨೨ ವ) ; ಸುಖಸ್ಥೈರ್ಯನಿಷ್ಠಲಾವಹಮಾದ ಯೋಗಯೋಗ್ಯಾಸನಗಳಲ್ಲಿ ಶುದ್ಧಾಸನ . . . ಪರ್ಯಂಕಾಸನ ಪದ್ಮಾಸನ . . . ಅರ್ಧಾಸನಾದಿಯೆಂಭತ್ತಾಲ್ಕಾಸನಭೇದಂಗಳಂ ತತ್ತಲ್ಲಕ್ಷಣಪೂರ್ವಕಮಾಗಿ ಸ್ವಸ್ವಯೋಗಸ್ಥಿತ್ಯನುಕೂಲತೆಯಿಂ ನಿರ್ಧರಿಸಿ (ವಿವೇಕ. ೧೫೦). ℙ ಇದನ್ನು 'ವೀರಾಸನ'ವೆಂದೂ ಹೇಳುತ್ತಾರೆ. [ಪರ್ಯಂಕ + ಆಸನ]

**ಪರ್ಯಂಕಿಕೆ** (ನಾ). ಮಂಚ ; ಪಲ್ಲಂಗ : ಸ್ವಕೃತಪರಿಣಯನ ಮಣಿಪುತ್ರಿಕೆಗಳಮುತ್ತುಂಗರತ್ನಪರ್ಯಂಕಿಕೆಯಂ ಸುತ್ತಾರಿಕೆಗಳನೇಣೀ ಪ್ರಕಾಂಡಮಂ . . . ಅಭರಣವಿಶೇಷಮುಮಂ ಬರಚರೇಶ್ವರಪ್ರಭು ಮಗಳ್ಗೆ ಬಟಾವಟಾಗೊಟ್ಟಂ (ವರ್ಧಮಾ. ೩-೯೯). [ಸಂ. ಪರ್ಯಂಕಿಕಾ]

**ಪರ್ಯಂತ**$_1$ (ನಾ). ೧. ಎಲ್ಲೆ ; ಗಡಿ ; ಮೇರೆ : "ಅವಧಿ ಪರ್ಯಂತಮಾ ಸೀಮೆಯಾಘಾಟಮೆನೆ ಪೊಲಮೇರೆಯು" (ಮಂಗರಾ. ೫೬-೧) ; ಸೆಣಸುಳ್ಳುದ್ವೃತ್ತರಂ ತಳ್ತಿರಿಯದೆ ಚತುರಂಭೋಧಿಪರ್ಯಂತಮಂ ಧಾರಿಣಿಯಂ ತಾಂ ಪೋಗಿ ಬಾಯ್ಕೇಳಿಸದೆ . . . ಒರ್ವಂ ಗುಣಮುಂಟೆಂದುಂಡು ಪಟ್ಟಿರ್ಪನನಣಮೆ ನಿರುದ್ಯೋಗಿಯಂ ಭೂಪನೆಂಬರ್ (ಸಂಪಭಾ. ೪-೧೧). ೨. ಹತ್ತಿರ ; ಸಮೀಪ ; ಬಳಿ : ಜನಪತಿ . . . ಕುಳ್ಳಿರೆ . . . ವೇತ್ರಿ ಖಡ್ಗಧರರುಂ ಪರ್ಯಂತದಲ್ಲೊಪ್ಪುಗುಂ (ಲಾಸ್ಯರಂ. ೧-೩೫). ೩. ಊರಿನ ಸಮೀಪ ; ಗ್ರಾಮದ ಹತ್ತಿರ: "ಗ್ರಾಮಾಂತಿಕಂ, ಉಪಶಲ್ಯಂ, ಪರ್ಯಂತಃ, ಪರಿಸರಃ, ಕ(ಪ)ಟಃ—ಈ ೫ ಊರ ಹೊ(ಜ?)ರೆ" (ಹಲಾಯು. ೪೩-೧೦೪). [ಸಂ.]

**ಪರ್ಯಂತ**$_2$ (ಅ). ವರೆಗೆ ; ತನಕ : ಆ ಸುಖ ದೊರೆಕೊಂಡೊಡವರಿಗಪ್ಪುದು ತೃಪ್ತಿ ಸಾಸಿರಬರಿಸಪರ್ಯಂತ (ಹದಿಬ. ೨-೧೨) ; ರಾಯನ ಕಣ್ಣುಗಳನ್ನು ಕೀಳಿಸಿ ಅತನನ್ನು ಅಮರಣಪರ್ಯಂತ ಕುರುಡನನ್ನಾಗಿ ಮಾಡಿಬಿಡಬೇಕೆಂಬುದಾಗಿ ಪ್ರಧಾನಿಗೆ ಆಜ್ಞಾಪಿಸಿದನು (ಕೃದೇವ. ೭) ; ಇನ್ನು ಮುಂದೆ ಅದರ ಅವಧಿ ೭ ವರ್ಷಗಳ ಪರ್ಯಂತ (ಶಿಕ್ಷದ. ೧೮೫). [<ಪರ್ಯಂತ$_1$]

**ಪರ್ಯಂತಂ** (ಅ). = ಪರ್ಯಂತ$_2$ : ಕಾರ್ಯವೆಮಗಿದುವೆ ಶಿವಪದಪರ್ಯಂತಂಬರಮಮೋಘಮುದ್ಧರಿಸುಗೆ ತಾತ್ಪರ್ಯದಿನರ್ಹತ್ಸಿದ್ಧಾಚಾರ್ಯೋಪಾಧ್ಯಾಯಸರ್ವಸಾಧುಗಳೆಮ್ಮಂ (ಆದಿಪು. ೧-೬) ; ಕೇಶವನ ಶಬ್ದಮಣಿದರ್ಪಣಮುಂ ಸೂರ್ಯೇಂದುಮೇರುವಾರಿಧಿಪರ್ಯಂತಂ ಪರೆದು ನಿಲ್ಕನಾಕುಳದಿಂದಂ (ಶಮದ. ೪ ಸಮಾಪ್ತಿವಾಕ್ಯ). [ಸಂ.]

**ಪರ್ಯಂತರ**$_1$, ಪರಿಯಂತರ$_1$ (ನಾ). ೧. (ಕಾಲ ಅಥವಾ ದೂರದ) ಅವಧಿ ; ಅಂತರ: (೬). **ಪರಿಯಂತರ**$_1$ : ೧. ನಾನು ನೀವು ಬರುವ ಪರಿಯಂತರದಲ್ಲು ಯಿಲ್ಲಿ . . . ಇದೇನೆ (ಶೀಷಧ. ೫-೬) ; ಹದಿನೈದು ದಿವಸಗಳ ಪರಿಯಂತರವೂ ಮಹೋತ್ಸವಮಂ ಮಾಡಿಸುವೆ (ಕಗದ್ಯ. ೩). ೨. ಅನಂತರದ ಸಮಯ ; ಅನೇಲಿನ ಕಾಲ : ಧೂರ್ತತನದಿಂ ಕಾದಿ ಕೂಡುವೆನಾರ್ತು ಪರಿಯಂತರದಲಾ ತ್ರೈಮೂರ್ತಿಯನು ಮೂದಲಿಸಿದಲ್ಲದೆ ಮುಕುತಿಯಿಲ್ಲ (ಕೌಶಿರಾ. ೨೩-೧೯). [<ಸಂ. ಪರ್ಯಂತ]

**ಪರ್ಯಂತರ**$_2$, ಪರಿಯಂತ, ಪರಿಯಂತಂ, ಪರಿಯಂತರ$_2$, ಪರಿಯಂತರಂ, ಪರಿಯಂತ್ರ, ಪರ್ಯಂತರಂ (ಅ). = ಪರ್ಯಂತ$_2$ : ಹೊಳೆ ಪರ್ಯಂತರ ಓಟ, ದೊರೆ ಪರ್ಯಂತರ ದೂರು (ಗಾದೆ). **ಪರಿಯಂತ :** ನಡುವಗಲು ತೊಡಗಿ ಮಧ್ಯಮರಾತ್ರಿ ಪರಿಯಂತ ಎಡೆವಿಡದೆ ಈ ತೆಱದೊಳರ್ಚಿಸುತ್ತಂ ಇರುತ (ತಿರುರ. ವೇ. ೬-೧) ; ನಡುಹಗಲುಪರಿಯಂತ ಕಾಳೆಗ ಬಿಡದೆ ಬಲುಹಾಯ್ತು (ಕುಮ್ಮಾದ್ಯೋ. ೧೦-೨೨) ; ನಿಮ್ಮನ್ವಯಾಗತದ ಪರಿವಿಡಿಯು ರಘುವಂಶವನು ವಿಸ್ತರಿಸಿದನು ವಿಮಳಾಗ್ನಿವರ್ಣನ ನಿಧಿಪಮದ ಸಾಮ್ರಾಜ್ಯಪರಿಯಂತಾದಿಕಾಲದಲಿ (ತೊರರಾ. ೧-೫-೬). **ಪರಿಯಂತಂ :** ಪಾಲಿಸಿದಳಿಂತು ನಡೆನುಡಿಗಳಂ ಕಲಿವಲ್ಲಿ ಪರಿಯಂತಮಾ ಶಿಶುವನು (ಜೈಮಿಭಾ. ೨೮-೧೯). **ಪರಿಯಂತರ**$_2$ : ಕೋಳ ರಕಮಿನ ಜೀನಸು ಮೂರು ತಿಂಗಳ ಪರಿಯಂತರ ಮಾರಾಟವಾಗದೆ ಉಳಿದರೆ . . . ಮಜೂರಿ ತೆಗೆದುಕೊಳ್ಳುವೆವು (ಮುಂಬವ್ಯಾ. ೩). **ಪರಿಯಂತರಂ :** ಇಂತು ಕಟಕದೊಳೇಳುದಿನಪರಿಯಂತರಂ ತಾನೆಯ್ದಿ ಮೆಚ್ಚಿದು (ಬಸವು. ೫೨-೪೩). **ಪರಿಯಂತ್ರ :** ಹಾಗವನು ಅರ್ಧಗಾಣಿಪರಿಯಂತ್ರ ಮಾಡಲು (ಭಾಸ್ಕರ. ೧೮-೩) ; ಪೂರ್ಣವವಯವಂಗಳು ಪೊರವ ಪರಿಯಂತ್ರ ದಯಮಾಡದೆ ಒಡದು ಕೆಡಿಸಿದೆ ಪಾಪಿ (ತುರಂಗ. ೩-೧೫) ; ಹೆಬ್ಬೆರಳಿನ ಬುಡ ಮೊದಲಾಗಿ ಕಿರುಬೆರಳ ಪರಿಯಂತ್ರ ರೇಖೆಯಿರಲು ಆ ಸ್ತ್ರೀಯು ಪತಿಘಾತಕಿಯಾಗುವಳು (ಸಾಮುಲ. ೧೨೯). **ಪರ್ಯಂತರಂ:**

ಮುೞಿದು ಕರ್ಣಜನಿಸಲ್ಕಾತನಂ ಸುತ್ತಿಸಿತು ಸುೞಿಗಾಳಿಯಿಂದದಿಂ ಕಣೆಗಳರೆಗಳೆಗೆಪರ್ಯಂತರಂ ಸಂಗರದೊಳು (ಜೈಮಿಭಾ. ೨೩-೧೬).
[<ಪರ್ಯಂತಂ]

**ಪರ್ಯಂತರಂ** 'ಪರ್ಯಂತರ$_2$' ನೋ.

**ಪರ್ಯಟಕ** (ನಾ). ಪರ್ಯಟನ ಮಾಡುವವನು ; ಸಂಚಾರಿ ; ಪ್ರವಾಸಿಗ : ಶಾಂತಿಭಿಕ್ಷೆಗಾಗಿ ಬಂದ ಜನರಲ್ಲದೆ ದೇಶದಲ್ಲಿ ಪ್ರಯಾಣ ಮಾಡಿದ ಅರಬ್ಬಿ ಪರ್ಯಟಕರು ದೇಶವನ್ನೂ ದೇಶದ ಜನರನ್ನೂ ಕಂಡು ಆಶ್ಚರ್ಯವನ್ನೇ ಪಟ್ಟರು (ಭಾಇಪ್ರ. ೩೬೮) ; ಮಧ್ಯಏಷಿಯದ ಮರುಭೂಮಿಯಲ್ಲಿ ಯಾವೆಲ್ಲ ಪರ್ಯಟಕರು . . . ಎಷ್ಟೋ ಸಮೃದ್ಧಶಾಲಿ ನಗರಗಳು ಮರಳು ಮುಚ್ಚಿಕೊಂಡು ಕಣ್ಮರೆಯಾಗಿರುವುದನ್ನು ಕಂಡಿದ್ದಾರೆ (ಸಿಬಂಧ. I, ೩೨೧). [ಸಂ.]

**ಪರ್ಯಟನ** (ನಾ). ೧. ಸಂಚಾರ ; ತಿರುಗಾಟ ; ಸುತ್ತಾಟ : ವಿಶಾಖನಂದಿಯುಮಾಯುರವಸಾನದೊಳ್ ಸತ್ತನೇಕಭವಗಹನಪರ್ಯಟನದಿಂ ಬಂದೈರಾವತತೀರದ ಕಾನನದಾಶ್ರಮದೊಳ್ . . . ಭಾಜನನಾದೊಂ (ಶಾಂತಿಪು. ೬-೬೨ ವ) ; ಅವನಿಗೆ ಮತ್ತೆ ಅನೇಕ ದೇಶಗಳನ್ನು ಪರ್ಯಟನ ಮಾಡಿ, ಜ್ಞಾನಸಂಪತ್ತನ್ನು ಹೆಚ್ಚಿಸಿಕೊಳ್ಳುವಂತಹ ಸದವಕಾಶಗಳು ಮೇಲಿಂದ ಮೇಲೆ ಬಂದವು (ಸಸ್ಮಕ. ೭೯). ೨. [ಜೈನ] ಚರಿಗೆಗಾಗಿ ಸಂನ್ಯಾಸಿಗಳು ಮಾಡುವ ಸಂಚಾರ,—ತಿರುಗಾಟ : "ಪರ್ಯಟನಂ ತಾನೀರ್ಯಾಚರ್ಯಾರ್ಥಂ ಪರಿಮಿತಪ್ರವೃತ್ತಿನಿಯಮಂ" (ವಸ್ತುಕೋ. ೫೮-೩೬). [ಸಂ.]

**ಪರ್ಯಟನೆ** (ನಾ). = ಪರ್ಯಟನ ೧ : ಈ ಪರ್ಯಟನೆಯು ಅವನಿಗೆ ಬಹಳ ಲಾಭದಾಯಕವಾಯಿತು (ಮೃಗಜ. ೧೯).
[ಸಂ.ಪರ್ಯಟನ]

**ಪರ್ಯಣ** 'ಪರಿಯಾಣ$_1$' ನೋ.

**ಪರ್ಯನುಯೋಗ** (ನಾ). ವಿಷಯವನ್ನು ತಿಳಿದುಕೊಂಡು ಖಂಡಿಸುವ ಉದ್ದೇಶದಿಂದ ಮಾಡುವ ಪ್ರಶ್ನೆ ; ಆಕ್ಷೇಪಕ್ಕಾಗಿ ಮಾಡುವ ಪ್ರಶ್ನೆ : "ಪರ್ಯನುಯೋಗಃ, ಉಪಾಲಂಭಃ—ಈ ೨ ಚುನ್ನವಾಡಿ ಬೆಸಗೊಳುಹ" (ಹಲಾಯು. ೨೫-೧೫೩). [ಸಂ.]

**ಪರ್ಯಯ** (ನಾ). ೧. ಸುತ್ತುವರಿಯುವಿಕೆ ; ಬಳಸುವಿಕೆ. ೨. ಅವಧಿ ಮುಗಿಯುವಿಕೆ ; ಕಾಲ ತೀರುವಿಕೆ. ೩. (ಕಾಲ) ಬದಲಾವಣೆಯಾಗುವಿಕೆ ; ವ್ಯತ್ಯಾಸವಾಗುವಿಕೆ. ೪. ಬದಲಾವಣೆ ; ಮಾರ್ಪಾಟು ; ವ್ಯತ್ಯಾಸ. ೫. ತಲೆಕೆಳಗಾಗಿರುವ ಸ್ಥಿತಿ ; ಅವ್ಯವಸ್ಥೆ ; ವೈಪರೀತ್ಯ. ೬. ಸಾಂಪ್ರದಾಯಿಕ ಕಟ್ಟಳೆಗಳನ್ನು ಬಿಡುವಿಕೆ,—ಮೀರುವಿಕೆ : "ಪರ್ಯಯಃ, ಅತಿಕ್ರಮಃ, ಅತಿಪಾತಃ, ಉಪಾತ್ಯಯಃ—೪ ಕಟ್ಟೆಯನ್ನು ಮೀರಿ ಹೋಗುವಿಕೆ" (ಸಿದ್ಧಾಂತಿ. ೩೬೭). ೭. ಕರ್ತವ್ಯವನ್ನು ಅಲಕ್ಷಿಸುವಿಕೆ,—ನಿರ್ಲಕ್ಷಿಸುವಿಕೆ. ೮. ಕ್ರಮವನ್ನು ತಪ್ಪುವಿಕೆ : "ಅತಿಪಾತಃ, ಪರ್ಯಯಃ, ಉಪಾತ್ಯಯಃ—೩ ಕ್ರಮವನ್ನು ತಪ್ಪುವಿಕೆ. ಹೇಳುವುದರಲ್ಲಿ ಮಧ್ಯೆ ಕೆಲವು ಭಾಗವನ್ನು ಮರೆತು ತಪ್ಪಿಹೋಗುವಿಕೆ" (ಸಿದ್ಧಾಂತಿ. ೨೨೬). [ಸಂ.]

**ಪರ್ಯಯಣ** (ನಾ). ೧. = ಪರ್ಯಯ ೧. ೨. ಕುದುರೆಗೆ ಹಾಕುವ ಜೀನು ; ತಡಿ ; ಹಲ್ಲಣ. [ಸಂ.]

**ಪರ್ಯವಲೋಕನ** (ನಾ). ಚೆನ್ನಾಗಿ ನೋಡುವಿಕೆ ; ಗಮನವಿಟ್ಟು ನೋಡುವಿಕೆ : ಈರ್ಯಾಮಾರ್ಗಪರ್ಯವಲೋಕನ ಮಂದಮಂದಗಮನನಿರತರವಧಿಬೋಧಾವಧೂತರೂಪದರ್ಶನಕ್ಷಪಿತ ಸಂದೇಹಸಂದೋಹರ್ (ಶಾಂತಿಪು. ೬-೭೦ ವ). [ಸಂ.]

**ಪರ್ಯವಸಾನ** (ನಾ). ೧. ಕೊನೆ ; ಅಂತ್ಯ ; ಮುಕ್ತಾಯ : ಸಂದ ಧರ್ಮಮೆ ವಲಂ ಪೊತ್ತೆತ್ತುಗುಂ ಮುಕ್ತಿಪರ್ಯವಸಾನಂಬರಮಾನುಷಂಗಿಕಫಲಂ ಭೂಪೇಂದ್ರ ದೇವೇಂದ್ರರಾಜ್ಯವಿಲಾಸಂ ಪೆಚಿತಲ್ತು ನಂಬು (ಆದಿಪು. ೨-೬) ; ಸುಬಳಮಹಾರಾಜನೊಂದುದಿವಸಂ . . . ಮಂತ್ರಮೇಳಾಪಕದೊಳಿರ್ದು ತತ್ಕಾರ್ಯಾಲೋಚನತಾತ್ಪರ್ಯಪರ್ಯವಸಾನದೊಳ್ ಮಜ್ಜನಂಬುಗುತ್ತಂ (ಸುಕುಮಾ. ೩-೨ ವ) ; ಇಂಥ ಆಭಾಸದಲ್ಲಿ ಪರ್ಯವಸಾನವಾಯಿತು 'ನೆಯ್ದಿಲಾಪಹರಣ' (ಹಸುಹೊ. ೩೭೮). ೨. ನಿರ್ಧಾರ ; ನಿರ್ಣಯ ; ನಿಶ್ಚಯ. [ಸಂ.]

**ಪರ್ಯವಸಾಯಿ** (ನಾ). ಕೊನೆಗೊಳ್ಳುವಂತಹುದು ; ಮುಕ್ತಾಯವಾಗುವಂತಹುದು : ಮನುಷ್ಯನ ಗುಣಗಳನ್ನು ಸಮಾಜಸಾಧಕಗಳಾಗುವಂತೆ ತಿದ್ದುವುದು–ಎಂದರೆ ಪರೋಪಕಾರಪರ್ಯವಸಾಯಿಗಳಾದ ಗುಣಭಾಗಗಳನ್ನು ಬಲಪಡಿಸಿ, ಲೋಕಕಂಟಕಗಳಾಗುವ ಗುಣಭಾಗಗಳನ್ನು ಅಣಗಿಸುವುದು ರಾಜ್ಯದ ಎರಡು ಕರ್ತವ್ಯಗಳಲ್ಲೊಂದು (ರಾಜ್ಯಾಂಗ. ೬೩). [ಸಂ.ಪರ್ಯವಸಾಯಿನ್]

**ಪರ್ಯವಸಿತ** (ಗು). ೧. ಮುಗಿದ ; ಕೊನೆಗೊಂಡ. ೨. ನಾಶವಾದ ; ಕಳೆದ. ೩. ನಿಶ್ಚಯಿಸಲ್ಪಟ್ಟ. [ಸಂ.]

**ಪರ್ಯವಸ್ಥೆ** (ನಾ). ವಿರೋಧ ; ಪ್ರತಿಭಟನೆ : "ಪರ್ಯವಸ್ಥಾ, ವಿರೋಧನಂ—೨ ಹಗೆಗೊಳ್ಳುವಿಕೆ" (ಸಿದ್ಧಾಂತಿ. ೩೬೩).
[ಸಂ.ಪರ್ಯವಸ್ಥಾ]

**ಪರ್ಯುಷ್ಟಿ,** ಪರಿಯುಷ್ಟಿ (ನಾ). ಸೇವೆ ; ಉಪಚಾರ : ಕಾನನಮಧ್ಯಸ್ಥಿತರುಂದ್ರಗಿರೀಂದ್ರಶೃಂಗದೊಳ್ ಆತ್ಮಪರಪರ್ಯುಷ್ಟಿನಿರಾಪೇಕ್ಷರಾಗಿ . . . ಉತ್ತರಾಶಾಭಿಮುಖರಾಗಿ ಪೋಗಿ (ಶಾಂತಿಪು. ೬-೬೧ ವ) ; ಪರ್ಯುಷ್ಟಿಯನನವರತಂ ಮಾಳ್ಪ ಶೀಳೋತ್ಕರಂ ಕೂಡಿರೆ ವೈಯ್ಯಾಪೃತ್ಯಮೆಂಬೀ ತಪದೊಳೆಸಗಿದಂ ಸೂರ್ಯಮಿತ್ರಬ್ರತೀಂದ್ರಂ (ಸುಕುಮಾ. ೪-೧೬) ; ಒಡವರ್ಪೀಂ ಬೆಸನೆಂಬ ಕೈಗುಡುವ ತೀರ್ಥಕ್ಕುಯ್ಯು . . . ಇರ್ದಲ್ಲಿಗೆ ಕಂದಮೂಲಫಲಮಂ ತಂದೀವ ಪರ್ಯುಷ್ಟಿಯಿಂ ಪಡೆಗುಂ ತುಷ್ಟಿಯನಿಂತು ವೃದ್ಧಯತಿಗಳ್ಗಾಸ್ಥಾನದೊಳ್ ವಾನರಂ (ಜಗವಿ. ೧೬-೫೫). 'ಪರ್ಯುಷ್ಟಿಗೆಯ್' ಪರಾ. **ಪರಿಯುಷ್ಟಿ :** 'ಪರಿಯುಷ್ಟಿಗೆಯ್' ಪರಾ. [<ಸಂ.ಪರೀಷ್ಟಿ]

**ಪರ್ಯುಷ್ಟಿಗೆಯ್,** ಪರಿಯುಷ್ಟಿಗೆಯ್ (ಕ್ರಿ). ಸೇವೆಯನ್ನು ಮಾಡು ; ಉಪಚರಿಸು : ಅಂತು ವಯೋಬಾಲಕನುಂ ಜ್ಞಾನವೃದ್ಧನುಮಪ್ಪ ಜಗದ್ಗುರುಗೆ ಸುರಸಮುದಯಂ ಪರ್ಯುಷ್ಟಿಗೆಯ್ಯುತ್ತಿರೆ (ಶಾಂತಿಪು. ೧೦-೬೭ ವ) ; ಆತ್ಮೀಯ ಬಹಿರಂತಃಪುರವಿಲಾಸಿನಿಯರಂ . . . ರಮಣೀರತ್ನಮನಲಂಕರಿಸಲುಂ ವಧೂಜನರ ಸಹ್ಯವ್ಯಾಪಾರಾಂತರಂಗಳೊಳನುಕರಿಸಿ ಪರ್ಯುಷ್ಟಿಗೆಯ್ಯಲುಂ ನಿಯೋಜಿಸಿ ಪೋಗಲ್ವೇಟ್ಟು (ವರ್ಧಮಾ. ೧೧-೩೫ ವ) ; ಪ್ರಾಯೋಪಗಮ(ನ)ಮಂಗೆಯ್ದು ಮಹಾಪುರುಷಂಗೆ ಪರ್ಯುಷ್ಟಿಗೆಯ್ಯಲ್ವೇಡೆಂದು (ಪೇಟ್ಟು) ಭಟಾರರಲ್ಲಿಂ ಬೆಳಗಾದಾಗಳೊಂದು ದೆಸೆಗೆ ಪೋದರ್ (ಜೀವಸಂ. ೧೧೨-೧೪). **ಪರಿಯುಷ್ಟಿಗೆಯ್ :** ತಪೋಧನರ್ಗಿರದೆ ಗದ್ದುಗೆಗಳಂ ಕಟ್ಟೆ ಧೂಪದೀಪಂಗಳುಮಂ ಕೊಟ್ಟು ಪರಿಯುಷ್ಟಿಗೆಯ್ವ ಪಟುತರ ಮರ್ಕಟಸಮೂಹಂಗಳುಮಂ (ಪಂಚತಂ. ೪೯-೨೧). [ಪರ್ಯುಷ್ಟಿ+ಕೆಯ್$_1$]

**ಪರ್ಯಸ್ತ** (ಗು). ೧. ಕೆದರಿದ ; ಹರಡಿದ. ೨. ಆವರಿಸಿದ ; ಸುತ್ತುಗಟ್ಟಿದ. (ನಾ). ೩. [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು : ಸ್ಥಿರಹಸ್ತ, ಪರ್ಯಸ್ತ, ಸೂಚೀವಿದ್ಧ . . . ಸ್ವಸ್ತಿಕರೇಚಿತ—ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಲಾಸ್ಯರಂ. ೫-೭ ವ). [ಸಂ.]

**ಪರ್ಯಸ್ತಕ** (ನಾ). = ಪರ್ಯಸ್ತ ೩ : ವಿಲಸತ್ತಲಪುಷ್ಪಪುಟಂ . . . ಪ್ರಕಟಿತ ನಿತಂಬ ಕರಿಹಸ್ತ ಕಟೀಭಿನ್ನಂಗಳೆನಿಪ ಕರಣಂಗಳ್ ಕ್ರಮದೆ ಕರಂ ರಂಜಿಸೆ ಪರ್ಯಸ್ತಕಮೆಂದೆಂಬಂಗಹಾರಮಕ್ಕೀ ಪತ್ತುಂ (ಲಾಸ್ಯರಂ. ೫–೧೧). [ಸಂ.]

**ಪರ್ಯಸ್ತಿ** (ನಾ). ಮಂಚ ; ಪಲ್ಲಂಗ. [ಸಂ.]

**ಪರ್ಯಸ್ತಿಕ** (ನಾ). ತಪಸ್ವಿಯ ಹಾಸುಗೆ : "ಪರ್ಯಸ್ತಿಕಃ, ಪರಿಕರಃ, ಪರ್ಯಂಕಃ– ಈ ೩ ತಪಸ್ವಿಯ ಹಾಸಿಕೆ" (ಹಲಾಯು. ೬೮–೨೫೬). [ಸಂ.]

**ಪರ್ಯಸ್ತಿಕೆ** (ನಾ). ೧. ಹಾಸುಗೆ ; ಶಯ್ಯೆ : "ಪರ್ಯಂಕಂ ಪರಿಕರಮೆನೆ ಪರ್ಯಸ್ತಿಕೆ" (ವಸ್ತುಕೋ. ೫೮–೩೬). ೨. ಸೊಂಟಕ್ಕೆ ಸುತ್ತಿಕೊಳ್ಳುವ ಬಟ್ಟೆ ; ಕಟಿಬಂಧ. [ಸಂ.ಪರ್ಯಸ್ತಿಕಾ]

**ಪರ್ಯಾಕುಲ** (ನಾ). ಅಂಜಿಕೆ ; ತಲ್ಲಣ : ಪದಘಾತಕ್ಕಗಿದಳ್ಕಿ ಬಳ್ಕಿದುದಧೋಲೋಕಂ ಭಯಂ ಮರ್ತ್ಯಲೋಕದೊಳಂ ಪೊಣ್ಮಿ ದುದೂರ್ಧ್ವಲೋಕದೊಳೆ ಮತ್ತಾಯ್ತುದ್ಭುತಭ್ರಾಂತಿಯೆಂಬುದನೆಂಬಂ ತಿರೆಯಂತದೇಂ ಭುವನಮಂ ಪರ್ಯಾ[ಪಾಠಾಂ.ನಿರ್ವ್ಯಾ]ಕುಲಂ ಮಾಡಲಾರ್ತುದೊ ದುರ್ಯೋಧನ ಭೀಮಸೇನರ ಗದಾಯುದ್ಧಂ ತ್ರಿಧಾಭ್ರಾಂತಿಯಂ (ಗದಾಯು. ೮–೧೦). [ಸಂ.]

**ಪರ್ಯಾಣ**$_1$ 'ಪರಿಯಾಣ$_1$' ನೋ.

**ಪರ್ಯಾಣ**$_2$ (ನಾ). ಕುದುರೆಯ ಜೀನು ; ತಡಿ ; ಹಲ್ಲಣ : "ಪರ್ಯಾಣಂ, ಪಲ್ಯಯನಂ—ಈ ೨ ಹಲ್ಲಣಂ" (ಹಲಾಯು. ೬೩–೨೮೮) ; ಕಣ್ಣಿಂ ಖುರನುಂ ತೋಱಿ ಪಕ್ಕರೆಯಿಕ್ಕಿ ಪೊಳೆವ ಪೊನ್ನ ಪರ್ಯಾಣಂ ಗಳುಮೆಸೆಯೆ ಘೋಟಕಾಯ್ಲರ್ ಪೊಳೆಯಿಸೆ ಬಿಸಿಲ್ಗುದುರೆಗಳ್ ಪೊಳೆ ವಂತೆ ಪೊಳೆವ ಕಡುಗುದುರೆಗಳುಮಂ (ಪಂಪಭಾ. ೧೦–೫೧ ವ) ; ಎರಡುಂ ಲಕ್ಕಂಬರಂ ಸುತ್ತಣಯರಶನಿಸನ್ನಾಹದಿಂ ಪನ್ನೆರಳ್ಸಾಸಿರವಶ್ವಶ್ರೇಣಿ ಮೇಲಣ್ಪವಣಿಯ ಮಣಿಪರ್ಯಾಣದಿಂ ತೋರ್ಕೆವೆತ್ತಿಯ್ತರೆ (ಎಕ. XI, ದಾವಣ. ೨೫–೩೨ ; 1224). [ಸಂ.]

**ಪರ್ಯಾಣಕ** (ನಾ). ಜೀನನ್ನು ಹೊಂದಿರುವುದು ; ಹಲ್ಲಣ ದಿಂದ ಸಜ್ಜಾದುದು : ಚಂದ್ರಾಪೀಡದೇವಂ . . . ಯಥಾಸ್ಥಿತ ಪರ್ಯಾಣಕಮಪ್ಪಿಂದ್ರಾಯುಧಮನೇಱಿ ಮಹಾಶ್ವೇತಾಶ್ರಮಮಂ ಪೊಕ್ಕು (ಕಾದಂಉ. ೫೪೧). [ಸಂ.]

**ಪರ್ಯಾತೀತ** (ಗು). ಅತಿಶಯವಾದ ; ಅಧಿಕವಾದ : ಪರಮಾ ಶ್ಚರ್ಯಪರ್ಯಾತೀತ ಶಿರಃಕಂಪಂಬೆರಸು (ಶಾಂತಿಪು. ೧೦–೭೫ ವ). [ಸಂ.]

**ಪರ್ಯಾಪ್ತ** (ಗು). ೧. ಪಡೆದ ; ಹೊಂದಿದ ; ಗಳಿಸಿದ. ೨. ಮುಗಿದ ; ಕೊನೆಗೊಂಡ. ೩. ಸಮಗ್ರವಾದ ; ಸಂಪೂರ್ಣ ವಾದ : ಉತ್ತಮಕ್ಷಮಾಮಾರ್ದವ . . . ಬ್ರಹ್ಮಚರ್ಯಾ [ಪಾಠಾಂ. ಚರ್ಯಪರ್ಯಾಯ]ಪರ್ಯಾಪ್ತ ದಶಧರ್ಮಂಗಳಂ ಕೈಕೊಂಡು (ಆದಿಪು. ೬–೩೦ ವ). ೪. ತುಂಬಿದ ; ಭರ್ತಿಯಾದ. ೫. ತೃಪ್ತಿಯನ್ನು ಹೊಂದಿದ ; ತಣಿದ : ಅಂತು ಸಹಸ್ರಲೋಚನಂ ಪರ್ಯಾಪ್ತಸಹಸ್ರ ಲೋಚನನಾಗಿ ಸಹಸ್ರಪತ್ರಾಯತನೇತ್ರನಂ ನೋಡಿ (ಜಗವಿ. ೪–೧೦೧ ವ). (ನಾ). ೬. ಮುಗಿದುದು ; ಕೊನೆಗೊಂಡುದು : "ಕೃತಮೆಂಬುದು ಪರ್ಯಾಪ್ತಂ" (ವಸ್ತುಕೋ. ೧೩೯–೧೨೬). ೭. ತುಂಬಿರುವುದು ; ಭರ್ತಿಯಾಗಿರುವುದು : ಅದರ ಮೂಲ್ಯ ಅದರೊಳಗೆ ಪರ್ಯಾಪ್ತ ವಾಗಿರುತ್ತದೆ (ನಿಬಂಧ. II, ೨೫೩). ೮. ಪರಿಪೂರ್ಣನಾದವನು : ಧನುರ್ವಿದ್ಯೆಯನ್ನಭ್ಯಾಸಗೆಯ್ದಾಗ ಪರ್ಯಾಪ್ತನಾಗಿರುವನ್ನೆ ಏಕಲವ್ಯನಾ ಭಿಲ್ಲಕುವರಂ (ಹಸ್ಪೆ ರ. ೨೭–೨೫) ; ಎಲ್ಲ ದೃಷ್ಟಿಯಿಂದಲೂ ಸಂಪೂರ್ಣ ಎನಿಸುವ ಮಾನವನು 'ಪರ್ಯಾಪ್ತ'ನಾದರೆ ಕುರುಡ, ಮೂಕ, ಹೆಳವ, ಹುಚ್ಚ ಇತ್ಯಾದಿ ಕೊರತೆಗಳುಳ್ಳ ಮನುಷ್ಯನು 'ಅಪರ್ಯಾಪ್ತ' ನೆನಿಸುವನು (ಜೈನಪ. ೨೯೪). ೯. ತೃಪ್ತಿಯನ್ನು ಹೊಂದುವುದು : "ತಣಿವುದು ಸಾಹಿತ್ಯಂ ತರ್ಪಣವೆನಿಸುಗುಮಾಶಿತಂ ಭವಂ ಪರ್ಯಾಪ್ತಂ" (ವಸ್ತುಕೋ. ೬೩–೭). ೧೦. ತೃಪ್ತಿ ; ತಣಿವು : "ಪರ್ಯಾಪ್ತಂ, ಉಪಸಂಪನ್ನಂ, ತೃಪ್ತಿಃ, ಸೌಹಿತ್ಯಂ—ಈ ೪ ತ(ಣಿ)ಣುವು" (ಹಲಾಯು. ೫೪–೧೭೧). ೧೧. ಹೇರಳವಾದುದು ; ಯಥೇಷ್ಟವಾದುದು : "ನಿಕಾಮವೆನೆ ಪರ್ಯಾಪ್ತಂ" (ವಸ್ತುಕೋ. ೧೦೫–೪೨). [ಸಂ.]

**ಪರ್ಯಾಪ್ತಂ** (ಅ). ೧. ಕೂಡಲೆ ; ತಕ್ಷಣ. ೨. ಮನಃ ಪೂರ್ವಕವಾಗಿ. [ಸಂ.]

**ಪರ್ಯಾಪ್ತಕ** (ನಾ). [ಜೈನ] ಪರ್ಯಾಪ್ತಿಯನ್ನು ಹೊಂದಿರುವ ಜೀವ : ಪ್ರಥಮಪೃಥ್ವಿಯೊಳು ಪರ್ಯಾಪ್ತಕರ್ಗಂ ಅಪರ್ಯಾಪ್ತಕರ್ಗಂ ಕ್ಷಾಯಿಕಮುಂ ಕ್ಷಾಯೋಪಶಮಿಕಮುಮುಂಟು (ತಸೂವ್ಯ. ೯) ; ಅಲ್ಲಿ ಸೂಕ್ಷ್ಮಬಾದರಪರ್ಯಾಪ್ತಕಾಪರ್ಯಾಪ್ತಕಭೇದದಿಂ ಸೂಕ್ಷ್ಮವನಸ್ಪತಿ ಕಾಯಂಗಳ್ . . . ಅಲ್ಲಿಯೆ ಸಾಯುತ್ತುಂ ಪುಟ್ಟುತ್ತುಮಿರ್ಕುಂ (ಮಲ್ಲಿಪು. ೧೩–೧೫೪). 'ಪರ್ಯಾಪ್ತಿ' ಪರಾ. [ಸಂ.]

**ಪರ್ಯಾಪ್ತಜೀವ** (ನಾ). = ಪರ್ಯಾಪ್ತಕ : ಜೀವವು ತನ್ನ ಶಕ್ತಿಯು ಪೂರ್ಣಗೊಳ್ಳಲಿಕ್ಕೆ ಅವಶ್ಯವೆನಿಸುವಷ್ಟು ದ್ರವ್ಯವನ್ನು ಹೊಂದು ವುದು. ಈ ದ್ರವ್ಯವನ್ನು ಯಾವ ಜೀವವು ಸಂಪೂರ್ಣವಾಗಿ ಹೊಂದಿರು ವುದೋ ಅದು 'ಪರ್ಯಾಪ್ತ' ಜೀವವು (ಜೈನಪ. ೨೯೪). [ಪರ್ಯಾಪ್ತ + ಜೀವ]

**ಪರ್ಯಾಪ್ತತೆ** (ನಾ). ಎಲ್ಲವನ್ನೂ ಒಳಗೊಂಡಿರುವಿಕೆ ; ಪರಿಪೂರ್ಣತೆ : ಆಕಸ್ಮಾತ್ತಾಗಿ ಓದಲು ನಡೆದ ಯಾರಿಗಾದರೂ ಶ್ರೀ ಅರವಿಂದರ ಕಾವ್ಯ–ಕಲಾಸಿದ್ಧಾಂತದ ಪರ್ಯಾಪ್ತತೆ, ನಿರ್ವಿಕಾರ ದೃಷ್ಟಿಗಳು ಆಶ್ಚರ್ಯವನ್ನುಂಟುಮಾಡದಿರವು (ನವ್ಯಕಾ. ೧೯). [ಸಂ. ಪರ್ಯಾಪ್ತತಾ]

**ಪರ್ಯಾಪ್ತಯೋಗ** (ನಾ). ತಪಸ್ಸನ್ನು ಮುಗಿಸಿದವನು,— ಪೂರ್ಣಗೊಳಿಸಿದವನು : ತನ್ಮುನೀಂದ್ರಂ ಪರ್ಯಾಪ್ತಯೋಗಂ ಕೆಯ್ಯನೆತ್ತಿ ಕೊಂಡು ಯಥೋಕ್ತವಿಹಾರದಿಂ ಮಾಸೋಪವಾಸದ ಪಾರಣೆ ಯೊಳ್ ರತ್ನಪುರಮಂ ಚರಿಗೆವುಗೆ (ಶಾಂತಿಪು. ೯–೨೧ ವ). [ಪರ್ಯಾಪ್ತ + ಯೋಗ]

**ಪರ್ಯಾಪ್ತಿ** (ನಾ). ೧. ಹೊಂದುವುದು ; ಪಡೆಯುವುದು. ೨. ಕೊನೆ ; ಅಂತ್ಯ. ೩. ಯೋಗ್ಯತೆ ; ಅರ್ಹತೆ. ೪. ತೃಪ್ತಿ ; ತುಷ್ಟಿ : ಸುಪ್ತಂ ಪ್ರಬುದ್ಧನೆನೆ ಪರ್ಯಾಪ್ತಿಯನಂತರ್ಮುಹೂರ್ತದಿಂ ಪಡೆದು ಸುಖಾವಾಪ್ತಿಯಿನಹಮಿಂದ್ರಂ ಪರಿತೃಪ್ತಿಯನುಪಪಾತತಲ್ಪತಳ ದೊಳ್ತಳೆದಂ (ಮಲ್ಲಿಪು. ೧೧–೬೩). ೫. ವ್ಯಾಪ್ತವಾಗಿರುವಿಕೆ ; ತುಂಬಿರುವಿಕೆ. ೬. ಸಾಕಷ್ಟಾದುದು ; ಯಥೇಷ್ಟವಾದುದು. ೭. ಹೊಡೆತದಿಂದ ರಕ್ಷಿಸುವಿಕೆ,—ರಕ್ಷಣೆ ಮಾಡುವಿಕೆ : "ಪರ್ಯಾಪ್ತಿಃ, ಪರಿತ್ರಾಣಂ, ಹಸ್ತವಾರಣಂ—೩ ಕೊಲ್ಲುವದಕ್ಕೆ ಉದ್ಯುಕ್ತನಾದವನನ್ನು ಅಡ್ಡಹಾಕಿ ಹಿಡಕೊಂಡು ಕೊಲ್ಲಲ್ಪಡಬೇಕಾಗಿದ್ದ ವನನ್ನು ಕೊಲೆಗೆ ಸಿಕ್ಕದ ಹಾಗೆ ಭಯವಿಲ್ಲದೆ ರಕ್ಷಿಸುವದಕ್ಕೆ ಪೆಸರುಗಳು" (ಸಿದ್ಧಾಂತಿ. ೩೫೫). ೮. ಆತ್ಮರಕ್ಷಣೆ; ಸ್ವಂತರಕ್ಷಣೆ. ೯. [ಜೈನ] ನಾಮಕರ್ಮಪ್ರಕೃತಿಗಳಲ್ಲಿ ಒಂದು ; ಶರೀರದ ಇಂದ್ರಿಯ ಮೊದಲಾದ ಪುದ್ಗಲ ರಚನೆಯು ಪೂರ್ಣಗೊಂಡಿರುವುದು ; ಇದರಲ್ಲಿ ಆರುವಿಧ. ೧. ಆಹಾರಪರ್ಯಾಪ್ತಿ. ೨. ಶರೀರ ಪರ್ಯಾಪ್ತಿ. ೩. ಇಂದ್ರಿಯಪರ್ಯಾಪ್ತಿ. ೪. ಶ್ವಾಸೋಚ್ಛ್ವಾಸ

ಪರ್ಯಾಪ್ತಿ. ೫. ಭಾಷಾಪರ್ಯಾಪ್ತಿ. ೬. ಮನಃಪರ್ಯಾಪ್ತಿ: ಸುಭಗ ದುರ್ಭಗ ಪ್ರತ್ಯೇಕಶರೀರಾಯಶಸ್ಕೀರ್ತ್ಯನಾದೇಯನಿರ್ಮಾಣ ಪರ್ಯಾಪ್ತಿ [ಪಾಠಾಂ. ಪರ್ಯಾಪ್ತ, ಅಪರ್ಯಾಪ್ತಿ] ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬–೪೯ ವ); ಆಹಾರಕ ಶರೀರಇಂದ್ರಿಯಉಚ್ಛ್ವಾಸನಿಶ್ವಾಸಭಾಷಾಮನಃಪರ್ಯಾಪ್ತಿಯೆಂದಾಱು ಪರ್ಯಾಪ್ತಿಗಳಕ್ಕುಂ (ಪಸಾರ. ೧೪೦). [ಸಂ.]

**ಪರ್ಯಾಯ** (ನಾ). ೧. ಸುತ್ತುವುದು; ತಿರುಗುವುದು; ಭ್ರಮಣ. ೨. ಒಂದಾದ ಮೇಲೆ ಮತ್ತೊಂದರಂತೆ ವರಸೆಯಾಗಿ ಬರುವುದು; ಅನುಕ್ರಮ; ಪರಿವಿಡಿ: "ಪರಿಪಾಟೀ . . . ಪರ್ಯಾಯಃ, ವಿಶಾಯಃ—ಈ ೭ ಪರಿವಿಡಿ" (ಹಲಾಯು. ೧೨೨–೫೫); ಅಂತು ಶಿಲಾಪಟ್ಟದೊಳ್ ನಿರಂತರಂ ಸೂರ್ಯರಾತ್ರಿಪ್ರತಿಮಾಪರಂಪರೆಯುಂ ಪರ್ಯಾಯದಿಂದಮನುಷ್ಠಿಸುತ್ತುಂ (ಶಾಂತಿಪು. ೧೧–೧೦೮ ವ); ಪ್ರಧಾನ ಜ್ಯೂರಿ ಶರೀರಭಾರವನ್ನು ಪರ್ಯಾಯವಾಗಿ ಎರಡು ಕಾಲುಗಳ ಮೇಲೆಯೂ ಬಿಡುತ್ತ, ನಡುನಡುವೆ ಕೆಮ್ಮುತ್ತ, ಪ್ರಶ್ನೋತ್ತರಗಳನ್ನು ವಾಚಿಸಿದನು (ಪುನರು. ೧೦೮). ೩. (ಕಾಲ, ಅವಧಿ ಮೊದಲಾದುವು) ಮುಗಿಯುವಿಕೆ; ಕೊನೆಗೊಳ್ಳುವಿಕೆ. ೪. ನಿಶ್ಚಿತ ಅವಧಿಯಲ್ಲಿ ಮತ್ತೆ ಮತ್ತೆ ಉಂಟಾಗುವಿಕೆ; ಕ್ರಮವಾದ ಆವೃತ್ತಿ; ಪುನರಾವರ್ತನೆ. ೫. ಸರದಿ; ಬಾರಿ; ಪಾಳಿ. ೬. ಕ್ರಮಬದ್ಧವಾದ ರಚನೆ,—ವ್ಯವಸ್ಥೆ: ಇನ್ತೀಯೆರಡುಂ ಪರ್ಯ್ಯಾಯದ ಮತ್ತರಿಪ್ಪತ್ತೊಂದುಮಂ ಪ್ರತಿಪಾಳಿಸುವವರ್ಗ್ಗೆ . . . ಸಾಸಿರ್ವ್ವರ್ ಬ್ರಾಹ್ಮಣರ್ಗ್ಗೆಯುಂಭಯ ಮುಂಖಿಗೊಟ್ಟ ಪ(ಫ)ಳಮುಕ್ಕು (ಇಆ. XVIII, ೩೯–೩೧; 999); ದೇವರ ಪೂಜಗೆ ಧೀವಗೊಂಡಿಂ ಬಡೆಗಣ ಪೂದೋಣ್ಟಂ ಮತ್ತರು ೩ ಆ ಪ್ರತಿಬದ್ಧದ ಮನೆ ನಿವೇಶನ ೩ ಅನ್ತೆರಡುಂ ಪರ್ಯ್ಯಾಯದ ಮೂಱುಂ ಸ್ಥಳದ ನೆಲಂ ಕಾಲಮತ್ತರು ಸಾಸಿರದ ನಾಲ್ವತ್ತೈದು (ಕಇಆ. ೯–೩–೩೦೫; ?). ೭. ಮಾರ್ಗ; ಬಗೆ; ರೀತಿ: ಆವುಂ ಪಲವುಂ ಪರ್ಯಾಯದಿಂ ಪೇೞ್ದೊಡಂ ಕೇಳ್ದನಿಲ್ಲಲ್ಲಿಗೆ ತಕ್ಕುದಂ ನುಡಿದು ದೇವಿಯ ರಿಂತಾನುಮೊಡಂಬಡಿಸುವುದೆನೆ (ಪಂರಾಮಾ. ೧೪–೧೨೨ ವ). ೮. ಸಮಾನಾರ್ಥವುಳ್ಳ ಬೇರೆ ಶಬ್ದ: ಅಯರ್ಜನಪ್ರಭರೇಖಾ ನಿರ್ಯಾಣಮನೆಸೆಯೆ ಶಾಲಿಹೋತ್ರಮುನೀಂದ್ರಂ ಪ್ರಾಯಕ್ಕೆ ಪೇೞ್ದುದಂ ತಾಂ ಪರ್ಯಾಯದಿನಱಿಯೆ ಪೇೞ್ದನಭಿನವಚಂದ್ರಂ (ಅಶ್ವಶಾ. ೫–೩೦); ಇದು ಇಲ್ಲಿ "ವರ್ಣನೆಗೆ ಅಶಕ್ಯ" ವೆಂಬುದರ ಪರ್ಯಾಯವಾದ "ಅಲಂಕಾರಿಕ ವಾಣಿ" ಯೆಂಬ ಸಾಮಾನ್ಯಾರ್ಥದಲ್ಲಿ ಪ್ರಯುಕ್ತವಾಗಿದೆ (ಧ್ವನ್ಯಾಲೋ. ೫೨ ಅಡಿಟ). ೯. ಕೊನೆ; ಅಂತ್ಯ; ಮುಕ್ತಾಯ. ೧೦. ಬೇರೆ ಕ್ರಮ; ಮತ್ತೊಂದು ರೀತಿ: ಪಾಂಡವರ್ ಮರ್ಯಾದಾಪರರಲ್ಲಿ ಮೆಯ್ಗರೆದು ಸಂದೊಂದಿರ್ದೊಡಂ ಕಾಣ್ಬೊಡಿಂ ಪರ್ಯಾಯಂ ಪೆಱತುಂಟೆ ತತ್ಪುರದ ಗೋವೃಂದಂಗಳಂ ಕೊಂಡೊಡಾ ಶೌರ್ಯಾನ್ವಿತರದರ್ಕೆ ಸೈರಿಸರವರ್ ಬಂದಾಂತಪರ್ ನಿಶ್ಚಯಂ (ನೇಮಿಪು. ೧೦–೧೩೩); ತಮ್ಮ ನಾಡು-ನುಡಿಯ ಬಗೆಗಿನ ಹೆಚ್ಚಿನ ವ್ಯಾಸಂಗಕ್ಕೆ ಇದು ಪರ್ಯಾಯದಿಂದಲಾದರೂ ಉತ್ತೇಜನಕಾರಿಯಾದೀತೆಂದು ನಂಬಿದ್ದೇನೆ (ಕರ್ನಾಪೂ. XII, ಬಿನ್ನಹ). ೧೧. ಇನ್ನೊಂದು ರೂಪ: ಒಂದು ಬಗೆಯ ವಿರಕ್ತಿ ಮತ್ತು ಅದರ ಪರ್ಯಾಯವಾಗಿ ಇರುವ ಉದಾಸೀನತೆ ಅವರ ಜೀವನವನ್ನು ಸುತ್ತುವರಿದಿದೆ (ದೂರಸ. ೮೧); ದ್ರವ್ಯವು ಸ್ವಾಭಾವಿಕವಾಗಿ ಅವಿಕೃತವಾದುದಾದರೂ ಅಸಂಖ್ಯಪರಿವರ್ತನಗಳಿಂದ ಪ್ರಕಟವಾಗುವುದಕ್ಕೆ ಪರ್ಯಾಯವೆನ್ನುವರು. ಕೊಡ, ಗಡಿಗೆ ಮುಂತಾದುವು ಮೃತ್ತಿಕೆಯ ಪರ್ಯಾಯಗಳು (ಜೈನಧ. ೧). ೧೨. ವಿಶಿಷ್ಟವಾದ ಗುಣ,—ಲಕ್ಷಣ. ೧೩. ಅವಕಾಶ; ಸಂದರ್ಭ. ೧೪. (ಕರಾ) ಉಡುಪಿಯಲ್ಲಿರುವ ಶ್ರೀಕೃಷ್ಣ ದೇವಸ್ಥಾನದ ಮೇಲ್ವಿಚಾರಣೆಯ ಸಲುವಾಗಿ, ಎರಡು ವರ್ಷಕ್ಕೊಮ್ಮೆ ಸ್ವಾಮಿಗಳ ಉತ್ತರಾಧಿಕಾರದ ಸಂದರ್ಭದಲ್ಲಿ ನಡೆಯುವ ಉತ್ಸವ: ಉಡುಪಿಯಲ್ಲಿ ಎರಡು ವರ್ಷಗಳಿಗೊಮ್ಮೆ ನಡೆವ ಪರ್ಯಾಯ, ಪಡುಬಿದ್ರೆಯಲ್ಲಿ ಜರಗುವ ಢಕ್ಕೆಬಲಿ . . . ಇವುಗಳು ಪ್ರಾಮುಖ್ಯವಾದುವುಗಳಾಗಿವೆ (ತುಳುನಾ. ೨೫೩); ತಮ್ಮ ಸರದಿಗೆ ಬಂದ ಐದನೇ ಪರ್ಯಾಯವನ್ನು ತಮ್ಮ ಚಿಕ್ಕಪಟ್ಟದ ಶಿಷ್ಯರಾದ ವೇದವೇದ್ಯರಿಗೊಪ್ಪಿಸಿ, ಆ ಕಾಲದಲ್ಲಿ ತಾವು ಸ್ವಾದಿಯಲ್ಲಿ—ಉಡುಪಿಯಲ್ಲಿ ನಡೆಸುವಂತೆಯೇ ಪರ್ಯಾಯೋತ್ಸವವನ್ನು ನಡೆಸಿದರು (ಕಭವಿ. ೧೬೬). ೧೫. ರಚನೆ; ನಿರ್ಮಾಣ. ೧೬. ಅಂಶ; ಭಾಗ; ವಿಭಾಗ: ಇಂದಿರಾ, ಯುಗಳಾಂಗುರೀಯ, ರಾಧಾರಾಣೀ—ಇವು ಮೂರೂ 'ವಂಗದರ್ಶನ'ದ ಮೊದಲ ಪರ್ಯಾಯದಲ್ಲಿ ೧೮೭೨ ರಿಂದ ೧೮೭೫ ರವರೆಗೆ ಬಂದ ಸಣ್ಣ ಕಾದಂಬರಿಗಳು (ಬಂಕಿಮು. ೧೧೬); ಇದು ಎರಡನೆಯ ಪರ್ಯಾಯ (ನಡೆದಾ. I, ೪೪೩). ೧೭. ವ್ಯತ್ಯಾಸ; ತಾರತಮ್ಯ: ಯಾರಿಗೇನು ಹಚ್ಚಬೇಕು. ಇದರ ಪರ್ಯಾಯನ ಗೊತ್ತಿಲ್ಲ. ಹ್ಯಾಂಗ ಹುಟ್ಟೇದ ಹಾಂಗ ಬೆಳೆದದ. ಆತು ಮರಾ ಬೆಳೆ ಧಾಂಗ! (ವೈನಿ. ೪೫). ೧೮. [ಕಾವ್ಯಮೀ] ಒಂದು ಬಗೆಯ ಅರ್ಥಾಲಂಕಾರ; P ಇದರಲ್ಲಿ ಎರಡು ಬಗೆಗಳಿವೆ: i. ಒಂದು ವಸ್ತುವು ಕ್ರಮವಾಗಿ ಬೇರೆ ಬೇರೆ ವಸ್ತುಗಳನ್ನು ಆಶ್ರಯಿಸಿರುವಂತೆ ವರ್ಣಿಸುವುದು. ಉದಾ: ಬಾಲೆಯ ಮುಖಕಾಂತಿ ಸರಸಿಜವನ್ನು ಬಿಟ್ಟಾಮೇಲೆ ಚಂದ್ರನನ್ನಾಶ್ರೈಸಿಹುದು (ಕುವಲ. ೧೦೧). ii. ಒಂದು ಸ್ಥಳದಲ್ಲಿ ಕಾಲಾನುಸಾರವಾಗಿ, ಕ್ರಮವಾಗಿ ಬೇರೆ ಬೇರೆ ವಸ್ತುಗಳು ಇರುವುವೆಂದು—'ಹಿಂದೆ ಇಲ್ಲಿ ಪ್ರವಾಹವಿತ್ತು, ಈಗ ಇಲ್ಲಿ ಮರಳು ಇದೆ' ಎಂಬಂತೆ ವರ್ಣಿಸುವುದು. ಉದಾ: ಪೊರೆದಕರ್ಣಂಗಣಿವರ್ಮರಾಬಟಿಕೆ ಬಲ್ಲಾಳಕರ್ಣಟುಂಬರ್ತೆಲುಂಗರುಮಂದಿಂಗವರೊಳ್ಪುದುಂಗದೆರವೆಂಬಂತಿರ್ದುದಿಂದಿಂತು ಸಾದರದಿಂ ಕನ್ನಡರಾಯರಾಳ್ವಿನೆಗಮಿ ಕರ್ಣಾಟದೇಶಂ ಕರಂ ಹರಿಸಂಬೆತ್ತುದು (ಅಪ್ರತಿ. ೯೮–೨೧): ಒಂದಕ್ಕೆ ಪಲವಾಶ್ರಯಕ್ರಮದಿ ಪೇಳಲ್ಕೆ ಪರ್ಯಾಯವು (ಕುವಲ. ೧೦೧). 'ಪರ್ಯಾಯಾಲಂಕಾರ' ಪರಾ. ೧೯. ಪರ್ಯಾಯೋಕ್ತಿಯ ಒಂದು ಬಗೆ; P ಬೇರೊಂದು ಕಾರ್ಯದ ನೆಪವನ್ನು ಒಡ್ಡಿ ಇಷ್ಟಾರ್ಥವನ್ನು ಸಾಧಿಸುವುದು. ಉದಾ: ಬನದೊಳಗೆ ನೋಡಿ ಪೊಸಮಾವಿನ ಗೊಂಚಲನಕ್ಕ ನಿನಗೆ ತಂದಪ್ಪೆಂ ನೀನಿನಿತೊಂದು ಬೇಗಮಂ ನಿನ್ನಿನಿಯನ ಪಕ್ಕದೊಳಿರೆಂದು ಸಖಿ ತೊಲಗುವುದುಂ (ಕಾವ್ಯಾವ. ೬೨೨): ನುಡಿಯದೆ ಮನದರ್ಥಮನದು ನುಡಿದಂತಿರೆ ನುಡಿದ ನುಡಿಯೆ ಪರ್ಯಾಯಂ (ಕಾವ್ಯಾವ. ೬೨೧).

**ಪರ್ಯಾಯವಾಗಿ** = ನೇರವಾಗಿ ಅಲ್ಲದೆ; ಪರೋಕ್ಷವಾಗಿ: ತುಂಗಳ ಮಾಸ್ತರರ ಬಗ್ಗೆ ಅವರು ಮುಖ್ಯಾಧ್ಯಾಪಕರ ಮುಂದೆ ಪರ್ಯಾಯವಾಗಿ ದೂರಿಕೊಳ್ಳಹತ್ತಿದರು (ರಂಗಗೋ. ೫೨); ನೇರವಾಗಿ ಆ ಮಾತನ್ನು ಬರೆಯುವ ಬದಲು ಪರ್ಯಾಯವಾಗಿ ಅದನ್ನು ತಿಳಿಸಿದಂತೆ ಕಾಣುತ್ತದೆ (ಮಹಾಗ. ೩೩೧). [ಸಂ.]

**ಪರ್ಯಾಯಂದಪ್ಪು** (ಕ್ರಿ). ಕ್ರಮವನ್ನು ತಪ್ಪು; ರೀತಿಗೆಡು: ಅಲೋಕತ್ರಯಮಧ್ಯದೊಳ್ ಮಧ್ಯಮಲೋಕವೆಂಬ ಪೆಸರಂ ಪಡೆದು ಪರ್ಯಾಯಂದಪ್ಪದೇಂ ಸುತ್ತಿಱಿದುಪೊ ವಲಯಾಕಾರದೊಂದೊಂದ ನತ್ಯಾಶ್ಚರ್ಯಂ (ಆದಿಪು. ೧–೪೮). [ಪರ್ಯಾಯಂ+ತಪ್ಪು₁]

**ಪರ್ಯಾಯದ್ವೀಪ** (ನಾ). "ಬಹುಮಟ್ಟಿಗೆ ನೀರಿನಿಂದ ಆವೃತವಾದ ಅಥವಾ ಸಮುದ್ರದೊಳಕ್ಕೆ ಚಾಚಿಕೊಂಡಿರುವ

ಭೂಭಾಗ: ಪರ್ಯಾಯದ್ವೀಪ; ದ್ವೀಪಕಲ್ಪ" (Peninsula. ಇಂಗ್ಲಿ.): ಕೊಂಚ ಕಡವೆನ್ನುವಾಗಿ ಎಲ್ಲಾ ಕಡೆಗಳಲ್ಲಿಯೂ ನೀರಿನಿಂದ ಸುತ್ತಲ್ಪಟ್ಟಿರುವ ಭೂಭಾಗವು "ಅರ್ಧದ್ವೀಪವು (Peninsula. ಪರ್ಯಾಯದ್ವೀಪ, ದ್ವೀಪಕಲ್ಪ)" ಎಂದು ಕರೆಯಲ್ಪಡುತ್ತದೆ (ಭೂಗೋಳ. ೧೦). [ಪರ್ಯಾಯ+ದ್ವೀಪ]

**ಪರ್ಯಾಯನಾಮ** (ನಾ). ಒಂದಕ್ಕೆ ಸಮಾನಾರ್ಥಕವಾದ ಮತ್ತೊಂದು ಹೆಸರು,—ಬೇರೆ ಹೆಸರು: ಸುಹೃದನೆನೆ ಸಹಾಯಂಗೆ ಪರ್ಯಾಯನಾಮಂ (ವಸ್ತುಕೋ. ೧೦೮-೧೧); ಅಕ್ಷರಮೆಂದುಂ, ವರ್ಣಮೆಂದುಂ, ಶುದ್ಧಾಕ್ಷರಕ್ಕೆ ಪರ್ಯಾಯನಾಮಂ (ಶಮದ. ೨ ವೃತ್ತಿ). [ಪರ್ಯಾಯ+ನಾಮ]

**ಪರ್ಯಾಯಪದ** (ನಾ). ಒಂದು ಶಬ್ದದ ಸಮಾನಾರ್ಥಕವಾದ, ಅದೇ ಭಾಷೆಯ ಮತ್ತೊಂದು ಶಬ್ದ; ಸಮಾನಾರ್ಥಕ ಶಬ್ದ; ಪ್ರತಿಪದ: ಈ ಶಬ್ದಗಳೂ ಧರ್ಮಶಬ್ದವೂ ಪರ್ಯಾಯಪದಗಳೆಂದೇ ಅವರ ಅಭಿಪ್ರಾಯವು (ಆರ್ಯಧ. ೩); ಸೌಂದರ್ಯ ಎಂಬ ಪದದ ಅರ್ಥ, ಅದರ ಪರ್ಯಾಯಪದಗಳಲ್ಲಿ ಸೂಚಿತವಾಗುವ, ಚಾರುತ್ವ, ಲಾವಣ್ಯ, ಲಾಲಿತ್ಯ ಇತ್ಯಾದಿ ಪದಗಳಿಗಿರುವ ಅರ್ಥಕ್ಕೆ ಮೀರಿದುದು (ಸೌಂದಸ. ೪೮). [ಪರ್ಯಾಯ+ಪದ$_2$]

**ಪರ್ಯಾಯಪಾಠ** (ನಾ). ಗ್ರಂಥದ ಒಂದು ಪಾಠಕ್ಕೆ ಬದಲಾಗಿ ಸಿಕ್ಕುವ ಬೇರೆ ಪಾಠ; ಪಾಠಾಂತರ: ಎರಡು ಪಾಠಸಂಪ್ರದಾಯಗಳಲ್ಲಿ ಸಮಾನಅಂತಃಪ್ರಾಮಾಣ್ಯವಿರುವ ಆದರೆ ಒಂದರಿಂದೊಂದು ಜನಿಸಿದ ಪರ್ಯಾಯಪಾಠ (Alternate Readings) ಗಳಿದ್ದಾಗ ಆಯ್ಕೆಯು ತುಂಬ ದುಷ್ಕರವಾಗುತ್ತದೆ (ಭಾರಪ. ೬೩). [ಪರ್ಯಾಯ+ಪಾಠ$_2$]

**ಪರ್ಯಾಯಪಾರಿತೋಷಕ** (ನಾ). ಸ್ಪರ್ಧೆಗಳಲ್ಲಿ ಆಯಾ ವರ್ಷ ಗೆದ್ದವರಿಗೆ ಹಿಂದಿನ ವರ್ಷ ಗೆದ್ದವರಿಂದ ತರಿಸಿ ಕೊಡುವ ಬಹುಮಾನ; ರೋಲಿಂಗ್ ಶೀಲ್ಡ್ ಅಥವಾ ಕಪ್ಪು: ರಾಷ್ಟ್ರವ್ಯಾಪಕಸ್ಪರ್ಧೆಗಳನ್ನು ಏರ್ಪಡಿಸಿ ಪರ್ಯಾಯಪಾರಿತೋಷಕಗಳನ್ನು ಸ್ಥಾಪಿಸುವುದು . . . ಇವೆಲ್ಲ ಶಾಲೆಯಲ್ಲಿ ಸಂಪ್ರದಾಯಗಳ ಸ್ಥಾಪನೆಗೂ ಬೆಳವಣಿಗೆಗೂ ನೆರವಾಗುತ್ತವೆ (ಶಿಕ್ಷದ. ೩೨೦). [ಪರ್ಯಾಯ+ಪಾರಿತೋಷಕ]

**ಪರ್ಯಾಯವಚ** (ನಾ). = ಪರ್ಯಾಯ ೧೯: ಪದೆದಿಷ್ಟಾರ್ಥಮನಾದೊಡಂತದನೆ ಮಾಡಲ್ ಬೇಜಿದೊಂದಾಗಲಂತದು ಪರ್ಯಾಯವಚಂ (ಉದಯಾ. ೫೦). [ಪರ್ಯಾಯ+ವಚ]

**ಪರ್ಯಾಯಶಬ್ದ** (ನಾ). = ಪರ್ಯಾಯಪದ: ಪರ್ಯಾಯಶಬ್ದದೊಳ್ ತಾತ್ಪರ್ಯದಿನಱಿದರ್ಥಗತಿಯಿನನ್ವರ್ಥತೆಯಿಂ ಪರ್ಯಾಳೋಚಿಸಿಕೊಳ್ಗಾಹಾರ್ಯಮಿದೆಂದನಭಿಹಿತದೊಳಭಿಯೋಗಪರರ್ (ವಸ್ತುಕೋ. ೨-೬). [ಪರ್ಯಾಯ+ಶಬ್ದ]

**ಪರ್ಯಾಯಸ್ಥ** (ನಾ). (ಉಡುಪಿಯ ಮಠದಲ್ಲಿ) ಶ್ರೀಕೃಷ್ಣದೇವಸ್ಥಾನದ ಮೇಲ್ವಿಚಾರಣೆಯ ಅಧಿಕಾರವನ್ನು ಹೊಂದಿದ ವ್ಯಕ್ತಿ: ಪರ್ಯಾಯಸ್ಥರಂತೆ, ಒಂದೊಂದು ಮನೆಯವರು, ತಮ್ಮ ಸರದಿ ಬಂದಾಗ . . . ಆರು ಕ್ಷೇತ್ರ ಸಾಲಿಗ್ರಾಮಗಳನ್ನೂ ಪೂಜಿಸುತ್ತಾರೆ (ಕಭವಿ. ೭). [ಸಂ.]

**ಪರ್ಯಾಯಾರ್ಥಿಕನಯ** (ನಾ). [ಜೈನ] ದ್ರವ್ಯಾರ್ಥಿಕನಯ ಮತ್ತು ಪರ್ಯಾಯಾರ್ಥಿಕನಯಗಳೆಂಬ ಎರಡು ಬಗೆಯ ನಯಗಳಲ್ಲಿ ಒಂದು; ವಿಶೇಷ, ಪರ್ಯಾಯ, ವ್ಯಾವೃತ್ತಿ ಇತ್ಯಾದಿ ಭೇದಗಳನ್ನು ಲಕ್ಷ್ಯವಾಗಿಟ್ಟುಕೊಂಡು ವಿಚಾರ ಮಾಡುವಿಕೆ: ಪರ್ಯಾಯಾರ್ಥಿಕನಯದಿಂ ಭಾವನಿಕ್ಷೇಪಮಱಿಯಿಪಡುಗುಂ (ತತ್ತ್ವಪ್ರ. ೧೧). 'ನಯ$_2$' ಪರಾ. [ಸಂ.]

**ಪರ್ಯಾಯಾಲಂಕಾರ** (ನಾ). = ಪರ್ಯಾಯ ೧೮: ಒಂದು ವಸ್ತು ಮೊದಲೊಳಿರ್ದ ತಾಣಮಂ ಬಿಟ್ಟು ಪೆಱಪೆಱತೊಂದೊಂದು ತಾಣಮಂ ಕ್ರಮದಿಂ ಸೇರಿತೆಂದು ಪೇೞ್ವುದು ಪರ್ಯಾಯಾಲಂಕಾರಂ . . . ಒಂದು ತಾಣದೊಳ್ತಱುವಾಯಿಂ ಪೆಱಪೆಱತೊಂದೊಂದು ವಸ್ತುಗಳ್ಸಂಬಂಧಿಸಿದುದಂ ಪೇೞ್ವುದುವುಂ ಪರ್ಯಾಯಾಲಂಕಾರಂ (ಅಪ್ರತಿ. ೯೮-೯); ಒಂದು ವಸ್ತುವಿಗೆ ಪರ್ಯಾಯದಿಂದನೇಕವಾದ ವಸ್ತುಗಳಲ್ಲಿಯಾಶ್ರಯವ ಮಾಡಿ ವರ್ಣಿಸಲ್ ಪರ್ಯಾಯಾಲಂಕಾರವೆನಿಪುದು (ಕುವಲ. ೧೦೧). [ಪರ್ಯಾಯ+ಅಲಂಕಾರ]

**ಪರ್ಯಾಯೋಕ್ತ** (ನಾ). ೧. [ಕಾವ್ಯಮೀ] ಒಂದು ಬಗೆಯ ಅರ್ಥಾಲಂಕಾರ; ಹೇಳಬೇಕಾದ ವಿಷಯವನ್ನು ನೇರವಾಗಿ ಹೇಳದೆ ಪ್ರಕಾರಾಂತರವಾಗಿ ಚಮತ್ಕಾರದಿಂದ ಹೇಳುವುದು; ಪರ್ಯಾಯೋಕ್ತಿ: ಪೇೞಲ್ತಕ್ಕರ್ಥಮಂ ಪ್ರಕಾಶಮಾಗಿ ಪೇೞದೆ ಪೆಱತೊಂದು ತೆಱದೊಳಂದವಾಗಿ ಪೇೞ್ವುದು ಪರ್ಯಾಯೋಕ್ತಂ (ಅಪ್ರತಿ. ೬೩-೮). ೨. ಬೇರೊಂದು ಕಾರ್ಯದ ನೆಪವನ್ನು ಒಡ್ಡಿ ಇಷ್ಟಾರ್ಥವನ್ನು ಸಾಧಿಸುವುದನ್ನು ವರ್ಣಿಸುವ ಅಲಂಕಾರ: ಬಗೆದರ್ಥಮನಱಿಪದೆ ಮೆಲ್ಲಗೆ ತಿರ್ದುವ ಬಗೆಯುನದಱ ನೆಪದಿಂ ಪೆಱತಂ ನಿಗದಿಸುವುದು ಪರ್ಯಾಯೋಕ್ತಗತಾಲಂಕಾರಂ (ಕವಿಾ. ೩-೧೩೧). [ಪರ್ಯಾಯ+ಉಕ್ತ]

**ಪರ್ಯಾಯೋಕ್ತಿ** (ನಾ). ೧. = ಪರ್ಯಾಯೋಕ್ತ ೧: ಉಸಿರಲಪ್ಪರ್ಥಮಂ ಪ್ರಕಾಶಮಾಗುಸಿರದೆ ರೈಯಮಾದ ಮಗುಳ್ದೊಂದು ಬಗೆಯಿಂದುಸಿರಲದು ಪರ್ಯಾಯೋಕ್ತಿಯೆನಿಕುಂ (ನರಚ. ೫೩). ೨. = ಪರ್ಯಾಯೋಕ್ತ ೨: ಮಗುಳ್ದೊಂದು ಕಜ್ಜಮಂ ನೆಪಂಗೆಯ್ದು ಇಷ್ಟಮಂ ಸಾಧಿಸೆ ಇದುವುಂ ಪರ್ಯಾಯೋಕ್ತಿಯೆನಿಪುದು (ನರಚ. ೫೩). [ಪರ್ಯಾಯ+ಉಕ್ತಿ]

**ಪರ್ಯಾಲೋಚನ,** ಪರ್ಯಾಳೋಚನ (ನಾ). ಚೆನ್ನಾಗಿ ವಿಚಾರ ಮಾಡುವಿಕೆ; ಕೂಲಂಕಷವಾಗಿ ಆಲೋಚಿಸುವಿಕೆ: 'ಪರ್ಯಾಲೋಚಿಸು' ಪರಾ. **ಪರ್ಯಾಳೋಚನ:** ತನ್ನ ತಂಗೆಯ ಸುತಾರೆಯ ಸ್ವಯಂವರವಿವಾಹಕಲ್ಯಾಣಕಾರ್ಯಪರ್ಯಾಳೋಚನವಿರಾಮದೊಳ್ ಶ್ರೀವಿಜಯಂ ಮೊದಲಾಗೆ ವಿಶ್ವಂಭರಾಧೀಶತನೂಜಸಮಾಜಮಂ ಬರಿಸೆ (ಶಾಂತಿಪು. ೬-೨೨ ವ). [ಸಂ.]

**ಪರ್ಯಾಲೋಚಿತ,** ಪರ್ಯಾಳೋಚಿತ (ಗು). ಚೆನ್ನಾಗಿ ಆಲೋಚಿಸಿದ; ಸೂಕ್ಷ್ಮವಾಗಿ ವಿಚಾರ ಮಾಡಿದ: ಅಂತು ಮಹಾಬಲಖಚರೇಂದ್ರಂ ಸ್ವಯಂಬುದ್ಧನೆ ತನಗೆ ಪರಮವಿಶ್ವಾಸಭೂಮಿಯಾಗೆ ತತ್ಪರ್ಯಾಲೋ[ಪಾಠಾಂ. ಳೋ]ಚಿತಕಾರ್ಯಪರ್ಯವಸಾನನುಂ ಮನೋಭಿಲಷಿತವಿಷಯಸುಖಾನುಭವನಿರತನುಮಾಗಿ ಮೂವತ್ತಾಱುಲಕ್ಕೆ ಪುಬ್ಬಂ ರಾಜ್ಯಂಗೆಯ್ಕೆ (ಆಪು. ೨-೨೩ ವ). **ಪರ್ಯಾಳೋಚಿತ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ಪರ್ಯಾಲೋಚಿಸು,** ಪರ್ಯಾಳೋಚಿಸು (ಕ್ರಿ). ಚೆನ್ನಾಗಿ ವಿಚಾರ ಮಾಡು; ಕೂಲಂಕಷವಾಗಿ ಆಲೋಚನೆ ಮಾಡು; ಆಮೂಲಾಗ್ರವಾಗಿ ವಿವೇಚಿಸು: ವಚನಗಳು ಯಾವ ಪ್ರಕರಣದಲ್ಲುಕ್ತವಾಗಿವೆ, ಹಿಂದಣ ಮುಂದಣ ವಾಕ್ಯಗಳೇನು ಹೇಳುತ್ತವೆ ಎಂಬುದನ್ನು ಪರ್ಯಾಲೋಚಿಸಬೇಕು (ಆರ್ಯಧ. ೪); ಈ ವಿಷಯವನ್ನು ಸರಕಾರವೂ ಸಮಾಜವೂ ಪರ್ಯಾಲೋಚಿಸಬೇಕು (ಗೋಗ್ರಾಸ. ೧೦೩).

**ಪರ್ಯಾಲೋಚಿಸು :** ಗುಜಿಗುಜಿಗೊಂಡು ಪರ್ಯಾಲೋಚಿಸಿ ಮನಂ ಮಗುಟ್ದು . . . ಅಬ್ಬಿತ್ತಿಯೊಳಾ ಕನ್ನೆಯಂ ಕನಕಶಾಂತಿಯೊಳ್ ನೆರಪಿದಂ (ಶಾಂತಿಪು. ೯-೧೭ ವ); ಸುಯೋಧನನು ಮಾಗಳಾತ್ಮೀಯರಾಮಾತ್ಯನಿಕರಮಂ ಕರೆದು ಪರ್ಯಾಲೋಚಿಪುದುಂ (ನೇಮಿಪು. ೧೦-೧೩೩). [ಪರ್ಯಾಲೋಚನ+-ಇಸು]

**ಪರ್ಯಾಸ** (ನಾ). ೧. ಅಂತ್ಯ; ಮುಕ್ತಾಯ. ೨. ಸುತ್ತುವಿಕೆ; ತಿರುಗುವಿಕೆ. ೩. ಹಿಂದುಮುಂದಾದ ಕ್ರಮ; ವಿಪರೀತ ವ್ಯವಸ್ಥೆ. [ಸಂ.]

**ಪರ್ಯಾಹಾರ** (ನಾ). ೧. ಬಿದಿರಿನ ಅಡ್ಡೆ; ಕಂಬಿ; ಕಾವಡಿ. ೨. ತಲೆಯ ಮೇಲಿನ ಭಾರ; ತಲೆಹೊರೆ: "ವಿವಧಃ, ವೀವಧಃ, ಭಾರಃ, ಪರ್ಯಾಹಾರಃ—ಈ ೪ ತಲೆಹೊಱೆ" (ಹಲಾಯು. ೧೨೫-೬೩). ೩. ಸಾಗಿಸುವುದು; ತೆಗೆದುಕೊಂಡು ಹೋಗುವುದು: "ಪರ್ಯಾಹಾರ, ವಿವಧ-ಹೊಱೆಯ ಹೊತ್ತು ಎಡೆಯಾಡುವದು" (ನಾಚಿರಾ. ೬). [ಸಂ.]

**ಪರ್ಯಾಳ** 'ಪರಿಯಾಣ[1]' ನೋ.

**ಪರ್ಯಾಳೋಚನ** 'ಪರ್ಯಾಲೋಚನ' ನೋ.

**ಪರ್ಯಾಳೋಚಿತ** 'ಪರ್ಯಾಲೋಚಿತ' ನೋ.

**ಪರ್ಯಾಳೋಚಿಸು** 'ಪರ್ಯಾಲೋಚಿಸು' ನೋ.

**ಪರ್ಯುತ್ಸುಕ** (ನಾ). ಕಾತರಗೊಂಡ ವ್ಯಕ್ತಿ; ತವಕಗೊಂಡ ವ್ಯಕ್ತಿ: ಅವುಗಳ ಸ್ಮರಣೆ ಕೂಡ ಈಗ ಅವನನ್ನು ಮತ್ತೆ ಪರ್ಯುತ್ಸುಕನನ್ನಾಗಿ ಮಾಡುತ್ತದೆ (ಧ್ವನ್ಯಾಲೋ. ೬೪ ಅಡಿಟಿ); ಆ ರಾಜರ್ಷಿಯನ್ನು ನೋಡಿದುದು ಮೊದಲಾಗಿ ಶಕುಂತಳೆ ಪರ್ಯುತ್ಸುಕಳಾಗಿರುವಂತಿದೆ (ಶಾಕುಂತ. ೩೪-೧೩). [ಸಂ.]

**ಪರ್ಯುದಂಚನ** (ನಾ). ಸಾಲ; ಋಣ: "ಅಪಮಿತ್ಯಕಂ, ಉದ್ಧಾರಃ, ಋಣಂ, ಪರ್ಯುದಂಚನಂ—ಈ ೪ ಸಾಲಂ" (ಹಲಾಯು. ೯೪-೯೧೪). [ಸಂ.]

**ಪರ್ಯುಪಾಸ್ತಿ** (ನಾ). ಸೇವೆ; ಶುಶ್ರೂಷೆ; ಉಪಚಾರ: "ಪರ್ಯುಪಾಸ್ತಿ ಶುಶ್ರೂಷಾಖ್ಯಂ" (ವಸ್ತುಕೋ. ೫೭-೩೫). [ಸಂ.]

**ಪರ್ಯುಪಾಸ್ಯೆ** (ನಾ). = ಪರ್ಯುಪಾಸ್ತಿ: "ಉಪಚಾರಂ ಸೇವನೆ ಪರ್ಯುಪಾಸ್ಯೆ ವರಿವಸ್ಯೆ ಭಕ್ತಿ ಶುಶ್ರೂಷಾರ್ಥಂ" (ವಸ್ತುಕೋ. ೨೦-೧೪). [ಸಂ. ಪರ್ಯುಪಾಸ್ಯಾ]

**ಪರ್ಯುಪ್ತಿ** (ನಾ). ಬೀಜವನ್ನು ಬಿತ್ತುವಿಕೆ; ಬಿತ್ತನೆಯ ಕಾರ್ಯ. [ಸಂ.]

**ಪರ್ಯುಷಿತ** (ಗು). ೧. ಹಿಂದಿನ; ಹಳೆಯದಾದ: ಪರ್ಯುಷಿತ ಚಂದನಾಂಗರಾಗಧೂಸರೋರುದಂಡನುಂ ಕುಂಕುಮಾಂಗರಾಗಪಿಂಜರ ರೂಪನುಂ . . . ಅಪ್ಪ ಕೇಯೂರನೆಂಬ ಗಂಧರ್ವಕುಮಾರಂ ಬೆರಸು ತರಳಿಕೆ ಮಹಾಶ್ವೇತೆಯಲ್ಲಿಗೆ ಬಂದು (ಕಾದಂಪೂ. ೯೪೬). (ನಾ). ೨. ಹಳೆಯದಾದುದು: ಆತ್ಮಾಶನ ಅತಿಪಾನ ಉಗ್ರಪ್ರತಿಗ್ರಹ ಉಚ್ಛಿಷ್ಟ ಪರ್ಯುಷಿತ ನಿಷಿದ್ಧ ದ್ರವ್ಯಂಗಳಂ ವರ್ಜಿಸುವದು (ವಿವೇಕ. ೧೩೪); ಅನ್ನವು ತನ್ನಲ್ಲಿರುವ ಅಗ್ನಿಗೇ ಆಹಾರವಾಗಿ ಜೀರ್ಣವಾಗಿ ಪರ್ಯುಷಿತವಾಗುವುದು (ಮಹಾಣ. ೨೯೪). [ಸಂ.]

**ಪರ್ಯೂಷಣ** (ನಾ). [ಜೈನ] ಭಾದ್ರಪದಶುದ್ಧ ಪಂಚಮಿಯಿಂದ ಚತುರ್ದಶಿಯ ವರೆಗೆ ನಡೆಸುವ ಒಂದು ವ್ರತದ ಹೆಸರು; ದಶಲಕ್ಷಣ: 'ಪರ್ಯೂಷಣಪರ್ವ' ಪರಾ. [ಸಂ.]

**ಪರ್ಯೂಷಣಪರ್ವ** (ನಾ). = ಪರ್ಯೂಷಣ: ಅವನಿಗೆ ಒಂದು ರೀತಿಯಿಂದ ಸಮಾಧಾನವನ್ನು ಉಂಟು ಮಾಡಲಿಕ್ಕೆ 'ದಶಲಕ್ಷಣಪರ್ವ' ಕಾರಣವಾಗುತ್ತದೆ. ಈ ಪರ್ವಕ್ಕೆ ಜೈನಪರಿಭಾಷೆಯಲ್ಲಿ ಪರ್ಯೂಷಣ ಪರ್ವವೆಂದೂ ಹೆಸರಿದೆ (ಜೈನಪ. ೫೭೧). 'ದಶಲಕ್ಷಣ' ಪರಾ. [ಪರ್ಯೂಷಣ+ಪರ್ವ]

**ಪರ್ಯೇಷಣೆ** (ನಾ). ೧. ಶ್ರಾದ್ಧಭೋಜನಕ್ಕಾಗಿ ಬ್ರಾಹ್ಮಣನನ್ನು ಶ್ರದ್ಧೆಯಿಂದ ಹುಡುಕುವಿಕೆ: "ಪರ್ಯೇಷಣಾ, ಪರೀಷ್ಟಿಃ, ಅನ್ವೇಷಣಾ . . . ಗವೇಷಣಾ-೪ ಶ್ರಾದ್ಧಾದಿಗಳಲ್ಲಿ ನಿಮಂತ್ರಣಕ್ಕೆ ಯೋಗ್ಯನಾದ ಬ್ರಾಹ್ಮಣನನ್ನು ಶ್ರದ್ಧೆಯಿಂದ ಹುಡುಕುವಿಕೆ" (ಸಿದ್ಧಾಂತಿ. ೨೨೪). ೨. ಸೇವೆ; ಪರಿಚರ್ಯೆ. [ಸಂ. ಪರ್ಯೇಷಣಾ]

**ಪರ್ಲು** 'ಪರಲು[2]' ನೋ.

**ಪರ್ವ** (ನಾ). ೧. ಜೋಡಣೆ; ಸೇರಿಕೆ; ಬೆಸುಗೆ: ಪಿಡಿದುದಿರ್ವ ಬಾಳ ಕಿಡಿಗ[ಳ]ನೊಡನೊಡನರೆವೊತ್ತಿ ತೊಟ್ಟ ಸನ್ನಣವುರಿಯಲ್ಕೊಡರಿಸಿ ದೊಡವಱ ಪ[ಾಠಾಂ. ಗ, ಸ]ರ್ವಂ ಬಿಡೆಯುರಿದರಿಸಮಿತಿಯೊಡನೆ ಕಾದಿದರಲೆಬರ್ (ಪಂಪಭಾ. ೧೦-೬೧). ೨. (ಕಬ್ಬು, ಬಿದಿರು ಮೊದಲಾದುವುಗಳ) ಗೆಣ್ಣು; ಗ್ರಂಥಿ: "ಗ್ರಂಥಿಃ, ಪರ್ವ, ಪರುಸ್—ಈ ೩ ಗಂಟು" (ಹಲಾಯು. ೩೧-೩೫); ಎಲರಿಂದಂ ಕಂಪಿಸು ತ್ತಿರ್ಪ ಕರ್ಬಿನ ಕೋಲ್ಗಳ್ ಬಿಡದೊಂದನೊಂದೊರೆಸೆ ಪರ್ವಾಘಾತದಿಂದುರ್ಬಿ ಭೋರೆನೆ ಪಾಯ್ತುರ್ಪ ರಸಪ್ರವಾಳಚಯಂ (ಜಗವಿ. ೨-೯); ಪರ್ವಂ ಪ್ರತಿ ಮೂಡಿದ ಕಾರ್ಯ್ ಕೊರ್ವಿ ನೆಲಂದಾಗಿ ನೆಗೆದು ತಮ್ಮಯ ತಾಯನುರ್ವರೆಯೊಳ್ ಮುಂದಾಡುವಗುರ್ವಂ ತಾಳ್ದಿದವು (ಮಹಾನೇ. ೧೪-೧೫). ೩. ಶರೀರದ ಕೀಲು,—ಅಸ್ಥಿಸಂಧಿ: "ತದಂಗುಳಿಗಳೊಳಾದ ಸಂಧಿ ಪರ್ವಮೆನಿಕ್ಕುಂ" (ವಸ್ತುಕೋ. ೬೯-೧೧). ೪. (ಮಹಾಭಾರತದಲ್ಲಿರುವಂತೆ) ಗ್ರಂಥದ ವಿಭಾಗ: ಹೇಗೆ ಒಂದು ವಂಶ ಅಥವಾ ಬೊಂಬಿನಲ್ಲಿ ಹಲವು ಪರ್ವಗಳಿರುತ್ತವೆಯೋ ಹಾಗೆ ಈ ಗ್ರಂಥದಲ್ಲಿ ಹದಿನೆಂಟು ಪರ್ವಗಳಿವೆ (ಭಾರದ. ೯೫). ೫. ಪ್ರತಿಪಕ್ಷದ ಅಷ್ಟಮಿ, ಚತುರ್ದಶಿ ಮತ್ತು ಹುಣ್ಣಿಮೆ, ಅಮಾವಾಸ್ಯೆ ದಿನಗಳು, ಸೂರ್ಯಚಂದ್ರಗ್ರಹಣಗಳು ಮತ್ತು ಸಂಕ್ರಮಣಕಾಲ; ಪುಣ್ಯಕಾಲ; ಸಂಧಿಕಾಲ: "ಪ್ರತಿಪತ್ಪಕ್ಷಾಂತ ಸಂಧಿ ಪರ್ವಮೆನಿಕ್ಕುಂ" (ವಸ್ತುಕೋ. ೧೭-೭); ಅನಶನವಿಧಿಯಿಂ ತಿಂಗಳಿನ ನಾಲ್ಕು ಪರ್ವದೊಳ ಮಾಪ್ತಪೂಜಾವಿಧಿಯಿಂ ಮನಮೊಸೆದಿರ್ಪಂ ನಾಲ್ಕನೆಯ ನೆಲೆಯವಂ ಪ್ರೋಷಧೋಪವಾಸಿಯೆನಿಕ್ಕುಂ (ಸುಕುಮಾ. ೬-೨೯); ಕಡುಬೆಟ್ಟ ಬೇಸಗೆ ಮಾಗಿ ಮಳೆಗಾಲದೊಳು ಪರ್ವದಲಿ ನೆಟ್ಟನೋರ್ವನೆ ಬೈಗಿನಿಂ ರವಿ ಪುಟ್ಟುವನ್ನೆಗ ಜಾನ ಜಪವಳವಟ್ಟು ನಿಲುವಾ ಪಾಲಕೀರ್ತಿ ನಮೋಸ್ತು [ಗೆ]ಜಿಗುವೆನು (ಸಾಳ್ವಭಾ. ೧-೨೨). 'ಪರ್ವಸಂಧಿ' ಪರಾ. ೬. ಸಂಕ್ರಮಣ ಮೊದಲಾದ ಪುಣ್ಯಕಾಲಗಳಲ್ಲಿ ಕೊಡುವ ತರ್ಪಣ ಮೊದಲಾದುವು. ೭. ಭಾಗ; ವಿಭಾಗ. ೮. (ಸಂತೋಷದ ಸಂದರ್ಭ, ಪುಣ್ಯಕಾಲ ಮೊದಲಾದುವುಗಳಲ್ಲಿ ಆಚರಿಸುವ) ಹಬ್ಬ; ಉತ್ಸವ: ದೀಪಾವಳಿಯ [ಪ]ರ್ವಕ್ಕೆ ದೇವರ ಸೊಡರಿಂಗೆ ಗಾಣದಲೊಮ್ಮಾನೆಣ್ಣೆ (ಸೌ೯ಇ. XX, ೧೮-೩; 980); ಮಾರಿ ಹೊಕ್ಕ ಮನೆಯೊಳ್ ಪರ್ವಂ ಗಡ (ಅನಂಪು. ೧೧-೭೨); ಬರಿಸುವುದೊಂದೂರೊಳಿರ್ಪಳನುಪಚಾರವೆರಸಿ ಪಾರಣೆ ಪರ್ವಗಳಿಗೆ (ಹರಿಚ. ೫-೨೯); ಹರಶರಣರೀ ಕೃತಿಯನಂಗೀಕರಿಸಿ ಲಾಲಿಸಿ ಕೇಳಿ ಕಡೆಯೊಳು ಓರಿದು ಪರ್ವಂಗಳನೊಡರಿ ಸಂತೋಷದೊಳು ಸುಖಿಸಿ (ಶಂಕರವಾ. ೧೬-೬೯). ೯. (ಅಲಂ) ಸಂತೋಷ; ಆನಂದ: ಪುರಕ್ಕನ್ನಡೆತಂದು ದೇವ ಪಡೆ ಪೌರಜನಂಗಳ ಕಣ್ಗೆ ಪರ್ವಮಂ (ಕಾದಂಪೂ. ೪೪೭); ಮಾನಿನಿಯರ್ ಕೆಲರ್ ಮದನಲಕ್ಷ್ಮಿಯರಂತಿರೆ ವಿಂಧ್ಯವಾಸಿನೀಸ್ಥಾನಮನೆಯ್ದಿದರ್ ಪಡೆದು ನೋಟ್ಪರ ಕಣ್ಗಳ ಪರ್ವಮೆಂಬಿನಂ (ಪಶಕು. ೧೨-೨೨).

**ಪರ್ವದ ಕೋಣೆ**=ಹಬ್ಬ, ಉತ್ಸವ ಇತ್ಯಾದಿ ಸಮಯಗಳಲ್ಲಿ ಸಮಾರಾಧನೆಯು ಸಲುವಾಗಿರುವ ಕೊಠಡಿ : ಸದ್ಯಕ್ಕೆ ಯಾರದೋ ಮನೆಯು ಜಗುಲಿಯೋ ಬಸವಣ್ಣನ ಗುಡಿಯು ಪರ್ವದ ಕೋಣೆಯೋ ಸಾಕಲ್ಲವೆ ? (ಬೆಳುಮ. ೬೫). [ಸಂ. ಪರ್ವನ್]

**ಪರ್ವಕಾಲ** (ನಾ). ೧. =ಪರ್ವ ೫: ಪರ್ವಕಾಲಗಳಲ್ಲಿ ತರ್ಪಣವನ್ನು ಕೊಡಬೇಕು (ರೂಢಿ). ೨. ಬದಲಾವಣೆಯನ್ನು ಹೊಂದುವ ಕಾಲ ; ಪರಿವರ್ತನೆಯ ಸಮಯ ; ಸಂಧಿಕಾಲ : ಇದು ನಮ್ಮ ಜೀವನದಲ್ಲಿ ಪರ್ವಕಾಲ—ಇತಿಹಾಸದಲ್ಲಿಯೂ ಇದೊಂದು ಪರ್ವಕಾಲ (ರಾಜ್ಯೋದ. ೬). ೩. ಉತ್ಸವದ ಕಾಲ ; ಹಬ್ಬದ ಸಮಯ : ಹಿಂದೆ ಎಂದು ಕಂಡಿರದ ಹೊಚ್ಚ ಹೊಸ ಪರ್ವಕಾಲವಿಂದು (ನೆಲಮು. ೩೬-೧೪) ; ಇದು ಹರ್ಷ-ಹೆಮ್ಮೆ ಪಡಬೇಕಾದ ಕಾಲ. ಈ ಪರ್ವಕಾಲ ಜೀವನದಲ್ಲಿ ಎಷ್ಟು ಜನಕ್ಕೆ ಬರುವ ಯೋಗ ? (ಹೊಸಕ್ರಿ. ೩೮) ; ಶಿವಗಂಗೆಯಲ್ಲಿ ನಾಳೆ ನಾಡಿದ್ದು ಏನಾದರೂ ಪರ್ವಕಾಲವೆ ? (ಶಾಂತಲಾ. ೨೮೩). ೪. ಉನ್ನತಿಯ ಕಾಲ ; ಏಳಿಗೆಯ ಕಾಲ : ಕ್ರಿ. ಶ. ಮೂರನೆಯ ಶತಮಾನದಿಂದ ಎಂಟನೆಯ ಶತಮಾನದ ವರೆಗೂ ಇರುವ ಕಾಲ ವಾಸ್ತುಕಲೆಯ ದೃಷ್ಟಿಯಿಂದ ಒಂದು ಪರ್ವಕಾಲವೆಂದು ಎಣಿಸಬಹುದು (ಮೈಪಾಸ್ತು. ೬೫). [ಪರ್ವ+ಕಾಲ]

**ಪರ್ವಣಿ** (ನಾ). ೧.=ಪರ್ವ ೫ : ಪ್ರತಿರಾತ್ರಿಯಲ್ಲಿ ಕಾಣುವ ನಕ್ಷತ್ರ ರಾಶಿಯನ್ನು ಜನರು ಅಲಕ್ಷಿಸುವರು ; ಅದೇ ಪರ್ವಣಿಯಂತೆ ಅವು ನೂರಾರು ವರ್ಷಕ್ಕೊಮ್ಮೆ ಬಂದರೆ ಜನತೆಗೆ ಅದರಲ್ಲಿದ್ದ ದೈವಿಕತೆಯು ಹೊಳೆಯುವದೆಂದು ಮತ್ತೋರ್ವ ಕವಿಯು ಹೇಳಿದ್ದನು (ಚೆಲುಸಿ. ೫೨); ಅಮಾವಾಸ್ಯೆಯು ಒಂದು ದೊಡ್ಡ ಪರ್ವಣಿಯು. ಅಂದು ಚಂದ್ರ ಸೂರ್ಯರ ಭೆಟ್ಟಿ (ಭಾರಸಂ. ೩೫೭). 'ಪರ್ವಸಂಧಿ' ಪರಾ. ೨. ಗೆಣ್ಣು ; ಅಸ್ಥಿಸಂಧಿ : ಅಂಗುಷ್ಠದ ಪರ್ವಣಿಯಿಂ ತೊಡಗಿ ಕಿರುಕುಣಿಕೆಯ ಮೊದಲ ಪರ್ವಣಿವರೆಗಂ (ಪಸಾರ. ೩೫೩) ; ನೆಟ್ಟನಂಗುಲಿ ಅನಾಮಿಕ ಮೂಲ ಪರ್ವಣಿಗಿಟ್ಟು ಅಂಗುಷ್ಠದ ಬಳಿಕ (ಪೂಜ್ಯಚ. ೧೦-೫೦). ೩. ಉತ್ಸವ ; ಹಬ್ಬ : ಇಂಥ ಪ್ರಸಂಗವೆಂದರೆ ಅವರಿಗೆ ಪರ್ವಣಿ (ಅನ್ನ. ೧೬೦). ೪. ಶುಭಕಾಲ ; ಸುಸಮಯ ; ಸುಸಂದರ್ಭ : ದೇವ ಏನಿದಪೂರ್ವ ಪರ್ವಣಿ ! (ಕ್ರಾಂಚಧ್ವ. ೧೭-೧೩) ; ಸಮ್ರಾಟನ ರಾಜಧಾನಿಯನ್ನು ಮೊದಲು ಮಾಡಿ, ಸಣ್ಣ ಬೀರೇಗೌಡನ ಹಳ್ಳಿಯ ವರೆಗೆ ಎಲ್ಲೆಲ್ಲಿಯೂ ಉತ್ಸವದ ಸಂಭ್ರಮವನ್ನು ಪ್ರದರ್ಶಿಸುವ ಪರ್ವಣಿ ! (ಬೆಂದಯು. ೮೭) . [ಸಂ. ಪರ್ವಣೀ]

**ಪರ್ವಣಿಕಾಲ** (ನಾ). ಒಳ್ಳೆಯ ಕಾಲ ; ಶುಭಸಮಯ : ಇದನ್ನು ಸಾಧಿಸಿದಾಗ ರಾಷ್ಟ್ರದ ಜೀವನದಲ್ಲಿ ಪರ್ವಣಿಕಾಲ ಬಂದೀತು (ನಮ್ಮಕಾ. ೧೬). [ಪರ್ವಣಿ+ಕಾಲ]

**ಪರ್ವತ** (ನಾ). ೧. ದೊಡ್ಡ ಬೆಟ್ಟ ; ಗಿರಿ ; ಶೈಲ : "ಅಚಳಃ, . . . ಗೋತ್ರಃ, ಪರ್ವತಃ . . . ಅದ್ರಿಃ, ಕುದ್ರಃ—ಈ ೧೪ ಬೆಟ್ಟು" (ಹಲಾಯು. ೨೭-೧೧) ; ಮತ್ತಿತ್ತ ಜಯಾವತಿಯುಂ . . . ಸತ್ತು ಮೊಗ್ಗಳಗಿರಿಯೆಂಬ ಪರ್ವತದೊಳ್ ಪೆಣ್ಬುಲಿಯಾಗಿ ಪುಟ್ಟಿದಳ್ (ಪಡ್ವಾರಾ. ೪೮-೨) ; ವಾರಿಧಿ ಪರ್ವತಂ ಪುರಮಧೀಶ್ವರನುದ್ವಹನಂ . . . ವಿರೋಧಿ ಜಯಂಗಳೆಂಬಿವಂ ಸೂರಿಗಳಂಗಮೆಂದು ಕೃತಿಯೊಳ್ ಪದಿನೆಂಟುಮನೆಯ್ದೆ ಬಣ್ಣಿಪರ್ (ಸೂಕ್ತಿಸು. ೧-೭೬). ೨. ಶ್ರೀಶೈಲ : ಕೃತಯುಗದಲ್ಲಿ ಕೇ[ದಾ]ರವೆಂಬ ಮೂಲಸ್ಥಾನ . . . ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ (ಬಸಪ. ೩೯೪) ; ಎಲ್ಲಿಹನು ಪರ್ವತದಲೇಂ ಪೆಸರು ಮಲ್ಲಿಕಾರ್ಜುನನೆಂಬುದು (ಸಿದ್ಧರಾ.೪೨-೪೨). ೩. ಕಲ್ಲು ; ಬಂಡೆ. ೪. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ: ಸ್ವರ ಸಾಗರ ಪರ್ವತಾದ್ರಿಯೇಬಿಬನಾಮಂ (ನ್ಯವಹಾ. ೯-೭) ; ನೂರುಪರ್ವತವರುಷ ಬಿಡದಲೆ ಚಾರು ವೃಂದಾವನದಲಿ ವಿಸ್ತಾರ ಆರಾಧನೆಯು ತೊಲಗದೆ ವಾರವಾರಕೆ ಆಗುತಿಪ್ಪುದು (ವಿದಾಕ್ಕ. ೫೬-೪). [ಸಂ.]

**ಪರ್ವತಕಾಕ** (ನಾ). ಕಾಗೆಯ ಜಾತಿಗೆ ಸೇರಿದ ಒಂದು ದೊಡ್ಡ ಪಕ್ಷಿ; ಡೊಂಬಕಾಗೆ : (ಕಿ). [ಪರ್ವತ+ಕಾಕ$_2$]

**ಪರ್ವತನಾಥ** (ನಾ). ೧. ಬೆಟ್ಟಗಳ ಒಡೆಯ ; ಹಿಮವಂತ. ೨. ಕೈಲಾಸಪರ್ವತದ ಒಡೆಯ ; ಶಿವ : ಉತ್ತಮೋತ್ತಮದುನ್ನತ ಶ್ರೀವೆತ್ತ ಸಿರಿಗಿರಿಗೆಣೆಯೆನಲು ಪ್ರಭೆವೆತ್ತ ಪುರವಂ ರಚಿಸಿ ಪರ್ವತನಾಥನಂ ತಂದು ಇತ್ತ ಸೊನ್ನಲಿಗೆಯೊಳಿರಿಸಿ (ಬಸಪು. ೯-೧೩).

**ಪರ್ವತನಾಥನಣುಗ** = ೧. ಪರ್ವತನಾಥನ ಮಗ ; ಮೈನಾಕ : (ಕಿ). ೨. ಕೈಲಾಸನಾಥನ ಮಗ ; ಶಿವನ ಪುತ್ರ : ಇಳೆಯೊಳಜಿಯಾ ಎನ್ನ ಹೆಸರನು ತಿಳಿದು ನೀ ನೋಡಂತುಮಲ್ಲದೆ ಬಳಿಕ ಪರ್ವತನಾಥನಣುಗನು ಜಾವಳನೆ (ಬಸಪು. ೩೮-೨೧). [ಪರ್ವತ+ನಾಥ]

**ಪರ್ವತಬಾಣ** (ನಾ). ಬೆಟ್ಟಗಳನ್ನು ಸುರಿಸುವ ಬಾಣ,—ಅಸ್ತ್ರ : ಪರ್ವತಬಾಣದಿನೆಚ್ಚೊಡಗುರ್ವುರ್ವಿರೆ ಪರ್ವತಪ್ರತಾನಂ ನಭಮಂ ಪರ್ವಿ ಬರೆ (ನೇಮಿಪು. ೧೨-೧೬೬). [ಪರ್ವತ+ಬಾಣ]

**ಪರ್ವತಬಾಳೆ** (ನಾ). ಕತ್ತಾಳೆ; ದೆವ್ವಬಾಳೆ: ಮುಡಿಸಿದ್ದ ಗೋರಟೆಹೂಗಳ ಹಳದಿಯ ನಡುವೆ ಕೆಂಪು ಪರ್ವತಬಾಳೆಯ ಹೂಗಳೂ ಭೂತಾಳೆಯ ರಕ್ತವರ್ಣದ ಎಲೆಯ ರೂಪದ ಹೂಗಳೂ ರಂಜಿಸಿದ್ದವು (ಮಲೆಮ. ೯೮). [ಪರ್ವತ+ಬಾಳೆ$_1$(<ಬಾಟಿ)]

**ಪರ್ವತರಾಜ** (ನಾ).=ಪರ್ವತನಾಥ ೧ : ಸಮುನ್ನತ ರಾಜಲೀಲೆಯಂ ಬೀಜಂತೆ ಪೂರ್ವಪಶ್ಚಿಮಕೆ ಪರ್ವಿದ ಪರ್ವತರಾಜನೊಪ್ಪುಗುಂ (೧ರಿಕ. ೧-೫೦) ; ಶ್ರೀ ಪಾರ್ವತೀದೇವಿಯಂ ಧೀರಂ ಪರ್ವತರಾಜನೊರ್ಮೆ ಪಡೆದಂ (ಹಮ್ಮಿರ. ೨-೬). [ಪರ್ವತ+ರಾಜ]

**ಪರ್ವತವಳಿ,** ಪರ್ವತಾವಳಿ$_2$ (ನಾ). [ಶೈವ] ಕಾಳಾಮುಖ ಶೈವರಲ್ಲಿ ಶ್ರೀಶೈಲಕ್ಕೆ ಸಂಬಂಧಿಸಿದ ಒಂದು ಪಂಗಡ: ನೈಷ್ಠಿಕ ತಪೋಧನರ್ಕ್ಕಾಳಾಮುಖ ಪರ್ವ್ವತವಳಿಯ ಶ್ರೀತ್ರಿಭುವನಪಣ್ಡಿತದೇವರ ಶಿಷ್ಯರ್ (ಸೌಇಇ. XI-i, ೧೧೬-೧೭ ; 1075). **ಪರ್ವತಾವಳಿ$_2$** : ಅವರ ಗುರುಕುಳಮೆಂತೆಂದಡೆ ಕಾಳಾಮುಖಪರ್ವ್ವತಾವಳಿ ತಪೋನೀ(ನಿ)ಷ್ಠಾಪರರೆನಿಸಿ ನೆಗಳ್ದ ಕೊಪ್ಪಿನ ವಖ್ಖಾಣದೇವರವರ ಶಿಷ್ಯಮ್ ರುದ್ರಶಕ್ತಿದೇವರು (ಎಇ. XIX, ೨೩೨-೬೫ ; 1180).

[ಪರ್ವತ+ಬಳಿ$_3$(<ಬಟು$_3$) ?]

**ಪರ್ವತಶ್ರೇಣಿ** (ನಾ). ಬೆಟ್ಟಗಳ ಸಾಲು,—ಪಂಕ್ತಿ : ಸಂಜೆಯ ಸೂರ್ಯನು ಪರ್ವತಶ್ರೇಣಿಯ ಹಿಂದಿನಿಂದ ಇಣಿಕಿ ನೋಡುತ್ತಿದ್ದಾನೆ (ಚೋಮನದು. ೩೩); ಪರ್ವತಗಳು ಒಂದಕ್ಕೊಂದು ಸೇರಿ ಪಂಕ್ತಿಯಾಗಿದ್ದರೆ "ಪರ್ವತಶ್ರೇಣಿ (Range)" ಎಂದು ಕರೆಯಲ್ಪಡುತ್ತವೆ (ಭೂಗೋಳ. ೧೧).

[ಪರ್ವತ+ಶ್ರೇಣಿ]

**ಪರ್ವತಾಧೀಶ್ವರ** (ನಾ).=ಪರ್ವತನಾಥ ೧ : ಮೇರುವಿನ ದಕ್ಷಿಣ ದಿಕ್ಕಿನಲ್ಲಿ ಮೂಡಣ ಜಲಧಿಯಿಂ ಪಶ್ಚಿಮವಾರ್ಧಿಪರ್ಯಂತರಂ ಪರ್ವಿದ ಪರ್ವತಾಧೀಶ್ವರಂ ಗಿರಿರಾಜನೆಂಬ ನಾಮದಿಂದೋಷಧಿಪ್ರಸ್ಥಮೆಂಬ ಪುರದೊಳಿರ್ದು (೧ರಿಕ. ೧ ಕಥಾಗರ್ಭ). [ಪರ್ವತ+ಅಧೀಶ್ವರ]

**ಪರ್ವತಾರೋಹಣ** (ನಾ). ಬೆಟ್ಟವನ್ನು ಹತ್ತುವುದು ; ಪರ್ವತವನ್ನು ಏರುವುದು : ಕಾಲುನಡಿಗೆಯಿಂದ ಪರ್ವತವನ್ನೇರುವುದೆಂದರೆ ಅದು ಬಹಳ ಶ್ರಮದ ಕೆಲಸ . . . ಆದುದರಿಂದ ಪರ್ವತಾರೋಹಣವು ಸಾಹಸದ ಕೆಲಸಗಳ ಸಾಲಿಗೆ ಸೇರಿದೆ (ಕಪಪು. ೬-೯೧).

[ಪರ್ವತ+ಆರೋಹಣ]

**ಪರ್ವತಾರೋಹಿ** (ನಾ). ಪರ್ವತಾರೋಹಣವನ್ನು ಮಾಡುವವನು; ಬೆಟ್ಟವನ್ನು ಏರುವವನು: ಸದಾ ಮಂಜಿನಿಂದ ಮೇಘಗಳಿಂದ ಆವೃತವಾದ ಅದರ ಉನ್ನತ ಶಿಖರಗಳು ಎಲ್ಲೋ ಕೆಲವು ಧೀರ ಪರ್ವತಾರೋಹಿಗಳಿಗೆ ಮಾತ್ರ ಪರಿಚಿತ! (ಸೌಂದಸ. ೨೬); ಮೂರನೆಯ ಪ್ರಯತ್ನದಲ್ಲಿ ಇಬ್ಬರು ಪರ್ವತಾರೋಹಿಗಳು ತಮ್ಮ ಪ್ರಾಣವನ್ನು ಕಳೆದುಕೊಂಡರು (ಕಸಪು. ೬-೯೨). [ಪರ್ವತ+ಆರೋಹಿ]

**ಪರ್ವತಾವಳಿ**$_1$ (ನಾ). ಬೆಟ್ಟಗಳ ಸಾಲು,—ಪಂಕ್ತಿ: ಈ ಪರ್ವತಾವಳಿಯ ಸರಾಸರೀ ಎತ್ತರ ೨೦೦೦ ಫೂಟು (ಕಭಾಗ. ೫).

[ಪರ್ವತ+ಆವಳಿ$_1$(=ಆವಲಿ)]

**ಪರ್ವತಾವಳಿ**$_2$ 'ಪರ್ವತವಳಿ' ನೋ.

**ಪರ್ವದಿನ** (ನಾ). [ಜೈನ] ಪೂಜೆ, ವ್ರತ ಮುಂತಾದುವುಗಳನ್ನು ಮಾಡಲು ಪ್ರಶಸ್ತವಾದ ದಿನ: ಪರ್ವದಿನಂಗಳೊಳ್ ವ್ರತಂಗಳನೊಡಗೂಡಿ ನಿಂದೆಮಗೆ ಮೆಟ್ಟಲಿಳೇಶ್ವರ ಕೇಳ್ದಿವಾವಿದಂ ತಿಳಿಯೆ ಗಣಾಧಿಪರ್ ಬೆಸಸೆ ಧುಂಪ್ರಜಿನೇಂದ್ರಸಭಾಂತರಾಳದೊಳ್ (ಆದಿಪು. ೧೫-೧೧); ಇಂದು ಪರ್ವದಿನಮುಪ್ಪಲಿಂ ದೇವಿಯುಂದಯಂಸಮಯದೊಳ್ ಪುಂಗಳಾಲಂಕಾರಾಲಂಕೃತೆಯಾಗಿ . . . ಅರ್ಚಿಸಿ (ಪುಷ್ಪಪು. ೩-೬೪ ಗ).

[ಪರ್ವ+ದಿನ]

**ಪರ್ವದಿವಸ** (ನಾ). = ಪರ್ವದಿನ: ಪರ್ವದಿವಸದೊಳಪ್ಪೊಡಮೆಂದಾನು ಹುಪಗುರ್ಣಜಿಕ್ಕಮೆಂದಟಾಯುಂ ಪಂಚಮಹಾಪಾತಕಂ (ಪದ್ಮಾರಾ. ೪-೧೮). [ಪರ್ವ+ದಿವಸ]

**ಪರ್ವಭಾಗ** (ನಾ). ಶರೀರದಲ್ಲಿ ಮೂಳೆಗಳು ಜೋಡಣೆಯಾಗಿರುವ ಭಾಗ; ಅಸ್ಥಿಸಂಧಿ: ಗರ್ವದಿ ಕೊರ್ವಿಹರಗುರ್ವ ಖರ್ವಿಸೆ ಪರ್ವತ ಗುರುತೆಯ ತೃಣಕೀವ ದುರ್ವಾರಸತ್ವ ಬಿಲ್ಲನುಳಿದೆನ್ನ ಪರ್ವಭಾಗದೊಳು ನಿಲ್ಲು ಮಣಿವೆಡಿಗೊ (ಹಂಸಪ. ೨೯೪-೧೯). [ಪರ್ವ+ಭಾಗ]

**ಪರ್ವರ್ಷ** 'ಪರವರಶಿ' ನೋ.

**ಪರ್ವಶೀ** 'ಪರಪರಶಿ' ನೋ.

**ಪರ್ವಶಿ** 'ಪರವರಶಿ' ನೋ.

**ಪರ್ವಸಂಧಿ** (ನಾ). ಚಂದ್ರನು ಬದಲಾವಣೆ ಹೊಂದುವ ಕಾಲ; ಹುಣ್ಣಿಮೆ ಮತ್ತು ಪಾಡ್ಯಕ್ಕೂ ಅಮಾವಾಸ್ಯೆ ಮತ್ತು ಪಾಡ್ಯಕ್ಕೂ ಮಧ್ಯೆ ಇರುವ ಕಾಲ: "ಪರ್ವಸಂಧಿಃ . . . ಪಾಡ್ಯವಿ ಹುಣ್ಣಿಮೆಗಳಿಗೂ, ಅಮಾವಾಸ್ಯ ಪಾಡ್ಯಗಳಿಗೂ . . . ಯಾವುದು ಮಧ್ಯಕಾಲವೋ ಅದರ ಹೆಸರು" (ಸಿದ್ಧಾಂತಿ. ೩೬). [ಪರ್ವ+ಸಂಧಿ]

**ಪರ್ವಳಿಸು** (ಕ್ರಿ). ಪಕ್ಕಕ್ಕೆ ಹಾಯು; ಕೆಲಕ್ಕೆ ಸರಿ: "ಪರ್ವಳಿ [ಪಾಠಾಂ. ಪೆರ್ಳ]ಸಿತೆನಲ್ ಕೆಲಕೆ ಪಾಯ್ವುದು" (ಭಾರತಿ. ೩೬).

[?+-ಇಸು$_3$]

**ಪರ್ವಾ** 'ಪರವೆ' ನೋ.

**ಪರ್ವಿಸು,** ಪರ್ಬಿಸು, ಹಬ್ಬಿಸು (ಕ್ರಿ). ೧. ಹರಡುವಂತೆ ಮಾಡು; ವ್ಯಾಪಿಸುವಂತೆ ಮಾಡು: ನಿರ್ಮಳಕೀರ್ತಿಯುಂ ದಿಗಂಬರ ಧರಣೀತಳಾವಳಿಯೊಳಾದಮೆ ಪರ್ವಿಸಿದಾ ಕವೀಂದ್ರರಂ ವಿರಹಿತತಂದ್ರರಂ ಪೊಗಟಿಡಂಗೆ ತಹಾಶ್ರಿತಪಾಣಿ ಕೂರ್ಪರೀ (ಪರ್ಥಪು. ೧-೧೬). ೨. (ಬಳ್ಳಿ ಮೊದಲಾದುವನ್ನು) ಹಬ್ಬುವಂತೆ ಮಾಡು: ಲತಾಂಗಿ ತಾಂಗಿ ಲಲಿತಾಂಗುಳಿಯೊಳ್ ನಡೆ ನೋಡಿ ಪಲ್ಲವಟ್ಟಿದ ದಯೆ ರತ್ನಭೂಷಣದ ಚೆಲ್ವಸುಧಾಗದ ಬಳ್ಳಿವಳ್ಳಿಯುಂ ಹೃದಯದೊಳಂದು ಪರ್ವಿಸುವುದುಂ ತಳೆದರ್ ಪುಳಕಾಂಕುರಂಗಳಂ (ಮಲ್ಲಿಪು. ೪-೬೪); ಅತನುದಾಹದಲಿ ಬಸವಳಿದ ಸಂಕಿಲೆಯು ನೋಡಿ ಸಿತಗಳಸ ಸುತನು ವಚನಾಮೃತವ ಕಟಿದು ವಿಶ್ರುತನೋಪಲತೆಯ ಪರ್ವಿಸಲು ತಮತಾಪವಡಗಿತು (ಸೌಂದಪು. ೧೩-೩೪). ೩. ಉಂಟು ಮಾಡು; ಉತ್ಪತ್ತಿಮಾಡು: ಧರೆಯೊಳ್ ಶಾಲೂರಸಂಘಂ . . . ಉರ್ವೀಧರಚಕ್ರಪ್ರಾಂತದೊಳ್ ನಿರ್ಝರತತಿ ತಟನೀವ್ಯೂಹದೊಳ್ ಪೂರವಾರಂ ವಿರಹಿವ್ರಾತಂ ಬಿಗುರ್ವಂತೊಡನೊಡನೆ ರುತಂ ಪರ್ವಿಸುತ್ತಿರ್ದುವೆತ್ತಂ (ಕಾದಂಉ. ೫೩೨); ಒರ್ವಳನೊಡಗೂಡಿ ದಣಿವನಾ ನೃಪನೊಮ್ಮೆ ಸರ್ವರ ನೆರೆದು ದಣಿವನು ಪರ್ವಿಸುವನು ಸುರುಳಿಸುವನು ಕಾಮುವ ಸಾರ್ವಭೌಮನು ನಾಡ ನರನೇ (ಭರಚ. ೧೦-೧೨೧). **ಪರ್ಬಿಸು:** ೧. ಮಲಯಜಗಂಪ ಮೆಯ್ಯೊಳಗೆ ಪರ್ಬಿಸುವ ಕೋಮಲೆಯರು ತಮ್ಮ ಜವ್ವನವ ಬೆಲೆಗಟ್ಟುವರೆ (ಮೋಹತ. ೧೮-೯೪). ೪. ಪ್ರಚುರಪಡಿಸು; ಪ್ರಚಲಿತಗೊಳಿಸು; ಜನಜನಿತವಾಗುವಂತೆ ಮಾಡು: ಕಬ್ಬಿಗರಾನುಸಿರಿದ ಕಾವ್ಯವ ತಿದ್ದಿ ಪರ್ಬಿಸುವುದು ಭೂತಳದಿ (ಮೋಹತ. ೧-೨೨). **ಹಬ್ಬಿಸು:** ೨. ಬಳ್ಳಿಯನ್ನು ನೆಲದ ಮೇಲೆ ಹಬ್ಬಿಸಬಹುದು. ಅನೇಕ ಕಡೆ ಗುಡಿಸಲು, ಮನೆಯ ಸೂರುಗಳ ಮೇಲೆ ಹಬ್ಬಿಸುತ್ತಾರೆ (ತರಚಿ. ೨೪). ೩. ತಬ್ಬಿ ತಂದಡು ಗಬ್ಬುಗಳಿಗುರಿ ಹಬ್ಬಿಸುತ ಕೈದೀವಿಗೆಗಳಂತೆಬ್ಬಿಸಲು ಪ್ರಭೆ ದೆಸೆಯೊಳಾವರಿಸಲ್ಕೆ (ಬಸಪು. ೧೬-೨೦); ಗನ್ನಗದುಕುಗಳ ಕಳೆದು ಗರ್ವವ ಬಿಟ್ಟು ಹನ್ನಸಗಳನು ಹಬ್ಬಿಸದೆ ತನ್ನ ಬಾಳಿಕೆ ಬಡತನದ ಬಗೆಯನೆಲ್ಲ ಬಿನ್ನವಿಪುದು ವಿನಯದೊಳು (ಹವಿಬ. ೩-೨೨). ೪. ಶಂಕರ ಮಂಗಳೂರಿಂದ ಬಂದ ಮೇಲೆ, ಗೇಣಸು ಸೂರೆಯಾದ ವಿಚಾರದಲ್ಲಿ, ಶ್ಯಾನುಭಾಗರು ಊರಲ್ಲೆಲ್ಲ ಹಬ್ಬಿಸಿದ ವಾರ್ತೆಗಳನ್ನು ಕೇಳಿದ್ದ (ಚಿಗುಕ. ೧೮೪). ೫. ಹಬ್ಬು; ಹರಡು; ವಿಸ್ತಾರಗೊಳ್ಳು: ಕನಕದಲಿ ರಜತದಲಿ ಬಲುಗಬ್ಬುಸದೊಂದೊಂದಕ್ಕೆ ಶತಯೋಜನದ ತೆಬಹುಗಳೆಡೆಗೆ ಹಬ್ಬಿಸುವಮಳ ತೋರಣದ ವಿನುತ ನಗರಿಗಳಾದುವು (ಕುವ್ಯಾಕ. ೬-೧೦).

[ಪರ್ವು$_1$ (<ಪರವು$_1$)+-ಇಸು$_3$]

**ಪರ್ವು**$_1$ 'ಪರವು$_1$' ನೋ.

**ಪರ್ವು**$_2$ 'ಪರವು$_2$' ನೋ.

**ಪರ್ವುಗೆ,** ಪರ್ಬುಗೆ, ಹಬ್ಬಿಗೆ, ಹಬ್ಬುಗೆ, ಹರ್ಬುಗೆ (ನಾ). ೧. ಹರಹು; ವಿಸ್ತಾರ; ವಿಶಾಲತೆ: ಚರಣದೆ ಕಾಂಚಿಯುಂ ಗುರುನಿತಂಬದ ಪರ್ವುಗೆಯಿಂದೆ ಮಧ್ಯಮಂ . . . ಕರಸರೋರುಹದೊಳ್ ಕದಪಂ ಲಲಾಟದೊಳ್ ಪರೆದ ಕುರುಳ್ಗಳಂ ವಿರಹವಿಹ್ವಲೆಯಾಗಿ ಲತಾಂಗಿ ತಾಳ್ದುವಳ್ (ಕಾದಂಉ. ೩೩೩); ಪುರ್ವೆಂಬ ಜವಳಿಗಟ್ಟಿನ ಕರ್ವಿನ ವಿಲ್ಗಳ್ಗೆ ಬಿಗಿದ ಮಧುಕರಮಾಲಾಮೌರ್ವಿಯೆನೆ ಮುಗಿದ ಕಣ್ಗಳ ಪರ್ವುಗೆಯೊಳ್ ಮೆಚಿದುದವರ ತಟಿತ್ತಿಮೆದುಚಿಗಲ್ (ಯಶೋಚ. ೨-೨೬). **ಪರ್ಬುಗೆ:** ೧. ಗರ್ಬದಿಂದಿಂತು ನೆಲನಗಲದೊಳ್ ನಡೆವ ಚಾತುರ್ಬಲಂ ಪಯಣ ಪಯಣದೊಳೆ ಖಂಡಂಗಳಂ ಘನಪರ್ವತಂಗಳಂ ಸಕಲ ಘೋರಾರಣ್ಯದ ಪರ್ಬುಗೆಗಳಂ . . . ಪೆರ್ಬೊಳೆಗಳಂ ದಾಂಟಿ ಕೈಲಾಸಪುರದ ರಾಜ್ಯದ ವಳಿತಮಂ ಪೊಕ್ಕುದು (ಚಬಪು. ೪೮-೬); ರತ್ನಾಕರಂ ಕಳುಹಿದ ಕುಲಾದ್ರಿಗಳ ಪರ್ಬುಗೆಗಳೀ ಕರವಿಂವಹುವೆನಲ್ಪೆರ್ದೆರೆಗಳಿಪ್ಪ ಬರುತಿರ್ದುವು ಮಹಾರ್ಣದೊಳು (ಜೈಮಿಭಾ. ೬-೪). ೨. ಆವರಿಸುವಿಕೆ; ಹರಡುವಿಕೆ; ವ್ಯಾಪಿಸುವಿಕೆ: ಅನಳಧ್ವನಿಯ ಪರ್ಬುಗೆಗೀ ಕಮಲೋದ್ಭವಾಂಡವಿಟ್ಟೆಡೆಯೆನೆ ದಂತವಕ್ತ್ರದನುಜಂ ನಡೆತಂದು . . . ನೋಡಿದಂ (ಜಗವಿ. ೯-೬೭); ಒಬ್ಬರೊಬ್ಬರ ತನು ಸೋಂಕಿದ ಪುಳಕಾಂಬುವುರ್ಬಿ ಪರಿಯೆ ತನುವಿನೊಳು ಕೊರ್ಬಿ ಬೆಳೆದ ಕೋಮಾಂಚಕ ಸಿರಿಯೊಂದು ಪರ್ಬುಗೆಯನು ಪೇಳಲಬಾಯೆ (ಅಂಜಚ. ೮-೧೧೮); ಬೈಗಿನ ಮುತ್ತಪೊಟ್ಟಿನ ಚೆಂಬಿಸಿಲ ಪರ್ಬುಗೆಯ ಬೆಳಗಿನೊಂಥಿರದಿಂ ಕಾಡಳೆಯಿರ್ದುವು (ರಾಪಾಶ್ವ. ೮೩-೧೦). **ಹಬ್ಬಿಗೆ:** ೩. ಮೆಟ್ಟಿಲು; ಸೋಪಾನ: ಹಯೂತನು ಬೀದಿಯ ಬಾಗಿಲಿನ ಹಬ್ಬಿಗೆಯನ್ನು ಹತ್ತಿ

ಬಂದಿದ್ದ . . . ನಾನು ಅರ್ಧ ಹಬ್ಬಿಗೆಯನ್ನು ಇಳಿದೆ (ಚೆಂಗಾಳ್ವ. ೩೧). **ಹಬ್ಬುಗೆ :** ೧. ಹಬ್ಬುಗೆಯ ಹದಿನಾಲ್ಕು ಲೋಕದ ಮೊಬ್ಬುಗಳ ನೀಡಾಡಿ ನಭದೊಳಗೊಬ್ಬನೇ ರವಿ ತೊಳಗಿ ಬೆಳಗುವವೋಲು . . . ಧರೆಯೊಳಗೊಬ್ಬನೇ ದುರ್ಯೋಧನನು ಮತ್ತೊಬ್ಬರಿಲ್ಲೆಂದೆನಿಸಿ ತೋಱುವೆನು (ಕುಮಾವ್ಯಾಅ. ೮-೯) ; ತಿರುಗಿದನು ಬಲಕಾಗಿ ಹರಭೂಧರವನೇಳಿಪ ಹಬ್ಬುಗೆಯ ಹರವರಿಯ ಯೋಜನವ್ಯೆದಱಳತೆಯ . . . ಮಣಿಮಂದಿರವ ಕಂಡನು ಕುಂಭಕರ್ಣ ನಿಶಾಚರೇಶ್ವರನ (ತೊರಾರಾ. ೫-೨-೩೬) ; ಉಬ್ಬಿ ದುರದೇರದೆಗೆದೊಡಲ ಬಾಗಿದ ಬೆನ್ನ ಹಬ್ಬುಗೆಯ ಪಚ್ಚಳದ ಸೆಳೆದ ಬಾಲದ ಕೊನೆಯ . . . ಗಬ್ಬಿನಾಯ್ಗಳ ಹಾಸನುಗಿದು ಬಿಡೆ ಹಂದಿಗಳನಬ್ಬರಿಸಿ ತುಡುಕಿದುವು (ಜೈಮಿಭಾ. ೨೮-೪೬). ೨. ಹೊಗೆಯ ಹಬ್ಬುಗೆ ಸತ್ಯಲೋಕವನುಗಿದು ದುರಿನಾಲಗೆಯ ಗರವೊಟ್ಟಗೆಯ ತೊಳಲಿಕೆ ತೆರಳಿಚಿತು ತೆತ್ತೀಸುಕೋಟಿಗಳ (ಕುಮಾವ್ಯಾಅ. ೨೦-೫೬) ; ಅನವರತ ಸರಸಗೋಷ್ಠಿಗೆ ನೆರೆದ ನಿರ್ಜರಾಂಗನೆಯರಂಗಚ್ಛವಿಯ ಹಬ್ಬುಗೆಯೊ . . . ಪೇಳೆನಲ್ಕೆಱೆವ ಕನಕಾಚಲಂ ಕಣ್ಗೆಸೆದುದು (ಜೈಮಿಭಾ. ೨-೧) ; ಕಬ್ಬೊಗೆಯ ಕೌರಿಡುವ ಹೊಗರಿನ ಹಬ್ಬುಗೆಯ ಕಿಡಿ ತುಂತುಱುಕೋದ್ಭವದುಬ್ಬುಗೆಯ ಹೊಱಹಾಯ್ವ ಕಾಲುರಿ ಕವಿವ ಮೇಲುರಿಯು . . . ಬೊಬ್ಬೆ ಮಿಗಲಬ್ಬರಿಸಿ ನುಡಿದನು (ಕೃಷ್ಣಾ.ಕಾ. ೨೪-೪೪). ೪. ಬೆಳೆಯುವಿಕೆ; ಬೆಳವಣಿಗೆ: ವಿಗಡ ಮುನಿ ಇಲ್ವಲನ ವಾತಾಪಿಗಳ ಮರ್ದಿಸಿ ವಿಂಧ್ಯಗಿರಿ ಹಬ್ಬುಗೆಯ ನಿಲಿಸಿದಗಸ್ತ್ಯಚರಿತವ ಮುನಿಪ ವರ್ಣಿಸಿದ (ಕುಮಾವ್ಯಾಅ. ೯-೧೩). ೫. ಆಧಿಕ್ಯ; ಹೆಚ್ಚಳ; ಅತಿಶಯತೆ: ಭಯರಸದ ಹಬ್ಬುಗೆಯಲುಬ್ಬಿದ ಶೋಕದೊಡ್ಡಿನ ಮುಗಿಲು ಕಱಿದುದು ಕುರುಬಲದ ಕಂಬನಿಯ ಬಿಱುವಳೆಯ (ಕುಮಾವ್ಯಾಕ. ೨೦-೩೬). ೬. ಸಾಲು ; ಪಂಕ್ತಿ ; ಶ್ರೇಣಿ : ರಾಘವಾನುಜನ ಉಬ್ಬಿಸಿದರೆಡಬಲನ ಸರುಹಿನ ಹಬ್ಬುಗೆಯ ಹರಹಿನಲಿ ತೆಗೆಹಿನ ತೆಬ್ಬುಗಳ ಸಂಧಿಸಿದ ಸರಳಿನ ಸನ್ನೆವಾತಿನಲಿ (ತೊರಾರಾ. ೩-೩-೧೦) ; ತಡೆತಗ್ಗು ತೆವರದೇಕಿಲ್ಲವುಂಟಾದರು ಪಡೆವಳ್ಳ ಸವಱು ಬಂದಿದರ್ಗ ಕಡುಬೇಗದೊಳು ಬಂದು ತೇಜಿಯಗಳ ದಾಂಟಿ ತುಡುಕಿ ತಾ ಗಿರಿಯ ಹಬ್ಬುಗೆಯಾ (ಭರತ. ೨೯-೫೫). **ಹರ್ಬುಗೆ :** ೧. "ವಲಂ, ವಲಿಃ, ವಲುಃ, ವಲನಂ, ವಲಕ್ಷೀಯಂ-ಈ ೫ ಹರ್ಬುಗೆ" (ಕಾಶಕ್ಯ. ೧೧೩).

[ಪರ್ವು$_1$(<ಪರಪು$_1$)+-ಗೆ]

**ಪರ್ವುಗೆಡು,** ಪರ್ಬುಗೆಡು, ಹರಹುಗೆಡು (ಕ್ರಿ). ವಿಸ್ತಾರವು ಕಡಮೆಯಾಗು ; ಕುಗ್ಗು ; ಸಂಕುಚಿತವಾಗು : ಅದಿರ್ದುದು ಪಕ್ಷಿಮಾನಿಳನಗುರ್ವಿಸೆ ಕೆಮ್ಮುಗಿಲುರ್ಚೆ ಪರ್ವು[ಪಾಠಾಂ.ರ್ಬು]ಗೆಟ್ಟುದು ಕುಡಿಮಿಂಚು ಸಂಚಳಿಸೆ ಸಂಚಳಿಸಿತ್ತು (ಚಂದ್ರಪು. ೪-೪೬). **ಪರ್ಬುಗೆಡು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಹರಹುಗೆಡು :** ಅವಕೃಷ್ಟಮೆನೆ ಹರಹುಗೆಟ್ಟುದೆನಿಸಿಕುರ್ಱ (ಮುಂಗರಾ. ೧೩೩-೨೯). [ಪರ್ವು$_2$(<ಪರಪು$_2$)+ಕೆಡು$_1$]

**ಪರ್ವುಗೆದೋಱು** (ಕ್ರಿ). ಹರಡಿಕೊಳ್ಳು ; ಆವರಿಸು ; ವ್ಯಾಪಿಸು: ಬಯಲೊಳ್ ಪರ್ವುಗೆದೋಱೆ ನುಣ್ಪಸಲೆಯೊಳ್ ಮೆಯ್ದೋಱೆ . . . ತಾಳವನದೊಳ್ ಕಾರ್ಕಶ್ಯಮಂ ಮಾಡಿಕೊಂಡು ಯಥಾಸಾರ ನಿಪಾತಮುಣ್ಮಿದುದು ಮೇಘೋನ್ಮುಕ್ತಧಾರಾರವಂ (ಕಾದಂಉ. ೫೩೩).

[ಪರ್ವುಗೆ+ತೋಱು]

**ಪರ್ವುಗೆವೆಱು** (ಕ್ರಿ). ವಿಸ್ತಾರವನ್ನು ಹೊಂದು ; ವೈಶಾಲ್ಯವನ್ನು ಪಡೆ : ಉದ್ಗ್ರೀವದಿಂ ಪರ್ವುಗೆವೆತ್ತಂತಂಗಕಾಂತಿಪ್ರಕರದೆ ಪಸರಿಪ್ಪಂತೆ ಮುಂಗಾಲ್ಗಳಿಂದಂ ಮುಗಿಲಂ ಮುಟ್ಟುವುದೆಂಬಂತತಿಜವಮಿದಿರೊಳ್ ಬಂದುದಿಂಪ್ರಾಯಮುಧಾಶ್ವಂ (ಕಾದಂಪೂ. ೪೫೬). [ಪರ್ವುಗೆ+ಪೆಱು$_1$]

**ಪರ್ವುಗೊಳ್,** ಪರ್ಬುಗೊಳ್, ಹಬ್ಬುಗೊಳ್ಳು (ಕ್ರಿ). ೧. ದೊಡ್ಡದಾಗು ; ಹಿರಿದಾಗು : ಅರ್ಗಸುವಾಕೃತಿ ಪರ್ವುಗೊಂಡ ಬಿಲ್ಲೊಡವಿದ ಗರ್ಜಿತಂ ಸುರಿವ ಸಾಯಕವದ್ಭುತವಾಯ್ತು ಸಾಲ್ವನಾ (ಜಗವಿ. ೧೮-೯೦). **ಪರ್ಬುಗೊಳ್ :** ೨. ನೀಡಿಕೊಳ್ಳು ; ಚಾಚಿಕೊಳ್ಳು ; ನೀಳವಾಗು : ವಿಸ್ತಾರಿಸಿ ಪರ್ಬುಗೊಂಡ ನಿಡುಗೊಂಬುಗಳಿಂದೆಸೆದಿರ್ದುದಾ ವನಂ (ಕುಸುಮಾ. ೧೧-೧೬೪). **ಹಬ್ಬುಗೊಳ್ಳು :** ೩. ಹರಡಿಕೊಳ್ಳು ; ಹಬ್ಬಿಕೊಳ್ಳು ; ವಿಸ್ತಾರವಾಗು : ಕರ್ನಾಟಕಸೀಮೆಯಲ್ಲಿ ಪೂರ್ವಕಾಲದಲ್ಲಿ ಅಡವಿಯು ಬಹಳ ಹಬ್ಬುಗೊಂಡಿತ್ತು (ಮುಂಬಯಿ. ೫-೧). [ಪರ್ವು$_2$(<ಪರಪು$_2$)+ಕೊಳ್$_1$]

**ಪರ್ಶುಕೆ** (ನಾ). ಶರೀರದ ಪಾರ್ಶ್ವದ ಎಲುಬು ; ಪಕ್ಕೆಲುಬು : "ಪರ್ಶುಕಾ, ಪಾರ್ಶ್ವಾಸ್ಥಿನಿ-ಪಕ್ಕದ ಎಲುವಿನ ಹೆಸರುಗಳು" (ಸಿದ್ಧಾಂತಿ. ೧೮೯). [ಸಂ.ಪರ್ಶುಕಾ]

**ಪರ್ಷ** (ನಾ). ಕಂತೆ ; ಕಟ್ಟು ; ಸಿವುಡು : ಬೆಳೆದ ತೆನೆಗಳನ್ನು ಕುಡುಗೋಲಿನಲ್ಲಿ ಕೊಯ್ದು 'ಪರ್ಷ'ಗಳಲ್ಲಿ ಕಟ್ಟಿ ಬಡಿದು . . . ಗಾಳಿಯಲ್ಲಿ ತೂರುತ್ತಿದ್ದರು (ಕಲ್ಪನಾ. ೪೯). [ಸಂ.]

**ಪರ್ಸ** (ನಾ). ಪರ್ಷಿಯಾದೇಶದ ಹೆಸರು; ℙ ಈಗಿನ ಇರಾಣದೇಶ : ಪರ್ಸದ ಹಿರಿಯರಸುಕುಲಂ . . . ಕುದುರೆಯಡರಿ, ಬಿಲ್ಲ ಪಿಡಿದು, ಮೆರೆಮೆರೆಯುತ ನಡೆದರೇ! (ಪಾರಸಿ. ೩-೫೦).

[←ಗ್ರೀಕ್. ಪಾರ್ಸ./ಸಂ. ಪರ್ಸ = ಪರ್ಷಿಯಾದೇಶದವನು]

**ಪರ್ಸು** (ನಾ). ತೊಗಲು ಮುಂತಾದುವುಗಳಿಂದ ಮಾಡಿದ ಹಣವನ್ನಿಟ್ಟುಕೊಳ್ಳುವ ಸಣ್ಣ ಚೀಲ : ಅವಳು ಮಾತನಾಡದೆ ತನ್ನ ಪರ್ಸಿನಿಂದ ಒಂದು ರೂಪಾಯಿ ತೆಗೆದು ನನ್ನ ಕೈಗಿತ್ತಳು (ದೀಪದ. ೧೮೪).

[←ಇಂ. Purse]

**ಪಲ್,** ಪಲು, ಪಲ್ಲು, ಹಲು, ಹಲ್ಲು (ನಾ). ೧. ಬಾಯಿಯಲ್ಲಿರುವ, ಆಹಾರವನ್ನು ನುರಿಸುವ ಅಂಗ ; ದಂತ : ಬಾಯೊಳ್ ಕವಡಿಕೆಗಳಂ ಪಲ್ಗಳಂತೆ ಮಾಡಿ (ಪಡ್ಡಾರಾ. ೧೧೮-೧೬) ; ಒಗೆತರ್ಪ ಪಲ್ಗಳಾ ನಗೆಮೊಗದ ಸರಸ್ವತಿಯನಾಗಳರ್ಚಿಸಿದ ಪೊದಟ್ಟಗಲದ ಚೆಲ್ವಿನ ಮೊಲ್ಲೆಯ ಮುಗುಳ್ಗಳನಿಳಿಸಿರೆ ಗುಣಾರ್ಣವಂ ಸೊಗಯಿಸಿದಂ (ಪಂಪಭಾ. ೨-೯) ; ಪಲ್ಗಳ ಬಣಂಬೆಗಳೊಳ್ ಪರವಸಂಗೊಂಡು ಮೆಟ್ಟಿಯುಂ (ಗದಾಯು. ೬-೨೮ ವ) ; ಪಲ್ಲಿಲ್ಲದ ಪುಲಿಯುಂ ನಖಮಿಲ್ಲದ ಸಿಂಹಮುಮೆನಿತು ಬಲ್ಲಿತಾದೊಡಮೇಗೆಯ್ವುದು (ಧರ್ಮಾಮೃ. ೧೩-೧೫೪). ೨. ಯಂತ್ರದ ಚಕ್ರಗಳ ಏಣು,—ಅರೆ : ಕುಣಿಕಿಲ್ಗಾಲಿ ನೊಗಂ ಪಲ್ಗಣೆಯಚ್ಚುನಿಸೊಂದ [ಪಾಠಾಂ.ಚ್ಚುಸೊಂಡ, ಚ್ಚಿ ಸೊಂದ]ನೊಂದು ತೆಱೆಯದ ತೆಱದಿಂ ಗಣಕೆಯ ಬಂಡಿಯನೊದೆವವೊಲಣೆಯುರಮೊದೆದಂ ಪ್ರತಾಪಿ ಕೃಷ್ಣಕುಮಾರಂ (ಅರ್ಥನೇ. ೭-೭೭). **ಪಲು :** ೧. 'ಪಲುಗಿರಿ' ಪರಾ. **ಪಲ್ಲು :** ೧. "ಪಲ್ಲು ಜಂತಮೆನೆ ರದನಮುಕ್ಕ್ಯಂ" (ಶಬ್ದಮಂ. ೭೧) ; ಶಬರಾವಳಿಯ ಬಲುಸಿಬಿರವು . . . ಮೆಱೆದಿಹುದು ಸಿಂಗದ ಪ[ಪಾಠಾಂ. ಹ]ಲ್ಲ ತೋರಣದಿ (ಸಾಳ್ವಭಾ. ೫-೫). **ಹಲು :** ೧. ಜಗುಳ್ದ ಹಲುಗಳ ಹಾಯಿದೆಲುಗಳ . . . ಮುಪ್ಪಿನ ಮುಗುದನೀತನು (ಕುಮಾವ್ಯಾಭೀ. ೧-೩೫) ; ಶೂರ್ಪಣಖಿಯೆಂಬಸುರೆ . . . ಹಲುಗಳ ಮಸೆವುತ್ತೈದಿದಳು (ತೊರಾರಾ. ೩-೪-೧). **ಹಲ್ಲು :** ೧. "ರದನಾಃ, ದಶನಾಃ, ದಂತಾ- ಈ ೩ ಹಲ್ಲು" (ನಾಚಿರಾ. ೧೨೨) ; ಹಾವಿನ ಬಾಯ ಹಲ್ಲ ಕಳೆದು ಹಾವನಾಡಿಸ ಬಲ್ಲಡೆ ಹಾವಿನ ಸಂಗವೇ ಲೇಸು (ಮಹಾದೇ. ಬ. ೭೪-೧೫೬) ; ಬಿಸುಟ ಕೈದುಗಳರೆಗಿರಿದ ಹಲ್ಲುಗಳ . . . ಪಾಯದಳದುಬ್ಬರದ ಭಂಗವನೇನನೆಂಬೆನು ವೈರಿಸೇನೆಯಲಿ (ಕುಮಾವ್ಯಾದ್ರೋ. ೧೮-೩೪) ; ಹಲ್ಲಿದ್ದವಗೆ ಕಡಲೆಯಿಲ್ಲ, ಕಡಲೆಯಿದ್ದವಗೆ ಹಲ್ಲಿಲ್ಲ (ಗಾದೆ). ೩. ಏಣಿಯ ಮೆಟ್ಟಿಲು : ನಿಚ್ಚಣಿಯ ಹಲ್ಲಿಗೆ ಅಂತರವಲ್ಲದೆ ಕೀಳು ಮೇಲುಂಟೆ (ಮೋಳಿಮಾ.

೧೬೧-೬೩೯) ; ನಿಚ್ಚಣಿಕೆಯನ್ನು ಹಚ್ಚಿ ಹಲ್ಲಿಗೊಬ್ಬನಂತೆ ಎಷ್ಟೋ ಮಂದಿ ಮೇಲಿಂದ ಕೆಳತನಕ ಸಾಲಾಗಿ ಕೂತಿದ್ದರು (ಮುಂಬಯಿ. ೪-೧೪೬). **೪.** ಬಾಚಣಿಗೆ, ಗರಗಸ ಇತ್ಯಾದಿಗಳಲ್ಲಿ ಹಲ್ಲಿನಾಕಾರದಲ್ಲಿರುವ ಮೊನೆ : ಬಾಚಣಿಗೆಯ ಹಲ್ಲುಗಳು ಮುರಿದು ಹೋಗಿವೆ (ರೂಢಿ) ; ಗರಗಸದ ಹಲ್ಲುಗಳು ಬಹಳ ಚೂಪಾಗಿವೆ (ರೂಢಿ).

**ಪಲ್ಪಱಿಗುಟ್ಟು, ಹಲುಹಱಿಗುಟ್ಟು** = (ಚಳಿ ಮುಂತಾದುವುಗಳಿಂದ) ಹಲ್ಲು ಶಬ್ದ ಮಾಡು : ಮೊರೆವ ಮೊರೆಪದಿಂ ತುಂಬಿಗಳುಂ ಪಲ್ಪಱಿಗುಟ್ಟದವುವೆಂಬಂತೆಯುಂ (ಕಾದಂಬ. ೨೧೯) ; ಪಲ್ಪಱಿಗುಟ್ಟುತ್ತಮೆ ವಾನರಾಳಿ ನಡುಗುತ್ತಿರ್ದತ್ತು ಶಾಖಾಗ್ರದೊಳ್ (ಕುಸುಮಾ. ೬-೧೩); ಮಳೆವೊನಲೊಳಗೆ ನಿಂದು ಹಸಗುಂದುತುಂ ನಡುಗುತೊಡನೊಡನೆ . . . ನಾಡೆ ಪಲ್ಪಱಿಗುಟ್ಟುತುಂ (ಅರಾಚ. ೧-೯-೬) ; ನಡುಗಿ ಹಲುಹಱಿಗುಟ್ಟಿ ಬಾಗಿಲೊಳು ನಿಂದಿರಲು (ಇಳರ. ದೇ. ೫೨-೯). **ಪಲ್ಲಂ ತಿನ್** = (ಕೋಪದಿಂದ) ಹಲ್ಲು ಕಡಿ: ಎಲ್ಲಮಂ ತಿಂದು ತಣಿಯದೆ ಪಲ್ಲಂ ತಿಂಬಂ (ಪಂಪಭಾ. ೩-೨೫ ವ); ಸೊಸೆಗೆ ಪಲ್ಲಂ ತಿನುತ್ತೆ ನೆತ್ತಿಯುಂ ಪೊಯ್ದುಕೊಳ್ವತ್ತೆಯರುಮಂ (ಲೀಲಾವ. ೫-೧೧೪ ವ). **ಪಲ್ಲಿಲ್ಲದವ** = ಸೂರ್ಯ : "ಪಗಲೆರೆಯನೆನಲು ಪಲ್ಲಿಲ್ಲದವನೆನಲು ದಿನನಾಥನಕ್ಕುಂ" (ಕಶರ. ೬೧). **ಹಲ್ಲು ಹಿಡಿದು ನೋಡು** = ೧. (ಪ್ರಾಣಿಗಳ ವಯಸ್ಸನ್ನು ತಿಳಿಯಲು) ಹಲ್ಲುಗಳನ್ನು ಪರೀಕ್ಷಿಸಿ ನೋಡು : ಧರ್ಮಕ್ಕೆ ಎಮ್ಮೆ ಕೊಟ್ಟರೆ, ಹಲ್ಲು ಹಿಡಿದು ನೋಡಿದ (ಗಾದೆ). ೨. ಮನುಷ್ಯನ ಯೋಗ್ಯತೆಯನ್ನು ಪರೀಕ್ಷಿಸು : ನಾನು ಸಲಿಗೆ ಕೊಟ್ಟುದಕ್ಕೆ ಅವನು ಹಲ್ಲು ಹಿಡಿದು ನೋಡುವುದಕ್ಕೇ ಬಂದನು (ರೂಢಿ). **ಹಲ್ಲು ಹಿಡಿದು ಮಾತಾಡು** = ನಾಲಿಗೆಯನ್ನು ಹತೋಟಿಯಲ್ಲಿಟ್ಟುಕೊಂಡು ಮಾತನಾಡು : ಹಲ್ಲು ಹಿಡಿದು ಮಾತಾಡು, ಇಲ್ಲದಿದ್ದರೆ ಪರಿಣಾಮ ನೆಟ್ಟಗಾಗೋದಿಲ್ಲ (ರೂಢಿ).

[**ದೇ.॥ ತಮಿ. ಮಲ. ಕೋಲಾ. ನಾಯ್ಕಿ. ಗಡಬ. ಗೊಂಡಿ.** ಪಲ್ ; **ತುಳು.** ಪರು ; **ಕೊಡ.** ಪಲ್ಲೀ ; **ತೆಲು.** ಪಲು, ಪಲ್ಲು, ಪನ್ನು ; **ಕುಇ.** ಪಲು, ಪಡು ; **ಕುವಿ.** ಪಲ್ಲು ; **ಕುರುಖ್.** ಪಲ್ಲ್ ; **ಮಲ್ತೊ.** ಪಲು ; **ಪರ್ಜಿ.** ಪೆಲ್]

**ಪಲ$_1$**, ಪಲವು, ಹಲ$_1$, ಹಲವು (ಸ). ಬಹಳ; ಅನೇಕ: ಬಾಹುಬಲಿ ಭರತನಂ . . . ಮಲ್ಲಯುದ್ಧದೊಳ್ ಪೊಣರ್ದು ಪಲಗಾ[ಪಾಠಾಂ.ವಾ]ಯಂಗಳೊಳ್ ಪೊಣರ್ದು ಶ್ರಾಂತವಾದಾಗಳ್ (ಚಾವುಂಪು. ೪೯). **ಪಲವು :** ತಾನುಂ ಪಲವುಂ ಎಸುವೆತ್ತು (ಎಕ. VIII, ಸೊರಬ. ೧೦-೮; ಸು. 800) ; ಪೆಡೆ ಪಲವಪ್ಪ ವಾಸುಕಿಮಹೋರಗನಂ ಕಡೆಗಣ್ಣ ಮಾಡಿ ಪಾಲ್ಗಡಲನುಪಾಯದಿಂ ಕಡೆಯೆ (ಕಾವ್ಯಸಾ. ೯೩೮ ಶೂದ್ರಕ) ; ಪಲವುಂ ತೆಱದ ಬಾಡುಗಳುಂ ತುಯ್ಯಲುಂ . . . ಮಹಾದೇವಿ ಬಡ್ಡಿಸಿದೊಡೆ (ಪಡ್ಡಾರಾ. ೬೮-೧೫) ; ಸಿಕ್ಕಿದ ಕಳ್ಳನಂತೆ ಪಲವಂ ನೆನೆಯುತ್ತುಂ (ಧರ್ಮಾಮೃ. ೧-೧೪೪) ; ಪಲವೊಳವದ್ಭುತವರ್, ಆದೊಡಮದ್ಭುತವರ್ ಇನ್ನಿರದೊಂದುವರ್ ಮಾನವಸಿನ್ (ಅಂತಿಗೊ. ೧೬-೩೦೯). **ಹಲ$_1$ :** 'ಹಲಕಾಲ' ಪರಾ. **ಹಲವು :** ದೇವನೊಬ್ಬ ನಾಮ ಹಲವು (ಬಸವ. ೬೧೫) ; ಸಾಯಕದ ಹೊದೆ ಹಲವು ಶಲ್ಯಗೆ ಬೀಯವಾದವು (ಕುವ್ಯಾಕ. ೪-೪) ; ಹಲವು ಪಾಪಂಗಳ ಹದಗೆಡಿಸುವ ಮಂತ್ರ (ಪುರಂದ. ೨-೨-೧).

**ಪಲಪಲವು** (ದ್ವಿರುಕ್ತಿ) : ಪಲಪಲವು ಕಳವಳಂ ಆರುಮಿಂತೆಂದಱಿಯರ್ (ಅಶ್ವತ್ಥಾ. ೧-೧೪) ; ನನ್ನೊಳಗು ಪಲಪಲವು ಕಳವಳ ಮನುಸಿರುತ್ತೆ ತಾನ್ ಕೂಗಿದತ್ತೆನಗೆ (ಅಂತಿಗೊ. ೧೧-೨೦೮). **ಪಲಂಬರ್, ಪಲಂಬರು, ಪಲಬರ್, ಪಲಬರು, ಪಲರ್, ಪಲರು, ಹಲಂಬರ್, ಹಲಬರು, ಹಲರು, ಹಲವರು** = ಹಲವು ಮಂದಿ ; ಅನೇಕ ಜನ : ಆತನುಂ . . . ತನ್ನೋರಗೆಗಳಪ್ಪ ಪಲಂಬರ್ ಮಾಣಗಳ್ವೆರಸು ಪೊಱವೊಟಲೊಳ್ಬಟ್ಟಾಡುತ್ತಿರೆ (ಪಡ್ಡಾರಾ. ೬೩-೨೨); ಪಲಂಬರ್ [ಪಾಠಾಂ. ಪಲರುಂ, ಪಲಬರುಂ] ಮ್ಲೇಚ್ಛರಾಜರಂ . . . ಮುಂದಿಟ್ಟು (ಆದಿಪು. ೧೩-೩೯ ವ) ; ನಿನ್ನಂ ಪಿಡಿದು ತರಲೆಂದು ಪಲಂಬರನಟ್ಟಿದೊಡೆ (ಕಾದಂಬ. ೬೩೯) ; ಅರಸುಗಳ್ಪಲಂಬರು ಸಹ ಜಿನದೀಕ್ಷೆಯ ಧರಿಸಿ (ಶಾಂತೀಚ. ೫-೮೩); ನೇಸಱ ಬೞಿಯ ಪಲಂಬರರಸರರಸುಗೆಯ್ಯುತಿರ್ದರ್ (ರಾಮಾಶ್ವ. ೭-೮) ; ಪಲಬರ್ಕಾಂತೆಯರೊಲ್ದು ಪೋದರ್ (ಕಾದಂಪೂ. ೬೫೧) ; ವೇದಶಾಸ್ತ್ರಂಗಳ್ ಭೂಷಣವಾಗೆ ಪಲಬರುಂ ಬ್ರಾಹ್ಮಣರಿಪ್ಪರ್ (ಎಕ. VIII, ಸಾಗರ. ೧೦೯-೫೨ ; 1042) ; ಸೋಮವಂಶದಲರಸುಗಳು ನಿಸ್ಸೀಮರಿದ್ದರು ಪಲಬರು (ಕುವ್ಯಾಸ. ೫-೩೧) ; ತಂಡದೆ ಕೀಱ ಸಾಱುವ ಪಲರ್ ಪಡೆವಳ್ಳರ ಮಾತುಗಳ್ ಮನಂಗೊಂಡಿರೆ (ಪಂಪಭಾ. ೧೦-೪೯) ; ಪಲರಿರ್ದು ಕಾದಿದರ್ ಮೆಯ್ಗಲಿಗಳ್ (ಗದಾಯು. ೪-೫೫); ಪಲರುಂ ಚೀಯೆಂಬಿನಂ ಸೂಸಿದೆಂಜಲವುಟ್ಗಳನಾವಗಂ ಬೆದಕಿ ತಿಂದು (ಸುಕುಮಾ. ೧೪-೫೬) ; ಕಂಜಾಕ್ಷಿಯರಿರೆ ಪಲರಲ್ಲಿ ವಿವಕ್ಷಿತನಾ ಚಾರುದತ್ತನಭಿವೀಕ್ಷಿಸಿದಂ (ನೇಮಿಪು. ೪-೪೬) ; ಪಲರು ಮುನ್ನಿನ ಬಾಂಧವರು (ಹರಿಬ. ೧-೪೧) ; ಭದ್ರಬಾಹುಸ್ವಾಮಿಗಳುಂ ಮೊದಲಾಗೆ ಹಲಂಬರಾಚಾರ್ಯ್ಯಪೂರ್ವ್ವದಿಂ ಬಳಿಯಂ ಸಮಂತಭದ್ರಸ್ವಾಮಿಗಳುದಯಿಸಿದರ್ (ಎಕ. VIII, ನಗರ. ೩೭-೧೪೪ ; 1147) ; ಕಾದಿ ಹಲಂಬರಂ ಕೊಂದು (ಎಕ. VI, ಚಿಕ್ಕಮ. ೧೫೭-೭ ; 1195) ; ಘನಪೌರುಷದಲೆಚ್ಚಾಡಿದನು ಹಲಬರ ಕೂಡೆ ಸುಕುಮಾರ (ಕುವ್ಯಾದ್ರೋ. ೬-೧೨) ; ಹಲಬರುಂಟೀರವಿಗಳಿಡಿಗತ್ತಲೆಯ ಮೊತ್ತಕೆ (ತೊರವೆ. ೩-೬-೩೧) ; ಮಾಚಿದೇವನು ಹಲರುಮೆಚ್ಚ ಹಲ್ವರ ಇಱಿದು (ಎಕ. IX, ಬೆಂಗಳೂ. ೨೫-೪ ; ಸು. 1140 ?) ; ನಾಯಕವಾಡಿಗಳು ಹಲರೆಂದು ಬೆಂಗೊಟ್ಟೋಡಿದನೆ (ಕುವ್ಯಾದ್ರೋ. ೬-೧೩) ; ಕಾಪಿನ ಹಲರ ಸಹಾಯದಿಂದ ಧರ್ಮಕ್ಕೆ ವೊಂದು ಕ್ಷೇತ್ರವನು ಕೊಡಬೇಕು ಯೆಂದು ಚಿತ್ತೈಸಲಾಗಿ (ಎಇ. XX, ೮-೩೪ ; 1556) ; ಅರಸಿಂಗೆ ಎಲ್ಲಾ ಹೊತ್ತು ಹಿತವಂ ನುಡಿವ ಮನುಷ್ಯರ್ ಹಲವರುಂಟು (ಪಂಚತಂ. ೧೦೨-೧೩) ; ಹಲವರು ಅದನ್ನು ಬಹಳ ಕೆಟ್ಟ ರೀತಿಯಿಂದ ಉಪಯೋಗಿಸುವುದುಂಟು (ಮುಂಬಯಿ. ೪-೪೦) ; **ಪಲಕೆಲವು** = ಅನೇಕ : ಕೊಂಡಾಡುತಂ ಸಂತಸುಖದಿಂ ಪಲಕೆಲವು ದಿವಸವಿಸಾ ತೆಱದೊಳಿರೆ (ಬಸರ. ೬-೮೯) ; ಭೂಮಿಯ ಚರಾಚರವನುದ್ಧರಿಸಿ ಪಲಕೆಲವು ಸಾಮರ್ಥ್ಯಮಂ ತೋರ್ಪಂ (ಸಿದ್ಧರಾ. ೨ ಸೂಚನೆ). **ಪಲರಂಜೆ ಗಂಡ** = ಅನೇಕ ಜನರನ್ನು ಅಂಜಿಸುವ ವೀರ ; ಒಂದು ಬಿರುದು : ಬೀರತ್ರಿಣೇತ್ರ ಗಜರಾಜಮಲ್ಲ ಪಲರಞ್ಜೆ ಗಣ್ಡ ಶ್ರೀಮತ್ಪಲದಂಕಕಾಱ ದೇವನ ಪೆರ್ಗ್ಗಡೆ (ಎಕ. X, ಮುಳಬಾ. ೫೯-೬ ; ಸು. 900 ?). **ಪಲರೋಡೆ ಗಂಡ** = ಹಲವರನ್ನು ಹೆದರಿಸಿ ಓಡಿಸುವ ವೀರ ; ಒಂದು ಬಿರುದು : ಪಲರೋಡೆ ಗಣ್ಡ ಇಱುವ ನೊಳಂಬನ್ (ಎಕ. XII, ತಿರು. ೨೮-೨೮ ; 943) ; ಪಲರೊಡೆ ಗಣ್ಡ . . . ಕಾಳೆಗಮಲ್ಲಂ ನನ್ನಿಯ ಗಂಗಂ (ಎಕ. X, ಶ್ರೀನಿವಾ. ೧೭-೫ ; ಸು. 1015). **ಪಲರ್ಮೆಚ್ಚೆ ಗಂಡ** = ಬಹು ಜನರು ಮೆಚ್ಚುವ ವೀರ ; ಒಂದು ಬಿರುದು : ಮಹಾದಂಡನಾಯಕ ಪಲರ್ಮೆಚ್ಚೆ ಗಣ್ಡ (ಎಕ. IV, ಹೆಗ್ಗಡ. ೧೦೪-೧೬ ; 1037). **ಪಲವುಂ ನಾಲಗೆಯುಳ್ಳವಂ** = ಅನೇಕ ಜಿಹ್ವೆಗಳನ್ನುಳ್ಳವನು ; ಆದಿಶೇಷ : ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾಱನಾ ನೆಲನಂ (ಕಬ್ಬಿಕಾ. ೧೯). **ಹಲವಾರು** = ಬಹಳ ; ಅನೇಕ : ಅವರಿಗೆ ಈ ಕೆಲಸವನ್ನು ಮಾಡಲು ಹಲವಾರು ತೊಂದರೆಗಳಿವೆ (ರೂಢಿ).

[ದೇ.॥ ತಮಿ. ಮಲ. ಪಲ ; ತುಳು. ಹಲವು ; ತೆಲು. ಪಲು]

**ಪಲ₂,** ಪಳ್₂ (ನಾ). ೧. ಹಣ್ಣು ; ಫಲ. **ಪಳ್₂ :** ೧. ಫಕಾರಕ್ಕೆ ಪಕಾರಂ . . . ಫಲಂ-ಪಳಂ, ಫಾಲ-ಪಾಲ (ಶಮದ. ೨೫೫ ಪ್ರಯೋ.) ; ವರದಕರಾಂಬುಜಂ ಮೆಱೆವ ಕೆಯ್ಯ ಪ[ಪಾಠಾಂ. ಫ]ಳಂ ಕಡುರಯ್ಯ ಮಾದಕೋಳಿರದಱ ಬಿಲ್ಲ ಕೋಲ ಪೊಸದೇಸೆ ವಿಳಾಸಮನಾಂತ ಯಕ್ಷಿ. . . ಮಾಡುಗನಂತಮತಿಪ್ರಕಾಶಮಂ (ಅನಂಪು. ೧-೯). 'ಮ್ಮಾದುಪಳ' ಪರಾ. ೨. ಕತ್ತಿ ; ಖಡ್ಗ. ೩. ಕತ್ತಿಯ ಅಲಗು,—ಮೊನೆ. ೪. ಲೋಭ : "ಪಳಮಂತದಸ್ತ್ರಶಲ್ಯಂ ಪಳಮಳ್ಕುಂ ವೃ[ರಿ]ತ್ತಿ ಪಳಮೆನಿಕ್ಕುಂ ಲೋಭಂ" (ವಸ್ತುಕೋ. ೧೩೪-೯೫). [<ಸಂ.ಫಲ]

**ಪಲ₃,** ಪಳ್₃ (ನಾ). ೧. ಒಂದು ತೂಕದ ಪ್ರಮಾಣ ; ಮೂರು ತೊಲ ; ಮೂರು ರೂಪಾಯಿ ತೂಕ ; ☞ ಈ ವಿವರಣೆಯ ಬಗ್ಗೆ ಅಭಿಪ್ರಾಯಭೇದಗಳಿವೆ : "ಸಿಕ್ಕಿಸಲ್ಪೇಳೆಯೆರಡುಮನೊಂದು ಪಾಗಮವು ನಾಲ್ಕಾಗೆ ಪಣಮೆನಿಕ್ಕವು ದಶಂ ತೂಕಕ್ಕೆ ನಿಲ್ಕವೀರೆಂಟಾಗೆ ಪಲಮಕ್ಕು" (ಮಂಗರಾ. ೧೦೪-೧೧) ; ಅರಿಸಿನದ ಹೇಱು ೧೪೯೯ ಪಲ ೫ (ಸೌಇಇ. IX-i, ೧೭೨-೩೨ ; 1106) ; ನಾಲ್ಕುಂ ಕರ್ಷಂ ಪಲಂ (ವ್ಯವಹಾ. ४-२೫) ; ಅನುದಿನಮೊಂದು ಪಲ ಗುಗ್ಗುಳಮನೊಸೆದು ಮನಸಿಜಾರಿಗೆ ಮೂಱುವೇಳೆಯೊಳಗರ್ಪಿಸುವೆಂ (ಅರಾಚ. ೨-೮-೭೩). ೨. ಒಂದು ಕಾಲದ ಪರಿಮಾಣ ; ಘಳಿಗೆಯ ಅರುವತ್ತನೆಯ ಒಂದು ಭಾಗ : ೬೦ ಪಲ=೧ ಘಟಿಕೆ (ನಾಡಿ)=೨೪ ಮಿನಿಟುಗಳು ಅಥವಾ ನಿಮಿಷಗಳು (ಜ್ಯೋತಿರ್ವಿ. ೨೦೧) ; ಒಂದು ಪಲವೂ ಸಾವಕಾಶ ಮಾಡದೆ ತಟ್ಟನೆ ಎದ್ದು ಎದುರಿಗೆ ಕುಳಿತನು (ಸಣ್ಣಕ. VII, ೩೩). ೩. ದ್ರವವನ್ನು ಅಳೆಯುವ ಒಂದು ಅಳತೆ. ೪. ಅಡಗು ; ಮಾಂಸ : "ಪಲಲಂ, ಜಾಂಗಲಂ, ಮಾಂಸಂ, ಪಲಂ . . . ತರಸಂ-ಈ ೮ ಮಾಂಸಂ" (ಹಲಾಯು. ೧೦೪-೯) , ಪುಳಿವುದತಿ ಕೀವೇಱುವುದು ಮಿಗೆ ಕೊಳೆವುದಾ ಪಲ ಪತ್ರ ನೀವದ ಕೊಳಬಹುದೆ (ಶಂಕರಾ. ೧೪-೨೮). 'ಪಲಾನ್ನ' ಪರಾ. ೫. ಹುಲ್ಲು ; ತೃಣ. ೬. ಒಂದು ಬಗೆಯ ಸಸ್ಯ : "ಪಾಂಡುತರುಃ—ಪಲ, ಕಹಿಪಡಲ" (ಓಷಧಿ. ೯೪). **ಪಳ್₃ :** ೨. ಒಂದು ಪಳವು ಅತನಿಗೆ ಸಂವತ್ಸರದಂತೆ ತೋರಿ (ತುಳಸೀ. ೧೫೬) ; ಐದು ಪಳವಾಯಿತು, ಹತ್ತು ಪಳವಾಯಿತು, ಗಳಿಗೆಯಾಯಿತು (ಕನ್ನಡಿ. ೧೩೬). [ಸಂ.]

**ಪಲಂಕಷ** (ನಾ). ೧. ಮಾಂಸಭಕ್ಷಕ ; ರಾಕ್ಷಸ. ೨. ಗುಗ್ಗುಳ. ೩. ಮುತ್ತುಗದ ಮರ ; ಕಿಂಶುಕ. ೪. ಸಿಂಹ. [ಸಂ.]

**ಪಲಂಕಷೆ** (ನಾ). ೧. ಒಂದು ಬಗೆಯ ಸಸ್ಯ ; ನೆಗ್ಗಿಲು : "ಪಲಂಕಷಾ . . . ಗೋಕ್ಷುರಕಃ, ವನಶೃಂಗಾಟಃ—ಈ ೭ ಪಲ್ಲೇರು ಗಿಡದ ಹೆಸರುಗಳು, ನೆಗ್ಗಲು ಹೆಸರುಗಳು" (ಸಿದ್ಧಾಂತಿ. ೧೩೪). ೨. ಅರಗು : "ಪಲಂಕಷಾ—ಅರಗು" (ಓಷಧಿ. ೯೨). [ಸಂ.ಪಲಂಕಷಾ]

**ಪಲಂಗ** 'ಪಲ್ಲಂಗ' ನೋ.

**ಪಲಂಗು** 'ಪಲ್ಲಂಗ' ನೋ.

**ಪಲಂಬು** 'ಪಲುಂಬು' ನೋ.

**ಪಲಕ** (ನಾ). ಘಳಿಗೆಯ ಅರುವತ್ತನೆಯ ಒಂದು ಭಾಗ ; ಪಲ : ಒಂದೇ ಒಂದು ಪಲಕದ ಅವಕಾಶದಲ್ಲಿ ಅಸೀಮ ಅಂತರವಾಗಿ ಹೋಯ್ತು ! (ಇಪ್ಪಕ. ೪೫೫). [←ಪಾರ. ಹಿಂ. ಮರಾ. ಪಲಕ್]

**ಪಲಕಾಲ,** ಹಲಕಾಲ, ಹಲಗಾಲ (ನಾ). ದೀರ್ಘಸಮಯ ; ಬಹುಕಾಲ : ಪ್ರೀತಿಯಿಂ ಪಲಕಾಲವಾ ರಘುಜಾತನೆನೆ ಧರ್ಮಾರ್ಥ ಕಾಮುವನೋತು ಸಾಧಿಸಿ (ಸಾಳ್ವಭಾ. ೧-೨೬). **ಹಲಕಾಲ :** ಹೇಸಿ ನನ್ನನು ದೂರ ಬಿಸುಟೆಳು ಮೃತ್ಯು ಬಳಲಿದೆನಿಂತು ಹಲಕಾಲ (ಕುಸ್ಮಾಳ. ೧೪-೨೫) ; ಕರುಣೆ ನಿಲ್ಲದು ಹಲಕಾಲವೀ ಜನರೊಳ್ (ಪಿಸೀಗೀ. ೧೪-೭). **ಹಲಗಾಲ :** ಪ್ರಬಂಧವಿದನ್ನು ಬರೆಯಬೇಕೆಂದು ಭಾವಿಸಿ ಹಲಗಾಲ ವಾಯಿತು (ಪಾರ್ಶಸು. ೫ ಮುನ್ನುಡಿ) ; ಹಲಗಾಲ ಮಳೆ ಹೊಯ್ದರೂ ಮುತ್ತುಗಕ್ಕೆ ಮೂರೇ ಎಲೆ (ಗಾದೆ). [ಪಲ₁+ಕಾಲ]

**ಪಲಕಾಲಂ,** ಪಲವುಕಾಲಂ (ಅ). ದೀರ್ಘಕಾಲದ ವರೆಗೆ ; ಬಹು ಕಾಲದ ವರೆಗೆ : ನಂದನೆಂಬರಸಂ ಪಲಕಾಲಮರಸುಗೆಯ್ಯುತ್ತಿರೆ (ವಡ್ಡಾರಾ. ೬೫-೬) ; ಪಲಕಾಲಮುಗಲ್ದ ನಲ್ಲರಿರ್ವರುಮೊಂದೆಡೆಯೊಳ್ ಕೂಡಿ (ಪಂಪಭಾ. ४-೧೦೮ ವ) ; ಮೆಚ್ಚಿದಿಚ್ಚೆಯಿಂ ಪಲಕಾಲಂ ವರ್ತಿಸು ತ್ತಮಿರ್ದು (ವರ್ಧಪು. ೧೦-೧೯ ವ). **ಪಲವುಕಾಲಂ :** ಪಲವುಕಾಲಂ ಪುದುವಾಟಿಂದ್ದಲಾತ್ಮನೊಡನೆ ಪೋಗದೆ ಕಡೆಗಣಿಸುವುದೆಂದೊಡುಬಾದರಂ ನಂಬುವುದೇ (ಆದಿಪು. ३-೬೧). [<ಪಲಕಾಲ]

**ಪಲಕಿ** 'ಪಲ್ಲಂಗ' ನೋ.

**ಪಲಕೀರೇಸೊಪ್ಪು** (ನಾ). ಒಂದು ಬಗೆಯ ಸೊಪ್ಪು : ಜೀವ ಹಾಲೇಬಳ್ಳಿ, ಪಲಕೀರೇಸೊಪ್ಪು (ಮೈಔಗಿ. ४४-೮೭೦). [ಪಲಕೀರೆ₀+ಸೊಪ್ಪು₂]

**ಪಲಕು** 'ಪಲುಕು₂' ನೋ.

**ಪಲಕ್ಕಿ** 'ಪಲ್ಲಂಗ' ನೋ.

**ಪಲಗಂಡ,** ಪಳಗಂಡ (ನಾ). ಇಟ್ಟಿಗೆ, ಗಾರೆ ಮುಂತಾದುವು ಗಳಲ್ಲಿ ಕೆಲಸ ಮಾಡುವವನು : "ಪಲಗಂಡನೆನೆ ಮುಟ್ಟಿಗಂ" (ಮಂಗರಾ. ೧೧೧-४). **ಪಳಗಂಡ :** "ಲೇಪಕಂ ಪಳಗಂಡಂ" (ವಸ್ತುಕೋ. ೬೫-೮೩). [ಸಂ.]

**ಪಲಗಣ್,** ಪಲಗಣ್ಣು (ನಾ). ೧. ಹಲವು ಕಣ್ಣು ; ಅನೇಕ ಕಣ್ಣು : ದ್ವಿಗುವಿಂಗೆ . . . ಪಲವುಕಣ್, ಪಲಗಣ್ (ಶಮದ. ೧೭೭ ಪ್ರಯೋ.) ; ಪಲಗಣ್ಮೊಯ್ಗೊಂಡದ ಪೂರ್ವದಿಶಾಧೀಶ್ವರನೆಂಬಂದದಿನತಿವಿಭ್ರಾಜಿಸಿದಂ ರಾಜಪ್ರಭರಾಜಸುತಂ (ಜಯುಕಾ. ೨-೬೯). **ಪಲಗಣ್ಣು :** ೨. ಕಣ್ಣಿನ ಒಂದು ಬಗೆಯ ರೋಗ : ನೀರುಗಣ್ಣು ಜಾರುಗಣ್ಣು ಮಂಜುಗಣ್ಣು ಪಲಗಣ್ಣು (ಶುಕಸ. ३೨೮). [ಪಲ₁+ಕಣ್]

**ಪಲಗಣ್ಣ** (ನಾ). (ವ್ಯೆಯಲ್ಲಿ) ಹಲವು ಕಣ್ಣುಗಳನ್ನು ಹೊಂದಿದವನು ; ಇಂದ್ರ ; ಸಹಸ್ರಾಕ್ಷ : "ಪಲಗಣ್ಣಂ ಪುರುಹೂತನಿಂದಿರಂ" (ಕರ್ಣಾನಿ. ೮) ; ಕಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ (ಕಬ್ಬಿಗಕಾ. ೧೬३) ; ಪಲಗಣ್ಣನ ಪಟ್ಟದ ಸತಿ ಸಗ್ಗದ ಲಲನೆಯರೊಳ ಗೋಲಗಮಿರ್ಪಂತೆ (ಜಯುಕಾ. ೨-೧೯).

ಪಲಗಣ್ಣ ಪದ = ಇಂದ್ರಪದವಿ : ಶಿವನಿಂದ ಪಲಗಣ್ಣ ಪದವ ಪಡೆದಪೆ (ಪ್ರೌಢರಾ. ೮-೯೨). **ಪಲಗಣ್ಣ ಬಿಲ್ =** ಇಂದ್ರಧನು ; ಕಾಮನ ಬಿಲ್ಲು : ಪಲಗಣ್ಣ ಬಿಲ್ಲೊಲುಮಿರ್ದು ಕಣ್ಣುಳ್ಳಿಸುವ ಚಿತ್ರಬಂಧದ ಲರ್ದಂಡೆಯುಂ ಕಂಡೆನ್ (ಸಂಸಪ. ३೫-೬). [ಪಲಗಣ್+-ಅ₇]

**ಪಲಗಣ್ಣು** 'ಪಲಗಣ್' ನೋ.

**ಪಲಗೆ,** ಹಲಗೆ, ಹಳಗೆ (ನಾ). ೧. ಮರ, ಲೋಹ ಮುಂತಾದುವು ಗಳ ಅಗಲವಾದ ಹಾಗೂ ತೆಳುವಾದ ಸೀಳು : ತೀರ ಪಲಗೆಯುಂ ಮೆಟ್ಟಯುಂ ಪೋಗಿಪೋಗಿ (ಪಂಪಭಾ. ೧३-೫३ ವ); ಪಡಗೊಡೆಯೆ ಪಲಗೆ ಯೊಂದಂ ಪಿಡಿದು . . . ತಡಿಗೆಯ್ದಿದೆಂ (ದಶಕು. ೨-೮४) ; ರತ್ನ ಕೆತ್ತಿಸಿ ದಮಲ ಬೋದಿಗೆ ಲೋವೆ ಪಲಗೆಯೊಳ್ಪುತ್ತಿನ ಕುಚ್ಚುಗಳ್ ಮೆಱೆಯೆ (ಮೋಹತ. ೧೬-೧೫) ; ನೆಲಗಟ್ಟಿನ ಪಲಗೆಯುನ್ನಪ್ಪಳಿಸಿದ ಸೊಪ್ಪುಳಂ ಕೇಳುತ್ತೆ (ಚಿಕವಂ. ೭४-೬). ೨. ಚದುರಂಗ, ಪಗಡೆ ಮೊದಲಾದುವುಗಳ ಹಾಸು ಮತ್ತು ಅದರ ಒಂದು ಸುತ್ತಿನ ಆಟ: ಆ ಪಲಗೆ ಯುಮಂ ಸೋಲ್ತು ಮಹೀಪತಿ ಚಲದಿಂ ಬಱಿಕ್ಕೆ ಸೋಲ್ತಂ ಗಡಮಾ

ದ್ರೌಪದಿಯುಮಂ (ಪಂಪಭಾ. ೬-೪) ; ವಸಂತತಿಳಕೆಯುಂ ತಾ[ನುಮೊ]ಡ್ಡಿಯಮಾಡಿದರಂತಾಡಿದಾಗಳ್ ಚಾರುದತ್ತನೊಂದೆರಡು ಪಲಗೆಯುಂ ಗೆಲೆ (ಬಂಹರಿ. ೩-೬೦ ಪ) ; ಪೂಡಿದ ಪಲಗೆಗಳನೆಲ್ಲವಂ ಪುಷ್ಕರನೊಲ್ದಾಡಿ ಗೆಲಲ್ (ನಳಚಂ. ೫೦೬) ; ವನಿತೆಗಂ ಪುರುಷಂಗಮಿವೆ ಲೋಕಕನುಸಾರಿಯೆನಿಪ ಸಾರಿಗಳಾಗೆ ಸುಪ್ರಸಾದಿಗಳೀರ್ವರನುವಿನಿಂ ಪ್ರಾವೀಣ್ಯಮಂ ಪಲಗೆಯುಂ ಮಾಡಿಯತಿಹರ್ಷದೆಸಕದಿಂದೆ (ಆರಾಚ. ೨-೮-೩). 'ನೆತ್ತವಲಗೆ' ಪರಾ. **೩.** ಚಿತ್ರ ಮುಂತಾದುವುಗಳನ್ನು ಬರೆಯಲು ಸಿದ್ಧಪಡಿಸಿದ ಮರ, ಲೋಹ ಮುಂತಾದುವುಗಳ ಸಾಧನ,—ಭಿತ್ತಿ : ಒಂದು ಚೈತ್ಯಾಲಯಮುಮಂ ಮಾಡಿಸುವೆನೆಂದು ಪಲಗೆಯೊಳ್ ರೇಖೆಗೊಂಡು (ಪದ್ಮಾರಾ. ೧೦೯-೬) ; ಪಲಗೆಗಳೊಳ್ ಪಲವು ತೆಱದ ವರ್ಣಕ್ರಮದಿಂ ಪಲವುಂ ರೂಪಂ ಬರೆಗುಂ (ಬಂಹರಿ. ೩-೨೫) ; ಶಶಿಮುಖಿಯು ಚಿತ್ರವೆಂಬುದು ರತಿಕಲೆಯ ಪಲಗೆ (ಭರಚ. ೧೦-೧೨೦). **೪.** ಒಂದು ಬಗೆಯ ಗುರಾಣಿ,–ಹರಿಗೆ : ಯುದ್ಧದುಳ್ ಉಜಕೀಲಿಚ್ಚದವಂಬುವಾಳ್ಪಲಗೆಯುಳ್ತಟ್ಟಿಬಿತ್ತವಲ್ಪನ್ದಿಪಿನ್ ಮುಱುಮೋಗೀಶ್ವರನುಳ್ಳ ಕದಿ ತಣಿದ (ಸೌಇಇ. IX-i, ೩೯೨-೩ ; 8ನೆಯ ಶತ) ; ಪಲಗೆಗಳಂ ಪೊಳೆಯಿಸಿ ಕಡಿತಲೆಯಂ ಜಡಿದು (ಜಗವಿ. ೧೨-೧೬) ; ಕಕ್ಕಡ ಕಡಿತಲೆ ಪಟ್ಟೆ ವಂಕುಡಿವಿಡಿದೊಕ್ಕಯ್ಯ ಪಲಗೆ ಪೆರ್ಬಡಿಗೆ ಎಕ್ಕಟಿಗರ ಮೇಲೆ ಚಮ್ಮಾವ ಚಮರವ ಲೆಕ್ಕವ ಮಾಡುವರಾರು (ಮೋಹತ. ೪೦-೧೫). **೩, ೪** : ಬರೆಯಲ್ಕೇಣ್ಮೆಚ್ಚರದಿಂ ಕರೆಯಲ್ಕೇಣ್ಮಯ್ಗೆ ಪಲಗೆ ಬರೆ ಕಾವ್ಯಕಲಾಪರಿಣತೆಯೊಳ್ ಖಟ್ಗಪರಿಣತೆಯೊಳ್ ಭಾಳನೇತ್ರನೆನಿಪಂ ಜನ್ನಂ (ಅನಂಪು. ೧-೫೪). **೫.** ಒಂದು ಬಗೆಯ ಚರ್ಮವಾದ್ಯ ; ತಮಟೆ : "ಪಲಗೆ-ಫಲಕ=ಹಲಗೆ, ಡೋಲು" (ತದ್ಭಕೋ. ೨೫). **ಹಲಗೆ : ೧.** ರಕುತದ ಧಾರೆ ನಾದಿತು ರಥದ ಹಲಗೆಗಳ (ಕುವ್ಯಾದ್ರೌ. ೬-೨೭) ; ಆ ಕಾಯಿ ಬೆಂದು ಕಡುಗೌರಾದ ಹದನನಱಿದಿಳುಹಿ ಹಲಗೆಯೊಳಿರಿಸಿಕೊಂಡು (ಸೂಪಶಾ. ೫-೨೭) ; ಮಂತ್ರಿಸಿದ ಹಲಗೆ ಕೊಡುತ್ತೇನೆ, ಕೊಟ್ಟಿಗೆಯಲ್ಲಿಟ್ಟು ಬಾ (ಪ್ರಶ್ನೆ. ೬೧). **೨.** ಹಲಗೆಯನೀಯದೆಯುಂ ಮಱುವಲಗೆಯನೀಯದೆಯುಮಣ್ಣ ಪೋದಪೆನೆಂಬೀ ಗೆಲವು ಗೆಲವಲ್ಲದಾನೀ ನೆಲನಂ ನಿನಗೀಯೆನೆಂಬುದುಂ ಧರ್ಮಸುತಂ (ಮಹಾನೇ. ೧೦-೧೧) ; ಓಡಲೇಕಿನ್ನೊಂದು ಹಲಗೆಯನಾಡಿ ನೋಡುವೆನೆಂಬವೊಲು ಕೈಮಾಡಿದನು (ಕುವ್ಯಾಗ. ೨-೩೪) ; ವಿಗಡ ಪುಷ್ಕರನೃಪನು ಗೆಲಿದನು ಹಲಗೆಯೊಂದಱಲಿ (ನಳಚ. ೪-೨೯). **೩.** ಧರೆ ಹಲಗೆ ವೃದ್ಧಿಯಾದುದು ಧರಣಿಯ ಮೇಲಿರ್ದ ಮರನೆ ಲೆಕ್ಕಣಿಕೆ ಗಡಾ (ಛಂದೋಂಬು. ೧-೩೦ ಅಡಿಪದ್ಯ) ; ಆ ಕಡವರದ ಮೇಲೆ ಕವಿದಿರ್ದ ಶಾಸನದ ಹಲಗೆಗಳಂ ತೆಗೆದೋದಿ (ಪುಣ್ಯಾಸ್ರ. ೭-೬೮ ಪ) ; ನಭೋಂಗಣದ ಹಲಗೆಯ ಮೇಲೆ ದೀಪ್ತಾಕ್ಷರಗಳಿಂದ ಕೆತ್ತಿರುವ ಪದ್ಯಕ್ಕಿಂತಲೂ ಸೊಗಸಾದುದು ಬೇರೊಂದುಂಟೆ ! (ಜ್ಯೋತಿರ್ವಿ. ೫). **೪.** ಸಮಚಿತ್ತವೆಂಬ ನೇಮದ ಹಲಗೆಯ ಪಿಡಿದು ಶಿವಚಿತ್ತವೆಂಬ ಕೂರಲಗ ಕೊಂಡು (ಬಸವ. ೭೨೫) ; ಕಠಾರಿಯ ಮಸೆವ ಹಲಗೆಯ ಬಲಿವ ಸುರಗಿಯ ಬಸೆಯ ಬೆಳೆಸುವ ವೀರ ಭಟರೊಪ್ಪಿದರು ಕಟಕದಲಿ (ಕುವ್ಯಾಭೀ. ೫-೩೮) ; ಹರಿಗೆ ಕತ್ತಿ . . . ಹಲಗೆಯನು ಭರದೆ ಪಿಡಿದು ಪರಿವಾರ ನಡೆದುದು (ಅಂಜಚ. ೬-೭೨) ; ಹಿಡಿದುಕೊಳಿ ಮುಟ್ಟುಗಳ, ಹಲಗೆ ಕತ್ತಿಯನು (ಇಂಗೀತ. ೧೬-೨೪). **೫.** ತಟಕಂಕಟ ಧಿಕ್ಕಟ ತಟಕೆನಿಸುವ ಹಲಗೆಯ ಶಬ್ದಂ (ಕುಂಬಜಿ. ಹ. ೨೫೪-೨೮) ; ಹಳ್ಳಿಗರು ಡೊಳ್ಳು, ಹಲಗೆ, ದಮ್ಮಡಿ, ದಪ್ಪು, ಟುಮರಿ ಮೊದಲಾದ ವಾದ್ಯಗಳನ್ನು ಬಾರಿಸಿಯೂ . . . ಕುಣಿಯುವುದನ್ನು ಕರ್ನಾಟಕದ ತುಂಬಾ ಈಗಲೂ ನೋಡಬಹುದು (ಕನ್ನಜಾ. ೩೦). **ಹಳಗೆ : ೫.** ವಾದ್ಯ ಹಳಗೆ ಮದ್ದಳೆ ೨ (ಸೌಇಇ. IX-ii, ೪೭೦-೫೨ ; 1482). [<ಸಂ. ಫಲಕ]

**ಪಲಗೆಗಂಟೆ** (ನಾ). (?) : ಮನೆದಾಣವುಂ ಪಲಗೆಗಣ್ಟಂ ಮೊದಲಾಗೆ ಕಟನಿಯುಂ ಪಡಗಣ್ಣಾಸೀಮೆ ಪೆರಮುಟಿ ಪಡುವಣ್ಣಾಸೀಮೆ ತಣವಳ್ಳಿ (ಎಇ. XXI, ೨೯-೧೧; 8ನೆಯ ಶತ). [ ? ]

**ಪಲಗೆಗಟ್ಟು** (ನಾ). ಹಲಗೆಗಳನ್ನು ಜೋಡಿಸಿ ಮಾಡಿದುದು : ಅರಲ್ದ ತಾವರೆಯ ತಣ್ಣೆಲೆಯ ಪಲಗೆಗಟ್ಟನೋವರಿಗಳೊಳಗಣ ಕಪ್ಪುರವಳಿಕಿನಳವಟ್ಟ ಜಗಲಿಗಳ ಮೇಲೆ ಪಸರಿಸಿದ ಕುಸುಮದೆಸಟ ಪಸೆಗಳೊಳಂ (ಚಂದ್ರಪು. ೭-೯೫ ಪ) ; ಸಂದುವಿಡದಂತೆ ತರಂಗೊಳಿಸಿ ರಚಿಸಿದ ಕರ್ಣಿಕಾಕದ ಪಲಗೆಗಟ್ಟನೆಡೆಯೆಡೆಯೊಳಳವಟ್ಟ ಎಸಳ್ಗಳಂ ನೆಗಪಿ (ರಾಜಶೇ. ೧೦-೩೧ಪ). [ಪಲಗೆ+ಕಟ್ಟು$_2$]

**ಪಲಗೆಜೂಜು** (ನಾ). ಪಗಡೆಯ ಜೂಜು : ಪಲಗೆಜೂಜಾಡಿದೆಂ ಸೂಳೆಗೆಯ್ದಂ (ಅರ್ಥನೇ. ೫-೩೬). [ಪಲಗೆ+ಜೂಜು$_1$(<ಜೂದು)]

**ಪಲಗೆರ್ದೆಯ** (ನಾ). ಗುರಾಣಿಯಂತಹ (ವಿಶಾಲವಾದ) ಎದೆಯುಳ್ಳವನು : ಪಲಗೆರ್ದೆಯಂ, ನಿಡುವಣೆಯಂ, ನುಣ್ಬೊಡೆಯಳ್ (ಶಬ್ದಾನು. ೩೨೮ ಪ್ರಯೋ). [ಪಲಗೆ+ಎರ್ದೆ+-ಅ$_7$]

**ಪಲಗೆವಿನ್ನಣ** (ನಾ). ಗುರಾಣಿಯನ್ನೊಡ್ಡುವ ಒಂದು ಬಗೆಯ ಕೌಶಲ : ಗರುಡಿಯೊಳಗೆ ಪಲಕೆಲಂಬರ್ಪಲಗೆವಿನ್ನಣಂಗಳೊಡನೆ ಕಾಮನ ಪರ್ವತದಂತೆ ಮಾರಚಿತ್ರಭಿತ್ತಿಯೊಳ್ ಬಿಡಿಯುತ್ತುಮಿರ್ದ ಕಡುಗಲಿ ಕೇಳ್ದು (ಅನಂಪು. ೧೧-೪೮ ಪ). [ಪಲಗೆ+ಬಿನ್ನಣ(<ಬಿನ್ನಾಣ)]

**ಪಲಗೋರು** (ನಾ). ವ್ಯವಸಾಯದ ಒಂದು ಉಪಕರಣ ; ಹತ್ತರಿಂದ ಇಪ್ಪತ್ತರವರೆಗೂ ಹಲ್ಲುಗಳಿರುವ ಕುಂಟೆ ; ಜಂತಗುಂಟೆ; ಹಲುಬೆ : ನಾಲ್ಕುಬೆರಳು ಅಗಲವಾಗಿ ಮೊನೆಯಾದ ಹಲ್ಲುಗಳನ್ನು ಹತ್ತು ಹನ್ನೆರಡು ಇಪ್ಪತ್ತರವರೆಗೂ ಅದರ ಅನುವರಿತು ಹಲ್ಲುಗಳನ್ನು ಹಾಸಿರುವ ಕುಂಟೆಗೆ ಅಲಕುಕುಂಟೆ ಹಾಗು ಪಲಗೋರು ಎಂಬ ಹೆಸರು (ಕೃಷಿಪ್ರ. ೫೬).
[<ಪಲ್+ಗೋರು$_2$./ತೆಲು. ಪಲಗೋರ್ರು, ಪಲಗಾರ್ರು]

**ಪಲಚೊಗೆ** (ನಾ). ಒಂದು ಊರಿನ ಹೆಸರು : ವೈಶಾಖಪೌರ್ಣಮಾಸ್ಯದಲ್ ಪಲಚೊಗೆ ನಾಮಗ್ರಾಮಮಂ (ಮೈಆರಿ. ೧೯೧೮, ೧೨-೧೩ ; 6ನೆಯ ಶತ). [ ? ]

**ಪಲಟಣ,** ಪಲ್ಟನು, ಪಲ್ತನು (ನಾ). ಸೈನ್ಯದ ದಳ ; ಪದಾತಿದಳದ ತುಕಡಿ ; ಪಟಾಲಂ : ರಣಮಸ್ತಖಾನನ ಆ ಎರಡೂ ಪಲಟಣಗಳಲ್ಲಿ ಮುಸಲ್ಮಾನರ ಯಾವತ್ತು ಪ್ರಕಾರದ ಆಯುಧಗಳಿದ್ದವು (ಕನ್ನಡಿ. ೩೧೬). **ಪಲ್ಟನು :** ಇಂಗ್ಲೀಷರು ತಮ್ಮ ಫಿರಂಗಿ ಬಂದೂಕುಗಳನ್ನು ಹಾರಿಸುವುದಕ್ಕೆ ಮೊದಲೇ ಅವರ ಪಲ್ಟನುಗಳನ್ನು ಕತ್ತರಿಸಿಬಿಟ್ಟನು (ಒಡೆಕ. ೭೯). **ಪಲ್ತನು :** ಪೋಲಿಸರು ಪದ್ಧತಿಯಂತೆ ತಮ್ಮ ಪಲ್ತನುಗಳ ಸಮೇತ ಬಂದು (ದುಸಾರ. ೩೪). 'ಪಟಾಲಂ' ಪರಾ.
[←ಪೋರ್ಚು. ಇಂ. Platoon./ಹಿಂ. ಪಲ್ಟನ್ ; ಮರಾ. ಪಲಟನ್, ಪಲಟಣ್]

**ಪಲತೀಗೆಬಳ್ಳಿ** (ನಾ). ಒಂದು ಬಗೆಯ ಬಳ್ಳಿ : (ಮೈಔಗ. ೫೦-೯೯೪). [ಪಲತೀಗೆ$_0$+ಬಳ್ಳಿ]

**ಪಲತುಡುಂಕು** (ಕ್ರಿ). (?) : ಗೊಟ್ಟಿಗಾಯಣೆಯರ ಕಾಯೆಗಳ್ಗೆ ತಲೆದೂಗುವ ನೆವದಿಂ ಕೊಡಂಕೆಯೊಳ್ ಪಲತುಡುಂಕಲಱಿಯದ ಪಸುಳೆದುಂಬಿಗೆ ಕನ್ನವುರದ ಚೆನ್ನೆಯ್ದಿಲ ಮಕರಂದರಸಮಂ ಸಾರ್ಚುವಂತೆಯುಂ (ಅನಂಪು. ೮-೭ ವ). [ ? ]

**ಪಲಕೆಜಿ** (ನಾ). ಹಲವು ರೀತಿ ; ಅನೇಕ ಬಗೆ : ಇಂತು ಪಲಕೆಜಿದೆ ಕೋಟಲೆಗೊಳುತಿರ್ದಪಂ (ಕಾದಂಪೂ. ೮೯೮); ಕೆಲಬರ್ ಪಲಕೆಜಿದಿಂ ಜಡಿಯೆ (ಸುಕುಮಾ. ೪-೬೦) ; ಜಗದಧಿವಲ್ಲಭನಂ ಲಡ್ಡುಗೆಯಿಂ ಪಲಕೆಜದ ಪುಷ್ಪದಿಂ ನಾನಾ ಪತ್ರಗಳಿಂ ಪೂಜಿಸಿ (ಧರ್ಮಾಮೃ. ೧-೧೦೭).
[ಪಲ$_1$ + ತೆಜ$_1$]

**ಪಲದಿವಸ** (ನಾ). ಅನೇಕ ದಿನ; ಬಹಳ ಕಾಲ : ಪಲದಿವಸಂ ಸೂಟ್ಟಿಡೆಯದೆ ಕರೆವುದರ್ಕಾಸೆವಟ್ಟು ಮಾತಟ್ಟದ ಕೆಳೆಯನನೆಮ್ಮಬ್ಬೆಯ ನೊಡಂಬಡಿಸಲಣ್ಮೆನೆಂದು ಪೋಗಲ್ವೇಟ್ಟು (ಶಾಂತಿಪು. ೮-೭೭ ಪ); ಪಲದಿವಸ ನೀಲಾಂಜನೆಯೊಳಿಂತೊಲಿದಿರುತೆ (ಸಾಳ್ವಭಾ. ೧೮-೪೯).
[ಪಲ$_1$ + ದಿವಸ]

**ಪಲದೆಜಿ³** (ನಾ). ಒಂದು ಬಗೆಯ ತೆರಿಗೆ : ತಗಡೂರಿಗೆ ಸಲುವ ಸ್ಥಳಸುಂಕ . . . ಮನೆವಣ ಆಡದೆಜಿ ಸಕೆದೆಜಿ ಪಲದೆಜಿ . . . ಸರ್ವ ಸ್ವಾಂಮ್ಯವನು ಆಗುವಮಾಡಿ (ಎಕ. III (R), ಸಂಜನ. ೩೩೮-೧೬; 1530).
[ಪಲ$_2$ + ತೆಜಿ$_3$]

**ಪಲಪಗಲು** 'ಪಲವಗಲು' ನೋ.

**ಪಲಪರಲು** (ನಾ). ಹಲವು ಬಗೆಯ ಹರಳು,—ರತ್ನ : ಬಲುವೆಸದ ತೊಡವು ಪಲಪರಲು ಮಿಸುನಿವಸನ ಪರಿಯಣದಂಗಡಿಯ ಸಾಲ್ಮುಸುಗ ಲೊಪ್ಪಿದುದಾ ಪೊಳಲು (ನೇಮಿಸಂ. ೧-೮೨).
[ಪಲ$_1$ + ಪರಲು$_1$ (<ಪರಲ್)]

**ಪಲವು** (ನಾ). "ಹಗ್ಗವನ್ನು ಹೊಸೆದು ಅದನ್ನು ಮೂಗುದಾರಕ್ಕೆ ಸಿಕ್ಕಿಸಲು ಅನುಕೂಲವಾಗುವಂತೆ ತುದಿಯಲ್ಲಿ ಎರಡು ಭಾಗ ಮಾಡಿ ಒಂದಕ್ಕೊಂದು ಸೇರಿಸುವಂತೆ ಮಾಡಿದ ಉಂಗುಟ, ಕುಣಿಕೆ" (ನನ್ನೂರು. ಕೋಶ) : ಪಲವು ಹಾಕಿದ ಹೊಸಹಗ್ಗ ನಾಗವಾಸದ ಮೇಲಿಟ್ಟಿದ್ದೀನಿ ; ಕಪ್ಪೆತ್ತಿನ ಹಗ್ಗ ಕಿತ್ಹೋದರೆ ಹಾಕು (ನನ್ನೂರು. ೨೪೭).
[<—ತೆಲು. ಪಲುವು]

**ಪಲಬಗೆ** 'ಪಲವಗೆ' ನೋ.

**ಪಲಬಿರುದು** (ನಾ). ಅನೇಕ ಪದವಿ,—ಗೌರವ : ತೊಂಗಲ್ವೆಂಟೆಯ ಜೋಡುಶಂಖದ ಜಗಜಂಪಿನ ಸತ್ತಿಗೆಯ ಪಲಬಿರುದುಗಳ್ಗೆಗಳ್ತೆವಡೆಯೆ (ರಾಜಶೇ. ೬-೧೧ ಪ).
[ಪಲ$_1$ + ಬಿರುದು]

**ಪಲಬು** 'ಪಲುಂಬು' ನೋ.

**ಪಲಮಾತು** 'ಪಲವಾತು' ನೋ.

**ಪಲಮೊಗ** (ನಾ). ಅನೇಕ ದಿಕ್ಕು ; ಹಲವು ದೆಸೆ : ದೆಸೆದೆಸೆಗಳಂ ಮೊಗೆಮೊಗೆದು ಮೊಗಸಿ ಪಲಮೊಗದೊಳವ್ವಳಿಸಿ ಪುಟನೆಗೆನೆಗೆದು ನೆಗಳ್ದು . . . ಎಲ್ಲರಂ ದಹಿಸತೊಡಗಿದುದು ದಳ್ಳುರಿ ನರನ ಬಲದೊಳು (ಜೈಮಿಭಾ. ೮-೩೯).
[ಪಲ$_1$ + ಮೊಗ]

**ಪಲರೂಪು,** ಪಲವುರೂಪು (ನಾ). ಹಲವು ರೂಪು; ಅನೇಕ ಆಕಾರ : ರತಿ ಪಲರೂಪಾಂತಂತೆಸೆವ ಸುರಸುದತಿಯರ್ ಕಳಸ ಕನ್ನಡಿ ವಿಡಿದಿದಿರ್ಗೆಲ್ತರೆ (ಶಬರ. ೫-೫೭ ಪ). **ಪಲವುರೂಪು :** ದಿನಪನುಪಟಳ ದಿಂದೆ ನೆಲೆಗೆಟ್ಟು ಪಲವುರೂಪನೆ ತಾಳ್ದು . . . ಕಾರೊಡಲ ಬೇಡವಡೆ ಬೇಂಟೆಗೆ ವಿಪಿನದೊಳೈತರುತಿರ್ದುದು (ಜೈಮಿಭಾ. ೨೮-೪೦) ; ಪಶ್ಚಿಮಾ ಚಲಂ ಪಲವುರೂಪಾಂತು ನಡೆಗೊಳ್ವಂತೆಯುಂ (ರಾಜಶೇ. ೧೩-೭೭ ಪ).
[ಪಲ$_1$ + ರೂಪು]

**ಪಲರ್ಮೆ** (ನಾ). ಅನೇಕ ಸಲ ; ಹಲವುಸಾರಿ : "ಒಮ್ಮೆ . . . ಪಲರ್ಮೆ—ಇವು ಎಣಿಸುವ ಸೂಚಿಗೊಳ್ ವರ್ತಿಪುವು" (ಶಶಸಾ. ೬೮-೫೩೦); ಸಮಸ್ತವಸ್ತುವಂ ಕುಡುವ ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ . . . ಬಹುಪ್ರಕಾರಜನಸಂಕಟಮೊಪ್ಪಿದುದಾ ಪ್ರಯಾಣದೊಳ್ (ಆದಿಪು. ೪-೫೭) ; ಮನೋಭವನಂ ತೆಗೆದಪ್ಪಿಕೊಂಡು ಪಲರ್ಮೆಯಯುಂ ಪರಸಿ (ನೇಮಿಪು. ೭-೧೩೨ ಪ) ; ಒಂದು ಮೊದಲಾದ ಸಂಖ್ಯಾವಾಚಿಗಳಿಗೆ ಆವೃತ್ತಿ ಎಂಬರ್ಥದಲ್ಲಿ ಮೆ ಸೇರುವುದು . . . ಸಾಸಿರ್ಮೆ, ಪಲರ್ಮೆ (ಕೈಪಿಡಿ. ೫೨).
[<ಪಲ$_1$ + -ಮ$_2$]

**ಪಲಲ**$_1$ 'ಪಲವಲ' ನೋ.

**ಪಲಲ**$_2$ (ನಾ). ೧. ಮಾಂಸ ; ಬಾಡು : ಲಲನಾರೂಪಮಿದಿನಿಕುಂ ಪಲಲಮಯುಂ (ಉಸಾರ. ೨೮-೧೬೬) ; ಮತ್ಸ್ಯ ಹರಿಣಪಲಲಂಗಳಂ . . . ಆ ವನಿತೆಯೊಳು ಕೂಡಿ ತಿಂದು (ವೀಶೈಪು. ೨-೭-೧೫) ; ಎಲುಗಳ ರಾಸಿ ಪಂದಲೆಗಳ ಇಡುಗೂಡೆ ಪಲಲದ ಪುಂಜ (ಗೊಮ್ಮಚ. ೭-೯೫). ೨. ಕೆಸರು ; ಕೊಚ್ಚೆ. ೩. ದೈತ್ಯ ; ರಾಕ್ಷಸ. [ಸಂ.]

**ಪಲವಂಗ,** ಹಲವಂಗ (ನಾ). ಹಲವು ರೀತಿ ; ನಾನಾ ಬಗೆ : ಪಲವಂಗದಲಿ ಕೊಂಡಾಡುವರು (ಬಸವು. ೨೫-೩). **ಹಲವಂಗ :** ಹಲವಂಗ ಗುಣದವನೊಬ್ಬರಸು ತಲೆಯಿಲ್ಲದವನೊಬ್ಬ ಪ್ರಧಾನಿ (ಪುರಂದ. ೩-೧೭೭-೧) ; ಹಂಬಲಿಸುತ ಹಲವಂಗದಿ ಹಗಲಿರುಳೆಂಬುದ ತಿಳಿಯದಳಲುತ (ಶತಸಾಂ. ೩೪-೮೩).
[ಪಲ$_1$ + ಅಂಗ$_1$]

**ಪಲವಂದ,** ಹಲವಂದ (ನಾ). = ಪಲವಂಗ : ಶಿವನ ಚಾರುಕೃಪೆಯಂ ಪಡೆವುದೇ ಮಂತ್ರವೆಂದು ನಿಶ್ಚಯಿಸಿ ಪಲವಂದದಿಂದಂ . . . ಒಡಂಬಡಿಸಿ (ಪದ್ಮರಾ. ೧೦-೨೧೮) ; ಪಲವಂದದಿಂದಾತ್ಮರಿರಲೊಂದೆಂಬುದಾಗದದು ಯುಕ್ತಿಯಿಂ ಪ್ರಸಿದ್ಧಂದೋಚು ಭೇದವಿಹುದಾಗಿ (ಅನುಸಾ. ೩-೪). **ಹಲವಂದ :** ಗುರುವು ಈ ತೆರದಿಂದಲಿರಬೇಕಲ್ಲದಲೆ ಹಲವಂದ ಬೀಳುವ ಗುರುವೆ (ಬಜ್ಜಪು. ೮೩-೩೩) ; ನಾಡಿನ ಹಲವಂದದ ಮುನ್ನಡೆಗಾಗಿ ಜೀವನವನ್ನು ಸಮರ್ಪಿಸಿ (ಮೋಕ್ಷಮಾ. ೧೫೩ ಪ್ರಸ್ತಾವನೆ).
[ಪಲ$_1$ + ಅಂದ]

**ಪಲವಕ್ಕೇಣಿ** (ನಾ). ಒಂದು ಪ್ರದೇಶದ ಹೆಸರು : ತತು ಪಲವಕ್ಕೇಣೀ ಸೀಮ್ನಾವರ್ (ಎಕ. VIII, ಸೊರಬ. ೩೩-೮ ; ಸು. 420). [?]

**ಪಲವಗಲು,** ಪಲಪಗಲು (ನಾ). = ಪಲದಿವಸ : ಹರನ ಸಾಹಸ ಕಂಜದೆ ಪಲವಗಲು ಮುಪ್ಪುರ ಪಡಿಬರಿಸಿ ಪೋರಿದುದು (ಹದಿಬ. ೨-೪೮). **ಪಲಪಗಲು :** ಪಲಪಗಲಿಂದವೆ ಕೀಲಿಸಿ ಕೆತ್ತಿರ್ದ ಕುಲಿಶದ ಪಡಿಯ ನೋಡಿದನು (ಶ್ರೀಪಾಲ. ೬-೬೪).
[ಪಲ$_1$ + ಪಗಲು(<ಪಗಲ್)]

**ಪಲವಗೆ,** ಪಲಬಗೆ (ನಾ). = ಪಲವಂಗ : ಆಲಸದೆ ನಾಣ್ಚದಂಜದೆ ಯಳುಕದೆ ಪೇಳು ಪಲವಗೆ ಕಬ್ಬದೊಳ್ಪುಗಳ (ಹದಿಬ. ೧-೨೯). **ಪಲಬಗೆ :** ಸುವರ್ಣಪಳಿಯ ಪಳದಿಯ ಜೋನೆಗವಳಿಯ ಪಲಬಗೆಯ ಪಲ್ಲಣದ ಪಕ್ಕಜಲ್ಲಿಯ ಪದ್ಮರಾಗದ ಪಾವುಡದ ಪರುಠವಣೆ ಪಸರಿಸೆ (ರಾಜಶೇ. ೬-೧೧ ಪ) ; ಪಲಬಗೆಯ ಬಲೆಗಳಿಂದಂ . . . ಎಸಗೆ ಬೇಂಟೆ ಗಳಂ (ಹಾಲಾಸ್ಯ. ೩-೮-೧೧).
[ಪಲ$_1$ + ಬಗೆ$_3$]

**ಪಲವಣ್ಣ** (ನಾ). ಅನೇಕ ವರ್ಣ : ಪಲವಣ್ಣದ ಗವಸಣಿಗೆಯ ಕೋಟಿಗೆ ನೆಲೆಗೊಳಿಸಿದರೆಂಬಂತೆ ಸಲೆ ಮೆಱೆವವು ಬಣ್ಣಪರಿಯ ಹರಿಗೆಗಳು ಬಳಸಿ ಕೋಟೆಯ ಮೈವಸದೊಳು (ಕುರಾಸಾಂ. ೧೦-೩೯).
[ಪಲ$_1$ + ಬಣ್ಣ]

**ಪಲವಯಣ** (ನಾ). ಅನೇಕ ದಿನದ ಪ್ರಯಾಣ : ಪಲವಯಣದ ಮೇಲೆ ಜನನಿಯ ನೋಳ್ಪೆಂ (ಜೀವಂಸಾಂ. ೧೫-೩೯). [ಪಲ$_1$ + ಪಯಣ]

**ಪಲವರಿ** (ನಾ). = ಪಲವಂಗ : ನೆಲಕೆ ಬಾಗಿಸಿದ ಪಲವರಿಯ ಡೆಂಕಣ ಕವಣೆ . . . ತಳಿಯ ಮರದ ಗೊಂದಣದ ಸಂವರಣೆಯಿಂದಾ ಕೋಟೆ ಕಣ್ಗೊಪ್ಪಿತು (ಸಮ್ಯಕೌ. ೮-೨೮).
[ಪಲ$_1$ + ಪರಿ$_3$]

**ಪಲವರ್ಥ,** ಹಲವರ್ಥ (ನಾ). ಅನೇಕ ಅರ್ಥ; ಹಲವು ಬಗೆಯ ಅರ್ಥ : ಒಂದು ಶಬ್ದಕ್ಕೆ ಪ[ಶಾಶಾಂ.ಹ]ಲವರ್ಥಮಂ

ಪ[ಪಾಠಾಂ.ಹ]ಲವರ್ಥಕೊಂದು ಶಬ್ದಂ ನುಡಿವ ಬೆಡಗುವಿಂ ನಾನಾರ್ಥ ಮೆಂದು ಪೇಳ್ವಿಂ (ಮಂಗರಾ. ೧೩೮-೧). **ಹಲವರ್ಥ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಪಲ$_1$ + ಅರ್ಥ]

**ಪಲವಲ,** ಪಲಲ$_1$, ಪಲ್ಲಲ (ನಾ). ಸಣ್ಣ ಕೊಳ,—ಹೊಂಡ : "ಪುರಹೊನಲ್ ಬೆಂಚೆ ಪಲವಲವೆಂನಲ್ ತಾನಲ್ಪಸರಸಿ" (ಶಬ್ದಮಂ. ೩೬). **ಪಲಲ$_1$ :** "ಬೆಂಚೆ ಪಲಲಮೆನಲ್ ತಾನಲ್ಪಸರಸಿ", (ಕಬ್ಬಿಗ. ೧೨). **ಪಲ್ಲಲ :** "ಪಲ್ಲಲಮೆಂದುಂ ಬೆಂಚೆಯೆಂಪು ಅಲ್ಪಸರಸಿ" (ಕರ್ಣಾ. ೫೩-೧೬೦). [<ಸಂ.ಪಲ್ವಲ./ಪ್ರಾ.ಪಲ್ಲಲ]

**ಪಲವಸತಿಗೆ** (ನಾ). ಚಿಗುರು, ರತ್ನ ಮುಂತಾದುವುಗಳಿಂದ ಅಲಂಕರಿಸಿದ ಕೊಡೆ,—ಛತ್ರಿ : ಕನಕದಂಡದ ಚವಕ ಸದಕ ಹಳತಾದಡೆ ಹೊಸತ ಮಾಡಿಸುವನು ದೇವರ ಪಲವಸತಿಗೆ ಹಜಾದಡೆ ಹೊಸ ಪಟ್ಟೆಗಳ [ಹೊಲ್ಸಿ]ಕ್ಕುವನು (ಸೌಇಇ. IX-ii, ೪೧೭-೪೪ ; 1377). [P ಇದು 'ಪಲ್ಲವಸತ್ತಿಗೆ' ಎಂಬುದರ ಅಪಲಿಖಿತ]

**ಪಲವಾಡು** (ಕ್ರಿ). ಹಲವು ಮಾತನ್ನು ಹೇಳು ; ಹೆಚ್ಚು ಮಾತ ನಾಡು ; ಬಗೆಬಗೆಯಾಗಿ ಮಾತಾಡು : ಈ ಸುರಸಭೆಯೊಳ್ ಪಲ ವಾಡು[ಪಾಠಾಂ.ದು]ವೆನ್ನ ನಾಲಗೆ ಬಲಸ್ಥನೊರ್ವಂಗೆ ಜೀಯ ದೇವೆಂದ ಪುದೇ (ಆದಿಪು. ೧೨-೧೧೧) ; ಅಂತು ಸಿಂದು ನೋಡಿ ಪಲುಂಬಿ ಪಲವಾಡಿ (ಗದಾಯು. ೫-೪ ವ) ; ನೊಂದು ಪಲುಂಬಿ ಪಂಬಲಿಸಿ ಮೇಣ್ಪಲವಾಡಿ ಬಳಲ್ದು ಬಾಡಿ (ರಾಜಶೇ. ೧೩-೧೩೪). [ಪಲ$_1$+ಆಡು$_1$]

**ಪಲವಾತು,** ಪಲಮಾತು, ಪಲವುಮಾತು, ಹಲವುಮಾತು (ನಾ). ಅನೇಕ ಮಾತು ; ಹೆಚ್ಚು ಮಾತು : ಪಲವಾತದೇನಿಲ್ಲಿಯೆ ಮಡಗಿದೆಂ ರಸವನೊಲವಿನಿಂ ಕುಡುವುದೆನೆ (ಅರಾಚ. ೨-೧೩-೨೦). **ಪಲಮಾತು :** ಮಾತುಕಾಜತನದುಲಿವ ಪಲಮಾತವೇತಕೆ (ಬಸವು. ೩-೫೬). **ಪಲವುಮಾತು :** ಈ ಪಲವುಮಾತೇತಕವನತಿಪಾಪಿ (ಬಸವು. ೨೮-೩೯) ; ಪಲವು ಮಾತೇನೈವರೊಡವುಟ್ಟಿದರು ಸನ್ನುತರು (ಸಾಳ್ವಭಾ. ೧-೪೬). **ಹಲವುಮಾತು :** ಹಲವುಮಾತೇನೊಂದೆ ಸಾಲದೇ (ಸಾಳ್ವಭಾ. ೨೫-೩೨). [ಪಲ$_1$+ಮಾತು$_1$]

**ಪಲವು** 'ಪಲ$_1$' ನೋ.

**ಪಲವುಕಾಲಂ** 'ಪಲಕಾಲಂ' ನೋ.

**ಪಲವುಪಾಯ** (ನಾ). ಅನೇಕ ಉಪಾಯ : ವಿಧುಹಾಸನಂ ಪಲವುಪಾಯದಿಂದೀಗ ನಾಂ ವಧಿಸದಿರ್ದೊಡೆ ತನ್ನ ಸಂತತಿಗೆ ಧರೆಯನಾಳ್ವಧಿಕಸಂಪದವಾಗದು (ಜೈಮಿಭಾ. ೩೧-೩೬). [ಪಲವು(<ಪಲ$_1$) + ಉಪಾಯ]

**ಪಲವುಮಾತು** 'ಪಲವಾತು' ನೋ.

**ಪಲವುರೂಪು** 'ಪಲರೂಪು' ನೋ.

**ಪಲವುಸೂಳ್** 'ಪಲಸೂಳ್' ನೋ.

**ಪಲವುಸೂಟ್** 'ಪಲಸೂಳ್' ನೋ.

**ಪಲವೆಡೆ** (ನಾ). ಹಲವು ಸ್ಥಳ ; ಅನೇಕ ಕಡೆ : ಪಲವೆಡೆಯೊಳ ಮರಿಯರಂ ಪಿರಿಯರುಮಂ ಕಾದಿ ಗೆಲ್ದು ಪಲವೆಡೆಗಳೊಳಂ ಮಹಾಧ್ವಜಮ ನೆತ್ತಿಸಿ ಮಹಾದಾನಂಗೆಯ್ದು ನೆಗಟ್ದ ಗಂಗವಿದ್ಯಾಧರಂ (ಎಕ. II, ೫೯-೧೨೧ ; 974). [ಪಲವು(<ಪಲ$_1$) + ಎಡೆ$_3$]

**ಪಲವೆಣಿಕೆ** (ನಾ). ಹಲವು ರೀತಿಯ ಯೋಚನೆ; ಹಲವು ಬಗೆಯ ಆಲೋಚನೆ : ಮಿಕ್ಕ ಸತಿಯರ ನೆರವಿ ಗಜಬಜಿಸೆ ಕಂಡಿಳೆಯೊಳೊಕ್ಕ ನೊಡಲಂ ಬಭ್ರುವಾಹನಂ ಮೃತಕಲ್ಪನಾಗಿ ಪಲವೆಣಿಕೆಯಿಂದೆ (ಜೈಮಿಭಾ. ೨೪-೪೫). [ಪಲವು(<ಪಲ$_1$) + ಎಣಿಕೆ]

**ಪಲವೇಂಟೆ** (ನಾ). ಹಲವು ಬಗೆಯ ಬೇಟೆ : ಇಂತು ಪನ್ನತಿಕೆಯಿಂ ಪಲವೇಂಟೆಯನಾಡಿ (ರಾಜಶೇ. ೫-೧೧೪ ವ). [ಪಲ$_1$ + ಬೇಂಟೆ]

**ಪಲವೋದು** (ನಾ). ಹಲವು ರೀತಿಯ ವಿದ್ಯೆ,—ಅರಿವು : ಪಲ ವೋದುಗಳಿಂದ ಪಲವುಗೈವೆಗಳಿಂದ . . . ಬೆಲೆವಡೆದಿರ್ಪೆನೆಂದೆಣಿಸುವಳಲ್ಲ (ಹದಿಬ. ೧-೩೩). [ಪಲ$_1$ + ಓದು$_2$]

**ಪಲಸ** 'ಪಲಸು' ನೋ.

**ಪಲಸರ** (ನಾ). ೧. ಹಲವು ಎಳೆಗಳುಳ್ಳ ಸರ : ಮನೋಹರಪುಷ್ಪಗಳ ಎಕ್ಕಸರ ದುಸರ ಪಲಸರ ದಂಡೆ ಬಾಸಿಗ ವಿವಿಧಮಾಲಾಬನ್ಧಗಳು (ಬಿಟ್ಟ.ಅ. ೮೨-೧೦). ೨. ಹಲವು ಬಗೆಯ ಮಾಲೆ : ವಿಲೇಪನಚಂದನವಾರಿ ಗಿಂಡಿ ಲಾವುಂಚದ ವೀಜನಂ ಪಲಸರಂ ಪಡಿಗಂ ರತಿಗೇಹಮೊಪ್ಪುಗುಂ (ಸುಕ್ಕವಿ. ೧೦-೩). [ಪಲ$_1$ + ಸರ$_3$]

**ಪಲಸಿಗೆ$_1$** (ನಾ). ಹೊಂದಿಕೊಳ್ಳುವಿಕೆ; ಪ್ರಯೋಜನವಾಗಿರುವಿಕೆ; ಫಲಿಸಿಕೆ: ಈ ಊರಿಗೆ ನಾವು ಬಂದದ್ದು ನಮಗೆ ಆಗಿ ಬರಲಿಲ್ಲ. ಹಳ್ಳಿಗಾಡ ವಾಸ ನಮಗೆ ಪಲಸಿಗೆ ಇಲ್ಲ (ಮಾಮರಾ. ೧೯೬). [<ಫಲಿಸಿಕೆ]

**ಪಲಸಿಗೆ$_2$,** ಪಲಸುಗೆ (ನಾ). ಒಂದು ಊರಿನ ಹೆಸರು : ಶ್ರೀಲೋಕಟಿ ಯರಸರ್ ಬನವಾಸಿ ಪನ್ನಿಚ್ಛಾಸಿರಮುಂ ಪಲಸಿಗೆ ಪನ್ನಿಚ್ಛಾಸಿರಮು ಮಾಳ್ವಲೆವಮುಜುಸಾಸಿರಂ . . . ಆಳೆ (ಎಕ. VII (S), ಶಿಕಾ. ೩೩೮-೫ ; 902). **ಪಲಸುಗೆ :** ಮಲವರಿಭೂಪರಂದರ್ಪ್ಪರ್ಮರ ದಿಪ್ಪುವ ವೀರಭಟಾಳಿಯಿಂ ಕರಂ ಪಲಸುಗೆನಾಗೊಡದಿಂ ಸೊಗಯಿಸಿದ್ದುದೋ ಕಳ್ವಪುಹೀಜದಂದದಿಂ (ಕಕುಲ. ೫-೫ ; 994). [ ? ]

**ಪಲಸು,** ಪನಸ, ಪನಸು, ಪಲಸ, ಹಲಸು, ಹಳಸು$_3$ (ನಾ). ಒಂದು ಬಗೆಯ ಮರ ಮತ್ತು ದಪ್ಪವಾದ ಮುಳ್ಳಿನಂತಹ ಒರಟು ಮೇಲ್ಮೈಯುಳ್ಳ ಮತ್ತು ಸಿಹಿಯಾದ ತೊಳೆಗಳುಳ್ಳ ಅದರ ಹಣ್ಣು : ಬೇರ್ವಿಡಿದು ಕಾಯ್ತ ಪಲಸೆಳಸೀರ್ವೊನಲಂ ಕಜೆಪ ತೆಂಗು (ಪಂಪಾಮಾ. ೧-೧೧೨); ಎಳಗಾಯ್ವೊಜೆ ತಳ್ತ ತೆಂಗು ಬೇರಿಂ ತುದಿಮುಟ್ಟೆ ಕಾಯ್ತ ಪಲಸೆಂಬಿವು ಕುಂದವು ನಂದನಂಗಳೊಳ್ (ಜಾವಿ. ೨-೧೫) ; ಪಲಸು ಮುಂತಾದ ಪಣ್ಗಳ ಮೆದ್ದು (ಮೋಹತ. ೪೨-೧೮). **ಪನಸ :** "ಪನಸಂ ಹಲಸು" (ಮಂಗರಾ. ೩೬-೧೭) : ಪನಸಾಮ್ರ ಕದಳೀ ನಾರಂಗ ನಾಳಿಕೇರೀಫಲಾಮೃತಾಸ್ವಾದದೆ ತಣ್ಣನೆ ತಣಿದು (ಆದಿಪು. ೧೧-೭೯) ; ಪನಸಾಮ್ರ ನಾರಂಗ ದಾಡಿಮುಫಲಂಗಳಿಂ . . . ಪೂಜಿಸಿದಂ (ಪುಷ್ಪಪು. ೯-೫) ; ಪನಸಂ ದ್ರಾಕ್ಷೆ ಜಂಬು . . . ಕಣ್ಗೆಸೆದುವು (ಜೈಮಿಭಾ. ೧೯-೬) ; ನಾರಿಕೇಳ (ತೆಂಗಿನ ಕಾಯಿ) ಮತ್ತು ಪನಸ (ಹಲಸು) (ಪ್ರವಾಇ. I, ೨೦೫). **ಪನಸು :** ಆಮ್ರಂ ಬೆಳಲಿಂಗುಳಂ ಪನಸು ನಿಂಬಂ ಜಂಬು ಜಂಬೀರಕಂ (ಕಾವ್ಯಸಾ. ೧೦೪೦ ರೂಪ್ರಕ) ; ಕದಳೀ ದಾಡಿಮ ಮಾತುಳಂಗ ಪನಸಿಂ ದೇಸಂ ಕರಂ ಸೋಭಿಕುಂ (ಕಇ. I, ೪೯-೬ ; 1423) ; ನೆಜೆ ಕಾತ ಪನಸುಗಳ . . . ಸೊಗಸು ಸೆಳೆದುದು ಮನವನು (ಕುಮ್ಮಾಉ. ೭-೨೬). **ಪಲಸ :** "ಪಲಸ (ಸು)-ಪನಸ" (ತದ್ಭಕೋ. ೨೫) : ನೆಲ್ಲಿ ಕದವೀಚಲ್ ಮಾರು ತುಂಬುರ್ಚಲ್ ಪಲಸಂ (ಸೂಕ್ತಿಸು. ೩-೨೩). **ಹಲಸು :** "ಪನಸಃ, ಕಂಟಕೀಫಲಃ, ಹಲಸು-ಈ ೩ ಹಲಸು" (ನಾಚಿರಾ. ೧೦೪) : ಕಬ್ಬು ಬಾಳೆ ಹಲಸು ನಾರಿವಾಳಕ್ಕೆ ಸಿಹಿನೀರನೆಜೆದವರಾರಯ್ಯ (ಮಹಾದೇ.ಬ. ೧೦-೩) ; ಫಲಭಾರಶ್ರೀಯ ಸೊಂಪಿಂದೊಲೆವ ಹ[ಪಾಠಾಂ.ಪ]ಲಸುಗಳ್ (ಕುಸುಮಾ. ೧-೮೯) : ಸುಲಭದಾಸಿಯ ಪೋಲ್ತು ಸೆರ್ಗೊನೆಯೊಳು ಕಾತ ಹಲಸಿನ ಮರಗಳೊಪ್ಪಿದುವು (ಮೋಹಕ. ೨೪-೪೬). **ಹಳಸು$_3$:** "ಪನಸ, ಕಂಟಕಿಫಲ ಹಳಸು" (ನಾಚಿರಾ. ೩).

[ದೇ.II ತಮಿ. ಪಲವು, ಪಲಾ, ಪಿಲಾ. ಮಲ. ಪಿಲಾವು, ಪ್ಲಾವು ; ಕೊತ. ಪಲವ್ ; ತುಳು. ಪಿಲ, ಪೆಲ್ಲ ; ಕೊಡ. ಪಲಚ; ತೆಲು. ಪನಸ ;

**ಪರ್ಜಿ.** **ಪೆನಚ್**; **ಗದಬ.** **ಪನಿಸ್**; **ಕುವಿ.** **ಪರ್ಹ,** **ಪನ್ಹ.**/**ಸಂ.** **ಪನಸ,** ಪಲಸ, ಫನಸ, ಫಲಸ./**ಪ್ರಾ.** **ಪಣಸ**]

**ಪಲಸುಗೆ** 'ಪಲಸಿಗೆ$_2$' ನೋ.

**ಪಲಸುವಣ್** (ನಾ). ಹಲಸಿನ ಹಣ್ಣು : ಒದವಿದ ಪಲಸುವಣ್ ಮೃದಂಗವಾ **ಕರ್ಣಿಕಾರದ ಪೂವೆ ಪೊಂದಾಳವು** (ಪದ್ಮರಾ. ೮-೨೪).

[ಪಲಸು+**ಪಣ್**$_3$]

**ಪಲಸೂಳ್,** ಪಲವುಸೂಳ್, ಪಲವುಸೂೞ್, ಹಲವುಸೂಳ್(ನಾ). ಅನೇಕ ವೇಳೆ; ಹಲವು ಬಾರಿ : ಭುವನಾಧಿಕರಷ್ಟಗುಣಪಿನದ್ಧರ ಪದಯುಗಕಾಂ ಪಲಸೂಳೆಱಗುವೆನು(ಜಯುಕಾ. ೧-೨). **ಪಲವುಸೂಳ್:** ಬೆನ್ನುಗಳಂ ಪಲವುಸೂಳ್ ಮುರಿಮುರಿದು ಕೊಳುತ (ಬಸವು. ೫೨-೧೨). **ಪಲವುಸೂೞ್ :** ಸರ್ವಜ್ಞರ್ ಬೆಸಸೆ ಪಲವುಸೂೞಾಮೆಲ್ಲಂ ಕೇಳ್ದಱದೆವು (ಆದಿಪು. ೧೨-೧೦೫ ವ). **ಹಲವುಸೂಳ್ :** ಹಲವು ಸೂಳ್ ಶೀತೋಷ್ಣನಿರ್ಮಳಸಲಿಲದಭಿಷೇಕಂಗಳಿಂ ಕೋಮಳಮಹಾಶಿವ ಲಿಂಗದಂಗಂ ಕಂದುವುದೊ (ಬಸವು. ೩೫-೧೨).

[ಪಲ$_1$ + **ಸೂಳ್**$_2$(<**ಸೂೞ್**)]

**ಪಲಹಾರ** 'ಫಲಾರ' ನೋ.

**ಪಲಾಂಡು** (ನಾ). ಈರುಳ್ಳಿ ; ನೀರುಳ್ಳಿ : "ಉಳ್ಳಿ ಗೃಂಜನಂ ಲಶುನಂ ಲಸೋನಂ ಪಲಾಂಡುವಕ್ಕುಂ" (ಮಂಗರಾ. ೪೧-೩೫) ; ಪಲಾಂ ಡುವುಮಿಂಗುಂ ಘನಪಿಂಡಮೂಲಕಂ ಮುನ್ನಿನ ನಿಶೆಯೊಳೊಡರ್ಚಿದಾ ಪದಾರ್ಥಂ ಮತ್ತಂ . . . ಆಗವು ವಿಧಿಯೊಳ್ (ವಿಷ್ಣುಪು. ೩-೩-೧೬೬); ಪಲಾಂಡುವೊಳುಂಟೆ ಪಟೀರಸೌರಭಂ (ವೃಷವಿ. ೧೯-೩೧) ; ಚಂದದಲಿ ಶಾಕವನು ಮಾಡುವೆವೆಂದು ಸೀಳ್ದರಿಸಿದ ಪಲಾಂಡು ಸುಗಂಧವನು ಸೇವಿಸುತ (ಪಲಾಂಡು. ೨). [**ಸಂ.**]

**ಪಲಾನಾ** 'ಫಲಾನ' ನೋ.

**ಪಲಾನೆ** 'ಫಲಾನ' ನೋ.

**ಪಲಾನ್ನ** (ನಾ). ಮಾಂಸವನ್ನು ಬೆರೆಸಿ ಮಾಡಿದ ಅನ್ನ : ಮೃದು ಪಲಾನ್ನವಿದೊ ಕಮ್ಮಗೆ ಮೂಗನೊಲಿಸುತಿದೆ (ಶ್ರೀರಾಮಾ. ೧೫೬-೧೦೬).

[ಪಲ$_3$ + ಅನ್ನ$_3$]

**ಪಲಾಯನ** (ನಾ). ೧.ತಪ್ಪಿಸಿಕೊಂಡು ಓಡಿಹೋಗುವಿಕೆ; ಪರಾರಿ: ಕವಿದನರ್ಜುನನೋಡದಿರು ಕ ರವ ಪಲಾಯನವಕಟಕಟ ಪಾರ್ಥಿವರ ಪಂಥವೆ ಮರೆಳಿ ನಿಂದಿರು ಕೊಲುವುದಿಲ್ಲೆಂದ (ಕುಮಾವ್ಯವಿ. ೮-೭೫) ; ಸಾಯು ಬಿದ್ದರ ಬಿಟ್ಟು ಕೆಲರು ಪಲಾಯನಂಗಳ ಹೂಡೆ (ಕೌಶಿರಾ. ೨೦-೬೦). ೨. ಕುದುರೆಯ ಜೀನು.

**ಪಲಾಯನಮಂತ್ರ** ಜಪಿಸು = ಓಟ ಕೀಳು ; ಓಡು : ರಾಜನ ರಣಪರಾಕ್ರಮವನ್ನು ಕಾಣುತ್ತಲೇ ಶತ್ರುಗಳು ಪಲಾಯನಮಂತ್ರ ಜಪಿಸಿ ದರು (ರೂಢಿ). **ಪಲಾಯನ ಮಾಡು** = ತಪ್ಪಿಸಿಕೊಂಡು ಓಡಿ ಹೋಗು ; ಪರಾರಿಯಾಗು : ಆಲೋಚಿಸಿದ್ದ ಉತ್ಕೃಷ್ಟಭಾವಗಳೆಲ್ಲ ಎಲ್ಲಿಗೋ ಪಲಾಯನ ಮಾಡಿದ್ದುವು (ನಂಟರು. ೩೯); ಹೇಳದೆ ಕೇಳದೆ ಪಲಾಯನ ಮಾಡಿದನು (ಬಂಕಿಸು. ೪೧). **ಪಲಾಯನ ಸೂಕ್ತವನ್ನು ಹೇಳು** = ಪಲಾಯನಮಂತ್ರ ಜಪಿಸು : ಅವರನ್ನು ಸಂತೋಷಗೊಳಿ ಸುವುದರೊಳಗೆ ನಾನೇ ಪಲಾಯನಸೂಕ್ತವನ್ನು ಹೇಳುವ ಸಂದರ್ಭವು ಮರಳಿ ಬಂದೊದಗಿತು (ರಾಜಾಮ. ೭೯). **ಪಲಾಯನ ಸೂತ್ರ ಪಠಿಸು** = ಪಲಾಯನಮಂತ್ರ ಜಪಿಸು : ಬೆದರಿ ಬಾಣಸಿಗರು ಪಲಾಯನಸೂತ್ರ ಪಠಿಸಿದ್ದಾಗಿತ್ತು (ಕಂಬಹು. ೨೦). [**ಸಂ.**]

**ಪಲಾಯನಗೈ** (ಕ್ರಿ). ತಪ್ಪಿಸಿಕೊಂಡು ಓಡಿ ಹೋಗು : ಅನಿಲಗಳು ಪಲಾಯನಗೈಯಲು ಶಕ್ಯವಿಲ್ಲ. ಏಕೆಂದರೆ ಭೂಮಿ ಅವುಗಳನ್ನೆಲ್ಲಾ ತನ್ನ ಕಡೆಗೇ ಬಲವಾಗಿ ಎಳೆದು ಆಕರ್ಷಿಸಿದೆ (ಆಕಾಶ. ೧೯).

[ಪಲಾಯನ+ಗೈ(<ಕೆಯ್$_1$)]

**ಪಲಾಯನಪಂಡಿತ** (ನಾ). (ಆಲಂ) ಹೇಡಿ : ರಣನಾಟಕ ಪಲಾಯನಪಂಡಿತರು ನೀವೆಂದನಾ ಮಗಧ (ಕುಮಾವ್ಯಸ. ೨-೮೮).

[ಪಲಾಯನ + ಪಂಡಿತ]

**ಪಲಾಯನವಾದ** (ನಾ). ಸಮಸ್ಯೆಗಳನ್ನೂ ತೊಂದರೆಗಳನ್ನೂ ಎದುರಿಸದೆ ಅವುಗಳಿಂದ ತಪ್ಪಿಸಿಕೊಳ್ಳಬೇಕೆನ್ನುವ ಸಿದ್ಧಾಂತ: ಇಕ್ಕಟ್ಟಿಗೆ ಸಿಕ್ಕಿದ ವ್ಯಕ್ತಿ ಕೆಲವು ಸಂದರ್ಭಗಳಲ್ಲಿ ಪಲಾಯನವಾದವನ್ನು ಒಪ್ಪಿಕೊಳ್ಳಬೇಕಾಗುತ್ತದೆ (ರೂಢಿ). ☞ ಇದು ಇಂಗ್ಲೀಷಿನ 'Escapism' ಎಂಬ ಶಬ್ದದ ಅನುವಾದ. [ಪಲಾಯನ+ವಾದ$_2$]

**ಪಲಾಯನವಾದಿ** (ನಾ). ಸಮಸ್ಯೆಗಳನ್ನೂ ತೊಂದರೆಗಳನ್ನೂ ಎದುರಿಸದೆ ಅವುಗಳಿಂದ ತಪ್ಪಿಸಿಕೊಳ್ಳಬೇಕೆನ್ನುವವನು : ಕತೆ ಗಳಲ್ಲಿ, ಪದ್ಯಗಳಲ್ಲಿ, ಕಲೆಯಲ್ಲಿ ಅರ್ಥ ಸಿಕ್ಕಬಹುದೆಂದು ತಿಳಿಯುವ ಮನುಷ್ಯ ಪೆದ್ದ, ಪಲಾಯನವಾದಿ (ಹೊಸಕ್ಷಿ. ೧೩೧).

[**ಸಂ.**ಪಲಾಯನವಾದಿನ್]

**ಪಲಾಯನಸೂಱೆಕಾಱ** (ನಾ). (ಆಲಂ) ಹೇಡಿ : ಏಱುವಡೆ ದವರನು ಪಲಾಯನಸೂಱೆಕಾಱರನವರ ದಳದಲಿ ತೋಱು ಹೇಳುವರೆನ್ನ ಹವಣೇ (ಕುಮಾವ್ಯದ್ರೋ. ೧೬-೨೮).

[ಪಲಾಯನ + ಸೂಱೆಕಾಱ(<ಸೂಱೆಗಾಱ)]

**ಪಲಾಯಿಗ** 'ಪಳಾಯಿಗ' ನೋ.

**ಪಲಾಯಿತ** (ನಾ). ತಪ್ಪಿಸಿಕೊಂಡು ಓಡಿಹೋದವನು; ಪರಾರಿ ಯಾದವನು. [**ಸಂ.**]

**ಪಲಾರ** 'ಫಲಾರ' ನೋ.

**ಪಲಾಲ,** ಪಳಾಳ (ನಾ). ೧. ಹುಲ್ಲು ; ತೃಣ : ನಮಗಿದು ಪಲಾಲಭಾರಂಬೊಲೀ ಮಹೀತಲಭಾರಂ (ಆದಿಪು. ೧೪-೩೩). ೨. ಪೈರಿನ ಕಾಂಡ ,—ದಂಟು : ತನಯುನಂ ಪಡೆಯದೆ ಬಾಳ್ವನ ಸಂಸಾರಮಸಾರಂ ತೆನೆಯಿಲ್ಲದ ನವಪಲಾಲದಂತಿರೆ ಧರೆಯೊಳ್ (ರಾಜಶೇ. ೩-೭೫). ೩. (ಆಲಂ) ನಿಸ್ಸಾರವಾದುದು ; ಜೊಳ್ಳು ; ಟೊಳ್ಳು : "ಪಲಾಲಃ, ನಿಷ್ಫಲಃ—ಫಲವಿಲ್ಲದ ಹೊಟ್ಟು, ಜಳ್ಳು" (ಸಿದ್ಧಾಂತಿ. ೨೮೦) ; ಆರಯೆ ಧರ್ಮಮೊಂದೆ ಶರಣೆನ್ಗೆ ಪಲಾಲಮ ನೊಲ್ಲೆನಿನ್ ನಮಸ್ಕಾರಮೆ ಸಾಲ್ಗುಂ (ಪಡ್ಡಾರಾ. ೧೪೩-೨೪); ಪಲರೊಳ್ ಬಱುವಾತುಗಳಂ ಪಲರ್ವೆ ಬಿತ್ತರಿಸಿ ನುಡಿದು ಮನದೊಳಳುಂಬಂ ನಲಿವನನೇಂ ನರನೆಂಬುದೆ ಪಲಾಲಮೆನವೇಱುಮಾತನಂ ಮಾನಸರೊಳ್ (ನೀತಿಪಂ. ೨-೧೫೬). ೪. ಜೊಳ್ಳುಮಾತು ; ವ್ಯರ್ಥವಾದ ನುಡಿ : ಬೇಱಿಕೊಂಡು ಪಲಾಲಮಂ ಗಱಪಿ ಚಾತುರ್ಯಕ್ಕೆ ಮುಯ್ಯಾಂ ಪುದೇ (ಸುಕುಮಾ. ೧೦-೧೧೪). **ಪಳಾಳ :** ೧. ಸುತ್ತಿರ್ದ ಪಳಾಳ [ಪಾಠಾಂ.ಲಾಲ]ವರ್ತಿಯಂ ಕಳೆದು ಭಟ್ಟಾರಕರ ಪಾದಮೂಲದೊಳ್ ತಂದಿಕ್ಕುವುದುಂ (ಚಾವುಂಪು. ೩೪೭). ೩. ಪಲವು ಶಾಸ್ತ್ರಂಗಳೊಳಂ ಪಳಾಳಮಂ ಬಿಸುಟು ಸಾರಮಂ ತೆಗೆದು (ಜಾತತಿ. ೧-೧೮). ೪. ಒಳಗಱಯದೆ ಪೊಱಗಱಯದೆ ಪಳಾಳಮಂ ನುಡಿವ ನಿಮ್ಮ ನುಡಿ ಗೆಮಗೀಗಳ್ ಮುಳಿಯಲೆಡೆಯಿಲ್ಲ (ಆದಿಪು. ೯-೧೦೫) ; ಕುತರ್ಕಾಳಾಪ ಸಂಸ್ಕಾರಮಂ ಪಿಡಿದೇನೆಂದು ಪಳಾಳಮಂ ಗಱಪುವೆ (ವರ್ಧಮಾ. ೧೪-೧೪). ೫. ಠಕ್ಕು ; ಮೋಸ : "ಪಳಾಳಂ—ಠಕ್ಕು" (ಶಮದ. ಪರಿ. ೨) ; ಲಲನೆಯರ ಚರಿತಮನಿತುಂ ಪಳಾಳಂ (ಪಾರ್ಶ್ವಪು. ೪-೫) ; ಆಸೆಯು ಪಳ್ಳಿ ಪಳಾಳದ ವಾಸಂ ಜತ್ತಕದ ಜನ್ಮಭೂಮಿ . . . ಇದೆನೆ ಸೂಳೆಗೇರಿ ಕಣ್ಗೆಸೆದಿರ್ಕುಂ (ವೀರವಿ. ೬-೯೬). [**ಸಂ.**]

**ಪಲಾವ್,** ಪಲಾವು, ಪುಲಾವು (ನಾ). ೧. ಮಾಂಸದ ಅನ್ನ; ಬಿರಿಯಾನಿ. ೨. ತರಕಾರಿ, ಮಸಾಲೆಗಳನ್ನು ಹಾಕಿ ಮಾಡಿದ ಒಂದು ಬಗೆಯ ಭಾತು,-ಅನ್ನ: ಈಚೆಗೆ ಮದುವೆಯ ಮನೆಗಳಲ್ಲಿ ಪಲಾವ್ ಮಾಡಿಸುವುದು ಸಾಧಾರಣವಾಗಿದೆ (ರೂಢಿ). **ಪಲಾವು:** ೧. ನೀರುಳ್ಳಿ, ಮೆಣಸು ಹಾಕಿದ ಕುರಿಕಾಲಿನ ಸಾರು ಅಥವಾ ಒರಟಾದ ಕುರಿಮಾಂಸದ ತುಂಡು ಸೇರಿದ ಪಲಾವು (ನಗೆಹೊ. ೨೩೧); ಕರಿಸಿದ್ದ ನ ಗಬ್ಬದ ಆಡು ಸಾಬರ ಅಡುಗೆಯ ಪಲಾವಿನ ವಾಸನೆಯಾಗಿ ಪರಿವರ್ತಿತ ವಾಗಿ . . . ವಾಯುಮಂಡಲದಲ್ಲಿ ಪಸರಿಸಿತ್ತು (ಮಲೆಮ. ೪೪೯). **ಪುಲಾವು:** ೧. ಸಾಹೇಬರು . . . ಪುಲಾವು ತಿನ್ನದ ದಿನವಿಲ್ಲ (ಜಾರುದಾ. ೪೫). [←ಪಾರ. ಪಲಾವ್, ಪಿಲಾವ್; ಹಿಂ. ಪುಲಾವ್; ಮರಾ. ಪುಲಾವ್, ಪುಲಾವಾ]

**ಪಲಾವು** 'ಪಲಾವ್' ನೋ.

**ಪಲಾಶ** (ನಾ). ೧. ಎಲೆ; ಪತ್ರ: ಪಲಾಶವಾಸವಿಸ್ಫುರಿತಮರಾಳ ನೊಂದು ಶಿಶುವಾಗಿರೆ ಬಾಣತಿಯಂತೆ ಕಣ್ಗೆದೇಂ ಸುರುಚಿರಮಾಯ್ತೊ ನೀರಜನಿ (ರಾಜಶೇ. ೨-೬೩). ೨. ಮುತ್ತುಗದ ಮರ; ಕಿಂಶುಕ: "ಮುಟ್ಟುಗಮೆನೆ ಪಲಾಶಂ" (ಕವಿಕಂ. ೫೬); ಅದು . . . ವಿವಾಹ ಗೇಹದಂತೆ ಸಮಿತ್ಕುಶಕುಸುಮಶಮೀಪಲಾಶೋಪಶೋಭಿತಮುಂ . . . ಎನಿಪುದು (ಕಾದಂಪೂ. ೧೦೦); ಅರ್ಘ್ಯಪಾಣಿಯಪಲಾಶಕಾಂಡಕುಶ ಕುಸುಮಹಸ್ತನಪ್ರಶಸ್ತಂ ಕೆಡೆನುಡಿಯೆ (ಪಂಂಪಾಪು. ೬-೧೨೫ ಪ). ೧, ೨: ಮಧುಮಧುಪಾನಪ್ರಮತ್ತಾಟವೀಪಿಂಜರಿತಾಸ್ಯಾಡಂಬರಂ ಪೂತೆಸೆದುದಸದಳಂ ಪ್ರೋತ್ಪಲಾಶಂ ಪಲಾಶಂ (ಅನಂಪು. ೬-೬೬). ೩. ಮಾಂಸವನ್ನು ತಿನ್ನುವವನು; ರಾಕ್ಷಸ. ೨, ೩: ರಂಜಿಸಿದುದೆಸೆವ ಪೂಗೆಂಪಿನಿಂ ದಕ್ಷಿಣಾಯಾತಮರುನ್ನಿಸ್ರೋತ್ಪಲಾಶಂ ಪ್ರಸವಕ್ಷತಘನಾಳೀ ಪಲಾಶಂ ಪಲಾಶಂ (ಜಗವಿ. ೧೪-೨೪). ೪. ಒಂದು ಬಗೆಯ ಸಸ್ಯ; ಕಾಡುಅರಿಸಿನ; "ವನಹರಿದ್ರಾ" (ಪಂಡಿತ. ೨೪೫). ೫. ಕಾರ; ಕಟು. ೬. ಕಹಿ; ತಿಕ್ತ: "ಪತ್ರಮುಂ ಮುಳುಮುತ್ತುಂ ಕಟು ತಿಕ್ತಮೆಂಬಿವು ಪಲಾಶಾಖ್ಯಂ" (ನಾನಾರ. ೧೪೪). [ಸಂ.]

**ಪಲಾಶಪರ್ಣ** (ನಾ). ಮುತ್ತುಗದ ಎಲೆ: ಪಲಾಶಪರ್ಣವೆ ಪಾತ್ರ ಭೋಜನ ಕಂದಮೂಲಫಲ (ಕುಪ್ಯಾಅ. ೧೬-೧೨). [ಪಲಾಶ+ಪರ್ಣ]

**ಪಲಾಶಪತ್ರ** (ನಾ). =ಪಲಾಶಪರ್ಣ: ಪಲಾಶಪತ್ರದೊಳ್ ದವನದ ಸಿಡುಪೂವುಮಂ ಮರುಗದ ಕುಡಿಯುಮಂ . . . ತಂದು ಮುಂದಿಟುಪಿ (ಮಲ್ಲಿಪು. ೫-೪೯). [ಪಲಾಶ+ಪತ್ರ]

**ಪಲಾಶವೃಕ್ಷ** (ನಾ). =ಪಲಾಶ ೨: "ಮುಟ್ಟುಗಮೆಂದು ಪಲಾಶವೃಕ್ಷಂ" (ಕಶಸಾ. ೫೦-೬೨). [ಪಲಾಶ+ವೃಕ್ಷ]

**ಪಲಾಶವೃತ್ತಿ** (ನಾ). ೧. (ಎಲೆಗಳಿಂದ) ಹಸುರಾಗಿರುವಿಕೆ. ೨. ರಾಕ್ಷಸರ ವರ್ತನೆ. ೧, ೨: ಮಧುಪಾನಪ್ರವೃತ್ತಿಯೆಂಬುದು ತುಂಬಿಗಳೊಳ್ ಪ[ಲಾ][ಪಾಠಾಂ.ರಾ]ಶವೃತ್ತಿಯೆಂಬುದರಣ್ಯಂಗಳೊಳ್ ವರ್ಣಸಂಕರಮೆಂಬುದು ಚಿತ್ರಕರ್ಮಂಗಳೊಳಲ್ಲದೆ ಪೆಜಿವೆಡೆಯೊಳಿಲ್ಲ (ಪರ್ಧಮಾ. ೧-೪೫ ಪ). [ಪಲಾಶ+ವೃತ್ತಿ]

**ಪಲಾಶಶಾಲೆ** (ನಾ). ಎಲೆವನೆ; ಪರ್ಣಕುಟಿ: ಬಹುದಿವಸಂಗಳನು ನೂಕಿದನು ನೃಪತಿ ಪಲಾಶಶಾಲೆಯಲಿ (ಕುಪ್ಯಾಅ. ೨೩-೪). [ಪಲಾಶ+ಶಾಲೆ₃]

**ಪಲಾಶಿ** (ನಾ). ೧. ಎಲೆಗಳುಳ್ಳುದು; ಮರ: "ವೃಕ್ಷಃ . . . ಪಲಾಶೀ, ದ್ರುಃ, ದ್ರುಮಃ, ಆಗಮಃ—೧೪ ವೃಕ್ಷಗಳ ಹೆಸರುಗಳು" (ಸಿದ್ಧಾಂತಿ. ೧೧೦). ೨. ಒಂದು ಬಗೆಯ ಬಳ್ಳಿ. ೩. ಒಂದು ಬಗೆಯ ಮರ; ಅಮಟೆ: "ಪಲಾಶಿಕಾ, ಪಲಾಶೀ-ಈಯೆರಡುಂ ಅಂಬಟೆ" (ಒಷಧಿ. ೯೨). [ಸಂ.ಪಲಾಶಿನ್]

**ಪಲಾಸಿ,** ಫಲಾಸಿ (ನಾ). ೧. ಒಂದು ಬಗೆಯ ಸಸ್ಯ: "ವಲ್ಲ ಪತ್ರೀ-ಪಲಾಸಿ" (ಒಷಧಿ. ೧೪೪). **ಫಲಾಸಿ:** ೧. "ಖುರುಪರ್ಣೀ-ಫಲಾಸಿ, ಎತ್ತುನಾಲಗೆ" (ಒಷಧಿ. ೪೪). ೨. ಒಂದು ಬಗೆಯ ಮರ; ಅಮಟೆ; ಅಂಬಟೆ: "ಆಮ್ರಾತಃ—ಫಲಾಸಿ, ಅಂಬಟೆ" (ಒಷಧಿ. ೧೧). [<ಪಲಾಶಿ]

**ಪಲಿಕಿನಿ,** ಪಲ್ಕಿನಿ (ನಾ). ನರೆತ ಕೂದಲುಳ್ಳವಳು; ಮುದುಕಿ; ವೃದ್ಧೆ: ಉರವ ತೋಟಿಡೆ ನೆರೆವ ಪಲಿಕಿನಿಯ ಪ್ರೌಢತೆಗೆ ನಗುತ ಚೋದ್ಯಂಬಟ್ಟನು (ಪ್ರಭುಪು. ೪-೧೪೩). **ಪಲ್ಕಿನಿ:** ಬಹು ಗಾದೆವಾತಂ ಕಲಿತ ಪಲ್ಕಿನಿಯುಂ ಶುಕನಂತೆ ನುಡಿಯುಂಟು ನಡೆಯಿಲ್ಲದೆ (ಪ್ರಭುಪು. ೬-೧೦೫). [<ಸಂ.ಪಲಿಕ್ನೀ]

**ಪಲಿಕ್ನಿ** (ನಾ). ೧. =ಪಲಿಕಿನಿ: "ವೃದ್ಧಾ, ಪಲಿಕ್ನೀ-೨ ಮುದಿಕಿಯ ಹೆಸರುಗಳು" (ಸಿದ್ಧಾಂತಿ. ೧೬೦). ೨. ಚೊಚ್ಚಲುಗಬ್ಬದ ಹಸು: "ಪಲ್ಕಿನೀ (ಪಲಿಕ್ನೀ), ಬಾಲಗರ್ಭಿಣೀ-ಈ ೨ ಎಳೆದನೆಯಾವು" (ಹಲಾಯು. ೪೬-೧೧೪). [ಸಂ.ಪಲಿಕ್ನೀ]

**ಪಲಿತ,** ಪಳಿತ (ಗು). ೧. (ಕೂದಲು) ಬೆಳ್ಳಗಾದ; ನರೆತ: ಪಲವು ದುರ್ಮಾರ್ಗರಕ್ಕಸಿಯರುಂ ಗುಮಿಗೂಡಿ ಪಲಿತಕೇಶಗಳ ಕೆಂಗುರುಳ್ಗಳ ಕೆದರ್ದಲೆಯ ಶತವಿಕಾರಗಳ ತೋರಿ . . . ಕಕ್ಕುಲಿತೆಗೊಳಿಸಿದರ್ (ವೆಂಕಾಂಪ. ೫-೧೦-೧). ೨. ಮುಪ್ಪಾದ; ವಯಸ್ಸಾದ: "ಪಲಿತ ಕಾಯ' ಪರಾ. (ನಾ). ೩. ಬಿಳಿಯ ಕೂದಲು; ನರೆ: "ಜರೆ ಪಲಿತಮೆನೆ ನರೆ" (ಮಂಗರಾ. ೯೫-೬); ಗರುಗಂ ಫಲತ್ರಯುಂ . . . ನಾರ ನಾಳದೊಳರೆದಿಂಬಿನೆ ಪೂಸೆ ಪಲಿತ ನಿರ್ಭಯಮಕ್ಕುಂ (ಲೋಕೋಪ. ೯-೪೯); ಬಾಲನೆಂಬೆನೆ ಮೇಲೆ ಪಲಿತದ ಬೀಜು ಬಿಟ್ಟಿದೆ ತಳತ ತನುವಿನಲಿ (ಕುಪ್ಯಾಕ. ೫-೨೧). ೪. ಮುಪ್ಪು; ವೃದ್ಧಾಪ್ಯ: ವಶ್ಯ ಕುಟಿಲಾರಾಧನಂ ವಲಿತ ಪಲಿತನಾಶಂ ಕಾಲವಂಚನಾಭ್ಯಾಸಯೋಗಂ . . . ಬಯಸುವ ವಿಕಾರಿಸಿದ್ಧರು ಸರಿಯೆ ಸಿದ್ಧರಾಮಂಗೆ (ಸಿದ್ಧರಾ. ೧-೯). **ಪಳಿತ:** ೩. ನಿಜಪಳಿತದರ್ಶನೋತ್ಪನ್ನಬೋಧನರ್ಕಕೀರ್ತಿಗೆ ರಾಜ್ಯಮಂ ಕೊಟ್ಟು . . . ನಿರ್ವಾಣಕ್ಕೆ ಸಂದಂ (ಚಾವುಂಪು. ೬೫); ಅಂತಿದಿರ್ಚಿದ ಜರಾಂಗನಾದೂತಿ ಲಲಿತಮಂ ಪೊತ್ತಿರ್ದ ಪಳಿತಮಂ ಕಂಡು (ಪರ್ಧಮಾ. ೧೦-೬ ಪ). ೫. [ಜೈನ] ಒಂದು ಕಾಲಮಾನ: ಅಪಮೃತ್ಯುವಿರಹಿತಂ ಮೂಱು ಪಳಿತಮಪ್ಪಾಯುಷ್ಯಮುಂ ದ್ವಮಜುಸಾಸಿರ ಬಿಲ್ಲಪಸಾರಿತ ಮಲ ಮೂತ್ರಾದಿ ಪರೀಷಹದೋಷಮಪಘನಂ ದಂಪತಿಯಾ (ಪಂಂಪಾಪು. ೧-೬೨); ವರ್ಗಗಳೊಂದೊಂದುಮೆರಡು ಮೂಱು ಪಳಿತೋಪಮಂ ಬಾಳ್ವರಾ ಭೂಮಿಗಳು (ರತ್ನಕ. ೨-೬ ಪ). [ಸಂ.]

**ಪಲಿತಕಾಯ** (ನಾ). ಮುದಿಯಾದ ದೇಹ; ವಯಸ್ಸಾದ ಶರೀರ: ಪಲಿತಕಾಯಕುರೂಪಿಯನು . . . ನಿಲಿಸುವುದಿಳೆಯೊಳಗ್ಗದ ಜಾಣರಾದ ವರರಸ ಕೇಳು (ಕುಪ್ಯಾಉ. ಓರಿಇ. ೩-೯೩). [ಪಲಿತ+ಕಾಯ]

**ಪಲಿತಶ್ಮಶ್ರು,** ಪಳಿತಶ್ಮಶ್ರು (ನಾ). ನರೆತ ಮೀಸೆ; ಬೆಳ್ಳಗಾದ ಮೀಸೆ: ಪಿಷ್ಟಾತಕಚೂರ್ಣಸಂಜಾತ ಪಿಂಜರವರ್ಣ ಪಲಿತಶ್ಮಶ್ರು ಕೂರ್ಚೋಪವಿದ್ಧ ವೃದ್ಧಕಂಚುಕಿಸಂಚಯಮುಮಂ (ಚಂದ್ರಪು. ೩-೯೬ ಪ). **ಪಳಿತಶ್ಮಶ್ರು:** ಪಳಿತಶ್ಮಶ್ರುಮಹೋಚ್ಚಕೂರ್ಚವದನಂ (ಕುಸುಮಾ. ೧೧-೬). [ಪಲಿತ+ಶ್ಮಶ್ರು]

**ಪಲಿತಾಂಕುರ,** ಪಳಿತಾಂಕುರ (ನಾ). ನರೆತ ಕೂದಲು: ಧರಣೀಶಸುತಂ ಪಲಿತಾಂಕುರವಿಲ್ಲದ ವೃದ್ಧನಂದದಿಂದಾಚರಿಪಂ

(ಶಂರ.ಪು. ೩-೩೨). **ಪಳಿತಾಂಕುರ :** ಕುಬೇರಸೆಟ್ಟಿಯ (ಧನಮಿತ್ರ) ಶಿರೋರುಹದೊಳ್ ಪಳಿತಾಂಕುರಮಂ ಧನವತಿ ಕಂಡು ನಿಮಗೆ ಬಟಿ ಬಂದುದೆಂದು ನಗುತುಂ ತೋಱಿದೊಡೆ (ಶಾಪುಂಪು. ೬೧).
[ಪಲಿತ+ಅಂಕುರ]

**ಪಲಿತೌಷಧ** (ನಾ). ಬಿಳಿಯ ಕೂದಲನ್ನು ಕಪ್ಪಾಗಿ ಮಾಡುವ ಔಷಧಿ : ಇದು ಚೋರರದೃಶ್ಯಾಂಜನವಿದು ವೃದ್ಧಾಂಗನೆಯರೆಸೆವ ಪಲಿತೌಷಧವಿಂತಿದು ಕಾಮನ ಕಾರಲಗೆಸಿಸಿದುದು . . . ಅಂಧಕಾರ ಮಹಾರಂ (ಚಂದ್ರಪು. ೮-೨೧). [ಪಲಿತ+ಔಷಧ]

**ಪಲಿಪಜಿ** (ನಾ). ಒಬ್ಬಾತನ ಹೆಸರು : ನನ್ನವಿಲ್ಲುಮಿಯರಾ ಮಗನ್ ಪಲಿಪಜಿ ಎಱದು ಸ್ವರ್ಗ್ಗಾಲಯಕ್ಕೇಱಿದೊನ್ (ಎಇ. IX, ೨೦-೮; 800). [?]

**ಪಲಿಯಿಸು,** ಪಳಿಸು (ಕ್ರಿ). ಫಲ ತೋರು ; ಪರಿಣಾಮ ಕಂಡು ಬರು: ಪಲತೆಱದಿಂದೆ ವೃಕ್ಷವಿಕೃತಂ ದೊರೆಕೊಂಡೊಡೆ ಪತ್ತು ತಿಂಗಳೊಳ್ ಪಲಿಯಿಕುಮಾ ಮಹೀರುಹಕೆ ಸತ್ತಿಗೆಯಂ ಪಿಡಿದಲ್ಲಿ ರುದ್ರನಂ ನಿಲಿಸಿ ಯಥೋಕ್ತಮರ್ಚಿಸಿ . . . ಕೆಯ್ಯನೊಸೆದಿತ್ತೊಡೆ ಪಿಂಗುಗುಮಾ ಮಹಾದ್ಭುತಂ (ಲೋಕೋಪ. ೪-೫೫). **ಪಳಿಸು :** ಬಳೆಗುಂ ಸಂತಸ ಮುಣ್ಮುಗುಂ ಬಗೆಯರಲ್ಗುಂ ಪ್ರಜ್ಞೆ ಸಲ್ಗುಂ ವಚಂ ಪಳಿಕುಂ ಗೈಮೆ (ಚಿಕವಿ. ೫-೧೧೬). [<ಫಲಿಸು]

**ಪಲು** 'ಪಲ್' ನೋ.

**ಪಲುಂಬು,** ಪಲಂಬು, ಪಲಬು, ಪಲುಬು, ಪಲ್ಬು, ಹಲಬು, ಹಲುಂಬು, ಹಲುಬು (ಕ್ರಿ). ೧. ದುಃಖವನ್ನು ಹೇಳಿಕೊಳ್ಳು, ತೋಡಿಕೊಳ್ಳು ; ಪ್ರಲಾಪಿಸು : ತನ್ನ ಪ್ರಾಣವಲ್ಲಭೆಯೊಡನಿರ್ದಂದಿನ ಮುಳಿಸೊಸಗೆಗಳಂ ನೆನೆದು . . . ತನ್ನೊಳ್ ಪಲುಂ[ಪಾಠಾಂ. ಲಂ]ಬುತಿರ್ದನಂ ಕಂಡು (ಪಂಪಭಾ. ೪-೧೦೭ ಪ) ; ಕನವರಿಸುವ ಗೋಟ್ಟಿಱಿದಟ್ಟು ಪಲುಂ[ಪಾಠಾಂ.ಲಂ]ಬುವ ನುಡಿ ವಿರಸಮುಪಶ್ರುತಿಯೊಳೀಯವೆಂತುಂ ಫಲಮಂ (ಲೋಕೋಪ. ೧೨-೫೪) ; ಅರಿಗೆ ಪೇಳ್ವೆನಾರಿಗೆ ಪಲುಂಬುವೆನಾರಿಗೆ ತೋರ್ಪೆನೆನ್ನ ಸಂಸಾರದುರಾಪ್ತದುಃಖಭಯಮಂ (ಶತಕ. ೩-೨೩). ೨. ದುಃಖಿಪಡು; ಅಳು; ರೋದಿಸು: ಸಂಗನಂ ತಕ್ಕೈಸಿ ಪಳವಿಸಿ ಪಲುಂಬಿ ಗೋಳಿಟ್ಟು ಅಲಿಟ್ಟು ಶಿವದಿಟ್ಟು (ಬಸರ. ೪-೩೯) ; ಕಂಬನಿಬಿಡುತೆಯ್ದಿ ಕಾಲ ಮೇಲ್ಕೆಡೆದು ಪಲುಂಬಿದರು (ಭರಚ. ೭೧-೭೯). **ಪಲಂಬು :** ೨. ಮರುಳಾದಂತೆ ಮಲ್ಲಣೆ ಮಲ್ಲಣೆಯೆಂದು ಪಲಂಬುತ್ತುಮಿರ್ಪಾ ಮಲ್ಲಣನ ಮೃದುದೈನ್ಯೋಕ್ತಿಗಳಂ ಕೇಳ್ದು (ಉದ್ಭಟ. ೧೨-೫೭ ಪ) ; ಏಕೆ . ಚಿಂತಿಸುವರೇಕೆ ಪಲಂಬುವರೇಕೆ ನೋವರೋ (ಕಾವ್ಯಸಾ. ೧೧೨೫). **ಪಲಬು :** ೨. ಪಲಬುಗೆಯೊಳು ಪಲಬುತಿನ್ನೇದಾರಿವಿಡಿದೆಂತಿಹಳೊ (ಕರ್ಣಪ್ರ. ೨-೧೯). **ಪಲುಬು :** ೧. ವಿರಹದೆ ಪಲುಬುವಳಳುವಳು ಮುಂದುಗೆಡುವಳು (ಕಂಸವಿ. ೯-೨೦೫). ೨. ಮಾರನ ಪೂಗೋಲು ತಾಗಿತೆಂದೆದೆಗೆಟ್ಟೆ ನಾರಿ ಹಮ್ಮೈಸಳು ಪಲುಬಿ (ಪರ್ವಚ. ೫-೧೫). **ಪಲ್ಬು :** ೧. ಪಲ್ಬಿದರ್ ಸೌಶರ್ಮ ಚಿತ್ರಾಂಗದನ ರಣದಿ ಗೆಲ್ವ ಪ್ರತಾಪರಾಷ್ಟ್ರರಿಯೇನೊ . . . ಎಂದು ಖಚರೇಂದ್ರ ಮರುಗೆ (ಜಿನಮು. ೨೭-೪). **ಹಲಬು :** ೨. ಹವಳದ ಮುಡಿಯ ಮ್ಯಾಲೆ ಹುಲ್ಲಿನ ಹೊರಿ ಹೊರಿಸಿ ಹಲಬುವ ತನಕ ಬಿಡಬಾರದ (ಕನ್ನಜಾ. ೩೫೬). **ಹಲುಂಬು :** ೨. ಹಳವಿಸಿ ಹಲುಂಬುತ್ತೆ ಪಾತ್ರೆಯಂ ಕರೆವುತಂ ಇರೆ ಕಂಡು (ತಿಪುರ. ದೇ. ೧೯-೫). **ಹಲುಬು:** ೧. ಒಳಗೊಳಗೆ ಪ್ರುಗನ ಗುಣಮಂ ಹಲುಬುತಿರಲು ಬೈದಪಳೆಂಬರು (ಹಚಕಾ. ೧೨-೧೨). ೨. ಹಂಬಲಿಸಿ ಹಲುಬಿ ಘನತಾಪ ಮನಮಂ ನಟ್ಟು ನೊಂದು (ಬಸರ. ೧೧-೭೪) ; ಬಾ ಮಗನೆ ಮೊಗದೋಱೆನುತ ಹಲುಬಿದನು ಕಲಿ ಪಾರ್ಥ (ಕುಮ್ಮಾರ. ೮ ಸೂಚನೆ); ಹಿಂದುವನ್ನು ಹಿಂದು ರಕ್ಷಿಸದಿದ್ದರೆ ಮತ್ತಾರು ರಕ್ಷಿಸಬೇಕೆಂದು ಹಲುಬಿದಳು (ಬಂಕಿಮ. ೩೦೧).

**ಪಲುಂಬಿ ಪಂಬಲಿಸು,** **ಹಲಬಿ ಹಂಬಲಿಸು** = ದುಃಖವನ್ನು ತೋಡಿಕೊಂಡು ಅಳು ; ಪ್ರಲಾಪಿಸು : ಕಿಱುದುಂ ಬೇಗಮುಱು ಮರುಳಂತು ಪಲುಂಬಿ ಪಂಬಲಿಸಿ (ಪಂಪಭಾ. ೪-೭೪ ಪ) ; ಮನದೊಳ್ ಚಿಂತಿಸಿ ಪಲುಂಬಿ ಪಂಬಲಿಸದೆ (ಧರ್ಮಾಮೃ. ೩-೨೧೭) ; ಅನ್ನಾಹಾರಗಳನು ತೊರೆದು ಹಲಬಿ ಹಂಬಲಿಸಿದನು (ದೌಲತ್. ೪೭೯).

[ದೇ.॥ ತಮಿ. ಪುಲಮ್ಪು ; ಮಲ. ಪುಲಮ್ಬು ; ತುಳು. ಪಲಂಬು ; ತೆಲು. ಪಲುಮು, ಪಲವು]

**ಪಲುಕಿಸು** (ಕ್ರಿ). ಧ್ವನಿಯನ್ನು ಬಳುಕಿಸು : ಇಲ್ಲಿ "ತ" ಎಂಬುದನ್ನು ಮೂರು ಮಾತ್ರೆಯ ಕಾಲಕ್ಕೆ ಎಳೆದು ಪಲುಕಿಸುವುದರಲ್ಲೇ ತಲ್ಲಣದ ನಡುಕವೂ ಸೂಚಿತವಾಗುತ್ತದೆ (ಸಮಾಲೋ. ೨೦೫).
[ಪಲುಕು$_1$+-ಇಸು$_3$]

**ಪಲುಕು$_1$** (ಕ್ರಿ). ೧. ಮಾತನಾಡು ; ನುಡಿ : ನಿಜವನ್ನು ಪಲುಕವ್ವ ಕನ್ಯೆಕುಮಾರಿ (ಅದೂಟ. ೨೦). ೨. (ಧ್ವನಿಯು) ಬಳುಕು; ಮಿಡಿ : ವೀಣೆಯ ಪಲುಕು ಪಲುಕಿದಂತಾಯಿತು (ಎಳಕ. ೭೫). ೩. ಹಾಡು ಹೇಳು ; ಗುಣುಗುಣಿಸು : ಮಲುದನಿಯಲ್ಲಿ ಚೋಳ ಕನ್ನೆಯರ ಭಂಗವನು ಪಲುಕಿದರಿವಳು ಮಲಗುವಂಥವಳೆ, ಈ ಮಾಯಾಂಗನೆ? (ದೀಪಮ. ೨೩-೧೨). ೪. (ಆಲಂ) ಅಪಶಕುನವನ್ನು ನುಡಿ : ಒಳ್ಳೆಯ ಕೆಲಸಕ್ಕೆ ಹೊರಟಿರುವಾಗ ಏನಾದರೂ ಪಲುಕಬೇಡ (ರೂಢಿ).
[ದೇ.॥ ತಮಿ. ಪಲುಕ್ಕು ; ತೆಲು. ಪಲುಕು, ಪಲ್ಕು]

**ಪಲುಕು$_2$,** ಪಲಕು (ನಾ). ೧. [ಸಂಗೀತ] (ಧ್ವನಿಯ) ಬಳುಕು ; ಮಿಡಿತ ; ಕಂಪನ : ಮಿಂಚಿನಂತೆ ಹೊಳೆಯುವ ಸ್ವರ ತಿರುವುಗಳೂ, ಪಲುಕುಗಳೂ . . . ಮೆಚ್ಚುಗೆಯನ್ನು ತಂದುಕೊಟ್ಟುವು (ಸಂಗೀತ. ೧೨೦) ; ನಿಮ್ಮ ಶಾರೀರದಲ್ಲಿ ಪಲುಕಿಲ್ಲ (ಬಪೂಪಿ. ೯೩) ; ಅವನು . . . ಹಾಡಿನ ಪಲುಕುಗಳನ್ನು ಕೂಡ ತಪ್ಪುತ್ತಿರಲಿಲ್ಲ (ಆಲಹೂ. ೭೧). ೨. (ಆಲಂ) ಧ್ವನಿಯಿಂದ ಕೂಡಿದ ರಚನೆ; ಅಂತರಾರ್ಥ ಕಲ್ಪನೆ: ಜನಪದಸಾಹಿತ್ಯದ ಒಂದೊಂದು ಪಲುಕೂ ಈ ದೃಷ್ಟಿಯಿಂದ ಭಾವಗೀತೆಯೇ (ಅನುಕ. ೩೭). **ಪಲಕು:** ೧. ರಾಜನ . . . ಸತತ ಅಭ್ಯಾಸದಿಂದ ಪಲಕುಗಳು, ನೆರವಲಗಳು ಲೀಲಾಜಾಲವಾಗಿ ನುಡಿಯುತ್ತಿದ್ದವು (ನಟಸಾ. ೪೯).
[<ಪಲುಕು$_1$/ತೆಲು. ಪಲುಕು, ಪಲ್ಕು]

**ಪಲುಗಿರಿ** 'ಪಲ್ಗಿರಿ' ನೋ.

**ಪಲುಗುಣ,** ಪಲ್ಗುಣ, ಫಲುಗುಣ, ಫಲ್ಗುಣ (ನಾ). ಪಾಂಡವರಲ್ಲಿ ಮೂರನೆಯವನು ; ಅರ್ಜುನ : ಫಕಾರಕ್ಕೆ ಪಕಾರಂ . . . ಫಲ್ಗುನ-ಪಲುಗುಣ (ಶಮದ. ೨೫೫ ಪ್ರಯೋ). **ಪಲ್ಗುಣ :** ನೀಲ ಧ್ವಜಂ ತಾನೆ ತುಱುಗಿದಗ್ಗದ ಸಕಲಬಲಸಹಿತ ನೂಕಿದಂ ಪಲ್ಗು[ಪಾಠಾಂ. ಫಲುಗು, ಫಲ್ಗು]ಣನ ಪಡೆಯ ಮೇಲೆ (ಜೈಮಿಭಾ. ೮-೩೬). **ಫಲುಗುಣ :** ಮಿಡಿವೆನಾಗಳೆ ಧರ್ಮನಂದನನ ಬಂದು ಫಲುಗುಣನಡ್ಡ ವಿಸಲಿ (ಕುಮ್ಮಾರ. ೧-೬೫). **ಫಲ್ಗುಣ :** ನೆನೆಯದೆ ಕಜ್ಜದ ಬಿಣ್ಪಂ ಮುನಿವಯ್ ನೀನೊರ್ವನೆಂಬ ಹರಿಗಮುಸಾಧ್ಯಂ ಮನುಜಪ್ರಾಕಾರಾಂಕನೊಳಿಸಿಬರುಮೊಂದಾಗಿ ತಾಗುವಂ ಫಲ್ಗುಣನೊಳ್ (ಕಾವ್ಯಾವ. ೪೦೪).
[<ಸಂ. ಫಲ್ಗುನ]

**ಪಲುಂಬಿ,** ಹಲುಂಬಿ (ನಾ). ನವಿಲು ; ಮಯೂರ : ಪುಲಿಯು

ಚರ್ಮದ ಪಲುಬಿಯ ಗಱಿಯ ತೋಳ ಕಚ್ಚಳಿಯ ತೊಂಗಲ್ಗಂಟಿಯ . . . ಪಲ ಬಿರುದುಗಳ್ಗೆಗಳ್ತೆವಡೆಯೆ (ರಾಜಶೇ. ೬-೧೧ ವ). **ಹಲುಬಿ:** ಹಲುಬಿಯ ಗಱಿಯ ಮಸ್ತಕದೊಳಗಿರದಾಂತು (ಜ್ಞಾನಚ. ೨೩-೫೮).
**P** ಇದು ಸಂಸ್ಕೃತದ 'ಕೇಕಿ' ಎಂಬುದರ ಅನುವಾದ.
[ಪಲುಬು(<ಪಲುಂಬು) + -ಇ$_3$]

**ಪಲುಬು** 'ಪಲುಂಬು' ನೋ.

**ಪಲುವ್ಮೃಗ** 'ಪಲ್ಮೃಗ' ನೋ.

**ಪಲುವೊರೆ** 'ಪಲ್ಮೊರೆ' ನೋ.

**ಪಲುಸುಲಿ** 'ಪಲ್ಸುಲಿ' ನೋ.

**ಪಲೆಗ** (ನಾ). (?) : ಅಪ್ಪಿಯ ಸೆಟ್ಟಿಯ ಮಕನಗಜವಮಮನ ಪಲೆಗ ಬೀರನೊಟಂಬನ ರಾಜ್ಯದೊಳೆ ತುಱುಗೊಳೆ ಕಾದಿ ಸತ್ತ (ಎಕ. X, ಗೋಲೀಜ. ೮೫-೩ ; ಸು. 920). [ ? ]

**ಪಲ್ಕಡಿ** 'ಪಲ್ಗಡಿ' ನೋ.

**ಪಲ್ಕಿನಿ** 'ಪಲಿಕಿನಿ' ನೋ.

**ಪಲ್ಕಿರಿ** 'ಪಲ್ಗಿರಿ' ನೋ.

**ಪಲ್ಗಚ್ಚು** 'ಪಲ್ಗರ್ಚು$_1$' ನೋ.

**ಪಲ್ಗಡಿ,** ಪಲ್ಕಡಿ, ಹಲುಕಡಿ$_1$, ಹಲ್ಕಡಿ$_1$, ಹಲ್ಗಡಿ, ಹಲ್ಲುಕಡಿ (ಕ್ರಿ). ೧. (ಆಕ್ರೋಶ ಇತ್ಯಾದಿಗಳಿಂದ) ಹಲ್ಲನ್ನು ಕಚ್ಚು ; ಹಲ್ಲು ಮಸೆ: ಉಗ್ರಕೋಪದಿಂ ವಿಾರ್ದನೀ ತನ್ನ ನೇಮವನಕಟ ಮಗನೆಂದು ಪಲ್ಗಡಿಯುತ್ತೈತರಲ್ಕೆ (ಜೈಮಿಭಾ. ೩೧-೩೦). **ಪಲ್ಕಡಿ :** ೧. ಪೇನಂತೆ ತಲೆಯಂ ಪತ್ತಿ ಪಲ್ಕಡಿವರ್ (ಧರ್ಮಾಮೃ. ೩-೭೩). **ಹಲುಕಡಿ$_1$ :** ೧. ಆ ಖಳತರುಣಿ . . . ಘುಂಘುರಿನೆ ಹಲುಕಡಿದು [ಪಾಠಾಂ. ಹಲುದಿನುತ] . . . ಝಡಿದಿಟ್ಟಳಿನಕುಲನ (ತೊರರಾ. ೧-೧೦-೧೫). **ಹಲ್ಕಡಿ$_1$:** ೧. ಅವರು ಸೇವಕನ ಉದ್ಧಟತನವನ್ನು ಕಂಡು ಹಲ್ಕಡಿದರು (ರೂಢಿ). **ಹಲ್ಗಡಿ:** ೧. ಖಡಖಡನೆ ಹಲ್ಗಡಿಯುತಲಿ . . . ಅಡವಿಯಲ್ಲಾರ್ಭಟೆ ಮಾಡಿದಳು (ಕರ್ನಾಕ. ೨೯೩). ೨. (ಚಳಿಯಿಂದ) ಹಲ್ಲು ಸಾಲು ಒಂದಕ್ಕೊಂದು ತಾಕುವಂತೆ ನಡುಗು : ಚಳಿಯಿಂದ ಹಲ್ಗಡಿದು ನಡುಗಿ ಗಡಗಡನೆ (ಕಾಲೂರ. ೭೭-೧೪೩). **ಹಲ್ಲುಕಡಿ :** ೧. ಪ್ರೀಚರನು . . . ಹಲ್ಲುಕಡಿಯುತ್ತ ನುಡಿದನು (ಮಹಾತ್ಮ. ೯೪). [ಪಲ್ + ಕಡಿ$_1$]

**ಪಲ್ಗದಿರ್** (ನಾ). ಹಲ್ಲಿನ ಕಾಂತಿ,-ಹೊಳಪು : ಭರದೆ ನುಡಿದಂ ಶಿಶುವಿನೊಡನೆ ಪಲ್ಗದಿರ್ಗೂಡಿ ದರಹಾಸಮುಣ್ಮುತಿರಲು (ಆರಾಚ. ೨-೧೧-೩೨). [ಪಲ್+ಕದಿರ್$_2$]

**ಪಲ್ಗರ್ಚು$_1$,** ಪಲ್ಗಚ್ಚು, ಹಲ್ಲುಕಚ್ಚು (ಕ್ರಿ). ೧. = ಪಲ್ಗಡಿ ೧. ೨. ಕೋಪವನ್ನು ಸಹಿಸಿಕೊಳ್ಳು,—ತಾಳಿಕೊಳ್ಳು : ಪಲವುಂ ಸೂಟಿಲಿದು ಪಲ್ಗರ್ಚಿ ಕಲ್ಲಸರದಿಂ ಸಿಲ್ಕುವಳಿದು ಮಾಣ್ಬುದುಂ (ಪಂಚತಂ. ೧೨೭-೧೨). **ಪಲ್ಗಚ್ಚು :** ೧. ಚಾಗಕ್ಕೆ ಮುಯ್ಯಾಂಪರೀವಡೆ ಪಲ್ಗಚ್ಚುವರ್ (ಎಕ II, ೧೩೩-೬೮ ; 982). ೨. ಕಾಲ್ಗೆ ಬೀಳುತುಂ ಪಲ್ಗಚ್ಚಿ ದೈನ್ಯವಚನಂಗಳಿಂದೆ . . . ಉಸಿರಿ ಮೈಗರೆವುತಿರ್ದರ್ (ಚಬಪು. ೨೪-೨೩). **ಹಲ್ಲುಕಚ್ಚು :** ೧. ಇದಕ್ಕೆ ಪ್ರತಿಫಲ ಕೊಡದಿರಲಾರೆನೆಂದು ಹಲ್ಲುಕಚ್ಚಿದನು (ಕಾಲೂರ. ೯ ಕಥಾಸಾರ).

ಪಲ್ಗರ್ಚಿ ಸೈರಿಸು = ಬಾಯಿ ಮುಚ್ಚಿಕೊಂಡು ಸಹಿಸಿಕೊಳ್ಳು,-ತಾಳಿಕೊಳ್ಳು ; ತೆಪ್ಪಗಿರು : ಪಸುವಂ ಮೋದುವವೋಲೆ ಮೋದೆಯುಮುದಂ ಕಂಡಂತೆ ಪಲ್ಗರ್ಚಿ ಸೈರಿಸಿದೆಂ ನಿನ್ನಯ ನನ್ನಿಗಿನ್ನೆವರಂ (ಸಂಪಭಾ. ೭-೫೮). ಹಲ್ಲುಕಚ್ಚಿಕೊಂಡಿರು = ಸುಮ್ಮನೆ ಸಹಿಸಿಕೊಂಡಿರು : ಒಂದು ಕಡೆ ಹಲ್ಲುಕಚ್ಚಿಕೊಂಡಿರೋಣ ಅವಳ ಕೈಯಿಂದ ಆಗೊಲ್ಲ (ಕಃಸಃಸಂ. ೨೦). [ಪಲ್ + ಕರ್ಚು$_1$]

**ಪಲ್ಗರ್ಚು$_2$** (ನಾ). = ಪಲ್ಗಲೆ ೧: ರಂಕಿದ ಕುಚ ತೋಳುಗಳ ಗಲ್ಲದೆಡೆಯ ನಖಾಂಕಿತ ಪಲ್ಗರ್ಚದುವೇ ಸೋಂಕಿದ ಖೂಳನದಾವನೊ ತೋಱೆಂದು ಝಂಕಿಸಿದಳು ತಾಯಿ ಮಗಳ (ಮೋಹತ. ೧೮-೭೬). [<ಪಲ್ಗರ್ಚು$_1$]

**ಪಲ್ಗಲೆ,** ಪಲ್ಗಳೆ$_2$ (ನಾ). ೧. ಹಲ್ಲು ನಾಟಿದ ಗುರುತು. ೨. [ಕಾಮಶಾ] ಪ್ರಣಯಪರವಶರಾದ ಸ್ತ್ರೀ ಪುರುಷರು ರತಿಕ್ರೀಡೆಯ ಕಾಲದಲ್ಲಿ ಪರಸ್ಪರ ಶರೀರಗಳಲ್ಲಿ ಮಾಡುವ ಹಲ್ಲಿನ ಕಚ್ಚು ; ದಂತಕ್ಷತ : ಮುಟ್ಟೆ ಬಿಡದ ಮೈ ಕಿಱುದನಿ ಪಲ್ಗಲೆಯುಟ್ಟೊಳಿಯಿಲ್ಲದ ಬಾಯ್ಗೂಟಂ . . . ಎಸೆದುವು ಜೋಡರ ಸುಸಿಲೊಳ್ (ಉದ್ಭದೇ. ೪-೧೭). **ಪಲ್ಗಳೆ$_2$ :** ೧. ಒರ್ವನತಿಕುಶಲನಪ್ಪ ಬಂಧುರ ಗರುಡಮಂತ್ರಸಿದ್ಧಂ ಬಂದು ಸಡಗರದಿ ಪಿರಿಯರಗನೆಯ್ದಿ ಕರ್ಚಿದ ಪಲ್ಗಳೆಯ ನಡೆನೋಡಿ ನಿಶ್ಚೈಸಿ ನುಡಿದಂ (ಆರಾಚ. ೨-೧೦-೧೭). [ಪಲ್+ಕಲೆ$_2$]

**ಪಲ್ಗಳೆ$_1$,** ಹಲುಗಳೆ (ಕ್ರಿ). ಹಲ್ಲುಗಳನ್ನು ತೆಗೆದು ಹಾಕು ; ಹಲ್ಲು ಕೀಳು : ನಡುಗಿ ಪೊಡೆವಡುವುದುಂ ಮೊಱೆಯಿಡುವುದು ಮೇಕಣ್ಣ ಪಿಡಿದು ಪಲ್ಗಳೆದುಂ ಪಾವಡಿಗನೆನಿಪವನ ಮೆಯ್ಯುಂ ಕಿಡಿಸಲ್ಕಾರ್ತಪುವೆ ತಮ್ಮ ನಚ್ಚಿನ ನಾಗರ್ (ಸಮಪ. ೯-೮೧). **ಹಲುಗಳೆ :** ಲಯಕೃತಾಂತನ ತಲೆಯ ನರೆಯರೆಗೊಯ್ದು ಕಡುಹಿನ ಕಾಲಭೈರವನ ಹಲುಗಳೆದ . . . ತಾಮಸರಿದ್ದುದು (ತೊರರಾ. ೩-೭-೬). [ಪಲ್ + ಕಳೆ$_1$]

**ಪಲ್ಗಳೆ$_2$** 'ಪಲ್ಗಲೆ' ನೋ.

**ಪಲ್ಗಱೆ** (ನಾ). ಹಲ್ಲಿಗೆ ಬರುವ ಬಣ್ಣ ; ಹಲ್ಲಿನ ಬಣ್ಣ : ಮತ್ತಿಯೆಲೆಯಂ ತಾಂಬೂಲದೆಲೆಯೆಂದು ಮೆಲ್ದು ಪಲ್ಗಱೆಗಾಸೆಗೆಯ್ವನುಮಂ . . . ಪೋಲ್ಕುಂ (ಧರ್ಮಾಮೃ. ೧೧-೩೫). [ಪಲ್+ಕಱೆ$_2$]

**ಪಲ್ಗಿಡಿಗಿರಿ** (ಕ್ರಿ). ಹಲ್ಲು ಕಚ್ಚಿಕೊಂಡಿರು ; ಅಸಹಾಯನಾಗಿರು : ಜವ್ವನೆಗಾಳ್ದನಾದ ಮುದುಪನಂತೆ ಪಲ್ಗಿಡಿಗಿರಿದು (ಧರ್ಮಾಮೃ. ೧೩-೬೯). [ಪಲ್+ಗಿಡಿಗಿರಿ]

**ಪಲ್ಗಿರಿ,** ಪಲುಗಿರಿ, ಪಲ್ಕಿರಿ, ಪಲ್ಲುಗಿರಿ, ಹಲುಗಿರಿ, ಹಲ್ಕಿರಿ, ಹಲ್ಗಿರಿ, ಹಲ್ಲುಕಿರಿ, ಹಲ್ಲುಗಿರಿ (ಕ್ರಿ). (ನಗು, ದುಃಖ, ಆಸೆ, ದೈನ್ಯ, ನೋವು, ಕೋಪ ಇತ್ಯಾದಿ ಭಾವಗಳನ್ನು ಸೂಚಿಸುವಾಗ) ಹಲ್ಲು ಬಿಡು ; ಹಲ್ಲು ಕಿಸಿ : ಒಳಕೆಯ್ಯೊಳಿರ್ದು ಪಲ್ಗಿರಿದೊಳವಾಲಂಗೊಂಡು ಮೊರೆವ ಭಷಕನ ತೆಱದಿಂ (ಕಾವ್ಯಾವ. ೨೪೪) : ಪುರ್ಬಿಕ್ಕಿ ಪಲ್ಗಿರಿದು ಹುಱಿಲ್ಗೊಂಡು ಕಿರಾತಕಾಂತೆಯುರಂಬಿಗೆ ನಗಿಸುತಿರ್ಪ ಮರ್ಕಟಪ್ರಕರದಿಂ (ಗಿರಿಕ. ೧-೧೨೮ ವ); ಅರಸ ಕೇಳವನ ಬಾಣದ ಘಾತಿಗರ್ಜನಂ ಕೊರಗಿದಂ ಮೇಲೆ ಪಲ್ಗಿರಿದನಾ ಕಪಿ (ಜೈಮಿಭಾ. ೨೭-೪೦). **ಪಲುಗಿರಿ :** ಕತ್ತೆಗಳಂತೊಱಲಿ ಕೋಡಗಗಳಂತೆ ಪಲುಗಿರಿದು (ಬಸರ. ೮-೧೦೧); ಕಂಗಳಂ ಮೆಳ್ಪಿಸುತ ಪಲುಗಿರಿ [ಪಾಠಾಂ. ಪಲ್ಗಿರಿ]ದುಂಗುಟಂಗಳನೂಱಿ ನಡೆವುತ (ಬಸವು. ೧-೪೯). **ಪಲ್ಕಿರಿ :** ತೆಕ್ಕೆಯಿಲ್ಲದ ಎತ್ತು ಬಿಕ್ಕಿ ಪಲ್ಕಿರಿದಂತೆ (ಗಾದೆ). **ಪಲ್ಲುಗಿರಿ :** ಪಲ್ಲುಗಿರಿದು ಪುರ್ಬೆತ್ತಿ ಬೆರಳ ಕೊನೆಯಲ್ಲಿ ಬರಿಗಳನು ತುಱಿಸಿ (ಅಂಜಚ. ೨-೮೦). **ಹಲುಗಿರಿ :** ನಿಂದಿರ್ದು ಶಿವನ ಶರಣರ್ಗೆ ಹಲುಗಿರಿವುತಂ (ತಿರುರ. ದೇ. ೧೫-೧೮) ; ಪಾರ್ಥನ ತೋಱು ಕೊಡುವೆನು ತನಗೆ ಹೇಳದೆ ಬಱಿದೆ ಹಲುಗಿರಿದೈ (ಕುಮ್ಯಾಕ. ೯-೨). **ಹಲ್ಕಿರಿ:** ಅವನು ಶ್ರೀಮಂತನಾಗಿದ್ದು ಯಾರ ಹಂಗಿಗೂ ಹಲ್ಕಿರಿಯಬೇಕಾದ ಆವಶ್ಯಕತೆಯಿರಲಿಲ್ಲ (ಪುನರು. ೧೧೭). **ಹಲ್ಗಿರಿ :** ಈಗ ಮತ್ತೆ ನನ್ನ ಬಳಿಗೇ ಬಂದು . . . ಹಲ್ಗಿರಿಯುತ್ತ

ರುವೆ (ಕವಿಕ. ೪). **ಹಲ್ಲುಕಿರಿ :** ಅವನು ಅವಳ ಮುಂದೆ ಹೇಗೆ ಹಲ್ಲು ಕಿರಿಯುತ್ತಿದ್ದಾನೆ (ಮುರುಕು. ೭). **ಹಲ್ಲುಗಿರಿ :** ನೋಡಿರೈ . . . ಬಡಕೋಡಗಂಗಳು ಹಲ್ಲುಗಿರಿವಾ ಸಂಭ್ರಮಂಗಳನು (ಕೌಶಿಂ. ೧೭–೧೬); ಅರುವಿಲ್ಲದ ವಿಪಿನದಲಿ ಹಾಳೂರ ಕೋಳಕೆ ಕಾಲ ತಗಲಿಸಿ ದಾರಿಗರಿಗವ ಹಲ್ಲುಗಿರಿವಂದದಲಿ ಸಂಸ್ಕೃತಿಯ . . . ಬಲೆಗೆ ಬಿದ್ದವಗಾರು ಗತಿ (ಅಮೃತ. ೨–೬೧). [ಪಲ್ + ಕಿರಿ$_2$]

**ಪಲ್ಗಿರಿಸು,** ಹಲುಗಿರಿಸು (ಕ್ರಿ). ಹಲ್ಲು ಬಿಡುವಂತೆ ಮಾಡು : ಅಡಿಗಡಿಗೆ ಪಳವಿಗೆಯ ಹಸುಮನಂ ಪಲ್ಗಿ[ಪಾಠಾಂ. ಹಲುಗಿ]ರಿಸಿ . . . ನೋಯಿಸಿದನು (ಜೈಮಿಭಾ. ೨೫–೩೯). **ಹಲುಗಿರಿಸು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಪಲ್ಗಿರಿ + -ಇಸು$_3$]

**ಪಲ್ಗಿಟಿ** (ನಾ). ಒಂದು ಊರಿನ ಹೆಸರು : ಮಹೋತ್ಸವಸಮಯೇ ಮುಣ್ಣಕಲ್ಲು ಗ್ರಾಮಸ್ಯ ಪಲ್ಗಿಟಿಗ್ರಾಮಸ್ಯ ಚ . . . ರಾಜಮಾನೇನ ದತ್ತಾ (ಇಆ. XI, ೬೭–೧೭ ; 7ನೆಯ ಶತ ?). [ ? ]

**ಪಲ್ಗುಟ್ಟುಹ** (ನಾ). ಹಲ್ಲನ್ನು ಉದುರಿಸುವಿಕೆ : ನಿಕಾರ, ವಿಪ್ರಕಾರ—ಪಲ್ಗುಟ್ಟುಹಂ ಮೊದಲಾದುದು (ನಾಚಿರಾ. ೬). [ಪಲ್ + ಕುಟ್ಟುಹ]

**ಪಲ್ಗುಣ** 'ಪಲುಗುಣ' ನೋ.

**ಪಲ್ಗುತ್ತು** ( ? ) (ಕ್ರಿ). ( ? ): ಪಟುಗಳ್ ಪೆರ್ಬುಯಲಾಗೆ ದೆರ್ಪಳನಿಸಂ ಪಲ್ಗುತ್ತ ಲೀಲೆಂಬಿನಂ ( ? ) ಕುಚಾಗಳ್ ತೀವಿರೆ ಗೋರೆಯಾಯ್ತು ನೆಲನೆಂಬಾಶಂಕೆಯಂ ಮಾಟ್ಪಿನಂ ಪುಟುಪೊಲ್ಪಾಯೆ ಮೃಗಂಗಳೋಡಲವಕಾಶಂ ತಾನದಿಲ್ಲೆಂಬಿನಂ ಸುಟುದಂಭೋನಿಧಿ ಮೇರೆದಪ್ಪಿದ ತೆಱಂ ಬಂದತ್ತ ನೀಕಾರ್ಣವಂ (ಕಾವ್ಯಸಾ. ೪೬೫ ಶೂದ್ರಕ). [ ? ]

**ಪಲ್ಟಣ** 'ಪಲಟಣ' ನೋ.

**ಪಲ್ಟಿ,** ಪರಟ್ಟಿ$_2$, ಪೈಟ (ನಾ). ತಲೆಕೆಳಗಾಗುವಿಕೆ; ಲಾಗ. **ಪರಟ್ಟಿ$_2$. ಪೈಟ :** (೬).

**ಪಲ್ಟಿ ಹಾಕು**=೧. ತಲೆ ಕೆಳಗಾಗಿ ನೆಗೆ; ಲಾಗ ಹಾಕು: ಅವರೆಲ್ಲಾ ಎತ್ತರಕ್ಕೆ ನೆಗೆದಾಡಿದರು. ಪಲ್ಟಿ ಹಾಕಿದರು (ಶಾಲಿಮ. ೧೨೧). ೨. (ಆಲಂ) ಅನುತ್ತೀರ್ಣನಾಗು ; ನಪಾಸಾಗು : ಅವನು ಸರಿಯಾಗಿ ಓದದೆ ಪರೀಕ್ಷೆಯಲ್ಲಿ ಪಲ್ಟಿ ಹಾಕಿದ (ರೂಢಿ). **ಪಲ್ಟಿ ಹೊಡೆ, ಪರಟ ಹೊಡೆ**=೧. ಪಲ್ಟಿ ಹಾಕು; ಲಾಗ ಹಾಕು: ಎದುರಾಳಿಯೂ ಚೆಂಡೂ ಇಬ್ಬರೂ ಪಲ್ಟಿ ಹೊಡೆಯುವರು (ತುಟವಿಾ. ೬೫); ಮೇಲಿನಿಂದ ಪರಟ ಹೊಡೆಯುವುದು (ಅದಾಟ. ೧೬೫). ೨.=ಪಲ್ಟಿ ಹಾಕು ೨: ಮ್ಯಾಟ್ರಿಕ್‌ನಲ್ಲೇ ಪಲ್ಟಿ ಹೊಡೆದ ನನಗೆ ಸ್ವಲ್ಪ ಅಧೈರ್ಯವಾದರೂ ಪ್ರೇಮವು ನನ್ನನ್ನು ಹಿಂಜರಿಯಲು ಬಿಡಲಿಲ್ಲ (ಚಿಗುಬ. ೧೧೧).

[←ಮರಾ. ಪಲಟೀ, ಪಲಟಾ. / ತಮಿ. ಪಲ್ಟಿ ; ತೆಲು. ಪಲ್ಟಿ, ಪಲ್ಲಟ]

**ಪಲ್ಟನು** 'ಪಲಟಣ' ನೋ.

**ಪಲ್ದಿನ್,** ಪಲ್ದಿನು, ಪಲ್ಲುದಿನು, ಹಲುದಿನ್, ಹಲುದಿನು (ಕ್ರಿ). ೧.=ಪಲ್ಕಡಿ ೧: ಒಂದು ದಿವ್ಯಧ್ವನಿಯಾಗಸದೊಳಗೊಗೆದುದನೆ ಕೇಳ್ದವಧರಿಸಿ ದಿವ್ಯಕ್ಕೆ ಪಲ್ದಿನುತ್ತುಂ (ಅರ್ಧನೇ. ೭–೧೮ ವ). ೨. (ಕುದುರೆ, ಹಸು ಮುಂತಾದ ಪ್ರಾಣಿಗಳು ಯಾವುದಾದರೂ ರೋಗದಿಂದ) ಹಲ್ಲನ್ನು ಕಡಿ,—ಅಗಿ : ಎಸಡಿನ ಪಾಲಂ ದುಗ್ಧಾಜ್ಯ ಸಮನ್ವಿತಮಟ್ಟು ಕೊಡೆಯೆ ಪಲ್ದಿಂಬುದನೋಡಿಸುಗುಂ (ಲೋಕೋಪ. ೯–೩೧) ; ಬೀಟ್ಟುಂ ಮೆಯ್ಯುರಿ ತಕರ್ಣಂ ಪಲ್ದಿಂಗುಂ . . . ಅಪ್ಪೊಡಂ ತಾಂ ತುರಗಂ ಗ್ರಹಭೀತನಕ್ಕುಂ (ಅಶ್ವಶಾ. ೧೬–೧೬). **ಪಲ್ದಿನು : ೧.** ತಿಳಿದೆದ್ದು ಪಲ್ದಿನುತ ಹುಬ್ಬುಗಳ್ ಗಂಟಿಕ್ಕಿ (ತುರಂಗ. ೪೭–೧೯). **ಪಲ್ಲುದಿನು: ೧.** ಮಾತ ಕೇಳಿ ಪಲ್ಲುದಿನುತ ನಿದ್ರಾವರಣೀಯವಹ ಗೆಲ್ಲಕಾಱರು ಬಂದರೆಂದು (ತ್ರಿಪುಸಾಂ. ೧೬–೧೬೫). **ಹಲುದಿನ್ : ೧.** ಕಡುನೊಂದು ಪರಿತಂದು ಹಲುದಿಂದು ನುಡಿದನು (ಸೋಮಚ. ೨–೬೧). **ಹಲುದಿನು: ೧.** ಮಾರಿಯಂದದಿ ಹಲುದಿನುತಲತಿಘೋರತರ ರೂಪಾಂತು ಮಾಯದಿ ಕ್ರೂರಖೇಚರ ಬರುತಲಿರೆ (ಸನತ್ಕು. ೭–೨೮); ಹರಿನಂದನನು ಹಲುದಿನುತ ಹರಿತಂದೊದೆದನತಿರಥನ (ಕುರಂಗ. ೬–೩೯–೭). [ಪಲ್ + ತಿನ್]

**ಪಲ್ದಿನು** 'ಪಲ್ದಿನ್' ನೋ.

**ಪಲ್ದೆಱಿ,** ಹಲುದೆಱಿ, ಹಲ್ತೆರೆ (ಕ್ರಿ).=ಪಲ್ಗಿರಿ : ಮಾಂಸರಸಮಂ ಸವಿದಾಡುವ ರಕ್ಕಸರ್ಗೆ ಪಲ್ದೆಱಿದ ಮರುಳ್ಗಳಿಂ (ಎಕ. VIII, ಸಾಗರ. ೧೧೯–೨೮ ; 1042) ; ನಾಳೀಜಂಘಂ ಕರಂ ಪಲ್ದೆಱಿದು ನಡುಗಿ ಪಱಿಟ್ಟಿಂದು ಪುರ್ಬಿಕ್ಕಿತಾಗಳ್ (ರಾಜಶೇ. ೯–೨೯). **ಹಲುದೆಱಿ :** ಮಾಯಾ ಮೋಹದಲಿ ಮೈಮಱಿದು ವಿಷಯಸುಖಂಗಳಿಗೆ ಹಲುದೆಱಿದು . . . ನಿನ್ನನಱಿಯದು ಮೂಢಜನ (ಸಿಭಾಗ. ೧೦–೫೨–೨೯). **ಹಲ್ತೆರೆ :** ಹಳಿದು ಹಲ್ತೆರೆದು ಅಣಕಿಪರೊ (ವಿದಾಕ್ಯ. ೪೮–೩). [ಪಲ್ + ತೆಱಿ$_1$]

**ಪಲ್ಮಡಿ,** ಪಲ್ಮಾಡಿ, ಪಲ್ಮಿಡಿ, ಹಲುಮಿಡಿ, ಹಲ್ಮಿಡಿ (ನಾ). ಒಂದು ಊರಿನ ಹೆಸರು; P ಬೇಲೂರು ತಾಲ್ಲೂಕಿನಲ್ಲಿರುವ ಈಗಿನ ಹಲ್ಮಿಡಿ : ಪೆತ್ತ ಜಯನಾ ವಿಜಅರಸನ್ಗೆ ಬಾಳ್ಗಟ್ಟು ಪಲ್ಮಡಿಉಂ ಮೂಟುವಳ್ಳಿಉಂ ಕೊಟ್ಟಾರ್ (ಮೈಆರಿ. ೧೯೩೬, ೧೬–೧೨ ; 450). **ಪಲ್ಮಾಡಿ :** ಪಿರಿಯ ಮುಗುಳಿಯ ಕೊಮಾರಯ್ಯನುಂ ಪಲ್ಮಾಡಿಯ ಮೆನ್ದಮ್ಮ . . . ಇನ್ದವೂರದ ವಿಟಯ್ಯನುಂ ಮಚ್ಚಿಳಂ (ಎಕ. VI, ಚಿಕ್ಕಮ. ೩–೧೪ ; 899 ?). **ಪಲ್ಮಿಡಿ :** ಅತ್ಯಂತಪ್ರಾಚೀನ ಕನ್ನಡ ಪಲ್ಮಿಡಿಶಾಸನ (ದ್ರಾವಿವಿ. ೮೧). **ಹಲುಮಿಡಿ :** ಹಲುಮಿಡಿಯ ದೇವಿಸೆಟ್ಟಿಯ ಮಗ (ಮೈಆರಿ. ೧೯೩೩, ೪–೧ ; 1523). **ಹಲ್ಮಿಡಿ :** ಸು. ೪೫೦ರ ಹಲ್ಮಿಡಿಶಾಸನವೇ ನಮಗೆ ದೊರಕಿರುವ ಅತ್ಯಂತ ಪ್ರಾಚೀನವಾದ ಕನ್ನಡ ಶಾಸನ (ಕಶಾಆ. ೭). [ ? ]

**ಪಲ್ಮಾಡಿ** 'ಪಲ್ಮಡಿ' ನೋ.

**ಪಲ್ಮಾಣಿಕ,** ಹಲವಮಾಣಿಕ, ಹಲುವಮಾಣಿಕ, ಹಲುವಮಾಣಿಕ್ಯ (ನಾ). ಒಂದು ಬಗೆಯ ಸಸ್ಯ ; ನಾಯಿಬೇಲ : ಜೀರಗೆಯುಂ ಪಲ್ಮಾಣಿಕವೋರಂತಿರೆ ಕುಡಿಯೆ ಮತ್ತೆ ದಿವ್ಯೌಷಧಿಗಳ್ (ಖಮದ. ೧೬–೫೩). **ಹಲವಮಾಣಿಕ:** "ಗೋಪಃ–ಹಲವಮಾಣಿಕ" (ಓಷಧಿ. ೫೦). **ಹಲುವಮಾಣಿಕ :** "ಗೊಳಗೊಂಟಿಯೆನೆ ಹಲುವಮಾಣಿಕಂ" (ಮಂಗರಾ. ೩೫–೧೩) ; "ಕಂಟುಪಾದಃ—ಹಲುವಮಾಣಿಕಾ" (ಓಷಧಿ. ೨೩). **ಹಲುವಮಾಣಿಕ್ಯ :** (೬). [ ? ]

**ಪಲ್ಮಿಗ** (ನಾ). ಕೋರೆಹಲ್ಲುಗಳನ್ನು ಹೊಂದಿರುವ ಸಿಂಹ, ಹುಲಿ, ಆನೆ, ಹಂದಿ ಮುಂತಾದ (ಹಿಂಸ್ರ) ಪ್ರಾಣಿ: ಪೇಪಿಂ ಪುಲ್ಮಿಗಮುಂ ಬೆಳ್ಮಿಗಮುಂ ಪಲ್ಮಿಗಮುಂ ತಣಿದುವೆಯ್ದೆ ಕಾಪಿನ ಪೊಲದೊಳ್ (ಅನಂಪು. ೧೧–೩೯). [ಪಲ್ + ಮಿಗ]

**ಪಲ್ಮಿಡಿ** 'ಪಲ್ಮಡಿ' ನೋ.

**ಪಲ್ಮುಱಿ,** ಹಲ್ಲುಮುರಿ (ಕ್ರಿ). ೧. ಹಲ್ಲು ಮುರಿ ; ಹಲ್ಲು ಮುರಿದು ಹೋಗು : ಜರೆಯೆಂಬೀ ಕಾಂತೆ . . . ವರಪಾದದ್ವಂದ್ವದಿಂ ಪಲ್ಮುಱಿಯೊದೆದೊಡೆ ಬಾಯಲ್ಲಿ ಪುಟ್ಟಿರ್ದ ದಂತೋತ್ಕರಮೆಲ್ಲಂ ಬಿಟ್ಟು ದೆಂಬಂತಿರೆ ಕಳೆದವು ವೃದ್ಧಂಗೆ ದಂತಂಗಳೆಲ್ಲಂ (ಬಾಧಪು. ೫–೩೩). **ಹಲ್ಲುಮುರಿ: ೨.** ಹಲ್ಲನ್ನು ಮುರಿದು ಹಾಕು,—ಉದುರಿಸು : ಹಲ್ಲು ಮುರಿಯುತ್ತೇನೆಂದು ಹೆದರಿಸಿದ ಮೇಲೆ ಅವನು ತನ್ನ ತಪ್ಪನ್ನು ಒಪ್ಪಿಕೊಂಡ (ರೂಢಿ). [ಪಲ್ + ಮುಱಿ$_1$]

**ಪಲ್ಮೃಗ,** ಪಲುಮೃಗ (ನಾ).=ಪಲ್ಮಿಗ : ತರಳಾಕ್ಷಿ ಪಲ್ಮೃಗದ

ಬಾರಿಯೊಳ್ ಬಿಟ್ಟುಮೋ ತರುಣಿಯೆನ್ನಂ ಕಾಣದತಿಭಯಂಗೊಳ್ಳುಮೋ (ಕುಸುಮಾ. ೧೪-೧೯೯ ರಗಳೆ). **ಪಲುಮೃಗ:** ಪಲುಮೃಗ ಬೆಳ್ಳಗ ಪುಲುಮೃಗ ಬಂದವು ನಲವಿಂದ ಕಾಪಿನ ಪೊಲಕೆ (ಅನಂಚ. ೧೭-೯).
[ಪಲ್ + ಮೃಗ]

**ಪಲ್ಮೊರೆ,** ಪಲುಮೊರೆ, ಪಲ್ಲುಮೊರೆ, ಹಲುಮೊರೆ, ಹಲ್ಮೊರೆ (ಕ್ರಿ). ೧. (ಕೋಪದಿಂದ) ಶಬ್ದ ಬರುವಂತೆ ಹಲ್ಲನ್ನು ಕಡಿ: ಕುರುಬಲಕ್ಕೆ ವಿಟ್ಟು ಪಲ್ಮೊರೆವಂತೆ ಮೊರೆದು ಪರಿವ ತನ್ನ ಕಿಸುಪೊನ್ನ ರಥಮುಂ (ಪಂಪಭಾ. ೧೦-೯೭ ಪ); ಜಯಾಂಗನೆ ಪಲ್ಮೊರೆದಪಳೆನೆ ಪರಿದುವು ಜೀರ್ಗರೆವುತ್ತುಂ ಚತುರಶೀತಿಲಕ್ಷರಥಂಗಳ್ (ಶಾಂತಿಪು. ೧೦-೧೨೯); ಕೋಪದಿಂ ಪುದಿದು ಪದ್ಮಿನಿ ಪಲ್ಮೊರೆವಂದಮಾಯ್ತು (ಕುಸುಮಾ. ೪-೧೭). ೨. ಧ್ವನಿಮಾಡು; ಝೇಂಕರಿಸು: ಅಳಿ ಬಿರಿದಿರ್ದ ಜಾದಿಯೊಳೆ ಪಲ್ಮೊರೆಯುತ್ತಿರೆ ಹಂಸೆ ಪೂತ ಪೂಗೊಳದೊಳ್ ರಾಗಿಸುತ್ತಿರೆ (ಪಂಪಭಾ. ೭-೭೦); ಜಾವಳಿಪ ರಾಜಶುಕವ್ರಜಮಲ್ಲಿ ಕಾಯ್ದು ಪಲ್ಮೊರೆವ ಮದಾಳಿಯುಂ ಸಖಿ ಸಾರದಿರಾ ಮರನಂ ವಸಂತದೊಳ್ (ಕಾವ್ಯಾವ. ೩೭೭). **ಪಲುಮೊರೆ:** ೧. ಮೂಡನಳಸುವಳಸಿ ಸುತ್ತಿರ್ದ ದಂಭೋಧಿಯೆಂಬಂತೆ ಗಂಭೀರಾರಾವದಿಂ ಪಲು[ಪಾಠಾಂ.ಲ್]ಮೊರೆವ ಪೊಲೆಸೆಗುಂ ಸುತ್ತಿ ಪಾನೀಯಖೇಯಂ (ಸುಕುಮಾ. ೯-೫೭); ದಿವಾಕರ ನಂದನನು ಪಲುಮೊರೆದು ಖಾತಿಯೊಳವರಸಿಂತೆಂದ (ಕುಮಾವ್ಯಾವಿ. ೬೦೩. ೮-೫). **ಪಲ್ಲುಮೊರೆ:** ೧. ಕೆರಳ್ದ ಸಿಂಗವೋ ಪಲ್ಲುಮೊರೆವ ಕೃತಾಂತನೊ (ಪರ್ಧಚ. ೭-೬). **ಹಲುಮೊರೆ:** ೧. ಒರ್ಮೆ ನಿಸೂಳೆ ತರುವಲಿಗೆ ಹಲುಮೊರೆದಳು (ಸೋಮಚ. ೨-೪೧); ಗರಳ ವಿಲ್ಲದ ಕುಪಿತಫಣಿ ಹಲುಮೊರೆದು ಮಾಡುವುದೇನು (ಕುಮಾವ್ಯಾದ್ರೋ. ೧೬-೫೫). **ಹಲ್ಮೊರೆ:** ೧. ಕರದ ಕರವಾಳುಡಿಯೆ ಬಿಡೆ ಹಲ್ಮೊರೆದು ಭರದಲಿ ಗದೆಯ ಕೊಂಡಬ್ಬರಿಸಿ (ಕುಮಾವ್ಯಾದ್ರೋ. ೬-೫೧).
[ಪಲ್ + ಮೊರೆ$_1$]

**ಪಲ್ಮೊಳೆ** (ನಾ). ಆಗ ತಾನೇ ಕಾಣಿಸುತ್ತಿರುವ ಹಲ್ಲು; ಮೊಳೆ ಹಲ್ಲು: ಝುಣರೆನಲ್ ಪೊಂಗೆಜ್ಜೆ ಪೊಂದೊಂದು ಪಲ್ಮೊಳೆ ಚೆಲ್ವಾಗಿರೆ ಮುದ್ದುವೀಱು ನಗುತ್ತೇಳ್ತಂದಪ್ಪುವಂ ಮಾತೆಯಂ (ರಾಜಶೇ. ೪-೭೩).
[ಪಲ್ + ಮೊಳೆ$_2$]

**ಪಲ್ಯ$_1$,** ಪಲ್ಲೆ$_1$ (ನಾ). ೧. ತರಕಾರಿ; ಕಾಯಿಪಲ್ಯ: ಬಲೀ, ಪಲ್ಯ ತಂದೆಯಾ . . . ಈಗಾದರೂ ಬೇಗ ಹೋಗಿ ತಕ್ಕೊಂಡು ಬಾ (ರಕ್ತಧ್ವ. ೧೭೮). ೨. ಊಟದಲ್ಲಿ ನಂಜಿಕೊಳ್ಳಲು ತರಕಾರಿಗಳಿಂದ ಮಾಡುವ ಒಂದು ಬಗೆಯ ವ್ಯಂಜನಪದಾರ್ಥ; ತಾಳದ: ಮೇಲೋಗರ ಪಳಿದ್ಯ ಪಲ್ಯಗಳ ರಾಕೇಂದುವದನೆಯರೆಡೆಮಾಡುವ ಸ್ವಪಯಾಗವನೇನ ಬಣ್ಣಿಪೆನು (ಮೋಹತ. ೧೪-೯); ಪರಿಪರಿಯ ಕಾಯ್ಪಲ್ಯ ಕಲಸೋಗರಗಳೊಬ್ಬಟ್ಟುಂಡೆ ಚಕ್ಕುಲಿ (ಅರ್ಜಾವಿ. ೧೭-೭೨). **ಪಲ್ಲೆ$_1$:** ೧. ಈ ಮೂಲೆಯಲ್ಲಿ ಪಲ್ಲೆ ಹೆಚ್ಚುವ ಈಳಿಗೆ ಇಟ್ಟಿದೆ (ಮುಂಬಯಿ. ೪-೧೬೩); ಹತ್ತು ತರಹದ ಪಲ್ಲೆ ಕೂಡಿ ಕುದಿಸಿದ ಅಡಿಗೆ ರುಚಿಯೆಂದು ಹೇಳುವರು (ನೆಲಮು. ೨೨-೧೫); ಕಾಯಿಪಲ್ಲೆ, ಕೋತಂಬರಿ ಮೊದಲಾದ ಪಲ್ಲೆಗಳನ್ನು ಮಾಡಿಕೊಳ್ಳಬೇಕು (ಕೃಷಿಪ್ರ. ೨೦೮). 'ಕಾಯಿಪಲ್ಲೆ' ಪರಾ. ೨. ನಾಗಗನ ಗಂಟಿನಲ್ಲಿ ಚಪಾತಿ ಪಲ್ಲೆ ಇತ್ತು (ಕಪಪು. ೩-೩೩); ಬಾಳೆಯ ಹೂ ಹಾಗೂ ದಿಂಡಿನ ಪಲ್ಲೆ ರುಚಿಕಟ್ಟು (ಸುತ್ತುಮು. ೮೦); ಸಾರನ್ನು ಬಡಿಸುವಾಗ ಅದು ಹರಿದು ಪಲ್ಲೆಯನ್ನು ಸೇರಿದರೆ ಕ್ಷಮಿಸಲು ಸಾಧ್ಯವೆ? (ಹುಚ್ಚುಹು. ೧೩).

**ಪಲ್ಯ$_2$** (ನಾ). ೧. (ಒಂದು ನಿರ್ದಿಷ್ಟ ಅಳತೆಯ) ಧಾನ್ಯವನ್ನು ತುಂಬುವ ಚೀಲ. ೨. ಒಂದು ಬಹುದೊಡ್ಡ ಸಂಖ್ಯೆ. ೩. [ಜೈನ] ಬಹು ದೊಡ್ಡ ಸಂಖ್ಯೆಯ ಎಣಿಕೆಯುಳ್ಳ ಒಂದು ಕಾಲ ಪ್ರಮಾಣ; ☞ ಇವು ಮೂರು ಬಗೆ. ೧. ವ್ಯವಹಾರಪಲ್ಯ. ೨. ಉದ್ಧಾರಪಲ್ಯ. ೩. ಅದ್ಧಾಪಲ್ಯ: ವ್ಯವಹಾರಪಲ್ಯಾಧಾರ ಪಲ್ಯಮುದ್ಧಾರಪಲ್ಯಮೆಂದು ಪಲ್ಯಂಗಳ್ ಮೂಱುತೆಱನಕ್ಕುಂ (ಅಜಿಪು. ೩-೧೫ ವ); ಅನ್ವರ್ಥಸಂಜ್ಞಾಸಮನ್ವಿತ ವ್ಯವಹಾರೋದ್ಧಾರಾದ್ಧಾಭೇದದಿಂ ಪಲ್ಯಂ ತ್ರಿವಿಧಂ (ತತ್ತ್ವಪ್ರ. ೧೭೫); ಭೋಗಮನುಣ್ಬಾರ್ಯರ ಬಾಱಿಕೆ ಪಲ್ಯಗಣನಂ ಪಲ್ಯೋಪಮಂ . . . ಅನಂತಕಲ್ಪಜರೊಳಾಯುಃಪಿಂಡಂ (ಅನಂಪು. ೯-೨೬). [ಸಂ.]

**ಪಲ್ಯಂಕ** (ನಾ). ೧. ಮಂಚ; ಪರ್ಯಂಕ: "ಮಂಚಃ, ಪರ್ಯಂಕಃ, ಪಲ್ಯಂಕಃ, ಖಟ್ವಾ-ಳ ಮಂಚ, ಪಟ್ಟೆಮಂಚ, ಚಪ್ಪರದ ಮಂಚ, ತೂಗುಮಂಚ" (ಸಿದ್ಧಾಂತಿ. ೨೧೦). ೨. ಪಲ್ಲಕಿ; ಪಾಲಕಿ.
[ಸಂ.]

**ಪಲ್ಯಂಕಾಸನ** (ನಾ). [ಯೋಗ] ಒಂದು ಬಗೆಯ ಆಸನ; ಅರ್ಧಪದ್ಮಾಸನ: ಪೂರ್ವಾಭಿಮುಖನುಂ ನಿಬಿಡನಿಬದ್ಧ ಪಲ್ಯಂಕಾಸನನುಮಾಗಿ (ಆದಿಪು. ೯-೭೬ ವ); ಅಂತುತ್ತರಾಭಿಮುಖನಾಗಿ ಪಲ್ಯಂಕಾಸನದೊಳೆ ಕುಳ್ಳಿರ್ದು (ಶಾಂತಿಪು. ೧೧-೧೦೩ ವ); ಪಲ್ಯಂಕಾಸನದೊಳ್ ಮೂವರುಂ ಯಥಾಕ್ರಮಮಿರ್ದರ್ (ಪಂಚಾಮಾ. ೧೦-೧೪೭).
[ಸಂ.]

**ಪಲ್ಯಯನ** (ನಾ). ಹಲ್ಲಣ; ಜೀನು: "ಪಲ್ಲಣಮುಮೆಂದು ಪಲ್ಯಯನಕ್ಕುಂ" (ಕವಿಕಂ. ೨೬೭). [ಸಂ.]

**ಪಲ್ಯೋಪಮ** (ನಾ). = ಪಲ್ಯ$_2$ ೩: ಪಲ್ಯೋಪಮ ದಶಮಭಾಗಾಯುಷ್ಯನುಮಪ್ಪಗ್ರಿಮಕುಳಧರಂ ಪ್ರತಿಶ್ರುತಿಯೆಂಬಂ (ಆದಿಪು. ೬-೫೨ ವ); ನಿಜಾಯುಃಪಲ್ಯೋಪಮತ್ರಯಾವಸಾನಮೆಯ್ದೆರೆಯುಂ ಕಾಮಾಂಧರಾಗಿ (ಶಾಂತಿಪು. ೭-೧೦ ವ). 'ತ್ರಿಪಲ್ಯೋಪಮ' ಪರಾ. [ಸಂ.]

**ಪಲ್ಲ$_1$** (ನಾ). ದಂತಗಳನ್ನುಳ್ಳುದು; ದಂತಿ; ಆನೆ: 'ಪಲ್ಲವಱು' ಪರಾ. [ಪಲ್ + -ಅ$_7$]

**ಪಲ್ಲ$_2$** (ನಾ). ದುಂಬಿ; ಅಳಿ: "ಪಲ್ಲಮೆನೆ ಪರಮೆ" (ಕಶರ. ೬೦); ಅಲ್ಲಿಗಲ್ಲಿಗೆ ಮಲ್ಲಬಾದಿರಿವ ಪಲ್ಲ ಬಲ್ಲುಲಿಗೆ ಕಲ್ಲದಾಡುವ ತೆಲ್ಲಯಿಸಿದ ಮಲ್ಲಗಿಳಿಯ ಸವಿನುಡಿಗೆ ಪಲ್ಲಟದ ಘಲ್ಲಣೆಯಲ್ಲಣೆಯ ಗಂಡುಗೋಗಿಲೆಯಿಂಚರಕ್ಕೆ ಪಲ್ಲಣಿಯ ಬೆಲ್ಲಂಗೋಲ್ವಿಲ್ಲನ ಮಲ್ಲಿಗೆಸರಲ ಜಲ್ಲಣೆಗೆ ತಲ್ಲಣಂಗೊಂಡು ಸಾವಗಿಸುವ . . . ಬಿಜ್ಜೋದರರುಂ (ರಾಮಾಶ್ವ. ೭೩-೩).

**ಪಲ್ಲ$_3$** 'ಪಲ್ಲವಿ' ನೋ.

**ಪಲ್ಲ$_4$** (ನಾ). ಧಾನ್ಯದ ಒಂದು ಅಳತೆ; ನೂರು ಸೇರು: ಭತ್ತ ಎಕರೆಗೆ ಹದಿನಾರು ಪಲ್ಲ ಹಾಕಿ (ಜಿಸ್ತಕ. ೨೫);. ಒಂದು ಪಲ್ಲ ಸಣ್ಣಕ್ಕಿ ಕಳಿಸಿಬಿಡಿ (ನಾಡಿಗೇ. ೯೮).
[< ಪ್ರಾ. ಪಲ್ಲ./ಸಂ. ಪಲ್ಯ./ತೆಲು. ಪಲ್ಲಾ./ಮರಾ. ಪಲ್ಲ]

**ಪಲ್ಲಂಕ** 'ಪಲ್ಲಂಗ' ನೋ.

**ಪಲ್ಲಂಗ,** ಪನ್ನಂಗ$_1$, ಪಲಂಗ, ಪಲಂಗು, ಪಲಕಿ, ಪಲಕ್ಕಿ, ಪಲ್ಲಂಕ, ಪಲ್ಲಂಗು, ಪಲ್ಲಕಿ$_1$, ಪಲ್ಲಕ್ಕಿ$_1$, ಪಾಲಂಕಿ$_1$, ಪಾಲಕಿ, ಪಾಲಖಿ, ಪಾಲಿಕೆ$_1$, ಪಾಲ್ಕಿ, ಪಾಲ್ಕೆ, ಪಾಲ್ಲಕೆ (ನಾ). ೧. ಮಂಚ; ಪರ್ಯಂಕ: "ಪಲ್ಲಂಗ—ಪಲ್ಯಂಕ = ಮಂಚ" (ತದ್ಭಕೋ. ೨೫); ಪೆಟ್ಟಿಗೆ, ಕಪಾಟ, ಪಲ್ಲಂಗ ಮುಂತಾದವುಗಳು (ಮುಂಬಪ್ಯಾ. ೧೪೨); ಹಾಗೆಯೇ ಪಲ್ಲಂಗದ ಮೇಲೆ ಬಿದ್ದುಕೊಂಡ (ವಾತ್ಸಲ್ಯ. ೪೦). **ಪನ್ನಂಗ$_1$:** ೧. "ಪನ್ನಂಗ (ಪಲಂಗ) —ಪಲ್ಯಂಕ" (ತದ್ಭಕೋ. ೨೪). ೨. ಪಲ್ಲಕ್ಕಿ, ರಥ ಮುಂತಾದುವುಗಳ ಮೇಲ್ಕಟ್ಟು,—ವಿತಾನ: ಆ ಭೈರಾದೇವಿಯೆಂಬ ಕುಮಾರತಿಯ

ಪಲ್ಲಕಿಯೊಳಗೆ ಇರಿಸಿ ಪಂನಂಗವಂ ಮುಚಿಕೊಂಡು ದಿಳ್ಳಿಯ ಸುರಿತಾನರ ಮನೆಗೆ ಕೊಂಡುಹೋಗಿ ಆ ಸುರಿತಾಳ ಮಹಾರಾಯರ ಮುಂದೆ ಪಲ್ಲಕಿಯಂ ಮುಂದಿರಿಸಿ ಪಂನಂಗವಂ ತೆಗೆದು ತೋಱಿಲಾಗಿ (ಮೈಆರ್. ೧೯೩೧, ೧-೧೧ ; 1310) ; ನಸುಕಂದಿ ಮುಖ ತೋಱುತಿದೆ ನಿವಗಿಂದಿಷ್ಟು ಬಿಸಿಲು ತಾಗಿದುದಹುದಕಟಾ ಪಿಸುಣರು ದಟ್ಟಿದ ಪನ್ನಂಗಗಳ ನಿವಗೆಸಗಿ ತಿಲ್ಲಹುದೆಂದು ನೊಂದ (ಭರಚ. ೨೩-೬೯) ; ಪನ್ನಂಗದೊಳಗೆ ಚವಲವ ಹಾಕೋನ ನನ್ನ ಅಣ್ಣ ಜುಂಜಯ್ಯನ ನೆನೆದೇನೆ (ನನ್ನೂರು. ೨೪). ೩. ಮಂಚವಿರುವ ಕೊಠಡಿ ; ಮಲಗುವ ಕೊಠಡಿ : ಕೊಚ್ಚಕ್ಕಿ ಅಂತಾ ಸುಲಿಹಲ್ಲಿಂದೇ ವಾರಿ ತೆಗೆಯೆ ಪನ್ನಂಗದ ಅಗಣೇಯ (ಗೌರಪ. ೬). **ಪಲಂಗ :** ೧. ಲಕ್ಷ್ಮಿ ಪಲಂಗದ ತುದಿಯಲ್ಲಿ ಕುಳಿತುಕೊಂಡು ಅವರನ್ನು ನಿರೀಕ್ಷಿಸುತ್ತಿದ್ದಳು (ಇತ್ರೀ. ೨೦). **ಪಲಂಗು :** ೧. ರಾಯ್ರು ಪಲಂಗು ಬೇಕೇನು (ಸಿಶೂರ. ೧೩) **ಪಲಕಿ :** ೪. ಉತ್ಸವ, ಮೆರವಣಿಗೆಗಳಲ್ಲಿ ದೇವತಾವಿಗ್ರಹಗಳನ್ನೂ ಮಾನ್ಯರನ್ನೂ ಕುಳ್ಳಿರಿಸಿ, ಮನುಷ್ಯರು ಹೊರುವ ಒಂದು ಬಗೆಯ ವಾಹನ : ಪಲಕಿ ಉಂಬಳಿಯ ಸಾಸನ (ಎಕ. III, ಮಂಡ್ಯ. ೩೩-೨೧ ; 1576); ತಿರುಮಲರಾಜನಾಯಕಗೆ ಪಲಕಿಯ ಉಂಬಳಿಗೆಗೊಡಗೆಯಾಗಿ ಕೊಟಿ ವಾಗಿ (ಎಕ. III (R), ನಂಜನ. ೨೦೮-೧೬ ; 1586). **ಪಲಕ್ಕಿ :** ೪. ಆ ಪಲಕ್ಕಿಯ ಉಂಬಳಿಗೆ ಕೊಟ್ಟೆವಾಗಿ (ಮೈಆರ್. ೧೯೩೩, ೪೩-೩; 16ನೆಯ ಶತ). **ಪಲ್ಲಂಕ :** ೧. ಪಲ್ಲಂಕದ ಮೇಲೆ ಪವಡಿಸಿದ್ದ ಲಕ್ಷ್ಮಿಗೆ ತಾನು ಕಾಣುತ್ತಿರುವುದು ಕನಸು ಎಂದೆನ್ನಿಸಲೇ ಇಲ್ಲ (ಹೇಮಕೂ. ೧). **ಪಲ್ಲಂಗು :** ೧. ಪಲ್ಲಂಗಿನ ಬುಡಕ್ಕೆ ಲಾಟಿಯು ಬಿದ್ದಿತ್ತು (ನಾಕಥೆ. ೨೧). **ಪಲ್ಲಕಿ$_1$:** ೪. ಸೀತೆಯ ಸುರುಚಿ ಪಲ್ಲಕಿಯಲ್ಲಿ ಬಿಜಯಂಗೈಸಿ ತರುತಿರಲು (ಕೌರಾ. ೪೩-೧೪) ; ಪಲ್ಲಕಿಯ ಅಂದದಿಂದೇಱಿಯರಸುಮಕ್ಕಳ ಬಲುಸಂದಣಿ ಪೊಱಮಟ್ಟುದು (ಶ್ರೀಪಾಲ. ೧೩-೬೩) ; ಎಡಕ ನಂದೀಕೋಲ, ಬಲಕ ಪಲ್ಲಕಿ (ಕನ್ನಜಾ. ೯). **ಪಲ್ಲಕ್ಕಿ$_1$:** ೪. ಜಗವ ಮೋಹಿಪ ಮಿಂಡಿವೆಂಗಳು ಪಲ್ಲಕ್ಕಿಯ ಸಾರ್ಚಿದರು (ಮೋಹತ. ೨೪-೪) ; ಬಂದುದಷ್ಟಱಿಓಳಿದಿರಾಗಿ ಪಲ್ಲಕ್ಕಿ ಜೀಯೆಂದೆನಲೇಱಿದಳೊಸೆದು (ಭರಚ. ೧೯-೧೪೨) ; ಪಲ್ಲಕ್ಕಿಯ ಮೇಲೇಱಿ ರಾಯರ ದೇವ ಮೆಲ್ಲಮೆಲ್ಲನೆ ಪೋಗುತಿರಲು (ಅನಂಚ. ೪-೩). **ಪಾಲಂಕಿ$_1$:** ೪. ಶಂಕರೊಡೆಯರಾ ಪಾಲಂಕಿಯಲ್ಲಿರ್ಪರು (ವೀಶೈಪು. ೮-೮-೪). **ಪಾಲಕಿ :** ೪. ಪಾಲಕಿ ಹೊತ್ತು ನಡೆದರು . . . ನಿಜನಿಕೇತನಕೆ (ಜಿನಭಾ. ೫-೬) ; ಮೊಗಲ ಸೈನಿಕವೇಷದಿಂದ ಪಾಲಕಿಯ ಹತ್ತಿರವಿದ್ದು ಅವಳನ್ನು ಪಾರು ಮಾಡುವ ದಾರಿಯನ್ನು ಹೇಳಿ ಕೊಟ್ಟಿದ್ದನು (ಬಂಕಿಮ. ೨೧೯); ಎಲ್ಲರೂ ಪಾಲಕೀಲಿ ಕ್ನೂತರೆ ಹೊರೋರು ಯಾರು ? (ಗಾದೆ). **ಪಾಲಖಿ :** ೪. ಪಾಲಖಿಯ ಮಧ್ಯದೊಳ್ ಕೃಷ್ಣೇಂದ್ರನು ರೂಢಿಮಿಗೆ ವಿಷ್ಣುವಂದದಿ ಪೊಳೆಯುತಿರ್ಪವನು ನಾಡಾಡಿಗಳು ನೋಡಲಮ್ಮರೆ (ಅಚಾವಿ. ೨೪-೫೦). **ಪಾಲಿಕೆ$_1$ :** ೪. ಏರಯ್ಯ ನೀವು ಪಾಲಿಕೆಯ (ಕುಮಾಸಾಂ. ೧೫೬). **ಪಾಲ್ಕಿ :** ೪. ಕೈಕೆ ಬಳಿಕನ್ನೆಗಂ ಪಾಲ್ಕಿಯೊಳ್ ಕುಳಿತು (ಪರಶು. ೪೩-೧೯) ; ಟೀಪುಸುಲ್ತಾನರ ಅವರಂಗು ಎಂಬ ಖಾಸಾ ಪಾಲ್ಕಿ ಖಾಸಾ ಕತ್ತಿ ಸಹ ಅಲ್ಲಿ ಬಿಟ್ಟು (ರಾಜೇಂದ್ರ. ೫೧) ; ನಿಮಗೆ ಪಾಲ್ಕಿ ಬೋಯಿಗಳನ್ನು ಕರೆಯಿಸಿಕೊಟ್ಟು ಕಳುಹುವೆನು (ದೇವೀಚಾ. ೧೫೮). **ಪಾಲ್ಕೆ :** ೪. ನಾಲ್ಕು ಹಣವುಳ್ಳನಕ ಪಾಲ್ಕೆಯಲಿ ಮೆಱೆದಿಕ್ಕು (ಸರ್ವಜ್ಞ. ೧೨೩೯). **ಪಾಲ್ಲಕೆ:** ೪. ಬೆಳ್ಳಿ ಸಾಮಾನದ ಪಾಲ್ಲಕೆ ಮುತ್ತಿನ ಕಂಠಿ ಬಂಗಾರದ ಕೊಡೆ . . . ಚಾಮರಗಳು (ಎಕ. VI, ಚಿಕ್ಕಮ. ೧೦೯-೩೫ ; 1717). 'ಪರ್ಯಂಕ' ಪರಾ.

ಪಲ್ಲಕ್ಕಿ ಉತ್ಸವ=ದೇವರ ವಿಗ್ರಹವನ್ನು ಪಲ್ಲಕ್ಕಿಯಲ್ಲಿರಿಸಿ ಮೆರವಣಿಗೆ ಮಾಡುವ ಸಮಾರಂಭ,—ಉತ್ಸವ : ಪಲ್ಲಕ್ಕಿ ಉತ್ಸವ ಹೊರಟಿದೆ. ನೋಡಿ ಬರುವ ಬಾ (ಮಗಮಾಂ. ೯೫). **ಪಲ್ಲಕ್ಕಿಯ ಉಂಬಳಿ**=ಹಿಂದೆ ಗೌರವಾರ್ಹ ವ್ಯಕ್ತಿಗಳಿಗೆ ವಿಶೇಷಗೌರವದ ಪಲ್ಲಕ್ಕಿಯ ವ್ಯವಸ್ಥೆಗಾಗಿ ಕೊಡುತ್ತಿದ್ದ ಉಂಬಳಿ : ಪಲ್ಲಕ್ಕಿಯ ಉಂಬಳಿಗೆ ಕೊಡಗೆಯಾಗಿ ಕೊಟ್ಟೆವಾಗಿ (ಮೈಆರ್. ೧೯೩೩, ೬೬-೧೨ ; 1598). [<ಸಂ. ಪಲ್ಯಂಕ./ಪ್ರಾ. ಪಲ್ಲಂಕ]

**ಪಲ್ಲಂಗು** 'ಪಲ್ಲಂಗ' ನೋ.

**ಪಲ್ಲಕಿ$_1$** 'ಪಲ್ಲಂಗ' ನೋ.

**ಪಲ್ಲಕಿ$_2$**, ಪಲ್ಲಕ್ಕಿ$_2$ (ನಾ). ಒಂದು ಬಗೆಯ ವಸ್ತ್ರ: ಸಾರಂಗವಟ್ಟೆ . . . ಪಲ್ಲಕಿ ನಲ್ಲೂರ ತೆಳಗಾವಿಯೆಂಬಾ ಸೀರೆಗಳಂ ಸತಿಯರೊಲೆಯೊಳುರುಪಿದ ರಾಗಳ್ (ತ್ರಿಪುವಿ. ೧೦-೨೮). **ಪಲ್ಲಕ್ಕಿ$_2$ :** ಕಂದು ಪೊರೆಯ ಪಲ್ಲಕ್ಕಿ [ಪಾಠಾಂ. ಕಾಪೋತಿ ಪಾಲಕಿಯು] ಕಂದವಾರದ ಸೀರೆ ಕೈಬರಹದ ಬಣ್ಣದಂದವನೇನ ಬಣ್ಣಿಸುವೆ (ಅಮುಸಾಂ. ೪-೯). [ ? ]

**ಪಲ್ಲಕ್ಕಿ$_1$** 'ಪಲ್ಲಂಗ' ನೋ.

**ಪಲ್ಲಕ್ಕಿ$_2$** 'ಪಲ್ಲಕಿ$_2$' ನೋ.

**ಪಲ್ಲಕ್ಕಿ$_3$** (ನಾ). ೧. ಒಂದು ಬಗೆಯ ಸಸ್ಯ : "ಮಧುರಾ—ಜೀವಕ, ಅಸಡಿ, ಪಲ್ಲಕ್ಕಿ, ಗರುಗ" (ಒಷಧಿ. ೧೧೪). ೨. ಪೈರಿನ ತೆನೆ ; ಹೊಡೆ : ಮುಸುಕಿನ ಜೋಳದ ಗಿಡದಲ್ಲಿ ಪಲ್ಲಕ್ಕಿ ಹಾದಿವೆ (ರೂಢಿ). [ ? ]

**ಪಲ್ಲಕ್ಕಿಹರುಹೆ** (ನಾ). ಒಂದು ಬಗೆಯ ಸಸ್ಯ : "ಪಲಾಖ್ಯಾಯಾ—ಪಲ್ಲಕ್ಕಿಹರುಹೆ" (ಒಷಧಿ. ೯೨). [ಪಲ್ಲಕ್ಕಿ$_3$ + ಹರುಹೆ(<ಹಱುಹೆ)]

**ಪಲ್ಲಟ** (ನಾ). ೧. ಬದಲಾವಣೆ ; ಮಾರ್ಪಾಟು ; ವ್ಯತ್ಯಾಸ : ಲಲಾಟದಲ್ಲಿ ವಿಭೂತಿ ಬರಲಿಕೆ ಪಾಪ ಪಲ್ಲಟವಾಗದೆ (ಬಸವ. ೬೩) ; ಮಾತು ಪಲ್ಲಟವಾಯ್ತು (ಬಸಪು. ೩೬-೧೧) ; ತನುವಿಗಾಪ್ಯಾಯನದಿನಂತರ್ಮನಕೆ ಪಲ್ಲಟವಾಯ್ತು (ಕುವ್ಯಾಗ. ೩-೩೬) ; ಎನ್ನ ಪುಣ್ಯ ಪಾಪಂಗಳೆಲ್ಲ ಪಲ್ಲಟ ವಾದುವಯ್ಯ (ಅಖಂಡೇ. ೧೦೩-೩೪). ೨. ತಲೆಕೆಳಗು ; ಅವ್ಯವಸ್ಥೆ; ತಿರುವುಮುರುವು : 'ಪಲ್ಲಟಂ ಬೀೞ್' ಪರಾ.

[<ಪ್ರಾ. ಪಲ್ಲಟ್ಟ, ಪಲಟ್ಟ./ಸಂ.ಪರಿವರ್ತ./ತುಳು. ತೆಲು. ಪಲ್ಲಟ]

**ಪಲ್ಲಟಂಬಾಯ್** (ಕ್ರಿ). ಬದಲಾಯಿಸು ; ಮಾರ್ಪಾಟು ಮಾಡು : ಸೂಟ್ಟೆಡೆದ ಕೂಟಂ ಪಲ್ಲಟಂಬಾಯ್ವ ಬಾಯ್ಮಱುಕಂ (ಚಂದ್ರಪ್ರ. ೮-೬೮). [ಪಲ್ಲಟ + ಪಾಯ್$_1$]

**ಪಲ್ಲಟಂಬೀೞ್** (ಕ್ರಿ). ಅಸ್ತವ್ಯಸ್ತವಾಗಿ ಬೀಳು ; ಅವ್ಯವಸ್ಥೆ ಯಾಗು : ಒಂದೊಂದೆಡೆಯೊಳುಡಿದು ಪಲ್ಲಟಂಬಿರ್ದು ಸುವರ್ಣಗೆಟ್ಟ ಪಲ್ಗಳಿಂ . . . ಪಿಸುಣ್ಪೇಱ್ವ ಜೀರ್ಣತಾರ್ಣ ಸ್ಥಳಗಳುಂ (ಚಂದ್ರಪ್ರ. ೫-೬೫ ವ). [ಪಲ್ಲಟ + ಬೀೞ್$_1$]

**ಪಲ್ಲಟಂಬೋಗು** (ಕ್ರಿ). ಅದಲುಬದಲಾಗು ; ವ್ಯತ್ಯಸ್ತವಾಗು: ಮರಳಿ ಬರೆ ಲಿಂಗದ ಕದಂಬವೆದೊಡನೈತಂದು ಪೀಠಂಗಳೊಳ್ ಪಲ್ಲಟಂ ಬೋಗಿ ನೆಲಸಿದವು (ಚೆಬಪು. ೫೬-೨೩). [ಪಲ್ಲಟ + ಪೋಗು$_1$(<ಪೋ$_1$)]

**ಪಲ್ಲಟಗೊಳಿಸು** (ಕ್ರಿ). ಬದಲಾಯಿಸು ; ಅದಲುಬದಲು ಮಾಡು : ಅಲ್ಪಪ್ರಾಣ ಮಹಾಪ್ರಾಣ ಅಕ್ಷರಗಳನ್ನು ಪಲ್ಲಟಗೊಳಿಸಿ ದಾಗಲೂ ಹಲವೆಡೆ ಅರ್ಥಭೇದವಿದೆ (ಸಂಶೋಧ. ೬೬).

[ಪಲ್ಲಟ + ಕೊಳು(<ಕೊಳ್$_1$) + –ಇಸು$_3$]

**ಪಲ್ಲಟಿಸು** (ಕ್ರಿ). ೧. ಬದಲಾವಣೆ ಮಾಡು ; ಮಾರ್ಪಾಟು ಮಾಡು; ವ್ಯತ್ಯಸ್ತಗೊಳಿಸು : ನಿಮ್ಮ ನಿಮ್ಮ ಕಸವರಮುಪ್ಪುದ ನಾರಯ್ದು ಪಲ್ಲಟಿಸಲೀಯದೆ ನೋಡಿಕೊಳ್ಳಿಂ (ವಡ್ಡಾರಾ. ೧೨೬-೩) ; ಎತ್ತಿಕೊಂಡ ಶ್ರುತಿಯಂ ಪಲ್ಲಟಿಸದೆಯುಂ (ಪಂಪಭಾ. ೧೪-೩೦ ವ);

ಧಾತು ಮಾತು ಪಲ್ಲಟಿಸಿದಡೆ ಗಮನವಿನ್ನೆಲ್ಲಿಯದೊ (ಅಪಚಂ. ೬೧-೨೬೬); ಭಾಳಲಿಪಿಗಳ ಲೆಕ್ಕವನು ಪ್ರತಿಕೂಲವಿಧಿ ಪಲ್ಲಟಿಸಿ ಬರೆದಡೆ ಹೇಳಿ ಫಲವೇನು (ಕುವ್ಯಾಗ. ೩-೨೮). ೨. ವ್ಯತ್ಯಾಸಗೊಳ್ಳು; ಮಾರ್ಪಾಟು ಹೊಂದು; ಬದಲಾವಣೆಯಾಗು: ಪಲ್ಲಟಿಸಿತ್ತು ಪೂಗುಡಿಗಳಿಂ ಗಿರಿಮಲ್ಲಿಗೆ ಶರದಾಗಮನಪ್ರವೇಶದೊಳ್ (ಬಾಧಪು. ೪-೬೫). ೩. ತಿರುವುಮುರುವು ಮಾಡು; ತಲೆಕೆಳಗು ಮಾಡು: (+). [ಪಲ್ಲಟ+-ಇಸು$_3$]

**ಪಲ್ಲಣ,** ಪಲ್ಲೇಣ, ಹಲ್ಲಣ, ಹಲ್ಲಳ (ನಾ). ೧. ಕುದುರೆ, ಎತ್ತು ಮೊದಲಾದುವುಗಳ ಬೆನ್ನಿನ ಮೇಲೆ ಹಾಕುವ ತಡಿ; ಜೀನು: "ಪಲ್ಯಯನಮೆಂದೆನಲ್ ಪಲ್ಲಣಂ" (ಚತುನಿ. ೧೮); ಕುದುರೆ ಯಿಂದಿೞಿದು ಪಲ್ಲಣಮಂ . . . ಕಟಿದು (ವಡ್ಡಾರಾ. ೧೬೨-೧೯); ಸಡಗರದೇಟಿಗೆಯುಂ ಕಳಕಳಧ್ವನಿಯುಂ ಬೆರಸಾಡುವಂತೆರಟ್ಟಿಡೆಯೊಳ ಮಾಗಳೊರ್ಮೊದಲೆ ಪಲ್ಲಣವಿಕ್ಕಿಪುದಲ್ಲಕಲ್ಲೋಳಂ (ಪಂಪಭಾ. ೧೩-೩೩); ತೊಳಗುವ ಪೊನ್ನ ಪಲ್ಲಣದ ನುಣ್ಬೆಳಗಾಗಸಮಂ ಮುಸುಂಕೆ (ಕಬ್ಬಿಕಾ. ೨೦೪). ೨. ಅಂಬಾರಿ: ಆನೆಯ ಪಲ್ಲಣಮನಾಡು ಪೊತ್ತು ಕೊಳಲಾಱಿದೆಂಬಂತೆ (ಪಸಾರ. ೪೮೨). **ಪಲ್ಲೇಣ:** ೧. "ಪಲ್ಯಯನ-ಪಲ್ಲೇಣ, ಹಲ್ಲೇಣ" (ಹೊಸುಗ. ೧೧೭). **ಹಲ್ಲಣ:** ೧. "ಪರ್ಯಾಣಂ, ಪಲ್ಯಯನಂ, ಇವು ಹಲ್ಲಣ" (ನಾಚಿಂರ. ೧೩೪); ಮಾಮರದಡಿಯೊಳ್ ಹಲ್ಲಣಮಂ ಬಿಟ್ಟು (ಪಂಚತಂ. ೧೨೦-೯); ಹೊನ್ನ ಹಲ್ಲಣದ ರನ್ನದ ಪಕ್ಕರೆಕ್ಕೆಯ . . . ಜಾತ್ಯಶ್ವಂಗಳ ವಳಯುಮುಂ (ಗಿರಿಕ. ೬-೫೫.ಪ); ಹಕ್ಕರಿಕೆಗಳ ಹಲ್ಲಣದ ಕವಚದ ಸೀಸಕದ . . . ಕಣೆಯ ಹೊಱೆ ಚಾಚಿದವು ಕಟಕಾಚಾರ್ಯನಿದಿರಿನಲಿ (ಕುವ್ಯಾದ್ರೋ. ೧೫-೧೯). **ಹಲ್ಲಳ:** ೧. ಗುಳವನಿಳುಹಿದವಾನೆಗಳು ಹಲ್ಲಳವ ಬಿಡೆ ಭುಲ್ಲೈಸಿದವು ಹಯಕುಳ (ಕುವ್ಯಾಕ. ೫-೩). [<ಸಂ. ಪಲ್ಯಯನ]

**ಪಲ್ಲಣಂಗಟ್ಟಿಸು** (ಕ್ರಿ). ಜೀನು ಹಾಕಿಸು; ತಡಿ ಹಾಕಿಸು: ಖಚರಂ ಪಿಡಿಪಟ್ಟು ಪಲ್ಲಣಂಗಟ್ಟಿಸಿಕೊಂಡುಮೇನೊ ಮುಖಲೀನ ಖಲೀನ ಕಶಾಭಿಘಾತದಿಂ ತೊಟ್ಟನೆ ನೋವನೆಯ್ದಿದಂ (ಪಂರಾಮಾ. ೪-೧೧೫). [ಪಲ್ಲಣಂಗಟ್ಟು+-ಇಸು$_3$]

**ಪಲ್ಲಣಂಗಟ್ಟು** (ಕ್ರಿ). ಜೀನು ಹಾಕು; ತಡಿಹಾಕು: ಆಡ ಪೋರಿಗಳಂ ಕೊಂಡು ಕೀೞಟ್ಟಲೆದು ಪಲ್ಲಣಂಗಟ್ಟಿ ನಡೆಯಿಸಿ (ಬಂಹರಿ. ೪-೩೪ ಪ); ಸುಲಕ್ಷಣಗುಣನಿಧಿಗಳ್ ಪಲ್ಲಣಂಗಟ್ಟಿ ಬಂದಿರ್ದುವು . . . ತುರಂಗಂ (ಪುಷ್ಪಪು. ೫-೧೦). [ಪಲ್ಲಣ+ಕಟ್ಟು$_1$]

**ಪಲ್ಲಣಿಸು,** ಹಲ್ಲಣಿಸು$_1$ (ಕ್ರಿ). ೧. ಜೀನು ಹಾಕು; ತಡಿಯನ್ನು ಅಳವಡಿಸು: ಪಲ್ಲಣಿಸಿದಿಂದ್ರಾಯುಧಮಂ ಗೃಹೀತಸಮಾಯೋಗನಾಗಿ (ಕಾದಂಉ. ೪೨೫); ಪಣ್ಣಾನೆಯಂ ಪಲ್ಲಣಿಸು ಕುದುರೆಯಂ ಪೂಡು ತೇರಂ (ಜಗವಿ. ೬-೭೫); ಪಲ್ಲಣಿಸಿ ತಂದಂ ವಾಹಕೋತ್ತಂಸನೊರ್ಬಂ . . . ವಿಜಯಶ್ರೀಗೇಹಮಂ ವಾಹಮಂ (ಕುಸುಪೂ. ೮-೬೩). **ಹಲ್ಲಣಿಸು$_1$:** ೧. ಹಲ್ಲಣಿಸು ವಾಜಿವ್ಯೂಹಮಂ ಕೂಡೆ ಪೂಡು ರಥವ್ರಾತಮಂ (ಗಿರಿಕ. ೬-೫೫); ಹಲ್ಲಣಿಸಿದ ವಾರುವವಿದೆ ಮಗನೆ (ಹಚಕಾ. ೧೨-೩೦ ರಗಳೆ); ದಾರಿದೆಗದವು . . . ಹಲ್ಲಣಿಸಿದ ಹಯಾಳಿ (ತೊರರಾ. ೨-೩-೫೧). ೨. ಧರಿಸು; ತೊಡು: ಹೊನ್ನು ಹೆಣ್ಣು ಮಣ್ಣನಾವರಿಸಿಕೊಂಡು ಒಡವೆ ಆಭರಣಂಗಳ ಹಲ್ಲಣಿಸಿಕೊಂಡು ಬಂದು ಸರ್ವರಿಗೆ ಶಾಸ್ತ್ರೋಪದೇಶವ ಹೇಳುವರು ವೇಷಧಾರಿಗಳು (ಮಡಿಪೂ. ೪೯-೬೯); ವೇಷವನು ಹಲ್ಲಣಿಸಿ ನಾನಾದೇಶದೇಶವ ತೊಳಲಿ (ಸದ್ಗುರು. ೨-೧೮); ಪುರಜನವ ಮೆಚ್ಚಿಸುವ ಕೋಡಿಗರಂತೆ ವೇಷಮಂ ಹಲ್ಲಣಿಸಿಕೊಂಡು ನಿಜವಿರಕ್ತರಂತೆ ದೇಶಮಧ್ಯದಲ್ಲಿ ಸುಳಿದು (ಘನಪ. ೩೪-೨೬). ೩. ಸಜ್ಜಾಗು; ಸಿದ್ಧವಾಗು: ಹಲ್ಲಣಿಸಿದುದು ಯಾದವರ ಪಡೆ . . . ಗಂಭೀರಭೇರಿಯ ಬಹಳ ರಭಸದಲಿ (ಕುವ್ಯಾಸ. ೧೭-೬೦); ಹಲ್ಲಣಿಸಿ ಹರಿತಂದು ಮೋಹರವಲ್ಲಿಗಲ್ಲಿಗೆ ನಿಂದುದು (ಕುವ್ಯಾಭೀ. ೭-೨). [ಪಲ್ಲಣ+-ಇಸು$_3$]

**ಪಲ್ಲಮರಿ** 'ಪಲ್ಲಮಱಿ' ನೋ.

**ಪಲ್ಲಮಱಿ,** ಪಲ್ಲ ಮರಿ, ಪಲ್ಲವರಿ (ನಾ). ೧. ಆನೆಯ ಮರಿ; ಮರಿಯಾನೆ: "ಪಲ್ಲಮಱಿ = ಆನೆಯ ಮರಿ" (ಶಮದ. ಪರಿ. ೨); ಪಿಡಿಯ ಮೊಲಲ್ ಪಿಡಿ ಸೃಕ್ವದೊಳಡಸಿದ ಪಲ್ಲವಕೆ ಪಲ್ಲಮಱಿ ನಿಳ್ಕುವುದುಂ ಕಡೆಗಣ್ಣೊಳ್ ಕಂಡೊಂದಿಭಮುಡಿದಿತ್ತುದು ಸಾದ್ರ್ರಸಲ್ಲಕೀಪಲ್ಲವಮಂ (ಕಾವ್ಯಾವ. ೧೪೫); ಸಂಗಳಿಸಿತದೊಂದು ಪಲ್ಲಮಱಿ ತಾಯ್ವಿಡಿಗಂತುಮನಂತಸೌಖ್ಯಮಂ (ಚಂದ್ರಪು. ೫-೬೫); ಅದೊಂದು ಪಲ್ಲಮಱಿ ಲಲ್ಲೆಯ ಚಲ್ಲಮನೇನೊಡರ್ಚಿತೋ (ಧರ್ಮನಾ. ೩-೧೧೪). ೨. ಆನೆ: ಅಡಿಯಿಡುವುವು ಪಲ್ಲಮಱಿಯ ಮಱಿಗಳ್ ವನದೊಳ್ (ಶಬಶಂ. ೩-೪೩). 'ಪಲ್ಲಮಱಿರಕ್ಕಸ' ಪರಾ. **ಪಲ್ಲಮರಿ:** ೧. ಕರಿ ಪಲ್ಲಮರಿಯನೆತ್ತಿರೆ ಕೆಸರಿಂ (ಸೌನಂದ. ೮-೧೭). **ಪಲ್ಲವರಿ:** ೧. "ಪಲ್ಲವರಿಯೆಂದೆನಲ್ಯಾನೆಮರಿಯಕ್ಕು" (ಕಶರ. ೬೧). [ಪಲ್ಲ$_1$ + ಮಱಿ$_2$]

**ಪಲ್ಲಮಱಿರಕ್ಕಸ** (ನಾ). ಒಬ್ಬ ರಾಕ್ಷಸನ ಹೆಸರು; ಗಜಾಸುರ: ಇದಿರಾಂತ ಪಲ್ಲಮಱಿರಕ್ಕಸನಂ ಸದೆದು (ಶಬಶಂ. ೫-೯). [ಪಲ್ಲಮಱಿ + ರಕ್ಕಸ]

**ಪಲ್ಲಯಿಸು** 'ಪಲ್ಲವಿಸು' ನೋ.

**ಪಲ್ಲಲ** 'ಪಲವಲ' ನೋ.

**ಪಲ್ಲವ$_1$** 'ಪಲ್ಲವಿ' ನೋ.

**ಪಲ್ಲವ$_2$** (ನಾ). ೧. ಚಿಗುರು; ತಳಿರು: ಪೊಂಗೊಡನಂ ತಮಾಳ ಪಲ್ಲವದೊಳೆ ಮುಚ್ಚಿದಂದದೊಳೆ ಚೂಚುಕಮಾಂತುದು ಕರ್ಪನಾಕೆಯಾ (ಪಂಪಭಾ. ೧-೧೨೫); ಆ ಲತಾಂಗಿ ಲಜ್ಜಿಸಿ ತನುವಂ ನಿಜಸ್ಮಿತಸಿತಾಂಶುಕ ಪಲ್ಲವದಿಂ ಮುಸುಂಕುವಳ್ (ಕಾದಂಉ. ೮೯); ಪಾಸುವ ಪಲ್ಲವಂಬೊಲಿರೆ ಕೇಸಡಿಗೆಂಪು (ಪುಷ್ಪಪು. ೧೩-೧೧೯). ೨. ಮೊಳಕೆ; ಅಂಕುರ. ೩. ಮೊಗ್ಗು. ೪. ಅಲತಿಗೆ. ೫. ಹುಲ್ಲಿನ ಗರಿ. ೬. ರೆಂಬೆ; ಕೊಂಬೆ. ೭. ಮುಂಗೈ. ೮. (ಬಾವುಟದ) ಬಟ್ಟೆಯ ಚುಂಗು; ವಸ್ತ್ರದ ತುದಿ: ಕೆಕ್ಕೆಯುದ ಪಲ್ಲವವಗಿಯೆ ಮೆಱೆದುದು (ಕುವ್ಯಾದ್ರೋ. ೩-೪). ೯. ವಿಟ; ಕಾಮುಕ: ಮಲ್ಲಿಕಾಲಳನೆಯೊಳೇಂ ಮನಂಬಿಡಿದನೋ ಬನದೊಳ್ಸಹಕಾರಪಲ್ಲವಂ (ರಾಜಶೇ. ೯-೫೪); ತಂದೊಡಲ್ಲದೆ ಪೊಸ ಪರ್ಬಮಂ ನೆಗಳ್ವುದಾಗದು ಮದ್ಗೃಹದೇವತಾಳಿ ಕಾಯ್ವುದು ಪೆಱತೊಂದು ಬಲ್ಗುಱಿಯುನಿಕ್ಕುಕೆ ಪಲ್ಲವ ಮಾಡೆ ಪರ್ಬಮಂ (ವೃಷವಿ. ೧೭-೧೯). ೧೦. ತೋಳ ಬಂದಿ. ೧೧. ಬಳೆ; ಕಂಕಣ. ೧೨. ಬಲ; ಶಕ್ತಿ. ೧೩. ಹರಡಿರುವಿಕೆ. ೧೪. ಶೃಂಗಾರ ಕೇಳಿ. ೧೫. ವೀಣೆ. ೧೬. ರತ್ನಸಮೂಹ. ೧೭. ಬಾಲದಂತೆ ನೀಳವಾದ ಕೂದಲು. ೧೮. ಆನೆ. ೧೯. ಬಾಲಕ. ೨೦. ಶಬ್ದ ಸಮೂಹ: "ತಳಿರುಂ ವಿದ್ರುಮ ವೀಣೆ ರತ್ನನಿಚಯಂ ಲಾಂಗೂಲಕೇಶಂ ವಿಟಂ ಕಳಭಂ ಶಬ್ದಸಮೂಹ ಬಾಲಕರಿವಿಂತುಂ ಪಲ್ಲವಾಖ್ಯಂ" (ನಾನಾರ. ೧೩೧); "ಬಾಲೆಯರು ಪವಳ ಗಜ ಜನಜಾಲಂ ವಿಟ ತಳಿರು ವೀಣೆ ರನ್ನಂ ಮಕ್ಕಳು ಜೋಲುವ ತಲೆನವಿರುಂ ದಶದೇಳಿಗೆ ಪಲ್ಲವವೆಸರ್ಗಳೀ ಭೂಮಿಯೊಳಂ" (ನಾನಾಕಂ. ೧೫೦). ℙ ಹದಿನೈದರಿಂದ ಇಪ್ಪತ್ತರ ವರೆಗಿನ ಅರ್ಥಗಳು ವಿಚಾರಾರ್ಹವಾದುವು. ೨೧. ಒಂದು ರಾಜವಂಶದ ಹೆಸರು ಮತ್ತು ಆ ವಂಶದಲ್ಲಿ ಹುಟ್ಟಿದವನು: ಕೇಕಯುಪಲ್ಲವರಂ

ಕಾದೆಱಿದು ಪೆತ್ತ ಜಯನಾ ವಿಜಯರಸನ್ಗೆ ಬಾಳ್ಗಟ್ಟಿ ಪಲ್ಲಡಿಉಂ ಮೂಱುವಳ್ಳಿಉಂ ಕೊಟ್ಟಾರ್ (ಮೈ.ಅರಿ. ೧೯೩೬, ೧೬–೧೧; 450); ಪಲ್ಲವ ಭಯಗೋಚ್ಛೇದದಿರ್ (ಎಕ. II, ೫೯–೧೧೨; 974); ಪಲ್ಲವ . . . ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗೞುತ್ತುಮಿರೆ (ಜಗವಿ. ೨–೬೯ ಪ); ಕಿಕ್ಕಿಱಿಗಿಱಿದು ಕುಳ್ಳಿರ್ದ ಲಾಳ ಗೌಳ ಚೋಳ ಕೇರಳ ಪಾಂಡ್ಯ ಪಲ್ಲವ . . . ಮೊದಲಾದ ರಾಜಪುತ್ರರ ಪಂಕ್ತಿಗಳೊಳಂ (೧೦ಕ. ೨–೧೦೫ ಪ). **೨೨.** ಒಂದು ದೇಶದ ಹೆಸರು: ಪಲ್ಲವ ಪಾರಿಯಾತ್ರಪ್ರಭೃತಿ ನಾನಾದೇಶಯೋಷಿದ್ಗಿೀಯಮಾನಸೌಭಾಗ್ಯಗೀತನುಂ (ಚಂದ್ರಪ್ರ. ೪–೮೦ ಪ). **೨೩.** [ನಾಟ್ಯ] ಮೂವತ್ತು ಬಗೆಯ ನೃತ್ತಹಸ್ತಗಳಲ್ಲಿ ಒಂದು; ☞ "ಎರಡು ಪತಾಕ ಹಸ್ತಗಳನ್ನೂ ಹೊರಕ್ಕೆ ಸುತ್ತಿಸುತ್ತ ತೋಳುಗಳನ್ನು ಮೇಲಕ್ಕೆತ್ತಿ ನೀಡಿ ಒಳಕ್ಕೆ ಸುತ್ತಿಸುತ್ತ ಕೈಗಳನ್ನು ಸ್ವಸ್ತಿಕದಂತೆ ಹಿಡಿಯುವುದು" (ಲಾಸ್ಯರಂ. ೨೫೦ ಗದ್ಯಾನುವಾದ): ಚತುರಸ್ರ . . . ಪಲ್ಲವ . . . ವಲಿತ, ಲಲಿತ—ಈ ಮೂವತ್ತು ನೃತ್ತಹಸ್ತಂಗಳ್ (ಲಾಸ್ಯರಂ. ೨–೪೪ ಪ).

**ಪಲ್ಲವತ್ರಿಣೇತ್ರ** = ಪಲ್ಲವರ ವಂಶದಲ್ಲಿ ಶಿವನಂತಿರುವವನು; ಒಂದು ಬಿರುದು: ಪಲ್ಲವಾದಿತ್ಯ ಪಲ್ಲವತ್ರಿಣೇತ್ರ . . . ಶ್ರೀವೀರಬಲ್ಲಾಳದೇವರಸರು . . . ಪ್ರಿಥ್ವೀರಾಜ್ಯಂಗೆಯ್ಯುತ್ತಮಿರೆ (ಎಕ. III (R), ಗುಂಡ್ಲುಪೇ. ೪೦–೬; 1320). **ಪಲ್ಲವಾದಿತ್ಯ** = ಪಲ್ಲವರ ವಂಶದಲ್ಲಿ ಸೂರ್ಯನಂತಿರುವವನು; ಒಂದು ಬಿರುದು: ಪಲ್ಲವಾದಿತ್ಯ ಪಲ್ಲವತ್ರಿಣೇತ್ರ . . . ಶ್ರೀವೀರಬಲ್ಲಾಳದೇವರಸರು . . . ಪ್ರಿಥ್ವೀರಾಜ್ಯಂಗೆಯ್ಯುತ್ತಮಿರೆ (ಎಕ. III (R), ಗುಂಡ್ಲುಪೇ. ೪೦–೬; 1320). [ಸಂ.]

**ಪಲ್ಲವಳ** (ನಾ). ೧. ಚಿಗುರು; ತಳಿರು. ೨. ಅಶೋಕ ವೃಕ್ಷ. ೩. ವಿಟ; ಜಾರ; ಕಾಮುಕ: "ಪಲ್ಲವ[ಪಾಠಾಂ. ವಿ]ಕನಾ ವಿಟಂ ವೇಶ್ಯಾವರಂ ಭುಜಂಗಂ ಬೊಜಗನಕ್ಕುಂ" (ಮಂಗರಾ. ೭೧–೧೮); ರುಕ್ಮಿಣಿಯಾ . . . ಪಡಿದಳಿರ್ಗಳ್ ಪಲ್ಲವಕಮನಃಪ್ರಮೋದಮಂ ಪೆರ್ಚಿಸುಗುಂ (ಜಗವಿ. ೧೦–೧೯); ಅ ಬೆಡಂಗಿನ ಕೇರಿಯೊಳ್ ಪಲ್ಲವಕಾನಂದನಿಧಿಯಾಗಿಯುಂ ಮದನಗುಣಶಿಳೀಮುಖಾಸ್ಪದಮಾಗಿಯುಂ . . . ವರ್ಣಿಸುತ್ತಿರ್ದನೊರ್ವ ವಿಟನಾಯಕಂ (ಪವಿತ್ರ್ಯಾರ. ೨–೭೧ ಪ). **೪.** ಒಂದು ಬಗೆಯ ಮೀನು. **ಶ್ಲೇಷೆ:** ಆ ನದಿ . . . ಪಲ್ಲವಕಮಯಮಾಗಿಯುಂ ಪಣ್ಯಾಂಗನಾವಾಟಮಲ್ತು (ತ್ರಿಪುವಿ. ೨–೨೫ ಪ). **೫.** ಒಂದು ದೇಶದ ಹೆಸರು; ಪಲ್ಲವರ ನಾಡು: ಚೇರ ಕೊಂಕಣ ಪಲ್ಲವಕ ಹವಿರ್ಯಾರ ಜಾಳಾಂಧ್ರ ದ್ರವಿಳ ಕಾಶ್ಮೀರ ಬಾಹ್ಲಿಕ . . . ದೇಶಂಗಳೊಳೆಸೆವ ಜಂಗಮವು ಭಕ್ತಾಳಿ (ಒಸಪು. ೬–೧೯). [ಸಂ.]

**ಪಲ್ಲವಗ್ರಾಹಿ** (ನಾ). (ಅಲಂ) ಆಳವಾದ ಪಾಂಡಿತ್ಯವಿಲ್ಲದವನು: ಪೆಱನೊರ್ವನೊಲ್ದು ಮೊಲಿಸಿಯುಮೊಂದೆಡೆಯೊಳ್ನಿಲ್ಲದ ಪಲ್ಲವಗ್ರಾಹಿ ಸೋಡಂಬಾಡನೆ ಬಂದು ಕಾಲ್ಗಿಡುವುದುಂ (ಮಲ್ಲಿಪು. ೭–೮೧). [ಸಂ.ಪಲ್ಲವಗ್ರಾಹಿನ್]

**ಪಲ್ಲವಜಂಗಮ** (ನಾ). ವಿಟನಾದ ಜಂಗಮ: ಪಲ್ಲವಜಂಗಮಂ ಪಣವಧೂಟಿಯ ಗೇಹದೊಳಿರ್ದು (ವೃಷವಿ. ೮–೨೦). [ಪಲ್ಲವ$_2$ + ಜಂಗಮ$_1$]

**ಪಲ್ಲವತಟಾಕ** (ನಾ). ಒಂದು ಊರಿನ ಹೆಸರು: ಉತ್ತರತಃ ಬೆಪ್ಪುಮ್ಮಾಟ್ಟಿಣುಸಿಪ್ಪಟ್ಟಸಹಿತಂ ಪಲ್ಲವತಟಾಕಮಿತಿಗ್ರಾಮಸ್ಯ ನಾಮಧೇಯಂ (ಎಕ. VII (R), ಮಂಡ್ಯ. ೩೫–೩೭; 713). [ಪಲ್ಲವ$_2$ + ತಟಾಕ]

**ಪಲ್ಲವನೇತ್ರೆ** (ನಾ). ಚಿಗುರಿನಂತೆ ಕೆಂಪಾದ ಕಣ್ಣುಗಳುಳ್ಳವಳು: ಅನವರತಬಾಷ್ಪವಾರಿಧಾರಾಪೂರಪರಿವಾರಿತ ಪಲ್ಲವನೇತ್ರೆಯುಂ (ಗದಾಯು. ೧–೫೫ ಪ). [ಸಂ.ಪಲ್ಲವನೇತ್ರಾ]

**ಪಲ್ಲವಪಂಡಿತ** (ನಾ). = ಪಲ್ಲವಗ್ರಾಹಿ: ಪಹಿಲವನು ವೇಢೈಸುವಡೆ ನರರಹಿಪತಿಗಳೇ ಭಟರ ಪಡಿಯಿಡಬಹುದೆ ಪಲ್ಲವಪಂಡಿತರ ಸತೃಣಾಸಿಗಳ ಗತಿಯ (ಕುಮ್ಯಾಕ. ೨೩–೬). [ಸಂ.]

**ಪಲ್ಲವಭಂಗ** (ನಾ). ಚಿಗುರನ್ನು ಕೊಯ್ಯುವುದು: ಲತಾಂಗಿ . . . ರಣರಣಕವ್ಯಥಾವ್ಯಜನಪಲ್ಲವಭಂಗವಾದವ್ವು ದೆಂದಂಜಿ ನಡುಗುವಂತೆ ನಿಡುಸುಯ್ಯು ಗಾಳಿಯಿಂ ನಡುಗುವ ಲತಾಮಂಟಪದೊಳಿರ್ಪಳ್ (ಕಾದಂಬ. ೩೩೪). [ಪಲ್ಲವ$_2$ + ಭಂಗ]

**ಪಲ್ಲವರಿ** 'ಪಲ್ಲವಱಿ' ನೋ.

**ಪಲ್ಲವಸತ್ತಿಗೆ** (ನಾ). ೧. ಚಿಗುರು, ರತ್ನ ಮುಂತಾದವುಗಳಿಂದ ಅಲಂಕರಿಸಿದ ಛತ್ರಿ,—ಕೊಡೆ: ಪಲ್ಲವಸತ್ತಿಗೆ ಸಂಕಂ ಝಲ್ಲರಿ ಜಯಮಂಗಲಂಗಳಂ ಚೋಳಮಹೀವಲ್ಲಭನಿತ್ತಡೆ (ಎಇ. VI, ೨೧೬–೧೧; 1057); ವಾರುವನ ಬೆನ್ನೆ ವಾಯ್ದು ಅಲ್ಲಲ್ಲಿ ಕೈದೀವಿಗೆಗಳು ತೆಲ್ಲಯ್ಸಿ ಪಲ್ಲವಸತ್ತಿಗೆ ಮೇಲ್ಮಸಗೆ (ಸಂಬರ. ೧೦–೪೯); ಸುತ್ತ ಮೆಱೆದವು ಮೇಲೆ ಪಲ್ಲವಸತ್ತಿಗೆಯ ಸಾಲುಗಳು ಬಿರುದಿನ ಕತ್ತರಿಯ ಹೀಲಿಗಳ ಝಲ್ಲರಿ ಮುಸುಕಿದವು ಗಜವ (ಕುಮ್ಯಾದ್ರೋ. ೩–೬). **೨.** (?): ಕೆಲಬರ್ ಪಲ್ಲವಸತ್ತಿಗೆಗಳಂತೆ ಪೊಳೆವ ಪಲ್ಲವಸತ್ತಿಗೆಗಳನೆತ್ತಿಯುಂ (ಲೀಲಾವ. ೧೧–೫೪ ಪ). [ಪಲ್ಲವ$_2$ + ಸತ್ತಿಗೆ]

**ಪಲ್ಲವಹಸ್ತ** (ನಾ). [ನಾಟ್ಯ] ಮೂವತ್ತು ಬಗೆಯ ನೃತ್ತಹಸ್ತಗಳಲ್ಲಿ ಒಂದು: ಎತ್ತಿದ ಬಾಹುಗಳಿಂ ಮಿಗೆ ಬಿತ್ತರಿಪ ಪತಾಕಹಸ್ತಮವು ವ್ಯಾವರ್ತಂಬೆತ್ತುಂ ಪಸರಿಸಿ ಮಿಗೆ ಪರಿವೃತ್ತ[೦] ಸ್ವಸ್ತಿಕಮವಾಗೆ ಪಲ್ಲವಹಸ್ತಂ (ಲಾಸ್ಯರಂ. ೨–೫೬). [ಪಲ್ಲವ + ಹಸ್ತ]

**ಪಲ್ಲವಾಚಾರಿ** (ನಾ). ಒಬ್ಬಾತನ ಹೆಸರು: ಪಲ್ಲವಾಚಾಂ ಲಿಕಿತಂ (ಎಕ. II, ೨೧–೫; ಸು. 700). [ಪಲ್ಲವ$_2$ + ಆಚಾರಿ]

**ಪಲ್ಲವಾಯುಧ** (ನಾ). ಚಿಗುರನ್ನು ಆಯುಧವನ್ನಾಗಿ ಉಳ್ಳವನು; ಮನ್ಮಥ: ಪಲ್ಲವಾಯುಧನು ಥೀ ಥೀ ನಾನು ನೆನೆದುದು ಹೊಲ್ಲವೆಂದೊಳಗೆ ಹೇಸಿದನು (ಭರತ. ೫೧–೧೧೮). [ಪಲ್ಲವ$_2$ + ಆಯುಧ]

**ಪಲ್ಲವಿ**, ಪಲ್ಲ$_3$, ಪಲ್ಲವ$_1$ (ನಾ). ೧. [ಸಂಗೀತ] ಹಾಡಿನ ಆರಂಭದಲ್ಲಿದ್ದು ನುಡಿಗೊಂದು ಸಲ ಪುನರಾವರ್ತನೆಗೊಳ್ಳುವ ಭಾಗ: ಲಿಂಗತ್ರಯ ವಚನತ್ರಯ . . . ಸಂಗೊಳಿಸದೆಯೊಂದೊಂದನೆ ಹಿಂಗದೆ ಪಿಡಿದೊರೆವುದಬಲೆ ಪಲ್ಲವಿ ಪದದೊಳ್ (ಕವಿಜಿ. ೩–೩೩); ಗಾನಸೌಧದ ಕಳಶವೇ ಪಲ್ಲವಿ . . . ಗಾಯಕನ ವಿಶಾಲಮನೋಧರ್ಮದ ಆಳತೆಗೋಲು ಪಲ್ಲವಿ (ಸಂಗೀಚಂ. ೯೧); ಈ ರೀತಿಯ ಸಮಯಸ್ಫೂರ್ತ ಸಂಗೀತಕ್ಕೆ ಐದು ಅಂಗಗಳಿವೆ. ಆಲಾಪನೆ, ತಾನ, ಪಲ್ಲವಿ, ನಿರವಲ್ ಮತ್ತು ಸ್ವರ (ಸಂಗೀತ. ೧). **೨.** (ಅಲಂ) ಪುನಃ ಪುನಃ ಹೇಳುವ ಮಾತು; ಪುನರಾವೃತ್ತಿಯ ಹೇಳಿಕೆ: ಬಿಡು ನೀನು ಮುಂದೇನು ಎನುವ ಪಲ್ಲವಿಯನು (ಇಂಚಾಪ. ೧೪೨–೯೭); ಮತಗಳೆಷ್ಟೋ ಪಥಗಳಷ್ಟು ಎಂಬುದು ಅವರ ಉಪದೇಶದ ಪಲ್ಲವಿ (ಭಾರದ. ೩೨೩); ನಾನು ಅವನ ಸಂಗ ಮಾಡುವುದಿಲ್ಲ ಎಂಬುದೇ ಆವಳ ಪಲ್ಲವಿಯಾಯಿತು (ಆಶ್ರಮ. ೭೨). **ಪಲ್ಲ$_3$:** ೧. ಒಂದು ಹಿಗ್ಗಿನ ಪಲ್ಲ, ಹಲವು ನುಡಿಯಲಿ ಹರಿಯೆ ಆಟ ಪಾಟದ ಹಾಡು ಕಳಸವಿಟ್ಟಂತೆ! (ಉಯ್ಯಾಲೆ. ೪೨–೭); ಸುತ್ತಲಿನ ನಾಲ್ವರು ಹುಡುಗರು ಪಲ್ಲಾ ಅನ್ನುತ್ತಿದ್ದಾರೆ (ಅನಂತ. ೭೨). **ಪಲ್ಲವ$_1$:** ೧. ಪದವಿಡುವೆಡೆಯೊಳ್ ಪಲ್ಲವದೊಳ್ ಪದನೊಳುಭಯಗಣ ಸಮನಾಗಲ್ ಸಲ್ಲಲಿತ ಕೀರ್ತಿಯಾದವುದು (ಛಂದೋಂಬು. ೧–೯೬ ಆಡಿಪದ್ಯ). [ದೇ.॥ ತಮಿ.ಮಲ.ತೆಲು.ಪಲ್ಲವಿ./ಸಂ.ಪಲ್ಲವೀ = ರಾಗಾಂಗರಾಗ]

**ಪಲ್ಲವಿಕ** (ನಾ). ೧. ವಿಟ. ೨. ವಿಶಾನು. ೧, ೨: ಆ ಮಹಾರ್ಣವಂ . . . ಗಾಣಿಕ್ಯಗೇಹರಾಜಿಯಂತೆ ಪಲ್ಲವಿಕಸಂತಾನಕ್ರೀಡಾಪ್ರಪಂಚಯುಂ . . . ಚತುರ್ಮುಖನಂತೆ ಸರಸ್ವತೀಪತಿಯುಮೆನಿಸಿದುದು (ಜಗವಿ. ೧-೪೪ ವ). 'ಪಲ್ಲವಕ' ಪಠಾ. [ಸಂ.]

**ಪಲ್ಲವಿಕೆ** (ನಾ). ಹರಡಿರುವುದು; ಜನಸಮೂಹ: ಸಕ್ರಮದ ಪಾಳಿಯ ಪಲ್ಲವಿಕೆ ಪರಿವಡೆದುದಮಳಪ್ರಣವಮಯವಾಗಿ (ಕುಪ್ಯಾಕ. ೭-೩೫). [ಪಲ್ಲವಿಸು+-ಇಕೆ]

**ಪಲ್ಲವಿತ** (ಗು). ೧. ಚಿಗುರಿದ; ಕುಡಿಯೊಡೆದ: ಪಲ್ಲವಿತ ಮುಕುಳಿತ ವಿಸ್ತಾರಿತ ರಮ್ಯಾಶೋಕಮಹೀರುಹಮುಂ (ಆದಿಪು. ೧೦-೪೧); ಚಿತ್ತ ಪಲ್ಲವಿತಾನುರಾಗಂಬೆತ್ತು ಕನ್ನದ ಬೊಮ್ಮದೇವನುದಾತ್ತಭಕ್ತಿಸ್ಥಿತಿಯೊಳೆಂದಿನ ಪರಿಯಿನಿರುತಿರ್ದ (ಬಸವು. ೩೧-೩೧); ಪಲ್ಲವಿತ ನವಚೂತ ತರು ಬೇಸಗೆಯು ರ್ಝಳಕೆ ನಿಲ್ಲದಸವಳಿದು ಜೋಲ್ವಂತೆ (ಜೈಮಿಭಾ. ೨೧-೩೬). (ನಾ). ೨. ಚಿಗುರಿದುದು; ಕುಡಿಯೊಡೆದುದು: ಅನುರಕ್ತಾಶೋಕವಲ್ಲರಿ ಪಲ್ಲವಿತಮಾಗೆಯುಂ ... ವಸಂತ ಸಮಯದೊಳ್ (ಮಲ್ಲಿಪು. ೫-೨). [ಸಂ.]

**ಪಲ್ಲವಿಸು,** ಪಲ್ಲಯಿಸು, ಪಲ್ಲೈಸು (ಕ್ರಿ). ೧. ಚಿಗುರು; ಕುಡಿಯಿಡು: ನೆಲೆವಡೆಂಗಳನೇಱುವ ನೀಱೆಯರಲಕ್ತಕರಾಗರಂಜಿತ ಪದಪಲ್ಲವಂಗಳಿನವನಿತಳಮೆಲ್ಲಂ ಪಲ್ಲವಿಸಿದಂತೆಯುಂ (ಕಾದಂಪೂ. ೪೭೮); ನವಸಹಕಾರದಂಕುರದಿನಂಕುರಿಸಿತ್ತು ಪೊದಟ್ದು ನೀಳ್ದು ಪಲ್ಲವತತಿಯಿಂದೆ ಪಲ್ಲವಿಸಿತು . . . ಮನೋಜಮನೋರಥದ್ರುಮಂ (ಅಜಿಪು. ೬-೧೧); ರತಿಯ ಲಾವಣ್ಯರಸಪ್ರವಾಹದಿಂ ಪಲ್ಲವಿಸದ ಚೂತವನಮಿಲ್ಲ (ಪಂರಾಮಾ. ೧-೧೦೬ ವ); ತಳಕ್ಕೆ ನೀರನೆಱೆದರೆ ಮೇಲೆ ಪಲ್ಲವಿಸಿತ್ತು ನೋಡಾ (ಬಸವ. ೪೨೦). ೨. ಚಿಗುರಿಸು; ಚಿಗುರನ್ನು ಹೊಮ್ಮಿಸು: ಅಶೋಕೆಯನೊದೆದು ಪಲ್ಲವಿಸೆಂಬ ಹಾದರಿಯ ನೆಳಲ್ಗೆ ಹರಿಣಂಗಳಂ ಹೊಡೆಯೆಂಬ ಕೆಲಸದ ನೆವದಿಂ . . . ಕೆಳದಿಯರೆಲ್ಲರಂ ಮೆಲ್ಲ ಮೆಲ್ಲನೆ ಕಳುಪಿ (ನಂಬಿರ. ೧೪-೩೯). ೩. ಹರಡಿಕೊಳ್ಳು; ವಿಸ್ತರಿಸು; ಹಬ್ಬಿಕೊಳ್ಳು: ಕಲಿಯುಗದಲ್ಲಿ ಷಡುದರುಶನ ಪಲ್ಲವಿಸಿತ್ತು (ಮೋಳಿಮಾ. ೪-೧೦); ಶಿವಭಕ್ತಿ ಚಿತ್ತದೊಳು ನಳನಳಿಸಿ ಸಂತಸದೆ ಹರನೊಲವು ಕರಣದೊಳ್ಪಲ್ಲವಿಸಿ (ಮಱಿರ. ದೇ. ೬೯-೨೨); ಅರುಣಾಧರಕಾಂತಿಯೆ ಮಿಗೆ ಪಸರಿಸಿ ಪಿರಿದು ಪಲ್ಲವಿಸದಂತೆಸೆದುದು ವರಮಣಿಕುಂಡಲಗಳ ರುಚಿ (ತ್ರಿಭುತಿ. ೮-೧೭); ಫುಲ್ಲಶರನ ಮಾರ್ಬಲ ವನದೊಳು ಪೊಕ್ಕು ಚೆಲ್ಲವರಿದು ಪೀಡಿಸಲು ಪಲ್ಲವಿಸಲು (ಮೋಹತ. ೭-೧೦). ೪. ಹಬ್ಬಿಸು; ಹರಡು: ತ್ರಿವಿಧಭಕ್ತಿಯನೆಲ್ಲೆಡೆಯೊಳುಂ ವಸುಮತಿಗೆ ನೆಱೆ ಪಲ್ಲವಿಸಿ ಬಾ ಹೋಗು (ಬಸವು. ೩೭-೫೫). ೫. ಅಗಲ ಮಾಡು; ಅರಳಿಸು: ತಂದು ಸುರಪನ ಛತ್ರವನು ನಲವಿಂದ ಪಲ್ಲವಿಸಿದರು (ಸಂಭಪ. ೨೦-೧೩೭). ೬. ಅರಳು; ವಿಕಾಸವಾಗು: ಪಾರಿಜಾತಾವಳಿ ಸೋಲ್ತ ವರ್ಗೆ ಕರಂ ಮುಗುಳ್ದು ಪಲ್ಲವಿಸಿದುವೆನಿಸಿದುವು ತಳದ ವೆಳ್ಪುಂ ಕೆಂಪುಂ (ಶಾಂತಿಪು. ೧೦-೨೮); ಪುಷ್ಪ ಪಲ್ಲವಿಸಿದೆ ಹೊಕ್ಕುಳಲಿ (ಪುರಂದ. ೨-೬೭-೨). ೭. ಕಾತರಿಸು; ಸಂಭ್ರಮಿಸು: ನಿನ್ನ ಜವ್ವನಕೊಬ್ಬಿನಲಿ ಮಱೆದು ಪಲ್ಲವಿ [ಪಾಠಾಂ. ತಲ್ಲಣಿ]ಸಿ ನೀ ಕಾಮಿಸಿದೊಡೆ (ಪ್ರಭುಲೀ. ೭-೧೮). ೮. ನಿಮಿರು: ಹರ್ಷಪ್ರಸರದಲಿ ರೋಮಾಳಿ ಪಲ್ಲವಿಸಿದುದು (ಸಂಭಪ. ೩೨-೨೯). ೯. ಮೂಡು; ಮೊಳೆ: ಧೃತರಾಷ್ಟ್ರಂಗೆ ಮಕ್ಕಳ ಮೇಲೆ ನೆನಹಾಯ್ತಧಿಕಶೋಕೋದ್ರೇಕ ಪಲ್ಲವಿಸೆ . . . ತನ್ನೊಳು ಹಿರಿದು ಚಿಂತಿಸಿದ (ಕುಪ್ಯಾಭೀ. ೧-೫೪); ಮುನ್ನಿನ ಲಘುತ್ವವಳಿದುದು: ಪೌರುಷತೆ ಮಾಸಿ ಪಲ್ಲವಿಸಿತಬಲಾಸಹಜಲಜ್ಜೆ (ಚಿತ್ರಾಂಗ. ೫೮-೧೬೦೫). ೧೦. ಕೂಡಿಸು; ಸೇರಿಸು; ಕಟ್ಟು: ಕರಪಲ್ಲವದಿ ನೇವರಿಸು ತುಭಯದ ಕೊರಳನಾರೈದು ಬಲ್ಲಿದನು ಫಲುಗುಣನು ಕಿರುವನು ಪಲ್ಲವಿಸಿದನು (ಸಂಭಪ. ೨೦-೪೧). **ಪಲ್ಲಯಿಸು:** ೧. ಕಲ್ಲ ಬಿತ್ತಿ ನೀರ ನೆಱೆದಲ್ಲಿ ಪಲ್ಲಯಿ[ಪಾಠಾಂ. ವಿ]ಸುವದೇ (ಪಂದೇಪ. ೨೭೪-೧೭). **ಪಲ್ಲೈಸು:** ೧. ಲತೆ ಪಲ್ಲೈಸುವ ಬಗೆ ಮಾಡೊ ಪ್ರೀತಿಯಲಿ (ಮೋಕ್ಷದೀ. ೩-೫); ಎಲ್ಲೆಲ್ಲಿ ಕುದುರೆಯು ಮೇಯ್ದಿತ್ತೋ ಆ ಸ್ಥಳಗಳಲ್ಲಿ ಕಡಲೆಯ ಗಿಡಗಳು ಪಲ್ಲೈಸುತ್ತಿದ್ದವು (ಕಭವಿ. ೧೩೫). ೩. ಆ ಕೆಂಡಕ್ಕೆ ಪ್ರತಿರೂಪಿಂದ ಉರಿ ಪಲ್ಲೈಸುವಂತೆ (ಅವರೇ. ೬೨); ಅಧಿಕ ಕ್ರೋಧಶಿಖಿ ಪಲ್ಲೈಸಿತಕ್ಷಿಯಲಿ (ಕುಪ್ಯಾಶ. ೩-೫೫); ಚಿಂತಾರಾಶಿಯಿಂ ಗಾಂಧಾರಿಯಿರ್ಪ ಸಮಯದಿ ಕುಂತಿಗಾ ಶತಶೃಂಗದೊಳ್ ಸುತನಾದ ವಾರ್ತೆ ಪಲ್ಲೈಸಲದ ಕೇಳಿ ಬಲಿಯದ ಮುನ್ನ ಸೈರಿಸದೆ ಗರ್ಭಮಂ ಪೊಸೆದಳಾಗ (ಲಕ್ಷ್ಮಭಾ. ೧-೨೫-೩೬). ೧೦. ಚೆಂಚೆಗಳ ಹಮ್ಮಿದರಾನೆಯಲಿ ಸತ್ತಿಗೆಗಳನು ಪಲ್ಲೈಸಿದರು ಮೇಲೆಸೆವ ಕಳಶದಲಿ (ನಳಚ. ೯-೫೭); ಮಲ್ಲಿಗೆ ಜಾಜಿ ಸಂಪಗೆಯರಳ್ಗಳ ಮಾಲೆ ಸಲ್ಲಲಿತಾಂಗಿಯರುಗಳ ಪಲ್ಲೈಸಿದ ಜಡೆಮುಡಿಗಳೊಳಗೆ ಬಹುಳೋಲ್ಲಾಸದೊಳೊಪ್ಪಿದುವು (ಕಂಸವಿ. ೨೧-೧೯). ೧೧. ಹೆಚ್ಚಾಗು; ವೃದ್ಧಿಸು: ಪೂಜೆಗೈವಾ ರಭಸ ಪಲ್ಲೈಸಿತೇವೇಳ್ವೆನು (ಲಕ್ಷ್ಮಭಾ. ೮-೬-೩೪). [ಪಲ್ಲವ$_2$+-ಇಸು$_3$]

**ಪಲ್ಲಹರಕಿ** (ನಾ). (?): ಕಳಿಂಗಬ್ಬೆಗಳಯ್ಯ ಪಲ್ಲಹರಕಿ ಪರಕಿಯ ಮಗಳ್ ಕಳಿಂಗಬ್ಬೆ (ಎಕ. XI, ದಾವಣ. ೧೭-೮; 889). [ ? ]

**ಪಲ್ಲಳಿ** (ನಾ). ನೊರೆ; ಬುರುಗು: ತುರಗಚಯಂ ತರಂಗತತಿ ಬೆಳ್ನೊಡೆ ಪಲ್ಲಳಿಗಳ್ ಗಜಾಳಿ ಭೀಕರಮಕರವ್ರಜಂ (ತ್ರಿಷವಿ. ೨೪-೩೮೫).

**ಪಲ್ಲಾಱು** (ಕ್ರಿ). ಹಲ್ಲು ಒಣಗಿಹೋಗು,—ನಿರ್ದ್ರವವಾಗು: ಎತ್ತಿ ಕಯ್ಯುಡಿದುಮಾಗಳ್ ಕಾಲುಡಿದುಂ ಬಟಿಲ್ದು ಪಲ್ಲಾಱು ಪೊಡರ್ಪುಗೆಟ್ಟು ಸಿರಲಪ್ಪೊಡಮಾಱದೆ ಪೋದೊಡೆ (ಪಂಪಭಾ. ೩-೫೮). [ಪಲ್+ಆಱು$_1$]

**ಪಲ್ಲಿ$_1$,** ಹಲ್ಲಿ (ನಾ). (ಮನೆಗಳಲ್ಲಿ ವಾಸಿಸುವ) ಸರಟದ ಜಾತಿಯ ಕೀಟಾಹಾರಿ; ಗೌಳಿ: ಕೆಲಕ್ಕೆ ಬಿಟ್ಟೋಡಿದ ಪಲ್ಲಿಯ ತತ್ತಿಯೊಳಗಿರ್ದ ಮಱಿ ಕೆಲದೊಳಿರ್ದ ಮಕ್ಷಿಕಮಂ ಪಿಡಿದುಕೊಳ್ವುದಂ ಕಂಡು (ಚಾವುಂಪು. ೭೧); ಪಲ್ಲಿ ಪಾವು ಪವರಣೆ ನವಿಲಾವೋಡೆಂಬಿವು ಕಷ್ಟಂ ಮನೆ ಮಾಡುವ ನೆಲನನಗುಟೆ ಕಾಣ್ಬೊಡೆ (ಲೋಕೋಪ. ೩-೧೫); ಪಲ್ಲಿಯಂತೆ ಕೀರಂ ಪತ್ತುತ್ತುಂ (ಧರ್ಮಾಮೃ. ೧-೧೬೦); ತೋಱಿತು ವಾಯಸನೆಡಗಡೆ . . . ದೂಱಿತು ಬಲದ ಭಾಗದೆ ಪಲ್ಲಿ (ಮೋಹತ. ೬-೨೫). **ಹಲ್ಲಿ:** "ಮುಸಲೀ, ಗೃಹಗೋಧಿಕಾ—ಈ ೨ ಹಲ್ಲಿ" (ನಾಚಿರಾ. ೧೧೩); ಹಲ್ಲಿ ಹೋಗಿ ತಾ ಕಾಲನ ನುಂಗಿತು (ಪುರಂದ. ೩-೯೩-೨). ☞ ಈ ಅರ್ಥದ ಶಬ್ದವು ಪ್ರಾಯಶಃ ದ್ರಾವಿಡಭಾಷೆಯಿಂದ ಸಂಸ್ಕೃತಕ್ಕೆ ಹೋಗಿರಬಹುದು. [ದೇ॥. ತಮಿ. ಮಲ. ತುಳು. ಕೊಡ. ಪಲ್ಲಿ; ತೆಲು. ಪಲ್ಲಿ, ಪಲ್ಲಿಯ, ಪಲ್ಲೆ, ಬಲ್ಲಿ/ಸಂ. ಪಲ್ಲಿ, ಪಲ್ಲೀ]

**ಪಲ್ಲಿ$_2$** (ನಾ). ೧. ಊರು; ಗ್ರಾಮ: ತೆಲುಗು ಹಾಗೂ ಕನ್ನಡ ನುಡಿಯಲ್ಲಿ 'ಪಲ್ಲಿ' ಎಂದರೆ 'ಹಳ್ಳಿ'—ಗ್ರಾಮ (ಪಶಪ. ೧೭೦). ೨. ಮನೆ; ನಿವಾಸ. ೩. ಒಂದು ಬಗೆಯ ಬಳ್ಳಿ: ದಾವಣಿಗಟ್ಟಿದ ಕುದುರೆ ಗುತ್ತಮುಮಪ್ಪ ಜೇವಣಿಗೆಯುಸಿಕ್ಕಿ ಬಳಿಕ ಓವದೆ ಹುಲ್ಲ ಪಲ್ಲಿಯ ಹಾಕಿಸುವ ರಾಯರಾವುತರೊಪ್ಪಿದರಲ್ಲಿ (ಶ್ರೀಪಾಲ. ೧೩-೧೦೯); ಪಲ್ಲಿಯ ಹುಲ್ಲೊಳಡಗಿ ಭೀತಿಗೊಂಡಾಗ . . . ಪಲ್ಲ ಕಿರಿದರೇನೆಂಬೆ (ಕಂಸವಿ. ೧೫-೯೪). [ಸಂ. ಪಲ್ಲೀ]

**ಪಲ್ಲಿಲಿ,** ಹಲ್ಲಿಲಿ (ನಾ). ೧. ಹಲ್ಲು ಇಲ್ಲದಿರುವಿಕೆ; ಬೊಚ್ಚುಬಾಯಿಯಾಗಿರುವುದು. ೨. ಸೂರ್ಯ: "ನಿಸಿವಗೆಯ ತಾವರೆಗೆಳೆಯ . . . ಬಿಸುಗದಿರ ಪಲ್ಲಿಲಿ ಜವನ ತಂದೆ ಜಗುನೆಯಯ್ಯನೆನಲ್ಕೆ ಸೂರ್ಯ

ನಾಮಂ" (ಶಬ್ದಮಂ. ೧೫). (ಗು). ೩. ಹಲ್ಲು ಇಲ್ಲದ,—ಉದುರಿ ಹೋದ: 'ಪಲ್ಲಿಲಿವಾಯ್' ಪರಾ. **ಹಲ್ಲಿಲಿ:** ೩. 'ಹಲ್ಲಿಲಿ ಬಾಯಿ' ಪರಾ. [ಪಲ್+-ಇಲಿ$_3$]

**ಪಲ್ಲಿಲಿಬಾಯಿ** 'ಪಲ್ಲಿಲಿವಾಯ್' ನೋ.

**ಪಲ್ಲಿಲಿವಾಯ್,** ಪಲ್ಲಿಲಿಬಾಯಿ, ಹಲ್ಲಿಲಿಬಾಯಿ (ನಾ). ಹಲ್ಲು ಇಲ್ಲದ ಬಾಯಿ; ಬೊಚ್ಚು ಬಾಯಿ: ಪೊಂಗಳಂ ಸುರಿವೊಡವಱರೊಸ್ಯೆರಿಸುವರಾತನ ಪಲ್ಲಿಲಿವಾಯ ನಾತನುಂ (ಪಂಪಭಾ. ೪-೧೦೦); ಸೊಗಯಿಸುಗುಮೆ ಪಲ್ಲಿಲಿವಾಯಗಿಲಿಲಿಗಂಧಂ ಸಮಂತು ಕೂರಿಲಿ ಕುಡುಗೋಲ್ (ಶಾವ್ಯಾಸ. ೨೫೭). **ಪಲ್ಲಿಲಿಬಾಯಿ:** ಕಬ್ಬನ್ನು ಜಗಿಯಲು ಪಲ್ಲಿಲಿಬಾಯವನಿಗಸಾಧ್ಯವಾದರೆ ಕಬ್ಬು ರಸಹೀನವಾಗುವುದೇ (ಶಾಲೂರ. ೧೧ ಅಭಿಪ್ರಾಯ). **ಹಲ್ಲಿಲಿಬಾಯಿ:** ನೋಡಡೊ: ಬತ್ತಿದ ಹಲ್ಲಿಲಿಬಾಯಿ, ತೆರೆ ಸುಕ್ಕಿದ ಮೊಗದಾ ಬಡತಾಯಿ! (ಕೋಗಿಲೆ. ೭೯-೧೭). [ಪಲ್ಲಿಲಿ+ಬಾಯ್]

**ಪಲ್ಲಿಲಿವಾಯ** (ನಾ). ಹಲ್ಲು ಉದುರಿ ಹೋದವನು; ಬೊಚ್ಚ; ಬೋಡ: "ಪಲ್ಲಿಲಿವಾಯನೆಂಬ ನುಡಿ ಬೋಡನೊಳ್" (ಕರ್ಣಾನಿ. ೨೭). [ಪಲ್ಲಿಲಿವಾಯ್+-ಅ$_7$]

**ಪಲ್ಲಿಶಕುನ** (ನಾ). ಹಲ್ಲಿ ನುಡಿಯುವುದನ್ನು ಗುರುತಿಸಿ ಹೇಳುವ ಶಕುನ: ಪಲ್ಲಿಶಕುನವ ಕೇಳು ರಾಯ (ಶರಲೀ. ೪೨೩). 'ಹಲ್ಲಿಸಕುನ' ಪರಾ. [ಪಲ್ಲಿ$_1$+ಶಕುನ]

**ಪಲ್ಲಿಸರ** (ನಾ). ಹಲ್ಲಿಯ ಹಾಗೆ ಲೊಚಗುಟ್ಟುವಿಕೆ: ಸಖಿಯುಂ ಸಂಕೇತಸದ್ಮಕ್ಕೆ ಪಲ್ಲಿಸರಂದೋಱುತೆ ಮುಂದೆ ಮುಂದೆ ನಡೆದೊಯ್ದಳ್ ದೂತಿ ಚಾತುರ್ಯದಿಂ (ಸೂಕ್ತಿಸು. ೮-೧೪೪). [ಪಲ್ಲಿ$_1$+ಸರ$_2$]

**ಪಲ್ಲಿಸು** (ಕ್ರಿ). ಕಚ್ಚು; ಕಡಿ: ಇಲ್ಲ ದೇವರು ನೀವು ಕೊಂಡಡಕೆಯ ಭಾಗ ಮೆಲ್ಲಿತಲ್ಲತಿಕಣಿಗಳು ಪಲ್ಲಿಸಿಯೆಂದುವು ನಿಮ್ಮ ಚೆಂದುಟಿಯ ನೆಂದುಲ್ಲಾಸದಿಂದ ನುಡಿದಳು (ಭರಚ. ೧೧-೬೭). [ಪಲ್+-ಇಸು$_3$]

**ಪಲ್ಲುಗಿರಿ** 'ಪಲ್ಗಿರಿ' ನೋ.

**ಪಲ್ಲುದಿನು** 'ಪಲ್ದಿನ್' ನೋ.

**ಪಲ್ಲುಮೊರೆ** 'ಪಲ್ಮೊರೆ' ನೋ.

**ಪಲ್ಲೆ$_1$** 'ಪಲ್ಯ$_1$' ನೋ.

**ಪಲ್ಲೆ$_2$,** ಹಲ್ಲೆ$_3$ (ನಾ). ೧. ತಕ್ಕಡಿಯ ಪರಡಿ,—ತಟ್ಟೆ: ಪುರದೊಳಗುಳ್ಳ ದಿಂಡುಗಳ ವಸ್ತ್ರಚಯಂಗಳನೊಟ್ಟೆ ನಿಟ್ಟೆಸಲ್ ಧರಣಿಯನಂತು ಪಲ್ಲೆ ಬಿಡದಿರ್ಪುದಚ್ಚರಿವಟ್ಟು ... ನವರತ್ನವಿಭೂಷಣಾಳಿಯಂ ಹರುಷದಿನಿಕ್ಕಿ ನೋಡಲದು ಮುನ್ನಿನ ಮಾಳ್ಕೆಯೊಳಿರ್ದುದದ್ಭುತಂ (ಕ್ರಿಪುವಿ. ೯-೭೧). **ಹಲ್ಲೆ$_3$:** ೧. ತಂದಿಕ್ಕಿದಂ ತ್ರಾಸಿನೊಳಗೆ ಕೌಪಂ ನಗುತೆ ಇಕ್ಕೆ ನೆಲನಂ ಹತ್ತಿ ತೊಂದೆಸೆಯ ಹಲ್ಲೆಯದು ಮಿಕ್ಕು ನೆಗೆಯಿತ್ತು ತಾರಾಪಥಕೆ ಮತ್ತೊಂದು (ಅಸೀರ. ದೇ. ೯೬-೧೩). ೨. ಚಪ್ಪಟೆಯಾದ ಬಿಲ್ಲೆ; ತೆಳುವಾದ ಪಟ್ಟಿಕೆ: ಮುತ್ತು ತೀವಿರ್ದ ಪಳಿಕಿನ ದೊಡ್ಡ ಭರಣಿಯುಂತೊಪ್ಪೆ ಬ್ರಹ್ಮಾಂಡಮಾ ಬಾಯ್ಗೆ ಮುಚ್ಚಿರಿಸಿರ್ದ ಕರ್ಪೂರದ ಹಲ್ಲೆಯಂತೆಸೆಯೆ ಶಶಿ ಚೆಲ್ವಾಯ್ತು ಚಂದ್ರಾತಪಂ (ಚೆಬವು. ೯-೨೩); ಬಿಸಿಲಿನಲ್ಲಿ ಸೀರ ಕೆಳಗೆ ಬೆಣಚುಕಲ್ಲಿನ ಹಲ್ಲೆಗಳು ಅಮೆಗಳಂತೆ ಬಿದ್ದಿರುವುದು ಕಾಣಿಸುತ್ತದೆ (ಸ್ವಪ್ನಹೊ. ೧೩). ೩. (ತರಕಾರಿ, ಹಣ್ಣು ಮುಂತಾದುವುಗಳನ್ನು ಹೆಚ್ಚಿ) ಚಿಕ್ಕದಾಗಿ ಮಾಡಿದ ಬಿಲ್ಲೆ: ಉತ್ತರಿಸಿ ಕುಂಬಳದ ಕಾಯ ಮೇಲಣ ಹಸುರ ಕೆತ್ತಿ ಹಲ್ಲೆಯ ಮಾಡಿ ಕುಯಿದು (ಸೂಪಶಾ. ೫-೩೨). ೪. ಆಟಕ್ಕಾಗಿ ಬಳಸುವ ಕಲ್ಲು, ಓಡು ಮುಂತಾದುವುಗಳ ಹಲಪೆ; ಚಾಪು: ಗಗನವನಿತೆಯೆಚ್ಚಾಡಲ್ಕೆ ಪಸರಿಸಿದ ನಕ್ಷತ್ರಗವಡಿಕೆಯೊಳಿಳುಹಿಟ್ಟುದೊಂದು ಬೆಳ್ಳಿಯ ಹಲ್ಲೆಯೊ [ಸಾತಾಂ. ರಜತದ ಹಲಗೆಯೊ] ... ಎನಿಸಿತ್ತು ಶಶಿಬಿಂಬವು (ಹಚಶಾ. ೩-೮೩); ಗದುಗು ಹಿಡಿಗವಡೆ ಸದುಗುಡಂ ಸೆಂಡು ಜಿಗಿಹಲ್ಲೆ ಬೊಹರಿಗಳಾಟದಲ್ಲಿ ಮನಗೊಂಡಾಡಿ ... ಕೆಟ್ಟುಹೋದೆಯಲ್ಲ (ಸಮ್ಯಕೌ. ೧೦-೯); ಕೆಲರು ಸೂರ್ಯನ ಸೆಳೆದು ಹಲ್ಲೆಯಂ ಮಾಳ್ಪರು (ವೀಶೈವು. ೩-೪-೧೧). ೫. (ಸಣ್ಣ ಕರುಗಳಿಗೆ ತಿನ್ನಿಸುವುದಕ್ಕಾಗಿ) ಅಂಗೈದಪ್ಪವಾಗಿ ಅಂಗೈಯಷ್ಟೇ ಅಗಲವಾಗಿ ಮಾಡುವ ಕೈರೊಟ್ಟಿ: ಬೋನವನೊಡೆದು ಹಲ್ಲೆಯ ಮಾಡುವ ಪಟ್ಟಿಯಂ ಪಱಿದು ಚಂಡಂ ಮಾಡುವ ಕಟ್ಟಿಗ್ಗರಂತೆ ಶಾಶ್ವತಮಲ್ಲದ ಶರೀರಮಂ ಪಿಡಿದು ರತ್ನತ್ರಯಂಗಳಂ ಕಿಡಿಸುವುದು ಬುದ್ಧಿಯಲ್ಲ (ಧರ್ಮಾಮೃ. ೯-೧೬೨). ೬. (ಕುದುರೆ, ಎತ್ತು ಮುಂತಾದ ಪ್ರಾಣಿಗಳ) ಗೊರಸಿಗೆ ಬಡಿಸುವ ಲಾಳ: ಕುದುರೆಹಲ್ಲೆಗಳಿಂದ ಪ್ರಥಮೆಯ ಮಾಡಿಸೈ ಈಗ (ಶನಿಮಾ. ೭). ೭. ರತ್ನ, ವಜ್ರ ಮೊದಲಾದುವುಗಳ ಹರಳು: ಮೂಗುಬಟ್ಟಿನಲ್ಲಿದ್ದ ವಜ್ರದ ಹಲ್ಲೆಯನ್ನರೆದು ಕುಡಿದುಬಿಡುವೆನೆಂದು ಸಿದ್ಧಮಾಡಿಕೊಂಡಳು (ಕಥವಿ. ೧೪೨). ೮. ಮಗುಚುಗೈಯ ತುದಿ: (೬). ೯. ಜೇನುಗೂಡು,—ಹುಟ್ಟು: ಜೇನ ಹಲ್ಲೆಗೆ ಕಲ್ಲು ಒಗೆದಾಗ ಅವು ಜೇಂಗೊಡುತ್ತ ಸಿಕ್ಕತ್ತ ಹಾರಾಡುವಂತೆ ... ಹಳ್ಳಿಗರು ಹೊರಟುಬಿಡುತ್ತಿದ್ದರು (ಮಣ್ಣಿಮ. ೧೦೪). 'ಹಳ್ಳಿ$_6$' ಪರಾ. [ದೇ.॥ ತುಳು. ಪಲ್ಲೆ]

**ಪಲ್ಲೇಣ** 'ಪಲ್ಲಣ' ನೋ.

**ಪಲ್ಲೇರು** (ನಾ). ನೆಗ್ಗಿಲುಗಿಡ: "ಪಲಂಕಷಾ, ಇಕ್ಷುಗಂಧಾ ... ವನಶೃಂಗಾಟಃ—೭ ಪಲ್ಲೇರುಗಿಡದ ಹೆಸರುಗಳು, ನೆಗ್ಗಲು ಹೆಸರುಗಳು" (ಸಿದ್ಧಾಂತಿ. ೧೩೪). [←ತೆಲು. ಪಲ್ಲೇರು]

**ಪಲ್ಲೈಸು** 'ಪಲ್ಲವಿಸು' ನೋ.

**ಪಲ್ಲೊತ್ತು$_1$** (ಕ್ರಿ). ೧. ಹಲ್ಲಿನಿಂದ ಕಡಿ: ಚಿತ್ತಭವಂ ಬಿಲ್ಲಂ ಗೊಲೆಗೆತ್ತಿದಣಿಸಲೆಂದು ಬಿರಯಿಯಂ ಬಿರಯಿಗೆ ಪಲ್ಲೊತ್ತುವ ತೆಱದಿಂ ಬಲ್ಲನೆಯೊತ್ತುವ ಮಾಧವಿಯ ನನೆಯ ಮೊನೆಯಂಬುಗಳಿಂ (ಮಲ್ಲಿಪು. ೫-೯). ೨. [ಕಾಮಶಾ] ದಂತಕ್ಷತವನ್ನು ಮಾಡು: ಉಯ್ಯಾಲಾಡುವಲ್ಲಿ ಪೂಜಿವಾಟ ಕದಲಿಸುವುದನು ಎಲೆಗಡಿವಲ್ಲಿ ಪಲ್ಲೊತ್ತುವುದನು ... ಕಲಿಯುತ್ತಿರುವುದನು ಕಂಡನು (ವಚಶಾ. ೪೯-೨೨). [ಪಲ್+ಒತ್ತು$_1$]

**ಪಲ್ಲೊತ್ತು$_2$,** ಹಲ್ಲೊತ್ತು (ನಾ). ೧. [ಕಾಮಶಾ] ದಂತಕ್ಷತ: ಕೆಂಪುದೋರುವ ಹಾಗೆ ಕಚ್ಚುತಿರೆ ಪ್ರವಾಳಮಣಿ ಹಾಗೆ ಅದು ಪಲ್ಲೊತ್ತಿನ ಕುರುಹು ಮೇಲೆ ತೋರುವುದು (ಕಾಮಶಾ. ೨೨೪). **ಹಲ್ಲೊತ್ತು:** ೧. ಎರಡು ಹಲ್ಲೊತ್ತುಗಳ ನಡು ಕೆಂಪು ಆಗುವ ಹಾಗೆ ಹಲ್ಲುಗಳಂ ಸಾಲು ತೆಗೆದು ಒಂದೊಂದು ಕ್ಷತದ ನಡುವೆ ಮತ್ತೊಂದು ಕ್ಷತಮಂ ಬೆರಸುವುದು (ಕಾಮಶಾ. ೨೨೪). ೨. ಹಲ್ಲು ಶೂಲೆ,—ನೋವು: "ಹಲ್ಲೊತ್ತು = ಹಲ್ಲುಬೇನೆ" (ಜಾನಕೋ. ೫೫). [ಪಲ್+ಒತ್ತು$_2$]

**ಪಲ್ವರಸೆ** 'ಪಲ್ವರಿಸೆ' ನೋ.

**ಪಲ್ವರಿಸೆ, ಪಲ್ವರಸೆ** (ನಾ). ಹಲ್ಲಿನ ಜೋಡಣೆ,-ವರಸೆ: ಪಂಪು ದಳೆದ ಪಲ್ವರಿಸೆಯ ಮೋಹನಾಕಾರೆ (ಮಡಿಕ್ಕಾ. VI, ೧೬೨೭). **ಪಲ್ವರಸೆ:** ಪಲ್ವರಸೆಯಿಂ ಕರ್ಣಾಂತಲೋಚನಂಗಳಿಂ (ಸೌಗಂಧಿ. ೯-೧೭); ಮಾವಿನ ಹೂವ್ವ ಗೊಂಚಲುಗಳು ಪಲ್ವರಸೆ (ಸೌಗಂಧಿ. ೧೯೧-೬). [ಪಲ್+ವರಿಸೆ]

**ಪಲ್ವಲ** (ನಾ). ಸಣ್ಣ ಸರೋವರ; ಕೊಳ: "ವೇಶಂತಃ, ಪಲ್ವಲಂ, ತಳ್ಪಂ—ಈ ೩ ಕೊಳಹೆ" (ಹಲಾಯು. ೧೧೧-೫೩); ಒಂದು ಪಲ್ವಲ ಪ್ರಾಂತದೊಳ್ ಕಾಂತಾರಕಳಭಪ್ರಾಯಪೋತ್ರಿಸಂತಾನದೊಳಗೆ ... ಸೊಗಯಿಸಿತ್ತು ತ್ತೈಕರಂ ಸೂಕರಂ (ಚಂದ್ರಪ್ರ. ೫-೫೯ ಪ); ಇಲ್ಲಿಯ

**ಪಲ್ಲವಲೋದಕಕಲ್ಲಸಿತಸುರಲೋಕದಮರ್ದಿಣಿಯೆ** (ಪದ್ಮರಾ. ೧೩-೩೯) ; **ಚಕ್ಕಂದೊಳಲಿ ಪಲ್ಲವಲಮಂ ಮದಕರಿ ಕದಳೀವನಮಂ ಪುಗುವಂತೆ ಪೊಕ್ಕು** (ಚಿಕಪಂ. ೨೯-೧೦). [ಸಂ.]

**ಪಲ್ಸು** 'ಪಲುಂಬು' ನೋ.

**ಪಲ್ಬೆಸಗೆಯ್ಮೆ** (ನಾ). ರತಿಕ್ರೀಡಾಕಾಲದಲ್ಲಿ ತುಟಿ ಮೊದಲಾದುವನ್ನು ಕಚ್ಚುವಿಕೆ : **ತುಡುಕಿ ತುಱುಂಬನೀಟಿಡ್ದೆಲೆಗೆ ಸಿಲ್ಕಿದೆಯೆಂದಲರ್ವಾಸಿನೊಳ್ ಪಡಲ್ವಡಿಸಿ ಕುಕಿಲ್ದು ಪಾಯ್ದುಡರ್ದ ಪಲ್ಬೆಸೆ[ಸ]ಗೆಯ್ಮೆಯ ಕೈಮೆಯಿಂದೆ ಸ್ವೈವಡಿಸುತ** (ಚಿಕವಿ. ೬-೨೫೪).

[ಪಲ್+ಬೆಸ$_1$+ಗೆಯ್ಮೆ(<ಕೈಮೆ$_1$)]

**ಪಲ್ಸುಲಿ,** ಪಲುಸುಲಿ (ಕ್ರಿ). ಹಲ್ಲು ತಿಕ್ಕು ; ಹಲ್ಲುಜ್ಜು ; ಹಲ್ಲನ್ನು ಶುಭ್ರಗೊಳಿಸು: **ಶೃಂಗಾರಂಗೆಯ್ವೊಡಂ ಪಲ್ಸುಲಿವೊಡಮು ಜೆವ್ವೊಡಂ . . . ಕಾಣಲೀಯಲಾಗದು ವಧುವಂ** (ಮದಿತಿ. ೧೦-೫೦) ; **ಪಳಿಕಿನ ಭಿತ್ತಿಯನೊಲವಿಂ ನಳಿನಾಕ್ಷಿಯರೆಯ್ದೆ ನೋಡಿ ಪಲ್ಸುಲಿಯಲ್ ನಿರ್ಮಳವಾದೊಡಮಧರಚ್ಛವಿಗಳ ಪೊಳೆಪಿಂದರುಣವಾಗೆ ಸುಲಿಯುತ್ತಿರ್ಪರ್** (ಬಾಧಪು. ೧-೧೪೨) ; **ಪಲ್ಸುಲಿಯದಿಪ್ಪರ್ಂದೇಕಭುಕ್ತಂಗಳುಂ ಬೆರಸೀ ಮಾಣಿಕಸೇನಯೋಗಿ ತಪದೊಳ್ಕಾಮೇಭಕಂಠೀರವಂ** (ಕಇ. I, ೪೯-೨೨ ; 1423). **ಪಲುಸುಲಿ :** **ಕುವರಿಯನು ಪಲುಸುಲಿಯುಲಿಕೆ ಮಾಧವನು ಮುದುಪನನೆನ್ನ ಕಳುಹಿದನು** (ಸಾಳ್ವಭಾ. ೩೦-೪).

[ಪಲ್+ಸುಲಿ$_1$]

**ಪವ** (ನಾ). ೧. ಧಾನ್ಯಾದಿಗಳನ್ನು ಗಾಳಿಯಲ್ಲಿ ತೂರುವಿಕೆ,—ಶುದ್ಧಿಮಾಡುವಿಕೆ : **"ಪವನಂ ನಿಷ್ಪಾವಮಂತೆ ಪವಂ"** (ವಸ್ತುಕೋ. ೧೧೪-೨೧) ; **"ನಿಷ್ಪಾವಃ, ಪವನಂ, ಪವಃ—೩ ಧಾನ್ಯಾದಿಗಳನ್ನು ಗಾಳಿಗೊಡ್ಡುವಿಕೆ, ತೂರುವಿಕೆ"**(ಸಿದ್ಧಾಂತಿ. ೩೬೪). ೨. ಕೆಸರು; ಕೊಚ್ಚೆ. ೩. ದನದ ಸಗಣಿ. [ಸಂ.]

**ಪವಡಿ** (ನಾ). ನೆಯ್ಗೆಯಲ್ಲಿ ಹಾಸಿನ ನಡುವೆ ಹೊಕ್ಕುಗಳನ್ನು ನೇಯುವಾಗ ಎರಡು ದಾರಗಳ ನಡುವೆ ಲಾಳಿಗೆ ಸ್ಥಳ ಬರುವಂತೆ ಮಾಡಲು, ನೆಯ್ಗೆಯವನು ಕಾಲಿನಿಂದ ಒತ್ತುವ ಮರದ ಕಾಲುಮಣೆ : **ಕಾಲ ಪವಡಿಗಳೆತ್ತಿ, ಕೋಲ ಕಂಬಿಗಳೆಳೆದು ನೂಲೆಳೆದು ಲಾಳಿ ಶಿವಸೂತ್ರ ಪೋಣಿಸಲು ನೀಲಪಾವಡವ ಲಿಂಗುಟ್ಟೆ** (ಕನ್ನಜಾ. ೧೯೬).

[←ಮರಾ. ಪಾವಡಾ]

**ಪವಡಿಸು,** ಪವಳಿಸು, ಪವ್ವಳಿಸು$_1$ (ಕ್ರಿ). ಮಲಗು ; ಒರಗು : **ಗಂಗಾತರಂಗಧವಳದುಕೂಲಪ್ರಚ್ಛದಾಚ್ಛಾದಿತಮೃದುತಲ್ಪತಲದೊಳ್ ಪವಡಿಸಿರೆ** (ಆದಿಪು. ೩-೨೧ ವ) ; **ಇಂತಿದು ನೃಪನಾರೋಗಿಪ ಪವಳದ ನೆಲೆಯಿದು ಪವಡಿಸಿರ್ದ ಚಂದನತಲ್ಪಂ** (ಕಾದಂಉ. ೨೦೩) ; **ದಳ್ಳುರಿಯ ಮಂಚದೊಳ್ ಪವಡಿಸಿದ್ದೈ** (ಗಿರಿಕ. ೮-೬೬) ; **ನಿರುತವನು ತಾವ್ ನುಡಿದು ಪವಡಿಸಿ ಭರದಿ ನಿದ್ರೆಯೊಳಿರಲಿಕಾಗಲೆಯಿರುಳು ತೊಡಗಿತು** (ಸಂಭಪ. ೨೩-೫೦) ; **ಪವಡಿಸು ಪರಮಾತ್ಮನೇ ನೀನು ಭವರೋಗವೈದ್ಯ ಭಕ್ತರ ನಿಧಿಯೆ** (ಪುರಂದ. ೩-೧೩೧ ಪಲ್ಲವಿ). **ಪವಳಿಸು :** **ತೋಳಿನಲ್ಲಿ ಬಿಗಿದಪ್ಪಿ ಪವಳಿಪ ಶ್ರೀಲಕುಮಿ ತ್ರೈಲೋಕ್ಯಮಾತೆ** (ವಿವಾಕ್ಯ. ೧೧-೩) ; **ಪಚ್ಚೆಕರ್ಪೂರದ ಪುಡಿಯ ರಾಶಿಗಳೊಳ್ ಪವಳಿಸಿರ್ದ** (ಸೌಗಂಧಿ. ೪೭೬-೭) ; **ಲವಲೇಶವಾನುಮಿರದಿರೆ ಕಯುವ್ವ ಜೀವನದಿ ಪವಳಿಸಿರನೇ ನರನು ?** (ಮಂಕುಕ. ೮೭೦). **ಪವ್ವಳಿಸು$_1$ :** **ಏಕಾರ್ಣವದ ಮಧ್ಯದಲಿ ಬಿಸಜದಂಶಿರುವಾಲದೆಲೆಯೊಳು ಶಿಶುವೆನಿಸಿ ಪವ್ವಳಿಸಿ ಸುಳಿಯುವ ಬಿಸರುಹಾಕ್ಷ** (ಗಗತಾ. ೫-೨೧). 'ಉಪ್ಪವಡಿಸು' ಪರಾ.

[ಪವಡ್$_0$ (ℙ←ಪ್ರಾ. ಪವಡ್ಡ)+-ಇಸು$_3$./ತೆಲು. ಪವಡಿಂಚು, ಪವಳಿಂಚು, ಪವ್ವಡಿಂಚು, ಪವ್ವಳಿಂಚು]

**ಪವಡೆ** 'ಪಾವುಡ$_1$' ನೋ.

**ಪವಣ್,** ಪವಣ, ಪವಣು, ಹವಣ, ಹವಣು (ನಾ). ೧. ಅಳತೆ ; ಲೆಕ್ಕ ; ಪ್ರಮಾಣ : **"ಪವಣೆಂದು ಪ್ರಮಾಣಂ"** (ಕಶಸಾ. ೬೯-೫೭೭) ; **ದಾಯಿಗರತ್ತಣನಪ್ಪಪಾಯಕೋಟಿಗೆ ಪವಣಿಲ್ಲ** (ಪಂಪಭಾ. ೭-೨೧) ; **ಆತಂ ಮನಮೊಸೆದು ನೋಡುತಿರ್ಪುದಱನಾಗಳಣ ಮಱದಳಿಲ್ಲ ಪೊಟ್ಟಿನ ಪವಣಂ** (ಕಾದಂಉ. ೧೦೦) ; **ಉಂಡ ಮೊಲೆವಾಲ ಪವಣಂ ಕೊಂಡು ಬಿಸುಟ್ವೊಡಲ ಪವಣನಿದು ಪವಣೆಂದಾರ್ಕಂಡು ಮನಂಗೊಂಡು ಪವಣ್ಗೊಂಡಱಪುವ ಜಡರನಾದಿಕಾಲಸ್ಥಿತಿಯಿಂ** (ಸುಕುಮಾ. ೬-೮) ; **ಪವಣಿಲ್ಲದ ಭವಸಮಿತಿಗೆ ಪವಣಂ ಮಾಡುತ್ತುಮುದಯಿಪುದು ಸಮ್ಯಕ್ತ್ವಂ** (ಪರ್ಧಪು. ೧೧-೭೨). ೨. ಶಕ್ತಿ ; ಸಾಮರ್ಥ್ಯ ; ಯೋಗ್ಯತೆ : **ಬಲದ ಪವಣನನಿತಿನಿತೆಂದಾನಱಯೆಂ** (ಪಂಪಭಾ. ೧೦-೫೯) ; **ಇವನಿಂದಂ ಕಂಡೆಂ . . . ಲೋಕದ ಪವಣನೆನುತ್ತುಂ ಯಶೋಲಕ್ಷ್ಮಿ ಮೇವೆರ್ಚ್ಚೆ** (ಎಕ. VII, ಶಿಮೊ. ೬೪-೪ ; 1112 ?) ; **ಪವಣಂ ನೋಡದೆ ನಾಡೆಯುಂ ಸೆಣಸಿ ಮುನ್ನೆಕ್ಕೆಕ್ಕೆಯಿಂ ಪಕ್ಕಿ ಸೋವವರ ಸ್ತ್ರೀಯರ ಸೀಯನಪ್ಪ ನುಡಿಯಂ ಕೇಳ್ದಾಗಳ್** (ಧರ್ಮನಾ. ೨-೨೯). ೩. ಕಟ್ಟಳೆ ; ನಿಯಮ : **ಯೋಗಿಯ ಪೋಲ್ ಪವಣಂ ಕಡೆಗಣಿಸದಿರ್ಕುಂ** (ಚಿಕವಿ. ೩-೧೨). ೪. ಸಮಾನ; ಸರಿಸಾಟಿ : **ಅಱವಂಟಿಗೆಗನ್ನದಾನದೆಡೆಗೀ ಜಗದೊಳ್ಪವಣಿಲ್ಲದೇಂ ಕೃತಾರ್ಥನೊ ನೊಕ್ಕಂ** (ಎಕ. VII, ಶಿಮೊ. ೧೦-೪೩ ; 1085 ?) ; **ನಿಮ್ಮ ಪುರಾಣದ ಪುಸಿಯಿದಱ ಪ[ಪಾಠಾಂ. ಹ]ವಣೆ ಪೇೞಿಂ** (ಧರ್ಮಪ. ೫-೧೪ ವ) ; **ಮರುಳೆ ಕೇಳ್ ಪವಣೆಂಗೆ ಬಪ್ಪನೇಯಂಧಕಾಸುರಹರಂ ಕಾಲಹರ ಕಾಮಹರನು** (ಲಶಿಚಿಂ. ೧೫-೧೦). ೫. ಶಕ್ಯವಾದುದು ; ಸಾಧ್ಯವಾದುದು : **ಸಜ್ಜನಿಕೆವಾಡಿದ ಸನ್ತತಶೌರ್ಯಮುರ್ಬಿಗಂ ಬಗೆಯನೆ ಬಣ್ಣಿಸಲ್ಪವಣೆ ಸಾಹಣಿ ಕೆಂಗನ ನಾಡಲಂಪಿನಿಂ** (ಸೌಇಇ. IX-i, ೨೦೬-೨೯ ; 1122) ; **ಬಣ್ಣಿಸಲ್ ಪವಣೆ ರೂಪಂ ಭೂಪನರ್ಥಾಂಗಿಯಾ** (ಅನಂಪು. ೨-೧೬) ; **ಆತನ ಬಲ್ಪಂ ಪೊಗೞ್ವೊಡೆನ್ನ ಪವಣಲ್ತು** (ಕಬ್ಬಿಕಾ. ೧೬೯) ; **ಎರಡನೆಯ ಮೃಡ ಹವಿಸ್ಮಾರನ ನುತಿಯೆನ್ನ ಶಿಥಿಲಮತಿಗಂ ಪವಣೇ** (ಹವಿಸ್ಮಾರ. ೧-೨೮). ೬. ಕ್ರಮ ; ರೀತಿ : **ಒಗೆದುರಿಲಿಂಗದೊಂದು ಪವಣಂ ಪರಿಭಾವಿಸಲ್** (ಸಮಪ. ೮-೭೫) ; **ಅವರಿರವು ಸ್ವರ್ಗ ಗಿರ್ಗದ ಪದವಿಗಳ ಪ[ಪಾಠಾಂ ಹ]ವಣೆ** (ತಿರುರ. ದೇ. ೯-೧೩) ; **ಪವಣೆಸೆಯೆ ಪುರುಳುವೊಪ್ಪಿರೆ** (ಚಿಕವಿ. ೧-೨೨). ೭. ಹೊಂದಾಣಿಕೆಯಾದುದು ; ಹದವಾದುದು; ಒಪ್ಪವಾದುದು : **ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂಗುಡಿವಿಡುವಂತೆ ನೀಳ್ದು ನಿಲೆ ಪೇೞ್ವುದು ನೀತಿ ನಿರಂತರಕ್ರಮಂ** (ಕವಿಮಾ. ೧-೧೪೯); **ಸ್ಫುಟವಾದಂ ಪವಣಾಗೆ ಜಾತ್ಯಭಿನಯಂ ಚೆಲ್ವಾಗೆ** (ಅರ್ಧನೇ. ೧-೧೦). ೮. ಚಳಕ ; ಕೌಶಲ ; ನೈಪುಣ್ಯ : **ಇಸುವವರ್ಗಳ ಕೈಯೊಳ್ ಸಿಟ್ಟಿಸಬಾರದು ತುಡುವ ಬಿಡುವ ಪವಣಂತಾರ್ಗಂ** (ಕಬ್ಬಿಕಾ. ೨೬೮). **ಪವಣ :** ೯. ನಿಶ್ಚಿತಜ್ಞಾನ : **"ನಿಂದಱ ಕೆಯೆನಲ್ ಸಂದ ಪವಣಮೆಂದಱಗೆ ಬುಧರ್"** (ಭಾರನಿ. ೫೪) ; **"ಪವಣ—ಪ್ರಮಾಣ = ನಿಶ್ಚಿತಜ್ಞಾನ"** (ತದ್ಭಕೋ. ೨೫). ೧೦. ಕಾರಣ ; ಹೇತು : **ತನಗೆ ಪ್ರತ್ಯಕ್ಷಾನುಮಾನೋಪಮಾನ ಸಂಜನಿಸುವ ಭಾವವರ್ಥಾಪತ್ತಿ ಘನಶಬ್ದವೆಂಬಿವು ತಾವಾಱು ಪವಣಂಗಳೆನಿಪನ್ಯವನು ಸಾಧಿಸುವಲ್ಲಿ** (ಪರಬೋ. ೩-೧೭-೨). ೧೧. ಹಂಚಿಕೆ; ಯೋಜನೆ; ಉಪಾಯ : **ಅವನು ಇದರ ಸಂಗತಿಯನ್ನೂ ನಿನ್ನ ಪವಣವನ್ನೂ ಹೇಳಿದನು** (ಮಂಜುಕ. ೫೬). **ಪವಣು :** ೧. **ಕೆಳಗಣಂಡಕಟಾಹ ತೊಡಗಿಯೆ ಜಲವು ತುಂಬಿಹುದದಱ ಘಾತವು ತಿಳಿಯಲಿಪ್ಪತ್ತೈದುಕೋಟಿಯ ಪವಣ ಪಡೆದಿಹುದು**

(ಕುಪ್ರಾಭಿ. ೭-೨೩). **೫.** ಇದರ ಮಹಿಮೆಯನೊರೆಯಲಾಲಿಸಲೆನಗೆ ನಿನಗೆ ಪವಣೆ (ಪದ್ಮರಾ. ೧೧-೧೩೧); ನರರ ಪವಣೇ ಕೀರ್ತಿಪಡೆ ಬಸವರಸ ನಿಮ್ಮಂ (ಬಸಪು. ೧-೯); ಮಹತ್ವಮಂ ತಿಳಿಯರಜ ಹರಿ ಸುರಪರು ನರದೇಹಿಯೆನ್ನ ಪವಣೇ (ಕೊಟ್ಟೂಬ. ೯-೩೫). **೬.** ಎಲ್ಲಾ ಜೀವದೊಳಂ ದಯಮುಳ್ಳುದೆ ಸದ್ಧರ್ಮವೆಂಬ ಶಾಸ್ತ್ರದ ಪವಣಂ . . . ರಕ್ಷಿಸುತಿರ್ಪಂ (ನನ್ನಚಾ. ೬-೨೦೭). **೭.** ಪವಣಿಂದ ಬಗೆಬಗೆಯ ಪೊನ್ನುಗಳ ಲಧಿಕನ್ಯೂನತೆಗಳನು ನೋಡುತ್ತಲಿ . . . ಅವಿರಳದ ಸಂತಸದಲಿರ್ದರು (ವೆಂಕಾರಾ. ೫-೩-೨೪). **೧೨.** ಸಂಧಿ; ಸಮಯ; ಅವಕಾಶ: ದಿವದ ರಾತ್ರಿಯಯರಡು ಜಾವದ ಪವಣಿನಲಿ ಹಸ್ತಿನಿಯ ನೆರವದು (ಕಕ್ಕೋಕ. ೯-೫೧). **೧೩.** ಸ್ಥಿತಿ; ಇರವು: ಎಲ್ಲಿಯುಂ ಕಾಣದೆ ಯಕಟಕಟಯ್ಯೋ ಗಡಾ ಸತ್ತನೆಂಬೀ ಪವಣಿಂದಂ . . . ರಕ್ಷಿಪ್ಪುದೆನ್ನಂ (ರಕ್ಷಾಶ. ೪೦). **ಹವಣ:** ೧. ಗುರುಗುಂಜಿಯ ಹವಣದ ಗುಳಿಗೆಯ ಕಟ್ಟಿ (ಸಾಳ್ವಸಾಂ. ೭). **೨.** ಆ ಮಹಾಬೆಳಗನೆ ಕಂಗಳಲ್ಲಿ ಹೆಱಿಹಿಂಗದೆ ನೋಡಿದರೆ ಎನ್ನಂಗದ ಹವಣ ಹೊಱಗೆ ಪರಿಪೂರ್ಣವಾಗಿದ್ದಿತ್ತು (ಲಿಂಗಪ. ೧೯-೭೬). **೧೧.** ಆವರಿಂದ ಹಲವರ ಹವಣಗಳಿಗೆ ಧಕ್ಕೆ ತಗಲ ಹತ್ತಿ ಅವರ ಸ್ವಾಮಿತ್ವವನ್ನು ಆದಷ್ಟು ಹೆಚ್ಚುಹೆಚ್ಚು ಜನರಿಗೆ ಒಪ್ಪಿಸಲಾರಂಭವಾಯಿತು (ತಕ್ಕಡಿ. ೪೮). **ಹವಣು:** ೧. ಎಲವೊ ನಿನ್ನಯ ಬಾಯ ಹವಣಿಂಗಳವಡದ ಬಲುದುತ್ತನಂಗೈಗಳಲಿ ಧರಿಸಿದೆ (ತೊರರಾ. ೩-೮-೬). **೨.** ಉಳಿದವರ ಹವಣಾವುದೆಂದಾ ವಸಿಷ್ಠಮುನಿಕುಲತಿಲಕನೆನಲು (ಹಚಕಾ. ೨-೨೦); ಸಾತ್ಯಕಿ ಹವಣನಱಿಯದೆ ಹೊಕ್ಕು ಸಿಕ್ಕಿದ (ಕುಪ್ರಾಕ. ೩-೭); ಮಾನವನು ತನ್ನ ಹವಣಿಗೆ ಮೀರಿದ್ದನ್ನು . . . ಬಯಸಿ ದೈವದ ಕಾಟಕ್ಕೆ ಸಿಕ್ಕುತ್ತಾನೆ (ಕಾವ್ಯಸ. ೧). **೩.** ಮನಮನ ತಾರ್ಕಣೆಯ ಕಂಡು ಅನುಭವಿಸಲು ನೆನಹೇ ಘನವಹುದಲ್ಲದೆ ಅದು ಹವಣಲ್ಲಿ ನಿಲ್ಲುವುದೇ ಎಲೆ ಅವ್ವ (ಮಹಾದೇ. ಬ. ೪೪-೧೦೨). **೪.** ಕಸುಗಾಯ ಹಿಸುಕಿದಡೇನು ಹಣ್ಣಿಗೆ ಹವಣಪ್ಪುದೇ (ಚನ್ನವ. ಕ. ೫೪-೧೧೭). **೫.** ಅದಱ ಮಹಿಮೆಯನೆಣಿಸುವಡೆ ಫಣಿಪತಿಗೆ ಹವಣಲ್ಲ (ಬಸಪು. ೪-೫೧); ಭೀಷ್ಮನ ಬೆಗಡುಗೊಳಿಸಲು ಹರನ ಹವಣಲ್ಲ (ಕುಪ್ರಾಭೀ. ೭-೧೨); ಈಶ ನಿಮ್ಮನು ನುತಿಸುವೆನೆಂದೆನಲ್ಗುರಗೇಶ ನಾಱನು ನನ್ನ ಹವಣೇ (ಮೋಹತ. ೨೫-೧೦); ಚದುರರ ತಲೆವಣಿ ತದ್ಭವಮೋಕ್ಷಸಂಪದನ ಬಣ್ಣಿಸಲೆನ್ನ ಹವಣೆ (ಭರಚ. ೧-೨೧). **೬.** ಕಪಿಲಸಿದ್ಧಮಲ್ಲಿಕಾರ್ಜುನ ಎನ್ನ ವಿಚಾರದ ಹವಣ ನೀನೇ ಬಲ್ಲೆ (ಸಿದ್ಧವ. ಕ. ೩೨೬-೧೦೫೪); ನೀವೆನ್ನ ಮನದ ಹವಣನಾರಯ್ಯಲೆಂದನುಗೆಯ್ದಿರಿ (ಹಚಕಾ. ೮-೨೪); ಮಾತಿನ ಹವಣ ನೀ ಬಲ್ಲೆ ಹೇಳೆನ್ನೆನಗೆ ಕರ್ತವ್ಯವನು ಮಾನಿನಿ (ಕುಪ್ರಾಅ. ೪-೭೯); ಇನ್ನೀ ಹವಣಿಂದವೆ ಬಳೆದೊಡೆ ನಿಮಗೆನ್ನಾಣೆ (ಜಯಕಾ. ೫-೮). **೭.** ಎನ್ನ ಕಜ್ಜುಕೀ ಪರಿಕರ ಹವಣು (ಗಣೇಶ. ೬-೧೩೩). **೧೧.** ಸವಿಗೂಟಕೆಡನ ಕಾಣದೆ ಕೊಂಡೆಯ್ದುವ ಹವಣನೆಣಿಸಿ ಮುಟ್ಟಿವಂದ (ಶ್ರೀಪಾಲ. ೫-೭೨); ನಿಮಗೀ ಹವಣು ತಿಳಿಯದು (ತೊರರಾ. ೨-೧-೩೩). **೧೨.** ಜಾವವೆರಡಱ ಹವಣಿನಲಿ ಹರಿದಶ್ವತನುಜನೊಳಾಯ್ತು ಬಲುಸಮರ (ತೊರರಾ. ೬-೧೭-೧೫); ಹವಣನಾರಯ್ದು ಲಂಚಮಂ ಮೊದಲೆ ಕೊಂಡು (ಚೆಬಪು. ೭-೬). **೧೪.** ಸಮಾನನಾದ ವ್ಯಕ್ತಿ; ಸರಿಸಾಟಿಯಾದವನು: ಜಯದ್ರಥನು ನಿನ್ನವನ ಹವಣೇ (ಕುಪ್ರಾಸ. ೧೦-೪೬). **೧೫.** ತಕ್ಕಷ್ಟು ಪ್ರಮಾಣದಲ್ಲಿರುವುದು; ಸಾಕಷ್ಟು: ಉಳಿದ ತೋಟದ ಗೆಡ್ಡೆಗೆಳಸು ಹಂದಿಗೆ ಹವಣು (ಹಚಕಾ. ೩-೬೪). **೧೬.** ಪ್ರಯತ್ನ; ಉದ್ಯೋಗ: ದಿವಿಜರೆಮ್ಮಯ ಹಗೆಗಳವರಿಗೆ ಹವಿಸನೀ ಕ್ರತುಗಳಲಿ ಮಾಡುವ ಹವಣು ಸಾಕು (ಉತ್ತರ. ೨೬-೨೭).

**ಪವಣಂ ಮೀಱು, ಹವಣು ಮೀರು** = ಅತಿಶಯವಾಗು; ಮಿತಿ ಮೀರು: ಸವಿಮಾತಿನಮರ್ದು ಪರಿಕಾಲ್ ಕಿಱಿವಾಯಿಂ ಪೊಕ್ಕು ಮಿಕ್ಕು ಬಗೆಗೆಱಿವೊಡೆಯಾಳ್ ಪವಣಂ ಮೀಱಿ ಪೊನಲ್ವರಿದವನೀಂದ್ರನೊಳಂಣ್ಕಿಸಿತ್ತು ಸಂತಸಸಸಿಯಂ (ಚಿಕವಿ. ೪-೪೪); ಈ ಹವ್ಯಾಸವು ತನ್ನ ಹವಣು ಮೀರದಂತೆ ಮಾತ್ರ ದಕ್ಷತೆ ವಹಿಸಬೇಕು (ಕಥಕ. ೧೦).

**ಪವಣ್ಮಾಡು, ಹವಣು ಮಾಡು** = ೧. ಗಣಿಸು; ಲೆಕ್ಕಿಸು: ಆತಂ ನಿನ್ನ ಮಾತನೆ ಪವಣ್ಮಾಡಿ ಪೇೞ್ದುದಂ ಕೈಕೊಳ್ಗುಂ (ಆದಿಪು. ೨-೪೩ ಪ). ೨. ಸರಿಯೆಂದು ತಿಳಿ; ಅನುಮೋದಿಸು: ನೆರೆದ ಜನಪಜನಮುದನೆ ಪವಣ್ಮಾಡೆ ಕೂಡೆ ದುರ್ಯೋಧನಂ ಮುಸಗಿ ಚತುರಂಗಸಾಧನಮಂ ಬೆಸಸೆ (ನೇಮಿಪು. ೯-೧೦೭ ಪ). ೩. ಉಪಾಯವನ್ನು ಹೂಡು: ಒಂದು ಹವಣು ಮಾಡಿ ತೆಗೆದೆ ಬಲೆಯನ್ನು (ಸುಪಸಂ. ೩೫).

[< ಪ್ರಾ. ಪವಾಣ, ಪಮಾಣ./ಸಂ. ಪ್ರಮಾಣ]

**ಪವಣ** 'ಪವಣ್' ನೋ.

**ಪವಣಂಬಟ್ಟೆ** (ನಾ). ಉಚಿತವಾದ ದಾರಿ; ಋಜುಮಾರ್ಗ: ಪವಣಂಬಟ್ಟೆ, ಮುಗುಳುಂಬುಗುಳ್ (ಶಬ್ದಾನು. ೭೫ ಪ್ರಯೋ).

[ಪವಣ್ + ಬಟ್ಟೆ$_1$]

**ಪವಣಱಿ,** ಹವಣರಿ, ಹವಣಱಿ (ಕ್ರಿ). ೧. ಸತ್ತ್ವವನ್ನು ತಿಳಿ; ಯೋಗ್ಯತೆಯನ್ನು ಅರಿತುಕೊಳ್ಳು: ಗಟಪರ್ ಪವಣಱಿಯದೆ ಬೆಸಗೊಳೆ ಸೆಣಸಿಂ (ಚಂದ್ರಪು. ೧-೫೭). ೨. ಕ್ರಮವನ್ನು ತಿಳಿ; ರೀತಿಯನ್ನು ಅರಿ: ಕಡುಕೆಂಪಿನ ಹಣ್ಣು ಮೇಲಿದೇಂ ಕಾಣಿಸದೊಡೊಪ್ಪುವರೆ ಬಲ್ಲವರ್ ಬಾಯ ನೀಂ ಮುಚ್ಚು ನಿನಗಿಪ್ಪ ಹಳದಿಯ ಕಾಯಿ ಹಣ್ಣಾದ ಬಳಿಕ ಪವಣಱಿದಿನ್ನು ಪಚ್ಚಿಯಾಡು (ಚೆಬಪು. ೧೦-೪೭). ೩. ಅವಕಾಶವನ್ನು ಕಾಣು; ಸಂಧಿಯನ್ನು ಸಾಧಿಸು: ಪದ್ಮನಾಭನ ಪದದೊಲ್ಮೆಯಂ ಪಡೆದು ಪವಣಱಿತು ಪೆಣ್ಣಂ ಪಿಡಿದಪೆನ್ (ಅದ್ಭುತ. ೧೦-೩). ೪. ಹದವನ್ನು ತಿಳಿ: ಪ[ಪಾಠಾಂ. ಹ]ವಣಱಿದುತ್ತರಂಗುಡುವ ಮೆಚ್ಚುವ ಮಾತಿನ ಗೊಟ್ಟಿಕೇಳ್ವ . . . ಮನದಟ್ಟಿಯಿಂ ಬರೆವ ಚಿತ್ತಮುವಳ್ಗೆ ವಿಪಸ್ವರೂಪಮಾದುವು (ಪರ್ಶಪು. ೪-೪೫); ಪವಣಱಿದಿಕ್ಕಿಯೋಗರಮಂ . . . ತುತ್ತುಗಳ್ ಸವಿವಡೆವಂತು ಪೊಂಬೆಸಱ ಸೂಪವನೊಪ್ಪುವ ಮಾದುರಂಗಳಂ ಯುವತಿ ತೆರಳ್ಚಿ ಬಡ್ಡಿಸಿದಳ್ (ದಶಕು. ೧೨-೧೩೦); ತವಕದನುವಱಿದಪ್ಪಿ ಮೊಗಗೊಡೆ ಪವಣಱಿದು ಚುಂಬಿಸುತೆ (ಸಾಳ್ವಭಾ. ೪-೧೦). **ಹವಣರಿ:** ೧. ವಸ್ತುಗಳೊಳವಿರುವ ಸೆಳೆತಗಳ ಹವಣರಿತು ಸೊಗಕೆ ನವಸಂಘಾತಗಳ ನಿಲಿಸುವರಿವು (ಮಲೆದೇ. ೪೮-೫). ೩. ಬವರದಲಿ ಸಿಲುಕಿದುದ ಹವಣರಿದು ತೋಳ . . . ಹೇಳ್ದ (ಕಎಪು. ೧೩-೭). ೪. ಕಾರ್ಯಕ್ಕೆ ಹವಣರಿತು ಸಾಧನ ಸಂಪತ್ತನ್ನು ಒದಗಿಸುವ ಸೋಪಾನಮಾರ್ಗವನ್ನು ಸಿದ್ಧಗೊಳಿಸಿದನು (ಕೃಮಹ. ೯). **ಹವಣಱಿ:** ೧. ಎಡೆ ಮಾಡುವಬಲೆಯುರೆಯ್ತಂದು ರಾಯ ತುತ್ತಿಡುವನ್ನದೊಳಗೊಂದು ತುತ್ತ ತುಡುಕಿ ತೆಗೆದುಕೊಂಡು ಪೋಗಿ ಪಂಗಳಿಗೆಲ್ಲಯೆಡೆಮಾಡಿದರು ಹವಣಱಿದು (ಭರಚ. ೪-೧೦೪). ೨. ವನಪಾಲನಾಗಳೆ ಹರುಷದಿಂ ಹರಿದು ಹೋಗಿ ಹವಣಱಿದು ಭೂತಳಪತಿ ಹರಿಶ್ಚಂದ್ರರಾಯನಂ ಕಂಡು (ಹಚಕಾ. ೧೩-೧೭). [ಪವಣ್ + ಅಱಿ]

**ಪವಣಿಕೆ,** ಪೋಣಿಕೆ, ಪೋವಣಿಕೆ, ಹವಣಿಕೆ (ನಾ). ೧. ಜೋಡಣೆ; ಹೊಂದಿಕೆ: ನವಿಲುಗರಿ ಬಾಣದಲಿ ಹಂಗನ ಕವಲುಗರಿ ಬೋಳೆಯಲಿ ಕಣಲಿಗೆ ಪವಣಿಕೆಯ ವಿಶಿಖದಲಿ . . . ಎಚ್ಚಾಡಿದರು ಬನಮಧ್ಯದಲಿ ಹಲಕಾಲ (ಅಂಬಿಕಾ. ೩೦-೬೧). ೨. ಮೋಸ; ತಂತ್ರ; ಕಪಟ: ಪವಣಿಕೆಯ ಭಿಕ್ಷುಕಂ ತಾನಾಗಿ ಸೀತೆಯಂ ಕದ್ದೊಯ್ದನು (ಪರಶು. ೨-೯). **ಪೋಣಿಕೆ:** ೩. ಪೋಣಿಸುವಿಕೆ: ನನ್ನ ಕವನ

ತೋರಬಹುದು ಬರಿಯ ಮಾತ ಪೋಣಿಕೆ (ಗಂಗಾತ. ೬೮-೧೨); ಕನ್ನಡದ ಸತ್ವವೂ ತಿರುಳೂ ಪೋಣಿಕೆಯು ಕಣ್ಣು (ಕಜಸಾ. ೯೯). ೪. ಪೋಣಿಸಿದುದು; ಸರಗೊಳಿಸಿದುದು: ಸೂತ್ರ—ಅವಮೋಚನೇ, ಪೋಣಿಕೆಯೊಳ್ (ಕಾಶಕ್ಯ. ೨೮೭). **ಪೋವಣಿಕೆ:** ೧. ತೊಳೆದ ತೋರ ಮುತ್ತಿನ ಮೊತ್ತಂ ಪೋವಣಿಕೆವಡೆದುದೆಂಬಿನಮಾ ವರವನಿತೆಯರದೇಂ ಮನಂಗೊಳಿಸಿದರೋ (ಅನಂಪು. ೭-೫೪). **ಹವಣಿಕೆ:** ೫. ಹಂಚಿಕೆ; ಯೋಜನೆ: ಬುದ್ಧಿಯುಂಗಣ್ಣಿನಲಿ ಸೌಕುಮಾರ್ಯವು ಕಂದಿ ನಿಲಲು ಬಾಳುವ ಹವಣಿಕೆಯು ವಿಫಲವಹುದು (ಪಯಣ. ೫೮-೧೪); ತಪ್ಪು ಹೊರಿಸಬಹುದೆಂದು ಸುಲ್ತಾನನ ಹವಣಿಕೆ (ದೌಲತ್. ೪೧); ಜೇಮ್ಸ್ ದಂಪತಿಗಳೂ ಸ್ವಾಮಿದಾಸರೊಡನೆ ನಿಲ್ಲುವ ಹವಣಿಕೆಯಲ್ಲಿದ್ದಾರೆ (ಸಮಜೀ. ೩೦ ಪೀಠಿಕೆ). ೬. ಹಿಡಿತ; ಹತೋಟಿ: ಮಣಿಯಲ್ಲಿ ಮಣಿವ ಕೊಲ್ಲಟಗಿತ್ತಿ ತನ್ನ ಜೋಕೆಯು ತೂಕದಲ್ಲಿ ತೂಗಾಡುವಳು. ಮೈಯ ಹವಣಿಕೆ ಮಿಗಿಲು (ಉಯ್ಯಾಲೆ. ೩-೧೦). ೭. ಸಿದ್ಧತೆ; ತಯಾರಿ: ಸ್ವಲ್ಪ ಸುತ್ತಾಡಿಕೊಂಡು ಬರುವ ಹೊತ್ತಿಗೆ ನೇಸರ ನಡು ನೆತ್ತಿಗೆ ಬರುವ ಹವಣಿಕೆಯಲ್ಲಿದ್ದ (ಶರೀಕ್ಷ. ೧೪೯); ಜಗತ್ತಿನ ಇನ್ನೊಂದು ಭಾಗವಾದ ಈ ಸ್ಥಳದಲ್ಲಿ ಬದುಕು ಸಾಗಿಸುವ ಹವಣಿಕೆಯಾಗಿತ್ತು (ಮಹಾತ್ಮಾ. ೨೬). [ಪವಣ್+-ಇಕೆ]

**ಪವಣಿಗ** (ನಾ). ಚಿಲ್ಲರೆ ವ್ಯಾಪಾರಿ (?): ಸೀರೆಯಂ ಕೊಂಡು ಮಾಜುವ ಪವಣಿಗರಲಿ ಪ್ರತ್ಯೇಕ ಬರಿಸಕ್ಕೆ ಹಾಗವೊಂದು (ಕಇ. II, ೨೧-೨೯; 1147). [ಪವಣ್ ?+-ಇಗ]

**ಪವಣಿಗೆ, ಪೋಣಿಗೆ, ಪೋಹಣಿಗೆ, ಪೌಣಿಗೆ** (ನಾ). ೧. ಕೂಡಿಕೆ; ಹೊಂದಾಣಿಕೆ: ಅವಳರಗಿಳಿಯೊಳು ನುಡಿದಾಡಲಾ ಮಾತ ಪವಣಿಗೆ ಮಾಡಿಕೊಂಡೊಂದು ಕವಿತೆ ಮಾಡಿದರಿವರತಿನಿಪುಣೆಯರೆಂದು (ಭರಚ. ೭-೬೮); ಯುವತಿಯುಂಗದಿ ಗರ್ಭಚಿಹ್ನಂ ಪವಣಿಗೆಯೊಳೊಪ್ಪಿದುದು ಸೌಖ್ಯದಿ (ಶಂಕರದಾ. ೧೬-೨೫). ೨. ರಚನೆ; ಬಂಧ; ನಿರ್ಮಾಣ: ಇವಳು ಕಾವ್ಯಾಲಂಕಾರನಾಟಕಗಳ ಪವಣಿಗೆಯಿರವ ಬಲ್ಲವಳು (ಹದಿಬ. ೧-೨೫). ೩. ಪೋಣಿಸುವಿಕೆ; ಸರಗೊಳಿಸುವಿಕೆ: ಮಣಿ ಉಳ್ಳನ್ನಕ್ಕ ಪವಣಿಗೆಯ ಹಂಗು ಬಿಡದು (ಮದೇವ. ೨೬೧-೭). ೪. ಪೋಣಿಸಿದುದು; ಸರ; ಸೂತ್ರ: ಉರಿಯ ಮಣಿಯ ಪವಣಿಗೆಯ ಮಾಡುವುದ ಕಂಡೆನಯ್ಯಾ (ಸಿದ್ಧೇಪ. ಶಿ. ೧೬೮-೪೯೧); ಒರೆ ತೂಕ ಬಣ್ಣಕ್ಕೆ ಸರಿಯಿರಲೊಪ್ಪವಿಟ್ಟಿರುತರದ ಪವಣಿಗೆಯ ಮಾಡಿ ಕಂಠದೊಳು ಧರಿಸಿಕೊಂಡಿಹರು ಶರಣರು (ಗುರುಬೋ. ೨-೧೫೧). **ಪೋಣಿಗೆ:** ೪. "ಸೂತ್ರಂ, ಸೂತ್ರಿತಂ, ಸೂತ್ರಣಂ, ಸೂತ್ರಣೀಯಂ—ಈ ೪ ಪೋಣಿಗೆ" (ಕಾಶಕ್ಯ. ೨೮೭); ಸೂತ್ರವು ಆಡುವಂದದಿ ಹೊಸ ಮುತ್ತುಗಳ ಹೆಜ್ಜವಿಟ್ಟು ಪೋಣಿಗೆಯ ತೆರದಿ (ನಂದಿಲೀ. ೧-೨೬). **ಪೋಹಣಿಗೆ:** ೪. ಸೊಕ್ಕಾನೆದಲೆಯ ಮಣಿಯಂ ತಂದು . . . ನರದ ನೇಣಿಂದ ಪೋಹಣಿಗೆಯಂ ಹಸಮಾಡಿದ ಎಕ್ಕಾವಳಿಗಳನನುರಾಗದಿಂ ತಂದು (ಸಮ್ಯಕೌ. ೧೦-೩೪). **ಪೌಣಿಗೆ:** ೫. ಒಳ್ಳೆಯ ರೀತಿ; ಅಚ್ಚುಕಟ್ಟು; ಓರಣ: ಅಟ್ಟಿದನು ಚರರನು ನೃಪತಿ ಗುಡಿಗೆರೆಯ ಪೌಣಿಗೆಯೊಳುರೆ ಕಟ್ಟಿ ಶುಭಕರ ಕಾಣಿಸಿಯೆ ಲಿಖಿತದಲಿ ತಳುವದೆ ಯಾಣಿವಾಹನೆ ವೇಗದಿಂದ್ಯೆತಹುದು ಪುರಿಗೆನುತ (ಅಂಬಿಕಾ. ೪೮-೨೪). [<ಪವಣಿಕೆ]

**ಪವಣಿಸು, ಪೋಣಿಸು, ಪೋಹಣಿಸು, ಹವಣಿಸು** (ಕ್ರಿ). ೧. ಅಳತೆ ಮಾಡು; ತೂಗು: ಪವಣಿಸುವನಾವನಾ ವೈಶ್ಯಕುಲನ ಧನಸಂಕುಲಮಂ (ಸುಕುಮಾ. ೯-೮೪); ಲೆಕ್ಕವಿಡಲ್ ಶಬ್ದಂ ನೆಱೆಯವು ಪವಣಿಸಲೆನೆ ಕಂಡರಾರೊ ಕಾಲದ ಪವಣಂ [ಪಾಠಾಂ.ಕಡೆಯಂ] (ಪಂರಾಮಾ. ೧-೫೪); ಬಳ್ಳದೊಳಳೆದುದದಧಿಯ ಜಳಮುಳ್ಳನಿತುಮನಾರೊ ಪವಣಿಸಲ್ ನೆಱೆವನ್ನರ್ (ಎಕ. II, ೩೪೫-೪೮; ಸು. 1159); ಪವಣಿಸಿ ನಾಭಿಮಂಡಲ ಸಮಾನದೆ ತೀವಿದೊಡಂ ತದಂಗನಾನಿವಹಕುಚಾಗ್ರಮಂ ಕುಸುಕುತಿರ್ದುದು . . . ಸಲಿಲೋತ್ಕರಂ (ಕುಸುಮಾ. ೫-೫೩೪). ೨. ಲೆಕ್ಕ ಹಾಕು; ಎಣಿಸು: ಜವದಿಂದಾಗಸದೊಳ್ ಪಾಱುವ ಪಕ್ಕಿಯುಂಮಂತುಗಾಣಲಣಮಾಜದೆ ತೇಂಗುವುದು ಪತಾಕಾಗ್ರದೊಳೆನೆ ಪವಣಿಸಲಾನಱಿಯೆನತುಳಮಂ ತದ್ಬಲಮಂ (ಚಂದ್ರಪ್ರ. ೧೦-೨೫); ಪವಣಿಸುವಡರಿದೆನುತ್ತಿರ್ಪ ಶಾಸ್ತ್ರಂಗಳಿಂ ತಮತಮಗೆ ಹೊಗಳುತೊಪ್ಪುವ ಪುರಾಣಂಗಳಿಂ (ವೀರರ. ಹ. ೪೮೨-೧). ೩. ಲೆಕ್ಕಕ್ಕೆ ಸಿಗು; ಎಣಿಕೆಗೆ ಒಳಪಡು: ಆ ಮುನೀಂದ್ರಂ ಬಂದನೆಂಬೊಂದಾನಂದಂ ಕೈಮಿಕ್ಕು ತನ್ನಗರೀಮಂದಿರವೃಂದಂಗಳೊಳ್ ತುಂಬಿ ಪವಣಿಸದೆ ಮರ್ತ್ಯಮೂರ್ತಿಯಂ ಕೈಕೊಂಡು ಪೊಱಪೊಣ್ಮುದೆಂಬಂತೆ ಪುರಜನಂಗಳ್ . . . ಪೊಱಮಟ್ಟು ಬಂದರ್ (ಬಾಧಪು. ೩-೧೬ ವ); ನವಿಲುಗಳ ನರ್ತನವ ಚಾತಕದ ಮನದೊಳುಕ್ಕುವ ಹರುಷರಸವನಾ ಕಾದಂಬಿನೀವನಿತೆಯವಲೋಕಿಸುತ್ತು ಮಾನಂದಾಶ್ರುವಾರಿ ಕಂದೆಱದೆಳೆನೆ ಮುಂಬನಿಗಳು ಪವಣಿಸದೆ ಸುರಿಯೆ (ಸಾಳ್ವಭಾ. ೨೬-೧೯). ೪. ಹೊಂದಿಸು; ಜೋಡಿಸು; ಕೂಡಿಸು: ಧನಧಾನ್ಯಕ್ಷೇತ್ರನಿವೇಶನಕುಪ್ಯಪ್ರಭೃತಿ ವಸ್ತುವಂ ಪವಣಿಸಿಕೊಂಡು (ಪರ್ಧಮಾ. ೭-೧೨); ಕೇವಲ ಹಿಂಡುಹಿಂಡು ಅಂಕೆಗಳನ್ನು ಪವಣಿಸಿ ಪಕ್ಕಪಕ್ಕ ತೊಡಿಸಿ "ಸರಳರೂಪ ಕೊಡಿರಿ" ಎನ್ನುತ್ತಾರಲ್ಲ (ಗಾಳಿಪ. ೧೮೪). ೫. ಮಣಿ, ಮುತ್ತು, ಹೂವು ಮೊದಲಾದುವನ್ನು ಸರಗಟ್ಟಲು ದಾರದಲ್ಲಿ ಸೇರಿಸು,—ಅಳವಡಿಸು: ಅರಗಿನ ಮಣಿಯ ಮಾಡಿ ಉರಿಯ ನೇಣ ಕಟ್ಟಿ ಹಿರಿಯರೆಲ್ಲರು ಪವಣಿಸಲಱಿಯರು (ಮೋಳಿಮಾ. ೧೭೪-೬೫೪); ವೆಜ್ಜವಿಲ್ಲದ ಮಣಿಯು ದಾರವಿಲ್ಲದೆ ಪವಣಿಸುವ . . . ನಿಮ್ಮ ಶರಣನ ಪರಿಯ ನೋಡಾ (ಅಪಚಂ. ೧೮೦-೮೧೧); ಕುಶಲವಹ ದಾರದಿಂದ ಪವಣಿಸಲೆಳೆಗಳಾದ ವಿಪ್ರತ್ತೊಂದಲ (ವೀಶ್ಯೆಪು. ೭-೭-೩೦); ಸೂಜಿಯಲ್ಲಿ ದಾರ ಪವಣಿಸುವ ಹವಣಿಕೆಯಲ್ಲಿದ್ದಾಗ (ದೇಕನ್ಯೆ. ೧೨). ೬. ಸಿದ್ಧಮಾಡು; ಅಣಿಗೊಳಿಸು: ಪವಣಿಸಿ ಜಿನೇಂದ್ರಪ್ರಮುತದಿಂ . . . ಸಹಸ್ರಯೋಜನದವಗಾಹದಿನೆಸೆವುದೀ ನಗಂ (ಪುಷ್ಪಪು. ೧೦-೫೫); ಸಭಾಮಂದಿರವನಮರವರ್ಧಕಿಗಳಿಂದ್ರನ ನೇಮದಿಂದ ಪವಣಿಸುತಿರ್ದರು (ತ್ರಿಲಾಪ. ೪೨-೩೯). ೭. ಒದಗಿಸು, ಪೂರೈಸು: ಪವಣಿಸು ಪಿಪ್ಪಲಿಯಂ ಸೈಂಧವಂ ಜೀರಿಗೆಯನರೆದು ಕುಡಿ (ಕಲ್ಯಾಕಾ. ೪-೧೨); ಭುವನಕ್ಕೆ ಬಾಧೆಯೆನುತಂ ಪವಣಿಸಿದಂ ಕೆಡಿಪ ಬುದ್ಧಿಯಂ ಲಕ್ಷ್ಮೀಶಂ (ದಶಾವ. ೮-೮); ಪಲವಗೆಯೊಳು ಪವಣಿಸಿಯವಳಿಚ್ಛೆಯ ಸಲಿಸಿ ಸಂತಸಗೊಳಿಸುವುದು (ಹದಿಬ. ೪-೨೬). ೮. ಸಾಧಿಸು: ವೈರವ ಪವಣಿಸಿ ಭಂಗಬಡುವವನು (ಕರ್ಣಾವ್ಯ. ೭-೯). **ಪೋಣಿಸು:** ೪. ಶೂನ್ಯಸಂಪಾದನೆ ಒಂದು ವಚನಸಂಕಲನ, ವಚನಗಳನ್ನು ಸಂಭಾಷಣೆಯ ರೂಪದಲ್ಲಿ ಪೋಣಿಸಿರುವುದು ಇದರ ವೈಶಿಷ್ಟ್ಯ (ಶೂನ್ಯಕು. ೨೫). ೫. ವಿರಳವಿಲ್ಲದೆ ಮಣಿಯ ಪೋಣಿ[ಪಾಠಾಂ. ಪವಣಿ]ಸಿ (ಮಹಾದೇ. ಬ. ೪೫-೧೧೫); ಶಶಿಕಿರಣಮನಾಯ್ದಾಯ್ದೊಳ್ಪೆಸೆಯಲ್ ಪೋಣಿಸಿದ ತೆಱದ ಮುಕ್ತಾಹಾರಂ (ದಶಕು. ೬-೪೦); ಹುಡುಗಿಯರಿಗಾಗಿ ಸೂಜಿಗೆ ದಾರ ಪೋಣಿಸುವುದು, ನಿಂಬೆ ಹಣ್ಣಿನ ಓಟ ಇವು ನಡೆದವು (ಕಪಪು. ೪-೩೪). ೯. ದಾರವನ್ನು ಸೂಜಿಕಣ್ಣಿನಲ್ಲಿ ಸೇರಿಸು: "ಕೋ—ಸೂತ್ರಪ್ರವೇಶೇ (ಪೋಣಿಸು)" (ಶಮಧಾ). ೧೦. ಚುಚ್ಚು; ನೆಡು; ನಾಟಿಕೊಳ್ಳು: ಕಡುಗಾದ ಶೂಲವೆದೆಯಲ್ಲಿ ಪೋಣಿಸಲು ಬೆನ್ನೆಡೆಯಲ್ಲಿ ಮೊನೆದೋಱಿ (ವೀಶ್ಯೆಪು. ೪-೧೯-೩೫). **ಪೋಹಣಿಸು:** ೫. ಹಲವು ವಿತ್ತಮಂ . . . ಜಿನದತ್ತೆ ಕೊಟ್ಟಳ್ ಗುಣಂಗಂಡರಂತದಕೆ ರತ್ನವನು ಪೋಹಣಿಸುವಂತೆ

(ಸಮ್ಮಕೌ. ೧೦-೨೨). **ಹವಣಿಸು :** ೧. ಸೇನನ ವೀರವ ಹವಣಿಪಡೆ ಸಹಸ್ರಜಿಹ್ವೆಯುಳ್ಳಂ ನೆರೆಯಂ (ಎಕ. XI, ದಾವಣ. ೮-೪ ; ಸು. 1265); ಭುವನದೊಳು ತನಗಧಿಕಬಲದಲಿ ಹವಣಿಸಲಿಕೆಣೆಯಿಲ್ಲ (ಸಂಭಸ. ೨೮-೨೧); ತನ್ನ ತುಳಭಾಗ್ಯವ ಹವಣಿಸುವರಾರು (ಶಿಭಾಗ. ೫-೩-೬) ; ಶಿವಶಿವಾ ಶರಣನೇಳ್ಗೆಯ ಹವಣಿಸಲ್ಕಳವೇ (ಶಂಕರಾ. ೧೫-೪೧). ೨. ಇವರು ಕಪಿಗಳೆ ಜೀಯ ಸೀತಾಯುವತಿಯರಸನು ನರನೆ ಸೀನೀ ಹವಣಿನಲಿ ಹವಣಿಸುವ ಬುದ್ಧಿಗೆ ಕಾಣೆನುರುಪಥವ (ತೊರರಾ. ೬-೧೯-೫) ; ಅವಿನಯ ವೆನಿಪ ವನವು ಬಳಸಿಹುದಾ ದಿವಿಜಾರಿಯ ಪುರವರವ ಹವಣಿಸಬಾರದೆನಂ ತಾನುಬಂಧಿಯೆಂಬವು ವನದ ಕಮಲಪಂಡಗಳು (ತ್ರಿಪುಸಾಂ. ೯-೩೮). ೪. ಅವರ ಮನವನೊರೆದು ನೋಡುವೆನೆಂದು ಹವಣಿಸಿದನೊಂದು ವೇಷವ ಶರೀರದೊಳಂದು (ತಿರುರ. ದೇ. ೧೦-೮) ; ಸಾಗರವನಾ ಮುನಿ ಹವಣಿಸಿದ ಜಠರದಲಿ (ಕುಪ್ಪಾಆ. ೯-೧೨) ; ಇಂತೆಂದನಾ ಹನುಮಂತ ಹವಣಿಸಿದುಚಿತವಚನದಲಿ (ತೊರರಾ. ೫-೩-೭೫). ೬. ದಧಿಮುಖ ಮರನ ಹವಣಿಸಿ ಶಿರವ ಗದೆಯಿಂದಪ್ಪಳಿಸಿದರೆ ಬಿದ್ದ ದಧಿಮುಖನು (ತೊರರಾ. ೩೨-೩೮). ೭. ಹವಣಿಸಿದನು ಛಳಿ ಬಿಸಿಲು ದಿವಿಜರ ಬಲಕೆ ಶ್ರೀರಾಮ (ಉತ್ತರ. ೬-೫೫) ; ಬಾಯಿಗೆ ಸವಿಯಾಗುವಂತೆ ಹಾಲು ಗಂಜಿಗಳನ್ನು ಹವಣಿಸಿ (ನಂಟರು. ೩೪). ೧೧. ಪ್ರಯತ್ನಿಸು ; ತೊಡಗು : ಧೂರ್ತರು ತರತರದ ಹಂಚಿಕೆಗಳಿಂದ ಜನರನ್ನು ಮೋಸಗೊಳಿಸಲಿಕ್ಕೆ ಹವಣಿಸುತ್ತಾರೆ (ಮುಂಬಯಿ. ೪-೧೯) ; ವಿಷ್ಣುವರ್ಮನು . . . ವೈಜಯಂತೀ ರಾಜ್ಯಕ್ಕಧಿಪತಿಯಾಗಲು ಹವಣಿಸುತ್ತಿದ್ದನು (ಕರ್ಣಾಅ. ೧೨). ೧೨. ಮೊದಲುಮಾಡು ; ಆರಂಭಿಸು : ಹವಣಿಸಿನ್ನೀ[ಪಾಠಾಂ. ಹವಣನಜೀಯೆನು] ತಪವನೀ ಖಳನಿವಹ ಕೊಲ್ಲದ ಮುನ್ನ ಸುಕ್ಷೇಮವನು ಮಾಡು (ಶಿಭಾಗ. ೪-೭-೪೩). ೧೩. ಒದಗು ; ಉಂಟಾಗು : ದಿನಸುಧೆಯಬ್ಧಿಯನೊಲವಿಂ ತವೆ ಜನರಿಚ್ಛೆಯನೆ ಪಡೆಯಲೆಂದುಜಿಕೆ ಕಡೆಯಲ್ ಹವಣಿಸಿದ ವಿಷಮನನುಕರಿಸುವ ತೆಜದಿಂದುದಯಮುಳಿದು ತಳೆದುದು ತಮಮಂ (೧೧ಕ. ೪-೭೪). ೧೪. ಸಿದ್ಧವಾಗು; ಅಣಿಯಾಗು: ಅತಿರೌದ್ರಾಕಾರವಡೆದಭವನ ಕಂಡು ರತಿರಾಜ ಹವಣಿಸಿ ನಿಂದ (ಮೋಹತ. ೭-೩೬). ೧೫. ಅಂಕೆಗೆ ತರು ; ಅಧೀನಕ್ಕೊಳಪಡಿಸು : ನೆಲನನಳೆವಂದೀ . . . ಜಲನಿಧಿಗಳೀ ಗಗನವೀ ಬ್ರಹ್ಮಾಂಡಹ[ಪಾಠಾಂ.ಪ]ವಣಿಸಿದ ವಿಲಸಿತದ ವಿಭುವಿಂಗೆ ದಟ್ಟಡಿ ಬಳುಕುನಡೆ ಮೆಲ್ನಡೆಗಳೆಂಬಿವು ತಿಳಿವವರ ಮನಸಿಂಗೆ ಮಜಿಕೆ ತಾನಲ್ಲವೇ (ತೊರರಾ. ೧-೮-೭೬); ಹವಣಿಸಿ ಹಲವು ಕಬ್ಬುನವ ತಾಡಿಪ ತನ್ನ ತವರವ ತಡಕೊಂಬುನರಿದೆ (ಮೋಹತ. ೪೧-೪೯). ೧೬. ವಿವರಿಸು ; ತಿಳಿಸು : ಆ ಭಕ್ತನೊಳಗೆ ಜಂಗಮವಡಗಿ ಆ ಜಂಗಮದೊಳಗೆ ಭಕ್ತನಡಗಿ ಇದೇನೆಂದು ಹವಣಿಸುವೆ ನಯ್ಯಾ ಎರಡೊಂದಾದ ಘನವ (ಬಸವ. ೫೨೪) ; ಹವಣಿಸಲಾವನನು ನೆರೆಯವು ನಿರಂತರ ನಿಗಮಕೋಟಿಗಳು (ಶಿಭಾಗ. ೧೦-೯೦-೨೭).

[ಪವಣ್+-ಇಸು₃]

**ಪವಣು** 'ಪವಣ್' ನೋ.

**ಪವಣುದೋಱು** 'ಪವಣ್ದೋಱು' ನೋ.

**ಪವಣ್ಗಟ್ಟು** (ಕ್ರಿ). ಹೊಂದಿಸಿ ಕಟ್ಟು ; ಹವಣಾಗಿ ಕಟ್ಟು : ಅಪರಾಂಭೋಧಿತರಂಗಮೆಂಬ ಕೊವಲೊಳ್ ತ್ರಿಂಶದ್ಘಟೀಪರ್ವದಿಂದೆ ಪವಣ್ಗಟ್ಟಿದ ದೋಂಟಿಯಂ ಕೊಳಿಸಿ (ಅನಂಪು. ೭-೬೩).

[ಪವಣ್ + ಕಟ್ಟು₁]

**ಪವಣ್ಗಱ್,** ಹವಣುಗಳಿ (ಕ್ರಿ). ಅಳತೆ ಮೀರು ; ಮಿತಿ ಮೀರು : ಕಣ್ಣುಡಿತೆಗಳಿಂದಾಕೆ ಪವಣ್ಗಱಿದಾ ಬಾಷ್ಪವಾರಿಯಂ ಸುರಿಯುತ್ತಂ (ಕಾದಂಉ. ೫೧೮). **ಹವಣುಗಳಿ :** ಹವಣುಗಳಿದ ತುರಂಗಕೋಟಿಗಳವಯವದಿನೊಯ್ಯಾರದಿಂ ತಳರ್ದುವು (ಕುಮುರಾ. ೩-೨೯).

[ಪವಣ್+ಕಱ್₁]

**ಪವಣ್ಗಿಡು** (ಕ್ರಿ). ಹವಣು ತಪ್ಪು ; ಅಳತೆ ತಪ್ಪು : ಅನಯಂ ಪುಟ್ಟಿದೆಯುಂ ಪವಣ್ಗಿಡದೆಯುಂ ತಂತಮ್ಮ ತೇಜಃಪ್ರಭಾವನೆ ಮೆಯ್ದೋಱಿದೆಯುಂ (ಪರ್ಧಪು. ೭-೫೯).

[ಪವಣ್ + ಕಿಡು(<ಕೆಡು₁)]

**ಪವಣ್ಗೊಳ್** (ಕ್ರಿ). ಲೆಕ್ಕ ಮಾಡು ; ಎಣಿಸು : ಗಟಾಲ್ಲೆನೆ ಸತ್ತುಮಾಯ್ದು ಲೋಭಿಗಳ ಪವಣ್ಗೊಳಲ್ ಮನುಜರಿರ್ಕಜನಾದೊಡಮೇಂ ಸಮರ್ಥನೇ (ಎಕ. VII, ಶಿಕಾರಿ. ೧೫೧-೩೫; 1047) ; ಉಂಡ ಮೊಲೆವಾಲ ಪವಣಂ ಕೊಂಡು ಬಿಸುಟ್ಟೊಡಲ ಪವಣನಿದು ಪವಣೆಂದಾರ್ಕಂಡು ಮನಂಗೊಂಡು ಪವಣ್ಗೊಂಡಱುವ ಜಠರನಾದಿಕಾಲಸ್ಥಿತಿಯಿಂ (ಸುಕುಮಾ. ೬-೮). [ಪವಣ್ + ಕೊಳ್₁]

**ಪವಣ್ಗೊಳಿಸು** (ಕ್ರಿ). = ಪವಣ್ಗೊಳ್ : ಕನಕನಂದಿಮುನೀಂದ್ರನ ಹೃದ್ಯಮಪ್ಪ ವಿದ್ಯಾವಳಿಯಂ ಪವಣ್ಗೊಳಿಪೊಡಂಬುಜಸೂನುಗಳುಂಬ ಮಾವಗಂ (ಶಾಂತೀಶ್ವ. ೧-೨೨) ; ಇಂತನಿಬರುಂ ಪೊಗಟ್ಟುದುಂ ರಾಯಂ ಮಗನ ಮೈಮೆಯಿಂದುರ್ಕುವ ಸಂತಸಮುಂ ಮನದೊಳ್ ಪವಣ್ಗೊಳಿಸಿ ನುಡಿದಂ (ಚಿಕವಿ. ೫-೭೩). [ಪವಣ್ಗೊಳ್+-ಇಸು₃]

**ಪವಣ್ನುಡಿ** (ನಾ). ಹವಣಾದ ಮಾತು ; ಉಚಿತವಾದ ನುಡಿ : ಅಳಿದಿರಿಸಿರ್ದುದಂ ಕುಡುವವನಂತೆ ಪವಣ್ನುಡಿಯಿಂದೆ ಭವ್ಯರಂ ತಿಳಿಪುವ (ಅಪಶ. ೪೮-೧೦೩). [ಪವಣ್ + ನುಡಿ₂]

**ಪವಣ್ದೋಱು,** ಪವಣುದೋಱು (ಕ್ರಿ). ೧. ಅಳತೆಗೆ ಸಿಕ್ಕು ; ಅಳವಿಗೆ ಬರು : ತವದಾಯುಷ್ಯದ ಕುಂದದಂದದ ಬಿಯಂಗೆಯ್ದುಂ ಪವಣ್ದೋಱದುದ್ಧವದೇ ಪೋಂಕೆನಿಸಿಪ್ಪ ರೂಪಿನ ಮನಂಗೊಂಡಿರ್ಪ ಲಾವಣ್ಯದೊಪ್ಪುವ ನೇಪಥ್ಯದಮರ್ಕೆ ನಿಲ್ಲವನಿಮಿಷೇಂದ್ರಾದಿಗಳ್ಗೆಂದೊಡಾರ್ಗಿವು ನಿಲ್ಕುಂ (ಶಾಂತಿಪು. ೭-೮). **ಪವಣುದೋಱು :** ೨. ಉಚಿತವಾಗು ; ಯೋಗ್ಯವೆನಿಸು : ಸವಿಯನೆಸಗದ ನುಡಿಯ ಪವಣುದೋಱದ[ಪಾಠಾಂ. ಱುವ] ನಡೆಯ . . . ಕುವಲಯಾಂಬಕದ ಸೌಷ್ಟವದವಳೆ ಕೊಂಕಣಿತಿ (ಜನವ. ೬-೩೧). [ಪವಣ್ + ತೋಱು]

**ಪವಣ್ಪಡಿಸು** (ಕ್ರಿ). ಹೊಂದಿಸು ; ಹೋಲಿಕೆ ಮಾಡು : ಪವಣ್ಪಡಿಪೊಡೀತನನೀತನೆ ಪೋಲ್ವನಿನ್ನರಾರ್ (ಪಂಪರಾಮಾ. ೧೧-೧೦೩).

[ಪವಣ್ಪಡೆ+-ಇಸು₃]

**ಪವಣ್ಪಡು** (ಕ್ರಿ). ದೊಡ್ಡ ಆಕಾರವನ್ನು ಪಡೆ ; ಅತಿಶಯವಾಗು : ನುಣ್ಪುಱಲೊಳಗದಿರ್ಮುತ್ತಿ ಪವಣ್ಪಡೆ ಕಟ್ಟಲಿಸಿ ಬೆಳೆದು ಬಳಸಿರ್ದೊಡದಂ ತಚ್ಚೆಳಗನೀಯೆ ಬೆಳತಿಗೆಗಚ್ಚೆಳಗೊಳಪೊಕ್ಕು ಚಪಳೆ ಕಳಿಕೆಯನಾಯ್ದಳ್ (ಚಂದ್ರಪು. ೭-೧೦೫). [ಪವಣ್ + ಪಡು₁]

**ಪವಣ್ಪಡೆ** (ಕ್ರಿ). ೧. ಅಳವಡು ; ಹೊಂದಿಕೆಯಾಗು : ಚಿನ್ನದ ಸವಂಗಮಪೂರ್ವದ ಮೊಚ್ಚೆಯಂ ಪವಣ್ಪಡೆದ ಸುವರ್ಣಪಾರವದ ಕುಪ್ಪಸಮೊಪ್ಪೆ . . . ಸೂಳೆಯರೊಪ್ಪಿ ತೋಱಿದರ್ (ಪಂಪಭಾ. ೯-೧೦೩). ೨. ನಿಗದಿಯಾಗು : ಕಣ್ಪೆಳಗುಂ ಲಲಿತಾಂಗದ ನುಣ್ಪೆಳಗುಂ . . . ಪವಣ್ಪಡೆವೊಡತರ್ಕ್ಯಮಾದುದು (ಕುಸುಮಾ. ೩-೯೩).

[ಪವಣ್+ಪಡೆ₁]

**ಪವಣ್ಪುಗಿಸು** (ಕ್ರಿ). ಎಣಿಕೆಗೆ ಒಳಪಡಿಸು ; ನಿಗದಿ ಮಾಡು : ಭಗಣದ ಲೆಕ್ಕಮಂ . . . ದೆಸೆಯಂತಮಂ ಪವಣ್ಪುಗಿಸಲೆರ್ಬ್ಬಲಂಗಳ ಮದದ್ವಿಪವಾಹನರೂಢಕಿಂಕರಾದಿಗಳ ಪವಣ್ಗಳಂ ಪವಣಿಸಲ್ ಬಗೆದರ್ಪನೆ ಗಾಂಪನಾಗನೇ (ಪಂಪರಾಮಾ. ೧೩-೧೧).

[ಪವಣ್+ಪುಗಿಸು(<ಪೊಗಿಸು)]

**ಪವನ** (ನಾ). ೧. (ಧಾನ್ಯಾದಿಗಳನ್ನು) ಗಾಳಿಯಲ್ಲಿ ತೂರುವಿಕೆ; ಶುದ್ಧಿ ಮಾಡುವಿಕೆ: "ನಿಷ್ಪಾವಃ, ಪವನಂ, ಪವಃ—೩ ಧಾನ್ಯಾದಿಗಳನ್ನು ಗಾಳಿಗೊಡ್ಡುವಿಕೆ, ತೂರುವಿಕೆ" (ಸಿದ್ಧಂತಿ. ೩೬೪). ೨. ಗಾಳಿ; ವಾಯು: "ಪವನಃ, ಶ್ವಸನಃ, ವಾಯುಃ . . . ಮಹಾಬಲಃ—ಈ ೨೦ ಗಾಳಿಯ ಪೆಸರ್" (ಹಲಾಯು. ೧೪-೭೫); "ಎಲರೆನಲ್ ಪವನಂ" (ಚತುಃ. ೧೦). ೩. ಉಸಿರು; ಶ್ವಾಸ: ತಲೀ ತೆಳಗಾಗಿ ನಿಂದರತಾನ; ಹಿಂಗಟ ಮಣಿತಾನ; ಮುಂಗಟ ಮಣೀತಾನ; ಪವನ ಏರಸತಾನ (ಬಿಟ್ಟಹೂ. ೪೧). ೪. ಗಾಳಿಯ ಅಧಿದೇವತೆ; ವಾಯುದೇವತೆ: "ಪವಮಾನಂ . . . ಪವನಂ ಪ್ರಭಂಜನಂ . . . ಸಮೀರಣಂ ಪೃಷದಶ್ವಂ" (ನಸ್ತುಕೋ. ೮-೪೪); ಪವನಂಗೆ ಪುಟ್ಟಿದಂ ರಾಘವನನುಗಾಳ್ (ಗದಾಯು. ೩-೪೧); ತೊಡೆವೆಂ ಶಕ್ರನ ನಾಮಮಂ ತುಡುಕಿ ನೀರೊಳ್ ಮೆಟ್ಟುವೆಂ ವಹ್ನಿಯಂ . . . ಎಟ್ಟುವೆಂ ಪವನನಂ (ಜಗವಿ. ೩-೨೧). [ಸಂ.]

**ಪವನಗತಿ** (ನಾ). = ಪವನಜವ: ಪವನಗತಿಪ್ರಯುತಂಗಳ್ . . . ನಭದವೊಲಿಸೆದವು ಮಿಗೆ ಪದಿನೆಂಟುಕೋಟಿ ಜಾತ್ಯಶ್ವಂಗಳ್ (ಪಾರ್ಶ್ವಪು. ೮-೭೫). [ಪವನ+ಗತಿ]

**ಪವನಜ** (ನಾ). ೧. ವಾಯುಪುತ್ರ; ಹನುಮಂತ; ಆಂಜನೇಯ: ಅದೇಗಹನಮೊ ಪವನಜಂಗೆ ದುರ್ಗಮಮುಂಟೇ (ಪಂರಾಮಾ. ೧೧-೭೬). ೨. ಭೀಮ: ಪವನಜನಿಂದೆ ಕೌರವಕುಲಂ ಪಡಲಿಟ್ಟವೊಲಕ್ಕುಂ (ಪಂಪಭಾ. ೧೦-೬೩); ಪವನಜನಾಸ್ಯಮಲ್ಲಿ ದವನಾನನಮಪ್ಪೊಡೆ ಮಟ್ಟಮಿರ್ದು ನೋಡುವುದೆ ಮದೀಯವಕ್ತ್ರಮನೆ (ಗದಾಯು. ೯-೩೩); ಒಗ್ಗರಣೆಗಳ ಸೌರಭಕೆ ತೀಳಿದುದು ನಿದ್ರೆ ಪವನಜನ (ಕುವ್ಯಾಅ. ೧೦-೨೩). ೩. ಅಗ್ನಿ: [ಸಂ.]

**ಪವನಜವ** (ನಾ). ಗಾಳಿಯ ವೇಗ; ವಾಯುವೇಗ: ಪವನಜವದ ಪವನಜ ಪರಿದಂ (ಗದಾಯು. ೬-೨೮); ಪರಮಭಾಗವತಂ . . . ಪವನಜವಾನ್ವಿತರಥದಿನೆಯ್ದಿದಂ ಗೋಕುಲಮಂ (ಜಗವಿ. ೫-೭೬); ಪವನಜವಮಂ ಮುಂಚ ವಾಜಿಗಳೋಟಂಗೊಂಡುವು (ರಾಮಾಶ್ವ. ೩೦-೨). [ಪವನ+ಜವ$_2$]

**ಪವನಜೆ** (ನಾ). ಒಂದು ಬಗೆಯ ಮರ; ಇಂಗುಳ: "ಪವನಜೆಯಿಂಗುಳಂ" (ಮಂಗರಾ. ೪೧-೩೩). [?]

**ಪವನತನಯ** (ನಾ). = ಪವನಜ ೨: ಪವನತನಯನ ಖತಿಯ ಝಾಡಿಯ ಹವಣ ಕಂಡರು (ಕುವ್ಯಾಸ. ೧೦-೨೫). [ಪವನ+ತನಯ]

**ಪವನತ್ರಯ** (ನಾ). [ಜೈನ] ಭೂಲೋಕವನ್ನು ಸುತ್ತಿರುವ ಘನೋದಧಿ, ಘನವಾತ ಮತ್ತು ತನುವಾತವೆಂಬ ಮೂರು ಬಗೆಯ ಗಾಳಿಗಳು: ಭುವನಂ ಪವನತ್ರಯಾವೃತಂ (ಮಲ್ಲಿಪು. ೧-೫೬). [ಪವನ+ತ್ರಯ]

**ಪವನದಿಶೆ** (ನಾ). ವಾಯುವಿನ ದಿಕ್ಕು; ವಾಯವ್ಯ: ಬಗ್ಗುಡದ ಪವನದಿಶೆಯೊಳು (ಕಇ. V, ೨೬-೭೩; 1147). [ಪವನ+ದಿಶೆ]

**ಪವನನಂದನ** (ನಾ). ೧. = ಪವನಜ ೧: ಮನದಿಂ ಬೇಗಂ ಪುಟ್ಟಿದಂ . . . ಬನದೊಳಗೆ ಪವನನಂದನನನಿಂದ್ಯಗುಣನೆಸೆವಶೋಕಧಾತ್ರೀರುಹದಿಂ (ಶಮುದ. ೧೦೬ ಪ್ರಯೋ). ೨. = ಪವನಜ ೨: ಕುರುಕುಳನಂದನಂ ಪವನನಂದನನೆಂಬ ಮದಾಂಧಗಂಧಸಿಂಧುರವೆ ಕಟುತ್ತು ಪಾಯೆ ಪಡಲಿಟ್ಟವೊಲಾದುದು (ಪಂಪಭಾ. ೧೩-೧೨); ಅಲಗಿನಲಿ ಖಡುಗದಲಿ ಹೊಯ್ದರು ಪವನನಂದನನ (ಕುವ್ಯಾಅ. ೧೦-೫೦). [ಪವನ+ನಂದನ]

**ಪವನನಿರೋಧ** (ನಾ). ಉಸಿರನ್ನು ತಡೆಹಿಡಿಯುವುದು; ಶ್ವಾಸಬಂಧನ: ಪವನನಿರೋಧಮಿಲ್ಲದ ಗಳೋಷ್ಠಪುಟಾದಿ ನಿಮಿತ್ತಮಿಲ್ಲದ . . . ನಾದಮೊಗೆದತ್ತಭವಂಗೆ ಗಭೀರತಾಯುತಂ (ವರ್ಧಪು. ೧೬-೨೭). [ಪವನ+ನಿರೋಧ]

**ಪವನನಿರ್ಘಾತ** (ನಾ). ಬಲವಾದ ಗಾಳಿ; ಬಿರುಗಾಳಿ: ಉಲ್ಕಾಪಾತ ಪವನನಿರ್ಘಾತಂ ಕೂಡಿದೊಡೊಂದಿ ಬಂದೊಡಂ ರೌದ್ರದಂಡಶೂಕರ ಮುಹೂರ್ತಮಾಗಡೆ ಸಾಯ್ಗುಂ (ಜಾತತಿ. ೬-೯). [ಪವನ+ನಿರ್ಘಾತ]

**ಪವನಪಥ** (ನಾ). ವಾಯುಮಾರ್ಗ; ಆಕಾಶ: ಪವನಪಥದಂತೆ ಮಂದಂ ಶ್ರವಣೋದಯಮಾಗೆ (ಮಲ್ಲಿಪು. ೧೩-೯೫); ಅಂತು ಪವನಪಥದಿನಿಟಿದು ಬಂದಾ ಮುನೀಶ್ವರರ ಪದಕುಶೇಶಯಂಗಳನತಿಸೇವ್ಯದಿವ್ಯಾರ್ಚನಾನಿಚಯದಿನರ್ಚಿಸಿ (ನೇಮಿಪು. ೪-೧೧೧ ವ); ಪವನಪಥಂ ಪ್ರಸನ್ನತರಮಾಯ್ತು (ಶಾಂತೀಶ್ವ. ೪-೪೨). [ಪವನ+ಪಥ]

**ಪವನಪುತ್ರ** (ನಾ). = ಪವನಜ ೩: ನೀವೀ ಪವನಪುತ್ರನನುವರದೊಳೆಂತಕಟ ಜಯಿಸುವಿರಿ (ಕುವ್ಯಾಉ. ೩-೧೩೨). [ಪವನ+ಪುತ್ರ]

**ಪವನಭಕ್ಷಣ** (ನಾ). ಗಾಳಿಯನ್ನು ಆಹಾರವಾಗಿ ಉಳ್ಳದು; ಹಾವು; ಸರ್ಪ: ಕಚ್ಚುವ ಮಹಾಪ್ಪಫಣೀಶ್ವರಾಂಶದ ಪವನಭಕ್ಷಣರಾಜಿ (ಬಸವಪು. ೪೬-೩೦). [ಪವನ+ಭಕ್ಷಣ]

**ಪವನಯೋಗ** (ನಾ). [ಯೋಗ] ಉಸಿರನ್ನು ತಡೆಹಿಡಿಯುವುದು; ಶ್ವಾಸಬಂಧನ: ರುದ್ರ ಲೆಕ್ಕವ ಮಣಿದು ಜಪವ ನೆಣಿಸುತ್ತೈದಾನೆ ಈಶ್ವರ ಪವನಯೋಗದಲ್ಲಿ ಮಗ್ನನಾದ (ಅನಚಂ. ೧೧೪-೫೧೪). [ಪವನ+ಯೋಗ]

**ಪವನಯೋಗಿ** (ನಾ). ಪವನಯೋಗವನ್ನು ಮಾಡುವವನು,— ಸಾಧಿಸುವವನು: ಪವನಯೋಗಿಗಳ ಪ್ರಪಂಚಿಗಳೆಂದೆಂಬೆ ಲಯಯೋಗಿಗಳ ನಾಯಿಗಿಂತ ಕಡೆ ಎಂಬೆ (ಸಿದ್ಧೇವ. ೧೧೫-೩೫೪). [ಪವನ+ಯೋಗಿ]

**ಪವನವಾರ್ತೆ** (ನಾ). ಗಾಳಿಸುದ್ದಿ; ವದಂತಿ: ಬಪ್ಪೊಸಗೆಯ ಪವನವಾರ್ತೆಯು ಸುಳಿಯಲಾಗಲ್ಲಿಗಲ್ಲಿಗಂ (ಪರಶು. ೩೩-೧). [ಪವನ+ವಾರ್ತೆ]

**ಪವನವೇಗ** (ನಾ). ೧. ವಾಯುವೇಗ: ನಡೆದು ಪರಮಂಡಲದ ರಾಯರ ಜಡಿದು ಕಪ್ಪವ ತಪ್ಪ ಶಿಪ್ಪರ ಗಡಣವೆಸೆದುದು ಪವನವೇಗದ ರಾಯಭಾರಿಗಳು (ಕುವ್ಯಾಉ. ೮-೪೩). ೨. ವಾಯುವೇಗವನ್ನು ಹೊಂದಿದ ವ್ಯಕ್ತಿ: ಏಂ ಬೆಸಗಲಿಗಳ್ ಬರ್ಪರೊ ಮಾನಸವೇಗರ್ ಪವನವೇಗರಿರುಳುಂ ಪಗಲುಂ (ಅಜಿಪು. ೫-೭೬). [ಪವನ+ವೇಗ]

**ಪವನಸಖ** (ನಾ). ವಾಯುವಿನ ಮಿತ್ರ; ಅಗ್ನಿ: ಪವನಸಖ ನಿದಿರೊಳೊದವಿದ ನವನೀತಂ ಕರಗುವಂತೆ (ನನ್ನಚಾ. ೩-೨೨). [ಪವನ+ಸಖ]

**ಪವನಸಾಧಕ** (ನಾ). = ಪವನಯೋಗಿ: ಪವನಸಾಧಕರೆಲ್ಲರು ಕಳವಳಿಸಿ ಹೋದರು (ಚನ್ನಪ.ಕ. ೧೧೦-೨೪೮). [ಪವನ+ಸಾಧಕ]

**ಪವನಸುತ** (ನಾ). ೧. = ಪವನಜ ೧: ಪವನಸುತಸೇನೆ ನಡೆದುದು ಪವನಪಥಂ ನೆಱೆಯದೆಂಬಿನಂ (ಪಂರಾಮಾ. ೧೦-೩೩). ೨. = ಪವನಜ ೨: ಪವನಸುತಂಗೆ ಪಾಸಟಿಗಳೊರ್ವರುಮಿಲ್ಲ (ಪಂಪಭಾ. ೧೨-೧೨೧); ಪವನಸುತಂ ಗದೆಗೊಳೆ ಗಾಂಡಿವಿ ಬಿಲ್ಗೊಳೆ ಕೆಯ್ದುಗೊಳ್ವ ಮಾರ್ಕೊಳ್ವದಟರ್ ಭುವನದೊಳಿಲ್ಲ (ಗದಾಯು. ೩-೧೬); ಬಂದನೊಬ್ಬನು ಪವನಸುತನ ಪುಳಿಂದನು . . . ಜೀಯ ಚಿತ್ತವಿಸೆಂದು ಬಿನ್ನಹ ಮಾಡಿದನು ಕಲಿಭೀಮಸೇನಂಗೆ (ಕುವ್ಯಾಅ. ೧೩-೧೫). [ಪವನ+ಸುತ]

**ಪವನಹತಿ** (ನಾ). ಗಾಳಿಯ ಹೊಡೆತ: ಪವನಜನ ಕೈಸನ್ನೆಗಳ ಘನಪವನಹತಿಯಲಿ ಲಹರಿ ಮಸಗಿತು ಬಹಳ ಬಲಜಲಧಿ (ಕುವ್ಯಾಉ. ೧೧-೨೦). [ಪವನ+ಹತಿ]

**ಪವನಹಸ್ತ** (ನಾ). ಗಾಳಿಯನ್ನು ಬೀಸುವ ಕೈ.

**ಪವನಹಸ್ತವ ಮಾಡು** = ಕೈಯಿಂದ ಗಾಳಿ ಬೀಸು : ಪನ್ನೀರಿನಲಿ ಮೊಗದೊಳದು ಪವನಹಸ್ತವ ಮಾಡಿ ವಯ್ಯಾರಿ ಕಣ್ದೆರೆದು ನೋಡೆ ಮಾತಾಡೆಂದು ಅಸುರಾರಿ ಗಲ್ಲವಿಡಿದು . . . ಮನ್ನಿಸಿದ (ಶ್ರೀಕೃಪಾ. ೩೯). [ಪವನ+ಹಸ್ತ]

**ಪವನಾಧ್ವ** (ನಾ). ಗಗನ ; ಆಕಾಶ : ಹಂಯಿಲ್ಲದ ಪವನಾಧ್ವಂ ಹರಿ ನೀನಿಲ್ಲದ ಗೋಕುಲಮಫಲಂ (ಜಗವಿ. ೩-೯೫) ; ಪವನಾಧ್ವದೊಳ್ ಸುಟುವ ಭಾನು ಕೃಶಾನುವಿನಾಶೆಯಿಂ ಪಗಲ್ ನಡೆಯದೊಡೆಂತು ನಿಸ್ತರಿಪರೆಂಬನಿತಾದುದು ಮಾಘಡಂಬರಂ (ಪುಷ್ಪಪು. ೬-೫೦). [ಪವನ+ಅಧ್ವ]

**ಪವನಾಶ** (ನಾ). = ಪವನಾಶನ ೩ : 'ಪವನಾಶನನಾಶ' ಪರಾ [ಸಂ.]

**ಪವನಾಶನ** (ನಾ). ೧. ಗಾಳಿಯೇ ಆಹಾರವಾಗಿರುವಿಕೆ : ಆವರಿಸಿರ್ದ ಕಲ್ಪತರುಕಾನನದೊಳ್ ಪವನಾಶನಂ . . . ದೇವವಧೂಸನ್ನಿಧಾನದೊಳೆ ಸಂಯಮಮೊಪ್ಪೆ . . . ತಪಮಿರ್ದಪರ್ (ಶಾಕುಂತ. ೧೦೩-೧೬೫). ೨. ಗಾಳಿಯನ್ನು ಆಹಾರವಾಗಿ ಸೇವಿಸುವಂಥದು : ಹರನ ಕೊರಳಿಂಗಾಭರಣವಾದುರಗ ಪವನಾಶನವೆನಿಸುವಂತೆ (ಕುಪ್ವಾಉ. ೩-೧೨೭). ೩. ಹಾವು; ಸರ್ಪ: "ವಿಷಧರಃ, ದಂದಶೂಕಃ, ಪವನಾಶನಃ . . . ಭುಜಂಗಮಃ—ಈ ೨೫ ಹಾವಿನ ಪೆಸರ್" (ಹಲಾಯು. ೧೦೫-೧೮). [ಪವನ+ಅಶನ]

**ಪವನಾಶನಪತಿ** (ನಾ). ಸರ್ಪಗಳ ಒಡೆಯ ; ಆದಿಶೇಷ : ಅವರ ಪ್ರತಾಪದ ವಿವರವನುಸುರ್ವೊಡೆ ಭುವನವ ನೆಜೆ ತಳೆದೆಸೆವ ಪವನಾಶನಪತಿಗಲ್ಲದುಳಿದ ಕವಿಸಿವಹಕ್ಕೆ ಗೋಚರವಹುದೆ (ತ್ರಿಪುಸಾಂ. ೫-೫೫). [ಪವನಾಶನ+ಪತಿ$_2$]

**ಪವನಾಶನನಾಶ** (ನಾ). ೧. ಹಾವನ್ನು ಕೊಲ್ಲುವಂಥದು ; ಗರುಡ: "ವಿಹಂಗರಾಜಃ . . . ಪವನಾಶನನಾಶಃ . . . ಕಶ್ಯಪನಂದನಃ (ಚ) —ಈ ೧೦ ಗರುಡನ ಪೆಸರ್" (ಹಲಾಯು. ೬-೩೧). ೨. ನವಿಲು. [ಸಂ.]

**ಪವನಾಶಿ** (ನಾ). ೧. ಗಾಳಿಯನ್ನೇ ಆಹಾರವಾಗಿ ಉಳ್ಳುದು ; ಹಾವು: ಪವನಾಶಿಗಳಾದವರಂ ಪವನಾಶಿಗಳಂ ಬಳಿಕ್ಕೆ ಕಂಡಂತಂಜುತ್ತವರಂ ಮುಟ್ಟದೆ (ಕಂದಶ. ೧೦೨). ೨. ಗಾಳಿಯನ್ನೇ ಆಹಾರವಾಗಿ ಉಳ್ಳ ಯೋಗಿ : ಮೇಲಿನ ಪ್ರಯೋಗವನ್ನು ನೋಡಿ. [ಸಂ. ಪವನಾಶಿನ್]

**ಪವನಾಹಾರ** (ನಾ). = ಪವನಾಶನ ೩ : ನೀನಾರ್ತು ಪಸಿದು ಮಜ್ಜೀವಾನಿಲನಂ ಪೀರ್ವುದುಚಿತವಲ್ಲದೆ ತನುವಂ ಮಾನವನೆಯ್ದುಪುದುಚಿತವೆ ಕೀನಾಶಪ್ರತಿಭೆಯೇಕೆ ಪವನಾಹಾರಾ (ನಳಚಂ. ೬೦೦). [ಪವನ+ಆಹಾರ]

**ಪವನು,** ಪೌನು (ನಾ). ಇಂಗ್ಲೆಂಡಿನ ಇಪ್ಪತ್ತು ಷಿಲ್ಲಿಂಗ್ ಬೆಲೆ ಬಾಳುವ ಒಂದು ಬಂಗಾರದ ನಾಣ್ಯ ; ಸವರನ್ನು : ಮಗುವಿಗೆ ನಾಲ್ಕು ಪವನಿನ ಒಂದು ಸರ ಮಾಡಿಸುವ (ಸನ್ಯಾಸಿ. ೨) ; ಹತ್ತಿಪ್ಪತ್ತು ಪವನು ಚಿನ್ನವಾದರೂ ಮೈಮೇಲೆ ಹಾಕವೆ ಇರಲಿಕ್ಕಾಗುತ್ತದೆಯೇ ? (ಸ್ವಪ್ನಹೊ. ೧೧೭) ; ನನ್ನ ಪವನುಗಳನ್ನು ನೀರಿಗೆ ಹಾಕಿ ನನ್ನನ್ನೇಕೆ ಉಳಿಸುತ್ತೀ (ಪರಾವ. ೧೫). **ಪೌನು :** ಸಾಮಾನ್ಯ ವಿದ್ವಾಂಸನೊಬ್ಬನು ಒಂದು ಘಂಟೆಯ ಕಾಲದ ಕಚೇರಿಗೆ ನೂರುಗಟ್ಲೆ ಪೌನುಗಳನ್ನು ಸಂಪಾದಿಸಬಲ್ಲನು (ಗಾನಕ. ೪).

[←ತುಳು. ಪವನ್./ಮರಾ. ಪವನ್./ಇಂ. Pound]

**ಪವಮಾನ** (ನಾ). ೧. ಗಾಳಿ ; ವಾಯು : "ಪವನಃ . . . ಪವಮಾನಃ . . . ಮಹಾಬಲಃ—ಈ ೨೦ ಗಾಳಿಯ ಪೆಸರ್" (ಹಲಾಯು. ೧೪-೭೫) ; ಪವಮಾನಂ ತಣಿದತ್ತು (ಮಲ್ಲಿಪು. ೯-೫೪) ; ಮುಂ ಬಿಸಜೋದ್ಭವಂ ಸಮೆದನಂಬುದಮಂ ಪವಮಾನಧೂಮಕೇತೂಂಬುಗಳಿಂದಮೆಂಬ ನುಡಿ ಸತ್ಯಂ (ಚಂದ್ರಪು. ೪-೩೩) ; ಕಡುಪರಿಮಳದ ಪಸರದ ಸೊಗಸು ತೀವಿತು ವಿಮಳಪದ್ಮಾಕರದ ಪವಮಾನ (ಕುಪ್ವಾಆ. ೨೩-೧೩). ೨. ಪವಿತ್ರಗೊಳಿಸುವಂಥದು. ೧, ೨ : ಪವಮಾನನಾಗಿಯುಂ ಕುರಂಗವಾಹನನಲ್ತು . . . ಎಂದು ವಕ್ರೋಕ್ತಿಯಿಂ ತೋಱುತ್ತುಂ (ಜಗವಿ. ೮-೧೦ ವ). ೩. ಗಾಳಿಯ ಅಧಿದೇವತೆ ; ವಾಯುದೇವತೆ : "ಪವಮಾನಂ ಶ್ವಸನಂ ಗಂಧವಹಂ . . . ಪೃಷದಶ್ವಂ" (ವಸ್ತುಕೋ. ೮-೪೪) ; ಪವಮಾನಪ್ರಿಯನಂದನಂ . . . ಮಹಾಧನ್ವಿ ಕಾದುವರಾರಾತನಂ (ಪಂರಾಮಾ. ೧೩-೧೨೧). ೪. [ಛಂದ] ಎರಡು ಲಘು ಮತ್ತು ಒಂದು ಗುರುವಿರುವ ಗಣ ; ಸಗಣ (UU—) : ಪವಮಾನಚತುಷ್ಕಯುತಂ ಯತಿಯುಂ ದಿವಸಾಧಿಪರೊಳ್ಳಿಲೆ . . . ತೋಟಕಂ (ಛಂದೋಂಬು. ೨-೧೨೬). [ಸಂ.]

**ಪವಮಾನಜ** (ನಾ). = ಪವನಜ ೨ : ತ್ರಿಜಗ ಮಱುಗ ಭಾಪೆನಲು ಪವಮಾನಜನು ತಿರುಗಿಟ್ಟಣಿಸೆ (ಕುಪ್ವಾಭೀ. ೫-೭). [ಸಂ.]

**ಪವಮಾನತನೂಜ** (ನಾ). = ಪವನಜ ೨ : ಪವಮಾನತನೂಜನದೊಂದು ಬಲ್ಪು . . . ತಂನೊಳೊಪ್ಪುವುದೆನೆ ಪಾಣ್ಡವಪ್ರತಿಮನಲ್ಲನೆ ಮಣ್ಡಲಸಾಮಿ ಲೋಕದೊಳ್ (ಎಕ. IV, ನಾಗಮಂ. ೪೭-೩೩ ; 1199). [ಪವಮಾನ+ತನೂಜ]

**ಪವಮಾನನಂದನ** (ನಾ). = ಪವನಜ ೨ : ಬಿಲುದುಡುಕಿ ಪವಮಾನನಂದನನಳವಿಗೊಟ್ಟನು . . . ಘಾಯವಡೆದನು ಘೋರಸಮರದಲಿ (ಕುಪ್ವಾದ್ರೋ. ೪-೩೧). [ಪವಮಾನ+ನಂದನ]

**ಪವಮಾನಸುತ** (ನಾ). ೧. = ಪವನಜ ೧ : ಪವಮಾನಸುತಂ ಸಂಭಿನ್ನವಿದ್ಯೆಯಿಂ . . . ವಿಯಚ್ಚರಪತಿಯ ಕೆಲಕೆ ಪೋಗಲ್ಪುಗೆದಂ (ಪಂರಾಮಾ. ೧೧-೭೩). ೨. = ಪವನಜ ೨ : ತುರಗರಥಸಾರಥಿಗಳನು ಹೊಯ್ದೊರಸಿದನು ಪವಮಾನಸುತನು (ಕುಪ್ವಾಆ. ೧೫-೫೦). [ಪವಮಾನ+ಸುತ]

**ಪವಮಾನಹೋಮ** (ನಾ). ಪವಮಾನವೆಂಬ ಮಂತ್ರಗಳನ್ನು ಹೇಳಿ ಅಗ್ನಿಗೆ ಮಾಡುವ ಹೋಮ ; ಋಗ್ವೇದದ ಒಂಬತ್ತನೆಯ ಮಂಡಲದಲ್ಲಿ ಆರುನೂರ ಹತ್ತು ಪವಮಾನ ಮಂತ್ರಗಳಿವೆ. ಇವುಗಳನ್ನು ಸ್ಮಾರ್ತಕರ್ಮದಲ್ಲಿ ಪಾಪಪರಿಹಾರಕ್ಕಾಗಿ ಜಪಿಸುತ್ತಾರೆ ಮತ್ತು ಈ ಮಂತ್ರಗಳನ್ನು ಘೋಷಿಸಿ ಅಗ್ನಿಗೆ ಹೋಮ ಮಾಡುತ್ತಾರೆ. 'ಪೂಯತೇ ಅಸೌ ಪವಮಾನಃ' ಎಂದು ಅದರ ವ್ಯುತ್ಪತ್ತಿ : ಅವರ ಎಂಬತ್ತನೆಯ ವರ್ಷದ ಹುಟ್ಟುಹಬ್ಬದಂದು ಪವಮಾನಹೋಮವನ್ನು ಮಾಡಿದರು (ರೂಢಿ). [ಪವಮಾನ+ಹೋಮ]

**ಪವರ** (ನಾ). ಕುಡಿಯುವುದು ; ಪಾನ : "ಪವರಮೆನಲ್ ಪಾನಂ" (ಭಾರನಿ. ೨೩). [?]

**ಪವರಣೆ** 'ಪಾವರಣೆ' ನೋ.

**ಪವರ್ಗ** (ನಾ). -[ವ್ಯಾಕ] ಪಕಾರದಿಂದ ಮೊದಲಾಗುವ 'ಪ ಫ ಬ ಭ ಮ' ಎಂಬ ಐದು ಅಕ್ಷರಗಳ ಗುಂಪು : ಪರಿಜನಫಳವತ್ ಕ್ಷೇತ್ರೋತ್ಕರಬಂಧುಸಮೂಹಭವನಮಹಿಳಾವಳಿಯೆಂಬುರುತರ ಪವರ್ಗಚಿಂತಾಪರಿಗತನಪವರ್ಗಚಿಂತೆಯಂ ಮಾಡುಗುಮೇ (ಚಂದ್ರಪು. ೧೩-೮೨) ; ಈ ವರ್ಗಗಳಿಗೆ ಕ್ರಮವಾಗಿ ಕವರ್ಗ . . . ಪವರ್ಗ ಎಂದು . . . ಹೆಸರನ್ನು ಇಟ್ಟಿದ್ದಾರೆ (ಮಧ್ಯಮ. ೧೩). [ಸಂ.]

**ಪವಲ್ಯ** 'ಪೌಳಿ$_1$' ನೋ.

**ಪವಳ**, ಹವಳ (ನಾ). ೧. ಒಡವೆಗಳಿಗೂ ಅಲಂಕಾರವಸ್ತುಗಳಿಗೂ ಉಪಯೋಗಿಸುವ ಒಂದು ಬಗೆಯ ಕೆಂಪುಬಣ್ಣದ ಮಣಿ ; ನವರತ್ನಗಳಲ್ಲಿ ಒಂದು ; ವಿದ್ರುಮ : "ಪ್ರವಾಳಮೆ ಪವಳಂ" (ಚತುನಿ. ೭೩) ; ನೀಲದ ತಲೆನವಿರುಮಂ ಪವಳದ ಬಾಯ್ದೆಱೆಯುಮಂ ಮುತ್ತಿನ ಪಲ್ಲುಮಂ . . . ಕಾಮದೇವನುದ್ದಲರಂಬಿನ ಶಕ್ತಿಗಳುಮನೊಂದು ಮಾಡಿ . . . ಪೆಣ್ಮಾಡಿದಂ (ಪಂಪಭಾ. ೪–೭೫ ವ) ; ಪವಳದ ಚಪ್ಪರವನಿಕ್ಕಿ ಮುತ್ತು ಮಾಣಿಕದ ಮೇಲುಕಟ್ಟು ಕಟ್ಟಿ (ಮಹಾದೇ. ಬ. ೩೫–೭೭) ; ಪವಳದ ಬಳ್ಳಿ ಪರ್ವಿದುದೊ (ಪುಷ್ಪಪು. ೧೧–೧೩) ; ಪವಳದಧರದ ಲಲನೆಯರು ಗಾಂಧಾರಿದೇವಿಯ ಬಳಸಿನಲಿ ನಡೆತಂದರು (ಸಂಭಪ. ೨೦–೧೯). ೨. ಕೆಂಪುಬಣ್ಣದ ಕುದುರೆ: "ತುರಗವರ್ಣಂ ಬಿಳಿಯದಾಗೆ ಕರ್ಕನೆನಿಕ್ಕು . . . ರಕ್ತವರ್ಣ ತಾನಿರೆ ಪವಳನಕ್ಕುಂ" (ಮಂಗರಾ. ೮೧–೧೪). **ಹವಳ**: ೧. "ವಿದ್ರುಮಂ ಹವಳಮಕ್ಕು" (ಮಂಗರಾ. ೪೩–೪೧); ಹೂವಿನ ಪಡಿಗೆ ಜಾತಿಹವಳಕ್ಕೆ ತೊಲೆಗೆ ಹಾ ೧ ಕರಿದಕ್ಕೆ ವೀಸ ೧ ಯಿದ ಆಚಂದ್ರಾರ್ಕತಾರಂಬರಂ ಸಲಿಸುವರು (ಎಕ. II, ೨೪೧–೨; ಸು. 1175); ತೆಗೆಸಿದನು ಗಜದಂತಮಯ ಪೆಟ್ಟಿಗೆಗಳನು . . . ಹವಳದ ಮಂಚವನು (ಕುವ್ಯಾಸ. ೫–೪೫) ; ಕೆಳಗಣ ನಕ್ಷತ್ರ ಹವಳದಂತೆ ಕೆಂಪುಬಣ್ಣದಿಂದ ಹೊಳೆಯುತ್ತದೆ (ನಕ್ಷತ್ರ. ೪).

**ಪವಳಬಾಯ ಪಕ್ಕಿ** = ಹವಳದಂತೆ ಕೆಂಪಗಿರುವ ಮೂತಿಯ ಪಕ್ಷಿ ; ಗಿಣಿ : ಅಕ್ಕ ನೀನೇಳೇಳು . . . ಚಕ್ಕನೆ ಕಣ್ದೆಱೆಯೆಂಬ ಪವಳಬಾ[ಪಾಠಾಂ.ವಾ]ಯ ಪಕ್ಕಿ ನುಡಿಯಲೆಳ್ದಳವಳು(ತ್ರೀಪಾಲ. ೨–೨೯).

[<ಪ್ರಾ. ಪವಾಲ./ಸಂ. ಪ್ರವಾಲ]

**ಪವಳದುಟಿ**, ಹವಳದುಟಿ (ನಾ). ಹವಳದಂತೆ ಕೆಂಪಗಿರುವ ತುಟಿ : ಪವಳದುಟಿಯ ಪೊಸಪಜಿಮೆಗುರುಳ್ಗಳ ಕುವಲಯನೇತ್ರದ . . . ಯುವತೀರೂಪದ ಚಿತ್ರಮನಾ ಸುಕುಮಾರಂ ನೋಡಿದನು (ಜಯಕಾ. ೩–೧೦) ; ಪವಳದುಟಿರಾಗಮಂ ಮಿಗುವ ನಿರ್ಮಳರದಚ್ಛವಿಗಳೊಪ್ಪಿರೆ ಮೆಱೆದರು . . . ಬಾಲಕಿಯರು (ಚೆಬಪು. ೭–೧೩). **ಹವಳದುಟಿ** : ಪಾರಿಜಾತಗಳು ಮುದ್ದುಗರೆಯುವುವು ಹವಳದುಟಿಗಳಿಂದ (ಹಾಡುಪಾ. ೨೭–೨). [ಪವಳ + ತುಟಿ]

**ಪವಳದೊಂಡೆ**, ಹವಳತೊಂಡೆ, ಹವಳದೊಂಡೆ (ನಾ). ಒಂದು ಬಗೆಯ ತೊಂಡೆ ; ಕೆಂಪುತೊಂಡೆ : ಸಕ್ಷೀರಕಂಚುಕಂ ಸುಪರೀಕ್ಷಿತದಾ ಪವಳದೊಂಡೆಯಿಂತಿವಱೊಳ್ ಸಂರಕ್ಷಿತನ್ನ ಪತರುಚೂರ್ಣಮನೀಕ್ಷಿಸಿ ಮತ್ತೀ ಪ್ರಯೋಗಮಂ ಮಾಟ್ಕೆ ಬುಧಂ (ಖಮದ. ೫–೯೧). **ಹವಳತೊಂಡೆ**: ಕಾಚತೊಂಡೆಯ ಬೇರು, ಹವಳತೊಂಡೆಯ ಬೇರು . . . ಸಮಾನಂಗೊಂಡು ಚೂರ್ಣವಂ ಮಾಡಿ . . . ನಸ್ಯ ಮಾಡಲು ಹದಿನಾಲ್ಕು ಬಗೆ ಮೊಲನಾಗರವ್ಯಾಧಿ ಗುಣವಹುದು (ವಿವೈವಿ. ೯೯). **ಹವಳದೊಂಡೆ**: "ಗಾಂಗೇರಿಕಾ—ತುರುವೆ, ಹವಳದೊಂಡೆ" (ಓಷಧಿ. ೪೮). [ಪವಳ + ತೊಂಡೆ$_1$]

**ಪವಳವಣಿ** (ನಾ). ಹವಳದ ಮಣಿ: ಪವಳವಣಿಯ ಮೇಲ್ಕಟ್ಟಿನ ಸೊಬಗಿಂದ ಭುವನೇಶ್ವರಿಯೊಪ್ಪಿದುದು (ಕಂನಪಿ. ೭–೩೫).

[ಪವಳ + ಮಣಿ$_3$]

**ಪವಳವಣ್ಣ** (ನಾ). ಹವಳದ ಬಣ್ಣ ; ಕೆಂಪುವರ್ಣ : ನವರತ್ನಗಳ ಪೆರ್ಚಿಸಿದ ಪವಳವಣ್ಣದ ಲೋವೆಗಳಿಂದೊಪ್ಪಿತು ಭುವನೇಶನೋಲಗಶಾಲೆ (ಕಂನಪಿ. ೨೦–೨೭). [ಪವಳ+ಬಣ್ಣ]

**ಪವಳವಲಗೆ** (ನಾ). ಹವಳದಿಂದ ಮಾಡಿದ ಹಲಗೆ : ಪಚ್ಚೆಗಳ ಕಂಬಂಗಳಿಂ ಪವಳವಲಗೆಗಳ ಮುಚ್ಚಳ್ಗಳಿಂ ನೀಲಮಣಿಯ ಲೋವೆಗಳಿಂ . . . ಕೇರಿಕೇರಿಯೊಳ್ ಪೆಚ್ಚಿದುವು ಗೃಹಗೃಹದ್ವಾರಂಗಳೊಳ್ ಮಹಾಮೇರುವೆಗಳೇನೆಂಬೆನು (ಚೆಬಪು. ೫–೩). [ಪವಳ + ಪಲಗೆ]

**ಪವಳವಳ್ಳಿ** (ನಾ). ಹವಳದ ಬಳ್ಳಿ : ಚಲಿಪ ಕೇತನತತಿಯ ಸುಳಿಯ ಸಬಳದ ಸಾಲ ತೊಳತೊಳಪ ಪವಳವಳ್ಳಿಗಳ . . . ಸೇನಾಸಮುದ್ರವನಾಗ ಪುರಜನಂ ನಿಟ್ಟಿಸಿದುದು (ಚೆಬಪು. ೪೨–೧೪). [ಪವಳ + ಬಳ್ಳಿ]

**ಪವಳವಾಯ್** (ನಾ). ಹವಳದಂತೆ ಕೆಂಪಾದ ಬಾಯಿ : ಬಂದರ್ ಪವಳವಾಯ ತಳಿರ್ವಾಯ ತೊಂಡೆವಾಯೊಳ್ವೆಂಡಿರ್ (ಜಗವಿ. ೪–೧೨೨).

[ಪವಳ + ಬಾಯ್]

**ಪವಳವಾಯ** (ನಾ). ೧. ಹವಳದಂತೆ ಕೆಂಪಾದ ಬಾಯಿಯುಳ್ಳ ವ್ಯಕ್ತಿ. ೨. ಒಂದು ಬಗೆಯ ಮೀನು : ಸಿಸಿಲ್ಪವಳವಾಯಂ ಹೈದಲುಂ ಬಾಳೆ ಹೆಗ್ಗರಿಲುಂ (ತ್ರಿಪುವಿ. ೫೭–೮) ; ಗಱೀಮೀನ್ಸೀಗುಡಿ ಗೆಂಡೆಮೀನ್ಪವಳವಾಯಂ ಬಾಳೆಮೀನ್ಪಾವುಮೀನ್ಮೊಜುಮೀನ್ (ರಾಜಶೇ. ೫–೧೧೫). [ಪವಳವಾಯ್ + -ಅ$_7$]

**ಪವಳವಾಯ್ದೆಱೆ** (ನಾ). = ಪವಳದುಟಿ : ಮಿಸುಗುವ ದಾಳಿಂಬದ ಬಿತ್ತಿನ ನವರಸಮಂ ಪೊಳೆವ ಪವಳವಾಯ್ದೆಱೆಗೆಱೆದಸುಗೆಯ ತಳಿರೊಳ್ಮಲಗಿಸಿ (ಜಯಕಾ. ೨–೨೯). [ಪವಳ + ಬಾಯ್ದೆಱೆ$_2$]

**ಪವಳಿ** 'ಪೌಳಿ$_1$' ನೋ.

**ಪವಳಿಸು** 'ಪವಡಿಸು' ನೋ.

**ಪವಾಡ$_1$** (ನಾ). ಅಮಾನುಷಕಾರ್ಯದಿಂದಾದ ಆಶ್ಚರ್ಯ ಘಟನೆ ; ಸಾಮಾನ್ಯಮಾನವನಿಂದ ಸಾಧ್ಯವಲ್ಲದ ಕಾರ್ಯ ; ಅಘಟಿತಘಟನೆ ; ಅದ್ಭುತ : ಎಂಬತ್ತೆಂಟು ಪವಾಡವ ಮೆಱೆದು ಹಗರಣದ ಚೋಹದಂತಾಯಿತ್ತೆನ್ನ ಭಕ್ತಿ (ಬಸವ. ೮೯೧) ; ರೂಢಿ ಮಚ್ಚಲು ಹಲವು ಪರಿಯ ಪವಾಡಗಳ ಮೆಱೆವುತ (ಪ್ರಭುಲಿ. ೯–೨೭) ; ತೇರಸರ್ ತೆಱದೊಳೆ ಪವಾಡಂಗಳಂ ಮಾಡಿ ಕೈಲಾಸಮಂ ಪೊಕ್ಕರು (ಚೆಬಪು. ೫೫–೪೭) ; ಜ್ಞಾನಿಯೆಂದು ಕರೆಯಲ್ಪಟ್ಟ ಆದರ್ಶಮಾನವ ಪವಾಡಗಳನ್ನು ಪ್ರದರ್ಶಿಸುವುದಿಲ್ಲ (ತತ್ವಪ್ರಾ. ೬೨೫).

[?./ತಮಿ. ಪಾವಾಟಮ್ ; ತೆಲು. ಪವಾಡ, ಪಾವಾಡ ; ☞ ತಮಿಳು, ತೆಲುಗು ಎರಡರಲ್ಲೂ 'ಪ್ರತಿಜ್ಞೆಯನ್ನು ಪೂರೈಸುವುದಕ್ಕಾಗಿ ದೇವತೆಯ ಎದುರಿನಲ್ಲಿ ಒಬ್ಬ ವ್ಯಕ್ತಿಯು ತನ್ನ ನಾಲಗೆಯನ್ನು ಕತ್ತರಿಸಿಕೊಳ್ಳುವಿಕೆ' ಎಂಬರ್ಥವಿದೆ]

**ಪವಾಡ$_2$** 'ಪಾವುಡ$_1$' ನೋ.

**ಪವಾಡಪುರುಷ** (ನಾ). ಅತಿಮಾನುಷಕಾರ್ಯವನ್ನೆಸಗುವ ವ್ಯಕ್ತಿ : ಆತನುಂ ಮಹಾಬಸವನುಂ ಮಿಸುಗುವ ಪವಾಡಪುರುಷರ್ ಗಡೀಕ್ಷಿಪೆವೆಂದು ಶರಣರೈತರುತಿರ್ದರು (ಚೆಬಪು. ೬–೪೮) ; ಈ ದೇಶದ ಜನರು ಪವಾಡಪುರುಷರಾದ ಮಹಾತ್ಮರನ್ನು ಹಿಂಬಾಲಿಸಿದ್ದರು (ಪಂಜಪಂ. ೭೫). [ಪವಾಡ$_1$ + ಪುರುಷ]

**ಪವಾಡಿ$_1$** (ನಾ). ಹೊಗಳುಭಟ್ಟ ; ಸ್ತುತಿಪಾಠಕ ; ವಂದಿ : ಮತ್ಸ್ಯಕೇಕಯರು . . . ಪವಾಡಿಗಳ ಕಳಕಳದ ಕೈವಾರದಲಿ ಕವಿದರು ದ್ರೋಣನಿದಿರಿನಲಿ (ಕುವ್ಯಾದ್ರೋ. ೧೭–೩೦).

[←ಮರಾ. ಪವಾಡಾ, ಪೋವಾಡಾ = ಹೊಗಳಿಕೆ]

**ಪವಾಡಿ$_2$** (ನಾ). (?) : ಭೂತದಿಂದ್ರಿಯಗಣದೊಡನೆ ನಿಜಪೌರುಷದ ಲೊದಗಿದ ಪವಾಡಿಗಳ ಗುಣವ ಝಾಡಿಸಿದರೆ ಸಮಷ್ಟಿಯ ಹಣಿತದಲಿ ಮುರಿದಿದಿರನಗಲಕೆ ಕುಣಿವ ಚೌಪಟ ಬೊಮ್ಮಗಜವಿದನಱೀವರಾರು (ಕುವ್ಯಾಸ. ೯–೧೫) ; ತಾಯಿಮಳಲುಬ್ಬೇಳಿಸೆ ಜಲನಿಧಿ ಬಾಯ ಬಿಡೆ ಗರ್ಜಿಸುವ ನಿಸ್ಸಾಳಾಯತದ ಸೂಳೊದಗೆ ಪಯಣದ ಪವಾಡಿಯಲಿ

[ಪಾಠಾಂ. ಪಯಣದ ಮೇಲೆ ಪಯಣದಲಿ] (ಕುಪ್ಪ್ಯಾವಿ. ೪-೩೧). [?]

**ಪವಿ** (ನಾ). ೧. ಇಂದ್ರನ ಆಯುಧ ; ವಜ್ರಾಯುಧ : "ಪವಿಃ, ಅಶನಿಃ . . . ಶಂಬಃ—ಈ ೧೨ ಇಂದ್ರನ ವಜ್ರಾಯುಧದ ಪೆಸರ್" (ಹಲಾಯು. ೧೧-೫೬) ; ಪವಿಯಂ ರಕ್ಷಿಸುವುದಱಿಂ ಪವಿತ್ರನಾದನೆ ಸುರೇಂದ್ರಂ (ಅಜಿಪು. ೪-೬೨) ; ಘನ ದರ್ಪೋನ್ನದ್ಧ ಬೌದ್ಧಕ್ಷಿತಿಧರ ಪವಿಯಿಪ್ಪಬನ್ನನೀಬನ್ನನೀ ಬನ್ನನೆ (ಎಕ. II, ೧೪೦-೧೪೫ ; 1145). ೨. ವಜ್ರ ; ಹೀರ : ಒಗೆದಿಂದ್ರಾಶಾದ್ರಿಯೆಂದೆಂಬತುಳಪವಿಮಯ ಸ್ತಂಭದೊಳ್ ಸಂಜೆಯೊಳ್ . . . ಭಗಣಂ ತತ್ಸೀಕರಂಬೊಲ್ಪೆಱೆಯೆ (ರಾಜಶೇ. ೬-೨೮). 'ಪವಿಗಲ್' ಪರಾ. ೩. ಸಿಡಿಲು : ತವೆ ಅಖಂಡಿತಕೀರ್ತಿಯುದ್ದಂಡವಾದಿ ಗಿರಿ ಪವಿಕೋಟ ಪಲ್ಯಾಕ್ಷಿ ದೇಶಿಕೇಂದ್ರಂ ನೋಡೆ ವಿವಿಧವೈಭವದಿನಿರ್ಪಂ (ಆರಾಚ. ೧-೧-೮೬) ; ವಿಧಿಯ ನಿಯತಿಯ ಪವಿಯ ಘಾತಕೆ ಸಿಲುಕಿ . . . ಬೆಂದುರಿದಳಿದನ್ನೆಸಲೆ? (ಶ್ರೀರಾಮಾ. ೧೭೧-೫೧೫). ೪. ಬಂಡಿಯ ಚಕ್ರದ ಪಟ್ಟೆ. [ಸಂ.]

**ಪವಿಗಂಬಿ** (ನಾ). ವಜ್ರದ ಕಂಬಿ: ನಡವೞಿಗಳಿಂದೆ ಪೊಡವಿಯನು ನಗ್ಗಿಪ ಹಸ್ತಿಗಡಣ ಪವಿಗಂಬಿಯೊಡರ್ಚಿದ ಚಕ್ರರಥವಿತತಿ (ನಪವೋ. ೨-೨೬). [ಪವಿ+ಕಂಬಿ$_1$]

**ಪವಿಗಲ್** (ನಾ.) ವಜ್ರದ ಕಲ್ಲು : ತೋರ ಪವಿಗಲ್ಗಳಿಂ ಬೆಳಗುತ ವಿರಾಜಿಸಲು (ನಪವೋ. ೨-೨೬). [ಪವಿ+ಕಲ್$_3$]

**ಪವಿಘಾತ** (ನಾ). ವಜ್ರಾಯುಧದ ಹೊಡೆತ ; ವಜ್ರಾಘಾತ : ಬರುತೆ ಕಂಡನಘಕುಲದ ಪವಿಘಾತಭಯಶಮನೌಷಧಿಯನು (ಜೈಮಿಭಾ. ೬-೧). [ಪವಿ+ಘಾತ$_2$]

**ಪವಿತ್ರ** (ಗು). ೧. ಶುದ್ಧವಾದ ; ನಿರ್ಮಲವಾದ. ೨. ಪುಣ್ಯಕರವಾದ ; ಪಾವನವಾದ : 'ಪವಿತ್ರಗಾತ್ರ' ಪರಾ. (ನಾ). ೩. ಶುದ್ಧಿಗೊಳಿಸುವ ಸಾಧನ ; ಶುದ್ಧಿ ಮಾಡುವ ಸಾಮಗ್ರಿ. ೪. ಶುದ್ಧವಾದುದು ; ನಿರ್ಮಲವಾದುದು : "ಶುಚಿ, ಮೇಧ್ಯಂ, ಪವಿತ್ರಂ, ಪುಣ್ಯಂ, ಪಾವನಂ—ಈ ೫ ಶುದ್ಧಮಪ್ಪ ವಸ್ತು" (ಹಲಾಯು. ೨೨-೧೩೨). ೫. ಪುಣ್ಯಕರವಾದುದು ; ಪಾವನವಾದುದು : ನೀರೊಳ್ ಪಂಚಮಜಲಧಿಯ ನೀರೆ ಪವಿತ್ರಂ (ಶಾಂತಿಪು. ೧೦-೩೮) ; ಸ್ಮರರಿಪು ಪುಟ್ಟೆ ಧಾರಿಣಿಗೆ ಕಾಶ್ಯಪಗೋತ್ರವಿದೇಂ ಪವಿತ್ರಮೋ (ಪುಷ್ಪಪು. ೧೨-೧೫) ; ಸನಾತನವೂ ಪವಿತ್ರವೂ ಎಂದು ನಂಬಲಾಗಿದ್ದ ಹಲವು ಅಂಶಗಳು ಅವರ ಆದರ್ಶವಾಗಿದ್ದವು (ತಕ್ಷದ. ೯). ೬. ದರ್ಭೆ : "ದರ್ಭೆಯಲ್ಲಿಯುಂ ಪವಿತ್ರವೆಂಬುದು" (ಹಲಾಯು. ೧೩೩-೧೬). ೭. ಧಾರ್ಮಿಕ ಆಚರಣೆಯಲ್ಲಿ ಉಂಗುರದ ಬೆರಳಿನಲ್ಲಿ ಧರಿಸುವ ಒಂದು ವಿಶಿಷ್ಟ ರೀತಿಯ ಗಂಟುಹಾಕಿರುವ ದರ್ಭೆಯ ಉಂಗುರ : ಮೇಲುದಂ ಮಱಿದು ಮೆಯ್ಯಱಿದೊರ್ವ ಕೊಜಲ್ದು ಮುಂಬಾಲೆಯುಂ ತಿರಿಪಿ ನೂಂಕಿ ಪವಿತ್ರಮನಿಟ್ಟು ಪಚ್ಚೋಲೆ ವಚ್ಚದೊಳೊಡಂಬಡೆ (ಕಾವ್ಯಾಪ. ೨೨೧) ; ಧನದನೊಲ್ ಶಿವನ ಸಖರು ವೃಷಭನೊಲು ಪುಣ್ಯಚರಿತರು ಪವಿತ್ರದೊಲ್ ಉತ್ತಮಾಂಗರು (ಷತಿಲ. ೪-೧೮); ನೀನೇ ಬಾ. ಪವಿತ್ರ ಹಾಕಿಕೊಂಡು ಮುಂದಿನ ಕೆಲಸ ಮಾಡು (ಪಂಶಪ್ಪ. ೪೪೬). ೮. ಉಂಗುರದ ಬೆರಳು ; ಅನಾಮಿಕೆ : "ಸಂಗಣಿಸಿಯಂಗುಷ್ಠಮೆನಲು ತರ್ಜನಿಯು ಮಧ್ಯಾಂಗುಲಿ ಪವಿತ್ರಂ ಕನಿಷ್ಠೆಯೆಂದೈದು ಬೆರಲಿಂಗೆ ಪೆಸರಕ್ಕು" (ಮಂಗರಾ. ೯೬-೧೦). ೯. ಕಿವಿಯ ಒಂದು ಆಭರಣ: "ಪವಿತ್ರಂ=ಒಂದು ಕಿವಿದುಡುಗೆ" (ಶಮದ. ಪರಿ. ೨); "ಪವಿತ್ರವೆನೆ ಕಿವಿದುಡಿಗೆ" (ಕಬ್ಬಿಕೈ. ೮೪). ೧೦. ಯಜ್ಞೋಪವೀತ; ಜನಿವಾರ. ೧೧. ಪರಿಶುದ್ಧನಾದವನು : "ಪವಿತ್ರಃ, ಪ್ರಯತಃ, ಪೂತಃ-ಪವಿತ್ರನಾದವನ ಹೆಸರುಗಳು, ಪರಿಶುದ್ಧನು" (ಸಿದ್ಧಾಂತಿ. ೨೨೯). ೧೨. ಒಂದು ವಿಶಿಷ್ಟವಾದ ಉತ್ಸವ : ಸಾಗರೇಶ್ವರದೇವಂಗೆ ಪವಿತ್ರಕ್ಕೆ ಒಂದು ಹಾಗ (ಕಇಅ. ೩೫-೪೮-೮; 1148). 'ಚೈತ್ರಪವಿತ್ರ' ಪರಾ. ೧೩. ಒಂದು ಬಗೆಯ ರೋಗ : ಸ್ಥಿರೇಷು ಚ=ಪವಿತ್ರ ಮೊದಲಾದ ಬಲಿತ ರೋಗಂಗಳೊಳಂ (ವಿದ್ಯೆವಿ. ೧೬೩).

**ಪವಿತ್ರದ ಉಂಗುರ**=ದರ್ಭೆಯುಂಗುರದಾಕಾರದಲ್ಲಿ ಮಾಡಿದ ಚಿನ್ನ ಅಥವಾ ಬೆಳ್ಳಿಯ ಉಂಗುರ : ಅವರ ಕೈಗಳಲ್ಲಿ ಪವಿತ್ರದ ಉಂಗುರಗಳು ಹೊಳೆಯುತ್ತಿದ್ದವು (ಕಳಹು. ೧). **ಪವಿತ್ರದ ಬೆರಳು**= ದರ್ಭೆಯ ಉಂಗುರವನ್ನು ತೊಡುವ ಬೆರಳು ; ಅನಾಮಿಕೆ : ರೋಗಾದ್ಯುಪದ್ರವಶಾಂತ್ಯರ್ಥಮಾಗಿ ಮಾಡಬೇಕಾದರೆ ಪವಿತ್ರದ ಬೆರಳಿಂದ ಕಳೆಯಬೇಕು (ಸೌಗಂಧಿ. ೩೯೧-೧೬). [ಸಂ.]

**ಪವಿತ್ರಕ** (ನಾ). (ಮೀನಿನ) ಬಲೆಯ ದಾರ : "ಶಣಸೂತ್ರಂ, ಪವಿತ್ರಕಂ—೨ ಬಲೆಯ ಹಗ್ಗ, ಬಲೆಯ ಹುರಿ" (ಸಿದ್ಧಾಂತಿ. ೮೧). [ಸಂ.]

**ಪವಿತ್ರಕಾಯ** (ನಾ).=ಪವಿತ್ರಗಾತ್ರ : ಆ ಪ್ರಸಾದವ ಕೊಂಬ ಪ್ರಸಾದಿ ಪವಿತ್ರಕಾಯನು ನೋಡಾ (ಸಿದ್ಧೇವ. ೭೯-೨೩೪). [ಪವಿತ್ರ+ಕಾಯ]

**ಪವಿತ್ರಗಾತ್ರ** (ನಾ). ಪಾವನವಾದ ದೇಹವುಳ್ಳವನು : ಬ್ರಹ್ಮಸೂತ್ರಾಭಿಧಾನ ಯಜ್ಞೋಪವೀತದಿಂ ಪವಿತ್ರಗಾತ್ರರ್ಮಾಡಿ (ಆದಿಪು. ೧೫-೧೧ ಪ). [ಪವಿತ್ರ+ಗಾತ್ರ]

**ಪವಿತ್ರಗ್ರಾವ** (ನಾ). ಸ್ವಚ್ಛವಾದ ಶಿಲೆ ; ಹಸನಾದ ಕಲ್ಲು : ಆ ವನದಶೋಕತರು ನುತಪಾವನಸಿಕತಿಳತಳಪ್ರದೇಶಪವಿತ್ರಗ್ರಾವದೊಳ್ . . . ವಸ್ತ್ರಾಭರಣಂಗಳಂ ಕಳೆದು (ಶಾಂತಿಪು. ೯-೬೪). [ಪವಿತ್ರ+ಗ್ರಾವ]

**ಪವಿತ್ರತೀರ್ಥ** (ನಾ). ಮಂಗಳಕರವಾದ ನದಿ,—ಸರೋವರ ; ಪಾವನತೀರ್ಥ : ವರಪದ್ಮಾದಿ ಪವಿತ್ರತೀರ್ಥ ಸರಸೀಪುಣ್ಯೋದಕ ಸ್ನಾನಮುಂ . . . ಆಯ್ತು (ಪುಷ್ಪಪು. ೧೧-೬). [ಪವಿತ್ರ+ತೀರ್ಥ]

**ಪವಿತ್ರತೆ** (ನಾ). ಪಾವನತೆ ; ಪರಿಶುದ್ಧತೆ : ಜಾಹ್ನವಿಗೆ ರವಿಸತಿಗೆ ನೂಱುಮಡಿ . . . ಸಂತತ ಪವಿತ್ರತೆ ತೇಜವೆಂಬಿವಱಿಂದೆ (ಬಸಪು. ೪-೩೦) ; ಅವನನ್ನು ನಿನ್ನ ಮನೆಗೆ ಕಳುಹಿಸಿದ್ದು ನಿನ್ನ ಪವಿತ್ರತೆಯನ್ನು ಪರೀಕ್ಷಿಸಲಿಕ್ಕೆಂದು (ಹಳ್ಳಿಹಾ. ೧೧೩). [ಸಂ. ಪವಿತ್ರತಾ]

**ಪವಿತ್ರದಿನ** (ನಾ). ೧. ಪಾವನವಾದ ದಿವಸ ; ಶುಭದಿನ : ಮತ್ತೊಂದು ಪವಿತ್ರದಿನದೊಳ್ ವಿಶ್ವಸೇನಮಹಾರಾಜನುಮೈರಾಮಹಾದೇವಿಯುಂ ಭಗವತ್ಸಿಂಹಾಸನಾಸನ್ನವರ್ತಿಗಳ್ ಮುಕುಳಿತ ಕರಕಮಳರಾಗಿ (ಶಾಂತಿಪು. ೧೦-೯೯ ಪ). ೨. ಉತ್ಸವ : ಹತ್ತು ಚೈತ್ರದಿನ ಮೂಱು ಪವಿತ್ರದಿನ ಮೂಱು ಸಂಕ್ರಮಣವೆರಡು ಪ್ರಥಮ ಉಥ್ಥಾನದ್ವಾದಶಿಯೆರಡು (ಎಕ. V (R), ತಿರುಪು. ೮೮-೪೧; 1276). [ಪವಿತ್ರ+ದಿನ]

**ಪವಿತ್ರಾಂಗುಲಿ** (ನಾ). ದರ್ಭೆಯ ಉಂಗುರವನ್ನಿಡುವ ಬೆರಳು ; ಅನಾಮಿಕೆ : ತಾಂ ಗೇಣಿನೊಳು ಪವಿತ್ರಾಂಗುಲಿಗೆ ಗೋಕರ್ಣಮೆಂಗು (ಮಂಗರಾ. ೯೬-೧೦). [ಪವಿತ್ರ+ಅಂಗುಲಿ]

**ಪವಿತ್ರಾತ್ಮ** (ನಾ). ಶುದ್ಧವಾದ ಮನಸ್ಸುಳ್ಳವನು ; ನಿರ್ಮಲಾಂತಃಕರಣವುಳ್ಳವನು : ಎಲೈ ಅಗ್ನಿಯೇ . . . ನೀನು ಪವಿತ್ರಾತ್ಮನು (ಋಕ್ಸಾರ. ೧೫). [ಪವಿತ್ರ+ಆತ್ಮ]

**ಪವಿತ್ರಾರೋಹಣ** (ನಾ). ದೇವರಿಗೆ ಯಜ್ಞೋಪವೀತವನ್ನು ಏರಿಸುವ ವಿಶೇಷ ಉತ್ಸವ : ಗದ್ಯಾಣವೊನ್ನವಲ್ಲಿಯ ಶ್ರೀಸ್ವಯಂಭು ಕಲಿದೇವಸ್ವಾಮಿದೇವರ ಪವಿತ್ರಾರೋಹಣಕಂ . . . ಬಿಟ್ಟರು (ಕೊಲ್ಹಾಶಾ. ೫-೧೧ ; 1076). [ಸಂ.]

**ಪವಿತ್ರಿತ** (ಗು). ಪಾವನಗೊಂಡ; ಶುದ್ಧಗೊಂಡ: ಸಗ್ಗಕಿದು ನಿಚ್ಚಣಿಗಿಪ್ಪವೊಲಿರ್ದುದಲ್ತೆ ಜಿನಸವನಜಳಪವಿತ್ರಿತಕಟಕಂ (ಆದಿಪು. ೨-೩೧). [ಸಂ.]

**ಪವಿತ್ರೀಕರಣ** (ನಾ). ಪಾವನಗೊಳಿಸುವುದು; ಶುದ್ಧಗೊಳಿಸುವುದು: ಅಂತು ಧರ್ಮಕ್ಷೇತ್ರಪವಿತ್ರೀಕರಣವಿಹಾರಾನಂತರಮನಂತಚತುಷ್ಟಯಪುಷ್ಪಿಪರಪುಷ್ಪ[ನುಂ] (ಶಾಂತಿಪು. ೧೨-೨೯ ಪ). [ಸಂ.]

**ಪವಿತ್ರೀಕರಿಸು** (ಕ್ರಿ). ಪಾವನಗೊಳಿಸು; ಶುದ್ಧಮಾಡು: ಗಂಗಾನದೀಹ್ರದಂಗಳೊಳ್ ಪಾತಾಳಮೂಲಂಬರಂ ಮುಳುಗಿ ನಿಜಗಾತ್ರಮಂ ಪವಿತ್ರೀಕರಿಸಿಯುಂ (ಚಂದ್ರಪು. ೯-೫೫ ಪ); ಆ ಕ್ಷೇತ್ರದಲ್ಲಿ ಪತಿತರನ್ನು ಪವಿತ್ರೀಕರಿಸುವ ಸತ್ಯಸತ್ವಪೂರ್ಣಸಂಕಲ್ಪದಿಂದ ನಿಷ್ಕಾಮತಪೋಬಲವನ್ನು ಧಾರೆ ಎರೆದಂತಿದೆ (ಬದುಬ್ಬೆ. ೧೨).
[ಪವಿತ್ರೀಕರಣ+-ಇಸು$_3$]

**ಪವಿತ್ರೀಭೂತ** (ಗು). ಪಾವನವಾದ: ತ್ರಿಭುವನೈಕ ಪವಿತ್ರೀಭೂತಮಹಾಪೂತಜಿನಾಲಯಮೆ ನಿರತಿಶಯಭಕ್ತಿಪುರಸ್ಸರಪೂಜಾವಿಚಿತ್ರವಿರಚನಾದಿ ಸಂಪದಾಸ್ಪದಮಾಗೆಯುಂ (ಆದಿಪು. ೪-೫೨ ಪ). [ಸಂ.]

**ಪವಿತ್ರ** (ನಾ). = ಪವಿತ್ರಾಂಗುಲಿ. [ಸಂ. ಪವಿತ್ರ]

**ಪವಿತ್ರೋದಕ** (ನಾ). ಶುದ್ಧವಾದ ನೀರು; ಮಂಗಳಕರವಾದ ಜಲ: ಎಂತು ನಿನ್ನ ಪೂಜೆ ಮಾಡಿ ಮೆಚ್ಚಿಸುವೆನೋ . . . ಪವಿತ್ರೋದಕದಿ ಪಾದ ತೊಳೆವೆನೆಂತೆಂದರೆ ಪಾವನೆಯಾದ ಗಂಗೆ ಪಾದೋದ್ಭವೆ (ಪುರಂದ. ಧಾ. ೧-೧೨೩-೧). [ಪವಿತ್ರ+ಉದಕ$_2$]

**ಪವಿಧರ** (ನಾ). ವಜ್ರಾಯುಧವನ್ನು ಧರಿಸಿದವನು; ಇಂದ್ರ: ಪವಿಧರನ ಸಭೆಯೊಳಗೆ . . . ಧರಣಿಪನ ಕಥನವೇ ಕಥನ (ಹಜಕಾ. ೧೪-೩೧); ಪವಿಧರನ ಭಯಕಂಜಿ ಸರಿದರ್ಣವದೊಳಿಹ ಮೈನಾಕದ ವಿಶಾಲವದೆನಿತು (ಬಸಪು. ೧೮-೨೭); ಅನ್ಯೋನ್ಯವಿಪಗರ್ವೋರ್ವೀಧ್ರಸಂಭೇದನಪವಿಧರನೀಬಂದಂ (ರಾಜಶೇ. ೬-೧೭). [ಸಂ.]

**ಪವಿಪಂಜರ** (ನಾ). ೧. ವಜ್ರದ ಪಂಜರ. ೨. (ಅಲಂ) ಭೇದಿಸಲಾಗದ ರಕ್ಷೆ: ಅಂಜದಿರು ಕಮಳಾಕ್ಷಿ ಧೌಮ್ಯನಿರಂಜನನು ನಿನಗಿಂದು ಸುತಿಪವಿಪಂಜರವಲಾಯೆನುತ ಹಾಯ್ದನು ಪವನಸುತರಥಕೆ (ಕುವ್ಯಾಅ. ೨೨-೩೨). [ಪವಿ+ಪಂಜರ$_1$]

**ಪವಿಭೃನ್ಮಣಿ** (ನಾ). ಇಂದ್ರನೀಲಮಣಿ: ಚೆಂದಳಿರೆ ಚಂದಿರಗಾವಿಯ ನೂತನಾಂಬರಂ ಸುಳಿಯದೆ ನಿಂದ ತುಂಬಿಗಳ ಸಾಲ್ ಪವಿಭೃನ್ಮಣಿಮಾಲೆ (ರಾಜಶೇ. ೯-೫೪). [ಸಂ.]

**ಪವಿಮೂರ್ತಿ** (ನಾ). ಒಂದು ಬಗೆಯ ಸಸ್ಯ; ಮಂಗರವಳ್ಳಿ: "ಕಾಂಡೀರಿ ಪವಿಮೂರ್ತಿ ಶೃಂಖಲೆಯಸ್ಥಿವಳ್ಳಿ ಮಂಗುರವಳ್ಳಿ" (ಮಂಗರಾ. ೪೩-೪೩). [ಸಂ.]

**ಪವುಂಚಿ** 'ಪೌಂಚಿ' ನೋ.

**ಪವುಜು** 'ಫೌಜು' ನೋ.

**ಪವುಡ** 'ಪ್ರವುಡ' ನೋ.

**ಪವುತಿ** 'ಪೌತಿ' ನೋ.

**ಪವುರ** (ನಾ). ಪ್ರಜೆ; ಪೌರ: ಪವುರ ಕಲಕಲ ಶೂರರಾತ್ರಿಗಳ ಕೇಳುತತಿಭಾರಣೆಯ ಕೋಪದಿಂದೋಲಗಕೆ ನಡೆತಂದು (ವೆಂಕಾರಾ. ೬-೧೯-೨). [<ಸಂ. ಪೌರ]

**ಪವುಳಿ** 'ಪೌಳಿ$_1$' ನೋ.

**ಪವ್ವಗೆ, ಪೌವಗೆ** (ಅ). ಹಠಾತ್ತನೆ, ಆಕಸ್ಮಿಕವಾಗಿ ಎಂಬರ್ಥಗಳನ್ನು ಸೂಚಿಸುವ ಒಂದು ಅನುಕರಣಾವ್ಯಯ: "ಪವ್ವಗೆಯೆಂದುಂ, ಕಟ್ಟನೆಯೆಂದುಂ ಆಕಸ್ಮಿಕಂ" (ಕಶಸಾ. ೫೮-೨೮೨). **ಪೌವಗೆ:** ಪೌವನೆ, ಪೌವಗೆ (ಶಬ್ದಾನು. ೪೯ ಪ್ರಯೋ).
[ಪವ್$_0$+-ಅಗೆ$_3$]

**ಪವ್ವನೆ, ಪೌವನೆ, ಹವ್ವನೆ, ಹೌವನೆ** (ಅ). = ಪವ್ವಗೆ: "ಪವ್ವನೆಂದು ಕಟ್ಟನೆಯೆನ್ನುತ್ತೀ ಪರಿಯೊಳುಸಿರೆ . . . ಆಕಸ್ಮಿಕಮುಂ" (ಕವಿಕಂ. ೧೩೩); ಅದಜಿ ಕಲ್ಲೆರ್ದೆ ಪವ್ವನೆ ಸೀಳೆ (ಕಬ್ಬಿಕಾ. ೩೦೦); ಪರಮುನಿರದೆ ಪವ್ವನೆ ಬಂದಂ (ಹವಿಸ್ಮಾರ. ೨-೯). **ಪೌವನೆ:** ಪಾರಿತು ಧೃತಿ ಪೌವನೆ ತಲೆದೋರಿತು ತಾರಳ್ಯಂ . . . ಮಿತಿ ಮೀರಿತು ಸಂತಾಪಮಾಗಳಾ ನಳನೃಪನಾ (ದಮಯ. ೧-೬೯). **ಹವ್ವನೆ:** ಈ ಹಸಿರು ಓಣಿಗಳ ನಡುವಿನ ಜಾಗದಲ್ಲೇ . . . ಹವ್ವನೆ ಬೆಳೆದು ನಿಂತಿತ್ತು (ಮೂರುದಾ. ೯೦). **ಹೌವನೆ:** ಹೌವನೆಯಾಕಸ್ಮಿಕ ಭಯಭಾವಿತಮಂತಿಂತುಗಳ್ ಪದಾಪೂರಣದೊಳ್ ಕೋವುವು (ಶಮದ. ೩೧೮).

**ಪವ್ವನೆ ಪಾಱು, ಪೌವನೆ ಪಾಱು, ಹವ್ವನೆ ಹಾರು, ಹವ್ವನೆ ಹಾಱು, ಹೌವ್ವನೆ ಹಾಱು** = ೧. ಇದ್ದಕ್ಕಿದ್ದಂತೆ ಹಾರು; ಹಠಾತ್ತಾಗಿ ಮೇಲಕ್ಕೆ ನೆಗೆ: ಅರನೇಱಾಲ ಗೊಂಚಲಂ ಕಟ್ಟದಿರೊಳ್ ಕಂಡು ತಾನುಂ ಸಾರಿಗೆಯುಮಿರದೆ ಪವ್ವನೆ ಪಾಱಿ ಸೆಳೆಗೊಂಬನಡದರ್ (ರಾಮಾಶ್ವ. ೫೪-೭). ೨. ಅಧಿಕವಾಗಿ ತುಡಿ,-ಮಿಡಿ; ಹೆಚ್ಚಾಗಿ ಕಂಪಿಸು: ಮತ್ತಿದು ಪೆಱತೇನೆನುತ್ತ ಮೆರ್ದೆ ಪವ್ವನೆ ಪಾಱಿಲ್ (ಕಾದಂಪೂ. ೮೯೯); ತತ್ಸರೋವರದೆರ್ದೆ ಪವ್ವನೆ ಪಾಱುವಂತೆ ಪಾಱುದುವು . . . ತದ್ವಿಹಗಕುಳಂ (ಗದಾಯು. ೭-೧೭); ಎಳಹುಲ್ಲೆಯಂತೆರ್ದೆ ದಡಂದಡಿಸಿ ಪವ್ವನೆ ಪಾಱಿ (ಚಿಬಪು. ೧೯-೮೨); ಸಿಂಹನಾದದಿಂದಲ್ಲಿಯ ಜಳಚರಂಗಳೆರ್ದೆ ಪೌವನೆ ಪಾಱುವನ್ನಗಮಾದರ್ (ಪಂಪಭಾ. ೧೩-೭೭ ಪ); ಈ ಮಾತನ್ನು ಕೇಳಿ ಶ್ರೀನಿವಾಸನ ಎದೆ ಹವ್ವನೆ ಹಾರಿತು (ರಂಗರೋ. ೨೦೭); ಪುರಕೆ ಪೋದಪೆನೆಂದು ನುಡಿಯೆ ಪರಮೆಯ ಮನಂ ಬೆದಱಿ ಹವ್ವನೆ ಹಾಱಿ . . . ಮೂರ್ಛೆವೋಗಲ್ಕೆ (ನಂಬಿರ. ೧೭-೬೫); ತದ್ಧ್ವನಿಗೆ ಹಮ್ಮೈಸಿ ಹವ್ವನೆ ಹಾಱಿ ಮೂರ್ಛೆಸಿದುದಾ ಜನಚಯಂ (ಪದ್ಮರಾ. ೬-೬೧). ೩. ಶೀಘ್ರವಾಗಿ ಹೋಗು: ನಿನಗಿದಿರಾದಗಿಯರೆನಿಪ್ಪಾರಾತಿಗಳ ಹರಣಂ ಹೌವನೆ ಹಾಱಲಿ (ಜಯಕಾ. ೮-೩೯). 'ಹೌಹಾರು' ಪರಾ.
[ಪವ್$_0$+-ಅನೆ$_1$]

**ಪವ್ವಶರ್ಮ** (ನಾ). ಒಬ್ಬಾತನ ಹೆಸರು: ಭಾರದ್ವಾಜಗೋತ್ರಪವ್ವಶರ್ಮಣ ಎಕ್ಕಂಶಃ (ಇಆ. VII, ೧೮೮-೪೨; 668).
[ಪವ್ವ$_0$+ಶರ್ಮ]

**ಪವ್ವಳಿಸು$_1$** 'ಪವಡಿಸು' ನೋ.

**ಪವ್ವಳಿಸು$_2$, ಹವ್ವಳಿಸು** (ಕ್ರಿ). ೧. ಉದ್ವೇಗದಿಂದ ಕೂಡಿರು: ಲೋಹಸೂಚಿಗಳವೋಲ್ ತನುರೋಮ . . . ಮಹೋನ್ನತಕಂಠವೆತ್ತಿ ಪ[ಪಾಠಾಂ.ಹ]ವ್ವಳಿಸುತಲುರ್ಕಿ ಸೊರ್ಕಿ ಬರುತಿರ್ದುದು ಭೀಕರನೊಂದು ಸೂಕರಂ (ತ್ರಿಪುವಿ. ೨೭-೬೦). **ಹವ್ವಳಿಸು:** ೨. ಹಾತೊರೆ; ಕಾತರಿಸು: ವೆಗ್ಗಳವೆನಿಪ ಹಸಿವಡಗದಿರೆ ಹವ್ವಳಿಸಿ ನೋಡುತಲಿದ್ದನು (ತಿಪ್ಪಆ. ೯-೧೮); ಇಂದುವಂ ಮುಡಿಯೊಳಿರೆ ಕಂಡು ಭೂಷಣದುರಗವೃಂದ ಹವ್ವಳಿಸಿದಪವು (ನಂದಿಪೂ. ೧೮-೧೨). ೩. ಹೌಹಾರು; ಹೆದರು: ತಳವಳಗೊಂಬ ಪೌರರು . . . ಹವ್ವಳಿಸಿ ಕಳವಳಿಸುವ ಕಾಂತೆಯರು ತೀವಿದುದಾ ಪೊಳಲೊಳಗೆಲ್ಲಿ ನೋಡಿದರು (ಶ್ರೀಪಾಲ. ೪-೨೫); ಹರಿವೆಸರಿಗೆ ಹವ್ವಳಿಸುವಾನೆಯ ಹಿಂಡು ತರಹರಂ ಪುದೆಯುದ ಕಂಡು (ಕುರಾಸಾಂ. ೪೦-೩೪). [?+-ಇಸು$_3$]

**ಪಶಿಗೆ** 'ಪಸುಗೆ' ನೋ

**ಪಶು** (ನಾ). ೧. ಹಸು; ಗೋವು: ಪಶುವಿನ ಜಿಹ್ವೆಯೊಳ್ ಪೊಲೆಯರಿರ್ಪೆಡೆಯೊಳ್ ಸುಧೆ ದೇವಿ ಪದ್ಮದೊಳ್ ಮಿಸುಗುವ ಲಕ್ಷ್ಮಿ

ಪೊರ್ದಿ ನೆಲಸಿರ್ದಪಳ್ (ಧರ್ಮಾಮೃ. ೯-೯೦); ಕಱಿಯೆಂಬ ನುಡಿ ತುಂಬುವೆಱಿಯೊಳು ಪಶುಗಳೊಳು (ರಾಮವಿ. ೨-೨೧). **೨.** ದನ; ಕಾಲ್ನಡೆ: ಬಳಿದಪ್ಪಿದ ಪಶು ತನ್ನ ಹಿಂಡನಱಸುವಂತೆ (ಬಸಪ. ೩೬೫); ಪಶುವಿಲ್ಲದ ವ್ಯವಸಾಯ, ಶಿಶುವಿಲ್ಲದ ಮನೆತನ (ಗಾದೆ). **೩.** ಪ್ರಾಣಿ; ಜೀವಿ: ವನಿತಾಪಶುಪಂಡಕವರ್ಜ್ಯನಿವಾಸೋದ್ದೇಶದೆಡೆಗಳೊಳ್ ಚರಯಿಸುತುಂ (ಸುಕುಮಾ. ೪-೮). **೪.** ಕ್ರೂರಮೃಗ; ದುಷ್ಟ ಪ್ರಾಣಿ: "ಪಶುಃ, ಶ್ವಾಪದಃ—ಈ ಎರಡು (ಬೆಳ್ಗ) ಕೋಟ್ಪೃಗಂಗಳ್" (ಹಲಾಯು. ೩೯-೮೦). **೫.** ಬಲಿಯನ್ನಾಗಿ ಕೊಡುವ ಪ್ರಾಣಿ: ಕೌರವೇಶ್ವರನೀತಂ ಪಶುವಾಗೆ ಬೇಳ್ದಂ (ಗದಾಯು. ೮-೪೬). **೬.** ಒಂದು ಬಗೆಯ ಸಸ್ಯ: "ಪಾವನೀ-ತುಳಸಿ, ಪಶು, ಸೂರ್ಯಭಕ್ತ, ಕಿತ್ತೀಳೆ, ಹಿಂತಾಳ" (ಔಷಧಿ. ೯೫). **೭.** (ಆಲಂ) ದಡ್ಡ; ಬುದ್ಧಿಗೇಡಿ: ನಿಖಿಳ ದಿವಿಜಾಳಿಗಳು ಪಶುಗಳಲಾ ವಿರಿಂಚನ ವಿಗಡತನದಲಿ ಕೆಟ್ಟರಕಟ (ಕುಪ್ರಾಕ. ೬-೨೩). **೮.** [ಶೈವ] ಜೀವಾತ್ಮ; ಜೀವಿ: ಈ ವಿಶ್ವವನ್ನು ಉಪಯೋಗಮಾಡಿಕೊಳ್ಳುವವರು ಜೀವಿಗಳು. ಇವರಿಗೆ ಪಶುಗಳೆಂದು ಹೆಸರು (ಭಾರದ. ೩೦೭); ಪತಿಯೇ ಪರಮಶಿವನು . . . ಪಶುವೇ ಪುರುಷನು, ಜೀವಾತ್ಮನು (ಹಿಂದಸಾ. ೨೯೬). [ಸಂ.]

**ಪಶುಕರ್ಮ** (ನಾ). **೧.** ಪ್ರಾಣಿಗಳಂತೆ ವರ್ತಿಸುವುದು; ಮೃಗಸ್ವಭಾವದಿಂದಿರುವುದು. **೨.** ಪ್ರಾಣಿ ಬಲಿ; ಪಶುಬಲಿ.
[ಪಶು + ಕರ್ಮ]

**ಪಶುಕರ್ಮಜೀವಿ** (ನಾ). ಪ್ರಾಣಿಯನ್ನು ಬಲಿ ಕೊಡುವವನು: ನಿಜಮಹತ್ವವನುಡುಗಿ ಪಶುಕರ್ಮಜೀವಿಗಳು ಶ್ರುತಿಬಾಹಿರರುಗಳ್ ತಾವಿಹಗೆ ಪಶುಪತಿಗಳಹರೇ (ಬಸಪು. ೫೪-೭).
[ಪಶುಕರ್ಮ+ಜೀವಿ$_1$]

**ಪಶುಕರ್ಮಿ** (ನಾ). = ಪಶುಕರ್ಮಜೀವಿ: ಧರಣಿಯೊಳು ಪಶುಕರ್ಮಿಯಾಗಿಹ ನರನನೀಶ್ವರನೆನುತ ಪಶುಪನ ಚರಣವಂ ಪೂಜಿಸದ ಪಶುಜೀವಿಗಳಿರಧಮರಿರ (ಬಸಪು. ೫೦-೪೭). [ಪಶು + ಕರ್ಮಿ]

**ಪಶುಗೆಡಹಿ** (ನಾ). ಪ್ರಾಣಿಗಳನ್ನು ಬಲಿ ಕೊಡುವವನು; ಯಜ್ಞ ಮಾಡುವವನು: ನೂಱು ಪಶುಗೆಡಹಿಗೆ ಸುರೇಂದ್ರನು ಮಾಱುವನು ಗದ್ದುಗೆಯ (ಕುಪ್ರಾಅ. ೭-೮೪).
[ಪಶು + ಕೆಡಹು(<ಕೆಡವು)+-ಇ$_3$]

**ಪಶುತನೂದಕ** (ನಾ). ದನದ ಗಂಜಳ; ಗೋಮೂತ್ರ: ಪಶುತನೂದಕದಂತೆ ಮೂಱು ವಕ್ರಮನುಳ್ಳ ಗೋಮೂತ್ರಗತಿಯುಂ (ತತ್ತ್ವಪ್ರ. ೧೦೧). [ಪಶು + ತನು + ಉದಕ$_2$]

**ಪಶುನೈವೇದ್ಯ** (ನಾ). ಪ್ರಾಣಿಯ ಬಲಿ: ಆಯುಧವರೇಣ್ಯ . . . ನಿನ್ನ ನೋಂಪಿಯ ಬಲ್ಲೆನಾಂ ತೊಟ್ಟ ಮೇಲ್ ನಿನ್ನ ಬಲಿಗೆ ಪಶುನೈವೇದ್ಯವಿಟ್ಟಂತೆಯೆ ದಿಟಂ ಅರಾತಿಯಸು (ಶ್ರೀರಾಮಾ. ೮೦೫-೧೩೨).
[ಪಶು + ನೈವೇದ್ಯ]

**ಪಶುಪ** (ನಾ). **೧.** ಪಶುಗಳ ಒಡೆಯ; ವೃಷಭ; ನಂದೀಶ್ವರ: ಈ ಪಶುಪನೆರಡನೆಯ ಶಂಭುದ್ದೀಪನಾಮಂ (ಬಸಪು. ೨-೬). **೨.** ಜೀವಿಗಳನ್ನು ರಕ್ಷಿಸುವವನು; ಶಿವ: ನಿರ್ಮಲಂ ನೀಂ ದುರ್ಮಲಂ ನಾಂ . . . ನೀಂ ಪಶುಪ ನಾಂ ಪಶುವು (ಬಸಪು. ೨೨-೬೦). **೩.** ದನ ಕಾಯುವವನು; ದನಗಾಹಿ; ಗೋಪಾಲ. [ಸಂ.]

**ಪಶುಪತಿ** (ನಾ). **೧.** = ಪಶುಪ ೨: "ಈಶಾನಃ, ಶಶಿಶೇಖರಃ, ಪಶುಪತಿಃ . . . ನೀಲಲೋಹಿತಃ—ಈ ೪೫ ಮಹಾದೇವರ ಪೆಸರ್" (ಹಲಾಯು. ೩-೧೧); ಪಶು ನಾನು ಪಶುಪತಿ ನೀನು (ಬಸಪ. ೫೩); ಪಶುಪತಿಯೆ ಶರಣೆನುತೆ ಸುಖದಿ ನಲಿದೋವುತುಂ (ನಂಬಿರ. ೯-೧೪೨); ಸುತನನಿತ್ತನು ನಿನಗೆ ಲೋಕತ್ರಿತಯದಲಿ ಬಲುಗೈ ಕಣಾ ಪಶುಪತಿಗೆ ಪುರುಷೋತ್ತಮಗೆ ಸರಿಮಿಗಿಲೆಂಬ ಸಂದೇಹ (ಕುಪ್ರಾಅ. ೪-೬೦). **೨.** ಒಬ್ಬಾತನ ಹೆಸರು: ಅಳಪಗಣಪಶುಪತಿ ಮಾದಕ್ಷಿಣಾಪಥ ಬಹುಶತಹವನಾಹವದು[ಳ್] ಪಶುಪ್ರದಾನ ಶೌರ್ಯೋದ್ಯಮಭರಿತೋ[ನ್ದಾನ] ಪಶುಪತಿಯೆನ್ದು ಪೊಗಟಿ (ಮೈಆರಿ. ೧೯೩೬, ೧೬-೬ ; ಸು. 450).
[ಪಶು + ಪತಿ$_2$]

**ಪಶುಪಾಲ** (ನಾ). ದನಗಳನ್ನು ಕಾಯುವವನು; ಗೋಪಾಲ: ಅಂತು ಶಾಕ್ವರವರನಾಗಿ ಕೆಕ್ಕಳಿಸಿ ಕೆಳರ್ದಟ್ಟಿಕೊಂಡು ಬಂದ ಕಂಸನಟ್ಟಿದರಿಷ್ಟನಂ ಅಧೀನರಿಷ್ಟನಂ ಕೊಂದಂತೆ ಕೊಲ್ಲದೆ ಪಶುವೆಂದು ಪೇಸಿ ಪಶುಪಾಲನಪ್ಪ ಕಾರಣದಿಂ ಕರುಣಿಸಿ (ಅರ್ಧನೇ. ೮-೨೦ ವ); ಕೋಲಕೋಲಾಹಳವ ನೋಡೆಮ್ಮೀಳಿಗೆಯ ಭುಜಬಲವನಿದು ಪಶುಪಾಲರಲಿ ಪರಿಭೂತವಾಯ್ತು (ನಿಘಾಗ. ೧೦-೬೦-೧೨). [ಸಂ.]

**ಪಶುಪಾಲಕ** (ನಾ). = ಪಶುಪಾಲ: ಶಕರು ಖದ್ಯೋತಪ್ರತಾಪರು . . . ಪಶುಪಾಲಕ ಪುಳಿಂದರು ಕಂಕಣಾಹ್ವಯರು ಸಕಲದಸ್ಯುಗಳೈದೆ ಸೋತುದು (ಕುವ್ಯಾಸ. ೩-೫೧); ಕಲಿ ಚಂಡಯಂ ಪಶುಪಾಲಕಂ ಕಲ್ಲಯಂ ಘನಗಾರುಡಂ ಮೃಗಯಾಚರಂ ಪಟು ಚೋಮಯಂ (ವೃಷವಿ. ೬-೩೮); ಅವನು ಪಶುಪಾಲಕನಾಗಿದ್ದನು (ಮಣಿಸ. ೯೪). [ಸಂ.]

**ಪಶುಪಾಲನ** (ನಾ). = ಪಶುಪಾಲನೆ: ಪಶುಸಂಹಾರ, ಪಶುಪಾಲನ, ಪಶುಯಜ್ಞ . . . ಪಶುಭಕ್ಷಣದಿಂದ ಬೆಳೆದ ಮಾನವಜಾತಿಯು ಪಶುವಿನ ಆವೇಶವನ್ನು ತನ್ನ ಆಚರಣೆಯಲ್ಲಿ ಪ್ರಕಟಿಸಿದರೆ ಆಶ್ಚರ್ಯವಲ್ಲ (ವಿಚಾಮಂ. ೮೨). [ಪಶು + ಪಾಲನ]

**ಪಶುಪಾಲನೆ** (ನಾ). ದನಕರುಗಳನ್ನು ಸಾಕುವುದು: ಪಶುಪಾಲನೆ ಪಶುಪತಿಯ ಉಪಾಸನೆಯಾಗಿ ಪಾಶಚ್ಛೇದನಕ್ಕೆ ದಾರಿ ಮಾಡಿಕೊಡುತ್ತದೆ (ಶರಚ. ೨೧೬); ವ್ಯವಸಾಯದ ಜೊತೆಗೆ ಇನ್ನೆರಡು ಉದ್ಯಮಗಳನ್ನು ಹೆಸರಿಸಬಹುದು. ಒಂದು ಕುರಿಸಾಕಣೆ. ಮತ್ತೊಂದು ಪಶುಪಾಲನೆ (ಕಶಾಅ. ೩೬೩). [ಪಶು+ಪಾಲನೆ]

**ಪಶುಪ್ರದಾನ** (ನಾ). ಯಜ್ಞದಲ್ಲಿ ಪಶುವನ್ನು ಬಲಿಕೊಡುವುದು: ಅಳಪಗಣಪಶುಪತಿ ಮಾದಕ್ಷಿಣಾಪಥ ಬಹುಶತಹವನಾಹವದು[ಳ್] ಪಶುಪ್ರದಾನ ಶೌರ್ಯೋದ್ಯಮಭರಿತೋ[ನ್ದಾನ] ಪಶುಪತಿಯೆನ್ದು ಪೊಗಟಿ (ಮೈಆರಿ. ೧೯೩೬, ೧೬-೭ ; ಸು. 450). [ಪಶು+ಪ್ರದಾನ]

**ಪಶುಬಂಧ** (ನಾ). ಯಜ್ಞಪಶುವನ್ನು ಬಲಿಗಾಗಿ ಬಲಿಗಂಬಕ್ಕೆ ಕಟ್ಟುವುದು: ಪಶುಬಂಧ[ಪಾಠಾಂ.ಬಂಧನ]ಕ್ಕೆ ತಂದ ಹೋತಿನ ತಲೆಯನಾ ದಕ್ಷನ ಮುಂಡದ ಮೇಲಿರಿಸಿ ಪ್ರಾಣಮಂ ವೀರೇಶ್ವರಂ ಕೊಟ್ಟಂ (ನನ್ನಚಾ. ೬-೯೯ ವ). [ಪಶು + ಬಂಧ]

**ಪಶುಬಲಿ** (ನಾ). ಜೀವಿಯನ್ನು ಕೊಲ್ಲುವುದು; ಪ್ರಾಣಿಬಲಿ: ಇಕ್ಕಲಿಕೆ ಪಶುಬಲಿಯನೆನ್ನಿವ ಸೊಕ್ಕಿ ಬಂದಪನು (ಕೌತಿರಾ. ೩೭-೧೬).
[ಪಶು + ಬಲಿ$_2$]

**ಪಶುಬುದ್ಧಿ** (ನಾ). ಪ್ರಾಣಿಯಂತೆ ನಡೆದುಕೊಳ್ಳುವುದು; ಮಾನವನಲ್ಲದಂತೆ ವರ್ತಿಸುವುದು: ವಿಜ್ಞಾನಿ "ಪಶುಬುದ್ಧಿ"ಯನ್ನು ಬೆಳೆಸಿಕೊಂಡರೆ ವಿಶ್ವದ ವಿನಾಶ ಶತಸ್ಸ್ವತಃಸಿದ್ಧ (ವಿಶಾಸ. iv, ವಿಚಾರದರ್ಪಣ). [ಪಶು + ಬುದ್ಧಿ]

**ಪಶುಮತ** (ನಾ). = ಪಶುಬುದ್ಧಿ: ಶಿವ ಬೇಱೆ ಇವು ಬೇಱೆ ಎಂಬ ಅಜ್ಞಾನಿ ಕರ್ಮಕಾಂಡಿಗಳ ಪಶುಮತದವರನೆನಗೊಮ್ಮೆ ತೋಱದಿರಾ (ಸಿದ್ಧೇಪ. ೭೩-೨೦೯); ಬೆಳಗ ಕತ್ತಲೆಯೆಂಬ ಕತ್ತಲೆಯ ಬೆಳಗೆಂಬ ಪಶುಮತದ ಪಾಷಂಡಿಗಳು ನೀವು ಕೇಳಿರೇ (ಘನವ. ೧೬-೧೫).
[ಪಶು + ಮತ]

**ಪಶುಯಜ್ಞ** (ನಾ). ಪಶುಬಲಿಯನ್ನು ಕೊಟ್ಟು ಮಾಡುವ ಯಜ್ಞ: ಆಗ ಪಶುಯಜ್ಞವಿರಲಿಲ್ಲವೆಂದ ಮೇಲೆ ಸ್ತೂಪದ ಹೋಲಿಕೆ ಸರಿಹೋಗುವುದಿಲ್ಲ (ಭಾರದ ೨೦೮). [ಪಶು+ಯಜ್ಞ]

**ಪಶುವರ್ತನೆ** (ನಾ). ಪ್ರಾಣಿಗಳಂತೆ ನಡೆದುಕೊಳ್ಳುವಿಕೆ; ಅಮಾನುಷವಾದ ನಡತೆ: ಪೋಲೀಸರ ಈ ಪಶುವರ್ತನೆಯನ್ನು ಕಂಡು ಹೇಸಿ . . . ತಮ್ಮ ಸರದಿ ಯಾವಾಗ ಬರುವುದೊ ಎಂದು ನಿರೀಕ್ಷಿಸುತ್ತ ನಿಂತರು (ಸರ್ಪಮಂ. ೧೫೦). [ಪಶು+ವರ್ತನೆ]

**ಪಶುವಿಧಿ** (ನಾ). = ಪಶುಯಜ್ಞ: ಅನ್ನಪ್ರಾಶನ, ಪುಂಸವನ, ಮದುವೆ, ಉಪನಯನ, ಸಮಾವರ್ತನ, ಪಶುವಿಧಿ (= ಯಜ್ಞ), ಚಾತುರ್ಮಾಸ್ಯ ಇತ್ಯಾದಿಗಳಿಗಾಗಿ ದಾನವನ್ನು ಕೊಡಲಾಗಿದೆ (ಕಶಾಅ. ೩೮೨). [ಪಶು+ವಿಧಿ]

**ಪಶುವೃತ್ತಿ** (ನಾ). = ಪಶುವರ್ತನೆ: ಮನುಷ್ಯ ಮನುಷ್ಯನೊಡನೆ ಇಂಥ ಪಶುವೃತ್ತಿಯಿಂದ ನಡೆದುಕೊಳ್ಳುತ್ತಾನಲ್ಲ! (ಹಳ್ಳಿಹಾ. ೮೮). [ಪಶು + ವೃತ್ತಿ]

**ಪಶುವೈದ್ಯ** (ನಾ). ೧. ಪ್ರಾಣಿಗಳ ರೋಗವನ್ನು ಗುಣಪಡಿಸಲು ಸಹಾಯಕವಾಗುವ ಚಿಕಿತ್ಸಾಶಾಸ್ತ್ರ. ೨. ಪ್ರಾಣಿಗಳ ರೋಗಕ್ಕೆ ಚಿಕಿತ್ಸೆ ಮಾಡಬಲ್ಲ ವೈದ್ಯ. [ಪಶು+ವೈದ್ಯ]

**ಪಶುವೈದ್ಯಶಾಲೆ** (ನಾ). ಪ್ರಾಣಿಗಳ ಚಿಕಿತ್ಸಾಲಯ; ದನಗಳ ಆಸ್ಪತ್ರೆ: ಪಶುವೈದ್ಯಶಾಲೆಯಲ್ಲಿ ಟಾಮಿಯನ್ನು ವೈದ್ಯರು ಪರೀಕ್ಷೆ ಮಾಡಿದರು (ಕಪವು. ೩-೩೭). [ಪಶುವೈದ್ಯ+ಶಾಲೆ$_3$]

**ಪಶುವ್ರಜ** (ನಾ). ದನಗಳ ಹಿಂಡು; ಗೋಸಮೂಹ: ಸುತ್ತ ಗೋವರ ಸನ್ನೆಯಲಿ ಪುರದತ್ತ ಮುಂದಾದವು ಪಶುವ್ರಜವುತ್ತರನು ಮುಳುಗಿದನು ಪರಿತೋಷಪ್ರವಾಹದಲಿ (ಕುವ್ಯಾವಿ. ೭-೪೯). [ಪಶು + ವ್ರಜ]

**ಪಶುಸಂಗೋಪನೆ** (ನಾ). = ಪಶುಪಾಲನೆ: ಮಾನವನ ಜೀವನ ವೃತ್ತಿಗಳಲ್ಲಿ ಪಶುಸಂಗೋಪನೆಯೂ ಒಂದು (ರೂಢಿ). [ಪಶು+ಸಂಗೋಪನೆ]

**ಪಶುಸ್ತನಿ** (ನಾ). ದ್ರಾಕ್ಷಿಯ ಹಣ್ಣು; ಗೋಸ್ತನಿ: "ಹಾರಹೂರಂ ಪಶುಸ್ತನಿ ಮೃದ್ವೀಕೆ ದ್ರಾಕ್ಷೆ" (ಮಂಗರಾ. ೩೪-೧೦). [ಸಂ.]

**ಪಶ್ಚಾತ್ಕರಿಸು** (ಕ್ರಿ). ಹಿಂದಕ್ಕೆ ತಳ್ಳು; ಹಿಂಭಾಗಕ್ಕೆ ನೂಕು: ಪಿರಿದಾಯಾಸದೆ ಗುಣಮಂ ದೊರೆಕೊಳಿಸಿದೊಡಂ ಖಲಂಗೆ ಗುಣಮಂ ಪಶ್ಚಾತ್ಕರಿಸಿ ಗುಣಿಯಂ ವಿಭೇದಿಪ ಪರಿತೀಕ್ಷ್ಣಮುಖಂಗೆ ಸೂಚಿಯಂತಿರೆ ಸಹಜಂ (ಶಬಶಂ.೧-೧೬). [ಸಂ. ಪಶ್ಚಾತ್ಕರಣ+-ಇಸು$_3$]

**ಪಶ್ಚಾತ್ಕಾಲ** (ನಾ). ಮುಪ್ಪಿನ ಕಾಲ; ಅಪರವಯಸ್ಸು: ಪೃಥ್ವಿಯೆಲ್ಲಮನಾಳ್ದು ಪಶ್ಚಾತ್ಕಾಲದೊಳೇನಾನುಮೊಂದು ವೈರಾಗ್ಯಕಾರಣಮಾಗಿ ಮಗಂಗೆ ರಾಜ್ಯಪಟ್ಟಂಗಟ್ಟಿ (ವಡ್ಡಾರಾ. ೯೪-೨೨). [ಸಂ.]

**ಪಶ್ಚಾತ್ತಾಪ** (ನಾ). ತಪ್ಪು ಕೆಲಸ ಮಾಡಿದುದಕ್ಕಾಗಿ ಅನಂತರ ಮರುಗುವಿಕೆ; ತಪ್ಪಿನ ಅರಿವಾಗಿ ವಿಷಾದಪಡುವಿಕೆ: "ವಿಪ್ರತಿಸಾರಃ, ಅನುಶಯಃ, ಪಶ್ಚಾತ್ತಾಪಃ, ಅನುತಾಪಃ–ಈ ೪ ಅನುಶಯಂಬಡುವುದು" (ಹಲಾಯು. ೧೧೯-೩೧); ಜನಮೆಂದಂತುಟಿ ಭಾವಿಸದನಯಮನಾಂ ನೆಗಟ್ದೆನೆಂದು ಪಶ್ಚಾತ್ತಾಪಂ ತನಗಧಿಕಮಾಗೆ... ತಳೆದನಂದುಬ್ಬೆಗಮಂ (ಪಂರಾಮಾ. ೧೫-೬೭); ಉತ್ತರಕ್ಷಣದಲ್ಲಿಯೇ ಶಾಂತಲೆಗೆ ಪಶ್ಚಾತ್ತಾಪ ಹುಟ್ಟಿತು (ಶಾಂತಲಾ. ೧೨೪). [ಸಂ.]

**ಪಶ್ಚಾತ್ತಾಪಪಡು** (ಕ್ರಿ). ಮಾಡಿದ ತಪ್ಪಿಗೆ ಮರುಗು,–ವಿಷಾದಪಡು: ಮಾನವನು ತನ್ನ ಅನಾಚಾರ ಮತ್ತು ದುರಾಚಾರಗಳಿಗೆ ಪಶ್ಚಾತ್ತಾಪ ಪಡುವುದರಿಂದ ಶುದ್ಧನಾಗಿ ಭಗವದನುಗ್ರಹಕ್ಕೆ ಪೂರ್ಣಪಾತ್ರನಾಗುವನು (ಶಕ್ತಿವಿ. ೧೦೨); ಇದರ ವಿಷಯದಲ್ಲಿ ನಾನು ಪಶ್ಚಾತ್ತಾಪ ಪಡಲಾರೆ (ಮಲಿನಾ. ೩). [ಪಶ್ಚಾತ್ತಾಪ+ಪಡು$_1$]

**ಪಶ್ಚಾದ್ವಿವೇಕ** (ನಾ). ಕಾರ್ಯವು ಕೈಮೀರಿದ ಮೇಲೆ ಬರುವ ತಿಳಿವಳಿಕೆ; ಅನಂತರ ಬರುವ ಅರಿವು: ಪಶ್ಚಾದ್ವಿವೇಕದಿಂದುಚಿನೊಂದು . . . ಮರಣಾಂತಮೇ ತನಗೆ ಪ್ರಾಯಶ್ಚಿತ್ತವೆಂದಾ ಕಟಾಹದೊಳ್ಮದಿವೆಣ್ಣೆಯೊಳ್ಬಿಳ್ದನಾ ಲಿಖಿತನು (ಜೈಮಿಭಾ. ೧೭-೩೯); ಏನು ಗತಿಯಾಗುತ್ತದೆಯೋ ಎಂದು ಹೆದರಿ, ಪಶ್ಚಾದ್ವಿವೇಕದಿಂದ ಪ್ರಚೋದಿತಳಾಗಿ ಅವಳು 'ಮನೆ'ಗೆ ಓಡಿ ಬರುತ್ತಿದ್ದಳು (ಮಲಿಮ. ೩೯೮). [ಸಂ.]

**ಪಶ್ಚಿಮ** (ನಾ). ೧. ಹಿಂಭಾಗ; ಬೆನ್ನು: "ಬೆನ್ನದು ಪಶ್ಚಿಮಂ ಪೃಷ್ಠಮಕ್ಕು" (ಮಂಗರಾ. ೯೭-೧೩); ಮುಜಾದವೆ ಕಾಲ್ಗಳ್ . . . ಅಂತೆ ಪಶ್ಚಿಮಂ ಪಱಿದುವೆ (ಬಂಹರಿ. ೧೨-೬೨). ೨. ಸೂರ್ಯನು ಮುಳುಗುವ ದಿಕ್ಕು; ಪಡುವಣ ದಿಕ್ಕು: ಪಶ್ಚಿಮಮಂ ಮಿಥುನ ತುಳಾಕುಂಭಮಾಳ್ಗುಂ (ಜಾತತಿ. ೧-೨೪); ತುಲಾ ಮಿಥುನ ಕುಂಭಯೀ ೩ ರಾಶಿಯೂ ಪಶ್ಚಿಮದಿಕ್ಕು (ಭಾಸ್ಕರ. ೬೮-೬); ಒಂದು ಭೂಪಟಕ್ಕೆ ಎದುರಾಗಿ ನಿಂತುಕೊಂಡರೆ . . . ಎಡಭಾಗವು ಪಶ್ಚಿಮವೆಂಬುದನ್ನು ತಿಳಿಯಬೇಕು (ಭೂಗೋಳ. ೧೩). ೩. ಕೊನೆಯದು; ಕಡೆಯದು. ೪. [ಯೋಗ] ತುತ್ತತುದಿಯ ಒಂಬತ್ತನೆಯ ಚಕ್ರ; ಸಹಸ್ರಾರ: ಮಹಾಪ್ರಸಾದಮಂ ಪಶ್ಚಿಮದಲ್ಲಿ ಧರಿಸಿದೆ (ಘನವ. ೬೯-೫೭).

**ಪಶ್ಚಿಮರಾಯ** = ಪಡುವಣಭಾಗದ ಒಡೆಯ; ಒಂದು ಬಿರುದು: ಗಿರಿದುರ್ಗಮಲ್ಲ ಪಶ್ಚಿಮರಾಯ ಭೋಜದೇವ ದಿಸಾಪಟ್ಟ ಶ್ರೀಮತು ಪ್ರತಾಪಚಕ್ರವರ್ತಿ ಸಿಂಗಣದೇವ (ಎಇ. XXX, ೯-೬; ಸು. 1220). [ಸಂ.]

**ಪಶ್ಚಿಮಘಟ್ಟ** (ನಾ). (ದಕ್ಷಿಣ ಭಾರತದ) ಪಡುವಣ ದಿಕ್ಕಿನ ಬೆಟ್ಟಗಳ ಸಾಲು: ಭಾರತದ ನದಿಗಳು ತುಂಬಿ ಹರಿಯುವುದಕ್ಕೆ ಪ್ರಧಾನಕಾರಣವೆಂದರೆ ಪಶ್ಚಿಮಘಟ್ಟಗಳ ಸಲುವಾಗಿ ಬೀಳುವ ಅತಿಶಯ ಪ್ರಮಾಣದ ಮಳೆಯೇ (ದಭಾಇ. ೬). [ಪಶ್ಚಿಮ + ಘಟ್ಟ]

**ಪಶ್ಚಿಮದಿಕ್ಪತಿ** (ನಾ). ಪಡುವಣ ದಿಕ್ಕಿನ ದೇವತೆ; ವರುಣ: "ವರುಣಂ ಪಶ್ಚಿಮದಿಕ್ಪತಿ" (ಪಸ್ತುಕೋ. ೮-೪೩). [ಪಶ್ಚಿಮ + ದಿಕ್ಪತಿ]

**ಪಶ್ಚಿಮನಾಡಿ** (ನಾ). [ಯೋಗ] ನಾಡಿಗಳಲ್ಲಿ ಒಂದು: ಮಯೂರನಾಡಿ . . . ಪಶ್ಚಿಮನಾಡಿ . . . ಸಂತೋಷನಾಡಿ ಇಂತೀ ನಾಡಿಗಳೊಳಗಾದ ಶರೀರದಲ್ಲಿ ತೋರುವ ನಾಡಿ ಜೀರ್ಣಪರ್ಣದಂತೆ (ಶರಚ. ೪೮೦). [ಪಶ್ಚಿಮ + ನಾಡಿ$_1$]

**ಪಶ್ಚಿಮಬುದ್ಧಿ** (ನಾ). = ಪಶ್ಚಾದ್ವಿವೇಕ: ಕಾರ್ಯ ಕೆಟ್ಟು ಕೈಮೀರಿದ ನಂತರ ಉಂಟಾಗುವ ಪಶ್ಚಿಮಬುದ್ಧಿಯಿಂದೇನು ಪ್ರಯೋಜನ? (ರೂಢಿ). [ಪಶ್ಚಿಮ+ಬುದ್ಧಿ]

**ಪಶ್ಚಿಮಸಲ್ಲೇಖನ** (ನಾ). [ಜೈನ] ನಾಲ್ಕು ಶಿಕ್ಷಾವ್ರತಗಳಲ್ಲಿ ಒಂದು; ಜೀವಿತದ ಕೊನೆಯ ಕಾಲದಲ್ಲಿ ಸ್ವೀಕರಿಸುವ ಸಲ್ಲೇಖನ ವ್ರತ: ಸಾಮಾಯಿಕ ಪ್ರೋಷಧೋಪವಾಸಮುಮುಪಭೋಗಪರಿಭೋಗಾದಿ ತಿಥಿಸಂವಿಭಾಗಮುಂ ಪಶ್ಚಿಮಸಲ್ಲೇಖನಮುಮೆಂಬ ನಾಲ್ಕುಂ ಶಿಕ್ಷಾವ್ರತಮುಂ (ಚಾವುಂಪು. ೧೯೨). [ಪಶ್ಚಿಮ+ಸಲ್ಲೇಖನ]

**ಪಶ್ಚಿಮಾಚಲ** (ನಾ). ಪಡುವಣ ದಿಕ್ಕಿನ ಪರ್ವತ; ಅಸ್ತಗಿರಿ: ರಂಜಿಸುವ ಪಶ್ಚಿಮಾಚಲಕಿರಾತಂ ತೊಟ್ಟ ಗುಂಜಾಭರಣಮೊ . . . ಪೇಳೆನಲ್ಕಾ ಬೈಗುಗೆಂಪೆಸೆದುದು (ಜೈಮಿಭಾ. ೮-೪೬). [ಪಶ್ಚಿಮ+ಅಚಲ]

**ಪಶ್ಚಿಮಾದ್ರಿ** (ನಾ). = ಪಶ್ಚಿಮಾಚಲ: "ಪಡುವೆಟ್ಟಿಂದು ಪಶ್ಚಿಮಾದ್ರಿ [ಪಾಠಾಂ. ಪಶ್ಚಿಮಾಚಲಂ]" (ಕಶಸಾ. ೪೯-೫೧); ಇನನುದಯಿಸಲಿ ಪಶ್ಚಿಮಾದ್ರಿಯೊಳನಲನೊಮ್ಮೆ ಹಿಮಾಂಶುವಾಗಲಿ . . . ಸಜ್ಜನರುಗಳು ನುಡಿದೆರಡನಾಡರು ಮನ ವಚನ ಕಾಯದಲಿ (ಕುವ್ಯಾಉ. ೩-೧೨೭); ರವಿ ಪಶ್ಚಿಮಾದ್ರಿ[ಪಾಠಾಂ. ಬ್ಧಿ]ಯಂ ಮಱಿಗೊಳೆ ತಮಸ್ತೋಮಮವನಿಯಂ ಮುಸುಕಿತು (ಜೈಮಿಭಾ. ೮-೪೯). [ಪಶ್ಚಿಮ + ಅದ್ರಿ]

**ಪಶ್ಚಿಮಾಭಿಮುಖ** (ನಾ). ೧. ಪಡುವಣದಿಕ್ಕಿಗೆ ಎದುರಾದುದು; ಪಶ್ಚಿಮದಿಕ್ಕಿಗೆ ಮುಖವಾಗಿರುವುದು: ಪಶ್ಚಿಮಾಭಿಮುಖವಾಗಿ ಸುತ್ತಿದ್ದರೂ . . . ಹಿಂದೆ ಬಿದ್ದಿದ್ದಾನೆ (ನಕ್ಷತ್ರ. ೩೯). ೨. ಪಶ್ಚಿಮದಿಕ್ಕಿಗೆ ಮುಖ ಮಾಡಿರುವವನು: ತುರಂಗರತ್ನಮನೇಱಿ ಪಶ್ಚಿಮಾಭಿಮುಖನಾಗಿ ನಿಂದು ಭರತೇಶ್ವರಚಕ್ರವರ್ತಿ ಗೆಲ್ಗೆಂದು ಸಾತಿರೇಕಂ . . . ಭರದಿಂದಂ ದಂಡದೊಳ್ ತಾಟಿಸಿದೊಡೆ ವಿಜಯಾರ್ಧಾಚಲಂ ತೊಟ್ಟನಾಗಳ್ ಬಿರಿದತ್ತು (ಆಪಿಪು. ೧೩-೩೫ ವ); ಚಕ್ರವರ್ತಿಯುಂ ಪಶ್ಚಿಮಾಭಿಮುಖನಾಗಿ ಪಯಣದ ಮೇಲೆ ಪಯಣಂಬೋಗೆ (ಶಾಂತಿಪು. ೧೧-೧೦ ವ). [ಪಶ್ಚಿಮ + ಅಭಿಮುಖ]

**ಪಶ್ಚಿಮಾರ್ಧಗೋಳ** (ನಾ). ಪಶ್ಚಿಮದ ಕಡೆಗಿರುವ ಭೂಮಿಯ ಅರ್ಧಭಾಗ; ಪಶ್ಚಿಮಗೋಲಾರ್ಧ: ಪಶ್ಚಿಮಾರ್ಧಗೋಳದಲ್ಲಿರುವ ಭೂಮಿಯು ಎರಡರಷ್ಟಕ್ಕಿಂತಲೂ ಪೂರ್ವಾರ್ಧಗೋಳದಲ್ಲಿರುವ ಭೂಮಿಯು ಹೆಚ್ಚಾಗಿದೆ (ಭೂಗೋಳ. ೧೩).
[ಪಶ್ಚಿಮ + ಅರ್ಧಗೋಳ(= ಅರ್ಧಗೋಲ)]

**ಪಶ್ಚಿಮೋದಧಿ** (ನಾ). ಪಡುವಣ ಕಡಲು; ಪಶ್ಚಿಮದಿಕ್ಕಿನ ಸಮುದ್ರ: ಸೇನೆ ಮೂಡಣ ಜಲಧಿಗಾಂತುದು ಪಶ್ಚಿಮೋದಧಿಯೆಂಬ ರಭಸದಲಿ (ಕುವ್ಯಾಭೀ. ೧-೬೪). [ಪಶ್ಚಿಮ+ಉದಧಿ]

**ಪಶ್ಚಿವ** 'ಪಚ್ಚಿಮ' ನೋ.

**ಪಶ್ಯಂತಿ** (ನಾ). ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ನಾಲ್ಕು ವಾಙ್ಮಯರೂಪಗಳಲ್ಲಿ ಒಂದು; ಪರಾ ಎಂಬ ಸೂಕ್ಷ್ಮರೂಪವಾದ ನಾದವು ನಾಭಿಪ್ರದೇಶದವರೆಗೂ ಚಲಿಸಿದಾಗ ಅದರ ಸಂಬಂಧದಿಂದ ಉಂಟಾಗುವ ಶಬ್ದ: ಅನ್ನಮಯ ಯಂತ್ರಮೂಲದ ಸೂಕ್ಷ್ಮತಂತ್ರಗಳ್ ಪಶ್ಯಂತಿಗಳ್ (ಶ್ರೀರಾಮಾ. ೭೧೭-೨೩೧); ಇದೇ ದೃಷ್ಟಿಯಿಂದ ಪಶ್ಯಂತೀ, ಮಧ್ಯಮಾ, ವೈಖರೀ-ರೂಪಗಳಿಂದ ವಾಙ್ಮಯವನ್ನು ಹೊರಹೊಮ್ಮಿಸುವಳಾದಾಗ್ಯೂ ಸಮಷ್ಟಿರೂಪದಲ್ಲಿ "ಪರಾ" ಎಂದೆನಿಸಿಕೊಳ್ಳುವಳು (ಭಾರದ. ೨೨೨); ಶಬ್ದ ಚೇತನದಲ್ಲಿ ಶೂನ್ಯ, ಸಂವಿತ್, ಸೂಕ್ಷ್ಮಅವಸ್ಥೆಗಳನ್ನು ದಾಟಿ ಮೂಲಾಧಾರದಲ್ಲ ಪರಾ ಆಗಿ ರೂಪ ಪಡೆದು ಮಧ್ಯೆ ಪಶ್ಯಂತಿಯಾಗಿ ಹೃದಯದೆದುರು ಬಂದು ಮಧ್ಯಮ ಆಗಿ ಉಚ್ಚಾರದಿಂದ ಹೊರಗೆ ಕೇಳಬಲ್ಲ ವೈಖರಿ ಸ್ವರವಾಗುತ್ತದೆ (ನಮ್ಮಸು. ೩೧). [ಸಂ. ಪಶ್ಯಂತೀ]

**ಪಶ್ಯತೋಹರ** (ನಾ). ಎಲ್ಲರೂ ನೋಡುತ್ತಿರುವಂತೆಯೇ ಕದಿಯುವವನು; ದರೋಡೆಕೋರ; ಹಗಲುಗಳ್ಳ: "ನೋಡೆ ನೋಡೆ ಕಳುವವನಂ ಪಶ್ಯತೋಹರನೆಂಬುದು" (ಪಲಾಯು. ೫೬-೧೮೪). [ಸಂ.]

**ಪಸ**$_1$, ಪಸವ$_2$, ಪಸವು, ಹಸ$_1$ (ನಾ). ೧. ಬರ; ಕ್ಷಾಮ; ದುರ್ಭಿಕ್ಷ: "ಪಸಂ ಬಱಂ" (ಕಣಾನಿ. ೬೧); ಪರಿವೇಷದೊಳ್ ಗ್ರಹದ್ವಯಮಿರೆ ಕದನಂ ತ್ರಿಗ್ರಹಂಗಳಿರೆ ಪಸಮುಂ . . . ಅಕ್ಕುಂ (ಲೋಕೋಪ. ೪-೩೫); ಅನೃತಂ ಭಯಂ ಪಸಮೆಂಬ ಮಾತು ಪೊರ್ದದು (ಪರ್ಮಾ. ೬-೫೭); ಬೇಗಂ ಕಿಡುವ ಮಾನಿಸವಾಟಿಗ್ಗೆ ಮಾರಿಯ ಮೇಲೆ ಪಸಮೆಂಬಂತೆ ಜವನೆಂಬ ಪಾತಕಂ . . . ಎಡೆಯೊಳಿಱಿಮುಱಿಮುಱಿದುಯ್ವಂ (ಜೀವಸಂ. ೬-೯). ೨. ಇಚ್ಛೆ; ಬಯಕೆ: "ಬಾಕುಳಿ, ಮೊಗಸು, ಪಸಂ, ಇಚ್ಛೆ—ಈ ೪ ಇಚ್ಛೆ" (ಕಶಸಾ. ೫೭-೨೩೩); ಪೊಸಪೂವಿನ ಪೊಸದುಡುಗೆಯ ಪಸವೋಡಿದುದಿಲ್ಲ (ಆದಿಪು. ೭-೭೦); ನೆರೆಗದಿರಂ ಧಾರೋಷ್ಣಂಗುಡಿದು ಮನದ ಪಸವೋಡಿ ತಸು ತಣಿದು (ಅನಂಪು. ೭-೮೦ ವ); ಎನ್ನ ಕಣ್ಣ ಪಸವೋಡುವಂತು ಮಾಡಿ ದೊರನಿಂ ತಮ್ಮೊಳ್ ಕೂಡುವಂತೆ ಮಾಟ್ಪಿಂ (ಬಂಹರಿ. ೯-೪೧ ವ); ಅಳಿನಿಯ ಪಸವನದರ ಸರಿದೂಗೆ ಮಿಂಗುಗುಮೆಯುವನ ಸೊಗಸಂ? (೧೪ವಿಂ. ೨೭-೧೫). ೩. ಅತ್ಯಾಸೆ; ಅತ್ಯಪೇಕ್ಷೆ: 'ಪಸವಡು' ಪರಾ. ೪. ಆತುರ; ಕಾತರ; ತವಕ: "ಉರವಣಿಗೆಯರ್ಥದೊಳ್ ಪಸ" (ಶಬ್ದಮಂ. ೬೩). ೫. (ಆಲಂ) ಹಸಿವು; ಕ್ಷುಧೆ: 'ಪಸವಡು' ಪರಾ. **ಪಸವ**$_2$: ೧. ಪನ್ನೆರಡುವರ್ಷಂಬರೆಗಮಾ ನಾಡೊಳ್ ಅನಾವೃಷ್ಟಿಯಾಗಿ ಮಹಾರೌದ್ರಪಸವಮಕ್ಕುಂ (ವಡ್ಡಾರಾ. ೮೮-೧೦). **ಪಸವು**: ೧. ಜ್ಞಾನಚಾರಿತ್ರಂಗಳಂ ಪ್ರತಿಪಾಳಿಸಿ ಬಡಗನಾಡ ಪಸವು ತಿಳಿದುದು (ವಡ್ಡಾರಾ. ೯೦-೧೬); ಇಂಚೆಯ ಪಸವಿನ ಬಱಿದ . . . ಬಾಧೆಯಿಲ್ಲದ ಪದದೊಳ್ . . . ವಿರಿಂಚಿಯ ಕೆಯ್ಪಿಡಿವೊಲಾದುವಾ ನಾಡೂರ್ಗಳ್ (ಪಂಪಭಾ. ೮-೫೧); ಪಸಿ[ಸ]ವಿನೊಳನ್ನಮಂ ಪಸಿದು ಬಂದವರ್ಗಿಕ್ಕುವ . . . ರಣಕ್ಕೆ ಶುಚಿತ್ವಮನಪ್ಪುಕೆಯ್ವ (?) ಮಾನಸಿಕೆಯ ನಾಲ್ವರುಂ ನಮಗೆ ವಂದ್ಯರ್ (ಗದಾಯು. ೪-೫೯); ಕಳವು ಪಿಸುಣ್ ಪಸವು ಬಱಂ . . . ಕುತ್ತಮಿಲ್ಲಾ ನಾಡೊಳ್ (ಶಬ್ದಾನು. ೧೪೦ ಪ್ರಯೋ). **ಹಸ**$_1$: ೧. ಈ ನೆಲಂ ನಲಿಯೆ ಭೂಭಾರಮನ್ನಿಳಿಪುವೆಂ ಕಯ್ಯ ಹಸಮಂ ಕಳೆದುಕೊಂಬೆ ನಾನೊಲಿದಿಂದು (ಇಹರ. ದೇ. ೪೦-೮); ಹಸ್ತದ ಹಸಂ ಹಱಿವಂತೆ ಪೂಜಿಸಿದನೋಜೆಯಿಂ ರಾಜೇಂದ್ರನು (ಹಚಕಾ. ೩-೬೮); ಹಸವಿಲ್ಲ ಜನಕೆ ಬೆಳೆಯಿಂ ಹಸವಿಲ್ಲಳಿಗಲರ್ಗಳಿಂದೆ ಹಕ್ಕಿಗೆ ಬನದಿಂ ಹಸವಿಲ್ಲೆಂದೆನೆ ಮುತ್ತನ ಹೊಸವೂರ್ ಎಸೆವುದು ಸಮಸ್ತಸೌಖ್ಯಾವಾಸಂ (ಎಕ. V, ಅರಸೀ. ೧೦೮-೪೫; 1255); ತನ್ನ ಕಯ್ಯ ಹಸವೋಪಿನಂ ತಱಿದು ನೆತ್ತರ ಕಡಲಂ ಹರಿಸಿ (ಮೈಆರಿ. ೧೯೩೭, ೩೧-೬; 1310).
[ದೇ. ॥ತುಳು. ಪಂಜ; ಕೋತ. ಪಜ್; ತೊದ. ಪೊರ್ಷ್]

**ಪಸ**$_2$, ಪಸನು, ಹಸ$_2$, ಹಸನ$_1$, ಹಸನು (ನಾ). ೧. ಮನೋಹರವಾದುದು; ಚೆಲುವಾದುದು; ಅಂದವಾದುದು. ೨. ನಿರ್ಮಲವಾದುದು; ಶುದ್ಧವಾದುದು; ಸ್ವಚ್ಛವಾದುದು: 'ಪಸಗೊಳಿಸು' ಪರಾ. **ಪಸನು**: ೩. ಒಳ್ಳೆಯದು; ಉತ್ತಮವಾದುದು; ಮೇಲಾದುದು: ಪಸಗೆಟ್ಟುರವಣಿಸುವ ಬಱಿಬೆಸನಿಗನೊಳ್ಪಸಿಗೆ ಸಂದು ಬೆಸವಟ್ಟುವುದಱಿಂ ಪಸುಸೂಲದ ಬಿಸುನೆತ್ತರ್ಪಸಿವರೆಯುಸಿರ್ಮಣದ ಬಾಟಿಸ್ತಿಯೇ ಪಸನಲ್ತೇ (ಚಕವಿ. ೬-೧೪೬). **ಹಸ**$_2$: ೧. "ನಿಗರ . . . ಹಸ . . . ಪರಿವಡೆದುದು—ಈ ೧೪ ಮನೋಹರಂ" (ಕಶಸಾ. ೫೫-೨೧೧). ೨. ಮಿಸುಕಲಾರದ ಜಸಂ ಬೆಸಸಬಾರದ ಹಸಂ (ವೆಂಕಾರಾ. ೪-೯-೨೫). ೩. ನೆಗಳ್ಗೆ ಕೊತ್ತಂಬರಿಕಷಾಯ ಹಸ (ರೂಢಿ). ೪. ಅಡಕೆಯಲ್ಲಿ ಒಂದು ಬಗೆ; ಚೆನ್ನಾದ ಅಡಕೆ; ಹದವಾದ ಕ್ರಮುಕ: ಶೇಖರಿಸಿದ್ದ ಕದರಡಕೆ ಬರಿಯ ಬೆಟ್ಟೆ ಗೋಟು . . . ಸ್ವಲ್ಪ ಹಸ ಮತ್ತು ದಳಗಳನ್ನಾದರೂ ಬೆರಕೆ ಮಾಡದಿದ್ದರೆ . . . ತನಗೆ ಕೊಡುವುದಿಲ್ಲ (ಮಲೆಮ. ೪೩೮); ತೋಟದಲ್ಲಿ ಎಷ್ಟು ಅಡಿಕೆ ಬೆಳೆದಿದೆ. ಬೆಟ್ಟೆಯೆಷ್ಟು-ಹಸ ಎಷ್ಟು (ಹೊಸಕ್ಷಿ. ೨೪೮). **ಹಸನ**$_1$: ೫. ಸ್ವಚ್ಛತೆ; ಶುದ್ಧತೆ: ಹಸನವಿಲ್ಲದಳ ಮನೆವಾರ್ತೆ ತಿಪ್ಪೆಯ ಕಸದಂತೆ ಇಹುದು (ಸರ್ವಜ್ಞ. ೧೭೨೪). ೬. ಸರಿಯಾದುದು; ಸಮರ್ಪಕವಾದುದು; ಯೋಗ್ಯವಾದುದು: ಬಸವನೇಕವಿವೇಕಿ

ಯಾದನು . . . ದೀನರಂ ಮಾಡಿದನೆ ಜಂಗಮವ ವಸುಧೆಯೊಳು ತಾನೀವವಂ ಗಡ ಹಸನವ್ವೆ ನುಡಿ ಈ ನುಡಿಯನಾಲಿಸುವರೇ ಶಿವಭಕ್ತರು ಗಳತಿದೋಷವಹುದಲ್ಲ (ಬಸವು. ೨೨-೪೬); ಅವರದು ಅವರಿಗೇ ಹಸನ, ನಮ್ಮದು ನಮಗೇ ಹಸನ (ಪ್ರಾಧ್ವ. II, ೬೪). **೭.** ಕ್ಷೇಮ; ಹದುಳ; ಕುಶಲ: ನೆಲವೆಲ್ಲವು ಮಸಣ ಮಸಣ ನೋಡಿದಲ್ಲಿ ಇಲ್ಲ ಹಸನ (ಸೂರ್ಯಪಾ. ೪೦-೧೬). **ಹಸನು:** **೧.** ಹಸನಾದ ಹೆಣ್ಣ ಮೇಲೆ ಕುಸುಮವ ತಂದಿಕ್ಕಿ ಶಶಿಮುಖಿಯರಿಗೆಲ್ಲ ಬಸುಱು ಮಾಡಿದನೀತ (ಪುರಂದ. ೧-೯೧-೨). **೩.** ರಸವಪ್ಪವಂ ಜಿಹ್ವೆ ಮುಖದಿಂದಲರ್ಪಿಸಲು ಹಸನಪ್ಪ ರುಚಿಯ ಪ್ರಸಾದವನು ಭುಂಜಿಸಲು (ದೀಕ್ಷಾಬೋ. ೧೧೦-೨೯೦); ಹಸನಪ್ಪ ಗುರುವಿನುಪದೇಶದಿಂ ಮುಕ್ತಿ ವಶವಾಗದಿಹುದೆ (ಸರ್ವಜ್ಞ. ೬೪); ಹಸನಲ್ಲದ ಕುಲದೊಳ್ ಪುಟ್ಟದಳ ಕೂಡಿ ವಸುಧೇಶ ಪುರವನ್ಯೆದಿದನು (ಜಿನರಾ. ೩-೯೯). **೬.** ಹಸನನುಳಿ ದುಸುರಿದಡೆ ಬಾಯ ತೆಱೆಯಲುಂಟೇ ಬಳಿಕ (ಬಸವು. ೪೦-೨೪); ಹಸನು ವರ್ಣವಿಭೇದಪದ್ಧತಿ ಸಸಿನ ವೈದಿಕಮಾರ್ಗ ನಿನ್ನಲಿ ವಸುಮತೀಪತಿ ಕೇಳು ಜನಪಾಲನೆಯು ಪರಿ ಲೇಸು (ತೊರಾ. ೧-೯-೨೩). **೭.** ಹಸನಾಗಿ ಬದುಕುವಡೆ ಕುಶಲನೆಂದೆನಿಸುವಡೆ . . . ಹಸಿದರಿಗೆ ಅಸನವನು ಇಕ್ಕು (ಸರ್ವಜ್ಞ. ೬೪೨); ದೇವಕೀದೇವಿಯರು ಮೊದಲಾದ ಶಶಿವದನೆಯರು ಬಂಧುವರ್ಗವು ಹಸನೆ (ಕೋಗಮು. ೧೨-೧೯). **೮.** ಒಳಿತು; ಲೇಸು; ಹಿತ: ಹಗೆಯ ಹೆಚ್ಚುಗೆ ಹಸನ ಕೊಡುವುದೆ (ಕುಪ್ಪಾಅ. ೮-೪೮); ಅಸಿಧಾರೆಯ ಜೀನ ನೆಕ್ಕೆ ನಾಲಗೆಗದು ಹಸನೆ (ಕುರಾಸಾಂ. ೩೪-೭೯). **೯.** ಹದ; ಹವಣು: ಹಸಿದಾರ್ಭಟಿಸುವ ಹುಲಿಯ ಮೀಸೆಯ ಮುಱು ಶಶಕ ಬಂದಲುಗಿದಂತೆ ಹಸನಱಿಯದೆ ಕೆಣಕಿದ ವೈರಿಬಲವನು ದೆಸೆಬಲಿ ಗೊಡು ಹೋಗು (ಕಂನವಿ. ೧೭-೨೪).

**ಹಸನಾಗು**=**೧.** ಚೆಲುವಾಗು; ಸುಂದರವಾಗು; ಮನೋಹರವಾಗು: ದಶರತ್ನಖಚಿತಕವಾಟಬಂಧಗಳಿಂದ ಹಸನಾಯಿತು ಕೃಷ್ಣನಗರ (ಮೋಹತ. ೨೯-೨೬). **೨.** ನಿರ್ಮಲವಾಗು; ಪರಿಶುದ್ಧವಾಗು: ಹಸನಾಯ್ತು ನಿನ್ನ ಮನ . . . ಕಂಡತಿಸಂತಸವಾಯಿತು (ದೀಕ್ಷಾಬೋ. ೧೦೨-೬). **೩.** ಚೆನ್ನಾಗು; ಉತ್ತಮವಾಗು: ಶ್ರದ್ಧೆಯಿಂದ ಮಾಡಿದ ಕೆಲಸ ಹಸನಾಗುತ್ತದೆ (ರೂಢಿ). **ಹಸ ಮಾಡು, ಹಸನ ಮಾಡು, ಹಸನು ಮಾಡು**=ಚೊಕ್ಕಟಗೊಳಿಸು; ಸ್ವಚ್ಛವಾಗುವಂತೆ ಮಾಡು; ನಿರ್ಮಲಗೊಳಿಸು: ಆ ಹೊಲನಂ ಹಸ ಮಾಡಿ ಬಿತ್ತುವ ಪರಿ ಇನ್ನಾವುದಯ್ಯಾ (ಸರ್ವಪ. ೧೦೫-೫೬೮); ಗುಡಿಲಂ ಹೊದಿಸಿ ಹಸ ಮಾಡುವ ಕಳನ ಕೆತ್ತುವ ಮೇಟಿಯಂ ನೆಡುವ . . . ಗೊಂದಣಂ ಕುಡಿಯರುಗಳೊಳ ಗೊಪ್ಪಮಂ ಪಡೆದುದು (ಸಮ್ಯಕೌ. ೧-೨೪); ಅದನ್ನು ಹಸನ ಮಾಡುವವರು ಹೆಣ್ಣಾಳುಗಳು (ಬೆಳಭಾ. ೯); ಅಕ್ಕಿ ಹಸನ ಮಾಡುವುದು . . . ಮೊದಲಾದ ಕೆಲಸ ಇರುತ್ತಿದ್ದವು (ಪ್ರತಿಬಿಂ. ೨೮); ಬೆಕ್ಕು ಅಂಗಾಲಿಂದ ಮೈಯನ್ನು ಹಸನು ಮಾಡಿಕೊಳ್ಳುತ್ತದೆ (ಮುಂಬಯಿ. ೩-೩೧); ಸರಗು-ಕಸರು ತುಂಬಿದ ಜೋಳ; ಹಸನು ಮಾಡಿದರೆ ಆರು ಚಟಾಕಿಗಿಂತಲೂ ಕಡಿಮೆಯಾಗಬಹುದು (ಜನಜೀ. ೨). [**ದೇ.॥ ತೆಲು.** ಪಸನು]

**ಪಸಂಗೊಳ್,** ಹಸಗೊಳ್ಳು (ಕ್ರಿ). ಚೆನ್ನಾಗು; ಒಳ್ಳೆಯದಾಗು: ಅಮರ್ದಿನ ಮುನ್ನೀರೊಳ್ ಪಸಂಗೊಂಡ ತೇಜಂ ನೆಗೞ್ದುದು (ಚಿಕವಿ. ೩-೮೨). **ಹಸಗೊಳ್ಳು:** ಎಲ್ಲೆಲ್ಲಿ ಏನು ಕಸುವಿನಲಿ ಬೆಳೆವುದೊ ಆ ಬದುಕು ಹಸಗೊಂಡು ರಸವಾಗಲಿ (ನೆಲಮು. ೨೨-೧೪).

[ಪಸ$_2$ + ಕೊಳ್$_1$]

**ಪಸಂದ್** 'ಪಸಂದು' ನೋ.

**ಪಸಂದ** 'ಪಸಂದು' ನೋ.

**ಪಸಂದು,** ಪಸಂದ್, ಪಸಂದ (ನಾ). **೧.** ಒಳ್ಳೆಯದು; ಚೆನ್ನಾದುದು: ಅದು ಅಷ್ಟು ಪಸಂದಾಗಿರುತ್ತದೆ (ಅನಾಥೆ. ೧೬೬); ಗರ್‍ರನೆ ತಿರುಗಿದ್ದಂತೂ ಬಹು ಪಸಂದಾಯಿತು (ಮಲ್ಲಿ. ೩೨). **೨.** ಅಚ್ಚುಕಟ್ಟು; ಒಪ್ಪ: ಮುದ್ದರಾಜರವರು ಮಡಿಕೇರಿಯೆಂಬ ಜಾಗ ಪಸಂದು ಮಾಡಿ (ರಾಜೇಂದ್ರ. ೨); ಆ ಸರದಾರರು ಪಸಂದು ಮಾಡಿದಂಥ ಮಾರ್ಗವನು ತಾವು ಒಡಂಬಟ್ಟು (ರಾಜೇಂದ್ರ. ೬೬). **ಪಸಂದ್: ೧.** ಈ ನಮೂನೆಗಳಲ್ಲಿ ಯಾವುದಾದರೂ ನಿಮಗೆ ಪಸಂದ್ ಬಿದ್ದೀತು (ದೇಕನ್ನೈ. ೧೦೬); ಬಂಗಲೇ ಕಟ್ಟಿಸಲಿಕ್ಕೆ ಜಾಗಾ ಮಾತ್ರ ಬಹಳ ಪಸಂದ್ ಆರಿಸಿದೀರಿ ನೋಡ್ರಿ ಧಣೀರ! (ಜನಜೀ. ೧೫೬). **ಪಸಂದ: ೧.** ಒಬ್ಬರ ವಸ್ತುವನ್ನು ಇನ್ನೊಬ್ಬರು ತೆಗೆದುಕೊಳ್ಳುವುದು ಪಸಂದವಲ್ಲ (ಅಳಸಿ. ೨೬). **೩.** ಅಂದ; ಚೆನ್ನ: ನೀನು ಭಾರಿ ಪಸಂದವಾಗಿ ಕಾಣುತ್ತೀಯೆ (ಕುಡಿಕೊ. ೧೮೪).

**ಪಸಂದ ಬೀಳು**=ಚೆನ್ನಾಗಿ ಕಾಣು; ಒಳ್ಳೆಯದಾಗಿ ತೋರು: ನಿನಗೆ ಪಸಂದ ಬಿದ್ದರ ನೀ ತೊಗೋ (ಗಂಪಾಯಿ. ೨೬೯).

[←ಪಾರ. ಹಿಂ. ಪಸಂದ್]

**ಪಸಗಂದು** (ಕ್ರಿ). ಹಸನುಗೆಡು; ಹದಗೆಡು: ತಂದೆಯನೆನ್ನಿಂದಂ ಕಿಱಿದಂದೆಗಳಟ್ಟುರ್ಕೆ ನಿಮ್ಮನೊಸೆದೋವಿದರಾ ಚೆಂದಮನಱಿತವರೊಳ್ ಪಸಗಂದದವೊಲ್ ಮೆಱೆದಪುದಿರದೆ ಪರತಂತ್ರತೆಯಿಂ (ಚಿಕವಿ. ೪-೧೭೯).

[ಪಸ$_2$ + ಕಂದು$_1$]

**ಪಸಗರಿಕೆ** (ನಾ). ಒಂದು ಬಗೆಯ ಹುಲ್ಲು: ಪಸಗರಿಕೆ, ಅಕ್ಕಬಲ್ರು ಹುಲ್ಲು, ಮೇಲ್‌ಗರಿಕೆಹುಲ್ಲು (ಮೈಗ್ಯಾಗಿ. ೨೭-೫೨೦).

[ಪಸ$_0$ + ಕರಿಕೆ (<ಕಱುಂಕೆ)]

**ಪಸಗೆಡಿಸು,** ಹಸಗೆಡಿಸು (ಕ್ರಿ). **೧.** ಸೋಲಿಸು; ಪರಾಜಯಗೊಳಿಸು: ಪಸಗೆಡಿಸಿ ಕೆಳದಿದಟಮಂ (ಅಪ್ರತಿ. ೧೧೦-೧೪೧). **ಹಸಗೆಡಿಸು: ೧.** ಮಿಱು ಬಂದವರುಗಳನು ಹಸಗೆಡಿಸಿಯೆ ಕಾದುತಿಹವು (ತ್ರಿಪುಸಾಂ. ೪-೫೫); ತಿವಿದವರನು ಹಸಗೆಡಿಸಿದನು ಬೇಗದೊಳು (ಕುರಾಸಾಂ. ೧೩-೧೪); ಅಸಮಾಕ್ಷ ದಕ್ಷಮುಖಶಿಕ್ಷ ಲೋಕಾಧ್ಯಕ್ಷ ಹಸಗೆಡಿಸಿದಂ ಶಬರನೆಮ್ಮನು (ಚೆಬಪು. ೫೩-೫೮). **೨.** ಹಾಳು ಮಾಡು; ನಾಶ ಮಾಡು: ಹಾದಿಗೆ ಕೊಟ್ಟ ಬುತ್ತಿಯನು ಹಳಸಿಸಿ ಹಸಗೆಡಿಸಿದನು (ಅಂತರಾ. ೩೦). **೩.** ನಿವಾರಿಸು; ಪರಿಹರಿಸು: ಹಸಿವು ತೃಷೆಯು ನಿದ್ರೆ ಮೊದಲಾದ ದುಃಖವ ಹಸೆ[ಸ]ಗೆಡಿಸುವ ಶಕ್ತಿಯುಳ್ಳ ಅಸಮವೈಭವನೆ ನನ್ನೆದೆಯೊಳಗಿರು (ಭರತ. ೧೫-೧೪೩). **೪.** ದಿಗ್ಭ್ರಮೆಗೊಳಿಸು: ನೋಡುವಮರರ ಹಸಗೆಡಿ[ಪಾಠಾಂ.ಗಿಡಿ]ಸುತಲಿ ತಾರಗೆಯು ದೆಸೆಗೆಡಿಸುತ ಮುಸೆದಂಬು ಪರಿದುದಂತವರ (ವರ್ಧಜ. ೬-೧೧೭).

[ಪಸಗೆಡು+-ಇಸು$_3$]

**ಪಸಗೆಡು,** ಹಸಂಗೆಡು, ಹಸಗೆಡು (ಕ್ರಿ). **೧.** ಅಂದ ಕೆಡು; ರೂಪ ಕೆಡು: ಪಸಗೆಟ್ಟುರವಣಿಸುವ ಬಱುಬೆಸನಿಗನೊಳ್ಪಸೆಗೆ ಸಂದು ಬೆಸವಟಱುವುದಱಿಂ ಪಸುಸೂಲದ ಬಿಸುನೆತ್ತರ್ಗಸಿವರೆಯುಸಿರ್ವಿಣದ ಬಾಟಿತ್ತಿಯೇ ಪಸನಲ್ತೇ (ಚಿಕವಿ. ೬-೧೪೬). **ಹಸಂಗೆಡು: ೨.** ಸಮಸ್ಥಿತಿಯನ್ನು ಕಳೆದುಕೊಳ್ಳು; ಹದಗೆಡು: ಕಂದಿದಾನನಂ ಕದಡಿ ಹಸಂಗೆಟ್ಟ ಮನಮಿರೆ ವಿಷಾದಂ ಪುಟ್ಟೆ ಕರಂ ಶಂಕರಂಗವಳ್ಕಿಂತಿಸಿದಳು (ವೃಷವಿ. ೯-೧೦೦). **೩.** ಕುಗ್ಗು; ಬಾಡು; ನಿಸ್ತೇಜವಾಗು: ಅಲರ ಬಿಜ್ಜಣಿಗೆಯಿಂ ಬೀಸೆ ಬೀಸರಂಬೋದಂತೆ ಹಸನಂ ಹಸಂಗೆಡೆ . . . ಬಿಸುಸುಯ್ಯರ್ ಬೀದಿವರಿಯೆ (ರಾಜಶೇ. ೭-೯೨ ಪ). **ಹಸಗೆಡು: ೧.** ಬಿಸಿಲೊಳು ತಿರ್‍ರನೆ ತಿರುಗಿದ ಕಾರಣ . . . ನಿನ್ನ

ಕೋಮಲತನು ಹಸಗೆಟ್ಟು ಬಡಬಡವಾಯ್ತು (ನೇಮಿಸಂ. ೮-೭೨); ಹಸಗೆಡೆ ಭಾನು ಕಂಪಿಸೆ ಗಾಳಿ ಭಯಂಕರಮಾದುದಾಹವಂ (ಹಮ್ಮಿ.ರ. ೩-೫೦). **೪.** ಸೋಲು ; ಪರಾಜಯಗೊಳ್ಳು : ದೇವರ ಶರಹತಿ ಗಾಣದೆ ಹಸಗೆಟ್ಟೇ ಹಂದೆ ಮೃಗಾಕಾರವ ಧರಿಸಿದೆನು (ವೀರೇಚ. ೨-೪೨); ಎಸೆವಾಳು ಕುದುರೆ ಗಜಗಳ ಮೋಹರದಲಿ ನುಸುಳಲಾಣದೆ ಪವಮಾನ ಹಸಗೆಟ್ಟು ಮಂದಗತಿಯನೈದಿದನು (ಕಂಸವಿ. ೧೭-೨೯). **೫.** ಹಾಳಾಗು ; ನಾಶವಾಗು ; ಕೆಟ್ಟುಹೋಗು : ಅವಗುಣಂಗಳ ಸಂಗದಿಂ ಕುಲಂ ಹಸಗೆಟ್ಟನಾಮಿಕೆಯರಾದರಲ್ಲದೆ ಸಂಗವಾರ ಕುಲಮಂ ಕೆಡಿಸದು (ಹಚಕಾ. ೭-೩); ಹಸಗೆಟ್ಟಿತೆನ್ನೀ ಕಾರ್ಯ (ಪ್ರಭಂಜ. ೨-೧೪೦); ಕಸ ಕೊಳೆ ಸೇರಿಕೊಂಡು . . . ಮನೆಸಾಮಾನುಗಳು ಹಸಗೆಡುವುವು (ಗೃಹವಿ. ೧೭೯).
[ಪಸ$_2$ + ಕೆಡು$_1$]

**ಪಸಗೆಯ್ಮೆ** (ನಾ). ಹಸನಾದ ಕಾರ್ಯ,-ಕೆಲಸ : ಪಸಗೆಯ್ಮೆಯ ಚಳಕದೆ ಸಂತಸವಡೆದಂ (ಚಿಕವಿ. ೬-೧೧೫). [ಪಸ$_2$+ಗೆಯ್ಮೆ(<ಕೈಮೆ$_1$)]

**ಪಸಗೆಯ್ಮೆವಾತು** (ನಾ). ಹದುಳವಾದ ಮಾತು; ಸವಿಮಾತು : ಕೆಲದೊಳ್ ಕೆಕ್ಕರಿಸುತೆ ಪಲಪಲವುಂ ಪಸಗೆಯ್ಮೆವಾತುಗೊಂಬವೊಲಲ್ತು (ಚಿಕವಿ. ೬-೧೩೧). [ಪಸಗೆಯ್ಮೆ+ವಾತು$_1$]

**ಪಸಗೊಳಿಸು,** ಹಸಗೊಳಿಸು, ಹಸನುಗೊಳಿಸು (ಕ್ರಿ). ಹಸನು ಮಾಡು ; ಶುದ್ಧಗೊಳಿಸು ; ಸ್ವಚ್ಛಮಾಡು : ಸಕ್ಕವಿಗಳುಂ ನಿಮ್ಮ ಬಾಲಕನ ತೊದಲ್ನುಡಿ ತಪ್ಪ ತಿದ್ದಿ ಪಸಗೊಳಿಸುವುದೊಲಿದು (ನವಮೋ. ೧-೧೬); ಬುಧಜನರು ಜರಿಯದೆ . . . ತಿದ್ದಿ ಪಸಗೊಳಿಸಲಹುದು (ನವಮೋ. ೩೪-೪೫). **ಹಸಗೊಳಿಸು :** ಕಾಳನ್ನು ಹಸಗೊಳಿಸಿ ತೆಗೆದಿಟ್ಟಳು (ರೂಢಿ). **ಹಸನುಗೊಳಿಸು :** ಬಾಳನ್ನು ಹಸನುಗೊಳಿಸಲಿಚ್ಛಿಸುವವರು ಮಾತ್ರ ಅಲ್ಲಿಗೆ ಹೋಗಬಹುದು (ಜಗದಾ. ೩೬). [ಪಸ$_2$+ಕೊಳ್$_1$+-ಇಸು$_3$]

**ಪಸದ** 'ಪಸಾದ' ನೋ.

**ಪಸದನ,** ಹಸದನ (ನಾ). **೧.** ಸಿಂಗರಿಸುವಿಕೆ; ಅಲಂಕಾರ ಮಾಡುವಿಕೆ: "ಪಸದನ (ಪಚ್ಚ, ಪಚ್ಚೆ)-ಪ್ರಸಾಧನ= ಅಲಂಕರಣ, ಶೃಂಗರಿಸುವಿಕೆ" (ತದ್ಭ ಕೋ. ೨೫). **೨.** ಅಲಂಕಾರ ; ಶೃಂಗಾರ: ಎನ್ನ ಮದುವೆಯಂದು ಪ್ರಥಮದಿವಸದ ಪಸದನವಮನೆನಗೆ ತೋಱಲ್ವೇಱ್ಕು ಮೆಂದು ಬೇಡಿದೊಡಾಂ ಪ್ರತಿಜ್ಞೆಯಂ ನೆಱಪಲ್ ಬಂದೆಂ (ವಡ್ಡಾರಾ. ೧೭-೧೫); ಮಾಸಿದಂದಮುಂ ಪಸದನದಂತೆ ಕಣ್ಗೆಸೆದು ತೋಱುದುದು (ಪಂಪಭಾ. ೩-೬೧); ಅಂತಳಾಕೆಯಾ ಪಸದನದೊಳ್ ಜಗತ್ತ್ರಿತಯಚಿತ್ತ ವಿಮೋಹನಶಕ್ತಿಯೇೞ್ಗೆಯುಂ (ಚಂದ್ರಪ್ರ ೬-೬೬). **೩.** ವೇಷ, ಭೂಷಣ ಮೊದಲಾದ ಅಲಂಕರಣಸಾಧನ; ಒಡವೆ; ತೊಡವು: "ಪಚ್ಚಂ ತೊಡವುಂ ಪಸದನವೆನಲಾಭರಣಂ" (ಕವಿಕಂ. ೧೭೪); ನಿನಗಾಪ್ತಮಾದ ಪಸದನಮನಮೂಲ್ಯಮಪ್ಪ ವಸ್ತುವನೊಂದು ಪುಸ್ತಕದೊಳ್ ಮಡಗಿಟ್ಟೆನೆಂದು ಪೇೞ್ದು ಲೋಕಾಂತರಿತನಾದಂ (ಪಂಚತಂ. ೧೯೨-೨೧); ಪಸದನದೆ ಕೋಮಳೆ ಸೊಗಯಿಸಿದಳ್ (ಪುಷ್ಪಪು. ೫-೯೬).
**ಹಸದನ :** **೧.** ಪ್ರಸಾಧನ, ಹಸದನ (ಶಬ್ದಾನು. ೧೬೦ ಪ್ರಯೋ).
[<ಸಂ. ಪ್ರಸಾಧನ./ಪ್ರಾ. ಪಸಾಹಣ]

**ಪಸದನಂಗೆಯ್,** ಪಸದನಂಗೈ, ಪಸದನಗೆಯ್, ಪಸದನಗೈ (ಕ್ರಿ). **೧.** ಅಲಂಕರಿಸು ; ಶೃಂಗಾರ ಮಾಡು : ದಿವ್ಯಾಭರಣ ಭೂಷಣಂಗಳಿಂ ಪಸದನಂಗೆಯ್ದಲ್ಲಿ (ಜಗವಿ. ೧೪-೧೧೩ ವ); ತಮ್ಮ ಪರಿಕರ್ಮ ಕೌಶಲಮಂ ಮೆಱೆದು ನೆಱೆಯೆ ಪಸದನಂಗೆಯ್ಕೆ (ವರ್ಧಪು. ೭-೯ ವ); ವಸುಧೆಯಂ ಪಾದಾಬ್ಜರಾಗಮುಗುವೆಳ್ಪುಗಳ್ ಪಸದನಂಗೆಯ್ಕೆ (ಚಿಬಪು. ೫-೧೨). **ಪಸದನಂಗೈ :** **೧.** ಪೆಣ್ತನಕೆ ತಗುವಂತೆ ಮೇಣ್ ಚೆಲ್ವರಳುವಂತೆನ್ನ ಪಸದನಂಗೈ (ಚಿತ್ರಾಂಗ. ೧೪-೪೯೩). **ಪಸದನಗೆಯ್ :** **೨.** ಅಲಂಕರಿಸಿಕೊಳ್ಳು ; ಶೃಂಗರಿಸಿಕೊಳ್ಳು : ವರಕುಂಕುಮಾಂಗಿ ಮೌಕ್ತಿಕಭೂಷದರ್ಪಣಕರೆ ಪಸದನಗೆಯ್ಯುತೆಳ್ತಂದು ಕರಮೆಸೆದಳು ಪೂರ್ಣಶಶಿಯ ತಾರಾಳಿಯು ಧರಿಸಿದ ಸಂಜೆವೆಣ್ಣೆಂಬಂತೆ (ತ್ರಿಭುತಿ. ೧೧-೨೧). **ಪಸದನಗೈ : ೨.** ಮೋಹನವಾಂತು ಲಕ್ಷಣಂಬೆತ್ತು ಪಸದನಗೈದು ಕಡುಸೊಬಗಿನಿಂ ಮಂಡಿಸುವ ಲಲಿತಾಂಗಮಂ . . . ಕಂಡುಕಂಡೈದೆ ಮನದಣಿಯುದದಱಂತೆ ತಾನುಂ ಚಿತ್ರವಾಗಿರ್ದನೈ (ಸಾಳ್ವಭಾ. ೨೪-೧೧). [ಪಸದನ+ಕೆಯ್$_1$]

**ಪಸದನಂಗೈ** 'ಪಸದನಂಗೆಯ್' ನೋ.

**ಪಸದನಂಗೊಳ್** (ಕ್ರಿ). ಅಲಂಕಾರವನ್ನು ಮಾಡಿಕೊಳ್ಳು ; ಶೃಂಗರಿಸಿಕೊಳ್ಳು : ನೆಱೆಯೆ ತೊಟ್ಟುಟ್ಟು ಪಸದನಂಗೊಂಡಿರ್ದ ದೇವಗಣಿಕೆಯರನೆ ಪೋಲ್ವಯುವ್ವನೆಯರರಸಿಯರ್ (ವಡ್ಡಾರಾ. ೮೧-೬); ಚಕ್ರಧರ ಜಲಕ್ರೀಡಾಪ್ರಾರಂಭಮಂ ಕಂಡು ನೀರಾಟಕ್ಕೆ ತಕ್ಕ ಪಸದನಂಗೊಂಡು ತಂಡತಂಡದಿಂ ಪುಗುವಾಗಳ್ (ಆದಿಪು. ೧೧-೧೩೬ ವ); ನಿನಗತ್ಯಾನಂದಂ ಮಾಡುವೆನೆಂಬೀ ನೆವದಿಂದೆಸೆಯೆ ಪಸದನಂಗೊಂಡಿರ್ದಂ (ಪಂಚತಂ. ೭೭-೮); ಪಸದನಂಗೊಂಡು ನಿಜೇಶನಲ್ಲಿಗೆ ವಂದು (ನೇಮಿಪು. ೧-೧೩೧ ವ). [ಪಸದನ+ಕೊಳ್$_1$]

**ಪಸದನಂಗೊಳಿಸು,** ಪಸದನಗೊಳಿಸು (ಕ್ರಿ). ಅಲಂಕಾರ ಮಾಡು; ಶೃಂಗರಿಸು : ಪ್ರಸಾಧನಶಾಲೆಯೊಳ್ ಸ್ವಯಂಪ್ರಭೆಯನಾನೆ ಪಸದನಂಗೊಳಿಸುತ್ತುಮಿರ್ದು (ಆದಿಪು. ೪-೧೧ ವ); ತರಿಸಿ ಬೊಂಬೆಯನೊಂದಂ . . . ನೆಱೆಯೆ ಪಸದನಂಗೊಳಿಸಿ (ಧರ್ಮಾಮೃ. ೩-೧೦); ಪಿನಾಕಿಯ ಮನೋರಥಮಂ ಪುಣ್ಯಫಲದಿಂ ಪಸದನಂಗೊಳಿಸುವಂತೆ[ಪಾಠಾಂ.ಗೊಳ್ವಂತೆ] . . . ಶರ್ವಾಣಿಗೆ ಶೃಂಗಾರಂಗೆಯ್ದು (ಗಿರಿಕ. ೫-೭೬ ವ); ಅಂಗಜನ ಬಾಣವನೆ ಮಸೆದೊಪ್ಪವಿಟ್ಟಂತೆ ಕಂಗೆಡ್ಡಮಾದ ಕಾಂತೆಯನೆಯ್ದೆ ಪಸದನಂಗೊಳಿಸಿ (ಸಾಳ್ವಭಾ. ೨೬-೪). **ಪಸದನಗೊಳಿಸು :** ವಸ್ತ್ರಾಭರಣ ಕುಸುಮಸುಗಂಧದಿಂ ಪಸದನಗೊಳಿಸಿ (ಸಾಳ್ವಭಾ. ೩೩-೯೦); ಜವದಿ ಪಸದನಗೊಳಿಸು (ಜಿನಾಂ. ೯೫). [ಪಸದನಂಗೊಳ್+-ಇಸು$_3$]

**ಪಸದನಂಬಡೆ** (ಕ್ರಿ). **೧.** ಅಲಂಕಾರವನ್ನು ಹೊಂದು ; ಶೃಂಗಾರಗೊಳ್ಳು : ಪೊಸ ಗಂಧಸಿಂಧುರಂಗಳಂ ಬಂಧುರವೆನೆ ಪಿಂಗದೆ ಸಿಂಗರಿಸಿ ಗಜಾರೋಹಕರ್ ಪಸದನಂಬಡೆದೇಱಿ (ರಾಜಶೇ. ೧೩-೬೫ ವ). **೨.** ಅಲಂಕಾರವಾಗು ; ಶೃಂಗಾರವಾಗು : ವಸುಧೆಗೆ ಬಿಸವಂದ ಮಸೀವ ಪಸದನಂಬಡೆದ ಪೊಸ ಪಸುರ್ವಂದರೊಸಗೆ ಮಿಗೆ ಮಿಸುಗುತ್ತಿರ್ದುದು (ರಾಜಶೇ. ೮-೫ ವ). [ಪಸದನ+ಪಡೆ$_1$]

**ಪಸದನಗೆಯ್** 'ಪಸದನಂಗೆಯ್' ನೋ.

**ಪಸದನಗೈ** 'ಪಸದನಂಗೆಯ್' ನೋ.

**ಪಸದನಗೊಳಿಸು** 'ಪಸದನಂಗೊಳಿಸು' ನೋ.

**ಪಸನು** 'ಪಸ$_2$' ನೋ.

**ಪಸಯಿತ** 'ಪಸಾಯ್ತ' ನೋ.

**ಪಸರ್,** ಪಸರು, ಹಸರು$_1$ (ಕ್ರಿ). ಹರಡು ; ವ್ಯಾಪಿಸು ; ಹಬ್ಬು : ಪಸರ್ಪಂ, ಪಸರ್ವಂ ; ಪಸರ್ಪಿನಂ, ಪಸರ್ವಿನಂ (ಶಬ್ದಾನು. ೫೧೧ ಪ್ರಯೋ). **ಪಸರು :** ಕಣ್ಣಿನಿಂದ ಉಂಡ ಅಮೃತ ಮುಖದಲ್ಲಿ ಪಸರುವುದು (ಬಾಬಲ. ೮೨); ಒತ್ತರಡಿನಲ್ಲಿ ಪಸರದೆ, ಮುಸಿ ಇಂಗುವಂತೆ, ಶ್ಯಾಮರಾಯನ ಪ್ರಕರಣದ ಹಕೀಕತ್ತನ್ನು ಖಾದರ ಚೆಕ್ಕಿಸಿಕೊಂಡ (ಪೀಸಹ. II, ೧೩೨). **ಹಸರು$_1$ :** ಆಗ ಎಳೆಬಿಸಿಲು ಹಿತವಾಗಿ ಸೊಂಪಾಗಿ ಹಸರುತ್ತಿತ್ತು (ಒಡ್ಡಿಉ. ೨). [<ಪಸರ]

**ಪಸರ,** ಹಸರ (ನಾ). **೧.** ಹರಡುವಿಕೆ; ವ್ಯಾಪ್ತಿ; ವಿಸ್ತರಣ :

"ಪಸರ (ಪ್ರಸಾರ)–ಪ್ರಸರ = ವಿಸ್ತರಣೆ" (ತದ್ಭ ಕೋ. ೨೫) : ಅಸುಗೆಯ ಕೆಂಪು ಬಾಳೆಯ ಪಸುರ್ಪು . . . ಸುತ್ತಲುಂ ಪಸರಿಸಿ ಪರ್ವಿ ಮಾಣಿಕದ ಪಚ್ಚೆಯ ಪೊನ್ನ ಬೆಳ್ಳಿಯಾ ಪಸರದ ಚೆಲ್ವನಿಮ್ಮಡಿಸೆ (ಪುಷ್ಪ ಪು. ೯–೩೦). **೨.** ಗುಂಪು ; ಸಮೂಹ : "ಬಂಬಲ್ . . . ಪಸರಂ . . . ಗೊಂದಣ . (ಉಂಡಲ್)—ಈ ೪೦ ಸಮೂಹಂ" (ಕಶಸಾ. ೫೬–೨೨೨) ; ಕೆಡೆದ ಝುಲ್ಲರಿಗಳ . . . ಕಡಿಯ ರಚನೆಯ ರಾಶಿ ಯಮುನಂಗಡಿಯ ಪಸರವಿದೆನಲು ಮೆಱೆದುದು ಕೂಡೆ ರಣಭೂಮಿ (ಕುಪ್ಯಾಕ. ೧೫–೩೦) ; ಮೂಢಜನದ ಪಸರದ ಮುಂದೆ ಕಬ್ಬವನೋದಿ ಪೇಳ್ವವ ರಸಿಕನೆ (ಪರ್ವಚ. ೧–೨೧). **೩.** ವಸ್ತುಗಳನ್ನು ಮಾರಾಟಕ್ಕಿಡುವ ಸ್ಥಳ ; ಅಂಗಡಿ : "ಪಸರ–ಪ್ರಸರ = ಸಮೂಹ, ಅಂಗಡಿ" (ತದ್ಭ ಕೋ. ೨೫) ; ಪಂಚರತುನದೊಳೆ ನೆಱೆದ ಪಸರದಿಂ ತೋರಣಂಗಳೊಳೆ ತೊಡರ್ದ ತಿಸರದಿಂ ನೆಱೆಯೆ ಸೊಗಯಿಪಾಯೇಕಚಕ್ರಮಂ ಮೆಚ್ಚಿದಂ ಹರಿಗಂ (ಪಂಪಭಾ. ೩–೨೨) ; ಸಕಲರತ್ನಂಗಳ ಪಸರದಿನೆಸೆದು ವಲ್ಲಿ ವಿಪಣಿಪದಂಗಳ್ (ಕಾದಂಪೂ. ೨೯೩) ; ಸೊಗಯಿಸಿದುದು ತೊಳಪ ಕಂಚುಗಾಜಿರ ಪಸರಂ (ರಾಜಶೇ. ೨–೧೦೨). **೪.** ಅಂಗಡಿಯ ಸರಕು: ಎಸೆದ ಬಹುರತ್ನರಾಶಿಯ ಪಸರಂಗಳಿನಪಜ ಬೀದಿಗಳ್ ಪಲವುಂ ರಂಜಿಸಿ ತೋರ್ಕುಂ (ಪಂಚತಂ. ೧೪–೧೦) ; ಸೋಂಬನಂಗಡಿಯಂತೆ ಪಸರಮಿಲ್ಲದೆ (ಧರ್ಮಾಮೃ. ೨–೧೫೫) ; ಮೊಸರು ಇಲ್ಲದ ಊಟ ಪಸರವಿಲ್ಲದ ಹರದ (ಸರ್ವಜ್ಞ. ೧೧೧೬). **೫.** ತೋರ್ಕೆ ; ಪ್ರಕಾಶ : ಸಚರಾಚರಂಗಳು ಪಸರಕ್ಕೆ ಬಾರದಂದು . . . ಅನು ನೀನು ಇಲ್ಲದಂದು ಅಂದೇನೊ ಇಂದೇನೊ (ಅದವ. ೧–೧). **೬.** ಸಂಭಾವನೆ ; ಉಡುಗೊರೆ ; ಕಾಣಿಕೆ : "ಉಪಹಾರಮೆನಲ್ ಪಸರಂ" (ಭಾರತಿ. ೬೨). **೭.** ಸುಲಭವಾದುದು ; ಹಗುರವಾದುದು : ಏಂ ಪಸರಮೋ ಕರ್ವಸುಹೃದ್ವ್ಯಂಜನಂ (ಪರ್ವಪು. ೧೦–೪೧). **೮.** ಸಲಿಗೆ ; ಸದರ : 'ಪಸರಂಗೊಡು' ಪರಾ. **೯.** ಅವಕಾಶ ; ಆಸ್ಪದ : 'ಪಸರಂಬಡೆ' ಪರಾ. **೧೦.** ಆಶ್ರಯ ; ನೆಲೆ : ಗಾಂಗೇಯನ ನುಡಿಯೊಳವಸರಮಂ ಪಸರಮಂ ಪಡೆಯದೆ (ಪಂಪಭಾ. ೧–೭೫ ಪ) ; "ಪಸರಮಂ = ಸಲಿಗೆಯನ್ನು" (ಪಂಪವೀ. ೨೮). **ಹಸರ : ೧.** ಹಸರದ ಪಸರದ ಭಕ್ತಿಯ ಪಸರಿಸಿ 'ನಾವು ಗುರುವೆಂಬಿರಿ (ಚನ್ನಪ. ಕ. ೫೨೮–೧೧೩೨) ; ಕಣ್ಣೆಸೆದನು ಬೆತ್ತದಡವಿಯ ಹಸರದೊಳಗೆ ಹೊಕ್ಕು ಹೊಡಕರಿಸುವ ಸಿಂಗಸಿಸುವಿನಂತಾ ವೀರರಾಮ (ಕುರಾಸಾಂ. ೪೩–೬೯) ; ಅನುಮಂದರಸ್ಥಾಯಿಪಂಚಮದಿಂದ ತಾರಸ್ಥಾಯಿಪಂಚಮದ ತನಕ ಆದರ ಹಸರವಿತ್ತು (ಸಂಗೀತ. ೪೫). **೨.** ಆ ಮಾದ್ರೇಶನಂಬಿನ ಹಸರವನು ಹರಿಗಡಿವನರ್ಜುನನಗಣಿತಾಸ್ತ್ರದಲಿ (ಕುಪ್ಯಾಶ. ೨–೪೯) ; ಗಿಡಗಿಡದ ಬುಡದಲ್ಲಿ ತರಗೆಲೆಯ ಹಸರ (ಕರುಶ್ರಾ. ೪೧–೧೯). **೩.** ಆ ಊರ ಹಸರದ ಸುಂಕವಂ ಆಚನ್ದ್ರಾರ್ಕವಾಗಿ ನಡೆವನ್ತಾಗಿ . . . ಬಿಟ್ಟ ಧರ್ಮ (ಮೈಆರಿ. ೧೯೨೮, ೫೬–೨ ; 1380) ; ಹೇಮವೇದಿಯ ವಿವಿಧ ರತ್ನಾವಳಿಯ ಹಸರದಲಿ ಆ ಮಹಾಪುರವೆಸೆದುದು (ಕುಪ್ಯಾಅ. ೧೪–೧೧) ; ಕಾಲಗತಿ ಬದಲಿಸಿದಂತೆ . . . ಹಸರದ ಇನ್ನಿತರ ಒಡವೆಗಳ ಮೇಲೂ ಅವರಿಗೆ ಮೋಹ ಬೆಳೆಯಿತು (ಕುಡಿಕೂ. ೩೦). **೧೦.** ಅದನೇನೆಂದಪೆಂ ಹೇಸಿಕೆಯ ಹ[ಪಾಠಾಂ.ಪ]ಸರಮಂ (ಪಿಂಡೋರ. ಹ. ೫೦೫–೯) ; ವೈಶಿಕದ ಹರವರಿ ಹುಸಿಯಹ [ಪಾಠಾಂ.ಪ]ಸರ ಕೃತಕದ ಕೇರಿ. . . ಎಂದೆನಿಪ ಸೂಳೆಗೇರಿಯ ಹೊಕ್ಕನಾದಯ್ಯನು (ಸೋಮಚ. ೨–೧೮). [<ಪ್ರಾ. ಪಸರ./ಸಂ. ಪ್ರಸರ]

**ಪಸರಂಗೆಯ್** (ಕ್ರಿ). ವಿಸ್ತಾರಗೊಳಿಸು ; ಹರಡು : ರಸಭಾವಾಭಿನಯಂಗಳಂ ಭುಜಲತಾಭ್ರೂಚಾಪನೇತ್ರೋತ್ಪಲಪ್ರಸರಂಗಳ್ ಪಸರಂಗೆಯ್ಯುತ್ತಿರೆ (ಆದಿಪು. ೭–೧೨೩) ; ಗಂಧೇಭಚರ್ಮಂಗಳಂ ಪಸರಂಗೆಯ್ದನೊ ಶಂಭು (ಸಂಪಭಾ. ೪–೪೯). [ಪಸರ + ಕೆಯ್$_1$]

**ಪಸರಂಗೊಡು** (ಕ್ರಿ). ಸಲಿಗೆಯನ್ನು ಕೊಡು ; ಸದರವನ್ನು ನೀಡು : ಇವಂದಿರ್ಗೆ ಪಸರಂಗೊಟ್ಟೆನಪ್ಪೊಡೆ ಮುನ್ನಿನಂತರ್ಕೆ ಕಿಡುವರ್ (ಪಞ್ಚಾರ. ೩–೧೫) ; ಬಾಬ್ಬನ್ನವಿಂದ್ರಿಯಾಳಿಗೆ ಪಸರಂಗೊಟ್ಟುಂ ಮೆಯ್ಮೆಚ್ಚಿದವೋಲುಟ್ಟುಂಡುಂ ಸಿದ್ದೆಗೆಯ್ದು ಸುಖಮಂ ಪಡೆಯಾ (ಶಾಂತಿಪು. ೮–೧೩೪) ; ಆನಿವಂದಿರನಾದರಿಸಿ ಪಸರಂಗೊಟ್ಟೆನಪ್ಪಡೆನಗೆ ಸುಸರಮಾಗಿ ಬೆಸಕೆಯ್ಯಲಱಿಯರ್ (ಸುಕುಮಾ. ೨–೫೨ ಪ). [ಪಸರ + ಕೊಡು$_1$]

**ಪಸರಂಗೊಳ್** (ಕ್ರಿ). = ಪಸರಂಬಡೆ ೧ : ಬಿಸುಸುಯ್ಯುಂ ನಸುಗಂದಿ ಬಾಡಿದಧರಂ ಕಣ್ಣೀರ ಬಾನಲ್ಗಳಿಂ ಬಸಿವಾಸ್ಯಂ ತಳಗಯ್ಯ ಪಜ್ಜೆ ಪಸರಂಗೊಂಡಿರ್ದ ಗಂಡಸ್ಥಳಂ . . . ಪಿಸುಣಾಡಿತ್ತಸಮಾಸ್ತ್ರನಸ್ತ್ರಹತಿಯಂ ತತ್ಕಾಮಿನೀರೂಪಕಂ (ಲೀಲಾವ. ೪–೧೪೩). [ಪಸರ + ಕೊಳ್$_1$]

**ಪಸರಂಬಡೆ** (ಕ್ರಿ). **೧.** ವಿಸ್ತಾರವನ್ನು ಹೊಂದು ; ಹರವಾಗು : ಪಲ್ಲವಪ್ರಸರದೊಳೆಯ್ದೆ ಕಣ್ಗೆ ಪಸರಂಬಡೆದೊಪ್ಪುವ ಕೆಂಪು (ಆದಿಪು. ೧–೬೬) ; ಪಥಿಕಜನದ ಕಣ್ಗಂ ಮನಕ್ಕಂ ಪಸರಂಬಡೆದು ನೆಱೆ ಸೊಗಯಿಸುವ ಸರಸಸರಸೀರುಹಾಕರಂಗಳೊಳ್ (ಶಾಂತಿಪು. ೧–೫೬ ವ) ; ಪುಟ್ಟಿಸಿದಂ ಪುಸಿವಡೆಯಂ ಕಡು ಮೆಚ್ಚಿದಿರೆ ಪಸರಂಬಡೆದಾನೆ ಕುದುರೆ ತೇರಾಳ್ಗಳುಮಂ (ಕಬ್ಬಿಕಾ. ೨೪೯). **೨.** ಸಲುಗೆಯನ್ನು ಪಡೆ ; ಸದರವನ್ನು ಹೊಂದು : ಅವಂದಿರ್ಪಸರಂಬಡೆದು ತಂತಮ್ಮ ಕಲಿತ ರೂಪ ಶೌರ್ಯ ವಿಭವಂಗಳಂ ವಾಚಾಲರಾಗಿ ಬಣ್ಣಿಸುತ್ತಮಿರೆ (ಕಾದಂಉ. ೨೬೨) ; ಸೂರ್ಯಮಿತ್ರನಾತನ ಪಸರಂಬಡೆದು . . . ಪೊಗೞ್ದು (ಸುಕುಮಾ. ೩–೭ ವ). **೩.** ಅವಕಾಶವನ್ನು ಪಡೆ ; ಅನುಕೂಲತೆಯನ್ನು ಹೊಂದು : ಮೆಯ್ಕುನಾಗಳಾಱಸಲೆಂದು ಪಟ್ಟದ ಗರ್ಭೇಶ್ವರಿಯಲ್ಲಿಗೆ ದೂತನನಟ್ಟಿ ಪಸರಂಬಡೆಯದೆ (ಶಾಂತಿಪು. ೮–೮೩ ವ). [ಪಸರ + ಪಡೆ$_1$]

**ಪಸರಂಬೆಱು** (ಕ್ರಿ). **೧.** ವಿಸ್ತಾರವನ್ನು ಹೊಂದು ; ಹರಡಿಕೊಳ್ಳು ; ವ್ಯಾಪಿಸು : ಪಸರಂಬೆತ್ತಿತ್ತಲುಂ ಬೇರ್ವ್ಯರಿದು ಬೆಳೆದು ಶಾಖಾನುಶಾಖಾಳಿ ನೀಳ್ದಿಣ್ದೆಸೆಗಂ ತಳುತೊಪ್ಪೆ (ಎಕ. V, ಬೇಲೂರು. ೧೬–೨೬ ; 1136) ; ಮಂಗಳೋತ್ತಾನಗಾನಂ ಪಸರಂಬೆತ್ತಿತ್ತಮುಱ್ದ್ರತ್ತಿರೆ ಪರಿಣಯಮಂ ಮಾಡಿದಂ (ನೇಮಿಪು. ೮–೬೫). **೨.** ಅತಿಶಯವಾಗು ; ಹೆಚ್ಚಾಗು : ಸೋಗೆಯಂ ನೂಲ ತೊಂಗಲ್ದೆಸೆಯಂ ಕರ್ಣಕೆನ್ನೆಯಂ ಭ್ರೂಲತಿಕೆಗಳುರಮಂ ಸಂಚಳತ್ತಾರಹಾರಂ ಪಸರಂಬೆತ್ತಿತ್ತ ಮೋರಂತಲೆಯೆ ಭರತನಂ ನೋಡಲ್ಕೆತಂದಳೊರ್ವಳ್ (ಆದಿಪು. ೧೧–೧೬) ; ಪಾಂಡುಮಹಿಪಂ ತಜ್ಜಾತಕರ್ಮೋತ್ಸವಂ ಪಸರಂಬೆತ್ತಿರೆ ಮಾಡಿ (ನೇಮಿಪು. ೩–೫೬) ; ಪಸರಂಬೆತ್ತಳಿ ಪಾಱೆ ಪಲ್ಲವಚರೇಂದ್ರಂಗಳ್ಕಱಂ ಪೊಂಗಳಂ ಮೊನೆಯಂಧರನಿಯನೆ (ಪ್ರಸಾವಿ. ೮–೩೫). [ಪಸರ + ಪೆಱು$_1$]

**ಪಸರಣ,** ಹಸರಣೆ (ನಾ). ಹರಡುವಿಕೆ; ವ್ಯಾಪಿಸುವಿಕೆ: ಜೀವಪ್ರಸರವಿದ್ದುದು ದುಃಖಿಸೌಖ್ಯದ ತಾರತಮತೆಯಲಿ ಉಸುರ ಪಸರಣವಿಲ್ಲದೆನ್ನು ಬ್ಬಸದ ಭೀತಿಯ ಬೇಗೆ ಮಿಗೆ ದಾಹಿಸುವುದೈ (ಕುಪ್ಯಾಸ. ೧೪–೧೨೮). **ಹಸರಣೆ :** ನಿಪ್ಪಸರದೆಸುಗೆಯ ನಿಶಿತ ಬಾಣಾವಳಿಯ ಬೆಂಬಳಿಯ ಬಿಸಿಲುದೋಱಿದ ಬೆಳಗುಗಳ ಹೊಂಬೆಸನ ಹಿಳುಕಿನ ನವಿಲ ಗಱಗಳ ಹಸರಣೆಯ ಹಮ್ಮುಗೆಯಲಿವ್ವಿಗಿಲಾಯ್ತು ರಣರಭಸ (ತೊರರಾ. ೬–೪೪–೨೭). [<ಪ್ರಾ. ಪಸರಣ./ಸಂ. ಪ್ರಸರಣ]

**ಪಸರಾಯ** (ನಾ). ಅಂಗಡಿಯ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ರಾಮುಗಿರಿಯ ಪಸಿಗೆ ಪಸರಾಯವನು ಯಿಾ ಮರಿಯಾದೆಯಲು ಧರ್ಮ್ಮಗಾರಿಯವನು ನಡಸವರು (ಎಕ. XI, ಹೊಳಲ್ಕೆ. ೭೫–೧೬ ; 1405 ? ). [ಪಸರ + ಆಯ$_1$]

**ಪಸರಾಯಿ** (ನಾ). = ಪಸರಾಯು : (ಮೈಗೆಜೆ. IV, ೭೮೨).
[< ಪಸರಾಯು]

**ಪಸರಿಕೆ,** ಹಸರಿಕೆ (ನಾ). ೧. = ಪಸರಣ : ಪರಿಮಳದ ಪಸರಿಕೆಯ ಕುಸುಮೋತ್ಕರದ ನಸುಮಿಡಿಗಾಯಿ . . . ಭೂಜದಿನೆಸೆದುದುದ್ಯಾನ (ತೊರರಾ. ೧-೯-೧೨). ೨. ಸಮಾಚಾರ ; ಸುದ್ದಿ ; ವಾರ್ತೆ : ಲೋಪಿಸದೆ ಸೂಚಿಸಲುವೇಳ್ಕನೆ ತಾಪದಿಂ ಮಗುಳಲ್ಲಿಗೈತಂದೀ ಪಸರಿಕೆಯ ನರುಹೆ ಪುನಿ ಪುರುಗುತ್ತ ತಿಳಿದೆಂದ (ಕಾವೇಮ. ೩೨-೧೪). **ಹಸರಿಕೆ:** ೧. ಕಲ್ಯಾಣವಿಭವದಿನೆಸೆದುದಾ ಮಣಿಮಯವಿವಾಹದ ವಸತಿ ಮುತ್ತಿನ ಚ ಕದಲಿ ವಿಮಲಾಂಕುರಾರ್ಪಣದ ಹಸರಿಕೆಯಲಿ (ತೊರರಾ. ೧-೧೬-೩೬); ಕೊರಗಿದಾನನದೊಸರ್ವ ನಯನೋದಕದ ಸುಯಿಲಿನ ಹಸರಿಕೆಯಲ್ಲೈತಂದ ರಿರುಳು ದಶಾಸ್ಯನರಮನೆಗೆ (ತೊರರಾ. ೬-೧೨-೧).
[ಪಸರ + -ಇಕೆ]

**ಪಸರಿಗ,** ಹಸರಿಗ (ನಾ). ೧. ಹರಡುವವನು ; ಪ್ರಸಾರ ಮಾಡುವವನು : ಪೊಕ್ಕಂ ಕಿಸುರಳಿಪಂ ಪಿಸುಣ ಪಸರಿಗಂ ನೃಪಸಭೆಯಂ (ಪಂಪಾಪು. ೩-೧೯). ೨. ಅಂಗಡಿಕಾರ : ಪಸರಿಗನ ನೋಂಪಿನಿಂದ ಮಾರುತನು ರಾಯನ ನಗರದಲಿ ತಾ ಸಂಚರಿಸುತಿಹನೆಂದು (ಕುಪಲ. ೬). **ಹಸರಿಗ :** ೩. ಪ್ರದರ್ಶನಕಾರ : ಬಸವನಾದೊಡೆಯಿಂದ್ರಜಾಲದ ಹಸರಿಗಗೆ ಮರುಳಾದನಾತನ ಗಸಣಿ ನಮಗೇಕೆನುತಲಿದ್ದುದು ಜಂಗಮಸ್ತೋಮ (ಪ್ರಭುಲೀ. ೨೩-೯). [ಪಸರ + -ಇಗ]

**ಪಸರಿಸು,** ಹಸರಿಸು (ಕ್ರಿ). ೧. ವಿಸ್ತಾರವಾಗು ; ವ್ಯಾಪಿಸು ; ಹರಡಿಕೊಳ್ಳು : [ಸುರಪತಿ]ಯ ಕಾಲ್ವಿಡಿವಂದಮುಸಿಟು ಸಿದವು ಪಸರಿಪಿನ ಕಿರಣಂಗಳ್ (ಪಂಪಭಾ. ೧೨-೧೦೮); ಕಣ್ಗಳ ರುಚಿ ದೆಸೆದೆಸೆಗೆ ಪಸರಿಸಿರೆ (ಪುಷ್ಪಪು. ೨-೧೮); ಮಿಂಚಿನ ಕುಡಿವೆಳಗ ದೆಸೆದೆಸೆಗೆ ಪಸರಿಸುತಡಸಿ ಬಂದುದು ಚಾಪವಾ ರಘುಭೂಪನಿದ್ದೆಡೆಗೆ (ತೊರರಾ. ೩-೬-೫೦). ೨. ಹರಡು ; ಹಬ್ಬಿಸು ; ವ್ಯಾಪಿಸುವಂತೆ ಮಾಡು : ತನ್ನ ಪಾಂಡಿತ್ಯದ ಯಶಮಂ ಪಸರಿಸಿ ತಾಯ್ತಂದೆಗಂ ಸಂತೋಸಂ ಮಾಡಿ (ಪಡ್ನಾರಾ. ೭೪-೨೦). ೩. ಅಧಿಕವಾಗು ; ಹೆಚ್ಚಾಗು : ಸಿರಿ ತುಳ್ಕಿ ಸಂತಸಂ ಪಸರಿಸೆ (ಅರ್ಧನೇ. ೧-೬೦); ಅರಮನೆಯೊಳಗೆ ಪಸರಿಸಿ ತತುಳಶೋಕದ ಜಲಧಿ (ಕುಮ್ಮಾದ್ರೌ. ೭-೮); ಆತನ ಕರುಣವೆನ್ನಲಿ ಪಸರಿಸಿದೊಡದು ಲೇಸು (ನಳಚ. ೩-೪೨). ೪. ಅಧಿಕಗೊಳಿಸು ; ಹೆಚ್ಚುಮಾಡು : ಒಸೆದಿಂಬನೆ ಪಸರಿಸಿ ಕುಡಲಿರ್ದಂ ಜನೇಶನಿಂತೇಕೆ ಕಟುದು ಪೋದನೋ ಪೇಟುಂ (ಕವಿಾ. ೨-೩೩). ೫. ಬಿಚ್ಚಿ ಹರಡು,—ಹರಹು : ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ (ಬಸವ. ೫೧); ಪರದಂ ಮಾಱುವ ಬಂಡಮಂ ಪಸರಿಸದೊಡಂ ಭವ್ಯಂ ಕರ್ಮಮಂ ಕೆಡಿಸುವ ಮಹಾವ್ರತಮಂ ತನ್ನೊಳ್ಪಸರಿಸದೊಡಂ ಆತಂಗೆ ಪಣಮಾಗದು ಈತಂಗೆ ಗುಣವಾಗದು (ಜೀವಸಂ. ೮೧-೬); ನಾರ ಸೀರೆಯಂ ಪಸರಿಪ ಕಂದಮೂಲಫಲಮಂ ತರೆ ಪೋಪ . . . ಮುನಿಮುಖ್ಯಕುಮಾರಸಮೂಹಮೊಪ್ಪುಗುಂ (ಗಿರಿಕ. ೧-೬೪). ೬. ಅಗಲವಾಗಿಸು ; ಹಿಗ್ಗಲಿಸು : ಸುಟ್ಟು ಕಾಯಿಗಳ ನಡುವೆ ಸೀಳಿ ಪಸರಿಸಿಯುಪ್ಪನಿಟ್ಟು (ಸೂಪಶಾ. ೪-೨೪). ೭. ಕೈಗೊಳ್ಳು ; ಆಚರಿಸು ; ಪಾಲಿಸು : ಜೀವಗಳ್ಪರ ದೇವ ಪಸರಿಸಿದನು ಪಲಾಯನವ (ಕುಮ್ಮಾಕೆ. ೪-೮). ೮. ಉಂಟಾಗು : ಮನಕ್ಕೆ ವಿಸ್ಮಯಂ ಪಸರಿಸೆ (ಸುಕುಮಾ. ೧೦-೫). **ಹಸರಿಸು :** ೧. ಸೃಷ್ಟಿಯೆಲ್ಲವ ತುಂಬಿ ಹಸರಿಸುವ ಸಿಸ್ಸೀಮ ಸದ್ಭಾವ (ಸುಲಿವೇ. ೫೨-೫); ಉಸಿರು ಹಸರಿಸಲಿ ಕಮ್ಮಲರ ನೀಳೆಸಳಿನಲಿ ! (ನಲ್ಮೆ. ೫೯-೪). ೨. ಬಲೆಯ ಹಸರಿಸುವ ಸೊಪ್ಪುಳವನಾಲಿಸುವ . . . ಪುಳಿಂದರು ಕಂಡರಂದೊಂದು ಸೊಕ್ಕಿದೆಕ್ಕಲನ (ಪಚಕಾ. ೬-೨); ಮಣ್ಣನಾನೆಯ ನಿಲಿಸಿ ಹಗ್ಗವ ಹಣ್ಣಿ ಹಸರಿಸಿ ಮುಚ್ಚಿದರೆ ಕರಿ ಹೆಣ್ಣನಪ್ಪುವೆನೆಂದು ಬಂದಾ ಕುಳಿಯ ಬೀಳ್ವಂತೆ (ಸಿಭಾಗ. ೧೧-೧೪-೨೧); ನಗೆಮೊಗದ ಬೆಳಗಿನ ಬೆಳಪ ಜೊನ್ನವ ಹಸರಿಸುತ . . . ಅಮರಿಯರು ಸೊಗಯಿಪರು (ಸಾಳ್ವಭಾ. ೩೨-೧೬). ೩. ತಲೆದಡವಿ . . . ನುಡಿಯೆ ಹಬ್ಬಿ ಹಸರಿಸಿ ದಳವೇಱುವೆ (ಶಂಕಕಂ. ೭೧). ೯. ಉತ್ಕರ್ಷವನ್ನು ಹೊಂದು ; ಉತ್ತೇಜಿತವಾಗು : ಪಸಪ್ಪೋಡುವಿನಂ ಹರಣಂ ಹಸರಿಸುವಿನವಿಾಂಟದಂತೆ ಬೆಳ್ದಿಂಗಳುಮಂ ಬಿಸಿಲುಮನೇನೆಸೆದಿರ್ದುವೊ ಪೊಸನೆಯ್ದಿಲ ಪೂವುಮಲರ್ದ ತಾವರೆವೂವುಂ (ಲೀಲಾವ. ೫-೨೭). ೧೦. ಕಾಣಿಸಿಕೊಳ್ಳು ; ವ್ಯಕ್ತವಾಗು : ಸುರನಂದನದ ಹೊಂಗೇದಗೆಯ ತುಱುಬಿನಲಿಱುಕಿ ಹೂದಂಡೆಗಳ ಹಾರಾವಳಿ ಸಹಿತ ಹಸರಿಸಿದನಸುರೇಂದ್ರ (ತೊರರಾ. ೬-೨೦-೧೫).
[ಪಸರು(< ಪಸರ್) + -ಇಸು$_3$]

**ಪಸರು** ‘ಪಸರ್’ ನೋ.

**ಪಸರೆ** (ನಾ). (ಆಲಂ) ಸಾಮಾನ್ಯ ; ನಾಡಾಡಿ : ಕಂಪಿಲಗೆ ಪಸರೆಯ ದೊರೆಗಳು ಪಾಸಟಿಯೆ (ಕುರಾಸಾಂ. ೫-೫೦); ಆಡಿಯಳುವುವ ಪಸರೆಯ ರಾಯರ ಗಂಡ ಕೂಡಿ ಕುಹಕವನೆಣಿಸುವ ನಾಡೆಱಿಯರ ಗಂಡ (ಕುರಾಸಾಂ. ೧೨-೨೨). [< ಪಸರ]

**ಪಸಲು** (ನಾ). ೧. ಭಾಗಿಸುವುದು ; ಭಾಗಾಕಾರ : ಮತ್ತರು ಪಸಲಾಗಿರೆ ವಂಭತುಂ ಶತಕಂಭವೆನಿಪುದಳತೆಯೊಳೆಲ್ಲಂ ಬಿತ್ತರದಿನೋದಿಸಿ ಕೊಳು (ಭಾಸ್ಕರ. ೨೮-೧). ೨. ಭಾಗವಾಗುವುದು ; ಭಾಗಗೊಳ್ಳುವುದು : ಪಸು, ಪಸಲು, ಭಾಗಂಗೊಳು . . . ಇಂತಿನಿತುಂ ಭಾಗಂಗೊಂಬುದಕ್ಕೆ ಪೆಸರು (ವ್ಯಪಹಾ. ೧೨-೧೩). ೩. ಭಾಗ ; ಪಾಲು : ಬಾಚಿಶೆಟ್ಟಿಯೋಣಿಯಿಂ ತೆಂಕಲು ಅಳ್ವನ ಪಸಲಲು ಸರ್ವ್ವಬಾಧಾಪರಿಹಾರವಾಗಿ ಬಿಟ್ಟ ತೋಂಟ (ಹೈಆಸಿ. V, ೮-೩೬ ; 1088).
[ಪಸು$_1$ + -ಅಲು(< -ಅಲ್$_2$)./ತಮಿ. ಪಯಲ್]

**ಪಸಲುವೋಗು** (ಕ್ರಿ). ಭಾಗವಾಗು : ನಾನಾಪರಮಾಣುಗಳನಪೇಕ್ಷಿಸಿ ವ್ಯಾಪಕಮಪ್ಪುದು ಪಸಲುವೋಗದು (ಪಸಾರ. ೮೦).
[ಪಸಲು + ಪೋಗು$_1$(< ಪೋ$_1$)]

**ಪಸಲೆ,** ಹಸಲೆ (ನಾ). ೧. ಎಳೆಯ ಹುಲ್ಲು ; ಹಸುರು ಹುಲ್ಲು : ಪಚ್ಚೆಯ ಪಸಲೆಯ ಪಸುರನಸಕಟುದು ನಿಮಿರ್ದ ನೆಲೆವಡಲಗೆಯ ಜಾಗಂಗಳುಂ (ಆದಿಪು. ೮-೧೫ ವ); ಅಱಿವ ಹೇಳುವರೆಲ್ಲರು ಮಜಿವೆಯಲ್ಲಿ ಬಿದ್ದು ಮೂಱಿಲೆ ಹಿಡಿದರಲ್ಲಾ ಅದು ಬಾಯಿಗೆ ಪಸಲೆ ಕೈಗೆ ಕಳಂಕು (ಮೋಳಮಾ. ೧೬೯-೬೩೦); ಪಸುರ್ಗಪ್ಪಿಂ ಸುತ್ತಲುಂ ಕಟ್ಟಿಲಿಪ ಪಸಲೆ (ಪುಷ್ಪಪು. ೩-೭೬); ಪೊಸಸುಸಿಲೊಳ್ ಸಸಿದೆಟ್ಟಿ ನಿಮಿರ್ನವಿರೆನೆ ಪಸಲೆಯೆಸೆದುದು (ರಾಮಾಶ್ವ. ೩-೧೭). ೨. ಹುಲ್ಲು ಬೆಳೆದ ನೆಲ ; ಹುಲ್ಲುಗಾವಲು : ಮುಂದಾ ಬಸವಂ ಪಸಲೆಯಂ ಪುಗುವಂತೆ ಜಗುನೆಯಂ ಪೊಕ್ಕು ಪಾಯ್ದು ಪೋಗೆ (ಅರ್ಧನೇ. ೭-೪೭ ವ); ಪಸಲೆಗೆ ಬಂದ ಪುಲ್ಲೆಯನೆರಳೆ ಸೆಯೊಳ್ ಕಿಱುವೇಡರಿರ್ಪರಾರ್ದಿಸೆ (ರಾಜಶೇ. ೫-೧೦೩); ಪಸಲೆಯೆಡೆಗೈತಂದ ಪಸುಪುಲ್ಲೆಯಕ್ಷಿಗಳ ಪೊಸಬೇಟಮಂ ಕಂಡು (ವೆಂಕಾರಾ. ೩-೬-೫೫); ಪುಲಿಯೊಡಲ ಪೊತ್ತವರ್ ಪಸಲೆಯೊಳ್ ಕುಕ್ಕಿದರ್ (ಕಾಲೂರ. ೧೦೨-೨೦೬). **ಹಸಲೆ :** ೧. ಕಲುವಾಳೆಯಲೆಗೊಯ್ದು ಬೆಳೆದ ಹಸಲೆಯ ಮೇಲೆ ಚಲುವಾಗಿರಿಸಿ ಮುಚ್ಚಿದ ನೊಂದಱಿಂ (ಕಣ್ಣರ. ದೇ. ೧೩೫-೧೭); ಹಸುರು ಹಸಲೆಯ ಮೇದು ಮೋದಗೊಂಡ ಚಿಗರೆ (ಭಾರಂಗ. ೭೧-೨೨). ೨. ನೆಳಲ ಹಸಲೆಯ ಮೇಲೆ ನಲಿನಲಿದು ತಪ್ಪುಗಾಲಿಕ್ಕಿ ತ್ರಿಭಂಗಿಯಿಂದಂ ನಿಂದು (ಅನಾರ. ದೇ. ೧೮೧-೧೨); ಹಸಲೆಗಳೊಳೊಸೆದು ಮೆಯ್ಮೆಳಕಱುಗಳ್

(ಕುಸುಮಾ. ೧೪-೨೯ ಪ); ಚನ್ನೆಸೆವ ಮಾಮರದ ತಣ್ಣೆಳಲ ಪೊಸ ಪಸಲೆಯೊಳು ವೇಣುವಿರಚಿತವಹ ಉನ್ನತವೆನಿಪ ಮೃದುತರಾಸನವನಿತ್ತು (ಸಿದ್ಧೇಪು. ೨೧-೭೬); ಹೊಸದಾಗಿ ಮೊಳೆತಿದ್ದ ಹಸುರು ಹಸಲೆಯ ಮೇಲೆ ಮಕ್ಕಳೂ ನಾಯಿಗಳೂ ನೆಗೆಯುತ್ತ ಆಟವಾಡುತ್ತಿದ್ದವು (ಪುನರು. ೧೪೨).

**ಪಸಲೆಗವಿ** (ಕ್ರಿ). ೧. ಹಸುರು ಮುಸುಕು; ಹಸುರಾಗು: ಬಿಸಿಲೆಲ್ಲ ಪಸಲೆಗವಿದುದು ಪಸುರ್ವೆಳಗಿಂದೆನಿಪ ಬಾಲಕದಳೀವನದೊಳ್ . . . ಹಿಮಗೃಹಮನವನಿಪಾಲಂ ಕಂಡಂ (ಕಾದಂಬ. ೨೦೯); ಮರಕತ ರತ್ನಾಂಗದ ರಶ್ಮಿರಾಜಿಯಿಂ ಪಸಲೆಗವಿದ ಭುಜಶಿಖರದೊಳಾ ಧರಣೀಶಂ ತಾಂಗುವುದಚ್ಚರಿಯೆ ಲತಾಂಗಿಯರ ಚಕಿತಹರಿಣೇಕ್ಷಣಮಂ (ಮಲ್ಲಿಪು. ೯-೨೫). ೨. ಹುಲ್ಲು ತುಂಬಿಕೊಳ್ಳು: ಕೆಸಱಿಂ ಕುಱಿಯಿಂ ನಾನಲಿನಸಿದಾಗಿರೆ ಕೊಂಕಿ ಪೋದ ಬಟ್ಟೆಗಳೆಲ್ಲಂ ಪಸಲೆಗವಿದಂದು ಸೈತಿರೆ (ಲೀಲಾವ. ೫-೪೧). [ಪಸಲೆ + ಕವಿ$_1$]

**ಪಸವ$_1$** (ನಾ). ಕಾಮಾತುರನಾದವನು; ಕಾಮುಕ: ಪರಲಲನೆಗೆಳಟಿ ಬಿಡೆ ಚಪ್ಪರಿಸುತ್ತಂ ಬಂದ ಪಸ[ವ][ಪಾಠಾಂ.ಪ]ನಂ ಪಾಂಬನನಚ್ಚರಿಯಾಗೆ ಕಾದುತಂ (ವರ್ಧಮಾ. ೪-೨೦); ಅಶೇಷಭಾಸುರಕಳಾಸಮಗ್ರೆಯನವಳಂ ಪಸದಂ[ವಂ] ನಿಶಾಟನೊರ್ವಂ ಶಶಿಕಳೆಯಂ ರಾಹು ಪಿಡಿವ ತೆಱದಿಂ ಪಿಡಿದಂ (ವರ್ಧಮಾ. ೧೩-೨೪). [ಪಸ$_1$ + -ಅ$_7$]

**ಪಸವ$_2$** 'ಪಸ$_1$' ನೋ.

**ಪಸವಡು** (ಕ್ರಿ). ೧. ಅತ್ಯಪೇಕ್ಷೆಯನ್ನು ಹೊಂದು,—ಪಡೆ ಪೊತ ಸುರಿಯಿಯ ಮುಂಗುಳಂ ಪಸವಟ್ಟಂತೊರ್ವಳ್ ತನಗೆ ಸರಿಗೆಂ ಲಂಬಣಕ್ಕಮಟ್ಟುಯೆ ಕೊಯ್ದಳ್ (ಆದಿಪು. ೧೧-೯೯); ಸೂಟ್ಟೂ ಟಿಯೊಳ್ ಪಸವಟ್ಟಂದದೊಳೆ ಮುಸುಱಿ ಮುತ್ತಿದುವಳಿಗಳ್ (ಪಂಪಾಪು. ೭-೧೪೧). ೨. ಹಸಿವಿನಿಂದ ಕೂಡು; ಹಸಿದಿರು: ಪುಲಿ ಪಿರಿದುಂ ಪಸವಟ್ಟುಂ ಮೆಲಲೇಂ ಬಗೆವುದೆ . . . ಪುಲ್ಲಂ (ಸೀತಿಮಂ. I, ೧೧೭). [ಪಸ$_1$ + ಪಡು$_1$]

**ಪಸವಳಿ** (ಕ್ರಿ). ಇಚ್ಛೆಯು ನಾಶವಾಗು; ಬಯಕೆಯು ಅಳಿ: ಪಸವಳಿದ ಬಗೆ ಬಿಳ್ದುದತ್ತ ಕೀಳ್ಗೆಲಕೆ (ಅಾಲೂರ. ೩೬-೩೪). [ಪಸ$_1$ + ಅಳಿ$_1$(<ಅಱು$_1$)]

**ಪಸವಾತು** (ನಾ). ಸವಿಮಾತು; ಸರಸವಚನ: ಪಸಿದೆಯೇಟಿಲೆ ಕಂದ ಪಗಲಿಬಿತಂದುದೆಂದುಸಿರ್ವ ಮಾತೆಯೊಳುರವಣಿಸಿ ಬಿಸುಬಿಸುನುಡಿ ಗಳಿಂ ಪೆಱದೆಗೆಯಿಸಿ ಮುನ್ನ ಪಸವಾತನೊಸೆದಾಲಿಪುದು (ಚಿಕವಿ. ೭-೧೫೭ ಸಾಂಗತ್ಯ). [ಪಸ$_2$ + ಮಾತು$_1$]

**ಪಸವು** 'ಪಸ$_1$' ನೋ.

**ಪಸಟ್** (ನಾ). (?): ಎಸಟ್, ತಮಟ್, ಪಸಟ್, ತುಟಿಲ್ (ಶಬ್ದಾನು. ೧೪೦ ವ್ಯಾಖ್ಯಾ). [?]

**ಪಸಾದ,** ಪರಸಾದ, ಪಸದ, ಹಸದ, ಹಸಾದ, ಹಾಸಾದ (ನಾ). ೧. ಅನುಗ್ರಹ; ದಯೆ: "ಪಸಾದ-ಪ್ರಸಾದ=ಅನುಗ್ರಹ, ಉಡುಗೊರೆ" (ತದ್ಭಕೋ. ೨೫); ಧರಾತಳಮಂ ನಿನಗಿತ್ತು ನಿನ್ನ ಕೊಟ್ಟುದನೆ ಪಸಾದಮೆಂದು ಪೊಡೆವಟ್ಟು (ಪಂಪಭಾ. ೧೩-೬); ಜನಪತಿ ಸಾಜದಿಂದಮೆ ಪಸಾದಮನಾದಮೆ ಮಾಡುತಿರ್ದನಾ ವನಿತೆಯ ಮೇಲೆ (ಕಾದಂಬ. ೨೭೯); ವಿದೂಷಕನರಸನ ಮಂದಸ್ಮಿತಲೋಚನಾಂಶು ಮನದನುಮತಿಯಿಂ ಮುಂದಿಡೆ ಭೋಂಕನೆ ಕೈಗುಡುವಂದದೊಳೆ ಪಸಾದಮೆನುತೆ ಪೊಡೆವಡುತೆಟ್ಟಂ (ಅನಂಪು. ೭-೪೯). 'ಪಸಾಯ' ಪರಾ. **ಪರಸಾದ:** ೨. ದೇವರಿಗೆ ಅರ್ಪಿಸಿದ ಹೂವು, ನೈವೇದ್ಯ ಮುಂತಾದುವು: ಗುರುವರೇಣ್ಯನ ಪರಸಾದ ಕೊಳ್ಳಲು ಹಿಂಕಿರಿಯರು ಬರಬೇಕು (ಸಿದ್ಧಪು. ೨-೮೭); ದೇವರ ಮುಂದಿನ ಪರಸಾದ ನಾ ಆದ . . . ನಮ ಜೀವ ಹೋದಾವ ಕೈಲಾಸಕ (ಮಲ್ಲಿಗೆ. ೨೬); ತಗದು ಇಡಿರಿ ಸುಭಗಕ್ಕಾ ಪರಸಾದಾನ (ಗಂಗಾಸಾ. ೯೬). **ಪಸದ:** ೧. ಬೆಸನಂ ಶ್ರೀವಿಕ್ರಮಾಂಕಂ ಬೆಸಸೆ ಪಸದಮೆನ್ದಾನ್ತುಕೊಣ್ಡಂ (ಸೌಇಇ. IX-i, ೧೭೨-೨೬; 1106). **ಹಸದ:** ೧. ಅಸುರರಾವುದನೆಂದಡದಕೇ ಹಸದವೆಂಬುದು (ನಿಭಾಗ. ೮-೬-೧೬). **ಹಸಾದ:** ೧. "ಉಸಿರಲ್ಕಂತಾ ಪ್ರಸಾದಮಕ್ಕು ಹಸಾದಂ" (ಕವಿಕಂ. ೨೬೨); ಎನಗೆ ದೇವಿ ಹಸಾದಮನೇಕೆ ಮಾಡಿದಳ್ (ಕಾದಂಬ. ೨೬೧). ೨. ದೊರೆತುದ ಹಸಾದವೆಂದುಣ್ಣು ಗೋಣಗಿಡದೆ (ಮಂಕುಕ. ೬೧). ೩. ಹಿರಿಯರ ನುಡಿಗೆ ಒಪ್ಪಿಗೆಯನ್ನು ಸೂಚಿಸುವ ಮಾತು: ಅಮಾತ್ಯನಿಕರಮುಖ್ಯಂ ಹಸಾದಮೆಂದಿಂತೆಂದಂ (ಪಂಚತಂ. ೨೫೪-೧೬); ಹಸಾದಮೆಂದು ಮುನಿಪತಿಗೆ ಪೊಡೆಮಟ್ಟಟ್ಟು ನೃಪಚಕ್ರಿ ನಿಜಶಿಬಿರನಿವೇಶಿತನಾಗಿ (ಕುಸುಮಾ. ೧೫-೧೬೦ ಪ); ಹೋದ ಬಾಣವ ಮರಳಿ ತೊಡದಿರು ಮಾದು ಕಳೆ ವೈರವನೆನಲ್ಕೆ ಹಸಾದವೆಂದನು (ಕುಮಾವ್ಯಾಉ. ೧೦-೩೫); ಜೀಯ ಹಸಾದವೆನುತ . . . ನಾಲ್ದೆಸೆಯಲಿ ಬಲುಪೌಜ ದಾಯವಱುತು ಮಾಡಿದರು (ಕಂನವಿ. ೧೩-೨೦). **ಹಾಸಾದ:** ೩. ಜೀಯ ಹಾಸಾದೆಂದು ನುಡಿವುತ (ಜಿನಭಾ. ೩-೭೧); ಜೀಯ ಹಾಸಾದವೆಂದ (ಜಿನಮು. ೫-೧೭). [<ಸಂ. ಪ್ರಸಾದ./ಪ್ರಾ. ಪಸಾದ]

**ಪಸಾಯ** (ನಾ). ೧. ಉಡುಗೊರೆ; ಬಹುಮಾನ; ಮೆಚ್ಚು: "ಪಸಾಯಮುಮೆನಲುಡುಗೊಱೆ" (ಕವಿಕಂ. ೧೫೧); ನೋಡಿಯುಂ ನುಡಿದುಮಟ್ಟುತ್ತುಂ ಪಸಾಯಂಗಳಂ ಕೆಲಕೆಲ್ಲಂ ಭರತೇಶನಾರೋಗಿಸಿದಂ ಕಲ್ಯಾಣಕಾಹಾರಮಂ (ಆದಿಪು. ೧೧-೨೬); ಅಬ್ಜನೇತ್ರೆ ಪಜ್ಜಳಿಪ ಕಟಾಕ್ಷರೋಚಿಯ ಪಸಾಯಮನಿತ್ತಲಗೋರ್ಯ್ದಳಟ್ಟುಯಿಂ (ಕುಸುಮಾ. ೫-೧೧೪); ಕಮಲಾಯತಾಂಬಕಿ ಚಿತ್ರಸೇನನ ಕರೆಸಿದಳು . . . ವಸ್ತ್ರಾಭರಣದ ಪಸಾಯವಿತ್ತಳು (ಕುಮಾವ್ಯಾಅ. ೭-೯೯). ೨. ಅನುಗ್ರಹ; ದಯೆ; ವರ: ನೀನುಮಾ ದೇವಿಯ ಪಸಾಯದಱಗಿನ ಕೂಸಪ್ಪುದಱಿಂ ನಿನ್ನವಸ್ಥೆಯಂ ಕಂಡು (ಲೀಲಾವ. ೧೦-೨ ಪ). 'ಪಸಾದ' ಪರಾ. [<ಪ್ರಾ. ಪಸಾಯ./ಸಂ. ಪ್ರಸಾದ]

**ಪಸಾಯಂಗೊಡು** (ಕ್ರಿ). ಉಡುಗೊರೆಯನ್ನು ನೀಡು; ಮೆಚ್ಚುಗೆ ಕೊಡು: ಆ ಪಣಕಾಂತೆ ದೂತಿಗೆ ಪಸಾಯಂಗೊಟ್ಟು (ವೃಷವಿ. ೮-೨೫). [ಪಸಾಯ + ಕೊಡು$_1$]

**ಪಸಾಯಂಬಡೆ** (ಕ್ರಿ). ಉಡುಗೊರೆಯನ್ನು ಪಡೆ; ಪುರಸ್ಕಾರವನ್ನು ಹೊಂದು: ಪಸಾಯಂಬಡೆವರಸರ ಮಕ್ಕಳೆಸಿಬರ ನಿಬರುಮೆಟ್ಟರ್ (ಶಾಂತಿಪು. ೮-೧೧). [ಪಸಾಯ + ಪಡೆ$_1$]

**ಪಸಾಯುತ** 'ಪಸಾಯ್ತ' ನೋ.

**ಪಸಾಯದಾನ** (ನಾ). ಮೆಚ್ಚಿ ಕೊಟ್ಟುದು: ಪಟ್ಟದಾನೆಯು ಬದಗಂ ಬಿನದಕೆ ಪಾಡುತ್ತಿರೆ . . . ತೀದಾಲಿಸಿ ಮೃಗಲೋಚನೆ ಮುಟ್ಟದ ಮನಮುನೆ ತೊಟ್ಟನೆ ಪಸಾಯದಾನಂಗೊಟ್ಟಳ್ (ಯಶೋಚ. ೨-೨೪). [ಪಸಾಯ + ದಾನ]

**ಪಸಾಯನ** (ನಾ). (ಒಡವೆ, ವಸ್ತ್ರ ಮುಂತಾದ) ಉಡುಗೊರೆ: "ಪಸಾಯನಮೆಂದು ಉಡುಗೊಱೆ" (ಕಶಸಾ. ೬೦-೩೨೪); ಮಗನ ಕದಪಂ ಕರ್ಚಿ ಪಸಾಯನಮಂ ಕೊಟ್ಟು (ಧರ್ಮಾಮೃ. ೨-೯೧); ಮನ್ನಣೆಯ ರಸಿಕರ್ಗೆ ಪಸಾಯನವನಿತ್ತು (ಗಿರಿಕ. ೪-೧೦೨ ಪ); ನಿಮ್ಮಡಿದಾವರೆಗಳ ಕಂಡುದನಂತಪಸಾಯನಮೆನಗೆ (ಅಂಜಚ. ೧೪-೧೩೨); ಅಂಗದಂ . . . ರಾಯಂಗೆ ಕಾಣಿಸಿಕೊಂಡು ಪಸಾಯನಮನೊಪ್ಪಿಸಿ (ರಾಮಾಶ್ವ. ೧೪೨-೭). [<ಸಂ. ಪ್ರಸಾದನ]

**ಪಸಾಯನಂಗೊಡು** (ಕ್ರಿ). =ಪಸಾಯಂಗೊಡು: ಕಮಲಿನಿ . . .

ಸೀಮಂತಸಮಯವೆಂಬುದುಮರಸನವಳ್ಗೆ ಪಸಾಯನಂಗೊಟ್ಟು ಪರಮಾನಂದಮಂ ತಳೆದು (ದಶಕು. ೧-೬೯ ವ). [ಪಸಾಯನ+ಕೊಡು$_1$]

**ಪಸಾಯನದಾನ** (ನಾ). =ಪಸಾಯದಾನ: ಕಾಪಾಡಿದ ನೋಡು ಆ ದೇವರು . . . ಬ್ರಿಟಿಷರಿಗೆ ನಮ್ಮನ್ನು ಪಸಾಯನದಾನ ಮಾಡಿ ಬಿಟ್ಟ (ಆಗಸ್ಟ್. ೨೪). [ಪಸಾಯನ+ದಾನ]

**ಪಸಾಯಿತ** 'ಪಸಾಯ್ತ' ನೋ.

**ಪಸಾಯಿತಿಕೆ** (ನಾ). ಪಸಾಯಿತನ ಕೆಲಸ: ಪೆಱಪೆಱರ ಪಸಾಯಿತಿಕೆಗಳಱಕೆಗೆ ××× ದೇವ ಸಮಸ್ತಲ್ದಿದು ಹೇರಱಕೆ ಪಸಾಯಿತನುಡೆವಣಿವಱದಿಂಬಳಿಕಂದುವಿಂದುವೆಂದುಂ ಲಕ್ಷ್ಮಂ (ಎಇ. XIII, ೩೨೧-೨೦; 1126). [ಪಸಾಯಿತ(<ಪಸಾಯ್ತ)+-ಇಕೆ]

**ಪಸಾಯಿತೆ** 'ಪಸಾಯ್ತೆ' ನೋ.

**ಪಸಾಯ್ತ**, ಪಸಯಿತ, ಪಸಾಯತ, ಪಸಾಯಿತ (ನಾ). ೧. ರಾಜನ ಅನುಗ್ರಹಕ್ಕೆ ಪಾತ್ರನಾಗಿ ಅವನ ಬಳಿಯಿರುವ ಒಬ್ಬ ಅಧಿಕಾರಿ: ಶತ್ರುಗಳಲ್ಲಿಗೆ ಮುನ್ನಮೆ ಪ್ರಧಾನರುಮಂ ಪಸಾಯ್ತರುಮನಟ್ಟಲಾಗದು (ಪಂಚತಂ. ೪೨-೯); ರಾಯಮುರಾರಿಯ ಮನದಂನನೆಸಿಪ್ಪ ಸಚಿವನಂ ನೆಗಳ್ದ ಪಸಾಯ್ತನ[ನೊ]ಸೆದು (ಕಇಅ. ೭೫-೧೨-೩೩; 1170); ನಾನಾದಿಗಂತದ ಧರಣಿಪರು ಸಚಿವರು ಪಸಾಯ್ತರು ನೆರೆದುದು (ಕುವ್ಯಾಸ. ೧೩-೩೧); ತನ್ನ ಗಿಳಿಗಳ ಮಱಗೋಗಿಲೆಗಳ ಪಸಾಯ್ತರಿಂ ಕೂಡಿ ಭೋಂಕನೆಟ್ಟಿದ್ದ ಇದಿರ್ವಂದು (ರಾಮಾಶ್ವ. ೫೭-೧೪). **ಪಸಯಿತ**: ೧. ಭುವನೈಕಮಲ್ಲದೇವನ ಭವನದೊಳಂ ತಾನೆ ಮಾನಸಂ ತಾನೆ ಮಹಾವ್ಯವಸಾಯಿ ತಾನೆ ವಿಜಯ ಪ್ರವರ್ಧಕಂ ತಾನೆ ಪಸಯಿತಂ ಲಕ್ಷ್ಮನೃಪಂ (ಎಕ. VII, ಶಿಕಾರಿ. ೧೩೬; 1068); ತ್ರೈಲೋಕ್ಯಮಲ್ಲವಲ್ಲಭನಾಳೆನಿಸಿದರೊಳಗೆ ಮಿಕ್ಕ ಪಸಯಿತನುಂ ಮಿಕ್ಕಾಳುಂ ಮಿಕ್ಕಣ್ಣನ ಬಲ್ಲಾಳುಂ ಲಕ್ಷ್ಮಣನೆ ಪೆಱರನಱವರುಮೊಳರೇ (ಸುಕುಮಾ. ಪರಿ. ೧-೧೨). **ಪಸಾಯತ**: ೧. ಪಸಾಯತರ್ವೆರಸು ಪರಿತಂದು (ಪಂಚತಂ. ೨೭೦-೬); ಗೋಱಟ್ಟಿ ಪುಯ್ಯಲ್ಗುವ ಪಸಾಯತರಪ್ಪ ಲೆಂಕವರ್ಗಮುಮಂ . . . ಕಂಡು (ವರ್ಧಮಾ. ೫-೯ ವ), ಅಖಿಳದಳನಾಯಕರ ಕರೆಕರೆದು ಕದನ ಪಸಾಯತರಿಗಿತ್ತನು ನೃಪತಿ ಕರ್ಪೂರದ ವೀಳೆಯವ (ಕುವ್ಯಾಕ. ೧೮-೯). **ಪಸಾಯಿತ**: ೧. ವಿರಹವಿಧುರಹೃದಯನಾಗಿಯುಮವಂ . . . ಪಸಾಯಿತರೊಳಂ ನುಡಿಯದೆ . . . ಹೇಮಕೂಟಮಂ ನೆನೆಯುತ್ತಮಿರ್ದು (ಕಾದಂಉ. ೨೭೨); ದಾಯಿತರಿಂ ಪೆಸರ್ವೆತ್ತ ಪಸಾಯಿತರಿಂ ಸುಭಟ ಚೇಟಕ ಪ್ರಕಟ ಮಹಾನಾಯಕರಿಂ ನಿರುಪಮಶೋಭಾಯತ ಮಾಯ್ತೋಲಗಂ (ಕುಸುಮಾ. ೩-೮೮); ಬಂದುದಿರುಳೋಲಗಕೆ ರಾಯನ ಮಂದಿ . . . ಸಚಿವ ಪಸಾಯಿತರು ಸಹಿತ (ಕುವ್ಯಾಕ. ೫-೫); ಕೊತ್ತಳದ ಮೇಲೆ ಅರಮನೆಯ ಮನ್ನೆಯರು, ಪಸಾಯಿತರು, ಡಣಾಯಕರು . . . ನಿಂತಿದ್ದರು (ರೂಲೇಖ. ೩). ೨. ವಂದಿ; ಮಾಗಧ: ಶಯ್ಯಾಸದನಗವಾಕ್ಷಮನೊಯ್ಯನೆ ಪೊಕ್ಕಲಿದು ನೃಪನ ಸುಖನಿದ್ರೆಯ ಕೆಯ್ಯಂ ತೊಲಗಿಸಿತು ಮಿಗೆ ಪಳಮೆಯ್ಯ ಪಸಾಯಿತರವೋಲ್ ಪ್ರಭಾತ ಸಮೀರಂ (ಪುಷ್ಪಪು. ೮-೨೦). ೩. ಮೆಚ್ಚುಗೆಗೆ ಪಾತ್ರವಾದ ಪ್ರಾಣಿ; ಪ್ರೀತಿಪಾತ್ರವಾದ ಪ್ರಾಣಿ: ಆಯೆಡೆಗೆ ನೀರುಣಲ್ಬರೆ ಜಾಯಿಲಮರಸನ ಪಸಾಯಿತಂ ಕೋಡೆರಡುಂ ಕೋಯೆ ಸೆಳೆದಶ್ವ ಮಹಿಷನ್ಯಾಯಮಂ ನಿಲೆ ಕೊಂದುದು (ಮಶೋಚ. ೩-೬೭).

[<ಸಂ. ಪ್ರಸಾದಿತ ?./P 'ಆಯ್ತ' ಎಂಬ ಪ್ರತ್ಯಯದಿಂದ ಕೊನೆಗೊಳ್ಳುವ ಶಬ್ದರೂಪಗಳ ಸಾಮ್ಯದಿಂದ ಈ ರೂಪ ಬಂದಿರಬಹುದು]

**ಪಸಾಯ್ತೆ**, ಪಸಾಯಿತೆ (ನಾ). ರಾಣಿಯ ಕೃಪೆಗೆ ಪಾತ್ರಳಾದವಳು: ಸಖಿಯರ ವಿಳಾಸಿನಿಯರ ಪಸಾಯ್ತೆಯರ ಕರಸಿಕೊಟ್ಟನು (ಕುವ್ಯಾಸ. ೧೩-೧೨). **ಪಸಾಯಿತೆ**: ಇವಳ್ ಪಸಾಯಿತೆ ಮನೋಹರಿಗೀಕೆಯುದೊಂದು ಕಾಣ್ಕೆ (ಕಾದಂಉ. ೩೯೨); ಅವದಿರ ಪಸಾಯಿತೆಯರಿಗೆ ಪಡಿಗವ ನೀಡ ಸಲ್ಲರು ಸೋಮಯಾಜಿಗಳು (ಕುವ್ಯಾಅ. ೮-೯); ಮಣಲೂರ ರಾಜನಂದಿನಿ ತನ್ನ ನಚ್ಚಿನ ಪಸಾಯಿತೆಗೆ ಬೆಸಸಲ್ . . . ಶೃಂಗಾರಗೈದಳಾ ಆಳಿ ಅಚ್ಚರಿವಡುತೆ (ಚಿತ್ರಾಂಗ. ೧೮-೪೯೪). [ಪಸಾಯ್ತ+-ಎ$_2$]

**ಪಸಾರ$_1$** (ನಾ). ೧. ಅಂಗಡಿ: ಅಲ್ಲ ಬೆಲ್ಲ ಅರಿಸಿನ ಮೊದಲಾಗಿ ಕಿಱುಕುಳವೆಲ್ಲವಂ ಪಸಾರಕ್ಕೊಂದೊಂದ ಕೊಟ್ಟರು ಹತ್ತಿಯ ಪಸಾರಕ್ಕೆ ಹಿಡಿವತ್ತಿಯ ಕೊಟ್ಟರು (ಸೌಇಇ. XX, ೨೪೮-೬೪; 1228); ಪಸಾರಕ್ಕೆರಡಡಕೆಯ ಕೊಟ್ಟರ್ (ಮುಂಬರಾ. X, ೨೬೯-೭೩; 1229); ಎಲ್ಲಿ ನೋಡಲು ಮುತ್ತುರತ್ನಪಸಾರಗಳು (ವೈಕುಂಪ. ೪-೪೫). ೨. (ಅಂಗಡಿಯ) ಸರಕು: ಅನುಭಾವವೆಂಬುದೇನು ಬೀದಿಯ ಪಸಾರವೆ (ಚನ್ನಪ. ೬೩-೪). ೩. (ವ್ಯಾಪಾರಕ್ಕಾಗಿ ಸರಕನ್ನು) ಹರಡಿ ಇಡುವಿಕೆ; ಪ್ರದರ್ಶನಕ್ಕೆ ಇಡುವಿಕೆ: ಮನೆ ನೋಡಾ ಬಡವರು ಮನ ನೋಡಾ ಘನ . . . ಪಸಾರಕ್ಕನುವಿಲ್ಲ ಬಂದ ತತ್ಕಾಲಕ್ಕುಂಟು (ಬಸವ. ೩೨೫); ನಿಮ್ಮೊಳಡಗಿದ ಲಿಂಗೈಕ್ಯವ ಪಸಾರಕ್ಕಿಕ್ಕುವ ಅಜ್ಞಾನಿಗಳೆತ್ತ ಬಲ್ಲರಯ್ಯ (ವಚಶಾ. II, ೪೪೪); ಕಣ್ಣಿಗೆ ಕಂಡರೂ ಕೈಗೆ ಸಿಗದಂತೆ ಸುತ್ತಲಿನ ಒಡವೆಗಳ ಪಸಾರದ ಉದ್ದೇಶವೇನಿರಬಹುದು ?(ಬಾಳಬ. ೪೦).

[<ಪ್ರಾ. ಪಸಾರ./ಸಂ. ಪ್ರಸಾರ]

**ಪಸಾರ$_2$** 'ಪನಸಾರೆ' ನೋ.

**ಪಸಾರಿ** (ನಾ). ಔಷಧದ್ರವ್ಯಗಳನ್ನು ಮಾರುವವನು: ಪಿಂಜಾರಿಯರು ಪಸಾರಿಯರು . . . ಮೊದಲಾದ ನಾನಾಜಾತಿ (ಸೌಗಂಧಿ. ೧೩೫-೯). [ಪಸಾರ$_2$(<ಪನಸಾರೆ)+-ಇ$_3$]

**ಪಸಾರೆ** 'ಪನಸಾರೆ' ನೋ.

**ಪಸಿ$_1$**, ಹಸಿ$_1$ (ಕ್ರಿ). ೧. ಆಹಾರವನ್ನು ಬಯಸು; ಹಸಿವು ಉಂಟಾಗು: ತಾಯುಪ್ಪ ಪೆಣ್ಬುಲಿ ಪಲವುದಿವಸಮಾಹಾರಮಂ ಪೆಱದೆ ಪಸಿದು ಮಮ್ಮಲ ಮಱುಗುತ್ತಿರ್ದು . . . ಪರಿತಪ್ಪುದಂ ಕಂಡು (ವಡ್ಡಾರಾ. ೪೮-೧೦); ಮೇಲ್ವಾಯೆ ಕರಂ ಪಸಿದ ಪುಲ್ಮರುಳ್ ಪಿಱತಿನಿಗಳ್ ಬೇಯುತ್ತುಮಿರ್ದ ಪೆಣನಂ ನಾಯುಗಿವಂತುಗಿದು ತಿಂದುವು (ಕಾವ್ಯಸಾ. ೫೩೬ ಶೂದ್ರಕ); ಪಸಿದುಣವೇಡಿದಂ ಬಡವ ನಾನುಣಲಿತ್ತೆಂ (ಪಂಪಭಾ. ೫-೭೨); ಪಸಿದ ರಕ್ಕಸಿಯುಂ ಕೆಳೆಗೊಳ್ವ . . . ಎಗ್ಗನಂ ಪೋಲ್ಕುಂ (ಧರ್ಮಾಮೃ. ೧೩-೧೩೪); ಪಸಿದೊಡಂಬುಜಭವಾಂಡಮಂ ಕಳಚಿ ಭಕ್ಷಿಸುವ , . . ವಿಷಮ ಪ್ರಮಥಗಣಮೈದುತಿರ್ದುದು (ಚೆಬಪು. ೪೧-೪೯). ೨. ಉಪವಾಸ ವ್ರತವನ್ನು ಮಾಡು; ಉಪವಾಸವಿರು: ಕೆಱೆಯ ಗಾವುಣ್ಡ ಪಸಿದು ದೇಗುಲವ ಮಾಡಿಸಿದಂ (ಎಕ. VII, ಶಿಮೊ. ೨೨-೪; 963). **ಹಸಿ$_1$**: ೧. "ಹಸಿ-ಕ್ಷುಧಾಯಾಂ, ದ್ರವದ್ರವ್ಯೇ ಚ" (ಶಮಧಾ): ಒಡಲುಗೊಂಡವ ಹಸಿವ ಒಡಲುಗೊಂಡವ ಹುಸಿವ (ದೇವಾಪ. ೫೯-೧೨೩); ಹಸಿದು ನಾವೈತಂದರೀ ಪರಿ ಮುಸಗಿ ಕುಣಿದಾಡಿದೊಡೆ . . . ತನಗೆ ತಣಿವಹುದೆ (ಕುವ್ಯಾಉ. ೮-೧೨); ಹಸಿದಿರ್ದುಂ ತಿನಲೊಲ್ಲದೆ . . . ಬಿಸುಸುಯ್ಯುತೆ ಹಳವಳಿಪರಗಿಳಿಯಂ ಕಂಡಳ್ ಕಮಲಾಕ್ಷಿ (ಜಯುಕಾ. ೨-೩೩). ೩. (ಅಲಂ) ತೀವ್ರಾಕಾಂಕ್ಷೆಯನ್ನು ಹೊಂದು: ಅವನು ಹಸಿದ ಕಣ್ಣುಗಳಿಂದ ಅವಳ ಕಡೆಯೇ ನೋಡುತ್ತಿದ್ದಾನೆ

(ರೂಢಿ). [ದೇ.॥ ತಮಿ. ಪಚಿ ; ಮಲ. ಪಯಿ, ಪೈ]

**ಪಸಿ$_2$,** ಪಸಿವು, ಪಸು$_2$, ಹಸಿವು (ನಾ). ೧. ಆಹಾರದ ಬಯಕೆ; ಕ್ಷುಧೆ: "ದ್ರವದ್ರವ್ಯ ಕ್ಷುತ್ತುಗಳೊಳ್ ಪ[ಪಾಠಾಂ. ಹ]ಸಿ" (ಶಬ್ದಮಂ. ೧೧೦) ; ಕಾಣಲೊಡಂ ಪಸಿಯುಂ ತೃಷೆಯುಂ ಕೆಡುವುದು ರಸಶುದ್ಧಿಯಿನಾ ಮುನೀಂದ್ರಚಂದ್ರನ ಮುಖಮಂ (ಅನಂಪು. ೯–೧೧೧) ; ಬಿಸಿವಡೆದಾ ಸರೋವರದಲ್ಲಿ ಮೀನುಗಳು ಬಿಸಿ ತಾಗಿ ಬಾಯ್ಬಿಡುವುದನು ಅಸಿಯಳು ಮಜಬುಕದಿಟ್ಟಿಯಲಿ ನೋಡಲ್ಕಾಗ ಪಸಿ ತಾಪ ಪರೆದುದಾಕ್ಷಣದಿ (ಮೋಹತ. ೯–೪೫). **ಪಸಿವು:** ೧. "ಗ್ರಾಸೇಚ್ಛಂ ಕ್ಷುದ್ಬುಭುಕ್ಷೆಗಳ್ ಪಸಿವೆನಿಕುಂ" (ವಸ್ತುಕೋ. ೯೩–೮) ; ಪಸಿವುಂ ನೀರಬಿಟ್ಕೆ ದಾಹ ವಾತಂ ಸೂಲೆ ಮೊದಲಾಗೊಡೆಯ ವೇದನೆಗಳಂ ಸೈರಿಸಿ (ಪಡ್ಡಾರಾ. ೫೨–೮) ; ಕೆಲದೊಳ್ ಪುಳಿಂದಿಯಿರೆ . . . ಸಲೆ ಪಸಿವಂ ಮಜಿದು ತಣಿದು ಬೇಡಂ ಬೇಡಂ (ಗಿರಿಕ. ೧–೧೧೭) ; ನರದೇಹವಿದಕೆ ಪಸಿವಾಲಸ್ಯ ನಿದ್ರೆಗಳ್ ವೆರಸಿಪ್ಪುವು (ಚೆಬಪು. ೧–೩೪); ಪಸಿವು ನೀರಡಿಕೆಯಂ ನೋವು ಸಾವಂ ಕಂಡುಂಡು ದಣಿದು ರೋಸಿದಿರಿ (ಶ್ರೀರಾಮಾ. ೩೬೮–೧೮೯). **ಪಸು$_2$:** ೧. ಸಿನ್ನಯ ಪೆಸರಂ ನೆನೆದವನುನ್ನತ ನೀರಡಿಕೆ ಪಸುಗಳಂ ನೀಗುಗೆ ತಾಂ (ಹಾಲಾಸ್ಯ. ೧–೯–೩೭) ; ಕೊಡಹುತ್ತ ಹೃಷಿಕಗಳನಡಗಿಸುತ ಪಸು ತೃಷೆಗಳಡಿಗಡಿಗೆ ತನು ಕೃಶಿಸುವಂದದಿ ನಿರಾಹಾರಮಡಿಸಿ ತಪದೊಳಗಿರ್ಪ (ವೆಂಕಾರಾ. ೧–೧೮–೬೪). **ಹಸಿವು:** ೧. ಹಸಿವು ತೃಷೆಯುಳ್ಳಾತನು . . . ತಿರಿದುಂಬುದಕ್ಕೆ ಹೋಹನು (ಪಂಚತಂ. ೧೭೬–೧೪) ; ಹಸಿವಾದರೆ ಊರೊಳಗೆ ಭಿಕ್ಷಾನ್ನಂಗಳುಂಟು (ಮಹಾದೇ. ಬ.೭೯–೧೯೯) , ಹಸಿವು ಘನವಾಯ್ತೆಂದು ಕುಡಿವರೆ ವಿಷವ (ಕೌತಿಂಶಾ. ೩೮–೧೧) ; ಹಸಿವಿಲ್ಲದವನಿಗೆ ಉಣಬಡಿಸಿದರೇನು ಫಲ ? (ಮಣಿಸ. ೩). ೨. (ಆಲಂ) ಇಚ್ಛೆ ; ಬಯಕೆ : ಅವರ ಜ್ಞಾನದ ಹಸಿವು ತೀವ್ರವಾಗಿತ್ತು (ರೂಢಿ). [<ಪಸಿ$_1$]

**ಪಸಿ$_3$,** ಪಸೆ$_1$, ಹಸಿ$_2$ (ನಾ). ೧. ಹೊಸದು ; ತಾಜಾ : ಪಸಿಯ ತೊವಲ ತಿದಿಯೊಳ್ ಪುದಿದು ಪುಟಪಾಕಂ ಸುಡುವರುಂ (ಆದಿಪು. ೫–೮೫ ಪ) ; ನೋಡಿದರ್ . . . ಪಸಿಯ ಪೊಸಜವ್ವನೆಯರ್ (ಅಜಿಪು. ೯–೩೭) ; ಪಸಿಯ ಬಿಸಿಬಿಸಿನೆತ್ತರುಗುವ ರುಂಡದ ಸರಂ ಕಂಠದಲಿ ರಿಂಗಣಗುಣಿಯುತಾಡೆ (ಚತ್ರಾಂಗ. ೮೧–೨೨೨೪). ೨. ತೇವ ; ಒದ್ದೆ; ಆರ್ದ್ರತೆ: "ದ್ರವದ್ರವ್ಯ ಕ್ಷುತ್ತುಗಳೊಳ್ ಪ[ಪಾಠಾಂ. ಹ]ಸಿ" (ಶಬ್ದಮಂ. ೧೧೦) ; ಮಣ್ಣೊಳ್ ಮಾಡಿದ ಪಸಿಯ ಮಡಕೆಯೊಳ್ ತೆಕ್ಕನೆ ತೀವಿದ ರಸಮಂ ಕಿಚ್ಚಿನ ಮೇಗಿಡಲ್ (ಚಾವುಂಪು. ೧೩೭) ; ಸಚಿತ್ತಪಿಧಾನ—ಪಸಿಯಪ್ಪುದಱಿಂ ಮುಚ್ಚಿದಾಹಾರಮನೀವುದುಂ (ತಸೂವೃ. ೨೪೩). ೩. ಪೂರ್ತಿ ಬಲಿಯದ ಕಾಳು; ಎಳೆಯ ಕಾಳು: ಪೊಡೆಯಂ ಕೊಯ್ದು ಧಾನ್ಯವಜಿಸುವ ಪಸಿಯಂ ಕುಟ್ಟಿಯಕ್ಕಿಯಂಜಿಸುವ . . . ಬಿತ್ತದೆ ಸಸಿಯಂ ನೋಡುವ ಕಟ್ಟಿಗ್ಗನಂ ಪೋಲ್ಕುಂ (ಧರ್ಮಾಮೃ. ೧೨–೨೪). ೪. ಹಸುರುಬಣ್ಣ : ಪಸಿಯ ನೇತ್ರಮುಂ ಪಚ್ಚವಡಿಸಿದಂತೆ ಪಸುರ್ವಡೆದ ನೆಲದೊಳ್ . . . ಉಪಾಶ್ರಯಂ ಬಡೆದಲಂಕರಿಸುವಿಂದ್ರಗೋಪಂಗಳುಮಂ (ಪಂಪಭಾ. ೬–೨೫ ಪ) ; ಕಪಟದಿಂದೆ ವಿಲಾಸಿನಿಯಾದ ವೇಷಮಂ ನೆನೆಯಿಸಿದಪ್ಪುದೀ ಪಸಿಯ ಬಣ್ಣಮಿವಳ್ಗೆನೆ ಚೆಲ್ವನಾಳ್ದು ಮೆಲ್ಲನೆ ನಡೆತರ್ಪ ನೀಲಮಣಿಪುತ್ರಿಕೆಯಂದ ದಿನಾದಮೊಪ್ಪಿದಳ್ (ಕಾದಂಪೂ. ೩೮) ; ಪಸಿಯ ಬಣ್ಣಂ, ಬಿಳಿಯ ಕರ್ಬು (ಶಮುದ. ೧೩೮ ಪ್ರಯೋ). ೫. ಒಣಗಿಸುವುದು ಅಥವಾ ಬೇಯಿಸುವುದು, ಕಾಯಿಸುವುದು, ಸುಡುವುದು ಮುಂತಾದ ಸಂಸ್ಕಾರಗಳನ್ನು ಹೊಂದದಿರುವಂತಹುದು. ೬. ಅಸಂಸ್ಕೃತ ವಾಗಿರುವಿಕೆ ; ಅಪಕ್ವತೆಯನ್ನು ಹೊಂದಿರುವಿಕೆ : ತುಜುಗಾರ್ತಿ ಸಿನಗೆ ಮುನೆವೆಂಡತಿ ಪಚ್ಚನೆ ಪಸಿಯ ಗೋವನ್ನೆ (ಪಂಪಭಾ. ೬–೫೨). 'ಪಸು$_3$' ಪರಾ. **ಪಸೆ$_1$:** ೨. ಪಡಿಗದ ಪಟನೀರ್ಪಸೆಯೊಜಿದ ಪ್ರಾಚೀಗ್ರಿಯಿಂದಸತಿಯರಿದೆ ಪಿಡಿವರಯ್ಯೊ ಪೊಸಮಡಿಮೆಯ್ಯಂ (ಚಕವಿ. ೬–೧೨೦); ಅಕ್ಕಿಯನ್ನು ಚೆನ್ನಾಗಿ ತೊಳೆದು ನೀರಿನ ಪಸೆ ಆರಲು ಬಿಡಬೇಕು (ಅಡುಸಾ. ೮೨) ; ಮೇಲಿನ ಗದ್ದೆಗಳಿಂದ ಕೆಳಗಿನ ಗದ್ದೆಗಳಿಗೆ ಒರತೆಯ ಪಸೆಯೂ ಬಂದಿತ್ತು (ಚಾಳಿಗಿ. ೧೧೦). ೭. ಜಿಡ್ಡು: ಮಾರಾಟದ ಹುಡಿ ಎಳೆದರೆ ಕಣ್ಣು ಹೋಗುವುದೇ ಸರಿ. ಅದಕ್ಕೆ ಪಸೆಯೇ ಹಾಕುವುದಿಲ್ಲ (ಪಳಮಿ. ೧೫). ೮. ಸತ್ತ್ವ ; ತಥ್ಯ ; ತಿರುಳು : ಈ ದಿನ ಅವನನ್ನು ಪೂರಾ ಪರೀಕ್ಷೆ ಮಾಡಿಬಿಡು. ಏನೂ ಪಸೆ ಇಲ್ಲದಿದ್ದರೆ ಇನ್ನಿಲ್ಲಿಗೆ ಬರುವುದೇ ಬೇಡಾನ್ನು (ಪತಿ. ೧೦೫). **ಹಸಿ$_2$:** ೧. ಹಸಿಯ ನೆತ್ತರು ಬಸಿದು ಹೋಗುವಾಗ ಕುಸುಮನಾಭನ ನಾಮ ನೆನೆಗೊಡದಲೆ ಮನ (ಪುರಂದ. ೧–೧೪೨–೪). ೨. "ಉನ್ನಂ, ಕ್ಲಿನ್ನಂ–ಈ ೨ ಹು?ಸಿ[ಹಸಿ]" (ಹಲಾಯು. ೧೨೬–೮೨) ; ಕುಶೆಯ ಕಯ್ಯಲಿ ಪಿಡಿದು ಹಸಿಯ ಧೋತ್ರವ ಪೆಗಲೊಳಿಕ್ಕಿಕೊಂಡು (ಕುಮುರಾ. ೬–೧೩೧) ; ಹಸಿಯ ಚರ್ಮಗಳ ಚಮ್ಮಾವುಗೆಗಳ ಮೆಟ್ಟಿದೆಸಕವೆಂದೆಣಿಸಿದನೊಳಗೆ (ಭರತ. ೧೨–೧೩೯). ೫. ಅರಿಯ ಖಂಡದಿ ಹಸಿಯ ಸುಂಟಗೆವೆರಸಿ ಭೂತಾವಳಿಯ ದಣಿಸಿದ (ಕುಪ್ಯಾಕ. ೮–೮೨) ; ಹಸುಳೆ ನೋಡಿ ವನಂಡೆಯೊಳಗಣ ಹಸಿಯ ಹಾಲನು ಕುಡಿದ (ಸಾಳ್ವಭಾ. ೨೧–೪೯) ; ಕೆಲವು ತರಕಾರಿಗಳನ್ನು ಮತ್ತು ಹೆಚ್ಚಿನ ಹಣ್ಣುಹಂಪಲುಗಳನ್ನು ಹಸಿಯಲ್ಲೇ ತಿನ್ನಬಹುದು (ಅಡುಸಾ. ೭೭). ೯. (?) : ನೊಸಲ ಕಣ್ಣ ಹಸಿಯೆಸಿಪ್ಪುದಸಮುನಯನನಿಡುವ ಭೂತಿ (ವಿಭೂರ. ೪–೬).

**ಪಸಿಯಡಕೆ, ಹಸಿಯಡಕೆ** = ಒಣಗಿಸದೆ ಅಥವಾ ಬೇಯಿಸದೆ ಇರುವ ಅಡಕೆ; ಹಸಿಯಾದ ಅಡಕೆ : ಪಸಿಯಡಕೆಯ ನಾರಂಗದ ಮಿಸುಗುವ ಸನ್ಮಾದುಫಲದ ಫಲನಿಕರದಿಂ (ಧರ್ಮಾಮೃ. ೧೦–೨೪) ; ಹಸಿಯ ಬರಿಯೋರ್ಮನ್ನಿ ಕಸವಿಲ್ಲ ಮುಸುರೆ ಇಲ್ಲ ಹಸಿಯಡಕೆ ಸಿಪ್ಪೆ ಮೊದಲಿಲ್ಲ (ಹಳ್ಳಿಬಾ. ೫೭). **ಹಸಿಯ ಬಿಸಿಲ್** = ಎಳೆಯ ಬಿಸಿಲು : ಮಿಸುಪ ನವತರುಣತರಣಿಯ ಪಸಿಯ ಬಿಸಿಲ್ ಮುಸಗೆ . . . ಪೊಸದಾವರೆವೂವನೋವಿ ಭಾವಿಸಿ ತಿಱಿದಳ್ (ಗಿರಿಕ. ೫–೫೯) ; ದಶನಕಾಂತಿ ಶಶಿಮಂಡಲದ ಪಸಿಯ ಬಿಸಿಲಂ ಬೀದಿವರಿಯಿಸಲಿಂತೆಂದರ್ (ಪುಣ್ಯಾಸ್ರ. ೧–೩೫ ಪ). **ಪಸಿಯರಿಸಿನದ ಕೊಂಬು** = ಒಣಗದಿರುವ ಅರಿಸಿನದ ಕೊನೆ : ಕಡಿದಿಕ್ಕಿದ ಬೆರಲ ಕೊಂಡಿಕೆಗಳಂ ಪಸಿಯರಿಸಿನದ ಕೊಂಬನುಡಿದು ಸುಣ್ಣಂದೊಡೆದೀಡಾಡಿದಂತಾಗೆ (ಅರ್ಥನೇ. ೫–೨ ಪ). **ಹಸಿದಡ್ಡ** = ಏನೇನೂ ತಿಳಿಯದವನು ; ಮಹಾ ಅಜ್ಞಾನಿ : ನಗರದೊಳಗಿನ ಹಸಿದಡ್ಡರ ಕೂಡಲೂ ಓದುವವನು, ಬರೆಯುವವನು (ಸಿಂಹಭ. ೭೭). **ಹಸಿಬಸಿ** = ತೇವವಾಗು ; ಆರ್ದ್ರವಾಗು ; ನೀರು ಸುರಿಸು : ಚಾರು ತುಂಬ ಸಿಡಿಮಿಡಿಗೊಂಡು . . . ಕಣ್ಣು ಪಿಳಿಪಿಳಿ ಪಿಳುಕಿಸಿ ಅವು ಹಸಿಬಸಿವಂತಾಗಿರಲು ಸುಮ್ಮನೆ ದುರುದುರು ನೋಡ ಹತ್ತಿದಳು (ಇಪ್ಪಕ. ೨೮೮). **ಹಸಿಬಿಸಿ** = ೧. ಅರ್ಧಮರ್ಧ ಬೆಂದುದು ; ಸರಿಯಾಗಿ ಬೇಯದಿರುವುದು : ವನದ ಮಹಾ ಮೃಗಗಳ ಕೊಂದು ಹಸಿಬಿಸಿ ತಿನಬೇಕು ಸವಿಸವಿದು (ರಾಮಗೋ. ೧೬) ; ಹಸಿಬಿಸಿ ತಿಂದು ಹೊಟ್ಟೆ ಕೆಡಿಸಿಕೊಳ್ಳಬೇಡ (ರೂಢಿ). ೨. ಅರ್ಧಮರ್ಧ ಜ್ಞಾನವುಳ್ಳವನು ; ಸರಿಯಾಗಿ ತಿಳಿದು ಕೊಳ್ಳದವನು : ಆತನಿನ್ನೂ ಹಸಿಬಿಸಿ. ಈಗಲೇ ಆಫೀಸಿನಲ್ಲಿ ಸೇರಿದರೆ ನಾಳೆ ನಾನು ಸಾಹೇಬರ ಮುಂದೆ ತಲೆ ಕೆಳಗೆ ಹಾಕಬೇಕಾಗುವದು (ಕುರಿಹಿಂ. ೨೨). ೩. ಪೂರ್ಣಜ್ಞಾನವಿಲ್ಲದ ; ಅಪಕ್ವಬುದ್ಧಿಯ : ಇಂಥಾ ಹಸಿಬಿಸಿ ಪಂಡಿತರಿಗೆ ಕೋಪರ್ನಿಕಸನ ವಿಚಾರಗಳು ಎಷ್ಟರ ಮಟ್ಟಿಗೆ

ತಿಳಿದವೆಂಬುದು ಮೇಲೇ ಕಾಣುತ್ತದೆ (ಮುಂಜಯಿ. ೫-೧೮೩).
**ಹಸಿಯ ತುರುಕ**=ಸೈರಣೆಯಿಲ್ಲದ ಮುಸಲ್ಮಾನ; ಅಂಧಶ್ರದ್ಧೆಯ ಮುಸಲ್ಮಾನ: ಹಸಿಯ ತುರುಕನವೋಲು ಕತ್ತಿಯ ಕೊಸರಿ ರ್ಝಳಪಿಸಿ ಕೂಗಿ ಕೊಸರುವನೊಡಲ ನೇವರಿಸಿ (ಅಮೃತ. ೨-೫೩). **ಹಸಿಯ ಹೊಲೆಯ**=ಸಂಸ್ಕೃತಿಯಿಲ್ಲದ ಹೊಲೆಯ; ತಿಳಿವಳಿಕೆಯಿಲ್ಲದ ಹೊಲೆಯ: ಪಶುವನುಬ್ಬಸಗೊಳಿಸಿ ವಧಿಸುವ ಹಸಿಯ ಹೊಲೆಯರ . . . ಹುಸಿವ ಹೊಲೆಯರ ನುಡಿಗಳಂ ಹೋಲುವುದೆ (ಬಸವು. ೫೫-೧೮). **ಹಸಿಯಿಟ್ಟಗೆ**=ಕೇವಲ ಬಿಸಿಲಿನಲ್ಲಿ ಒಣಗಿಸಿದ ಇಟ್ಟಿಗೆ; ಸುಡದೆ ಇರುವ ಇಟ್ಟಿಗೆ: "(ಬಿಸಿಲಿನಲ್ಲಿ ಒಣಗಿಸಿದ) ಹಸಿಯಿಟ್ಟಗೆ; ಹೆಂಟೆ" (Adobe. ೧೦೬೩). **ಹಸಿಸುಳ್ಳು**=ಅಪ್ಪಟ ಸುಳ್ಳು; ಸಂಪೂರ್ಣ ಸಟೆಯಾದುದು: ಅವರು ಹೇಳುವುದೆಲ್ಲಾ ಹಸಿಸುಳ್ಳು (ರೂಢಿ).

[ದೇ.॥ ತಮಿ. ಪೈ; ಮಲ. ಪಸಿ, ಪಯಿ, ಪೈ; ತುಳು. ಪಜಿ; ತೆಲು. ಪಚ್ಚಿ, ಪಸಿ]

**ಪಸಿಂಡಿ** (ನಾ). ಚಿನ್ನ; ಬಂಗಾರ (?): ದೊಡ ಮಾದಿಯ್ಯ ಪಸಿಣ್ದಿದೀಪಗಳ (ಸೌಇಎ. ೧೯೪೧, ಜಮ್ಮಲಮಡುಗು. ೪೪೫-೫; ?).

[ದೇ.॥ ತೆಲು. ಪಸಿಂಡಿ, ಪಯಿಂಡಿ, ಪೈಂಡಿ]

**ಪಸಿಕ** 'ಪಸುಗೆ' ನೋ.

**ಪಸಿಕೆ** 'ಪಸುಗೆ' ನೋ.

**ಪಸಿಗೆ** 'ಪಸುಗೆ' ನೋ.

**ಪಸಿದೊಗಲ್** (ನಾ). ಹಸಿಯ ಚರ್ಮ; ಆಗ ತಾನೇ ಸುಲಿದ ತೊಗಲು: ಪಸಿದೊಗಲ [ಪಾಠಾಂ. ಪಂದೊವಲ] ಥೋತ್ರದಿಂದೊಟ್ಟಿಯೆಲುಗಳ ಕುಂಡಲಂಗಳಿಂದೆ (ಜೈವಿಭಾ. ೧೬-೨೪).

[ಪಸಿ₃+ತೊಗಲ್ (<ತೋಲ್₁)]

**ಪಸಿಮೆ** (ನಾ.) ಹಸಿಯಾಗಿರುವಿಕೆ; ತೇವದಿಂದ ಕೂಡಿರುವಿಕೆ; ಆರ್ದ್ರತೆ: ಅಡಕೆ ಒಣಗಿಲ್ಲ, ಇನ್ನೂ ಪಸಿಮೆ ಇದೆ (ರೂಢಿ).

[ಪಸಿ₃+-ಮೆ₁]

**ಪಸಿಯೊರಟು** (ನಾ). ೧. ಅಚ್ಚ ಒರಟುತನ; ಶುದ್ಧ ಅಸಂಸ್ಕೃತತೆ: ಪಸಿಯೊರಟು ತಂದೆಗೊಗೆದಾ ಮಗಳ ಪಸಿಯೊರಟನೊಗೆತವರ್ ತೋಱುಗುವರ್ (ಅಂತಿಗೊ. ೨೨-೪೫೪). (ಗು). ೨. ಶುದ್ಧ ಒರಟಾದ; ಸಂಪೂರ್ಣವಾಗಿ ಅಸಂಸ್ಕೃತವಾದ: ಏಗಳುಂ ಸ್ಯೂಕಸವನ್ ಪಸಿಯೊರಟು ಮನದವನ್ (ಬದ್ಧಪ್ರ. ೧೦-೨೦೧).

[ಪಸಿ₃+ಒರಟು(<ಒಱಂಟು)]

**ಪಸಿರ್** 'ಪಸುರ್₂' ನೋ.

**ಪಸಿರ್ಗಲ್** 'ಪಸುರ್ಗಲ್' ನೋ.

**ಪಸಿವು** 'ಪಸಿ₂' ನೋ.

**ಪಸಿವೆಱು** (ಕ್ರಿ). ಹಸಿವುಂಟಾಗು; ಕ್ಷುಧ್ಬಾಧೆಯುಂಟಾಗು: ಪಸಿವೆತ್ತು ಮಸಗಿ ಬಂದು ಬಿಲಂಗಳೊಳಗಣೆಱುಂಪೆಗಳಂ ಮೊಗಮಿಟ್ಟೊದಿಯೂದಿ ತಣಿಯದೆ . . . ಕೆಲಕೆಲೆದು ಕುಪ್ಪಿಯುರ್ಬಿ ಕೊರ್ಬಿ ನಲಿದಾಡುವ ಭಲ್ಲೂಕನಿಕಾಯದಿಂ (ಗಿಂಕ. ೧-೧೨೮ ವ).

[ಪಸಿ₂+ಪೆಱು₁]

**ಪಸು**₁, ಪಂಚು₁, ಪಚ್ಚು₁, ಹಂಚು₁, ಹಚ್ಚು₂ (ಕ್ರಿ). ಪಚ್ಚು₃ (ಭೂತಕೃ). ೧. ವಿಭಾಗಿಸು; ಪಾಲುಮಾಡು: "ಪಸು-ವಿಭಜನೇ (ವಿಭಾಗ ಮಾಡು), ಜೀವಧನೇ ಚ (ಹಸು)" (ಶಮಧಾ); ಮುಳಿದೆಚ್ಚೊಡೆ ಸೌಳನೆ ಸೀಳ್ದು ಪಚ್ಚವೋಲಾದುದು ದಂಡಧಾರ ಗಜಮಾತನೊಡಲ್ವೆರಸಂದು ಪಾರ್ಥನಿಂ (ಪಂಪಭಾ. ೧೨-೮೭); ತಂದಂಬುಸಹಿತವಿದೆ ದೇವ . . . ನಿನ್ನ ಮುಂದಿಟ್ಟು ಸರಿಯಾಗಿ ಪಸುವೆಂ [ಪಾಠಾಂ. ಹಚ್ಚುವೆ, ಹಸುವೆಂ] ನೋಡಾ (ಕಣ್ಣ.ರ. ಪೇ. ೧೩೦-೭೩); ಪಲವು ಕವಿತ್ವಗಳಿವೆಂದು ಪಿಂಜುತೆ ಪಸುತುಂ ಅಳಿವರುಚುವ ಬಿಮೆಯಿನ್ನಂ ಕಳಿಯದು (ಸಂಸಪ. ೬-೧೨). ೨. [ಗಣಿತ] ಭಾಗಾಕಾರ ಮಾಡು: ಭಾಗಿಸು: ಪಂಚಾಹತರಾಶಿಯಂ ಪಸು[ಪಾಠಾಂ. ಶಿ, ಸಿ] ದಿವಾರಾತ್ರಿ ಪ್ರಮಾಣದಿಂದಂ (ಜಾತತಿ. ೨೪-೩೧). **ಪಂಚು**₁: ೧. ಅಖಿಳ ದೇಶಮಂ ನಿಶ್ಚಯಂ ವಿಂಗಡಿಸಿ ಪಂಚಿ ನಿಮಗಿತ್ತಪೆಂ (ಪರಮ. ೩೯-೪೯). ೩. ವಿತರಣೆ ಮಾಡು: ಸಮರಲಂಪಟರೆಚ್ಚು ಪಂಚಿ[ಪಾಠಾಂ. ಪಚ್ಚಿ] ದರ್ ಕಾಕಜಂಬುಕತತಿಗೆ ರಿಪುಭಟರ ಮಾಂಸಗಳ (ಚಿಬಪು. ೧೬-೧೩). **ಪಚ್ಚು**₁: ೧. ಪಚ್ಚು[ಚ್ಚಿ] ಪರಿಕಲಿಸಿ ಬೆನ್ನಂ ಮುಚ್ಚಿರೆ ಮುಂದಿ (ಕಾವ್ಯಸಾ. ೯೬೬ ಶೂದ್ರಕ); ಎನಗಂ ಪಾಂಡುಗವಿಂಲ್ಲ ಭೇದಮೆಳೆಯಂ ಪಚ್ಚಾಳ್ವಂ (ಪಂಪಭಾ. ೧೩-೯); ದಿವ್ಯಪಿಂಡಮನೊಂದಂ . . . ತಂದಾದರದಿಂ ಪಚ್ಚಿ[ಪಾಠಾಂ. ಪಂಚಿ] ಪೆಂಡಿರಿರ್ವರಿಗಿತ್ತಂ (ಧರ್ಮಪ. ೯-೫೬). ೩. ಬಲನೆಡನೊಳುರುಬುತಿಹ ಸುಭಟರಂ ಪಚ್ಚುವರ್ ಭೂತವೇತಾಳಜನಕೆ (ಚಿಬಪು. ೨೪-೧೮). **ಹಂಚು**₁: ೧. ನಾನು ತಂದನ್ನವನು ಜನಸಿಯು ಹಂಚಿ (ಸಂಭಪ. ೨೩-೨೨); ಹೊಸದಾಗಿ ಕಣ್ಣು ಕೊರೆದ ಕತ್ತಿಯ ಹಾಳೆಯಲ್ಲಿ ತಲೆಗೂಡಲನ್ನು ಹಂಚಿ ಗಂಟಿಕ್ಕಿ (ಭಾಮಣಿ. ೨೬). **ಹಚ್ಚು**₂: ೪. (ತರಕಾರಿ ಮುಂತಾದುವುಗಳಂತೆ) ಸಣ್ಣ ಸಣ್ಣ ಹೋಳುಗಳನ್ನಾಗಿ ಮಾಡು; ತುಂಡರಿಸು: ನರನ . . . ಸಿಡುಸರಗಳ್ಪಿಚ್ಚಿದವು . . . ಚುಚ್ಚಿದವು ಕೂಡೆ ಥಟ್ಟುಚ್ಚಿದವು ಸೀಳಾಗಿ ಹ[ಪಾಠಾಂ. ಪ]ಚ್ಚಿದವು (ಜೈಮಿಭಾ. ೧೩-೧೮): ಉಗುರುಗಳಿಂದ ಗೀರಲೂ . . . ಹಚ್ಚಲೂ ಮಿಸಾಟಲೂ ಬಹುದು (ಅನಂಶ. ೨); ಹಚ್ಚಲಿಕ್ಕೆ ತಿಳಿಯದಿದ್ದರೆ ಮುಂಗೈ ಕಚ್ಚಿಕೊಂಡ ಹಾಗೆ (ಗಾದೆ).

**ಪಂಚಂಪಾಡಾಗು**=ಒಡೆದು ಚೂರಾಗು: ಹರಿಹಂಚಾಗು: ಹಾಗೆ ಹೇಳಿದ್ದಾದರೆ ಆಸ್ತಿ ಪಂಚಂಪಾಡಾಗಿ ಒಂದೊಂದು ಹಿಸ್ಸೆಗೆ ಐವತ್ತು ವರಹಗಳ ಕಂದಾಯ ಸಲುವ ಭೂಮಿ ಬರುತ್ತಿತ್ತು (ಜಾರುದಾ. ೬೯); **ಪಂಚಂಪಾಡು ಮಾಡು**=ಚೂರುಚೂರು ಮಾಡು: ನಾಡ ಜನರೂರೆಲ್ಲ ಪಂಚಂಪಾಡು ಮಾಡಿದನೆಂಬ ಖಾಡಾಖಾಡಿಯಲಿ ಬಂದು (ರಾಮಗೋ. ೩೫). **ಪಂಚಿ ಕೊಡು, ಪಚ್ಚಿ ಕೊಡು, ಹಂಚಿ ಕುಡು, ಹಂಚಿ ಕೊಡು, ಹಚ್ಚಿ ಕೊಡು**=ವಿಭಾಗಿಸಿ ಕೊಡು; ಪಾಲು ಮಾಡಿ ಕೊಡು: ನಿನಗೆ ಭಾಗ್ಯಮಿಲ್ಲದೊಡಂ ನಿನ್ನ ನೆರೆಮನೆಯವರ ಭಾಗ್ಯಮಂ ಪಂಚಿ ಕೊಡು [ಪಾಠಾಂ. ಪಂಚಿ ಕುಡು, ಪಚ್ಚಿ ಕೊಡು]ವೆಂ (ಧರ್ಮಪ. ೧-೪೫ ವ); ಪಾರ್ವತಿಗೆ ದೇಹಮಂ ಪಚ್ಚಿ ಕೊಟ್ಟಭವ ಸರ್ವಾಪರಾಧಂಗಳಂ ಕ್ಷಮಿಸು (ಚಿಬಪು. ೫೭-೩೮); ನೆರೆದ ಯಾಚಕರಿಗೆ ಹಂಚಿ ಕುಡುವ ಚಿನ್ನವರದರೊಪ್ಪಿಹರು (ಮೋಹತ. ೩-೨೮); ರಾಗರಸದೊಳನವರತ ಕಾದಲರ ಸಂಭೋಗಕ್ಕೆ ಸಮವಾಗಲೆಸುತ ಆಗಮಜ್ಞರು ಹಂಚಿ ಕೊಟ್ಟಂತೆ ಪೇಟೆಯ ಭಾಗದಂಗಡಿಗಳೊಪ್ಪಿದುವು (ಮೋಹತ. ೩-೧೨); ಸುಖ ಮುಂದಿಗೆ ಆಗುವಂತಿದ್ದರೆ ಎಲ್ಲರಿಗೂ ಹಂಚಿ ಕೊಡುತ್ತೇನೆ (ಅಪನಾ. ೧೦೪); ಸಂಡ ನಾಡುಂ ಬೀಡನಂದಿರದೆ ಹಚ್ಚಿ ಕೊಟ್ಟು (ಕಮಾಂಡ. ೬-೫೩); ರಾಜ್ಯಮಂ ಹಚ್ಚಿ ಕೊಡು ಪಾಂಡವರಿಗೆ (ತುರಂಗ. ೪೧ ಸೂಚನೆ). **ಪಂಚುಪಱಿ, ಹಂಚುಹಱಿ**=ಚೂರು ಚೂರಾದುದು; ಹರಿ ಹಂಚಾದುದು: ಅಂತು ಎರ್ದೆಗೆಱಗಿದಪಱಿಂದೆ ಕಿಡಿಮುಸಿಯಾಗಿ ಕರಿಕುವೋಪನ್: ಪಂಚುಪಱಿಯಾಗಿ ಬಲಮುಡುಗಿದನ್ (ಬದ್ಧಪ್ರ. ೨೦-೪೧೮); ಪಂಚಭೂತಂಗಳೊಳಸಂಚಲವನಱಿಯದಲೆ ಹಂಚನೆ ಹಿಡಿದು ತಿರಿದುಂಬ ಜ್ಞಾನಿ ತಾ ಹಂಚುಹಱಿಯುಹನು (ಸರ್ವಜ್ಞ. ೩೪೮).

**ಪಂಚುಪಚಿ ಮಾಡು, ಹಂಚುಂಹಚಿ ಮಾಡು, ಹಂಚುಹಚಿ ಮಾಡು**=ಚೂರುಚೂರು ಮಾಡು; ಪುಡಿಪುಡಿ ಮಾಡು; ನಾಶ ಮಾಡು: ಪಂಚುಪಜು ಮಾಡಿ ಪಡೆಗುಂ ಪಂಚತ್ವಮನಾವ ಗತಿಯೊಳಂ ಜವಂ (ಮಲ್ಲಿಪು. ೧೩-೧೫೭); ಪಂಚತೆ ಮುಟ್ಟೆ ಪಂಚುಪಜು ಮಾಳ್ಕುಂ ನಾರಕಾನೀಕಮಂ (ಅಸಂಪು. ೯-೪೧); ಪಂಚಮಹಾಪಾತಕಮಂ ವಂಚನೆಯಂ ಪಾಪದೋಷಮಂ ಕೊಲೆ ಹೊಲೆಯಂ ಸಂಚಲಿಸದ ಬ್ರಹ್ಮೇತಿಯ ಹಂಚುಂಹಜುಮಾಳ್ಪುದನ್ನದಾನವೆ ಸಫಲಂ (ನೀತಿಸಾ. ೬೨೭); ಮೋಟಂ ನೀರ್ಗುಡಿವಂತೆ ಹಂಚುಹಜು ಮಾಡಿ ಕಿಡಿಸದೆ (ಧರ್ಮಾಮೃ. ೧೪-೪); ಪಂಚೇಂದ್ರಿಯ ಸಪ್ತಧಾತು ಹಂಚುಹಜು [ಪಾಠಾಂ.ಹಜುಹಂಚು] ಮಾಡಿ ಕಾಡಿಹವಯ್ಯ (ಬಸವ. ೪೭). **ಪಚ್ಚುಕೊಳ್, ಹಂಚಿಕೊಳ್ಳು, ಹಚ್ಚುಕೊಳ್**=ವಿಭಾಗ ಮಾಡಿ ಕೊಳ್ಳು; ಹಿಸ್ಸೆ ಮಾಡಿಕೊಳ್ಳು: ಮುನ್ನ ತನ್ನ ಮಾಡಿದ ಕರ್ಮದುದಯದಿಂದೆಯ್ದುವ ಸಾವುಮಂ ನೋವುಮಂ ಪೆಜರ್ಪಚ್ಚುಕೊಳ್ಳಿ ಮೆಂದೊಡೆ ಪಚ್ಚುಕೊಳ್ವರೆ (ಧರ್ಮಾಮೃ.೭-೯೭); ಪಂಚೀಕರಣದೃಷ್ಟನ ನಿನ್ನ ಪಾಲಿಗೆ ಹಂಚಿಕೊಂಡೆನ್ನ ಪಾಲಿಪುದು (ಮೋಹತ. ೨೮-೨೭); ಉತ್ತಮ ಮಧ್ಯಮಾದಮನೆಲನೆಲ್ಲ ಹಂಚಿಕೊಂಡು . . . ಅನುಭವಿಸೂದು (ಎಕ. X ( S ), ಕೋಲಾರ. ३೧-೧೧; 17ನೆಯ. ಶತ); ಮಿಕ್ಕ ಭಾಗಗಳನ್ನು ಉಳಿದವರು ಹಂಚಿಕೊಳ್ಳೋಣ (ರಾವಿಜ. ೭೬); ಲಗ್ಗೆಯನೊಡ್ಡಿಕೊಂಡೆರೆಯನು ಹಚ್ಚಿಕೊಂಡು ಸೆಂಡಸಿಟ್ಟಾಡುವ ಮಕ್ಕಳ ಮರುಳ್ಗಳ ತಂಡ ರಂಜಿಸಿತಲ್ಲಲ್ಲಿ (ನೇಮಿಸಂ. ೮-೯೮). **ಪಚ್ಚುಣ್**=ಹಂಚಿಕೊಂಡು ಊಟ ಮಾಡು: ನಾಗಜೀಯರುಂ ಸಾಮ್ಯಭಾಗಿಗಳಾಗಿ ಪಚ್ಚುಣ್ಡು ಬರುತಂ (ಎಕ. III, ನಂಜನ. ೪೪-೪; 1113). **ಹಂಚಿ ಬಿಡು**=ಪಾಲುಮಾಡಿ ಕೊಡು; ಭಾಗಮಾಡಿ ಕೊಡು: ರೈತರಿಗೆ ಭೂಮಿಯನ್ನು . . . ಆದಷ್ಟು ಜಾಗ್ರತೆ ಹಂಚಿ ಬಿಡಬೇಕೆಂದು ಅವನು ನಿರ್ಧರಿಸಿಕೊಂಡಿದ್ದನು (ಪುನರು. ೨೯೯). **ಹಂಚಿ ಹಾಯ್ಕು**=ಹಂಚಿಬಿಡು: ಕುಚದ ವೃತ್ತತೆಯ ಕೊಟ್ಟಳು ಕೋಕಪಕ್ಷಿಗೆ ಕಚದ ಭಾರವ ಕೊಟ್ಟು ನವಿಲ್ಗೆ ವಚನ ಸುಸ್ವರ ತನಗೇಕೆಂದು ಶುಕಪಿಕ ನಿಚಯಕ್ಕೆ ಹಂಚಿ ಹಾಯ್ಕಿದಳು (ಮೋಹತ. ೯-೩೦). **ಹಂಚಿ ಹೋಗು**=ಬೇರೆ ಬೇರೆಯಾಗು; ಚೂರು ಚೂರಾಗು: ಉಪನಿಷತ್ತಿನ ಅಖಂಡಏಕರಸಪುರುಷೋತ್ತಮನು ಇಂದು ಚೂರು ಚೂರಾಗಿ ಹಂಚಿ ಹೋಗಿದ್ದಾನೆ (ಭಾರದ. ೪೭); ಟಕಾರ ಹಲವು ಧ್ವನಿಗಳಾಗಿ ಹಂಚಿ ಹೋಯಿತು (ದ್ರಾವಿವಿ. ३३೧).

[ದೇ.॥ ತಮಿ. ಪಕು; ಮಲ. ಪಗು; ತುಳು. ಪಗಿ; ತೆಲು. ಪಗುಲು; ಕುಇ. ಪಷ್ಕ]

**ಪಸು$_2$** 'ಪಸಿ$_2$' ನೋ.

**ಪಸು$_3$**, ಪಚ್ಚೆ$_1$, ಹಚ್ಚೆ$_1$, ಹಸು$_1$ (ನಾ). ೧. ಹಸುರು; ಹಸುರುಬಣ್ಣ: 'ಪಸುಂಬುಲ್' ಪರಾ. ೨. ಎಳೆಯದು; ಚಿಕ್ಕವಯಸ್ಸಿನದು: 'ಪಸುಗೂಸು' ಪರಾ. ೩. ಸುಗಂಧವನ್ನು ಸೂಸುವ ಎಲೆಗಳುಳ್ಳ ಒಂದು ಬಗೆಯ ಗಿಡ: "ಗೌಪದಿ—ಬಿಳಿಯ ಗಜುಕೆ, ಪಸು, ಅರಳಿ" (ಓಷಧಿ. ೫೧). **ಪಚ್ಚೆ$_1$**: ೧. "ಜಾಗವಸುರೆನೆ ಪಚ್ಚೆ" (ಶಬ್ದಮಂ.೭೦). 'ಪಚ್ಚೆದೋರಣ' ಪರಾ. ೩. "ದೇವಕಣಿಶಂ ಪಚ್ಚೆಯಕ್ಕು" (ಮಂಗರಾ. ४೦-३೦); ಮರುಗ ಮಲ್ಲಿಗೆ ಪಚ್ಚೆ ಮುಂದಿ ವಾಳಕ್ಕೆ ಪರಿಮಳದುದಕವನೆಜಿದವರಾರಯ್ (ಮಹಾದೇ. ಜ. ೧೦-३); ವನಪಾಲಂ ಕಾಣ್ಕೆಗೈದಂ ವಿಚಕಿಲದಲರಂ ಪಚ್ಚೆಯಂ ಬಾಳೆವಣ್ಗೊಳ್ಗೊನೆಯಂ (ರಾಜಶೇ. ೧೦-೨). ೪. ಹಸುರುಬಣ್ಣದ ರತ್ನ; ಮರಕತ: "ಪಸುರ್ವರಲೆನೆ ಪಚ್ಚೆ" (ಚತುನಿ. ೧೧೦); ತಂತಮ್ಮ ಮನೆಯ ಮುಂದಣ ಪಚ್ಚೆಯ ಜಗಲಿಗಳೊಳಂ . . . ತಂಡತಂಡದೆ ನೆರೆದಿರ್ದ ಪೆಂಡವಾಸದೊಳ್ವೆಂಡಿರಂ ಕಂಡು (ಪಂಪಭಾ. ४-८४ ಪ); ಶುದ್ಧಸ್ಫಟಿಕದ ನೆಲಗಟ್ಟಂ ಪಚ್ಚೆಯ ಕಂಬಂಗಳಿಂ . . . ಒಪ್ಪುವ ಕೃತ್ರಿಮಚೈತ್ಯಾಲಯಂಗಳಂ ಕಣ್ತಣಿವಿನಂ ನೋಡುತ್ತುಂ (ಧರ್ಮಾಮೃ. ೨-೧೪೫); ಪಚ್ಚೆಯ ಮಣಿಗೋಪುರದಿಂದುಚ್ಚಳಿಪಂಶುಗಳನಿಂದುಮಂಡಳದ ಮೃಗಂ ಮೆಚ್ಚುವೆಳವುಲ್ಲೆನುತ್ತುಂ ನಚ್ಚಿಯೆ ಬಂದೆಳಸಿ ಬಳಸಿ ಬೆಚ್ಚನೆ ಸುಯ್ಗುಂ (ಪಾರ್ಶ್ವಪು. ೧೬-೬೭). ೫. (ಪಗಡೆಯಾಟದಲ್ಲಿ) ಹಸುರು ಬಣ್ಣದ ಕಾಯಿ: ಪಚ್ಚೆಯಂ ನೀಂ ಪವಣಲಿತ್ತಾಡು ಸಿನ್ನ ಪಳದಿಯ ಕಾಯ್ಗಳವು ಮೊದಲೆ ಹಣ್ಣಾದುವು (ಚಿಬಪು. ೧೦-೪೭ ಅ); ಬಚ್ಚನಾಲಗೆಯೆ ಬೀಳೆಂದು ಹಾಸಂಗಿಯಂ ಪಚ್ಚೆಯ ವಿದೂಷಕನುರುಳ್ಚಿದಂ (ಜೈಮಿಭಾ. ೬-३೧). ೬. ಹಸುರು ಬೆಳೆ; ಪಯಿರು: ಬಾಳೆ ಬದಣ ಮುಂತಾದ ಏನುಳ್ಳ ಕೀಳುಪಚ್ಚೆ ತೃಣಕಾಷ್ಠ ಮುಂತಾದ ಧಾನ್ಯದ ××× (ಎಕ. VII, ಶಿಮೊ. ೭೧-೨೮; 1431). ೭. (ಹಣ್ಣು, ಕಾಯಿ ಮುಂತಾದುವುಗಳ) ಹಸುರಾದ ಹೊರ ಭಾಗ; ಸಿಪ್ಪೆ: ಮಿಗೆ ಬಲಿದ ಕಗ್ಗುಂಬಳದ ಕಾಯ ಗೇಣುಗೇಣಗಲದಲಿ ಕತ್ತರಿಸಿ ಕೊಂಡದಜ ಪಚ್ಚೆಯಂ ತೆಗೆಯದೆ (ಸೂಪಶಾ. ೫-೧೨). ೮. ಹೊಸದಾಗಿರುವುದು; ತಾಜಾ: (ಕ). ೯. ಕರ್ಪೂರ: "ಪ್ರಾಲೇಯ ಮೆನಲು ಘನಸಾರಮೆನೆ ಪಚ್ಚೆ" (ಮಂಗರಾ. ೯೯-೨೨). 'ಪಚ್ಚೆತೈಲ' ಪರಾ. ೧೦. ಕಪ್ಪು; ಶ್ಯಾಮಲ ವರ್ಣ: 'ಪಚ್ಚೆದೇವರು' ಪರಾ. ೧೧. ಮನುಷ್ಯರ ಹಣೆ, ಕೈ ಮುಂತಾದ ಸ್ಥಳಗಳಲ್ಲಿ ಅಲಂಕಾರಕ್ಕಾಗಿ ಚಿತ್ರ ಬರೆದು, ಹಸುರುಬಣ್ಣ ತುಂಬಿ ಚುಚ್ಚುವುದು ಮತ್ತು ಹಾಗೆ ಚುಚ್ಚಿ ಆದ ಗುರುತು: (ಕ). **ಹಚ್ಚೆ$_1$**: ३. ಪೆಗ್ಗುರುಟಗೆ ಹೊಡೆಮರ(ಳ)ಟ್ಟ ಹಚ್ಚೆಯೆಲೆ ಮೆಣಸಿಗೆ . . . ಉರುತರದ ವಿಷಪ್ರಹಾರಿಗ[ಳ್] ಬೆರಸಲವ(ದ)ಂ (ಖಸುದ. ೧೬-೧೦೯). ೧೧. ಹೊಡೆ ಕಟ್ಟು ತೂಗು ಗುದ್ದಿಜು ಸೀಳು ಹೋಳೆಂಬ ನುಡಿ ಬಾಳೆಯಲ್ಲಿಯೊಡೆಗೆಜಿಯಲ್ಲಿ ತೊಲೆಯಲ್ಲಿ ಬಿಡೆ ನರಿಯ ಬಿಲದಲ್ಲಿ ಕೈಯ ಹಚ್ಚೆಗಳಲ್ಲಿ ತಂತುವಾಯರ ನೂಲೊಳು . . . ಅಲ್ಲದಂತಾ ನಾಡೊಳೆಂದುಮಿಲ್ಲ (ಚೇರಮ. ೨-೮); ಎಡದ.ಗಲ್ಲದ ಮೇಲೆ ವಸುದಳ ತಾಮರಸದ ಹಚ್ಚೆಯ ಬೊಟ್ಟೆಸೆವುದಂತೆ (ಹನುಮ. ३५); ಅವರು ಮುಂಗೈ ಮೇಲೆ ಕುಚ್ಚಿಸಿಕೊಂಡಿದ್ದ ಲತಾಕಾರದ ಹಚ್ಚೆಯ ನಸುಹಸುರು ಬಣ್ಣವು ಅವರ ಗೌರವರ್ಣಕ್ಕೊಂದು ಆಭರಣವಾಗಿ ತೋರುತ್ತಿತ್ತು (ಕಾನೂರು.೨೮). **ಹಸು$_1$**: ೨. 'ಹಸುಗೂಸು', 'ಹಸುಮಗು' ಪರಾ. ३. "ರೋಹಿಣೀ–ಸಿವನ್ನಿ, ಹಸು, ಅಳಲೆ . . . ಜಟಾಮಾಂಸಿಭೇದ" (ಓಷಧಿ. ೧೪೦). 'ಪಸಿ$_3$' ಪರಾ.

**ಪಚ್ಚೆಯ ಸಾರ**=ಉತ್ತಮವಾದ ಮರಕತಮಣಿ; ಪಚ್ಚೆಸಾರ: ಮುತ್ತಿನ ಮುಜುದ ಲಂಬಣಂಗಳ್ವೆರಸೆಟಿಲ್ವ ಪಚ್ಚೆಯ ಸಾರದ ತೋರಣಂಗಳಂ ನುಗುಳುತ್ತುಂ ಬಂದು (ಆದಿಪು. ४-२५ ಪ).

[ದೇ.॥ ತಮಿ. ಪಚು, ಪಚ್ಚೈ; ಮಲ. ಪಚ, ಪಚು; ತುಳು, ಕೊಡ. ಪಚ್ಚೆ; ಕೋತ. ಪಚ್; ತೊದ. ಪೊಚ್]

**ಪಸು$_4$**, ಹಸು$_2$, ಹಸುವು (ನಾ). ೧. ಆಕಳು; ಗೋವು: "ವಸುಧೆ ದಿವಂ . . . ಪಸುವೆಂಬಿನಿತಜಿೊಳಂ ವರ್ತಿಸುಗುಂ ಗೋ ಶಬ್ದಂ" (ವಸ್ತುಕೋ. ೧३೫-೧೦೪); ಇದನಟಿವಾತ ಕೆಜಿಯಿಂ × ಕೋಡಿಯ ಮನಟಿದು ಪಸುವುಮ್ಪಾರ್ವರು ××× [ಕೊನ್ದೋನವ]ನ್ತಮ್ಮಚ್ಚೆಯುನ್ತಂಗೆಯುಮ ××× ಮಾಡಿ ಕೊಣ್ದೋ[ಂ] (ಸೌಇಇ. XI-i, ೭-೨೭, 837); ಕುಡುವುದು ಪಸುವಿನ ಪಾಲಂ (ಅಶ್ವಶಾ. ೧೦-೧೫); ಪಸುವೆನಿಸದಮಲ ಸುರಧೇನು ಮರನೆಂದೆನಿಸದಸವು ಕಲ್ಪದ್ರುಮಂ

(ಚೆಬಪು. ೧-೧೨). ೨. ದನ; ಕಾಲ್ನಡೆ : ಅಸಿತೇಂದೀವರಲೋಲ ಲೋಚನೆಯನಂದಂತಾ ಸಭಾಮಧ್ಯದೊಳ್ ಪಸುವಂ ಪೋದುವವೋಲೆ ಮೋದೆಯುಂ (ಪಂಪಭಾ. ೭-೫೮). ೩. ಪ್ರಾಣಿ ; ಜೀವಿ : 'ಪಸುಪತಿ' ಪರಾ. ೪. (ಅಲಂ) ಅಜ್ಞಾನಿ ; ಜ್ಞಾನಹೀನ : "ಜೀವಧನ ವಿಭಜನಾಜ್ಞಾನಿಗಳೊಳಂ ಪಸು" (ಶಬ್ದಮಂ. ೧೧೦) ; ಏಸು ಮಱಯದ ಪಸುವೆನೆ ಕೇಳಲಾಱೆನೆಂದೆನುತ ಮನದಿ ನೋಯರವರು (ಶಾಂತೀಚ. ೪-೯೬). **ಹಸು$_2$ :** ೧. "ಹಸುವೆನಲ್ ಗೋವು" (ಕಶರ. ೧೧೪) ; ಬಡಹಸುವಂ ಕೆಡೆಯದಂತು ರಕ್ಷಿಸವೇಡಾ (ಸಮಪ. ೯-೬೧) ; ಐದು ಪರಿಯ ಬಣ್ಣವ ತಂದು ಕೊಟ್ಟರೆ ನಾಲ್ಕುಮೊಲೆಯ ಹಸುವಾಯಿತ್ತು (ಮಹಾದೇ.ಬ. ೫೭-೧೪೧) ; ಕಱೆಯದಿಹ ಹಸುವಿದ್ದು ಕಷ್ಟವು (ಸಂಭಪ. ೨-೭೨); ಹಸುವಿಗಿಟ್ಟಳು ಹಾಲುಓಗರ ಬಿಸಿಮಡ್ಡಿಯ ಗಂಡಗೆ ಹಾಕಿ (ಪುರಂದ. ೧-೧೧೧-೬). **ಹಸುವು :** ೧. ಗೋಕುಲಂ, ಗೋಧನಂ—೨ . . . ಆಕಳ ಹಿಂಡು, ಹಸುವುಗಳ ಮಂದೆ (ಸಿದ್ಧಾಂತಿ. ೨೯೧). [<ಪ್ರಾ. ಪಸು./ಸಂ. ಪಶು]

**ಪಸುಂಗಜು** (ನಾ). ಹಸುರಾದ ಗರಿ ; ಹಚ್ಚನೆಯ ಗರಿ : ಪಚ್ಚನೆಯೆಂಬುದರ್ಕೆ ಆದಿಯಿತ್ವವಿಲ್ಲಾಗಿ-ಪಸುಂಗಜು, ಪಸುರ್ವಂದರೆಂದಾಯ್ತು (ಶಮದ. ೧೮೨ ಪ್ರಯೋ). 'ಪಸುರ್ಗ‌ರಿ' ಪರಾ. [<ಪಸುರ್$_2$+ಗಜು]

**ಪಸುಂಗಾಯಿ** (ನಾ). ಒಂದು ಊರಿನ ಹೆಸರು ( ? ): ಗಣೇಗೂರಾ ನರೆವೆವರುಂ ಬೆಳ್ಳಿಮಣಿಯರುಂ ಸನ್ನಿಗಾಲಾ ಪುಟ್ಟಿರುಂ ಬಟ್ಟಿವರುಂ ಪಸುಂಗಾಯ ಕಟಿಾಚ್ಚ ತರುಬಿರದರುಂ ಇ ಪೊಲನಂ ನಡಯಿಸಿದೋರ್ (ಎಕ. XVI, ಗುಬ್ಬಿ. ೭೫-೫೯ ; 733). [ ? ]

**ಪಸುಂಗುರಿ** (ನಾ). ಹಸಿಯ ಕಾಳು, ತರಕಾರಿಗಳಿಂದ ತಯಾರಿಸಿದ ಒಂದು ಬಗೆಯ ವ್ಯಂಜನ ; ಪಚ್ಚಡಿ : ತಾಳಿನ ಪಳಿಹ ಪಸುಂಗುರಿ ಸಾಸವೆ ಸೀಕರಣೆ ಹೊರಿಪಾನ ಪಳಿದೆಯವೆಂಬ ನಾನಾಭಿನ್ನ ರುಚಿಯ ಶಾಖಂಗಳುಂ (ಧರ್ಮಪ್ಯಾ. ೨-೩೮). 'ಕೋಸುಂಬರಿ', 'ಗುಗ್ಗುರಿ$_1$', 'ತಿಂಗುಜು' ಪರಾ. [<ಪಸುರ್$_2$+?]

**ಪಸುಂಡಿ** (ನಾ). ಒಂದು ಊರಿನ ಹೆಸರು ; ☞ ಧಾರವಾಡ ಜಿಲ್ಲೆಯ ಈಗಿನ ಅಸುಂಡಿ : ಇಟ್ಟಗೆ ಪಸುಣ್ಡಿ ಮುಗುಳಿ ಪರಸ್ತಿ (ಇಆ. VII, ೨೨೦-೨೯; 658) ; ಚನ್ದ್ರಪ್ರಭಭಟಾರಾಪ್ಪರ್ಸುಣ್ಡಿಯ ನಭ್ಯಂನ್ತರಸಿದ್ಧಿಯಾಳುತ್ತಿರೆ (ಸೌಇಇ. XI-i, ೩೪-೮ ; 925) ; ಪಸುಣ್ಡಿಗೆ ಪೋದ ಬಟ್ಟೆಯಿಂ ತೆಂಕ (ಸೌಇಇ. XX, ೧೮-೪೧ ; 980). [ ? ]

**ಪಸುಂಡಿಗೆಱೆ** (ನಾ). ಒಂದು ಊರಿನ ಹೆಸರು : ಪಸುಣ್ಡಿಗೆಱೆಯಾ ತೆಂಕಾಯರ್ ಕಡೆಗೋಡು ಪಳ್ಳಗೆಱೆಯಾ ಪಳ್ಳಮ್ (ಮೈಆರಿ. ೧೯೨೪, ೮೦-೧೧೧ ; 799). [ಪಸುಂಡಿ+ಕೆಱೆ]

**ಪಸುಂಬ,** ಪಸುಬ, ಹಸುಂಬ, ಹಸುಬ (ನಾ). ಒಂದು ಬಗೆಯ ಪಕ್ಷಿ; ಶಕುನದ ಹಕ್ಕಿ : ಪರಡೆ ಪಸುಂಬಂ ಮೈನಂ ಎರಳೆ ನವಿಲ್ಕಾಗೆ . . . ಇವು ಪೋಗೆ (ಲೋಕೋಪ. ೧೨-೧೭) ; ಪೂಗಿಡುವಂ ಸಾರ್ದುಪದು ಗಂಡುಪೋದಗೆ ಪಸುಂಬಂ ಕಟ್ಟಿ ಕಬ್ಬಳ್ಳಿ ಬಂದೆಡದೊಳ್ದೀಪ್ತದೊಳಾಂದು ವೇಱುತು (ಅನಂಪು. ೧೩-೭೨) ; ಘೂಕಂ ಸರಟಂ ಸಾಳ್ವಂ ಪಸುಂಬಂ ಪರಡೆ ಶಿಖಿ ಶುಕಂ ತದ್ವನಾಂತಸ್ಥವಿಕರ್ಣಂ (ಶಬಶಂ. ೩-೩೩). **ಪಸುಬ:** "ಚಂಚುಕಮೆನಲು ಪಸುಬನೆನಿಸಿಕ್ಕು" (ಮಂಗರಾ. ೫೨-೮) ; ಒಮ್ಮೆ ಆತನಿರಿಸಿದ ಉರುಳಿನಲ್ಲಿ ಪಸುಬವೊಂದು ಎರಗಿ ಸಿಲುಕಿಕೊಂಡಿತು (ಕುಡಿಕೂ. . ೯೩). **ಹಸುಂಬ :** ಹರಿಣೆ ಧಾತೆನಲು ಗಿಳಿ ಹಸುಂಬ [ಪಾಠಾಂ. ಪಸುಂಬೆ]ಗಳ ಗಜುಯಂತಪ್ಪ ವರ್ಣಕ್ಕೆ ನಾಮಮುಕ್ಕುಂ (ಮಂಗರಾ. ೧೩೧-೨೨). **ಹಸುಬ :** ಹರಡೆ ಹಸುಬಂ ಹಿಸುಣ ಹೆಬ್ಬಕ್ಕಿ ಗಿಡುಗ . . . ಹಕ್ಕಿಗಳ ಮಳೆಗಱೆಯುವಂತಾದುದು (ಹಚಕಾ. ೫-೪೩); ನೆಲೆಯಿಂದಂ ದಕ್ಷಿಣಸ್ಥಾನದೊಳೆ ಹಸುಬನುತ್ಸಾಹದಿಂ. . . ಉಲಿದೋಱಲ್ ಬಾಱ್ಗಿಂ (ಖಮದ. ೩-೮೬) ; ಹರಡೆ ಕೆದಱುತು ಬಲದಲುದಯದಲುರಿಯಲೊದಱುತು ಹಸುಬನೆಡದಲಿ (ಕುಮ್ಯಾಸ. ೧೩-೨) ; ಹಸುಬ ಹಾಲ್ವಕ್ಕಿ ಮುಂತಾದ ಶಕುನವಕ್ಕಿಯುಸುರ್ದುವು ಶುಭವಚನಗಳ (ನಾಗಕು. ೩-೩೩) ; ಹಸುಬ ಪಲ್ಲಿಗಳ ಬಾಯ್ಯೂಗ ಮುಚ್ಚುವಿರೆ ಸಾಕೆಂದ (ಭರಚ. ೫೦-೭೦). [ದೇ.॥ ತೆಲು. ಪಸಪು]

**ಪಸುಂಬರಿ** (ನಾ). ಹಸಿಮೆಣಸಿನಕಾಯಿ (?) : ನೀರುಳ್ಳಿಯ ಮಾವಿಡಿಗಳ ಪಸುಂಬರಿಯ ಸವಿದಡಗಿನ ಬಾಡುಗಳ ನೆಲದೊಳೇಂ ಬೇಯಿಸಿದರ್ (ಸೂಕ್ತಿಸು. ೧೩-೨೯). 'ಪಸುಂಗುರಿ', 'ಪಸುಪೂರಿ' ಪರಾ. [ದೇ.॥ ತೆಲು. ಪಚ್ಚವಿರಿಯ]

**ಪಸುಂಬುಲ್** (ನಾ). ಹಸುರು ಹುಲ್ಲು : ಬಾನಿಂದೆ ಪಸಿ ಬಿಟಿಱೊಡಲ್ಲದೆ ಮತ್ತಂತೆ ಪಸುಂಬುಲ್ತಲೆ ಕಾಣ್ಬುದರಿದು (ಕುಱಳ್. ೧-೨-೬). [ಪಸು$_3$+ಪುಲ್]

**ಪಸುಂಬೆ,** ಪಸುಬೆ, ಹಸಿಬೆ, ಹಸುಂಬೆ, ಹಸುಬೆ, ಹಸುವೆ (ನಾ). ೧. ಒಂದು ಬಗೆಯ ಚೀಲ ; ಮಧ್ಯದಲ್ಲಿ ಬಾಯಿಯಿದ್ದು ಭುಜದ ಮೇಲೆ ಹಾಕಿಕೊಂಡಾಗ ಎರಡೂ ಕಡೆ ಬರುವಂತಹ ಉದ್ದನೆಯ ಚೀಲ; ಇಬ್ಬೊಟ್ಟೆಯ ಚೀಲ: ಮರ್ದುಗಳಂ ಪಸುಂಬೆಯೊಳ್ ತೆಕ್ಕನೆ ತೀವಿ (ಪಡ್ಮಾರಾ. ೬೯-೧೬) ; ಕೈಗೆ ತೊವಲುಟುಯಲ ಗುರ್ವಿಸಿದುದು ತೀವಿದ ಗುಳ್ಳೆಯ ಪಸುಂಬೆಯುಂ [ಸೋ]ರ್ಚಿದಂತೆ ತನು ಕೀಚಕನಾ (ಪಂಪಭಾ. ೮-೭೭) ; ಜೀವಂ ಬೆಂಬಿಡದೀ ಪಂದೊವಲ ಪಸುಂಬೆಯೊಳೀಯೊಡಲೊಳಾವ ಸುಖಕಿರ್ದಪುದೋ' (ಆಜಿಪು. ೬-೫೪) ; ತೊಗಲ ಪಸುಂಬೆಯೊಳ್ಪೊಲಸಿನೋವರಿಯೊಳ್ . . . ತನುವಿನೊಳ್ಪವಿದಿರ್ದಪನಾತ್ಮಂ (ಅಪಶ. ೪೪). ೨. ಒಂದು ಹಸಿಬೆ ಚೀಲದಲ್ಲಿ ಹಿಡಿಯುವಷ್ಟು ಪ್ರಮಾಣ: ಮುಮ್ಮುರಿಥ[ದ]ಣ್ಣದ ಪಸುಂಬೆಯೊಳ್ವ[ಣ] (ಇಆ. V, ೩೪೩-೩೪ ; 1093) ; ಪಣಮೊಂದಂ ಧ್ರುವಮಾಗೆ ಪಸುಂಬೆಗೆ ಹಾಗವನೆಱಕದೆ ಕತ್ತ್ರೆಯಲ್ಲಿ ಬೇಳೆಯನಿತ್ತರ್ (ಸೌಇಇ. IX-i, ೧೬೫-೬೧ ; 1099). **ಪಸುಬೆ:** ೧. 'ಪಸುಬೆವಳ' ಪರಾ. ೨. ನೂಳಗೇರಿಯ ಬಣಜಿಗರು ಪಸುಬೆಗೆ ಹ(ಹಾ)ಗವ ಬಿಟ್ಟರು (ಕಇ. VI, ೩೪-೩೪ ; 1109). **ಹಸಿಬೆ:** ೧. ದಾಸರು ದೇವರ ಹಸಿಬೆಯನ್ನು ಹೆಗಲಿಗೆ ಹಾಕಿಕೊಂಡು . . . ಬರುವುದು ಅನಾಥೆಯ ಕಣ್ಣಿಗೆ ಕಾಣಿಸಿತು (ಕಭಪ. ೫೯); ಅಂಚೆಯ ಹಸಿಬೆಯನ್ನು ಹೆಗಲಿಗೇರಿಸಿ ಬಟವಡೆಗೆ ಹೊರಟ (ಪೀಕಪ. II, ೮೬) ; ದೂರದಲ್ಲಿ ಹಸಿಬೆಯನ್ನು ಹೊತ್ತುಕೊಂಡು ಬರುತ್ತಿರುವ ತಂದೆಯನ್ನು ಚಿದಾನಂದನು ಗುರುತಿಸಿದನು (ಮುತ್ತೈದೆ. ೨೩೧). **ಹಸುಂಬೆ:** ೧. ಪ್ರಿಥ್ವಿಯೆ ಹಸುಂಬೆಯಾಗೆ ಅಷ್ಟಲೋಕಪಾಳಕರೇ ಗೊಂಟಾಗೆ ವಾಸುಗಿಯೇ ಬಳಸಾಗೆ ಫಣಿಕುಳಂಗಳೇ ದಾರವಾಗಿ-ಬೊಕ್ಕಣವೊಳವಸುಂಬೆಯಾಗಿ (ಎಕ. VII, ಶಿಕಾರಿ. ೧೧೮-೩೦; 1054) ; ಭವಿಗಳು ನೆಗಪಲಾಱದ ಹಸುಂಬೆಯಂ ಜಡರೀಕ್ಷಿಸಲ್ಕೆತ್ತಿಲೊಕ್ಕಿಯೆಂಬೂರೊಳಗೆ ಮೆಱದ ಚೀಲಾಳದೇವಂ (ವೀಶೈಪು. ೮-೪-೩೨) ; ಧರೆಯೊಳು ಹಸುಂಬೆಯಂ ಮಡಗಿ (ಗುರುಚಾ. ೧೪-೯). ೨. ರಾಮೇಸ್ವರ ದೇವರಂಗಭೋಗಕ್ಕೆ ಹಸುಂಬೆ[ಗೆ] ಹಾಗವಂ ಸ್ಥಾಯಿಯಾಗಿ ಬಿಟ್ಟರು (ಸೌಇಇ. XX, ೭೫-೩೧ ; 1118) ; ಅಡಕೆಯ ಹೇಱಂಗೆ ೨೦೦ ಹಸುಂಬೆಗೆ ಅಯ್ವತ್ತು (ಎಕ. II, ೩೪೯-೬೬ ; 1159) ; ಅಯ್ನೂರ್ವರು ಬಿಟ್ಟ ಸುಂಕ ಹಸುಂಬೆಗೆ ವೀಸವೊಂದು ಹೇರಿಂಗೆ ವೀಸಂ ಕಾಣಿ (ಎಕ. VII, ಶಿಕಾರಿ. ೨೩೬-೮೩ ; 1174). **ಹಸುಬೆ:** ೧. ಬಂಡವ ತುಂಬಿದ

ಹಸುಬೆ ಕೊಂಡವನ ನುಂಗಿತ್ತು (ವೋಳಿಸೂ. ೨೪೩-೭೯೪); ಬಸವ ಹಸುಬೆಯ ಸೆಟ್ಟಿಯಾಗಿ ತಳರುತೆ (ಪ್ರಭುಪು. ೭-೧೦೧); ಹಸುಬೆಯಲ್ಲಿದ್ದ ತಿಂಡಿಯ ಗಂಟು ದಾರಿಯುದ್ದಕ್ಕೂ ಅವನಿಗೆ ಜ್ಞಾಪಕ ಬರುತ್ತಿತ್ತು (ಕಳಹು. ೪). **೨.** ಆ ಹಸುಬೆಗೆ ಯಡಕೆ ಹತ್ತು (ಎಕ. VI, ಕಡೂರು. ೯೬-೮೧; 1141); ಅರವಾನೆಣ್ಣೆ ಹೇಱುಂಗೆ ನೂಱ ಎಲೆ ಹೊಱೆಯ ××ತು ಹಸುಬೆಗೆ ಅಡಿಕೆ ೨ ಭತ್ತಕೆ ಸೋಡಿಗೆ ಭತ (ಎಕ. VII, ಹೊನ್ನಾಳಿ. ೧೦೮-೫೬; 1203); ಎಲೆಯ ಹೇಱುಂಗೆ ೫೦ . . . ಹಸುಬೆಗೆರಡಡಕೆ ಈ ಧರ್ಮವ ಹಲರು ನಡಸಿದರು (ಎಕ. XI, ಹೊಳಲ್ಕೆ. ೩೪-೩೯; 1522). **೩.** ಹಸುಬೆಯ ಗುರುತಿರುವ ಕಲ್ಲು; ಹಸುಬೆಯ ಕಲ್ಲು: ಗುಂಡಿನಲಿ ಬರದ ಮುಕ್ಕೊಡೆ ಹಸುಬೆ ನೆಟ್ಟಿ ಅಲ್ಲಿಂ ತೆಂಕ ಹಿರಿಯ ಬೆಟ್ಟದ ತಪ್ಪಲ ಹಾಸಱೆಗಲ್ಲು (ಎಕ. II, ೩೩೪-೩೦; 1282); ಶ್ಯಾಲೆ ಮಾರಿ ಜಾಡನಾದ ಹಿಡಿದ ಕಬ್ಬಿಣದ ಕೋಲು ಹೇಲ ಮೇಗಳ ಹಸುಬೆ ಬೆಳ್ಳಿ ಮೂಡಿ ಬೆಳಗನೆ ಜಾವದಲ್ಲಿ ಯಳಂದಿರ ನಾಗಕೋರ್ಮನ ಹೆಡೆಯ ತುಳಿವವರು (ಪಾತಾಚ. ೩-೧). **ಹಸುವೆ:** ೧. "ಮೂಲೀ=ಹಸುವೆಯುಂ, ಗೋಟುಂ" (ಕಾಶಕ್ಯ. ೨೬೨).

**ಪಸುಂಬೆಯ ಸೇಸೆ, ಪಸುಂಬೆ ಶೇಷೆ**=ಒಂದು ಬಗೆಯ ತೆರಿಗೆ; ಹಸುಬೆಚೀಲದ ಸರಕಿನ ಮೇಲೆ ಹಾಕುವ ತೆರಿಗೆ (?): ಅಯ್ನೂರ್ವ್ವರುಮಿಬ್ಬು ಪಸುಂಬೆಯ ಸೇಸೆಯುಲು ಪಾಗಮುಮಂ ಅಂಗಡಿಯುಲು ಸೊಟಗೆ ಭತ್ತಮ ಬಿಟ್ಟರ್ (ಸೌಇಇ. IX-i, ೧೩೯-೩೯; 1074); ಗವಱೇಶ್ವರದೇವರ ಪ್ರತಿಷ್ಠಾಕಾಲದೊಳ್ಮಾಡಿದಾಯಸ್ಥಾನಮೆನ್ತೆನ್ದೊಡೆ ಪಸುಂಬೆಶೇಷೆ ದಣ್ಡಂ ದೋಷ ××× (ಶಾಸಪ. ೭೭-೨೩; 1005). **ಹಸುಂಬೆಯರು**=ಹಸುಬೆಚೀಲದಲ್ಲಿ ಸಾಮಾನುಗಳನ್ನು ಹೊತ್ತು ಮಾರುವವರು: ಇನ್ನು ಸೀವಳಿ ಗಂಧಹುಡಿ ಹಸುಂಬೆಯರಷ್ಟಶೆಟ್ಟಿಯರು ವ್ಯವಹರಿಪರು (ನಪವೋ. ೨-೪೭). **ಹಸುಬೆಯ ಕಲ್ಲು**= ಹಸುಬೆಯ ಗುರುತಿರುವ ಗಡಿಕಲ್ಲು; ☞ ಶಾಸನಗಳಲ್ಲಿ ಲಿಂಗ ಮುದ್ರೆ, ಮುಕ್ಕೊಡೆ, ವಾಮನ ಮುಂತಾದ ಮುದ್ರೆಗಳಿರುವ ಕಲ್ಲುಗಳಿವೆ: ಚತುಸ್ಸೀಮೆಯನೂ ಹಸುಬೆಯ ಕಲ್ಲನೂ ನೆಡಿಸಿ (ಎಕ. IX, ಚನ್ನಪ. ೭೧-೩೨; 1331).

[ದೇ.‖ ತಮಿ. ಪಚುಮ್ಬೈ; ಮಲ. ಪಯಿಮ್ಪ; ತುಳು. ಪಸುಂಬೆ, ಪಸಂಬೆ, ಪೈಂಬೆ]

**ಪಸುಂಬೆವಣ** (ನಾ). ಒಂದು ಬಗೆಯ ತೆರಿಗೆ: ಅಂಕವಣಂ ಪಸುಂಬೆವಣಮೆಂಬಿನಿತಱೊಳ್ (ಎಇ. XIII, ೩೩೩-೭೦; ?).

[ಪಸುಂಬೆ+ಪಣ$_3$]

**ಪಸುಗೂಸು,** ಹಸುಕೂಸು, ಹಸುಗೂಸು (ನಾ). ಎಳೆಯ ಮಗು; ತೀರ ಚಿಕ್ಕ ಮಗು: ಪಸರಿಸೆ ಜರಾಯುಪಟಲಂ ಪಸುಗೂಸುಗಳೊಡಲೊಳವನಗಲ್ಚುವ ಮತಿಯಂ ವಸುಮತಿಗಱಿಪಿ . . . ಪ್ರಕಟಿಸಿದಂ (ಆದಿಪು. ೬-೬೫); ಪಸುಗೂಸು ಪಾಲ್ಗುಡಿವಂತೆ ಪಲ್ಲಿಲ್ಲದೆಮ್ಮ ಪುಲ್ಲಂ ಮೇವಂತೆ (ಧರ್ಮಾಮೃ. ೧೪-೪); ನಿಮ್ಮನಿಬರಂ ಪಸುಗೂಸುಗಳನಿನ್ನ ಪಹರಿಸಿ ಮಿಗೆ ಘಾಸಿಮಾಡಿದಡೇನು ಫಲವೆನಗೀಗಳ್ (ಬಸಪು. ೫೨-೩೭); ಪಸುಗೂಸು, ತಾಯಿಲ್ಲ (ಅಶ್ವತ್ಥಾ. ೨೧-೪೨೯). **ಹಸುಕೂಸು:** ಆಲದ ಮರನ ಹಸುಕೂಸು ನುಂಗಿತು (ಪುರಂದ. ೨-೧೯-೫); ಕೋಮಲವಾದ ಹಸುಕೂಸು, ಇಲ್ಲವೆ ನಿಸರ್ಗಶಕ್ತಿಗಳಾದ ನದೀನಿರ್ಝರಗಳು, ಗುಡುಗು ಮಿಂಚುಗಳು, ಗಾಳಿ ಮೋಡಗಳು ಯಾವ ಸಹಜತೆಯಿಂದ ವರ್ತಿಸುವುವು (ಪಚರ. ೩೧). **ಹಸುಗೂಸು:** ಹಸುಗೂಸು ಬಸುಱ ಬಾಣತಿ . . . ಎಂಬವರ ಹಿಡಿದು ತಿಂಬ . . . ದೂಳಯ್ಯ ಕೇತಯ್ಯಗಳೆಂಬ ನೂಱುಮಡಕೆಗೆ ನಮ್ಮ ಕೂಡಲಸಂಗಮದೇವ ಶರಣೆಂಬುದೊಂದು ಪಡಿ ಸಾಲದೆ (ಉಸಪ. ೫೫೫); ಹಸುಗೂಸಿನಂತೆ ಹಸಿತಂ ಮಿಗೆ ಸೋಂಕಿಲೊಳೊಪ್ಪಿ ಪುಷ್ಪಮಂಜರಿ ಪೊರಳುತ್ತುಮಿರ್ಪ ಲತೆಯಂ ಲಲಿತಾಂಗಿ ಮರಳ್ದು ನೋಡಿದಳ್ (ಲೀಲಾಪ. ೭-೩೫); ಆ ಹಸುಗೂಸುಗಳು ತಾಯಿಯ ಇಂಪಾದ ಹಾಡನ್ನು ಕೇಳುತ್ತಿದ್ದಂತೆಯೇ ನಿದ್ದೆ ಹೋದರು (ಮಣಿಸ. ೭೧). [ಪಸು$_3$+ಕೂಸು]

**ಪಸುಗೂಸುತನ** (ನಾ). ಎಳೆಯತನ; ಹಸುಳೆತನ: ಪಸುಗೂಸುತನದೊಳಂ ಸಾಹಸವತಿಮಾನುಷವತೀಂದ್ರಿಯಂ ನಿನಗದಱಿಂ ಬೆಸಗೊಂಡಪೆವೊಂದಂ . . . ಕೃಷ್ಣ (ಜಗವಿ. ೪-೧೨೯); ಪುಟ್ಟಲೊಡನೆ ಪಸುಗೂಸುತನಂ ಪಱಿಪಟ್ಟುದು (ಜಯಕಾ. ೧೩-೪೮). [ಪಸುಗೂಸು+-ತನ]

**ಪಸುಗೆ,** ಪಂಚುಗೆ, ಪಶಿಗೆ, ಪಸಿಕಿ, ಪಸಿಕೆ, ಪಸಿಗೆ, ವಸಿಗೆ, ಹಸಿಗೆ, ಹಸುಗಿ, ಹಸುಗೆ, ಹಸೆಗೆ (ನಾ). **೧.** ವಿಭಾಗ; ಹಂಚಿಕೆ; ಪಾಲು: ಕೀೞ್ಕುಲ್ ಪಸುಗೆಗೆ ಮೂವತ್ತು ಮತ್ತರುಮೊನ್ದು ತೋಂಟಮುಮಾಗೆ (ಸೌಇಇ. IX-i, ೭೭-೨೩; 992); ಪರಿವಿಡಿಯ ಕೇಳಿ ಪ್ರಸಾದಪಸುಗೆಯನಿತ್ತು (ಸಿದ್ಧರಾ. ೮-೬೧); ಬಿಳಿಯಱುವೆಯಿಂದ ಸೋದಿಸಿ ಪಲ ಪಸುಗೆ ಮಾಡಿಕೊಳುತ (ಸೂಪಶಾ. ೩-೪೦); ಕೂರ್ಮೆಯಿನೆನಗೆ ತಿನವಡಿಸುವಾ ಪಸುಗೆಯ ಚಕ್ಕುಲಿಯಂ ಗಾರಿಗೆಯಂ . . . ನಿನಗಂ ಪಾಲಿತ್ತು ಮೊದಲೊಳರ್ಪಿಸುವೆಂ (ರಾಮಾಶ್ವ. ೮೮-೨೫). **೨.** ವಿವೇಕ; ವಿವೇಚನೆ: ನೃಪ ಪರಮಾತ್ಮನ ಪಾಱಿಯ ಪಸುಗೆಯ ನುಡಿಗೆ ಪರಮಾರ್ತನಾಗಿ (ಪಂಪಭಾ. ೧೨-೧೭೬ ಪ); ಬಗೆಯದೆ ಪಾಱಿಯಂ ಪಸುಗೆಯಂ ಗುಣಹಾನಿಯನಪ್ರಸಿದ್ಧಿಯಂ ಬಗೆಯದೆ ಬಂದ ದೂದವಿಗೆ ಚಿತ್ರಮನೊಪ್ಪಿಸಿ ಕೊಟಿದಾಸೆಯಂ ಬಗೆದಳ್ (ಪಂರಾಮಾ. ೪-೧೧); ಅಂತುಸಿರ್ವರ್ ಪಂತವಾತುಗಳ ಪಸುಗೆಗಳೊಳ್ (ಅಪ್ರತಿ. ೭೧-೧೫). **೩.** ಹಂಚುವ ಗುಣ; ದಾನಶೀಲತೆ; ಔದಾರ್ಯ: ಕರ್ಣನೊಳ್ಗಸಮಂ ವಿಕ್ರಮದುಕರ್ಮಮಂ ಪಸುಗೆಯಂ ಕೇಳುತ್ತೆ ಬಂದು (ನೇಮಿಪು. ೯-೬೭). **೪.** ಉಚಿತವಾದುದು; ಯೋಗ್ಯವಾದುದು; ತಕ್ಕುದು: ಪೆಣ್ಬುಯ್ಯಲನಾರಯ್ಯದೋಸರಿಪುದೆನ್ನ ಗಂಡುಗೂಸುತನಕ್ಕೆ ಪಸುಗೆಯಲ್ತು (ಚಂದ್ರಪು. ೮-೬೬ ಪ). **೫.** ಔಚಿತ್ಯ; ಯುಕ್ತತೆ: ಮಾತಿನ ಪಸುಗೆ ಪಸುಗೆವಡೆದತ್ತೆನೆ ನುಡಿದಂ ಮಧುರಮೃದುಗಂಭೀರಧ್ವನಿಯಿಂ (ಆದಿಪು. ೨-೧೦); ಬಿಡದೆ ಬಣ್ಣಸಂಗಂ ಜಗಮೆಯ್ದೆ ಕೂಡೆ ರಾಜನನಿನತೇಜನಂ ಪಸುಗೆಗೋಜನನಾಶ್ರಿತಕಲ್ಪಭೂಜನಂ (ಎಇ. XVI, ೬೨-೩೯; 1081). **ಪಂಚುಗೆ:** ೧. 'ಪಂಚುಗೆಗೊಳ್' ಪರಾ. **ಪಶಿಗೆ:** ೧. ಆತಗಂಗಡಿ ಜಾತ್ರೆಯಲಿ ಫಲವಾತದಿ ನಿಶಿಲಿ ಪಶಿಗೆಯನು ತರಲು (ಬಿಜ್ಜಪು. ೪೫-೩೬). **೬.** ವಸ್ತುವಿನ ರೂಪದಲ್ಲಿ ಕೊಡುವ ತೆರಿಗೆ: ಗೊಲ್ಲರ ಹಟಿಗೆ ಮ ೧ ಕುರುಬರ ದೊಡಿಗೆ ಮ ೧ . . . ಪಶಿಗೆ ಮುಂತಾದು ಸಂತ್ತೆಯಲ್ಲಿ ಪಾಸಿಗೆ ಸಕಲ ಬೆಹಾರದಲು (ಎಕ. XVI, ಗುಬ್ಬಿ. ೭೪-೬೧; ಸು. 1672). **ಪಸಿಕಿ:** ೬. ಬಿರಾ[ಡ]ವಿಲ್ಲ ಸುಂಕವಿಲ್ಲ ಪಸಿಕಿಯಿಲ್ಲ (ಸೌಇಇ. XV, ೨೬೮-೨೨; 1646). **ಪಸಿಕೆ:** ೭. (?): ಕರುಣಿಕಧರೆಯ ಮಹಾಜನತನ ಸಲುವುದು ಧರೆಯ ಪಸಿಕೆ ಪಳಿಗೆಗಳಾ (ಪೇಪಪು. ೩-೧೩೧). **ಪಸಿಗೆ:** ೬. ತೋಟಪೇಟೆಯಲು ಗಾಣಿಗರ ಯೆಂಣೆ ಪಸಿಗೆಯಿಷ್ಟನು ಕೊಟೆಉ (ಸೌಇಇ. IX-ii, ೪೭೭-೩೩; 1509); **ಸಂತೆ ಪಸಿಗೆ** ಮೂಲೆ ವೀಸ ಸಹಾ ಕೊಡಬೇಕು (ಎಕ. XI, ಹೊಳಲ್ಕೆ. ೭-೪೫; 1568); **ಸಂತೆ** ಪಸಿಗೆ ಗುಡಿ ಮುಂದಣ ಮನೆ ವಾರ ಸಹ (ಮೈಆರಿ. ೧೯೨೯, ೭-೨೧; 1673). **ವಸಿಗೆ:** ೬. ಮಲಪುರದ ಅಂಗಡಿಯ ಕಟ್ಟಿಸಿ ಸಂಥೆಯ ವಸಿಗೆಯ ಸರ್ವ್ವಮಾನ್ಯವ ಬಿ[ಟ್ಟು] ಸೂರ್ಯ್ಯನಾರಾಯಣದೇವಂಗೆ ಕೊಟ ಧರ್ಮಶಾಸನದ ಕ್ರಮವೆಂತೆಂದರೆ (ಸೌಇಇ. IX-ii, ೫೨೩-೧೩; 1528). ☞ ಇದು 'ಪಸಿಗೆ'ಯ ಅಪಲಿಖಿತವಿರಬಹುದು.

**ಹಸಿಗೆ :** ೧. ನಾಡೆಲ್ಲರೂ ನೆರೆದು ಕೂಡಿ ಮಾಡುವ ಗುಣಸಮೂಹ ಬೇಡ ಪಶುವನೆಚ್ಚು ಕೂಡಿ ಹಸಿಗೆಗೆ ಬಂದಂತೆ (ಸುಂಕಬಂ. ೮೩); ಧಾರುಣೀಪತಿ ರತ್ನಮಯಭಂಡಾರಸಹಿತ ಗಜಾಶ್ವರಥ ಪರಿವಾರವನು ಮಾಡಿದನು ಹಸಿಗೆಯುನೆರಡುಭಾಗವನು (ಕುಮ್ಯಾಭ. ೮-೭೯); **ಅಯ್ಯ ನವರಿಗೆ ಕೊಟ್ಟ** ಗ್ರಾಮದ ಹಸಿಗೆಯ ವಿವರ (ಸೌಇಇ. IX-ii, ೫೪೫-೧೫; 1532); ರಾಜ್ಯವನ್ನು ಹಸಿಗೆ ಮಾಡಿಕೊಂಡು ಪಾಂಡವರ ಸಂಗಡ ಅನುವಾಗಿರಿ (ಛೇಸ್ಮಚ. ೧೪೬). **ಹಸುಗಿ :** ೧. ಗದ್ದೆಯ ಎರಡು ಹಸುಗಿಯ ಪೊಂಬತ್ತು ಭಂಡಿ ಭತ್ತದ ಸ್ಥಳ (ಕಇ. V, ೩೨-೭೫; 1215). **ಹಸುಗೆ :** ೧. ಮಹಾಜನಗಳ್ತಮ್ಮ ಹಸುಗೆಗೆ ಬಂದಾಲದ ಹಾಡವಂ ಧಾರಾಪೂರ್ವಕವಾಗಿ ಕೊಟ್ಟ ಕಂಬವೇಟ್ಟೂರುಮಂ . . . ಕೊಟ್ಟು (ಸೌಇಇ. IX-i, ೨೯೫-೨೧; 1172); ಕರೆಸಿ ಪಾಂಡುಕುಮಾರಕರಣೀಧರೆಯ ಹಸುಗೆಯ ಮಾಡಿ ಕೊಡು (ಸಂಭಪ. ೨೧-೬೬); ಜನ್ನಕ್ಕೆ ಬಂದು ತಂತಮ್ಮ ಹಸುಗೆಯಂ ಮನಂದಣಿಯೆ ಕೈಯಾಱೆ ಕೊಂಡು (ರಾಮಾಶ್ವ. ೧೬೬-೧೧); ಬೇಟೆಯಲ್ಲಿ ದೊಡ್ಡ ಕಡವೆಯೊಂದನ್ನು ಕೊಂದು ಹಸುಗೆ ಮಾಡುತ್ತಿದ್ದಾಗ (ಕಾನೂರು. ೧೪೪). **ಹಸೆಗೆ :** ೧. ಶ್ರೀಮಾನ್ಯದ ಭೂಮಿ ಹದಿನೆಂಟರ ಹಸೆಗೆಯಲ್ಲಿ . . . ಮತ್ತರು ನಾಲ್ಕು (ಸೌಇಇ. IX-i, ೩೨೯-೫೭; 1209). **P** ಇದು 'ಹಸುಗೆ'ಯ ಅಪಲಿಖಿತವಿರಬಹುದು.

ಪಸುಗೆಗೊಳ್ಗಂಡಂ = ಹಂಚುವ ಗುಣದಲ್ಲಿ ಶ್ರೇಷ್ಠನಾದವನು; ದಾನವೀರನಾದವನು; ಒಂದು ಬಿರುದು : ಫಣಿಧ್ವಜವಿರಾಜಮಾನ ಕಲಿಮುಟ್ಟಿಗಣ್ಡ ಪಸುಗೆಗೊಳ್ಗಣ್ಡಂ . . . ಶ್ರೀಮತ್ ಸೇನವಾರಂ (ಎಕ. VI, ಚಿಕ್ಕಮ. ೭೬-೮; ಸು. 1060?). **ಹಸುಗೆಯ ಇಲಾಖೆ** = ಪಡಿತರ ವಿಭಾಗ; ರೇಶನ್ ವ್ಯವಸ್ಥೆಯನ್ನು ನೋಡಿಕೊಳ್ಳುವ ಆಡಳಿತ ವಿಭಾಗ : ಹಸುಗೆಯ ಇಲಾಖೆಯೆಂದರೆ ಆದಕ್ಕೆ ಮೇಲ್ವಿಚಾರಕರೇ ಇಲ್ಲ (ಭ್ರಮಾನ. ೩೩). [ಪಸು$_1$+-ಗೆ]

**ಪಸುಗೆಗೆಡು** (ಕ್ರಿ). ವಿವೇಕವನ್ನು ಕಳೆದುಕೊಳ್ಳು; ವಿವೇಚನೆಯಿಲ್ಲದಾಗು : ಒರ್ವರೊರ್ವರಂ ನಂಬದ ಬಗೆಯಿಂ ಕನಕಾಸ್ವಾದವಿಲ್ಲದೆಯುಂ ಮರುಳ್ಪಸಗಿ ಪಸುಗೆಗೆಟ್ಟು ಪಸಿಯ ಬಡಿಗೆಗಳನೆತ್ತಿಕೊಂಡು (ಅರ್ಥನೇ. ೪-೧೧೪ ಪ). [ಪಸುಗೆ + ಕೆಡು$_1$]

**ಪಸುಗೆಗೊಳ್,** ಪಂಚುಗೆಗೊಳ್, ಹಸುಗೆಗೊಳ್ (ಕ್ರಿ). ೧. ಭಾಗವನ್ನು ಪಡೆ; ಪಾಲನ್ನು ಹೊಂದು : ಒಸೆದಿತ್ತುದನೊಡಬಡುವಳು ಪೆಣ್ ಗಂಡು ಪಸುಗೆಗೊಂಬನು ಬಲ್ಮೆಯೊಳು (ಹವಿಬ. ೫-೧೦); ಎಮ್ಮಂದಿಗರೆಂತಂತು ಪಸುಗೆಗೊಂಡುಂ (ರಾಮಾಶ್ವ. ೪೩-೧). ೨. ಹಂಚಿಕೊಳ್ಳು; ಭಾಗಮಾಡಿಕೊಳ್ಳು : ಬೇಂಟೆಯಾಡಿದ ಮೃಗಂಗಳಂ ನೀಮ ಪಸುಗೆಗೊಂಡು ಹಬ್ಬಮಂ ಮಾಡಿ ಉಣಿ (ಚಂದ್ರಸ. ೩೯-೧೧). **ಪಂಚುಗೆಗೊಳ್ :** ೧. ವಿಂಶತೀಶಂಗೆ ಲೇಶಮುಂ ಪಂಚುಗೆಗೊಂಡ ಕಾರಣವಿಲ್ಲ (ಭಾರಶಾಂ. ೫೮೧). **ಹಸುಗೆಗೊಳ್ :** ೧. ಕತ್ತಲೆ ಹಸುಗೆಗೊಂಡುದು ನಲಯಭೂಧರದಪರಭಾಗವನು (ತಿಮ್ಮಭ. ೭-೧೦೮). [ಪಸುಗೆ + ಕೊಳ್$_1$]

**ಪಸುಗೆದಪ್ಪು** (ಕ್ರಿ). = ಪಸುಗೆಗೆಡು : ಪೂಜ್ಯರುಮೇಕೆ ಪೇಟ್ಪಸುಗೆದಪ್ಪುವರ್ (ಅರ್ಥನೇ. ೨-೫೩). [ಪಸುಗೆ + ತಪ್ಪು$_1$]

**ಪಸುಗೆನೀಡು** (ಕ್ರಿ). ಹಂಚು; ವಿತರಣೆ ಮಾಡು; ಪಾಲನ್ನು ಕೊಡು : ಪಸುಗೆ ನೀಡಂಶಂಗಳಂ ಸತಿಯರ್ಗೆ (ಶ್ರೀರಾಮಾ. ೧೪-೩೫೮). [ಪಸುಗೆ + ನೀಡು$_1$]

**ಪಸುಗೆವಡೆ** (ಕ್ರಿ). ಔಚಿತ್ಯವನ್ನು ಪಡೆ; ಯುಕ್ತವಾಗು : ಮಾತಿನ ಪಸುಗೆ ಪಸುಗೆವಡೆದತ್ತೆನೆ ನುಡಿದಂ ಮಧುರಮೃದುಗಂಭೀರಧ್ವನಿಯಿಂ (ಆದಿಪು. ೨-೧೧). [ಪಸುಗೆ + ಪಡೆ$_1$]

**ಪಸುಗೆವೋಗು** (ಕ್ರಿ). ೧. ಪಾಲಾಗು; ಹಂಚಿ ಹೋಗು. ೨. (ಅಲಂ) ಕುಗ್ಗು; ಕಡಮೆಯಾಗು; ಕ್ಷೀಣಿಸು : ದಮಿತಾರಿ . . . ಪಸುಗೆವೋಗದ ಶೌರ್ಯಮುಮಂ ಸೂಚಿಸಿ ಪೋಗದೇಱುಮಂ . . . ಪೊಗೞುಸುವೆನೆಂದು ತಱಿಸಂದು (ಶಾಂತಿಪು. ೪-೩೬ ಪ); ಮಕರಂದಂ . . . ಮನದೊಳ್ ಬೆರ್ಚಿ ಬಸಮಲ್ಲದ ಬೇವಸದ ಬಿಣ್ಪು ಪಸುಗೆವೋಗೆ ಲಾಘವಮನಪ್ಪುಕೆಯ್ದಂತಿರೀಷದುನ್ಮೀಲಿತವದನಾರವಿಂದನಾಗಿ (ಲೀಲಾವ. ೪-೫೭ ಪ). [ಪಸುಗೆ + ಪೋಗು$_1$ (< ಪೋ$_1$)]

**ಪಸುನೊರೆ** (ನಾ). (ಹುಲ್ಲಿನ ರಸದಿಂದ) ಹಸುರಾದ ನೊರೆ : ಏಣೀಸ್ಯಕ್ವದಿಂ ಸೂಸಿದ ಪಸುನೊರೆಯಿಂ ನಾಂದು ನಿಂದೆತ್ತುಗಂ ಸೂಕರಪೋತವ್ಯಸ್ತಮುಸ್ತಾಸುರಭಿರಸರಜಃಕಾತರಂ ಮಾತರಿಶ್ವಂ (ಲೀಲಾವ. ೭-೧೦೪). [ಪಸು$_3$ + ನೊರೆ$_2$]

**ಪಸುಪತಿ** (ನಾ). ಜೀವಿಗಳ ಒಡೆಯ; ಶಿವ : "ಪಸುಪತಿ-ಪಶುಪತಿ = ಶಿವನ್" (ತದ್ಭಕೋ. ೨೫); ಪೂರ್ವಪದಂ ತದ್ಭವಮಾದುದರ್ಕೆ . . . ಪಶುಪತಿ-ಪಸುಪತಿ (ಶಮದ. ೨೪೯ ಪ್ರಯೋ.). [ಪಸು$_4$ + ಪತಿ$_2$]

**ಪಸುಪುಲ್ಲೆ** (ನಾ). ಎಳೆಯ ಹುಲ್ಲೆ; ಮರಿ ಜಿಂಕೆ : ಪಸಲೆಯೆಡೆಗೈತಂದ ಪಸುಪುಲ್ಲೆಯಕ್ಕಿಗಳ ಪೊಸಬೇಟಮಂ ಕಂಡು ಪಾರ್ದು . . . ಕೆಡೆವುತಿರೆ ಕೈರಾತಿಯು (ವೆಂಕಟಾರ. ೩-೬-೫೫). [ಪಸು$_3$ + ಪುಲ್ಲೆ$_1$]

**ಪಸುಪೂರಿ** (ನಾ). ಒಂದು ಬಗೆಯ ತಿನಿಸು (?) : ಬಱಿಕ್ಕ ಪೊಸತಪ್ಪ ಪಸುಪೂರಿ [ಪಾಠಾಂ. ಪಸುಂಪತಿ, ಪಿಸುಂಭೂರಿ]ಗಳ ಮಿಸುಪ ಪುಳಿಗೆ ಬಾಯೊಱೆತು ಬಾತಂಕಿರೆ ತಿಂದು ಕೈಗರ್ಚಿ ಮೆಚ್ಚಿ ಹರಿಹರ ಎನ್ನುತಿದ್ದು (ಪುಣ್ಯಾಸ್ರ. ೩-೪೮ ಪ). 'ಪಸುಂಗುರಿ, 'ಪಸುಂಬರಿ' ಪರಾ. [? + ಪೂರಿ]

**ಪಸುಪೊನ್** 'ಪಸುರ್ಪೊನ್' ನೋ.

**ಪಸುಬ** 'ಪಸುಂಬ' ನೋ.

**ಪಸುಬೆ** 'ಪಸುಂಬೆ' ನೋ.

**ಪಸುಬೆವಳ** (ನಾ). ಹಸುಬೆಚೀಲದಲ್ಲಿ ವಸ್ತುಗಳನ್ನು ತುಂಬಿ ವ್ಯಾಪಾರ ಮಾಡುವವನು; ವೈಶ್ಯ; ವ್ಯಾಪಾರಿ : "ಪಸುಬೆವಳನೆಂದು ವೈಶ್ಯನು" (ಕಬ್ಬಿಕೈ. ೩೩); ಎತ್ತ ನೋಡಿದಡತ್ತ . . . ಕಸ್ತೂರಿ ಜವಾದಿ ಕುಂಕುಮ ಚಂದ್ರವಿಕ್ರಯದ ಪಸುಬೆವಳರುಗಳ ಥರದ (ರುಕ್ಮಾಂಗ. ೩-೨೨). [ಪಸುಬೆ (< ಪಸುಂಬೆ) + -ವಳ]

**ಪಸುವಮಗ,** ಹಸುಮಗ (ನಾ). ಎಳೆಯ ವಯಸ್ಸಿನ ಮಗ; ಚಿಕ್ಕ ಹುಡುಗ : ಏಂ ನಿಷ್ಕರುಣಿಯೊ ಪಸುವಮಗನೆನ್ನದೆ ಮುತ್ತಾನ್ನನೆನ್ನದೆ . . . ಕೊಂದಪಂ ಯಮರಾಜಂ (ಅಜಿಪು. ೧೦-೨೫). **ಹಸುವಮಗ :** ಕರ್ಮಮಂ ಕೂರ್ತು ಮಾಡಿದ ಕಾಲವುಂಬ ಕಾಲಂ . . . ಹಸುವಮಗನಾದ ಕಾಲವಾ ಪ್ರಾಯವಪ್ಪಾ ಕಾಲವು (ವೀಶೈಪು. ೪-೫-೪೬); ಹಸುವಮಗನಾದ ಪುರಂದರವಿಠಲ (ಪುರಂದ. ೧-೧೭೦-೩); ಪ್ರೀತಿಯ ಭರದಿಂದ ಆ ಹಸುವಮಗನನ್ನು ಬಿಗಿದಪ್ಪಿಕೊಂಡು . . . ಹರಸಿ ಹೊರಟುಹೋದನು (ಮುಂಬಯಿ. ೫-೧೨೭); ಹೊಡುವುದು ಹೊಸಬಂಡಿ, ಹೊಡೆಯುವವನು ಹಸುಮಗ (ಹಳ್ಳಿಬಾ. ೩೪). [ಪಸು$_3$ + ಮಗ$_1$]

**ಪಸುವಮಗು,** ಹಸುಮಗು (ನಾ). = ಪಸುಗೂಸು. **ಹಸುವಮಗು.**

ಪಸುಮಕ್ಕಳ್, ಹಸುಮಕ್ಕಳು (ಬಹುವ) : ಪಸುಮಕ್ಕಳಂ ಗೂಳಿ ತಗುಳ್ದಂತೆ (ಧರ್ಮಾಮೃ. ೨-೭೧); ಹಸುಮಕ್ಕಳೊಡನಾಟ ಶಿವಭಕ್ತಿಯಾ ಬೇಟವಾಗೆ (ಸೌಂದಪು. ೩-೧೦); ಹಸುಮಕ್ಕಳ ಶಿರೋಮಣಿಯೆ ಸಿಂಗರದ ಕಣಿಯೆ (ಚೆಬಪು. ೫-೨೮); ಹಸುಮಕ್ಕಳಾಡಿದರ ಹಸನವ್ವ ಅಂಗಳ (ಜನಗೀ. ೭೧); ಯುಗ-ಯುಗಗಳ ಹಣೆಬರಹವ ಬರಸಿ

ಮನ್ವಂತರಗಳ ಭಾಗ್ಯವ ತೆರೆಸಿ . . . ಹೊಸಗಾಲದ ಹಸುಮಕ್ಕಳ ಹರಸಿ ಹಕ್ಕಿ ಹಾರುತಿದೆ ನೋಡಿದಿರಾ ? (ಗಂ. ೫೭–೪). [ಪಸು$_3$ + ಮಗು]

**ಪಸುಮಱಿ** (ನಾ). ಎಳೆಯ ಮರಿ; ಸಣ್ಣ ಮರಿ; ಶಾಬ: ಇಸೆ ಪಸು[ಪಾಠಾಂ.ಶು]ಮಱಿ ಯೋನಿಮುಖಪ್ರಸವಕ್ಕಲಸಿದವೊಲೇೞಿ ಬಾಯಿಂ ತಾನೊಂದಸುವೆರಸು ಬೀೞ್ಟುದುಂ (ಯಶೋಚ. ೩–೫೬). [ಪಸು$_3$ + ಮಱಿ]

**ಪಸುವೊಗ,** ಹಸುವೊಗ (ನಾ). ಹಸುವಿನ ಮುಖ; ಗೋಮುಖ. **ಹಸುವೊಗ:** ಶಿಸಿ ತಾನೆ! ಸಾಧುವಿದು ಹಸುವೊಗದ ಹಸಿದ ಹುಲಿಯಂತೆ (ಕಎಪು. ೪೩–೮).

ಪಸುವೊಗದ ಬಗ್ಗ = ಗೋಮುಖವ್ಯಾಘ್ರ ; ಸಾಧುವಿನಂತೆ ತೋರುವ ದುಷ್ಟ,–ಕಪಟಿ: ಪಸುವೊಗದ ಬಗ್ಗನಾ ಖೂಳನ್ (ಶ್ರೀರಾಮಾ. ೨೫೫–೭೩೧). [ಪಸು$_4$ + ಮೊಗ]

**ಪಸುರ್$_1$** (ಕ್ರಿ). ಹಸುರುಬಣ್ಣವನ್ನು ಹೊಂದು; ಹಸುರಾಗು: "ಪಸುರ್–ಹರಿತಭಾವೇ" (ಶಮಧಾ); ಕಿರಣಂಗಳೆ ಕಾವುಗಳೆನೆ ಹರಿದಶ್ವಂಗಳೆ ಪಸುರ್ತ ಪಸುರೆಲೆಯೆನೆ ತೋರ್ಪರುಣದಿನಮಣಿ ಬಯಲ್ದಾವರೆಯುನೆ ಪೋಲ್ತಿರ್ದನಪರಗಿರಿವರಶಿರದೊಳ್ (ಕಾವ್ಯಸಾ. ೮೮೦ ಶೂದ್ರಕ) ; ಪೊಳೆವ ಮರೇಂದ್ರಗೋಪದ ಪಸುರ್ತೆಳವುಲ್ಗಳ ತಳ್ತ ಕಾರ್ಮುಗಿಲ್ಗಳ (ಪಂಪಭಾ. ೭–೨೫) ; ಮಿಂಚು ಕಣ್ಗಳೊಳ್ ಮೊಳೆತುದು ಶಕ್ರಚಾಪಲತೆ ಪೊಣ್ಮಿ ಪಸುರ್ತುದು (ಅರ್ಧನೇ. ೪–೬೦).

**ಪಸುರ್$_2$,** ಪಸಿರ್, ಪಸುರು, ಹಸರು$_2$, ಹಸಿರು, ಹಸುರು (ನಾ). ೧. ಪಚ್ಚೆಬಣ್ಣ ; ಹರಿದ್ವರ್ಣ; ಮರಕತವರ್ಣ: "ಶ್ಯಾಮಮಂ, ಶ್ಯಾಮಳಂ . . . ಹರಿತ್–ಈ ೬ ಪ(ಹ)ಸುರ್" (ಹಲಾಯು. ೧೨೧–೪) ; ಜಾಗಂಗಳ ಪಸುರ್ಗಳೆಸೆಯೆ ರತ್ನದ ಕೇರ್ಗಳ್ ಜಾಗಂಬೊಯ್ದಂತಿರೆ ಪರಭಾಗಂಬಡೆದುವು ವಿಗಾಹಗೇಹಾಂತರದೊಳ್ (ಆದಿಪು. ೪–೩೧) ; ಮಿಸುಪ ಕದಳೀವನಂಗಳ ಪಸುರಿಂ ಬಾಸಣಿಸಿ ದೆಸೆಗೆ ಪೊಸನಂಜ್ಬೆಳಗಂ ಪಸರಿಸುವ . . . ನಗರಿ ಸೊಗಯಿಸಿ ತೋರ್ಕುಂ (ಕಾದಂಪೂ. ೨೯೯) ; ಗಗನದೆ ಚರಿಸುವ ಗಿಳಿಯ ದೇಹಚ್ಛವಿ ಮಿಗೆ ನಮ್ಮ ಪಸುರ್ಗೆಣೆಯಹುವೆ (ಕಂನವಿ. ೫–೭೫). ೨. ಹಳದಿ ಬಣ್ಣ ; ಅರಿಸಿನದ ಬಣ್ಣ : 'ಪಸುವೊರ್ನ್' ಪರಾ. ೩. ಕಪ್ಪುಬಣ್ಣ ; ಕಾಳವರ್ಣ: ಮುಗಮುಗಿಸಿತ್ತು ಕತ್ತುರಿಯ ಕಿತ್ತಲಗಂತದು ಪಲ್ಲ ಮಿಂಚು ಮಲ್ಲಿಗೆಯ ತುಱುಂಬು ಮೆಯ್ಯ ಪಸುರೊಪ್ಪಿದುದಾತನ ವಾರಿಯಿಂದು ವೇಳೆಗೆ ಬರುತಿರ್ಪಂ ಸಿತಗನೆಂಬುದು ಮಂಜಿ ಬೊಜಂಗನೆರ್ದು ಮೆಲ್ಲಗೆ ಪೊಱಮಟ್ಟು ಪೋಗೆ (ಲೀಲಾಪ. ೨–೫೬). 'ಪಸುವಾರ್ಸೆ' ಪರಾ. ೪. ನೀಲಿಬಣ್ಣ ; ನೀಲವರ್ಣ: 'ಪಸುರ್ಗಟ್ಟು' ಪರಾ. ೫. ಎಳೆಹುಲ್ಲು ; ಗರಿಕೆ: (೬). ೬. ಸಸ್ಯಸಂಪತ್ತು ; ಪೈರು : 'ಪಸುರಾದಾಯ' ಪರಾ. ೭. ಒಂದು ಬಗೆಯ ರತ್ನ ; ಪಚ್ಚೆ; ಮರಕತ: 'ಪಸುರ್ಗಂಕಣ' ಪರಾ. ೮. ಎಳೆತನ; ಬಲಿಯದಿರುವಿಕೆ: (೬). ೯. ಹೊಸತನ; ತಾಜಾ; ನವೀನತೆ: (೬). 'ಪಚ್ಚೆ$_1$', 'ಪಯಿರ್', 'ಪಸಿ$_3$', 'ಪಸು$_3$' ಪರಾ. **ಪಸಿರ್:** ೧. 'ಪಸಿರ್ಗಲ್' ಪರಾ. ೧೦. (ಆಲಂ) ಯೌವನದ ಕೆಚ್ಚು,–ಶೌರ್ಯ: ಪರಿಯಿಸುವೆನೆಂಬನ ಪಸಿರ್ಪರೆಗುವಿಗಾಯತಿವರ್ತಿಯಂ. ವಶವರ್ತಿ ಮಾಡಲುಮಂಕುಶಮಿಲ್ಲದಂಕಿಸಲುಂ ನಿನಗೆ ತೀರ್ವುದು (ಅರ್ಧನೇ. ೫–೧೧೫ ವ). **ಪಸುರು:** ೧. ಪುರವೆಂಬ ನಾರಿಯಾ ಪಸುರ ಪಟ್ಟೆಯನುಟ್ಟ ತೆಜದಿಂದ ಶಾಲಿಯ ಗದ್ದೆ ಪಿರಿದು ಶ್ರೀರಂಗಪಟ್ಟಣವ ಬಳಸಿಕೊಂಡಿರುವ ಸಂಭ್ರಮವನೇನೆಂಬೆ (ಕಂನವಿ. ೫–೬೩); ಎನಿತು ಪಸುರೊಳ್ ತೆರಮದೆನಿತು ಮಂಜಳ ಕೆಂಪದೆನಿತು ನಾಲಗೆ ನುಡಿಯದಿರ್ಪ ಪೊಗರೆನಿತು ? (ಕಾಲೂರ. ೧೯೯–೨೫೦). ೩. ಇಂಗಿದಧರಂ ಪಸುರ ದಂತಂಗಳುಂ ಬೆಳರ್ತ ಕಂಗಳುಂ ಬೆರೆತ ಮೊಗಮುಂ . . . ದುರ್ಗಂಧದಿಂ ತುಂಬಿರೆ (ಮಹಾವಿ. ೬–೪೯). **ಹಸರು$_2$:** ೧. ಅಂದವಾದಾ ಹಸರು ಮೇಲ್ಪಂದಿಯನುಟ್ಟಳು ದೂತಿ (ಶ್ರೀಕೃಪಾ. ೧೭). **ಹಸಿರು:** ೧. ಏನು ಹಸಿರು ! ಏನು ಹಳದಿ ! ಸುತ್ತು ಮುತ್ತು ನೋಡು ಕೆಳದಿ ! ಹುಲ್ಲು ಹೂವು ಆದರೇನು, ಹಬ್ಬದುಬ್ಬಿನಲ್ಲಿವೆ (ಸಖೀಗೀ. ೭೭–೧); ಮೈ ಹಸಿರು ಕೆಂಚೂಚು ಕರಿಯ ಕೊರಳು ಪಚ್ಚೆ, ಮಾಣಿಕ, ಕೆಚ್ಚ ನೀಲ ಹರಳು (ಗಂಗಾತ. ೨೮–೧೧). ೩. ಹಸಿರಿನೇರುವೆ ಹಗಲ ಬೆಳಕಿನೊಳು ಬೆರೆದಂತೆ ಸಂಜೆಮುಗಿಲಿನ ಮಳಲೊಳೋಲಗಿಸುವಂತೆ . . . ನನ್ನರಿವಿನೀ ಮನೆಯೊಳಂಜಿಯಡಗಿರುವಂಥ ಮುದದಾಪ್ತಗೆ ಸನ್ನೆಗೈವನು ಹೊರಗೆ ಚೆಲುವುದೊರೆ ಬಳಿಯ ಸಾರೆಂಬ ಪರಿಗೆ (ಮಲಿದೇ. ೫೧–೧). ೫. ಮಳೆಯು ಎಳೆಯುವ ತೇರಿಗೆ ಹಸಿರು ಏರಿದೆ ಏರಿಗೆ ಹಸಿರು ಸೇರಿದೆ ಊರಿಗೆ ಹಸಿರು ಚಾಚಿದೆ ದಾರಿಗೆ (ಗಂಗಾತ. ೧೨–೪). ೬. ಉಲ್ಲಾಸದ ಹಚ್ಚನೆಯ ಹಸಿರು ಅಲ್ಲಿ ಗೋಚರಿಸದು (ಹಾಹುತ್ತ. ೯೯). 'ಹಸಿರುವಾಣಿ' ಪರಾ. ೯. ಚೇತನ ಪ್ರತ್ಯೇಕ ಚಿದ್ಭೂತಿಯೇ, ನಲವೆ. ನಿನ್ನ ಹಸಿರಾರುವುದು ನುಡಿತೇರು ಹರಿಯೆ ಸೂಕ್ಷ್ಮ ಸೀ, ದಿನಬಳಕೆ ನುಣ್ಣ ಮಾತಿದು ತೋರ ಅರಿದಿದಕೆ ನಲುಗಿಸದೆ ನಿನ್ನ ಹಿಡಿಯೆ (ಮಲಿದೇ. ೪೩–೨); ಅವರು ಹೇಳಿದ ವಿಚಾರ ಮನಸ್ಸಿನಲ್ಲಿ ಇನ್ನೂ ಹಸಿರಾಗಿದೆ (ರೂಢಿ). **ಹಸುರು:** ೧. "ಶ್ಯಾಮಳಂ ಶ್ಯಾಮಂ ಪಲಾಶಮೆಂದರೆ ಹರಿದ್ರಾಮ[ಭ]ಮೆನೆ ಹಸುರು" (ಮಂಗರಾ. ೧೩೧–೨೧); ಹಸುರುಮೈ ಹಾವಿನಾಭರಣ ಬಿಡುಮಂಡೆ . . . ರುಂಡಮಾಲೆ ಗಜಗಮನ ಕೆಂಪಿನ ಪುಷ್ಪಸರಮೊಪ್ಪವಾ . . . ದೇವಾಂಗನೆಯುರ್ಕೈತಂದು ಕಂಡರಪ್ರತಿಮ ಸಿದ್ಧೇಶ್ವರನನು (ಸಿದ್ಧರಾ. ೪–೮) ; ಹಕ್ಕಿಯಿಂಪು ; ಹಸುರ ಸೊಂಪು ; ಅಲ್ಲಿ ಚಳಿಯು ಕಚ್ಚದು (ಅನಿಕೇ. ೧೬–೧೭). ೫. ವಿಷಯವೆಂಬ ಹಸುರನೆನ್ನ ಮುಂದೆ ಪಸರಿಸಿದೆಯಯ್ಯಾ (ಬಸವ. ೫೧) ; ಬಸವನೆಂದರೆ ಪಾಪ ದೆಸೆಗೆಟ್ಟು ಹೋಗುವದು ಬಿಸಿಲಿಂಗೆ ಹಸುರೊಳೆಸೆದಿರ್ಪ ಹನಿಯಾಱು ಹುಸಿದು ಹೋದಂತೆ (ಸರ್ವಜ್ಞ. ೨೯೪) ; ಒಣಹುಲ್ಲಿನ ನಡುವೆ ಹಸುರು ಬೆಳೆದು ಇಣುಕಿ ನೋಡುತ್ತಿತ್ತು (ಯೋಧಪು. ೧). ೭. ಆವರು ಕೆಂಪು–ಹಸುರಿನ ಬಳೆ ಮಾಡಿಸಿಕೊಂಡಿದ್ದಾರೆ (ರೂಢಿ). ೧೧. ಚರ್ಮದ ಮೇಲೆ ಹಾಕಿಸಿಕೊಳ್ಳುವ ಹಚ್ಚೆ : ಅನಾಗರಿಕರು ಹೇಗೆ ಮೈಗೆ ಬಣ್ಣ ಬಳಿದುಕೊಂಡು ಹಸುರು ಚುಚ್ಚಿಸಿಕೊಂಡು ಅತ್ಯಂತ ಹೆಮ್ಮೆಪಡುತ್ತಾರೆಯೊ . . . ಹಾಗೆಯೇ ನಮ್ಮ ವಿಲಾಯತಿ ವಿದ್ಯೆಯನ್ನು ನಾವು ಮೈಮೇಲೆ ಲೇಪಿಸಿಕೊಂಡು ದಂಭದಿಂದ ದಾಪುಗಾಲು ಹಾಕುತ್ತ ನಡೆಯುತ್ತೇವೆ (ನಿಬಂಧ. I, ೨೮೭). [< ಪಸುರ್$_1$]

**ಪಸುರಂಗಿ,** ಹಸುರಂಗಿ (ನಾ). ಹಸುರುಬಣ್ಣದ ಅಂಗಿ : ತಳಿರ್ಗಳ ಮರ್ಕವೆತ್ತ ತಲೆಕಟ್ಟು ಲತಾಂತದ ಮಾಲೆ . . . ಪಸುರಂಗಿಗೆ ಪೀಲಿಯ ಪಕ್ಕಜಲ್ಲಿ . . . ಒಪ್ಪೆ (ಶಬಶಂ. ೩–೧೬). **ಹಸುರಂಗಿ:** ಹಸುರಂಗಿಗಳ ತೊಟ್ಟನು . . . ಕಿರಾತವೇಷದ ವಿಗಡ ದೇವರ ದೇವ (ಕುವ್ಯಾಅ. ೫–೨೮). [ಪಸುರ್$_2$ + ಅಂಗಿ$_2$]

**ಪಸುರಾದಾಯ** (ನಾ). ಬೆಳೆಗಳ ಮೇಲೆ ಹಾಕುವ ತೆರಿಗೆ ಮತ್ತು ಅದರಿಂದ ಬರುವ ಆದಾಯ : ಶುಕ್ರವಾರ ಸಂಥೆಯಲು ಹುಟ್ಟುವಂಥಾ ಸುಂಕ ಸುವರ್ನಾದಾಯ ಪಸುರಾದಾಯ ಸರ್ವಾದಾಯವನೂ ಇ ಲಕ್ಷ್ಮೀದೇವಿ ಅ(ಂ)ಮ್ಮನವರಿಗೆ . . . ಧಾರೆನೆರಸಿ ಕೊಡಿಸಿದ ಸಂಥೆಯ ಸರ್ವಾದಾಯದ ಧರ್ಮಶಾಸನ (ಸೌಇಇ. IX–ii, ೫೮೪–೧೫ ; 1538). [ಪಸುರ್$_2$ + ಆದಾಯ]

**ಪಸುರಿಡಿ** (ಕ್ರಿ). ಹಸುರಿನಿಂದ ತುಂಬು,–ಕೂಡು : ಪಸುರಿಡಿದು

ಕಣಿಶಮುಂ ಕರ್ಚಿ ಸೊಲ್ಲಲೇ ಪಾಲ್ದುಂಬಿ ಕಾಯ್ವಲಂಗೂಡಿ ಪೊಂಬೆಳಸಾಗಿ ಪಲವು ಪರಿಯಿಂ ನೆಲ್ಲ ಗರ್ದೆಗಳೊಪ್ಪಿದವು (ಪದ್ಮರಾ. ೮–೧೨).

[ಪಸುರ್$_2$ + ಇಡಿ$_2$]

**ಪಸುರು** 'ಪಸುರ್$_2$' ನೋ.

**ಪಸುರುಗೊಳು** 'ಪಸುರ್ಗೊಳ್' ನೋ.

**ಪಸುರುಡಿಗೆ,** ಹಸುರುಡಿಗೆ, ಹಸುರುಡುಗೆ (ನಾ). ಹಸುರು ಬಣ್ಣದ ಉಡುಪು ; ಹಸುರಿನ ಉಡುಪು ; ☞ ಹರಕೆಯು ನೆರವೇರಿದಾಗ ಉಡುವ, ಬೇವು ಮೊದಲಾದ ಸೊಪ್ಪಿನ ಉಡುಗೆ ಎಂಬರ್ಥದ ಸೂಚನೆಯೂ ಇಲ್ಲಿದೆ : ಸಾನುರಾಗದೊಳುಟ್ಟ ಪಸುರುಡಿಗೆಯೆನೆ . . . ನಗರಮಂ ಬಳಸಿದುಪವನಂಗಳ್ಗಿಱಿವುವು (ಜೈಮಿಭಾ. ೩–೨೨) ; ಪುರಲಕ್ಷ್ಮಿ ತನ್ನೊಳಗಿರುವರಿಗಿಷ್ಟಾರ್ಥ ಪರಕೆ ಕೈಗೂಡೆ ಸಂತಸದೆ ಪಿರಿದುಟ್ಟ ಪಸುರುಡಿಗೆಯೊಯೆಂದೆನಲಾ ವರ ವನ ಬಳಸಿಕೊಂಡಿಹುದು (ಕಾನವಿ. ೨–೪೦). **ಹಸುರುಡಿಗೆ:** ಹೊಲದ ಹಸುರುಡಿಗೆ, ನೇತ್ರಾವತಿಯ ಮಾಲೆ ಮಲೆಗಾಳಿ ಸಾರುತಿಹುದಿಂತು ತವಲೀಲೆ (ಕಎಪು. ೩೧–೩). **ಹಸುರುಡುಗೆ:** ಚಿಗುರಿಸಿತು ತಾಯ್ನೆಲದ ಹಸುರುಡುಗೆಯೊಡಲಂ (ಕಾಲೂರ. ೪೫–೬೩). [ಪಸುರು(<ಪಸುರ್$_2$) + ಉಡಿಗೆ$_1$(<ಉಡುಗೆ)]

**ಪಸುರುಡೆ,** ಹಸುರುಡೆ (ನಾ). = ಪಸುರುಡಿಗೆ : ಬನದೇವಿ . . . ಪಸುರುಡೆಯನುಟ್ಟು ಪೊಂದೊಡವೆಗಳ ತೊಟ್ಟು . . . ಕಾದಿಹಳೊ ಎಂಬಂತೆ ತೋರುತಿದೆ (ಚಂದ್ರಸ. ೭೧–೧೦). **ಹಸುರುಡೆ:** ಹಸುರುಡೆಯ ಬನದೇವಿ ತೇಲಿ ತೇಲಿ ಪ್ರವೇಶಿಸುತ್ತಾಳೆ (ಬಿಗಾಳಿ. ೭೪) ; ನೆಲತಾಯಿಯು ಮತ್ತೆ ಹಸುರುಡೆ ಉಟ್ಟು ಕಳಕಳಿಸಿದಳು (ದೇಶಾಂಕ. ೬).

[ಪಸುರು(<ಪಸುರ್$_2$)+ಉಡೆ$_2$]

**ಪಸುರುವಣಿ** 'ಪಸುರ್ವಣಿ' ನೋ.

**ಪಸುರುವೊಗರ್** (ನಾ). ಹಸುರಿನ ಕಾಂತಿ ; ಹಸುರುಬಣ್ಣದ ಛಾಯೆ : ಕೊರ್ವಿ ನಳನಳಿಸಿ ನೀಳ್ದುಱಿ ಬೆಳೆದ ರಸದಾಳಿಗೆರ್ವುಗಳ ಸೋಗೆಗಳ ಪಸುರುವೊಗರಾಗಸಕೆ ಪರ್ವುತಿಹುದಾ ನಾಡೊಳೆಲ್ಲಿಯುಂ (ಜೈಮಿಭಾ. ೩–೫). [ಪಸುರು(<ಪಸುರ್$_2$)+ಪೊಗರ್$_2$]

**ಪಸುರುಳಿ** (ಕ್ರಿ). ಹಸುರುಬಣ್ಣವು ಹೋಗು,–ಮಾಸು : ಪಸುರುಳಿದ ನಾಗವಲ್ಲಿಯು ಪರ್ಣಕರ್ಪೂರದೆಸೆವ ಚೂರ್ಣಪ್ರಭಾಗದ ಕ್ರಮುಕಮುಮ ಪೊನ್ನ ಸಂಬಳಿಗೆಯೊಳಗೆ ತೀವಿ (ನವನೋ. ೧೪–೧೬).

[ಪಸುರು(<ಪಸುರ್$_2$) + ಉಳಿ$_1$(<ಉಱು$_1$)]

**ಪಸುರೆಲೆ** ಹಸುರೆಲೆ (ನಾ). ಹಸುರಾದ ಎಲೆ : ಹರಿದಶ್ವಂಗಳೆ ಪಸುರ್ತ ಪಸುರೆಲೆಯೆನೆ ತೋರ್ಪರುಣದಿನಮಣಿ ಬಯಲ್ದಾವರೆಯನೆ ಪೋಲ್ತಿರ್ದಂ (ಕಾವ್ಯಸಾ. ೮೮೦ ಶೂದ್ರಕ) ; ಆಭರಣದೊಳಗುರ್ಚಿದ ಪಚ್ಚೆಯ ಪಸರಿಸಿದ ಪಸುರಂ ಪಸುರೆಲೆಗೆತ್ತೆಳಸುವ ವಲ್ಲಭಹರಿಣಶಾಬಕಂಗಳ್ಗೆ (ಕಾದಂಉ. ೨೫) ; ಪಸುರೆಲೆಗಳ ಬಿಟ್ಟು ತನಿಗಬ್ಬಿನೊಳಗಣ ರಸವ ಕೊಂಬಾನೆಗಳಂತೆ . . . ಕೆಲರು ಭೇದಿಸಿ ನಿಜಸುಖವ ಭೋಗಿಪರು (ಭರಚ. ೧–೧೦೬). **ಹಸುರೆಲೆ:** ಗದ್ದೆಗಳಲ್ಲಿಯೂ ತೋಟಗಳಲ್ಲಿಯೂ ತೇವ ಹೆಚ್ಚಾಗಿರುವುದರಿಂದ ಹಸುರೆಲೆಯು ಇವುಗಳಲ್ಲಿ ಜಾಗ್ರತೆಯಾಗಿ ಕೊಳೆಯುವುದಕ್ಕೆ ಅವಕಾಶವಿದೆ (ಪ್ರಪಮ. ೩೨) ; ಮಳೆ ಕೊಡುವ ಬೆಟ್ಟಗಳ ಮೋಲೆಯುಂಡು ಹಸುರೆಲೆಯು ತಳೆವಿಡಿದು ನೆಲದ ದಾರಿಯು ನೋಳ್ಪ ಚೆಲುವೆ (ಕಾಲೂರ. ೨೩–೭).

**ಹಸುರೆಲೆಯ ಗೊಬ್ಬರ** = ಹಸುರು ಎಲೆಗಳನ್ನು ಮಣ್ಣಿನಲ್ಲಿ ಬೆರೆಸಿ ಕೊಳೆಯುವಂತೆ ಮಾಡಿ ತಯಾರಿಸುವ ಗೊಬ್ಬರ : ಹಸುರೆಲೆಯ ಗೊಬ್ಬರ—ಭೂಮಿಯನ್ನು ಉಳುವಾಗ . . . ಹಸುರೆಲೆಯನ್ನು ಹಾಕಿ ಮಣ್ಣಿನಲ್ಲಿ ಬೆರಸಿದರೆ ಈ ಎಲೆ ಕ್ರಮೇಣ ಕೊಳೆತು ಅದರಲ್ಲಿರುವ ಪದಾರ್ಥಗಳೆಲ್ಲವೂ ಮಣ್ಣಿಗೆ ಸೇರಿ ಸಸ್ಯಾಹಾರವಾಗುವುದು (ಪ್ರಪಮ. ೩೨). [ಪಸುರ್$_2$+ಎಲೆ$_1$]

**ಪಸುರೆಲೆವಳ್ಳಿ** (ನಾ). ಹಸುರಾದ ವೀಳೆಯದೆಲೆಯ ಬಳ್ಳಿ,–ಹಂಬು : ಇರ್ತಡಿಗಾಲುವೆಯಿಂದವೆ ನೆಱೆ ಮುಸುಕಿ ಬೆಳೆದ ಚೆಂದಂಗೊಳ್ವಾಳೆಯಡಕೆ ಪಸುರೆಲೆವಳ್ಳಿ (ಜಯಕಾ. ೧–೩೮).

[ಪಸುರ್$_2$ + ಎಲೆವಳ್ಳಿ]

**ಪಸುರೆಸಳು** (ನಾ). ಹಸುರು ಬಣ್ಣದ ದಳ,–ಪಕಳೆ : ತಳದೊಳೊಪ್ಪುವ ಪಸುರೆಸಳ ರೋಚಿಯಿಂ ನಡುವೆ ತೊಳಪ ಕೆಂದಳದ ದೀಧಿತಿಯಿಂದೆ . . . ಹೊಳೆಹೊಳೆವ ಕೋಕನದಪಂಕ್ತಿಗಳ ಬಣ್ಣಂ . . . ಕೊಳದೊಳಾ ರಾಜಿಸಿತು ತುಹಿನಗಿರಿರಾಜನಂದನೆಯು ಕಣ್ಗೆ (ಜೈಮಿಭಾ. ೧೫–೧೦).

[ಪಸುರ್$_2$ + ಎಸಳು$_1$(<ಎಸಱ್)]

**ಪಸುರೆಱಕೆ** (ನಾ). ಹಸುರು ಬಣ್ಣದ ರೆಕ್ಕೆ : ಬಿಸಿಲೆಸಕದಿಂದೆ ಕೊರಗಿದ ದೆಸೆವೆಣ್ಗಳ ಬಿಸುಪನಾಱುಪಂತಿರೆ ಗಿಳಿಗಳ್ ಪಸುರೆಱಕೆಯೆಂಬ ಬಾಟೆಯ ಪೊಸ ಬಿಜ್ಜಣಿಗೆಗಳಿನೆಸಗಿವುವು ತಣ್ಣೆಲರಂ (ಕಾದಂಪೂ. ೧೩೦).

[ಪಸುರ್$_2$+ಎಱಕೆ(<ಎಱಂಕೆ)]

**ಪಸುರೇಱು** (ಕ್ರಿ). ಹಸುರುಬಣ್ಣದಿಂದ ಕೂಡು ; ಹಸುರಾಗು : ದೆಸೆ ಪಸುರೇಱೆ ಪಚ್ಚೆಯೊಳೆ ಮುಚ್ಚಿ ಮುಸುಂಕಿದ ಮಾಟಿಯಾದುದು (ಪಂಪಭಾ. ೭–೨೨) ; ಕಳಮಾವಳಿ ನಳನಳಿಸಿ ಬೆಳೆದು ಪಸುರೇಱೆ ಲಸದ್ಭೂವನಿತೆಗೆ ಧಾತ್ರಂ ಪರಿಭಾವಿಸಿ ಪೊದಯಿಸಿದ ಹರಿತಪಟದಂತಿರ್ದಂ (೧ರಕ. ೨–೧೨) ; ಪಸುರೇಱಿದ ಕಾಯ್ಗಳವೆಲ್ಲಿಯಲ್ಲಿ ಪಣ್ಗೊನೆಗಳವೆಲ್ಲಿಯಲ್ಲಿಯೆನೆ ಸೋಲಿಸುಗುಂ ಬಿಡದಾವನಂ ಬನಂ (ಕಬ್ಬಿಕಾ. ೩೨) ; ವಿರಹಿವ್ರಾತಕಳಲೇಱೆ ಪೊಲನೆ ಪಸುರೇಱೆ . . . ಕಾಮುರ್ಕವೇಱಿತ್ತೈ (ಸಾಳ್ವಭಾ. ೨೬–೧೮). [ಪಸುರ್$_2$+ಏಱು$_1$(<ಏಱ್$_1$)]

**ಪಸುರ್ಗಂಕಣ** (ನಾ). ಮರಕತದ ಬಳೆ ; ಪಚ್ಚೆಯ ಬಳೆ : ನೂಪುರಮಂ ಪದಕ್ಕೆ . . . ಪಸುರ್ಗಂಕಣಮಂ ನಳಿತೋಳ್ಗೆ ಪತ್ರಲೇಖಾಪರಿಶೋಭೆಯಂ ನಿಜಕಪೋಲತಳಕ್ಕೆ ಕುಡಲ್ ಮನೋಜಸಂತಾಪನತಪ್ತಮಾತುರಿಸಿದಪ್ಪುದು ಮನ್ಮನಂ (ಪಂಚಾಪಮಾ. ೯–೧೬೩).

[ಪಸುರ್$_2$+ಕಂಕಣ]

**ಪಸುರ್ಗಂಬ** (ನಾ). ೧. ಹಸುರಾದ ಕಂಬ. ೨. (ಆಲಂ) ಬಾಳೆಯ ಕಂಬ : ಕುಳಿರ್ವ ಬಾಳದ ಬೇರ್ಗಳ ಕೇರ್ಗಳಿಂ ಲತಾವಳಿಯನೆ ಸುತ್ತುಗೊಂಡ ಪಸುರ್ಗಂಬದಿಂ (ಕಾದಂಉ. ೪೫೮).

[ಪಸುರ್$_2$+ಕಂಬ$_1$(<ಕಂಭ)]

**ಪಸುರ್ಗಟ್ಟು,** ಹಸಿರುಗಟ್ಟು, ಹಸುರುಗಟ್ಟು, ಹಸುರ್ಗಟ್ಟು (ಕ್ರಿ). ೧. (ವಿಷದಿಂದ ಅಥವಾ ಪೆಟ್ಟಿನಿಂದ ರಕ್ತವು ಹೆಪ್ಪುಗಟ್ಟಿ, ಚರ್ಮವು) ನೀಲಿಬಣ್ಣಕ್ಕೆ ತಿರುಗು ; ನೀಲಿಗಟ್ಟು : ಈ ಚಮ್ಮಟಿಗೆ ಸುಲಿದು, ಬೆನ್ ಪಸುರ್ಗಟ್ಟೆ (ಅಶ್ವತ್ಥಾ. ೬–೯೫). **ಹಸಿರುಗಟ್ಟು:** ೨. ಹಸುರು ಬಣ್ಣವನ್ನು ಹೊಂದು : ಅದರ ಮೇಲ್ಭಾಗ ಹಸಿರುಗಟ್ಟಿತ್ತು (ರಂಗರೋ. ೧೮). **ಹಸುರುಗಟ್ಟು:** ೧. ಹಸುರುಗಟ್ಟಿತು ತೋಳು (ಒಲುಮೆ. ೩೫–೧೭). **ಹಸುರ್ಗಟ್ಟು:** ೨. ಹಸುರ್ಗಟ್ಟಿತೊ ಕವಿಯಾತ್ಮಂ ಹಸುರ್ನೆತ್ತರ್ ಒಡಲಿನಲಿ ! (ಪಕ್ಷಿಕಾ. ೩೪–೬).

[ಪಸುರ್$_2$+ಕಟ್ಟು$_1$]

**ಪಸುರ್ಗಣೆ** (ನಾ). ಹೊಸದಾದ ಹೂವಿನ ಬಾಣ ; ಕೋಮಲವಾದ ಬಾಣ (?) : ಕುಸುಮಸರನ ಪಸುರ್ಗಣೆಯ ಪೊದೆಗೆ ಪುರುಡಿಸುವ ಜಾಗದ ನೆಲೆಯ ಹಡಲಗೆಗಳೊಳಂ (ಪರ್ಣಪು. ೭–೩ ಪ).

[ಪಸುರ್$_2$ + ಕಣೆ$_1$]

**ಪಸುರ್ಗಪ್ಪು** (ನಾ). ದಟ್ಟ ಹಸುರಿನಿಂದ ಕೂಡಿದ ಕಪ್ಪು ;

ಸಾಂದ್ರವಾದ ಕಪ್ಪುಬಣ್ಣ : ಪಸುರ್ಗಪ್ಪಿಂ ಸುತ್ತಲುಂ ಕಟ್ಟಿಲಿಪ ಪಸಲೆಯಾಕಾಸಮುಂ ಮಧ್ಯದೊಳ್ ಶೋಭಿಸಿ ತೆಳ್ಪಂ ತಾಳ್ದ ಚಂದ್ರೋಪಳಂ (ಪುಷ್ಪಪು. ೩-೭೬). [ಪಸುರ್$_2$+ಕಪ್ಪು$_4$(<ಕರ್ಪು$_1$)]

**ಪಸುರ್ಗರಿ** (ನಾ). ಹಸುರುಬಣ್ಣದ ಗರಿ : ಬಂದೆರಗಿದಪ್ಪವಾ ವ್ರೀಹಿ ವಿಸ್ತಾರಕ್ಕೆ ಬನಮೆಚ್ಚ ಕೆಮ್ಮೊನೆಯ ಪಸುರ್ಗರಿಯ ಕಣೆಗಳೆನೆ ಗಿಳಿವಿಂಡು ದಂಡು (ಚಿತ್ರಾಂಗ. ೫೩-೧೪೪೩). 'ಪಸುಂಗಱಿ' ಪಠಾ. [ಪಸುರ್$_2$+ಗರಿ(<ಗಱಿ)]

**ಪಸುರ್ಗಲ್,** ಪಸಿರ್ಗಲ್, ಪಸುರ್ಗಲ್ಲು, ಹಸುರುಕಲ್ಲು (ನಾ). ಹಸುರುಬಣ್ಣದ ರತ್ನ; ಮರಕತ; ಪಚ್ಚೆ : "ಪಸುರ್ಗಲ್ಲೆನೆ [ಪಾಠಾಂ.ಪರ್ರಲೆನೆ] ಪಚ್ಚೆ" (ಚತುಸಿ. ೧೧೦); ಬಾಳತೃಣಂಗಳೆಂದೆಳಸುಗುಂ ಪಸುರ್ಗಲ್ಗಳ ಕಾಂತಿಯಂ ಮೃಗೀಬಾಳಕಂ (ಮಲ್ಲಿಪು. ೨-೭೭). **ಪಸಿರ್ಗಲ್ :** ಸಿದ್ಧರಸದ ಬಲ್ದೊಱೆ ಬಜ್ಜರಗವಿ ಪಸಿರ್ಗಲ್ಲಱೆ ಸಸಿಗಲ್ಗೋಡು ಮೆಱೆಗುಮಾ ಗಿರಿತಟದೊಳ್ (ಶಬಶಂ. ೩-೩೦). **ಪಸುರ್ಗಲ್ಲು:** ಅಂಗಚ್ಛವಿಯ ಪೊರೆ ಸೂಸಿ ಪಸುರ್ಗಲ್ಲೊಳಂ ಪೊಳೆಯೆ ಬನಲಕ್ಷ್ಮಿಯಂತೆ ರತಿಕಾಂತೆ ಮೆರೆಯೆ (ನಪಮೋ. ೧೩-೪೧). **ಹಸುರು ಕಲ್ಲು :** ನೀಲಗಿರಿಯಿಂದ ತರಿಸಿದ ಹಸುರುಕಲ್ಲು, ಅಮೃತಶಿಲೆ . . . ಬ್ರೆಕ್ಕಿಯ ಇತ್ಯಾದಿ ಶಿಲೆಗಳಿಂದ ಆಭರಣಗಳನ್ನು ತಯಾರಿಸುತ್ತಿದ್ದರು (ಭಾರದ. ೧೪). [ಪಸುರ್$_2$+ಕಲ್$_3$]

**ಪಸುರ್ಗಲ್ಲು** 'ಪಸುರ್ಗಲ್' ನೋ.

**ಪಸುರ್ಗವಿಲ** (ನಾ). ಹಸುರು ಮಿಶ್ರಿತವಾದ ಕಪಿಲವರ್ಣ; ಸಾಂದ್ರವಾದ ಕಂದುಬಣ್ಣ : ಪಸುರ್ಗವಿಲನಾದ ನೀಪದ ಕುಸುಮಮುಮಂ ದೆಸೆಗೆ ಕಂಪನೆತ್ತುವ ಲೋಧ್ರಪ್ರಸವಮುಮಂ . . . ಮುಸುಱಿ ಮುತ್ತಿದುವಳಿಗಳ್ (ಪಂರಾಪಾ. ೭-೧೪೧). [ಪಸುರ್$_2$+ಕವಿಲ$_2$(<ಕವಿಲ್$_3$)]

**ಪಸುರ್ಗಱ** (ಕ್ರಿ). ಹಸುರುಬಣ್ಣವನ್ನು ಕಳೆದುಕೊಳ್ಳು : ಪಸುರ್ವರಲ ಜಗಲಿಯೊಳ್ ರಂಜಿಸಿದುದು ಚೆಂಬೊನ್ನ ಪಟ್ಟವಣೆ ಪಸುರೆಲೆಯಿಂ ಮುಸುಕಿದ ತಾವರೆಗೊಳದೊಳ್ ಪಸುರ್ಗಱದು ಮರಲ್ದರಲ್ದ ಪೊಂದಾವರೆವ್ವೋಲ್ (ಪಂರಾಮಾ. ೫-೧೨೨). [ಪಸುರ್$_2$+ಕಱ$_1$]

**ಪಸುರ್ಗಾಯ್,** ಹಸರುಕಾಯಿ (ನಾ). ಹಸುರಾದ ಕಾಯಿ; ಬಲಿಯದ ಕಾಯಿ ; ಎಳೆಗಾಯಿ : ತೋರಣಗಟ್ಟಿದಂತೆ ಪಸುರ್ಗಾಯ್ಗೊಡಂಬೆಗಳಿಂ ಕಣ್ಗೊಳಿಪ ಕೌಂಗುಮರಂಗಳುಂ (ಶಬಶಂ. ೨-೪೨ ವ). **ಹಸರುಕಾಯಿ :** ಕ್ಷಾರಕಃ, ಜಾಲಕಃ-೨ ಹಸರುಕಾಯಿ, ಹಸರು ಮಗ್ಗು (ಸಿದ್ಧಾಂತಿ. ೧೧೪). [ಪಸುರ್$_2$+ಕಾಯ್$_4$]

**ಪಸುರ್ಗಾವು** (ನಾ). ಹಸುರುಬಣ್ಣದ ಕಾವು; ಹಸುರಾದ ಕಾಂಡ: ಆಱಿಡಿವಸುಳೆಗಳು ಅನುವಂ ಪಡೆದುವು ತತ್ತೃಣರಾಜಿಯ ಕೊನೆಗರ್ಚಿದ ಹರಿನೀಲದ ಪರಲೆನೆ ನನೆವಿಲ್ಲನ ಪಸುರ್ಗಾವಿನ ಮಿಗಸೊಕ್ಕಿನ ಪೊಸಮಿಂಟಿಯೆನೆ (ಜಯಕಾ. ೧-೩೯). [ಪಸುರ್$_2$+ಕಾವು$_3$]

**ಪಸುರ್ಗಿಡು** (ನಾ). ಹಸುರಾದ ಗಿಡ : ನಾಟಿರ್ದ ಪಸುರ್ಗಿಡು ಪುಷ್ಪಲತೆಯ ವೃಕ್ಷವಾಟಿಯೊಳ್ ಕುಸುಮಸೌರಭಕೆ ಊಟಿವರಿವ ತುಂಬಿಗಳ ದೊಂಬಿ . . . ಒಪ್ಪಿದುವು (ಮೋಹತ. ೫-೨೫). [ಪಸುರ್$_2$+ಗಿಡು]

**ಪಸುರ್ಗೂಳ್**, ಪಸುರುಗೂಳು, ಪಸುರ್ಗೂಳು, ಹಸುರ್ಗೂಳು (ನಾ). ನಿವಾಳಿ ತೆಗೆಯಲು ಬಳಸುವ ಒಂದು ಬಗೆಯ ಬಣ್ಣದ ಅನ್ನ : ಮಡದಿಯರ್ ಪಸುರ್ಗೂಳ್ಗಳಾರತಿ ನಿವಾಳಿಸಲ್ (ಪರಶು. ೮-೨೧). **ಪಸುರುಗೂಳು :** ಇಳಿದರಾನೆಯನಬಲೆಯರ ಹೊಂದಳಿಗೆಗಳ ಪಸುರು[ಪಾಠಾಂ.ಪಸ್ರು]ಗೂಳ ದೀಪಾವಳಿಯ ಸಾಲಿನ ಸೇಸೆಗಳ ಸೂಸುಗಳ ಸೊಗಸಿನಲಿ (ತೊರರಾ. ೧-೧೬-೪೪). **ಪಸುರ್ಗೂಳು :** ಬಾಲೆಯರ ಹೊಂದಳಿಗೆಗಳ ಪಸುರ್ಗೂಳುಗಳ ಪಸರಿಕೆಯ ಮಣಿದೀಪಾಳಿ ಸುಳಿದವು (ತೊರರಾ ೧-೬-೧೩). **ಹಸುರ್ಗೂಳು :** ಹಸುರ್ಗೂಳ ಹರಿವಾಣಗಳೊಳು ತುಂಬಿ . . . ನಿವಳಿಸಿದರಚ್ಯುತನಂಘ್ರಿಗಳಲಿ (ಮೋಹತ. ೪೨-೨೭). [ಪಸುರ್$_2$+ಕೂಳ್(<ಕೂೞ್$_1$)]

**ಪಸುರ್ಗೂಳು** 'ಪಸುರ್ಗೂಳ್' ನೋ.

**ಪಸುರ್ದಳಿರ್** (ನಾ). ಹಸುರಾದ ಎಲೆ; ಚಿಗುರು : ಪಸುರ್ದಳಿರೋಳಿಯೋ ಶುಕನಿಕಾಯದೆಱಂಕೆಯ ಮಾಲೆಯೋ (ಕುಸುಸಾ. ೯-೫೬); ಮುಂದೆ ಪಸುರ್ದಳಿರ್ದೊಂಗಲಿಂದೆ ಶೋಭಾವಹಮುಪ್ಪುದೊಂದು ವನಮಿರ್ದುದು (ದಶಕು. ೫-೧೪). [ಪಸುರ್$_2$+ತಳಿರ್$_2$]

**ಪಸುರ್ದೆನೆ** (ನಾ). ೧. ಹಸುರಾದ ತೆನೆ. ೨. ಪಚ್ಚೆಯ ತೆನೆ : ಮುಂದೆಸೆಯೊಳ್ ಗೋರಂಟೆಯ ಮರುಗದ ದವನದ ಪಸುರ್ದೆನೆಯ ಗೊಜ್ಜಿಗೆಯ ಜಾದಿಯ ಮುಡಿವಾಳದ ಮಡಿಯ . . . ಗಿಡುಗಳ ಪಂತಿಗಳ್ (ರಾಮಾಶ್ವ. ೪೩-೮). [ಪಸುರ್$_2$+ತೆನೆ]

**ಪಸುರ್ದೋರಣ** (ನಾ). ಹಸುರಾದ ತೋರಣ; ಹಸುರೆಲೆಯ ತೋರಣ : ಪಸುರ್ದೋರಣ ಪಳಿ ಗುಡಿ ಸಂತಸವಱೆ ಪೊಸಮುತ್ತಿನ ಬಣ್ಣವುರಂ ಮನೆಮನೆದಪ್ಪದೆ ಶೋಭಿಸಿತು (ಜಯಕಾ. ೨-೫೯); ದೊರೆಗಾದ ಪುತ್ರೋತ್ಸವಕೆ ಪಸುರ್ದೋರಣಂ ಕಟ್ಟಿ ಪಟ್ಟಣವ ಸಿಂಗರಿಸಿ (ಚಂದ್ರಸ. ೩೯-೭). [ಪಸುರ್$_2$+ತೋರಣ]

**ಪಸುರ್ನನೆ** (ನಾ). ಹಸುರಾದ ಮೊಗ್ಗು; ಕಾಯಿಮೊಗ್ಗು : ಪಸುರ್ನನೆಯೊಳಿಡಿದ ಮಲ್ಲಿಗೆತಳಿರಿಂ . . . ಪೊಸಮಾವುಗಳಿಂ ಬಸಂತ ಮೆಸೆದಪುದು (ಆದಿಪು ೧೧-೮೩). [ಪಸುರ್$_2$+ನನೆ$_3$]

**ಪಸುರ್ನನೆದೋಱು** (ಕ್ರಿ). ಹಸುರುಮೊಗ್ಗನ್ನು ಕಾಣಿಸು; ಕಾಯಿಮೊಗ್ಗನ್ನು ಹೊಂದು : ಮಲ್ಲಿಗೆ ಪಸುರ್ನನೆದೋಱಿದುದು (ಆದಿಪು. ೧೧-೧೦೪). [ಪಸುರ್ನನೆ+ತೋಱು]

**ಪಸುರ್ನೆಲ,** ಹಸುರ್ನೆಲ (ನಾ). ಹುಲ್ಲು ಮುಂತಾದ ಸಸ್ಯಗಳಿಂದ ತುಂಬಿ ಹಸುರಾದ ಭೂಮಿ,-ನೆಲ : ಆರ ಹಜ್ಜೆಗಳಿವು? ನಿನ್ನವಲ್ಲ ! ಪೂಗಳ ಪರಾಗದಿಂದಿಡಿದ ಪಸುರ್ನೆಲದಲ್ಲಿ ಚಿತ್ರಕಾರನು ಮುದ್ರಿಸಿದ ತೆರದಿ ತೋರುತಿವೆ (ಚಂದ್ರಸ. ೮೨-೬). **ಹಸುರ್ನೆಲ :** "ಶಾದ್ವಳಂ, ಹರಿತಂ—ಈ ೨ ಹಸುರ್ನೆಲಂ" (ಹಲಾಯು. ೨೬-೪). [ಪಸುರ್$_2$+ನೆಲ]

**ಪಸುರ್ಪತ್ರ** (ನಾ). ಹಸುರಾದ ಎಲೆ : ಪಸುರ್ಪತ್ರ ಮುರುಟುವವು ಹಿಮಕೆ (ನಪಮೋ. ೬-೩೪). [ಪಸುರ್$_2$+ಪತ್ರ]

**ಪಸುರ್ಪು** (ನಾ). ೧. ಹಸುರುಬಣ್ಣ; ಮರಕತ ವರ್ಣ : "ಜಾಗಮೆಂದುಂ ಪಸುರ್ಪೆಂದುಂ ಮರಕತವರ್ಣಂ" (ಕಶಸಾ. ೫೬-೨೧೯); ಪರಿಯೆ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋಱೆ (ಆದಿಪು. ೧೧-೧೦೬); ಮಲ್ಲಿಕಾಕುಸುಮದ ಬೆಳ್ಪು ಮಾವಿನ ಪಸುರ್ಪು ಮದಾಳಿಯ ಕರ್ಪು (ಸುಕುಮಾ. ೯-೪೮); ನಂದನಂ ತಳೆದುವು ಕೂಡೆ ಕೆಂಪಿನ ಪಸುರ್ಪಿನ ಕರ್ಪಿನ ಬೆಳ್ಪಿನಂದಮಂ (ಗಿರಿಕ. ೭-೩೯); ಬಾಟೆಯ ಪಸುರ್ಪು ತಮಾಳದ ಕರ್ಪು . . . ಸುತ್ತಲುಂ ಪಸರಿಸಿ (ಪುಷ್ಪಪು. ೯-೩೦) ೨. ಹಸುರು ಔಷಧಿ : ಕಾಮನ ಕರವಾಳ ಕೂರ್ಪು ವಿರಹಾಹಿಯ ಕೊಳ್ವ ಪಸುರ್ಪು ಚೀಯ ಭಾಪೆನಿಸಿದುದಂಗಹಾರ ಕರಣಾಭಿನಯಂಗಳ ನೇರ್ಪು ನೀಱೆಯಾ (ಮಲ್ಲಿಪು. ೮-೫೬). [ಪಸುರ್$_2$+-ಪು$_2$]

**ಪಸುರ್ಪುವಡೆ** (ಕ್ರಿ). ಹಸುರುಬಣ್ಣವನ್ನು ಪಡೆ : ಪಸಿಯ ನೇತ್ರಮುಂ ಪಚ್ಚವಡಿಸಿದಂತೆ ಪಸುರ್ಪುವಡೆದ ನೆಲದೊಳ್ ಪದ್ಮರಾಗದ ಪರಲ್ಗಳಂ ಬಲಿಗೆದಱಿದಂತೆ ಉಪಾಶ್ರಯಂಬಡೆದಳಂಕರಿಸುವಿಂದ್ರಗೋಪಂಗಳುಮಂ (ಪಂಪಭಾ. ೭-೨೫ ವ). [ಪಸುರ್ಪು+ಪಡೆ$_1$]

**ಪಸುರ್ಪುವೆಱು** (ಕ್ರಿ). ಹಸುರುಬಣ್ಣವನ್ನು ಹೊಂದು ; ಹಸುರಾಗು : ಅತಿಭಾಸುರವಾಯ್ತು ಪಸುರ್ಪುವೆತ್ತ ಕಳಮಕ್ಷೇತ್ರಂ (ನೃಷವಿ. ೪-೧೫); ತೊಳಗುವ ದಂತದೋಲೆ . . . ಪಸು[ಪಾಠಾಂ. ಸಿ]ರ್ಪು ವೆತ್ತ ಪಟ್ಟೆಳೆಯ ನಿಱೋಳವೊಪ್ಪಿರೆ ಪುಳಿಂದಿಯರಾದರಮರ್ತ್ಯಕಾಂತೆಯರ್ (ಶಬಶಂ. ೩-೧೧). [ಪಸುರ್ಪು+ಪೆಱು₁]

**ಪಸುರ್ವಣಿ** 'ಪಸುರ್ವಣೆ' ನೋ.

**ಪಸುರ್ವಿಡಿ** (ನಾ). ಹಸುರಾದ ಮಿಡಿಗಾಯಿ : ಕಾಂಚವಾರದ ಕಾಂಚಿಯುಮಂ ಪಸುರ್ವಿಡಿಯ ಪಚ್ಚೆಸಾರಮುಮಂ . . . ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು (ಚಂದ್ರಪು. ೭-೧೧೪ ವ) ; ತನಗೊಂದು ಕರ್ಬು ಸಾಲದೆ ಮಱುದುಂಬಿ ಸಾಲದೆ ಪಸುರ್ವಿಡಿ ಸಾಲದೆ (ಕಬ್ಬಿಕಾ. ೧೯೨). [ಪಸುರ್₂+ಮಿಡಿ₄]

**ಪಸುರ್ವಂದರ್,** ಪಸುರ್ವಂದಲ್ (ನಾ). ಹಸುರುವಾಣಿಯಿಂದ ಕಟ್ಟಿದ ಚಪ್ಪರ : ಪಸೆಯುಂ ಪಸುರ್ವಂದರುಮಂ ಪೊಸಯಿಸಿ (ಆದಿಪು. ೯-೧೨೭) ; ಪಸುರ್ಪೊನ್ನ ಜಗಲಿ ಪಚ್ಚೆಯ ಪಸುರ್ವಂದರ್ . . . ಎಸೆದಿರ್ದುವು ರಾತ್ರಿಪುತಿಯ ಬೀಡಿನೊಳೆತ್ತಂ (ಕಾವ್ಯಾವ. ೨೩೬) ; ಪಸುರ್ವಂದರ್ ನೃಪನ ಕಣ್ಣದೇಂ ರಂಜಿಸಿತೋ (ಪರ್ಶ್ವಪು. ೭-೪) ; ಪಸದನಂ ಬಡೆದ ಪೊಸ ಪಸುರ್ವಂದರೊಸಗೆ ಮಿಗೆ ಮಿಸುಗುತ್ತಿರ್ದುದು (ರಾಜಶೇ. ೮-೫ ವ). **ಪಸುರ್ವಂದಲ್** : ಮನಂಗೊಳಿಪ ವಿತಾನಪಂಕ್ತಿ ಪಸುರ್ವಂದಲೊಳೊಡ್ಡಿದೆಯಾಡುವೆಯ್ದೆಯರ್ (ಸಂಪಭಾ. ೧-೧೦೭).

[ಪಸುರ್₂+ಪಂದರ್]

**ಪಸುರ್ವಂದಲ್** 'ಪಸುರ್ವಂದರ್' ನೋ.

**ಪಸುರ್ವಕ್ಕಿ** (ನಾ). ಹಸುರುಬಣ್ಣದ ಹಕ್ಕಿ ; ಗಿಣಿ : ಪಸುರ್ವಕ್ಕಿ ಗೀಜಗ ಗವುಜು ಹರಡೆ ಹಂಗ ಹಸುಬ ಕರಿಯ ಹಕ್ಕಿಗಳು ಬಿಸಿಗದಿರನು ಪೋಗಲೊಡನೆ ಗೂಡುಗಳ ಬಂಡಸವಸದಿಂದ ಸಾರಿದವು (ಚಂಪ್ರಸಾಂ. ೧೩-೪೯). [ಪಸುರ್₂+ಪಕ್ಕಿ]

**ಪಸುರ್ವಟ್ಟೆ** (ನಾ). ಹಸುರುಬಣ್ಣದ ಬಟ್ಟೆ ; ಹಸುರುವಸ್ತ್ರ : ಮೇಲ್ಗಟ್ಟಿನ ಪಸುರ್ವಟ್ಟೆಯವೋಲ್ಗಿಳಿಗಳ್ ಸುಟಿಯೆ ಗಗನದೊಳ್ (ಮಲ್ಲಿಪು. ೨-೧೭) ; ಕೆಂ[ಪೆಸೆವ] ದುಕೂಲಾಂಬರದ ಪಸುರ್ವಟ್ಟೆಯ ಗುಡಿಗಳುಂ (ಕುಮುರಾ. ೨-೮೦); ಆ ನಳಿನಜನಿಟ್ಟ ಪಸುರ್ವಟ್ಟೆದೆರೆಯೆನಲಾ ನಂದನಾಳಿಯೊಪ್ಪಿದುದು (ಪ್ರಭಂಜ. ೧-೭೧) ; ಪಸುರ್ವಟ್ಟೆವುಟ್ಟು ಕರಿಯ ಝುಲ್ಲಿ ಕಟ್ಟಿದ ಮಿಸುನಿವಟ್ಟಲ ಸಿಂಧದಂತೆ . . . ಕಣ್ಗೆಸೆದವು ಹೊಂದಾವರೆಗಳು (ಕುರಾಸಾಂ. ೨-೯೭). [ಪಸುರ್₂+ಬಟ್ಟೆ₂]

**ಪಸುರ್ವಡು** (ಕ್ರಿ). ಹಸುರಾಗು : ಒಪ್ಪುವ ಪಸುರ್ವಟ್ಟಾಲವಟ್ಟಂಗಳೊ ಚಿಲುವನಹ ಬಾಳೆಯೆಲೆಗಳೊ . . . ಎನಲ್ಕೆ ಪೆಂಪಂ ತಾಳಿದುದು (ಬಸವು. ೨೭-೪೧). [ಪಸುರ್₂+ಪಡು₁]

**ಪಸುರ್ವಡೆ** (ಕ್ರಿ). ಹಸುರುಬಣ್ಣವನ್ನು ಹೊಂದು ; ಹಸುರಾಗು : ವನಲಕ್ಷ್ಮಿಯ ನೇತ್ರಾಂಶುವೆನೆ ನೇತ್ರಕ್ಕೆಸೆದು ಮಿಸುಗಿ ಪಸುರ್ವಡೆದುವು ನಂದನದ . . . ಹರಿದ್ರುವನಸಂತತಿಗಳ್ (ಪುಷ್ಪಪು. ೨-೪೭).

[ಪಸುರ್₂+ಪಡೆ₁]

**ಪಸುರ್ವಣೆ,** ಪಸುರುವಣೆ, ಪಸುರ್ಮಣಿ (ನಾ). ೧. ಹಸುರುಬಣ್ಣದ ರತ್ನ ; ಮರಕತ ; ಪಚ್ಚೆ : "ಜಾಗವರಲ್, ಪಸುರ್ವಣೆ—ವ ಮರಕತಂ" (ಕಶಸಾ. ೫೦-೫೯) ; ಪುರುಷರತ್ನಕ್ಕೆ ಸ್ತ್ರೀರತ್ನಮಲ್ಲದೆ ಸಾಮಾನ್ಯಮಣಿಯುಂ ಪಸುರ್ವಣೆಯುಂ ದೊರೆಯಲ್ಲವೆಂಬಂತೆ (ಶಾಂತಿಪು. ೪-೮೪ ವ) ; ಸೊಗಸೆಸೆಯಲ್ಪಸುರ್ವಣೆಯುಂಗುರಗಳನೊಲ್ದು ಸಿಯಳ ಕರಶಾಖೆಗಳ್ಗಮರ್ಚಿದಳೊರ್ವಳ್ (ಉದ್ಭಟ. ೮-೩೭) ; ಓರಣದಿಂ ಕೀಲಿಸಿ ಪಜ್ಜಳಿಸುವ ಪಸುರ್ವಣೆಯೆಂಬ ತೆಱದಿ ನಳನಳಿಸುತ ತುಱುಗಿ ಬೆಳೆದ ಬಹಿರುದ್ಯಾನಂ ಕಣ್ಗೊಳಿಸಿದುದು (ಜಯುಕಾ. ೧-೪೫). **ಪಸುರುವಣೆ :** ೧. "ಪಸುರುವಣೆ ಜಾಗವರಲೆನೆ ಮರಕತಂ" (ಶಬ್ದಮಂ. ೬೯). **ಪಸುರ್ಮಣಿ :** ೧. ಪಸುರ್ಮಣಿಕಂಕಣಂಗಳಿಂಚರಮೊಡನುಣ್ಮೆ ಮಾಡಿದುದು . . . ಸುತ್ತಿದಳಿನೀಕರರುಚಿಂಕೃತಮೆಂಬ ಶಂಕೆಯಂ (ಮಲ್ಲಿಪು. ೪-೭೬). ೨. ಕಪ್ಪಾಗಿರುವ ಮಣಿ ; ಕರಿಮಣಿ : ಪಸುರ್ಮಣಿಯ ನಪ್ಪೊಡಮುಟಿಯದಂತು ಚಾಗಂಗೆಯ್ದು (ಸಂಪಭಾ. ೨-೧೦೫ ವ) ; ಮಣಿಯೆಂಬ ಪಸುರ್ಮಣಿಯುಂ ತುರಂಗಮೆಂಬ ತುರಂಗಮುಮಂ . . . ಉಟಿಯದಂತಿರೆ ತಂದು (ಶಾಂತಿಪು. ೧೧-೫೫ ವ). [ಪಸುರ್₂+ಮಣಿ₃]

**ಪಸುರ್ವಣ್ಣ** (ನಾ). ೧. ಹಸುರುಬಣ್ಣ : "ಜಾಗಮೆನಲ್ಕದು ಸಂಗತಿ ಪಸುರ್ವಣ್ಣಮೆಂದು ಧರೆಯೊಳ್ ನಿರುತಂ" (ಕವಿಕಂ. ೧೦೩). ೨. ಕಪ್ಪುಬಣ್ಣ ; ಶ್ಯಾಮಲವರ್ಣ. ೩. ಕಪ್ಪುಬಣ್ಣದವನು ; ಶ್ಯಾಮಲವರ್ಣದವನು ; ವಿಷ್ಣು : "ಪಸುರ್ವಣ್ಣಂ ಪೊಡೆಯಲರಂ" (ಚತುನಿ. ೩೧). [ಪಸುರ್₂+ಬಣ್ಣ]

**ಪಸುರ್ವರಲ್** (ನಾ). ಹಸುರುಬಣ್ಣದ ರತ್ನ ; ಪಚ್ಚೆ ; ಮರಕತಮಣಿ: ಪಸುರ್ವರಲ ಜಗಲಿಯೊಳ್ ರಂಜಿಸಿದುದು ಚೆಂಪೊನ್ನ ಪಟ್ಟವಣೆ (ಸಂರಾಸೂ. ೫-೧೨೨) ; ಕಳಮಕ್ಷೇತ್ರವೆಸೆವುವಾ ದೇಶದೊಳು ಭೂಮಾತೆ ಧರಿಯಿಸಿದ ಪಸುರ್ವರಲ ತೊಡಿಗೆಯಂತೆ (ಸೌಂದಪು. ೨-೪) ; ಪಸುರ್ವರಲ್ಗಳ ಭಾಗ್ಯವೆನಿಪ ಸುರತರುಗಳಿಂ (ಭಾವಚಿಂ. ೧-೨೬) ; ತೊಡವಿನ ಕೆಂಬರಲ್ ಪಸುರ್ವರಲ್ಗಳ ಸಾಲ್ವೆಳಗಿಂದ್ರಚಾಪಮಂ ಪಡೆಯೆ (ಶಬಶಂ. ೧-೪೫). [ಪಸುರ್₂+ಪರಲ್]

**ಪಸುರ್ವಸದನ** (ನಾ). ಹಸುರುಬಣ್ಣದ ಬಟ್ಟೆ ; ಹಸುರುಡುಗೆ : ಬೆಳೆವೊನಲೊಪ್ಪಿದುದಾ ವಸುಧಾಸತಿ ಕೈಗೈಯೆ ವಿರಾಜಿಪ ಪಸುರ್ವಸದನದಂತೆ (ಜಯುಕಾ. ೧-೩೮) ; ವಸುಧಾರಮಣಿ ವಿಲಾಸದಿ ಕೈಗೆಯ್ದ ಪಸುರ್ವಸದನವೆಂಬಂತೆ ಮುಸುಕಿ ಬೆಳೆದ ಬೆಳೆಗೆಯ್ವನತತಿ ರಂಜಿಸುತಿಹವಾದೇಶದೊಳು (ತ್ರೈಪಾಲ. ೧-೪೮). [ಪಸುರ್₂+ಪಸದನ]

**ಪಸುರ್ವಳವಿಗೆ** (ನಾ). ಹಸುರುಬಣ್ಣದ ಬಾವುಟ ; ಹಸುರುನಿಶಾನಿ : ಪೊಂಗೋಂಟೆಯ ತೆನೆಯ ಪಸುರ್ವಳವಿಗೆಯ ಕಾಂತಿ . . . ಯಮುನೆಗಂಗೆಯರ ಸಂಗಮಂ ಜನಿಸಿತಾಗಸದೊಳೆನಾಶ್ಚರ್ಯಮೆಂಬಂತೆ ಕಾಣಿಸಿದುದು (ಚಿಬಪು. ೧೧-೩೩). [ಪಸುರ್₂+ಪಳವಿಗೆ(<ಪಟಯಿಗೆ)]

**ಪಸುರ್ವಾಸೆ** (ನಾ). ಹೊಕ್ಕುಳ ಮೇಲಿನ ಕಪ್ಪಾದ ಕೂದಲಿನ ಸಾಲು ; ಬಾಸೆ : ಪಸುರ್ವಾಸೆ ಬಟ್ಟೆಯಿಂದುದ್ದೆಸಮಱಿಯದೆ ನಡೆದು ಕುಚನಗಾಂತರದೊಳ್ ಪೊಕ್ಕು ಸಿಲಿಂಕೆ (ಪರ್ಶ್ವಪು. ೬-೮).

[ಪಸುರ್₂+ಬಾಸೆ₁]

**ಪಸುರ್ವಿಡಿ** (ಕ್ರಿ). ಹಸುರಿನಿಂದ ಕೂಡು; ಹಸುರಾಗು : ಪಸುರ್ವಿಡಿದ ಮಾವಿನಿಂ ಬೇವಿನಿಂ ಪರಿಮಳಂಬೆತ್ತ ಸುರಹೊನ್ನೆಯಿಂ ಹೊನ್ನೆಯಿಂ . . . ಕಾನನಂ ಕಣ್ಗೆಸೆದುದು (ರಾಘಚ. ೧೭-೫೪). [ಪಸುರ್₂+ಪಿಡಿ₁]

**ಪಸುರ್ಪುಲ್,** ಹಸುರುಹುಲ್ಲು (ನಾ). ಹಸುರಾದ ಹುಲ್ಲು; ಗರಿಕೆ: ಬೆಳೆದ ಪಸುರ್ಪುಲ್ಲಿಂದಾಸೆಯೊಳೆ ಸಾರ್ದು ಮರಕತದೊಡ್ಡುಂಗಲ್ಲನೆ ಕಾರ್ದು ಮೃಗಂಗಳ್ ಕಲ್ಲನೆ ಕನಲುತ್ತು ಮಿರ್ಪುವು (ಅಜಿಪು. ೯-೨೩) ; ಪಸುರ್ಪುಲ್ಲಂ ಮೇದು ಸಂದೊಂದೆಡೆಯೊಳಮೊಡಲಿಂಬಿಲ್ಲೆನಲ್ ಕೊರ್ವಿ ಕೆಚ್ಚಲ್ ಕುಸಿವನ್ನಂ ಬೀಗಿ ಪಾಲಂಬಿಱುವಿಡೆ ಮೊಲೆಯಿಂ . . . ಮೆಲ್ಪೊತ್ತುತುಂ ನಿಂದುದು ವನಮಹಿಷೀವೃಂದಮಾನಂದದಿಂದಂ (ಪಂರಾಸೂ. ೭-೧೫೭) ; ಪಸುರ್ಪುಲ್ಲಂ ಮೇಯುತುಂ ಮಂಜುಶಾಡ್ವಲದೊಳ್ ಕಣ್ಗೊಳಿಸಿರ್ದುದೊಂದು ಹರಿಣಂ (ಉದ್ಭಟ. ೨-೬೯). **ಹಸುರುಹುಲ್ಲು :** ಮೊಸರು ಹುಳಿ ಅಂತ ಹಸುರುಹುಲ್ಲು ಹಿಂದಿದನಂತೆ (ಗಾದೆ).

[ಪಸುರ್₂+ಪುಲ್]

**ಪಸುರ್ವೆಳಗು** (ನಾ). ಹಸುರುಬಣ್ಣದ ಕಾಂತಿ; ಹಸುರಿನ ಪ್ರಭೆ: ಬಿಸಿಲೆಲ್ಲ ಪಸಲೆಗವಿದುದು ಪಸುರ್ವೆಳಗಿಂದೆನಿಪ ಬಾಲಕದಳೀವನದೊಳ್ (ಕಾದಂಉ. ೨೦೯); ಗಿಳಿ . . . ಪಸುರ್ವೆಳಗಂ ಪಸರಿಸುತುಂ ಮಿಸುಪ ಪಸಲೆಯ ಪಸೆಯೊಳ್ ಮನಂಗೊಳಿಪ ಕುಮಾರಪಾಲಘೂರ್ಜರನಂ ಕಂಡು (ಉದ್ಭಟ. ೬-೧೨೬ ಪ); **ಪೊಸಮಾವಶೋಕೆಯೊಳ್ . . . ಗಿಳಿವಿಂಡು ಬನಸಿರಿಯೊಳು ಮಸೆದು ಪೊಂದೊಂದಱೊಳ್ಮಧುಮಾಸಕಂಗಜನದಸೆಯಂತೆ . . . ಪಸುರ್ವೆಳಗಿ**[ಪಾಠಾಂ.ಸಿ]**ನಂತೆ ಕೆಂಪಸಿತಂ ಪಳದಿ ಪಳುಕುಪಚ್ಚೆಗಳ ಬಣ್ಣದಿಂದೆ** (ಜೈಮಿಭಾ. ೮-೪).
[ಪಸುರ್$_2$ + ಬೆಳಗು$_2$]

**ಪಸುರ್ವೆಳ್ಪು** (ನಾ). = ಪಸುರ್ವೆಳಗು : **ಪೊಯ್ಮಾರಿಂ ಪೊಱಮಡುವಂತೆ ಲತಾವಿಟಪಂಗಳ್** ನಿಜಮಾದ **ಪಸುರ್ವೆಳ್ಪನೊಳಕೆಯ್ಕೆ** (ಕಾದಂಉ. ೪೨೯). [ಪಸುರ್$_2$ + ಬೆಳ್ಪು$_2$]

**ಪಸುರ್ವೊಡೆ** (ನಾ). ಹಸುರುಬಣ್ಣದ ಹೊಡೆ; ಹಸುರು ತೆನೆ : **ಮುಗುಳುಹೊಡೆಗಳರೆಹೊಡೆ ನೆಱೆ ಮೇಲಕ್ಕೆ ನಿಗುರುವ ಹೊಡೆ ಪಸುರ್ವೊಡೆಯು ಒಗುಮಿಗೆಯುಲಿ ಹಾಲುದುಂಬುದೆನೆಯ ಶಾಲಿ ಸೊಗಸನಿತ್ತವು ನೋಳ್ಪರಿಗೆ** (ಕಂಸವಿ. ೫-೬೨). [ಪಸುರ್$_2$ + ಪೊಡೆ$_3$]

**ಪಸುರ್ವೊನ್,** ಪಸುಪೊನ್, ಪಸುವೊನ್ (ನಾ). ಹಳದಿಬಣ್ಣದ ಚಿನ್ನ; ಶುದ್ಧವಾದ ಬಂಗಾರ; ಅಪರಂಜಿ: ವಾರುವದ ಬೋರುಗುದುರೆಗಳ್ **ಪೂಡಿದ ಪಸುರ್ವೊನ್ನ ರಥಮನೇಱ . . .** ಗಾಂಗೇಯನಲ್ಲಿಗೆ ಬಂದು (ಪಂಪಭಾ. ೧೨-೫೩ ಪ); **ಪಸುರ್ವೊನ್ನ ಜಗಲಿ ಪಚ್ಚೆಯ ಪಸುರ್ವಂದರ್ . . . ಎಸೆದಿರ್ದುವು ರಾತ್ರಿಮುತಿಯ ಬೀಡಿನೊಳೆತ್ತಂ** (ಕಾವ್ಯಾವ. ೨೩೬). **ಪಸುಪೊನ್ : ಪೊಸಮುಸೆಯ ಬಾಳ ಪೊಳೆಪುಂ ಪಸುಪೊನ್ನಾ**[ರ]**ತಿಯ ಕೊಳಗಿ ಬೆಳಗುವ ಮಿಂಚುಂ ದೆಸೆದೆಸೆಗ**[ಳೊ]**ಳೆಸೆದಿರೆ** (ಪರ್ಮಪು. ೪-೪೩). **ಪಸುವೊನ್ :** ಬಿಸುಗಲ್, ಪಸುರ್ವಂದರ್, ಪಸುವೊನ್ (ಭಾಷಾಭೂ. ೧೪೬ ಉದಾ). [ಪಸುರ್$_2$ + ಪೊನ್]

**ಪಸುವೊನ್** 'ಪಸುರ್ವೊನ್' ನೋ.

**ಪಸುವೊನ್ನವೊಟಿ** (ನಾ). ಒಂದು ಸ್ಥಳದ ಹೆಸರು (?) : **ಗೋವಿನ್ದರಂ ಸಟಿ್ನಮೂನೂಱುಂ ಕುಣುಂಗಿಲ್ ಆಯ್ನೂಱುಮಂ ಪ್ರತಿಪಾಲಿಸುತ್ತಿರೆ ನಸಿಗುನ್ದದ ಪಸುವೊನ್ನವೊಟಿಯಿಂ** (ಎಕ. IX, ದೇವನ. ೪೨-೬, ಸು. 900 ?). [ ? ]

**ಪಸುಳ,** ಹಸುಳ (ನಾ). ಎಳೆಯವನು; ಚಿಕ್ಕವನು; ಶಿಶು : **ಪಸುಳರಿರೆ** [ಪಾಠಾಂ. **ಶಿಶುಗಳಿರೆ**] **ನಮಗೇತಕೌ ಗಡಣಿಸಿದೆ ಭಿಕ್ಷಾನ್ನಂಗಳಂ ನೀನುಸಿಕನಿರ್ಪುದು ಧರ್ಮವೇ ಕರೆಯೌ ತನೂಭವನ** (ಬಸವು. ೨೪-೬೩). **ಹಸುಳ :** ಐದುವರ್ಷದ **ಹಸುಳ**[ಪಾಠಾಂ. **ಳೆ**] ವನವೆತ್ತ ತಪವೆತ್ತ (ಪುರಂದ.೨-೬೦-೧); ಮನುಮಥನು ತನ್ನನದಿ **ಸರ್ವಮಂ** ಗ್ರಹಿಸಿದಂ **ಹಸುಳನೆಂದವ ಬಗೆದಿರೇ** (ನಪಮೋ. ೧೨-೨೫); **ಹಾದಿಗಾಣದ ಹಸುಳನನು ಸಂತ್ಯಜಿಸಿ ಪೋಗುವರೆ** (ರಘುಪಂ. ೮-೧೨). [<ಪಸುಳೆ]

**ಪಸುಳೆ,** ಹಸುಳೆ (ನಾ). ೧. ಚಿಕ್ಕಮಗು; ಎಳೆಯ ಕೂಸು; ಶಿಶು : **ಪಾಲ್ವಲ್ಗಳ ಪ**[ಪಾಠಾಂ.ಹ]**ಸುಳೆಗಳಂ ಕೊಂದು ಬಾಯೆಂದು ಪೇೞ್ವೇ ಬೆಸನಂ ಚಾಣೂರಮಲ್ಲಂಗೆನಗೆ ಬೆಸಸಲೇಂ ತಕ್ಕುದೇ ಕಂಸರಾಜಾ** (ಅರ್ಧನೇ. ೮-೬೦; ಕಾವ್ಯಸಾ. ೫೧೦ ನೋ); **ಪ**[ಪಾಠಾಂ.ಹ]**ಸುಳೆಗೆ ತಕ್ಕ ಮಜ್ಜನಮಿದಲ್ತು** (ಅನಂಪು. ೫-೬೪); **ನೀಂ ಪಸುಳೆ ಪೋಗು** (ಚಿಬಪು. ೪೦-೪); **ಪಸುಳೆಯೆಂದು ಸೈರಿಸಿದೆ** (ಜೈಮಿಭಾ. ೪-೩೪); **ತೊದಲಿತು ಮುದ್ದು ಪಸುಳೆ!** (ಕಂಬ.ಹು. ೬೫). ೨. ಎಳೆಯದು; ಚಿಕ್ಕದು : 'ಪಸುಳೆಗಿಳಿ', 'ಪಸುಳೆಗೋಗಿಲೆ' ಪರಾ. **ಹಸುಳೆ:** ೧. **ಎಸಳ ಸೋಗಿಲ ಗಸುಳೆಯಂ ಝುಂಕಾರರವದಿಂ ಜೋಗುಳಂಬಾಡಿ ತರಂಗದಿಂ ತೂಗಿ** (ಗಿರಿಕ. ೨-೭೧ ಪ); **ಒಬ್ಬನೆ ಹಸುಳೆ ಹೊಕ್ಕನು ವೈರಿಮೋಹರವ** (ಕುಮ್ಯಾದ್ರೋ. ೫-೫); **ಹಸುಳೆ . . . ಪಶುಮೃಗಗಳು ಗಾನರಸಕೆ ಸೋಲುವವು** (ಭರತ. ೧-೮೭); **ಕಿವಿಗೆ ನುಸುಳೆ ಹಸುಳೆಯಿಂಪು** (ಗಿಳಿವಿಂ. ೯೫-೫೫).
[ದೇ.॥ ತಮಿ. ಪಚಲ್, ಪೈಚಲ್, ಪಯಲ್, ಪೈದಲ್, ಪೈಯಲ್; ಮಲ. ಪೈತಲ್; ತುಳು. ಪಸಿ = ಹುಡುಗ]

**ಪಸುಳೆಗಾಳಿ** (ನಾ) ಎಳೆಯ ಗಾಳಿ; ಮಂದಮಾರುತ: **ಬೀಸುವ ಚಾಮರತತಿ ಪೆತ್ತುದು ಪಸುಳೆಗಾ**[ಪಾಠಾಂ.ಘಾ]**ಳಿಯನು** (ಶ್ರೀಪಾಲ. ೧೩-೭೫). [ಪಸುಳೆ+ಗಾಳಿ$_1$]

**ಪಸುಳೆಗಿಳಿ** (ನಾ). ಎಳೆಯ ಗಿಳಿ; ಮರಿಗಿಳಿ : **ಪರಿವ ಪಸುಳೆಗಿಳಿಗಳ ನುಣ್ದೊರಲಿಂ ಪಱಿಗುಟ್ಟುವ ಪರಪುಟ್ಟದ . . . ಶಶಿಕಾಂತದ ಪರಲೆಯಿನೊಸರ್ವ ಕೊಳದ ಸುಭಗತೆಯಿಂ ಪಱಲೆಯನುಱೆ ಪಾಱಿಸುವುದು ನಂದನಕಾ ನಂದನದಿರವು** (ಜಯಕಾ. ೧-೪೬). [ಪಸುಳೆ + ಗಿಳಿ]

**ಪಸುಳೆಗೊರಲ್** (ನಾ). ಮಗುವಿನ ಗಂಟಲು; ಶಿಶುವಿನ ಕಂಠ: **ಪಸುಳೆಗೊರಲಿಂ ಪೊಣ್ಮಿದಂತಿಹುದು ಶ್ರೀಹರಿಯ ನಾಮಂ** (ಚಂದ್ರಸ. ೩೬-೧೨). [ಪಸುಳೆ + ಕೊರಲ್]

**ಪಸುಳೆಗೋಗಿಲೆ** (ನಾ). ಎಳೆಯ ಕೋಗಿಲೆ; ಮರಿಕೋಗಿಲೆ : **ಅಶೋಕೆಯ ಕೊನೆದಳಿರನುಣಿಸಿತ್ತು ಪಸುಳೆಗೋಗಿಲೆಗಳಂ ಪೊರೆವ ವೀಣಾನಿನಾದೆಯರಿಂ . . . ಅತಿಮನೋಹರಮಾದ ವೇಶ್ಯಾವಾಟಂ ಕಣ್ಗೆಸೆದಿರ್ಪುದು** (ಉದ್ಭಟ. ೧-೭೮ ಪ). [ಪಸುಳೆ+ಕೋಗಿಲೆ]

**ಪಸುಳೆತನ,** ಹಸುಳೆತನ (ನಾ). ಎಳಮೆ; ಬಾಲ್ಯ; ಚಿಕ್ಕಂದು: **ಪಸುಳೆತನದೊಳ್ ಪ್ರಣವಮಂ ಶರಣಗಣಕೆ ಬೋಧಿಸುವನೀ ಕುವರನೆಂಬೊಲ್ ತೊದಲ್ವಾತು ರಂಜಿಸಿದುವು** (ಚಿಬಪು. ೫-೪೧); **ಪಸುಳೆತನದಂದಿಂದೆ ವೃದ್ಧಾಪ್ಯದನ್ನೆಗಂ ಬಿಸಜನಾಭನ ಭಕ್ತಿ ದೊರೆಕೊಳದ ಮನುಜರಂ ನಸುನಗುವ ಧವಳದೊಳ್ಪಿಂ ಚಂದ್ರಹಾಸನಿವನಖಿಳಭೂಮಂಡಲದೊಳು** (ಜೈಮಿಭಾ. ೨೮-೬೧). **ಹಸುಳೆತನ : ಹಸುಳೆತನದಲಿ ಹರನ ಮಗನಾ ವಿಷಮದೈತ್ಯನ ಸೀಳಿ ಬಿಸುಡನೆ** (ಕುಮ್ಯಾದ್ರೋ. ೫-೨೫); **ಹಸುಳೆತನ ಏಳುವರ್ಷಗಳ ವಯಸ್ಸಿನವರೆಗೆ** (ಕ್ರಿಯಾತಿ. ೨೯). [ಪಸುಳೆ+-ತನ]

**ಪಸುಳೆದಳಿರ್** (ನಾ). ಎಳೆಯ ಚಿಗುರು : **ಪಸುಳೆದಳಿರ ಪಾಸಿನ ಮೇಲೊಱಗಿಸಿ ಪೊಸಗಪ್ಪುರವಳಿಕಂ ಪೊಸೆದುದಿರಿಸಿ . . . ಸಖೀಜನಮುಪಚರಿಸಿದುದಾಗ** (ಜಯಕಾ. ೪-೩೯). [ಪಸುಳೆ + ತಳಿರ್$_2$]

**ಪಸುಳೆದಿಂಗಳ್** (ನಾ). ಬಾಲಚಂದ್ರ : **ಗೆರೆನಗೆಯ ಕಿರಿಯೊಡಲ ಪಸುಳೆದಿಂಗಳ್ ದಿನಂ ದಿನದಿನಂ ಬಳೆವಂತೆ** (ಶ್ರೀರಾಪಾ. ೧೬-೪೩೫).
[ಪಸುಳೆ+ತಿಂಗಳ್]

**ಪಸುಳೆವಿಸಿಲ್,** ಹಸುಳೆಬಿಸಿಲು (ನಾ). ಎಳೆಬಿಸಿಲು; ಹೂಬಿಸಿಲು : **ಪ್ರಾಕಾರದ ಮಣಿಮಯುವ ಪ್ರಾಕಾರದ ಪಸುಳೆವಿಸಿಲ ಮುಸಕದಿನಿರುಳುಂ ಕೋಕನಿದಮುಡುಗವು** (ಅನಂಪು. ೧-೧೦೨); **ಇದು ಪಸುಳೆವಿಸಿಲ ಮುಸಕದಿನೆಸಟ್ಮುಸುಪ ಪೊಸದಾವರೆಯ ಪಸೆಯೊಳಸದಳಮೆಸೆವ ಸರಸತಿಯುಡಿದಳಿರ್ಗೆ . . . ಸಮೆದ ಕಾವನ ಗೆಲ್ಲಂ** (ಕಬ್ಬಿಗ. ೩೪೯ ಗದ್ಯ); **ಪಸುಳೆವಿಸಿಲ ಪ್ರವಾಹಂಗಳೆತ್ತಲುಂ ಪರಿವಿನಂ ದಿನಪನುದಯಂಗೈದು ಬರುತಿರ್ದನು** (ಜೈಮಿಭಾ. ೯-೧೪). **ಹಸುಳೆಬಿಸಿಲು : ಹಸುಳೆಬಿಸಿಲ ಹೊನ್ನ ಲೀಲೆ ಹಸುರ ಕಡಲ ತಬ್ಬಿರೆ** (ಅನಿಕೇ. ೪೨-೭).
[ಪಸುಳೆ + ಬಿಸಿಲ್]

**ಪಸುಳೆವೆಣ್ಣು** (ನಾ). ಎಳೆ ಹುಡುಗಿ; ಬಾಲಕಿ : **ತಸಿಮಾವಣ್ಣನ ಮಧುರತೆ ಕಾಯೊಳು ಜನಿಪುದೆ ರತಿಸವಿ ಎಳೆಯ ವನಿತೆಯೊಳಲ್ಲದೆ ಪಸುಳೆವೆಣ್ಣನೊಳುಂಟೆ** (ಜೀಪಂಸಾಂ. ೧೯-೯೭). [ಪಸುಳೆ+ಪೆಣ್ಣು (< ಪೆಣ್)]

**ಪಸೆ$_1$** 'ಪಸಿ$_3$' ನೋ.

**ಪಸೆ$_2$,** ಹಸೆ$_1$ (ನಾ). ೧. ಮದುವೆ ಮೊದಲಾದ ಶುಭಕಾರ್ಯಗಳಲ್ಲಿ ಹಾಕುವ ಹಾಸು,—ಆಸನ,—ಮಣೆ : ಮೂವತ್ತಿರ್ವರರಸುಮಕ್ಕಳ ಕೂಸುಗಳಂ . . . ಒಂದೆ ಪಸೆಯೊಳ್ ಮದುವೆನಿಱಿಸಿದಳ್ (ಪದ್ಮರಾ. ೪೫-೧೮); ಪಸುರ್ವಂದರ್ ಪಸೆ ವೇದಪಾಠಗರವಂ . . . ಮಂಗಳತೂರ್ಯನಾದಮೆಸೆಯುತ್ತಿರ್ಪನ್ನೆಗಂ ಚಕ್ರಿ ರಾಗಿಸಿ ಕೆಯ್ನೀರೆಱೆದಂ ಗುಣಾರ್ಣವಮಹೀಪಾಲಂಗಮಾ ಕನ್ನೆಯಂ (ಪಂಪಭಾ. ೫-೨೫); ಜೋಯಿಸನ ಮಗಳ್ [ಪಸೆಯ ಮೇಲೆ] ರಂಡೆಯಾದಳ್ (ಧರ್ಮಾಮೃ. ೧೨-೩೮); ಇರ್ವರ್ಕನ್ನೆಯರುಮನೆರಡುಂಕೆಲದೊಳಗೊಂದೆ ಪಸೆಯೊಳಿರಿಸಿ ಪಾಣಿಗ್ರಹಣಂಗೆಯ್ದು (ಬಂಹರಿ. ೨-೩೪ ವ). ೨. ಹಾಸಿದುದು; ಹಾಸುಗೆ; ಹಾಸು : ಉರುಳ್ಚಿ ಪೂವಿನ ಪಸೆಯೊಳ್ ಪೊರಳ್ಚಿದನಳುಕೆಯ ಬರ್ದೆಯರಂ ಗುಣಾರ್ಣವಂ (ಪಂಪಭಾ. ೨-೪೦); ಕುಳಿರ್ವಲರ್ದಲರೆಸಟ ಪಸೆಯ ಮೇಲೊಱಗಿರ್ದಂ (ಕಾದಂಪೂ. ೯೦೫); ಚೆಂಬೊನ್ನ ಶಿಲೆಯ ಮೇಲೆ ವಿರಚಿಸಿದ ಚೆನ್ನೆಯ್ದಿಲೆಸಟ ಪಸೆಗಳುಮಂ . . . ನೋಡುತ್ತೆ (ಪಂಪಾಸಾ. ೨-೧೩ ವ); ವಸಂತಂಗೆ ಪೊಸತಳಿರ್ಗಳ ಪಸೆಯಂ ತಂದಿಕ್ಕಿ (ಗಿರಿಕ. ೪-೧೫೭ ವ). **ಹಸೆ$_1$** : ೧. ಹಸೆಯ ಮೇಲಣ ಮಾತಬೆಸಗೊಳಲಟ್ಟಿದರೆ ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು (ಮಹಾದೇ. ಚ. ೨೫-೪೮); ಮುತ್ತಿನ ಸೇಸೆಯೊಳೆಸೆವ ರತ್ನಂಗಳು ತೆತ್ತಿರ್ದ ಹಸೆಯ ವಿಪ್ಪರದಿ ಹತ್ತಿದ ದಂಪತಿಗಳ ವಿಗ್ರಹಂಗಳು ತೆತ್ತಿಸಿದಂತೆ ಶೋಭಿಸಿತು (ಪೋಹತ. ೧೩-೭೨); ಈಶ್ವರಂ ಶಿವೆಗೂಡಿ ಹಸೆಯೊಳಗೆ ಮಂಡಿಸಿದನು (ಚೆಬಪು. ೩೭-೫೮). ೨. ಸೆಟ್ಟಿಗುತ್ತಂ ತನ್ನ ಬಿಟ್ಟಾಯಮೆಂತೆಂದೊಡೆ ಹಸುಂಬೆಯಸಿಕ್ಕುವಲ್ಲಿ ಹಸೆಯ ಜವಳಿ ಗಂಧರ ಬಟ್ಟಲು ಒಂದು ಗೋಂಟು ವಿಚಾರಂಗೆಯ್ದವರಲ್ಲಿ ಮುದ್ರಾಪಣಂ ಹೊಂಗೆ ಹಾಗಂ (ಎಇ. XIX, ೩೮-೩೦; 1144); ಕ್ರೀಡಾವನದ ಹೂವಿನ ಹಸೆಯೊಳ್ ಮಯ್ಯನೀಡಾಡಿ (ನಂಬಿರ. ೧೨-೧೧೭); ನೀರೇಜದ ನಿಟ್ಟೆಸಟ ಹಸೆಗಳಿಂದೆಸೆಯೆ ವಿರಚಿಸಿದ ಲತಾಮಂಟಪಮಂ ಕಂಡು (ಕುಸುಮಾ. ೫-೯೭ ವ); ಹಸಿಬಾಳೆಯೆಲೆಯ ಹಸೆಯಲಿ ಮಲಗಿಸಿದರು (ಕಾಲೂರ. ೧೮೩-೧೧೫). ೩. ರಂಗವಲ್ಲಿಯಿಂದ ಮಾಡುವ ಚಿತ್ರರಚನೆ: ಇಂದು ರಥೋತ್ಸವ, ಮನೆಯ ಮುಂದೆ ಹಸೆ ಹಾಕಬೇಕು (ರೂಢಿ).

[<ಪಾಸು$_2$./ತುಳು.ಪಜಿ]

**ಪಸೆ$_3$** (ನಾ). ಹುರುಳಿಲ್ಲದ ಮಾತು; ಕಾಡುಹರಟೆ; ಕೆಲಸಕ್ಕೆ ಬಾರದ ಮಾತು : ಹುಸಿಯನೇ ಹೊಸೆದು ಪಸೆಯನೇ ಕೊಚ್ಚಿ ಪಶುಪತಿಯ ಅನುಭಾವಿಗಳೆಂದು ಪ್ರಳಯಕ್ಕೊಳಗಾಗಿ ಹೋದರು ನೋಡಾ (ಸಿದ್ಧೇಪ. ೧೧೫-೩೫೭); ಅಱುವಿಂಗೊಡೆಯರ್ . . . ಪಸೆಯ ನಾರೊಳಂ ನುಡಿಯರ್ (ನೀತಿಮಂ. II, ೧೫೮).

**ಪಸೆಗೆಯ್** (ಕ್ರಿ). ಹಾಸುಗೆಯಾಗಿ ಮಾಡಿಕೊಳ್ಳು : ಕೂರ್ಗಣೆಗಳಡಗಿದುವಿಳಿಯೊಳಸುರೇಂದ್ರನಸವಳಿದು ವಸುಧೆಯಂ ಪಸೆಗೆಯ್ದನು (ಜೈಮಿಭಾ. ೨೨-೧೪). [ಪಸೆ$_2$ + ಕೆಯ್$_1$]

**ಪಸೆಗೊಳಿಸು** (ಕ್ರಿ). ಹಸೆಯ ಮೇಲೆ ಕುಳ್ಳಿರಿಸು : ಅಂಗಜಾತಂಗೆ . . . ಶೃಂಗರಿಸಿ ಶಶಿಕಾಂತನಿಳಯದೊಳು ಪಸೆಗೊಳಿಸೆ (ನವಮೋ. ೧೩-೫೨). [ಪಸೆ$_2$+ಕೊಳು(<ಕೊಳ್$_1$) + -ಇಸು$_3$]

**ಪಸೆಜಗತಿ** (ನಾ). ಹಸೆಯನ್ನು ಇಟ್ಟಿರುವ ವೇದಿಕೆ; ಹಸೆಯ ಜಗಲಿ : ಮದುವೆಯ ಪಸೆಜಗತಿಯನೇಱುವಂತೆ (ಚಿಕವಂ. ೫೪-೨೧). [ಪಸೆ$_2$+ಜಗತಿ$_1$]

**ಪಸೆನಿಲ್,** ಹಸೆನಿಲ್ (ಕ್ರಿ). (ವಿವಾಹದ) ಹಸೆಮಣೆಯ ಮೇಲೆ ನಿಲ್ಲು; ಮದುವೆಯಾಗು; ವಿವಾಹವನ್ನು ಮಾಡಿಕೊಳ್ಳು : ಶಂಭು ಕೂರ್ತು ಪಸೆನಿಂದಂ ತನ್ಮಹಾದೇವಿಯೊಳ್ (ರಾಜಶೇ. ೩-೯೦); ಪಸೆನಿಂದಾತ್ಮಜೆಯಂದಮಾಳ್ದ ಮುಡಿಯಂ ಕೊಯ್ದಾಯನೇ ಬೇಡೆ ತಾಪಸನಾತಂಗುಱಿ ಮಾನಕಂಜಂ (ವೃಷವಿ. ೮-೩೫); ದೇವಿಯರು ಮತ್ತೆ ತಪವಾಚರಿಸಿ ಪರಮೇಶನನ್ನೊಲಿಸಿ ಪಸೆನಿಂದುದಾಯ್ತು (ನಾಗಿ. ೪). **ಹಸೆನಿಲ್** : ಹಸೆನಿಂದು ಕಂಪಿಲರಾಯಗಾನು ಬಂದವಳಲ್ಲ (ಕುಂರಾಸಾಂ. ೩೨-೧೧೮); ಮೋಕ್ಷಸತಿಯ . . . ಹಸೆನಿಂದನ ಕಥೆಯ ಮೃಗಾಕ್ಷಿ ಪೇಳುವೆನು (ರಾಮವಿ. ೨೦-೯). [ಪಸೆ$_2$+ನಿಲ್]

**ಪಸೆನೀರು** (ನಾ). ತಂಪಾದ ನೀರು; ತಣ್ಣೀರು : ಅಲ್ಲೊಂದು ಇಲ್ಲೊಂದು ಪಸೆನೀರಿನ ತೋಡುಗಳು (ಹೊಸಕ್ತಿ. ೬೩).

[ಪಸೆ$_1$(<ಪಸಿ$_3$)+ನೀರು$_1$(<ನೀರ್)]

**ಪಸೆಯಿಡು** (ಕ್ರಿ). ಪೀಠವನ್ನು ಇಡು : ಶರಣೆಂದು ಬಿಜಯಮಾಡಿಸಿ ಪಸೆಯಿಟ್ಟು ಕುಳ್ಳಿರಿಸಿ ವಿಭೂತಿ ವೀಳಯವಿತ್ತು (ತ್ರಿಭುತಿ. ೧೯-೩೩).

[ಪಸೆ$_2$ + ಇಡು$_1$]

**ಪಸೆಯಿರ್** (ಕ್ರಿ). ೧. ಹಸೆಮಣೆಯ ಮೇಲಿರು; ಪೀಠದಲ್ಲಿ ಕುಳಿತಿರು: ನವರತ್ನಖಚಿತಪಲ್ಲಕ್ಕಿಯೊಳು ಪಸೆಯಿರ್ದು (ಗುರುಚಾ. ೫-೧೭). ೨. = ಪಸೆನಿಲ್ : ಪಸೆಯಿರ್ದಂ ಗರುಡವೇಗ ನೃಪನಂದನೆಯೊಳ್ (ಶಸುಪ. ೫೩ ಪ್ರಯೋ); ಕನಕಲತೆ ಕಾಂತಿಮತಿಯೊಡಗೂಡಿ ಸೌಂದರಂ ಮಿನುಪವನಿಯೊಳ್ ಪುಟ್ಟೆ ಪರಮನಾಚಿಯೊಳೆಸೆವ ವಿನಯನಿಧಿಯಂಗಸಂಗದೊಳೊಲ್ದು ಪಸೆಯಿರ್ದ ಕಥೆಯ ಕೇಳ್ (ಆರಾಚ. ೪-೬ ಸೂಚನೆ).

[ಪಸೆ$_2$ + ಇರ್$_1$]

**ಪಸೆವಣೆ,** ಹಸೆಮಣೆ, ಹಸೆವಣೆ (ನಾ). ಮದುವೆ, ಮುಂಜಿ, ಆರತಿ ಮುಂತಾದ ಶುಭಸಂದರ್ಭಗಳಲ್ಲಿ ವಧೂವರರು, ವಟು ಮುಂತಾದವರನ್ನು ಕೂರಿಸುವ (ಚಿತ್ತಾರದ) ಮಣೆ,-ಪೀಠ : ಮಿಸುಪ ರತ್ನದ ಪಸೆವಣೆಯ ಮೇಲೊಸಗೆಯ ಸುಮುಹೂರ್ತದೊಳ್ಮಂಡಿಸಿ (ಉದ್ಭಟ. ೮-೫೬ ವ). **ಹಸೆಮಣೆ** : ತರಿಸಿ ಹೊಸ ಹಸೆಮಣೆಯೊಳಗೆ ಕುಳ್ಳಿರಿಸಿ ಕಮಲಾಕ್ಷಿಯರು . . . ನೇವರಿಸಿದರು ಸೆಳ್ಳುಗುರ್ಗಳಲಿ ಶಶಿಮುಖಿಯ ಸಿರಿಮುಡಿಯ (ತೊರಂರಾ. ೧-೧೪-೧೩); ನೀನೂ ಬಂದು, ಹಸೆಮಣೆಯ ಮೇಲೆ ಜೊತೇಲಿ ಕೂತರೆ ತಾನೆ ಆಗೋದು ? (ಮರಳಿ. ೧೦೨); ಅವನನ್ನು ಹಸೆಮಣೆಯ ಬಳಿಗೆ ಕರೆತಂದರು (ಕವಿಕ. ೫೦). **ಹಸೆವಣೆ** : ಸುರರ ಮುಂಡಗಳ ಹಸೆವಣೆಗಳೊಳ್ ಕುಳಿತು ಕೆಂಗರುಳ ಬಣ್ಣದ ಬಾಸಿಂಗಗಳಂ ಧರಿಸಿ . . . ಮರುಳ ಮದವರ್ಕಳೆಸೆಯಲ್ ವೀರ ನಿಜಾಜಿ ಸಮರಾಂಗಣದೊಳು (ಚಿಬಪು. ೩೨-೨೦). [ಪಸೆ$_2$+ಮಣೆ]

**ಪಸೆವರಿಸು** (ಕ್ರಿ). ಹಾಸನ್ನು ಹರಡು; ಹಸೆಯನ್ನು ಹಾಕು: ಪೊಕ್ಕು ಮಕುಟಬದ್ಧ ಪರಿವೃತಂ ಕರುಮಾಡದೊಳ್ ಮುನ್ನಂ ಪಸೆವರಿಸಿದ ಮೃಗಾಧಿರಾಜವಿಷ್ಟರದೊಳ್ ಕುಳ್ಳಿರ್ದು (ಶಾಂತಿಪು. ೧೧-೮೩ ವ).

[ಪಸೆ$_2$+ಪರಿಸು(<ಪರಿಯಿಸು)]

**ಪಸೆವಾಸು$_1$** (ಕ್ರಿ). ಹಸೆಯ ಮಣೆಯನ್ನು ಹಾಸು; ಪೀಠವಿಡು : ರಂಗವಲಿಯಿಕ್ಕಿ ತೋರಣ ಮುಂಗುಡಿಯುಮನೊಪ್ಪೆ ಕಟ್ಟಿ ಪಸೆವಾಸಿ ಮಹಾಮಂಗಳಕಳಶದಿನಿದಿರ್ಗೊಂಡು (ಜೀವಸಂ. ೧೯೬-೨೯).

[ಪಸೆ$_2$ + ಪಾಸು$_1$]

**ಪಸೆವಾಸು$_2$** (ನಾ). ಹಸೆಯ ಮೇಲೆ ಹಾಸುವ ಬಟ್ಟೆ,—ವಸ್ತ್ರ : ಮಿಸುಗುವ ಚೌಕದ ಮುತ್ತಿನ ಪಸೆವಾಸಿನ ಪಟ್ಟವಟಿಯ ದುಗುಲದ ರುಚಿಗಳ್ ಪಸರಿಸೆ ಪೊಂಜಗಲಿ ವಿರಾಜಿಸುತಿರ್ದುದು (ಜಗವಿ. ೧೦-೯೫).

[ಪಸೆ$_2$ + ಪಾಸು$_2$]

**ಪಸೆವಿಡಿ,** ಹಸೆಹಿಡಿ (ಕ್ರಿ). ಹಾಸುಗೆ ಹಿಡಿ; ಕಾಯಿಲೆ ಮಲಗು : ಮದುವೆಗೊರ್ಪಗಲುಂದು ಪಸೆವಿಡಿದು ಮದುಮಗಳ್ ಕುದಿವೊಡಲಿನಿಂ

**ಪೊರೆ** ಬಾಯ್ಬಿಡುತಲಿಹಳು (ಕಾಲೂರ. ೧೪೨-೩೦೮). **ಹಸೆಹಿಡಿ :** ಆರು ತಿಂಗಳು ಹಸೆಹಿಡಿದಿದ್ದವರಂತೆ ಕಾಣುತ್ತಿ (ಒಡ್ಡಉ. ೧೪೫); ಅಷ್ಟರಲ್ಲಿ ಆತನ ಹೆಂಡತಿ ಗಂಗು ಜ್ವರದಿಂದ ಹಸೆಹಿಡಿದಳು (ಮುಂಗಾಮು. ೬೧); ಮನೋವ್ಯಾಕುಲದಿಂದ ಆರೋಗ್ಯ ಕೆಟ್ಟಿತು. ಹಸೆಹಿಡಿದಳು (ದೇವನು. ೪೬).

[ಪಸೆ$_2$ + ಪಿಡಿ$_1$]

**ಪಸೆವೆಣ್** (ನಾ). (ಮದುವೆಯ) ಹಸೆಯ ಮೇಲೆ ಕೂರುವ ಹೆಣ್ಣು ; ಮದುವಣಗಿತ್ತಿ : ಪಸೆವೆಣ್ಣೆಸಿಪ್ಪ ಕನ್ನೆಯನತಿಶಯಾನಂದದೊಸಗೆಯಿಂ ಕರೆದು (ಕಃಮಾಪು. ೭-೧೯೪). [ಪಸೆ$_2$ + ಪೆಣ್]

**ಪಹಡಿ,** ಪಾಡಿ$_3$ (ನಾ). ೧. ಸಣ್ಣ ಗುಡ್ಡಗಳಿರುವ ಪ್ರದೇಶ : ಬಯಲ ಗದ್ದೆಗಳು ಬರುವ ದಾಲುಯಿತ ಆಯದ ಪಹಡಿ ಕುಂಪುರಿಯೆಂಬ ಬಯಲೊಳಗೆ (ಸೌಇಎ. ೧೯೨೯, ಕಾರ್ಕಳ್, ೫೧೯-೧೦ ; ?). ೨. [ಸಂಗೀತ] ಒಂದು ರಾಗದ ಹೆಸರು : ರಾಮಕ್ರಿಯೆ . . . ಪಹಡಿ . . . ಮಧ್ಯಮಾವತಿಯೆಂಬ ಮೂವತ್ತಾಱು ರಾಗಂಗಳೇ ಮುಖ್ಯವಾಗಿ . . . ಪ್ರಸಿದ್ಧಗೊಂಡಿರ್ಪುವು (ವಿವೇಕ. ೨೩೪). **ಪಾಡಿ$_3$ :** ೨. ರಾಗ ಪಾಡಿ, ಆದಿತಾಳ (ತ್ರೀಕೃಪಾ. ೨).

[←ಹಿಂ. ಮರಾ. ಪಹಾಡೀ./ಸಂ. ಪಹಾಡಿಃ, ಪಾಡೀ]

**ಪಹಡು** (ನಾ). ಗುಡ್ಡ ; ಸಣ್ಣ ಬೆಟ್ಟ : (ಕ).

[←ಹಿಂ. ಮರಾ. ಪಹಾಡ್]

**ಪಹಣಿ,** ಪಾಣಿ$_3$ (ನಾ). ೧. ಬೆಳೆಯ ಅಂದಾಜನ್ನು ಗುರುತಿಸುವುದು ; ಬೆಳೆಯ ಲೆಕ್ಕ : ಪಹಣಿಯನ್ನು ಚಕ್ಕು ಮಾಡಬೇಕಾದರೆ ಬಾಂದುಗಳಲ್ಲಿ ಒಂದು ನಿರ್ದಿಷ್ಟ ಭಾಗವನ್ನಾದರೂ ಅಮಲ್ದಾರರು ಅಜಮಾಯಿಷಿ ಮಾಡಬೇಕು (ಕಲಪ. ೧೫೪); ನಾಡಿಗರು ಪಹಣಿ ಬರೆಯುವುದಕ್ಕೆ ಆಗಮಿಸಿದ್ದಾಗ ಅವರೊಂದಿಗೆ ಅಹೋಬಲರಾಯರೂ ಬಂದಿದ್ದರು (ಜೆಳುಮ. ೧೨೧). ೨ (ಶಾನುಭೋಗರಲ್ಲಿರುವ) ಬೆಳೆಯ ದಾಖಲೆ ಪುಸ್ತಕ ; ಕಡತ : ಖಾತೆಯನ್ನು ಬೇರೆ ಹೆಸರಿನಲ್ಲಿಡುವುದು, ಪಹಣಿಯಲ್ಲಿ ಬಾಳೆಗೆ ಬದಲು ತೆಂಗಿನ ಫಸಲು ಎಂದು ಬರೆಯುವುದು . . . ಇವು ನನ್ನೂರ ಶಾನುಭೋಗರ ಕಿತಾಪತಿಗಳು (ನನ್ನೂರು. ೧೪೮); ಕುಳಿತಲ್ಲಿಂದಲೇ ಪಹಣಿ ಎಂಬ . . . ಸುಳ್ಳಿನ ಕಂತೆ ಒಂದನ್ನು ಗೀಚುತ್ತಿದ್ದರು (ಪುಸ್ತಕ. ೭೨). **ಪಾಣಿ$_3$ :** ೧. ಹಕ್ಕ-ರಜಿಸ್ಟರದಲ್ಲಿ ಪಾಣೀ ನಿನ್ನ ಹೆಸರಿಗೆ ಮಾಡಿಸಬೇಕು (ಏೀಪಹ. II, ೧೦೩).

[←-ಮರಾ. ಪಾಹಣೀ]

**ಪಹಣಿಕಲ್ಲು** (ನಾ). ಖಾತೆದಾರನ ಜಮೀನಿನ ಎಲ್ಲೆಯನ್ನು ಸೂಚಿಸಲು ಇರುವ ಕಲ್ಲು ; ಬಾಂದು : ಗ್ರಾಮನೌಕರರುಗಳು . . . ಜಮೀನುಗಳ ಹದ್ದು ಬಾಂದು ಪಹಣಿಕಲ್ಲು ಇತರ ಗುರ್ತುಗಳನ್ನು ಕಾಪಾಡುವಿಕೆ ಮತ್ತು . . . ಅನೇಕ ವಿಷಯಗಳಿಗೂ ಗಮನಕೊಡಬೇಕು (ಗ್ರಾಮಾಆ. ೨೦೪). [ಪಹಣಿ+ಕಲ್ಲು(<ಕಲ್$_3$)]

**ಪಹಣಿಲೆಕ್ಕ** (ನಾ). ಪ್ರತಿಯೊಬ್ಬ ಜಮೀನುದಾರನ ಜಮೀನಿನ ಅಳತೆ, ಬೆಳೆ ಮುಂತಾದುವನ್ನು ನಮೂದಿಸಿರುವ ದಾಖಲೆ ಪುಸ್ತಕದಲ್ಲಿರುವ ಲೆಕ್ಕ : ಮೊನ್ನೆ ಪಹಣಿಲೆಕ್ಕಕ್ಕೆ ಬೇಕಾದ ದಾಖಲೆ ತರಲು ಅಲ್ಲಿಗೆ ಹೋಗಿದ್ದೆ (ಬಾಳಿವ್ಯ. ೧೬). [ಪಹಣಿ+ಲೆಕ್ಕ]

**ಪಹರಣೆ** (ನಾ). [ಸಂಗೀತ] ಮದ್ದಳೆ ಬಾರಿಸುವುದರಲ್ಲಿ ಒಂದು ರೀತಿ,—ಬಗೆ : ತೊಡರದ ಪಹರಣೆಯಿಂ ಪಯದೊಡನುಗ್ಗಡಿಸುವುದು . . . ನಚ್ಚಣಿಯರಾಟಮೇನಚ್ಚರಿಯೋ (ಚಂದ್ರಪು. ೧೫-೭೫); ಜತಿಜೋಕೆ ತುಡುಕು ಪಹರಣೆ ಗತಿ ಗಮಕಂ . . . ಬೆಡಂಗಿಸಿತುಂ ಸಂಗತಿವಡೆಯೆ ವಾದನಕಳಾವತಿ ಬಾಜಿಸುತಿರ್ದಳಿಂತು ಮುರಜಮನೊರ್ವಳ್ (ಶಾಂತೀಶ್ವ. ೧೩-೨೨೬); ಆ ಸಮಯದೊಳ್ ಮದ್ದಳೆಗಂ ಮದ್ದಳೆಯಿಂ . . . ಚಮತ್ಕಾರ ತುಡಿಕು ರಿಗ್ಗವಣೆ ಪಹರಣೆಗಳೆಂಬ ನಾನಾಶಬ್ದಂಗಳಂ ಬಾಜಿಸಿ (ಧರ್ಮನಾ. ೨-೨೩೯); ಬಾಜಿಸಿದನೊರ್ವನಮರಮದ್ದಳೆಯ ಲೀಲೆಯೊಳು ತುಡುಕು ಪಹರಣೆ ರಿಗ್ಗವಣೆ ಮೋಡಿಗಳನು (ಗೋಮಟೇ. ೭-೧೬). [<ಪ್ರಾ. ಪಹರಣ./ಸಂ. ಪ್ರಹರಣ]

**ಪಹರಿ,** ಪಾರಿ$_6$ (ನಾ). ೧. ಕಾವಲು ಕಾಯುವವನು ; ಕಾವಲುಗಾರ ; ಪಹರೆದಾರ : ಇದೇ ಈಗ ಸೆರೆಮನೆಯ ಪಹರಿ ಏಳು ಹೊಡೆದಿದ್ದಾನೆ (ವಿಮೋಚ. ೨೪೪). ೨. ಕಾವಲು ಕಾಯುವುದು ; ಗಸ್ತು ; ಪಹರೆ : ಭಕ್ತರ ಮಂದಿರಕ್ಕೆ ಹೂ ಕಾಯಿ ಹಣ್ಣು ಹುಲ್ಲುಹೊರೆ ಕಟ್ಟಿಗೆ ಬೊಕ್ಕಸ ಪಹರಿ ಪಾಡಿತನ ಬಾಗಿಲು ಮುಂತಾಗಿ ಶುಶ್ರೂಷೆಯ ಮಾಡಿ ಉಂಬಾಗ ಒಡೆಯರೆನಿಸಿಕೊಂಬ ತುಡುಗುಣಿಗೆಲ್ಲಿಯದೋ ನಿಜಜಂಗಮಸ್ಥಲ (ಮೋಳಿಗೆನಾ. ೪೩-೧೮೦) : ಕನ್ನಮಂ ತದ್ಧರಾಕಾಂತಗೃಹಕಿಕ್ಕೆ ಪಡಕಣದ ಪಹರಿಯ ಸುಭಟರಂತದಂ ಕಂಡು ಹೆಡಗೈಗಟ್ಟೆ (ಸಸ್ಯಕಾ. ೧೦-೧೧) ; ಉಳಿವ ಪಕ್ಕಿಯೆ ಪಹರಿಯಾಳು ಗಿಳಿ ಪಡಿಯಜರು (ಚೇರಮ. ೨-೨೧). 'ಪಹರೆ' ಪರಾ. **ಪಾರಿ$_6$ :** ೧. ಹರನ ಮೋಹನದ ನಿಧಿಯಂ ಪುತ್ತುವೆರಸಿ ಫಣಿ ಪರಿಕಿಸೆ ಸದಾ ಕಾದುಕೊಂಡಿರುತ್ತಿರ್ದೊಡಂ ನಿರುತಮುಬಲಾಶ್ರಯದೊಳಿರ್ದ ಕಾರಣದಿ ನೆಚ್ಚಬಾರದು ಕೆಯೇ ಕಾರ್ಯಮೆಂದು ತರತರದ ಘಂಟೆ ಪಾರಿಗಳನಿಂಬಿಟ್ಟರೆನೆ . . . ಕಟಿಸೂತ್ರಮೊಪ್ಪಿತಗಜಾತೆಯ ತನೂದರದೊಳು (ಚಬಪು. ೩೭-೧೪). ೨. ಪಾರಿ ಪಡಕಣದಾಳಿಂದ ವಾದ್ಯಗಳಿಂದ ಕೇರಿಕೇರಿಯೊಳು ತಿರುಗುವ ವೀರಭಟಾಳಿಯಿಂದೆಸೆದುದಾ ಕುಮ್ಮಟಿದಾರಭಟಿ (ಕುರಾಸಾಂ. ೩೮-೮೭) ; ಪಾರಿಯ ಪಟುಭಟರುಗಳು ಸುತ್ತಿದರಾಳುವೇರಿಯ (ಮೋಹತ. ೧೧-೨೦); ಪಾರಿಯ ತಿರುಗುವರನಿರಿಸಿದನು ದಿನ ರಾತ್ರೆಯಲಿ (ಜಿನಭಾ. ೫೧-೩).

[←ಹಿಂ. ಪಹರೀ./ಸಂ. ಪ್ರಹರಿನ್]

**ಪಹರೆ,** ಪಹಾರೆ, ಪಾರಾ, ಪಾರೆ$_3$, ಪಾಹರೆ (ನಾ). ೧. ಕಾವಲು; ಗಸ್ತು : "ಪಹರೆ(ಪಾರೆ)-ಪ್ರಹರ=ಕಾವಲು" (ತದ್ಭಕೋ. ೨೫) ; ದೈತ್ಯಾಂಗನೆಯರು ಕೈಪಿಡಿದಾಯುಧದಿಂ ಪಹರೆಯೊಳಿರೆ ಭಯದಿ (ಹನುಮ. ೯೫) ; ಅರಮನೆಗೆ ಸುತ್ತ ಪಹರೆ ಇಟ್ಟು (ರಾಜೇಂದ್ರ. ೧೬) ; ಉಭಯಪಾರ್ಶ್ವದಲ್ಲಿಯೂ ರಾವುತರ ಪಹರೆ (ತ್ರೀರಾಯ. ೪೩). ೨. ಕಾವಲುಗಾರ : (ಕ). ೩. ಮೂರುಘಂಟೆಗಳ ಅವಧಿ ; ಜಾವ : (ಕ). **ಪಹಾರೆ :** ೧. ಹೊರಮುಗ್ಗಲಿಗೆ ಅರಬಜನರ ಪಹಾರೆಯದೆ (ಮಂಜುಕ. ೪). **ಪಾರಾ :** ೧. ಗ್ರಾಮದ ಸುತ್ತ ಪಾರಾ ನಿಲ್ಲಿಸಿಬಿಟ್ಟನು (ರಾಜೇಂದ್ರ. ೩೧) ; ಸೇವಕನು ನಾಲ್ಕು ಕಣ್ಣುಗಳಿಂದ ಪಾರಾ ಕಾಯುವವನಂತೆ ನಿಂತಿದ್ದನು (ಕಾಬಝ. ೩೦) ; ಯಾವಾಗಲೂ ಅವಳ ಸುತ್ತಲೂ ಪಾರಾ (ವಿವಧು. ೧೧೪). **ಪಾರೆ$_3$ :** ಅರಮನೆಯ ಸುತ್ತ ಪಾರೆ ಇರುತ್ತಿತ್ತು (ರೂಢಿ). **ಪಾಹರೆ :** ೪. ಹೊತ್ತು : ವೇಳೆ ; ಕಾಲ : ಬ್ಯಾಸಿಗಿ ಹೊಡದದ ಬಿಸಿಲಿನ ಜೇರೆ ಮಧ್ಯಾಹ್ನದ ಪಾಹರೆ ಯಾರಿಗಿಲ್ಲ ಹ್ವಾರೆ (ಸಜೀಗೀ. ೮೨-೧೦).

**ಪಹರೆ ಮಾಡು**=ಪಹರೆಕೊಡು : ಗುಡಿಯ ಸುತ್ತಲೂ ಪಹರೆ ಮಾಡುವನು (ಗಂಗಾಸಾ. ೩೧) ; ಪಹರೆ ಮಾಡುವ ಪೋಲೀಸರು (ಮಣ್ಣುಹ. ೧೫). **ಪಹರೆಯವನು**=ಕಾವಲುಗಾರ ; ಗಸ್ತಿನವನು : ಮಂಕುಹಿಡಿದವನನ್ನು ನಗಿಸಿ ಕಳಿಸಿಕೊಟ್ಟಾಗ ಈ ಪೋಲೀಸಿನ ಪಹರೆಯವನಿಗೆ 'ಅಯ್ಯೋ' ಅನಿಸಿತ್ತು (ನಡೆವಾ. II, ೧೦೬೦); ರಾತ್ರಿ ಪಹರೆಯವನು ಬಾರಿಸಿದ ಗಂಟೆಯ ಸದ್ದು . . . ಎಚ್ಚರಿಕೆ ಕೊಟ್ಟಿತು (ಮನೆಪ. ೧೦೦).

[←ಹಿಂ. ಪಹರಾ; ಮರಾ.ಪಹಾರ, ಪಹಾರಾ./ಪ್ರಾ. ಪಹರ./ಸಂ. ಪ್ರಹರ]

**ಪಹರೆಕೊಡು** (ಕ್ರಿ). ಕಾವಲಿರು ; ಗಸ್ತು ತಿರುಗು : ಅಲ್ಲಲ್ಲಿ ಕಾವಲುಗಾರರು ಪಹರೆಕೊಡುತ್ತಿದ್ದರು (ಶ್ರೀರಾಮ. ೧೨೯); ಕಾರ್ಖಾನೆಯ ಬಾಗಿಲು ಬಾಗಿಲುಗಳಲ್ಲಿ ಪಹರೆಕೊಡುತ್ತಿದ್ದರು (ದುಂಬಿಕ. ೧೫೫).
[ಪಹರೆ + ಕೊಡು$_1$]

**ಪಹರೆಗಾರ** (ನಾ). = ಪಹರಿ ೧: ಬಿಚ್ಚುಗತ್ತಿ ಹಿಡಿದ ಪಹರೆಗಾರರನು ಬಂದು ಅರಿಕೆ ಮಾಡಿದ (ಹಾಹುತ್ತ. ೪೯).
[ಪಹರೆ+-ಕಾರ$_1$(<-ಕಾಱ)]

**ಪಹರೆಯಿರು** (ಕ್ರಿ). ಕಾವಲಿರು ; ಕಾಯು : ಭಟರು ಅವನ ಹಿಂದೆಯೇ ಬಂದು . . . ಆತನ ಬಳಿಯಲ್ಲಿಯೇ ಇರುತ್ತ ಅವನ ಮೇಲೆ ಪಹರೆಯಿದ್ದರು (ಒತೆಕ. ೧೬). [ಪಹರೆ+ಇರು$_1$(<ಇರ್$_1$)]

**ಪಹರೇಕರಿ** (ನಾ). ಕಾವಲುಗಾರ; ಚೌಕೀದಾರ; ಗಸ್ತಿನ ಸಿಪಾಯಿ : ಈ ರೀತಿ ಹೇಳಿದ ಪಹರೇಕರಿಯ ಮಾತನ್ನು ಕೇಳಿ ಬಸಂತಿಯು ವಿಷಯದಲ್ಲಿ ಸಂಶಯವು ಬಂತು (ಮಂಜುಕ. ೧೪೦).
[<-ಮರಾ. ಪಹಾರೇಕರೀ]

**ಪಹಾರೆ** 'ಪಹರೆ' ನೋ.

**ಪಹಿಲವಾನ** 'ಪೈಲವಾನ' ನೋ.

**ಪಹಿಲ್ವಾನ್** 'ಪೈಲವಾನ' ನೋ.

**ಪಳ$_1$** 'ಪಟ$_1$' ನೋ.

**ಪಳ$_2$** 'ಪಲ$_2$' ನೋ.

**ಪಳ$_3$** 'ಪಲ$_3$' ನೋ.

**ಪಳಂಕು** 'ಪಳುಂಕು' ನೋ.

**ಪಳಂಚಲೆ** (ಕ್ರಿ). ೧. ತಾಗು; ಅಪ್ಪಳಿಸು; ಬಡಿ : "ಪಳಂಚಲೆ ತಾಂ ಪೊಣರ್ದರ್ಥನಾಮದೊಳ್" (ಕರ್ಣಾಸಿ. ೧೬) ; ಸೀಮಾವಿವಾದದಿಂ ತದ್ಭೂವಿಜರೋರೊರ್ವರಂ ಪಳಂಚಲೆವೆಡೆಯೊಳ್ ಸೀವೊಗಳ ತೊಡರ ನುಡುಗಿಸಿ ಸೀಮಂಕರನೆಂಬುದೊಂದು ಪೆಸರಂ ಪಡೆದಂ (ಆದಿಪು. ೬-೫೭) ; ಚಕ್ರಗೊಟ್ಟದಗ್ಗದ ನೃಪರಂ ಪಳಂಚಲೆದು (ನಾಂವೇಡ್. ೩-೧೫; 1047) ; ದಿಗಧಿಪರಂ ಪಳಂಚಲೆವ ವಿಕ್ರಮದೇಳ್ಗೆ (ಎಕ. V, ಅರಸೀ. ೬೨-೩೦ ; 1177). ೨. ಅಲ್ಲಾಡು ; ಅಲುಗಾಡು : ನೆಲೆವೊಟ್ಟನೊಳೊಟ್ಟೈಸಿ ಪಳಂಚಲೆವ ಕುರುಳೋಳಿಯುಂ (ಆದಿಪು. ೪-೪೧ ವ) ; ತೊಡರ್ದಮರ್ದ ಬಾಳವಣ್ಣದ ತುಡುಗೆ ಪಳಂಚಲೆವ ಪಂಚಜಡೆ (ಪಂಪಭಾ. ೨-೪). ೩. ಮುಟ್ಟು ; ಸೋಕು; ಸ್ಪರ್ಶಿಸು : ಈ ನಿಜತನೂಜೆಯನು ತ್ರವಮಂಗಳಾನಕಧ್ವನಿ ದೆಸೆಯಂ ಪಳಂಚಲೆವಿನಂ ನೆರಪೀಗಳೆ ವಜ್ರಜಂಘನೊಳ್ (ಆದಿಪು. ೪-೨೬) ; ಪಾಡುವ ಗೇಯದೊಂದು ಮೆಲ್ಲುಲಿ ಕಿವಿಯಂ ಪಳಂಚಲೆಯೆ (ಧರ್ಮಾಮೃ. ೩-೧೭೪) ; ಕೀರ್ತಿಶ್ರೀ ದಿಶಾಭಾಗದೊಳ್ ಪರೆದಾಶಾಗಜಮಂ ಪಳಂಚಲೆಯೆ (ಎಕ. VII, ಶಿಮೊ. ೪-೨೨ ; 1122) ; ಬಳಸಿ ಬಳಸಂದು ಪಳಂಚಲೆದೊಲೆದು ಪಕ್ಕಮಂ ಬಿರ್ಚಿ ಲಲ್ಲೆಗೆಯ್ದುತ್ತು ಪಾರಿವಂ ಪಾರಿವದೊಳ್ (ಗಿರಿಕ. ೨-೫೨). ೪. ಹೊಳೆ; ಥಳಥಳಿಸು: ಅಲುಗೆ ಕುರುಳ್ ತೊಡವು ಪಳಂಚಲೆಯೆ ತಳತ್ತಳಿಸಿ ಪೊಳೆಯೆ ತನುರುಚಿ (ಧರ್ಮಾಮೃ. ೭-೧೮೬). ೫. ಕಾಡು ; ಪೀಡಿಸು ; ಹಿಂಸಿಸು : ಕೊಲೆಯೆಂದಸತ್ಯಮೆಂದು . . . ಪಳಂಚಲೆವ ಪರಿಗ್ರಹಮೆಂದಿವಱಿಂದಾದ ಪೇಕ್ಷೆಯನುಪೇಕ್ಷಿಸು (ಸುಕುಮಾ. ೭-೩೪) ; ಬಿರಯಿಗಳಂ ಪಳಂಚಲೆವ ತಣ್ಣೆಲರ್ (ಪುಷ್ಪಪು. ೨-೨೫). ೬. ಮೀರು ; ಕೀಳುಮಾಡು : ವಿಳಾಸಮಂಬರಚರಾಮರಕಾಂತೆಯರೆಲ್ಲರಂ ಪಳಂಚಲೆಯೆ (ಆದಿಪು. ೧-೭೨); ಜಳನಿಧಿಯಂ ಪಳಂಚಲೆವನೇಕತಟಾಕದಿನ್ (ಸೌಇಇ. IX-i, ೨೩೭-೨೧; 1160) ; ಆತ್ರೇಯದ್ಯುತಿಯಂ ಪಳಂಚಲೆದು ಕುಂದಚ್ಛಾಯೆಯಂ ಮಿಕ್ಕು (ಚಂದ್ರಪು. ೧-೩೩) ; ಚಂಚಲಾಕ್ಷಿಗಳ ಡಾಳಂ ಬಳ್ಳಿಮಿಂಚಂ ಪಳಂಚಲೆಯೆ (ಪದ್ಮರಾ. ೩-೩೦). ೭. ವ್ಯಾಪಿಸು ; ಆವರಿಸು : ವಿಪಂಚೀನಾದವಿಸಾಗಳ್ಪಳಂಚಲೆವುತ್ತಿರ್ದಪುದಲ್ತೆ ಸಾಲ್ವುದಿದೆ ತದ್ಗಂಧರ್ವರಂ ಸೋಲಿಸಲ್ (ಕಾದಂಪೂ. ೬೫೨) ; ಭೇರಿಯ ಭೂರಿನಿನಾದಂ ದೆಸೆ ಮುಟ್ಟೆ ಪಳಂಚಲೆಯೆ (ರಾಮಾಶ್ವ. ೫೦-೨). ೮. ಸುಳಿದಾಡು ; ಕಾಣಿಸಿಕೊಳ್ಳು : ಅಬ್ಬಿಜನಿಬ್ಬುಳಿಗೊಂಡಲಂಪುಗಳ್ ಕನಸಿನೊಳಂ ಪಳಂಚಲೆವು[ವೆ]ನ್ನೆರ್ದೆಯೊಳ್ (ಪಂಪಭಾ. ೪-೧೦೬). ೯. ಗರ್ವಪಡು; ಬೀಗು : ಮೊಕ್ಕಳಮೇಕೆ ನೀಂ ಪಳಂಚಲೆದಪೆಯಣ್ಣ ಸೂಟ್ಟಡೆಯ ಲಪ್ಪುದು ಕಾಣ ಮಹಾಜಿರಂಗದೊಳ್ (ಪಂಪಭಾ. ೧೦-೨೩).
[ಪಳಂಚು$_1$ + ಅಲೆ$_1$]

**ಪಳಂಚಾಡು** (ಕ್ರಿ). ತಿರಸ್ಕರಿಸು ; ಹೀಗಳೆ : ಹರಹಾಸದ್ಯುತಿಯಂ ನಿರಾಕರಿಸಿ ಗಂಗಾಸಿಂಧುಕಲ್ಲೋಲಶೀಕರಮಂ ನಿಂದಿಸಿ ಸಿಂಧುವಾರ ಕುಸುಮಶ್ರೀಯಂ ಪಳಂಚಾಡಿ ಭಾ[ಪಾಠಾಂ.ಚಲ್ ವಿಭಾ]ಸುರ ಚಂದ್ರಾಂಶುವಿಕಾಸಮಂ ತೆಗಟ್ದು ಮುಕ್ತಾಹಾರವಿಸ್ತಾರಡಂಬರಮಂ ಮಿಕ್ಕು ಬೆಳಪ್ಪುದುಜ್ಜ್ವಳಯಶಂ ಶ್ರೀಗಂಡಮಾರ್ತಂಡನಾ (ಕಾವ್ಯಾವ. ೮೬೩).
[ಪಳಂಚು$_1$ + ಆಡು$_1$]

**ಪಳಂಚಿಸು**, ಪಳಚ್ಚಿಸು (ಕ್ರಿ). ೧. ಕುಟ್ಟು ; ಬಡಿ : ಸಂಬಳಿ ಗೋಲಿಂದಿರದೆ ಪಳಂಚಿಸಿದಳ್ ಜರ್ಝರರವಮೊಗೆಯಲ್ಕೆ ನೃಪಸಭಾ ಕುಟ್ಟಿಮಮಂ (ಕಾದಂಪೂ. ೩೪). **ಪಳಚ್ಚಿಸು : ೨. ಪ್ರಕಾಶಮಾನ** ವಾಗು ; ಬೆಳಗು : ತವೆ ಸುವರ್ಣದ ಗುಡಿಯು ರವಿ ಪಳಚ್ಚಿಸಿದವೊಲು ರಂಜಿಸಲು (ಪ್ರಭುಪು. ೭-೧೩೦). [ಪಳಂಚು$_1$+-ಇಸು$_3$]

**ಪಳಂಚು$_1$**, ಪಣಂಚು, ಪಳಚು, ಹಣಚು, ಹಳಚು$_1$, ಹಳಚ್ಚು, ಹೊಣಚು (ಕ್ರಿ). ೧. ತಾಗು ; ಬಡಿ ; ಹೊಡೆ ; ಅಪ್ಪಳಿಸು: "ಪಳಂಚು-ಸಂಘಟ್ಟನೇ" (ಶಮಧಾ) ; ಗಗನಮನೇನದರ್ದುವೊ ಜಯನ ಶರಂಗಳ್ ಸಿಡಿಲಂ ಮಿಂಚಂ ಪಳಂಚಿ ಸಂಚಳಿಸುವಿನಂ (ಆದಿಪು. ೧೩-೬೩) ; ತನು ತನುವಂ ತಱುಂಬೆ ಮಿಗೆ ಕೂರಸಿ ಕೂರಸಿಯಂ ಪಳಚ್ಚೆ (ಎಕ. VII, ಶಿಕಾರಿ. ೨೪೨-೨೪; 1163) ; ಎರಡು ಬೆಳಗು ಪಳಂಚಿಯೊಂದಾದ ಪಾಂಗಿನಿಂ (ಪದ್ಮರಾ. ೧೩-೫೫) ; ಕರಿ ಕರಿಯೊಳ್ . . . ಪದಾತಿ ಪದಾತಿಯೊಳ್ ಘನಂ ಗಿರಿ ಗಿರಿಯಂ ತೆವೊಲ್ಕಿಗೆ ಪಳಂಚಿದುದು (ಹವ್ಯಾಕ. ೩-೪೮). ೨. ತಾಕು ; ಸ್ಪರ್ಶಿಸು ; ಸೋಕು : ಒಯ್ಯನಾಱಸಿ ಬಂದು ಕಿವಿಯೊಳ್ ಪಳಂಚಲೆರ್ದಯಂ ಪಿಡಿದಲುಗುವ ಸೀಯನಪ್ಪ ಗೀತಾತೋದ್ಯ ನಾದಕ್ಕಂ (ಆದಿಪು. ೨-೪೧ ವ) ; ಮಂಗಳವೃತ್ತಂಗಳೊಳಗೊಯ್ಯನೊಯ್ಯನಾಱು ಬಂದೆರ್ದೆಯಂ ಪಳಂಚುವ ಸಂಗೀತರವಾಕರ್ಣನದೊಳಂ (ವರ್ಧಮಾ. ೫-೪ ವ) ; ತೂರ್ಯಘೋಷಮುವಶ್ಯಂ ದೆಸೆಯಂ ಪಳಂಚೆ (ಪುಷ್ಪಪು. ೧೩-೭೩). ೩. ಆಕ್ರಮಿಸು ; ಮುತ್ತು ; ಮೇಲೆ ಬೀಳು : ಕಾಡೊಳ್ ಬೇಡವಡೆ ಪಳಂಚಲೊಡವಂದ ಪರದ ರೆಲ್ಲರುಂ ಸಂಚಳಿಸೆ (ನೇಮಿಪು. ೪-೭೦ ವ) ; ತವಕದೆ ಪಳಂಚಿದುವು ಕಾಲ್ವೇಗದಾನೆಗಳ್ (ಚಿಬಪು. ೨೬-೧೩) ; ಎದ್ದು ನಭದೊಳ್ಪಳಂಚುವ ರೊಮ್ಮೆ ಭೂತಳದೋಳಿದ್ದು ಹೆಣಗುವರೊಮ್ಮೆ (ಜೈಮಿಭಾ. ೨೨-೨೯) ; ವೈರದಿಂ ವಾರಿಧಿಯೊಳ್ಪೊಕ್ಕ ಭೂರಿಭೂಧರಂಗಳ್ಪಳಂಚಲೆಂದು ಪಟುತೆಯಿಂದಿದಿರ್ಚಿ ನಿಂದವೆಂಬಂತೆ ಸಾರ್ತಂದು (ರಾಜಶೇ. ೧-೧೦೨ ವ). ೪. ಕೂಡು ; ಬೆರೆ ; ಸೇರು : ಕುರುಳ್ಗಳೊಳ್ ಸುಱಿದು ಮುಂದೊಂದಿರ್ದ ಸೌಭಾಗ್ಯಘಂಟಿಗಳೊಂದಿಂಚರದೊಳ್ ಪಳಂಚಿ ಸುಱಿದತ್ತಂದೊಂದು ಮಂದಾನಿಳಂ (ಪಂಪಭಾ. ೪-೮೦) ; ಮಣಿಮಯಚಿತ್ರಭಿತ್ತಿಗಳ ದೀಪ್ತಿಗಳೊಳ್ ನಿಜದೇಹದೀಪ್ತಿಗಳ್ ಸೆಣಸಿ ಪಳಂಚಿ ಸಂಚಳಿಸೆ (ಸುಕುಮಾ. ೯-೧೪) ; ಚಂಚಲತನ ಬೇಡ ಹೆತ್ತ ಮಗನೊಳು ಪಳಂಚದೆ ಬಿಡು ತಂದೆಯುರಿಸಿ (ಕುಂರಾಸಾಂ. ೩೨-೧೨೩). ೫. ಪ್ರಕಾಶಿಸು ; ಹೊಳೆ : ಪೊಸಮುಸೆಯ

ಮಿಂಚಿನಂತಮರಸಮಾಜದ ಕಣ್ಗಳೊಳ್ ಪೞಂಚಿ ರಂಜಿಸಿ (ಶಾಂತಿಪು. ೬-೩೨ ಪ) ; ರತ್ನದೀಧಿತಿಯೊಳೊಂದಿ ಪೞಂಚುವ ಬಳ್ವಿವಾಡದಿಂ ಕಳಸದ ಮತ್ತವಾರಣದ ಶೋಭೆಗಳಿಂ (ಧರ್ಮಾಮೃ. ೫-೪೫) ; ಪೊಸಮಿಂಚಿನವೊಲ್ ಪೞಂಚುತಾಯದಿಂದಡಿಯಿಡುವ ತುಟಿಲಾಳ್ಗಳ . . . ಧ್ವನಿ ಪ್ರತಾನದಿಂದಾ ಬಲ್ಲಕೀನಗರಂ ವಿರಾಜಿಸುತ್ತಮಿರ್ದುದು (ಉದ್ಭಟ. ೧-೮೮ ಪ) ; ನವ್ಯಹೇಮತೋರಣ ಕಳಶ ಕನ್ನಡಿಯ ಪೊಳಪು ಪೊಂದಿಸಿಲೊಳ್ ಪೞಂಚುತಲಿರೆ (ರುಕ್ಮಾಂಗ. ೩-೧೧). ೬. ವ್ಯಾಪಿಸು ; ಆವರಿಸು ; ತುಂಬು : ದೇಹಚ್ಛಾಯೆಯುಂ ರತ್ನಕುಂಡಲ ಭೂಷಾರುಚಿಯುಂ ಪೞಂಚೆ ದೆಸೆಯಂ . . . ಬಂದಂ ಪ್ರಭಾಮಂಡಲಂ (ಪಂರಾಮಾ. ೪-೯೦) ; ಅಂಭೋರವಮೊಗೆಯೆ ಪೞಂಚಿತ್ತು ನಕ್ಷತ್ರಮಾರ್ಗಾಂತರಮಂ (ಜಗವಿ. ೬-೬೨) ; ಪಂಚರತ್ನದ ಕೊಡೆ ಪಿಡಿದಂತೆ ನಭವ ಪೞಂಚಲು ಮಳುಟಿದ ಕಾಂತಿ (ನಾಗಕು. ೧೨-೮೩) ; ತನುದ್ಯುತಿಯಾಗಸಮಂ ಪೞಂಚೆ (ಕಮಮಾ. ೧-೬.) ೭. ಮೀರು ; ಕೀೞುಮಾಡು ; ಅತಿಶಯಿಸು : ನಿರುಪಮದೇಹದೀಪ್ತಿಗಳೊಳಿಕ್ಕೆಯಿನೆಯ್ದೆ ಪೞಂಚಿ ಮಿಂಚುವಾಭರಣದ ಮಿಂಚು (ಆದಿಪು. ೨-೫) ; ಮಿಸುಗುವ ರವಿಬಿಂಬಂಗಳ್ಮಸದಲಗುಗಳಂ ಪೞಂಚಿ ಮಿಂಚುವ ಕಾಂತಿ ಪ್ರಸರದೆ . . . ಪೊಳೆದುವಂಬರತಳದೊಳ್ (ಕಾದಂಪೂ. ೪೬೬) ; ದಿವ್ಯ ಭೂಷಣಮರೀಚಿ ರವಿಪ್ರಭೆಯಂ ಪೞಂಚೆ (ಜಗವಿ. ೧-೪೧) ; ಮಿಂಚಂ ಮಿನುಗುವ ಸಂಚಲತೆಯೊಳೆ ಪೞಂಚಿ ಗೆಲುವ ಚಟುಲಾಕ್ಷಿಗಳು (ಜಯಕಾ. ೨-೨). ೮. ಸಾಗಿಸು ; ನಡೆಸು : ಜಾರೆಯರ್ . . . ಉಪಶಾಂತರೊಳ್ಪಂಚಶರಕೇಳೀಪ್ರಪಂಚಮಂ ಪೞಂಚುತ್ತಿಸೆದಿರ್ದರ್ (ಉದ್ಭಟ. ೧೦-೧೦೬ ಪ). ೯. ಚಿಮ್ಮು ; ಸಿಡಿ ; ಹಾರು : ಚಿಮ್ಮಿದುದು ಜಿಂಕೆಮಱಿಯೊಂದು ಹೊದರೊಡಲಿಂದೆ . . . ತಿರಿಕವಣೆಯಿಂ ಪೞಂಚುವ ರತ್ನಶಿಲೆಯಂತೆ (ಚಿತ್ರಾಂಗ. ೩-೭೪). ೧೦. (ಅಲಂ) ತಪ್ಪು ; ಎಡಹು : ಬಲ್ಲರ ಕಿವಿಗಳ್ಗೆ ಮಾಣಿಕದ ಮಂಜರಿಯಾಗೆ ಪೞಂಚದೋದು ವಕ್ಕರಿಗರ ಜಿಹ್ವೆಗಿಂಪಮರ್ದ ನೂತ್ನತರಾಮೃತಧಾರೆಯಾಗೆ (ಉದ್ಭಟ. ೧-೧೨). **ಪಣಂಚು :** ೧. ಕಡಿಕಡಿಯೆನುತುಂ ಬೊಬ್ಬಿಟ್ಟಡುರ್ತಿರ್ಪ ಮುಱಿ ಪಣಂಚಿ ಸೆಣಸಿತ್ತಾಗಳ್ (ವೀರವಿ. ೫-೩೧). **ಪೞಚು :** ೧. ಮುದ್ಗರವನಿಡಲೆದೆಯನದು ಪೞಚಿ ಬಸವಳಿಯಿಸಿತು (ಶೀಷಂರಾ. ೧೪-೪೮). ೭. ದುಂಡುದೋಳು ಬೆಳಗುತ ಪಾತಾಳದ ಫಣಿಪನ ಫಣಾವಳಿಯ ರತ್ನವ ಪೞಚಿದುವು (ಕಂನವಿ. ೨೦-೨೩). ೧೧. ಕಾದು ; ಸೆಣಸು ; ಯುದ್ಧ ಮಾಡು : ಕರವಾಳ ಪಿಡಿದು . . . ಪೞಚುವ ಮಹಾವೀರರ (ಸೌಂದಪು. ೮-೩೭) ; ಶಿಲೆಯೆರಡು ತಂತಮ್ಮೊಳು ತಾಕಿ ಪೞಚುವುದನು ಕಂಡು (ನೇಮಿಸಂ. ೧೮-೩೧) ; ಪಾರ್ವತಿಯ ಪತಿಯೊಡನೆ ಪೞಚಿ ಬೊಬ್ಬಿಡುವ ವೀರವನೆನಗೆ ಪಾಲಿಸು (ವೀಶೈಪು. ೨-೧೨-೨೦). ೧೨. (ಗಾಳಿಯು) ಬೀಸು ; ಸುಳಿ : ಕುಳಿರಂ ಮಾಣ್ದು ಪೞಚಲಮ್ಮದು ಗಾಳಿ (ನಂದಿಪ್ಪಾ. ೨-೨೨). ೧೩. ಕಣ್ಣನ್ನು ಮಿಟುಕಿಸು ; ಎವೆ ಬಡಿ ; ರೆಪ್ಪೆಹೊಡೆ : ಎವೆಗಳ್ ಪೞಚುವಕ್ಷಿ ನಿಮಿಷಂ ನಿಮೇಷಮೆನಿಕ್ಕು (ಮಂಗರಾ. ೯೪-೩). **ಹಣಚು:** ೧೪. ಎದುರಿಸು; ಪ್ರತಿಭಟಿಸು : ಹರಿಯ ಹಣ[ಪಾಠಾಂ.೪]ಚಿ ಗದಾಯುಧವನೀಶ್ವರನ ಜಟಿದಜಗರವನಿಂದ್ರನ ಪರಿಭವಿಸಿ ರುಜುರೋಹಿತವ . . . ಧರಿಸಿದತಿಬಲರಿರ್ದುದುದಿತಮಹೋಗ್ರ ತೇಜದಲಿ (ತೊರರಾ. ೬-೧೦-೯). **ಹೞಚು$_1$ :** ೧. ಕಲ್ಲಂ ತಾಗಿದ ಮಿಂಟೆಯಂತೆ ಬೆಟ್ಟಮಂ ಹೞಚಿದ ಭೃತ್ರದಂತೆ ಹೆಜಿಸಾರ್ದು ನಿಂದು (ಧರ್ಮಪ. ೧-೭೫ ಪ) ; ಹೞಚುವಸಿಗಳ ಖಣಿಖಟಿಲು (ಕುಪ್ಪಾದ್ರೋ. ೨-೨೬) ; ಸಾಗರಕೆ ಸಾಗರವು ಹೊಯಿಕೈಯಾಗಿ ಹೞಚಿದವೋಲು ಹೞಚಿದರು (ತಿಪ್ಪುಪು. ೧-೫೮): ಹೆಲನರಾ ನಾನೆ ಮುಂಬುಮುಂಬಿಂಗೆನಿತು ಸಂಖ್ಯೆಯಲಿ ಮುಂದಣ್ಕೆ ನೂಂಕಿದುದಿದಿರ್ಚ ಪಾರಸಿಕನಾವೆಗಳ ಹೞಚಿ ? (ಪಾರಸಿ. ೧೪-೩೨೫). ೩. ಸಂಗ್ರಾಮಭೂಮಿಯೊಳು ಹೞಚಿದವರನರೆ ಘೞಿಗೆಯೊಳಿಱಿವೆವು (ತ್ರಿಪುಸಾಂ. ೧೪-೧೫೬) ; ಹೞಚಿದರು ತಗರಂತೆ ಗಜದವ್ರೊಲೊಲೆದು ನಿಂದರು . . . ಕಡಿತಲೆಗಾಱಿರುಭಯದಲಿ (ಕುಪ್ಪಾಭೀ. ೪-೩೫) : ಅತಿಕಾಯನುರವಣಿಸಿ ಹೞಚಿದನು ಹರಿದಶ್ವತನುಜನ ನಳನ ನೀಲನ . . . ದ್ವಿವಿದ ಪಟುಭಟರ (ತೊರರಾ. ೬-೩೪-೫೧); ದೊರೆದೊರೆಗಳು ಮೋಹರಿಸಿ ಉರುವಣೆಯಿಂ ಬಂದು ಹೞಚಿದರು (ಕುರಾಸಾಂ. ೧೩-೧೧೦). ೬. ಹೞಚಿತು ಸೂರ್ಯೋದಯಮಿಾ ಸ್ಥಳಕೆಲ್ಲಂ (ಸೂಕ್ತಿಸು. ೯-೮೩); ಹಾಲಂತೆ ಹೞಚಲೊಪ್ಪುವ ಜೊನ್ನವ ಕಂಡು (ಜಿನರಾ. ೮-೧೦೭). ೧೩. ಆಱುಕೋಟಿಬ್ರಹ್ಮರು ಮಡಿವಲ್ಲಿ ನಾರಾಯಣಗೊಂದು ದಿನವಾಯಿತ್ತು ನಾರಾಯಣರೊಂದುಕೋಟಿ ಮಡಿವಲ್ಲಿ ರುದ್ರನ ಕಣ್ಣೆವೆ ಹೞಚಿತ್ತು (ಒಸವ. ೫೪೧) ; ಕಣ್ಣೆವೆ ಹೞಚಿ ನೋಡಿದುದಿಲ್ಲ ಮಗನ ಲಾವಣ್ಯವನೆಂದಳಲಿದಳು (ಮೋಹತ. ೪-೮೦) ; ಕಣ್ಣೆವೆ ಹೞಚುವಷ್ಟಱೊಳವನೂಳಿಗವೆಣ್ಣುಗಳೊಳ್ಪು ಮಾಡುವರು (ಭರತ. ೧೬-೮೮). 'ಎವೆ ಹೞಚು' ಪರಾ. ೧೪. ಅಸುರಾಂತಕಂ . . . ಕಂಡುದಂ ಕಾಣ್ಬೆನಿಂ ಹೞಚಿ ನೋಡುವೆನೆನುತ್ತೋಡುವ ಸುರಾವಳಿಯಂ ಕೂಡಿ ಹುರಿಗೈದನು (ಚೆಬಪು. ೩೧-೨೮) ; ನಾರಿ ತಾನಿವಳೆನಿತು ಬಲುಗೈವೀರತನಮಂ ಮೆರೆತರೆಂದೇ ಸ್ಯೆರಿಸಿದರಾನ್ಯೆದೆ ಮಿಾರ್ದುದು ಹೞಚವೇಳ್ಕು (ಅಂಬಿಕಾ. ೨೪-೪೯). ೧೫. ಅಲ್ಲಾಡು ; ಅಲುಗಾಡು : ನಾಳಿಕೇರದ ಫಲಗೊಂಚಲು ಘಾಳಿಯಿಂದವೆ ಹೞಚಿ ಹೊಂಬಾಳೆಗಳ ಮೇಲಿಳಿದ ಪಣ್ಗೊನೆಯೊಳೆಳೆದು (ಕೊಲ್ಲಾಚ. ೨೫). **ಹೞಚ್ಚು :** ೧೧. ಶಿರನಿನ್ನಟ್ಟಿಗೆ ಹೊಱಿಯಾದಡೆ ನಿಲಲರದೆಮ್ಮೊಡನೆ ಹೞಚ್ಚುವುದು (ಕುಮುರಾ. ೯-೬೩). **ಹೊಣಚು :** ೧೩. ದೇಹಕಾಂತಿಗುಂದುವಣ . . . ಎವೆ ಹೊಣಚದೆ ದಿಟ್ಟಿಸಿ ನೋಡುವಣ, ವೈದ್ಯರುಗಳ ಮಾತ ನಿರಾಕರಿಸುವಣ, ಹೀಗಿದ್ದರೆ ನಿಸ್ತೇಜಗ್ರಹವೆಂದಱಿವುದು (ವೈದ್ಯಸಾ. 11, ೭೮).

**ಪೞಂಚು$_2$**, ಹೞಚು$_2$ (ನಾ). ೧. (ಒಂದಕ್ಕೊಂದು) ತಾಗುವಿಕೆ ; ಬಡಿಯುವಿಕೆ. ೨. ಹೊಳಪು ; ಕಾಂತಿ. **ಹೞಚು$_2$.**

**ಪೞಂಚಿನುಂಗುರ, ಹೞಚಿನುಂಗುರ** = ೧. ಒಂದಕ್ಕೊಂದು ತಾಗಿ ಜಣಜಣಿಸುವ ಕಾಲುಂಗುರ,—ಸದ್ದಾಗುವ ಕಾಲುಂಗುರ : ಅಂತಪಾರಪುಣ್ಯಪಣ್ಯಾಂಗನಾಜನಕ್ಕೆ ಪಂಚರತ್ನದುಪಾಯನಮನಿತ್ತು ಪೞಂಚಿನುಂಗುರದ ನೂಪುರದ ನೂಲ ತೊಂಗಲ ಸಂಕಲೆಯ . . . ವಿವಿಧೋಪಾಯನ ರತ್ನಪಟಲಿಕೆಗಳಂ ಪಿಡಿದೊಡನೆ ಬರೆ (ಪಂರಾಮಾ. ೫-೧೨೭ ಪ) ; ಕಳೆದು ಪೞಂಚಿನುಂಗುರಮನೇಱಿ ಮುಸುಂಕಿ ಮರಲ್ಚಿ ಸೆಕ್ಕೆ ಮೇಖಳೆಯೊಳಡಂಗುವಂತೆ ನಿಱಿಯಂ ಸೆಱಗಿಂ ಪೊದೆದುಟ್ಟು ದೂತಿ ಕೈಕೊಳಿಸದ ಬಟ್ಟೆಯಿಂದೆಡಪಿ ನಿಂದೊಡಮಾಯೆನಲಮ್ಮದಂಘ್ರಿಯಂ ತಳದೊಳವುಂಕುತಂ ನಡೆದು ಕಾಹಿನ ಗೇಹಮನೊರ್ವಳೆಯ್ದಿದಳ್ (ಸೂಕ್ತಿಸು. ೮-೧೪೫) ; ಕನಕಕಾಂಚೀದಾಮದ . . . ಕಾಲ ಹೞಚಿನುಂಗುರದ ಶೃಂಗಾರಂ ಪೞಚ್ಚನಾಗೆ (ಧರ್ಮಪ. ೨-೨೩ ಪ). ೨. ಹೊಳಪಿನ ಕಾಲುಂಗುರ ; ತಳತಳಿಸುವ ಕಾಲುಂಗುರ : ಕಾಲ ಪೞಂಚಿನುಂಗುರದ ಮೆಲ್ಲುಲಿಯಿಂದಮೆ ಪೇೞ್ದು ತಮ್ಮ ಲೀಲಾಲಸಯಾನಮಂ (ಜಾಧಪು. ೬-೧೧೪). **ಹೞಹೞಚು ಮಾಡು** = ಶುದ್ಧ ಮಾಡು; ನಿರ್ಮಲಗೊಳಿಸು : ಹಂಸೋದಕದ ತೆಱದಿ ಹೞಹೞಚು ಮಾಡಿ ನವಪರಿಮಳಂಗಳನಿಕ್ಕಲಂತದುವೆ ಧಾರಾಂಬುವೆನಿಸೆ ಕಡುಸೊಗಸು ದಳೆದಿರ್ಪುದು (ಸೂಪಶಾ. ೭-೪೨). [<ಪೞಂಚು$_1$]

**ಪೞಂಪೆ** 'ಪೞಂಬೆ' ನೋ.

**ಪೞಂಬೆ**, ಪೞಂಪೆ (ನಾ). ಒಂದು ಬಗೆಯ ಮರ (?) :

ಉತ್ತರತಃ ಬಳ್ಳಿಗೆಱೆಯ ಪಡುವ ಗಜಗೊಡ ಪಳಮ್ಪು ಪುಣುಸೆಯೆ (ಎಕ. XII, ಗುಬ್ಬಿ. ೬೧-೯೩ ; 812). **ಪಳಂಪೆ :** ವೀರ್ತಂಡಕೊಲ್ಲಿಯ ಪಳಮ್ಪೆಯಾಳೆ (ಇಆ. XVIII, ೩೬೭-೨೧; ಸು. 8ನೆಯ ಶತ). [ ? ]

**ಪಳಕ**$_1$ (ನಾ). ೧. ಉಪಯೋಗ ; ಬಳಕೆ : (ಕ). ೨. ಅಭ್ಯಾಸ; ರೂಢಿ : (ಕ). ೩. ಪಳಗಿಸುವಿಕೆ ; ತರಪೇತಿ : ನಾನೀ ಪದವಿಗೆ ಮತ್ತಾರನ್ನೂ ತಿದ್ದಿ ಪಳಕ ಮಾಡಿಲ್ಲ (ದೇವೀಚಾ. ೧೧೦). 'ಪಳಗು' ಪರಾ. [ದೇ.‖ ತಮಿ. ಮಲ. ಪಟುಕ್ಕ]

**ಪಳಕ**$_2$ (ನಾ). ಒಂದು ಬಗೆಯ ಆಯುಧ ( ? ) : ಬತ್ತೀಸಕಡಿಯ ಬಾಹರ ಪುಟದ ಗುಳವಡ ಕಣಂಗಳ ಕುಳಿಶದ್ಧಳಂ ಪಳಕದ ಪಾರಡದುಜ್ಜಳಿಕೆಯಿಂ ತುಱುಲ ಸಂಪರಂ ಪ್ರಳಯಕ್ಕೆ ಸಂಗಳಿಸಿ ನೆಗೆದ ಪನ್ನೆರಡುವರ್ಕಬಿಂಬಂಗಳನೊಕ್ಕೈಸಿ ತೆಗೆದು ಮೇಲೊಟ್ಟಿಕೊಂಡಂತೆಯುಂ (ಅನಂಪು. ೧೪-೬ ವ). [ ? ]

**ಪಳಕಕಾಱ** (ನಾ). ಪಳಕವೆಂಬ ಆಯುಧವನ್ನು ಹಿಡಿದವನು (?) : ಅತಿರಥರ ಮಹಾರಥರ ಅರ್ಧರಥರ ಸಮರಥರ ಪಳಕ[ಪಾಠಾಂ.ಪಳ, ಫಳ, ಬಳ]ಕಾಱರ ಆರೆಕಾಱರ ನಡುವೆ . . . ಇಕ್ಕೆಯ ಸೀಗುರಿಯ ಬೀಸುವ ಚಾಮರದ ವಿಚಿತ್ರವಿಭ್ರಮದಿಂ ಸೌಂದರಪೆರುಮಾಳೆ ಬಿಜಯಂಗೆಯ್ದಿರಲು (ಸಂಚಿ೨. ದೇ. ೩೪೮-೯), [ಪಳಕ$_2$+-ಕಾಱ]

**ಪಳಕು**$_1$ 'ಪಳುಂಕು' ನೋ.

**ಪಳಕು**$_2$ 'ಪಟಿಕ' ನೋ.

**ಪಳಕೆ** (ನಾ). ಸಲಿಗೆ ; ಬಳಕೆ : ಎಲ್ಲ, ಎಲ್ಲಾ ಮಾಯವಾದುವು ಹಳೆಯ ಪಳಕೆಯ ಮುಖಗಳು (ಇಂಗೀತ. ೮೭-೩) ; ಗೌರಿಯ ಪಳಕೆಯ ಬಳಕೆಯ ಜಾಗಗಳಲ್ಲೆಲ್ಲಾ ಅದು . . . ಅರಸಾಡಿ ಅರಚುವುದು (ನಜೆವಾ. II, ೮೯೬) ; ಹೊಸಮುಖವಲ್ಲ. ಚಿರಪರಿಚಿತ ಪಳಕೆಯ ಮುಖ (ನಟಸಾ. ೭೭). 'ಪಳಕ$_1$', 'ಬಳಕೆ', 'ಹಳಕೆ' ಪರಾ. [<ಪಳಗು+-ಕೆ]

**ಪಳಕೆಳೆ** (ನಾ). ಹಳೆಯ ಮಿತ್ರ,—ಗೆಳೆಯ ; ಬಹಳ ಕಾಲದ ಸ್ನೇಹಿತ: ನನ್ನ ನಂಬಿಕೆಯ ಪಳಕೆಳೆಯಿವನು (ಪುರುನಾ. ೧೧೧-೪೩೯).

[ಪಳ$_1$(<ಪಟುದು)+ಕೆಳೆ$_2$]

**ಪಳಕ್ಕನೆ** (ಅ). ತಟಕ್ಕನೆ; ಇದ್ದಕ್ಕಿದ್ದಂತೆ : ಕಣ್ಣೊಳಗಿಂದ ಪಳಕ್ಕನೆ ನೀರು ಚಿಮ್ಮಿದವು (ರಂಗರೋ. ೧೬೪) ; ಪಳಕ್ಕನೆ ಬೆಂಕಿಯ ಚೆಂಡು ಮುಂದೆ ಹಾದುಹೋದಂತೆ ಅರಿವಾಯ್ತು (ದೇವಹಂ. ೫೬).

[ಪಳಕ್$_0$+-ಅನೆ$_1$]

**ಪಳಗ** 'ಪಟಿಗ$_1$' ನೋ.

**ಪಳಗಂಡ** 'ಪಲಗಂಡ' ನೋ.

**ಪಳಗಬ್ಬಿಗ** 'ಪಟಿಗಬ್ಬಿಗ' ನೋ.

**ಪಳಗಲು** 'ಪರಳ್ಗಲ್ಲು' ನೋ.

**ಪಳಗಾಟ** (ನಾ). ಪಳಗುವಿಕೆ; ಹೊಂದಿಕೊಳ್ಳುವಿಕೆ: ಮದರಾಸಿನ ಪಳಗಾಟದಲ್ಲಿ ಸೇರಿಹೋದಂತಹ ಅವರ ರೀತಿನೀತಿಗಳನ್ನು ಕಂಡು . . . "ಎಷ್ಟು ಬೇಗನೇ ಪಟ್ಟಣದ ನಾಗರಿಕತೆಯಲ್ಲಿ ಪಳಗಿ ಬಿಟ್ಟಿರಿ ?" ಎಂದೆ ನಾನು (ಪತಿ. ೧೬). [ಪಳಗು+ಆಟ]

**ಪಳಗಿಸು**, ಹಳಗಿಸು (ಕ್ರಿ). ೧. (ಪ್ರಾಣಿ ಮುಂತಾದುವನ್ನು) ಅಂಕೆಗೆ ತರು ; ಹತೋಟಿಗೆ ತರು ; ಸಾಧುಮಾಡು : ರಾಯನಪ್ಪಣೆಯ ಮೇರೆ ಗಜಕ್ಕೆ ಪ್ರೀತಿಪಾತ್ರವಾದ ಹೆಣ್ಣಾನೆಹಿಂಡುಗಳಂ ಹಿಡಿದು ಪಳಗಿಸಿ (ಸೌಗಂಧಿ. ೨೫೩-೧೬) ; ಸಿಡಿಲ ಪಳಗಿಸುವರಿವು, ರವಿಯ ಸೆರೆಹಿಡಿವರಿವು (ಪುಚಿಪೆ:. ೪೮-೧) ; ಮನುಷ್ಯನು ಕುದುರೆಯನ್ನು ಪಳಗಿಸಿದ್ದು ಇತ್ತೀಚೆಗೆ (ಸಮಾಲೋ. ೨೩೪). ೨. ರೂಢಿ ಮಾಡು ; ಅಭ್ಯಾಸ ಮಾಡಿಸು ; ಒಗ್ಗಿಸು : ನಾವು ಅದನ್ನು ಬಹಳ ಜನರು ಇರುವ ಕಡೆಗೆ ಕರೆದುಕೊಂಡು ಹೋಗಿ ಪಳಗಿಸಬೇಕು (ಶಾಲೆಪು. ೨೦೧) ; ಕೈಯನ್ನು ಪಳಗಿಸಿಕೊಳ್ಳುವುದಕ್ಕೋಸ್ಕರ ಬರೆದನೆನ್ನಬಹುದು (ಕಾವ್ಯಸ. ೫೬) ; ಅವರೇ ನಮ್ಮ ಹಳೆಯ ಭಾಷೆಯನ್ನು ಈ ಹೊಸಹೊಸ ವಿಷಯಗಳಿಗೆ ಪಳಗಿಸಿಕೊಡತಕ್ಕವರು (ಸಾಹಿಶ. ೬೩). ೩. ಬಳಸಿ ಹದಕ್ಕೆ ತರು,-ಉಪಯೋಗಕ್ಕೆ ಯೋಗ್ಯವಾಗುವಂತೆ ಮಾಡು: ಪಾದರಿಯ ಹೂವಿನಿಂದೆ ನೆಱೆ ಪಳಗಿಸಿದ ಮಡಕೆಯೊಳಗೆಱೆದು ಮತ್ತಾ ಹೂವುಗಳನು ಹೊಱೆಯಿಟ್ಟು (ಸೂಪಶಾ.೨-೧೬). ೪. ತರಬೇತು ಮಾಡು ; ತಯಾರುಗೊಳಿಸು : ಸಾಮಾಜಿಕಜೀವನದಲ್ಲಿ ಮಕ್ಕಳನ್ನು ಪಳಗಿಸುವಾಗ, ಅವರ ಸ್ವಾಭಾವಿಕಗುಣಶಕ್ತಿಗಳನ್ನು ಸರ್ವಹಿತವೆನಿಸುವಂತೆ ಬೆಳಸಬೇಕೆಂಬುದು ಸ್ವಾಭಾವಿಕ (ಶಿಕ್ಷದ. ೬೮). **ಹಳಗಿಸು :** ೧. ಹಳಗಿಪಡೆ ಹುಲಿಯ ಹಸಿವೆಗೆ ಹೋತನೀವಂತೆ, ಇವರ ನೆತ್ತರ ತೃಷೆಗೆ ನಿರ್ದೋಷಿ ಈತನನ್ನೀಯುವುದೆ ನಿಶ್ಚಯಂ (ಗೊಲ್ಗೊಥಾ. ೮-೨೧೧).

[ಪಳಗು+-ಇಸು$_3$]

**ಪಳಗು**, ಪಳುಗು (ಕ್ರಿ). ೧. ಹತೋಟಿಗೆ ಬರು; ಅಂಕೆಗೆ ಬರು: ಹಕ್ಕಿಗಳು ಎಷ್ಟು ಪಳಗಿದ್ದುವೆಂದರೆ . . . ಅವು ಅವನ ಸುತ್ತ ಕೋಳಿಮರಿಗಳಂತೆ ಸೇರಿಕೊಳ್ಳುತ್ತಿದ್ದವು (ಪ್ರವಾಇ. II. ೫೨) ; ಅವು ಕಚ್ಚುತ್ತವೇನು ? ಇಲ್ಲ, ಇಲ್ಲ. ಅವು ಪಳಗಿವೆ (ಶಾಲೆಪು. ೪೨). ೨. ರೂಢಿಯಾಗು ; ಅಭ್ಯಾಸವಾಗು ; ಬಳಕೆಯಾಗು : ಎಷ್ಟೋ ಪದಪ್ರಯೋಗಗಳು ಭಾಷಾಶಾಸ್ತ್ರಪ್ರಯೋಗದಿಂದ ಪಳಗಿ ಸಾಧುವೆನಿಸಬಲ್ಲವು (ಸಂಶೋಧ. ೮೬) ; ವಾಸ್ತವಿಕವೂ ಪರಿಣಾಮಕಾರಿಯೂ ವಿವೇಕಯುತವೂ ಆದ ಮಾರ್ಗದಲ್ಲಿ ಪಳಗುವಂತೆ ಸಹಾಯ ದೊರೆಯಬೇಕು (ಶಿಕ್ಷದ. ೩೬೨) ; ನೋಡಿ ಪಳಗಿದ ನಮ್ಮ ದೃಷ್ಟಿಗೆ ಈ ನೋಟಗಳೆಲ್ಲವೂ . . . ಕಂಗೊಳಿಸುವುವಲ್ಲವೆ ! (ಜ್ಯೋತಿರ್ವಿ. ೬೭). ೩. ತರಬೇತಾಗು ; ನುರಿ ; ಪರಿಣತಿಹೊಂದು : ಚಿತ್ರಣಶಕ್ತಿಯ ಇಷ್ಟು ಪಳಗಿದ ಕೈಯಾಗಿದೆ ಈ ಜಾನಪದ ಕವಿಯದು ! (ಕನ್ನಜಾ. ೧೮೮) ; ಅವಳ ತಂದೆ ವ್ಯವಹಾರದಲ್ಲಿ ಪಳಗಿದ ಮನುಷ್ಯರು (ದೂರಸ. ೧೦೯) ; ಕೈ ಮತ್ತಷ್ಟು ಪಳಗಬೇಕು ಎನ್ನುವ ಹಾಗಿತ್ತು (ದೂಜಿಟ್ಟ. ೯೯). ೪. ಹದಕ್ಕೆ ಬರು; ಪಾಡಾಗು : ಈ ಲೇಹ್ಯವಂ ಮತ್ತೊಂದು ಪಳಗಿದ ಮಡಕೆಯಲ್ಲಿರಿಸಿಕೊಂಡು (ಸಕವೈ. ೩೯೩). **ಪಳುಗು:** ೪. ಪಳುಗಿದ ಮಡಕೆಯೊಳ್ ಸುರಿದು ಬಾಯಿಗೆ ಮುಚ್ಚಳ ಮುಚ್ಚಿ (ಸಾಳ್ವಸಾಂ. ೧೮) ; ಒಂದು ಸೇರು ಒಳ್ಳೆಣ್ಣೆಯನ್ನು ಪಳುಗಿದ ಮಣ್ಣುಮಡಕೆಯಲ್ಲಿ ಹುಯಿದು (ಸಕವೈ. ೩೦).

**ಪಳಗಿದ ಕೈ** = ನುರಿತ ಕೈ : ಕಳವಿನ ವಿದ್ಯೆಯಲ್ಲಿ ಯಮುನದು ಪಳಗಿದ ಕೈ (ಇಪ್ಪಕ. ೪೨೮).

[ದೇ.‖ ತಮಿ. ಪಟುಕು ; ಮಲ. ಪಟುಕ್ಕು]

**ಪಳಗೆಂಪು** (ನಾ). ಒಂದು ಬಗೆಯ ಪದ್ಮರಾಗ,-ಕೆಂಪುಮಣಿ : ಎಳೆನೀಲ ಪಚ್ಚೆ ಪಳಗೆಂಪು ಮುತ್ತುಗಳ ನಿರ್ಮಳಕಾಂತಿಯಿಂದೆಸೆವ ಪುಷ್ಪಕಂಗಂಡು ತಿಳಿಗೊಳನುಂ ಬನಂ ಪದ್ಮಮುಂ ಜೊನ್ನಮೆಂದು ಮಿಸಾನ್ ಮೃಗಮಳಿ ಚಕೋರಂಗಳು ಪೋಳೆಪ ಚಂಚಲಿಪ ಕವಿವೊಲಿವ ನೋಟಗಳ ಕೋಮಳೆಯರ್ (ಚಿಪ್ರ. ೫-೧೫). [ಪಳ? + ಕೆಂಪು$_1$]

**ಪಳಚನೆ** 'ಪಳಚ್ಚನೆ' ನೋ.

**ಪಳಚು** 'ಪಳಂಚು$_1$' ನೋ.

**ಪಳಚ್ಚನೆ**, ಪಳಚನೆ, ಹಳಚನೆ (ಅ). ನಿರ್ಮಲವಾಗಿ ; ನಿಚ್ಚಳವಾಗಿ ; ಸ್ಪಷ್ಟವಾಗಿ : "ಜಳಕ್ಕನೆಂದುಂ ಪಳಚ್ಚನೆಂದುಂ ನಿರ್ಮಲಂ" (ಕಶಸಾ. ೫೬-೨೧೪) : ನೆರೆದಹಮಿಂಪ್ರರ ತನುಪರಿಕರದ ನೆಱಲ್ಗಳ್ ಪಳಚ್ಚನೆಸೆದಿರೆ (ಅಪು. ೬-೩೭) : ತಿಳಿದಿರ್ದ ಕೊಳದ ಜಲದೊಳ್

ಪೞಚ್ಚನೆಸೆದಿರ್ದ ತನ್ನ ನೆೞಲಂ ತನ್ನೊೞಪಳಿಗೆತ್ತು ಮುೞುಗಿ ಕಾಣದೆ ತಳವೆಳಗಾಗಿರ್ದುವಿರುಳ ವಿರಹವಿಹಂಗಂ (ಅಜಿಪು. ೬-೬೨): ಪೊೞಲಸಿತುಂ ಪೞಚ್ಚಸಮ್ಮತಪ್ಪವದಿಂ ತೊಳೆದಂತೆ ಸೊಂಪು ಪೊಂಪುೞಸೆ (ಅಸಂಪು. ೭-೯೧); ಬೆಳುವಸನದಿಂದಾ ಕೋಮಲೆ ಕಂಗಳಿಗೆ ಪೞಚ್ಚ ನೊಪ್ಪಿದಳು (ಚಂಪ್ರಸಾಂ. ೨೪-೧೦). **ಪೞಚನೆ:** "ಗಮ್ಮನೆ ತಾಂ ಜಳಕನೆಂದು ಪೞಚನೆಯೆನ್ನಲ್" (ಕವಿಕಂ. ೧೦೧); ಪೞಚನೆ ಪೊಳೆವೆಳ ವೆಂಡಿರ ಬೆಳೆಯಲರ್ಗಣ್ಣವರ ಚೆಲ್ವನೆಳಕುೞಗೊಂಡಂತಳದುರ್ ತೊಳ ಗಿದುವು (ಲೀಲಾಪ. ೯-೭೬); ಬೆಳ್ದಿಂಗಳ ಸಿರಿಗೆ ಸರಿಗೆವರ್ಪುವು ಪೞಚನೆ ಕವಿಭಾಳನೇತ್ರನಿಡುವ ಪದಂಗಳ್ (ಅಸಂಪು. ೧-೫೦); ನಿರ್ಮಲವಾದ ಲಲಿತಾಂಗದಿಂದ ಪೞಚನೆಸೆದಳೊಪ್ಪವಿಟ್ಟ ಪರಂಜಿಯು . . . ಬೊಂಬೆಯಂತೆ (ಚಂಪ್ರಸಾಂ. ೧೨-೮೧). **ಹೞಚನೆ:** ಹಸನಾಗಿ ಹೞಚನೆಸೆವ ಹಾಲ ಧಾರೆಯೊಳೆಸೆದುದು ಜಿನನ ದಿವ್ಯಾಂಗ (ಚಂಪ್ರಸಾಂ. ೨೪-೧೫೭); ಸಾಧ್ಯ ವಾದ ಒಂದೇ ಮಾರ್ಗವನು ವಿಕ್ರಮರಾಯರು ಹೞಚನೆ ಕಂಡು . . . ಸಿದ್ಧಿಯನು ಸೈವಡೆದುಕೊಂಡರು (ಜಿಟ್ಟೆಅ. ೨೧೩-೯).

**ಹೞಹೞಚನೆ** (ದ್ವಿರುಕ್ತಿ): ಹೞಹೞಚನಾದುದಾಶಾವಲಯ (ಸಮ್ಯಕೌ. ೧-೧೯); ರಾಜವೀಧಿಗೆ ಬಂದು ಹಾಲಂತೆ ಹೞಹೞಚನೆ ಹೊಳೆವ ಹುಣ್ಣಿಮೆಯ ತಿಂಗಳ ಬೆಳಗಿನೊಳ್ (ಸಮ್ಯಕೌ. ೨-೧೦೨); ಹೞಹೞಚನೆ ಪೆಣ್ಣುರೂಪಿನ ಚೆಲ್ವ ಪುತ್ತಳಿಗಳೆಸೆದುವು ಭಿತ್ತಿಯೊಳು (ಭರಚ. ೧೨-೨೨). **ಪೞಚ್ಚನಾಗು**=ನಿರ್ಮಲವಾಗು; ಪ್ರಕಾಶಮಾನ ವಾಗು: ಸರೋಜಕುಮುದೋಜ್ವಲಮಾಗೆ ಕೊಳಂ ಪೞಚ್ಚನಾಗಿರೆ ಶಶಿರಶ್ಮಿ ಬಂದುದತಿನಿರ್ಮಲನೀರದಮಪ್ಪ ಶಾರದಂ (ಕಾದಂಉ. ೬೩೨); ಪೞಚ್ಚ ನಾಯ್ತು ಗಗನಂ ಮೇಘವ್ರಜಂ ಪೋಗೆಯುಂ (ಕುಸುಸಾ. ೬-೪೨); ತಿಂಬೆಲರೂದಿತ್ತು ಪೞಚ್ಚನಾದುವು ಸರೋನದ್ಯಂಬುಗಳ್ ನಂದನಾವಲಿ ಸೊಂಪೇೞಾದುದು (ವೃಷವಿ. ೩-೧೮). [<ಪೞಂಚು$_1$+-ಅನೆ$_1$]

**ಪೞಚ್ಚಿಸು** 'ಪಳಂಚಿಸು' ನೋ.

**ಪೞಥ** 'ಪಣತ' ನೋ.

△ **ಪೞದಿ** 'ಪಳದಿ' ನೋ.

**ಪೞದು** 'ಪೞದು' ನೋ.

**ಪೞದೆ** 'ಪಳಿದ್ಯ' ನೋ.

**ಪೞದೇಗುಲ** (ನಾ). ಹಳೆಯ ದೇವಸ್ಥಾನ: ಹೇರಡವಿಯಲ್ಲಿ ಪೞ ದೇಗುಲದ ಲಿಂಗಕ್ಕೆ ವೈರಿಭಯವಹುದೆಂದು ರಾಜೋಪಚಾರದಿಂದಾರಾಧ ನೆಯ ಮಾಡಿ (ರಾಘಚ. ೬-೨೨). [ಪೞ$_1$(<ಪೞದು)+ದೇಗುಲ]

**ಪೞದ್ಯ** 'ಪಳಿದ್ಯ' ನೋ.

**ಪೞನುಡಿ** 'ಪೞನುಡಿ' ನೋ.

**ಪೞಪೞ** 'ಪೞಪೞ' ನೋ.

**ಪೞಪೞನೆ** 'ಪೞಪೞನೆ' ನೋ.

**ಪೞಪೞಿಸು** (ಕ್ರಿ). ಭ್ರಮೆಗೊಳ್ಳು; ಭ್ರಾಂತಿಯನ್ನು ಹೊಂದು: ತಳಮಿವು ತಳಿರಿವು ಬೆರಲಿವು ಕಳಿಕೆಗಳಿವು . . . ಎಂದಱಿಯದೆ ಕೋಮಳೆ ಪೂಗೊಯ್ವೆಡೆಯೊಳ್ ಪೞಪೞಿಸಿದಳತಿಮುಗ್ಧೆ (ಶಾಂತೀಶ್ವ. ೧೦-೧೨೬). 'ಹಳಹಳಿಸು' ಪರಾ. [ಪೞಪೞ? +-ಇಸು$_3$]

**ಪೞಬ,** ಹಳಬ (ನಾ). ೧. ವಯಸ್ಸಾದ ವ್ಯಕ್ತಿ: ಹಿರಿಯ: ಮಾಂಧಾತಂ ಪೞಬಂ ಶಕ್ರನರೆಗದ್ದುಗೆ ಪೊರ್ದಿದಂ (ಸೌನಂದ. ೧೧-೪೩); ಬಭ್ರುವಾಹನನ ಕಂಡು, ಪೋಲ್ವೆಗೆ ಬೆರಗುಗೊಂಡರಾ ಸೇನೆಯಲಿ ಪೞಬರಾದವರೆಲ್ಲರುಂ (ಚಿತ್ರಾಂಗ. ೮೧-೨೨೦೮). **ಹೞಬ:** ೨. ಬಹು ಕಾಲದಿಂದ ಪರಿಚಿತನಾದ ವ್ಯಕ್ತಿ: ಹೞಬರಾಗಿಯುಂಯಿರುವ ವೇಗಶಾಲಿಗಳಾದ ಭೃತ್ಯರಂ ಕರಸಿ (ಸೌಗಂಧಿ. ೬೭೭-೧೨); ಹೞಬನೊ ಹೊಸಬನೊ ನೀನು (ಇಂಚಾಪ. ೬೮-೨೮). ೩. ಗೌಡ ಹಾಗೂ ಶಾನುಭೋಗರ ಕೈಕೆಳಗಿರುವ ಒಬ್ಬ ಗ್ರಾಮಸೇವಕ; ಕುಳವಾಡಿ: ಗೌಡ ಶಾನುಭೋಗರ ಕೈಕೆಳಗೆ ತಳವಾರ, ಪಟ್ಟಣಸೆಟ್ಟಿ, ಹಳಬರು ಮುಂತಾದ ಕಿರುಕುಳ ಕಾಮದಾರರಿರುತ್ತಾರೆ . . . ಹಳಬರು ಊರಿನ ಕಾವಲುಗಾರರಾಗಿರುತ್ತಾರೆ (ಕಭಾಗೆ. ೩೭೬); ಹಳಬನು ಊರಿನ ಕಾವಲುಗಾರನಿರುವನು (ವಿಜಾಭೂ. ೫೫): ಹಗಲು-ರಾತ್ರಿ ಚಾವಡಿ ಯನ್ನು ಹಳಬ ಕಾಯ್ದುಕೊಂಡು ಬಿದ್ದಿರುತ್ತಾನೆ (ಗ್ರಾಳಗ್ರಾ. ೫). [ಪೞ$_1$(<ಪೞದು)+-ಬ$_2$]

**ಪೞಬದ್ದ** (ನಾ). (?): ಪಗೆಗಂ ಪಾೞಗಂ ಪರಿಭವಕ್ಕಂ ಪೞವೆಗಂ ಪಾಗುಡಕ್ಕಂ ಪೞಬದ್ದಕಂ ವೈವಾಹಿಕಸಂಬಂಧಕ್ಕಂ ಮೈತ್ರಕ್ಕಂ . . . ಮಹಾಸಮುದ್ರದೊಳ್ ಮಹಾನದಿಗಳ್ ಕೂಡುವಂತೆ (ಪಂಪಭಾ. ೯-೯೫ ವ); "ಪೞಬದ್ದಕ್ಕಂ=ಲಾಭ ಅಥವಾ ಪ್ರಯೋಜನ ಪಡೆದು ದಕ್ಕೂ" (ಪಂಪವೀ. ೩೩೭). [?]

**ಪೞಮಂಜರಿ** (ನಾ). [ಸಂಗೀತ] ಒಂದು ರಾಗದ ಹೆಸರು: ಲಲಿತ ಸಾಳಂಗ ಸಾವೇರಿ ಗುಜ್ಜರಿ ಗೌಳ ಪೞಮಂಜರಿಗಳೆಂಬ ವಿವಿಧರಾಗಂ ಗಳಿಂ ಬಳಸಿ ಪಾಡಿಸಿದನು (ಜೈವಿಭಾ. ೨೧-೫೭). [<ಸಂ. ಫಲಮಂಜರೀ]

**ಪೞಮಾತು** 'ಪಳಮಾತು' ನೋ.

**ಪೞಮೆ** 'ಪೞಮೆ' ನೋ.

**ಪೞಮೊರೆ,** ಪಳಮೊರೆ (ನಾ). ಹಿಂದಿನ ಪೀಳಿಗೆ; ವಂಶಾನುಕ್ರಮ: ಅಯ್ದನೆಯನ್, ಆ ಮರ್ದಸ್, ಪರ್ಸದ ಕಳಂಕಂ, ಪೞಮೊರೆಯ ನಾಣ್ಚಿಸಿದೊಡೆ (ಪಾರಸಿ. ೨೯-೬೬೫). **ಹೞಮೊರೆ:** (Ancestry. ಇಂಕನಿ). 'ತಲೆಮೊಱೆ$^3$' ಪರಾ. [ಪೞ$_1$(<ಪೞದು)+ಮೊರೆ$_6$(<ಮೊಱೆ$^3{}_4$)]

**ಪೞಯಠಾಣ** (ನಾ). ಒಂದು ಊರಿನ ಹೆಸರು: ಪೞಯಟ್ಠಾಣ ಪ್ರತ್ಯಾಸನ್ನ ಭಾಡಲಿಗ್ರಾಮಮಧಿವಸತಿ (ಎಇ. XIX, ೬೪-೨೩; 687). [? + ಠಾಣ(<ತಾಣ)]

**ಪೞಯಿ** (ಗು). ಹಿಂದಿನಿಂದ ಬಂದ: ಪೂಜನೆಯ ಮರಸಕೆ ಪ ೩ ಯೆಂದೆಂದಿಗುಂ ಸೂಱಕೆ ಪೞಯಿಗುಡಗೆ ಮರಿಯಾದೆಯಲಿ ವೃತ್ತಿ ಸಿದ್ಧಾಯವನು ಕಲ ಮೇಲೆ ಮಡಗುವರು (ಎಕ. XIV, ತಿನ. ೭೨-೨೪; 1309). [☞ ಇದು 'ಪೞೆಯ' ಎಂಬುದರ ಅಪಲಿಖಿತವಿರಬಹುದು]

**ಪೞಯಿಗೆ** 'ಪೞಯಿಗೆ' ನೋ.

**ಪೞಯಿಸು,** ಪಳವಿಸು, ಹಳವಿಸು, ಹಳಿಸು$_2$ (ಕ್ರಿ). ಪ್ರಲಾಪಿಸು; ಗೋಳಾಡು: ತಮ್ಮ ಗಂಡರಂ ಕೊಳುಗುಳದೊಳಱಸಿ ಕಾಣದೆ ಬಾಯಂೞದು ಪೞಯಿಸುತ್ತುಂ (ಪಂಪಭಾ. ೧೪-೪ ವ): ನೆನೆವಲ್ಲಿಯೆ ಕಂಡೞಲುಣ್ಮೆ ಶೋಕರಸದಿಂ ಪೞಯಿಸಿದಳ್ಕಾಂತೆ ತನ್ನ ಚೊಚ್ಚಲ ಮಗನಂ (ಗದಾಯು. ೧೦-೧೮): ನೀವೇಂ ನಿಮಿತ್ತ ಪಂಬಲಿಸಿ ಪೞಯಿಸು ತಿರ್ದಪಿರಿ (ಸೌಂದಪು. ೧೭-೬೧); ಆತನ ರಾಣಿ ಪೆತ್ತ ಬಸಿಱನೊಂದುರಿಯಿಂ ನೊಂದು ಪೞಯಿಸಿ . . . ಮಱುಮಱುಗಿ ಹಮ್ಮೈದಂಬೋವಳ್ (ರಾಮಾಶ್ವ. ೬೭-೧); ಬಡನಾಯಿಯು . . . ಆಕಾಶಕೆ ಮೊಗ ಮಾಡಿ ಪೞಯಿಸತೊಡಗಿತು (ಕೋಗಿಲೆ. ೫೦-೨೦). **ಪೞವಿಸು:** ಅಂತು ಪುಯ್ಯಲಿಟ್ಟೊಳಱ ಪೞವಿಸಿ ಬಾಯಂೞದಬ್ಬೆ ಸುತಾರೆಯುಂ (ಶಾಂತಿಪು. ೬-೩೩ ವ); ಆ ಬಳಂ ಬಾಯ್ವಿಟ್ಟು ಪೞವಿಸಿ ಪ್ರಳಾಪಂಗೆಯ್ದು ಸುಯ್ದು ವಿಕಳನಾಗಿ ಮತಿಗೆಟ್ಟು (ನೇಮಿಪು. ೧೪-೧೦೦ ವ); ಕೇಳೀವನದ ತರುಲತಾ ವಿಹಂಗಮಂಗಳ್ಗೆ ಪೇೞ್ದು ಪೞವಿಸಿಯುಂ (ವರ್ಧಪು. ೯-೭೧ ವ);

ಸಂಗನಂ ತಕ್ಕೈಸಿ ಪಳವಿಸಿ ಪಲುಂಬಿ ಗೋಳಿಟ್ಟು (ಬಸವ. ೪-೩೮).
**ಹಳವಿಸು** : ಪರಿಯುತ್ತ ಪಳವಿಸುತ ಬಾಯಿಟ್ ಬತ್ತಲೊಜಲುತ್ತ (ಸಿದ್ಧರಾ. ೨-೪೭) : ಬದುಕೇಕೆಂದು ಹಳವಿಸಿ ಮಱುಗುತಿರಲ್ (ಕೌಶಿರಾ. ೨೯-೨೨) ; ಅಳಲಿದರು ಬಳಿಕೊಬ್ಬರೊಬ್ಬರು ಹಳವಿಸುತ ಹಲವಂಗದಲಿ (ತೊರವೆ. ೨-೬-೨೬): ಮೂರ್ಛೆ ತಿಳಿದು . . . ಹಳವಿಸಿದನು ರಾಯನು (ಕುಮಾರರಾಂ. ೪೦-೯೫). **ಹಳಿಸು**$_2$: ಸುಳಿವ ಸಮೀರ ಪೊಂಪುಳಿಪ ಚಕೋರ ಸುಮ್ಮಳಿಪ ರಾಜೀವನುಬ್ಬೇಳ್ವ ಜಳನಿಧಿ ಸಂತಸದಳಿವ ನೀಲಾಬ್ಜದಿಂ ಹಳಿಸುವ ಚಕ್ರವಾಕಗಳು (ಭೈರವೇ. ೨-೭೧). [<ಪ್ರಲಾಪಿಸು]

**ಪಳರಸ** (?) (ನಾ). (?) : ಕುಂಬಳದೊಳ್ಪಳರಸಮಂ ಮೆಣಸಂ ಕೊಳಲಲಂಭ್ಯಮೆಸೆಸಿರ್ದ ನಾಯ್ಗಳತಿವಿಷಮಬೀಗುಂ (ಸುಸುದ. ೧೩-೩೪). [?+ರಸ]

**ಪಳವಡ** (?) (?). (?) : ಒಳಗಿರ್ದ ಬದಣೆ ವರ್ಣಲಿಂಗವಾಯ್ತು . . . ಚೆಲ್ವನಳವಡಿಸಿ ಮುಂಡನಕೆ ಜೆಡೆ ಮೂಡೆ ಸಂತತಂ ಪಳವಡದ ರೋಮಶಾಟಿ ಪೊಳವ ರನ್ನಂ ಬಿಗಿದ ಕಂಥೆಯಾಗೊಪ್ಪಿರಲು . . . ಶುದ್ಧ ಶಂಭುರೂಪಾಗಿರ್ದರು (ಲಿಂಗಪು. ೨೨-೩). [?]

**ಪಳವಳಿಗೆ,** ಪೊಳವಳಿಗೆ, ಹೊಳೆವಳಿಗೆ (ನಾ). (?) : ಚೈತ್ರ ಪವಿತ್ರಂಗಳ ಸೋಮದೇವರುಗಳಿಗೆ ದಿನ ಹದಿನಾಲ್ಕುಕ್ಕಂ ಎಣ್ಣೆ ಹತ್ತು ಕೊಳಗದ ಇಬ್ಬಳ ಪಳವಳಿಗೆಯ ಪಕ್ವಾನ್ನಕ್ಕೆ ಕೊಳಗ ಹತ್ತು . . . ಹೋಪು ಪಳವಳಿಗೆಗೆ ಸಲಗೆ ಒಂದು ಕೊಳಗ ಹತ್ತು (ಎಕ. III, ತಿರುಮ. ೧೦೧-೫೯; 1276) ; ಕಂಡರಿವರೆಣ್ದೆಸೆಯಲೊಪ್ಪುವ . . . ಹೂದಂಡೆಗಳ ಪಳವಳಿಗೆಗಳ ನನೆಯುಂಡೆಗಳ ಸಿಂಗರದಲೊಪ್ಪಿಹ ಶಸ್ತ್ರಮಂಟಪವ (ಅಕ್ರೂಚ. ೬-೭೧). **ಪೊಳವಳಿಗೆ:** ಚೈತ್ಯಾಲಯಮಂ ಕಟ್ಟಿಸಿ ಪ್ರತಿಷ್ಠೆಯಂ ಮಾಡಿಸಿ ಜಯಘಂಟೆ ಚಾಮರ ಪೊಳವಳಿಗೆ ಗೀತ ವಾದ್ಯ ನೃತ್ಯ ಶ್ರೀಬಲಿ ಮುಂತಾದ ವೈಭವಂಗಳಂ ಯಥಾಶಕ್ತಿಯಿಂ ಮಾಡಿಸಿ (ನೋಂಪಕ. ೨೨-೭). **ಹೊಳೆವಳಿಗೆ:** ಹೊನ್ನಾನೆಗಳ್ಲಿಂದ ಹೊಳೆವಳಿಗೆಯ ಸಾಲು ಗನ್ನಡಿಯಿಂದ . . . ಸಂಪನ್ನಗೃಹಗಳು ಮೆಱೆದುವು (ಭರಚ. ೧೫-೨೪). 'ಫಳವಳಿಗೆ'. 'ಫಳವಳಿಗೆ' ಪರಾ. [?]

**ಪಳವಾತು** 'ಪಟಿವಾತು' ನೋ.

**ಪಳವಾನ್** (ನಾ). ಹಿಂದಿನಿಂದ ಇರುವ ಆಕಾಶ; ಸನಾತನವಾದ ಗಗನ: ಪಳವಾನೇ ಪೊಸಎಲರೇ ತಳಿಮಳೆಯ ಚೆಲ್ವು ಬೆಳೆಯಿ (ಸೋಂಗಳ. ೪೫-೧೭). [ಪಳ$_1$ (<ಪಟದು)+ಬಾನ್$_3$]

**ಪಳವಿಗೆ** 'ಪಟಿಯಿಗೆ' ನೋ.

**ಪಳವಿಸು** 'ಪಳಯಿಸು' ನೋ.

**ಪಳವು** 'ಪಟುವ' ನೋ.

**ಪಳವೆ** 'ಪಟವೆ' ನೋ.

**ಪಳಸು** 'ಪಟಸು' ನೋ.

**ಪಳಸುಗೂಳು** (ನಾ). ಹಳಸಿದ ಅನ್ನ : ಪಾಲುಂಬುವರ್ ಪಳಸು ಗೂಳಿಗಿಚ್ಛೈಸುವರೆ (ಸಮ್ಯಕ್ತ್ವ. ೧೨-೨೨).
[ಪಳಸು(<ಪಟಸು)+ಕೂಳು$_2$ (<ಕೂೞ್$_1$)]

**ಪಳಹ**$_1$ 'ಪಳಿದ್ಯ' ನೋ.

**ಪಳಹ**$_2$ 'ಪಟಹ' ನೋ.

**ಪಳಹಗಾಱಿಕೆ** (ನಾ). ಮದ್ದಳೆಯನ್ನು ಬಾರಿಸುವ ವಿದ್ಯೆ,—ಕೌಶಲ : ಅತಿಪಳಹಗಾಱಿಕೆಯಾಂತು ಮಿಳಿರ್ಪ ಮಿಂಚಿನವೊಲುಂ ಪೊಳೆವ ಢಂಗುರವಿದ್ಯೆಯಂ ನಿನಗೆ ಕಲಿಸಿದವನೆಂತಪ್ಪ ಗಾರುಡಿಗನೋ (ಪ್ರಭುಪು. ೫-೧೪೬). [ಪಳಹ$_2$(<ಪಟಹ)+-ಕಾಱ+-ಇಕೆ]

**ಪಳಹರ** (ನಾ). ೧. ಬಾವುಟ ; ಧ್ವಜ : ಕೇರಿನ ತುರಗವನು ವಂದಿಸಿದನಾ ಪಳಹರದ ಹನುಮಂಗೆಜಗಿದನು (ಕುಮಾರವ್ಯಾ. ೯-೩೬) ; ಪಳಹರಗಳೆತ್ತಿದವು ಮುತ್ತಿನ ಮಲಕು ಜಲ್ಲರಿ ಚಿಮ್ಮಿದವು (ಅಂಬಿಕಾ. ೨೫೫೭). ೨. ಧ್ವಜಸ್ತಂಭ : ಚಳನಯನಂಗಳಂ ಕುಸುಮಸಾಯಕ ನೊಪ್ಪಿರೆ ಕೂರ್ತು ಮಾಡಿದಂ ಪಟವಿಗೆಯಂ ತನೂದರಿಯಪಾಂಗಮರೀಚಿ ಗಳಿಂದ ಮಾಡಿದಂ ಪಳಹರವಂ (ನಳಚಂ. ೩೬೧). ೩. ಬಟ್ಟೆ ; ವಸ್ತ್ರ: ಸಕಳಾಯುಧಸಂಭೃತಂಗಳಪ್ಪ ಚೀಂಚೆಗಳ ಕಾಂಚನದ ಪಳ[ಪಳಹ]ರಂಗಳ ಕದಳಿಕಾಕನಕದಂಡದ ಕೆಂಗರ್ಚೆಗಳೊಳ್ ಕೋರ್ಪ ತೋರಣೊ ಮರಂಗಳ (ಮಹಾನೀ. ೧೨-೪೬ ವ). [<ಪಟ+?]

**ಪಳಹರವೇಂಟೆ** (ನಾ). ಒಂದು ಬಗೆಯ ಬೇಟೆ : ಗೋರಿವೇಂಟೆ ಪಳಹರವೇಂಟೆ ಪಟವೇಂಟೆ ವಿದ್ಯಾಧರರ ವೇಂಟೆ ಚಿತ್ರವೇಂಟೆ . . . ಮೆಱೆವುತಿಪ್ಪಂಟು ಕೆಱದುಚಿತವೇಂಟೆಯನಾಡಿದಂ (ಪಚಕಾ. ೫-೪೯).
[ಈ ಇದು 'ಪಳಹದ ಬೇಂಟೆ' ಎಂದಿರಬಹುದೇ?]

**ಪಳಾಯಿಗ,** ಪಲಾಯಿಗ (ನಾ). ಹಲಗೆಯನ್ನು ಬಾರಿಸುವವನು; ಹರೆಕಾರ : ಭವ್ಯಜನಕ್ಕೆ ಬೆಸಸು ಪೆನೆಂತೀಗಳು ಪಳಾಯಿಗ ನಮಗಿರ್ದ ಮಾತಂ ಕರಸ್ಪರ್ಶನಮಾತ್ರದೊಳೆ ಮುರಿವಂ ನಿರಾಪೇಕ್ಷೆಯಿಂ ನುಡಿವಂತೆ (ಶ್ರಾವಕಾ. ೩-೨೩). **ಪಲಾಯಿಗ:** ವಸುದೇವನೊರ್ವನಾ ಪಲಾಯಿಗನ ಕಯ್ಯ ಪಟಹಮಂ ಕೊಂಡು ಪ್ರಹರಣಪ್ರಾಗಲ್ಭ್ಯಂ ಪ್ರಮೋದಮನೊದವಿಸೆ . . . ಬಾಜಿಸುತ್ತಮಿರ್ಪಲ್ಲಿ (ಮಹಾನೀ. ೫-೩೪ ವ). 'ಪಟಿಗ$_2$' ಪರಾ.
[ಪಳಾಯ್$_0$ (<ಪಟಹ)+-ಇಗ]

**ಪಳಾರ** 'ಫಲಾರ' ನೋ.

**ಪಳಾವಳಿ** (ನಾ). ಹಣ್ಣುಗಳ ಗುಂಪು ; ಫಲಗಳ ಸಮೂಹ: ಇಟಿಪಿದ ಪಳಾವಳಿಗಳುಂ ಕೊಳ್ವ ಬಿಟ್ಟುಗಳುಂ (ಲೀಲಾವ. ೭-೩೮ ವ) ; ಲೇಸಿನ ಪಳಾವಳಿಯ . . . ಕಾಣಿಕೆಯೊನಿತ್ತು (ನಮಮೋ. ೧೦-೨೦).
[ಪಳ$_2$ (<ಪಲ$_2$)+ಆವಳಿ$_1$ (=ಆವಲಿ)]

**ಪಳಾಸ** 'ಪಾಳಾಸ' ನೋ.

**ಪಳಾಸ್ತ್ರಿ** (ನಾ). ೧. "ಬಟ್ಟೆಯ ಮೇಲೆ ಬಳಿದಿರುವ, ಶರೀರ ಶಾಖದಲ್ಲಿ ಚರ್ಮಕ್ಕೆ ಅಂಟಿಕೊಳ್ಳುವ ಮುಲಾಮು, ಔಷಧ ಲೇಪ : ಪಳಾಸ್ತ್ರಿ ; ಪಟ್ಟು" (Plaster. ಇಂಕನಿ). ೨. ಗಾಯದ ಮೇಲೆ ಕಟ್ಟುವ, ಔಷಧಿಯ ಲೇಪ ಮಾಡಿದ ಬಟ್ಟೆಯ ಪಟ್ಟೆ : "ಗಾಯದ ಮೇಲೆ ಹಚ್ಚುವ ಮುಲಾಮು ಪಟ್ಟೆ, ವೊ.ದು; ಪಳಾಸ್ತ್ರಿ" (Patch. ಇಂಕನಿ). [←ಇಂ. Plaster]

**ಪಳಾಳ** 'ಪಲಾಲ' ನೋ.

**ಪಳಿ**$_1$ 'ಪಟಿ$_1$' ನೋ.

**ಪಳಿ**$_2$ 'ಪಟಿ$_2$' ನೋ.

**ಪಳಿ**$_3$ 'ಪಟಿ$_4$' ನೋ.

**ಪಳಿ**$_4$ 'ಪಟಿ$_5$' ನೋ.

**ಪಳಿ**$_5$ 'ಪಡಿ$_3$' ನೋ.

**ಪಳಿ**$_6$ (ನಾ). ಪದ್ಧತಿ ; ಸಂಪ್ರದಾಯ : ಪಳಿಮಂಜಳಿಕ್ಕೆಯಿಂ ದೊಡ್ಡಂಗೆ ದೂಳಿಸಿದರು (ಕಾಲೂರ. ೧೪೭-೩೨೧). [?]

**ಪಳಿಕ** 'ಪಟಿಕ' ನೋ.

**ಪಳಿಕು** 'ಪಟಿಕ' ನೋ.

**ಪಳಿಕುಗಮ್ಮರಿ** (ನಾ). ಸ್ಫಟಿಕದ ಕೊಳ್ಳ : ಪಳಿಕುಗಮ್ಮರಿ ಪಟ್ಟೆ ಯಜಿನೀಲದ ಗವಿ ಕುಲಿಶವೊಣೆ ಮಾಣಿಕದ ಪಳಿಕಬೀಡಾರ ರನ್ನದ ಕೋಡುಂಗಲ್ಲೊಳಗಿಹವಾ ಶಿಖರಿಯೊಳು (ಶ್ರೀಪಾಲ. ೪-೩೯).
[ಪಳಿಕು (<ಪಟಿಕ)+ಕಮ್ಮರಿ$_1$]

**ಪಳಿಕುಂಗಾಳಾಂಜಿ** (ನಾ). ಸ್ಫಟಿಕದ ಪೀಕದಾನಿ:

ಪುಂಡರೀಕಾಕ್ಷನ ಗಂಡೂಷೋದಕಮನಾನಲ್ಕೆ ಪಳಿಕುಗಾಳಾಂಜಿದಳೆದ ಪುಳೂಟಿಗದವರ (ಚಿಕಪಂ. ೧೦೨-೧೩).

[ಪಳಿಕು(<ಪಟಿಕ)+ಕಾಳಾಂಜಿ$_2$]

**ಪಳಿಕುದಟ್ಟೆ** (ನಾ). ಸ್ಫಟಿಕದ ಹರಿವಾಣ: ಪಸದನಕ್ಕೆಂದು ಪಳಿಕುದಟ್ಟೆಯೊಳಿಟ್ಟ ಕತ್ತುರಿಯಣ್ಪು (ಚಿಕಪಂ. ೮೬-೨೦)

[ಪಳಿಕು(<ಪಟಿಕ)+ತಟ್ಟೆ]

**ಪಳಿಕುಮಣಿ,** ಪಳುಕುಮಣಿ (ನಾ). ಸ್ಫಟಿಕದ ಮಣಿ: ತತ್ಕಾರ್ತ್ವರ್ಥ ಮನಜಾಯದ ಮುನ್ನಮುಪಾರ್ಥಂ ರಂಜಿಸದ ಪಳಿಕುಮಣಿಯುವೊಲಿರದೇ (ಜಗಧಿ. ೧-೧೪); ಈರ್ಷೆ ಕಿಲುಬುಗಳು ತೊಳೆದು ಹೋಗಿ ಅವರ ಬಗೆಗಳು ಪಳಿಕುಮಣಿಗಳಂತಾದುವು (ಧೂಮಪು. ೭೫). **ಪಳುಕುಮಣಿ:** ಪಳುಕುಮಣಿವೆರೆದ ಕಂಠದ ವಿಳಸದ್ರುದ್ರಾಕ್ಷಮಾಲೆ ಪಳಿಯುಡೆ ಸುಲಿಪಲ್ . . . ಮಿಸುಗೆ (ಪ್ರಭುಲಿ. ೩೭-೧೬); ತೆತ್ತಿಸಿದ ಪಳುಕುಮಣಿಯೋಳಿಯೆನೆ ನೀರ್ಗುಳ್ಳೆ ಸಾಲೆಸೆದುದು (ಚಿತ್ರಸ್ಯ. ೪೧). [ಪಳಿಕು(<ಪಟಿಕ)+ಮಣಿ$_3$]

**ಪಳಿಕುಮಸೆ** (ನಾ). ಸ್ಫಟಿಕದ ಹಸೆ: ಪೊಸತಾಯ್ತು ವಿಧುಬಿಂಬ ಮಧ್ಯದಂಕಂ ಪಳಿಕುಮಸೆಯಿರ್ದ ಕಾಳಿಯಂತೆ (ಚಿಬಪು. ೯-೨೫).

[ಪಳಿಕು(<ಪಟಿಕ)+ಪಸೆ$_2$]

**ಪಳಿಕುವಾಸರ್ಬ,** ಪಳುಕುವಾಸರ್ಬ (ನಾ). ಸ್ಫಟಿಕದ ಹಾಸುಗಲ್ಲು: ತಳಿರ್ತ ತರುಣತಮಾಲತರುವನದ ತಳದ ತಣ್ಣೆಳಲ ಪಳಿ[ಪಾಠಾಂ.ಳು]ಕುವಾ[ಪಾಠಾಂ.ಪಾ]ಸರ್ಬಯ (ರಾಜಶೇ. ೧-೧೩೦ ಪ). **ಪಳುಕುವಾಸರ್ಬ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ಪಳಿಕು(<ಪಟಿಕ)+ಪಾಸರ್ಬ]

**ಪಳಿಕುವೆಸ** (ನಾ). ಸ್ಫಟಿಕದಿಂದ ನಿರ್ಮಿಸಿದುದು; ಸ್ಫಟಿಕದ ರಚನೆ,-ಶಿಲ್ಪ: ತಳಿರ ಕಾವಣಂಗಳಲ್ಲಿ ಪಳಿಕುವೆಸದ ಬೆಟ್ಟದಲ್ಲಿ ಪರಿವ ತೊರ್ಬಯ ತಡಿಗಳಲ್ಲಿ . . . ಕೂಡಿ (ಕಬ್ಬಿಗಕಾ. ೩೪೪).

[ಪಳಿಕು(<ಪಟಿಕ)+ಬೆಸ$_1$]

**ಪಳಿಕೆಯರ್** 'ಪಟ್ಟಿಕೆಯರ್' ನೋ.

**ಪಳಿಗಪ್ಪುರ,** ಪಳಿಗರ್ಪುರ (ನಾ). ಹರಳುಹರಳಾದ ಕರ್ಪೂರ; ಪಚ್ಚಕರ್ಪೂರ: ಪಳಿಗಪ್ಪುರವನಿನೀರ್ ಪೊಸವಾಳೆಯ ಸುಳಿ ಕರ್ಮಿದು ವಾದೆಲರ್ (ಜಯುಕಾ. ೪-೪೦). **ಪಳಿಗರ್ಪುರ:** ಎಳೆಯುಲ್ಲಯಿಂಗುಳ್ಳಿ ಕಂಬೇವು ಮಾದಲದ ತಳಿರು ಮಾವಿನಕಾಯಿ ಕೇದಗೆಯ ಹೂವಿಕ್ಕಿ ಪಳಿಗರ್ಪುರವ ತಳಿದು (ಸೂಪಶಾ. ೫-೬೮). [<ಪಳಿಕು+ಕಪ್ಪುರ]

**ಪಳಿಗರ್ಪುರ** 'ಪಳಿಗಪ್ಪುರ' ನೋ.

**ಪಳಿಗುಡಿ** (ನಾ). ಒಂದು ಬಗೆಯ ಶ್ರೇಷ್ಠವಾದ ಬಟ್ಟೆಯ ಧ್ವಜ: ಪಲ ಪಸುರ್ದೋರಣ ಪಳಿಗುಡಿ ಸಂತಸವರ್ಬ ಪೊಸಮುತ್ತಿನ ಬಣ್ಣವುರಂ ಮನೆಮನೆದಪ್ಪದೆ ಶೋಭಿಸಿತು (ಜಯುಕಾ. ೨-೫೯); ಪಳಿಗುಡಿಗಳ ಬಳಗಗಳಿಂದ ಚೆಲ್ವನು ತಳೆದ ಸಿಂಧಗಳ ಸಾಲಿಂದ ಮಿಳಿರ್ವ ಪತಾಕೆಗಳಿಂದಾ ನಗರಂ ಕಂಗೊಳಿಸಿತು ಕಡುರಮ್ಯಮಾಗಿ (ಚಂಪ್ರಸಾಂ. ೧೨-೮).

[ಪಳಿ$_3$(<ಪಟ್ಟ$_4$)+ಗುಡಿ$_2$]

**ಪಳಿಗುಡು** 'ಪಳಿಗೊಡು' ನೋ.

**ಪಳಿಗೆ$_1$,** ಹಳಿಗೆ (ನಾ). ಎಣ್ಣೆ ಮೊದಲಾದ ದ್ರವಗಳ ಒಂದು ಅಳತೆ,-ಪ್ರಮಾಣ: ××× ಕ್ಕಂ ಸೊಳಸ ೧ ಬ ಲೆಕ್ಕದೆ ಬಿಟ್ಟ ಪಳಿಗೆ ೧ (ಸೌಇಇ. XX, ೧೬೮-೫೩; 1192); ನಂದಾದೀವಿ[ಗೆಗೆ] ಪಳಿಗೆಯೆಣ್ಣೆಯ ತಾವನುನಯದಿಂದವಿತ್ತರಾಚಂದ್ರಾರ್ಕ್ಕಂ (ಕೊಲ್ಹಾಶಾ. ೨೦-೩೦; 1265); ಸಂತೆ ಪೇಟೆಗಳ ಪಳಿಗೆ ಪಸಿಗೆಗಳನು (ದೇವಾಂಪು. ೫-೧೯೪); ಸಂತೆಯ ಪಸಿಗೆ ಪಳಿಗೆಯನೂ . . . ಧಾರೆಯನೆಱದು ಕೊಟೆವೂ (ಸೌಇಇ. IX-ii, ೫೫೩-೧೨; 1552). **ಹಳಿಗೆ:** ತೆಲ್ಲಿಗರ ಗೊತ್ರಳಿಗಳು ದೇವರ ನಂದಾದೀವಿಗೆಗೆ ಗಾಣಂಗಳಲೊಂದೊಂದು ಹಳಿಗೆಯೆಣ್ಣೆಯಂ ಕೊಟ್ಟರು (ಎಇ. V, ೧೯-೬೭; 1161); ಇನ್ನೂಱು ತೆಲ್ಲಿಗರ ಕೊತ್ತಳಿಗಳು ಗಾಣಕ್ಕೆ ಹಳಿಗೆವೊಂದು ಬಿಟ್ಟರು (ಸೌಇಇ. XV, ೧೨೯-೫೩; 1176).

**ಪಳಿಗೆ$_2$** (ನಾ). ಒಂದು ಬಗೆಯ ವಸ್ತ್ರ: "ಪಳಿಗೆ—ಪಟಿಕಾ=ವಸ್ತ್ರವಿಶೇಷ" (ತದ್ಭಕೋ. ೨೫). [<ಸಂ.ಪಟಿಕಾ]

**ಪಳಿಗೊಡು,** ಪಳಿಗುಡು (ಕ್ರಿ). ಒಂದಕ್ಕೆ ಪ್ರತಿಯಾಗಿ ಮತ್ತೊಂದನ್ನು ಕೊಡು,—ನೀಡು: ಮಿತವಚನನ ಶಿರಕ್ಕೆ ಪಳಿಗೊಡದಿರ್ದಳೀಕೆ (ಭಾಪಚಂ. ೯-೪೨). **ಪಳಿಗುಡು:** ಈತನ ಶಿರವನರಿದೀ ಶಿಶುಶಿರಕ್ಕೆ ಪಳಿಗು[ಪಾಠಾಂ.ಗೊ]ಡುವುದು (ರಾಜಶೇ. ೧೪-೧೪ ಪ).

[ಪಳಿ$_5$(<ಪಡಿ$_3$)+ಕೊಡು$_1$]

**ಪಳಿತ** 'ಪಲಿತ' ನೋ.

**ಪಳಿತಂಕ** (ನಾ). ಒಂದು ಬಗೆಯ ತಪಸ್ಸಿನ ಭಂಗಿ (?): ಪಳಿತಂಕದೆ ತಾನ್ನಿವಮೇಱದಾನ್ (ಎಕ. II, ೧೧೩-೪; ಸು. 700); ಪದುಳಿಕೆಗುಂದದಿರ್ದ ಪಳಿತಂಕದ ಚೆಲ್ವ ಸಡಿಲ್ದುದಿಲ್ಲ ಕರ್ಪದ ಬಿಗಿಪೊಯ್ಯ ನೊಯ್ಯನೆ ಸಡಿಲ್ದುದು (ಸುಕುಮಾ. ೯-೧೭). [?]

**ಪಳಿತಶ್ಮಶ್ರು** 'ಪಲಿತಶ್ಮಶ್ರು' ನೋ.

**ಪಳಿತಾಂಕುರ** 'ಪಲಿತಾಂಕುರ' ನೋ.

**ಪಳಿದೆ** 'ಪಳಿದ್ಯ' ನೋ.

**ಪಳಿದ್ಯ,** ಪಳದೆ, ಪಳದ್ಯ, ಪಳಹ$_1$, ಪಳಿದೆ, ಪಳಿಹ, ಫಳಿದ್ಯ (ನಾ). ಮೊಸರು ಅಥವಾ ಮಜ್ಜಿಗೆಯಿಂದ ತಯಾರಿಸುವ ಒಂದು ಬಗೆಯ ಮೇಲೋಗರ: ಪರಿಪರಿಯ ಮೇಲೋಗರಮಂ ಪಾನ ಪಳಿದ್ಯಂಗಳಂ ಮಾಡಿ (ಧರ್ಮಪ. ೨-೪೭ ಪ); ಪಳಿದ್ಯ ಕೋವೆ ತುಪ್ಪ (ಎಕ. VIII, ತೀರ್ಥಹ. ೧-೪೪; 1431); ಪರಿಪರಿಯ ತಾಳಲುಪ್ಪಿನಕಾಯ್ ಪಳಿದ್ಯ ಕಚ್ಚರಿ ಬಾಳುಕಂಗಳ . . . ನೀಡಿಸಿದನು (ಚಿಬಪು. ೫-೬೦); ಕುಂಬಳಸಂಡಿಗೆ ಪಳಿದ್ಯ ಮುಂತಾದುವನಂಬುಜಾಕ್ಷಿಯರಿಕ್ಕಲಾಗ (ಜ್ಞಾನಚ. ೨-೧೪೦). **ಪಳದೆ:** ಪಳದೆಯ ಮೇಲೆ ಇವರ ಪ್ರೀತಿಯು ಬಹಳ ಇರುವುದರಿಂದ ಇವರಿಗೆ 'ಪಳದೆ'ಗಳುಯೆಂಬ ಚೇಷ್ಟೆಯ ಉಪನಾಮವು ಬಂದಿದೆ (ಕಭಾಗಿ. ೭೯). **ಪಳದ್ಯ:** ಹೆಸಱು ತೋಯ ಪಳದ್ಯ ಕಲಸುಮೇಲೋಗರ (ಬೊಂಕಶಾ. ೧೯೪೦, ಕುಪುಟ. ೧೧೩-೨೭; 1475); ಪಳದ್ಯವ ಬಡಿಸಲು ಚಪ್ಪರಿದುಣುತಿರ್ದರಾಗ (ಗೋಮಟೇ. ೨-೧೨೯); ಪಳದ್ಯ ಕಾಸಿ ಉಣ್ಣಲು ದೀಪನಮಕ್ಕುಂ (ವಿವೈವಿ. ೪); ಘಮಘಮಘಮಾಂತ ತಿಂಡಿ-ತೀರ್ಥ, ಪಾಯಸ-ಪಳದ್ಯ, ತುಂಬಿ ತುಂಬಿ ಸುಮ್ಮಸುಮ್ಮನೆ ತುಳುಕಿ ಹೋಗುತ್ತಿದ್ದವು (ಪತಾಕ್ಷಿ. ೧೫); ನೀಲಕಂಠನ ಮದುವೆಗೆ ನೀಲಿಸೊಪ್ಪಿನ ಪಳದ್ಯ (ಗಾದೆ). **ಪಳಹ$_1$:** ಸಾಸವೆ ಶಿಖರಿಣಿ ಪಳಹಂ ಕೀಸಿದ ಹುಳಿಯುಲ್ಲಮೊಗ್ಗಿನುಪ್ಪಿನಕಾಯ್ಗಳ್ (ನಳಚಂ. ೪೪೭). **ಪಳಿದೆ:** ಹಸಿಯ ಅಲ್ಲವು ಲೇಸು ಬಿಸಿಯ ಪಳಿದೆಯು ಲೇಸು (ಸರ್ವಜ್ಞ. ೧೧೧೭); ಕಿಚ್ಚಡಿ ಬೋನವು ಪಚ್ಚಡಿ ತಾಳಿಲು ಹೆಚ್ಚಿನ ಪಳಿದೆಯು ಉತ್ಸಹ ಬನ್ನಿ (ಶರಲೀ. ೮೭-೧೬). **ಪಳಿಹ:** ತಾಳಿದ ಪಳಿಹ ಪಸುಂಗುರಿ ಸಾಸವೆ ಸೀಕರಣೆ . . . ಎಂಬ ನಾನಾಭಿನ್ನರುಚಿಯ ಶಾಖಂಗಳಂ (ಧರ್ಮಾಮೃ. ೨-೩೮). **ಫಳಿದ್ಯ:** "ಖಲ—ಫಳಿದ್ಯ" (ಅಕಾಸಿ. ೮-೨೭); ಮಜ್ಜಿಗೆಫಳಿದ್ಯ ಸಹ (ಎಕ. VII, ಶಿಮೊ. ೭೧-೬೧; 1431).

**ಪಳಿನುಡಿ** 'ಪಟ್ಟಿನುಡಿ$_2$' ನೋ.

**ಪಳಿಮರಿಯಾದೆ** (ನಾ) ಪ್ರತಿಮರ್ಯಾದೆ: ಆ ಹಂಚಮಾನದವರು ತಂಮ ಪಳಿಮರಿಯಾದೆಯ ಹೊಂನಿನ ಕಟಳೆಯನು ಅರಮನೆಗೆ ಕೊಟ ಅ

ಪಳಿಮರಿಯಾದೆಯುಲಿ ಬಹಂಥಾ ಕಾಟಗದ್ಯಾನ ನೂಱು ಅಯಿವತ್ತು ಹೊಂನನು (ಸೌಇಇ. IX-ii, ೪೫೯-೧೬ ; 1465).

[ಪಳಿ$_5$(<ಪಡಿ$_3$)+ಮರಿಯಾದೆ]

**ಪಳಿಯಣ್ಣ** (ನಾ). ಒಬ್ಬಾತನ ಹೆಸರು : ಐನೂರ್ವ್ವಾರ್ಚಾರಿಯ ಮಗ ಪಳಿಯಣ್ಣ (ಎಕ. X, ಚಿಕ್ಕಬ. ೨೬-೯ ; 880).

[ಪಳಿ ? +ಅಣ್ಣ$_1$]

**ಪಳಿಯಱ** 'ಪಡಿಯಱ' ನೋ.

**ಪಳಿಯುಡೆ** (ನಾ). ಒಂದು ಬಗೆಯ ಶ್ರೇಷ್ಠವಾದ ಬಟ್ಟೆಯಿಂದ ತಯಾರಿಸಿದ ಉಡುಪು : ಪಳಿಯುಡೆ ಸುಲಿಪಲ್ತೊಳಪ ಲಲಾಟದ ಭಸಿತದ ವಿಳೇಪನಂ (ಪ್ರಷಪಿ. ೩೭-೧೬). [ಪಳಿ$_3$(<ಪೞು$_4$)+ಉಡೆ$_2$]

**ಪಳಿಲಜ್ಜೆ** (ನಾ). ಅಪವಾದದಿಂದುಂಟಾದ ನಾಚಿಕೆ; ನಿಂದೆಯಿಂದಾದ ನಾಚಿಕೆ : ಪಳಿಲಜ್ಜೆಯಂ ತೊರೆದು ಬಿಂಕದಿಂ ಕನಕಲಂಕಾಲಕ್ಷ್ಮೀ ತಲೆಯೆತ್ತಿ ನಿಲ್ವಂತೆವೋಲ್ (ಶ್ರೀರಾಪು. ೮೩೪-೨೦೩).

[ಪಳಿ$_2$(<ಪೞು$_2$)+ಲಜ್ಜೆ]

**ಪಳಿವೀಡು** (ನಾ). ನಿಂದೆಯ ನೆಲೆ ; ದೂಷಣೆಯ ಬೀಡು : ಪೇಡಿತನಮಂ ಕೊಲ್ಗೆ ಬಗೆ. ಸಾಲ್ಗುಮಾ ಪಳಿವೀಡು, ಸೋಲ್ಕನಂ (ಶ್ರೀರಾಪು. ೩೪೧-೫೨೧). [ಪಳಿ$_2$(<ಪೞು$_2$)+ಬೀಡು$_2$]

**ಪಳಿವು** 'ಪೞು$_2$' ನೋ.

**ಪಳಿವೊಱಿಸು** (ಕ್ರಿ). ದೋಷವನ್ನುಂಟುಮಾಡು : ಸ್ವಧರ್ಮದಿಂ ನಿರ್ವಿಘ್ನಮಾಗಿ ಸಕಲಪ್ರಕೃತಿಜಾತ ಚಾತುರ್ವರ್ಣಮಂ ಬಿಡದೆ ಪೊರೆವಲ್ಲಿ ನೀತಿಶಾಸ್ತ್ರಂಗಳ್ಗೆ ಪಳಿವೊಱಿಸದೆ ಉರ್ವಿಯಂ ನವಸಹಸ್ರಾಬ್ದಮಂ ಪಾಲಿಸಿದಂ (ಜೈವಿಭಾ. ೧೮-೧೫). [ಪಳಿ$_2$(<ಪೞು$_2$)+ಪೊಱಿಸು]

**ಪಳಿಸಂಕು ?** (ನಾ). ಒಂದು ಬಗೆಯ ಶಂಖ (?) : ಜಡಿವ ಕಹಳೆಯು ಉಕ್ಕಡ ಕೊಂಬು ಪಳಿಸಂಕು ಒಡನೆ ತಂಬಟೆ ಡಮಾಮಿಗಳ (ದೇಪಾಂಪು. ೩-೨೦೮).

[☞ ಇದು 'ವಳಿಸಂಕು (=ರೇಖೆಗಳುಳ್ಳ ಶಂಖ)' ಎಂಬುದರ ಅಪಲಿಖಿತ ವಿರಬಹುದು]

**ಪಳಿಸು** 'ಪಲಿಯಿಸು' ನೋ.

**ಪಳಿಹ** 'ಪಳಿದ್ಯ' ನೋ.

**ಪಳಿಹತ** 'ಪೞಿಹತ್ತ' ನೋ.

**ಪಳಿಹತ್ತ** 'ಪೞಿಹತ್ತ' ನೋ.

**ಪಳಿಹಸ್ತ** (ನಾ). [ಅಶ್ವಶಾ] ಕುದುರೆಯ ಮೊಳಕಾಲಿನ ಕೆಳಭಾಗ : ಜಂಘೆಯಿಂ ಕೆಱಗೆ ಪಳಿಹಸ್ತ(ತ್ತ)ಮೆಂಬ ಪೆಸರಕ್ಕುಂ ಪಳಿಹಸ್ತ(ತ್ತ) ಮನಾಶ್ರಯಿಸಿದುದರ್ಕೆ ಕೂರ್ಚಮೆಂಬ ಪೆಸರಕ್ಕುಂ (ಅಶ್ವಶಾ. ೮೮-೨೨).

[ ? ]

**ಪಳು** 'ಪೞುವ' ನೋ.

**ಪಳುಂಕು,** ಪಣಂಕು, ಪಳಂಕು, ಪಳಕು$_1$ (ಕ್ರಿ). ೧. ನೂಕು ; ತಳ್ಳು : "ಪಳುಂಕು (ಪೞುಕು)-ಪ್ರೇರಣೇ (ನೂಂಕು)" (ಶಮಧಾ) ; "ಪ[ಪಾಠಾಂ. ಪು]ಳುಂಕಿದನೆನಲ್ ನೂಂಕಿದಂ" (ಕಬ್ಬಿಕೈ. ೯೧). ೨. ಒತ್ತು ; ಅದುಮು : ಗಳದೊಳ್ ತೋಳ ಮೊದಲ್ ಪಳಂಚೆ . . . ಪೆರ್ವೊಲೆ ವಕ್ಷಸ್ಥಳಮಂ ಪಳುಂಕೆ (ಅನಂಪು. ೭-೧೮). **ಪಣಂಕು :** ೩. ಒತ್ತಿ ಹಿಡಿದುಕೊಳ್ಳು ; ಗಟ್ಟಿಯಾಗಿ ಹಿಡಿ : ಮಣಿಯುದವುಂಕಿ ಸೊಕ್ಕಡರೆ ಬಗ್ಗಿಸಿ ಕುತ್ತುವ ಕೊಂತ ನಟ್ಟ ಕಂಪಣದ ಪಣಂಕುವಿಟ್ಟಗಳ (ವರ್ಧಮಾ. ೪-೬೫). **ಪಳಂಕು :** ೩. "ಪಳಂಕು–ಗಾಢಸ್ಪರ್ಶನೇ (ಒತ್ತಿ ಹಿಡಿದುಕೊಳ್ಳು)" (ಶಮಧಾ). ೪. ಒತ್ತಿರು ; ಅದುಮಿಕೊಂಡಿರು : ಪೂಸಿದ ಕುಂಕುಮಮೆನಸುಂ ಬೀಸರವಾಗಿರದು ಮೊಲೆ ಪಳಂಕವು (ಬಂಹಿಂ. ೩-೧೪). **ಪಳಕು$_1$ :** ೫. ಜರ್ಝರಿತವಾಗು ; ನುಗ್ಗಾಗು : ಪಲಗೆಯನೇಱಿ ಗಾಳಿಯ ವಶದಿಂದಂಬರಾವತಿಯೆಂಬೂರ್ಗೆ ವಂದಿೞಿದೊಡೂರವರ್ ಕಂಡು ಪಳಕಿದ ಮೆಯ್ಯೊಂದದಂ ಭಿನ್ನಪಾತ್ರೆಯೆಂದಱಿದು ಸಂಭಾಷಿಸುತ್ತಿರ್ದು . . . ಎಂದೊಡೆ (ಬಂಹಿಂ. ೪-೧೫ ವ).

[ದೇ.|| ತುಳು. ಪಳೆಂಕು]

**ಪಳುಕ** 'ಪಟಿಕ' ನೋ.

**ಪಳುಕಿ** (ನಾ). ಒಂದು ಬಗೆಯ ಮರ : ಜಾಲಿ ಜಾನೆಯು ಬೋರೆ ತರೆಯು . . . ಬಿದಿರು ಬೆತ್ತಂ ಪಳುಕಿ ತೆಂಗು ತರುಜಾಲ ಶಳಿಮೆಳೆಯ ಬಹುಲತೆಗಳು ಕಿಕ್ಕಿ ಕಿಕ್ಕಿರಿಪ ಕಾನನದೊಳು (ನಪಮೋ. ೮-೯). [ ? ]

**ಪಳುಕು** 'ಪಟಿಕ' ನೋ.

**ಪಳುಕುಗಲ್** (ನಾ). ಸ್ಫಟಿಕಶಿಲೆ : ಗೋಪಿಯರ್ ಕುಳಿರ್ಗಲ್ಲಱೆಯ ಮೇಲೆ ಪಾಲ್ದೆನೆಗಳಂ ಪುಂಜಿಸಿ ಪಳುಕುಗಲ್ವಿಡಿದು ಕುಟ್ಟಿ ಕುಟ್ಟಿಕ್ಕಿಯಂ ಜಾಣಮರೆ ಸಮೆದು (ಪದ್ಮರಾ. ೮-೧೫). [ಪಳುಕು(<ಪಟಿಕ)+ಕಲ್$_3$]

**ಪಳುಕುಗಳಶ** (ನಾ). ಸ್ಫಟಿಕದ ಕಲಶ,–ಕೊಡ : ಚಾಪಲಾಂಬಿಕೆಯರು ಪಳುಕುಗಳಶವಿಡಿದಾ ಪಾನೀಯಶಾಲೆಯೊಳು ನಿಂದು ನೀರೆಱೆಯೆ ನಾರಿಯರ ಲಾವಣ್ಯವ ಸುಂದರಲೋಚನದಿಂದ ಕುಂದದೀಂಟುತ ಪಥಿಕರು ಜಲಪಾನ ಸಾಕೆಂದೆನ್ನರಾ ಬಟ್ಟೆಗಳೊಳು (ವರ್ಧಚ. ೧-೫೪).

[ಪಳುಕು(<ಪಟಿಕ)+ಕಳಶ(=ಕಲಶ)]

**ಪಳುಕುಗೊಡ** (ನಾ). =ಪಳುಕುಗಳಶ : ಪಳುಕುಗೊಡದೊಳಗೆ ಪೊಜಗುಜ್ವಳಿಪಂತರ್ಜ್ಯೋತಿಯಂತಿರೆ (ರಾಜಶೇ. ೧೩-೫೫) ; ಒಳಗಿರ್ಪ ಪ್ರಾಣಲಿಂಗವದು ತಾನೆ ಪಳುಕುಗೊಡದೊಳು ದೀಪದ ತೆಱದಿ (ಕೈಕಪ. ೪-೧೭-೩). [ಪಳುಕು(<ಪಟಿಕ)+ಕೊಡ$_2$]

**ಪಳುಕುವಣಿ** 'ಪಳಿಕುಮಣಿ' ನೋ.

**ಪಳುಕುವಲಗೆ** (ನಾ). ಸ್ಫಟಿಕದ ಹಲಗೆ : ಆ ಕ್ರೀಡಾಶೈಲಂಗಳೊತ್ತಿನೊಳ್ ಬಳಸಿದ ಪಳುಕುವಲಗೆಯ ನೆಲಗಟ್ಟುಂ (ಚಕವಂ. ೮೫-೩).

[ಪಳುಕು(<ಪಟಿಕ)+ಪಲಗೆ]

**ಪಳುಕುವಾಸಱೆ** 'ಪಳಿಕುವಾಸಱೆ' ನೋ.

**ಪಳುಗಾಡು** (ನಾ). ದಟ್ಟವಾದ ಕಾಡು ; ದಟ್ಟಡವಿ : ಓಕೊಂಡ ನಾತನುಂ ಪಳುಗಾಡೊಳೋಡೋಡಿ ಬರುತೆ (ಶ್ರೀರಾಮಾ. ೨೫೦-೬೦೮). ☞ ಇಲ್ಲಿ ಅವಧಾರಣೆಗಾಗಿ ಒಂದೇ ಅರ್ಥದ ದ್ವಂದ್ವಶಬ್ದಗಳನ್ನು ಬಳಸಲಾಗಿದೆ. [ಪಳು(<ಪೞುವ)+ಕಾಡು$_2$]

**ಪಳುಗು** 'ಪಳಗು' ನೋ.

**ಪಳುಗೋಂಟೆ** (ನಾ). ಒಂದು ಬಗೆಯ ದುರ್ಗ ; ವನದುರ್ಗ : ಈ 'ದುರ್ಗತ್ರಯ'ವನ್ನು 'ಬೆಟ್ಟಗೋಂಟೆ', 'ಕಡಲ್‌ಗೋಂಟೆ', 'ಪಳುಗೋಂಟೆ' ಅಥವಾ 'ನೆಲಕೋಟೆ' ಎಂದು ಹೇಳುವರು (ಕರ್ಣಾಜ. ೪).

[ಪಳು(<ಪೞುವ)+ಕೋಂಟೆ]

**ಪಳುವ** 'ಪೞುವ' ನೋ.

**ಪಳುವಟ್ಟೆ** (ನಾ). ಕಾಡುದಾರಿ : ಮಲೆಯ ಪಳುವಟ್ಟೆಯಂ ಕೊಂಡು ನಡೆತರೆ (ಶ್ರೀರಾಮಾ. ೧೮೩-೨೧೧). [ಪಳು(<ಪೞುವ)+ಬಟ್ಟೆ$_1$]

**ಪಳುವು** 'ಪೞುವ' ನೋ.

**ಪಳುವೆಱು** (ಕ್ರಿ). ಕಾಡಿನಿಂದ ಕೂಡಿರು ; ಗಿಡಮರಗಳಿಂದ ಆವೃತವಾಗಿರು : ಕುತ್ತುಜಾಗಿರ್ದ ಹೆಮ್ಮೆಳೆಗಳಂ ಸುಡುತ ಬಳವೆತ್ತ ಬೆಟ್ಟದ ಸೀಳ್ದು ಸೆಕ್ಕೆಗಳೆವುತ್ತ ಪಳು[ಪಾಠಾಂ. ಮುಳು, ಹುಲು]ವೆತ್ತ ನೆಲನಂ ಕರಿಕುವರಿಸುತ್ತ . . . ಸುತ್ತ ಮುತ್ತಿತ್ತು ದಾವಾನಳಂ (ಹಚಕಾ. ೧೦-೫). [ಪಳು(<ಪೞುವ)+ಪೆಱು$_1$]

**ಪಳೆ** 'ಪೞ$_1$' ನೋ.

**ಪಳಿಂಕ,** ಪಳ್ಯಂಕ (ನಾ). (ಉಕ) ೧. ಪಂಡಿತ. ೨. (ಆಲಂ) ದಡ್ಡ; ಉಡಾಳ: ನಿನ್ನ ಮೊಮ್ಮಗ ಏನೋ ಆ ನಾಟಕ ಆಡೋ ಪಳಿಂಕರ ಸಹವಾಸಕ್ಕ ಬಿದ್ದಾನ ಅಂತ ಕೇಳೇನಿ (ಗಂಗಾಸಾ. ೧೧೨); ಈ ನಮ್ಮ ಪಳಿಂಕ ಏನು ಮಾಡುತಾನೋ ಯಾರಿಗೆ ಗೊತ್ತು! (ಸಮುಜೀ. ೫೩೭). **ಪಳ್ಯಂಕ:** ೨. ಒಬ್ಬ ಭೋಳ್ಯಾ ಮುದುಕ ಯಜಮಾನನ ಇಬ್ಬರು ಪಳ್ಯಂಕರು ಗಂಟುಬಿದ್ದು . . . ಮಸಲತ್ತು ನಡಸ್ಯಾರ (ಹೊಸಂಸಾ. ೧೧೪). [?]

**ಪಳಿಗನ್ನಡ** 'ಪಟಿಗನ್ನಡ' ನೋ.

**ಪಳಿಗರ್ಪಡ** (ನಾ). ಹಳೆಯ ಬಟ್ಟೆ: ಪಳಿಗರ್ಪಡವುಂ ಕರ್ಚುವ ಚಳಕದ ಕರಮೆತ್ತ ಶಸ್ತ್ರಚಾಳನವಿದ್ಯಾಬಳಮೆತ್ತ (ವೃಷವಿ. ೧೨-೨೦). [ಪಳಿ(<ಪಟಿದು)+ಕರ್ಪಡ]

**ಪಳಿಗಾಲ** (ನಾ). ತೀರ ಹಿಂದಿನ ಕಾಲ; ಪುರಾತನಕಾಲ: ಪಳಿ[ಪಾಠಾಂ.ಳ]ಗಾಲದಂಬರ ಬೀಳದಂತವನಿಗೆ ನಳಿನಜನೊಲಿದಾಂಕೆಗೊಟ್ಟು ಕಳಧೌತದ ಕಂಭದಂತೆಸೆದುದು ವಿಯತ್ತಳವ ಚುಂಬಿಸುತಮರಾದ್ರಿ (ಕುರಾಸಾಂ. ೨-೭). [ಪಳಿ(<ಪಟಿದು)+ಕಾಲ]

**ಪಳಿಗೆರ್ಪು,** ಹಳಿಕೆರ, ಹಳಿಗೆರಹು (ನಾ). ಹಳೆಯ ಎಕ್ಕಡ; ಜೀರ್ಣವಾದ ಪಾದರಕ್ಷೆ; ಹರಿದ ಮೆಟ್ಟು: ಮಿಱುಪ ಭಕ್ತರ ಕಂಡೊಡವರಡಿಗೆ ಸಂತಸದೆ . . . ವಂದಿಸುತ್ತವರ ಪಳಿಗೆರ್ಪು ಗಳನೊಸೆದು ನೆಱೆ ಪೊಲ್ದು ಕೊಡುತೆ (ಅರಾಚ. ೧-೭-೧೧). **ಹಳಿಕೆರ:** ಎರೆಯಿಲ್ಲದಾರಂಬ ದೊರೆಯು ಇಲ್ಲದ ಊರು ಹರೆಯು ಹೋದವಳ ಒಡನಾಟ ನಾಯಿ ಹಳಿಕೆರವ ಕಡಿದಂತೆ (ಸರ್ವಜ್ಞ. ೧೭೩೫). **ಹಳಿಗೆರಹು:** ನಾಯಂತೆ ಕೆಟ್ಟು ಬೊಗುಳುವ ಕುನ್ನಿಗಳ ಬೆಂದ ಬಾಯನಾ ಪುಲ್ಯಸರ ಹಳಿಗೆರಹಿನಿಂ ಹೊಡಸಿ (ವೀಶೈಪು. ೩-೨೩-೧೧). [ಪಳಿ(<ಪಟಿದು)+ಕೆರ್ಪು]

**ಪಳಿಗೊಂಡೆ** (ನಾ). ಹಳೆಯ ಎತ್ತು; ಮುದಿಬಸವ: ಪಳಿಗೊಂಡೆ ಬಿಳ್ದ ಪೊಸವುಲ್ಲಳ ಪೊದಱೊಳ್ ತನ್ನನೆತ್ತುವವರಿಲ್ಲದೆ ಮೇಣ್ಣಳಲು ತ್ತಿರ್ದಪುದು (ವೃಷವಿ. ೧೦-೭). [ಪಳಿ(<ಪಟಿದು)+ಗೊಂಡೆ₁]

**ಪಳಿಗೊಳ್ಳಿ** (ನಾ). ಹಳೆಯ ಕೊಳ್ಳಿ; ಉರಿದು ಆರಿದ ಕೊಳ್ಳಿ: ಪಳಿ[ಪಾಠಾಂ.ಳ]ಗೊಳ್ಳಿಗಳ ಭಸ್ಮದೊಡೆದೋಡುಗಳ . . . ಸುಡುಗಾಡೊಳು (ಜೈಮಿಭಾ. ೩೧-೫೫). [ಪಳಿ(<ಪಟಿದು)+ಕೊಳ್ಳಿ₁]

**ಪಳಿಗೊಱಡು** (ನಾ). ಹಳೆಯ ಮೋಟುಮರ; ಹಳೆಯ ದಿಮ್ಮಿ,-ಕೊರಡು: ಎಲರೊಲಪಕೆ ನನೆವೋದೆಳಲತೆ ಮೆಲ್ಲನೊಲೆವಂತೆ ಪೊಲು ಪಳಿಗೊಱಡು ಅಲುಗದು (ಶ್ರೀಪಾಲ. ೧-೨೨). [ಪಳಿ(<ಪಟಿದು)+ಕೊಱಡು(<ಕೊಱಂಡು)]

**ಪಳಿಗೋಱು** (ನಾ). ಹಳೆಯ ಚಿಂದಿ; ಹರುಕಲು ಬಟ್ಟೆ: ಪೊಸ ಮಿಸುಪಿಪಸದನವ ಬಿಸುಟು ಬೇಗಡೆಗಪೇಕ್ಷಿಸುವಂತೆ ಪಟ್ಟಾವಳಿಯು ಬಿಟ್ಟು ಪಳಿಗೋಱು[ಪಾಠಾಂ. ಲಿ]ಗಂ ಬಸಿದು ಬೀಳ್ವಂತೆ (ನಂದಿಪೂ. ೨೨-೧೬). [ಪಳಿ(<ಪಟಿದು)+ಕೋಱು₁]

**ಪಳಿಗೌದಿ** (ನಾ). ಹಳೆಯ ಕೌದಿ,-ಹಚ್ಚಡ: ಆರಾದೊಡಿನ್ನೊಂದರುವೆ ಗೊಟ್ಟು ಪಳಿಗೌದಿಯುಂ ಬಿಡಿಸರ್ (ಕೊಟ್ಟೂಬ. ೮-೧೪). [ಪಳಿ(<ಪಟಿದು)+ಕೌದಿ(<ಕವುಂದಿ)]

**ಪಳಿದುಪ್ಪ,** ಹಳದುಪ್ಪ (ನಾ). ೧. ಹಳೆಯ ತುಪ್ಪ: ರಸಿಕಂಗೆ ಪಳಿದುಪ್ಪವೆನಿತಿರ್ದೊಡಂ ಸದ್ಯೋಘೃತಂ ಸೊಗಸನೀಯದೇ (ಪದ್ಮರಾ. ೧-೪೬). **ಹಳದುಪ್ಪ:** ೨. ಔಷಧಿಯಂತೆ ಬಳಸುವ (ಒಂದು ಬಗೆಯ) ಹಳೆಯ ತುಪ್ಪ: ಆದ ಮೈಗಂಡಿಯೊಳು ರಕುತವ ಶೋಧಿಸುತ ಹಳದುಪ್ಪವನು ತೊಡೆದಾದರಿಸಿದುದು ವೈದ್ಯಸಂತತಿ ವೀರ ಭಟರುಗಳ (ಕುವ್ಯಾಭಿ. ೬-೪೧). [ಪಳಿ(<ಪಟಿದು)+ತುಪ್ಪ]

**ಪಳಿನುಡಿ** 'ಪಟಿನುಡಿ' ನೋ.

**ಪಳಿನೆಲ್ಲು** (ನಾ). ಹಳೆಯ ನೆಲ್ಲು,-ಬತ್ತ: ಜಿನ ವನಜಾಕ್ಷ ಮನ್ಮಥ ಶಿವಂ ಪಳಿನೆಲ್ಲು ಪತಂಗ ಪಂಕಜಾಸನ ಮುನಿ ವೃಷ್ಟಿ ಕಾವಿನಿಯಜಾದಿ ಗಳಿಂತಜಶಬ್ದಮಕ್ಕು (ನಾನಾರ. ೪೮). [ಪಳಿ(<ಪಟಿದು)+ನೆಲ್ಲು(<ನೆಲ್)]

**ಪಳಿಯ** 'ಪಟಿದು' ಪರಾ.

**ಪಳಿಯಾಱು** (ನಾ). ಒಂದು ಸ್ಥಳದ ಹೆಸರು: ಪಳಿಯಾಱುೊಳ್ದೀವ ನಾಟನ್ನಿಱಿದು ಮಡಿಪಿದೊಂ ಪಾಣ್ಡ್ಯನನ್ (ಎಕ. XI, ಚಿತ್ರದು. ೭೭-೩೭; 937). [?]

**ಪಳಿಯುೞಿಕೆ,** ಹಳೆಯುಳಿಕೆ (ನಾ). ಹಿಂದಿನಿಂದ ಉಳಿದು ಬಂದುದು; ಪ್ರಾಚೀನ ಅವಶೇಷ: "ಭೂಪದರದಲ್ಲಿ ಸಿಕ್ಕಿ ರಾಸಾಯನಿಕ ಅಥವಾ ಇತರ ಮಾರ್ಪಾಟನ್ನು ಹೊಂದಿದ (ಸಾ., ಚರಿತ್ರಪೂರ್ವಯುಗದ) ಸಸ್ಯ ಅಥವಾ ಪ್ರಾಣಿಯ ಅವಶೇಷವೆಂದು ಗುರುತಿಸಬಹುದಾದ ಪದಾರ್ಥ(ದ): ಪಳೆಯುಳಿಕೆ(ಯು); ಜೀವ್ಯವಶೇಷ (ದ)" (Fossil. ಇಂಕಸಿ); ಈ ಪಳೆಯುಳಿಕೆಗಳೆ ಲುಪ್ತಜೀವಿಶಾಸ್ತ್ರದ ಮೂಲಾಧಾರ (ಪ್ರಾಣಿಶಾ. ೧೧); ಪ್ರಾಚೀನಮಾನವ . . . ಮಾಡುವ ಕೆಲಸಕಾರ್ಯಗಳಲ್ಲಿ ಕ್ರಮೇಣ ಉತ್ತಮಮಾರ್ಪಾಟುಗಳನ್ನು ಮಾಡಲುಪಕ್ರಮಿಸಿದ್ದ ಎಂಬ ವಿಷಯಗಳು ಅವನು ಬರೆದ ಚಿತ್ರ, ಉಪಯೋಗಿಸುತ್ತಿದ್ದ ಆಯುಧಾದಿ ಪಳೆಯುಳಿಕೆಗಳಿಂದ ವ್ಯಕ್ತವಾಗುತ್ತದೆ (ಕವಿಕೋ. I, ೭೧೧); ಅಂಥ ಒಂದು ಪಳೆಯುಳಿಕೆಗೆ ವಿದೇಶಗಳಲ್ಲಿ ಪ್ರಸಿದ್ಧಿಯೇ? (ಒಂಟಿದ. ೧೪). **ಹಳೆಯುಳಿಕೆ:** ಇವು ಅವಶೇಷಗಳು, ಹಳೆಯುಳಿಕೆಗಳು (ಕಬಸಾ. ೧೨೨). [ಪಳಿ(<ಪಟಿದು)+ಉೞಿಕೆ(<ಉೞಿಕೆ)]

**ಪಳಿವಾತು** 'ಪಟಿವಾತು' ನೋ.

**ಪಳಿವೆಸ** (ನಾ). ಹಳೆಯ ಕೆಲಸ; ಹಿಂದೆ ಮಾಡಿದ ಕಾರ್ಯ: ಜಾಣರೆನೆ ಪೂಜಿಪರ್ಗ್ಗ ಪುರಾಣದ ಭಟ್ಟರ್ಗ್ಗ ಪಾತ್ರಪಾವುಳತತಿಗಂ ಮಾಣದೆ ಖಣ್ಡಸ್ಫುಟಿತಶ್ರೇಣಿಯ ಪಳಿವೆಸನ ಪೊಸತು ಮಾಡುವುದಕ್ಕುಂ (ಸೌಇಇ. IX-i, ೧೫೩-೫೭; 1083). [ಪಳಿ(<ಪಟಿದು)+ಬೆಸ₁]

**ಪಳಿವೊಳ್ತಲೆ** (ನಾ). ಮುಂಜಾನೆ; ಬೆಳಗಿನ ಜಾವ: ಪಳಿವೊಳ್ತಲೆ ಯೊಳ್ ಸುಂದರವಿಳಸಿತಪದಮಂ ಸಮಾರ್ಜನಂಗೆಯ್ವುದು ಮತ್ತಳುರ್ದ ನಿಡುನೇಹದಿಂ ಗುಣಸಿಳಯನ ಪದದೊಳ್ ವಿರಾಜಿಪುದು ಸೀನೆಂದಂ (ಹಾಲಾಸ್ಯ. ೧-೪-೧೦೧). [℗ ಇದು 'ಪಳಿವೊಳ್ತಱಿ' ಎಂಬುದರ ಅಪಲಿಖಿತವಿರಬಹುದು]

**ಪಳ್ಕು** 'ಪಟಿಕ' ನೋ.

**ಪಳ್ಕೆ** 'ಪಟಿಕ್ಕೆ' ನೋ.

**ಪಳ್ಕೆವನೆ** 'ಪಟಿಕ್ಕೆವನೆ' ನೋ.

**ಪಳ್ತಿ** 'ಪಟಿತ್ತಿ' ನೋ.

**ಪಳ್ಪಳಿ** (ಕ್ರಿ). (?): ದಲಿವಂ, ಪಳಿವಂ, ಹೋ ಹೋ ಪಳ್ಪಳಿವಂ ಜಗದ್ವ್ಯತಿಕರಕ್ರೀಡಾವಿನೋದಂ ಜಿನಂ (ಶಬ್ದಾನು. ೫೩ ಪ್ರಯೋ). [?]

**ಪಳ್ಯಂಕ** 'ಪಳಿಂಕ' ನೋ.

**ಪಳ್ಳ,** ಹಳ್ಳ (ನಾ). ೧. ನೀರಿನ ಸಣ್ಣಪ್ರವಾಹ; ಚಿಕ್ಕ ನದಿ; ತೊರೆ: ಕಂದಮೂಲಫಲಂಗಳಂ ತಿಂದು ತೊಱೆಯ ಪಳ್ಳದ ನೀರ್ಗಳಂ ಕುಡಿದು (ಪದ್ಮಾರಾ. ೯೦-೨೨); ನೆಣದ ಪಳ್ಳಂಗಳಂ ಪಾಯ್ದಂ ನೆತ್ತರ ತೊಱೆಗಳಂ ಬಂಚಿಸಿಯುಂ . . . ಪೋಗಿವೋಗಿ (ಪಂಪಭಾ. ೧೩-೫೩ ವ); ಪಲವುಂ ಪಳ್ಳ ಸಮುದ್ರವೈ (ಸೋಮೇಶ. ೧); ಪರಿಮಳದ

ಪೞನೀರ ಪಳ್ಳಮಂ ದಾಂಟಲಾಱದ ಬಾಲಮರಾಳಂಗಳಂ (ಗಿರಿಕ. ೨-೬೧ ಪ); ಕೆಱೆ ಕೊಳ ಪಳ್ಳ ಬಾವಿ ಮೊದಲಾದವನೀಂಟಿಯುಂ (ಹಾಲಾಸ್ಯ. ೧-೯-೬). ೨. ತಗ್ಗಾದ ಪ್ರದೇಶ; ಎತ್ತರವಲ್ಲದ ಜಾಗ: (ಕ). ೩. ತಗ್ಗು; ಗುಂಡಿ: ಎತ್ತೆತ್ತಲುಂ ಪಳ್ಳಕೊಳ್ಳ ಮುಳ್ಳವನಿತಳಂ (ಚೆ.ಪು. ೪೯-೩೧); ಮಡುಗಿಡು ಸರು ದಱಿ ಪಳ್ಳಂ . . . ಕುತ್ತುಱು ನಾನಲ್ಲಿಕೊಳೆಡೆವಿಡದೋಡಿತ್ತು ಪಂದಿ (ಶಬಶಂ. ೪-೨೩); ಪಳ್ಳದಿಂಟಿ ಕಿಱುದೆಱೆಗೆಱೆಗಳ್ (ಚಕವಿ. ೧-೧೫). **ಹಳ್ಳ:** ೧. ಮೂಡಲು ಹಳ್ಳವೆ ಮೇರೆ (ಸೌಇಇ. VIII, ೩೭೪-೧೭; 1085); ತೃಷೆಯಾದರೆ ಕೆಱೆ ಬಾವಿ ಹಳ್ಳಗಳುಂಟು (ಮಹಾವೇ. ಬ. ೭೯-೧೯೯); ಕಾನನದ ಹಳ್ಳದ ಶಿಲೋಚ್ಚಯ ಸಾನು (ಕುವ್ಯಾಅ. ಓರಿಇ. ೧೪-೨೪); ಎಲ್ಲಿ ನೋಡಲು ಸರಿ ಜರಿ ಹಳ್ಳ ಬರೆಗಳು ಕಲ್ಲ ಪಡೆಗಳು ಗುಹೆಗಳು (ಕಂಸವಿ. ೧೮-೪೩); ಹನಿಗೂಡಿದರೆ ಹಳ್ಳ, ತೆನೆಗೂಡಿದರೆ ಬತ್ತ (ಗಾದೆ). ೨. ಅವರ ಗದ್ದೆ ಹಳ್ಳದಲ್ಲಿರುವುದರಿಂದ ನೀರು ಯಾವಾಗಲೂ ನಿಂತಿರುತ್ತದೆ (ರೂಢಿ). ೩. ಯಾವ ಆನೆಯು ಶಿರೋಭಾಗದಲ್ಲಿ ಹಳ್ಳವಾಗಿ ಹಿಂಭಾಗದಲ್ಲಿ ಸುಂದರವಾಗಿ . . . ಅತ್ಯಂತ ಮದೋದಕವಂ ಸ್ರವಿಸುವದು (ಸೌಗಂಧಿ. ೨೬೯-೩); ಅವರು ಮನೆಯ ಮುಂದೆ ಚಪ್ಪರದ ಕಂಬ ನೆಡಲು ಹಳ್ಳ ತೋಡಿದ್ದಾರೆ (ರೂಢಿ).

**ಹಳ್ಳಕ್ಕೆ ಬೀಳು**=೧. ಗುಂಡಿಯಲ್ಲಿ ಬೀಳು: ತೋಳ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲು (ಗಾದೆ). ೨. ಮೋಸ ಹೋಗು; ಬೇಸ್ತುಬೀಳು: ತಿಳಿದೂ ಹಳ್ಳಕ್ಕೆ ಬೀಳುವ ಮೂರ್ಖರು ನಾನಲ್ಲ (ಸಿಕೆಉ. ೬೬). **ಹಳ್ಳಗೂಡಿ ಹೋಗು**=ನಾಶವಾಗು: ನಾಟಕ ಸಿನಿಮಾ ಥಾಟಗಳಲ್ಲಿ ಸಿಲುಕಿ ಹಿಂದಿನ ಸಾಹಿತ್ಯವು ಹಳ್ಳಗೂಡಿ ಹೋಗಬಹುದು (ರೂಢಿ). **ಹಳ್ಳ ಹಿಡಿ**=ಹಾಳಾಗು; ನಾಶವಾಗು; ಕೆಟ್ಟು ಹೋಗು: ನಮ್ಮ ಧರ್ಮ ಹಳ್ಳಾ ಹಿಡಿದು ಹೋಗ್ತದ ನೋಡ್ರಿ ಬೇಕಾದರ (ಹೊಸಂಸಾ. ೮); ನಮ್ಮಪ್ಪ ಹಚ್ಚಿ ಕೊಟ್ಟ ನೌಕರಿ ಇಲ್ಲದಿದ್ದರ ಹಳ್ಳಾ ಹಿಡೀತಿದ್ದ (ಗಂಪಾಯಿ. ೬೭).

[ದೇ.॥ ತಮಿ. ಪಳ್ಳಮ್; ಮಲ. ಪಳ್ಳ; ತುಳು. ಪಳ್ಳ, ಪಲ್ಲ; ತೆಲು. ಪಲ್ಲ]

**ಪಳ್ಳಗೞ್ದೆ**, ಹಳ್ಳಗದ್ದೆ (ನಾ). ತಗ್ಗಾದ ಪ್ರದೇಶದಲ್ಲಿರುವ ಗದ್ದೆ; ತಗ್ಗಿನ ಗದ್ದೆ: ಇಪಗೊಣ್ಡನ ಒರೆಯ್ಗೆ ಪುಚ್ಚಿ ಕಟ್ಟಿದ ಕೊಡಗಿ ಪಳ್ಳಗೞ್ದೆ ನಾಲ್ಗಣ್ಡುಗ (ಎಕ. IV, ಹುಣಸೂ. ೧೧-೧೦; 1020). **ಹಳ್ಳಗದ್ದೆ:** ಹಳ್ಳಗದ್ದೆಗಳಾಗಿ ಕುಳ್ಳವೆರಡೆತ್ತಾಗಿ ಒಳ್ಳೆ ಗುಣದವಳು ಸೊಸೆಯಾದರಾ ಮನೆಗೆ ಬಳ್ಳದಲಿ ಹೊನ್ನು (ಸರ್ವಜ್ಞ. ೧೭೧೬).

[ಪಳ್ಳ+ಗೞ್ದೆ]

**ಪಳ್ಳನೆ** (ಅ). ಒಂದು ಅನುಕರಣಾವ್ಯಯ; ತಟ್ಟನೆ; ಕೂಡಲೆ; ಇದ್ದಕ್ಕಿದ್ದಂತೆ: ಜನಕಜೆಗಾಸೆಗೆಯ್ಕೆ ಸುಕೃತಕ್ಷಯದಿಂ ಜಲವರ್ಷವಿದ್ಯೆ ಪಳ್ಳನೆ ಪೆಱಪಿಂಗೆ (ಪಂರಾಮಾ. ೧೧-೧೫೬). [ಪಳ್$_0$+-ಅನೆ$_1$]

**ಪಳ್ಳವಳ್ಳಿ** 'ಬಳ್ಳಿವಳ್ಳಿ' ನೋ.

**ಪಳ್ಳಾಳ್ಗಾಪಂದ** (?) (ನಾ). (?): ಸತಿಪನ್ನೆರಾಟ್ಟು ಕಿಱುದೆಱೆಯುಮ್ಮುದು ಪಳ್ಳಾಳ್ಗಾಪನ್ದರು ಎಚ್ಚು ಬಿದ್ದ ಕುತ್ತಟ್ಟುಗಾವುಣ್ಡರುಮ್ ಬಿದ್ದ ××× ಣ್ಡತ್ತಿ (ಎಕ. XVI, ಸಿರಾ. ೧೨೩-೧೦; 783). [?]

**ಪಳ್ಳಿ$_1$**, ಹಳ್$_5$, ಹಳ್ಳಿ (ನಾ). ೧. ಚಿಕ್ಕಊರು; ಗ್ರಾಮ: ಗುವಳಾಲಗೊಱ್ಗವಾಣರಸ ಆಳೆ ವೇಗೂರಂ ಪೊಂಪುಲಂ ಆಳೆ ತುಱುಕೊಳೆ ಪಳ್ಳಿ ಅರಕ್ಕಮನ್ ತುಱುವಿಟ್ಟು ವಿಟ್ಟಮಾಮಾನಿ (ಎಕ. X, ಮುಳಬಾ. ೨೬೫-೨; ಸು. 860); ಇಲ್ಲಿಗನತಿದೂರದೊಳ್ ಮಾತಂಗರ ಪಳ್ಳಿಯಿರ್ಪುದಲ್ಲಿಗೆನ್ನಾಳ್ದನೊಡೆಯಂ (ಕಾದಂಉ. ೭೩೯); ಖೂಳ ಗೊಲ್ಲರ ಪಳ್ಳಿಯಲಿ ಕಟ್ಟಾಳಲಾ (ಕುವ್ಯಾಸ. ಓರಿಇ. ೧೧-೧೫); ಒಕ್ಕಲುದೆಗೆದಿಹ ಪುರ ಪಳ್ಳಿ ಗ್ರಾಮವ ಹೊಕ್ಕು ಸೂಱೆಯನಾಡಿಕೊಳುತ (ಕಂಸವಿ ೧೨-೮). ೨. ನೆಲಸುವಿಕೆ; ತಂಗುವಿಕೆ: 'ಪಳ್ಳಿರ್' ಪರಾ. **ಹಳ್$_5$:** ೧. ಸಾರಥಿಯ ಬಲದಿಂದ ನಾ ನೆಲ ನೀರುಗಳ ಮೇಲಿಂದಲೆ ದೂರದಾ ಹೊಳಲುಗಳ ಹಳಗಳ ಸಾರಿ ಬೇಗನೆ ಹಾಯುವೆ (ಕಪು. ೨೯-೭). **ಹಳ್ಳಿ:** ೧. ಹಟ್ಟಕಾಱರಿಹ ಹಳ್ಳಿ ಘೋಷಂ (ಮಂಗರಾ. ೫೫-೧೦); ನೀನು ಮೇಣ್ ಗೋವಳರ ಹಳ್ಳಿಯ ಭಟನೋ (ಕುವ್ಯಾಸ. ಓರಿಇ. ೧೧-೩೭); ಮೂರುಮನೆಯ ಹಳ್ಳಿಯಿರಲಿ ಅಲ್ಲೊಂದು ಚಾವಡಿ ಕಾಣಲೇ ಬೇಕು (ಗಾಳಿಸು. ೧); ಒಳ್ಳೆಯವರ ಮಾನ ಹಳ್ಳಿಯಲ್ಲಿ ಹೋಯಿತು (ಗಾದೆ).

**ಹಳ್ಳಿಪಳ್ಳಿ** (ಕೂಡುನುಡಿ): ನಾಟ್ಯಕಲೆಯು ಹಳ್ಳಿಪಳ್ಳಿಗಳಲ್ಲಿ ಇದೀಗ ಹೆಚ್ಚಾಗಿ ಬೆಳೆಯುತ್ತಾ ಬಂದಿದೆ (ಅಮಗಾಂ. IV, ಮುನ್ನುಡಿ); ಹಳ್ಳಿಪಳ್ಳಿ, ಮನೆಮನೆಯಲ್ಲಿ ಜನದ ಮಾತೇ ಮನದ ಮಾತಾಗಬೇಕು (ವಿಚಾಮಂ. ೧೯); ಆಟವೆಂದರೆ ಸುತ್ತಿನ ಹಳ್ಳಿಪಳ್ಳಿಗಳಿಂದ ಜನರು ಬರುತ್ತಿದ್ದರು (ಹುಟ್ಟಹ. ೮೩). **ಹಳ್ಳಿಯ ಗೌಡ**=೧. ಚಿಕ್ಕ ಊರಿನ ಪಟೇಲ. ೨. ಗ್ರಾಮೀಣ; ಗಾವಿಲ; ಹಳ್ಳಿಗ: ಗೌಡದೇಶದ ರಾಯನಿವನೆನೆ ಹಳ್ಳಿಯ ಗೌಡನೆಂದೆಣಿಸಿ ಸಾಗಿದಳು (ಭರಚ. ೫೫-೯೩).

[ದೇ.॥ ತಮಿ. ಮಲ. ಪಳ್ಳಿ; ತುಳು. ಹಳ್ಳಿ; ತೆಲು. ಪಲ್ಲಿ, ಪಲ್ಲೆ; ತೊದ. ಪೊಳ್./ಸಂ. ಪಲ್ಲಿ, ಪಲ್ಲೀ]

**ಪಳ್ಳಿ$_2$** (ನಾ). (ಕರಾ) ಒಂದು ಬಗೆಯ ಆಟ; ಇಬ್ಬರು ಹುಡುಗರಲ್ಲಿ ಒಬ್ಬನ ಎಡಗೈಯನ್ನು ಇನ್ನೊಬ್ಬನು ತನ್ನ ಎಡಗೈಯಿಂದ ಹಿಡಿದು, ಇತರರು ಬಿಡಿಸಲು ಯತ್ನಿಸಿದರೆ ಸಾಧ್ಯವಾಗದಂತೆ ಬಿಗಿಯಾಗಿ ಹಿಡಿದು ಆಡುವ ಆಟ: ಪಳ್ಳಿ ಆಡಿದರೂ ತಳ್ಳಿ ಬಿಟ್ಟು ಹೋಗದು (ಗಾದೆ). [←ತುಳು. ಪಳ್ಳಿ]

**ಪಳ್ಳಿಕ** (ನಾ). (?): ಖಣ್ಡಸ್ಫುಟಿತಮುಮುತ್ತಮನ್ನೈವೇದ್ಯಮನುದಿನಂ ಸಲ್ವನಗಂ×××ಸ್ವಾಸ್ವರಮಾ ಬಳಿಯ ಪಳ್ಳಿಕದ ಸಮನೊನ್ದಂ (ಎಕ. VII (S), ಶಿಕಾರಿ. ೩೪೫-೪; ಸು. 1100). [?]

**ಪಳ್ಳಿಕಾಱ**, ಹಳ್ಳಿಕಾರ, ಹಳ್ಳಿಕಾಱ (ನಾ). ೧. ಹಳ್ಳಿಯವನು; ಗ್ರಾಮವಾಸಿ: ಗಾವುಣ್ಡ ಕಾಡಿಯಣ್ಣಙ್ಗೆ ಮೂಗಣ್ಡುಗೞ್ದೆ ಪಳ್ಳಿಕಾಱ ತುವಣ್ಣಙ್ಗೆ ಮೂಗಣ್ಡುಗೞ್ದೆ (ಸೌಇಇ. IX-i, ೨೬-೧೫; 950); ಆ ಪಳ್ಳಿಕಾಱನಂ ಕೂಡಿಕೊಂಡು ಅಲ್ಲಿಗೆ ಬಂದು (ಭೈರಸೂ. I, ೨೮೨). **ಹಳ್ಳಿಕಾರ:** ೧. ಹಳ್ಳಿಕಾರನಲ್ಲ ಹಾದಿಕಾರನಲ್ಲ ಭದ್ರೆ ಚಿನ್ನವ್ನ ಮಗನಲ್ಲೇ ಜಾಣೆ (ನಾಪದ. ೩೮). ೨. ದನಗಳಲ್ಲಿ ಒಂದು ಉತ್ತಮವಾದ ತಳಿ: ಅವರ ಮನೆಯಲ್ಲಿರುವುದು ಹಳ್ಳಿಕಾರ ಜಾತಿಯ ಹಸು (ರೂಢಿ). **ಹಳ್ಳಿಕಾಱ:** ೧. ಧರಣಿಪಾಲರ ಮಧ್ಯದಲಿ ಭಾಸ್ಕರನು ಗಡ ತುಱು ಹ[ಪಾಠಾಂ.ಪ]ಳ್ಳಿಕಾಱರ ಪುರದ ಭಾಸ್ಕರನೀತ ನಲ್ಲಾ (ಕುವ್ಯಾಸ. ೮-೧೭); ಹಳ್ಳಿಕಾಱನ ಕುಱುಹ ಕವಿಕವಿಯೆನುತ ಬೋಎಂದುಬ್ಬಿ ಬೊಬ್ಬಿಱಿದು (ತೊರರಾ. ೩-೬-೮); ಹಳ್ಳಿಕಾಱರು ಕಾಣುತೀ ಪರಿ ತಲ್ಲಣಿಸುವಲ್ಲಿ (ಸಿಭಾಗ. ೩-೮-೧೮). [ಪಳ್ಳಿ$_1$+-ಕಾಱ]

**ಪಳ್ಳಿಕೂಟ** (ನಾ). ಹಳ್ಳಿಯ ಪಾಠಶಾಲೆ; ಗ್ರಾಮದ ಸ್ಕೂಲು: ಎಲ್ಲಾ ಪಳ್ಳಿಗಳೊಳಂ ಪಳ್ಳಿಕೂಟಂಗಳ ಕಲ್ಪಿಸಿಯುಂ (ಮರಾಚ. ೧೦೭-೩೬); ಆ ಗ್ರಾಮದ ಪಳ್ಳಿಕೂಟ(School)ದ ಅಯ್ಯನವರಿಗೆ ತನ್ನ ಮಕ್ಕಳಿಗೂ ವಿದ್ಯಾಭ್ಯಾಸ ಮಾಡಿಸೆಂದು ಮೊರೆಬಿದ್ದಳು (ಕಭವಿ. ೪೨೭). [ಪಳ್ಳಿ$_1$+ಕೂಟ$_1$]

**ಪಳ್ಳಿಗ**, ಹಳ್ಳಿಗ (ನಾ). ೧.=ಪಳ್ಳಿಕಾಱ ೧: ಕಳ್ಳರುಮೊಡೆಯರುಮೊಂದಿರೆ ಪಳ್ಳಿಗರೇಗೆಯ್ವರೆಂಬ ನುಡಿಗೆಡೆಯಪ್ಪರ್ (ಚಕವಿ. ೬-೨೬೬). **ಹಳ್ಳಿಗ:** ೧. ಇವೆಲ್ಲ ಹಳ್ಳಿಗರಿಂದ ಬಂದ ಕಾಣಿಕೆಗಳಾಗಿದ್ದವು

(ಹಬ್ಬ.ಬ. ೨) ; ಈ ರತ್ನವನ್ನು ಒರ್ವ ಕಗ್ಗ ಬಡ ಹಳ್ಳಿಗನ ಕೊರಳಲ್ಲಿ ಕಟ್ಟುವ ಪ್ರಸಂಗವು ಒದಗಿದೆ (ಪರಿಣೀ. ೫) ; ಇನ್ನು ಮೇಲಾದರೂ ಹಳ್ಳಿಗರನ್ನು ತಿದ್ದುವ ಕೆಲಸವನ್ನು ಕೈಗೊಳ್ಳುವುದು ಒಳ್ಳೆಯದು (ಹುಟ್ಟಹ. ೧೮೬). ೨. (ಅಲಂ) ದಡ್ಡ ; ಹೆಡ್ಡ : ಯಾವನೋ ಹಳ್ಳಿಗನು ಅದನ್ನು ಪ್ರತಿಲಿಪಿಗೊಳಿಸಿರಬೇಕೆಂದು ಕಾಣುತ್ತಿತ್ತು (ಬಾಣಅ. ೨೦೨). [ಪಳ್ಳಿ$_1$ + -ಇಗ]

**ಪಳ್ಳಿರ್** (ಕ್ರಿ). ತಂಗು ; ನೆಲಸು : ಪಳ್ಳಿರಲ್ಕೆಂದವರ್ಗೀವುದೊಳ್ಳು ನಿಲೆ ಕಂಚಿ ನೆಗಟ್ತೆಯ ವಾರಣಾಸಿ (ಪಂಪಭಾ. ೯-೪೩). P 'ಇರಲ್ಕೆ ಪಳ್ಳಿ' ಎಂದು ಅನ್ವಯ ಮಾಡಿದರೆ ಈ ಪದದ ಅಸ್ತಿತ್ವಕ್ಕೆ ಅಡ್ಡಿ ಬರುತ್ತದೆ ಎಂಬುದು ವಿಚಾರಣೀಯ. [ಪಳ್ಳಿ$_1$ + ಇರ್$_1$]

**ಪಳ್ಳಿವರ್** (ಕ್ರಿ). (ಅಲಂ) ಗುಂಪುಕೂಡಿ ಬರು ; ಒಟ್ಟಾಗಿ ಬರು : ಮುನಿದಿಂದ್ರಂಗೆ ಸುರಾಂಗನಾತತಿ ಸುರೇಂದ್ರಾವಾಸದಿಂ ಪಳ್ಳಿವಂದು ನಿತಾಂತಂ ನೆರೆದಿರ್ದರಂಬರದೊಳ್ (ಧರ್ಮಾಮೃ. ೮-೧೯೫).

[ಪಳ್ಳಿ$_1$ + ಬರ್ (<ವರ್)]

**ಪಳ್ಳಿವೋಗು** (ಕ್ರಿ). (ಅಲಂ) ಗುಂಪಾಗಿ ಹೋಗು ; ವಲಸೆ ಹೋಗು : ವನಜಾನೀಕಮೆ ಪಳ್ಳಿವೋಪ ತೆಱದಿಂ ಕಿಟ್ಟಿರ್ದುದು ಭೂಪಂ ತಪೋವನಮಂ ಪುತ್ರಕಳತ್ರಮಿತ್ರಸಹಿತಂ ಪೊಕ್ಕಂ (ಆದಿಪು. ೪-೮೩) ; ಆ ಬಾಲೆ . . . ನೂರ್ಮಡಿ ಸುಡುವ ವಿರಹಪರಿತಾಪಕ್ಕೆ ಕಣ್ಣಲಿಡೆ ನಾಳ್ಕಡಿವೋದಂತೆಯುಂ ಪ್ರಾಣಂಗಳ್ ಪಳ್ಳಿವೋ[ಪಾಠಾಂ.ಳ್ತೀರೊಡೆ]ದಂತೆಯುಂ . . . ಮುಚ್ಚೆವೋಗಿರ್ಪುದುಂ (ಲೀಲಾವ. ೧೦-೭೦ ವ).

[ಪಳ್ಳಿ$_1$ + ಪೋಗು$_1$(<ಪೋ$_1$)]

△ **ಪಱಗು** (ಕ್ರಿ). ಭೂಮಿಯನ್ನು ಹರತೆ ಹೊಡೆ ; ಹರಗು. **ಪಱಗ ಕೊಳ್** = (ಅಲಂ) ಮೂಲೋತ್ಪಾಟನ ಮಾಡು ; ನಾಶ ಮಾಡು: ಪಡೆಮುಂಚ್ಚೆ ಗಂಡ ಮಾರ್ಕ್ಕೊಳ್ವರ ಗಂಡ ಬ[೦]ಟಸಾಸಿರ್ವ್ವರ ಬಣ್ಣಮಾಸಳೆಯು ಬಂಮಂ ತುಱುವ ವಗುಬಿ ಪಱಗ ಕೊಂಡು ಸುರಲೋಕ ಪ್ರ[ಪ್ತ]ನಾದಂ (ಕಇ. II, ೧೭-೫ ; 1126). [<ಪರಗು]

**ಪಱಣಿ** 'ಪಱುಣಿ' ನೋ.

**ಪಱಪಱಿಸು** (ಕ್ರಿ). ಸ್ಪರ್ಧಿಸು ; ಪೈಪೋಟಿ ಮಾಡು ; ಮೇಲಾಟ ಹೂಡು : ಬಱಿದೆ ಪಱಪಱಿಸಿ ನೆಱೆ ಬೆಬ್ಬಱಬೆಱುಟಱೆ ಅಡಕಣ ಬಾಯಿ ಪೋಱೆಮಾಡಿ ಕಿ[ಱಿ]ಧೆ ಮಾಂನ್ದಪನೆ ಸುಭಟಚೂಡಾರತ್ನ ಕಕ್ಕ ಭೂಪಾಳಕನು (ಸೌಇಇ. XI-ii, ೧೭೮-೨೫ ; 1127) ; ಪಱಪಱಿಸುವ ಭೂಪಾಲರನದಿದೆನ್ನದೆ ತತ್ತಱದಱಿದು (ವೀರೇಶ. ೧-೨೫).

[ಪಱಪಱ$_0$ + -ಇಸು$_3$./P. ತಮಿ. ಪಱಪಱ = ಅವಸರಪಡು, ಆತುರಗೊಳ್ಳು]

**ಪಱಪಱಿಸುಹ** (ನಾ). ಸ್ಪರ್ಧಿಸುವಿಕೆ ; ಪೈಪೋಟಿ ; ಮೇಲಾಟ: "ಸ್ಪರ್ಧಾ, ಸಂಘರ್ಷಃ—ಈ ೨ ಪಱಪಱಿಸುಹ" (ಹಲಾಯು. ೧೩೦-೧೦೧). [ಪಱಪಱಿಸು + -ಹ$_2$(<—ಪ$_2$)]

**ಪಱಮೆ**, ಪರಮೆ$_1$, ಪಱಿವೆ (ನಾ). ೧. ದುಂಬಿ ; ಭ್ರಮರ : "ಅಲರ್ವಕ್ಕಿ, ಬಂಡುಣಿ, ಪಱಮೆ . . . ಮುಯ್ಯಾರಡಿ—ಈ ೭ ಭ್ರಮರಂ" (ಕಶಸಾ. ೫೫-೧೯೮) ; ಪಪ್ಪಕಮಾಗಿರೆ ಪಱಮೆಗಳುಪ್ಪಯಣಂಗೆಯ್ದು ವಂದು ಪೊಸಮಲ್ಲಿಗೆಯೊಳ್ (ಆದಿಪು. ೬-೨೧) ; ಪಱಮೆಗಳ ಕಪ್ಪಿನಿಂದಂ ಮಿಱುಗುವ ಕೆಂದಳದ ಕೆಂಪಿನಿಂದಾವಿಳಮಾಗುಱೆ ಚಿತ್ರಿಸಿದಂತಾದಂ ಮೆಱೆಗುಂ ಪಿರಿದಪ್ಪ ಪುಷ್ಪಮಾಲಾನಿವಹಂ (ಚಾಧಪು. ೧-೧೩೦) ; ಗಂಧಕೆ ಪದೆದೆಱಗುವ ಪೊಸಪಱಮೆಗಳ ಪಸುಳೆಯಿಂಚೆರಮೊಪ್ಪಿದುವು (ಜಯಕಾ. ೪-೪) ; ಪಱಮೆಯಂತೆ ಕರ್ಪಿಡಿದ ಮುಂಗುರುಳುಂ (ಅದ್ಭುತ. ೮-೧೨).

**ಪರಮೆ**$_1$ : ೧. ಅಲ್ಲಿಗಲ್ಲಿಗೆ ಪರಮೆಯರಗಿದೊವುಲ್ಲಾಸದೊಳು (ಕಂಕ. ೬೯-೩) ; ಪರಮೆಗಳ ಸೇಣಿ ಹರಿನೀಲಮಣಿತೋರಣದ ಸಿರಿವಡೆಯೆ (ಶೇಷರಾ. ೭-೩೧ ;) ತುಂಬಿ ಮೊರೆದು ಪರಮೆಯನು ಕರೆಯುತಿದೆ ತುಂಬುಬಾಳಾಗಿ (ಹೃದಸ. ೫೨-೯). **ಪಱಿವೆ** : ೨. ಹಕ್ಕಿ ; ಪಕ್ಷಿ: ಪಱಿವೆಗಳೋಟದ ಆ ಋಜುಪಥಮನ್ . . . ಈಗಳ್ ಇದೆ ಕೊಳ್— ಇಱಿವೆನ್ (ಬದ್ಧಪ್ರ. ೧೬-೩೨೬) ; ಬೀಸುತೆ ಪುರಿನೇಣ್ ಪೆಣೆದಾ ಬಲೆಯನ್, ಪಿಡಿವನ್ ತಿಳಿಬಾನ್ ಪಱಿವೆಗಳನ್ (ಅಂಕಿಗೊ. ೧೬-೩೨೨).

[ದೇ.॥ ತಮಿ. ಪಱವೈ ; ಮಲ. ಪಾಱ್ಱ = ಪತಂಗ]

**ಪಱಮೆವಸುಳೆ** (ನಾ). ದುಂಬಿಯ ಮರಿ ; ಮರಿದುಂಬಿ : ಮುನಿನಿವಹದ ಸದಪಂಕಜಕೆಱಗುವೆನಾಂ ಪಱಮೆವಸುಳೆಯಂತೆ (ಜಯಕಾ. ೧-೧೦). [ಪಱಮೆ + ಪಸುಳೆ]

**ಪಱಮೆವಱಿ** (ನಾ). = ಪಱಮೆವಸುಳೆ : ಪರಸ್ಪರಟ್ಟಿದ ಕಪ್ಪದ ಕರಿಗಳ ಮದಜಳಮನುಂಡು ಕಂಪೇಱಿದ ತದ್ಧರಣೀಶಗೃಹಾಂಗಣದೊಳ್ ಪಱಿವಱಿಯಾಡುವುವು ಪಱಮೆವಱಿಗಳ ಬಳಗಂ (ಚಂದ್ರಪು. ೬-೩೩) ; ಪರಿಮಳಕ್ಕೆ ಪಱಿಮಱಿಯಾಡುವ ಪಱಮೆವಱಿಗಳ ಝುಣತ್ಕಾರಸಾರದಿಂದತಿವಿಚಿತ್ರಶೋಭೆವೆತ್ತಿರ್ಪುದು (ಕುಸುಮಾ. ೨-೭೧ ವ) ; ನಱುಗಂಪಿಗಾಸೆವಟ್ಟೆಱಗಲಾಱದೆ ಪಱಮೆವಱಿಗಳಾಡುತ್ತಿರಲು (ಸೌಂದಪು. ೩-೨೫) ; ಬಂಡಿನಲರ್ಪುಡಿಯಿಂ ಪೊರೆದ ಪಱಮೆವಱಿಯಂ (ರಾಮಾಶ್ವ. ೫೨-೨೭).

[ಪಱಮೆ + ಮಱಿ]

**ಪಱಮೆವಿಂಡು** (ನಾ). ದುಂಬಿಗಳ ಗುಂಪು ; ಭೃಂಗಗಳ ಸಮೂಹ : ಮುಗಮುಗಿಪ ಮೈಗಂಪು ಪಱಮೆವಿಂಡಂ ಸಾಲಿಡಿಸೆ ದಿಟ್ಟಿಗೇನೆಸೆದಳೋ (ಪದ್ಮರಾ. ೩-೩೧) ; ವಿಶಾಱದ ಕಮ್ಮಲರ್ಗಳ ದೇವಾರ್ಚನೆಗೇಱಿಸಗೊಡದೆಯೆಂಜಲಿಸಿ ಹೇಱಿದ ಪಱಮೆವಿಂಡುಗಳ ಬಂಧಿಸಿದಂತೆ ನೇಱಾಲ ಪಣ್ಣಕೊಪ್ಪಿದುವು (ಪೋಹತ. ೨೪-೪೫). [ಪಱಮೆ + ಪಿಂಡು$_2$]

**ಪಱಲೆ**, ಹರಲೆ, ಹಱಲೆ$_1$ (ನಾ). ಅಪವಾದ; ನಿಂದೆ: ಶಶಿಕಾಂತದ ಪರಲೆಯಿನೊಸರ್ವ ಕೊಳದ ಸುಭಗತೆಯಿಂ ಪಱಲೆಯನುೞಿ ಪಾಱಿಸುವುದು ನಂದನಕಾ ನಂದನದಿರವು (ಜಯಕಾ. ೧-೪೬). **ಹರಲೆ** : ಹರಲೆ ನಿನ್ನ ಬದುಕಾಯಿತು (ಶ್ರೀಕೃಪಾ. ೩೪) ; ಕ್ಷುದ್ರಜನರು ನಿರರ್ಥಕವಾಗಿ ನಿಮ್ಮ ಹೆಸರಿನಿಂದ ಹರಲೆ ಮಾಡುತ್ತಾರೆ (ಸ್ಕೂಲಮಿ. ೧೪೮). **ಹಱಲೆ**$_1$ : ಹಱಲೆಯೊಳು ತಂದಿಕ್ಕಿತೆನ್ನ ಡಂಬಿನ ಭಕ್ತಿ (ತಿರುರ. ವೇ. ೨೧-೧೬) ; ಎಂದೆಂದಿಗೆನ್ನೀ ತಲೆಗೆ ಹಱಲೆ ಬಪ್ಪುದೆಂದವನೇಳ್ವ ವೇಳೆಯೊಳು (ನೇಮಿಸಂ. ೧೪-೮೭) ; ಎಮ್ಮ ತಲೆಗೆ ಹಱಲೆಯು ತರ್ಪುದುಚಿತವೇ (ಸಮ್ಯಕೌ. ೧೦-೩).

[<ಪಱಿ$_2$ ?]

**ಪಱಿವೆ** 'ಪಱಮೆ' ನೋ.

**ಪಱಿ**$_1$, ಪರಿ$_1$, ಹರಿ$_1$, ಹಱಿ$_1$ (ಕ್ರಿ). ೧. ಕಡಿ ; ಕತ್ತರಿಸು ; ತುಂಡುಮಾಡು : "ಪಱಿ—ವಿಚ್ಛಿತ್ತೌ (ಹರಿ), ಭೂಪಱೆ ಱ" (ಶಮಧಾ) ; ಪಱಿದು ಬಿಸುಟ ಕುಂತಳಂಗಳಂ ಪುತ್ತಿನೊಳಗೆ ಮಡಗಲೆಂದು ಕಯ್ಯಂ ಕುತ್ತಿದೊಡೆ (ಚಾವುಂಪು. ೧೬) ; ತನ್ನ ಜಗದ್ವಿಲಾಸ ಸಾಕಾದಡೆ ಮತ್ತೆ ತಾನೇ ಪಱಿವನದಱ ಮಾಯಾಪಾಶವನು (ಮಹಾದೇ. ಬ. ೧೦-೪); ಕೊರಲ ಕಂಠಿಕೆಯಂ ಪಱಿದು (ಜಯಕಾ. ೨-೩೭). ೨. ಕತ್ತರಿಸಿಹೋಗು ; ತುಂಡಾಗು ; ಸೀಳಿಹೋಗು : ಮುಳಿದು ತನಗೆರ್ಘ್ಯ ಮೆತ್ತಿದ ತಳಗೆಯೊಳಿಡೆ ತಿಱಿದ ಕೆಱದೆ ತಲೆ ಪಱಿದಾಗಳ್ ಕಳಕಳಿಸಿ ನಗುತಮಿರ್ದುದು (ಪಂಪಭಾ. ೬-೬೪) ; ಪಱಿದ ಶಿರಂಗಳಿಂ ಕೆದಱಿ ಬಿದ್ದ ಗಜಂಗಳಿಂ (ಎಕ. VIII, ಸಾಗರ. ೧೦೯-೨೭ ; 1042); ಪುರಹರಂ ಪೊಡೆಯೆ ತೋಳ್ಪಱಿದ ಭೀಕರಗಜಾಸುರನೋ (ಹಚರಾ. ೬-೨೦) ; ಕೈ ಪಱಿದ ಗಜೇಂದ್ರನಂತೆ ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೧೧೧೨). ೩. ಬಲವಂತದಿಂದ ಕೀಳು; ಕಿತ್ತು ಹಾಕು;

ತರಿ : ನನೆಗಳ ಗೊಂಚಲಂ . . . ಸೊನೆ ಸುರಿವನ್ನೆಗಂ ಪಱಿದು ನೋಯಿಸಿ ಕಾಡಿದೆವು . . . ಮೃದುಪುಷ್ಪಸ್ತಬಕಂಗಳಂ ಪಱಿದೆವು (ಆದಿಪು. ೧೧-೧೩೦). ೪. ಕಿತ್ತುಹೋಗು ; ಜಗುಳು : ಉಡೆವಣ [ಪ][ಪಾಠಾಂ. ವ]ಱಿಯುದ ಮುನ್ನಮೆ ತೊಡಗಿ ಚಲಂ ನೆಗೞ್ದ (ಪಂಪಭಾ. ೧-೪೬). ೫. ಬೇರೆಯಾಗು ; ಬೇರ್ಪಡು : ಕೇಡ ತೊಡರಿಂದೆ ನಾನ್ ಪಱಿದು ಬಿಡುಗಡೆಯನಾನಲ್ಕೆ ಪಕ್ಕುಂಟು ನನಗೆ (ಅಂತಿಗೊ. ೧೯-೩೮೪). **ಪರಿ**$_1$ **: ೬.** ಪರಿಹರಿಸು ; ನಾಶಮಾಡು : ಚಿಂತಾತತಿಯನು ಪರಿದಿಟ್ಟನೋಯೆನಲ್ . . . ಮೂಡಲೊಳು ಮುಂಬೆಳಗು ತೋರಿದುದು (ವೆಂಕಾರಾ. ೫-೫-೨೪). **ಹರಿ**$_1$ **: ೧.** ಸೆರೆಯ ಹರಿ, ಅರಿಯಸಿರಿ ಹುಟ್ಟಿಳಿಸು ಹುಡಿಯಲ್ಲಿ (ಪಾಂಚಜ. ೫-೮). **೩.** ಆದಾವ ಪುಷ್ಪಗಳೋ . . . ಬಾಗಿ ಒಂದೆರಡನ್ನು ಹರಿದುಕೊಂಡೆ (ಚೆಂದುಟ. ೧೫). **೭.** ನಾಶವಾಗು ; ಹಾಳಾಗು : ದೇವರು ಒಲಿದರೆ ಜೇಡನ ಬಲೆ ಸಹ ಪೊರೆವುದು ಕೋಟೆಯ ಹಾಗೆ ಮುನಿದರೆ ಹರಿವುದು ಕೋಟೆ ಕೊತ್ತಳ ಸಹ ಜೇಡರ ನೂಲಿನ ಹಾಗೆ (ಇಂಚಾಪ. ೨೧೦-೪೦). **ಹಱಿ**$_1$ **: ೧.** ಹಱಿಯನೆ ದಾಸನ ವಸ್ತ್ರವ ಉಣ್ಣನೆ ಚೆನ್ನಯ್ಯನ ಸಂಗಾತ (ಬಸವ. ೪೩೨) ; ನಿಱಿಯುಡಿಗೆಯುಲಿ ಮಲ್ಲುಗಂಟಿನ ಸೆಱಗ ಮೋಹಿಸಿ ಬೆರಳ ದರ್ಭೆಯ ಹಱಿದಂ ಬಿಸುಟನು (ಕುಮಾರ್ದ್ರೋ. ೯-೧೫). **೮.** ತೀರು ; ಮುಗಿ : ನೂಱನೋದಿ ನೂಱ ಕೇಳಿದರೇನು ಆಸೆ ಹಱಿಯದು ರೋಷ ಬಿಡದು (ಬಸವ. ೬೫೩) ; ಎನ್ನ ಕರ್ಮ ಹಱಿಯಿತ್ತು (೭.ಸವ. ೭೯೩).

**ಪಱಿವಱಿ**$_1$ (ದ್ವಿರುಕ್ತಿ) : ತನ್ನ ಭೀಕರಗದಾಘಾತದೊಳ್ ಜಾಱಿ ಪಱಿವಱಿದು ಪೆಱಗೆಡೆದು ತಾಱಿವಱಿದ ಕಾಂಭೋಜಾವಳಿಗಳ . . . ಕೈಗುತ್ತಿ ನೋಡಿಯುಂ (ಗದಾಯು. ೬-೨೮ ವ). **ಪಱಿದಿಕ್ಕು** = ಚೂರು ಚೂರು ಮಾಡು ; ಧ್ವಂಸ ಮಾಡು : ಪಱಿದಿಕ್ಕಿ ಮೋಹಪಾಸದ ತೊಡರಂ (ಎಕ. II, ೧೪೧-೬೬ ; 1139) ; ಪೋಗಣ ಮಾಯಾಭ್ರಮೆಯುಂ ಪಱಿದಿಕ್ಕಿ (ಶಬಶಂ. ೨-೯೫) ; ಪಿರಿಯ ಅವಶೇಷಗಳನ್ ಪಿಕ್ಕ ಪಱಿದಿಕ್ಕುವುದು (ಬದ್ಧಪ್ರ. ೫೫-೧೧೮೭). **ಪಱಿದಿಡು, ಪರಿದಿಡು** = ಕಿತ್ತು ಹಾಕು ; ನಾಶ ಮಾಡು : ಪಱಿದಿಟ್ಟು ದಿಟ್ಟಿಯ ಬಳಿಕೊರ್ವನ ಕಾಲ ಮುಱಿದಿಟ್ಟ (ಮೋಹತ. ೧೨-೩೭) ; ಸವತಿಯರಿರ್ವರುಮಾ ಕೃತಿಗೇಳೆ ಬೇರ್ವರಿದಿರ್ಪ ವೈರದ ಬೇರ ಪಱಿದಿಟ್ಟರ್ವರೊಂದೆಸಿಸಿಯೊಪ್ಪುವರು (ಹಮಬ. ೧-೫೯) ; ಚಿಂತಾತತಿಯನು ಪರಿದಿಟ್ಟನೋಯೆನಲ್ . . . ಮೂಡಲೊಳು ಮುಂಬೆಳಗು ತೋರಿದುದು (ವೆಂಕಾರಾ. ೫-೫-೨೪). **ಪಱಿದು ಪತ್ತಿಸು** = ಪರಿದು ಮತ್ತೆ ಅಂಟಿಸು ; ತದ್ರೂಪವಾಗಿಸು: ಚುಂಬಿಸಿದರ್ ಸ್ಮರಸಿರ್ದು ನಾಂಗುಲೀಕದ ಕುಸುಮಂಗಳಂ ಪಱಿದು ಪತ್ತಿಸಿದಂತೆವೊಲೊಪ್ಪಿ ತೋರ್ಪಿನಂ (ಕಾವ್ಯಸಾ. ೬೬೬ ರೂದ್ರಕ) ; ವಸುದೇವನ ದೇಹಮನಗೆವ್ರೆಯ್ದಂತೆಯುಂ ಪಱಿದು ಪತ್ತಿಸಿದಂತೆಯುಂ ಮೊಕ್ಕಳಮಿಾ ಮಕ್ಕಳೇಕಾದುವೆಂದು ಬೆಕ್ಕಸಂಬಟ್ಟು ನೋಡೆ (ಅರ್ಹಸೇ. ೫-೨ ವ). **ಪಱಿಪಟ್ಟೆ ಮಾಡು** = ಪಱಿದಿಕ್ಕು : ಇಱಿವರು ತಱಿದರು ಕೊಱೆದರು ಮೂಗನು ಜರಿಟೋಪಿ ಜೋಡುದಗಲೆಯ ಪಱಿಪಟ್ಟೆ ಮಾಡಿ ರಾವುತರ ಮೈಯಲಿ ಬಲುಸುರಗಿಗಳನು ಸೆಕ್ಕಿದರು (ಕಂನವಿ. ೩-೬೮). **ಹರಿದರೆ ಹತ್ತುವ** = ಒಂದು ಬಗೆಯ ಔಷಧಿಸಸ್ಯ : ಹರಿದರೆ ಹತ್ತುವನ ಸಹಮೂಲವಂ ಮೊಸರಿನಲ್ಲರೆದು ನುಂಗಿಸಲು ಹೊಟ್ಟೆಬೇನೆ, ಗ್ರಹಣಿ ಸಹ ನಿಲ್ಲುಗು (ಸಕವೈ. ೩೫೩). **ಹಱಿಕೊಳ್ಳು, ಹರಕೊಳ್ಳು** = ಹರಿದುಕೊಳ್ಳು ; ಕಿತ್ತುಕೊಳ್ಳು : ಬರುತೇನು ತಂದೆ ಬಱಿಗೈಲಿ ಬಂದೆ ಪರಸಿಂದೆಗಳ ಕಟ್ಟಿ ಹಱಿಕೊಂಡೇನೆಂದೆ (ಪುರಂದ. ೨-೫೩-೧) ; ಕುದುರೆಯು ಕಟ್ಟಿದ ಹಗ್ಗವನ್ನು ಹರಕೊಂಡು ಓಡಿ ಹೋಗಿತ್ತು (ಮುಂಬಯಿ. ೪-೭೯) ; ಜವರಾಯ ಬಾಳೆಯ ಸುಳಿಯ ಹರಕೊಂಡ (ನನ್ನೂರು. ೧೩೫) ; ಅವನನ್ನು ಹರಕೊಂಡು ತಿಂಬುವ ಹಾಗೆ ನೋಡುತ್ತದೆ (ಫಲಸಂ. ೧). **ಹಱಿದರೆ ಹತ್ತಿಸುವ** = ಹರಿದರೆ ಹತ್ತುವ : ಚೆನ್ನಿಗ್ಗಿಲು ಹಱಿದರೆ ಹತ್ತಿಸುವ (ಅದನ್ನು ಪರಡೆ ಎನ್ನುವರು) ಈ ಎರಡನ್ನು . . . ಅರೆದು (ವಿವೈವಿ. ೧೫೭).

[**ದೇ.॥ ತಮಿ. ಮಲ.** ಪಱಿ ; **ತುಳು.** ಪರಿಪು, ಪರ್ಪು ; **ಕೊಡ.** ಪರಿ ; **ತೆಲು.** ಪೆಱುಕು, ಪೆರುಕು]

△ **ಪಱಿ**$_2$ 'ಪರಿ$_2$' ನೋ.

**ಪಱಿ**$_3$, ಹಱಿ$_3$ (ನಾ). ೧. ಕತ್ತರಿಸುವಿಕೆ; ಹರಿಯುವಿಕೆ. **೨.** (?) : ಬೀಸುವಲ್ಲಿಯೆ ಬೀಸಲಱಿದೆಯಿಲ್ಲ ಪಱಿಯನಾ ದಿಟ್ಟಿ ಮುರಿವಲ್ಲಿ ಕಡುಪಿನೊಳ್ ಮುರಿದಯ್ (ಎಕ. II, ೧೩೩-೧೨೬ ; 982). **ಹಱಿ**$_3$ **: ೩.** ಕತ್ತರಿಸಿದುದು ; ಚೂರಾದುದು ; ತುಂಡಾದುದು: ಹಱಿ ಹತ್ತು ಹೊಲಿವುದೊಂದೇ ಸೂಜಿ (ಸರ್ವಪ. ೧೨೩-೬೩೨). 'ಹಱಿಮುಱಿ' ಪರಾ.

**ಪಱಿವಱಿ**$_2$ (ದ್ವಿರುಕ್ತಿ). **ಪಱಿವಱಿಯಾಗು** = ೧. ಚೂರು ಚೂರಾಗು ; ಛಿನ್ನಭಿನ್ನವಾಗು : ಜಳಕೇಳಿಗೆಂದು ಬಂದೋಲಾಡುವ ಮಾಳವವಿಲಾಸಿನಿಯರ ಪೆರ್ಮೊಲೆಯ ಪೊರ್ಕುಳಿಯೊಳ್ ಪಱಿವಱಿಯಾದ ಪೆರ್ದೆರೆಯೊಳ್ (ಕಾದಂಪೂ. ೧೬) ; ಗದಾಪರಿಘಪ್ರಹಾರದಿಂ ಪಱಿವಱಿಯಾಗಿ. . .ಬಿಟ್ಟರಿಬಲಂಗಳೆ ಪೇೞವೆ ನಿನ್ನ ಬೀರಮಂ (ಗದಾಯು. ೨-೩) ; ಜವದಿಂ ಪೋದಿನನ ವರೂಥವಾಜಿಗಳ ಮೊಗದೊಳೊಗೆದ ಫೇನಂಗಳ್ ವಾಯುವಶದೆ ಪಱಿವಱಿಯಾಗಿರ್ದುವು ಗಗನಾಂಗಣದೊಳೆನಿಸಿದುವು ಭಗಣಂಗಳ್ (ಚಂದ್ರಪು. ೮-೨೪) ; ಬಿದಿರ ಕೊನೆಯ ಕೋಳ್ಗೆ ಪಱಿವಱಿಯಾದ ಮುಗಿಲ ಪೊಱೆಯಿಂ ಸುರಿವ ಮುತ್ತುಗಳಂ (ಕಬ್ಬಿಕಾ. ೨೩೪). **೨.** ಭಂಗಹೊಂದು : ಪಱಿವಱಿಯಾಯ್ತು ಪಜ್ಜಳಿಪ ಮೆಯ್ವೆಳಗಿಂಗೆಳಮಿಂಚಿನಲ್ಕದಾರಱಿದಭಿವರ್ಣಿಪರ್ ಸತಿಯ ರೂಪಿನ ರೂಢಿಸಿದೊಂದು ಗಾಡಿಯಂ (ಧರ್ಮನಾ. ೩-೫೩). [<ಪಱಿ$_1$]

**ಪಱಿ**$_4$ (ನಾ). ೧. ಅಲಂಕಾರ ; ಶೃಂಗಾರ ; ಭೂಷಣ : "ಪಱಿ– ವಿಚ್ಛಿತ್ತೌ (ಹರಿ), ಭೂಷಣೇ ಚ" (ಶಮಧಾ). **೨.** ಸಂತೋಷ ; ಹಿಗ್ಗು : 'ಪಱಿಪಡಿಸು' ಪರಾ. [**ದೇ.॥ ತಮಿ.** ಪಱಿ = ಚಿನ್ನ]

**ಪಱಿಕೊಳ್** (ಕ್ರಿ). ೧. (ಹೂವು ಮೊದಲಾದುವನ್ನು) ಕೀಳು ; ತಿರಿ : ಪರಿಮಳವೆರೆದಿಂಪಿನ ದಿವ್ಯಪುಷ್ಪವ ಪಱಿಕೊಂಡತಿಹರುಷದಲಿ ಸರಗಟ್ಟಿ ಬೆಲೆಗೆ ಮಾಱುವ ಮಾಲೆಗಾತಿಯರಿರವ ನಾನೇನ ಬಣ್ಣಿಪೆನು (ಕಂನವಿ. ೨-೮೩). **೨.** ಕಿತ್ತುಕೊಳ್ಳು : ಮೂಡಣದೆಸೆವೆಣ್ ರತ್ನದ ಹಚ್ಚವ ಗಾಡಿಯೊಳಿನಸಿಗಲಂಕರಿಸಲ್ಬಗೆಮಾಡದೆ ಪಡುಗಡೆವೆಣ್ದಿಟ್ಟಸಿ ಕಿನಿಸಿಂದವ ಪಱಿಕೊಂಡು ನೋಡದೆ ನೂಂಕಲ್ (ಉದ್ಭಪೇ. ೪-೬).

[ಪಱಿ$_1$ + ಕೊಳ್$_1$]

**ಪಱಿಗಡ್ಡ** (ನಾ). ಹರುಕುಗಡ್ಡ : ಮಾದೆಗನ ಪಱಿಗಡ್ಡಮನೆಡಗಯ್ಯೊಳ್ ಪಿಡಿದು (ಧರ್ಮಾಮೃ. ೧೦-೧೪೫) ; ನೊರೆವಾಯರ್ ಜೋಲ್ದುಟಿ ಪೆಮರ್ಗರಲ್ದ ಕೆವಿಮ್ಮಸೆ ಕೆದರ್ದ ಪಱಿಗಡ್ಡಂ (ಪ್ರಷವಿ. ೧೧-೬೧). [ಪಱಿ$_1$ + ಗಡ್ಡ$_1$]

**ಪಱಿಗಲ್** 'ಪಱಿಗೋಲ್' ನೋ.

**ಪಱಿಗೋಲ್,** ಪಱಿಗಲ್, ಪಱಿಗೋಲು, ಪಱುಗಲ್, ಪಱುಗೋಲ್, ಪಱುಗೋಲು, ಹರಗಲು, ಹರಗೋಲು, ಹರಿಗಲು, ಹರಿಗೋಲು, ಹರುಗೋಲು, ಹಱಿಗೋಲು, ಹಱಿಗೋಲು, ಹಱುಗಲ್, ಹಱುಗೋಲ್, ಹಱುಗೋಲು (ನಾ). ನೀರನ್ನು ಭೇದಿಸಿಕೊಂಡು ಹೋಗುವ ಸಾಧನ ; ನಾವೆ ; ದೋಣಿ :

ಪಱುಗೋಲೊಳ್ (ಪಱುಗೋಲೊಳ್) ಕುೞ್ದರ್ಂ (ಶಮದ. ೧೩೩ ಪ್ರಯೋ); ಪಱುಗೋಲ್ಗಳಂ ಮುಳುಂಗಿಸುವ ಸೀತಾನದಿಯಂತೆಯುಂ (ಭಾರತಸಂ. ೮೪-೫೫೩). **ಪಱುಗಲ್ :** ನಾರೀಜನಕೆ ಪಱು[ಪಾಠಾಂ.ಱು]ಗಲೆಂದೇಱಲ್ . . . ನೀರಾಟವಾಡಲ್ ನೆಱೆಗುವೆನೆ ಪೊದಟ್ಟಿತ್ತು ಚಂದ್ರಾಂಶುಜಾಲಂ (ಕಾದಂಬ. ೪೨೨). **ಪಱುಗೋಲು :** ಪಱುಗೋಲು, ಪಡಗು . . . ಮುಂತಾದವು ಅವರು ನೀರ್ಬಟ್ಟೆಯನ್ನು ತಿಳಿದವರಾಗಿದ್ದರೆಂದೂ . . . ಸಾರುತ್ತವೆ (ಭಾಷಾಶಾ. ೨೫೬). **ಪಱುಗಲ್ :** ಪಱುಗಲಿಕ್ಕಿ ಪಾಯಲ್ಕಂ . . . ಸವಿನೋಡಲ್ಕಂ ಬಗೆವುದೆಸೆವ ನವ ಚಂದ್ರಿಕೆಯಂ (ಪರ್ಣಮಾ. ೮-೮೦); ಸುಱಿದುಡು ಸುಱಿಯೊಳಗಣ ಪಱುಗಲಂತೆ ಪಾತಕನ ಮನಂ (ಪಂರಾಮಾ. ೯-೮೧). **ಪಱುಗೋಲ್ :** ಮೊಗೆಯಲ್ ಕೊಡಗೊಂಡು . . . ಪಱುಗೋಲ್ಗಳಸಿಕ್ಕಿ ಪಾಯಿಸಲ್ (ಅಜಿಪು. ೬-೪೫); ಪಱುಗೋಲಿಲ್ಲದೆ ತೊಱೆಯಂ ಪಾಯ್ವನೆಂಬ ಪಚ್ಚಪಸಿಯೆಗ್ಗನಂ ಪೋಲ್ಕುಂ (ಧರ್ಮಾಮೃ. ೧-೬೭); ಪೆರ್ಮೞೆ ಕೊಳಲ್ಕವಳಾ ಮುನಿಪುಂಗವಂಗೆ ತೊಟ್ಟನೆ ಪಱುಗೋಲನೊಡ್ಡಿ ದೃಢಮಪ್ಪಿನವಾಂತು (ಮಹಾನೇ. ೧೬-೧೧). **ಪಱುಗೋಲು :** ಪಱುಗೋಲೊಳುೞಿ ಚೆಲ್ವ ವಡೆದು ಕುೞ್ದುರ್ (ಪುಷ್ಪದಂತಪು. ೧೫-೨೨); ಬಿಜ್ಜೋದರಿ ಕಣ್ಣೋಲ ಮನಮರ್ಚಿದಳ್ ಪಱು[ಪಾಠಾಂ.ಱು]ಗೋಲೊಳ್ ಪೋಪಂತೆ ಗಗನ ಮೆಂಬಂಬುಧಿಯೊಳ್ (ಶಬರಂ. ೧-೪೩). **ಹರಗಲು :** ಮಳೆ ಬಂದರೆ ಬರಲಿ. ಹೊಳೆ ತುಂಬಬೇಡ. ಹರಗಲಿಗೆ ಬೇಕೆ ಹಿಡಿ ಹೊನ್ನು (ಹಳ್ಳಿಬಾ. ೬೭); ದೇಹವನ್ನು ಹರಗಲಿಗೆ ತೆಗೆದುಕೊಂಡು ಹೋದ ಮೇಲೆ ಸತ್ತವನ ಸಹೋದರನು ದಡಕ್ಕೆ ಹೋದನು (ಮಲೆನಾ. ೧೧೬). **ಹರಗೋಲು :** ಒಂಟಿ ಹುಟ್ಟಿನ ಹರಗೋಲಿನಂತೆ ಎನ್ನ ಪಾಡು (ಅಂತರಾ. ೪೫); ಕೆಸರಿಗೆ ಹರಗೋಲು ಬೇಕೆ ? (ಗಾದೆ). **ಹರಿಗಲು :** ಇವನು ಹರಿಗಲಲ್ಲಿ ಹೊಳೆ ದಾಟಿರಬೇಕು (ಕೆಲನೆ. ೧೦೦); ಎಷ್ಟು ಸಲ ಹರಿಗಲದಾಗೆ ತಿರಿಗಿಸಿವ್ನಿ ಅಯ್ನೋರನ್ನ ! (ಅಲಿಮ. ೨೧೬). **ಹರಿಗೋಲು :** ಹೊಳೆಯುಲಿಹ ಹರಿಗೋಲು ಸದ್ಯ ಮುರಿದುದೆ (ತುರಂಗ. ೪೬-೨೯); ಹರಿಗೋಲನೇರಿಸಿ ಹರಿವ ಪ್ರವಾಹದೊಳುರುಳಿಸುವುದು ನಿನಗೊಪ್ಪೆ (ಶಾಕುಂತ. ೬೮ ಅಡಿಟಿ); ಇವರು ಹರಿಗೋಲು ಹತ್ತಿದರು (ನೀತಿಚಿಂ. II, ೧೧). **ಹರುಗೋಲು :** ರೊಕ ತೆಗೆದುಕೊಳುತ ಹರುಗೋಲ ಹಾಕಿ ದಾಟಿಸಿ (ಎಕ. VII, ಶಿಮೊ. ೩-೯; 1671); ಕಲ್ಲಿನ ಹರುಗೋಲಿನ ಮೇಲೇರಿದ ಅದ್ಭುತ (ಪುರಾವಿ. ೧೩೮). **ಹಱಗೋಲು :** ಹಱಗೋಲ ಸೂಳೆಯು ತೆಱನೆರಡು ಒಂದಯ್ಯ ಹಱಗೋಲನೇಱದವನಿಳಿಯೆ ಬೇಱೊಬ್ಬ ಹರಿದೇಱುವಂತೆ (ಸರ್ವಜ್ಞ. ೧೮೯೧). **ಹಱುಗೋಲು :** ಸಂಸಾರವೆಂಬ ಸಾಗರವ ದಾಂಟುವರೆ ಅಱುಹೆಂಬ ಹಱುಗೋಲನಿಕ್ಕಿ . . . ಸುಜ್ಞಾನವೆಂಬ ಸಟ್ಟುಗವ ಪಿಡಿದು (ಶೂನ್ಯಸಂ. ೧೨೭-೩೭); ತುಱುಗೆವೆಗಣ್ಣ ನೀರಿಂಗೆ ಹಱುಗೋಲ ಹಾಯ್ಕಿಸಬೇಡೆಂದು . . . ತೊಡೆದ ಲೋಚನವ (ಮೋಹತ. ೪-೮೭); ಗೋಷ್ಪದಜಲಕೆ ಹಱುಗೋಲದೇತಕೆ (ಜೈಮಿಭಾ. ೧೨-೧೪). **ಹಱುಗಲ್ :** ನಾವಾರೋಹಃ, ನಾವಿಕಃ–ಈ ೨ ಹಱುಗಲೇಱುವಾತಂ (ಹಲಾಯು. ೬೫-೨೩೬); ಹಱಿದ ಹಱುಗಲಂತೆ ಸುಸಿಲ್ದೊಱೆಯಂ ದಾಂಟಿಸಲಾಱದೆ (ಲೀಲಾಪ. ೨-೧೧೬ ಪ). **ಹಱುಗೋಲ್ :** ಅಸವಾಸ್ತ್ರನೇಱಲೆಂದಿಟ್ಟ ಹೊಸ ಹಱು[ಪಾಠಾಂ.ಱು]ಗೋಲೆಂಬಂತೆ ಘಳಿಗೆ ವಟ್ಟಲೆಸೆದು ಕಣ್ಗೆ ರಂಜಿಸಿತು (ತ್ರಿಪಾಲ. ೧೦-೫೩); ಅಂಬುಧಿಯು ದಾಂಟುವಂಗೇಕೆ ಹಱುಗೋಲ್ ಸೀಮೆಯೆಂಬುದಂ ಮಾಱಿದೀ ಸಿಸ್ನೀಮ ಸಿದ್ಧರಾಮಂಗಿಷ್ಟಲಿಂಗಮೇಕೆ (ಚೆಬಪು. ೫೭-೯೧). **ಹಱುಗೋಲು :** ತುಂಬಿದ ತೊಱೆಯು ಹಾಯ್ದುಹೆವೆಂದು ಹಱುಗೋಲನೇಱುವ ಅಣ್ಣಗಳು ನೀವು ಕೇಳಿರೇ (ಅಪಚಂ. ೮೦-೩೬೦); ಬಿಡು ಮರೀಚಿಯ ತೊಱೆಗೆ ಹಱುಗೋಲಿಡುವರುಂಟೆ (ಕುಮಾರವ್ಯಾಸ. ೪-೩೮); ಪಾರಾಶರವ್ರತಿ . . . ಹಱುಗೋಲೊಳಗಂಬಿಗಿತ್ತಿಯ ನೆರೆದನು (ಕಂಸವಿ. ೯-೧೪೮).

ಹರುಗೋಲ ತೆರು = ಒಂದು ಬಗೆಯ ತೆರಿಗೆ ; ನಾವೆಯ ಮೇಲೆ ಹಾಕುವ ತೆರಿಗೆ : ಯಿಾ ಆರು ಮಂದಿಗೂ ಹರುಗೋಲ ತ್ತೆರು ಸಹಾ ಬಿಟಿಥೆವೆ (ಎಕ. VII, ಶಿಮೊ. ೩-೨೯ ; 1671). **ಹರುಗೋಲ ಹಣ =** ಹರುಗೋಲ ತೆರು : ದಂಡ ಹರುಗೋಲ ಹಣ ಬಾವಲಿ ಬಿರಾಡ ಮುಂದೆ ಹುಟ್ಟುವ ಪೂರ್ವಾದಾಯ ಸಹವಾಗಿ (ಮೈಆರಿ. ೧೯೩೪, ೨೭-೨೨ ; 1430). [ಪಱು$_1$ + ಕೋಲ್$_3$]

**ಪಱುಗೋಲು** 'ಪಱುಗೋಲ್' ನೋ.

**ಪಱುತಿನ್,** ಹಱುತಿನ್ (ಕ್ರಿ). ಹರಿದು ತಿನ್ನು ; ಕಿತ್ತು ತಿನ್ನು : ಪೊಯ್ದಾಡಿ ಮಡಿದ ಕಲಿಗಳ ಶರೀರಂಗಳಂ ಪೊಯ್ದೆಳೆದು ಪಱುತಿಂಬ ಮರುಳ್ಗಳ್ (ಜೈಮಿಭಾ. ೮-೩೩). **ಹಱುತಿನ್ :** ಕೊಱಚಾಡೆಲ್ಲರ ಮುಂದೆ ರಚ್ಚೆಗೆಳೆಯುತ್ತಂ ಕಿತ್ತು ಮೈಯೆಲ್ಲವಂ ಹಱುತಿಂದು (ಸೋಮೇಶ. ೭೩); ಠಕ್ಕ ಹಾಲ್ದೆನೆಯ ಹಱುತಿಂದು ಕಂಕಿಯನು ಇಕ್ಕಿ ಹೋದಂತೆ (ಸರ್ವಜ್ಞ. ೧೮೮೭). [ಪಱು$_1$ + ತಿನ್]

**ಪಱುದಲೆ,** ಹಱುದಲೆ (ನಾ). ೧. ತರಟುದಲೆ ; ಎಲ್ಲ ಕಡೆಯೂ ಕೂದಲು ಸಮನಾಗಿಲ್ಲದಿರುವ ತಲೆ : ಸಲೆ ಮಾಂಸಿ ನೆಲ್ಲಿ . . . ಕೋಷ್ಠಮೆಂಬಿವಂ ಕಱಿಯಿಂದಂ ತಲೆಯಂ ಪೂಸಲೊಡಂ ಪಱುದಲೆ ನಿಱುದಲೆಯುಕ್ಕುಂ (ಲೋಕೋಪ. ೯-೫೨); ಪಱುದಲೆ ಕುಱುನೊಸಲಱುಗಣ್ಣೊಱೆವಾಯ್ ಹಪ್ಪಳಿಕೆಮೂಗು (ಯಶೋಚ. ೨-೩೮). **ಹಱುದಲೆ :** ೧. ಎಲವೆಲವೊ ಮಾರುತಿಯುಳ್ಳಿಗಡ್ಡದ ಹಱುದಲೆಯ ರಣಮೂಢ ಸಿಲುಕಿದೆಲಾ (ಕುಮಾರವ್ಯಾಸ. ೧೩-೬೧). ೨. ಕತ್ತರಿಸಿದ ತಲೆ : ಹಱುದಲೆಯು ಬೊಮ್ಮಂಗೆ ಕುಱುದಲೆಯು ದಕ್ಷಂಗೆ . . . ಸರಿಯುಹರೆ ಹರಗೆ (ಸರ್ವಜ್ಞ. ೨೨೦). [ಪಱು$_1$ + ತಲೆ$_1$]

**ಪಱುದೊವಲ್,** ಹರಿದೊಗಲು, ಹಱುದೊಗಲು (ನಾ). ಕತ್ತರಿಸಿದ ಚರ್ಮ : ಜೀರ್ಣವಾಗೆ ತನು ಕೂರಲಗಿನ ಪಱುದೊವಲೊಳಿರ್ದನಂತಾ ಮುನಿಪಂ (ಅನಂಪು. ೧೨-೩೪). **ಹರಿದೊಗಲು :** ಹರಿದೊಗಲು ನೆಣವಸೆಯ ಖಂಡದಿಂ . . . ರಣಜಯಂ ರಂಜಿಸಿದುದು (ತುರಂಗ. ೫೬-೩೯). **ಹಱುದೊಗಲು :** ಹಱುದೊಗಲ ನೆತ್ತರನು ಕಾಣಿಸಲಱಿಯದೋಯೆಂದೊಬಲಿ ಧರಣಿಯಲೊಱಗಿದರು ಕೈದುಗಳುಡಿದು ದಾಡೆಗಳು ನೆಱೆ ಮುಱಿದು (ಕಿಭಾಗ. ೭-೫-೭); ಜುಱುಜುಱುಪ ಕರುಳುಗಳ ಖಂಡಹ ಹಱುದೊಗಲ ಕೊಡೆ ತೋಳ್ಗಳಲಿ ಹೆದ್ದೊಱೆಗಳಾದವು (ಕಿಭಾಗ. ೧೦-೮೬-೮). [ಪಱು$_1$ + ತೊವಲ್$_3$(< ತೋಲ್$_1$)]

**ಪಱುನಂಟಿ** (ನಾ). ಕಡಿದು ಹೋದ ನಂಟುತನವುಳ್ಳವನು ; ದ್ವೇಷವುಳ್ಳ ನಂಟ : ಪೊಱಪೊಟಲೊಳಿರ್ಪರಿರ್ವರ್ ನೆಱೆದೊಕ್ಕಲ್ತನದ ಪೆರ್ಮೆಯೊಕ್ಕಲಿಗರ್ ಪೇರಱುಕೆಯ ಶಶಿಸೂರ್ಯರ್ಮಖ್ಯರ್ ಪಱುನಂಟರ್ (ಚಂದ್ರಪು. ೫-೮೭). [ಪಱು$_1$ + ನಂಟ]

**ಪಱುಪಡಿಸು** 'ಪಱುವಡಿಸು' ನೋ.

**ಪಱುಪಡು** 'ಪಱುವಡು' ನೋ.

**ಪಱುಪಾಟು** (ನಾ). ಹರಿದು ಹೋಗಿರುವುದು ; ತುಂಡಾದ ಅವಸ್ಥೆ : ಸಿರದ ಮುಂಡಾಸವ ಸೀಳ್ದಿಕ್ಕಿ ದಗಲೆಯ ಪಱುಪಾಟ ಮಾಡಿದರಾಗ (ಕಂಸವಿ. ೧೫-೪೬). [ಪಱು$_1$ + ಪಾಟು$_2$(< ಪಾಡು$_3$)]

**ಪಱುಬಾರ** (ನಾ). ಒಂದು ಪಂಗಡದ ಹೆಸರು (?) : ಕೊತ್ತನೂರಾ ಕುನ್ದಪ್ಪಡಿಗಳುಂ ಪಱುಬಾರರುಂ ಬಾಣಗುನ್ದೂರಾ ದೇವಡಿಗಳುಂ (ಎಕ. XVI, ಗುಬ್ಬಿ. ೭೫-೫೭ ; 733). [ ? ]

**ಪಱುವಱು** 'ಪಱುವಱು$_3$' ನೋ.

**ಪಱಿವಱಿಗೊಳ್** (ಕ್ರಿ). ಸಂಭ್ರಮಗೊಳ್ಳು ; ಸಡಗರಗೊಳ್ಳು : ಕಂಪಿಸುವ ಕೈ ಕಮಳವೆಂದೆಱಗಿ ಪಱಿಮಱಿಗೊಂಬ ಹಸುಳೆದುಂಬಿಯು ನೋಡಿ ಸಾಕುವಾಸಕ್ತಿಯಿಂ ಸಿದ್ಧಪತಿಯಿಪ್ಪಾಗಳು (ಸಿದ್ಧರಾ. ೪-೩೬) ; ಪೊಱಗೆ ಚೆಲ್ಲಿದ ಕಸ್ತೂರಿಯ ರಜಕ್ಕೆ ಪಱಿಮಱಿಗೊಂಬ ಮದಾಳಿಮಾಳಿಕೆ (ರಾಜಶೇ. ೧೩-೪೫ ಪ). [ಪಱಿಮಱಿ(<ಪಱಿವಱಿ$_3$)+ಕೊಳ್$_1$]

**ಪಱಿಮೂಗು** (ನಾ). ಹರಿದ ಮೂಗು ; ಹರುಕಾದ ಮೂಗು : ಕೆಲಬರ್ಗೆ ಸೊಂಡಿಲಂತೆ ನಿಡುಮೂಗು ; ಕೆಲಬರ್ಗೆ ಪಱಿಮೂಗು ; ಕೆಲಬರ್ಗೆ ನಿಡುಗಣ್ (ಅದ್ಭುತ. ೪೪-೩). [ಪಱಿ$_1$+ಮೂಗು]

**ಪಱಿಯಾಳ್ತನ** (ನಾ). ಕಳೆದುಹೋದ ಕಲಿತನ,—ಪೌರುಷ : ಪಱಿಯಾಳ್ತನದಱಗಂಡಿಂದಱಿಯದೆ ಮೆಯ್ವೆರ್ಚಿ ಪೋಗಿ ಪರದನ ಮನೆಯಂ ತರುವಲಿತನದಿಂ ಪೊಕ್ಕೊಡೆ ಕುಱಿ ಸಾವಂತಲ್ಲಿ ಸಾವು ನಿಶ್ಚಯಮಕ್ಕುಂ (ಧರ್ಮಾಮೃ. ೬-೨೩). [ಪಱಿ$_1$+ಆಳ್ತನ]

**ಪಱಿಯಿಡು** (ಕ್ರಿ). ಕತ್ತರಿಸು : ಚಕ್ರದಿಂ ನಾಲ್ಕುಕಾಲುಮನೊರ್ಮೊದಲೆ ಪಱಿಯಿಟ್ಟೊಡೆ (ಪದ್ಮರಾ. ೧೨೦-೧೯). [ಪಱಿ$_1$+ಇಡು$_1$]

**ಪಱಿಯಿಸು,** ಪಱಿಸು, ಹರಿಸು$_1$, ಹಱಿಸು (ಕ್ರಿ). ೧. ಕತ್ತರಿಸುವಂತೆ ಮಾಡು ; ಛೇದಿಸುವಂತೆ ಮಾಡು. ೨. ಕತ್ತರಿಸು ; ಛೇದಿಸು : ಇವರೀ ಶಿರಂಗಳಂ ಪಱಿಯಿಸಲೊಲ್ವೊಡೇನರಿದೆ ಶಾರ್ಙ್ಗಿಗೆನಲ್ ಹರಿ ಬಾಣಕೋಟಿಯಿಂ ಪಱಿಯಿಸೆ (ಜಗವಿ. ೮-೬೪). ೩. ಕೂದಲನ್ನು ಕೀಳಿಸು ; ಲೋಚು ಮಾಡು : ತಲೆಯ ರೋಮಂಗಳೆಲ್ಲಮಂ ಪಱಿಯಿಸಿ (ಧರ್ಮಾಮೃ. ೧-೧೩೫). **ಪಱಿಸು :** ೩. ಸ್ವೈರಿಸಿ ತಲೆಯಂ ಪಱಿಸಿಕೊಂಡು (ಧರ್ಮಾಮೃ. ೧-೧೩೮). ೪. ನಾಶಮಾಡು ; ಹಾಳುಮಾಡು : ಭವಪಾಶಮಂ ಪಱಿಸಿದವನೋ (ಬಸವ. ೪೦-೪೪). **ಹರಿಸು$_1$ :** ೫. (ಕೊಂಡುಕೊಳ್ಳುವುದಕ್ಕಾಗಿ ಬಟ್ಟೆ ಮೊದಲಾದುವನ್ನು) ಕತ್ತರಿಸುವಂತೆ ಮಾಡು ; ಹರಿಯುವಂತೆ ಮಾಡು : ಅವಳು ಲಂಗಕ್ಕಾಗಿ ಮೂರು ಗಜ ಬಟ್ಟೆ ಹರಿಸಿದ್ದಾಳೆ (ರೂಢಿ). **ಹಱಿಸು :** ೨. ವರಮೃಗಂಗಳನುಗ್ರಶರದಿಂ ಹಱಿಸಿ ಶಿವಲೋಕಕ್ಕೆ ಕಳುಪುತಿರೆ (ಬಸವ. ೩೪-೩೧). [ಪಱಿ$_1$+-ಇಸು$_3$]

**ಪಱಿಯೆಸು,** ಹಱಿಯೆಸು (ಕ್ರಿ). ಕತ್ತರಿಸುವಂತೆ ಬಾಣವನ್ನು ಬಿಡು ; ತುಂಡಾಗುವಂತೆ ಬಾಣವನ್ನು ಹೊಡೆ : ಒಂದೆ ದಿವ್ಯಶರದಿಂ ಶಿರಮಂ ಪಱಿಯೆಚ್ಚೊಡೆ (ಪಂಪಭಾ. ೧೧-೭೯) ; ಬಿಲ್ಲ ಗೊಣೆಯುಮಂ ಪಱಿಯೆಚ್ಚಂ ಸಾರಥಿಯಂ ಕೆಡೆಯೆಚ್ಚಂ (ಪಂಪರಾಮಾ. ೧೧-೫). **ಹಱಿಯೆಸು :** ದಿವ್ಯಶರದಲಿ ಕರವೆರಡ ಹಱಿಯೆಚ್ಚಡಾಗಳೆ ಕೆಡೆದವವನಿಯಲಿ (ಕುಮಾರವ್ಯಾ. ೬-೫೪). [ಪಱಿ$_1$+ಎಸು$_1$]

**ಪಱಿವಡಿಸು$_1$,** ಪಱಿಪಡಿಸು (ಕ್ರಿ). ೧. ಕತ್ತರಿಸು ; ಛೇದಿಸು. ೨. ನಾಶಮಾಡು : ಈಗಳೆ ಪೋಗಿ ಪೂಗೊಳನಂ ಮುತ್ತಿ ದುರ್ಯೋಧನನಂ ಪೊಱಮಡಿಸಿ ಪಗೆಯಂ ಪಱಿವಡಿಪುದು (ಗದಾಯು. ೬-೩೮ ಪ) ; ಪಗೆವನನಾವ ಬಗೆಯೊಳಮಾವ ತೆಱದಿಂ ಪಱಿವಡಿಸುವುದು ನಯಂ (ನೇಮಿಪು. ೧೨-೧೮೨ ಪ). **ಪಱಿಪಡಿಸು :** ೨. ಅಱವಗೆಯುಂ ಪಱಿಪಡಿಸಲ್ಕೆ ಹಲಾಯುಧ ನೆಱೆದಿರ್ದಪೆನೆನಗೆ ತೋಱಿ ಬಿಡು ಕೌರವನಂ (ಗದಾಯು. ೭-೬೧) ; ಹೂಣನಂ ಕೀಟ್ಟಡಿಸಿ ಬಾಣನಂ ಪಱಿಪಡಿಸಿ ಮಗಧನಂ ಧಿಕ್ಕರಿಸಿ ಸಗರನಂ ನ್ಯಕ್ಕರಿಸಿ (ಜಗವಿ. ೧೬-೧೧೮ ರಗಳೆ) ; ಭವಪಾಶಮಂ ಪಱಿಪಡಿಸಿ ವಿಮೋಹಮನಳುರ್ಕೆಗಿಡಿಸಿ ನರೇಂದ್ರಂ . . . ಪರಿನಿಷ್ಕ್ರಮಣಕ್ಕೆ ಮನಂ ಪರಿಯೆ ಪರಿಚ್ಛೇದಿಸಲ್ಕದೇಂ ಪರಿಣತನೋ (ಪುಷ್ಪದಂ. ೧೩-೭೫). ೩. ಸವೆಸು ; ಮುಗಿಸು ; ತೀರಿಸು : ಸಪ್ತಾಷ್ಟಭವದೊಳಾತ ಪಱಿಪಡಿಸುವ ಕರ್ಮತತಿಯ (ದ್ವಾದಶಾ. ೫೧-೧೨೨೪). ೪. ಭಂಗವುಂಟುಮಾಡು : ಮುಂಕೊಂಡ ಮಹಾವ್ರತಮಂ ಪಱಿಪಡಿಸದ . . . ಸತ್ಯಕ್ಕೆಱೆವೆಟ್ಟೆನಿಸುವ ಸಾಧುಸಮಿತಿಗತಿ ಸಮತೆಯೊಳೆಱಗುವೆನು (ಜಯಕಾ. ೧-೫). ೫. ಹೋಗಲಾಡಿಸು ; ಪರಿಹರಿಸು ; ನಿವಾರಿಸು : ವ್ಯಾಧಿಯಾದಂದವಾಗಿರ್ದುದಿದಂ ಸದ್ವೈದ್ಯರಿಂ ನೋಡಿಸಿ ಪಱಿಪಡಿಸಿಂ (ಸುಕುಮಾ. ೧೧-೩೪) ; ಎಱೆವುದು ಕಾಂಜಿಕಮೊಂದಂ ಪಱಿಪಡಿಕುಂ(ಗುಂ) ನೆಲ್ಲ ಬೇರ ವಿಷಮಾ ಕ್ಷಣದಿಂ (ಖಮದ. ೨-೪೧). ೬. ಬಿಡು ; ತೊರೆ : ಅಟಮಟದಿನಾಚರಿಪ ಧರ್ಮಮಂ ಪಱಿಪಡಿಸು ದಿಟವನೆ ನುಡಿವ ಧರ್ಮವನೆಯಾಚರಿಸು (ಸಮ್ಯಕ್ತ್ವ. ೧-೫) ; ಜನನಿಜನಕರು ಬಂಧುಬಳಗವೆಲ್ಲವ ಬಿಟ್ಟು ವಿನುತಮಪ್ಪೀ ಬುದ್ಧಸಮಯಮಂ ಪಱಿಪಡಿಸಿ . . . ನಿನ್ನ ಬೆಂಬಳಿಯಲ್ಲಿ ಬಂದು ದೇಸಿಗನಾದನೀಗಲೆನ್ನಾ ಮನದಾಣ್ಮನೆಂದು ಮಱುಕಂಬಡೆಯದೆ (ಸಮ್ಯಕ್ತ್ವ. ೯-೪೬). [ಪಱಿವಡು+-ಇಸು$_3$]

**ಪಱಿವಡಿಸು$_2$** (ಕ್ರಿ). ಸಂತೋಷಪಡು : ಪರಾಗಪುಂಜದೊಳ್ ಪಱಿವಡಿಸಿತ್ತು ಭೃಂಗಶಿಶು ನೀರಜದೊಳ್ ನಿಜಪಾಂಸುಕೇಳಿಯಂ[ಯಿಂ] (ಚಂದ್ರಪ್ರ. ೭-೬೧) ; ಭಾಗೀರಥಿಯ ಪಾವನವೆನಿಸಿದುತ್ತರದಿಶಾಕೂಲದಲಿ ಪಱಿವಡಿ [ಪಾಠಾಂ.ರಿ]ಸಿ ಮುನಿನಿಕರ ನೆರೆದಿರಲು (ಸಿಭಾಗ. ೧-೨-೧೯). [ಪಱಿ$_4$+ಪಡು$_1$+-ಇಸು$_3$]

**ಪಱಿವಡು,** ಪಱಿಪಡು, ಹಱಿಪಡು (ಕ್ರಿ). ೧. ಕತ್ತರಿಸಿ ಹೋಗು ; ತುಂಡಾಗು : 'ಪಱಿವಡಿಸು$_1$' ಪರಾ. ೨. ನಾಶವಾಗು ; ಇಲ್ಲವಾಗು : ಇದಱ ಪೂರ್ವಜನ್ಮಸಂಸ್ಕಾರವಿನ್ನುಂ ಪಱಿವಟ್ಟುದಿಲ್ಲ (ಪಂಚತಂ. ೨೬೨-೮) ; ಪುದಿದೆಂಟುಂ ಕರ್ಮಬಂಧಂ ಪಱಿವಡೆ (ಧರ್ಮಾಮೃ. ೧-೨). ೩. ಕಡಮೆಯಾಗು ; ಕುಗ್ಗು ; ಕ್ಷೀಣಿಸು : ಮಱುಗೆ ಶರೀರಂ ಕಣ್ಗಳ್ ಪೊಱಮಡೆ ಮೇಲ್ವಾಸ್ವಸಮೆತ್ತೆ ಸೆಡೆದಳ್ಕೆ ಬಲಂ ಪಱಿವಡೆ ಜೊಮ್ಮನೆ ಜೋಲ್ವುಂ (ಧರ್ಮಾಮೃ. ೪-೧೬೨). ೪. ಬವಣೆಪಡು ; ಭಂಗಪಡು : ಒರ್ಮಡಿತೆ ನೀರ್ಗೆ ಪಱಿವ[ಪಾಠಾಂ. ಪ]ಟ್ಟೆರ್ಕೆಯ ಪಣ್ಣೆಲೆಯ ಮಱಗೆ ದೇಸಿಗರಂ ದೇವರ್ಕಳ್ಗೊಡೆಯವರ್ಮಾಟ್ಪರೆ (ಶಮದ. ೨೪ ಪ್ರಯೋ ; ಶಬ್ದಾನು. ೧೪೦ ವ್ಯಾಖ್ಯಾ ನೋ). **ಪಱಿಪಡು :** ೧. ಎನ್ನ ಮಿತ್ರನಪ್ಪ ಮೂಷಕದಿಂದಲ್ಲದೀ ಪಾಶಬಂಧನಂ ಪಱಿಪಡದು (ಪಂಚತಂ. ೨೯೧-೧೯) ; ಸೂಸುವ ಕುಂತಳಂ ನಸು ಬಱಲ್ದ ಕುಚಂ ಪಱಿಪಟ್ಟ ಹಾರಮುಬ್ಬಾಸವದೊಳ್ ಕೊಡರ್ದ ನಱುಸುಯ್ . . . ಭಯಮಂ ತಳೆದಿರ್ದ ಚಿತ್ರಮುತ್ತಾಸುರಮಪ್ಪನಂ ಗಗನದಿಂ ಸತಿ ಭೋಂಕೆನೆ ಬಿಲ್ದುಳುರ್ವಿಯೊಳ್ (ದಶಕು. ೧೨-೧೯೧) ; ಅವರ ದುಷ್ಕರ್ಮಪಾಶಂಗಳು ಪಱಿಪಟ್ಟು ಪೋಗಲೆಂದಧಿಕವರಮಿತ್ತು (ಚೆಬಪು. ೩೨-೨೯). ೨. ಮೆಯ್ಯ ಮಮತ್ವಂ ಪಱಿಪಡೆ ಪಱಿಪಟ್ಟು ಪೋದುದಸು ಮೆಯ್ಯಿಂದಂ (ಸುಕುಮಾ. ೧೨-೪೨) ; ವಜ್ರಮಯಕೋದಂಡಂ ಕಡಿಕಂಡಮಾಗೆ ಪಱಿಪಡೆ ಪೊಡರ್ಪು ಹೇಮಪ್ರಭಂ ಹತಪ್ರಭನಾದಂ (ಪಂಪರಾಮಾ. ೩-೬೦) ; ಬೋಧದೊಂದೆಸಕದಿಂ ಪಱಿಪಟ್ಟುವು ಪಾಪಪಾಂಶುಗಳ್ (ಚಂದ್ರಪ್ರ. ೧೧-೧೬) ; ಮನೋಧೃತಿಯಂ ಪೊದಟ್ದ ಪಾಂಗುಱೆ ಪಱಿಪಟ್ಟು ಲಜ್ಜೆ ಲವಮಿಲ್ಲದೆ ಬಿಟ್ಟು (ಕುಸುಮಾ. ೧೩-೨೩). ೩. ಶೋಕವಿಕಳದಿಂ ಶೂನ್ಯಮಾದ ಮನದಿಂ ಧೈರ್ಯಮುಂ ಪಱಿಪಟ್ಟುದು (ಶಾಂತಿಪು. ೪-೭೯ ಪ). ೪. ಪಱಿಪಟ್ಟ ಪಗೆವರಂ ನೆಱೆ ಪಱಿಪಡಲಣಮಾಯದವರನವರ್ಗಳ ಬಾಟೆಯೊಳ್ ನಿಱಿಸಲ್ ಬಗೆದೈ (ಪಂಪಭಾ. ೯-೪೫) ; ಇಂತೀ ಲಗ್ಗೆಯೊಳ್ ಪಯಿಂಧಾಸಿರ್ವರ್ ಪಱಿಪಟ್ಟಱದು (ಚಕವಿ. ೨-೧೧೫). ೫. ಮುಗಿ ; ತೀರು : ಮೂಗಿನೊಳುಸುರೆಂಬ ಮಾತು ಪಱಿಪಟ್ಟುದು ನಿಚ್ಚಟಂ (ವರ್ಧಮಾ. ೫-೫) ; ತಿರಿಕರ್ಗೆ ಬಡತನಮೆಂದು ಪಱಿಪಟ್ಟುದಿಲ್ಲದೇ

ನಚ್ಚರಿಯೋ (ಧರ್ಮಾಮೃ. ೯-೮೪) ; ಆಯುಷ್ಯಂ ಪಱಪಡುವಾಗಳೆ ಬೆರ್ಚವಂತೆ ಮಱುಗುವ ಮರುಳಿಂಗಾರಯ್ಯೆ ವಿಭವಂ ಮಱುಭವಂ ನಾಡೆಯುಂ ವ್ಯರ್ಥಮಲ್ತೇ (ಚಂದ್ರಪ್ರ. ೪-೧೮). **೬.** ನಿವಾರಣೆಯಾಗು ; ಪರಿಹಾರವಾಗು : ಓವುಮುಮಂ ಶುಂಠಿಯುಮಂ ಸೇವಿಸೆ ಪಱಪಡುಗುಮಾವಗಂ ಕಫರೋಗಂ (ಲೋಕೋಪ. ೯-೧೬) ; ಪಱಪಡೆ ಸೇದೆ ಪಿಂಗೆ ತೃಷೆ ತಣ್ಗೊಳಸಂಗಳನೆತ್ತಿ ನಿಂದು ನೀರೆಱೆವ ಚಳಲ್ಲತಾಂಗಿಯರ ಕೊಂಕಿದ ತೋಳ ಮೊದಲ್ಗೆ (ಅನಂಪು. ೧-೮೩); ಮುಗ್ಧವಿಳಿಂಪರೆ ಶಂಕೆ ಚಿತ್ತದಿಂ ಪಱಪಡುವಂತು ಬಾಲಶಿಶಿಸಂ ತಱಸಂದೊಡೆ (ಪುಷ್ಪಪು. ೧೧-೩೧) ; ಆ ಪರದಂ ತಂದಾ ಚಂದನಮಂ ನೃಪತಿಗೆಱೆಯೆ ದಾಹಜ್ವರವೆಯ್ದೊಂದೆ ನಿಮಿಷಕ್ಕೆ ಪಱಪಡೆ (ಧರ್ಮಾಪ. ೯-೧೦). **೭.** ನಿಂತು ಹೋಗು ; ಕೊನೆಗೊಳ್ಳು : ಆ ನುಡಿ ಪಱಪಡೆ ಮುಳಿದು ನೋಡುಗುಂ ಕೆಳದಿಯರಂ (ಪಂಪಭಾ. ೪-೫೬) ; ಬರವಿನ ಮಾತು ಮಂತ್ರಿಸುತನೊಳ್ಪಱಪ[ಪಾಠಾಂ.ವ]ಟ್ಟುದನೆಯ್ದೆ ಕಂಡು (ಕಾದಂಉ. ೪೫೧). **೮. ಕಾಣದಾಗು ; ಅಡಗು ; ಮರೆಯಾಗು :** ಇಂತೊಗೆದು ಪರೆದ ಪಾಂಸುಪಟಲಂ . . . ಕುದುರೆಗಳ ಲಾಲಾಜಲಜಾಲಕದೊಳಂ ಪಱಪಡಲ್ (ಕಾದಂಪೂ. ೬೦೫). **ಹಱಪಡು : ೨.** ನಿರ್ಜರೆಯೆಂಬ ನಾಮ ಹಱಪಟ್ಟು ಕರ್ಮವೆಲ್ಲವು ಹೋಗಲದು ತಾನೆ ನೆಱ ಮೋಕ್ಷ ನಿರ್ಧರಿಸಾತ್ಮ (ಭರತೇ. ೬೮-೮೬). [ಪಱು$_1$ + ಪಡು$_1$]

**ಪಱವಡೆ,** ಪರಿವಡೆ (ಕ್ರಿ). ಸೊಗಸಾಗಿರು ; ಶೋಭಿಸು ; ರಂಜಿಸು : "ನಿಗರ, ನೆಟ್ಟೆ . . . ಪಱವಡೆದುದು—ಈ ೧೪ ಮನೋಹರಂ" (ಕಶಸಾ. ೫೫-೨೧೧) ; ಪಕ್ಕಿಗಳ ಪೆರ್ಚಿದ ಸರಂಗಳಿಂ ಹರಣಂ ಬಡೆದಂತೆ ಪಱವಡೆದು ತಿಂತಿಣಿವಡೆದ ಪೇರಡವಿಯೊಳ್ (ಕಬ್ಬಕಾ. ೨೧೬); ಪಱವಡೆದು ಕಣ್ಣಪ್ಪದೇವನ ವರವಿಲೋಚನಯುಗ್ಮಮೇ ಶಿವನಕ್ಷಿಯುಗಮಾಗೆ (ಬಸಪು. ೧೮-೮೫) ; ಭುಲ್ಲವಿಸಿ ಹಯಪದಸಮೂಹದ ಚೆಲ್ಲಿದವು ಸಕ್ರಮದ ಪಾಳಿಯು ಪಲ್ಲವಿಕೆ ಪಱವಡೆದುದಮಳಪ್ರಣವಮಯವಾಗಿ (ಕುಮ್ಯಾಕ. ೬-೩೫). **ಪರಿವಡೆ :** ಕೆಲರು ಬಳಲ್ದು ಮಲಗಿನ ವಿಶ್ರಾಮಪೀಠಗಳ ಮೇಲೆ ಪರಿವಡೆದೊರಗಿಯೂ . . . ಇರುವರು (ವಿಗಡ. ೬-೨೩). [ಪಱು$_4$ + ಪಡೆ$_1$]

**ಪಱವಱ$_1$** 'ಪಱು$_1$' ಪರಾ.

**ಪಱವಱ$_2$** 'ಪಱು$_3$' ಪರಾ.

**ಪಱವಱ$_3$,** ಪಱಮಱ (ನಾ). ೧. ಒಂದು ಬಗೆಯ ಆಟ ; ಹಾರುಗುಪ್ಪೆ : "ಪಱವಱಯೆನಲು ಹಾಱುಗುಪ್ಪೆ" (ಶಬ್ದಮಂ. ೫೬); "ಪಱವಱಯೆನೆ ಪೆಗಲ ಪತ್ತುವಾಟಂ" (ಕವಿಕಂ. ೨೨೬) ; ಕೀಱ ಪಾಱ ಬವಣೆಗೊಂಬ ಮಱವಕ್ಕಿಗಳನಟ್ಟಿ ತಱಬಿ ಪಿಡಿವಲ್ಲಿ ಪಱವಱಯಾಟಮಂ . . . ಕಲ್ವರ್ (ಚಿಕಪಂ. ೮-೧೪). ೨. (ಅಲಂ) ಸಡಗರ ; ಸಂಭ್ರಮ (?) : ಅವನೀಪಾಲರ್ ಕೆಯ್ಗೆಯ್ಯಲೆಂದು ಪಱವ[ಪಾಠಾಂ.ಮ]ಱಯಾದರ್ (ಪಂಪಭಾ. ೩-೪೨). ℙ "ಪಱಮಱಯಾಡು ಎಂಬುದಕ್ಕೆ ಪಱಮಱಯುಂ+ಆಡು ಎಂದು ಆಟವೆಂದೇ ಅರ್ಥವಾಗುತ್ತದೆ. ಈ ಆಟಕ್ಕಾಗಿ ಮಕ್ಕಳು ಪಡುವ ಸಡಗರ ಎಂದು ಇಲ್ಲಿ ಲಕ್ಷ್ಯಾರ್ಥವನ್ನು ಸೂಚಿಸಿದೆಯೆಂದು ಭಾವಿಸಬೇಕು" (ಪಂಪದೀ. ೧೧೦). **ಪಱಮಱ : ೧.** "ಪಱಮಱಯೆಂದು ಪೆಗಲಂ ಪತ್ತುವಾಟಂ" (ಕಶಸಾ. ೬೯-೫೫೬) ; ಪಱಮ[ಪಾಠಾಂ.ವ]ಱ ಪಾಱುಂಬಳೆ ಮರಗೆರಸಿ ಕುಣಿಲ್ಸೆಂಡು . . . ಪೊಣೆಗುಂಡೆಂಬಿವನಾ ಮುರಹರನಲ್ಲಲ್ಲಿಗಾಡುತುಂ ಬರಲ್ (ಕಾವ್ಯಸಾ. ೩೬೬.; ಜಗಪಿ. ೪-೪೪ ನೋ) ; ಪುಂಬರಿದೊತ್ತಿ ಮುತ್ತಿ ಗಜಱ ಗೆಲ್ಲದ ಚಲ್ಲದ ಪಱಮಱಯ ಗಂಡರನೆತ್ತಂ ಪಿಂಡುಗೆಡೆಪುತಂ (ರಾಮಾಶ್ವ. ೧೪೫-೯). ೨. 'ಪಱಮಱಗೊಳ್' ಪರಾ.

**ಪಱವಱಯಾಡು, ಪರಿಮಱಯಾಡು, ಪಱಮಱಯಾಡು** = ೧. ಹಾರುಗುಪ್ಪೆ ಆಟವನ್ನು ಆಡು : ಪರನ್ಯಪರಟ್ಟಿದ ಕಪ್ಪದ ಕರಿಗಳ ಮದಜಳಮನುಂಡು ಕಂಪೇಱಿದ ತದ್ಧರಣೀಶಗೃಹಾಂಗಣದೊಳ್ ಪಱವಱಯಾಡುವುವು ಪಱಮೆವಱಗಳ ಬಳಗಂ (ಚಂದ್ರಪ್ರ. ೬-೩೩); ಬೆಮರ್ಚವಯವದೊಳ್ ಪಱಮಱಯಾಡುವಂತೆ ಪರಿದವು ವಿಳೋಕನಂ ನೃಪವರನಾ (ವರ್ಧಪು. ೬-೬) ; ಧುರದೊಳ್ಪಱಮಱಯಾಡುವ ತೆಱದಿಂದುಱದಿಱದನೆಂಬ ನಿಯಮಮಂ ದೂಷ್ಯಂ (ಶಮದ. ೧೯ ಪ್ರಯೋ). ೨. ಸಂಭ್ರಮಗೊಳ್ಳು ; ಸಡಗರಿಸು : ಯುದ್ಧದೊಳು ಪರಿಮಱಯಾಡುವಟ್ಟಿಗಳ (ಎಕ. VIII, ಸೊರಬ. ೧೩೨-೨೪ ; 1151) ; ನಿಡುಸುಯ್ಯ ಪರಿಮಳಕ್ಕೆ ಪಱಮಱಯಾಡುವ ಮಧುಕರನಿಕರಂ (೧೦ಕ. ೫-೬೬ ವ) ; ಪರಿಮಳದೊಳ್ ಪಱಮಱಯಾಡುವ ಮಱದುಂಬಿ (ಅನಂಪು. ೩-೯೫ ವ) ; ಮೃಗಮದತಿಲಕದ ಪರಿಮಳಕ್ಕೆ ಬೆರಸಿ ಪಱಮಱಯಾಡುವ ಮಱದುಂಬಿಗಳ ಬಂಬಲಂ ಪೊಡೆವ ಕರತಳಂ . . . ಕಮನೀಯಮಾಗೆ (ರಾಜಶೇ. ೫-೧೯ ವ).

**ಪಱವಾಯ್,** ಹಱವಾಯ್ (ನಾ). ೧. ಹರಿದು ಹೋಗಿರುವ ಬಾಯಿ ; ಹರುಕುಬಾಯಿ. ೨. ಗುಟ್ಟನ್ನು ರಟ್ಟು ಮಾಡುವ ಬಾಯಿ ; ಒಡಕುಬಾಯಿ : 'ಪಱವಾಯ್ತನ' ಪರಾ. **ಹಱವಾಯ್ : ೧.** ಮುಱಿದ ಹಾವಸೆಹಲ್ಲ ಹಱ[ಪಾಠಾಂ.ಱು]ವಾಯ ತುಱುಚೆಗಳು . . . ಸುತ್ತ ಮುತ್ತಿರಲು (ಪಾಗೀರ. ದೇ. ೨೫೪-೨೬). [ಪಱ$_1$ + ಬಾಯ್]

**ಪಱವಾಯ** (ನಾ). ಹರುಕುಬಾಯುಳ್ಳವನು ; ಒಡಕುಬಾಯಿಯವನು : ಚೆಚ್ಚರಿಗಂ ಪಱವಾಯಂತುಚ್ಚಳನತ್ಯುಗ್ರಕೋಪಿ ಮೂರ್ಖಂ (ಸಮಸ. ೬-೧೦೬). [ಪಱವಾಯ್+-ಅ$_7$]

**ಪಱವಾಯ್ತನ** (ನಾ). ಗುಟ್ಟನ್ನು ಕಾಪಾಡಿಕೊಳ್ಳದ ಸ್ವಭಾವ : ನೆಱ ನಿನ್ನ ಬೆನ್ನನೇನೆಂದಱಯೆ ನೀನಿನಿತಱಂದೆ ಬೆನ್ನಿಲ್ಲೆಂಬಾ ಪಱವಾಯ್ತನದಿಂದೇನೆಂದಱಯದೆ ಗಱಪುವರ ನುಡಿಗಳಂ ಕೈಕೊಳ್ವ (ಧರ್ಮಾಮೃ. ೫-೧೮೬). [ಪಱವಾಯ್+-ತನ]

**ಪಱವು,** ಹರಿವು$_1$, ಹರು, ಹರುವು, ಹ್ಱವು, ಹಱುವು (ನಾ). ೧. ಕತ್ತರಿಸುವಿಕೆ ; ತುಂಡುಮಾಡುವಿಕೆ ; ಹರಿಯುವಿಕೆ : (೬). ℙ ಪಕಾರಾದಿಯಾದ ಶಬ್ದದ ನಾಮರೂಪವು ಕಾವ್ಯಪ್ರಯೋಗದಲ್ಲಿ ದೊರಕದಿರುವುದು ಪರಿಶೀಲನಾರ್ಹ. ತಮಿಳಿನಲ್ಲಿ 'ಪಱವು' ಶಬ್ದವು ಬಳಕೆಯಲ್ಲಿದೆ. **ಹರಿವು$_1$ : ೨.** ಕೊನೆಗಾಣಿಸುವ ಉಪಾಯ ; ಪರಿಹಾರದ ದಾರಿ : ರಥವೆತ್ತನೂಕಿ ಬರೆ ಕರ್ಣನಂ ಕಾಳಗದಿ ಗೆಲ್ಲಲು ಪಿನಾಕಿಗಸದಳ ಬಿದ್ದ ಕಾಲದೊಳ್ನೀ ಹರಿವ ಕಾಣೆಂದು ಬೋಧಿಸಿದನು (ತುರಂಗ. ೬೦-೨೬). **ಹರು : ೨.** ನಾನೇನೋ ಒಂದು ಹರು ನೆನೆದಿದ್ದೀನಿ . . . ತೀರ್ಥಳ್ಳಿ ದೋಣಿ ಗಂಡೀಲಿ ಹೊಳೆ ದಾಟಬಿಟ್ರೆ, ನಮ್ಮನ್ಯಾರೂ ಮೂಸಿ ನೋಡೂದಿಲ್ಲ ಆಮ್ಯಾಲೆ (ಮಲೆಮ. ೬೮೦). **ಹರುವು : ೨.** ಮರುಪಂಪ್ರತಿ ನಡಸೋದಕೆ ಹರುವಿಲ್ಲದ ನಿಮಿತ್ತ ನಿವಗೆ ನಾವೆಲ್ಲರು ಒಪ್ಪಿ . . . ಗುಣವ ಮಾಡಿದೆವು (ಸೌಇಇ. IX-ii, ೪೬೦-೧೫ ; 1465). **ಹಱವು : ೨.** ತಾನೇ ವಿವೇಕದಲಿ ಜನಪನಳುಪಿಗೆ ಹಱುವ ಮಾಡುವೆನು (ಪ್ರಭುಲೀ. ೧೯-೧೦). **೩.** ಪರಿಹಾರ; ನಿವಾರಣೆ : ಇಂದ್ರಮುಖ್ಯರ ಹಳೆಯ ಶಾಪಕೆ ಹಱುವ ಕಂಡನು (ಸಂಭಪ. ೩೩-೪೫) ; ಪ್ರಶ್ನೆಸಾಗರದ ಅಂತಗಾಣದೆ ಹಱುವ ಹೇಳದೆ ಚಿಂತಿಸಿದನು (ನಿಭಾಗ. ೧೧-೨೦-೨೬) ; ತಾತನ ಮುಣತ್ರಯಕೆ ಹಱುವಹುದು ರಾಘವ ಭೀಷ್ಮರಂತೆ ಕೀರ್ತಿ ಸ್ಥಿರವಹುದು

(ಜೈಮಿಭಾ. ೨೬-೫೮). **೪.** ನಾಶ; ಅಳಿವು : ನಾವ್ ನರರು ದಿಟ ತಾಪಸರು ತೀರ್ಥಾಚಂತರಿನ್ನಾರಾದಡೇನೆಮಗಾಯ್ತು ಹಱಿವು (ತೊರಂ. ೨-೫-೧೪) ; ರಾವಣರಾಜನಿಗೆ ನಾನಾವ ಬಗೆಯೊಳು ಪೇಳಿದೊಡೆ ದೇವಿಯ ಬಿಟ್ಟು ಕಳುಹಿತಿಲ್ಲವನಿಗೆ ನೀವು ಹಱಿವನೆಣಿಸುವುದು (ರಾಮವಿ. ೧೫-೫೩) ; ಉಂಬ ಮನುಜನು ತುತ್ತುತುತ್ತಿಗೆ ತುಂಬುವುದು ದಿಢದೌಕ ದನ್ನವ ಪಂಬಲಳಿಯಲು ಮನಸಿಗತಿಸುಖವಹುದು ಕ್ಷುಧೆಯೆಂಬ ತಿಂಬ ವೈರಿಗೆ ಹಱಿವಹುದು (ನಿಭಾಗ. ೧೧-೨-೫೧). **೫.** ಕೊನೆ ; ಅಂತ್ಯ ; ಮುಕ್ತಾಯ : ನಾನಱಿಸುತ್ತಲಱಿಸುತ್ತ ಬಂದು ಭಾವಕ್ಕಗಮ್ಯವಾದ ಮೂರ್ತಿಯ ಕಂಡೆ ನೋಡಾ ಎನ್ನ ಅಱಿವಿನ ಹಱಿವ ಕಂಡೆ ನೋಡಾ (ಅಪಚಂ. ೧೬೭-೭೫೨) ; ಕೆಱೆಯ ಕೆಲಸದಲಿ ಸಿದ್ಧೇಂದ್ರನಿರುತಿರೆ ಬಂದು ಹಱುವಿಲ್ಲವೆನುತ ಕರೆಯೋ ಒಡ್ಡರೆಱೆಯನಂ ಕೊಱೆಕೂಲಿಗೊಂಡನೋ ನಾಳೆ ಮಿಕ್ಕುದನಗೆಯ ಬಾರದೇ ಎಂಬನ್ನೆಗಂ (ಸಿದ್ಧರಾ. ೯-೩೯).

**ಹಱುವು** : **೨.** ಇವರೆಲ್ಲರ ಹಂಗಿಗೆ ಹಱುವ ಕೇಳಿಹರೆಂದಂಜಿ (ಕಲ್ಯಾಶಾಂ. ೪೪) ; ಏನು ಹಱುವಿಲ್ಲದೆ ಕಳವುಗೈದಾ ನಿಮಿತ್ತದಿ ಪೊಳಲರಸನಾ ಭಾನುದತ್ತನು ಪುತ್ರರನು ನಾನೆಂತು ಕೊಲಿಸುವೆನು ಎಂದು ಪೊಳಲಿಂ ಹೊಱವಡಿಸಿ (ಸಾಳ್ವಭಾ. ೨೦-೨೯) ; ಮುಂದೆ ನಿನಗೆ ಹಱುವ ಹೇಳಶಕ್ಯೊಂದು ದೇವತೆ ನನಗುಂಟು ತಾಳು (ಭರಚ. ೪೬-೧೪೭). **೪.** ಕಂದೆಱೆದು ಮುನಿ ನೋಡಿದೊಡೆ ತಮಗಿಂದು ಹಱುವಹುದು (ಕುಮಾ್ಯಅ. ೩-೧೭) ; ದುರುಳ ಬಲುಹಿಂದೆನ್ನನೆಳೆದರೆ ಕೆರಳಿದರು ಗಂಧರ್ವರೀತಗೆ ಹಱುವ ಕಂಡರು (ಕುಮಾ್ಯವಿ. ೬೦೯. ೩-೯೭). **೫.** ಹಱುವಾಗಿ ಹೋಯ್ತು ಭವಮಾಲೆ (ಸರ್ವಜ್ಞ. ೪೫೮). **೬.** ತೊಂದರೆ ; ಕೇಡು ; ಅಪಾಯ : ಉಂಟು ತೋಱಿರೆ ತೋಱದಡೆ ನಿಮಗೆ ಹಱುವೇನು ಗಂಟಲಂ ಕೊಯ್ವನೋ (ಲಿಂಗಪು. ೩೦-೪).

[ಪಱಿ$_1$ + -ವು]

**ಪಱಿವೇಱು** (ಕ್ರಿ). = ಪಱಿವಡೆ : ಹರಿನೀಳಸ್ಥಳಿಯೊಳ್ ಬಣ್ಣವುರಂ ಪಱಿವೆತ್ತುದು ಬಗೆ ಮರುಳ್ವನ್ನೆವರಂ (ಚಂದ್ರಪ್ರ. ೪-೬೩ ರಗಳೆ).

[ಪಱಿ$_4$ + ಏಱು$_1$]

**ಪಱಿವೊಱಸು** (ನಾ). ಪುಕ್ಕವನ್ನು ಕತ್ತರಿಸಿದ ಹೊರಸು,- ಪಾರಿವಾಳ : ಕಿಱುವಡಿಗಾಲದಂದುಟಾದೆನೋಪಳನಾನವಳಂದೆ ಗಂಡರಂ ಪಱಿವೊಱಸಾ[ಪಾಠಾಂ. ನಾ]ಗೆ ಮಾಡುವಳ್ (ಜಗವಿ. ೧೬-೧೩೪).

[ಪಱಿ$_1$ + ಪೊಱಸು]

**ಪಱಿಸೀರೆ** (ನಾ). ಹರಿದ ಬಟ್ಟೆ ; ಚಿಂದಿ : ತೊಟ್ಟನೆ ಪಱಿಸೀರೆಗಳಂ ಬೆಟ್ಟಾಗಿರೆ ಗುಹೆಯ ಬಾಗಿಲೊಳ್ ತೀವಿಸಿದಂ (ಧರ್ಮಾಮೃ. ೯-೧೭೨).

[ಪಱಿ$_1$ + ಸೀರೆ$_2$]

**ಪಱಿಸು** 'ಪಱಿಯಿಸು' ನೋ.

**ಪಱುಕ,** ಹರುಕ, ಹಱುಕ (ನಾ). **೧.** ಸಂಬಂಧವನ್ನು ಕಡಿದು ಕೊಂಡ ವ್ಯಕ್ತಿ : 'ಹಱುಕು' ಹೋ. **೨.** ನಾಶಕಾರಕನಾದ ವ್ಯಕ್ತಿ : ಪಱುಕನಧಟ ಸಾಸಿರಬಾಹುಪಿತನೆನ್ನ ಕಿಱುಕಾಂತನೊಳು ಕಾದುತಿಹನು (ಮೋಹತ. ೩೫-೩೮). **೩.** ಕ್ಷುದ್ರವ್ಯಕ್ತಿ ; ಕೀಳು ಮನುಷ್ಯ ; ನೀಚ : ಪಾರ್ವತಿಜಠರದೊಳೊಗೆದವನಲ್ಲ ಸಲಾಱುಯೋನಿಜ ಗಾದ ಪಱುಕ ಗಾಱುಗೆಡೆಯ ಬೇಡ (ಮೋಹತ. ೩೮-೧೪). **ಹರುಕ** : **೩.** ಬಿಳಿಗಲ್ಲ ಪುಡಿಯ ಮೊಸರೋಗರಮೆನುತ್ತೆ ಪ್ರಿಯದಳೆದುಂಡು ಪ್ರಾಣಗಳ ಬಿಡುವ ಹರುಕನ ತೆರದೊಳು (ವೆಂಕಾರಾ. ೨-೩೫-೧೯). **ಹಱುಕ** : **೩.** ಹಱುಕನೇ ನೀನೆಲವೊ ರಾಯರೊಳುಱುವ ನೃಪ ನಿಮ್ಮಯ್ಯ (ಕುಮಾ್ಯವಿ. ೬-೨೧) ; ಹಱಿದ ಹಱಗೋಲು ಹೊಲ್ಲ ಹಱುಕನ ಕೆಳೆ ಹೊಲ್ಲ (ಸರ್ವಜ್ಞ. ೧೭೦೬). [ಪಱುಕು + -ಅ$_7$]

**ಪಱುಕು,** ಹರುಕು, ಹಱುಕು, ಹಱುಕು (ನಾ). **೧.** ಹರಿದು ಹೋದ ಬಟ್ಟೆ, ಕಂಬಳಿ ಮುಂತಾದುವು ; ಚಿಂದಿ ; ಜೂಲು : (ಕ). (ಗು). **೨.** ಘನತೆಯಿಲ್ಲದ ; ದೊಡ್ಡತನದಿಂದ ಕೂಡಿರದ: 'ಪಱುಕ' ಪರಾ. **ಹರುಕು** : **೧.** ಆಕೆಗೆ ಒಳ್ಳೆಯ ಬಟ್ಟೆಯಿಲ್ಲದೆ ಹರುಕೇ ಗತಿಯಾಗಿದೆ (ರೂಢಿ). **೨.** ಅವರ ಬಾಯಲ್ಲಿ ಎಂದೂ ಹರುಕು ಮಾತುಗಳು ಬರುವುದಿಲ್ಲ (ರೂಢಿ). **೩.** ಬಟ್ಟೆ ಮೊದಲಾದುವು ಹರಿದು ಉಂಟಾದ ತೂತು,-ರಂಧ್ರ : ಆಕೆಯ ತಲೆಯ ಮೇಲಿದ್ದ ಗಂಟಿನ ಹರುಕಿನಿಂದ ಅಕ್ಕಿಯೆಲ್ಲಾ ಸುರಿದು ಹೋಯಿತು (ರೂಢಿ). **೪.** ಘನತೆಯಿಲ್ಲದಿರುವಿಕೆ ; ದೊಡ್ಡಸ್ತಿಕೆಯಿಲ್ಲದಿರುವಿಕೆ : ಸಭಾ ಮರ್ಯಾದೆಯನ್ನು ಬಿಟ್ಟು ಆತ ಹಾಗೆ ಹರುಕು ಹರುಕಾಗಿ ವರ್ತಿಸಬಾರದಾಗಿತ್ತು (ರೂಢಿ). **ಹಱಿಕು** : **೩.** ಕಂಬಳಿಯ ಹಱಿಕಿನಲ್ಲಿ ಬತ್ತೀಸ ಕೋಟಿ ದೇವರ್ಕಳೆಲ್ಲರೂ ಸಿಕ್ಕಿ ಅಳಲುತ್ತ ಬಳಲುತ್ತಲೈದಾರೆ (ಮೋಳಿಮಾ. ಕ. ೫೮೮-೩೦೪). **ಹಱುಕು** : **೫.** ಸಂಬಂಧವನ್ನು ಕಳೆದು ಕೊಂಡ ವ್ಯಕ್ತಿ ; ದೂರವಾದವನು : ಹಱುಕುಗಳು ನಾವ್ ನೂಱು ಮಕ್ಕಳು ಹೊಱಗೆ ಬದುಕುವೆವೈಸಲೇ (ಕುಮಾ್ಯಸ. ೧೨-೬೩).

**ಹರುಕುಮುರುಕು** = **೧.** ಛಿನ್ನಭಿನ್ನವಾದುದು ; ಭಗ್ನ ; ಮುರುಕಲು : ಭಾವನೆಗಳು ಹರುಕುಮುರುಕಾಗಿದ್ದವು (ಮುನಿಮಾ. ೨೦). **೨.** ಸಂಪೂರ್ಣವಲ್ಲದುದು ; ಅರೆಬರೆ : ಹರುಕುಮುರುಕಾಗಿ ಆಡುವ ಇಂಗ್ಲಿಷ್ ಮಾತು (Broken-English. ಇಂಕನಿ). [<ಪಱಿ$_1$]

**ಪಱುಗಲ್** 'ಪಱುಗೋಲ್' ನೋ.

**ಪಱುಗೋಲ್** 'ಪಱಿಗೋಲ್' ನೋ.

**ಪಱುಗೋಲು** 'ಪಱಿಗೋಲ್' ನೋ.

**ಪಱುಣೆ** 'ಪಱುಣೆ' ನೋ.

**ಪಱುಣೆ,** ಪಱಣೆ, ಪಱುಣೆ, ಹಱುಣೆ, ಹಱುಣೆ (ನಾ). ನಾರುಬಟ್ಟೆ ; ನಾರುಮಡಿ (?) : ಪಱುಣೆ[ಪಾಠಾಂ. ಹಱುಹೆ]ಮಡಿಯಾಗಿಯುಂ ಬಲ್ವಸ್ತ್ರವಾಗದು (ಧರ್ಮಾಮೃ. ೧೧-೧೮೬). **ಪಱಣೆ** : ಪೆಣನಂತಪ್ಪ ಮೆಯ್ಯಂ ಪೆಂಡಿರತ್ತ ತಪಾಗಳ್ ಅವರ್ ಓಡುವ ಮೃಗದ ಮೇಲೆ ಪಱಣೆ[ಪಾಠಾಂ. ಪರುಣೆ, ಪಱು(ವ)ಣೆ]ಯನಿಕ್ಕಿದಂತೆ ಮಿಗೆ ಬೆರ್ಚುವರ್ (ಜೀವಸಂ. ೧೪೨-೧೩). **ಪಱುಣೆ** : ಪಱುಣೆ[ಪಾಠಾಂ. ರುಣೆ]ಯಂ ಪಡೆದೊಡಂ ಕುಱುವಡಿಯಂ ಪಡೆದೆನೆಂದಿರ್ಪ ಕಳ್ಳನಂತಪ್ಪರೀ ದಿವ್ಯವಸ್ತ್ರಾಭರಣಂಗಳಂ ಕೊಳ್ಳೆಂದು ಮುಂದಿಕ್ಕಿದೊಡೆ (ಸುಕುಮಾ. ೭-೨೭ ವ). "ಹಳೆಯ ಬಟ್ಟೆ?" (ಸುಕುಮಾ. ಕೋಶ) ; [ಕಳ್ಳನ ನನ್ನಿಯಂತೆ] ಪಱು[ಪಾಠಾಂ. ಪುರು]ಣೆಯ ಶೋಭೆಯಂತೆ . . . ಪೊಱ ಗಣ್ಗೆ ರಂಜಿಸುವ ಬಹಿರಾಳಾಪದ ಡೊಂಬನೊಲ್ಲದೆ (ಧರ್ಮಾಮೃ. ೮-೯೪). **ಹಱುಣೆ** : ವನಿತೆಯರಲ್ಲಿ ಕಸವಂ ಬಿಸುಡುವಂತೆ ಹಳೆದಾದ ಹಱುಣೆ [ಪಾಠಾಂ. ಹರಿಣೆ]ಯಂ ಪೇಸಿ ಪೊಱಮಡಿಪಂತೆ . . . ಬಿಡಲು (ಪಿಂಡೋರ. ಹ. ೫೦೪-೩). **ಹಱುಣೆ** : ದುಕೂಲಮನೀಡಾಡಿ ಹಱುಣೆಯ[ಪಾಠಾಂ. ಬಣ್ಣ ಮ]ನುಡುವ . . . ಗಾವಿಲನಂತಾಗಿ (ಧರ್ಮಾಮೃ. ೧೪-೧೦೬).

[ದೇ. ॥ ?]

**ಪಱುವಿ** (ನಾ). ಒಂದು ಊರಿನ ಹೆಸರು : ಎಳಂಗೂಡಲೂರ್ಮ್ಮಱುಯಾಚಿಗೂಡಲೂರ್ಪ್ಪಱುವಿ ಶ್ರೀಪುರಮಿತಿ ಚತುರ್ಷ ಗ್ರಾಮೇಷು (ಎಕ. X, ಗೋಲೀಬಿ. ೪೭-೪೬ ; 762). [ ? ]

**ಪಱುವಿನಾಡು** (ನಾ). ಒಂದು ನಾಡಿನ ಹೆಸರು : ಪಱುವಿನಾಡ ವೆಂದುಱ ಪೊನ್ನೆಯೊಳಿಱ್ದು (ಮೈಎರಿ. ೧೯೩೭, ೪೮-೯ ; 960) ; ಪಲ್ಲವಾದಿತ್ಯಂ ಪ್ರಿಥ್ವೀರಾಜ್ಯಗೆಯ್ಯುತ್ತಂ ಪಱುವಿನಾಡವೆನ್ನುಱು ಪೊಂನೆಯ ಳಿಱ್ದು (ಸೌಇಇ. IX-i, ೪೧-೧೧ ; 11ನೆಯ ಶತ). [ಪಱುವಿ + ನಾಡು]

**ಪಱೆ**$_1$, ಪರೆ$_3$, ಹರೆ$_3$, ಹಱೆ (ನಾ). ಒಂದು ಬಗೆಯ ಚರ್ಮ ವಾದ್ಯ; ಹಲಗೆ; ತಮಟೆ; ☞ ಕನ್ನಡದಲ್ಲಿ ಚರ್ಮವಾದ್ಯಗಳನ್ನು ಸೂಚಿಸುವ ಪದಗಳು ಅನೇಕ ವೇಳೆ ಒಂದಕ್ಕೊಂದು ಪಲ್ಲಟವಾಗುತ್ತವೆ. ಕವಿಗಳಲ್ಲಿ ಈ ಪದಗಳ ಉಪಯೋಗದಲ್ಲಿ ನಿರ್ದಿಷ್ಟವಾದ ಏಕಾಭಿಪ್ರಾಯವಿಲ್ಲ: "ಪಱೆ ಬದ್ದಣಮೆಂದು" (ಕರ್ಣಾನಿ. ೬೮); ಎಕ್ಕಮದ್ದಳೆಯ ಕೊಟಿಲ ಝುಂಕಾರದ ಪಱೆಗಳ್ ಮುಂದೆ ಬಾಜಿಸುತ್ತಂ ಬಟ್ಟೆಯಂ ಕಾಪಿನವರ್ ಪರೆ (ಪದ್ಮಾರಾ. ೮೦-೧೧); ಪೊಟಿಲೆಲ್ಲಂ ಚೋದ್ಯಂಬಟ್ಟು ಬದ್ದವಣದ ಪಱೆಗಳಂ ಪೊಯ್ಸಿ (ಪಂಪಭಾ. ೩-೩೧ ಪ); ಪಱೆಯ ಪರ್ಗಾಳೆಯ ಪಳಹದ . . . ಭೂರಿಸಿನಾದಂ ದೆಸೆ ಮುಟ್ಟೆ ಪಳಂಚಲೆಯೆ (ರಾಮಾಶ್ವ. ೫೦-೧). **ಪರೆ**$_3$: ತಮಟೆ, ಪರೆ, ಹಲಗೆ, ದವುಡಿ, ಢಕ್ಕೆ (ಕಂನುಹು. ೮೨); ಒದಗಿರ್ಪ ಪರೆ ಕೊಂಬು ಮುರಿಕೊಂಬುಗಳ ಮೊಳಗು ಪದಪಿನಿಂ ಬೀಗರಂ ಕರೆದುಲಿಯುತಿತ್ತು (ಕಾಲೂರ. ೧೪೬-೩೧೪). **ಹರೆ**$_3$: ಕಾಳೆ, ಹರೆ, ಕೊಂಬುಗಳ ಐಳಿ, ಮೊಳಗಿ, ಐಳಿ (ಇಂಗೀತ. ೧೬-೧); ಭೇರಿಗಳು ಬಾಜಿಸಿದವು; ಹರೆಗಳು ಭೋರೆಂದು ಮೊರೆದವು (ಭಾಮಣಿ. ೨೧); ಜನ ಹರೆ, ಡೋಣು, ತಮಟೆ, ಕಹಳೆ, ಕೊಂಬುಗಳ ಸಮೇತ ಕಗ್ಗಲಿಗೆ ಹೋಗಿ . . . ಪೂಜೆ ಮಾಡಿದರಂತೆ (ನನ್ನೂರು. ೩೦). **ಹಱೆ**: ಈ ತ್ರಿವಿಧದ ಹೊಱಗು ಮಾಡಿ ಹಱೆಯ ಹೊಯಿಸಿ ಕುಱುಹ ಪೂಜಿಸುವರ ಮೆಚ್ಚ ಕೂಡಲಸಂಗಮದೇವ (ಬಸವ. ೨೦೬); ಬೊಬ್ಬಿಱಿದವೇಳೆಂಟುಸಾಸಿರ ಶಂಖ ಪಂಚಮದ ಹಱೆಗಳಱಿಚಿದವು (ಹಚಕಾ. ೫-೧೧); ಬೊಬ್ಬಿಱಿತದೊಡನುಬ್ಬೇಳ್ವಲಗ್ಗಿಯ ಹಱೆಗಳಬ್ಬರವಾಯ್ತು ಕರ್ಣನ ಶಸ್ತ್ರಪೂಜೆಯಲಿ (ಕುವ್ಯಾಸ. ೮-೮); ವಿವಿಧವಾದಕರೊಳಗದೋರ್ವನ ಹೆಗಲ ಹಱೆವೊಂದ ತವಕಿಸದೆ ಕೆಗಕೊಂಡು (ಸಾಳ್ವಭಾ. ೧೮-೫೫).

**ಹಱೆಯುವ** = ಹರೆಯನ್ನು ಬಾರಿಸುವವನು: ಈ ಗಜಬಿಜಿಗಂಜಿ ಹಱೆಯುವ ಸತ್ತು ಎಣ್ಣೆಯ ಗಡಿಗೆಯ ಒಡೆಯ ಹಾಕಿದ (ಮೋಳಮಾ. ೯೧-೩೬೦). [ದೇ॥. ತಮಿ. ಪಱೈ; ಮಲ. ಪಱ; ಕೊಡ. ಪರೆ; ಕೋತ. ಪರ್; ತೊದ. ಪಱ್; ಗೊಂಡಿ. ಪರ]

**ಪಱೆ**$_2$ (ನಾ). ೧. ನಿಂದ್ಯವಾದುದು: ಪಱಿವ ಪಸುಳೆಗಿಳಿಗಳ ನುಣ್ಗೊರಲಿಂ ಪಱೆಗುಟ್ಟುವ ಪರಪುಟ್ಟದ ಪಾಡುವ ಪಱಮೆವಱಿಯ ಫಲವೀವ ಗುಣದಿನಮರಮಹೀಜಾತವನು ಪಱೆಯೆಂಬ ಕುಜಾತದ ಪಶಿ ಕಾಂತದ ಪರಲೆಯಿನೊಸರ್ವ ಕೊಳದ ಸುಭಗತೆಯಿಂ ಪಱಲೆಯನುಱೆ ಪಾಱುಸುವುದು ನಂದನಕಾ ನಂದನದಿರವು (ಜಯಕಾ. ೧-೪೬). ೨. ನಿಂದೆಗೊಳಗಾದವನು: ಉಱುವ ಕಾರ್ಯವನೆಲ್ಲವನೊಲ್ಲದೇಳ್ಗೆಯ ತೊಱೆದಭಿಮಾನವನುಳಿದು ಪಱೆಗಳಂದದಿ ತಿಱಿದುಂಬುದನೇಕಿದು ನೆಱೆ ಸಂತಸದಿ ಬಯಸುವೆ (ಕರ್ಣಾವ್ಯ. ೯-೯).

**ಪಱೆಕಾಱ**, ಹರೆಕಾರ, ಹರೆಕಾಱ, ಹಱೆಕಾಱ, ಹಱೆಗಾಱ (ನಾ). ತಮಟೆ ಬಡಿಯುವವನು; ಹರೆ ಬಾರಿಸುವವನು: ಮತ್ತರೊನ್ದು ಪಱೆಕಾಱರ್ಗ್ಗಂ ಪಾಡುವರ್ಗ್ಗಂ (ಇಎ. ೧೫೯೦, ಹಾನುಗ. ೧೨೮-೩೪; 950); ಪಱೆಕಾಱರ್ಗ್ಗಂ ಪಾತ್ರಕ್ಕಂ ದೇಸಿಗ ಛಾತ್ರಭೋಜನಕ್ಕಮೆಂದು . . . ಕುಡೆ (ಸೌಇಇ. IX-i, ೮೦-೧೫; 1018); ಕಪ್ಪಡಿಗನಾಗಿ ಬಂದೆಂ ತಪ್ಪದೆ ಪಱೆಕಾಱನಾಗಿ ನಿಂದೆಂ (ಬಂಹು. ೫-೧೬); ಅಜ್ಞಾತಕುಲನುಂ ಪಟಹವಾದನವೆ ಜೀವನವಾಗಿರ್ಪ ಪಱೆಕಾಱಂಗೆ ಕುಮಾರಿಯಂ ಕುಡುವುದುಚಿತಮಲ್ಲ (ಮಹಾನೇ. ೫-೩೯ ಪ). **ಹರೆಕಾರ**: ಮೂಲಸ್ಥಾನದೇವರಿಗೆ ನಾಕು ಮತ್ತರು ಕೆಞ ದೇವರ ಕೆಞಯ ಬಡಗೆಯಲು ಹರೆಕಾರ ಸೋಮ ಬಿಟ್ಟ (ಸೌಇಇ. IX-i, ೨೯೧-೩೮; 11ನೆಯ ಶತ). **ಹರೆಕಾಱ**: ಹಾಡುವರ್ಗಂ ಹರೆಕಾಱರ್ಗ್ಗಂ . . . ಇನ್ನಿನಿಬರ ಜೀವಿತಂ ಬಡ್ಡಿಯಲು ನಡೆವಂತಾಗಿ (ಶಾಸಪ. ೪೬-೫೨; ಸು. 12ನೆಯ ಶತ). **ಹಱೆಕಾಱ**: ಶ್ರೀಮೂಲಸ್ಥಾನದೇವರಿಗೆ ಭೋಗವಂ ಮಾಡುವ ಹಱೆಕಾಱ ಭೋಗೋಜಂಗೆ (ಎಕ. XI, ದಾವಣ. ೧೧-೩೮; 1066); ಬೆದ್ದಲು ೨೦೦ ಹಱೆಕಾಱರಿಂಗೆ (ಎಕ. XV, ಬೇಲೂರು. ೩೪೩-೧೧೧; 1265). **ಹಱೆಗಾಱ**: ಹಱೆಗಾಱನಲ್ಲಿವನಿಱೆಗಾಱನೆನುತವೆ ಬೆಱಗಾಗಿ ನಾಡ ಮನ್ನೆಯರು . . . ಓಡಿದರು (ನೇಮಿಸಂ. ೧೨-೮೪).
[ಪಱೆ$_1$ + -ಕಾಱ]

**ಪಱೆಕಾಱಗೆಯ್** (ನಾ). ಹರೆಕಾರನ ಭೂಮಿ; ತಮಟೆ ಬಾರಿಸುವವನ ಹೊಲ: ಊರಿಂ ತೆಂಕಲ್ ಮಾಱುವಡಿನ ಪೊಲದೊಳ್ ಪಱೆಕಾಱಗೆಯ್ಯುತ್ತಮರ್ತ್ತ್ಯವತ್ತು (ಸೌಇಇ. XI-i, ೧೧೬-೩೫; 1075). [ಪಱೆಕಾಱ + ಕೆಯ್$_4$]

**ಪಱೆಕೆಱೆ** (ನಾ). ೧. ಒಂದು ಊರಿನ ಹೆಸರು: ತಾಯೂರ ಪಱೆಕೆಱೆ ಬಸವಯ್ಯ (ಎಕ. III, ನಂಜನ. ೯೬-೫; 898 ?). ೨. ಒಂದು ಕೆರೆಯ ಹೆಸರು: ಹಡುವರ್ಗ್ಗಂ ಪಱೆಕೆಱೆಗೆ ತೆಂಕಣಕೋಡಿಯಲಿ ಗಱ್ದೆ ಮತ್ತರ್ ೧ (ಎಕ. VII, ಹೊನ್ನಾಳಿ. ೧೦೬-೧೬; 1048).
[ಪಱೆ ? + ಕೆಱೆ]

**ಪಱೆಗ** (ನಾ). = ಪಱೆಕಾಱ: ಪೂವಣಿಗಂ, ಪಱೆಗಂ (ಶಬ್ದಾನು. ೪೧೬ ಪ್ರಯೋ). [ಪಱೆ$_1$ + -ಗ$_2$]

**ಪಱೆಗುಟ್ಟು**, ಹಱೆಗುಟ್ಟು (ಕ್ರಿ). ೧. ಹರೆಬಡಿ; ತಮಟೆ ಹೊಡೆ: ಶ್ರೋತ್ರಿಯರುಂ ಕ್ಷತ್ರಿಯರುಂ ಪಱೆಗುಟ್ಟೆ ಪಶುಯಾಗಂಗೆಯ್ದು (ಪಂಚತಂ. ೬೨-೩); ಪರಮೋತ್ಸವದಿಂ ಪಱೆಗುಟ್ಟೆ ಬಿಚ್ಚತಂ ಕುಣಿದವು ಭೂತಕೋಟಿ (ಪಂರಾಮಾ. ೧೦-೧೪೪); ಪಱೆಗುಟ್ಟೆ ಮಾಸ ಪಳದಂಕಂ ಬಾಸೆಯುಂ ಸಾಱೆ (ಅನಂಪು. ೨-೨೯). ೨. ಧ್ವನಿ ಮಾಡು; ನಾದವನ್ನು ಹೊಮ್ಮಿಸು: ಪಸರಿಸೆ ಜಾದಿಯ ಜೊಂಪಂ ಮಿಸುಪಲ್ ಪಱೆಗುಟ್ಟೆ ಕೊರಳ ಸರವಂ ಕುಕಿಲೆಂದೆಸಗೆ ಕೊಳರ್ಮಿಕ್ಕಿ (ಪುಷ್ಪಪು. ೬-೫೨); ನುಣ್ಗೊರಲಿಂ ಪಱೆಗುಟ್ಟುವ ಪರಪುಟ್ಟದ ಪಾಡುವ ಪಱಮೆವಱಿಯ (ಜಯಕಾ. ೧-೪೬). **ಹಱೆಗುಟ್ಟು**: ೨. ತುಟಿ ಮಿಡುಕುತ್ತಿರೆ ಹಲು ಹಱೆಗುಟ್ಟುತೆ . . . ನಿಲುತ್ತಂ (ಭೃಂಗೀರ. ಹ. ೪೬೩-೩೦).
[ಪಱೆ$_1$ + ಕುಟ್ಟು$_1$]

**ಪಱೆಗುಲ** (ನಾ). ಹರೆಯನ್ನು ಬಾರಿಸುವವನ ಕುಲ; ಹೊಲೆಯರಲ್ಲಿ ಒಂದು ಪಂಗಡ: ಪರಮಭಕ್ತನೆನಿಸಿ ನೆಱೆ ನಾಯನಟ್ಟುಂಬ ಪಱೆಗುಲದೊಳೊಗೆವುದೆನ್ನ ಜಱೆ (ಸಾನಂಚ. ೩-೫೫). [ಪಱೆ$_1$ + ಕುಲ]

**ಪಱೆಮೆ** (ನಾ). ಒಂದು ವಂಶದ ಹೆಸರು: ಸ್ವಸ್ತಿ ಶ್ರೀಮತ್ ಪಱೆಮೆಯರ ಕುಲದ ತೊರೆಯರ ಮಾರಣ್ಣಗಂ ಅನ್ನವ್ವೆಯಕ್ಕಂಗಂ ಪುಟ್ಟಿದ ವರತಾತಣ್ಣ (ಎಕ. IV, ಗುಂಡ್ಲುಪೇ. ೮೪-೧; ಸು. 1000 ?). [ ? ]

**ಪಱೆಯ**, ಪರೆಯ$_1$ (ನಾ). ೧. ಮಾದಿಗ; ಹೊಲೆಯ: ಬಿನ್ನಣಿಯಹ ಪಱೆಯಂಗೊಸೆದಿರ್ದೊಡೆಡೆಗೆ ತಾಮುಣಲಿಕ್ಕುವರೊಡಂಬಡಿಂ ಮಾಲೆಯಿಕ್ಕುವನ್ನರುಮೊಳರೇ (ಬಂಹರಿ. ೫-೧೫). ೨. (?): ಅಗಳ ಪಾಣ್ಡಿಯನ ಮೇಗೆ ಎಟ್ದು ಪಱೆಯಱಾಱಿಱಿದೊ (ಎಕ. X, ಶ್ರೀನಿವಾ. ೩೦-೯; 800 ?). **ಪರೆಯ**$_1$: ೧. "(ದ. ಇಂಡಿಯಾದಲ್ಲಿ) ಕೀಳುಜಾತಿಯವನು; ಪರೆಯ; ಹೊಲೆಯ; ಮಾದಿಗ; ಅಂತ್ಯಜ" (Pariah. ಇಂಕನಿ). [ದೇ.॥ ತಮಿ. ಪಱೈಯ; ಮಲ. ಪಱಯ]

**ಪಱೆವಡಿಗ** (ನಾ). = ಪಱೆಕಾಱ: ಮಾಲೆಯಿಂ ಜೀವಿಸುವಂ, ಮಾಲೆವಡಿಗಂ . . . ಪಱೆವಡಿಗಂ, ಪೂವಡಿಗಂ (ಶಬ್ದಾನು. ೪೧೬ ಪ್ರಯೋ).
[ಪಱೆ$_1$ + -ವಡಿಗ]

**ಪಱೆವೊಯ್ತು** (ನಾ). ಹರೆಯನ್ನು ಬಾರಿಸುವ ಸಮಯ;

ಸಾಯಂಕಾಲ : ದಯಾಭದ್ರರೆಂಬ ರಿಸಿಯರ್ . . . ಜಿನಾಲಯದೊಳಾಷಾಢಮಾಸದ ಚತುರ್ದಶಿಯ ದಿವಸದಂದು ಪೞಿಪೊೞ್ತು ಬಂದು ಜೋಗುಗೊಂಡಿರ್ದರ್ (ವಡ್ಡಾರಾ. ೨೬-೨೪). [ಪೞಿ₁ + ಪೊೞ್ತು]

**ಪೞ₁,** ಪಳ₁, ಪಳೆ, ಪೞಿ, ಹಳ₁, ಹಳೆ, ಹೞ, ಹೞಿ (ಸಪೂರೂ). 'ಪೞದು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪೞಗನ್ನಡ', 'ಪೞಗಲಿ' ಪರಾ. **ಪಳ₁:** 'ಪಳಗಬ್ಬಿಗ' ಪರಾ. **ಪಳೆ :** 'ಪಳೆಗನ್ನಡ', 'ಪಳೆವಾತು' ಪರಾ. **ಪೞಿ :** 'ಪೞಿಸವಿರ್' ಪರಾ. **ಹಳ₁ :** 'ಹಳಗನ್ನಡ', 'ಹಳವಾತು' ಪರಾ. **ಹಳೆ :** 'ಹಳೆಗನ್ನಡ', 'ಹಳೆವರ' ಪರಾ. **ಹೞ :** 'ಹೞಗೂಂಟಣಿ' ಪರಾ. **ಹೞಿ :** 'ಹೞಿಗೂೞ್' ಪರಾ.

**ಪೞ₂** (ನಾ). ( ? ) : ದೇಗುಲಂ ಮಾಡಿಸಿ ಈ ಕಟ್ಟಂ ಪಡಿಸಲಿಸಲೆಂದು ಕೊಟ್ಟುದು ಯಿಾ ಪೞಂ (ಎಕ. VII, ಶಿಕಾ. ೨೮೪-೨ ; 902). [ ? ]

**ಪೞಅಲಗು** (ನಾ). ಹಳೆಯ ಖಡ್ಗಧಾರೆ,-ಕತ್ತಿಯ ಬಾಯಿ : ಪೊಸಸುಗ್ಗಿ, ಪೊಸಅಡಕೆ, ಪೞಗಟವೆ, ಪೞಅಲಗು (ಭಾಷಾಭೂ. ೧೪೪ ಪ್ರಯೋ). [ಪೞ₁(<ಪೞದು) + ಅಲಗು₂]

**ಪೞಏಱು** (ನಾ). ಹಳೆಯ ಏರಿ,-ಒಡ್ಡು : ಆಗ್ನೇಯದ ದೆಸೆಗೆ ಸೀಮೆ ಕುಳರ್ಪ್ಪಗೆಱೆಯ ಒಳಗಣ ಪೞಏಱಿಯೆ (ಎಕ. IX ( S ), ಬೆಂಗಳೂ. ೧೫೫-೩೫ ; 828). [ಪೞ₁(<ಪೞದು) + ಏಱು(<ಏರಿ₁)]

**ಪೞಂಗಾಸು** (ನಾ). ( ? ) : ಪೞಂಗಾಸಿನ ಪೊನ್ನ ಗಂಟೆಯವೊಲೊಪ್ಪಿ ದುದುದ್ಗತಭಾನುಮಂಡಲಂ (ಅಜಿಪು. ೬-೭೦). 'ಪದಂಗಾಸು₂' ಪರಾ.

[☞ ಇದು ತಮಿಳಿನ 'ಪೞಙ್ಕಾಸು'(= ಹಳೆಯ ಕಾಲದ ನಾಣ್ಯ), ಎಂಬುದಕ್ಕೆ ಸಂಬಂಧಿಸಿರಬಹುದು]

**ಪೞಕ** 'ಪಟಹ' ನೋ.

**ಪೞಗ₁,** ಪಳಗ (ನಾ). ಒಣಗಿದ ಎಲೆ ; ತರಗೆಲೆ : "ಪೞಗಂ= ಒಣಗಿದೆಲೆ" (ಶಮದ. ಪರಿ. ೧) ; "ಪೞಗಮೆನಲೊಣಗಿದೆಲೆ" (ಸಂಜೀವ. ೪); ನಡೆಗೆಟ್ಟು ತಡೆವಟ್ಟು ಕೊೞಗಂ ಪೞಗದ ನೆರೆಯ ಮಱಿಯಱಿಯೊಳ್ ತಾಂಟದತ್ತು (ರಾಮಾಶ್ವ. ೧೩೫-೨೪). **ಪಳಗ :** ಪಳಗಂ ತಿಂದಿರ್ಪ ನೀಡುಂ ಪಸುದುರೆ ಮರುದಾಹಾರದಿಂದೊಪ್ಪಿ ತೋರ್ಪ (ಪಾಪ್ರಾಶ. ೯೬) ; ಕೆಂದಳಿರ ನಳನಳಿಕೆ ಪಳಗಂಗಳುದಿರ್ವ ದನಿ (ಸಂಪಶ. ೩೧-೨).

[ದೇ.॥ ತಮಿ. ಪೞುಪ್ಪು = ಹಣ್ಣಾದ ಎಲೆ]

**ಪೞಗ₂** (ನಾ). ಪಟಹವಾದ್ಯವನ್ನು ಬಾರಿಸುವವನು : ಪಱಿಯವರಲ್ಲಿಗೆ ವಂದವರೊಳ್ ಸಂಭಾಷಿಸುತವಿರ್ದು ಪ[ೞಗ]ನ ಕಯ್ಯ ಪಟಹಮಂ [ಕೊಂ]ಡು ಬಾಜಿಸುತಿರ್ದಂ (ಬಂಹರಿ. ೫-೧೨ ಪ).

[<ಪಟಹ + -ಗ₂]

**ಪೞಗನ್ನಡ,** ಪಳೆಗನ್ನಡ, ಹಳಗನ್ನಡ, ಹಳೆಗನ್ನಡ (ನಾ). ಪ್ರಾಚೀನವಾದ ಕನ್ನಡ : ಪೞಗನ್ನಡಮಂ ಪೊಲಗಿಡಿಸಿ ನುಡಿವರಾಗಮ ಬಲಹೀನರ್ (ಕವಿ. ೧-೪೮) ; ಪೞಗನ್ನಡಂ ಪುದುಂಗೊಳೆ ಕೊೞಿ ಸಕ್ಕದಮಂ ತಗುೞ್ಚಿ ಜಾಣ್ ಕಿಡೆ ಮುತ್ತಂ ಮೆಟಿಸಂ ಕೋದಂತಿರೆ ಪೇೞ್ವುಱಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ (ಕಾವ್ಯಾವ. ೫೫). **ಪಳೆಗನ್ನಡ :** ಒಳುಗನ್ನಡ ಬೆಳುಗನ್ನಡ ಪಳೆಗನ್ನಡ ದೇಶಿಯಂಗಳಾ ಕನ್ನಡಮಂ ತೀ (ಕವಿಜಿ. ೪-೨). **ಹಳಗನ್ನಡ :** ನಡುಗನ್ನಡಕ್ಕೆ ಹಿಂದಿನದು "ಹಳಗನ್ನಡ" (ಕೃಪಿಡಿ. ೧) ; ಹಳಗನ್ನಡದ ನಿಯಮದಂತೆ ರಾಮಂಗೆ ಆತಂಗೆ, ಅವಳ್ಗೆ-ಎಂದಾಗುವುದಷ್ಟೆ (ಸಂಶೋಧ. ೬೧). **ಹಳೆಗನ್ನಡ :** ತೆಲುಗಲಿಪಿ ನಾಗರದ ಲಿಪಿ ಗ್ರಂಥಲಿಪಿ ಹಳೆಗನ್ನಡದ ಲಿಪಿ ದ್ರಾವಿಳಲಿಪಿಯುಂ . . . ಮೊದಲಾದ ಹಲವು ಲಿಪಿಗಳನೋದ ಬಲ್ಲಗ್ಗಳದ ಕರಣಕರಂ ಕರೆಸಿ (ಬಸಪು. ೫-೫೩) ; ಈ ಹೊಸಗನ್ನಡಯುಗ ದಲ್ಲಿಯೂ ಹಳೆಗನ್ನಡದ-ಅಚ್ಚಗನ್ನಡದ ಕೆಲವು ಸಾಲುಗಳು . . . ಮಿನು ಗುತ್ತವೆ (ಕಾಲೂರ. ೬ ಹರಕೆ). [ಪೞ₁(<ಪೞದು) + ಕನ್ನಡ₁]

**ಪೞಗಬ್ಬ** (ನಾ). ಹಳೆಯ ಕಾವ್ಯ ; ಪ್ರಾಚೀನ ಕಾವ್ಯ : ಎಸೆಯದೆ ಪೊೞ್ತು ಕೆಟ್ಟ ಪೞಗಬ್ಬಮನಾವಗಮೆಮ್ಮವೆಂದು ಬಾಜಿಸಿ (ಶಾಂತಿಪು. ೧೨-೭೬) ; ಪೞಗಬ್ಬಮೆಲ್ಲಮಂ ಚಕ್ಕೆಸಿ ತಿಂದು ಕುಂಬಳದ ಮಾೞ್ಕೆಯ ಮಾಡುವೆನೆಂಬ ಸಾಸಿಗಂಗಳ್ಕಟ ಪೊಣ್ಮು ನಿರ್ವಹಿಪುದೇನರಿದಾಯ್ತು ಮಹಾಪ್ರಬಂಧಮಂ (ಸೂಕ್ತಿಸು. ೧-೩೬). [ಪೞ₁(<ಪೞದು) + ಕಬ್ಬ₁]

**ಪೞಗಬ್ಬಿಗ,** ಪಳಗಬ್ಬಿಗ (ನಾ). ಹಿಂದಿನ ಕವಿ ; ಪ್ರಾಚೀನ ಕವಿ : ಪೞಗಬ್ಬಿಗರ್ನುಡಿದ ಮಾತನೆ ಪಲ್ಲಟವಿಟ್ಟು ಕಟ್ಟುವಂ ಕವಿಗಳ ವೇಷದಿಂದೆ ಕುಣಿದೇಡಿಪ ಱೋಡಗನೆಂದು ನಕ್ಕಪಂ (ಅನಂಪು. ೧-೪೬). **ಪಳಗಬ್ಬಿಗ:** ವಿಭಕ್ತಿ ಸಮಾಸ ಶಿಥಿಲಗಳಾ ಪಳಯನೇನುಂ ಪಾಡುಗವಿತೆಗಳೊಳು ವಿಚಾರಿಸ ಸಲ್ಲವೆಂಬಗ್ಗಳದ ಪಳಗಬ್ಬಿಗರ [ಪೇಳ್ಕೆಯಂ] ತೆಱದಿ ವಿರಚಿಸದೆ (ಸಾಳ್ವಭಾ. ೧-೪೫). [ಪೞ₁(<ಪೞದು) + ಕಬ್ಬಿಗ]

**ಪೞಗಲಿ** (ನಾ). ಹಿರಿಯ ವೀರ ; ಅನುಭವಿಯಾದ ಯೋಧ : ಉಬ್ಬಾಳಿಯುಳವಿಯ ಲೆಕ್ಕಕ್ಕಿಱಿದು ಬೆಸಕೆಯ್ವ ಪೞಗಲಿಗಳುಮಂ . . . ನೋಡಿ (ಗದಾಯು. ೯-೩೪ ವ). [ಪೞ₁(<ಪೞದು)+ಕಲಿ₂]

**ಪೞಗಳ್ಳು** (ನಾ). ಹಳೆಯ ಹೆಂಡ : ಪೞಗಳ್ಳಂ ಕುಡಿದುರ್ಕಿ ಸೊಕ್ಕಿ ಕೆಡಪುತ್ತೋರೊರ್ವರೊಳ್ ಪೋರ್ದು ಪೊಯ್ದುಱಿಯುತ್ತುಂ (ಲೀಲಾವ. ೨-೧೨೬). [ಪೞ₁(<ಪೞದು) + ಕಳ್ಳು(<ಕಳ್₃)]

**ಪೞಗಟವೆ** (ನಾ). ಹಳೆಯ ನೆಲ್ಲು,—ಬತ್ತ : ಪೞಗಟವೆಯ ಕೂೞ್ ತಿವುಡುಗಳೆದ ತೊವರಿಯ ತೊವೆ (ಕಾವ್ಯಾವ. ೨೪೧) ; ಪೊಸ ಅಡಕೆ, ಪೞಗಟವೆ (ಭಾಷಾಭೂ. ೧೪೪ ಪ್ರಯೋ). [ಪೞ₁(<ಪೞದು) + ಕಟವೆ]

**ಪೞಗಾಂಪ** (ನಾ). ಮುದಿ ದಡ್ಡ ; ವಯಸ್ಸಾದ ಮೂರ್ಖ : ಪೞಗಾಂಪರ ನುಡಿ ಮುತ್ತುಂ ಮೆಟಿಸುಂಗೋದಂದಂ (ಶಾಂತಿಪು. ೧೦-೧೮೧). [ಪೞ₁(<ಪೞದು) + ಗಾಂಪ]

**ಪೞಗುಂಟಣಿ,** ಹೞಗೂಂಟಣಿ (ನಾ). ವಯಸ್ಸಾದ ಕುಂಟಣಿ,— ತಲೆಹಿಡುಕಿ : ಚೆಲ್ಲದೊಳೆ ನುಡಿದು ಪೊಸಸವಿಯುಲ್ಲಮನಿತ್ತಗಲೆ ನೂಂಕಿ ಕಳೆದಂ ಚದುರಂ ನಲ್ಲರೊಳೆ ನೆರೆಯಲೀಯದ ನಿರ್ಲಜ್ಜೆಯೆ ಲಜ್ಜೆಯೆಂಬ ಪೞಗುಂಟಣಿಯುಂ (ಲೀಲಾವ. ೧೩-೧೫). **ಹೞಗೊಂಟಣಿ :** ಹೞಗೂಂಟಣಿ ಶಿಕ್ಷಿಸಿದಳ್ ಮೃಗಾಕ್ಷಿಯಂ (ಶಾಂತೀಶ್ವ. ೧೧-೭೭).

[ಪೞ₁(<ಪೞದು)+ಕುಂಟಣಿ]

**ಪೞಗೂೞ್,** ಹೞಿಗೂೞ್ (ನಾ). ಹಳೆಯ ಆಹಾರ ; ತಂಗಳನ್ನ : ಈ ಪೞಗೂೞ ಪಂದೆಗಳ್ಗೆಂದಿನಿತೇತಕೆಂದಿೞಿಕೆಗೆಯ್ವುದು ನೀತಮಿದಲ್ತು (ಚಕವಿ. ೫-೪೫). **ಹೞಿಗೂೞ್ :** ತಾಮಿರ್ವರುಂ ಪೋಗಿ ತಿರಿತಂದೆಂಜಲು ಹೞಿಗೂೞುಂದಿನ್ನಂ ಸಲಹೆ (ಪೂರ್ವಪು. ೨೧).

[ಪೞ₁(<ಪೞದು)+ಕೂೞ್₁]

**ಪೞಗೆಯ್** (ನಾ). ಹಳೆಯ ಹೊಲ : ಅಸವಸದಿಂ ಪೞಗೆಯ್ಯಂ ಕಸಮಂ ಸೋದಿಸದೆ ಬಿತ್ತಿದೊಕ್ಕಲಿಗನವೋಲ್ ಸಸಿಯಂ ನೋಡಿ ತಳೋದರಿ ಬಿಸುಸುಯ್ಯುಂ ಬಯ್ಯುಮಂತೆ ಮಾಡಿದ ಬಿದಿಯಂ (ಕಾವ್ಯಾವ. ೪೫೪). [ಪೞ₁(<ಪೞದು) + ಕೆಯ್₄]

**ಪೞದು,** ಪಳದು, ಹಳತು, ಹಳದು, ಹೞದು (ನಾ). ೧. ಹಳೆಯದು ; ಹಿಂದಿನದು ; ಪೂರ್ವಕಾಲಕ್ಕೆ ಸೇರಿದುದು : "ಜೀರ್ಣಂ, ಜರತ್, ಪುರಾಣಂ . . . ಪುರಾತನಂ-ಈ ೬ ಪ(ಹ)ೞದು" (ಹಲಾಯು. ೧೧೮-೨೬) ; ಪೊಸತುಂ ಪೞದುಮನಱಿದು ಪರಿಯಿಸಲ್ ನೀನೆ ಬಲ್ಲೆ

(ಪಂಪಭಾ. ೫-೪೬ ವ); ಪೊಸತು ಪಟದೆಳದು ಪೊಱಗೊಳಗು ಸಮ ಮೆನಿಪ್ಪವಱಿಕೊಳಕ್ಷಮಂಶಕ್ಕೆ ನಿಪಾತಿಸೆ ಪಡೆಗುಮವಱೊಳೊಳಗಿಂಗ ಸಂಗದಿಂ ಸಮನಿಸಿರ್ಕುಮುಳ್ಳಾದೇಶಂ (ಶಾಬ್ದ್ಯಾವ. ೨೩೯). **ಪಳದು:** ೧. ಪಳದೆಂದು ತೆಗೆದೊಗೆಯುಗುಂ (ಕಾಲೂರ. ೧೮೭-೪೨೫). **ಹಳತು:** ೧. ಭಂದಭಂದ ನವಬಂಧ ಪಡೆದು ಬಂದಿಹವು ಹಳತ ಮರೆಸಿ (ಅರಳು. ೨೪೪-೨೦); ಹಳತೂ ಚರ್ಚೆಗೆ ಬರಲಿ, ಹೊಸತೂ ಬರಲಿ (ಒಂಟದ. ೬೪); ಹಳತಿಗೆ ತೇಪೆ ಹಾಕಿ ರಿಪೇರಿ ಮಾಡುವ ಕೆಲಸದಷ್ಟು ಅವಿವೇಕ ಇನ್ನೊಂದಿಲ್ಲ (ಹಣಪ್ರ. V, ಮುನ್ನು ೧). (ಗು). ೨. ಹಳೆಯ; ಪ್ರಾಚೀನ: ಹಳತು ಗ ೧॥ ಆ ಶುದ್ಧ ೧೫ ಲು ಮೃಷ್ಟಾನ್ನ ಸಮಾರಾಧನೆ ದಕ್ಷಿಣೆ ಸಹ ಗ|೦ . . . ಅಂತು ಹಳತು ೨॥೦ (ಮೈಆರಿ. ೧೯೪೩, ೫೦-೨೫; 1682); ಹಳತು ಗ೩॥೦ ಅಕ್ಕಾರಧಲ್ಲೂ ಯಿದೇ ಹಳತು ಆರ್ರುವರೆ ವರಹಾವಂನ್ನು . . . ನಪ್ಪಿಸಿದ ದಾನಶಾಸನ (ಮೈಆರಿ. ೧೯೩೩, ೩೧-೪೦; 1737). **ಹಳದು:** ೧. ಹಳದು ವಿಾರಿ ಹೊಸದಿಲ್ಲ, ಬಿಳಿದು ವಿಾರಿ ಬಣ್ಣವಿಲ್ಲ (ಗಾದೆ). **ಹಟದು:** ೧. ಹಟದಪ್ಪ ಮಾತದ್ಮೈತಿಹ್ಯಮಕ್ಕುಂ (ಮಂಗರಾ. ೨೬-೨).

ಪಳೆಯಂತೆ = ಹಿಂದಿನಂತೆ; ಮೊದಲಿನಂತೆ: ಮತ್ತೆ ಮರವಟ್ಟಾಗಿ ಕ್ರಿಮಿಗಳ ಮೊತ್ತದಲಿ ಜನಿಸುವರು ಮನುಜರ ಸತ್ವವಹ ಪಳೆಯಂತೆ ತನ್ನಯ ಭಳುತಿಯಿಲ್ಲದಡೆ ಸುತ್ತಿ ಬಹ ಚಕ್ರದಲಿ ಸಾವುತ ಮತ್ತೆ ಹುಟ್ಟುವ ದುಃಖಸಾಗರದುತ್ತರಣವನು ಕಾಣದಿಹ ನರನಾಮುಸಕುನೆಂದ (ಸಿಭಾಗ. ೧೧-೧೭-೪೨); ತಣ್ಣದಿರನನ್ವಯದ ಪಾರ್ಥನ ತುರಂಗಮದು ಪೆಣ್ಣುದುರೆಯಾಗಿ ಪೆರ್ಬುಲಿಯಾಗಿ ಪಳೆ[ಪಾಠಾಂ. ೪]ಯಂತೆ ಕಚ್ಚೋಳಿಸು ವನುಲಾಶ್ವಮಾಗಿಯಾಶ್ಚರ್ಯದಿಂಸ್ತ್ರೀ ರಾಜ್ಯಮಂ ಪೊಕ್ಕುದು (ಜೈಮಿಭಾ. ೧೫ ಸೂಚನೆ). **ಪಳೆಯ ಮಾಳ್ಕೆ** = ಹಿಂದಿನ ರೀತಿ; ಮೊದಲಿನ ಬಗೆ: ದೇಶದೊಳಲ್ಲಿಗಲ್ಲಿಗೆತ್ತತ್ತಲುಮಾವಗಂ ಪಳೆಯ ಮಾಳ್ಕೆ ವೊಲಾದುದು ಗಂಗರಾಜನಿಂ (ಎಕ. II, ೭೩-೩೭: 1118). **ಪಳೆಯ ರೋಗ** = ಹಳೆಯ ರೋಗ; ಬಹಳ ಕಾಲದಿಂದ ಬೇರೂರಿರುವ ವ್ಯಾಧಿ: ಪಳೆಯ ರೋಗಕೌಷಧಂಗೊಳಲ್ ನವರೋಗಮೊಲಿದು ಬಂದಂತೆ (ಚಿಬವು. ೩೩-೭). **ಪಟದಾಗು** = ಹಳಸಿ ಹೋಗು; ರುಚಿಗೆಡು: ಕಾಂತೆಯುರ್ಗನುರಾಗಂ ಪಟದಾಗೆ ಪುರುಷರೌಷಧಿಗ್ಗುಳಿಗೆಯವೊಲ್ ಮನಕ್ಕೆ ಹೇಯಮಂ ಪುಟ್ಟಸುಗುಂ (ದಶಕು. ೪-೯೫). **ಪಟೆಯ, ಪಳೆಯ, ಹಳೆಯ** = ವಯಸ್ಸಾದವನು; ಹಿರಿಯ; ವೃದ್ಧ: ಮುನ್ನಂ ಪಟೆಯರುಮನಾಪ್ತರುಮಂ ಪೊಱಗಿಕ್ಕಿ (ಪಂಚತಂ. ೧೩೯-೧೯); ಪುರದೊಳಗಣ ಭವ್ಯಜನರುಂ ಪಟೆಯರುಂ ಪ್ರಧಾನರುಂ . . . ಪಾಗಿಸಿ (ಧರ್ಮಾಮೃ. ೮-೨೦೬); ಸಂದಾಯಿಯೆಂಬ ಪಳೆಯನ ಕೈಯೊಳಾಗಳೆ ಕೊಟ್ಟ ಶಿರಗೊಯ್ಯೂ ಪಳಗೀವುದೆನೆ (ಭೈರವೇ. ೧-೨೬೪); ಅಂದಿಂಗೆಳೆಯ ನೀನು ಹಳೆಯ ನಾನು (ಬಸವ. ೨); ಹಳೆಯರನು ಸೇವಕರನಾಪ್ತರ ಬಳಗವನು ನಿಜಮಂತ್ರಿವರ್ಗವನುಳಿದು ತಾನನುಚಿತದಿ ದುರ್ಜನರುಗಳ ಪಾಲಿಸಿದ ಫಲವು ಕೈಯೊಡನಾಯ್ತು (ಜೀವಂಧ. ೪-೭೩); ಹಳೆಯನಹೆ ನರೆಗೂಡದಲೊಂದಿಲ್ಲ (ಸಿಭಾಗ. ೫-೭-೮). **ಪಟೆಯ ಪಾಡಿ** = ಹಳೆಯ ಸೈನ್ಯ; ಹಿಂದಿನ ಸೇನೆ: ಅಂತು ಬಿಡಂಗುವೆತ್ತು ನಡೆವ ಪುಸಿವಡೆಯ ಪೆಱಗೆ ಪಟೆಯ ಪಾಡಿಯಂ ಕೂಡಿಕೊಂಡು . . . ನಡೆದಂ ಕಾವಂ (ಕಬ್ಬಿಕಾ. ೨೦೮). **ಪಟೆಯ ಬೇವಿನೆಣ್ಣೆ** = ಹಳೆಯದಾದ ಬೇವಿನೆಣ್ಣೆ: ಕನಲ್ವ ಕೆಂಡದ ಮೇಲೆ ಪಟೆಯ ಬೇವಿನೆಣ್ಣೆಯೊಳ್ ಕೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ . . . ಬೇವ ಪೆಣಂಗಳ ಕ[೦]ವು ನಾಱುವುದರ್ಕೆ ಸೈರಿಸಲಾಱದೆ (ಪಂಪಭಾ. ೧೩-೭೧ ವ). **ಪಟೆಯ ಸೀರೆ, ಹಳೆಯ ಸೀರೆ, ಹಳೇಸೀರೆ, ಹಟೆಯ ಸೀರೆ** = ಹಳೆಯದಾದ ಬಟ್ಟೆ; ಹಳತಾದ ವಸ್ತ್ರ: ಪಟೆಯ ಸೀರೆಯಂತೆ ಗುಣದೊಳ್ ನೂನಮಾಗದೆ (ಧರ್ಮಾಮೃ. ೫-೯೯); ಅವಳು ಬಣ್ಣ ಮಾಸಿದ ಹಳೆಯ ಸೀರೆಯನ್ನು ಉಟ್ಟಿದ್ದಳು (ರೂಢಿ); ನನ್ನ ಹಳೇ ಸೀರೆ ಹರಿದು ಹೋಯಿತು (ರೂಢಿ); "ಪಟಚ್ಚರಮೆಂಬುದು ಹಟೆಯ ಸೀರೆ" (ಹಲಾಯು. ೯೦-೩೯೬); "ಪಟಚ್ಚರ, ಜೀರ್ಣವಸ್ತ್ರ—ಹಟೆಯ ಸೀರೆ" (ನಾಚಿರಾ. ೬). **ಹಳೆಪೈಕ, ಹಳೆಯ ಪಯಿಕ, ಹಳೆಯ ಪೈಕ, ಹಳೇಪೈಕ** = ೧. ಹೆಂಡ ಇಳಿಸುವುದೇ ಕುಲವೃತ್ತಿಯಾಗುಳ್ಳ ಒಂದು ಜಾತಿ ಹಾಗೂ ಅದಕ್ಕೆ ಸೇರಿದ ವ್ಯಕ್ತಿ; ಈಡಿಗ: ಹಳೆಪೈಕದವರ ಗ್ರಾಮಾಂತ್ರಗಳಿಂದಾ ವರುಷ ೧ಕ್ಕೆ ವರ್ತನೆ (ಎಕ. XII, ಮದ್ದಗಿ. ೩೧-೩; 1656); ಹಳೆಪೈಕರು–ಇವರು ಕಾನಡಾಜಿಲ್ಲೆಯಲ್ಲಿಯೂ ಧಾರವಾಡಜಿಲ್ಲೆಯ ದಕ್ಷಿಣಭಾಗದಲ್ಲಿಯೂ ಮಾತ್ರ ಇರುತ್ತಾರೆ (ಕಭಾಗ. ೧೭೭); ಯಳವರ್ಷ ಹಳೇಪೈಕದ ಗಿರಿಯನೆಂಬ ದಂಡಿಗೇ ದಾಸನ ಮೈಮೇಲೆ ದೇವತೆಯು ಬಂದು . . . ಪಚಾರಿಸಿದಳಂತೆ (ಚಿತ್ರಪಾ. ೭); ನಮಗೋಸ್ಕರ ನಮ್ಮ ಹಳೇಪೈಕದವರು ಕೆಲಸ ಮಾಡುವುದಿಲ್ಲವೆ? (ಸುಮುತಿ. ೭೮). ೨. ಒಂದು ವಿಶಿಷ್ಟ ಪರಿಚಾರಕವರ್ಗ: ತಂತಮ್ಮ ಸೀಮೆಗಳಲ್ಲಿ ಪಲಕಾಲದಿಂದ ಸ್ಥಿರರಾಗಿರುವ ಮಹಾರಾಜವಂಶದವರು, ಸಾಮಂತರು . . . ಹಳೆಯ ಪಯಿಕದವರು ದಣ್ಣನಾಯಕರು (ಬಿಟ್ಟಿಅ. ೩೦-೪); ತಳುವದೆ ಬೆಟ್ಟದ ಚಾಮೇಂದ್ರ ಸಾಕಿದ ಹಳೆಯ ಪೈಕದ ನಾಯಕರು ಒಳಹೊಕ್ಕು ವೈರಿ ಮಾರ್ಬಲವನು ಸದೆದಾಗ ಕಳಕಳವನು ಮಾಡಿದರು (ಕಂಠವಿ. ೩-೬೯); ಎಳದು ಮೃಗವನು ಕೊಲ್ಲ ಹಳೆಯ ಪೈಕದ ಮಂದಿ ಒದಗೆ (ಕುಮಾಸಾಂ. ೧೪೪). [ದೇ॥ ತಮಿ. ಮಲ. ಪಟು; ತುಳು. ಪರ; ಕೊಡ. ಪಳೆ]

**ಪಟನವಿರ್, ಪಟೆನವಿರ್** (ನಾ). ೧. ಹಳೆಯ ಕೂದಲು: ಪಂದಿಗಳುಂ ಪಟನವಿರಿಕ್ಕಿದುವು (ಪಂಪಭಾ. ೫-೩೮); ಮೂಷೆಯಿಟ್ಟಱಗಿದ ಮಾಟ್ಕೆಯಿಂ ಪಟನವಿರ್ ಮೊದಲಿಂದೆ ಕಟಲ್ದು ಬೆಳ್ನವಿರ್ ತುಱುಗಿ (ಸೂಕ್ತಿಸು. ೩-೩೭). **ಪಟೆನವಿರ್:** ೨. ನರೆತ ಕೂದಲು: ಪಟೆನವಿರೆಲ್ಲಂ ಮೆಯ್ಯುಂ ತಳೆದುಂ ಬೆಳ್ಳಿಗಳಾಗಿ ತೀದಿರ್ದುವು (ಸೂಕ್ತಿಸು. ೩-೯೩). [ಪಟು₁ (<ಪಟದು) + ನವಿರ್]

**ಪಟನೀರ್, ಹಳೆನೀರು** (ನಾ). ಬಹಳ ದಿನಗಳಿಂದ ಶೇಖರಿಸಿಟ್ಟ ನೀರು; ಹಳೆಯ ನೀರು: ಸಾರವೊಣಿಪ್ಪುತ್ತರಣಿಯ ಬೇರಂ ಸೈಂಧವಸಮನ್ವಿತಂ ಪಟನೀರಿಂದೋರಂತರೆ ಕಿಸುವೊನ್ನೊಳ್ ಱಱಿಸಿ ಕೊಂಡೆಚ್ಚೆ ನೇತ್ರರೋಗಂ ಕಿಡುಗುಂ (ಲೋಕೋಪ. ೯-೬೮); ಪೀರ್ದ ಪಟನೀರ್ಗಳನಟ್ಟುಸಲಾಱದೆಯ್ದೆ ಕಂಟಳಿಸಿ ಮುಗುಟ್ಟುದಪ್ಪುದು (ಲೀಲಾವ. ೧೨-೩೮); ಪಟ[ಪಾಠಾಂ. ಎಳೆ]ನೀರಿಂದಂ ಮರ್ದಿಸಿ ಹಳೆಯದೊಳಂ ಪೂಸೆ ಕಿಱಯ ಕುಟಜದ ಬಿತ್ತಂ ಕೊಟ್ಟಾವಿನ ತೂರ್ಯನ ವಿಷಮುಱಿಗುಂ (ಖಮದ. ೧೦-೬೮). **ಹಳೆನೀರು:** ದಾಹಕ್ಕೆ ಹಳೆನೀರಂ ಬೆಚ್ಚಗೆ ಮಾಡಿ ಕುಡಿಯ ಕೊಡುವುದು (ಸಕವೈ. ೭೭). [ಪಟು₁(<ಪಟದು)+ನೀರ್]

**ಪಟನುಡಿ, ಪಳನುಡಿ, ಪಳೆನುಡಿ** (ನಾ). ಪ್ರಾಚೀನವಾದ ಮಾತು; ವೇದ: ಪಟನುಡಿಯಂ ಪರ್ಚಿದ ಮುನಿಗಳ ಪೊಗಟ್ಟುನಮಂದು ಕುವರನಾದ ವೊಲಾದಂ ನಿಳಯಂಗೆ ನಿಖಿಲಗುಣದೊಳ್ಗಳೆಯಂಗಳಸಿಂಗರಾರ್ಯವರ್ಯಂ ಗೀಗಳ್ (ಚಿಕವಿ. ೪-೧೯); ಪಟನುಡಿಯಂ ಬಟಿಸಂದು ಪಲವುಂ ಪಗಲ್ ತಿರಿಯಂ ಪೊರೆಯುತೆ (ರಾಮಾಶ್ವ. ೭-೧೧). **ಪಳನುಡಿ:** ಕಾವ ಪಳನುಡಿಯೊಡೆಯನ ವಾಹನನು ನೀನು (ವಿಜಗೀ. ೨೧-೬). **ಪಳೆನುಡಿ:** ರಂಗ ನಿನ್ನಯ ಸಂಕುಗೊರಲ ಗೋಚರದಿಂದ ಹಿಂಗುಗ್ಗ ಗಡ ಭವಪಾಶ ಹಿಂಗೆಂಬ ಪಳೆನುಡಿಯರ್ಥವೆನ್ನೆರ್ದೆಯೊಳು ಮುಂಗುಡಿಗಟ್ಟಿರುತಿರ್ಕೆ (ಶತಸಾಂ. ೩-೧೪). [ಪಟು₁(<ಪಟದು) + ನುಡಿ₂]

**ಪಟಪಟ, ಪಳಪಳ, ಪಟ್ಪಟ** (ನಾ). ಒಂದು ಅನುಕರಣ ಶಬ್ದ: ಪಟಪಟಯೆಂದಾಲಿಕಲ್ಲಗಳುದಿರ್ದುವು ನಭದಿಂ (ಶಮದ. ೫೪ ಪ್ರಯೋ).

**ಪಳಪಳ** : ಮಣ್ಣತ್ತಿ ಹಾಕುವಾಗ ಏನೋ ಪಳಪಳ ಹೊಳೆಯುವುದನ್ನು ಕಂಡಳು (ತ್ಯಾಗಮ. ೧೦೬). **ಪಟ್ಪಟ** : 'ಪಟ್ಪಟನೆ' ಪರಾ.

**ಪಟಪಟನೆ,** ಪಳಪಳನೆ, ಪಟ್ಪಟನೆ (ಅ). ಒಂದು ಅನುಕರಣಾವ್ಯಯ : ಕನಕಪ್ರಾಸಾದಪಂಕ್ತಿಗಳ್ ಪಟಪಟನೆ ಬೆಳಗುವ ಸೊಡರ್ಗಳ ನಾದಿತ್ಯನ ನಂಟರೆಂದು ತಮೋರಾಜಕಂ ಮುಳಿದು ಸೆಱಗೆಯ್ದು ಬೆಳಗಿನ ಸೆಱೆಯ ಮನೆಗಳನ್ನವಾದುವು (ಪಂಪಭಾ. ೪-೪೯ ವ) ; ಕೆಯ್ದಾವಿಗೆಗಳ್ ಪಟಪಟನೆಸೆದಿರೆ (ಶಾಂತಿಪು. ೮-೬೪). **ಪಳಪಳನೆ** : ಮರುಳ್ಗಳಾಟಮುಂ ಪಳಪಳನೆಮೆಯುಳ್ಕದೆ ನೋಡಿ ಮುಗುಳ್ನಗೆ ನಗುವ ವೀರಭಟರ ಪಂದಲೆಗಳುಂ (ಪಂಪಭಾ. ೧೦-೧೧೬ ವ) ; ಪಳಪಳನೆ ಸುರಿಯುತಿರೆ ಮಾತುಗಳ ಮುತ್ತುಮಳೆ ಕಡುಬಡವನಂತಾದನರ್ಜುನಂ (ಚಿತ್ರಾಂಗ. ೩೫-೯೫೭). **ಪಟ್ಪಟನೆ** : "ಪಟಪಟನೆ, ಪಟ್ಪಟನೆ-ವಿರಲಾರ್ಥಂ" (ಶಮದ. ಪಂ. ೧).

[ಪಟಪಟ+-ಅನೆ$_1$]

**ಪಟಪು** (ನಾ). ನರೆತ ಕೂದಲಿಗೆ ಹಚ್ಚುವ ಕಪ್ಪುಬಣ್ಣ ; ಕಲಪು: "ಪಟಪು (ಪಟವು)—ನರೆಗಿಕ್ಕುವ ಕರ್ಪು" (ಶಮದ. ಪಂ. ೧) ; ಪಟಪು, ಪೊಟಪು (ಶಬ್ದಾನು. ೧೪೦ ವ್ಯಾಖ್ಯಾ). [ ? ]

**ಪಟಮಱವು** (ನಾ). ಹಳೆಯದಾಗಿ ಮರೆತುಹೋದುದು : ಪಟ್ಟಸೂತ್ರದೆರಡೆಱೆಯುಮಂ ಗಂಟಿಕ್ಕುವಂತೆ ಪರಂಪರಮುಂ ಪಟಮಱವುಮಾದ ನಣ್ಪಂ ಪುನರ್ನವಂ ಮಾಳ್ಪ ಬಗೆಯಿಂ ಎನ್ನನಿಂತೆಂದಟ್ಟಿದ ನೆಮ್ಮರಸಂ (ಶಾಂತಿಪು. ೫-೩೨ ವ).

[ಪಟು$_1$(<ಪಟದು)+ಮಱವು (<ಮಱವು)]

**ಪಟಮೆ,** ಪಳಮೆ, ಹಳಮೆ$_1$ (ನಾ). ಹಳೆತನ ; ಪ್ರಾಚೀನತೆ ; ಪುರಾತನತೆ : ನೀಂ ಪಟಮೆಯನೆ ತೋಱಿ ಕೀಱಿ ಕೆಡೆನುಡಿದಪೆ (ಪಂಚತಂ. ೧೦೬-೮) ; ಪಟಮೆಯ ದೇವರ ಮೇಲೆಂತಯ್ . . . ಮೆಱೆದಪ್ಪಯ್ ! (ಬದ್ಧಪ್ರ. ೨೨-೪೬೫). 'ಪಟವೆ' ಪರಾ. **ಪಳಮೆ** : ಪಳಮೆಯಾಳದ ಕಣ್ಣನೆನ್ನ ಕಣ್ಣಲಿ ನೆಟ್ಟು (ಹೊಂಗಳು. ೧೭-೧೬). **ಹಳಮೆ$_1$** : ಬಳಸಿನಲಿ ಬಂದಿಹರ ಕಾಣುತಿಹೆನು . . . ಹಳಮೆಯ ಮಹಾತ್ಮರನು ಪರಮಕವಿಗಳನು (ಇಂಗೀತ. ೯೩-೪) ; ಭಾರತದೇಶದ ಇತಿಹಾಸಕ್ಕೆ ಇರುವಷ್ಟು ಹಳಮೆ, ಹಿರಿಮೆ ಪ್ರಪಂಚದ ಬೇರೆ ಯಾವ ದೇಶಕ್ಕೂ ಇಲ್ಲ (ಭಾರಪ. ೪೧೭) ; ೭ನೆಯ ಶತಕದ ಬಾದಾಮಿಶಾಸನವು ತ್ರಿಪದಿಯ ಹಳಮೆಯನ್ನು ತಿಳಿಸುವುದಲ್ಲದೆ . . . ಒಬ್ಬ ಕಲಿಯ ಶಬ್ದಚಿತ್ರವನ್ನು ಕೊಡುತ್ತದೆ (ತಪನಿ. ೧). [ಪಟು$_1$(<ಪಟದು)+-ಮೆ$_3$]

**ಪಟಯಿಂಗೆ** (ನಾ). ( ? ) : ×× ನಮೆಸ್ಕ ನೆತ್ತರೊಗೊಡೆ[ಬಾ]ಟಿ ಮಟುವಕ್ಕ ××× ವ ಪಟಯಿಙ್ಗೆ[ಗೊ]ಡ್ಡೊಡೆ ಬಾಟಿನೆನ್ದೀ ವೃತ[ಂ]ಗಳಂ ಸಲಿಸುತ್ತು (ಸೌಇಇ. XI–i, ೧೦–೧೦ ; 864). [ ? ]

**ಪಟಯಿಗೆ,** ಪಳಯಿಗೆ, ಪಳವಿಗೆ, ಪಟವಿಗೆ, ಹಳಯಿಗೆ, ಹಳವಿಗೆ, ಹಟಯಿಗೆ, ಹಟವಿಗೆ (ನಾ). ಧ್ವಜ ; ಪತಾಕೆ ; ಬಾವುಟ : "ಪಟಯಿಗೆಯೆಂದು ಕೇತನದೊಳಂ" (ಕರ್ನಾಶಿ. ೭೯) ; ಪಟಯಿಗೆ ಬಿಟ್ಟೊಡೆ ಬೀರದ ಪಟವಿಗೆಯ ನಿಱಿಸಲೆಂದೆ ಹರಿವಕ್ಷಮನಲ್ಲಟುವೋಗೆ ಯೆಚ್ಚು (ಪಂಪಭಾ. ೧೨-೨೦೯) ; ದಿನಕರನ ಹಯಂ ಗಗನಾಧ್ವಖೇದಮಂ ಪಟಯಿಗೆಗಳ ತಣ್ಣೆಲರ ತೀಟದಿಂ ತೊಲಗಿಸುಗುಂ (ಪಂಪರಾಮಾ. ೧-೧೧೬). **ಪಳಯಿಗೆ** : ಸಾರದಿರಿತ್ತಲು ಮುಳಿದಪೆ ಮಾರಿಗಳೀ ಪಾರ್ವ್ವರೆಂದು ಕಲಿಯಂ ದೇವಾಗಾರದ ಪಳಯಿಗೆ ದೂರದೆ ಬಾಗಿಸುವನ್ತಿರ್ಕ್ಕುಮಲ್ಲಿ ವಾತೋದ್ಧೂತಂ (ಸೌಇಇ. IX–i, ೧೫೮-೪೬ ; 1092) ; ಮಿಳಿರ್ವ ಪಳಯಿಗೆ . . . ಚಾಮರನಿಚಯದಿಂದೆ ಸಿಂಗರಿಸಿರ್ದ ಥಳಥಳಿಪ ಮಣಿರಥಾವಳಿಗಳು ಪಳಂಚಿದವು (ಸಾಳ್ವಭಾ. ೨೫-೧೭) ; ಕರಮಿದೆ ನನ್ನಿಯೆಸುತ್ತುಂ ಬಿರಿದಿನ ಪಳಯಿಗೆಯನೆತ್ತಿಸುತ್ತೆ ಸೆದಿರ್ದಂ (ನೃಪವಿ. ೩೭-೮). **ಪಳವಿಗೆ** : "ಪಳವಿಗೆ ಕೇತನಕೆ ನಾಮಂ" (ಭಾರತಿ. ೪೧) ; ಬಗಿದು ಪಾತಾಳಮಂ ಮುಟ್ಟುವಗಳುದ್ಧದಿಂ ನೆಗಳ್ದಂಬರದೊಳೆಸೆವ ಪ[ಪಾಠಾಂ. ಹ]ಳವಿಗೆಗಳೊಪ್ಪದಿಂ (ಏಕಾಂರ. ಹ. ೨೮೧-೨) ; ಪಲಪಲ ತೆಱದ ಪಳವಿಗೆಯ . . . ರಥದೊಳಗೆ ನಿಂದನು ಶಕ್ರಸಾರಥಿ ನುಡಿಸಿದನು ನರನ (ಕುಮಾ. ಒರಿಾ. ೮-೧೪) ; ಪಳವಿಗೆಯ ಹನುಮನಂ ಪಲ್ಗಿರಿಸಿ ಹರಿಯನೆಚ್ಚು . . . ಸಾತ್ಯಕಿ ಬಭ್ರುವಾಹನಾದಿಗಳನುಜಿ ನೋಯಿಸಿದನು (ಜೈಮಿಭಾ. ೨೫-೩೯). **ಪಟವಿಗೆ** : "ಪಟವಿಗೆ (ಪಟಯಿಗೆ) ಕೇತನಂ" (ಶಮದ. ಪಂ. ೧) ; ಅನೇಕ ಪ್ರಾಸಾದದ ಮೇಲೆ ಚಿತ್ರದ ಪಟವಿಗೆಗಳಂ ತುಱುಗಲುಂ ಬಂಬಲ್ಗಳುಮಾಗೆ ಕಟ್ಟಿಸಿ (ಪಂಪಭಾ. ೩-೪೦ ವ) ; ಪೊಂಬಾಟೆಯ ಪಟವಿಗೆಗಳೊಳಂ . . . ಸೊಂಪುವಡೆದ ಕಂಪಿನ ಪೊಟಲೆಂಬ ಬೀಡು ಬಗೆಗೊಳಿಸುತಿರ್ಪುದು (ಕಬ್ಬಿಕಾ. ೧೧೮) ; ಪಟ್ಟವಣೆಯುಂ ಪಟವಿಗೆಯುಂ . . . ಮೇಲ್ಕಟ್ಟುಂ ಒಳ್ಗೆಲೆಯನು ಮೂಟೆಗದವನುಮಾಗಿಯುಂ ತಣಿಯದೆ (ಚಿಕಪಂ. ೮೫-೨೧). **ಹಳಯಿಗೆ** : ರಾಜಮುದ್ರೆ, ನಾಡ ಹಳಯಿಗೆ ಮತ್ತು ನಾಡ ಶಾಸನ ಇವುಗಳ ಗೌರವವನ್ನು ಕಾಪಾಡುವುದರಲ್ಲಿ . . . ಪ್ರಾಣವನ್ನೇ ಪಣವಾಗಿರಿಸುವನು (ಕಪಪು. ೭-೮೮) ; ಚೋಳರ ಹಳಯಿಗೆಯನ್ನು ಇಳಿಸಿ ಹೊಯ್ಸಳ ಹಳಯಿಗೆಯನ್ನು ಏರಿಸಿದ ಸಂಭ್ರಮ ಸಡಗರಗಳ ಪ್ರದರ್ಶನವಾಯಿತು (ಸವತಿ. ೩). **ಹಳವಿಗೆ** : ಹೊಳೆವ ಸಿಂಧ ಪತಾಕೆ ಹಳವಿಗೆ (ಕೌರಾ. ೧೩-೪೧) ; ನವಹೇಮದಂಡದ ಹಳವಿಗೆಯ ತುದಿವಲಗೆಯಲಿ ಹಾಯ್ಕಿದರು ಪನ್ನಗನ (ಕುಮಾದ್ರೋ. ೧೦-೪೧) ; ಬಾಲದಲಾ ವರೂಥದ ಹಳವಿಗೆಯ ಕಂಭದಲಿ ಬಿಗಿದು (ತೊರರಾ. ೬-೨೨-೧೩) ; ದಳದ ಸಿಂಗಾರದಲಿ ಬಿರುದಿನ ಹಳವಿಗೆಯನೆತ್ತಿಸಲಿ (ತಿಮ್ಮಅ. ೬-೧೨). **ಹಟಯಿಗೆ** : ಉಚ್ಛ್ರೂಡಾ, ಅವಚೂಡಾ—ಈ ೨ (ಪರಿವಿಧಿಯಿಂ) ಹಟಯಿಗೆಯ ಮೇ(ಎ)ಲೆ ಮೊಗದ ಕೆಟಗೆ ಕಟ್ಟಿದ ಕುಂಚಂ (ಹಲಾಯು. ೭೫-೩೦೪). **ಹಟವಿಗೆ** : ಗರುಡನಂತೆ ಹಾವಿನ ಹಟವಿಗೆಯನಾರಯ್ದು ನೋಡಿಯುಂ (ಗದಾಯು. ೬-೨೮ ವ) ; ಹಟವಿಗೆ ನಮ್ಮದೀ ರಥಮಿದಪ್ಪೊಡೆ ನಮ್ಮದು (ಕುಸುಮಾ. ೧೨-೫೧). [<ಪ್ರಾ. ಪಡಾಇಯಾ./ಸಂ. ಪತಾಕಿಕಾ]

**ಪಟವ** 'ಪಟಹ' ನೋ.

**ಪಟವಂಡು** (ನಾ). ಶೇಖರವಾದ ಮಕರಂದ ; ಸಂಗ್ರಹಗೊಂಡ ಮಧು : ಕುಮುದಕೇಸರದ ರಜದೊಳರ್ದ ಚರಣಚಯಮಂ ಕೀಟಲಾಱದೆ ಪಟವಂಡಿನೊಳ್ಪಿಂಡುನೆಗೆದು ಪೊರಳ್ದು ನರಳ್ದು ಮೊರೆವ ಮಱಿದುಂಬಿಗಳ ಗಱಿಯುಂ ಗಿಜ್ಜನೆ ತೆಗೆದು ನೆಗಪಿಯುಂ (ಲೀಲಾವ. ೩-೨೦ ವ).

[ಪಟು$_1$(<ಪಟದು)+ಬಂಡು$_2$]

**ಪಟವಗೆ,** ಹಳೆಹಗೆ (ನಾ). ಹಿಂದಿನಿಂದಲೂ ಶತ್ರುವಾಗಿರುವವನು; ಬಹಳಕಾಲದ ವೈರಿ : ಪಟವಗೆಗಳಾರುಮಂ ಗೆಲ್ದಳವಿಂ ಕೈಯಿಕ್ಕಿ ನಿಂದ ಕಲಿಯೆಂದುಂ ತನ್ನೊಳಗುಂ ಪೊಱಗುಂ ತೋಱದ ಬಟ್ಟೆಯಂಗೆಱಿಗಿರ್ದ ಬಾಟ್ಟುದೀ ಮೂಲೋಕಂ (ಕಬ್ಬಿಕಾ. ೨೩೦). **ಹಳೆಹಗೆ** : ಕೆಳೆಯನೇ ಹಳೆಹಗೆಯೆಯೆಂಬವ್ವೋಲ್ ಮಳೆಕಡೆಗೆ ಮಲೆನಾಡುಗಳ ನೋಡಿ ಹಿನ್ನಡೆಯುತಿರಲು (ಕಾಲೂರ. ೫೭-೯೨). [ಪಟು$_1$(<ಪಟದು)+ಪಗೆ$_2$]

**ಪಟವಟ್ಟೆ** (ನಾ). ಹಳೆಯದಾಗಿ ಸವೆದ ದಾರಿ : ಬೆಟ್ಟುಗಳ್ಕಿದೆ ನುರ್ಗಿ ಪಟವಟ್ಟೆವೋಲಾಗೆ (ದಶಕು. ೭-೬೭).

[ಪಟು$_1$(<ಪಟದು)+ಬಟ್ಟೆ$_1$]

**ಪಟವರ,** ಹಳೆಮರ, ಹಳೆವರ (ನಾ). ೧. ಬಹುಕಾಲದಿಂದಿರುವ ಮರ. ೨. ಹಳೆಯದಾದ ಮರದ ಕೋಳ : ನಿನ್ನಾಜ್ಞೆಗೋಸಗಂ ಕೋಳಂ ನೆಲಸಿತ್ತೆನ್ನ ಕರದೊಳಲ್ಲದೆ ಕೇಳಾನಿನ್ನೊರ್ವರ ಬಗೆವೆನೆ ನೋಡೆನ್ನಳವನೆನುತ್ತೆ ನುರ್ಗಿದಂ ಪಟವರನಂ (ದಶಕು. ೯-೩೧).

**ಹಳೆಮರ :** ೧. ನಮ್ಮ ಮನೆಯ ಎದುರಿನಲ್ಲೊಂದು ನೂರುವರ್ಷಗಳಷ್ಟು ಹಿಂದಿನ ಹಳೆಮರವಿದೆ (ರೂಢಿ). **ಹಳೆಮರ :** ೩. ಒಣಗಿದ ಮರ ; ಒಣಮರ: ಒಟ್ಟಿದರು ತಾಳೇಳಜುದ್ದದಲಿಟ್ಟೆಚಿಸಿ ಹಳೆಮರನನುರಿಗಳಲಿಟ್ಟು ಬೊಬ್ಬಿಟಿದಬ್ಬರಿಸಿದರು ನಾಲ್ಕುಮೈಗಳಲಿ (ತೊರಂಾ. ೫-೭-೯). [ಪಟು₁(<ಪಟುದು)+ಮರ₁]

**ಪಟವಲ್** (ನಾ). ಹಳೆಯದಾದ ಹಲ್ಲು ; ಸವೆದ ಹಲ್ಲು : ನರೆದಲೆ ಬೇರ್ಬಲ್ಲ ಪಟವಲ್ ಕಲೆಗಳ್ ತುಱುಗಿರ್ದ ಮೆಯ್ (ದಶಕು. ೮-೧೨). [ಪಟು₁(<ಪಟುದು)+ಪಲ್]

**ಪಟವಱಗೋಲ್** (ನಾ). ಹಳೆಯ ಹರಿಗೋಲು ; ಜೀರ್ಣವಾದ ದೋಣಿ : ಇಱದೀಱಮೊಟಂ ಗಂಡರೊಳಿಸೆಂಬುದು ತನಗೆ ಮುತ್ತ ಮುದುಗೂಂಟಿಣಿ ತಾಂ ಕಟಱ ವಣ್ ಮುತ್ತದ ಪೆಣ್ತೆಲೆ ಪಟವಱಗೋಲ್ ಪಱದ ಭೇರಿ ನೀರ್ ತೆಗೆದ ಕೊಳಂ (ಸೂಕ್ತಿಸು. ೮-೩೮೨). [ಪಟು₁(<ಪಟುದು)+ಪಱಗೋಲ್]

**ಪಟವಾಡ** (ನಾ). ಕುಗ್ರಾಮ ; ಬೇಚಿರಾಕುಗ್ರಾಮ : ಪಟವಾಡಯ್ದುನೆ ಬೇಡೆಯುಂ ಕುಡದ ನಾನೇನೆಂದು ಸಂಧಾನಮಂ ಗಱಯಿಪ್ಪೆಂ (ಪಂಪಭಾ. ೧೩-೨೪). [ಪಟು₁(<ಪಟುದು)+ಬಾಡ₁]

**ಪಟವಾತು,** ಪಳಮಾತು, ಪಳವಾತು, ಪಳೆವಾತು, ಹಳವಾತು, ಹಳೆಮಾತು (ನಾ). ೧. ಪ್ರಾಚೀನವಾದ ನುಡಿ ; ವೇದ : "ಓದು, ಪಟವಾತು, ಬೇದಂ, ಸುತಿ–ಈ ೪ ವೇದಂ" (ಕಶಸಾ. ೫೭–೨೪೨) ; ಜಗದೊಳ್ ಶ್ರೀಚಳದೇವನಿಂ ಪಿರಿಯರಿಲ್ಲೆತ್ತಾನುಮುಂಟಾದೊಡಂ ಬಗೆಗೊಳ್ಗಂ ಪಟವಾತಿನೊಳ್ . . . ಮೆಯ್ದೋಱದಿನ್ನೆಲ್ಲಿಯುಂ (ಗೀತಗೋ. ೨-೫) ; ಒಂದೆಡೆಯೊಳ್ ಪಟವಾತಂ ನುಡಿಯುತೆ ಜನ್ನದಾರಮಂ ಪೊಸೆಯುತಿರ್ಪರ್ (ಅದ್ಭುತ. ೧-೧೦). ೨. ಪರಂಪರೆಯಿಂದ ಬಂದ ನುಡಿ ; ಐತಿಹ್ಯ : "ಪಟವಾತು–ಐತಿಹ್ಯಮೆಂಬುದು" (ಹಲಾಯು. ೨೪–೧೪೬). **ಪಳಮಾತು :** ೨. ಅಂಗಗುಣ ಲಿಂಗಕ್ಕಾಯಿತ್ತು ಲಿಂಗಗುಣ ಅಂಗಕ್ಕಾಯಿತ್ತು ಇವೆಲ್ಲ ಭಾವಸಂಕಲ್ಪವಿಕಲ್ಪವು ಅಂಗಲಿಂಗಮೆಂಬುದು ಪಳಮಾತು (ಸಿದ್ಧಪ. ೩. ೪೧೭–೧೩೪೪). **ಪಳವಾತು :** ೧. ಹೋಲ್ತೊಡಲ ನಱವಾಯನ್ನೆಯ ಸೀರ್ಗುಡಿಗನಂ ಸೀಳ್ದ ಪಳವಾತಿಗೊಳಗಾಗದಾರಿಗೆ ತನ್ನ ಬಾಳ್ದೆಲೆಯಗುಡದ ಮೂವಟ್ಟಿಯ್ಯೆಮೊಗದ ಶಿವ ಸುಮ್ಮಾನದಿಂ ಸಲಹುಗೆ (ನಂದಿಪುಾ. ೨೧-೫೫) ; ರವಿ ಚಂದ್ರರ್ ಗಾಲಿಗಳ್ ಸಾರಥಿ ಬಿದಿ ಪಳ[ಪಾಠಾಂ. ಳೆ]ವಾತಶ್ವಂ (ಶಬಶಂ. ೨-೧೨) ; ಪಳವಾತನನುಸರಿಸದಿಹ ವಿದ್ಯೆಯಂದದಿಂ ತೊಳಪ ಸಂಸ್ಕಾರವಿರಹಿತವಾಣಿಯಂದದಿಂ (ವೆಂಕಾರಾ. ೫-೮-೨). **ಪಳೆವಾತು :** ೧. "ಪಳೆವಾತೆನಿಕ್ಕು ವೇದಂ" (ಕಶರ. ೬೩) ; ಪಳೆವಾತುಗಳೆ ಸೋಣಗಗಳಾಗಲೆಸೆದನ ಮೃತ್ಯುಂಜಯರಾಯೆಸ್ನಿರೊ (ಭಕ್ತಿಸ. I, ೨-೨) ; ಪಳೆವಾತಿನಧಿಕತೆಯ . . . ಆರಾದೊಡಂ ವಿಚಾರಿ ಬಳಸುವರೆ (ವೆಂಕಾರಾ. ೨-೮-೬). **ಹಳವಾತು :** ೧. ಹಳವಾತೆ ಹುಸಿ ತೋಳಿದು ಬೊಳಿಹೋಳಿದು ಹುತ್ತಿನ ಹೊಳೆ ಹರಿದು ಬಂದಂತೆ ಹೊಸದಾಗಿವೆ (ಮುಕ್ತಕಂ. ೯-೪೩). **ಹಳೆಮಾತು :** ೩ ಮರೆಯುವಷ್ಟು ಹಳೆಯದಾದ ವಿಷಯ : ಅದು ನಮಗೆ ದಕ್ಕಿ ಹಳೆಮಾತು ಆಗಿಹೋಯಿತು (ರೂಢಿ). [ಪಟು₁(<ಪಟುದು)+ಮಾತು₁]

**ಪಟವಾನಿಸ** (ನಾ). ಹಿರಿಯ ಮನುಷ್ಯ ; ವಯಸ್ಸಾದ ವ್ಯಕ್ತಿ : ಕಳೆಯಲ್ಕಾಗದು ನರಪತಿಕುಳವನಱವ ಪಟವಾನಿಸನಂ (ಶಮದ. ೬೬ ಪ್ರಯೋ) ; ಎಳದು + ಪೆಱ, ಎಳವೆಱ, ಏವಂ ಬೆಳೆವೊಲಂ . . . ಪಟವಾನಿಸಂ (ಶಬ್ದಾನು. ೯೧ ಪ್ರಯೋ). [ಪಟು₁(<ಪಟುದು)+ಮಾನಿಸ₁(<ಮಾನುಸ)]

**ಪಟವಾವಿ** (ನಾ). ಹಳೆಯ ಬಾವಿ : ಮರ್ದುಗಳೆಲ್ಲಮನೊಂದು ಪಟವಾವಿಯೊಳ್ ಪೊಯ್ದು (ವಡ್ಡಾರಾ. ೭೦-೮) ; ಪಟವಾವಿಯ ನೀರಂತೆ ಕಜ್ಜೊಳಗಡಂಗಲುಂ (ಧರ್ಮಾಮೃ. ೬-೩೮) ; ಓಡಿ ಬಿರ್ದ ಪಟವಾವಿಯ ಮಧ್ಯದ ಕಾಸಮೂಲಮಂ ತೊಟ್ಟನೆ ಪತ್ತಿ (ಧರ್ಮಪ. ೧-೭೯). [ಪಟು₁(<ಪಟುದು)+ಬಾವಿ]

**ಪಟವಾವಿಗೆ** (ನಾ). = ಪಟವಾವಿ : ನಿಡುಮರದ ತುದಿಗೋಡುಗಳೊಳ್ ಕಟ್ಟಿದ ತೃಣಪುಲೀಚಿಹ್ನಂಗಳಿನಱಯಲಾದ ಕಾಡ ಪಟವಾವಿಗೆಗಳೊಳಂ (ಕಾದಂಬು. ೨೬೬). [ಪಟು₁(<ಪಟುದು)+ಬಾವಿಗೆ]

**ಪಟವಿಗೆ** 'ಪಟಯಿಗೆ' ನೋ.

**ಪಟವೆ,** ಪಳವೆ, ಹಳವೆ (ನಾ). ೧. ಬಹುಕಾಲದ ಸಂಬಂಧ ; ಹಳೆಯ ನಂಟು : ಪರಿಭವಕ್ಕಂ ಪಟವೆಗಂ ಪಾಗುಡಕ್ಕಂ ಪಟಬದ್ಧಕ್ಕಂ . . . ಮೋಕ್ಷಕ್ಕಂ ಮಹಾಸಮುದ್ರದೊಳ್ ಮಹಾನದಿಗಳ್ ಕೂಡುವಂತೆ (ಪಂಪಭಾ. ೯-೫೫ ವ) ; ದ್ವಾರದೊಳಿರ್ದ ಜನಾರ್ದನನ ಪಟವೆಯ ಕಳತೂರ್ಯಮಂಗಳಕಾರ್ಯದೊಳ್ ಕೂಸನಲಂಕರಿಸಲಟ್ಟಿದಂ (ನೇಮಿಪು. ೬-೧೬೭ ವ) ; ವಕಾರಕ್ಕೆ . . . ಪಟವೆ, ಎಳವೆ (ಶಮದ. ೨೨೧ ಪ್ರಯೋ). **ಪಳವೆ :** ೧. ಪಳವೆಯನೆಣಿಸಡೆ ಮುನ್ನಿನ ಪಳತ್ತನೊಳಗಾದ ಪಾಣ್ಡುನೃಪಸುತರೊಳ್ ತಾನೆಳಸಿ ಪಿಡಿದವನೆ ಭೂಪಂ (ಎಕ. XI, ದಾವಣ. ೮೪–೨೪ ; 1161). **ಹಳವೆ :** ೨. ಹಳೆಯತನ ; ಹಳಮೆ : ಮೌನಕಳಲುಂಟೆ ? ತಾಳಮೆಗುಂಟೆ ಹಳವೆ ? (೧೪ವಿಂ. ೩೦–೯೪) ; ಪ್ರಾಚೀನಕಾವ್ಯಗ್ರಂಥಗಳನ್ನು ಅವುಗಳ ಹಳವೆಯಿಂದ ಎತ್ತಿ ಹೊರತಂದು ತಿರುವಿ ಹಾಕಿದ . . . ಸಾಹಿತಿಯು (ಪಾಶ್ಚಾವಿ. ೪೬೦). 'ಪಟಮೆ' ಪರಾ. [ಪಟು₁(<ಪಟುದು)+-ವೆ]

**ಪಟವೇಟೆ** (ನಾ). ಹಳೆಯದಾದ ಪ್ರಣಯ : ಮಸೆವುದು ಮಾಸಲಿರ್ದ ಪಟವೇಟಮನಿಚ್ಛೆಯ ಬಿಚ್ಚತಿಕ್ಕೆಯಂ ಪೊಸಯಿಪುದು (ಶಾಂತಿಪು. ೮-೯೧) ; ಪೊಸವೇಟದ ಪಟವೇಟದ ಸುಸಿಲಿನಿಂದಂ ಪಡೆದುದಳಿಗೆ ಬೆಳಗಪ್ಪಾಗಳ್ (ಅಜಿಪು. ೬-೬೫) ; ಮುಕ್ಕಳ್ಗಾವಗವಿಗಾ ಬೇಟಮೆ ಸಾಲ್ಗುಮೆಂದು ಪಟ[ಪಾಠಾಂ. ಟು]ವೇಟಮಂ ಪೊರಿಗೊಳ್ಕು ಪೆಡೆಗೆ ಹಾರಂ ಪೊಸವೇಟಮಂ ಪೊಯ್ದುಕೊಳಲುಂ (ಅರ್ಧನೇ. ೫-೨ ವ). [ಪಟು₁(<ಪಟುದು)+ಬೇಟ₁(<ಬೇಂಟ)]

**ಪಟಸು,** ಪಳಸು, ಹಳಸು₁ (ಕ್ರಿ). ೧. ಹಳೆಯದಾಗು ; ಹಳತಾಗು : "ಪಟಸೆಂದು ಜರಾಸಿತಾರ್ಥದೊಳ್" (ಕನಾಸಿ. ೭೯). ೨. ಆಕರ್ಷಣೆಯನ್ನು ಕಳೆದುಕೊಳ್ಳು ; ನೀರಸವಾಗು : ಇಂದಿನ ಚಂದ್ರಿಕೆ ಕಂದು ನಾರ್ತುದೋ ಗಾವರದಿಂಪದೇಂ ಪಟು[ಪಾಠಾಂ. ಬಳ] ಸಿತೋ (ಲೀಲಾವ. ೨-೯೪) ; ಬಾಯಲ್ ಸವಿಗೆಟ್ಟೆ ಚುಂಬನಂ ಪಟಸಿದ ಮಚ್ಚುಮುಗ್ಗಲಿಪ ನಾಣ್ಚುಡಿಯುಂ ಸತಿಗಾಗೆ (ಸೂಕ್ತಿಸು. ೮-೩೯೪) ; ನವವಿಧರತ್ಯೋಪಚಾರದಿನೆಂದುಂ ಪಟಸದು ಬೇಟಂ (ಶಮದ. ೨೪೪ ಪ್ರಯೋ) ; ಪೊಲ್ಲವೇಜ್ ಮನೆಯೊಳೊರ್ಪಾಸಿನೊಳ್ ಕೂಡೆ, ನೀನೊಲ್ದ ಕೋಳ್ಕಟ್ಟಿಯದು ಪಟಸಿ ಕಣ್ಣಾಗುವುದಲ್ತೆ ಬೇಗಮ್ (ಅಂತಿಗೊ. ೩೦-೬೧೧). **ಪಳಸು :** ೩. ಆಹಾರದ ಸ್ವರೂಪ ಹಾಗೂ ರುಚಿ ಕೆಡು ; ಆಹಾರವು ಹುಳಿಯಾಗಿ ನಾರು : 'ಪಳಸುಗೂಳು' ಪರಾ. **ಹಳಸು₁ :** ೧. ಮಾತು ಹಳಸದ ಮುನ್ನ ಕೈಗಳು ಸೋತು ಕೆಗೆದವೆ (ಕುಪ್ಪಾವಿ. ೮-೭೬) ; ಇಂದಿದ್ದದ್ದು ನಾಳಿಗೆ ಹಳಸುತ್ತದೆ. ಊರೂ ಸಮ ; ತಿನ್ನುವ ಊಟವೂ ಸಮ (ಮೂಕಜ್ಜಿ. ೧೭೩) ; ಯಾವ ಹಳಸಿದ ತತ್ವಜ್ಞಾನವನ್ನು ರಾಯರು ಪ್ರಚಾರಪಡಿಸಿದವರಲ್ಲ (ಕಂಬಹು. ೧೨೧). ೩. ಕ್ಷಾಮದ ಕಾಲವು ಹೇಳುವುದಿಲ್ಲವು ಅನ್ನವು ಹಳಸಿಹುದೆಂದು (ಇಂಚಾಪು. ೨೨೫-೧೧) ; ಖಾನಿಯಲ್ಲಿ ಹಳಸಿದ ತಿಂಡಿ (ಚಂಡೆಮ. ೬-೧೪) ;

ನಾಯಿ ಹಸಿದಿತ್ತು, ಹಿಟ್ಟು ಹಳಸಿತ್ತು (ಗಾದೆ). ೪. ಹಾಳಾಗು; ಕೆಡು; ಹಸಗೆಡು: ಹಳಸಿದಗ್ಗಳಿಕೆಗಳ ವಿಲಾಸಲುಗಳೆದ ಬಿರುದಿನ . . . ಕಳವಳದ ಕನಸುಗಳಲಿದ್ದುದು ರಾಯನಾಸ್ಥಾನ (ಕುವ್ಯಾಕ. ೧–೨೦); ಹಳಸಿದುದು ಯಜ್ಞಗಿಜ್ಞದ ಮಾತು (ಚಿಬಪು. ೩೧–೨೮); ನೆಲದೊಳೊರ ಗಿರ್ಪವಳ ರವಣನ ಹಳಸಿದೊಡಲನು ತೋರಾ (ರಾಮಾಸಂ. ೬–೩–೧೬); ಚಾಲುಕ್ಯರ ಮನಸ್ಸು ಹಳಸುತ್ತಿದೆ ಎಂಬುದನ್ನು ಹೊಯ್ಸಳರಾಜ್ಯದ ಹಿರಿಯರೂ ಕಂಡುಕೊಂಡಿದ್ದರು (ಸಪತಿ. ೧೭೫).

[ಪಱು$_1$(<ಪಱಿದು)+-ಸು$_2$]

**ಪಱಹ**, ಪಳಹ$_2$, ಪಱಕ, ಪಱವ, ಬಱಪ (ನಾ). ೧. ಒಂದು ಬಗೆಯ ಚರ್ಮವಾದ್ಯ; ಪಟಹ: "ಪಱಹಂ ಪಟಹಾಭಿಧಾನದೊಳ್" (ಕರ್ಣಾನಿ. ೮೦), ಪಱಹದ ರುತಿ ಮೊಱಗಲ್ (ಚಂದ್ರಪ್ರ. ೧೨–೬೧); ಪ[ಱಗ]ನ ಕಯ್ಯ ಪಱಹಮಂ [ಕೊಂ]ಡು ಬಾಜಿಸುತಿರ್ದಂ (ಬಂಹರಿ. ೫–೧೨ ವ). ೨. ಬೇಟೆಹಾಗೂ ಕಳ್ಳತನದಸಂದರ್ಭಗಳಲ್ಲಿ, ಗಾಳಿಯು ನುಗ್ಗದಂತೆ ಕನ್ನಗಳನ್ನು ಮುಚ್ಚಲು ಉಪಯೋಗಿಸುವ (ತಮಟೆಯಂತೆ ಅಗಲವಾಗಿರುವ) ಚರ್ಮದ ಒಂದು ಬಗೆಯ ಸಾಧನ ವಿಶೇಷ: "ಪಱಹಂ–ಬೇಂಟೆಯ ತೆರೆ; ವಾದ್ಯವಿಶೇಷಂ" (ಶಮದ. ಪರಿ. ೧); ಸೋಪಿನ ತೋಪಿನ ಪಱಹದ ಕೋಪಿನ ಪಾಳೆವದ ಗೋರಿವೇಂಟೆಗೆ . . . ನಡೆತಂದರಲ್ಲಿ ಮುಂದೆ ಪುಳಿಂದರ್ (ಸೂಕ್ತಿಸು. ೩–೧೦೪); ವಿಳಸಿತಯೋಗಚೂರ್ಣತತಿ ಕರ್ಕಟರಜ್ಜು . . . ಪಱಹಮೆನಿಪ್ಪ ಪಾಯಶತಮಂ ತಳೆದು . . . ಕನ್ನಗತ್ತಿ ಸಹಿತಂ ಪೊಱಮಟ್ಟಂ (ದಶಕು. ೮–೯೩); ಕನ್ನದಿಂ ಗಾಳಿ ಬಾರದಂತೆ ಮುಚ್ಚುವ ಪಱಹಮಂ ಕನ್ನದೊಳ್ ಸಂದಿಸಿದ ಕಲ್ಲಂ ತೆಗೆವಿರ್ಕುಱಿಂ ಮತ್ತಮನೇಕಚೌರ್ಯಸಾಧನಂಗಳಂ ಕೊಂಡು . . . ಎಟ್ಟುರುತಿರ್ದಂ (ದಶಕು. ೮–೯೩ ವ). **ಪಹ$_2$**: ೧. ಉಲಿಯುತಿರ್ದಪೆ ಪಳಹಮೆಂತು ನಿರಪೇಕ್ಷೆಯಿಂ (ರತ್ನಕ. ೧–೪ ವ); ಪಳಹದ ಶಂಖದ ಕಹಳೆಯ ನಿನದಂ ಮೊಳಗುತ್ತಿರೆ ದಶದಿಸೆಯೊಳ್ (ವೃಷವಿ. ೫–೨೨ ರಗಳೆ); ಪೆರ್ಗಾಳೆಯ ಪಳಹದ ಕೊಱಲ ತಂಬಟೆಯ . . . ಭೂರಿನಿನಾದಂ ದೆಸೆ ಮುಟ್ಟೆ ಪಳಂಚಲೆಯೆ (ರಾಮಾಶ್ವ. ೫೦–೧). **ಪಱಕ**: ೧. ವಸುದೇವ ನೊರ್ವನಾ ಪಲಾಯಿಗನ ಕಯ್ಯ ಪಱಕ[ಪಾಠಾಂ. ಸಕಳಕ]ಮಂ ಕೊಂಡು . . . ಬಾಜಿಸುತ್ತಮಿರ್ಪಲ್ಲಿ (ಮಹಾನೇ. ೫–೩೪ ವ). **ಪಱವ**: ೧. "ಡಿಂಡಿಮಾಭಿಧಾನಂ ಪಱವಂ" (ವಸ್ತುಕೋ. ೬೯–೨೬); ಪಱವದ ತಿವಳಿಯ ಜುಂಕದ ಮೊಳಸಿನ ಜೇಕಿರದ ಸಿವಿಱ ಸಿಪ್ಪಿನ ಉಯುದಿಂದೆಱಲದೆ ಕುಣಿದರ್ (ಅಜಿಪು. ೫–೩೨); ಕರಡೆಯ ತಾಳದ ಪಱವದ ಮದ್ದಳೆಯ ಮಿಕ್ಕ ವಾದ್ಯಮುಮೊಳವೇ (ಗದಾಯು. ೩–೪೯); ಕೊಱಲ ಪಱವದ ಪಲವುಂ ಗಿರುಗಟೆಯ ಸಿವುಱ ಸಿಪ್ಪಿನ ಕೊರಗಿನ ಕಿನ್ನರದ ಸರಮೆ ಸರಮಾ ಪೊಱಲೊಳ್ (ಸೂಕ್ತಿಸು. ೪–೧೦೪). **ಬಱಪ**: ೨. ಆ ಕಳ್ಳರ್ . . . ತನ್ನ ತಂದ ಪೊನ್ನ ಪುಡಿಕೆಯುಮನುಱಿಯುಮಂ ಬಱಪಮುಮಂ ಅಲ್ಲಿ ಪಟ್ಟಿರ್ದ ಭಟ್ಟನ ಮುಂದೆ ತಂದಿಕ್ಕಿ (ಪಂಚತಂ. ೨೩೨–೭). [<ಪ್ರಾ. ಪಡಹ./ಸಂ. ಪಟಹ./ತೆಲು. ಬಲಪ, ಬಲ್ಪ]

**ಪಱಿ$_1$**, ಪಳಿ$_1$, ಹಳಿ$_1$, ಹಱಿ$_1$ (ಕ್ರಿ). ೧. ದೂಷಿಸು; ನಿಂದಿಸು; ಬಯ್ಯು: "ಪಱಿ–ನಿಂದಾಯಾಂ, ವಸ್ತ್ರವಿಶೇಷೇ ಚ" (ಶಮಧಾ); ಪಱಿಗೆ ಮೇಣ್ ಪೊಗೞ್ಗೆ ಮೇಣ್ ನೆವಮಿಲ್ಲದೊಡಿಂತು ಕೈಗೞಿಯೆ ಬಗ್ಗಿಸುಗೆ (ಕವಿರಾ. ೧–೧೩೬); ಭೂತಳಂ ಪಱಿಯೆ ತೇಜಮೆ ಕೆಟ್ಟಪುದು (ಪಂಪಭಾ. ೯–೧೮); ಮುಳಿಗುಂ ಮುರಾರಿ ವಾಕ್ಪತಿ ಪಱಿಗುಂ (ಪಂಚತಂ. ೧೬೫–೬). ೨. ನಾಯಿಯನ್ನು ಅಟ್ಟು,–ಓಡಿಸು: "ಪಱಿಯೆನಲ್ ವರವಸ್ತ್ರದಲ್ಲಿ . . . ಕುನ್ನಿಯಂ ಪೊಱವಡಿಪ ನುಡಿಯೊಳಂ ವರ್ತಿಸಿರ್ಕುಂ" (ಸಂಜೀವ. ೧೮). ೩. (ಅಲಂ) ಮೀರು; ಅತಿಶಯಿಸು: ವಿಭೂಷಣಕಾಂತಿ ಸುರೇಂದ್ರಚಾಪಮಂ ಪಱಿಯೆ (ಚಂದ್ರಪ್ರ. ೧೦–೨೬); ಕಾಂಚನಕುಂಭಮಂ ಪಱಿವ ಪೆರ್ಮೊಲೆಯಂ ನಸುದೋಱುತುಂ (ಉದ್ಭಟ. ೧೦–೬೮); ಸುಱಿಯುಂ ಪಱಿದೊಪ್ಪುವ ಪೊಕ್ಕುೞಿಂದೆ . . . ಒಪ್ಪುವಳ್ (ಕಬ್ಬಿಕಾ. ೧೨೧). **ಪಳಿ$_1$**: ೧. ತನಗೆ ಕವಿತ್ವಮಿಲ್ಲ ಪೆಱರಂ ಪಳಿ[ಪಾಠಾಂ. ಜಱಿ]ದಲ್ಲದೆ ನಿಲ್ಲನಾತನೊಳ್ ಮುನಿವುದನೀತಿ (೧೦ಕ. ೧–೨೯); ಬಡವರಾದವರನು ಪ[ಪಾಠಾಂ. ಹ]ಳಿಯ ದಿರೆಚ್ಚಱಿಕೆ (ಪುರಂದ. ಭಾ. ೫–೯೬–೪); ಪರಿಚಾರಮೆಂದು ಪಳಿಯದೆ ಪಿರಿದು ಕಿಱಿದುಗಳ ಭೇದವನೆಣಿಸದೆ ನಿರವಿಸಿದುದನೆಸಗುವುದು (ಹದಿಬ. ೩–೩೩); ಪಳಿವುದು ಲೋಕಂ ತಂದೆಯ ನಿಳಯದೆ ಪತಿಯುಳ್ಳ ಸತಿಯುಮಿರೆ (ಶಾಕುಂತ. ೬೬–೧೧೭). ೩. ಪಂಚಶರಮಂ ಪಳಿವ ಸುಚ್ಚರಲ್ (ಕಾರಿರ. ದೇ. ೨೮೯–೧೭); ಮುಖಮಂ ಮುಕುರದಿರವಂ ಪಳಿದುದು (ಚಿಬಪು. ೫–೪೪); ಮಾದಳಿರ ಪಳಿವ ಚೆಂದುಟಿಯ ಸವಿಗೆ . . . ಬಯಸಿ (ಜೈಮಿಭಾ. ೩–೧೦); ಪಂಚಬಾಣನ ಚೆಲ್ವ ಪಳಿವ ಜಯಂತನನಂಚೆಗಮನೆಯಱಿಸಿದಳು (ಕಂನವಿ. ೯–೧೯೯). **ಹಳಿ$_1$**: ೧. ಕಳಬೇಡ ಕೊಲಬೇಡ . . . ತನ್ನ ಬಣ್ಣಿಸಬೇಡ ಇದಿರ ಹಳಿಯಲು ಬೇಡ ಇದೆ ಅಂತರಂಗಶುದ್ಧಿ ಇದೆ ಬಹಿರಂಗಶುದ್ಧಿ (ಬಸವ. ೨೩೫); ರೋಗಿ ಹಳಿದೊಡೆ ಹಾಲು ಹುಳಿಯಪ್ಪುದೆ (ಹಚಕಾ. ೧–೨೭); ಆವ ಹಿರಿಯರ ಹಳಿದೆನೋ ಮುನ್ನಾವ ಧರ್ಮವ ತುಳಿದೆನೋ (ಕೌತಿರಾ. ೩೦–೪೩); ಸ್ಥಲವೊಂದು ನಿನಗಿಹುದು ವಿಶ್ವವೃಕ್ಷದೊಳಂತು ಹಳಿಯದಿರು ನಿನ್ನಿರವ (ಮಂಕುಕ. ೫೬೨). ೩. ಇಳೆಗೆ ನಳಕೂಬರ ಜಯಂತರ ಚೆಲುವ ಮದನನ ರೂಪರೇಖೆಯ ಹಳಿವುದಾ ನಳನೃಪನ ನಿಜಸೌಂದರಿಯ ಲೋಕದಲಿ (ನಳಚ. ೨–೩೬). **ಹಱಿ$_1$**: ೧. 'ಹಱಿಸು' ಪರಾ.

[ದೇ.॥ ತವಿ. ಮಲ. ಪಱಿ; ಕೊಡ. ಪಳಿ]

**ಪಱಿ$_2$**, ಪಳಿ$_2$, ಪಳಿವು, ಪಱಿವು, ಹಳಿ$_3$, ಹಳಿವು$_1$, ಹಱಿವು (ನಾ). ೧. ಅನ್ಯಾಯವಾದ ಆರೋಪ; ನಿಂದೆ: "ತೆಗೞ್, ಪಱಿ . . . ಅಣಕಂ–ಈ ೬ ನಿಂದೆ" (ಕಶಸಾ. ೫೭–೨೫೬); ತನ್ನ ಮುಂ ಗೆಯ್ದ ಪಾಪಮುಮಯಶಮುಂ ಪಱಿಯುಂ ಪೊಲ್ಲಮೆಯುಮಂ ನೀಗಿದಂ (ವಡ್ಡಾರಾ. ೧೬೭–೨೬); ಲೋಕದ ಪಱಿ ಪೊರ್ದದೆ ಮಾಣ್ಗೆ ಧರ್ಮಯುದ್ಧದೊಳೆಸಗಿಂ (ಆದಿಪು. ೧೪–೧೦೨); ಚಿತ್ರಭ್ರಾಂತಿಯುಮಂ ಹಳಿಯ ಪಱಿಯುಮಂ ಪಿಂಗಿಸಿದರ್ (ಪಂರಾಮಾ. ೧೬–೫೬). ೨. ನಾಯಿಯನ್ನು ಅಟ್ಟುವುದು,–ಓಡಿಸುವುದು: "ಪಱಿ=ವಸ್ತ್ರವಿಶೇಷಂ; ದೂಷಣಂ; ನಾಯ ಸೋವುವುದು; ಲೋಹದ ಘಟ್ಟ" (ಶಮದ. ಪರಿ. ೧); ಅಂತು ಪರಿದು ನೆರೆದ ರಾಜನ್ಯಕಮಂ ಪಱಿ[ಪಾಠಾಂ. ಳಿ]ಯಂತೆ ಪಲಾಯನಶೀಲಮಾಡಿ ಹೇಮಪ್ರಭನಂ ಮುಟ್ಟೆವಂದು (ಪಂರಾಮಾ. ೩–೫೮ ವ). **ಪಳಿ$_2$**: ೧. ಅಳಿಪಿಲ್ಲದೆ ನೆಗೞ್ದಿರೆಯುದ್ದವಸ್ಸುರ್ನರಪುರಮಂ ಪಳಿಗಳ್ಗದಳಿವ ಪಾತಕರಿಳಿವರ್ಗ್ಗಳಗಳನೆ ನರಕಗತಿಗೆ (ಸೌಇಇ. XX, ೪೭–೩೯; 1074); ಗೋವಳತಿ ಗೋಪಿಯ ನಂದನ ಕಂದನಾದನೆಂಬಾ ಪಳಿಯೆಲ್ಲಮಂ ಕಳೆಯಲ್ (ಕೊಲ್ಹಾಶಾ. ೯–೩೮; 1147); ಪಳಿವಾಂತ ಲವಣಾಬ್ಧಿಸಂಜಾತವಿದ್ರುಮವನಿಳಿಸಿ (ನಂದಿಮಾ. ೮–೩೬); ನಮ್ಮಯ ಕುಲದ ಯಶಶ್ಚಂದ್ರಿಕೆಯ ಪಾಳ್ಗೆಯ್ದ, ಪಳಿಯ ಕರ್ದಿಂಗಳಂ ಮೆತ್ತಿ (ಚಿತ್ರಾಂಗ. ೫೯–೧೬೩೪). **ಪಳಿವು**: ೧. ಕಳವು ಪುಸಿ ಹಾದರ . . . ಪಳಿವು ವಂಚನೆ ಜಾತಿಸಂಕರ ಕೊಲೆ ವಿರೋಧವು ವಿಕೃತಮಾಯಾವಳಿಗಳೆಂಬಿವು ನಿನ್ನೊಳಿಲ್ಲಲೆ ರಾಯ (ಕುವ್ಯಾಸ. ೧–೪೫); ಕಾರ್ಪಣ್ಯಮಳಿವು ಪಳಿವನ್ಯಾಯ . . . ಕರ್ಕಶಂಗಳಿವು ಮೊಳೆದೋಱುವು (ಜೈಮಿಭಾ. ೨–೫); ಪುರಜನರ ಬಿಱುನುಡಿಗೆ ತಡೆದೆ ಜಾತಿರಾಜರ ಪಳಿವ ನೊಳಕೊಂಡೆ (ಶ್ರೀರಾಮ. ೩–೫೦); ಪಳಿವಾಯಿತು ಕ್ಷತ್ರಿಯ ಕುಲಕೆ

(ಕೋಗಿಲೆ. ೧೯-೧೦). ೩. ನಿಂದೆಗೆ ಗುರಿಯಾಗುವಂತಹುದು ; ಹೀಯಾಳಿಕೆಗೆ ಪಾತ್ರವಾಗುವಂತಹುದು : ನಿನ್ನ ನಿತಂಬಕ್ಕೆ ಪುಳಿನ ಸ್ಥಳಂ ಪೞಿವು ನಿನ್ನ ಬಟ್ಟದೊಡೆಗೆ ಬಾಳೆ ಬಹಿಷ್ಕಾರಂ (ನಂಬಿರ. ೧೪-೧೮). **ಪೞಿವು :** ೧. "ಪೞಿವೆಂದೆನೆ ನಿಂದೆ" (ಚತುಸಿ. ೪೬) ; ಪೞಿವನ್ನಾಯುವ ನೋಡದನ್ಯರೊಳೆ ದೂಱಿಟ್ಟಿಲ್ಲರಂ ಬಾಧಿಪಾ ತಳವಾಱಂ ಬೆಳವಾರನ್ನೆ (ಸೋಮೇಶ. ೬೬) ; ಕೆಳವು ಪಿಸುಣ್ ಪಸವು ಬೞಿಂ ಪೞಿವೞಿ ವಲಸೊಲಸು ಕುತ್ತುವಿಲ್ಲಾ ನಾಡೊಳ್ (ಶಬ್ದಾನು. ೧೪೦ ವ್ಯಾಖ್ಯಾ). **ಹಳಿ$_3$ :** ೧. ಹಳನೇಹವಿಹುದೆಂದು ಎಳಸಿ ಹೋಗುವನೆಗ್ಗ ಕಳವಳ ವಕ್ಕು ಹಳಿಯಕ್ಕು (ಸರ್ವಜ್ಞ. ೧೮೦೭); ಕಳ್ಳನೆಂಬ ಹಳಿ ಮೆರಸಲೇಂ ನೀ ಕಳ್ಳರ ನಡು ತೂಗಾಡಿದೆಯಾ ? (ಗೀವಿಂ. ೪೧-೯) ; ಅಯ್ಯೋ! ನಿಮಗೆ ಇಂಥ ಹಳಿ ತರೋದು ನನ್ನ ಹಣೇಲಿ ಬರೆದಿತ್ತಲ್ಲ (ಚಕಂ೩. ೨೧೧). **ಹಳಿವು$_1$ :** ೧. ಹಳಿವು ಹೊಱದ ತಿಳಿವಿನಲ್ಲಿ ಕಳೆ ಕಣ್ಡೞಿದು ಉಳಿದ ನಿಜದ ಶೇಷ ಶ್ರೀಗುಹೇಶ್ವರ ನಿಮ್ಮ ಬಸವಣ್ಣ (ಅಪಚಂ. ೨೯೨-೧೩೦೫); ರಕ್ಷಿಪನ ಹಳಿವಂ ಕೇಳಲೆನಗೆಂತು ಸೈರಿಸಲ್ಪಪ್ಪುದೇ (ಇಱಿರ. ದೇ. ೧೦೭-೭) ; ಭೃಮಿಯಿವನು ನೆಱಿ ಹಳಿವ ತಹನೀ ಶ್ರೋತ್ರಿಯರ ಕುಲಕೆ (ಸಂಭಪ. ೩೧-೧೪) ; ನಿಮ್ಮಯ ನುಡಿಗೆ ಹೊದ್ದದು ಹಳಿವು (ತೊರರಾ. ೧-೯-೨೬). ೪. ತೊಂದರೆ ; ಕೇಡು ; ವಿಪತ್ತು : ಹಲವು ದೇಶಗಳಿಲ್ಲ ದುರ್ಭಿಕ್ಷದಿಂದಳಿಯೆ ಹಳಿವಿಲ್ಲದಿರ್ದುದಾ ಗೌತಮಾಶ್ರಮದಲ್ಲಿ ಮುನಿತಪಸ್ತೇಜದಿಂದ (ಲಕಚಂ. ೨೪-೩). **ಹೞಿವು :** ೧. "ನಿಃಷಮ ದುಷ್ಷಮ ಗರ್ಹ್ಯ ಎಂಬಿವು ಹೞಿವಿನೊಳ್ ಅಪ್ಪುವು" (ನಾಚಿಂ೩. ೬).

[< ಪೞಿ$_1$./ತಮಿ. ಮಲ. ಪೞಿ]

**ಪೞಿ$_3$**, ಹಳಿ$_4$, ಹೞಿ$_2$ (ನಾ). ೧. ಲೋಹದ ಘಟ್ಟ ಅಥವಾ ಕಂಬಿ : "ಪೞಿ = ವಸ್ತ್ರವಿಶೇಷಂ ; ದೂಷಣಂ ; ನಾಯ ಸೋವುವುದು ; ಲೋಹದ ಘಟ್ಟ" (ಶಮದ. ಪರಿ. ೧) ; "ಪೞಿಯೆನಲ್ ವರವಸ್ತ್ರದಲ್ಲಿ ದೂಷಣದಲ್ಲಿ ಲೋಹಮಂ ಕರಗಿಸಿದ ಘಟ್ಟಯೊಳ್ ಕುನ್ನಿಯಂ ಪೊಱವಡಿಪ ನುಡಿಯೊಳು ವರ್ತಿಸಿರ್ಕುಂ" (ಸಂಜೀವ. ೧೮). **ಹಳಿ$_4$ :** ೧. ಕಾದ ಲೋಹದ ಹಳಿಯವೊಲು ಕೆಂಪಾದವಸುರರ ಮೋಱಿಗಳು (ಕುವ್ಯಾಕ. ೭-೨೮) ; ಹೊಳಕಿದುದು ಕಿರಣಾಳಿ ಹೇಮದ ಹಳಿಗಳಲಿ . . . ಮಣಿ ಹರ್ಮ್ಯಾದಿ ಹಂತಿಗಳ ಸೊಗಸಿನಲಿ (ತೊರರಾ. ೫-೨-೨೪). ೨. ಉಗಿ ಬಂಡಿಯ ಸರಳು ; ರೈಲುಕಂಬಿ : ಯಾರೊ ಹಳಿ ಕಿತ್ತುತ್ತಾರೆ. ಡಬ್ಬಿ ಉರುಳಿಸುತ್ತಾರೆ (ಹಾಸುಹೊ. ೨೮) ; ಹಳಿಯ ಮೇಲೋಡುತಲಿದೆ ರೈಲು (ಚಂದ್ರವೀ. ೧೦೫-೧೮). ೩. ಬಂಡಿಯ ಗಾಲಿಯ ಕಬ್ಬಿಣದ ಪಟ್ಟ,-ಪಟ್ಟಿ : ಕಮ್ಮಾರರು ಗಾಲಿಗೆ ಹಳಿಯನ್ನು ಬಿಗಿಯುವಾಗ (ಮುಂಬಯಿ. ೫-೧೧೫) : ಒಂದರ ಹಳಿ ಬಿಟ್ಟದ್ದರೆ ಮತ್ತೊಂದರ ಅಚ್ಚು ಮಣಿದು ಹೋಗಿದೆ (ಜೆಳಭಾ. ೧೬೬) ; ಹಳಿ ಕಟ್ಟಲು ತಂದಿಟ್ಟದ್ದ ಒಂದು ಗಾಡಿಚಕ್ರಕ್ಕೆ ಡಿಕ್ಕಿ ಹೊಡೆದು, ಅದನ್ನು ಮೈ ಮೇಲೆ ಬೀಳಿಸಿ ಕೊಂಡಿದ್ದನು (ಮಲೆಮ. ೨೮೮). ೪. ಹಳಕು ; ಚೂರು ; ಹರಳು: ಪಚ್ಚೆಗರ್ಪುರದ ಹಳಿಯನೊಡದಾ ಧೂಳಿಯಂ ಹರಹಿ (ಪದ್ಮರಾ. ೮-೯೨) ; ವಾಟಿಯೊಳಗೆಯುಪ್ಪಿನ ಹಳಿಯ ತಡಹಿಕೊಂಡು ಗೊಂದಣದ ಸಂಭಾರವಂ ಮೆತ್ತಿ . . . ಮಡಕೆಯೊಳಿರಿಸಲದು ತುಂಬುವಾಳಿಗಾಯ್ತೆಸರಾದವು (ಸೂಪಶಾ. ೪-೭೪). ೫. ಮೊಸರು ಮೊದಲಾದುವುಗಳ ಗಡ್ಡೆ,-ಗರಣೆ ; ಥೈಂಡಿ : ನೆನ್ನೆ ಅವರ ಮನೆಯಲ್ಲಿ ಬಡಿಸಿದ ಹಳಿ ಮೊಸರು ಸೊಗಸಾಗಿತ್ತು (ರೂಢಿ). **ಹೞಿ$_2$ :** ೧. ಮೇರುವಿನ ಹೞಿಗಳೇಂ ಭಂಡಾರಕ್ಕೆನ್ನಾಣೆ ವಜ್ರಧಾರೆಗಳೆಂಟಂಕಾರಿಸಿ ಸಲಿಸದೊಡೆಂದು ಬಲಾಂಗೆ ದಿವಿಜಾರಿ ರಾಯಸಂ ಬರೆಯಿಸುವಂ (ಅನಂಪು. ೧೩-೮) ; ಕಾಯ್ದ ಕರ್ಬೊನ್ನ ಹೞಿಗಳಿಂದೇರ್ವರಿಯನಮರ್ಚುವುದುಂ (ಶಾಂತೀಶ್ವ. ೯-೧೧೦ ವ). ೪. ಆಕುಂಚಿತಮಾದ ವಾಮಪಾದಾಂಗುಷ್ಠದೊಳ್ ಕೊಡರ್ದ ಪಾದುಕದ ಪಲ್ಲೆಯಂ ಪದ್ಮರಾಗದ ಹೞಿಯೊಳೞಿ ತ್ರಿಭಂಗಿ ಸಂಗಳಿಸೆ ನಿಂದು (ಮಹಾನೇ. ೧೪-೭೨ ವ). 'ಫಳಿ$_2$' ಪರಾ.

**ಹಳಿಹಳಿ** (ದ್ವಿರುಕ್ತಿ) : ಹಳಿಹಳಿಯೇಳ್ವ ಮುಗಿಲ ಹೊರೆಯೊಳು ಕೂಡುವೆಳೆವಾಂಬಟ್ಟೆಗಾದರಲ ಲಲಿತಾಂಗಸೌರಭ್ಯವ ತಲೆವೊಱಿವೊತ್ತು ಸುಳಿವ ಗಾಳಿಗೆ ಮೈಯನಿತ್ತ (ಶ್ರೀಪಾಲ. ೪-೬೬) ; ನನ್ನ ತಟ್ಟೆಗೆ ಹಳಿಹಳಿಯಾದ ಮೊಸರನ್ನು ಹಾಕಿದರು (ಚೆಂಗಾಳ್ವ. ೫೮).

**ಪೞಿ$_4$**, ಪಳಿ$_3$, ಪೞು$_3$(ನಾ). ೧. ಕಸ ; ಕೊಳೆ ; "ಕಳೆ" (ಚತುಸಿ. ೬. I, ೬೦). **ಪಳಿ$_3$ :** ೨. ಪೈರು ಕಟಾವಾದ ಮೇಲೆ ಉಳಿಯುವ ಕೂಳೆ : ನಟ್ಟು ಕಡಿಸಿ ಹಸನ ಮಾಡಿದರೂ ಅಜಮಾಸು ಇಷ್ಟೇ ಹಣ ವೆಚ್ಚವಾಗುತ್ತದೆ. ಪಳೀ ಆರಿಸುವುದು ಬೇರೆ (ಕಭಾಗ. ೨೬೭). **ಪೞು$_3$ :** ೧. "ಬಿಂಜದೊಳ್ ಕಸದೊಳಂ ಪೞು" (ಶಬ್ದಮಂ. ೧೧೩).

**ಪೞಿ$_5$**, ಪಡಿ$_4$, ಪಳಿ$_4$ (ನಾ). ಒಂದು ಬಗೆಯ ಉತ್ತಮವಾದ ಬಟ್ಟೆ : "ತೆಗೞು ವಾಸ ಪೞಿಯೆನಿಕು" (ಶಬ್ದಮಂ. ೧೧೬) ; ಅರ್ಧ ಗಪ್ಪಡಮಂ ಬಿಸುಟ್ಟು ಪೞಿಯಂ ಸಯ್ಯುಟ್ಟುಕೊಂಡಿರಿಂ (ಪಡ್ಮಾರಾ. ೯೩-೧೬) ; ಪೞಿ ಚಿತ್ರಾವೞಿ ಜೋಗಂ ಪೞಿಯಂ ದೇವಾಂಗಮೆಂಬ ವಸನಂಗಳನೇಂ ಗೞಿಯಿಸುವವೊ ಮಡಿವಳ್ಳನ ಪೞಿಯತನನೆ ಪೋಲ್ತು ವಿಶದವಸನಾಂಗಕುಜಂ (ಆದಿಪು. ೫-೩೪) ; ಚೀನದ ತಳಿರ್ವಟ್ಟೆಯ ಪೞಿಯ ವೞಿಯ ದೂಸಿಗವಸರಂ (ಲೀಲಾವ. ೭-೧೯). **ಪಡಿ$_4$ :** "ಪಳಿ (ಪಡಿ)—ಪಟೀ = ಬಟ್ಟೆ" (ತದ್ಭಕೋ. ೨೫). **ಪಳಿ$_4$ :** ಚಿತ್ರದಣ್ಣಂ ಪಳಿಯೆಸೆವ ಝುಳಂಬಂ ಗಜೇನ್ದ್ರಂ ತುರಂಗಂ (ಎಇ. XIII, ೩೩೦-೧೩; 929) ; ಅಯ್ನೂರ್ವರು ಬಿಟ್ಟ ಧರ್ಮಮೆಂತೆನೆ ಆನೆ ಮಾಣಿಕ ಪಳಿ ಪತ್ರಾವಳಿ ಅಡಕೆ ಮೆಳಸು (ಕಇ. V, ೩೩-೫೩ ; 1176) ; ಪಳಿಯ ನುಟ್ಟನು ಮಲ್ಲಗಂಟಿನಲಿ (ಕುವ್ಯಾವಿ. ೩-೭೯) ; ಮಲಯಜದಣ್ಪು ಪೊಂದೊಡಿಗೆ ಪಟ್ಟೆಯ ದಟ್ಟಿ ಪಳಿಯ ಚಲ್ಲಣ (ಕುರಾಸಾಂ. ೧೧-೩೭).

[< ಸಂ. ಫಲಿ]

**ಪೞಿ$_6$** 'ಪಡಿ$_3$' ನೋ.

**ಪೞಿಕಯ್** 'ಪೞಿಕೆಯ್' ನೋ.

**ಪೞಿಕೆಯ್**, ಪಳಿಕೆಯ್, ಪೞಿಕಯ್ (ಕ್ರಿ). ೧. ದೂಷಣೆ ಮಾಡು ; ಹೀಯಾಳಿಸು ; ನಿಂದಿಸು : ಪೞಿಕೆಯ್ದು ತೊಟ್ಟನುೞಿ ದಂತುೞಿದ ಮಹಾಪುರುಷರೞಿಯದುೞಿದರೆ ಸಿರಿಯುಂ (ಕವಿರಾ. ೩-೧೭೫) ; ಪೞಿಕೆಯ್ದು ಬಂದು ನಲ್ಲಳ ಮುಳಿಸನೊಳಕೊಂಡು (ಆದಿಪು. ೧೨-೨೯ ವ) ; ಶಿಶುಪ್ರಕರಮನೇನಗಲ್ಚಿದನೊ ಧರ್ಮಮನೇಂ ಪೞಿಕೆಯ್ದನೋ (ಸುಕುಮಾ. ೯-೧೦೨) ; ಚೋಳನಂ ಪೞಿಕೆಯ್ದು ಮಾಳವನನಿೞಿಕೆಯ್ದು ಲಾಳನಂ ಱೋಡಾಡಿ (ಜಗವಿ. ೧೭-೧೧೮ ರಗಳೆ). ೨. ಕೆಟ್ಟ ಕೆಲಸವನ್ನು ಮಾಡು ; ತಪ್ಪು ಮಾಡು : ಇಂ ವಿಷಯ ಸುಖಕ್ಕೆಜಗೆಂ ಪೞಿಕೆಯ್ದು ತೊಟ್ಟನುೞಿವಂತುೞಿವೆಂ (ಅಜಿಪು. ೨-೮೨); ಅಳಿಪಿ ಪೞಿಕೆಯ್ವವನಂ ಬೀಸಿ ಬಿದಿರ್ದಿಕ್ಕಿ ಕಳೆವುದು (ಲೀಲಾವ. ೧೪-೪೪). **ಪಳಿಕೆಯ್ :** ೧. ಪಳಿಕೆಯ್ವಂ[ಪಾಠಾಂ. ಕೈವಂ] ಖಳನೆಂದಾಂ ಮುಳಿಯೆಂ (ಶಬಶಂ. ೧-೧೯). ೩. (ಆಲಂ) ಅತಿಶಯಿಸು ; ಮೀರು : ಸರಸಿಯಂ ಪಳಿಕೆಯ್ವ ನಾಭಿಮಂಡಲವಲ್ಲಿ (ಕಾದಿರ. ದೇ. ೨೮೯-೧೩). **ಪೞಿಕಯ್ :** ೧. ವಿತ್ತೇಶನೇನಿತೊತ್ತಡಂ ಪೞಿ ಕಯ್ವರ್ ವರುಣಂ ಕರಂ ಕರುಣದಿಂ ಲಲ್ಲೈಸೆ ತಾವೊಲ್ಲರ್ (ಸೂಕ್ತಿಸು. ೪-೧೩೧). [ಪೞಿ$_2$ + ಕೆಯ್$_1$]

**ಪೞಿಗೞಿ** (ಕ್ರಿ) ದೋಷರಹಿತವಾಗು ; ನಿಂದೆಯಿಲ್ಲದಿರು :

ಅಹಮಿಂದ್ರರ್ . . . ಪಾಪಹರಂಗೆಱಗುವರೆನಿಸಿದ ಮಹಿಮೆಯ ಪೞಿಗೞಿದ ಪರಮಕೋಟಿಯೊಳಿರ್ಪರ್ (ಶಾಂತಿಪು. ೯-೧೨೪).
[ಪೞಿ$_2$ + ಕೞಿ$_1$]

**ಪೞಿಂಗಾಳೆಗ** (ನಾ). ಪ್ರತಿಯಾದ ಯುದ್ಧ,—ಕಾಳಗ: ಅೞಿಮರುಳಾದಂತಾ ಲತೆಯೊಳ್ ಪೞಿ[ಪಾಠಾಂ. ೞು]ಗಾಳೆಗಂಗಾದಿ ಬರೆವರೆ (ಪಂಪಭಾ. ೫-೧೨ ವ). [ಪೞಿ$_6$(<ಪಡಿ$_3$) + ಕಾಳೆಗ]

**ಪೞಿನುಡಿ$_1$** (ಕ್ರಿ). ನಿಂದೆಯ ಮಾತನ್ನಾಡು; ಅಪವಾದವನ್ನು ಹೊರಿಸು; ದೂಷಿಸು: 'ಪೞಿನುಡಿಹ' ಪರಾ.
[ಪೞಿ$_2$ + ನುಡಿ$_1$]

**ಪೞಿನುಡಿ$_2$**, ಪಳಿನುಡಿ (ನಾ). ನಿಂದೆಯ ಮಾತು; ಅಪವಾದ; ದೂಷಣೆ: ವಿಜ್ಞಾನವಿಕಲಂ ಪಶುಪ್ರಾಯಂ ಎಂಬುದು ಮೊದಲಾಗೆ ಪೞಿನುಡಿಯಂ ಸೈರಿಸುವನುಂ (ತತ್ತ್ವಪ್ರ. ೩೩೭). **ಪಳಿನುಡಿ:** ನೀವೆಲ್ಲ ಪಳಿನುಡಿಯ ಬಳಿಯುಲೆಂದೇ ಕೇಳಿಗೊಂಡಿರಾ ಹೇಳಿ? (ನಡೆದಾ. I, ೪೫೮). [ಪೞಿ$_2$ + ನುಡಿ$_2$]

**ಪೞಿನುಡಿಹ** (ನಾ). ದೂಷಣೆಯ ಮಾತನ್ನಾಡುವಿಕೆ; ನಿಂದಿಸುವಿಕೆ: "ಅವರ್ಣವಾದಃ, ಪೞಿನುಡಿಹ" (ತಸೂವ್ಯ. ೨೧೪).
[ಪೞಿನುಡಿ$_1$ + -ಹ$_2$(<-ಪ$_2$)]

**ಪೞಿಯತ** 'ಪೞಿಹತ್ತ' ನೋ.

**ಪೞಿಯತ್ತ** 'ಪೞಿಹತ್ತ' ನೋ.

**ಪೞಿಯಱ** 'ಪಡಿಯರ' ನೋ.

**ಪೞಿವಾವುಗೆ** (ನಾ). ಮಂಚವನ್ನು ಇಡಲು ಮಾಡಿದ ಎತ್ತರದ ಪೀಠ,—ವೇದಿಕೆ: "ಪೞಿವಾವುಗೆಯ ವಲಂ ಪ್ರತಿಪಾದುಕಂ" (ಸಂಜೀವ. ೧೯); ಪಳಿಕಿನ ಪೞಿವಾವುಗೆಯಿಂ . . . ರಂಜಿಪ ರನ್ನದ ಸೆಳೆಮಂಚದ ಮೇಲೆ ಲೀಲೆಯಿಂ ಕುಳ್ಳಿರ್ದರ್ಗಳ್ (ಪಂರಾಮಾ. ೩-೭೫); ನಿಶ್ಶ್ರೇಯಸಶ್ರೀಯ ಸಿರಿಮಂಚದ ಕೆೞಗೆ ಪೊಳೆವ ಪೞಿವಾವುಗೆಯಂತೆ ಪಳಚ್ಚನಾದಚ್ಚವಳುಕಿನ ಸಮಾಧಿಶಿಲಾಪಟ್ಟಕಮುಂ (ಅನಂಪು. ೧೪-೬೮ ವ); ಕಕಾರಕ್ಕೆ . . . ಪ್ರತಿಪಾದುಕಂ—ಪೞಿವಾವುಗೆ (ಶಮದ. ೨೧ ಪ್ರಯೋ). [<ಸಂ. ಪ್ರತಿಪಾದುಕಂ]

**ಪೞಿವು** 'ಪೞಿ$_2$' ನೋ.

**ಪೞಿವೊಂದು** (ಕ್ರಿ). ಅಪವಾದವನ್ನು ಹೊಂದು; ನಿಂದೆಗೊಳಗಾಗು: ಪೆತ್ತರ್ ಪೞಿವೊಂದದವೊಲಿತ್ತೆಡೆಯೊಳಡಂಗಿ ಬಾೞ್ವುದುತ್ತಮವಲ್ತೇ (ಚಿಕವಿ. ೬-೨೮೫). [ಪೞಿ$_2$ + ಪೊಂದು$_1$(<ಪೊರ್ದು)]

**ಪೞಿಹತ** (ನಾ). ತಡೆ; ವಿಘ್ನ: "ಪೞಿಹತ ಪ್ರತಿಹತಮುದಕ್ಕು" (ಕವಿಕಂ. ೨೪೩). [<ಸಂ. ಪ್ರತಿಹತ]

**ಪೞಿಹತ್ತ**, ಪಳಿಹತ, ಪಳಿಹತ್ತ, ಪೞಿಯತ, ಪೞಿಯತ್ತ, ಫಳಿಹತ (ನಾ). ೧. ಒಬ್ಬನಿಗೆ ಬದಲಾಗಿ ಬರುವವನು; ಪ್ರತಿನಿಧಿ: ಕಕಾರಕ್ಕೆ—ಪ್ರತಿಹಸ್ತಂ-ಪೞಿಹತ್ತಂ; ಪ್ರತಿಪಾದುಕಂ-ಪೞಿವಾವುಗೆ (ಶಮದ. ೨೧ ಪ್ರಯೋ). **ಪಳಿಹತ:** ಅವರ ಪಳಿಹತರು ಕೋಣವತ್ತಿಯ ಟಿಣಾಂತರದ ಪೆರ್ಗ್ಗಡೆಗಳು (ಕಇ. IV, ೨೨-೩೫; 1024); ವ(ಧ)ರ್ಮ್ಮಕಾರ್ಯೋದ್ದೇಶದಿಂ ತನ್ನ ಪಳಿಹತಂ ಸಿಂಗರಸನಂ ಕರೆದು (ಎಇ. XVIII, ೧೯೧-೬; 1104); ಮೊದಲ ಪತ್ಥಳಿಯ ಪಳಿಹತ ಮಹಾದೇವಣ್ಣನು (ಎಇ. XIII, ೩೨೨-೫೫; 1126) ೨. ಪ್ರತಿನಿಧಿಗೆ ಸಲ್ಲುವ ಸುಂಕ: ಶ್ರೀಕರಣಗಳು ಪಳಿಹತವುಂ ಬಿಟ್ಟಿವಾಗಿ ಪ್ರತಿವರ್ಷಂ ಸಲ್ವಂತಾಗಿ ಬಿಟ್ಟ ಸ್ಥಿತಿ (ಮೈಆರಿ. ೧೯೪೦, ೧-೭೫; ಸು. 1300). **ಪಳಿಹತ್ತ:** ೧. "ಪಳಿಹತ್ತ (ಪ್ರತಿಹತ್ತ)-ಪ್ರತಿಹಸ್ತ = ಪ್ರತಿನಿಧಿ" (ಶಬ್ದಕೋ. ೭೫); ಅವನನ್ನು ತನ್ನ ಪಳಿಹತ್ತ ಮಾಡಿ (ಮಂತ್ರಶ. ೧೨-೮). **ಪೞಿಯತ:** ೧. ಪೞಿ . . . ದೇವಾಂಗಮೆಂಬ ವಸನಂಗಳನೇಂ ಗೞಿಯಿಸುವವೊ ಮುಡಿವಳ್ಳನ ಪೞಿಯತನನೆ ಪೋಲ್ತು ವಿಶದವಸನಾಂಗಕುಜಂ (ಆದಿಪು. ೫-೩೪). **ಪೞಿಯತ್ತ:** ೧. "ಪೞಿಯತ್ತ[ಪಾಠಾಂ. ಪೞಿಹತ್ತ]ಮೆಂದು ಪ್ರತಿಹಸ್ತಂ" (ಕಶಸಾ. ೭೩-೬೫೭). **ಫಳಿಹತ:** ೧. ಅವರ ಫಳಿಹತ ಪಾಕಣ್ಣನು (ಎಕ. XI, ದಾವಣ. ೧೪೧-೩೧; 1065). [<ಸಂ. ಪ್ರತಿಹಸ್ತ]

**ಪೞು$_1$** 'ಪೞುವ' ನೋ.

**ಪೞು$_2$** (ನಾ). ಮಿತಿ; ಮೇರೆ; ಎಲ್ಲೆ: 'ಪೞುಗೞಿ' ಪರಾ.
[ದೇ.॥ ತಮಿ. ಪೞು = ಚೌಕಟ್ಟು]

**ಪೞು$_3$** 'ಪೞಿ$_4$' ನೋ.

**ಪೞುಗೞಿ** (ಕ್ರಿ). ಮೇರೆ ಮೀರು; ಅತಿಶಯಿಸು: ವಿಚಾರಕ್ಕೆ ಪವಣ್ಗೆಳೆದ ಗುಣದಿಂ ಕರಂ ಪೞುಗೞಿದುದು ದಯೆ (ಶಾಂತಿಪು. ೧೦-೯೯); ಜಾನಕಿಯನುೞಿ ಸೆೞಿವಿಡಿದು ಬರುತ್ತು ಮಾಕೆಯ ಪೞು[ಪಾಠಾಂ. ೞಿ]ಗೞಿದ ಗಾಡಿಯಂ ನೋಡಿ (ಪಂರಾಮಾ. ೯-೧೬೦ ವ); ಅೞಲಿರದ ಗ್ರಹಾತನ ವಿಯೋಗದೊಳಾಗೆ ಮನಕ್ಕೆ ಮೊಕ್ಕಳಂ ಪೞುಗೞಿದಿರ್ದ ತನ್ನ ಸಿರಿಯಂ ಮರುಭೂತಿ ಬಿಸುಟ್ಟು (ಪಾರ್ಶ್ವಪು. ೪-೫೦)
[ಪೞು$_2$ + ಕೞಿ$_1$]

**ಪೞುವ**, ಪಳವು, ಪಳು, ಪಳುವ, ಪಳುವು, ಪೞು$_1$, ಪೞುವು, ಹಳವು$_1$, ಹಳಿವು$_2$, ಹಳು$_1$, ಹಳುವ, ಹಳುವು (ನಾ). ೧. ಕಾಡು; ಅರಣ್ಯ: ನಿಮಗಿನ್ನುಮ್ಮಳಿಕೆವೇಡ ಪೞುವದೊಳ್ (ನೇಮಿಪು. ೧೦-೪೪). 'ಪೞುವಗಿಚ್ಚು' ಪರಾ. **ಪಳವು:** ೧. ನೈರಿತ್ಯದೊಳು ಬಿದಿರ ಪಳವುಂ ಪಲ್ಮಕುಡಿವುಂ (ಸೌಇಇ. IX-i, ೧೨೧-೪೬; 1057). **ಪಳು:** ೧. "ಪಳುವೆನೆ ಕಾಡು" (ಕಶರ. ೫೮); ಕೇಡಳುರ್ಕೆಯ ಪಳುವನೇಂ ಪಳಿಯೆ ತಪ್ಪೆ (ಕಾಲೂರ. ೪೯-೭೨). **ಪಳುವ:** ೧. ಈ ದಟ್ಟಪಳುವದಲಿ ಮುಕುಂದನಂ ಕರೆವರಾರ್? (ಚಂದ್ರಸ. ೩೬-೧೧). **ಪಳುವು:** ೧. ಪುರಹರಂ ಬ್ರಹ್ಮಾಂಡಕೊಡೆಯನಾದೊಡೆ ದಿಗಂಬರನಾಗಿ ಪಳುವಿನೊಳ್ ತಿರುಗಿದನದೇತರ್ಕೆ (ಅರಾಜ. ೩-೧೧-೪); ಕೋಪದಿಂದ ಪಳುವಿನೊಳಿಂತಿರಿಸಿ ಪೋದಂ (ಕಾಮಕ. ೨-೩೫). **ಪೞು$_1$:** ೧. "ಪೞುವೆಂದುಂ, ಬಿಂಜವೆಂದುಂ ಅಡವಿ" (ಕಶಸಾ. ೫೦-೮೧); ಈ ಪೞುವಿನೊಳಿನ್ನರಸನನಿಂತು ಬಿದಿಯೆ ತಂದಿಕ್ಕುವುದೇ (ಪಂಪಭಾ. ೨-೨೨); ಮಗಳೇ ನೀನಿಲ್ಲದೆ ಮನೆ ಬಗೆವಂದೆನಗಟ್ಟಿ ತಿಂಬ ಪೞುವಾದುದು (ಧರ್ಮಾಮೃ. ೩-೨೪೩); ಬಗೆಗೆ ಸುಖದುಃಖಮುಂ . . . ಪೞು ಪೊೞಲುಂ ಪಗೆ ಕೆಳೆಯುಂ ಸಮನೆನೆಯಾ ಯೋಗಿಗೆ ಸಮತೆ ಸಮಂತು ಸಮನಿಸಿತ್ತು ಸಮಗ್ರಂ (ಪುಷ್ಪಪು. ೧೪-೧೭). **ಪೞುವು:** ೧. ಪೞುವಂ ಕಡಿದನೊಕ್ಕಲಿಗಂ (ಶಬ್ದಾನು. ೨೦೪ ಪ್ರಯೋ); ಕಿಚ್ಚಿಂ ಗಾಳಿಯುಮೊಂದೇ ಪೆರ್ಚುಗೆಯೊಳ್ ಬೆರಸಿ ಪೞುವಿನೊಣಗಿಡಮರನಂ ಚುರ್ಚುವವೊಲ್ (ಚಿಕವಿ. ೨-೪೬). **ಹಳವು$_1$:** ೧. ಬಟಾಬಯಲು ಇದು, ಹೋ ಅಖಂಡ ತಾನರ್ಥಹೀನ ಹಳವು (ಅರಳು. ೧೯೫-೩); ಅಡವಿ, ಹಳವು, ಗಡ್ಡೆ (ಕಂನುಹು. ೮೭). **ಹಳಿವು$_2$:** ೧. ಆವ ಹೊಲದಲು ಹಳಿವ ಕಡಿದುತ್ತ ಹದಂ ಬೇಡೆಂದೆನಲಾಗದು (ಎಕ. XII, ತಿಪಟೂ. ೩-೧೭; 1263). **ಹಳು$_1$:** ೧. ಮಹಾಅರಣ್ಯವಾಗಿಯಿದ ಹಳುವನೂ (ಎಕ. VII, ತಿಪಮೊ. ೩೦-೩೧; 1413 ?); ಹೊಳೆಯ ಮಂಟಪದೊಳಗೆ ಕುಳಿತು ಹಳೆಯ ನೆನಪನು ಮನಕೆ ತಂದೆನು: ಹಳುವ ತುಂಬಿದ ಗೋಳ ಹೊಳಲನು, ಹರಿದ ಕಂಬನಿ ಕಾಲ್ವೆಯ (ಮಾಂದಳಿ. ೨೬-೭). ೨. ಒಂದು ಬಗೆಯ ಕಾಡುಗಿಡ: ವರ್ಷ ವರ್ಷವೂ ಹಳು ಹುಟ್ಟಿ ಬೆಳೆದು ಒಣಗಿ ಹೊದಿಸಿದ್ದ ಹೆಂಚುಗಳಲ್ಲಿ

ಅರೆಪಾಲು ಮುಚ್ಚಿ ಹೋಗಿದ್ದವು (ಮಲಿಸು. ೨೭). **ಹಳುವ:** **೧.** ಹಳುವದಲಿ ಗಿರಿಶಿಖರದಲಿ ದಾವಾಗ್ನಿಮಧ್ಯದಲಿ ಸಿಲುಕಿದಡೆ ಬಿಡಿಸುವವಲೇ ಪ್ರತಿಫಲಿತ ಪೂರ್ವಾರ್ಜಿತಪುಣ್ಯಾವಳಿಗಳೆಂಬುದು ತನ್ನೊಳಾದುದು (ಕುಮಾರ್ಯಾಗ. ೪-೨೫); ನಾನಾಹಳುವವನು ಬಳಸಿದರು ಬಂದರು (ತೊರಂರಾ. ೩-೧-೧೨); ರಘುವರಂ ಸೀತೆಯುಂ ಹಳುವಕಟ್ಟದ ಬಳಿಕ ಪಿರಿದು ಕಕ್ಕುಲತೆಯುಂ ತಳೆದು . . . ಕುಳ್ಳಿರ್ದನಂ (ಶೇಷರಾ. ೫-೧); ಅವನಿರುವ ಹಳುವ ನಗರೋಪವನನಂದನ (ಯಶೋಧ. ೫). **ಹಳುವು:** **೧.** ಪಾಂಡವರು ಹಳುವಿನೊಳಗೆ ಹನ್ನೆರಡುವರುಷವಿರ್ದು ಬಳಿಕೆಲ್ಲಿಗೆಯ್ದಿದರು (ನೇಮಿಸಂ. ೨೫-೧೨೪); ಈ ದ್ವೀಪದ ಪೂರ್ವಭಾಗದಲ್ಲಿ . . . ದಟ್ಟವಾದ ಹಳುವುಗಳುಂಟು (ಮುಂಜಯಿ. ೪-೨೦೧); ಹಳುವು ಅಡೆ ಕರೆವುದು (ಮೊಂದಳಿ. ೪೫-೩). **[ದೇ.॥ ತವಿ. ಮಲ. ಪೞುವ]**

**ಪೞುವಗಿಚ್ಚು** (ನಾ). ಕಾಡುಗಿಚ್ಚು; ದಾವಾಗ್ನಿ: "ಪೞುವ ಗಿಚ್ಚು ಕಾಟ್ಕಿಚ್ಚೆನಿಪ್ಪುದು" (ಚತುನಿ. ೧೧೧). [ಪೞುವ + ಕಿಚ್ಚು]

**ಪೞುವಗೆ** (ನಾ). (ಆಲಂ) ಕಾಡುಬುದ್ಧಿ; ಕೆಟ್ಟಮನಸ್ಸು; ದುರ್ಬುದ್ಧಿ: ಆಕೆಯುವನ ಮನದ ಪೞುವಗೆಯನೞಿ[ಯು]ದಂತೆ ಗೆಯ್ವೆನೆಂದು (ಪಂಪಭಾ. ೮-೬೩ ವ); ಆನರಸುಗೆಯ್ವ ಪೞುವಗೆಯನದಂ ಪರಿಹರಿಸಿದೆಂ (ಪಂಪಭಾ. ೧೨-೧೨೯). [ಪೞು$_1$(<ಪೞುವ) + ಬಗೆ$_2$]

**ಪೞುವಡು** (ಕ್ರಿ). ಕಾಡನ್ನು ಸೇರು; ಅರಣ್ಯವನ್ನು ಹೊಗು: ದಶರಥಂ ತಪಂಬಟ್ಟುದುಮಂ ರಾಮಲಕ್ಷ್ಮಣರ್ ಪೞು[ಪಾಠಾಂ. ೞು] ವಟ್ಟುದುಮಂ ಚರಪಚನದಿನಱಿದು (ಪಂರಾಮಾ. ೮-೫ ವ).
[ಪೞು$_1$(<ಪೞುವ) + ಪಡು$_1$]

**ಪೞುವಟಿಲ್** (ನಾ). ನಿರ್ಜನಪ್ರದೇಶದಲ್ಲಿ ಅಳುವ ಅಳು; ಅರಣ್ಯರೋದನ: ಆನೊರ್ವಳೆ ಬಡವೆ ಬಱುವೆಯಾದೆಂ. ಉಃ! ಪೋಕೆ ಪೞುವಟಿಲಿನೇಂ? (ರಾಮಾಶ್ವ. ೪೦-೬).
[ಪೞು$_1$(<ಪೞುವ) + ಅಟಿಲ್$_2$]

**ಪೞುವಟ್ಟೆ** (ನಾ). ಕಾಡುದಾರಿ; ಅರಣ್ಯಮಾರ್ಗ: ಪೞುವಟ್ಟೆಯುಂ ತಗುಳ್ದಳುರ್ವ ಬೇಗೆವೊಲೆಚ್ಚ ಶರಾಳಿಗಳ್ ಛಟಿಲ್‌ಛಟಿಲೆನೆ ಪಾಯೆ (ಪಂಪಭಾ. ೮-೧೦೫). [ಪೞು$_1$(<ಪೞುವ) + ಬಟ್ಟೆ$_3$]

**ಪೞುವು** 'ಪೞುವ' ನೋ.

**ಪೞ್** 'ಪೞ$_1$' ನೋ.

**ಪೞ್ನರೆ** (ನಾ). (ಆಲಂ) ಹಳೆಯದು; ಪ್ರಾಚೀನವಾದುದು; ಪುರಾತನವಾದುದು: ಮಗಳುಮನ್ ಪೞ್ನರೆಯ ವಿಧಿ ಬಡಿದು ನರಲಿಸಿತ್ತು (ಆಂತಿಗೊ. ೪೪-೯೧೧). [ಪೞ್(<ಪೞದು) + ನರೆ$_2$]

**ಪೞ್ನವಿರ್** 'ಪೞನವಿರ್' ನೋ.

**ಪೞ್ಯ** 'ಪೞದು' ಪರಾ.

**ಪೞಯುಪ್ಪು** (ನಾ). ಬಹಳದಿನಗಳಿಂದ ಶೇಖರಿಸಿ ಹಳೆಯದಾದ ಉಪ್ಪು: "ವಸುವೆನಲ್ ಪೞ್ಯುಪ್ಪೆನಿಕ್ಕು" (ಮಂಗರಾ. ೪೩-೪೧). [ಪೞ್(<ಪೞದು) + ಉಪ್ಪು$_1$]

**ಪೞ್ಯೆಲೆ** (ನಾ). ಹಳೆಯ ಎಲೆ; ಹಣ್ಣೆಲೆ: ಪೞ್ಯೆಲೆ ದೋಷತ್ರಯಮಂ ಕಳೆವವೊಲೆಳೆಯೆಲೆ ಕಱಿಲ್ಲುವುದೆ (ಉದ್ಭಟ. ೧೦-೭೩).
[ಪೞ್(<ಪೞದು) + ಎಲೆ$_1$]

**ಪೞ್ಯೊಲ್ಮೆ** (ನಾ). ಹಳೆಯ ಪ್ರೀತಿ; ಹಿಂದಿನ ಒಲುಮೆ: ಪೞ್ಯೊಲ್ಮೆಯನ್ ಬಿಸುಟನ್ (ಅಭ್ಯತ್ತ. ೩೨-೬೩೫).
[ಪೞ್(<ಪೞದು$_1$) + ಒಲ್ಮೆ]

**ಪೞ್ವುಣ್**, ಹಳೆಹುಣ್ಣು (ನಾ). ಹಳೆಯ ಗಾಯ: ಪವಿಯ ಮುಖಘಾತದಿಂ ಜೋಣವೋದ ಪೞ್ವುಣ್ಗೆ ಜಿಗುಟೆಯಂ ಬಿಟ್ಟವೊಲ್ (ಸೂಕ್ತಿಸು. ೩-೮೦); ಪಲದೆವಸಕ್ಕೆಮುಗೀಗಳ್ ಕಲಹಂ ದೊರೆಕೊಂಡುದಿಲ್ಲಿ ಮೆೞ್ದಪವಿಂ ದೋರ್ವಲದಳವನೆಂದು ಪೞ್ವು[ಪಾಠಾಂ. ೞ್ವು]ಣ್ಗಲೆಯೊಡೆವಿನಮುರ್ವಿ ಕೊರ್ವಿದರ್ ಕಡುಗಲಿಗಳ್ (ಚಂದ್ರಪ್ರ. ೧೦-೬೨). **ಹಳೆಹುಣ್ಣು:** ಹಳೆಹುಣ್ಣಿಗೆ:—ಬೇವಿನ ಸೊಪ್ಪು, ಕಲುವು ಇವಂ ಅರೆದು ಬಿಸಿಮಾಡಿ ಕಟ್ಟಲು ಗುಣ (ವಿವೈವಿ. ೭೭).
[ಪೞ್(<ಪೞದು) + ಪುಣ್]

**ಪೞ್ವೆಣ್** (ನಾ). ಹಿರಿಯಳಾದ ಹೆಣ್ಣು; ಅನುಭವಸ್ಥಳಾದ ಹೆಂಗಸು: ಪೞ್ವೆಣ್ಣಸಗುವ ತೆಱದಿನೆಸಗಲಾರ್ಪಳೆ ಪೊಸವೆಣ್ (ಉದ್ಭಟ. ೧೦-೭೪). [ಪೞ್(<ಪೞದು) + ಪೆಣ್]

**ಪೞ್ಕು** (ಕ್ರಿ). (?): ಪದಪಾಕಕ್ಕೊಳಗಾಗೆ ಬಾಗಿಸಿದ ರಾಜಾನ್ನಾನ್ನದೊಳ್ ಘಾಸಿಯಾಗದುದಂ ಸಜ್ಜುಕವಾಲ ಘಟ್ಟವೊಸರಂ ತಂದಿಕ್ಕಿ ಪೞ್ಕಿತ್ತಿ ನುಗ್ಗಿದ ಕರ್ಗಾಯ್ . . . ಕಟ್ಟಿದುದಂ ಕಾಮಿನಿ ತಂದು ನೀಡೆ ಕಲಸುಂಗೂೞಿಂ ಕರಂ ರಾಗದಿಂ (ಮುಹಾನೇ. ೧೬-೪೯). [?]

**ಪೞ್ಕೆ**, ಪಕ್ಕೆ$_1$, ಪಳ್ಕೆ, ಹಕ್ಕೆ (ನಾ). **೧.** ಹಾಸುಗೆ; ಶಯ್ಯೆ: "ಪೞ್ಕೆ-ಶಯನಂ, ಶಯನಸ್ಥಾನಂ" (ಶಮದ. ಪರಿ. ೧); ಈ ತಪೋಧನಂಗೆ ನಿವಾತಮಪ್ಪೆಡೆಯೊಳ್ ಪೞ್ಕೆಗೆಡೆಮಾಡಿ ಕುಡೆಂದು ಪೇೞ್ದು (ಪಂಚತಂ. ೭೩-೧೧); ನೀಹಾರಕರನಲಸಿ ಪೞ್ಕೆ[ಪಾಠಾಂ. ಕ್ಕೆ]ಗೆ ಸಾರಲೊಡಂ ಮುಗುೞ್ ಮುರ್ಬಿ ಪರ್ಬಿತ್ತಾಗಳ್ (ಲೀಲಾವ. ೩-೯); ಮೇಲ್ವಾಯ್ದೀಂ ಪೞ್ಕೆಗುಯ್ದು ತೞ್ಕೈಸುವೆನೋ (ಚಿಕವಿ. ೬-೨೧೩). **೨.** ಮಲಗುವ ಸ್ಥಳ; ವಿಶ್ರಮಿಸುವ ಜಾಗ: "ಪೞ್ಕೆಯೆನಲ್ ಶಯನ ಸ್ಥಲಾಹ್ವಯಂ" (ಕರ್ಣಾಸಿ. ೭೪); "ಶಯನಮುಂ, ಶಯನದ ಉ[ಎ]ಡೆಯೊಳುಂ ಪೞ್ಕೆ" (ಸಂಜೀವ. ೧೫). **೩.** ನೆಲೆ; ಆಶ್ರಯಸ್ಥಾನ: ಕಕ್ಕಿನ ಪೞ್ಕೆ ಕಾಳಿಯ ತವರ್ ಕವಡಿಂಗೆಡೆ ... ಬೆಲೆವೆಣ್ಗಳ ಬೀದಿಯದೇಂ ಪೊದೞ್ದುದೋ (ಚಿಕವಿ. ೬-೭೪). **೪.** ಹಕ್ಕಿಯ ಗೂಡು: ಬಱಿಯ ಗೂಡೊಳಗೆ ಮಱಿ ಕವರ್ದ ಪೞ್ಕೆಯನ್ ಕಂಡೊಡನೆ ಚೀಱ್ವಂತೆ ಚೀಱ್ದಳ್ (ಆಂತಿಗೊ. ೨೦-೪೧೨). **ಪಕ್ಕೆ$_1$:** **೧.** "ಪಕ್ಕೆಯೆನೆ ಶಯನಮುಕ್ಕುಂ" (ಕವಿಕಂ. ೧೪೬); ಉದಯಾದ್ರಿಯ ಸೆಜ್ಜರಕ್ಕೆ ಪಕ್ಕೆಗೆ ಬರುತಿರ್ಪ ದೇವಗಜದಂಗಮರೀಚಿಯ ಭಂಗಿವೆತ್ತಿರಲ್ ಬಗೆಗೊಳಿಸಿತ್ತು ಚಂದನರಸಂದೊಡೆದಂದದೆ ಪೂರ್ವದಿಙ್ಮುಖಂ (ಜಗವಿ. ೧೬-೧೦೩); ತುಱುಗಿದ ತನುತಾಪದಿಂದೆ ಪಕ್ಕೆಯ ತಳಿರ್ ತಱಗೆಲೆಯಾಗಿ ತೋಱುಸಲು (ಮೋಹಕ. ೨೮-೧೬). **೨.** "ಶಯ್ಯೆ ಮನೆಗಳೊಳ್ ಪಕ್ಕೆ" (ಶಬ್ದಮಂ. ೮೦). **೩.** ಇದೆ ಸರ್ವಮೃಗಪಕ್ಷಿಗಳ ಪಕ್ಕೆಯೆಂದು . . . ಬೇಂಟೆಯಾಡುತ್ತಿರ್ದಂ (ಭಾಪಚಿಂ. ೫-೧೦); ವಿಪುಳಧರ್ಮವಾಸ ವಿಪುಳಪುಣ್ಯದ ಪಕ್ಕೆ (ತ್ರಿಭುತಿ. ೨-೧೧). **೪.** ಅಳ್ಕಿಟ್ಟೊಳೆ ಪಕ್ಕೆಗೆ ಸಾರ್ವ ವಿಹಂಗವೀಥಿ ಚೇತರಿಸುವ ಮಾರುತಂ ನಸುಕಲಂಕುವ ಸಾಂಧ್ಯಮಯೂಖಲೇಖೆಗಳ್ (೧೨ಕ. ೪-೬೬); ತಾಳಿತು ಕೆಂಪನಪರದಿಕ್ಕು ಪಕ್ಷಿಜಾಲ ಪಕ್ಕೆಗೆ ಸಾರಿದವು (ಜೀವಂಸಾಂ. ೫-೨); ಪಜ್ಜಳಿಸೆ ಪಡುಗೆಂಪು ಪಕ್ಕಿ ಪಕ್ಕೆಗೆ ಸಾರೆ (ಸಮ್ಯಕ್ತ್ವಾ. ೧-೩೭). **೫.** ಮೃಗಗಳ ವಾಸಸ್ಥಾನ; ಪ್ರಾಣಿಗಳ ಇಕ್ಕೆ: ಮೃಗಮುಂ ಗಾಳಿಯುನಿರ್ಕೆಯುಂ ಪಕ್ಕೆಯುಂ . . . ಎಲ್ಲಂದದಿಂ ಬಗೆದಾಗಳ್ (ಪಂಪಭಾ. ೫-೪೩). **ಪಳ್ಕೆ:** **೧.** ಕಸವರದ ತೃಷೆಯಿಂದೆ ಚಂಡಾಲರಾದೊಡಂ ಮಿಸುಪ ಪಳ್ಕೆಗೆ ಕರೆವರವಿಚಾರಿಗಳ್ (ಅರಾಚ. ೨-೫-೪೦). 'ಪಳ್ಕೆವನೆ' ಪರಾ. **ಹಕ್ಕೆ:** **೧.** ತೊಡುವುದಾದೊಡೆ ಭೂತಿ ಹಕ್ಕೆಯ[ಪಾಠಾಂ. ಮಲಗುವ] ಹಾಸ ನೋಡಿದೊಡೆ ಕಡವಸಗಳಿಹ ವಾಸವಾದೊಡೆಯಡವಿಯು (ಪ್ರಭುಲೀ. ೨೦-೩೦). **೩.** "ಇಕ್ಕೆ . . . ಹಕ್ಕೆ, ಗಡಿ, ಗರುಡಿ, ಆಗರಂ—ಈ ೧೫ ಆಶ್ರಯಕ್ಕೆ ಪೆಸರ್" (ಕಶಸಾ. ೫೯-೨೯೦); ಹರನ ಹರುಷದ ಹಕ್ಕೆ ಪರಮೇಶ್ವರನ ಪರಿಣಾಮದ ಪಸರ

(ಪ್ರಭುಲಿ. ೨-೨೩) ; ಧುರ್ನಿರ್ಘಾತಿಯ ಹಕ್ಕೆ ಹಾಸ್ಯದ ಹೊಲಂ . . . ಗಣಿಕಾಪ್ರತೋಳಿ ತಾಂ (ಹವಿಪ್ಕಾರ. ೨-೯೨) ; ಹದಿರ್ ಚದುರುಗಳ ಹಕ್ಕೆ ಮೋಹನದಿಕ್ಕೆಯೆನಿಪ ವೇಶ್ಯಾಶ್ರಯಂ ಮುಂದೆ ಕಡುಚೆಲ್ವಾದುದು (ಚೆಬಪು. ೧೧-೩೭). ೪. ಹಕ್ಕೆಯಿಂದಗಲ್ದ ಚಕ್ರಂ ಹೂವನಬಿಸುವಳಿ . . . ನಲಿವ ಜಾರೆಯರು ಸಂಜೆಯೊಳು ರಂಜಿಸಿದರು (ಹಚಕಾ. ೩-೭೭). ೫. ಕೇಳಿದನು ಮೃಗದಿಕ್ಕೆ ಹಕ್ಕೆಯು ಗಾಳಿಯನು (ಕುಪ್ಯಾಳ. ೪-೧೨) ; ಹಕ್ಕೆಗೆಯ್ದಿದವು ಹಲ ಮಿಗಗಳ್ (ಸಮ್ಯಕೌ. ೧೦-೨೪) ; ಇತ್ತಲಿದೆ ಹುಲ್ಲೆಗಳ ಹಕ್ಕೆ ; ಮರಿಗಳಿಕ್ಕೆ (ಚಂದ್ರಸ. ೨೮-೧೦) ; ಮೃಗಗಳನ್ನು ಬೆಂಬತ್ತಿ ಅವುಗಳ ಹಕ್ಕೆಗಳನ್ನು ಕಂಡುಹಿಡಿದೆನು (ಮಣಿಪಿ. ೨೨). ೬. ದನಕರುಗಳನ್ನು ಕಟ್ಟುವ ಸ್ಥಳ ; ಕೊಟ್ಟಿಗೆ ; ದೊಡ್ಡಿ : "ಹಕ್ಕೆಯೆನಲ್ ಮೃಗಾಲಯದೊಳಪ್ಪುದು" (ಕರ್ಣಾಸಿ. ೫೦) ; ಒಕ್ಕಲಿಗನ ಮನೆಯಲ್ಲಿ ದನದ ಹಕ್ಕೆಯೊಳಗೆ . . . ಅಡಗಿಕೊಂಡಿತು (ಮುಂಬಯಿ. ೪-೪೨) ; ಹಕ್ಕೆಯನ್ನು ಬಳಿದು ಹಸ ಮಾಡಿದಳು (ಎರಸಿ. ೫೪).

[<ಪಡು₁./ತುಳು. ಪರ್ಕೆ ; ತೆಲು. ಪಕ್ಕ]

**ಪಟಿಕ್ಕಿಗೆಡು** (ಕ್ರಿ). ಆಶ್ರಯ ತಪ್ಪು ; ನೆಲೆಯಿಲ್ಲದಾಗು : ಹಗೆವೊಯ್ದಿರಲೆಯು, ಪಟಿಕ್ಕಿಗೆಟ್ಟ ನರಿಯು . . . ಗಜಬಜದ ಸಂಚಾರಂ ಬಲ್ಪಿರಿದಾಯ್ತು (ರಾಮಾಶ್ವ. ೮೪-೮). [ಪಟಿಕ್ಕಿ+ಕೆಡು₁]

**ಪಟಿಕ್ಕಿಗೆಯ್** (ಕ್ರಿ). ಮಲಗು ; ವಿಶ್ರಮಿಸು : ನಿನ್ನ ಕುಚಮಧ್ಯ ದೊಳೊಯ್ಯನೆ ಪಟಿಕ್ಕಿಗೆಯ್ದು ನಾನೆಳಸಿ ಸುಖಂಗಳಂ ಸವಿವ ಕಾಲಮು ದೆಂದೆನಗಪ್ಪುದಂಗನೇ (ಕಾವ್ಯಸಾ. ೫೭೫). [ಪಟಿಕ್ಕಿ+ಕೆಯ್₁]

**ಪಟಿಕ್ಕಿತಟಿಕ್ಕ್ಯಸು ?** (ಕ್ರಿ). ಗಾಢವಾಗಿ ಅಪ್ಪು ; ಬರಸೆಳೆ(?) : "ಪಟಿಕ್ಕಿತಟಿಕ್ಕ್ಯಸಿದಂ= ತಡಕಯ್ಯಂ ಮಾಡಿದಂ" (ಶಮದ. ಪರಿ. ೧) ; ಪಟಿಕ್ಕಿತಟಿಕ್ಕ್ಯಸಿದನೆಂಬಲ್ಲಿ ತಡಕೈಯಂ ಮಾಡಿದನೆಂಬರ್ಥಂ (ಶಮದ. ೧೯ ಪ್ರಯೋ). [ಪಟಿಕ್ಕಿ?+ತಟಿಕ್ಕ್ಯಸು]

**ಪಟಿಕ್ಕಿವನೆ,** ಪಕ್ಕೆವನೆ, ಪಳ್ಕೆವನೆ (ನಾ). ಮಲಗುವ ಮನೆ ; ಶಯ್ಯಾಗೃಹ : "ಸೆಜ್ಜೆವನೆ, ಪಟಿಕ್ಕಿವನೆ—ಈ ೨ ಶಯ್ಯಾಗೃಹಂ" (ಕಶಸಾ. ೬೦-೩೧೭) ; ಬೆಳಗಪ್ಪ ಸಮಯದಯೆಟಿಕ್ಕಿದ್ದಯ್ಯನೆ ಪಟಿಕ್ಕಿವನೆಯಂ ಪೊಱಮಟ್ಟು (ಉದ್ಭಟ. ೧೦-೧೩೭ ಪ). **ಪಕ್ಕೆವನೆ :** "ಪಕ್ಕೆವನೆಯೆನ್ನಲದು ತಾನಕ್ಕು ಶಯ್ಯಾಗೃಹಕ್ಕೆ ನಾಮಂ" (ಕವಿಕಂ. ೧೪೬); ಪಕ್ಕೆವನೆಗಾಗಿ ನಡೆತಂದಳು ರಾಯನ ರಾಣಿ (ಸೊಬಸೋ. ೨-೮) ; ಪಕ್ಕೆವನೆಗೆ ನಡೆತಂದಳಂಜನೆದೇವಿ (ಅಂಜಚ. ೮-೮೧). **ಪಳ್ಕೆವನೆ :** ಕೈವಿಡಿದವನಂ ಪಳ್ಕೆವನೆಗವಳ್ಕೊಂಡೊಯ್ದಳ್ (ವೀರವಿ. ೬-೬೭).

[ಪಟಿಕ್ಕಿ+ಮನೆ]

**ಪಟಿಕ್ಕಿವೆಟ್ಟು,** ಪಕ್ಕೆವೆಟ್ಟ, ಪಕ್ಕೆವೆಟ್ಟು (ನಾ). ಸೂರ್ಯನು ವಿಶ್ರಮಿಸುವ ಬೆಟ್ಟ ; ಪಶ್ಚಿಮಬೆಟ್ಟ ; ಪಡುವೆಟ್ಟ : ಪೊಂದಿಸಿಲಾದುದು ಪೊರ್ದೆ ಪಟಿಕ್ಕಿವೆಟ್ಟಮ[ಪಾಠಾಂ. ಪಕ್ಷವೇದಿಯ]ನರ್ಕಂ (ಪಂಪಭಾಮಾ. ೧೧-೧೭೭). **ಪಕ್ಕೆವೆಟ್ಟ :** ನಭೋಲಕ್ಷ್ಮಿ ಸಕಳಪ್ರಕಾಶಮಂ ಮೊಟ್ಟಗಟ್ಟ ಪಕ್ಕೆವೆಟ್ಟದಿಟ್ಟಡೆಗೆ ಕಳಿಪಿದ ಕಟ್ಟೀವದ ಪೊಟ್ಟಳಮಿದೆಂಬಿನಂ ದ್ಯುಮಣಿ ಚರಮಾಚಳಶಿರೋಮಣಿಯಪ್ಪುದುಂ (ವರ್ಧಪು. ೬-೨೩ ಪ) ; ಚೆಂಗೊಡೆಯಂತಿರ್ದುವು ಪಕ್ಕೆವೆಟ್ಟದೆಡೆಯೊಳ್ ನೀಹಾರರುಙ್ಮಂಡಲಂ (ಸೂಕ್ತಿಸು. ೯-೧೨). **ಪಕ್ಕೆವೆಟ್ಟು :** ಅಂತು ಕಾದಿ ಕಡೆಗಾಲದ ಬಚಿಸಿಡಿಲ ಬಳಗದೊಳ್ ತೊಡರ್ದ ಪಕ್ಕೆವೆಟ್ಟುಗಳ ತಟಿಕ್ಕೆಯಂತೆಯುಂ (ಚಂದ್ರಪು. ೧೦-೮೭ ಪ). [ಪಟಿಕ್ಕಿ+ಬೆಟ್ಟ]

**ಪಟಿಕ್ಕಿಸಾರ್** (ಕ್ರಿ). ಹಾಸುಗೆಯನ್ನು ಸೇರು ; ಮಲಗು : ನಿದ್ರಾತುರನಾಗಿ ಪಟಿಕ್ಕಿ[ಪಾಠಾಂ. ಕ್ಕೆ]ಸಾರ್ವಂತಿರೆ ಸಾರ್ದಂ ಚಂದ್ರನಪ ವೇಲಾವನಮಂ (ಕಾದಂಬ. ೧೬೧). [ಪಟಿಕ್ಕಿ+ಸಾರ್]

**ಪಟಿಗ್ಗು,** ಹಟಿಗ್ಗು (ನಾ). ಹಣ್ಣಿಗೆ ಬಂದ ಕಾಯಿಗಳನ್ನು ಹೊಗೆ ಹಾಕಿ ಹಣ್ಣು ಮಾಡುವುದು,—ಅಡೆಹಾಕುವುದು,—ಮಾಗಿಸುವುದು : (ಕ). **ಹಟಿಗ್ಗು :** "ಹಟ್ಗು=ದೂವೆಯೊಳ್ ತಬಲಂ ಪೂಟ್ದ ಕ್ರಿಯೆ" (ಶಮದ. ಪರಿ. ೧). ℙ ಈ ಶಬ್ದರೂಪಗಳ ಬಗೆಗೆ ಸಿದ್ಧವಾದ ಅಭಿಪ್ರಾಯವಿಲ್ಲ. [?]

△ **ಪಟಿಬ್ಬು** 'ಪರ್ಚು₁' ನೋ.

**ಪಟಿತ್ತಿ,** ಪತ್ತಿ₁, ಪರ್ತಿ, ಪಳ್ತಿ, ಹತ್ತಿ₁ (ನಾ). (ಬೀಜಸಹಿತವಾದ) ಅರಳೆ ; ಕಾರ್ಪಾಸ ; ತೂಲ : "ಪಿಚವ್ಯಃ, ಬಾದರಃ, ಕಾರ್ಪಾಸಃ— ಈ ೩ ಪಟಿತ್ತಿ (ಹತ್ತಿ)" (ಹಲಾಯು. ೩೪-೪೯) ; ಮಳವೆಗೆ ಪಟಿತ್ತಿ ಪದಿನಾಱು ಪಲಂ (ಎಇ. IX, ೨೨-೭ ; 800) ; ಬಂಡಿಗಳೊಳ್ ಪಟಿತ್ತಿ[ಪಾಠಾಂ. ತ್ರಿ]ಯುಂ ಧಾನ್ಯಮಂ ತೀವಿಕೊಂಡು ಪೊಟಲ್ಗೆ ಮಾಱಲೆಂದು ಪೋಪನ್ನೆಗಂ (ವಡ್ಡಾರಾ. ೭೬-೧೧) ; ಕಪ್ಪದಕ್ಕೆ ಪಟಿತ್ತಿಯುಂ ಬ್ರಹ್ಮಲಿಂಗಭಟರ್ಗೆ ಕೊಟ್ಟುದು (ಮೈಆರಿ. ೧೯೪೬, ೨೮-೧೯ ; 1032). **ಪತ್ತಿ₁ :** ಪತ್ತಿಯಂ ಕಿಚ್ಚು ತಗುಳ್ದಂತೆ (ಧರ್ಮಾಮೃ. ೨-೭೧) ; ನಾಡೆಯುಂ ನೂಲುಂ ಪತ್ತಿಯುಮಂ ಸಂಗ್ರಹಂಗೆಯ್ದು (ಬಂಪರಿ. ೪-೧೦ ಪ) ; ಪತ್ತಿಸುವನಜ್ಞಾನವಾರ್ಗದ ಪತ್ತಿಯಂ (ಶಂಕರದಾ. ೪-೩೧). **ಪರ್ತಿ :** ಒಕ್ಕಲು ಪಣಂ ಮೂಱು ಪರ್ತಿಯ ಮಳವೆ ಪನ್ನೆರಡು ಇನ್ನಿನಿತುಮಂ ವರಿಷಪ್ರತಿ ಬಿಟ್ಟರ್ (ಎಇ. XVI, ೩೩೧-೨೧ ; 1077). **ಪಳ್ತಿ :** ಮುಚಿವೊಕ್ಕ ಬಳಿಕೆ ಕಲ್ಮಷದುಱುವೆಂಬುದು ಪಳ್ತಿಯೊಟ್ಟಲಗ್ನಿಯ ತೆಱದಿಂತುಱಿ ಬಱಿದಪ್ಪುದು (ವಿಷ್ಣುಪು. ೧-೨-೧೭೫) ; ಕಿರ್ಚು ಪಳ್ತಿಯ ರಾಸಿಯಂ ದಹಿಸಿ ಬಿಡುವಂತೆ (ಭಾರತಾಂ. ೧-೪). **ಹತ್ತಿ₁ :** "ಹತ್ತಿ ಕಾರ್ಪಾಸಂ ಪಿಚವ್ಯಮಾ ಬಾದರಂ ಅರಳೆ ಪಿಚು ತೂಳಕಾಖ್ಯಂ" (ಮಂಗರಾ. ೩೮-೨೬) ; ಸಲುವುದು ಹತ್ತಿಯಡಕೆಯೆಲೆ (ಎಕ. VIII, ಸೊರಬ. ೩೨೮-೬೨ ; 1159) ; ಧರಣಿ ಹತ್ತಿಯ ಕುಯುನದಂದದಿ ವರಮುನಿಗೆ ತಾನಾಗೆ (ಕುಪ್ಯಾಳ. ೨೫-೨೪) ; ಎಡಗೆಡೆಗೆ ಹತ್ತಿಗಳ ಹೊಱಿಗಳ ಹೊಡಚಿದರಲೆಯ ಸುತ್ತಿದರು (ತೊರಭಾ. ೫-೮-೮) ; ಹತ್ತಿ ತೂಗುವಲ್ಲಿ ನೊಣಕ್ಕೆ ಉಪವಾಸ (ಗಾದೆ).

[ದೇ.॥ ತಮಿ. ಮಲ. ಪರುತ್ತಿ ; ತುಳು. ಕುಣ. ಕುವಿ. ಪರ್ತಿ : ತೆಲು. ಪತ್ತಿ, ಪ್ರತ್ತಿ ; ಕೊಡ. ಪರತಿ]

**ಪಟಿತ್ತಿಂಗಟ್** (ನಾ). (?) : ಒನ್ದಡಿ ಪಾನಿಯಿಂ ಏಟುಂ ಒನ್ನತ್ತಿ ದಿವಸಂ ಪಟಿತ್ತಿಂ ಗಟ್ ತಪುಸಿ ಮೂಱಿ ದಿವಸಂ ವೇಸನೆ ಈ ××× ರೆ ಉಟ್ಟದು (ಎಕ. III, ಮೈಸೂರು. ೫೫-೮ ; ಸು. 740). [?]

**ಪಟಿತ್ತಿಯಮುಟ್ಟಪುರ,** ಪತ್ತಿಯಮುತ್ತಉರ (ನಾ). ಒಂದು ಊರಿನ ಹೆಸರು ; ℙ ಈಗಿನ ಧಾರವಾಡ ಜಿಲ್ಲೆಯ ಹತ್ತಿಮತ್ತೂರು : ಪಟಿತ್ತಿಯಮುಟ್ಟಪುರದ ನೂಱ್ಪ್ಪರ್ದಿವ್ವೊರುವಿಟ್ಟು ದಯೆಗೆಯ್ಯೆ ಕಚ್ಚವರ ಕಾದಮ್ಮನ ಪುತಪುರಂ ಬಿಡಿಸಿದೊಂ (ಇಅ. XII, ೨೨೫-೮ ; 916). **ಪತ್ತಿಯಮುತ್ತಉರ :** ಪತ್ತಿಯಮುತ್ತಉರದ ದಂಡಿನೊಳು ಕಿಱಿಯ ಸಿರಿಉರದ ಸಾಯಿರಮತ್ತರ್ ಪೊಲನಂ (ಎಇ. III, ೨೩೪-೪೫ ; ಸು. 1070). [ಪಟಿತ್ತಿ+?+ಪುರ₂]

**ಪಟ್ದಿಲ** 'ಪರ್ದಿಲ' ನೋ.

**ಪಟ್ಟಿಪಟಿ** 'ಪಟಿಪಟಿ' ನೋ.

**ಪಟ್ಟಿಪಟನೆ** 'ಪಟಿಪಟನೆ' ನೋ.

ಕರ್ನಾಟಕ ಸರ್ಕಾರದ ಉದಾರ ಧನಸಹಾಯದಿಂದ ಕನ್ನಡಿಗರ ಬಹುದಿನಗಳ ಬೇಡಿಕೆಯಾಗಿದ್ದ ಕನ್ನಡ ನಿಘಂಟಿನ ಎಂಟು ಸಂಪುಟಗಳು ಈಗ ಪುನರ್ಮುದ್ರಣಗೊಂಡು ನಿಮ್ಮ ಕೈಸೇರುತ್ತಿವೆ.

ಸಮಸ್ತ ಕನ್ನಡಿಗರಿಗೆ ಈ ಸಂಪುಟಗಳನ್ನು ಒಪ್ಪಿಸಲು ನೆರವು ನೀಡಿದ ಕರ್ನಾಟಕ ಸರ್ಕಾರವನ್ನು ನಾನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಡಾ. ನಲ್ಲೂರು ಪ್ರಸಾದ್ ಆರ್. ಕೆ.
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು

ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ಆರನೆಯ ಸಂಪುಟ

## ಪಾಲುಗ್ಗಮಣ - ಬಿಲ್ಲ

"ಶಬ್ದಸಾರಮಾರ್ಗಮಶಕ್ಯಂ"
-ಕೇಶಿರಾಜ

ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : ಬೆಂಗಳೂರು - ೧೮
೧೯೯೦

ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

## ಆರನೆಯ ಸಂಪುಟ

"ಶಬ್ದಪಾರಮಾರ್ಗಮಶಕ್ಯಂ"

–ಕೇಶಿರಾಜ

ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : : ಬೆಂಗಳೂರು–೧೮

೧೯೯೦

04

KANNADA NIGHANTU - VOL-VI
Second Edition : 2010
Published by : Kannada Sahitya Parishat
Pampa Mahakavi Road, Chamarajapet, Bangalore - 560 018
Pages : VIII+5473 to 6480 Price : Rs. 350=00

ಮೊದಲನೆಯ ಮುದ್ರಣ – ೧೯೯೦
ಎರಡನೆಯ ಮುದ್ರಣ – ೨೦೧೦
ಪ್ರತಿಗಳು : ೨೦೦೦
ಬೆಲೆ : ಮುನ್ನೂರು ಐವತ್ತು ರೂಪಾಯಿಗಳು




ಮುದ್ರಣ: **ರಾಜಾ ಪ್ರಿಂಟರ್ಸ್**
ನಂ.೫೯, ೪ನೆ ಕ್ರಾಸ್, ಲಾಲ್‌ಬಾಗ್ ರಸ್ತೆ
ಕೆ.ಎಸ್. ಗಾರ್ಡನ್, ಗಂಗಾಧರಪ್ಪ ಬ್ಲಾಕ್
ಬೆಂಗಳೂರು– ೫೬೦ ೦೨೭.

05

# ಕನ್ನಡ ನಿಘಂಟು ಸಂಪಾದಕ ಸಮಿತಿ

(೧೯೯೦ನೆಯ ಡಿಸೆಂಬರ್ ತಿಂಗಳಿನಲ್ಲಿ ಇದ್ದಂತೆ)

**ಅಧ್ಯಕ್ಷರು ಮತ್ತು ಪ್ರಧಾನ ಸಂಪಾದಕರು**

ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ

**ಸದಸ್ಯರು**

ಡಾ. ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ.
ಡಾ. ಜಿ. ಎಸ್. ಗಾಯಿ, ಎಂ.ಎ., ಪಿಎಚ್.ಡಿ.
ಡಾ. ಹಾ. ಮಾ. ನಾಯಕ, ಎಂ.ಎ., ಪಿಎಚ್.ಡಿ.
ಡಾ. ಜಿ.ಎಸ್. ಶಿವರುದ್ರಪ್ಪ, ಎಂ.ಎ., ಪಿಎಚ್.ಡಿ
ಡಾ. ಎಂ. ಚಿದಾನಂದಮೂರ್ತಿ, ಎಂ.ಎ., ಪಿಎಚ್.ಡಿ.
ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ, ಎಂ.ಎ., ಪಿಎಚ್.ಡಿ.
ಡಾ. ಕೆ.ವಿ. ರಮೇಶ್, ಎಂ.ಎ., ಪಿಎಚ್.ಡಿ.
ಡಾ. ಕೆ. ಕೃಷ್ಣಮೂರ್ತಿ, ಎಂ.ಎ., ಪಿಎಚ್.ಡಿ.
ಶ್ರೀ ಎನ್. ಬಸವಾರಾಧ್ಯ, ಎಂ.ಎ.,

**ಕರ್ನಾಟಕ ಸರ್ಕಾರದ ಪ್ರತಿನಿಧಿಗಳು**

ಡಾ. ಸಿದ್ಧಯ್ಯ ಪುರಾಣಿಕ, ಬಿ.ಎ., ಎಲ್ಎಲ್.ಬಿ.

**ಪರಿಷತ್ತಿನ ಅಧ್ಯಕ್ಷರು**

ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ

**ಪರಿಷತ್ತಿನ ಗೌರವ ಕಾರ್ಯದರ್ಶಿಗಳು**

ಶ್ರೀ ಗೊ.ರು. ಚನ್ನಬಸಪ್ಪ
ಶ್ರೀ ಟಿ. ರಾಮಯ್ಯ

**ಪರಿಷತ್ತಿನ ಗೌರವ ಕೋಶಾಧಿಕಾರಿಗಳು**

ಶ್ರೀ. ಎಸ್.ವಿ. ಶ್ರೀನಿವಾಸರಾವ್

# ನಿಘಂಟು ಕಛೇರಿಯ ಸಿಬ್ಬಂದಿ

ಪ್ರಧಾನ ಸಂಪಾದಕರು

**ಪ್ರೊ. ಜಿ. ವೆಂಕಟಸುಬ್ಬಯ್ಯ** ಎಂ.ಎ., ಬಿ.ಟಿ.

**ಸಹಾಯಕ ಸಂಪಾದಕರು**

ಶ್ರೀಮತಿ ಮಂಜುಳಾರಾವ್, ಎಂ.ಎ.

ಶ್ರೀಮತಿ ಎಂ. ಎನ್. ಜಾನಕಮ್ಮ, ಎಂ.ಎ.

ಶ್ರೀಮತಿ ಉಮಾದೇವಿ, ಎಂ.ಎ

ಶ್ರೀಮತಿ ವಿಜಯಲಕ್ಷ್ಮಿ, ಎಂ.ಎ

ಶ್ರೀಮತಿ ಎಂ.ಎಸ್. ಸುಜಯ, ಎಂ.ಎ

ಶ್ರೀ ಬಿ. ಆರ್. ಬಸವರಾಜ, ಎಂ.ಎ.

**ಒಪ್ಪೊತ್ತಿನ ಸಹಾಯಕರು**

ಶ್ರೀ ಕೆ. ಆರ್. ಶೇಷಗಿರಿ, ಎಂ.ಎ.

ಶ್ರೀ ಎ. ಎನ್. ಭಟ್, ಎಂ.ಎ.

**ಕಚೇರಿಯ ಸಿಬ್ಬಂದಿವರ್ಗ**

ಬೆರಳಚ್ಚುಗಾರ್ತಿಯರು : ಶ್ರೀಮತಿ ಎ. ನೇತ್ರಾವತಿಬಾಯಿ, ಶ್ರೀಮತಿ ಸಿ. ಎನ್. ವಿಜಯಲಕ್ಷ್ಮಿ

ಸಹಾಯಕರು : ಶ್ರೀ ರಾಘವೇಂದ್ರ ಪ್ರಸಾದ್, ಶ್ರೀ ಆರ್. ಶಂಕರಪ್ಪ, ಶ್ರೀ ರೇವಯ್ಯ,

# ಅಧ್ಯಕ್ಷರ ನುಡಿ

'ನಿಘಂಟು ಎಂದರೆ ಕನ್ನಡ ಸಾಹಿತ್ಯ ಪರಿಷತ್ತಿನ ಬೃಹನ್ನಿಘಂಟು' ಎಂದೇ ಖ್ಯಾತವಾಗಿರುವ ಈ ಮಹಾನಿಘಂಟಿನ ಎಂಟು ಸಂಪುಟಗಳನ್ನು ಅದು ಪ್ರಕಟವಾದ ೧೫ ವರ್ಷಗಳ ನಂತರ ಮತ್ತಷ್ಟು ಸುಂದರವಾಗಿ ಮರುಮುದ್ರಣಗೊಳಿಸಿ ಕನ್ನಡ ಕುಲಕೋಟಿಗೆ ಅರ್ಪಿಸಲು ನನಗೆ ಸಂತೋಷವೆನಿಸುತ್ತದೆ. ಕನ್ನಡ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ಪಡೆದುಕೊಂಡಿರುವುದು ಅದರ ಸಂಪನ್ನತೆ ಮತ್ತು ಅರ್ಹತೆಗಳಿಂದಾಗಿಯೇ ಎಂಬುದನ್ನು ಲೋಕದೆದುರು ಬಿಚ್ಚಿತೋರಿಸುವ ಸಾಧನಗಳಲ್ಲಿ ಮುಖ್ಯವಾದದ್ದು ಈ ಬೃಹತ್ ನಿಘಂಟು. ಕನ್ನಡದ ಸಮಸ್ತ ಜ್ಞಾನವನ್ನೂ ತನ್ನೊಳಗೆ ಐಕ್ಯಗೊಳಿಸಿಕೊಂಡಿರುವ ಈ ನಿಘಂಟಿನ ವಿವಿಧ ಸಂಪುಟಗಳಲ್ಲಿ ಶಬ್ದವೊಂದರ ಅರ್ಥ, ವಿವರಣೆ, ಉದಾಹರಣೆ ಒಮ್ಮೊಮ್ಮೆ ಅರ್ಧಪುಟವನ್ನು ದಾಟಿ ಒಂದು ಪುಟವನ್ನು ಆವರಿಸಿಕೊಂಡಿರುವುದುಂಟು.

ಕ್ರಿ.ಶ.೪೫೦ರ ಹಲ್ಮಿಡಿಶಾಸನದಿಂದ ಪ್ರಾರಂಭವಾಗಿ ಈ ಸಂಪುಟ ಯೋಜನೆ ಅನುಷ್ಠಾನಗೊಂಡ ೧೯೫೦ರವರೆಗೆ ಕನ್ನಡದಲ್ಲಿ ಪ್ರಕಟವಾದ ಎಲ್ಲ ಬಗೆಯ ಸಾಹಿತ್ಯ ಪ್ರಕಾರಗಳಿಂದಲೂ ಉಲ್ಲೇಖಗಳನ್ನು ನೀಡಲಾಗಿರುವುದು, ಕೆಲವೊಮ್ಮೆ ಒಂದೇ ಶಬ್ದಕ್ಕೆ ಬೇರೆ ಬೇರೆ ಅರ್ಥಗಳು ಪ್ರಾಪ್ತವಾಗುವ ಸಂದರ್ಭಗಳನ್ನು ಜೊತೆಗಿರಿಸಿ ಕೊಟ್ಟಿರುವುದು, ಪ್ರತಿಯೊಂದು ಶಬ್ದವನ್ನೂ ನಾಮಪದ ಅಥವಾ ಕ್ರಿಯಾಪದವೆಂದು ಖಚಿತವಾಗಿ ವಿಂಗಡಿಸಿಕೊಂಡಿರುವುದು, ಅರ್ಥ ಸ್ಪಷ್ಟೀಕರಣಕ್ಕೆಂದು ಉದಾಹರಣೆಯಾಗಿ ಕೊಟ್ಟಿರುವ ವಾಕ್ಯ ಅಥವಾ ವಾಕ್ಯತುಂಡುಗಳೇ ಮೂಲಕಾವ್ಯವನ್ನು ಓದಬೇಕೆನ್ನುವ ಆಸಕ್ತಿಯನ್ನು ಹುಟ್ಟಿಸುವುದು – ಈ ಎಲ್ಲ ಅಂಶಗಳು ಇದರ ಅಪೂರ್ವತೆಯನ್ನು ಎತ್ತಿ ಹಿಡಿಯುವ ಸಾಕ್ಷಿಕಲ್ಲುಗಳಾಗಿವೆ. ನಿಘಂಟು ಎನ್ನುವುದೇ ತುಂಬ ವೈಜ್ಞಾನಿಕವಾದ, ಒಂದು ಭಾಷೆಯ ಸೃಜನ ಸಾಹಿತ್ಯದಷ್ಟೇ ಪ್ರಮುಖವಾದ, ಭಾಷೆಯಲ್ಲಿರುವ ಶಬ್ದಗಳನ್ನು ಶುದ್ಧವಾಗಿ ಉಚ್ಚರಿಸಬೇಕೆಂದು ತಿಳಿಸಿಕೊಡುವ ರಚನೆಯಾಗಿರುವುದರಿಂದ ಜ್ಞಾನೇಂದ್ರಿಯಗಳೆಲ್ಲದರ ಎಚ್ಚರದ ದುಡಿಮೆಯನ್ನು ಬಯಸುತ್ತದೆ. ಕನ್ನಡದ ಅಭಿಮಾನವನ್ನು ಮೈತುಂಬಿಕೊಂಡ ಘನ ವಿದ್ವಾಂಸರ ಸತತ ಪರಿಶ್ರಮದಿಂದ ಈ ಯೋಜನೆ ಶಿಸ್ತುಬದ್ಧವಾಗಿ ಯಶಕಂಡಿದೆ. ಮೊದಲ ಮುದ್ರಣದ ೧೦,೦೦೦ ಪ್ರತಿಗಳು ಕೆಲವೇ ವರ್ಷಗಳಲ್ಲಿ ಕನ್ನಡಿಗರ ಮನೆಯ ಕಪಾಟುಗಳನ್ನು, ಗ್ರಂಥಭಂಡಾರಗಳನ್ನು, ಶಾಲೆಕಾಲೇಜುಗಳನ್ನು ಅಲಂಕರಿಸಿದ್ದರಿಂದ ಕನ್ನಡ ಸಾಹಿತ್ಯ ಪರಿಷತ್ತು ಧನ್ಯತಾಭಾವವನ್ನು ತಳೆಯುವಂತಾಯಿತು. ಆದರೆ ನಿಘಂಟುವಿನ ಉಪಯುಕ್ತತೆಯನ್ನು ತಡವಾಗಿ ಅರ್ಥಮಾಡಿಕೊಂಡವರು ಅಂದಿನಿಂದ ಇಂದಿನವರೆಗೆ ಸಾಹಿತ್ಯ ಪರಿಷತ್ತಿಗೆ ದೂರವಾಣಿ ಕರೆ ಮಾಡಿ, ಮಾರಾಟ ವಿಭಾಗದಲ್ಲಿ ವಿಚಾರಿಸಿ, ಪುಸ್ತಕ ಮಳಿಗೆಗಳಲ್ಲಿ ಹುಡುಕಾಡಿ ಸಿಗದೆ ನಿರಾಶರಾಗಿದ್ದಾರೆ. ಮರುಪ್ರಕಟಿಸುವಂತೆ ಒತ್ತಾಯ ಮಾಡಿದ್ದಾರೆ.

ಎಂಟು ಸಂಪುಟಗಳಲ್ಲಿ, ಒಂಬತ್ತು ಸಾವಿರಕ್ಕಿಂತಲೂ ಅಧಿಕ ಪುಟಗಳ ವಿಸ್ತಾರದಲ್ಲಿ ಹರಡಿಕೊಂಡಿರುವ, ಎಲ್ಲರ ಮನೆಯನ್ನೂ ಬೆಳಗಬೇಕಾಗಿರುವ ಈ ನಿಘಂಟನ್ನು ಮುದ್ರಿಸುವುದಾಗಲೀ, ಮುದ್ರಿತ ಪ್ರತಿಗಳನ್ನು ಒಂದೆಡೆ ಜೋಡಿಸಿಡುವುದಾಗಲೀ, ಮಾರಾಟದ ವ್ಯವಸ್ಥೆ ಮಾಡುವುದಾಗಲೀ, ಹೆಚ್ಚಿನ ಪ್ರಮಾಣದಲ್ಲಿ ಒಂದು

ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವುದಾಗಲೀ ಅಷ್ಟೊಂದು ಸುಲಭವಾದ ಕೆಲಸವಲ್ಲ. ಈ ಅಸಾಧ್ಯವನ್ನು ಸಾಧ್ಯವಾಗಿಸುವ ಧೈರ್ಯೋತ್ಸಾಹಗಳು ಪರಿಷತ್ತಿನೊಡಲಲ್ಲಿ ಚಿಮ್ಮುವುದಕ್ಕೆ ಕರ್ನಾಟಕ ರಾಜ್ಯ ಸರ್ಕಾರ ಕಾರಣವಾಯಿತೆಂದರೆ ಅದನ್ನು ಯಾರೂ ಅತಿಶಯೋಕ್ತಿಯೆಂದು ಭಾವಿಸಬೇಕಾಗಿಲ್ಲ. ಕರ್ನಾಟಕ ರಾಜ್ಯ ಸರ್ಕಾರ ಕನ್ನಡ ಸಾಹಿತ್ಯ ಪರಿಷತ್ತಿನ ಮಾತುಗಳನ್ನು ಪ್ರೀತಿಯಿಂದ ಆಲಿಸುತ್ತಿರುವುದು, ಕನ್ನಡ ಸಾಹಿತ್ಯ ಪರಿಷತ್ತನ್ನು ಕನ್ನಡದ ಸಾರ್ವಭೌಮ ಪ್ರತಿನಿಧಿಯೆಂದೇ ಭಾವಿಸುತ್ತಿರುವುದು ಕನ್ನಡದ ಭಾಗ್ಯವೆಂದೇ ಹೇಳಬೇಕು. ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಹಲವು ಒತ್ತಡಗಳ ನಡುವೆಯೂ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳಲ್ಲಿ ಅತ್ಯಂತ ಪ್ರೀತಿಯಿಂದ ಭಾಗವಹಿಸುತ್ತಿರುವುದು, ಸಮಾರಂಭಗಳಲ್ಲಿ ಕೊಟ್ಟ ಆಶ್ವಾಸನೆಗಳನ್ನು ಅತಿಶೀಘ್ರವಾಗಿ ಅನುಷ್ಠಾನಗೊಳಿಸುತ್ತಿರುವುದು, ಪರಿಷತ್ತಿನ ಎಲ್ಲಾ ಯೋಜನೆಗಳಿಗೂ ಹಸಿರು ನಿಶಾನೆ ತೋರುತ್ತಿರುವುದು, ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳು ಮುಖ್ಯಮಂತ್ರಿ – ಕನ್ನಡ ಸಂಸ್ಕೃತಿ ಮಂತ್ರಿಗಳ ಕಚೇರಿಯ ಹೊರಗೆ ಕಡತಗಳೊಂದಿಗೆ ಗಂಟೆಗಟ್ಟಲೆ ಕಾಯುತ್ತಿದ್ದುದನ್ನು ತಪ್ಪಿಸಿರುವುದು, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಿಂದ ತಾಲ್ಲೂಕು ಸಮ್ಮೇಳನಗಳವರೆಗೆ ಎಲ್ಲವೂ ಅದ್ದೂರಿಯಾಗಿ ನಡೆಯಲು ಬೇಕಾದಷ್ಟು ಪ್ರಮಾಣದಲ್ಲಿ ಹಣ ಬಿಡುಗಡೆ ಮಾಡುತ್ತಿರುವುದು – ಇಂಥವನ್ನೆಲ್ಲಾ ಕಂಡಾಗ ಪರಿಷತ್ತಿನ ಅಧ್ಯಕ್ಷನಾಗಿ ನನಗೆ ಮನಸ್ಸು ತುಂಬಿ ಬರುತ್ತದೆ. ಆರುಕೋಟಿ ಕನ್ನಡಿಗರ ಪರವಾಗಿ ಅವರಿಗೆ ಕೃತಜ್ಞತಾ ಕುಸುಮಗಳನ್ನು ಅರ್ಪಿಸಬೇಕೆನ್ನಿಸುತ್ತದೆ. 'ಕನ್ನಡದ ಮುಖ್ಯಮಂತ್ರಿ' 'ಕನ್ನಡಿಗರ ಮುಖ್ಯಮಂತ್ರಿ' ಎಂದು ಅಭಿಮಾನದಿಂದ ನುಡಿಯಬೇಕೆನ್ನಿಸುತ್ತದೆ. ಸನ್ಮಾನ್ಯ ಮುಖ್ಯಮಂತ್ರಿಗಳ ಕನ್ನಡದ ಮೇಲಿನ, ಕನ್ನಡ ಸಾಹಿತ್ಯ ಪರಿಷತ್ತಿನ ಬಗೆಗಿನ ಈ ಅಖಂಡ ಪ್ರೀತಿ ಹೀಗೇ ಮುಂದುವರಿಯಲೆಂದು ಆಶಿಸುತ್ತೇನೆ.

ಕರ್ನಾಟಕ ಸರ್ಕಾರ ನಿಘಂಟು ಯೋಜನೆಯ ಮಹತ್ವವನ್ನು ಮನಗಂಡು ಒಂದು ಕೋಟಿ ರೂಪಾಯಿಗಳನ್ನು ಸಾಹಿತ್ಯ ಪರಿಷತ್ತಿಗೆ ಉದಾರವಾಗಿ ನೀಡಿದೆ. ಸರ್ಕಾರ ಹಣ ನೀಡಿರುವುದು ಪರಿಷತ್ತಿಗಾದರೂ ಇದು ಜನತೆಯ ಹಣ ಮತ್ತು ಇದರ ಅಂತಿಮ ಫಲಾನುಭವಿಗಳೂ ಜನತೆಯೇ. ಈ ಎಚ್ಚರವನ್ನಿರಿಸಿಕೊಂಡೇ ಸಾಹಿತ್ಯ ಪರಿಷತ್ತು ಬಹುಬೇಡಿಕೆಯ ಬೃಹನ್ನಿಘಂಟಿನ ಎಂಟು ಸಂಪುಟಗಳನ್ನು ಪುನರ್ಮುದ್ರಣಗೊಳಿಸುತ್ತಿದೆ. ಸರ್ಕಾರದ ಉದಾರ ಆರ್ಥಿಕ ನೆರವಿನ ಪರಿಣಾಮವಾಗಿ ನಿಘಂಟಿನ ಬೆಲೆಯನ್ನು ಸಾಮಾನ್ಯರೂ ಕೊಳ್ಳಲು ಮನಸ್ಸು ಮಾಡುವಂತೆ ಕಡಿಮೆಗೊಳಿಸಲಾಗಿದೆ. ಭಾಷೆ ಮತ್ತು ಸಾಹಿತ್ಯಾಭಿಮಾನದ ಸಂಕೇತವೆಂಬಂತೆ ಈ ಯೋಜನೆಯ ಯಶಸ್ಸಿನಲ್ಲಿ ಪ್ರಮುಖ ಪಾತ್ರ ನಿರ್ವಹಿಸಿರುವ ರಾಜ್ಯ ಸರ್ಕಾರವನ್ನು ಹಾಗೂ ಕನ್ನಡ ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಜಯರಾಮರಾಜೇ ಅರಸ್ ಮತ್ತು ನಿರ್ದೇಶಕರಾದ ಶ್ರೀ ಮನು ಬಳಿಗಾರ್ ಅವರುಗಳನ್ನು ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ. ನಿಘಂಟು ಯೋಜನೆ ಪ್ರಾರಂಭವಾದಾಗ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣರಿಂದ ಮೊದಲಗೊಂಡು ಮುಕ್ತಾಯವಾದಾಗ ಅಧ್ಯಕ್ಷರಾಗಿದ್ದ ಡಾ. ಸಾ.ಶಿ. ಮರುಳಯ್ಯನವರವರೆಗೆ ಇದನ್ನು ಆಸಕ್ತಿಯಿಂದ ಮುನ್ನಡೆಸಿಕೊಂಡು ಬಂದ ಎಲ್ಲ ಅಧ್ಯಕ್ಷರುಗಳಿಗೂ ನಿಘಂಟು ಸಮಿತಿಯ ಅಧ್ಯಕ್ಷರು, ಸದಸ್ಯರುಗಳು, ಸಂಪಾದಕರು, ಸಿಬ್ಬಂದಿ ವರ್ಗದವರಿಗೂ ಅಂದವಾಗಿ ಮುದ್ರಿಸಿಕೊಟ್ಟ ರಾಜಾ ಪ್ರಿಂಟರ್ಸ್‌ನವರಿಗೂ ಮತ್ತು ಅವರ ಸಿಬ್ಬಂದಿ ವರ್ಗದವರಿಗೂ ಕನ್ನಡ ಸಾಹಿತ್ಯ ಪರಿಷತ್ತು ತುಂಬಾ ಆಭಾರಿಯಾಗಿದೆ. ಮರುಮುದ್ರಣದ ಈ ನಿಘಂಟಿನ ಸಂಪುಟಗಳನ್ನು ಕನ್ನಡ ಜನತೆ ಪ್ರೀತಿ ವಿಶ್ವಾಸಗಳಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಬೆಂಗಳೂರು
೫–೬–೨೦೧೦

**ಡಾ. ನಲ್ಲೂರು ಪ್ರಸಾದ್ ಆರ್.ಕೆ.**
ಅಧ್ಯಕ್ಷರು

# ಸಂಪಾದಕರ ಅರಿಕೆ

ಕನ್ನಡ-ಕನ್ನಡ ನಿಘಂಟಿನ ೬ನೆಯ ಸಂಪುಟವು ಪ್ರಕಟವಾಗುತ್ತಿರುವುದು ನನಗೆ ಸಂತೋಷದ ವಿಷಯ. ಈ ಸಂಪುಟದ ಮುದ್ರಣಪ್ರತಿಯು ಸಿದ್ಧವಾಗಿ ಆರು ವರ್ಷಗಳಾದುವು. ಆದರೂ ಮುದ್ರಣಕ್ಕೆ ಅನೇಕ ಅಡ್ಡಿಗಳುಂಟಾಗಿ ಐದನೆಯ ಸಂಪುಟ ಪ್ರಕಟವಾಗುವುದೇ ೧೯೮೭ರ ಅಂತ್ಯದ ವರೆಗೆ ತಡವಾಯಿತು. ಈಗ ೧೯೯೦ರ ಕೊನೆಯ ಭಾಗದಲ್ಲಿ ಈ ಆರನೆಯ ಸಂಪುಟ ಪ್ರಕಟವಾಗುತ್ತಿದೆ.

ಕನ್ನಡ ನಿಘಂಟಿನ ಈ ಮಹಾಕಾರ್ಯವನ್ನು ಸಾಧಿಸಲು ಕರ್ನಾಟಕ ಸರ್ಕಾರ ನೀಡುತ್ತಿರುವ ಧನಸಹಾಯವನ್ನು ಕುರಿತು ಭಾರತದ ಎಲ್ಲ ಭಾಷೆಗಳ ವಿದ್ವಾಂಸರೂ ನಿಘಂಟುಕಾರರೂ ಮುಕ್ತಕಂಠದಿಂದ ಹೊಗಳುತ್ತಾರೆ. ಶತಮಾನಕ್ಕೊಮ್ಮೆ ಕೈಗೊಳ್ಳಬಹುದಾದ ಇಂಥ ವಿದ್ವತ್ಕಾರ್ಯಗಳ ಬಗ್ಗೆ ನಮ್ಮ ಸರ್ಕಾರದ ನಿಲುಮೆ ಎಲ್ಲರ ಗೌರವಕ್ಕೆ ಪಾತ್ರವಾಗಿದೆ. ಕನ್ನಡಿಗರೆಲ್ಲರೂ ನಮ್ಮ ಸರ್ಕಾರಕ್ಕೆ ತಮ್ಮ ಪ್ರೀತಿವಿಶ್ವಾಸಗಳನ್ನು ನೀಡಿ ಕೃತಜ್ಞತೆಗಳನ್ನು ಸಲ್ಲಿಸುತ್ತಾರೆ.

ಈ ಸಂಪುಟವನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ನಮ್ಮ ನಿಘಂಟು ಸಂಪಾದಕ ಸಮಿತಿಯ ಸದಸ್ಯರೆಲ್ಲರೂ ನೀಡಿದ ಸಂಪೂರ್ಣ ಸಹಕಾರಕ್ಕೆ ನಾನು ಕೃತಜ್ಞನಾಗಿದ್ದೇನೆ. ನಿಘಂಟುಕಾರ್ಯ ಕ್ಲಿಷ್ಟವಾದ ವಿದ್ವತ್ಕಾರ್ಯ. ಇದಕ್ಕೆ ಬಹುಶ್ರುತತ್ವವೂ, ಒಬ್ಬ ವ್ಯಕ್ತಿಗೆ ಸಾಧ್ಯವಾಗದ ಅಗಾಧ ವಿದ್ವತ್ತೂ ಅಗತ್ಯವಾಗುತ್ತದೆ. ಆದುದರಿಂದ ಸಂಪಾದಕ ಸಮಿತಿಯ ಸದಸ್ಯರು ಬೇರೆ ಬೇರೆ ಕ್ಷೇತ್ರಗಳಲ್ಲಿ ಆಳವಾದ ಪರಿಜ್ಞಾನವುಳ್ಳವರಾಗಿ ಸಂಪಾದಕನಿಗೆ ಎದುರಾಗುವ ಅನೇಕ ಸಮಸ್ಯೆಗಳನ್ನು ತಮ್ಮ ತಿಳಿವಳಿಕೆಯ ಬೆಳಕಿನಲ್ಲಿ ಪರಿಹರಿಸಿ ಅವನ ಕಾರ್ಯವನ್ನು ಸುಲಭಗೊಳಿಸಿದ್ದಾರೆ. ಅವರ ವಿಶ್ವಾಸಕ್ಕೆ ನನ್ನ ಗೌರವವನ್ನು ಇಲ್ಲಿ ದಾಖಲಿಸುತ್ತಿದ್ದೇನೆ.

ನಿಘಂಟುಕಾರ್ಯದ ವ್ಯಾಪ್ತಿ ವಿಶ್ವವಿಶಾಲವಾದುದು. ಹೊಸ ಶಬ್ದಗಳ ಸೃಷ್ಟಿ ಆಗುತ್ತಲೇ ಇರುತ್ತದೆ. ಅದನ್ನು ಬೆನ್ನುಹತ್ತುವ ಕಾರ್ಯ ಮುಂದುವರಿದಿದ್ದರೂ ಎಷ್ಟೋ ವೇಳೆ ಈ ನಿಘಂಟು ಮುದ್ರಣವಾಗುವ ವೇಳೆಗೆ ಅವು ನಮ್ಮ ಕೈಸೇರಿರುವುದಿಲ್ಲ. ಇಂಥ ಶಬ್ದಗಳನ್ನೆಲ್ಲ ಪಟ್ಟಿ ಮಾಡಲಾಗುತ್ತಿದೆ. ಕೊನೆಯ ಸಂಪುಟದ ಅನುಬಂಧದಲ್ಲಿ ಅವುಗಳನ್ನು ಸೇರಿಸಬೇಕಾಗುತ್ತದೆ.

ಈಗ ಪರಿಷತ್ತಿನ ಅಧ್ಯಕ್ಷರಾಗಿರುವ ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯನವರು ನಿಘಂಟಿನ ಸಿಬ್ಬಂದಿಯ ಸಮಸ್ಯೆಗಳನ್ನು ಪರಿಹರಿಸುವುದರಲ್ಲಿಯೂ ಈ ಸಂಪುಟವು ಬೇಗ ಮುದ್ರಣವಾಗುವುದರಲ್ಲಿಯೂ ಆಸಕ್ತಿಯನ್ನು ತಳೆದು ಸಹಾಯಮಾಡಿದ್ದಾರೆ. ಸರ್ಕಾರಿ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಇ. ಕೃಷ್ಣನಾರಾಯಣ ಅವರು ಪರಿಷತ್ತಿನ ೬೦ನೇ ಸಮ್ಮೇಳನದ ವೇಳೆಗೆ ಈ ಸಂಪುಟವನ್ನು ಪ್ರಕಟಪಡಿಸಲು ಎಲ್ಲ ಏರ್ಪಾಟುಗಳನ್ನೂ ಮಾಡಿ ನಮ್ಮನ್ನು ಋಣಿಗಳನ್ನಾಗಿ ಮಾಡಿದ್ದಾರೆ.

ನಿಘಂಟಿನ ಕರಡನ್ನು ತಿದ್ದುವುದು ಬಹು ಎಚ್ಚರಿಕೆಯಿಂದ ಮಾಡಬೇಕಾದ ಕಾರ್ಯ. ಇದಕ್ಕೆ ಕನ್ನಡಭಾಷಾಸಾಹಿತ್ಯಗಳ ಮತ್ತು ಮುದ್ರಣ ತಂತ್ರದ ಆಳವಾದ ಪರಿಜ್ಞಾನವಿರಬೇಕು. ಇಂಥ ಕ್ಲಿಷ್ಟಕಾರ್ಯವನ್ನು ಈ ನಿಘಂಟಿನ ಮುದ್ರಣಕಾರ್ಯ ಪ್ರಾರಂಭವಾದಾಗಿನಿಂದ ಸಮರ್ಥವಾಗಿ ನಿರ್ವಹಿಸಿದವರು ಶ್ರೀಮತಿಯರಾದ ಮಂಜುಳಾರಾವ್, ಉಮಾದೇವಿ, ವಿಜಯಲಕ್ಷ್ಮಿ, ಎಂ. ಎಸ್. ಸಂಜಯ. ಕೊನೆಕೊನೆಗೆ ಕರಡಿನ ಸಂಖೆ ಹೆಚ್ಚಾದಾಗ ಇವರ ಜತೆಗೆ ಶ್ರೀಮತಿ ಎಂ. ಎನ್. ಜಾನಕಮ್ಮ ಮತ್ತು ಶ್ರೀ ಬಿ. ಆರ್. ಬಸವರಾಜ ಅವರೂ ಸಹಾಯಮಾಡಿದ್ದಾರೆ. ಇವರಲ್ಲದೆ ನಿಘಂಟು ಕಚೇರಿಯ ಬೆರಳಚ್ಚುಗಾರ್ತಿಯರೂ ಸಹಾಯಕ ವರ್ಗದವರೂ ಬಿಡುವಿಲ್ಲದೆ ದುಡಿದಿದ್ದಾರೆ. ಇವರಿಗೆಲ್ಲ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಇನ್ನುಮುಂದೆ ಈ ನಿಘಂಟಿನ ೭ ಮತ್ತು ೮ನೆಯ ಸಂಪುಟಗಳು ಪ್ರಕಟವಾಗಬೇಕು. ಈಗಾಗಲೇ ಈ ಎರಡು ಸಂಪುಟಗಳ ಬಹುಭಾಗದ ಪರಿಶೀಲನಾಕಾರ್ಯ ಪೂರೈಸಿದೆ. ಇನ್ನು ಮೂರು ತಿಂಗಳುಗಳಲ್ಲಿ ಏಳನೆಯ ಸಂಪುಟವನ್ನು ಮುದ್ರಣಕ್ಕೆ ಸಿದ್ಧಮಾಡಲಾಗುತ್ತದೆ. ಅದರ ಮುದ್ರಣವು ಪೂರೈಸುವ ವೇಳೆಗೆ ಎಂಟನೆಯ ಸಂಪುಟದ ಮಿಕ್ಕ ಭಾಗಗಳನ್ನು ಅಂದರೆ 'ವ' ಕಾರ 'ಸ' ಕಾರ 'ಹ' ಕಾರಗಳ ಸಭಾಪ್ರತಿಯನ್ನು ಸಂಪಾದಕಸಮಿತಿಯ ಮುಂದೆ ತರಲು ಸಾಧ್ಯವಾಗುತ್ತದೆ. ಈಗಾಗಲೇ 'ವ' ಕಾರದ ಪರಿಶೀಲನೆಗೆ ಸಭಾಪ್ರತಿಯನ್ನು ಸಿದ್ಧಮಾಡಿ ಆಗಿದೆ. ಸಂಪಾದಕ ಸಮಿತಿಯ ಮುಂದಿನ ಸಭೆಯಲ್ಲಿ 'ವ' ಕಾರದ ಪರಿಶೀಲನೆ ಪ್ರಾರಂಭವಾಗುತ್ತದೆ.

ಈ ಆರನೆಯ ಸಂಪುಟದಲ್ಲಿ ನಮ್ಮ ಅವಜ್ಞತೆಯಿಂದ ಆಗಿರಬಹುದಾದ ಪ್ರಮಾದಗಳಿದ್ದರೆ ಅವುಗಳನ್ನು ವಿದ್ವಾಂಸರು ತೋರಿಸಿ ಕೊಡಬೇಕೆಂದೂ ಅಂಥವರ ಹೆಸರುಗಳನ್ನು ಉಲ್ಲೇಖಿಸಿ ಮುಂದೆ ಅವುಗಳನ್ನು ತಿದ್ದಿಕೊಳ್ಳಲಾಗುವುದೆಂದೂ ಈ ಮೂಲಕ ತಿಳಿಸಲು ನಾನು ಅಪೇಕ್ಷಿಸುತ್ತೇನೆ.

ಕನ್ನಡದ ಈ ಬೃಹತ್ ನಿಘಂಟು ಅನೇಕ ಬಗೆಯ ಇತರ ನಿಘಂಟುಗಳ ಪ್ರಕಟನೆಗೆ ಸಹಾಯಕವಾಗಲೆಂದೂ, ಈ ನಿಘಂಟಿನ ಪ್ರಯೋಜನ ಹೆಚ್ಚಲೆಂದೂ ನಾನು ಆಶಿಸುತ್ತೇನೆ.

ಬೆಂಗಳೂರು.
೨೮-೧೨-೧೯೯೦

**ಜಿ. ವೆಂಕಟಸುಬ್ಬಯ್ಯ**
ಪ್ರಧಾನ ಸಂಪಾದಕ

# ಅಧ್ಯಕ್ಷರ ಕೃತಜ್ಞತೆಗಳು

ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಕನ್ನಡ-ಕನ್ನಡ ನಿಘಂಟುವಿನ ಪ್ರಥಮ ಸಂಪುಟ ಬಿಡುಗಡೆಗೊಂಡಿತು. ಸಂಪಾದಕ ಮಂಡಲಿಯ ತೀರ್ಮಾನದಂತೆ ಎರಡು ವರ್ಷಕ್ಕೊಂದು ಸಂಪುಟ ಹೊರಬೀಳಬೇಕಾದರೂ ಎರಡನೆಯ ಸಂಪುಟ ಹೊರಬಿದ್ದುದು ೧೯೭೭ರಲ್ಲಿ. ಹಾಗೆಯೇ ೩ನೇ ಸಂಪುಟ ೧೯೭೭ರಲ್ಲಿ, ೪ನೇ ಸಂಪುಟ ೧೯೭೯ರಲ್ಲಿ ಪ್ರಕಟವಾದವು. ೫ನೇ ಸಂಪುಟ ೧೯೮೭-೮೮ರ ವರೆಗೆ ಪ್ರಕಟಣೆಗೆ ಕಾಯಬೇಕಾಯಿತು. ೬ನೇ ಸಂಪುಟ ಕನ್ನಡ ಸಾಹಿತ್ಯ ಪರಿಷತ್ತಿನ ಅಮೃತ ಮಹೋತ್ಸವದ ಸಂದರ್ಭದಲ್ಲಿ ಪ್ರಕಟವಾಗುತ್ತಿರುವುದು ನೆಮ್ಮದಿಯ ಸಂಗತಿ. ಅದಕ್ಕೂ ಹೆಚ್ಚಾಗಿ ಇದರ ಬಿಡುಗಡೆ ಕನ್ನಡ ಸಾಹಿತ್ಯ ಪರಿಷತ್ತಿನ ೬೦ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ವಜ್ರಾಧಿವೇಶನ ಸಂದರ್ಭದಲ್ಲಿ ಆಗುತ್ತಿರುವುದು ನಮಗೆಲ್ಲಾ ಅತ್ಯಂತ ಹರ್ಷದ ವಿಷಯವಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟುವಿನ ಮೊದಲ ಎರಡು ಸಂಪುಟಗಳನ್ನು ಸಾಹಿತ್ಯ ಪರಿಷತ್ತಿನ ಬಿ. ಎಂ. ಶ್ರೀ. ಅಚ್ಚುಕೂಟದಲ್ಲೇ ಮುದ್ರಿಸಲಾಯಿತು. ಮೂರು ಮತ್ತು ನಾಲ್ಕನೆಯ ಸಂಪುಟಗಳನ್ನು ಬೆಂಗಳೂರು ನಗರದಲ್ಲಿರುವ ಸರ್ಕಾರಿ ಮುದ್ರಣಾಲಯವು ಮುದ್ರಿಸಿಕೊಟ್ಟಿತು. ಐದನೆಯ ಸಂಪುಟ ಭಗವಾನ್ ಇಂಡಸ್ಟ್ರೀಸ್ ಅವರಲ್ಲಿ ಮುದ್ರಿತವಾಯಿತು. ಆರನೆಯ ಸಂಪುಟದ ಮುದ್ರಣದ ಜವಾಬ್ದಾರಿಯನ್ನು ಮತ್ತೆ ಕರ್ನಾಟಕ ಸರ್ಕಾರದ ಮುದ್ರಣಾಲಯ ವಹಿಸಿಕೊಂಡಿದೆ.

ಬಹುಶಃ ಮುದ್ರಣಾಲಯಗಳ ಬದಲಾವಣೆಗಳು ಕಾರಣದಿಂದಾಗಿಯೇ ಈ ಸಂಪುಟಗಳು ಹೊರಬರಲು ಸ್ವಲ್ಪ ವಿಳಂಬವಾಯಿತು ಅನ್ನಿಸುತ್ತದೆ. ಆದರೆ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಇ. ಕೃಷ್ಣನಾರಾಯಣ ಅವರ ವಿಶೇಷವಾದ ಕಾಳಜಿಯಿಂದಾಗಿ ಈ ಸಂಪುಟ ಮುದ್ರಣಗೊಂಡು ಹೊರಬರಲು ಸಾಧ್ಯವಾಯಿತು. ಈ ಮುದ್ರಣಕಾರ್ಯವನ್ನು ಆಗುಮಾಡಿಕೊಟ್ಟಿರುವ ಶ್ರೀ ಇ. ಕೃಷ್ಣನಾರಾಯಣ ಮತ್ತು ಅವರ ಸಹಾಯಕ ಸಿಬ್ಬಂದಿವರ್ಗದವರಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಈ ನಿಘಂಟುವಿನ ಮುದ್ರಣದ ಹಂತದಲ್ಲಿ ನಿಘಂಟು ಸಂಪಾದಕ ಸಮಿತಿಯ ಸದಸ್ಯರು ಮತ್ತು ಸಿಬ್ಬಂದಿಯವರು ವಿಶೇಷವಾದ ಶ್ರಮ ಮತ್ತು ಆಸಕ್ತಿಗಳನ್ನು ತೋರಿದ್ದಾರೆ. ಕರಡಚ್ಚನ್ನು ತಿದ್ದುವ ಕಾರ್ಯದಲ್ಲಂತೂ ನಿಘಂಟು ಸಿಬ್ಬಂದಿಯವರು ವಹಿಸಿದ ಪಾತ್ರ ಮುಖ್ಯವಾದುದು. ಅವರಿಗೆ ಪರಿಷತ್ತಿನ ಕೃತಜ್ಞತೆಗಳು.

ನಿಘಂಟುವಿನ ಪ್ರಧಾನ ಸಂಪಾದಕರೂ ಮತ್ತು ಸಂಪಾದಕ ಮಂಡಲಿಯ ಅಧ್ಯಕ್ಷರೂ ಆದ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಅಪಾರ ಶ್ರಮ ವಹಿಸಿದ್ದಾರೆ. ಅವರಿಗೂ ಸಂಪಾದಕ ಸಮಿತಿಯ ಸದಸ್ಯರೆಲ್ಲರಿಗೂ ಹೃತ್ಪೂರ್ವಕವಾದ ಕೃತಜ್ಞತೆಗಳು.

ಈ ಕನ್ನಡ-ಕನ್ನಡ ನಿಘಂಟುವಿನ ಯೋಜನೆ ಪೂರ್ಣವಾಗಿ ಕರ್ನಾಟಕ ಸರ್ಕಾರದ ಯೋಜನೆಯಾಗಿದ್ದು, ಇದರ ಜವಾಬ್ದಾರಿಯನ್ನು ಕನ್ನಡ ಸಾಹಿತ್ಯ ಪರಿಷತ್ತು ಸುಸೂತ್ರವಾಗಿ ನಿರ್ವಹಿಸಲು ಸರ್ಕಾರ ನೆರವಾಗುತ್ತಿರುವುದಕ್ಕಾಗಿ ಪರಿಷತ್ತಿನ ಕೃತಜ್ಞತೆಗಳನ್ನು ತಿಳಿಸುತ್ತೇನೆ.

ಈ ಬೃಹತ್ ನಿಘಂಟು ಮೊದಲು ನಾಲ್ಕು ಸಂಪುಟಗಳಲ್ಲಿ ಮುಗಿಯುತ್ತದೆ ಎಂಬ ಯೋಜನೆಯಿಂದ ಕೂಡಿದ್ದರೂ ಈಗ ಎಂಟನೆಯ ಸಂಪುಟದವರೆಗೂ ವಿಸ್ತರಣೆಗೊಳ್ಳುತ್ತಿದೆ. ಇದಕ್ಕೆ ಕಾರಣ ನಿಘಂಟು ಸಮಿತಿ ಸಂಗ್ರಹಿಸಿ ವ್ಯವಸ್ಥೆಗೊಳಿಸಿರುವ ಅಪಾರವಾದ ಶಬ್ದ ಸಂಪತ್ತು.

ನಿಘಂಟುವಿನ ೫ನೆಯ ಸಂಪುಟವು ೧೯೮೭-೮೮ರಲ್ಲಿ ಪ್ರಕಟವಾಗುವಾಗ ನಿಘಂಟು ಸಂಪಾದಕ ಮಂಡಲಿ ಸದಸ್ಯರುಗಳ ಪಟ್ಟಿಯಲ್ಲಿ ಪರಿಷತ್ತಿನ ಆಡಳಿತಗಾರರ ಮತ್ತು ಸಹಾಯಕ ನಿರ್ದೇಶಕರ ಹೆಸರುಗಳ ಜೊತೆಗೆ ಅವರಿಗಿಂತ ಹಿಂದೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಹೆಚ್. ಬಿ. ಜ್ವಾಲನಯ್ಯ ಮತ್ತು ಗೌರವ ಕಾರ್ಯದರ್ಶಿಗಳಾದ ಶ್ರೀ ಜಿ. ವಿ. ಶಿವಸ್ವಾಮಿ ಮತ್ತು ಶ್ರೀ ಚಂದ್ರಕಾಂತ ಪಡೆಸೂರ ಹಾಗೂ ಕೋಶಾಧಿಕಾರಿಗಳಾದ ಶ್ರೀ ಎಂ. ಪಿ. ದೇವರಾಜ್ ಅವರ ಹೆಸರುಗಳು ಸೇರಬೇಕಾಗಿತ್ತು ಎಂಬುದನ್ನು ಇಲ್ಲಿ ನಮ್ರವಾಗಿ ಸೂಚಿಸಬಯಸುತ್ತೇನೆ.

ಇನ್ನು ಕೆಲವೇ ದಿನಗಳಲ್ಲಿ ೭ನೇ ಸಂಪುಟದ ಮುದ್ರಣಕ್ಕೆ ಪ್ರತಿಗಳು ಸಿದ್ಧಗೊಳ್ಳಲು ಸಾಧ್ಯವಾಗುತ್ತದೆ. ವಾಸ್ತವವಾಗಿ ಈ ನಿಘಂಟನ್ನು ರೂಪಿಸಲು ಪ್ರಾತಃಸ್ಮರಣೀಯರಾದ ಅನೇಕ ವಿದ್ವಾಂಸರುಗಳು ಅಪಾರವಾದ ಶ್ರಮವನ್ನು ವಹಿಸಿದ್ದಾರೆ. ಅವರೆಲ್ಲರ ಶ್ರಮ ಮತ್ತು ತಪಸ್ಸುಗಳ ಫಲವಾಗಿ ಈ ನಿಘಂಟಿನ ಯೋಜನೆ ೧೯೯೨ರ ಆರಂಭಕ್ಕೆ ಮುಗಿಯುವ ಭರವಸೆ ನಮಗಿದೆ ಎಂದು ತಿಳಿಸಲು ಸಂತೋಷವಾಗುತ್ತದೆ.

ಈ ನಿಘಂಟುವಿನ ೬ನೇ ಸಂಪುಟವನ್ನು ಕನ್ನಡಿಗರ ಕೈಯಲ್ಲಿರಿಸಲು ನಿಜವಾಗಿಯೂ ಹೆಮ್ಮೆಯಾಗುತ್ತದೆ. ಇದಕ್ಕೆ ಸಂಬಂಧಿಸಿದ ಎಲ್ಲರಿಗೂ ಹೃತ್ಪೂರ್ವಕವಾದ ಕೃತಜ್ಞತೆಗಳು.

ಬೆಂಗಳೂರು
೨೮-೧೨-೧೯೯೦

ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ
ಅಧ್ಯಕ್ಷರು

**ಪಾಳುಗ್ಗಮಣ** (ನಾ). [ಜೈನ] ಉಪವಾಸದಿಂದ ಮರಣ ಹೊಂದುವಿಕೆ; ಪ್ರಾಯೋಪಗಮನ : ಬಲದೇವಾಚಾರ್ಯ್ಕರ ಪಾಳುಗ್ಗಮಣ (ಎಕ. II, ೬೨; ಸ. 750). [< ಸಂ. ಪ್ರಾಯೋಪಗಮನ]

**ಪಾಂಕ್ತ** (ಗು). ೧. ಕ್ರಮಬದ್ಧವಾದ ; ಸಮಗ್ರವಾದ. (ನಾ). ೨. ಕ್ರಮಬದ್ಧವಾದುದು ; ಸಮಗ್ರವಾದುದು : ಹೊಸಮಾರ್ಗದ ಗ್ರಂಥಕರ್ತನು . . . ಜನಾಂಗಗಳ ಚರಿತ್ರೆಗಳನ್ನೂ ಮನುಷ್ಯಜಾತಿಯ ಪಾಂಕ್ತವಾದ ಅಭ್ಯುದಯವನ್ನೂ ವಿವರಿಸುವನು (ಗ್ರಂಥಾ. ೯೯) ; ಎಲ್ಲಾನೂ ಪಾಂಕ್ತ ಆಗಿ ಆಗಬೇಕು. ಬಾಚೂ ಏನೂ ತಪ್ಪೂ ಹಾಂಗಿರ್ಲ (ದೀಶನಿ. ೨೮) ; ಇಂಥ ಪೂರ್ವಸಂಬಂಧಕಲ್ಪನೆಯಿಂದ ಕವಿಯ ಬಹುಶ್ರುತತ್ವ ಪಾಂಕ್ತವಾಗಿ ಪ್ರಕಾಶವಾಗುತ್ತದೆ (ಸಂಜಂಶ. ೧೭೦). [ಸಂ.]

**ಪಾಂಕ್ತೇಯ** (ಗು). ೧. (ಭೋಜನಕ್ಕೆ) ಜೊತೆಗೆ ಕುಳಿತುಕೊಳ್ಳಲು ಯೋಗ್ಯವಾದ. (ನಾ). ೨. ಜೊತೆಯಲ್ಲಿರಲು ಯೋಗ್ಯವಾದುದು ; ಸಹವಾಸಯೋಗ್ಯವಾದುದು : ಛಂದಸ್ಸೇ ಸಾಧುಕಾವ್ಯಭಾಷೆಯ ಏಕಮಾತ್ರ ಪಾಂಕ್ತೇಯವೆಂದು ಗಣ್ಯವಾಗಿತ್ತು (ಸಿಪಿಂಠ. II, ೩೦೯). [ಸಂ.]

**ಪಾಂಗ** 'ಪಂಗ$_1$' ನೋ.

**ಪಾಂಗತ**, ಪಾಂಗಿತ (ನಾ). ಕ್ರಮಬದ್ಧವಾದುದು: ತೊಟ್ಟಿಲಲ್ಲಿರುವುದು; ಅಂಬೆಗಾಲಿಕ್ಕುವುದು . . . ಎಲ್ಲಾ ಅಟ್ಟದ ಮೆಟ್ಟಲಿನಂತೆ ಪಾಂಗತವಾಗಿದೆ (ಪಾಠಗೀ. ೦೬೯). **ಪಾಂಗಿತ** : ಆಯುವು ತೀರಿಯಲ್ಲವತರಿಸಿದಿರಿ ಪಾಂಗಿತದೊಳು ನಿಮ ಪಾಂಡುರಾಜನಿಗೆ (ಜನಭಾ. ೬೩-೨೩). [< ಸಂ. ಪಾಂಕ್ತ / ಮರಾ. ಪಂಗತ್]

**ಪಾಂಗಱ** (ಕ್ರಿ). ಕ್ರಮವನ್ನು ತಿಳಿ ; ಹದವನ್ನು ಅರಿತುಕೊಳ್ಳು : "ಪಾಂಗಱ (ಪಾಂಗು + ಅಱ)—ಪ್ರಕಾರಗಳುನೇ (ರೀತಿಯನ್ನು ತಿಳಿ)" (ಕಮಟಾ); ಅಲಸದೆ ಪೀನಂ ಪಡೆಯದೆ ಪಾಂಗಱದು ದೋಷಮಂ ಪಿಂಗಿಸಿ ತಪ್ಪದೆ ಬಗೆದು ಪೇಟ್ವುದು (ಕಶಬಾ. ೦-೯೯) ; ಕಮ್ಮಿತ್ತಾಗೆ ಪಾಂಗಱ ದಮ್ಮತೋಪಮಾನವಿದು ತಾನೆನೆ ವಾಟ್ಟುದು ಕ್ಷೀರದುಂಡೆಯಂ (ಲೋಕೋಪ. ೬-೧೦) ; ಅಱಯಲಾಗದು ನೆಟ್ಟನೆಂದು ಬಿಸುಟ್ಟುದುಂ ನಯಮಲ್ತು ಪಾಂಗಱವ ವಿಪ್ರವರರ್ಕಳಿಂ ಚರರಿಂ ವಿಚಾರಪರರ್ಕಳಿಂ ಪೆಱರುಮನ್ನರಿನಿನ್ನುಮಾರಯಿಸಿಂ ವಿದಗ್ಧರಿನೊಯ್ಯನೆತ್ತಱಯಲ್ಕೆಮೊ (ಕಾವ್ಯಾವ. ೯೩). [ಪಾಂಗು$_1$ + ಅಱ]

**ಪಾಂಗಟು** (ಕ್ರಿ). ಕ್ರಮತಪ್ಪು; ರೀತಿಗೆಡು : ಗಟಯಿಸಿದರ್ಥಂ ಸಲೆ ಪಾಂಗಟುಯದೆಯುಂ ಶಬ್ದವೊಂದದಿರ್ದೊಡೆ ಮುತ್ತುಂ ಮಟಿಸುಂ ಕೋದಂತಿರ್ಕುಂ (ಕಶಬಾ. ೩-೫) ; ಘಟಲನೆ ನಡೆಯೋದು ಜಡಿದು ಸಾರಥಿಯಂ ಪಾಂಗಟುದು ನಿಲಲೀಯದಲ್ಲಿಂದೆಟಿದುಪ್ಪಂತುಯ್ದುಳಾತ್ಮವರನಂ ನರನಂ (ಕಾವ್ಯಾವ. ೨೭). [ಪಾಂಗು$_1$ + ಅಟು$_1$]

**ಪಾಂಗಿತ** 'ಪಾಂಗತ' ನೋ.

**ಪಾಂಗು$_1$** (ನಾ). ೧. ಆಕಾರ; ಆಕೃತಿ ; ರೂಪು : "ಪರಿಜು ಪಾಂಗಾಕಾರಂ" (ಶಬ್ದಮಂ. ೬೨). ೨. ಬಗೆ ; ಪ್ರಕಾರ ; ರೀತಿ : "ಪಾಂಗುಂ ಪ್ರಕಾರಾಹ್ವಯಂ" (ಕರ್ಣಾಶಿ. ೯೪) ; ಇರುಳುಂ ಪಗಲುಂ ಪಲವುದಿವಸ ಮೊಂದೆ ಪಾಂಗಿನೊಳ್ ಪ್ರಳಾಪಿಸಿ (ವಡ್ಡಾರಾ. ೦೦೬-೦೦); ಈ ಮಾಂಗಳನಾವ ಪಾಂಗಿನೊಳ್ ನಾಂ ತಿಱುವೆಂ (ಪಂಪಭಾ. ೬೩-೯) ; ಲೋಕದೊಳಿನ್ನೀ ಪಾಂಗಿಂ ತಪದೊಳಿಸಗುವನ್ನರುಮೊಳರೇ (ಧರ್ಮಾಮೃ. ೨-೨೦೬) ; ಹೆಂಗಳ ರೂಪು ಗಂಡರಿಗೆ ಗಂಡರ ರೂಪು ಹೆಂಗಳ ಸೋಲಿವುದೆಂಬ ಪಾಂಗಲ್ಲವವನ ಚೆಲ್ವಿಕೆ (ಶಠತ. ೧-೩೦). ೩. ಸರಿ; ಸಾಟಿ : "ಪಾಂಗೆಂದು ಗೆತ್ತೆಂದು ಸದೃಶಭಾವಂ" (ಕಶಬಾ. ೫೯-೨೯೪) ; ಒಂಬತ್ತುಂ ವನ್ನದ ನುಣ್ಣದಿರ ನೆಗೆದು ನೀಳ್ದೊಂದೊಂದಱಿಯೊಳ್ ಕೂಡಿ ಮಯ್ವೆತ್ತಿರ್ದಿಂದಿರವಿಲ್ಲ ಪಾಂಗನೆನಸುಂ ಬಾಂಬಟ್ಟೆಯೊಳ್ ಬೀಱ ಕಣ್ಗೆತ್ತಂ ಸೋಲಮಾನೀವ ರನ್ನವಸರಂ ಚೆಲ್ವಾದುದು (ಶಬ್ದಾ. ೩೭); ಸೊಗಯಿಸುತಿರ್ದರಂದು ಪೂವಡಿಗವೆಣ್ಗಳು ಭಾವಕರ ಬಗೆಗೆ ಸಾರ್ಚ ಹಾಪಡಿಗವೆಣ್ಗಳ ಪಾಂಗನು (ಶೌಂದಪು. ೦೨-೩೦) ; ಸತ್ಯವಾಕ್ಯಂಗಳಂ ನುಡಿವಲ್ಲಿ ಸದ್ವಾಣಿ ನಿತ್ಯಹರ್ಷಾಂಗಿಯಪ್ಪುದಜಾಂದರಾಂಥತಿಯ ಪಾಂಗು (ಛಾಪತಿ. ೨-೦೭). ೪. ಎಡೆ ; ಅನುವು; ಆಸ್ಪದ: ಬೆಡಂಗಿಗೆ ಪಾಂಗಾಪ ದೇಸಿಗಂ . . . ಸೌಂದರ್ಯಕ್ಕೆ ನೆಲೆಯಾದಂದಕ್ಕಂ ಬೆಕ್ಕಸಂಬಟ್ಟು (ಶಾಂತಿಪು. ೩-೩೩೫) ; ಸಂಗತಮಣಿರುಚಿಯಂ ಜನಮುಂಗಾ ನಡೆಗೆಱಗುವೆಡೆಯೊಳಿನಿಸಿ ಸಱಯಲ್ ಪಾಂಗಾದುದು ಸುರಗಿರಿಕೊಟಂಗಳುಮಂ ಪ್ರಣತಸುರತಿರೀಟಂಗಳುಮಂ (ಅಜಪು. ೫-೫). ೫. ಅಂದ ; ಸೊಗಸು ; ಚೆಲುವು : ಬರ್ಪ ಪಾಂಗುಗುರ್ವಾಗಿರೆ ಚೆಲ್ವನಾಯ್ತುರಬೊಜಂಗರ ಲೀಲೆ ಸುರೇಂದ್ರಲೀಲೆಯಂ (ಶಂಕಥಾ. ೪-೬೭); ದರಹಾಸಂ ಭ್ರೂವಿಳಾಸಂ ನೆಗಟ್ದೆ ನಡುಗೆ ಮಧ್ಯಂ ಸ್ತನಾಭೋಗಬಾಧ್ಯಂ ಸ್ಫುರಿತಾಂಗಂ ಬೀಱ ಪಾಂಗಂ ನೆರೆದುಪುರುನಿತಂಬಂ ಪುರಸ್ತೀಕದಂಬಂ (ಜಗಪು. ೦೩-೭೮) ; ಪಾಂಗು ಬೆಡಂಗು ಭಂಗಿ ಸಂಗಳಿಸೆ ಸುಕಂಠಿ ಪಾಡಿ ಪುದಿದಳ್ ಮುದದಂ ನರನಾಥಚಿತ್ತದೊಳ್ (ಕುಸುಮಾ. ೧-೩೭). ೬. ಕ್ರಮವಾದುದು ; ಅನುಕೂಲವಾದುದು ; ಯೋಗ್ಯವಾದುದು : ವಿಜಯಾರ್ಧಾದ್ರಿಯನೆಯ್ದಿ ತತ್ಕಟಕದೊಳ್ ಬೀಡಿಂಗೆ ಪಾಂಗಾಗೆ ತದ್ವಿಜಯಶ್ರೀಕಟಕೋಪಮಂ ಕಟಕಮಣ್ಮಟ್ಟಾಗೆ ಬಿಟ್ಟಿರ್ಪಿನಂ ವಿಜಯಾರ್ಧೇಂದ್ರಕುಮಾರನಾ ನಗದಧೀಶಂ ಬಂದು ಕಂಡಂ (ಶಾಂತಿಪು. ೦೦-೨೪). 'ಪಾಂಗಱ', 'ಪಾಂಗುವೆಱು' ಪರಾ. ೭. ಸಂಬಂಧ ; ಹೊಂದಾಣಿಕೆ : ಬೂದಿ ಜೆಡೆ ಲಕ್ಕಣಂ ತಪಕಾದುವೆರೆಟ್ಕೊಣೆ ಶರಾಸನಂ ಕವಚಮಿವೆಂತಾದುವೊ ಮುತ್ತುಂ ಮೆಟಸುಂ ಕೋದಂತುಟೆ ನಿನ್ನ ತಪದ ಪಾಂಗೆಂತು ಗಡಾ (ಶಂಕಥಾ. ೭-೬೨); ಕಟುವೂವಾಗಲೊಡಂ ಪುಟ್ಟೆಟು ದೊರ್ವಯೆ ಪಾಱ ಪೋಪ ಕಂಪಿನ ತೆಱದಿಂ ಕಟುಕಟವಾದೊಡಲಿಂ ಪಾಂಗುಟುಯದೆ ಪಱಪಟ್ಟು ಪೋದುದಸು ಮುನಿಪತಿಯಾ (ಧರ್ಮಾಮೃ. ೦೦-೩೯). [ದೇ. ॥ ತಮಿ. ಪಾಙ್ಕು ; ಮಲ. ಪಾಙ್ಙ್, ಪಾಙ್ಕು]

**ಪಾಂಗು$_2$** 'ಪಾಗು$_1$' ನೋ.

**ಪಾಂಗುವಡೆ** (ಕ್ರಿ). ಅಂದವನ್ನು ಪಡೆ ; ಚೆಲುವಾಗು : ಮುತ್ತಿನ ಸೂಸಕವ ಸೇರಿಸಿದಳೊರ್ವ ಲಲಿತಾಂಗಿ ಪಾಂಗುವಡೆಯೆ (ಶೌಂದಪು. ೦೩-೩೭). [ಪಾಂಗು$_1$ + ಪಡೆ$_1$]

**ಪಾಂಗುವೆಱು** (ಕ್ರಿ). ಕ್ರಮಬದ್ಧವಾಗು : ಅಸದೃಶಮೆನೆ ಮುನ್ನಂ ಶಬ್ದಶಾಸ್ತ್ರಾದಿ ವಿದ್ಯಾವಿಸರಮನುಚಿತಾಲಾಪಂಗಳಿಂ ಪಾಂಗವೆತ್ತೋದಿಸಿದಂ (ಸುಕುಮಾ. ೭-೯೭). [ಪಾಂಗು$_1$ + ಪೆಱು$_1$]

**ಪಾಂಚಜನ್ಯ** (ನಾ). ೧. ಕೃಷ್ಣನ ಶಂಖ ; IP 'ಪಂಚಜನ' ಎಂಬ ರಾಕ್ಷಸನ ಮೂಳೆಗಳಿಂದ ಮಾಡಿದ ಶಂಖ : "ನಾರಾಯಣನ . . . ಶಂಖಮಂ ಪಾಂಚಜನ್ಯಮೆಂಬುದು" (ಪಲಾಯು. ೭೩-೨೭); ಇಕ್ಕಿ ಪಂಚಜನನಂ ತತ್ಪಂಚಜನಾಸ್ಥಿಜನಿತಮಂ ಪಾಂಚಜನ್ಯಶಂಖಮನುಪೇಂದ್ರನೀಟ್ಕೊಂಡೊಲವಿಂ (ಜಗಪು. ೭-೨೩) ; ಮುರವಿಜಯ ನಿಜಪಾಂಚಜನ್ಯಮನಿರದ ಫಲುಗುಣ ದೇವದತ್ತಸ್ಫುರಿತರವವನು ರಚಿಸಿದನು (ಕುಮಾವ್ಯಾಶೀ. ೩-೨). ೨. ಕಶ್ಯಪ, ವಸಿಷ್ಠ, ಪ್ರಾಣ, ಆಂಗೀರಸ ಮತ್ತು ಚ್ಯವನ ಎಂಬ ಐದುಜನ ಋಷಿಗಳು ಮತ್ತು ಅವರಿಂದ ಪ್ರವೃತ್ತವಾದ ಐದು ಕುಲಗಳು. ೩. ಬೆಂಕಿ ; ಅಗ್ನಿ. ೪. ಚಂದ್ರ. ೫. ಮರ ; ವೃಕ್ಷ : "ಅನಲ ಹಿಮಾಂಶು ಶಂಖ ಕುಲಭೇದಗಳಿಂತಿವು ಪಾಂಚಜನ್ಯಮೆಂದೆನಿಕುಂ" (ನಾನಾರ. ೬೭). ೬. ಒಂದು ಬಗೆಯ ಹುಲ್ಲು ; ಜಂಬುಹುಲ್ಲು. ೭. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ಪಂಚವ್ರತ ಇಂದ್ರಿಯ . . . ಹರವಕ್ತ್ರ ಪಾಂಚಜನ್ಯ

ಶುಕ್ಲ—ಇಂತಿನಿತುಂ ಶಿಕ್ಕೆ ಹೆಸರು (ವ್ಯವಹಾ. ೧೦-೩೩). "ಅಗ್ನಿ ಕುಜಂ ದ್ವಿಜರಾಜಂ ಶಂಖಂ ತಾಂ ನಿಜವೈದಲೆ ಲೆಖ್ಖಿ ಪಾಂಚಜನ್ಯಮೆನಿಸ್ಕ್ಯಂ" (ನಾನಾಕಂ. ೯೮). [ಸಂ.]

**ಪಾಂಚಭೌತಿಕ** (ಗು). ೧. ಪಂಚಭೂತಗಳಿಂದಾದ ; ಪ್ರಾಕೃತಿಕವಾದ ; ಜಡಪ್ರಕೃತಿಯ : ವ್ಯಕ್ತಸ್ಥಿತಿಗೆ ಹೇತುಭೂತವಾದ ಪಾಂಚಭೌತಿಕ ಶರೀರತ್ಯಾಗವೇ ಸಾವು (ಭಾರಧ. ೧೦೯). (ನಾ). ೨. ಪಂಚಭೂತಗಳಿಂದಾದುದು ; ಪ್ರಾಕೃತಿಕವಾದುದು : ದಶಾವತಾರರೂಪಗಳು ಅಜ್ಞರ ದೃಷ್ಟಿಗೆ ಪಾಂಚಭೌತಿಕವಾಗಿ ತೋರುತ್ತಿದ್ದರೂ ಪ್ರಾಜ್ಞರ ದೃಷ್ಟಿಗೆ ಜ್ಞಾನಾನಂದಮಯವಾಗಿಯೇ ತೋರುವುವು (ಹಂರಸಾ. ೨೮೩). [ಸಂ.]

**ಪಾಂಚರಾತ** (ನಾ). ೧. ವೈಷ್ಣವಾಗಮಗಳಲ್ಲಿ ಒಂದು ; ✱ ವಾಸಿಷ್ಠ, ನಾರದೀಯ, ಕಾಪಿಲ, ಗೌತಮೀಯಾಯಕ, ಸನತ್ಕುಮಾರೀಯ ಎಂಬ ಐದು ವಿಧ ಜ್ಞಾನಗಳನ್ನು ಉಪದೇಶಿಸುವ ಒಂದು ತತ್ವಶಾಸ್ತ್ರ : ಪಾಂಚರಾತ್ರ ಮೊದಲಾದ ಕೆಲವು ಆಗಮಗಳು ವೇದಾಂತವಿರುದ್ಧವಲ್ಲವೆಂದು ಕೆಲವರಿಂದ ಪರಿಗ್ರಹಿಸಲ್ಪಟ್ಟಿರುವುವು (ಹಂರಸಾ. ೯೪) ; ಶ್ರೀಪಾಂಚರಾತ್ರಾಗಮವು ಅನಂತ, ಗರುಡ, ವಿಷ್ವಕ್ಸೇನ, ಬ್ರಹ್ಮ, ಇಂದ್ರರೆಂಬ ಐದು ದೇವತೆಗಳಿಗೆ ಐದು ರಾತ್ರಿಗಳಲ್ಲಿ ಭಗವನ್ಮುಖದಿಂದ ಉಪದಿಷ್ಟವಾಗಿ ಅನ್ವರ್ಥವಾಗಿದೆ (ಭಾರಧ. ೭೭). 'ಪಂಚರಾತ್ರ' ಪರಾ. ೨. ಪಾಂಚರಾತ್ರಾಗಮವನ್ನು ಅನುಸರಿಸುವ ವೈಷ್ಣವಪಂಗಡ ಮತ್ತು ಅದರ ಸಂಪ್ರದಾಯ. [ಸಂ.]

**ಪಾಂಚರಾತ್ರಿಕ** (ನಾ). ವೈಷ್ಣವ ಪಂಗಡದವನು ; ಪಾಂಚರಾತ್ರ ಸಂಪ್ರದಾಯದ ಅನುಯಾಯಿ : ಪಾಷಂಡಿಗಳು ಮಹಾಕ್ರೂರರಹ ಪಾಂಚರಾತ್ರಿಕರಾಗಿರೇಯೆಂದು ಗೌತಮಂ ಶಾಪವಿತ್ತಂ (ವೀಕ್ಷೈಪು. ೪-೨-೨೫). [ಸಂ.]

**ಪಾಂಚವಾರ್ಷಿಕ** (ಗು). ೧. ಐದು ವರ್ಷ ವಯಸ್ಸಾದ. ೨. ಐದು ವರ್ಷಗಳ ಅವಧಿಗೆ ಸಂಬಂಧಿಸಿದ : 'ಪಾಂಚವಾರ್ಷಿಕಯೋಜನೆ' ಪರಾ. [ಸಂ.]

**ಪಾಂಚವಾರ್ಷಿಕಯೋಜನೆ** (ನಾ). ವ್ಯವಸ್ಥಿತವಾಗಿ ಮಾಡಬೇಕಾದ ಕಾರ್ಯಗಳ ರೂಪರೇಷೆಯ ವಿಧಾನಗಳನ್ನು ಐದು ವರ್ಷಗಳಿಗೊಮ್ಮೆ ಮುಂಚಿತವಾಗಿ ರೂಪಿಸಿಕೊಳ್ಳುವುದು : ಭಾರತದ ಮೊದಲನೆಯ ಪಾಂಚವಾರ್ಷಿಕಯೋಜನೆಯಲ್ಲಿ ಕೃಷಿಗೆ ಪ್ರಾಧಾನ್ಯವಿತ್ತು (ರೂ೨). 'ಪಂಚವಾರ್ಷಿಕಯೋಜನೆ' ಪರಾ. [ಪಾಂಚವಾರ್ಷಿಕ+ಯೋಜನೆ]

**ಪಾಂಚಾಲ**, ಪಾಂಚಾಳ (ಗು). ೧. ಪಾಂಚಾಲದೇಶಕ್ಕೆ ಸಂಬಂಧಿಸಿದ : ಮುತ್ತಿಗೆ ತೆಗೆಸಿದರು ಪಾಂಚಾಲನಾಯಕರು (ಕುವ್ಯಾಲ. ೧೫-೪೪). (ನಾ). ೨. ಒಂದು ದೇಶದ ಹೆಸರು : ಲಾಳ ಮಾಳವ . . . ಪಾಂಚಾಲಮತ್ಸ್ಯಕುರಂಗವಂಗಕಳಿಂಗಬಂಗಾಳ (ಬಸಪು. ೬-೧೮). ೩. ಪಾಂಚಾಲದೇಶದ ಅರಸು : ಮರುಳೆ ಪಾಂಚಾಲನ ಕುಮಾರಿಯ ವರಕಟಾಕ್ಷದ ಬೀಸುವಲೆಯಲಿ . . . ಧರಣಿಪಾಲಮೃಗಂಗಳನು ಸಲೆ ಬರಿಸಿಸದೆದನು (ಕುವ್ಯಾಲ. ೦೪-೦೮) ; ಬಂಗಾಳ ಬಾಹ್ಲೀಕ ಘೋಟ ವರಪಾಂಚಾಲ . . . ಧರಣೀಪಾಲತತಿ ಸಂದಣಿಸಿದುದು ಸಾಕೇತನಗರಿಯಲಿ (ತೊರರಾ. ೦-೬-೦೮). ೪. ಉಪ್ಪಾರ : ಕಲ್ಲಾನೆ ಕುಟುಕೋರು ಚೇಣೂರು ಪಾಂಚಾಲ್ರು ಚಿನ್ನಾದಾ ಉಳಿಯಾ ಮಸಕೊಂಡು ರಂಗಯ್ನ ಕಲ್ಲುಮಾಳಿಗೆ ಕಡದಾರೋ (ಜಾಪ್ಯಹ. ೫೦). ೫. ಮರಗೆಲಸ ಮಾಡುವವನು ; ಬಡಗಿ : ಪಾಂಚಾಲರಿಗೆ ಆಚಾರಿ ಎಂದೂ . . . ಹಳೆಪೈಕರಲ್ಲಿ ಪೂಜಾರಿ ಎಂದೂ . . . ಕೌಟುಂಬಿಕ ಹೆಸರುಗಳಿವೆ (ತುಳುಜಾ. ೧೮೪). ೬. = ಪಾಂಚಾಲಿ ೪ : ದ್ವಿತ್ರಿಪದರಚಿತವೃತ್ತಿ ವಿಚಿತ್ರೌಪಮ್ಯಾದ್ಯಲಂಕ್ರಿಯಾಸಮೇತಂ ಶ್ರೋತ್ರಸುಖಲಲಿತಮೃದುಪದ ಪಾತ್ರಂ ಪಾಂಚಾಲರೀತಿಯೆನೆ ಪೆಸರ್ವಡೆಗುಂ (ಕಾವ್ಯಾವ. ೭೮೪).

**ಪಾಂಚಾಳ** : ೧. ಪಾಂಚಾಳೋತ್ತಮಮಹೇಂದ್ರನಗರದಿಂದಂ ಬಂದಂ (ನೇಮಿಪು. ೯-೬೮). ೨. ಪಾಂಚಾಳ ಗಂಗಾಂತರ ಕೌಶಾಂಬಿ . . . ಮತ್ಸ್ಯದೇಶಕ್ಕೆ ತಸ್ಕರರೋಗಾದಿ ಭಯಂಗಳಂ ಜನಿಯಿಸುಂ (ಜಟ್ಟಿಮ. ೧೩-೭೦). ೭. ಪಂಚಕಾರುಕರು ; ✱ ಉಪ್ಪಾರ, ಕಮ್ಮಾರ, ಬಡಗಿ, ಕಂಚುಗಾರ ಮತ್ತು ಸೊನ್ನಾರರೆಂಬ ಐದು ಶಾಖೆಗಳಿಗೆ ಪಾಂಚಾಳರೆಂಬ ಹೆಸರು ಇರುವುದು ; ಬಡಗಿ, ನೇಕಾರ, ಕೆಲಸಿಗ, ಅಗಸ ಮತ್ತು ಸಮಗಾರ ಎಂಬ ಐದು ವರ್ಗಗಳಿಗೂ ಇದೇ ಹೆಸರುಂಟು : ಹೆಸರಿಸಿದ ಪಾಂಚಾಳ ಚಿಪ್ಪಿಗ ಕುಶಲಕಾರ್ಯದ ಶಿಲ್ಪಿಕ . . . ಮುಚ್ಚಿಗರೆಸೆವ ವೀಧಿಗಳೊಳಗೆ ಬರುತಿರ್ದನು ದಶಗ್ರೀವ (ತೊರರಾ. ೨-೩೦). [ಸಂ.]

**ಪಾಂಚಾಲಿ** (ನಾ). ೧. ಪಾಂಚಾಲದೇಶದ ಹೆಂಗಸು. ೨. ಪಾಂಚಾಲದೇಶದ ರಾಜಪುತ್ರಿ ; ದ್ರೌಪದಿ : ಪಾಂಚಾಲಿಯುಂ ಗಂಧದಾಯಕಿಯಾಗಿರ್ಪಿನಮಂದು ಮತ್ಸ್ಯಗೃಹದಿಂದೀ ನಿಗ್ರಹಂ ಪೊಲ್ಲದೇ (ಗದಾಯು. ೩-೩೪) ; ಪಾಂಚಾಲಿಯ ಮನೋರಥಶಾಲಿಯಲಿ ಸಾರಿದರಲ್ತೆ ಸಭೆಯಲಿ ಮಹೀಸುರರ (ಕುವ್ಯಾಲ. ೧೫-೧) ; ಪಾಂಚಾಲಿ . . . ಸಲಹೆಂದು ಹರಿಚರಣಕೆಱಗಿದಳು (ಜೈಮಿಭಾ. ೨-೫೦). ೩. ಗೊಂಬೆ ; ಪುತ್ತಳಿ. ೪. [ಕಾವ್ಯಮೀ] ಕಾವ್ಯದ ರೀತಿಗಳಲ್ಲಿ ಒಂದು : ಗೌಡಿ ವೈದರ್ಭಿ ಪಾಂಚಾಲಿಯೆಂಬ ರೀತಿತ್ರಯಂಗೂಡಿ (ವಿವೇಕ. ೨೭೭) ; ವಾಮನನು . . . ಓಜಸ್ಸು ಮತ್ತು ಕಾಂತಿಗಳುಳ್ಳದ್ದು ಗೌಡಿಯೆಂದೂ ಮಾಧುರ್ಯ ಸೌಕುಮಾರ್ಯಗಳುಳ್ಳದ್ದು ಪಾಂಚಾಲಿಯೆಂದೂ ಹೇಳುತ್ತಾನೆ (ಕೃಬಿಧಿ. ೨೩೩). ೫. [ನಾಟ್ಯ] ನಾಲ್ಕು ಬಗೆಯ ವೃತ್ತಿಗಳಲ್ಲಿ ಒಂದು : ಮನಾವತಿಯುಂ ದಾಕ್ಷಿಣಾತ್ಯೆಯುಂ ಪಾಂಚಾಲಿಯುಂ ಮಾದ್ರುಮಾಗಧಿಯುಮೆಂಬ ನಾಲ್ಕುಂ ವೃತ್ತಿಯುಮಂ . . . ಪಾತ್ರಸಂಕ್ರಮಣದೊಳ್ ನೆಟಿಯ ತೋಱಿ (ಅಜಪು. ೫-೨೮ ವ). [ಸಂ. ಪಾಂಚಾಲೀ]

**ಪಾಂಚಾಲಿಕೆ**, ಪಾಂಚಾಳಿಕೆ (ನಾ). ೧. ಗೊಂಬೆ ; ಪುತ್ತಳಿ : ಚಿಂತಾಮಣಿಯುನು ರತ್ನಪಾಂಚಾಲಿಕೆಸಂತಾನವನು ದಿವ್ಯಭೂಮಿ ಎಂತು ಪಡೆವುದಂತೆ ಜೈನಕುಮಾರನಾ ಕಾಂತೆ ಪೆತ್ತಳು ಭೂಮಿ ನಲಿಯೆ (ವರ್ಧಕ. ೧೦-೮೧). ೨. ದ್ರೌಪದಿ. ೧, ೨ : ಆ ಮಂಟಪಂ . . . ಪಾಂಚಾಲಿಕೋದಂಚಿತವಾಗಿಯುಂ ಕಲಶಜಾತಸಮನ್ವಿತಮುಂ . . . ಎನಿಸಿರ್ದುದು (ರಾಜಶೇ. ೮-೮ ವ). ೩. = ಪಾಂಚಾಲಿ ೪ : "ಪಾಂಚಾಲಿಕಾ" ಬಂಗಾಲದ ಒಂದು ಕಾವ್ಯಪ್ರಕಾರ (ಇಶ್ವಕ. ೧೬೩ ಅಡಿಟಿ).

**ಪಾಂಚಾಳಿಕೆ** : ೧. "ಚೇಲ ಶಿಲಾದಿಕೃತಂ ಪಾಂಚಾಳಿಕೆ ತಾನಕ್ಕುಮೆಸೆವ ಪುತ್ರಿಕೆ" (ವಸ್ತುಕೋ. ೫೦-೩೮) ; ಸೂರ್ಯನೋ ಕಲಶಮೋ ದಿಗ್ಭಿತ್ತಿಯೋ ಭಿತ್ತಿಯೋ ದೊರೆವೆತ್ತಾ ದೆಸೆವೆಣ್ಗಳೋ ಪರಿಲಸತ್ಪಾಂಚಾಳಿಕಾಜಾಳಮೋ ಪಿರಿದುಂ ನಿಟ್ಟಿಸಬಾರದೆಂದೆನೆ ಜನಂ (ಎಕ. XI, ದಾವಣ. ೨೫-೭೧; 1224). ೩. ಕಾರುಣ್ಯಂ ಹಾಸ್ಯಂ ಶೃಂಗಾರಮಿವಿನಿತ್ತಱಿಕೊಳಮಕ್ಕೆ ವೈದರ್ಭಿ ಮನೋಹಾರಿ ಪ್ರಳಯೋದ್ಭುತರಸ ವೀರರಸಂಗಳ್ಗೆ ಪೇಱ್ಗೆ ಪಾಂಚಾಳಿಕೆಯಂ (ಕಾವ್ಯಾವ. ೭೮೮). [ಸಂ. ಪಾಂಚಾಲಿಕಾ]

**ಪಾಂಚಾಲೆ** (ನಾ). ದ್ರೌಪದಿ : ಪಾಂಚಾಲೆ ಪೊಕ್ಕಳು ಭದ್ರಮಂಟಪ ಶಾಲೆಯನು ಮರಳಿದುದು ಮನ್ಮಥನೊಡ್ಡು ಸತಿಯೊಡನೆ (ಕುವ್ಯಾಲ. ೧೪-೧) : ದೇವ ನೀನಂದು ಗಾಂಡೀವಮಂ ತನಗಿತ್ತೆ ಭಾವಿಸಲ್ ಪಾಂಚಾಲೆ ನಿನ್ನೊಳುದ್ಭವಿಸಿದಳ್ ನಾವು ಲೋಗರೆ ನಿನಗೆ (ಜೈಮಿಭಾ. ೬-೪೩). [ಸಂ. ಪಾಂಚಾಲಾ]

**ಪಾಂಚಾಳ** 'ಪಾಂಚಾಲ' ನೋ.

**ಪಾಂಚಾಳಿಕೆ** 'ಪಾಂಚಾಲಿಕೆ' ನೋ.

**ಪಾಂಜ** (ನಾ). (ಕರಾ) ಒಂದು ಬಗೆಯ ಹಾರಾಡುವ ಅಳಿಲು: "ಪಾಂಜ ಎಂದರೆ ಪಾರಂಬೆಕ್ಕು" . . . ಒಂದು ಜಾತಿಯ ಹಾರಾಡುವ ಅಳಿಲು. ನೀವು ಕಾಡಲ್ಲಿ ಕೆಂಚಳಿಲನ್ನು ನೋಡಿಲ್ಲವೆ? ಇದೂ ಅದೇ ಜಾತಿಯದು (ಪಟ್ಕಕ. ೩೬).
[←ತುಳು. ಪಾಂಚ=ಒಂದು ಬಗೆಯ ಕಾಡುಬೆಕ್ಕು]

**ಪಾಂಜರಪೋಳ, ಪಿಂಜರಾಪೋಲು** (ನಾ). ೧. ವಯಸ್ಸಾಗಿ ನಿಃಶಕ್ತವಾದ ಅಥವಾ ಅಂಗಹೀನವಾದ ದನಗಳನ್ನು ಮುಫತ್ತಾಗಿ ನೋಡಿಕೊಳ್ಳುವ ಸ್ಥಳ; ಧರ್ಮಾರ್ಥಗೋಶಾಲೆ: ಇವರನ್ನು ಬಲಾತ್ಕಾರವಾಗಿ ಎತ್ತಿಕೊಂಡು ಹೋಗಿ ಯಾವುದಾದರೊಂದು ಪಾಂಜರ ಪೋಳ(ಧರ್ಮಾರ್ಥ ದನದ ಹಕ್ಕೆ)ದಲ್ಲಿ ಬಿಟ್ಟು ಬರಬೇಕೆಂಬ ರೊಚ್ಚು ಒಮ್ಮೊಮ್ಮೆ ಉಕ್ಕಿ ಬರುತ್ತದೆ (ದೇಶಸ್ಥ. ೦೦೦); ನೂರಾರು ದನಗಳಿರುವ ಪಾಂಜರಪೋಳಗಳಲ್ಲಿಯೂ ಡೇರಿಫಾರ್ಮುಗಳಲ್ಲಿಯೂ ಹಿನೆಯ ಳನೆಯ ಯಂತ್ರ ಇಟ್ಟರೆ ಅನುಕೂಲವಾಗುವುದು (ಗೋಗ್ರಾಸ. ೩೯). **ಪಿಂಜರಾ ಪೋಲು**: ೨. (ಆಲಂ) ಮುದುಕರು ಮಾತ್ರ ಅಧಿಕಾರದಲ್ಲಿರುವ ವ್ಯವಸ್ಥೆ: ಆ ಕಚೇರಿ ಒಂದು ಪಿಂಜರಾಪೋಲು. ಬರೀ ಮುದುಕರೇ ತುಂಬಿದ್ದಾರೆ (ರೂಢಿ).
[←ಹಿಂ. ಪಿಂಜರಾಪೋಲ್; ಮರಾ. ಪಾಂಜರಪೋಳ, ಪಾಂಜರಾಪೋಳ, ಪಿಂಜರಾಪೋಳ; ಗುಜ. ಪಿಂಜರಾಪೋಳ, ಪಿಂಜರಾಪೋಲು]

**ಪಾಂಟ** (ನಾ). ಮಂತ್ರಪೂತವಾದ ದ್ರವ (?): ಚನ್ನಬಸವಗೆ ಬಸವ ಪಾಂಟದಿಂ ಗುರುವಾಗಿ ಸುಜ್ಞಾನಬೋಧೆಯಂ ಉಂಟುಮಾಡೆನಲ- (ಶ್ರಶುಕೃ. ೭-೩೩); ಎಂಟುಧೀರರನೆಂಟುಪುಷ್ಪದ ಮೇಲಿಟ್ಟು ಪಾಂಟದಿಂ ಕೈಲಾಸಕೊಯ್ದು ಪರಶಿವನಿಪಂ (ಶ್ರಶುಕೃ. ೭-೦೪೮). [<ಸಂ. ಫಾಂಟ]

**ಪಾಂಟತ್ವ** (ನಾ). ಮಂತ್ರಪೂತವಾದ ದ್ರವದ ಗುಣ (?): ಪಾಂಟತ್ವ ದಿಂದೆ ಪರಿಪರಿಯ ಶಾಖಾದಿಗಳ ನಾಂಟಿ . . . ರಾಜಿಸುವರಲ್ಲಿಪ್ಪ ಜನಪದಗಳು (ಶ್ರಶುಕೃ. ೩-೨೦); ಸ್ವರ್ಗದೊಳಗೆ ದೇವೇಂದ್ರನು ಪಾಂಟತ್ವದಿಂದೆ ನಮುಚಿಯ ಕೊಂದು ಶ್ರೇಷ್ಠನಾಗಿರಲು (ಶ್ರಶುಕೃ. ೩-೭೪).
[ಪಾಂಟ+-ತ್ವ]

**ಪಾಂಟಿಮುತ ?** (ನಾ). (?): ಮುತ್ತರು ಡಂಗೆಗೊಂಡು ಬಡಿಯಲ್ ಚಲ ದಿಂದೆನಸುಂ ದುರಾಗ್ರಹಂ ಚಿತ್ತದೊಳಾಗೆ ನಿನ್ನ ಬಟಿಯಂ ಬರಲೀ ಮುಳಿಸೇಂ ಟಮಾಳದಿಂ ಸುತ್ತುವರ್ಗಲ್ಲದೊಲ್ಲೆ ಬಿಡು ನೀನೆನಗಿಲ್ಲಳ ಪೂಜಾ ತೋಟಿ ವೇಟುತ್ತಿರಲಾಸೆಯುಂ ಬಿಸುಟು ನೀಂ ಕಳೆ ಪಾಂಟಿಮುತಕ್ಕೆ [ಪಾಠಾಂ. ಕಳೆ ಪಾಂಡಿಮುತಕ್ಕೆ, ಕಟು ಪಾಂಟಿಮುತಕ್ಕೆ] ಸ್ವೈರಿಸೆಂ (ಕಾವ್ಯಾ.ಪ. ೪೬೦).
[?]

**ಪಾಂಡಪ್ಪ** (ನಾ). ಒಬ್ಬಾತನ ಹೆಸರು: ಕಬ್ಬಲಿಗೆ ಪಡೆವೋದಲ್ಲಿ ಕೊಮಾಲರಾ ಮಗನಪ್ಪಣ್ಣಪ್ಪನ್ ಕಾಳೆಗದುಳ್ಸತ್ತಲ್ಲಿ (ಎಕ. X. ಮುಳಬಾ. ೨೩೫-೮; 760). [ಪಾಂಡು₁+ಅಪ್ಪ₁]

**ಪಾಂಡರ** (ಗು). ೧. ಬಿಳಿಯ ಛಾಯೆಯ; ಬಿಳಿಬಣ್ಣದ: ಋತು ವರ್ಣಕ್ರಮದಿಂದಮೊಂದಿದ ದಿನು ನೀಲಾಭದಿಂ ಸ್ನಿಗ್ಧಮುಚ್ಛಕರಂ ಪಾಂಡರ ಮಾಗಿ ಟಕ್ಕೆಸೆಯೆ ಮೇಣ್ ಬೆಳ್ಪಾಗೆ ವೈಡೂರ್ಯದಾಕೃತಿಯಿಂ ತತ್ಪತಿ ಸೂರ್ಯನಲ್ಲಿ ಶುಭದಂ (ಲೋಕೋಪ. ೯-೩೬). ೨. ಬಣ್ಣಗುಂದಿದ; ಪೇಲವವಾದ. (ನಾ). ೩. ಬಿಳುಪಾದುದು; ಬಿಳಿದು: "ಗೌರಃ . . . ಅವದಾತಃ. ಪಾಂಡರಃ—ಈ ೧೨ ಬಿಳಿದು" (ಹಲಾಯು. ೦೨೦-೪೭). ೪. ಬಿಳಿಬಟ್ಟೆಯನ್ನು ಧರಿಸಿದ ಭಿಕ್ಷು. ೫. ಕಾವಿಕಲ್ಲು; ಗೈರಿಕಧಾತು.
[ಸಂ.]

**ಪಾಂಡರಂಗಪಲ್ಲಿ** (ನಾ). ಒಂದು ಊರಿನ ಹೆಸರು: ಮಹಾದೇವಪಗಿರೇಃ ಪೂರ್ವತ ಅನೇಪಂ ಚಾಲುಕನ್ನಕ ದುದ್ದಪಲ್ಲಿ ಸಹಿತಾ ಪಾಣ್ಡರಙ್ಗಪಲ್ಲೀ ಪ್ರತಿಪ(ಪಾ)ದಿತೇ . . . ಆಜ್ಞಾಪಯತೀತಿ (ಪ್ಪಕಿಂ. ೦೬೬, ೦೦೬-೦೬; ಸು. ೬೧೦). [ಪಾಂಡರಂಗ₁+ಪಲ್ಲಿ₂]

**ಪಾಂಡವ** (ನಾ). ೧. ಪಾಂಡುರಾಜನ ಮಗ; P ಧರ್ಮರಾಯ, ಭೀಮ, ಅರ್ಜುನ, ನಕುಲ ಹಾಗೂ ಸಹದೇವ ಈ ಐವರಿಗೂ ಅಥವಾ ಈ ಐವರಲ್ಲಿ ಯಾರಿಗಾದರೂ ಈ ಹೆಸರು ಅನ್ವಯವಾಗು ವುದು: "ಪಾಂಡವಂ ಧರ್ಮಜಂ ಯುಧಿಷ್ಠಿರನು ಧರ್ಮಪುತ್ರ ನೆಂದೆನಿಸು" (ಶಬ್ದಗಾ. ೭೮-೩); ಆನೆಂಬುದನಿಂಬಾಕೆಯ್ಯೆಯಪ್ಪೊಡೆ ಪಾಂಡವರ ನೊಡಂಬಡಿಸಿ ಸಂಧಿಯಂ ಮಾಡಿ ಪೂರ್ವಕ್ರಮದೊಳ್ ನಡೆವಂತು ಮಾಳ್ಪೆಂ (ಗದಾಯು. ೩-೪೪ ವ); ಪಾಂಡವಪರಾಜಿಯೊಳೆನ್ನಂ ಕಂಡಾಂಪ ವರೊಳರೆ (ಜೇಮಿಭಾ. ೦೨-೦೪೪); ನೀವು ಸುಖದಲಿ ಪಾಂಡವರನು ಜೀವಿಸುವುದೆಮಗುಳ್ಳಿದ ಯದುಭೂಪಾವಳಿಯ ಕೃಪೆ ಮಾಡಬೇಕು (ಕುಮಾವ್ಯಾ. ೦-೩೩). ೨. ಬಿಳಿಯ ಹಕ್ಕಿ; ಬೆಳ್ಳಕ್ಕಿ. ೩. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ: ಶರ ಬಾಣ ವಿಷಯ ಪಾಂಡವ ಪುರವೈರಿಮುಖಂಗಳೈದಱ ನಾಮಂ (ವ್ಯವಹಾ. ೯-೦೯).

**ಪಾಂಡವರ ಪೂಜೆ**=ದೀಪಾವಳಿಯಲ್ಲಿ ಪಾಂಡವರ ಗುರುತಾಗಿ ಸಗಣಿ ಬೆನಕಗಳನ್ನು ಇಟ್ಟು ಮಾಡುವ ಪೂಜೆ; P "ಪಾಂಡವರು ಅಜ್ಞಾತ ವಾಸವನ್ನು ಮುಗಿಸಿ ಕೌರವರ ಕಣ್ಣಿಗೆ ಕಂಡುದು ಬಲಿಪ್ರತಿಪದೆಯ ದಿವಸವೇ. ಪಾಂಡವರು ಪುಣ್ಯಪುರುಷರು. ಅವರ ಕುರುಹು ಗಳನ್ನೂ ಮಾಡಿ ಈ ದಿವಸ ಪೂಜಿಸುವುದುಂಟು" (ಹಾತಕ್ಕೂ. ೦೪೯): ಪಾಂಡವರ ಪೂಜೆಯನ್ನು ದೀಪಾವಳಿಯಲ್ಲಿ ಮಾಡುತ್ತಾರೆ (ರೂಢಿ). **ಪಾಂಡವರ ಹಬ್ಬ** = ದೀಪಾವಳಿಯಲ್ಲಿ ಪಾಂಡವರ ಪ್ರತಿಮೆಗಳನ್ನು ಪೂಜಿಸಿ ಮಾಡುವ ಹಬ್ಬ: ಪರವ್ವ ಪ್ರತಿವರುಷವೂ 'ಪಾಂಡವರ ಹಬ್ಬ'ಕ್ಕೆ ತನ್ನ ಮಗಳನ್ನು ಕರೆಯಿಸಿಯೇ ಕರೆಯಿಸುತ್ತಾಳೆ (ಗಂಗಾಗಾ. ೬೪).
[ಸಂ.]

**ಪಾಂಡವರ ಮುದ್ದು** (ನಾ). ಬಿಳಿನೈದಿಲೆಯ ಗಡ್ಡೆ: "ಪ್ರಪೌಂಡರೀಕಂ, ಪೌಂಡರ್ಯಂ—೨ ಪುಂಡರೀಕವೆಂಬುವ ಗ್ರಂಥ್ಯದ್ರವ್ಯದ ಹೆಸರುಗಳು. ಪೆಂಡಾರಗಡ್ಡೆ, ಪಾಂಡವರ ಮುದ್ದು, ಇದು ಬಿಳೀನೈದಿಲೆಗಡ್ಡೆ" (ಸಿದ್ಧಾಂತ. ೦೪೦). [<ಪಾಂಡವ₁+ಮುದ್ದು (<ಮುದ್ರೆ)]

**ಪಾಂಡವರ ಹರಿವೆ** (ನಾ). ಒಂದು ಬಗೆಯ ಹರಿವೆಸೊಪ್ಪು: ಸುನಿಷಣ್ಣವು (ಪಾಂಡವರ ಹರಿವೆ) ಅಗ್ನಿವರ್ಧಕ (ಅಷ್ಟಾಂಗ. ೦೩೩-೭೦ ಅರ್ಥ); ಕುಟುಂಜರ (ಪಾಂಡವರ ಹರಿವೆ) . . . ಜೀವ್ಯಮಧು ಇವೆಲ್ಲ ಮಧುರ (ಅಷ್ಟಾಂಗ. ೦೩೬-೯೩ ಅರ್ಥ). [<ಪಾಂಡವ₁+ಹರಿವೆ₂ (<ಹಱುಹೆ)]

**ಪಾಂಡವರಾಜಾನ್ನ** (ನಾ). ಒಂದು ಬಗೆಯ ಧಾನ್ಯ: "ಮುನಿಧಾನ್ಯ—ಪಾಂಡವರಾಜಾನ್ನ" (ಓಷಧಿ. ೦೨೬). [ಪಾಂಡವ₁ + ರಾಜಾನ್ನ]

**ಪಾಂಡಿ₁** (ನಾ). ೧. ಹೆಣ್ಣುಮಕ್ಕಳು ಆಡುವ ಒಂದು ಬಗೆಯ ಆಟ; ನೆಲದ ಮೇಲೆ ಪಕ್ಕಪಕ್ಕದಲ್ಲಿ ನಾಲ್ಕು ನಾಲ್ಕರಂತೆ ಎಂಟು ಚೌಕ ವಾದ ಮನೆಗಳನ್ನು ಬರೆದು, ಕಲ್ಲಿನ ಬಿಲ್ಲೆಯೊಂದನ್ನು ಕುಂಟುತ್ತಾ ಮನೆಯಿಂದ ಮನೆಗೆ ತಳ್ಳಿಕೊಂಡು ಹೋಗುವ ಆಟ; ಕುಂಟಾಟ: ಪಾಂಡಿ ಆಡೋಣ ಬರ್ತೀಯಾ? (ರೂಢಿ). ೨. ಕುಂಟಾಟವನ್ನು ಆಡಲು ಬಳಸುವ ಚಪ್ಪಟೆಯಾದ ಕಲ್ಲು; ಬಚ್ಚ: ನನ್ನ ಪಾಂಡೀನ ಎಷ್ಟು ಸಲ ಹಾಕಿದರೂ ಇನ್ನೂ ಒಂದೂ ಹಣ್ಣಾಗಲಿಲ್ಲ (ರೂಢಿ). ೩. ಕುಂಟಾಟದಲ್ಲಿ ಗೆದ್ದ ನಂತರ ಹಣ್ಣಾದ ಮನೆಯನ್ನು ಸೂಚಿ ಸಲು ಹೇಳುವ ಮಾತು: ನಾನೇ ಗೆದ್ದೆ. ನನ್ನದು ಐದು ಪಾಂಡಿ ಆಯಿತು (ರೂಢಿ). [←ತಮಿ. ಪಾಣ್ಡಿ]

**ಪಾಂಡಿ₂** (ನಾ). ಒಂದು ಬಗೆಯ ದೋಣಿ,—ನಾವೆ: ಅವರ ಖಟಾಟೋಪವೇನಿ ದ್ದರೂ, ಅದು ಕಡಲಿಗಿಳಿದಾಗ, ಮಾರಿಬಲೆ ಎಳೆಯುವಾಗ, ಪಾಂಡಿಯಲ್ಲಿ

ಕುಳಿತು ಹುಟ್ಟುಹಾಕುವಾಗ_ಆಗಲೇ ಕಾಣಬೇಕು (ಜಾರುದಾ. ೩೨) : ಮರಕಾಲರಲ್ಲಿ ಹಲವರು ಪಾಂಡಿಗಳಲ್ಲಿ ಪರದೇಶದ ವ್ಯಾಪಾರ ಮಾಡಿ ಪಾಂಡಿ ಎಂಬ ಹೆಸರನ್ನು ಗಳಿಸಿಕೊಂಡಿದ್ದರು (ತುಳುನಾ. ೫೪).
[←ಮಲ. ಪಾಣ್ಡಿ]

**ಪಾಂಡಿ$_3$** (ನಾ). ಒಂದು ಬಗೆಯ ಹುಲ್ಲು (?): ಪುಣಿಸೂರ್ಪ್ಪೂರ್ಲ ನೆಲ್ಲು ಪಾಣ್ಡಿಯುಮಳಿವದು (ಪ್ಯಾಆರಿ. ೧೯೩೦, ೩೭-೮; 800).
[?. / ತಮಿ. ಪಾಣ್ಟಿ. / ಸಂ. ಪಾಂಡು]

**ಪಾಂಡಿತ್ಯ** (ನಾ). ಅರಿವು ; ಜ್ಞಾನ : ದಶದಿಶೆಗಳೊಳೆಲ್ಲಂ ನಿನ್ನ ಪಾಂಡಿತ್ಯದ ಯಶಮಂ ಪಸರಿಸಿ . . . ತಾಯ್ತಂದೆಗಂ ಸಂತೋಸಂ ಮಾಡಿಯುಮರಂ ಬಿಡಿಸಿಯೊಡಂಬಡಿಸಿ ಬಂದೊಡೆ ತಪಮಂ ಕುಡಲಕ್ಕುಂ (ವಡ್ಡಾರಾ. ೬೪-೧೫); ಈ ಸರಸಪಾಂಡಿತ್ಯಮೀ ನಿರಹಂಕರಣಭಕ್ತಿ . . . ಈ ಘನತೆ ಆರಿಗುಂಟು (ಬಸಪು. ೨-೩೧) ; ಈಗಿನ ಕಾಲದಲ್ಲಿ ಪಾಂಡಿತ್ಯವಿಲ್ಲದವರೆಷ್ಟೋ ಮಂದಿ ಪಂಡಿತೋತ್ತಮರೆಂದು ಬಿರುದಾಂಕಿತರಾಗಿದ್ದಾರೆ (ರಾಯುಕ. ೩೮). [ಸಂ.]

**ಪಾಂಡಿಮ** (ಗು). ೧. ಬಿಳುಪಾದ ; ಬೆಳ್ಳಗಾದ : ಚಂದನಾಪಾಂಡಿಮ ಗಾತ್ರಂ ಗ್ರೀಷ್ಮಸಾಯಂಸಮಯದೊಳೆಸೆದತ್ತಂದು ಬಾಲಾಕಲಾಪಂ (ಚಂದ್ರಪು. ೯-೮೪). (ನಾ). ೨. ಬಿಳಿಯ ಬಣ್ಣ ; ಧವಳತೆ : ಘನತ್ಪಾಂಡಿಮ ಭಾಸ್ವತ್ಪುರ ಶಶಿ ದಿನಕೃತ್ಪವಮಾನ ಸುಹೃತ್ಪರಪಸು ವಿಕಿರತ್ಪಟುನಯನ (ಉದ್ಭದೇ. ೭-೨೬). [ಸಂ. ಪಾಂಡಿಮನ್]

**ಪಾಂಡಿಯ** (ನಾ). ಪಾಂಡ್ಯದೇಶದ ರಾಜನ ಹೆಸರು : ವಲ್ಲಿವರಸದೇವಯ ಮೂಡಲ ಗೋವನ್ ಬರುಪಾನಟ್ಟಿದ × × × ಆಗಳು ಪಾಣ್ಡಿಯನ ಮೇಗೆ ಎಟ್ಟಿ ಪಟಿಯುಜಿಜಿಜಿದೊ (ಎಕ. ೫ ಶ್ರೀಬಿಪಾ. ೩೦-೯ ; ಸು. 800 ?). [←ತಮಿ. ಪಾಣ್ಡಿಯನ್./ ಸಂ. ಪಾಂಡ್ಯ]

**ಪಾಂಡಿಸೆಟ್ಟಿ** (ನಾ). ಒಬ್ಬಾತನ ಹೆಸರು : ಪಾಂಡಿಸೆಟ್ಟಿ ನಾಲ್ಬಾಸಿರಂ (ಎಇ. XIV, ೯೧-೨೩ ; 725). [<ಪಾಂಡ್ಯ + ಸೆಟ್ಟಿ]

**ಪಾಂಡು$_1$** (ಗು). ೧. ಹಳದಿ ಛಾಯೆಯುಳ್ಳ ಬಿಳಿಯ ಬಣ್ಣದ : ರಾಜಿಸುತಿರ್ದಮಂದರುಣಪಂಕಜ ಪಾಂಡುಪಯೋಜನೀಳನೀರೇಜ ಕದಂಬಕಂಗಳ . . . ವರ್ಣಸಂಕರತೆಯಿಂದೆ ಕೊಳಂಗಳ್ (ಜಗಿ. ೪-೬೫). (ನಾ). ೨. ಬಿಳಿಯ ಬಣ್ಣ ; ಧವಳತೆ : "ಗೌರಃ, ಶ್ವೇತಃ . . . ಪಾಂಡುಃ. ಅವದಾತಃ , ಪಾಂಡರಃ __ಈ ೧೨ ಬಿಳಿದು" (ಹಲಾಯು. ೧೨೦-೪೩). ೩. ಒಂದು ಬಗೆಯ ರೋಗ ; ಕಾಮಾಲೆ ; ಅರಿಸಿನ ಮುಂಡಿಗೆ ರೋಗ : ತಪಸದ ಎಲೆ, ಆನೆನೆಗ್ಗಿಲು . . . ನೀರಲ್ಲಿ ಕಲಸಿ ಪ್ರಯೋಗಿಸಲು ಪಾಂಡು, ಮೈ ಬೆಳ್ಳಪ್ಪುದಂ, ಗುದದೊಳ್ಪುಟ್ಟಿದ ವ್ಯಾಧಿಗಳ ಕೆಡಿಸುಗುಂ (ಖಿಪ್ಯಖಿ. ೨೦). ೪. ಒಬ್ಬ ರಾಜ ; ಪಾಂಡವರ ತಂದೆ : ಎನಗಂ ಪಾಂಡುಗಮಿಲ್ಲ ಭೇದಮೆಳೆಯಂ ಪಟ್ಟಾಳ್ವಂ (ಪಂಪಭಾ. ೧೩-೯) ; ಈತನೇ ಧೃತರಾಷ್ಟ್ರನೆರಡನೆಯಾತ ಪಾಂಡು (ಕುಮ್ಯಾಆ. ೩-೧೧). [ಸಂ.]

**ಪಾಂಡು$_2$**, ಪಾಡ್ (ನಾ). ಭೂಮಿಯನ್ನು ಅಳೆಯುವ ಒಂದು ಪ್ರಮಾಣ ; ಒಂದು ಬಿಘೆಯ $\frac{೧}{೨೦}$ನೆಯ ಭಾಗ : ೨೦ ಕಾಠಿಗೆ ೧ ಪಾಂಡು, ೨೦ ಪಾಂಡಿಗೆ ೧ ಬಿಘೆ, ೧೨೦ ಬಿಘೆಗೆ ೧ ಚಾಹೂರು (ಕಛಾಗಿ. ೨೯೦). **ಪಾಡ್** : ೨೦ ಪಾಡ್—ಬಿಘೆ ೧ (ಭೂಮಿಆ. ೬೮).
[←ಮರಾ. ಪಾಂಡ್]

**ಪಾಂಡುಕ** (ನಾ). ೧. ಹಳದಿಛಾಯೆಯ ಬಿಳಿಬಣ್ಣ. ೨. ಕಾಮಾಲೆ ರೋಗ ; ಅರಿಸಿನಮುಂಡಿಗೆರೋಗ. ೩. ಪಾಂಡುರಾಜ. ೪. ಒಂದು ಬಗೆಯ ಪಡವಲ ; ಕಹಿಪಡವಲ ; "ಆ ಪಾಂಡುಕಂ ಕಹಿಪಡಲವಕ್ಕು" (ಮಂಗರಾ. ೪೪-೪೪). ೫. [ಜೈನ] ಸುಮೇರು ಪರ್ವತದ ಮೇಲಿರುವ ಭದ್ರಪಾಲ, ನಂದನ, ಸೌಮನಸ ಮತ್ತು ಪಾಂಡುಕವೆಂಬ ನಾಲ್ಕುವನಗಳಲ್ಲಿ ಕೊನೆಯದು ; P ಇದರಲ್ಲಿ ಜನ್ಮಾಭಿಷೇಕಕಲ್ಯಾಣಕ್ಕಾಗಿ ವಿನ್ಯಾಸಲಾಗಿರುವ ನಾಲ್ಕು ಶಿಲಾಪೀಠಗಳಿವೆ : ವಿನುತೋದ್ಯತ್ಪಲ ಭದ್ರಶಾಲೆಯೆಸೆದತ್ತೀ ಭದ್ರಶಾಲಂ ಸುನಂದನವಾಗಿರ್ದುದು ದಿವ್ಯನಂದನವಿದಿಂತೊಪ್ಪಿರ್ದುದೀ ಸಾರಸೌಮನಸಂ ವಿಕಾಸಿಕುಸುಮಶ್ರೀಪಾಂಡುಕಂ ಪಾಂಡುಕಂ ಮನಕಿಂಬಾಯ್ತಾದೆ ನೋಡ ತನ್ನಿ ಗಿರಿಗೀ ನಾಲ್ಕುಂ ಬನಂ ಜವ್ವನಂ (ಪುಷ್ಪಪು. ೧೧-೫೬). 'ಪಾಂಡುಕವನ' ಪರ್ಯಾ. ೬. ಪಾಂಡುಕವನದಲ್ಲಿರುವ ಅರ್ಧಚಂದ್ರಾಕೃತಿಯ ನಾಲ್ಕು ಪೀಠಶಿಲೆಗಳಲ್ಲಿ ಮೊದಲನೆಯದು ; P ಈ ನಾಲ್ಕೂ ಶಿಲೆಗಳು ನೂರುಯೋಜನ ಉದ್ದವಾಗಿಯೂ ಐವತ್ತುಯೋಜನ ಅಗಲವಾಗಿಯೂ ಎಂಟುಯೋಜನ ಎತ್ತರವಾಗಿಯೂ ಇದ್ದು ಪ್ರತಿಯೊಂದು ಶಿಲೆಯ ಮೇಲೆ ನಡುವೆ ತೀರ್ಥಂಕರನಿಗಾಗಿ ಒಂದು, ದಕ್ಷಿಣಕ್ಕೆ ಸೌಧರ್ಮೇಂದ್ರನಿಗಾಗಿ ಒಂದು ಹಾಗೂ ಉತ್ತರಕ್ಕೆ ಈಶಾನೇಂದ್ರನಿಗಾಗಿ ಒಂದು— ಹೀಗೆ ಮೂರು ಪೂರ್ವಾಭಿಮುಖವಾದ ಸಿಂಹಾಸನಗಳಿವೆ ಎಂಬ ನಂಬಿಕೆ ಇದೆ : ಕ್ಷೀರೋದವಾರಿಧಾರಾಪೂರದ ಚೆಲ್ವಿಂಗೆ ಸೆಣಸುವಂತಭಿನವನೀಹಾರದ ಪೂರದ ಬೆಳ್ಪನೆ ಬಾಯಿಸ್ಸಿ ಪಾಂಡುಕಶಿಲಾತಲಂ ಸೊಗಯಿಸುಗುಂ (ಆದಿಪು. ೭-೭೪) ; ಬಳಸಿ ವಿದಿಕ್ಚತುಷ್ಟಯಮನುತ್ತರಪೂರ್ವದಿನರ್ಧವೃತ್ತಮಂ ಪೋಳೆವುವೆ ಪಾಂಡುರಪ್ರಭೆಯ ಪಾಂಡುಕಮುಂ ಕಮಿಲಾದ ರತ್ನಕಂಬಳಮುಮೆನಿಪ್ಪ ಜೈನಸವನೋತ್ಸವಪೀಠಶಿಲಾಚತುಷ್ಟಯಂ (ಮಲ್ಲಿಪು. ೧೨-೯೦). ೭. ನವನಿಧಿಗಳಲ್ಲಿ ಒಂದು; ಹದಿನೆಂಟು ಪ್ರಕಾರದ ಧಾನ್ಯಗಳನ್ನು ಒದಗಿಸುವ ಸಾಮರ್ಥ್ಯವುಳ್ಳ ನಿಧಿ : ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಆದಿಪು. ೧೫-೩ ವ); ಧಾನ್ಯಂಗಳು ಹದಿನೆಂಟುಪ್ರಕಾರವ ತಾನೀವ ಪಾಂಡುಕ ನಿಧಿಯು (ದ್ವಾದಶಾ. ೧೦-೪೨೮).
[ಸಂ.]

**ಪಾಂಡುಕಂಬಲ**, ಪಾಂಡುಕಂಬಳ (ನಾ). ೧. ಬಿಳಿಯ ಕಂಬಳಿ: **ಪಾಂಡುಕಂಬಳ** : ೧. ತಗುಳ್ದೈಕಿಲಾಕ್ರಮಿಸೆ ಲೋಕಮನೆಯ್ದೆ ಸರೋಜಸಂಭವಂ ಪೊದಿಸಿದ ಪಾಂಡುಕಂಬಳಮಿದೆಂಬವೊಲಾದುದು ಮಂಜಿನುರ್ವರಂ (ಪುಷ್ಪಪು. ೬-೩೮). ೨. [ಜೈನ] ಪಾಂಡುಕವನದಲ್ಲಿರುವ ನಾಲ್ಕು ಪೀಠಶಿಲೆಗಳಲ್ಲಿ ಒಂದು : ಪಾಂಡುಕ ಪಾಂಡುಕಂಬಳ ರಕ್ತಕಂಬಳಾತಿರಕ್ತಕಂಬಳ ವಿಶಾಲರತ್ನಶಿಳಾತಳಪ್ರಶಿಷ್ಟಿತ ಭಗವಜ್ಜನ್ಮಾಭಿಷೇಕಸಿಂಹಾಸನಾಳಂಕೃತಮುಮಾಗಿ (ಆದಿಪು. ೧-೪೯ ವ) ; ವಿಳಸತ್ಪಾಂಡುಕ ಪಾಂಡುಕಂಬಳ ಶಿಲಾಪಟ್ಟಂ ಶಿಲಾಪಟ್ಟಕಂಬಳ ಸತ್ಕಾಂತ್ಯತಿರತ್ನಸಂಚಳ ಶಿಲಾಪಟ್ಟಂಗಳಂ ನಾಲ್ಕು ಕೋಣ್ಗಳೊಳೊಪ್ಪಿರ್ಪುವು . . . ಜಿನಪ್ರಜಕ್ಕೆ ಸವನಸ್ಥಾನಂಗಳೀ ಶೈಳದೊಳ್ (ಪುಷ್ಪಪು. ೧೧-೫೮). P ಪಾಂಡುಕ, ಪಾಂಡುಕಂಬಳ, ರಕ್ತಕಂಬಳ, ಅತಿರಕ್ತಕಂಬಳ ಎಂಬ ಈ ನಾಲ್ಕು ಪೀಠಶಿಲೆಗಳು ಅನುಕ್ರಮವಾಗಿ ಭರತಕ್ಷೇತ್ರ, ಪಶ್ಚಿಮವಿದೇಹ, ಐರಾವತ ಹಾಗೂ ಪೂರ್ವವಿದೇಹದ ತೀರ್ಥಂಕರರ ಜನ್ಮಾಭಿಷೇಕಕ್ಕೆ ನಿಯಮಿತವಾಗಿವೆ ಎಂಬ ನಂಬಿಕೆ ಇದೆ.
[ಸಂ.]

**ಪಾಂಡುಕಂಬಲಿ**, ಪಾಂಡುಕಂಬಳಿ (ನಾ). ಬಿಳಿಯ ಕಂಬಳಿಯನ್ನು ಹೊದಿಸಿದ ರಥ. **ಪಾಂಡುಕಂಬಳಿ** : "ಪಾಂಡುಕಂಬಳೀ . . . ಬಿಳೀ ಕಂಬಳಿ, ಪ್ಲಾನಲ್ ಮುಂತಾದವುಗಳಿಂದ ಹೊದಿಸಲ್ಪಟ್ಟ ರಥದ ಹೆಸರು" (ಸಿದ್ಧಾಂತಿ. ೨೫೩). [ಸಂ. ಪಾಂಡುಕಂಬಲಿನ್]

**ಪಾಂಡುಕಂಬಳ** 'ಪಾಂಡುಕಂಬಲ' ನೋ.

**ಪಾಂಡುಕಂಬಳಿ** 'ಪಾಂಡುಕಂಬಲಿ' ನೋ.

**ಪಾಂಡುಕವನ** (ನಾ). = ಪಾಂಡುಕ ೫ : ಭದ್ರಸಾಲಾನಂದನ ಸೌಮನಸ ಪಾಂಡುಕವನವಿರಾಜಿತಮುಂ (ಆದಿಪು. ೧-೪೯ ವ); ಪಾಂಡುಕವನಕ್ಕದರ್ದತ್ತು ಸುರೇಂದ್ರವಾರಣಂ (ಶಾಂತಿಪು. ೧೨-೧೦೧). [ಪಾಂಡುಕ + ವನ]

**ಪಾಂಡುಕಾಮಾಲೆ** (ನಾ). ಕಾಮಾಲೆ ; ಅರಿಸಿನಮುಂಡಿಗೆ ರೋಗ : ವಜ್ರಗಿರಿ [illegible]ೇರ ಆಕಳ ಮಜ್ಜಿಗೆಯಲ್ಲಿ ಕೊಳ್ಳಲು ಪಾಂಡುಕಾಮಾಲೆ ಮಾಣ್ಗು [illegible] ೨೬೦). [ಪಾಂಡು₁ + ಕಾಮಾಲೆ]

**ಪಾಂಡುಗಾತ್ರ** (ನಾ) ಬಿಳಿಬಣ್ಣದ ಮೈಯುಳ್ಳವನು ; ನಾರದ : ಪಾಂಡುಗಾತ್ರಂ ತಳರ್ದನಫಲತಾದಾತ್ರನಾ ಬ್ರಹ್ಮಪುತ್ರಂ (ಜಗ. ೨-೪೪). [ಪಾಂಡು₁ + ಗಾತ್ರ]

**ಪಾಂಡುಚ್ಛತ್ರ** (ನಾ). ಬಿಳಿಯ ಕೊಡೆ ; ಶ್ವೇತಚ್ಛತ್ರ : ಜಾತಿವಾಜಿ ಸಮಾಜಂ ಮದವದ್ಗಜೇಂದ್ರಘಟೆ ಪಾಂಡುಚ್ಛತ್ರಷಂಡಂ ನಿಗುಂಬಿಸೆ ಪುತ್ರಂಗಿದಿರ್ವಂದರಂದರಸಿಯುಂ ಭೂಪಾಲನುಂ (ಶಾಂತಿಪು. ೬-೯೯) [ಪಾಂಡು₁ + ಛತ್ರ]

**ಪಾಂಡುದೇಹ** (ನಾ). ಬಿಳಿಯ ಮೈ ; ಧವಳಶರೀರ : ಮಹಾಪಾಂಡು ದೇಹಮುಮುಜ್ಜೃಂಭಿಪೆಜಂಕೆಯುಂ ಬಗೆಗೊಳಲ್ . . . ಅಬ್ಜಭವಹಂಸು ಪಾಜಿತಭ್ರಾಧ್ವದೊಳ್ (ಜಗ. ೧-೪೦). [ಪಾಂಡು₁ + ದೇಹ]

**ಪಾಂಡುಪಕ್ಷ** (ನಾ). ಪಾಂಡವರ ಪಕ್ಷಪಾತಿ : ಪಕ್ಷಿವಾಹನ ಪೂರ್ಣ ಲಕ್ಷಣ ಸರ್ವೇಶ ಮೋಕ್ಷದಾಯಕ ಪಾಂಡುಪಕ್ಷ (ಐದಾಕ್. ೭೭-೧). [ಪಾಂಡು₁ + ಪಕ್ಷ]

**ಪಾಂಡುಪಲ್ಲಿ** (ನಾ). ಒಂದು ಬಗೆಯ ಮರ ; ಬಿಳಿಯ ಕಡವ : "ಧೂಸರಾ—ಪಾಂಡುಪಲ್ಲಿ" (ಓಷ. ೬೨). [ಸಂ. ಪಾಂಡುಪಲ್ಲೀ]

**ಪಾಂಡುಪಿಂಡ** (ನಾ). ಕುದುರೆಯ ತಿಗದ ಕೆಳಗಿನ ಭಾಗ : ಊರುವಿನ ಕಣ್ಣದೆಡೆ ತಾನಾರಯರ್ ನೀಂ ಪಾಂಡುಪಿಂಡಮೆಂಬಭಿಧಾನಂ (ಅಶ್ವಶಾ. ೯-೫೪). [ಪಾಂಡು₀ + ಪಿಂಡ]

**ಪಾಂಡುಭೂಮಿ** (ನಾ). ಬಿಳಿಯ ಮಣ್ಣುಳ್ಳ ಭೂಮಿ ; ಮೊಗೆಮಣ್ಣಿನ ನೆಲ: "ಪಾಂಡುಭೂ(ಂ)ಮಿಃ, ಉದಗ್ಭೂ(ಮ)ಮಿಃ —೨ ಈ ಮೊಗೆಯ ಭೂಮಿ" (ಹಲಾಯು. ೫೬-೫). [ಪಾಂಡು₁ + ಭೂಮಿ]

**ಪಾಂಡುರ** (ಗು). ೧. ಬಿಳಿಯ ; ಬಿಳುಪಾದ : ಘನತರುಶಾಖಾ ಗ್ರಾಮಾಗ್ರನಿಭೃತಪಾಂಡುರಕಪೋತಪಂಕ್ತಿಪ್ರಕರಂ ನೆನೆಯಿಪುದು ಶೂನ್ಯ ಮಾಗಿಯುಮನೇಕಮುನಿಪಾಗ್ನಿಹೋತ್ರಧೂಮಾವನಿನ್ನುಂ (ಕಾದಂಪೂ. ೧೧೯); ರಂಭಿಸಿತ್ತು ರಘುರಾಮನ ಪಾಂಡುರದೇಹಮಂಡಲಂ (ಶಂಖಾರಾ. ೩-೧೫೨). (ನಾ). ೨. ಬಿಳುಪು ; ಬಿಳಿಯ ಬಣ್ಣವುಳ್ಳದು : "ಗೌರಃ . . . ಪಾಂಡುರಃ, ಪಾಂಡುಃ, ಅವದಾತಃ, ಪಾಂಡರಃ —ಈ ೧೨ ಬಿಳಿದು" (ಹಲಾಯು. ೦೨೧೦-೪೭); ಅಂಬಾಲೆ ಮದ್ರೂಪಮುಂ ಕಂಡು ಮೊಗಮಂ ಪಾಂಡುರಂ ಮಾಡಿದಳಪ್ಪುದಜಿಂದಾಕೆಗೆ ಮಗಂ ಪಾಂಡುರೋಗ ಸಂಗತನುಂ ಅತ್ಯಂತಪ್ರತಾಪನುಮಾಗಿ ಪಾಂಡುರಾಜನೆಂಬ ಮಗ ನಕ್ಕುಂ (ಪಂ. ಭಾ. ೧-೮೫ ವ). ೩. ತೊನ್ನು ; ಶ್ವೇತಕುಷ್ಠ : "ಪಾಂಡುಃ , ಪಾಂಡುರಃ —ಈ ೨ ಬಿಳಿಯ ಬಣ್ಣವುಂ, ರೋಗವುಂ, ರಾಜನುಂ" (ನಾಕಕ್. ೦೦೦). [ಸಂ.]

**ಪಾಂಡುರಂಗ₁** (ನಾ). ೧. ಬಿಳಿಯ ಬಣ್ಣದ ದೇಹವುಳ್ಳವನು. ೨. ಶಿವ ; ಈಶ್ವರ : ಪಾಂಡುರಂಗನ ಭಕ್ತರಂ ಭೂಮಂಡಲದೊಳಗೆ ಸುಳಿವ ಜಂಗಮಮಂಡಳಿಗಳಂ ಕರಸಿದರು ಪಡಿಹಾಜಿರಂ ಕಳುಹಿ (ಬಸಪು. ೯-೫); ಕಂಗಳು ಮೂರಿರ್ದಾಗಸಗಂಗೆಯನು ಧರಿಸಿ ತಿಂಗಳ ಸೂಡಿಯುಂ ಪಾಂಡುರಂಗ ತಾನಲ್ಲವದು ನಾರಂಗದ ಫಲ ಪಾಲ್ ಇಷ್ಟ ಲಿಂಗಾಭಿಷೇಕಂ (ಪ್ರಭುಲಾರ. ೨೦೮-೨೦). [ ಪಾಂಡುರ + ಅಂಗ₂ ]

**ಪಾಂಡುರಂಗ₂** (ನಾ). ಪಂಢರಾಪುರದಲ್ಲಿ ನೆಲಸಿರುವ ವಿಷ್ಣುವಿನ ಅವತಾರ ; ವಿಠ್ಠಲ : ನಾ ನಿನ್ನ ಮನಕೆ ಬಾರನೆ ಜಯ ಪಾಂಡುರಂಗ (ಪುರಂದ. ೩-೦೨೭ ಪಲ್ಲವಿ) ; ನಾಮದೇವ ಪಾಂಡುರಂಗನ ಭಕ್ತ (ಶಾರದ. ೨೯೨). [<ಪಂಢರ₂ (ಪ←ಮರಾ. ಪಂಢರ) + ರಂಗ]

**ಪಾಂಡುರಂಗವಿಟ್ಠಲ** (ನಾ). = ಪಾಂಡುರಂಗ₂ : ಅನಂತಕೋಟಿ ಬ್ರಹ್ಮಾಂಡನಾಯಕ . . . ಪಾಂಡುರಂಗವಿಟ್ಠಲ (ಪುರಂದ. ೯-೬೭ ಗದ್ಯ). [ಪಾಂಡುರಂಗ₂ + ವಿಟ್ಠಲ]

**ಪಾಂಡುರಕುಷ್ಠ** (ನಾ). ತೊನ್ನುರೋಗ : "ಪಾಂಡುರಕುಷ್ಠಂ ಶ್ವಿತ್ರಂ" (ಪಕ್ಷಿಕೋ. ೭೭-೩೭). [ಪಾಂಡುರ + ಕುಷ್ಠ]

**ಪಾಂಡುರತೆ** (ನಾ). ಬಿಳಿದಾಗಿರುವಿಕೆ ; ಧವಳತೆ ; ಬಿಳುಪು : ದುಗ್ಧಾರ್ಣವಫೇನಪಾಂಡುರತೆಯಂ ಕೆಯ್ಕೊಂಡು ಬೆಳ್ದಿಂಗಳಂತಿರೆ ಕೋಟಿಕ್ಕೆಸೆವುತ್ತರೀಯವಸನಂ ರಾಜೇಂದ್ರಚಂದ್ರಾಂಕನಾ (ಕಾದಂಪೂ. ೨೮). [ಸಂ. ಪಾಂಡುರತಾ]

**ಪಾಂಡುರಿತ** (ಗು). ೧. ಬೆಳ್ಳಗಾದ ; ಬಿಳಿಬಣ್ಣವನ್ನು ಹೊಂದಿದ : ಧವಳಕಲಮಾಕ್ಷತ ಕ್ಷೀರಗೌರಪಾಂಡುರಿತಕರ್ಕೇತನಕರಂಡಕಂಗಳಿಂ . . . ಮನಂಗೊಳಿಪ ದೇವಪೂಜಾಗೃಹಮಂ ಪೊಕ್ಕು (ಶಂಖಾಪು. ೦೨-೩ ವ) (ನಾ). ೨. ಬೆಳ್ಳಗಾದುದು : ಸುರಸ್ತ್ರೀಯರಪಾಂಗಾಕ್ಷಿಪ್ರಭಾಸಂಚಯ ದಿನುದಿತ ದೇಹಾಂಶುಸಂದೋಹದಿಂ ಮೇದುರ ಧಮ್ಮಿಲ್ಲದ್ಯುತಿಸ್ತೋಮದಿ ನಧರಮಯೂಖಾಳಿಯಿಂದೆತ್ತಲುಂ ಪಾಂಡುರಿತಂ ಪೈಸಂಗಿತಂ ಕರ್ಬುರಿತ ಮರುಣಿತಂ ವ್ಯೋಮರಂಗಂ (ಶಾಂತಿಪು. ೦೨-೭೮). [ಸಂ.]

**ಪಾಂಡುರೋಗ** (ನಾ). = ಪಾಂಡು₁ ೩ : ತ್ರಿಕಟುಕ, ಚಿತ್ರಮೂಲ, ಕಬ್ಬಿಣಕಿಟ್ಟ ಇವಂ ಚೂರ್ಣಮಂ ಮಾಡಿ ಅಳಲೆಯಲ್ಲಿ ಕುಡಿಯೆ ಪಾಂಡು ರೋಗ ಕೆಡುಗುಂ (ಪಶ್ವವೈ. ೦೭೨) ; ಪಾಂಡುರೋಗಕ್ಕೆ . . . ಅಭ್ರಕವು ಬಹಳ ಉಪಯುಕ್ತವಾಗುವುದು (ಶಿಕಾ. ೦೬). [ಪಾಂಡು₁ + ರೋಗ]

**ಪಾಂಡುರೋಗಿ** (ನಾ). ಕಾಮಾಲೆರೋಗದಿಂದ ನರಳುವವನು : ಪರ್ಮೆಯಾಹ ಪಾಂಡುರೋಗಿಯೆ ಮುನ್ನ ದೇವಗುರುಭಕ್ತರರ್ಥಾಪಹಾರೀ (ಬಸವಪು. ೯-೨೨-೫೫) ; ಅಂಜುತಳುಕುತ್ತ ಸುರತಂಗೆಯ್ಯಲಪರುಷರದಿ ನೆರೆ ಪಾಂಡುರೋಗಿ ಪುಟ್ಟುವನು (ಪವಮೋ. ೦೪-೪೪). [ಸಂ. ಪಾಂಡುರೋಗಿನ್]

**ಪಾಂಡುವಾತ** (ನಾ). ಒಂದು ಬಗೆಯ ವಾತರೋಗ (?) : ಒಂದು ಕವಾಟಕಂ ಕೊಂಡೊಡೆ ಪಂದ್ದಾಗ್ನಿ, ಶೂಲೆ, ಪಾಂಡುವಾತ, ಮೇಹ, ವಾತಶೂಲೆ ಇಷ್ಟು ಮಾಣುವುವೆ (ಪಶ್ವವೈ. ೪೫). [ಪಾಂಡು₁ + ವಾತ]

**ಪಾಂಡುಸಂಧಿ** (ನಾ). = ಪಾಂಡುಪಿಂಡ : ತ್ರಿಕದೆರಡುಂ ಕೆಲಕ್ಕುಂ ರೋಹಿಣಿಸಂಧಿಯೆಂಬ ಪೆಸರಕ್ಕುಂ ಅಲ್ಲಿಂ ಕಟಗೆ ಪಾಂಡುಸಂಧಿಯೆಂಬ ಪೆಸರಕ್ಕುಂ (ಅಶ್ವಶಾ. ೮೯-೯) ; ತಿಕ(ಗ)ದಿರ್ಕೆಲ ರೋಹಿಣಿಯೆನಿಸುಗು ವೃಷಮವದಟ ಕಟಿಗೆ ಪಾಂಡುಸಂಧಿಯೆ (ಅಶ್ವಶಾ. ೯-೪೫); ಪ ಇಲ್ಲಿ ಛಂದೋ ದೋಷವಿರುವುದರಿಂದ ಪಾಠ ಕೆಟ್ಟಿರಬಹುದು. [ಪಾಂಡು + ಸಂಧಿ]

**ಪಾಂಡ್ಯ** (ನಾ). ೧. ಭಾರತದ ದಕ್ಷಿಣಭಾಗದ ಒಂದು ದೇಶ ಪ ಮಧುರೆಯನ್ನು ರಾಜಧಾನಿಯಾಗಿ ಹೊಂದಿದ್ದ ದೇಶ : ಚೇರ ಪಾಂಡ್ಯ ಕಳಿಂಗ ಖಸಾನ್ಧ್ರಯಾದವಮಹೀಭುಜಮೌಳಿಮಣಿಪ್ರಭಾ ಪ್ರಭಾಲಿಂಗಿತಪಾದಪೀಠಂ (ಶಾಸ. XX, ೪೬-೫ ; 1072) ; ಚೋಳಚೇರ ಪಾಂಡ್ಯಕಳಿಂಗಾದಿ ವಿಷಯಂಗಳಂ ಸಾಧಿಸಿ ಕಪ್ಪಂಗೊಂಡು (ರಹ್ಮಾಮ್ಯ. ೦೦-೭೦). ೨. ಪಾಂಡ್ಯದೇಶದ ರಾಜ : "ಪಾಂಡ್ಯಃ = ಪ್ರಸ್ಥೇ ರಾಜನುಂ"(ನಾಕಕ್. ೦೦೦); ಪಳಯಾಚಿಕೊಳ್ದೇಪೆನಾಟನ್ನಿ ಪಾಡಿಸಿದೊಂ ಪಾಣ್ಡ್ಯನಾಸ್ (ಎಕ. XI, ಚಿತ್ರದು. ೭೭-೭೭ ; 937); ಎಲೆ ಚೊಳಕ್ಷಿತಿ ಪಾಳ ಸನ್ನಪಟ್ಟಿಯಂ ನೀಂ ನೀವಿಕೊಳ್ ನಿನ್ನನುಂ ಗೋಲೆಮಾಡ್ಪಿತ್ತಿರು

ಪಾಣ್ಡ್ಯ ಪಲ್ಲವ ಭಯಂಗೊಣ್ಣೋಡದಿರ್ (ಎಕ. II, ೫೯-೧೦೨; 974).
[ಸಂ.]

**ಪಾಂಡ್ಯಗದ್ಯಾಣ** (ನಾ). ಒಂದು ಬಗೆಯ ಚಿನ್ನದ ನಾಣ್ಯ ; ಪಾಂಡ್ಯ ಕುಲದವರಾದ ಆಳುಪರ ನಾಣ್ಯ : ಬಿದಿರಗದ್ದೆಯ ಮೇಲಿಕ್ಕಿದ ಪಾಣ್ಡ್ಯಗದ್ಯಾಣಂ ಮುವತ್ತುಮನಾ ಪೊನ್ನ ವೃದ್ಧಿಯುಮಂ ಅಗ್ರಕೆನ್ದು ಶಾಸನವಾಗೆ ಮಾಡಿಸಿದ ಧರ್ಮ (ಸೌಇಇ. VII, ೩೮೦-೧೬, 1140).
[ಪಾಂಡ್ಯ + ಗದ್ಯಾಣ]

**ಪಾಂಡ್ಯಗಾವುಂಡ** (ನಾ). ಒಬ್ಬಾತನ ಹೆಸರು : ಪಾಣ್ಡ್ಯಗಾವುಣ್ಡಂ ತಮ್ಮ ಕೆಱೆಯೊಳ್ ಮಾಧವಯ್ಯಂಗೆ ಇರ್ಕಣ್ಡುಗ ಮಣ್ಣ ಪೆನ್ನಸ ಬಿಟ್ಟ (ಎಕ. XV, ಹೊಳೆನ. ೭೮-೫; 974). [ಪಾಂಡ್ಯ + ಗಾವುಂಡ (<ಗಾಮುಂಡ)]

**ಪಾಂಡ್ಯವಿಲ್ಲರಸ** (ನಾ). ಒಬ್ಬಾತನ ಹೆಸರು : ಪಾಣ್ಡ್ಯವಿಲ್ಲರಸರಾ ಮಗನ್ ದೇವು (ಎಇ. II, ೧೯-೧; ಸು. 800). [ಪಾಂಡ್ಯ + ವಿಲ್ಲರಸ$_0$]

**ಪಾಂತ** (ನಾ). ಪಕಾರದಿಂದ ಕೊನೆಗೊಳ್ಳುವ ಶಬ್ದ : ಪಾಂತಕ್ಕೆ—ಅಪ್ಪು, ಆಲಿಂಗನೇ, ಉದಕೇ ಚ (ಕಮಿಥಾ); ಪಾಂತವರ್ಗಃ — ಪಕಾರವೇ ಅಂತವರ್ಣವಾಗುಳ್ಳ ನಾನಾರ್ಥ ಪದಸಮೂಹವು (ಸಿದ್ಧಾಂತಿ. ೪೦೫).
[ಪ$_1$ + ಅಂತ$_2$]

**ಪಾಂತಿಪುರ** (ನಾ). ಒಂದು ಊರಿನ ಹೆಸರು ; P ಧಾರವಾಡ ಜಿಲ್ಲೆಯ ಈಗಿನ ಹಾನಗಲ್ಲು : ಸ್ವಾಮಿಶರ್ಮ್ಮಣೇ ಪಾನ್ತಿಪುರ ವಿಷಯೇ, ಕಿಱುಕುಪ್ಪುಟೂರಗ್ರಾಮ[ಮ್] . . . ಸೋದಕಂ ಸದಕ್ಷಿಣಂ . . . . ದತ್ತವಾನ್ (ಕಇ. II, ೦-೦೦; ಸು. 600) ; ಬನವಾಸಿಪುರವರೇಶ್ವರಂ ಪಾಂತಿಪುರಾಧಿಪಂ ಶ್ರೀಮನ್ಮಯೂರವರ್ಮ್ಮದೇವಂ (ಸೌಇಇ. XX, ೨೯-೬೩ 1034). [ಪಾಂತಿ$_0$ + ಪುರ$_1$]

**ಪಾಂಥ** (ನಾ). ದಾರಿಹೋಕ ; ಪ್ರಯಾಣಿಕ : "ಪಯಣಂಬೋಪಾತಂ ಮಾರ್ಗಯಾಯಿ ತಾಂ ಪಥಿಕನಧ್ವನೀನಂ ಪಾಂಥಂ" (ಚಸ್ತುಕೋ. ೪೩-೨); ಎನಸುಂ ಕೈವಾರದಿಂದಿಲ್ಲದ ಗುಣಗಣಮಂ ರಾಗದಿಂ ಕೆಮ್ಮನೀ ಪಾಂಥ ನೊಳಧ್ಯಾರೋಪಣಂಗೆಯ್ದೆನಗನವರತಂ ಬಣ್ಣಿಸುತ್ತಿರ್ದಳ್ (ಕಾದಂಬ. ೨೬೨); ಯುವತಿಯರಾರ್ದು ಚಪ್ಪರಿಸೆ ಕೋಗಿಲೆಯಾಂಚರಮೆಂದು ಬೆರ್ಚಿ ಪಾಱುವು ಗಿಳಿವಿಂಡು ಪಾಂಥರೆರ್ದೆ ಪವ್ವನೆ ಪಾಱುವುವಾ ಪ್ರದೇಶದೊಳ್ (ಆನಂಪು. ೦-೬೨). [ಸಂ.]

**ಪಾಂಥಶಾಲೆ** (ನಾ). ಪ್ರಯಾಣಿಕರು ತಂಗುವುದಕ್ಕಾಗಿ ನಿರ್ಮಿಸಿದ ವಿಶ್ರಾಂತಿಗೃಹ ; ಛತ್ರ : ಪಾಂಥಶಾಲೆಗಳು ಮತ್ತು ಪಾಂಥಶಾಲಾ ಪಾಲಕರು (ಶಾರಾಶ.೨೯೦). [ಪಾಂಥ + ಶಾಲೆ$_3$]

**ಪಾಂಥಸ್ತ** (ನಾ). = ಪಾಂಥ : ಅಂದು ಗುಡಿಯಲ್ಲಿ ಅತಿಥಿ-ಅಭ್ಯಾಗತ-ಪಾಂಥಸ್ತರಿದ್ದರೆ, ಕಾಕಾ, ಅವರಿಗೆ ಗುಡಿಯಲ್ಲಿಯೇ ಪ್ರಸಾದವಾಗಬೇಕೆಂದು ವಿನಮ್ರವಾಗಿ ಬಿನ್ನವಿಸುತ್ತಾರೆ (ದೀಕಶ. II, ೬೯). [<ಪಾಂಥಸ್ಥ]

**ಪಾಂಥಸ್ಥ** (ನಾ). = ಪಾಂಥ : ಮಧ್ಯಾಹ್ನದ ಬಿಸಿಲಿನಲ್ಲಂತು ಸುತ್ತು ಮುತ್ತಲಿನ ಗ್ರಾಮಗಳು ಸದ್ಯಕ್ಕೆ ಸುಡುತ್ತವೆಂದು ಪಾಂಥಸ್ಥನು ಭ್ರಮೆಗೊಳ್ಳುತ್ತಾನೆ (ಕಭಾಗ. ೭); ತಾನೊಬ್ಬ ಮಾನವ, ಜನನ-ಮರಣಗಳ ನಡುವಿನ ದಾರಿಯನ್ನು ತುಳಿಯುವ ಪಾಂಥಸ್ಥ. ತನ್ನ ಮನಸ್ಸಿಗೆ ಶಾಂತಿಯಿಲ್ಲ ವೇಕೆ? (ಸಮುಕೀ. ೩೦೦). [ಸಂ.]

**ಪಾಂಪು** 'ಪಾಪು' ನೋ.

**ಪಾಂಬ** 'ಪಾಣ್ಬ' ನೋ.

**ಪಾಂಬಬ್ಬೆ** (ನಾ). ಒಬ್ಬಾಕೆಯ ಹೆಸರು : ಪಡಿಯಱ ದೊರಪಯ್ಯನ ಪಿರಿಯರಸಿ ಪಾಂಬಬ್ಬೆ ತಲೆಪಱಿದು ಮೂವತ್ತುಪರಿಸಂ ತಪಂಗೆಯ್ದುದ್ದಂ ನೋನ್ತುಚ್ಚಪವಾಣಾಮೇಱಿದರ್ (ಎಕ. VI, ಕಡೂರು. ೦-೦೫; 971).
[ಪಾಂಬು$_0$ + ಅಬ್ಬೆ$_1$]

**ಪಾಂಬುಳಕುಂಟೆ** (ನಾ). ಒಂದು ಸ್ಥಳದ ಹೆಸರು : ತೆಂಕ್ಷಣದೆಸೆ ಗುಡ್ಡೆಗಲ್ಲು ತುಮ್ಮುಕುಣ್ಟೆ ರೇವುಕುಣ್ಟೆ ಪಾಮ್ಬುಳಕುಣ್ಟೆ (ಎಕ. XII ಶಿರಾ. ೪೮-೩೩; 878). [ಪಾಂಬುಳ$_0$ + ಕುಂಟೆ$_3$]

**ಪಾಂಬೆ** 'ಪಾಣ್ಬೆ' ನೋ.

**ಪಾಂಶು** (ನಾ). (ಮಣ್ಣಿನ) ಧೂಳು ; ಹುಡಿ ; ರಜ : ತೋಯ . . . ಕ್ಷೀರಘೃತಂಗಳೊಳ್ ಸ್ನೇಹಗುಣಂ ಪ್ರಕರ್ಷಾಪ್ರಕರ್ಷದಿಂ ವರ್ತಿಸುಗುಂ ಪಾಂಶುಕಣಶರ್ಕರಾದಿಗಳಲ್ಲಿ ರೂಕ್ಷಗುಣಂ ವರ್ತಿಸುಗುಂ (ತತ್ತ್ವಸೂ. ೨೪೬).
[ಸಂ.]

**ಪಾಂಶುಕೇಳಿ** (ನಾ). ಧೂಳಿನಲ್ಲಿ ಆಟವಾಡುವಿಕೆ ; ಧೂಳಾಟ : ತ್ವರಿತ ಗತಿಪ್ರಯುಕ್ತತುರಗೋತ್ಕರಸತುರಘಟ್ಟನೋತ್ಥಿತೋದ್ಧುರರಜಮರ್ಕ ಮಂಡಲಮನಾವರಿಸುತ್ತಿರೆ . . . ನಿರ್ಜರಕರಿ ಪಾಂಶುಕೇಳಿಯ ನೊಡರ್ಚುಗುಮಲ್ಲಿ ಜಯಪ್ರಯಾಣದೊಳ್ (ರಾಜಶೇ. ೩-೫).
[ಪಾಂಶು + ಕೇಳಿ$_3$ (= ಕೇಲಿ)]

**ಪಾಂಶುಲೆ** (ನಾ). ೧. ಮುಟ್ಟಾದವಳು ; ಋತುಮತಿ. ೨. ಜಾರೆ ; ವ್ಯಭಿಚಾರಿಣಿ : "ಪಾಂಶುಲಾ = ಜಾರೆ" (ಕಾಕಶ. ೨೩೯).
[ಸಂ. ಪಾಂಶುಲಾ]

**ಪಾಂಶೆ** 'ಪಾವಸೆ' ನೋ.

**ಪಾಂಸು** (ನಾ). ೧. = ಪಾಂಶು : "ಪಾಂಸುಃ, ಕ್ಷೋದಃ, ರೇಣುಃ, ಚೂರ್ಣಂ, ಧೂಳೀ, ರಜಃ — ಈ ೬ ಧೂಳಿ" (ಹಲಾಯು. ೬೩-೨೪೯); ವಿವಿಧ ವೈಪಥಪಾಂಸುಗಳಿಂದೆ ನಾಡೆ ಸೀಱಿದ ತಲೆಯುಂ ಕರಂ ಮಲಿನಘಾದ ಪಟಚ್ಚರಮುಂ ನೆಗೞ್ಚಲಂದಿದಿರೊಳೆ ಲೇಖವಾಹನಿವಹಂ ಬರೆ ಕಂಡನಿಳಾಧಿನಾಯಕಂ (ಕಾದಂಬ. ೬೩೩); ಅಂಬರಣಪಾಂಸು ಪತ್ತಿರೆ ಶರೀರಮಂ ತೊಡೆದು ಕಳೆದೆ ವಸ್ತ್ರಾಂಚಲದಿಂ ಗುರುನಂಷನ ನೀನೆನ್ನೀ ಪರಿಭವಪಾಂಸು ವನದೆಂತು ಪೇೞ್ ಕಳೆದಪೆಯೋ (ಗದಾಯು. ೯-೨೭); ಕುಸುಮತರುಗಳ್ ಮರುದಾಹತಿಯಿಂ ಪರಾಗಪಾಂಸುಪ್ರಸರಂಬೆರಸಲರ ಸುರಿದಪುವು (ಜಗಂ. ೯-೭೦). ೨. ಹೂವಿನ ಧೂಳಿ ; ಪರಾಗ : 'ಪಾಂಸುಕೇಳಿ' ಪರಾ. ೩. ಒಂದು ಬಗೆಯ ಗಿಡ ; ಪರ್ಪಟಕ : "ಪಾಂಸು ಪರ್ಪಟಕಮಕ್ಕು" (ಮಂಗರಾ. ೪೨-೩೪). [ಸಂ.]

**ಪಾಂಸುಕೇಳಿ** (ನಾ). ೧. = ಪಾಂಶುಕೇಳಿ : ಆತನ ಲಲಿತೋತ್ಸಾನಶಯಿತ ದರಹಸಿತತರಂಗಿತಗತಿಸ್ಖಲಿತಮುಗ್ಧಜಲ್ಪಿತಾದಿ ಬಾಲ್ಯವಿಲಾಸಂಗಳಿಂದಂ ಕರಿಕರೋದ್ಧೂತಧೂಳೀವಿಲಾಸ ಪಾಂಸುಕೇಳಿಯಿಂದಂ . . . ಆನಂದಿತ ಹೃದಯನಾಗಿ (ಆದಿಪು. ೮-೫೦ ವ) ; ಆಡುವ ಪಾಂಸುಕೇಳಿಯೊಳೆ ಸಲ್ವ ತೊದಳ್ನುಡಿಯುಂ . . . ನಾಡೆಯುಂ ರೂಡಿಸೆ (ಜಗಂ. ೩-೭೦). ೨. ಹೂವಿನ ಪರಾಗದಲ್ಲಿ ಆಡುವಿಕೆ : ಪರಾಗಪುಂಜದೊಳ್ ಪಱಿಪಡಿ ಸಿತ್ತು ಭೃಂಗಶಿಶು ನೀರಜದೊಳ್ ನಿಜಪಾಂಸುಕೇಳಿಯಂ (ಚಂದ್ರಪು. ೭-೭೦).
[ಪಾಂಸು + ಕೇಳಿ$_3$ (= ಕೇಲಿ)]

**ಪಾಂಸುಲೆ, ಪಾಂಸುಳೆ** (ನಾ). ೧. ಮುಟ್ಟಾದವಳು ; ಋತುಮತಿ. ೨. ಜಾರೆ ; ಹಾದರಗಿತ್ತಿ ; ವ್ಯಭಿಚಾರಿಣಿ : "ಸ್ವೈರಿಣಿ . . . ಅಭಿಸಾರಿ ಪಾಂಸುಲೆ[ಪಾಠಾಂ. ಸಾಂಬಂಧಕಿ] ಬಂಧಕಿಯೆನಲ್ಕೆ ಹಾದರದ ನಾರಿಯೆನಿಸಿಕ್ಕು" (ಮಂಗರಾ. ೯೦-೪); ಒರ್ವಳ್ ಪಾಂಸುಲೆ ಈ ನೆಪದೆ ಪಾಣ್ಬನ ನೆರೆವೆನೆಂದು ಬಂದುದಂ ಭೂನುತನ ನೋಳ್ಪ ಸತಿಯರ ಗೋಷ್ಠಿಯಿಂ ಮಾಱಿದಳು (ಶಬ್ದಸಾ. ೬-೬೯). ೩. ಭೂಮಿ.
**ಪಾಂಸುಳೆ :** ೨. "ಪಾಂಸುಳಾ, ಬಂಧಕೀ, ಸ್ವೈರಿಣೀ, ಅಸತೀ, ಪುಂಶ್ಚಳೀ, ಇತ್ವರೀ, ಧರ್ಷಿಣೀ, ಕುಲಟಾ, ಅವಿನೀತಾ, ಅಭಿಸಾರಿಕಾ — ಈ ೧೧ ಹಾದರಗಿತ್ತಿ" (ಹಲಾಯು. ೬೦-೩೪೨) ಬಳಸಿದುದರ್ಕಾಮೆಱುರಘಟ್ಟಿತವಾದವರಾದ್ರಿಯಿಂದಮುಚ್ಚಳಿಸಿದ ಧಾತು

ರೇಣುವನೆ ಚಕ್ರಯುಗಂಗಳಗಲ್ಕೆಗಿಚ್ಚು ಪಾಂಸುಳೆಯರ ರಾಗದೇಚ್ಗಿ . . . ಸಂಜೆಯ ಕೆಂಪು ಲೋಕಮಂ (ಶಂಕ್ರಕೃ. ೬-೯). [ ಸಂ. ಪಾಂಸುಲಾ ]

**ಪಾಂಸುಳ** (ಗು). ೧. ಧೂಳು ಮುಸುಕಿದ ; ಧೂಳಿನಿಂದ ತುಂಬಿದ. (ನಾ). ೨. ಧೂಳು ತುಂಬಿದುದು : ಸಮೀರನುದಾರಕದಂಬಕೇತಕೀ ಪ್ರಸರರಜಸ್ಸರಪ್ರಕಟಪಾಂಸು[ಪಾಠಾಂ. ಪಾತು]ಳಮಾದುದು ಮೇಘಕಾಲ ದೊಳ್ (ಶಂಕಶಾ. ೬-೨೨). [ ಸಂ. ಪಾಂಸುಲ ]

**ಪಾಂಸುಳೆ** 'ಪಾಂಸುಲೆ' ನೋ.

**ಪಾಂಸೆ** 'ಪಾವಸೆ' ನೋ.

**ಪಾಕ₁** (ಗು). ೧. ತೀರ ಎಳೆಯ : ಪಾಕಕುಶಕಾಶವಿಶದಂ . . . ಕೃಷ್ಣಲಾಮರೀಬಿಂಬಾಕೀರ್ಣಂ ತನ್ನದೀತಟಂ ಕಡುರಯ್ಯಂ (೮೦ಚಾಪ. ೫-೬೦). ೨. ಸರಳಸ್ವಭಾವದ ; ನಿಷ್ಕಪಟವಾದ. (ನಾ). ೩. ಬೇಯಿಸುವುದು ; ಪಕ್ವಗೊಳಿಸುವುದು : ಆ ಭೋಜ್ಯವಸ್ತುವಂ ಹಸನಾಗಿ ಪಾಕಮಂ ಮಾಳ್ಪ ವಿವರದ ಶಾಸ್ತ್ರಮಂ ಮನುಗೊಂಡು ಪೇಳ್ವೆಂ (ಸೂಪಶಾ. ೦-೩). 'ನಳಪಾಕ', 'ಪಾಕಶಾಸ್ತ್ರ' ಪರಾ. ೪. ಬೇಯಿಸಿ ಸಿದ್ಧಪಡಿಸಿದ ಅನ್ನ ಮೊದಲಾದುವು ; ಅಡುಗೆ : ಭವಿ ಮಾಡಿದ ಪಾಕವ ತಂದು ಲಿಂಗಕರ್ಪಿಸುವ ಕಷ್ಟರ ಕಂಡು ನಾಚಿತ್ತೆನ್ನ ಮನವು (ಬಸವ. ೬.೨೬) ; ಪರಿಪರಿಯ ಬಹುಭಕ್ಷ್ಯಪಾಕದ ಪರಿಮಳದ ಶಾಕಾದಿಗಳವೊಗ್ಗರಣೆಗಳ ಸೌರಭಕೆ ತಿಳಿದುದು ನಿದ್ರೆ ಪವನಜನ (ಕುಮ್ಮಾಭಾ. ೦೦-೨೨). ೫. ಪರಿಪಕ್ವತೆ; ಹಣ್ಣಾಗುವಿಕೆ; ಪರಿಪೂರ್ಣತೆ. ೬. ಬೆಲ್ಲ ಅಥವಾ ಸಕ್ಕರೆಯನ್ನು ಕುದಿಸಿ ತಯಾರಿಸಿದ ಮಂದವಾದ ದ್ರವ : ಸಕ್ಕರೆಗೆ ನೀರು ಸೇರಿಸಿ ಕುದಿಸಿ ಪಾಕ ನೂಲಿನಂತೆ ಎಳೆಯಲು ಬರುವವರೆಗೆ ಕಾಯಿಸಬೇಕು (ಅಡುಗೆ. ೦೦೦). 'ಎಳೆಪಾಕ₁' ಪರಾ. ೭. ಮೂಲಿಕೆಗಳನ್ನು ಬಟ್ಟೆಯಿಳಿಸಿ ತೆಗೆದ ಸಾರ ; ಕಷಾಯ : ಆಡುಸೋಗೆಬೇರು, ಕಹಿಪಡವಲ . . . ಚೂರ್ಣಮಾಡಿ ಬಳ್ಳ ಹಸುವಿನ ಬೆಣ್ಣೆಯಲ್ಲಿ ಪಾಕವ ಮಾಡಿ ಹದದಲ್ಲಿಳುಹಿ ತೆಗೆದುಕೊಳ್ಳೆ ಹಳೆಯ ಜ್ವರ ಮಾಣ್ಗುಂ (ಸಕಶ್ಯ. ೦೨೭). ೮. ಕಾರ್ಯದ ಕೊನೆಯಲ್ಲಿ ದೊರೆಯುವ ಫಲ ; ಪರಿಣಾಮ ; ಸಿದ್ಧಿ : ಪಾಕದೊಳತಿವಿಷಮಂ ಕಿಂಪಾಕಫಲಪ್ರತಿಮಮಮಲಿವಿಷಯಸುಖಂ (೮೦ಪು. ೯-೭೫). ೯. ಪಚನ ವಾಗುವಿಕೆ ; ಜೀರ್ಣವಾಗುವಿಕೆ. ೧೦. ಮಗು ; ಕೂಸು : "ಬಾಲಃ. ಪಾಕಃ . . . ಶಿಶುಃ, ಶಾಬಃ, ಡಿಂಬಃ — ಈ ೯ ಮಗುವು" (ಕರಾಭು. ೮೩-೬೯೮). ೧೧. ಇಂದ್ರನಿಂದ ಹತನಾದ ಒಬ್ಬ ರಾಕ್ಷಸ : "ಪಾಕಃ = ರಕ್ಕಸಂ" (ಶಾಶಕ. ೦೩೮). 'ಪಾಕಶಾಸನ' ಪರಾ. ೧೦, ೧೧ : ಕುಳಭೂಭೃತ್‌ಪರಿಪಂಥಿಪಾವಕಮುಖಂ ಪಾಕಾಪಹಂ . . . ಸತಕಂ ಸಂಕ್ರಂದನಂ (ಚಾಶಕೀ. ೩-೯). ೧೨. ಮನೆಯಲ್ಲಿ ಪೂಜೆಗೊಳ್ಳುವ ಅಗ್ನಿ ; ಗೃಹ್ಯಾಗ್ನಿ. ೧೩. ಚರು ; ಹವಿಸ್ಸು : "ಹವ್ಯಂ, ಪಾಕಃ, ಚರುಃ, ಸಾನ್ನಾಯ್ಯಂ, ಹವಿಃ — ಈ ೫ ಚರು" (ಕರಾಭು. ೬೯-೨೬೩). ೧೪. ತೇಜಸ್ಸಿನ ಸಂಯೋಗ : ಪೃಥಿವಿಯಲ್ಲಿ ರೂಪ, ರಸ, ಗಂಧ, ಸ್ಪರ್ಶ ಇವು ಪಾಕದಿಂದ ಬದಲಾವಣೆ ಹೊಂದುವುವು. ಪಾಕವೆಂದರೆ ತೇಜಸ್ಸಿನ ಸಂಯೋಗ (ಭಾತತ್ತ್ವ. ೨೯೮). ೧೫. [ಕಾವ್ಯಮೀ] ಅರ್ಥಗಾಂಭೀರ್ಯ ; P "ಅರ್ಥಗಭೀರತೆಗೆ ಪಾಕವೆಂದು ಹೆಸರು. ಕೆಲವು ಕಾವ್ಯಗಳಲ್ಲಿ ಅರ್ಥವೂ ಅದರ ಸ್ವಾರಸ್ಯವೂ ಸಂಲಭವಾಗಿದ್ದು ಕ್ಲೇಶವಿಲ್ಲದೆ ತಿಳಿಯುವುದಂ ; ಮಂತ್ತೆ ಕೆಲವುಗಳಲ್ಲಿ ಅರ್ಥವು ಗೂಢವಾಗಿದ್ದು ಅದು ತಿಳಿಯ ಬೇಕಾದರೆ ಬುದ್ಧಿಕ್ಲೇಶವಾಗುವುದು" (ಕೃಬಿಶ. ೨೨೫.) : ಗುಣಗಣ ಮಣಿಯರಮನಿಸಿ ವೃತ್ತಿ ಬಿತ್ತರಂಬಡೆಯೆ ಪಾಕಂ ಲೋಕೋತ್ತರಮೆನಿಸೆ ಶಯ್ಯೆ ರಯ್ಯಮಾಗೆ ಬಂಧಮುಗುಂದಲವಡೆಯೆ . . . ಗದ್ಯಪದ್ಯ ಚಂಪು ಪ್ರಮುಖಪ್ರಬಂಧಂಗಳಂ ಪೇಳ್ವು (ರಾಜಶೇ. ೫-೦೯ ಪ). 'ದ್ರಾಕ್ಷಾಪಾಕ', 'ನಾರಿಕೇಳಪಾಕ' ಪರಾ. ೧೬. [ಜ್ಯೋತಿ] ಗ್ರಹಗತಿ : ದಶೆ : 'ಪಾಕನಾಥ' ಪರಾ. [ ಸಂ. ]

**ಪಾಕ₂, ಪಾಕು₂** (ನಾ). ಸ್ವಚ್ಛವಾದುದು ; ಸಾಫು ; ಚೊಕ್ಕಟ : ಎಲೆ ತುಂಬಾ ಬಡಿಸಿಕೊಂಡು ಪಾಕವಾಗಿ ಒಂದಗುಳನ್ನೂ ಬಿಡದೆ ಚೆನ್ನಾಗಿ ಕುಮ್ಮರಿಸುತ್ತಾಳೆ ಹೊಟ್ಟೆಯೊಳಕ್ಕೆ (ಮೂಮನೂ. ೦೦೭). **ಪಾಕು₂** : ಬೀದಿಗಳೆಲ್ಲ ಆ ದಿನ ಚೊಕ್ಕಟವಾಗಿದ್ದುವು. ಸುಬೇದಾರರು ಜಮಾಬಂದಿಗೆ ಬರುತ್ತಾರೆಂದು ಶೇಕದಾರರು ಖುದ್ದಾಗಿ ನಿಂತು ಪಾಕು ಮಾಡಿಸಿದ್ದರು (ಸಾಂಗ್ರಾ. ೩೩).

**ಪಾಕು ಮಾಡು** = ಹಸನುಗೊಳಿಸು; ಸ್ವಚ್ಛಮಾಡು: ಅಡವಿಯಲ್ಲಿನ ರಸ್ತೆಗಳ ಅಕ್ಕಪಕ್ಕಗಳಲ್ಲೂ ಪಾಕುಮಾಡಿ ಅಲ್ಲಿ ಸಸ್ಯಗಳು ಇರದಂತೆ ನಿರ್ಮೂಲಿಸುತ್ತಾರೆ (ಕಶಕೋ. I,೯೯೯) ; ಬಂಜರುಭೂಮಿಯನ್ನು ಪಾಕು ಮಾಡಿ ಉಳುಮೆಗೆ ಅರ್ಹಮಾಡುವುದು (೮೦ಕಸಂ. ೨೯೯).

[ ← ಪಾರ. ಹಿಂ. ಪಾಕ್ ]

**ಪಾಕಂಗೆಯ್** (ಕ್ರಿ). ಅಡುಗೆ ಮಾಡು: ನಲವಿಂದೊದವಿಸಿದಖಿಳಸದ್ರವ್ಯಮಂ ಬಳಿಕ ಚಂಡಿ ಪಾಕಂಗೆಯ್ದಳು (ಕ್ರಮಿಬಾ. ೦೦-೨೯).

[ ಪಾಕ₁ + ಕೈ₁ (< ಕೆಯ್₁) ]

**ಪಾಕಂಪೊಪ್ಪು** (ನಾ). (ಹೊಸ) ಬೆಲ್ಲದ ಪಾಕಕ್ಕೆ ಹುರಿದ ಕಡಲೆಕಾಯಿ ಬೀಜ, ಕಡಲೆ, ಗಸಗಸೆ, ಎಳ್ಳು ಮುಂತಾದುವನ್ನು ಹಾಕಿ ತಯಾರಿಸುವ ಒಂದು ಬಗೆಯ ಸಿಹಿತಿಂಡಿ : ಪಾಠಪ್ರವಚನ ರುಚಿಸದೆ ಹೋದರೆ ಪಾಕಂಪೊಪ್ಪನು ಮೆಲ್ಲುವೆವು (ಶಿಲಾಂ. ೧೭-೨೦).

[ ಪಾಕ₁ + ಪೊಪ್ಪು (< ಪರುಪು) ]

**ಪಾಕಂಬೋಗು** (ಕ್ರಿ). ( ? ) : ನೆಲವಾಳು ಪಾಕಂಬೋಪಲ್ಲಿ ಮೂಪರಲೋರ್ವ್ವರ್ ಸತ್ತಡಲ್ಲದೆ ಭೂಮಿ ನಿಲ್ಲದು (ಕ್ರಶಾಶ. IX-1, ೨೩-೦೮ ; 1059). [ ? ]

**ಪಾಕಗೂಳು** (ನಾ). ಕುದಿದು ಮಂದವಾದ ಕಬ್ಬಿನ ರಸ : ಸಂದುಸಂದನು ಕಡಿದು ಕಬ್ಬನು ತಂದು ಗಾಣದಲಿಕ್ಕಿ ಅರೆದಡೆ ಬೆಂದು ಪಾಕಗೂಳ [ಪಾಠಾಂ. ಪಾಕಗುಳ್ಳ] ಸಕ್ಕರೆಯಾಗಿ ನೊಂದೆನೆಂದು ಸಿಹಿಯ ಬಿಟ್ಟಿತ್ತೆ (ಮುಹಾದೇ. ಬಿ. ೨೪-೫೦). [ ಪಾಕ₁ + ಕೂಳು₂ (< ಕೂಬು₁) ]

**ಪಾಕಗೊಳ್** (ಕ್ರಿ). ಚೆನ್ನಾಗಿ ಬೇಯು ; ಪಕ್ವವಾಗು : ರಸಮಾದಿಗಳ್ ಪಾಕಗೊಂಡಿರಲು ಪಳಿದೇಯುಮಕ್ಕು ಬೇಯದ ರಸಂ ಪಾನಂಗಳೇಂದನಿಕ್ಕುಂ (ಮುಂಗರಾ. ೬೯-೯). [ ಪಾಕ₁ + ಕೊಳ್₁ ]

**ಪಾಕಗೊಳಿಸು** (ಕ್ರಿ). ಹದಗೊಳಿಸು : ಈ ಉಷ್ಣತೆಗೆ ಅನುಗುಣವಾಗಿ ಹಸಿರನ್ನು ಪಾಕಗೊಳಿಸಲು ಹಾಗೂ ಅದನ್ನು ಕೆಡದಂತೆ ಇರಿಸಲು ಬರುತ್ತದೆ (ಗೋಗ್ರಾಕ. ೯೯). [ ಪಾಕ₁ + ಕೊಳು (< ಕೊಳ್₁) + —ಇಸು₃ ]

**ಪಾಕಡ** 'ಫಾಕಡ' ನೋ.

**ಪಾಕಡಾ** 'ಫಾಕಡ' ನೋ.

**ಪಾಕದಂಡ** (ನಾ). (?) : ಚೋರ ಪಾಕದಣ್ಡ ದಶಾಪರಾಧಂಗಳಪ್ಪಬೆಲ್ಲಂ ಪೂರ್ವ್ವಾಚಾರಂ (ಎಕ. XIV, ೮೯೦-೦೯ ; 725). [ ? ]

**ಪಾಕನಾಥ** (ನಾ). [ಜ್ಯೋತಿ] ಮನುಷ್ಯನ ಜೀವನದ ಮೇಲೆ ಶುಭಾಶುಭ ಫಲಗಳನ್ನು ಬೀರುವ ಗ್ರಹ : ತ್ರಿದಶಷಡಾಯುರಾಶಿಗಳೊಳಕ್ಕೆ ವಿಲಗ್ನದೊಳಕ್ಕೆ ಮೇಣ್ ಸುಹೃತ್‌ಸದನದೊಳಕ್ಕೆ ಸದ್ಗ್ರಹವರ್ಗದೊಳಕ್ಕಿರೆ ಪಾಕ[ಪಾಠಾಂ. ಚಾಪ]ನಾಥನಲ್ಲದೊಡೆ ದಶಾಧಿನಾಥನ ಸುಹೃದ್ಭವನೋಪಚಯತ್ರಿಕೋಣಗೇಹದೊಳಿರೆ ಚಂದ್ರನಿರ್ದೊಡೆ ಶುಭಂ ನಿಲೆ ಬೇಚಿಡೆಯೊಳ್ ಶುಭೇತರರ್ (ಜಾತತಿ. ೯-೦೫).

[ ಪಾಕ₁ + ನಾಥ ]

**ಪಾಕನೇಮಿ** (ನಾ). ಬೇಯಿಸಿದುದನ್ನು ಸೇವಿಸುವುದಿಲ್ಲವೆಂಬ ನಿಯಮವುಳ್ಳವನು : ಸರ್ವಸಂಗಪರಿತ್ಯಾಗಿ ಎಂದೊಡೆ ಭೋಗಕ್ಕೆ ಮುಳುಗಿಸುವೆ ಪಾಕನೇಮಿ ಎಂದೊಡೆ ಷಡ್ರಸಕ್ಕೆ[ಪಾಠಾಂ. ಷಡುರಸಾನ್ನಕ್ಕೆ]ಆಶಿಸುವೆ (ಸವಾಪ. ೧೩-೯೯). [ಪಾಕ$_1$ + ನೇಮಿ$_1$]

**ಪಾಕಯಜ್ಞ** (ನಾ). ೧. ಮನೆಯಲ್ಲಿ ನಡೆಸುವ ಹೋಮಾದಿ ಕಾರ್ಯ ; ವೈಶ್ವದೇವಹೋಮ, ಬಲಿಕರ್ಮ, ನಿತ್ಯಶ್ರಾದ್ಧ ಮತ್ತು ಅತಿಥಿ ಭೋಜನ ಎಂಬ ನಾಲ್ಕು ಪಾಕಯಜ್ಞಗಳು ; P "ಹುತ, ಅಹುತ, ಪ್ರಹುತ, ಪ್ರಾಶಿತ, ಬಲಿದಾನ (ಮಹಾಭಾ. ಅಶ್ವಮೇಧಿಕ. ವೈಪ ೩.೭೬)" (ಶ್ರೀವತ್ಸ. ೩೫೪). ೨. ಅಡುಗೆ. [ಪಾಕ$_1$ + ಯಜ್ಞ]

**ಪಾಕರ** 'ಪಕ್ಕರೆ$_1$' ನೋ.

**ಪಾಕರಿಪು** (ನಾ). ಪಾಕನೆಂಬ ದೈತ್ಯನ ವೈರಿ ; ಇಂದ್ರ : ಪಾಕರಿಪುತನಯನಂಗವುನಾ ಕಪಟಕಿರಾತನೋವಿ ಮೆಲ್ಲನೆ ತಿವಿದಂ (ಕಬಕಂ. ೪-೮೨). [ಪಾಕ$_1$ + ರಿಪು]

**ಪಾಕಲ್** 'ಪಾಗಾರ' ನೋ.

**ಪಾಕಲ$_1$** 'ಪಾಗಾರ' ನೋ.

**ಪಾಕಲ$_2$**, ಪಾಕಳ (ನಾ). ೧. ಆನೆಗೆ ಬರುವ ಜ್ವರ. ೨. ಒಂದು ಬಗೆಯ ಗಿಡ ; ಚಂಗಲಕೋಷ್ಠ : "ವ್ಯಾಧಿಃ, ಕುಷ್ಠಂ. ಪಾರಿಭಾವ್ಯಂ, ವಾಪ್ಯಂ, ಪಾಕಲಂ, ಉತ್ಪಲಂ — ೬ ಚಂಗಲಕೋಷ್ಠ" (ಸಿದ್ಧಾಂತಿ. ೧೪೧). **ಪಾಕಳ** : ೧. 'ಕೂಟಪಾಕಳ' ಪರಾ. [ಸಂ.]

**ಪಾಕಲು** 'ಪಾಗಾರ' ನೋ.

**ಪಾಕವ್ಯ** (ನಾ). ಅಡುಗೆ : ಇದನರಿತ ಬಳಿಕಿಲ್ಲವಜ್ಞಾತದ ಗಸಣಿ ನೋಡುವರೆ ಅಪ್ಪುತವ ಮುದದಲೀಂಟಿದವಂಗೆ ಪಾಕವ್ಯದಲಿ ತೊಡಕಿಲ್ಲ (ವಿಭಾಗ. ೧೧-೩೫-೩೬). [<ಸಂ. ಪಕ್ತವ್ಯ ?]

**ಪಾಕಶಾಲೆ** (ನಾ). ಅಡುಗೆಮನೆ: "ರಸವತೀ, ಪಾಕಸ್ಥಾನಂ, ಮಹಾನಸಂ — ೩ ಅಡಿಗೆಯ ಸಾಲೆ, ಅಡಿಗೆಮನೆ, ಪಾಕಶಾಲೆ" (ಸಿದ್ಧಾಂತಿ. ೨೮೨). [ಪಾಕ$_1$ + ಶಾಲೆ$_3$]

**ಪಾಕಶಾಸನ** (ನಾ). ಪಾಕನೆಂಬ ದೈತ್ಯನನ್ನು ದಂಡಿಸಿದವನು ; ಇಂದ್ರ : "ಇಂದ್ರಃ . . . ಪಾಕಶಾಸನಃ, ದಿವಸ್ಪತಿಃ, ಬಿಡೌಜಾಃ, ಮರುತ್ವಾನ್, ಮೇಘವಾಹನಃ — ಈ ೩೯ ದೇವೇಂದ್ರನ ಪೆಸರ್" (ಹಲಾಯು. ೧೦-೫೪); ಅನಿಮೇಷಾವಳಿ ಮಾಳೆಗಟ್ಟಿ ತರದಿಂ ದುಗ್ಧಾಬ್ಧಿಯಂ ಮುಟ್ಟಿ ಕಾಂಚನರೂಪ್ಯಂಗಳ ಕುಂಭದಿಂ ಮೊಗೆದು ಜೈಜೈಯೆಂಬಿನಂ ಪಾಕಶಾಸನಹಸ್ತಾಗ್ರದೊಳೆತ್ತಿ ತಂದು ಕುಡೆ ಕೊಂಡಿಂದ್ರಂ ಜಿನೇಂದ್ರಂಗೆ ಮಜ್ಜನಮಂ ಕುಂದದೆ ಮಾಳ್ಪಂ (ಸುಕುಮಾ. ೧-೭೬) ; ಪಾಕಶಾಸನನೈದಿ ವೃತ್ರನ ಧಾಕುಗೆಡಿಸಿ ವಧೀಚಿಯಸ್ಥಿಯಲೌಕಿ ಹೊಯ್ಯಲು ದಾನವನ ತನು ನೀರೊಳಡಗೆಡೆಯೆ (ಕುಮಾರಾ. ೪-೧೦೭). [ಸಂ.]

**ಪಾಕಶಾಸನಿ** (ನಾ). ೧. ಇಂದ್ರನ ಮಗ. ೨. ಜಯಂತ : "ಇಂದ್ರಃ . . . ಋಭುಕ್ಷಾ — ೩೫ ದೇವೇಂದ್ರನ ಹೆಸರುಗಳು . . . ಜಯಂತಃ, ಪಾಕಶಾಸನಿಃ — ೨ ಆತನ ಕುಮಾರನ ಹೆಸರುಗಳು" (ಸಿದ್ಧಾಂತಿ. ೧೧). ೩. ವಾಲಿ. ೪. ಅರ್ಜುನ. [ಸಂ.]

**ಪಾಕಶಾಸ್ತ್ರ** (ನಾ). ಅಡುಗೆಯ ವಿಧಾನವನ್ನು ತಿಳಿಸುವ ಶಾಸ್ತ್ರ ; ಸೂಪಶಾಸ್ತ್ರ : ಒಗ್ಗಾಲಿ ರಾಮಪಂಡಿತ ಮತ್ತು ನಂಜಿಭಟ್ಟರು . . . ತಮ್ಮ ವರುಷದ ಸಂಪಾದನೆಯನ್ನು ಪಾಕಶಾಸ್ತ್ರದ ಪಾಂಡಿತ್ಯದಿಂದ ಗಿಟ್ಟಿಸಿಕೊಂಡು ಬರುತ್ತಿದ್ದರು (ಕಂಬಹು. ೧೦). [ಪಾಕ$_1$ + ಶಾಸ್ತ್ರ]

**ಪಾಕಶೇಷ** (ನಾ). ಅಡುಗೆಯನ್ನು ಬಳಸಿದ ನಂತರ ಉಳಿದುದು : ಕಿಂಚಿತ್ಪಾಕಶೇಷವ ಕೊಂಡು ಬಂದೊಡೆ ಕೃಷ್ಣನದ ಕೈಗೊಂಡು ಸವಿದನು (ಕುಮಾರ. ೧೬-೪೦). [ಪಾಕ$_1$ + ಶೇಷ]

**ಪಾಕಸ್ಥಾನ** (ನಾ). = ಪಾಕಶಾಲೆ : "ಪಾಕಸ್ಥಾನಂ, ರಸವತೀ, ಮಹಾನಸಂ — ಈ ೩ ಬಾಣಸಿನ ಮನೆ" (ಹಲಾಯು. ೪೯-೧೪೦). [ಪಾಕ$_1$ + ಸ್ಥಾನ]

**ಪಾಕಳ** 'ಪಾಕಲ$_2$' ನೋ.

**ಪಾಕಾರಿ** (ನಾ). = ಪಾಕರಿಪು : ಪೆಜಿಸಾರ್ ಕೋಣಪ ನೂಂಕದಿರ್ ಪವನ . . . ಪಾಕಾರಿ ಬಂದೆಙಗ್ಗೆ (ಕಬಕಂ. ೧-೮೩). [ಸಂ.]

**ಪಾಕಿ** (ನಾ). ೧. ಹಣ : ಪರಹೆಣ್ಣುಗಳ ನೋಡಿ ಪಾಕಿಗಳನೀಡಾಡಿ ಅರಿತೊಂದು ಕಡೆಗೆ ಕರವೇ ಎಲೆ ಮರುಳೆ ಹರುಷದಿಂದವಳ ನೆರೆವೇ (ವಾದಿಕೀ. ೩೮) ; ಜೋಕೆಯಿಂ ಮೂಗುತಿಯನೊಯ್ದು ಆಕೆ ಗಂಡನ ಕಣ್ಣಿಗೇ ತಾನ್ಹಾಕಿದನು ಪಾಕಿ ಕೊಡುಯೆನುತ (ಕಥಾ. ೨೩೩). ೨. ಚಿಕ್ಕ ಬೆಲೆಯ ನಾಣ್ಯ : ಪಾಕಿಗೆ ಚಿಂತಿಸಿ ಪಣವ ನೀಗಿದರೆಂಬ ಪಾಕಿಗೆ ಬಹರೆ (ಭರತ. ೬೦-೯೬) ; ಪಾಕಿಗೆ ಒಮ್ಮಣವಾದರೂ ಪಾಪಿಯ ಬರ ತಪ್ಪಲಿಲ್ಲ (ಗಾದೆ). [<ಪಾಗ$_1$]

**ಪಾಕಿಗ** (ನಾ). ಅಡುಗೆ ಮಾಡುವವನು ; ಬಾಣಸಿಗ : ಪಾಕುಳಿಗಂ, ಪಾಕಿಗಂ, ಪಾಕಕರ್ತಾ, ಅಡುಗುಳಿಗಂ, ಅಡುಗಿಗಂ ಸ ಏವ (ಶಬ್ದಾನು. ೪೦೦ ವ್ಯಾಖ್ಯಾ). [ಪಾಕ$_1$ + –ಇಗ]

**ಪಾಕಿಸು** (ಕ್ರಿ). ಬೇಯಿಸು ; ಅಡು : ಹೃದಯದಲಿ ನೆಲಸಿಹ ಭರದ ಕೋಪವೆ ಬೀಜವದರಲಿ ನೆರೆದ ಬಲುಬೆಳೆ ಫಲವ ಮುಸಲದಿ ಥಳಿಸಿ ಪಾಕಿಸುತ ಧುರದ ಹಬ್ಬದಿ ಭೂತಕೋಟಿಗೆ ಚಿರದಲೌತಣವಿಕ್ಕಿಸುವೆ (ಕೋಗಿಲು. ೨೩-೬೧) ; ತನಿವಾಲ ಶರ್ಕರೆಯ ನಾಡೆ ಪಚನಿಸುತ . . . ಏಲಕ್ಕಿಯಂ ಕೊನರಿಸುತ ಪಾಕಿಸುತ್ತ (ಅಂಗಪು. ೮-೩). [ಪಾಕ$_1$ + –ಇಸು$_3$]

**ಪಾಕೀಜಾ**, ಪಾಕೀಜು (ನಾ). ಸ್ವಚ್ಛತೆ; ನೈರ್ಮಲ್ಯ ; ಶುದ್ಧಿ : ಪೂರ್ವದಲ್ಲಿ ಅಂಚೀಇಲಾಖೆಯು ಗ್ರಾಮಗಳ ಪಾಕೀಜಾ ಮತ್ತು ಬಂದೋಬಸ್ತು ಮೊದಲಾದ ಇಲಾಖೆಗಳೂ ಬೇರೆ ಇರಲಿಲ್ಲ (ಪಾಳೆಗಾ. ೩೩). **ಪಾಕೀಜು** : ಜಮೀನು ಪಾಕೀಜು ಮಾಡಿಸಿದ್ದು ಯಾರಪ್ಪನ ಮನೆ ಗಂಟು? (ತಂದತೋ. ೧೪೦); ಅಲ್ಲಿ ನೀರು ದೀಪಗಳ ಸೌಕರ್ಯವಾಗಲಿ ಪಾಕೀಜು ವ್ಯವಸ್ಥೆಯಾಗಲಿ ಇರಲಿಲ್ಲ (ದಾದಾನ. ೧೫೦). [←ಪಾರ. ಪಾಕೀಜಹ್ ; ಹಿಂ. ಪಾಕೀಜಾ]

**ಪಾಕೀಜು** 'ಪಾಕೀಜಾ' ನೋ.

**ಪಾಕೀಟು**, ಪಾಕೆಟ್ಟು (ನಾ). ೧. ಲಕೋಟೆ : ಅವಳ ಪತ್ರವನ್ನು ತನ್ನ ಟ್ರಂಕಿನ ತೀರ ಬುಡದ ಇನ್ನೊಂದು ಪಾಕೀಟಿನಲ್ಲಿ ಬಚ್ಚಿಟ್ಟು . . . ಬೀಗ ಹಾಕಿದನು (ಅನ್ನ. ೧೪೭); ಮೆಹಬೂಬ . . . ಒಂದು ಕಾಗದದ ಪಾಕೀಟನ್ನು ಹೊರಗೆ ತೆಗೆದು . . . ಅದರಲ್ಲಿ ಆ ಹತ್ತರ ನೋಟುಗಳ ಸುರುಳಿಯನ್ನು ಸೇರಿಸಿ ರಾಘಪ್ಪನ ಬರವನ್ನು ಎದುರು ಕಾಯುತ್ತ ಕುಳಿತುಕೊಂಡಳು (ಗಂಪಾಯ. ೧೪೨). ೨. ಜೇಬು ; **ಕಿಸೆ** : ಅಂಗಿಯ ಪಾಕೀಟಿನಲ್ಲಿ ಚಿಲ್ಲರೆಯಿರಲಿಲ್ಲ (ರೂಢಿ). **ಪಾಕೆಟ್ಟು** : ೩. ಹಣವಿಡುವುದಕ್ಕಾಗಿ ಮಾಡಿದ ಚರ್ಮದ ಮಡಿಕೆ ಚೀಲ : ಬಸ್ಸಿನಲ್ಲಿ ನನ್ನ ಹಣದ ಪಾಕೆಟ್ಟನ್ನು ಯಾರೋ ಹಾರಿಸಿದರು (ರೂಢಿ). [←ಇಂ. Pocket]

**ಪಾಕು$_1$** 'ಪಾಗು$_1$' ನೋ.

**ಪಾಕು$_2$** 'ಪಾಕ$_2$' ನೋ.

**ಪಾಕು$_3$** 'ಪಾಯ್ಕು$_2$' ನೋ.

**ಪಾಕುಳ** (ನಾ). ಅಮೇಧ್ಯ ; ಮಲ : ಭವಪಾಶದ ಪಾಕುಳದಲ್ಲಿ ಬಿದ್ದು ನಿಶ್ಚಟಭಕ್ತನೆಂದಡೆ ಒಪ್ಪುವನೆ ಖಘಟವುರ ರಾಮೇಶ್ವರಲಿಂಗ (ಪುಣಿಸಿಂ.೪. ೮೩-೨೨) ; ಪಾಕುಳದೊಳಗಣ ಕ್ರಿಮಿಯಂತೆ ಪೊವಕುಳಿಗೊಂಬಂದು ನೀನಾವ ಕುಲ ಹೇಳಿರೇ (ಸರ್ವಶ. ೧೭೫-೮೬೯) ; ಸಲೆ ಕಾಯ್ದುರ್ಕಿನ ದಾರೆಯಂ ಬಿಡು ನವದ್ವಾರಂಗಳೊಳ್ . . . ಬಾಲವೃದ್ಧಂ ಕೀವಾಗಿ

ಶೀವಿರ್ದ ಸೀಂಬುಟ್ಟುವಂ ಬಾಯ್ಗೆಟಿ ನೂಂಕು ಪಾಕುಳಿದರೊಳ್ . . . ಎಂಬ ಕಾಲಯುವುನಂ ಕಂಡೆಂ (ದಕಶು. ೩-೦೭). [?]

**ಪಾಕುಳಿಗ** (ನಾ). = ಪಾಕಿಗ : ಪಾಕುಳಿಗಂ, ಪಾಕಿಗಂ, ಪಾಕಕರ್ತ (ಶಬ್ದಾ.ಸು. ೪೦೦ ವ್ಯಾಖ್ಯಾ). [ಪಾಕ₁+ −ಉಳಿಗ₃]

**ಪಾಕುಳಿಗಿತಿ** (ನಾ). ಅಡುಗೆಯವಳು ; ರಂದಣಗಿತ್ತಿ : ದೇವುಳಿಗಿತಿ, ಪಾಕುಳಿಗಿತಿ, ಕಯ್ಪುಳಿಗಿತಿ (ಶಬ್ದಾ.ಸು. ೧೯೩ ಪ್ರಯೋ).

[ಪಾಕುಳಿಗ+ −ಇತಿ₁ (< −ಇತ್ತಿ)]

**ಪಾಕೆಟ್ಟು** 'ಪಾಕೀಟು' ನೋ.

**ಪಾಕ್ಯ** (ಗು). ೧. ಬೇಯಿಸಬೇಕಾದ. ೨. ಬೇಯಿಸಿ ಸಿದ್ಧಪಡಿಸಿದ. (ನಾ). ೩. ಒಂದು ಬಗೆಯ ಉಪ್ಪು ; ಅಟ್ಟುಪ್ಪು : "ಪಾಕ್ಯಂ, ಬಿಡಂ—ಈ ೨ ಅಟ್ಟುಪ್ಪಿನ ಹೆಸರು" (ನಿಘಂ.ಶಿ. ೨೮೬). [ಸಂ.]

**ಪಾಕ್ಷಿಕ** (ಗು). ೧. ಹದಿನೈದು ದಿನಗಳ ಗಡುವಿನ ; ಹದಿನೈದು ದಿನಗಳಿಗೊಮ್ಮೆ ಬರುವ : ಇಬ್ಬರು ಸದಸ್ಯರು ಪಾಕ್ಷಿಕ ಸಭೆಯಲ್ಲಿ ... ಒಂದೊಂದು ಪ್ರಬಂಧವನ್ನು ಓದಬೇಕಾಗಿತ್ತು (ದಾದಾಶ. ೦೭). ೨. ಒಂದು ಪಕ್ಷಕ್ಕೆ ಒಲಿದ ; ಒಂದು ಪಂಗಡಕ್ಕೆ ಸೀಮಿತವಾದ. (ನಾ). ೩. ಹದಿನೈದುದಿನಗಳಿಗೆ ಸಂಬಂಧಪಟ್ಟುದು ; ಒಂದು ಪಕ್ಷಕ್ಕೆ ಸೀಮಿತವಾದುದು : ಪಾಕ್ಷಿಕವೊ ಮಾಸಿಕವೊ ವಾರ್ಷಿಕವೊ ಏನೇನೊ ಬರುವ ಯೋಜನೆ ಸಕಾಲಕ್ಕೆ ಬರಲಿ (ಕೀಶಂ. ೯೭-೦೦). ೪. ಹದಿನೈದು ದಿನಗಳಿಗೊಮ್ಮೆ ಪ್ರಕಟವಾಗುವ ಪತ್ರಿಕೆ : ಮಾಸಿಕವಾಗಿದ್ದ ಪತ್ರಿಕೆ ಈಗ ಪಾಕ್ಷಿಕವಾಗಿ ಮಾರ್ಪಟ್ಟಿದೆ (ರೂಢಿ). ೫. [ಜೈನ] ಹಿಂಸೆಯನ್ನು ತ್ಯಾಗಮಾಡಿ ಶ್ರಾವಕಧರ್ಮವನ್ನು ಆಚರಿಸುವವನು . ಕಷಾಯಂಗಳ ಕ್ಷಯೋಪಶಮ ಹೀನಾಧಿಕಭಾವದ ವಶದತ್ತಣಿಂದವು ದಾರ್ಶನಿಕ ಮೊದಲಾದ ಹನ್ನೊಂದುಸ್ಥಾನದ ವಶವನುಳ್ಳ ಪಾಕ್ಷಿಕನಾಪೇಕ್ಷೆಯಿಂದವು ಹಿರಿದು ಸಂಪನ್ನನಾಹಾತನು ನೈಷ್ಠಿಕನಹನು (ಶಾಗಾರ. ೨೯-೦). [ಸಂ.]

**ಪಾಖಂಡ** (ನಾ). ೧. ವೇದಧರ್ಮವನ್ನು ಖಂಡಿಸುವ ನಾಸ್ತಿಕ ಮತದವನು ; ಧರ್ಮಲಂಡ ; ನಾಸ್ತಿಕ. ೨. ಧರ್ಮಲಂಡತನ ; ಸ್ತ್ರಿಕತೆ : ರಾಮಗುಣಸಮೂಹವು ಕುಪಂಥ, ಕುತರ್ಕ . . . ದಂಭ, ಪಾಖಂಡಗಳೆಂಬ ಉರುವಲಗಳನ್ನು ಸುಡುವ ಪ್ರಚಂಡಅಗ್ನಿಯಾಗಿರುವುದು (ತುಳಸೀ. ೯). [ಸಂ.]

**ಪಾಖಂಡಮತ** (ನಾ). ನಾಸ್ತಿಕಮತ : ಕೋವರ್ನಿಕಸನ ಹಿಂದೆ ಅವನ ಮತಕ್ಕೆ ಪಾಖಂಡಮತವೆಂಬ ಹೆಸರು ಬಿತ್ತು (ಶುಂಬಾಭು. ೩-೨೨೦).

[ಪಾಖಂಡ+ಮತ]

**ಪಾಖಂಡಿ** (ನಾ). = ಪಾಖಂಡ ೧ : ಬ್ರಹ್ಮವಿಷ್ಣುಮಹೇಶ್ವರರನ್ನು ಭೇದಬುದ್ಧಿಯಿಂದ ನೋಡುವವನು ಪಾಖಂಡಿಯೆಂದು ಹೇಳಿದೆ (ಶಾರದ. ೦೪೨); ಅವನ ಮನಸ್ಸು ಮರುಳಾರ್ಯನಂಥ ಪಾಖಂಡಿಯ ದರ್ಶನದಿಂದ ಇನ್ನಷ್ಟು ಕ್ಷುಬ್ಧವಾಯಿತು (ಅಕ್ರಸು. ೯೬).

[ಸಂ. ಪಾಖಂಡಿನ್]

**ಪಾಗ₁**, ಹಾಗ (ನಾ). ೧. ಕಾಲುಭಾಗ; ನಾಲ್ಕನೆಯ ಒಂದು ಅಂಶ : "ಪಾಗ — ಪಾದ = ಕಾಲಂಶ" (ಕನ್ನಕೋ. ೨೫). ೨. ಚಿಕ್ಕಬೆಲೆಯ ಒಂದು ನಾಣ್ಯ ; ಹಣದ ಕಾಲುಭಾಗ : ೨೦ ಸೀರೆಯ ಸುಂಕ ಪೊದಕೆಗೆ ಪಾಗ ೨ ಸೀರೆಗೆ ಪಾಗ ೧ (ಪಾಂರೇಡ್. ೩-೨೨ ಪ; 1042); ಅಯ್ನೂರ್ವರುಮಿಟ್ಟು ಪಸುಂಬೆಯ ಸೇಸೆಯುಲು ಪಾಗಮುಮಂ ಅಂಗಡಿಯಲು ಸೊಟಿಗೆ ಭತ್ತಮ ಬಿಟ್ಟರ್ (ಸೌಇಇ. IX–1, ೦೩೯-೪೦ ; 1074); ಕೊಯ್ನಾಳಿಗಳೆಲ್ಲರುಮೆತ್ತಿಕಾಚಿರು ದೇವರ್ಗೆ ನನ್ದಾದೀವಿಗೆಗೆ ಬಿಟ್ಟ ಧರ್ಮ ಏಣಿಗೆ ಪಾಗ (ಸೌಇಇ. IX–1, ೦೪೦-೩೫; 1130); ಸುಸಿಲೇಂ ಪೇಟಿರ್ ಪಾಗದೊಳ್ ತೀರದೇ (ಶಾಬ್ದಾ.ಶ. ೬೩೩). ೩. ತೂಕದ ಒಂದು ಪ್ರಮಾಣ : "ಪಾಗವಾವು ನಾಲ್ಕಾಗೆ ಪಣಂ . . . ಬಳ್ಳಮವು ನಾಲ್ಕನಲು ಕೊಳಗವಾವು ವಿಂಶತಿಗೆ ಖಂಡುಗಾಖ್ಯಂ" (ಶುಂಗಣಾ. ೦೦೪-೦೦). **ಹಾಗ** : ೧. ಹಣದ ತಲೆಯಕ್ಕಿ ನೆಲದೆಟಿಯ ಹಾಗ ಶವದುಡಿಗೆಯೆನಗಾಯ್ತು (ಹದಕಾ. ೦೦-೩೮); ಇಲ್ಲಿ ಅಭಿವ್ಯಕ್ತ ಗೊಂಡಿರುವುದೇನಿದ್ದರೂ ಆ ವಿರಾಟ್‌ಪುರುಷನ 'ಹಾಗ' ಮಾತ್ರ (ಸೌಂದಸ. ೦೦೮). ೨. ಸೆಟ್ಟಿಯರೊಕ್ಕಲಿಗೆ ಹಾಗ ಎಂಟು (ಸೌಇಂ. ೦೯೪೭, ಹಾನಗಲ್. ೩೪೯-೪೩; 1036); ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಿಲಿವರಯ್ಯಾ (ಬಸವ. ೦೩೮); ಹಾಗದ[ಕಾಣಾ. ಪಚ್ಚೆ]ಯ] ಪಸುರ್ವಾಣಿಯಂ ಕುಡಲಿಲ್ಲದಂತು ಬಾಯ್ತಂಬುಲಮೆಂಬುದಂ ಪಡೆಯದಂತುಟಿ (ಲೀಲಾವ. ೨-೦೦೭) ; ಹಾಗದ ಕೋಶಿ ಮುಪ್ಪಾಗದ ಬೆಲ್ಲ ತಿಂತು (ಗಾದೆ). ೪. ಭಾಗ ; ಪಾಲು : ಕಾವಗೌಡಂ ತನ್ನ ಹಾಗದ ಬಳದೊಳಗೆ ಬಿಟ್ಟ ಮತ್ತರೆರಡು ಕಮ್ಮ (ಕಇ. I, ೨೪೯-೨೦; 1148); ಬಾಚಗಾವುಂಡನ ಹಾಗದಿಂ ಪಡುವಲು ಮತ್ತಂ (ಕಇ. I, ೨೫-೭೭; 1186) ; ಬೊಮ್ಮಗವುಡಂಗೆ ಹಾಗದ ಕೆಯ್ಯನು ಗಪುಡು ಗೊಡೆಗೆಯಾಗಿ . . . ಕೊಟ್ಟ (ಎಕ. VI. ಶಕೃಸು. ೮೩-೪; ?).

ಹಾಗದ ಕಾಸು = ಚಿಕ್ಕಬೆಲೆಯ ನಾಣ್ಯ : ಹಣ ತಿಂದು ಹುಟ್ಟಿದವನಿಗೂ ಹಾಗದ ಕಾಸು ತಿಂದು ಹುಟ್ಟಿದವನಿಗೂ ಸಮವೆ ? (ಕಂಗಾಳ್ಯ. ೯) ; ಮೇಲೆ ಬಿದ್ದು ಬರುವ ಸೂಳೆ ಹಾಗದ ಕಾಸಿಗೂ ಬೇಡ (ಗಾದೆ). [<ಸಂ. ಪಾದ]

**ಪಾಗ₂** 'ಪಾಗಾ' ನೋ.

**ಪಾಗಡ** 'ಪಾಡಗ₂' ನೋ.

**ಪಾಗಡಿ** 'ಪಗಡಿ₂' ನೋ.

**ಪಾಗಡೆ** 'ಪಾಡಗ₂' ನೋ.

**ಪಾಗದ** (ನಾ). ೧. ಪ್ರಾಕೃತಭಾಷೆ : ಸಕ್ಕದಮುಂ ಪಾಗದಮುಂ ಮದಕ್ಕಂ ಬಗೆದಂತೆ ಸಮಚಿ ಪೇಟಲ್ (ಕವಿರಾ. ೦-೪೦) ; ಸಕ್ಕದದೊಳ್ ಮುನ್ನಂ ಪಾಗದದೊಳಾದ [ಸು]ಕೃತಿಗಳೆಲ್ಲಂ ಕನ್ನಡ ಮುಂಡಿಗವಿದಂತೆ ಜಗನ್ನುತವಿಾ ಕೃತಿಯೆ ತಾನಳಂಕೃತಿಯೆನಿಪಾ (ವರ್ಧಮಾ. ೦೭-೪೯) ; ಪ್ರಾಕೃತ-ಪಾಗದ (ಶಮರ. ೨೬೮ ಪ್ರಯೋ). ೨. ಜನಸಾಮಾನ್ಯರ ಭಾಷೆ ; ದೇಶಭಾಷೆ : "ಪಾಗದಂ ನರಭಾಷಿತಂ" (ಕರ್ಣಾಟ. ೭೨) ; ಸಕ್ಕದದೊಳರ್ಪುದಂ ನಲವಿಂ ಪಾಗದದಿಂ ರಚಿಯಿಸಿ ಕೇಳ್ವೊಳ್ಪುಳ್ಳುದೆ ಸೆ (ಶಬ್ದಾ.ಸು. ೦-೫೪). [<ಪ್ರಾ. ಪಾಗಯ. / ಸಂ. ಪ್ರಾಕೃತ]

**ಪಾಗರ₁** 'ಪಾಗಾರ' ನೋ.

**ಪಾಗರ₂** 'ಪಕ್ಕರೆ' ನೋ.

**ಪಾಗರಗೋಡೆ** (ನಾ.) ಸುತ್ತುಗೋಡೆ ; ಪ್ರಾಕಾರದ ಗೋಡೆ ; ಪೌಳಿ : ಮಟಕೆ ಹಾಕಿದ ಪಾಗರಗೋಡೆ ಗಡಿ (ಎಕ. VIII. ತೀರ್ಥಹ. ೫೨-೦೭ ; 1641). [ಪಾಗರ₁ (<ಪಾಗಾರ) + ಗೋಡೆ]

**ಪಾಗಲ್₁**, ಹಾಗಲ್, ಹಾಗಲ, ಹಾಗಲು (ನಾ). ಒಂದು ಬಗೆಯ ಬಳ್ಳಿ ಹಾಗೂ ತರಕಾರಿಯಾಗಿ ಬಳಸುವ ಅದರ **ಕಾಯಿ** : ಸಲೆ ಪಂದಿಯ ನೆಣನುಮನಂಕೊಲೆಯ ಕಷಾಯಮುಮನೆಚಿಗೆ ಮೂಲದೊಳಾಪೊಂಡಲಗೆಗಿದಚ್ಚರಿಯೆನೆ ಪಾಗಲ ಕಾಯಕ್ಕಂ (ಲೋಕೋಪ. ೬-೫೪) ; ಸಾಗರಮೊಂದು ಕಂಕಣದಿನುರ್ವರೆ ಕಾವಲಿಯಿಂ ಕುಲಾದ್ರಿಗಳ್ ಪಾಗಲ ಕಾಯ್ಗಳಿಂ . . . ಕರಂ ಕಿಚಿಯವಾದುವು ಕಣ್ಗೆ ಗುಣಾವಲೋಕನಾ (ಅರ್ಧನೇ. ೬-೪) ; ಪೊತ್ತದೆ ಪೊಗಸುತ್ತದೆ ನಸುಬತ್ತದೆ ಕೆಂಪಟರ್ದ ಬೆಂದ ಪಾಗಲ ಕಾಯಂ ಪತ್ತೆಂಟು ತುತ್ತಿದಲ್ಲದೆ ಚಿತ್ತಂ ತಣಿಗುಮೆ (ಸೂಕ್ತಿಸು. ೦೦-೯೩). **ಹಾಗಲ್** : "ಹಾಗಲ್—ಕಾರವೇಲ್ಲ,

ಕಟಿಲ್ಲಕ, ಸುಷವಿ" (ನಾಶಿರಾ. ೩.). **ಹಾಗಲ** : ಹಾಗಲ ಹಡಲಂ ಕುಳಂ ಕೂಗಲಿ ಕೂಷ್ಮಾಂಡವವರೆ ಬದನೆಗಳಿಂ ಲೇಸಾಗಿರೆ ಮಾಡಿದ ಸವಿಮೇಲೋಗರವಮಂ ತಂದು ಬಡಿಸಿದರ್ ಮಾನಿನಿಯರ್ (ರರ್ವಸ. ೨-೫೫) ; ಕತ್ತರಿಗುಳ್ಳ ಹಡಲ ಹಾಗಲ ಕೂಗರಿ ಬದನೆ ಮೊದಲಾದ ಕಾಯ್ಗಳ ರಸಂಗಳಂ ತೆಗೆದು (ಸೂಶಶಾ. ೫-೪೧) ; ಹಾಗಲ ಬದನೆ ಹೆಗ್ಗುಳ್ಳ . . . ಹಲವು ಫಲಕಂದಗಳ ಶಾಖಾವಳಿಯ ಸವಿಯೊಪ್ಪುರಣೆ ಘಮಘಮಿಸಲಿಕೆ ಬಡಿಸಿದರು (ಅನಂರಾ. ೬-೨೫-೩೯) ; ಹಾಗಲ ಕಾಯನ್ನು ಹೇಗೆ ಅಟ್ಟರೂ ಕಹಿ (ಹಳ್ಳಿಶಾ. ೬೬). **ಹಾಗಲು** : "ಹಾಗಲು ಪೀತಪುಷ್ಪ ಕರ್ಕೋಟಕಿಯೆನಿಸಿಕ್ಕು" (ಮಂಗರಾ. ೪೪-೪೪) ; ಹರಳುಗಳಂ ಹಂದಿಗಳ ರಕ್ತವವೆಗಳಲ್ಲಿಯೂ ಅಂಕೊಲೆ ತೈಲದಲ್ಲಿಯೂ ನೆನಸಿ ಬಿತ್ತಲು ಅದರಲ್ಲಿ ಹಾಗಲುಕಾಯಿ ಹುಟ್ಟುವುದು (ಶಾಗಂ. ೪೩೬-೦೪).

**ಹಾಗಲ ಕಾಯಿಗೆ ಬೇವಿನ ಕಾಯಿ ಸಾಕ್ಷಿ**=(ಅಲಂ) ದುಷ್ಟನಿಗೆ ಅದೇ ಮನೋಭಾವದ ಇನ್ನೊಬ್ಬನು ಕೊಡುವ ಸಾಕ್ಷಿ : ಹಾಗಲ ಕಾಯಿಗೆ ಬೇವಿನ ಕಾಯಿ ಸಾಕ್ಷಿ (ಗಾದೆ).

[ದೇ. ॥ ತಮಿ. ಪಾಕಲ್, ಪಾವಲ್ ; ಮಲ. ಪಾವಲ್]

**ಪಾಗಲ್₂** 'ಪಾಗಾರ' ನೋ.

**ಪಾಗಲ** 'ಪಾಗಾರ' ನೋ.

**ಪಾಗಲು** 'ಪಾಗಾರ' ನೋ.

**ಪಾಗಾ, ಪಾಗ್₂** (ನಾ). ಆನೆ ಮತ್ತು ಕುದುರೆಗಳ ಲಾಯ : ಪೂರ್ವಕಾಲದಲ್ಲಿ ಆನೆಗಳ ಪಾಗಾ ಈ ಬಾಜಾರಿನಲ್ಲಿ ಇತ್ತು (ಕರ್ಣಗ. ೫೨೪) ; ಮೋಜಿನ ಕುದುರಿ . . . ಪಾಂಡವರ ಮನಿಯೊಳಗ ಪಾಗಾದಾಗಿತ್ತು, ಪಾಗಾದ ಗೂಟವ ಜ್ಯಾಡಿಸಿ ಕಿತ್ತು ಹೋಗುವಾಗ ಶಿಶುನಾಳಕೋಡ್ಯೋಡಿ ಬಂತು (ಕಂಆ. ೪೬). **ಪಾಗ್₂** : ಕುದುರಿಗೆ ಪಾಗದ ಮನೆಯಿರಲಿ ಕೋ ಪಲ್ಲಕ್ಕಿ ಅಬಕಾಗಿರಿ ಚಿತ್ತರಿಗಿಮನಿಯಿರಲಿ (ಕನ್ನಶಾ. ೩೨೮).

[ ← ಮರಾ. ಪಾಗಾ ]

**ಪಾಗಾಣತಿ** (ನಾ). ದಾಸಿ (?) : ಮಾರುವುದು ನಿನ್ನ ತೊತ್ತಿನ ಮಕ್ಕಳಿಗೆ ಮಾರುವುದು ನಿನ್ನ ಪಾಗಾಣತಿಯರಿಗೆ ಮಾರುವುದು ನಿನ್ನ ಬೋನಕಾರ್ತಿಯರಿಗೆ . . . ಮಾರದಿರು ಎನ್ನ ಮಾರಿಗೆ ಗುರಿಮಾಡಿ (ಪೋಕ್ಷಂ. ೬೦-೬).  [ ? ]

**ಪಾಗಾರ, ಪಾಕಲ್, ಪಾಕಲ₁, ಪಾಕಲು, ಪಾಗರ₁, ಪಾಗಲ್₂, ಪಾಗಲ, ಪಾಗಲು** (ನಾ). ಸುತ್ತುಗೋಡೆ ; ಪ್ರಾಕಾರ ; ಪೌಳಿ : ಝುಗೆಯ ಲಹರಿಯ ಜಾಳಿಗೆಯ ಪಚ್ಚೆಗಳ ಪಾಗಾರದ ಸುರತ್ನಾಳಿಗಳ ಲೆಸೆದುದು ರಾಜಸಭೆ (ಕುಮಾವ್ಯಾ. ೦೩-೨೫) ; ಕಟೆಯ ಪಾಗಾರವು (ಮೊಂಕಶಾ. ೦೯೪೦, ಕುಮುಟ. ೧೧೩-೯; 1475) ; ಮರಳಿನ ಪಾಗಾರವಳಿವುದು ಖಚಿತವು (ಗಣಶಾ. ೩-೪೫) ; ಮನೆಯ ಸುತ್ತಲೂ ಎತ್ತರವಾದ ಪಾಗಾರವನ್ನು ಮಾಡಿಸಿದನು (ಮತಿಸ. ೪೨). **ಪಾಕಲ್** : ಪಳುಕಿನ ಪಾಕಲಂ ಬಳಸಿ ರಂಜಿಸುತಿರ್ಪ ಮಹೇಶಗೇಹದೊಳ್ (ಶಿರಶಿ. ೩-೪೦) ; ಪ್ರಾಕಾರ_ಪಾಗರ, ಪಾಕಲ್ (ಶಬ್ದಾಮ. ೬೦ ಪ್ರಯೋ). **ಪಾಕಲ₁** : "ಪಾಕಲೆನಲು ಪಾಕಲ ಮೆನಲುಃ ಕಂಗೊಳಿಕು ಪ್ರಾಕಾರದೊಳ್" (ಕಶಿರ. ೩೫). **ಪಾಕಲು** : "ಪಾಕಲುಯೆಂಬ ಶಬ್ದಂ = ಪ್ರಾಕಾರದಲ್ಲಿಯುಂ, ಕಾಂಗಿನಲ್ಲಿಯುಂ" (ಶಮದ. ಪು. ೩೧೨ ಟಿ). **ಪಾಗರ₁** : "ಕೋಟಾ = ಪಾಗರಂ" (ಶಾಕಳ್ಳ. ೨೫೫) ; ತಳವಾಸುಗೆಯ ಪಚ್ಚೆ ಪಳಿಕೆಸವ ಪಾಗರಂ ಹೊಳೆವ ವಜ್ರಸ್ತಂಭ (ಮಸೋಶ. ೧-೨೩) ; ಬೇಲಿಯಿಕ್ಕಿದ ಕಲ್ಲುಬಸ್ತಿಯ ಪಾಗರದಡಿ ತೆಂಕಲು ಹರಿದ ಅರಳೆಗಡಿ (ಕಶ. I, ೪೦-೫೦; 1417) ; ಪಾಗರ[ಪಾಠಾಂ. ಬಾಗಿಲ] ವೊಂದೆರಡನು ದಾಟಿ ಮುಂದೊಂದು ಬಾಗಿಲೊಳ್ಳಿಂದನಾ ರಾಯ (ಶರಶ. ೨೨-೬೬); ಭವಿದ್ಯಪ್ಟಿ ಪೂದೋಂಟಕಂ ಬೀಳದಂದದಿಂ ತವೆ ಪಾಗರವ ಕಟ್ಟಿಸುವುದಣೆಯರದೊಳು (ಪಾಸೋಕು. ೨-೬೬). **ಪಾಗಲ್₂** : ಸೌಧಶಿಖರಪ್ರಾಗ್ಭಾಗಮಂ ಪತ್ತಿ ಪಾಗಲ[ಪಾ]ಶ್ರ್ಯಸಿ . . . ಅಟ್ಟಾಳಮಂ ಮೆಟ್ಟಿ ನೋಟ್ಟಿ ಲತಾತನ್ವಿಯರಂಬರೇಚರಿಯರೆಂಬಾಶಂಕೆಯಂ ಮಾಡಿದರ್ (ಪುಷ್ಪಪು. ೮-೪೬) ; ಪ್ರಾಕಾರ _ ಪಾಗಲ್ (ಶಮದ. ೨೮೦ ಪ್ರಯೋ) ; ದೇಗುಲಮಂ ಗೋಹುರಮಂ ಪಾಗಲ್ಗಳನಡಿಗೆಸೆಜ್ಜೆವಜ್ಜಣಮನೆ ಮುಂತಾಗಿ . . . ಒಡರಿಸಿದಂ (ಶಳಪ. ೨-೧೪೦). **ಪಾಗಲ** : ಪಾಗಲಂ = ಪ್ರಾಕಾರಂ (ಶಮದ. ಶಂ.೨). **ಪಾಗಲು** : ಪ್ರಾಕಾರ _ ಪಾಗರ, ಪಾಗಲು (ಹೊನುಗ. ೧೦೮). [ <ಪಾಲಿ. ಪಾಗಾರ. / ಪ್ರಾ. ಪಾಕಾರ, ಪಾಗಾರ. / ಸಂ. ಪ್ರಾಕಾರ ]

**ಪಾಗಿವಾಳ** (ನಾ). ಕಾಲವನ್ನು ಅಳೆಯುವ ಒಂದು ಪ್ರಮಾಣ : ಅರುವತ್ತು ಅಕ್ಷರ ಕೂಡಲು ಒಂದು ಪಾಗಿವಾಳ, ೬೦ ಪಾಗಿವಾಳ ಕೂಡಲು ೧ ಘಳಿಗೆ (ರುದ್ರಶಾ. ೮೫).  [ ? ]

**ಪಾಗು₁, ಪಾಂಗು₂, ಪಾಕು₁** (ನಾ). ೧. ತಲೆಗೆ ಸುತ್ತುವ ಉತ್ತಮ ವಸ್ತ್ರ ; ರುಮಾಲು; ಪೇಟ : ಧರೆಯ ಪಾಗನೆ ಮಾಡಿ ಸಿರಕೆ ಸುತ್ತಿದನೊಬ್ಬ (ರೇಪಾಂಪು. ೩-೦೬೦) ; ಪತ್ತಿದ ಪನ್ನ ಸುತ್ತಿದ ನಿರಾಜಿಯ ಪಾಗು ರೂಪೆತ್ತು ನಿಂದಿಹನಾರು (ಶೌಂದಕಾ. ೯-೬೬) ; ಚಂದ್ರಗಾವಿಯ ಅಂಗಿ ತೊಟ್ಟು ಇಂದ್ರನೀಲದ ಪಾಗು ಸುತ್ತಿ (ಗೋಹಾಡು. ೨೯); ಈ ಸೈನಿಕರಾದರೋ ಪೀತವಸ್ತ್ರಧಾರಿಗಳು. ಕೆಂಪುಪಾಗು ಸುತ್ತಿದ್ದರು (ಕುಟಿಖಾ. ೮೨). ೨. ಒಂದು ಶ್ರೇಷ್ಠ ಬಗೆಯ ಸೀರೆ : ಚಿತ್ರ ಚಿತ್ರಾವಳಿ ಪಾಗು ಪಸುರ[ ಪಾಠಾಂ. ಪಾಂಗುಪಶು ]ಪಟ್ಟೆ ಸೂತ್ರಾವಳಿಯ ಚಿನ್ನಧಾರೆ (ಅಮುಣಾಂ. ೪-೮). **ಪಾಂಗು₂** : ೧. ಒಡಿದೆತ್ತಿ ತನ್ನ ಪಾಂಗಿಂ ಬಿಡದಡಿಯಂ ಕಟ್ಟಿ ತೂಗಿ ವಿತ್ತಮನಿಕ್ಕೆಂದಡಿಗಡಿಗೆ ಜಡಿಯುತುಂ ಬಿಡುನುಡಿಯಂ ನುಡಿಯುತ್ತುಮಿರ್ದನಾ ಶಿವಭಕ್ತಂ (ಉದ್ಭಟ. ೧೨-೩೪) ; ಪೆಗಲ್ವರವಿಟಾದಾ ತುಱುಂಬರೆವ ಟೊಪ್ಪಿಗೆ ಕಟ್ಟಿದ ಪಾಂಗು ಪೂಸಿ ಸೂಗಿರಿಸಿದ ಗಡ್ಡಮಿಸೆ ಕರದೊಳ್ ಸಲೆ ಚಿತ್ರಿತ ವೇತ್ರದಂಡಮೊಪ್ಪಿರೆ ಸಹವಾಸಿಗಳ್ ತಳರ್ದರ್ (ಶಾಂತೀಶ್ವ. ೧೫-೮೯). **ಪಾಕು₁** : ೧. ಪಾರು ಅವನಿಗೆ ವೀಳ್ಯದೆಲೆ – ಹೊಗೆಸೊಪ್ಪುಗಳನ್ನಿತ್ತಳು. ಅವುಗಳನ್ನು ಅವನು ತನ್ನ ಪಾಕಿನೊಳಗೆ ಸೇರಿಸಿದ (ಧೂಮಮು. ೨೬).

**ಪಾಗುಸುತ್ತು**=ರುಮಾಲನ್ನು ಸುತ್ತು,-ಕಟ್ಟು: ತಲೆಗೆ ಒಂದು ಥಾನು ಬಟ್ಟೆಯನ್ನು ಪಾಗು ಸುತ್ತಿ ಕಾಲಿನಲ್ಲಿ ಪಾಪಾಸು ಮೆಟ್ಟಿ . . . ತೊರೆಡುತ್ತಿದ್ದರು (ಕರಿಶ. ೮೦೬).

[ದೇ. ॥ ತಮಿ. ಪಾಕು ; ತೆಲು. ಪಾಗ, ಪಾಗಾ. / ಹಿಂ.ಪಾಗು, ಪಾಗ ]

**ಪಾಗು₂** (ನಾ). ಒಂದು ಬಗೆಯ ಚರ್ಮವಾದ್ಯ : ಮಣ್ಣಿನ ಮಕ್ಕಳು ಹಾಲಕ್ಕಿಒಕ್ಕಲು, ಭೂದಾಯಿ ನಕ್ಕಳು ಅವರಾಟಕೆ ಹರಿದಿನ ಹಗರಣ ಗುಮಟೆಯ ಪಾಗಿನ ಒಡೆ – ಕೊಟ್ಟೆ – ಪಾಯಸ ರಸದೂಟಕೆ ! (ಕ್ರಾಂತರ್ಪ. ೩-೭). 'ಗಂವಂಟೆಪಾಗಂ' ಪರಾ.

[ ದೇ. ॥ ತುಳು. ಪಾಂಕ್ ]

**ಪಾಗುಡ₁** 'ಪಾವುಡ₁' ನೋ.

**ಪಾಗುಡ₂** 'ಪಾವುಡ₂' ನೋ.

**ಪಾಗುಡಂಗಟ್ಟು** (ಕ್ರಿ). ಉಡುಗೊರೆಯನ್ನು ಗಂಟು ಕಟ್ಟು : ಪ್ರಜಾಪತಿಮಹಾರಾಜಂ ಪಾಗುಡಂಗಟ್ಟಿ ಸಂಪೂರ್ಣೇಂದುಮುಖಿಯನಿಂದು ನಾಳೆನ್ನದೆ ಬಂದ ಪೊಟ್ಟೆ ಪೊಟ್ಟಾಗೆ ರಥನೂಪುರಚಕ್ರವಾಳಕ್ಕೆ ಬೇಗಮಟ್ಟುವುದುಂ (ಶಾಂತಿಪು. ೫-೩೬ ವ). [ ಪಾಗುಡ₂ (< ಪಾವುಡ₂) + ಕಟ್ಟು₁ ]

**ಪಾಗುಡಂಗೊಡು, ಪಾಗುಡಗೊಡು** (ಕ್ರಿ). ಉಡುಗೊರೆಯನ್ನು ಕೊಡು : ಸೇಸೆಯಿಕ್ಕುವ ಪಾಗುಡಂಗೊಡುವೀ ಸಮಯದೊಳಗತ್ತ ನಾಕವಾಸದೊಳು ಸುರರೆಱಗದೆಱಗದವರ ಮಕುಟಗಳು (ಹಳ್ಳಿಶಾ. ೩೩-೮).

**ಪಾಗುಡಗೊಡು** : ಎಬಿಗೆ ಮಂತ್ರಿಗಳೊಂದಿ ಕಾಣಿಕೆಯಿಕ್ಕಿ ಪಾಗುಡಗೊಟ್ಟು (ಸಾಳ್ವಭಾ. ೪೦-೯). [ ಪಾಗುಡ$_2$ (<ಪಾವುಡ$_2$) + ಕೊಡು$_1$ ]

**ಪಾಗುಡಂತರ್** (ಕ್ರಿ). ಉಡುಗೊರೆಯನ್ನು ತರು : ಸ್ತ್ರೀರತ್ನಮಂ ದೇವರ್ಗೆ ಪಾಗುಡಂತಂದೆನೆಂದೊಪ್ಪಿಸುವುದುಂ (ಧರ್ಮಾಮೃ. ೩-೧೩೭). [ ಪಾಗುಡ$_2$ ( <ಪಾವುಡ$_2$) + ತರ್ ]

**ಪಾಗುಡಗೊಡು** 'ಪಾಗುಡಂಗೊಡು' ನೋ.

**ಪಾಗುಪಟ್ಟೆ** (ನಾ). ಉತ್ತಮವಾದ ರೇಷ್ಮೆಬಟ್ಟೆ : ತೂಗುತೊಟ್ಟಿಲಿಗೊಂದು ಪಾಗುಪಟ್ಟೆಯ ಹಾಸಿ ಮಾಗಾಯಿ ಮಗನ ಮಲಗೀಸಿ ಅವರಮ್ಮ ಜೋಗುಳ ಹಾಡಿ ಹಿಗ್ಯಾಳ (ಹಳ್ಳಿಹಾ. ೭೭). [ ಪಾಗು$_1$ + ಪಟ್ಟೆ$_3$ ]

**ಪಾಗೋಟ,** ಪಾಗೋಟೆ (ನಾ). ಒಂದು ಬಗೆಯ ರುಮಾಲು ; ಪಗಡಿ : ಮುಂಡಾಸ, ತುರುಬಿನ ರುಮಾಲು, ಪಟಕಾ, ಪಾಗೋಟ ಎಂದು ರುಮಾಲಿನ ವಿಭಾಗಗಳು (ಗೋಮಟಾಕ್ಷ. ೩೪). **ಪಾಗೋಟೆ** : ಪಾಗೋಟೆಯನ್ನು ಧರಿಸಿದ ಅವರ ತಂದೆಯೂ ಮುಖರೆಯನ್ನು ಧರಿಸಿದ ಅವರ ತಾಯಿಯೂ ಬಂದವರನ್ನೆಲ್ಲ ಸ್ವಾಗತಿಸುವದರಲ್ಲಿ ತೊಡಗಿದ್ದರು (ಕಮಲಾ. ೧೩೩); ತಲೆಯ ಮೇಲೆ ಒಂದು ಗೋಲಾಕಾರದ ಪಾಗೋಟೆ ಮತ್ತು ವಾರ್ನಿಶ್ ಮಾಡಿದ ಹೊಸದೊಂದು ಜೋಡುಪಾದರಕ್ಷೆ ಧರಿಸಿ... ಹೊರಬಿದ್ದನು (ಇಕ್ಷುಕ. ೩೯). [←ಮರಾ. ಪಾಗೋಟೇ, ಪಾಗೋಟೇ ]

**ಪಾಗೋಟೆ** 'ಪಾಗೋಟ' ನೋ.

**ಪಾಚಕ** (ಗು). ೧. ಜೀರ್ಣಶಕ್ತಿಯನ್ನುಂಟುಮಾಡುವ : 'ಪಾಚಕರಸ' ಪರಾ. (ನಾ). ೨. ಬೇಯಿಸುವಿಕೆ; ಅಡುಗೆಮಾಡುವಿಕೆ. ೩. ಅಡುಗೆ ಮಾಡುವವನು; ಬಾಣಸಿಗ : ಒಂದು ಕಬ್ಬಿನ ರಸವೆ ಪಾಚಕನಿಂದ ಗುಡ ಶರ್ಕರೆಗಳ ಬಹುಭೇದವಾದಂತೆ (ಗಗಶಾ. ೦೪ ೬); ಪಾಚಕನು ಬಂದು . . . ಇಂದು ಯಾವ ಬಗೆಯ ಖಾನಾ ಸಿದ್ಧಗೊಳಿಸಬೇಕು ಎಂದು ವಿಚಾರಿಸಿದನು (ಇಕ್ಷುಕ. ೦೩೪) ; ಅವನು . . . ವಿಚಾರಣೆ ಮಾಡಿಸಿ, ಆ ಪಾಚಕನಿಗೂ ಮಗನಾದ ನಾಗಪ್ಪನಿಗೂ ಮರಣ ದಂಡನೆಯನ್ನು ವಿಧಿಸಿದನು (ಪಾಳಗಾ. ೬೯). [ ಸಂ. ]

**ಪಾಚಕತ್ವ** (ನಾ). ಅಡುಗೆಯ ವಿದ್ಯೆ : ಪಾಚಕತ್ವವು ಪುರುಷನನ್ನು ಬಿಟ್ಟು ಸ್ತ್ರೀಯಲ್ಲಿರುವುದು (ಛಾತಕ್ಷ. ೬೫೦). [ ಸಂ. ]

**ಪಾಚಕರಸ** (ನಾ). ಉಂಡ ಆಹಾರವು ಪಚನವಾಗಲು ಜಠರವು ಸ್ರವಿಸುವ ರಸ; ಪಿತ್ತಕೋಶದ ರಸ : ಒಂದೇ ಪ್ರಕಾರದ ಆಹಾರವನ್ನು ಯಾವಾಗಲೂ ಪಚನಮಾಡುವ ಪಾಚಕರಸದೊಳಗೆ ಅನ್ಯಜಾತಿಯ ಆಹಾರವನ್ನು ಪಚನ ಮಾಡುವ ಸಾಮರ್ಥ್ಯ ಉಳಿಯುವದಿಲ್ಲ (ಮುಂಬಯಿ. ೩-೦೬೯); ಆಮಾಶಯದಲ್ಲಿರುವ ರಸದಿಂದ ಅನ್ನವು ಪಚನವಾಗುವ ಕಾರಣ ಅದಕ್ಕೆ ಪಾಚಕರಸವೆಂದು ಹೆಸರು (ಮುಂಬಯಿ. ೬-೩೦೮). [ಪಾಚಕ + ರಸ]

**ಪಾಚಕಶಕ್ತಿ** (ನಾ). ಉಂಡ ಆಹಾರವನ್ನು ಜೀರ್ಣಿಸುವ ಸಾಮರ್ಥ್ಯ : ಸಿಕ್ಕ ಹಾಗೆ ತಿನ್ನಬಾರದು. ತಿಂದರೆ ನಿಶ್ಚಯವಾಗಿ ಜೀರ್ಣಕೋಶದ ಪಾಚಕಶಕ್ತಿಯು ಕಡಿಮೆಯಾಗುವದು (ಮುಂಬಯಿ. ೪-೨೩). [ ಪಾಚಕ + ಶಕ್ತಿ ]

**ಪಾಚನ** (ನಾ). ೧. ಅಡುಗೆ ಮಾಡುವಿಕೆ; ಬೇಯಿಸುವಿಕೆ. ೨. ಪಕ್ವಗೊಳಿಸುವಿಕೆ. ೩. ಜೀರ್ಣಗೊಳಿಸುವಿಕೆ ; ಪಚನಕ್ರಿಯೆ : ಲಂಘನವು ದೀಪನ ಪಾಚನಂಗಳನ್ನುಂಟುಮಾಡುವುದು (ಕಳವೈ. ೦೦೦). [ಸಂ.]

**ಪಾಚವಾರಿ** (ನಾ). ಐದು ಗಜದ ಸೀರೆ : ಪಸೂ ಪರಕರದ ಪೋರಿಯಾಗಿ ಉಳಿಯದೆ ಪಾಚವಾರಿಯಲ್ಲಿಯ ಸಣ್ಣ ಹೆಣ್ಣಾಗಿ ಬಂದಿದ್ದಳು (ಬಿಕಶ. I. ೦೦೬). [ ←ಮರಾ. ಪಾಂಚ್‌ವಾರ್ = ಐದು ಗಜ ]

**ಪಾಚಿ$_1$** 'ಪಾವಸೆ' ನೋ.

**ಪಾಚಿ$_2$** (ನಾ). (ಮಕ್ಕಳ ಭಾಷೆಯಲ್ಲಿ) ಹಾಲು : (?). [ದೇ. ॥ ತಮಿ. ಮಲ. ಪಾಚ್ಚಿ]

**ಪಾಚಿ$_3$** (ನಾ). ಮೂಡಣದಿಕ್ಕು; ಪೂರ್ವದಿಕ್ಕು : "ಪಾಚಿ_ಪ್ರಾಚಿ= ಮೂಡುದಿಕ್ಕು" (ಕರ್ನಕೋ. ೨೩). [<ಸಂ. ಪ್ರಾಚೀ]

**ಪಾಚಿ$_4$** 'ಪಾಜಿ$_2$' ನೋ.

**ಪಾಚಿಕೆ** 'ಪಾಸಂಗೆ' ನೋ.

**ಪಾಚಿಬಳ್ಳಿ** (ನಾ). ಒಂದು ಬಗೆಯ ಔಷಧಿ ಸಸ್ಯ : ಬೇಲದ ತಿರುಳು (ಹಣ್ಣು), ಪಾಚಿಬಳ್ಳಿ (ಕರ್ನಾಟಕಿ), ಮಗ್ಗಾರೆಕಾಯಿ, ಮಗ್ಗಾರೆಬೇರು_ಇವನ್ನು ಬಗೆಯೊಂದಕ್ಕೆ ಒಂದು ಸೇರಿನಂತೆ ಹಾಕಿ ಚೂರ್ಣಿಸಿ (ಕಳವೈ. ಶಂ. ೬೩೯). [ ಪಾಚಿ$_1$ (<ಪಾವಸೆ) + ಬಳ್ಳಿ ]

**ಪಾಚಿಸು$_1$** (ಕ್ರಿ). ಸುಡು; ಬೇಯಿಸು : ಪುಸಿದೊಡಂತಕನವರ್ ಪಾಚಿಸರೆ ನರಕದೊಳ್ ವ್ಯೆಯನು (ತ್ರಿಬಿಭಾ. ೨೬-೯೯). [ಪಾಚನ + _ಇಸು$_3$]

**ಪಾಚಿಸು$_2$** (ಕ್ರಿ). (ಮಕ್ಕಳ ಭಾಷೆಯಲ್ಲಿ) ಮಲಗಿಸು; ನಿದ್ರೆಮಾಡಿಸು : ಆಟವಾಡಿದ್ದು ಸಾಕು, ಪಾಚಿಸುತ್ತೀನಿ ಬಾ (ರೂಢಿ). [ ಪಾಚು + _ಇಸು$_3$ ]

**ಪಾಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಡುಬಿಳಿಸಜ್ಜಬು ಹುಲ್ಲು, ಪಾಚಿಹುಲ್ಲು (ವೃಕ್ಷಶಾ. ೪೯-೯೬೭). [ ಪಾಚಿ$_1$ (<ಪಾವಸೆ) + ಹುಲ್ಲು (<ಪುಲ್) ]

**ಪಾಚು** (ಕ್ರಿ). (ಮಕ್ಕಳ ಭಾಷೆಯಲ್ಲಿ) ಮಲಗು; ನಿದ್ರಿಸು : ಬೂಚಿ ಬಂದಿದೆ ರಂಗ ಬೂಚಿ ಬಂದಿದೆ ಚಾಚಿ ಕುಡಿದು ಸುಮ್ಮನೆ ನೀ ಪಾಚಿಕೊಳ್ಳೊ ಕೃಷ್ಣಯ್ಯ (ಪುರಂದ. ೪-೧೦೦ ಅನುಪಲ್ಲವಿ). [ ? ]

**ಪಾಚೆ** 'ಪಾವಸೆ' ನೋ.

**ಪಾಚ್ಛಾ** 'ಪಾತಶಹ' ನೋ.

**ಪಾಚ್ಛಾಯಿ** 'ಪಾತಶಹ' ನೋ.

**ಪಾಛಾ** 'ಪಾತಶಹ' ನೋ.

**ಪಾಜಿ$_1$** (ಗು). ೧. ಕೀಳುತರದ; ನೀಚ : (?). (ನಾ). ೨. ಕ್ಷುಲ್ಲಕ ವ್ಯಕ್ತಿ ; ಅಲ್ಪ ; ಕೀಳುಮನುಷ್ಯ : ಇಂದು ಕಾಜಿಯಾದವ ನಾಳೆ ಪಾಜಿಯಾಗುತ್ತಾನೆ ! (ಶಿಕ್ಷಾಮು. ೧೪೩). [←ಪಾರ. ಹಿಂ. ಮರಾ. ಪಾಜೀ]

**ಪಾಜಿ$_2$**, ಪಾಚಿ$_4$ (ನಾ). ಒಂದು ಬಗೆಯ ಬಲೆ : ಕೊರಲ್ವಲೆ ನಿಡುವಲೆ ಪಾಜಿ ಬೆಳ್ವಾರ ಬಡಿವಲೆ ಬಲುವಲೆಗಾಱರು ತೂಗಿ ಬೊಬ್ಬಿಡುತಲ್ಪೆದಿನರು ಮುಂಗಡೆಯ (ವೀರೇಶಚ. ೦೯-೦೭). **ಪಾಚಿ$_4$** : ಪಾಚಿ ಸಿಡಿಯು ಸಲೆ ಕಾಲು ಕಣ್ಣಿ ತಡಿಕೆ ಸೆಳೆಗೋಲಿನ ಬಲುನಾಯಕರೊಮಗಿದರು (ಹಂಸಾ. ೧-೬೬). [ ? ]

**ಪಾಜಿಕ** (ನಾ). (?) : ಪರದನಾರ್ಬ್ಬನ್ನದಸಂಗಡಿಯ ಪಾಜಿಕವಿಂದಿಟಿ ಯನನ್ಯಾಯದೊಳ್ಪರಧನಂ ಪೊಯ್ದಡೆ ಸಾವು ಸಾಲ್ವರ್ (ಶಾಇ. IX-1, ೭೭-೩೪; 992). [ ? ]

**ಪಾಜು** (ನಾ). (ಕರಾ) ನೀರು ಮೇಲಿನಿಂದ ಕೆಳಗೆ ಹರಿಯಲು ಅಗಲವಾಗಿ ಕಟ್ಟಿರುವ ಕಲ್ಲಿನ ಪಾವಟಿಗೆ,–ಮೆಟ್ಟಿಲು. [ ? ]

**ಪಾಜೆ$_1$** (ನಾ). ಭಾಷೆ; ಮಾತು : ಇದು ಬಸಪ್ಪ್ಯ ಆಡೋ ಮಾತು . . . ಅವನ ಪಾಜೆ ನಿಮ್ಮ ಬಾಯಲ್ಲಿ ಬರಬಾರದಲ್ಲ (ಶಕರಾ. ೦೯೨). [ ←ತಮಿ. ಪಾಚೈ. / ಸಂ. ಭಾಷಾ ]

**ಪಾಜೆ$_2$** 'ಫಾಜೆ' ನೋ.

**ಪಾಟ$_1$** (ನಾ). ಹಾಡುವಿಕೆ; ಗಾಯನ : ವೀರಶ್ರೀಯುಂ . . . ಆ ರೂಪಂ ಕಂಡು ನಕ್ಕು ದುಃಖಿಮಂ ಪಾಟದೊಳಾಗಳಾ ನಗ್ಗಿಸಿದ ಪಗರಣಿಗಂಗೆ ಒರಿದು ಕಸವರಮನಿತ್ತೂನಂದಿಂದಿತ್ತ, ಬಾದುಬ್ಬೆಯ ಪರ್ವಮುಂ ಪಗರಣ

ದಾಟಪಾಟವುಮಾದುವು (ವರ್ಧಮಾ. ೧೧೮-೨೩) ; ಮಸೆದ ಮದನನಲಗಿನಲರ್ಗಣೆಗಳಂತೆ ಕಣ್ಣೊಳ್ ಬೆಳೆದೆಳಸಿ ಬಂದಿರ್ದ ಪಾಟದಾಟದ ಮುದ್ದಿನ ಬರ್ದಿನ ಪರಿವಾರದೇವಿಯುರುವಮಂ (ಆದಿಪು. ೨-೬೫ ವ) ; ತನ್ನ ಪಾಡು ವಿಂಚರದಿಂದೆಮ್ಮ ಪಾಟವಮಂ ಕೀಟ್ಮಾಡಿದಳಿವಳ್ (ಕಾದಂಬ. ೩೩೪) ; ಎತ್ತ ಕೇಳ್ದೊಡಮೆಸೆವ ಪಾಟವಮೆ [ಪಾಠಾಂ. ಗೀತವುೆ, ಪಾಡವೆ] ಎತ್ತಲುಂ ಕಿಡುವೊಡಮೊಳ್ಗಂಧಮೆ (ಜೀವಸಂ. ೨೩೪-೨). 'ಪಾಟ್ಟು' ನೋ. [<ಪಾಡು₁./ತಮಿ. ಮಲ. ಪಾಟ್ಟು ; ತೆಲು. ಪಾಟ್ಟ. ಪರ್ಜಿ. ಕೊಂಡ. ಪಾಟ ; ಗದಬ. ಪಾಟಿ]

**ಪಾಟ₂** (ನಾ). ೧. ಪಠ್ಯವಿಷಯಗಳ ಪಠನ ; ಗ್ರಂಥಗಳ ವಾಚನ : "ಪಾಠಃ — ಪಾಟಂ" (ಕಾಶಕ್ಕ. ೧೧) ; ಅಬ್ಬಿಯಬ್ಬೆಯುಮಾದುಂ ಪರಿವಾರಿಸಿ ಪಾಟವೋದಲಚ್ಚರಸಿಯರಾಡಲಚ್ಚರಸಿಯರ್... ಎಂದೊಡೇ ಪೊಗಟ್ಟುದೋ ಜಿನಚಂದ್ರವಿಭೂತಿಲೀಲೆಯಂ (ಶಾಂತಿಪು. ೭-೭೫). ೨. ವಾಡಿಕೆ ; ರೂಢಿ ; ಅಭ್ಯಾಸ : ನಿಮಗೆ ಈ ಗಾಳೀಲಿ ಕೂತ್ಕೊಂಡು ಪಾಟ ಇಲ್ವೇನೋ (ಘಾಟೀಮು. ೧೦೦) ; ಮದರಂಗಿದನ ಚಿರತೆಗೆ ಪಾಟ ಆಗಿಬಿಟ್ಟಿದೆ. ಬೇರೆ ದನ ಇಷ್ಟು ರುಚಿ ಇಲ್ಲವೇನೊ (ಸಣ್ಣಕ. VI, ೧೧೯); ಅವನಿಗೂ ಆ ಹೆಸರೇ ಪಾಟಾಗಿ ಹೋಗಿತ್ತು (ವಜ್ರಾರು. ೧೬೦). [<ಸಂ. ಪಠ]

**ಪಾಟ₃** 'ಪಟ್ಟೆ₂' ನೋ.

**ಪಾಟಕ₁** (ನಾ). ಓದುವವನು ; ಪಾಠಕ : ಶ್ರಾವಕರ ಪಾಟಕರ ಜನನಿಯು ಭಾವದಿಂ ಚಿಂತಕರ ಪೊರೆವುದದಾವ ಕೃತಿಯಿದೆನುಳಿದು ಧರಣೀತಲದೊಳಿರುತಿಹುದು (ವಿವೇಕ. ೧೮-೪೪). [<ಸಂ. ಪಾಠಕ]

**ಪಾಟಕ₂** (ನಾ). ೧. ಸೀಳುವವನು ; ಹೋಳುಮಾಡುವವನು ; ಕತ್ತರಿಸುವವನು : ಕರ್ನಾಟಕಚೇಣಾಪ್ರೋಟಕದರಸುಗಳಿರ್ದರು ರಿಪುಶಿರಪಾಟಕನೋಲಗದೊಳಗೆ (ಕರ್ಣಾಟ. ೩-೬). ೨. ಗ್ರಾಮದ ಒಂದು ಭಾಗ. [ಸಂ.]

**ಪಾಟಕಾಜಿ** (ನಾ). ರಾಜನ ಬಿರುದಾವಳಿಗಳನ್ನು ಹಾಡಿ ಹೊಗಳುವವನು ; ವಂದಿ ; ಪಾಠಕ : ಪಾಟಕಾಜಿರರಸಾಳ್ಗಳ ಗೇಟ್ಪರ ಕಳಕಳನಿನದಂ ಭೋರ್ಗರೆದಂಬುಧಿನಿನದದಂತುಟಾದುದು (ವರ್ಧಮಾ. ೩-೫೫) ; ಬಗೆಕಾಜಿಂ ಪಾಟಕಾಜಿನೊಳ್ನುಡಿಕಾಜಿಂ ಪಗೆಕಾಜಿನಾಗಿಯುಂ ಕೆಯ್ಗೆ ತಕ್ಕಂ ಕೆಯ್ದುಕಾಜನೆನಿಸಲ್ಕಾಜಿಂ (ಕಾವ್ಯಾವ. ೩೨೫) ; ಅಲರ್ಗಳ್ ಪುಟ್ಟಿಪಳ್ಳರ ಪಸರದಂತೆ ಕಂಪಂ ಪ[ರ]ಕಲಿಸೆ ತುಂಬಿಯೆ ಪಾಟಕಾಜನಂತೆ ಮೊರೆಯೆ (ಜಿಂಹಂ. ೫-೫ ವ). [ಪಾಟ₁+—ಕಾಜಿ]

**ಪಾಟಚ್ಚರ** (ನಾ). ಬಟ್ಟೆಯನ್ನು ಕಳವು ಮಾಡುವವನು; ವಸ್ತ್ರಚೋರ : "ಪಾಟಚ್ಚರಃ, ಪಟಚ್ಚರಃ—ಈ ೨ ಸೀರೆಗಳ್ಳಂ" (ಹಲಾಯು. ೫೬-೧೮೫). [ಸಂ.]

**ಪಾಟನ** (ನಾ). ಸೀಳುವಿಕೆ ; ಕತ್ತರಿಸುವಿಕೆ : ವನಕರಿಕುಂಭಪಾಟನಪಟಿಷ್ಠಕಠೋರನಖಪ್ರಹಾರಭೇದನಗಳಿತಾಸ್ತ್ರರಕ್ತನವಮೌಕ್ತಿಕಪಂಕ್ತಿವಿಳಾಸಭಾಸುರಾನನಂ (ಜಂಶಭಾ. ೦೩-೫೦). [ಸಂ.]

**ಪಾಟಲ, ಪಾಟಳ** (ಗು). ೧. ಕಿಳಿಗೆಂಪು ಬಣ್ಣದ ; ನಸುಗೆಂಪು ಬಣ್ಣದ : ಪಾಟಲಲೋಲವಿಲೋಚನಂ ಮನಂಬುಗೆ ನಳಿತೋಳ ಕೋಳಿಸೆಯೆ (ಜಂಶಭಾ. ೮-೫೯); ಉದ್ಯಾನಲತೆಯನೀಕ್ಷಿಸಿ ನಾಂ ಪಾಟಲವರ್ಣಂಗೈವೆನಿಂದು ದೇವಿಯ ಮೊಗಮಂ (ಕೃಷ್ಣಾಲೋ. ೮೩). (ನಾ). ೨. ನಸುಗೆಂಪು ಬಣ್ಣ : ಸಲೆ ಮುದದಿಂದೆ ಪಾಟಲಮನಾಂತ ಕಪೋಲದೆ ರಕ್ತಲೋಚನೋತ್ಪಲದೆ ವಿಲಾಸಮಂ ತಳೆದ (ಪಾರವಾ. ೨-೭೬); ಜಡದೆ ಪಾಟಲವಿಡಿದು ಸಿರದೊಳ್ ತೊಡರಿ ಮಿರುಗುತೆ ಪುಷ್ಪಭಾಗವ ಪೊಡೆಪೊಡೆವ ಬಿಳಿಲಿಡದ ಜಡೆಗಳನಾಂತು (ಶಾಪೇಮು. ೫೪-೨೭). ೩. ಒಂದು ಬಗೆಯ ಹೂವಿನ ಗಿಡ ಮತ್ತು ಅದರ ಹೂವು; ಪಾದರಿ: ಪೂಗ ವಟ ದಾಡಿಮ ಪಾಟಲ . . . ಹಿಂತಾಳಮಹೀಜಮುಖ್ಯತರು ಸಂತತಿಯಿಂ ವನಬ್ರಂದಮೊಪ್ಪುಗುಂ (ಯಾದಕಂ. ೧-೩೫). ೪. ಮಳೆಗಾಲದಲ್ಲಿ ಕೊಯ್ಲಾಗುವ ಒಂದು ಬಗೆಯ ಬತ್ತ. **ಪಾಟಳ** : ೧. ಕಳಕಂಠಲೋಚನಚ್ಛವಿವಿಳಾಸಮಂ ತಳೆದ ನೀಲಪಾಟಳಜಂಬೂಫಳಮಧುರರಸಮನೀಂಟಿದೆಂ (ಕಾದಂಪೂ. ೮೬). ೨. "ಅರುಣಃ . . . ಪಾಟಳಃ, (ಆ)ಶಾಮ್ರಃ, ಲೋಹಿತಃ—ಈ ೭ ಕೆಂಪು" (ಹಲಾಯು. ೦೨೦-೪೮). ೩."ಪಾದರಿ ಪಾಟಳಂ ಪಾಟಳಿಯೆನಿಕ್ಕು"(ಮಂಗರಾ. ೩೭-೧೭); ವಿದಳಿತ ಚಂಪಕಲವಲೀನಾಗಂ ವಕುಳಪಾಟಳಾಶ್ವತ್ಥವ್ರಾತಂ . . . ಆದಿಯಾಗೆ ಪಲವುಂ ಪೆಱವಂದದ ಪಾದಪಂಗಳಿಂದೊಪ್ಪುವ ಚಂದದ ಬನದೊಳೆತ್ತಲುಂ ಸುಜಿವರಗಿಳಿಗಳೆ (ಸುಕುಮಾ. ೧೦-೫೬ರಗಳೆ) ; ಸೊಗಯಿಸುವಾಟದ ಸುರರ ಭವನಮಂ ವಿಕಸಿತ ಪಾಟಳಗಂಧಯುತೆ ಕಂಡಳ್ (ಜಂಹರ. ೯-೧೦೪). [ಸಂ.]

**ಪಾಟಲದ್ಯುತಿ** (ನಾ). ಕಿಳಿಗೆಂಪು ಬಣ್ಣ : ಬಿಂಬಾಧರದ ಕೆಂಬೆಳಗು ಸುಲಿಪಲ್ಲ ಸೂಸುವೆಳಗಿನೊಡವೆರೆದು ವದನವಿಧುಮಂಡಳದ ಪಾಟಲದ್ಯುತಿಯಂತೆ ಪಸರಿಸಿ ಬೀದಿವರಿಯೆ (ರಾಜಶೇ. ೫-೧೯ ವ). [ಪಾಟಲ+ದ್ಯುತಿ]

**ಪಾಟಲಾಧರ, ಪಾಟಳಾಧರ** (ನಾ). ಕಿಳಿಗೆಂಪುಬಣ್ಣದ ತುಟಿ : ಸುದತಿಯೆ . . . ಜಯಾನ್ವಿತನಾದೆಂ ಇದೊ ನಿನ್ನ ಪಾಟಲಾಧರವದನಾಬ್ಜವನಾಂ ವಿಲೋಕಿಸಿದ ಕತದಿಂದಂ (ಶಾಕುಂತ. ೧೦೯-೧೮೭). **ಪಾಟಳಾಧರ** : ಪಾಟಳಾಧರಸುಧಾರಸಮಂ ಸವಿದಟ್ಟಿಮುಂ ಲತಾಂಗಮನಮರ್ದಪ್ಪಿ ದಕ್ಷಿಣವಿಟಂಗೆಣೆಯಾದುದು ದಕ್ಷಿಣಾನಿಳಂ (ಮಲ್ಲಿಪು. ೫-೨೩). [ಪಾಟಲ+ಅಧರ]

**ಪಾಟಲಿ₁, ಪಾಟಳಿ** (ನಾ). ೧. ಪಾದರಿಗಿಡ ಮತ್ತು ಅದರ ಹೂವು : "ಪಾದರಿ ಪಾಟಳಂ ಪಾಟಲಿ[ಪಾಠಾಂ. ಪಾಟಳಿ, ಪಾಡಳಿ]ಯೆನಿಕ್ಕು" (ಮಂಗರಾ. ೩೭-೧೭) ; ಮತ್ತೊರ್ವಳ್ ಸುರಭಿಪಾಟಲೀಪಾಟಲದಶನವಸನೆ (ಆದಿಪು. ೧೧-೧೧೦ ವ); ಜೀವನದೊಳಗೆಮ್ಮರಳನೊಂದಿಸಿ ನೆಟ್ ಸೇವಿಸಿದವರ ಶ್ರಮಗಳ ಗಾವಳಿಯನು ಪರಿದಪವೆಂದು ನಱುಗಂಪು ಕೀವಿದ ಪಾಟಲಿಯಿಹುವು (ಕಂವಿಶ. ೭-೫೩). ೨. ಒಂದು ದೇಶದ ಹೆಸರು : ಮಹಾರಾಷ್ಟ್ರದೇಶದ ಸ್ತ್ರೀಯರು, ಪಾಟಲಿದೇಶದ ಸ್ತ್ರೀಯರು, ಪುಂಡು ಮಾತುಗಳಂ ಅಪೇಕ್ಷೆಯೊಡನೆ ಕೂಡಿ ಆಡುವರು ; ರತಿಯಲ್ಲಿ ನಾಚಿಕೆಯಿಲ್ಲದವರು (ಕಾಮಶಾ. ೨೦೯). **ಪಾಟಳಿ** : ೧. ಕಂಪುಗೊಳಲ್ ತೆಗೆದುಸಿರಿನಿಸಂ ಪೊಱಮಟ್ಟೆಸೆಟ ತುದಿಯನೆಯ್ದಲೊಡಂ ಮುನ್ನಂ ಪಱಿಯವಪ್ಪ ಪೂಗಳ ಕಂಪಿನೊಳೇಂ ಪೊಗಟ ಪಾಟಳೀಪರಿಮಳಮಂ (ಆದಿಪು. ೧೦-೧೦೦) ; ಪಾಟಳಿಗಳೆಸಕದಿಂ ನಿಂಬೆಗಳೆಳುಂಬದಿಂ . . . ಅನಂತತಿಲಕದ ಕುಜಂಗಳಿಂ . . . ಪೊಂಗಿ ಪೊಂಪುಟಿಯೋಗಿ (ಅದ್ಭುತ. ೩-೯೩). [ಸಂ.]

**ಪಾಟಲಿ₂, ಪಾಟ್ಲಿ** (ನಾ). ಸುಮಾರು ಕಾಲಂಗುಲದಷ್ಟು ದಪ್ಪವಾದ ಚಿನ್ನದ ಕೈಬಳೆ : ಭಿಕಾರಿತಾಯಿ ನನಗೆ ಪಾಟಲಿ, ಬಿಲ್ವರ ಮುಂತಾದ ವಸ್ತ ಮಾಡಿಸಿದಳು (ಸ್ವ್ಯತಿಶ. ೨೦೪) ; ಬಂಗಾರದ ಗೋಟು ಪಾಟಲೀ ಬಿಡಿಸಿ ಕೊಡು . . . ವಂಕೀಜೋಡು ಕೊಡಸು (ರಕ್ತರ್ತ್ರ. ೮೨) ; ಮೈಮೇಲೆ ಬಂಗಾರ ಹಾಗು ಮುತ್ತಿನ ಆಭರಣಗಳು, ಪಂಕಿ, ಸರಿಗೆ, ಗೋಟು, ಪಾಟಲಿ ಮೊದಲಾದ ಎಲ್ಲ ವಸ್ತುಗಳೂ ಇದ್ದವು (ಕ್ಷಾಮಶಾ. ೧೦). **ಪಾಟ್ಲಿ** : ನಾ ಗೋಟು ಪಾಟ್ಲಿ ಎಲ್ಲಾ ಇಟಗೊಂಡರ ಕೈ ಹಿಂಗ ಮ್ಯಾಲ ಎತ್ತಲಿಕ್ಕೆ ಆಗತಿದ್ದಿಲ್ಲ (ಗಂಪಾಮು. ೧೭) ; ಒಂದು ಜತಿ ಪಾಟ್ಲಿ ಮಾಡಸರಿ ಅಂತ ಹೇಳಿದರ ಕೇಳಪಲ್ಲರಿ (ಕುಂಕುಮ. ೧೭). [←ಮರಾ. ಪಾಟಲೀ]

**ಪಾಟಲಿತ, ಪಾಟಳಿತ** (ಗು). ನಸುಗೆಂಪಾದ : ಶೂಲಧರಂ . . . ಮುಷ್ಟಿಯುದ್ಧಸನ್ನದ್ಧನಾಗಿ ನಿಂದ ಪಾರ್ಥನಿದಿರ್ಗೆವಂದೋರೊರ್ವರುದೀರ್ಣರೋಷಾವೇಶಪರುಷಪಾಟಲಿತಕಟಾಕ್ಷದಿನದರೆ ನೋಡಿ ಬಾಹಾಸ್ಫಾಲನಂಗೆಯ್ಯಲ್ (ಕಜಿಕಂ. ೪-೭೦ ವ). **ಪಾಟಳಿತ** : ಇದಿರೆಲ್ದೀರ್ಷ್ಯಾರೋಷದಿಂ

ಶಶಿಪ್ರಭೆ ನವೋದಯಶಶಿಪ್ರಭೆಯಂತೆ ಪಾಟಳಿತಮುಖಿಯಾಗಿ (ಚಂದ್ರಪು. ೬-೯೩ ಪ). [ಸಂ.]

**ಪಾಟಲಿಮ, ಪಾಟಳಿಮ**(ಗು). ೧. ನಸುಗೆಂಪುಬಣ್ಣದ : ಪರಿಣತಪ್ರವಾಳಪಾಟಲಿ[**ಪಾಠಾಂ.** ೪]ಮಲೀಲಾಧರನಿಜಾಧರಪಲ್ಲವನುಂ (ಚಂದ್ರಪು. ೪-೮೦ ವ). (ನಾ). ೨. ನಸುಗೆಂಪು ಬಣ್ಣ. **ಪಾಟಲಿಮ** : ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ. ಪಾಟಲಿಮನ್]

**ಪಾಟಲೀಪುತ್ರ,** ಪಾಟಳೀಪುತ್ರ (ನಾ). ಮಗಧದೇಶದ ರಾಜಧಾನಿ ; ಈಗಿನ ಪಾಟ್ನಾನಗರ : ಪಾಟಲೀಪುತ್ರದ ಮಾರ್ಗದಲ್ಲಿ ನಾಗಸೇನನಿಗೆ ಧನಿಕವ್ಯಾಪಾರಿಯೊಬ್ಬನು ಸಿಕ್ಕಿದನು (ಬುದ್ಧಕ. ಬಿಂದು. ೨೪); ಮೂರನೆಯ ಸಂಗೀತಿ—ದೇವಾನಾಂಪ್ರಿಯ ಪ್ರಿಯದರ್ಶಿಯೆಂಬ ಅಶೋಕರಾಜನ ಕಾಲದಲ್ಲಿ ಪಾಟಲೀಪುತ್ರದಲ್ಲಿ ನಡೆದದ್ದು (ಭಾರದ. ೩೦೩). **ಪಾಟಳೀಪುತ್ರ** : ಪಾಟಳೀಪುತ್ರಮೆಂಬ ಪುರಮಲ್ಲಿ ಶ್ರೇಷ್ಠಿ ಸುದತ್ತನೆಂಬೊಂ (ವಡ್ಡಾರಾ. ೧೫-೦೯). [ಸಂ.]

**ಪಾಟಲೀಪುಷ್ಪ** (ನಾ). ಪಾದರಿ ಹೂವು : ಪಾಟಲೀಪುಷ್ಪ ಅಥವಾ ಪಾದರಿಹೂವನ್ನು ಧರಿಸುವುದರಿಂದ ಮನಸ್ಸಿನ ಕ್ಲೇಶವನ್ನು ಪರಿಹಾರ ಮಾಡಿ . . . ಮಹಾಪರಿಮಳದೊಡನೆ ಕೂಡಿರುವುದು (ಸಕಪ್ಪ. ೪೪); ಮಂತ್ರ ಇಪ್ಪತ್ತುಸಾವಿರಮಂ ಜಪಿಸಿ ಪಾಟಲೀಪುಷ್ಪದಿಂ ಹತ್ತುಸಾವಿರ ಹೋಮಮಂ ಮಾಡೆ ಮಂತ್ರಸಿದ್ಧಿಯಪ್ಪುದು (ಕಾಮಶಾ. ೨೬೦). [ಸಂ.]

**ಪಾಟಲೂನು,** ಪಾಟಲೂಣ, ಪಾಟಲೋಣ, ಪಾಟಲೋನು, ಪಾಟ್ಲೋನು (ನಾ). ಐರೋಪ್ಯಮಾದರಿಯ ಷರಾಯಿ ; ಪ್ಯಾಂಟು : ಬೆಲೆಯುಳ್ಳ ಕೋಟು ಪಾಟಲೂನುಗಳ ಜೊತೆಗಳು ಅವರಲ್ಲಿ ಹತ್ತೆಂಟು ಇದ್ದವು (ಕೋಕಮು. ೨೩೦) ; ಪಾಟಲೂನು ಸಾಹೇಬರ ಪೋಷಾಕು. ಬೆಲೆಯುಳ್ಳದ್ದು (ಶ್ರೀಕಾಂತ. ೭); ಒಮ್ಮೆಲೇ ಅವಳ ಮೊಮ್ಮಗ ಗಾಡಿಯಿಂದ ಜಿಗಿದ, ಪಾಟಲೂನು, ಉದ್ದ ಕೈಯ ಅಂಗಿ ಹಾಕ್ಕೊಂಡು (ಹೂಸಕ್ಕ. ೭೩). **ಪಾಟಲೋಣ** : ಮೊಳಕಾಲ ಕೆಳಗೆ ಪಾದದ ಮೇಲೆ ಗೇಣು ಅಂತರದಲ್ಲಿ ನೇಣು ಹಾಕಿಕೊಂಡಂತೆ ಜೋತಾಡುವ ಇಸ್ತ್ರೀಯ ಅಸ್ಪೃಷ್ಟವಾದ . . . ಕಿರಮಂಜೀಬಣ್ಣದ ಪಾಟಲೋಣ (ದೀಶಕ. I, ೨೪). **ಪಾಟಲೋನು** : ಪಾಟಲೋನಿನ ಜೇಬಿನೊಳಗಿಂದ ಸಿಗರೇಟಿನ ಡಬ್ಬಿಯನ್ನು ತೆಗೆಯುತ್ತ ಕೇಳಿದ ಗದ್ರೆ (ಕೃಜಕ. ೫೯). **ಪಾಟ್ಲೋನು** : ಬೂಟು ಪಾಟ್ಲೋನು ಧರಿಸಿ ದೇಶಭಾಷೆ ಮಾತನಾಡುವುದಕ್ಕೆ ನಾಚಿಕೆಯೆನಿಸಲಾರಂಭಿಸಿತು (ಯುಕ್ಷಕ್ರ. ೩೪).

[←ಮರಾ. ಪಾಟಲೂಣ, ಪಾಟಲೋಣ. / ಇಂ. Pantaloon]

**ಪಾಟಲೋಣ** 'ಪಾಟಲೂನು' ನೋ.

**ಪಾಟಲೋನು** 'ಪಾಟಲೂನು' ನೋ.

**ಪಾಟವ** (ನಾ). ೧. ತೀಕ್ಷ್ಣತೆ; ಚುರುಕು. ೨. ಜಾಣತನ ; ಚಾತುರ್ಯ : ಒಳ್ಳೆಯ ಸಂಗ್ರಹಶಕ್ತಿಯೂ ಭೂಗರ್ಭಶೋಧನಪಾಟವವೂ ಬಂದುವಲ್ಲದೆ ಅವನಿಗೆ . . . ಪ್ರಾಣಿಶಾಸ್ತ್ರದ ಗಾಢಪರಿಚಯವಾಯಿತು (ಜಿಜ್ಞಾಕ. ೯೨) ; ಅವನು . . . ಊಹೆ ಮಾಡುವುದರಲ್ಲಿ ಪಾಟವ ಹೊಂದಿದತಕ್ಕವನು (ಭಾರಜಾ. ೩೭೪). ೩. ಪಟುತ್ವ ; ಶಕ್ತಿ ; ಸಾಮರ್ಥ್ಯ : ಮಾಟದಿಂದರಿವರ್ಜನರ್ಮಾಡಿಯಾಟದಿಂ ಪಂಡಿತರು ನೆನಹಿನ ಪಾಟವದೆ ದೇವರ್ಕಳಂಗೈನೆಲ್ಲಿಕಾಯಂದದಲಿ (ಜಿವೇಶ. ೮-೩೭) ; ಕತ್ತಲೆಗೆ ಜಗದಾಂಧ್ಯ ಕರಣಪಾಟವವೀಯೆ (ವಂಶಾರಾ. ೩-೩೭-೨೩) ; ವಾದಗಳು ನಡೆಯುತ್ತಿದ್ದ ಕಾಲದ ಅವಾಂತರದಲ್ಲಿ . . . ಕಿವಿಗಳ ಪಾಟವವೇ ಕುಗ್ಗಿರಬೇಕೆಂದು ಅನೇಕರು ಸಿದ್ಧಾಂತ ಮಾಡುತ್ತಲೇ ಇದ್ದರು (ಕುರಾಯ. ೦೨೭). 'ದೃಷ್ಟಿಪಾಟವ' ಪರಾ. ೪. ಕಲಿತನ ; ಶೌರ್ಯ : "ಪಾಟವಂ= ಬಂಟತನಂ" (ಕಾಶಕ್ಕ. ೨೭೯). ೫. ಆರೋಗ್ಯ : ಕೋಟಿಚಂದ್ರಾದಿತ್ಯದೇಹಪ್ರಕಾಶಉದ್ಘಾಟಿತನೇತ್ರತೀಕ್ಷ್ಣಾಂಗಪಾಟವಪದಿವ್ಯಮಹಾಲಕ್ಷಣದೊಳ ಮಾಟವಲ್ಲವೆ ತೀರ್ಥಕರರು (ಮುನಿಮ. ೩-೩೪) ; ಊಟ ಉಪಚಾರಗಳ ಬೇಡವೆನ್ನದಿರು ಪಾಟವವು ಮೈಗಿರಲಿ ನೋಟ ತತ್ತ್ವದೊಳಿರಲಿ ಪಾಠಿಸು ಸಮನ್ವಯವ (ಮಂಕುತಿ. ೨೬೧). ೬. ದುಡುಕುಸ್ವಭಾವ. [ಸಂ.]

**ಪಾಟಳ** 'ಪಾಟಲ' ನೋ.

**ಪಾಟಳಕಾಂತಿ** (ನಾ). ನಸುಗೆಂಪುಬಣ್ಣ ; ಪಾದರಿ ಹೂವಿನ ಹೊಳಪು : ನೇತ್ರಾಂಬುಜಂ ಪಾಟಳಕಾಂತಿಶ್ರೀಯಿನೊಪ್ಪುತ್ತಿರೆ . . . ಲೀಲೆಯಿಂದುಪ್ಪವಡಿಸಿದಳ್ ಹೃದ್ಯಾಂಗಿ ಶಯ್ಯಾಗ್ರದಿಂದಂ (ಜಗಪಿ. ೨-೭೮).

[ಪಾಟಳ (=ಪಾಟಲ) + ಕಾಂತಿ]

**ಪಾಟಳಾಧರ** 'ಪಾಟಲಾಧರ' ನೋ.

**ಪಾಟಳಿ** 'ಪಾಟಲಿ$_1$' ನೋ.

**ಪಾಟಳಿತ** 'ಪಾಟಲಿತ' ನೋ.

**ಪಾಟಳಿಮ** 'ಪಾಟಲಿಮ' ನೋ.

**ಪಾಟಳೀಪುತ್ರ** 'ಪಾಟಲೀಪುತ್ರ' ನೋ.

**ಪಾಟಾಳಿ** (ನಾ). ದೇವಸ್ಥಾನದಲ್ಲಿ ಸ್ತೋತ್ರಗಳನ್ನು ಹಾಡಿ ಸೇವೆ ಸಲ್ಲಿಸುವ ಒಂದು ವರ್ಗ ಮತ್ತು ಆ ವರ್ಗಕ್ಕೆ ಸೇರಿದ ವ್ಯಕ್ತಿ : ಪಾರ್ತಿಸುಬ್ಬನೆಂದರೆ . . . ಕುಂಬಳೆ ಪಾಟಾಳಿಯೂ ಆಗಿದ್ದನು (ಪಾರ್ತಿಸು. ೪) ; ಸುಬ್ಬನ ತಂದೆ ಊರ ದೇವಸ್ಥಾನದ ಪಾಟಾಳಿ (ಅಪಾಪಿ. ೦೪೩) ; ಪಾಟಾಳಿ ಕೆಲಸ ಮಾಡಿದ ಬಗ್ಗೆ ದೇವಸ್ಥಾನದಿಂದ ದಿನಕ್ಕೆ ಒಂದು ಸೇರು ಬೆಳ್ತಿಗೆ ಅಕ್ಕಿ ಸಿಗುತ್ತದೆ (ಹಪಕ. ೪೪).

[<ಪಾಠಾಳಿ. / ತಮಿ. ಪಾಟ್ಟಾಳಿ, ಪಾಟ್ಟಾಳ್]

**ಪಾಟಿ$_1$** 'ಪಾಟಿ$_2$' ನೋ.

**ಪಾಟಿ$_2$** (ನಾ). ೧. ಹಲಗೆ ; ಫಲಕ : ತುಸು ಹೊತ್ತಿನಲ್ಲಿ "ಕರ್ನಾಟಕ ಬಾನಾವಳಿ" ಎಂಬ ಹೆಸರಿನ ಪಾಟಿಯು ಕಂಡಿತು (ರಕ್ತಕ್ಷ. ೦೪) ; ಅಲ್ಲಿ "ವಿಂಚೂರಕರ ಹೋಟೆಲ್ಲು" ಎಂದು 'ಪಾಟಿ' ಹಚ್ಚಿದ ಒಂದು ಉಪ್ಪರಿಗೆಯ ಕಟ್ಟಡ ಕಂಡಿತು (ಚಿತ್ತಾಪು. ೫೫). ೨. ಬಳಪದಿಂದ ಬರೆಯುವುದಕ್ಕಾಗಿ ಸಿದ್ಧಪಡಿಸಿದ ಕಲ್ಲಿನ ಕಪ್ಪುಹಲಗೆ ; ಸ್ಲೇಟು : ತನ್ನ ಪಾಟಿ ಪುಸ್ತಕಗಳನ್ನು ಕಟ್ಟಿ ಅಲ್ಲಿ ಮೂಲೆಯಲ್ಲಿಟ್ಟು ಮಾಸ್ತರರ ಕಡೆಗೆ ಸಿದ್ಧ ಹೊರಟನು (ರಾಜಾದೀ. ೫೫) ; ವತ್ಸಲಾ ಇಡೀ ಪಾಟಿ ತುಂಬ ಅಆ ಬರೆದು ಆತನಿಗೆ ತೀಡಲಿಕ್ಕೆ ಹಚ್ಚಿದ್ದಳು (ವೃಶಿ. ೩೫೭).

[←ಮರಾ. ಪಾಟೀ]

**ಪಾಟಿಕುಂಭ** (ನಾ). ದೊಡ್ಡಗಡಿಗೆ (?) : ಕಾಟಕೊಟಣೆಸಿಟ್ಟ ಗೊಲ್ಲರ ಮೇಟಿ ಅಡಿನ ಹಿಕ್ಕೆಯಂ ಶಶಿಜೂಟನೀಶ್ವರನೆಂದು ಪಾಲಂ ಕಾನದಿಟ ಮೇಲೆ ಪಾಟಿಕುಂಭದಿ ಕಜಿರಿದೆಜಿದು ಕಾಲಾಟದಿಂದಾಬಿದಬೆಂದು ಕುಣಿವುತ . . . ಭಜಿಸುತಿರೆ (ಬಸಪು. ೯-೦೨). [ಪಾಟಿ$_2$ + ಕುಂಭ]

**ಪಾಟಿಗಾಣ್** (ಕ್ರಿ). ಸಮವೆಂದು ಭಾವಿಸು ; ಸರಿಸಮಾನವೆಂದು ತಿಳಿ : ಅದಿರದೆ ವೀರವೈರಿಭಟರಂ ಘಟಕೋಟಿಗೆ ಪಾಟಿಗಾಣದು . . . ಘನಕಪಿತ್ಥಮನಾ ಬನದೊಳ್ ಕಡಂಗಿ ಕಿತ್ತಿದಟದು ಪೋದುದೇ ನಿನಗಮಿಾ ತೆಜದಿಂ ಕೆಡೆವಂತುಟಾದುದೇ (ಪರ್ವಪು. ೩-೦೫).

[ಪಾಟಿ$_1$ (<ಪಾಟಿ$_2$) + ಕಾಣ್]

**ಪಾಟಿಗೆಡಿಸು** (ಕ್ರಿ). ಸ್ಥಿತಿಗೆಡುವಂತೆ ಮಾಡು ; ನಾಶಮಾಡು : ಪಾಟಿಗೆಡಿಸುವೆಪಘವನೆಂಬಾ ನವಕೋಟಿಮುನಿಗಳ ಮೆಲ್ಲಡಿಗೆ ತಾಟಿಸಿ ಪಣೆಸು ನೀವಿಯಾಶಸಂಗತಿಯ ಸಂಘಾಟದಿಂದಾನುಸುರುವೆನು (ಸೇಮಿಸಂ. ೧-೨೦).

[ಪಾಟಿಗೆಡು (<ಪಾಟಿಗೆಡು) + –ಇಸು]

**ಪಾಟಿಗೆಡು** 'ಪಾಟಿಗೆಡು' ನೋ.

**ಪಾಟಿಗೆಯ್** (ಕ್ರಿ). ಸಮಾನವಾಗಿ ಕಾಣು ; ಎಣೆಯೆಂದು ಎಣಿಸು : ಕಾಗೆ ಕರ್ರನೆಲ್ಲಾ ಕೋಗಿಲೆಗೆ ಬನ್ನವಪ್ಪುದೆಯುದಂತಿಲ್ಲಾಗಿ ಪಾಟಿಗೆಯ್ಯಂ (ಸಿದ್ಧೇಶ್ವ. ೧-೧೮). [ಪಾಟಿ$_1$ (<ಪಾಟಿ$_2$) + ಕೆಯ್$_1$]

**ಪಾಟಿತ** (ಗು). ಸೀಳಿದ ; ಒಡೆದ ; ಮುರಿದ : ಕೂರಿಸೆ ಗುರುಶುಶ್ರೂಷೆಯೊಳಾ ರಾಮನನುಗ್ರಪರಶುಪಾಟಿತರಿಪುವಂಶಾರಾಮನನಿಷು ವಿದ್ಯಾಪಾರಗನೆನಿಸಿದುದು ಬಲ್ಮೆ ವೈಕರ್ತನನಾ (ಶಂಶಭಾ. ೧-೧೦೬); ಪರಿಮಳಾಕಿಲಂಪಟಷಟ್ಚರಣಪಟಲಪಾಟಿತ ಕುಟ್ಮಲಾವಳೀಸ್ಯಂದಮಾನ ಮಕರಂದ ಬಿಂದುಸಂದೋಹಜನಿತ ದುರ್ದಿನಂಗಳಿಂ (ಚಂದ್ರಪ್ರ. ೧-೧೦೫ ವ). [ಸಂ.]

**ಪಾಟಿದೈವ** (ನಾ). ಸರಿಸಮವಾದ ದೇವತೆ ; ಸದೃಶವಾದ ದೇವತೆ : ಪಾಟಿದೈವವಿದೆಂದು ನಾಡೊಳು ಪಾಟಿಸುವರೆಲೊ ಜನನ ವಿಧಿಗಳ ಕೋಟಲೆಯನೆಣಿಸುವೊಡೆ ತಾಂ ಫಣಿಪತಿಗೆ ಹವಣಲ್ಲ (ಬಸವ. ೫೧-೬೫). [ಪಾಟಿ$_1$ (<ಪಾಟಿ$_2$) + ದೈವ]

**ಪಾಟಿದೋಱು** (ಕ್ರಿ). ಸಮಾನವೆಂದು ಗಣಿಸು,–ಎಣಿಸು : ಅನೇಕ ನೃಪಾಲರಂ ಭುಜಾಬಳದಿನದಿರ್ಪಿ ತತ್ಕುಲಧನಂಬೆರಸೀಱ್ಕುಳಿಗೊಂಡ ಕನ್ಯಕಾಕುಳದೊಳಗಾರ ಪೋಲ್ವೆಯುವಳೀಕೆಯನೇಕೆಯೊ ಪಾಟಿದೋಱುವಿರ್ (ಪುಷ್ಪ. ೭-೫೭). [ಪಾಟಿ$_1$ (<ಪಾಟಿ$_2$)+ತೋಱು]

**ಪಾಟಿಸವಾಲು** 'ಪಾಟೀಸವಾಲು' ನೋ.

**ಪಾಟಿಸು$_1$, ಪಾಳಿಸು$_1$** (ಕ್ರಿ). ೧. ಸರಿಸಮಾನವೆಂದು ಎಣಿಸು : ನೋಟವೊಂದಲ್ಲದೆ ನುಡಿಯಿಲ್ಲ ಮೈಯೊಲೆದಾಟವಿಲ್ಲ ಕುವರರಿಗೆ ಮಾಟದ ಬೊಂಬೆಯಂತಿರೆ ಕಂಡು ದೇವೇಂದ್ರ ಪಾಟಿಸಿ ನುಡಿದನಿಂತೆಂದು (ಭರತ. ೬೭-೩೯); ಪಾಟಿಸಿ ಕೇಳಣ್ಣ ನಾನು ನೀನಾಡುವರಾಟಕಾಱರು ನಮ್ಮ ಭಟರು ನೋಟಕಾಱರೆ ನೀನು ನೆನೆದ ಸಂಗ್ರಾಮ ಸಫಾಟಿಕೆಯಾಯ್ತು ಕಂಜಾಸ್ತ್ರಾ (ಭರತ. ೫೦-೮೦). ೨. ವಿಮರ್ಶಿಸು ; ಪರಾಮರ್ಶಿಸು ; ಪರಿಶೀಲಿಸು : ನೀಟಂಗೆಜಗದ ಜೈತಜಿಕಾಟಕನಂ ಕಡಿದು ಬಿಸುಡೆ ಚಿಕದೇವೇಂದ್ರಂ ಪಾಟಿಸಿ ಬಲ್ಲವರಲ್ಲದ ಮಾಟದ ರಾವಣಿಯುನಿಂದು ಮಡಿಪಿದನೆಂದರ್ (ಅಶ್ವ. ೬೧-೨೦). ೩. ಕೊಡು ; ನೀಡು : ಒದಗಿಸು : ಹಾಟಕಭಿತ್ತಿಸಮನ್ವಿತ ನಾಟಕಶಾಲೆಗಳ ವಿವಿಧಸೌಧಂಗಳ ಕೋಡಾಟವನೆ ಮೆಚ್ಚಿದಾ ಮೆಚ್ಚಂ ಪಾಟಿಸುವುವು ಮಿಥುನತತಿಗೆ ಗೃಹಮಹಿಜಾತಂ (ಆದಿಪು. ೫-೩೭) ; ತೃಣಮನುಜರು ಕೈಮುಗಿದು ವಂದನೆ ಮಾಡೆ ಅನುಮಾನವಿಲ್ಲದಲೆ ಪಾಟಿಸುವ ಕರ್ಣ (ಕೀರ್ತನ. ೦೬-೧). ೪. ಆದರಿಸು ; ಗೌರವಿಸು ; ಮೆಚ್ಚಿಸು : ಮಾಟು ಸಿಂಗರದಿಂಪುವಡೆದು ಮಿಗೆ ಬಯಸಿ ಬಯಸಿದ ಸುವಸ್ತುಗಳನಿತ್ತು ಪಾಟಿಸುವ ಭೀಮಫಲ್ಗುಣರ . . . ಕೌತುಕದ ಮಾಳ್ಕೆಯಂ ಕಂಡು ನಲಿದಾಡಿತು ಜನಂ (ಜೈಮಿಭಾ. ೩೪-೧೧). ೫. ಅಪೇಕ್ಷಿಸು ; ಬಯಸು : ಊಟದಿನಾಟದಿನೊಪ್ಪುವ ಪಾಟದಿನಾಟಿಸುವ ಕೀಟದಿಂ ಕಂಪಿನ ಕಯ್ಯೂಟದಿನಪ್ಪ ಸುಖಂಗಳೆ ಪಾಟಿಸಿದ ಸುಖಂಗಳೆಂದ್ರಿಯಂಗಳ ದೆಸೆಯಿಂ (ಅಜಿಪು. ೨-೮೧); ಚೆನ್ನಿಂಗೆ ಮುಱುಗಿ ಮಾಣದೆ ಚೆನ್ನಂ ಪಾಟಿಸುವರಾಗಳುಂ ವಿಕಳಂಗರ್ (ಸಮುಕ. ೬-೪೪); ಓಪರೊಳಾರುಂ ಬೇಟವುಂ ಪಾಟಿಸಿದವರೊಳಿ ನಿನ್ನಂತು ನಾಣ್ಗೆಟ್ಟು ಬಾಯ್ಬಿಟ್ಟರನಾರೀ ಲೋಕದೊಳ್ ಕಂಡಱಿಯೆಂ (ಶೃಂಗಾರ. ೪-೧೮); ಮೋಕ್ಷವನು ಪಾಟಿಸುವ ನರ ನಿರಪೇಕ್ಷನಾಗಿಯೆ ಭಜಿಸಬೇಹುದು (ತಿಮ್ಮಳ. ೨-೪೭). ೬. ಮಾಡು ; ರಚಿಸು ; ನಿರ್ಮಿಸು : ಪೊಸದುರ್ಗಮಂ ಪಾಟಿಸಿ ಪಿರಿಯ ನಿಡುಬಾವಿಗಳನಗುಳಿಸಿ ದ್ವಾದಶಜೋಳಗೆ (ಬಸವ. ೦೬-೧೧); ಕೋಟೆಯಿದ್ದುದು ಮುಂದೆ ಶಿವನ ಕರೋಟಮಾಲಾವಳಯುದವೊಲಾಱಿ ಪಾಟಿಸಿದ ಕೊತ್ತಳದ ಮುಗಿಲಟ್ಟಳೆಯ ಮುರುಹಿನಲಿ (ತೊರಣ. ೫-೨-೪); ಬಳಸದಧಿಕಸ್ನೇಹವನು ವೆಗ್ಗಳ ಮೆನಿಪ ಹಗೆತನವ ಪಾಟಿಸಿ ಬಳಗವೆಲ್ಲವ ಕೊಲಿಸಿ ತಾನಳಿದನು ಸುಯೋಧನನು (ತಿಮ್ಮಕ್ಕ. ೧-೮೪). ೭. ಉಂಟುಮಾಡು ; ಹುಟ್ಟಿಸು : ಬೇಟದ ಸುಗ್ಗಿ ನಾಲ್ಕೆ ದಿನವಾ ದೆಸೆಯೊಳ್ ಬಸವಾದ ಗಂಡರಿಂಗೂಟಮೆ ಕೋ[ಪಾಠಾಂ. ತೋ]ಟಿಯೆಂದು ಸಮಸಂದೆಮೆಯುಂ ಮಱಿಯಾಗದಂತು ಬಾಯ್ ನಾಟಿರೆ ಬಾಯೊಳಪ್ಪುದುಗದಂತು ತೊಡಂಕಿರದೇಕೆ ತೋಟಿಯಂ ಪಾಟಿಸೆ ತಾವೆ ತಮ್ಮಗಳನಾಱಿಡಿಗೊಳ್ಳರೊ ನಾಡಗೊಡ್ಡೆಯರ್ (ಲೀಲಾವ. ೧೪-೪೦). ೮. ಹೊಂದು; ತಾಳು; ಅವಲಂಬಿಸು: ಸಂಸ್ಕೃತಿಪಾರ್ಥಿಯಲ್ಲಿ ಬಿರ್ದರಳಡೆ ವೀರವೃತ್ತಿಯನೆ ಪಾಟಿಸಿ ಮೋಕ್ಷಸುಖಕ್ಕೆ ಚಿತ್ರಮಂ ತಿರಿಪುತುಮಿರ್ದ ಜೈನಮುನಿಪುಂಗವರಿಂ ಮಿಗಿಲಾರೊ ಲೋಕದೊಳ್ (ಧರ್ಮಾಮೃ. ೧೨-೫೦). ೯. ಬೆರಸು ; ಹೊಂದಿಸು ; ಜೋಡಿಸು : ಮೋಟ ಪುರುವಳ್ಳಿ ಎಲೆಯುತ್ತಾಟಿಸುಗುಂ ನಸ್ಯಕರ್ಪುರದೊಳ್ ವಿಷಮುನದುಂ ಪಾಟಿ[ಪಾಠಾಂ. ಪಾರಿ, ಲೋಟಿ]ಸಿ ಮರಿಚದೊಳೇಯಲ್ ಕೋಟಲೆತಾಕುಲಮುದೇವುದಿಂತಿದಱಿದಿರೊಳ್ (ಖಮದ. ೭-೮೯). **ಪಾಳಿಸು$_1$ : ೧೦. ಜೊತೆಸೇರು ; ಬೆರೆ ; ಜೊತೆಯಾಗು** : "ಪಾಳಿಸು _ ಸಂಯೋಗೇ" (ಶಮದ. ). P ಇಲ್ಲಿ ಕುಳಸಹಿತವಾದ ರೂಪವು ಪ್ರಾಚೀನವಲ್ಲದುದರಿಂದ ಪರ್ಯಾಯಪದವಾಗಿ ಗಣಿಸಲಾಗಿದೆ. [ಪಾಟಿ$_1$ + –ಇಸು$_3$]

**ಪಾಟಿಸು$_2$** (ಕ್ರಿ). ೧. ಓದು ; ಪಠಿಸು : ಬಗೆವುಗೆ ಜೈನಮನೋದದೆ ಮಿಗೆ ಪಾಟಿಸಿ ಕುಮತಿ ಕುಮತಮಂ ಪಲ್ಲಂ ನಾಲಗೆ ತಪ್ಪುವನ್ನಮಿರದೋದುಗೆ ಸಮ್ಯಕ್ಚಾನಿಯಾಗಲೇನಱಿದಪನೇ (ಸಮುಕ. ೩-೩೩). ೨. ಹೊಗಳು ; ಕೀರ್ತಿಸು : ಪಾಟಿದೈವವಿದೆಂದು ನಾಡೊಳು ಪಾಟಿಸುವರೆಲೊ ಜನನ ವಿಧಿಗಳ ಕೋಟಲೆಯನೆಣಿಸುವಡೆ ತಾಂ ಫಣಿಪತಿಗೆ ಹವಣಲ್ಲ (ಬಸವ.೫೧-೬೫). ೩. ತಿಳಿದುಕೊಳ್ಳು ; ಕಲಿತುಕೊಳ್ಳು ; ಅಭ್ಯಾಸ ಮಾಡು : ತೋಟಿಗೆಳಸದರನೊಯ್ಯನೊಯ್ಯನೆ ಮನೋಭವನ ಧಾಟಿಗೊಳಗಾಗಿ ನಿಲಿಸುವ ಮದನಕಲೆಗಳಂ ಪಾಟಿಸುವ ಬಗೆಯನೆಳೆಯರ್ಗೆ ಕಲಿಸುವ . . . ಚಾರುಚೇಟಿಯರ್ ಚಲಿಸುವರ್ (ಜೈಮಿಭಾ. ೬-೩೭). ೪. ಪಳಗು ; ಹತೋಟಿಗೆ ಬರು : ಪಾಟಿಸಿದಯಾಹವವ್ಯಾಗಂಗಳ ಬೇಟೆಗೊಳಿಸಿದ ಶಬರರಟವಿಯ ಪಾಟಿಸಿಹ ಹೊಲಮರಿಗಳಿಂದೈದಿದನು ದೆಸೆಗಳನು (ಉತ್ತರ. ೧೧-೩). ೫. ರೂಢಿಯಾಗಿರು ; ಅಭ್ಯಾಸವಾಗಿರು ; ವಾಡಿಕೆಯಲ್ಲಿರು : ಪಾಟಿಸಿ ಮಾಡಿದ ಸೂರ್ಕಿಪಳಾಟಮೆ ವಲಮೆನಿಸಿ ನೆಗಟ್ಟಿ ನೀರಾಂಜನೆ . . . ನೋಟಕರಂ ತವದ ಮಾಟಕ್ಕೆಯಿಂ ಮೋಹಿಸಿದಳ್ (ಆದಿಪು. ೯-೩೮) ; ಮುಸೆವುದು ಮಾಸಲಿರ್ದ ಪಱಪೇಟಮುನಿಟ್ಟೆಯ ಬಿಚ್ಚಟಿಕ್ಕೆಯುಂ ಪೊಸಯಿಪುದೊಳ್ಕಮಂ ನಡಪುತಿರ್ಪುದು ಧಾತುವನೊಳ್ಳಿತೆಯ್ದೆ ಪಾಟಿಸುವುದು ಕೂಟದೊಳ್ ಕುಶಲನಪ್ಪುದು . . . ಬೇಟಿ ಪೆಱತಾವುದು ಕೇಳಿಕೆಯುಂ ವಿಟತ್ವಮುಂ (ಶಾಂತಿಪು. ೮-೯೧).
[ಪಾಟ$_2$ + – ಇಸು$_3$]

**ಪಾಟಿಸು$_3$** (ಕ್ರಿ). ೧. ಸೀಳು ; ಹೋಳುಮಾಡು ; ಕತ್ತರಿಸು : ಕಾಟಕನಾನಿಮಿಷಮಂ ಮಿಗೆ ಪಾಟಿಸಿ ಮಾಱುತ್ತಮಿರ್ಪ ವೈತಂಸಿಕಂ (ಪಸ್ತುಕೋ. ೬೬-೯೫). ೨. ಕಳೆ ; ನಾಶವಾಗು ; ನಿವಾರಣೆಯಾಗು : ಕೋಟಿದಿನದೊಂದು ಯಾತನೆ ಪಾಟಿಸುಗುಂ ಮಾಯೆಕಾರನೀತನ ಚದುರಿಂ(ಪಸ್ತುಕೋ.೬೦). ೩. ಕೀಳು ; ಉತ್ಪಾಟಿಸು : ಸಮಂತು ಪಾಟಿಸುವೆನೊಯ್ಯನೆ ಮುಳ್ಳೊಳೆ ಮುಳ್ಳನೆಂದು ತಾನೀ ನಯದಿಂದೆ ಪೆರ್ಚಿ ಪೊರೆದಟ್ಟಱಿಳಂದೊಡನುಂಡನಲ್ಲನೇ (ಶಂಶಭಾ. ೯-೬೭). [ಪಾಟನ + – ಇಸು$_3$]

**ಪಾಟಿಹೆಂಡ** (ನಾ). ಹಿಂದಿನ ದಿನದ ಹೆಂಡ ; ಹಳೆಯ ಹೆಂಡ : ಗೌಡರ ಮಗ . . . ಪಾಟಿಹೆಂಡ ಮತ್ತು ಹೊಸಹೆಂಡ ಎಷ್ಟು ಅಂತ ಬೇರೆಬೇರೆ ಅಳೆಸಿ ಇಷ್ಟು ಹೊಸಹೆಂಡಕ್ಕೆ ಅಷ್ಟು ಪಾಟಿಹೆಂಡ ಎಂದು

ಸೇರಿಸಿ, ಶಿಸ್ತಿಗೆ ತುಂಬಿಸಿ ಮಾರಾಟಕ್ಕೆ ಕಳುಹಿಸುತ್ತಿದ್ದ (ಶಕ್ಕೂರು. ೧೬೪).
[ಪಾಟ₁ + ಹೆಂಡ (<ಪೆಂಡ)]

**ಪಾಟೀಕ**, ಪಾಠೀಕ(ನಾ). ವಿದ್ವಾಂಸ ; ಪಂಡಿತ : ಸದ್ಬುಧ ಪುರೋಹಿತ . . . ಪಾಂಡಿತ್ಯ ಪಾಟೀಕ ಸಕಲವಿನಿಯೋಗ . . . ಸಂದಣಿಸೆ (ಶಶಿರೋ. ೩೪-೧೮). **ಪಾಠೀಕ** : ಎಂತಹ ಪಾಠೀಕನಾಗಲಿ . . . ದಾಸರನ್ನು ಕಂಡರೆ ಸನ್ಯಾಸಿಗಳಿಗೆ ಮಾಡುವಂತೆ ನಮಸ್ಕಾರ ಮಾಡುವುದು ರೂಢಿಗೆ ಬಂತು (ಕಶಿ. ೩೪೦). [←ಮರಾ. ಪಥೀಕ. / ಸಂ. ಪಾಠಕ]

**ಪಾಟೀಲ** 'ಪಟ್ಟಾಯಿಲ' ನೋ.

**ಪಾಟೀಸವಾಲು**, ಪಾಟಿಸವಾಲು (ನಾ). (ನ್ಯಾಯಾಲಯದಲ್ಲಿ ಹಿಂದೆ ನಡೆದ ವಿಚಾರಣೆಯಿಂದ ತಿಳಿದು ಬಂದ ವಿಷಯಗಳನ್ನು ತಾಳೆ ನೋಡುವುದಕ್ಕಾಗಲಿ, ಮುಚ್ಚಿಟ್ಟ ವಿಷಯಗಳನ್ನು ಹೊರಡಿಸುವುದಕ್ಕಾಗಲಿ ಮಾಡುವ) ಪ್ರಶ್ನಾವಳಿ ; ಅಡ್ಡಸವಾಲು : ವಕೀಲರು ಪಾಟಿ ಸವಾಲು ಹಾಕುವುದೆಂದರೆ ಅದೊಂದು ಚಿತ್ರಹಿಂಸೆ (ಪಾಶಗೇ. ೯೩); ತನ್ನ ಅಂತರಾತ್ಮ ಎದುರಿಗೆ ಬಂದು ನಿಂತು ತನ್ನನ್ನು ಪಾಟೀಸವಾಲು ಮಾಡುತ್ತಿದೆಯೋನೋ ಎನಿಸಿತು ಅವನಿಗೆ (ನ್ಯಾಬಸ್ಕೀ. ೧೫೨); ಮರುದಿನ ಬೆಳಗ್ಗೆ ಇಂದಿರೆಯ ಪಾಟೀಸವಾಲಿಗೆ ಆರಂಭವಾಯಿತು (ಬಂಕಿಮ. ೦೨೨). **ಪಾಟಿಸವಾಲು** : ಏನಾದರೂ ಕಳುವಾಗಿದ್ದರೆ ಅವಳೊಬ್ಬಳೇ ಅದಕ್ಕೆ ಜವಾಬ್ದಾರಳೆಂದೂ ಪಾಟಿಸವಾಲು ನಡೆಸಿದಾಗ ಆಪಾದಿತೆಯಾದ ಯೆವ್ ಘೀವಿಯಾ ಬಾಪ್ಕೋವ ಹೇಳಿಕೆಯಿತ್ತಳು (ಪುನರು. ೪೪); ಇವಳ ಪಾಟಿಸವಾಲಿನ ಮುಂದೆ ತಮ್ಮ ಲಾಯರತ್ವ ಸತ್ತ್ವವಿಲ್ಲದ್ದೆಂದು ಲಾಯರು . . . ಬಲ್ಲರು (ಪಾಪುಶಿ. ೦೬೮). [ಪಾಟೀ₀+ಸವಾಲು (<ಸವಾಲ್)]

**ಪಾಟು₁** 'ಪಾಡ್ಮ₃' ನೋ.

**–ಪಾಟು₂** (ಪ್ರ). ಒಂದು ಕೃದಂತ ಭಾವನಾಮ ಪ್ರತ್ಯಯ : 'ತಿದ್ದುಪಾಟು' ಪರಾ.

**ಪಾಟುಗೆಡಿಸು** (ಕ್ರಿ). ಕಷ್ಟಕ್ಕೆ ಗುರಿಮಾಡು ; ದುರ್ಗತಿಗೆ ಈಡು ಮಾಡು : ಆಟವಲ್ಲವು ಕಪಟನಾಟಕಧಾರಕನ ಕಾಟಕಾರು ಕ್ರೂರನೋಟದಿಂದ ಪಾಟುಗೆಡಿಸಿ ಹೀನಕೋಟಲೆಯೊಳು ನೂಕಿ ಬೂಟಕತನ ಮಾಯ ದಾಟದಂತೆ (ಕೋಟ್ಲೆರೀ. ೫೦-೧). [ಪಾಟುಗೆಡು + —ಇಸು₁]

**ಪಾಟುಗೆಡು** (ಕ್ರಿ). ರೀತಿಗೆಡು ; ನಡತೆಗೆಡು : ಪಾಟುಗೆಟ್ಟು ಹೆಂಗಳೊಡನೆ ಕೋಟಲೆಗೊಂಡು ತಿರುಗಬೇಡಿ ನೀಟುಗಾತಿಯರೊಲುಮೆ ಬೂಟಕವೆಂದು ತಿಳಿಯಿರೊ (ಪುರಂದ. ೨-೦೬-೦).
[ಪಾಟು₁ (<ಪಾಡು₃)+ ಕೆಡು₁]

**ಪಾಟುಪಡು** 'ಪಾಡುಪಡು' ನೋ.

**ಪಾಟುಬಡಿಸು** 'ಪಾಡುಪಡಿಸು' ನೋ.

**ಪಾಟುಬಡು** 'ಪಾಡುಪಡು' ನೋ.

**ಪಾಟ್ಟು** (ನಾ). ೧. ತಮಿಳು ಹಾಡು, — ಸ್ತೋತ್ರ : ಅಂದೆಸಗಿ ನಾಲ್ಕನೆಯ ತಿರುವಂದಾದಿಯುಮಂ ಚತುರ್ನವತಿಯುಂ ಪಾಟ್ಟುಂ ಸಂದ ತಿರುಚಂದ್ರವೃತ್ತಮನೊಂದಿಸಿ ಪೇಟ್ಟರ್ ಕಡಂಗಿ ನೂರ್ಪವೃತ್ತಂ (ದಿಕ್ಕ. ೩-೩೮). ೨. ಕವಿತೆ; ಕಾವ್ಯ : ಪುಲಿಗೆರೆಯ ತಿರುಳ ಕನ್ನಡದ ಪುರುಳ ರಸರಸದ ಬಾವಿ ಮನೆಮನೆಗೆ ತೀವಿ ತನ್ನೆರಡು ಪಾಟ್ಟು ಮೆಸೆಯೆ . . . ಪಂಪನ್ ಎಮ್ಮ ತಾಯ್ನುಡಿಗೀಗೆ ಪೊಸಪೂಸತು ಪೆಂಪನ್ (ಹೊಂಗಳು. ೩೪-೪). 'ಪಾಡ್ಮ₂' ಪರಾ. [←ತಮಿ. ಪಾಟ್ಟು]

**ಪಾಟ್ಲಿ** 'ಪಾಟಲಿ₂' ನೋ.

**ಪಾಟ್ಲೋಣು** 'ಪಾಟಲೂನು' ನೋ.

**ಪಾಠ₁** (ನಾ). ಒಂದು ಬಗೆಯ ಮೂಲಿಕೆ ; ಅಗುಳುಶುಂಠಿ : "ದೀಪಿಪ್ಪೀ—ಅಂಲಿ, ಪಾಠ, ಓವ, ಮೆಂಥೆಯ" (೬ಶಂ. ೬೬). [ಸಂ. ಪಾಠಾ]

**ಪಾಠ₂** (ನಾ). ೧. ಓದು; ವಾಚನ. ೨. ಉಗ್ಗಡಣೆ ; ಘೋಷ ; 'ಸ್ಮೃತಿ ಪಾಠ' ಪರಾ. ೩. ಅಭ್ಯಾಸ ; ಅಧ್ಯಯನ : "ಅಧ್ಯಯನೇ, ಪಾಠದೊಳ್" (ಕಾಶಕ್ಕ. ೨೬೪) ; ಅಂದು ಪಾಠವು ಕಾಟ ಎಂದು ತಿಳಿದಿದ್ದೆ (ಳಂಕು. ೯-೨); ಪಾಠ್ಯ ಪಾಠಕ್ಕಾಗದು, ಪ್ರೌಢ್ಯ ಕೆಲಸಕ್ಕಾಗದು (ಗಾದೆ). ೪. ಕಲಿಸುವಿಕೆ ; ಅಧ್ಯಾಪನ : "ಅಧ್ಯಯನಂ, ಅಧ್ಯಾಪನಂ . . . ಅಧೀತ್— ಈ ೮ ಪಾಠಂ" (ಕಾಶಕ್ಕ. ೧೬೪). ೫. ಪರಂಪರಾಗತವಾದ ಗ್ರಂಥಸ್ವರೂಪ : ಮಹಾಭಾರತಕ್ಕೆ ದಾಕ್ಷಿಣಾತ್ಯಪಾಠ, ಉತ್ತರೀಯಪಾಠವೆಂದು ಎರಡು ಪಾಠಗಳಿವೆ (ಭಾರತ. ೯೬). ೬. ಲಿಖಿತ ಭಾಗ, —ರೂಪ : ಕೆಲವು ಸಂದರ್ಭಗಳಲ್ಲಿ ಕವಿಯ ಪಾಠ ಇದೇ ಎಂದು ನಿಶ್ಚಯವಾಗಿ ಹೇಳುವುದಕ್ಕಾಗದಿರಬಹುದು (ಕನ್ನಸಂ. ೦೬೨). ೭. ಅಭ್ಯಾಸಕ್ಕಾಗಿ ಆಯ್ದುಕೊಂಡ ಭಾಗ ; ಕಲಿಯುವುದಕ್ಕಾಗಿ ನಿಯೋಜಿಸಿಕೊಂಡ ಭಾಗ : ಒಂದೊಂದು ಪಾಠಕ್ಕೂ ಆಗುವಷ್ಟನ್ನು ಆರಿಸಿಕೊಂಡು ಪಾಠಮಾಡುವುದು ಸಂಪ್ರದಾಯವಾಗಿ ಬಂದಿದೆ (ಕಿಶ್ವರ. ೨೨೦). ೮. ವೇದಾಧ್ಯಯನ ; ಬ್ರಾಹ್ಮಣನು ಪ್ರತಿನಿತ್ಯ ಮಾಡಬೇಕಾದ ಪಂಚಯಜ್ಞಗಳಲ್ಲಿ ಒಂದಾದ ಬ್ರಹ್ಮಯಜ್ಞ : "ಪಾಠಃ—ವೇದಪಾರಾಯಣ ಜಪಾದಿಗಳು . . . ಪಾಠವೇ ಬ್ರಹ್ಮಯಜ್ಞ" (ಸಿದ್ಧಾಂತ. ೨೦೬); ಎನಗೀ ಶಾಸ್ತ್ರಂ ಪಾಠಂ ಜನರಂಜನ ಮಾಡಿ ಪೇಟ್ದು ಕಟುಪೆಂ ಪೊಟ್ಟಂ (ಅಬ್ಬಿಮ. ೦-೨೬). ೯. ವಿವೇಕ ; ತಿಳಿವಳಿಕೆ : ಆ ಅಹಂಕಾರಿಗೆ ಸರಿಯಾದ ಪಾಠವನ್ನು ಕಲಿಸಬೇಕು (ರೂಢಿ).

**ಪಾಠಮಾಡು**=೧. ಕಲಿಸು ; ಪಾಠ ಹೇಳು : ಈಗ ಬಂದಿರುವ ಹೊಸ ಮೇಷ್ಟರು ಬಹಳ ಚೆನ್ನಾಗಿ ಪಾಠಮಾಡುತ್ತಾರೆ (ರೂಢಿ). ೨. ಉರು ಹೊಡೆ ; ಗಟ್ಟಿಮಾಡು ; ಬಾಯಿಪಾಠ ಮಾಡು . ಇನ್ನು ಅರ್ಧ ಗಂಟೆಯುಲ್ಲಿ ಈ ನಾಲ್ಕು ಮಗ್ಗಿಗಳನ್ನು ಪಾಠ ಮಾಡು (ರೂಢಿ). [ಸಂ.]

**ಪಾಠಕ** (ನಾ). ೧. ಬಿರುದಾವಳಿಗಳನ್ನು ಹೊಗಳಿ ಹಾಡುವವನು ; ಭಟ್ಟಂಗಿ : ಕವಿಗಳಿಗೆ ಪಾಠಕಜನಕೆ ದೈವಜ್ಞರಿಗೆ ವೈದ್ಯರಿಗೆ . . . ಎಟಿದು (ಜಕಪು. ೩೯-೨೯); ಮುನಿಗಳೇ ಮಾಣಿಯರು . . . ಸೂರ್ಯಾದಿಗಳೇ ಸಹಚರರು ಘನಚತುರ್ದಶವಿದ್ಯೆ ಪಾಠಕಜನವಲ್ಲೈ (ಕುವ್ಯಾಸ. ೦-೯೦) ; ಬವರದಾದಿಯಲುಸುರಪತಿಯುಪ್ಪವಡಿಸಿದನಿದ್ದೆಸಿಯ ಮಂಗಳರವದ ಪಾಠಕ ಸೂತಮಾಗಧರುಗಳ ಸೂಕ್ತಿಯಲಿ (ಕುಭಾರ. ೬-೨೦-೦೦). ೨. ಓದುವವನು ; ಓದುಗ ; ವಾಚಕ : "ಓದಾಳಿಯೆಂದು ಪಾಠಕಂ" (ಕಶಶಾ. ೬೦-೩೨೯); ಕೆಲವು ಪಾಠಕರು ಈ ಗ್ರಂಥವ ಕೊನೆಯನ್ನು ನೋಡಿ ದುಃಖಿತರಾಗಬಹುದು (ಬಂಕಿಮ. ೦೬೬); ಈ ದೀರ್ಘ ವಿವರಣೆಯು ಪಾಠಕರಿಗೆ ಬೇಸರವಾಗಬಹುದು (ಜೀವಾತ್ಮ. ೦೮೦). ೩. ಕಲಿಸುವವನು ; ಶಿಕ್ಷಕ; ಗುರು. ೪. ವೇದ, ಪುರಾಣ ಮೊದಲಾದುವುಗಳನ್ನು ಓದಿ ಹೇಳುವವನು ; ಪ್ರವಚನಕಾರ. [ಸಂ.]

**ಪಾಠಕರಣ** (ನಾ). [ ಸಂಗೀತ ] ನೂರೆಂಟು ತಾಳಗಳಲ್ಲಿ ಒಂದು : ಧ್ರುವ ಮಟಯ . . . ಪಾಠ[ ಪಾಠಾಂ. ಟೀ]ಕರಣ . . . ಜಯಮಾಳವೆಂಬವೇ ಮೊದಲಾದ ನೂರೆಂಟು ತಾಳಗಳು (ಏಶೀಕ. ೦೯೨). [ಸಂ.]

**ಪಾಠಕಲಿ** (ಕ್ರಿ). ೧. ಅಭ್ಯಾಸಮಾಡು : ಜನನಿಯಿಂದ ಪಾಠಕಲಿತ ಜನರು ಧನ್ಯರು (ಕಶವು. ೫-೦೪೮). ೨. ಅನುಭವದಿಂದ ತಿಳಿದುಕೊಳ್ಳು ; ಬುದ್ಧಿಕಲಿ : ಆ ದುಷ್ಟನು ಸರಿಯಾಗಿ ಪಾಠಕಲಿಯುವಂತೆ ಮಾಡಬೇಕು (ರೂಢಿ). [ಪಾಠ₂+ಕಲಿ₁(<ಕಲ್₁)]

**ಪಾಠಕಲಿಸು** (ಕ್ರಿ). ೧. ಪಾಠವನ್ನು ಹೇಳಿಕೊಡು : ಆ ಪಂಡಿತರು ತುಂಬ ಚೆನ್ನಾಗಿ ಪಾಠ ಕಲಿಸುತ್ತಾರೆ (ರೂಢಿ). ೨. (ಶಿಕ್ಷೆಗೊಳಗಾಗಿಸಿ) ತಪ್ಪನ್ನು ತಿದ್ದಿಕೊಳ್ಳುವಂತೆ ಮಾಡು ; ಬುದ್ಧಿಕಲಿಸು : ಬಲು

ಸೊಕ್ಕಿಗೆ ಬಂದಿದ್ದಾನೆ, ಅವನಿಗೆ ಪಾಠ ಕಲಿಸಬೇಕಾಗಿದೆ (ರೂಶಿ).
[ಪಾಠ₂ + ಕಲಿಸು₁]

**ಪಾಠಕಾಜಿ** (ನಾ). ಭಟ್ಟಂಗಿ ; ಸ್ತುತಿಪಾಠಕ : ಪೊಗೞುತೆ ವರ್ಪವರ ಸರಂಗಳೊಳಂ ಪಾಡುವ ಪಾಠಕಾಜಿರಿಂಚರಂಗಳೊಳೆಲ್ಲಂ ದಿಗ್ಭಿತ್ತಿಗಳ್ ತೆಕ್ಕನೆ ಶೀವೆ (ಶಂಶಭಾ. ೩-೫೪ ವ). [ಪಾಠ₂ + — ಕಾಜಿ]

**ಪಾಠಕಿ** (ನಾ). ಕಲಿಸಂವವಳು ; ಅಧ್ಯಾಪಿಕೆ : "ಅಧ್ಯೇತ್ರೀ = ಪಾಠಕಿ" (ಕಾಶಕ್ಕ. ೧೬೪). [ಸಂ. ಪಾಠಕೀ]

**ಪಾಠಕ್ರಮ** (ನಾ). ೧. ಓದಬೇಕಾದ ಕ್ರಮಂ ; ಅಭ್ಯಾಸ ಮಾಡಬೇಕಾದ ಕ್ರಮಂ : ವರ್ಣಂಗಳ ಪಾಠಕ್ರಮವುವರ್ಣವವ್ಯತಥಾತ್ರಿಯೊಳ್ ಪ್ರಸಿದ್ಧಂ (ಕಪುರ. ೪). ೨. ಗ್ರಂಥದಲ್ಲಿರುವ ವಿಷಯದ ಅನುಕ್ರಮ : ಜ್ಞಾನಾವರಣೀಯಂ . . . ಅಂತರಾಯಮೆಂದಿಂತು ಮುಂ ಪೇಳ್ದ ಪಾಠಕ್ರಮಮಿಾ ಪ್ರಕಾರದಿಂದಂ ಸಿದ್ಧಮಾದುದು (ಗೊಮ್ಮಸಾ. ೨-೮).
[ಪಾಠ₂ + ಕ್ರಮ]

**ಪಾಠಗ್ರಂಥಿ** (ನಾ). (ಹಸ್ತಪ್ರತಿಯಲ್ಲಿ) ಮೂಲಪಾಠವೇನಿರಬಹುದೆಂದು ಊಹಿಸಲಾಗದಂತೆ ಕೆಟ್ಟುಹೋಗಿರುವ ಪಾಠ ; ಸಮಸ್ಯಾತ್ಮಕವಾದ ಪಾಠ : ಇಂಥ ಅಪರಿಹಾರ್ಯವಾದ ಅತಿ ದುಷ್ಟ ಪಾಠಕ್ಕೆ ಪಾಠಗ್ರಂಥಿ (Crux) ಎಂಬ ಹೆಸರನ್ನು ಕೊಟ್ಟಿದೆ (ಕನ್ನಸಂ. ೨೦೭).
[ಪಾಠ₂ + ಗ್ರಂಥಿ]

**ಪಾಠಣ** (ನಾ). ಕಲಿಸಂವಿಕೆ ; ಅಧ್ಯಾಪನ : ಓದಿಸುವ ಬುಧವರನ ಬರಿಸಿ ವೊಲಿದು . . . ಪುತ್ರಚಿಂತಾಮಣಿಯ ಪಾಠಣದ ಬುಧವರನ ಚರಣಗಳಿಗೆರಗಿಸುತ್ತೆ ಕಳುಹೆ (ಪಪುರಾ. ೧೩-೬೦). [<ಸಂ. ಪಾಠನ]

**ಪಾಠದೋಷ** (ನಾ). ಗ್ರಂಥಗಳಲ್ಲಿ ಕಾಣುವ ಅಶುದ್ಧವಾದ ಅಥವಾ ತಪ್ಪಾದ ಬರೆವಣಿಗೆ : ಈ ಎರಡು ಪ್ರಧಾನದೋಷಗಳಿಂದ ಉದ್ಭವಿಸುವ ಪಾಠದೋಷಗಳ ಬಗ್ಗೆ ಇನ್ನೊಂದು ಅಧ್ಯಾಯದಲ್ಲಿ ಹೇಳಲಾಗುತ್ತದೆ (ಭಾರಪ. ೩೦). [ಪಾಠ₂ + ದೋಷ]

**ಪಾಠನಿರ್ಣಯ** (ನಾ). (ಹಳೆಯ ಗ್ರಂಥಗಳ ಹಸ್ತಪ್ರತಿಗಳನ್ನು ತಾಳೆ ನೋಡಿ) ಸರಿಯಾದ ಪಾಠ ಯಾವುದೆಂಬುದನ್ನು ನಿರ್ಧರಿಸಂವಿಕೆ : ಪಾಠನಿರ್ಣಯದ ವಿಷಯದಲ್ಲಿ ತೋರುವ ವ್ಯವಸ್ಥಿತವೂ ಕೌಶಲ್ಯಪೂರ್ಣವೂ ಆದ ವಿವೇಚನೆಯೆಂದು ಇದನ್ನು ಸೂತ್ರಿಸಬಹುದು (ಭಾರಪ. ೯); ಹಸ್ತಪ್ರತಿಗಳ ಆಧಾರದ ಮೇಲೆ ಅದರ ಪಾಠನಿರ್ಣಯ ಮಾಡುವುದು (ಕನ್ನಸಂ. ೨೮). [ಪಾಠ₂ + ನಿರ್ಣಯ]

**ಪಾಠಪರಿಷ್ಕರಣ** (ನಾ). ಹಳೆಯ ಹಸ್ತಪ್ರತಿಗಳಲ್ಲಿರುವ ಪಾಠದೋಷಗಳನ್ನು ನಿವಾರಿಸುವಿಕೆ : ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡ ಮೇಲೆ ಗ್ರಂಥಸಂಪಾದನಕಾರ್ಯ ಪಾಠಪರಿಷ್ಕರಣದಲ್ಲಿ ಪರ್ಯವಸಾನವಾಗುತ್ತದೆ (ಕನ್ನಸಂ. ೦೬೩); ಅತ್ಯುತ್ತಮಹಸ್ತಪ್ರತಿ ಇಲ್ಲವೆ ದಾಖಲೆಗಳಲ್ಲಿಯೂ ಸಹ ಕಂಡುಬರುವ, ಆದರೆ ನಂಬಲು ಯೋಗ್ಯವಲ್ಲದ ಅಂಶಗಳನ್ನು ಹಸ್ತಪ್ರತಿಸಂಪ್ರದಾಯದಿಂದ ತೆಗೆದುಹಾಕುವುದೇ ಪಾಠಪರಿಷ್ಕರಣ . . . ಗ್ರಂಥಕಾರನ ಪಾಠದ ಮೂಲರೂಪವನ್ನು ಸಾಧಿಸುವುದು (ಭಾರಪ. ೪೧).
[ಪಾಠ₂ + ಪರಿಷ್ಕರಣ]

**ಪಾಠಭೇದ** (ನಾ). ಪ್ರಾಚೀನಕಾವ್ಯಗಳ ಹಸ್ತಪ್ರತಿಗಳಲ್ಲಿರುವ ಬೇರೆ ಬೇರೆ ಪಾಠ ; ಪಾಠಾಂತರ : ಗ್ರಂಥಗಳಲ್ಲಿ ಪಾಠಭೇದಗಳುಂಟಾಗುವುದು, ಪ್ರಕ್ಷೇಪಗಳಾಗುವುದು, ಗ್ರಂಥಪಾತವಾಗುವುದು, ಅಸ್ತವ್ಯಸ್ತವಾಗುವುದು, ಪ್ರತ್ಯಂತರಗಳ ಸಹಾಯದಿಂದ ಪಾಠಶೋಧನೆ ಮಾಡುವುದು —ಇವೇ ಮುಂತಾದುವನ್ನು ಪ್ರಾಚೀನ ಭಾರತೀಯವಿದ್ವಾಂಸರು ಬಲ್ಲವರಾಗಿದ್ದರು (ಕನ್ನಸಂ. ೦೧) ; ಈ ಉಪನಿಷತ್ತಿನ ಎರಡು ಬೇರೆಬೇರೆ ಪ್ರತಿಗಳಲ್ಲಿ ಪಾಠಭೇದವಿದೆ (ಶಂಭಾಷ್ಯ. ೨೦೭). [ಪಾಠ₂ + ಭೇದ]

**ಪಾಠಭ್ರಾಂತಿ** (ನಾ). ಹಸ್ತಪ್ರತಿಯನ್ನು ಬರೆಯುವವನ ತಪ್ಪಿನಿಂದಾಗಿ ಉಂಟಾದ ಪಾಠ : ಪಾಠಭ್ರಾಂತಿ ಮತ್ತು ಅವುಗಳನ್ನು ಪರಿಹರಿಸುವ ಪ್ರಯತ್ನಗಳು (ಭಾರಪ. ೬೭). [ಪಾಠ₂ + ಭ್ರಾಂತಿ]

**ಪಾಠಮಿಶ್ರಣ** (ನಾ). ಬೇರೆ ಬೇರೆ ಸಂಪ್ರದಾಯದ ಪಾಠಗಳನ್ನು ಮಿಶ್ರಣ ಮಾಡಿ ಬರೆಯುವಿಕೆ : ಭಿನ್ನಶಾಖೆಗಳು ಹೀಗೆ ಒಂದರೊಡನೊಂದು ಸೇರುವುದಕ್ಕೆ ಪಾಠಮಿಶ್ರಣ (Crossing or Intermixing) ಎಂದೂ . . . ಹೆಸರು (ಭಾರಪ. ೫೪) ; ಎಲ್ಲ ಪ್ರತಿಗಳ ಉತ್ತಮಾಂಶಗಳನ್ನೊಳಕೊಂಡ ಒಂದು ಪಾಠವನ್ನು (Eclectic text) ಸಂಪಾದಕನು ಕೊಡಬೇಕಾಗುತ್ತದೆ. ಆಗ ಅದರಲ್ಲಿ ಭಿನ್ನಸಂಪ್ರದಾಯಗಳ ಪಾಠಮಿಶ್ರಣ ಆಗಲೇಬೇಕಾಗುತ್ತದೆ (ಕನ್ನಸಂ. ೦೬೬). [ಪಾಠ₂ + ಮಿಶ್ರಣ]

**ಪಾಠಯಿಸು** 'ಪಾಠಿಸು' ನೋ.

**ಪಾಠಯೋಜನೆ** (ನಾ). ಭಿನ್ನಭಿನ್ನಪ್ರತಿಗಳ ಉತ್ತಮಾಂಶಗಳನ್ನು ಆಯ್ದುಕೊಂಡು ಬಹುಶಃ ಸರಿಯೆನ್ನಿಸಬಹುದಾದ ಪಾಠವನ್ನು ನಿರ್ಮಿಸುವುದು: ಈ ರೀತಿಯ ಪಾಠಯೋಜನೆಯನ್ನು ಕೆಲವರು ಸಂಪಾದನಶಾಸ್ತ್ರಜ್ಞರು ಒಪ್ಪುವುದಿಲ್ಲ . . . ಉತ್ತಮಪ್ರತಿಗಳು ದೊರೆತಂತೆಲ್ಲ ಇಂಥ ಪಾಠಯೋಜನೆಯಲ್ಲಿ ವ್ಯತ್ಯಾಸಗಳನ್ನು ಮಾಡುತ್ತಲೇ ಇರಬೇಕಾಗುತ್ತದೆ (ಕನ್ನಸಂ. ೦೬೬). [ಪಾಠ₂ + ಯೋಜನೆ]

**ಪಾಠವಿಕಲತೆ** (ನಾ). ಗ್ರಂಥಸ್ವರೂಪವು ಕೆಟ್ಟುಹೋಗುವಿಕೆ; ಗ್ರಂಥದ ಮೂಲಶಬ್ದಸ್ವರೂಪವು ಬದಲಾಗುವಿಕೆ : ಪಾಠವಿಕಲತೆ ಎಷ್ಟು ಶೀಘ್ರಗತಿಯಲ್ಲಿ ಘಟಿಸುತ್ತಾ ಹೋಗುವುದೆಂದರೆ ಹೊಸ ಸ್ವಾಪಿತ್ಯಗಳ ಹುಲುಸುಬೆಳೆಯಲ್ಲಿ ಮೂಲಪಾಠಾಂತರಗಳು ಮರೆಯಾಗಿ ಬಿಡುತ್ತವೆ (ಭಾರಪ. ೬೬). [ಪಾಠ₂ + ವಿಕಲತೆ]

**ಪಾಠಶಾಲೆ** (ನಾ). ವಿದ್ಯಾಭ್ಯಾಸ ಮಾಡುವ ಸಂಸ್ಥೆ ; ವಿದ್ಯಾಲಯ : ಸುರಬಾಲೆಯ ಸಂಗಡ ಒಟ್ಟಾಗಿ ಪಾಠಶಾಲೆಗೆ ಹೋಗಿದ್ದೇನೆ (ಇಶ್ಯಕ. ೮); ಮನೆಯೆ ಮೊದಲ ಪಾಠಶಾಲೆ (ಕಪಕು. ೫-೧೪೮). [ಪಾಠ₂ + ಶಾಲೆ₂]

**ಪಾಠಶೋಧಕ** (ನಾ). ಗ್ರಂಥದ ಸರಿಯಾದ ಪಾಠವನ್ನು ಕಂಡುಹಿಡಿಯುವವನು : ಅವನ ಮುಂದಿನ ಕೆಲಸ ಪ್ರಾಮಾಣಿಕನಾದ ಪಾಠಶೋಧಕನ ಕೆಲಸ, ಪಾಠವಿಮರ್ಶಕನ ಕೆಲಸವಲ್ಲ (ಭಾರಪ. ೬೭).
[ಪಾಠ₂ + ಶೋಧಕ]

**ಪಾಠಶೋಧನೆ** (ನಾ). ಗ್ರಂಥದ ಸರಿಯಾದ ಪಾಠವನ್ನು ಗೊತ್ತುಪಡಿಸುವಿಕೆ : ಪ್ರತ್ಯಂತರಗಳ ಸಹಾಯದಿಂದ ಪಾಠಶೋಧನೆ ಮಾಡುವುದು (ಕನ್ನಸಂ. ೦೧). [ಪಾಠ₂ + ಶೋಧನೆ]

**ಪಾಠಸಂಪ್ರದಾಯ** (ನಾ). ಕಾವ್ಯಗಳಲ್ಲಿ ಸಾಂಪ್ರದಾಯಿಕವಾಗಿ ಬಂದಿರುವ ಗ್ರಂಥಪಾಠ ಮತ್ತು ಅದನ್ನು ಅನುಸರಿಸಿರುವ ಪದ್ಧತಿ : ಪ್ರತಿ ಮಾಡುವ ಕೆಲಸ ಯಾವ ಊರಿನಲ್ಲಿ ನಡೆಯಿತೆಂಬುದು ಗೊತ್ತಾಗುತ್ತದೆ. ಇದರಿಂದ ಪ್ರಾದೇಶಿಕ ಪಾಠಸಂಪ್ರದಾಯಗಳನ್ನು ತಿಳಿಯಲು ನೆರವಾಗುತ್ತದೆ (ಕನ್ನಸಂ. ೫೩). 'ಪಾಠಸಂಪ್ರದಾಯನಿರ್ಣಯ' ಪರಾ.
[ಪಾಠ₂ + ಸಂಪ್ರದಾಯ]

**ಪಾಠಸಂಪ್ರದಾಯನಿರ್ಣಯ** (ನಾ). ಒಂದು ಗ್ರಂಥದಲ್ಲಿ ಯಾವುದಾದರೊಂದು ಶಬ್ದವು ಬೇರೆ ಬೇರೆ ಪರಂಪರೆಗಳಲ್ಲಿ ಉಲ್ಲೇಖಿತವಾಗಿದ್ದರೆ ಯಾವ ಸಂಪ್ರದಾಯಕ್ಕೆ ಹೆಚ್ಚು ಪ್ರಾಧಾನ್ಯ ಕೊಡಬೇಕೆಂದು ತೀರ್ಮಾನಿಸುವುದು : ಪಾಠಸಂಪ್ರದಾಯನಿರ್ಣಯ (Recension) : ಮೇಲೆ ಹೇಳಿದ ಸಾಮಗ್ರಿಗಳ ಮೂಲರೂಪವನ್ನು ಸಾಧಿಸುವುದು (ಭಾರಪ. ೪೧). [ಪಾಠಸಂಪ್ರದಾಯ + ನಿರ್ಣಯ]

**ಪಾಠಸಾಕ್ಷಿ** (ನಾ). ಹಸ್ತಪ್ರತಿಗಳನ್ನು ತಾಳೆ ನೋಡುವುದರಿಂದ ಸಿಕ್ಕುವ ಮೂಲಗ್ರಂಥಸ್ವರೂಪಗಳ ಆಧಾರ : ಹಸ್ತಪ್ರತಿಗಳ ಪಾಠಸಾಕ್ಷಿ

ಗಳನ್ನು ತೂಗಿನೋಡುವುದು ; ಅವು ತಪ್ಪಾಗಿದ್ದರೆ ಅವನ್ನು ತಿದ್ದುವುದು ಅಥವಾ ಸರಿಪಡಿಸುವುದು (ಕಪ್ನಸಂ. ೨೮). [ಪಾಠ$_2$ + ಸಾಕ್ಷಿ]

**ಪಾಠಹೇಳು** (ಕ್ರಿ). ಕಲಿಸು ; ವಿದ್ಯಾಭ್ಯಾಸ ಮಾಡಿಸು : ಅವನ ಮೈಯನ್ನು ಮುಟ್ಟದೆ ಪಾಠ ಹೇಳಲಿಕ್ಕೆ ನನ್ನಿಂದಾಗದು (ಮರಮು. ೧೭೯). [ಪಾಠ$_2$ + ಹೇಳು (<ಪೇೞ್)]

**ಪಾಠಾಂತರ** (ನಾ). ಹಸ್ತಪ್ರತಿಗಳಲ್ಲಿ ದೊರೆಯುವ ಬೇರೆಬೇರೆ ಪಾಠ : ಇದಕ್ಕೆ ಕೆಲವು ಪಾಠಾಂತರಗಳೂ ಉಂಟು (ಕುಮೂಸಾಂ. ೨೩); ಹಸ್ತಪ್ರತಿಗಳನ್ನು ಪರಸ್ಪರ ಹೋಲಿಸಿ ಪಾಠಾಂತರಗಳಲ್ಲಿ ಉಚಿತವಾದುವನ್ನು ಆರಿಸಿಕೊಳ್ಳುವ ಕ್ರಮವನ್ನು ಈತನು ಅವಲಂಬಿಸಿರುವುದು ಮುಖ್ಯವಾದುದಾಗಿದೆ (ಕಪ್ನಸಂ. ೦೫); ಲಭ್ಯಪ್ರತಿಗಳ ಪ್ರಮಾಣಗಳನ್ನು ಪಾಠಾಂತರದಿಂದ (Collation) ನಿರ್ಧರ ಮಾಡಿಕೊಳ್ಳಬೇಕು (ಛಾರಶ. ೪೧). [ಸಂ.]

**ಪಾಠಾಳಿ** (ನಾ). ದೇವಸ್ಥಾನದಲ್ಲಿ ಮಂತ್ರಗಳನ್ನೂ ಸ್ತೋತ್ರಗಳನ್ನೂ ಪಠಿಸುವವನು : ಉದಯಕಾಲದಲ್ಲಿ ನೈವೇದ್ಯಕ್ಕೆ ಪಾಠಾಳಿ ಹೊಯ್ದ ಪಡಿಯಿಂದಲೂ ದಿನವೊಂದಕ್ಕೆ ಪೇಟೆಯ ಮೂಡೆ ೪ ಅಕ್ಕಿಯ ಲೆಕ್ಕದಲ್ಲಿ (ಮೈಆರಿ. ೧೯೨೮, ೦೦೨-೧೯; 1698); ಈ ಹಾಡುಗಳನ್ನು ಹಾಡುವಾಗ ಪಾಠಾಳಿ (ಪಾಟಾಳಿ) ಎಂಬುವನು ಪ್ರತ್ಯೇಕ ವ್ಯಕ್ತಿ. ಅವನ ಕೆಲಸಗಳಲ್ಲಿ ದೇವರ ಸ್ತುತಿಪಾಠ ಒಂದು (ಜಾನಗೀ. ೧೫): ಈಗಲೂ ಪೆರಡೂರು, ಎಲ್ಲೂರು ದೇವಸ್ಥಾನಗಳಲ್ಲಿ ಪಾಠಾಳಿಯು ಶಿವಳ್ಳಿಬ್ರಾಹ್ಮಣವರ್ಗಕ್ಕೆ ಸೇರಿದವರು ಆಗಿರುವರು (ತುಳುನಾ. ೧೦೯). [ಪಾಠ$_2$ + –ಆಳ್$_3$]

**ಪಾಠಿ** (ನಾ). ಒಂದು ಬಗೆಯ ಸಸ್ಯ ; ಚಿತ್ರಮೂಲ : "ಪಾಠಿನ್, ಚಿತ್ರಕಃ, ವಹ್ನಿಸಂಜ್ಞಕಃ–೩ ಚಿತ್ರಮೂಲದ ಪೆಸರುಗಳು" (ಸಿದ್ಧಾಂತಿ. ೧೩೦). [ಸಂ. ಪಾಠಿನ್]

**ಪಾಠಿಸು, ಪಾಠಯಿಸು** (ಕ್ರಿ). ೧. ಓದು ; ಪಠನಮಾಡು ; ಅಧ್ಯಯನ ಮಾಡು : ಪಂಪ್ರಶ್ನಾನಂತರಂ ಪಾಠಿಸಲ್ ಪೋಗವೇಟ್ ಕನ್ಯಾಭವನಕ್ಕೆ ಪೋದಳ್ (ಜಾಪುಂಪು. ೫೫). ೨. ಓದಿಸು : ಕೃಷ್ಣಚರಿತೆಯ ಪೀಠಿಕೆಯೊಳಗೋದು ಪದನ ಪಾಠಿಸಿ ಕೇಳದ ಸುಜನರ್ಗೆ ಮುಕುತಿವಧೂಟಿಯ ಸಂಸರ್ಗವಹುದು (ಪೋಹಕ. ೦-೩೯). ೩. ಸಾಧಿಸು ; ರೂಢಿಸಿಕೊಳ್ಳು : ಘನವಿವೇಕವನುಳ್ಳವರು ಹಗೆತನವ ಪಾಠಿಸಿ ಮುಳುಗರಧಿಕಭವಾಂಬುರಾಶಿಯಲಿ (ತಿಪ್ಪ್ಯಶ. ೦-೭); ಪಾಟವವು ಮೈಗಿರಲಿ ನೋಟ ತತ್ತ್ವದೊಳಿರಲಿ ಪಾಠಿಸು ಸಮನ್ವಯುವ (ಮುಂಕುಳ. ೨೬೧). **ಪಾಠಯಿಸು** : ೪. ಉರುಹೊಡೆ ; ಕಂಠಪಾಠ ಮಾಡು : ಕೋಟಿಗೀತವನೋದಿ ಪಾಠಯಿಸಿ ಫಲವೇನು ಕೂಟಸ್ಥನಲ್ಲದವನೋದು ಗಿಳಿ ಕಲಿತ ಪಾಠದಂತಕ್ಕು (ಸರ್ವಜ್ಞ. ೪೪೦). [ಪಾಠ + –ಇಸು$_3$]

**ಪಾಠೀಕ** 'ಪಾಟೀಕ' ನೋ.

**ಪಾಠೀನ** (ನಾ). ೧. ಸಾರ್ವಜನಿಕರಿಗೆ ಪುರಾಣ, ಪುಣ್ಯಕಥೆಗಳನ್ನು ಓದಿ ಹೇಳುವವನು; ಪುರಾಣಿಕ. ೨.ಒಂದು ಬಗೆಯ (ದೊಡ್ಡ) ಮೀನು,–ಮತ್ಸ್ಯ : "ಮೀನಂ ಶಫರಂ ತಿಮಿ ಪಾಠೀನಂ ಝಷಮನಿಮಿಷಂ ವಿಶಾರಂ ಮತ್ಸ್ಯಂ ಮೀನವೆಸರ್" (ಕಸ್ತುಕೋ. ೨೨-೫); ಉತ್ಕಮಾಠಲುಠನಕಾಠಿನ್ಯ ಪಾಠೀನಮತ್ಸ್ಯಚ್ಛದನಚ್ಛೇದಾದಿ ನಾನಾಜಲಚರನಿಕರ . . . ರೌದ್ರಂ ಸಮುದ್ರಂ (ಕಾವ್ಯಸಾ. ೭೪)... ೩. ಮತ್ಸ್ಯಾವತಾರಿಯಾದ ವಿಷ್ಣು : ಕೃಷ್ಣ ಪಾಠೀನ ಕಮಠ ವರಾಹ ವರ್ಧಿಷ್ಣು ನೃಸಿಂಹ ವಾಮನಾಖ್ಯ ಜಿಷ್ಣು ರಾಮತ್ರಯ ಬುದ್ಧರೂಪ ಕಲ್ಕಿವಿಷ್ಣು ರಂಗಾ ರಕ್ಷಿಸೆನ್ನ (ಕಕಸಾಂ. ೬೫-೨೫). [ಸಂ.]

**ಪಾಠೀನಪಾಳಿ** (ನಾ). ೧. ಮನ್ಮಥನ ಬಾವುಟ ; ಮೀನಧ್ವಜ. ೨. ಮನ್ಮಥ ; ಕಾಮ : ಮಂತ್ರಿಯುಮನ್ಯನಿಖಿಳಸೇನಾಧಿಪರು ಸಹಿತ ಬಂದು ಭಾವು ನೀನಲ್ಲದಿನ್ನಾರೆಮ್ಮ ಸಲಹೆಂಬುತಾ ಪೊಳೆವ ಪಾಠೀನಪಾಳಿಯಡಿಗೊಂದಿಸಲು . . . ಅವರ್ಗೆಯಭಯಮುಮಂನಿತ್ತು ಮನ್ನಿಸಿದನು (ಸವಮೋ. ೧೨-೯೩).

[ಪಾಠೀನ + ಪಾಳಿ$_5$ (= ಪಾಲಿ$_2$)]

**ಪಾಠೆ** (ನಾ). ೧. ಒಂದು ಬಗೆಯ ಮೂಲಿಕೆ ; ಅಗುಳುಶುಂಠಿ ; "ಪಾಠೆಯೆಂದೆನಲಗುಳುಶುಂಠಿಯಕ್ಕುಂ" (ಮಂಗರಾ. ೪೩-೪೦). ೨. ಒಂದು ಬಗೆಯ ವನಸ್ಪತಿಯ ಬೇರು ; "ಸಿತಪಾಟಲಿ" (ಶಂಡಿತ. ೨೩೬). [ಸಂ. ಪಾಠಾ]

**ಪಾಠೋಪಕರಣ** (ನಾ). ಪಾಠವನ್ನು ಕಲಿಸುವಾಗ ಸಹಾಯಕವಾಗಿ ಬಳಸುವ ಚಿತ್ರ, ವಿಗ್ರಹ, ಫಲಕ ಮೊದಲಾದ ಸಲಕರಣೆ : ಬೋಧನಕ್ರಮ ಹೆಚ್ಚು ಫಲಪ್ರದವಾಗಬೇಕಾದರೆ ಹಲವು ಸಲಕರಣೆಗಳು ನೆರವಾಗುತ್ತವೆ. ಅವನ್ನು ಪಾಠೋಪಕರಣಗಳೆಂದು ಕರೆಯಬಹುದು (ಶಿಕ್ಷರ. ೨೬೫). [ಪಾಠ$_2$ + ಉಪಕರಣ]

**ಪಾಠ್ಯ** (ಗು). ೧. ಓದಬೇಕಾದ ; ಪಠಿಸಬೇಕಾದ. (ನಾ). ೨. ಓದಬೇಕಾದುದು ; ಪಠಿಸುವಂತಹುದು : ಮೊದಲಿನಲ್ಲಿ ಸಾಹಿತ್ಯದ ಕೃತಿಗಳು ಕೇವಲ ಗೇಯ ಅಥವಾ ಪಾಠ್ಯವಾಗಿದ್ದುವು (ಅಂಕಾ. ೨೦೫). ೩. ಹಾಡಿನ ಸಾಹಿತ್ಯ : ಬ್ರಹ್ಮನು . . . ಋಗ್ವೇದದಿಂದ ಪಾಠ್ಯವನ್ನೂ ಸಾಮವೇದದಿಂದ ಸಂಗೀತವನ್ನೂ ಯಜುರ್ವೇದದಿಂದ ಅಭಿನಯವನ್ನೂ ಅಥರ್ವವೇದದಿಂದ ರಸವನ್ನೂ ತೆಗೆದುಕೊಂಡು ನಾಟ್ಯವೇದವನ್ನು ನಿರ್ಮಿಸುತ್ತಾನೆ (ಭಾರದ. ೫೫೦). 'ಪಠ್ಯ' ಪರಾ. [ಸಂ.]

**ಪಾಡ್** 'ಪಾಂಡು$_2$' ನೋ.

**ಪಾಡಗ$_1$, ಹಾಡಂಗಿ, ಹಾಡಗ** (ನಾ). ತೇಗದ ಮರ : "ಪಾಡಗವೆಂದು ತೇಗು" (ಕಕಸಾ. ೫೦-೭೩); "ಪಾಡಗವೆ ತೇಗು" (ಕದ್ಮಕ್ಕ. ೭೦). **ಹಾಡಂಗಿ** : ಸಿರಿಸಂ ಹಾಡಂಗಿ ಭಾರಂಗಿ . . . ಎಂಬೀ ಮರದಾಱುಗಲಿಱುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ (ಶಾರ್ಙ್ಯಶ. ೦೨-೫೮). **ಹಾಡಗ** : "ಹಾಡಗಂ ಸುರವತಿಯಕ್ಕುಂ" (ಮಂಗರಾ. ೪೦-೩೨); ಹಾಡಗ, ಬಿಳೇಚಳ್ಳೆ, ಗವುಡಿ (ವೈಶಿಗ. ೨೪-೪೫೧) ; ತೇಗು ಮುಪ್ಪಾಗುವಾಗ ಹಾಡಗ ಹಸಿಯಾರಲಿಲ್ಲ (ಗಾದೆ).

**ಪಾಡಗ$_2$, ಪಾಗಡ, ಪಾಗಡೆ** (ನಾ). ಕಾಲಿನ ಕಡಗ ; ಕಾಲುಂಬಳೆ : ಗೆಜ್ಜೆಗಳ ಸಜ್ಜನೆಗೆ ಅಂದುಗೆಯಾನಂದೆಗೆ ನೇವುರದ ಭಾವಕೆಗೆ ಪಾಡಗದ ಪರುಷಕ್ಕೆ . . . ತಂದೆ ನಿಯಾಮಿಸಿ ಕೊಟ್ಟ . . . ಷೋಡಶಸಹಸ್ರ ವಿಲಾಸಿನಿಯರ್ವೆರಸು ನಡೆತಂದು (ಗಂಕ. ೩-೯೧ ವ) ; ಬೆರಳ ಚಿಲ್ವಿಕೆಯಿಂದ ಮುದ್ರಿಕೆ ಮೆಱೆಯ ಪಾಡಗ ನೇವುರಂಗಳು ಕರಚರಣ ಸೌಂದರ್ಯದಲಿ . . . ಒಪ್ಪಿದವು (ಕುವ್ಯಾಆ. ೧೩-೧೫) ; ಚಂದವ ನೋಡಿರೆ . . . ಅಂದುಗೆ ಪಾಡಗ ಗೆಜ್ಜೆಯ ಧರಿಸಿ ಧಿಂಧಿಮಿಕೆಂದು ಕುಣಿಯುವ ಕೃಷ್ಣನ (ಪುರಂದ. ೩-೧೦೫ ಅಮಶಲ್ಲವಿ) ; ಚರಣದಲ್ಲಿ ಗೆಜ್ಜೆ ಪಾಡಗವು ಶಬ್ದಮಾಡಿತು (ಕೋಹವೂ. ೩೭). **ಪಾಗಡ** : "ಪಾಗಡ—ಕಾಲ ಕಡಗ" (ಜಾವಕೋ. ೧೫). **ಪಾಗಡೆ** : ಬಾಗಿರೆ ಪತಿಯಳಕಮನಿಂಬಾಗಿರೆ ಮುಳಿಸಾಱುವನ್ನೆಗಂ ಸಿಲ್ಕಿಸುಗೀ ಪಾಗಡೆಯೆಂದೊದವಿರೆ ಪೆಂಪಾಗಡೆ ಪದಪದ್ಮದೊಳ್ ಪೆಱಳ್ ಪದವಿಟ್ಟಳ್ (ಲೀಲಾವ. ೦೨-೭೭).

[ದೇ.॥ ತಮಿ. ಪಾಟಕ ; ಮಲ. ಪಾಡಕ ; ತುಳು. ಪಾಡಗೊ ; ತೆಲು. ಪಾಡಗ./ಸಂ. ಪಾದಕಟಕ]

**ಪಾಡಳಿ** 'ಪಾಡಱು' ನೋ.

**ಪಾಡಱು** (ಕ್ರಿ). ೧. ಕ್ರಮವನ್ನು ತಿಳಿದುಕೊಳ್ಳು : ತೋಡುಂ ಬೀಡುಮದುಡುಗದೆ ಪಾಡಱಿದೆಚ್ಚಾಱಿರಂಗದೊಳ್ ವಾಜಿಯ[ನ]ಟ್ಟಾಡಿ ಸುರಾ[ಂ]ಗನೆಯರೊಳ[ಂ] ಕೂಡಿದೊನೇಂ ಕಲಿಯೊ ನೆಗಳ್ದ ಕಂ[ದರಕೇತಂ] (ಎಇ. XVIII. ೦೭೨-೮ ; 985) ; ಭಯಭಕ್ತಿಯಿಂ ಪಾಡಱಿದು ಭಜಿಸಿ

(ಶಬ್ದಮ. ೩-೪೦). ೨. ಸ್ಥಿತಿಯನ್ನು ತಿಳಿ : ಫಲುಗುಣನ ಚಿತ್ರದ ಪಾಡಱಿದು ನುಡಿವುತ್ತ ತಂದನು ಪಾಳೆಯಕೆ ರಥವ (ಕುಮಾ.ಭಾ. ೧೬-೨). ೩. ಅಂದವನ್ನು ಅರಿ : ಅಸುಗೆದಳಿರ ದುಪ್ಪಟಿಯುಂ ಪಾಡಱಿದುಟ್ಟು ಪೊಳಂದಪುರಂಧ್ರಿಯರೊಪ್ಪವಡೆದರಲ್ಲಿ (ಜಗನ್ನಾ. ೧೫-೩೮). ೪. ಯೋಗ್ಯತೆಯನ್ನು ಅರಿತುಕೊಳ್ಳು : ರೂಢಿಪತಿ ಸತ್ಕರಿಸಿ ಪಂಶದ ಪಾಡಱಿದು ಪೊಣಲಿಕ್ಕೆ ಕಳುಹಿದ (ಸಂಭಶ. ೨೬-೧೩). [ಪಾಡು₃+ಅಱಿ]

**ಪಾಡಟ್**, ಪಾಡಳಿ (ಕ್ರಿ). ೧. ಸ್ಥಿತಿಗೆಡು; ನೆಲೆಗೆಡು : ಕವಿಯು ನೆಯ್ದ ಕನ್ಯಾಕಲಕಂಠರವಂ ಶ್ರೀಕಂಠಂ ರಾಗರಸೋತ್ಕಂಠಂ ಪ್ರತಿಸ್ಪೈಯೊಳ್ ಪಾಡಟಿದಂ (ಸಂಗಾಪು. ೧೦-೧೧೦) ; ನಾಡೆಯುಮಾ ನೃಪವುವನಂ ಪಾಡಟಿದಲ್ಲಲ್ಲಿ ಪೊಕ್ಕು ನಿಜವಲ್ಲಭೆಯುಂ ಕೂಡೆ ತೊಟಲ್ದೋರಂದದೆ (ಕುಸುಮ. ೧೪-೧೨೫) ; ಪಾಡಟಿದು ಇಂತು ಶಿಕ್ಷೆಗಾನ್ ಸಂದೆನ್ (ಖಿದ್ಯಪ್ರ. ೦೪-೨೮೪). ೨. ಬಲಗುಂದು ; ನಿಃಸತ್ತ್ವವಾಗು ; ನಿರ್ವಿಣ್ಣವಾಗು : ಪರಮಮಿತ್ರಾ ಇಂತೇಕೆ ಬರ್ದಿ ಬಂಬಳಂಬಾಡಿ ಪಾಡಟಿದುಬ್ಬೆಗಂಬಟ್ಟಿರ್ದೆ (ವಡ್ಡಾರಾ. ೩೯-೬) ; ಬಾಡಿ ಪಾಡಟಿದು ಬಟಲ್ದು ಜೋಲ್ದಿರವು ಮೆಯ್ಯೊಳೆ ಮೆಯ್ವಡಿದೆನ್ನ ಕಣ್ಗಳೊಳ್ ಸುಟಿದುವು (ಸಂಶಖ. ೪-೩೦) ; ಕೋಡನೂಱ ಪಾಡಟಿದು ಪರಿಕಲಿಸಿ ಕೆಡೆದ ಮದಾಂಧಗಂಧಸಿಂಧುರಂಗಳಡಿಯೊಳಡಂಗಿದನೆ ಗೆತ್ತು ಕೈಗುತ್ತಿ ನೋಡಿಯುಂ (ಗದಾಯು. ೬-೨೮ ವ). ೩. ಕಳೆಗುಂದು; ಕಾಂತಿಗುಂದು ; ಬಣ್ಣಗೆಡು : ನಸುವಾಸಿ ಪಾಡಟಿದ ರೂಪಿನೊಳುಣ್ಮುವ ಗಾಡಿ ನಾಡೆ ಕಣ್ಗೆದಟ್ (ಸಂಶಖ. ೧೩-೯೯) ; ಪೊಗೆಗೊಂಡ ಚಿತ್ರಲತೆ ಧೂಳಿಗೊಂಡ ಪುತ್ರಳಿಗೆ ಮಂಜುಗೊಂಡಬ್ಜಿನಿ ಕಾರ್ಮುಗಿಲೊಳಕೊಂಡೆಳೆವಱಯೆನೆ ಮೃಗಲೋಚನೆ ಸೀತೆ ನಾಡೆ ಪಾಡಟಿದಿರ್ದಳ್ (ಸಂಗಾಪು. ೧೦-೮೩), ಚಿತ್ತವಲ್ಲಭನುಟಿದ ವಿರಹಪರಿತಾಪದಿಂ ಬಾಡಿ ಪಾಡಟಿದ ಗುಡಿಕಾರ್ತಿಯುಂ ನೋಡಿ (ಅಸಂಪು. ೮-೨೭ ವ). ೪. ವ್ಯಾಮರೆ ; ಪರವಶವಾಗು : ವನಚರಿ ಪಾಡೆ ಪಾಡಟಿದು ಸಾರ್ದೊಲಿದಾಲಿಸುತಿರ್ಪ ದಂತಿಯುಂ ವನಚರನೆಚ್ಚೊಡೆ (ಲೀಲಾವ. ೮-೩೫). **ಪಾಡಳಿ** : ೧. ನಿಲಲ್ಬಗೆಗಾಣದೆ ಪಾಡಳಿದುರುಳ್ವಂದದಿನಸ್ವಾದ್ರಿಯು ಕೋಡುಂಗಲ್ಲು ಪರಿಮಾದಿಂ ಬಿಳ್ದನದಿತಿಸುತನಬುಧಿಯೊಳು (ಜಗನ್ನಾ. ೧೩-೫೮) ; ತೀಡುವ ಸುಯ್ಯುಲ್ಬಗೆಗೊಂಡೊಡಲಿಂದವೆ ಪಾಡಳಿದನು ಸುಕುಮಾರ (ಶ್ರೀಪಾಲ. ೯-೩೩). ೨. ತೋಳಂ ತೂಗಿ ಬಾತ ಬೆರಳೊರಸಿ ಮಸೆದು ಪಾಡಳಿದ ತೊಡೆ ಹಲವು ಹರಳೊತ್ತಿ ಬೊಕ್ಕೆಗಳು ಮೂಡಿ ನಡೆಗೆಟ್ಟು ದುಲ್ಲಡಿಯು ನಿಜಪನಿಕೆಯುಂ ನೋಡಿ (ಹಠಕಾ. ೯-೨೫) ; ಬಾಡಲು ಪಂಕಜ ಕೂಡಲು ಬಾತಗೆ ಮೂಡಲು ಉತ್ಪಲರಾಗವನು ಪಾಡಳಿಯಲು ವಿರಹಿಗಳಂಬುಧಿ ಪೆಚ್ಚೆ ಮೂಡ ಮೂಡಲು ಚಂದ್ರಮನು (ಜೀವಂಸಾಂ. ೪-೩೦) ; ಕಡುಪಸಿವಿನಿಂ ಪಾಡಳಿದು ತದ್ವೇದಿಕಾಗ್ರದೊಳಗಿರುತಿರ್ದನು (ಶಬಪು. ೩೨-೪೬). [ಪಾಡು₃+ಅಟ್₁]

**ಪಾಡಾಟ** (ನಾ). ಹಾಡುವಿಕೆ : ದುಃಖ ಸುಖವಾಯ್ತೀ, ಪಗೆಯೆ ಪುಡಿಯಾಯ್ತೀ, ಗೋಳಿಲ್ಲ ಪಾಡಾಟವಾಯ್ತೀ ! (ಪಾರಸಿ. ೧೩-೨೯೩).
[ಪಾಡು₂+ಆಟ]

**ಪಾಡಾವಿಗ** (ನಾ). (?) : ಗಾನ್ಧರ್ವಿಗರ್ಗ್ಗಂ ಪಾಡಾವಿಗಂಗಂ ಪಾತ್ರಕ್ಕೆ ಮದ್ದಳೆಯವಂಗಯಾ ಕೋಲ ಮ ೩೦ (ಶಾಇ. IX-1, ೧೫೫-೫ ; ಸು. 1086). [?]

**ಪಾಡಿ₁** 'ಪಾಟ್₁' ನೋ.

**ಪಾಡಿ₂**, ಪಾಳಿ₁, ವಾಡಿ₁, ಹಾಡಿ, ಹಾಡು₄, ಹಾಡ್ಯ (ನಾ). ೧. ಊರು; ಹಳ್ಳಿ ; ಗ್ರಾಮ : ಶ್ರೀಪುರುಷಮಹಾರಾಜರ್ ಪೃಥುವೀರಾಜ್ಯಗೆಯೆ ಕೊಡಲೂಪ್ಪಾಡಿಒಡೆಯು ನಂದಿ ಕಾದನಾ ಎಱನಾಗನಾ ವ್ಯವಹಾರದನ್ನರಂ ಸಾಲಮಿಲ್ಲಾಪ್ (ಎಕ. X, ಕೋಲಾರ. ೭೨ ; 760) ; ಈ 'ಪಾಡಿ' ಯಿಂದಲೇ 'ಪಟ್ಟಿ' 'ಹಟ್ಟಿ' ಎಂಬುವುಗಳು ಹುಟ್ಟುತ್ತವೆ (ತುಳುನಾ. ೩೦) ; ಕಾಡುಮೇಡುಗಳೂಳಿದು ಪಾಡಿಗಳ ಬಳಿವಿಡಿದು . . . ನಡೆದು (ಕಾಲಊರ. ೧೫೦-೩೩೦). ಈ ಅನೇಕ ಊರುಗಳ ಹೆಸರಿನ ಕೊನೆಯಲ್ಲಿ ಈ ಶಬ್ದ ಉಳಿದುಕೊಂಡಿದೆ. ಉದಾ : ಕನ್ನಂಬಾಡಿ, ಬಾಗೆವಾಡಿ, ಹಾಗಲವಾಡಿ. ೨. ಜಿಲ್ಲೆ; ನಾಡು; ಪ್ರಾಂತ್ಯ : 'ಗಂಗವಾಡಿ' ಪರಾ. ೩. ದನ ಮುಂತಾದುವನ್ನು ಕಟ್ಟುವ ಸ್ಥಳ : ಹಟ್ಟಿ; ಕೊಟ್ಟಿಗೆ : ಕೇಳಿದನು ಕುದುರೆಪಾಡಿಯೊಳಿರ್ದ ನಳ (ತುರಂಗ. ೩೨-೧೨). ೪. ಮನೆಗಳ ಶ್ರೇಣಿ; ಕೇರಿ : ಆತನು ಗೇರು ಬೀಜ ಶೇಖರಿಸುವ ರೀತಿಯೇ ಬೇರೆ. ಪರರ ಪಾಡಿಯಿಂದ ಕದ್ದು ಬೀಜ ತರುವುದಿಲ್ಲ (ಕರಾವ. ೪೨) ; ಗಿರಿಜನರು ಬಿದಿರಿನಿಂದ ಗುಡಿಸಲುಗಳನ್ನು ನಿರ್ಮಿಸಿ ಹುಲ್ಲಿನ ಮಾಡುಗಳನ್ನು ಕಟ್ಟಿ ಅವಲ್ಲಿ ವಾಸಿಸುತ್ತಾರೆ. ಇಂತಹ ಮನೆಗಳ ಗುಂಪಿಗೆ 'ಪಾಡಿ' ಎಂದು ಕರೆಯುತ್ತಾರೆ (ತುಳುನಾ. ೨೨೦). ೫. ಪಡೆ; ದಳ; ಸೈನ್ಯ : ಆನೆ ರಪುಸೇನೆಗೆ ಸಾಲ್ವೆನವುಂಕಿ ಪೇಡಿ ಪಾಡಿ ಗಟ್ಟಿಱವೆಡೆಗ್ಯಯು ಕೈಯುಗುರೆ ಸಾಲದೆ ನಚ್ಚಿನ ಕೈದುವೇಟ್ಟುದೇ (ಕಾವ್ಯಸಾ. ೪೧೧ ಪೂರ್ವಕ) ; ಪೂಡಿದ ಕಣೆ ಕುಣಿವು ತೆಗೆದ ಕೊಮರನ ಬಿಲ್ಲೊಳ್ ಮೂಡಿದುದು ನುಂಗಲಹಿತರ ಪಾಡಿಗಳಂ ಮಸಗಿ ಮಿಟ್ಟು ಬಾಯ್ದುಟಿದ ತೆಱಂ (ಅರ್ಥನೇ. ೬-೪೨) ; ಕೆಟ್ಟೋಡಿ ಪಾಡಿಯೆಲ್ಲಂ ಪಿಟ್ಟುಂಪಿಟ್ಟಾಗಿ ಪೋದೊಡಂ . . . ಈಸನೊರ್ವನೆ ನಿಂದಂ (ಕಬ್ಬಿಗಾ. ೨೯೫) ; ಮನೆಯಲ್ಲೆಡೆಯು ಮಾಡಿದ ನೃಪನ ಪಾಡಿಯು ಪಡಿತಳಿಸಿ ತತ್ಸೈನ್ಯಸಾಗರಕೊಂದು ನಿಮಿಷದಲಿ (ಸಂಭಶ. ೨೬-೧೫). ೬. ಸೈನ್ಯದ ಬೀಡು ; ಪಾಳೆಯಂ : ನೆರೆದನುಬಾಗದಿಂ ಪಡೆಯು ಪಾಡಿಯ ಬೀರರ ಪೆಂಡಿರಟ್ಟಿಱಂ ಪರಸಿಯೊಬಿಲ್ದು ಸೇಸೆಗಳನಿಕ್ಕೆ . . . ಪೊಕ್ಕನಾತ್ಮಮಂದಿರ ಮನುದಾತ್ತಚಿತ್ತನವನೀತಳಪೂಜ್ಯಗುಣಂ ಗುಣಾರ್ಣವಂ (ಸಂಶಖ. ೦೦-೧೨೫). ೭. ಸೇವಕರ ಸಮೂಹ ; ಕೆಲಸಗಾರರ ಗುಂಪು : (*). ೮. ಸೈನಿಕ ; ಯೋಧ : ಹಡಪದ ಹುಡುಗ ಸತ್ತಿಗೆಯೊಳು ಬಲ್ಲೆಹವಿಡಿದ ಪಾಡಿಗಳೊಡಬರಲು ಪಡಿಗುದುರೆಯ ರಾವುತರು ಪೊಳಲ ಪೊಱಮಡುತಿರ್ದರು (ಶ್ರೀಪಾಲ. ೦೩-೬೬). **ಪಾಳಿ₁** : ೫. ತುಂಬಿ ಪೊಸ ದಾವರೆ ಮಲ್ಲಿಗೆಯೆಂಬಿವಾಂತರಂ ದೆಸೆಪಲಿಗೆಯ್ವ ಪಾಳಿ (ಕಬ್ಬಿಗಾ. ೧೭೪). **ವಾಡಿ₁** : ೧. ಊರು, ಕೇರಿ. . .ವಾಡ, ವಾಡಿ. . .ಕೋಟೆ (ಕಂಪುಹು. ೭೯). ೨. 'ವಾಡಿ' ಪದಕ್ಕೆ ಇರುವ ದನಗಳ ಹಟ್ಟಿ ಎಂಬ ಅರ್ಥವು ಉತ್ತರ ಹಿಂದುಸ್ತಾನದ ಪ್ರಾಚೀನಗ್ರಂಥದಲ್ಲಿ ದೊರೆಯುತ್ತಿದ್ದುದನ್ನು ಹೇಳಿದ್ದಾಗಿದೆ (ಕರ್ನಾಟಿ. ೯೩). ೯. ಬೇಲಿಯಿಂದಾವೃತವಾದ ಹಂಲ್ಲಂಗಾವಲು, ತೋಟ ಮುಂತಾದುವು: (*). ೧೦. ನಗರದ ಬಡಾವಣೆ; ಉಪನಗರ : (*). ೧೧. (?) : ಜಿನಚಂದ್ರಮುನೀಂದ್ರರ ಪಾದಮೂಲದೊಳ್ಪಿನಮಿತ ರಾಗಿ ಕೊಂಡು ಕೊನೆವರ್ ಸಲೆ ಮಾಣಿಯು ಪಾಡಿಯೊಳ್ ಮಹಾವನಿಪರ್ (ಶಾಂತಿಪು. ೧-೩೩). **ಹಾಡಿ** : ೧. ಕೂಲಿ ಆಳುಗಳು ರೈಟರಿಗೆ ತಮ್ಮ ಹೆಸರುಗಳನ್ನು ಕೊಟ್ಟು ತಾವು ವಾಸ ಮಾಡುವ ಹಾಡಿಗಳಿಗೆ ತೆರಳಿದರು (ಸಶಪೀ. ೨೦). 'ಹಾಡಿಹಕ್ಕಲು' ಪರಾ. ೪. ಪಣೆಯುರ ಹಾಡಿಯಲ್ಲಿ ಕೊಳುಂಬನ ಮನವನ್ನು ಸೆಳೆದ ಚೆಲುವೆಯ ಹೆಸರು ದೇಚು (೧೦೩. ೦). **ಹಾಡು₄** : ೧. ಮತ್ತಪವರೊಳಗೆ ಕರುವರ ಕಲ್ಲಣಂ ಹಂದಿಗೆಯ್ಯ ಸ್ಥಳಂ ತಂನ ವೀಸಂ ಕಾಣಿಯು ಬಳದೊಳಗೆ ಬಡಗಣ ಮೆಂದಲ ಹಾಡಿನಲಾ ಹಚ್ಚೇಶ್ವರದೇವರ ದೇವಕಾರ್ಯಕ್ಕೆ ಬಿಟ್ಟ ಎರೆಯು ಮತ್ತರೊಂದು (ಕಇ. I. ೨೫-೮೩ ; 1130). **ಹಾಡ್ಯ** : ೧೨. ಹುಲ್ಲು, ಸೌದೆ ಮುಂತಾದುವು ದೊರೆಯುವ ಸಣ್ಣ ಕಾಡು : ಬೈಸಿಕಲ್ಲನ್ನು ಮೋಹನನ ಮನೆಯ ಹಿಂದುಗಡೆ ಹಾಡ್ಯದಲ್ಲಿಟ್ಟು . . .

ನಿಂತು ನೋಡುತ್ತಿದ್ದನು (ಶಂಖಶಂ. ೧೨೫); ಆದರ ಒತ್ತಿಗೆ ಬ್ಯಾಣದ ಹಕ್ಕಲು, ಅದರಾಚೆಗೆ ಸೊಪ್ಪಿನ ಹಾಡ್ಯ ಕಣ್ಣೊಬ್ಬಲವಾಗಿತ್ತು (ಮಲೆಮ. ೧೩೩). ಹಾಡ್ಯ–ಹುಲ್ಲುಸಾದೆಯು ಕುರುಚುಕಾಡು (ನವ್ಯಸು. ೨೪೭); ಅಲ್ಲಿಂದ ಗದ್ದೆ, ಹಾಡ್ಯ, ಹಕ್ಕಲು, ಒಡ್ಡು ಇತ್ಯಾದಿಗಳನ್ನು ಸುತ್ತಿ ನೋಡಿಕೊಂಡು ಮನೆಗೆ ಹಿಂದಿರುಗುವಾಗ ಕಪ್ಪು ಕವಿದಿತ್ತು (ಗಂಗಾಳ. ೧೪).

[ದೇ. ॥ ತಮಿ. ಪಾಟ; ಮಲ. ಪಾಡಿ; ತುಳು. ಪಾಡಿ, ಹಾಡಿ; ತೆಲು. ಪಾಡು; ಕೊಡ. ಪಡಿ=ಕುರುಬರ ಹಟ್ಟಿ, –ಗುಡಿಸಲು./ಮರಾ. ಪಾಡಾ, ಪಾಡೀ./ಪ್ರಾ. ವಾಡಿ, ವಾಡೀ./ಸಂ. ವಾಟೀ]

**ಪಾಡಿ₃** ' ಪಹಡಿ ' ನೋ.

**ಪಾಡಿ₄** (ನಾ). ಒಂದು ಬಗೆಯ ಬಲೆ: ಉರುಳು ಪಾಡಿ ಸಿಡಿ ಸೆಳೆ ಗಾಣ ಬೆಳ್ಳಾರ ತಡಿಕೆ ದೀವದ ಖಗಮೃಗಸಂತತಿಗೂಡಿ ನಡೆತಂದನಾ ಪನ ಚರನು (ವೀಬಸಂ. ೨-೫೮). ' ಪಾಜ್ಜಿ₂' ಪರಾ. [?]

**ಪಾಡಿಗ್ಯೆ?** (ಕ್ರಿ). ಮಲಗು; ಒರಗು (?): ಕಳಚಿ ನೊಗನನು ತೆಗೆದು ಕಬ್ಬಿಯನಿಳುಹಿ ಪಡಿವಾಘೆಗಳ ಸರಿದನುಕೊಳಿಸಿ ಹಿಡಿಯಲು ಪಾಡಿಗ್ಯೆದವು ಮರಳಿದೆಡಬಲಕೆ (ಕುಮಾ.ದ್ರೋ. ೧೦-೫೩); ಅಳಿದವೈನೂಱಾನೆ ಮಗ್ಗುಲ ನೆಲಕೆ ಕೀಲಿಸಿ ಪಾಡಿಗ್ಯೆದವು ಬಲುಗುದುರೆ ಹದಿನೈದುಸಾವಿರವೇಳುನೂಱುರಥ ಮಲಗಿದವು (ಕುಮಾ.ದ್ರೋ. ೧೪-೭). [ಪಾಡಿ ? + ಗ್ಯೆ (<ಕೆಯ್₁)]

**ಪಾಡಿತನ** (ನಾ). ಒಂದು ಬಗೆಯ ಊಳಿಗ,—ಸೇವೆ (?): ಭಕ್ತರ ಮಂದಿರಕ್ಕೆ ಹೂಕಾಯಿ ಹಣ್ಣು ಹುಲ್ಲ ಹೊಱೆ ಕಟ್ಟಿಗೆ ಬೊಕ್ಕಸ ಪಹರಿ ಪಾಡಿತನ ಬಾಗಿಲು ಮುಂತಾಗಿ ಶುಶ್ರೂಷೆಯ ಮಾಡಿ ಉಂಬಾಗ . . . ತುಡುಗುಣಿಗೆಲ್ಲಿಯದೋ ನಿಜಜಂಗಮಸ್ಥಲ (ಪ್ರೋಲಿಮಾ. ೪೩–೧೮೦).

[ಪಾಡಿ ? + —ತನ]

**ಪಾಡಿಯ** ' ಪಾಡಿವ ' ನೋ.

**ಪಾಡಿರಾವುತ** (ನಾ). ಸರಿಸಮಾನವಾದ ರಾವುತ: ಓಡಿದ ಕುದುರೆಯ ನೇಱುತ ಪಾ [ಪಾಠಾಂ. ಪ] ಡಿರಾವುತರೆಡಬಲದೊಳಗ್ಯೆನೂಱು ಬಿಡದೆ ಮೆಱೆಯೆ . . . ಪಡೆಗಿದಿರಾಗಿ ಮಲೆತನು (ಕುರಾಶಾಂ. ೧೪-೧೦೮).

[ಪಾಡಿ₁ (<ಪಾಟ್ಟಿ₂) + ರಾವುತ]

**ಪಾಡಿವ, ಪಾಡಿಯ, ಪಾಡ್ಯ** (ನಾ). ಪಕ್ಷದ ಮೊದಲನೆಯ ತಿಥಿ; ಪ್ರತಿಪದೆ: " ಪ್ರತಿಪತ್ ಪಕ್ಷತಿ ನಾಮದ್ವಿತಯಂ ಪಾಡಿವಂ " (ವಸ್ತುಕೋ. ೦೭-೭); ಚೈತ್ರಮಾಸ ಸುದ್ಧಪಕ್ಷದ ಪಾಡಿವದ ಬುಧವಾರಂ . . . ಈಶ್ವರಯ್ಯಗೆ ಕೊಟ್ಟರ್ (ಎಕ. VIII, ಸೊರಬ. ೭೦-೫; 938); ಪಾಡಿವದೆಳವೆಱೆ ಪುಣ್ಣಮಿವರೆಗಂ ರೂಡಿಸಿ ದಿನದಿನದಪ್ಪದೆ ಕಲೆಯೊಳ್ ಕೂಡಿ ಬಳೆದು ಕುವಲಯಕತ್ಯಾನಂದಮನೀವಂದದೊಳು (ಜಯಕಾ. ೨-೬೩); ಪಾಡಿವದ ಶಶಿಯ ಮೂಡಿದುದನಾರ್ ಕಂಡರಾ ಇರುಳ್ ? (ಶ್ರೀರಾಮಾ. ೬೩೨-೮೩). **ಪಾಡಿಯ:** ನಾಡಿಯಱುವತ್ತಕ್ಕೆ ಒಂದು ತಿಥಿಯಕ್ಕದಕೆ ಪಾಡಿಯ[ಪಾಠಾಂ. ವ]ಮೊದಲು ಪೌರ್ಣಮಿಯದಮಾವಾಸ್ಯೆ ಕಡೆ (ಮಂಗರಾ. ೨೦-೯). **ಪಾಡ್ಯ:** "ಪ್ರತಿಪತ್ತಿಂಗೆ ಪಾಡ್ಯಮೆಂದವತರಿಕು" (ಕಬ್ಬಮಂ. ೨೦); ಅಶುಭ ಷಷ್ಠಿ ಅಷ್ಟಮಿ ನವಮಿ ಪಾಡ್ಯ (ಗಗಶಾ. ೪-೬೬); ಪಾಡ್ಯ ಪಾಠಕ್ಕಾಗದು, ಪೌರ್ಣ್ಯ ಕೆಲಸಕ್ಕಾಗದು (ಗಾದೆ).

[<ಪ್ರಾ. ಪಾಡಿವಯಾ. / ಸಂ. ಪ್ರತಿಪದ್]

**ಪಾಡಿಸು, ಹಾಡಿಸು** (ಕ್ರಿ). ೧. ಹಾಡುವಂತೆ ಮಾಡು; ಹಾಡು ಹೇಳಿಸು; ಗಾಯನ ಮಾಡಿಸು: " ಪಾಡಿಸು—ಗಾಯನೇ " (ಶಮಧಾ); ಬದ್ದವಣಮುಮಂ ಬಾಜಿಸಿ ಮಂಗಳಮುಮಂ ಪಾಡಿಸಿ (ಪಂಪಭಾ. ೧-೧೩೩ ವ); ಸಕಲಲೋಕಗಳಂ ಹೆತ್ತ ಮುತ್ತೈದೆ ಬಾಲಕತನದ ನಟನೆಯಂ ನೋಡಿ . . . ತೊಟ್ಟಿಲೊಳು ಪಟ್ಟಿರಿಸಿ ಜೋಗುಳಂ ಪಾಡಿಸಿದಳು (ಸಿದ್ಧರಾ. ೧-೫೮); ಪಾಡಿಸುತುಂ ಪೆಸರ್ವಡೆದ ಗಾಣರಿಂ (ಕಬ್ಬಿಕಾ. ೨೪೦). ೨. ಬಿರುದಾವಳಿ, ಗುಣಾತಿಶಯ ಮೊದಲಾದುವುಗಳನ್ನು ಹೊಗಳಿ ಹೇಳಿಸು; ಸ್ತುತಿ ಮಾಡಿಸು: ಪೆಸರೆಸೆಯೆ ಬೀರಮಂ ಪಾಡಿಸಿಯುಂ ಪೊಗೞಿಸಿಯುಮುರ್ಕಿ ಬಿಬ್ಬಾಹವದೊಳ್ ಕುಸಿದು ಪೆಱಪಿಂಗಿ ಪೇೞರ್ ಮಾನಸರೇನಿನ್ನೂಱು ವರ್ಷಮಂ ಬಟ್ಟಪರೇ (ಪಂಪಭಾ.೧೨ ೧೬೬); ಪೊಱಮಟ್ಟಂ ಲಲಿತಾಂಗನೆಂದೊಡಮವರ್ . . . ಭೀತಿಯಿಂ ಬೀರಮಂ ಮಱೆದುಂ ಪಾಡಿಸಲಣ್ಮರ್ (ಧರ್ಮಾಮೃ. ೨-೬೬); ಗಮಕಿತ್ವದ ವಾಗ್ಮಿವೃಂದದೊಳ್ ಲೀಲೆ ಮಿಗಲ್ಕೆ ಪಾಡಿಸುತಮಾಡಿಸುತುಂ (ಸಂಬರ. ೧೦ ಸೂಚನೆ). **ಹಾಡಿಸು:** ೧. ಹಾಡಿಸ ಬೇಡ ನಾನಾವಾದ್ಯವ ದನಿಮಾಡಿಸಬೇಡ . . . ಸ್ವಸ್ಥದಿ ನಿದ್ದೆಗೆಯ್ವುದು (ಮೋಹತ. ೨೭-೩೭); ಚಿಕ್ಕಪ್ಪನಿಗೆ ಹುಡುಗಿಯ ಬಾಯಿಂದ ಮತ್ತೊಂದು ಹಾಡನ್ನು ಹಾಡಿಸಬೇಕೆಂದು ಆಶೆಯುಂಟಾಗಿರಬಹುದು (ಜನಪ. ೧೨೫).

[ಪಾಡು₁ + —ಇಸು₁]

**ಪಾಡಿಱಿಸು** (ಕ್ರಿ). ಬಲುಗುಂದಿಸು; ಸೋಲಿಸು: ಇದಿರಾಂಪರೆಲ್ಲವನ ಸಱಿದು ಪಾಡಿಱಿಸಿ ಬಸವಱಿಸದೀ ಚೆಲ್ವೆಯರದೇಂ ನಿಲ್ವರೇ (ಚಿಕ್ಕ. ೬-೧೫೪). [ಪಾಡು₃ + ಇಱಿಸು]

**ಪಾಡು₁, ಹಾಡು₁** (ಕ್ರಿ). ೧. ಗಾಯನ ಮಾಡು; ರಾಗಬದ್ಧವಾಗಿ ಗೀತೆಯನ್ನು ಹೇಳು; ಸಂಗೀತ ಹೇಳು: ಲೋಗರ್ ಪಗರಣಿಗರಾಗಿ ಎನಿತಾನುಂ ತೆಱದ ರೂಪುಗಳಂ ಕೈಕೊಂಡು ಮುಖಮೊಗಂಗಳನಿಟ್ಟು ಬಂದು ಮುಂದೆ ಆಡಿಯುಂ ಪಾಡಿಯುಂ ನಗಿಸಿಯುಮೆಂತುಮಱಿಕ್ಕೆ ಮಾಣ್ಗಿದಿರ್ದೊಡೆ (ವಡ್ಡಾರಾ. ೧೧೪-೧೫); ಎರಲೆಗೆ ಪಾಡುವ ಗೋರಿಯನರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ (ಆದಿಪು. ೧೪-೮೦); ರಸವೊಸರ್ವಂತು ಪಾಡುತಿರೆ ಶುದ್ಧಮನೋಮಣಿದೀಪ್ತಿ ಪೊಣ್ಮೆ ರಾಜಿಸಿದಪುದೋ (ಕಾದಂಪೂ. ೬೬೩); ಸಕಲುರಾಗಂಗಳಿಂದೊಸೆದು ತುಂಬುರ ನಾರದರ್ ಪಾಡುತಿರ್ಪ ರೊಂದೆಸೆಯೊಳತಿವಿಭವದಿಂದೆ (ಕಬಪು. ೨-೨೮). ೨. ಮಧುರವಾಗಿ ಧ್ವನಿಮಾಡು; ಗುಂಜಾರವ ಮಾಡು: ಕುಕಿಲ್ವ ಕೋಗಿಲೆಯ ಪಾಡುವ ತುಂಬಿಯ ನಲ್ಲರೊಳ್ಗೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರ ನೋೞ್ಪೊಡಾವ ಬೆಟ್ಟುಗಳೊಳವಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಪಂಪಭಾ. ೪-೨೮); ಪಾಡುವ ತುಂಬಿಯಿಂ ಕುಕಿಲ್ವ ಕೋಗಿಲೆಯಿಂ ಕಡುರಮ್ಯಮಾಗಿರಲ್ (ಧರ್ಮಾಮೃ. ೨-೧೪೪); ಗಿಳಿ ಯೋದಿದಪುದು . . . ಅಳಿ ಪಾಡಿದಪುದು (ಶಬ್ದಾಮ. ೪೫೪ ಪ್ರಯೋ). ೩. ಹೊಗಳು; ಕೀರ್ತಿಸು: ಪಾಡುವರು ಕೆಲರಲ್ಲಿ ಹರಿಯನು ನೋಡುವರು ನಿಜದೃಷ್ಟಿ ದಣಿಯಲು ಆಡುವರು ತಮ್ಮಿಂದ ಪುಣ್ಯರದಾರು ಲೋಕದಲಿ (ಕೌಶರಾ. ೪೪-೧೩); ಭೂತಗಣ ಕರತಾಳದಲಿ ಕುಣಿದಾಡುತಿರ್ದವು ಪಾಡುತವನಿಪನ (ತೊರರಾ. ೩-೬-೧೩); ಕಂದರ್ಪತನಯನ ಕಡಿದಾಡಿ ತೆಗೆತಂದ ಮಂದರಧರನ ಪಾಡಿದರು (ಮೋಹತ. ೪೨-೪೭). **ಹಾಡು₁:** ೧. " ಗಾಯತೇ-ಹಾಡಿದಪಂ " (ಕಾಶಕ್ಕ. ೧೨೮); ಎನ್ನ ಕಾಯವ ದಂಡಿಗೆಯ ಮಾಡಯ್ಯಾ . . . ಬತ್ತೀಸರಾಗವ ಹಾಡಯ್ಯಾ (ಬಸವ. ೫೦೦); ಓತು ಕೊಂಡಾಡುತಂ ಹಾ[ಪಾಠಾಂ. ಆ]ಡುತಂ ಹರಸುತಂ (ಬಸರ. ೭-೮೨). ೨. ಕೈವಿಡಿದು ಕುಣಿವುತ ತಣಿವುತಂ ಬೊಬ್ಬಿಡುತ ಹಾಱುತ ಚಪ್ಪಳಿಕ್ಕುತ ಹಾ[ಪಾಠಾಂ. ಪಾ]ಡುತಾಡುತ್ತ (ಬಸಪು. ೫೯–೨೪). ೩. ತಮ್ಮಂಗದ ಮೇಲೆ ಲಿಂಗವಿರಲು ಅನ್ಯರನೆ ಹಾಡಿ ಅನ್ಯರನೆ ಹೊಗಳಿ ಅನ್ಯರ ವಚನವ ಕೊಂಡಾಡಲು ಕರ್ಮ ಬಿಡದು (ಬಸವ. ೦೦೭); ಎನ್ನನಲ್ಲದೆ ಬೇಡನೆನ್ನನಲ್ಲದೆ ನೋಡನೆನ್ನನಲ್ಲದೆ ಹಾಡನು (ಕನ್ನ.ರ. ದೇ. ೦೪೪-೦೦); ನೋಡಿ ದಣಿಯನು ಬಿರುದ ಹೊಗಳಿಸಿ ಹಾಡಿ ದಣಿಯನು ನಿಚ್ಚಲುಚಿತವ ಮಾಡಿ ತಣಿಯನು ಮಾನನಿಧಿಯನದೆಂತು ಮಱೆದಪೆನು ಕಾಡಲಾಗದು ಕೃಷ್ಣ ಖಾತಿಯ ಮಾಡಲಾಗದು ಬಂದೆನಾದೊಡೆ ರೂಢಿ ಮೆಚ್ಚದು ಕೌರವನ ಹಗೆ ಹರಿಬ ತನಗೆ (ಕುಮಾಉ. ೧೦-೧೮).

**ಹಾಡಿ ಹರಸು** = ಹೊಗಳಿ ಆಶೀರ್ವದಿಸು.—ಹರಸು : ಮದನ ಹರನರಸಿ ಬಿಜಯಂಗೈದು . . . ಸಿದ್ಧರಾಮಯ್ಯನೆಂದು ಹೆಸರಿಟ್ಟಾಡಿ ಹಾಡಿ ಹರಸಿದಳು (ಸಿದ್ಧರಾ. ೨-೭) ; ಅಂದು ಸುಜನಸ್ತೋಮ ಪಾಂಡುವ ನಂದನರ ನೆಟಿ ಹಾಡಿ ಹರಸುತಲಿ (ಸಂಭಪ. ೧೫ ೧೦೫) ; ಜನತೆ . . . ಶಿಶುವಿಗೆ 'ಶ್ರೀನಿವಾಸ'ನೆಂದು ಹೆಸರಿಟ್ಟು ಹಾಡಿ ಹರಸಿತು (ಹೇಮಕೂ. ೭). [ದೇ.॥ ತಮಿ. ಮಲ. ಪಾಟು ; ತೆಲು. ಪಾಡು ; ಕೋಲಾ. ಪಡ್ ; ನಾಯ್ಕಿ. ಗಡಬ. ಪಾರ್ ; ಪರ್ಜಿ. ಪಾಡ್ ; ಗೊಂಡಿ. ಪಾರಾನಾ ; ಕುವಿ. ಪಾಟ್‌ಲಿ ; ಕುರುಖ್. ಪಾರ್ನಾ ; ಮಲ್ತೊ. ಪರೆ]

**ಪಾಡು$_2$**, ಹಾಡು$_2$ (ನಾ). ೧. ಗೀತ : "ಗೀತಮೆನೆ ಗಾನಮೆನೆ ಪಾಡೆ ನಿಕ್ಕಂ" (ಶಬ್ದಮಣಿ. ೨೩-೨) ; ಛಂದಮನಱಿಯದನೋದುಂ ಮುಂದಿರ್ದಾ ತಾಳದಳವನಱಿಯದ ಪಾಡುಂ ಬಂದುದ ಕೆಡೆವನ ನುಡಿಯುಂ ಒಂದರ್ಕಂ ಬಾರ್ತೆಯಿಲ್ಲ (ಛಂದೋಂಬು. ೧-೪೯ ಅಡಿಟಿ) ; ಪಾಡಿನೋಜೆಯುಂ ಗಡಣಿಸು ತುಂಬಿ (ಕಬ್ಬಿಗಕಾ. ೧೨೭) ; ಅಂತದು ಪಾಡಿನ ಜೋಡಿನ ದಾಟಯ್ಯಸೆ (ರಾಮಾಶ್ವ. ೮೮-೧೨). ೨. [ಕಾವ್ಯವಿಜ್ಞಾ] ಒಂದು ಬಗೆಯ ಕಾವ್ಯಪ್ರಬಂಧ ; ೯ ಹದಿನೈದು ಅಥವಾ ಇಪ್ಪತ್ತೈದು ಭಾಗಗಳು ಪ್ರಬಂಧದ ಅಂಗವಾಗಿ ಹೊಂದಿಕೊಂಡಿರುವುದು: ಪದಿನಯ್ದುಮಿರ್ಪತ್ತಯ್ದುಂ ಪದಂ ಯಥಾಸಂಭವಂ ಪ್ರಬಂಧನ ಮೆಯ್ಯೊಳ್ ಪುದಿದೊದವಿ ನೆಗಟ್ದುಡಂತದು ಸದಲಂಕಾರಂ ರಸಾಸ್ಪದಂ ಪಾಡಕ್ಕುಂ (ಕಾವ್ಯಾವ. ೯೫೩). 'ಪಾಡುಗಬ್ಬ' ಪರಾ. **ಹಾಡು$_2$** : ೧. "ಗೀತಂ, ಗಾನಂ . . . ಈ ೨ ಹಾಡಿನ ಪೆಸರ್" (ಹಲಾಯು. ೧೭-೯೩) ; ಕೊಂಡಾಡಲು ಜಿಹ್ವೆ ಪವಿತ್ರ ಹಾಡ ಕೇಳಲು ಕರ್ಣದೊಳಿರ್ದ ಪಾತ್ರಕ ವೋಡುವುದಿಳೆಯ ಜೀವರಿಗೆ (ಮೋಹತ. ೪೧-೧೭) ; ಹೊಸಬಾಳಿನ ಬೆಡಗು ಸಾಕು — ಬೆಳಕು ಬೇಕು ಹಾಡಿಗೆ (ಅರಳು. ೩೫೧-೧೧). [<ಪಾಡು$_1$]

**ಪಾಡು$_3$**, ಪಾಟು$_1$, ಹಾಡು$_3$ (ನಾ). ೧. ರೀತಿ ; ಬಗೆ : "ಪಾಡೆನೆ ರೀತಿಯಕ್ಕು" (ಕಶರ. ೧೨೭) ; ಸ್ಥಳವೆ ಜಲರೂಪದಲಿ ಜಲವೇ ಸ್ಥಳದ ಪಾಡಿನಲ್ಲಿದ್ದುದದು (ಕುವ್ಯಾಸ. ೧೨-೩೭) ; ಗೆಳೆಯಂದಿರ ಪಾಡೆಲ್ಲಾ ಒಂದೇ (ಕಿರಾತ. ೨). ೨. ಸ್ಥಿತಿ ; ಅವಸ್ಥೆ ; ಗತಿ : ಸುರರೊಳಗೆ ಸಿತಗರ ಸೀಳುವೆನು ಮಾನವರ ಪಾಡೇನು (ಕುವ್ಯಾದ್ರೋ. ೧೭-೩೨) ; ನನ್ನ ಮನಸ್ಸಿನ ಪಾಡು ವಿಪರೀತವಾಗಿತ್ತು (ಅಂಹೂ. ೧೧). ೩. ತನಗೆ ಮಾತ್ರ ಸಂಬಂಧಪಟ್ಟಿರುವ ಸ್ಥಿತಿ : ಅವರಿಗೆ ಕೊಟ್ಟು ಬಿಟ್ಟರೆ ತಮ್ಮ ಪಾಡಿಗೆ ಹೊರಟು ಹೋಗುತ್ತಾರೆ (ಶ್ರಕಾಪ. ೪೭) ; ಆ ಹುಡುಗ ಬೇರೆಯವರ ತಂಟೆಗೆ ಬಾರದೆ ತನ್ನ ಪಾಡಿಗೆ ಓದಿಕೊಂಡಿದ್ದಾನೆ (ರೂಢಿ). ೪. ಕ್ಷೇಮ ; ಸುರಕ್ಷಿತತೆ ; ಸುಸ್ಥಿತಿ : ಪಾಡು ತಪ್ಪಿದ ಬಳಿಕ ವಿನಯವ ಮಾಡಿ ಮೆಱೆವುದು (ಕುವ್ಯಾದ್ರೋ. ೧-೯) ; ಸರಿವುದೇ ಪಾಡೆನುತ . . . ಸಂವರಿಸಿಕೊಳುತಡರಿದನು ತನ್ನಯ ತೇರ ತವಕದಲಿ (ತೊರರಾ. ೩-೨೩-೨೯). ೫. ಕಷ್ಟ ; ತೊಂದರೆ ; ದುಸ್ಥಿತಿ : ಗರುಡಿಗಳಿಹ ವದೞೊಳಗೆ ಬಿರುದಿನ ಬಂಟರ್ಗೆ ಬಿಡದೆ ಪಾಡುಗಳನು ಬರಿಸುವಭ್ಯಾಸಿಗಳಿಹರು ; (ಕುರಾಸಾಂ. ೪-೭೭) ; ಒಡಲ ದಂಡಿಸುವಾಯಸವಿಲ್ಲ ಪಣವ ವೆಚ್ಚಿಸುವ ಪಾಡಿಲ್ಲ ಗುಣವಂತೆಯರೆಸಗುವ ಪತಿಶುಶ್ರೂಷೆಗೆಣೆಯುಹ ತಪವಿನ್ನೊಳವೆ (ಹಂಪಿ. ೨-೨೨) ; ನಾವು ಅನುಭವಿಸ್ತಿರೋ ಪಾಡು ಅರ್ಥವಾಗಿದೇಂತ ತೋರುತ್ತೆ (ರಂಗವ. ೧೨೦). ೬. ಪಂತ ; ಪ್ರತಿಜ್ಞೆ : "ಪಾಡೆನೆ ಪಂಥಂ" (ಶಾರಪ. ೫) ; ತನಗೆ ಮಾತಿನ ಪಾಡು ಬಿದ್ದುದು ವಿತಥವಾಣಿಯನಾಡಲಾಱೆನು (ಸಂಭಪ. ಶಾಂ. ೩೦೭-೨೦). ೭. ಪೆಂಪು ; ಮಹಿಮೆ : ಪಾಡುಳ್ಳ ಪರಮಸದ್ಭಕ್ತಿಯೋಳೇಳು (ಪಪಮೋ. ೩೩-೩೮). ೮. ಸಮಾನ ; ಸಾಟಿ : "ಪಾಡೆನೆ ಸದೃಶಮುಮಕ್ಕುಂ" (ಶಾರಪ. ೩೯) ; ವಿರಿಂಚನ ಪಾಡು ಶಕ್ರನ ಸರಿಸದವರಿಗೆ ಭಂಗವೀ ವಿಧಿ (ಕುವ್ಯಾಸ. ೦೭-೭೯) ; ಆ ಪರಿಹರಬ್ರಹ್ಮಾಮರೇಂದ್ರರು ಪಾಡೆ ನಿನಗೆ (ತೊರರಾ. ೧-೫-೯) ; ಗಾಡಿಯೊಳಿಂದ್ರನ ನಗುವ ಚಕ್ರಿಗೆ ಶಚಿ ಪಾಡಲ್ಲವೆಂಬೆನ್ನ ಮಗಳಾ ಜೋಡಿಸಲೊಲ್ಲೆಯು (ಶರಶ. ೩೭-೫೩) ; ಈ ವೀರರೊಳಗೆ ಒಬ್ಬನೂ ನನಗೆ ಪಾಡಲ್ಲ (ಬದುಕಿ. ೧೪೧). ೯. ಸರಿಯಾದುದು ; ಯೋಗ್ಯವಾದುದು ; ಉಚಿತವಾದುದು : ಓಡುಗೆಯ್ಯನ ಶಕುತಿಯೊಳವರಿರುವನ್ನ ಪಾಡೆಂಬುದೆನಗೆ ಕಾಣಿಸಿತು (ಮೋಹತ. ೩೭-೫೩) ; ಇನ್ನಿಲ್ಲಿ ಕವಿಯು ವಂಶದ ಹೊಲಬನ್ನು ಒಂದಿಷ್ಟಾದರೂ ಹೇಳದೆ ಹರಿವುದು ಪಾಡಲ್ಲ (ಪಾಕೋಜ. ೭೨) ; ಜಗತ್ತು ಪಾಡಾದರ ನಾವೂ ಪಾಡು (ಹೊಸಂಸಾ. ೭). ೧೦. ಹಣ್ಣಿಗೆ ಬರುತ್ತಿರುವ ಕಾಯಿ ; ಪಕ್ವವಾಗುತ್ತಿರುವ ಕಾಯಿ ; ದೋರೆಗಾಯಿ : ಉಚ್ಚತರಶಾಖಾಗ್ರಮಂ ಪತ್ತಿ ಪಾಡುಗಳನಾಯ್ದುತಿಹ ಪುಡುಗರುಗಳಂ ಅಚ್ಚಿಗಳಿನೀಕ್ಷಿಸುತ್ತಂ (ಮಹಾಪಿ. ೫-೭) ; ಇಂದಿನದು ತುಸು ಪಾಡು ನಾಳೆ ಹಣ್ಣಾದಾಗ ಬಂದೀತು ಹಾಡು (ಅರಳು. ೩೫೨-೧೮). **ಪಾಟು$_1$** : ೧. ಉಂಟು ನೀನುಲಿವಾಕು ಯಮ ಕೈಭಂಟಿಕೆಯ ನೀನರಿಯೆ ಪೂರ್ವನು ಜಂಟಿಸಿದರನುಭವಗಳಲ್ಲದೆ ಬಿದ್ದ ಪಾಟುಗಳಾ ತುಂಟ ಬಲ್ಲನೆ (ಶರಾಮಾ. ೪೯೫-೪೭). 'ಪಾಟುಗೆಡು' ಪರಾ. ೨. 'ಪರಿಪಾಟು$_1$' ಪರಾ. ೫. ವಾಗ್ಬ್ರಹ್ಮಿಗಳೆಲ್ಲರು ಪಡುವ ಪಾಟ ನೋಡಿ ನಮ್ಮ ಭಕ್ತರು. . ಅನಿಷ್ಟವ ಪರಿಹರಿಸಿದರು (ಪಪಶಾ. II. ೨೫೫-೪) ; ಪಡದ ಪಾಟುಗಳಿಂದ ಪಡೆವುದವನ ಕೈವಿಡಿದ ಪೂಚೆಂಡ ಪೆರ್ಮೆಯೊಳ್ ಮುಡಿಗೆ ಕಣ್ಗಳಿಗೊತ್ತಿ ಮುಂಡಾಡಿ ಮನೆಗುಯ್ದು ಪೊಡಮಟ್ಟು ನಲಿದು ಪೂಜಿಪುದು (ಶಕಪಿ. ೬-೦೫೭). ೧೧. (ಸಮುದ್ರದಲ್ಲಿ) ತೆರೆಗಳ ಇಳಿತ : (ಕ). **ಹಾಡು$_3$** : ೨. ಒಣಹೆಮ್ಮಗೆ ಹೋದರೆ ಈ ಹಾಡು ಆಗುವುದು (ಮುಂಬಯು. ೨-೦೯). ೫. ಆರ್ಯಾವರ್ತದ ಜನರಿಗಾದ ಹಾಡೇ ನಮಗೂ ಉಂಟಾಗುವುದರಲ್ಲಿ ಸಂದೇಹವಿಲ್ಲ (ಕಸಿಂಹಾ. ೨೩).

**ಪಾಡ ಚಾಕರಿ** = ಕಷ್ಟದ ಕೆಲಸ: ಆ ಪಾಟ ಪಾಡ ಚಾಕರಿ ಅವನಂಥ ಭೋಳೆಯಲ್ಲದೆ ಇನ್ನಾರು ಮಾಡಬೇಕು ? (ಹೊಸಕ್ಷಿ. ೨೯). **ಪಾಡಾಗಿ** = ಚೆನ್ನಾಗಿ ; ಸರಿಯಾಗಿ : ಎರಡುದಿನದಿಂದ ಮಯ್ಯಾಗೆ ಯಾಕೋ ಪಾಡಾಗಿಲ್ಲ (ಕೆಳುವು. ೧೯) ; ಈ ಗಿಳಿ ಪಾಡಾಗಿ ನೋಡಿಕೋರಿ (ಕರಿಹಾ. ೮). **ಪಾಡಾಗು**, **ಹಾಡಾಗು** = ೧. ಚೆನ್ನಾಗು ; ಸರಿಯಾಗು : ಇನ್ನೂ ಎಂಟು ದಿನ ಬಿಟ್ಟು ಮನೆಗೆ ಬಂದಿದ್ದರೆ ಪಾಡಾಗುತ್ತಿತ್ತು (ಸುಪಸಂ. ೩೮). ೨. ಹಣ್ಣಿನ ಹದಕ್ಕೆ ಬರು ; ದೋರೆಯಾಗು : ಕಾಯಿಗಳು ಪಾಡಾಗಿ ಬೀಳಹತ್ತಿದ ಬಳಿಕ ಅವುಗಳನ್ನು ಇಳಿಸಿ ಎಂಟು ಹತ್ತು ದಿನ ಒತ್ತಿಗೆ ಹಾಕುತ್ತಾರೆ (ಮುಂಬಯು. ೨-೬೨) ; ಅರಳಿದ ಕೆಲವು ಹೂಗಳೂ ಪಾಡಾದ ಕಾಯಿಗಳೂ ಕೆಳಗೆ ಬಿದ್ದಿದ್ದವು (ಕಸಿಂಹಾ. ೬೬). ೩. ಅವಕಾಶವಾಗು ; ಇಂಬಾಗು : ಗಾಡಿಗೆ ಪಾಡಾದ ಪಸದನಕ್ಕಂ ತೇಜಕ್ಕೋಜಾದ ಕಾಂತಿಗಂ ಬೆಡಂಗಿಂಗೆ ಪಾಂಗಾದ ದೇಸಿಗಂ ಮಾಸರಿಕೆಗೆಕ್ಕಲಾವಣಮಾದ ಸೌಷ್ಠವಕ್ಕಂ . . . ಸೌಂದರ್ಯಕ್ಕೆ ನೆಲೆಯಾದಂದಕ್ಕಂ ಬೆಕ್ಕಸಂಬಟ್ಟು (ಕಾಂತಿಪು. ೩-೫೩ ವ) ; ಗುರು ನದೀಸುತರಿದ್ದರೀ ಪರಿ ಪರಿಭವಕೆ ಪಾಡಹುದೆ (ಕುವ್ಯಾಅ. ೨೦-೪). ೪. ಸ್ಥಿತಿಯಾಗು ; ಅವಸ್ಥೆಗೆ ಬರು : ತಾವು . . . ಸಂಶಯಪಟ್ಟಿದ್ದರಿಂದ ನನ್ನದು ಈ ಹಾಡಾಯಿತು (ಸ್ವಾಧಿಪೂ. ೯) ; ಪಾರ್ಟೋವಿನ ಸಾಲೆಯ ದಿನಗಳಲ್ಲೂ ಇದೇ ಹಾಡಾಯಿತು (ದಕ್ಷಿಪ. ೩). **ಪಾಡಿಗೆ ಬರು** = ಹಣ್ಣಾಗುವ ಸ್ಥಿತಿಯನ್ನು ಮುಟ್ಟು : ಆ ಕಾಯಿಗಳು ಪಾಡಿಗೆ ಬಂದು ಕೆಲಕೆಲವು ಹಣ್ಣುವರಿದು ಸೊಂಪಾಗಿ ತೋರುತ್ತಿದ್ದವು (ಮುಂಬಯು. ೩-೩೭). **ಪಾಡುಮಾಡು** = ಸರಿಗೊಳಿಸು ; ತಿದ್ದು ; ತೀಡು : ಜೋಡುಸವಗ ತೌಳಿ ಕತ್ತಿ ಖಂಡೆಯ ಲೌಡಿ ಖೇಡೆಯ ಚೂಡಾಯತಗಳ ಪಾಡು ಮಾಡುವ ಸಂಭ್ರಮವಂದೆರಡುಂ ಬೀಡಿನೊಳಗೆ ಮಸಗಿದುದು (ಕುರಾಸಾಂ. ೦೪-೭೭) : ತಿಳಿದು ತಿಳಿದು ಮೇಲೆ ಮೇಲೆ ನೋಡಲು ಕಾಣಲಳವಲ್ಲದಿರ್ಪ ನಡುವನು

ಇಳಿವ ನೆಱೆಯ ಪಾಡು ಮಾಡುವ ನೆವದಿಂದ ಪೊಳೆಯಿಸಿ ತೋಱಿಸು ತಿಹರು (ಕುಶಾಸಾಂ. ೨೫-೭೦).

[<ಪಡು$_1$./ತಮಿ. ಮಲ. ತೆಲು. ಪಾಟು; ತುಳು. ಪಾಡು]

**ಪಾಡುಂಗಾಱ, ಪಾಡುಕಾಱ,** ಪಾಡುಗಾರ, ಪಾಡುಗಾಱ, ಹಾಡುಕಾರ, ಹಾಡುಕಾಱ, ಹಾಡುಗಾರ (ನಾ). ೧. ಹಾಡುವವನು; ಗಾಯಕ; ಸಂಗೀತಗಾರ: ಪಾಡುಂಗಾಱಂ, ಜೂದುಂಗಾಱಂ (ಶಾಶಾಕೊ. ೦೬೬೫ಟಾ); ಪಾಡುಂಗಾಱಂ, ಅಲಸುಂಗಾಱಂ (ಕಶುದ. ೨೦೦ ಪ್ರಯೋ); ಕರಣಿಕ ರೊಳ್ಪಾಡುಂಗಾಱರ ಗಣಿಕೆಯರೆಸೆವ ಮಾಲೆಗಾಱರ . . . ಆಳಿಯಂ ಗಳೆಸೆಗುಂ ಪುರದೊಳ್ (ಅಪ್ಪು. ೫-೭-೩೦). **ಪಾಡುಕಾಱ :** ೨. ಸ್ತುತಿ ಪಾಠಕ; ಹೊಗಳುವವನು; ವಂದಿ: ಸೊಗಸ ಹುಟ್ಟಿಸಿ ಸುಲಿವ ರಸವಾದಿಗಳನವರ ವಿಡಾಯಿಗಳ ನಂಬುಗೆಯ ಕೇವಣ ಪಾಡು ಕಾಱರ ಕರ್ಣ ನೋಡು (ಕುವ್ಯಾದ್ಯೋ. ೦೬-೨೫). **ಪಾಡುಗಾರ :** ೧. ಪುಟುಪಾಡುಗಾರ ತುಟಿ ಮುಚ್ಚಿದನು (ಸತೀಗೀ. ೭೬-೩). **ಪಾಡುಗಾಱ :** ೧. ವೃದ್ಧನರೆಮೆಯ್ಯನಂಬಿಕೆಗೀಯೆ ತವಗಿಪ್ಪೆಡೆಗಾಣದೆ ಎಡಗಿವಿಯ ತೊಡವಿನೆಕ್ಕಲಗಾಣನಿಳಿಗಿಳಿದನೋಯೆಂಬ ಪಡಿಯಾದನಾ ಪಾಡುಗಾಱ (ಶ್ರೀಪಾಂ. ೩-೦೫). **ಹಾಡುಕಾರ :** ೧. "ಗಾಯಕ__ಹಾಡುಕಾರ" (ಗಂಗಾಮು. ೦೦೯). **ಹಾಡುಕಾಱ :** ೧. ಛಪ್ಪನದೇಶದ ಹಾಡುಕಾಱಱಿಗೊಡೆ (ಕೌತ್ರಿಎ. ೦೯೯೯, ಸೊಂಡೂರು. ೭೬-೨೦; 1450). **ಹಾಡುಗಾರ :** ೧. ಹಾಡು, ಹಾಡಿಕೆ ಮತ್ತು ಹಾಡುಗಾರ ಇದೊಂದು ತ್ರಿವೇಣೀಸಂಗಮವು (ಪಾತಿಸಂ. ೬೭).

[ ಪಾಡು$_1$ + –ಕಾಱ ]

**ಪಾಡುಂಗಾಱಿಕೆ, ಪಾಡುಗಾಱಿಕೆ,** ಹಾಡುಗಾರಿಕೆ (ನಾ). ಹಾಡುವಿಕೆ; ಗಾಯನ; ಗಾನ: ನೀಂ ಪಾಡುಂಗಾಱಿಕೆಯೊಳ್ ಬಲ್ಲಿದನೆನಿಪ ಜಸಮಂ ಕೇಳ್ದಿಲ್ಲಿಗೆಯ್ತಂದೆಂ (ಅಪ್ಪು. ೦೭-೮). **ಪಾಡುಗಾಱಿಕೆ :** ಪಾಡುವ ಪ್ರಾತಃಕಾಲದ ರಾಗವ ಪಾಡುಗಾಱಿಕೆಯೊಳಾಲಿಸುತ (ಶರಕ. ೨೫-೮). **ಹಾಡುಗಾರಿಕೆ :** "ಗೀತಂ, ಗಾನಂ—೨ ಹಾಡುಗಾರಿಕೆ ಹೆಸರುಗಳು" (ಸಿದ್ಧಾಂತಿ. ೫೭); ಅವರ ಹಾಡುಗಾರಿಕೆ ಯಾವುದೇ ಪ್ರಯಾಸವನ್ನು ಕಾಣದಂತಿತ್ತು (ಸಂಗೀತ. ೫೯).

[ ಪಾಡುಂಗಾಱ + –ಇಕೆ ]

**ಪಾಡುಕಾಯಿ** 'ಪಾಡುಗಾಯಿ' ನೋ.

**ಪಾಡುಕಾಱ** 'ಪಾಡುಂಗಾಱ' ನೋ.

**ಪಾಡುಕುಳಿ** (ನಾ). ಹಾಡುವುದೇ ಗೀಳಾಗಿರುವವನು; ಹಾಡುವುದರಲ್ಲಿ ಆಸಕ್ತಿಯುಳ್ಳವನು: ಪಾಡುಕುಳಿ, ಮಱುಕುಳಿ (ಕಶುದ. ೨೦೩ ಪ್ರಯೋ).

[ ಪಾಡು$_1$ + –ಕುಳಿ$_2$ ]

**ಪಾಡುಗ,** ಹಾಡುಗ (ನಾ). ೧. = ಪಾಡುಂಗಾಱ ೧: ಪಾಡುಗಂ, ಜೂದುಗಂ (ಶಮ್ದಾಮ. ೩೬೪ ಪ್ರಯೋ). **ಹಾಡುಗ :** ೧. "ಗಾಯಕಃ, ಗಾಯಿತಾ__ಈ ೨ ಹಾಡುಗಂ" (ಕಾಕಶ್ಯ. ೬೯). ೨. = ಪಾಡುಂಗಾಱ ೨: ದಿವಿಜರ ರಾಯ . . . ಶಿವಾದಿಗಳ ಸಾಹಸಕೆ ಮೂವಡಿಯ ರಾಯಭಟರಿದೆ ನೇವಿಸಾ ಸುರರಾಯನೂರಿನ ಹಾಡುಗರ ಹುಲುನಾಯಕರಿಗಿನಿತೇಕೆ ಖತಿ ಬೆಸಸೆಂದನಾ ಕರ್ಣ (ಕುಪ್ಯಾಕ. ೦೯-೩).

[ ಪಾಡು$_1$ + –ಗ$_2$ ]

**ಪಾಡುಗಬ್ಬ,** ಹಾಡುಗಬ್ಬ (ನಾ). [ಕಾವ್ಯವಿಶಾ] ಹಾಡುವುದಕ್ಕೆ ಅನುಕೂಲವಾದ ಕಾವ್ಯ; ಆ ದೇಶೀಯಛಂದಸ್ಸಿನ ಷಟ್ಪದಿ, ಸಾಂಗತ್ಯ ಮತ್ತು ತ್ರಿಪದಿಗಳಲ್ಲಿ ರಚಿತವಾದ ಕಾವ್ಯ: ಪಾಡುಗಳಿಂದು ತಱಿಸಲೆ ಮಾಡಿದುದಂ ಪಾಡುಗಬ್ಬವೆಂದು ಬುಧರ್ ಕೊಂಡಾಡುವರ್ (ಕಾವ್ಯಾವ. ೯೩೯); ನಾಡೊಳಗುಳ್ಳ ಜಾಣರು ಜಾಣೆಯರೊಡನಾಡುವ ಸವಿಮಾತುಗಳ ಪಾಡುಗಬ್ಬವ ಪರುಶವಿಸಿದ ಬಗೆಯ ನೀ ನೋಡು ಮಾನಿನಿ ಮುಂದೆ ಮುಂದೆ (ಮೋಹತ. ೦-೩೫). **ಹಾಡುಗಬ್ಬ :** ಕಬ್ಬಿಗರೋದುಗಬ್ಬವ ಹಾಡುಗಬ್ಬವ ಕಬ್ಬದೊಳೊರೆವರವೆರಡು ಕಬ್ಬಿನಂತಿರಬೇಕು ಬದಿರಂತೆ ರಚಿಸಲ್ಕೇಕಬ್ಬೆ (ಶರಕ. ೦-೭); ನಿಬ್ಬಣಕೆ ಹೊರಟಂತೆ ಹಾಡುಗಬ್ಬಗಳ ಕೊಲ್ಲಾರಿಬಂಡಿ (ಕಲಿಮು. ೩೩-೮).

[ ಪಾಡು$_1$ + ಕಬ್ಬ$_1$ ]

**ಪಾಡುಗವಿತೆ** (ನಾ). = ಪಾಡುಗಬ್ಬ: ಱಕಾರಳಕ್ಷಳ ಲತ್ತ್ವರೇಫೋಷ್ಮಳ ಱಕಾರ ಪ್ರಾಸಭೇದಂಗಳ ಸ್ವರವ್ಯಂಜನ ವಿಭಕ್ತಿ ಸಮಾಸ ಶಿಥಿಲಗಳಾ ಪಳಿಯ ನೇನುಂ ಪಾಡುಗವಿತೆಗಳೊಳು ವಿಚಾರಿಸ ಸಲ್ಲ (ಶಾಕ್ಯಶಾ. ೦-೪೫).

[ ಪಾಡು$_1$ + ಕವಿತೆ ]

**ಪಾಡುಗಾ** (ಕ್ರಿ). (ಪರಸ್ಪರರ) ಕ್ಷೇಮವನ್ನು ಉಳಿಸು,—ರಕ್ಷಿಸು: ಇಂತು ಪಾಡುಗಾದೊಡನೊಡನಿರ್ವರುಂ ಮೆಱೆಯಲೆಂದೆ ಶರಾಸನ ವಿದ್ಯೆಯಿಂ ಪಡಲ್ವಡಿಸಿದರೆತ್ತಮಿತ್ತಮಿದಿರೊಳ್ ಮಲೆದೊಡ್ಡಿದ ಚಾತು ರಂಗಮಂ (ಪಂಪಭಾ. ೦೦-೦೮).

[ಪಾಡು$_2$ + ಕಾ$_1$]

**ಪಾಡುಗಾಯಿ,** ಪಾಡುಕಾಯಿ, ಹಾಡುಗಾಯಿ (ನಾ). ಹುಳಿಯನ್ನು ಕಳೆದುಕೊಂಡು ಹಣ್ಣಿನ ಅವಸ್ಥೆಗೆ ತಿರುಗುತ್ತಿರುವ ಕಾಯಿ; ದೋರೆಗಾಯಿ: ನಾಲ್ಕಾರು ಪಾಡುಗಾಯಿಗಳ ಗೊಂಚಲು ತುದಿಯಲ್ಲಿ ಬಾಗಿ ನಿಂತು . . . ಎದುರಿಗೇ ಇರಬೇಕೆ? (ದೇಶಕ್ಕ. ೦೫೬). **ಪಾಡುಕಾಯಿ:** ತಚ್ಛೂತಶಾಖಾಗ್ರದೊಳ್ ಜೊಂಪದಿಂ ತೂಗುತಿಹ ಪಾಡುಕಾಯಿಗಳರಲ್ ಕಂಡು (ಮುಹಾಶಿ. ೫-೫). **ಹಾಡುಗಾಯಿ :** ಹುಣಿಸೆ ಇನ್ನೂ ಹಾಡುಗಾಯಿ (ಲೂತಿ).

[ ಪಾಡು$_3$ + ಕಾಯಿ$_1$ (<ಕಾಯ್$_4$) ]

**ಪಾಡುಗಾರ** 'ಪಾಡುಂಗಾಱ' ನೋ.

**ಪಾಡುಗಾಱ** 'ಪಾಡುಂಗಾಱ' ನೋ.

**ಪಾಡುಗಾಱಿಕೆ** 'ಪಾಡುಂಗಾಱಿಕೆ' ನೋ.

**ಪಾಡುಗೆಡಿಸು** (ಕ್ರಿ). ನೆಲೆಗೆಡುವಂತೆ ಮಾಡು; ದಂಸ್ಥಿತಿಗೆ ಒಳಪಡಿಸು: ಪವನಜಾದ್ಯರ ಪಾಡುಗೆಡಿಸಿದನಸ್ತ್ರಸಾರದಲಿ (ಕೂರಭಾ. ೬-೨೫-೩೩); ಮೋಡಿಯ ಹರಿಗೆಯ ಭಟರು ನೇಜೆಯಗಳ ನೀಡುತಿರುವ ಮುಲ್ಲಾಕರ ಪಾಡುಗೆಡಿಸಿ ಹೊಯ್ದುಱೆಯಟ್ಟಿ ದೆಸೆದೆಸೆಗೋಡಿಸಿದುದನೇವೇಳ್ವೆ (ಕಂಶಿಪ. ೦೫-೪೧).

[ ಪಾಡು$_3$ + ಕೆಡಿಸು$_1$ ]

**ಪಾಡುಗೆಯ್,** ಪಾಡುಗೈ (ಕ್ರಿ). ಸಂಪಾದಿಸು; ಹದಗೊಳಿಸು; ಸಿದ್ಧಪಡಿಸು: ಒಯ್ಯನೆ ಗದೆಯನಣಂ ಪಾಡುಗೆಯ್ದುದ್ರ್ದ ಭೋರೆಂದೆಱವು ಗ್ರಾರಾತಿಯೂರುದ್ವಯಮನಿಡೆ . . . ಕೆಡೆದನಿಳಾಭಾಗದೊಳ್ ಧಾರ್ತರಾಷ್ಟ್ರಂ (ಪಂಪಭಾ. ೦೩-೯೭). **ಪಾಡುಗೈ :** ನಾವೀ ನಿಜಾಯುಧಗೂಡಿ . . . ಸಂಗರವ ಪಾಡುಗೈವುದೆ ಪಂಥ (ಕೂರಭಾ. ೫-೯-೧).

[ ಪಾಡು$_3$ + ಕೆಯ್$_1$ ]

**ಪಾಡುಗೈ** 'ಪಾಡುಗೆಯ್' ನೋ.

**ಪಾಡುಗೊಳ್** (ಕ್ರಿ). ಲೆಕ್ಕಿಸು; ಗಮನಿಸು; ಎಣಿಸು: ಕರಿಗಳ ಪಾಡು ಗೊಳ್ಳದ ಬಳದಿನಾಗಲು ನೋಡಿ ತಕ್ಷಣ ತನ್ನ ಮಗಳನು ಭೀಮಸೇನಂಗೆ ಪರಿವಿವಾಹವ ಮಾಡಿ ನುಡಿದನು (ಕಂಶಿಪ. ೦೭-೨೪).

[ ಪಾಡು$_3$ + ಕೊಳ್$_1$ ]

**ಪಾಡುದಪ್ಪು** (ಕ್ರಿ). ನೆಲೆಗೆಡು; ಹದಗೆಡು; ಕೆಟ್ಟು ಹೋಗು: ಗೋಡೆ ಗಟ್ಟಾಗಿ ಬಳಸಿಕೊಂಡ ವೀರರ ನೋಡಿ ನಾಗೇಂದ್ರ ಮೈಬೆದಱಿ ಪಾಡು ದಪ್ಪಿತು ತನ್ನ ಕಾರ್ಯವೆಂದವರ ಬಿಟ್ಟೋಡಿದನಿರದೆ ತನ್ನೂರ್ಗೆ (ಶರಕ. ೫೭-೪೪).

[ ಪಾಡು$_3$ + ತಪ್ಪು$_1$ ]

**ಪಾಡುಪಂತ,** ಪಾಡುಪಂಥ (ನಾ). ಹೆಸರಾಂತ ಶಪಥ; ಜನಜನಿತವಾದ ಪ್ರತಿಜ್ಞೆ: ಈ ಪಾಡುಪಂತದ ಮಾತನಾಡುವ ಶರಚಾಪಾಗಮಜ್ಞ ನೀನಹುದು (ಮೋಹತ. ೦೨-೫೭); ಎಂತಾನುಮಿಾ ಪಾಡುಪಂತಮಂ ಮಗುಟ್ಟವೇೞ್ಕುಂ (ಚಳಮಂ. ೦೨-೮). **ಪಾಡುಪಂಥ :** ಕುಂದು ಹೆಚ್ಚಿನ ಪಾಡುಪಂಥದ ಕಂದುಕಸರಿನ ಕಲಿಮನದ ಕಡುಹಿಂದ ಕಯ್ದುಡುಕಿದರು ಕಲಿಗಳಾಜಿಯಲಿ (ಕೂರಭಾ. ೪-೩-೬); ಬಡವ ಬಲ್ಲಿದರ ಕೂಡ ಪಾಡುಪಂಥದ ಮಾತು ತರವೆ (ಪ್ರಾಕೃಶಾ. ೦-೪೪).

[ಪಾಡು$_1$ + ಪಂತ$_1$]

**ಪಾಡುಪಂಥ** 'ಪಾಡುಪಂತ' ನೋ.

**ಪಾಡುಪಡಿಸು** 'ಪಾಡುವಡಿಸು' ನೋ.

**ಪಾಡುಪಡು,** ಪಾಟುಪಡು, ಪಾಟುಬಡು (ಕ್ರಿ). ಕಷ್ಟಪಡು; ತೊಂದರೆಯನ್ನು ಅನುಭವಿಸು : ಕಾಡಿನಲ್ಲಿದ್ದುಕೊಂಡು ಪಾಡು ಪಟ್ಟು ತಪಸ್ಸು ಮಾಡುವುದು ಆತ್ಮಜ್ಞಾನಕ್ಕಾಗಿ (ವಕಠಾ. ೦೭೧); ಅದಕ್ಕೋಸ್ಕರವೇ ಅಲ್ಲವೇ ನಾನೂ ನಿನ್ನ ತಂದೆಯೂ ಇಷ್ಟೊಂದು ಪಾಡು ಪಡುತ್ತಿರುವುದು (ಮಹಾಗ. ೯೭); ಹೀನಾಯವಾದ ನರಜನ್ಮಕ್ಕೆ ಹೇಗೆ ತಾನೆ ಹೋಗಿ ಪಾಡುಪಡಲಿ (ಕುಮಾರಾಂ. ೩೪). **ಪಾಟುಪಡು :** ಪಾಟುಪಡದಲೆ ಜಗದಿ ಜೀವರ ಫೋಟಕಾಸ್ಯನು ಸೃಜಿಸಿ ಯೋಗ್ಯತೆ ದಾಟಗೊಡದಲೆ ಸಲಹುತಿಪ್ಪನು ಸರ್ವಕಾಲದಲಿ (ಜಗದಾ. ೦೯೭). **ಪಾಟುಬಡು:** ಒಲ್ಲೆನೊ ಇಹದಲ್ಲಿ ಬಂದು ಎಲ್ಲ ಪಾಟುಬಡುವುದು (ಮೋಕ್ಷದೀ. ೫೦-೫). [ ಪಾಡು$_3$ + ಪಡು$_1$ ]

**ಪಾಡುಬೀಟ್** (ಕ್ರಿ). ಕಷ್ಟ ಪಡಂ : ಪಾಡುಬಿದ್ದುಟುಪಾರಂಬದ ಧಾನ್ಯ ಶತ್ರುಜಯ ಪುತ್ರೋತ್ಪತ್ತಿ . . . ಬೇಹಾರವಿಂತೆಲ್ಲ ಮುಂ ಪಲಕಷ್ಟಂ ಕಡೆಗೊಳ್ಳಿತ್ತೈ (ಸೂಜ್ಞಮೀ. ೯೭). [ ಪಾಡು$_3$ + ಬೀಟ್$_1$ ]

**ಪಾಡುಮ್ಮೆಮೆ** (ನಾ). ಹಾಡಿನ ಮಹಿಮೆ ; ಹಾಡುಗಾರಿಕೆಯ ಮಹಿಮೆ : ಸಾಡಂ ಸಡ್ಡೆಯಿಂ ಪಾಡೆ ಪಾಡುಮ್ಮೆಮೆಗೆ ಪಾಸಟ ಯಿಲ್ಲಂ (ಅದ್ಮು.ಕ. ೨೨-೧೧). [ಪಾಡು$_3$ + ಮ್ಮೆಮೆ ( <ಮೆಯ್ಮೆ) ]

**ಪಾಡುವಡಿಸು,** ಪಾಟುಂಬಡಿಸು, ಪಾಡುಪಡಿಸು (ಕ್ರಿ). ತೊಂದರೆ ಗೊಳಗುಮಾಡು ; ಕಷ್ಟಪಡಿಸು ; ಪೀಡಿಸು : ಪಾಡುವಡಿಪರೆಂದು ಪರಿಹರಿಸದೆ ಚುನ್ನವಾಡದೆ ಮನೆವಾಳ್ತೆಯನು ಮಾಡುವುದವರ ಸಮ್ಮತದಿಂದ (ಹಂಪ. ೪-೦೩). **ಪಾಟುಬಡಿಸು:** ಪಾಟುಬಡಿಸದಿರು ಸಿರಿಲಕುಮಿನಲ್ಲ (ಐದಾಳ್. ೮೬-೪) ; ನೀಟಾದ ಭೋಜನವ ಬಯಸುವೆನು ಯಮರಾಯ ಪಾಟುಬಡಿಸುವ ಭಂಗ ಕೇಳಿ ಎಚ್ಚರಿಯದಲೆ (ಐದಾಳ್. ೦೦೪-೧). **ಪಾಡುಪಡಿಸು :** ನಾವು ದೇವತೆಗಳ ಪಾಡು ಪಡಿಸಿದೆವು (ಶೌಗಂಂ. ೧೧೧-೦೭) ; ಒಂದು ವೇಳೆ ಮಕ್ಕಳಾದರೂ ಈಗ ನೀನು ನನ್ನನ್ನು ಪಾಡುಪಡಿಸುವಂತೆ ಅವರೂ ನಿನ್ನನ್ನು ಪಾಡು ಪಡಿಸಲಿ (ಕಲೆ. ೩೨). [ಪಾಡು$_3$ + ಪಡು$_1$ + –ಇಸು$_3$ ]

**ಪಾಡುವೇಳು** (ಕ್ರಿ). ಕ್ರಮವನ್ನು ತಿಳಿಸು ; ವಿಧಾನವನ್ನು ಹೇಳಿ ಕೊಡು : ಆತನು ಚೆಂಡಾಟವ ಚೆಂಡಾಟವನಾಡುವ ನೃಪತನಯರಿಗೆ ಪಾಡುವೇಳುತ ನಿಂದಿಹನು (ಕುಮಾರಾಂ. ೩೦-೪೮).

[ಪಾಡು$_3$ + ಪೇಳು ( <ಪೇಟ್ ) ]

**ಪಾಡೆ** (ನಾ). ದೋಣಿ ; ನಾವೆ : ಸಂಸಾರಾಂಬುಧಿಯಲ್ಲಿ ಶರೀರವೆಂಬೊ ಪಾಡೆಯಲ್ಲಿ ಕಂಸಾರಿ ವ್ಯವಹಾರಿ ಕಡುಲೋಭಿ ಜೀವಶಟ್ಟಿ ಕಾಲವೆಂಬೊ ಕಳ್ಳಪಾಡೆ ಕಲಹಂಸಾವುಂಡಿರುವ ಕ್ರೂರವೆಂಬೊ ಕಳ್ಳಬಂಟ ಕಿಡಿಗೇಡಿ ನೋಡುತಿಹ ಬಾರಯ್ಯ ಈಗ (ಶುಕಂದ. ೩-೦೫-೦). 'ಪಾಂಡಿ$_3$' ಪರಾ.

[ ದೇ. ॥ ಮಲ. ಪಾಣ್ಣಿ ; ತೆಲು. ಪಾದಿ ]

**ಪಾಡ್ದನ,** ಪಾಡ್ದನೆ, ಪಾರ್ದನ (ನಾ). (ಕರಾ) ಭೂತಗಳ ಹಾಗೂ ತುಳುನಾಡಿನ ವೀರರ ಹಳೆಯ ಕಥೆಗಳನ್ನು ಹೇಳುವ ಹಾಡು ; ಭೂತಾರಾಧನೆಯ ಹಾಡು : ತುಳುಭಾಷೆಯ ಕತೆಗಳಲ್ಲಿ ಪಾಡ್ದನಗಳು ಎಂಬೊಂದು ವರ್ಗವಿದೆ ; ಅದು ದೈವಗಳ ಪುರಾಣಗಳ ವರ್ಗ (ಸುವರ್ಣ. ೧೨೦) ; ಈ ಪಾಡ್ದನಗಳು ಮಾನವಶಾಸ್ತ್ರದ ಅಭ್ಯಾಸಿಗಳಿಗೆ ಧಾರಾಳವಾಗಿ ವಸ್ತುಗಳನ್ನು ಒದಗಿಸಬಲ್ಲುವು (ಕಾವನೀ. ೦೭). **ಪಾಡ್ದನೆ :** ತುಳುನಾಡಿನ ನಿದರ್ಶನವನ್ನು ಹೇಳುವಲ್ಲಿ ಇಲ್ಲಿನ ದೈವಗಳ ಪಾಡ್ದನೆ ಕೆಲವು ಜನರ ವೃತ್ತಿಯಾಗಿದೆ (ಕಾವನೀ. ೦೦) ; ತುಳು ಪಾಡ್ದನೆಗಳ ಸೊಲ್ಲನ್ನು ಹಾಡುತ್ತ . . . ಅವರು ನಡೆಯುತ್ತಿದ್ದರು (ಜಗುಂ. ೪೩). **ಪಾರ್ದನ :** ಕಳ್ಳು ಕುಡಿದು ಮಧ್ಯರಾತ್ರಿ ಕಳೆದ ಮೇಲೆ ಪಾರ್ದನ ಹೇಳುತ್ತಾ ಎಲ್ಲರನ್ನು ನಿದ್ರೆಯಿಂದೆಬ್ಬಿಸುತ್ತಾ ಮನೆ ಸೇರುವುದು ಆತನ ನಿತ್ಯದ ವಿಧಿಯೇ ಆಗಿತ್ತು (ಪರಾಕ. ೪೨).

[ ←ತುಳು. ಪಾಡ್ದನ, ಪಾಡ್ದನೊ, ಪಾರ್ದನ ]

**ಪಾಡ್ದನೆ** 'ಪಾಡ್ದನ' ನೋ.

**ಪಾಡ್ಯ** 'ಪಾಡಿವ' ನೋ.

**ಪಾಡ್ಯಮಿ** (ನಾ). ಚಾಂದ್ರಮಾನಪಕ್ಷದ ಮೊದಲನೆಯ ತಿಥಿ ; ಪಾಡ್ಯ; ಪ್ರತಿಪದೆ : 'ಬಲಿಪಾಡ್ಯಮಿ' ಪರಾ. **P** ಪಂಚಮಿ, ಸಪ್ತಮಿ, ಅಷ್ಟಮಿ, ನವಮಿ, ದಶಮಿ ಇತ್ಯಾದಿ ಶಬ್ದರೂಪಗಳ ಹೋಲಿಕೆಯ ಮೇಲೆ 'ಪಾಡ್ಯ' ಶಬ್ದಕ್ಕೆ 'ಮಿ' ಎನ್ನುವುದು ಸೇರಿ ಇದು ರೂಪಿತ ವಾಗಿರಬಹುದು. [ <ಪಾಡ್ಯ./ತೆಲು. ಪಾಡ್ಯಮಿ ]

**ಪಾಡ್ಯಾಹ್ನ** (ನಾ). (ಕರಾ) ಪಾಡ್ಯದ ದಿನ ವೇದಂಪಣಿಗರಿಗೆ ಏರ್ಪಡಿ ಸುವ ಉತ್ಸವ : ಐತಾಳರು ತಮ್ಮ ಮನೆಯ 'ಪಾಡ್ಯಾಹ್ನ'ಕ್ಕೆ ಅವರನ್ನು ಬರಹೇಳಿದ ಬಳಿಕ, ಉಪಾಯವಿಲ್ಲದೆ ಮಾರಳದರು (ಮರಮ. ೨೩೮). [ ಪಾಡ್ಯ ( <ಪಾಡಿವ) + ಅಹ್ನ ]

**ಪಾಣ** (ನಾ). ೧. ನರ್ತನ ಮತ್ತು ಗಾಯನಗಳನ್ನು ವೃತ್ತಿಯಾಗಿ ಉಳ್ಳವನು ; ನಟ : ಇವರು ಹಿರಿಯರುಗಳೇ ಯಾಗ ನಟ್ಟುವಿಗ ಪಾಣರು (ಬಸವ. ೬೦೩) ; ಗಾಣರ ಪಾಣರ ವೈತಾಳಿಕರ ವಂದಿ ಮಾಗಧರ ಸಂದಣಿಯೊಳ್ ಸಂದಣಿಸಿ (ಮಹಾವೀ. ೦೨-೯ ವ) ; ನಟ್ಟುವ ಪಾಣ ಗಣಿಯಾಟ ಮಿಣಿಯಾಟ . . . ಮೊದಲಾದ ಅಱುವತ್ತುನಾಲ್ಕು ವಿದ್ಯೆಗಳ ಸಾಧಿಸಿದ ಡೊಂಬನೇನು ಕಿಱಿಯನೇ (ಗಣಶಾ. ೧೨೦-೨). ೨. ಕುಣಿದು ಪೂಜೆ ಸಲ್ಲಿಸುವ ಪೂಜಾರಿ : ನಮ್ಮ ಊರಿನ ದೈವಾರಾಧನೆಗಳಲ್ಲಿ "ಪಾಣರು" ದೈವದ ವೇಷ ತೊಟ್ಟು, ಕೋಲವೆಂಬ ಉತ್ಸವಗಳಲ್ಲಿ ಕುಣಿಯುತ್ತಾರೆ (ಹುಚುಬಿ. ೨೭). ೩. (ಕರಾ) ಓಲೆಗರಿಯಿಂದ ಕೊಡೆ ತಯಾರಿಸುವವನು. [ ದೇ.॥ ತಮಿ. ಮಲ. ಪಾಣ ]

**ಪಾಣವಿಕ** (ನಾ). ಪಣವವೆಂಬ ವಾದ್ಯವನ್ನು ಬಾರಿಸುವವನು : ವೈಣಿಕ ಪಾಣವಿಕ ವಾಂಶಿಕ ಮಾರ್ದಂಗಿಕ ಗಾಯಕ ನರ್ತಕಾದಿ ಕುತಪಪ್ರತತಿ ಯುಮಂ . . . ಸಮಕಟ್ಟಿ (ಶಂರ್ಗೃಪ. ೬-೮೫ ವ). [ಸಂ.]

**ಪಾಣಿ$_1$** 'ಪಾಣೀಯ' ನೋ.

**ಪಾಣಿ$_2$** (ನಾ). ೧. ಕೈ ; ಹಸ್ತ : "ಪಾಣಿ ಹಸ್ತಂ ಪಂಚಶಾಖ ಕರವೆನಲು ಕೈ" (ಮಂಗರಾ. ೯೫-೮) ; ನೇತ್ರ ನಾಸಿಕ ಪಾದ ಪಾಣಿ ಶ್ರೋತ್ರವೆಂಬಿವು ತಮ್ಮೊಳೊಂದೇ ಸೂತ್ರದಲಿ ಸಂಸ್ಪೃಷ್ಟವಾಗಿ ಸಮಾನ ಬುದ್ಧಿಯಲಿ ಗಾತ್ರವಿದಿದಿಹವೋಲು (ಕುವ್ಯಾಉ. ೪-೭) ; ಪಾಣಿ ಚಿಗುರಿನ ಹಾಗೆ ವಾಣಿ ಜೇನಿನ ಹಾಗೆ ಮನವೇಕೆ ಕಲ್ಲಿನ ಹಾಗೆ (ಶಂಕಾಶ. ೮೩-೨). ೨. ಬೆರಳನ್ನು ಚಾಚಿದ ಅಂಗೈ : "ನೀಡಿದ ಬೆರಳ ತಳಂ ಪಾಣಿ ಯೆಂಬುದು" (ಹಲಾಯು. ೮೮-೩೮) ; "ಅಂಗುಲಿ ಮಾಡಿದ ಕುಡಿತೆಯಾ ಪ್ರಸೃತಿಯೆನಿಕ್ಕು ನೀಡಿದ ಬೆರಳ್ ಪಾಣಿಯಕ್ಕುಂ" (ಮಂಗರಾ. ೯೫-೯).

[ಸಂ.]

**ಪಾಣಿ$_3$** 'ಪಹಣಿ' ನೋ.

**ಪಾಣಿಗೆ** (ನಾ). ಆನೆಗೆ ತೊಡಿಸುವ ಒಂದು ಬಗೆಯ ಅಲಂಕಾರ (?): ಪಾಣಿಕದ ಮೊಗರಂಬ ಚಿಪ್ಪಿನ ಪಾಣಿಗೆಯ ಕಿರಿಹೊರಜೆ ಮುಂಜುಜೆಯ ನೇಣಿನುರುಸಂಕಲೆಯ ಸೂಸಿಗೆ ಕೊಂಬಿನಣಬುಗಳ ಡಾಣೆದೊತ್ತಳ ನೊತ್ತಿನೊತ್ತುಗೆ ಕಾಣಪಗ್ಗರಣೆಗಳ ಚೌದಂತಾನೆ ಹೊಕ್ಕುವು ರಕ್ಕಸ ವ್ರಜ ಮೆಟ್ಟಿ ಘಟ್ಟಿಸುತ (ಅಂದಶಾ. ೧೪-೧೧). [?]

**ಪಾಣಿಗ್ರಹಣ** (ನಾ). ೧. ಕೈಹಿಡಿಯುವುದು ; ಮದುವೆ : "ಉಪ ಯಾಮಃ, ಪರಿಣಯನಂ, ಪಾಣಿಗ್ರಹಣಂ, ವಿವಾಹಃ, ಉದ್ವಾಹಃ –

ಈ ೫ ಮದುವೆ" (ಹರಾಯು. ೮೦-೩೯೧); ಅಹಹ ವೈರಿಗೆ ಧರೆಗೆ ಪಾಣಿ ಗ್ರಹಣವಾಯಿತೆ (ಕುಮಾ.ಳ. ೩-೨೭); ಧರ್ಮದಾಸನಿಗೆ . . . ಕೆಲವು ದಿವಸದಲ್ಲಿಯೇ ದ್ವಿತೀಯ ಪಾಣಿಗ್ರಹಣವಾಯಿತು (ಅದೂಟಿ. ೭೭). ೨. (ಅಲಂ) ಕೈಸೆರೆ ಹಿಡಿಯಂವಿಕೆ : ಪಟುಭಟರು ಅಪ್ಪಣೆ ಪ್ರಕಾರ ಪ್ರಾಣಯುಕ್ತವಾಗಿ ಪಾಣಿಗ್ರಹಣವೆಸಗಿದ ಆನೆ ೧೮೦ (ಎ.ಕ. XII. ಕೊರಟಗೆ. ೨೩-೨೪ ; 1824). [ಸಂ.]

**ಪಾಣಿಗ್ರಹಣಂಕೆಯ್** 'ಪಾಣಿಗ್ರಹಣಂಗೆಯ್' ನೋ.

**ಪಾಣಿಗ್ರಹಣಂಗೆಯ್, ಪಾಣಿಗ್ರಹಣಂಕೆಯ್** (ಕ್ರಿ). ೧. ಮದುವೆ ಮಾಡಿಕೊಡು : ಬಂಧುಗಳ್ ವಿವಾಹವಿಧಿಯನೊಡರ್ಚೆ . . . ನಾಲ್ವರುಮಂ ತಂದು ಪಾಣಿಗ್ರಹಣಂಗೆಯ್ಕೆ (ಶಾಪುಂಪು. ೪೨೮). **ಪಾಣಿಗ್ರಹಣಂಕೆಯ್ :** ೨. (ಅಲಂ) ನೀರನ್ನು ಧಾರೆಯೆರೆದು ಕೊಡು ; ದಾನ ಮಾಡು : ಭೂತಶರ್ಮ್ಮರ್ಗ್ಗೆ ಶಾಲಿಗ್ರಾಮ ಸರ್ವಪರಿಯಾರ ಪರಿಗ್ರಹದಿನ್ನು ಪಾಣಿಗ್ರಹಣಂಕೆಯ್ದು ಕೊಟ್ಟರ್ (ಪ್ರಕರ. ೦೯೧೦. ೦-೩೨ ; 788?). [ಪಾಣಿಗ್ರಹಣ + ಕೆಯ್$_1$]

**ಪಾಣಿಗ್ರಹಣಂಗೆಯಿಸು, ಪಾಣಿಗ್ರಹಣಂಗೆಯ್ಸು** (ಕ್ರಿ). ಕೈ ಹಿಡಿಸು; ಮದುವೆ ಮಾಡಿಸು : ಅಂತು ಕೈನೀರೆರೆದು ಪಾಣಿಗ್ರಹಣಂಗೆಯಿಸಿ ದಾಗಳ್ [ಪಾಠಾಂ. ಗೆಯ್ಸಾಗಳ್] (ಆದಿಪು. ೪-೯೮ ವ). **ಪಾಣಿಗ್ರಹಣಂಗೆಯ್ಸು :** ಗುಣಾರ್ಣವನಾ ದ್ರುಪದಜೆಯನೊಡನೆ ಕುಳ್ಳಿರಿಸಿ . . . ಹುತವಹಸಮಕ್ಷದೊಳ್ ಕೆಯ್ನೀರೆರೆದು ಪಾಣಿಗ್ರಹಣಂಗೆಯ್ಸ (ಪಂಪಭಾ. ೩-೭೯ ವ). [ಪಾಣಿಗ್ರಹಣಂಗೆಯ್ + — ಇಸು]

**ಪಾಣಿಗ್ರಹಣಂಗೆಯ್ಸು** 'ಪಾಣಿಗ್ರಹಣಂಗೆಯಿಸು' ನೋ.

**ಪಾಣಿಘ** (ನಾ). ೧. ಹರೆ, ಮೃದಂಗ, ಢಕ್ಕೆ ಮೊದಲಾದ ವಾದ್ಯಗಳನ್ನು ಬಾರಿಸುವವನು,– ನುಡಿಸುವವನು. ೨. ಕೈತಾಳ ಹಾಕುವವನು; "ಹಾಡುವಾಗ ಕೈಮೇಲೆ ತಾಳವ ಹಿಡಿಯುವವನು" (ಗಂಗಾಕು. ೨೦೫): "ಪಾಣಿವಾದಃ, ಪಾಣಿಘಃ–೨ ಕೈತಾಳ ಹೊಡೆಯುವವನ ಹೆಸರು" (ಸಿದ್ಧಾಂತಿ. ೩೦೦). [ಸಂ.]

**ಪಾಣಿಚಲನ** (ನಾ). (ನೃತ್ಯದಲ್ಲಿ) ಕೈಗಳ ಚಲನೆ, — ವಿನ್ಯಾಸ : ಮೃದುಪಾದನ್ಯಾಸಮಿಂಬಾಗೆ ಕಂಕಣರಾವಂ ಸೊಗಸಾಗೆ ಪಾಣಿಚಲನಂ ಚೆಲ್ವಾಗೆ . . . ನೀಡೆ ಮೆರೆದಳ್ ಲೀಲಾಲಸಲ್ಲಾಸ್ಯಮಂ (ರಾಜಶೇ. ೦೨-೭೨). [ಪಾಣಿ$_2$ + ಚಳನ ( = ಚಲನ)]

**ಪಾಣಿಜ** (ನಾ). ಕೈಬೆರಳಿನ ಉಗುರು : "ಕಾಮಾಂಕುಶಾಃ, ಕರರುಹಾಃ, (ಪುನರ್ನವಾಃ), ಪಾಣಿಜಾಃ, ನಖಾಃ, ನಖರಾಃ — ಈ (೬) ಉಗುರ್" (ಹಲಾಯು. ೦೯-೩೩೭) ; "ಪಾಣಿಜಂ ಕಾಮಾಂಕುಶಂ ನಖಮನಲ್ಲುಗುರು" (ಮಂಗರಾ. ೯೫-೮). [ಸಂ.]

**ಪಾಣಿತಲ, ಪಾಣಿತಳ** (ನಾ). ಅಂಗೈತಳ; ಕರತಳ : "ಪಾಣಿತಲ [ ಪಾಠಾಂ. ಳ ] ಮೆಂದೊಡಂಗ್ಯ" (ಮಂಗರಾ. ೯೫-೮). **ಪಾಣಿತಳ :** ದೇಸೆ ವಿಳಾಸಮಂ ಪಡೆಯೆ ಗೊಂದಳವೆಕ್ಕಣಮಾಗಲು ನೃಪಾವಾಸದೊಳಾಡಿ ದತ್ತಸೆಯೆ ಪಾಣಿತಳಂ ಪಡೆವಂತೆ ಕುಂಕುಮಸ್ಥಾಸಕಮಂ (ಮಲ್ಲಿಪು. ೨೨-೦೦); ಪಾಣಿತಳಪ್ರಭೆ ಪಸರಿಸೆ ಶೋಣಿತಚಮರೀಜಮೆನಿಸಿದುವು ಸಿತ ಚಮರಶ್ರೇಣಿಗಳ್ (ಪುಷ್ಪಪು. ೭-೨೮). [ಪಾಣಿ$_2$ + ತಲ]

**ಪಾಣಿತಳ** 'ಪಾಣಿತಲ' ನೋ.

**ಪಾಣಿತ್ರಯ** (ನಾ). [ಸಂಗೀತ] ವಾದ್ಯವಾದನಕ್ರಮದಲ್ಲಿಯ ಸಮಪಾಣಿ, ಅಧಃಪಾಣಿ ಮತ್ತು ಉಪರಿಪಾಣಿಯೆಂಬ ಮೂರು ಬಗೆಯ ಹಸ್ತವಿನ್ಯಾಸ : ವಾದಕನುಪವಾದನಿನೆಸೆವ ಹೃದ್ಯವಾದ್ಯ ವಿಶೇಷಂಗಳೊಳ್ ನೆಗಟ್ದ ಸಮಪಾಣಿಯುಮಧಃಪಾಣಿಯುಮುಪರಿಪಾಣಿಯುಮೆಂಬ ಪಾಣಿತ್ರಯದೊಳಂ . . . ನೆರೆದು (ಅಜಿತಪು. ೫-೩೨ ವ). [ಸಂ.]

**ಪಾಣಿದ** (ನಾ). (?) : ಇವಕ್ಕೆ ಸಾಕ್ಷಿ ಮಿಾಕಣೂರರು ಅಯಿರಣ ಕೀಟಪರು ಆನೆಗರು ಕಟಿಕ್ಕೆಯರು ಚಂಗರಸನು ತಲೆಪರಿಯಾ ಕೆಯ್ಯಾಳದೋರ್ ಕವುಳನ್ನೆಯಾರುಂ ಕಳ್ಳಿಕುಳ್ಳಿಯಂ ಪಾಣಿದರುಂ ಅಕ್ಕಶಾಲೆಯಗಾ ಪುಲಿಯಣ್ಣಂಗಳು ಎರೆಕಾಡನಳೆದೋರ್ (ಕೌತಾ. IX-1. ೯೭-೦೫ ; ಸು. ೧ನೆಯ ಶಶ). [ ? ]

**ಪಾಣಿದಂಡ** (ನಾ). ದೋಣಿಯನ್ನು ನಡೆಸುವ ಹುಟ್ಟು : "ಅರಿತ್ರಯೆನೆ ನೀರ ಹಲುಗೋಲಕ್ಕವಂ ತೆಗೆವ ಗಟ್ಟಿ ಹುಟ್ಟು ಪಾಣಿದಂಡಾಖ್ಯ ಮಕ್ಕುಂ" (ಮಂಗರಾ. ೧೨೩-೦೩). [ ಪಾಣಿ$_2$ + ದಂಡ]

**ಪಾಣಿಪಂಚೆ** (ನಾ). ಸ್ನಾನಕ್ಕಾಗಿ ಉಪಯೋಗಿಸುವ ಜಾಳುಜಾಳಾದ ಪಂಚೆ ; ನೀರುಪಂಚೆ (ಉಕ) : ಇನ್ನು ನಾನು ಅರ್ಧಪಾಟು ಬನೀನು ಪಾಣಿಪಂಚೀಲಿ ಕಾಲಾ ಕಳೆಯಬೇಕು (ವೃದ್ಧವಿ. ೧೦೨); ಉಳಿವವರ ಬಟ್ಟೆ ಕೊಳೆಯಿಂದ ರಟ್ಟಾಗಿದ್ದರೆ ಅಪನದು ಬೆಳ್ಳಗಿರದಿದ್ದರೂ ಹಳ್ಳಿಯ ಹಾರುವರ ಪಾಣಿಪಂಚೆಯಷ್ಟರ ಮಟ್ಟಿಗಾದರೂ ಶುಚಿಯಾಗಿರುತ್ತಿತ್ತು (ಮಲೆಮ. ೩೪). [ಪಾಣಿ$_1$ (< ಪಾಣೀಯ) + ಪಂಚೆ]

**ಪಾಣಿಪತ್ತು** 'ಪಾನಿಪತ್ತು' ನೋ.

**ಪಾಣಿಪಾಡು** (ನಾ). ತೋಟ ; ಉದ್ಯಾನ : ಇಲ್ಲ ಮರಾಳಮಿಲ್ಲದ ಕೊಳಂ ಕೊಳನಿಲ್ಲದ ಪಾಣಿಪಾಡು ಪಾಡಿಲ್ಲದ ತುಂಬಿ ತುಂಬಿಗಳ ಗೊಂದಣ ವಿಲ್ಲದ ಪೂ (ಅನಂಪು. ೩-೯). [ಪಾಣಿ$_3$ ( P ← ತಮಿ. ಪಾಣಿ = ಊರಿನ ಸುತ್ತಲಿನ ತೋಪು) + ಪಾಡು$_3$]

**ಪಾಣಿಪಾತ್ರ** (ನಾ). ೧. ಪಾತ್ರೆಯಂತೆ ಒಡ್ಡಿದ ಕೈ ; ಬೊಗಸೆ : ಶ್ರೇಯಾಂಸಂ . . . ಕನಕಕಳಶದೊಳ್ ಶೀವಿದಮೃತರಸಸಮಾನಧವಳೇಕ್ಷು ರಸಧಾರೆ ಪುಣ್ಯಧಾರೆಯಂತೆ ಸೊಗಯಿಸುವಿನಂ ಸಮುತ್ತಾನೀಕೃತವಿಪಾಲ ಪಾಣಿಪಾತ್ರದೊಳೆರೆವುದುಂ (ಆದಿಪು. ೧೦-೦ ವ); ಕಬ್ಬಿನ ರಸಮಂ ಪಾಣಿಪಾತ್ರದೊಳೆರೆವುದುಂ (ಶಾಪುಂಪು. ೩೯); ಮುನೀಂದ್ರನ ಮೃದು ಕಿಸಲಯಸಮಪಾಣಿಪಾತ್ರದೊಳ್ ಶುದ್ಧಮನಂ ವಸುಧೇಶನಿಕ್ಕಿದಂ ಪಾಯಸಮಂ (ಪುಷ್ಪಪು. ೦೯-೦೦). ೨. [ಜೈನ] ಪನ್ನೊಂದು ಬಗೆಯ ಶ್ರಾವಕರಲ್ಲಿ ಒಬ್ಬ ; ಬೊಗಸೆಯಲ್ಲೇ ಊಟ ಮಾಡುವವನು : ವೈದಿಕಗ್ರಂಥಗಳಿಂದ ದಿಗಂಬರರು, ಶ್ರಮಣರು, ಪಾಣಿಪಾತ್ರರು, ಮಹರ್ಷಿಗಳು, ವಾತರಶನರು ಇರುತ್ತಿದ್ದರೆಂದು ತಿಳಿದು ಬರುವುದರಿಂದ ಈ ಸಂಪ್ರದಾಯವು ಅನಾದಿಕಾಲದ್ದು ಎಂದು ತಿಳಿಯ ಬಹುದು (ಹಿಂದಸಾ. ೭೨). [ಪಾಣಿ$_2$ + ಪಾತ್ರ]

**ಪಾಣಿಪಾತ್ರೆ** (ನಾ). = ಪಾಣಿಪೀಠ : [ಲಿಂಗವ] ಪಾಣಿಪಾತ್ರೆಯೊಂದು ಅಂಗೈಯಲಿಕ್ಕಿದ ಗುರುವೆ (ಶಿವಗೀ. ೭೩-೩೫೩). [ಪಾಣಿ$_1$ (< ಪಾಣೀಯ) + ಪಾತ್ರೆ]

**ಪಾಣಿಪೀಠ** (ನಾ). ಅಭಿಷೇಕದ ನೀರು ಹರಿದು ಹೋಗಲು ಅನುಕೂಲವಾಗುವಂತೆ ಲಿಂಗದ ಸುತ್ತಲೂ ತಗ್ಗಾಗಿರುವ ಪೀಠ: 'ಪಾಣಿಪೀಠಲಿಂಗ' ಪರಾ. [ಪಾಣಿ$_1$ (< ಪಾಣೀಯ) + ಪೀಠ]

**ಪಾಣಿಪೀಠಲಿಂಗ** (ನಾ). ಅಭಿಷೇಕದ ನೀರು ಹರಿದು ಹೋಗಲು ಅನುಕೂಲವಾಗುವಂತೆ ಸುತ್ತಲೂ ತಗ್ಗಾಗಿರುವ ಪೀಠವುಳ್ಳ ಲಿಂಗ: ಗರ್ಭಗುಡಿಯಲ್ಲಿ ಬಳಪದ ಕಲ್ಲಿನ ಪಾಣಿಪೀಠಲಿಂಗ ಮೂರು ಅಡಿ ಎತ್ತರ ವಿದೆ (ಹೊಯ್ಸಳವಾ. ೦೨೨). [ಪಾಣಿಪೀಠ + ಲಿಂಗ]

**ಪಾಣಿಪೀಡನ** (ನಾ). ೧. ಕೈಯನ್ನು ಹಿಸುಕುವುದು. ೨. ಪಾಣಿಗ್ರಹಣ; ಮದುವೆ : "ಉಪಯಾಮ ವಿವಾಹೋದ್ವಾಹ ಪರಿಣಯಂ ಪಾಣಿಪೀಡನಕ್ಕಾಖ್ಯೆ" (ಪಸ್ತುಕೋ. ೫೩-೦೦). [ಪಾಣಿ$_2$ + ಪೀಡನ]

**ಪಾಣಿಪುಟ** (ನಾ). ಬೊಗಸೆ : ಮೌನಿಯುಂ ಮೌನಿಸಮಾನನುಂ ಮೋಕ್ಷಯೋಗ್ಯಚರ್ಯಾಕಾಲದೊಳ್ ಒರ್ಮೆಯುಂ ತನುವಂ ತೋರ್ಪನುಂ

ಪಾಣಿಪುಟಮಾತ್ರಪಾತ್ರನುಂ . . . ಇಂತಪ್ಪ ಮುನಿಗೆ ಸಿಕ್ಕುಮಂ ಅಲಾಭ ಪರೀಷಹಜಯಮುಮಕ್ಕುಂ (ಶಕ್ತ್ಯ.ಶ್ರ. ೩೩೬). [ಪಾಣಿ₂ + ಪುಟ₂]

**ಪಾಣಿಬಟ್ಟಲು** 'ಪಾಣಿವಟ್ಟ' ನೋ.

**ಪಾಣಿಮುಕ್ತ** (ನಾ). ಕೈಯಿಂದ ಎಸೆಯಬಹುದಾದ ಶಕ್ತಿ ಮೊದಲಾದ ಆಯುಧ : "ಬಿಟ್ಟೀಟು ಮೊದಲಾದುದು ಕೆಯ್ಯಿಂ ಬಿಡಲ್ಪಡುವುದು ಪಾಣಿ (ಕರ) ಮುಕ್ತಮೆಂಬುದು" (ಜಲಾಯು. ೭೭-೩೦೯) : ಅಗ್ನಿಪುರಾಣವು ಆಯುಧಗಳನ್ನು ಅಸ್ತ್ರ ಮತ್ತು ಶಸ್ತ್ರಗಳೆಂದು ಎರಡು ಭಾಗಗಳಾಗಿ ವಿಂಗಡಿಸುತ್ತದೆ. ಅವುಗಳಲ್ಲಿ ಮೊದಲನೆಯದನ್ನು (೧) ಯಂತ್ರಮುಕ್ತ, (೨) ಪಾಣಿಮುಕ್ತ, (೩) ಮಂತ್ರಮುಕ್ತ, (೪) ಮುಕ್ತಸಂಧಾರಿತ (ಬಿಟ್ಟು ಹಿಂದಕ್ಕೆ ಪಡೆವದ್ದು) ಎಂದು ನಾಲ್ಕಾಗಿ ವಿಭಾಗಿಸುತ್ತದೆ (ಕಜಾಕ. ೨೭೩). 'ಪಾಣಿಮುಕ್ತಗತಿ' ಪರಾ.
[ಪಾಣಿ₂ + ಮುಕ್ತ]

**ಪಾಣಿಮುಕ್ತಗತಿ** (ನಾ). ಸಂಸಾರಿಜೀವಕ್ಕೆ ಇರುವ ನಾಲ್ಕು ಗತಿಗಳಲ್ಲಿ ಒಂದು ; ಒಂದು ದೇಹವನ್ನು ತೊರೆದು ಇನ್ನೊಂದನ್ನು ಪಡೆಯುವುದಕ್ಕಾಗಿ ಜೀವವು ಕೈಕೊಳ್ಳುವ ಗಮನಕ್ಕೆ ವಿಗ್ರಹಗತಿಯೆಂದೂ ಹೆಸರಿದ್ದು, ಅದು ಇಷುಗತಿ, ಪಾಣಿಮುಕ್ತಗತಿ, ಲಾಂಗಲಗತಿ ಹಾಗೂ ಗೋಮೂತ್ರಗತಿ ಎಂದು ನಾಲ್ಕು ವಿಧವಾಗಿದೆ : ನಿರ್ಮುಕ್ತಬಾಣದಂತೆ ಋಜುವಪ್ಪ ಇಷುಗತಿಯುಂ ಇಟ್ಟ ಗುಂಡಿನವೋಲ್ ಏಕಚಕ್ರಮನುಳ್ಳ ಪಾಣಿಮುಕ್ತಗತಿಯುಂ . . . ಗೋಮೂತ್ರಗತಿಯುಂ ಎಂದು ಗತಿ ನಾಲ್ಕುತೆಱಂ (ಶಕ್ತ್ಯ.ಶ್ರ.೧೦೦); ಒಂದೇ ಸಮಯದೊಳೆಚ್ಚಂಬಿನಂತೆ ಸಯ್ಪೋಪಿಷುಗತಿಯುಮೆರಡುಸಮಯದೊಳಿಟ್ಟ ಗುಂಡಿನಂತೆ ಒಂದೇ ಕೊಂಕಿನಿಂ ಪೋಪ ಪಾಣಿಮುಕ್ತಗತಿಯುಂ ಮೂಱುಸಮಯದೊಳು ನೇಗಿಲಂತೆರಡು ಕೊಂಕಿನಿಂ ಪೋಪ ಲಾಂಗಲಗತಿಯುಂ ನಾಲ್ಕುಸಮಯದೊಳ್ ಗೋಮೂತ್ರದಂತೆ ಮೂಱು ಕೊಂಕಿನಿಂ ಪೋಪ ಗೋಮೂತ್ರಗತಿಯುಂ (ಕಜಾರ. ೫೯೪).
[ಪಾಣಿಮುಕ್ತ + ಗತಿ]

**ಪಾಣಿಮೂಲ** (ನಾ). ಮಣಿಕಟ್ಟು ; ಮುಂಗೈ ಹರಡು; ಪ್ರಕೋಷ್ಠ: "ಪಾಣಿಮೂಲಮೆನೆ ಮಣೀಟ್ಟು" (ಶಬ್ದಗಣ. ೯೩-೮).
[ಪಾಣಿ₂ + ಮೂಲ₂]

**ಪಾಣಿಯ** 'ಪಾಣೀಯ' ನೋ.

**ಪಾಣಿಯದರ** 'ಪಾಣೀಯದಾರ' ನೋ.

**ಪಾಣಿಯದಾರ** 'ಪಾಣೀಯದಾರ' ನೋ.

**ಪಾಣಿಯಬಾರ** 'ಪಾಣೀಯದಾರ' ನೋ.

**ಪಾಣಿಯವಣ್ಣ** (ನಾ). ಒಂದು ಬಗೆಯ ವಸ್ತ್ರವಿಶೇಷ : ಉಟ್ಟ ಪಟ್ಟಣಿಗೆಯುಂ ಪೊದೆದ ಪಾಣಿಯವಣ್ಣಮುಮೆಸೆಯೆ (ಮಲ್ಲಿ. ೮-೧೫೭). 'ಪಾಣಿಯವಾಸ' ಪರಾ. [ಪಾಣಿಯ ? + ಬಣ್ಣ]

**ಪಾಣಿಯವಾಸ** (ನಾ). ಒಂದು ಬಗೆಯ ವಸ್ತ್ರವಿಶೇಷ : ಈ ವನವೀಥಿಯೊಳ್ ಬಳೆದ ಬಾಳದ ಬೇಗಿನ . . . ಕೇದಗೆಯಿಂಪುವೆತ್ತ ಕಂಪಾವಗಮಿಲ್ಲಿ ಪಲ್ಲವಿಸೆ ಪಾಣಿಯವಾಸಮನಿಕ್ಕಿದಂತೆ ಸೌಖ್ಯಾವಹಮೆಂದೊಡೀ ನದಿಯನೀಕ್ಷಿಸೆ ಪಾಂಥನ ತೃಷ್ಣೆ ಪೋಗದೇ (ಪಾರ್ಶ್ವ. ೯-೫). 'ಪಾಣಿಯವಣ್ಣ' ಪರಾ. [ಪಾಣಿಯ ? + ವಾಸ್ತ₂]

**ಪಾಣಿಲಾಘವ** (ನಾ). ೧. ಕೈಚಳಕ ; ಹಸ್ತಚಾತುರ್ಯ : ಕೇಣಮಿಲ್ಲದೆ ಚಾರಿ ಚಳಕ ಚಾಳಿಯ ಚದುರ್ ಪಾಣಿಲಾಘವ ಪಂಥಪಾಡುಗಳನಱಿದು ಬಿನ್ನಾಣದಿಂ ಗಾಯಗಾಣಿಸಿದರತಿಬಲರಲ್ಲಿ ನಾನಾಪ್ರಹಾರದಿಂದೆ (ಕೈಬಿಕಾ. ೨೨-೬). ೨. ಕೈನೆರವು ; ಹಸ್ತಾವಲಂಬನ : ಭುಜಾಂತೆಯುಂ . . . ವೈವಾಹಸನ್ನಂಟಪನಿಕಟಕ್ಕೆ ಕರೆದೊಯ್ಯಲವಸರದಲೊರ್ವೆ ಸದ್ಮುಕುತಿಯಿಂ ಪಾಣಿಲಾಘವಮೀಯೆ ರಾಜಿಸಿತು ಮಕರಕೇತನನಿಟ್ಟ ದೇವತೆಗೆ ನವಕಿಸಲಯೋಪಾಯನಂಗೈದೊಲು (ವಂಕಾರಾ. ೧-೨೨-೧೭). [ಪಾಣಿ₂ + ಲಾಘವ]

**ಪಾಣಿವಟ** 'ಪಾಣಿವಟ್ಟ' ನೋ.

**ಪಾಣಿವಟ್ಟ**, ಪಾಣಿಬಟ್ಟಲು, ಪಾಣಿವಟ, ಪಾಣಿವಟ್ಟಲು, ಪಾಣಿವಟ್ಟು, ಪಾನಿವಟ್ಟಲು (ನಾ). = ಪಾಣಿಪೀಠ : ದೇವರದಾಸ ನಾಥವರ್ಮ್ಮನೀ ದೇಗುಲಮಂ ಕಣ್ಣಪೀಠ ಪಾಣಿವಟ್ಟಸಹಿತಂ ಕಲ್ಲೋಳ್ಮಾಡಿಸಿದಂ (ಎಕ. XI, ಜಗಳೂ. ೨೯-೧೦; 920) ; ಲಿಂಗಗಳು ಪಾಣಿಪಟ್ಟಗಳು ಸಿಕ್ಕಿರುವುದರಿಂದ . . . ಶೈವಮತವನ್ನು ಅತ್ಯಂತಪ್ರಾಚೀನವೆಂದು ಹೇಳಲಾಗಿದೆ (ಶಾರದ. ೧೭). **ಪಾಣಿಬಟ್ಟಲು** : ಈ ದೇವಸ್ಥಾನದಲ್ಲಿರುವ ಲಿಂಗಕ್ಕೆ ಬಳಪದ ಕಲ್ಲಿನ ಪಾಣಿಬಟ್ಟಲಿದೆ (ಅದೇ). **ಪಾಣಿವಟ** : ಕೊಡಂದೇರ ಮೋದ್ಯೆಯ ದೇವರ ಪಾಣಿವಟ ತೆರೆಕಲಮೆಟುಕಲಾ ಸಹ ಸಾಯ ಮಾಡಿದು (ಎಕ. IX, ಕೊಡಗು. ೨೯-೨೩; 1867). **ಪಾಣಿವಟ್ಟಲು** : ಪ್ರತಿಅಂಕಣದ ನಡುವೆ ಅಮೃತಶಿಲೆಯ ಪಾಣಿವಟ್ಟಲುಳ್ಳ ಸ್ಫಟಿಕದ ಲಿಂಗ (ಮುಸುಗ. ೧೩೦). **ಪಾಣಿವಟ್ಟು** : ಈ ಲಿಂಗಗಳು ಬಾಣ ಪಾಣಿವಟ್ಟುಗಳಿಂದ ಕೂಡಿದ ಆಕೃತಿಯಲ್ಲಿಲ್ಲ (ಶಾರದ. ೨೦೮). **ಪಾನಿವಟ್ಟಲು** : ಆ ದೇವಸ್ಥಾನದಲ್ಲಿರುವ ಕಪ್ಪುಶಿಲೆಯ ಲಿಂಗ, ಪಾನಿವಟ್ಟಲುಗಳು ತುಂಬಾ ಚೆನ್ನಾಗಿವೆ (ಅದೇ).
[ಪಾಣಿ₁ (< ಪಾಣೀಯ) + ಪಟ್ಟ₃. / ತಮಿ. ತೆಲು. ಪಾನವಟ್ಟ]

**ಪಾಣಿವಟ್ಟಲು** 'ಪಾಣಿವಟ್ಟ' ನೋ.

**ಪಾಣಿವಟ್ಟು** 'ಪಾಣಿವಟ್ಟ' ನೋ.

**ಪಾಣಿವಾದ** (ನಾ). ೧. ಹರೆ, ಮೃದಂಗ ಮೊದಲಾದ ವಾದ್ಯಗಳನ್ನು (ಕೈಗಳಿಂದ) ಬಾರಿಸುವವನು. ೨. ಕೈತಾಳ ಹಾಕುವವನು : "ಪಾಣಿವಾದಃ. ಪಾಣಿಘಃ — ೨ ಕೈತಾಳ ಹೊಡೆಯುವವನ ಹೆಸರು" (ಸಿದ್ಧಾಂತ. ೩೦೧). [ಸಂ.]

**ಪಾಣಿಶಾಖೆ** (ನಾ). ಕೈಬೆರಳು : "ಪಾಣಿಶಾಖೆಗಳಂಗುಲಿಗಳೆನಲು ಬೆರಲುಗಳು" (ಶಬ್ದಗಣ. ೯೩-೮). [ಸಂ. ಪಾಣಿಶಾಖಾ]

**ಪಾಣೀಯ**, ಪಾಣಿ₁, ಪಾಣಿಯ (ನಾ). ನೀರು; ಜಲ: 'ಪಾಣೀಯದಾರ' ಪರಾ. **ಪಾಣಿ₁** : ಭೂನಾಥ ನೋಡಲು ಪಾಣಿಯೊಳ್ಪಿಸುಡಲು ತಾನೆಸೆಯಲು ಮುನ್ನಿನಂತೆ (ಕರಣಾ. ೮-೬೦); ಚಾ ಪಾಣಿ ಯಮಸ್ನಾನೂ ಆಗಬೇಕೆನರಿ ಮತ್ತ (ಕಡಿದಾ. I, ೨೬೪). 'ಕತ್ತರಿವಾಣಿ' ಪರಾ. **ಪಾಣಿಯ** : "ಪಾಣಿಯ (ವಾಣಿ)—ಪಾನೀಯ" (ಶಬ್ದಕೋ. ೨೬).
[< ಸಂ. ಪಾನೀಯ. / ಪ್ರಾ. ಪಾಣಿಅ]

**ಪಾಣೀಯದರ** 'ಪಾಣೀಯದಾರ' ನೋ.

**ಪಾಣೀಯದಾರ**, ಪಾಣಿಯದರ, ಪಾಣಿಯದಾರ, ಪಾಣಿಯಬಾರ, ಪಾಣೀಯದರ, ಪಾಣೀಯಬಾರ (ನಾ). ನೀರು ಹರಿದುಹೋಗುವ ಮಾರ್ಗ ; ಚರಂಡಿ ; ಜಲಮಾರ್ಗ : "ಪಾಣೀಯದಾರ (—ದರ, ಬಾರ) — ಪಾನೀಯದ್ವಾರ = ಜಲಮಾರ್ಗ" (ಶಬ್ದಕೋ. ೨೬); ಪಾಣೀಯದರಂ, ಪಾಣೀಯದಾರಂ, ಪಾಣೀಯಬಾರಂ (ಶಬ್ದಾನು. ೩೭೮ ವೃತ್ತಿ). **ಪಾಣಿಯದರ** : "ಪಾಣಿಯದರಂ, ಪಾಣಿಯದಾರಂ, ಪಾಣಿಯಬಾರಂ—ಈ ೩ ಪಾನೀಯದ್ವಾರಕ್ಕೆ ಪೆಸರ್" (ಕರಣಾ. ೫೯-೩೦೦). **ಪಾಣಿಯದಾರ** : ಮೇಲಿನ 'ಕಶಸಾ' ಪ್ರಯೋಗವನ್ನು ನೋಡಿ. **ಪಾಣಿಯಬಾರ** : ಟಂಟಣಿಸುತ್ತವಿಪ್ಪರ್ (ನ್ರ)(ನೃ)ಪಾಳರ ಹಿಂಡ ನಿಜಾಸಿ ದಂಣ್ಣದಿಂ ಕಂಟಿಯ ಬಾರದೊಳ್ ಸುಳಿಸಿ ಪಾಣಿಯಬಾರದ ನೀರನೂಡಿ ನಿಃಕ್ಕ(ಕ)ಂಟಕವಾಗೆ ಮಾಡಿ ಪಡೆದಂ ಸಲೆ ದಂಡಿನ ಗೋವನೆಂಬುದಂ ಬಂಟರ ಬಲ್ಲಹಂ ನೆಗೆದ ಬಲ್ಲಹರೊಳ್ ಕಲಿ ಬರ್ಮ್ಮಭೂಭುಜಂ (ಎಕ. XII, ೯೭-೧೯; 1188 ; ಶಾಶಕಮು. ೦೮೯-೦೦೫೩ ನೋ) ; **ಪಾಣೀಯ**

ದ್ವಾರ—ಪಾಣೆಯಬಾರ (ಕಮರ. ೨೯೬ ಕ್ರಿಯೋ). **ಪಾಣೇಯದರ :** ಮೇಲಿನ 'ಪಾಣೇಯದಾರ' ಉಲ್ಲೇಖದಲ್ಲಿರುವ 'ಶಬ್ದಾನು' ಪ್ರಯೋಗವನ್ನು ನೋಡಿ. **ಪಾಣೇಯಬಾರ :** ಮೇಲಿನ 'ಪಾಣೇಯದಾರ' ಉಲ್ಲೇಖದಲ್ಲಿರುವ 'ಶಬ್ದಾನು' ಪ್ರಯೋಗವನ್ನು ನೋಡಿ. [ <ಸಂ. ಪಾನೀಯದ್ವಾರ ]

**ಪಾಣೇಯಬಾರ** 'ಪಾಣೇಯದಾರ' ನೋ.

**ಪಾಣ್ನಾಟ** (ನಾ). ಒಂದು ಪ್ರದೇಶದ ಹೆಸರು : ಶ್ರೀಮತ್ಕೊಜ್ಜಣಿ ವೃದ್ಧರಾಜೇನ ದುವ್ವಿನೀತ ನಾಮತೇಯೇನ ಸಮಸ್ತಪಾಣ್ನಾಟ ಪುನ್ನಾಟಾಧಿಪತಿನಾ . . . ತೈತ್ರಿಯ ಚರಣ ಭೂತಶರ್ಮ್ಮಗ್ಗೆ ಶಾಲಿಗ್ರಾಮೆ ಸರ್ವಪರಿಹಾರ ಪರಿಗ್ರಹದಿನ್ತು ಪಾಣಿಗ್ರಹಣಂ ಕೆಯ್ದು ಕೊಟ್ಟಾರ್ (ಮೈಶಾ. ೧೯೪೧. ೧-೨೮; 788). [ ? ]

**ಪಾಣ್ಬ,** ಪಾಂಬ (ನಾ). ಜಾರ ; ಹಾದರಿಗ ; ವ್ಯಭಿಚಾರಿ : "ಜೊಡಂ ಪರಳಿಗನು ಪಾಣ್ಬ ಸಿತಗಂ ಜಾರಂ" (ಕಶಂ. ೦೬೦) ; ನಾಣಿಲಿ ಪಾಣ್ಬಂ ಪಂದೆ ಲೋಭಂ ಖಳಂ . . . ಎಂಬೀ ನಾಮನಾಮಾವಳಿಗೆ ನಿಳಯನಕ್ಕುಂ ವ್ರತವ್ರಾತಹೀನಂ (ಶಾ. ೧೦-೩೦); ಅನಲ್ಲಿಗೆ ಪರ್ಪನೆಂ[ದಾ ಪಾಣ್ಬ]ನಂ ನಂಬೆ ನುಡಿದಾ ಪೊಟ್ಟಿಗೆನ್ನನಲ್ಲಿಗೆ ವರಿಸು (ಶಂಕಥಾ. ೮-೬೨೬) ; ಪಾಣ್ಬನೆಟ್ಟಿದೊಯ್ಯೆ ನಿನ್ನ ಕುಟುಂಬಿನಿಯಂ ಕಾದೆಯಿಲ್ಲ ರಾಪೂತ್ಕೃತಿಯಿಂ (ಜಗಂ. ೦೭-೯೦). **ಪಾಂಬ :** ಪಾಂಬನಂ ದ[ನುಜನನು]ಗ್ರಖಡ್ಗಮುಖ ದಿಂದಿಱದೊತ್ತಿದ ದುರ್ಗಿ . . . ಪರಿರಕ್ಷಿಸುತಿರ್ಕೆ (ಶಂಕಶಂ. ೨-೨೦); ಪರ ಲಲನೆಗಳಿಪಿ ಬಿಡೆ ಚಪ್ಪರಿಸುತ್ತಂ ಬಂದ ಪಸವ[ಪಾಠಾಂ. ದ]ನಂ ಪಾಂಬನ ನಟ್ಟುರಿಯಾಗೆ ಕಾದುತಂ ಬೆರಸರಿದಿರದೆತ್ತಿಸುವೆನಾಜಿಯೊಳ್ ಪಂದಲೆಯಂ (ಪರಶು. ೪-೨೦).

**ಪಾಣ್ಬರಂಕುಸ,** ಪಾಂಬರಾಂಕುಶ=ಒಂದು ಬಿರುದು : ಸಂಸಾರ ಸಾರೋದಯಂ ಮಱುವಕ್ಕದಲ್ಲಟಂ ನೋಡುತ್ತೆ ಗಲ್ವಂ ಪಾಣ್ಬರಂಕುಸಂ ಅಮ್ಮನ ಗಂಧವಾರಣಂ (ಶಂಕಥಾ. ೧-೪೮ ಪ) ; ಚಾಳುಕ್ಯವಂಶೋದ್ಭವಂ ಪಾಂಬರಾಂಕುಶನಪ್ಪನ ಗನ್ಧವಾರಣಂ (ಕಶಿ. ೨೪-೦೩-೬೯; ?).

**ಪಾಣ್ಬುತನ** (ನಾ). ಹಾದರ ; ಜಾರತನ ; ವ್ಯಭಿಚಾರ : "ಜಾಡ— ವ್ಯಭಿಚಾರೇ, ಪಾಣ್ಬುತನದೊಳ್" (ಶಾಶ್ಕ. ೨೬೬) ; ಆಗಳ್ ಜಸಂ ಕೆಯ್ದುವನಿಕ್ಕಿ ವೀರಶ್ರೀಗಾಣ್ಮನಯ್ ಪಾಣ್ಬುತನಕ್ಕೆಳಪ್ಪಯ್ ಪೋಗೇಕೆ ನೀಂ ಮೆಯ್ಗರೆದಿರ್ಪಯೆಂದಾ ಭೋಗೀಶ್ವರಂಗಂದು ವಿನಮ್ರನಾದಂ (ಶಾಪ್ಯ. ೧೬೩). [ ಪಾಣ್ಬ + —ತನ ]

**ಪಾಣ್ಬು** (ನಾ).=ಪಾಣ್ಬುತನ : "ವಿಂಠ—ವ್ಯಭಿಚಾರೇ, ಪಾಣ್ಬಿನೊಳ್" (ಶಾಶ್ಕ. ೨೨); "ಹಾದರಃ—ಪಾಣ್ಬು" (ಶಾಶ್ಕ. ೮೩). [ಪಾಣ್ಬ + —ಉ]

**ಪಾಣ್ಬೆ,** ಪಾಂಬೆ (ನಾ). ಜಾರೆ ; ಹಾದರಗಿತ್ತಿ ; ವ್ಯಭಿಚಾರಿಣಿ : "ಪುಂಶ್ಚಲಿ ಕುಲಟೆಯಸತಿ ಕುಲಪಾಂಸುಳೆ ಬಂಧಕಿ ಜಾರೆ ಪಾಣ್ಬೆಯಿತ್ವರಿಕೆ ಯವಳ್" (ಚನ್ನಕೋ. ೩೨-೪) ; ಪಾಣ್ಬರಂಕುಸನಾ ಪಾಣ್ಬೆಯರ ಗೆಯ್ವ ಗೆಯ್ತಂಗಳುಮಂ . . . ಕಂಡು ಚೋದ್ಯಂಬಟ್ಟು (ಶಂಕಥಾ. ೪-೮೩ ಪ); ನಾರಾಯಣಭಟ್ಟಂ . . . ಆ ಪಾಣ್ಬೆಯ ಡಂಭತನಕ್ಕೆ ಬೆಱಗಾಗಿ (ಶಂಕಶಂ. ೨೨೯-೦೦); ಜಡನಂತವಿಚಾರಿಯಾಗದೆ ಪಾಣ್ಬೆಯಂತೆ ಮತ್ತೊಂದು ಮನಮಾಗದೆ ನಪುಂಸಕನಂತೆರಡಕ್ಕಾಸೆಗೆಯ್ಯದೆ (ಧರ್ಮಾಪು. ೧-೧೦೩). **ಪಾಂಬೆ :** ಕಾಂ ತನಗಮಿಂಬಾದಾಗಳಾ ಪಾಂಬೆ[ಪಾಠಾಂ. ಪಾಣ್ಬೆ]ಯೆಂದು ದನೆಂಗುಂ ಸುಟುಯುತ್ತ ಪೊತ್ತುಗಳೆಗುಂ ಜಾರಂ ಮಹಾಕ್ಲೇಶದಿಂ (ಸಮುಪ. ೫-೫೫); ಎಲವೆಲವೋ ನೀನಗಲ್ದೊಡೆ ನಿಲಲಾಜದ ಪಾಂಬೆ ಬಂದಳೀಯಿರ್ದಳೆ ಬಾ (ಪರಶು. ೦೦-೨೨). [ ಪಾಣ್ಬ + —ಎ ]

**ಪಾತ₁** (ನಾ). ೧. ಹಾರುವುದು ; ಹಾರಾಟ. ೨. ಬೀಳುವುದು ; ಪತನ : 'ಗರ್ಭಪಾತ' ಪರಾ. ೩. (ಬಾಣವನ್ನು) ಬಿಡುವುದು : ಪಾತಂ ಲಕ್ಷ್ಯಂ ಶೀಘ್ರಂ ಘಾತಂ ಬಹುವೇಗವೆಂಬಿವಯ್ದೇಸಿನೊಳಂಶಿತನ ದೊರೆಯಿಲ್ಲೆನಿಸಿದುದಾತನ ಬಿಲ್ಬಲ್ಮೆ ಸುರರಿನಂಬರತಲದೊಳ್ (ಶಂಕಥಾ. ೧೨-೦೮೫). ೪. ಪೆಟ್ಟು ; ಹೊಡೆತ : ಅಯ್ಯೊ ಏನೀ ಘಾತ! ಮರಣ ಮರ್ಮಾಘಾತ! ಅರಳಿಗಶನಿಯ ಪಾತ! (ಕ್ರಾಂತರ್ಪ. ೩೨-೨೦). ೫. ಆಕ್ರಮಣ ; ಧಾಳಿ. ೬. (ಮಲ್ಲಯುದ್ಧದ) ಪಟ್ಟು ; ವರಸೆ : ಕಳಂಬೊಕ್ಕು ನಿಜಿಸುಗೆಯ್ದು ನಖಹತಿ ದಶನಹತ್ತಿ ಪಾದಪಾತಂ ಮುಷ್ಟಿಪಾತವೆಂಬ ದೋಷಂಗಳಂ ಪೊರ್ದದ ನಾಲ್ಕುಂ ಸ್ಥಾನದೊಳಂ . . . ಪಲತೆಱದ ಪಾತಂಗಳೊಳಂ ನೆರೆದು (ಶಂಕ್ರತು. ೫-೭೭ ಪ); ಅಥಟಂದಂ ಮೂಱುಂ ಲಗ್ಗದ ನಾಲ್ಕುಸ್ಥಾನವೆಯ್ದು ಡೊಕ್ಕರದ ಮಹೋಗ್ರದ ಮೂಱತೆರಡು ಬಿನ್ನಣದೊದವಂ ಪಲವು ತೆಱದ ಪಾತವ ಮೆಱದರ್ (ಕೃಪು. ೨೬-೦೭). ೭. ಹಾಳು ; ನಾಶ : 'ಗ್ರಂಥಪಾತ' ಪರಾ. ೮. ತಪ್ಪು ; ದೋಷ. ೯. (ನೆಲಮಟ್ಟದ) ಇಳಿತ ; ತಗ್ಗು : ನಾಲೆಗಳು ವಿವಿಧವಾದ ಉಬ್ಬುತಗ್ಗಿನ ಭೂಮಿಯಲ್ಲಿ ನೂರಾರು ಮೈಲಿಗಳ ದೂರ ಹೋಗುವಾಗ ಅನೇಕ ಕಲ್ಲುಗಾರೆಯ ಕಟ್ಟಡಗಳು ಬೇಕಾಗುತ್ತವೆ. ಅವನ್ನು ಈ ರೀತಿ ವಿಂಗಡಿಸಬಹುದು. A. ಪಾತಗಳು (Drops) ಕಡಿದಾದ ಇಳಿಕಲುಗಳು (Rapids) . . . ಪಾತವು ನಾಲೆಯ ತಳದಲ್ಲಿ ಒಂದು ಮೆಟ್ಟಲಿನ ಹಾಗೆ (ಕಿಸ್ಪಾ. ೩೬೬). ೧೦. (ನೋಟವನ್ನು) ಹರಿಸುವಿಕೆ ; ಹೊರಳಿಸುವಿಕೆ : ಜಳಧರ ಸಮಯನಿಶಾಸಂಚಲಿತವಿದ್ಯುತ್ಪಿಂಗಳಾಕ್ಷಪಾತಂಗಳಿಂ ದೆಸೆಗಳಂ ನುಂಗು ವಂತೆ ಮುಳಿದು ನೋಡಿ (ಶಂಕಥಾ. ೦೩-೭೫ ಪ). 'ದೃಷ್ಟಿಪಾತ' ಪರಾ. ೧೧. [ನಾಟ್ಯ] ನರ್ತನಕಾಲದಲ್ಲಿ ಕಣ್ಣಿನ ಆಲಿಗಳನ್ನು ಚಲಿಸುವ ಒಂದು ವಿಧಾನ : "ಕೆಳಗಡೆ ನೋಡುವುದು" (ಶಾಸ್ತ್ರಂ. ೨೬೪ ಗದ್ಯಾನುವಾದ): ಭ್ರಮಣ, ವಲನ, ಪಾತ . . . ಪ್ರಾಕೃತ — ಈ ಒಂಬತ್ತು [ಸ್ವನಿಷ್ಠ] ಆಲಿಯ ಭೇದಂಗಳ್ (ಶಾಸ್ತ್ರಂ. ೩-೫೪ ಪ); ಕೆಳಗಂ ನೋಡಲ್ ಪಾತಂ (ಶಾಸ್ತ್ರಂ. ೩-೫೬). [ ಸಂ. ]

**ಪಾತ₂** (ನಾ). ಒಂದು ಬಗೆಯ ಸಸ್ಯ : ನೀಮುಱಾ, ಪರೇರಾಬೇರು, ಪದ್ವಲಿ, ಪಾತ, ಕಾಡುಬಳ್ಳಿ (ಮೈಶಿ. ೨೦-೩೯೦). [ ? ]

**ಪಾತಂಗ** 'ಪತಂಗ₂' ನೋ.

**ಪಾತಂಜಲ** (ನಾ). ೧. ಪತಂಜಲಿಮಹರ್ಷಿಯಿಂದ ರಚಿತವಾದ ಯೋಗ ಶಾಸ್ತ್ರ ; ಷಡ್ದರ್ಶನಗಳಲ್ಲಿ ಒಂದು : ಪಾತಂಜಲ ಯಮಪಾದ್ಯ ಷ್ಟಾಂಗಯೋಗಸಾಧನದಿಂ ಮನೋನಿಶ್ಚಲತೆಯಂ ನಿಶ್ಚಲಪರಿಪಕ್ವಾಂತಃ ಕರಣಂಗೆ ಮೋಕ್ಷಸಿದ್ಧಿಯಂ ಬೋಧಿಸಿ ಸಾಧಿಸುವುದು (ಶವೀಳ. ೧೦). ೨. ಪಾಣಿನಿಯ ಅಷ್ಟಾಧ್ಯಾಯಿಸೂತ್ರಗಳಿಗೆ ಪತಂಜಲಿಯು ಬರೆದ ವ್ಯಾಖ್ಯಾನ : ಮಹಾಭಾಷ್ಯ. [ ಸಂ. ]

**ಪಾತಕ** (ಗು). ೧. ಪಾಪ ಮಾಡಿದ ; ಪಾತಕಿಯಾದ : ರಾತ್ರಿಯ ಲೊತ್ತೆಯ ಕೊಂಬ ಪಾತಕಸೂಳೆಯಂತೆ ಬಱಿಯ ಮಾತಿಂಗೊಲಿವನೆ ನಮ್ಮ ಕೂಡಲಸಂಗಮದೇವ (ಬಸವ. ೪೬೮). (ನಾ). ೨. ಬೀಳುವಂತೆ ಮಾಡುವುದು ; ಬೀಳಿಸುವುದು. ೩. ಕೆಟ್ಟ ಕೆಲಸ ; ಪಾಪ ; ದೋಷ : "ವೃಜಿನಂ, ದುರಿತಂ . . . ಪಾತಕಂ—ಈ ೧೪ ಪಾಪಂ" (ಶಠಾಯು. ೧೦೩-೬); ಅಪವಿತ್ರನುಡಿಯ ನುಡಿವ ಸೂತಕವೇ ಪಾತಕ (ಬಸವ. ೭೬೯); ನಿನ್ನೊಡನೆ ನಗುತಿಪ್ಪ ಪಾತಕವೆನ್ನೊಳೆಂದಿಗೆ ಪರಿಹರಿ ಸುವುದು ನಿನ್ನುಮಂ ಕೋಪಿಸುವ ಪಾಪಂ ಹಱವುದೆನಗೆಂದೊ (ಬಸಪು. ೪೫-೮); ನಟ್ಟ ದೃಷ್ಟಿಯ ತೆಗೆಯಲಾಱದೆ ಸೋತು ಕೀಚಕ ಪಾತಕವ ನೆನೆದ (ಕುಮ್ಮಾ. ೨-೯). ೪. ಪಾಪ ಮಾಡಿದ ವ್ಯಕ್ತಿ ; ಪಾಪಿ ; ಪಾತಕಿ : ದಶಸ್ಥಾನಕದೊಳ್ ರವಿಸುತನಿರೆ ಶೂಲದೊಳಿಕ್ಕುವರಾ ಲಗ್ನ ಪ್ರಸೂತನಂ ಪಾತಕನಂ (ಜಾತಕ. ೨೩-೭); ಮಾತಿನಲೆ ಒಲಿಸಿ ಮಹತ್ತಪ್ಪ

ಲಿಂಗವ ಕಂಡಹೆನೆಂಬ ಪಾತ್ರಕರ ಮೆಚ್ಚ ನಮ್ಮ ಕೂಡಲಸಂಗಮದೇವ (ಬಸವ. ೭೯೭); ಮುರಿಯಲಾಗದು ಕೊಂಡ ಹಜ್ಜೆಗಳ ಹೊರಳಿವೆಣನನ್ನು ಮೆಟ್ಟಿ ಮುಂದಣನೆಗುರವಣಿಸುವುದು ಕ್ಷಪ್ಪಿದವರಿಗೆ ನರಕವೀ ಪಾತಕರ ಗತಿ ನಮಗೆಂದು ಸಾಚಿದರು (ಕುಮ್ಮಾದ್ರೋ. ೨-೭). [ ಸಂ. ]

**ಪಾತಕಿ** (ನಾ). ಪಾಪವನ್ನು ಮಾಡಿದ ವ್ಯಕ್ತಿ ; ಪಾಪಿಷ್ಠ : ಪಾತಕಿಯೊಳ್ ಲಕ್ಷ್ಮಿಯೊಳಶಿಕಾತರಕಾಪುರುಷಗಣನೆಯೊಳ್ ನೆರೆ ಯಲ್ಕಿಂತೀತನೆ ಬಗೆಗಾಂ ಪುರುತನುಜಾತರ ಬಗೆದುದನೆ ಬಗೆವೆನಟಿಪಂ ಬಗೆಯೆಂ (ಆದಿಪು. ೧೪-೦೨೩); ಮಲಹರಂಗಂಣ್ಣಿಸಿದ ಪಾಲಂ ನಲಿದು ನಿಚ್ಚಂ ಕುಡಿದ ಪಾತಕಿ ತರೆಯನಟ್ಟಿಯೊಳಿತ್ತಿ ಬಿಸುಡದೆ ಮಾಣ್ಬನೇ ನಿನ್ನ (ಬಸವು. ೧೪-೩೦); ತಾಯ ತುಟುಬಿಗೆ ಹಾಯ್ದು ಪಾತಕಿನಾಯ ಕೊಂಡಾಡುವರೆ (ಕುಮ್ಮಾದ್ರೋ. ೫-೪೮). [ ಸಂ. ಪಾತಕಿನ್ ]

**ಪಾತಗಿತ್ತಿ** (ನಾ). ಪಾಪ ಮಾಡಿದವಳು ; ನೀಚಹೆಂಗಸು : ಭೂತಳ ದೊಳು ಪಸರಿಸಿತಪಕೀರಿತಿ ಪಾತಗಿತ್ತಿಯ ದೆಸೆಯಿಂದ (ಅಂಜಕ. ೯-೦೦೭); ಮದನೋದ್ರೇಕಮಾನಸೆಯಾಗುತಾ ದುಷ್ಟೆ ಸುದತಿ ಮತ್ತಾ ಪಾತಗಿತ್ತಿ (ಶ್ರೀಶಂಜ. ೨-೩೩); ಹೆತ್ತ ಮಗನ ಹೇಸದೆ ಕೊಂದ ಪಾತಗಿತ್ತಿ (ಶ್ರೀಶಂಜ. ೨-೭೩).

[ P ಇದು 'ಪಾತಕಗಿತ್ತಿ' ಎಂಬುದರ ಅಪಲಿಖಿತವಿರಬಹುದು]

**ಪಾತನ** (ನಾ). ೧. ಕೆಳಗೆ ಬೀಳುವಂತೆ ಮಾಡುವುದು ; ಬೀಳಿಸುವುದು : ಪಾತನ . . . ಚೂರ್ಣನ ವಿಮುಖೀಕರಣ ದುರ್ಭೋಗ್ಯ ನಾನಾವಿಧಾ ಸಂಖ್ಯಾತತೀವ್ರವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷಾಲೇಶಮೆಂದೆನಿಸಿ (ವಿವೇಕ. ೧೮೧); ನಿನ್ನ ಮಹಾಪೂರವಿಳಿವುದು ತಟನಿಯ ಜಲಧರಸಮಯವು ಕಳೆಯೆ ತಟತರುಪಾತನ ಪಾತಕವೊಂದೆಯೆ ಬಹುಕಾಲ ಉಳಿವುದು ತಿಳಿಯೆ (ಇಂಕಾಕ. ೯೭-೭೩). ೨. ತಗ್ಗುವಂತೆ ಮಾಡುವುದು ; ತಗ್ಗಿಸುವುದು. [ ಸಂ. ]

**ಪಾತರ**, ಪಾತುರ (ನಾ). ೧. ಪಾತ್ರ : ಈ ನನ್ನ ಕಟ್ಟುಗಡಸಿನ ಮೆಯ್ಯೆಂಬ ಹೊನಹಿನ ಪಾತರದಲ್ಲಿ ಎಸರಿಟ್ಟಿರುವ ರೂಪಸೌನ್ದರ್ಯಯವ್ವನ ಶೃಂಗಾರ ಕಲೆಗಳೆಂಬ ಪಂಚಾಸವಗಳನ್ನು . . . ಸವಿನೋಡಿಯೇಬಿಡಬೇಕೆಂಬ ಮದನಾಗ್ರಹದ ಚಪಲಚ್ಛಲವು ನಿಮಗೆ ! (ಮಂತ್ರಿಕ. ೨೯-೦೭). ೨. ಕುಣಿತ ; ನರ್ತನ ; ನಾಟ್ಯ : ಕೊಳು ಕುತ್ತುವೆ ಕುತ್ತ ಕೊಳು ಮೇಳವೆ ಮೇಳ ಕೊಳೊಂದು ಗಳಿಗೆ ತಡೆದಿಹರೆ ಪಾತ್ರರದ ಮೇಳ ಮುಗಿದಂತೆ (ಸರ್ವಜ್ಞ. ೨೦೦೨); ಗುಡಿಯ ಮುಂದಿನ ಪಟಾಂಗಣದಲ್ಲಿ ಒಂದೆಡೆ ಗುಗ್ಗುಳವು ಹೊತ್ತಿ, ಮತ್ತೊಂದೆಡೆ ಪಾತರದ ಮೇಳವು ಕುಣಿಯಬೇಕು (ಕನ್ನಡಾ. ೯). **ಪಾತುರ** : ೩. ಅರ್ಹನಾದವನು ; **ಯೋಗ್ಯ** : ಹಯವದನರಾಯನ ಪ್ರಿಯಕೆ ಪಾತುರನಾಗಿ (ವೃಕುಂವ. ೪-೯೫). ೪. ಅಭಿನಯ ಮಾಡುವವನು ; ನಟ : (*).

**ಪಾತರದವರು**=ನಾಟ್ಯ ಮಾಡುವ ವೃತ್ತಿಯವರು ; P ಕೆಲವರು ದೇವದಾಸಿಯರಲ್ಲಿ ಈ ವೃತ್ತಿಯನ್ನು ಅನುಸರಿಸುವವರು ಇರುವರೆಂದು ತಿಳಿದು ಬರುತ್ತದೆ : ವಿಜಾಪುರಜಿಲ್ಲೆಯಲ್ಲಿ ಪಾತರದವರು ಬಸುರಾದರೆ, ಅವರು ಗೊರವರ ಕೈಯಿಂದ ಹಲ್ಲುಪುಡಿ ಹಚ್ಚಿಸಿಕೊಳ್ಳಲಿಕ್ಕೆ ಬೇಕು (ಕಥಾಗ. ೦೧೮); ಗಂಗಾಸಾನಿ ಅಚ ಪಾತರದವರ ಮನೆತನದಾಕೆ. ಆ ಊರಿಗೆ ಇವರದೊಂದೇ ಮನೆ . . . ಸೋಮವಾರಕ್ಕೊಮ್ಮೆ ಅಷ್ಟಾವಧಾನದ ಕಾಲದಲ್ಲಿ ಆ ಮನೆತನದವ ರೊಬ್ಬರು ದೇವರ ಮುಂದೆ ನೃತ್ಯಮಾಡುತ್ತಿದ್ದರು (ಗಂಗಾಸಾ. ೧೦).

[ <ಸಂ. ಪಾತ್ರ ]

**ಪಾತರಗಿತ್ತಿ** (ನಾ). ೧. ನರ್ತಕಿ ; ನಟಿ : (*). ೨. (ಆಲಂ) ಬಣ್ಣ ಬಣ್ಣದ ಪಕ್ಕಗಳಿಂದ ಕೂಡಿದ ಚಿಟ್ಟೆ ; ಪತಂಗ : ಪಾತರಗಿತ್ತಿಯೆಂಬ ಹುಳವು ಗಿಡಗಿಡಾ ಹಾರಾಡುವುದನ್ನು ನಾವು ನೋಡುತ್ತೇವೆ (ಮುಂಬಯಿ. ೫-೦೦೩); ಪಾತರಗಿತ್ತೀ ಪಕ್ಕಾ ನೋಡಿದೇನ ಅಕ್ಕಾ (ಗರಿ. ೯೫-೧); ಬಣ್ಣ ಬಣ್ಣದ ಹಕ್ಕಿ ಮತ್ತೆ ಪಾತರಗಿತ್ತಿ ನನ್ನ ಗೆಳೆತನವಿತ್ತು ಬಸದ ತುಂಬ (ಕಡಲು. ೬-೦೪೭). ೩. (ಚಿಟ್ಟೆಯಂತೆ) ಮೆರೆಯುವವಳು : ಪಟ್ಟಣಗಳಲ್ಲಿ, ಪಾತರಗಿತ್ತಿಗಳ ಮಧ್ಯದಲ್ಲಿ, ಕಾಲೇಜಿನ ವಾತಾವರಣದಲ್ಲಿ ಬೆಳೆದ ಹೇಮಾ ಹಾಗೂ ಅವಳ ಅನುರಾಗಕ್ಕಾಗಿ ಹವಣಿಸಿದ ವಿಶ್ವನಾಥರನ್ನು . . . ನಾಯಕಿ—ನಾಯಕರೆನ್ನಬಹುದು (ಸಾಸವಾ. ೧೬೧). ೪. ವೇಶ್ಯೆ ; ಗಣಿಕೆ. [ ಪಾತರ + –ಗಿತ್ತಿ ]

**ಪಾತಶಹ**, ಪಾಚ್ಛಾ, ಪಾಚ್ಛಾಯಿ, ಪಾಥಾ, ಪಾತಷಹ, ಪಾತಷಾಹ, ಪಾತುಶಾಹ, ಪಾತ್ಸಾಹ, ಪಾತ್ಸ್ಯಾವು, ಪಾದಶಾ, ಪಾದಶಾಹ, ಪಾದಷಹ, ಪಾದಷಹಾ, ಪಾದಷಾಹ, ಪಾದುಶಾಹ, ಪಾದುಷಹ, ಪಾದುಷಾ, ಪಾಷ, ಬಾದಶಹ, ಬಾದಶಾಹ, ಬಾದಷಹ, ಬಾದುಶ (ನಾ). ೧. ಮುಸಲ್ಮಾನರ ದೊರೆ ; ಸುಲ್ತಾನ: ಪೂರ್ವಕಾಲದಲ್ಲಿ . . . ಒಬ್ಬ ಬಹು ಪರಾಕ್ರಮಶಾಲಿಯಾದ ಪಾತಶಹನು ಇದ್ದನು (ಕಗಧ್ಯ. ೦೩). **ಪಾಚ್ಛಾ** : ೧. ನಮಗೆ ಅರಸುಗಳಿಗೆ ಪಾಚ್ಛಾಗಳಿಗೆ ಪುಣ್ಯ ಲಭ್ಯ (ಮೈಶಾ. ೦೯೨೩, ೭೩-೩೨: 1532). ೨. ಹಿರಿಯ ಕುಳ ; ಶ್ರೀಮಂತ : ಹೊನ್ನ ತೆತ್ತಲ್ಲದೆ ಹೊಲ ಮಾಡಬಾರದು . . . ಸರಕಾರಕ್ಕೆ ರುಜು ಇಲ್ಲದೆ ರೈತನಾಗಬಾರದು ಅದೆಂತೆಂದೊಡೆ ಇಷ್ಟುಲ್ಯಾತನೆ ಪಾಚ್ಛಾರೈತ ಇಲ್ಲದಾತ ದುಬ್ಬುಳುಕ (ಪಕಸಂ. ೬೦ – ೬೦). **ಪಾಚ್ಛಾಯಿ** : ೧. ಅರಸುಗಳಿಗೆ ಪಾಚ್ಛಾಯಿಗಳಿಗೆ ಪುಣ್ಯ ಲಭ್ಯವೆಂದು ನೋಡಿ ದಾನಪಾಲನೆ ಮಾಡುತ್ತಾ ಇರಬೇಕು (ಮೈಶಾ. ೦೯೨೪, ೬೪-೨೩; 1533). **ಪಾಥಾ** : ೧. ಮೊಗಲ ಪಾಥಾಸಾಹೇಬರ ಆಳಿಕೆಯಲ್ಲಿ . . ೨ ಕೊಡಗಿ ಹಾಕಿಕೊಟ್ಟ ಊರ ಮುಂದಣ ಗದ್ದೆಯಲಿ ಬೀಜಾವರಿ (ಎಕ. XI. ಹೊಳಲ್ಕೆ. ೦೨೬-೫ ; 1692?) ; ಟೀಪೂಸುಲಟಾನ ಪಾಥಾರವರ ಧರ್ಮ (ಎಕ. XIV, ಶ್ರೀರಂಗ. ೦೬೫-೦; ?). **ಪಾತಷಹ** : ೧. ಈಗ ಟ್ರೂನಿಸದ ಪಾತಷಹನಾಗಿದ್ದೇನೆ (ಮುಂಬಯಿ. ೫-೮೩೪). **ಪಾತಷಾಹ** : (*). **ಪಾತುಶಾಹ** : ೧. ಪಾತುಶಾಹ ಮಹಾಸೇನಾತ್ರಸ್ತ ದಕ್ಷಿಣ ಭೂಭುಜಾಂ ಅಭಯಸ್ಯ ವಿಧಾತ (ಎಕ. VII, ಶಿವಮೊ. ೨-೨೬ ; 1661); ನೆಲವಾರ್ತೆಯಂ ಕೇಳಿ ಪಾತುಶಾಹಂ ಬಂದು ತಲೆದೂಗಿ ಸತ್ಯನೀತಂ ಪೊದಾನಹುದೆಂದು ಸಲೆ ಸಲಾಮಂ ಮಾಡಿ ಹೋದನು (ಗುರುಬಾ. ೦೪-೨೫). **ಪಾತ್ಸಾಹ**: ೧. ಅನಿತರೊಳ್ಪಾತ್ಸಾಹನೈತಂದು ರಾಯರಂ ಮುರಿದವನಿ ಯಂ ಸೆಳೆಯಲು (ಜೀಳವಂ. ೦-೦೨೬). **ಪಾತ್ಸ್ಯಾವು** : ೧. ಮುಂಕೊಂಡು ಪಾತ್ಸ್ಯಾವು ರಣಧೂಳಿಖಾನನ ಬಿಂಕದ ಬೀಳ್ಕೊಟ್ಟನಾಗ (ಕಂಕಪ. ೦೮-೪). **ಪಾದಶಾ** : ೧. ಟಿಪುಸುಲತ್ತಾನ ಪಾದಶಾರ ಧರ್ಮ (ಮೈಶಾ. ೦೪೯೩, ೩೪-೦; ಸು. 1795). **ಪಾದಶಾಹ** : ೧. ದಿಳ್ಳಿಯ ಪಾದಶಾಹನತಿಭಕ್ತಿಯಿಂ ಭಂಡಾರದಿಂ ದಿವ್ಯಕನಕಾದಿ ವಸ್ತುಗಳ ತಂಡಮಂ ತರಿಸಿತ್ತು (ಚಕಾರ. ೨೭-೨೮). **ಪಾದಷಹ** : (*). **ಪಾದಷಹಾ** : ೧. ಆ ಕಾಲದಲ್ಲಿ ಡಿಲ್ಲಿ ಪಾದಷಹಾ ಎಂಬ ಅಶ್ವಪತಿಯು . . . ಲೆಖ್ಖವಿಲ್ಲದ ಕುದುರೆ ಫೌಜು ಉಳ್ಳವನಾಗಿದ್ದನು (ಕಥಾಮು. IV, ೩೨). **ಪಾದಷಾಹ** : ೧. ಚಲುವ ರಾಯಸ್ವಾಮಿಯವರಿಗೆ ಡಿಲ್ಲಿಯ ಪಾದಷಾಹರು ಒಪ್ಪಿಸಿದ್ದ ಗ್ರಾಮ ಭೂಮಿಗಳಂ ತಾವು ಅನುಭವಿಸಿಕೊಂಡು (ಮಹಾವಂ. I. ೪೨) **ಪಾದುಶಾಹ** : ೧. ವಿಜಯಾಪುರದ ಸುರಿತಾಣ ಮಹಮ್ಮದಪಾದುಶಾಹ ನೆಡೆಗೆ ನಡೆದವನಡಿವಿಡಿದು (ಚಕವಂ. ೫೭-೬). **ಪಾದುಷಹ** : ೧. ಪ್ರಭು ಗಳೆ! ನೀವು ದೊಡ್ಡ ಪಾದುಷಹರು! (ಬಸ್ಕರು ೯). **ಪಾದುಷಾ** : ೧. ರಾಜರಿಗೆ ಪಾದುಷಾಗಳಿಗೆ ಅರಸುಗಳಿಗೆ ನಮಗೆ ಸಹ ಪುಣ್ಯ ಲಭ್ಯ ವೃದ್ಧಿ ಯಾಗಿ (ಮೈಶಾ. ೦೯೨೪, ೬೫-೩೦ ; 1500). **ಪಾಷ** : ೧. ಅಲ್ಲೀಬೇಯಿಯಾ

ದೇಶದ ಮುಹಮ್ಮದಾಲಿ ಎಂಬ ಸೈನಿಕನೊಬ್ಬನು . . . ಪಾಷ ಅಥವಾ ಚಕ್ರವರ್ತಿ ಪ್ರಸಿಧಿ ಎಂದು ಕರಸಿಕೊಂಡನು (ಇಸ್ಲಾಂಸಂ. ೫೭). **ಬಾದಶಹ :** ೧. ದಿಲ್ಲಿಯ ಬಾದಶಹನ ಹಸ್ತಕನಾದ ಒಬ್ಬ ಸರದಾರನು . . . ಅವನ್ನು ದೇವರಾಜನಿಗೆ ಅಷ್ಟೇ ಹಣಕ್ಕೆ ಮಾರಿದನು (ಮುಂಬಯಿ. ৮-೮೨); ಈಗಿನ ಹುಡುಗರಿಗೆ ಸ್ವಾಮಿಗಳಿಗಿಂತ ಮೊಗಲ ಬಾದಶಹರು ಎಂದು ಪಟ್ಟಕ್ಕೆ ಬಂದರೆಂಬುದೇ ಹೆಚ್ಚು ಗೊತ್ತಿರತದ (ಅಶ್ವಮೇ. ೭); 'ಬಾದಶಹ ಬಿರುದನ್ನು ಕಳೆದುಕೊಂಡ ಬಹದ್ದೂರಶಹನು . . . ಅಲ್ವರ ರಾಜನಿಗೆ ಬರೆದ ಪತ್ರಗಳು (ಶ್ರಬಂಧ. iii, ಲೇಖನಗಳ ತಿರುಳು). **ಬಾದಶಾಹ :** ೧. ಟಿಪ್ಪುಸುಲತಾನ ಬಾದಶಾಹ ಸಾಹೇಬರವರು (ಬೊಂಕಶಾ. ೧೯೩೪, ರಾಜಬಿನ್ನೂರ್. ೮೨-೦ ; १). **ಬಾದಷಹ:** ೧. ಆ ವಿಗ್ರಹವು ದೆಹಲಿಯ ಬಾದಷಹನ ಮಗಳ ಬಳಿ ಇದ್ದಿತೆಂದೂ . . . ಐತಿಹ್ಯವಿದೆ (ಕಶಾಅ. ೧೬೪); ತಲೆದಿಂಬಿಗೆ ಕೈಗಳ ರಡನ್ನೂ ಊರಿ ಬೆನ್ನು ಕೊಟ್ಟು ಕುಳಿತಿದ್ದರು — ಹುಕ್ಕಾ ಎಳೆಯುತ್ತ ಮಲಗುತ್ತಿದ್ದ ಜಹಾಂಗೀರ ಬಾದಷಹನಂತೆ (ಮುಂಗಾರುಮು. ೫). **ಬಾದುಶ:** ೧. ಅರರೆ ಬಾದುಶ ಬಿದ್ದನೆಂದು ಮೊಗಲರೆಲ್ಲ ಮೊರದೆದ್ದು ಸುತ್ತಿ ಮುತ್ತಿದರು (ಸೌಂದಕಾ. ೭-೧೧೪).

[ ← ಪಾರ. ಪಾದ್‌ಶಾ, ಪಾದ್‌ಶಾಹ್, ಬಾದ್‌ಶಾಹ್ ; ಹಿಂ. ಪಾಚ್ಛಾ, ಪಾತಶಾಹ್, ಪಾತಸಾ, ಪಾತ್ಸಾಹ್, ಪಾದಶಾ, ಪಾದಶಾಹ್, ಬಾದಶಾಹ್ ; ಮರಾ. ಪಾಚ್ಛಾ, ಪಾಥಾ, ಪಾತ್ಶಹಾ, ಪಾತಶಾಹ್, ಪಾದಶಹಾ, ಬಾಚ್ಛಾ, ಬಾದಶಹಾ ]

**ಪಾತಷಹ** 'ಪಾತಶಹ' ನೋ.

**ಪಾತಷಾಹ** 'ಪಾತಶಹ' ನೋ.

**ಪಾತಷಾಹಿ,** ಪಾದಶಾಯಿ, ಬಾದಷಾಹಿ (ಗು). ೧. ಬಾದಷಹನಿಗೆ ಸಂಬಂಧಿಸಿದ ; ಸುಲ್ತಾನನಿಗೆ ಸೇರಿದ : (೩). ೨. ಶ್ರೇಷ್ಠವಾದ ; ರಾಜಯೋಗ್ಯವಾದ : (೩). (ನಾ). ೩. ದೊರೆತನ ; ಪ್ರಭುತ್ವ : (೩). **ಪಾದಶಾಯಿ :** ೧. ಗವರ್ನರ್‌ಸಾಹೇಬರವರು ಮುಂಬಾಯಿಯಿಂದಾ ಪಾದಶಾಯಿ ರಿಜಿಮೆಂಟ್ಟು ಒಂದು . . . ಪೇಶ್ವೆಯುವರ ಬಳಿಗೆ ಕಳುಹಿಸಿದಲ್ಲಿ (ರಾಕೇಂದ್ರ. ೧೬೪). **ಬಾದಷಾಹಿ :** ೧. ಯಾವ ಟಿಕ್ಕ ತಮ್ಮ ಅಲ್ಲಿಸಾಬರು ದೊಡ್ಡಬಳ್ಳಾಪುರದಲ್ಲಿ ಬಾದಷಾಹಿ ಸನ್ನದಿನ ಕಿಲ್ಲೆದಾರ ಬಳಿಯಲ್ಲಿ ನೌಕರಿ ನಿಂತರು (ಹೈದರ. ೨೨); ಈ ದೊಲೆಯ ಬೊಕ್ಕಸದಲ್ಲಿದ್ದ ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ಶಿವರಾಯಿ ಹೊನ್ನು ಬಾದಷಾಹಿ ಹೊನ್ನು (ಚಿತ್ರಶಾ. ೧೦೪).

[ ← ಪಾರ. ಪಾದ್‌ಶಾಹೀ, ಬಾದ್‌ಶಾಹೀ ; ಹಿಂ. ಪಾತಶಾಹೀ, ಪಾದಶಾಹೀ, ಬಾದಶಾಹೀ ; ಮರಾ. ಬಾದಶಾಹೀ, ಬಾಚ್ಛಾಈ ]

**ಪಾತಳಿ** (ನಾ). ೧. ಸಮತಟ್ಟಾದ ಮೇಲ್ಭಾಗ, — ಮೇಲ್ಮೈ : ಹಗ್ಗ ಅಲುಗಾಡಿದ್ದರಿಂದ ನೀರ ಪಾತಳಿಯ ಮೇಲೆ ಸಣ್ಣ ತೆರೆ ಎದ್ದಿತು (ಮೂರುದಾ. ೧೦೪); ಪ್ರತಿ ಕೊರೆಕಂಬಿಯೂ ಪಾತಳಿಯಿಂದ (Surface) ಒಳಬಾಗಿದ ಒಂದು ಸಣ್ಣ ಚೀಲದಲ್ಲಿದ್ದು ಒಳಸ್ಥಾನವನ್ನು ಪಡೆದಿದೆ (ಕೀಟಬಿ. ೮೪) ; ಸಬ್‌ಮರೀನು ಇನ್ನೂ ನೀರಿನ ಪಾತಳಿಯ ಮೇಲೆಯೇ ನಡೆದಿತ್ತು (ಕವನಿ. ೫೩). ೨. ಮಟ್ಟ ; ಹಂತ : ಧಾರವಾಡವು ಸಮುದ್ರ ಪಾತಳಿಯಿಂದ ೨೫೮೦ ಫೂಟು ಎತ್ತರದ ಮೇಲೆ ಇದೆ (ಕೀಟಬಿ. ೨೩) ; ಬರಿಯ ತರ್ಕದ ಪಾತಳಿಯಲ್ಲಿ ಶೋಭಿಸಬಹುದಾದ ಈ ಶಬ್ದಗಳಿಗೆ ವ್ಯವಹಾರಲೋಕದಲ್ಲಿ ಸ್ಥಾನವಿದೆಯೆ ? (ಮೂರುದಾ. ೧೩೫).

[ ← ಮರಾ. ಪಾತಳೀ ]

**ಪಾತಳು** 'ಪತ್ತಲ' ನೋ.

**ಪಾತಾಲ,** ಪಾತಾಳ (ನಾ). ೧. ಭೂಮಿಯ ಕೆಳಗಿನ ಏಳಂ ಲೋಕಗಳಲ್ಲಿ ಒಂದು ; ನಾಗಲೋಕ : "ಅತಲಃ . . . . ತಳಾತಲಃ ಪಾತಾಲಃ — ಈ ೭ ಅಡಿಯಣ ಲೋಕಂ" (ಶಾಶಕ್ಕೆ. ೨೬೧) ; ಸ್ವರ್ಗ ಮರ್ತ್ಯ ಪಾತಾಲ [ಪಾತಾಂ. ೪] ದೊಳಗುಳ್ಳಖಿಳಶಬ್ದಪ್ರವರ್ತನೆಯನಭಿಧಾನವಾಗಿ ಪೇಳ್ವೆಂ (ಮಂಗರಾ. ೨-೩). ೨. ಸಮುದ್ರದ ಒಳಗಿನ ಬೆಂಕಿ ವಡಬಾಗ್ನಿ. **ಪಾತಾಳ :** ೧. "ಬಡಬಾಮುಖಂ . . . ನಾಗಲೋಕಂ, ರಸಾತಳಂ — ಈ ೬ ಪಾತಾಳಂ" (ಹಲಾಯು. ೧೦೩-೧) ; ಪಾತಾಳದಿಂದತ್ತ ಧಾತ ಬಲ್ಲನಿಲ್ಲ ಗಗನದಿಂದ ಮೇಲೆ ಅನುಭಾವ ತಾನಿಲ್ಲ (ಅವತಂ. ೧೫-೫೮) ; ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೆ ದೇವ (ಬಸವ. ೫೨೪) ; ಪಾತಾಳಂ ನಿಜಮೂಲವ್ಯಾಪ್ತವ ಸೀಮಂ ವಿಯತ್ತಳಂ ಶಾಖಾಸಂಘಾತದ ಸೀಮವೆಸಲ್ಕಾ ಚೂತಮಹೀಜಾತಮನ್ನೃತಿಯ ನೇಪ್ಪೊಗಟ್ವೆಂ (ಕುಸುಮಾ. ೦-೧೧೧). ೨. "ಪಾತಾಳಂ ವಡಬಾಗ್ನಿ ರಸಾತಳಮೆಂಬೆರಡುಮಾಟಿಗೆ" (ವಸ್ತುಕೋ. ೧೨೦-೨೩). ೩. (ಅಲಂ) ಬಹಳ ಆಳವಾದ ಸ್ಥಳ : ಜೂನ್ ತಿಂಗಳಲ್ಲಿ ಎಲ್ಲ ಬಾವಿಗಳ ನೀರೂ ಪಾತಾಳ ಕಂಡವು (ಮೋಹಾಶ್ರ. ೧೨೫) ; ಬೇಸಿಗೆಯಲ್ಲಿ ಅವರ ಬಾವಿಯಲ್ಲಿ ನೀರು ಪಾತಾಳದಲ್ಲಿರುತ್ತದೆ (ಅದೇ). 'ಪಾತಾಳಖಾತ' ಪರಾ. ೪. [ ಜ್ಯೋತಿ ] ಲಗ್ನದಿಂದ ನಾಲ್ಕನೆಯ ಸ್ಥಾನ, — ರಾಶಿ : ವ್ಯವಹರಿಪ ಸಂಜ್ಞೆ ಚತುರಸ್ರವದೆಂದಷ್ಟಮ ಚತುರ್ಥಗೃಹಕೆ ಚತುರ್ಥಕ್ಕೆ ಪಲಂ ಮಾತ್ರಂ ಪಾತಾಳ ನೀಶ್ರ ಸುಖ ಹಿಬುಕ ಬಂಧುವೆಂದೈದು ಪೆಸರ್ (ಜಾತಕ. ೧-೩೪); ಶೀ ತ ಮ ಯೂ ಖಾ ಪ ತ್ಯ ನಿಂ ದಂ ತ ನು ಧ ನ ದಶಧರ್ಮಾಯ ಪಾತಾಳ ಷಟ್‌ಪಂಚಮದೊಳ್ ಧಾತ್ರೀಜನಿಂ ಕೇಂದ್ರ ನಿಧನ ನಯನಾಯಂಗಳೊಳ್ ಪೂಜ್ಯನಕ್ಕುಂ (ಜಾತಕ. ೧೦-೧೧). ೫. [ ಗಣಿತ ] ಏಳು ಎಂಬ ಸಂಖ್ಯೆಯ ಸಂಕೇತ : ಸಪ್ತ, ಭಯ, ಅದ್ರಿ, ಗಿರಿ, ಮುನಿ, ಪಾತಾಳ . . . ದ್ವೀಪ, ಅಶ್ವ ಇಂತಿನಿತುಂ ೭ಕ್ಕೆ ಹೆಸರು (ವ್ಯವಹಾ. ೧೦-೨೭).

**ಪಾತಾಳಹೋಮ** = (ಅಲಂ) ರಹಸ್ಯಕಾರ್ಯಾಚರಣೆ : ಲಕ್ಷ್ಮಿಯು ಒಡವೆಗಳನ್ನೆಲ್ಲಾ ತಂದಿರುವೆ . . . ಅದಕ್ಕೆ ಇಷ್ಟು ಪಾತಾಳಹೋಮವೇ? (ಲಕ್ಷ್ಮೀಶ್ರ. ೫೯). [ ಸಂ. ]

**ಪಾತಾಲಗಂಗೆ,** ಪಾತಾಳಗಂಗೆ (ನಾ). ಶ್ರೀಶೈಲದ ಬೆಟ್ಟದ ಬುಡದಲ್ಲಿ, ಆಳದಲ್ಲಿ ಪ್ರವಹಿಸುವ ನದಿ : ಮೇಲನೇಜಿದ ಮನುಜರಂ ಪಾತಾಲ[ಪಾತಾಂ. ೪]ಗಂಗೆಯೊಳಾಡಿಸುತ್ತನುಕೂಲವಾಗಿಹ ತುಂಗಗಂಗಾ ವೃಕ್ಷಪಂಕ್ತಿಗಳ (ಬಸವು. ೧೯-೫೫). **ಪಾತಾಳಗಂಗೆ :** ಶ್ರೀಶೈಲ ಕಂಧರದೊಳಾವಗಂ ಸುರಗಂಗೆ ಪಾತಾಳಗಂಗೆ ಸರಸತಿಯೆಂಬ ಪರಮ ನದಿಗಳ ಸಂಗಮದೆ ಶೋಭಿಪಾ ವಾಹನಾಖ್ಯ ತೀರ್ಥಕ್ಕೆ ಮುದದಿಂ ನರಸಿಂಹಬಲದಿಂದೆ ಬಂದು (ಅರಾತ. ೩-೧೩-೩೯). [ ಪಾತಾಲ+ಗಂಗೆ$_2$ ]

**ಪಾತಾಲಗಡ** 'ಪಾತಾಲಗರಡಿ' ನೋ.

**ಪಾತಾಲಗರಡಿ,** ಪಾತಾಲಗಡ, ಪಾತಾಳಗಡ, ಪಾತಾಳಗಡೆ, ಪಾತಾಳಗರಡಿ. ಪಾತಾಳಗರುಡ$_1$, ಪಾತಾಳಗರುಡಿ (ನಾ). ೧. ಬಾವಿ ಮುಂತಾದ ಜಲಾಶಯಗಳಲ್ಲಿ ಬಿದ್ದ ವಸ್ತುವನ್ನು ಮೇಲಕ್ಕೆ ತೆಗೆಯಲು ಬಳಸುವ, ಕೊಂಡಿಗಳುಳ್ಳ ಒಂದು ಬಗೆಯ ಕಬ್ಬಿಣದ ಸಾಧನ: ಪಾತಾಲಗರಡಿ=ನೀರಲ್ಲಿ ಮುಳುಗಿದ ಸಾಮಾನುಗಳನ್ನು ಎತ್ತುವ ಉಕ್ಕಿನ ಸರಪಳಿ" (ಜಾನಕೋ. ೧೫). **ಪಾತಾಲಗಡ :** ೧. "ಪಾತಾಂಗಡ= ನೀರಲ್ಲಿ ಮುಳುಗಿದ ಸಾಮಾನುಗಳನ್ನು ಎತ್ತುವ ಉಕ್ಕಿನ ಸರಳಿ"(ಜಾನಕೋ. ೧೫). **ಪಾತಾಳಗಡ :** ೧. ಆ ಸರಪಳಿಯ ತುದಿಗೆ ಕಬ್ಬಿಣದೊಂದು ಪಾತಾಳ ಗಡ ಹಚ್ಚಿರುತ್ತದೆ (ಮುಂಬಯಿ. ೩-೧೧೩); ಎಷ್ಟೋ ಸಲ ಆತ್ಮ ಹತ್ಯೆಯ ವಿಚಾರವು ಬಾವಿಯಲ್ಲಿಯ ಪಾತಾಳಗಡದಂತೆ ತಲೆಯಲ್ಲಿ ಅಸ್ಪಷ್ಟವಾಗಿ ಸುಳಿದಾಡುತ್ತಿತ್ತು (ಮುಕ್ತಿ. ೩೭). **ಪಾತಾಳಗಡ:** ೧. ಕೆಲಸ ಯಾರಾದೇ ಪ್ರೇರಣೆಯಿಂದವರು ನಿರ್ವಹಿಸಿರಲಿ . . . ಆನರ ಇತಿ ಮಿತಿ

ಯನ್ನು 'ಪಾತಾಳಗಡೆ' ಹಾಕಿ ಮಥಿಸುತ್ತಾರೆ (ಹಳ್ಳಿಕೋ. ೯).

**ಪಾತಾಳಗರಡಿ :** ೧. ಮುಂಬಯಿಶಹರದಲ್ಲಿ ಆಗುವ ಜೀನಸಗಳ ವಿವರವು ನಮಗೆ ಕಂಡು ಬಂದ ಮಟ್ಟಿಗೆ ಕೆಳಗೆ ಬರಿಯಲ್ಪಟ್ಟಿದೆ. ೧. ಅಡಕೊತ್ತುಗಳು . . . ೨೩. ಪಾತಾಳಗರಡಿ (ನೀರಿನಲ್ಲಿ ಹಾಕಿ ಒಳಗಿನ ಸಾಮಾನ ತೆಗಿಯುವದು) (ಮುಂಬಿವ್ಯಾ. ೧೦೦); ಆಕೆ ಬಯಸಿದ ವಸ್ತು, ಹಣ್ಣುಹಂಪಲು, ಮಾಂಸ ಯಾವುದನ್ನೆಲ್ಲ ಆತ ಆಕೆಗೆ ಒದಗಿಸಿದ್ದಾನೆ. ಪಾತಾಳಗರಡಿ ಹಾಕಿಯಾದರೂ ತಂದುಕೊಟ್ಟಿದ್ದಾನೆ (ಬಜಿ. ೧೬೯). ೨. (ಅಲಂ) ರಹಸ್ಯವನ್ನು ಹೊರಗೆ ತೆಗೆಯುವ ವ್ಯಕ್ತಿ : ಅಚ್ಚುತಪ್ಪನವರು ಹೆಂಡತಿಯ ಮಾತಿಗೆ ತಲೆದೂಗಿ, "ನೀನು ಪಾತಾಳಗರಡಿ ಕಣೇ ರಮಾ" . . . ಎಂದರು (ಗೃಹಂ. ೧೦೯). **ಪಾತಾಳಗರುಡ$_1$ :** ೨. ನಾಗಯ್ಯಸೆಟ್ಟರೊ! ಪಾತಾಳಗರುಡ ಅವರು (ಹಹಸ. ೬೫).

**ಪಾತಾಳಗರುಡಿ :** ೧. ಪಾತಾಳಗರುಡಿಯ ಕೊಂಡಿಗೆ ಸಿಕ್ಕಿಕೊಂಡ ವಸ್ತು ನಡುವೆಯೇ ತಪ್ಪಿಸಿಕೊಂಡಿತ್ತು (ಮೂರುದಾ. ೦೦೪).

[ ← ತಮಿ. ಪಾತಾಳಕ್ಕರಣ್ಡೆ ]

**ಪಾತಾಲನಿಲಯ** (ನಾ). ಪಾತಾಳದಲ್ಲಿ ನೆಲಸಿರುವವನು ; ದೈತ್ಯ : "ಅಸುರಃ , ದಾನವಃ . . . ಪಾತಾಲನಿಲಯಃ (ಸ್ತ್ರೀ ತಾಃ)—ಈ ೮ ಅಸುರರ ಪೆಸರ್" (ಹಲಾಯು. ೩-೫). [ ಪಾತಾಲ+ನಿಲಯ ]

**ಪಾತಾಲಲೋಕ**, ಪಾತಾಳಲೋಕ (ನಾ). ಭೂಮಿಯ ಕೆಳಗಿನ ಏಳು ಲೋಕಗಳಲ್ಲಿ ಒಂದು; ನಾಗಲೋಕ; ಪಾತಾಳ: "ಪಾತಾಳಮೆನಲು . . . ರಸಾತಲಮೆನಲ್ಕಧೋಭುವನಮೆಂದೆನಲು ಪಾತಾಲ[ಪಾತಾ. ಳ]ಲೋಕಕ್ಕೆ ನಾಮಂ" (ಮಂಗರಾ. ೦೦೬-೦). **ಪಾತಾಳಲೋಕ :** ಪಾತಾಳಲೋಕ ವಿಜಯಂ ಮಾತಂಗಕನ್ಯಾಸಿದ್ಧಿಯಾಯೆರಡುಂ ಮತ್ತೀತಿಸಕಲಾವನೀವಿಖ್ಯಾತಿ ಯೆನುತ್ತ ಮನಿಪಾಲತನಯಂ ನಲಿದಂ (ದಕಳು. ೩-೩೨); ವಿರಾಮ ಜಂಗಮದಲ್ಲಿ ಹದಿನಾಲ್ಕುಲೋಕಂಗಳಡಗಿರ್ಪವು ನೋಡಾ ಅದೆಂತೆಂದೊಡೆ ಪಾದತಳದಲ್ಲಿ ಅತಳಲೋಕ . . . ಕಟಿಯಲ್ಲಿ ಪಾತಾಳಲೋಕ (ಅಂಜೀ. ೧೪೨-೧೩೪). [ ಪಾತಾಲ+ಲೋಕ ]

**ಪಾತಾಳ** 'ಪಾತಾಲ' ನೋ.

**ಪಾತಾಳಖಾತ** (ನಾ). ಬಹಳ ಆಳವಾದ ಕಂದಕ : ಉರುಳಿದೆನೊ ಪಾತಾಳಖಾತಕೆ ಎಂದು ಎದೆಯೊಳಗಾಗಿರೆ . . . ಯಾವ ಕೈಯೋ ಕಾಯುತಿದೆ ಈ ಮರುಳುಮನವನು ವಂಚಿಸಿ (ಹಾರುಪಾ. ೫೨-೨೦); ಅನಂತ್ಯದೊಂದು ನವಜಲಧಿಯಲ್ಲಿ ಹೊರಟಿಹುದು ನನ್ನ ನಾವೆ . . . ಮಸುಕು ಮಸುಕು ಹಿಂದೆಲ್ಲ ಮು ದೆ ಪಾತಾಳಖಾತಸಿಂಧು(ಕೃತ್ಯಾಂ.೦೨-೩).

[ ಪಾತಾಳ (=ಪಾತಾಲ)+ಖಾತ$_1$ ]

**ಪಾತಾಳಗಂಗೆ** 'ಪಾತಾಲಗಂಗೆ' ನೋ.

**ಪಾತಾಳಗಂಧಿ** (ನಾ). ಹಾವಿನ ವಿಷವನ್ನು ಪರಿಹರಿಸುವ ಒಂದು ಬಗೆಯ ಮೂಲಿಕೆ : ಸೂತ್ರನಾಭಿ, ಸರ್ಪಗಂಧಿ, ಪಾತಾಳಗಂಧಿ, ಶಿವನಾಭಿಬಳ್ಳಿ (ಮೈಕಿಗಿ. ೬೬-೦೩೪೦).

[ ಪಾತಾಳ (=ಪಾತಾಲ)+ಗಂಧಿ ]

**ಪಾತಾಳಗಡ** 'ಪಾತಾಲಗರಡಿ' ನೋ.

**ಪಾತಾಳಗಡೆ** 'ಪಾತಾಲಗರಡಿ' ನೋ.

**ಪಾತಾಳಗರಡಿ** 'ಪಾತಾಲಗರಡಿ' ನೋ.

**ಪಾತಾಳಗರುಡ$_1$** 'ಪಾತಾಲಗರಡಿ' ನೋ.

**ಪಾತಾಳಗರುಡ$_2$** (ನಾ). ಹಾವಿನ ವಿಷವನ್ನು ಪರಿಹರಿಸುವ ಒಂದು ಬಗೆಯ ಮೂಲಿಕೆ ; ಸರ್ಪಾಕ್ಷಿ: ಪಾತಾಳಗರುಡನ ಬೇರಂ ಆದಿತ್ಯವಾರ ವೋಣದಿಂದ ತಂದು . . . ಮುಟ್ಟಿಸೆ ಸ್ತ್ರೀವಶ್ಯ (ಖಿನ್ಯಪಿ. ೨೦೭); ಪಾತಾಳಗರುಡಸಮೂಲವುಂ ಚೂರ್ಣಂ ಮಾಡಿ ಹಸುವಿನ ತುಪ್ಪದಲ್ಲಿ ಕಲಸಿ ಮೆಲ್ಲಲು ಬಹುಮೂತ್ರಂ ನಿಲ್ಲುವುದು (ಸಳಕ್ಕ. ೩೩೪). 'ಗರುಡಪಾತಾಳ' ಪರಾ. [ <ಸಂ. ಪಾತಾಲಗರುಡೀ ]

**ಪಾತಾಳಗರುಡಿ** 'ಪಾತಾಲಗರಡಿ' ನೋ.

**ಪಾತಾಳತಳ** (ನಾ). ಪಾತಾಳಪ್ರದೇಶ : ಪಾತಾಳತಳಮನೆಯ್ದಿದ ಖಾತಿ ಸುರೆವುರಮನೆಯ್ದಿದಟ್ಟಳೆ ಪೆಂಪು ದ್ಯೋತಿಸೆ ಪುರಮಿರ್ಪುದು ಭೋಗಾ ಶಯದ ಭೋಗವತಿಯನಮರಾವತಿಯಂ (ಅಜಿತ. ೨-೦೬); ವಿಲಸತ್ ಮಹೋಕ್ಷವಾಹನ ಮಹೋಕ್ಷಪಾತಕರಲಘು ಪಾತಾಳತಳವಾಸಿ ರಕ್ಷಾಕ್ಷರಂ ಲಲಿತ ತ್ರಿಯಕ್ಷಂ ಸಹಸ್ರೋದರಂ ದೀರ್ಘಲೋಚನಂ ಹ್ರಸ್ವಕಂಠಂ (ಅಂಚಕ. ೪-೪-೩೩).

[ ಪಾತಾಳ (=ಪಾತಾಲ)+ತಳ (=ತಲ ]

**ಪಾತಾಳನಿವಾಸಿ** (ನಾ). ಪಾತಾಳದಲ್ಲಿ ನೆಲೆಸಿರುವವನು ; ರಕ್ಕಸ ದೈತ್ಯ : "ದನುಜರ್ ದೈತೇಯರ್ . . . ಪಾತಾಳನಿವಾಸಿಗಳ್ ಸುರದ್ವಿಷರೆನೆ ದೈತ್ಯರ್" (ಶಬ್ದಮಣಿ. ೬-೩೨).

[ ಪಾತಾಳ (=ಪಾತಾಲ)+ನಿವಾಸಿ ]

**ಪಾತಾಳಬಾಣ** (ನಾ). (ನೆಲವನ್ನು ಭೇದಿಸಿ) ಪಾತಾಳದ ವರೆಗೆ ಹೋಗುವ ಒಂದು ಬಗೆಯ ಬಾಣ : ಆಕಾಶಗಾಮಿನಿ ಸೂರಬಾಣ ನೊಪ್ಪರಿ ಪಾತಾಳಬಾಣ ವಡಬಾಬಾಣ ಮಾಯಾಬಾಣ ವೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿಸಾಧನವಿಶೇಷಂಗಳಿಂವಲುಂ (ಚಕೇಳ. ೨೬೩).

[ ಪಾತಾಳ (=ಪಾತಾಲ)+ಬಾಣ$_2$ ]

**ಪಾತಾಳಮರ** (ನಾ). ಒಂದು ಬಗೆಯ ಮರ : ಪೇನಾರಿಮರ, ಪೀನಾರಿ, ಪಾತಾಳಮರ, ಭೇತಾಳ, ತೊಕಡಕನೆ ಮರ, ಭಾತಾಳ (ಮೈಕಿಗಿ. ೬೨-೦೪೬೨). [ ಪಾತಾಳ$_1$+ಮರ$_1$ ]

**ಪಾತಾಳಯಂತ್ರ** (ನಾ). ಔಷಧಿಗಳನ್ನು ಭಟ್ಟಿ ಇಳಿಸಲು ಬಳಸುವ, ಭೂಮಿಯಲ್ಲಿ ಹುಗಿದಿಡುವ ಒಂದು ಬಗೆಯ ಯಂತ್ರ : ಜೇಪಾಳದ ಬೀಜವಂ ಕಹಿಸೋರೆಯ ಬೀಜ ಸಹ ಪಾತಾಳಯಂತ್ರದಿಂ ತೈಲವ ತೆಗೆದು . . . ಲೇಪವ ಮಾಡೆ ಅವಮಾಂತ್ಯ ವಿರೇಚನವಕ್ಕುಂ (ಸಳಕ್ಕ. ೩೦೫).

[ ಪಾತಾಳ (=ಪಾತಾಲ)+ಯಂತ್ರ ]

**ಪಾತಾಳಯಂತ್ರಿ** (ನಾ). ಗಂಪ್ತಕಾರಸ್ಥಾನ ಮಾಡುವ ವ್ಯಕ್ತಿ : ನೀನು ಇಂಥಾ ಪಾತಾಳಯಂತ್ರಿ ಎಂಬುದು ನಮಗೆ ತಿಳಿದಿರಲಿಲ್ಲ (ಅಪ್ಪಾಚ. ೪೮); ಪಾತಾಳಯಂತ್ರಿಗಳಾದ ಪೋಲೀಸರು ಪೂರ್ವ ಪಶ್ಚಿಮಗಳನ್ನೊಂದು ಮಾಡುವಂತಹ ಪಾತಾಳಯಂತ್ರಿಗಳಿರುವರೆಂಬುದನ್ನು . . . ಕೇಳಿ ಅರಿತಿದ್ದರು (ಸ್ವಾರಾಜ. ೦೦೯). [ ← ಮರಾ. ಪಾತಾಲಯಂತ್ರೀ ]

**ಪಾತಾಳಲೋಕ** 'ಪಾತಾಲಲೋಕ' ನೋ.

**ಪಾತಾಳಸುಳಿ** (ನಾ). ದನದ ಹೊಟ್ಟೆಯ ಕೆಳಭಾಗದಲ್ಲಿರುವ ಒಂದು ಬಗೆಯ ಕೆಟ್ಟ ಸುಳಿ : ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ, ದಾವಣಿಸುಳಿ . . . ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೇ ಸುಳಿ ಇರೋದು ತಕ್ಕಾಲಾ (ಹುಟ್ಟಿಹ. ೦೬೫).

[ ಪಾತಾಳ (=ಪಾತಾಲ)+ಸುಳಿ$_2$ (<ಸುಟ್ಟಿ) ]

**ಪಾತಾಳಾಂಕಣ** (ನಾ). ನೆಲಮನೆಯ ಅಂಗಳ ; ಭೂಮಿಯ ಮಟ್ಟದಿಂದ ಕೆಳಗಿನ ಅಂಗಳ : ಪಾಳೆಯಗಾರರ ಕಾಲದಲ್ಲಿ ನಲವತ್ತು ಸ್ತಂಭಗಳ ಪಾತಾಳಾಂಕಣ ರಚಿತವಾಯಿತು (ಹೂಯ್ಸಳಾ. ೯೨); ನೀನು ದನ ಕಾಯುವುದಕ್ಕೂ ನಾಲಾಹಿಕ್ ಎನ್ನಿಸಿಕೊಂಡು ಮತ್ತೆ ಬಸವಣ್ಣದೇವರ ಗುಡಿಯ ಪಾತಾಳಾಂಕಣವನ್ನು ಹಿಡಿದಿದ್ದ (ಚಲುಹು. ೦).

[ ಪಾತಾಳ (=ಪಾತಾಲ)+ಅಂಕಣ ]

**ಪಾತಾಳಿ** (ನಾ). ಪಾತಾಳಲೋಕದ ಒಡೆಯ ; ವಾಸುಕಿ : ದೀನನೇ ಶರನಿಕರದಲಿ ಪವಮಾನಜನೊ ಪಾತಾಳಿಯೋ[ ಪಾಠಾಂ. ಪವಮಾನಿತನುಜ

ನೊ ಪಾವಕನೊ]ಕಲಿ ವೈನತೇಯನೊ ಕರ್ಣನೋ ನಾವಱಿಯೆವು (ಕುಮ್ಯಾಭ. ೧೨-೨೫). [ಸಂ. ಪಾತಾಲಿನ್]

**ಪಾತಿ₁**, **ಪಾತೆ₁** (ನಾ). ೧. ಮರ, ಗಿಡಗಳ ಬುಡದಲ್ಲಿ ನೀರು ನಿಲ್ಲಲು ಮಾಡಿರುವ ಕಟ್ಟೆ ; ಆಲವಾಲ : ಶರತ್ಕಾಲದಲ್ಲಿ ಮಳೆಯಿಲ್ಲದೆ ಸ್ವಲ್ಪ ಬಾಡುವ ಸಮಯದಲ್ಲಿ ತರುಗಳ ಪಾತಿಯಲ್ಲಿ ತುಂಬಿದ ಜಲವು ಯಿಂಗಿ ಚನ್ನಾಗಿ ನೀರು ನಿಲ್ಲುವ ಪರಿಯಂತವು ಜಲವ ಕಟ ಬೇಕು (ಸೌಗಂಧಿ. ೪೨೭-೯); ಜನ . . . ಸಸಿಗಳಿಗೆ ಹತ್ತಿರುವ ಹುಳುಗಳನ್ನು ಬಿಡಿಸುವುದು, ಅವುಗಳ ಪಾತಿ ಸರಿಮಾಡಿ ಗೊಬ್ಬರ ಹಾಕುವುದು— ಇತ್ಯಾದಿ ಕೆಲಸಗಳಲ್ಲಿ ತೊಡಗಿದ್ದರು (ಐತ್ಯಾಕ. ೧). ೨. ಬೀಜ ಬಿತ್ತಲು ಮಾಡಿರುವ ಮಡಿ : ಓತು ಮಾಡುವ ಲಿಂಗವಂತರ ಭಾತಿಗಳು ಶಿವಭಕ್ತಿ ಬೀಜಕೆ ಪಾತಿಗಳು ಪರಮಾರ್ಥನಿಜಯೋಗಪ್ರಸೂತಿಗಳು (ಬಸವು. ೫೭-೯೭); ಇಂತಹ ಎರಡು ಬೀಜಗಳನ್ನು ಒಂದೇ ಹೊಲದ ಎರಡು ಪಾತಿಗಳಲ್ಲಿ ನೆಟ್ಟರೆ ಕೆಲವು ಕಾಲದ ನಂತರ ಒಂದು ಅರಳಿಮರವಾಗಿಯೂ ಮತ್ತೊಂದು ಆಲದ ಮರವಾಗಿಯೂ ಪ್ರಕಟವಾಗುತ್ತವೆ (ಜೀವಾತ್ಮ. ೧೬೪); ಸೊಪ್ಪಿನ ಬೀಜ ಬಿತ್ತುವುದಾದರೆ ಪಾತಿ ಮಾಡಬೇಕು (ತರಕಾ. ೭೭). **ಪಾತೆ₁ :** ೧. ಯಾತದ ತುದಿಯಲ್ಲಿ ಕಟ್ಟಿದ ಮಡಕೆಯಂತೆ ಆದ ನೀಶಿವಂತರು ಮೆಟ್ಟಿದಡೆ ಪಾತಾಳದ ಉದಕವ ತಂದು ಪಾತೆಗೆ ಹರಹಿದ ತೆಱನಂತೆ (ಪೋಳಿಬಾ. ೧೦೪-೪೦೫); ಜಲವನದಾವ್ಯೇಲಂಟಳೆರೆದಲ್ಲದೆ ನಿಮ್ಮಯ ಪಾತೆಗಂಬುವಂ (ಪಾಳುಂತ. ೫೩-೮೭); ಸೀತೆ . . . ಹತ್ತಿಗಿಡದ ಪಾತೆಯೊಳಕ್ಕೆ ಧೊಪ್ಪನೆ ಬಿದ್ದಳು (ಅವತಂ. ೨೧೭). ೨. ಅದೇ ಸಂಸಾರಪಾತೆಯಲ್ಲಿ ಪುಟ್ಟಿದಾದ ಒಂದು ಗುಲಾಬಿಯು ಉದ್ಭವವಾಗಿ (ದಿನಾಂ. ೮).
[ದೇ.॥ ತಮಿ. ಮಲ. ಪಾತ್ತಿ ; ತುಳು. ಪಾತಿ ; ತೆಲು. ಪಾದಿ. ಪಾದು]

**ಪಾತಿ₂** (ನಾ). ಒಬ್ಬರು ಕುಳಿತುಕೊಳ್ಳುವಂತಹ ದೋಣಿ ; ಚಿಕ್ಕ ದೋಣಿ : ಶಾನುಭೋಗರು ದೋಣಿಯವನೊಬ್ಬನನ್ನು ಕರೆದು 'ಬೆಳ್ಳ, ಕೋಡಿಗೆ ಪಾತಿಯನ್ನು ಹಿಡಿ ನೋಡುವ' ಎಂದರು (ಮರಳು. ४೭६); ದೋಣಿ ಪಾತಿ ಹರಿಗೋಲು ಅಲ್ಲು ಇಲ್ಲು ಎಲ್ಲಲ್ಲೂ ಕಾಣಲಿಲ್ಲ ಈತನು (ಪಡಿಲಂ. ೬೮-೯); ಎಂತಹ ಸೆಳೆತಕ್ಕೂ ತಮ್ಮ ಪುಟ್ಟ ದೋಣಿ, ಪಾತಿಗಳನ್ನು ಒಯ್ಯಬಲ್ಲರು (ಬಾಂಕೃ. I. ೩೮೩). 'ಪಾತಿಗೆ' ಪಠಾ.
[ದೇ.॥ ತಮಿ. ಪಾತ್ತೈ ; ತುಳು. ಪಾತಿ]

**ಪಾತಿಗ** (ನಾ). ದೋಣಿಯನ್ನು ನಡೆಸುವವನು : ಮುನ್ನ ಹುಟ್ಟನರಿ ಯದನಳವೆ ನನ್ನ ಹುಟ್ಟನಿಕ್ಕಲು, ಪಾತಿಗ ? (ಗೀಲಿ. ೫೫-೨೪).
[ಪಾತಿ₂+—ಗ₂]

**ಪಾತಿತ** (ಗು). ಬೀಳುವಂತೆ ಮಾಡಿದ ; ಬೀಳಿಸಿದ ; ಕೆಡವಿದ : ಪಾತಿತದ್ವಿಷಪಟಾಕಂ ಕಾಂ[ದಿ]ಶೀಕಂ ಭಯಾಕುಳಿತಾನೀಕನಪಾಸ್ತವಿಕ್ರಮ ಗುಣೋದ್ರೇಕಂ (ಶಾಶಾ. XX, ೨೦-೨೬; 1019); ಅತನನುಜಂ ಜಗದ್ವಿಖ್ಯಾತಂ ಶ್ರೀ[ಬಾ]ಚಿರಾಜದಣ್ಣಾಧೀಶಂ ಪಾತಿತಸಮಸ್ತವೀರಾರಾತಿ ಬಲಂ (ಕಶಾ. ೪-೨-೦೦೨; 1058). [ಸಂ.]

**ಪಾತಿತ್ಯ** (ನಾ). ಅಧಃಪತನ : ದುರ್ಗತಿ : ಕುಂಟಣಿವಿದ್ಯೆಯಲ್ಲಿ ಪಾರಂಗತಳಾದ ಆ ಹೆಣ್ಣು ತನ್ನ ಸಖಿಯನ್ನು ಶಿವ್ವಾಪ ಜಯಲು . . . ಪಾತಿತ್ಯದ ರಸಾತಳಕ್ಕೆ ನೂಕುತ್ತಾಳೆ (ಸಂಜೀತ. ೭೩). [ಸಂ.]

**ಪಾತಿವ್ರತೆ** (ನಾ). ಗಂಡನ ಸೇವೆಯೇ ವ್ರತವಾಗಿ ಉಳ್ಳವಳು ; ಹದಿಬದೆ ; ಪತಿವ್ರತೆ : ಭುವನದೊಳು ನಾವಹಗೆ ಪರಮೋತ್ಸವದ ಪಾತಿವ್ರತೆಯರಾಗಿಯು ಶಿವಚರಣ ಸದುಭಕ್ತಿಯುಕ್ತಿಯೊಳಾಚರಿಸುತಿಹೆವು (ಬಸವು. ೨೫-೩೭). [ಸಂ. ಪಾತಿವ್ರತಾ]

**ಪಾತಿವ್ರತ್ಯ** (ನಾ). ಪತಿವ್ರತೆಯಾಗಿರುವಿಕೆ : ಪತಿವ್ರತಾಧರ್ಮ: ಅಹಹ ಪಾತಿವ್ರತ್ಯವತಿಸನ್ನಿಹಿತವಲ್ಲಾ ನಿನಗೆ ಹಲಬರ ಮಹಿಳೆ ಸತಿ ಯೆನಿಸುವರೆ (ಕುಮ್ಯಾಭ. ೨೨-೨೮); ತರುಣಿಮಣಿಗಳಲಾ ಅರುಂಧತಿ ವರಸರಸ್ವತಿಯನಿಬರೀಕೆಯ ಸರಿಗೆ ಪೋಲಿಸಬಹುದೆ ಪಾತಿವ್ರತ್ಯಶೀಲದಲಿ (ಕೌಶಿಧಾ. ೪೩-೫೦); ಪರಮಪಾತಿವ್ರತ್ಯ ರೂಪವು ನಾರಿಗೆ ಸ್ವರ ದಿಂಪು ರೂಪು ಕೋಗಿಲೆಗೆ (ಶಂಕಾಪ. ೧೫೫-೬೪). [ಸಂ.]

**ಪಾತೀದಾರ** (ನಾ). ಪಾಲುಗಾರ : ಭಾಗಸ್ಥ : ಹಿಸ್ಸೆದಾರ : ತಾನೇ ರಾಚಪ್ಪನನ್ನು ನಾಕಾಣೆಯ ಪಾತೀದಾರನನ್ನಾಗಿ ಮಾಡಿಕೊಂಡು ಕಂತ್ರಾಟದ ವ್ಯವಹಾರದಲ್ಲಿ ತೊಡಗಿಸಬೇಕೆಂದು ಯೋಚನೆ ಹಾಕಿದಾಗ, ತಾನೇ ಅವನ ಮನೆ ತನಕ ನಾಕೆಂಟು ಸಾರೆ ಎಡತಾಕಬೇಕಾಯಿತು (ವಿಶಪ. II. ೩೦೬).
[←ಮರಾ. ಪಾತೀದಾರ್]

**ಪಾತುರ** 'ಪಾತರ' ನೋ.

**ಪಾತುರೆ** (ನಾ). (ಕೊಡವಜನರು ಹುತ್ತರಿಹಬ್ಬದ ಕೋಲಾಟದಲ್ಲಿ ಬಳಸುವ) ಒಂದು ಬಗೆಯ ನಾಗಬೆತ್ತದ ಕೋಲು : ಅತನ ಸಂಗಡ ಪರಿಯಕಳಿ ಆಡುವುದೆಂದರೆ ಪಾತುರೆ ಹೊಯ್ಲುಗಳಿಂದ ತೊಡೆ ಮತ್ತು ಕಾಲುಗಳನ್ನು ಹುಣ್ಣು ಮಾಡಿಕೊಳ್ಳುವುದೆಂದು ಅವರೆಲ್ಲರೂ ಬಲ್ಲರು (ಹುಲಿಹಾ. ೧೨೬). [←ಕೊಡ. ಪಾತೂರೆ]

**ಪಾತುರೆಕೋಲು** (ನಾ). = ಪಾತುರೆ : ಕುಳಿತಿದ್ದವ ಎದ್ದು ನಿಂತು ಎಡಗೈ ಯಲ್ಲಿ ಪರ್ಯವನ್ನು ಹಿಡಿದು, ಬಲಗೈಯಲ್ಲಿ ಪಾತುರೆಕೋಲನ್ನು ಎತ್ತಿ ಕುಣಿಯಲಾರಂಭಿಸಿದ (ಹುಲಿಹಾ. ೧೨೬); ಚಿಮ್ಮಿ ಪಾತುರೆಕೋಲ ಹೊಯ್ಲಿಗೆ ಕುಣಿವ ಪದ ಹೊರಹೊಮ್ಮಲಿ (ಕಪವು. ೬-೧೫೩).
[ಪಾತುರೆ+ಕೋಲು₁ (<ಕೋಲ್₁). / ಕೊಡ. ಪಾತೂರೆಕೋಲ್]

**ಪಾತುಶಾಹ** 'ಪಾತಶಹ' ನೋ.

**ಪಾತೆ₁** 'ಪಾತಿ₁' ನೋ.

**ಪಾತೆ₂**, ಹಾತೆ (ನಾ). ೧. "ಪಾತರಗಿತ್ತಿ, ಚಿಟ್ಟೆ" (ಗೀಲಿ. ೫೩೩); ನಡುಚೈತ್ರದಿ ಮನಸಗೆ ಗ್ರೀಷ್ಮ, ಬೇಯದೆ ಮನಸು ? ಮುಗಚದೆ ಮೃಗ ಜಲದೊಳೂಷ್ಮ ಕಡಸಿದ ಕನಸು ? ಪಾತೆಯಲರ ಪಾತಿಯಿಲ್ಲ, ತರಗೆಲೆಗಳ ಬಟ್ಟೆಯೊಲ್ಲದೇವುದೊ ನೆನಸು ? (ಗೀಲಿ. ೦೦೭-೦೯). **ಹಾತೆ :** ೧. ಮಿಡಿತೆ ಹಾತೆ ಹಾವುಗಳೆಲ್ಲ ಈ ಬೆಂಕಿಗೆ ಬದುಕಲುಂಟಾ ? (ಜಾಲಗ. ೫೦); ಗಿಡಗಳ ಸಂತಾನಕ್ರಮದಲ್ಲಿ, ಪರಾಗವಿನಿಮಯವು ಮುಖ್ಯವಾದ ಒಂದು ರೀತಿ. ಈ ಕೆಲಸವು ಹಾತೆ, ಹುಳು, ಹುಪ್ಪಟೆ ಮೊದಲಾದ ಕ್ರಿಮಿಕೀಟ ಗಳಿಂದ ಸಾಗುವದು (ಬಾಂಕೃ. II. ೭೮೦). ೨. ಜಿರಲೆ ಮುಂತಾದ ಕೀಟ : ಎಲುವ ಕಡಿವ ಶ್ವಾನ (ಸ್ವಾನ)ನಂತೆ ಹಾತೆಯ (ಹತ್ತಿಯ ಹುಳವ) ತಿಂಬ ಹಲ್ಲಿಯಂತೆ . . . ಭೋಗಕ್ಕೆ ಮುಚ್ಚಿ ಹುಚ್ಚಾದಿರಲ್ಲಾ (ಸಿದ್ಧೇವ. ೦೩೫-೪೦೦); ಮಾತಿನ ಮಾಲೆಯೂ ತೂತಾದ ಮಡಿಕೆಯೂ ಹಾತೆಯು ಹುಲ್ಲಾಸರವೆಯು ಇವು ನಾಲ್ಕು ಏತಕ್ಕು ಬೇಡ (ಸರ್ವಜ್ಞ. ೦೯೯೭). ೩. ಪತಂಗ ; ದೀಪದ ಹುಳು : 'ಹಾತೆಹುಳು' ಪಠಾ.
[ದೇ.॥ ತುಳು. ಪಾತೆ, ಪಾಂತೆ ; ಕೊಡ. ಪಾತೆ]

**ಪಾತೇಲಿ** (ನಾ). ಅಗಲವಾದ ಬಾಯುಳ್ಳ ಪಾತ್ರೆ : ಬೋಗುಣಿ; ಡಬರಿ : ದೊಡ್ಡ ದೊಡ್ಡ ಹಂಡೆಗಳು, ಕೊಳಗಗಳು, ಪಾತೇಲಿಗಳು ಆಗುವ ದಲ್ಲದೆ ನಿತ್ಯದ ಕೆಲಸಕ್ಕೆ ಬೇಕಾಗುವ . . . ಪಾತ್ರೆಗಳು ಹೇರಳವಾಗಿ ಹುಟ್ಟುತ್ತವೆ (ಕಚಾಗ. ४೭೦); ಒಲೆಯ ಮೇಲೆ ಒಂದು ದೊಡ್ಡ ಪಾತೇಲಿಯಲ್ಲಿ ಗುಳಂಬ ಬೇಯುತ್ತಿತ್ತು (ಸ್ವ್ಯತಿತ. ೨೫೨).
[←ಮರಾ. ಪಾತೇಲಿ, ಪಾತೇಲೆ]

**ಪಾತ್ರ** (ನಾ). ೧. ದುಂಡಗಿರುವ ಸಣ್ಣ ಪಾತ್ರೆ : ಕುಡಿಯುವ ಬಟ್ಟಲು. ೨. ತಟ್ಟೆ, ಹರಿವಾಣ, ಮಡಕೆ, ಮುಂತಾದ ಪಾತ್ರೆ : ಭಾಂಡ : "ಪಾತ್ರಂ ಭಾಂಡಂ ಸ್ಥಾಲಿಯುಮಾತ್ರಂ ಭಾಜನಮೆನಿಕ್ಕುಂ" (ಪಮ್ಮಕೋ. ೪೯-೨೬); "ಅಮತ್ರಂ, ಭಾಜನಂ, ಪಾತ್ರಂ, ಸ್ಥಾಲಂ

—ಈ ೪ ತಳಿಗೆ" (ಹಲಾಯು. ೫೪-೧೬೨); ಪಾತ್ರವಿದ್ದಷ್ಟೇ ನೀರು ಸಿಕ್ಕೀತು (ಗಾದೆ). ೩. ಪೂಜೆ, ಯಜ್ಞಯಾಗಾದಿಗಳಲ್ಲಿ ಬಳಸುವ ಪಾತ್ರೆ: "ಪೂಜೋಪಹಾರಮವೆ ಬಲಿ ಭಾಜನಮುಪಯೋಗ್ಯಮಪ್ಪುದುಂ ತಾಂ ಪಾತ್ರಂ" (ವಸ್ತುಕೋ. ೦೨೨-೨೪). ೪. ಎರಡು ದಡಗಳ ನಡುವಿನ ನೀರು ಹರಿಯುವ ಪ್ರದೇಶ; ನದಿ, ಹೊಳೆ ಮುಂತಾದುವುಗಳ ಒಡಲು: "ಎರಡು ತಡಿಯು ನಡು ಪಾತ್ರವೆಂಬುದು" (ಹಲಾಯು. ೦೦೦-೯೬); ಕಾವೇರಿಯು ಶಿವನ ಜಡೆಯಿಂದಿಳಿದ ಗಂಗೆಯು ಹಾಗೆ ಮೈತುಂಬಿ ಹರಿಯುತ್ತಿದ್ದಾಳೆ. ಪಾತ್ರ ತುಂಬಿ ದಡಗಳನ್ನು ಅಲೆಗಳು ಅಪ್ಪಳಿಸುತ್ತಿವೆ (ಸಿಕಿಲು. ೦೨೬). ೫. ನೇಗಿಲಿನಿಂದ ಉತ್ತ ಸಾಲು, —ಗೆರೆ: "ಪಾತ್ರಂ ಸೀತಾಗ್ರಮುಂ" (ವಸ್ತುಕೋ. ೦೩೪-೦೦೬). ೬. ದೋಣಿ; ನಾವೆ: ಭವಾಂಭೋಧಿಯ ತಡಿಯನೆಯ್ದಿಸೆಮ್ಮಂ ನಯನಿಕ್ಷೇಪಪ್ರಮಾಣಪಾತ್ರದಿನರುಹಾ (ಶಂರಾಮಾ. ೭-೪೦). ೭. ಯೋಗ್ಯತೆ; ಅರ್ಹತೆ: ಸ್ನೇಹಮನೆಣಿಸನು ಗಣಿಸನು ಪಾತ್ರಮನಂತೆ ದಶಾಂತರಗಳನು . . . ಉತ್ತಮನು (ಇಂಶಾಶ. ೭೦-೩೯). ೮. ಯೋಗ್ಯತೆಯುನ್ನು ಹೊಂದಿರುವಂತಹುದು; ಯೋಗ್ಯವಾದುದು: ಈ ನೆಲ ಗೌರವ ಹಾಗೂ ಕೀರ್ತಿಗಳಿಗೆ ಪಾತ್ರವಾಗಿತ್ತೆಂದು ಅರ್ಥ (ದ್ರಾಶಿಪ. ೬೨). ೯. ಯೋಗ್ಯನಾದವನು; ಅರ್ಹನಾದವನು: ಪಾತ್ರ ಅಪಾತ್ರವೆಂದು ಕಂಡರೆ ಶಿವನೆಂತು ಮೆಚ್ಚುವನು (ಬಸವ. ೬೦೪); ಅವರಿರವು ಸ್ವರ್ಗನಿರ್ಗದ ಪದವಿಗಳ ಪಹಣಿ . . . ಎಂಬ ಕೀರ್ತಿಗೆ ತಾವೆ ಪಾತ್ರರಾಗಿರುತಿರಲು (ತಿರುರ. ದೇ. ೯-೦೫). ೧೦. ದಾನ ಮುಂತಾದುವುಗಳನ್ನು ಪಡೆಯಲು ಯೋಗ್ಯನಾಗಿರುವವನು—ಅರ್ಹನಾಗಿರುವವನು: ಪಾತ್ರಮುತ್ತಮಮಧ್ಯಮಜಘನ್ಯಭೇದದಿಂ ತ್ರಿವಿಧಮಕ್ಕು (ಆದಿಪು. ೦೦-೯ ವ); ಉತ್ತಮಪಾತ್ರಂ ಸಕಲ ನಿವೃತ್ತಂ ವಿರತಾವಿರತನೆ ಮಧ್ಯಮಪಾತ್ರಂ ಮತ್ತಮಸಂಯುತ ಸಮ್ಯಗ್ದೃಷ್ಟಿಮನಂ ತಾಂ ಜಘನ್ಯಪಾತ್ರಮೆನಿಕ್ಕುಂ (ಶಂಧ್ರಪು. ೩-೩೨); ದಾನಕ್ಕರುಹರಿವರಲ್ಲೆಂದು ನೋಡದೆ ಮೂಢಮಾರ್ಗದಲಿ ಕರೆದಪಾತ್ರಂಗಿತ್ತು ಪಾತ್ರನ ಪರಿಹರಿಸಲೀ ಎರಡಜಂ ಸಂಹರಣವೈದುವುದಾರ್ಜಿಸಿದ ಧನವು (ಕುವ್ಯಾಅ. ೩-೨೩); ಧನಿಕಂ ಕಳ್ಳೊಡವೆಗೆ ಕಳ್ಳನ ಪಾತ್ರನ ಗೈದ ತೆರದೆ (ಶಾಕುಂತ. ೬೮-೦೨೦). ೧೧. ಸಾಹಿತ್ಯಕೃತಿಗಳಲ್ಲಿ ಸೃಷ್ಟಿಯಾಗುವ ವ್ಯಕ್ತಿ, ವಸ್ತು, ಸನ್ನಿವೇಶ ಮುಂತಾದುವು: ಅವನು ನಿರ್ಮಿಸಿದ ಪ್ರತಿಯೊಂದು ಪಾತ್ರಕ್ಕೂ ತನ್ನದೇ ಆದ ವೈಶಿಷ್ಟ್ಯವಿದೆ (ರಮುಗಾ. ೭೪); ವ್ಯಕ್ತಿಯೊಬ್ಬನ ನೈತಿಕದೃಷ್ಟಿಯನ್ನು ಪ್ರಕಟಿಸುವುದೇ ಪಾತ್ರ (ಅಂಕಾ. ೩೨ ಪೀಠಿಕೆ); ಶಾಕುಂತಲ . . . ರಾಧ ಮುಂತಾಗಿ ನಾಯಕಿಯರ ಪಾತ್ರವಲ್ಲ ಇವಳ ಪಾಲಾಗಿದ್ದುವು (ರಂಗನಾ. ೦೬). ೧೨. ಮಂತ್ರಿ; ಸಚಿವ: ಶ್ರೀನಾಥರಾಜನ ಲಕ್ಷ್ಮೀಪತಿರಾತ ಪಶ್ಚಿಮಬಾಲಚಂದ್ರಮಹಾಪಾತ್ರಯಿವರು ಮೊದಲಾದ ಪಾತ್ರಸಾಮಂತರನೂ ಮಾನಿಯರನೂ ಜೀವಗ್ರಾಹವಾಗಿ ಹಿಡಿದುಕೊಂಡು (ಕ್ಷಾಇ. IX-ii, ೫೦೦ ೦೨; 1515); ವಿದ್ಯಾಧರನೆಂದೆಂಬ ಪಾತ್ರೆ[ತ್ರ] ಕೈಮುಗಿದು ನಿಂದು ನುಡಿದನು ರಾವುತಮಾಯಿಕೆಯು ಪಾಡೊಂದಿದ ಬಲು ಪಂಥಗಳನು (ಕುರಾಸಾಂ. ೦೬-೬); ಉಳಿದ ಪಾತ್ರೆ[ತ್ರ]ಗಳು ಅಂದು ಬಿನ್ನವಿಸಿದರಾ ಗಜಪತಿಗಿಂತೆಂದು ರಾವುತಿಕೆಯಿರವನು (ಕುರಾಸಾಂ. ೦೬-೦೦). ೧೩. ಅಭಿನಯಿಸುವವನು; ನಟ: ಅಂತು ಭಾರದ್ವಾಜ ನಾಗಾಮಿಕ ಸಂಗ್ರಾಮರಂಗಕ್ಕೆ ಪಾತ್ರಂಗಳಂ ಸಮೆಯಿಸುವ ಸೂತ್ರಧಾರನಂತೆ ಶಸ್ತ್ರವಿದ್ಯಾಭ್ಯಾಸಂಗೆಯ್ಯುತ್ತಿರೆ (ಪಂಪಭಾ. ೨-೫೯ ವ); ಮಂಗಳರವಂಗಳಂ ಮಾಣಬೇಡುಲಿವ ವಾದ್ಯಂಗಳಂ ನಿಲಿಸಬೇಡೋಲೈಸುತಿರ್ಪ ಪಾತ್ರಂಗಳಂ ತಡೆಯಬೇಡ (ಸಿದ್ಧರಾ. ೬-೩೬); ಪಾತ್ರವಾಡೆ ಮಾದಕಂ ಬಾಜಿಸಿದಂ (ಕಮರ. ೨೪೯ ಪ್ರಯೋ); ಪಾತ್ರದ ಪಾತನು ಗೀತದ ನುಡಿಯನು ಕಟ್ಟಿ ಕೊಟ್ಟರು ನಮ್ಮ ತಂದೆ (ಇಂಶಾಶ. ೦೦-೯೩). ೧೪. [ನಾಟ್ಯ] ನೃತ್ಯ; ಕುಣಿತ: ಪಾತ್ರದ ಭೋಗದವರೊಳು ಮಧುಕನಾಥಗೆ ಹೋಗಿ ಮಾಯಾಂಗನೆಯು ಲಾಸ್ಯದ ಕೇಳಿಯೊಳಿಗವ ಜೋಗ ವಿಸುತಿರುತಿರ್ದ . . . ಅಲ್ಲಮಪ್ರಭು ಲಿಂಗಲೀಲೆಯುಲಿ (ಪ್ರಭುಲಿ. ೫-೬೨); ಸ್ವಾನುಭವದ ಸುಖದಿಂದಧಿಕವೆ ಪಾತ್ರ ಗಾನ ಮುಂತಾದ ಸುಖಗಳು (ಶರತ. ೦೩-೦೬೦); ಬನವಾಸಿಯೆಂಬ ಪಟ್ಟಣದ ಮಾದಕ ರಾಜನಲ್ಲಿ ಮದ್ದಳೆಕಾಜನಲ್ಲಮನೆಂಬವನು ಕಾಮಲತೆಯೆಂಬ ಪಾತ್ರದ ಸ್ತ್ರೀಗೆ ಮೆಚ್ಚಿರಲು (ಭೈರಸೂ. I, ೫೬). ೧೫. ಕುಣಿಯುವವಳು; ನರ್ತಕಿ: ನೇತ್ರೋನ್ಮೀಲನನಿಮೀಲನಮಾತ್ರದೆ ನರಸುರವಿಭೇದಮಾಯುತ್ತಲ್ಲದೊಡಾ ಪಾತ್ರಂಗಳಜಿಯುಲಾಗನೆ ಸುತ್ರಾಮನೆ ಸೂತ್ರಧಾರನಾಗಾಡಿಸಿದಂ (ಆಶಪು. ೫-೯೬). ೧೬. ದೇವಸ್ಥಾನಗಳಲ್ಲಿ ನರ್ತಿಸುವ ದೇವದಾಸಿ: ಸೂಳೆವಳಿಗಂ ಪಂಚಿಗಂಗಂ ಪಜೆಕಾಜಗ್ಗ್ರಂ ಪಾತ್ರಕ್ಕಂ ದೇಸಿಗ ಛಾತ್ರ ಭೋಜನಕ್ಕಮೆಂದು ಸಮಕಟ್ಟಿ . . . ಕುಡೆ (ಕ್ಷಾಇ. XI-i, ೬೦-೦೬; 1018); ಪಂಸಿಗಂಗೆ ಮತ್ತರ್ ೧೨ ಪಾಡುವರ್ಬಿರ್ಗ್ಗಂ ಮತ್ತರ್ ೩೦ ಪಾತ್ರವೆರೆದರ್ಕ್ಕಂ ಮತ್ತರ್ ೪[ರ] ಭೋಗದ ಸೂಳೆಯರ್ ೪ (ಕ್ಷಾಇ. XI-i, ೦೦೩-೩; ಸ. 1070); ಪಾತ್ರ ನಾಲ್ವರ್ಗ್ಗಂ ಎರೆಯ ಮತ್ತ ೩೨ ಮಾಗೆ ಮತ್ತ ೩೦ . . . ಸೂಳೆವಳಂಗೆರೆ ಮತ್ತರು ೪ (ಕ್ಷಾಇ. XX, ೩೦೦-೯; ಸು. 12ನೆಯ ಶತ). ೧೭. (ಕಾರ್ಯದಲ್ಲಿ) ಭಾಗವಹಿಸುವಿಕೆ,—ಭಾಗಿಯಾಗಿರುವಿಕೆ; ಸಕ್ರಿಯವಾಗಿರುವಿಕೆ: ಈಚೆಗೆ ನಡೆದ ಮಂತ್ರಾಲೋಚನೆಗಳಲ್ಲೆಲ್ಲಾ ಬ್ಲಾಂಡಿಂಗ್ಸನ ಹೆಂಡತಿಯದೇ ಮುಖ್ಯಪಾತ್ರ (ಯೋರಪು. ೩೦); ಮಾನವಇತಿಹಾಸದಲ್ಲಿ, ನದಿಗಳ ಪಾತ್ರ ಬಹಳ ಪ್ರಧಾನವಾದುದು (ನನದಿ. ೦೬).

**ಪಾತ್ರಜಗದಳೆ** = ಒಂದು ಬಿರುದು: ಪಡೆವಳೆ ರಾಯರೊಳಪ್ಪ ಕುಡೆ ಬಾಚಲದೇವಿ ಪಾತ್ರಜಗದಳೆವೆಸರಂ (ಎಕ. VII, ಶಿವಮೊ. ೯೬-೨೩; 1113). **ಪಾತ್ರಪಾವುಳ** = ದೇವಾಲಯದ ನರ್ತಕಿ ಮತ್ತು ಪರಿಚಾರಕವರ್ಗ: ಶ್ರೀಸ್ವಯಂಭುಸೋಮೇಶ್ವರದೇವರ್ಗ್ಗೆ ಸೂಳೆಗೇರಿಯುಂ ಮಾಡಿಸಿ ಅಲ್ಲಿಯ ಪಾತ್ರಪಾವುಳಕ್ಕಂ ಬಂದ ಸೂಳೆಯರು ಘ[ಗ]ಳಿಗೆ . . . ಸರ್ವ್ವ ಬಾಧಾಪರಿಹಾರಂ ಸರ್ವ್ವನಮಸ್ಯವಾಗಿ ಪಡೆದು ಬಿಟ್ಟ ಭೂಮಿಯ ಪ್ರಮಾಣಂ (ಕ್ಷಾಇ. XX, ೭೪-೩೦; 1112); ಕೋಟೆಯ ಕೆಯ್ಯ ಸ್ಥಳದೊಳಗೆ ಪಾತ್ರಪಾವುಳಕ್ಕೆ ಬಿಟ್ಟ ಮತ್ತರು ಇಂನೂಱ ಇಪ್ಪತ್ತು (ಕಇ. II, ೦೬-೯೩; 1122); ಶ್ರೀವಿಷ್ಣುದೇವರ ರಂಗಭೋಗದ ಪಾತ್ರಪಾವುಳಕ್ಕಂ . . . ವಿಷ್ಣುಭಟ್ಟೋಪಾಧ್ಯಾಯರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಕೊಟ್ಟ ಮತ್ತರು ೪೦ (ಕ್ಷಾಇ. VIII, ೩೭೦-೯; 1125).

[ಸಂ.]

**ಪಾತ್ರಂಬಡೆ** (ಕ್ರಿ). ಯೋಗ್ಯತೆಯನ್ನು ಪಡೆ; ಅರ್ಹತೆಯನ್ನು ಹೊಂದು: ಪುತ್ರಂಬಡೆದೆನೆ ಪರಮಪವಿತ್ರೀಕೃತಭವಸುಖಾಮೃತಕ್ಕಾನೀಗಳ್ ಪಾತ್ರಂಬಡೆದೆಂ . . . ಎರಡುಂ ಭವಕ್ಕವೊಳ್ಪಂ ಪಡೆದೆಂ (ಸುಕುಮಾ. ೦೦-೨೯).

[ಪಾತ್ರ + ಪಡೆ$_1$]

**ಪಾತ್ರಂಸೂಳೆ** (ನಾ). ನರ್ತಿಸುವ ವೃತ್ತಿಯನ್ನು ಅವಲಂಬಿಸಿರುವ ವೇಶ್ಯೆ,—ಗಣಿಕಾಸ್ತ್ರೀ; ದೇವದಾಸಿ: ಚಾಮರ ಹಾಕುವ ವೃತ್ತಿಯನ್ನು, ನರ್ತಿಸುವ ವೃತ್ತಿಯನ್ನು ('ಪಾತ್ರಂಸೂಳೆ') ನೋಡಿದರೆ . . . ಅವರ ವೃತ್ತಿಗಳನ್ನು, ಸ್ಥಾನಗಳನ್ನು ಹೆಸರಿಸಿರುವಂತೆ ಕಾಣುತ್ತವೆ . . . ಸೂಳೆಗೂ 'ಪಾತ್ರಂಸೂಳೆ'ಗೂ ವ್ಯತ್ಯಾಸವನ್ನು ಊಹಿಸಬಹುದು. ಎರಡನೆಯವಳು ನೃತ್ಯಾದಿ ಅಭಿನಯಗಳನ್ನು ಮಾಡುವವಳು (ಕಶಾಅ. ೧೮೪).

[ಪಾತ್ರ + ಸೂಳೆ]

**ಪಾತ್ರಚಾರಿ** (ನಾ). ಪಾತ್ರವನ್ನು ಅಭಿನಯ ಮಾಡುವವನು : ನಟ : ಸೂತ್ರಧಾರಿಣಿ ನೀನು : ಪಾತ್ರಚಾರಿಯು ನಾನು : ಯಾವ ಪಾತ್ರವನಿತ್ತರೇನು ನೀನೆನಗೆ (ಅಗ್ನಿಹಂ. ೧೯-೧). [ಸಂ. ಪಾತ್ರಚಾರಿನ್]

**ಪಾತ್ರಚಿತ್ರಣ** (ನಾ). =ಪಾತ್ರನಿರ್ಮಾಣ : ಕಾಳಿದಾಸನ ಶಕುಂತಲೆಯ ಪಾತ್ರಚಿತ್ರಣ ತುಂಬ ಸೊಗಸಾಗಿದೆ (ರೂಢಿ). [ಪಾತ್ರ+ಚಿತ್ರಣ$_0$]

**ಪಾತ್ರತೆ** (ನಾ). ಯೋಗ್ಯತೆ; ಅರ್ಹತೆ : ಅಳಸಿಂಗರಾಚಾರ್ಯರ ಶಿಷ್ಯೆಯಾಗುವ ಪಾತ್ರತೆಯನ್ನು ಪಡೆದುದಕ್ಕೆ ಹೊನ್ನಮ್ಮನಿಗೆ ಸಂತೋಷ! (ಕರ್ನಾಕ. ೧೯೭) ; ವಿದ್ಯೆಯಿಂದ ಬರಬೇಕಾದ ವಿನಯವನ್ನು ನೀನು ಪಡೆದಿದ್ದೀಯೆ. ಅದೇ ನಿನಗಿಂದು ಈ ಪಾತ್ರತೆಯನ್ನು ಕೊಟ್ಟದ್ದು (ಹೊಸಕ್ಷಿ. ೩೮) . [ಸಂ. ಪಾತ್ರತಾ]

**ಪಾತ್ರತ್ರಿತಯ** (ನಾ). (ದಾನ ತೆಗೆದುಕೊಳ್ಳುವವರಲ್ಲಿ) ಉತ್ತಮ, ಮಧ್ಯಮ ಮತ್ತು ಅಧಮರೆಂಬ ಮೂರು ವಿಧದ ವ್ಯಕ್ತಿಗಳು : ಆ ಭೋಗಭೂಮಿಯೊಳ್ ಪಾತ್ರತ್ರಿತಯದಾನಫಲಂಗಳಿಂದೇಕದ್ವಿತ್ರಿಪಲ್ಯೋಪಮಾಯುಷ್ಯರುಂ . . . ಆರ್ಯಾಭಿಧಾನರುಮಾಗಿ ದಂಪತಿಸ್ವರೂಪದಿಂ ಪುಟ್ಟಿ (ಚಂದ್ರಪು. ೩-೩೬ ವ). [ಪಾತ್ರ+ತ್ರಿತಯ]

**ಪಾತ್ರತ್ವ** (ನಾ). ಅರ್ಹತೆಯನ್ನು ಹೊಂದಿರುವಿಕೆ : ಅತಿಬಾಲವಿದ್ಯಾಕುಲಾವಧಿವರ್ಣೋತ್ತಮತ್ವ ಪಾತ್ರತ್ವ ಸೃಷ್ಟ್ಯಧಿಕಾರ ವ್ಯವಹಾರೇಶಿತ್ವಾವಧ್ಯತ್ವಾದಂಡ್ಯತ್ವ ಮಾನಾರ್ಹತ್ವ ಪ್ರಜಾಸಂಬಂಧಾಂತರಮೆಂಬ ಪತ್ತುಮಧಿಕಾರಂಗಳುಮನಱಿಪಿ (ಆದಿಪು. ೧೫-೦೬ ವ): ಅತಿಬಾಲವಿದ್ಯಾಕುಳಾವಧಿ ವರ್ಣೋತ್ತಮತ್ವಂ ಪಾತ್ರತ್ವ . . . ಪ್ರಜಾಸಂಬಂಧಾಂತರಮೆಂಬಿಪ್ಪತ್ತುಮಧಿಕಾರಂಗಳುಮನಱಿಪೆ (ಚಾವುಂಪು. ೨೦೩). [ಸಂ.]

**ಪಾತ್ರದ** (ನಾ). ತಕ್ಕಡಿ; ತ್ರಾಸು : "ಪಾತ್ರದಂ ತ್ರಾಸು ಸಮದಂಡಿ ತೂಗುವ ಕೋಲು" (ಮಂಗರಾ. ೦೦೫-೧೪). [ಸಂ.]

**ಪಾತ್ರದತ್ತಿ** (ನಾ). [ಜೈನ] ಮಹಾತಪೋಧನರಾದ ಮುನಿಗಳಿಗೆ ಶುದ್ಧವಾದ ಆಹಾರಾದಿಗಳನ್ನು ಮತ್ತು ಸಂಯಮೋಪಕರಣಗಳನ್ನು ವಿಧಿಪೂರ್ವಕವಾಗಿ ನೀಡುವುದು : ಪರಮತಪಶ್ಚರಣನಿರತಯತಿಸಮಿತಿಗೆಲ್ಲಂ ಪ್ರತಿಗ್ರಹಾದಿಪುರಸ್ಸರಂ ನಿರವದ್ಯಾಹಾರಾದಿ ವಿತರಣರೂಪಪಾತ್ರದತ್ತಿಯುಂ . . . ಬೆರಸು (ಆದಿಪು. ೧೫-೧೩ ವ) ; ಪಾತ್ರದತ್ತಿಯೆಂಬುದು ಮಹಾತಪೋಧನರ್ಗೆ ಪ್ರತಿಗ್ರಹಾರ್ಚನಾ ವಿಧಿಪೂರ್ವಕಂ ನಿರವದ್ಯಾಹಾರಸಂಯಮೋಪಕರಣಂಗಳಂ ಕುಡುವುದು (ಚಾವುಂಪು. ೨೦೧); ಪಾತ್ರದತ್ತಿಯೆಂಬುದು ಮಹಾತಪೋಧನರ್ಗೆ ನಿರವದ್ಯಾಹಾರಮುಮಂ ಸಂಯಮೋಪಕರಣಮುಮಂ ಕುಡುವುದು (ಅಜಿತಪು. ೧೨-೧ ವ). [ಪಾತ್ರ+ದತ್ತಿ]

**ಪಾತ್ರದಾನ** (ನಾ). =ಪಾತ್ರದತ್ತಿ : ಪಾತ್ರದಾನವಿಧಾನಮೆ ವಿನೋದಮಾಗೆಯುಮಿಂತು ನಿತ್ಯೋತ್ಸವಂಗಳೊಳ್ ಕೆಲವು ಕಾಲಂ ಸಲೆ (ಆದಿಪು. ೯-೫೨ ವ) ; ಕ್ರಮದೆ ಪರವ್ಯಪದೇಶಂ ಸಮತ್ಸರತ್ವಂ ಸಚಿತ್ತನಿಕ್ಷೇಪಪಿಧಾನಮತಿಕ್ರಮ ಕಾಲಮತಿಕ್ರಮಮುಮಕ್ಕುಂ ಪಾತ್ರದಾನಮಂ ಕುಡುವೆಡೆಯೊಳ್ (ಸುಕುಮಾ. ೬-೨೨). [ಪಾತ್ರ+ದಾನ]

**ಪಾತ್ರದಾನಿ** (ನಾ). ಪಾತ್ರದತ್ತಿಯನ್ನು ಕೊಡುವವನು : ಮಾಯಾಚಾರಪರಿಣತರುಮಪ್ಪ ಪಾತ್ರದಾನಿಗಳುಂ ತಿರ್ಯಗ್ಜಾತಿತ್ವಮಂ ಪೊರ್ದಿದ ಮಿಥುನಂಗಳಾಗಿ ಪುಟ್ಟಿ ಪರಸ್ಪರವೈರಂಗಳಿಲ್ಲದೆ . . . ರಮಿಯಿಸುವುವು (ಆದಿಪು. ೫-೪೧ ವ). [ಸಂ. ಪಾತ್ರದಾನಿನ್]

**ಪಾತ್ರಧರ** (ನಾ). ಊಟದ ತಟ್ಟೆ ಮುಂತಾದುವನ್ನು ಇಡುವ ಪೀಠ, — ಮಣೆ : ಅಡ್ಡಣಿಗೆ : "ಪಾತ್ರಿಯೆನೆ ತಟ್ಟೆ ಪಾತ್ರಧರ ಮಡ್ಡಣಿಗೆ [ಪಾಠಾಂ. ಪಾತ್ರಪಡಡ್ಡಣಿಗೆ]" (ಮಂಗರಾ. ೬೩-೨೫). [ಸಂ.]

**ಪಾತ್ರಧಾರಿ** (ನಾ). ಪಾತ್ರ ವಹಿಸುವ ವ್ಯಕ್ತಿ ; ನಟ : ಭಾಗವತ ಹಿಮ್ಮೇಳದೊಡನೆ ಕುಳಿತು ಪ್ರಸಂಗವನ್ನು ಹಾಡುತ್ತಿದ್ದರೆ ಪಾತ್ರಧಾರಿಗಳು ಮಾತುಗಳಿಂದ ಅರ್ಥಪ್ರತಿಪಾದನೆ ಮಾಡುತ್ತಾರೆ (ಯಕ್ಷಬ. ೧೬) ; ನೀನೂ ಅದರಾಗ ಪಾತ್ರಧಾರೀ ಆಗೀದಿ (ದೀಪಹ. II. ೫).
[ಸಂ. ಪಾತ್ರಧಾರಿನ್]

**ಪಾತ್ರನಿರ್ಮಾಣ** (ನಾ). ಸಾಹಿತ್ಯಕೃತಿಗಳಲ್ಲಿ ಸೃಷ್ಟಿಸುವ ವ್ಯಕ್ತಿಚಿತ್ರಣ : ದುಷ್ಯಂತನ ಪಾತ್ರನಿರ್ಮಾಣಕ್ಕಿಂತಲೂ ಶಕುಂತಲೆಯ ಪಾತ್ರನಿರ್ಮಿತಿಯಲ್ಲಿ ಕವಿ ಹೆಚ್ಚು ಗಮನ ಕೊಟ್ಟಿದ್ದಾನೆಂಬುದು ಹೇಳಿದರೆ ಅದು ಕಾಳಿದಾಸನ ಪ್ರತಿಷ್ಠೆಗೆ ಧಕ್ಕೆ (ರಮ್ಯಸಾ. ೭೪). [ಪಾತ್ರ+ನಿರ್ಮಾಣ]

**ಪಾತ್ರನಿರ್ಮಿತಿ** (ನಾ). = ಪಾತ್ರನಿರ್ಮಾಣ : ಸಂಸ್ಕೃತ ನಾಟಕಕಾರರು ಪಾತ್ರನಿರ್ಮಿತಿಯಲ್ಲಿ ನಿಷ್ಣಾತರಲ್ಲ ಎಂಬ ಒಂದು ಅಭಿಪ್ರಾಯವುಂಟು (ರಮ್ಯಸಾ. ೭೩). [ಪಾತ್ರ+ನಿರ್ಮಿತಿ]

**ಪಾತ್ರಪಾವುಳ** 'ಪಾತ್ರ' ಪರಾ.

**ಪಾತ್ರವಹಿಸು** (ಕ್ರಿ). ೧. ಪಾಲುಗೊಳ್ಳು ; ಭಾಗವಹಿಸು : ಹಲವಾರು ಉಪಾಧ್ಯಾಯರು ಪಾತ್ರವಹಿಸಿ ಅಂಕಿ ಅಂಶಗಳನ್ನೂ ಅಭಿಪ್ರಾಯಗಳನ್ನೂ ಸೂಚಿಸಿರುತ್ತಾರೆ (ಶಿಕ್ಷದ. ೩೬೯). ೨. ನಾಟಕ ಮುಂತಾದುವುಗಳಲ್ಲಿ ವೇಷ ಹಾಕು,-ನಟಿಸು : ನೀನೇ ಪಾತ್ರ ವಹಿಸಿ ನೀನೇ ತಗೋಬೇಕು ಬಹುಮಾನ (ರಂಗನಾ. ೯೩). [ಪಾತ್ರ+ವಹಿಸು]

**ಪಾತ್ರವಾಡು** (ಕ್ರಿ). ನರ್ತನ ಮಾಡು; ನರ್ತಿಸು : ಕಾಮಿನಿಯೊತಾ ಭರತಸಂಭವ ಭೂಮಿಯೋ ಪೇಳೆನಲು ಮೆಱೆದಾ ಶ್ಯಾಮೆ ಮಾಯಾದೇವಿ ಮೋಹಿಸಿ ಪಾತ್ರವಾಡಿದಳು (ಪ್ರಭುಲಿಂ. ೪-೫೭) ; ಪಾತ್ರವಾಡಿದ ಸತಿಯರಿಗೆ ತಪಹಂತೆ ಧಾತ್ರೀಶಗಿಂಪಾಗುವಂತೆ . . . ಪವಿತ್ರಾತ್ಮಕಲೆಯ ಪಾಡಿದರು (ಭರತೇ. ೦೩-೧೦೪) ; ನಟನ ತಾಂಡವನೃತ್ಯದುತ್ಕಟ ಶಿರುಪು ನೇಱು ಗುಂಡಾಳವ ನಟಿಸಿ ಪಾತ್ರವಾಡಿದನು (ಭೈರಸೂ. I. ೨೫೭). [ಪಾತ್ರ+ಆಡು$_1$]

**ಪಾತ್ರವಿಕೀರ್ಣ** (ನಾ). ೧. ನದಿ, ತೊರೆ ಮುಂತಾದುವು ಹರಿಯುವ ಸ್ಥಳ,-ಪಾತಳಿ. ೨. ನಟಿಸುವವರಿಂದ ಆವೃತವಾದುದು. ೧, ೨ : ಪಾತ್ರವಿಕೀರ್ಣಮಾತತಸುತಾಳಧರಂ ವಿವಿಧಾವನದ್ಧವಾ ಸೂತ್ರಿತವಂಶಕಾರನಿಕರಂ ಕಳಕಂಠಸಮೂಹಸಂಶ್ರಿತಂ ಚಿತ್ರಿತರೂಪಶೋಭೆಗೆಡೆಯಾದುದು ಭಾವಿಸಿ ನೋಡೆ ನಾಡೆ ತೂರ್ಯತ್ರಯಸಂಪ್ರದಾಯಮೆನೆ ಕಾನನಮಾವೃತದಿಕ್ಕುಳಾನನಂ (ಚಂದ್ರಪು. ೫-೫೩). [ಪಾತ್ರ+ವಿಕೀರ್ಣ]

**ಪಾತ್ರವೆಣ್** (ನಾ). ನರ್ತಕಿ : ಪರಿಪರಿ ಪಾತ್ರವೆಣ್ಗಳು ಸಿಂಗರಿಸಿಯೆ ಹರುಷದೊಳಗೆ ನಡೆತಂದು ಕರದಭಿನಯ ಕಟ್ಟಳೆ ಕಳಾಸಿಕೆಯಿಂದ ಸಿರಿಯರಸನನೋಲಗಿಪರು (ಕಂಸವ. ೭-೦೦೭). [ಪಾತ್ರ+ಪೆಣ್]

**ಪಾತ್ರಸಂಕ್ರಮಣ** (ನಾ). ಪಾತ್ರಗಳ ಜೋಡಣೆ : ದಶರೂಪಲಕ್ಷಣಮುಮಂ ಪಾತ್ರಸಂಕ್ರಮಣದೊಳ್ ನೆಱೆಯೆ ತೋಱೆ ಭರತದ ಸಾರಸರ್ವಸ್ವ ಮುಮಂ ನಾಟ್ಯಧರ್ಮದೊಳ್ ಸೌಧರ್ಮಕಲ್ಪೇಶ್ವರಂ ಪ್ರತ್ಯಕ್ಷಂ ಮಾಡಿದಾಗಳ್ (ಅಜಿತಪು. ೫-೨೮ ವ). [ಪಾತ್ರ+ಸಂಕ್ರಮಣ]

**ಪಾತ್ರಸೃಷ್ಟಿ** (ನಾ). =ಪಾತ್ರನಿರ್ಮಾಣ : ಪಾತ್ರಸೃಷ್ಟಿಯು ಕವಿಯ ಪ್ರತಿಭೆಗೆ ಒರೆಗಲ್ಲಾಗಿರುತ್ತದೆ (ರೂಢಿ). [ಪಾತ್ರ+ಸೃಷ್ಟಿ]

**ಪಾತ್ರಾಭಿಗರ** 'ಪಾತ್ರಾಭಿಗಾರ' ನೋ. ಪಾತ್ರ

**ಪಾತ್ರಾಭಿಗಾರ, ಪಾತ್ರಾಭಿಗರ** (ನಾ). ಊಟಕ್ಕೆ ಮುಂಚೆ (ಶುದ್ಧಿಗಾಗಿ) ಎಲೆಗಳಿಗೆ ಮತ್ತು ಎಲ್ಲ ಅಡಿಗೆಪಾತ್ರೆಗಳಿಗೆ ತುಪ್ಪವನ್ನು ಪ್ರೋಕ್ಷಿಸುವುದು : ಘೃತಸಮುದ್ರದ ಸಡಗರವು ಪಾತ್ರಾಭಿಗಾರವ್ಯಯಕೆ ತೀರುವುದೆ (ತಿಮ್ಮಕ. ೫-೭೧); ಪಾತ್ರಾಭಿಗಾರವಂ ಮಾಡಿಸಿ ಪದಾರ್ಥಂಗಳು ಬಡಿಸೆಂದು (ಕುಡೇಲೋ. ೦೦೫). **ಪಾತ್ರಾಭಿಗರ :** ಪರಮ

ಸೌಖ್ಯವನಾಂತು ಶಿಗುಳರು ಪಾತ್ರಾಭಿಗರ ಪರವಾನ್ನ . . . ತೊವ್ವೆ ಪಳಿದ್ಯವ ತರತರದಲಿ ಬಡಿಸಿದರು (ಮೋಹತ. ೩-೩೦). [ಪಾತ್ರ+ಅಭಿಗಾರ]

**ಪಾತ್ರಿ** (ನಾ). ೧. ಪಾತ್ರ ವಹಿಸುವವನು : ಈ ಭೂತಾರಾಧನೆಯಲ್ಲಿ ಹಂದಿಯ ಮುಖವಾಡವನ್ನು ಅದರ ಪಾತ್ರಿಯು ಧರಿಸಿ ಕುಣಿಯುವುದು ವಾಡಿಕೆಯಾಗಿದೆ (ಜಾಪನೀ. ೬೧) ; ಅವರಿಗೆ ಇದಿರಾಗಿ ನಾಗನ 'ಪಾತ್ರಿ'ಯು (ಪಾತ್ರ ವಹಿಸುವಾತ) ಕಾಳಿಂಗಸರ್ಪದಂತೆ ಕುಣಿಯುತ್ತ ತಿರುಗುತ್ತಾನೆ (ಹುಮುಖ. ೨೩). ೨. (ಕರಾ) (ದೈವ, ದೇವರು ಮುಂತಾದ) ಅಲೌಕಿಕಶಕ್ತಿಗಳ ಆರಾಧಕ ; ಅಲೌಕಿಕಶಕ್ತಿಗಳು ಮೈ ಮೇಲೆ ಬರುವ ವ್ಯಕ್ತಿ : ಕೋಲ ಮಾಡಿಸಲು ಉಂಟಾದ ಮುಖ್ಯ ಅಡಚಣೆ ಎಂದರೆ, ದೈವದ ಪಾತ್ರಿ ಬಿರುಮಣ್ಣ ಸತ್ತದ್ದು (ಕುಡಿಕೂ. ೩೫೯) ; ಕಂಡ್ಲೂರಿನ ಪಂಜುರ್ಲಿದೈವದ ಪಾತ್ರಿಯನ್ನು ಕರೆಯಿಸಿ, ಬೊಬ್ಬರ್ಯನನ್ನು ಬಂಧಿಸಿ . . . ಗೋಳಿಮರದಲ್ಲಿ ಸ್ಥಾನ ಕಲ್ಪಿಸಿಕೊಟ್ಟರು (ರೇಪಹಂ. ೫೭). [ಸಂ. ಪಾತ್ರಿನ್]

**ಪಾತ್ರೀಕರಿಸು** (ಕ್ರಿ). ಅರ್ಹನನ್ನಾಗಿ ಮಾಡು ; ಯೋಗ್ಯನನ್ನಾಗಿ ಮಾಡು : ಧನಿಕಂ ಕಳ್ದೊಡವೆಗೆ ಕಳ್ಳನ ಪಾತ್ರನ ಗೈದ ತೆರದೆ ನೀಂ ಮುಟ್ಟಿದ ನಂದನೆಯಂ ಬಹುಮತಿಸುತೆ ನಿನ್ನನೆ ಪಾತ್ರೀಕರಿಸಿ ಬಿಟ್ಟ ಮುನಿಯೆ ವಿಪಾಸ್ಯಂ (ಶಾಕುಂತ. ೬೮-೧೩೦). [ಪಾತ್ರೀಕರಣ್ + — ಇಸು]

**ಪಾತ್ರೀಭೂತ** (ಗು). ೧. ಅರ್ಹತೆಯನ್ನು ಹೊಂದಿದ ; ಯೋಗ್ಯತೆಯನ್ನು ಪಡೆದ : ಪಾತ್ರೀಭೂತ ವಿನೇಯಸಂತತಿಗೆ ಸಮ್ಯಗ್ದರ್ಶನ ಜ್ಞಾನಚಾರಿತ್ರಂಗಳ್ ನಿಜಮಪ್ಪನಂತಸುಖಮಂ ರಾಗಾದಿಗಳ್ ಜನ್ಮ ಮೃತ್ಯು ತ್ರಾಸಂಗಳನೀವುವು (ಕುರಾಪೂ. ೧-೪). (ನಾ). ೨. ಅರ್ಹತೆಯನ್ನು ಪಡೆದವನು ; ಯೋಗ್ಯ : ಶ್ರೋತ್ರೀಯರುಂ ಕ್ಷತ್ರಿಯರುಂ ಪಡಿಗುಟ್ಟಿ ಪಶುಯಾಗಂಗೆಯ್ದು ಲೋಕದೊಳ್ ಪಾತ್ರೀಭೂತರುಂ ಪವಿತ್ರಗೋತ್ರರುಮಾಗಿ ಪರಲೋಕದೊಳ್ ಪಾಕಶಾಸನ ಸಮಾನಭೋಗಿಗಳಪ್ಪರ್ (ಶಂಶತಂ. ೬೨-೪). [ಸಂ.]

**ಪಾತ್ರೆ** (ನಾ). ೧. ಕೊಳಗ, ತಪ್ಪಲೆ, ತಟ್ಟೆ, ಹರಿವಾಣ ಮುಂತಾದ ಸಾಧನ; ಭಾಜನ : "ಪಾತ್ರಯೆನೆ ತಟ್ಟೆ . . . ಪಾತ್ರಯೆನೆ ಪಡಿಗಮೆನಿಸಿಕ್ಕು" (ಮಂಗರಾ. ೬೩-೨೩); ಕೆಡದಂತೆ ಬಯ್ಚಿಟ್ಟು ಕುಡುವುದೀ ಪಾತ್ರಯುಂ (ತಿರುರ. ದೇ. ೧೧-೧೬); ವಿರಾಜಿಪ್ಪ ಮನೋಜ್ಞ ಪಾಯಸದ ಪಾತ್ರಗಳಿಂ . . . ಪಾಲ್ಗೊಸರಿಪ್ಪ ಕಟಾಹಕೋಟಿಯಿಂದೊಪ್ಪಿದುದಂದ ನೂನವಿಭವಂಬಡೆದಾ ವರಯಜ್ಞಮಂಟಪಂ (ಅಂಶ್ವಟಿ. ೪-೪೮) ; ಈ ಹಾಲನ್ನು ಮೊಂಡ ಚೂರಿಗಳಿಂದ ಪಾತ್ರಗಳಲ್ಲಿ ಸವರಿಕೊಳ್ಳುತ್ತಾರೆ (ಮುಂಬಯು. ೪-೪೦). ೨. ನದಿ, ಹೊಳೆ ಮುಂತಾದುವುಗಳ ಒಡಲು,— ಎರಡು ದಡಗಳ ನಡುವಿನ ಪ್ರದೇಶ : ಹೊಳೆ ತುಂಬಿದಾಗ ಅದರ ಪಾತ್ರೆಯ ಅಗಲ ೫೦೦ ಫೂಟು ಇರುತ್ತದೆ (ಕಭಾಗ. ೧೯); ಮೇಲಣ ಪರ್ವತಗಳ ನೀರು ಆ ಕೊರಕಲಿನ ಬಂಡೆಗಳ ಮೇಲಿಂದ ಉರುಳಾಡುತ್ತ ಹರಿದು ಬರುವಂತೆ ಕಂಡಿತು. ಇನ್ನು ಅದರ ಪಾತ್ರೆಯನ್ನು ತುಳಿದೇ ಬೆಟ್ಟವನ್ನು ಏರಬೇಕು (ಸ್ವಕ್ಷಹೊ. ೦೩೩).

**ಪಾತ್ರೆಪಡಗ, ಪಾತ್ರೆಪಗಡ, ಪಾತ್ರೆಪಡಗು, ಪಾತ್ರೆಪಡದೆ**=ಕೊಳಗ, ತಪ್ಪಲೆ ಮುಂತಾದ ಪಾತ್ರೆ,—ಸಾಮಾನು : ಮನೆಯ ಪಾತ್ರೆ ಪಡಗಗಳೆಲ್ಲವೂ ದೇವಸ್ಥಾನಕ್ಕೆ ಸೇರಿದುವು (ಮಂಶಪ್ಪ. ೪೯೭); ಕಾಳು ಕಡಿ ತೀರಿದ ಮೇಲೆ ಮನೆಯಲ್ಲಿ ಹೆಂಗಸರು ಪಾತ್ರ ಹಿರಿಯರಿಗೆ ಕಾಣದಂತೆ ಪಾತ್ರೆ ಪಡಗಗಳನ್ನು ಕೊಟ್ಟು ದೋಸೆ, ಖಾರ ತಿಂದದ್ದೂ ಉಂಟು (ಏರಿಲೇ. ೩); ದನಕರುಗಳು ಹೋದುವು, ದೊಡ್ಡ ಪ್ರಮಾಣದ ಪಾತ್ರೆ ಪಗಡಗಳೂ ಹರಾಜಾಗಿ ಹೋದುವು (ಮಸಳೂ. ೪); ಇದ್ದ ಅಲ್ಪಸ್ವಲ್ಪ ಪಾತ್ರೆ ಪಡಗುಗಳು ಸೇಟನಂಗಡಿಯ ಹಾದಿ ಹಿಡಿಯಲೂ ಹೆಚ್ಚು ಕಾಲ ಬೇಕಾಗಿರಲಿಲ್ಲ (ರಾಗಿತ. ೨೭); ನಾಳೆ ಉಪವಾಸವಿದ್ದರೂ ಸರಿ, ಅವನ ಪಾತ್ರೆ ಪಡದೆಗಳಲ್ಲಿ ನಾನೇನೂ ಮಾಡಲಿಕ್ಕಿಲ್ಲ (ಶಹ. ೯೨). **ಪಾತ್ರೆಪರಟ, ಪಾತ್ರೆಪರಡಿ, ಪಾತ್ರೆಪರಾಟು** = ಪಾತ್ರೆಪಡಗ : ಹರೇಕೃಷ್ಣನ ಪಾತ್ರೆಪರಟ . . . ವಶಪಡಿಸಿಕೊಂಡನು (ಬಂಕಿಮ. ೧೦೭); ಅವರು ದಿನಾಲು ಅಡುಗೆಗಾಗಿ ಕಾಳು ಕಡಿಗಳನ್ನು ಹಸನು ಮಾಡಿಕೊಡ ಬೇಕಾಗುತ್ತಿತ್ತು. ಪಾತ್ರೆ-ಪರಡಿಗಳನ್ನು ತಿಕ್ಕಿ ಕೊಡಬೇಕಾಗುತ್ತಿತ್ತು (ಮಣ್ಣಮ. ೧೬೩); ನಾಲ್ಕು ದಿನ ಬಿಟ್ಟು ಹೋದರೆ ಇಲ್ಲಿನ ಪಾತ್ರೆ ಪರಡಿ ಉಳಿದೀತೆ ? (ಮುಗಿಯು. ೧೧೪); ಪಾತ್ರೆ ಪರಾಟುಗಳು ಹೋಗಲಿ . . . ಈ ಕಣಜದ ಕಾಳನ್ನಾದರೂ ಬಿಟ್ಟುಬಿಡಿ ಸ್ವಾಮಿ (ಕಮಕೂ. ೩೨). **ಪಾತ್ರೆಪಳಿಗೆ** = ಪಾತ್ರೆ ಪಡಗ : ಒಗೆಯುವುದನ್ನು ಪೂರೈಸಿದ ಬಳಿಕ ಕೂಡ ನಲ್ಲಿ ಇದ್ದುದಾದರೆ, ಪಾತ್ರೆ-ಪಳಿಗೆಗಳನ್ನು ತೆಗೆದುಕೊಂಡು ಬಂದು ಬೆಳಗುವಳು (ಶ್ರತಿಬಿಂ. ೨೭). **ಪಾತ್ರೆಪೇಣಿ**=ಪಾತ್ರೆ ಪಡಗ : ವಿಪರೀತ ಪಾತ್ರೆ ಪೇಣಿ ಕುರ್ಚಿ ಮೇಜುಗಳನ್ನು ಅಡುಕಿಕೊಂಡು ಮನೆಯಲ್ಲಿ ಓಡಾಡುವುದಕ್ಕೆ ಜಾಗ ಸಾಲದಂತೆ ಮಾಡುವುದು ಜಾಣತನವಲ್ಲ (ಗೃಹಶಿ. ೧೬೭). [ಸಂ. ಪಾತ್ರ]

**ಪಾತ್ಶಾಹ** 'ಪಾತಶಹ' ನೋ.

**ಪಾತ್ಶ್ಯಾವು** 'ಪಾತಶಹ' ನೋ.

**ಪಾಥ** (ನಾ). ೧. ನೀರಂ ; ಉದಕ : "ಸಲಿಲಂ ಜೀವನಮಂಬು ತೋಯಮುದಕಂ ಪಾಥಂ . . . ಪಾನೀಯಮೆಂದಿಂತನಾಕುಳದಿಂದಂ ತಟಿಸಲ್ಗೆ ನೀರ್ಗೆ ಪೆಸರಂ ಪರ್ಯಾಯದಿಂ ಪಾಗ್ವಿದರ್" (ಪಸ್ಸುಕೋ. ೨೨-೧); ಬಂದೇಱಿದಂ ಧೀರಂ ಶೌರಿ ವರೂಥಮಂ . . . ಶಸ್ತ್ರತೂಣೀರವ್ರಾತಸನಾಥಮಂ ಧ್ವಜಝಷಾಪ್ತಸ್ಪರ್ಣದೀ ಪಾಥಮಂ (ಜಗನ. ೧೫-೬೦). ೨. ಅಗ್ನಿ. ೩. ಸೂರ್ಯ. [ಸಂ.]

**ಪಾಥೆ** (ನಾ). ಒಂದು ಬಗೆಯ ಔಷಧದ್ರವ್ಯ ; ಅತಿಬಜೆ : ಲವಣ ಪಂಚಕಮಿಂಗು ಪಿಪ್ಪಲಿ ಶುಂಠಿ ತುಂಬುರುಧಾನ್ಯಕಂ ಶಿವೆ ದುರಾಲಭೆ ಪಾಥೆ ಚಿತ್ರಕವೋಲವಮೆಂಬಿವನೆಲ್ಲಮಂ ಸವನೆ ಕೊಂಡು ಸುರಾನ್ವಿತಂ ಕುಡೆ (ಲೋಕೋಪ. ೯-೩೩೯). [ ? ]

**ಪಾಥೇಯ** (ನಾ). ಪ್ರಯಾಣಕಾಲದಲ್ಲಿ ದಾರಿಯ ಊಟಕ್ಕಾಗಿ ಸಿದ್ಧಮಾಡಿ ತೆಗೆದುಕೊಂಡು ಹೋಗುವ ಆಹಾರವಸ್ತು ; ಬುತ್ತಿ : "ಪಾಥೇಯಂ, ಸಂಬಳಂ—ಈ ೨ ಸಂಬಳಂ" (ಹಲಾಯು. ೩೯-೨೦೩); ಮೋಕ್ಷಪುರಪ್ರಸ್ಥಿತ ಭವ್ಯಪಥಿಕಪಾಥೇಯಮಪ್ಪ ಸಮ್ಯಕ್ತ್ವಮುಮಂ (ಆಪಕ್ಕು. ೧೨-೧ ಪ) ; ರಾಘವಂ ಜಾನಕೀಸ್ಮೇರಮುಖಾಬ್ಜಾಲೋಕನಂ ಲೋಚನಸುಖಮುಖಪಾಥೇಯಮಾಗೆಯ್ದೆ ವಂದಂ (ಕುರಾಪೂ. ೭-೨೯); ಪಾಥೇಯಮಂ ಭೋಜನಂಗೈದು ವಿಶ್ರಮನಾಗಿ ತಳಿತ ಮಾಮರನ ನೆಳಲಂ ಸಾರ್ದನು (ಕೃಬಾಭಾ. ೨೯-೪೮). [ಸಂ.]

**ಪಾಥೇಯಧನ** (ನಾ). ಪ್ರವಾಸಕ್ಕೆ ಬೇಕಾಗುವ ಹಣ ; ದಾರಿವೆಚ್ಚ : ಬೋಧಿದರ್ಶನಚಾರಿತ್ರಮೆ ಮೋಕ್ಷಮಾರ್ಗಪಾಥೇಯಧನಂ (ಅಪಂಕ್ಕು. ೩-೬೨). [ಪಾಥೇಯ + ಧನ]

**ಪಾಥೋಜ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : "ಪಾಥೋಜಂ—ತಾವರೆ" (ಓಶಂ. ೯೭); ತತ್ತಪಸ್ವಿಯ ಪಾದಪಾಥೋಜಯುಗಲಮಂ ಚಿತ್ತದೊಳ್ಪರಿಸುತ್ತೆ (ದುರಕ್ಕು. ೨೩-೩೭). [ಸಂ.]

**ಪಾಥೋದ** (ನಾ). ೧. ನೀರನ್ನು ಕೊಡುವಂತಹುದು ; ಮೋಡ. ೨. ಕೊನ್ನಾರಿಗಡ್ಡೆ : "ಪಾಥೋದಃ—ಭದ್ರಮುಸ್ತೆ" (ಓಶಂ. ೯೭). [ಸಂ.]

**ಪಾಥೋದಂತಿ** (ನಾ). ನೀರಾನೆ : ಎನಸುಂ ಱಗ್ಗಿಯ್ದು ಚೆಲ್ವಂ ಪಡೆವುದು ವಿಚಳತ್ಕೂರ್ಮ ಪಾಠೀನಸಂಘಟ್ಟನಪಾಥೋದಂತಿದಂತಾಹತಮಕರಕರ ಕ್ಷೋಭಸಂಜಾತಕಲ್ಲೋಲ . . . ಅಂಭೋನಿಧಾನಂ (ಎಇ. XV, ೩೯-೩ ; 1189). [ಸಂ. ಪಾಥೋದಂತಿನ್]

**ಪಾಥೋದರ** (ನಾ). ಮೋಡ ; ಮೇಘ. [ಸಂ.]

**ಪಾಥೋಧಿ** (ನಾ). ಸಮುದ್ರ : ಹರ್ಷೋನ್ಮಾದಕದ್ದುದು ಕಟಿಧ್ವಜಿನಿ, ಘೇ ಘೇ ಜಯಧ್ವನಿಗೈವ ರಾಕ್ಷಸಧ್ವಜಿನಿಯುಂ ಕೂಡಿ, ಪಯೋಧಿಯಪ್ಪವೊಲ್ ಪಾಥೋಧಿಯೊಳ್! (ಶ್ರೀರಾಮಾ. ೬೯೬ ೫೭೯). [ಸಂ.]

**ಪಾಥೋನಿಧಿ** (ನಾ). = ಪಾಥೋಧಿ : ಅನತರಾಗಿ ಜೀವಿಸದೆ ದುಷ್ಟನೃಪರ್ ಕೆಲರೋಡಿ ಪೋಗೆ ಪಾಥೋನಿಧಿಯಲ್ಲಿ ಪೊಕ್ಕೊಡವರಂ ತವಿಸಲ್ ಬಟಸಂದು (ಕೃಷ್ಣಕೃ. ೫-೫೩). [ಸಂ.]

**ಪಾಥೋರುಹ** (ನಾ). = ಪಾಥೋಜ : "ಪಾಥೋರುಹಂ–ತಾವರೆ" (೬೫೦. ೯೩). 'ಪಾಥೋರುಹಾಕ್ಷ' ಪರಾ. [ಸಂ.]

**ಪಾಥೋರುಹಾಕ್ಷ** (ನಾ). ಕಮಲದಂತಹ ಕಣ್ಣುಗಳನ್ನುಳ್ಳವನು ; ಕೃಷ್ಣ : ಪಾಥೋರುಹಾಕ್ಷನಂ ದಾರುಕಂ ನಿಟ್ಟಿಸಿ ಮರಳಿ ರಥಮಂ ತಿರುಗಿಸಿದನು (ಕೃಬಣಾ. ೬-೫೬). [ಸಂ. (ಪಾಥೋರುಹ + ಅಕ್ಷಿ + –)]

**ಪಾದ** (ನಾ). ೧. ಕಾಲು ; ಚರಣ : "ಅಂಘ್ರಿಃ, ಚರಣಃ, ಪಾದಃ —ಈ ೩ ಕಾಲ್" (ಹಲಾಯು. ೬೯-೩೫೬); ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ ಇರಿಸಯ್ಯಾ (ಬಸವ. ೨೬೯); ಸಾಕ್ಷರಸೇವ್ಯಂ ನಿಜವಿದ್ಯೆ ವಿಶ್ವವಿನುತಂ ಪಾದಂ ಸದಾಳಿಪ್ರಿಯಂ ವರದಾನೋನ್ನತಭದ್ರಲಕ್ಷಣಪದಂ . . . ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ (ಜಗಪ. ೦-೫); ಹರಿ ಪದ್ಮಾನಂದಿ ಪೀತಾಂಬರೋಲ್ಲಸಿತಂ ಚಕ್ರಸಹಾಯ ನಾಕ್ರಮಿಸಿದಂ ಭೂಚಕ್ರಮಂ ಪಾದದಿಂ (ಕೃಷ್ಣಕೃ. ೬-೨೩). ೨. ಕದಿರು ; ಕಿರಣ ; ರಶ್ಮಿ : "ಉಸ್ರಃ, ಧಾಮ . . . ಪಾದಃ, ವಿರೋಚಃ, ಗೌಃ—ಈ ೩೨ ರಶ್ಮಿಗಳ ಪೆಸರ್" (ಹಲಾಯು. ೬-೯೯). ೧, ೨ : ಜನಚಿತ್ತಾಹ್ಲಾದಪಾದಂ . . . ಉದ್ಯನ್ಮಂಡಲಾಗ್ರಂ ಸಲೆ ಘನಪದವೀ ಶೋಭೆಯುಂ ಪೆರ್ಚಿಸುತ್ತಿರ್ಪಿನಮೊಳ್ಪಂ ಪೆತ್ತುತ್ತದಾಂ ಬೆಳಗುಗೆ ಜಗಮಂ ಗೋಪನಾರ್ತಂಡದೇವಂ (ಜಗಪ. ೦-೯) ; ಭೂಭೃದ್ವರರಾ ತಲೆಯುಲಿ ಮೆರೆಯುತ್ತ ಮೇಣಮರರ ಶಿರಭಾಗದಲಿ ಆ ಎರಡೂ ದಿನಪನ ಪಾದಗಳು ಸೌಖ್ಯವ ತರಲಿಮಗನವರತ (ಧನ್ಯಾಲೋ. ೯೭). ೩. ಪರ್ವತಗಳ ಬುಡ : "ದರಿ ಕಂದರಂ . . . ಗಿರಿಪರ್ಯಂತಂ ಪಾದಂ" (ವಸ್ತುಕೋ. ೨೬-೩). ೪. ಸಣ್ಣಗುಡ್ಡ : "ಪಾದಾಃ, ಪ್ರತ್ಯಂತಪರ್ವತಾಃ–ಈ ೨ ಕೆಲದ ಕಿಱುಬೆಟ್ಟುಗಳ್" (ಹಲಾಯು. ೨೬-೦೩) ; "ಕಿಱುಗಿರಿ ಪಾದಮಕ್ಕು" (ಮಂಗರಾ. ೩೦-೨). ೫. (ಮರದ) ಬೇರು ; ಮೂಲ : "ಪಾದಂ, ಮೂಲಂ–ಈ ೨ ಮರದ ಬೇರ್" (ಹಲಾಯು. ೩೦-೨೯) ; "ಪಾದಮೆನೆ ಮೂಲಮೆನೆ ಪಸರಿಸಿದ ಬೇರಕ್ಕುಂ" (ಮಂಗರಾ. ೩೨-೨). ೬. ಗುರುಹಿರಿಯರಾದವರನ್ನು ಗೌರವಾರ್ಥವಾಗಿ ಸಂಬೋಧಿಸುವ ಒಂದು ನುಡಿ : ಪಾದ ಪರಾಕು ಚಿತ್ತವಿಪುದು (ಜಕಪ. ೯-೨೯); ಹಿಂದೆ ನಾಲ್ಕೈವರ್ಷಗಳ ಕೆಳಗೊಂದು ಸಲ ನಾನಿಲ್ಲಿಗೆ ಬಂದು, ಗೈದಾಟಕ್ಕೆ ಪಾದದ ತಂದೆ ತಂಗಿ ಸುನಂದೆಯು . . . ಹಿಂದೆ ಬಂದಳು ಪಾಪಿಯಾ (ಕಂಪು. ೯೦-೩೦). ೭. ಗುರುಹಿರಿಯರ ಹೆಸರುಗಳ ಕೊನೆಯಲ್ಲಿ ಗೌರವಾರ್ಥವಾಗಿ ಸೇರಿಸುವ ಶಬ್ದ : "ಪಾದಃ, ದೇವಃ, ಭಟ್ಟಾರಕಃ –ಈ ಮೂಱುಂ ಪೆಸರ ಕಡೆಯೊಳ್ ಪೂಜಾಪ(ಚ)ನಂ" (ಹಲಾಯು. ೨೫-೦೫೯). ೮. ಭಾಗ ; ಅಂಶ. ೯. ನಾಲ್ಕನೆಯ ಒಂದು ಭಾಗ,–ಅಂಶ ; ಕಾಲುಭಾಗ : "ಪಾದಂ ತುರ್ಯಾಂಶಂ" (ವಸ್ತುಕೋ. ೭೨೦-೨೨). ೧೦. ಹನ್ನೆರಡು ಅಂಗುಲಗಳ ಅಳತೆ ; ಒಂದು ಅಡಿ. ೧೧. [ಛಂದ] ಪದ್ಯದ ಒಂದು ಸಾಲು : ಪಾದದೊಳಿರಡನೆಯಕ್ಕರಮಾದರದಿಂದಾದುದಾವುದವದನ ಱಾದನಿತಂ ಪಾದದೊಳಿಡುವುದದಕ್ಕುಂ ಭೇದೋಕ್ತಿಕ್ರಮವಿಚಾರಿತೋರು ಪ್ರಾಸಂ (ಕಪಾಕ. ೨-೩೨); ಒಂದಿದ ಋತುಷಟ್ಟದಿಗಳೊಳೊಂದೇ ತೆಱನೆರಡು ಪಾದಮುಂ ದೋಣ್ ಮುಂದಕೊಂದರೆ ಬಕ್ಕುಂ (ಛಂದೋಂಬು. ೫-೨೫೯ ಅಡಿ); ಪದ್ಯವು ಪಾದದಿಂದ ಕೂಡಿರುವುದು . . ಪದ್ಯದ ಪಾದವು ಗಣ ಮತ್ತು ಪ್ರಾಸಗಳ ನಿಯಮವುಳ್ಳ ಶಬ್ದಸಂಘಟನೆಯಾಗಿರುವುದು (ಕೃಬಿ. ೬೯). ೧೨. [ಜ್ಯೋತಿ] ಒಂದು ನಕ್ಷತ್ರದ ಕಾಲಮಾನದ ನಾಲ್ಕನೆಯ ಒಂದು ಭಾಗ ; ರಾಶಿಯ ಒಂಬತ್ತನೆಯ ಒಂದು ಭಾಗ : ಒಂದು ನಕ್ಷತ್ರಕೆ ನಾಲ್ಕು ಪಾದ, ಒಂಭತ್ತು ಪಾದಕ್ಕೆ ಒಂದು ರಾಶಿ (ಭಾಸ್ಕರ. ೩೯-೬); "ಪದಪೂರಣೆ ಕಾಲು ತೇಜ ಮೂರ್ಪಾದಾಖ್ಯಂ" (ನಾನಾಕಂ. ೦೫೩); "ಅಂಘ್ರಿ ಪದಪೂರು ತೇಜ ಪಾದಾಹ್ವಯಂ" (ನಾನಾರ. ೦೫೦).

**ಪಾದ ಬೆಳಸು, ಪಾದ ಬೆಳೆಸು** = (ಗೌರವಾರ್ಥದಲ್ಲಿ ಅಥವಾ ವ್ಯಂಗ್ಯವಾಗಿ) ಬರು ; ಆಗಮಿಸು; ದಯಮಾಡಿಸು : ನಾಮಕರಣದ ದಿನ ಸ್ವತಃ ಅವರೇ ಪಾದ ಬೆಳಸಿ ಬಂದು ನೋಡಿ ಹೋದರು (೬೩ಊ. ೦೩) ; ತಾಯಿ ತಕ್ಕ ಮಟ್ಟಿಗೆ ಸಂತೃಪ್ತಳಾಗಿ ದಿವಾನಖಾನೆಯ ಕಡೆಗೆ ಪಾದ ಬೆಳಸಿದಳು (ಕುಸರು. ೫೭೬). [ಸಂ.]

**ಪಾದಕಟಕ** (ನಾ). ಕಾಲಿಗೆ ಹಾಕಿಕೊಳ್ಳುವ ಕಡಗ, –ಬಳೆ : "ಸಿಂಜಿನೀ, ಪಾದಕಟಕಃ—ಈ ೨ ಕಾಲ ಕಡಗಂ" (ಹಲಾಯು. ೯೨-೯೦೬); "ಪಾದಾಂಗದಂ . . . ಪಾದಕಟಕಃ—ಅಂದಿಗೆ, ಕಾಲುಸರಪಣಿ, ಪಾಗಡ, ಕಾಲುಕಡಗ, ಕಾಲುತೊಡಿಗೆ" (ಸಿದ್ಧಾಂತಿ. ೨೦೦). [ಪಾದ + ಕಟಕ₃]

**ಪಾದಕಡಗ** (ನಾ). = ಪಾದಕಟಕ : ಅಭಿಮನ್ಯುವನ್ನು ರಮಣೀಯವಾದ ಪೀತಾಂಬರಗಳಿಂದಲೂ . . . ಪಾದಕಡಗಗಳಿಂದಲೂ ಅಲಂಕರಿಸಿ (ಕೃಪಾಪ. ೦೨೯). [ಪಾದ + ಕಡಗ₁]

**ಪಾದಕೃಚ್ಛ್ರ** (ನಾ). ಪ್ರಾಯಶ್ಚಿತ್ತರೂಪವಾಗಿ ನಾಲ್ಕು ದಿನಗಳು ಮಾಡುವ ಒಂದು ವ್ರತ ; ಮೊದಲ ದಿನ ಒಪ್ಪತ್ತು ಹಗಲು ಊಟ, ಎರಡನೆಯ ದಿನ ಒಪ್ಪತ್ತು ರಾತ್ರಿ ಊಟ, ಮೂರನೆಯ ದಿನ ಅಯಾಚಿತ ಅನ್ನ (ಬೇಯಿಸದ ಆಹಾರ), ನಾಲ್ಕನೆಯ ದಿನ ಪೂರ್ಣ ಉಪವಾಸ–ಹೀಗೆ ವ್ರತ ಮಾಡುವಿಕೆ. ಇದರ ಇನ್ನೊಂದು ಪ್ರಕಾರ–ಮೊದಲ ದಿನ ರಾತ್ರಿ ಊಟ, ಎರಡನೆಯ ದಿನ ಉಪವಾಸ, ಮೂರನೆಯ ದಿನ ಊಟ, ನಾಲ್ಕನೆಯ ದಿನ ಉಪವಾಸ : ದೋಷಪರಿಹಾರಾರ್ಥವಾಗಿ ಶರೀರಬಾಧಾತ್ಮಕತ್ವದಿಂ ಮಹತ್ಕಷ್ಟಸಾಧ್ಯಂಗಳಾದ ಪಾದಕೃಚ್ಛ್ರ ಮುಂತಾದವುಗಳ ಪಕ್ಷಮಾಸಾದಿಕಂಗಳಲಿ ಅನ್ನಮಂ ಪೇರ್ಚಿಸಿ ತಗ್ಗಿಸಿಕೊಂಬುದು (ಏಕೇಕ. ೦೫೯) ; ಒಂದು ಉಪವಾಸಮಂ ಮಾಡಿ ಮರುದಿನ ಪಾರಣೆಯೇಕಭುಕ್ತ ಮೊದಲಾದ ನಾಲ್ಕುದಿನದ ವ್ರತವೂ ಪಾದಕೃಚ್ಛ್ರವೆನಿಸೂದು (ಆಕೀಮು. ೯೯೨-೩). [ಸಂ.]

**ಪಾದಗಟ್ಟೆ** (ನಾ). ೧. ಕೇರನ್ನು ಕಟ್ಟಿ ಹೊರಡಿಸುವ ಸ್ಥಳ : ಕಳಸದಾರತಿ ಹಿಡಿದ ಐದೆಯರ ಗುಂಪು ಕೇರಿಗೂ ಪಾದಗಟ್ಟೆಗೂ ಆರತಿಯನ್ನು ಬೆಳಗಿತು (ಜನಪ. ೦೯೩); ಅವನಿಗೆ ಊರಿನ ಮುಂದಿನ ಪಾದಗಟ್ಟೆಯ ಬಸವನೂ ಬೇಕು ; ಊರ ಹೊರಗಿನ ಗರುಡಗಂಬದೆದುರಿನ ಹನುಮನೂ ಬೇಕು (ಕನ್ನಪಾ. ೦). ೨. ಕೆಳಗಿನ ಭಾಗ ; ಅಡಿಭಾಗ : ಪಾದಚಾರಿಯಾಗಿಯೇ ಅನಂತ 'ಚಾರಮಿನಾರ' ನೋಡಲು ನಡೆದ . . . ಪಾದಗಟ್ಟೆ ಮುಟ್ಟಿ, ಮೇಲೆ ಕೆಳಗೆ ನೋಡಿ ಮಳಿಗೆ ಹಿಂತಿರುಗಿದ (ಜಾದಾಪ. ೫೬). [ಪಾದ + ಕಟ್ಟೆ₁]

**ಪಾದಗಾಣಿಕೆ** 'ಪಾದಗಾಣ್ಕೆ' ನೋ.

**ಪಾದಗಾಣ್ಕೆ,** ಪಾದಗಾಣಿಕೆ (ನಾ). ಪೂಜ್ಯರಾದ ಗುರು ಹಿರಿಯರಿಗೆ ಒಪ್ಪಿಸುವ ಕಾಣಿಕೆ : ವಿಕ್ರಮನಾಯಕಂ ಮತ್ತೆ ಕೆಲಂಬರ್ ಧೀರ ಕಿರಾತರುಂ ಬಂದು ವಂದಿಸಿ ಪಾದಗಾಣ್ಕೆ ಮಾಡಿದರ್ (ಹಮ್ಮಿ.ಕ. ೯-೬೨ ಚ). **ಪಾದಗಾಣಿಕೆ :** ಗುರುಗಳಿಗೆ ಪಾದಗಾಣಿಕೆ ಅರ್ಪಿಸಬೇಕು (೬೨೦). [ ಪಾದ+ಕಾಣ್ಕೆ ]

**ಪಾದಘಾತ** (ನಾ). ೧. ಹೆಜ್ಜೆಯ ಹೊಡೆತ, — ಪೆಟ್ಟು. ೨. ಹೆಜ್ಜೆಯಿಡುವ ಶಬ್ದ ; ಹೆಜ್ಜೆಸದ್ದು : ತಾಯಿಯ ಪಾದಘಾತ ಮಂದವಾಗಲು ತನ್ನ ವಿಚಾರವನ್ನು ಮುಂದುವರಿಸುವನು (ಆಯುಂಕ. ೦). [ ಪಾದ+ಘಾತ ]

**ಪಾದಚಾರಿ** (ನಾ). ೧. ಕಾಲುನಡಗೆಯಲ್ಲಿ ಸಾಗುವಂತಹುದು : ಬರುವಾಗ ದುರದೃಷ್ಟ ಬೇಗನೆ ಬರುವುದು ಧಾವಿಸಿ ಕುದುರೆಯನೇರಿ ಬೀಳ್ಕೊಂಡು ಹೋಹಾಗ ಮೆಲ್ಲನೆ ಹೋಹುದು ಹೋಹುದು ಅದು ಪಾದಚಾರಿ (೩ಂಕಾಕ. ೦೬೨-೯೬). ೨. ಕಾಲುನಡಿಗೆಯಲ್ಲಿ ಸಾಗುವ ವ್ಯಕ್ತಿ : ಪ್ರಭುಗಳೂ ಇವರ ಸಂಗಡ ಸೇರಿ, ಪಾದಚಾರಿಗಳಾಗಿ ಬೆಟ್ಟ ಗುಡ್ಡಗಳನ್ನು ಹತ್ತಿ ಇಳಿದು . . . ವನಭೋಜನ ಮಾಡಿದುದುಂಟು (ಹಾಂಕಲ. ೦೨೨); ರಥದಿಂದ ಇಳಿದು, ಪಾದಚಾರಿಯಾಗಿ ಗುರುವಿನ ಬಳಿಗೆ ಸಾರಿ, ವಂದನೆ ಮಾಡಿ, ಒಂದು ಕಡೆ ನಿಂತಳು (ಹತ್ತುಹು. ೦೮). ೩. ಕಾಲುನಡೆಯ ಸೈನಿಕ ; ಪದಾತಿ ; ಕಾಲಾಳು : "ಪದಾತಿಃ . . . ಪದಿಕಃ, ಪಾದಚಾರೀ — ಈ ೮ ಕಾಲಾಳ್" (ಹಲಾಯು. ೩೯-೨೯೬). [ ಸಂ. ಪಾದಚಾರಿನ್ ]

**ಪಾದಚ್ಛಾಯೆ** (ನಾ). ಕಾಲಿನ ಪಡಿಯೆಚ್ಚು ; ಹೆಜ್ಜೆಯ ಪಡಿಯಚ್ಚು : ಪಾದಚ್ಛಾಯೆಯುಮನಿಟ್ಟು ಜೋಯಿಸದಭಿಪ್ರಾಯಂಗಳಿಂ . . . ಪೇಟ್ಟ ಜೋಯಿಸಮದಾರ್ಗಂ ಮರ್ತ್ಯರೊಳ್ ದುರ್ಲಭಂ (ಸುಕುಮಾ. ೩-೨೦). [ ಸಂ. ಪಾದಚ್ಛಾಯಾ ]

**ಪಾದಜ** (ನಾ). ಭಗವಂತನ ಪಾದಗಳಿಂದ ಜನಿಸಿದವನು ; ಶೂದ್ರ : ಸಂಪದದೊಳನೂನರಕ್ಕೆ ಪರದರ್ ಸಲೆ ಧಾರ್ಮಿಕರಕ್ಕೆ ಪಾದಜ[ಾಕಾಂ. ಶೂದ್ರ]ರ್ (ಹಂಕಕಂ. ೩೧೨-೮); ನಿಜ ಕೃಷಿವ್ಯವಸಾಯದಲಿ ತದ್ದ್ವಿಜಕುಲದ ಶಿಶ್ರೂಷೆಯಲಿ ಪಾದಜರು ಕೃತ್ಯರು (ಕುಮ್ಮಾ.ಭ. ೦೯-೯೬). [ ಸಂ. ]

**ಪಾದತಲ,** ಪಾದತಳ (ನಾ). ಹೆಜ್ಜೆಯ ಕೆಳಭಾಗ ; ಅಂಗಾಲು : ಮುಖ ಚಂದ್ರಕಾಂತವು ಕುಂತಲ ನೀಲವು ಪದ್ಮರಾಗವು ಪಾದತಲವು (೩ಂಕಾಕ. ೯೯-೩೬). **ಪಾದತಳ :** "ಪಾದತಳಮದಡಿಯೆನೆ" (ಹತ್ತುಕೋ. ೬೬-೨) ; ಸಿರದಲಾದವು ತತ್ತೀಸಕೋಟಿ ದೇವತೆಗಳು ಪಾದತಳದಲ್ಲಿ ಭೂಮಿ ಜನನವು (ಜಸ. ೩೪೬). [ ಪಾದ+ತಲ ]

**ಪಾದತಳ** 'ಪಾದತಲ' ನೋ.

**ಪಾದತಿಙುಗೆ** (ನಾ). ಪಾದಪೂಜೆಯ ಸಮಯದಲ್ಲಿ ಕೊಡುವ ಕಾಣಿಕೆ : ಹೊರಣು ದಂಡದೋಷದಿಂ ಪಾದತಿಙುಗೆಯಂ ಕೊಂಬು ದಿಲ್ಲೆಂದು [ಒ]ಂದು ಹೊಂನ ಪಾದಪೂಜೆಯಂ ಕೊಂಡು (೯೩. v; ೬೦-೩, 1221). [ ಪಾದ+ತಿಙುಗೆ ]

**ಪಾದತ್ರಾಣ** (ನಾ). ೧. ಕಾಲಿನ ಶಕ್ತಿ, — ಬಲ : ಧಾರವಾಡದ ಜೀಪ್ಗೆ ಪಾದತ್ರಾಣ ಬಹಳ ಬೇಕು (ಬೀಕಕ್ಕ. ೦೯೦). ೨. ರಕ್ಷಣಾರ್ಥವಾಗಿ ಪಾದಗಳಿಗೆ ತೊಡುವ ಸಾಧನ ; ಮೆಟ್ಟು ; ಪಾದರಕ್ಷೆ : "ಪಾದ ತ್ರಾಣಮುಪಾನತ್ [ಪಾದುಕೆ] ತಾನೆತದನುಪದೀ[ ನಾ ]ನಾಮಂ " (ಹತ್ತುಕೋ. ೯೯-೨೯). [ ಪಾದ+ತ್ರಾಣ ]

**ಪಾದದಾಹ** (ನಾ). ಒಂದು ವಿಧವಾದ ವಾತರೋಗ ; ಪಿತ್ತರಕ್ತದಿಂದ ಕೂಡಿದ ವಾತಸಂಚಾರದಿಂದ ಉಂಟಾಗುವ ಉರಿಮಾಯು : ಮುಡಿವಾಳ, ಲಾವಂಚ . . . ಪ್ರಾತಃಕಾಲದಲ್ಲಿ ದುಡ್ಡು ೧ ತೂಕ ಚೂರ್ಣಮಂ ಜೇನುತುಪ್ಪದಿಂ ಕಲಸಿ ಸೇವಿಸೆ ಕ್ಷಯ, ರಕ್ತಪಿತ್ತ, ಪಾದದಾಹ, ಪ್ರಮೇಹ . . . ರಕ್ತಾರ್ಶರೋಗ ಸಹ ಕೆಡುಗುಂ (ಕಕಕ್ಕ. ೨೯೯). [ ಸಂ. ]

**ಪಾದಧೂಳಿ** (ನಾ). ಪಾದಕ್ಕೆ ಹತ್ತಿರುವ ಧೂಳು : ಅಂತರಂಗ ದೊಳಾಣ್ಮನ ಪಾದವ ಭಜಿಪ ಭಾವೆಯರ ಪಾದಧೂಳಿಗಳಿಂದೆ ಪಾವನಮಹುದೀ ಮೇದಿನಿಯೆನೆ ವಿಕ್ಕೃದೇನು (ಹರಿಶ. ೨-೩); ನಮ್ಮ ತಾಯಿಯ ಪಾದಧೂಳಿಯು ನಮ್ಮ ಪ್ರಾಣದ ನಿಲುಗಡೆ (ಕಂಕು. ೯೬-೨೩); ಶಿವಶರಣ — ಸಾಧು — ಸತ್ಪುರುಷರ ಪಾದಧೂಳಿಯಿಂದ ಕನ್ನಡನಾಡು ಪಾವನವಾಗಿದೆ (ಕನ್ನಾ. ೦೬). [ ಪಾದ+ಧೂಳಿ (=ಧೂಲಿ) ]

**ಪಾದನ್ಯಾಸ** (ನಾ). ಹೆಜ್ಜೆಯಿಡುವಿಕೆ : ಪಾದನ್ಯಾಸವಿಳಾಸಮಾರ್ವರೆಯು ವಿಥ್ಯಾಧ್ವಾಂತಮಂ ತೂಳ್ದಿ . . . ಬಾಪರಿಗೆ ವಂದಂ ಪಾರ್ಶ್ವ ಯೋಗೀಶ್ವರಂ (ಪಾರ್ಶ್ವ. ೦೫-೯೬). [ ಪಾದ+ನ್ಯಾಸ ]

**ಪಾದಪ** (ನಾ). ಬೇರಿನಿಂದ ನೀರು ಕುಡಿಯುವುದು ; ಮರ, ಗಿಡ ಮುಂತಾದುವು : "ತರು ಶಾಖಿ ಪಾದಪಂ . . . ಶಿಖಿ ವೃಕ್ಷಂ" (ಹತ್ತುಕೋ. ೩೦-೦); ಪಾದಪಂಗಳ ಪುಷ್ಪಸ್ತಬಕಂಗಳಿಂ ಮುಜ್ಜೃಂತಂ (ಕಾದಂಪೂ. ೬೩೦); ಕಡಿದರರಿಭಟಪಾದಪವನಡಗೆಡಹಿದರು ಗಜಗಿರಿಗಳನು (ಕುಮ್ಮಾ.ಭ. ೩-೯). [ ಸಂ. ]

**ಪಾದಪಟ್ಟ** (ನಾ). ಗೌರವಸೂಚಕಚಿಹ್ನೆಯಾಗಿ ಕಾಲಿನಲ್ಲಿ ಧರಿಸುವ ಒಂದು ಬಗೆಯ ಆಭರಣ ; ಕಾಲ ತೊಡರು : (೧). [ ಸಂ. ]

**ಪಾದಪಲ್ಲಟ** (ನಾ). (ಪದ್ಯದ) ಸಾಲುಗಳ ಅದಲು ಬದಲು : ಈ ಮೇಲಿನ ಪದ್ಯಗಳಲ್ಲಿ ಅಕ್ಷರಪಲ್ಲಟ, ಪದಪಲ್ಲಟ, ಪಾದಪಲ್ಲಟ ಮತ್ತು ಪ್ರಾಸಪಲ್ಲಟಗಳೂ ಕಂಡುಬರುವುದನ್ನು ಗಮನಿಸಬಹುದು (ಕುಹುಮಾಂ. ೯೩). [ ಪಾದ+ಪಲ್ಲಟ ]

**ಪಾದಪಾತ** (ನಾ). ಮಲ್ಲಯುದ್ಧದಲ್ಲಿಯ ದೋಷಗಳಲ್ಲಿ ಒಂದು ; ಕಾಲಿನಿಂದ ಒದೆಯುವುದು : ಕಳಂದೊಕ್ಕು ನಿಜಸುಗೆಯುದ್ಧ ನಖಹತಿ ದಶನಹತಿ ಪಾದಪಾತಂ ಮುಷ್ಟಿಪಾತಮೆಂಬ ದೋಷಂಗಳಿಂ ಪೊರ್ದದ ನಾಲ್ಕುಂ ಸ್ಥಾನದೊಳಂ . . . ಪಲತೆಱದ ಪಾತಂಗಳೊಳಂ ನೆರೆದು (ಚಂದ್ರಪ್ರ. ೩-೬೬ ವ). [ ಪಾದ+ಪಾತ ]

**ಪಾದಪಾಶ** (ನಾ). ೧. ದನ, ಕರು ಮುಂತಾದ ಪ್ರಾಣಿಗಳ ಕಾಲಿಗೆ ಕಟ್ಟುವ ಹಗ್ಗ : ಪಾದಪಾಶ—ಪಾವಮಾಸ (ಜಸುರ. ೨೯೩ ತ್ರಯೋ). ೨. [ ಛಂದ ] ಮಧ್ಯಲಘುವುಳ್ಳ ಗಣ ; ಅಗ್ನಿಗಣ ; ರಗಣ : ಇದಱಿಂ [ ತೆಯಾಪ್ಪ ] ನಿಯಮಂಗಳಾದಱುಸೆ ತೃತೀಯ [ ಪಾದದೊಳ್ ] ಪಾದಪಾಶ [ ಸುರಪಾಕರ್ಷಹರಂ ] ಮದವದ್ಗಜೇಂದ್ರಗತಿ ನಾಗವರ್ಮನಿಂ (ಛಂದೋಂಬು. ೩-೨೦೩). [ ಸಂ. ]

**ಪಾದಪಾಶನ** (ನಾ). ೧. ಮರ, ಗಿಡ ಅಥವಾ ಸೌದೆಯೇ ಆಹಾರ ವಾದುದು ; ಬೆಂಕಿ ; ಅಗ್ನಿ. ೨. [ ಛಂದ ] ಮಧ್ಯಲಘುವುಳ್ಳ ಗಣ ; ಅಗ್ನಿಗಣ : ನಯುಗ ಮಿರೆ ಪಾದಪಾಶನಾದಿರೆ ಬಂದು ಕೋಕನದವದನೆ ನಾಕಿಯಿಂ ವಿನುತವಿದುವೆ ನಾಮದಿಂ (ಛಂದೋಂಬು. ೨-೦೩). [ ಪಾದಪ+ಅಶನ ]

**ಪಾದಪೀಠ** (ನಾ). ಕಾಲಿಡುವುದಕ್ಕಾಗಿ ಮಾಡಿದ ಪೀಠ ; ಕಾಲುಮಣೆ : ವಱಾ ಪೊಡಮಡುವ ತೆಱನೆರ್ದೆಯೊಱಕಮನನಾವಡಿಸಿ ಪೊಳೆವ ಮಕುಟದ ಕೆಕ್ಕೆಱಗಿಱದ ಪೊನ್ನ ಪೂಂಗಳ ತುಱುಗಲ್ ಮಂಕಲಿಸೆ ಪಾದಪೀಠದ

ಮೊದಲೊಳ್ (ಶಾಂತಿಪು. ೦೦-೬೦); ಯಾದವವಂಶೋದ್ಭವಭುಜಪರಾಕ್ರಮಣೆಬ್ರತ ಪ್ರಭಾಲಿಂಗಿತಪಾದಪೀಠಂ (ಶಾಸಂ. XX. ೯೬-೬; 1072); ವಿನಯಂ ಗುಂದದೆ ಪಾದಪೀಠತಳದೊಳ್ ಕುಳ್ಳಿರ್ದ ಲೋಕೈಕಮಿತ್ರನ ನೊತ್ತಂಬದಿನೆತ್ತಿ (ಪುಷ್ಪ. ೯-೬೨). [ ಪಾದ+ಪೀಠ ]

**ಪಾದಪೂಜೆ** (ನಾ). ೧. ಗುರುಹಿರಿಯರ ಪಾದಗಳನ್ನು ಪೂಜಿಸುವುದು : ಅಂತು ಮಹಾಜನರ ಪಾದಪೂಜೆಯಂ ಕೊಟ್ಟು (ಶಾಸಂ. ೬-೬೬; 1079); ಮೇಗಣ ಅರಿವಾತ್ತರು ಗದ್ದೆಯ ನೀರ್ವಾರಿಗಂ ಕ್ರಿಯವಂ ಕೊಟ್ಟು ಊರಿಂಗೆ ಪಾದಪೂಜೆಯ ಕೊಟ್ಟು ಮಾನ್ಯವಾಗಿ ಆ ದೇವರಿಗೆ ಬಿಟ್ಟರು (ಶಾಸಂ. XX. ೬೩-೨೦; 1122). ೨. ಮಠಾಧಿಪತಿಗಳಿದುರಿಗೆ ಪಂಥದ ಮೂಲಪುರುಷರ ಪಾದುಕೆಗಳಿಗೆ ಮಾಡುವ ಪೂಜೆ : ಇಂದು ಅವರ ಮನೆಯಲ್ಲಿ ಶೃಂಗೇರಿಮಠದ ಸ್ವಾಮಿಗಳನ್ನು ಕರೆಸಿ ಪಾದಪೂಜೆ ನಡೆಸಿದರು (ಜನ). ೩. (ಅಲಂ) ಒದೆಯುವುದು; ಥಳಿಸುವುದು : ಸತ್ತರ್ಗೆ ಪಾದಪೂಜೆಯನೆಸಪ ನಯಗಾಜಲ್ (ಅಕ್ಕ. ೧೦-೧೦೭); ಮೂರು, ನಾಲ್ಕು ಜನ ಆಳುಗಳಿಗೆ ಅವರು 'ಪಾದಪೂಜೆ'ಯನ್ನು ಮಾಡಿದರು (ಎಡಕ. ೦೨೯). [ ಪಾದ+ಪೂಜೆ ]

**ಪಾದಪೂರಕ** (ನಾ). ಪದ್ಯದ ಸಾಲನ್ನು ಪೂರ್ಣಗೊಳಿಸಲು ಪದ ಅಥವಾ ಅಕ್ಷರವನ್ನು ಸೇರಿಸುವುದು; ಸಾಲನ್ನು ಭರ್ತಿಮಾಡುವುದು : ತನ್ನ ಆಶ್ರಯದಾತನಿಗೆ ಆದರವನ್ನು ತೋರಿಸಲೂ . . . ಪಾದಪೂರಕವಾಗಿಯೂ ನೃಪತುಂಗನ ಹೆಸರನ್ನು ಗ್ರಂಥಕಾರನು ಬಳಸಿರುವನೆಂಬುದು ಸ್ಪಷ್ಟವಾಗಿದೆ (ಕವಿಕ. ೩೬). [ ಪಾದ+ಪೂರಕ ]

**ಪಾದಪೂರಣ** (ನಾ). ಪದ್ಯದ ಪಾದಗಳನ್ನು ಪೂರ್ಣಗೊಳಿಸುವುದು : "ನೆಱೆ ಸಲೆ ತವೆ ಮಿಗೆಯೊಗುಮಿಗೆಯುಱೆಯೆಂಬಿವು ಪಾದಪೂರಣಾರ್ಥಂ" (ಶಮ. ೩೯); ಹಠಾತ್ತಾಗಿ ಪಾದಪೂರಣಕಾರ್ಯದಲ್ಲಿ ಅವುಗಳಿಗೆ ಸಮನ್ನು ಹೋಗುತ್ತದೆ ; ಅವುಗಳಿಂದ ಮಾತ್ರಾಪೂರಣವಾಗುವುದು ಮಾತ್ರ (ಶಂಬ. II, ೨೦೦). [ ಪಾದ+ಪೂರಣ ]

**ಪಾದಪೆಂಡೆಯ** (ನಾ). ಬಿರುದಿನ ಚಿಹ್ನೆಯಾಗಿ ಕಾಲಲ್ಲಿ ಧರಿಸುವ ಒಂದು ಬಗೆಯ ಕಡಗ : ಪಾದಪೆಂಡೆಯಪಡೆದೆಸೆವ ಪೆಂಪು (ಕಾಕ.೩೩). [ ಪಾದ + ಪೆಂಡೆಯ ]

**ಪಾದಪ್ರಕ್ಷಾಲನ**, ಪಾದಪ್ರಕ್ಷಾಳನ (ನಾ). ಕಾಲುಗಳನ್ನು ತೊಳೆಯುವುದು : ತನ್ನನಿಯೂಗಲಪಾದಪ್ರಕ್ಷಾಲ [ ಶಾಶಂ. ೪ ] ನೋದಕದೊಳ್ಪೊರಳ್ದು (ಅರ್ಜು. ೬-೨ ವ); ಪಾದಪ್ರಕ್ಷಾಲನಮಂ ಸಾದರದಿಂ ಮಾಡಿ ಸಾರ್ತರಲ್ (ಕುಮಾರ. ೦೦-೨೦). **ಪಾದಪ್ರಕ್ಷಾಳನ** : ಶ್ರೀಕೃಷ್ಣನು ಯಜ್ಞ ರಕ್ಷಣೆಯ ಭಾರವನ್ನೂ ಬ್ರಾಹ್ಮಣರ ಪಾದಪ್ರಕ್ಷಾಳನಾದಿ ಕೈಂಕರ್ಯವನ್ನೂ ವಹಿಸಿದನು (ಅಕ್ಕ. ೦೦೦). [ ಪಾದ+ಪ್ರಕ್ಷಾಲನ ]

**ಪಾದಪ್ರಕ್ಷಾಳನ** 'ಪಾದಪ್ರಕ್ಷಾಲನ' ನೋ.

**ಪಾದಪ್ರಣತ** (ನಾ). ಪಾದಗಳಿಗೆ ನಮಸ್ಕರಿಸಿದವನು, -ಬಾಗಿದವನು : ದ್ವಾರಪಾಲಕರರಸಂಗವರ ಬರವನಱಿಪಿ ಬಂದು ಕಾಣಿಸೆ ಲೋಕಾಂತಿಕ ದೇವರವನೀಶ್ವರಂದಪ್ರಣತರಾಗಿ (ಶಾಂತಿಪು. ೦೦-೯೩ ವ). [ ಪಾದ+ಪ್ರಣತ ]

**ಪಾದಪ್ರಣಾಮ** (ನಾ). ಕಾಲಿಗೆ ನಮಸ್ಕಾರ ಮಾಡುವುದು: ಕಾದಂಬರಿಯುಂ ಮೆಯ್ಯ ವಲಪುಗೂಡಿ ಚಂದ್ರಾಪೀಡನಿಗೆ ಪಾದಪ್ರಣಾಮವ ಮಾಡಿ . . . ಕುಳಿತುಕೊಂಡಳು (ಕಾದಂ. ೩೩). [ಪಾದ + ಪ್ರಣಾಮ]

**ಪಾದಬಂಧ** (ನಾ). (ಆನೆ ಮೊದಲಾದವುಗಳ) ಕಾಲಿಗೆ ಕಟ್ಟುವ ಸರಪಣಿ; ಸಂಕೋಲೆ : "ನಿಗಳಃ, ಪಾದಬಂಧಃ, ಹಿಂಜೀರಃ, ಶೃಂಖಲಾ, ಅಂದುಕಃ — ಈ ೫ ಆನೆಯ ಕಾಲ್ಗಟ್ಟು" (ಹಲಾಯು. ೬೬-೬೦); "ಹಿಂಜೀರ ಮಂದುಕಂ ಶೃಂಖಳಂ ಪಾದಬಂಧಂ ನಿಗಳಮೆನಲಂ ಸಂಕಲೆಯೆನಿಪ್ಪಂ" (ಕುಂಗಣ. ೯೬-೨). [ ಪಾದ+ಬಂಧ ]

**ಪಾದಮಾರ್ಗ** (ನಾ). ೧. ಕಾಲುನಡಗೆಯ ದಾರಿ; ಕಾಲುದಾರಿ. ೨. ಕಾಲುನಡಗೆ : ಅವಧಿಜ್ಞಾನಿಗಳ್ ಪವನಮಾರ್ಗದಿಂದಿಬ್ಬರಂ ಕಂಡು ಪಾದಮಾರ್ಗದೊಳ್ ಕಿಱಿದಂತರದೊಳ್ ಆವವತಿಪುರಸ್ಸರಮಿದಿರ್ಗೊಂಡು (ಆದಿಪು. ೬-೩೩ ವ); ಪಾದಮಾರ್ಗದಿಂ ಪೋಗಿ ಸೌಧರ್ಮಕಲ್ಪದೊಳಕ್ಕೃತಕಚೈತ್ಯಾಲಯಂಗಳಂ ಕಲ್ಪಪಾದಪಪ್ರತಿಪಾದಿತ ವಿವಿಧಾರ್ಚನಂಗಳಿಂದರ್ಚಿಸಿ (ಶಾಂತಿಪು. ೯-೬೮ ವ). [ಪಾದ + ಮಾರ್ಗ]

**ಪಾದಮೂಲ**, ಪಾದಮೂಳ (ನಾ). ೧. ಕಾಲಿನ ಕೆಳಭಾಗ ; ಅಂಗಾಲು. ೨. ದೇವಸ್ಥಾನದ ಸೇವೆಯಲ್ಲಿ ಕಾಯಮ್ಮಾಗಿ ನಿರತರಾದ ಪರಿಚಾರಕ ವರ್ಗ: ಶ್ರೀಮದ್ದಿವ್ಯಶಕ್ತಿಪಣ್ಡಿತಭಟಾರರ ಮುಯ್ಯುಣಾಪುಣ್ಣನಂ ಪಾದಮೂಲಮುಂ ಪನ್ನಕದಱಿಪ್ಪಣ್ಕಳುಮಿಟ್ಟು (ಎಕ. X (೬). ಕೋ. ೩೬-೩; ೬೩೩ ಶ). ೩. (ಅಲಂ) ಕಾಲಿನ ಬಳಿ,—ಸಮೀಪ : ಆತನ ಪಾದಮೂಲದಲ್ಲಿ ಅಂದಿಂದಮಾ ಅಸಮಸಾಹಸಿಯಾದ ವೀರವಿಕ್ರಮನೆಂಬ ನಾಯಿಯೊಂದು ಕುಳಿತುಕೊಂಡು ದೇವೇಂದ್ರನ ಮುಖವನ್ನೇ ನೋಡುತ್ತಿದ್ದಿತು (ಕಿಶಕ. ೦); ಒಂದು ಬಾಣವು ಎಲ್ಲಿಂದಲೋ ಬಂದು ಅವರ ಪಾದಮೂಲದಲ್ಲಿ ಬಿತ್ತು (ಕುಶಾಶ. ೯೯). **ಪಾದಮೂಳ** : ೨. ಶ್ರೀರಾಮೇಶ್ವರದೇವರ್ಗೆ ಅಂಗಭೋಗಕ್ಕಂ ರಂಗಭೋಗಕ್ಕಂ ಗನ್ಧಧೂಪದೀಪನಿವೇದ್ಯಕ್ಕೆ ದೇಗುಲದ ಖಂಡಸ್ಫುಟಿತಕಲ್ಲಿಯ ತಪೋಧನರ ಗ್ರಾಸಕ್ಕ [೦] ಪಾದಮೂಳಪರಿಗ್ರಹಕ್ಕಂ . . . ಕೊಟ್ಟರು (ಕರಶಾ. ೩೦-೯೦-೯೦; 1121); ಅಲ್ಲಿಯ ಬ್ರಾಹ್ಮಣರ ತಪೋಧನರ ದೇವರ ಬ್ರಹ್ಮಪುರಿ ನಾಗಿಯಣ್ಣಭಟ್ಟನ ಗ್ರಾಸಕ್ಕಂ ಪಾದಮೂಳ ಪರಿಗ್ರಹಕ್ಕಂ . . . ಬಿಟ್ಟರು (ಕರಶಾ. ೫೦-೩೩-೨೬; 1121). [ ಪಾದ+ಮೂಲ ]

**ಪಾದಮೂಲಿ** (ನಾ). =ಪಾದಮೂಲ ೨ : ಆ ಊರ ೨೪ ಪ್ರಜೆ ಜನಂಗಳು ಯಮ್ಮಾಳದೇವರ ಪಾದಮೂಲಿಗಳು ಯಿವರೆಲ್ಲರ ಸನುಮತದಿಂದ . . . ಕೊಂಡ ಕ್ಷೇತ್ರದ ವಿವರ (ಶಾಸಂ. ೧೫-11 ; ೯೩೩-೮ : 1402) ; ತುಳುವದ ಶಾಸನಗಳಲ್ಲಿ ಬರುವ ಅಧಿಕಾರಿಗಳು ಯಾ ಅಧಿಕಾರವರ್ಗಗಳು . . . ಒಕ್ಕಲರು (ಒಕ್ಕಲ ಮಕ್ಕಳು), ಮೂಲಿಗರು, ಪಾದಮೂಲಿಗಳು ( ಕುಳುಶಾ. ೩೬೦ ). [ ಸಂ. ಪಾದಮೂಲಿನ್ ]

**ಪಾದಮೂಳ** 'ಪಾದಮೂಲ' ನೋ.

**ಪಾದರ**$_1$ 'ಪಾರದಾರ' ನೋ.

**ಪಾದರ**$_2$ (ನಾ). ಒಂದು ಬಗೆಯ ಸಸ್ಯ : "ಮಟೋರಃ —ಹಲಸು, ಪಾದರ, ಪಾರಿವಾ(ಣ)ಳ, ಕಕ್ಕೆ, ಅರಸಿಕ್ಕೆ, ಮುತ್ತುಗ, ಮಂದಾರ" (ಒಕಥ. ೦೦೭). [ ? ]

**ಪಾದರಕ್ಕೆ** (ನಾ). =ಪಾದರಕ್ಷೆ : ಪರಪದಂ ತದ್ಭವವಪಾದ ಸಮಾಸಕ್ಕೆ . . . ಪಾದರಕ್ಷಾ_ಪಾದರಕ್ಕೆ (ಶಬರ. ೨೯೯ ಪ್ರಯೋ); ಪಾದರಕ್ಕೆ, ಪರದೊಮ್ಮಂ, ದಾನಸಾಲೆ ( ಶಬ್ದಾ. ಸು. ೨೯೬ ಪ್ರಯೋ). [ <ಸಂ. ಪಾದರಕ್ಷಾ ]

**ಪಾದರಕ್ಷಣ** (ನಾ). =ಪಾದರಕ್ಷೆ : "ಉಪಾನತ್, ಪಾದರಕ್ಷಣಂ— ಈ ೨ ಪಾದರಕ್ಷೆ" ( ಹಲಾಯು. ೬೨-೦೩೬ ). [ ಪಾದ+ರಕ್ಷಣ ]

**ಪಾದರಕ್ಷೆ** (ನಾ). ರಕ್ಷಣಾರ್ಥವಾಗಿ ಪಾದಗಳಿಗೆ ತೊಡುವ ಸಾಧನ ಮೆಟ್ಟು ; ಪಾದತ್ರಾಣ : "ಉಪಾನತ್, ಪಾದರಕ್ಷಣಂ — ಈ ೨ ಪಾದರಕ್ಷೆ" ( ಹಲಾಯು. ೬೨-೦೩೬ ) ; ಆವನಾದರೇನು ಶ್ರೀಮಹಾದೇವನ ನೆನೆವವನ ಬಾಯ ತಂಬುಲ ಮೆಲುವೆ ಬೀಳುಡಿಗೆಯ ಹೊದೆವೆ ಪಾದರಕ್ಷೆಯ ಕಾಯ್ದು ಬದುಕುವೆ ( ಬಸವ. ೯೬೬ ) ; ದೇವತಾದರ್ಶನಕ್ಕೆ . . . ಪಾದರಕ್ಷೆಗಳನ್ನು ಮೆಟ್ಟಿ ಹೋಗಬಾರದು ( ಶಾಂತಲಾ. ೯ ). [ ಸಂ. ಪಾದರಕ್ಷಾ ]

**ಪಾದರಗಿತ್ತಿ,** ಹಾದರಗಿತ್ತಿ (ನಾ). ವ್ಯಭಿಚಾರ ಮಾಡುವವಳು ; ಜಾರೆ : ಪರಿಜನಂಗಳ ಮೆಚ್ಚಿಸುವಾಗ ಪಾದರಗಿತ್ತಿಯೇ ಶರಣ ಸರ್ವರ ಮೆಚ್ಚಿಸುವಾಗ ಸಂತೆಯ ಸೂಳೆಯೇ ಶರಣ (ಸಿದ್ಧೇವ. ೧೧೫-೩೨೬). **ಹಾದರಗಿತ್ತಿ :** ಈ ಮಹಾಮಹಿಮರಿಗೆ ಜಗದ ಜತ್ತಿಗೆಯ ಹಾದರಗಿತ್ತಿಯು ಹದಿನೆಂಟುಜಾತಿಯ ಮನೆಯಲ್ಲಿ ತೊತ್ತಾಗಿ ಹುಟ್ಟಿದ ಶಿವದ್ರೋಹಿಯ ಲಿಂಗವಂತರ ಮನೆಯ ಹೊಗಿಸುವರೆ (ಶೂನ್ಯಸಂ. ೨೩೬-೦೦); ಗೋಣಾಗೊಯ್ಕೆಯರು. . . ಹಾದರಗಿತ್ತಿಯರು ಬ್ರಹ್ಮಹತ್ಯಕಾತಿಯರನವರತವುಂ ಹೊನ್ನುಬಾಕಿಯರು (ಬಸವ. ೪೦-೩೩); ಗಂಡನಲ್ಲಿ ವಿಕಾರವಾದ ನೀಚವ್ಯಾಪಾರವಂ ಮಾಡುವಳು. ಹಾದರಗಿತ್ತಿಯಂತೆ ಒಯ್ಯಾರದಿಂ ನಟಿಪಳು (ಕಾಮಶಾ. ೨೦೯); ಹಾದರಗಿತ್ತಿ ಕಾಲು ಹಸೆಮಣೆ ಮೇಲೂ ನಿಲ್ಲುವುದಿಲ್ಲ (ಗಾದೆ).

[ ಪಾದರ$_1$ (<ಪಾರದಾರ)+ —ಗಿತ್ತಿ ]

**ಪಾದರಜ** (ನಾ). ೧. ಕಾಲುನಡಗೆಯಿಂದೆದ್ದ ಧೂಳು ; ಕಾಲುಧೂಳಿ : ಭಯವಶವಿಮುಕ್ತಭೂಷಣಚಯ ಕೇರಳಕಾಮಿನೀಮುಖಶ್ರೀನ್ಯಪಸೇನೆಯ ಪಾದರಜದಿನಂದೇನಯುತ್ಪ್ರಕರ್ಷಂ ಮಪಿಳ ಸಮಂ ತಾಳ್ದಿದುದೋ ( (ಶಾಂತಿಪು. ೧೦-೦೫). ೨. ಹೆಜ್ಜೆಗಳಿಗೆ ಅಂಟಿರುವ ಧೂಳು ; ಪಾದಧೂಳಿ : ಕಮಳಭವಾದ್ಯರುಂ ಪಡೆವರೇ ಹರಿಪಾದರಜೋಲವಪ್ರಸಾದವಂ (ಜಗ. ೩-೯೨); ಕಾಲಿಗೆ ಬಿದ್ದು ನಮಸ್ಕರಿಸಿ, ಪಾದರಜವನ್ನು ನನ್ನ ತಲೆಯ ಮೇಲೆ ಸಿಂಪಿಸಿ . . . ಓಡಿ ಹೋದೆನು (ಮಹಿಷ. ೫). [ ಪಾದ+ರಜ$_1$ ]

**ಪಾದರಸ** (ನಾ). ೧. ಒಂದು ಬಗೆಯ ದ್ರವರೂಪದ ಲೋಹ ; ಪಾರಜ : "ರಸ ಪಾರದ ಸೂತಕ ಚಪಲ[ಸಂ]ಜ್ಞಿತಂ ಗಿರಿಶವೀರ್ಯಮದು ಪಾದರಸಂ" (ಪದ್ಮಕೋ. ೪೯-೦೫); ವೈಕ್ರಿಯಕಶರೀರಂಗಳ್ ಪಾದರಸದ ಮಾರ್ಗದಿಂ ಪತ್ತುತ್ತುಮಿರ್ಕುಂ (ಸುಕುಮಾ. ೧೦-೯೭ವ) ; ಚೋರಿಸಿ ನಿಲುಕಿದರು ಫಣಿಯಂತೆ ಮುಮ್ಮೈಲುಳಿಯಲೊಲೆದರು ಪಾದರಸದಂದದಲಿ ಪಟುಭಟರು ((ಕುಮಾ.ಗ. ೬-೨) ; ಪಾದರಸ ಕರತಳದಲಿರುತದನಂಟದಂದದಿ ತಿಳಿವಿಗರು ಸಂಸೃತಿಯಲಿರೆ ನಿರ್ಲೇಪರೆಂದೆಣಿಸು (ಗಗಶಾ. ೦೫-೨೫); ಇಲಿ ಪಾದರಸ ಕುಡಿದ ಹಾಗೆ (ಗಾದೆ). ೨. (ಅಲಂ) ಚುರುಕಾದ ವ್ಯಕ್ತಿ: ಉರಿಯ ಬಂದಿಯ ಹಿಡಿದು ಹೆಚ್ಚುವ ದೊರೆಯಲೇ ದಿಟ ಪಾದರಸವೆಲೆಯರಸ ನಿನ್ನ ಕುಮಾರನು (ಕುಮಾ.ದ್ರೋ. ೯-೪೦).

[ <ಪಾರದ+ರಸ./ತಮಿ. ಪಾತ್ತರಚ ; ತುಳು. ತೆಲು. ಪಾದರಸ ]

**ಪಾದರಿ$_1$** (ನಾ). ಜಾರೆ ; ವ್ಯಭಿಚಾರಿಣಿ ; ಹಾದರಗಿತ್ತಿ : ಪೋದಿರುಳಿನ ಕಿತ್ತಡವಂ ಮೂಣಲೆಯಾಗಿಂತು ನುಡಿದೊಡಜಿದುದನಜಿದಾ ಪಾದರಿ ಬೇಸತ್ತವೊಲಿರೆ ಪೋದಂ ಬಗೆ ಕದಡಿ ತಾಯ ಪೊರೆಗೆ ನೃಪೇಂದ್ರಂ (ಧರ್ಮಾಮೃ. ೨-೬೦); ಚಪಲೆ ಚಂಚಲೆ . . . ಪರವಶೆ ಪಾದರಿ ವಿಫಲೆ ವಿಹ್ವಲೆ . . . ತಾಮಸಿಯೆನಿಪ ವನಿತೆಯರ ನಿಜಕೆ ನಿಲಿಸಿ ನಿಶ್ಚೈಸಿದೊಡೆ ಬಳಿಕ ಬಳಲಿಕೆ ಬಾರದೆ (ಶೃಂಶಾ. ೫-೬೦) ; ಅತಿಪಾತಂ ಮಧುಪಾನವ್ಯಸನದೊಳ್, ಮಧುಪಾನವ್ಯಸನಪಾಜಿಡಿಯೊಳ್, ಆಜಿಡಿ ಪಾದರಿಯೊಳ್, ಪಾದರಿ ಬನದೊಳಲ್ಲದಿಲ್ಲಂ (ರಾಮಾಶ್ವ. ೮-೨).

[ ಪಾದರ$_1$ (<ಪಾರದಾರ)+ —ಇ$_2$ ]

**ಪಾದರಿ$_2$,** ಹಾದರಿ (ನಾ). ಒಂದು ಬಗೆಯ ಮರ ಮತ್ತು ಅದರ ಹೂವು ; ಪಾಟಲಿ : "ಪಾದರಿ ಪಾಟಲಾಖ್ಯಂ" (ಪದ್ಮಕೋ.೩೬-೦); ಪಾದರಿ ಪೂತುವು ತೋರಿದುವಾದುವು ಮಲ್ಲಿಗೆಗಳ್ (ಆದಿಪು. ೦೦-೮೫); ಅತಿಪಾತಂ ಮಧುಪಾನವ್ಯಸನದೊಳ್, ಮಧುಪಾನವ್ಯಸನಪಾಜಿಡಿಯೊಳ್, ಆಜಿಡಿ ಪಾದರಿಯೊಳ್, ಪಾದರಿ ಬನದೊಳಲ್ಲದಿಲ್ಲಂ (ರಾಮಾಶ್ವ. ೮-೨). **ಹಾದರಿ :** "ಹಾದರಿ—ಪಾಟಲಾ—ಪಾದರಿ" (ಕರ್ಣಕೋ. ೪೯); ಕೇದಗೆ ಸಂಪಗೆ ನಾಗಂ ಹಾದರಿಯದಿರ್ಗುಂತೆ ಪುಂಜಿ ಪಕುಳ ಲವಂಗಂ ಜಾದಿ ಮೊದಲಾದನೇಕ ಪೂದೋಂಟಂ ಸುರಭಿಪರಿಮಳಾಮೋದಂಗಳ್ (ಎಕ. VIII. ಶಾಗರ.೦೦೬-೩೦೨, 1042); ಅಶೋಕೆಯನೊದೆದು ಪಲ್ಲವಿಸೆಂಬ ಹಾದ[ಶಾಂ. ಪಾದಿ] ರಿಯ ನೆಳಲ್ಗೆ ಹರಿಣಂಗಳಂ ಹೊಡೆಯೆಂಬ ಕೆಲಸದ ನೆವದಿಂ ರತಿಮಂಗಳೆ . . . ಕಳುಪಿ (ಶಂಬರ. ೦೯-೩೯); ಹಾಲೆ ಹಾದರಿ ಬನ್ನಿ ಮೊದಲಾದ ತರುಗಳ ಜಾಲದಿಂದೆಸೆದುದಾ ವಿಪಿನ (ರಾಮಪು. ೦೫-೩೯).

[ <ಸಂ. ಪಾಟಲಿ./ತಮಿ. ಮಲ. ಪಾತಿರಿ ; ತುಳು. ಪಾದರಿ ; ತೆಲು. ಪಾದಿರಿ, ಪಾದಿಲಿ ]

**ಪಾದರಿ$_3$** 'ಪಾದ್ರಿ' ನೋ.

**ಪಾದರಿಗ,** ಪಾರದರಿಗ, ಹಾದರಿಗ (ನಾ). ಹಾದರ ಮಾಡುವವನು ; ವ್ಯಭಿಚಾರಿ ; ವಿಟ : ಮಿಣ್ಣಗಳಂತೆ ಗಾಳದೊಳ್ ತೊಡರ್ದಿರ್ದ ಪಾದರಿಗರಿಂ (ಕಾವ್ಯಸಾ. ೩೨೯ ಕೂರ್ದ್ಯ೪); ಪೃಥ್ವಿಯಂ ರಕ್ಷಿಸುವ ಸ್ವಾಮಿ ಚೋರ ಜಾರ ಪಾದರಿಗರ್ಕಳಂ ಕೊಲ್ಲದಿರ್ಕುಮೆ (ಪಶ್ಚಾ.ಶಾ. ೩೦-೯); ಪಾದರಿಗೆಯ ಮೂಗನರಿದು ಪಾದರಿಗನಂ ಕೊಲ್ವರು (ಶಾಸ್ತ್ರ. IX-1, ೬೬-೩೩; 992); ನಾವಿದನ ಪೆಂಡತಿಯಪ್ಪ ದೂದವಿ ಪಾದರಿಗನಂ ಸಂಕೇತಸ್ಥಾನದೊಳಿರಿಸಿ ಪರಿತಂದು (ಪಂಚತಂ. ೬೬-೩). **ಪಾರದರಿಗ :** ಕ್ಷಪಾಕರನಿನಾತ್ಮಜಾಂಶಗತನಾಗೆ ನೋಡಲ್ ದಿನಾಧಿಪಪ್ರಭೃತಿ ಷಡ್ಗ್ರಹಂಗಳವನಲ್ಪಪುತ್ರಂ ಸುಖಿವ್ಯಪೇತಧನಭಾಗಿ . . . ಪಾರದರಿಗಂ ಮಹಾ ಕೃಪಣನಕ್ಕುಮಾ ಲಗ್ನಜಂ (ಜಾತಕ. ೨೦-೨೨). **ಹಾದರಿಗ :** "ಜಾರಃ, ಉಪಪತಿಃ — ಈ ೨ ಹಾದರಿಗಂ" (ಹಲಾಯು. ೬೬-೨೩೯) ; ಕಳ್ಳ ಹಾದರಿಗರ ಸಂಪಾದನೆ ಹೊಳ್ಳ ಕುಟ್ಟಿ ಕೈ ಹೊಟ್ಟಾದಂತೆ ಕಾಣಾ (ದೇವಾಪ. ೨೨-೩೬); ಕಡುಹುಗಳ್ಳನು ಹಾದರಿಗನುಂ ಗಡಣೆಗಿವರೆನೆ ಶಂದ್ರಿಕಂ ಕಾಲಗಡಿಕನಹ ಕೀಚಕನು ನೆಣಿ ಕಡಿವಡೆವರು (ಬಸವ. ೦೦-೫೦); ಹೋದನತ್ತಲು ಸತಿಯ ಕೊಂಡಾ ಹಾದರಿಗನು (ಶಶಿಶಾ. ೬-೯೩).

[ ಪಾದರ$_1$ (<ಪಾರದಾರ)+ —ಇಗ ]

**ಪಾದರಿಗೆ** (ನಾ). =ಪಾದರಿ$_1$ : ಪಾದರಿಗೆಯ ಮೂಗನರಿದು ಪಾದರಿಗನಂ ಕೊಲ್ವರು (ಶಾಸ್ತ್ರ. IX-1, ೬೬-೩೩; 992); ಪಾದರಿಗೆಯ ದೂದವಿಯಂತೆ ಪೆಜರಂ ಸಂಕೇತಂಗೊಳಿಸದೆ (ಧರ್ಮಾಮೃ. ೫-೪೯); ನಿಗ್ರಹಕ್ಕೆ ಪಾದರಿಗೆಯ ನೋಡಿ ನಿಗ್ರಹಮನೆಯ್ದಿ ಪರುಗ್ರದುರಂತದುಃಖಮಂ (ಶಬಾರ. ೩೦೦). [ ಪಾದರಿಗ+ —ಎ$_2$ ]

**ಪಾದರಿಸು** (ಕ್ರಿ). ಹಾದರ ಮಾಡು ; ವ್ಯಭಿಚಾರ ಮಾಡು : ಜಲಜಶರತಾಪವಂ ನಿಲಿಸಲಾಜದೆ ಬಂಧುಗಳು ತಿಳಿಯದಂತೆ ಪಾದರಿಸು ತಡಕದೊಳಿತಲು (ರಾಜಶೇ. ೦೦-೩೯); ದನುಜೇಂದ್ರನಾತ್ಮಸುತೆ ಕರ್ನಿಕೆಯು ಪಾದರಿವುದನುಮತವೆ (ಪದಮೋ. ೨೬-೮).

[ ಪಾದರ$_1$ (<ಪಾರದಾರ)+ —ಇಸು$_1$ ]

**ಪಾದಲೇಪೌಷಧಿ** (ನಾ). ಕಾಲಿಗೆ ಹಚ್ಚಿಕೊಳ್ಳುವ ಒಂದು ಬಗೆಯ ಅಂಜನ : ಪಾದಲೇಪೌಷಧಿಪ್ರಭಾವದಿಂ ವಿಂಶತಿಸಹಸ್ರಸೋಪಾನಂಗಳ ನಸಂಗದಿಂದಮೇಜಿ ಗಂಧಕುಟಿಯಂ ಪೊಕ್ಕು (ಚಂದ್ರಪ್ರ. ೬-೫ ವ); ಅಲ್ಲಿ ಸರ್ವರೂ ಪಾದಲೇಪೌಷಧಿಸಾಮರ್ಥ್ಯದಿಂ ಆ ಸೋಪಾನಗಳನ್ನಾರೋಹಿಸಿದರು (ಪುರುಷ. ೦೨೯). [ ಸಂ. ]

**ಪಾದವಟ್ಟ** (ನಾ). ಕಾಲಿನ ಒಂದು ಬಗೆಯ ಆಭರಣ ; ಕಾಲಂದುಗೆ : ಪೆಂಡೆಯ ಪಾದವಟ್ಟಗಳೊಪ್ಪಿದುವು ಚಂದ್ರಮಂಡಲಮುಖಿಯಡಿಗಳೊಳು (ಶಬಿತ. ೪೦-೬೦). 'ಪಾಯಂವಟ್ಟ' ಪಠಾ. [ <ಪಾದಪಟ್ಟ ]

**ಪಾದವಟ್ಟಿಗೆ** (ನಾ). ಮೆಟ್ಟಿಲು ; ಸೋಪಾನ : ಪಾಸಿದ ತಣ್ಗದಿರಣಿಯ ಪಾದವಟ್ಟಿಗೆಗೊಳಗೇರಿಯ ನಿಡುಪುರಂಗಳಿಟುಂಬಿನ ಕಟ್ಟಿಲೆಯನೊಳಕೊಂಡು. . . ಕಿಜುಗಾಳಿಯಲೆಪದಿಂ ಕಲ್ಪರಿವ ತೆರೆಯಿನೊಂದು ಕೊಳಂ ಪಗಲ್ವೆಣ್ಣ ಕ್ರೀಡಿಯೆಂಬಂತಿರೆ ಸೊಗಯಿಸಿದತ್ತು (ರಾಮಾಶ್ವ. ೩೨-೦೪).

[ <ಸಂ. ಪಾದಪಟ್ಟಿಕಾ ]

**ಪಾದವಲ್ಮೀಕ** (ನಾ). ಆನೆಯಂ ಕಾಲಿನಂತೆ ಕಾಲು ದಪ್ಪವಾಗಿ ಊದಿಕೊಳ್ಳುವ ಒಂದು ಬಗೆಯ ರೋಗ; ಆನೆಕಾಲುರೋಗ: "ಶ್ಲೀಪದಂ, ಪಾದವಲ್ಮೀಕಂ... ಈ ೨ ಒಟಿಲೆಗಾಲ್" (ಕಲಾಯು. ೯೯-೧೩೦). [ಪಾದ+ವಲ್ಮೀಕ]

**ಪಾದವಾಸ** (ನಾ). =ಪಾದವಾಶ ೧: ಪರಪದದ ಮೊದಲೊಳ್ ಪಕಾರ ಬಕಾರ ಮಕಾರಂಗಳಿರೆ ಪತ್ವಮಕ್ಕುಂ . . . ಪಾದವಾಶ—ಪಾದವಾಸ, ಯೋಗವಾದುಕಾ — ಜೋಗವಾವುಗೆ (ಶಮದ. ೨೯೨ ಕೃಯೋ). [<ಸಂ. ಪಾದವಾಶ]

**ಪಾದವಿನ್ಯಾಸ** (ನಾ). ೧. ನಡೆಯುವಾಗ ಕಾಲನ್ನು ಇಡುವುದು. ೨. ಪದ್ಯದ ಪಾದಗಳನ್ನು ಜೋಡಿಸುವುದು. ೩. ಕಿರಣಗಳನ್ನು ಹರಡುವುದು, – ಪಸರಿಸುವುದು. ೨, ೩: ಅತಿಶಯಪದಾರ್ಥ ನಿಕರಪ್ರತೀತಿಯಂ ಪಡೆವ ಪಾದವಿನ್ಯಾಸಂ ಭೂನುತವಾಗದಲ್ತೆ ನಿರ್ದೋಷತೆಯಿಂದಲ್ಲದೆ ಸಮಂತು ಕವಿಗಂ ರವಿಗಂ (ಕಂದ್ರಕೃ. ೦-೧೬). [ಪಾದ+ವಿನ್ಯಾಸ]

**ಪಾದವಿಷ್ಟರ** (ನಾ). ಕಾಲಿಡುವುದಕ್ಕಾಗಿ ಮಾಡಿದ ಪೀಠ; ಕಾಲಮಣೆ; ಪಾದಪೀಠ: ಕ್ಷಮರಾಪ್ತರ್ ನಯಕೋವಿದರ್ ಸಕಳ ಶಾಸ್ತ್ರಾರ್ಥರ್ . . . ಕುಲೀನರ್ ನೃಪೇಂದ್ರಪ್ರಗೇಂದ್ರಾಸನಪಾದವಿಷ್ಟರ ದೋರ್ದರ್ (ಅವಂಕೃ. ೨-೨೩). [ಪಾದ+ವಿಷ್ಟರ]

**ಪಾದಶಾ** 'ಪಾತಶಹ' ನೋ.

**ಪಾದಶಾಖೆ** (ನಾ). ಕಾಲಿನ ಬೆರಳು. [ಸಂ. ಪಾದಶಾಖಾ]

**ಪಾದಶಾಯಿ** 'ಪಾತಷಾಹಿ' ನೋ.

**ಪಾದಶಾಹ** 'ಪಾತಶಹ' ನೋ.

**ಪಾದಶಿಲೆ** (ನಾ). ಕಂಬದ ತಳಕ್ಕೆ ಆಧಾರವಾಗಿ ಕೊಡುವ ಕಲ್ಲು; ಕಂಬದ ಅಡಿಗಲ್ಲು: ಎನ್ನ ಪಾದವೇ ಪಾದಶಿಲೆಯಾಗಿ ಎನ್ನ ಕಾಲೇ ಕದಹದ ಕಂಬಗಳಾಗಿ (ಸರ್ವಕ. ೦೬೦-೬೦). [ಪಾದ+ಶಿಲೆ]

**ಪಾದಶೂಲೆ** (ನಾ). ಕಾಲಿನಲ್ಲಿ ಉಂಟಾಗುವ ನೋವು: ಮೂಜು ಮಾನ ಮಷ್ಷಿಗೆ ಒಂದು ಹಿಡಿ ಲೊಕ್ಕಿಯ ಸೊಪ್ಪಿನೊಳಗೆ ಹೋಯ್ದು . . . ಸೇವಿಸಿ ಮರ್ದನಂ ಮಾಡೆ ಮಂದಾಗ್ನಿ. ಪಾತಶೂಲೆ. ಪಾದಶೂಲೆ. ಸರ್ವಾಂಗ(ಗ)ಶೂಲೆ. ಮುಡುಬುಶೂಲೆ, ಪೋಣ್ಣುಂ (ವೈದ್ಯಪಿ. ೬೩). [ಪಾದ+ಶೂಲೆ$_1$]

**ಪಾದಶೃಂಖಲೆ** (ನಾ). ಕಾಲನ್ನು ಕಟ್ಟಲು ಉಪಯೋಗಿಸುವ ಸರಪಣಿ: ಪರಪದಂ ತದ್ಭವಮಾದ ಸಮಾಸಕ್ಕೆ—ಉತ್ತರದೇಶ—ಉತ್ತರದೇಸ . . . ಪಾದಶೃಂಖಲಾ—ಪಾದಸಂಕಲೆ (ಶಮದ. ೨೯೯ ಕೃಯೋ). [ಪಾದ + ಶೃಂಖಲೆ]

**ಪಾದಷಹ** 'ಪಾತಶಹ' ನೋ.

**ಪಾದಷಹಾ** 'ಪಾತಶಹ' ನೋ.

**ಪಾದಷಾಹ** 'ಪಾತಶಹ' ನೋ.

**ಪಾದಸಂಕಲೆ** (ನಾ). = ಪಾದಶೃಂಖಲೆ: ಪರಪದಂ ತದ್ಭವಮಾದ ಸಮಾಸಕ್ಕೆ — ಉತ್ತರದೇಶ — ಉತ್ತರದೇಸ . . . ಪಾದಶೃಂಖಲಾ — ಪಾದಸ್ಸಂಕಲೆ (ಶಮದ. ೨೯೯ ಕೃಯೋ); ದಾನಸಾಲೆ. ಬಾಹುಬಲೆ. ಪಾದಸಂಕಲೆ (ಶಬ್ದಾನು. ೨೯೬ ಕೃಯೋ). [ಪಾದ+ಸಂಕಲೆ]

**ಪಾದಸರ** (ನಾ). ಕಾಲಿಗೆ ಧರಿಸುವ ಒಂದು ಬಗೆಯ ಸರಪಣಿ ಯಾಕಾರದ ಆಭರಣ; ಕಾಲುಸರ: ಜಗನ್ಮೋಹನಾಕಾರದಿಂ . . . ಪಾದಸರ ಕಾಲುಂಗುರಗಳಿಂ ಬಂಧುರಮಾದ ಪಾದಪ್ರವಿನ್ಯಾಸದಿಂ (ಸೌಗಂಧಿ. ೩೯-೦೦); ಹೆಜ್ಜೆಯ ಕುಣಿತಕ್ಕೆ ತಕ್ಕಂತೆ ಈ ಪಾದಸರಗಳ ಕಿರುಗೆಜ್ಜೆಯ ನಾದ ಅನುರಣಿಸುವಂತಿದೆ (ನೂಲಂಬ. ೯೬). [ಪಾದ+ಸರ$_3$]

**ಪಾದಸಾಲೆ** (ನಾ). ಕಾಲಿನ ಆಭರಣ: ಬಿಜ್ಜಣಿಯು ಕಾಳಂಜಿಯಿಂದವಹ ಪಾದಸಾಲೆಯುಂ ಮುಖ್ಯವುಪಕರಣವೃಂದವಂ ನೆರಪಿ . . . ಶೃಂಗರಿಸುತಿರಲು (ಸರಸೋ. ೨೬-೬೬). [ಪಾದ+ಸಾಲೆ$_1$./ ತವಿ. ಪಾತ್ರಚಾಲ]

**ಪಾದಾಂಗುಲೀಯಕ** (ನಾ). ಕಾಲಿನ ಬೆರಳಿಗೆ ಇಟ್ಟುಕೊಳ್ಳುವ ಉಂಗುರ; ಕಾಲುಂಗುರ; ಕಾಲುಸುತ್ತು: ಪಾದಾಂಗುಲೀಯಕ ಗಳುಗಳು—ಸ್ತ್ರೀಯರುಗಳು ಕಾಲುಬೆರಳುಗಳಲ್ಲಿ ಉಂಗುರಗಳು, ಒಲ್ಲಿ . . . ಧರಿಸಿದಲ್ಲಿ ಹೆಚ್ಚಾದ ಮಂಗಳವೂ, ಸರ್ವದುಷ್ಟಗ್ರಹೋಚ್ಚಾಟನವೂ ಸದಾ ಆನಂದವೂ ಆಗುವುವು (ಸಕವ್ಯ. ೯೦). [ಸಂ. ಪಾದಾಂಗುಲೀಯಕ]

**ಪಾದಾಂಬು** (ನಾ). ಪಾದದಲ್ಲಿ ಹುಟ್ಟಿದ ನೀರು: ನೈಜದಿಂದಜನ ಕರಪಾತ್ರದಗ್ರೋದಕಂ ವೈಜಯಂತೀಧರನ ಪಾದಾಂಬು . . . ತಾನಂತು ಪುಲ್ಲಪತಿಪಾಪಂಗಳ ಮೈಜೋಡನುಗಿದು ಬಿಸುಡುವ ಗಂಗೆ ಬೆದಱಿದಳ್ (ಜೈಮಿಭಾ. ೯-೨೬). [ಪಾದ+ಅಂಬು$_3$]

**ಪಾದಾಕ್ಷ** (ನಾ). ಪಾದದಲ್ಲಿ ಕಣ್ಣುಳ್ಳವನು; ಶಿವ; ☞ ವಿಷ್ಣುವು ಕ್ಷುಪನೆಂಬ ರಾಜನ ನಿಮಿತ್ತವಾಗಿ ದಧೀಚಿಮುನಿಯನ್ನು ಚಕ್ರಾಯುಧದಿಂದ ಹೊಡೆದಾಗ ಅದು ಮುರಿದು ಹೋಗಲು, ಶಿವನನ್ನು ಮೆಚ್ಚಿಸಿ ಪುನಃ ಚಕ್ರವನ್ನು ಪಡೆಯುವೆನೆಂದು ವಿಷ್ಣುವು ಸಹಸ್ರಕಮಲಗಳಿಂದ ಅರ್ಚಿಸತೊಡಗಿದನು. ಆಗ ಒಂದು ಕಮಲವು ಸಾಲದಾಗಲು ಭಕ್ತಿಭರದಲ್ಲಿ ತನ್ನ ಕಣ್ಣನ್ನೇ ಕಿತ್ತು ಶಿವನ ಪಾದಗಳಿಗೆ ಅರ್ಪಿಸಿ, ಸಂತುಷ್ಟನಾದ ಶಿವನಿಂದ ತನ್ನ ಕಣ್ಣು, ಚಕ್ರ ಎರಡನ್ನೂ ಮರಳಿ ಪಡೆದನು. ಇದರಿಂದ ಶಿವನು 'ಪಾದಾಕ್ಷ'ನಾದನೆಂದು ಶೈವಪುರಾಣಗಳಲ್ಲಿ ಹೇಳಿದೆ: ಭಾಳಾಕ್ಷ ಪಾದಾಕ್ಷನಂ . . . ಶಿವನು ಸೋಮಾಭರಾಮಾಂಗನಂ ಹೃದ್ರಾಜೀವದೋಳಿಟ್ಟು ನಾಡೆ ನೆನೆದು (ಕಬ್ಬಿಗಕ. ೨-೬). 'ಕಣ್ಣಡಿಗ' ಪರಾ. [ಸಂ. (ಪಾದ+ಅಕ್ಷಿ+–)]

**ಪಾದಾಗ್ರ** (ನಾ). ಕಾಲಿನ ತುದಿ; ತುದಿಗಾಲು: "ಪಾದಾಗ್ರಂ, ಪ್ರಪದಂ — ಈ ೨ ತುದಿಕಾಲ್" (ಕಲಾಯು. ೯೬–೩೬೩); ತೊಂಗರೆ ಪಾದಾಗ್ರದೆ ನೂಂಕಿದಂ ಮುಳಿದವಂ ಪಾರಾಶಿಗೊಳ್ ಚೇಪ್ರನಂ (ರಾಜಶೇ. ೯–೨೨). [ಪಾದ+ಅಗ್ರ$_1$]

**ಪಾದಾಘಾತ** (ನಾ). ಕಾಲಿನ ಹೊಡೆತ; ಒದೆತ: ಅದುರಿತು ಪಾದಾಘಾತದಿಂದ ಧರೆ (ಐಸವ. ೫೯೦); ಅಶೋಕಮರಗಳು . . . ಧಾರಿಣಿಯಂದಲೋ ಮಾಲವಿಕೆಯಿಂದಲೋ ಪಾದಾಘಾತದೋಹದ ಮಾಡಿಸಿಕೊಂಡಂತೆ ಮೈಯೆಲ್ಲ ಹೂ ತಳೆದಿತ್ತು (ಪಸುಹೂ. ೦೬೦). [ಪಾದ+ಆಘಾತ]

**ಪಾದಾತ** (ನಾ). ೧. ಕಾಲುನಡೆಯ ಸೈನಿಕ; ಕಾಲಾಳು: "ಪದಾತಿಃ, ಪತ್ತಿಃ, ಪಾದಾತಃ . . . ಪಾದಚಾರೀ — ಈ ೮ ಕಾಲಾಳ್" (ಕಲಾಯು. ೬೪–೨೯೬); "ಯಾತಂ ಪದಾತಿಸಂ . . . ಪಾದಾತಂ ಪದಾಜಿಯುಂ ಪದಿಕನೆನೆ ಕಾಲಾಳ್" (ಮಂಗರಾ. ೬೫–೨೬). ೨. ಕಾಲಾಳುಗಳ ಸೈನ್ಯ; –ಪಡೆ: ಪದಾತಿ ಸೈನ್ಯ: ನಡೆದುದು ಪಾದಾತಂ ಚತುರಶೀತಿಕೋಟಿ ಪ್ರಮಿತಂ (ಆದಿಪು. ೦೦–೩೩); ಆ ಪಾದಾತಂ ಲಕ್ಷಾಲಕ್ಷಮಪಂ ಪ[ರಿ]ವೀಕ್ಷಿಸಲರಿದುಜಲದಿದಿರ್ಚಿ ಕಾದುವರೊಳರೇ (ಶಾಂತಿಪು. ೦೦–೦೦೬). [ಸಂ.]

**ಪಾದಾತಿ** (ನಾ). ಕಾಲಾಳು; ಪದಾತಿ. [ಸಂ.]

**ಪಾದಾತಿಕ** (ನಾ). ೧. =ಪಾದಾತ ೧: "ಪದಾತಿಃ. ಪತ್ತಿಃ, ಪಾದಾತಃ, ಪಾದಾತಿಕಃ . . . ಪಾದಚಾರೀ — ಈ ೮ ಕಾಲಾಳ್" (ಕಲಾಯು. ೬೪–೨೯೬). ೨. =ಪಾದಾತ$_2$: "ಪದಿಕಂ ಪತ್ತಿ ಪದಾತಂ ಪದಾತಿ ಪಾದಾತಿಕಂ ಪಾದಾಜಿಗೆ ನಾಮಂ" (ಪಸ್ತುಕೋ. ೬೩-೦೦). [ಸಂ.]

**ಪಾದಾದಿಯಮಕ** (ನಾ). [ಕಾವ್ಯಮೀ] ಶಬ್ದಾಲಂಕಾರಗಳಲ್ಲಿ ಒಂದು: ಪದ್ಯದ ಸಾಲುಗಳ ಮೊದಲಲ್ಲಿ ನಿಯತವಾಗಿ ಬರುವ ಯಮಕ:

ಪಾದಾದಿಯಮಕಕ್ಕೆ — ಉಪದಾತ್ತನುತೋನ್ನತವಮಂ ದ್ವಿಪವುದವರಿ ಪೂರ್ಣಗಿರಿಸರಿತ್ಸಂತತಿಯಂ ಉಪದಾತ್ತನುತೋನ್ನತವಮಂ ತಪನಕರೋತ್ತ ಪನತಪ್ತತಪನೋಪಲಮಂ (ಕಾವ್ಯಾ.ಶ. ೩೩೯). [ಸಂ.]

**ಪಾದಾಪವಿದ್ಧ** (ನಾ). [ನಾಟ್ಯ]ನೃತ್ಯದ ಒಂದು ಭಂಗಿ; ನೂರೆಂಟು ಕರಣಗಳಲ್ಲಿ ಒಂದು; ❡ "ಕಟಕಾಮುಖ ಹಸ್ತಗಳೆರಡನ್ನು ಒಂದ ಕ್ಕೊಂದು ಹಿಮ್ಮುಖವಾಗಿರುವಂತೆ ನಾಭಿಯ ಹತ್ತಿರ ಹಿಡಿದು ಸೂಚೀಪಾದದಿಂದ ಅಪಕ್ರಾಂತಚಾರಿಯನ್ನು ಮಾಡುವುದು" (ಲಾಸ್ಯರಂ. ೨೧೯ ಗದ್ಯಾನುವಾದ); ತಲಪುಷ್ಪಪುಟ, ಲೀನ . . . ದಂಡಪಕ್ಷ, ಪಾದಾಪವಿದ್ಧ . . . ಗಂಗಾವತರಣ — ಈ ನೂರೆಂಟು ಕರಣಂಗಳ್ (ಲಾಸ್ಯರಂ. ೪-೯೨ ಪ). [ಪಾದ + ಅಪವಿದ್ಧ]

**ಪಾದಾಪವಿದ್ಧಕ** (ನಾ).=ಪಾದಾಪವಿದ್ಧ: ಸಲೆ ವಲಿತ ದಂಡಪಕ್ಷಂ ಸುಲಲಿತ ಪಾದಾಪವಿದ್ಧಕಂ . . . ಭುಜಗತ್ರಸ್ತರೇಚಿತಾಖ್ಯಮಿವಿಂತುಂ (ಲಾಸ್ಯರಂ. ೪-೩೦). [ಸಂ.]

**ಪಾದಾಭಿಘಾತ** (ನಾ).=ಪಾದಾಘಾತ: ಪಾದಾಭಿಘಾತವಿಚಲನ್ಮೇದಿನ್ಯುತ್ಥಿತ ವಿಶಾಲಧೂಳಿಪಟಲಾಚ್ಛಾದಿತಗಗನಂ ನಡೆದುದು ಪಾದಾತಂ ಚತುರಶೀತಿ ಕೋಟಿಪ್ರಮಿತಂ (ಅಜಿತ. ೧೦-೩೩). [ಪಾದ + ಅಭಿಘಾತ]

**ಪಾದಾಭಿಷೇಚನ** (ನಾ). ಪಾದಗಳಿಗೆ ಅಭಿಷೇಕ ಮಾಡುವುದು: ಪೌರವರ್ಗಾಡಿದ ನಲಿನೀಪತ್ರಪುಟಪ್ರಸಾದಿತಸಾರಜಲಪಾದಾಭಿಷೇಚನದೊಳ ಮಭಿಷೇಕವಿಧಿಯಂ ನಿರ್ವರ್ತಿಸಿ (ಅಜಿತ. ೬-೩೯ ವ). [ಪಾದ + ಅಭಿಷೇಚನ]

**ಪಾದಾಭ್ಯಂಗನ** (ನಾ). ಎಣ್ಣೆ ಮುಂತಾದ ಲೇಪನದ್ರವ್ಯಗಳನ್ನು ಪಾದಗಳಿಗೆ ಹಚ್ಚಿ ತೊಳೆಯುವುದು: ಪಾದಾಭ್ಯಂಗನದಿಂದ ನೇತ್ರ ರೋಗವೂ . . . ಶಿರೋಭ್ಯಂಜನದಿಂದ ಸರ್ವರೋಗವೂ ಹರವಾಗುವುದು (ಸಕವ್ಯ. ೩೦). [ಪಾದ + ಅಭ್ಯಂಗನ]

**ಪಾದಾರ್ಚನೆ** (ನಾ). ಪಾದಗಳನ್ನು ಪೂಜಿಸುವುದು, — ಅರ್ಚಿಸುವುದು; ಪಾದಪೂಜೆ: ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ . . . ಕರೆದು ಕುಳ್ಳಿರಿಸಿ ಪಾದಾರ್ಚನೆಯಂ ಮಾಡಿ ಪಾದೋದಕವಂ ಕೊಂಡು (ಬಸವ. ೭೬೯); ಪಾದಾರ್ಚನೆಯ ಮಾಡುವೆನಯ್ಯಾ ಪಾದೋದಕದ ಹಂಗಿಂಗೆ (ಬಸವ. ೭೬೭). [ಪಾದ+ಅರ್ಚನೆ]

**ಪಾದಾರ್ಧ** (ನಾ). ಪದ್ಯದ ಸಾಲಿನ ಅರ್ಧಭಾಗ: ಯಮಕಂ (ಪ)ದ ಪಾದಾರ್ಧ ಸಮಶ್ಲೋ(ಕಾದಿ)ಗೋಚರಂ (ಕವಿಕಾ. ೨-೦೨೯). [ಪಾದ+ಅರ್ಧ]

**ಪಾದಾವರ್ತ** (ನಾ). ೧. ಬಾವಿಯಿಂದ ನೀರನ್ನು ಮೇಲಕ್ಕೆತ್ತಲು ಉಪಯೋಗಿಸುವ (ಕಾಲಿನಿಂದ ತಿರುಗಿಸಬಹುದಾದ) ಒಂದು ಬಗೆಯ ರಾಟೆ, — ಯಂತ್ರ: "ಉದ್ಘಾಟಕಂ, ಘಟೀಯಂತ್ರಂ, ಪಾದಾವರ್ತಃ, ಅರಘಟ್ಟಕಃ — ಈ ೪ ಜಾಟಣಂ" (ಹಲಾಯು. ೦೦೩-೩೩). ೨. ಕ್ಷೇತ್ರದ ಒಂದು ಅಳತೆ; ಒಂದು ಚದರಡಿ: ಪಾದಾವರ್ತ ಶತತ್ರಯಂ (ಎಕ. III. ೩೨೦-೦೩; ೮೭೮). [ಸಂ.]

**ಪಾದಾಶ್ರಿತ** (ನಾ). ಪಾದಗಳಲ್ಲಿ ಆಶ್ರಯವನ್ನು ಪಡೆದವನು; ಶರಣಾದವನು: ಹರಿಪಾದಾಶ್ರಿತರಾಗಿಮಿಲ್ಲದೊಡೆ ಪಗೆಗೊಳ್ಳಿಂ (ಜಗ.೩. ೯-೦೦೩). [ಪಾದ + ಆಶ್ರಿತ]

**ಪಾದಾಶ್ರಿತೆ** (ನಾ). ಪಾದಗಳಲ್ಲಿ ಆಶ್ರಯವನ್ನು ಹೊಂದಿರುವವಳು; ಶರಣಾಗತೆ: ನಾವೀಗ ಜಗದಂಬೆಯ ಪಾದಾಶ್ರಿತೆಯರಾಗಿದ್ದೇವೆ (ಕವಾಕುಂ. ೩೩). [ಪಾದಾಶ್ರಿತ + —ಎ₂]

**ಪಾದಾಸ್ತ** (ನಾ). ಕಾಲುಗಳನ್ನೇ ಆಯಂಥವಾಗಿ ಉಳ್ಳುದು; ಕೋಳಿ: ಪಾರಿವ ಶಿಖಿ ಗಂಡಭೇರುಂಡ ಕೆಂಗ್ಣಾ ಕೀರಂಚೆ ಕೊಂಚೆ ಪಾದಾಸ್ತ . . . ಖಂಜರೀಟ ಖಗದ ಸಂಚಾರ . . . ಆ ನಗದಿ ರಂಜಿ ಸುವದಪಾರ (ಭೈರವೇ. ೦-೩೩). [ಪಾದ + ಅಸ್ತ]

**ಪಾದಾಹತಿ** (ನಾ). = ಪಾದಾಘಾತ: ಆಸ್ಥಾನದಲ್ಲಿರ್ದ ದುರ್ಧರವಿದ್ಯಾಧರ ವೀರರಂ ಜವನ ಬಾಯೊಳ್ ತೂಂಕಿದಂ ತನ್ನ ನಿಷ್ಠುರಪಾದಾಹತಿಯಿಂ ಪ್ರಭಂಜನಸುತಂ ಹಸ್ತಪ್ರಹಾರಂಗಳಿಂ (ಶಂರಾಭ್ಯು. ೦೦-೦೯೨). [ಪಾದ + ಆಹತಿ]

**ಪಾದಿ₁**, ಹಾದಿ (ನಾ). ೧. ಬಟ್ಟೆ; ದಾರಿ; ಮಾರ್ಗ: ಅಕ್ಕಿ ಬತ್ತ ಹೇರುಂಗೆ ಮಾನ ೨ ಎಣ್ಣೆ ಕೊಡಕ್ಕೆ × ಳಸಿಗೆ ೨ ಪಟ್ಟಣಸಾಮಿ ಗೊಯ್ದು ಸೆಟ್ಟಿದೇವರ್ಗೆ ಯೆತ್ತದೋಪಾದಿಯೆಲೆಯೆತ್ತಿ ಕೊಂಬನ್ನು ಊರು ಗಡವೂರ ಗಂಗರ × × × ಬಾಚಗಉಡ ಬಮ್ಮಿಸೆಟ್ಟಿ ಕನುಲ್ಲರುಂ ಗೊಯ್ದಿಸೆಟ್ಟಿಯ ಪಾದಿಯ ಸಂತೆಯ ಯೆತ್ತಿಕೊಂಬರು (ಎಕ. VII. ಶಿವಮೊ. ೬೬-೩೩; 1203); ಇದುವೆ ಕಡವೆಯ ನೊರೆಯು ಭಲ್ಲುಕಂ ಕೆದರ್ದೆಡೆಯುಯಿದು ಗಜಂ ಪೋದ ಪಾದಿ (ರಾಜಶೇ. ೦೭-೬೯). **ಹಾದಿ**: ೧. ಇದು ಸತ್ಪಥಕ್ಕೆ ಎಯ್ದುವ ಹಾದಿ (ಐರೀಕ್ಷ್ಯ. ೪. ೯೨೯-೨೦); ಅಸುರರು ಹಾದಿಯನು ಸವೆಬಿದರು ಯಮಪುರದತ್ತ ಪಯಣಕ್ಕೆ (ಕೌಶಿಕಾ. ೨೦-೦೭); ವಿದುರನ ಗೃಹದಿ ಪೋದದಿ ಒಕ್ಕುಡುತೆಯ ಪಾಲನೆ ಕೊಂಡು ಹಾದಿಲಿ ಹರಿಸಿದ್ದು ಎಲ್ಲಿ ಕಲಿತೆಯ್ಯ (ಕೃಲಂದ. ೦-೯೩-೯); ಆದಿದೈವವನು ತಾ ಭೇದಿಸಲಿಕಜಿಯದಲೆ ಹಾದಿಯ ಲ್ಲಿಗೆಡೆಮಾಡಿ ನವಿಸುವ ಮಾದಿಗರ ನೋಡು (ಸರ್ವಜ್ಞ. ೦೯೯). ೨. ಪಂಕ್ತಿ; ಸಾಲು; ಓಳಿ: ಕರ್ಯೋಳರ ಹಾದಿಗಳೊಂದೆಸೆ ಯೊಳು ಬಯ್ಯೆಯ ಸತಿಯರ ಸಾಲೊಂದೆಸೆಯೊಳು (ತಿರುಪಾ. ದೇ. ೨೨೨-೦೯). ೩. ರೀತಿ; ಬಗೆ; ಕ್ರಮ: ಮೋವದಿ ಕವಿ ಕಾವ್ಯದೊಳ್ ಪೊಗಳ ಬೇಕೆಂಬ ಹಾದಿಯಂ ಪೊಗಳ್ದಡೀಶ್ವರನಾಣೆ ಶಿವಸಿದ್ಧರಾದಿತ್ಯ ಸಿದ್ಧರಾಮನ ಚರಿತ್ರವನೆಯ್ದೆ ಪೊಗಳಲಾನೆನಿತಜವನು (ಸಿದ್ಧರಾ. ೦-೩); ಕಮಲೋದರನು ಕಾಮಿನಿಯನೆದೆಯೊಳಗಾದರಿಸಿದನು ಕಮಲಭವ ಜಗವಜಿಯೆ ನಂದನೆಯ ಐದೆಯನು ನೆಟ್ ಮಾಡಿಯರವೇಣ್ನಾದನೀಶ್ವರನಿಂದ್ರಗಿಂದ್ರರ ಹಾದಿಯದು (ಕೌಶಿಕಾ. ೦-೩-೩೭); ಮುಂದಿನ ಪೀಳಿಗೆಗೆ ಅನುಕೂಲವಾಗುವಂತಹ ಮತ್ತು ಉಪಯೋಗವಾಗುವಂತಹ ಹಲವಾರು ಮಹತ್ವದ ವಿಷಯಗಳ ಬಗ್ಗೆ ಹಾದಿ ಹಾಕಿಕೊಡುವುದೂ . . . ಅಷ್ಟೇ ಮಹತ್ವದ್ದು (ಸಸ್ಯಕ. ೪೦).

**ಹಾದಿಗುಂಟ**=ದಾರಿಯ ಉದ್ದಕ್ಕೂ: ಹಳ್ಳವಾಗಿ ಬಂದ ಹಾಲು ಹಾದಿಗುಂಟ ಹರಿವುದಿನ್ನೂ (ಹಾಡುಪಾ. ೩೨-೩). **ಹಾದಿಗೆ ಬರು**=ದಾರಿಗೆ ಬರು; ಸರಿಯಾದ ಕ್ರಮಕ್ಕೆ ಬರು; ಸರಿಯಾಗು: ರಾಮನು ಒಬ್ಬ ಸ್ತ್ರೀಯನ್ನೇ ಉದ್ಧರಿಸಿದನು . . . ಆದರೆ ನಾಮದಿಂದ ಕೋಟ್ಯವಧಿಜನರ ವಿಪರೀತಬುದ್ಧಿಯು ಹಾದಿಗೆ ಬಂದಿರುವದು (ತುಳಸೀ. ೬); ಅಂತೂ ಹಾದಿಗೆ ಬಂದಿದ್ದಾನೆ (ಕಳ್ಳಕು. ೬೦). **ಹಾದಿಗೆ ಹಚ್ಚು** = ದಾರಿಯನ್ನು ಕಾಣಿಸು; ಸರಿಯಾದ ಮಾರ್ಗದಲ್ಲಿ ನಡೆಸು: ನನ್ನನ್ನು . . . ಈ ಹಳ್ಳದಿಂದ ಎತ್ತಿ ಹಾದಿಗೆ ಹಚ್ಚು ದೇವಾ (ಹಳ್ಳಹಾ. ೯೯). **ಹಾದಿಗೆ ಹತ್ತು**=ಹಾದಿಗೆ ಬರು: ಅಪ್ಪ . . . ಹಾಗೆ ನಡೆಸಿಕೊಂಡದ್ದ ರಿಂದಲೇ ಹುಡುಗ ಹಾದಿಗೆ ಹತ್ತಿದ (ಪೂಸಕ್ಕ. ೦೬೯). **ಹಾದಿ ಬೀದಿ ರಂಪ** = ಬೀದಿಯಲ್ಲಿ ನಡೆಯುವ ಜಗಳ; ಬೀದಿಜಗಳ: ಅಲ್ಲಿಗೇನು ಹೋಗಿ ನೀವು ಹಾದಿ ಬೀದಿ ರಂಪ ಎಬ್ಬಿಸಬೇಡಿ (ಗಂಗಾಪ. ೯೯).

[ದೇ.॥ ತಮಿ. ಪಾತೈ; ಮಲ. ಪಾಥ; ತುಳು. ಹಾದಿ. / ಸಂ. ಪಥ]

**ಪಾದಿ₂** (ನಾ). ಕಾಲಾಳು; ಪದಾತಿ: ಥಳಥಳಿಸುವ ರಥಯೂಥಪಾದಿ ಗಳಿಂದ ಥಳಪಳನೆಸೆವ ಕೈದುಗಳ ಥಳಥಳಿಕೆಯೊಳು ಮೇಳಿಸಿದ ಮಗಧನ ಥಳಕನೆ ಗೆಲಿದನ ಜಯತು (ಕಣಾಭಾ. ೭೦-೩೯). [ಸಂ. ಪಾದಿನ್]

**ಪಾದಿಕ** (ನಾ).=ಪಾದಿ₂: "ಪದಾತಿಃ, ಪತ್ತಿಃ, ಪಾದಾತಃ, ಪಾದಾತಿಕಃ, ಪದಾ (ಜಿ)ಜಯಃ, ಪಾದಿಕಃ, ಪದಿಕಃ, ಪಾದಚಾರೀ — ಈ ೮ ಕಾಲಾಳ್" (ಹಲಾಯು. ೩೯-೨೯೩). [ಸಂ.]

**ಪಾದಿಲೋಣ** 'ಪಾದೆಲೋಣ' ನೋ.

**ಪಾದುಕ** (ನಾ). ಹಾವುಗೆ; ಪಾದುಕೆ : "ಪಾದುಕವುದನುಪದೀನವೆನೆ ಹಾವುಗೆಯು" (ಶಬ್ದಮ. ೬೧-೦೪). [ಸಂ.]

**ಪಾದುಕಾಕಾರ** (ನಾ). ಹಾವುಗೆಯನ್ನು ತಯಾರಿಸುವವನು; ಚಮ್ಮಾರ : "ಚರ್ಮಕೃತ್, ಪಾದುಕಾಕಾರಃ – ೨ ಸಮ್ಮಗಾಱಂ" (ಹಲಾಯು. ೯೬ ೯೯೨). [ಸಂ.]

**ಪಾದುಕಾಸಿದ್ಧಿ** (ನಾ). ಐದು ಬಗೆಯ ಸಿದ್ಧಿಗಳಲ್ಲಿ ಒಂದು; ಮಂತ್ರಶಕ್ತಿಯುಳ್ಳ ಪಾದುಕೆಗಳನ್ನು ಧರಿಸಿ ಇಚ್ಛೆ ಬಂದಲ್ಲಿ ಸಂಚರಿಸಬಹುದಾದ ಸಿದ್ಧಿ : ಪಾದುಕಾಸಿದ್ಧಿ ಅಂಜನಾಸಿದ್ಧಿ ಘಟಿಕಾಸಿದ್ಧಿ ಮೂಲಿಕಾಸಿದ್ಧಿ ರಸರಸಾಯನಾದಿ ಸಿದ್ಧಿಗಳಂ ಸಾಧಿಸುತ್ತಿರ್ಪಂ (ವಿವೇಕ. ೧೧). [ಸಂ.]

**ಪಾದುಕೆ** (ನಾ). ೧. (ಮರ, ಲೋಹ ಮುಂತಾದುವುಗಳಿಂದ ಮಾಡಿದ) ಪಾದರಕ್ಷೆ ; ಹಾವುಗೆ : "ಪಾದುಕಾ, ಅನುಪದೀನಾ – ಈ ೨ ಹಾವುಗೆ" (ಹಲಾಯು. ೫೨-೦೩೬) ; ಚರ್ಮದ ಪಾದುಕೆಗಳನ್ನು ಹಾಕಿಕೊಳ್ಳುವುದರಿಂದ . . . ಮಹಾಹಿತಕರವಾಗಿರುವುದು (ಸಕಪ್ರ. ೫೫); ರಾಮನ ಪಾದುಕೆಯನ್ನು ತಂದಿಟ್ಟುಕೊಂಡು ರಾಮನ ಪ್ರತಿನಿಧಿಯಾಗಿ . . . ರಾಜ್ಯವನ್ನು ನೋಡಿಕೊಳ್ಳುತ್ತೇನೆ (ವಾರಾಕ್ರ. ೨೯) ; ಪೂಜ್ಯಪಾದುಕೆಗಳಂ ಪೂಜ್ಯಪಾದಂಗೆತ್ತು ಸಿಂಹಾಸನದೊಳಿಟ್ಟು ಪೂಜಿಸುವೆನಾಂ (ಶ್ರೀರಾಮಾ. ೦೭೩-೫೬೬). ೨. ಕಲ್ಲು ಅಥವಾ ಮರದ ಮೇಲೆ ಮೂಡಿರುವ, ದೇವರು ಅಥವಾ ಗುರುಗಳ ಪೂಜಾರ್ಹವಾದ ಪಾದದ ಗುರುತು,—ಮುದ್ರೆ. [ಸಂ. ಪಾದುಕಾ]

**ಪಾದುಕೆಗೆಯ್**, ಪಾದುಕೆಗೈ (ಕ್ರಿ). ಪಾದರಕ್ಷೆಯಾಗಿ ಮಾಡು ; ಹಾವುಗೆಯನ್ನಾಗಿ ಮಾಡು : ಗಣ್ಯ ಪುಣ್ಯರ ಚರಣಕೆನ್ನೆರ್ದೆಯನೊಸೆದು ಪಾದುಕೆಗೆಯ್ವೆನು (ರಾಕಳ. ೦-೦೩). **ಪಾದುಕೆಗೈ :** ನಿರ್ಮಲಾತ್ಮಕ ಪರಮಶಿವಶರಣರಡಿಗೆಯನ್ನೆರ್ದೆಯ ಪಾದುಕೆಗೈವೆನು (ಪಪುಮೋ. ೦-೦೪). [ಪಾದುಕೆ+ಕೆಯ್$_1$]

**ಪಾದುಕೆಗೈ** 'ಪಾದುಕೆಗೆಯ್' ನೋ.

**ಪಾದುಶಾಹ** 'ಪಾತಶಹ' ನೋ.

**ಪಾದುಷಹ** 'ಪಾತಶಹ' ನೋ.

**ಪಾದುಷಾ** 'ಪಾತಶಹ' ನೋ.

**ಪಾದೂಯುಗ್ಮ** (ನಾ). (ಹೆಜ್ಜೆಗಳ ಗುರುತುಳ್ಳ) ಹಾವುಗೆಗಳ ಜೊತೆ : ಶಿವನಾಮಾಂಕಿತಮಂ ರತ್ನವಿರಚಿತಮನುತ್ತಮಾಂಗದೊಳ್ ಪಾದೂಯುಗ್ಮವನೆಸೆಯೆ ತಳೆದು (ಕಾದಂಪು. ೬೬೧). [ಸಂ.]

**ಪಾದೆಲೋಣ**, ಪಾದಿಲೋಣ (ನಾ). ಒಂದು ಬಗೆಯ ಕಪ್ಪುಬಣ್ಣದ ಉಪ್ಪು ; ಬಿಡುಲವಣ : ಸೂರತಿಬಂದರಿನಿಂದ ಮೇಲೆ ಕಿಮ್ಮತ್ತು ಇರತಕ್ಕ ಜಿನಸಗಳು. ೧. ಅಕ್ಕಲಕಾರಾ . . . ೧೨೬. ಪಾದೆಲೋಣ (ಮುಂಬವಾ. ೦೨೬). **ಪಾದಿಲೋಣ :** ಆ ಜಿನಸಗಳು . . . ಈ ಪ್ರಕಾರ-ಅಕ್ರೋಡ, ಅಕ್ಕಲಖಾರ . . . ಪಚ್ಚಕರ್ಪೂರ, ಪಾದಿಲೋಣ, ಪಿಸ್ತ, ಹಿಪ್ಪಲಿ (ಮುಂಬವಾ. ೨೦೪). [←ಮರಾ. ಪಾದೇಲೋಣ]

**ಪಾದೋದಕ** (ನಾ). ೧. ಕಾಲುಗಳನ್ನು ತೊಳೆಯಲು ಕೊಡುವ ನೀರು : ಅತಿಥಿಗಳಿಗೆ ಪಾದೋದಕವನ್ನೀಯುವುದು ಆದರ ಸತ್ಕಾರದ ಪದ್ಧತಿ (ಕ್ರಶಿಂರ. ೯೫). ೨. [ವಿಶೇ] ಗುರುಹಿರಿಯರ ಕಾಲುಗಳನ್ನು ತೊಳೆದ ನೀರು ; ಪಾದತೀರ್ಥ : ಒಳಗೆ ತೊಳೆಯಲಾಗದೆ ಹೊರಗ ತೊಳೆದು ಕುಡಿವುತ್ತಿದ್ದರಯ್ಯ ಪಾದೋದಕಪ್ರಸಾದವನರಿಯದೆ ಬಂದ ಬಟ್ಟೆಯಲ್ಲಿ ಮುಳುಗುತ್ತೈದಾರೆ (ಅವಚಂ. ೩೬-೦೬೦); ಗಂಡ ಕೊಂಬುದು ಪಾದೋದಕಪ್ರಸಾದ ಹೆಂಡತಿ ಕೊಂಬುದು ಸುರೆ ಮಾಂಸ (ಬಸವ. ೦೦೪); ಶ್ರೀಪಾದಮಂ ತೊಳೆದು ಪಾದೋದಕಮಂ ತಳೆದು . . . ಕೃತಾರ್ಥಮನನಾಗುತ್ತಿರಲ್ (ಶಂಖಶ. ೬-೩೦). ೫ ಪಾದೋದಕದಲ್ಲಿ ಹತ್ತು ಬಗೆಗಳನನ್ನು ಹೇಳುತ್ತಾರೆ : "ದಶವಿಧಪಾದೋದಕ : ಗುರುಪಾದೋದಕ, ಲಿಂಗಪಾದೋದಕ, ಜಂಗಮಪಾದೋದಕ, ಸ್ಪರ್ಶನೋದಕ, ಅವಧಾನೋದಕ, ಆಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕ, ಸತ್ಯೋದಕ" (ಶಸ್ಥಪ. ೪ ೬೩೦ ಪಾಂಬಾಟಿಕಶಬ್ದಕೋಶ). [ಪಾದ+ಉದಕ$_2$]

**ಪಾದೋದಕಿ** (ನಾ). ಪಾದೋದಕವನ್ನು ಸ್ವೀಕರಿಸುವವನು, – ಸೇವಿಸುವವನು : ಹುಟಪಟತಲ್ಲದೆ ಪ್ರಸಾದಿಯಲ್ಲ ತೃಷೆಯಡಿತಲ್ಲದೆ ಪಾದೋದಕಿಯಲ್ಲ (ಅವಚಂ. ೧೨೪-೩೬೩). [ಸಂ. ಪಾದೋದಕಿನ್]

**ಪಾದ್ಯ** (ಗು). ೧. ಕಾಲಿಗೆ ಸಂಬಂಧಿಸಿದ. (ನಾ). ೨. ಕಾಲುಗಳನ್ನು ತೊಳೆಯುವ ನೀರು : ಮುನಿಜನಪೂಜಾನ್ನದಾನಾದಿಕರಣಜಿನಗೃಹಜನ ಸತತೋಪನೀಯಮಾನಪಾದ್ಯಗಂಧಾಕ್ಷತಕುಸುಮಚರುಧೂಪದೀಪಫಲಾದ್ಯರ್ಚನಾತ್ಮಕಪುಷ್ಪನಿಕ್ಷೇಪಮಹಿಮಂ (ಆದಿಪು. ೧೫-೦೩೪); ರಾಘವಂಗಾನತರಾಗಿ ಮೌಳಿಮಣಿದೀಪ್ತಿಜಲಂಗಳಿನೀಯೆ ಪಾದ್ಯಮಂ (ಪಂರಾಮಾ. ೧೬-೩೧) ; ಅಕ್ಕನ ಕೇಸಡಿದಳಿರ್ಗೆ ಜಯಶ್ರೀಮುಖ ಪಾದ್ಯಮಂ ಪ್ರಕಟಿಸಿದಳ್ (ಅಶಂಪು. ೨-೫೦). ೩. ಕಾಲುಗಳನ್ನು ತೊಳೆಯುವುದು ; ಪಾದಪ್ರಕ್ಷಾಲನ : ಜನಪತಿಗಂದು ಪಾದ್ಯಮನದೇಂ ಪೊಱಪಂತೆ ಮೆಲ್ಲನೆ . . . ಸುರಿದತ್ತು ಸದ್ಮಸರಸೀಶರಶೀಕರ ಮಂದಮಾರುತಂ (ಮಲ್ಲಿಪು. ೭-೪೮); ಮುದದೊಳೆದ್ದು . . . ಪುಣ್ಯಸಂಪದದ ಸಂಧ್ಯಾವಂದನಂ ಮಾಡಿ ವಿಹಿತಾರ್ಘ್ಯಪಾದ್ಯಮಂ ನಿರ್ವರ್ತಿಸಿ (ಹರಿಕಾ. ೪-೫೪) ; ಮುನಿಯನಿದಿರ್ಗೊಂಡು ಪೊಡೆಮಟ್ಟು ಭದ್ರಾಸನದೊಳ್ಕುಳ್ಳಿರಿಸಿ ಅರ್ಘ್ಯಪಾದ್ಯಂಗಳಿಂ ಪೂಜಿಸಿ (ರಾಮಾಶ್ವ. ೧೧-೮) ; ಪಾದ್ಯಕ್ಕೆ ನೀರು ಇಲ್ಲ, ಊಟಕ್ಕೆ ಮಜ್ಜಿಗೆಯಿಲ್ಲ ? (ಗಾದೆ). [ಸಂ.]

**ಪಾದ್ಯದ್ರವ್ಯ** (ನಾ). ಕಾಲುಗಳನ್ನು ತೊಳೆಯುವ ನೀರಿನ ಜೊತೆಗೆ ಉಪಯೋಗಿಸುವ ವಸ್ತು ; ಪೂಜಾಸಾಮಗ್ರಿ : ಬಿಳಿಯ ಸಾಸುವೆ ಕುಸುಮ ದೂರ್ವೆ ಕೋಷ್ಠ ಲಾಮಂಚ ಕರ್ಪೂರಮೆಂಬಾಱು ಪಾದ್ಯದ್ರವ್ಯಂಗಳಂ . . . ಸಂಪಾದಿಸಿ (ವಿವೇಕ. ೯೪). [ಪಾದ್ಯ+ದ್ರವ್ಯ]

**ಪಾದ್ಯಪಾತ್ರೆ** (ನಾ). ಪಾದ್ಯದ್ರವ್ಯಗಳೊಂದಿಗೆ ಬೆರೆಸಿದ ನೀರಿರುವ ಪಾತ್ರೆ,–ಬಟ್ಟಲು : ವಿವಿಧಾಷ್ಟಗಂಧ ಕರ್ಪೂರ ಲಾಮಂಚ ಸಾಸವೆ ಕೋಷ್ಠ ದೂರ್ವೆಯೆಂಬಾಱ ನೀರೊಳು ಬೆರಸಿ ಶಿವನ ಪಾದಕ್ಕೆಂದು ಸಂಕಲ್ಪಿಸುತ್ತೊಲಿದು ಪಾದ್ಯಪಾತ್ರೆಯೊಳೆಱೆವುದು (ಗುರುಕಾ. ೫ ೫೪). [ಪಾದ್ಯ+ಪಾತ್ರೆ]

**ಪಾದ್ಯವಿಧಿ** (ನಾ). ಕಾಲುಗಳನ್ನು ತೊಳೆಯುವ ಕ್ರಿಯೆ ; ಪಾದಪ್ರಕ್ಷಾಲನ : ನಿಜಪಾದಾಂಬುರುಹಕ್ಕೆ ಪಾದ್ಯವಿಧಿಯಂ ನೇತ್ರಾಂಬುವಿಂ ಮಾಡುವಗ್ರಜಂ (ಆದಿಪು. ೦೪-೦೩೩). [ಪಾದ್ಯ+ವಿಧಿ]

**ಪಾದ್ರಿ**, ಪಾದರಿ (ನಾ). ಕ್ರೈಸ್ತರ ಧರ್ಮಗುರು ; ಚರ್ಚಿನ ಒಬ್ಬ ಕಾರ್ಯಕರ್ತ : ಡೂಬಾಯಿ ಪಾದ್ರಿ ತನ್ನ ಮಿತ್ರರಿಗೆ ಬರೆದ ಕೆಲವು ಪತ್ರಗಳು ಫ್ರಾನ್ಸ್‌ದೇಶದಲ್ಲಿ ನೊರ್ಟನ್ ವಿಶ್ವವಿದ್ಯಾಲಯದ ಪುಸ್ತಕ ಭಂಡಾರದಲ್ಲಿವೆಯಂತೆ (ಸಜ್ಞಾ. II೬೬ ೨೭) ; ಪಾದ್ರಿ . . . ನಮ್ಮನ್ನು ಭೆಟ್ಟಿಯಾಗಿ ಸಂಜೆ ತಮ್ಮನ್ನು ಕಾಣಲು ಹೇಳಿದ್ದರು (ಅಮೋಘ. ೧೪). **ಪಾದರಿ :** ಆಂಗ್ಲರ ಆಳ್ವಿಕೆ ಆರಂಭದಿಂದ ಕೊಂಚಕಾಲ ಕ್ರಿಶ್ಚಿಯನ್ ಪಾದರಿಗಳಿಗೆ ಭರತಖಂಡದ ಪ್ರವೇಶಕ್ಕೆ ಅನುಮತಿ ಇರಲಿಲ್ಲ (ಹುಮ್ಮಾಕ. ೧೧೪ ಶಿಲಾಕ). [← ಸ್ಪ್ಯಾನಿಷ್, ಪೋರ್ಚ್. Padre]

**ಪಾನ್‌ದಾನು**, ಪಾನದಾನು (ನಾ). ೧. (ಉಕ) ಎಲೆಯಡಿಕೆ ತಾಂಬೂಲ ; ವೀಳೆಯ : ಆ ಸಾಹೇಬರು . . . ಹರ್ಷಿತರಾಗಿ ಹೂವಿನ ಹಾರ ಪಾನ್‌ದಾನುಗಳನ್ನು ಸ್ವೀಕರಿಸಿ ಮಹಾಸ್ವಾಮಿಯವರಿಂದ ಅಪ್ಪಣೆ ತೆಗೆದುಕೊಂಡರು (ಮಹಾಪಂ. 'II, ೦೨೦). **ಪಾನದಾನು :** ೨. ತಾಂಬೂಲವನ್ನು ಇಡುವ ಡಬ್ಬಿ, – ಸಂಪುಟ : ಪರಿಚಾರಿಕೆಯ

ಕೈಲಿದ್ದ ಪಾನದಾನು ನೆಲದ ಮೇಲೆ ಬಿದ್ದು ಝಣಝಣ ಶಬ್ದವಾಯಿತು (ದೇಶೀಣಿ. ೭೩). [←ಹಿಂ. ಮರಾ. ಪಾನ್‌ದಾನ್]

**ಪಾನ್‌ಪಟ್ಟಿ**, ಪಾನಪಟ್ಟಿ (ನಾ). ೧.=ಪಾನ್‌ದಾನು ೧: ಪಟ್ಟದ ಆನೆ, ಪಟ್ಟದ ಕುದುರೆಗಳು ಕೆರೆಯ ಬಳಿಗೆ ಹೋಗಿ ಪೂಜೆ ಆಗಿ ಬಂದ ಮೇಲೆ ಎಲ್ಲರಿಗೂ ಹೂವಿನ ಹಾರ ಪಾನ್‌ಪಟ್ಟಿ ಮರ್ಯಾದೆ ಆಯಿತು (ಮಹಾಪಂ. II, ೧೮೪). **ಪಾನಪಟ್ಟಿ**: ೨. ಸಣ್ಣ, ಅಡಿಕೆಯನ್ನು ಹಾಕಿ ಸಿದ್ಧಪಡಿಸಿದ ವೀಳ್ಯ; ಬೀಡ: ಅವರು . . . ಭಜಿ, ಚಹ, ಪಾನಪಟ್ಟಿ ಇಷ್ಟರಿಂದಲೇ ಎದ್ದುಬಿಟ್ಟರು (ಮಣ್ಣಿ.ಕೆ. ೧೦೯). [←ಮರಾ. ಪಾನ್‌ಪಟ್ಟೀ]

**ಪಾನ್‌ಸುಪಾರಿ**, ಪಾನಸುಪಾರಿ, ಪಾನುಸುಪಾರಿ (ನಾ).=ಪಾನ್‌ದಾನು ೧: ಅಕ್ಷತೆಗೆ ಬಂದ ಅತಿಥಿಗಳಿಗೆಲ್ಲಾ ಸಾರಿಗೆ ಮೇಲೆ ಸಾರಿಗೆಯಂತೆ ಚಹಾ, ಪಾನ್‌ಸುಪಾರಿ ಮುಗಿಯುವವರೆಗೂ ತಾಸೆರಡು ತಾಸಾಯಿತು (ವೃ. ೧೩). **ಪಾನಸುಪಾರಿ**: ಪಾನಸುಪಾರಿ, ಅತ್ತರದಾಣಿ, ಗುಲಾಬದಾಣಿ, ಹೂಗುಚ್ಛ ಇವುಗಳನ್ನು ಕೊಡುವ ಕಾರ್ಯಕ್ರಮ ನಡೆಯಿತು (ಅಷ್ಟ. ೨೪೭); ಪಾನ-ಸುಪಾರಿಯ ಭರ್ಜರೀ ತಯಾರಿ ನಡೆಯಿತು (ದೀಶಹ. II. ೩೩೪). **ಪಾನುಸುಪಾರಿ**: ಪಾನುಸುಪಾರಿಯ ಕೆಲಸ ಮುಗಿದ ಮೇಲೆ ಸಿವರಾಮಪ್ಪನೂ ಅಲ್ಲಿಗೆ ಬಂದನು (ಅಷ್ಟ. ೨೪೮). [←ಹಿಂ. ಮರಾ. ಪಾನ್‌ಸುಪಾರೀ]

**ಪಾನು**$_1$ (ನಾ). (ಕುದುರೆಯ) ಅಪಾನ; ಗುಂದಪ್ರದೇಶ: ಬಾಲದ ದಂಡಿಗೆ ಬಾಲದ ದಂಡೆಂಬ ಪೆಸರನನುಕರಿಸಿರ್ಕುಂ ಬಾಲದ ಮೇಜೆಯೊಳಗಿರ್ಪುದ ಲೀಲೆಯಿನಱಿ ಪಾನವೆಂಬ ಪೆಸರದಕೆಂದುಂ (ಅಶ್ವಶಾ. ೯-೪೭). [<ಸಂ. ಅಪಾನ]

**ಪಾನ**$_2$ (ನಾ). ೧. ಕುಡಿಯುವಿಕೆ; ಕುಡಿತ: ಜ್ಞಾನ ತಪ್ಪಿಸುವ ಪಾನಗಳನ್ನು ಮಾಡಬಾರದು (ಶೀತಿಶಾ. II, ೬). ೨. ಪಾನೀಯ; ಪೇಯ: ಬಲುವಿಧವಾದ ರಸವನೆ ಕೂಡಿಸಿ ಪಾನಪ್ರಭೇದವನ್ನು ಅನುವಾಗಿ ಮಾಡಿ ತಂದು ವಸ್ತ್ರಕ್ಕೆ ಹಚ್ಚಿ ದೀಪವನೆ ಮುಟ್ಟಿಸಿದರದು ವಸನ ಸುಡದು (ಶಿವಾಕ್ಕ. ೧೯-೩). ೩. ಕುಡಿಸದ ಪದಾರ್ಥ: "ಬೇಯದ ರಸಃ ಪಾನಂಗಳೆಂದೆನಿಕ್ಕುಂ" (ಮಂಗರಾ. ೬೪-೪). ೪. ಕಷಾಯ: ಮರಿಚಾಮ್ಲತರುಚಿ ಚಾತುರ್ಜಾತಕಯುತಮಾಗೆ ಸುಧೋಪಮಾನಮಕ್ಕುಂ ಪಾನಂ (ಲೋಕೋಪ. ೮-೫೭). ೫. ಕುಡಿಯುವ ಬಟ್ಟಲು; ಚಷಕ. ೬. ನೀರಿನ ಕಾಲುವೆ; ನಾಲೆ. [ಸಂ.]

**ಪಾನಂದಿಪಡಿ** (ನಾ). ಒಂದು ಸ್ಥಳದ ಹೆಸರು: ಅನ್ತೆ ಬನ್ದು ಪಟ್ಟಗಲ್ಲ ನೈರಿತ್ಯನ್ಸಿಸಿ ಪಾನನ್ದಿಪಡಿಯ (ಎಕ. IV (R). ಹುಣಸೂ. ೩೩೪-೩೬ ; 904). [?]

**ಪಾನಕ** (ನಾ). ಬೆಲ್ಲ ಅಥವಾ ಸಕ್ಕರೆಯೊಂದಿಗೆ, ನಿಂಬೆ ಮುಂತಾದ ರಸ, ನೀರು – ಇವುಗಳನ್ನು ಸೇರಿಸಿ ತಯಾರಿಸಿದ ಪಾನೀಯ; ಪರಬತ್ತು: ಪಾನಕವು ಶ್ರಮ ಹಸಿವೆ ನೀರಡಿಕೆ ದಣುವುಗಳನ್ನು ನಾಶ ಮಾಡುವುದು (ಅಷ್ಟಾಂಗ. ೦೨೨-೩೪ ಅರ್ಥ); ಬೆಳಿಗ್ಗೆ ಊಟವಿಲ್ಲದೆ ಬರಿಯ ಹುಣಿಸೆಹಣ್ಣನ್ನು ಕಿವುಚಿ ಬೆಲ್ಲದಲ್ಲಿ "ಪಾನಕ" ಕುಡಿದಿದ್ದರು (ಅಂಹೂ. ೧೮); ವಿಧವಿಧವಾದ ಪಾನಕಗಳಿಗೆ ಮಂಜಿನ ಗಡ್ಡೆಗಳನ್ನು ಸೇರಿಸಿ ಕುಡಿಯುವುದು (ಶಾಕ್ಕಾ೦. ೦೨೪).

**ಪಾನಕ ಪಣ್ಯಾರ**=ಪರಬತ್ತು ಮತ್ತು ಪ್ರಸಾದರೂಪವಾದ ತಿಂಡಿ: ರಾಮನವಮಿಯಂದು ಮನೆಗೆ ಬಂದವರಿಗೆ ಪಾನಕ ಪಣ್ಯಾರ ಕೊಡುವುದು ಕೆಲವರ ಸಂಪ್ರದಾಯ (ರೂ). [ಸಂ.]

**ಪಾನಕಪೂಜೆ** (ನಾ). (ನರಸಿಂಹಜಯಂತಿ, ರಾಮನವಮಿ ಮುಂತಾದ ಹಬ್ಬಗಳಂದು) ಪೂಜೆ ಮಾಡಿ ಪ್ರಸಾದರೂಪವಾಗಿ ಭಕ್ತಾದಿಗಳಿಗೆ ಇತರ ಖಾದ್ಯಗಳೊಡನೆ ಪಾನಕ, ಮಜ್ಜಿಗೆ ಮುಂತಾದುವನ್ನು ಹಂಚುವುದು: ಸನ್ನ ಕಾಲದಲ್ಲಿ ಶ್ರೀರಾಮನವಮಿ ನಡೆಯುವುದು. ಎಲ್ಲೆಲ್ಲೂ ಅರವಟ್ಟಿಗೆಗಳನ್ನಿಡಿಸುತ್ತೇನೆ. ಪಾನಕ ಪೂಜೆಗಳನ್ನು ಮಾಡಿಸುತ್ತೇನೆ (ಕಂಕಕ. ೨೨); ಅವರು ರಾಮನವಮಿ ಪ್ರಯುಕ್ತ ಪಾನಕ ಪೂಜೆಗೆ ಕರೆದಿದ್ದಾರೆ (ರೂ). [ಪಾನಕ+ಪೂಜೆ]

**ಪಾನಕೇಳಿ** (ನಾ). ಮದ್ಯ ಮುಂತಾದುವನ್ನು ಕುಡಿಯುವ ಲೀಲೆ, – ವಿನೋದ: ಎಳಿ, ತಡವೇಕೆ ಪಾನಕೇಳಿ ಮೊದಲಾಗಲೀಗ, ಅಂಗಡಿಯ ಕದವ ಈ ಕ್ಷಣಕೆ ತೆರೆಯ ಹೇಳಿ (ಅರಳು. ೦೭೭-೯). [ಪಾನ$_2$+ಕೇಳ್ಳಿ (=ಕೇಳಿ)]

**ಪಾನಕ್ರೀಡನ** (ನಾ).=ಪಾನಕೇಳಿ: ದುಶ್ಶಾಸನನ ನೆತ್ತರದಿ ಪಾನಕ್ರೀಡನಾಸೌಭಾಗ್ಯಸುಪದಕೆ ಸರಿಯದಾವುದು (ಕುಪ್ಪಾ.ಕ. ೨೨-೪೩). [ಪಾನ$_2$+ಕ್ರೀಡನ]

**ಪಾನಕ್ರೀಡೆ** (ನಾ).=ಪಾನಕೇಳಿ: ಕಾಮತ್ರಿಲೋಕೀಜಯಾಕರಶಾಖಾಸು ಲತಾಳಿಯೋ ಬಗೆವೊಡೆಂಬಂತಿರ್ಮಾದಿಂದ್ವಂಕ ಕರ್ಬುರಕಾಯಂ ಶಬರೀಚಯಂ ನೆರೆದು ಪಾನಕ್ರೀಡೆಯೊಳ್ ನಾಡೆಯುಂ (ಕಂದ್ರಕ. ೫-೫೬). [ಪಾನ$_2$+ಕ್ರೀಡೆ]

**ಪಾನಗೋಷ್ಠಿ** (ನಾ). ೧. ಕೆಲವು ಜನ ಸೇರಿ ಒಟ್ಟಿಗೆ ಮದ್ಯಪಾನ ಮಾಡುವುದು, – ಕುಡಿಯುವುದು: "ಆಪಾನಂ, ಪಾನಗೋಷ್ಠಿ – ಈ ೨ ಕಳ್ಳುಡಿವುದು" (ಶಬ್ದಾಯು. ೫೪-೧೭೩). ೨. ಮದ್ಯಪಾನ ಮಾಡುವವರ ಗುಂಪು; ಕುಡಿಯುವವರ ಕೂಟ: (ಕ). ೩. ಮದ್ಯಪಾನ ಮಾಡುವ ಸ್ಥಳ; ಹೆಂಡದಂಗಡಿ: (ಕ). [ಪಾನ$_2$+ಗೋಷ್ಠಿ]

**ಪಾನಗೋಷ್ಠಿಕೆ** (ನಾ). ೧.=ಪಾನಗೋಷ್ಠಿ ೨: "ಪಾನಗೋಷ್ಠಿಕೆ= ಸರಾಯ ಕುಡಿಯುವುದಕ್ಕಾಗಿ ಕೂಡಿದ ಮಂದಿ" (ಗಂಗಾಪು. ೨೦೩). ೨.=ಪಾನಗೋಷ್ಠಿ ೩: "ಆಪಾನಂ, ಪಾನಗೋಷ್ಠಿಕಾ – ೨ ಅನೇಕ ಮಂದಿ ಕೂಡಿ ಮದ್ಯಪಾನ ಮಾಡುವ ಸ್ಥಳದ ಹೆಸರುಗಳು" (ಸಿದ್ಧಾಂತಿ. ೩೦೯). [ಪಾನ$_2$+ಗೋಷ್ಠಿಕೆ]

**ಪಾನದಾನು** 'ಪಾನ್‌ದಾನು' ನೋ.

**ಪಾನನಿರೋಧ** (ನಾ). ಮಾದಕಪಾನೀಯಗಳ ತಯಾರಿಕೆ ಮತ್ತು ಮಾರಾಟದ ಮೇಲೆ ಹಾಕುವ ನಿಷೇಧ,–ನಿರ್ಬಂಧ: ಪಾನನಿರೋಧ ಬಂದ ಮೇಲೆ ಕುಡಿಯುವವರು ಹೆಚ್ಚಾಗಿದ್ದಾರೆ (ಪಶ್ಚಿಮ. ೩೦೩). [ಪಾನ$_2$+ನಿರೋಧ]

**ಪಾನಪಟ್ಟಿ** 'ಪಾನ್‌ಪಟ್ಟಿ' ನೋ.

**ಪಾನಪಭಟಾರ** (ನಾ). ಒಬ್ಬಾತನ ಹೆಸರು: ಶ್ರೀನೆಡುಬೊಟೆಯ ಪಾನಪಭಟಾರನ್ನೋನನ್ತು ಮುಡಿಪ್ಪಿದಾರ್ (ಎಕ. II, ೯-೦; ಸು. 700). [ಪಾನಪ$_1$+ಭಟಾರ]

**ಪಾನಪಾತ್ರ** (ನಾ). (ವಿಶೇಷವಾಗಿ ಮದ್ಯವನ್ನು) ಕುಡಿಯುವ ಪಾತ್ರೆ: "ಚಷಕಃ, ಪಾನಪಾತ್ರಂ, ಸರಕಃ, ಅನುತರ್ಷಣಂ—೪ ಹೆಂಡ ಕುಡಿಯುವ ಬಟ್ಟಲು ಹೆಸರು" (ಸಿದ್ಧಾಂತಿ. ೩೦೯). [ಪಾನ$_2$+ಪಾತ್ರ]

**ಪಾನಪಾತ್ರೆ** (ನಾ).=ಪಾನಪಾತ್ರ: ಈ ಸಾಂಗತ್ಯದ ಪುಟ್ಟಪುಟ್ಟ ಪಾನಪಾತ್ರೆಗಳಲ್ಲಿ ಸಂಸ್ಕೃತದ ಸುಭಾಷಿತಗಳನ್ನೂ ಮುಕ್ತಕಗಳನ್ನೂ ಕನ್ನಡಿಸಿ ಕೊಟ್ಟಿದ್ದೇನೆ (ಶಂಖಾಕ. IV, ೫೦೩). [ಪಾನ$_2$+ಪಾತ್ರೆ]

**ಪಾನಭಾಜನ** (ನಾ).=ಪಾನಪಾತ್ರ: "ಕಂಸಃ, ಪಾನಭಾಜನಂ — ೨ ಬಟ್ಟಲು" (ಸಿದ್ಧಾಂತಿ. ೨೮೩). [ಪಾನ$_2$+ಭಾಜನ]

**ಪಾನಭೂಮಿ** (ನಾ). ಮದ್ಯಪಾನ ಮಾಡುವ ಸ್ಥಳ: ಪಾನಭೂಮಿಯೊಳೆಂತು ಯಜ್ಞಕುಂಡದೊಳೆಂತು ಪ್ರಜ್ವಲಿಸುವನು ಕೃಶಾನು (ಗಕಾಪ. ೫೭-೨೭). [ಪಾನ$_2$+ಭೂಮಿ]

**ಪಾನವಾಟಿ** (ನಾ). ಮದ್ಯಪಾನ ಮಾಡುವ ಸ್ಥಳ; ಪಡಖಾನೆ; ಹೆಂಡದಂಗಡಿ: ಈ ವೇಳೆಗೆ ಪಾನವಾಟಿಯ ಹಣ್ಣುಮಗಳು ವ್ಹಾರಿ ಮತ್ತಷ್ಟು ಬಿಯರ್ ತಂದಳು (ಕಶ್ಮೀ. VIII, ೧೦೩). [ಸಂ. ಪಾನವಾಟೀ]

**ಪಾನವ್ಯಸನ** (ನಾ). ಮದ್ಯಪಾನ ಮಾಡುವ ಗೀಳು; ಕುಡಿಯುವ ಚಟ: ಪೈದಿಗಳಲ್ಲಿ ಮನೆಮಾಡಿಕೊಂಡಿದ್ದ ದುಷ್ಟಪ್ರವೃತ್ತಿಗಳು ಪಾನವ್ಯಸನ, ದ್ಯೂತಕ್ರೀಡೆ, ಕ್ರೂರಹಿಂಸೆ, ನರಮಾಂಸಭಕ್ಷಣ ಮೊದಲಾದ ಘೋರಾಪರಾಧಗಳು . . . ನೆಕ್ಕುದೋವನಿಗೆ ಮನವರಿಕೆಯಾಗಿತ್ತು (ಭೂಕರು. ೫೩೪). [ಪಾನ್ನ+ವ್ಯಸನ]

**ಪಾನಸುಪಾರಿ** 'ಪಾನ್‌ಸುಪಾರಿ' ನೋ.

**ಪಾನಾಂಗ** (ನಾ). [ಜೈನ] ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು; ಮಧುರವಾದ ಪೇಯಗಳನ್ನು ಒದಗಿಸುವುದೆಂದು ನಂಬಲಾದ ಕಲ್ಪವೃಕ್ಷ: ಪಾನಾಂಗ: ಈ ಜಾತಿಯ ಕಲ್ಪವೃಕ್ಷದಿಂದ . . . ನೀರು ಮತ್ತು ಪೇಯಪದಾರ್ಥಗಳು ದೊರೆಯುತ್ತವೆ (ಜ್ಞಾಕಶಾ. ೫೭೩). [ಸಂ.]

**ಪಾನಾಂಬು** (ನಾ). ಕುಡಿಯುವ ನೀರು: ಬೇಸಗೆಗೆ ತೆರೆಗಿಂಡಿ ತಂಬುಗೆ ವಾಸಿಸುವ ಪಾನಾಂಬುವೊಪ್ಪೆ (ಬಸಪು. ೧೨-೯). [ಪಾನ್ನ+ಅಂಬು]

**ಪಾನಿ**₁ (ನಾ). ಕುಡಿಯುವವನು: ವಿಲೋಕಪ್ರಪಂಚವಿರಹಿತಾರಾಧ್ಯರಮಲ ಸದ್ಗೀತಪೀಯೂಷಪಾನಿ (ಬಸೋಪು. ೧-೫೧). [ಸಂ. ಪಾನಿನ್]

**ಪಾನಿ**₂ (ನಾ). ೧. ವಸ್ತ್ರ; ಬಟ್ಟೆ: 'ಇರ್ಪಾನಿ' ಪರಾ. ೨. (?): ಅರಟ್ಟಿಗಳರಸರ್ ಚೊತ್ತಮ್ಮನ್ ಎಡೆತ್ತೊಟಿನಾಡುಸಾಸಿರವುಮಾಳುತ್ತಿದು ವಿಟ್ಟದು ಒನ್ದಡಿ ಪಾನಿಯೆಮೇಟುಂ ಒನ್ವತ್ತಿ ದಿವಸಂ ಪಟ್ಟಿಂಗಟ್ (ಎಕ. III, ಮೈಸೂರು. ೫೫-೮; ಕ್ರಿ. 740). [?]

**ಪಾನಿಗಟ್ಟು** (ಕ್ರಿ). [ಜೈನ] ಚರಿಗೆಗೆ ಬಂದ ಜೈನಸನ್ಯಾಸಿಗಳನ್ನು ಭಿಕ್ಷೆಗೆ ನಿಲ್ಲಿಸಿಕೊಳ್ಳು: ಭಟ್ಟಾರರೊಡವಂದ ಬ್ರಹ್ಮಚಾರಿ ತಪಂಬಟ್ಟು ಪೆಷುದು ಕೇಳ್ದೊಡೆದು ಮುಷ್ಷಿಮ್ಮ ಮನೆಯೊಳುಂಡು ತಪಂಬಟ್ಟನಿಂ ಪಾಳೆ ನಮ್ಮ ಮನೆಯೊಳ್ ಪಾನಿ[ಪಾಠಾಂ. ನೆ]ಗಟ್ಟುವಮೆಂದು ಬಗೆದಿರ್ದು (ಕಥಾರ. ೭೯-೧೨); ಎಮ್ಮಲ್ಲಿಗೆ ನೀಮುಂ ಕಿತ್ತಿಯ್ಯಂಗಳನೊಡಗೊಂಡು ಬಂದು ಪಕ್ಕದಿರ್ದು ಪಾನಿ[ಪಾಠಾಂ. ನೆ]ಗಟ್ಟಿ ಮಾರ್ಗಮಂ ತೋಱಿ ಮಗುಳೆ ಬಿಜಯಂಗೆಯ್ಯಿಂ (ಕಥಾರ. ೮೦-೧). ❖ ಇಲ್ಲಿ 'ಪಾನಿಗಟ್ಟಿ' ಎಂಬ ಕೃದಂತಪದವು ಶ್ರಾವಕ, ಶ್ರಮಣ ಈ ಇಬ್ಬರಿಗೂ ಅನ್ವಯವಾಗು ವಂತೆ ಪ್ರಯೋಗವಾಗಿದೆ. ಆದುದರಿಂದ ಅರ್ಥಕ್ಲೇಶವಿದೆ. ಶ್ರಮಣ ರನ್ನು ಭಿಕ್ಷೆಗಾಗಿ ಆಹ್ವಾನಿಸಿ ಕಾಲು ತೊಳೆಯುವ ಸಮಯದಲ್ಲಿ ಅವರ ತಲೆಯ ಮೇಲಭಾಗದಲ್ಲಿ ಚೌಕಾಕಾರದ ಶುಭ್ರವಸ್ತ್ರವನ್ನು ಕಟ್ಟುವ ಪದ್ಧತಿಯಿದೆಯಂತೆ. ಆದುದರಿಂದ ಇಲ್ಲಿ 'ಪಾನಿ' ಎನ್ನು ವುದು ಯಾವ ಶಬ್ದದಿಂದ ಉತ್ಪನ್ನವಾಗಿದೆ ಎಂಬುದು ಚರ್ಚೆಗೆ ಆಸ್ಪದವನ್ನುಂಟುಮಾಡುತ್ತದೆ. 'ಇರ್ಪಾನಿ' ಹೋ.

[ಪಾನಿ₂+ಕಟ್ಟು₁]

**ಪಾನಿಪತ್ತು**, ಪಾಣಿಪತ್ತು (ನಾ). ೧. ದಿಲ್ಲಿ ಮತ್ತು ಅಂಬಾಲಗಳ ನಡುವೆ ಇರುವ ಐತಿಹಾಸಿಕ ಪ್ರಸಿದ್ಧಿಯುಳ್ಳ ಒಂದು ಯುದ್ಧ ಭೂಮಿ. ೨. (ಆಲಂ) ಯುದ್ಧದಲ್ಲಿ ಉಂಟಾಗುವ ರಕ್ತಪಾತ: ಒಕ್ಕುಡಿತೆ ಅರೆಮುಕ್ಕು ಎನುತೆನುತೆ ಹಲಕಿಲವು ಪಾನಿಪತ್ತುಗಳನ್ನು ಮುಕ್ಕುಳಿಸುವೆ (ನಾಡಂೞ. ೯೦-೦೩). ಪಾಣಿಪತ್ತು: ೩. ಮಹಾಯುದ್ಧ: ಪ್ರಪಂಚದ ಪಾಣಿಪತ್ತಿನಲ್ಲಿ ಇವೆರಡೇ ವರ್ಗಗಳು ಒಂದಕ್ಕೊಂದು ಇದಿರಾಗಿ ಪಡೆಗಟ್ಟಿ ನಿಲ್ಲುವವು (ಮಾಪಾರ. ೧೧೦). [←ಹಿಂ. ಪಾನೀಪತ್]

**ಪಾನಿಯಾಲಯ** (ನಾ). ಸಮುದ್ರ (?): ಕೇಶಕರ್ಷಿಯಾಡುವುದ ಕೇಳುತ ವಿಭೀಷಣಂ ಪಾನಿಯಾಲಯದ ಕಳೆದುತ್ತರದ ತಟದೊಳು ದಿನೆ ಸನಂದನ ನಿರ್ದೋಡಲ್ಲಿಗೈತಂದು (ವೆಂಕಾರಾ. ೭-೫-೮). [<ಪಾನೀಯ+ಆಲಯ]

**ಪಾನಿವಟ್ಟಲು** 'ಪಾಣಿವಟ್ಟ' ನೋ.

**ಪಾನಿಸು** (ಕ್ರಿ). ಕುಡಿ; ಪಾನಮಾಡು: ಶುನಕವಮಾಂಸವ ಭಕ್ಷಿಸುರಯು ಪಾನಿಸಿದವರ ಪಾಪಕೆ ಹೋಹರು (ಎಕ. XII, ಕುಣಿಗ. ೮೮-೦೭; 1544) ಗಂಗೆಯಿಂದೆಸಗಿದಾ ಮದಿರೆಯಂ ಪಾನಿಪರೆ? (ಜೈಮಿ. ೧೨-೬೯).

[ಪಾನ್ನ+-ಇಸು₂]

**ಪಾನೀಯ** (ಗು). ೧. ಕುಡಿಯಬಹುದಾದ; ಕುಡಿಯಲು ಯೋಗ್ಯ ವಾದ. (ನಾ). ೨. ಕುಡಿಯಲು ಯೋಗ್ಯವಾದ ಪಾನಕ, ಸೋಮರಸ, ಹಣ್ಣಿನ ರಸ, ಮದ್ಯಮುಂತಾದ ದ್ರವಪದಾರ್ಥ: ಸಹಕಾರಪಕ್ವರಸಸಾರಾಸಾರಪಾನೀಯದಿಂ ಸವಿಶೇಷಂ ಬೆಳೆದೊಪ್ಪಿ ತ್ತೋರ್ಪ ಕಳಮಂ ತಾನೆಲ್ಲಿಯುಂ (ಸುಕುಮಾ. ೦-೭೪). ೩. ನೀರು; ಜಲ: "ಅಪಃ(ಪ್), ತೋಯಂ . . . ಪಾನೀಯಂ . . . ಜೀವನೀಯಂ—ಈ ೨೭ ನೀರ್" (ಕಲಾಯು. ೧೧೭-೨೬); ಇತ್ತ ಶಿಷ್ಯಂ ಮುದದೊಳು ಪರಿಶುದ್ಧ ಪಾನೀಯದಿಂ ಸ್ನಾನಮಂ ಮಾಡಿ (ಬೆಸ್ರಿಶ. ೭-೯೧). [ಸಂ.]

**ಪಾನೀಯಖೇಯ** (ನಾ). (ಊರಿನ ಸುತ್ತಲೂ ತೋಡಿರುವ) ಕಂದಕ; ಅಗಳು: ಮೂವಳಸುವಳಸಿ ಸುತ್ತಿರ್ದುದಂಭೋಧಿಯೆಂಬಂತೆ ಗಭೀರಾ ರಾವದಿಂ ಪಲ್ಮೊರೆವಪೊಸೆಗಿಂ ಸುತ್ತಿ ಪಾನೀಯಖೇಯಂ (ಸುಕುಮಾ. ೯-೩೭). [ಪಾನೀಯ+ಖೇಯ]

**ಪಾನೀಯಜ** (ನಾ). ನೀರಿನಲ್ಲಿ ಹುಟ್ಟಿದುದು; ತಾವರೆ: 'ಪಾನೀಯಜಾಸನ' ಪರಾ. [ಸಂ.]

**ಪಾನೀಯಜಾಸನ** (ನಾ). ತಾವರೆಯನ್ನು ಪೀಠವಾಗಿ ಉಳ್ಳವನು; ಬ್ರಹ್ಮ: ಅಂಭೋಜಾಯತಾಕ್ಷನ ನಾಭಿಯಲಿ ಪಾನೀಯಜಾಸನನುದಿಸಿದನು (ಕೊರಾ. ೪-೨-೦೩). [ಪಾನೀಯಜ+ಆಸನ]

**ಪಾನೀಯಧಾರಕ** (ನಾ). ಮದ್ಯ ಮುಂತಾದ ಪಾನೀಯಗಳನ್ನು ಸದಾ ಹಿಡಿದು ಸಿದ್ಧವಾಗಿ ನಿಂತಿರುವ ಸೇವಕ: ತಾ ಭೋಗಿಸದೆ ಬಳಸದೆ ರಾಜನನೋಲಗಿಸುವವನೆ ಪಾನೀಯಧಾರಕನು (ಕುಮ್ಮಾ. ೩-೯೩).

[ಪಾನೀಯ+ಧಾರಕ]

**ಪಾನೀಯಮಂಡಪ** (ನಾ). (ನೀರು, ಪಾನಕ, ಮಜ್ಜಿಗೆ ಮುಂತಾದ) ಪೇಯಗಳನ್ನು ದಾರಿಹೋಕರಿಗೆ ನೀಡಲು ದಾರಿಯ ಪಕ್ಕಗಳಲ್ಲಿ ಕಟ್ಟಿರುವ ಮಂಟಪ; ಅರವಟ್ಟಿಗೆ: ಪಾನೀಯಮಂಡಪಂಗಳೊಳ್ ಕಲಶಮನೆತ್ತಿ ನೀರೆಱೆವ ಕಾಂತೆಯ . . . ನೋಡಿ (ಚಂದ್ರಪು. ೦-೯೭).

[ಪಾನೀಯ+ಮಂಡಪ]

**ಪಾನೀಯಶಾಲಿಕೆ** (ನಾ). =ಪಾನೀಯಮಂಡಪ: "ಪ್ರಪಾ. ಪಾನೀಯ ಶಾಲಿಕಾ—೨ . . . ಅರವಟಿಕೆ" (ಸಿದ್ಧಾಂತಿ. ೧೧೦).

[ಸಂ. ಪಾನೀಯಶಾಲಿಕಾ]

**ಪಾನೀಯಶಾಲೆ** (ನಾ). =ಪಾನೀಯಮಂಡಪ: "ಪ್ರಪಾ. ಪಾನೀಯ ಶಾಲಾ — ಈ ೨ ಅಱವಟ್ಟಿಗೆ" (ಕಲಾಯು. ೫೦ (೪೨); ಅನಂಗಶೃಂಗಾರ ಲೀಲೆಗಳೆನಿಪ್ಪ ಪಾನೀಯಶಾಲೆಗಳುಂ (ಭೃಪು. ೯-೨೨ ಪ); ಆ ಪಾನೀಯ ಶಾಲೆಯೊಳು ನಿಂದು ನೀರೆಱೆವ ನಾರಿಯರ ಲಾವಣ್ಯಪ ಸುಂದರ ಲೋಚನದಿಂದ ಬಂದದೀಂಟುತ ಪಥಿಕರು ಜಲಪಾನ ಸಾಕೆಂದೆನ್ನರಾ ಬಟ್ಟೆಗಳೊಳು (ವರ್ಧಕ. ೧-೫೮). [ಪಾನೀಯ+ಶಾಲೆ]

**ಪಾನೀಯಸಂಚರ** (ನಾ). ನೀರಿನಲ್ಲಿ ಸಂಚರಿಸುವಂತಹುದು; ಮೀನು: "ಮೀನಂ ಝಷಂ . . . ಪಾನೀಯಸಂಚರಂ ಶಲಿ ವೈಸಾರಿಣಂ ಮತ್ಸ್ಯಮೆನೆ ಮೀನ್ಗೆ ನಾಮಂ" (ಶಬ್ದಗರಾ. ೧೨೦-೬). [ಪಾನೀಯ+ಸಂಚರ]

**ಪಾನು** (ನಾ). ೧. ಎಲೆ; ಪತ್ರ: (*). ೨ ಪುಸ್ತಕದ ಅಥವಾ ಪತ್ರಿಕೆಯ ಹಾಳೆ: ಬಳವಂತನು' ಅವಸರದಿಂದ ಪಾನು ತಿರುವುತ್ತ ಹೋದ್ದರಿಂದ ಆ ಚಿತ್ರಗಳು ಗೋದಾವರಿಗೆ ನೆಟ್ಟಗೆ ಕಾಣಸಲಿಲ್ಲ

(ಕಾಕೃಗ. ೬೦) : ಒಂದು ವಾರಪತ್ರಿಕೆಯನ್ನು ತೆಗೆದುಕೊಂಡು ಅದರ ಹಾನುಗಳನ್ನು ತಿರುವಿಹಾಕುತ್ತಿದ್ದರು (ಕಾಂಹಿಂ. ೪). ೩. ವೀಳ್ಯದೆಲೆ : "ವೀಳ್ಯದೆಲೆ . . . ನಾಗಲತೆ, ತಾಂಬೂಲವಲ್ಲಿ, ಎಲೆಬಳ್ಳಿ, ಪಾನು, ಅಂಬಾಡಿಎಲೆ, ನಾಗವಲ್ಲಿ" (ಕಸ್ತ್ರ. ೦೦೬). 'ಪಾನುಸುಪಾರಿ' ಪರಾ. ೪. ಅಡಕೆ, ಸುಣ್ಣ ಮೊದಲಾದುವನ್ನು ಹಾಕಿ ಮಡಿಸಿರುವ ವೀಳೆಯದೆಲೆಯ ಸುರುಳಿ ; ಬೀಡ ; ಪಾನ್‌ಪಟ್ಟಿ: (೬). ೫. ಇಸ್ಪೀಟು ಎಲೆ : ಪಾನುಗಳು ಸರಿಯಾಗಿ ಬರದೆ ಈ ಸಲವೂ ಅವನು ಸೋತುಹೋದನು (ಊ೩). [←ಹಿಂ. ಮರಾ. ಪಾನ್]

**ಹಾನುಂಗಲ್**, ಪಾನಂಗಲ್ಲು, ಹಾನಂಗಲ್, ಹಾನುಂಗಲು, ಹಾನಂಗಲ್, ಹಾನಗಲ್ಲು (ನಾ). ಒಂದು ಸ್ಥಳದ ಹೆಸರು ; ಈಗಿನ ಧಾರವಾಡಜಿಲ್ಲೆಗೆ ಸೇರಿದ ಒಂದು ಊರು : ಮಾಧವವರ್ಮಣಃ ಪಾನುಂಗಲ್ಯಾವಿಷಯೇ (ಎಕ. X, ಕೋಲಾರ. ೬೨-೬೭ ; 757). **ಪಾನುಗಲ್ಲು** : ಪಾನುಗಲ್ಲೆಂಬ ಪುರವರಕೆಯ್ದಿ ಗೋವಿಂದಪೆಗಡೆಯೆಂದೆನಿಪ ಶಿಷ್ಯನ ಸದನದಲ್ಲಿರುತಿರೆ (ಜಸಿಕೋಶ. ೬-೦೦೦). **ಹಾನುಂಗಲ್** : ಬನವಾಸಿ ಹಲಸಿಗೆ ಹಾನುಙ್ಗಲ್ಲುಚ್ಚಂಗಿಗೊಣ್ಡ ಹೊಯ್ಸಳವೀರಬಲ್ಲಾಳದೇವರ ರಾಜ್ಯದ . . . ಬಿಲಗೋವಿಂದರಸರುಂ ಉಮ್ಮಡಿಯ ಬವರಕ್ಕೆ ನಡದಲ್ಲಿ (ಎಕ. X. ಗೌರೀಬಿ. ೪೦-೩ ; 1180) ; ಶ್ರೀಮತ್ಕೈಲಪದೇವರಸರು . . . ಹಾನುಂಗಲ್ಲೈನೂರುಮಂ ಸ(ಬಾ)ಹ್ಯಾಭ್ಯಾಂತರಸಿದ್ಧಾಯವಿನಯಸ್ವಾಮ್ಯವಮನಾಳುತ್ತಮಿರೆ (ಕಕಶಿಂ. ೬-೬). **ಹಾನುಂಗಲು** : ನರಸಿಂಗವರ್ಮ್ಮ ನಿಮ್ಮೂರ್ಳನಂ ಕಳಪಾಳಕಾಳನಳಂ ಹಾನುಂಗಲುಗೊಣ್ಡ ಚಿತುರ್ಮ್ಮುಖಗಣ್ಡ(ಎಕ. II, ೦೪೩-೨೭; 1131); ಬನವಸೆ ಹಾನುಂಗಲು . . . ಛಂತೀ ಸಮಸ್ತ ದುರ್ಗ್ಗಂಗಳಂ (ಎಕ. VII, ಶಿಕಾ. ೪೦-೩೩; 1180 ?). **ಹಾನುಗಲ್** : ಹಾನುಗಲ್ಲಾಡಯೆಲಂಬಿಯ ಕಂಪಣದ ಬಬ್ಬಿಯ ಬಾಡಂ (ಎಕ. VII, ಶಿಕಾ. ೬೨-೩೬ ; 1168). **ಹಾನುಗಲ್ಲು** : ಹಾನುಗಲ್ಲ ಮಹಾಸೀಮ್ನಿ ವಿಖ್ಯಾತಿಮಧಿಕಂಶ್ರಿತಂ (ಎಕ. VII, ಶಿಕಾ. ೬೩-೬೭ ;1527). [?]

**ಹಾನುಗಲ್ಲು** 'ಪಾನಂಗಲ್' ನೋ.

**ಹಾನುಸುಪಾರಿ** 'ಪಾನ್‌ಸುಪಾರಿ' ನೋ.

**ಹಾನೆ**, ಬಾಣ್ಣೆ₁, ಬಾನ₁, ಬಾನಿ₁, ಬಾನಂ₂, ಬಾನೆ, ಹನ್ಗೆ, ಹಾನೆ (ನಾ). ೧. ಲೋಹ, ಮರ, ಮಣ್ಣು ಮುಂತಾದುವುಗಳಿಂದ ಮಾಡಿದ ಅಗಲಬಾಯಿಯ ಪಾತ್ರೆ : ಕಟಕಕ್ಕವಿರ್ದ ನೆರೆ ಸಂಕಟಮೆನಿಸದೆ ತೆಱಪುಗುಡುಮವೊಲ್ ಪಾನೆಯ ಕೂಟಕಟಕಂ ನೆರೆದುಂಡೊಡಮುತ್ಕಟವುಪಕ್ಷೀಣಋದ್ಧಿಯಂ ಮುನಿ ತಳೆದಂ (ಆಪುಂ. ೬-೦೦೨) ; ದೊಕ್ಕನೆ ಪಾನೆಯನಿಕ್ಕದೆ ಕಿಕ್ಕಿರಿಸದೆ ಕಣ್ಣನುಗುಳದಗುಳಂ ಬೆರಳಿಂ ತಕ್ಕುದನೆರೆಯದೆ ಭಕ್ತಿಯಿನಿಕ್ಕಿದವೋಲುದರಗರ್ತ್ತಮಂ ಪೂರ್ಗ್ಗಿನಿತಂ (ಉಸಾರ. ೨೦-೦೩೩). ೨. ಅಳೆಯುವ ಒಂದು ಸಾಧನ : ಅವರ ತಮ್ಮೋಪ್ಪಯ್ಯಂ ದೇಗುಲಮಂ ಮಾಡಿಸಿ ಭಟಾರರ್ಗ್ಗೆ ಊರಮುನ್ನೂಡಣ ಕಿಳಾರಕೆಯ್ಯೊಳ್ಪಿರಿಯ ಪಾನೆಯೊಳಱ ಗಣ್ಡುಗಂ ಮಣ್ಣುಮ × × × ಕೀಸಪಯ್ಯಂಗೆ ಬಿ × × ಟ್ಟ (ಎಕ. VII, ಶೀಕಾಹ. ೨೬-೦೩; ೯೨೦) ; ಗುಣಿಗನ ಒಂದು ಮತ್ತಲ್ಗೆ ಪಿರಿಯ ಪಾನೆಯೊಳ್ ಎರಡು ಪಾನೆ ಬತ್ತವ . . . ಎಲ್ಲ ಕಾಲಕ್ಕಮವ್ ಕೊಟ್ಟೋರ್ (ಎಕ. VIII, ಸೊರಬ. ೬೩-೫; ೯೪೧). 'ಇಪ್ಪಾನೆ', 'ಒಪ್ಪಾನೆ' ಪರಾ. **ಬಾಣೆ₁**. ೩. ನೀರು, ಮಂಸುರಿ ಇತ್ಯಾದಿಗಳನ್ನು ಹಾಕಿಡುವ ಅಗಲವಾದ ಬಾಯುಳ್ಳ ದೊಡ್ಡದಾದ ತೊಟ್ಟಿ : ಸಮತಟ್ಟಾದ ಬಯಲುಗಳಲ್ಲಿ ರೈಲುಹಾದಿಯ ಎರಡು ಮಗ್ಗುಲಿಗೂ ಬಲು ಉದ್ದವಾದ ಎರಡು ನೀರಿನ ಬಾಣಿಗಳನ್ನು ಮಾಡುತ್ತಾರೆ (ಬಾಲಕ್ರ.I. ೩೪೯). ೪. ದೋಣಿಯಲ್ಲಿ ಪ್ರಯಾಣಿಕರು ಕೂರಲು ಹಾಕಿರುವ ಅಡ್ಡಹಲಗೆ: ಅವಸರದಿಂ ದೋಣಿಹತ್ತಿ ಕುಳಿತಳಾಕೆ ಬಾಣಗೂಕ್ಕೆ(೧೪೦. ೬೩-೦೦); ಯಾವುದೋ ಒಂದು ಮಹಾಯಿಯು ದೋಣಿಯ ಬಾಣಿಯಲ್ಲಿ ಕುಳಿತ ಆ ಹುಡುಗನನ್ನು ಅಪ್ಪಳಿಸಿ ಸೆಳೆದು ಒಯ್ದುಬಿಟ್ಟಿತ್ತು ( ಮ್ಯಂಮಾ. ೪೬). **ಬಾಣ್ಣೆ** : ೧. ಶತ್ರುನುಡಿನಾ ಜನನಿಯಿಲ್ಲದಡತ್ತಲಿತ್ತಲು ಪರಿಕಿಸುತ ಹಸಿವೆತ್ತಿ ಬಾ[ ಬಾಣಂ. ಬೋ ] ನದೊಳೊಂದು ಹೂರಿಗೆಯಂ ತೆಗೆದು ಮೆಲಲು (ಬಕಥ. ೨೪-೩೩). **ಬಾನಿ₁** : ೧. ಆಕೆ ಕಮಂಡಲು ಒಂದನ್ನು ತಂದಿದ್ದಳು . . . ಈ ಮಣ್ಣುಬಾನಿಯಂತೆ ಎಡವಿ ಬಿದ್ದರೆ ಎಲ್ಲಿ ಒಡೆದುಹೋಗುವುದೋ ಎಂಬ ಭಯವೇ ಇಲ್ಲ (ಶಿವಶಾ. ೦೩೬) ; ಸಬಕಾರದ ನೊರೆಯನ್ನು ಒಂದು ಬಾನಿಯಲ್ಲಿ ತುಂಬಿಟ್ಟು ಬೋಳಿಸಬೇಕಾದ ಮುಖವನ್ನು ನಾಲ್ಕಾರು ನಿಮಿಷ ಅದರಲ್ಲಿ ನೆನೆಯಿಟ್ಟು ತೆಗೆದರಾಯಿತು (ದೇಕಸ್ತ. ೬೬). ೩. ಕಲಗಚ್ಚನ್ನು ಬಾನಿಗೆ ಸುರಿಯಲು ಬಂದ ರಂಗವ್ವ . . . ಕೇಳಿದಳು (ಶಿಕಾ. ೪೮). ೫. ಹೂವಿನ ಸಸಿ ಮುಂತಾದುವುಗಳನ್ನು ಬೆಳೆಸುವ ಮಣ್ಣಿನ ಪಾತ್ರೆ; **ಕುಂಡ**: ನಾನು ಬಾಗಿಲೆದುರು ಒಂದು ಸುಂದರವಾದ ಕೈತೋಟ ಮಾಡಿದೆ. ಐವತ್ತು ಬಾನಿಗಳನ್ನು ತಂದಿರಿಸಿದೆವು (ಸ್ಮೃತಿ. ೩೨೪) ; ಸಂಜೆಯ ಮುಂದೆ ಬಂಕದಲ್ಲಿಟ್ಟ ಬಾನಿಯೊಳಗೆ ಅರಳಿದ ಮಲ್ಲಿಗೆಯ ಹೂವಿನ ಗಂಧ ಬರುತ್ತಿತ್ತು (ಇಕ್ಕ. ೨೩೩). **ಬಾನಂ₂** : ೫. ನಾಗಪ್ಪನು . . . ಹೂವಿನ ಬಾನುಗಳಿಗೆ ನೀರು ತಣಿಸುತ್ತಿದ್ದನು (ಕತಕ. ೯೩). **ಬಾನೆ** : ೧. ಗಮಗಮಿಸುತ್ತಿದ್ದ ಕಾಫಿ ತುಂಬಿದ್ದ ಬೆಳ್ಳಿಯ ಗಡಿಗೆ, ಸಕ್ಕರೆಯ ಬಾನೆ . . . ರೊಟ್ಟಿಗಳನ್ನುಳ್ಳ ಬುಟ್ಟಿಗಳನ್ನು ಜೋಡಿಸಲಾಗಿತ್ತು (ಕೃಷು. ೦೩) ; ಬಾನೆಯನ್ನು ತಲೆಮೇಲೆ ಕವಿಚಿಕೊಂಡು ತಿರುಗಲಾರಂಭಿಸಿದನು (ಕಥಾಮಂ. IV. ೦೦೬). ೩. ಬಾನೇಯಂತಾ ಬಾಯಿದೆರೆಯೆ ಬಾಯಿ ತುಟಿಯು ವಿಕಾರದ ಹಲ್ಲು . . . ಆ ನಳರಾಜ ತಾನು ಯಿಂತಾ ರೂಪು ಧರಿಸಿದ (ಯಕಳ. ೦೦೦) ; ಒಳಗಿದ್ದ ದೊಡ್ಡ ಬಾನೆಗಳಲ್ಲಿ ಮದ್ಯ ತುಂಬಿದ್ದಿತು (ಬಾಂತಲಾ. ೨೨೮) ; ಈ ಕಲಗಚ್ಚಿನ ಬಾನೆಯಲ್ಲಿ ಅಲ್ಲಿದ್ದ ಗೋಗಣವು . . . ಅಕೃತ್ರಿಮಸುಖವನ್ನು ಸವಿಯುತ್ತಿದ್ದಿತು (ಕಮಕ. ೦೩೮). ೫. ಚಿತ್ರವಿಚಿತ್ರವಾದ ಅನೇಕ ಬಗೆಯ ಗಿಡ ಬಳ್ಳಿಗಳು ಇರುವ ಮಣ್ಣು ಬಾನೆಗಳು ಸಾಲಾಗಿ ಇವೆ (ಕುಕರ್ಮ. ೪೬). ೬. ಎತ್ತುಗಳನ್ನು ಹೂಡಿ, ಬಾವಿಯಿಂದ ನೀರೆತ್ತಲು, ಚರ್ಮದಿಂದ ಮಾಡಿದ ಒಂದು ಸಾಧನ; **ಕಪಿಲೆ** : ಧರ್ಮಡೋಣಿಗೆ ನೀರ ಎತುವ ಕಬಿನದ ಏತದ ಬಾನೆ ಕಬಿನದ ಕಟ್ಟು ಬಿಷ್ಟಂ ಧರ್ಮವನು ತಪದೆ ನಡಸಿ ಬಾಹೆಉ (ಕ್ಕಾಇ. IX-ii, ೬೬೦-೨೨ ; 1559). **ಹನ್ಗೆ** : ೨. ಕೊಟ್ಟ ಧ್ರುಂ(ಧ)ರ್ಮ್ಮ ಚಿತ್ರ ಪವಿತ್ರುದಲಿ ಪೊಕ್ಕಲಿಗೆ ಹಾಗೆ ಪೊಟ್ಟಲುಗೊಳಗ ಹನೆಗೆ ಮಾನವತ್ತ ಸೊಂಟಗೆಯಣ್ನೆ (ಕ್ಕಾಇ. XV. ೯೩-೩೨ ; 1154). **ಹಾನೆ** : ೨. ಶ್ರೀಪ್ರಸಂನಕೇಶವದೇವರ [ದೇವಡ್ಡಿ]ಗಳಿಗೆ ಗುಗ್ಗರಿಗೆ ಹಾನೆಯಲುಂ ಅಂಗಡಿಗಳಲು ಸಟ್ಟುಗಾಯಮಂ ಬಿಟ್ಟರು (ಕ್ಕಾಇ. XV. ೩೪೩-೦೦ ; 1166); ನಸಿಂಹ್ವದೇವರ ಬಾಳಿನ [ತೆ] ಬುಪರಾಹ ಪ ೬ ಭತ್ತ ಹಾನ ೪೫ ನೊ ಧಾರೆಯಾಗಿ ಎಱದು ಕೊಟ್ಟರು (ಕ. III-i, ೨-೬ ; 1331); ಯಳ್ಳಿಂಗೆ ಹಾನೆ ೩೬ (ಕ್ಯತಂ. ೦೪೪೩. ೩೪-೦೩ ; 1673); ಎರಡು ಹಾನೆ ಭತ್ತಕ್ಕಾಗಿ, ಹನ್ನೆರಡು ಗಂಟೆ ದುಡಿಯುವ ಜನವಾಗಿರಲಿಲ್ಲ (ದೇಶಕು. ೩೪). ೭. ಭೂಮಿಯ ಒಂದು ಅಳತೆ : ಯಿಾ ಅಕ್ಕಿಯ ಕೊಟಿಕೆಗೆ ಕೊಠಾರಿ ಗುಡಿಯ ನಾಲ್ವತ್ತು ಹಾನೆ ಗದ್ದೆಯ ಮೇಲಣ ಎಂಟು ಹಾನೆಯಕ್ಕಿಯೂ ಕೂಡಿ ಸಡಲುದು (ಕ್ಕಾಇ. IX-ii, ೪೦೩-೨೬ ; 1872). [ ದೇ.೫ ತಮಿ. ಪಾನೈ, ಪಾಣಾ; ಮಲ. ಪಾನ, ಪಾನಿ; ತುಳು. ಪಾಣಿ, ಪಾಣೆ, ಪಾನೆ, ಬಾಣ, ಬಾಣೆ, ಬಾನ, ಹಾನೆ ; ತೆಲು. ಬಾನ ; ಕೊಡ. ಪಾನಿ ]

**ಹಾನ್ನಾಡು** (ನಾ). ಒಂದು ಪ್ರದೇಶದ ಹೆಸರು : ಶ್ರೀಮತ್ ಕೊಙ್ಗಣಿವೃದ್ಧರಾಜೇನ ದುರ್ವ್ವಿನೀತ ನಾಮಧೇಯೇನ ಸಮಸ್ತ ಪಾನ್ನಾಡ (? ಪಾಱಾಡ) ಪುನ್ನಾಡಾಧಿಪತಿನಾ (ಇಆ. V, ೦೩೪-೦೦ ; ೬೧೩). [? + ನಾಡು]

**ಹಾಪ್₁** 'ಪಾಪೆ' ನೋ.

**ಪಾಪ್ಮ** (ನಾ). ೧. ದೋಷ ; ಪುಣ್ಯವಲ್ಲದ ಕಾರ್ಯ ; ದುರಾಚಾರ : "ವೃಜಿನಂ, ದುರಿತಂ . . . ಪಾಪಂ, ಪಾಪ್ಮಾ, ಪಾತಕಂ—ಈ ೧೪ ಪಾಪಂ" (ಹಲಾಯು. ೦೬೩-೫) ; ಪಾಪವಿದು ಪುಣ್ಯವಿದು ಹಿತರೂಪಮಿದುಹಿತಪ್ರಕಾರ ವಿದು ಸುಖವಿದು ದುಃಖೋಪಾತ್ತವಿದೆಂದರಿವುಗುಮಾ ಪರಮಕವಿ ಪ್ರಧಾನರಾ ಕಾವ್ಯಂಗಳ್ (ಕವಿರಾ. ೦-೦೬): ಪಾಪದ ಪುಣ್ಯದ ಭೇದಮನೀ ಪರಿಯಿಂದರಿಯದಿರ್ಪ ನಡೆಪಾಪಿಯರ್ಗಾ ಶ್ರೀಪುರುಷೋತ್ತಮನಂ ಮನೆ ಗಾಪೆನಿಸಿದ ದಿವ್ಯಪಾದಕಾಣೆಜಗಿದಪೆಂ (ಜಗ. ೬-೨೨೬). ೨. ದುರಾಚಾರ ದಿಂದ ಬಂದ ಕರ್ಮಫಲ : ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲ ದೊಡಾಳ್ದನಾಳ್ ಸರೋಗ ನರೋಗಂ (ಶಾಂತಿಪು. ೬-೦೯೦); ಮುನ್ನ ಮಾಡಿದ ಪಾಪ ಬೆನ್ನ ಬಿಡದನ್ನಕ್ಕ ಇನ್ನು ಬಯಸಿದರುಂಟೆ (ಬಸವ. ೨೯); ಬಸವ ಶರಣೆನೆ ಪಾಪವಳಿವುಗು (ಬಸಪು. ೦-೨೫). ೩. ತಪ್ಪು ; ಅಪರಾಧ : ಭೂಪನಂ ಹೊದ್ದುವುದು ರಾಷ್ಟ್ರದ ಪಾಪ (ಬಸಪು. ೫೫-೬). ೪. ಕೆಟ್ಟ ವಸ್ತು : "ಅವರ್ಣಂ, ಅಣಕಂ . . . ಪಾಪಂ, ರೇಫಸಂ—ಈ ೧೩ ಹೊಲ್ಲಹ ವಸ್ತು" (ಹಲಾಯು. ೫೬-೦೬೨). ೫. ಕೆಟ್ಟ ಮನುಷ್ಯ; ದುಷ್ಟ; ಪಾಪಿ :"ನೃಶಂಸಃ, ಘಾತುಕಃ, ಕ್ರೂರಃ, ಪಾಪಃ—೪ ಪರರಿಗೆ ಬಾಧೆಮಾಡುವ ಸ್ವಭಾವ ವುಳ್ಳವನ ಹೆಸರುಗಳು" (ಸಿದ್ಧಾಂತಿ. ೩೩೩); ಮಿಟ್ಟು ಪೊಟ್ಟು ಪಾರೆ ಪಾಪರ್ ದೇವರಂ ತೆಗಟಿಸಲೊಡಮೇನಕ್ಕುಂ ? (ರಾಮಾಶ್ವ. ೨೯-೪). ೬. ದುರ್ದೈವ ; ದುರದೃಷ್ಟ. ೭. ಕೇಡು ; ಅನಿಷ್ಟ : 'ಪಾಪಶಂಕೆ' ಪರಾ. ೮. ಅನು ಕಂಪೆಯನ್ನು ಸೂಚಿಸುವಾಗ ಬಳಸುವ ಒಂದು ಶಬ್ದ : ಕೂಸಿಗಿಂತ ತ್ರಾಣೆಯಲ್ಲ ಪಾಪ ರಾಯರು (ರಾಮಾನಿ. ೯೬) ; ಏನೋ ಚೋರಾಚಾರು ಅಂತಿಂತಹ ಕಾಳುಕಡಿ ತಿಂದರೆ ತಿನ್ನಲಿ ಪಾಪ ಎಂಬಂತಿಲ್ಲ (ದೇಶಸ್ಥ. ೪೪) ; ಪಾಪ ಮಗು ಏನೆಂದುಕೊಂಡಿತೋ ಕಾಣೆ (ಕರ್ಣ. ೦೬). ೯. [ಜೈನ] ಒಂಬತ್ತು ವಿಧವಾದ ಪದಾರ್ಥಗಳಲ್ಲಿ ಒಂದು : 'ನವಪದಾರ್ಥ', 'ಪಾಪಪದಾರ್ಥ' ಪರಾ. [ಸಂ.]

**ಪಾಪ್ಮ** (ನಾ). ಒಂದು ಬಗೆಯ ಗಿಡ : "ಪರ್ವಣಃ—ಪಾಪ, ಚಪಲ, ಗೇರು" (ಓಷಧಿ. ೯೦). [?]

**ಪಾಪಕರ್ತ** (ನಾ). ದುರಾಚಾರವನ್ನು ಮಾಡಿದವನು : ಪಾಪಕರ್ತನು ನಾನು ಪಾಪನಾಶನ ನೀನು (ಪುರಂದ. ೪-೯೦-೦). [ಪಾಪ್ಮ+ಕರ್ತ]

**ಪಾಪಕರ್ಮ** (ನಾ). ೧. ಕೆಟ್ಟ ಕೆಲಸ ; ದುರಾಚಾರ : ಆತನ ಭಾರ್ಯೆ ಪೃಥ್ವಿಶ್ರೀಯೆಂಬೊಳಾಕೆಯ ಗರ್ಭದೊಳ್ ಪಾಪಕರ್ಮ ಜೀವಂ ನೆಲಸಿದೊಡೆ (ಶಬ್ದಾರಾ. ೬೬-೯); ಎಲವೊ ಎಲವೋ ಪಾಪಕರ್ಮವ ಮಾಡಿದವನೇ . . . ಒಮ್ಮೆ ಶರಣೆನ್ನೆಲವೋ ಒಮ್ಮೆ ಶರಣೆಂದರೆ ಪಾಪಕರ್ಮ ಓಡುವುವು (ಬಸವ. ೬೧೧); ಪಾಪಕರ್ಮವ ಮಾಡಿದಡಮಿಳನ ಯುಮಭಟರು ಕೋಪದಿಂದಲಿ ಸೆಳೆಯೆ (ಪುರಂದ. ರಾ. ೨-೯೩-೪); ಪಾಪಕರ್ಮಗಳ ನಶಿಗಳೆದು ನಿಂದವಗೆ ಕೋಪವೆಲ್ಲಿಯದು (ಸರ್ವಜ್ಞ. ೫೦೨). ೨. ಕೆಟ್ಟ ಕೆಲಸವನ್ನು ಮಾಡಿದವನು ; ದುಷ್ಕರ್ಮವನ್ನು ಮಾಡಿದವನು ; ಪಾಪಿಷ್ಠ : ಎನ್ನ ಪಾಪಕರ್ಮನ ಕತದಿಂದಮಿಾ ನಿಮಗಮಿಾಯಿರವಾದುದೆ ಸಿಂಧುನಂದನಾ (ಗದಾಯು. ೫-೯೦); ತನಗಿಕ್ಕುವೆಜೀವ ಕರುಣಂ ಮನ ದೊಳಮಿನಿತಿಲ್ಲ ಪಾಪಕರ್ಮನಪಂ ಮಾವನೆ (ಸುಕುಮಾ. ೨-೭೦) ; ಇಂ(ಇ)ದನ್ನಾ[ರಾ]ನುಂ ಕಿಡಿಸಿಹೆನೆಂಬ ಪಾಪಕರ್ಮ್ಮಂಗುಪೇಕ್ಷಿಸಿದಂಗಂ . . . ಸಾಸಿರಕವಿಲೆಯುಮಂ ವಾರಣಾಸಿಯೊಳಂ ಕುರುಕ್ಷೇತ್ರದೊಳಂ ತಂನ ಸ್ವಹಸ್ತದೊಳು ಕೊಂದ ದೋಷಮಕ್ಕು (ಎಪಿ. XXVII. ೬೩-೫೪: 1114). [ಪಾಪ್ಮ+ಕರ್ಮ]

**ಪಾಪಕೃತ್ಯ** (ನಾ). ಕೆಟ್ಟಕೆಲಸ ; ದುರಾಚಾರ ; ಪಾಪಕರ್ಮ : ನಾವು ಅಹರ್ನಿಶಿ ಅನೇಕ ಪಾಪಕೃತ್ಯಗಳನ್ನೆಸಗುತ್ತಿದ್ದೇವೆ. (ಪುನರು. ೩೯೫). [ಪಾಪ್ಮ+ಕೃತ್ಯ]

**ಪಾಪಕ್ಷಯ** (ನಾ). ಪಾಪವು ನಾಶವಾಗುವುದು; ದುಷ್ಕರ್ಮ ಕಳೆಯುವುದು : ಪಾಪಕ್ಷಯಕ್ಕೆಂದು ಗಂಗೆಯೊಳ್ಮಿಂದರೆ ಪಾಪಿಯ ತಿಂದಂತೆ ತಾಪಸ್ಥಸುರರಿಂಗೆ ಹಿತಗೈಯ ಬಂದ ಪ್ರಾಣೋಪವನ ನೀನು (ಸೋಮೇಶ. ೬-೩೩); ಶುಭತಾರೆಯಲಿ ಪಾಪಕ್ಷಯವು (ಗಗಜ. ೪-೩೦). [ಪಾಪ್ಮ+ಕ್ಷಯ]

**ಪಾಪಗ್ರಹ** (ನಾ). ದುಷ್ಪರಿಣಾಮವನ್ನುಂಟುಮಾಡುವ ರಾಹು, ಕೇತು, ಶನಿ, ಮಂಗಳ ಮುಂತಾದ ಅಶುಭಗ್ರಹ : ಪಾಪಗ್ರಹಮು [ಶಾಕಾಂ. ಗೃಹಮದು]ದಯದೊಳಿರೆ ಪಾಪೇಕ್ಷಣವಾಗೆ ತಟಟಯಕ್ಕುಂ (ಜಾತಕ. ೨೦-೨೦). [ಪಾಪ್ಮ+ಗ್ರಹ]

**ಪಾಪಚಿತ್ತ** (ನಾ). ೧. ಕೆಟ್ಟ ಮನಸ್ಸು. ೨. ಕೆಟ್ಟ ಮನಸ್ಸುಳ್ಳವನು ; ದುಷ್ಟ : ಪಾಪಚಿತ್ತರು ಗೋಣಿಯಲಿ ನರರೂಪನೊಂದಂ ರಚಿಸಿ ಯಲಿ ಕೌಪನುಡಿಸಿ ವಿಭೂತಿಯಂ ಸರ್ವಾಂಗದಲಿ ಪೂಸಿ (ಬಸಪು. ೬೩-೩೦). [ಪಾಪ್ಮ+ಚಿತ್ತ]

**ಪಾಪಚೇಲಿ** (ನಾ). ಒಂದು ಬಗೆಯ ಮೂಲಿಕೆ; ಅಗಳುಶುಂಠಿ : "ಅಗುಳುಸುಂಟಿ—ಪಾಠೆ, ಅಂಬಷ್ಠೆ, ವಿದ್ಧಕರ್ಣಿ, ಪಾಪಚೇಲಿ, ಪ್ರಾಚೀನ, ರಸೆ" (ಔಷಧ. ೬). [ಸಂ. ಪಾಪಚೇಲೀ]

**ಪಾಪಚ್ಚಿ** (ನಾ). ಮಕ್ಕಳನ್ನು ಪ್ರೀತಿಯಿಂದ ಕರೆಯುವಾಗ ಅಥವಾ ನಿರ್ದೇಶಿಸುವಾಗ ಉಪಯೋಗಿಸುವ ಒಂದು ಮಾತು : ಆ ಮಾಯಾ ನಗರಿಯಲ್ಲಿ, ಪಾತಾಳದಲ್ಲಿಯ ಪಾಪಚ್ಚಿಯಂತೆ, ಮಂದಾಕಿನಿ ಗಾಬರಿಯಾ ದಳೇನೊ (ಕ್ಷಿತಿ. ೨೦). 'ಪಾಪಣ್ಣಿ' ಪರಾ. [←ತಮಿ. ಪಾಪ್ಪಾಚ್ಚಿ]

**ಪಾಪಟ** 'ಪಾಪಟ್ಟೆ' ನೋ.

**ಪಾಪಟೆ**$_1$ (ನಾ). ೧. ಬೈತಲೆ ; ಸೀಮಂತ. ೨. ಒಂದು ಬಗೆಯ ಆಭರಣ (?) : ಪೊಸಮಿಸುನಿಯೊಳು ಬಿಗಿದ ರತ್ನದ ಯಸುಳುದೆನೆಗಳ ಶಹಲೆದಿಂಡಿನ ಬೆಸದ ಬಂಕದ ಹಳುಕು ಪಾಪಟೆ ಪಚ್ಚೆ ನಿಚ್ಚಳದ . . . ವಜ್ರ ದ್ವಾರಸೊಬಗಿನೊಳೆಸದುದಾಕ್ಷಣ ಮಯನ ನಿರ್ಮಿತದಿಂದಲಾ ನಗರ (ಅಂಬಿಕಾ. ೬-೫) ; ಕಡಗ ಸರಘಣೆ ಸಾರಸನ ಶಿರಕಿಡುವ ಮಲಕುಗಳಿಂದ ಮುತ್ತುಗ ಳೊಡನೆ ತೊಡರಿದ ಮುದ್ದು ಪಾಪಟೆಬಲೆಯು ರಂಜಿಸುತ . . . ನಡೆತರುವ ಶಿಶುಗಳ ಬೆಡಗ ನೋಡುತಲಿ (ಜನಕಾ. ೬-೦೯). [ದೇ.॥ ತುಳು. ಪಾಪಟೆ ; ತೆಲು. ಪಾಪಟ ; ಕುವಿ. ಪಾಪೆಟ್ಟು]

**ಪಾಪಟ್ಟೆ**, ಪಾಪಟೆ, ಪಾಪಡಿ$_1$, ಪಾವಟೆ (ನಾ). ೧. ಒಂದು ಬಗೆಯ ಔಷಧಿ ಸಸ್ಯ ; ಇಂದ್ರವಾರುಣಿ; ಹಾವುಮೆಕ್ಕೆ: "ಕಾಕಚ್ಛೇದಿ-ಪಾಪಟೆ" (ಓಷಧಿ. ೩೦); ನೆಲಗೋಣಿ ಪು(ಹು)ಣಿಸೆ ಪಾಪಟೆ ಹುಲಿಗಿಲ್ ದೊಗ್ಗಳೆಯ ಹಜುಹೆಯೆಂಬಿವಟೆಲೆಯಂ ಕಟಿಯೊಳುಟಿ ಕಾಸಿ ಕಟ್ಟಲ್ ತೊಲಗುಗು ಮೊದಲಿಸುವ ಮುಳ್ಳ ವಿಷಮನಿತನಿತುಂ (ಜಪುರ. ೨-೨೦೦); ಮುಳ್ಳು ಮುತ್ತುಗದ ರಸ, ಪಾಪಟೆಸೊಪ್ಪಿನ ರಸ, ಹೆಗ್ಗುಳ್ಳಂಗಡಲೆಸೊಪ್ಪಿನ ರಸ . . . ಪ್ರಾತಃಕಾಲದಲ್ಲಿ ಗ ೪ ತೂಕವಂ ಸೇವಿಸುವುದು (ಸಕಪ್ಮ. ೨೦೩). ೨. ಒಂದು ಬಗೆಯ ಮರ ಮತ್ತು ಉಪ್ಪಿನಕಾಯಿಗೆ ಉಪಯೋ ಗಿಸುವ ಅದರ ಹುಳಿಯಾದ ಕಾಯಿ : ಅಂಬಟೆಯ ತದುಕಲ ಸುಂಡೆ ಪಾಪಟೆಯ ಚಳ್ಳೆ ಮಾಗುಳಿ ತಳಿಲೆ ತೊಗರಿ ಗುಳ್ಳ ತಿಂತ್ರಿಣಿಯುಪ್ಪುಗಾಯಿ ಗಳ್ಳೆಲ್ಲ ಸುಪ್ಪಾರಿಯರು ಬಡಿಸಿದರತಿವಿಚಿತ್ರದಲಿ (ಅಶಂಕ. ೬-೨೫-೩೬). **ಪಾಪಟೆ** : ೧. "ಪಾಪಟೆ—ಪರ್ವಟ=ಒಂದು ಗಿಡ" (ಕರ್ನ್ಮಕೋ. ೨೬): ಗಸಗಸೆ, ಸಾಸಿವೆ . . . ಪಾಪಟೆ, ಮಂಗಾರೆ (ಪಶುವು. ೨೩೦). **ಪಾಪಡಿ**$_1$: ೧. ಸೆ(ಸಿ)ೀಗುಡಿತೆಯ ಮುಳ್ ಕೊಗ್ಗಿಯ ದಾಗುಡಿ ಚಿತ್ರರಟೆ ಪಾಪಡಿಗ ಳೆಂಬಿವಟಿಯೊಳ್ ಪ್ರಾಗುಕ್ತ ಮೂಲಮಿರದರೆದಾಗಳ್ ಖರಮೂತ್ರ ಲೇಪಮುಶ್ರಿ ವಿಷಮ್ಮಂ (ಜಪುರ. ೬-೩೨). **ಪಾವಟೆ** : ೧. **ಪಾವಟೆ** :—ಈ ಕಾಯಿ ಸಮೂಲವಂ ತಂದು ಅರೆದು ಬೆಣ್ಣೆಯಲ್ಲಿ ಕಲಸಿ ಮೂಯು

ಆದಿತ್ಯವಾರ ತೆಗೆದುಕೊಳ್ಳಿ ಮೂಲವ್ಯಾಧಿ ಗುಣ (ಔಷ್ಯ. ೬); ಪಾಪಟೀ ಬೀಜ, ತಕ್ಕೋಲ . . . ಲಾವಂಚ—ಇವನ್ನು ಪ್ರತ್ಯೇಕ ಕರ್ಷಪ್ರಮಾಣ ಹಾಕಿ ಚೂರ್ಣಿಸಿ ಹಾಲಿನಲ್ಲಿ ಕಲಸಿ ಹಾಕುವುದು (ಸಕಲ್ಯ. ೯೫೦ ಪಂ).
[ದೇ.॥ ತಮಿ. ಪಾಪಟ್ಟೈ; ಮಲ. ಪಾಪಟ್ಟ; ತುಳು. ಪಾಪಟೆ ; ತೆಲು. ಪಾಪಟ]

**ಪಾಪಟೆ₃**, ಪಾಪಡಿ₂ (ನಾ). ೧. "ಸುವಾಸನಾಯುಕ್ತವಾದ ಮಣ್ಣು" (ಶ್ರಕಣ). ೨. ಒಂದು ಬಗೆಯ ಸುಗಂಧದ್ರವ್ಯ : "ಜತುಕೆ ಪಾಪಟೆ [ಪಾಠಾಂ.ಡಿ] ಯೆನಿಸ್ಕುಂ" (ಮಂಗರಾ. ೯೨–೩೯). **ಪಾಪಡಿ₂** : ೧. ಘಟ ಅಂದರೆ ಉಸುಬುಮಣ್ಣು ಹೊಟ್ಟು (ಪಾಪಡಿ) ಮುಂತಾದವುಗಳು (ಮುಂಬವ್ಯಾ. ೩೧). ೨. ಮೇಲಿನ 'ಮಂಗರಾ.' ಪ್ರಯೋಗದ ಪಾಠಾಂತರವನ್ನು ನೋಡಿ.
[<ಸಂ. ಪರ್ಪಟೀ]

**ಪಾಪಡಖಾರ** 'ಪಪ್ಪಡಕಾರ' ನೋ.

**ಪಾಪಡಿ₁** 'ಪಾಪಟೆ₂' ನೋ.

**ಪಾಪಡಿ₂** 'ಪಾಪಟೆ₃' ನೋ.

**ಪಾಪಡಿ₃** (ನಾ). (ಉಕ) ಹಳದಿ ರೇಷ್ಮೆಯಲ್ಲಿ ಒಂದು ಪ್ರಕಾರ : ೧೯, ಪಾಪಡಿ ೨೦, ಮಾನಚುಂಗ . . . ೪೩, ಕುಬೀನ ಇದರ ಹೊರ್ತು ಮತ್ತೂ ರೇಶ್ಮಿಯಲ್ಲಿ ಬಹಳ ಜಾತಿಗಳುಂಟು (ಮುಂಬವ್ಯಾ. ೦೦೯).
[←ಮರಾ. ಪಾಪಡೀ]

**ಪಾಪಣ್ಣ** (ನಾ). ಮಕ್ಕಳನ್ನು ಪ್ರೀತಿಯಿಂದ ಕರೆಯುವಾಗ ಅಥವಾ ನಿರ್ದೇಶಿಸುವಾಗ ಉಪಯೋಗಿಸುವ ಒಂದು ಮಾತು: ಪಾಪಣ್ಣ ಸ್ಕೂಲಿಗೆ ಹೋಗಲು ಹಟ ಮಾಡಲಿಲ್ಲ (ರೂಢಿ). 'ಪಾಪಚ್ಚಿ' ಹೋ.
[ಪಾಪ₁ (<ಪಾಪೆ) + ಅಣ್ಣ₁]

**ಪಾಪನಾಯಕಿಹೊನ್ನು** (ನಾ). ಒಂದು ಬಗೆಯ ಬಂಗಾರದ ನಾಣ್ಯ : ದುರ್ಗವು ಕೈವಶವಾದ ಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದು ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ೧ ಗಬರು . . . ೧ ಪಾಪ ನಾಯಕಿಹೊನ್ನು (ಚಿತ್ರಶಾ. ೦೦೯). [? + ಹೊನ್ನು (<ಪೊನ್)]

**ಪಾಪನಾಶನ** (ನಾ). ೧. ಪಾಪದ ನಿವಾರಣೆ; ದುಷ್ಕರ್ಮದ ನಾಶ. ೨. ಪಾಪವನ್ನು ನಾಶ ಮಾಡುವವನು; ದುಷ್ಕರ್ಮವನ್ನು ಹೋಗಲಾಡಿಸುವವನು : ಗೌರಿಸಹಿತಂ ಮುಂದೆ ನಿಂದು ಮಹೇಶ ನೀಶನು ಪಾಪನಾಶನನು [ಪಾಠಾಂ. ಪಾಶಧರಕರನು] . . . ಮೆಚ್ಚಿ ತಾನೊಲಿದು (ಬಸತು. ೨೬–೨೬); ಪಾಪಕರ್ತನು ನಾನು ಪಾಪನಾಶನ ನೀನು (ಕುಂಠದ. ೯–೯೦–೦). [ಸಂ.]

**ಪಾಪಪದಾರ್ಥ** (ನಾ). [ಜೈನ] ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸಂವರ, ನಿರ್ಜರ, ಬಂಧ ಮತ್ತು ಮೋಕ್ಷ ಎಂಬ ಒಂಬತ್ತು ವಿಧವಾದ ಪದಾರ್ಥಗಳಲ್ಲಿ ಒಂದು : ಜೀವಪದಾರ್ಥಮ ಜೀವಪದಾರ್ಥಂ ಮೋಕ್ಷಪದಾರ್ಥಂ ಆಸ್ರವಪದಾರ್ಥಂ ಸಂವರಪದಾರ್ಥಂ . . . ಪುಣ್ಯಪದಾರ್ಥಂ ಪಾಪಪದಾರ್ಥಮೆಂಬ ನವಪದಾರ್ಥಮುಮಂ . . . ಕೈಕೊಂಡು (ಸುಕುಮಾ. ೩–೩೯ ವ). [ಪಾಪ₂ + ಪದಾರ್ಥ]

**ಪಾಪಪ್ರಜ್ಞೆ** (ನಾ). ತಾನು ಮಾಡಿದ ದುಷ್ಕರ್ಮದ ಅರಿವು – ತಿಳಿ ವಳಿಕೆ : ಈ ಕರಾಳಸಾವಿಗೆ ತಾವೂ ಕಾರಣರು ಎಂಬ ಪಾಪಪ್ರಜ್ಞೆ ವಾಸುದೇವನ ಪತ್ರದ ಕತೆಯಲ್ಲಿ ಬಿಡುಗಡೆ ಪಡೆಯುವ ಹವಣಿಕೆಯಲ್ಲಿತ್ತು (ಮಾರುದಾ. ೩೩೬); ಮಗನಿಗೆ ತನ್ನ ವ್ಯವಹಾರವೆಲ್ಲ ಗೊತ್ತಾದಾಗ ಅವಳು ಪಾಪಪ್ರಜ್ಞೆಯಿಂದ ನಿರ್ಬಲಳಾಗುತ್ತಾಳೆ (ಹೊಸಕ. ೨೬೨).
[ಪಾಪ₂ + ಪ್ರಜ್ಞೆ]

**ಪಾಪಭೀತಿ** (ನಾ). ಪಾಪದ ಅಂಜಿಕೆ : ಪಾರ್ಥನು ಪಾಪಭೀತಿಯಿಂದ ವಿಹ್ವಲನಾಗಿದ್ದಾನೆ (ಭಾರಕಥ. ೦೦೬). [ಪಾಪ₂ + ಭೀತಿ]

**ಪಾಪಭೀರು** (ನಾ). ಪಾಪಕ್ಕೆ ಹೆದರುವವನು; ದುಷ್ಕರ್ಮಕ್ಕೆ ಅಂಜು ವವನು : ಅವನಾ ನಿಸ್ತ್ರಿಂಶಕರ್ಮಕ್ಕೆ ಕೊಕ್ಕರಿಸಿ, ಪಾಪಭೀರು ವಪ್ಪುದರಿಂ (ಆದಿಪು. ೨–೦೯ ವ) ; ಜನಕತನೂಜೆ ನೆಟ್ಟನೆ ಮಹಾಸತಿ ಗರ್ಭಿಣಿ ಪಾಪಭೀರು (ಶಂಕರಾಭ. ೦೫–೬೨); ಅಧಿಕಪಾಪಭೀರುಗಳೇ ಮಾಸದಲಿ ಓರಂತೆ ದೀಪಪೂಜೆಯ ಮಾಡಿದವರು ಮುರಾರಿಯ ಕೆಲದ ಲೊಪ್ಪುವರು (ರುಕ್ಮಾಂಗ. ೬–೦೯). [ಪಾಪ₂ + ಭೀರು]

**ಪಾಪಭೀರುತ್ವ** (ನಾ). ಪಾಪಕೆ ಹೆದರುವ ಸ್ವಭಾವ : ಅಂತುಪಶಮ ಭಾವಮುಂ ಪಾಪಭೀರುತ್ವಮುಂ ತನಗೆ ತೊಟ್ಟನೆ ಪುಟ್ಟೆ (ಶಂಕರಾಭ. ೯–೦೫ವ); ಇಲ್ಲಿ ಧರ್ಮರಾಜನ ಪಾಪಭೀರುತ್ವ, ಸತ್ಯಸಂಧತೆ ಅಭಿವ್ಯಕ್ತವಾಗು ತ್ತದೆ (ಭಾರಕ. ೦೦೩). [ಸಂ.]

**ಪಾಪರ್** 'ಪಾಪರು' ನೋ.

**ಪಾಪರ್‌ಚೀಟಿ** (ನಾ). ದಿವಾಳಿ ; ಪಾಪರು : ಪಾಪರ್‌ಚೀಟಿ ತೆಗೆದುಕೊಂಡಿದ್ದ ಒಬ್ಬ ಸಾಲಗಾರನನ್ನು ದೋಷಾರೋಪಣೆಯಿಂದ ತಪ್ಪಿಸಿದ್ದಾಯ್ತು (ಕೃಸರು. ೨೦೨). [ಪಾಪರ್ (<ಪಾಪರು) + ಚೀಟಿ₂ (< ಚೀಟ್ಟು)]

**ಪಾಪರತ** (ನಾ). ದುರಾಚಾರದಲ್ಲಿ ಆಸಕ್ತಿಯುಳ್ಳವನು : ಪಾಪಿಂ ಖಳ ಪ್ರೀತಿ ಪಾಪರತಂ ಕಾನವರೋಹಿಯಪ್ಪ ದಶೆಯೊಳ್ ವಿಶ್ವಂಭರಾಪುತ್ರನಾ (ಜಾತಕ. ೯–೨೨). [ಪಾಪ₂+ರತ]

**ಪಾಪರಹಿತ** (ನಾ). ೧. ಪಾಪವಿಲ್ಲದುದು ; ದೋಷಮುಕ್ತವಾದುದು : ಪಾಪರಹಿತಂಗಳುರುಸುಖರೂಪಂಗಳೆನಿಪ್ಪನೇಕವಿಧಕೇಳಿಗಳಿಂದಾ ಪುಣ್ಯ ದಂಪತಿಗೆ ನಿವಿಹೋಪಮುವೆನೆ ಪೋಯ್ತನೇಕವತ್ಸರನಿಕರು (ಶಂದ್ರಪ್ರ. ೦೦–೦೦೯). ೨. ಪಾಪದಿಂದ ದೂರವಾದವನು ; ದುಷ್ಕರ್ಮದಿಂದ ದೂರವಾದವನು : ಆ ಪರಸುಕಾರುಣಿಕಗೆಱಗಿಯ ಪಾಪರಹಿತನು ಮಾಡಿ ದನು ವಿನಯದಲಿ ಬಿನ್ನಪವ (ಐಭಾಗ. ೦೦–೩೨–೩೩). [ಪಾಪ₂ + ರಹಿತ]

**ಪಾಪರು**, ಪಾಪರ್ (ನಾ). ದಿವಾಳಿಯಾದವನು ; ನಿರ್ಗತಿಕ : 'ಜನತಾ' ಎಂಬ ಆಧುನಿಕಯುಗದ ಈ ಹೆಸರು ಪ್ರಜಾಪ್ರಭುತ್ವದ ಪಾಪರು ಅಥವಾ ಅರ್ಧಪಾಪರುಗಳಾದ ಯಾತ್ರಿಕರನ್ನು ಸಾಗಿಸುವಂಥ ಬಂಡಿಯದು (ಅಲ. ೦); ಎಲ್ಲಾ ಹೋಯಿತು, ಪಾಪರಾದೆ (ಬೆಂಕಿ. ೦೬೯). **ಪಾಪರ್**: ಪಾಪರ್ ಆಗಿ ಅಪ್ಪೀಲುಮಾಡಲಿಕ್ಕೆ ಅಪ್ಪಣೆಗೋಸ್ಕರ ಮೂವತ್ತುದಿವಸಗಳು (ಗ್ರಾಕಿಸಕ. ೦೩೩); ಕೋರ್ಟಿಗೆ ಹೋದವರು . . . ಆಸ್ತಿಪಾಸ್ತಿ ಎಲ್ಲವನ್ನು ಪರರ ಪಾಲುಮಾಡಿ ಪಾಪರ್ ಆಗ್ತಾರೆ (ನಮ್ಮ. ೪೪); ನೀವೂ ನಮ್ಮ ಹಾಗೆ ಬೇಗ 'ಪಾಪರ್' ಆಗ್ತೀರಿ (ನಮ್ಮೂರ. ೬೬).

**ಪಾಪರು ಮಾಡು**=ನಿರ್ಗತಿಕನನ್ನಾಗಿ ಮಾಡು ; ದಿವಾಳಿಯಾಗು ವಂತೆ ಮಾಡು : ಎಷ್ಟೋ ಜನ ಒಬ್ಬರ ಮೇಲೊಬ್ಬರನ್ನು ಕಡಹಿ ಅವರನ್ನು ಪಾಪರು ಮಾಡಿ ತಾವೂ ಹಾಳಾಗುತ್ತಾರೆ (ಹುಬ್ಬಹ. ೦೩೬).
[←ಇಂ. Pauper]

**ಪಾಪರ್ಧಿ** (ನಾ). ಬೇಟೆ; ಮೃಗಯಾವಿಹಾರ: "ಆಚ್ಛೋಟನಂ, ಮೃಗಯಾ, ಮೃಗವ್ಯಂ, ಪಾಪರ್ಧಿಃ, ಆಖೇಟಕಃ–ಈ ೫ ಬೇಂಟೆ" (ಹಲಾಯು. ೬೦–೨೬೦); ಶಬರನ ಮಾತಂ ಶ್ರೇಣಿಕಂ ಕೇಳ್ದು ಪಾಪರ್ಧಿಗರ್ತಿಕನಾಗಿ ಬೇಂಟೆಬಿನ್ನಣದವರಂ ಕೂಡಿಕೊಂಡಟವ್ಯಮುಂ ಪುಗುತಪ್ಪುದುಂ (ಕುಕ್ಕಾಸ. ೩–೫೩ ವ); ದ್ಯೂತ ಮದ್ಯ ಪಿಶಿತ ವೇಶ್ಯಾಪಾಪರ್ಧಿ ಚೌರ್ಯ ಪರದಾರ ವೆಂಬ ಸಪ್ತವ್ಯಸನಮುಂ ನಿರಾಕರಿಸಿಯುಂ (ಕ್ರಿಪು. ೦೯–೬೩ ವ).
[<ಸಂ. ಪಾಪರ್ದ್ಧಿ]

**ಪಾಪವಿಘಾತಿ** (ನಾ). ಪಾಪವನ್ನು ನಿವಾರಿಸುವಿಕೆ ; ಪಾಪವನ್ನು ನಾಶಮಾಡುವಿಕೆ : ಕೇಳಿದನು ಜನಮೇಜಯುಕ್ಷಿತಿಪಾಲಕನು ವರಸರ್ಪ ಯಜ್ಞಸ್ಥಳಪಾಪವಿಘಾತಿಗೋಸುಗವೀ ಮಹಾಕಥೆಯ (ಕುಮ್ಯಾಭ. ೨–೪).
[ಪಾಪ₂ + ವಿಘಾತಿ]

**ಪಾಪವಿನಾಶ** (ನಾ). ಪಾಪವನ್ನು ನಾಶಮಾಡುವವನು ; ದುಷ್ಕರ್ಮವನ್ನು ಹೋಗಲಾಡಿಸುವವನು : ಜಯಜಯ ನಂದನಂದ ಪರಮೇಶ್ವರ ಪಾಪವಿನಾಶ ಲೋಕವಿಸ್ಮಯಕರ ಶಂಭು ಶಂಕರ (ಅಂಕೃ. ೧೧-೨೨); ದಾಶರಥಿ ವೈಕುಂಠನಗರನಿವೇಶ ತ್ರೈಜಗದೀಶ ಪಾಪವಿನಾಶ (ಹಂಸಾ. ೦೦). [ಪಾಪ್ಮ$_2$+ವಿನಾಶ]

**ಪಾಪಶಂಕಿ** (ನಾ). ಅನಿಷ್ಟವಾಗುವುದೆಂಬ ಸಂದೇಹವುಳ್ಳುದು : ಅತಿ ಸ್ನೇಹವು ಪಾಪಶಂಕಿಯಾದವಲ್ಲ (ಶಾಕುಂತ. ೫೬-೨). [ಸಂ. ಪಾಪಶಂಕಿನ್]

**ಪಾಪಸತ್ವ** (ನಾ). ದುಷ್ಟಪ್ರಾಣಿ; ಕೆಟ್ಟ ಜೀವಿ : ನಾಲ್ಕನೆಯ ಕುಳಧರಂ ಪುಟ್ಟಿ ಪಾಪಸತ್ವಂಗಳ್ ಕಾಡೆ ಲಕುಟಯುಷ್ಟ್ಯಾದಿ ರಕ್ಷಾವಿಧಿಯನುಪದೇಶಂಗೆಯ್ದಾತಂ ಕ್ಷೇಮಂಧರನೆಂಬ ಪೆಸರಂ ಪಡೆದಂ (ಆದಿಪು. ೬-೫೬ವ). [ಪಾಪ್ಮ$_2$+ಸತ್ವ$_2$]

**ಪಾಪಹರ** (ಗು). ೧. ಪಾಪವನ್ನು ನಾಶಮಾಡುವ ; ದುಷ್ಕರ್ಮವನ್ನು ಹೋಗಲಾಡಿಸುವ : ಪಾಪಹರಮೂರ್ತಿ . . . ತಾಪಸಸುತನೆನ್ನನಂದು ಭೋಂಕೆನೆ ಕಂಡಂ (ರಕಸು. ೯-೬೯). (ನಾ). ೨. ಪಾಪವನ್ನು ನಾಶಮಾಡುವವನು : ಪಾಪಹರಂ ಪ್ರಕಾಶಿತವೃಷಂ ವೃಷಧ್ವಜಂ. . . ಉಪಾಶ್ರಿತಭವ್ಯಜನಾಭಿನಂದನಂ (ಆಂಪು. ೦-೯೦); ಅಹಮಿಂದ್ರರಧಿಕ ಭಕ್ತಿಯಿನಹರ್ನಿಶಂ ತಮ್ಮ ನೆಲೆಗಳಿಂ ತಳರದೆ ಪಾಪಹರಂಗೆಱಗುವರೆನಿಸಿದ ಮಾಹಿಮೆಯ ಪೞೆಗೞಿದ ಪರಮಾಕ್ಷೋಟಿಯೊಳಿರ್ಪರ್ (ಶಾಂತಿಪು. ೯-೧೨೪). [ಸಂ.]

**ಪಾಪಹೃತ್ತು** (ಗು). ಪಾಪವನ್ನು ಪರಿಹಾರ ಮಾಡುವ ; ಪಾಪವನ್ನು ಹೋಗಲಾಡಿಸುವ : ಶ್ರೀದೇವೇಂದ್ರಮುನೀಂದ್ರವಂದಿತಗುಣವ್ರಾತಂ . . . ಪಾಪಹೃತ್ಪಾದಾಬ್ಜಂ ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ (ಆದಿಪು. ೦-೧). [ಸಂ. ಪಾಪಹೃತ್]

**ಪಾಪಾಂತಕ** (ಗು). ಪಾಪವನ್ನು ನಾಶಮಾಡುವ : ಆ ಪರಮಧರೆಯೊಳಾಶ್ರಿತಪಾಪಾಂತಕಪುಣ್ಯತೀರ್ಥಪಾನಕಜನಸಂತಾಪಪನಳಿಪತಿ ಶುಭಕರ ದಾಮಗೆಗಳ್ ಮಹಿಮೆಯಿಂದೆ ಪರಿರಾಜಿಕರ್ಗಂ (ಹಮ್ಮಿರ. ೦-೫೯). [ಪಾಪ್ಮ$_2$+ಅಂತಕ]

**ಪಾಪಾತ್ಮ** (ನಾ). ದುಷ್ಟ ; ಪಾಪಿ : ಪಾಪಾತ್ಮ ನಾನಲ್ಲ ಪಾಪವೆನಗಿನಿತಿಲ್ಲ (ಕವಳ. ೦೯೦ ಪಲ್ಲವಿ); ಪಾಪಾತ್ಮನ್ನ ಪರಮಾತ್ಮ ತಿಳಿಯನೆ ? (ಗಾದೆ). [ಸಂ. ಪಾಪಾತ್ಮನ್]

**ಪಾಪಾಲೋಕನ** (ನಾ). [ಜ್ಯೋತಿ] ಅಶುಭಗ್ರಹಗಳ ದೃಷ್ಟಿ ; ದುಷ್ಟಗ್ರಹಗಳ ನೋಟ : ಪಾಪಗ್ರಹಮುದಯದೊಳಿರೆ ಪಾಪೇಕ್ಷಣವಾಗೆ ತಱಿಯಿಕ್ಕುಂ ಲಗ್ನಂ ಚಾಪ ವ ಷಮೀಷನಾಗಿರೆ ಪಾಪಾಲೋಕನದೆ ವಿಕೃತದಂತನೆನಿಕ್ಕುಂ (ಜಾತಕ. ೨೧-೨೦). [ಪಾಪ್ಮ$_2$ + ಆಲೋಕನ]

**ಪಾಪಾವಹ** (ನಾ). ಪಾಪದಿಂದ ಕೂಡಿದವನು ; ಪಾಪಿಷ್ಠ ; ಪಾಪಿ : ಖರರುಜ್ಜಾಂದನಂ . . . ತ್ರಿಕೋಣಸ್ಥನಾಗಿರೆ ಪಾಪಾವ [ಪಾಠಾಂ. ಪಾಪ. ಪ] ಹನಕ್ಕುಂ (ಜಾತಕ. ೧೬-೧೯). [ಪಾಪ್ಮ$_2$+ಆವಹ]

**ಪಾಪಾಸಕಳ್ಳಿ** 'ಪಾಪಾಸುಕಳ್ಳಿ' ನೋ.

**ಪಾಪಾಸು** 'ಪಾಪೋಸು' ನೋ.

**ಪಾಪಾಸುಕಳ್ಳಿ, ಪಾಪಾಸಕಳ್ಳಿ** (ನಾ). ಕಳ್ಳಿಯ ಜಾತಿಗೆ ಸೇರಿದ ಒಂದು ಬಗೆಯ ಮುಳ್ಳಿನ ಸಸ್ಯ ; ಡಬ್ಬುಗಳ್ಳಿ (ಉಕ): ಹಳ್ಳಿಯ ಸುತ್ತ . . . ಪಾಪಾಸುಕಳ್ಳಿಯ ಬೇಲಿಯೂ ಇದೆ(ಮಲೆನಾ. ೨೩); ಆ ಹಸುವಿನ ಕೊರಳಿಗೂ ಹೊಟ್ಟೆಗೂ ಹುಡುಗರು ಬೇಕಾದಷ್ಟು ಪಾಪಾಸುಕಳ್ಳಿ ಹಣ್ಣಿನ ರಸವನ್ನು ಸವರಿದರು (ಕಳಹು. ೫೦). **ಪಾಪಾಸಕಳ್ಳಿ** : ಪಾಪಾಸಕಳ್ಳಿಬೇರು . . . ಗಜ್ಜುಗದ ಬೇರು ಇವನ್ನು ಪ್ರತ್ಯೇಕ ೧೦ ಪಲ ತೆಗೆದುಕೊಂಡು ಸಣ್ಣಗೆ ಕತ್ತರಿಸಿ (ಸಕವೈ. ೪೪೦ ಹಂ). [ಪಾಪಾಸು (<ಪಾಪೋಸು)+ಕಳ್ಳಿ$_1$]

**ಪಾಪಾಸ್ರವ** (ನಾ). [ಜೈನ] ಜೀವನಲ್ಲಿ ಹರಿದು ಬರುವ ಪಾಪಕರ್ಮಗಳು: ಆಸ್ರವಮೆರಡುತೆಱಂ ಪುಣ್ಯಾಸ್ರವಮೊಂದದಱ ವೈಪರೀತ್ಯಭವಂ ಪಾಪಾಸ್ರವಮಂತವಱೊಳ್ ಪುಣ್ಯಾಸ್ರವವಸ್ತುಸ್ವರೂಪಮಕ್ಕುಂ ತ್ರಿವಿಧಂ (ಶಾಂತಿಪು. ೦೨-೯). [ಪಾಪ್ಮ$_1$ ಆಸ್ರವ]

**ಪಾಪಿ** (ಗು). ೧. ಕೆಟ್ಟ; ದುಷ್ಟ. (ನಾ). ೨. ಪಾಪ ಮಾಡಿದವನು ; ಕೆಟ್ಟ ಕೆಲಸವನ್ನು ಮಾಡಿದವನು ; ಪಾಪಿಷ್ಠ : "ಖಳನುಗ್ರಂ ಪಾಪಿ ದುಷ್ಟಾತ್ಮಕ(ನವನೆ) ಶಠಂ ದುರ್ಜನಂ ತಾನನಾರ್ಯಂ" (ಚನ್ನಕೋ. ೦೨೦-೧೦); ಕಿಱಿದಾನುಂ ಬೇಗಮಿರ್ದಲ್ಲಿ ಕಾರ್ಯವ್ಯಗ್ರಪಾಪಿ [ಪಾಠಾಂ. ಪಾಪಿ] ಪಾಶಾಶ್ರಿತರೆಲ್ಲರುಂ ಕೇಳಲೆಂದು ಮಹೀಭುಜನಿಂತೆಂದಂ (ಶಂಕಭಾ. ೦೩-೮ ವ); ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯಾ (ಬಸವ. ೨೨೩); ಅಟಮಟಿಸಿ ಪರವಧುವ ತಂದುತ್ಕಟದ ಪಾಪಿಗೆ ಹೇಸಿ ವನವಧು ಚಿಟುಕ ಮುರಿದಪಳ್ (ಕುಲಾ. ೫-೪-೧೦) ; ಪಾಪಿ ಸಮುದ್ರಕ್ಕೆ ಹೋದರೂ ಮೊಳಕಾಲುದ್ದ ನೀರು (ಗಾದೆ).

**ಪಾಪಿಕೂಸು, ಪಾಪಿಯ ಕೂಸು** = ಶ್ರೀಶೈಲದಲ್ಲಿ ಕೆಲವರ ಕಣ್ಣಿಗೆ ಬೀಳುವುದೆಂದು ನಂಬಲಾದ ಒಂದು ಮಗು ; ಇದು ಎತ್ತಿಕೊಂಡವರನ್ನೇ ನಾಶಮಾಡುವುದೆಂದು ಹೇಳಂತ್ತಾರೆ : ಕೂಸೊಂದು ಮುಟ್ಟಲು ಹೋದ ಏಸೊಂದು ಜನಗಳು ಆಸು ನೀಗಿ ತುತ್ತಾಗಿ ಹೋದರು ಪಾಪಿಗೂಸು ವಿಶಾಲರೂಪು ತಾಳಿ ನುಂಗುತಿರೆ (ಸಿದ್ಧಪು. ೬-೩೦) ; ಪಾಪಿಯ ಕೂಸನೆತ್ತಿದಂತೆ ಕೂಡಲಸಂಗಮದೇವರ ಭಕ್ತಿ ಅಳಿಮಾನದವರಿಗೆ ಅಳವಡದಯ್ಯಾ (ಬಸವ. ೬೬೬); ಬಾಬಾಯೆಂದು ಪಾಪಿಯ ಕೂಸನೆತ್ತಿಕೊಳ್ಳಂತಟುವ ಕೂಸನೆತ್ತಿಕೊಂಡು (ಅರ್ಪವೇ. ೬-೬೦ ವ); ಧರಿಸಿ ಪಾಪಿಯ ಕೂಸ (ರೇಚಣ. ೦೦೯-೨೩). [ಸಂ. ಪಾಪಿನ್]

**ಪಾಪಿಯುಸಿ** (ನಾ). ಕೆಟ್ಟವಳು; ದುಷ್ಟೆ; ಪಾಪಿಷ್ಠೆ : ನಾನೆಂಥ ಪಾಪಿಯುಸಿ ?— ಎಂದು ತನ್ನನ್ನು ತಾನೇ ಹಳಿದುಕೊಂಡಳು (ಶಕುಂತಾ. ೦೨). [<ಸಂ. ಪಾಪೀಯಸೀ]

**ಪಾಪಿಷ್ಠ** (ನಾ). = ಪಾಪಾತ್ಮ : ಲೋಕಂ ಪೊಗಳಲಿದೞಿಂದ ಹೋಗದ ಸಹ್ಯಭಾವನೆಯಿಂದಮಂದಿರು ಮಾತ್ರೆಯುಂ ಪಾಪಿಷ್ಠರಾಗಿರ್ದು (ಬಸಪು. ೬೦-೨೦); ಆ ಸೂರ್ಯನು ಹ್ಯಾಗೆ ಪಾಪಿಷ್ಠನಾದನೋ ಪುನಃ ಯಾವ ಉಪಾಯದಿಂದ ಪರಿಶುದ್ಧನಾದನೋ (ಅರ್ಕಕಾ. ೨). [ಸಂ.]

**ಪಾಪಿಷ್ಠೆ** (ನಾ). ದುಷ್ಟೆ ; ಪಾಪಿ : ನಿಮ್ಮಡಿಗಳ ವಕ್ಷಸ್ಥಳಮಂ ವಿದಾರಿಸಿ ರಕ್ತಪಾನಮಂ ಮಾಟ್ಪೆನೆಂಬ ದೋಹಳಮೆನಗೆ ಪಾಪಿಷ್ಠೆಗೆ ಪುಟ್ಟಿರ್ದುದು (ವಡ್ಡಾರಾ. ೬-೩೬ವ); ನಿಮ್ಮಿಬ್ಬರಲ್ಲಾರೋ ಒಬ್ಬಳು ಆ ಪಾಪಿಷ್ಠೆಯಾಗಿರಬೇಕು (ದೇವೀಭಾ. ೦೯೬). [ಸಂ. ಪಾಪಿಷ್ಠಾ]

**ಪಾಪು, ಪಾಂಪು** (ನಾ). (ಕರಾ) ಸೇತುವೆ ; ಪೂಲು ; ಸಂಕ : ಅಬ್ಬಿಯ ನೀರು, ಕಳೆದ ವರ್ಷದ ಪಾಪನ್ನು ಕೊಚ್ಚಿಕೊಂಡು ಹೋಗಿದೆ (ಕುಂಕುಮ.೬೩).
**ಪಾಂಪು** : ಅಶ್ವತ್ಥಪುರಕ್ಕೆ ಈ ಪಾಂಪಿನ ಮೇಲಿಂದಲ್ಲದೆ ಬೇರೆ ಕಡೆಯಿಂದ ಹೋಗಲು . . . ಅಸಾಧ್ಯವೇ ಆಗಿತ್ತು (ಚೂಡ. ೫೫). [←ತುಳು. ಪಾಪು]

**ಪಾಪೆ, ಪಾಪ$_1$, ಹಾಪೆ$_1$** (ನಾ). ೧. ಗೊಂಬೆ ; ಪುತ್ತಳಿ ; ವಿಗ್ರಹ ; ಪುಡುಕೆಯಂ ತೆಱೆದು ನೋಟ್ಪನನ್ನೆಗಮದಱೊಳಗಿರ್ದ ಇಂದ್ರಜಾಲಿಗರ ಪಾಪೆಗಳುಂ ಸೀರೆಗಳುಂ ಝುಣಂಬಮುಂ ಕೊಂಡು (ವಡ್ಡಾರಾ. ೦೯-೧೦); ಪಳುಕಿನ ಪಾಪೆಯನಮರ್ದಿಂ ತೊಳೆದಂತೊರ್ಪ್ಪೊಗೆಬದ ದಿವ್ಯವಪು ಮಣಿಮಯಕುಂಡಲಮಕುಟಕಟಕಭೂಷಣವಿಲಾಸದಿಂದೇಂ ವಿಲಾಸಮಂ ತಾಳ್ದಿದುದೋ (ಆದಿಪು. ೬-೩೯) ; ಕದನದೊಳಾರ್ದು ಸಾರ್ದಿಸೆ ಮಹಾರಥರಚ್ಚು ಸಿಡಿಲ್ದುದು . . . ಪಾಪೆ ರೂಪುಗೆಟ್ಟುದು ನೊಗನೋರೆವೋಯ್ತು (ಶಂಕಾಪು. ೧೩-೬೯); ಲೋಗರ್ . . . ತಿಟ್ಟವಿಟ್ಟ

ಪಾಪೆಯೆನೆ ಮೂಗುವಟ್ಟಿರ್ದರ್ (ಶಬರಶ. ೧೧-೧೯). ೨. ಕಣ್ಣಿನ ಗೊಂಬೆ ; ಕನೀನಿಕೆ ; ಕಣ್ಣುಗುಡ್ಡೆ : ಸುಭದ್ರೆಯ ರೂಪು ಕಣ್ಣ ಪಾಪೆಯಂತೆ ಕಣ್ಗೊಳ್ಳೆ ತೊಳಗೆ (ಕಂಶಭಾ. ೪-೬೯ ಪ); ಮೋಹಲತಾ ಪರಿವೃದ್ಧಿಗೀಗಳೀ ಸುರಿವುವೆ ಕಣ್ಣ ಪಾಪೆಯೆನೆ ಪೊಣ್ಮಿದುವುತ್ಸವಬಾಷ್ಪ ವಾರಿಗಳ್ (ಪುಲ್ಲಿಕ. ೪-೬೯); ಅಡಿದಳಂ ಸುಟ್ಟು ಮಣಿಗೈಡೆಯಾಗೆ ಪಾಪೆ ಕಪ್ಪಡರೆ . . . ಧನಿಕಂ ಬೆಳ್ಪುವಿಡಿಯಲುಮಭಕ್ಷಭಕ್ಷಣನೆನಿಪನು (ಜಪಪ. ೧೧-೧೬); ಎನ್ನ ಮನದಲಿ ನೀನು ನಿನ್ನ ಮನದಲಿ ನಾನು ಎಮ್ಮ ಕಣ್ ಪಾಪೆಯೊಳು ನಾವು ನಾವುಗಳು (ಪಶೀಗೀ. ೬೦-೧೦). ೩. ಗೊಂಬೆಗಳಿಂದ ಕೂಡಿದ ಬಿರುದಿನ ಪೆಂಡೆಯ : (?). ಪಾಪ₁: ೨. 'ಕಾಶಿಬಿಂದು' . . . ಇದರ ಮಧ್ಯ ಗುಂಡಾದ ರಂಧ್ರವಿರುತ್ತದೆ. ಇದಕ್ಕೆ 'ಪಾಪ' ಎಂದು ಹೆಸರು . . . ಈ ಕಾಶಿಬಿಂದುವಿನ ಮೇಲೆ ಬೆಳಕು ಬಿದ್ದರೆ ಪಾಪವು ಸಂಕುಚಿತವಾಗುತ್ತದೆ (ಪಶ್ಚುದೃ. ೧೦೫). ೪. ಮಗು ; ಕೂಸು : ಅವರ ಪಾಪ ಒಂದೇ ಸಮನೆ ಅಳುತ್ತಿತ್ತು (ರೂಢಿ). ಪಾಹೆ₁: ೧. ಕರುಣದ ಹಾಹೆಯಂತೆ ದೈನ್ಯದ ಸೀಮೆಯಂತೆ . . . ಭೋಗದ ವಿಯೋಗಿಯೆನಿಸಿರ್ದ ತರುಣಿಯರ ವಿರಹಾತಿಶಯಮಂ ಗಿರಿರಾಜಂ ಕರುಣಿಸಿ ನೋಡಿ (ಗಿಂಕ. ೪-೧೦೯ ವ); ಕಾಳವಟ್ಟದೊಳ್ ಮೂಡಿದ ಹಾಹೆಯಂತೆಸೆವೆ (ಅಜಿಂಪು. ೦೩-೭೯); ನೀನಾಡಿಸುವ ಹಾಹೆಯಾನು (ಶದ್ವಾ. ೦-೩) ; ಹಳಚುವುವು ಹಾಹೆಗಳು ಸೂತ್ರಪನಲುಗಿದೊಡೆ ತತ್ಪುಣ್ಯಪಾಪಾವಳಿಗಳಾ ಹಾಹೆಗಳಿಗುಂಟೇ ಸೂತ್ರಧರನಿರಲು (ಕುವ್ಯಾಉ. ೯-೭೨). ೨. ನೇತ್ರ ಹಾಹೆಗೆ ವಿಶ್ವರೂಪಜೀವ ಬಲುಹುಂಟೆ (ದೀಕ್ಷಾಬೋ. ೪೦-೦೩) ; ರಾಹು ತೊಡಕಿದ ರವಿಯುವೊಲು . . . ದಿಟ್ಟಿಸಿದ ಕಂಗಳ ಹಾಹೆಯುವೊಲೆಸೆದಿರ್ದ ನಾಹವರಂಗಮಧ್ಯದಲಿ (ತೊರರಾ. ೪-೪-೩೨). ೩. "ತೊಡರೆಂದೊಡಕ್ಕು ಬಿರುದಿನ ಹಾಹೆ" (ಶಬ್ದಮಂ. ೫೨) ; ಕಾಲ ಪೊಂದೊಡರ ದೈತ್ಯರ ಹಾಹೆಗಳೊಪ್ಪೆ ವೇಣುವಿಂ ತುತ್ತುರುನಿಸ್ವನಂ ನೆಗಟೆ ಗೋವಳರಾಯನ ಲೀಲೆ ರಂಜಿಕುಂ (ಜಗಪು. ೫-೪೩) ; ಅಮರರ ತೊಡರ ಹಾಹೆಯನೆಡದ ಕಾಲಿಂಗಿಟ್ಟು ಹೊಜವಂಟ (ಕಾಶಿರಾ. ೧೧-೩೨) ; ರಾಜರಾಜರ ಧುರದೊಳಗೆ ಗೆದ್ದವರ ಹೆಸರಿನ ಹಲವು ಹಾಹೆಗಳ ಬಿರುದುಗಳ ಪಿಡೆಯುವನು ಕಾಲಲಿ ಧರಿಸಿದನು (ತೊರರಾ. ೬-೨೦-೦೩). ೫. ರೂಪ ; ಆಕಾರ ; ಮಾಟ : ಜಗವೆಲ್ಲವು ನಿನ್ನ ಹಾಹೆ ಉತ್ಪತ್ತಿ ಸ್ಥಿತಿಲಯವೆಲ್ಲವೂ ನಿನ್ನ ಹಾಹೆ ಕ್ರಿ ನಿಃಕ್ರಿ ಎಂಬುದೆಲ್ಲವು ನಿನ್ನ ಹಾಹೆ (ಪೋಲವಾ. ೧೦೩-೪೪೫) ; ಚಿತ್ರದ ಬೊಂಬೆಯ ಹಾಹೆ ಎಲ್ಲಕ್ಕೆ ಆತ್ಮನಿಂದ ಚೇತನಿಸಿ ನಡೆವುತ್ತಿವೆ (ಮರೀಪ. ೨೬೭-೩೦). ೬. (ಆಲಂ) ನೋಟ; ದೃಷ್ಟಿ: ಆತ್ಮಂಗೆ ಕಾಯವೆ ರೂಪು ಆ ಕಾಯಕ್ಕೆ ಆತ್ಮನೆ ಹಾಹೆ ಆ ಹಾಹೆಗೆ ಅಜೀವ ಬೀಜ ಆ ಬೀಜಕ್ಕೆ ಗೋಪತಿನಾಥ ವಿಶ್ವೇಶ್ವರ ಲಿಂಗವೆ ನಿರ್ಬೀಜ (ತುಜುಗಿ. ೭-೩೦); ಕಚ್ಚಿದರೆ ವಿಷವೇರಿತಲ್ಲದೆ ವಿಷಕ್ಕೆ ಹಾಹೆಯಿಲ್ಲ . . . ಹಾವಿದ್ದಂತೆ ವಿಷವ ಕೊಲಬಹುದೆ (ಸಗವೂ. ೪. ೬೩೭-೫೭). 'ಹೂಹೆ₁' ಪರಾ.

ಹಾಹೆಯ ಕಟ್ಟು=ಕೇಡಿನ ನಾಶಕ್ಕಾಗಿ ಗೊಂಬೆಗಳಿರುವ ಯಂತ್ರವನ್ನು ಕಟ್ಟು : ರತಿಗೆ ಹಾಹೆಯ ಕಟ್ಟುವಳು ತನ್ನತಿಶಯದ ಚೆಲುವಿನಲಿಯೆನಿಸಿದ ಸತಿಯನಾ ವಿಭು ತಾಂ ಸ್ವಯಂವರವಿಧಿಯುಲೀಯುಲಿಕೆ (ಶಾಶ್ಯಶಾ. ೨೯-೪೦). ಹಾಹೆಯ ತೊಡರು=ಸಣ್ಣ ಸಣ್ಣ ಬೊಂಬೆಗಳಿಂದ ಕೂಡಿದ ಕಾಲಿನ ಆಭರಣ ; ಬಿರುದಿನ ಪೆಂಡೆಯ : ನಕ್ಷತ್ರಕುಲವಿಟ್ಟಣಿಪ ಮುಡಿ ಹೂವನಿಟ್ಟು ಚರಣದೊಳಗಳವಟ್ಟ ಹಾಹೆಯ ತೊಡರನಿಟ್ಟ ವೀರೇಶ್ವರನ ಚರಣಾಂಬುಜಕ್ಕೆ ಶರಣು (ಲಶಿಶಂ. ೦೮-೧೮) ; ಹಾಹೆಯ ತೊಡರ ಭಂಡರು ಕೆಲರು ಕೆಲರು ಕುಲಕ್ರಮಾಗತದ ಗಡಬಡೆಯ ಭಂಡರು (ಕುವ್ಯಾಕ. ೧೩-೫).
[ದೇ.॥ ತಮಿ. ಪಾಪ್ಪಾ, ಪಾವೈ ; ಮಲ. ಪಾವ ; ತುಳು. ಪಾಪೆ ; ತೆಲು. ಪಾಪ]

ಪಾಪೋಸು, ಪಾಪಾಸು, ಪಾಯಿಪೋಸು (ನಾ). ೧. ಕಾಲನ್ನು ಮುಚ್ಚುವಂತಹುದು ; ಮೊಚ್ಚೆ ; ಪಾದರಕ್ಷೆ: ಪಾಪೋಸು ಹೋದುವಲ್ಲ ಸ್ವಾಮಿ ಎನ್ನ (ಪುರಂದ. ೪-೦೦೯ ಪಲ್ಲವಿ) ; ಕಾಲ ಕುಪ್ಪಸ ಪಾಪೋಸು ಜೋಲುವ ಜವಿಕೆಯ ಮೊಲೆಕಟ್ಟುಗಳ ಚೆಲ್ವ ಸೂಳೆಯರ್ಮೆದಿದರಾಗ (ಕಂನಪ. ೧೧ ೪) ; ಗೆಳೆಯರು . . . ತಮ್ಮ ಪಾಪೋಸುಗಳನ್ನು ಎಳೆಯುತ್ತ ಮುಂದೆ ಮುಂದೆ ನಡೆದರು (ಕನಕ. ೪೦) ; ಪಾದಕ್ಕೆ ತಕ್ಕ ಪಾಪೋಸು, ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ (ಗಾದೆ). ಪಾಪಾಸು: ೧. ವ್ಯಾಪಾರ ನಮಗಾಯಿತು . . . ಪರಮಪಾಪಿ ಕಲಿ ಎಂಬೊ ಪಾಪಾಸು ಮೆಟ್ಟಿ ದುರಾತ್ಮರಾದವರ ಎದೆ ಮೇಲೆ ನಡೆವಂಥ ಪುರಂದ. (೨-೦೫-೦) ; ಪಾಪಾಸು, ಎಕ್ಕಡ, ಛತ್ರಿ ಮುಂತಾದವುಗಳನ್ನು ಉಪಯೋಗಿಸಿದರೆ . . . ಕಾಲುಕಣ್ಣುಗಳಲ್ಲಿ ಹುಟ್ಟುವ ಸಕಲ ರೋಗಗಳನ್ನೂ ಕೆಡಿಸುವುವು (ಸಕವೈ. ೫೫); ಒಂದುದೇಶದ ಜನರು ಪಾಪಾಸು ಹಾಕುವರು, ಇನ್ನೊಂದು ಕಡೆಯವರು ಬೂಟ್ಸುಗಳನ್ನು ಉಪಯೋಗಿಸುವರು (ಜಾಂಕ್ರ. I, ೪೭೦). ೨. ಎಕ್ಕಡದ ಆಕಾರದಲ್ಲಿರುವ ಮತ್ತು ಮುಳ್ಳುಗಳಿಂದ ಕೂಡಿದ ಎಲೆಗಳುಳ್ಳ ಒಂದು ಬಗೆಯ ಸಸ್ಯ ; 'ಪಾಪಾಸುಕಳ್ಳಿ' ಪರಾ. ಪಾಯಿಪೋಸು: ೧. ಈ ಶರೀರ ನಿನ್ನ ದಾಸರ ಪದಕೆ ಪಾಯಿಪೋಸು ಮಾಡಿದರೂ ಋಣಾ ಸಲ್ಲಿಸುವೇನೆ (ಪೋಕ್ಷದೀ. ೨೮-೨). [←ಪಾರ. ಪಾಪೋಷ್ : ಹಿಂ. ಪಾಪೋಶ್, ಪಾಯಪೋಶ್ ; ಮರಾ. ಪಾಯ್‌ಪೋಶ್, ಪಾಯಪೋಸ್]

ಪಾಪೌಘ (ನಾ). ದುಷ್ಕರ್ಮದ ರಾಶಿ.–ಸಮೂಹ : ಕಲ್ಯಾಣದಾಯ ಕಾಹಲ್ಯಾಪನುತಿಪವಿತ್ರ ಕಲ್ಯಾಣಾಚಲಧನ್ವ ಪ್ರಮಥತ್ರೈಲ್ಯತಿಪಾಪೌಘ ವಲ್ಕಲವಿತ್ರ ಧಾವಲ್ಯಾಂಗ (ಶೈರಪೇ. ೪-೧೧); ಪಾಪೌಘಪ್ರಬದ್ಧಂ ಮರ್ಘುರೆ ಗೆಲಡದೇಕಿರ್ಪನಾ ಗೆಲ್ವ ಪಾಂಗು ನಡೆ ನೋಳ್ಪಂ (ವೃಕಪು. ೨೮-೧೦೩).
[ ಪಾಪ₂ + ಓಘ ]

ಪಾಪ್ಪಳಿ 'ಪೊಪ್ಪಳಿ₁' ನೋ.

ಪಾಪ್ಮ (ನಾ). ಪಾಪ : ದುಷ್ಕರ್ಮ ; ಪಾತಕ : "ವೃಜಿನಂ, ದುರಿತಂ . . . ಅಶುಭಂ, ಪಾಪಂ, ಪಾಪ್ಮ, ಪಾತಕಂ_ಈ ೧೪ ಪಾಪಂ" (ಹಲಾಯು. ೧೦೩-೫). [ ಸಂ. ಪಾಪ್ಮನ್ ]

ಪಾಬ (ನಾ). (?) : ಸದಾಯ ಪಾಬ ಕೂಪ ತಟಾಕ ನಿಧಿನಿಕ್ಷೇಪ (ಎಕ. X (S), ಕೋಲಾರ. ೩೦೪-೦೫; 17ನೆಯ ಶತ). [ ? ]

ಪಾಭಸೆ (ನಾ). ಒಂದು ಸ್ಥಳದ ಹೆಸರು : ಇನ್ನು ವಿಂಧ್ಯಾಟವೀನಿಕಟ ಶಾಖೀತಟವುಂ . . . ಬನವಾಸಿ ದೇಶವುಂ ಪಾಭಸೆಯ ಕೋಟೆಯುಂ ಮೊದಲಾಗೆ (ಎಕ. II, ೫೯-೧೧೧ ; 974). [ ? ]

ಪಾಮ (ನಾ). ಒಂದು ಬಗೆಯ ಚರ್ಮರೋಗ ; ತುರಿಕೆ : "ಕಜ್ಜೂ ನಾಮಮುಜಿಗೆ ಪಾಮಂ" (ಪಸ್ತುಕೋ. ೭೩-೩೫) ; "ಪಾಮಂ ಖಸಂ ಖತ್ತುವೆನೆ ಕರಕನಿಕ್ಕುಂ" (ಮಂಗರಾ. ೧೦೩-೦). [ ಸಂ. ಪಾಮಾ ]

ಪಾಮನ (ಗು). ೧. ಕಜ್ಜಿ ಹತ್ತಿದ. (ನಾ). ೨. ಕಜ್ಜಿ ಹತ್ತಿದವನು : "ಕಚ್ಛು ಪಾಮನನಕ್ಕುಂ" (ಪಸ್ತುಕೋ. ೭೪-೪೦). [ಸಂ. ಪಾಮನ್]

ಪಾಮರ₁ (ನಾ). ನೆಲಬಾವಿಯಿಂದ ನೀರು ಸೇದುವಾಗ ಕಾಲಿಡಲು ಅನುಕೂಲವಾಗುವಂತೆ ಬಾವಿಗೆ ಅಡ್ಡಲಾಗಿ ಹಾಕುವ ಮರದ ಹಾಸುಹಲಗೆ. [ < ಪಾಯ್₂ + ಮರ₁ ]

ಪಾಮರ₂ (ಗು). ೧. ಅಲ್ಪವಾದ ; ತುಚ್ಛ : ಗರುವವ್ಯಾತಕೊ ನಿನಗೆ ಪಾಮರಮಾನುಜನೆ (ಪುರಂದ. ೨-೦೬೮ ಪಲ್ಲವಿ). ೨. ಏನೂ ತಿಳಿಯದ. ೩. ಕಜ್ಜಿ ಹತ್ತಿದ. (ನಾ). ೪. ಅಲ್ಪ ; ನೀಚ : "ವಿವರ್ಣಃ, ಪಾಮರಃ . . . ಕ್ಷುಲ್ಲಕಃ, ಇತರಃ–೧೦ ನೀಚನ ಪೆಸರು" (ಸಿದ್ಯಾಂಕ. ೩೦೨). ೫. ಏನೂ ತಿಳಿಯದವನು ; ದಡ್ಡ ; ಮೂಢ : ಬರಿ ತಾರಾಡಿ ಅವನರಿವಿಗೆಟುಕುವವೊಲೊಂದಾತ್ಮನಯವ ಹವಣಿಸಿದನಿದನು

ಪಾಮರಜನದ ಮಾತಿನಲಿ (ಮಂಕುಕ. ೯೩೮) : ಪಾಮರ ಮೊದಲಾಗಿ ಪಂಡಿತರವರೆಗೆ ಯಾರೂ 'ನಾನಿರುವೆನೇ ಇಲ್ಲವೇ' ಎಂದು ಸಂಶಯಪಡುವುದಿಲ್ಲ (ಭಾರತ. ೨೩೫). ೬. ಒಕ್ಕಲಿಗ ; ರೈತ : ಮೂಡೆಗಟ್ಟಂ ಕಟ್ಟಿ ಹುಡುಕುನೀರೊಳ್ ಮೆಟ್ಟಿ ಕಾಡುತಿಹ ಪಾಮರರ ಕೈವಿಡಿತೆಗೊಳಗಾಗಿ (ಭಾವಕಂ. ೨-೮) ; ಗಗನಮೆನಿಪ್ಪ ಪಾಳ್ವೊಲದೊಳ್ . . . ಮುರ್ಬೆನಿಪ ಗೊಬ್ಬರಮಂ ತಳಿದಲ್ಲಿ ಚೆಲ್ಲಿ ತಾರಗೆಗಳೆನಿಪ್ಪ ಬಿಳ್ತುಗಳನಂತವ ಕೈಂದಪಬಿಂಬರಾಷ್ಟ್ರಕುಂಭಗತಸುಧಾಮರೀಚಿಜಳಮಂ ಸುರಿದಂ ಸಲೆ ಕಾಲ ಪಾಮರಂ (ರಾಜಶೇ. ೧೧-೬೮). [ಸಂ.]

**ಪಾಮರಿ** (ನಾ). ೧. ಹಳ್ಳಿಯ ಹೆಂಗಸು ; ಒಕ್ಕಲಗಿತ್ತಿ : ಪಾಮರಿಯರ್ ಜಿತಾಮರಿಯರಿರ್ಪರ್ಕಾದು ಕೇದಾರಮಂ (ಪುಲ್ಲಕು. ೨-೨೦); ನೆಯ್ದಿಲ್ವೊಪ್ಪುಡಿಯನೆತ್ತಿ ಬೈತಲೆದೀವುವ ಪಾಮರಿಯರಂ ಮಹೀಪತಿ ಕಂಡಂ (ರೇಣಾವ. ೫-೬೮) : ನಸುಬಾಗಿ ಬೀಸುಗಲ್ಗಳನಡುತಿರ್ಪ ಪಾಮರಿಯರೊಪ್ಪುವರಾ ಕಳಮಪ್ರದೇಶದೊಳ್ (ದಶಕು. ೧-೨೯) ; ಶಾಲಿಗಳ ಕೈಗಂಪ ಪೊಲಗಾವ ಪಾಮರಿಯರೋಳಿಗಳ ಮೈಗಂಪ . . . ಸೇವಿಸುತೆ ಪಥಿಕರಾಸರ್ಗಳಿಪರಾ ನಾಡೊಳು (ಕೈಬಂಖಾ. ೩-೮). ೨. ತಿಳಿವಳಿಕೆಯಿಲ್ಲದವಳು ; ದಡ್ಡಿ. [ಸಂ. ಪಾಮರೀ]

**ಪಾಮರೀಜನ** (ನಾ). ಹಳ್ಳಿಯ ಹೆಂಗಸರು ; ಚದುರಿಂದೆ ಗರ್ದೆಗಳನೊಲ್ದುಜಿ ಕಾವುದು ಪಾಮರೀಜನಂ (ತ್ರಿಶೂ. ೨-೯೦). [ಸಂ.]

**ಪಾಮರೆ** (ನಾ). = ಪಾಮರಿ ೧ : ಪಾಮರೆಯರ ಕಲಮದೊಳು ಗಿಳಿಯ ಸೋವಲು (ತರ್ಕಕಿ. ೧೩-೫). [ಸಂ. ಪಾಮರಾ]

**ಪಾಮಾಜಿ** 'ಪಾವಸೆ' ನೋ.

**ಪಾಮೆ** (ನಾ). ೧. = ಪಾಮಂ : "ಪಾಮಾ, ಕಚ್ಛೂಃ, ಖಸಃ – ಈ ೩ ಕೆರಕು (ಕೆರಂಕು)" (ಹಲಾಯು. ೯೮-೯೯೮). ೨. ಹೊಟ್ಟೆರೇವಂತ ಹಂದು ; ಉಮಿಯಿಂದ ಕೂಡಿದುದು : ಮೂಲವಲ್ಲಿ ಪಾರವಾಳದ (ಮಾವಿ) ಬಣ್ಣನಂಥಾ ಕಾಳುಗಳು ಕೂಡಿರಬಾರದು. ಮತ್ತು "ಪಾಮಾ" ಅಂತಂದರೆ ಹೊರಟು ಕೂಡಿರಬಾರದು (ಮುಂಬವ್ಯಾ. ೫೬). [ಸಂ. ಪಾಮಾ]

**ಪಾಯ್**$_1$, ಪಾಯ್$_1$, ಹಾಯು (ಕ್ರಿ). ಪಾಯಿದ, ಪಾಯ್ದ, ಹಾದ, ಹಾಯ್ದ (ಭೂತಕೃ). ಪಾಯಿದು, ಪಾಯ್ದು, ಹಾದು, ಹಾಯಿದು (ಭೂತನ್ಯೂ). ೧. ನೆಗೆ ; ಹಾರು : "ಪಾಯ್ – ಲಂಘನೇ" (ಶಮಧಾ) ; ನೆಲಸಿರ್ದ ವಜ್ರಪಂಜರಮಳಬುವಿನಂ ಪಾಯ್ದು ಸಿಂಧುರಾರಾತಿಯನುಜ್ಜ್ವಳತನುವನಭ್ರಪಥದತ್ತ ಲಂಘಿಸಲ್ಕಿರ್ದುದಂ ಚಮೂಪತಿ ಕಂಡಂ (ಅವಿಕು. ೧೬-೯೫) ಆಗಳಾ ಪಟುಪಂಗಳಿಂದೆ ಪಾಯ್ವ ಪುಲಿಗಳ ಪಾಳಿಗಳೊಳ್ ಪರಿದಾಡುವ ತರುಣಹರಿಣಂಗಳುಮಂ . . . ನೋಡಿ (ಶಂಶಭಾ. ೦-೦೦೫ ವ) ; ಧೀಂಕಿಟ್ಟು ಪಾಯುತ್ತೆ . . . ಕಿಡಪಿತೊಂದೇಣನಂ ಚಿತ್ರಕಾಯೆಂ (ಗಂಕ. ೦.೯೫) ; ಮೇಗಣ್ಗೆ ಪಾಯ್ವ ಸೆಂಡಂ ವನಿತೆಯೊರ್ಪಳ್ ಕೀಳ್ಪಡಿಸಿ ಪೊಯ್ಕೆ (ಶದ್ಮರಾ. ೮-೯೮) ೨. ಮೇಲಿನಿಂದ ಕೆಳಕ್ಕೆ ಹಾರಂ ; ಧುಮುಕು : ಆ ಕೋಡಗಂ . . . ಒಂದು ದಿವಸಂ ಪರ್ವತಶಿಖರದಿಂ ಪಾಯ್ದು ಬಂದು ಬರ್ದುಂಕಿ ಮುನಿಪರರ ಪಕ್ಕದೆ ಬಿರ್ದತ್ತಾಗಳ್ (ವಡ್ಡಾರಾ. ೧೬೨-೨೯) ; ಬೊದಿಲ್ಲನೆ ಪಾಯ್ದು ನೀರೊಳಾ ಬಾಳನನಾದಮಾದರದೆ ಕಂಡೊಸೆದಂ ನಿಧಿಗಂಡನಂತೆವೋಲ್ (ಶಂಶಭಾ. ೦-೯೬) : ಕೋಪಾನಳನಳುರೆ ಮಹಾಕೂಪದೊಳಿಭವೈರಿ ಪಾಯ್ದು ಸತ್ತುದು (ಶಂಶಕಂ. ೯೦-೨) ; ರಥದಿಂದಾ ಕ್ಷೋಣಿಗೆ ಪಾಯ್ದಂ ಬಳಾಹಕಂ ಭಯದಿಂದಂ (ಕುಸುಮಾ. ೦೦-೨೯). ೩. ತುಡಿ ; ಸ್ಪಂದಿಸು ; ಮಿಡುಕು ; ಹೊಡೆದುಕೊಳ್ಳು : ಅಟ್ಟುಪಟ್ಟ ಪುಲ್ಲೆಯುಂತಿರರ್ದೆ ಪಡಪಡ ಪಾಯೆ (ರೇಣಾವ. ೦೦-೬೦ ವ). ೪. ಹೊರಸೂಸು ; ಹೊಮ್ಮು : ಮುತ್ತುಗಳಂತಿರೆ ಸೂಸಿ ಪಾಯ್ವ ಶೀಕರದೊಳೆ ನಾಂದು ಸೇಡುಗೊಳುತಂ (ಕಾವ್ಯಸಾ. ೬೮ ಕೂದ್ರ೯) ; ಎಚ್ಚ ಶರಾಳಿಗಳ್ ಛಟಿಲ್‌ಛಟಿಲೆನೆ ಪಾಯೆ ಪಾಯ್ವ ಬಿಸುನೆತ್ತರ ಸುಟ್ಟುರೆ ಚಾತುರಂಗಮಂ ಕಟಕುಟಮಾಗೆ ಪೇಟಿ ಪಸುರಿಲ್ಲನೆ ಪಾಯಿಸಿ ತೇರಂ (ಶಂಶಭಾ. ೮-೦೦೫) ; ಪೂತ್ತರಿಸುವ ಚಕ್ರಸಿಂಧುರದ ಪುಷ್ಕರದಿಂದಿರಮಣ್ಮೆ ಪಾಯ್ವ ಶೀಕರನಿಕರಂ (ಕುಸುಮಾ. ೯-೩೮) ; ಬೆಚ್ಚನೆ ಪಾಯ್ತಂದು ಪೊದಟ್ದ ರಕ್ತಜಲದಿಂದಂ ತೋಯ್ದು ಕಂದರ್ಪದೇವನ ಚಕ್ರಕ್ಕೆಣೆಯಾಯ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ (ಕಾವ್ಯಸಾ. ೯೩೨). ೫. ದಾಟಿ ಹೋಗು ; ದಾಟು ; ಉತ್ತರಿಸು : ಜಲನಿಧಿಯಂ ಪಾಯ್ದೊರ್ವನೆ ನಿಲಿಕಿ ದಶಾನನನ ಪೊಬಲನಾ ಲಂಕೆಯುಂ (ಕಬರಾ. ೩-೦೯೦) ; ನಿಜಪರಿಜನಂಬೆರಸು ಗಂಗೆಯಂ ಪಾಯ್ದುದಟಿ ಪಡುವಣದೆಸೆಯು ಕಾಮ್ಯಕವನದ ಬಟ್ಟೆಯಂ ತಗುಳ್ದು ಪೋಗೆವೋಗೆ (ಶಂಶಭಾ. ೬-೨೦ ವ) ; ಗಂಗೆಯಂ ಪಾಯ್ವಾಗಳಂಬಿಗರ ಮಗಳ್ ಮತ್ಸ್ಯಗಂಧಿಯೆಂಬ ಕನ್ನಿಕೆ ನಾಫೆಗೆ ಹುಟ್ಟನಿಕ್ಕುವಲ್ಲಿ (ರಶ್ಮೀಶ. ೩-೦೦೦ ವ) ; ಕಟಿಂಗಿದ ತಮಾಲವೆಂಬ ಕಾಟ್ಪೊಚ್ಚಮಂ ಪಾಯ್ದಂ (ರಾಮಾಶ್ವ. ೫೬-೨೯). ೬. ಅಪ್ಪಳಿಸು ; ಡಿಕ್ಕಿಹೊಡೆ ; ತಾಟಿಸು : ಗಗನತಳಂಬರಂ ನೆಗೆದು ಮತ್ತಗಜಂಗಳ ಮಸ್ತಕಕ್ಕೆ ಪಾಯ್ದುಗಿಬಗಿ ಮಾಡುವಲ್ಲಿ (ಕಾದಂಪೂ. ೯೯) ; ಬಲವದ್ವೃಕ್ಷಮನೊತ್ತಿ ಪಾಯ್ದು . . . ಸುಟಿದತ್ತಂದೆಂದು ಜಂಝಾನಿಲಂ (ಉದ್ಭಟ. ೬.೮೨) ; ಎನ್ನ ತ್ರಿವಿಧಸಪ್ತಕಜನ್ಮಸಾಫಲ್ಯವೆಂದು ಕಂಭವನೆ ಪಾಯಲ್ (ಭಾವಕಂ. ೩-೬) ; ಕಾಯು ಬಲಿದಿಹುದೆಂದು ಬೆಟ್ಟವ ಪಾಯೆ ಕೆಡುತಿಹ ಬಹಳ ಪಾಪಿಯು ದಾಯು ಬಳಿಕವಗಾಯ್ತು (ಕೋಗಯು. ೫-೦೯). ೭. ಎರಗು ; ಮೇಲೆ ಬೀಳು ; ಆಕ್ರಮಣ ಮಾಡು : ತುಱುಗೋಳೊಳೆ ಸಾವುದು ಸೈಪಿದೆಂದು ಪಾಯ್ದುಱಿಕೆಯು ಗೋವರಣ್ಮೆ ಬರೆ (ಶಂಶಭಾ. ೮-೯೫) ; ಅರ್ಕಾಶ್ವಂಗಳಂ ನೀಳ್ಕಿ ಕೊಪ್ಪರದಿಂ ಪಾಯ್ವಳವಿಂದೆ ಕೇಶಿ ಪರಿತಂದಂ ಕಂಸಾನಾದೇಶದಿಂ (ಜಗಂ. ೫-೯೯) ; ಒಲಿದು ಪಿಡಿದ ಚೆನ್ನಿಗನೊಲ್ಲದೆ ಪೋದ ಲಲನಾಜನದ ರೋಷವನು ಗೆಲಲಱಿಯದು ಪಾಯ್ದು ಪಶು ತಪ್ಪಿ ಪೋದ ಪೆಣ್ಬುಲಿಯ ಕೋಪಾಟೋಪದವೊಲ್ (ಕುರಂಗಶಾಂ. ೩೩-೮೩). ೮. ಮುಸುಕು ; ಮುತ್ತು : [ನವ]ಶಾಳಿಗೆ ಪಾಯ್ವ ಶುಕಾಳಿ ತೋಱಿ (ಶಂಶಭಾ. ೦-೫೨) ; ವಿಶಾಲವಪ್ಪ ಆಲದ ಮರದ ಮೇಲೆ ಕಾಗೆ ಬಂದು ಪಾಯ್ದುಂ ದುಸ್ವರದಿಂ ಕರೆವುದುಂ (ಶಂಶಕಂ. ೨೨೯-೦೦) ; ಬಂಡನುಣ್ಬಳಿಪಿನಿಂ ಪೆಣ್ದುಂಬಿಗಳ್ಪಾಯ್ದು ಪುಷ್ಪರಸಾಸಾರದ ತುಂತುಱುಂದೆಱಿಕೆ ನಾಂದಾಂದೋಳಿತಾಶೋಕಮಂಜರಿಯಂ ಸಾರ್ವುವು ಪಲ್ಲವೋಲ್ಲಸಿತಮಂ ಬಾಲಾತಪಭ್ರಾಂತಿಯಿಂ (ಪುಲ್ಲಕು. ೨-೩೬) ; ಕೇಣವಿಲ್ಲದ ರೋಹಿತ ವಾರ್ಧಿಯೊಳು ಕಟ್ಟುಗಾಣಕ್ಕೆ ಪಾಯ್ವ ಮೀಸೆನಲು ಗೋಣರೆಗಡಿದು ಪೆರ್ನೆರವಾಂತು ಮಿಡುಕುವ ಪ್ರಾಣದ ಶವಗಳೊಪ್ಪಿದುವು (ಕೋಹಕ. ೯೦-೬೦). ೯. (ಭೂತ, ಪಿಶಾಚಿ ಮುಂತಾದುವು) ಮೆಟ್ಟು ; ಹಿಡಿದುಕೊಳ್ಳು : ಪಾಯ್ದತ್ತು ಭೂತಮೆಂಬರ್ ಕೆಲರ್ ; ಮತ್ಸರದ ಕಾರವನ ಪ್ರೇತವೆಂಬರ್ ಕೆಲರ್ (ಅಶ್ವಶಾ. ೦-೦೨). ೧೦. ಮುಂದೆ ನುಗ್ಗು : ಸಂಜಾತರೋಷಂ ಮೇಷಂ ಮುಳಿದು ಕಡೆಯೆ ಪಾಯ್ದೊಡವಳ್ ಕಡುಮುಳಿದು ಓರಿಯದೊಂದುರಿಪ ಕೊಳ್ಳಿಯಂ ತಂದಾ ತಗರಂ ಪೊಯ್ಕಲೊಡನದಱ ಮೆಯ್ಯನುರಿ ಪತ್ತಲ್ ಕಟ್ಟಿದ ನೇಣಂ ಪಱಿಯೆ ಪಾಯ್ದಾ ತಗರ್ ಪರಿದು ಕುದುರೆಯ ಮಂದುರಮಂ ಪಾರಿ ಪುಗುವಂತೆ ಪೊಕ್ಕು (ಶಂಶಕಂ. ೦೬೯-೦೦) ; ಆ ಕಲಕಂಠಜಾಲಕಂಗಳ ಕಳಕಳಕ್ಕೆ ತೆರಳ್ದು ಕೇಱಿ ಪಾಯ್ವ ಗೋಲಾಂಗೂಲಂಗಳ್ (ಕುಸುಮಾ. ೨-೬೦ ವ) : ಮುತ್ತಿದ ಕಿರಾತರಂ ಕಾಣುತ್ತುಂ ನಾಲ್ದೆಸೆಗೆ ಪಾಯ್ವ ಮಿಗಮುಂ ಕಡೆಯೆ ಚೊತ್ತಿ (ಉದ್ಭಟ. ೨-೬೦) ; ಕಂಡೆಡೆಗೆ ಪಾಯ್ವುದಿಂ ಕಾಯ್ವುದಿಂ

ಸುಯ್ವರಿಂ ತದ್ರಣಾಂಕಣಮೆಸೆದುದು (ಶಬ್ದ. ೦೭-೨೦). ೧೧. (ರಭಸ ದಿಂದ) ಹೋಗು ; ಬಳಿಸಾರು ; ಪಲತೆಱದಿಂ ಲೋಗರ್ದಾನಲಾಭ ಭೋಗೋಪಭೋಗವೀರ್ಯಾದಿಗಳಂ ಸಲಿಸುವೆಡೆಗೆಡೆಗಮಾಯ್ದು ಬಱಿ ಸಂದೊಂಗಂತರಾಯಮನುಬಂಧಿಸುಗುಂ (ಸುಕುಮಾ. ೬-೨೭) ; ಹರಿಯುಜರ್ ಪಂದಿ ಪದರ್ಗಗಳಾಗುತೆ ಮೇದಿನಿಗೆ ನಭಕೆ ಪಾಯ್ದೞಿಸಿ ಕಾಣದೆ (ಶವ್ಯ೦ಠ. ೦೦-೨೩೦). ೧೨. ಎಡೆಯಾಡು ; ತೊಳಲಾಡು : ನೆಯ್ದಿಲ್ಗೊಳಂಗಳೊಳೋಲಾಡಿಯುಮೊಸರ್ವ ಚಂದ್ರಕಾಂತಶಿಲಾತಳಂಗ ಳೊಳ್ಕರಂಗಳನೆಱಿವಿಯುಂ ವಿಘಟಿತ ಚಕ್ರವಾಕಂಗಳಪ್ಪ ಕಮಲವನಂಗಳೊಳ್ ಪಾಯ್ದುಮಿಂತು ಪಲತೆಱದೆ ಕೋಟಲೆಗೊಳುತಿರ್ಪಂ (ಕಾದಂಬ. ೮೮೬). ೧೩. ಇರಿ ; ತಿವಿ ; ಗುಮ್ಮು : ನಸೆವಣಕದೆ ಬೆನ್ನಂ ಸಂಧಿಸುವುದುಮಸ ವಸದಿನೆಡೆಗೆ ಪುಗಲೊಡನಂತಾ ಬಸವಂ ಪಾಯ್ದೊಡೆ ಕೆಸಱೊಳ್ ಬಸಪಱಿ ದಿರ್ದೊಂದು ಗೊಂದೆ ಪೊಂದಿತ್ತಾಗಳ್ (ಶಂಪ್ರತಿ. ೨-೨೯) ; ನಿಟ್ಟೊಡ ಲನಂ ನಿವ್ರ್ಯಗ್ರನಂ ತತ್ಪುರೋರುಪದಪ್ರಾಪ್ತನನೆಬ್ಬಿ ಪಾಯ್ದು ಪಸುಗೆ ಗೊರ್ೞಿಂದೆ ಕೋದೆತ್ತಿ ಮಂಡಪಸೋಪಾನದ ಪಾರ್ಶ್ವದಲ್ಲಿ ಕೆಡವಂತೀ ಡಾಡಿದತ್ತೆತ್ತಲುಂ ವರ್ಧತಿ. ೪-೬). ೧೪. ಆವರಿಸು ; ಹಬ್ಬು : ಮಂದೈಸಿ ಪಾಯ್ದು ಸಾಯಕಸಂದೋಹದಿನಭ್ರಮಾರ್ಗಮಾರ್ಗಂ ಕಾಣಲ್ ಬಂದುದಣಮಿಲ್ಲ ಶರಭಯದಿಂದೋಡಿದುದಕ್ಕುಮೆಂಬ ನುಡಿ ಪರೆವಿನೆಗಂ (ಕಾಂತಿಶ. ೪-೦೪). ೧೫. ತೆವಳು ; ನುಸುಳು : ಪುಱುಮೊಲ್ವಾಯು ಮೃಗಂಗಳೋಡಲವಕಾಶಂ ತಾನದಿಲ್ಲೆಂಬಿನಂ ಸುಱಿದಂಭೋನಿಧಿ ಮೇರೆ ದಪ್ಪಿದ ತೆಱಂ ಬಂದತ್ತನೀಕಾರ್ಣವಂ (ಕಾವ್ಯಸಾ. ೪೬೩). ೧೬. ಕೈನೀಡು ; ಚಾಚು : ಧರ್ಮಪತ್ನಿ ಬಾಯುಱಿದು ಕೊರಲ್ಗೆ ಪಾಯ್ದು ಪರಿದಾಡುವ ಬಾಲಕನಾದ ಶೋಕದಿಂ ಗಱಗಱ ಕಣ್ಣ ನೀರ್ ಸುರಿಯೆ ಚಿಂತಿಪ ಪಾರ್ವನ ಕೋದೊಂದು ಪೊಂಪುಱಿಯುನೆ ನೋಡಿ ನಾಡೆ ಕರುಣಂ ತನಗಾಗಿರೆ ಕೊಂತಿ ಚಿಂತೆಯಿಂ (ಶಂಶಭಾ. ೩-೨೩) ; ಮೋಕ್ಷಮಾರ್ಗದೊಳ್ ಪದವಿಡೆ ಪಾಯೆ ಮುಂದಲೆಗೆ ಪಾಯುಳೆ (ಶಂಕಶ. ೭೦). **ಹಾಯ್$_1$** : ೧. ಷಡಾಧಾರ ಬಳಿ ವಿಡಿದು ನೆತ್ತಿಯಿಂದುತ್ತರಕ್ಕೆ ಉಚ್ಚಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಅವವ. ೦೨-೨೦) ; ಬಂದರಿಪರಿಬ್ಬರು ಮುಹೀತಳಕಿಂದು ವದನೆಗೆ ಸುತರನಿತ್ತರು ಮಂದಗಮನೆಯು ಕಳುಹಿ ಹಾಯ್ದರು ಗಗನಮಂಡ ಲಕೆ (ಸಂಶಶ. ೦೩-೯೦); ಆ ಲತಾಂಗಿಯು ಪತಿಯು ಕೀರ್ತಿ ವಿಶಾಲವಾದಂದದಲಿ ರಾಜಮರಾಳ ಗಗನಕೆ ಹಾಯ್ದು ಕಂಡಿಳಿತಂದುದಾ ಪುರಕೆ (ವಳಶ. ೨-೨೬). ೪. ಅಜಿಲುಗೊಂಡ ಕೆಱಿಗೆ ತೊಱಿ ಬಂದು ಹಾಯ್ದಂತೆ ಬಜಿಲುಗೊಂಡ ಸಸಿಗೆ ಮಳೆ ಸುರಿದಂತಾಯಿತ್ತು ನೋಡಾ (ಬಹಾದೇ. ೨. ೨೪-೪೩) ; ಇದು ಹೊಸತು ಬಾಣಾಬ್ಧಿವೇಲೆಯನೊದೆದು ಹಾಯ್ದುದೊ ಭುವನವಳಿಪಂದುದ ಯಾಸಿನ ಮಳೆಗಾಲವೋ ಮಾವಾ ಶರಾವಳಿಯೊ (ಕುವ್ಯಾಭೀ. ೯-೩೭). ೫. ಉಂಭವನೆ ದಾಂಟ ಮೇಲಣ ಬಾಗಿಲನೆ ಹಾಯ್ದು ಕುಂಭಿನಿಯು ಮೊಲೆ ವಾಲನುಂಡು ದಣಿಯದ ಶಿಶುವೆ (ಶಿವಗೀ. ೦೯೨-೯೭೦) ; ಆ ಭವನಮುಖದಲಿ ಕಿಚ್ಚನೊಟ್ಟಿಸಿ ಪವನಸುತಸಹಿತವರು ಹಾಯ್ದರು ಬಿಲದ ಮಾರ್ಗದಲಿ (ಕುವ್ಯಾಆ. ೮-೪೮) ; ಆ ಭರತ ನಿಜಬಲಸಹಿತ ಭಾಗೀರಥಿಯು ಹಾಯ್ದೊಲವು ಮಿಗಿಲ್ಪತಂದನಾ ಮುನಿನಾಥನಿದ್ದೆಡೆಗೆ (ತೊರರಾ. ೨-೬-೦೪). ೬. ದಟ್ಟೈಸಿ ಮಡಲಿಱಿದ ಕಾಽದೊಳು ನಡುವಿರುಳು ನಟ್ಟ ಮುಳ್ಳುಗಳನೆಡಹಿದ ಕಲ್ಲ ಹಾಯ್ದು ಮುರಮುಟ್ಟಿಂ . . . ಮುಱಿದು ಗೋಳಟ್ಟು ಬಾಯ್ಬಿಟ್ಟು ಮೊಱಿ ಯಿಡುತ ನಡೆತಂದು (ಹವಶಾ. ೦೨-೨೦); ಸ್ಥಳವನೇ ಜಲವೆಂದು ನಿರ್ಮಳಜಲ ವನೇ ಸ್ಥಳವೆಂದು ಬಾಗಿಲ ನೆಳಲ ಭಿತ್ತಿಯು ಹಾಯ್ದು ಬಾಗಿಲ ಭಿತ್ತಿ ಯೆಂದಿಳಿದು (ಕುವ್ಯಾಸ. ೦೩-೨೬). ೭. ಪೊನ್ನೊಳದ ಎಮ್ಮೆತುಱುಗಳೊ ××× ಹಾಯ್ದು ಮಡೆಕಪ್ಪಣ ಕಾದಿ ಸತ್ತು ಸಗ್ಗಿಯಾದ (ಪ್ರೈಅಂ. ೦೯೩೦, ೦೨-೩ ; ಸು. ೪೬೧) ; ಇರುಳುಗಳ್ಳನ ಕೂಡೆ ಸೇರಿದ ಮರುಳಿನಂತಿರೆ ನೀವು ರಣದಲಿ ತಱಿಸಿಕೊಂಬಿರಿ ಹಾಯ್ದರವದಿರು ನಿಮ್ಮನೆಡೆಯೊಡ್ಡಿ (ಕುವ್ಯಾದ್ರೋ. ೦೩-೩೨). ೮. ತಾವರೆಯೆಸಳ ದೋಣಿಯು ಮೇಲೆ ಹಾಯ್ದವು ಕುಸುಮ ದುಬ್ಬರದ ತೊಱಿಯನು ಕೂಡೆ ತುಂಬಿಗಳು (ಕುವ್ಯಾಆ. ೫-೯). ೧೦. ಹಲಉ ಕುದುರೆ ಹರಿಇಸಲು ಕಳ ಹಾಯ್ದು ಕುದುರೆಯು ಕೆಡಹಿ (ಪ್ರೈಅಂ. ೦೯೩೦, ೭೭-೬ ; ಸು. 1164). ೧೧. ನಾರಿಯರು ಕಂಡರು ಸುಲಲಿತಾ ಭಾರದಲಿ ತಡಿಗಳಿಗೆ ಹಾಯ್ದರು [ಪಾಠಾಂ. ಹಾಯಿದು] ಸೀರೆಗಳ ತೆರೆವಿಡಿ ದರಂಗೋಪಾಂಗಲತೆಗಳಿಗೆ (ಕುವ್ಯಾಆ. ೦೦-೩೦) ; ಹಾಯ್ದನು ಹಂಸೆಯಂ ಮುನಿಪ (ತೊರರಾ. ೦-೫-೨೫) ; ಸೇನಾಸಮಗ್ರದಿಂ . . . ಕುದುರೆಗಳ ಹಿಂದುಗೊಂಡು ಬರಲು ತವಾರ್ಯೊಳವು ಹಾಯ್ದನಿಲಜವದಿಂ ಪಡೆಯೊಳೊರ್ವರುಮುಱಿಯದಂತೆ ಕುಂತಳನಗರಕೆ (ಕೈಮಿಶಾ. ೨೬-೩). ೧೬. ನುಡಿಯದಿರಸತ್ಯವನು ರಾಜ್ಯವ ಬಿಡು ವಿಭಾಡಿಸು ನಿನ್ನ ವಧುವಿನ ಮುಡಿಗೆ ಹಾಯ್ದರೆ ನೀಂಸಧರ್ಮದ ತಡಿಯನಡರದಿರು (ಕುವ್ಯಾಸ. ೦೦-೩೦). ೧೭. ಓಡಿಹೋಗು ; ಪಲಾಯನ ಮಾಡು : ಕಪಿಸೇನೆ ಕಂಗೆಟ್ಟೊದಱಿ ಹಲುಗಿರಿಯುತ್ತ ಹಾಯ್ದುದು ಕದನ ಸಾಕೆವನೊಡನೆನುತ (ತೊರರಾ. ೨೫-೨) ; ಗಡ್ಡದ ಮುದುರು . . . ಕಂಗೆಟ್ಟು ಹಾಯ್ದರು [ಪಾಠಾಂ. ಯ್ದುದು] ಹೊದಕೆ ದಂಡು ಕಮಂಡಲವ ಬಿಸುಟಖಿಳದೆಸೆದೆಸೆಗೆ (ತೊರರಾ. ೦-೦೦-೦೨) ; ಹಯುಚತುಷ್ಟಯುವನಿಸಲು ಉಗ್ರಶರಘಾತಿಗವು ಸೂತನಂ ಕೈಕೊಳದೆ ವಿಗ್ರಹವನುಳಿದೊಂದು ಕಡೆಗೆ ಹಾಯ್ದವು (ಕೈಮಿಶಾ. ೭-೫೨). ೧೮. ದಾಟಿ ಹೊರಬರು ; ಹೊರಬೀಳು : ಪಸುಪತೀಶ್ವರ ಕಡಿವ ತೆಱಹಿನೊಳಸು ರನೆಚ್ಚಂಬಡಸಿ ರಾಮನ ಬಸುಜನುಚ್ಚಳಿಸಿದವು ಹಾಯ್ದವು ತೋದ ರಕುತದಲಿ (ತೊರರಾ. ೩೫-೩೨) ; ಕೊಯ್ದು ಕೊರಳಿನ ಕೊಱಿದ ತೋಳಿನ ಹಾಯ್ದು ಮೂಳೆಯು ಸುರಿವ ಕರುಳಿನಲೆಯ್ದು ಪಡೆಗೇಱಿಯಾಯ್ತು ಚೂಣಿಯು ಚಾತುರಂಗದಲಿ (ಕುವ್ಯಾಕ. ೨-೪) ; ಉಚ್ಚಳಿಸಿ ಹಾಯ್ದಂಬುಗಳವನ ಕಾಯದಿಂದೆಚ್ಚಱಿಲ್ಲದೆ ನಿಮಿಷಮಿದರ್ಮ ಚೇತರಿಸಿಕೊಂಡೆಚ್ಚನು (ಕೈಮಿಶಾ. ೭-೪೫). ೧೯. ಉಂಟಾಗು ; ಸಂಭವಿಸು : ಭೂಸುರವಿಷಯಕೀತನನು ಕೊಟ್ಟೆ ತಾನೆನೆ ಹಾಯ್ದು ನಾಲ್ವರ ಹೊಟ್ಟೆಯೊಳಗುರಿ ಬಳಿಕ ನೀವಿದ ಕೊಟ್ಟರೇಕೌ ತಾಯೆ ಭೀಮನನೇನ ಮಾಡಿದರಿ (ಸಂಶಶ. ೨೩ ೪೭). **ಹಾಯು** : ೧. ಮರನನೇಱಿದ ಮರ್ಕಟನಂತೆ ಹಲವು ಕೊಂಬೆಗೆ ಹಾಯು [ಪಾಠಾಂ. ಬಾ]ತಱಿದೆ ಬೆಂದ ಮನವ ನಾನೆಂತು ನಂಬುವೆನಯ್ಯಾ (ಬಸವ. ೩೩). ೪. ಎಲೋ, ಹುಡುಗಾ ! ನಿನ್ನ ಕೈಯೊಳಗಿಂದ ನೆತ್ತರ. ಹಾಯುತ್ತದೆ (ಕುಂಬಯು. ೬. ೨-೪೭). ೫. ಕಿಂದರಜೋಗಿಗೆ ಮಕ್ಕಳೆಲ್ಲ ಮುಗ್ಧರಾಗಿ ಹಳ್ಳ ಹೊಳೆಗಳನ್ನೂ ಹಾಯ್ದು ಬೆಟ್ಟದ ಒಡಲಲ್ಲಿ ನುಗ್ಗಿದರಂತೆ (ಗಾಳಶ. ೩೩) ; ಈ ದೇವರ ರಥೋತ್ಸವದಲ್ಲಿ ಜನರು ಕಿಚ್ಚು ಹಾಯುವರು (ಕನ್ನಜಾ. ೦೦). ೬. ಅಲ್ಲಪಹುದೆಂಬ ಅಜ್ಞಾನಿಯೊಡನಾಟ ಕಲ್ಲು ಹಾದಂತೆ (ಸರ್ವಜ್ಞ. ೬೨೦) ; ತಲೆ ಗಟ್ಟಿಯೆಂದು ನೀ ಕಲ್ಲನು ಹಾಯ್ವರೆ (ಇಂಕಾಶ. ೯೨-೪೯). ೭. ಧನುಜರತಿ ಭೀತಿಯಲಿ ಸೈನ್ಯವ ಕೂಡಿ ಧಾಳಿಯನು ನಿರುತ ಹಾಯುತ, (ಸಂಶಶ. ಶಂ, ೩೦೯) ; ಲಖನೌಗೆ ಬಂದ ಬಳಿಕ ಅವರ ಕಿರಿತನ ಶಬ್ದಗಳಲ್ಲಿ ಹೊರಡಲಾರಂಭಿ ಸಿತು. ಜೇಡರವನ ಸಿಟ್ಟು ಗಡ್ಡದ ಮೇಲೆ ಹಾಯುತ್ತಿತ್ತು (ಶ್ರೀಮಾತ್ರ. ೭೫). ೧೦. ಕಾರು ಹಾಯ್ದರೆ ಬಾಯ್ಗೆ ಸಿಡಿವುದು ಕೆಂಪುಗೋದಿಯ ಕಿಚಡಿಯು (ವೆಂಮು. ೦೨-೨೦). ೧೧. ಆ ಪುಣ್ಯಾತ್ಮಳ ಮನಸಿನೊಳಗ ಏನಿದೆಯೊ ಏನೊ . . . ಮೊದಲೇ ಒಂದು ಕಾಗೆ ಸಮೀಪ ಹಾಯಲೊಲ್ಲದು (ಅಶ್ವಮೇ. ೭೯) ; ಮುಂದೆ ಎಂಟಾನೆಂಟು ದಿವಸಗಳಾದರೂ ಅವನ ಮನೆಯ ಕಡೆಗೆ ಹಾಯಲಿಲ್ಲ (ಕುಂಬಯು. ೪-೫೩) ; ಜೈನ ಕವಿಗಳು ಚಂಪುವಿನ ಹತ್ತಿರ ಹಾಯಲಿಲ್ಲವೆಂದರೂ ಸರಿ (ಕಸಾಶ. ೩೪೬). ೧೩. ಮುಂದೆ ಬಂದರೆ ಹಾಯದೀರಿ ಹಿಂದೆ ಬಂದರೆ ಒದೆಯದೀರಿ (ಗೋಪಾಡು. ೬೦) ; ಒಂದು ಹಸುವು ಗೋಪಾಲಕನನ್ನು ಹಾಯಲಿಕ್ಕೆ ಹೋಯಿತು (ಪ್ರಾಶ. ೧೦೬)

೧೪. ಏಷ್ಯದ ದೊಡ್ಡಪರ್ವತಗಳೆಲ್ಲ ಪ್ರಾಯಶಃ ಪಶ್ಚಿಮದಿಂದ ಪೂರ್ವಕಡೆಗೆ ಹಾಯುತ್ತವೆ (ಭೂಗೋ೪. ೨೫). ೧೯. ನೆಗಡಿ ಹಾಯುದಂತೆ ಅವನು ತನಗೇನೊ ಉಪಾಯ ಮಾಡಿಕೊಂಡಿದ್ದಾನೆ (ದೇಶನ್ನ. ೧೦). ೨೦. ಗೋಚರಿಸು; ಹೊಳೆ: ಚಹಾ ಗುಟುಕರಿಸಿದ. ಕೊನೆಯ ಗುಟುಕು ಗುಟುಕರಿಸುವಾಗ ತಾನು ಹೊರಗೆ ಹೋಗಬೇಕು ಎಂಬ ವಿಚಾರ ಹಾಯಿತು (ಅಶವಾ. ೨೩).

**ಹಾದಾಟ**=ಪರಸ್ಪರ ಹಾಯುವಿಕೆ: ಎತ್ತುಗಳ ಹಾದಾಟದ ನಡುವೆ ಸಿಕ್ಕ ಮಗು ಕಂಗಾಲಾಯಿತು (ರೂಢಿ). **ಹಾದು ಬರು**=ದಾಟಿ ಬರು: ಕಳಿಸಿದರೆ ಕಳಿಸು ಬೆಲೆಬಾಳುವಂತಹ ಸರಕು ಎಲ್ಲ ಬಂದರುಗಳಿಗು ಹಾದು ಬರಲಿ (ಕಿಂಮು. ೦೮-೮); ಅವರಿಬ್ಬರು . . . ಒಂದು ತೋಟಕ್ಕೆ ಹೋಗಿ, ಅಲ್ಲಿಯ ಮಾವಿನ ತೋಪಿನೊಳಗಿಂದ ಹಾದು ಬರುತ್ತಿದ್ದರು (ಮುಂಬಯಿ. ೬. ೩-೩೭). **ಹಾಯ್ದಾಡು, ಹಾದಾಡು**=೧. ಓಡಾಡು; ನಡೆದಾಡು; ತಿರುಗಾಡು: ಆನೆ ಅರಣ್ಯವನ್ನು ದಾಟಿ ಬಂದು, ಜನರು ಹಾಯ್ದಾಡುತ್ತಿರುವ ಗುರುತಿನ ದಾರಿಯಲ್ಲಿ ಅವನನ್ನು ಇಳಿಸಿ (ಬುದ್ಧಜಾ. ೬೫). ೨. ಕೊಂಬಿನಿಂದ ಇರಿ,-ತಿವಿ: (೬). ೩. ದಾಟು: (೬). **ಹಾಯ್ದು ಹೋಗು, ಹಾದು ಹೋಗು**=ದಾಟಿ ಹೋಗು: ಗೌಡರ ಗರ್ಜನೆ ದೂರದಲ್ಲಿ ಹಾಯ್ದು ಹೋಗುವವರಲ್ಲಿಯೂ ಹೆದರಿಕೆ ಹುಟ್ಟಿಸುತ್ತದೆ (ಗ್ರಾಮಗು. ೩): ಎಲ್ಲಾ ಗ್ರಹಗಳೂ . . . ಒಂದಕ್ಕೊಂದು ತಾಗದೆ . . . ಪ್ರತ್ಯೇಕವಾಗಿ ದೂರವಾಗಿವೆ. ಒಂದರ ಮೇಲೆ ಒಂದು ಹಾದು ಹೋಗಿಲ್ಲ (ಆಕಾಶ. ೦೩); ಬಗೆಬಗೆಯ ಸುಂದರ ಆಕೃತಿಗಳು ನಮ್ಮ ಕಣ್ಮುಂದೆ ಹಾದು ಹೋಗುತ್ತವೆ (ಭಾರದ. ೫೨೫).

[ದೇ.॥ ತಮಿ. ಕೊಡ. ಪಾಯ್. ಮಲ. ತೆಲು. ಪಾಯು]

**ಪಾಯ್$_2$, ಪಾಯು$_1$, ಹಾಯ್$_2$, ಹಾಯಿ$_1$, ಹಾಹೆ$_2$** (ನಾ). ೧. ಚಲಿಸುವುದು; ನಡೆಯುವುದು: (೬). ೨. ರೀತಿ; ಕ್ರಮ: (೬). ೩. ಔಚಿತ್ಯ; ಯುಕ್ತತೆ: (೬). **ಪಾಯು$_1$**: ೨. ದುಡ್ಡು ಇರೂತನಕ ಎಲ್ಲಾರೂ ಬೇಕಾಗೋದು, ದುಡ್ಡು ಹೋದ ಮ್ಯಾಲ ಎಲ್ಲಾರೂ ಘಾನಾಘಾನಾ ಆಗೋದು. ಇದು ಲೋಕದ ಪಾಯಾಸ ಅದ (ಗಂಡೂಯ. ೦೦೦); **ಪುಟ್ಟ** . . . ಪೈಲವಾನನೇನಲ್ಲ. ಆದರೂ ಕುಸ್ತಿಯ ಪಾಯುವನ್ನು ನೋಡುವುದು ಎಂದರೆ ಅವನಿಗೆ ತುಂಬಾ ಆಸೆ (ರೀಮುಕಾ. ೬೭). **ಹಾಯ್$_2$**: ೪. ದಾಟುವುದು; ದಾಟುವಿಕೆ: (೬). **ಹಾಯಿ$_1$**: ೫. ಗಾಳಿಯ ಅನುಕೂಲತೆಗಾಗಿ ದೋಣಿಯ ನಡುಗಂಬಕ್ಕೆ ಕಟ್ಟುವ ನೌಕಾಪಟ; ಹಡಗಿನ ಪಟ: ತೇಲಿದ್ದು ತೇಲಿತ್ತು ಮುಳುಗಿದ್ದು ಮುಳುಗಿತ್ತು ಗಾಳಿ ನೀರ್ ಬಾಳು ಒಗುಮಿಗುತಲಿಹುದು. ಮೇಲೆ ಕೀರ್ತಿಯ ಹಾಯಿ ಪಾಪ ಬಿಡುತಿದೆ ಬಾಯಿ ತೆರೆನೊರೆಯಲಿತಿಹಾಸ ನಗುತಲಿಹುದು (ಗಂ. ೬೪-೦೬); ಹಾಯಿ ಇರಲಿಲ್ಲ ದೋಣಿಗೆ: ಸುಮ್ಮ ಸುಮ್ಮನೆ ಗೊತ್ತುಗುರಿ ಇಲ್ಲದೆ ಅದು ನೀರ ಮೇಲೆ ತೇಲುತಿತ್ತು (ಬವಕಂ. ೦೦೬); ಎತ್ತಿದ್ದ ಹಾಯಿಗಳನ್ನು ಅನುಕೂಲಮಾರುತವು ತುಂಬಿ. ಹಡಗವನ್ನು ಸಮುದ್ರದ ಮೇಲೆ ವೇಗವಾಗಿ ಓಡಿಸಿತು (ಮುಡಿಸ. ೭೯). ೬. ಹಾಯಿಪಟವನ್ನು ಕಟ್ಟಿರುವ ದೋಣಿ; ನೌಕಾಪಟವನ್ನು ಹೊಂದಿಸಿರುವ ನಾವೆ: ಹಾಯಿ ಮಿಥಾನು ಹಿಡಿಯುವರು ನೀರ ಮೇಲೆ ಹೋಗಲು ಉಪಯೋಗಿಸುವ ಸಣ್ಣ ಹರಿಗೋಲು (ಮಮ್ಮನು. ೦೯೯); ಹಲವರಿಗೆ ಮುನ್ನೂರು ಹಡಗುಗಳು . . . ಕಡುವೇಗ ಇನ್ನೂರು ಹಾಯಿಗಳು (ಶಾರಾ. ೦೪-೩೨೭); ಹಾಯಿ ಬಿಟ್ಟಿದ್ದನ್ನು ನೋಡಿ ಮನೆಯ ದಾರಿ ಹಿಡಿದಿದ್ದೆ. ತಾನು (ಹೊಸಕ್ಕೆ. ೫೭). **ಹಾಹೆ$_2$**: ೫. "ಹಡಗಿನ . . . ಪಟಂ ಹಾಹೆಯುಕ್ಕು" (ಮುಂಗರಾ. ೦೨೦-೫); ಗಾಳಿಗೆಷ್ಟು ಹರಿದೀತು ಹಾಹೆ ಹುಟ್ಟಿಲ್ಲದಾಗೆ ಹಡಗ? (ಸೂರ್ಯಜಾ. ೩೩-೨).

**ಪಾಯ್ಕಟ್ಟು**=ರೀತಿ; ವೈಖರಿ; ಕ್ರಮ: ದುರುಗೋಜಿಯ ಹೊಲಿಯುವ ಪಾಯ್ಕಟ್ಟಿನಲ್ಲಿ ಅಂಗಿಯನ್ನು ಹೊಲಿಯುವವರು ಈ ಊರಿನಲ್ಲಿ ಮತ್ತಾರು ಇಲ್ಲ (ರೂಢಿ). [<ಪಾಯ್$_1$./ತುಳು. ಪಾಯಿ]

**ಪಾಯು$_1$** 'ಪಾಯ್$_2$' ನೋ.

**ಪಾಯು$_2$** (ನಾ) ೧. ಪಾದ; ಅಡಿ; ಚರಣ: "ಪಾಯ (ಪಾಯ್, ಪಾಯಿ)–ಪಾದ" (ಶಬ್ದಕೋ. ೨೬); ಗತಿ ಸ್ತಂಭಿಸಿ ಪಾಯುಂ [ಪಾಕಾಂ.ದಂ] ಪೈಸರಂಬೋಗಿ ಹಸ್ತಂ ಮಲಂಗಿ ನೋಟಮುಚ್ಚೊತ್ತಿ ಮೂರ್ಛಿಸುವ ಮಗಳಂ ಪದ್ಮಾವತಿ ಕಂಡು (ಮಲುರ.ಹ.೦೬೯-೦೮). ೨. ಬುನಾದಿ; ಅಸ್ತಿವಾರ; ಅಡಿಪಾಯ: ಸಖಿತ್ವದಿಂದಲೂ ಸಂತೋಷದಿಂದಲೂ ಪಾಯ ಗಟ್ಟಿ ಮಾಡುವ ಬಗ್ಗೆ . . . ಒಂದು ದಾರಿ ಮಾಡಿ ಇರಿಸಬೇಕಾಗಿ ಇದೆ (ರಾಜೇಂದ್ರ. ೦೬೫); ಉಪ್ಪಾರನಾಗಿ ಪಾಯಾ ತುಂಬಬೇಕು (ಮುಂಬಯಿ. ೪-೦೪೫); ಸದ್ಯದಲ್ಲೇ ನಾನು ಮನೆಯ ಪಾಯ ತೆಗೆಸಬೇಕಾಗಿದೆ (ಯೋರಕ್ಕ. ೩೨). ೩. ನಾಲ್ಕನೆಯ ಒಂದು ಭಾಗ; ಕಾಲುಭಾಗ: 'ಪಾಯದ್ರವ್ಯ' ಪರಾ.

**ಪಾಯ ಹಾಕಿಸು**=ಬುನಾದಿಯನ್ನು ಹಾಕಿಸು; ಅಡಿಪಾಯವನ್ನು ಹಾಕಿಸು: ಅಕ್ಕಿಮಬ್ಬೆ ಯೋಚಿಸಿ ಮೊಟ್ಟಮೊದಲು ಜಿನಾಲಯಕ್ಕೆ ಪಾಯ ಹಾಕಿಸಿದಳು (ದಾನಚಿಂ. ೦೬೫). **ಪಾಯ ಹಾಕು**=ಬುನಾದಿ ಹಾಕು; ಅಡಿಪಾಯ ಹಾಕು: ಪಾಯ ಹಾಕಿದ್ದಾರೆ; ಮೇಲೆ ಕಟ್ಟಡ ಎದ್ದಿಲ್ಲ (ರಂಗಕ. ೦೫೫). [<ಪ್ರಾ. ಪಾಯ. /ಸಂ. ಪಾದ]

**ಪಾಯಕ** (ನಾ). ಕಾಲಾಳು; ಪದಾತಿ: ಜಾಳಾಂಧ್ರ ದೇಶದ ಅರಸು ಆನೆಯನೇಜು ನಾಯಕ ಪಾಯಕ ಮಾವತಿಗರ ತೆತ್ತುತ್ರ ಮಾರ್ಬಲ ಸಹಿತ ರಾಜಬೀದಿಯೊಳು ಬರುತ್ತಿರಲು (ಸರ್ವಪ. ೨೦೫-೯೩೦); ಹರಿಗೆಯ ತುಳುವ ಪಾಯಕರು ಬಿಲ್ಲವರು ಕಾಡೆರೆಯ ವೀರರು. . ನಡೆದರು ಶರಣಮಣಿಯೊಡನೆ (ಶಂಕರಾ. ೬-೩೫). 'ಕಾಲುಂಪಾಯಕ' ಪರಾ. [<ಪ್ರಾ. ಪಾಇಕ್ಕ. / ಸಂ. ಪಾಯಿಕ]

**ಪಾಯಕು** 'ಪಾಯಕ್ಕ$_2$' ನೋ.

**ಪಾಯಖಾನೆ, ಪಾಯಿಖಾನೆ, ಪಾಯ್ಖಾನೆ** (ನಾ). ೧. ಶೌಚಗೃಹ; ಕಕ್ಕಸು: ಕಾಮ ತುಚ್ಛವಾದ ಸಂಗತಿ–ಪಾಯಖಾನೆಗಳ ಗೋಡೆಗಳ ಮೇಲೆ ರೂಪಿಸುವ ಸಂಗತಿ–ಎಂಬ ಕಲ್ಪನೆ ಆಗ (ಮುಕ್ತಿ. ೦೦೬); ಉಳದದ್ದು ನಿದ್ದೀ ಪಾಯಖಾನ್ಯಾಗ ಮುಗಸಿದಿ ಏನಲೇ ರ್ಝುಣಕ್ಯಾ! (ಬಂದಯ. ೦೦೦). ೨. ಮಲ; ಅಮೇಧ್ಯ: ಪಾಯಿರೆ ಬಿದ್ದ ಮಗುವಿನ ಪಾಯಖಾನೆ ತೆಗೆಯಲು ಅಲ್ಲಿ ಯಾರೂ ಇರಲಿಲ್ಲ (ರೂಢಿ). **ಪಾಯಿಖಾನೆ**: (೬). **ಪಾಯ್ಖಾನೆ**: (೬).

[ ←ಪಾರ. ಪಾಖಾನಹ್, ಪಾಏಖಾನಾ; ಹಿಂ. ಪಾಖಾನಾ, ಪಾಯಖಾನಾ; ಮರಾ. ಪಾಯ್ಖಾನಾ]

**ಪಾಯಜಾಮ, ಪಾಯಜಾಮೆ, ಪಾಯಿಜಾಮ, ಪಾಯಿಜಾಮೆ, ಪೈಜಾಮ, ಪೈಜಾಮಾ** (ನಾ). ದೊಗಲೆ ಷರಾಯಿ; ಆಳ್ಳಕವಾದ ಇಜಾರ: ಸ್ವಲ್ಪ ಹರಿದಿದ್ದ ಪಾಯಜಾಮ, ಮಾಸಿದ ಅಂಗಿ (ರಂಗಪ. ೦೨೪). **ಪಾಯಜಾಮೆ**: ಕಪ್ಪುಬಣ್ಣದ ರೇಶ್ಮೆಯ ನಿಲುವಂಗಿ, ಹತ್ತಿಕಾಲಿನ ನೂಲಿನ ಪಾಯಜಾಮೆ (ಪ್ರಕಾಶ. ೩). **ಪಾಯಿಜಾಮ**: ಒಬ್ಬ ಸಂಗೀತಗಾರನು . . . . ಕುತ್ತಿನ ಪಾಯಿಜಾಮ ಹಾಕಿಕೊಂಡು ಹಾಡುತ್ತಿರಲಾಗಿ (ಕಥಾಮು. IV, ೦೦); ಮೆಲ್ಲನೆ ಕಡಲ ತೆರೆ ಅಂಗರನ ಪಾಯಿಜಾಮವನ್ನು ಮುತ್ತಿಡುತ್ತಿತ್ತು (ಹೊಸಕ್ಕೆ. ೬೨). **ಪಾಯಿಜಾಮೆ**: ಬಣ್ಣ ಬಣ್ಣದ ಪಾಯಿಜಾಮ, ಅದೇ ರೀತಿಯ ಅಂಗಿ ತೊಟ್ಟ ಈ ವ್ಯಕ್ತಿ ದೊಡ್ಡಪ್ಪನೇ ಎಂದು ಯಶೋದೆ ಒಂದು ಕ್ಷಣ ಶಂಕಿಸಿದಳು (ವಾತ್ಸಲ್ಯ. ೦೫). **ಪೈಜಾಮ**: ಅಜಯನ ದೃಷ್ಟಿ ಕಿಶೋರನ ಪೈಜಾಮದ ಕಡೆ ಹರಿಯಿತು (ಆತ್ಮಾರ್ಪ. ೨೩). **ಪೈಜಾಮಾ**: ಶ್ರೀಧರ . . . ಪೈಜಾಮಾ ಬದಲಿ

ಒಮ್ಮೆ ಶಾಂತ ಮಲಗಿದ್ದಲ್ಲಿಗೆ ಹೋಗಿ ಮಗುವಿನ ಹಣೆ ಮುಟ್ಟಿ ನೋಡಿದ (ವಾತ್ಸಲ್ಯ. ೯೭); ಪಿಹರುಶರ್ಟನ್ನು ತೆಗೆಯುವನು . . . ಪೈಜಾಮಾ ಕಳೆದೊಗೆಯುವನು (ಅಶ್ವಮೇ. ೦೦೭).

[← ಪಾರ. ಪಾಎಜಾಮಹ್, ಪಾಜಾಮಹ್; ಹಿಂ. ಪಾಯಜಾಮಾ, ಪಾಜಾಮಾ; ಮರಾ. ಪಾಯ್‌ಜಮಾ, ಪಾಯ್‌ಜಾಮಾ]

**ಪಾಯಜಾಮೆ** 'ಪಾಯಜಾಮ' ನೋ.

**ಪಾಯಣ್ಣೆ** (ನಾ). (?) : ಅರಸುಗಳ ಕೈ ಉತ್ತಾರರತ್ನ ಪಾಯಣ್ಣೆ ಸಂದಾದೀಪ ಪುಡಿಪಟ್ಟು ಅಲಂಕಾರದಿಃಪಕೆ ಸಹಾ ನಾಣ್ಯ ೩೦ ಲಾ ೦ (ಎಕ. XI. ಹೊಳಲ್ಕೆ. ೭-೩೯ ; 1568). [?]

**ಪಾಯದಳ**, ಪಾಯಿದಳ, ಪಾಯ್ದಳ (ನಾ). ಕಾಲಾಳುಗಳ ದಂಡು ; ಪದಾತಿಸೈನ್ಯ : "ಯಾತಂ ಪದಾತಿಕಂ ಪಾಯದಳ ಪತ್ತಿ ಪಾದಾತಂ ಪದಾಜಯಂ ಪದಿಕನೆನೆ ಕಾಲಾಳ್" (ಚಂಗಂ. ೬೩-೨೬); ಒಂದು ಕೊಡಗ . . . ಆ ಪುರವರಸು ತನ್ನ ಪಾ[ಕಾಣಾಂ. ಪಾ]ಯದಳ ಸಹಿತ ಒಂದರ ಒಂದೇ ಬಾರಿ ಮುಚ್ಚಿದು ನುಂಗಿತ್ತು ಕಂಡೆ (ಅವತಂ. ೯೯-೨೦೦); ನೂಕಿತೊಂದೇ ವಾಘೆಯಲಿ ರಥ ನಾಕುಸಾವಿರ . . . ಲಕ್ಕಪಾಯದಳ (ಕುಮಾ. ೨-೯) ; ಕದನದ ಗಾಯದಲಿ ನೊಂದೊಲ್ಲಿ ಬಾಯಲಿ ಬೆರಳನಿಟ್ಟುದು ವೈರಿಪಾಯದಳ (ಶಲ್ಯ. ೯-೩೯); ರಾಯಬಲ, ಪಾಯದಳ, ದಳದಳದ ಪೆರಗೆ, ಬಂದು ಬಂದೆತ್ತಲೀ . . . ಬೀಡುಬಿಟ್ಟಳಿಯೆ (ಕಾಲಸಿ. ೩-೦೦೯). **ಪಾಯಿದಳ**: ತುರಗ ಕರಿ ರಥ ಪಾಯಿದಳ ಬಲ ಹೊರಳಿಯೊಡೆದಮನು (ಕುಮಾದ್ರೋ. ೦೨-೦೯); ಬಂದು ಭಂಡಾರ ಬೊಕ್ಕಸ ರಥು ಲ್ಲಿ ಪಟ್ಟೆಯು ಬಂದು ಉಳಿಯದೆ ಪಾಯಿದಳವ ಇಂದು ಒಪ್ಪಿಸಿ ಹೋಗು (ಹಂಸಾಂ. ೪೦-೦೦೩); ಅರ್ಜುನನು ಪಾಯಿದಳದ ಮೇಲೆ ಕಾಣಿಸಿಕೊಂಡು ಅದನ್ನು . . . ನೋಯಿಸಲು (ಕೃಪಾಂ. ೦೦೬). **ಪಾಯ್ದಳ**: "ಪಾಯ್ದಳ (ಪಾಯದಳ)—ಪಾದದಲ= ಕಾಲಾಳ ಸೈನ್ಯ" (ಶಬ್ದಕೋ. ೨೬); ಮುಜಿದನೊಗ್ಗಿನ ಪಾಯ್ದಳವನು (ಕುಮಾದ್ರೋ. ೩-೬೭); ನೆರೆದುದಗಣಿತವರಸುಗಳು ಕರಿತುರಗರಥಪಾಯ್ದಳದ ಸಂದಣಿ (ಶಲ್ಯ. ೩-೩೦); ವಾಜಿಯು ಕಾಪಿಂ ಪಾಯ್ದಳಂ ಸಡಗರದಿಂ ನಿಚ್ಚ ಪಯಣದಿಂ ದೇಶದೇಶಂಗಳಂ ಕಟಿಕಟಿದು ಪೋಗುತುಮಿರ್ದುದು (ರಾಜಾಕ. ೩೦-೨). [ಪಾಯ್ಸ+ದಳ (=ದಲ)]

**ಪಾಯದಟ**, ಪಾಯಿದಟ (ನಾ). =ಪಾಯದಳ : ಪಾಯದಟವೆಲ್ಲ ಮೆಚ್ಚು ಮುಜಿದಂ ರಾಜಾಪಜಿಯಾಗೆ ತೆಜಿಪುವಡೆದಿದಿರೊಡ್ಡಿನ ತೇರೊಡ್ಡುಗಳ್ ಶೂರಸಾರಥಿಪ್ರೇರಣದಿನೋರೊಂದಂ ಪತ್ತೆಸಾರ್ಚಿದಾಗಳ್ (ಚಂದ್ರಶು. ೧೦-೭೯ ವ) **ಪಾಯಿದಟ**: ಮೂಲಬಲದೊಳ್ . . . ನೊಜಾನೆಯಿಪ್ಪಾಜುಸಾಸಿರಕುದುರೆ ಲಕ್ಕಪಾಯಿದಟಮಾಯ್ತೆಂದು ಲೆಕ್ಕಿಗಂ ಬಿನ್ನವಿಸೆ (ಜೈಮಿನಿ. ೨೨-೦೯). [ಪಾಯ್ಸ+ದಟ]

**ಪಾಯದೂತ** (ನಾ). ಕಾಲಾಳು : ಪಾಯಪಾದರಿಕಾಲನಾ ಪಾಯದೂತರತಿವೇಗದಿಂ (ಹಾಲಾಸ್ಯ. ೨-೯-೩೯). [ಪಾಯ್ಸ+ದೂತ]

**ಪಾಯದೆ** 'ಫಾಯಿದೆ' ನೋ.

**ಪಾಯದ್ರಮ್ಮ** (ನಾ). ದ್ರಮ್ಮದ ನಾಲ್ಕನೆಯ ಒಂದು ಭಾಗ; ದ್ರಮ್ಮದ ಕಾಲುಭಾಗ : ಪಾಯದ್ರಮ್ಮಂ ಅಡಿಗಚ್ಚು ಕಾಣಿಕೆ (ದೊಂಕೆರಾ. ೦೯೩೯, ಬಂಕಾಪುರ. ೩-೦೯ ; 984). [ಪಾಯ್ಸ+ದ್ರಮ್ಮ]

**ಪಾಯನ್ನೇರಳೆ** (ನಾ). ಒಂದು ಬಗೆಯ ನೇರಿಲೆ : ಕರೀನೇರಳೆ, ಪಾಯನ್ನೇರಳೆ (ವೃಕಿಂ. ೬೩-೦೯೯೬). [? + ನೇರಳೆ (<ನೇಜಲ್)]

**ಪಾಯಬಂದ** (ನಾ). ಕುದುರೆಯ ಹಿಂಗಾಲಿಗೆ ಕಟ್ಟುವ ಹಗ್ಗ; ಪಿಚಾಡಿ: ಪುಶಳಾ. . .ಥಾಬೆಗೆ ಹೋಗಿ ಬಾಪೂಸಾಹೇಬನ ಕುದುರೆಯ 'ಪಾಯಬಂದ ಕಾಡಣೆ'ಯನ್ನು ಬಿಚ್ಚಿಕೊಂಡು, ತಿರುಗಿ ಕೋಣೆಗೆ ಬಂದು ಬಾಗಿಲು ಹಾಕಿಕೊಂಡಳು (ಗ್ರಾಮಾಯ. ೦೯೦). [← ಮರಾ. ಪಾಯ್‌ಬಂದ್]

**ಪಾಯಭರಣ** (ನಾ). ತಳಪಾಯವನ್ನು ತುಂಬುವುದು ; ಅಡಿಪಾಯವನ್ನು ಮುಚ್ಚುವುದು : ಈಗ ಬಸವಂತಿ—ಶ್ಯಾಮರಾಯರ ನಡುವೆ ಚೈನಾ—ಭಿತ್ತಿ ನಿರ್ಮಿಸುವ ಹಂಚಿಕೆ ಹಾಕಿದ್ದ. ಭಿತ್ತಿಯ ಪಾಯಭರಣ ಸರಬರಿಗೆ ಆಸುರಿಸಿತ್ತು (ಲೀಲಾ. II. ೩೪೩). [ಪಾಯ್ಸ+<ಭರಣ$_1$]

**ಪಾಯರಿ** (ನಾ). ಅಂತಸ್ತು ; ಪದವಿ : ಏ ಪಾಯರಿ ಏರಾಕ ಹತ್ತೀದೆಲಾ. ಮೊದಲ ನನ್ನ ಇಲ್ಲೆ ಬರೇ ಮುಸುರೀ ತಿಕ್ಕಾಕ ಕರತಂದಿ. ಈಗ ಮದುವೆಗೆ ತಯಾರಾದಿ (ರಕ್ತರ. ೦೦೬). [← ಮರಾ. ಪಾಯರೀ]

**ಪಾಯಲಿ**, ಪಾಯಿಲಿ, ಪಾಯಿಲೆ (ನಾ). ಧಾನ್ಯವನ್ನು ಅಳೆಯುವ, ನಾಲ್ಕು ಸೇರಿನ ಒಂದು ಅಳತೆ : ೪ ಶೇರಿಗೆ ೧ ಸೊಲಿಗೆ, ಪಾಯಲಿ ಅಥವಾ ಚಿಟ್ಟಿ . . . ೨೦ ಮಣಕ್ಕೆ ಅಥವಾ ೧೦ ಹೇರಿಗೆ ೧ ಖಂಡುಗ ; ಈ ಪರಿಮಾಣಗಳು ಬಹುತರವೊಂದೇ ಸವನಾಗಿ ಯೆಲ್ಲ ಕಡೆಯಲ್ಲಿ ನಡಿಯುತ್ತವೆ (ಕಥಾಗ. ೨೯೦). **ಪಾಯಿಲಿ**: ರೂಪಾಯಕ್ಕೆ ಇಷ್ಟು ಪಾಯಿಲಿ ಮೇಲೆ ಅಂತಾ ಇರತಕ್ಕ ಜೀನಸುಗಳು (ಮುಂಬಯಿ. ೦೩೩). **ಪಾಯಿಲೆ**: ಚೂರುಮರಿ (ಅಕ್ಕಿ ಅರಳು) ಮುಂಬಯಿಯಲ್ಲಿಯ ಅಳಿಯುವ ಪಾಯಿಲೆ ೨೦ಳ ಸೂರ್ತಿ ರೂಪಾಯಿಯ ಭಾರ ಇರುತ್ತದೆ (ಮುಂಬಯಿ. ೦೩೩).

[← ಮರಾ. ಪಾಯಲೀ]

**ಪಾಯವಟ್ಟ**, ಪಾಯಿವಟ್ಟ (ನಾ). ೧. ಕಾಲಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ ; ಕಾಲಂದುಗೆ ; ನೂಪುರ : "ಸಿಂಜಿನಿ ಹಂಸಕಂ ಕಡೆಯ ಪೆಂಡೆಯಂ ಪಾಯವಟ್ಟಂ" (ಚಂಗಂ. ೦೦೨-೩೦) ; ಸಂದಿವಟ್ಟದ ಪಾಯವಟ್ಟವುಮಂ . . . ವಿವಿಧ ಕಿಸಲಯದ ಕಿಸಲಯಮಾಮಂ ಮನೋಹರಮೆನೆ ಸವೆದು ತಮತಮಗೆ ಪಸದನಂಗೊಂಡು (ಚಂದ್ರಶು. ೭-೦೦೯ ವ); ರಾಜೀವಲೋಚನೆ ಕಳುಹಿದಳು ವಿಕ್ರಯಿಸಲೆಂದದ ಪಾಯವಟ್ಟಪನು (ಬಸವ. ೯೨-೦೨) ; ಉಲಿವ ನೇವುರ ಪಾಯವಟ್ಟದ ಲಲಿತಕಂಕಣ ತೋಳ ಬಂದಿಯ . . . ಕೋಮಲೆಯರೆಯ್ದಿದರು (ಪ್ರಭುಲಿ. ೯-೨೯) ; ಬಾಯಿ ಬಡಿಕ ತವಸಿಗಳ ಕಾಯೆ ನೀ ಕಡೆಮೆಟ್ಟಿನುತೆ ಕಾಲಂದುಗೆ ಪಾಯವಟ್ಟವ ತಂದಿಕ್ಕಿದರು (ಮೋಹತ. ೨೬-೯೬). ೨. ಗೌರವಸೂಚಕಚಿಹ್ನೆಯಾಗಿ ಕಾಲಿನಲ್ಲಿ ಧರಿಸುವ ಒಂದು ಬಗೆಯ ಆಭರಣ ; ಕಾಲ ತೊಡರು ; ಪೆಂಡೆಯ : "ಪಾಯವಟ್ಟ—ಪಾದಪಟ್ಟ=ಪೆಂಡೆಯ" (ಶಬ್ದಕೋ. ೨೬) ; ಪಾದಪಟ್ಟ—ಪಾಯವಟ್ಟ (ಕಮತ. ೨೯೨ ಪ್ರಯೋ); ವೀರಮುದ್ರಿಕೆ ಪಾಯವಟ್ಟ ಕಾಂಚಿದಾಮ ಹಾರ ಕೇಯೂರ (ಜಗೋಪು ೩-೭೦). **ಪಾಯಿವಟ್ಟ**: ೧. ಝಣಝಣರೆಂಬ ನೇವುರ ಪಾಯಿವಟ್ಟಂಗಳು ತರುಣಿಗೊಪ್ಪಿದವು (ಬಿಜ್ಜಳಾಂ. ೨-೦೨೩) ; ಕೆಂಪಾವರೆಯ ಬಂಡುಣಿಸಿಗಳೆಸೆಯೆ ತಂದಿಹ ಮದ ಹಂಸೆಯಂತೆ ಚೆಂದದ ಮುತ್ತಿನ ಪಾಯಿವಟ್ಟದ ಪವದ್ವಂದ್ವವೆಸೆದು ಮಂದವಳ (ಕಂಠೀ. ೯-೨೨). [<ಸಂ. ಪಾದಪಟ್ಟ]

**ಪಾಯವಧಾರು** (ನಾ). (ಆಚಾರ್ಯರು, ರಾಜರು ಮೊದಲಾದವರನ್ನು ಕುರಿತ) ಕೊಂಡಾಟದ ಒಂದು ನುಡಿ ; ಪರಾಕು ಹೇಳುವಾಗ ಬಳಸುವ ಒಂದು ಮಾತು : ಪಾಯವಧಾರುಯೆನಲು ಗಜಮಸ್ತಕದೊಳಳವಟ್ಟು ಕೈವೀಸೆ ಭೋರೆಂಬ ಲಗ್ಗೆವಜೀಗಳ ಬೊಬ್ಬೆಯಬ್ಬರಂಗಳೊಳು ಚಂದ್ರಾದಿತ್ಯ ಮುತ್ತಿದ ಶಿವಾಲಯವನು (ಸೋಮಕು. ೩-೬); ಇನನಂದನನು . . . ಮುಂದೆ ಪಾಯವಧಾರು ರಿಪುನೃಪಬಂದಿಕಾಬವಧಾರು ಧಿರುಪಯವೆಂದು ಕಳಕಳ ಗಜಜಿ ಮಿಗೆ ಕುರುಭೂಮಿಗೈತಂದ (ಕುಮಾದ್ರೋ. ೦-೦೯); ಕೆಲದ ಪಾಯವಧಾರುಗಳ ಮಂಗಳಮಹಾರವವೆಸೆಯಲುತ್ಸವದೊಳಗೆ ಸುಮುಹೂರ್ತದಲಿ ಹೊಕ್ಕರು ಹರಿಬಲರು ಪುರವ (ಸಭಾಗ. ೦೦-೯೨-೩). [ಪಾಯ್ಸ+ಅವಧಾರು]

**ಪಾಯಶುದ್ಧಿ** (ನಾ). ಕಟ್ಟಡ ಮೊದಲಾದುವಕ್ಕೆ ತಳಹದಿ ಹಾಕುವಾಗ ಅಡಿಪಾಯದಲ್ಲಿ ಅಮಂಗಳಕರವಾದುದೇನೂ ಇಲ್ಲದಿರುವಿಕೆ,—

ಶುದ್ಧವಾಗಿರುವಿಕೆ : ಮನೆ ಕಟ್ಟುವಾಗ ಪಾಯುಶುದ್ಧಿ ಚೆನ್ನಾಗಿರಬೇಕು (ಲೂ). [ ಪಾಯು₂+ಶುದ್ಧಿ ]

**ಪಾಯಸ** (ನಾ). ೧. ಅಕ್ಕಿ, ರವೆ, ಗಸಗಸೆ, ಸೇವಗೆ ಮುಂತಾದುವುಗಳನ್ನು ತುಪ್ಪದಲ್ಲಿ ಹುರಿದು, ಹಾಲಿನಲ್ಲಿ ಬೇಯಿಸಿ ಸಕ್ಕರೆ ಅಥವಾ ಬೆಲ್ಲವನ್ನು ಸೇರಿಸಿ ಸಿದ್ಧಪಡಿಸುವ ಒಂದು ಬಗೆಯ ಸಿಹಿಪೇಯ : "ಕ್ಷೈರೇಯಂ, ಪಾಯಸಂ, ಪರಮಾನ್ನಂ—ಈ ೩ ತುಯ್ಯಲ್" (ಅಭಿಧಾ. ೩೩–೧೩) ; ಮುದದೆ ಮಾಡಿದಲ್ ಪಾಯಸಮಂ ನವಘೃತಸಮನ್ವಿತಂ ಸಿತಸಹಿತಂ (ಶಂಕರ. ೦೫೯–೨೨) ; ದೇವ ಪರಡಿಯ ಪಾಯಸಸನುಣ್ಣು ದಮ್ಮಯ್ಯ (ಬಸವ. ೬–೦೨೮) ; ಶಾಕಶೀಕರಣೆಯ ಗೂಡಪೋಡಣೆಯ ಸುಪಾಕ ವೊಗ್ಗರಣೆ ಪಾಯಸವ. . . ಬಡಿಸಿದರು (ಜೈಮಿ. ೪–೭೪). ೨. ಒಂದು ಬಗೆಯ ಗಂಧದ್ರವ್ಯ ; ಲೋಬಾನ : "ಪಾಯಸಃ, ಶ್ರೀವಾಸಃ, ವೃಕ್ಷಧೂಪಃ, ಶ್ರೀವೇಷ್ಟಃ, ಸರಳದ್ರವಃ—೫ ಸರಳದೇವದಾರುವೃಕ್ಷದ ಬೊಂಕೆ, ರಾಳ್ತೆಯ ಬೊಂಕೆ" (ಸಿದ್ಧಾಂತ. ೨೦೮). [ ಸಂ. ]

**ಪಾಯಸಂಕಲೆ** (ನಾ). ಕಾಲಿಗೆ ಕಟ್ಟುವ ಸರಪಣಿ,—ಸಂಕೋಲೆ : "ಪಾಯು(ಪಾದ) ಸಂಕಲೆ—ಪಾದಶೃಂಖಲಾ" (ಶಬ್ದಕೋ. ೨೩). [ ಪಾಯು₂+ಸಂಕಲೆ₁ ]

**ಪಾಯಟಿ** (ನಾ). (?) : ಬಯ್ದಂಗೆ ಪಣಮುಮೊ[ಂದುಂ] ಪೊಯ್ದಂಗಾಱು ಪಣಮಿಱಿಯೆ ಪನ್ನೆರಡುಪಣಂ ಪಾಯಟಿದೆ ಸುರಿಗೆಗಿರ್ಚಿರದೆಯ್ದಿದವಂ ಗೆಂಟುಂಪಣಮೆ ದಣ್ಡಂ (ಶಾಶಾ. IX–1, ೦೦೨–೪೫ ; 1046). [?]

**ಪಾಯಾಳ** (ನಾ). ದೂತ ; ಹರಿಕಾರ ; ಸಂದೇಶವಾಹಕ : ಪಂಚಶರನ ಪಾಯಾ[ ಪಾಠಾಂ. ಯ್ದಾ, ಯ್ಯಾ ]ಳನಂತೆ ಚಂಚರೀಕದ ಕುಂಚ ಮನೆತ್ತಿ ಕಿಂಜಲ್ಕದ ಕೆಂದೂಳಿಯೊಳ್ಪೊರೆದು ಮಕರಂದಬಿಂದುವೆಂಬ ಬೆವರಂ ಪೇಱಿ ಪರಿತರ್ಪ ತಣ್ಣೆಲರಿಂ . . . ಮನಂಗೊಳಿಸಿ (ಆದಿಪು. ೪–೬೮ ವ); ಗಾಳಿಯ ಮುಂದೋಡುವ ಜಂಘಾಳಹಯದ್ವಯಮನೇಱಿ ಪಥಗತಪುರವಪಾಳಾಳಿಗಳಂ ಕಟಿದಾ ಜಂಘಾಳರ್ ಪಾಯಾಳರೆಯ್ದಿ ಶೌರೀಪುರಮಂ (ಜಗನ್ನಾ. ೩–೭೭). [<ಪ್ರಾ. ಪಾಯಾಲ ]

**ಪಾಯಾಳು** (ನಾ). ಪಾದಚಾರಿ : ಗುರುವೆಂಬ ಅಂಜನ ಶಿಷ್ಯನೆಂಬ ಪಾಯಾಳು (ಶಿವಶ. ೪. ೭೩೩–೦೯೦೦). [ಪಾಯು₂+ಆಳು₃ (<ಆಳ್₃) ]

**ಪಾಯಿ₁** (ನಾ). ೧. ಪಾಪಿ ; ಪಾಪಿಷ್ಠ : "ಪಾಯಿ—ಪಾಪಿನ್. ೨. ಪಾದ (ಶಬ್ದಕೋ. ೨೩). ೨. ಬಡವ ; ನಿರ್ಗತಿಕ : "ಪಾಯಿ = ಬಡವಂ" (ಅಭಿಧಾ. ೦೭೭). 'ಬಡಪಾಯಿ' ಪರಾ." [ <ಸಂ. ಪಾಪಿನ್ ]

**ಪಾಯಿ₂, ಪೈ₂** (ನಾ). ೧. ಒಂದು ನಾಣ್ಯದ ಹೆಸರು : ಪ್ರತಾಪ ಚೌಲ ನಾಲ್ಕುಂ ಸತತಂ ಚೌಲಕ್ಕೆ ನಾಲ್ಕು ಪಾಯಿಗಳಕ್ಕುಂ ಅತಿಶಯದ ಪಾಯಿಯೊಂದಕೆ ಗತಿಸಂಖ್ಯೆಯು ಗಿತಿಯುಮೆಂಬ (ಪ್ರಶಸ್ತಿ. ಅನುಬಂಧ I, ೩–೨೬); ಪ್ರತಾಪಕೆ ಪಣವು ಬಾಣಂ . . . ಪ್ರತಾಪಕಂ ಪದಿನಾಱುಪಾಯಿ ಚೌಪಕ್ಕಿಗಿತಿಗಳುಮಂ (ಪ್ರಶಸ್ತಿ. ಅನುಬಂಧ I, ೩–೨೮). ಪೈ₂ : ೨. ಹಿಂದೆ ಚಲಾವಣೆಯಲ್ಲಿದ್ದ ತಾಮ್ರದ ಒಂದು ಸಣ್ಣ ನಾಣ್ಯ ; ಆಣೆಯ ಹನ್ನೆರಡನೆಯ ಒಂದು ಅಂಶ ; ಒಂದು ಬಿಡಿಗಾಸು : ಮುಪ್ಪಾಗವು ಮೂಱುವೀಸಕ್ಕವು ಪೈಗಳಾಗುತ್ತಿರಲಾ ಧಾರಣೆಯೊಳಿಪ್ಪತ್ತು ಹಣವು ಹಾಗಕೆ ತಪ್ಪದೆಯೆಷ್ಟೆಂದು ಪೇಳು (ಶಾಸ್ತ್ರ. ೬–೦೯) ; ಜಗದೀಶ ಚಂದ್ರನು . . . ಒಂದು ಪೈಯನ್ನೂ ತೆಗೆದುಕೊಳ್ಳದೆ, ಶ್ರದ್ಧಾಸಕ್ತಿಯಿಂದ ತನ್ನ ಕೆಲಸವನ್ನು ನಿರ್ವಹಿಸಿಕೊಂಡು ಹೋದನು (ಸತ್ಯ. ೯೩). ೩. ಈಗ ಚಲಾವಣೆಯಲ್ಲಿರುವ ರೂಪಾಯಿಯ ಮೂರನೆಯ ಒಂದು ಭಾಗ; ಒಂದು ಪೈಯನ್ನು ಖರ್ಚು ಮಾಡಲೂ ಹಿಂದುಮುಂದು ನೋಡುವ ಸ್ವಭಾವ ಅವರದು (ಲೂ). [ ←ಮರಾ. ಪೈ. / ಪ್ರಾ. ಪಾಯ. / ಸಂ. ಪಾದ ]

**ಪಾಯಿ₃** (ನಾ). ಮೊಳಕೆ : ಬೀಜದ ಬೆಳ್ಳುಳ್ಳಿಯ ಹಿಳುಕುಗಳನ್ನು ಸೀಳಿದರೆ ಮೊಳಕೆ ಬಂದಿರುವುದು ಚೆನ್ನಾಗಿ ಕಾಣಿಸುತ್ತದೆ. ಅಂತಹ ಪಾಯಿಗಳನ್ನು ೪–೫ ಅಂಗುಲ ದೂರಕ್ಕೊಂದಿರುವಂತೆ ನೆಡಬೇಕು (ತರಕಾ. ೩೩). [?].

**ಪಾಯಿಂಟ್** 'ಪಾಯಿಂಟು' ನೋ.

**ಪಾಯಿಂಟು, ಪಯಿಂಟು, ಪಾಯಿಂಟ್, ಪೈಂಟು** (ನಾ). ೧. ವಿಷಯ; ಅಂಶ : ಈ ಕೆಳಗೆ ವಿವರಿಸಿರುವ ಪಾಯಿಂಟುಗಳನ್ನು ವಿಚಾರಿಸಿ ಅವುಗಳನ್ನು ನೋಟು ಮಾಡಿಕೊಳ್ಳಬೇಕು (ಗ್ರಾಮಾಂ. ೩೭); ಇಲ್ಲಿರೋ ಪಾಯಿಂಟಿಷ್ಟೆ ನೋಡು (ಎಮಕ. ೫೯). **ಪಯಿಂಟು** : ೧. ನನಗೂ ನಿಮ್ಮ ಪಯಿಂಟು ಸಮನೆಂದೇ ಕಾಣಿಸುತ್ತದೆ (ಮೂಕಜ್ಜಿ. ೨೨೦). **ಪಾಯಿಂಟ್** : ೨. ಮುದ್ರಣದಲ್ಲಿ ಅಚ್ಚಿನ ಮೊಳೆಗಳ ಅಳತೆಯ ಒಂದು ಮಾನ : ಅಚ್ಚುಮೊಳೆಗಳ ತಯಾರಿಕೆ ಮತ್ತು ಇತರ ಕೆಲವು ಮುದ್ರಣಕ್ಷೇತ್ರಗಳಲ್ಲಿ ಪಾಯಿಂಟ್ ಎಂಬ ಕ್ರಮಬದ್ಧ ಅಳತೆಯು ಬಳಕೆಯಲ್ಲಿದೆ. ಪಾಯಿಂಟ್ ಎಂದರೆ ೧/೭೨ ಅಂಗುಲ (ಮುದ್ರಣ. ೦೨). **ಪೈಂಟು** : ೧. ಹೌದು ಅಮ್ಮ, ನೀವೆನ್ನುವ ಪೈಂಟು ಸವು (ಸ್ವಪ್ನಹೂ. ೯೯). [← ಇಂ. Point]

**ಪಾಯಿಕ** (ನಾ). ಕಾಲಾಳು ; ಪದಾತಿ. [ಸಂ.]

**ಪಾಯಿಕು** 'ಪಾಯ್ಕು₂' ನೋ.

**ಪಾಯಿಖಾನೆ** 'ಪಾಯಖಾನೆ' ನೋ.

**ಪಾಯಿಜಾಮ** 'ಪಾಯಜಾಮ' ನೋ.

**ಪಾಯಿಜಾಮೆ** 'ಪಾಯಜಾಮ' ನೋ.

**ಪಾಯಿತರ್** 'ಪಾಯ್ತರ್' ನೋ.

**ಪಾಯಿದಳ** 'ಪಾಯದಳ' ನೋ.

**ಪಾಯಿದಟ** 'ಪಾಯದಟ' ನೋ.

**ಪಾಯಿದೆ** 'ಫಾಯಿದೆ' ನೋ.

**ಪಾಯಿನಿ** (ನಾ). ಒಂದು ಬಗೆಯ ತಂತೀವಾದ್ಯ : ವಿಪಂಚಿಕೆ ಚಿತ್ರಿಕೆ . . . ಪಾಯಿನೀ ರಾಗವಾಲಿನೀ ಕಾಳಕೀಯೆಂಬ ಮೂವತ್ತುಮೂಱು ತಂತ್ರಿ ವಾದ್ಯಂಗಳಲ್ಲಿ (ಚವೀಕ. ೨೩೬). [ ? ]

**ಪಾಯಿಪೋಸು** 'ಪಾಪೋಸು' ನೋ.

**ಪಾಯಿಲಿ** 'ಪಾಯಲಿ' ನೋ.

**ಪಾಯಿಲೆ** 'ಪಾಯಲಿ' ನೋ.

**ಪಾಯಿವಟ್ಟ** 'ಪಾಯವಟ್ಟ' ನೋ.

**ಪಾಯಿಸು, ಪಾಯ್ಸು, ಹಾಯಿಸು, ಹಾಯ್ಸು, ಹಾಸು** (ಕ್ರಿ). ೧. ಹಾರುವಂತೆ ಮಾಡು ; ನೆಗೆಯುವಂತೆ ಮಾಡು : (೪). ೨. ಹರಿಯುವಂತೆ ಮಾಡು ; ಪ್ರವಹಿಸುವಂತೆ ಮಾಡು : (೪). ೩. ದಾಟುವಂತೆ ಮಾಡು ; ದಾಟಿಸು : ತೊಱೆಯ ತಡಿಯೊಳೋತಮುಂ ನಡೆಯಿಸುವ ಮತ್ಸ್ಯಗಂಧಿಯುಂ ಕಂಡೆಮ್ಮನೀ ತೊಱೆಯಂ ಪಾಯಿಸೆಂಬುದುಂ (ಶಾಂತಿಪು. ೧–೬೮ ವ) ; ಮುನಿಯ ಮಾಸಟವಂ ಮುಳ್ಳಿಸಲ್ಕನ್ನೆಗಬ್ಬೇಶ್ವರನು ಹಿಮಾದ್ರಿಯುಂ ಪಾಯಿಸ(ಲ) (ಲಾ?) ದರಿಸುವಂ . . . ಕುಂಧರಾವಂ (ಕಳಂ. ೬–೬) . ೪. ಮೇಲೆ ಬೀಳುವಂತೆ ಮಾಡು ; ನುಗ್ಗಿಸು : ಹೆಜ್ಜಾರ ಸಮರದೊಳ್ ಮುರಾರಿ ಮಾರನಾಗಿ ಗುದುರೆಯ ಪಾಯಿಸಿ ತಾನ್ನಯನಿಜೀದು (ಎಕ. III. ನಂಜನ. ೦೨೨–೦೫ ; ಸು. 266 ?) ; ಮುಂ ಪುಸಿದಿಪನಿಂತ ಪಾಯಿಸಿದನಿಂದ್ರನೊಳಾದಿಸರೇಂದ್ರರೆಲ್ಲರಂ, (ಶಾಂತಿಪು. ೩–೬೨) ; ನೂಂಕುವಿಭಸಂತತಿ ಪಾಯಿಸುವಶ್ವವೃಂದಮರ್ಮಿಸೆ ಕವಿತರ್ಪರಾತಿಚತುರಂಗಪತಾಕಿನಿಯಂ ಮುಕುಂದನೀಕ್ಷಿಸಿ ಮುಳಿದೆಚ್ಚನಾ ಪಡೆಗೆ ಮಾರ್ಪಡೆಯಂ (ಜಗನ್ನಾ. ೦೫–೪೪);

೫. ಒಳಗಾಗುವಂತೆ ಮಾಡು ; ಒಳಗಾಗಿಸು : ಲೇಸಲ್ಲದ ಸುಖಕ್ಕೆ ಪಾಯಿಸಿ ನೋಯಿಸುವಿಂದ್ರಿಯಂಗಳುಮಂ (ರವರ್ಣಮ್ಮ. ೯-೨೩). ೬. ಹೋಗುವಂತೆ ಮಾಡು; ಚಲಿಸುವಂತೆ ಮಾಡು; ಮುನ್ನಡೆಸು : ಪೊಳೆವ ಬಾಳುಳ್ಕಂಗಳಂ ಪೋಲೆ ಪಾಯಿಸಲೆಂದಿರ್ದಳವಂ ಪೊದಟಿದ್ದೆಸೆಯ ಚಕ್ರಾರಾವಂ (ಆದಿಪು. ೧೪-೧೦೦); ಬೆಲಗಸೆ ತೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತಿರ್ದ ಬಚ್ಚಲ ಪರಿನೀರಿನೊಳ್ ಪರಿಯ ಲೋಳಿಯಿಸಲ್ ಪಜಿಗೋಲನಿಕ್ಕಿ ಪಾಯಿಸಲ್ [ ಪಾಠಾಂ. ಪಾಯ್ಸಲೆ ] ನೆಲೆಯೆಂದು . . . ಬಗೆದುದಂದು ಜನಂ ಘನಚಂದ್ರಿಕಾಂಬುಮಂ (ಅಜಿಪು ೬-೯೩). **ಪಾಯ್ಸು :** ೪. ಭೀಮಯ್ಯನ ಮಗಂ ಪೆರ್ಗ್ಗಡೆ ಬೆಣಾಯ್ಯಂ ಗಂಗರಾನೆಯ ಕುಂಭಸ್ಥಳಕ್ಕೆ ಕುದುರೆಯಂ ಪಾಯ್ಸಿ ಸತ್ತೊಡೆ (ಎಕ. XII. ಮಧುಗಿ. ೬೦-೯ ; ಸು. ೯೭೦). ೭. ಸೇರಿಸಿಕೊಳ್ಳು ; ಕೂಡಿಸಿಕೊಳ್ಳು : ವದನಂ ಗೆಲವಿಂ ವಿಧುಬಿಂಬದ ಕಳೆಗಳನೊಳಗೆ ಪಾಯ್ಸಿಕೊಂಡುದೆನಲ್ ಕುಂದದ ಕಾಂತಿಯಿಂ ಕಾಂತೆಯ ರದನಾವಳಿಯೆಸೆಯಲಂ ಕರಂ ತಳತ್ತಳಿಸಿದುದೋ (ಪುಷ್ಪಪು. ೩-೯೩). **ಹಾಯಿಸು :** ೨. ಆ ಉಪೇಂದ್ರಂಗಾದ ಶೇಷನೀ ವಿಧಾತ್ರನು ಧರೆಗೆ ಹಾಯಿಸಲೀ ವಿಧದಿ ದಧಿ ಕಡಲು ಪುಟ್ಟಿದುದು (ಸಂಕಕ. ೬-೧೦) ; ನೆಟ್ಟ ಬೀಜ ಕ್ಯಾಗಲಿ ಪೈರಾಗಲಿ ನೀರು ಹಾಯಿಸಬೇಕು (ಕಕಕ. ೬೬); ಬುದ್ಧಿವಂತಮನುಷ್ಯ ಕಾಲುವೆ ತೋಡಿ, ಗದ್ದೆ ತೋಟಗಳಿಗೆ ನೀರು ಹಾಯಿಸಿ ಗಿಡ ಮರಗಳನ್ನು ಬೆಳೆಯಿಸುತ್ತಾ ಬಂದ (ಪಪಂ. ೪). ೩. ನಾನೀ ಹೊಳೆಯಂ ತಂದು ಅಂಬಿಗನ ಕೇಳಿದರೆ ನಾ ನಿನ್ನ ಹಾಯಿಸಿಕೊಟ್ಟಿಹೆನೆಂದನು (ಕೃಷ್ಣಸಂ. ೦೨೬-೩೬) ; ತೊರೆಯುರೆರೆಯಾ . . . ಹೊತ್ತ ಹಿಂಗಿಸಿ ಹಾಯಿಸೆನ್ನ (ಗೀಪಂ. ೩೩-೦೩) ; ಒಕ್ಕಲಿಗನು . . . ದನಗಳನ್ನು ಬಿಚ್ಚಿ, ಹೊಡೆದು ಕೆಟ್ಟು ಹಾಯಿಸುವನು (ಕನ್ನಡಾ. ೦೬೬). ೪. ಈಯೊಳ್ಳಿಗನನೆಡಕಿಕ್ಕಿ ಹಾಯಿಸು ಕಲ್ಲೆಯಲಿ ಮುರಿನೂಕು ನಡೆ ಭೂಪತಿಯ ಸಮ್ಮುಖಕೆ (ಕುಮಾರವ್ಯಾ. ೨-೩೪) ; ಹೀಗೆ ತಾವೇ ಮೋಟಾರು ಹಾಯಿಸಿ ಕೊಲ್ಲುವವರಾದರೆ ನಮ್ಮ ಕಾವಲುಯೇತಕ್ಕೆ ? (ಕೃಣಕ. ೬೬). ೮. ಬರುವಂತೆ ಮಾಡು ; ತರು : ಆ ದಿವಸದ ಕನ್ನಡಕವಿಗಳೆಲ್ಲ . . . ಭಾರತದ ಇತರ ಭಾಷೆಗಳ ಸಾರವನ್ನು ಕನ್ನಡಕ್ಕೆ ಹಾಯಿಸಿದವರು (ರಾಮರಾ. ೯೩). **ಹಾಯ್ಸು :** ೪. ಮುಂಗಡೆಗೆ ಪ್ರಾಪಂಕರಾ ಮಾತುಗಳಂ ತವೆ ಹಾಯ್ಸಿ ನೋಡುತ ಲಿಂಗನಂತನ ಬರವಿಗವರುಗಳಡ್ಡಗಟ್ಟಿರಲು (ಬಸಪು. ೨೦-೩೯) ; ಹಾಯ್ಸು ರಥವನು ಭೀಮಸೇನನ ರಥದ ಮುಂಗುಡಿಗೆ (ಕುಮಾರವ್ಯಾ. ೨೦-೨೩). **ಹಾಯಿಸ್ಕು :** ೯. ದಾಟು ; ಹೋಗು : ರಾಣಿ ಹುಬ್ಬುಗುಟಿಕ್ಕಿದಳು. ಕಾವಲುಗಾರನ ಮೇಲೆ ಹಾಸಿ ಹೋಯಿತು (ಬಾಬಾನ್ನಾ. ೩೪). [ಪಾಯ್$_1$ + — ಇಸ್ಕು]

**ಪಾಯು** (ನಾ). ಐದು ಕರ್ಮೇಂದ್ರಿಯಗಳಲ್ಲಿ ಒಂದು ; ನವದ್ವಾರಗಳಲ್ಲಿ ಒಂದು ; ಮಲದ್ವಾರ ; ಗುದ : "ಗುದಃ, ಪಾಯುಃ, ಅಪಾನಂ—ಈ ೩ ಗುದಂ" (ಹಲಾಯು. ೮೩-೩೪೪) ; ಏಳನೆಯ ತಿಂಗಳಿಗೆ ಪಾಯು ಮೇಢ್ರಂ ಯೋನಿಯು ಉದಯಿಸುಗು (ಲಕಿಪಂ. ೩೯-೩೩) ; ಪ್ರಾಣ ಮಾರಂತು ನಾಸಿಕಂ ಗಂಧ ಪಾಯುಗಳೈದು ಭೂಮಿ ಪಂಚಕವೆನಿಪವು (ಶೀಕೃಪು. ೬-೩-೦೨) ; ವಾಕ್, ಪಾಣಿ, ಪಾದ, ಪಾಯು, ಉಪಸ್ಥ—ಈ ಐದು ಕರ್ಮೇಂದ್ರಿಯಗಳು (ಹಿಂದಸಾ. ೨೩೬). [ ಸಂ. ]

**ಪಾಯ್ಕು$_1$**, ಹಾಕು, ಹಾಯಿಕು, ಹಾಯಿಕ್ಕು, ಹಾಯಿಕ್ಕು (ಕ್ರಿ). ೧. ಕಳಚು ; ತೆಗೆ ; ಬಿಚ್ಚು : ಆವರ್ . . . ಅಸಗವೊಳಿಗೆ ಬಂದು ತಮ್ಮ ತಮ್ಮ ಸೀರೆಗಳಂ ಪಾಯ್ಕಲ್ಕಾ ತಿಜುಕುಜುಪಿತೊಂಡಂ ಹಸಾದವೆನುತ್ತವಂ ನಿರ್ಮಳಮಪ್ಪಂತೊಗೆಯಲುದ್ಯುತನಾದಂ (ಶ್ರೀಪು. ೩೩-೯೮) ; ಹಣಿದ ವಿವಿಧವಸ್ತ್ರಂಗಳಂ ಪಾಯ್ಕಿ ಪೊಸತಾದ ವಸ್ತ್ರವನಲಂಕರಿಸಿಕೊಂಬಂದದಿಂ ಕರ್ಮದಿಂ ದಗ್ಧದೇಹವನೆ ಬಿಟ್ಟು (ಶೀಕೃಪು. ೬-೬-೩೩). **ಹಾಕು :** ೨. ಇಡು ; ಇರಿಸು : ಅಸುವಿಲ್ಲದಂತಿರ್ದೊಡವು ಸತ್ತುವೆಂದು ಭಾವಿಸಿ ಬಡಿದೆ ನೆಲಕೆ ಹಾಕದೆ ಮಾಣಂ (ಸಮ್ಯಕ್. ೨-೩೬) ; ನಾನು ಆವರ ಮನೆಗೆ ಕಾಲು ಹಾಕುವುದಿಲ್ಲ (ರೂಢಿ). ೩. ಧರಿಸು ; ತೊಡು : ಬೇಸಗೆಯಲ್ಲಿ ಹತ್ತಿಬಟ್ಟೆ ಹಾಕಬೇಕು (ರೂಢಿ). ೪. ಸ್ಥಾಪಿಸು : 'ಅಂಗಡಿ ಹಾಕು' ಪರಾ. ೫. ನೆಡು ; ಬಿತ್ತನೆ ಮಾಡು : ನಮ್ಮ ಮನೆಯ ಮುಂದೆ ಒಂದು ಮಲ್ಲಿಗೆಯ ಬಳ್ಳಿಯನ್ನು ಹಾಕಿದ್ದೇನೆ (ರೂಢಿ). ೬. ಸುರಿ ; ಹೊಯ್ಯು ; ಎರೆ : ಗಿಡಗಳಿಗೆ ದಿನಾಲು ನೀರು ಹಾಕಬೇಕು (ರೂಢಿ). ೭. ತೂರು ; ಎಸೆ ; ಬಿಸಡು : ಒಸಲು ದಿಟವೆಂದಡೆ ಅದು ಒಡೆಯಹಾಕುವ ಕುಂಭ (ಕೋಲಕಾಂ. ೩-೦೩); ಉದಿತದಿನೇಶನೆಂಬ ಮಣಿಕಂದುಕಮಂ ಧರೆಯೆಂಬ ಕಾಂತೆ ತನ್ನುದಯ ಗಿರೀಂದ್ರವೆಂಬ ಕರದಿಂದಮ ಹಾಕಿ ತದಸ್ತಶೈಲವೆಂಬೊದವಿದ ಹಸ್ತದಿಂದೆ ಪಿಡಿವಲ್ಲಿ ಪುರಾಂಗನೆ ಮಧ್ಯದೊಳ್ ವಿನೋದದೆ ಪಿಡಿಯಲ್ಕದಂ ಕರಮನೆತ್ತಿದವೊಲ್ ಮೆಚ್ಚಿಗುಂ ನೃಪಾಲಯಂ (ರಾಕಪು. ೦-೦೩೩). ೮. ಪ್ರಸವಿಸು ; ಈಯು : ಅವತೋಕಾ, ಸ್ರವದ್ಗರ್ಭಾ— ೨ . . . ಕಂಡು ಹಾಕಿದ ಹಸುವು (ಸಿದ್ಧಾಂತ. ೨೯೪) ; ಈ ದಿನ ನಮ್ಮ ಮನೆಯ ಹಸು ಕರು ಹಾಕಿತು (ರೂಢಿ). ೯. ಗುರುತಿಸು ; ರೇಖಿಸು ; ಬರೆ : ಈ ಚಿತ್ರದಲ್ಲಿ ಹಾಕಿರುವ ಗೆರೆಗಳು ಕಂಡೂ ಕಾಣದಂತಿವೆ (ರೂಢಿ). ೧೦. ಆರಂಭಿಸು ; ತೊಡಗು : 'ಕೈಹಾಕು' ಪರಾ. ೧೧. ತೊಡಗಿಸು ; ವಿನಿಯೋಗಿಸು : ದ್ರವ್ಯ ಗಳಿಸುವುದಕ್ಕೆ ಎಂದಿಗೂ ಮನಸು ಹಾಕುತ್ತಿದ್ದಿಲ್ಲ (ಮುಂಬಯಿ. ೩-೨೦೬); ಈ ವ್ಯಾಪಾರಕ್ಕೆ ಬಂಡವಾಳವನ್ನು ಹಾಕುವುದೇ ತುಂಬಾ ಕಷ್ಟದ ಕೆಲಸ (ರೂಢಿ). ೧೨. ಸೇರಿಸು : ನಮ್ಮ ಹುಡುಗನನ್ನು ಸ್ಕೂಲಿಗೆ ಹಾಕಬೇಕು (ರೂಢಿ). ೧೩. ನೀಡು ; ಬಡಿಸು : ನೂಕುವವನು ಹಾಕನು, ಬೋಕಿಯವನು ಕೊಡನು (ಗಾದೆ) ; ನನಗೆ ಊಟ ಹಾಕು (ರೂಢಿ). ೧೪. ಹೊಡೆ ; ಪೆಟ್ಟು ಕೊಡು ; ಬಡಿ : ಅವನಿಗೆ ಎರಡು ಹಾಕು (ರೂಢಿ). ೧೫. ಮಾಡು ; ರಚಿಸು : ಜಂಗಮವು ಬೇಡಿದಡೆ ಹೊಸವಸ್ತ್ರಂಗಳನೆ ಕೊಡುವಂ ನಿರಂತರ ಲಿಂಗಸಂಪದವೊದಗಿ ಹಾಕಿದ ಸೀರೆಗಳನವರ್ಗೆ (ಬಸಪು. ೨೦-೩೩) ; ಶ್ರೀಮತು ಕರಿಯಪಗಳ ಸಿಸ್ಸ ತಮ್ಮಯನು ಮಾತಾಪಿತೃಗಳಿಗೆ ಪುಣ್ಯವಾಗಲಿಯೆಂದು ಹಾಕಿದ ಬನಕ್ಕೆ ಮಂಗಳ (ಪ್ರಮಲಂ. ೦೯೨೯, ೨೬-೯; ೪). ೧೬. ತ್ಯಜಿಸು ; ತೊರೆ : ಆ ಕಲ್ಪದೊಳಗುಳ್ಳನೇಕಸುಖಂಗಳ ಸಾಕಲ್ಯಮಾಗನುಭವಿಸಿ ನಾಕೋದ್ಭವನು ನಿಜಾಯುವಿನಂತ್ಯದೊಳ್ ಹಾಕಿದ ನಿಜದೇಹವನು (ಅಂಜನ. ೯-೨೩೯). ೧೭. ಹಚ್ಚು ; ಲೇಪಿಸು : ಎಣ್ಣೆ ಹಾಕಿದರೆ ಕಣ್ಣಿಗೆ ಗುಣ, ಮಣ್ಣು ಹಾಕಿದರೆ ಬುಡಕ್ಕೆ ಗುಣ (ಗಾದೆ). ೧೮. ಹೇರು ; ಹೊರಿಸು : ನಿಶ್ಚಯಿಸಿದ ದರದಂತೆ ಅಡತಿ ಮಜೂರಿ ಮುಂತಾದುವುಗಳನ್ನು ಹಾಕಲು ತೊಂದರೆಯಾದೀತು (ಮುಂಬಯ್ಯಾ. ೪). ೧೯. ಹಾಸು : ಹೊಸ ಕೂಟವಜಿತು ಹಾಸಿಗೆಯನು ಹಾಕುವ ಶಿಶುವು ಏನೆ ಅಮ್ಮ (ಪುರಂದ. ೨-೬೩-೩). ೨೦. ಒಟ್ಟು ; ಗಿಡಿ : ಆಳಿಯರ್ ಬೀಸುವ ಚಮರಾಲವಟ್ಟತಣ್ಣಾಳಿಯಿಂದವಳೊಡಲ್ಗಿಚ್ಚು ತಾಳಿಯ ಹಾಕಿ ಪೆರ್ವೊಟಗೊಂಡ ತೆಬದಿ ಭಡಾಳಿಸಿತುಷ್ಣ ಸಂಘಟಿಸಿ (ಪೋಹಕ. ೨೬-೬೨). **ಹಾಯಿಕು :** ೧. ಛಾಯಾವಡೆದಾನೆಗಳು ಗುಳವನು ಹಾಯಿಕಲು ನೆಲಕುರುಳಿದವು ವಾನಾಯುಜಂಗಳು ಬಿಗುಹ ಬಿಡೆ ದೊಪ್ಪೆಂದವಾಜಿಯಲಿ (ಕುಮಾರವ್ಯಾ. ೩-೪). ೬. ಪುಳಕದಲ ಪುಬ್ಬರಿಸೆ ಕುಸುಮಾಂಜಳಿಯನಂಬ್ರುದ್ವಯಕೆ ಹಾಯಿಕಿ ನಳಿನಭವ

ವೈಯಿಕ್ಕಿದನು (ಶಬ್ದ. ೬-೨೦). ೭. ಖಡುಗ ಕೊಂತವ ನಥಕೆ ಹಾಯಿಕಿ ಹಿಡಿವ ಸುಭಟರ ಭುಜವ ಹೊಯ್ಲಿನ ಕಡುವುನದ ರಣದವಕಿಗರ ಸೌರಂಭ ರಂಜಿಸಿತು (ಕುಮಾ.ದ್ರೋ. ೯-೨೬) ; ಇಡುವ ಡೆಂಕಣಿ ಹಾಯಿಕುವ ಗುಂಡು ಮೇಲುಜಿ ಕೆಡಹುವ ತೊಲೆ ಪತ್ತಿದವರ ಬಡಿವ ಬಲ್ಗದಿಗೆ (ಕುಮಾಸಾಂ. ೩೭-೫೩) ; ತಂದು ನಾ ಬಡಕುಮಾರಕನನು ಕಡಲೊಳ ಗಂದೆ ಹಾಯಿಕಿ ಮರ್ದಿಸಿದೆ (ಜೈಮಿ. ೦೨-೫). ೧೬. ಈ ದುರಾಗ್ರಹ ನಿಲಲಿ ಹಾಯಿಕು ಕೈದುವನು (ಕುಮಾ.ದ್ರೋ. ೦೮-೫೮). ೨೧. ಬೀಸು : ಸಿಲುಕಿದನು ಘಡ ಸ್ವಾಮಿದ್ರೋಹಿಗೆ ಬಳಿಯು ಹಾಯಿಕೊ ಗಂಡು ಮಿನಗ್ಗಳಿಯ ಗಾಣವ ಕೊಳ್ಳದೆನುತ್ತೌಕಿದರು ಬಳಸಿನಲಿ (ಕುಮಾ.ಕ. ೦೯-೭೯). ೨೨. ಕೆಡೆಯಿಸು ; ಬೀಳಿಸು : ಬಲುಕಣಗಳಿಪದಿರನು ಕರಿ ಮುಂಕೊಳಿಸಿ ಕೆಡೆಹಿತು ಮಪನಕೌಸಲಬಲವ ಕೈಕೆಯುಮಗಧಭೂಪರ ಕೊಡಹಿ ಹಾಯಿಕಿತು (ಕುಮಾ.ದ್ರೋ. ೩-೨೯). ಹಾಯಿಕ್ಕು : ೨೧. ಮುನಿ ಹಾಯಿಕ್ಕಿದನಲಾ ಬಲೆಯನಕಟಾ ಸಿಕ್ಕಿದಿರಲಾ ಸ್ವಾಮಿದ್ರೋಹರು (ಕುಮಾ.ಸ. ೨-೦೯). ಹಾಯ್ಕು : ೨. ಹೃದಯವಲ್ಲಭ ಕನ್ನಡಿಯ ಮಧ್ಯದಲಿ ಉದ್ದಿನ ಬೀಜವನು ಹಾಯ್ಕುವಡೆ ಬೀಳುವುದನಿತು ತಳುವಿಂತನಿತು ಮಾತ್ರದಲಿ . . . ಶಿವನಂ ಕೀರ್ತಿಸಾ (ಬಸವ. ೯೨-೩೫) ; ಗಗನದಲಿ ರಥ ಯೋಜನಾಂತಕೆ ಚಿಗಿದು ಧರಣಿಯ ಮೇಲೆ ಬೀಳಲು ನಗುತ ಕರಣವ ಹಾಯ್ಕಿ ಮುಂಡಿಯೊಳಿರ್ದನಾ ದ್ರೋಣ (ಕುಮಾ.ದ್ರೋ. ೦೩-೦೯). ೩. ಒಪ್ಪಾರು ಕೇಶಪಾಶವ ಮಾಡಿ ತ್ರಿಭಾಗೆಯ ಘಮ್ಮನೆ ನಿಡುಜಡೆವೆಣೆದು ಕಮ್ಮಲರ್ಗಳ ಸೂಡಿ ಸಿರಿಮುಡಿಯಲಿ ವೀರಚಿಮ್ಮುರಿಯನು ಹಾಯ್ಕಿದನು (ಜೈಮಿ. ೩೬-೫೯) ; ತಲೆಗಳ ಕೊಯ್ದು ಕೊರಳೊಳಗೆ ಹಾಯ್ಕಿ . . . ಪೆರ್ಮರುಳೊಂದಿರುತ್ತಿರಲ್ ಕಂಡು ಭಯಭಕ್ತಿಯಿಂ ಚರಣಕೆಱಗಿದುದೋಂಗು ಪುಲ್ಮರುಳ್ (ಶಬರ. ೯೦-೨೬). ೪. ವೈಶ್ಯಕುಲಸಂಭವರು ಹಾಯ್ಕಿನರಲ್ಲಿ [ಪಾಠಾಂ. ಹೊಯಿಸಿದರು] ಗೂಡಾರವನು (ಹರಿಶ. ೫-೯೯). ೭. ಸದಮದ ಭಟಕ್ಕೆಯೊಳಗೆ ಈರೇಳುಭುವನವನು ಒದಜಿ ಹಾಯ್ಕಿ ತಾನೆ ಸಿಂದುವಲಾ (ತತ್ವ. ೪. ೫೯೬-೦೩೬೨) ; ಪಾಕವೆಲ್ಲವನಕ್ಕಟ ವೃಥಾಪಾಕವಂ ಮಾಡಿದನಿವಂ ನಮಗೇಕೆನುತ್ತವೆ ತನಯನಂ ಕೊಂದೆಳೆದು ಹಾಯ್ಕಿದಳು (ಬಸವ. ೨೯-೫೯) ; ಕಲಿಭೀಮಂ . . . ಶರ ಧನುವ ಹಾಯ್ಕಿದನು ಧೊಪ್ಪನೆ ಧರೆಗೆ ಧುಮ್ಮಿಕ್ಕಿದನು (ಕುಮಾ.ಕ. ೦೨-೨೬) ; ಹೆಗ್ಗರಿಯೊಂದ ಕಿತ್ತೆತ್ತಿ . . . ತಂದನು ಗಂಡುಗಲಿ ಹಾಯ್ಕಿದರೆ ಮುಳುಗಿತು ತಳದ ಪರಿಯಂತ (ಕೌಶಿಕಾ. ೧೬-೬) ; ಕಮಠಾಂಗವಾಗಿರ್ದ ಪಿಂಡಮಂ ತೆಗೆದು ಮಡುವಿನೊಳೆ ಹಾಯ್ಕೆಂದೊಡುದ್ದಂಡದಿಂದೆತ್ತಿ ಬೀದಿಗೆ ಬಿಸುಡಲ್ (ಕೈವಲ್ಯ. ೦೦-೩೦). ೨೧. ಹತ್ತಿ ತದ್ಗಿರಿಶಿಖರವನು ಮರವೊತ್ತದಲಿ ಬಲೆಗಳನು ಹಾಯ್ಕಿದರೊತ್ತಿ ಸೋಹಿದರು (ಹರಿಶ. ೨-೦೩). ೨೨. ಭುಜಗ ಸಮೂಹವ ಖಗರಾಜ ಹೊಕ್ಕಂತೆ ಕುಜನರ ಕುಟ್ಟಿ ಹಾಯ್ಕಿದನು (ಜೈಮಿ. ೩೫-೨೧). ೨೩. ತೊಡಿಸು : ದಂತಿಗಳ ಹೆಗಲಲಿ ನಿಡುನೊಗನ ಕಟ್ಟಿದರು ಕಿವಿಯಲಿ ಕೀಲುಗಳ ಸರಿಸಿ ಜಡಿವ ಗುಳವನು ಹಾಯ್ಕಿ ಬೀಸಿದರೊಡನೊಡನೆ ಹಕ್ಕರಿಕೆ ಜೋಡಿಸಿ ಗಾಲಿಯ ಬಿಗಿದು (ಕುಮಾ.ದ್ರೋ. ೮-೯೫) : ನೃಪನಿವಹದಲಿ ನೀ ಹಾಯ್ಕು ಮಾನವಿದ್ದವನ ಕೊರಳಿಗೆನುತ್ತ ಕೊಟ್ಟನು ಪುಷ್ಪ ಮಾಲಿಕೆಯ (ಹರಿಶ. ೩-೫೭) ; ಅಂಗಲಾಚುತ್ತವನ ಕಾಯ್ತುಂದೆಗಳ್ . . . ಅಳುತಿರೆ ಚಿಕ್ಕಲಿಂಗಣ್ಣನಾ ಲಿಂಗಮಂ ಕಂಡು ತಂದವನ ಕೊರಲಿಂಗೆ ಹಾಯ್ಕಿ ಲೊಡನೆ ಲಿಂಗಣ್ಣನಸು ಬರಲ್ (ಶಬರ. ೬-೩೦). ೨೪. ಕೊಡು : ಕುಡಿತೆಯೆರಡಜಿಳೊಳಘ್ರ್ಯಜಲವನು ಹಿಡಿದು ಹಾಯ್ಕುವ ಸಮಯದಲಿ ತಲೆ ನಡುವೆ ಬಿದ್ದುದು ಅರ್ಘ್ಯದಲಿ ನವರತ್ನಮಯವಾಗೆ (ಕುಮಾ.ದ್ರೋ. ೨೯-೯೩); ಕುಚದ ವೃತ್ತತೆಯ ಕೊಟ್ಟಳು ಕೋಕಪಕ್ಷಿಗೆ ಕಚದ ಭಾರವ ಕೊಟ್ಟು ನವಿಲ್ಗೆ ವಚನ ಸುಸ್ವರ ತನಗೇಕೆಂದು ಶುಕಪಿಕನಿಚಯಕ್ಕೆ ಹಂಚಿ ಹಾಯ್ಕಿದಳು (ಜೈಮಿ. ೯-೩೦). ೨೫. ಗುರಿಪಡಿಸು ; ಒಳಗಾಗಿಸು : ಕಾಮನ ಸೂನು ಬಾಣನ ಮಗಳಿಗೆ ಹೊಗಲವರ್ ಕಂಡು ವಿಗಡನ ಹಿಡಿದು ಸಂಕಲೆಗೆ ಹಾಯ್ಕಿದರು (ಜೈಮಿ. ೩೬-೩೦). ೨೬. ಉಂಟುಮಾಡು : ಶಿವ್ರತೇಜವ ಹಾಯ್ಕಿ ಜನಿಯಿಸಿತಾ ವಿಧಾತ್ರವಿಹಿತವ ತಾಳ್ದುಜಿಯಿಾ ವಸುಂಧರೆಯೊಳಗೆ ಬಡಬಾನಳವು ಮಸ್ಸಹವು (ಸಂಕ್ಷ. ೨೫-೬೨). ೨೭. ಹೊಂದಿಸು ; ಜೋಡಿಸು ; ಅಳವಡಿಸು : ಕಱಿಯುರ ವಣೆಸಿ ಬಂದು ದೀರ್ಘಕರಾಗ್ರದಿಂ ಪಿಡಿದು ಭರದೊಳುದ್ದಕೆ ಹಾಯ್ಕಿ ಕೊಂಬುಗಳೆರಡ ನೆಗ್ಗಲು (ಬಸವ. ೨೨-೦೨) ; ನವಹೆ ಮಪಂಚದ ಹಳವಿಗೆಯ ತುದಿವಲಗೆಯಲಿ ಹಾಯ್ಕಿದರು ಪನ್ನಗನ (ಕುಮಾ.ದ್ರೋ. ೦೦-೯೦): ಸೂಸಿದರ್ ಕೆಂಡಮಂ ಬಲ್ಗವಣೆಲ್ಗಳಂ ಬೀಸಿದರ್ . . . ಬೀರ್ವಗ್ಗಮಂ ಹಾಯ್ಕಿ ಸೇದಿದರ್ ಮರುಳ್ಗಳ್‌ ತೂಂತರು (ಶಬರ. ೯೨-೩೬). ೨೮. ಪಕ್ಕಕ್ಕೆ ತಳ್ಳು ; ಸರಿಸು : ಹಿಡಿವ ಬಡುವೊಬ್ಬುಳಿಗೆ ತಹ ಬಲನೆಡಕೆ ಹಾಯ್ಕುವ ಸುಪ್ರತೀಕಗಜ (ಕುಮಾ.ದ್ರೋ. ೩-೦೦). ೨೯. ಇರಿ ; ತಿವಿ ; ಗುಮ್ಮು : ಹಾವಿನಂತಿರೆ ನಿಲುಕಿದರು ಸೂಕರನವೊಲು ಕೋಡೆತ್ತಿ ಹಾಯ್ಕಿದರು (ಕುಮಾ.ಭೀ. ೯-೩೫). ೩೦. ಬಿಡು : ರಕ್ಷಿಸಿಯು ಜೀವವನೊದೆದು ಹಾಯ್ಕು (ಕೂರ. ೦-೦೦-೮).

**ಹಾಕಿಕೊಳ್ಳು** = ೧. ಧರಿಸು : ತೊಡು : ಹಬ್ಬದ ದಿನ ಹೊಸಬಟ್ಟೆ ಹಾಕಿಕೊಳ್ಳುವುದರಲ್ಲಿ ಮಕ್ಕಳಿಗೆ ತುಂಬಾ ಉತ್ಸಾಹ (ಕೂಂ). ೨. ಹೊಂದು ; ವಶಪಡಿಸಿಕೊಳ್ಳು : ಅಣ್ಣನ ಹೆಂಡಿರ ತಮ್ಮ ಹಾಕಿಕೊಂಡು ಕೊಡದಿರಲಾಗಿ ಇದು ಅನ್ಯಾಯವೆಂದು ಅವನ ಕಿಜಿಯ ತಮ್ಮ ತಾ ತೆಕ್ಕೊಂಡ (ಶಾಸನ. ೪. ೯೩೯-೬೮). **ಹಾಕಿಡು** = ಇರಿಸು ; ಇಡು : ನಾಗೊಂದಿಗೆ ಅಥವಾ ಹಲಿಗೆಗಳಲ್ಲಿ ಸಾಮಾನುಗಳನ್ನು ಹಾಕಿಡುವ ಪಾತ್ರೆಗಳನ್ನು ವ್ಯವಸ್ಥಿತವಾಗಿ ಇರಿಸಬೇಕು (ಅಡುಗೆ ೫೨). **ಹಾಕಿಯಾಡು, ಹಾಕ್ಯಾಡು** = ಹೊಡೆದಾಡು : ಅವನು ಹಾಗೆ ಹೇಳಿದರೆ, ನೀನು ತಕರಾರು ಮಾಡಬೇಕಾಗಿತ್ತು. ಮಹಾರಾಜ ! ನಾನು ಹಾಕಿಯಾಡಿದೆನು. ಆದರೂ ಅವನು ಕೇಳಲಿಲ್ಲ (ರಾಜ. ೦೬೬) : ಗೋಕುಲದೊಳು ಪುಟ್ಟಿ ಆಕಾರವಡಗಿಸಿ ಹೋಕತನದಲ್ಲಿ ಹಾಕ್ಯಾಡುತ ಗೊಲ್ಲರ ಕೂಡಲಿ ಬೆಳೆದು (ಪುರಂ. ೨೦-೨) : ಇವು ತಮ್ಮ ಹುಡುಗರದೆ ಅಂತ ರಂಗಣ್ಣರಾಯರು. ಅಲ್ಲ, ತಮ್ಮ ಹುಡುಗರವು ಅಂತ ಯಂಕಣ್ಣರಾಯರು ಹಾಕ್ಯಾಡಿದರು (ಶ್ರೀನಿ. ೯೫). **ಹಾಕ್ಯಾಟ** = ಬಡಿದಾಟ ; ಗುದ್ದಾಟ : ಯಾರ ಸಂಗಾಟಾದ್ರೂ ಹಾಕ್ಯಾಟ ಗೀಕ್ಯಾಟ ಆಗೇತೇನು ? (ಶ್ರೀಕೃ. ೯); ಮನ್ಯಾಗ ಏನಾರೇ ಹಾಕ್ಯಾಟ ಗೀಕ್ಯಾಟ ಆಗೇತೇನ್ರಿ ? (ಕಂದಮ. ೨೬).

[ ಪಾಯ ೃ₁ + – ಕು₁ ]

**ಪಾಯ್ಕು₂**, ಪಾಕು₃, ಪಾಯುಕು, ಪಾಯಿಕು (ನಾ). ಒಳ್ಳೆಯದು, ಭಲೆ ಎಂಬರ್ಥದ ಕೊಂಡಾಟದ ಒಂದು ನುಡಿ: "ಅರರೆ ಧಣು ಭಾಪು ಭಳಿರೇ ಧಿರುರೇ ಮಝು ಪೂತುರೆ ಪಾಯ್ಕು [ಪಾಠಾಂ. ಪಾಕು, ಪಾಯಿಕು] ಬಾಗು ಸಲೆ ಸುಂಪ್ಪುರಿಯೆನೆ ಕೊಂಡಾಟದ ನುಡಿ" (ರಾಜ. ೯೬); ಅನಿಮಿಷಾವಳಿ ಪೂತು ಪಾಯ್ಕನೆ ಹಣಗಿದರು ಘಟರು (ಕುಮಾ.ದ್ರೋ. ೬-೫೬) ; ಆಯಿತಿದು ಸಮರದಲಿ ಗುರು ಗಾಂಗೇಯ ಕರ್ಣ ದ್ರೌಣಿಗಳ ತಜಿವಾಯ ಲೆಕ್ಕಕೆ ಸಂದನೈ ಮಝು ಪೂತು ಪಾಯ್ಕೆನುತ (ಕುಮಾ.ಕ. ೨೦-೩೫). **ಪಾಕು₃** : ಮೇಲಿನ 'ಭಾರನಿ' ಪ್ರಯೋಗದ ಪಾಠಾಂತರವನ್ನು ನೋಡಿ. **ಪಾಯುಕು** : ಸರಿಸ ಸಬಳಿಗೆ ಪೂತು ಪಾಯುಕುಯೆಂಬ ಕಳಕಳಿಕೆ . . . ಮಸಗಿದುದೊಂದು ಕಡೆಯಲಿ (ಕುಮಾ.ಆ. ೮-೬); ಪೂತು ಪಾಯುಕು ಮಝು ಭಾಪು ಭಲರೆಯೆಂದು ಸೂತಸುತರು ಕೊಂಡಾಡೆ (ಕುಮಾಸಾಂ. ೧೯-೯೨). **ಪಾಯಿಕು** : ಪೂತು ಪಾಯಿಕು ತತ್ತ ಹೊಕ್ಕಿನೊಳಾತುಕೊಂಬವ

ರಾರು (ಕುಮಾ.ದ್ಯೋ. ೪-೧೧) : ಅರರೆ ಧಣಾಧಣಾ ಪೊತು ಪಾಯಿಕು ಸರಿಯು ಕಾಣೆನು (ಕುಮಾ.ಕ. ೨೩-೦೭).

**ಪಾಯ್ಖಾನೆ** 'ಪಾಯಖಾನೆ' ನೋ.

**ಪಾಯ್ತು** (ನಾ). ಹಾಯುವಿಕೆ : ಹಾಯುವುದು : ಸುಯ್ತುಂ, ಸುಯ್ತುಂಗಳ್ ; ಪಾಯ್ತುಂ, ಪಾಯ್ತುಂಗಳ್ (ಶಬ್ದಾನು. ೫೫೩ ಪ್ರಯೋ).
[ ಪಾಯ್$_1$ + —ತ್$_2$ ]

**ಪಾಯ್ತರ್, ಪಾಯಿತರ್** (ಕ್ರಿ). ೧. ಚಿಮ್ಮು ; ಸೂಸು : ಪಡಪಡವಾಯ್ವ ಮೆಲ್ಲಿರ್ದೆಗಳಂ ಕರಯುಗ್ಮದಿನೊತ್ತಿ ಕಣ್ಣ ನೀರಡಿಗಡಿಗುಣ್ಮಿ ಪಾಯ್ತರೆ (ಆಪು. ೬-೦೨೦) ; ತಿರುವಾಯೊಳ್ ತೊಟ್ಟು ದಿವ್ಯಾಸ್ತ್ರಮನಿಸೆ . . . ಕರ್ನೆತ್ತರಿರ್ಮೆಯ್ಯೊಳಂ ಪಾಯ್ತರೆ (ಶಂರಾಜಾ. ೦೩-೨೮) ; ಮೂಗಿಂದಂ ಬಾಯಿಂದಂ ಬೇಗಂ ಕನ್ನೆತ್ತರೊಡನೆ ಪಾಯ್ತರೆ ಕಣ್ಗಳ್ ಮೇಗೊಗೆದು ಸೂಸೆ ಹರಿ ಕಡುವೇಗದಿ ಪಿಡಿದೊತ್ತಿ ಕೊಂದು ಬಿಸುಟಿರ್ದರ್ (ಬಂಹಂ. ೬-೫೦). ೨. ವೇಗವಾಗಿ ಹರಿ ; ಪ್ರವಹಿಸು : ಬೆಟ್ಟದ ಮೇಗಣಿಂ ಪಾಯ್ತ[ಪಾಠಾಂ. ಪರಿತ]ರ್ಪ ನಿರ್ಝರಶೀಕರಂಗಳಿಂ ಮೆಯ್ಯಾಪ್ಯಾಯನಮಾಗಿ (ಪಶ್ಪಾರಾ. ೦೦೮-೬) ; ಪರಿಪೂರ್ಣೋತ್ಕಟದಾನಧಾರೆ ಕಟದಿಂ ಪಾಯ್ತರ್ಪುದುಂ ಪೆರ್ಚೆ ಪುಷ್ಕರದಿಂ ಶೀಕರನಿರ್ಝರಂ ಸುರಿವುದುಂ . . . ಒಪ್ಪೆ ಚಕ್ರಿಯ ಮಾನಗೊಂಡತಪ್ಪಮತ್ತದ್ವಿಪಂ (ಆದಿಪು. ೦೨-೫೮) : ಎಚ್ಚೊಡೆಳೆಯದಿರೆ ಶರಮಿರದುಚ್ಚಳಿಸಿದುದೊಡಲನದಱ ಕೆನ್ನೀರ್ ಭರದಿಂ ಬೆಚ್ಚನೆ ಪಾಯ್ತರೆ ಕಣ್ಣರಮುಚ್ಚುತ್ತುಂ ಮೂರ್ಛೆವೋದುದಲ್ಲಿ ವರಾಹಂ (ಕಬಕಂ. ೪-೨೨). ೩. ಮೇಲೆ ಬೀಳು ; ಆಕ್ರಮಣ ಮಾಡು : ನೆರೆದಿದಿರಾದೊಡಟ್ಟುವ ಪೊದಳ್ದರೆಯಟ್ಟಿದೊಡಂಡುಗೊಳ್ವ ಪಾಯ್ತರೆ ಮುಸುಡೆತ್ತಿ ಗರ್ಜಿಪ . . . ಬಗೆ ಮೊಕ್ಕಳಮಾದುದು ಸೂಕರೇಂದ್ರನಾ (ಕಬಕಂ.೪-೦೦). ೪. ಬಾಣ ಮೊದಲಾದುವು ದೇಹದೊಳಗೆ ನಾಟಿ ಬರು,—ಹಾದು ಬರು : ಹೊಗರೊಗುವ ಪೊಸಮಸೆಯ ಬಾಣಮಸುರನ ತನುವನುಗಿದು ಭರವಸದಿಂದೆ ಪಾಯ್ತಂದು ಧರಣಿಯಂ ಬಗಿದು ಪಾತಾಳಮಂ ಪೊಕ್ಕು ಫಣಿಪನ ನಲೆಯಲ್ (ಕಬಪು. ೪೦-೦೦). ೫. ಹೊರಬರು : ಹೊರಬೀಳು : ಕರುಳೊಕ್ಕುರ್ವಿಯೊಳ್ ಕುಪ್ಪಳಿಸೆ ನೆಣವಳಿರ್ ಸೂಸೆ ಬಂಬಲ್ಮಿದುಳ್ ಪಾಯ್ತರೆ . . . ಕಾದಿತ್ತು ಖಡ್ಗಪ್ರಕಾನಂ (ಜಗಪ. ೭-೫೭). ೬. ಮುಂದುವರಿ ; ಮುನ್ನುಗ್ಗು : ಕೆದಱುತುಂ ಕೇಸರವ್ರಾತಮಂ ಮಂಗಡೆಯೊಳ್ ಪಾಯ್ತಂದುದುದ್ಯತ್ಪದನಖವಿದಳತ್ಕುಂಜರೇಂದ್ರಂ ಮೃಗೇಂದ್ರಂ (ಕಬಕಂ. ೩-೬೨). **ಪಾಯಿತರ್** : ೬. ಆ ಶೃಂಗಿಯುಂ ಶೃಂಗಿಯುಂ ನೋಕುವಂತೆ ನೋಂಕಿ ಪೋಪಾಗಳವಲ್ಗೆ ಮುನಿ ಮುನಿದು ನೀಂ ದೆಸೆಬಿದ್ದಂ ಮರೆಯಂತೆ ಪಾಯಿತಂದೆಯಪ್ಪುದಱಿಂ ಮರೆಯಾಗೆಂದು ಶಾಪಮಂ ಕುಡೆ (ಕಇ. I, ೨೫-೨೩; 1186). [ ಪಾಯ್$_1$ + ತರ್ ]

**ಪಾಯ್ದಳ** 'ಪಾಯದಳ' ನೋ.

**ಪಾಯ್ಯ** (ನಾ). ಒಂದು ಅಳತೆ : "ಪಾತವ, ದ್ರುಪಮುಂ, ಪಾಯ್ಯಂ . . . ಮಾನಾರ್ಥಕಂ" (ಸಿದ್ಧಾಂತಿ. ೩೦೦). [ ಸಂ. ].

**ಪಾಯ್ಸು** 'ಪಾಯಿಸು' ನೋ.

**ಪಾರ್$_1$, ಪಾರು$_1$, ಹಾರು$_1$** (ಕ್ರಿ). ೧. ನೋಡು ; ಅವಲೋಕಿಸು : ಇನಿತಂ ಪಾರೆನ್ನಂ ತ್ವರಿತಗತಿಕೆ ಪಿಡಿ ಮೇಲುದನೀಗಳ್ ಲಲಿತಲತಿಕೆ (ಕಾದಂಪು. ೪೬೨) ; ಇರ್ಕಲದೊಳ್ ಪಾರ್ದೊಡೆ ಬಯ್ಯು ಮೆಯ್ಸೆರೆ (ಜು[3])ದ ಪೊಟ್ಟೆಂದಂತದಂ ಪೇಟ್ ನೋಡಲೊಡಂ (ಲೋಕೋಪ. ೨-೨೭) : ಪೋರ್ದಂ ತೀರ್ದಂ ಪಾರ್ದಂ ಸಮಂತು ಪೀರ್ದಂ . . . ಸೋರ್ದಂ ತಾನೆಂದೊಡಂ ಗುರೂಪಧ್ಯೆಯಿನಿತುಂ (ಚುದ. ೪೦) : ಪೊಲ್ಲನೆಯ್ಕೆಸಿನ ವೆಣಮಾನ್ ಮರ್ ಮಾಡದಿರ್ಪ್ಪರುವರ್ . . . ಬಯಸಿ, ಪಾರ್ದು,

ನಲಿದೆಱವ ಪರ್ದಿಂಗೆ ಸವಿಯೊರೆಯ ನಿಧಿಯಾಗೆ ಬಿಸುಟರ್ಕೆ ಬಯಲೊಳ್ (ಅಂತಿಗೂ. ೨-೨೨). ೨. (ಸಮಯವನ್ನು) ಎದುರು ನೋಡು ; ನಿರೀಕ್ಷಿಸು ; ಪ್ರತೀಕ್ಷಿಸು: "ಪಾರ್—ಸಮಯಾನ್ವೇಷಣೇ" (ಶಮಂ) : ಕಾರ್ಗಾಲದ ಬರವಂ ಬಾದಗೆ ಪಾರ್ವಂತೆ ತನ್ನ ಬರವನೆ ಪಾರುತಿರ್ದ ಧರ್ಮಪುತ್ರನ ಮರುತ್ಸುತನ ಪಾದಮಲಂಗಳಂ ನಿಜಮಕುಟಮರೀಚಿಗಳಿಂದರ್ಚಿಸಿ (ಶಂಶಭಾ. ೮-೩೬ಐ) ; ಕಜ್ಜಮಂ ಕಾಲಮಂ ಪಾರ್ವ ಕಜ್ಜಗಲಿಗಳುಮಂ ಮಾರ್ಗವಿನಾಯದ ಬಿಧಿರದ ಲೋಭಿಗಲಿಗಳುಮಂ. . . ನೋಡಿ (ಗದಾಯು. ೯-೩೪೫) : ನೀರೆಱೆದುಪಕಾರಕ್ಕೆಳನೀರಂ ರುಚಿವೆರಸು ತೀವಿ ಮನಪಾಲಕರಂ ಪಾರುತ್ತಿರ್ಪಂತಿರ್ಪುವು ಸಾರಾಯಫಲಾಳಿ ನಾಳಿಕೇರಂ ಬನದೊಳ್ (ಗಿಂಕ. ೨-೪೭). ೩. ಬಯಸು ; ಅಪೇಕ್ಷಿಸು ; ಹಾರೈಸು : ದೇವನ ದಾನೋದಯಮಂ ಪಾರ್ವವುಱಿದುದರ್ಕಱಗುಮವೇ (ಆದಿಪು. ೯-೦೦೯); ನೀರನುಣಲ್ಕೆ ಪೋಗಿ ಯಮುನಾನದಿಗೊರ್ಮೆಯೆ ಬೆರ್ಚಿದಂತೆ ನಿಷ್ಕಾರಣಮೇಕೆ ನೀಂ ಮಗುಳ್ದು ನಿನ್ನೊಳೆ ಚಿಂತಿಸುತಿರ್ದೆ ಪೇಱಿದಂ ಪಾರದೆ ಬೇಱದೊಂದುಮಂ (ಶಂಕಕಂ. ೩೫-೦೦); ಭಾಸ್ಕರಂ ಕನ್ನಡಿಯ ಬೆಳಗಂ ಪಾರ್ವನೆ (ಬಸರ. ೮-೦೨೦) ; ಪೆಱರೊಡವೆಯ ಪಾರ್ವನೆ ಸುರರಾಜಂ (ಕಬಪು. ೨೩-೨೨). ೪. ವಿಚಾರ ಮಾಡು ; ಯೋಚಿಸು ; ಆಲೋಚನೆ ಮಾಡು : ಬೆಸನಂಗಳಂ ಸಮಕಟ್ಟುವಮಪ್ಪೊಡೆ ಸಪ್ತವ್ಯಸನಂಗಳಯ್ಯರುಮನೊಂದುಂ ಗಲ್ವುವಲ್ಲ ರಾಷ್ಟ್ರವ್ಯಸನಮುಂ ಬಳವ್ಯಸನಮುಂ ಪಾರ್ವಮಪ್ಪೊಡವು ಮುನ್ನಮಿಲ್ಲ (ಶಂಶಭಾ. ೬-೬೭ಐ); ಪಾರಲ್ಕೇಂ ಜೀವಿತಸಂಧಾರಣಕಿಂ ಗಮನಮೊಂದೆ ಪೊಱಗಾಗಿರೆ ಮತ್ತಾರಯಲುಪಾಯವಿಲ್ಲವಧಾರಿಸುವುದು ಮನದೊಳಾರ್ಯ ಸಮಗಿದು ಕಾರ್ಯಂ (ಕಾದಂಬು. ೬೫೬): ಉದಾತ್ತನಂ ಪಾರದೆ ಬಯ್ದು (ಚಂದ್ರಪು. ೮-೬೪). ೫. ಲಕ್ಷಿಸು ; ಗಮನಿಸು : ಮದನಂ ತೋಟಿಗನಾದ ಚೂತವತನುಜ್ಯಾರಾವದೊಳ್ಕೂಡಿ ಪಾಡಿದ ಪೆಣ್ದುಂಬಿ ವಸಂತದೊಳ್ಮದನಕೇಳೀಸೂತ್ರಮಂ ಪಾರದೋದಿದ ಕೀರಂ . . . ಅಲ್ಲದಿಲ್ಲೆನೆ ಬನಂ ಚಿತ್ರೋತ್ಸವಾಲಂಬನಂ (ಪುಲ್ಲಪು. ೨-೩೭).

**ಪಾರು$_1$** : ೧. 'ಪಾರುಮೀಳೆಯ' ಪರಾ. ೨. ಮಱೆಯ ಬರವಂ ಪಾರುವ ಒಕ್ಕಲಿಗನಂತೆ (ಶ್ರಾವಕಾ. ೦೩೩-೬) ; ಬರವ ಪಾರು [ಪಾಠಾಂ. ಹಾರು, ನೋಡು]ತ್ತಿರಲು ಬಂದ್ಯ ಕರುಣದಿಂದಗ್ನಿಯನು ಪರಿಹರಿಸು (ಪಳತ. ೬-೦೨); ಪಾರದೆ ಪರಸಹಾಯವನು ಪೋರದೆ ಪುರ್ಬು ಗಂಟಿಕ್ಕದೆ ಪುಸಿಯದೆ ಸೇರಿ ಸೇವೆಯನೆಸಗುವುದು (ಹರಿಬ. ೩-೨೫); ತಾಸರಿಯದಾವುದನೊ ಪಾರುತುಂ . . . ಸಖಿಯರ್ಗಗೋಚರಸ್ವರ್ಗದಲಿ ಚಂದ್ರಮುಖಿ ಮನದೊಳ್ ಮರಳಿ ಬಾಳಿದಳ್ ಕಳೆದ ಕಾಲಮಂ! (ಶಕ್ರಾಂಗ. ೬೨-೦೭೦೮). ೩. "ಬಯಸು, ಬೇಡು, ಕೇಳು, ಕೋರು, ಹಾರೈಸು, ಪಾರು (ಹಾರು)" (ಕಂಹುಹು. ೬೮).

**ಹಾರು$_1$** : ೧. ಹಸುಳೆಯುಂ ತನ್ನಯ ಕುಮಾರನೆಂದೇ ಬಗೆದು ಕರೆಕರೆದು ತರೆದಡವಿ ತಡವರಿಸಿ ಮೆಯ್ಯುಗ್ಗುಹನು ಹಾರುತಿರೆ (ಹಚಶಾ. ೦೩-೨) ; ತಾಗಿದ ಕೂರಲಗು ಗಱದೋಱದವು ನಿಜಹಯದ ಮೈಗಳಲಿ ಹಿಂದಿದರ್ಜುನನಱದನಾ ದೈತ್ಯಾರಿಗೆಂದನು ದೇವ ಬಿನ್ನಹ ಮಾರುಮಂಗಳ ಪಹಿಲತೆಯ ಚಿತ್ತೈಸಿದಿಶೆಯಂದ (ಕುಮಾ.ದ್ಯೋ. ೨೦-೨೩). ೨. ತೆಗೆ ಮಾರುಪಮಂ ಹಾರುವ ಬಗೆಯಂ ತನಗಿರುಳೆ ಬವರಮೆನುತ ಸಮಂಗಂಬುಗುವ ಕಟಕಿಗರನಳಿಱಂ ಪುಗಿಸಿದುದು ಭುಜಬಾಸಿ ಗಂಗದಣ್ಣಾಧಿಪನ (ಎಕ. II, ೭೩-೨೨; 1118) ; ನಿಮ್ಮ ಬರವ ಹಾರುತಿರ್ಪೆನಯ್ಯ (ಮಹಾದೇ. ಐ. ೦೬೯-೩೦೪) ; ನಿಲ್ಲು ಕಳಶಜ ತಪ್ಪಿದವ ನಾನಲ್ಲ ಫಲುಗುಣ ಸಾತ್ಯಕಿಯವೋಲಿಲ್ಲ ತನ್ನಲಿ ವಿನಯ ಹಾರದಿರಿ (ಕುಮಾ.ದ್ರೋ. ೦೩-೦೦) ; ಪಾರನಾರಿಯರು ಪಾಮಾರ ನಾರಿಯರೊ ಶೃಂಗಾರಕೆ ಸೋತು ಭೂವರನ ಹಾರುತ್ತಿದ್ದರು ಸುರಪಶುವ ಗೋದಾನಕ್ಕೆ ಹಾರುವ ಹಾರುವನಂತೆ (ಪರಿಷ. ೦-೬೬). ೩. ಸರ್ಪನ ಬಾಯ

ಕಪ್ಪೆ ನೊಣಕ್ಕೆ ಹಾರುವಂತೆ ಆಪ್ಯಾಯನ ಬಿಡದು(ಮುಕಾರೇ. ಬ. ೩೬-೦೩೬); ಮಾವಣ್ಗಳಂ ಪೀರ್ವ ಕೀರವಿಟ್ಟಿಯ ಪಣ್ಗೆ ಚಿತ್ತಂ ಹಾರಿದಪುದೇ (ಐಶಕು. ೧೧-೦೦); ಧಾರುಣಿಯ ಲಂಪಟರು ಕದನವ ಹಾರಿ ಬಂದರು ಗಡ (ಕುಮ್ಮಾರ. ೦-೪) ; ಹಾರಿದ ಸಖಿಯರ ಪೊರೆವಿರಿ ನೀವೊಂದ ಹಾರಲಿಲ್ಲದ ಬಲ್ಲೆನೆನ್ನ ಹಾರವಂತೊಪ್ಪದಿ ಬಾಳಿರೆಂದೊಂದೊಂದು ಹಾರವ ಹರಸಿಯಿಕ್ಕಿದಳು (ಭರತ. ೩೩-೬೦). ೪. ಹಾರಲತಿಶಯತೃಷ್ಣೆ ನಾಶಕೆ ಕಾರಣವಲೇ ಮಾವ (ಕುಮ್ಮಾಸ. ೦೩-೩೩) ; ಅಧರ ಉರುಟಿಕಿ ಮದನಮಂದಿರ ಸದರ ರೋಮವು ಬಿರಿದು ನುಡಿಗಳು ತೊದಳು ಲಜ್ಜೆಯು ಹೀನದ್ವಿಗುಣ ಹಾರಿ ನೋಡೆಂದ (ಕಕ್ಕೋಳ. ೫-೨೦). [ದೇಶ. ತಮಿ. ಮಲ. ಪಾರ್]

**ಪಾರ್₂** ‘ ಪಾಱು₁ ’ ನೋ.

**ಪಾರ್₃** ‘ ಪಾಱು₂ ’ ನೋ.

**ಪಾರ₁** (ನಾ). ೧. ನದಿ, ಸಮುದ್ರ ಮುಂತಾದುವುಗಳ ದಡ, –ತೀರ : “ ಪಾರವೆಂಬುದು ತಡಿ ” (ಹಲಾಯು. ೦೦೦-೯೩) ; ಕಾಣದಂಬುಧಿಯ ತೋಳ್ ನೀಡಿ ಸನ್ನೆಗೈವೀಸಿ ಕರೆದಂತಾಯ್ತು ರಾಮಂಗೆ, ತನ್ನಾತ್ಮದಶಿ ದೂರದಾ ಪಾರದಿಂ (ಶ್ರೀರಾಮಾ. ೦೪೭-೪೯೯) ; ಪಾರವಿರ್ಪ ಜಲರೂಪ ಸಿಂಧುವಂ ಪೀರಿದಾತನ ಮಹತ್ತ್ವಮೇನೊ ಪೇಳ್ (ಸೀಗಟ್ಟಿ. ೭೪) . ೨. ಎಲ್ಲೆ ; ಗಡಿ ; ಮೇರೆ ; ಸೀಮೆ : ಅಮಿತಮತಿಗುಣದಿನತಿ ವಿಕ್ರಮಗುಣದಿಂ ಶಾಸ್ತ್ರಪಾ[ಪಾಠಾಂ.ಶಸ್ತ್ರ ಪಾ]ರಮುಂ ರಿಪುಬಳ[ಪಾ] [ಪಾಠಾಂ. ಪಾ, ಹಾ]ರಮುಮೊಡನೆ ಸಂದುವೆನಿಸಿದನಮೋಘಬಲಶಾಲಿ ಮನುಜಪಾರ್ತಾಂಡನೃಪಂ (ಶಂಶಲಾ. ೧-೯೩) ; ಸ್ವಾರಸ್ಯವಮಿತ ಪಾರಿಗವಿರದು ಜೀವನದಿ ಪಾರದಿರ್ಕೆಯು ನೆನೆದು ನಡೆಯಲದು ಸಫಲ (ಮುಂಕುಕ. ೬-೭೬) ; ಅವರ ಸಂತೋಷಕ್ಕೆ ಪಾರವೇ ಇಲ್ಲ (ಕಿಶ್ವದ. ೦೦೩) . ೩. [ಸಾಂಖ್ಯ] ಒಂಬತ್ತು ಬಗೆಯ ತುಷ್ಟಿಗಳಲ್ಲಿ ಐದನೆಯದು : ಪಾರ ಎಂದರೆ ದ್ರವ್ಯಾರ್ಜನೆ. ಐದನೆಯದು (ಹಿಂದಸಾ. ೬೩). [ಸಂ.]

**ಪಾರಂ** (ಅ). ಚೆನ್ನಾಗಿ ; ಅತಿಶಯವಾಗಿ : ಆರೂಢವ್ಯಸನಕ್ಕೆಪೋಪ ಯುವರಾಜಾಗ್ರಾನಕಥಾನದಿಂ . . . ಪಾರಸ್ತೀಗಪಾಸೋತ್ಥವಸ್ತುರಚನಾ ಲಂಕಾರರ್ಥುಂಕಾರದಿಂ ಪಾರಂ ಪಟ್ಟಪದಂ ಜನಶ್ರುತಿಪಥಕ್ಕಾಗಿರ್ಪುದಾಹ್ಲಾದನಂ (ಮುಕಾನೇ. ೦-೭೮). ‘ ಪಾರಂತಗುಳ್ ’ ಪರಾ. [<ಪಾರ₂]

**ಪಾರಂಗತ** (ಗು). ೧. ಸಂಪೂರ್ಣವಾಗಿ ತಿಳಿದ ; ಸಮಗ್ರವಾಗಿ ಅರಿತ : ಸುಪ್ರಸಿದ್ಧವೈದ್ಯನಾದ ಪಾರಂಗತ ಕಾನ್ವೀಮಾನೂ ಕೂಡ ಕಾಕನ ಸಂಶೋಧನೆಯಿಂದ ಬೆರಗಾಗಿ ಹೋದನು (೭೬೩ಸ. ೬೪). (ನಾ). ೨. ಚೆನ್ನಾಗಿ ತಿಳಿದವನು ; ನಿಷ್ಣಾತ : ಪಾರಂಗತಂಗಂತರಾಳ ದೂರ ಗಳೇನು ? ಸ್ವೈರಪಥವಾತನದು (ಮುಂಕುಕ. ೭೬೮) ; ಅಂಡಯ್ಯನು . . . ತನ್ನ ಕುಲಪರಂಪರೆಗನುಗುಣವಾಗಿ ವಿದ್ಯೆಯಲ್ಲಿ ಪಾರಂಗತನಾದನು (ಸಾಹಿಸ. ೧೦೩). [ಸಂ.]

**ಪಾರಂಗಮತೆ** (ನಾ). ಪೂರ್ಣಪಾಂಡಿತ್ಯ ; ಸಂಪೂರ್ಣಜ್ಞಾನ : ಪ್ರಸೇನಜಿತನ ತಂದೆಯು, ಮಗನು ಕಲಿತು ಬಂದ ವಿದ್ಯೆಯ ಪಾರಂಗಮತೆಯನ್ನು ಕಂಡು ಸಂತುಷ್ಟನಾಗಿ, ಅವನಿಗೆ ರಾಜ್ಯದಲ್ಲಿ ಅಭಿಷೇಕ ಮಾಡಿದನು (ಹತ್ತುಸು. ೦೩೯). [ಸಂ. ಪಾರಂಗಮತಾ]

**ಪಾರಂತಗುಳ್** (ಕ್ರಿ). ಎಲ್ಲವನ್ನೂ ಚೆನ್ನಾಗಿ ತಿಳಿ ; ಪಾರಂಗತನಾಗು : ಕಾವ್ಯಾಂತತ್ತ್ವದಜಾಪೊಳ್ ಪಾರಂತಗುಳ್ವಿಷ್ಟಿತಂಗುಡುವೊಲ್ದಂತೊಡಗೂಡುವ . . . ಬರ್ಪವಂಗಬಲೆಯರ್ ಸೋಲ್ವರ್ ಮಹೋತ್ಸಾಹದಿಂ (ಮುಕ್ಕಾಪಿ. ೦೬-೭). [ಪಾರಂ + ತಗುಳ್₁]

**ಪಾರಂಪರೆ** (ನಾ). ೧. ಕುಲ ; ವಂಶ ; ಪರಂಪರೆ : ಹುಸಿ ಹೊದ್ದದಂತೆ ನಡೆವ ಕಲಿಗಳಾರಯ್ಯ ಹೇಳವರ ಪಾರಂಪರೆಗೆ ಸಲೆ ಸಂದ ರಾಜಗುರು ನೀನಜಿಯದವರಿಲ್ಲ (ಹಕಶಾ. ೨-೬) ; ಅವನಿಗೆ ಇಕ್ಷ್ವಾಕು ಮೊದಲಾದ ಪಾರಂಪರೆ[ ಪಾಠಾಂ. ಪರಂಪರೆ, ಪರಂಪರೆ ]ಯಿಂದ . . . ಸಕಲ ಕ್ಷತ್ರಿಯವರ್ಗ ಹಾಗೂ ಸಮಸ್ತ ಸ್ತ್ರೀವರ್ಗ ಜನಿಸಿತ್ತು (ಭೈರಸೂ. I. ೦೩). ೨. ಸಂಪ್ರದಾಯ : ದಶರಥಧರಣಿಪತಿ ರವಿಕುಲದ ಪಾರಂಪರೆಯ ಪರಮಾಪ್ತ ಪ್ರಧಾನರ ಕರೆಸಿ (ತೊರರಾ. ೦-೩-೦). [ <ಪ್ರಾ. ಪಾರಂಪರ. / ಸಂ. ಪಾರಂಪರ್ಯ ]

**ಪಾರಂಪರ್ಯ** (ನಾ). ಪರಂಪರೆಯಿಂದ ಬಂದಿರುವುದು ; ಸಂಪ್ರದಾಯ ; ಆಚಾರ : “ ಆಮ್ನಾಯಃ, ಸಂಪ್ರದಾಯಃ, ಪಾರಂಪರ್ಯಂ, ಗುರುಕ್ರಮಃ — ಈ ೪ ಎಡೆವಱಿಯುವ ಗುರೂಪದೇಶಂ” (ಕರಾಭಿಯು. ೬೭-೨೯೬) ; ಅರ್ಥಗಪ್ಪಡದ ತೀರ್ಥಪಾರಂಪರ್ಯದಿಂದಂ ಸುರಥಮೆಂಬುದು ನಾಡಲ್ಲಿ ಪಳಭಿಯೆಂಬುದು ಪೊಬಲದನಾಳ್ವೊಂ ವಜ್ರಪಾಳಂ (ವಡ್ಡಾರಾ. ೯೩-೩) ; ಅನೇಕ ಶತಮಾನಗಳಿಂದ ಪಾರಂಪರ್ಯವಾಗಿ ನಡೆದು ಬಂದಿರುವ ದೈನ್ಯಭಾವವಿನ್ನೂ ತೊಲಗಿಲ್ಲ (ಅರ್ಚರ. ೬೩). [ಸಂ.]

**ಪಾರಂಪರ್ಯೆ** (ನಾ). = ಪಾರಂಪರ್ಯ: “ಮುಂತೆ ಪಾರಂಪರ್ಯೆ [ಪಾಠಾಂ. ಪರಿಯ]ಸಂಪ್ರದಾಯಮೆನಲ್ ನಿರಂತರಂ ಗುರೂಪದೇಶಮೆನಿಕ್ಕು” (ಮುಂಗರಾ. ೬೩-೩). [ಸಂ. ಪಾರಂಪರ್ಯ]

**ಪಾರಂಬಿ, ಪಾರಂಬೆ** (ನಾ). ಮರದ ಬೀಳಲು : ಕರುಳಿಗೊಂದು ಹೊಸ ಕರುಳ ಪಾರಂಬಿ ಇಳಿಬಿಟ್ಟು ನೆಲವ ನಿನ್ನದೆ ಮಾಡಿಕೊಂಬಿ (ಪವ್ವರ್ನ. ೭-೬). **ಪಾರಂಬೆ**: ಬಲಿತ ಪಟತರುಶಾಖೆಯಿಂ ನೇಲಕಿಳಿದ ಪಾರಂಬೆಗಳ ಪೋಲುವ ಬೆಳೆದ ಶ್ಮಶ್ರುಗಳುಳ್ಳ ಸಚಿವರನತ್ರಿಗಳನು ಕೊಂಡು (ರಘುಮಂ. ೦೯೯-೭೦). [← ಮರಾ. ಪಾರಂಬೀ, ಪಾರಂಬಾ]

**ಪಾರಂಬೆ** ‘ ಪಾರಂಬಿ ’ ನೋ.

**ಪಾರಕ₁** (ಗು). ೧. ಆಚೆಗೆ ಒಯ್ಯುವ; ದಾಟಿಸುವ ; ಪಾರುಮಾಡುವ. (ನಾ). ೨. ಆಚೆಗೆ ಒಯ್ಯುವವನು ; ದಾಟಿಸುವವನು : ದ್ವಾರ ದ್ವಾರಂಗಳೊಳಗಲದಿಹ ಪಾರಕರ ಬಗೆಗೊಳ್ಳದಂತದಾರ್ವರದಾ ಸಾಹಸಿಗಳ ವಿಜಾಜುತ್ತ ನಡೆತರಲು (ಐಶಕು. ೬೧-೨೯) ; ಕಟ್ಟಿದ ಪುಟ್ಟ ಪಟ್ಟಿಯ ಕಾಸೆಯ ಥಟ್ಟಿ ಕಟ್ಟಾಯತರ ಪಿಂಡಿವಾಳ ನೆಟ್ಟನೆ ಪೊಜೆಯ ಪಾರ[ಪಾಠಾಂ. ರು] ಕರು ಕಣ್ಗೆಸೆದರು ಪಟ್ಟದಾನೆಗಳಂತಲ್ಲಿ (ಕುರಾಸಾಂ. ೨೭-೪೦). [ಸಂ.]

**ಪಾರಕ₂**. ಪಾರಗ₂ (ನಾ). ೧. ಹರಿಗೆಯನ್ನು ಹಿಡಿದ ಯೋಧ; ಗುರಾಣಿಯನ್ನು ಹಿಡಿದಿರುವ ಸೈನಿಕ (?): ಒಜಲಿ ಗಜದಾಡಿಗಳ ಕೈಗಳ ಹಜೆಯ ಹೊಯ್ದರು ಪಾರಕರು ಮುಕ್ಕುಜಾಕಿದರೆ ಸಬಳಿಗರು ಕೋದೆ ತ್ತಿದರು ಕರಿಘಟೆಯ (ಕುಮ್ಮಾಶ. ೨-೦೬) ; ಸೀಳ ಬಡಿದನು ಸಮರಥರ ಪಾಯಿಕಾಳ ರಾವುತರನು ಮಹಾರಥಜಾಲವನು ಜೋಧರನು ಭಾರಿಯ ಪಾರಕವ್ರಜವ (ಕುಮ್ಮಾಗ. ೯-೩೬). **ಪಾರಗ₂** : ೨. ಒಂದು ಬಗೆಯ ಆಯುಧ ; ಹರಿಗೆ ; ಡಾಲು : ವೀರನಹಿತಿದಿರಾಗೆನುತ ಬಹುಭಾರಣದ ಚಮ್ಮಟವ ಖಡುಗವ ಪಾರಗದ ಪರಿಣತರು ಹೆಣಗಿದರು (ಕುಮ್ಮಾದ್ರೋ. ೦೯-೩) ; ಚಾರಣದ ಚಮ್ಮಟವ ಖಡುಗದ ಪಾರಗವಬಿಚ್ಚಟದ ಲಾಳಿಯು ಖ್ಯಾರದೊಡ್ಡಿನ ಹೊಯ್ಲ ಹೋರಟೆಗಳ ಸುರೇಬೆಗಳ ಸುರತರಶ್ರಮ ರೊದಗಿದರು (ಕುಮ್ಮಾಕ. ೦೯-೩೩). [<ಪ್ರಾ. ಫಾರಕ್ಕ ?./ಸಂ. ಸ್ಫಾರಕ ? ]

**ಪಾರಕಾವಣೆ** ‘ ಪಾರಖಾವಣೆ ’ ನೋ.

**ಪಾರಕು**, ಪಾರಕ್ಕು, ಹಾರಕ, ಹಾರಕು, ಹಾರಕ್ಕೆ, ಹಾರಕ್ಕು (ನಾ). ಒಂದು ಬಗೆಯ ಧಾನ್ಯ : ಪ್ರಥಮದಿವಸದೊಳೆ ಪಾರಕಿನ ಕೂಳುಮಾ ಪರೆಯುಮೆಣ್ಣೆಯುಮಾಡಿನಳಿಯುಮಂ ಬಡ್ಡಿಸಿದೊಡದನಮೃತಮಾ ನುಣ್ಣಂತುಂಡು (ವಡ್ಡಾರಾ. ೬೮-೨೬) ; ಪಂತ್ರದೊಳಂ ಪೊಯ್ದ ಪಾರಕಿನಂತೆ ತನ್ನ ಕಾಲದ ತದನಂತರದೊಳು ವರ್ಣನಮೋಹನೀಯಾತ್ರುಯ ದೊಳಾವುದಾನುಮೊಂದುದಯಕ್ಕೆ ಬಕ್ಕುಂ (ಹಸಾಬ. ೯೦೦ ೦೨) ; ಬರಗಳ್ಳು

ಕೋರೆ ಪಾರಕುವೆರಸಗಸೆ ಕುಸುಂಬೆ ಕಬುವೆ ನೆಲ್ ಸಾವೆಗಳುಂ ತುರಗಕ್ಕಹಿತಂ (ಅಶ್ವಶಾ. ೭-೩೯). **ಪಾರಕ್ಕು :** ಆದರದೆ ಜ್ಯೇಷ್ಠದಪವದ ಬೂದಿಯು ಮೃಗಶಿರದೆ(ರಾದಿ) ಕೊಂಡ ಮುಟಿಯುಂ ಬೆಳೆಗುಂ ಪೋದಿನಿ ಪೊಜಗಣ(ವರ) ನಾಲ್ಕುಜೋಳಾದೊಡೆ ಪಾರಕ್ಕು ಬರ(ಬ)ಗು ಬೆಳೆಗುಂ ಸ್ವಲ್ಪಂ (ಜಶ್ರು. ೬-೦೩೭); ಉಪ್ಪಿಲ್ಲದ ಪಾರಕ್ಕಿನ ಸಪ್ಪಾಸೋ ಗರದೊಳಾಮ್ಲವೇಜಾದ ಕಬ್ಬಿಯುಂ ತಪ್ಪದೆ ಬಲಸಿಕ್ಕೆ (ಪೂಜ್ಯಸ್ತ್ರ. ೩-೯೭). **ಹಾರಕ :** "ಕೋದ್ರವಾ=ಹಾರಕಂಗಳು" (ಶೀತಿವಾ. ೦೭-೬೦); ಹಾರಕದಕ್ಕಿ ಅಪನ ಹೆಸರು ಗುಗ್ಗರಿ ಹುಗ್ಗಿ ಪಾಯಸ. . . ನಿವಾಳಿಸಿ (ಬಾಲಚ. ೦೨೭-೭) : ಸೆಜೆ ನವಣೆ ಸೆಲು ಹಾರಕ × × × ಧಾನ್ಯ ಕುಳಪಾಲ ಭತ ಖ ೧ (ಕೌಇಇ. IX-ii, ೩೩೯-೨೯ ; 1633) ; ಹಾರುವರ ಹೊಲಕ್ಕೆ ಹಾರಕ, ದೇವರ ಹೊಲಕ್ಕೆ ಹುಚ್ಚೆಳ್ಳು (ಗರುದಾ. ೯೩). **ಹಾರಕು :** "ಉನ್ಮಾಳಃ, ಕೋದ್ರವಃ, ಕೋರದೂಷಕಃ—ಈ ೩ ಹಾರಕು" (ಹಲಾಯು. ೯೩-೯೨೭). **ಹಾರಕ್ಕೆ :** ಕ್ಷೀರಸಿತಪಾನದಿಂ ಧುತ್ತೂರದ ಕೂಷ್ಮಾಂಡರಸದೊಳಂ ಬೆಲ್ಲ ದೊಳಂ ಹಾರಕ್ಕಿನ(ಯ) ಸೊರ್ಕಬ್ಬುಗುಂ (ಲೋಕೋಪ. ೦೦-೯೨). **ಹಾರಕ್ಕು :** ಮರಿಚಂ ಕುಂಬಳದೆಲೆಯುಮನರೆದ ರಸಂ ಸಿಂಧುಜಾತಮುಂ ಕೂಡಿ ಬಟ್ಟಿಕ್ಕರದೀಂಟಲ್ ಹಾರಕ್ಕಿನ ಪಿರಿದೆನಿಪ ವಿಷಾಪಹರಣಮಕ್ಕು ಮಮೋಘಂ (ಬವೈದ. ೨-೦೩೯).

[ದೇ. ॥ ತೆಲು. ಆರಿಕ, ಆರಿಕೆ, ಆರುಕ, ಆರುಗ]

**ಪಾರಕ್ಕು** 'ಪಾರಕು' ನೋ.

**ಪಾರಖ** (ನಾ). (ಮುತ್ತು, ರತ್ನ ಮುಂತಾದುವುಗಳ) ದರ್ಜೆ ; ಕಿಮ್ಮತ್ತು ; ಯೋಗ್ಯತೆ : ಪಾರಖ ನಮೂನೆ—ತೂಕದ ಸಮಯ ಗಿರಾಯಿಕರು ಆರಳಿ ತೆಗೆದುಕೊಂಡರೆ, ಈ ಖರ್ಚಿನ ರಕಮು ಬೀಳುವದಿಲ್ಲ (ಮುಂಬಪ್ರಾ. ೦೭). [←ಮರಾ. ಪಾರಖ್]

**ಪಾರಖಾವಣಿ** 'ಪಾರಖಾವಣೆ' ನೋ.

**ಪಾರಖಾವಣೆ,** ಪಾರಕಾವಣೆ, ಪಾರಖಾವಣಿ, ಪಾರ್ಖಿವಣೆ (ನಾ). ೧. (ನಾಣ್ಯ, ಮುತ್ತು, ರತ್ನ ಮೊದಲಾದುವುಗಳನ್ನು) ಪರೀಕ್ಷಿಸಿ ನೋಡುವುದು ; ಪರೀಕ್ಷೆ ; ತಪಾಸಣೆ : (೯). ೨. ಸಲ್ಲಿಸುವುದು ; ಜಮಾ ಮಾಡುವುದು ; ಪಾವತಿ ಮಾಡುವುದು : ಅದು ವರ್ತಕ ಧರ್ಮವಲ್ಲ. ಹಾಗಿದ್ದರೆ ಜಾಗ್ರತೆಯಾಗಿ ಪಾರಖಾವಣೆಗೆ ಹಣ ತರಿಸು (ಆಗಾಟಿ. ೦೦); ಗ್ರಾಮದ ಕಂದಾಯವು ವಸೂಲಾದ ಕೂಡಲೇ ಪಟೇಲನ ಅಪ್ಪಣೆ ಪ್ರಕಾರ ಆ ಹಣವನ್ನು ತಾಲ್ಲೂಕು ಖಜಾನೆಗೆ ಪಾರ ಖಾವಣೆ ಮಾಡುವುದಕ್ಕಾಗಿ ತೆಗೆದುಕೊಂಡು ಹೋಗುವ ಕೆಲಸವು ಇವನದಾಗಿರುತ್ತದೆ (ಗ್ರಾಪಚರ. ೩). **ಪಾರಕಾವಣೆ :** ೧. ಲಿಂಗ ರಾಜ ಅನ್ಯಾಯ ಮಾಡಿದರು. ಆದರ ಲೆಕ್ಕ ದೇವರದುರು ಪಾರಕಾವಣೆ ಆಗುತ್ತೆ (ಬಳರಾ. ೦೭೯). **ಪಾರಖಾವಣಿ :** ೨. ಆ ಮೇರೆಗೆ ಐವಜು ಪಾರಖಾವಣಿ ಮಾಡಿಕೊಂಡು ಕಳಪೆಹಣವನ್ನು ವಾಪಸ್ ಕೊಟ್ಟು ಬಾಕಿ ಐವಜಿಗೆ ಆಗಿಂಬಾಗ್ಯ . . . ರಶೀದಿ ಕೊಡಬೇಕು (ಮುಹಾಪಂ. II, ೩೩). **ಪಾರ್ಖಿವಣೆ :** ೨. (ಮೈಗೆಜೆ. IV, ೭೮೨). 'ಪಾರಖಾಣೆಯು' ಪರಾ. [←ಮರಾ. ಪಾರಖಾವಣ್]

**ಪಾರಖೀ** (ನಾ). (ಮುತ್ತು, ರತ್ನ, ನಾಣ್ಯ ಮೊದಲಾದುವುಗಳನ್ನು) ಪರೀಕ್ಷಿಸುವವನು : ಪರೀಕ್ಷಕ : ಅದು ಸರಾಫರ ದಂಧೆಯಲ್ಲಿ ಕಳೆದ ೪೦ ವರುಷದ ಅನುಭವ. ಬಂಗಾರದ, ಮುತ್ತುರತ್ನದ ಪಾರಖೀ ನಾವು (ಗೀತುಗೆ. ೯೨). [←ಹಿಂ. ಮರಾ. ಪಾರಖೀ]

**ಪಾರಗ**[1] (ನಾ). ೧. ತೀರವನ್ನು ಮುಟ್ಟಿದವನು ; ದಡವನ್ನು ಕಂಡವನು : ಅನುಪಮಗುಣರನುಪಮತಪರನುಪಮಸಿದ್ಧಾಂತವಾರ್ಧಿ ಪಾರಗರೆಂದೀ ಪನಧಿಪರೀವೃತಸಕಳಾವನಿ ಪೊಗಟ್ಟುದು ಸಕಳಚಂದ್ರ ಸೈದ್ಧಾಂತಿಗಳಂ (ಸುಕುಮಾ. ೦-೨೯) ; ಸ್ವಸ್ತಿ ಸಮಸ್ತಶಾಸ್ತ್ರಾಮ್ರೃತ ಪಾರಾವಾರಪಾರಗರುಂ ತದುಕ್ತತಪೋನುಷ್ಠಾನನಿಷ್ಠಿತರುಂ (ಕಇಇ. ೯೯-೩-೯; 11:4); ಸಂಗೀತಾಂಬುಧಿಪಾರಗರ್ ಪಲರುಮಿಾ ತಾನಂಗಳಂ ಬಲ್ಲರೇ (ಅಪ್ರತಿ. ೯೨-೦೩). ೨. ಸಂಪೂರ್ಣವಾಗಿ ತಿಳಿದವನು ; ನಿಪುಣ ; ಪಂಡಿತ: 'ಚತುರ್ವೇದಪಾರಗ', 'ಶ್ರುತಪಾರಗ' ಪರಾ. [ಸಂ.]

**ಪಾರಗ**[2] 'ಪಾರಕ್ಕ[2]' ನೋ.

**ಪಾರಗತ್ವ** (ನಾ). ನೈಪುಣ್ಯ : ಅಪರುಪದೇಶಕೌಶಲಮುಮಂ ಪರಮಾಗಮ ಪಾರಗತ್ವಮಂ . . . ಭವ್ಯಜನಕಂ ಪರಿಕೀರ್ತಿಸುತಿರ್ದು (ಮುಹಾಪೇ. ೩-೦೮). [ಸಂ.]

**ಪಾರಗಾಣಿಸು** (ಕ್ರಿ). ಒಂದು ಕಡೆಯಿಂದ ಮತ್ತೊಂದು ಕಡೆಗೆ ದಾಟಿಸು; ಪಾರುಮಾಡು : ಯಾರೂ ಕಾಯುವರಿಲ್ಲ ಸೇರಿದೆ ನಿನಗಯ್ಯಾ ಧೀರ ವೇಣುಗೋಪಾಲ ಪಾರಗಾಣಿಸೊ ಸ್ವಾಮಿ (ಕಠಂ. ೩೩೯); ಸಂಕಷ್ಟಗಳ ಮಾರುವ ದಾಂಟಿಸಿ ಪಾರಗಾಣಿಸುವ ಒಂಟಿ ಇವನೆಂದಾ ಪಿಲಾತನಕಟರಿ ವನೇಂ (ಗೊಲ್ಗೊಥಾ. ೨-೯೭). [ಪಾರಗಾಣು + — ಇಸು[3]]

**ಪಾರಗಾಣು** (ಕ್ರಿ). ದಡವನ್ನು ಸೇರು ; ಪಾರಾಗು : ಕಡಲ ಕಡೆದರು ಸುರಾಸುರರು ನಿಜಬಲದಿಂದ ಕುಡಿವನದನು ತಪಸ್ಸಿನಿಂದ ಕುಂಭಜನು ಕಡಮೆಜನ ಪಾರಗಾಂಬರೆ ಗಾಸಿಯನು ಪಡದೆ ? (ಮುಂಕುಶ. ೨೩೯); ಈ ಸಲದ ಕೆಲಸದಲ್ಲಿ ನಾವು ಪಾರಗಾಣುತ್ತೇವೆಂಬ ಭರವಸೆಯೋ ನನಗಿಲ್ಲ (ಬಿಶಾಪ. ೦೫). [ಪಾರ[2] + ಕಾಣು (<ಕಾಣ್)]

**ಪಾರಗಾವ** (ನಾ). ಒಂದು ಊರಿನ ಹೆಸರು : ದಕ್ಷಿಣತಃ ಪಾರಗಾವಾ ವ್ರಾ(ಬ್ರಾ)ಹ್ಮಣ ಗ್ರಾಮಃ ಪಶ್ಚಿಮತಃ ವಿಲ್ವ ? ವಾಡೇಗ್ರಾಮಃ (ಇಇ. XI. ೦೦೩-೩೯; 753). [? + ಗಾವ (<ಗಾಮ)]

**ಪಾರಗೆಯ್** (ಕ್ರಿ). ಹಿಂಜರಿ ; ಹಿಂದೆಗೆ : ಅಕ್ಕುಳಿಸಿತೆಂದುಂ, ಮೆಯ್ದು ಗೆದುದೆಂದುಂ . . . ನುಣ್ಚಿತೆಂದುಂ, ಪಾರಗೆಯ್ಕೆಂದುಂ—ಈ ೧೩ ಅಪ ಸರಣಕ್ಕೆ ಪೆಸರ್ (ಕಕಾ. ೭೨-೭೯೯). [ಪಾರ[?] + ಕೆಯ್[1]]

**ಪಾರಜ** (ನಾ). ದ್ರವರೂಪದ ಒಂದು ಬಗೆಯ ಲೋಹ : ಪಾದರಸ : ರಸದೊಳು ಪಾರಜದೊಳು . . . ಷಡುರಸದೊಳಾ ರಸಾಖ್ಯಂ (ಮುಂಗರಾ. ೦೯೭-೩೫) ; ಭಯ ಮತ್ತು ಧೈರ್ಯವು ಬೆಂಕಿ ಮತ್ತು ಬರ್ಫಕ್ಕೆ ತಗುಲಿದ ಪಾರಜದಂತೆ ಕೆಳಗೆ ಮೇಲೆ ಒಮ್ಮೆಲೆ ಸರಿದಾಡ ಹತ್ತಿದುವು (ಜಯಂತ. ೯೯); ಕನ್ನಡಿಯ ಒಂದು ಮೈಗೆ ಪಾರಜ ಹಾಕಿ . . . ನೋಡುವ ಕನ್ನಡಿಯನ್ನು ಮಾಡುತ್ತಾರೆ (ಮುಂಬಯು. ೪-೨೨೨). 'ಪಾದರಸ' ಪರಾ. [<ಸಂ. ಪಾರದ]

**ಪಾರಟ** 'ಪರಡ[4]' ನೋ.

**ಪಾರಡೆ** 'ಪರಡ[4]' ನೋ.

**ಪಾರಣಕ್ಷಮ** (ನಾ). ಬೇರೆಯವರ ಉಪವಾಸವನ್ನು ಕೊನೆಗೊಳಿಸು ವುದರಲ್ಲಿ ಸಮರ್ಥನಾದವನು : ಚಾರುಚಕೋರವಿದೂರಪಾರಣಕ್ಷಮ ನವವಲ್ಲಭಂ ಬೆಳಗಿದಂ ಪುರಮೊಂದೆನೆ ಲೋಕಮೆಲ್ಲಮಂ (ಚಂದ್ರಪ್ರ. ೬-೩೫). [ಸಂ.]

**ಪಾರಣಾವಾಸರ** (ನಾ). ಪಾರಣೆ ಮಾಡುವ ದಿವಸ : ಪಾರಣಾವಾಸರಾಳಿ ಗಳಿಂತೀರ್ಥಜನಪ್ಪ ಪುಣ್ಯದಿನಮಂ ಸಮ್ಮಿಶ್ರಮಂ ಮಾಡೆ (ಸುಕುಮಾ. ೯-೦೨). [ಸಂ.]

**ಪಾರಣಾವಿಧಿ** (ನಾ). ಪಾರಣೆಯನ್ನು ಮಾಡುವ ರೀತಿ,—ಕ್ರಮ ; [ಪ್ರವ್ರ]ಜ್ಯಾಶ್ರಮಗುರೂರ್ವರಾಸ್ಯತಿಲಕಂ ಯಾಮಿನೀವಿಯೋಗಮಂ ನಿರ್ವರ್ತಿಸಿ ರಾಜಮಂದಿರಕ್ಕೆ ವಂದು ಪಾರಣಾವಿಧಿಯೊಳಮೃತಾಹಾರ ಮನಾರೋಗಿಸಿ (ಶಾಂತಿಪು. ೯-೯೯ ವ) ; ಮಂಡೋದರಿಯುಂ ತಾನುಂ ಪಾರಣಾವಿಧಿಯಂ ಮಾಡಿಸಿ ರಾಮನಲ್ಲಿಗೆ ವಂದು (ಶಾಪುಪು. ೩೦೦). [ಸಂ.]

**ಪಾರಣೆ$_1$** (ನಾ). ೧. ವ್ರತೋಪವಾಸದ ಮಾರನೆಯ ದಿನ ಮಾಡುವ ಊಟ: ಪಕ್ಷೋಪವಾಸದ ಪಾರಣೆಗೆಂದು ಪೋಟಲೆ ಚರಿಗೆವುಗುತಂದೊಡೆ (ಪಂಪಾಭಾ. ೬೬-೨೬) ; ಪಾರಣೆಯು ಏನಂಗಳೊಳವಧಾರಿಸಿ ಜಠರಾಗ್ನಿ ನಂದದಂದದಿನರ್ಧಾಹಾರಮನಾರೋಗಿಸುವಾಚಾರದಿನಳವಟ್ಟುದಪರೊ ಳವ ವೋದರ್ಯಂ (ಸುಕುಮಾ. ೪-೫); ಘತ ತೊಲಗು ಕೌರವಕೃತಾಂತನ ಪಡೆಗೆ ಪಾರಣೆಯಾಗಳೀಗಳೆ ನಡೆಸುವೆನು ನಾಕಕ್ಕೆ ನೆಚಿದ ಮಹಾ ರಥಾವಳಿಯ (ಕುಮಾರವ್ಯಾ. ಶ. ೨೬೮) ; ಪಾರಣೆಯಾದರೂ ಪಾರಾಯಣ ತೀರಲಿಲ್ಲ (ಗಾದೆ). ೨. ತೃಪ್ತಿ ; ಸಂತೋಷ : ಅಲ್ಲವೋ ಬರಿಯ ವಾಸನೆ ಅಲ್ಲ ಬರಿ ಕಣ್ಣ ಪಾರಣೆ (ಪಾಸಿಗ. ೧೬-೧೬).

**ಪಾರಣೆ ಪರ್ವ** = ಪಾರಣೆ ಮಾಡುವ ಹಬ್ಬ : ಬರಿಸುವುದೊಂದೂ ರೋಳಿಪರ್ವಳನುಪಚಾರವೆರಸಿ ಪಾರಣೆ ಪರ್ವಗಳಿಗೆ ನೆರೆಯೂರೊಳು ಬಾಳುವ ನಿಜತ್ರನುಜೆಯು ಕರೆಯಿಸುವುದು ಕಾಲವಜಾತು (ಹರಿಬ. ೫-೨೯). **ಪಾರಣೆ ಮಾಡು** = ಉಪವಾಸ ಮುಗಿದ ನಂತರ ಊಟ ಮಾಡು : ಬಸವಂತಿ ತನ್ನ ಆರೋಗಣೆಯನ್ನು ಬಡಿಸಿಕೊಂಡು ಉಪವಾಸದ ಪಾರಣೆ ಮಾಡಿ ದಳು. (ದೀಕ್ಷಾ. II, ೧೩೬). [ಸಂ. ಪಾರಣ]

**ಪಾರಣೆ$_2$** (ನಾ). ಒಂದು ಗ್ರಂಥದ ಪೂರ್ಣವಾದ ವಾಚನ (?) : ಕವಿಳಾಸಪುರದೊಳಗೆ ಸ್ವಯಂಭುವಲ್ಲಿಕಾರ್ಜುನ ಸಂಗಮೇಸ್ವರ ನಾಗೇಸ್ವರ ಯಾ ಮೂಜುಲಿಂಗಕಂ ಅಂಗಭೋಗ ರಂಗಭೋಗ ಜೀರ್ಣೋದ್ಧಾರಕ್ಕಂ ಪಾರಣೆಯ ಜಂಗಮಾರಾಧನೆಗಂ . . . ಸಲುವಂತೆ (ಎಕ. XXI, ೧೪-೬೦; 1280). [<ಸಂ. ಪಾರಾಯಣ ?]

**ಪಾರಣೆ$_3$, ಹಾರಣೆ, ಹಾರಣಿ** (ನಾ). ಒಂದು ಬಗೆಯ ತೆರಿಗೆ : ಕಯ್ಗಂ ಮನೆಗಂ ತೊಣ್ಣಕ್ಕಮರುವಣಂ ಗದ್ಯಾಣಂ ಮೂಜು ಪಣವಾಜು ಪರಿವುಂ ಪಾರಣೆಯುಂ ಮೊದಲಾಗಿ ಕಿರುಕುಳಬಾಧೆಯೊನ್ದುಮಿಲ್ಲದನ್ತಾಗಿ ಗಾವುಣ್ಡರ್ ಪ್ರತಿಪಾಳಿಸುವರ್ (ಸೌಇಇ. XI-i, ೬೮-೩೬; 1045) ; ಪರಿವು, ಪಾರಣೆ—ಇವೆರಡೂ 'ಕಿಱುಕುಳ'ಗಳು, ಎಂದರೆ ಸಣ್ಣ ತೆರಿಗೆಗಳು (ಕಶಾಶಿ. ೪೦೦). **ಹಾರಣೆ :** ಆ ಪೆರುಮಾಳಿಪುರದ ಮಹಾ ಜನಂಗಳು ಪಡಿಕೆ ಹಾರಣೆಯೆಂದೆನ್ನದೆ ಸರ್ವ್ವಬಾಧೆಪರಿಹಾರ ಸರ್ವ್ವ ಮಾನ್ಯವಾಗಿ . . . ನಡಸಿ ಕೊಡುವರು (ಎಕ. XI, ಚಿತ್ರದು. ೦೨-೪೩; 1286). **ಹಾರಣೆ :** ಕುನ್ನಿವಣ ಪಡಿಷಂ ಹಾರಣೆ ಮೊದಲಾಗೆ (ದೊಂಕಿಶಾ. ೦೯೩೫, ಕಾಶಿಪಿಷ್ಟೂರ್. ೬-೨೨; 955). [?]

**ಪಾರಣೆಗೆಯ್** (ಕ್ರಿ). ಉಪವಾಸದ ನಂತರ ಊಟವನ್ನು ಮಾಡು : ಅಂಬರೀಷನವೊಲು ದ್ವಾದಶಿ ದ್ವಿಜನಿಕುರಂಬಕ್ಕೆಯನ್ನದಾನಗಳ ಸಂಭ್ರಮ ದಲಿ ಮಾಡಿ ಪಾರಣೆಗೆಯ್ವನಾ ಕುಂಭಿನೀಪತಿ ಭಕ್ತಿಯಲಿ (ಕಂಚಿ. ೪-೯). [ಪಾರಣೆ$_1$ + ಕೆಯ್$_1$]

**ಪಾರತಂತ್ರತೆ** (ನಾ). ಇನ್ನೊಬ್ಬರ ಅಧೀನವಾಗುವಿಕೆ ; ಬೇರೆಯವರ ವಶವಾಗುವಿಕೆ : ಪುತ್ರದೋಹಳಕಾರಣಮಂ ಧಾರಿಣೀಪತಿಗೆ ಸವಿಸ್ತರಂ ಬಿನ್ನವಿಸೆ ಕೇಳ್ದರಸನುಂ ತತ್ಕ್ಷಣೋಪಗತಾನುಭವಾಲಾಭಚಿಂತಾಪಾರ ತಂತ್ರತೆಯ ಮ್ಲಾನಮನನುಂ ದೀನಾನನನುಮಾಗಿ (ಚಂದ್ರಪ್ರ. ೩-೬೨ ವ). [<ಪರತಂತ್ರ]

**ಪಾರತಂತ್ರ್ಯ** (ನಾ). ಅನ್ಯರಿಗೆ ಅಧೀನವಾಗಿರುವುದು ; ಪರಾಧೀನತೆ : ಶ್ರುತಿಯೊಳಗಾಡುವ ಹಾಡಿನ ತೆರದಿ ಸ್ವತಂತ್ರ ನೀನೀ ಪಾರತಂತ್ರ್ಯದಿ (ಗಜೇಶ. ೪-೮೪) ; ಭವ್ಯಪರಂಪರೆಯ ನಾಡು ಪಾರತಂತ್ರ್ಯದ ಸಂಕೋಲೆಯಿಂದ ಬಂಧಿತವಾಯಿತು (ಆತ್ಮಾರ್ಪ. ೨). [ಸಂ.]

**ಪಾರತೆ** (ನಾ). ವೀಕ್ಷಣೆ ; ನಿರೀಕ್ಷಣೆ : ಹರವಿಚಾರತೆಗಳೋ ನಿರುತ ಪಾರತೆ ಗಳೋ ನಿಷ್ಠೆ ತೋರತೆಗಳೊ ತಮವಿದೂರತೆಗಳೋ (ಶಿವಂ. ೫-೩೪). [<ಪಾರ್$_1$ + –ತೆ$_3$]

**ಪಾರತ್ರ್ಯ** (ನಾ). ಪರಲೋಕ : ಹೆಂಡ್ರು ಮಕ್ಕಳಿಗಾಗಿ ಎನ್ನ ಹಿತವನೆ ಮರೆದು ಕಂಡಕಂಡವರ ಕಾಡಿ ಬೇಡಿ ಉಂಡುಟ್ಟು ಸುಖಪಟ್ಟು ಪಾರತ್ರ್ಯವ ಮರೆದು ಕೊಂಡಯಲಿ ನಿಪುಣನಾಗಿ ತೂಗಿ (ಶರಣ್ಯ. ೫೪-೬). [<ಸಂ. ಪಾರತ್ರ್ಯ]

**ಪಾರತ್ರಿಕ** (ಗು). ೧. ಪರಲೋಕಕ್ಕೆ ಸಂಬಂಧಪಟ್ಟ ; ಪಾರಲೌಕಿಕ ವಾದ : ಐಹಿಕದ ನಾನಾಭೋಗಮಂ ಮತ್ತಮುನ್ನತಪಾರತ್ರಿಕಸೌಖ್ಯದೇಳ್ಗೆ ಯನನೂನಂ ಮಾಳ್ಪ . . . ಕವಿ ನಿಂ ಬೇಗಂ ಪೊಗಳ್ (ತ್ರಿಷ. ೦-೨೮); ಪಾರತ್ರಿಕಾನಂದಮಂ ಗಳಿಪ ನಾಯಕನಾಗೆ ಮತ್ಯ್ಕತಿಯದೇಂ ಸ್ವಪಾಂ ತುದೋ ಲೋಕದೊಳ್ (ಪುಸೂಮ. ೦-೨೨). (ನಾ). ೨. ಪರಲೋಕ : ಖರರುಚಿನ್ನಂದನನೊಂದಿದಂಮದಯದೊಳ್ ರೋಗಾನ್ವಿತಂ ಬಾಲ್ಯಕಾಲ ರುಜಾರ್ತಂ ಮಲಿನಂ ಸಕಾಮನಲಸಂ ಪಾರತ್ರಿಕವ್ಯಾಪ್ತಿ [ಪಾಠಾಂ. ಪಾತತ್ರಿಕದ್ಯಾಪ್ತಿ, ಪಾತತ್ರಿಕವ್ಯಾಪ್ತಿ] ತತ್ಪರನಕ್ಕುಂ (ಜಾತತಿ. ೦೫-೦೪). ೩. ಪರಲೋಕಕ್ಕೆ ಸಂಬಂಧಿಸಿದುದು ; ಪಾರಲೌಕಿಕವಾದುದು : ಬಟಿಕ್ಕೆಂದ್ರವೈಹಿಕಪಾರತ್ರಿಕಭೋಗಮಂ ಕುಡುವಿನಂ ಮಾಣಿಕ್ಯಭಟ್ಟಾರ ಕಾಂತಿಕಮಂ ಸಾರೆ ವಿನೇಯರಾಜಿಗೆ ಜಯಂ ಭದ್ರಂ ಶುಭಂ ಮಂಗಳಂ (ಅರಿಪ್ರ. ೦೬-೮) ; ಸಾಂಸಾರಿಕ — ಪಾರತ್ರಿಕಗಳೆಂಬ ಇತ್ತರಡ ಪುರು ಷಾರ್ಥಗಳೂ ನಿಕಟಸಂಬಂಧದಿಂದ ಒಡಗೂಡಿ ಚತುರ್ವರ್ಗವೆನ್ನಿಸುವುದು (ನಾಡೋಜ. ೩೫೪). [ಸಂ.]

**ಪಾರದ** (ನಾ). ೧. ದ್ರವರೂಪದ ಒಂದು ಬಗೆಯ ಲೋಹ ; ಪಾದರಸ ; ಪಾರಜ: "ರಸ ಪಾರದ ಸೂತಕ ಚಪಲ[ಸಂ]ಜ್ಞಿತಂ ಗಿರಿಶ ವೀರ್ಯಮದು ಪಾದರಸಂ" (ಪಶ್ಚಿಕೋ. ೯೪-೦೩) ; ಮಾಸರಮೊನೆ ಪಾರದದಿಂ ಪೂಸಿದ ಪೋಲ್ ಪೊನ್ನ ಮುಕುರಮಂ ಹಿಮಲಿಪ್ತಂ ನೇಸಱ ಬಿಂಬಂ ತಿಂಗಳ ಕೂಸಿನ ಪೋಲ್ ಕೋಡುತಿರ್ದುದಂದಿನ ದಿನದೊಳ್ (ರೀರಾಜ. ೯-೬): ಪಾರದಂ ಸಿದ್ಧರಸಮಾದೊಂದು ಸಂತಸಂ ಬಾಲ ನಿರವಂ ಕಂಡೊಡಪ್ಪುದುಂ (ರಾಜಶೇ. ೬೬-೦೬). ೨. ಲೋಹವನ್ನು ಚಿನ್ನವನ್ನಾಗಿ ಮಾಡುವ ರಸ ; ಸಿದ್ಧರಸ : ಪಾರದಂ ಪಾರದೆ ಬಂದ ತೋರ್ಕೆ ಸುಮನೋಮಣಿಸನ್ನಣಿಹಾರದಲ್ಲಿ ಬಂದೋರಣಮಾಗಿ ನಿನ್ದ ಪರಿವನ್ದಿಜನಕ್ಕನಿಪೊನ್ದು ದಾನಗಂಭೀರತೆಯಾದುದೇಂ ಪೊಗಳ್ವೆಂ (ಎಕ. III, ನಂಜ. ೨೬೦-೨೬; 1408). [ಸಂ.]

**ಪಾರದಂದೊಡೆ** (ಕ್ರಿ). ಪಾದರಸವನ್ನು ಹಚ್ಚು, –ಲೇಪಿಸು : ಕಡೆವರೊ ಶಂಖದಿಂ . . . ರುಚಿರೋಜ್ವಲಾಗಮಂ ಬಿಡದಮೃತಾಂಶುರಶ್ಮಿಗಳ ಕುಂಚಿಗೆಯಿಂದಮೆ ಕರ್ಚಿ ಪಾರದಂದೊಡೆದರೊ ಪೇಟೆನಲ್ ಕರಮೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ (ಕಾದಂಪೂ. ೬೬೬). [ಪಾರದ + ತೊಡು$_1$]

**ಪಾರದರ** 'ಪಾರದಾರ' ನೋ.

**ಪಾರದರಿಗ** 'ಪಾದರಿಗ' ನೋ.

**ಪಾರದರಿಗೆ** (ನಾ). ಹಾದರ ; ವ್ಯಭಿಚಾರ : ಹರವರಕ್ಕನಂಗದೊಳಾ ರ ದರಿಗೆಯ ಪಚ್ಚವಂ ಕೊಣ್ದು ಪಾದರಿಗೆಯ ಮಾಗನರಿದು ಪಾದರಿಗನಂ ಕೊಲ್ವರು (ಸೌಇಇ. IX-i, ೬೬-೩೨; 992). [ಪಾರದರ (<ಪಾರದಾರ) + –ಇಗೆ$_0$]

**ಪಾರದರ್ಶಕ** (ಗು). ೧. ತನ್ನ ಮೂಲಕ ನೋಡಿದರೆ ಆಚೆಯ ಕಡೆ ಇರುವ ವಸ್ತು ಸ್ಪಷ್ಟವಾಗಿ ಕಾಣಲಾಗುವಂತೆ ಬೆಳಕನ್ನು ತನ್ನ ಮೂಲಕ ಶುದ್ಧವಾಗಿ ಹಾಯಗೊಡುವ : ಗಾಜು ಪಾರದರ್ಶಕ ಪದಾರ್ಥವು (ಪುಂಬಯ. ೪-೨೨೦); ಬೆಳಕು ಕೆಲವು ವಸ್ತುಗಳ ಮೂಲಕ ಹೆಚ್ಚು ನಷ್ಟ ಹೊಂದದೆ ಹೊರಕ್ಕೆ ಬರುವುದು. ಇಂತಹ ವಸ್ತುಗಳನ್ನು ಪಾರದರ್ಶಕವಸ್ತುಗಳೆಂದು ಹೇಳುತ್ತೇವೆ (ಭೌತಶಿ. ೦೫೫). (ನಾ). ೨.

ತನ್ನ ಮೂಲಕ ಆಚೆಯ ಪಕ್ಕವನ್ನು ಕಾಣಿಸುವಂತೆ ಬೆಳಕನ್ನು ಸಾಗಿಸುವಂತಹುದು : ಈ ಬರ್ಫವು ಹೆಚ್ಚು ಕಡಿಮೆ ಪಾರದರ್ಶಕವಾಗಿರುತ್ತದೆ (ಮುಂಬಯಿ. ೬–೦೯೦). 'ಅಪಾರದರ್ಶಕ' ಪರಾ. [ಸಂ.]

**ಪಾರದರ್ಶಕತೆ** (ನಾ). ಪಾರದರ್ಶಕ ಗುಣ : ಶಾಸ್ತ್ರಗಳ ಸಂಕ್ಷಿಪ್ತಶೈಲಿ ಇದಕ್ಕೆ ಎಷ್ಟರ ಮಟ್ಟಿಗೆ ಕಾರಣವೋ ಸಂಸ್ಕೃತಭಾಷೆಯ ಪಾರದರ್ಶಕತೆಯೂ ಅಷ್ಟರ ಮಟ್ಟಿಗೇ ಕಾರಣವಾಗಿರಬಹುದು (ಸಮಾಲೋ. ೦೩೫); ಗುಟ್ಟುಗುಟ್ಟಿನ ಗಂಟು ವ್ಯಕ್ತಿವ್ಯಕ್ತಿಗಳೆಲ್ಲ ; ಈ ಗುಡಿಯು ಮುದರ ನಂಟು ಈ ಮಹಾಗುಟ್ಟಿನೆಡೆ ಒಬ್ಬೊಬ್ಬನೂ ಪಡೆವ ಪಾರದರ್ಶಕತೆಯನು ಅರಿವರಾರುಂಟು ? (ಮುಕಿದೇ. ೩೫–೦೦). [ಸಂ. ಪಾರದರ್ಶಕತಾ]

**ಪಾರದರ್ಶಿ** (ನಾ). ಯಾವುದೇ ವಿಷಯವನ್ನಾಗಲಿ ಪೂರ್ಣವಾಗಿ ತಿಳಿದುಕೊಂಡವನು ; ಪಾರಂಗತ ; ನಿಷ್ಣಾತ : ಆ ದ್ವಾರಕಿಯುಲದನಜಿತು ವೃದ್ಧವಚೋವಿಶೇಷವಲಿ ಶೌರಿ ಕರೆಸಿದನಾತ್ಮವಿದ್ಯಾಪಾರದರ್ಶಿಯನೊಲಿದು ಮನದಲಿ ಸೀರಧರಸಹಿತಾತನೊಡನಿಂತೆಂದನುಚಿತದಲಿ (ಕಿಭಾಗ.೧೦–೬೭–೪೮); ಅರ್ಜುನನು ಧನುರ್ಧರನೆನಿಸಿಕೊಂಡಂತೆಯೇ ಖಡ್ಗಪ್ರಯೋಗದಲ್ಲಿಯೂ ರಥಯುದ್ಧದಲ್ಲಿಯೂ ಕೂಡ ಪಾರದರ್ಶಿಯೆನಿಸಿಕೊಂಡನು (ಭೀಷ್ಮಕ. ೫೯). [ಸಂ. ಪಾರದರ್ಶಿನ್]

**ಪಾರದಾರ**, **ಪಾದರ**₁, **ಪಾರದರ**, **ಪಾರದ್ವಾರ**, **ಹಾದರ** (ನಾ). ೧. ಮತ್ತೊಬ್ಬನ ಹೆಂಡತಿಯೊಡನೆ ಹೊಂದಿರುವ ಅನೈತಿಕಸಂಬಂಧ ; ಪರಸ್ತ್ರೀಗಮನ,— ಸಂಸರ್ಗ : ಅದು ಕಾರಣದಿಂದಂ ಮಹಾದುಃಖಕೆ ಪಾರದಾರಮೆ ಮೊದಲೆಂದು ಬೆರ್ಚಿ ಪರಸ್ತ್ರೀಯರಂ ತಾಯಂ ಕಾಣ್ಬಂತೆ ಕಾಣ್ಬುದು (ಧರ್ಮಾಮೃ. ೬–೦೯೩). ೨. ಪರಪುರುಷನೊಡನೆ ಇಟ್ಟುಕೊಳ್ಳುವ ಅನೈತಿಕ ಸಂಬಂಧ ; ಪರಪುರುಷಗಮನ : ಸತಿ ತಪ್ಪಿ ಪಾರದಾರವ ಮಾಡಿದಲ್ಲಿ ಒಳಗಿಟ್ಟುಕೊಂಡು ಸಂದು ಸಂಶಯವಿಲ್ಲದೆ ಗುರುಲಿಂಗಜಂಗಮಕ್ಕೆ ಉದಾಸೀನವ ಮಾಡಿದಡೆ ತಪ್ಪನೊಪ್ಪಬಹುದೆ (ಮೋಳಿಮಾ. ೫೪– ೨೨೪). ೩. ವ್ಯಭಿಚಾರ; ಜಾರತನ : ಪಾರದಾರ ಮಾಡಿದೊಡೆ (ಕೈಐಂ. ೦೯೩೬, ೨೫–೩೬; 872); ಪಾರದಾರ ಮಾಡಿದೊಡೆ ಇಟ್ಟೂಳಿ ಇಪ್ಪತ್ತನಾಲ್ಕು ದ್ರಮ್ಮ ಆ × × ಮಿಣಕ್ಕಡೆ ಇಪ್ಪತ್ತ ನಾಲ್ಕು [ದ್ರ]ಮ್ಮ (ಕಷಂ. ೯೬–೦೮–೩೬; 932). **ಪಾದರ**₁ : ೩. ಪಸೆಯೊಳ್ಪಸುವರ್ಣಂದ ರೊಳಗ್ನಿಸಾಕ್ಷಿಯೊಳ್ಕೊಂಡ ಪಾಂಡುಪತಿಯರೆ ದೋಷಾಮಸಥಪಾದರದಿಂ ಜನಿಯಿಸಿದರ್ (ಗದಾಯು. ೩–೩೮); ಪಾದರಂ ಲೇಸು ಸಾವುದರಿದು (ಧರ್ಮಾಮೃ. ೮–೮೮) ; ಪೆಸರನಡಗಿಸಿ ಕಳವು ಪಾದರಂಗಳ ಹಿಂಸೆಯಸುವ ತೊಲಗಿಸಿ ಧರಾತಳಮನಾಜ್ಞೆಯೊಳೆ ಪಾಲಿಸುವ ರಾಜಂಗಿಹಪರಂಗಳೊಳ ಗನುಮಾನವಿಲ್ಲ (ಜಿಶಿಕ್ಷೆ. ೮–೧೬). **ಪಾರದರ** : ೧. ನೃಪತನಯಂ . . . ಪಾರದರದೊಳ್ ಪುಟ್ಟಿವನರಸುಗಮರಸಿಗಂ ಪುಟ್ಟಿದನೇ (ಪಂಪಭಾ. ೧೨–೦೩೬) ; ಇನಿತೊಂದು ಪರಾಭವಪದಮನೆಯ್ದುವರ್ ಪಾರದರದೊಳೇದಾಂ ಪರದಾರನಿವೃತ್ತಿಗೆಯ್ದಂ (ಸುಕುಮಾ. ೭–೩೪). ೩. ನುಡಿಯುಲ್ಯಾತ್ರರುಮಿಲ್ಲ ಪಾರದರದೊಳ್ ಸತ್ರಾಂಗಬಿಲ್ವನ್ನರಾರ್ (ಪಂಪಭಾ. ೮–೯೦) ; ಶೋಭಮಿರ್ಪತಿಶಯಂತೋಷಮಿರ್ಪ ಮತಪಿರ್ಪಡೆಯೊಳ್ . . . ಪಾರದರಮಿರ್ಪ ಪರಿಗ್ರಹಕಾಂಕ್ಷೆಯಿರ್ಪ ಕುತ್ಸಿತಮತ ಮಿರ್ಪವಲ್ತು (ಅರ್ಥನೀ. ೨–೫೯). **ಪಾರದ್ವಾರ** : ೩. ಹೋಗಬಿಟ್ಟು ಮರಳಿ ಹಿಂದೆ ನೋಡಿ ಮತ್ತಾಗಬೇಕೆಂಬ ಸಂದೇಹವುಳ್ಳನ್ನಕ್ಕ ಅದೆ ಪಾರದ್ವಾರ ನಾಯಕನರಕ ತಪ್ಪದು (ಬಸವ. ೭೫೫) ; ಸಾವಿರ ನೋಂಪಿಯ ನೋಂತು ಪಾರದ್ವಾರ ಮಾಡಿದಂತಾಯಿತ್ತು ಅವನ ವ್ರತ (ಸರ್ವ. ೦೮೪–೮೪೭). **ಹಾದರ** : ೧. ಶಿವನರಿವಣ್ಣನಂ ಹರಿಯು ಹಾ[ಪಾಠಾಂ. ಪಾ]ದರಮಬ್ಜಜನೊಬ್ಬಟ್ಟೆ ಹೇಳುವ ನನೆನಿಲ್ಲ ಬಲ್ಲಹನ ಶೌರ್ಯಮಂ (ಅಸಂಪು. ೦–೯೦); ಕೆಳಲ ರಾಗದ ರಹಿಯೊ ಚಲ್ಲಿಯ ಕಲಸುಗೂಳೋ ಹಳ್ಳಿಕಾತಿಯರೊಳಗುಡಿಯ ಪಾದರವೊ . . . ಜಯುಸಿರಿಯ ಕಾಹಿನೊಳಾರು ನೀನು (ಕುಮಾ.ಕ. ೨–೬೮). ೩. ಸಾಸಿರನೋಂಪಿಯೊಂದೆ ಹಾ[ಪಾಠಾಂ. ಪಾ]ದರದೊಳೆ ಕೆಟ್ಟು ಪೋಕುಂ (ಸಮುತ. ೫–೬೮); ಅನ್ಯದೈವವೆಂಬುದು ಹಾದರ (ಬಸವ. ೬೦೮); ಕಳವು ಹಾದರವೆರಡಜಿಲಿ ತಾನಳಿದವಂಗವಕೀರ್ತಿನರಕದೊಳಿಳಿವನಲ್ಲದೆ ಸಗ್ಗಸುಖವಿಲ್ಲ (ಕೌಶಿರಾ. ೩೮–೦೫): ಹಾದರಕ್ಕೆ ಹುಟ್ಟಿದ ಮಕ್ಕಳು ಚೆನ್ನ, ಹಲವು ಸೊಪ್ಪಿನ ಮೇಲೋಗರ ಚೆನ್ನ (ಗಾದೆ).

ಪಾದರವಾಡು, ಹಾದರವಾಡು = ವ್ಯಭಿಚಾರ ಮಾಡು: ಧುರದೊಳ್ . . . ಅಂಧಕಾಸುರನಂ ಕೊಂದಂ ಕಪಾಲದೊಳ್ತಿರಿದುಂಡಂ ಸುರಮುನಿಪತ್ನಿಯರೊಳ್ಪಾದರವಾಡಿದು (ಸಮುತ. ಅನುಬಂಧ I, ೩೬೨) ; ಗೊಲ್ಲರಲ್ಲಿಗೆ ಬೆಣ್ಣೆಯಂ ಕಳುಲ್ಲಿಗೆಯ್ದು ಮುರಾರಿ ಗೋಪಿಯರಲ್ಲಿ ಹಾದರವಾಡಿ (ಬಸಪು ೫೪–೪೦) ; ಏಡಿ ಹಾದರವಾಡೆ ಗೋಡಾರಗಪ್ಪೆಯ ಕೂಡಿ (ಜಿರಾಜ. ೦೦–೯). [<ಸಂ. ಪಾರದಾರ್ಯ. / ತುಳು. ಹಾದರೊ ; ಕೊಡ. ಪಾದರ]

**ಪಾರದಾರಿಕ** (ನಾ). ೧. ವ್ಯಭಿಚಾರ ; ಹಾದರ : ಸಾಧಾರಣಮೆಂಬಧಿಕರಣಮಂ ಚಾರಾಯಣಂ ಸಾಂಪ್ರಯೋಗಿಕಮಂ ಸ್ವರ್ಣನಾಭಂ . . . ಪಾರದಾರಿಕಮಂ ಗಾಣಿಕಾಪುತ್ರಂ . . . ಪೇಳ್ದಂ (ಮದತಿ. ೦–೫೪ವ ). ೨. ವ್ಯಭಿಚಾರ ಮಾಡುವವನು ; ಹಾದರಿಗ. [ಸಂ.]

**ಪಾರದಾರ್ಯ** (ನಾ). ಹಾದರ ; ವ್ಯಭಿಚಾರ : ಚೋರವಿದ್ಯವು ಸಹಜ ನಿನಗಾ ಪಾರದಾರ್ಯವು ನಿಯತ ದಿಟದಿಟ ಹಾರುವಂಗವು ಹಸನು (ಕೌಶಿರಾ. ೩೬–೪೩). [ಸಂ.]

**ಪಾರದಿ**, **ಪಾರುಧಿ**, **ಹಾರುದಿ** (ನಾ). ಬೇಟೆ ; ಮೃಗಯೆ ; ಶಿಕಾರಿ : ಬನವಾಸಿಪುರವರಾಧೀಶ್ವರಂ . . . ಅಭಿನವಪಾರ್ಥಂ ಸುಭಟರ ತೀರ್ಥಂ [ನಿಂ]ದಿರಿಪಾತಂ ಪಾರದಿಪರಸುರಾಮನುಭಯದೇಸಿವಲ್ಲಭಂ (ಶಾಇಇ. XX, ೦೦೦–೦೦ ; 1129); ಧಾರುಣಿಸು ಜನದ ಹುಯ್ಯಲ ನಿಲಿಸಬೇಕೆಂದು ಪಾರದಿಗೆ ಪೊಱಮಟ್ಟು ಮೃಗಪಕ್ಷಿಗಳವ ಸಂಹಾರಿಸುತ ಹೇಮಕೂಟದಿ ಗುರುವಿರೂಪಾಕ್ಷನಂ ಕಂಡನವನೀಶನು (ಹಕಾ. ೫ ಸೂಚನೆ) ; ವರಪುರೇಶ್ವರ ತನ್ನ ಸೇನೆಯ ನೆರಹಿ ಪಾರಡಿ[ದಿ]ಯಾಡುತಲ್ಲಿಗೆ ಸರಿದು ಬಂದನು ಜಾಮದಗ್ನಿಯ ವರತಪೋವನಕೆ (ಸಂಕಶ. ೨೬–೦೨). **ಪಾರುಧಿ** : ಮಱುದಿವಸ ಪಾರುಧಿಯನಾಡಿಯೆ ಪರಮಹಾಪಾಳೆಯುವ ಹೊಕ್ಕರು (ಸಂಕಶ. ಶಂ. ೩೨೯); ನೆಱೆಯ ಕಾಲದ ವೃಷ್ಟಿ ಸುರಿಯಲು ಪರಿಹರಿಸಿ ಪಾರುಧಿಯ ಭೂಪತಿ ಮರಳುತಲೆ ಮಳೆಗಂಜಿ ಹೊಕ್ಕನು ನೃತ್ಯನಂದನೆಯ ನಿರುತಮಂದಿರದೊಳಗೆ (ಸಂಕಶ. ಶಂ. ೩೨೯). **ಹಾರುದಿ** : ಅಖಿಳಜಗದಳಲುರಿಯ ನಂದಿಸುವ ಹಾರು[ಪಾಠಾಂ. ಪಾರ]ದಿಯೆ ಸಂಸಾರವಾರುಧಿಯನುತ್ತರಿಪ ಗುರುಪಾದವ ಶಂದು ತೋಱುತ್ತಲಾ (ಹಕಾ. ೫–೪೪). [<ಪ್ರಾ. ಪಾರದ್ಧಿ./ಸಂ. ಪಾಪರ್ದ್ಧಿ]

**ಪಾರದೃಶ್ಯ** (ನಾ). ದೂರದ ದೃಶ್ಯ,–ನೋಟ : ಪಾರದೃಶ್ಯವನ್ನು ಕಳುಹುವವರು, ಎದುರಿನ ನೋಟವು ಒಂದು ಕೆಮೆರಾಲೆನ್ಸಿನಿಂದ ಈ ಗೋಲಕದ ಒಳಗಿರುವ ಲೋಹದ ಹಾಳೆಯ ಮೇಲೆ ಬೀಳುವಂತೆ ಮಾಡುತ್ತಾರೆ (ಪಾಲಕ್ರ. III, ೦೬೫೩). [ಪಾರ₂ + ದೃಶ್ಯ]

**ಪಾರದೃಶ್ವ** (ನಾ). ಪೂರ್ಣವಾಗಿ ತಿಳಿದುಕೊಂಡವನು ; ಪಾರಂಗತ ; ನಿಷ್ಣಾತ : ಆ ನೃಪಾಲಮೌಲಿಮಾಣಿಕ್ಯಂ ಪದವಾಕ್ಯಪ್ರಮೇಯನ್ಯಾಯರಾಜನೀತಿಭರತಸುರತಾದಿ ಸಮಸ್ತಶಾಸ್ತ್ರಪಾರಾವಾರಪಾರದೃಶ್ವನುಂ . . . ಇಕ್ಷ್ವಾಕುವಂಶಕುಶೇಶಯಾಕರಭೂಲೋಕದಿವಾಕರನುಮೆಂಬ ನೆಗಟ್ತೆಗಂ ಪೊಗೞ್ತೆಗತ್ತಳಗಮಾದಂ (ಅಸಂಪು. ೨–೦೦ ವ). [ಸಂ. ಪಾರದೃಶ್ವನ್]

**ಪಾರದೇಶಿಕ** (ಗು). ಪರದೇಶಕ್ಕೆ ಸಂಬಂಧಿಸಿದ : ನವೀನಸಂಸ್ಕೃತಿಯವರಿಗೆ ಆಮರೋದಿ ಅರಿತಿರುವ ಪಾರದೇಶಿಕಪಂಥದ ರೀತಿಯಲ್ಲಿ ಧರ್ಮವೆಂದರೆ ಮತವು . . . ಭಕ್ತಿಯು ಎಂದೇ ಭಾವನೆಯು (ಅರ್ಥಧ. ೩). [ಸಂ.]

**ಪಾರದ್ವಾರ** ‘ ಪಾರದಾರ ’ ನೋ.

**ಪಾರದ್ವಾರಿ** (ನಾ). ಹಾದರಿಗ ; ಜಾರ : ಕ್ರೂರಕರ್ಮಿಗೆ ಶಠಗೆ ಪಾರ ದ್ವಾರಿಗೆ . . . ಇಹಪರವಿಲ್ಲ (ಅಜಿಪು. ೫-೯೦).

[ ಪಾರದ್ವಾರ (<ಪಾರದಾರ) + –ಇ ]

**ಪಾರಪತೆಗಾರ** ‘ ಪಾರುಪತ್ಯಗಾಜಿ ’ ನೋ.

**ಪಾರಪತ್ತೆಗಾಜಿ** ‘ ಪಾರುಪತ್ಯಗಾಜಿ ’ ನೋ.

**ಪಾರಪತ್ಯ** ‘ ಪಾರುಪತ್ಯ ’ ನೋ.

**ಪಾರಪತ್ಯಗಾರ** ‘ ಪಾರುಪತ್ಯಗಾಜಿ ’ ನೋ.

**ಪಾರಪತ್ರ** (ನಾ). ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಯಾಣ ಮಾಡಲು ಪಡೆಯುವ ಅಪ್ಪಣೆಚೀಟಿ, ಅಧಿಕಾರಪತ್ರ ; ರಹದ್ದಾರಿ: ಭಾರತದೊಳಕ್ಕೆ ಪ್ರವೇಶ ಮತ್ತು ಅಲ್ಲಿಂದ ಉತ್ಪ್ರವಾಸನ ಮತ್ತು ನಿರ್ವಾಸನ ; ಪಾರಪತ್ರಗಳು ಮತ್ತು ದೃಷ್ಟಾಂಕಗಳು (ಭಾಂಸಂ. ೨೬೯).

[ ಪಾರ್ರ + ಪತ್ರ ]

**ಪಾರಮಾರ್ಥ** (ನಾ). ೧. ಮಹೋನ್ನತವಾದ ಸತ್ಯ. ೨. ಒಳ್ಳೆಯದು; ಉತ್ತಮವಾದುದು : ನೀರ ಬೊಬ್ಬುಳಿಕೆಯ ಬರ್ದುನ್ನೊಳೆ ಕಟ್ಟಿಯಾ ರೈಕೆಗೆಯ್ವ ಮರುಳನಂತೆ ಶಾರೀರಸೌಖ್ಯವ ನಿಜವೆಂದು ತಿಳಿವುದು ಪಾರ ಮಾರ್ಥವೆ ಬಲ್ಲವರಿಗೆ (ತ್ರಿಕಾ. ೯-೨೭). ೩. ಪರಮಾರ್ಥಕ್ಕೆ ಸಂಬಂಧಿಸಿದುದು ; ಮೋಕ್ಷ : ವಿಭ್ರಾಂತಿಯ ಪೊಂದಿ ದೂಷಿತನಾದಾಗಿ ನಿರಂತರಪಾರಮಾರ್ಥಸಚ್ಚಿಂತನೆಯುಂ ತೊಲಂಗಿಸಿ (ಅಪುತ. ೫೫).

[ < ಪರಮಾರ್ಥ ]

**ಪಾರಮಾರ್ಥಿಕ** (ಗುಂ). ೧. ಪರಮಾರ್ಥಕ್ಕೆ ಸಂಬಂಧಿಸಿದ ; ಮೋಕ್ಷ ಮಾರ್ಗಕ್ಕೆ ಸಂಬಂಧಿಸಿದ : ಮುಕುಳಿತಕರೋಪೇತಂ ದೂತಂ ಪ್ರಜಾ ಪತಿ ಪಾರಮಾರ್ಥಿಕವಚನಸದ್ಭಾವಂ (ಶಾಂತಿಪು. ೫-೭೭); ನಿಮ್ಮ ನಿಮ್ಮ ಕರ್ಮಗಳನ್ನು ಅನಾಸಕ್ತವಾಗಿ ನಿಮ್ಮ ನಿಮ್ಮ ಯೋಗ್ಯತೆಗನುಗುಣ ವಾಗಿ ಮಾಡುತ್ತ ಹೋಗಿರಿ. ಅದರಲ್ಲಿಯೇ ನಿಮ್ಮ ಐಹಿಕ, ಪಾರಮಾರ್ಥಿಕ ಸುಖವಿದೆ (ರರ್ಮಾಅ. ೦೪೬). ೨. ತತ್ತ್ವವಿಚಾರದಲ್ಲಿ ಮನಸ್ಸನ್ನು ತೊಡಗಿಸಿದ. ೩. ಶ್ರೇಷ್ಠವಾದ ; ಮುಖ್ಯವಾದ. (ನಾ). ೪. ಪರಮಾರ್ಥಕ್ಕೆ ಸಂಬಂಧಿಸಿದುದು ; ಮೋಕ್ಷಮಾರ್ಗಕ್ಕೆ ಸಂಬಂಧಿ ಸಿದುದು : ಪಾರಮಾರ್ಥಿಕ ವ್ಯಾವಹಾರಿಕ ಪ್ರಾತಿಭಾಸಿಕ ತುಚ್ಛವೆಂದು ಪದಾರ್ಥಗಳು ನಾಲ್ಕಾಗಿ ತಿಳಿಯಲಕ್ಕುಂ (ಏವೇಳ. ೨೦) ; ಮಾನವನ ಜೀವನಸಂಗ್ರಾಮ ಹೇಗೆ ದ್ವಿಮುಖವೊ ಹಾಗೆಯೇ ಮಾನವನ ಅನ್ನ ಷಣೆಗೆ ವಿಷಯವಾದ ವಿಶ್ವವೂ ದ್ವಿಮುಖಿ—ಪಾರಮಾರ್ಥಿಕ ; ವ್ಯಾವಹಾರಿಕ; ನಿತ್ಯ ; ಅನಿತ್ಯ (ಮನ್ವ . ೩ ಪೀಠಿ) ; ನಾನು ಎರಡು ಕೃತಿಗಳನ್ನು ರಚಿಸಿರುವೆನು. ಒಂದು ಲೌಕಿಕ, ಇನ್ನೊಂದು ಪಾರಮಾರ್ಥಿಕ (ಡಾಪಚಂ. ೬). ೫. ಪರಮಾರ್ಥವನ್ನು ಕುರಿತ ಚಿಂತನೆ; ತತ್ತ್ವವಿಚಾರ : ಇವರು ನಿಶ್ಚಿಂತರಾಗಿ ವೃದ್ಧ ರಾಜಮಾತೆಯೊಡನೆ ತಮ್ಮ ಉಳಿದ ಆಯುಷ್ಯ ವನ್ನು ಪಾರಮಾರ್ಥಿಕದಲ್ಲಿ ಕಳೆಯುತ್ತಿದ್ದರು (ಸಪತ. ೨೯). ೬. ಅತಿಶ್ರೇಷ್ಠವಾದ ಸತ್ಯ : ಅದ್ವೈತವೇದಾಂತದಲ್ಲಿ ಪರಮಾತ್ಮನನ್ನು ವಿನಾಯಿಸಿ ಬೇರೆ ಯಾವ ವಸ್ತುವೂ ಪಾರಮಾರ್ಥಿಕವಾಗಿ ಇರುವುದಿಲ್ಲ (ತತ್ತ್ವ.ಪಿ. ೧೦). ೭. ವಿಚಾರಮಾಡತಕ್ಕವನು ; ಬಲ್ಲವನು ; ಪ್ರಾಜ್ಞ : ಪಾರಮಾರ್ಥಿಕನೆಂದೊಡೆ ಪ್ರಾಜ್ಞನೆಂಬುದರ್ಥಂ (ಮನೋಬಿ. ೬-೦೭ ಟೀಕು) ; ಒಂದೆ ಜಾಗ್ರದಿ ವ್ಯಾವಹಾರಿಕನೆಂದು ಸ್ವಪ್ನದಿ ಪ್ರಾತಿಭಾಸಿಕನೆಂದು ಸುಷುಪ್ತಿಲಿ ಪಾರಮಾರ್ಥಿಕನೆಂದು ಪೆಸರದಕೆ (ಅನ್ಯು.ತ. ೯-೨೯) ; ಸುಷುಪ್ತ್ಯವಸ್ಥೆ ಯುಲ್ಲಿಯೂ ವ್ಯಷ್ಟಿಕಾರಣಶರೀರದಲ್ಲಿಯೂ ಅಭಿಮಾನವ ಮಾಡಿದ ಜೀವನಿಗೆ ಪ್ರಾಜ್ಞನೆನುತಲೂ ಪಾರಮಾರ್ಥಿಕನೆನುತಲೂ . . . ಹೆಸರು (ವೇಸಾರ. ೬). [ಸಂ.]

**ಪಾರಮೇಶ್ವರಾಗಮ** (ನಾ). ಆಗಮಂಗಳಲ್ಲಿ ಒಂದು ಬಗೆ : ಆ ಸಿದ್ಧಾಂತ ಭೇದಂಗಳಾವಾವುವೆಂದೊಡೆ ಕಾಮಿಕಾಗಮ ಯೋಗಜಾಗಮ . . . ಪಾರ ಮೇಶ್ವರಾಗಮ ಕಿರಣಾಗಮ ವಾತುಳಾಗಮವೆಂಬವಿಪ್ಪತ್ತೆಂಟು ದಿವ್ಯಾ ಗಮಂಗಳಕ್ಕುಂ (ಏಕೋ. ೬೭). [ಸಂ.]

**ಪಾರಮೇಷ್ಠ್ಯ** (ನಾ). ಬ್ರಹ್ಮಪದವಿ ; ಬ್ರಹ್ಮತ್ವ : ಪಾರಮೇಷ್ಠ್ಯದ ಪರಮವಿಭವದ ಸಾರಭವನವದಾಯ್ತು (ಜಭಾಗ ೧೦-೯-೦೦); ಪಾರಮೇಷ್ಠ್ಯದ ತನ್ನ ನಿಜಪದಸಾರಸುಖವಜ್ಞಾನ ಮೂಢಶರೀರಿಗಳೀಗಳೆಪಡೆದೆನುತ ಮನದೊಳಗೆ ಕರುಣಿಸಿದ (ಜಭಾಗ. ೦೦-೨೯-೬೪). [ಸಂ.]

**ಪಾರಮೈಶ್ವರ್ಯ** (ನಾ). ೧. ಅತಿಶಯವಾದ ಸಿರಿ ; ಉತ್ಕೃಷ್ಟವಾದ ಸಂಪತ್ತು. ೨. ಚಕ್ರವರ್ತಿತ್ವ ; ಸಾರ್ವಭೌಮತ್ವ : ಉತ್ತರಾಪಥದ ರಾಜರನ್ನು ಗೆದ್ದು ಅವರಿಂದ ಪಾಳಿಧ್ವಜಾದಿ ಪಾರಮೈಶ್ವರ್ಯಸೂಚಕ ಚಿಹ್ನಗಳನ್ನು ತೆಗೆದುಕೊಂಡನೆಂದು ಬರೆದಿದೆ (ಕರ್ನಾಇ. ೬೨). [ಸಂ.]

**ಪಾರಮ್ಯ** (ನಾ). ೧. ಪರಾಕಾಷ್ಠೆ ; ತುತ್ತತುದಿ : ‘ ಬಾಳೆಗಂಗಾಧರ ಟಿಳಕ ’ ಎಂಬ ಹೆಸರು ಕಿವಿಗೆ ಬಿದ್ದೊಡನೆ . . . ಅತ್ಯತಿಮಹೋತ್ಸಾಹ, ಪ್ರಸ್ಫುಟಿತ ಗಾಂಭೀರ್ಯ, ಪರಿಣತಿಯ ಪಾರಮ್ಯ—ಇವೆಲ್ಲವೂ ಮನಃ ಪಟಲದಿದುರು ಸುಳಿದುಹೋಗುತ್ತವೆ (ರಸಿರ್ಗಾ. ೦೨೯). ೨. ಪ್ರಾಧಾನ್ಯ : ಜೀವ ಮಾನುಷ್ಯದೊಳು ಪಡೆವವಿಂತಭಾವಗಳ ಪಾರಮ್ಯ ವಿಲ್ಲೆಂಬ ಭೂಮಾನುಭೂತಿ (ಮಪರಿ. ೫೯-೬); ಈ ಗ್ರಂಥಗಳಲ್ಲಿ ದೇಶ ಭಾಷೆಗೆ ಕೊಟ್ಟಿರುವ ಪ್ರಾಶಸ್ತ್ಯ, ಜಾತಿಕುಲಗೋತ್ರಗಳನ್ನು ಬದಿಗೊತ್ತಿ ಭಕ್ತಿಗೆ ಕೊಟ್ಟ ಪಾರಮ್ಯ, ಅತಿಶಯ ಬೆಲೆಯುಳ್ಳದ್ದೆಂದು ಇಂದಿನವರಿಗೆ ತೋಚದೇ ಇರದು (ಕಾಕಿಪ. ೬೯೯). ೩. ಶ್ರೇಷ್ಠತೆ : ಸತ್ಯ, ಅಹಿಂಸೆ ಮತ್ತು ಗುರಿಯನ್ನು ಸಾಧಿಸುವ ಸಾಧುಮಾರ್ಗ—ಇವು ಮೂರೂ ಪರಸ್ಪರ ಸಂಬಂಧವುಳ್ಳವುಗಳಾಗಿವೆ ; ಮತ್ತು ನೀತಿನಿಯಮಗಳ ಹಿರಿಮೆಯೂ ಪಾರಮ್ಯವೂ ಅವಕ್ಕೆ ಮೂಲಾವಲಂಬನ (ಗ್ರಜೀಅ. ೦೩೯). [ಸಂ.]

**ಪಾರಯಿಸು**, ಪಾರಯ್ಸು, ಪಾರ್ಯೆಸು, ಹಾರಯಿಸು, ಹಾರಯ್ಸು, ಹಾರವಿಸು, ಹಾರ್ಯೆಸು (ಕ್ರಿ). ೧. ಬಯಸು ; ಅಪೇಕ್ಷಿಸು : ಮೇರುನಗೋಪಕಂಠವನದೊಳ್ ಮನಕೇಳಿವಿಳಾಸಮಂ ಸ್ವಯಂಭೂರಮಾ ಣಾಂಬುರಾಶಿವಿಲಸತ್ತಟದೊಳ್ ಜಲಕೇಳಿಲೀಲೆಯುಂ ಪಾರಯಿಸಿರ್ದುದಂ ನೆನೆವೂ ನೀಂ (ಆದಿಪು ೬-೬೩) ; ಪರಿವರ್ತಿತ ಕಟಾಕ್ಷಕಿರಣಾಕ್ಷತಂಗಳಿಂ ನಿಜಾಂಘ್ರಿಗಳನರ್ಚಿಸುವ ಕನ್ಯಾರತ್ನಮಂ ನಿಜಕುಲಕ್ಕಿದುವೆ ಚೂಡಾರತ್ನ ಮೆಂದು ನೋಡಿ ಪಾರಯಿಸಿ[ಶಾಂ. ಯ್ಸಿ] ಪಲವಂ ನಲ್ಲರಕೆಯಂ ಪರಸಿ (ಹರಿಪು. ೩-೯೭ ವ). **ಪಾರಯ್ಸು** : ೧. ಅದರ್ಕೆ ಪಾರಯ್ಸ ಸೌಭಾಗ್ಯಶಾಳಿ ವಿಟನಿನಿತೆಂದಂ (ಶಾಂತಿಪು. ೬-೬೩ ವ); ಸಚ್ಚಿಂ ತೊದಳೊಳ್ಳೊದಬ್ಬ ನುಡಿಯಂ ಪಾರಯ್ಸ[ಶಾಂ. ರ್ಯೆಸಿ] ಕೇಳಲ್ಕೆ ನೋಣನೊ (ಸುಕುಮಾ. ೯-೦೦೬). **ಪಾರ್ಯೆಸು** : ೧. ಆ ರಾಜಸುತಂ ಪಸಿದುಂ ನೀರಡಸಿದೆನೆನಗಿವಲ್ಲದ ಲ್ಲಲ್ಲೆನ್ನಂ ಪಾರ್ಯೆಸಂ ಪಲವಂ (ಅಜಿಪು. ೫-೬೬) ; ಆ ರಮಣೀರಮಣರ ಶೃಂಗಾರರಸಾಪೂರ್ವತರ ತರಂಗಿಣಿಯೊಳದೇಂ ಪಾರ್ಯೆಸಿ ತೊಬಲ್ವುವೊ ರಸ ಪೂರದ ವಿಣಂಗಳನೆ ಪೋಲ್ವ ನೋಟ್ಟರ ಕಣ್ಗಳ್ (ಚಂದ್ರಪ್ರ. ೬-೭೬) : ಅನ್ಯಕೃತವೆನಿಪ್ಪತ್ಪಾತವೊಂದಲ್ಲದಬ್ಜ ವಿಕಾಸಂ ನೆಲೆಗೊಂಡು ಕೋಕವಿಘಟನಂ ಪಾರ್ಯೆಸಿರಲ್ ಮಬ್ಬು ಪಿಂಗುವುದೇ (ಶಕಶಂ. ೬೯೭). **ಹಾರಯಿಸು** : ೧. ಧಾರುಣೀಪತಿ ಧರ್ಮಸುತ ತಾ ಹಾರಯಿಸಿಯಿಹುದೆಂದು ಕುಂತೀನಾರಿ ತಾ ಪತಿಕರಿಸೆ ಪಾರ್ಥನು ಚಲುವಮತವೆಂದ (ಸಂಭಕ. ೨೪-೬೬) ಎನ್ನ ಪ್ರಾಣ ನಿಮ್ಮ ಪ್ರಸಾದವನೆ ಹಾರಯಿಸುತಿರ್ಪುದಯ್ಯಾ (ಅಪಾಂಕೇ. ೦೩೨-೬೭); ಆರೋಗ್ಯಭಾಗ್ಯವನು ಮನಕೆ ತನುಗೆಂತಂತೆ ಹಾರಯಿಸುವೊಡೆ ಹಲವು ಸರಳನೀತಿಗಳ ಧಾರಯಿಸು ನೆನಸಿನಲಿ ನುಡಿಯುಲ್ಲಿ ನಡತೆಯಲಿ ಪಾರಾಗು ಸುಳಿಯುಂದ ( ಮುಂಕುಳ. ೬೦೬ ). ೨. ಒಳ್ಳೆಯದನ್ನು ಬಯಸು ; ಶುಭ

ಕೋರು ; ಹರಸು : ಈ ಸಂಸ್ಥೆಯ ಕೆಲಸ ನಾನಾಮುಖವಾಗಿ ಹಬ್ಬಲೆಂದು ಹಾರಯಿಸುತ್ತೇನೆ (ಕರುಣಾ. ೦೨೮). ೩. ಎದುರು ನೋಡು ; ನಿರೀಕ್ಷಿಸು ; ಕಾಯು : ರಾಜಕುವರಿ ಬನದೊಳಲ್ಲಲ್ಲಿರೆದು, ನಿಂತಾಲಿಸುತ್ತ, ಮರಳಿ ಪುಂಬರಿದು ಹಾರಯಿಸಿ ನಿಡುನೋಟವಟ್ಟುತ್ತೆ . . . ಸವ್ಯಸಾಚಿಯನರಸುತಿರೆ (ಅಶ್ವಾಸ. ೨೦-೩೪೮). ೪. ಸಂತೋಷ ಪಡು ; ಮೆಚ್ಚು : ನಿತ್ಯನೂರವನೆಸಿ ಬರುತಿರ್ದನುಮ್ಮಹದಲ್ಲಿ ಹಾರಯಿಸುತಂ ಹಿಗ್ಗುತಂ ಹೊಂಗಿ ಹೊಗಳುತಂ ಕೀರದೆನ್ನಳಪಲ್ಲ ನಿಷ್ಕೆ ಏರಿದೆನ್ನುತಂ (ಕರುಣಾ. ೧೦-೦೩); ಕಂಗಳಪಟ್ಟು ಬೆಳೆದೆಳೆಯ ದರ್ಭೆಯುಂ ಎಂದು ಹಾರಯಿಸಿ . . . ಕುಡುಗೋಲ್ವಿಡಿದು ಸಾರ್ದಂ (ಹರಿಶ್ಚ. ೦೨-೬).

**ಹಾರಯ್ಸು** : ೧. ಬಳಿದ ಬಳಲಬೇಡಮ್ಮಲ್ಲಿ ಹಾರಯ್ಸು [ಪಾಠಾಂ. ರೈಸ]ದಿರ್ದಯವನು (ಕೃಷ್ಣಾ. ೦೪-೩). ೨. ಮೇಲಣ ಜಗದ ಜನ ಹಾರಯ್ಸು [ಪಾಠಾಂ. ರೈಸಿ] ತಲೆದೂಗುಗಳಲಿರಲಿದ್ದೆಸೆಯ ಬಲ ಮೆಚಿದುದು ಮಹಾಹವವ (ಕೊರಾ. ೬-೦೯-೨೦). ೩. ಬರವನೇ ಹಾರಯ್ಸು [ಪಾಠಾಂ. ರೈಸಿ] ಕೃಶೆಯಾದ ಕೌಸಲೆಗೆ ರಾಮನಭಿವಂದಿಸಿದನು (ಕೃಷ್ಣಾ. ೦೬-೯). ೪. ಊರುನ್ನಯದೊಳ್ ಕರದೊಳ್ ಚಾರು ಭುಜಾಗ್ರಂಗಳೊಳ್ ಸುಬಾಹುಗಳೊಳ್ ಪೃಥ್ವೋರಃಸ್ಥಳದೊಳ್ ಗಿರಿಸುತೆ ಹಾರಯ್ಸುತ ಕುಸುಮಮಾಲೆಯುಂ ಪಸರಿಸಿದಳ್ (ಗಿರಿಜಾ. ೩-೬೦): ಹರುಷದಿಂದ ಪಿನಾಕಿ ಹಾರಯ್ಸಿದನು ಪೊಯ್ಸಿದನುಳ್ಳೇರಿಗಳ ನಾಕಪತಿ . . . ರಾವಣಿಯ ಮರಣದಲಿ (ಕೊರಾ. ೬-೯೪-೩೪).

**ಹಾರವಿಸು**$_1$ : ೧. ಹಾರವಿಸಿ ನಲಿದೆತ್ತಿ ಕಿಂಚಿತು ಭಾರವಿಲ್ಲದೆ ಕೈಗೆ ಸೋಂಕದೆ ಸಾರತೇಜಃ ಪುಂಜತನು ಶಿಶು ತನ್ನ ಕೈಯೊಳಗೆ ಪೂರವಿಸಿಕೊಂಡಿರಲು (ಪ್ರಭು. ೬-೩೬) ; ಕಲ್ಲೆದೆಯೊಳಿರ್ದು ಹಾರವಿಸಿದೆನು ಪಿಡಿದು ಮುಟ್ಟಿದ ಕೊಂಬೆಗಳ್ಮುರಿದುವೇ ಇಲ್ಲ ತನಗಿನ್ನು ಗತಿ ಸೆರೆಗಳ ಬಿಡಿಸುವವರಿಲ್ಲಿನ್ನು . . . ಎಂದು ಮೊರೆಯಿಟ್ಟಳು (ಕುಕಂಗ. ೬-೨೯). ೩. ಹರಿಯ ಬರವಿಗೆ ಹಾರವಿಸಿ . . . ಮೆರೆದಿಹವು ತೋರಣಗಳಿತ್ತ್ಸರದಲ್ಲಿ ಸಾಲ್ಸೆರೆದು (ಕೋಣಗಲು. ೬-೦೦). ೪. ನೋಡಿರೆ ಬಸವಸುಕುಮಾರನಂ ನೀವೆನಲು ಸರ್ಬರು ಕಂಡು ತಾವಾಗ ಹಾರವಿಸಿ ಹೊಡಮಟು (ಬಸವ. ೩-೯೬) ; ತಂಗಿಯು ನಾರು ಸೋಲಿಸುವವರು ತಾವಾರಿಲ್ಲ ನೃಪರೊಳಗೆ ಭೂರಿವಿಪ್ರರ ಮಧ್ಯದಲ್ಲಿನ್ನಾರದುಂಟೆಂದೆನುತ ಮನದಲಿ ಹಾರವಿಸಿ ಶ್ರೀಕಂಠವರವಿದು ಸಿದ್ಧಿಸುವುದೆಂದ (ಶಂಕರ. ೩೦-೯೦); ಹಾಡುವ ಹಾರವಿಸುವಸುರೆಯರ . . . ಕಂಡು ಹೇಸುತ ಹನುಮ ಹೊಐಪಂಟು(ಕೊರಾ. ೩-೨-೩೬).

**ಹಾರೈಸು** : ೧. ನೀರೊಳಗಣ ಮೀನನಂತೆಪೊಲಾರೆಬೆಪೊಡಮುರುಳೆವರಿದು ಪುರುಳಿಲ್ಲದ ಹಂಬಾರದೆನ್ನೆ ಬಾತು ಬಲ್ಮೆಗೆ ಹಾರೈಸುವರೇಕೆ ಬಯಕೆಗವಿಗಳ್ ಕೆಲಬರ್ (ಲೀಲಾವ. ೦-೨೯); ಹರನ ಕರುಣಕ್ಕೆ ಹಾರೈಸಿ ಭಕ್ತಿಭರದಿಂ ಭಾರೈಸಿ (ಬಸವ. ೯-೬೦); ಹರಿ ಮೆಚ್ಚನಯ್ಯ . . . ಹಣವಿಗೆ ಹಾರೈಸಿಕೊಂಡು ತಿರುಪತಿಗ್ಹೋಹರ ಕಂಡು ಹಣಕಾಸು ಕೊಂಡು ಬಂದು ಸ್ವಾಮಿಯ ನೋಡುವವಗೆ (ಪುರಂದ. ೨-೬೯-೪); ನಾನೆಂದೂ ಅವರಿಗೆ ಕೆಡಕು ಹಾರೈಸೊಲ್ಲ (ಕುಸು. ೩೩೨). ೨. ಮಂಗಳವೃತ್ತಂಗಳನೋದಿ ಪೊಗಟ್ಟು ಹಾರೈಸಿ ಪರಸುವ ಮಂದಾರಾವೃಂದಾರಕರ ಸಂದಣಿಗಳೊಳಂ . . . ಅತ್ಯುತ್ಸವೋತ್ಸವಪ್ರಕ್ಷೋಭಿತವಾಗಿರ್ದುದು (ಅನಂತ. ೩-೩ ೫) ; ಈ ವಿವಾಹ ನಿರ್ವಿಘ್ನವಾಗಿ ನೆರವೇರಲಿ ಎಂದು ಹಾರೈಸದವರು ಒಬ್ಬರೂ ಇಲ್ಲ (ಪ್ರಬಂಧ ೦೦೩). ೩. ತರುಣಿಯರು ವೀಧಿವೀಧಿಯೊಳಡ್ಡಗಟ್ಟಿ ನಿಂದರು ನಿಮ್ಮ ಬರವ ಹಾರೈಸುತಿರ್ದಪರು (ಶಾಂಡಿ. ೦೩-೮); ಅರ ಹಾರೈಸಿವರೇನುಂಟು ಬಟನೀರ ಕಡೆದರಲ್ಲೇನುಂಟು (ಪುರಂದ. ೦-೦೩೯ ಪಲ್ಲವಿ); ಬಾಯಾರಿ ಹೋದರೆ, ನೀರೊಡನೆ ಬತ್ತುವುದು. ತಾಯಿ ಸೋದರರೆಂದು ಹಾರೈಸಲು . . . ಮಾಯವಾಗುವರು ಮೆಲ್ಲನೆ ದೂರದೀದ (ಸರ್ವ. ೩೦-೦). ೪. ಅಯ್ಯ ನೀ ನೋಡಿದರೆ ನೋಡು ನೋಡದಿದ್ದರೆ ಮಾಣು ನಾ ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾಆನಯ್ಯ (ಬಸವ. ಬ. ೩೯-೬೩) ; ಚಿತ್ತದಲಿ ಹಾರೈಸಿ ಪಗುಡಲು ಮತ್ತೆ ಸುಮನ್ನಾನದಲಿ ಬಂದಳು ಮತ್ತಗಜಗತಿಯಿಂದಲಾ ಸಮಯದಲಿ ಮದವತಿ(ಪ್ರಭು. ೩-೪೦) ; ಮುನಿಪತಿ ಚಿತ್ತದಲಿ ಹಾರೈಸಿ ಹರಸಿದನಂಜನಸುತನ (ಕೊರಾ. ೩-೦-೩೩). [<ಪಾರ್$_1$ + –ಇಸು$_1$]

**ಹಾರಯ್ಸು** 'ಹಾರಯಿಸು' ನೋ.

**ಪಾರಲೌಕಿಕ** (ಗು). ೧. ಪರಲೋಕಕ್ಕೆ ಸಂಬಂಧಿಸಿದ ; ಪರಲೋಕದ : ಪುಸ್ತಕಗಳೆಂಬ ಗುರುಗಳು . . . ಲೌಕಿಕ ಮತ್ತು ಪಾರಲೌಕಿಕ ವಿಷಯಗಳ ಪರಿಜ್ಞಾನ ಮಾಡಿಕೊಡುವರು (ಗ್ರಂಥಾಂ. ೨); ಸತ್ಯಂ ಎಂದರೆ ಪಾರಲೌಕಿಕ ಸದ್ರೂಪಿಯಾದ ಬ್ರಹ್ಮವೆಂತಲೂ ಅರ್ಥ ಮಾಡುತ್ತಾರೆ (ಭಾರತ. ಚಾ ಅಂತು). (ನಾ). ೨. ಪರಲೋಕಕ್ಕೆ ಸಂಬಂಧಿಸಿದುದು : ಮೋಕ್ಷ : ಮಗನೋವನೆ ಪಾರಲೌಕಿಕವಗಡಹುದವಪ್ಯಾತಿ ತನ್ನನು ಕಸುಹುದೈ ಹಿತದಲ್ಲಿ (ಕುಮ್ಯಾ. ೦೦-೦೩) ; ದಶರಥಂ . . . ಪಾರಲೌಕಿಕದೆಡೆಗೆ ತನ್ನಾತ್ಮವಂ ತಿರುಗಿಸಲ್ಕೆಳಸಿ, ಸಚಿವರಂ ಗುರುಗಳಂ ಪ್ರಜೆಗಳಂ ಕರೆದೊರೆದಂ (ಶ್ರೀರಾಮಾ. ೩೩-೭೮). [ಸಂ.]

**ಪಾರಲೌಕಿಕವಿಧಿ** (ನಾ). ಸತ್ತವರಿಗಾಗಿ ಮಾಡುವ ಕ್ರಿಯೆ ; ಉತ್ತರ ಕ್ರಿಯೆ ; ಅಪರಕರ್ಮ : ದವಿತಾರಿಯ ಭುಜಬಲವಿಕ್ರಮದಳಿಗೆ ಮೆಚ್ಚಿ ಮಚ್ಚುಗುಡಿಸುವಪೊಲನುಕ್ರಮದಿಂ ನೀರ್ಗುಡಿಸಿ ಯಥಾಕ್ರಮದಿಂ ಪದವಡಿಸಿ ಪಾರಲೌಕಿಕವಿಧಿಯುಂ (ಶಾಂತಿ. ೯-೩೬). [ಪಾರಲೌಕಿಕ + ವಿಧಿ]

**ಪಾರವಶ್ಯ** (ನಾ). ೧. ಬೇರೆಯವರಿಗೆ ವಶವಾಗುವುದು ; ಪರಾಧೀನತೆ : "ಪರವಸಮೆಂಬುದು ಪಾರವಶ್ಯಮೆಂದೆನಿಪರ್ಥಂ" (ಶಬ್ದಾ. ೦೦೯). ೨. ಆನಂದದ ಪರವಶತೆ, – ಮೈಮರೆವು : ಅತ್ತಲೊಬ್ಬಯ್ಯಂ ಶಿವಾನಂ ದೋತ್ತಮಂ ತಾನೆಂಬ ಪೆಸರಂ ಪೊತ್ತು ಲಿಂಗಧ್ಯಾನತದ್ಗತಪಾರವಶ್ಯದಲಿ . . . ಸಮಾಧಿಸ್ಥನಾಗಿರಲು (ಬಸವ. ೩೪-೯). [ಸಂ.]

**ಪಾರವಾರಿ** (ನಾ). (?) : ಪೊಗೆ ಭೋಗೆಯುಂ ಪಾರವಾರಿಯುಂ × × × ಲವಿದಾದೋನುಂ ಕೊಟ್ಟೋನುಂ(ಎ. IV. ಹಗ್ಗ. ೯೬-೩; ಶು. 780).[?]

**ಪಾರವೆಯ್ದಿಸು** (ಕ್ರಿ). ೧. ದಡವನ್ನು ಸೇರಿಸು ; ದಾಟಿಸು : ಘೋರ ತರನಿಸ್ಸಾರವಟು ಸಂಸಾರಪಾರಾವಾರವಂ ವಿಗೆ ಪಾರವೆ[ಪಾಠಾಂ. ವ]ಯ್ದಿಸಲಾಪುವಮಾಪತನೂಭವನೆ ಬಾರಾ (ಬಸವ. ೨೯-೪೦). ೨. ತುದಿ ಮುಟ್ಟಿಸು ; ಕೊನೆಗಾಣಿಸು : ಪೂತವಮಾಗಿಹ ನಿಮ್ಮ ಕೃತಿಯಂ ಪಾರವೆ [ಪಾಠಾಂ. ವ]ಯ್ದಿಸಿ ಪೊರೆವುದೆಮ್ಮನುದಾರವಾಹಿಮಾಣಾರ ಬಸವ ಕುಮಾರ ಭವದೂರ (ಬಸವ. ೦-೩). [ಪಾರ್$_1$ + ಎಯ್ದಿಸು]

**ಪಾರವೆಯ್ದು** (ಕ್ರಿ). ದಡವನ್ನು ಸೇರು ; ದಾಟು ; ಪಾರಾಗು : ಹೆದ್ದೊಚಿಯಮುಚಿ ತಡಿಗೆ ದಾಂಟಿಸುವ ತೋರವಹ ಬಲುದೆಪ್ಪವಿರೆ ಮಾನಹಾರಿ ಸೋರೆಯೊಡಂ ಪಿಡಿದು ತಾಂ ಪಾರವೆ[ಪಾಠಾಂ. ವ]ಯ್ದುವೆನೆಂಬವನಪೊಲು ಕೇಳು ಜಗದೇವಾ (ಬಸವ. ೩೦-೯೩).

[ಪಾರ್$_1$ + ಎಯ್ದು]

**ಪಾರಶವ** (ನಾ). ೧. ಒಂದು ಬಗೆಯ ಲೋಹ ; ಹದಮಾಡಿದ ಕಬ್ಬಿಣ; ಉಕ್ಕು. ೨. ಒಂದು ಬಗೆಯ ಕಬ್ಬಿಣದ ಆಯುಧ : "ಪಾರಶ [ಪಾಠಾಂ. ಸ]ಮೆನೆ ಶಸ್ತ್ರ"(ಶಬ್ದಮ. ೩೦-೩). ೩. ಬ್ರಾಹ್ಮಣನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಮಗ. [ಸಂ.]

**ಪಾರಶಿಕ, ಪಾರ್ಸಿಕ** (ನಾ). ೧. ಪರ್ಷಿಯಾದೇಶ ; ಇರಾನ್ : ನಡೆದುದು ಭೂರಿಬಲ . . . ವಿಂಧ್ಯ ಬೋಟಕ ಪಾರಶಿ[ಪಾಠಾಂ. ಸಿ]ಕ ಸಾಂಬ್ರಾಣಿ ಹುರುಮಂಜಿಗಳ ಬಳಿವಿಡಿದು (ಕೊರಾ. ೯-೬-೯). ೨. ಪರ್ಷಿಯಾದೇಶದ ವ್ಯಕ್ತಿ : ಜಡಗತಿಯ ಕೋಸದುಗ್ಗಡದ ಕೇಳಿಯ ತಕ್ಕ ನುಡಿಯವಳಿ ಪಾರ

ಶಿಕದವಳಿಸಿಯಳಿ (ಜಿಪ. ೬-೨೦). ೩. ಪರ್ಷಿಯಾದೇಶದ ಕುದುರೆ.

**ಪಾರ್ಸಿಕ** : ೨. ಕಾಳಗವೆ, ರಾತ್ರಿ ನಿನಗಿಲ್ಲೆಂದು ಪಾರ್ಸಿಕಂಗಿತ್ತುದಾ ದೈವಂ (ಜಾಠರ. ೬-೦೩೨). [<ಸಂ. ಪಾರಸೀಕ]

**ಪಾರಶೀಕ** (ನಾ). ಪರ್ಷಿಯಾದೇಶದ ಜನ : ಪಾರಶೀ[ಜಾಣಾಂ. ಸೀ]ಕ ಕಿರಾತ ಬರ್ಬರ ಪಾರಿಯಾತ್ರರ ಮುಖ್ಯದು ಸರ್ವವಿಹಾರವನು ಮಾಡಿದನು ಮ್ಲೇಚ್ಛ ಸಹಸ್ರಕೋಟಿಗಳ (ಕುವ್ಯಾಸ. ೬-೨೬). [ಸಂ.]

**ಪಾರಸ** (ನಾ). =ಪಾರಶಿಕ ೧ : ಬರ್ಬ್ಬರಂ×[ಪಾರಸ]ದೈಕಪಾದ ಲಂಬ ಕರ್ಣ್ಣಸ್ತ್ರೀರಾಜ್ಯ ಘೋಳಿಪಾ×ವೆಂಬ ನಾನಾದೇಶದೇಶಾಂತರ×××ಗಳ (ಕ್ರೆಇ. XX, ೦೦೨-೪೦; 1144 ?) ; ಪೂರ್ವಕಾಲದಲ್ಲಿ ಪಾರಸದೇಶವನ್ನು ಆಳಿ ದಂಥ ವಿಖ್ಯಾತರಾದ ಮುಸಲ್ಮಾನ ಅರಸರಲ್ಲಿ ಒಬ್ಬ ಬಹುಪರಾಕ್ರಮಶಾಲಿ ಯಾದ ಪಾತ್ರಶಹನು ಇದ್ದನು (ಕಗದ್ಯ. II, ೦೩). [ಸಂ.]

**ಪಾರಸವ** (ನಾ). =ಪಾರಶವ ೧ : "ಶಸ್ತ್ರಂ, ತೀಕ್ಷ್ಣಂ, ಅಯಃ, ಪಾರಸವಂ —ಈ ೪ ಉಕ್ಕು" (ಹಲಾಯು. ೨೬-೦೭). [ಸಂ.]

**ಪಾರಸಿ** (ಗು). ೧. ಪರ್ಷಿಯಾದೇಶಕ್ಕೆ ಸಂಬಂಧಿಸಿದ. (ನಾ). ೨. ಪರ್ಷಿಯಾದೇಶದ ಭಾಷೆ : ಓರೆದು ನೋಡೀ ಲಿಪಿಯು ಓದಲ ಬಲ್ಲವರು ಆರೆ ಪಾರಸಿಯಲ್ಲ ಅರಬ್ಬಿಯಲ್ಲ (ಕರಿಂ. ೦೩೯-೬). [ಸಂ. ಪಾರಸೀ]

**ಪಾರಸಿಕ** (ನಾ). ೧.=ಪಾರಶಿಕ ೧ : ಪಾರಸಿಕದೇಶದಲಿ ಪುಟ್ಟಿರ ವನಾಯುಜಂ (ಜುಂಗರಾ. ೬೩-೨೦); ಏಪ್ಪವನು ಯಾರೋಹಿಗೊಂದಿಸಿದ ಸೇತು, ಪಾರಸಿಕವೀರರಿಗೆ ಹಾ ರಾಹು ಕೇತು ! (ಪಾರಸಿ. ೬-೦೩೬). ೨. ಪರ್ಷಿಯಾದೇಶದ ಜನ : ಪಾರಸಿಕರಸಾಧ್ಯಬಲಂ ಪೊಕ್ಕುದ ಹಲ ಸಿರಿಯೆ ಪೋಗೆ (ಪಾರಸಿ. ೦-೦). ೩. ಪರ್ಷಿಯಾದೇಶದ ಕುದುರೆ. [ಸಂ.]

**ಪಾರಸಿಗ** (ನಾ). ಪರ್ಷಿಯಾದೇಶಕ್ಕೆ ಸೇರಿದವನು ; ಪಾರಸಿಕ : ರುದ್ರದತ್ತಂ ಪಾರಸಿಗನುಪದೇಶವುಂ ಬೇಟೆಯುಂ ಕೇಳ್ದನಪ್ಪುದಱಿಂ ತನ್ನ ಕಯ್ಯ ಕತ್ತಿಗೆಯಿಂದೇಟುವಡ ಪೋರಿಗಳಂ ತಲೆಯನರಿದು (ಬಂಹಂ. ೯-೬೩ ಪ). [ಪಾರಸ+—ಇಗ]

**ಪಾರಸೀಕ** (ನಾ). ೧. = ಪಾರಶಿಕ ೧ : ಪಾರಸೀಕದೇಶದಲ್ಲಿ ಹುಟ್ಟಿದುವು ವನಾಯುಜಂಗಳೆಂಬುದು (ಹಲಾಯು. ೬೨-೨೬೩); ಬರ್ಬರ ಪಾರಸೀಕ ಪಾರಿಯಾತ್ರ ಹವಿಷ್ಕಾರ ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲರಿಂ ಭಯಾನಕರಸವುಂ . . . ನೆಗಱುತ್ತುಮಿರೆಯಿರೆ (ಜಗಂ. ೨-೩೯ ಪ). ೨. = ಪಾರಸಿಗ : ತುರುಕ ಬರ್ಬರ ಪಾರಸೀಕರ ತುರಗವೈಸಾವಿರ ಸಹಿತ ಮೋಹರಿಸಿ ನಿಂದನು ಶಕುನಿ ಥಟ್ಟಿನ ಬಲದ ಬಾಹೆಯಲಿ (ಕುವ್ಯಾಗ. ೦-೯). ೩. ಪರ್ಷಿಯಾದೇಶದ ಭಾಷೆ ; ಪಾರಸಿ : ಈ ಶಾಸನ ಗಳು ಬಾಣಮುಖಾಕ್ಷರದಿಂದ ಕೆತ್ತಲ್ಪಟ್ಟಿರುವುವು. ಇವುಗಳು ಪಾರಸೀಕ, ಸೂಸಾನ್ ಮತ್ತು ಶೇವಿನಾಯು ಎಂಬ ಮೂರು ಭಾಷೆಗಳಲ್ಲಿವೆ (ಕಶಾಶ. ೨-೩). ೪. ಪರ್ಷಿಯಾದೇಶದ ಕುದುರೆ : "ವಾನಾಯುಜ ವಾಜಿಕುಳಂ ಪಾರಸೀಕವೆಂದದಱಿಗವಱಿಕೊಳ್" (ಪಸ್ತುಕೋ. ೬೩-೨೩). [ಸಂ.]

**ಪಾರಳತೆ** (ನಾ). (ಭೂವಿಜ್ಞಾ) ಒಂದು ತುದಿಯಿಂದ ಮತ್ತೊಂದು ತುದಿಯವರೆಗಿನ ಅಳತೆ ; ವ್ಯಾಸದ ಅಳತೆ : ಭೂಗೋಳದ ವ್ಯಾಸವು ಅಥವಾ ಭೂಗರ್ಭದ ಪಾರಳತೆಯು ೭,೯೧೨ ಮೈಲುಗಳುಳ್ಳದ್ದಾಗಿದೆ (ಕೂಗೋಳ. ೩). [ ಪಾರ್₂+ಅಳತೆ ]

**ಪಾರಾ** ' ಪಹರೆ ' ನೋ.

**ಪಾರಾಚೌಕಿ** (ನಾ). ಪಹರೆಯವರು ಕಾವಲು ಇರುವ ಚಾವಡಿ,—ಠಾಣೆ : ಅವರು ಹಗಲು ಟೀಪುಸುಲ್ತಾನರ ಸರಹದ್ದಿನಲ್ಲು ಇದ್ದುಕೊಂಡು, ರಾತ್ರಿ ಕಾಲದಲ್ಲಿ ಪಾರಾಚೌಕಿ ತಪ್ಪಿಸಿ, ಕಳ್ಳಮಾರ್ಗವಾಗಿ ಕೊಡಗಿನ ಸೀಮೆ ಸರ ಹದ್ದಿನ ಒಳಗೆ ಬರುವುದು (ರಾಜೇಂದ್ರ. ೦೦೩). [ಪಾರಾ (<ಪಹರೆ)+ಚೌಕಿ]

**ಪಾರಾಟ** ' ಪಾಱಾಟ ' ನೋ.

**ಪಾರಾಪತ** (ನಾ). ಪಾರಿವಾಳ ; ಕಪೋತ : ಮಯೂರಪಾರಾಪತಪ್ರಕರ ಕುಕ್ಕುಟ ಘಟಕತ್ತುಚಾಪ ತಿತ್ತಿರಿ ಕಪಿಂಜಳಾದಿ ವಿವಿಧವಿಹಂಗಪರಿಶೋಭಿ ತೋಪಾಂತದೊಳ್ (ಧರ್ಮಾಮೃ. ೩-೬೨ ಪ) ; ಪ್ರಮತ್ತ ಪರಪುಷ್ಟಮಯೂರ ಕೀರಪಾರಾಪತಂಗಳುಲಿವವುಂ . . . ಸೊಗಯಿಸುತ್ತುಮಿರಲ್ (ಜುಅನಂ. ೬ ೬೨ ಪ). [ ಸಂ. ]

**ಪಾರಾಯಣ** (ನಾ). ೧. ದಾಟುವುದು ; ಕಡೆಹಾಯುವುದು. ೨. ಗ್ರಂಥಾದಿಗಳನ್ನು ಮೊದಲಿನಿಂದ ಕಡೆಯವರೆಗೆ ಓದುವುದು ; ಗ್ರಂಥಾದಿಗಳ ಆಮೂಲಾಗ್ರವಾದ ಪಠನ : "ಸಾಕಲ್ಯವಾಚನಂ, ಪಾರಾಯಣಂ—ಈ ೨ ಕಡೆ ಮುಟ್ಟಲೋದುವುದು" (ಹಲಾಯು. ೬೬-೨೯೭) ; ವೇದಪಾರಾಯಣದ ಫಲ ಗಂಗಾದಿ ತೀರ್ಥಸ್ನಾನಫಲ . . . ವಸ್ತ್ರಾದಿ ಕನ್ಯಾದಾನಫಲವಹುದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ (ಕುವ್ಯಾಗ. ೦೩-೨೦) ; ತಿರುಪರಾತ್ಪರವಾಸುದೇವನ ತಿರುವಡಿಗಳನು ನುತಿಸಿ ಪೂಜಿಸಿ ತಿರುಪ್ರಬಂಧಾದಿಗಳ ಪಾರಾಯಣವ ಮಾಡುತಲಿ (ಗಗಜಾ. ೦೯-೯೯); ಪಾರಾಯಣ, ಜಪಗಳು ಪೂಜೆಯಲ್ಲಿ ಆವಶ್ಯಕಗಳಾಗಿರುತ್ತವೆ (ಕಾರಿದ. ೨೨೬). ೩. ಗ್ರಂಥಾದಿಗಳನ್ನು ಮೊದಲಿನಿಂದ ಕಡೆಯ ವರೆಗೆ ಓದಿದವನು ; ಪಂಡಿತ ; ಪಾರಗ : "ಅನಂತಪಾರಾಯಣಂ ಮಿಗೆ ಓದಿದವನಕ್ಕುಂ" (ಜುಂಗರಾ. ೬೩-೩) ; ನಿಜಾನ್ವವಾಯಪಾರಾಯಣ ನಿಂತು ಸಂತತಿಗದರ್ಪನೊರ್ದೆದನುತ್ತರೋತ್ತರಂ (ಕಾಂತಿಪು. ೬-೦೦೩).

**ಪಾರಾಯಣ ಮಾಡು** = ೧. ಗ್ರಂಥಾದಿಗಳನ್ನು ಮೊದಲಿನಿಂದ ಕೊನೆಯವರೆಗೆ ಓದು : ಪಾರಾಯಣ ಮಾಡಿದ ಬ್ರಾಹ್ಮಣಭೋಜನಕ್ಕಂ ದಕ್ಷಿಣೆಗಂ ಬಿಟ್ಟರು (ಕ್ರೆಇ. XI-i, ೦೦೭-೯ ; 1076) ; ಶ್ರೋತ್ರಿಯರು . . . ದಿನವೂ ರಾಮಾಯಣವನ್ನು ಪಾರಾಯಣ ಮಾಡುತ್ತಿದ್ದರು (ಹಂಪ್ಪ. ೦೯೬). ೨. ಒಂದೇ ವಿಚಾರವನ್ನು ಹಲವು ಸಲ ವಿವರಿಸಿ ಹೇಳು : ಮತ್ತೆ ಮತ್ತೆ ಅದೇ ವಿಷಯವನ್ನು ಪಾರಾಯಣ ಮಾಡಬೇಡ (ರೂಡಿ). [ ಸಂ. ]

**ಪಾರಾವತ₁** (ನಾ). ಪಾರಿವಾಳ ; ಕಪೋತ : "ಪಾರಾವತಾಖ್ಯಂ ಕಪೋತಂ" (ಪಸ್ತುಕೋ. ೯೨-೦೯) ; ರಾಜಹಂಸ ಪಾರಾವತಮಿಥುನಂಗಳುತ್ತುಂಗ ಪ್ರಾಸಾದ ಶಿಖರವಾನೆಗವಾಕ್ಷಾಂತರಾಳವಿವಿಧಗೃಹಾಂತರಗತಂಗಳಾದುವು (ಹಂಶಪಾ. ೯-೯೯ ಪ) ; ಪಾರಾವತಂ ವಾನರನೆತ್ತಾಡಂಚೆ ಸಿಂಹಂ . . . ಕಾಟಿಕ್ಕೋಟೆಯೆಂಬೀ ಶಿಖಿಕವ್ರಾತಂಗಳೊಳ್ ಸಂಭವಿಸಿ ದುಃತದಿಂ ದುಃಖಮಂ ಪೆರ್ಚಿಪಾಟಿಂ (ಧರ್ಮಾಮೃ. ೦೩-೦೩೭); ಶುಕ ನೀಲಕಂಠ ಪಾರಾವತ ಮಧುಕರನಿಕರದಿಂದದು ಸೊಗಯಿಪುದು (ಕುರಾಕಾಂ. ೯-೫೦). [ಸಂ.]

**ಪಾರಾವತ₂** (ನಾ). ಒಂದು ಬಗೆಯ ಮರ ; ಹಾಲಿವಾಣ : ಪಾರಾವತ ವೆಂಬ ಮರಂಗಳಂ ಪಶ್ಚಿಮದಲ್ಲಿ ನೆಲ್ಲಿಮರಗಳಂ ಉತ್ತರದಲ್ಲಿ . . . ಹಾಕ ಬೇಕು (ಶೌಗಂಧಿ. ೯೨೬-೦೯). [ ? ]

**ಪಾರಾವಾರ** (ನಾ). ೧. ನದಿ, ಸಮುದ್ರ ಮೊದಲಾದುವುಗಳ ಎರಡು ದಂಡೆಗಳು,— ತೀರಗಳು. ೨. ಸಮುದ್ರ ; ಕಡಲು : "ರತ್ನಾಕರಃ . . . ಪಾರಾವಾರಃ, ತೋಯಧಿಃ, ಅರ್ಣವಃ, ಜಳರಾಶಿಃ, ಸಾಗರಃ, ಸಮುದ್ರಃ—ಈ ೧೨ ಸಮುದ್ರಂ" (ಹಲಾಯು. ೦೦೭-೬೦) ; ಶ್ರೀ ರಮಣಿಯಂ ದ್ವಿಪದ್ವಳಪಾರಾವಾರದೊಳುದಗ್ರಭುಜವಿಜಯಮಹಾಮೇರು [ವಿ]ನೆ ಕಡೆದು ಪಡೆದಳವಾರುವಾನಿಟಿಸಿದುದುದಾತ್ತನಾರಾಯಣನಾ (ಹಂಶಪಾ. ೯-೦); ಸದಸದಾದಿಪಸುಸ್ವರೂಪನಿರೂಪಣಪ್ರವೀಣಸಿದ್ಧಾನ್ತಾದಿ ಸಮಸ್ತಶಾ[ಸ್ತ್ರಾ]ವ್ಯಕ್ತಪಾರಾಪಾರಪಾರಗರುಂ (ಕ್ರೆಇ. XX, ೯೬-೨೩; 1072) ; ಕಾಯ್ದು ಛಾಯ್ಯೆಂದುಮೇಟಂ ಕುಲಪಾರಾವಾರವಿವಾ ಬೇಸಗೆಯ ದಿಸಿಲೊಳ್ (ಜಗಿಪ. ೦೭-೬೦). ೩. ಎಲ್ಲೆ ; ಮೇರೆ : ಅಮ್ಮೈಯ್ಯನ

ಸಂತೋಷಕ್ಕೆ ಪಾರಾವಾರವೇ ಇರಲಿಲ್ಲ (ಕಂಗಾಳ್ಕ. ೩೨೭) ; ನಾನು . . . ನನ್ನ ಪಾರಾವಾರವಿಲ್ಲದ ಅಂಧಜಗತ್ತಿನ ಪರಮೇಶ್ವರನನ್ನು ಕರೆಯುತ್ತಿದ್ದೆನು (ಇಕ್ಕ್. ೨೦೬). ೪. [ಜೈನ] ಒಂದು ದೀರ್ಘವಾದ ಅವಧಿ,–ಕಾಲ; "ಪಲ್ಯತಕ್ಕಿಂತ ಬಹು ಮಹತ್ತಾದ ಕಾಲ" (ಕೈಪಕೋ. ೦೬೭): ಏಕಪಾರಾವಾರೋಪಮಾಯುಷ್ಯನುಂ ವರ್ಷಸಹಸ್ರಸಂಕಲ್ಪಕಲ್ಪಿತಾಮೃತಾಹಾರನುಂ . . . ಆಗಿ (ಧರ್ಮಾ. ೨-೬೯ ವ). [ಸಂ.]

**ಪಾರಾವಾರಗ** (ನಾ). ಎಲ್ಲವನ್ನೂ ಸಂಪೂರ್ಣವಾಗಿ ತಿಳಿದವನು ; ಪಂಡಿತ ; ನಿಷ್ಣಾತ : ಕುಮಾರಬ್ರಹ್ಮಚಾರಿಯಾಗಿ ಭದ್ರಬಾಹು ತಪಂಬಟ್ಟು ಕೆಲವುದಿವಸದಿಂದೊಳಗೆ ದ್ವಾದಶಾಂಗಚತುರ್ದಶಪೂರ್ವಮಪ್ಪಾಗಮಮೆಲ್ಲಮಂ ಗ್ರಂಥಾರ್ಥಸ್ವರೂಪದಿಂ ಕಲ್ತು ಸಕಲಶಾಸ್ತ್ರಪಾರಾವಾರಗನಾಗಿ (ವಡ್ಡಾರಾ. ೬೪-೨೪). [ಸಂ.]

**ಪಾರಾಶರ** (ಗು). ೧. ಪರಾಶರಋಷಿಗೆ ಸಂಬಂಧಿಸಿದ. (ನಾ). ೨. ಪರಾಶರಋಷಿಯ ಮಗ ; ವೇದವ್ಯಾಸ : "ಪಾ[ಶಾಕಾ. ಪ]ರಾಶರಂ ವ್ಯಾಸನಕ್ಕುಂ" (ಮಂಗರಾ. ೬೬-೦೦) ; ಇದಂ ಮುನಿಪಾರಾಶರನೊಲ್ದು ಪೇಟ್ದ (ಪಂಪಭಾ. ೬-೩). ೩. ಪರಾಶರಸಂಪ್ರದಾಯದ ಸೂತ್ರಗಳು,–ನಿಯಮಗಳು. [ಸಂ.]

**ಪಾರಾಶರಿ** (ನಾ). ಪರಾಶರಸಂಪ್ರದಾಯದ ಸಂನ್ಯಾಸಿ,—ಭಿಕ್ಷು : "ಭಿಕ್ಷುಃ, ಪರಿವ್ರಾಟ್, ಕರ್ಮಂದೀ, ಪಾರಾಶರೀ, ಮಸ್ಕರೀ—ಸನ್ಯಾಸಿಯ ಹೆಸರುಗಳು" (ಸಿದ್ಧಾಂತಿ. ೨೨೬). [ಸಂ. ಪಾರಾಶರಿನ್]

**ಪಾರಿ**$_1$ 'ಪಾಚು' ನೋ.

**ಪಾರಿ**$_2$ (ನಾ). ಗಾಡಿಯ ತೊಟ್ಟಿಲಿಗೆ ಆಸರೆಯಾಗಿರುವ ಎರಡೂ ಪಕ್ಕಗಳ ಮರದ ಪಟ್ಟಿ : ಬಂಡಿಯ ಪಾಡು ತುಂಬಾ ಏರುಪೇರಾಗಿದೆ. ಈಗಿರು ಪಾರಿ ಹಿಡಿಯುತ್ತೇನೆ. ನಿಧಾನವಾಗಿ ಬಿಡು (ರೂಢಿ).

[ದೇ.॥ ತಮಿ. ಪಾರ್]

**ಪಾರಿ**$_3$, **ಬಾರಿ**$_1$ (ನಾ). ಒಂದು ಬಗೆಯ ಸಸ್ಯ : ಹಿಂಗು ಇಂಗಲಿಂಗ ಪಿಪ್ಪಲಿ ಕಟುಕತ್ರಯ ಸೈಂಧವಮುಂ ಫಲತ್ರಯಂ ಸಂಗತಮಪ್ಪ ಪಾರಿ [ಶಾಕಾ. ರೆ, ಲೆ]ಯುಜಮೋದ ಪುರಂದರದೊಂಬಿಪಂ . . . ಕೋಲಲ್ ಶೃಂಗಿ ಮಹೋರಗಾದಿ ವಿಷಸಂತತಿಯಂ ಕಳೆಗುಂ (ಕಮದ. ೩-೬೨). **ಹಾರಿ**$_1$ : "ಬಹುಪ್ರಜಾ—ಮೊದೆ, ಇಲಿ, ತಕ್ಕೋಲ, ಹಾರಿ" (ಚಿತ್ರ. ೦೦೬).

[ದೇ.॥ ತಮಿ. ಪಾರಿ]

**ಪಾರಿ**$_4$, **ಹಾರಿ**$_2$ (ನಾ). ಸಾಲು ; ಪಂಕ್ತಿ ; ಶ್ರೇಣಿ : "ಪಾರಿಯೆನಲಾದಪುದು ಪಾರಗಂ ಶ್ರೇಣಿಗಂ" (ಕಕಕ. ೬೪). 'ಪಾರಿಪಂಜು' ಪರಾ. **ಹಾರಿ**$_2$ : ಕಾದೆಬ್ಬೆಮೊಪ್ಪೋರಿಯ ಹಾರಿಯಂತೆಯುಂ ಪಂದಿಯ ಗೊಂದಳದಂತೆಯು (ಕುಸ್ಕಕ್ಕ. ೩-೦೭೬ ವ) ; ಸುರಿವ ಘಟಾಳಿ ಶೀವುವ ಘಟಾಳಿ ಮರಳ್ವ ಘಟಾಳಿ ಹಾರಿಯೊಳ್ಪರಿವ ಘಟಾಳಿ ಸಾಗರದ ಮೇರುವಿನಂತರದೊಳ್ ನಿರಂತರಂ ತಿರುಗೆ (ಅನಂತ. ೩-೬೩). [< ಸಂ. ಪಾಲಿ]

**ಪಾರಿ**$_5$ (ನಾ). ೧. ಕುಡಿಯುವ ಬಟ್ಟಲು ; ಪಾನಪಾತ್ರ ; ಲೋಟ. ೨. ಪುಡಿ ; ಹುಡಿ : ಅತಿಸುರಭಿಸಹಕಾರಕಸ್ತೂರಿಕರ್ಪೂರಪಾರಿ [ಶಾಕಾ. ಲಿ]ಸಮ್ಮಿಶ್ರತಾಂಬೂಲರಾಗರಕ್ತಾಧರಪ್ರವಾಲಪ್ರಭಾಪ್ರಕಟಿತಪೂರ್ವಸಂಧ್ಯಾರಾಗನುಂ (ಅರಿತ. ೩-೮೦ ವ). [ಸಂ. ಪಾರೀ]

**ಪಾರಿ**$_6$ 'ಪಸರಿ' ನೋ.

**ಪಾರಿಕತ್ತು** 'ಫಾರೀಕತ್ತು' ನೋ.

**ಪಾರಿಕಾಂಕ್ಷಿ** (ನಾ). ಮುನಿ ; ಋಷಿ : "ತಪಸ್ವೀ, ತಾಪಸಃ, ಪಾರಿಕಾಂಕ್ಷೀ—ಇ ತಪಸುಳ್ಳವನ ಹೆಸರುಗಳು" (ಸಿದ್ಧಾಂತಿ. ೨೨೪) ; ಆ ಕೌರವನ ನಗರಿಗೆ ಪಾರಿಕಾಂಕ್ಷಿಪ್ರವರನೊಬ್ಬನು ಬಂದು ಹೊಕ್ಕನು ರಾಜಮಂದಿರವ (ಕುಮಾರಿ. ೦ ೧೧); ಪೂಜಾಯೋಗ್ಯವಸ್ತುಗಳ ಕೈಕೊಂಡು ಪರಮಶ್ರದ್ಧಾನ್ವಿತದಿ ನರದೇವನೈತಂದನಾ ಪಾರಿಕಾಂಕ್ಷಿಯೆಡೆಗೆ (ಪಂಚಾಶ. ೦-೦೭-೪೩). [ಸಂ. ಪಾರಿಕಾಂಕ್ಷಿನ್]

**ಪಾರಿಕಾಯ** 'ಪಾರಿಖಾಯ' ನೋ.

**ಪಾರಿಕೆ** (ನಾ). ದರ್ಶನ ; ಕಾಣ್ಕೆ : ಪಾರ್ವರ ಪಾರಿಕೆ ತ್ರಿನೇತ್ರಶಿಖೆಯೊಲು ಉತ್ತರೋತ್ತರವು ಮೇಲುಮುಖ (ಸೂರ್ಯನಾ. ೦೦೩-೯).

[ಪಾರು$_1$ (< ಪಾರ್$_1$) + –ಇಕೆ]

**ಪಾರಿಖತ್ತು** 'ಫಾರೀಕತ್ತು' ನೋ.

**ಪಾರಿಖಾಯ**, ಪಾರಿಕಾಯ, ಹಾರಿಕಾಯ, ಹಾರಿಕಾಯಿ (ನಾ). ಒಂದು ಬಗೆಯ ತೆರಿಗೆ,—ಸುಂಕ : ಇದನುಪೇಕ್ಷಿಸಿದಾತಂ ಕೆಱೆಯನೊಡೆದ ಪಾತಕನಕ್ಕುಂ ಪಾರಿಖಾಯಂ ಮೊದಲಾಗೆಲ್ಲಮುಂಗ್ಗೆ × × ನಿವೇಶನಂ ಕೊಟ್ಟ (ಎಇ.XX, ೬೮-೯೨; 1012); ತಿಪ್ಪೆಸುಂಕ ಮನೆದೆಱೆ ಪಾರಿಖಾಯ ಹೊಲೆಗೊಱೆ ಮುಱಿವ ಈಱತಿನಿತುಮಂ . . . ಧಾರಾಪೂರ್ವಕಂ ಮಾಡಿ ಕೊಟ್ಟರು (ಕ್ಇಇ. XX, ೦೫೬-೯೩ ; 1176). **ಪಾರಿಕಾಯ** : ಶ್ರೀಮಜ್ಜಗದೇವ ನಾರಾಯಣದೇವರಿಂಗಾಳ ಹೊಳಲು ಹಂನೆರಡಱ ಬಳಿಯ ಪಿರಿಯ ಪೆಂಬಱಿತಿಯ ಪಟ್ಟಂ ಪಾರಿಕಾಯಮುಮಂ ಕುಮವಿದೆಱೆಯುಮ[ಂ] ದೇವರಂಗಭೋಗಕ್ಕೆ ಧಾರಾಪೂರ್ವ್ವಕಂ ಮಾಡಿ ಕೊಟ್ಟರ್ (ಕಇಇ. ೫೩-೯೯-೦೯; 1107). **ಹಾರಿಕಾಯ** : ಕೇವಣ ಕೇಸಿಯಣನಾಯಕ ಸತ್ರಕ್ಕೆ ಬಿಟ್ಟ ಧ[ರ್ಮ್ಮ]ಹಾರಿಕಾಯ ತಿಪ್ಪೆಸುಂಕ ಗಾಣದಲಿ ಕಾಶ್ಮೀರಭೂಮಿ ಮತ್ತ ಇದಿನಿಸುವ ನಿರ್ವ್ವಾಣದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಕೊಟ್ಟ ಧರ್ಮ್ಮ (ಸೌಇಇ. IX-1, ೨೩೫-೦೭ ; 1141) ; ಹಿರಿಯ ಕಱೆಯ ತುಂಬಿನ ಹರಿಯ ಎರಡು [ಭ]ರಣ ತೋಟ ಪೂರೊಳಗೆ ಹಾರಿಕಾಯ ಹೊಂಗೆ ವೀಸದ ಆಯಗಾಣಂಗಳಲ್ಲಿ ಸೊಲ್ಲ[ಗೆ] ಎಣ್ಣೆ ಒಂದು ಗಾಣ . . . ಸರ್ವ್ವನಮಸ್ಯವಾಗಿ ಕೊಟ್ಟ ವ್ರಿತಿ (ಕಇ. IV, ೨-೦೮ ; 1241) ; ಮಗ್ಗ ಮುದ್ರೆ ಕ್ರಯ ಕಡ್ಡಾಯ ಹಾರಿಕಾಯ ಬಾಳುಕ . . . ನೀಲು ಆಗುಮಾಡಿಕೊಂಡು . . . ಭೋಗಿಸಿ ಬಹುದು (ಸೌಇಇ. IX-ii, ೪೯೦-೨೫ ; 1419). **ಹಾರಿಕಾಯಿ** : ಅನುಪು ಹಾರಿಕಾಯಿ ಮೊದಲಾದ ಏನುಂಟಾದದನು ಸರ್ವಮಾನ್ಯವಾಗಿ . . . ಸಮರ್ಪಿಸಿದೆವು (ಸೌಇಇ. IX-ii, ೪೯೦-೦೭ ; 1518). [?]

**ಪಾರಿಜಾತ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು ; P ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ ಮತ್ತು ಹರಿಚಂದನ ವೆಂಬ ಐದು ದೇವತರುಗಳು ಇಂದ್ರನ ನಂದನವನದಿಂದ ಬಂದುವೆಂದು ನಂಬಲಾಗಿದೆ : ಕನಕಧ್ವಜನೆಂಬ ದೇವಂ . . . ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತಂ ದೇವರ್ಕಳ ದೇವಿಯರ್ಕಳ್ ಸಹಿತಂ ಕ್ಷಪಣಕನ ವಿಮಾನದ ಮುಂದೆ ಇಂತೆಂದು ಪೇೞ್ದುದಿದಂ (ವಡ್ಡಾರಾ. ೮೪-೮) ; ದೇವರ್ಕಳೀಗಳರ್ಚಿಸಿ ಹೋದರಲಿದೇಪ ದೇವಲೋಕದ ಪಾರಿಜಾತದರಳಿವೆ ದೇವ (ಸಂಶಿರ. ೯-೫೮) ; ಮಂದಾರ ಪಾರಿಜಾತ ಸಂತಾನ ಕಲ್ಪ ಹರಿಚಂದನಗಳೆಂಬ ಪೆಸರಿನಿಂ ಪ್ರಸಿದ್ಧಮಾದ ಕಲ್ಪವೃಕ್ಷಪಂಚಕಮಿಪ್ಪುದು (ಅವೇಶ. ೨೦೦). [ಸಂ.]

**ಪಾರಿಜಾತಕ** (ನಾ). =**ಪಾರಿಜಾತ** : "ಮಂದಾರಃ, ಪಾರಿಜಾತಕಃ, ಹರಿಚಂದನಃ, ಕಲ್ಪವೃಕ್ಷಃ, ಸಂತಾನಃ—ಈ ೫ ದೇವರ ಮರಂಗಳ್" (ಹಲಾಯು. ೨೨-೧೩೫) ; ನಂದನವನಸಂಭವಹರಿಚಂದನ ಸಂತಾನ ಪಾರಿಜಾತಕ ವಿಲಸನ್ಮಂದಾರನಮೇರುದ್ರುಮಸಂದೋಹದ ಕುಸುಮಕೋಟಿಯುಂ ವಾಸಿತಮುಂ . . . ಮದಾಳಿಗಳ್ ಮುಸುಱೆ (ಪುಷ್ಪಕ. ೦೧-೪೪) ; ಅಲ್ಲಿ ಸಂಪಿಗೆಯುತ್ತು ಪಾರಿಜಾತಕವಿತ್ತು ಮಾವು ಮಲ್ಲಿಗೆಯುತ್ತು ಮನೆಯೆದುರು (ಸಬೀಗೀ. ೦೭-೨೪೩). [ಸಂ.]

**ಪಾರಿಣಾಮಿಕ** (ಗು). ೧. ಪರಿಣಾಮಕ್ಕೆ ಸಂಬಂಧಿಸಿದ. (ನಾ). ೨. [ಜೈನ] ಜೀವತ್ವ, ಭವ್ಯತ್ವ, ಅಭವ್ಯತ್ವ ಮೊದಲಾದ ಕರ್ಮಗಳು

ಉದಯ, ಉಪಶಮ ಮೊದಲಾದುವುಗಳಿಂದ ಉತ್ಪನ್ನವಾಗದೆ ಇರುವುದು: ಭಾವೋಪಲಕ್ಷಕಂ ಜೀವನೆಂಬುದು ಅವಾವುವೆಂದೊಡೆ ಔದಯಿಕಭಾವಂ . . . ಕ್ಷಾಯೋಪಶಮಿಕಭಾವಂ ಪಾರಿಣಾಮಿಕಭಾವಮೆಂದಿಂತು ಭಾವಪಂಚಕಯುಕ್ತ ತೆಜೀವಂಕ್ಕುಂ (ಸುಕುಮಾ. ೮-೪೩); ಸಾಸಾದನ ಸಮ್ಯಗ್ದೃಷ್ಟಿಗೆ ಪಾರಿಣಾಮಿಕಭಾವಂ . . . ಅಕ್ಕುಂ (ತತ್ತ್ವಸೂ. ೪೮). [ಸಂ.]

**ಪಾರಿತಥ್ಯ** (ನಾ). ಹೆಂಗಸರು ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ: "ಪಾರಿತಥ್ಯ=ಮುಡಿಯ ಮೇಗಣ ಮುತ್ತಿನ ಸೆಂಡು, ಮುತ್ತಿನ ದಂಡೆಯೆಂದೂ ಎಂಬರು" (ಪಾಚರಾ. ೯). [ಸಂ. ಪಾರಿತಥ್ಯಾ]

**ಪಾರಿತೋಷ** (ನಾ). ಬಹುಮಾನ: ಶಾಲಾವಾರ್ಷಿಕೋತ್ಸವದಲ್ಲಿ ಆ ಹುಡುಗನಿಗೆ ಅನೇಕ ಪಾರಿತೋಷಗಳು ಬಂದುವು (ರೂಢಿ). [ಸಂ.]

**ಪಾರಿತೋಷಕ** (ನಾ). = ಪಾರಿತೋಷ: ಶ್ರೀಮನ್ತರ ಪಾರಿತೋಷಕದಿಂದ ನಾನೂ ಧನ್ಯೆಯಾದೆನಲ್ಲ! (ಶಟ್ಕಿ.೦೩-೦೭); ಇಂದಿಗೆ ಸುಮಾರು ನಲವತ್ತೇಳು ವರುಷಗಳ ಹಿಂದೆ ರವೀಂದ್ರನಾಥಠಾಕೂರ ಅವರಿಗೆ ಒಂದು ಪಾರಿತೋಷಕವು ಸಿಕ್ಕಿತು. ಅದು ನೋಬೆಲ್ ಪಾರಿತೋಷಕ (ಕಶಪು. ೫-೧೩೦).
[< ಸಂ. ಪಾರಿತೋಷಿಕ]

**ಪಾರಿತೋಷಿಕ** (ನಾ). = ಪಾರಿತೋಷ: ಬಳಿದ ಮುನಿನಾಥವಾರ್ತಾವಿಳಸತ್ಕಲ್ಪಲತೆ ಫಲಿತವಾದತ್ತನೆ ಭೂತಳಪಾಳಂ ವನಪಾಲಂಗಳತೆಗೆ ಮಿಗಿಲೆನಿಸಿ ಪಾರಿತೋಷಿ[ಪಾಠಾಂ.ಷ]ಕಮಿತ್ತಂ (ಚಂದ್ರಪ್ರ. ೨-೮೦೦); ಅವರ ಆ ಕರಕೌಶಲಕೆ ಬೆರಗಾದರು . . . ಪಾರಿತೋಷಿಕಗಳನೇಕವನಿತ್ತರು ಮೆಚ್ಚಿದ ಸರಕಾರದವರು (ಇಂಕಾಪ. ೦೦-೩೯). [ಸಂ.]

**ಪಾರಿಪಂಜು** (ನಾ). ಪಾಲುದೀವಟಿಗೆ: ಸುತ್ತ ಕೋವರದ ಕಾವಲು ಪಾರಿಪಂಜಿನ ಮೊತ್ತವನೇನ ಬಣ್ಣಿಸುವೆ (ಅಪುಸಾಂ. ೨-೩೩).
[ಪಾರಿ + ಪಂಜು]

**ಪಾರಿಪಂಥಿಕ** (ನಾ). ದಾರಿಹೋಕರನ್ನು ಸುಲಿಯುವವನು; ಕಳ್ಳ: "ಏಕಾಗಾರಿಕಃ, ತಸ್ಕರಃ, ದಸ್ಯುಃ . . . ಪಾರಿಪಂಥಿಕಃ, ಸ್ತೇನಃ— ಈ ೧೦ ಕಳ್ಳಂ" (ಹಲಾಯು. ೫೬೦-೬೩); ಅರಸುಗಳ ವನಿತೆಯರ್ಕಳ ಪರಿಕರಪರಿಪೂರ್ಣಭೋಜನಂಗಳ ದುರಿತಾಚರಣರತಪಾರಿಪಂಥಿಕ ನರರಂ. ಕಥಾಶ್ರವಣಮಹಿತಮೆಂಬರ್ ಶ್ರಮಣರ್ (ಉಸಾರ. ೨೫-೦೪೯). [ಸಂ]

**ಪಾರಿಪಕ್ಷ** (ನಾ). ಕುದುರೆಯ ಬಾಯಲ್ಲಿರುವ ಕಡೆಯ ನಾಲ್ಕು ದವಡ ಹಲ್ಲುಗಳು: "ಎರಡು ನಡುದಂತಗಳು ಸಂದಂಶಮಕ್ಕೊಕ್ಕಿನೆರಡು" ಪಲ್ಗಳು ಮಧ್ಯಮಂಗಳಕ್ಕವಱೊತ್ತಿನೆರಡು ದ್ವಿಜಂ ಪಾರಿಪಕ್ಷಂಗಳ್ (ಕುಂಗಶಾ. ೬೩-೨೦): ಕಡೆಯ ಪಲ್ಗಳ್ ನಾಲ್ಕಕ್ಕಂ ಪಾರಿಪಕ್ಷ(ಕ್ಷ)ಮೆಂಬುದು (ಅಶ್ವಶಾ. ೯೭-೯). [ಸಂ.]

**ಪಾರಿಪತ್ಯ** 'ಪಾರುಪತ್ಯ' ನೋ.

**ಪಾರಿಪಾಟ್ಯ** (ನಾ). ರೀತಿ; ಓರಣ; ಕ್ರಮ: ವೇಣಿಯ ರಚನೆಯಲ್ಲಿ ಚಾತುರ್ಯದ ಪಾರಿಪಾಟ್ಯವು ಕಾಣುತ್ತಿದ್ದಿತು (ಕಶಾಕುಂ. ೯೪). [ಸಂ.]

**ಪಾರಿಪಾರ್ಶ್ವಕ** (ನಾ). ೧. ಆಳು; ಸೇವಕ; ಪರಿಚಾರಕ. ೨. ನಾಟಕದಲ್ಲಿ ನಾಂದಿಯನ್ನು ಹೇಳುವವನು: "ಸಾಮಾನ್ಯಾಭಿನಯ" ಪ್ರಕರಣ ಸಂಬಂಧದಲ್ಲಿಯೇ ನಾಯಕ ನಾಯಿಕೆಯರ ಭೇದ, ಅವರ ಶೀಲಸ್ವರೂಪಗಳು, ಪರಿವಾರ, ಸೂತ್ರಧಾರ, ಪಾರಿಪಾರ್ಶ್ವಕ ಮುಂತಾದವರ ಗುಣಗಳು . . . ಇವೆಲ್ಲಾ ನಿರೂಪಿಸಲ್ಪಟ್ಟಿವೆ (ಸಂಪಾಟ. ೦೨). [ಸಂ.]

**ಪಾರಿಪಾರ್ಶ್ವಿಕ** (ನಾ). = ಪಾರಿಪಾರ್ಶ್ವಕ. [ಸಂ.]

**ಪಾರಿಪ್ಲವ** (ಗು). ೧. ಅಲುಗುವ; ಹೊಯ್ದಾಡುವ; ಚಂಚಲವಾದ: ವಸ್ತುಹೀನಮಭಿಧಾನಮುಂಟಕ್ಕುಮಪ್ಪೊಡೆ ಶಬ್ದಾರ್ಥಸಂಬಂಧಂ ಪಾರಿಪ್ಲವಪರಿಪ್ಲವಮಕ್ಕುಂ (ಶಾಂತಿಪು. ೯-೦೩೯ ವ); ಪಯಃಪ್ಲವದೊಳಗೆ ಮುಳುಗಿ ಪಾರಿಪ್ಲವನೇತ್ರೆಯರಮರಕಾಂತೆಯರ್ ಸೊಗಯಿಸಿದರ್ (ಆದಿಪು. ೪-೬೦). ೨. ತೇಲುವ. (ನಾ). ೩. ಹೊಯ್ದಾಟ; ಅಸ್ಥಿರತೆ; ಚಾಂಚಲ್ಯ: "ಲೋಲಂ, ಚಪಳಂ . . . ಪಾರಿಪ್ಲವಂ, ಚಳಾಚಳಂ, ಸಂಚಳಂ—ಈ ೧೦ ಸಂಚಳಂ" (ಹಲಾಯು. ೦೦೫-೦೦); ಅಪಬೋಧಂ ವಿಷಯಪರಿಪ್ಲವಂ (ಮನೋವಚನಕಾಯನಿಯಮಂ ಪಾರಿಪ್ಲವ)ಮಿನಿತಿಲ್ಲದೆ ಮೂಜಗಂ ಭುವನಮನೆಳಗಿಸುವ ಸಮತೆ ಸಮನಿಸಿದಪುದೇ (ಶಾಂತಿಪು. ೯ ೦೦೯). ೪. ವ್ಯಾಪನೆ; ಹರಡುವಿಕೆ; ವಿಸ್ಫುರಣೆ: ವರ್ಣಕ್ಕಿಂತಲೂ ನಯನಗಳಿಗಿಂತಲೂ ಸೌಂದರ್ಯದಾ ಪಾರಿಪ್ಲವವು ಅತ್ಯಂತ ಮನೋಹರವಾಗಿದ್ದಿತು (ಕಶಾಕುಂ. ೯೫). ೫. ದೋಣಿ. ೬. ಒಂದು ದೇಶದ ಹೆಸರು: ಹಯಪುತ್ತ್ರಾಭಿಮುಖವಾಗಿ ಪಾರಿಪ್ಲವಧರೆಯೊಳ್ಪೆದಿ ಪೆಣ್ಗುದುರೆಯಾಗಿ ಪುಲಿಯಾಗಿ . . . ಮುನ್ನಿನಂತೆ ನಿಯಮಿತಮಬಾಶ್ವಮಾದತ್ತು (ಸೃಬಚಾ. ೦೫-೬). [ಸಂ.]

**ಪಾರಿಬರುಹ** (ನಾ). (ಮದುವೆ ಮುಂತಾದ ಶುಭಸಮಾರಂಭಗಳಲ್ಲಿ ಕೊಡುವ) ಬಳುವಳಿ; ಉಡುಗೊರೆ: ಪಾರಿಬರುಹಂಗಳನು ಕೊಂಡು ಮುರಾರಿ ಪಾರ್ಥ ಸುಭದ್ರೆಯರು ಸಹಿತೇಱಿ ರಥವನು . . . ಬಿಜಯಂಗೈದನಿಂದ್ರಪ್ರಸ್ಥಪುರವರಕೆ (ಸಭಾಗ. ೦೦-೬೨-೩೬). [<ಸಂ. ಪಾರಿಬರ್ಹ]

**ಪಾರಿಬ್ರಾಜಕ** (ನಾ). ವಿರಕ್ತಿ; ಸಂನ್ಯಾಸ: ಪಾರಿಬ್ರಾಜಮೆಂದಭಿಷ್ಟುತೆಗೆಯಲ್ ನಿನ್ನೋಲ್ಗಣಂ ಮಾಸದೇ (ಸುಕುಮಾ. ೪-೩೦).
[<ಪಾರಿವ್ರಾಜಕ]

**ಪಾರಿಭದ್ರ** (ನಾ). ೧. ಒಂದು ಬಗೆಯ ಮರ; ಹಾಲಿವಾಣದ ಮರ: "ಪಾರಿಭದ್ರಃ, ನಿಂಬತರುಃ, ಮಂದಾರಃ, ಪಾರಿಜಾತಕಃ—೪ ಹಾಲಿವಾಣದ ಮರದ ಹೆಸರುಗಳು" (ಸಿದ್ಧಾಂತಿ. ೦೦೬). ೨. ಬೇವಿನ ಮರ. ೩. ದೇವದಾರುವೃಕ್ಷ. ೪. ಚಂಗಲಕೋಷ್ಟ. [ಸಂ.]

**ಪಾರಿಭದ್ರಕ** (ನಾ.) = ಪಾರಿಭದ್ರ ೧: "ಮಂದಾರಃ, ಪಾರಿಭದ್ರ (ಜಾತ)ಕಃ—ಈ ೨ ಹಾರಿವಾಳಂ" (ಹಲಾಯು. ೩೩-೪೭). ೨. ದೇವದಾರುವೃಕ್ಷ: "ಶಕ್ರಪಾದಪಃ, ಪಾರಿಭದ್ರಕಃ, ಭದ್ರದಾರು, ದ್ರುಕಿಲಿಮಂ, ಪೀತದಾರು, ದಾರು, ಪೂತಿಕಾಷ್ಠಂ—೭ ದೇವದಾರುವೃಕ್ಷದ ಹೆಸರು" (ಸಿದ್ಧಾಂತಿ. ೦೨೪). [ಸಂ.]

**ಪಾರಿಭಾವ್ಯ** (ನಾ). ಒಂದು ಬಗೆಯ ಮೂಲಿಕೆ: "ವ್ಯಾಧಿ" ಕುಷ್ಠಂ, ಪಾರಿಭಾವ್ಯಂ. . . ಉತ್ಪಲಂ—೬ ಚಂಗಲಕೋಷ್ಟ" (ಸಿದ್ಧಾಂತಿ. ೦೪೧).
[ಸಂ.]

**ಪಾರಿಭಾಷಿಕ** (ಗು). ೧. ಯಾವುದಾದರೊಂದು ಕಲೆ, ವಿಜ್ಞಾನ, ಕೈಗಾರಿಕೆ ಮೊದಲಾದುವಕ್ಕೆ ವಿಶಿಷ್ಟವಾದ ಅರ್ಥದಲ್ಲಿ ಬಳಕೆಗೆ ಬಂದಿರುವ; ತಾಂತ್ರಿಕವಾದ ಅರ್ಥವುಳ್ಳ. (ನಾ). ೨. ತಾಂತ್ರಿಕವಾದ ಅರ್ಥವುಳ್ಳುದು: ಅನುಭಾವ ಎಂಬ ಮಾತನ್ನು ಪಾರಿಭಾಷಿಕವಾಗಿ, ಬಹುಮಟ್ಟಿಗೆ "mysticism" ಎಂಬರ್ಥದಲ್ಲಿ, ಕನ್ನಡದಲ್ಲಿ ವೀರಶೈವರಲ್ಲದೆ ಇನ್ನಾರೂ ಉಪಯೋಗಿಸಿಲ್ಲ (ಶೂನ್ಯಸಂ. ೦೩೦); ವಾಕ್ಯಗಳ ಅಂತಸ್ಸಿಗೆ ಹಿಡಿಯದ ಜಟಿಲವೂ ಪಾರಿಭಾಷಿಕವೂ ಆದ ಅಂಶಗಳನ್ನು ಕಡಿಮೆ ಮಾಡುವುದುತ್ತಮ (ಶಿಕ್ಷದ. ೦೫೦). [ಸಂ.]

**ಪಾರಿಭೋಗಿಕ** (ನಾ). ಬುದ್ಧನು ಉಪಯೋಗಿಸಿದ ವಸ್ತುಗಳು: ಬುದ್ಧನು ಉಪಯೋಗಿಸಿದ ಪದಾರ್ಥಗಳು (ಪಾರಿಭೋಗಿಕ): ಇವರಲ್ಲಿ ಭಿಕ್ಷಾಪಾತ್ರೆ, ಕಮಂಡಲು ಮತ್ತು ಆಸನಗಳು ಮುಖ್ಯ ಉದಾಹರಣೆಗಳು (ಬುದ್ಧದ. ೪೯೫). [ಸಂ.]

**ಪಾರಿಯ** 'ಪಾರಿವ' ನೋ.

**ಪಾರಿಯಪಟ್ಟೆ** 'ಪಾರಿಯವಟ್ಟೆ' ನೋ.

**ಪಾರಿಯರ** 'ಪಾರಿಯರ್ಾರ' ನೋ.

**ಪಾರಿಯವಟ್ಟೆ**, ಪಾರಿಯಪಟ್ಟೆ, ಪಾರಿವಟ್ಟೆ (ನಾ). ಒಂದು ಬಗೆಯ ಬಣ್ಣದ ಬಟ್ಟೆ : ಪಸಿರ್ಪಟ್ಟೆ ಪಾರಿಯವ[ ಪಾಠಾಂ. ಪ ]ಟ್ಟೆ ಕೆಂಬಟ್ಟೆ ಕ್ಷಗೆಸೆವ ಹಳದಿಯ ಪಟ್ಟೆಗಳ ಪೊಸಗುಡಿಗಳ ಸಾಲು ಹೊಯ್ದುವು ಗಣಿಕಾನಿಸರಕಾ ಪಾಳೆಯದೊಳಗೆ (ಶಂರಾಸಾಂ. ೧೨-೬೨). **ಪಾರಿಯಪಟ್ಟೆ** : ಉಟ್ಟ ದುಕೂಲಮೆಂಬುದದು ಪಾರಿಯಪಟ್ಟೆವೊಲಾಗೆ (ಶೀರವಿ. ೬-೩೦) ; ಕಂಗಾಣಿಸದೆ ಪಾರಿಯಪಟ್ಟೆ[ಟ್ಟೆ] ಕರ್ವಣ್ಣ ಗೊಂಗಡಿ ಮುಸುಕಿಟ್ಟುಕೊಂಡು . . . ದುಸ್ಸಂಗದಂಪತಿಗಳೊಪ್ಪಿದರು (ಪೋಹತ. ೦೮-೨೩). **ಪಾರಿವಟ್ಟೆ** : ಭೂದೇವಿಯರ್ ಕುಜಾವಳಿಯೆಂಬ ಮಕ್ಕಳಿಗೆ ಸಾದರದಿ ಪಾರಿವಟ್ಟೆಯ ಪಾಸಿ ನಿಲಿಸಿದೊಲ್ (ಬಕೋಕ್ಷ. ೦೦-೨೩).

[ ಪಾರಿಯ ( <ಪಾರಿವ$_2$ ) + ಪಟ್ಟೆ$_3$ ]

**ಪಾರಿಯಾತ್ರ** (ನಾ). ೧. ಏಳುಕುಲಪರ್ವತಗಳಲ್ಲಿ ಒಂದು ; ಇದು ವಿಂಧ್ಯಪರ್ವತದ ಪಶ್ಚಿಮಭಾಗದಿಂದ ನರ್ಮದೆಯ ಉತ್ಪತ್ತಿಸ್ಥಾನದ ವರೆಗೂ ಹಬ್ಬಿ ಅರಾವಳಿಬೆಟ್ಟಗಳಲ್ಲಿ ಸೇರಿಕೊಂಡಿದೆ. ೨. ಒಂದು ದೇಶದ ಹೆಸರು : ಪಾರಸೀಕ ಪಾರಿಯಾತ್ರ ಹಮ್ಮೀರ ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗಟುತ್ತುಮಿರೆ (ಜಗಂ. ೨-೩೯ ವ); ಪಾರಿಯಾತ್ರ ಮಿಥಿಲಾ ಪಾಂಚಾಳ . . . ಮತ್ಸ್ಯದೇಶಕ್ಕೆ ತಸ್ಕರ ರೋಗಾದಿ ಭಯಂಗಳಂ ಜನಿಯಿಕುಂ ಪಂಕೇಜಮಿತ್ರಾತ್ಮಜಂ (ಜಟ್ಟಿಮ. ೦೨-೬೦); ಪುಷ್ಕರ ಪಾರಿಯಾತ್ರ ಕರೂಷ ಕಾಂಭೋಜ . . . ಧರಣೀಪಾಲತತಿ ಸಂದಣಿಸಿದುದು ಸಾಕೇತನಗರಿಯಲಿ (ತೊರರಾ. ೦-೬-೦೮). ೩. ಪಾರಿಯಾತ್ರದೇಶದಲ್ಲಿ ಹುಟ್ಟಿದುದು : ಮನುತಗಮನದ ಪಾರಿಯಾತ್ರನ ತುರಗ ಹೂಡಿದ ಹೇಮನಿರ್ಮಿತ ಹಿರಿಯ ಟೆಕ್ಕೆಯದ . . . ತಳತ ಶಸ್ತ್ರದಿ ಭರದಿ ತುಂಬಿದ ಕೋಟರಥಗಳು ರಣಕೆ ಹೊಣಿವಡಲು (ಕೌಶಿರಾ. ೨೦-೬). [ ಸಂ. ]

**ಪಾರಿಯಾತ್ರಕ** (ನಾ). ೧. = ಪಾರಿಯಾತ್ರ ೧: '' ಹಿಮವಾನ್, ನಿಷಧಃ, ವಿಂಧ್ಯಃ, ಮಾಲ್ಯವಾನ್, ಪಾರಿಯಾತ್ರಕಃ, ಗಂಧಮಾದನಂ ___ ಹೇಮಕೂಟಾದಯುಃ '' (ಸಿದ್ಧಾಂತಿ. ೦೦೬). ೨. = ಪಾರಿಯಾತ್ರ ೨ : ಪಾರಿಯಾತ್ರಕ ಕೇರಳಮುಖಪಾರದೇಶಂಗಳೊಳೆಸೆವ ಜಂಗಮವು ಭಕ್ತಾಳಿ ಎಡೆಯೆಡೆಯೊಳೀ ಗಡಣೆಯಿಂದೆಡೆವಿಡದೆ ನಡೆವುತ್ತಿರಲು (ಬಸಪು. ೬-೦೯); ಪಾರಿಯಾತ್ರಕದೇಶದಲ್ಲಿಪ್ಪ ಮಲ್ಲಿಕಾಪುರದಲ್ಲಿ ಪಾರಿಯಾತ್ರಕನೆಂಬ ರಾಜನಿಪ್ಪನು (ಕೈರಸೂ. I, ೩೬೦). [ ಸಂ. ]

**ಪಾರಿಯಾತ್ರಿಕ** (ನಾ). ಪ್ರಯಾಣಕ್ಕೆ ಯೋಗ್ಯವಾದ ರಥ : ''ಅಧ್ವನ್ಯಃ, ಪಾರಿಯಾತ್ರಿಕಃ, ಕರ್ಣೀರಥಃ ___ ಈ ೩ ಪಯಣದ ರಥಂ '' (ಹಲಾಯು. ೩೩-೨೯೦). [ ಸಂ. ]

**ಪಾರಿಯಾತ್ರೆ** (ನಾ). = ಪಾರಿಯಾತ್ರ ೧ : ಸ್ವಸ್ತಿ ಅನೇಕಸುಧಾರಸ × ತ್ರವೀಚಿಚ್ಛಾಯಲವಣಾಬ್ಧಿ ಪಳೆಯವಳಯುತವೇಳಾವನಗಂಗಾತೀರಪಾರಿಯಾತ್ರೆ ತನುಮಧ್ಯದೇಶಾಧೀಶ್ವರ ಮಾಹಿಷ್ಮತೀಪುರವರಾಧೀಶ್ವರನ ಹಿಹಯವಂಶೋದ್ಭವಂ (ಕಇಅ. ೦೨-೯-೬೯; 1148). [ ಸಂ. ಪಾರಿಯಾತ್ರ ]

**ಪಾರಿಯಾನಿಕ** (ನಾ). = ಪಾರಿಯಾತ್ರಿಕ. [ ಸಂ. ]

**ಪಾರಿರಕ್ಷಕ** (ನಾ). ಸಂನ್ಯಾಸಿ ; ಭಿಕ್ಷು: '' ಪರಾಶರೀ . . ಪಾರಿರಕ್ಷಕಃ, ಪಾರಿವ್ರಾಜಕಃ, ತಪಸ್ವೀ, ಕರ್ಮಂದೀ, ತಾಪಸಃ ___ ಈ ೯ ತಪಸ್ವಿ '' (ಹಲಾಯು. ೩೮-೨೫೫). [ ಸಂ. ]

**ಪಾರಿರ್ಯಾರ**, ಪಾರಿಯರ (ನಾ). ಪರಿಹಾರ : ಮನ್ನೆಗಾಮುಣ್ಣು ಪ್ರಜೆಕರಣ ಚೈತ್ಯನಿತ್ಯುದ: ಮುವತ್ತಎರಡು ಸರ್ವ್ವಪಾದ ಪಾರಿರ್ಯ್ಯಾರ (ಸೌಇಇ. IX-1, ೫೨-೫: ?). **ಪಾರಿಯರ** : ಇ ಪಾರಿಯರಮನಟಿವೊನ್ನಂದನ ನ್ತಾಯ ತಪ್ಪಿಗ್ಗಿಯುಮಾನ್ಗೆಡೆಸೋನಕ್ಕು ತಾನ್ (ಸೌಇಇ. IX-1, ೫೨-೬ ;?).

[ <ಸಂ. ಪರಿಹಾರ ]

**ಪಾರಿವ$_1$** (ನಾ). ಒಂದು ಬಗೆಯ ಪಕ್ಷಿ ; ಕಪೋತ ; ಪಾರಿವಾಳ : ''ದ್ಯುಶದಾಸನಂ ಪಾರಿವಮೆನಿಕ್ಕು'' (ಮಂಗರಾ. ೫೨-೮); ದಿವ್ಯಮ[ಖ]ಮಂ ಕೆಯ್ಕೊಂಡು ಸಗ್ಗಕ್ಕೆ ಪಾಱಿದುವಾ ಪಾರಿವ ಜಕ್ಕವಕ್ಕಿಗಳ್ (ಪಂಪಭಾ. ೬-೩೮); ಕಾಮಿನೀಮಣಿತಮೀಬೆಂದು ಪಾರಿವದ ಮೆಲ್ಲುಲಿಯಂ . . . ತಣಿಯದೆ ಕೇಳ್ವರ್ (ಉದ್ಭಟ. ೦-೧೨); ಕಾಬುಜುಲೆ ಲಾವುಗೆ ಗೌಜು ಪಾರಿವ . . . ಗಿಂಚಲು ಗರಿಗ ಮೊದಲಾದಖಿಳಖಗಕುಲ ಬಿದ್ದುದುರಿಯೊಳಗೆ (ಕುವ್ಯಾಆ. ೨೦-೩೩). [ <ಪ್ರಾ. ಪಾರಾವಯ, ಪಾರೇವಯ./ಸಂ. ಪಾರಾವತ./ತೆಲು. ಪಾರುವ, ಪಾರುವಾ, ಪಾವುರಾ]

**ಪಾರಿವ$_2$**, 'ಪಾರಿಯ (ನಾ). ೧. ಒಂದು ಬಗೆಯ ಬಣ್ಣ : ಪವಣ್ಬಡೆದ ಸುವರ್ಣಪಾರಿವದ ಕುಪ್ಪಸವೊಪ್ಪೆ ಬೆಡಂಗನಾಳ್ದು ಕಣ್ಗೆಡಜಿದೆ ಪೆಂಡವಾಸದ ವಿಳಾಸದ ಸೂಳೆಯರೊಪ್ಪಿ ತೋಱಿದರ್ (ಪಂಪಭಾ. ೯-೦೦೩); ''ಪಾರಿವಾಳದ ಬಣ್ಣ '' (ಶಂಪದೀ. ೩೯೦) ; ಬೀಸುಬಡಿಗೆಯ ಧನುಸರಳ ಪಾರಿವ[ಪಾಠಾಂ. ಭಾಸುರ]ದ ಕುಪ್ಪಸದ ಕೇಶದಲಿ ತಳಿರುಗಳ ಕಟ್ಟಿ ವಿಲಾಸದಲಿ ಹರಿತಹ ಕಿರಾತರು ಘಾಸಿಯಾದರು (ಕುವ್ಯಾಆ. ೬೦೩. ೯-೦೦). **ಪಾರಿಯ** : ೨. ಒಂದು ಬಗೆಯ ಬಣ್ಣದ ಬಟ್ಟೆ : ದೈತ್ಯಮರ್ದನನ ದಾಸವಾರಿಯ ರಕ್ಷಸಜೂಜಿನ ಪಚ್ಚೆಯ ಪರಿಗೆಯ ಪಸರದ ಪಾರಿಯದೊಯ್ಯಾರದ ಕೆಂದಟ್ಟಿನ ಪಂತಿಯು . . . ತಟ್ಟನೊಟ್ಟಜೆಯು ೬ಟ್ಟುಬ್ಬಟೆಯ ಬಿರುದಿನ ಹರಿಗೆಕಾಜಿನ ಪರಿವೇಥಿಯೊಳಂ (ಗಂಕಿ.೬-೩೫ ವ); ತವೆ ಪಾರಿಯದಿ ನಿಂಪ್ರಗೋಪದಿಂ ಶಿವನಾಂತ ತೊವಲಿರದನಣಕಿಸುತೆ ಪೊಂಬಟ್ಟೆಯಿಂದೆ ಮಾಧವನ ಮಲ್ಲಿಸುತೆ . . . ಒಪ್ಪಿವರಲ್ಲಿ ದೂಸಿಗರ್ (ಕನ್ನರಾ. ೯-೬೬); ಬಟ್ಟಮುತ್ತುಗಳು ಕೇವಣಿಸಿರ್ದ ಪಾರಿಯ ಪಟ್ಟಾವಳಿ ಚಲ್ಲಣವ ತೊಟ್ಟು (ಮೋಹತ. ೦೨-೯೩). [ <ಪ್ರಾ. ಪಾರಸು./ತಮಿ. ಮಲ. ಪಾರಿ]

**ಪಾರಿವಂಕ** (ನಾ). = ಪಾರಿವ$_1$. ಗೊರವ ಗೌಜನು ಕಾಡೆ ಗಿಡಗ ಸಬಲ ಮುಂಡೆ ಹರಟೆ ಕೆಂಬೋತು ಪಾರಿವಂಕ . . . ಪರಿಯನಿನ್ನೇನ ಪೇಳುವೆನು (ಮಾರೀಸಾಂ. ೦-೬೨). [ <ಪಾರಿವ$_1$ ]

**ಪಾರಿವಗೂಗು** (ನಾ). ೧. ಪಾರಿವಾಳದ ಧ್ವನಿ. ೨. (ಅಲಂ) ಸಂಭೋಗಕಾಲದಲ್ಲಿ ಕೊರಳಿನಿಂದ ಹೊರಡುವ ಧ್ವನಿ ; ಮಣಿತ ; ರತಿಕೂಜಿತ : ನಳಿತೋಳಂ ಪಿಡಿದೀಟ್ಟು ಬಿಡೊಡೆಯ ಮೇಲಿಟ್ಟನ್ನ ಮೆಯ್ಮೇಲ್ಮೆಗೊಳ್ಳಳವಪ್ಪಂತಿರೆ ತಳ್ಕೆಗೆಯ್ದು . . . ಅಗ್ಗಳದೊಳ್ಪಾರಿವಗೂಗಿನಿಂ ತಣಿಪಂ (ಶಶಿ. ೬-೨೫೩). [ ಪಾರಿವ$_1$+ಕೂಗು$_2$ ]

**ಪಾರಿವಟ್ಟೆ** 'ಪಾರಿಯವಟ್ಟೆ' ನೋ.

**ಪಾರಿವಾಣ$_1$** 'ಪಾರಿವಾಳ$_1$' ನೋ.

**ಪಾರಿವಾಣ$_2$** 'ಪಾರಿವಾಳ$_2$' ನೋ.

**ಪಾರಿವಾಳ$_1$**, ಪಾರಿವಾಣ$_1$, ಪಾರಂವಾಣ$_1$, ಪಾಲ್ವಣ, ಹಾರವಾಣ$_1$, ಹಾಲುವಾಣ$_1$ (ನಾ). = ಪಾರಿವ$_1$ : ''ಪಾರಾವತಃ, ಕಲರವಃ, ಕಪೋತಃ ___ ಈ ೩ ಪಾರಿವಾಳ '' (ಪಾತರಾ. ೦೦೯) ; ಅಂಬಾಲಿಕೆ ನಿನ್ನಯ ಕವಿಯಿಂ ಬಿಟ್ಟಪುದೆಂದು ಜಗುಟ್ಟಿ ಚೆನ್ನೆಯ್ದಿಲ ಪೂಮಂ ಭರದೆ ತೆಗೆದು ಬೀಸಿದೆನೆಂಬರದೊಳ್ ಪಾರಿವಾಳಮಂ ಬೆದಱಿಪವೋಲ್ (ದಶಕು. ೬-೨೩೩) ; ಶುಕಪಿಕಪಾರಿವಾಳದ ಹುಯ್ಯಲುಬ್ಬಿತು ಸುಕರವಾಯ್ತೆಂದುಸುರುವೆನು (ಭರತ. ೦೦-೯೬) ; ಅವನು ನಿರ್ಮಲಳು ಕೊಟ್ಟಿದ್ದ ಪಾರಿವಾಳದ ಕಾಲಿಗೆ ಒಂದು ಪತ್ರವನ್ನು ಕಟ್ಟಿ ಹಾರಿಬಿಟ್ಟನು (ಬಂಕಿಮ. ೨೨೯). **ಪಾರಿವಾಣ$_1$** : '' ಪಾರಾವತಃ, ಕಲರವಃ ಕಪೋತಃ . . . ಪಾರಿವಾಣದ ಹಕ್ಕಿ '' (ಸಿದ್ಧಾಂತಿ. ೦೫೬); ಶ್ಲೇಷ್ಮಾಧಿಕವಾದ ನಾಡಿಯು ಪಾರಿವಾಣದ ಹಾಗೆ ವೇಗ ಮಂದವಾಗಿ ಶೀತವಾಗಿ ಆಡುತ್ತಿಹುದು (ಸಕವ್ಯ. ೦೩); ಪಾರಿವಾಣ ಬಿಡೋಕೆ ಹೋಗಿದ್ದೆಯ? (ರರ್ಪುಶ್ರೀ. ೩೦೦). **ಪಾರುವಾಣ$_1$** : (ಕ). **ಪಾಲ್ವಣ** : ಕಾಡ ಗೌಜಲು ಕರಿಯ ಲಾವುಗೆ . . . ಪರಿತ ಪಾಲ್ವಣ ಸ್ವೇತಸೋರೆಯು

ಪರಿವ ಗೀಜಗ ಮೆರೆದವು (ಗೋಹಾಡು. ೨೯). **ಹಾರವಾಣ₁** : (೯), **ಹಾಲುವಾಣ₁** : '' ಪಾರಾವತಃ, ಕಲರವಃ, ಕಪೋತಃ — ೩ ಹಾಲುವಾಣದ ಹಕ್ಕೀ ಹೆಸರುಗಳು '' (ಸಿದ್ಧಾಂತ. ೦೫೬). [<ಸಂ. ಪಾರಾವತ]

**ಪಾರಿವಾಳ₂**, ಪಾರಿವಾಣ₂, ಪಾರುವಾಣ₂, ಹರಿವಾಣ₂, ಹರಿವಾಳ₁, ಹಾರವಾಣ₂, ಹಾರಿಯಾಳ, ಹಾರಿವಾಣ, ಹಾರಿವಾಳ, ಹಾರುವಾಣ, ಹಾಲಿವಾಣ, ಹಾಲುವಾಣ₂ (ನಾ). ಒಂದು ಬಗೆಯ ಮರ; ಪಾರಿಭದ್ರ: '' ಪಾರಿಭದ್ರಃ, ನಿಂಬತರುಃ, ಮಂದಾರಃ, ಪಾರಿಜಾತಃ — ಈ ೪ ಪಾರಿವಾಳದ ಮರ '' (ನಾಚರಾ. ೦೦೬); ಪಾರಿವಾಳದಾ ತದಕಿನ...ಇಪ್ಪೆಯ ಮಾತಂಗಳ ಕೊಂಬುಗಳಂಬರಂಬರಂ ಪುದಿದು ಪೊದಟ್ಟು ಸುರ್ಬಡರೆ ಪರ್ಬಿರೆ (ಲೀಲಾವ. ೬-೨೨); ಆವರಿಕೆಸೊಪ್ಪು, ಕರಿಹತ್ತಿ ಸೊಪ್ಪು, ಪಾರಿವಾಳದ ಸೊಪ್ಪು . . . ರಸವ ಹಿಂಡಿ ಬೆರಣೆ ಬೂದಿಯ ಕಲಸಿ ನೆತ್ತಿಬಾಯಿಗೆ ಒತ್ತಿದಾಕ್ಷಣವೇ ರಕ್ತವಾಂತಿ ನಿಲ್ಲುವದು (ಸಕಲವೈ. ೦೯೮). **ಪಾರಿವಾಣ₂** : '' ನಿಂಬತರುಃ — ಬೇವು, ಪಾರಿವಾ(ಳ)ಣ '' (೬ಕಂ. ೯೭); ಆ ತೈಲದಿಂ ಕೈಯಂ ಪೂಸಿ ಪಾರಿವಾಣದ ಕಾಯಂ ಒತ್ತಲು ಒಡೆಯುವುದು (ಖಶ್ಯಶಿ. ೩೩); ಪಾರಿವಾಣದ ಸೊಪ್ಪಿನ ರಸ, ಒಂದೆಲಗನ ರಸ . . . ಇವಿಷ್ಟನೂ ಪ್ರತ್ಯೇಕ ಒಂದು ಹಲವ ಹನಿಸಿ. ಮರ್ದಿಸಿ . . . ಕೊಡಿಸುವುದು (ವೈದ್ಯಸಾ. I. ೮೯). **ಪಾರುವಾಣ₂** : "ಪಾರುವಾಣ (ಹಾಲಿವಾಣ) — ಪಾರಿಭದ್ರ = ವೃಕ್ಷವಿಶೇಷ" (ತದ್ಭಕೋ. ೨೬). **ಹರಿವಾಣ₂** : ಹರಿವಾಣ : — ಈ ಬಿತ್ತ ಮೂಜನ್ನು ನೀರಲ್ಲಿ ಅರೆದು ಕುಡಿಯೆ ಮೂಜುದಿನದಲ್ಲಿ ಋತುವಾಗುವಳು (ಖಶ್ಯಶಿ. ೭). **ಹರಿವಾಳ₁** : ಈ ನಮ್ಮ ಊರ ಮುಂದಿನ ಹರಿವಾಳದ ಮರಗಳು (ಮುಂಬಯಿ. ೬-೨೮೮), **ಹಾರವಾಣ₂** : (೯). **ಹಾರಿಯಾಳ** : '' ಹಾರಿಯಾಳದ ಮರ = ಪಾರಿಜಾತಕ, ಪಾರಿಭದ್ರ, ಮಂದಾರ, ನಿಂಬತರು '' (ನಾಚರಾ. ೯). **ಹಾರಿವಾಣ** : " ಪಸಿರಃ — ಉತ್ತರಣೆ, ಚೆನ್ನಗ್ಗಲು, ಗಜಹಿಪ್ಪಲಿ, ಹಾರಿವಾಣದ ಮರ " (೬ಕಂ. ೦೯೬); ಅವರಿಯ ಮೂಳಮುಮಂ ತುಪ್ಪವುಮಂ ಮೇಣ್ ಹಾರಿವಾಳ(ಣ)ದೆಲೆಯಂ ತಿಳತೈಳವುಮಂ ಮೇಣಿಡು ಮಾಜ್ಯವುಮನೆಜೆಯೆ × × × ಪೋಕುಂ ಕ್ರಿಮಿಗಳ್ (ಲೋಕೋಪ. ೯-೨೩೦). **ಹಾರಿವಾಳ** : ಅರುಟಾಳಂ ಹಾರಿವಾಳಂ ತುಡು ತಡಸೊಡವಂ ಲೊಕ್ಕಿ ಗೊಟ್ಟಕ್ಕಿ . . . ತಱಿಮುದಿಂದೊಪ್ಪುತಿರ್ದತ್ತರಣ್ಯಂ (ಗಂಕ. ೦-೬೨); ಕುರುಟಿಗೆ ಹಾರಿವಾಳ[ಪಾಠಾಂ. ಣ]ದ ರಸಂಗಳೊಳಾಲದ ಪಾಲನಿಂಬಿನಿಂ ಬೆರಸಿಡು (ಜಮತ. ೦೫-೩೮); ಹಾರಿವಾಳ (ಪಾಂಗಾರಾ)— ಮಧ್ಯಮ ಆಕಾರದ ವೃಕ್ಷವು, ಕಟ್ಟಿಗೆ ಕೊರೆದು ಹಲಿಗೆಗಳನ್ನು ಮಾಡುವರು (ಕಶಾಗ.೩೦). **ಹಾರುವಾಣ** : (೯). **ಹಾಲಿವಾಣ** : ಹಾವಿನ ಹೆರೆ, ಹಾಲಿವಾಣದ ಎಲೆ, ಬಿಳಿಯ ಸಾಸುವೆಯುಮಂ ಸಮಂಗೊಂಡು ಶಿಶುವಿಂಗೆ ಧೂಪವಿಕ್ಕುವುದು (ಬಾಲಚಿ. ೦೨೫-೬); ಸುರದುಂಬೆಯೆಕ್ಕೆಯೆಲೆ ನಾಗರಮುಂ ಬಜೆಯುಳ್ಳಿ ಹಾಲಿವಾಣದ ಕೊನರುಂ ಮರಿಚಂಬೆರಸರೆ ನಸ್ಯಂ ಪರವಿಮುವೆ ಸೃಪಾಣ್ರದಿಂ ವಿಷಘ್ನಮೆನಿಕ್ಕುಂ (ಜಮತ. ೭-೩೬); ಹಾಲಿವಾಣದ ಮರದಲ್ಲಿ . . . ಕಾಜಾಣವೊಂದು ಆಲಾಪನೆಗೆ ತೊಡಗಿತು (ಮಲೆಮ. ೯೦). **ಹಾಲುವಾಣ₂** : ವೀಳಿಯದೆಲೆ ಹಂಬು ಹಬ್ಬುವುದಕ್ಕೆ ಅನುಕೂಲವಾದ ಗಿಡಗಳನ್ನು ಪಕ್ಕದಲ್ಲಿ ಬೆಳೆಸಬೇಕು. ಇವು ಸಾಮಾನ್ಯವಾಗಿ ಅಗಸೆ ಮತ್ತು ಹಾಲುವಾಣ (ವ್ಯವಮ. ೫೫). [ <ಸಂ. ಪಾರಿಭದ್ರ ]

**ಪಾರಿವೂಳಿಗ** (ನಾ). ಕಾವಲು ಕಾಯುವ ಕೆಲಸ; ಪಹರೆ ಊಳಿಗ: ತಿಮ್ಮದಾಸನ ಮಗ ಲೋವಿದಾಸಗೆ ಶ್ರೀ ಸ್ವಾಮಿಯವರ ಪಾರಿವೂಳಿಗ ಶಂಖು ಜಾಗಟೆ ಗುಡಿಕಾವಲು ಅದ್ಭುತ ಮುದ್ರೆ ಸಹ ಅಪ್ಪಣೆ ಪಾಲಿಸಿ ಧರ್ಮ ಕೊಟ . . . ಪೊಲ ೮ (ಮೈಶಾಂ. ೦೯೨೯, ೭-೦೫ : 1673).

[ ಪಾರಿ₆ (<ಪಹರಿ)+ಊಳಿಗ (<ಊಟಿಗ) ]

**ಪಾರಿವೇಂಟೆ**, **ಪಾರುವೇಟೆ** (ನಾ). ೧. ದೇವಸ್ಥಾನದಲ್ಲಿ ನಡೆಯುವ ಒಂದು ಉತ್ಸವ ವಿಶೇಷ: ಮಕರಸಂಕ್ರಮಣದ ಮರುದಿನ ಪಾರಿವೇಂಟೆಯಾಗಿ ಗಿರಿಪ್ರದಕ್ಷಿಣ ಮಾಡುವಾಗ . . . ಅವಧರಿಸುವ ಮಹಾನೈವೇದ್ಯದ ಹರಿವಾಣ ೨೦ (ಶಾಶಾ. IX — ii, ೫೫೦-೬ . ೧೫೩೭). **ಪಾರುವೇಟೆ** : ೨. ಬೇಟೆ; ಶಿಕಾರಿ: ಕೋಟೆಯ ಮುಂದಿನ ಪಾರುವೇಟೆಯ ಬಯಲಲ್ಲಿ ಬೋನನ್ನು ಇಳಿಸಿದಾಗ, ಸುತ್ತ ನೆರೆದಿದ್ದ ಜನರನ್ನು ಕಂಡು . . . ಹುಲಿರಾಯನಿಗೆ ದಿಗ್ಭ್ರಮೆಯಾಯಿತು (ದೂರೇಖ. ೯).

[ದೇ.॥ ತಮಿ. ಪಾರಿವೇಟ್ಟೈ; ತೆಲು. ಪಾರುವೇಟ, ಪಾಱುವೇಂಟ]

**ಪಾರಿವ್ರಾಜ** (ನಾ). = ಪಾರಿವ್ರಾಜಕ ೨: ''ಭಿಕ್ಷು ಕರ್ಮಂದಿಯುಮಪೀನಂ ಪಾರಿವ್ರಾಜಂ ತಾಪಸಕ್ಕಂ '' (ಚನ್ನಕೋ. ೫೬-೩೯). [ಸಂ.]

**ಪಾರಿವ್ರಾಜಕ** (ನಾ). ೧. ವಿರಕ್ತಿ; ಸಂನ್ಯಾಸ: ಪಾರಿವ್ರಾಜಕ (ಪಾರಿವ್ರಾಜ್ಯ)ಮೆಂಬುದು ಗೃಹಸ್ಥಧರ್ಮಮಂ ಪ್ರತಿಪಾಲಿಸಿ ವಿರಕ್ತಚಿತ್ತಂ ದೀಕ್ಷೋದ್ಯುಕ್ತನಾಗಿ . . . ನಿರ್ಗ್ರಂಥಾಚಾರ್ಯರ ಪಕ್ಕದೆ . . . ದೀಕ್ಷೆಗೊಳ್ವುದು (ಚಾವುಂಪು. ೨೨೯). ೨. ಒಂದೆಡೆ ನಿಲ್ಲದೆ ಬೇರೆ ಬೇರೆ ಕಡೆಗಳಲ್ಲಿ ಸುಳಿದಾಡುವ ತಪಸ್ವಿ: '' ಪರಾಶರೀ, ಬ್ರತೀ, ಭಿಕ್ಷುಃ . . . ಪಾರಿವ್ರಾಜಕಃ, ತಪಸ್ವೀ, ಕರ್ಮಂದೀ, ತಾಪಸಃ — ಈ ೯ ತಪಸ್ವಿ'' (ಹಲಾಯು. ೬೮-೨೫೫). [ಸಂ.]

**ಪಾರಿವ್ರಾಜ್ಯ** (ನಾ). [ಜೈನ] ಶ್ರಾವಕನು ನಿರ್ವಾಣದೀಕ್ಷೆಯನ್ನು ತೆಗೆದುಕೊಳ್ಳುವುದು: ಸಜ್ಜಾತಿ ಸದ್ಗೃಹಿತ್ವಪಾರಿವ್ರಾಜ್ಯ ಸುರೇಂದ್ರತ್ವ ಸಾಮ್ರಾಜ್ಯಪರಮಾರ್ಹಂತ್ಯಪರಿನಿರ್ವಾಣಮೆಂಬೇಟುಂ ಪರಮಸ್ಥಾನನಾಮ ಕರ್ತ್ರನ್ವಯಕ್ರಿಯೆಗಳಂ (ಆಪು. ೦೫-೦೬ ವ); ತಪದೊಳ್ ನೆಗಟ್ದೊಡೆ ದಿಗ್ವಿಜಯಪರಮನಿರ್ವಾಣಸುಖಭಾಜನರಪ್ಪರಿದು ಪಾರಿವ್ರಾಜ್ಯಕ್ರಿಯೆ (ಚಾವುಂಪು. ೨೩೦). [ಸಂ.]

**ಪಾರಿಶುದ್ಧತೆ** (ನಾ). ಅತ್ಯಂತ ಶುದ್ಧವಾಗಿರುವುದು; ಪರಿಶುದ್ಧತೆ: ನಡೆ ನುಡಿ ಎರಡರಲ್ಲೂ ಪಾರಿಶುದ್ಧತೆ ಈ ಸೌಂದರ್ಯದ ಲಕ್ಷಣ (ಕಂಶಿ. ೩೬); ನಮ್ಮ ಮಕ್ಕಳು . . . ಅಂತರಂಗದ ಪಾರಿಶುದ್ಧತೆಗೂ ನೆರವಾಗತಕ್ಕ ಶಿಕ್ಷಣವನ್ನೂ ಪಡೆಯಬೇಕು (ಶಿಕ್ಷದ. ೬೨೯).

[ಸಂ. ಪಾರಿಶುದ್ಧತಾ]

**ಪಾರಿಶೇಷಕ** (ನಾ). ಉಳಿದ ಅಂಶ; ಪರಿಶೇಷ: ಮಹೀಭಾರಾಂತರವ ನಿಶ್ಚಯಿಸಿ ಭಾರತಪಾರಿಶೇಷಕವ ಅಂತಕಾಂತಕ . . . ಹೊಕ್ಕನು ದೋರಕಾಪುರಿಯ (ಕುವ್ಯಾಆ. ೨-೩೫). [ಸಂ.]

**ಪಾರಿಶೇಷನ್ಯಾಯ** (ನಾ). ಒಂದು ಬಗೆಯ ನ್ಯಾಯ; ೫ ನಾಲ್ಕಾರು ವ್ಯಕ್ತಿಗಳಲ್ಲಿ ಒಬ್ಬ ವ್ಯಕ್ತಿಯನ್ನು ಅಥವಾ ನಾಲ್ಕಾರು ವಸ್ತುಗಳಲ್ಲಿ ಒಂದು ವಸ್ತುವನ್ನು ಗುರುತಿಸಬೇಕಾದಾಗ ಜೊತೆಗಿರುವ ಇತರ ವ್ಯಕ್ತಿ ಅಥವಾ ವಸ್ತುಗಳನ್ನು ಅಲ್ಲಗಳೆದು ಕೊನೆಗೆ ಉಳಿಯುವ ನಿರ್ದಿಷ್ಟ ವ್ಯಕ್ತಿ ಅಥವಾ ವಸ್ತುವನ್ನು ಒಪ್ಪಿಕೊಳ್ಳುವಿಕೆ: ಪಾರಿಶೇಷನ್ಯಾಯದಿಂ ಪರಮೇಶ್ವರನೇ ಜಗತ್ಕರ್ತೃವೆಂದು ನಿಶ್ಚಿತಮಕ್ಕುಂ (ಖಪೀಕ. ೨). [ಸಂ.]

**ಪಾರಿಷದ** (ಗು). ೧. ಪರಿಷತ್ತಿಗೆ ಸಂಬಂಧಿಸಿದ; ಸಭೆಗೆ ಸಂಬಂಧಿಸಿದ. (ನಾ). ೨. ಸಭಾಸದ; ಸಭಿಕ: ಹೊಸಹೊಸ ಕವಿಗಳು ತಮ್ಮ ಹೊಸಹೊಸ ಕೃತಿಗಳಿಂದ ಪಾರಿಷದರಿಗೆ ಪರಿಚಿತರಾದರು (ಕಚಾಕೃ. ೫೫); ತಮ್ಮಂತಹ ದೊಡ್ಡವರು, ರಸಿಕ ಪಾರಿಷದರು ಮಾಡುವ ಪ್ರಯತ್ನದಿಂದ ರಸಜೀವನವು ಪುನರುದ್ಧಾರವಾಗಬೇಕಾಗಿದೆ (ಸಾಹಿಜೀ. ೭೯). ೩. ರಾಜ, ದೇವತೆ ಮೊದಲಾದವರ ಸೇವಕವರ್ಗ. ೪. [ಜೈನ] ಇಂದ್ರನ ಸಭೆಯಲ್ಲಿ ಸದಸ್ಯರಾಗಿರುವ ದೇವತಾವರ್ಗ: ಸಾಮಾನಿಕತ್ರಯಸ್ತ್ರಿಂಶತ್ಪಾರಿಷದಾತ್ಮರಕ್ಷಲೋಕಪಾಲಾಭಿಯೋಗ್ಯಕಿಲ್ಬಿಷರೊಡನೆ ಗಜ

ತುರಗ ರಥ ವೃಷಭಗಂಧರ್ವನರ್ತಕೀಪದಾತ್ಯನೀಕಂಬೆರಸು ಬಂದು ಮುಂದೆ ನಿಲ್ವುದುಂ (ಆದಿಪು. ೬-೯೨ ವ) ; ಅನೇಕ ಪ್ರಕಾರಪಾರಿಷದ ಪ್ರಕೀರ್ಣಕಾಭಿಯೋಗ್ಯ ಕಿಲ್ಬಿಷಿಕರುಮೆಂತರ್ವರ್ಧ್ವಬಾಹ್ಯಾಪಸ್ಥಿತಗಳಪ್ಪ ಮೂಱುಂ ಪರಿಷೆಯುಮಾತ್ಮೀಯಪರಮೈಶ್ವರ್ಯರ್ ಪ್ರಕಾಶಕವಾಗೆ (ಪರ್ಮಪು. ೦೦-೬೦ ವ). ೫. [ವೀರಶೈ] ಚಂಡೀಶ್ವರ ಮುಂತಾದ ಶಿವ ಗಣ ; ಪ್ರಮಥಗಣ : ಕಲ್ಯಾಣಪುರವರಪಾರಿಷದಗಣಸಂಕುಲಕೆ (ಬಸವಪು. ೦೬|೦೩). [ಸಂ.]

**ಪಾರಿಪ್ಲವ** (ನಾ). ಗದಾಯುದ್ಧದಲ್ಲಿ ಒಂದು ವರಸೆ(?) : ಬವರಿ ಮತ್ಯೋತ್ಪ್ರಗತಿ ವಿಲಂಘನ . . . ಸಂಪ್ಲವನ ಪಾರಿಪ್ಲವ ಗದಾಪರಿರಂಭ ವಿಕ್ಷೇಪ . . . ಲಘುವಿನ್ಯಸ್ತವೆಂಬೀ ವಿವರದಲಿ ಕಾದಿದರು (ಕುವ್ಯಾ.ಗ. ೬-೨೫). [?]

**ಪಾರಿಸಿ, ಪಾರ್ಸಿ** (ನಾ). ೧. ಪರ್ಷಿಯಾದೇಶ ; ಇರಾಣ : ಪಶ್ಚಿಮದಲ್ಲಿ ಸುಮಾರು ಒಂದು ಲಕ್ಷ ಪಾರಿಸೀಜನರೂ . . . ವಾಸವಾಗಿದ್ದಾರೆ (ಭೂಗೋಳ. ೬೦). 'ಪಾರಿಸಿಲಿಪಿ' ಪರಾ. **ಪಾರ್ಸಿ** : ೨. ಪರ್ಷಿಯಾ ದೇಶದ ಜನ : ಹಿಂದೂದೇಶದವರಲ್ಲದ ಆಸ್ಮಾಖಂಡದ ವಂಶೀಯರು ... ಚೀನೀಯರು, ಮೊಗಲರು, ಪಾರ್ಸಿ ಪಠಾಣರು (ತುಳುಪಾ. ೦೬೪). [<ಸಂ. ಪಾರಸೀ]

**ಪಾರಿಸಿಲಿಪಿ** (ನಾ). ಪರ್ಷಿಯಾದೇಶದ ಭಾಷೆಯ ಲಿಪಿ : ದ್ರಾವಿಳ ಲಿಪಿಯುಂ ಪಾರಿಸಿ[ಪಾಠಾಂ. ರಸ, ರಿಸ]ಲಿಪಿಯುಂ ಲಾಳಲಿಪಿ ಮೊದಲಾದ ಹಲವು ಲಿಪಿಗಳನೋದಬಲ್ಲಗ್ಗಳದ ಕರಣಿಕರಂ ಕರೆಸಿ ಬಿಜ್ಜಳವಸುಹೀಪತಿಯಾಗ ತಾ ಹಿಡಿದಿರ್ದ ಲೇಖೆಯನು ಅವರ ಕೈಯೊಳು ಕೊಟ್ಟು (ಬಸಪು. ೫-೩೩). [ಪಾರಿಸಿ+ಲಿಪಿ]

**ಪಾರಿಸು** (ಕ್ರಿ). ಉಪವಾಸ ಮುಗಿಸಿದ ನಂತರ ಆಹಾರವನ್ನು ಸೇವಿಸು ; ಪಾರಣೆ ಮಾಡು : ಎನ್ನ ಮಹಾಮಹಿಮೆಯೊಳೆಂತುಟ್ಟೆ ನೆಂದು ಪಾರಿಸದೆ ಮತ್ತಮುಪೋಷ್ಯೋಪವಾಸಂಗೆಯ್ದು (ಪಂಪ್ರಾ. ೦೦೭-೦೬); ಅಪರಾಜಿತಂ ವಿಮಳವಾಹನ ಜನಪತಿಯಂ[ ಅರ್ಹದ್ದಾಸನಂ ] ಕಂಡಲ್ಲದುಣ್ಣೆನೆಂದೆಂಟುದಿವಸಮುಪವಾಸಂಗೆಯ್ದು ಪಾರಿಸಲೊಲ್ಲದಿರೆ ಸುರರಾಜನಱಿದು . . . ವಿಮಳವಾಹನನ [ಅರ್ಹದ್ದಾಸನ] ಪ್ರತಿ ಬಿಂಬಮಂ ತೋಱಿಸೆ ಕೃತಾರ್ಥನಾಗಿ ನಮಸ್ಕಾರಂಗೆಯ್ದು ಪಾರಿಸೆ (ಹಾಪುಃಪು ೩೨೫); ಮುನಿಪಂ ಮಾಸೋಪವಾಸಾಂತರದೊಳನುನಯಂ ಪಾರಿಸಲ್ಕೆಂದು ಪೊಕ್ಕಯ್ಯನೆ ಚರ್ಯಾಮಾರ್ಗದಿಂದಂ ಬರೆ(ಬಂಹಂ. ೫-೪೪). [ಪಾರಣೆ$_1$+ — ಇಸು$_1$]

**ಪಾರಿಸೋಜ** (ನಾ). ಒಬ್ಬಾತನ ಹೆಸರು : ಹಿಟ್ಟಿನ ಅಕ್ಕಸಾಲೆ ಪಾರಿ ಸೋಜಂಗೆ ಮತ್ತರು ೪ (ಕೊಲ್ಯಾ.ಶಾ. ೩೭-೩೭ ; 1049). [ಪಾರಿಸ$_?$ +ಓಜ$_1$ (<ಒವರಿಖ)]

**ಪಾರಿಹಾರಿಕ** (ನಾ). ಮಾಲೆಯನ್ನು ಕಟ್ಟುವವನು ; ಮಾಲೆಗಾರ : "ಮಾಲಾಕಾರಃ, ಮಾಲಿಕಃ, ಪಾರಿಹಾರಿಕಃ—ಈ ೩ ಮಾಲೆಗಾಱಂ" (ಹಲಾಯು. ೯೬-೪೩೫). [ಸಂ.]

**ಪಾರಿಹಾರ್ಯ** (ನಾ). ಬಳೆ ; ಕಂಕಣ ; ಕಡಗ : "ಆವಾಪಃ, ಪಾರಿ ಹಾರ್ಯಃ, ಕಟಕಃ, ವಳಯಃ—ಈ ೪ ಕಂಕಣಂ" (ಹಲಾಯು. ೯೦-೪೦೩) ; ಮೇಖಲೆಯ ಪಾರಿಹಾರ್ಯದ ಮಣಿನೂಪುರದ ಮಧುರಸ್ವನಂ ಮುಪ್ಪುರಿ ಗೂಡಿದ ಮದನಪಾಶಮೆನೆ ನಡೆತಂದಳ್ (ಶಂಕರಾಪು. ೩-೬೪) ; ಮಣಿಕಾಂಚೀ ಮಣಿಪಾರಿಹಾರ್ಯಮಣಿಮಂಜೀರಸ್ವನಂ ಪೊಣ್ಮಲ್ . . . ಗಣಿಕಾಶ್ರೇಣಿ ಯುಮೊಱಲ್ ನಿಂದುದು ತವಂಗಶ್ರೇಣಿಯಂ ಲೀಲೆಯಿಂ (ಜಗಪು. ೬-೪೪). [ಸಂ.]

**ಪಾರೀಕತ್ತು** 'ಫಾರೀಕತ್ತು' ನೋ.

**ಪಾರೀಖತ್ತು** 'ಫಾರೀಕತ್ತು' ನೋ.

**ಪಾರೀಣ** (ನಾ). ೧. ದಾಟುವುದು. ೨. ಎಲ್ಲಾ ವಿಷಯಗಳಲ್ಲಿ ಸಂಪೂರ್ಣಪರಿಚಯವನ್ನು ಪಡೆದಿರುವುದು ; ಪಾಂಡಿತ್ಯ. ೩. ಎಲ್ಲಾ ವಿಷಯಗಳಲ್ಲಿ ಸಂಪೂರ್ಣಪಾಂಡಿತ್ಯವನ್ನು ಪಡೆದಿರು ವವನು ; ಪಂಡಿತ ; ನಿಷ್ಣಾತ : ಧ್ಯಾನಶಗಣಸರಸ್ಸರೋಜವಿವಳನ ಶೋಭಾಪ್ರಭಾವಪ್ರಸವಪಾರೀಣದಿವ್ಯವಚನಮರೀಚಿಮಾಲಿರೊ ಚರ್ನಿಚಯ ತ್ರಿಜಗಚ್ಚೂಡಾಮಣಿಯುಂ . . . ಪೊದೆಸಟ್ಟು (ಶಾಂತಿಪು. ೯-೩೯ ವ); ನಿಜ ಗುರುಭಜನಪಾರೀ[ಪಾಠಾಂ. ರಿ]ಣನ . . . ನೋಡಿ (ಬಸವಪು ೩೯-೫೩). [ಸಂ.]

**ಪಾರು$_1$** 'ಪಾರ್$_1$' ನೋ.

**ಪಾರು$_2$** 'ಪಾಱು$_1$' ನೋ.

**ಪಾರು$_3$** (ಕ್ರಿ). ೧. ಬೆಳೆ ; ವೃದ್ಧಿಯಾಗು : (೬). ೨. ಉಂಟಾಗು ; ಸಂಭವಿಸು : (೬). [ ದೇ. ॥ ತಮಿ. ಪಾರಿ ; ತೆಲು. ಪಾಱು ]

**ಪಾರು$_4$** 'ಪಾಱು$_2$' ನೋ.

**ಪಾರು$_5$**, ಹಾರು$_3$ (ನಾ). ೧. ಆಚೆಯ ದಡ ; ಪಾರ : "ಪಾರು—ಪಾರ=ಆಚೆವಡ" (ಶಬ್ದಕೋ. ೨೬); ಸಿರಿಯ ಪೊಸ ತವರೂರು ಪವಳರನ್ನದ ಪಾರು ಸುರರ್ಕೆಸಿರಿಯ ನಾಡು . . . ಶಾನೆಸುತ್ತಿಂಗಡಲ್ ಕಂಗೊಂಡುದು (ಕವಿಚ. III, ೨೦೫ ಕೃಷ್ಣಾವತೀಶಬರಯ). ೨. ಕೊನೆ ; ಅಂಚು : (೬). ೩. ಮನೆಯ ಮಾಡಿನ ಇಳಿಜಾರು ; ಸೂರಿನ ಇಳಿಜಾರು ಭಾಗ : (೬). ೪. ನೊಗದ ಎರಡು ಪಕ್ಕ,—ಕಡೆ ; 'ಪಾರುಂವಿಳಿ' ಪರಾ. ೫. ಅಪಾಯದಿಂದ ತಪ್ಪುವಿಕೆ ; ಬಚಾವು : ಮೃಗಗಳಂ ನೋಡಾರ್ಯ ! ಬಲೆಗೆ ಬಲಿಯಾಗಿ, ಪಾರು ಬೇರಿಲ್ಲದಿರೆ, ರೋಸಿ, ಹಿಂದಿರುಗಿ, ಕುರುಡುಧೈರ್ಯವ ನೆಮ್ಮಿ, ಬೇಂಟೆಯನೆದು ರಿಸವೆ? (ಶಕಾರ. ೬೦-೬). **ಹಾರು$_3$** : ೩. ಈ ಗುಬ್ಬಚ್ಚಿಗಳಿಗೆ ಮನೆಯ ಹಾರಿನ ಸಂದಿಗಳಲ್ಲಿ ಗೂಡು ಕಟ್ಟುವ ಅಭ್ಯಾಸವಿಲ್ಲದಿದ್ದರೆ ಚೆನ್ನಾಗಿರುತ್ತಿತ್ತು (ಈಶಕೆ. ೫೦).

**ಪಾರಾಗು**=ಬಿಡುಗಡೆ ಹೊಂದು ; ಬಚಾವಾಗು : ಇವನ ಕೈಯಿಂದ ಪಾರಾಗಲು ಗಾಂಧೀಜಿ ಮಾಡಿಕೊಂಡ ಯೋಜನೆ ನನ್ನ ತಲೆಯನ್ನು ತುಂಬಿತು (ದೀಕನ್ನ. ೩೬) ; ಆತ್ಮಸತ್ತ್ವವಿದ್ದ ಒಂದೇ ಒಂದು ಜೀವವೆಂದರೆ ಸತ್ತು ಪಾರಾಗಿ ಹೋದ ತಮ್ಮನ ಹೆಂಡತಿ (ಹೊಸಕ್ಷಿ. ೨೯೪). **ಪಾರು ಮಾಡು** = ಕಾಪಾಡು ; ರಕ್ಷಿಸು : ನೀನು ನನ್ನನ್ನು ಪಾರು ಮಾಡಬೇಕು ರಂಗಣ್ಣ (ರಂಗರೋ. ೨೩) ; ಜೀವನದಲ್ಲಿ ದುರಾತ್ಮರಿಂದ ಕಷ್ಟಕ್ಕೆ ಸಿಕ್ಕಿದಾಗ ನಮ್ಮನ್ನು ಪಾರು ಮಾಡಿದವಳು ಅವಳು (ವಶಭಾ. ೦೬೩). [ <ಸಂ. ಪಾರ ]

**ಪಾರುಂಬಳೆ** 'ಪಾಱುಂಬಳೆ' ನೋ.

**ಪಾರುಖಾಣ** 'ಪಾರುಖಾಣೆಯ' ನೋ.

**ಪಾರುಖಾಣಯ** 'ಪಾರುಖಾಣೆಯ' ನೋ.

**ಪಾರುಖಾಣೆ** 'ಪಾರುಖಾಣೆಯ' ನೋ.

**ಪಾರುಖಾಣೆಯ**, ಪಾರುಖಾಣ, ಪಾರುಖಾಣಯ, ಪಾರುಖಾಣೆ (ನಾ). ೧. ಬಹುಮಾನ ; ಉಡುಗೊರೆ : "ಎಸೆದುಂ ಕೊಡುವುಚಿತ ಪಾರುಖಾಣೆಯುಮಕ್ಕುಂ" (ಕವಿಕಾಂ. ೨೫೫) ; ಪಾರುಖಾಣೆಯವಿತ್ತನಾ ಜಂಭಾರಿಯೂರ್ವಶಿ ರಂಭೆ ಮೇನಕೆ ಗೌರಿ ಮೊದಲಾದಖಿಳಪಾತ್ರಕೆ (ಕುವ್ಯಾ.ಅ. ೬-೯೬). ೨. ಕರಣಿಕರು ಇಡುವ ಲೆಕ್ಕಾಚಾರ : ತೀರ ದಿಬ್ಬರ ಸತ್ತ್ವಪವನಿಯ ಸಾರದಿಬ್ಬರ ಬಲುಹುಗಾಣಿಪು ಪಾರುಖಾಣೆ ಯುವದಟರಿಬ್ಬರ ಭುಜಬಲಾಟೋಪ ಸಾರಹಿಯಾದು (ಕುವ್ಯಾಸ. ೨-೦೦೬). **ಪಾರುಖಾಣ** : (೬). **ಪಾರುಖಾಣಯ** : ೧. "ಪಾರುಖಾಣಯ

ವೆಂದು ಉಚಿತವಚಿತು ಕುಡುವ ವಸ್ತು" (ಶಬ್ದ. ೬೩-೬೬೪)

**ಪಾರುಖಾಣೆ** : ೧. ತುಂಬುರ ರಂಭೆ ಭೃಂಗಿಯುಂ ಪರಿಕಿಸಿ ಪಸಾಯುವಮಂ ಪಾರುಖಾಣೆಯ ಕೊಡಲು ನೆರೆದಿರ್ದ ಹರನ ಸಭೆ ಸುಖದ ಸೊಗಸಿನ ಜೊಮ್ಮು ವಿಡಿದು ಮೆಚ್ಚಿದಿರಲು (ಸಿದ್ಧರಾ. ೦-೨೩); ಕಿರಿ ಕಡವಿಯು ಕಡಿತ ಗಿರಿಗಳ ಹೋರಟಿಗೆ ಹೊಗಬೇಕು ಸೇನೆಗೆ ಪಾರು ಖಾಣೆಯು ಕೊಟ್ಟವಾಗಳೆ (ಕುಮಾರ. ೪-೩೩). ೨. ಧಾರುಣೀಪತಿ ಕೇಳು ನಿನ್ನ ಕುಮಾರರಲಿ ತೊಂಬತ್ತಯೆಂಟಜ ಪಾರುಖಾಣೆಯ ಲೆಕ್ಕ ಸಂದುದು ನಿಮ್ಮ ಚಿತ್ತದಲಿ (ಕುಮಾರ. ೦೪-೨೬). ೩. ನಾಶ ; ಕೊನೆ ; ಮಂಕಿತ್ರಯಂ : ಕಂಡುದು ಪಾರುಖಾಣೆಯುನಸುರನಸು ಬಲು ಭಾರಿಯೊಡಲೊರ್ಗುಡಿಸಿ ಕೆಡೆದುದು ಬಿರಿದ ಗಿರಿಯಂತೆ (ಕುಮಾರದ್ರೋ. ೦೬-೩೪). ೪. ವಿರಹತಾಪ (?): "ಕರಣಿಕರ ಲೆಕ್ಕ ಸಂಖ್ಯೆಯೊಳರಸರ್ ವಿಬುಧಾಳಿಗೀಯುವರ್ಥಂಗಳೊಳುಂ ವಾರಣದೊಳು ಮದನತಾಪದಿ ಪರಿವರ್ತಿಸು ಪಾರುಖಾಣೆಯೆಂದಜಿಗೆ" (ಧಾರಿಶ. ೬೩). 'ಪಾರಖಾವಣೆ' ಪರಾ. [?. / ಮರಾ. ಪಾರುಖೇಣೀ=ನಾಶವಾಗು, ನಷ್ಟವಾಗು]

**ಪಾರುಗಟ್ಟಿಗೆ**, ಹಾರಕಟ್ಟಿಗೆ, ಹಾರಗಟ್ಟಿಗೆ, ಹಾರಂಗಟ್ಟಿಗೆ, ಹಾರೆ ಗಟ್ಟಿಗೆ (ನಾ). ಚೂಪಾದ ಆಯುಧವನ್ನು ತುದಿಗೆ ಅಳವಡಿಸಿದ ಕೋಲು ; ಅಂಕುಶ : ಪಾರುಗಟ್ಟಿಗೆಯುವನುರ್ಬಿನೊಳೆಱಗುವ ಸೊರ್ಕಾ ನೆಯ ನಿಗ್ಗಿಕ್ಕೆ ಎರ್ದೆಯೊಡ್ಡಿ ಸೋಂಕದ ಮುನ್ನಮೆ ಒರ್ಮೆಯೊಳೊ ಲೆದು ತಪ್ಪಿಸಿ ಎಡೆಗೆಡವುವಂತೆ ಕಡಪಿ (ಚಿಕ್ಕದೇ. ೦೬೩-೦). **ಹಾರಕಟ್ಟಿಗೆ** : ಕೊರಳ ಜೊತ್ತಿಗೆ ಹಾರಕಟ್ಟಿಗೆ ಸುರಳಿತದ ವೊಗರಂಬ ಸಾವಿರ ಕರಿಗಳಡಬಲಕೊಳುವೃತ್ತಿದಿದುಪಧಿ ಃವೀಯುಲಿ (ಸಂಕ. ೨೦-೪೦). **ಹಾರಗಟ್ಟಿಗೆ** : ನೀಲದ ಹಾರಗಟ್ಟಿಗೆಯೆಸಿಸಿದರ್ದು ಬಾಲೆಯ ಬಾಸೆ (ತ್ರಿಕು. ೨೦-೪೪). **ಹಾರುಗಟ್ಟಿಗೆ. ಹಾರೆಗಟ್ಟಿಗೆ** : "ಒತ್ತುವ ಹಾರೆಗಟ್ಟಿಗೆ ಅಯೋಮುಖಂ" (ಶುಂಗರಾ. ೪೬-೬); ಹಾಕಿದ ಅಂಚಿಕೆ ಸೂನಂಗಿ ಕೈಗತ್ತಿ ನೂಕುವ ಹಾರೆಗಟ್ಟಿಗೆಯು (ಅಕ್ರೂರ. ೨-೩೩).

**ಹಾರುಗಟ್ಟಿಗೆವಿದ್ಯೆ**=ಅಂಕುಶವನ್ನು ಬಳಸುವ ವಿದ್ಯೆ : ಆನೆ ಯೊಂದಿಗೆ ಕಾದುವ ಹಾರುಗಟ್ಟಿಗೆವಿದ್ಯೆ . . . ನಾನಾಸಂಜ್ಞೆಗಳನು ಅರಿತು (ಶಕಾ. ೪). 'ಅರೆಗಟ್ಟಿಗೆ' ಪರಾ. [ < ಪಾರ್ $_1$ + ಕಟ್ಟಿಗೆ $_1$ ]

**ಪಾರುಗಡೆ** (ನಾ). ಬಿಡುಗಡೆ ; ಪಾರಾಗುವುದು : ತಂದೆಯು ಪ್ರೇತ ವಾಗಿ ಎಲ್ಲೊ ವೈತರಣಿ ದಾಟಲಾರದೆ ಅಲೆಯುತ್ತಿರಬೇಕು, ಈ ಪಿಂಡ ಸಲಿಸಿದ ಮೇಲೆಯೂ ಅವರ ಪಾರುಗಡೆಯಾಗುತ್ತದೋ ಇಲ್ಲವೋ (ಕುಗಿಡು. ೪೬). [ಪಾರು $_4$ + ಕಡೆ $_4$ ]

**ಪಾರುಗಾಣಿಸು** (ಕ್ರಿ). ೧. ದಡವನ್ನು ಸೇರಿಸು ; ದಡ ಮುಟ್ಟಿಸು ; ದುಃಖಸಾಗರದಲ್ಲಿ ತೇಲುತ್ತಿರುವ ನಮ್ಮ ಜೀವನನೌಕೆಯನ್ನು ಪಾರು ಗಾಣಿಸಮ್ಮಾ (ಶ್ರಾವಂ. ೪). ೨. ರಕ್ಷಿಸು : ನೀವೇ ನನ್ನ ಮಾನವನ್ನು ಕಾಪಾಡಿ ಪಾರುಗಾಣಿಸಬೇಕು (ಚಾಳುಕೂ. ೨೩). ೩. ಕೊನೆಮುಟ್ಟಿಸು ; ಮುಗಿಸು : ನಿನ್ನ ಕಾರ್ಯವನ್ನು ನೀನೇ ಪಾರು ಗಾಣಿಸು ತಾಯಿ! (ಕುಂಹಿಂ. ೦೬೦). ೪. ಪರಿಹರಿಸು; ಹೋಗಲಾಡಿಸು : ಶನಿಮಹಾರಾಯನು ಹೆಗಲೇರಿದರೆ ಅದರ ಪರಿಣಾಮವನ್ನು ಪಾರುಗಾಣಿಸು ವುದಕ್ಕೆ ತ್ರಿಮೂರ್ತಿಗಳಿಗೂ ಅಸಾಧ್ಯ (ಕಂಗಾಳ. ೦೩೩).

[ಪಾರುಗಾಣು + -ಇಸು $_3$ ]

**ಪಾರುಗಾಣು** (ಕ್ರಿ). ೧. ಪಾರಾಗು ; ಬಚಾವಾಗು : ಟಳಕರು ನನ್ನ ನಾಡಿ ಹಿಡಿದು ಕುಳಿತಿದ್ದರು. ಬೆಳಗ್ಗೆ ನಾನು ಪಾರುಗಂಡೆ (ಸ್ವ. ಕಿ. ೦೦೬). ೨. ಕೊನೆಮುಟ್ಟು : ನೀವು ಮಾಡಿದ ಲಗ್ನ ನಗೆನಗುತ ಪಾರುಗಂಡಿದ್ದರೆ ಅವನಿಗೆ ಎಷ್ಟೋ ಆನಂದವೆನಿಸಬಹುದಿತ್ತು (ಕುವಕ. ೬೨). [ಪಾರು $_4$ + ಕಾಣು (< ಕಾಣ್)]

**ಪಾರುಗೆಯ್ತು** 'ಪಾಱುಗೆಯ್ತು' ನೋ.

**ಪಾರುಧಿ** 'ಪಾರದಿ' ನೋ.

**ಪಾರುಪತ** 'ಪಾರುಪತ್ಯ' ನೋ.

**ಪಾರುಪತಿಗಾರ** 'ಪಾರಂಪತ್ಯಗಾಱ' ನೋ.

**ಪಾರುಪತ್ತೆ** 'ಪಾರಂಪತ' ನೋ.

**ಪಾರುಪತ್ತೆಗಾರ** 'ಪಾರುಪತ್ಯಗಾಱ' ನೋ.

**ಪಾರುಪತ್ಯ**, ಪಾರಪತ್ಯ, ಪಾರಿಪತ್ಯ, ಪಾರಂಪತ, ಪಾರುಪತ್ತೆ, ಪಾರ್ಪತ್ಯ (ನಾ). ೧. ಮೇಲ್ವಿಚಾರಣೆ ; ಉಸ್ತುವಾರಿ ; ಯಾಜ ಮಾನ್ಯ : ಇಳೆಯಾಣ್ಮಂ ತನಗಲ್ತೆ ವೆಗ್ಗಳನೆನುತ್ತಂ ಪಾರುಪತ್ಯಂಗಳಂ ಖಳಗೀಯಲ್ (ಸೋಮೇಶ. ೬೪); ಛತ್ರದ ಯೆಲ್ಲಾ ಪಾರುಪತ್ಯವನೂ ಮಾಡಿಕೊಂಡಿಹ ಸಂಕರಪುಟ್ಟರಿಗೆ ೪೦ ಸಲಗೆ ಭತ್ತ (ಎಕ. VIII, ತೀರ್ಥಹ. ೨-೪೪ ; ೧೬೩೬); ಹಿಂದಕ್ಕೆ ಬೇಲೂರ ಚೆನ್ನಕೇಶವನ ಗುಡಿಯಲ್ಲಿ ಸೂರಯ್ಯನೆಂಬ ಒಬ್ಬ ಬ್ರಾಹ್ಮಣನು ಪಾರುಪತ್ಯವನ್ನು ಮಾಡಿಕೊಂಡಿದ್ದನು (ಕೀಶಾಂ. II, ೨೪); ನೀರು ಹೊರುವ ಬಡ್ಡಿಗೆ ಊರ ಪಾರುಪತ್ಯವೇಕೆ? (ಗಾದೆ). ೨. ಆಳಿಕೆ : ಅಧಿಕಾರ : ಮನೆಯಲ್ಲೆಲ್ಲಾ ನಿನ್ನದೇ ಪಾರುಪತ್ಯವಾಗಿದೆಯಲ್ಲ (ಶಾರೆಕು. ೦೦೩); ಅವನು ನಮ್ಮ ಕಡೆಗೆ ತಿರುಗಿಬಿಟ್ಟರೆ ಅವಳದೇನು ಪಾರುಪತ್ಯ ನಡೆಯುತ್ತದೆ? (ಕುಹಾಗ. ೦೬೪): ಚೇಳಿಗೆ ಪಾರುಪತ್ಯ ಕೊಟ್ಟರೆ ಜಾವ ಕ್ಕೊಂದು ಸರ್ತಿ ಮುಟ್ಟಿಸಿತು (ಗಾದೆ). ೩. (ಅಲಂ) ದೊಡ್ಡಸ್ತಿಕೆ ; ಪ್ರತಿಷ್ಠೆ : ಅವಳು ಮಾಡುವ ಪಾರುಪತ್ಯಕ್ಕೆ ಕೊನೆಯೇ ಇಲ್ಲ (ಕೂಡಿ). **ಪಾರಪತ್ಯ** : ೧. ಮಾಡಿದವು ಗುರುಭಾರವನು ಮುರಗೇಡಿಯಲಿ ರಣಪಾರಪತ್ಯವ ಮಾಡುವಾತನು ಕೃಷ್ಣನು (ಕುಮಾರ. ೦-೬೦); ಯಿಾ ಛತ್ರದ ಪಾರಪತ್ಯ ×× ಬಿಟ್ಟದು ಕಾಲೆಯು ಬೀಜವರಿ ಖ ೨ ॥ (ಎಕ. VIII, ತೀರ್ಥಹ. ೦೬೪-೦೦; 1440); ಏನೂ ಚಿಂತೆಯಿಲ್ಲ. ಹಿಂದುಗಡೆ ಅವನ ಪಾರಪತ್ಯವನ್ನು ಮಾಡಲಿಕ್ಕೆ ಬಂದೀತು (ಕೂಜುಳ. ೦೨೩). ೨. ಇಷ್ಟಕ್ಕೂ ಅವಳ ಪಾರಪತ್ಯವೆಲ್ಲಾ ಎರಡೇ ತಿಂಗಳು (ಶಂಕಕ. ೨೬). **ಪಾರಿಪತ್ಯ** : ೧. ಚೆಂನಪ್ಪಅಯ್ಯನವರು ಪಾರಿಪತ್ಯವ ಮಾಡಿ ನಡಸಿಕೊಂಡಿಹರು (ಸೌಇಂ. ೦೪೬೨, ಉಡುಪಿ. ೩೦೩-೪೦; 1397): ಅವಳ ಪತಿಯುಂ ಗ್ರಾಮಮಂ ನಾಡ ಪಾರಿಪತ್ಯವನೆಸಗುವಾತನುಂ (ಶೀಕೃತಿ. ೬-೨-೨೩). **ಪಾರುಪತ** : ೪. ಮೇಲ್ವಿಚಾರಕ ; ಪಾರುಂಪತ್ಯಗಾರ : ಆಚಾರ್ಯರಿಗೆ ಗ ೬ ಪಾರು ಪತರ ಸತ್ರಕ್ಕೆ ಗ ೬೨ . . . ಶ್ರೀ ವಿಶ್ವೇಶ್ವರದೇವರ ಅಮೃತಪಡಿ ಮೊದಲಾದ ಎಲ್ಲಾ ಧರ್ಮಕ್ಕಂ . . . ಧಾರಾಪೂರ್ವಕಂ ಮಾಡಿ ಕೊಟ್ಟರು (ಎಕ. XV, ಬೇಲೂರು. ೨೪೬-೬೬ ; 1279). **ಪಾರುಪತ್ತೆ** : ೧. ಮಗನೆ ರಾಜ್ಯದ ಪಾರುಪತ್ತೆಗೆ ದಾರೂ ಇಲ್ಲ (ಕಾಕೃಪ. ೬೩-೦). **ಪಾರ್ಪತ್ಯ** : ೧. ಕಳಚಿದಂ ಮಣಿಮಯದ ಮಕುಟಮಂ ದಂತರಂಗಳಂ ಮುರಿಯುಲೊದ್ದು ನಿಲಿಸಿದಂ ಪಗೆ ಪಾರ್ವತ್ಯಮಂ (ಕುಶಂಗ. ೬೩-೩೨).

[ದೇ. ॥ ತಮಿ. ಪಾರುಪತ್ತಿಯಂ, ಪಾರಪತ್ತಿಯಂ ; ಮಲ. ಪಾರ್ವತ್ಯ ; ತುಳು. ಪಾರುಪತ್ಯ, ಪಾರುಪತ್ಯೊ ; ತೆಲು. ಪಾರುಪತ್ತೆ, ಪಾರ್ಪತ್ತೆ]

**ಪಾರುಪತ್ಯಗಾತಿ** (ನಾ). ಮೇಲ್ವಿಚಾರಣೆ ನಡೆಸುವವಳು ; ಉಸ್ತುವಾರಿ ಮಾಡುವವಳು : ಅಗ್ರಫೇನಾಪೆತೊಸ್ರೀವ್ಮಾ . . . ಯಜಮಾನಿಯು ಮಗನ ಬಳಿ ಪಾರುಪತ್ಯಗಾತಿಯಾಗಿದ್ದಳು (ಕೃಕು. ೦೩).

[ ಪಾರುಪತ್ಯ + -ಕಾತಿ $_1$ ]

**ಪಾರುಪತ್ಯಗಾರ** 'ಪಾರಂಪತ್ಯಗಾಱ' ನೋ.

**ಪಾರುಪತ್ಯಗಾರಿಕೆ** (ನಾ). ಆಳ್ವಿಕೆ ; ಪ್ರಭುತ್ವ : ಹಿಂದಿಯ ಪಾರುಪತ್ಯ ಗಾರಿಕೆಗಿರುವ ಹಕ್ಕನ್ನು ಪ್ರಶ್ನಿಸಿ ಹಲವಾರು ಪ್ರಾಂತ್ಯಗಳು ಪ್ರತಿಭಟ ಸಿದುವು (ಶಿಕ್ಷದ. ೬೬೦). [ಪಾರುಪತ್ಯಗಾರ (< ಪಾರುಪತ್ಯಗಾಱ) + -ಇಕೆ]

**ಪಾರುಪತ್ಯಗಾಱ**, ಪಾರಪತೆಗಾರ, ಪಾರಪತ್ತೆಗಾಱ, ಪಾರಪತ್ಯಗಾರ, ಪಾರುಪತಿಗಾರ, ಪಾರುಪತ್ತೆಗಾರ, ಪಾರುಪತ್ಯಗಾರ, ಪಾರುಪತ್ಯಕಾಱ, ಪಾರ್ಪತ್ತೆಗಾರ, ಪಾರ್ಪತ್ಯಗಾರ (ನಾ). ಮೇಲ್ವಿಚಾರಣೆ ನಡೆಸುವವನು ; ಉಸ್ತುವಾರಿ ಮಾಡುವವನು : ಆವಾವ ಪಾರುಪತ್ಯಗಾಱ ಬಂದ ಅವ ಯಿದ ಅಳುಹಿದರೆ ಯಿಾ ಶ್ಲೋಕಾರ್ಥದ ಪಾಪಕ್ಕೆ ಹೋಹರೂ (ಎಕ. III (R), ಗುಂಡ್ಲುಪೇ. ೦೩೬-೩೬ : 1492) ; ನಮ್ಮ ಬೂದಿಹಾಳಸೀಮೆಯ ಪಾರುಪತ್ಯಗಾಱ ಲಖರಾಜನ ತಿಮ್ಮಪಯನ ಕಳುಹಿಸಿದ ಶಾಸನದ ಕೊಡಗಿಯಾ ಕಲ್ಲನು × × × ನೆಟ್ಟಿಸಿ ಕೊಟ್ಟೆವು (ಎಕ. VI. ಕಡೂರು. ೦೨೬-೦೦ : 1532). **ಪಾರಪತೆಗಾರ** : ರಾಜೇಶ್ರೀದೊರೆಗಳು ತಮ್ಮ ಹುಜೂರು ಸಾಮದೀರು ಪಾರಪತೆಗಾರ ಕಸಬೆ ಗವುಡ ಗ್ರಾಮಾನುಗ್ರಾಮಗಳ ಗವುಡರು (ಎಕ. XI. ಹೊಳಲ್ಕೆ. ೨೩-೬೦ ; 1665). **ಪಾರಪತ್ತೆಗಾಱ** : ಪಾರಪತ್ತೆಗಾಱ ಸಹ ವರುಸ ೧೬ ಮೂಱಗಳಿಯ ಮರ್ದನೆಯ × × ತಿಂಗಳು ೧೬ . . . ಆಚಂದ್ರಾರ್ಕವಾಗಿ ನಡಉದು (ಎಕ. VI (R). ಶಾಂಕರ. ೦೬೨-೨೮ ; 1526). **ಪಾರಪತ್ಯಗಾರ** : ಮಹಾಮಾತ್ರರು ಎಂಬ ಹೆಸರುಳ್ಳ ಅಧಿಕಾರಿಗಳು . . . ಪಾರಪತ್ಯಗಾರರ, ಲೆಕ್ಕಪತ್ರಗಳ ಸಂರಕ್ಷಕರ ಮತ್ತು ನಾಣ್ಯನಿರ್ಮಾಪಕರ ಕೆಲಸಗಳನ್ನೂ ಸಹ ನೋಡಿಕೊಳ್ಳುತ್ತಿದ್ದರು (ಕುಕುಸಾ. ೯೩). **ಪಾರುಪತಿಗಾರ** : (೩). **ಪಾರುಪತ್ತೆಗಾರ** : ಮಹಾರಾಜೇಶ್ರೀಯವರ ಅಪ್ಪಣೇ ಪ್ರಕಾರಕ್ಕೆ ಜಿಗಣಿಸ್ಥಳದ ಅಧಿಕಾರ್‍ರು ಪಾರುಪತ್ತೇಗಾರ್‍ರು ಶಾನುಭಾಗರು ಗವುಡ ಜಿಗಣಿ ಪಂಚಾನನದವರು ಸಹ ಮಾನ್ಯದ ಭೂಮಿ × × × (ಎಕ. IX. ಆನೇಕ. ೯೦-೩ ; 1765); **ಹೊಳೆಯ** ದಡದಲ್ಲಿ ಇರುವುದು ನರಸಿಂಹಸ್ವಾಮಿಯ ದೇವಸ್ಥಾನ. ಇದರ ಪಾರುಪತ್ತೇಗಾರರು ಒಳ್ಳೆ ವಯಸ್ಸಾದವರು (ಗಸುಡಾ. ೦೬೩). **ಪಾರುಪತ್ಯಗಾರ** : ತೆರಣಾಂಬೆಯ ಚಾವಡಿಗೆ ಚಿಕ್ಕ ಪಾರುಪತ್ಯಗಾರರು ಈ ಲೇಖದಲ್ಲಿ ಕಳವಾಸಿಯಕ್ಕೆ ಕೊಟ್ಟು ಅಲ್ಲಾಳದೇವರ ರಥೋತ್ಸವನು ಆಚಂದ್ರಾರ್ಕಸ್ಥಾಯಿಯಾಗಿ ನಡಿಸಿ ಬಹಿರಿ ಎಂದು ಬಿಡಿಸಿ ಕೊಟ್ಟ ಧರ್ಮಶಿಲಾಶಾಸನ (ಎಕ. XIV. ಗುಂಡ್ಲುಪೇ. ೬-೦೩ ; 1520) ; ಪಾರುಪತ್ಯಗಾರನಾಗಲಿ ... ಸುಂಕದ ಮಣೇಗಾರನಾಗಲಿ ಆರು ಇದಕ್ಕೆ ವಿಗಡ ಆಚರಿಸಿದರು ಅವರು ತಂದೆ ತಾಯಗಳ ವಾರಣಾಸಿಯಲಿ ಕೊಂದ ಪಾಪಕೆ ಹೋಹರು (ಎಕ. IX. ದೊಡ್ಡಬ. ೩-೨೦ ; 1596) ; ನೀನು ಅಡಿಗೆಮನೆಯ ಪಾರುಪತ್ಯಗಾರರಿಗೆ ಅಧ್ಯಕ್ಷನಾಗಿ . . . ಸುಖವಾಗಿ ಇರು (ಕೃಪಾಪಿ. ೦೬) ; ಅವರು ದೇವಸ್ಥಾನದ ಪಾರುಪತ್ಯಗಾರರಾಗಿದ್ದರು (ಬಕಕಂ. ೦೦೯). **ಪಾರುಪತ್ಯಕಾಱ** : ಕಾಳಮಲ್ಲಿಕಾರ್ಜುನ ದೇವರು ಪಾರುಪತ್ಯಕಾಱ ಕೆಂಪಿನಲಿಂಗಣೊಡೆಯರು ದೇವರು ಕೂಡಿ ಕಟ್ಟಿದ ಭಾವಿಯ ಜೀರ್ಣೋದ್ಧಾರವನು ಮಾಡಿದರೂ (ಎಕ. IV (R), ಕಾಡುಗಾ. ೨೬೨-೯ ; 1540). **ಪಾರ್ಪತ್ತೆಗಾರ** : ನಾನೂ ಅಯ್ನೋರೂ ಮತ್ತು ಪಾರ್ಪತ್ತೇಗಾರ್‍ರೂ ಮೂವರೂ ದೀವಟಿಗೆ ಹಿಡ್ಕೊಂಡು ಗುಡಿ ಮೂರು ಸುತ್ತ ಬಳಸಿ ನೋಡಿ (ಇಬದು. ೩೫). **ಪಾರ್ಪತ್ಯಗಾರ** : (ಮೈಗೆಜೆ. IV, ೬೬೨).

[ ಪಾರುಪತ್ಯ + – ಕಾಱ ]

**ಪಾಱುಪತ್ಯಕಾಱ** ' ಪಾರುಪತ್ಯಗಾಱ ' ನೋ.

**ಪಾರುಪ** ' ಪಾರ್ವ ' ನೋ.

**ಪಾರುವಾಣ$_1$** ' ಪಾರಿವಾಳ$_1$ ' ನೋ.

**ಪಾರುವಾಣ$_2$** ' ಪಾರಿವಾಳ$_2$ ' ನೋ.

**ಪಾರುವಿಳಿ** (ನಾ). ನೊಗದ ಆ ಕಡೆ, ಈ ಕಡೆಗಳಲ್ಲಿರುವ ಹಗ್ಗ : ಪಾರುವಿಳಿಯ ಹೆಗಲೊಳು ಹೂಡಿ ನೊಗನನು ಸಾರಥಿಗಳನು ಸತ್ಕರಿಸಿ . . . ಪೊಱವಮ್ಮಟ್ಟರಂದಾ ರಥಿಗಳು ರಥವೇಱ (ಶ್ರೀಪಾಂ. ೦೩-೬೯).

[ ಪಾರು$_1$ + ವಿಳಿ$_2$ ]

**ಪಾರುವೀಳೆಯ** (ನಾ). (ದೇವರು, ಅರಸರು ಹಾಗೂ ಅಧಿಕಾರಿಗಳ) ದರ್ಶನವನ್ನು ಮಾಡಿದವರಿಗೆ ಕೊಡುವ ಗೌರವತಾಂಬೂಲ ; ಬೆಳ್ಳಿಬಟ್ಟಲಂತೆಸೆವ ಒಪ್ಪದ ಪಾರುವೀಳೆಯ[ಪಾಠಾಂ. ಳ್ಯ]ಗಳನು ಬಾದುರಗೆ ಡಿಳ್ಳಿಶ್ವರನೀಯೆ ಮಲ್ಲುಖಾನರು ತಳ್ಳಂಗೊಂಡರದೆಯೊಳು (ಕುಮಾರಾಮ. ೦೯-೯೬). [ ಪಾರು$_1$ (<ಪಾರ್$_1$) + ವೀಳೆಯ ]

**ಪಾರುವೇಟೆ** ' ಪಾರಿವೇಂಟೆ ' ನೋ.

**ಪಾರುಶದ** (ನಾ). ರಾಜ, ದೇವತೆ ಮುಂತಾದವರ ಸೇವಕವರ್ಗ,– ಪರಿವಾರ : ನಾರದಾದಿ ಮುನೀಶ್ವರರ ಪರಿವಾರವೊಂದೆಸೆಗೊಂದೆಸೆಗೆ ನಿಜ ಪಾರುಶದ ಪರಿವಾರವಾ ಸುರವರರ ಪರಿವಾರ . . . ಪರಿವರಿಸಿರಲು (ಶಿಭಾಗ. ೬-೯-೩೨). [ <ಸಂ. ಪಾರಿಷದ ]

**ಪಾರುಷ್ಯ** (ನಾ). ೧. ಒರಟುತನ ; ಕಾಠಿಣ್ಯ. ೨. ನಿಷ್ಠುರತ್ವ : ಪಾರುಷ್ಯ ಎಂದರೆ ನಿಷ್ಠುರತ್ವ (ಭಾಕತ್ತ. ೦೧೦). ೩. ಕಠಿಣವಾದ ಮಾತು ; ಬಿರುಸುನುಡಿ : "ಪಾರುಷ್ಯ, ಅತಿವಾದಃ – ೨ ಅಪ್ರಿಯವಾಗಿ ನುಡಿಯುವಿಕೆ" (ಸಿದ್ಧಾಂತಿ. ೩೩). ೪. ಬೃಹಸ್ಪತಿ. [ಸಂ.]

**ಪಾರೆ$_1$**, ಅರೆ$_1$, ಹಾರೆ (ನಾ). ನೆಲವನ್ನು ಅಗೆಯುವುದು, ಕುಟ್ಟುವುದು ಮುಂತಾದ ಕೆಲಸಗಳಿಗೆ ಉಪಯೋಗಿಸುವ ಕಬ್ಬಿಣದ ಒಂದು ಉಪಕರಣ ; ಗಡಾರಿ : ಕಡುಗಾಯ್ದ ಪಾರೆಯೊಂತುಂ ಸುಡಲರಿಯದು ಸತ್ಯಮುಳ್ಳನಂ ಪುಸಿವವನಂ ಸುಡುವುದು (ರಕರಾಜಪು. ೬-೦೪೦) ; ಆಕೆ ತನ್ನ ಶುಚಿತನಕ್ಕೆ ದಿವ್ಯಮಂ ಪಿಡಿವೆನೆಂದು ಪಾರೆಯಂ[ಪಾಠಾಂ. ಪಾಳವಂ] ಕಾಸುವ ಸಮಯದೊಳ್ (ಪುಣ್ಯಾಸ್ರ. ೩-೬೬ ಪ) ; ದ್ರೋಣಕ್ಕೆ ಡೆಗ್ಗಪರ ಪಾರೆ ನೆಲಗುದ್ದು ದ್ರೋಣ ಸಬಳ ಶರಗಳ ಸಂಕುಳವೆದ್ದಿತು ಕೊಲ್ಲಾರದೊಳಾ ಬಿಂಕಕಾತಿಯ ದಂಡಿನೊಳಗೆ (ಕುಮಾರಾಮ. ೯೦-೫೦). **ಅರೆ$_1$** : ಚರಿತದಿಂದೊಂದುದ್ದವಾ[ಪಾಠಾಂ. ಬಾ]ರೆಯಂ ಪಿಡಿತಂದು ಪರಮವೈರಾಗ್ಯಯುಕ್ತಂ ಹರುಷದಿಂ ಬಂದು (ಪಾಂಗೀರ. ದೇ. ೨೬೯-೫). **ಹಾರೆ** : "ಹಾರೆ ಭೇದಿಯತ್ತುಂ" (ಪಂಪಭಾ. ೦೦೯-೨); ಕೂರ್ಪುವೆತ್ತ ಧಾರೆ ತೋರ ಹಾರೆಗಾಸಿ ಗುದದೊಳಿಟ್ಟು . . . ಸುಡುವರು (ಕಾವಿಸಂತ. ೬-೦೯೩); ಹಾರೆಯಾಕಾರದ ಚಂಡವೇಗೆಯು ರಾಯ ವೀರಭುಜದಿ ತೂಗಿ ನೋಡಿ ಪಾರುವಾಣೆಯ ತೆಂಕಮುಖ ಮಾಡಿ ತೆಂಕಮುಖಾರವಿಂದಾಯತನಾದ (ಪಟ. ೨೯-೬೬); ಚಪ್ಪಡಿಕಲ್ಲನ್ನು . . . ಹಾರೆಯಿಂದ ಮಿಾಟಿ ಒಳಗೆ ಹೋಗಿ ನೋಡಲು ಒಂದು ಅಂಕಣದ ಚಿಕ್ಕ ಮನೆಯಾಗಿತ್ತು (ಹುಟ್ಟಿಹ. ೬೯).

[ದೇ.‖ ತಮಿ. ಪಾರೈ ; ಮಲ. ಕುವಿ. ಪಾರ ; ತುಳು. ಪಾರೆಂಗಿ ; ತೆಲು. ಪಾರ, ಪಾಱ ; ಕೋತ, ತೊದ. ಪಾರ್]

**ಪಾರೆ$_2$** (ನಾ). ಬಂಡೆ : ಆ ಪಾರೆಯನ್ನು ಹಳ್ಳದಲ್ಲಿ ತಳ್ಳುವುದಕ್ಕೆ ಅದರ ಕೆಳಗೆ ಡೊಗರು ತೋಡುತ್ತಾನೆ (ಕಥಾಮಂ. IV, ೬); ಪಾರೆಯನ್ನು ಹತ್ತಿ ಅದರ ಮೇಲೆ ಹೋಗಿ ನಿಂತರೆ, ಎಷ್ಟು ಚನ್ನಾಗಿ ಕಾಣುತ್ತದೊ ಸುತ್ತಲೆಲ್ಲ (ಕುಂಶಿಕೊ. ೨೩). [ದೇ.‖ ತಮಿ. ಪಾಱೈ, ಪಾರ್; ಮಲ. ಪಾಱ; ತುಳು. ಪಾಡೆ; ಕೊಡ. ಪಾರೆ ; ಪರ್ಜಿ. ಪಾರ]

**ಪಾರೆ$_3$** 'ಪಹರೆ' ನೋ.

**ಪಾರೆ$_4$** (ನಾ). ಶರೀರದ ಒಂದು ಭಾಗ ; ಅವಯವ : ವೆತ್ತುರಂ ಕುಡಿದು ಸೀನೆಣದೊರ್ಪಿಡಿಖಂಡಮಂ ಪತ್ತೆ ತೆಱಱದು ನೆಣದೊಟ್ಟಿಲ ಪಾರೆಯುಮಾರೆಯುಂ ತುತ್ತಿ ನುಂಗಿ (ಕಾವ್ಯಾವ. ೬೨೩).

[?. / ತುಳು. ಪಾರೆ=ಭುಜ]

**ಪಾರೆಯಂಬು** (ನಾ). ಹಾರೆಯಾಕಾರದ ಬಾಣ : ಓರೊಂದೆ ಪಾರೆಯಂಬಿನೊಳೋರೊಂದೆ ಗಜೇಂದ್ರಮುರುಳೆ (ಶಂಪಾ. ೦೦-೬೦); ವಿಜಯನು ಅವರ ಮೇಲೆ ಕೆಂಗರಿಗಳ ಪಾರೆಯಂಬುಗಳನ್ನು ಕರೆದು . . . ಸುಶರ್ಮನ ತಲೆಯನ್ನು ಹಾರಿಸಿದನು (ಕಾಪುಕ. ೨೩). [ಪಾರೆ$_1$ + ಅಂಬು]

**ಪಾರಿವಾಯ್** (ನಾ). ಹಾರೆಯ ತುದಿ, — ಮೊನೆ: ಪಂದಿಯ ಪಿಂದನೆಯ್ದಿ ಪಿಡಿವಿಟ್ಟಯ ನೆಟ್ಟಿಱ ಪುಲ್ಲೆಯಂ ತೆಱಿಂದಂದೆಸು ಪಾರಿವಾಯ ಸರಲಿಂ (ಕುಹಾಸೇ. ೨-೦೬). [ಪಾರ್$_1$+ಬಾಯ್]

**ಪಾರ್ಯಿಸು** 'ಪಾರಯಿಸು' ನೋ.

**ಪಾರೋಕ್ಷ** (ನಾ). ಕಣ್ಣಿಗೆ ಕಾಣದಿರುವುದು; ರಹಸ್ಯವಾದುದು: ಪಾರೋಕ್ಷವೆಂಬುದು ತಿಳಿವುದದು ಅಪರೋಕ್ಷವೆಂಬುದು ನೆಲೆಗೆ ಕಂಡದು ಬಳಿಕ ಪಾರೋಕ್ಷವದು ಅದು ಮರೆಯು (ಹ್ಯಾಸಿಸಿ. ೩-೭೯). [ಸಂ.]

**ಪಾರೋಡು** 'ಪಾಱೋಡ' ನೋ.

**ಪಾರ್ಕು$_1$** (ನಾ). ಭುಜಾಗ್ರ; ಅಂಸ; ಹೆಗಲು: ಸೂಸಿದ ಖಂಡ ಮುರುಳ್ದ ತಲೆ ಪಱಿದು ಕರಂ ಪಸರಿಸಿದ ಪಾರ್ಕು ಕರುಳೊಕ್ಕುಸುವಿಟ್ಟ ದೆಣಂ ದಲೆತ್ತವಾ ರಣರಂಗಂ (ನೇಮಿಪು. ೧೦-೦೩೪); ಬಾಣಘಾತದಿಂ ಪಾಱುವ ಪಾರ್ಕುಗಳ್ ಪರೆದ ಪಣ್ಣಲೆಗಳ್ . . . ವಾಜಿ ವಾರಣ ವರೂಥವುಸಂಜಿಸಿದತ್ತು ಸುತ್ತಲುಂ (ಮುಹಾಪೇ. ೬-೦೦೯); ಅಲ್ಲಿ ಕಕುದ ಸಂಬಂಧಿಯಪ್ಪ ಪಾರ್ಕುಗಳ್ಗೆ ಯೆಸಯ(ಅಂಸವೆ)ಂಬ ಪೆಸರಕ್ಕುಂ (ಅಶ್ವಶಾ. ೬೬-೦೬). [<ಸಂ. ಪಾರ್ಶ್ವ]

**ಪಾರ್ಕು$_2$** (ನಾ). ವಿಹಾರಪ್ರದೇಶ; ಉದ್ಯಾನ: ಅವರು . . . ಭೇಟಿ ಕೊಡದ ಪಾರ್ಕುಗಳಿರಲಿಲ್ಲ (ಸೋತುಗ. ೬೩). [←ಇಂ. Park]

**ಪಾರ್ಕೆ** (ನಾ). ಹಾರುವಿಕೆ; ನೆಗೆತ: ಲಂಘನಂ=ಒಣಗುಂ, ಪಾರ್ಕೆಯುಂ (ಶಾಬಶ್ಯ. ೦೦); ಜಳಪರಿಪೀತವಾರಿದವುನಾನೆಗಳಿಂದು ತುಡುಂಕು ವಾನೆಗಳ್ಗಳಿಚಳನಂಗಳಿಂದೊಗೆದ ವಾಃಕಣವುಂ ಸೊದೆಗೆತ್ತು ನುಂಗುವಾ ಜಳಚರದಾ ಪರಿಸ್ಫುರಣಮುಂ ಮಿಗೆ ಮುತ್ತಿನ ಪಾರ್ಕೆಯಿಂದು ಕೈದಳಿ ವಪುರೀಜನಂಗಳ ಬೆಡಂಗಿನೊಳೊಪ್ಪಿತು ಸಿಂಧುಬಂಧುರಂ (ಶಂಪ್ರಶು. ೦-೬೨). [ಪಾರ್$_2$ (<ಪಾಱು$_1$) + — ಕೆ]

**ಪಾರ್ಖವಣೆ** 'ಪಾರಖಾವಣೆ' ನೋ.

**ಪಾರ್ಗುಪ್ಪೆ** 'ಪಾಱುಂಗುಪ್ಪೆ' ನೋ.

**ಪಾರ್ಟಿ** (ನಾ). ೧. ಪಂಗಡ; ಪಕ್ಷ: ತಾನು ಕ್ರಾಂತಿಕಾರಿ ಪಾರ್ಟಿಗೆ ಸೇರಿದ್ದೇನೆ ಎಂದು ನಿನ್ನೆ ತಾನೇ ಆತ ಹೇಳಿದ (ಅತ್ಯಾಶೆ. ೭೬); ನಮ್ಮ ಹಳ್ಳಿಯಲ್ಲಿ ಹಿಂದೆ ಪಾರ್ಟಿಯಾಗಿ ಆದರ ಕಷ್ಟ ನಿಷ್ಠೂರಗಳನ್ನು ಅನುಭವಿಸಿ ಇತ್ತೀಚೆಗೆ ಒಂದೇ ಗುಂಪಾಗಿದ್ದರು (ಹುಟ್ಟಿಹ. ೬೦). ೨. ಸಂತೋಷ ಕೂಟ: ಗೆಳೆಯರ ಒತ್ತಾಯಕ್ಕೆ ಅನಂತ ಊರು ಮುಂದಿನ ಗುಡ್ಡದ ಮೇಲೆ ಪಾರ್ಟೀ ಕೊಟ್ಟನು (ಜೀದಾಸ.೨). [←ಇಂ. Party]

**ಪಾರ್ಟು** (ನಾ). ೧. ವಿಭಾಗ; ಖಂಡ; ಭಾಗ: ಈ ಪುಸ್ತಕವನ್ನು ಮೂರು ಪಾರ್ಟುಗಳನ್ನಾಗಿ ಮಾಡಿ ಪ್ರಕಟಿಸಲಾಯಿತು (ರೂಡಿ). ೨. ನಾಟಕ, ಸಿನಿಮಾಗಳಲ್ಲಿ ನಟನಟಿಯರಿಗೆ ವಹಿಸುವ ಪಾತ್ರ: ಅವಳು ಮರಾಠಿ ನಾಟಕದಲ್ಲಿ ಬಹಳ ಚೆನ್ನಾಗಿ ಪಾರ್ಟು ಮಾಡುತ್ತಾಳೆ! (ಸ್ವಕ್ಯಹೂ. ೨೩೬); ರಾಧಾ ನಾಟಕದಾಗ ಕೃಷ್ಣನ ಪಾರ್ಟ ಇದ್ದಾಂಗ ಕಾಣ್ತದ ನಿಂದು? (ಶಮ್ಮಟಿ. ೦೭). [←ಇಂ. Part]

**ಪಾರ್ಥ** (ನಾ). ೧. ದೊರೆ; ರಾಜ. ೨. ಪೃಥೆಯ ಮಗ; ಅರ್ಜುನ: ಇಮ ಚಕ್ರವ್ಯೂಹಮಿಾ ವ್ಯೂಹಮನೊಡೆಸದಟಂ ಪಾರ್ಥಂ (ಹಂಪೀಹ. ೦೦-೬೭); ಉರಗೇಂದ್ರಲೋಕಮಂ ಪೊಕ್ಕುರಗರೋಳಿಱುದುರಗಪತಿಯ ನಿಜಸುತೆಯೊಡನಾದರದಿಂ ಜಯಲಕ್ಷ್ಮಿಯೊಳೊಡವೆರೆದಂ ಕೀರ್ತಿಯೊಳಮೊಂದೆ ಪಸೆಯೊಳೆ ಪಾರ್ಥಂ (ಗದಾಯು. ೨-೯೨); ಸಂಹರಿಸು ಮುತ್ತರಿಭುವನೆಂದುರುತರದ ಭಕ್ತಿಯಲಂದು ಸೈಗೆಡೆದಿರ್ದನಾ ಪಾರ್ಥ (ಕುಮ್ಯಾಕ. ೬-೯೭). ೩. ಒಂದು ನಕ್ಷತ್ರದ ಹೆಸರು: ಪಾರ್ಥನನ್ನು ಗುರುತಿಸಲು ಸಮತ್ರಿಕೋನಾಕಾರದ ಮೂರುನಕ್ಷತ್ರಗಳು ಸಹಾಯಕವಾಗುತ್ತವೆ (ಶಕ್ಷಕ್ರ. ೨೯). [ಸಂ.]

**ಪಾರ್ಥಕುಮಾರ** (ನಾ). ಅರ್ಜುನನ ಮಗ; ಅಭಿಮನ್ಯು: ಶಿವಶಿವ ನುಡಿವ ೯ವಿ ಯಾರಿನ್ನು ಪಾರ್ಥಕುಮಾರನಾಹವವ (ಕುಮ್ಯಾದ್ರೋ. ೬-೬). [ಪಾರ್ಥ + ಕುಮಾರ]

**ಪಾರ್ಥಜ** (ನಾ). ೧. ಅರ್ಜುನನ ಮಗ. ೨. ಅಭಿಮನ್ಯು. ೩. ಬಭ್ರುವಾಹನ: ಪಾರ್ಥಜನ ಶರವರ್ಷದೊಳ್ಳನೆಯುವರಿಲ್ಲ ಪಾಂಡವನ ಪರಿವಾರದೊಳ್ (ಜೈಮಿಭಾ. ೨೨-೪೦); ಚಿತ್ರಾಂಗದೆಯ ಬೇಟಬರರ್ಪ ಶಿಬಿಕೆಯೊಡೆ ಪಾರ್ಥ ಪಾರ್ಥಜರಿರ್ವರುಂ ಕಾಲ್ನಡಗೆಯೊಂದೆ ಸಾರ್ದರ್ (ಶತ್ಯಾಂಗ. ೯೯-೨೪೪೬). [ಸಂ.]

**ಪಾರ್ಥಿ** (ನಾ). ೧. ಅರ್ಜುನನ ಮಗ. ೨. ಅಭಿಮನ್ಯು: ಹರನ ನಯನಜ್ವಾಲೆ ಪಾರ್ಥಿಯ ಸರಳ ಕಿಡಿಯುಲಿ ಪಲ್ಲಟಿಸೆ ಸಂಗರದೊಳಗೆ ಸ್ಮರಿಸಿದು ಸದೆದನು ಸಲಸೈನಿಕರ (ಕುಮ್ಯಾದ್ರೋ. ೫-೨). ೩. ಬಭ್ರುವಾಹನ: ಎನ್ನ ವಿಕ್ರಮವನೀಗ ನೋಡೆನುತೆದ್ದು ಕರೆಸಿದಂ ಪಾರ್ಥಿ ನಿಜಸೈನಿಕವನು (ಜೈಮಿಭಾ. ೨೯-೨೬). ೪. ಮತ್ತಿಯ ಮರ. [ಸಂ.]

**ಪಾರ್ಥಿವ** (ಗು). ೧. ಪೃಥ್ವೀ ಸಂಬಂಧವಾದ; ಭೌತಿಕವಾದ; ಭೂಮಿಗೆ ಸಂಬಂಧಿಸಿದ: ಈ ಅನಂತ-ಕೋಟಿ-ಬ್ರಹ್ಮಾಂಡದ ಅನಂತ ಅಸ್ತಿತ್ವದ ಹಿನ್ನೆಲೆಯಲ್ಲಿ ವಿಮರ್ಶಿಸಿದಾಗ ಹೊಳೆದೀತು ನಮ್ಮಾ ಕ್ಷಣ ಭಂಗುರವಾದ ಪಾರ್ಥಿವ ಜಗತ್ತನ್ನು ನೋಡುವ ದೃಷ್ಟಿ (ಮೂರುದಾ. ೨೦೬). ೨. ಭೂಮಿಯನ್ನು ಆಳುವ; ಅರಸುವಂಶದ: ಪಾರ್ಥಿವ ಚೂಡಾರತ್ನಂ ತೀರ್ಥಂಕರೇಂದ್ರೂದಯಾಚಳಂ ಪ್ರಾಪ್ತಾನೇಕಾರ್ಥಂ ಪರಿಪಾಳಿತಬುಧಸಾರ್ಥಂ ಸಿದ್ಧಾರ್ಥನೆಳೆಯೊಳಱೆ ಕೃತಾರ್ಥಂ (ವರ್ಧಪು. ೦೬-೪೯). ೩. ಇಹಲೋಕಕ್ಕೆ ಸಂಬಂಧಿಸಿದ; ಐಹಿಕವಾದ: ಪಾರ್ಥಿವ ಪರಿಮಿತಿಯಲ್ಲಿ ಮುಂದುಡಿ ಹೋಗದಂತೆ. . ಅನಂತತೆಯು ಚಿದಾನಂದದ ಆಸೆ ಹುಟ್ಟಿಸಿದ್ದು ಈ ಸ್ವಪ್ನಲೋಲತೆ (ದೀಕನ್ನ. ೨). (ನಾ). ೪. ಪೃಥ್ವಿಗೆ ಸಂಬಂಧಿಸಿದುದು; ಭೌತಿಕವಾದುದು: ನಾಟಕವು ನಾಟಕಕಾರನ ಸಂತಾನವು, ಅವನ ಭಿನ್ನತೆಯು ಪಾರ್ಥಿವವಾಗಿದೆ (ಶ್ರೀಂಪರ ೯೦). ೫. ಭೂಮಿಯನ್ನು ಆಳುವವನು; ರಾಜ: "ರಾಜಾ:, ರಾಜನ್ಯ: . . . ಪಾರ್ಥಿವ:, ನರದೇವ:, ಲೋಕಪಾಲ: —ಈ ೧೨ ಅರಸು" (ಹಲಾಯು. ೬೯-೨೬೭); ಅವಲೋಕಿಪುದುಂ ನವವನಜವಲ್ಲಿಗೆಱಗುವ ಶ್ರುಷಟ್ಪಯುಂಗಳಿವೆನೆ ಪಾರ್ಥಿವನ ನಯನಂಗಳೆಱಗಿದು ಪವಯುವದಿಂ ನಿಂದ ಗಾಯಿಕಾಯುವತಿಯರೊಳ್ (ಶಾಂತಿಪು. ೬-೩೩); ಇಱುಯದೆ ಬೇಡಿದೊಡೀಯದೆ ಬಱದೆ ಕುಲೀನತೆಗೆ ಬೆಸದು ಪಾರ್ಥಿವ ಶಬ್ದಕ್ಕೆಱವಟ್ಟನಿಸಿ ಧರಿತ್ರಿಗೆ ಪೊಱಯೆನಿಪಂ ರಾಜನಾಮಧಾರಕನಲ್ತೇ (ಹಂಪಾಸಾ. ೪-೪೦). ೬. ಶಿವ; ಈಶ್ವರ. ೭. ಮಣ್ಣಿನಲ್ಲಿ ಹುಟ್ಟಿದುದು; ಮರ, ಗಿಡ ಮೊದಲಾದುವು. ೮. ಆಕಾಶ: "ಶಿತಿಕಂಠ ಭೂಪ ನಭ ಪುರಮಿತಿ ನಾಲ್ಕುಂ ಪಾರ್ಥಿವಾಖ್ಯೆಯೊಸೆಕುಂ ಜಗದೊಳ್" (ನಾನಾಕಂ. ೬೩). ೯. ಅರುವತ್ತು ಸಂವತ್ಸರಗಳಲ್ಲಿ ಹತ್ತೊಂಬತ್ತನೆಯ ಸಂವತ್ಸರದ ಹೆಸರು: ಆ ಪರಾಭವ ಪ್ರಭವ ವಿಭವ . . . ಪಾರ್ಥಿವ . . . ಅಕ್ಷಯವೆಂದಱವತ್ತು ತಱನಾಗಿಹುದು (ಐಪೀಳ. ೬೨೦). ೧೦. ಮಣ್ಣಿನ ಪಾತ್ರೆ; ಗಡಿಗೆ. ೧೧. ದೇಹ; ಒಡಲು. [ಸಂ.]

**ಪಾರ್ಥಿವ ಕುಲ** (ನಾ). ರಾಜಮನೆತನ; ಅರಸುವಂಶ: ಮೂರ್ಧಾಭಿಷಿಕ್ತ ಪಾರ್ಥಿವಕುಲಪ್ರಸೂತರುಂ ವಿನಯೋಪಪನ್ನರುಂ ಕೋವಿದರುಂ . . . ಪೊಱಗೆ ತುರಗಾರೂಢರ್ ಪ್ರಣಾಮಲಾಲಸರಾಗಿ ಬಾಗಿಲೊಳ್ ಪಾರ್ದಿರ್ಪರ್ (ಕಾದಂಪೂ. ೪೩೦); ಸದ್ವಂಶಸಂಜಾತಂ ಪಾರ್ಥಿವಕುಲ ವರಿಷ್ಠಪಂಶಸಂಭವಶ್ರೇಷ್ಠಂ! (ಶತ್ಯಾಂಗ. ೩೬-೯೯೦). [ಪಾರ್ಥಿವ + ಕುಲ]

**ಪಾರ್ಥಿವಗುಣ** (ಗು). ೧. ಪೃಥ್ವಿಯ ಸಂಬಂಧವುಳ್ಳ : ಭೂಗುಣವುಳ್ಳ. ೨. ರಾಜಯೋಗ್ಯವಾದ ಗುಣದಿಂದ ಕೂಡಿದ ಕ್ಷತ್ರಿಯ ಗುಣದಿಂದ ಕೂಡಿದ : ಪ್ರಿಯದಿಂದೊಂದೆಡೆಯಿರವಂ ಬಯಸಿದ ಶೌರ್ಯಾದಿಸಕಲಪಾರ್ಥಿವಗುಣಸಂಚಯದಭ್ಯರ್ಥನದಿಂದಾಶ್ರಯರೂಪನನಾ ಮಹೀಶನಂ ಬಿಡಿ ಪಡೆದಂ (ಕಾದ್ಬ.ಕ. ೩-೨೪). (ನಾ). ೩. ಪೃಥ್ವಿಯ ಸಂಬಂಧವುಳ್ಳುದು ; ಭೂಗುಣದಿಂದ ಕೂಡಿದುದು. ೪. ರಾಜಯೋಗ್ಯಗುಣದಿಂದ ಕೂಡಿದವನು ; ಕ್ಷತ್ರಿಯಗುಣದಿಂದ ಕೂಡಿದವನು. ೩, ೪ : ಪಾರ್ಥಿವಗುಣಯುತಮಾಗಿಯುಮರ್ಥಿತ ಫಲದಾಯಿಯಾಗಿಯುಂ ನಿನ್ನೊಳ್ ತಾಂ ವ್ಯರ್ಥತೆಯಂ ಪಡೆಗುಂ ಪರಮಾರ್ಥವಿಚೇತನತೆಯಿಂದೆ ಕಲ್ಪಕುಜಾತಂ (ಕಂದ. ೩-೪೪).

[ಪಾರ್ಥಿವ + ಗುಣ]

**ಪಾರ್ಥಿವತ್ವ** (ನಾ). ಮಣ್ಣಿನ ಗುಣದಿಂದ ಕೂಡಿದುದು : ಅರಸು ಗುಣಕ್ಕಾಗರವಾದರಸನೆ ಪಾರ್ಥಿವನದೊಂದುವಿಲ್ಲದೆ ಬೆಸದಿರ್ಪರರಸನವಂ ವ್ಯಕ್ತಿಂದಸ್ವರೂಪದಿಂ ಪಾರ್ಥಿವತ್ವಮುಂ ಪ್ರಕಟಿಸುಗುಂ (ಶಾಬ್ದಂ.ಕ. ೩೦೦).

[ಸಂ.]

**ಪಾರ್ಥಿವಪುತ್ರ** (ನಾ). ೧. ರಾಜಪುತ್ರ; ಕ್ಷತ್ರಿಯ ಕುಮಾರ : ಕುಂದಕರಿಯ ಕವಚದೊಳ್ ಬರ್ಪ ಪಾರ್ಥಿವಪುತ್ರಸಾರ್ಥಮುಂ (ಚಂಪ್ರ.ಕ. ೭-೮೦ ವ). ೨. ಸೂರ್ಯ. [ಪಾರ್ಥಿವ + ಪುತ್ರ]

**ಪಾರ್ಥಿವಶರೀರ** (ನಾ). ೧. ಜಡಶರೀರ ; ಭೌತಿಕವಾದ ದೇಹ : ಸತ್ಯಸಾಪ್ರೀತನಂ ಭಸ್ಮನೆಯಿಸಿಲ್ಲಗ್ನಿಯ್ಯಲ್ಕೆಳಸಿ ಸಂಹರಿಸಿ ಆ ಜರಾಜರ್ಜರಿ ಪಾರ್ಥಿವಶರೀರವಂ ಅನಾಯಾಸಂ ಘಾಸಿಸಿದರೇನಂತೆ ! (ಅವಸಂ. ೧೯ ೮); ಅವರ ಆತ್ಮವು ಪಾರ್ಥಿವಶರೀರದ ಬಂಧನವನ್ನು ತೊರೆದು ಹೋಗಬೇಕು . . . ಹೋಗಿರಬೇಕು (ಸಂಗೀತ. ೨೪). ೨. ಶವ ; ಹೆಣ : ಶ್ರೀಶಲೀಘರ . . . ಪಾರ್ಥಿವಶರೀರವನ್ನು ಎಲ್ಲ ಸಮಾಜದವರು ತೇರು ಕಟ್ಟಿ . . . ಶರೀಘರ ತಂದೆಯ ಸಮಾಧಿಯ ಜೊತೆಗೆ ಅಂತ್ಯವಿಧಿಯನ್ನು ಒಳ್ಳೆ ವಿಜೃಂಭಣೆಯಿಂದ ಮುಗಿಸಿದರು (ಶರೀಫ. ೭೯ ಶರೀಫಸ್ಮರಣ).

[ಪಾರ್ಥಿವ + ಶರೀರ]

**ಪಾರ್ಥಿವಸಂವತ್ಸರ** (ನಾ). ಅರುವತ್ತು ಸಂವತ್ಸರಗಳಲ್ಲಿ ಹತ್ತೊಂಬತ್ತನೆಯದು : ಕಳಚುರಿಚಕ್ರವರ್ತ್ತಿ ಭುಜಬಳಮಲ್ಲದೇವ ವರ್ಷದ ಹತ್ತನೆಯ ಪಾರ್ಥಿವಸಂವತ್ಸರದ ಶ್ರಾವಣ ಬಹುಳ ದ್ವಾದಶೀ ಬೃ[ಬ್ರ]ಹಸ್ಪತಿ ವಾರದಂದಿನ ವ್ಯತಿಪಾತ ಪರ್ಬ್ಬ ನಿಮಿತ್ತದಿಂ (ಕೊಲ್ಹಾ.ಶಾ. ೦೨-೦೪; 1165); ದಂಡನಾಯಕರುಂ ಸಮಸ್ತಕರಣಂಗಳುಂ ಪಾರ್ತ್ಥಿವಸಂವತ್ಸರದಾಷಾಢ ಬಹುಳನವಮಿ ಮಂದವಾರ ದಕ್ಷಿಣಾಯನಸಂಕ್ರಾಂತಿಯಲು . . . ಧಾರಾಪೂರ್ಬ್ಬಕಂ ಕೊಟ್ಟರು (ಕೊಲ್ಹಾ.ಶಾ. ೦೩-೩೯; 1166).

[ಪಾರ್ಥಿವ + ಸಂವತ್ಸರ]

**ಪಾರ್ಥೇನಿಯಂ** (ನಾ). (ಬೆಳೆಗಳಿಗೆ ಕಳೆಯಾಗಿರುವ) ಒಂದು ಕೀಳು ಬಗೆಯ ಸಸ್ಯ : ಈಚೀಚೆಗೆ ಕಂಡ ಕಡೆಯಲ್ಲೆಲ್ಲಾ ಪಾರ್ಥೇನಿಯಂ ಬೆಳೆ ಹೆಚ್ಚುತ್ತಿದೆ (ರೂಢಿ). [← ಇಂ. Parthaneum]

**ಪಾರ್ದನ** 'ಪಾಡ್ದನ' ನೋ.

**ಪಾರ್ಪತ್ಯಗಾರ** 'ಪಾರುಪತ್ಯಗಾರ' ನೋ.

**ಪಾರ್ಪತ್ಯ** 'ಪಾರುಪತ್ಯ' ನೋ.

**ಪಾರ್ಪತ್ಯಗಾರ** 'ಪಾರುಪತ್ಯಗಾರ' ನೋ.

**ಪಾರ್ಪಾಲಿ** (ನಾ). ಒಂದು ಬಗೆಯ ಸಸ್ಯ : ಪಾರ್ಪಾಲಿ, ಕೊಡಚಿ, ಗೊಟ್ಟಿ (ವೈ.ನಿ. ೭೯-೦೭೩೩). [ ? ]

**ಪಾರ್ಪು** (ನಾ). ನೋಟ ; ದರ್ಶನ : ಎನ್ ನೋಪ್ಪ ನೋಪ್ಪಿಯೋ, ಏನ್ ಪಾರ್ಪ್ಪ ಪಾರ್ಪ್ಪೋ (ತೊಂಗಳ. ೩೯-೦೦). [ಪಾರ್[1] + — ಪು]

**ಪಾರ್ಬ** 'ಪಾರ್ವ' ನೋ.

**ಪಾರ್ಬಣ** (ನಾ). ಪರ್ವಕಾಲದಲ್ಲಿ ಪಿತೃಗಳಿಗೆ ತರ್ಪಣ ನೀಡುವ ಕ್ರಿಯೆ,—ವಿಧಿ ; ಅಮಾವಾಸ್ಯೆಯ ದಿನ ಮಾಡುವ ಶ್ರಾದ್ಧ ; ಪರ್ವಶ್ರಾದ್ಧ : ಕಳುಹಿ ಪಾರ್ಬಣಯೋಗ್ಯ ಮಾಂಸಂಗಳನು ರಾಜಾಲಯಕೆ ವನದಲಿ ಸುಳಿದು ಮೃಗಯಾವ್ಯಸನದಲಿ ವರನೃತ್ಯಗೀತದಲಿ ಬಳಲಿ ಬಸವಳಿವುತ್ತ ಹೋದನು ಫಲುಗುಣನು (ವಿರಾಗ. ೦೦-೬೮-೨೩).

[<ಸಂ. ಪಾರ್ವಣ]

**ಪಾರ್ಬಿಕೆ** 'ಪಾರ್ವಿಕೆ' ನೋ.

**ಪಾರ್ಲಿಮೆಂಟು** (ನಾ). ರಾಷ್ಟ್ರದ ಕೇಂದ್ರಸರ್ಕಾರಕ್ಕೆ ಸಂಬಂಧಿಸಿದ ಪ್ರಮುಖಪಟ್ಟಣಗಳ ಪ್ರಜಾಪ್ರತಿನಿಧಿಗಳನ್ನೊಳಗೊಂಡ ಪ್ರಧಾನ ಸಭೆ ; ಲೋಕಸಭೆ ; ಕೇಂದ್ರಸಂಸತ್ತಿನ ಉಭಯಸಭೆಗಳಲ್ಲಿ ಒಂದು : ಬ್ರಿಟಿಷ್ ಪಾರ್ಲಿಮೆಂಟಿನ ಉದ್ದೇಶ ನಮ್ಮನ್ನು ಹಿಂದಿನ ಅಂಧಕಾರದಲ್ಲೇ ತೊಳಲಿಸಬೇಕೆಂದು ಇರಲಿಕ್ಕಿಲ್ಲ (ಕಾರಂ. ೪೩೭).

[← ಇಂ. Parliament]

**ಪಾರ್ವ, ಪಾರುವ, ಪಾರ್ಬ, ಹಾರವ[1], ಹಾರುವ[1], ಹಾರ್ವ** (ನಾ). ವೇದ ಮೊದಲಾದ ಧರ್ಮಗ್ರಂಥಗಳನ್ನು ಓದಿ ತಿಳಿದಿರುವವನು ; ಬ್ರಹ್ಮಜ್ಞಾನಿ ; ಬ್ರಾಹ್ಮಣ : "ಪಾರ್ವರೆನಲ್ ದ್ವಿಜರ್ಕಳ್" (ಶಬ್ದಮ. ೫೭) ; ಆ ಧರ್ಮ್ಮಕ್ಕೆ ಬಕ್ರ ಬಪ್ಪೊಂ ಬಾರಣಾಸಿಯುಂಳ್ ಸಾಸಿರ್ವ್ವ[ರ್] ಪಾರ್ವ್ವರುಂ ಸಾಸಿರಂ ಕವಿಲೆಯಂ ಕೊನ್ದ ಪಾತಕನಕ್ಕೆ (ಮೈ.ಆ. ೦೯೩೩, ೫೩-೫೫; ಸಂ. ೩೩೦); ಪದಿನೆಂಟುಧರ್ಮಶಾಸ್ತ್ರಂಗಳುಮಂ ಬಲ್ಲೊಂ ಸೋಮಶರ್ಮನೆಂಬೊಂ ಪಾರ್ವಂ (ವಡ್ಡಾ.ರಾ. ೭೩-೦೫); ಪರದಿಗಾ[ರ್] ಪಾರ್ವ[ಪಾಠಾಂ. ರ್ಬ]ರ್ಗಾದರಸರ್ಗಾ ಕುಡಿಯರಪ್ಪ ನಾಲ್ವರ್ಗ್ಗಗಳ್ ಸ್ಥಿರಗೋಪಾಧ್ಯಾಯರ್ಕ್ಕಾಪರಿಪಾಲ್ಯಕ್ಷೇತ್ರಕರ್ಷಣಂಗಳ್ಕ್ಕಾಯೆಗಳ್ (ಕಂದ. ೦-೬೪) ; ಪಾರ್ವನೆಂದೆನ್ನೊಳ್ ಪುಸಿದು ವಿದ್ದೆಯಂ ಕೈಕೊಂಡುದರ್ಕೆ ಮೆಂಡಂ ಪೆಜಿತಿಲ್ಲ (ಕಂಕಥಾ. ೦-೦೦೫೮) ; ಪರಿದಿಜಾದಂತಕನೊಳ್ ಪಾರ್ವರ ಪಿಳ್ಳೆಯ ಪೋದ ಜೀವಮಂ ತಂದಂ (ಗದಾಯು. ೨-೩೫). **ಪಾರುವ** : ಪುರದೊಳಗಣ ಪಾರುವರೆಲ್ಲರುಮಂ ಮತ್ತನ್ನಸಮುದಾಯಗಳುಮಂ ಕಳ್ಳರ್ ಭರದಿಂದಂ ಕಂಡುಂ ಸುವರವೋಘಂ ಸೀಳ್ದು ಕೊಲೆ ತಳಾಜರ ಕೈಯೊಳ್ (ಧರ್ಮಾಮೃ. ೯-೬೩); ಕಾದಿ ಕಲು ಮರ ನೊರೆದಿಗಳ ಪುಡುಕಿ ತತ್ವಸಂಬೋಧೆಯಿಲ್ಲದೆ ಕೃಪಣ ಶಿಶ್ನೋದರಂಗಳಂ ಸಾಧನಂಗೈವ ಪಾರುವರೆಸೆಮಾ ಕಲಿಯೊಳು (ಪಂಕಾರಾ. ೫-೨೨-೦೨); ಆ ಪಾರುವಂ ಗುರಿಗಟ್ಟಿ ಸೂಸಿದ ಪುಣುಂಬುಗಳ್ವರುಮಂಗೆ ಕಪಿಗಳಂತೆ ಪೇರೊಲವನಾಂತು (ಶಃಕರಾ. ೦೪-೩೫). **ಪಾರ್ಬ** : ಬಯ್ಯ ಸಟ್ಟುಗದಿಂದ ಕಡೆಹೊಡೆದು ಕೊಂದು ಪಾರ್ಬನನೆಳೆದು ಹಾಮ್ಮಲು (ಜಕಶ. ೫೩-೪೦). **ಹಾರವ[1]** : ಕೌರವರ ಪತ್ರಿರ ಯಾರಿದ್ದಾರೆ ? ಕೆಲವರು ಪಂಚಾಂಗದ ಹಾರವರು ; ಉಳಿದವರು ಮುಂದುಕರು (ಸಿ.ತಿಂ. III. ೩೦); ಅಭ್ಯಾಸವಿಲ್ಲದ ಪಾರವ ಅಗ್ನಿಕಾರ್ಯ ಮಾಡಿದರೆ ಗಡ್ಡ ಮೀಸೆ ಹೊತ್ತಿತು (ಗಾದೆ). **ಹಾರುವ[1]** : ಅನಾಗತರೋಕ್ತಿ ಕಾಲೂರನನೇಕವಂ ದ್ವಿಜರ್ಗೆಗೊಟ್ಟುದಜಿಂದಮುಮಗ್ರಹಾರವಾ ಹಾರುವರಿಂದ ಮಾಡಿ × × ದೆ (ಎಕ. VIII, ಸಾಗರ. ೦೦೯-೫೪; 1079) ; ಹಾಸನಿಕ್ಕ ಸಾಗಿಗನಾದ ವೇದವನೋದಿ ಹಾರುವನಾದ (ಬಸವ. ೫೯೦) ; ತಿಂದ ಹಾರುವರೊಡನೆ ಭೂಮಿಶ್ವರರಿಗೆತ್ತಣ ಮೈತ್ರಿ (ಸಂಕಥಾ. ೦೭-೯೨); ಪಾರುವನು ಉಪಕಾರಿ ಹಾರುವನು ಅಪಕಾರಿ ಹಾರುವನು ತೋರ್ವ ಬಹುದಾರಿ ಮುನಿವರೆ ಹಾರುವನೆ ಮಾರಿ (ಸರ್ವಜ್ಞ. ೦೦೦೪). **ಹಾರ್ವ** : ಸೀನು ಔಷಧಿಯನ್ನು ಕೊಟ್ಟು ಗುಣ ಮಾಡೆನುತ ಹೀನ ಹಾರ್ವಗೆ ವೇಳೆ ಒಪ್ಪಿಸುತ ಪೋದ (ಕರಿಲ. ೪೦೦-೭) ; ಆ ಹಾರ್ವನು ಪಾಪತಿ ಹಸಾ ಕೊಟ್ಟವನು (ಕೊಪಂಗ. ೬೨).

**ಹಾರ್ವರ ಬಲ್ಲಹ, ಹಾರ್ವರ ಬಲ್ಲಹ**–ಬ್ರಾಹ್ಮಣರ ಮುಖ್ಯಸ್ಥ : ಒಂದು ಬಿರುದು : ವುತ್ತರಾಯಣಸಂಕ್ರಾಂತಿಪರ್ವನಿಮಿತ್ತಂ ಮಹಾಪ್ರಭು ಹಾರ್ವರ ಬಲ್ಲಹಂ ಬಸವರಸ ಮುಖ್ಯಪ್ರಧಾನಂಗಳ ಸಂನಿಧಾನದಲು ಸರ್ವನಮಸ್ಯವಾಗಿ ಧಾರಾಪೂರ್ವಕ ಮಾಡಿ . . . ಬಿಟ್ಟ ಮತ್ತರು ೧೨ (ಕಿಎ.ಶಾ. ೦೬-೩೩ ; 1235); ಸುಮಾರ್ಗಿಯೆಂಬ ಮೇದಿನಿ ಪೆಸರಿಂದೆ ಬಣ್ಣಿಪುದು ಹಾರ್ವರ ಬಲ್ಲಹ ಪಲ್ಲಿದೇಶಮಂ (ಕಿಎ.ಶಾ. ೦೬-೩೩: 1235). ೯ ಕೆಲವು ಸ್ಥಳನಾಮಗಳಲ್ಲಿರುವ 'ಹಾರೋ' ಎಂಬ ಪೂರ್ವಪದವು 'ಹಾರುವರಿಗೆ ಸಂಬಂಧಪಟ್ಟ' ಎಂಬ ಅರ್ಥವನ್ನು ಸೂಚಿಸುತ್ತದೆ. ಉದಾಹರಣೆ–ಹಾರೋಗದ್ದೆ = ಹಾರುವರ ಗದ್ದೆ, ಹಾರೋಹಳ್ಳಿ = ಹಾರುವರ ಹಳ್ಳಿ.

[ <ಹಾರ್$_1$. / ತಮಿ. ಪಾರ್, ಪಾಪ್ಪನನ್, ಪಾಪ್ಪಾನ್; ಮಲ. ಪಾಪ್ಪಾನ್; ಕೊಡ. ಪಾರುವ; ತೆಲು. ಪಾಱುಂಡು, ಪಾಱುಪಾಂಡು]

**ಹಾರ್ವಂತಿ, ಪಾರ್ವತಿ$_1$, ಪಾರ್ವಿತಿ, ಹಾರವಿತ್ತಿ, ಹಾರುವಿತಿ, ಹಾರುವಿತ್ತಿ** (ನಾ). ಬ್ರಾಹ್ಮಣ ಹೆಂಗಸು; ಬ್ರಾಹ್ಮಣನ ಹೆಂಡತಿ: ಸೋಮಶರ್ಮನೆಂಬೊಂ ಭಟ್ಟನಾತನ ಹಾರ್ವಂತಿ ತ್ರಿವೇದಿಯೆಂಬೊಳ್ (ಶಬ್ದಾ.ಶಾ. ೦೨-೦೦); ಆಗಳ್ ಸಾಹಸಭೀಮಂ . . . ಹಾರ್ವಂತಿಯುಂ ಹಾರ್ವನುಂ ಪರಸಿ ಸೇಸೆಯನಿಕ್ಕೆ ಲಲಿತ ಪೂರಿಲಿ ಬಂದಿಯನಟ್ಟಿಕೊಂಡು ರಕ್ಕಸಾರ್ಕದೆ ಗೆಯ್ವಂದು (ಸಂಹಿತಾ. ೬-೨೬ ವ); ಅಶೋಕದತ್ತನೆಂಬ ಪಾರ್ವ್ವನು ತಲೆಯರ್ ಪಿಡಿದು ಕೊಲ್ವುದುಂ ವಿನೋದಂ ತನ್ನ ಹಾರ್ವಂತಿಯ ದುಶ್ಚರಿತ್ರಮನಱಿ ವನಪ್ಪುದಱಿನಾಕೆಯು ಬೞಿಯನೆ ಬಂದುಬಿದಿರ್ದ (ವಂಡಾಟ. ೦೩-೩೯ ವ). **ಹಾರ್ವತಿ$_1$** : ಕೇಳೆನ್ನ ನುಡಿಯ ಹಾರ್ವತಿಯೆನಗೆನ್ನೆವರು ಬಾಲರುಂಟವರೊಳಗೋರ್ವ ಹಾಲೂಡಲಿನ ಭೀಮಂ (ಸಿಬಂಸಂ. ೨೩-೦೨೯); ಅರಸಿ, ಹಾರ್ವತಿ, ಒಕ್ಕಲಿತಿ, ಸೆಟ್ಟಿತಿ (ಶಬ್ದಾ.ಕು. ೨೦೨ ಪ್ರಯೋ). **ಹಾರ್ವಿತಿ**: ಶುಕನಾಸ ಮಂತ್ರಿ ಸಂಭಾವಿತೆಯಪ್ಪ ಹಾರ್ವಿತಿ ಮನೋರಮೆಗತ್ತ, ಭವತ್ಪ್ರಸಾದದಿಂದೀ ವರಲಗ್ನದೊಳ್ ತನಯನತ್ಯಧಿಕೋತ್ಸವವಾಗೆ ಪುಟ್ಟಿದಂ (ಕಾದಂಬ. ೯೨೩); ಭಾಂಡಿಲನೆಂಬ ಪುರೋಹಿತಂಗಮಾತನ ಪೆಂಡತಿ ವೃಷ್ಣವತಿಯೆಂಬ ಹಾರ್ವಿತಿಗಂ ಪುಟ್ಟಿದ ಮಗಂ . . . ಷಷ್ಟದಾದು (ರಮ್ಯಾಕ್ಷ. ೬-೦೨೯); ಆತನ ಹಾರ್ವಿತಿ ಹಾರ್ವತಿಯನ್ನಳಪ್ಪ ಚೆನ್ನೆಯೊಂದುದಿನಂ ಪಸದನಂಗೊಂಡು ಕನ್ನಡಿಯಂ ನೋಡುತ್ತುಮಿರೆ (ಕಿಬುಕ. ೦೯-೬೮). **ಹಾರವಿತ್ತಿ** : ಅತ್ತಲೊರ್ವ ಮುಂದೆ ಹಾರ[ಸಾಶಾಂ. ರು] ವಿತ್ತಿ ಬಸುಱಾಗಿ ಅಡವಿಯಲ್ಲಿ ಹಣ್ಣು ಹೆತ್ತು ಬಿಟ್ಟು ಹೋಗಲು (ಬೈರಸೂ. I, ೬೮). **ಹಾರುವಿತಿ** : ವರನ ಪರಿ ಹೊಸತಾಯ್ತು ಹೊತ್ತನು ಹರನ ಹಗೆ ಹಾರುವಿತಿಯನು ನಮ್ಮರಸಿ ನೆಱೆ ಹಾರುವಿತಿಯೆಂದರು ನಗುತ ಚಪಲೆಯರು (ಕುಮಾ.ಅ. ೦೩-೩೬); ಗೋಡೆಯ ತೆಱೆಕೆಯೊಳು ಬರೆದಕ್ಕರವ ನೋಡಿಕೊಂಡಿದಾರಱುಪಿಯನೆ ಮುಂದೆ ಹಾರುವಿತಿಯೊಳು ಬಂದೊರ್ಬ ಕುಱಿಕನಿದ ಬರವನನೆ (ವೀಕ್ಷ.ಕೃ. ೬-೪-೯೯). **ಹಾರುವಿತ್ತಿ** : ಹಾರುವಿತ್ತಿ[ಸಾಶಾಂ. ವಗಿತಿ]ಯೊಳು ಸೊಬಗುಮನೋರಂತ ಱುಸುವರು ನಾಡೆ ಗಾಮಿಲರಲ್ತೇ (ಕೃಷ್ಣಸ್ತ್ರ. ೫-೨೬).

[ಹಾರ್ವ + –ತಿ$_1$ (<–ಇತಿ)./ತಮಿ. ಪಾಪ್ಪಾತ್ತಿ]

**ಹಾರ್ವಗೊಲೆ** (ನಾ). ಬ್ರಾಹ್ಮಣಹತ್ಯೆ; ಬ್ರಹ್ಮಹತ್ಯೆ : ಅವನೆಮ್ಮ ಪಾಡೊಳ್ ದಾಟಿಟ್ಟು ತುಱುಸೆಱೆಯೊಡನೆನ್ನಣುಗರಂ ಪಿಡಿದು ಬಂದುಗೆಯ್ದು ಹಾರ್ವಗೊಲೆಗೆ ಪೇಸಿ ಬಿಟ್ಟು ಎನ್ನ ನಾಡೊಳ್ ತಲೆಯೂರಿಸಿದ ಬೂಕನಕೆರೆಯಂ ಕೊಂಡು . . . ತಿರುಕುಳಿ ಹಾರ್ವಗಿರ್ತ್ತಂ (ಶಾಸಂ. ೦೩-೯).

[ ಹಾರ್ವ + ಕೊಲೆ$_2$ ]

**ಹಾರ್ವಗೋಲು** (ನಾ). (ಬ್ರಾಹ್ಮಣಸಮುದಾಯವು ಸೇರಿ ನಿಷ್ಕರ್ಷಿಸಿದ) ಒಂದು ಅಳತೆಯ ಕೋಲು : ಮಹಾಪ್ರಭು ಹಾರ್ವರ ಬಲ್ಲಹಂ . . . ಹೆಂಟಿಗೆಸಟ್ಟಿಯುಂ ಮೂಡಲು ಜಂಜಲವಾಡದ ಬಟ್ಟೆಯುಂ ಹಡುವಲು ಹಾರ್ವಗೋಲಲು ಬಿಟ್ಟ ಮತ್ತರು ೧೨ (ಕಿಎ. II, ೩೬-೩೩; 1235).

[ ಹಾರ್ವ + ಕೋಲು$_1$ (<ಕೋಲ್$_1$) ]

**ಹಾರ್ವಣ** (ಗು). ೧. ಅಮಾವಾಸ್ಯೆಗೆ ಸಂಬಂಧಪಟ್ಟ. ೨. ಹುಣ್ಣಿಮೆಗೆ ಸಂಬಂಧಿಸಿದ : ಪ್ರಣುತಸುಧಾಗರ್ಭಮೆ ಕಾರಣವಿಾ ಕೋಮಳೆಯ ಮುಖಸುಧಾರುಚಿಗುಱುದಂತೆಣೆಗೊಂಡು ತೊಳಗುತಿರ್ಪಂ ಹಾರ್ವಣ ಶಶಿಬಿಂಬಕ್ಕೆ ಕೃಶತೆಯತ್ತಣೆನಾಯ್ತೋ (ಲೀಲಾವ. ೦೯-೨೨) ; ಕನ್ನಡಿ ಹಾರ್ವಣ ಶಶಿಯನು . . . ನವಲತೆಯು ಸನ್ನುತಪಾರಿಜಾತದ ಪಡೆದಂತೆ ಸುಪನ್ನೆ ಪಡೆದಳು ಪುತ್ರನನು (ಸುಕ್ರಸಾಂ. ೯-೩೩); ಕ್ಷಣರುಚಿ ರುಚಿರೇಕ್ಷಣೆ ಹಾರ್ವಣ ವಿಧುಮುಖಿ ಪಾಣ್ಬೆ ಪೂಗಳಲ್ಲದೆ ತಲ್ಲಣಿಸಿ ಪೆಡಂಮೆಟ್ಟುತ್ತಂಗಣ ಕೈದುತೆ ಸುಯ್ದು ಬೈದಳಾ ಕಮಳಜನಂ (ರಾಜಶೇ. ೦೦-೨೩). (ನಾ). ೩. ಅಮಾವಾಸ್ಯೆಯಲ್ಲಿ ಪಿತೃಗಳಿಗೆ ಮಾಡುವ ಒಂದು ಶ್ರಾದ್ಧಕರ್ಮ.

[ಸಂ.]

**ಹಾರ್ವಣಶ್ರಾದ್ಧ** (ನಾ). ಪರ್ವಕಾಲದಲ್ಲಿ ಮಾಡುವ ಶ್ರಾದ್ಧ : ಪುತ್ರ ಅನ್ನುವುದು ಕೆಳಗಿನ ಮೂರು ತಲೆಗಳನ್ನೂ ಒಳಗೊಳ್ಳುತ್ತದೆ. ಏಕೆಂದರೆ ಆ ಮೂವರೂ ಪಾರ್ವಣಶ್ರಾದ್ಧ ಮಾಡುವ ಅಧಿಕಾರಿಗಳು (ವಂಶವೃ. ೨೩೦).

[ ಪಾರ್ವಣ + ಶ್ರಾದ್ಧ ]

**ಪಾರ್ವತಿ$_1$** 'ಹಾರ್ವಂತಿ' ನೋ.

**ಪಾರ್ವತಿ$_2$** (ನಾ). ೧. ಪರ್ವತರಾಜನ ಮಗಳು ; ಗಿರಿಜೆ : "ರುದ್ರಾಣೀ . . . ಪಾರ್ವತೀ, ಗೌರೀ . . . ಗಿರಿಜಾ, ಮೇನಕಾತ್ಮಜಾ — ಈ ೨೧ ಗೌರೀದೇವಿಯ ಪೆಸರ್" (ಕರಾಯು. ೯-೦೩) ; ನಾಗೇಂದ್ರ ಘನವೆಂಬಿವೆ ಪಾರ್ವತಿಯು ಕಿಱುಕುಣಿಕೆಮಾಡಿ ಕೆಯಾಯಿತ್ತು ಅಂತಹ ಪಾರ್ವತಿ ಘನವೆಂಬೆನೆ ಪರಮೇಶ್ವರನ ಅರ್ಧಾಂಗಿಯಾದಳು (ಶಿಸ. ೬೭೬): ಮಹಾತ್ರಿಲೋಚನ ಮಹಾನಿಧಿ ತನ್ನ ವಿವಾಹವರ್ಣನಾಸಂಗತಿಯೊಂದು ಮತ್ಕೃತಿಗೆ ಪಾರ್ವತಿ ಮಾಳ್ಕೆ ಮಹೋತ್ಸವಂಗಳಂ (ಗಿರಿಜಾ. ೦-೪). ೨. ಮಂತ್ರಗಳಲ್ಲಿ ಒಂದು : ಗಾಯತ್ರಿ ಮೃತ್ಯುಂಜಯ ದಕ್ಷಿಣಾಮೂರ್ತಿ . . . ಪಾರ್ವತಿ ಕಾಮಧೇನು ಕಲ್ಪವೃಕ್ಷ . . . ಮಹಾಮಂತ್ರಂಗಳಂ (ಶಿವೇಶ. ೬೦). ೩. ತದುಕಿನ ಗಿಡ ; ಆನೆಬೇಲ. ೪. ಗೊಲ್ಲರವಳು; ಗೋಪಿಕೆ. ೫. ದ್ರೌಪದಿಯ ಒಂದು ಹೆಸರು. ೬. ಸುಗಂಧದ ಮಣ್ಣು.

[ಸಂ. ಪಾರ್ವತೀ]

**ಪಾರ್ವತಿತನಯ** (ನಾ). ೧. ಪಾರ್ವತಿಯ ಮಗ. ೨. ಕಾರ್ತಿಕೇಯ; ಷಣ್ಮುಖ. ೩. ಗಣಪತಿ; ಗಣನಾಥ: ಶರಣು ಪಾರ್ವತಿತನಯ ಮೂರುತಿ ಶರಣು ಮೂಷಿಕವಾಹನ (ಕುರಂಡ. ೦-೩ ಕಲ್ಪಿತ). [ಪಾರ್ವತಿ$_2$ + ತನಯ]

**ಪಾರ್ವತಿಯೊಡೆಯ** (ನಾ). ಗಿರಿಜೆಯ ಪತಿ ; ಈಶ್ವರ : ಪಾರ್ವತಿಯೊಡೆಯನ ವರದಿಂ ಪಾತ್ರತಿ ಕರ್ವಿಲ್ಲಂ ಸಮ್ಮೋಹನರೂಪದಿಂದುರ್ವಿಯ ವಿಟರೆಲ್ಲರ್ದೆಯೊಳ್ನೆಲಸಿದು (ಶಯಾಶ. ೦-೬೩). [ಪಾರ್ವತಿ$_2$ + ಒಡೆಯ]

**ಪಾರ್ವತೀಜಾನಿ** (ನಾ). = ಪಾರ್ವತಿಯೊಡೆಯ : ಆ ನರನಾಥನಾ ಕುಸುಮಭೂಷಣಮಂ ಪದೆದಿತ್ತು ಪಾರ್ವತೀಜಾನಿಗೆ ತಾನುಮಾತ್ತ ರಮೆಯುಂ ಬೞಿಯಂ ತಳೆದಿರ್ದನಂ (ರಾಜಶೇ. ೦೦-೬೦).

[ಸಂ. (ಪಾರ್ವತೀ + ಜಾಯಾ + –)]

**ಪಾರ್ವತೀದಯಿತ** (ನಾ). = ಪಾರ್ವತಿಯೊಡೆಯ : ಶ್ರೀಯುಂ ಮಹಾಲಕ್ಷ್ಮಿ . . . ದೀರ್ಘಾಯುಷ್ಯಮಂ ಪಾರ್ವತೀದಯಿತಂ ಮಾಣದೆ ಜೌಡಿಸಟ್ಟಿಗೆ ಕುಡುತ್ತಿರ್ಕ್ಕಾಗಳುಂ (ಕಿಎ.ಶಾ. ೦೩-೩; 1166). [ಸಂ.]

**ಪಾರ್ವತೀವಲ್ಲಭ** (ನಾ). = ಪಾರ್ವತಿಯೊಡೆಯ : ಪಾರ್ವತೀವಲ್ಲಭಚರಣ ಸರಸೀರುಹಭೃಂಗಂ ಮಹಾಮಹಿಮೋತ್ತುಂಗಂ ನಾಮಾದಿ ಸಮಸ್ತಪ್ರಶಸ್ತಿ ಸಹಿತಂ (ಶಾಸಂ. XX, ೯೬-೩೩; 1072). [ಸಂ.]

**ಪಾರ್ವತೇಯ** (ನಾ). ಪರ್ವತಪ್ರದೇಶದಲ್ಲಿ ಜನಿಸಿದವನು; ಪರ್ವತವಾಸಿ: ಷಟ್ಖಂಡಭೂವಲ್ಲಭನುಂ ಹಿಮವತ್ತಟಂಬಿಡಿದು ಮಾಡವೊಗದೆ ಪಯಣಂಬರೆ ಪಾರ್ವತೇಯೋಪಾದಪ್ರಧಾನಪುರಸ್ಸರನಾಗಿ (ಶಾಂತಿಪು. ೧೦-೩೩ ವ); ಈ ಜನಗಳ ಭೂಷಣಗಳು ಆಕಾರಗಳಂ ನೋಡಿದರೆ ಪಾರ್ವತೇಯರಂತೆ ಕಾಣುವರೆಂದು ನಿಶ್ಚೈಸಿ (ಮುದ್ರಾ.ಮಂ. ೨೮). [ಸಂ.]

**ಪಾರ್ವರ** (ನಾ). (?) : ಸ್ವಸ್ತಿಶ್ರೀವಿಕ್ರಮಮಹಾರಾಜಪೃಥಿವಿರಾಜ್ಯಕೆಯ್ಯೆ ಪಬ್ಬು ರಕ್ಕಸನೂರುಕೊಳ್ವಲ್ಲಿ ಪಾರ್ವರೊಡೆರೊಳ್ ಸತ್ತಾನ್ ಪೆರುಣ್ಣೋವನ್ (ಎ.ಕ. X (3), ಶ್ರೀನಿವಾ. ೦೦೬-೯; ಕ್ರಿ. 700): ಪಾರ್ವರೊಡೊರೊಳ್ ಸತ್ತಾನ್ (ಪ್ರ್ಯಾ. ೦೯೦೭, ೦೦-೯; ೭ನೆಯ ಶತ). [?]

**ಪಾರ್ವಾಟ** (ನಾ). ಮೆರವಣಿಗೆ; ᑭ ವರ್ಷದಲ್ಲಿ ಯಾವುದಾದರೂ ಹಬ್ಬದಲ್ಲಿ ಒಂದು ಪ್ರಾಣಿಯನ್ನು ಬೇಟೆಯಾಡಿ ಅದನ್ನು ಕೊಲ್ಲುವುದಕ್ಕೆ ಮುಂಚೆ ಮೆರವಣಿಗೆ ಮಾಡುವುದೂ ಕೆಲವು ಹಬ್ಬಗಳಲ್ಲಿ ಮೊಲ, ನರಿ ಇತ್ಯಾದಿ ಪ್ರಾಣಿಗಳನ್ನು ಬೇಟೆಯಲ್ಲಿ ಹಿಡಿದು ಮೆರವಣಿಗೆ ಮಾಡಿ ಮತ್ತೆ ಕಾಡಿಗೆ ಬಿಡುವುದೂ ಉಂಟು: ವರ್ಷಕ್ಕೆ ಒಂದು ಸಲ ಇವರು ಒಂದು ಚಿರತೆಯನ್ನು ಹಿಡಿದು ಪಾರ್ವಾಟ ಮಾಡಿ ಮುಗಿಸುವುದು (ಕ.ಕೈ. VI, ೦೦೯). [<ಪರ್ವ ? +ಆಟ]

**ಪಾರ್ವಿಕೆ, ಪಾರ್ಬಿಕೆ** (ನಾ). ಬ್ರಾಹ್ಮಣಿಕೆ; ಹಾರುವತನ: ಪಾರ್ವಿಕೆಯೊಳ್ ಇರ್ದ ಪಾರ್ವಂಗೆ ಕೂಳನ್ ಒಯ್ವರ್ (ಪ್ರಾಕ್ಕ. ೩೯೭); ಕಡೆಗೆ ವಂದಿಸದಿದ್ದನಾವಡೆ ಕಿಡುಗು ಪಾರ್ವಿ[ಪಾಠಾಂ. ರ್ಬಿ]ಕೆ ಮುಂದೆ ವಂದಿಸಿದಡೆ ಕಿಡುಗು ಮೃಡಭಕ್ತಿಯುಂತಾಗಿಂತೆರಡರಿಂದ ಕಿಡುವನಿಳೆಯೊಳು ಪಾರ್ಬನು (ಬಸವ. ೩-೭೯). ಪಾರ್ಬಿಕೆ: ಅಕುಲದಭವನ ಭಕ್ತತತಿಗಾವ ಕುಲ ವೆಂದಿದನೆಣಿಸಿ ನೀ ಪಾರ್ಬಿಕೆಗೆ ಸಲಿಸುವೆಯುಂತಿನಿತು ಮಾರ್ಗಂಗಳೆಂದು (ಬಸವ. ೩-೦೯) [ಪಾರ್ವ+-ಇಕೆ]

**ಪಾರ್ವಿತಿ** 'ಪಾರ್ವಂತಿ' ನೋ.

**ಪಾರ್ವಿಸು** (ಕ್ರಿ). ಹಾರಿಸು; ನೆಗ್ಗಿಸು (?): ತ (ಂ)ನ್ನ ಪಾರುಪಮಂ ಪಿ(ಂ)ನ್ನಪಿತ್ತು ಮು(ಂ)ನ್ನ ಪಾರ್ವಿಸಿ ಮುರಾರಿಯೊಳು ದುಬ್ಬಾದುಬ್ಬಿ ಯೊಳು ಕಾದಿ ತಳ್ತಿಱಿದು ಗೆಲ್ದು (ಕಾಶಿಕ. IX-i, ೩೯೭-೨೦; 1148). [?]

**ಪಾರ್ವೆ** (ನಾ). = ಪಾರ್ವಂತಿ: ಪರಿಕಿಸದಾ ಪಾರ್ವೆ ನಡೆದು ಪರ ಮಾತ್ರ(ಥ)ಂ ಕೊನ್ದಕನ್ನು ಮುನ್ನುಗ್ಗರಿಯಂ ತಾನೆರಡಿಲ್ಲದೆಂಬ ನಾಳನುಡಿ ಪೊರೆದು (ಪ್ರಾ. ೦೯೭೩, ೩೯-೩; 11ನೆಯ ಶತ). [ಪಾರ್ವ+-ಎ]

**ಪಾರ್ಶ್ವ** (ನಾ). ೧. ಪಕ್ಕ; ಮಗ್ಗುಲು; ಬದಿ: "ಕಲಂ ಪಾರ್ಶ್ವ ಸಂಜ್ಞಿಕಂ" (ಶಬ್ದ.ಕೋ. ೬೮-೬); ಮಣಿವಿಚಿತ್ರಪಾರ್ಶ್ವಂಗಳುಮಧಸ್ಥಲೋ ಪರಿಮಿತಲಸಮಾನವಿಸ್ತಾರಂಗಳುಮಪ್ಪ ಹಿಮವನ್ಮಹಾಹಿಮವನ್ನಿಷಧನೀಲ ರುಗ್ಮಿಶಿಖರಿಗಳೆಂಬ ವರ್ಷಧರಮಹೀಧರಂಗಳಿಂದಂ . . . ಎಸೆದು (ಆದಿಪು. ೦-೯೮ವ); ಆ ಮಹಾನುಭಾವನಾ ಮಹಾಕಾಳದೊಳ್ ಸುಪ್ರಸಾಕ ಪ್ರದೇಶಮಂ ಕಂಡು . . . ವಿಕಾಗ್ರುಚಿತ್ರದೊಳೇಕಪಾರ್ಶ್ವಮೊಳ್ ಮೆಯ್ಯನಿಕ್ಕಿ (ಸುಕುಮಾ. ೦೨-೦೯ ವ); ಕೆಳಗೆ ಪಶ್ಚಿಮಪಾರ್ಶ್ವದಲ್ಲಿ ಒಂದ ರೊಳಕ್ಕೆ ಒಂದಕ್ಕೆ ಪ್ರವೇಶವಿರುವ ಎರಡು ಕೊಠಡಿಗಳು (ಪಂಚಿರು. ೦೯). ೨. ಎದೆಯ ಕೆಳಗಿನ ಎರಡು ಮಗ್ಗುಲು; ಪಕ್ಕೆ: "ಪಾರ್ಶ್ವಂ-೧ ತಯೋರಧಃ—ಕಂಕಳ ಕೆಳಗಡೇ ಪಕ್ಕದ ಪೆಸರುಗಳು" (ಸಿದ್ಧಾಂತ. ೦೯೨). ೩. ಸಮೀಪ; ಹತ್ತಿರ: "ಸಮೀಪಂ . . . ಪಾರ್ಶ್ವಂ, ಉಪಾಂತಂ, ಅಪದಾಂತರಂ—ಈ ೧೮ ಸಮೀಪಂ" (ಶಬ್ದಮ. ೦೦೩-೯); ಪುರುಜಿನ ಪಾರ್ಶ್ವದೊಳ್ ವೃಷಭಸೇನಗಣಾಗ್ರಣಿ ತಜ್ಞನೋಕ್ತಮಂ ಭರತನ್ಪಮಗೆ . . . ಒಲವಿಂದೆ ಪೇಟ್ದುದಂ . . . ಪೇಟ್ದಿಂ (ಪಾರ್ಶ್ವಪು. ೦-೯೯). ೪. ವಂಚನೆಯ ಉಪಾಯ; ಕುತಂತ್ರ: 'ಪಾರ್ಶ್ವಕ' ಪರಾ. ೫. ಒಂದು ವಸ್ತುವಿನ ಮೇಲ್ಮೈ. ೬. ಧಾರೆ; ಅಂಚು; ನೇಮಿ. ೭. ಕನ್ನಡದಲ್ಲಿ ಪಾರ್ಶ್ವನಾಥಪುರಾಣವನ್ನು ಬರೆದ ಒಬ್ಬ ಕವಿಯ ಹೆಸರು: ಲಲಿತಪದಾರ್ಥಾಳಂಕೃತಿಗಳಿನೊಸರ್ವ ರಸಂಗಳಿಂದೆ ಬುಧ ರೊಳ್ಮೊಳಕಾವೆಳಸಸ್ಸಮೊಗೆಯೆ ಕವಿಕುಳತಿಳಕಂ ಶಾಸನವುನೊಲ್ದು ಪೇಟ್ದಂ ಪಾರ್ಶ್ವಂ (ಪಾರ್ಶ್ವಪು. ಆಶ್ವಾಸ. II, xii). ೮. ಒಂದು ದೇಶದ ಹೆಸರು: ಗೌಳ ಪಾರ್ಶ್ವ ಕರೂಷ ಕೋಸಲ ಚೇದಿ . . . ಹಮ್ಮೀರಾದಿ ಸಕಲದೇಶಾಧೀಶಸಮುದಯಸ್ಯೈಕತಸೇತುಮಹಾಸಿಂಧುಪ್ರವಾಹ ಪರಾಕಾ (ಯಶೋ.ಚ. ೩-೦ ವ). ೯. [ಜೈನ] ಇಪ್ಪತ್ತುಮೂರನೆಯ ತೀರ್ಥಂಕರನ ಹೆಸರು; ಪಾರ್ಶ್ವನಾಥ: ವೃಷಭ . . . ಪಾರ್ಶ್ವ ವರ್ಧಮಾನ ರೆಂಬಿಪ್ಪತ್ತುನಾಲ್ವರ್ ತೀರ್ಥಕರರ್ (ಶಾಂತಿಪು. ೯೦೨); ದಿವಿಜನಾಥಂ ಜನ್ಮಾಭಿಷೇಕಕಲ್ಯಾಣಾನಂತರಂ ಪಾರ್ಶ್ವನೆಂಬುದು ತ್ರಿಲೋಕಪೂಜಿತ ಮಪ್ಪ ಧರ್ಮಂ ಅದರಾಶ್ರಯಮಪ್ಪುದರಿಂ ಪಾರ್ಶ್ವನೆಂದು ಪೆಸರ ನಿಟ್ಟು ಪೋಗೆ (ಪಾರ್ಶ್ವಪು. ಆಶ್ವಾಸ. I, iii). [ಸಂ.]

**ಪಾರ್ಶ್ವಕ** (ನಾ). ೧. ಮೋಸದಿಂದ ಹಣವನ್ನು ಸಂಪಾದಿಸುವವನು. ೨. "(ಸೈನ್ಯದ ಪಕ್ಕವನ್ನು ರಕ್ಷಿಸುವ ಅಥವಾ ಅವನ್ನು ಅಪಾಯಕ್ಕೊಳ ಪಡಿಸುವ) ಸೈನಿಕರಕ್ಷಣೆಗಳು: ಪಾರ್ಶ್ವಕ" (Flank. ಇಂಕಿ). [ಸಂ.]

**ಪಾರ್ಶ್ವಕೋಣಾಸನ** (ನಾ). [ಯೋಗ] ಒಂದು ಬಗೆಯ ಆಸನ: ಮುಖ್ಯವಾದ ಕೆಲವು ಆಸನಗಳು, ಅಷ್ಟವಿನ್ಯಾಸಗಳು ೧. ಉತ್ತಾನಾಸನ . . . ೬೬. ಪಾರ್ಶ್ವಕೋಣಾಸನ (ಶಾಕಟ. ೦೬೬). [ಸಂ.]

**ಪಾರ್ಶ್ವಕ್ರಾಂತ** (ನಾ). [ನಾಟ್ಯ] ಹದಿನಾರು ಬಗೆಯ ಮಾರ್ಗ ಆಕಾಶ ಚಾರಿಗಳಲ್ಲಿ ಒಂದು ᑭ "(i) ಕುಂಚಿತಚರಣವನ್ನು ಮೇಲಕ್ಕೆತ್ತಿ ನೆಲವನ್ನು ಹಿಮ್ಮಡಿಯಿಂದ ಗಟ್ಟಿಸುವುದು. [ಇದನ್ನೇ ಪಾರ್ಶ್ವ ದಂಡಚಾರಿಯೆಂದೂ ಕರೆಯುತ್ತಾರೆ] (ii) ಕುಂಚಿತಚರಣವನ್ನು ಮತ್ತೊಂದು ತೊಡೆಯವರೆಗೂ ಎತ್ತಿ ಉದ್ವೃಟ್ಟಿತ ಮಾಡಬೇಕು" (ಶಾಸ್ತ್ರಂ. ೩೦೬ ಗದ್ಯಾನುವಾದ); ಒಂದು ಪದಂ ಕುಂಚಿತದಿಂದಂ[ದಂ] ಬಡೆದೆತ್ತಿ ತ[ನ್ನ] ಪಾರ್ಶ್ವದ ದೆಸೆಯಿಂ ಚಂದದೆ ಲಾಗಿಸಿ ಮಡದಿಂದೊಂದಿಸೆ ಭೂತಳಮನಿಂತು ಪಾರ್ಶ್ವಕ್ರಾಂತಂ (ಶಾಸ್ತ್ರಂ. ೬-೯೨); ಈ ಚಾರಿ ಪಾರ್ಶ್ವದಂಡಪಾದಮೆಂದು ಲೋಕಪ್ರಸಿದ್ಧಂ; ಮತ್ತೊಂದು ತೊಡೆ ಪರಿಯಂತರ ಎತ್ತಿ ಉದ್ವೃಟ್ಟಿತಪಾದವಂ ಮಾಡಿದರೆ ಇದನ್ನೂ ಪಾರ್ಶ್ವ ಕ್ರಾಂತಮೆಂಬರು (ಶಾಸ್ತ್ರಂ. ೬-೯೨೩). [ಸಂ. ಪಾರ್ಶ್ವಕ್ರಾಂತಾ]

**ಪಾರ್ಶ್ವಗತ** (ನಾ). = ಪಾರ್ಶ್ವಾಗತ: ಋಜು ಋಜುಪರಾವೃತ್ತಿ ಅರ್ಧ ಋಜು ಅರ್ಧಋಜುಪರಾವೃತ್ತಿ ಸಾಚಿ ಸಾಚಿಪರಾವೃತ್ತಿ ದ್ವ್ಯರ್ಧಾಕ್ಷಿ ತತ್ಪರಾವೃತ್ತಿ ಪಾರ್ಶ್ವಗತಮೆಂಬ ನವಸ್ಥಾನಕಂಗಳೊಳು . . . ಆಳವಡೆ (ಚಂದ್ರ.ಪು. ೦೩-೬೦). [ಸಂ.]

**ಪಾರ್ಶ್ವಚರ** (ನಾ). ೧. ಪಕ್ಕದಲ್ಲಿರುವವನು. ೨. ಸಮೀಪದಲ್ಲಿ ಸಂಚರಿಸುವವನು. ೩. ಸೇವಕ; ಆಳು: ಅಭಿನವರೂಪಹಾವನವ ಭಾವಸಮನ್ವಿತೆ ಪುಟ್ಟಿದಳ್ ಸ್ವಯಂಪ್ರಭೆ ಮಗಳಾಕೆ ಪಾರ್ಶ್ವಚರ ಭೂಚರ ಖೇಚರ ನೇತ್ರಪುತ್ರಿಕಾನಿಭೆ . . . ನಯನೋತ್ಪಲೇಂದುಕಿರಣ ಪ್ರಭೆಯಪ್ಪುದು ತಪ್ಪದೊಪ್ಪುಗುಂ (ಶಾಂತಿಪು. ೩-೦೬). [ಪಾರ್ಶ್ವ+ಚರ]

**ಪಾರ್ಶ್ವಭೇದ** (ನಾ). [ನಾಟ್ಯ] ನರ್ತನದಲ್ಲಿ ಒಂದು ಬಗೆ; ᑭ "ವೃಶ್ಚಿಕಕುಟ್ಟಿತ, ಊರ್ಧ್ವಜಾನು, ಆಕ್ಷಿಪ್ತ, ಸ್ವಸ್ತಿಕ ಈ ನಾಲ್ಕು ಕರಣಗಳನ್ನೂ ಮಾಡಿ ಒಂದಾವರ್ತಿ ಸುತ್ತಿ ಉರೋಮಂಡಲ, ನಿತಂಬ, ಕರಿಹಸ್ತ, ಕಟೀಛಿನ್ನ ಈ ನಾಲ್ಕು ಕರಣಗಳನ್ನೂ ಕ್ರಮ ವಾಗಿ ಮಾಡುವುದು" (ಶಾಸ್ತ್ರಂ. ೩೦೦ ಗದ್ಯಾನುವಾದ): ವಿಮಲಪಾಚುರಿತ ಪಾರ್ಶ್ವಭೇದ ಸರ್ಪಿತಂ ಊಡಿಮೆತ್ತ ಮತ್ಸ್ಯಾಕ್ರೀಡಂ ಪಸರಿಪ ವಿಮ್ಮ ದ್ರ್ಯಾಂತಂ ಶಶಿಮುಖಿ ವಿಷ್ಕಂಭಕಾಪಸೃತಮೆಂಬಿನಿತುಂ (ಶಾಸ್ತ್ರಂ. ೩-೯). [<ಸಂ. ಪಾರ್ಶ್ವಚ್ಛೇದ ?]

**ಪಾರ್ಶ್ವಜಾನು** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; **P** "ಸಮಪಾದದಿಂದ ನಿಂತುಕೊಂಡು ಒಂದು ಕಾಲಿನಿಂದ ತೊಡೆಯ ಹಿಂಭಾಗವನ್ನು ತಾಗಿಸಿ, ಒಂದು ಕೈಯನ್ನು ಮುಷ್ಟಿಹಸ್ತದಿಂದ ಎದೆಯ ಹತ್ತಿರದಲ್ಲೂ ಇನ್ನೊಂದು ಕೈಯನ್ನು ಅರ್ಧಚಂದ್ರಹಸ್ತದಿಂದ ಸೊಂಟದ ಹತ್ತಿರದಲ್ಲೂ ಹಿಡಿಯುವುದು. ಹೀಗೆ ಎರಡು ಪಾರ್ಶ್ವಗಳಲ್ಲೂ ಮಾಡುವುದು. ಯುದ್ಧ, ನಿಯುದ್ಧ [ಜಟ್ಟಿಕಾಳಗ] ಇವೇ ಮೊದಲಾದುವನ್ನು ಅಭಿನಯಿಸುವಾಗ" (ಶಾಸ್ತ್ರರಂ. ೬೦೦ ಗದ್ಯಾನುವಾದ) ; ತಲಪುಷ್ಪಪುಟ, ಲೀನ . . . ತಲಸಂಸ್ಫೋಟಿತ, ಪಾರ್ಶ್ವಜಾನು . . . ನಾಗಾಪಸರ್ಪಿತ, ಗಂಗಾವತರಣ— ಈ ನೂರೆಂಟು ಕರಣಂಗಳ್ (ಶಾಸ್ತ್ರರಂ. ೪-೬೨ವ). [ಸಂ.]

**ಪಾರ್ಶ್ವದ್ವಯ** (ನಾ). [ನಾಟ್ಯ] ಹದಿಮೂರು ವಿಧವಾದ ಹಸ್ತಕ್ಷೇತ್ರಗಳಲ್ಲಿ ಒಂದು : ಪಾರ್ಶ್ವದ್ವಯ, ಪುರಸ್ತಾತ್, ಪಶ್ಚಾತ್ . . . ಕಟಿಶಿರ, ಊರುದ್ವಂದ್ವ— ಈ ಹದಿಮೂರು ಹಸ್ತಕ್ಷೇತ್ರಂಗಳ್ (ಶಾಸ್ತ್ರರಂ. ೪-೦೫ವ). [ಸಂ.]

**ಪಾರ್ಶ್ವನಾಥ** (ನಾ). ೧. = ಪಾರ್ಶ್ವ ೭ : ಕವಿಕುಳತಿಳಕಪ್ರಣೂತಪಾರ್ಶ್ವನಾಥಪ್ರಣೀತಮಪ್ಪ ಪಾರ್ಶ್ವನಾಥಚರಿತಪುರಾಣದೊಳ್ ಕಥಾವತಾರವರ್ಣನಂ (ಪಾರ್ಶ್ವಪು. ೧-೦೫೫ ಗದ್ಯ). ೨. =ಪಾರ್ಶ್ವ ೯ : ಸಂಪೂರ್ಣಮಾಯ್ತು ಬಿಪ್ರಸ್ತುತಪಾರ್ಶ್ವನಾಥಚರಿತಂ ಪಾರ್ಶ್ವೋದಿತಂ (ಪಾರ್ಶ್ವಪು. ೧೬ ೦೫೬). [ಸಂ.]

**ಪಾರ್ಶ್ವನಿಕುಟ್ಟಕ** (ನಾ). [ನಾಟ್ಯ] ನೂರೆಂಟುಕರಣಗಳಲ್ಲಿ ಒಂದು; **P** "ಪತಾಕಹಸ್ತಗಳೆರಡನ್ನು ಸ್ವಸ್ತಿಕದಂತೆ ಹಿಡಿದು, ಒಂದು ಕೈಯನ್ನು ಮೇಲ್ಮುಖವಾಗಿಯೂ ಇನ್ನೊಂದನ್ನು ಕೆಳಮುಖವಾಗಿಯೂ ಮಾಡಿ, ಮೇಲ್ಮುಖವಾಗಿರುವ ಕೈಯನ್ನು ಪಾರ್ಶ್ವದಲ್ಲಿ [ಪಕ್ಕದಲ್ಲಿ] ನಿಲ್ಲಿಸಿ, ಕೆಳಮುಖವಾಗಿರುವ ಕೈಯನ್ನು ಪಾರ್ಶ್ವಕ್ಕೆ [ಪಕ್ಕಕ್ಕೆ] ತರುವಾಗಲೇ ಆ ಪಾರ್ಶ್ವದ ಕಾಲನ್ನೂ ಅಂಗಾಲು ಮೇಲ್ಮುಖ ಮಾಡಿ ಪಕ್ಕದ ಹತ್ತಿರಕ್ಕೆ ತಂದು ಕೈಗೆ ಮುಟ್ಟಿಸುವುದಲ್ಲದೆ ಇನ್ನೊಂದು ಕೈಯನ್ನು ಮೇಲಕ್ಕೆ ಚಲಿಸುವುದು. ಹೀಗೆ ಎರಡು ಪಾರ್ಶ್ವಗಳಲ್ಲೂ ಪರ್ಯಾಯವಾಗಿ ಮಾಡುವುದು" (ಶಾಸ್ತ್ರರಂ. ೨೯೭ ಗದ್ಯಾನುವಾದ) : ತಲಪುಷ್ಪಪುಟ, ಲೀನ, ವಿವರ್ತಿತ . . . ಪಾರ್ಶ್ವನಿಕುಟ್ಟಕ, ಚಕ್ರಮಂಡಲ, ಉರೋಮಂಡಲ . . . ವೃಷಭಕ್ರೀಡಿತ, ನಾಗಾಪಸರ್ಪಿತ, ಗಂಗಾವತರಣ— ಈ ನೂರೆಂಟು ಕರಣಂಗಳ್ (ಶಾಸ್ತ್ರರಂ. ೪ ೬೨ ವ). [ಪಾರ್ಶ್ವ+ನಿಕುಟ್ಟಕ]

**ಪಾರ್ಶ್ವಪಾದಾಸನ** (ನಾ). [ಯೋಗ] ಒಂದು ಬಗೆಯ ಆಸನ : ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು ೧. ಉತ್ತಾನಾಸನ . . . ೬೩. ಪಾರ್ಶ್ವಪಾದಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಶಾರದ. ೦೬೭). [ಸಂ.]

**ಪಾರ್ಶ್ವಭಾಗಿನಿ** (ನಾ). ಮಗ್ಗುಲಲ್ಲಿರುವವಳು; ಪತ್ನಿ : ನಿನ್ನನ್ನು ಸರಿಯಲ್ಲಿಟ್ಟು ತನ್ನ ಪಾರ್ಶ್ವಭಾಗಿನಿಯನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸುತ್ತಿರುವ ಆ ಅಧಮ ಕೇಶವರಾಯನೇ ನನ್ನ ಪತಿ (ಅಂಬಿಕೆ. ೪೭). [ಸಂ. ಪಾರ್ಶ್ವಭಾಗಿನೀ]

**ಪಾರ್ಶ್ವಮಂಡಲ** (ನಾ). [ನಾಟ್ಯ] ಮೂವತ್ತು ಬಗೆಯ ನೃತ್ತಹಸ್ತಗಳಲ್ಲಿ ಒಂದು : ಚತುರಸ್ರ, ಉದ್ವೃತ್ತ, ತಲಮುಖ . . . ಪಾರ್ಶ್ವಮಂಡಲ, ಉರೋಮಂಡಲ . . . ಅಲಪದ್ಮ, ಉಲ್ಬಣ, ವಲಿತ, ಲಲಿತ— ಈ ಮೂವತ್ತು ನೃತ್ತಹಸ್ತಂಗಳ್ (ಶಾಸ್ತ್ರರಂ. ೨-೯೯ ವ) ; ಈ ಕೆಳಗೆ ಹೇಳುವ ಹಸ್ತಗಳು ನೃತ್ತಹಸ್ತಗಳು— ೧. ಚತುರಸ್ರ, ೨. ಉದ್ವೃತ್ತ . . . ೨೨. ಪಾರ್ಶ್ವಮಂಡಲ (ಅಭಾಸ್ಕ. ೯೯). [ಸಂ.]

**ಪಾರ್ಶ್ವವರ್ತಿ** (ನಾ). ಸಹಾಯಕ ; ಸೇವಕ. [ಸಂ. ಪಾರ್ಶ್ವವರ್ತಿನ್]

**ಪಾರ್ಶ್ವವಾಯು** (ನಾ). ದೇಹದ ಅರ್ಧಭಾಗದ ಚಲನೆಯನ್ನು ಉಡುಗಿಸುವ ವಾತರೋಗ; ಲಕ್ವ : ಮಾತು ನಿಲ್ಲಬಹುದು, ಪಾರ್ಶ್ವವಾಯು ಬರಬಹುದು (೯೦೦೦. ೩೦) ; ಜಯಜಯಾ ಪ್ರತಿಪಾಗವು ಪಾರ್ಶ್ವವಾಯುವನ್ನು ಗುಣಪಡಿಸುವುದೆಂಬ ನಂಬಿಕೆಯಿದೆ (ಭಾರತ. ೫೯೯). 'ಅರ್ಧಾಂಗವಾಯು' ಪರಾ. [ಪಾರ್ಶ್ವ+ವಾಯು]

**ಪಾರ್ಶ್ವಶೂಲೆ** (ನಾ). ಪಕ್ಕೆಗಳಲ್ಲಿ ಉಂಟಾಗುವ ನೋವು; ಪಕ್ಕೆಶೂಲೆ : ಹೊಟ್ಟೆಶೂಲೆಗೆ, ಪಾರ್ಶ್ವಶೂಲೆಗೆ :—ಬಿಳ್ಳಿತಾದ ಮೆಣಸು ಹೊನ್ನುತೂಕವನ್ನು ವೀಳ್ಯದೆಲೆಗೆ ತೊಡೆದು ಆ ಎಲೆ ಮೆಲ್ಲಲು ಹರ (ವೈದ್ಯಪ. ೦೨೩) ; ಗರುಗ, ಬಳ್ಳಿಸೊಂಡೆ . . . ವಾಯುವಿಳಂಗ – ಇಷ್ಟನ್ನು ಚೂರ್ಣಿಸಿ, ಕಲ್ಕವ ಮಾಡಿ ಕವಡಿ, ತೈಲಪಕ್ವದಲ್ಲಿಳುಹಿ ಪಾನವ ಮಾಡಲು . . . ಪಾರ್ಶ್ವಶೂಲೆ, ಗ್ರಹಣಿ, ಅಗ್ನಿಮಾಂದ್ಯ, ಇವಿಷ್ಟು ಪರಿಹರವಹುದು (ಸೆಕವೈ. ೨೨೬). [ಪಾರ್ಶ್ವ+ಶೂಲೆ]

**ಪಾರ್ಶ್ವಸ್ಥ** (ನಾ). ೧. ವಿಟಪುರುಷರಲ್ಲಿ ಒಂದು ಬಗೆ ; ಹತ್ತಿರದ ಮನೆಯಲ್ಲಿ ವಾಸಿಸುವ ವಿಟ.—ಜಾರಃಸ್ತ್ರೀಯುಳ್ಳ ಮನೆಯ ಬಟ್ಟಿಕಲದ ಮನೆಯೊಳಿರ್ಪನಂ ಪಾರ್ಶ್ವಸ್ಥನೆಂಬುದು (ಕಾಮಶಾ. ೨೫೨). ೨. ಸೂತ್ರಧಾರನ ಸಹಾಯಕ. [ಸಂ.]

**ಪಾರ್ಶ್ವಸ್ವಸ್ತಿಕ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು; **P** "ಒಂದು ಪಾರ್ಶ್ವದಲ್ಲಿ ದಿಕ್‌ಸ್ವಸ್ತಿಕವನ್ನೂ ಇನ್ನೊಂದು ಪಾರ್ಶ್ವದಲ್ಲಿ ಅರ್ಧನಿಕುಟ್ಟಕವನ್ನೂ ಪುನಃ ಪಾರ್ಶ್ವವ್ಯತ್ಯಾಸದಿಂದ ಅದೇ ಕರಣಗಳನ್ನು ಮಾಡಿ ಅಪವಿದ್ಧ, ಊರೂದ್ವೃತ್ತ, ಆಕ್ಷಿಪ್ತ, ನಿತಂಬ, ಕರಿಹಸ್ತ, ಕಟೀಛಿನ್ನ ಈ ಕರಣಗಳನ್ನು ಕ್ರಮವಾಗಿ ಮಾಡುವುದು" (ಶಾಸ್ತ್ರರಂ. ೩೦೬ ಗದ್ಯಾನುವಾದ) : ಸ್ಥಿರಹಸ್ತ, ಪರ್ಯಸ್ತ . . . ಪಾರ್ಶ್ವಸ್ವಸ್ತಿಕ, ಭ್ರಮರ . . . ಸ್ವಸ್ತಿಕರೇಚಿತ— ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಶಾಸ್ತ್ರರಂ. ೩-೭ ವ). [ಪಾರ್ಶ್ವ+ಸ್ವಸ್ತಿಕ]

**ಪಾರ್ಶ್ವಾಗತ** (ನಾ). [ಚಿತ್ರಕಲಾ] ಒಂದು ವಸ್ತುವಿನ ಮಗ್ಗುಲು ನೋಟ; ಋಜ್ವಾಗತ, ಅರ್ಧಋಜ್ವಾಗತ, ಪಾರ್ಶ್ವಾಗತ, ಸಾಚಿ ಮತ್ತು ದ್ವ್ಯರ್ಧಾಕ್ಷ ಎಂಬ ಪಂಚವಿಧ ಸ್ಥಾನಕಗಳಲ್ಲಿ ಒಂದು : ರಂಜಿಸುಗುಂ ಪಾರ್ಶ್ವಾಗತಂ . . . ತದ್ವಿದ್ಯರಂ ಮೆಚ್ಚಿಸುಗುಂ ದ್ವ್ಯರ್ಧಾಕ್ಷಮೆಂಬಂತಿರೆ ಸೊಗಯಿಸುತಿರ್ಪಂಗನಾಭಂಗಿಯಂ ಚಿತ್ರಿಸಿ ಚಿತ್ರಕ್ಕಾಯು ಪೊಯ್ದು ಮದನನನೆ ಮಹಾದೇವಿ ಕಣ್ಗೊಪ್ಪಿ ತೋರ್ಪಳ್ (ಅಪಾ. ೨-೯೩). 'ಪಾರ್ಶ್ವಗತ' ಪರಾ. [ಸಂ.]

**ಪಾರ್ಶ್ವೋತ್ತಾನಾಸನ** (ನಾ). [ಯೋಗ] ಒಂದು ಬಗೆಯ ಆಸನ: ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು ೧. ಉತ್ತಾನಾಸನ, ೨. ಚತುರಂಗದಂಡಾಸನ . . . ೬೬. ಪಾರ್ಶ್ವಕೋಣಾಸನ, ೬೭. ಪಾರ್ಶ್ವೋತ್ತಾನಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಶಾರದ. ೦೬೭). [ಸಂ.]

**ಪಾರ್ಷದ** (ನಾ). ೧. ಸಭೆಯಲ್ಲಿರುವವನು; ಸಭಾಸದ : ಸಕಲಧನೇಶಮುಖ್ಯರು ಪಾರ್ಷದೋತ್ತಮರು (ಶಿಭಾಗ. ೦೦-೬೨-೨೬). ೨. ಪರಿಚಾರಕ : ಅವರನ್ನು ಜಯವಿಜಯರೆಂಬ ಪಾರ್ಷದರು ತಮ್ಮ ಕೈಯೊಳಗಿನ ವೇತ್ರಯಷ್ಟಿಯಿಂದ ಪ್ರತಿಬಂಧಿಸಿದರು (ಭಾಮಕ. ೦೦೦). [ಸಂ.]

**ಪಾರ್ಷ್ಣಿ** (ನಾ). ೧. ಪಾದದ ಹಿಂಭಾಗ; ಹಿಮ್ಮಡಿ : ಗೂ[ಢ]ಗುಲ್ಫಪಾರ್ಷ್ಣಿಗಳನೊಳಕೊಂಡ ಮನುಜಪಾಂಥಾತನ ಪೊಜಿಅಡಿಗಳ್ ವಿರೋಧಿಭೂಪಾಳರನಡಿಗೆಜಿಗಿಸದ ಸಂತೋಷಪದೋನ್ನತಂಗಳಾದಂತೆ ಕೂರ್ಮೋನ್ನತಂಗಳಾದುವು (ಶಂಕರಾ. ೨-೩೯ ವ) ; ವಿಸಟಂಬಱಿರ್ಪನೆಯಂ ವಾರ್ಷ್ಣಿಗತಿಯೊಳೆ ಬೆಸಂಬೆತ್ತು ಕಾಲ್ಗೊಳ್ಗಮು ಊರಂಬಸದಿಂದಂಗುಷ್ಠದಿಂ

ಪಾರ್ಷ್ಣಿಯಾನಳವಡಿಸುತ್ತುಂ . . . ಬಂಬಲ್ವರಿಯಿಸಿ (ಶಾಂತೀ. ೯-೯೩); ಪರಿವರ್ತಿತ್ತಪ್ತಂ ಪತಿತಂ . . . ಅಂಗುಲಿ ಸಂಗತಮಾಯೆಂಟುಂ ಸಮಂತು ಪಾರ್ಷ್ಣಿಯ ಭೇದಂ (ಶಾಸ್ತ್ರ. ೩-೦೦೦). ೨. ಸೈನ್ಯದ ಹಿಂಭಾಗ. ೩. ಹಿಂಬದಿ; ಹಿಂಭಾಗ: "ಪರಭಾಗಂ ಪಾರ್ಷ್ಣಿ ಪಾಡಂ" (ಪಸ್ತು ಕೋ. ೩೬-೨). ೪. ಹಿಂದಿನಿಂದ ಹಿಡಿಯುವುದು,—ಆಕ್ರಮಿಸುವುದು: "ಹಿಂದೆ ಹಿಡಿವಲ್ಲಿ ಪಾಡವಲ್ಲಿ ಪಾರ್ಷ್ಣಿಯೆಂದೆನಿಸು" (ಮಂಗರಾ. ೦೯೨-೨೦). ೫. ಹಿಂದಿನಿಂದ ಹಿಡಿಯುವವನು,—ಆಕ್ರಮಿಸುವವನು; ಪಾರ್ಷ್ಣಿಗ್ರಾಹಕ: "ಹಿಂದೆ ಸೆಳೆವನಲ್ಲಿಯುಂ, ಪಾಡದಲ್ಲಿಯುಂ — ಪಾರ್ಷ್ಣಿಯೆಂಬುದು" (ಹಲಾಯು. ೦೩೬-೩೬). ೬. ರಥದ ಅಚ್ಚಿನ ಮುಂಭಾಗ,—ತುಂದಿ. ೭. ಒದೆತ; ತುಳಿತ. ೮. ಜಯವನ್ನು ಹೊಂದುವ ಅಪೇಕ್ಷೆ. ೯. ತನಿಖೆ; ವಿಚಾರಣೆ. ೧೦. ಸ್ವೇಚ್ಛಾಚಾರದಿಂದಿರುವವಳು; ಸ್ವೈರಿಣಿ. ೧೧. ಕುಂತಿಯ ಒಂದು ಹೆಸರು. [ಸಂ.]

**ಪಾರ್ಷ್ಣಿಗಮನ** (ನಾ). [ನಾಟ್ಯ] ಹಿಮ್ಮಡಿಗಳನೂರಿ ಹಿಂದಕ್ಕೆ ನಡೆಯುವುದು; ನೃತ್ಯದಲ್ಲಿ ಒಂದು ಭಂಗಿ: ಪಿಂತಣ್ಗೆ ಪಾಡಗಳಿಂದಂ ಸಂತತ ನಡೆಯಲ್ಕೆ ಪಾರ್ಷ್ಣಿಗಮನಮೆನಿಕ್ಕುಂ (ಶಾಸ್ತ್ರ. ೨-೦೦೦).

[ ಪಾರ್ಷ್ಣಿ + ಗಮನ]

**ಪಾರ್ಷ್ಣಿಗ್ರಾಹಕ** (ನಾ). ಹಿಂಭಾಗದಲ್ಲಿದ್ದು ಮೇಲೆ ಬೀಳುವ ಶತ್ರು: ಅದಂ ಕಂಡು ಕಪ್ಪಮಾಯದೆ ಚಪ್ಪರಿಸುವ ಮಂಡಳಿಕರುಮನಡಂಗದಾಟವಿಕರುಮಂ ಒತ್ತಿ ಬರ್ಪ ಪಾರ್ಷ್ಣಿಗ್ರಾಹಕರುಮನಱಿದು (ಆದಿಪು. ೪-೬೨ ವ).

[ ಪಾರ್ಷ್ಣಿ+ಗ್ರಾಹಕ ]

**ಪಾರ್ಷ್ಣಿಪಾರ್ಶ್ವಗತ** (ನಾ). [ನಾಟ್ಯ] ಇಪ್ಪತ್ತುಮೂರಂ ದೇಶೀಯಂ ಸ್ಥಾನಕಗಳಲ್ಲಿ ಒಂದು; ℗ "ಒಂದು ಪಾದದ ಒಳಭಾಗದಲ್ಲಿ [ಕೀಲಿನಲ್ಲಿ] ಇನ್ನೊಂದು ಕಾಲಿನ ಹಿಮ್ಮಡಿಯನ್ನು ಅಡ್ಡವಾಗಿರಿಸುವುದು" (ಶಾಸ್ತ್ರ. ೩೩೦ ಗದ್ಯಾನುವಾದ): ಪದದೊಳಪಾರ್ಶ್ವಮನಿತರದ ಪದಪಾರ್ಷ್ಣಿ[ಯುಮೊಂದೆ ಪಾರ್ಷ್ಣಿ]ಪಾರ್ಶ್ವಗತಾಖ್ಯಂ (ಶಾಸ್ತ್ರ. ೬-೪೦).

[ಸಂ.]

**ಪಾರ್ಷ್ಣಿರೇಚಿತ** (ನಾ). [ನಾಟ್ಯ] ಮೂವತ್ತೈದು ದೇಶೀಯಭೌಮಚಾರಿಗಳಲ್ಲಿ ಒಂದು; ℗ "ಪಾರ್ಷ್ಣಿಪಾರ್ಶ್ವಗತಸ್ಥಾನಕದಲ್ಲಿ ಹಿಮ್ಮಡಿಯನ್ನು ರೇಚಿತ ಮಾಡುವುದು" (ಶಾಸ್ತ್ರ. ೩೨೨ ಗದ್ಯಾನುವಾದ): ರಥಚಕ್ರ, ಪರಾವೃತ್ತತಲ, ನೂಪುರ . . . ವಿಶ್ಲಿಷ್ಟ, ಪಾರ್ಷ್ಣಿರೇಚಿತ, ಊರುತಾಡಿತ . . . ಅರ್ಧಸ್ಖಲಿತ, ಸಮಸ್ಖಲಿತ; ಈ ಮೂವತ್ತೈದು ದೇಶಿಯ ಸಂಬಂಧದ ಭೌಮಚಾರಿಗಳು (ಶಾಸ್ತ್ರ. ೬-೦೬ ವ).

[ ಪಾರ್ಷ್ಣಿ + ರೇಚಿತ ]

**ಪಾರ್ಷ್ಣಿವಿದ್ಧ** (ನಾ). [ನಾಟ್ಯ] ಇಪ್ಪತ್ತಮೂರು ದೇಶೀಯಸ್ಥಾನಕಗಳಲ್ಲಿ ಒಂದು; ℗ "ಒಂದು ಕಾಲಿನ ಹಿಮ್ಮಡಿಯ ಮೇಲೆ ಇನ್ನೊಂದು ಕಾಲಿನ ಹೆಬ್ಬೆಟ್ಟನ್ನು ಇಡುವುದು" (ಶಾಸ್ತ್ರ. ೩೩೦ ಗದ್ಯಾನುವಾದ): ಚತುರಸ್ರ, ಪಾರ್ಷ್ಣಿವಿದ್ಧ . . . ಚರಣಂ ಪಾಡದೊಳಗನ್ಯದ ಚರಣದ ಪೆರ್ಬೆಟ್ಟನಿರಿಸೆ ಪಾರ್ಷ್ಣಿಯ ವಿದ್ಧಂ (ಶಾಸ್ತ್ರ. ೬-೩೯).

[ಸಂ.]

**ಪಾರ್ಸಲ್** 'ಪಾರ್ಸಲ್ಲು' ನೋ.

**ಪಾರ್ಸಲ್ಲು, ಪಾರ್ಸಲ್, ಪಾರ್ಸೆಲ್** (ನಾ). (ಸಾಮಾನ್ಯವಾಗಿ ಟಪಾಲು ಮೂಲಕ ಕಳಿಸುವ) ಕಟ್ಟಿದ ವಸ್ತು; ಭಾಂಗಿ: ಬುಟ್ಟಿಗಟ್ಟಲೆ ಹಣ್ಣುಗಳನ್ನು ಪಾರ್ಸಲ್ಲು ಮಾಡಿ ಊರಿಗೆ ಕಳಿಸಿದರು (ರೂ). **ಪಾರ್ಸಲ್**: ನೀವು ನಮ್ಮಿಬ್ಬರಿಗೂ ಪಾರ್ಸಲ್ ಮಾಡಿ ಕಳಿಸಬೇಕು (ಸಮಾಜ. ೫೨೫). **ಪಾರ್ಸೆಲ್**: "ಪಾರ್ಸೆಲ್ . . . ಒಂದು ಕಟ್ಟಾಗಿ ಕಟ್ಟಿದ ಸಾಮಾನು; ಮೂಟೆ; ಭಾಂಗಿ" (Parcel· ಇಂಕಕ). [← ಇಂ. Parcel]

**ಪಾರ್ಸಿ** 'ಪಾರಸಿ' ನೋ.

**ಪಾರ್ಸಿಕ** 'ಪಾರಶಿಕ' ನೋ.

**ಪಾರ್ಸೆಲ್** 'ಪಾರ್ಸಲ್ಲು' ನೋ.

**ಪಾಲ್$_1$**, ಪಾಲು$_1$, ಹಾಲು$_1$ (ನಾ). ೧. ಸಸ್ತನಿಗಳು ತಮ್ಮ ಸಂತಾನ ಪೋಷಣೆಗಾಗಿ ಅವುಗಳಿಗೆ ಕುಡಿಸುವ, ಸ್ತನಗ್ರಂಥಿಗಳಿಂದ ಉತ್ಪತ್ತಿಯಾಗುವ ಬಿಳಿಯ ಬಣ್ಣದ ದ್ರವ; ಕ್ಷೀರ: "ಕ್ಷೀರಂ ದುಗ್ಧಂ ಪಾಲ್" (ವಸ್ತುಕೋ. ೯೨-೦); ಕಿಟ್ಟಾನೇಶ್ವರದಾ ದೇವರು ಪರವರಿಯ ಭತ್ತಮುಂ ಕವಿಲೆಯ ಪಾಲುಂ ಎಟ್ಟುಂ × × × (ಎಕ. VI. ಕೊಪ್ಪ. ೩೬-೩; ಸು. 676?); ಮಱುಗುವ ಪಾಲ್ಗಳಿಯ ಪನಿಗಳಂ ಬೆರಸಿದವೋಲ್ (ಕಬಿರಾ. ೦-೫೬); ಬಡಿಗಂಡನಿಲ್ಲ ಪಾಲನೆ ಕಂಡಂ (ಶಬರ. ೬-೦೯). ೨. (ಕಳ್ಳಿ, ಎಕ್ಕ ಮುಂತಾದ) ಕೆಲವು ಸಸ್ಯಗಳು ಸ್ರವಿಸುವ ಬಿಳಿಯ ರಸ: ಒಳಮೊಂಡಿನ ಪಾಲ್ಗಳುಮಂ ಪೀರ್ದಿಂಗೊರಲ್ಗಳಿವ ನೀರ್ವಕ್ಕಿಗಳ ಸುಸಿಲ ಮಸಕದಿಂಚರಂಗಳುಮಂ . . . ನೆಗಟ್ಟೃಮಿರ್ಪಂ (ಕಾದಂಬ. ೫೨೬); ಪಾಲೆಂಬ ತೆಱದೆ ಪಶುವಿನ ಪಾಲಂ ಪೋಲುವುವೆ ನಾಯ ಕಳ್ಳಿಯ ಪಾಲ್ಗಳ್ (ಅಕ. ೨-೬೬): ಪಾಲೆಂಬ ನಾಮಮಾವಿನ ಪಾಲಿಂಗಂ ನಾಯ ಪಟವ ಕಳ್ಳಿಯೊಳಾದಾ ಪಾಲಿಂಗಮಕ್ಕುಮಾದೊಡ ಪಾಲೊಳ್ಪುಂ ಸವಿಯು ಮದಱೊಳೇಂ ಸಮನಿಕುಮೇ (ರಜೋವು. ೦-೦೯೨). ೩. ತೆಂಗಿನಕಾಯಿ, ಕಬ್ಬು ಮುಂತಾದುವುಗಳ ರಸ; (ಕ). ೪. ಸಿಡುಬು ಮೊದಲಾದುವುಗಳಿಗೆ ಮದ್ದಿನಂತೆ ಉಪಯೋಗಿಸುವ ಲಸಿಕೆ: (ಕ). ೫. ಬಿಳಿಯ ಬಣ್ಣ; ಬಿಳುಪು: 'ಪಾಲ್ತೊತ್ತ' ಪರಾ. ೬. ಸಾಮಾನ್ಯವಾಗಿ ಬತ್ತ, ಗೋಧಿ ಇತ್ಯಾದಿ ಏಕದಳಧಾನ್ಯದ ಬಲಿಯದೆ ಇರುವ ಎಳೆಯ ಕಾಳಿನಲ್ಲಿರುವ, ಪಿಷ್ಟಾಂಶದಿಂದ ಕೂಡಿರುವ ಬಿಳಿಯ ರಸ: 'ಪಾಲ್ದೆಂಬು', 'ಪಾಲ್ದೆನೆ' ಪರಾ. **ಪಾಲು$_1$**: ೧. ಕಱೆಯುತ್ತೆ ಸುರಧೇನು ಪಾಲನು (ಸಂಚಿಹ. ೬-೬); ಚಿಲುಪಾಲು ತುಂಬಾಲು ಕೆನೆವೆರಸಿದ ಪಾಲು ಸುಲಲಿತ ಬಟ್ಟವಾಲುಗಳ್ ಸಲೆ ಕಟ್ಟು ಮೊಸರುಗಳ್ ಗಟ್ಟಿಮಜ್ಜಿಗೆಗಳ ಲಲನೆಯರುಣಬಡಿಸಿದರು (ಕುಮಾ. ೯-೪೦); ಗೊಲ್ಲ ಕರೆದಾ ಧ್ವನಿಯ ಕೇಳಿ ಎಲ್ಲ ಪಶುಗಳು ಬಂದವಾಗ ಚೆಲ್ಲಿ ಸೂಸಿ ಪಾಲ ಕರೆದು ಅಲ್ಲಿ ತುಂಬಿತು ಬಿಂದಿಗೆ (ಗೋಹಾಡು. ೪೦). **ಹಾಲು$_1$**: ೧. "ಆವೃಧಸ್ಯಂ ಪಯಂ ದುಗ್ಧಮಾ ಕ್ಷೀರಮೆನಲಾವುಗಳು ಕಱೆವ ಹಾಲಕ್ಕು" (ಮಂಗರಾ. ೫೪-೫); ಕಲ್ಲ ನಾಗರ ಕಂಡರೆ ಹಾಲನೆಱೆಯೆಂಬರು (ಜನಪ. ೦೯೪); ಹಾಲ ಸಾಗರ ಮನೆಯ ಸಜ್ಜೆಯ ಮೇಲೆ ಶೇಷನ ಹಾಸು (ಸಂಚಿಹ. ೬-೦); ಹುಳಿಗಲಸಿದರೆ ಕೊಡನ ಹಾಲವೊಲಳಿವುದೇ ಕ್ಷೀರಾಂಬುನಿಧಿ (ಕೃಕು. ೩-೬-೪೦). ೨. ಎಷ್ಟೆಲ್ಲ ಔಷಧ ಹಾಕಿಕೊಂಡವನಿಗೆ ಕಳ್ಳೀಹಾಲಿನ ಹೆದರಿಕೆಯೆ! (ಕಂಪು. ೦೬); ಎಕ್ಕದ ಹಾಲು, ಕೋಲುಗಳ್ಳಿಹಾಲು ಮತ್ತು ಕಣಗಿಲುಹಾಲು ಈ ಮೂರು ಸಸ್ಯಕ್ಷೀರಗಳನ್ನು ಒಂದೊಂದು ತೊಟ್ಟು ಸೇರಿಸಿ ರೊಟ್ಟಿ ಹಾಕಿಸಿಕೊಂಡು ತಿನ್ನು (ಶಪೂರು. ೦೬೫); ಈ ಗಿಡಗಳನ್ನು . . . ಮೈಸೂರ ನಾಡಿನಲ್ಲಿ ಬೆಳೆಸುತ್ತಾರೆ. ಇದರ ಹಾಲಿನಿಂದ ರಬ್ಬರನ್ನು ತಯಾರಿಸುತ್ತಾರೆ (ಸಸ್ಯಶಾ. ೦೩೩). ೩. ಮಾಘ ಫಾಲ್ಗುಣದಲ್ಲಿ ಗಾಣವನ್ನು ಹೂಡಿದರೆ ಅಷ್ಟರಲ್ಲಿ ಬಿಸಿಲು ಬಲಿತು ಕಬ್ಬಿನ ಹಾಲು ಸ್ವಲ್ಪ ಕಡಿಮೆ ಆಗುವದು (ಕೃಷಿಕ್ರ. ೦೬೫); ಕಬ್ಬಿನ ಗಣೆ ಡೊಂಕು, ಅದರ ಹಾಲದು ಡೊಂಕೆ ರಸಿಕಾ ಪೇಳೊ (ಗಂ. ೩೨-೦); ಗಾಣದ ಚಕ್ರಗಳಲ್ಲಿ ಕಬ್ಬು ಜಜ್ಜಿ ಹೋಗಿ ಅದರಿಂದ ಹಾಲು ಸುರಿಯುತ್ತಿತ್ತು (ಳಕಥೆ. ೩-೬೨). 'ಕಾಯಿ ಹಾಲು' ಪರಾ. ೫. 'ಹಾಲುಗಲ್ಲು', 'ಹಾಲುಗಾರೆ' ಪರಾ. ೬. ಧೊರೆ ಸನ್ನ ತಮ್ಮ ಬರುವಾಗ ಯಾಲಕ್ಕಿಗೊನಿ ಬಾಗಿ ಹಾಲ ಸುರಿದಾವ (ಗರತಿ. ೫೬). ೭. ಸುಕುಮಾರತೆ; ಕೋಮಲತೆ; ಮೃದುತ್ವ: 'ಹಾಲುಗಲ್ಲ', 'ಹಾಲುಗೆನ್ನೆ' ಪರಾ.

**ಪಾಲ ಪೊನಲ್**=ಹಾಲಿನ ಹೊಳೆ : ಪಾಲ ಪೊನಲ್ ಪೊದಟ್ಟೊದವಿ ಸೌಂದರಮಂದರಕಂದರಂಗಳಂ ಶೈಲದರೀಗೃಹಂಗಳುಮನೊರ್ಮೆಯೆ ತೆಕ್ಕನೆ ಕೀವಿ . . . ಪರಿದತ್ತು ನಗೋಪಕಂಠದೊಳ್ (ಅಜಪು. ೬-೭೩). **ಪಾಲ ಮುನ್ನೀರ್** =ಹಾಲಿನ ಸಮುದ್ರ; ಕ್ಷೀರಸಾಗರ : ಪಾಲ ಮುನ್ನೀರ್ ಕೆರೆಯುಂಕಿರ್ದುತ್ತರೀಯಂ ನೆಲದೊಳಲೆಯುತ್ತಿರ್ದ ಮೂ ರ್ಧಾ ಭಿಷಿಕ್ತರ್ ಬೆರಸು . . . ಬಂದನಾ ಸಾರ್ವಭೌಮಂ (ಕಾದಂಬ. ೨೬೪); ಎನ್ನ ದೇಹದ ಬೆಮರ್ವನಿಯೊಳೊಗೆದರ್ ಪಾಲ ಮುನ್ನೀರ ಮಗಳೆಣೆಯ ಬೊಮ್ಮರ್ (ಶಬ್ದಾರ. ೧೦-೨೩). **ಪಾಲುರ್ಕು, ಹಾಲುಕ್ಕು**=ಹಾಲು ತುಂಬಿ ಕೊಂಡು ಹೊರಬರು; ಹಾಲು ಸೂಸು: ಭುವನಸಂಭ್ರಮದೊಡನೆ ತಾಯ್ದೆರ್ಗೆ ಪಾಲುರ್ಕೆ ಬರಲೊಂದಿರುಳ್, ಕನಸಿನೊಳ್, ದುಗ್ಧಾಬ್ಧಿಯಂ ಕಂಡು ನಲಿದಳ್ ದೇವಿ ಕೌಸಲ್ಯೆ (ಶ್ರೀರಾಮಾ. ೦೩-೪೦೩); ಈ ಮನೆ ಹಾಲುಕ್ಕಿದಂತೆ ಬಳೆಯಲಿ (ಸಪತ. ೩೬). **ಪಾಲ್ಬೆಣ್ಣೆಯುಂಬಳಿ**=ಹಾಲು ಮತ್ತು ಬೆಣ್ಣೆಗಾಗಿ ಕೊಟ್ಟ ಕೊಡುಗೆ : ಸದಾಶಿವರಾಯನಾಯಕನ ಪೊಮ್ಮದಿರೆಂಬ ವಾತ್ಸಲ್ಯದಿಂದಾ ಕುಮಾರರ್ಗೆ ಪಾಲ್ಬೆಣ್ಣೆಯುಂಬಳಿಗೆಂದು ನಿಯಾಮಿಸಿ ಮಾಸೂರಂ ಮಲ್ಲೂರು . . . ಸಂಕಣಭೂಪಂಗಾ ಸಮಯದೊಳಿತ್ತು (೬೪೫. ೩-೩). **ಹಾಲ ಕಾಗದ**=(ಹಾಲಿನಂತೆ) ಬೆಳ್ಳಗಿರುವ ಕಾಗದ; ಬಿಳುಪಾದ ಕಾಗದ : (೬). **ಹಾಲ ಕಾಟಿ**= ಗೋವಳಿಗ; ಕವಾಡಿಗ : ಹಾಲಕಾಟಿರ ಊರ ಚಿಕದೇವರು . . . ಯಿ ಶಾಸನದಲಾದ ಪ್ರಮಾಣಿನ ಭೂಮಿಯನೂ ಶ್ರೀನರ[ಸಿಂಹ]ಭಾರತೀಶ್ರೀಪಾದ ಒ[ಡೆ]ಯರು ××× (ಸೌಇಇ. IX-ii, ೯೪೦-೯೭; 1406 ). **ಹಾಲ ಕೆನೆ**=ಪಾಲ್ಗೆನೆ: ಹಾಲ ನೇಮ ಹಾಲ ಕೆನೆಯ ನೇಮ (ಬಸವ. ೨೪೨). **ಹಾಲಗಂಬ**=ಮದುವೆಯಲ್ಲಿ, ಧಾರೆಯ ಮಂಟಪಕ್ಕೆ ಸಮೀಪವಾಗಿ ನೆಡುವ (ಮುರಿದರೆ ಹಾಲು ಸುರಿಸುವ) ಮರದ ಕೊಂಬೆ : ಹೂದರಗಂಬಕ ಚೆಂದನ್ನ ಸಿಂಗಾರ ತುದ ಕಟ್ಟಿದರ ಹಾಲಗಂಬ ಮಾವಯ್ಯ ಬಂದ ಹೂದರಕ ಬಣ್ಣ ದಾಗ (ಜೋಳಗೀ. ೯೭). **ಹಾಲಗಾಳು**=ಹಾಲು ತುಂಬಿದ ಕಾಳು; ಎಳೆಯ ಕಾಳು : ಉಳಿದ ಪಕ್ಷಿಗಳು ತಿನ್ನುವಾಗ ಬಿದ್ದಂಥ ಹಣ್ಣು ಹಂಪಲುಗಳನ್ನೂ ಹಾಲಗಾಳುಗಳನ್ನೂ ತಂದು ನನಗೆ ಗುಟುಕು ಕೊಟ್ಟು ಉಳಿದರೆ ತಾನು ತಿನ್ನುತ್ತಿತ್ತು (ಮುಂಬಯಿ. ೩-೪೦೨). **ಹಾಲಗೋಳಿ**=ಹಂಸಪಕ್ಷಿ : ಹಾಲ ಗೋಳಿಯ ಮ್ಯಾಲ ನೀರಗೋಳಿಯ ತಂದ ನೀರಾಗ ನಿರಿಗಿ ಒದೆಯೂವ ಹೆಣ್ಣೀನ ಹ್ಯಾಂಪಕ ತಂದ ಶಿವರಾಯ (ಕನ್ನಜಾ. ೦೦೬). **ಹಾಲ ತೊಟಿ**=ಪಾಲ್ದೊಟಿ : ಹಾಲ ತೊಟಿಗೆ ಬೆಲ್ಲದ ಕೆಸರು ಸಕ್ಕರೆಯ ಮಳಲು ತವರಾಜದ ನೊರೆ ತೆರೆಯಂತೆ ಆದ್ಯರ ವಚನವಿರಲು (ಬಸವ. ೨೮೦). **ಹಾಲ ಧಾರೆ**=ಒಂದು ಬಗೆಯ ಪೂಜೆ ; ಕ್ಷೀರಾಭಿಷೇಕ: [ಮು]ನಿಚಂದ್ರದೇವರುಗಳ ಹೆಸರಿನಲು ನಡ[ವ] ಹಾಲ ಧಾರೆಗು ಸಹ ಅಕ್ಕಿ ಮೂಡೆ ೧೧ ( ಎಇ. XX. ೯೪-೯೮; 1556 ). **ಹಾಲ ಬಾನ**=ಹಾಲಿನೊಂದಿಗೆ ಕಲಸಿದ ಅನ್ನ : ಹಾಲ ಬಾನುಣಲೊ ಹವಳ ಕೇರಾಡಲೊ (ಗರತಿ. ೦೨೩); ಹರಿಯಾಗದನ್ನಮ್ಮಗಳು ಹಾಲಾ ಬಾನುಣ್ಣೊಳು (ಜೋಳಗೀ. ೮೦). **ಹಾಲ ಮಣಿ**=(ಹಾಲಿನಂತೆ) ಬಿಳುಪಾದ ಗಾಜಿನ ಮಣಿ : (೬). **ಹಾಲ ಸಹಸ್ರ**=ಹಾಲ ಧಾರೆ : ಶ್ರೀಸ್ವಯಂಭು ರಾಮೇಶ್ವರದೇವರ್ಗೆ [ಹಾ]ಲ ಸಹಸ್ರ ಗದ್ದುಗೆಯುಂ ಕೊಟ್ಟು ರಕ್ಷಿಣೆಯಾಗಿ ಕಟ್ಟಿಪ ಕೆಯಿಂ ತೆ××× ಬಟ್ಟೆಯಿಂ ಪಡುವಲು . . . ಬಿಟ್ಟ ಕೆಯಿ ಹಿರಿಯ ಕೋಲ ಮತ್ತರೇಳು (ಕಇ. II. ೨೪-೩೦; 1167). **ಹಾಲ ಹರವಿ**= ೧. ಹಾಲಿನ ಕೊಡ : ತಾಳಮರದ ಕೆಳಗೆ ಒಂದು ಹಾಲ ಹರವಿಯಿರ್ದೊಡೆ ಅದ ಹಾಲ ಹರವಿಯೆನ್ನರು ಸುರೆಯ ಹರವಿಯೆಂಬರು (ಬಸವ. ೯೦); ಹಾಲ ರವಿಯ ಸುತ್ತ ಯಾಲಕ್ಕಿ ನಾಶಾವ ಯಾರುಂಡರವ್ವ ಹಗಲೂಟ (ಗರತಿ. ೭೨). ೨. ಒಂದು ಊರಿನ ಹೆಸರು : ತಂಮ ಪ್ರವಿಷ್ಟದ ತಂಬುಘಟಿಯ ಮೂಡಣ ಬೆಂಚೆಯಾಶಾನ್ಯದಲ್ಲಿ ಹಾಲ ಹರವಿಯ ದಾರಿಯ ನೈಂಕಲೂಮ್ಮೂರ್ಧ್ವಕದೊಟಿಯಂ ಧಾರಾಪೂರ್ಬ್ಬಕಮ್ಮಾಡಿ ಕೊಟ್ಟ ಮತ್ತ ರಾಜು (ಸೌಇಇ. IX-i. ೨೯೩-೦೮; 1172). **ಹಾಲ ಹಸುಳೆ**=ಎಳೆಯ ಮಗು: ಆ ತರುಣಿಯು ವಯಸ್ಸಿನಲ್ಲಿ ದೊಡ್ಡವಳೇ ಆಗಿದ್ದರೂ ನಿರ್ದೋಷಿತ್ವದಲ್ಲಿ ಯಥಾರ್ಥವಾಗಿಯೂ ಹಾಲ ಹಸುಳೆಯಾಗಿದ್ದಳೆಂಬುದರಲ್ಲಿ ಯಾವ ಸಂದೇಹವೂ ಇಲ್ಲ (ಕವಿಕ. ೩೨); ತನ್ನ ಭವಿತವ್ಯದ ಬಗ್ಗೆ ಏನೇನೂ ಅರಿಯದ ಹಾಲ ಹಸುಳೆ ಹಿಂದುಮುಂದಿನ ಯೋಚನೆಗೆ ಅವಕಾಶವಿಲ್ಲದೆ ಹಸೆಯನ್ನೇರುತ್ತಾಳೆ (ಅಲ್ಪವಿ. ೯೨). **ಹಾಲ ಹೂರಣಗಡುಬು**=ಹಾಲಿನಲ್ಲಿ ನೆನೆಸಿ, ಸಿದ್ಧಮಾಡುವ ಒಂದು ಬಗೆಯ ಹೂರಣಗಡುಬು : ತಟುಪಿನೆಮ್ಮೆಯ ಹಾಲ ನಾಲ್ಕೊಂದೆನಿಸಿ ಕಾಸಿ ನೆಟಿ ಸಣ್ಣನಾದಕ್ಕಿಹಿಟ್ಟ ನಿನಿಸಂ ಹೊಯ್ದು . . . ಕರ್ಪೂರಂ ಮೊದಲಾದ ನಟುಗಂಪ ಪೊರೆಯೊತ್ತಿ ಹಾಲ [ಹಾಹಂ.ಬು] ಹೂರಣಗಡುಬುವೆಸರಾಂತು ಸವಿವಡೆದುದು (ಸೂಪಶಾ. ೧-೫೬). **ಹಾಲಿಗೆ ಸಕ್ಕರೆ ಬೆರಸು**=ಒಂದಕ್ಕೊಂದು ಪೂರಕವಾಗುವಂತೆ ಚೆನ್ನುಮಾಡು—ಸೊಗಸುಗೊಳಿಸು: ಈ ಎರಡು ಸಂಸಾರಗಳ ವಿವಾಹ ಬಂಧನ ಹಾಲಿಗೆ ಸಕ್ಕರೆ ಬೆರಸಿದಂತಾಗಿದೆ (ರೂಢಿ). **ಹಾಲಿಗೆ ಹುಳಿ ಹಿಂಡು**=ಕೆಡಿಸು; ಕೆಟ್ಟುದನ್ನು ಮಾಡು; ಹಾಳುಮಾಡು. **ಹಾಲಿನೊಡೆ**=ಹಾಲಿನಲ್ಲಿ ಬೇಯಿಸಿ ಮಾಡುವ ಒಂದು ಬಗೆಯ ವಡೆ : ತಿಳಿದುಪ್ಪದಿಂದ ಬೆಂದೊಡೆಯನೆಮ್ಮೆಯ ಹಾಲಿನೊಳಗೆ ಬೇಯಿಸೆ ಹಾಲಿನೊಡೆಯಾಯ್ತು (ಸೂಪಶಾ. ೧-೭೦). **ಹಾಲು ಕುಡಿದ ಹಾಗೆ ಆಗು**= ತೃಪ್ತಿಯಾಗು ; ತಣಿವನ್ನು ಹೊಂದು : ಈ ಸಂತೋಷದ ಸಂಗತಿಯನ್ನು ಕೇಳಿ ಹಾಲು ಕುಡಿದ ಹಾಗೆ ಆಯಿತು (ರೂಢಿ). **ಹಾಲುಕ್ಕಿಸು**=ಹೊಸ ಮನೆಯನ್ನು ಪ್ರವೇಶ ಮಾಡುವಾಗ (ಸಮೃದ್ಧಿಯ ಸಂಕೇತವಾಗಿ) ಹಾಲನ್ನು ಉಕ್ಕಿಸು : ಹೊಸಮನೆಗೆ ಹೋಗಿ ಹಾಲುಕ್ಕಿಸಿ ಬರಲು ಇಂದು ಒಳ್ಳೆಯ ಮುಹೂರ್ತವಿದೆ (ರೂಢಿ). **ಹಾಲುಜೇನು, ಹಾಲ್ಜೇನು**=ಜೇನು ಬೆರಸಿದ ಹಾಲು; ಜೇನುಬಾಲು : ರಸರಸವು ಹಾಲುಜೇನು (ಹೃದಸ. ೬೩-೨); ತನ್ನ ಒರಟುತುಟಿಗಳನ್ನು ಅವಳ ಹಾಲುಜೇನಿನಂತಹ ತುಟಿಗಳಿಗೆ ತಗುಲಿಸಿದ (ಹಾಡುಹು. ೩); ನಿನ್ನ ಬಾಯಲ್ಲಿ ಹಾಲ್ಜೇನು ಸುರಿಯಲಿ (ಜಾಂಕಥಾ. ೬೭); ಹಾಲ್ಜೇನನ್ನೇ ತನ್ನ ಮೈಯಲ್ಲಿ ತುಂಬಿಟ್ಟುಕೊಂಡು ಬೆಳೆದಳು ಅವಳು (ಹೊಸಕ್ಕೆ. ೩). **ಹಾಲುತುಪ್ಪ**=ಸತ್ತವರ ಸಮಾಧಿಗೆ ಮೂರನೆಯ ದಿನ ಮಾಡುವ ಒಂದು ವಿಧಿ. **ಹಾಲು ತುಪ್ಪ ಅನ್ನು**=ಒಳ್ಳೆಯದಾಗಲೆಂದು ಹೇಳು ; ಶುಭವನ್ನು ಹಾರೈಸು : ಥೀ, ಹುಚ್ಚಿ ! ಹಾಲು ತುಪ್ಪ ಅನ್ನು (ದಾಳೂಟ. ೦೦೦). **ಹಾಲು ತುಪ್ಪದಲ್ಲಿ ಕೈತೊಳೆ**=ಸುಖ, ಸಮೃದ್ಧಿಯ ಜೀವನವನ್ನು ನಡೆಸು : ನಮ್ಮಗಳು ಹಾಲು ತುಪ್ಪದಲ್ಲಿ ಕೈ ತೊಳೀತಾಳೆ (ಪತಿದಾ. II. ೧೦೬೦). **ಹಾಲು ತುಪ್ಪ ಬಿಡು**=ಸತ್ತವರ ಸಮಾಧಿಗೆ ಮೂರನೆಯ ದಿವಸ ಹಾಲು ಮತ್ತು ತುಪ್ಪವನ್ನು ಹಾಕು : ಸತ್ತ ದಿನ ದುಃಖದಲ್ಲಿ ಭಾಗಿಗಳಾಗಲು ಬಾರದಿದ್ದವರು . . . ಮೂರನೇ ದಿನ ಹಾಲೂ ತುಪ್ಪ ಬಿಡುವ ಹೊತ್ತಿಗೆ ಎಷ್ಟು ಕೆಲಸವಿದ್ದರೂ ಬಿಟ್ಟು ಬರುತ್ತಿದ್ದರು (ಹುಟ್ಟಿಹ. ೭೬). **ಹಾಲು ಬಿಡಿಸು**=ಶಿಶುವಿಗೆ ಸ್ತನ್ಯಪಾನದ ಅಭ್ಯಾಸವನ್ನು ಬಿಡಿಸು : ಹಾಲು ಬಿಡಿಸುವ ಹೊತ್ತಿಗೆ ಮಕ್ಕಳಿಗೆ ಬಹಳ ತೊಂದರೆಯಾಗುತ್ತದೆ (ರೂಢಿ).

[ದೇ.೩ ತಮಿ. ಪಾಲ. ಕೊಡ. ಕೋಲಾ. ಗದಬ. ಗೊಂಡಿ. ಪಾಲ್; ತುಳು. ಪೇರ್ ; ತೆಲು. ಪಾಲು. ಪಾಡಿ ; ಕುಇ. ಪಾಲು. ಪಾಡು; ಕುವಿ. ಪಾಲು ; ಬ್ರಾಹುಈ. ಪಾಲ್ಹ್]

**ಪಾಲ್₂**, ಪಾಲು₁ (ನಾ). ೧. ಹಂಚಿದ ಭಾಗ ; ಹಿಸ್ಸೆ : ಮಿಂದು ಪೂಜ್ಯರ್ಗೆ ಮುಂ ಪಾಲಂ ನೀಡದೇನನುಮುಣ್ಣನುಂ ಅಧರ್ಮದಿ ಪಾಲ್ಗೆ ಗೋವಂಬೊಲ್ ಗೋವಂ ಕರೆಯಂ ದಿಟಂ (ಶಾಶಂದ. ೨-೦೪).

**ಪಾಲು₁ :** ೧. ಅತಿಬಳನ ನಿಮಗೀವೆನಾತನ ಗತಿಯ ಪರಿ ವಿಪರೀತ ಕಾನಾ ಸುತನ ನಿಲಿಸಲಿಕಾಟಿಸೀವೆನು ನಿಮ್ಮ ಪಾಲಿಗೆಯು (ಸಂಕಶ. ೨೩-೩೬); ಶ್ರೀಹರಿಹರದೇವರ ಅವಸರಸತ್ರಕ್ಕೆ ಸಮರ್ಪ್ಪಿಸಿದ್ದ ಎರಡು ಪಾಲು (ಇಸಿ. IV, ೩೬-೯ ; 1530); ಧನವನೊದವಿಸುವುದೊಕ್ಕಲಿಗ್ಯೆದು ಪಾಲರಸಿಗೊಂದು ಪಾಲೀ ಕ್ರಮಮಾಡೊಳು (ಕಂಥ. ೯-೭೦); ತಂನ ಪಾಲಿಗೆ ಬಂದ ಭೂಮಿಯ ವಳಗೆ ಕೊಟದು (ಎಕ. VII, ಶಿಕಪು. ೨೯-೩೦ ; 1712); ಪಾಲಿಗೆ ಬಂದದ್ದು ಪಂಚಾಮೃತ (ಗಾದೆ). ೨. ಬಣ ; ಪಂಗಡ : 'ಪಾಲುಮುಖಂಡ' ಪರಾ.

**ಪಾಲಾಗು**—೧. ಭಾಗಕ್ಕೆ ಬರು ; ಪಾಲಿಗೆ ಸೇರು : ಪಲಬರ ಪಾಲಾದರವಾ ಕಲಹಂಸೋತ್ತುಂಗಗಮನಭಾಮಿನಿಯರನುಜ್ಜ್ವಲಗುಣ ರಾಜಿ ಪತಿವ್ರತಕಲಿತಾತುಳಕಾಂತ ಗೌರಿಗೆಣೆಯೆನಲಹುದೇ (ಹಮ್ಮಿ.ರ. ೨-೩೭); ಹಣ್ಣು ಹಂಪಲಗಳು . . . ಪುಣ್ಯವಂತರ ಪಾಲಾಗುವವು (ಕಟ್ಟಿಹೂ. ೪೩) ; ನಮ್ಮ ರಹಸ್ಯವು ಪ್ರತಿಕಕ್ಷಿಗಳ ಪಾಲಾಯಿತು (ರಾಜಿಕ. ೦೫). ೨. (ಆಸ್ತಿಯಲ್ಲಿ) ತನ್ನ ಭಾಗವನ್ನು ತೆಗೆದುಕೊಂಡು ಹೋಗು ; ಹಿಸ್ಸೆಯಾಗು ; ಭಾಗವಾಗು : ಒಡೆದು ಪಾಲಾಗಿದ್ದ ಕಾನೂರಿನ ಆಸ್ತಿ ಮತ್ತೆ ಒಂದಾಯಿತು (ಕಾಹೂರು. ೬೭೦). **ಪಾಲು ಮಾಡು**—೧. ವಿಭಾಗಿಸು ; ಭಾಗಮಾಡು : ತಿರುಗಿ ಹಪ್ಪಳವನ್ನು ಪಾಲು ಮಾಡಿ . . . ತಿನ್ನಿಸಿಯೇ ಬಿಟ್ಟಳು (ಮಹಿಮ. ೫೦). ೨. ಹಿಸ್ಸೆಮಾಡು : ಚರಸ್ವತ್ತುಗಳನ್ನು ಪಾಲು ಮಾಡುವಾಗಲೂ ಕೂಡ ಅನೇಕ ಉಪಾಯಗಳಿಂದ ತಮಗೆ ಹೆಚ್ಚು ಪಾಲು ಬರುವಂತೆ ಮಾಡಿಕೊಂಡರು (ಕಾಹೂರು. ೩೪೯).

[ದೇ.₁ ತಮಿ. ಮಲ. ತುಳು. ಕೊಡ. ಪಾಲ್ ; ತೆಲು. ಪಾಲು ; ಪರ್ಜಿ. ಪೇಲ]

**ಪಾಲು₂** 'ಪಾಲ್ಯ' ನೋ.

**ಪಾಲು₃**, ಪಾಳು, ಹಾಲು₁ (ನಾ). ೧. ನೊಸಲು; ಹಣೆ : ಫಕಾರಕ್ಕೆ ಪಕಾರಂ—ಕಫ—ಕಪ . . . ಫಾಲ—ಪಾಲ (ಕಶಿರ. ೨೫೩ ಪ್ರಯೋ). **ಪಾಳ₂** : ೧. "ಪಾಲ (ಪಾಳ)—ಫಾಲ=ಹಣೆ" (ಕರ್ಣಕೋ. ೨೩). ೨. ನೇಗಿಲಿನ ಗುಳ : " ಪಾಳ ೩, ಕುಶೀರ ೩—ಈ ೨ ಕುಳು (ಕಣಾಯು. ೯೯-೩೨೦) ; ಫಾಲ, ಪಾಳ ೩ ಫಣೆ, ಪಣೆ (ಕಣ್ಣಿ.ಹು. ೦೯೨ ಪ್ರಯೋ ೧). **ಹಾಲ₁** : ೨. ಬೆಳಗಪ್ಪ ಜಾವದಲ್ಲಿ ಕೂರಿಗೆಯ ಹಾಲದ ಪೊಳಗೆಯಿಂದ ಪುದು (ಅಟ್ಟಿಹು. ೯-೨೮ ಪ).  [< ಸಂ. ಫಾಲ]

**ಪಾಲು₄** (ನಾ). ೧. ರಕ್ಷಿಸುವವನು ; ಕಾಪಾಡುವವನು : ಕಾಯಬೇಕೆನ್ನ ಗೋಪಾಲ ಒಂದುಪಾಯವನರಿಯೆನು ಭಕುತರ ಪಾಲ (ತುಕಂದ. ೨-೦೬೪ ಕಲ್ಲಂ). ೨. ಒಬ್ಬಾತನ ಹೆಸರು : ಬನ್ನೂರ್ಚಾವರಿಯ ಮಗ ಪಾಲ ಬಲ್ಲದ ತುಱುಗೊಲೊ ಕಾದಿ ತುಱುವನಿಕ್ಕಿಸಿ ಸ್ವರ್ಗ್ಗಿಯಾದ (ಎಕ. X, ಮುಳಬಾ. ೯೭-೬ ; ಸು. 970). ೩. ಪೀಕದಾನಿ ; ಪಡಿಗ. ೪. ರಕ್ಷಣೆ : ಕಾಪಾಡುವುದು. [ಸಂ.]

**ಪಾಲಂಕಿ₁** 'ಪಲ್ಲಂಗ' ನೋ.

**ಪಾಲಂಕಿ₂** (ನಾ). ಒಂದು ಬಗೆಯ ಸಂಗಂಧದ್ರವ್ಯ; ಕುಂದುರುಷ್ಕ.
[ಸಂ. ಪಾಲಂಕೀ]

**ಪಾಲಕ** (ನಾ). ೧. ಕಾಪಾಡುವ ವ್ಯಕ್ತಿ ; ರಕ್ಷಕ ; ಪೋಷಕ : "ಅಮ್ಮಿತಾ=ಪಾಲಕಂ" (ಕಾಕಣ್ಣ. ೪೦) ; ಆ ದಿನ ಶಾಲೆಗೆ ಇಬ್ಬರು ಪಾಲಕರು ಹಿರಿಯ ಗುರುಗಳನ್ನು ಕಾಣಲು ಬಂದಿದ್ದರು (ಕಹು. ೯-೨೯) ; ಅವಳ ದೊಡ್ಡಮ್ಮನೇನೊ ಒಳ್ಳೆಯವಳಾಗಿದ್ದಳು. ಆದರೇನು ಅವಳು ಎಷ್ಟಾದರೂ ಪಾಲಕಳೇ ಹೊರತು ತಾಯಿಯಲ್ಲ (ಶೀಕಬಾ. ೦೪೩). ೨. ಆಳುವವನು; ರಾಜ. ೩. ರಕ್ಷಿಸುವುದು; ರಕ್ಷಣೆ. ೪. ಕುದುರೆ. ೫. ಅಶ್ವರಕ್ಷಕ. [ಸಂ.]

**ಪಾಲಕಾಪ್ಯ** (ನಾ). ೧. ಕರೇಣುವಂಹರ್ಷಿಯ ಮಗ ; ಆನೆ, ಕುದುರೆ ಮುಂತಾದುವುಗಳ ಲಕ್ಷಣಗಳನ್ನು ತಿಳಿಸುವ ಗ್ರಂಥವನ್ನು ಬರೆದ ಒಬ್ಬ ಮುನಿ. ೨. ಈತನು ಬರೆದ ಗಜಾಶ್ವಾದಿ ಲಕ್ಷಣಗಳನ್ನೊಳಗೊಂಡ ಶಾಸ್ತ್ರಗ್ರಂಥ : ಇರ್ಪರುಮನೋದಲಿಟ್ಟೊಡೇಟಿಯುವರುಪದೊಳಗೆ ವ್ಯಾಕರಣಂ . . . ಪಾಲಕಾಪ್ಯಂ ಚಾಣಕ್ಯಂ ವೈದ್ಯಂ ಮೊದಲಾಗೊಡೆಯ ಶಾಸ್ತ್ರಂಗಳನೆಲ್ಲಮನಿರ್ವರುಂ ಕಲ್ತು (ವಡ್ಡಾರಾ. ೧೨೮-೨೨).
[ಸಂ.]

**ಪಾಲಕಿ** 'ಪಲ್ಲಂಗ' ನೋ.

**ಪಾಲಕೆಟ್** 'ಪಾಲ್ಕೆಟ್' ನೋ.

**ಪಾಲಕ್ಕಿ** (ನಾ). ಒಂದು ಬಗೆಯ ತರಕಾರಿ ಸೊಪ್ಪು : ನಮ್ಮ ಮನೆಯ ಹಿತ್ತಲಿನಲ್ಲಿ ಪಾಲಕ್ಕಿಯ ಸೊಪ್ಪು ಹೇರಳವಾಗಿ ಬೆಳೆದಿದೆ (ರೂಢಿ).
[< ಸಂ. ಪಾಲಕ್ಯಾ. / ತೆಲು. ಪಾಲಾಕು. / ಹಿಂ. ಪಾಲಕ್]

**ಪಾಲಕ್ಯ** (ನಾ). ಒಂದು ಬಗೆಯ ತರಕಾರಿಸೊಪ್ಪು ; ಹರಿವೆ : "ಪಾಲಕ್ಯಮೆಂಬುದು ಹಱುಪೆ (ಕಣಾಯು. ೨೭-೧೧) ; ಪಾಲಕ್ಯವು (ಪಾನಕನ ಪಲ್ಲೆ) ಗುರು ಮತ್ತು ಸಾರಕವಿದೆ (ಆಯುಸ್ಸಂಗ. ೧೩೬).
[ಸಂ. ಪಾಲಕ್ಯಾ]

**ಪಾಲಕ್ಕೆ** (ನಾ). = ಪಾಲಕ್ಯ. [ಸಂ. ಪಾಲಕ್ಯಾ]

**ಪಾಲಖಿ** 'ಪಲ್ಲಂಗ' ನೋ.

**ಪಾಲಘ್ನ** (ನಾ). ಅಣಬೆ ; ನಾಯಿಂಕೊಡೆ : "ಛತ್ರಾ, ಅತಿಛತ್ರ ೩, ಪಾಲಘ್ನ ೩ — ೩ ಕೊಡೆಹುಲ್ಲಿನ ಹೆಸರುಗಳು. ಛತ್ರಾಕಾರವಾದ ಹುಲ್ಲು, ಛತ್ರಾತಿಛತ್ರವೆಂದು ಏಕಪದವಾಗಿ ಕೆಲವರು ಹೇಳಿದರು " (ಸಿದ್ಧಾಂತಿ. ೧೫೦).
[ಸಂ.]

**ಪಾಲಡಕೆ**, ಹಾಲಡಕೆ (ನಾ). ಹಸಿಯ ಅಡಕೆ : ಮದನವೇದನೆಯ ವಿನ್ನಾಣಂಗಳಪ್ಪ ಪಸುರೆಸೆವ ಪಾಲಡ[ಪಾಠಾಂ. ಡ]ಕೆಯ ಗೊಂಚಲುಮಂ . . . ಕತ್ತುರಿಯ ಕಂಪಿನಿಂ ಸೊಂಪಂ ತಳೆದ ಮಲಯಜವಿಲೇಪನಮುಮನರಸಂಗೆ ತೋಱೆ (ಕಾದಂಬ. ೧೮೮). **ಹಾಲಡಕೆ** : ಹಾಲಡಕೆ ಬಹಳ ಮತ್ತು ಬರುವಂತೆ ಮಾಡುತ್ತದೆ (ರೂಢಿ). [ಪಾಲ್₁ + ಅಡಕೆ₁]

**ಪಾಲನ** (ಗು). ೧. ನಡೆಸುವ ; ಪಾಲಿಸುವ. ೨. ಕಾಪಾಡುವ ; ರಕ್ಷಿಸುವ. (ನಾ). ೩. ನಡೆಸುವುದು; ಪಾಲಿಸುವುದು. ೪. ಕಾಪಾಡುವುದು ; ರಕ್ಷಣೆ. ೫. ಆಗ ತಾನೇ ಕರು ಹಾಕಿದ ಹಸುವಿನ ಹಾಲು. [ಸಂ.]

**ಪಾಲನೆ** (ನಾ). ೧. ಕಾಪಾಡುವುದು ; ರಕ್ಷಿಸುವುದು ; ರಕ್ಷಣೆ : ನಿರ್ವ್ಯಸನದೊಳು ಪಾಲನೆಯೊಳು ಧನದೊಳು . . . ಭೋಗಮುಖ್ಯ (ಮಂಗರಾ. ೧೫೦-೫೦) ; ಪಾಲನೆಯಿಲ್ಲದಿದ್ದರೆ ಲಾಲನೆಗೆ ಎಡೆಯೆಲ್ಲಿ ? (ಗಾದೆ); ಮಕ್ಕಳ ಪಾಲನೆಯ ವಿಷಯದಲ್ಲಿ ತಾಯಿಯಾದವಳು ಹೆಚ್ಚು ಗಮನ ಕೊಡಬೇಕು (ರೂಢಿ). ೨. ಸಾಕುವುದು : ಈಗಿನ ಕಾಲದಲ್ಲಿ ಸೀಮೆದನಗಳನ್ನು ಪಾಲನೆ ಮಾಡುವುದು ತುಂಬಾ ದುಬಾರಿ (ರೂಢಿ). ೩. ನಡೆಸುವುದು ; ಪಾಲಿಸುವುದು : ಯಾವುದೇ ಕೆಲಸದಲ್ಲಿ ನಿಯಮದ ಪಾಲನೆ ತುಂಬಾ ಮುಖ್ಯ (ರೂಢಿ). [ಸಂ. ಪಾಲನ]

**ಪಾಲಶರ್ಮ** (ನಾ). ಒಬ್ಬಾತನ ಹೆಸರು : ಕಾಶ್ಯ(ಶ್ಯ)ಪಗೋತ್ರ ಪಾಲಶರ್ಮ್ಮಣಚತುರಿಅಂಶ ೩ (ಇಸಿ. VII, ೧೮೮-೯೦ ; 668).
[ಪಾಲ್₁+ಶರ್ಮ]

**ಪಾಲಾ** (ನಾ). ಜೊತೆ ; ಸಂಗ ; ಸಹವಾಸ : ನೀನೂ ಅವನನ್ನು ಏರಿಗಟ್ಟಿಕೊಂಡು ಬರುವಿಯಾ ? ನಿನ್ನ ಪಾಲಾನೂ ಫೂ (ಸಿರಾಶ. ೮೯).

**ಪಾಲಾ ಫೂ** = ಜೊತೆ ಬಿಡುವುದು ; ಸಂಗ ಬಿಡುವುದು ; ಥೂ : ರಾಮಾನೂ 'ಪಾಲಾ ಫೂ' ಎಂದನು (ಸಿರಾಶ. ೮೯) ; ನಿನ್ನ 'ಪಾಲಾ

ಘೂ!!' ಎಂದು ಸಿಟಕೋಡು ಅತ್ತ ದೂರ ಹೋಗಿ ಒಂದು ಕಂಟಿಯ ಕಡೆಗೆ ಮೋರೆ ಮಾಡಿ ನಿಂತು ಅಳಹತ್ತಿದಳು (ದಾಸಹು. ೧೪). **ಪಾಲಾ ಘೂ ಬಿಡು** = ಜೊತೆ ಬಿಡು; ಕೂ ಬಿಡಂ; ಸಂಗ ಬಿಡಂ: ಮೊದಲಿನಿಂದಲೂ ಇಬ್ಬರೂ ಕೂಡೇ ಇರುತ್ತಿದ್ದೆವಲ್ಲ, ನೀನೇ ನನ್ನ ಪಾಲಾ ಘೂ ಬಿಟ್ಟೆ (ಶಿಣಿಶಿ. ೨೩). **ಪಾಲಾ ಬಿಡು** = ಪಾಲಾಘೂ ಬಿಡಂ: ಸಾಯಂಕಾಲವು ಗೆಳೆಯರು ಪಾಲಾ ಬಿಟ್ಟದ್ದರಿಂದ ಒಬ್ಬಂಟಿಗನಾಗಿ ಕೂತಿರುವ ಹುಡುಗನಂತೆ . . . ತೋರುತ್ತಿತ್ತು (ಶಿಣಿಶ. ೯೨); ನೀನು ರಂಗನ ಪಾಲಾ ಬಿಡು, ಅವನ ಸಂಗವನ್ನು ಮಾಡಬೇಡ (ರಂಗರೋ. ೬೪). **ಪಾಲಾ ಹಿಡಿ** = ಜೊತೆ ಸೇರು; ಸಂಗ ಕಟ್ಟು: ತಾನಾಗಿ ಪಾಲಾ ಬಿಟ್ಟು ತಾನಾಗಿ ಪಾಲಾ ಹಿಡಿದಾನೆಂದು ಬಸವಂತನ ಕನಸುಮನಸಿನಲ್ಲಿಯೂ ಅನಿಸಿದ್ದಿಲ್ಲ (ಶಿಣಿಶ. ೯೮).

[ ← ಮರಾ. ಪಾಲವ = ಸಂಬಂಧ ]

**ಪಾಲಾಶ** (ಗು). ೧. ಮುತ್ತುಗದ ಮರಕ್ಕೆ ಸಂಬಂಧಿಸಿದ; ಪಲಾಶವೃಕ್ಷದ. (ನಾ). ೨. ಮುತ್ತುಗದ ಮರ; ಪಲಾಶವೃಕ್ಷ: ನಂದುವ ಕಿಚ್ಚುಮನಸ್ತಮಯಂದೋರುವ ಚಂದ್ರಸೂರ್ಯರೆಂಬರ ನಂಬದೆ ಸುಂದರವಿಧಿ ಕೆಂಬೆಳಗಂ ತಂದಿಟ್ಟವೊಲೆಯ್ದೆ ತೋರ್ಪತಾ ಪಾಲಾಶಂ (ಮಲ್ಲಿಕಾ. ೩-೩೬೬); ಪಾಲಾಶ ಕಲಧೌತಪುಷ್ಪಂಗಳುಂ ತುಳಸಿ ಮಾಲೂರ ಪತ್ರಯಿಾ ನಾಲ್ಕು ಲಿಂಗಕ್ಕೆ ಪ್ರಕ್ಷಾಲಿಸಿ ಪುನಃಪುನಃ ಧರಿಸಬೇಕಾದುದುಂ ನಿರ್ಮಾಲ್ಯವಲ್ಲ ಸತತಂ (ಗುರುಚಾ. ೬-೧೭). ೩. ಮುತ್ತುಗದ ಮರದಿಂದ ಮಾಡಿದುದು. ೪. ಹಸುರುಬಣ್ಣ; ಮರಕತವರ್ಣ: "ಶ್ಯಾಮಂ, ಶ್ಯಾಮಳಂ, ರಾಮಂ, ಪಾಲಾಶಂ, ಹರಿತಂ, ಹರಿತ್—ಈ ೬ ಪ(ಹ)ಸುರ್" (ಹಲಾಯು. ೧೨೦-೪೯). [ ಸಂ. ]

**ಪಾಲಾಶದಂಡ** (ನಾ). ಮುತ್ತುಗದ ಕೋಲಂ: ಕೈಗಳವಡುವ ತತ್ ಪಾಲಾಶದಂಡವೆ ವಿಷ್ಣುಕಂಕಾಳ ಇಡುವ ಮೇಧಾವಿಯೆ ಭಸಿತವು (ಬಸಪು. ೩-೫೪). [ ಪಾಲಾಶ + ದಂಡ ]

**ಪಾಲಾಸ** (ನಾ). ಮುತ್ತುಗದ ಮರ; ಪಲಾಶವೃಕ್ಷ: ಪಾಲಾಸ ಬದರಿಕ ಮಾಮರ ತಳಿರ್ತೆಣ್ಕೆ ಗೋಳಿಯಾಲವು (ದೇವಾಂಪು. ೬-೨೬೮).

[ < ಪ್ರಾ. ಪಾಲಾಸ./ಸಂ. ಪಾಲಾಶ ]

**ಪಾಲಿ₁** (ನಾ). ಕಾಪಾಡುವವನಂ; ರಕ್ಷಿಸುವವನಂ: ಸೂರ್ಯಲೋಚನ ಶರಣ ಪಾಲಿ ನಗಧರ್ಮ ಸೃಷ್ಟಿಸ್ಥಿತಿಪ್ರಹರಣವಿನೋದಿತಂ . . . ವಿರೂಪಾಕ್ಷ ನನವರತ ನಿಮ್ಮ ಸಲಹುಗೆಯೆನುತೆ ಮರೆಯಿತ್ತಂ (ರಾಶಿಶ. ೩-೧೨).

[ ಸಂ. ಪಾಲಿನ್ ]

**ಪಾಲಿ₂, ಪಾಳಿ₂** (ನಾ). ೧. ಸಾಲಂ; ಪಂಕ್ತಿ: ಬೆಳದಿಂಗಳಿನಲ್ಲಿ ಎಲ್ಲವೂ ಸ್ಪಷ್ಟವಾಗಿ ಕಾಣದಿದ್ದರೂ ಸುಗಂಧದಿಂದ ಬಕುಳಪುಷ್ಪವೆಲ್ಲಿದೆ, ಸಿಂಧುವಾರದ ಪಾಲಿ ಎಲ್ಲಿದೆ, ಸಂಪಿಗೆ ಎಲ್ಲಿದೆಯೆಂಬುವನ್ನರಿಯಬಹುದಾಗಿತ್ತು (ಶಾಶಿಶಿ. ೩೬); ರಂಗಾದಲ್ಲೀ ಪಾಲೀ ತಿರುಗೋನೇ ಸೀಬೀಯ ರಂಗಾ ಪಮ್ಮೇಲೇ ದಯವಾಗೋ (ಹುಬ್ಬಿಹ. ೩೬). ೨. ಗುಂಪು; ಸಮೂಹ. ೩. ಭಿತ್ತಿ; ಗೋಡೆ: "(ಎರಡು ಭಾಗಗಳನ್ನು ಪ್ರತ್ಯೇಕಿಸುವ) ತಡಕೆ, ಪಾಲಿ; ಅಂತರಪಟ" (Dissepiment. ಇಂಕಶಿ). ೪. ಸೇತುವೆ; ಸಂಕ: "ಅಳಿ ಪಾಲಿ[ ಪಾಶಾಂ. ೪ ]ಯೆನಲೇರಿಯಕ್ಕುಂ" (ತುಂಗರಾ. ೧೨೩-೧೪). ೫. ಸಂತ್ರಲೂ ಬಿಗಿಯುವುದಂ,—ಕಟ್ಟುವುದಂ. ೬. ಆಸ್ಪದ; ಅವಕಾಶ. ೭. ಜಾಗ; ಪ್ರದೇಶ. ೮. ದಿಕ್ಕು. ೯. ಪಾಲು; ಭಾಗ. ೧೦. ಕತ್ತಿಯ ಹಿಡಿಕೆ: "ಪಾಲಿ[ ಪಾಶಾಂ. ೪ ] ಪರುಜು ವೆನಲು ಮೋಹಳಮಕ್ಕು" (ತುಂಗರಾ. ೬೪-೩೬). ೧೧. ಆದಿ; ಪೂರ್ವ. ೧೨. ಕಿವಿ. ೧೩. ಹಾಲೆ. ೧೪. ನಿತಂಬ. ೧೫. ದೇಹ; ಶರೀರ. ೧೬. ಗುರುತು; ಚಿಹ್ನೆ. ೧೭. ಬಾವುಟ. ೧೮. ದಾರ. ೧೯. ಬಳ್ಳಿ. ೨೦. ಬಾಣ; ಸರಳಂ. ೨೧. ಬೆಂಕಿ. ೨೨. ವೇದವನ್ನು ಹೇಳುವ ಒಂದು ರೀತಿ; ಸಂಹಿತಾಪಾಠ. ೨೩. ನಾಚಿಕೆ; ಲಜ್ಜೆ. ೨೪. ತೇವ; ಹಸಿ. ೨೫. ಹೇನಂ. "ಕ್ಷೇತ್ರದೊಳಾದಿಯೋಳ್ ಶರದೊಳಾದ್ರ್ಯವದೋ[illegible]ಶ್ರುತಿಭೇದ ಭಿತ್ತಿಯೋಳ್ ಶ್ರೋತ್ರದೊಳಗ್ನಿಯೋಳ್ ಪರಜಿನೋಳ್ ಪರಮೇಶನೊಳುಂ ವಿಬಂಧದೋಳ್ ಗಾತ್ರದೊಳಾಸೆಯೋಳ್ ಧ್ವಜದೊಳಾಸ್ಪದದೋಳ್ ಲತೆಯೋಳ್ ವಿಭಾಗದೋಳ್ ಸೂತ್ರದೊಳ್ಕದೆ ಲಜ್ಜೆಯೋಳ್ ಪಂಚಮದೋಳ್ ಸಲೆ ಪಾಲಿ [ ಪಾಶಾಂ. ೪ ] ವಾಚಕಂ" (ಶಾನಾರ.೩೨). **ಪಾಳಿ₂**: ೧. ಸೂಳೆ ನಿಂಬೆಗೆ ಕರುಣಾಳು ದೇವರ ದೇವ ಪಾಳಿಯಿಂ ಪೊಮ್ಮಳಿಗಟ್ಟಿದನೇಳುದಿವಸ (ಭೈರಸೂ. I, ೧೪೭). ೨. ಬಿತ್ತಿಂ ಬಿದಪಾಳೀಜಾಳದೊಳ್ಪೊಯ್ದೆಳವೆಟ್ಟಿಯುಗೆಯುಬ್ಬು (ಅನಂಪು. ೨-೩೪): ಗರುಡರ ಗಣಂ ಕಿನ್ನರರ ಕುಲಂ ವಿದ್ಯಾಧರರ ಪಾಳಿ ಸಿದ್ಧರ ಸಮೂಹ . . . ದಿಕ್ಪಾಲಕರು ಮುಖ್ಯರಾದ ಪರಿಪರಿಯ ನಿರ್ಜರಿರ್ದರೀಶನೊಡ್ಡೋಲಗದೊಳು (ಸಿದ್ಧೇಪು. ೧-೩೯); ಚೂಳಿಯೊಳ್ ಮೈದೋರ್ಪಿದಂ ಮಂದಮಾರುತಂ ಪಾಳಿಯಿಂ ನಡೆಸಿದಂ ಸೇನೆಯಂ ಸೇನಾನಿ (ಶಬಪು. ೩೫-೧೨). ೪. "ಆಳೀ, ಪಾಳೀ—ಈ ೨ ಏರಿ" (ಹಲಾಯು. ೧೧೧-೫೪); ಕಳಮಕಾನನದ ಮುಂದೆ ಮುಂದ್ಯೆಸಿದ ಜಾದಿಯ ಮೆಳೆಗಳ ಬಳಸಿನಿಂ ಪೊಳೆವ ಪಾಳಿಯಿಂ ಮೆಟ್ಟಿ ನಿಂದು (ರೀಲಾಶ. ೫-೬೮ ವ). ೭. ಪಾಂಡುಕುಮಾರರಟವಿಯ ಪಾಳಿಯಲಿ ಪರುಠವಿಸಿದರು ಪದಯುಗಪರಿಭ್ರಮಾವ (ಶುದ್ಧಾಶ. ೪-೧); ನದಿಯಿಂ ನಂದನದಿಂ ಲತಾಪ್ರತತಿಯಿಂ ಪುಷ್ಪಾಳಿಯಿಂ ಪಾಳಿಯಿಂ . . . ತದಿಳಾಮಂಡಳಮೊಪ್ಪುಗುಂ (ರಾಜಶೇ. ೨-೨೮). ೧೨. ಪಾಳಿವರ್ಜಿತ ಪತಿವಿಭೂಷ ಸದ್ಭಕ್ತದುರಿತಾಳಿಪರ್ಜನ್ಯಜಂರ್ಝಾವಾತ ಗಿರಿಜಾಲೋಲ ಪಾಲಿಸುಗೆ ರಾಮೇಶ್ವರಾ (ನವಮೋ. ೫-೧). ೧೭. ಮಕರಪಾಳಿಪಪುದುರ್ಗದಹ . . . ಭಾಸುರಚರಿತ್ರಾ (ವವಮೋ. ೨೫-೧೩). ೧೯. ವಿಧಿ ಮಾಯಾಪಾಶಯುತಪಾಳಿವಿಭೇದಕಲವಿತ್ರ ಭವಸಾಗರಬಹಿತ್ರ (ವವಮೋ. ೨೫-೦೩). ೨೨. ಋಗ್ಯಜುಸ್ಸಾಮಾಥರ್ವಣವೇದಂಗಳು ಸ್ವರವರ್ಣಭೇದದಿಂದಂ ಮಂತ್ರಸಹಿತ ಪಾಳಿಪದಕ್ರಮಜಟೆಭೇದದಿಂದಂ ಶತಸೂತ್ರಂ ಮೊದಲಾಗೆಲ್ಲವಾಂ ಯಥಾಕ್ರಮದಿಂದುಚ್ಚರಿಸಿ (ಪಶ್ಯರಾ. ೨೩-೨೫); ಲೋಲಹರಿ ಮತ್ಸ್ಯಾವತಾರದಿ ತಮನನಟ್ಟಿಯಟ್ಟಿ ಬೀಳಲಪ್ಪಳಿಸಿದನಾ ವಾಲದಿ ಘೋಳಿನುತ ತಮ ಬಳಿ ವೇದದ ಪಾಳಿಗಳು ಕ್ರಮದಿಂದ ಹರಿಯನು ಹೊಗಳುತಿದಿರಾಗಿ (ಸಂಕಶ. ೪-೨೯); ಉದಾತ್ತ ಅನುದಾತ್ತ ಸ್ವರಿತ ಪ್ರಚಯ ಪಾಳಿ ಪದ ಕ್ರಮ ಜಟೆ ಚರ್ಚೆಯೆಂಬ ಋಗ್ಯಜುಸ್ಸಾಮಾಭಿಧಾನಮುಳ್ಳ ವೇದಶಾಸ್ತ್ರಂಗಳಂ ಪಠಿಸುವೆವು (ದಶಾವ. ೨-೦೩ ವ). ೨೩. ಪಾಜಿತು ಪಾಳಿ ಮೈದೋರ್ಜಿತು ಮದನಾಗ್ನಿ ಜಾಜಿತು ಜಾಣ್ಮೆ (ಕುರಾಸಾಂ. ೨೨-೯); ಜಾಜಿತು ಜಾಣ್ಮೆ ಬಿಂಕ ಮುಚ್ಚಿಗೊಂಕಿತು ಬಿನ್ನನೆಯಾಯ್ತು ಬಿನ್ನಣಂ ಪಾಜಿತು ಪಾಳಿ (ಚಕವಿ. ೬-೨೦೯). "ಕ್ಷೇತ್ರಶರಪೂರ್ವದಿಶಹರಗಾತ್ರಾನಲ ಶ್ರುತಿ ವಿಭಾಗ ಧ್ವಜ ಲತೆ ಕಿವಿ ಬಹುಸೂತ್ರಾಯುಧಬಂಧಪ್ರಿಯ ಚಿತ್ರಾಸ್ಪದ ಭೀತಿ ಮಾನವಿಂಶತಿ ಪಾಳೀ" (ನಾನಾಕಂ. ೬೨). ೨೬. ತುದಿ; ಅಂಚು: ಮೇಲೆ ನಿಂತರು ಮಡದೆಡೆಗೆ ನಾಲ್ವರಳನುಕೂಲ ಗೇಣಾಗಲುಂ ಗುಟದ ಪಾಳಿಗೆ ಋಜುಕೂಲಮಾಳಪಡಲಂಗದೊಳಾಲಿಗಳರೆಮುಗುಳ್ದಿರಲು (ಪರ್ಣಶ. ೧೧-೬೯). ೨೭. ಸರದಿ; ಬಾರಿ. ಇಂದುಮತಿಗೆ ಐದನೆಯ ವಾರ್ಡಿನಲ್ಲಿ ಸಹಾಯ ಮಾಡುವ ಪಾಳಿ ಬಂದಿತ್ತು (ಅಕನಾ. ೧೬೦); ಅಂಬೇಡ ಭಕ್ತರು ಪಾಳಿಯಿಂದ ಆ ವೆಚ್ಚವನ್ನು ಒದಗಿಸುತ್ತಿದ್ದರು (ಶರತ. ೨೯೬); ನಾಲ್ಕು ಜನ ಸಿಪಾಯಿಗಳು ದಿವಸಾಗಲೂ ಪಾಳಿಯ ಪ್ರಕಾರ ಮನೆ ಕಾಯುತ್ತಿದ್ದರು (ಹಳ್ಳಿಹಾ. ೦೬). ೨೮. ಬೀಸುವ ಕಲ್ಲಿನ ಒಂದೊಂದು ಭಾಗ,—ಹೋಳು: ಈ ಬೀಸುವ ಕಲ್ಲು ಮಾತ್ರ ಪ್ರಕೃತಿ ಪುರುಷರಂತೆ ಅಚಲವಾದುದನ್ನು ನೋಡಿ ಬಾಬೂನಿಗೆ ಅಚ್ಚರಿಯಾಯಿತು. ಆ ಕಲ್ಲು, ಆ ಗೂಟ, ಆ ಮೊರ, ಆ ಬೀಸುವ ಪಾಳಿಗಳು, ಪಾಳಿಗಳೊಳಗಿಂದ ಹೊರಟ

ಶುಭ್ರನಾಮಾಂಕಿತವಾದ ಆ ಹಿಟ್ಟು ಎಲ್ಲವೂ ಬಾಬೂನಿಗೆ ಆತ್ಮೀಯವಾಗಿದ್ದವು (ರಕ್ತರ. ೦೯೩).

**ಪಾಲಿ ಹಚ್ಚು** = ಸಾಲಾಗಿ ನಿಂತು ಸರದಿಗಾಗಿ ಕಾಯುತ್ತಿರು : ಒಂದು ಬಚ್ಚಲಾ, ಐವತ್ತುಮಂದಿ ಪಾಳೀ ಹಚ್ಯಾರ ಮ್ಯ ತೊಳಕೊಳ್ಳಿಕ್ಕೆ (ಕೃಶಿ. ೦೪); ನಾವು ಸಲೂನಿನಲ್ಲಿ ಪಾಳಿ ಹಚ್ಚಿ ಕುಳಿತುಕೊಳ್ಳುತ್ತೇವೆ (ದೇಶನ್ನ. ೭೦).

[ ಸಂ. ]

**ಪಾಲಿ₁, ಪಾಳಿ₂** (ನಾ). (ಬುದ್ಧನ ಉಪದೇಶಗಳ ಮೂಲಭಾಗವನ್ನು ಹೊಂದಿರುವ) ಪ್ರಾಕೃತಭಾಷೆಗಳಲ್ಲಿ ಒಂದು ; ಈ ಭಾಷೆಯ ಹೆಸರನ್ನು ತ್ರಿಪಿಟಕಗಳ ಟೀಕೆಗಳಲ್ಲಿ ಮಾತ್ರ ಬಳಸಲಾಗಿದೆ : ಪಾಲಿ ಸಾಹಿತ್ಯದ ಸಾಲಿನಲ್ಲಿ ಪ್ರಾಚೀನತೆಯ ಅಗ್ರಸ್ಥಾನವು 'ಬುದ್ಧವಚನ'ಕ್ಕೇ ಮೀಸಲಾಗಿರುವುದು (ಬುದ್ಧ. ೩ ಪ್ರವೇಶ). **ಪಾಳಿ₂** : ಈ ಬಹುವಚನ ಪ್ರತ್ಯಯ ಪ್ರಾಕೃತ—ಪಾಳಿಭಾಷೆಗಳಲ್ಲಿ . . . ಸೇರಿ ಹೋಗಿದೆ (ದ್ರಾ. ೭೬. ೯೩೨).

**ಪಾಲಿಂಧಿ** (ನಾ). ಒಂದು ಬಗೆಯ ಸಸ್ಯ ; ಕರಿಯ ತಿಗಡೆ.

[ ಸಂ. ಪಾಲಿಂಧೀ ]

**ಪಾಲಿಕೆ₁** 'ಪಲ್ಲಂಗ' ನೋ.

**ಪಾಲಿಕೆ₂** (ನಾ). ೧. ಕಾಪಾಡುವವಳು ; ಕಾಯುವವಳು : ಪೂಣ್ಯಪಾಪುಳಕಂಗಳೆ ಸಸಿಗಳಾಗೆ ರತಿಸುಖಮೆಂಬ ಫಲವಂ ವಿಲಾಸಿಯುವಜನಕಿತ್ತು ಮನ್ಮಥನ ಕಳಮವನಮೋಯೆನಲ್ ಕಳಮವನದೊಳ್ ಕಳಮವನಪಾಲಿಕೆಯರೊಪ್ಪುಗುಂ (ಶಬ್ದ. ೬-೧೭). ೨. ಮದುವೆಯಲ್ಲಿ ಬ್ರಹ್ಮ, ಇಂದ್ರ, ಯಮ, ವರುಣ ಮತ್ತು ಸೋಮದೇವತೆಗಳಿಗೆ ಅರ್ಪಿಸಲು, ದ್ವಿದಳ ಧಾನ್ಯಗಳನ್ನು ತುಂಬಿಡುವ ಐದು ಮಣ್ಣಿನ ಪಾತ್ರೆಗಳು : (೪). ೩. ಮಣ್ಣಿನ ಪಾತ್ರೆ : ಪ್ರತ್ಯೇಕಂ—ಬೇರೆಬೇರೆ, ಪಾಲಿಕಾದೀನಾಂ-ಬಯಸಿಕೆ, ಶ್ರಾವೆ, ಮೊದಲಾದವರ ಸಂಖ್ಯೆ, ದಶ-ಹತ್ತು (ಕೃಶಿಪ್ರಾ. ೪-೦೭).

[ ಸಂ. ಪಾಲಿಕಾ ]

**ಪಾಲಿಡಿ** (ಕ್ರಿ). ಹಾಲು ತುಂಬು : ಪೂಗೊಯ್ದು ಸರಸಿಜಾನನೆ ಪೋಗಲ್ ನೆರೆ ಮುಗಿದುದಿಲ್ಲ ಬಂಧನಕೋಶಂ ಕೈಗಳಿನುಡಿದೀ ತಳಿರ್ಗಳ ಪೂಗಂ ಪಾಲಿಡಿದು ನಾಡೆ ಕಾಣಿಪುದಿನ್ನುಂ (ಕಾಕಂತ. ೩೩-೫೭). [ಪಾಲ್₁+ಇಡಿ₂]

**ಪಾಲಿತ** (ಗು). ರಕ್ಷಿಸಲ್ಪಟ್ಟ ; ಕಾಪಾಡಲ್ಪಟ್ಟ : ಲೋಕಾರಣ್ಯಾತ್ತ ಛಲರೇ ಪಾಲಿತಾರ್ಥನಿಕಾಯ ಛಲರೇ (ಐಕೃ. ೩೦-೨೫) ; ಅಭಿಮನ್ಯುವನ್ನು . . . ದ್ರೋಣಾಚಾರ್ಯನಿಂದ ಪಾಲಿತವಾದ ವಾಹಿನಿಯನ್ನು ಪ್ರವೇಶ ಮಾಡೆಂದು ಹೇಳಿ, ಕೊಲ್ಲಿಸಿದನು (ಶೀಕ್ಷಕ. ೨೨೮). [ಸಂ.]

**ಪಾಲಿತಪುತ್ರಿ** (ನಾ). ಸಾಕುಮಗಳು : ನನ್ನ ಪಾಲಿತಪುತ್ರಿಯಾದ ನಿನ್ನ ಹಿತರಕ್ಷಣೆ ನನಗೆ ಸೇರಿದೆ (ರಾಕ್ಷೋ. ೦೯೯). [ಪಾಲಿತ + ಪುತ್ರಿ₂]

**ಪಾಲಿಶ್** 'ಪಾಲಿಷ್' ನೋ.

**ಪಾಲಿಷ್, ಪಾಲಿಶ್** (ನಾ). ೧. ಉಜ್ಜುವುದರಿಂದ ಉಂಟಾಗುವ ಮೆರುಗು,-ಹೊಳಪು : ಮನುಷ್ಯರಲ್ಲದೆ ಪಕ್ಕಿಗಳಿಗೂ ಈ ಪಾಲಿಷ್ ಮಾಡಿದ ಅಕ್ಕಿಯನ್ನು ಕೊಟ್ಟರೆ ಬೆರಿಬೆರಿಯ ಮಾದರಿಯ ರೋಗ ಬರುತ್ತದೆ (ಗ್ರಹ. ೩೩) ; ಅಕ್ಕಿಯನ್ನು ವಿಶೇಷವಾಗಿ ಪಾಲಿಷ್ ಮಾಡಿದರೆ ಅದರಲ್ಲಿರುವ ತವುಡು ಮತ್ತು ಭ್ರೂಣ ಹೊರಟುಹೋಗಿ . . . ಜೀವಾತ್ರಗಳ ಅಂಶಗಳು ನಷ್ಟವಾಗುವುವು (ಆಹಾ. ೭೯). ೨. ಮೇಲ್ಮೈಗೆ ಹೊಳಪು ಕೊಡಲು ಉಪಯೋಗಿಸುವ ಒಂದು ಬಗೆಯ ಮೆರುಗಿನ ಪದಾರ್ಥ ಮತ್ತು ಅದರಿಂದಾದ ಹೊಳಪು : ಜವಾನನು ಬೂಟ್ಸುಗಳಿಗೆ ಪಾಲಿಷ್ ಕೊಟ್ಟು ಮೆರುಗು ಬರುವಂತೆ ಮಾಡಿಟ್ಟಿದ್ದನು (ರಂಗಳ. ೨೨). **ಪಾಲಿಶ್** : ೨. ಪಾಲಿಶ್ ಮಾಡಿಸೋಣವೇ ? (ಕೋಣಸ. ೬೯).

[ ← ಇಂ. Polish ]

**ಪಾಲಿಸಿ** (ನಾ). ವಿಮೆಯ ಕರಾರುಪತ್ರ : ನನ್ನ ಸ್ನೇಹಿತನು ಬಹು ಒತ್ತಾಯಪಡಿಸಿದುದರಿಂದ . . . ಇನ್ನೊಂದು ಕಂಪನಿಯಲ್ಲಿ ಒಂದು ಪಾಲಿಸಿಯನ್ನೂ ತೆಗೆದುಕೊಂಡೆನು (ಪಾಶಿಗೇ. ೦೦೦). [ ← ಇಂ. Policy ]

**ಪಾಲಿಸು, ಪಾಳಿಸು₁** (ಕ್ರಿ). ೧. ಕಾಪಾಡು; ಸಲಹು; ವೈರಿಗಳ್ ತಳರ್ದಪರೆಂತು ತನ್ನ ಬಲವಿಲ್ಲದೆ ತಾಳ್ದುವೆನೊಪ್ಪುಗೊಳ್ಳಿ ತನ್ನಳಿಯುನನೆಯ್ದು ಪಾಲಿಸುಗೆ ಬಂದಿದನೀಗಳನಾಥಯೂಥನುಂ (ಅಜಿತ. ೪-೬೯) ; ಕರುಣಿಸು ದೈವಮ ಪಾಲಿಸು ಹರಾದ್ರಿ . . . ವನದೇವಿಯರಿರಾ ನೆರೆದೆಲ್ಲರುಮೆನಗೆ ಪುರುಷಭಿಕ್ಷಮನಿಕ್ಕಿಂ (ಕಾದಂಪೂ. ೯೨೫) ; ಪ್ರಜೆಯುಂ ಪಾಲಿಸಬಲ್ಲೊಡಾತ ನರಸಂ (ಸೋಮೇಶ. ೯). ೨. ಆಡಳಿತ ನಡೆಸು ; ಆಳು : ತನ್ನ ವಿಕ್ರಮಮೆ ತನ್ನ ನೆಗಟ್ಟೆಯೆ ತನ್ನ ಮಾತೆ ತಾನೆಸೆವ ಜಗತ್ರಯಕ್ಕೆನಿಸಿ ಪಾಲಿಸಿದಂ ನೆಲನಂ ಗುಣಾರ್ಣವಂ (ಪಂಪಭಾ. ೦೪-೩೯) ; ಸಜ್ಜನನುತನಾಗಿ ಪಾಲಿಸು ಮಹಾವನಿಯಂ ರವಿಚಂದ್ರರುಳ್ಳಿನಂ (ರಹಾಸ್ಯ. ೦೩-೦೬೪) ; ಚಲದಂಕಕಂಠೀರವನರಸೇಂದ್ರ ಭೂತಳವ ಪಾಲಿಸುತಿರ್ಪಿಯಲಿ (ಶಂಕರ. ೬-೨). ೩. ನೆರವೇರಿಸು ; ನಡೆಸು ; ಈಡೇರಿಸು : ದುಷ್ಕರಂ ತಿನ್ನದ ಸಿಂಹಂ ತನ್ನನೆ ನಂಬಿ ಬಂದಿರ್ದನ್ನನೆಂತುಂ ತಿಂಬುದಿಲ್ಲಮಾದೊಡಮಾನುಂ ನುಡಿದು ಮಾತಂ ಪಾಲಿಸುವೆನೆಂದು ಸಿಂಹದ ಸಮೀಪಕ್ಕೆ ಬಂದು . . . ಎನ್ನ ಶರೀರಮಂ ಕೈಕೊಳ್ಳಿಮೆನೆ (ಶಂಕಶಂ. ೦೯೩-೦೫) ; ಆಲಿಸೆನ್ನ ಬಿನ್ನಪವ ಲಾಲಿಸೆನ್ನ ಬಿನ್ನಪವ ಪಾಲಿಸೆನ್ನ ಬಿನ್ನಪವ (ಪುಹಾದೇ. ಬ. ೩೯-೮೦) ; ಪಾಲಿಸುವನೇತು ನಿಷ್ಠೆಯಂ ಭಾವರಾಗದ ಜೀವಿ ಸಹಜ ಸಂಚಲ ನರಂ ತಾಂ ? (ಕಶ್ರಾಂಗ. ೩೯-೦೦೫೦). ೪. ದಯಪಾಲಿಸು ; ಕೊಡು ; ನೀಡು : ಕಾಮಿರ್ಪರುಂ ಪಟ್ಟಿಕೊಂಡು ಪೊಲ್ಲೆಗೆವಂದು ಲಾಭದ ಪೆರ್ಚಿಂ ಬಸದಿಗೆ ಬಂದು ವರಧರ್ಮಭಟ್ಟಾರಕರಂ ಕಂಡು . . . ಇನ್ನೊಂದು ವ್ರತಮಂ ಪಾಲಿಸಿಮೆಂಬುದುಂ (ಧರ್ಮಾಮೃ. ೨-೦೯೯) ; ಸ್ವಾಮಿ ನವಗೆ ಅಮರನಾಯಕ ತನಕ್ಕೆ ಪಾಲಿಸಿದ ಕೊಟ್ಟೂರ ಚಾವಡಿಗ್ಗೆ(ಗೆ) ಸಲುವ . . . ಗ್ರಾಮವನು . . . ಶ್ರೀಹರಿಹರದೇವರ ಅವಸರಸತ್ರಕ್ಕೆ ಸಮರ್ಪ್ಪಿಸಿದ್ದು (ಇಕ. I. ೩೨೮-೭ ; 1530) ; ಪೂತನಿ ವಿಷದ ಮೊಲೆಯನಿತ್ತ ಹಂಗಿಗೆ ಮಾತಾಸ್ಪದವ ಪಾಲಿಸಿದ (ಪೋಹಕ. ೩೯-೦). ೫. ಅನುಸರಿಸು ; ಆಚರಿಸು : ತಾನಿತರ ಕನ್ಯಕೆಯಂತೆ ನಾಣ್ಗೆಟ್ಟು ಸ್ವೈರಣಿಯಂ ಬಿಟ್ಟು . . . ನಿಜಾಚಾರಮಂ ಮಱೆದು ಶೀಲಮಂ ತೊಱೆದು ಕುಲಕ್ರಮಮಂ ಪಾಲಿಸದೆ ರಾಗಾಂಧೆಯೆನಾಗಿ (ಕಾದಂಪೂ. ೯೭೯) ; ಜಸಮಂ ಧರ್ಮಮುಮಂ ಪಾಲಿಸುವೊಡಂ . . . ಅರ್ಥದು ಪರೀಕ್ಷಿಸುವುದು ಮನುಜಂ ಸಮಸ್ತಕಾರ್ಯಸ್ಥಿತಿಯಂ (ಶಂಕಶಂ. ೦೯೯-೦೩) ; ನೀತಿಯ ಪಾಲಿಸದೆ ಕೊಲೆಗಡುಕತನದೊಳು ಮೇಲುಗಾಣದೆ ಬಂಧುಗಳ ಗುರುಗಳ ಸಹೋದರರ ಕೋಲ ಮೊನೆಯಲಿ ಕೊಂದು (ಕುಪ್ರಾಭೀ. ೩-೯೨) ; ಪಿತೃವಾಕ್ಯವು ನ್ಯಾಯವಾಗಿದ್ದ ಪಕ್ಷದಲ್ಲಿ ಅದನ್ನು ಪಾಲಿಸುವುದು ಪುತ್ರನ ಕರ್ತವ್ಯ (ಕೃಶಾಕ. ೯೧). ೬. ಮನ್ನಿಸು ; ಕ್ಷಮಿಸು: ಓಬಳಣ್ಣನಾಯಕನು . . . ನನ್ನ ತಪ್ಪನ್ನು ಪಾಲಿಸಬೇಕೆಂದು ಅವರ ಪಾದಕ್ಕೆ ಬಿದ್ದನು (ಚಿತ್ರಪಾ. ೦೭). **ಪಾಳಿಸು₁**: ೧. ಬೇಳಲೆ ಬಗೆವೊಡೆ ಹರಿಯೊಡನಾಳೋಚಿಪಮೆಂದು ಬಟಿಯನಟ್ಟಿದೆನೆಮ್ಮಂ ಪಾಳಿಸುವೈ[ನೀಂ]ನಿನ್ನೊಡನಾಳೋಚಿಸದೆಮಗೆ ನೆಗಬಲೇಂ ನೆಱಿಪುದೇ (ಪಂಪಭಾ. ೬-೨೨) ; ಮೂಳರಂ [ಮಂ] ಪಾಳಿಸಿಯುಂ ಕೋಶಮಂ ಪೋಷಿಸಿಯುಂ ಇಂತು ಸಾಮ್ರಾಜ್ಯಮಂ . . . ನಿಜಾಯತ್ತಮುಮೆನಿಸಿದಂ (ಶಂಪ್ರಶ. ೨-೬೧) ; ಮನಃಕ್ಷತಂ ಬಿಡದೆ ಪಾಳಿಸಿ ಮೇಳಿಸಿ ಪುತ್ರಮೋಹದಿಂ ನಡೆಪಿದ ಕೂರ್ಮೆಯಂ ಬಗೆವುದಿಲ್ಲಿ (ಪುಕ್ತಶು. ೦೩-೯೬). ೨. ಧರೆಯಂ . . . ಸುರಪತಿವಿಭವಂ ಪಾಳಿಸುತ್ತಿರ್ದ್ದಂ (ಸೌರೀಣ. ೩-೪ ; 1047) ; ಭೂಪಾಳರ್ ಪಾಳಿಪರಿಳೆಯಂ (ಅಭ್ಯಕು. ೬-೬೩). ೩. ರಾಮನರೇಂದ್ರನುಂ ನೆಗಟ್ದ ಪಾಂಡುನರೇಂದ್ರನ ಪುತ್ರರಯ್ವರುಂ ಪ್ರೇಮದಿನಾರ್ಜಿತಬ್ರತಮನೊಪ್ಪಿರೆ ಪಾಳಿಸಿ ಮುಕ್ತಿಕಾಮಿನೀಕಾಮರೆನಲ್

ಸಂದರ್ (ಸಮುಕ. ೨-೩೭); ಜಿನಧರ್ಮವಂ ಬಿಸುಟರ್ತಿಯಿಂ ಪಾಳಿ ಪಾತನುಮಿಂದ್ರಿಯಂಗಳ ಭೋಗವುಂ ಮರುಳಲ್ಲನೇ (ಧರ್ಮಾಮೃ. ೩-೦೮೩). ೫. ಪಾಳಿಯಂ ಪಾ[ಪಾಠಾಂ. ಬಾ]ಳಿಸುವಂ ಬನ್ನಿಂ (ಪಂಪಭಾ. ೦೧೯-೦೮). ೭. ನಡೆದುಕೊಳ್ಳು; ಸಲ್ಲು: ಹರಿಸುತಂಗೆ ಗಿರಿದುರ್ಗವಾಗಿ ಪಾಳಿಸದ ಕೃತ್ರಕಶೈಲವಿಲ್ಲ (ಪುಶ್ಪವೃ. ೯-೨೨).

ಪಾಲಿಸಿ ಕೊಡು = ದಯಪಾಲಿಸು; ಕರುಣಿಸು: ಆ ಗ್ರಾಮವನು ಹುಗಿನು ಹೊಯಿಸಿ ಪಾಲಿಸಿ ಕೊಟ್ಟರು (ಎಕ. VII. ಶಿಕಾರಿ. ೦೦೬-೩೭; 1558 ?). [ಪಾಲನ+ -ಇಸು₃]

**ಪಾಲು₁** 'ಪಾಲ್₁' ನೋ.

**ಪಾಲು₂** 'ಪಾಲ್₂' ನೋ.

**ಪಾಲುಂಡೆ,** ಹಾಲುಂಡೆ (ನಾ). ಹಾಲಿನಿಂದ ತಯಾರಿಸಿದ ಒಂದು ಬಗೆಯ ಸಿಹಿಭಕ್ಷ್ಯ: "ಪೀಯೂಷಪಿಷ್ಟಮೆನೆ ಪಾ[ಪಾಠಾಂ. ಹಾ]ಲುಂಡೆಯೆನಿಸಿಕ್ಕು" (ಮಂಗರಾ. ೬೯-೨); ಅಮರ್ದಿನುಂಡಿಗೆಗಳೆನಿಸುವ ಪಾಲುಂಡೆಗಳುಮಂ . . . ಅರಸಂಗು ಪಂಕ್ತಿಯೊಳುಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದರ್ (ಸುಕುಮಾ. ೦೦-೨೯೩). **ಹಾಲುಂಡೆ:** ಹೂರಿಗೆಯ ಬಡ್ಡಗೆಯ ಬೆಟ್ಟಂಗಳಲ್ಲಿ ಹಾಲುಂಡೆ ಘೃತಪೂರದಾಲಯವದಲ್ಲಿ (ಭಾರ. ೬-೦೦); ತುಪ್ಪದ ತೋರ ಹಾಲುಂಡೆಗಳ ಯೆಳ್ಳುಂಡಿಗೆಯ ಕೆನೆಮೊಸರ ಚಾರುಶಾಕಾವಳಿಯುಲಾ ವಿಸ್ತಾರ ಭಕ್ಷ್ಯಾವಳಿಯ ಪಾಕದೊಳೋರೆ ಹುಸಿಯುಂಟೆಂಬ ಯಂತ್ರವ ಕಳಚಿ ಬಲುಹುಂಟು (ಸಂಭಿ. ೩೦-೫); ಸಣ್ಣಸೇವಗೆ ಹಾಲುಂಡೆ . . . ಹೂರಣಗಡುಬು ಭೂವಗೆ ಮುದ್ದು ವೆಣ್ಣುಗಳೆಡೆ ಮಾಡಿದರು (ಕಂಪಿ. ೬-೯೭). [ಪಾಲ್₁+ಉಂಡೆ]

**ಪಾಲುಗ** (ನಾ). ಹಾಲು ಮಾರುವವನು; ಹಾಲಿನ ವ್ಯಾಪಾರಿ: ಪೊನ್ನುಗಂ, ನಾರುಗಂ, ಪಾಲುಗಂ, ಪರಲುಗಂ (ಶಬ್ದಾ ಪ. ೧೨೯ ಪ್ರಯೋ). [ಪಾಲ್₁+-ಉಗ]

**ಪಾಲುಗಡಲು** 'ಪಾಲ್ಗಡಲ್' ನೋ.

**ಪಾಲುಗಾರ** 'ಪಾಲ್ಗಾರ' ನೋ.

**ಪಾಲುಗಾರತಿ** 'ಪಾಲುಗಾರ್ತಿ' ನೋ.

**ಪಾಲುಗಾರಿಕೆ** (ನಾ). (ವಾಣಿಜ್ಯ ಮಂತ್ರು ವ್ಯಾಪಾರದಲ್ಲಿ) ಪಾಲು ಪಡೆದಿರುವುದು; ಭಾಗವನ್ನು ಹೊಂದಿರುವುದು: ಅದು . . . ಎಲ್ಲ ಕಲೆಗಳಲ್ಲಿಯೂ ಪಾಲುಗಾರಿಕೆ; ಎಲ್ಲ ಸೌಜನ್ಯದಲ್ಲಿಯೂ ಎಲ್ಲ ಸಂಪನ್ನತೆಯಲ್ಲಿಯೂ ಪಾಲುಗಾರಿಕೆ (ರಾಷ್ಟ್ರಾಂಗ. ೨೦); ಇವರ ಆಚಾರ್ಯಪದವಿಯು ಹೆದರಿ ಕೊಟ್ಟಿದ್ದಲ್ಲ . . . ಕೋಮುವಾರು ಪ್ರಾಂತವಾರು ಪಾಲುಗಾರಿಕೆಯಲ್ಲಿ ಬಂದದ್ದಲ್ಲ (ಚಿತಾಪುಂ. ೯೯). [ಪಾಲುಗಾರ (<ಪಾಲ್ಗಾಱ)+-ಇಕೆ]

**ಪಾಲುಗಾರ್ತಿ,** ಪಾಲುಗಾರತಿ (ನಾ). ಭಾಗವನ್ನು ಪಡೆಯುವ ಹಕ್ಕುಳ್ಳವಳು; ಹಿಸ್ಸೆದಾರಳು: ಎಲ್ಯ, ನನ್ನ ದುಃಖದ ಪಾಲುಗಾರ್ತಿ, ಸುಮ್ಮನೆ ಅಳುವುದರಲ್ಲಿ ಏನೂ ಅರ್ಥವಿಲ್ಲ (ಮುಂಬಯಿ. ೯-೧೬೦); ಬಸವಣ್ಣನ ಕಷ್ಟ-ಸುಖಗಳಲ್ಲಿ ನಾಗಲಾಂಬಿಕೆ ಪಾಲುಗಾರ್ತಿಯಾಗಿದ್ದಾಳೆ (ಶರಣಾಕ. ೦೨೬). **ಪಾಲುಗಾರತಿ:** ಅವರೆಲ್ಲರಿಗೂ ಬರುವ ಕಷ್ಟ ಸುಖಗಳಲ್ಲಿ ತಾನೂ ಪಾಲುಗಾರತಿಯಾಗಿದ್ದಾಳೆ (ಜಿಸಾ. ೦೯); ತನು ಮನ ಧನದಲ್ಲಿ ಪಾಲುಗಾರತಿಯಲ್ಲ (ಸಹರಾ. ೬-೯೩). [ಪಾಲುಗಾರ (<ಪಾಲ್ಗಾಱ)+-ತಿ₁ (<-ಇತ್ತಿ)]

**ಪಾಲುಗುಣ,** ಫಾಲ್ಗುಣ (ನಾ). ಚಾಂದ್ರಮಾನ ವರ್ಷದ ಹನ್ನೆರಡನೆಯ ತಿಂಗಳು: ಬಿದಿರೂರ ಬಟ್ಟಗಣ್ಣನ ಮಗ ಚಿಕ್ಕಬಮ್ಮಗಣ್ಣ ಪಾಲುಗುಣ ಮಂಗಳವಾರದಂದು ಸುರಲೋಕಪ್ರಾಪ್ತನಾದ (ಮ್ಯಾಕಂ. ೦೯೩೨, ೩೩-೫; 1190); ಫಾರಕ್ಕೆ ಪಕಾರಂ . . . ಫಾಲ್ಗುಣ—ಪಾಲುಗುಣ (ಶಮದ. ೨೩೩ ಪ್ರಯೋ); **ಫಾಲ್ಗುಣ:** ಫಾಲ್ಗುಣದ ಶುಕ್ಲಾಷ್ಟಮಿಯಂದು ನಂದೀಶ್ವರ ಪೂಜೆಗೆಂದು . . . ಪೋಗಿ (ಪುಶ್ಪವೃ. ೬-೩೩೫): ಅಖಿಳಮಂತ್ರಗಳ ಜಪ . . . ಫಾಲ್ಗುಣದಲ್ಲಿ ಸಕಲಜಯ (ಗಗಶಾ. ೯-೬೬); ಫಾಲ್ಗುಣದ ಸುವಾಸಿತವಾದ ಬಿಸಿಲುದಿನದಲ್ಲಿ . . . ಅವನು ಬರುತಲಿರುವನು (ಧರ್ಮಾ. ೬೯). [<ಸಂ. ಫಲ್ಗುನ]

**ಪಾಲುಗೂಡು** (ಕ್ರಿ). ಪಾಲನ್ನು ಹೊಂದು,—ಪೆಡೆ: ಇಬ್ಬರೂ ಕೂಡಿಯೆ ಹೊಸಧಾಟಿಯ ಆರತಿಹಾಡು ಹಾಡಿದೆವು. ಶೀವಣ್ಣ ಬಿಂದಣ್ಣ ಒಂದೊಂದು ರೂಪಾಯಿ ಹಾಕಿದರು . . . ನಾನು ಅಕ್ಕ ಹಂಚಿಕೊಂಡೆವು. ಜಯಣ್ಣನೂ ಪಾಲುಗೂಡಲು ಬಂದ. ಅಕ್ಕ ಬೈದು ಕಳಿಸಿದಳು (ಸ್ಮೃತಿ. ೦೯೩). [ಪಾಲು₂ (<ಪಾಲ್₂)+ಕೂಡು₁]

**ಪಾಲುಗೊಳ್ಳು** 'ಪಾಲ್ಗೊಳ್' ನೋ.

**ಪಾಲುಣ** (ನಾ). ದೇವರಿಗೆ ಮಾಡುವ ಹಾಲಿನ ನೈವೇದ್ಯ: ಯಿಪ್ಪತುಹೆಂಟು ಹೊನ್ನನ್ನು ನಿಮ್ಮ ಸ್ಥಾನದ ಬಯಿರವದೇವರ ಪಾಲುಣ ಕೋಸರ ತಿರುನಾಳನು ಹೊಸ್ತಾಗಿ ರಥೋತ್ಸಹವನೂ ಮಾಡುವ (ಎಕ. X. ಕೋಲಾರ. ೩೯-೦೭; 1495). [ಪಾಲ್₁+?]

**ಪಾಲುದಾರ** 'ಪಾಲ್ದಾರ' ನೋ.

**ಪಾಲುಪಂಚಾಯ್ತಿ** (ನಾ). ಹಿಸ್ಸೆಯ ಬಗ್ಗೆ ನಡೆಯುವ ಪಂಚಾಯ್ತಿ: ಊರಿನಲ್ಲಿ ಏನು ಗಲಾಟೆಯಾಗಲಿ, ಪಾಲುಪಂಚಾಯ್ತಿ ನಡೆಯಲಿ, ಅಲ್ಲಿ ಶ್ಯಾಮಕಕ್ಕ ಇರಬೇಕು (ಹೊಸಕ್ಷಿ. ೨೯೯). [ಪಾಲು₂ (<ಪಾಲ್₂)+ಪಂಚಾಯ್ತಿ (<ಪಂಚಾಯಿತಿ)]

**ಪಾಲುಪಟ್ಟಿ** (ನಾ). ಆಸ್ತಿ, ಕೆಲಸ ಮುಂತಾದುವುಗಳಲ್ಲಿ ಯಾರ ಪಾಲು ಎಷ್ಟು ಎಂಬುದನ್ನು ನಮೂದಿಸುವ ಕರಾರುಪತ್ರ,—ದಾಖಲೆ ಪತ್ರ: ತಮ್ಮನೊಡನೆ ಪಾಲುಪಟ್ಟಿಯಾದ ಕೆಲವೇ ದಿನಗಳಲ್ಲಿ ನಂಜುಂಡ ಶ್ರೋತ್ರಿಯರ ಆದಾಯ ಬೆಳೆಯಲು ಪ್ರಾರಂಭಿಸಿತು (ವಂಶವೃ. ೯೩೩). [ಪಾಲು₂ (<ಪಾಲ್₂)+ಪಟ್ಟಿ₂]

**ಪಾಲುಪೊಂಗಲು,** ಹಾಲುಪೊಂಗಲು (ನಾ). ಹಾಲಿನಿಂದ ಮಾಡುವ ಒಂದು ಬಗೆಯ ಪೊಂಗಲು: ಪಾಲುಪೊಂಗಲನಿಕ್ಕಿಸಯ್ಯ ಬಾಲಗೋವ್ಗಳ ಕೂಡಿ ಸಾಗಲು ಲೋಲಕೃಷ್ಣನು ನಿಮಗೆ ಒಲಿವನು (ಗೋಚಾಪು. ೦೦೦). **ಹಾಲುಪೊಂಗಲು:** ತಣ್ಣೀರುಸ್ನಾನ, ದೇವಪೂಜೆ, ಯಜ್ಞಕರ್ಮಗಳು ಮುಗಿದ ನಂತರ ಹಾಲುಪೊಂಗಲ ಉಪಾಹಾರ (ಶಾಂತಲಾ. ೬೬). [ಪಾಲು₁ (<ಪಾಲ್₁) + ಪೊಂಗಲು₁ (<ಪೊಂಗಲ್₂)]

**ಪಾಲುಮಾರಿಕೆ** (ನಾ). ಸೋಮಾರಿತನ; ಆಲಸ್ಯ: ಪಾಲುಮಾರಿಕೆ, ಜನ್ಮಭೂಮಿಯಲ್ಲಿ ಆಶೆ, ರೋಗಿಯಾಗುವಿಕೆ, ಭಯಶೀಲತೆ, ಅಸಂತೋಷ ಈ ಐದೂ ಪೂಜ್ಯತೆಗೆ ವಿಘ್ನಕಾರಣಗಳು (ಮುಂಬಯಿ. ೬-೩೩೬); ಅದೇನೋ ಕಾಗದ ಬರೆಯಬೇಕೆಂದರೇ ನನಗೆ ಕೆಟ್ಟ ಪಾಲುಮಾರಿಕೆ (ಅಪತ. ೮); ಕೆಲಸವನ್ನು ಮಾಡುವುದರಲ್ಲಿ ಪ್ರವುಲ್ಲೆಗೆ ಪಾಲುಮಾರಿಕೆಯಿಲ್ಲ (ದೇವಿಚಾ. ೬೦). [ಪಾಲುಮಾರು +- ಇಕೆ. / ತಮಿ. ಪಾಲ್ಮಾಱಿಕೈ; ತೆಲು. ಪಾಲುಮಾಲಿಕ, ಪಾಲ್ಮಾಲಿಕ]

**ಪಾಲುಮಾರು** (ಕ್ರಿ). ಆಲಸ್ಯಹೊಂದು; ಸೋಮಾರಿಯಾಗು: ಪಾಲುಮಾರದೆ ಭಕ್ತಿಯಿಂದಲಿ ಮೂಲಮಂತ್ರಧ್ಯಾನದೊಳು ಪಗಲಿರುಳು ಸೀನಿರ್ದು (ಯಕೋಲ. ೦೭); ತನ್ನ ಕೆಲಸದಲ್ಲಿ ಎಂದೂ ಪಾಲುಮಾರುತ್ತಿರಲಿಲ್ಲ. ಜೈಲಿನ ಕಾಯಿಂದೆ ಕಟ್ಟಲೆಯ ಪ್ರಕಾರ . . . ಒಂದನ್ನೂ ತಪ್ಪದೆ ನೋಡಿಕೊಳ್ಳುವನು (ಸತ್ಯಕ. IX. ೯೦); ಬೆಳಗಿನ ಝಾವದ ಚಳಿಯಲ್ಲೆದ್ದು ಸ್ನಾನಾದಿಗಳನ್ನು ಮಾಡಲು ಪಾಲುಮಾರದ ಸ್ತ್ರೀಯರ ಹೊರತು ಮಿಕ್ಕವರೆಲ್ಲರಿಗೂ ಇದು ಬಾಧಕರವಾಗಿಯೇ ಇದ್ದಿತು (ಲಕ್ಷ್ಮೀಕ್ಷೇ. ೯). [ದೇ.॥ ತಮಿ. ಪಾಲ್ಮಾಱು; ತೆಲು. ಪಾಲುಮಾಲು, ಪಾಲ್ಮಾಲು, ಪ್ರಾಲುಮಾಲು, ಪ್ರಾಲ್ಮಾಲು]

**ಪಾಲುಮುಖಂಡ** (ನಾ). ಹಳ್ಳಿಗಳ ಬಣಗಳ ಮುಂಖ್ಯಸ್ಥ: ತಮ್ಮ ಮಗಳ ಮದುವೆಯ ಸಂದರ್ಭದಲ್ಲಿ ಪಾಲುಮುಖಂಡರಿಂದ ಬಹಿಷ್ಕಾರ ಗಿಹಿಷ್ಕಾರದ ಅವಮಾನದ ಗೊಂದಲಕ್ಕೆ ಅವಕಾಶ ಒದಗದಿರುವುದಕ್ಕಾಗಿಯೂ . . . ಮದ್ದು ತೆಗೆದುಕೊಳ್ಳುತ್ತಿದ್ದಾಳೆ (ಮಲೆಮ. ೬೬೦).
[ಪಾಲು₃ (<ಪಾಲ್₃)+ಮುಖಂಡ]

**ಪಾಲುವಂತಿಗೆ** (ನಾ). ತನ್ನ ಪಾಲಿಗೆ ಸಲ್ಲಬೇಕಾದ ಹಣ; ಪಾಲುಗಾರಿಕೆಯ ಹಣ: (೬). [ಪಾಲು₃ (<ಪಾಲ್₃)+ವಂತಿಗೆ]

**ಪಾಲೆ₁**, ಹಾಲೆ₁ (ನಾ). ಒಂದು ಬಗೆಯ ಹಕ್ಕಿ; ಹಂಗನ ಹಕ್ಕಿ; ಶಕುನದ ಹಕ್ಕಿ: "ಚಾಷಃ, ಕಿಕೀದಿವಿಃ — ೨ ಹಂಗನ ಹಕ್ಕೀ ಹೆಸರು, ಶಕುನದ ಹಕ್ಕಿ, ಆಂಧ್ರದಲ್ಲಿ ಪಾಲೆಪಕ್ಷಿ" (ಸಿದ್ಧಾಂತಿ. ೦೫೬). **ಹಾಲೆ₁**: (೬).
[ದೇ.॥ ತಮಿ. ಪಾಲ್ಲೈ; ತೆಲು. ಪಾಲ]

**ಪಾಲೆ₂**, ಹಾಲೆ₂ (ನಾ). ೧. ಒಂದು ಬಗೆಯ ಮರ ಮತ್ತು ಅದರ ಹಣ್ಣು: "ರಾಜಾದನಂ, ಫಲಾಧ್ಯಕ್ಷಂ, ಕ್ಷೀರಿಕಾ — ಈ ೩ ಪಾಲೆಯ ಮರ" (ಅಜಾ. ೦೦೬); ಜಳದಂ ಪಿಪ್ಪಲಿ ದೇವದಾರು ರುಜೆ ನಿಂಬಂ ಚಿತ್ರಕಂ ಪಾಲೆ . . . ಇಂತಿವಂ ಜಳದೊಳೆ ಮೂವಡಿಗೂಡ ಕಾಸಿ . . . ಕುಡಲೊಡಂ ಸರ್ವಜ್ವರಂ ಪಿಂಗುಗುಂ (ಗೋವೈ. ೯-೨೬೫); ಅಂಬಟೆ ಪಾಲೆ ಬಿಳ್ಪಾಲೆ (ಬಸ್ವಾಂಗ. ೦೦-೨). **ಹಾಲೆ₂**: ೧. ಹಾಲೆಯಂಕೋಲೆದಿಂಡಂ . . . ಹೆಜ್ಜಾಲ ಹೆದ್ದುಂಬರೌದುಂಬುರಂಗಾಲಯವದೆನಿಸಿ ನಾನಾ ಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಸೋಮಶ. ೩-೨); ಹಲಸು ಹಾಲೆಯರಳಿ ಚಿಲ್ಲ ಚಿನ್ನೆಗೆ ತೇಗು ತುಂಬುರವರಗಳಿಂ ನಿಲ್ಲದೆ ಮೆಚಿದುದಾ ವಿಪಿನ (ಚನ್ನಬಸಾ. ೨೬-೫೫); ಹಾಲೆ ಬದಿರಿಪ್ಪೆ ಹುಣಸಂಕೋಲೆಲಚಿಯ . . . ಬನ್ನಿ ಹೊನ್ನೆಯ ತರುಗಳ್ (ಹಮ್ಮಾರ. ೯-೬೪). ೨. ಒಂದು ಬಗೆಯ ಔಷಧಿ ಸಸ್ಯ: "ಅಮೃತಶಿಖಾ—ಚಿಟಕೆ, ಹಾಲೆ" (ಓಷಧಿ. ೮); "ಶೋಫ—ಚಿಟಕಿ, ಹಾಲೆ" (ಓಷಧಿ. ೦೬೨). ೩. ಪಡವಲದ ಬಳ್ಳಿ ಮತ್ತು ಅದರ ಕಾಯಿ: "ಹಾಲೆ ಕೋಶಾತಕಿ ಪಟೋಳಿಯುಕ್ಕು" (ಶಬ್ದಾಗಮ. ೩೬-೨೦). ೪. (?): "ಹಾಲೆ ಕಾಂಡಿಕೆ [ಪಾಠಾಂ. ಕಾಟಿಕೆ, ಕಾಡಗೆ]ಯುಕ್ಕು" (ಶಬ್ದಾಗಮ. ೪೪-೪೭).
[ದೇ.॥ ತಮಿ. ಪಾಲೈ; ಮಲ. ತೆಲು. ಪಾಲ; ತುಳು. ಪಾಲೆ]

**ಪಾಲೆ₃**, ಆಲೆ₃, ಪಾಲ₁, ಹಲ್ಲೆ₁, ಹಾಲೆ₃ (ನಾ). ೧. ಕಿವಿಯ ಮೃದುವಾದ ಕೆಳಭಾಗ, —ಕೊಪ್ಪು: ನಸುನೇಲ್ವ ಕರ್ಣಾಟೀಕರ್ಣಪೂರನ ಪಾಲೆಗಳಂ ಸರಸ್ವತಿಯಾಡುವ ಲೀಲಾಂದೋಳದಂತಾದುವು (ಜಂಜಶಾ. ೨-೩೯೮): ತಾಳಿವಡೆಯಾದ ಕೇಶಮನುಗುರ್ಗೊನೆಯಿಂ ತೆಗೆದೊತ್ತಿ ಪಾಲೆಯಂ ವಿಷಾದಿದ ಸುತ್ತಿನೋಲೆಗಳನೋವುತುಮಾಯತಮಾಗೆ ತೊಟ್ಟು (ಲೀಲಾವ. ೫-೦೦೬); ಪೊಸಮುತ್ತಿನ ಪುಂಜದ ರಂಜಿಸುವೋಲೆಯನಮರಿ ಪಾಲೆಯೊಳ್ ನಿಯಮಿಸಿದಳ್ (ಚಂದ್ರಪ್ರಭ. ೧೧-೧೬೨). ೨. ಸೇತುವೆ; ಸಂಕ: ಕೋಟಿಚೆನ್ನಯರು ಬಲ್ಲಾಳನ ಆಳುಗಳೊಂದಿಗೆ ಪಾಲೆ ದಾಟಿ . . . ಬೆಳ್ಳಿಯ ಕಲಶದ ಬಳಿಯ ಉಪ್ಪರಿಗೆಯನ್ನು ಏರಿದರು (ಕೋಟಿಚ. ೦೯). **ಆಲೆ₃**: ೧. ಮಿರುಪ ತಳಿರೆಲೆ ಕೆಂಪಿನಾಲೆಯ ಜೋಲ್ವ ಕರ್ನಗಳ (ಅಂಜನಾ. ೫-೦೬); ಹಣೆ ಚಚ್ಚಿಕೊಳ್ಳುವಿಕೆ, ಕಿವಿಯ ಆಲೆಯನ್ನು ಅನಾವಶ್ಯಕವಾಗಿ ಉಜ್ಜಿಕೊಳ್ಳುವಿಕೆ (ಮಲೆಮ. ೧೯೨). **ಪಾಲ₁**: ೨. ಎಳೆಸವಿಲಾ ಕಡಿಯೊಳಾಡು ತಿರಲೊರ್ವ ಲಲನೆ ನೋಡಲು ಕೇಕರಾಂಶು ಪೊಳೆದೆಯ್ದಿತು ತತ್ಪ್ರತಿಮನದಿಗಿಟ್ಟ ಪಳುಕಿನ ಪಾಲದಂದದೊಳು (ಶ್ರೀಪಾಂ. ೫-೩೬); ನೀರ ಮುಟ್ಟದೆ ಪೋಲಕತ್ತಿ ಪಾಲವ ಕಟ್ಟ ದಾರಿಯ ಮಾಡಬೇಕವಕೆ ಧಾರಿಣೆ ಚರರಾಗದಂಬರೇಚರರು ಕಠೋರವ್ಯಂತರರು ಬೇಕೆಂದ (ಭರತ. ೩೩-೬೯); ಕಾಡುಮೇಡುಗಳನ್ನು ಹಿಂದೆ ಹಾಕಿ ತೋಡುಗಳನ್ನೂ ಪಾಲಗಳನ್ನೂ ದಾಟಿದರು (ಕಾಂಚನ. ೦೪ ಕಥಾಸಾರ). **ಹಲ್ಲೆ₁**: ೧. ಕಿವಿಗಳ ಹಲ್ಲೆಗಳ ಪಿ ಎಕವಜ್ರದ ಬೆಂಡೋಲೆಗಳು ಕಿರಣಗಳನ್ನು ಸೂಸುತ್ತಿದ್ದುವು (ಮಹಾಪು. ೨೦೩). **ಹಾಲೆ₃**: ೧. ವರಮುತ್ತಿನೋಲೆಗಳು ತೀವಿ ಹೊಳೆವುತ್ತಮಿರೆ ಲೆಂಕರಸನೆಂಬ ಭಕ್ತಂ ಕಂಡು ಸರಸರನೆ ಭೋಂಕನೋಲೆಯನಲ್ಲಿ ತೆಗೆವುತಿರೆ ಸರಸರನೆ ತೆಗೆದ ಸಂಭ್ರಮದೊಳಗೆ ಹಾಲೆ ಸೊಪ್ಪಾಗುತಿರೆ (ಬಸವ. ೦೩-೦೩); ಹಾಲೆಗಳೊಳು ಥಳಥಳಿಪ ಮುತ್ತಿನ ಹರಳೋಲೆಗಳನು ಧರಿಸಿಹರು (ಶಂಕ್ರಸಾಂ. ೧೨-೧೦೬); ನಾ ತೂಗಿ ಬಾಗಿ ನೀರ ಮೊಗದೆ ಮಾವಯ್ಯ ಹಾಲೆ ಸವೆದು ಪಾಲೆ ಬಿತ್ತು, ಮಾವಯ್ಯ (ಹಳ್ಳಿಪು. ೦೬೪).
[<ಸಂ. ಪಾಲಿ, ಪಾಲೀ]

**ಪಾಲೆ₄** (ನಾ). ಒಂದು ಬಗೆಯ ತೆರಿಗೆ: ಮುಂದನಾಡ ಬಂಗೆಡಗ್ರಾಮ ವೊನ್ದಕೆ ಪಾಲೆಯು ಗಲುಹ ಆಯ್ಯೂಬು ವರಹ (ಎಸಿ. XIV, ಗುಂಡ್ಲು. ೦೨೬-೩೫; ಸು. 1410). [?]

**ಪಾಲೆಗೊರವಿ** (ನಾ). ಒಂದು ಬಗೆಯ ಮರ: (ವೃಕ್ಷಿಗ. ೫೩-೦೦೩೬).
[ಪಾಲೆ₂+ಗೊರವಿ₂]

**ಪಾಲೆರೆ** 'ಪಾಲೆಜ್' ನೋ.

**ಪಾಲೆಜ್**, ಪಾಲೆರೆ, ಹಾಲೆರೆ, ಹಾಲೆಜ್ (ಕ್ರಿ). ೧. ಹಾಲನ್ನು ಹೊಯ್ಯು, —ಸುರಿ: ದೊರೆಯಕ್ಕುಮೆ ನಿನಗೆ ಯುಧಿಷ್ಠಿರನರ್ಘ್ಯಮನೆತ್ತ ಶಂಖದೊಳ್ ಪಾಲೆಜ್ದಂತಿರೆ ಮಲಿನಮಿಲ್ಲದೊಳ್ಗುಲದರಸುಗಳಿರೆ ನೀನಾ ಮಗ್ರಪೂಜೆಯನಾಂಪಾ (ಪಂಪಭಾ. ೬-೫೦). ೨. ಹಾಲು ಕೊಡು; ಹಾಲು ಕುಡಿಸು: ಪಾಸಿನ ಮೇಲೆ ಪಟ್ಟಿರಿಸಿ ಪಾಲೆಜ್ದೆನ್ನೊಡಗೂಡ ಬಾಲಿಕಾಭ್ಯಾಸದಿನೆತ್ತಿ ಸತ್ತಿಗೆಯ ತಣ್ಣೆಳಲೊಳ್ ಬಳೆವಂತು ಮಾಡಿ . . . ಕೊಲ್ವುದೇ (೧೧೯. ೦-೦೦೬); ಕೆಚ್ಚಿಯಂ ಕಟ್ಟಿಸು . . . ಶಿಷ್ಟರಂ ಪೊರೆಯೆನು ತ್ತಿಂತೆಲ್ಲಮಂ ಪಿಂದೆ ತಾಂ ಯೆಜದಲ್ಪಾಲೆಜ್ವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ (ಕಾಇ. IV, ೨೩೬-೪೫; 1380); ಪಾಲೆಜ್ದೋವಿ ಚಿಣ್ಣನ ಪಕ್ಕೆಗ್ಗಿದಿದಳು (ಪೋಚಕ. ೪-೭೫). **ಪಾಲೆರೆ**: ೧. ವಿಜಯವರ್ಮ ನರೇಂದ್ರ ಬೇಗದಿಂ ತನ್ನ ಸತಿಯು ಪಾಲೆರೆಯುತಿರಲು (ಸಂಗಂಧ. ೧೩೨-೧೧). ೨. ತೊಡೆಯ ತೊಟ್ಟಿಲೊಳಿಟ್ಟು ಪಾಲೆರೆದು . . . ಪಾಲಿಸಿದ ನಿನ್ನ ಮೆಯ್ಯಿದನೆಂತು ಪೇಳ್ ಕಾಂತಾರರಾಕ್ಷಸಿಗೆ ತುತ್ತುಗೂಳ್ ಕೊಡಲಿ? (ಶ್ರೀರಾಮ. ೬೯-೪೮). **ಹಾಲೆರೆ**: ೧. ಪುಷ್ಪಗಳ ಗೊಂಚಲುಗಳೆಂಬ ತೊಟ್ಟಿಲಿನೊಳ್ . . . ಮಕರಂದವೆನುವ ಹಾಲೆರೆದು (ಸಂಗಂ. ೪೭೦-೦); ಹಾವಿಗೆ ಹಾಲೆರೆದರೆ ತನ್ನ ವಿಷ ಬಟ್ಟೀತೇ? (ಗಾದೆ). **ಹಾಲೆಜ್**: ೧. ಹಾವಿಗೆ ಹಾಲೆಜ್ದೇನು ಫಲ (ಪುರಂದ. ೦-೬೦ ಪಲ್ಲವಿ). [ಪಾಲ್₁+ಎಜ್₁]

**ಪಾಲೇಜು** (ಕ್ರಿ). ಹಾಲು ಹೆಚ್ಚಾಗು: ಆಲದ ಅತ್ತಿಯ ಬಸರಿಯ ಪಾಲೇಜಿದ ಕೊನೆಯನುಡಿದು ಮದಮಿಶ್ರಿತದಿಂದಾಲೋಚಿಸದಿಕ್ಕುವ ದಾರೇಟುದಿನಂ ತರದೆ ಹಯಕೆ ಖಾಸವಿನಾಶಂ (ಅಶ್ವಶಾ. ೬-೩೮).
[ಪಾಲ್₁+ಏಜು₁ (<ಏಜ್₁)]

**ಪಾಲೈಸು** (ಕ್ರಿ). (?): ಭೋರೆಂದು ಸುರಿವ ಕೀಬ್ಬರದ ಪೂರದಿಂ ಕಾರ ಕಾವಣಮಂ ಜಂಝಾನಿಳನೊತ್ತುವಂತೆ ಕುಟುಕುಟುಂಮೆಟ್ಟಿ ನಡೆಯಿಸುತ್ತುಂ ಗಜಟುವ ಗಟಿಕಾಜಿರ ಚಪ್ಪರಿಸುವೊಪ್ಪಕಾಜಿರ ಕರೆವ ಪರಿಕಾಜಿರ ಪಾಲೈ[ಪಾಠಾಂ. ರೈ]ಸುವಾರೆಕಾಜಿರ ನೆರವಿಗಳಂ ಕೈಸನ್ನೆಯಿಂ ನಿವಾರಿಸುತ್ತುಂ (ಅನಂತ. ೩-೨೯೪). [?]

**ಪಾಲೋಗರ**, ಹಾಲೋಗರ (ನಾ). ಹಾಲಿನಲ್ಲಿ ಮಾಡಿದ ಅನ್ನ: ಪಲತೆಜದ ಪಾಲೋಗರದ ಕಟ್ಟೋಗರದ ಸೊಗಸುವಡೆದ ನೀರೋಗರದ ಮಿಸುಗುವಂಬಲಿಯ ವಿಧಮುಂ ವಧೂಜನವಜೀವ ತೆಜದಿನೊರೆವಂ (ಸೂಪಶಾ. ೩ ಸೂಪಶಾ). **ಹಾಲೋಗರ**: ಹಾಲುಂಡೆ ಘೃತಪೂರದಾಲಯ ವದಲ್ಲಲ್ಲಿ ಹಾಲೋಗರದೊಡೆ ಶಣ್ಣ ಸೇವಗೆಗಳಲ್ಲಲ್ಲಿ . . . ಮೇಲೋಗರದ ಹಿರಿಯ ರಾಸಿ ಮುಸಗಿದವಲ್ಲಿ (ಬಸವ. ೭-೦೨); **ಹಾಲೋಗರವ**

ಕುಂಡು ಬಾಲೆಯರ ತೋಳ ಮೇಲೆ ಒಱಗಿದರೆ ಬಾರದ ಭವದಲ್ಲಿ ಬಪ್ಪುದು ತಪ್ಪದು ಶಾಣರಣ್ಣ (ಸಿದ್ಧೇವ. ೯೯–೧೯೦): ಸಾಲವನು ಕೊಂಬಾಗ ಹಾಲೋಗರುಂಡಂತೆ [ಪಾಠಾಂ. ಹಾಲುಕೂಳುಂಬಂತೆ. ಹಾಲುಹಣ್ಣುಂಡಂತೆ] (ಸರ್ವಜ್ಞ. ೦೬೯೧). [ಪಾಲ್$^{1}_{1}$+ಓಗರ]

**ಪಾಲೌಗು**, ಹಾಲವುಗ (ನಾ). ಹಾಲು ಮತ್ತು ಅಕ್ಕಿಹಿಟ್ಟಿನಿಂದ ತಯಾರಿಸಿದ ಒಂದು ಬಗೆಯ ಖಾದ್ಯ : ಸೂಸಲುಂಡಲಿಗೆ ಪಾಲೌಗು ಪಾಯಸ ಬೆಣ್ಣೆಗಾಸಿದ ತುಪ್ಪ ಕೆಂಗೂಳ ರಾಸಿ ರಂಜಿಸಲು (ಶಬರಶಂ. ೨೬-೨). **ಹಾಲವುಗ** : ಬಿಗುಳಿ ಚಕ್ಕುಲಿ ಹಾಲವುಗ (ಬಸಪು. ೧೪–೧೫). [ಪಾಲ್$^{1}_{1}$ + ಔಗು$_{2}$ (<ಅವುಗು)]

**ಪಾಲ್ಕಿ** 'ಪಲ್ಲಂಗ' ನೋ.

**ಪಾಲ್ಕೆ** 'ಪಲ್ಲಂಗ' ನೋ.

**ಪಾಲ್ಕೆಱೆ**, ಪಾಲಕೆಱೆ (ನಾ). ಒಂದು ಕೆರೆಯ ಹೆಸರು : ಅನ್ತ ಬರೆ ಪಾಲ್ಕೆಱೆಯ ತೆಙ್ಕಣ ಕಡೆಗೋಡಿ (ಮ್ಯಕಂ. ೧೯೨೧, ೧೧–೧೬೧ ; 967). **ಪಾಲಕೆಱೆ** : ಅನ್ತೆ ಬನ್ದು ಪಾಲಕೆಱೆಗನೆ ಬಂ ಪುಣಸೆಯಿಂ ಅನ್ತೆ ಬನ್ದು ನಗರವಳ್ಳದಿ ಮೂಡಣ ಬೇಲಿಯಿಂ (ಎಕ. III, ಸಂಪುಟ. ೦೩೯–೧೫ ; 915 ?). [ಪಾಲ್$^{1}_{1}$+ಕೆಱೆ]

**ಪಾಲ್ಗಂಚಿ** (ನಾ). ಒಂದು ಬಗೆಯ ಗಿಡ : (*). [ಪಾಲ್$^{1}_{1}$+ಕಂಚಿ$_{1}$]

**ಪಾಲ್ಗಂದಲ್** (ನಾ). ಹಾಲಿನ ಮಡಕೆ: ಪಾಲ್ಗಂದಲಿಂ ಮಾಱುಂ ಬೋದುದು ಬೆಣ್ಣೆಯುಳ್ಳಿಯಂತೆ ಕೃಷ್ಣಾ ನೀನೆ ತಿಂದಿರ್ಪೆ (ವಚಸಂ. ೨೧). [ಪಾಲ್$^{1}_{1}$+ಕಂದಲ್$_{1}$]

**ಪಾಲ್ಗಡಗ**, ಹಾಲ್ಗಡಗ (ನಾ). ಚಿಕ್ಕಮಕ್ಕಳ ಕಾಲಿಗೆ ತೊಡಿಸುವ ಒಂದು ಬಗೆಯ ಕಡಗ : ಅರಳೆಲೆಯು ಮಾಗಾಯಿ . . . ಪೊಕ್ಕಳು ಘಂಟೆ ಪಾಲ್ಗಡಗ ಗೆಜ್ಜೆ ಸಹ ಜಾಲದೊಡವಾ ಪರಿಪರಿಯ ರತ್ನಖಚಿತಾಭರಣಗಳನಿಟ್ಟು (ಸವಮೋ. ೦೫–೫೦). **ಹಾಲ್ಗಡಗ** : ಹಸರಂಗಿ ತೊಡಸೀದ ಹಾಲ್ಗಡಗ ಇಡಸೀದ (ಗರತಿ. ೯೦). [ಪಾಲ್$^{1}_{1}$+ಕಡಗ$_{1}$]

**ಪಾಲ್ಗಡಲ್**, ಪಾಲುಂಗಡಲು, ಪಾಲ್ಗಡಲು, ಹಾಲುಗಡಲು, ಹಾಲ್ಗಡಲು (ನಾ). ಹಾಲಿನ ಸಮುದ್ರ ; ಕ್ಷೀರಸಾಗರ ; P ಇದೊಂದು ಪೌರಾಣಿಕಕಲ್ಪನೆ. ಸಪ್ತಸಮುದ್ರಗಳಲ್ಲಿ ಒಂದು ; ವಿಷ್ಣುವಿನ ವಾಸಸ್ಥಾನ : ಜೈನಧರ್ಮದಲ್ಲಿ ಅರ್ಹಂತನ ಜನ್ಮಾಭಿಷೇಕಕ್ಕೆ ಬಳಸುವ ಐದನೆಯ ಸಮುದ್ರ : "ಇಂಗಡಲೆಂದು ಪಾಲ್ಗಡಲೊಳ್" (ಕರ್ಣಾಟ. ೨೦) ; ಪೆಡೆ ಪಲವಪ್ಪ ವಾಸುಕಿಮಹೋರಗನಂ ಕಡೆಗಣ್ಣ ಮಾಡಿ ಪಾಲ್ಗಡಲನುಪಾಯದಿಂ ಕಡೆಯೆ (ಕಾವ್ಯಸಾ. ೯೩೮ ಕೂಡ್ರಕ) ; ಕಡೆಯಿಕ್ಕಿದ ಬಿಡುಮುತ್ತಿನ ಪೊಡದುರ್ಣಾಮ್ಯದ ಬೆಳಗು ಪೊಳೆವ ದುಗುಲದ ಪಸೆಯೊಳ್ ತೊಡರ್ದಿರೆ ಪೆಱತಲ್ತಿದೆ ಪಾಲ್ಗಡಲೆನಿಸಿದುದಾ ವಿವಾಹವೇದಿವಿಲಾಸಂ (ಆದಿಪು. ೯-೧೬) : ಜಗಮಿದು . . . ಪಾಲ್ಗಡಲಿಂದೊಗೆದುದೊ ಪೇೞೆಂಬಿನೆಗಂ ಸೊಗಯಿಸಿದುದು ಸಾಂದ್ರಚಂದ್ರಿಕಾವಿಸ್ತಾರಂ (ಕಾದಂಬ. ೧೯೫). **ಪಾಲುಗಡಲು** : ಪಾಲುಗಡಲಲಿ ಫಣಿಯ ಮಂಚದ ಮೇಲೆ ಪವಡಿಸಿ, ಪರಮನೆನಿಸಿದ ಲೀಲೆಯೆತ್ತಲು ಮನುಜಭಾವದ ನಟನೆ ತಾನೆತ್ತ (ಕೌರವ. ೪೩-೪೫): ಪಾಲುಗಡಲು ಮನೆಯಾಗಿರಲು ಬೊಂದಾಲದೆಲೆಯ ಮೇಲೆ ಮಲಗುವರೆ (ಪುರಂದ. ೪–೦೦೪–೦). **ಪಾಲ್ಗಡಲು** : ಪಾಲ್ಗಡಲೊಳಪೊಕ್ಕ ಶಶಿಯಂತೆ ಪೊಕ್ಕು ನೀರ್ಗಲ್ಗಳ ರುಚಿಸರಸಿಯನು ಸಲ್ಗಿಯ ಸುರರೆಪ್ಪಿ ಮಿಂದು (ಪಾರ್ಶ. ೯-೯೪) : ಕೊಡವಾಲು ಪುಳಿವೆರೆ ವಳಿವುದಲ್ಲದೆ ಪಾಲ್ಗಡಲು ನಾಶವನೈದುವುದೆ (ಮೋಹತ. ೦-೩೦). **ಹಾಲುಗಡಲು** : ಇದು ಹಾಲುಗಡಲಿನ ಸೀಮೆ ; ಚಂದ್ರಮನೆ ಸ್ವಾಮಿ (ಕಾದಂ. ೭೩-೦೬). **ಹಾಲ್ಗಡಲು** : ಶುಳರಿಂದೆ ಹೆಪ್ಪಾದ ಹಾಲ್ಗಡಲಿನೈಕಿಲೊಳ್ಗಡ್ಡೆಯಂ ಕಡಿಕಡಿಯುತಿಟ್ಟಿಗೆಯನೊಟ್ಟಿ (ಅಶ್ವಾಂಗ. ೯೦–೨೪೯೯) : ಹಾಲ್ಗಡಲಿನ ತೆರೆತೆರೆಯ ಮೇಲೆ ಮಹಾವಿಷ್ಣು ನರ್ತಿಸಿದಾಗ ಲಾಸ್ಯಕಲೆ ಮೂಡಿ ಬಂದಿತು (ಗೌಂದಸ. ೧೧೭).

**ಪಾಲ್ಗಡಲ ಕುವರಿ** = ಕ್ಷೀರಸಾಗರದಲ್ಲಿ ಜನಿಸಿದವಳು: ಲಕ್ಷ್ಮಿ : "ಸಿರಿ ಲಕುಮಿ ಮಾಲಕುಮಿ ಪಾಲ್ಗಡಲ ಕುವರಿ ಮಿಕ್ಕ ತಾವರೆವನೆಯಳೆಂಬ ಪೆಸರಿಂದಿರೆಗೆ" (ಕಬ್ಬಮಂ. ೭). **ಪಾಲ್ಗಡಲ ಮಗಳ್** = ಪಾಲ್ಗಡಲ ಕುವರಿ : ಪಾಲ್ಗಡಲ ಮಗಳನಿಯನೊಡನೆ ಬೊಮ್ಮಂ ಸರಿಮಿಗಿಲ್ಗೆ ಕಿನಿಸಿಂ ಪೋರೆ (ಜಾವತಂ. ೩.೨೬). **ಪಾಲ್ಗಡಲೊಡೆಯ** = ಕ್ಷೀರಸಾಗರದ ಒಡೆಯ ವಿಷ್ಣು : ಕರಿಯ ಮರನ ಚಕ್ರದಿ ಉದ್ಧರಿಸಿದ ಹರಿ ನಮ್ಮ ಪಾಲಿಪ ಪಾಲ್ಗಡಲೊಡೆಯನು (ಪುರಂದ. ೩–೦೩೫–೦) : ಕರ್ಣಜ ಪಾರ್ಥರಾಸ್ಯಂಗಳು ಕಚುಬೆಲ್ಮುಕಾಂತಿಕಲೆಗಳನಾಂತುವಾಗ ಪಾಲ್ಗಡಲೊಡೆಯನಂ ಮುಂದೆ ಕಂಡು (ಕೃಮುಪ. ೨೪–೭೭). [ಪಾಲ್$^{1}_{1}$ + ಕಡಲ್$_{2}$]

**ಪಾಲ್ಗಡಲು** 'ಪಾಲ್ಗಡಲ್' ನೋ.

**ಪಾಲ್ಗಡೆ** (ಕ್ರಿ). ಹಾಲನ್ನು ಕಡೆ, — ಮಥಿಸು : ಒಂದೆ ಕೈಯೊಳ್ ಪಾಲ್ಗಡೆವನೆಂಬ . . . ಪೆರ್ಗಾವಿಲನಂ ಪೋಲ್ಕುಂ (ರಘುರಾಮ್ಯ. ೫–೦೦೬ ಅವತರ್ಣ); ಘನಕುಚೆ ಗೋಪಿ ಪಾಲ್ಗಡೆಯುತುಂ ಮನೆವಾಟಿಗೆ ಪೋಗೆ (ಜಗಿವ. ೩-೩೦). [ಪಾಲ್$^{1}_{1}$ + ಕಡೆ$_{1}$]

**ಪಾಲ್ಗಱೆ**, ಹಾಲುಕರೆ (ಕ್ರಿ). ಹಾಲನ್ನು ಕರೆ, – ಹಿಂಡು : ಇನಿತು ಪಾಲ್ಗಱೆದು ಹೊಂಬಟ್ಟಲೊಳಿರಿಸಿ ತಾಂ ನಿಲಿಸಿ ಬಂದಾ ಮಲಹರನ ಬಳಿಗದೆ ಯುವತಿ ಹೋದಹಳು (ಬಸಪು. ೩೦–೦೨) ; ಕಾಡುವ ಪಶುವಿನ ಬಾಲವ ಕಟ್ಟಿಸಿ ಕೊಡೆ ಪಾಲ್ಗಱೆಯಲು ಒದೆಯುವುದೆ (ಪುರಂದ. ಧಾ. ೨-೪೧-೨). **ಹಾಲುಕರೆ** : ಹಾಲುಕರೆದು ಮೊಸರು ಮಾಡಿ . . . ಮಾರಾಟ ಮಾಡುತ್ತೇವೆ (ಹಸುಹೂ. ೬೦) ; ಹೊಸದಾಗಿ ಬಂದು ಕೊಟ್ಟಿಗೆ ಸೇರಿರುವ ಕಾಳಿಮ್ಮೆಗೆ ಕರು ಬಿಟ್ಟು ಹಾಲುಕರೆದುಕೊಂಡಿದ್ದಾರೆ (ಕೆಳಮು. ೯೦). [ಪಾಲ್$^{1}_{1}$ + ಕಱೆ$_{1}$]

**ಪಾಲ್ಗಾಱ**, ಪಾಲುಗಾರ (ನಾ). ೧. (ಆಸ್ತಿಯ) ಭಾಗಸ್ಥ ; ಹಿಸ್ಸೆದಾರ : ಪಾಲು ಬರಬೇಕಾದ ಹಕ್ಕುಳ್ಳವನು : ಪಾಲ್ಗಾಱರಣ್ಣಂದಿರ್ ! ಎಲ್ಲಮನ್ ಪೇಟ್ವಿನ್ (ಆಕ್ಯಶಾ. ೦೨–೨೪೮). **ಪಾಲುಗಾರ** : ೧. ಕರಾರು ಪತ್ರಕ್ಕೆ ಎಲ್ಲ ಪಾಲುಗಾರರ ಒಪ್ಪಿಗೆ ಮತ್ತು ಅಂಕಿತಗಳು ದೊರೆತ ಮೇಲೆ, ಪಾಲುಗಾರಿಕೆಯು ಪೂರ್ಣವಾಗುತ್ತದೆ (ಕಕ್ಯಡಿ. ೯೬) ; ಪ್ರತಿಸ್ಪರ್ಧಿ ಎನ್ನುವುದಕ್ಕಿಂತಲೂ ಪಾಲುಗಾರ ಎನ್ನುವುದೇ ಸರಿ (ಮುಂಗಾರು. ೩೪). ೨. ಪಾಲುಗೊಳ್ಳುವವನು : ಊರಲ್ಲಿಯ ಎಷ್ಟು ಜನರ ದುಃಖದಲ್ಲಿ ಅವನು ಈಗಾಗಲೇ ಪಾಲುಗಾರನಾಗಲಿಲ್ಲ ? (ಮೂರುದಾ. ೦೬೨). [ಪಾಲ್$^{1}_{2}$ + – ಕಾಱ]

**ಪಾಲ್ಗುಂಬಳ**, ಹಾಲಗುಂಬಳ. ಹಾಲುಕುಂಬಳ, ಹಾಲುಗುಂಬಳ, ಹಾಲ್ಗುಂಬಳ (ನಾ). ಒಂದು ಬಗೆಯ ಬಳ್ಳಿ ಮತ್ತು ತರಕಾರಿಯಾಗಿ ಬಳಸುವ ಅದರ ಕಾಯಿ ; ಸೋರೆ : ಮಟಿಗಾಲದೊಳೆಲೆವಾಡಂ ಹಱೆಯೆಳ್ಳಿಂ ಹಿಟಿದ ತೈಲಮಂ ಬಿಸತತಿಯಂ ಮೊಳೆಯುಳ್ಳುಮುಮಂ ಪಾಲ್ಗುಂಬಳಮಂ [ಪಾಠಾಂ. ಯುಲ್ಲಮನುಪ್ಪುಂಗಾಯ್ಗಳಂ] ಸೇವಿಸಲುಮಾಗದೆಂಬಂ ಜೈನಂ (ಸಮಶ. ೬-೯). **ಹಾಲಗುಂಬಳ** : "ಶ್ರಮಷ್ನೀ – ಹಾಲಗುಂಬಳ" (ಔಷಂ. ೦೬೨); ಕಹಿಸೋರೆಬಳ್ಳಿ, ಈಸುಗಾಯಿಬಳ್ಳಿ, ಹಾಲಗುಂಬಳ (ವೈಶಿಗ. ೯೯-೯೬೨). **ಹಾಲುಕುಂಬಳ**: "ಇಕ್ಷ್ವಾಕು__ಹಾಲುಕುಂಬಳಕಾಯಿ. ೨. ರಾಜವಿಶೇಷ" (ಗಂಗಾಮು. ೩೫). **ಹಾಲುಗುಂಬಳ** : "ದೀರ್ಘವೃಂತ ಫಲಾ–ಹಾಲುಗುಂಬಳ" (ಔಷಧಿ. ೭೭) ; ಹಾಲುಗುಂಬಳ ಪನಸಫಲದ ಸಾರತರ ಶಾಕಭೇದವ ನಾನು ಬಲ್ಲನಿತ ಚಾರುಚಂದ್ರಾನನೆಯರಜೀವ ಮಾಳ್ಕೆಯೊಳನುರಾಗದಿಂದವೆ ಬುಸುರ್ವೆನು (ಸೂಪಶಾ. ೫ ಸೂಚಕ) ; ಹಾಲುಗುಂಬಳ . . . ಕಫವಾತಕರ (ಅಶ್ವಾಂಗ. ೦೩೬–೬೬). **ಹಾಲ್ಗುಂಬಳ** : ಹಾಲ್ಗುಂಬಳ

5 10 15 20 25 30 35 40 45

ಕಾಯಿಯ ಪಲ್ಯ ತಿಂದು ಕೈ ಕಾಲೆಲ್ಲ ಪಾತ ಹಿಡಿದುಕೊಂಡಿದೆ (ಜಾಪ).
[ ಪಾಲ್$_1$ + ಕಾಂಬೆಳ್ ]

**ಪಾಲ್ಗುಡಿ.** ಹಾಲ್ಕುಡಿ, ಹಾಲ್ಗುಡಿ (ಕ್ರಿ). ೧. ಹಾಲನ್ನು ಕುಡಿ.–ಪಾನ ಮಾಡು: ಕಳ್ಗುಡಿಪವರಂ ಪೊಲ್ಲರೆಂಬಂತೆ ಪಾಲ್ಗುಡಿಪವರನೇಕೆ ಪೊಲ್ಲರೆನ್ನರ್ (ದಮಶಾಪು. ೭-೪೩) ; ನಂದಿನಿಯು ಪಾಲಿದೆ ನೀಂ ಕುಡಿಯಲ್ಕೆ ನಿನ್ನ ಚೆಂದಿಕೆ ಬಳೆಪಷ್ಟುದೆಂದಬಳೆ ನಂಬಿಸೆ ಪಾಲ್ಗುಡಿದು (ಜಗಿಪಿ. ೩-೩೧) ; ಕಲ್ಲಿನಾಥನು ಕಂಡೆಜಗಿ ಮುಂದೆ ಪಾಲ್ವಟ್ಟಲನಿಟ್ಟು ದೇವ ಪಸಿದೆ ಪಾಲ್ಗುಡಿವು ದೆಂದುಸುರ್ದ ಕೊಡಗೂಸು ಕಂಭವುಂ ಮಱಿಗೊಂಡು ನಿಂದಿರ್ದ (ವೃಶಪು. ೯-೭೧ ವ). **ಹಾಲ್ಕುಡಿ :** ೨. ಎದೆಹಾಲು ಕುಡಿ : ಮೊಲೆ ಯುಣ್ಣು : ಹಾಲ್ಕುಡಿವ ಮಗುವನ್ನು . . . ಬಿಟ್ಟು, ಹೊಲಗೆಲಸಕ್ಕೋ ಗದ್ದೆಕೆಲಸಕ್ಕೋ ಹೋದ ತಾಯಿ ಮನೆಗೆ ಹಿಂದಿರುಗುತ್ತಾಳೆ (ಜನ್ಮರು. ೧೬). **ಹಾಲ್ಗುಡಿ :** ೩. ರಸವನ್ನು ಕುಡಿ : ಗೌರಿಹುಣ್ಣಿವೆ ಹಾಲ್ಗುಡಿದು ಬೆಳದೋಳ ಧ್ವಜವನ್ನೆತ್ತಿತು (ಕಿಂಪು. ೧೨-೧೧). [ ಪಾಲ್$_1$ + ಕುಡಿ$_1$ ]

**ಪಾಲ್ಗುಡಿಸು.** ಹಾಲುಕುಡಿಸು (ಕ್ರಿ). ೧. ಹಾಲನ್ನು ಪಾನಮಾಡಿಸು : ಹಂಸೆಗೆ ಪಾಲ್ಗುಡಿಸಿಂಬ . . . ಹಾದರಿಯ ನೆಳಲ್ಗೆ ಹರಿಣಂಗಳಂ ಹೊಡೆ ಮೆಂಬ ಕೆಲಸದ ನೆಪದಿಂ ರತಿಮುಂಗಳೆ ಬಂದ ಕೆಳದಿಯರೆಲ್ಲರುಂ ಮೆಲ್ಲಮೆಲ್ಲನೆ ಕಳೆದಿ (ಸಂಪರ. ೧೯-೩೫). **ಹಾಲುಕುಡಿಸು :** ೨. ಮೊಲೆಯೂಡು : ಸ್ತನ್ಯಪಾನ ಮಾಡಿಸು : ಎಷ್ಟು ಹೊತ್ತಿಗೆ ಹಾಲುಕುಡಿಸಿಯೇನೋ ಎಂದು ಹಾತೊರೆಯುತ್ತ ಬಂದ ತಾಯಿ . . . ಅಲ್ಲೊಂದು ಕಡೆ ಕುಳಿತು ಹಾಲುಣಿಸುತ್ತಾಳೆ (ಜನ್ಮರು. ೧೬).
[ ಪಾಲ್$_1$ + ಕುಡಿಸು$_1$ ( < ಕುಡಿಯಿಸು ) ]

**ಪಾಲ್ಗನೆ** (ನಾ). ಹಾಲನ್ನು ಕಾಯಿಸಿದಾಗ ಮೇಲೆ ನಿಲ್ಲುವ ತಿರುಳು.–ಸಾರವತ್ತಾದ ಭಾಗ: ಹಾಲಿನ ಕೆನೆ : ಪುಳಗೂಟು ತದಿಕನ ಕೆಂಪೇರು ಪಾಲ್ಗನೆಯುನೆಳೆಯ ಪುಲ್ಲು ಕಬ್ಬುಂ ಬಲವಂತನಕ್ಕುಮೆಂಬುದ್ದುಲಚಿತ್ತಂ ತಂದು ಪೊರೆವುದುಂ ಗಜಶಿರುವಂ (ರಮಶಾಪು. ೧೨-೧೬೯).
[ ಪಾಲ್$_1$ + ಕೆನೆ$_3$ ]

**ಪಾಲ್ಗೊಂಬ** (ನಾ). (?) : ಮಲ್ಲಿಗೆಮಾವು ಅಂತೆ ಬರೆ ಪಾಲ್ಗೊಂಬ ಎಂಬ ಪುಣಸೆ ಅಂತೆ ಬರೆ (ಶ್ವಕಂ. ೧೯೨೧. ೧೦–೧೮೬ ; 967). [ ? ]

**ಪಾಲ್ಗೊಡು** (ಕ್ರಿ). ಹಾಲನ್ನು ಕೊಡು.–ನೀಡು : ಹಸಿವಱಿತು ತಾಯ್ಪನ್ನ ಶಿಶುವಿಗೆ ಒಸೆದು ಪಾಲ್ಗೊಡು[ಪಾಠಾಂ. ಮೊಲೆಕೊಡು]ವಂತೆ ನೀ ಪೋಷಿಸದೆ ಬೇಱನ್ನಾರು ಪೋಷಕರಾಗಿ ಸಲಹುವರು ( ಹಂಶಾ. ೨೩).
[ ಪಾಲ್$_1$ + ಕೊಡು$_1$ ]

**ಪಾಲ್ಗೊಳ್.** ಪಾಲುಗೊಳ್ಳು (ಕ್ರಿ). ೧. ಭಾಗವನ್ನು ಹೊಂದು.–ಪಡೆ : ಬೇಡವೋ ಸ್ವಾಸರಸನೊಡನವನ ಶಯ್ಯೆಯನ್ ಪಾಲ್ಗೊಳ್ವುದೆಂದುಂ ಬೇಡವೋ ಬಾಸಿಂದವಿಯದು ಬಂದವನೊಡನೆ ಪಾದುವೆ ತಾನೆಂದುಂ (ಅತ್ಮಶ್ರೃ. ೯೭–೧೦೨೭). **ಪಾಲುಗೊಳ್ಳು :** ೧. ನಮಗೀ ಸಾಲದಿರುವ ಅನ್ನದಲ್ಲಿ ಇವು ಪಾಲುಗೊಳ್ಳುವುದರಿಂದ ಹಾಗೂ ನಮ್ಮ ಸಂಖ್ಯೆಯೂ ಬೆಳೆಯುತ್ತಿರುವುದರಿಂದ ಇಳಿಯ ಭವಿಷ್ಯಕ್ಕೆ ನಾವು ಕೈಯಿಕ್ಕಬೇಕಾಗಿದೆ (ದೀಕ್ಷ. ೪೩). ೨. ಭಾಗವಹಿಸು : ಪಾತ್ರವಹಿಸು : ಈ ಜನ ಸಹಜವಾಗಿಯೂ ಎಂಬಂತೆ ತಮ್ಮ ಜೀವನದರ್ಶನದಲ್ಲಿ ಪಾಲುಗೊಳ್ಳುವಂಥ ಮಿತ್ರ ಮೇಳವನ್ನೇ ಸದಾ ಆಶ್ರಯಿಸಿರುತ್ತಾರೆ (ಪುಸರು. ೧೯೭) : ಅಸಂಖ್ಯ ರೂಪಗಳು ಇದರಲ್ಲಿ ಪಾಲುಗೊಂಡರೂ ಇದು ಹೆಚ್ಚುವುದೂ ಇಲ್ಲ ಕುಂದುವುದೂ ಇಲ್ಲ . . . ಈ ಸೌಂದರ್ಯ ಸಂಪೂರ್ಣವಾದುದು (ಸೌಂದ. ೧೦೭).
[ ಪಾಲ್$_2$ + ಕೊಳ್$_1$ ]

**ಪಾಲ್ಗೋಡು** (ನಾ). (ಮೃದುವಾಗಿದ್ದು) ಅಲುಗಾಡುವ ಕೋಡು : ಈ ಕೋಡು ಅಲುಗಾಡುವ ಹಸುಗಳಿಗೆ ಹಾಲು ಹೆಚ್ಚು ಎಂಬ ನಂಬಿಕೆಯಿದೆ : ಸವಿಜೇನ ಸಜ್ಜನಿಂಬನಿಯನೆಱೆದು ಪಾಲ್ಗೋಡಿನ ಜೋಲ್ಗಚ್ಚಲ ಕೋರವೊಲೆಯ ಎಳಗಂದಿ ಕರ್ಣಜುವಿನ ತೊರೆದ ತಂಬಾಲುಂಬರೆದು ಹಸಿ (೨೩ವಜಕ್ಕ. ೦೦೦–೩೨). [ಪಾಲ್$_1$ + ಕೋಡು$_6$ ]

**ಪಾಲ್ತುತ್ತ.** ಹಾಲ್ತುತ್ತ (ನಾ). ಬಿಳಿಯ ಪಾಷಾಣ : ಮೈಲುತುತ್ತ : (ಕ). **ಹಾಲ್ತುತ್ತ :** (ಕ). [ ಪಾಲ್$_1$ + ತುತ್ತ. / ತಮಿ. ಪಾಲ್ತುತ್ತ; ತೆಲು. ಪಾಲತುತ್ತ ]

**ಪಾಲ್ತೊಱೆ** 'ಪಾಲ್ದೊಱೆ' ನೋ.

**ಪಾಲ್ದಳಿ** (ಕ್ರಿ). ಹಾಲನ್ನು ಸಿಂಪಡಿಸು.–ಚಿಮುಕಿಸು : ಮಲ್ಲಿಗೆಯರಳ್ಗುಡಿ ಪಾಲ್ದಳಿದಂದದಿ ಚಲ್ಲಿತು ಬೆಳುದಿಂಗಳೆಳೆಗೆ (ಮೋಹಕ. ೦೮–೦೦೨).
[ ಪಾಲ್$_1$ + ತಳಿ$_1$ ]

**ಪಾಲ್ದಾರ.** ಪಾಲುದಾರ (ನಾ). ಪಾಲುಗಾರ : ಭಾಗಸ್ಥ : (ಕ). **ಪಾಲುದಾರ :** ನಿನ್ನ ದುಃಖದಲ್ಲಿ ನಾನೂ ಪಾಲುದಾರ ಎಂದು ಹೇಳೋಣ ಅಂತ ಬಂದೆ (ಹೂಸ್ಕೆ. ೦೨೦). [ ಪಾಲ್$_2$ + – ದಾರ್$_4$ ]

**ಪಾಲ್ದುಂಬು.** ಹಾಲುತುಂಬು. ಹಾಲ್ದುಂಬು (ಕ್ರಿ). ೧. ಹಾಲು ತುಂಬಿಕೊಳ್ಳು. – ಭರ್ತಿಯಾಗು : ಪಾಲ್ದುಂಬಿದ ಸಾಲ್ದನೆಗಳ ನೆಲ್ದುಂಗಲಸೊಬಗು ಸೀಳೆ ಗಿಳಿ (ರಾಜಶೇ. ೨–೦೩). **ಹಾಲುತುಂಬು :** ೧. ಭತ್ತದ ಗದ್ದೆ ತುಂಬ ಪೋಲು ಕದರು. ಕದರಿನಲ್ಲಿನ್ನೂ ಹಾಲು ತುಂಬಬೇಕು. ಹಾಲು ಗಟ್ಟಿಯಾಗಿ ಕಾಳು ಮೂಡಬೇಕು (ಜೂರುದಾ. ೨೦೬). ೨. ಹಾಲನ್ನು ತುಂಬಿಸು.–ಭರ್ತಿಮಾಡು : ಬಾಟ್ಲಿಯಲ್ಲಿ ಹಾಲುತುಂಬಿಕೊಡು (ಜಾಪ). **ಹಾಲ್ದುಂಬು :** ೧. ಬಿತ್ತಿದ ೪೦–೭೫ ದಿನಗಳಲ್ಲಿ ಹಾಲ್ದುಂಬಿ ತೆನೆಗೆ ಬಂದು ಬಿಡುವುದು. ಹೀಗೆ ಹಾಲ್ದುಂಬುತ್ತಲೇ, ಕೊಯ್ದು ದನಕ್ಕೆ ಹಾಕಿದರೆ, ಅತ್ಯಂತ ಪೋಷಕಆಹಾರವಾಗುತ್ತದೆ (ನೋನ್ಯಾಸ. ೬೦). [ ಪಾಲ್$_1$ + ತುಂಬು$_1$ ]

**ಪಾಲ್ದನೆ.** ಹಾಲ್ದನೆ (ನಾ). ಧಾನ್ಯದ ಎಳೆಯ ತೆನೆ ; ಹಾಲು ತುಂಬಿದ ತೆನೆ : ಸಸಿಯಂತೆ ಪೊಡೆಯಂತೆ ಪಾಲ್ದನೆಯಂತೆ ಕೊಯ್ಲಾದಂತೆ (ತಮಶಾಪು. ೦೨–೨೪) ; ಗಿಳಿ ಸೋವಂಗನೆಯರ ಕಣ್ಗಳ ರುಚಿ ದೆಸೆದೆಸೆಗೆ ಪಸರಿಸಿರೆ ಪಾಸಿನ ಸಿಮರ್ಗಳಜಾಳವೆಂದು ಪಾಲ್ದನೆಗಳ ದೆಸೆಗಂ ಸಾರವಂಟ ಕೆಲವರಗಿಳಿಗಳ್ (ಧಿಸ್ಪೃ. ೨–೭೮) ; ಉರ್ವರೆಯ ಶಾಲಿಗಳ ಪಾಲ್ದನೆಗೆ ಸಭೆದಿಂ ಮುಂಸುರ್ವ ಗಿಳಿವಿಂಡುಗಳನುಲಿಯಿಂದೆ ಪಾಮರಿಯರೆರ್ವಿಸಿದೊಡ (ಕೃಬಿಭಾ. ೩–೫). **ಹಾಲ್ದನೆ :** ಸಂಜೆಯ ರಂಜಿಸುವ ಹೊಂಬಿಸಿಲಿನಲ್ಲಿ ಆ ಬಂಗಾರ ಬೆಳೆ ಬಂದ ಹಕ್ಕಿಗಳಿಗೆ ಹಾಲ್ದನೆಯ ಗುಟುಕು ಕೊಡುತ್ತ ಸೃಷ್ಟಿಯ ಅನಂತಕರುಣೆಗೆ ಉದಾಹರಣೆಯಾಗಿ ನಿಂತಿದೆ (ಜಿಕ. ೨೦೬).
[ ಪಾಲ್$_1$ + ತೆನೆ$_1$ ]

**ಪಾಲ್ದೊಱೆ.** ಪಾಲ್ತೊಱೆ (ಕ್ರಿ). ೧. (ಮೊಲೆಯಲ್ಲಿ) ಹಾಲು ತುಂಬಿಕೊಳ್ಳು.–ಕೂಡಿಕೊಳ್ಳು : (ಕ). ೨. (ಮೊಲೆಯಿಂದ) ಹಾಲು ಜಿನುಗು; ಹಾಲು ತೊಟ್ಟಿಕ್ಕು. – ಸ್ರವಿಸು : ಬಾಲಂಗೆ ಮೋಹದಿಂದೆ . . . ಪಾಲ್ದೊಱೆವ ಮೊಲೆಯುಣಿಪ (ಕೃಬಿಭಾ. ೦೮–೨೦). **ಪಾಲ್ತೊಱೆ :** ೨. ಕಣ್ಣಣಿಯುದರ್ಘಕನಂ ನಡೆನೋಡಿನೋಡಿ ಪಾಲ್ತೊಱೆದು ಕುಚಂಗಳಿಂ ಬಿಡದೆ ಸೂಸುವ ಸ್ತವನಗೆಂದು ಸಾಗರ್ವಮೋ (ಮಲ್ಲಿಪು. ೩–೦೦೩).
[ ಪಾಲ್$_1$ + ತೊಱೆ$_2$ ]

**ಪಾಲ್ದೊಱೆ.** ಹಾಲ್ದೊಱೆ (ನಾ). ಹಾಲಿನ ಪ್ರವಾಹ.–ಹೊಳೆ : ತೊಱೆಗಳೆಲ್ಲಂ ಪಾಲ್ದೊಱೆ[ಪಾಠಾಂ. ಪಾಂದೊಱೆ]ಯೆನಿಸಿಯುಂ (ಆಶಪು. ೪–೬೭೮). ಬಹುಲ ಪಾಲ್ದೊಱೆಯು ಪೀರ್ವಂತೆ ಪೀರ್ದೊಂದಡಿ ಬಯಕೆಯಿಲ್ಲದೆ ತಣಿದಿಹನು (ಭರತ. ೧೮–೩೬). **ಹಾಲ್ದೊಱೆ :** ಪೆರೆ ತುಂಬಿ ಮೂಡಿದನು. ಹಾಲ್ದೊಱೆಯುದಾಸುರ ಬಾಸಿಂದ ಬಂತು (ನಡಿದು. ೭. ೪೩೦).
[ ಪಾಲ್$_1$ + ತೊಱೆ$_2$ ]

**ಪಾಲ್ನೊರೆ** (ನಾ). ಹಾಲಿನ ನೊರೆ: ಪಾಲ್ನೊರೆವೆಳ್ಪಿನಂತೆ ... ಕಂಗಳ ಕಾಂತಿ ದೆಸೆದೆಸೆಗೆ ಪಸರಿಸಲ್ (ಕಬಪು. ೩೭-೫೪). [ ಪಾಲ್$_1$ + ನೊರೆ$_2$ ]

**ಪಾಲ್ಪಡು** (ನಾ). ಒಂದು ಸ್ಥಳದ ಹೆಸರು: ಶ್ರೀ ಎರೆಯ್ಯಂಗರ ಮಗ ಬೊಲ್ಯಗಂಗಗಾವುಣ್ಡನಿಱಿದು ಬಿಟ್ಟನಾತಂಗೆ ಪಾಲ್ಪಡುವಿನುಳ್ಪಡುವಣ ಕೆಱೆಯುಳ್ ತಾವರೆ ಕಟ್ಟನ್ನೆಟಿಗೆ ಮೂವತ್ತು ಗೊಳಂ ಕೞನಿ ಕಲ್ನಾಡು ಸರ್ವಪರಿಹಾರಪ್ರಸಾದಂಗೈದಾರ್ (ಎಕ. X, ಬಾಗೆ. ೦೩-೫; ಸು. 890); ತುಱುವ ಮಗುಱ್ಚಿ ಮಣ್ಣೆಯಾಚರಿಯುಱೆಯುಂ ಪಾಲ್ಪಡುವಿನ ಚೋಲಾಚರಿ ಇಱಿದು ಸಗ್ಗಸ್ಥನಾದಂ (ಎಕ. X, ಕೋಲಾರ. ೦೪-೬; 1036).

[ ? ]

**ಪಾಲ್ಪಸುಳೆ**, ಹಾಲುಹಸುಳೆ (ನಾ). ಹಾಲು ಕುಡಿಯುವ ಮಗು; ಹಸುಗೂಸು: ಸೃಷ್ಟಿಯಿದು ನಿನ್ನೆರ್ದೆಯ ಪಾಲ್ಪಸುಳೆ, ಓ ತಾಯೆ (ಶ್ರೀರಾಮಾ. ೦೩೩-೨೦೭). **ಹಾಲುಹಸುಳೆ**: ಆಕೆಗಿದ್ದುದು ಹಾಲುಹಸುಳೆಯಾಗಿದ್ದ ದಿನದಿಂದ ತನ್ನನ್ನು ಸಾಕಿ ಸಲಹಿದ ಅಜ್ಜಿಯ ಆವಶ್ಯಕತೆ (ಐತಿಹ. ೦೦೭).

[ ಪಾಲ್$_1$ + ಪಸುಳೆ ]

**ಪಾಲ್ಪಟ್ಟಲ್** (ನಾ). ಹಾಲಿನ ಬಟ್ಟಲು: ನಾವಿದಂ ನೋಡುವೆವೆನುತ ಶಿವದೇವನಾ ಪ ಜ ದಿ ಪ ಸ ವ ಬ ಳೆ ಯನಾ ವಿಧದೊಳೊಬ್ಬಳವಳೆದು ಪಾಲ್ಪಟ್ಟಲಂ ಕೊಟ್ಟು ದೇವನಿಳಯಕೆ ಕಳುಹುತಂ (ಬಸಪು. ೦೪-೨೬); ಕಲ್ಲಿನಾಥನಂ ಕಂಡಜಗಿ ಮುಂದೆ ಪಾಲ್ಪಟ್ಟಲನಿಟ್ಟು ದೇವ ಪಸಿದೆ ಪಾಲ್ಗುಡಿವುದೆಂದುಸುರ್ದ (ವೃಕಾ. ೯-೭೦೩). [ಪಾಲ್$_1$ + ಬಟ್ಟಲ್]

**ಪಾಲ್ಪತ್ತು** (ಕ್ರಿ). ಹಾಲು ಇಲ್ಲದಂತಾಗು; ಹಾಲು ಇಂಗಿ ಹೋಗು: ಪಾಲ್ಪತ್ತಿದಾಕಳಂತೆ ಮಕ್ಕಳಿಲ್ಲದ ಸತಿಯಂತೆ (ರಚರ್ಗವು. ೯-೨೩ ಅಚಿಕದ್ಧ).

[ ಪಾಲ್$_1$ + ಬತ್ತು$_1$ ]

**ಪಾಲ್ಮರ**, ಹಾಲ್ಮರ (ನಾ). ಹಾಲು ಬರುವ ಆಲ, ಅತ್ತಿ, ಅರಳಿ, ಇಪ್ಪೆ, ಗೋಣಿ, ಬಸರಿ ಮುಂತಾದ ಮರ; ಕ್ಷೀರವೃಕ್ಷ: ಮಧುಮದ್ಯಮಾಂಸಂಗಳುಮಂ ಮುಂದೆ ಪಾಲ್ಮರದ ಪಣ್ಗಳುಮನಾಳಂಬೆಯುಂ ಸಣಂಬಿನ ಪೂವುಮೆಂಬಿವಂ ಸೇ ವಿ ಸು ವ ರುಂ . . . ವಿಱುಂ ನರಕಂಗಳೊಳ್ ಪುಟ್ಟಿ ದುಃಖಂಗಳನೆಯ್ದುವರ್ (ವಡ್ಡಾರಾ. ೦೨೩-೦೭); ಮರಂಗಳೆಲ್ಲಂ ಪಾಲ್ಮರಂಗಳೆನಿಸೆಯುಂ ಬಳ್ಳಿಗಳೆಲ್ಲಮಮೃತವಳ್ಳಿಗಳೆನಿಸೆಯುಂ (ಅಪು. ೪-೭೭ವ); ತ್ರಿಣೆತ್ರ ಪಾಲ್ಮರನೇಱೆ ಪಿಂಗಲಿ ಬಳಿದು ಬಾಯ್ದೊಂಡವು ಸರಾಗದಿನೊರೆದು ದಂಪತಿ ತಾಱಿನಿತ್ತವು ಕರಿಯ ಹಕ್ಕಿಗಳು (ಕೊರಾ. ೦-೭-೭); ಪಾಲ್ಮರದ ಚಕ್ಕೆ ಎದನ್ನು ಅಂಬಿಲದಲ್ಲಿ ಅರೆದು ಮೈಗೆ ಪೂಸಲು ದಾಹಜ್ವರ ಪರಿಹಾರವು (ಸವೈ. ೫೩). **ಹಾಲ್ಮರ**: ತುಪ್ಪಂ ಸಾಸಿವೆ ಹಾಲ್ಮರನ ಸಮಿತ್ತು ಈ ದ್ರವ್ಯಂಗಳಿಂದೆ ಅಗ್ನಿದೇವತಾರ್ಥವಾಗಿರ್ದ ಮಂತ್ರಂಗಳಿಂ ಹೋಮಮಂ ಮಾಡಿಸಿ (ರೋಟಿಮೊಳ. ೪-೪೭ ಟೀಕು).

[ ಪಾಲ್$_1$ + ಮರ$_1$ ]

**ಪಾಲ್ಮೞೆ** (ನಾ). ಹಾಲಿನ ಮಳೆ; ಕ್ಷೀರಧಾರೆ: ಬಸದಿಪುವಮಂದಿನ ಪಾಲ್ಮೞೆ ಪಸರಿಸಿತೆನೆ ಜಗಮನೊಡನೆ ಕರ್ಪೂರದ ರಜಂ ಮುಸುಕಿದುದೆನೆ ಪುದಿದೇನಾಱಿಸಿದುದು ಪೊಳೆವಮೃತಕಿರಣನಮೃತಕರಂಗಳ್ (ಆದಿಪು.೦೨-೦೦).

[ಪಾಲ್$_1$ + ಮೞೆ]

**ಪಾಲ್ಮುನ್ನೀರ್** (ನಾ). ಹಾಲಿನ ಸಮುದ್ರ; ಕ್ಷೀರಸಾಗರ: ಪಾಲ್ಮುನ್ನೀರೊಳ್ನಳತೆಱೆಗಳ ಬಲ್ನೆರೆಯೊಕ್ಕುಡಿಯುಟಪ್ಪಗಸದೊಱೆ ಮೇಲ್ಪಿನ ಪೊಳೆಪ್ಪಱೆಯೊಳಗಾಳ್ದಿರ್ದು ಬೆಳ್ಪುವರೆಗಿಪ್ಪ (ಬನ್ನದೇ. ೨-೩೭).

[ ಪಾಲ್$_1$ + ಮುನ್ನೀರ್ ]

**ಪಾಲ್ಮೊಲೆ** (ನಾ). ಹಾಲು ತುಂಬಿರುವ ಮೊಲೆ: ತೀವಿದ ಪಾಲ್ಮೊಲೆಯುಂ ತಳಮಾರ್ಗಯುಂಮಾವರಿಸುತ ಕರ್ಪುರದ ಕಂದನ ಸರ್ವಾಂಗಮನೀಕ್ಷಿಸದಾಕೆಯು ಕಣ್ಗಳ್ ಪೀಲಿಮು ಕರ್ಣ್ಣಸೆ (ಜಯಾಶಾ. ೨-೩೭). [ ಪಾಲ್$_1$ + ಮೊಲೆ$_1$ ]

**ಪಾಲ್ಯ** (ಗು). ೧. ಕಾಪಾಡಬೇಕಾದ; ರಕ್ಷಿಸಬೇಕಾದ. (ನಾ). ೨. ಕಾಪಾಡಬೇಕಾದುದು; ರಕ್ಷಿಸಬೇಕಾದುದು: ಅಜಿತವಿಜಿತಕಲ್ಪಿಪ ನಿನಗಿಂ ತ್ಯಾಜ್ಯಂ ಪರಿಗ್ರಹಂ ದಲ್ ಪ್ರಾಜ್ಯಂ ತಪಮದುವೆ ಪಾಲ್ಯಮಾಕೈವಲ್ಯಂ (ಅಜಪು. ೬-೭೭). [ ಸಂ. ]

**ಪಾಲ್ಲಕಿ** ' ಪಲ್ಲಂಗ ' ನೋ.

**ಪಾಲ್ವಕ್ಕಿ**, ಹಾಲಕ್ಕಿ, ಹಾಲವಕ್ಕಿ, ಹಾಲಹಕ್ಕಿ, ಹಾಲುವಕ್ಕಿ, ಹಾಲುಹಕ್ಕಿ, ಹಾಲ್ವಕ್ಕಿ (ನಾ). ೧. ರಾತ್ರಿಯಲ್ಲಿ ಸಂಚರಿಸುವ ಗೂಬೆಯ ಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ; ಶಕುನದ ಹಕ್ಕಿ; ಪಿಂಗಲಿ: "ಎಸೆವ ಪಿಂಗಲಿ ಶಕುಂತಂ ಭಾಸಮೆನಲು ಪಾಲ್ವಕ್ಕಿ[ಪಾಠಾಂ. ಹಾಲುವಕ್ಕಿ] ಯೆಂದೆನಿಕ್ಕುಂ" (ಮಂಗರಾ. ೫೨-೬); ಪಾಲ್ವಕ್ಕಿ ಮೃಗಾಂಕ ಘೂಕ ದನುಜಂ ಪಾಠೀನಮಿಂತು ನಿಶಾಚರಮಕ್ಕುಂ (ಶಾಶಾರ. ೨೪). **ಹಾಲಕ್ಕಿ**: ೧. ಚಿಲೀಪಿಲೀ ಚಿಲಿಪಿಲಿ ಎಂದೂ ಹಾಲಕ್ಕಿ ಉಲಿಯುತಲಿತ್ತ ಶುಭ ನುಡಿಯ (ಪಾದಲೀ. ೫-೪); ಹಾಲಕ್ಕಿ ನೀಲಕ್ಕಿ ನೀಲವರ್ಣದಕ್ಕಿ ಬೇಲೂರ ಗದ್ದೆ ಗೊನೆಬತ್ತದ ನೆಲ್ಲಕ್ಕಿ ಸೇರಾವೆ ನಮ್ಮ ಅರಮನೆಗೆ (ಜಾಪದ.೧೦೫). **ಹಾಲವಕ್ಕಿ**: ೧. "ಪಿಂಗಲಃ— ಹಾಲವಕ್ಕಿ" (ಬಿತಂ. ೯೭). **ಹಾಲಹಕ್ಕಿ**: ೧. ಹಾಲಹಕ್ಕಿಯನ್ನು ಹಿಂದುಗಡೆಯಲ್ಲಿ ಕಂಡರೆ ಬಹುಪುತ್ರಪ್ರಾಪ್ತಿ ಆಗುವುದು (ಶಾಗಂಂ. ೫೮೫-೭); ಹಾಲಹಕ್ಕಿಯು ಜಗದಾಹ್ಲಾದಕರವಾದ ಚಂದ್ರನ ಪ್ರಣಯಿಯನ್ನು ಉಚ್ಚಕಂಠದಿಂದ ಸಪ್ತಮತಾರದಲ್ಲಿ ಮಾತನಾಡಿಸುತ್ತಿದ್ದಿತು (ಕೋಟಿಮೊ. ೩); ಹಾಲಹಕ್ಕಿ ಆದರೆ ಹಾಲು ಕರೆದೀತೇ? (ಗಾದೆ). **ಹಾಲುವಕ್ಕಿ**: ೧. "ನೀಡೋದ್ಭವಃ—ಹಾಲುವಕ್ಕಿ, ಪಕ್ಷಿಸಮುದಾಯ" (ಬಿತಂ. ೮೪); ಕೊಟ್ಟ ಕೂಗಿತ್ತು ಹಾಲುವಕ್ಕಿ ಬಳಯಿತ್ತು ಹಂಗ ಕಟ್ಟಿತ್ತು ಅವನ ಅವಳ ಮದುವೆ ನಿಂದಿತ್ತು (ಅಜ್ಞಮಾ. ೪. ೦೪೭-೦೫೭); ಅಂದು ಮಧ್ಯಾಹ್ನ 'ಎಣ್ಣೆ ಜೋಗಿ' ಬಂದು ಹಾಲುವಕ್ಕಿಯ ಶಕುನವನ್ನು ಒಡಚಿ ಹೇಳುವಾಗ . . . ಧೈರ್ಯ ಹೇಳಿ ಹೋಗಿದ್ದ (ಶಿಳುಮ. ೮೪). ೨. ಒಕ್ಕಲಿಗರಲ್ಲಿ ಒಂದು ಬಣ, – ಪಂಗಡ: ಬಾಲೋಲಿಕಾರ, ಬಂಟ, ದಬ್ಬಿ, ಗತ್ತಿ, ಗಂಡ, ಹಲದವ, ಹಾಲುವಕ್ಕಿ . . . ಪಕ್ಕಲಿಗ, ವೆಲ್ಲಾಲ (ತುಳುವಾ. ೦೭೦). **ಹಾಲುಹಕ್ಕಿ**: ೧. "ಮಹ್ಯಾಲೂಕಃ— ಹಾಲುಹಕ್ಕಿ" (ಬಿತಂ. ೦೨೭); ಹಸುಬ ಹಂಗನು ಬಾವುಗೆ ಹಾಲುಹಕ್ಕಿಯು ಕುಶಲದಿಂದುಲಿವ ಮಣಿಯನು ಚಸನಾಗಿ ಶಕುನವ ಪೇಳ್ವ ಪಕ್ಷಿಗಳು ಪಾತ್ರೆಸೆದವು ಆ ಮಲೆಯೊಳಗೆ (ಪುರದೀಕಾಂ. ೦-೭೦). **ಹಾಲ್ವಕ್ಕಿ**: ೧. ಖಗಾವಳಿಯು ಗೂಡುಗಳಲ್ಲಿ ಗಲಗು ಪಿರಿದಾಯ್ತು ಹಾಲ್ವಕ್ಕಿ ಹರಿದವು ಪಕ್ಕೆಗೆ (ಸಪ್ತಕೀ. ೦೦-೩೮); ಹಾಲ್ವಕ್ಕಿ ಕೋಗಿಲೆ ಕೋಟಿದೇವನ ಕುಕ್ಕುಮಾಯಿಯ ಕೆಂಡವಕ್ಕಿಗಳವಱಿ ಒಳೊಪ್ಪಿದುದು (ಸಾಳ್ವಭಾ. ೫-೨೨).

**ಹಾಲಕ್ಕಿ ಒಕ್ಕಲರು**=ಒಕ್ಕಲಿಗರ ಒಂದು ಒಳಪಂಗಡ. ಕರಾವಳಿ ಪ್ರದೇಶದಲ್ಲಿ ವಾಸಿಸುವ ಜನರಲ್ಲಿ ನಾಡವರು, ಹಾಲಕ್ಕಿ ಒಕ್ಕಲರು, ನಾಮಧಾರಿಗಳು ಮುಖ್ಯವಾಗಿ ಒಕ್ಕಲತನದಿಂದ ಜೀವಿಸುವರು (ಕರಾವೀ.೬).

[<ಪಾಲ್$_1$ + ಪಕ್ಕಿ]

**ಪಾಲ್ವಣ** ' ಪಾರಿವಾಳ$_1$ ' ನೋ.

**ಪಾಲ್ವಳ್ಳ**, ಹಾಲುಹಳ್ಳ (ನಾ). ಒಂದು ಹಳ್ಳದ ಹೆಸರು: ಸಾಱಿಕಿಯ ಸೀಮಾಮರ್ಯ್ಯಾದೆಯನ್ತೆನ್ದೊಡೆ ತೆಂಕ ಪಾಲ್ವಳ್ಳಂ ನೈರಿತಿಯೊಳ್ಬರವುಲಿಗೆಱೆಯ ತೆಂಕಣ ಕೋಡಿಯಿಂ (ಶಾಇಇ. XI-i, ೫೨-೫೭; ಸು. 1007). **ಹಾಲುಹಳ್ಳ**: ನಮ್ಮೂರಂತೂ ಹಾಲುಹಳ್ಳದ ದಂಡೆಯ ಮೇಲಿದೆ. ಅದರಿಂದಲೇ ನಮ್ಮೂರಿಗೆ ಹಾಲುಹಳ್ಳ ಎಂದು ಹೆಸರು ಬಂದಿದೆ. ಹಾಲುಹಳ್ಳವು ಊರ ಪೂರ್ವಕ್ಕಿದ್ದು ಹನ್ನೆರಡುತಿಂಗಳೂ ಜುಳುಜುಳು ಎಂದು ಹರಿಯುತ್ತಿದೆ (ಕಕಪು. ೬-೧). [ ಪಾಲ್$_1$ + ಪಳ್ಳ ]

**ಪಾಲ್ಪೊನಲ್** (ನಾ). ೧. ಹಾಲಿನ ಹೊಳೆ : ಆ ಕುಮುದಾಕರಂಗಳ ತನಿವೆಳಗಿನ ಬೆಳಗಮಂ ಪಾಲ್ಪೊನಲ ಪೂರಮೆಂದು ಪೀರ್ವಾಸೆಯಿಂ ಪರಿತರುತಿರ್ಪ ತರುಣಕಲಹಂಸಪ್ರಸರಮುಂ (ಕುಸುಮಾ. ೨-೭೧ ವ). ೨. ಕಬ್ಬಿನ ಹಾಲಿನ ಹೊಳೆ : ರಸದಾಳಿಯೆಸೆವ ಪಾಲ್ಪೊನಲೊ ಸೊಗಯಿಪ ಪೊಚ್ಚಪೊಸ ಜೇನ ಸೋನೆಯೋ (ಶಬ್ದಮ. ೧-೩೦). ೩. ಎಳೆಯ ಧಾನ್ಯದ ರಸದ ಪ್ರವಾಹ : ಕೀರಕಿಶೋರಚಂಚುಹತಿಯಿಂದೆನಸುಂ ಕಣಿಶಾಗ್ರಭಾಗದಿಂ ಭೋರನೆ ಸೋರ್ವ ಪಾಲ್ಪೊನಲೆ ಕಾಲ್ಪೊನಲಾಗೆ (ಕುಸುಮಾ. ೨-೪೫). [ಪಾಲ್$_1$ + ಪೊನಲ್]

**ಪಾಲ್ಪೊತೆ** 'ಪಾಲ್ಪೊದೆ' ನೋ.

**ಪಾಲ್ಪೊದೆ, ಪಾಲ್ಪೊತೆ** (ನಾ). ಬೆಳ್ಳಗಿರುವ ಸುಣ್ಣ : ಅರೆದೊಡೆ ಸೌಧಸಂತತಿಗೆ ಪಾಲ್ಪೊದೆಯುಪ್ಪ ಕಟಲ್ಗೆ ಕೂಡೆ ಕಪ್ಪುರವಳುಕಪ್ಪುಗುರ್ವ ನೊಳಕೊಂಡುದು ಚಂದ್ರಿಕೆ ಸಾಂದ್ರಭಾವದಿಂ (ಜಗಿ. ೧೬-೧೦೯). **ಪಾಲ್ಪೊತೆ :** ರೂಢಿವಡೆದ ನೃಪಾಲರ ನೆಲೆಮಾಡ ಚಿನ್ನದ ಚಿನ್ನ ಕನ್ನಾ ಮಾಡಮೊಪ್ಪವಮಾತ್ಮಮುಖ್ಯರ ಪಾಲ್ಪೊತೆಯ ಮಾಡ (ಶಾಸ್ತ್ರಸಾ. ೨-೯). [ಪಾಲ್$_1$ + ಪೊದೆ]

**ಪಾವಕ** (ಗು). ೧. ಶುದ್ಧಗೊಳಿಸುವ; ಪವಿತ್ರಗೊಳಿಸುವ. ೨. ಶುದ್ಧವಾದ. ೩. ಪ್ರಕಾಶಮಾನವಾದ. (ನಾ). ೪. ಶುದ್ಧಗೊಳಿಸುವಂತಹುದು : ಆವ ಜೀವದ ಪಾಪವಾವನುಭವದಿನಹುದೊ . . . ನೋವೆಲ್ಲ ಪಾವಕವೊ (ಮುಂಕುಶ. ೩೦೯). ೫. ಬೆಂಕಿ ; ಅಗ್ನಿ: "ಸಪ್ತಾರ್ಚಿಃ . . . ಪಾವಕಃ . . . ಹುತಾಶನಃ—ಈ ೪೦ ಕಿಚ್ಚಿನ ಪೆಸರ್" (ಕಬಾಯು. ೧೨-೬೨); ಪಾವಕನಟ್ಟಿ ಖಾಂಡವವನುಂಡಪನರ್ಜುನನೊಡಿದಪ್ಪಂ (ಕಂಕಭಾ. ೩-೭೮) ; ಪಾವಕನು ನಿಜರೂಪದಿಂದಾ ದೇವಿಯರನೊಡಗೊಂಡು ಬಂದನು (ಜೈಮಿ. ೪೩-೩೯). ೬. ಉತ್ತಮವಾದ ಆಚರಣೆ ; ಸದಾಚಾರ ; ಒಳ್ಳೆಯ ನಡತೆ. ೭. ದೀಪದ ಬತ್ತಿ. ೮. ಆಗ್ನೇಯಾಸ್ತ್ರ. ೯. ಮೇಲಕ್ಕೆ ಕಾಣುವಂತಹುದು ; ಸ್ಪಷ್ಟವಾದುದು. ೧೦. ಗೇರು ಮರ. ೧೧. ಒಂದು ಬಗೆಯ ಔಷಧಿಗಿಡ ಚಿತ್ರಮೂಲ. ೧೨. ವಾಯುವಿಳಂಗ. ೧೩. ವಾಂಕ್ವಾತ್ಯ. ೧೪. ನೆಲ್ಲಿಗಿಡ. ೧೫. ವರುಣ. ೧೬. [ಛಂದ] ಅಕ್ಷರಗಣಗಳಲ್ಲಿ ಒಂದು; ನಡುವೆಲಘು ವಿರುವ ಗಣ; ರಗಣ (–U–): ಪಾವಕೋದ್ಭಾವದಿಂ ಶ್ರೀವಧೂಪಾವನಂ (ಛಂದೋಂಬು. ೨-೩೮); "ಉತ್ತಮಾಚಾರದೊಳು ಗೇರಿನೊಳು ನಿಜುಪಲೊಳು ಚಿತ್ರಮೂಲದೊಳಗ್ನಿಯೊಳು ಕಿಚ್ಚುಗೋಲೊಳುರಿವತ್ತಿಯೊಳು ಪಾವಕ ಮೆನಿಸ್ಕು" (ಮುಂಗರಾ. ೧೫೩-೬೨); "ವೀತಿಹೋತ್ರಂಗೆ ಸಲೆ ಭಲ್ಲಾತಕಿಗುಂ ಚಿತ್ರಮೂಲದೊಳು ಶೀವ್ರದೊಳುಂ ಆತುರದಿ ಮುಗಿದ ವಸ್ತುಗಳೀ ತೆಱದಿಂ ಪಾವಕಾಖ್ಯಮೆನಿಸಂ" (ಶಾಪಾಶಂ. ೧೯೩). [ಸಂ.]

**ಪಾವಕದಿಕ್ಕು** (ನಾ). ಅಗ್ನಿಯ ದಿಕ್ಕು ; ಆಗ್ನೇಯ : ಪಾವಕದಿಕ್ಕಿನಂತೆ ವನದಂತೆ . . . ಕಾಮಿಜನದಂತೆ ಸಮುತ್ಕಳಿಕಾಕುಳಂ ಕೊಳಂ (ಕುಶ್ಚಕು. ೨-೬೩). [ಪಾವಕ + ದಿಕ್ಕು]

**ಪಾವಕನಯನ** (ನಾ). ಬೆಂಕಿಗಣ್ಣ ; ಶಿವ : ಪಾವಕನಯನನವರಾವತಾರನು : . . ಸುಖದಿಂದೆ ಸುರಗಿಯ ಚೌಡರಸನಿರ್ದ (ಬಸಪು. ೩೩–೨೦) ; ಸಕಲಜನರಾ ಜಲಪ್ರಳಯವಾಗಲ್ಕೆ ಪಾವಕನಯನಗಂದು ಮೊಜೆಯಿಡೆ (ಶಿಕೃಪು. ೩-೧೧-೬). [ಪಾವಕ + ನಯನ]

**ಪಾವಕಪಾವನೆ** (ನಾ). ಅಗ್ನಿಪರೀಕ್ಷೆಯಿಂದ ಶುದ್ಧಳೆಂದು ತೀರ್ಮಾನಿಸಲ್ಪಟ್ಟವಳು; ಸೀತೆ : ಹಾ! ರಾಘವಾ! ಪಾವಕಪಾವನೆಯುಂ ತೊಱೆಯಲ್ಕೆಂತು ಮನಂದಂದೆಯ್? (ರಾಮಾಶ್ವ. ೨೫-೧೬). [ಪಾವಕ+ಪಾವನೆ]

**ಪಾವಕಾಂಬಕ** (ನಾ). = ಪಾವಕನಯನ : ಪಾವಕಾಂಬಕಮೂರ್ತಿ ಸೊಡ್ಡಳದೇವ ಬಾಚರಸಯ್ಯನೆನಲತಿಪಾವನಾತ್ಮನು (ಬಸಪು. ೩೩-೧) ; ಇಂತಪ್ಪ ಸತ್ಪುರುಷನಾವ ಕಾರ್ಯಕ್ಕೆ ಕಳುಹಲು ಮಾರುವವನಲ್ಲ ಪಾವಕಾಂಬಕನೆಡೆಗೆ ಕಳುಹುವುದೆಯನುಚಿತಂ ಕಳುಹದಿರೆ ಸಕಲಸುರರ ಬಾಧೆ ಹಿಂಗದು (ಸವರೋ. ೩-೭). [ಪಾವಕ + ಅಂಬಕ]

**ಪಾವಕಾಕ್ಷಿ** (ನಾ). (ಶಿವನ) ಬೆಂಕಿಯ ಕಣ್ಣು ; ಬೆಂಕಿಯನ್ನುಗುಳುವ ಕಣ್ಣು : ನೀನಖಿಳಮಂ ನಿನ್ನ ಫಾಳದ ಪಾವಕಾಕ್ಷಿಯುಂ ತೆಗೆದು ಸುಡುವಲ್ಲಿ (ಶಿಕೃಪು. ೩-೩-೩೬). [ಪಾವಕ + ಅಕ್ಷಿ]

**ಪಾವಕಾಸ್ತ್ರ** (ನಾ). ಮಂತ್ರಿಸಿ ಬಿಟ್ಟಾಗ ಬೆಂಕಿಯನ್ನು ಸುರಿಸುವುದೆಂದು ನಂಬಲಾದ ಒಂದು ಅಸ್ತ್ರ ; ಆಗ್ನೇಯಾಸ್ತ್ರ : ಪಾವಕಾಸ್ತ್ರವು ಮೊಜೆದು ಭುಗಿಭುಗಿಲೆಂದು ಹೊಗೆಯಾವರಿಸಿ ಕವಿತರಲು (ಜೈಮಿ. ೩೬-೩೭); ಪಾವರದೊಳೆನ್ನ ಪಡಬಾಗ್ನಿಯೋ ವಿಲಯರುದ್ರನ ಪಣೆಯ ಕಣ್ಣಿಚ್ಚಿದೋ ಭಾವಿಸುವೊಡರಿದೆಂಬೊಲಾಮುದು ಧನಂಜಯನ ಪಾವಕಾಸ್ತ್ರಂ (ಕೃಮಿಶಾ. ೧೩-೧೧). [ಪಾವಕ + ಅಸ್ತ್ರ]

**ಪಾವಕಿ$_1$** (ನಾ). ೧. ಅಗ್ನಿಯ ಮಗ. ೨. ನೀಲ : ಪಾವಕಿಯ ಪಟುತನವ ಬಣ್ಣಿಪನಾವನಿಂದ್ರಾರಿಯನು ಗೆಲುವನು . . . ಕಲಿಗಳ ದೇವನೀ ಕಪಿಯೆಂದು ಹೊಗಳಿದ ರಾವಣನ ಮಗ ಮತ್ಸರಂಗಳ ಬಿಟ್ಟು ಪರಿಣಮಿಸಿ (ಜೈಮಿ. ೩೮-೪೩). ೩. ಕಾರ್ತಿಕೇಯ ; ಸ್ಕಂದ. [ಸಂ.]

**ಪಾವಕಿ$_2$** (ನಾ). ಅಗ್ಗಿಷ್ಟಿಕೆ ; ಕುಮಟಿ : "ಪಾವಕಿ(ಕೆ)ಯೆನಲ್ ಬೆಸಕಿಲಕ್ಕು" (ಮುಂಗರಾ. ೬೦-೨೦). [ಪಾವಕ+—ಇ$_3$ ?]

**ಪಾವಟಣಿಗೆ** (ನಾ). ಮೆಟ್ಟಿಲು ; ಸೋಪಾನ : ನೀರು . . . ಮೊನ್ನೆ ನಾನು ಬಂದಾಗ ಎರಡು ಪಾವಟಣಿಗೆ ಕೆಳಗಿದ್ದವು (ಸಮಜೀ. ೫೭); ಆಕೆ . . . ಪಾವಟಣಿಗೆಗಳನ್ನಿಳಿದು, ಕೆಳಗೆ ಬಂದಳು (ಶೂಶಿಬಾ. ೧೦೬). [←ಮರಾ. ಪಾವಟಣೀ, ಪಾವಠಣೀ]

**ಪಾವಟ** (ನಾ). = ಪಾವಟಣಿಗೆ : ಚಲುವ ಪಾವಟಗಳನು ರಚಿಸುವೆ (ಪ್ರಾಕಸಂ. ೧೭-೯) ; ನೆರೆವರಸುಗಳ ಮಧ್ಯದಲಿಬೋರಿದನಲ್ಲಿ ಪಾವಟಿಯ (ಸನಥ. ೨೭-೧೯) : ಯಶೋದೆ ಗಾಡಿಯಿಂದಿಳಿದಳು. ವಸುಧೆಯೊಂದಿಗೆ ತಿಂಗಳ ಹಿಂದೆ ಹತ್ತಿದ್ದ ಪಾವಟಗಳನ್ನೇ ಹತ್ತಿ ಮೇಲೆ ಬಂದಳು (ವಾತ್ಸಲ್ಯ. ೨೨೭). [←ಮರಾ. ಪಾವಟೀ / ತುಳು. ಪಾವಟೆ ; ತೆಲು ಪಾವಟ]

**ಪಾವಟಿಕೆ, ಪಾವಟಿಗೆ** (ನಾ). = ಪಾವಟಣಿಗೆ : ನೂರಾರು ಪಾವಟಿಕೆಗಳನ್ನು ಇಳಿದ ಬಳಿಕ, ಬಾವಿಯ ಎರಡೂ ಪಾರ್ಶ್ವಗಳಿಗೆ ಬಂಕಗಳಿವೆ (ಕಬ್ಬಿಂ. ೯). **ಪಾವಟಿಗೆ :** ಮುತ್ತಿನ ಪಸೆಯ ಜಗುಲಿ ನೀಲದ ಪಾವಟಿಗೆ ಮಿಕ್ಕ ಮಾಣಿಮಿಸುನಿಕುಸುರಿಗೆಲಸಂಗಳಿಂದಲಂಕರಿಸಿ . . . ಇಂಬುವಡೆದುದ್ವಾಹಮಂದಿರಂ ಮೊಜೆದುದು (ಹಾರಾಸ್ಕ. ೧-೬-೨೭ ವ); ರಾಜಮಾತೆಯ ಹಣೆಯ ಮೇಲೆ ಮುಪ್ಪು ಇಳಿಯಲೆಂದು ಪಾವಟಿಗೆಗಳನ್ನು ಇಟ್ಟಂತೆ ನಾಲ್ಕಾರು ಸುಕ್ಕುಗಳು ಇದ್ದುವು (ಸವತಿ. ೩೧). [ಪಾವಟ + —ಇಕೆ]

**ಪಾವಟಗೆ** 'ಪಾವಟಿಕೆ' ನೋ.

**ಪಾವಟೆ** 'ಪಾವಟ್ಟೆ' ನೋ.

**ಪಾವಡ$_1$** 'ಪಾವುಡ$_1$' ನೋ.

**ಪಾವಡ$_2$** 'ಪಾವುಡ$_2$' ನೋ.

**ಪಾವಡ$_3$** (ನಾ). ಕಣದಲ್ಲಿ ಧಾನ್ಯವನ್ನು ಒಂದೆಡೆಗೆ ಸೇರಿಸಿ ರಾಶಿ ಮಾಡಲು ಅಥವಾ ನೆಲವನ್ನು ಸಮಮಾಡಲು ಬಳಸುವ (ಕಬ್ಬಿಣದ) ಸಾಧನ ; ಗೋರೆ : ಒಬ್ಬ ಕಮ್ಮಾರನು ಒಂದು ಗುದ್ದಲಿಯನ್ನು ಕೊಟ್ಟು ಪಾವಡವನ್ನು ತಕ್ಕೊಳ್ಳಲಿಕ್ಕೆ ಅಪೇಕ್ಷಿಸುತ್ತಾನೆಂದು ಕಲ್ಪಿಸುವ (ಮುಂಬಮು. ೩-೨೬೦). [←ಮರಾ. ಪಾವಡೇ, ಫಾವಡೇ]

**ಪಾವಡ₄**, ಪಾವುಡ₄ (ನಾ). ರಿಕಾಪು ; ಅಂಕವಣೆ : ಪಾವಡಗಳ ಮೆಟ್ಟಿ ವಾಘೆಗೆ ಕೈನೀಡಿ ರಾವುತರೊಡೆಯನೊಪ್ಪಿದನು (ಕುಶ. ೨೯-೧೬). **ಪಾವುಡ₄** : ತಂಡತಂಡದೊಳು ನಡೆದು ಬಹ ಪೌಜನು ಕಂಡು ಪಾವು [ಪಾಠಾಂ. ವ]ಡಗಳ ಮೆಟ್ಟಿ ಮುಂಡೆಯ ನೆಗಹಿ ನೋಡುವ ರಾವುತರ ಗಂಡ ಗಿಂಡಿಯ ಲಕ್ಕ ನೆಯ್ದಿದನು (ಕುಮಾರಾಂ. ೧೧-೩೬). [ ? ]

**ಪಾವಡಜಲ** (ನಾ). ಬಟ್ಟೆಯಿಂದ ಮುಚ್ಚಿ ತಂದ (ಅಭಿಷೇಕದ) ನೀರು: ಭಾವವೊಂದಿಲ್ಲದೆ ಪಾವಡಜಲ ತಂದು ತೀವಿ ಲಿಂಗಾರ್ಚನೆಗಳನು ಮೂವೇಳೆಯೊಳು ಮಾಡಿ (ಶರಣ. ೨-೩೪).

[ ಪಾವಡ₁ (< ಪಾವುಡ₁) + ಜಲ₂ ]

**ಪಾವಡಿಗ**, ಹಾವಡಿಗ, ಹಾವಾಡಿಗ (ನಾ). ಹಾವುಗಳನ್ನು ಹಿಡಿದು ಆಡಿಸುವ ವೃತ್ತಿಯುವನು : ಹಾವಾಡಿಸುವವನು : ಪಾವಡಿಗಂ ಪಾವಿನ ಬಯ್ಯೊಳ್ . . . ಇರುಳ್ವಟ್ಟಿಗಾಜಿಂ ಕಳ್ಳನ ಕಯ್ಯೊಳ್ ಸಿಕ್ಕು ವಂತೆ (ರವಚರಿತ್ರ. ೧೬-೦೫೫) ; ಪಾಪಂ ಪಿಡಿದನಿತಱೊಳೇಂ ಪಾವಡಿಗರ್ ಸುಭಟರಪ್ಪರೇ ಜಗುನೆಯು ನೀರ್ಪಾವಂ ಪಿಡಿದನಿತಱೊಳುರ್ವೀಪಳಯಂ ಸುಭಟನೆಂಗುಮೋ ಹರಿ ನಿನ್ನಂ (ಜಗ. ೦೬-೪೪) : ಅಡಿಗ ಪ್ರತ್ಯಯಕ್ಕೆ – ದೇವಡಿಗಂ, ಪಾವಡಿಗಂ, ಪೂಪಡಿಗಂ (ಶಮದ. ೨೦೩ ಶ್ರಯೋ). **ಹಾವಡಿಗ** : "ವ್ಯಾಳಗ್ರಾಹೀ, ಅಹಿತುಂಡಿಕಃ–ಈ ೨ ಹಾವಡಿಗಂ" (ಹಲಾಯು. ೧೦೦೦-೪೩೯) ; ನಾನಾವರ್ಣದ ಸಂಸಾರ ಹಾವು ಹಾವ[ ಪಾಠಾಂ. ವಾ ]ಡಿಗನ ಸ್ನೇಹದಂತೆ (ಬಸವ. ೧೨) : ವೈನತೇಯನ ವಿಗಡಿಸಿದ ವಿಷವೇನು ಸದರವೊ ಹಾವಡಿಗರಿಗೆ (ಕುಮ್ಮಾ. ೦೩-೦೦) : ಹಾವ ಹರಿಕಟಕದಲಿ ಹರಹಿದ ಹಾವಡಿಗರೇ ನಾವು (ತೊರವೆ. ೭-೦೬-೯). **ಹಾವಾಡಿಗ**: "ವ್ಯಾಳಗ್ರಾಹೀ, ಅಹಿತುಂಡಿಃ — ಈ ೨ ಹಾವಾಡಿಗನ ಹೆಸರು" (ನಾಚರಾ. ೯೯) ; ಕಳ್ಳ ಹಾದರಿಗ ಹಾವಾಡಿಗ ಅಪರಾಧದಡು ಶಿವಲಾಂಛನವ ತಾಳ್ದು ಬಂದಲ್ಲಿ ಶಿವನೆಂದೇ ಪ್ರಮಾಣಿಸು ವುದು (ಮೋಕ್ಷಮಾ. ೪೨-೦೭೩) : ಭೋಗಭಂಗಂ ಹಾವಾ[ ಪಾಠಾಂ. ವ ] ಡಿಗರೊಳ್ . . . ಅರ್ಥವಾದಂ ಸ್ತೋತ್ರದೊಳಲ್ಲದೆ ತನ್ನೊಳಿಲ್ಲೆನಿಸಿರ್ಪುದು (ರಶು. ೦-೨೨ ವ) ; ಹಾವಾಡಿಗರು, ಗೊಂಬೆಲಿಗರು . . . ಎಲ್ಲರೂ ಸಂಘಟಿಸಿ ಒಂದಾಗಿ ಇರುವವರ ತಾಳ್ಮೆಯ ಪರೀಕ್ಷೆಯನು ಮಾಡುವರೋ (ಅರಳು. ೩೩೪-೦೦). [ ಪಾವು₁ + – ಅಡಿಗ₂ ]

**ಪಾವಡಿಗಿತಿ** (ನಾ). ಹಾವಾಡಿಗರ ಜಾತಿಯವಳು ಅಥವಾ ಹಾವಾಡಿಗನ ಹೆಂಡತಿ : ಪಾವಡಿಗಿತಿ, ಪೂಪಡಿಗಿತಿ, ಮಾಲೆಪಡಿಗಿತಿ . . . ಪಟ್ಟಸಾಲಿಗಿತಿ, ಗಂದಿಗಿತಿ (ಶಬ್ದಾನು. ೦೯೨ ಶ್ರಯೋ).

[ ಪಾವಡಿಗ + – ಇತಿ₁ (< – ಇತ್ತಿ) ]

**ಪಾವಡೆ** 'ಪಾವುಡ₁' ನೋ.

**ಪಾವಣೆ₁** 'ಪಾವುಣ' ನೋ.

**ಪಾವಣೆ₂** 'ಪಾವುಣೆ' ನೋ.

**ಪಾವತಿ** (ನಾ). ತಲುಪಬೇಕಾದ ವಸ್ತು, ಹಣ ಮೊದಲಾದುವು ತಲುಪಿದುವೆಂದು ಬರೆದು ಕೊಡುವ ದಾಖಲೆಪತ್ರ : ರಸೀದಿ : ತಾನು ಪೋಲೀಸ ಅಧಿಕಾರಿಯಾದುದರಿಂದ ಪಾವತಿಯನ್ನು ನೀಲಲೋಚನೆಯ ಹೆಸಿನಿಂದಲೇ ಬರೆಯಬೇಕೆಂದು ಹೇಳಿದ (ಪ್ರಣಯ. ೨೫) : ಅನೇಕ ಪಾವತಿಗಳಿಲ್ಲ. ಕೆಲವಂತೂ ಸುಳ್ಳುಪಾವತಿಗಳು ಎನ್ನುವುದು ಸ್ಪಷ್ಟವಿದೆ (ಐಮಾ. ೦೫೦). [ ←ಹಿಂ. ಮರಾ. ಪಾವತೀ ]

**ಪಾವತಿದಾರ** (ನಾ). ಹಣವನ್ನು ಕಟ್ಟಬೇಕಾದವನು, – ಕೊಡಬೇಕಾದವನು : (Drawer. ಪಾರಿಸಿ. ೩೩). [ಪಾವತಿ + – ದಾರ₄]

**ಪಾವತಿಪುಸ್ತಕ** (ನಾ). ರಸೀದಿಗಳನ್ನು ಬರೆಯುವ ಪುಸ್ತಕ ; ರಸೀದಿ ಪುಸ್ತಕ : ಕಿಸೆದಾಗ ಅದ ಅಲ್ಲಾ ಪಾವತಿಪುಸ್ತಕ (ಕಿಡಗು. ೧೨).

[ಪಾವತಿ + ಪುಸ್ತಕ]

**ಪಾವನ** (ಗು). ೧. ಹಸನಂಗೊಳಿಸುವ ; ಪವಿತ್ರಗೊಳಿಸುವ : ಸುರವಕಂ ಸುರವಕ್ತ್ರಪಾವನಸದಾಚಾರಂ . . . ನಂದನಂ ಪುಟ್ಟಿದಂ (ಪುಷ್ಪ. ೦೩-೦೦). ೨. ಪರಿಶುದ್ಧವಾದ ; ಪವಿತ್ರವಾದ : ಪಾವನಕ್ಷೀರಮಂ ಕೊಡುವ ಕೆಚ್ಚಲ ಮಾಂಸವಾವ ಲೇಸು (ಕನಕಾ. ೭-೦೭) ; ವರಧನುಷ್ಕೋಟಿಯಲಿ ಮಿಂದೀಶ್ವರಪದಾಂಬುಜಕೆಱಗಿ . . . ತತ್ತೀರ್ಥ ಸೇವಾಪರಮಪಾವನಕರಣನಾದನು (ಕುಮ್ಮಾ. ೦೯-೦೫) ; ಕಳೇಬರವನರ್ಪಿಸುವೆ ಪಾವನ ಸರಿತ್ಪತಿಯ ವಿಸ್ಮೃತೌದಾರ್ಯಕ್ಕೆ ! (ಚಿತ್ರಾಂಗ. ೬೬-೦೬೯೮). (ನಾ). ೩. ಶುದ್ಧವಾದುದು; ಪವಿತ್ರವಾದುದು: "ಶುಚಿ, ಮೇಧ್ಯಂ, ಪವಿತ್ರಂ, ಪುಣ್ಯಂ, ಪಾವನಂ — ಈ ೫ ಶುದ್ಧವಪ್ಪ ವಸ್ತು" (ಹಲಾಯು. ೨೨-೦೬೨) ; ಶರಣ ನಡೆದುದೆ ಪಾವನ ಕಾಣಿರೊ (ಬಸವ. ೮೬೨) ; ಪ್ರಚುರ ಕಾಳಿಂದೀವನಂ ಪಾವನಂ (ಜಗ. ೩-೬೬). ೪. ಪವಿತ್ರಗೊಳಿಸುವವನು : ದೇವನನಱಿದು ಪೂಜಿಸಿದಾತ ಪಡುದರಂ ಶತಕೃಧಿಕ ಜಗಕ್ಕೆ ಪಾವನ (ಬಸವ. ೬೦೭) : ರಾಜೀವಪೀಠನ ಪಿತನೆ ಜಗಕತಿ ಪಾವನನೆ . . . ಕಾವುದಾನತಜನವ (ಕುಮ್ಮಾ. ೧-೧) ; ಆವ ವರ್ಣದಲು ದಿಸರಲು ಸದ್ಭಾವನನೆ ಪಾವನನು (ಗಗನಾ. ೦೯-೩೮). ೫. ಬೆಂಕಿ ; ಅಗ್ನಿ. ೬. ಶುದ್ಧಗೊಳಿಸುವ ನೀರು, ಗೋಮಯ ಮೊದಲಾದ ವಸ್ತು. ೭. ತಪಸ್ಸು. ೮. [ ಛಂದ ] ಪ್ರತಿಯೊಂದು ಪಾದದಲ್ಲಿ ಮೂರು ಅಕ್ಷರಗಳಿರುವ ಒಂದು ಸಮಪಾದ ವೃತ್ತ : ಪಾವಕೋದ್ಭವದಿಂ ಶ್ರೀವಧೂಪಾವನಂ (ಛಂದೋಂಬು. ೨-೩೮). [ಸಂ.]

**ಪಾವನಗೊಳಿಸು** (ಕ್ರಿ). ಪವಿತ್ರಗೊಳಿಸು ; ಪುನೀತಗೊಳಿಸು : ಬಾದೊರೆಯೆ ! . . . ಕಡೆಗಣಿಸದಿರು ನಾನು ಬಡವನೆಂದು ಜೀವದಾಪೋಷಣೆಯನಿತ್ತಿ ಪಾವನಗೊಳಿಸು (ಬಿಪಾಸಿ. ೪೮-೩).

[ಪಾವನ + ಕೊಳ್₁ + – ಇಸು₂]

**ಪಾವನಚಾರಿತ್ರ** (ನಾ). ಒಳ್ಳೆಯ ಶೀಲ ; ಶುದ್ಧವಾದ ನಡವಳಿಕೆ : ಪಾವನಚಾರಿತ್ರಾಪ್ರಧಸೇವೆಯೆ ದೋಷತ್ರಯಂಗಳಂ ಕಿಡಿಸೆ ತಪೋಭಾವನೆಯೊಳಿಸೆಪನಾಮುಯನಾವನುಮಾ ಮುನಿಯೆ ಪರಮಾರ್ಥಮಾರ್ಗಕ್ಕಾರ್ಗಂ (ಅಜಿಪು. ೬-೬೧). [ ಪಾವನ + ಚಾರಿತ್ರ ]

**ಪಾವನತೆ** (ನಾ). ಪವಿತ್ರತೆ ; ಪಾವಿತ್ರ್ಯ ; ಪರಿಶುದ್ಧಿ : ಪಾವನತೆಗೆ ಬಯಸಿ ಜಗತ್ಪಾವನನಂ ಗಂಗೆ ಪೊರ್ದಿ ಪೊಗಟ್ಟಂದದಿನಿಂದೀವರಪರಿಮಳರತ ಮಧುಪಾವಳಿರವದೆಸೆವುದವಾಳಪರಿಖಾವಳಯಂ (ಪಾರ್ಶ್ವಪು. ೦೬-೩೫) ; ಮುಸುಟ ಚೌಡಾರ್ಯ . . . ನಿಜಪಾವನತೆಯೊಪ್ಪಲು ನೋಡಿ ಶಿವಸಮಯಸ್ಥರಂ ಮಾಡಿ (ಬಸವು. ೩೨-೬೩). [ಸಂ. ಪಾವನತಾ]

**ಪಾವನತ್ವ** (ನಾ). ಪಾವನತೆ ; ಪವಿತ್ರತೆ ; ಪರಿಶುದ್ಧಿ : ನೀವು ಬಿಜಯಂಗೆಯ್ದು ಕರುಣಾಭಾವಗುಣದಿಂ ನೋಡಿ ಮರ್ತ್ಯವನೋದಿ ಮನುಜರನೆಲ್ಲರಂ ನಿಜಭಕ್ತಿಯುಕ್ತಿಯಲಿ ಪಾವನತ್ವವನಿತ್ತು ಪಾಲಿಸಿ ಕಾವುದೆನ್ನಯ ಬಿನ್ನಪವನು (ಬಸವು. ೧-೬೦) ; ಪಾವನತ್ವದಿ ನೋಡೆ ಅಮರಗಂಗಾಜನಕ ದೇವತ್ವದಲಿ ನೋಡೆ ದಿವಿಜರೊಡೆಯು (ಪುರಂದ. ೨-೦೬೪-೨).

[ಸಂ.]

**ಪಾವನಿ** (ನಾ). ೧. ವಾಯುದೇವನ ಮಗ. ೨. ಹನುಮಂತ ; ಆಂಜನೇಯ : ಪಾವನಿ ಜಾಂಬವಾಂಗದ . . . ಸುಗ್ರೀವ ವಿಯಚ್ಚರಪ್ರಮುಖರೇಱಿದ ರತ್ನವಿಮಾನಮಾಲೆ ಶೋಭಾವಹಮಾಗಿ ಸುತ್ತಿ ಬರೆ (ಶಂಠಾಮ. ೧೨-೯೨) ; ಭಾನುಜನೆಂಬುದು ಬೇಟ್ವವಗ್ಗೆ ಪಾವನಿ ಪರನಾರಿಗೆಂಬುದು ಧರಿತ್ರಿ ಸೆಗಟಿತ್ತಿಯ ತಂತ್ರಪಾಟನಾಮಾನಂ (ಎಶ. XII, ಪಾವುಗ. ೪೩-೩೦ ; 1161). ೩. ಭೀಮಸೇನ : ಪಾವನಿಯೊಳ್ ಪೊಣರ್ದಂ ಮಗಧಾವನಿಪಂ ಪೊಣರಲಂಜಿದಂ ನಿನಗೆ (ಜಗ. ೦೬-೩).

[ಸಂ.]

ಹಾವಚಿಗಳೂ ಭುಜದಂಡಗಳೆಂಬ ಸರ್ಪಗಳೂ (ಶೃಪಾಳ. ೧೮೩). **ಹಾವಚಿ :** ೨. ಎಲ್ಲವ ಬಿಟ್ಟು ಹಲ್ಲ ಸುಲಿಯ ಬಂದೆ ಮುನ್ನಿನಲ್ಲಿಯ ಹಾವಚಿ [ಹಾಂ.ಸೆ] ಹಲ್ಲ ಬಿಡದು ನೋಡಾ (ಸಕವ. III, ೬೩–೧೩೦). **ಹಾವಸಿ :** ೧. ಹಳ್ಳ ಹಾವಸಿ ಹಾವು ಹುಲಿ ಕಾಡಾನೆ ಕೋಣಗಳು . . . ಹೆಮ್ಮರಂಗಳು ಪಲ್ಲವಿಸಿ ಜೀರೆಂಬ ಕಾನನದಲ್ಲಿಯುಱಿಸುತ ಬರುತ್ತಲಿರ್ದಳು ಮಾಯೆಯಲ್ಲಮನ (ಶ್ರಶುಂ. ೬–೯೩). **ಹಾವಸೆ :** ೧. "ಜಲನೀಲೀ. ಶೈವಾಲಂ. ಶೈವಲಂ– ಈ ೩ ಹಾವಸೆಯ ಪೆಸರು" (ನಾಶಾ. ೧೧೧) : ಕುಱುಹೆಂಬೆನೆ ಕಲ್ಲಿನಲ್ಲಿ ಹತ್ತಿದ ಹಾವಸೆ (ಅಂಬವ. ೯. ೩೯೩–೫೮) : ಕಳಸದ ತಳಿರ್ : ನೀರ ಹಾವಸೆ (ಕವಿರ. ೧೩೨ ಪ್ರಯೋ) : ಬಲ್ಲವರು ಹಾವಸೆಯ ಕಲ್ಲ ತಾ ಮೆಟ್ಟುವರೆ (ಸರ್ವಜ್ಞ. ೬೯೦). ೨. ನೊರೆವಾಯ ಹಾವಸೆವರಿದ ಪಲ್ಗಳ ಜೋಲ್ದುಟಿಯ ನಸುಮುರುಟುಗಿವಿಗಳ ಹಱಿಕಗಡ್ಡದ . . . ಕುಱುಬನು (ಐಸಕೊ. ೨೦–೧೧); ಮುಸುಳಿಸಿದ್ದ ದುಕೂಲ ರದನದೊಳೆಸೆವ ಹಾವಸೆ (ಕುವ್ಯಾಬ. ೩–೫೭) : ಹಲ್ಲ ಹಾವಸೆಗಳಂ ಮುಳಲಿಕ್ಕುತುದ್ದುದ್ದಿ ಮುಂಡಿಯ ಕಟ್ಟಿ . . . ಸಿಂಗಾರ ವಿದು ತಮಗೆಂದು ರಚಿಸಿದರು ಮುನಿಗಳು (ಚೀಕೃಕೊ. ೩–೧೧–೯೫). ೩. ಹಸುರುಬಣ್ಣ : ಕಮಲಕೇಸಿನ ಸೀರಿ ತುಂಬಿಗಳ ಕುಸುರುಗಳು ಹಾವಸೆಯ ರವಿಕೆ ಗಿಳಿಬಣ್ಣ (ಕನ್ನಜಾ. ೩೭೮). **ಹಾವುಸೆ :** ೧. ಹಾವುಸೆಯ ಅರೆಯನ್ನು ಹಾವಿನಾ ಮರಿಯನ್ನು ಹಾಡುತ್ತ ಬರುವ ಕೊರವೀಯ ಕಂಡರೆ ಹಾದೀಯ ಬಿಟ್ಟು ಮರೆಯಾಗು (ಹಕೃಕ. ೬೩).

[ದೇ.॥ ತಮಿ. ಪಾಚ್ಚಿ. ಪಾಚ : ಮಲ. ಪಾಶಿ. ಪಾಶರ್, ಪಾಯಲ್. ಪಾಯಿ, ಪಾಯಿಲ್ : ತುಳು. ಪಾಚಿ. ಪಾಂಬಚ್ಚಿ, ಪಾಮಜಿ, ಪಾಪುಜು, ಪಾಪಾಚಿ, ಪಾಪಾಜು ; ಕೊಡ. ಪಾಮಂಜಿ ; ತೆಲು. ಪಾಚಿ, ಪಾಸು, ಪ್ರಾಚಿ]

**ಪಾವಸೆಗಲ್**, ಹಾವಸೆಗಲ್ಲು (ನಾ). ಪಾಚಿ ಮೆತ್ತಿಕೊಂಡ ಕಲ್ಲು ; ಹಾವಸೆ ಹಿಡಿದ ಕಲ್ಲು : ಪಾವಸೆಗಲ್ಲಂ ಮೆಟ್ಟಿದಂತೆ ಸನ್ಮಾರ್ಗಮಂ ವಿಱಿ ಪರಿಯದೆ (ಧರ್ಮಾಮೃ. ೧೧–೧೧೯). **ಹಾವಸೆಗಲ್ಲು :** ಹಾವಸೆಗಲ್ಲ ಮೆಟ್ಟಿ ಹರಿದು ಗೊತ್ತ ಮುಟ್ಟಬಾರದಯ್ಯಾ ನುಡಿದಂತೆ ನಡೆಯಲು ಬಾರದಯ್ಯಾ (ಬಸವ. ೨೦೦) : ತನಗರಿಯದಂತೆಯೇ ಹಾವಸೆಗಲ್ಲಿನ ಮೇಲೆ ನಡೆದು ಅನಾಮತ್ತಾಗಿ ಅಂಗಾತನಾದ (ದೀಕಪ. II, ೩೯).

[ಪಾವಸೆ + ಕಲ್₃]

**ಪಾವಸೆಗಿಱು** (ಕ್ರಿ). ಪಾಚಿಯೆಂದು ಭ್ರಮಿಸು : ಒಳಗಱಿಯದೆ ಪಚ್ಚೆಯ ಸಿಲೆಗಳನಂಚೆಯ ಪಿಂಡು ಕಂಡು ಪಾವಸೆಗೆತ್ತಪ್ಪಳಿಸಿ ಕದರ್ಕುತ್ತುಮೇಂ ತಳಮಳಗಪ್ಪುವೊ (ಶಾಂತಿಕೊ. ೨–೯೮) : ನವಕರ್ಣಪೂರದೊಂದಲೆದ ಶಿರೀಷ ಮಂಜರಿಯನೀಕ್ಷಿಸಿ ಪಾವಸೆಗೆತ್ತು ತೃಷ್ಣೆಯಿಂ ಬಲವರುಶಿರ್ದುದಂಗನೆ ಯನುನ್ಮುಖಬಾಲಮರಾಳಮಂಡಳಂ (ಕಾದಂಆ. ೧೬೯).

[ಪಾವಸೆ + ಗಿಱು]

**ಪಾವಸೆಗೊಳ್** (ಕ್ರಿ). ಪಾಚಿಗಟ್ಟು : ಹಾವಸೆ ಹಿಡಿ : ಪ್ರೌದಬ್ದಿ ಕಣ್ಬನಿಯ ಬಾಸಲ ತಣ್ಣಸದೊಳ್ ಪಗಲ್ತು ಪಾವಸೆಗೊಳೆ ಕಾರ ತಂದಲೊಳಗುಂದಲೆ ಯಾಗಿರೆ ನಟ್ಟು ಸೋರ್ವ ಪಾಚ್ಚಸದಿಯ ಪೆಣ್ಣ ಜೋಹದಪೊಲೊಪ್ಪಿದ ಳೊರ್ವಳನಂಗರಾಗದಿಂ (ಶಾಂತಿಕೊ. ೮–೮೯) : ಪಸರಿಸಿದ ಬಯಲ್ಮಡು ಪಾವಸೆ ಗೊಂಡಿರೆ ಗಡಣದಾಡುವೆಳಮೆಂಡಿರ್ ನುಣ್ಬಸಲೆಯೆಗೆತ್ತೆಯ್ವರೆ (ಲೀಲಾವ. ೫–೯೭). ಮೇಗೆ ನೆಗೆದಿಸುವ ಪಾವಸೆಗೊಂಡ ಪೇರಾಮೆಯಂ ತಾವರೆಯ ಕೊಡೆಯೆಲೆಗೆತ್ತಱಿಯದೆಱಿಗಿದೊಡದು ತೆಱಂಬೊಳೆಯೆ ಬೆಚ್ಚಿ ಬಿಚ್ಚತು ಬಾಱಿ ಕಳವಳಿಪ ವಿಕಳಕುರವಕನಿಕರಂಗಳೊಳಂ (ಚಂದ್ರಕೊ. ೫–೯೦ ವ).

[ಪಾವಸೆ + ಕೊಳ್₁]

**ಪಾವಸೆವಲ್**, ಹಾವಸೆಹಲ್ಲು (ನಾ). ಕೀಟುಗಟ್ಟಿದ ಹಲ್ಲು; ಕೊಳೆಗಟ್ಟಿದ ಹಲ್ಲು : ಮುರುಂಟಿದ ಕರ್ಣಮುರ್ವಿ ಕೆಕ್ಕರಿಸಿದ ಕಣ್ಣುಱಿಟುದಲೆ ಪಾವಸೆವಲ್ಮಿಗೆ ಗಂಟುಮೊರ್ಬುಗಳ್ (ವೃಕಾ. ೧೧–೬೦). **ಹಾವಸೆಹಲ್ಲು :** ಮುಱಿದ ಹಾವಸೆಹಲ್ಲ ಹಱುವಾಯ ತುಱುಚಿಗಳು ಬತ್ತಲೆಯ ಬಾಳ್ಗಣಂಗಳು ಸುತ್ತ ಮುತ್ತಿರಲು (ಐಗೀರ. ದೇ. ೨೫೯-೨೭). [ಪಾವಸೆ + ಪಲ್]

**ಪಾವಡೆ** 'ಪಾವುಡ₁' ನೋ.

**ಪಾವಾಣೆ** (ನಾ). ಕಾಲುಆಣೆ ಬೆಲೆಯ ತಾಮ್ರದ ಒಂದು ನಾಣ್ಯ ; ಮೂರು ಕಾಸಿನ ಬಿಲ್ಲೆ; ಕಾಲಾಣೆ: ಇಬ್ಬರಿಗೆ ಎರಡೆರಡಾಣೆಯಂತೆ ಲೆಕ್ಕ ಮಾಡಿ, ಹದಿನಾರು ಪಾವಾಣೆಗಳನ್ನು ಎಣಿಸಿಯೂ ಕೊಟ್ಟರು (ಸ್ವಕೃಹೊ. ೬೯); ಏನಿದ್ದರೂ ಪಾವಾಣೆ. ಆಣೆ ವ್ಯಾಪಾರ. ಅಷ್ಟರಲ್ಲೆ ತೃಪ್ತಿ ಅವರಿಗೆ (ದೇವಹಂ. ೬೦). [ಪಾವು₂ + ಆಣೆ₅]

**ಪಾವಿ** (ಗು). ಹೆಜ್ಜೆಗೆ ಸಂಬಂಧಿಸಿದ : ಕಾಲಮಾನದ ಹಾಗೆ ತಾಲಮಾನವ ಪಲ್ಲಟಿಸುತ್ತ ಹೆಜ್ಜೆಯ ಹಾಕುವೊಲು ಪಾವಿ ಪದ್ಧತಿಯಲ್ಲಿ ಪದ ಕೂಡಿ ಬರುವಾಗ ಯಾರಾರೆ ಗುರು–ಲಘು ಎಣಿಸುವರೆ ? (ಸಂಗೀ. ೨೫–೯೩೭). 'ಪಾವು₂' ಪರಾ. [← ಹಿಂ. ಪಾಂವ್]

**ಪಾವಿಟ್ಟಗೆ** (ನಾ). ಒಂದು ಊರಿನ ಹೆಸರು ; ☞ ಬಿಜಾಪುರಜಿಲ್ಲೆಯ ಇಂಡಿ ತಾಲ್ಲೂಕಿನಲ್ಲಿ ಇರುವ ಈಗಿನ ಸಾಲೋಟಗಿ ಎಂಬ ಊರು : ಪಾವಿಟ್ಟಗೆ ಇತಿ ಖ್ಯಾತನಾಮ ಗ್ರಾಮೇ (ಎಇ. IV, ೬೦–೧೯ ; 945) ; ಈ ಊರಿನ ನಿಜವಾದ ಹೆಸರು 'ಪಾವಿಟ್ಟಗೆ'. ಅಲ್ಲಿಯ ಶಾಲೆಯಿಂದಾಗಿ ಅದರ ಹೆಸರು 'ಶಾಲಾಪಾವಿಟ್ಟಗೆ' ಯಾಗಿ, ಇದೇ ಮುಂದೆ 'ಸಾಲೊಟಗಿ' ಎಂದಾಯಿತು (ಕಶಾಅ. ೨೦೯ ಅಡಿಟಿ). [ ? ]

**ಪಾವಿತ್ರ್ಯ** (ನಾ). ಶುದ್ಧತೆ ; ಪವಿತ್ರತೆ ; ಶುಚಿತ್ವ : ಸದ್ದಿರದೆ ತುಟಿ ಬೆರಳಿನೊಳು ಸುಳಿವ ಮಾರುತದ ಪಾವಿತ್ರ್ಯದೊಸಗೆಯನು ಕಳೆದು ಬಱ ನೆಲದ ನೆನೆದೊಡನೆ ನೆರೆಗೊಳುವ ನೇತ್ರಾಂಬುತೀರ್ಥಗಳ . . . ಸಂಘಟಿಸಿ ತಪ್ಪಥಾಭಿನ್ನವಾದೀಶ್ವರಪ್ರಕೃತಿರೂಪಂ (ಮಲೆಮ. ೩೯–೯) ; ವೃತ್ತಿಯ ಪಾವಿತ್ರ್ಯದಿಂದ ದೊಡ್ಡ ಹೆಸರು ಬಂದಿತ್ತು (ಕಂಬಹು. ೯೦). [ಸಂ.]

**ಪಾವು₁**, ಹಾವು (ನಾ). ೧. ನೆಲದ ಮೇಲೆ ಸರಿದುಕೊಂಡು ಹೋಗುವ ಪ್ರಾಣಿ ; ಸರೀಸೃಪವರ್ಗಕ್ಕೆ ಸೇರಿದ ಒಂದು ಜಂತು ; ಸರ್ಪ : ದಕ್ಷಿಣಭಾಗದಾ ಮದುರೆ ಉಯ್ಮನಿತಾವ × × ಶಾಪದೆ ಪಾವು ಮುಟ್ಟಿದೊನ್ . . . ನೋನ್ತು ಭಕ್ತಿಯಿಮ್ ಅಕ್ಷಿಮಣಕ್ಕೆ ರಮ್ಯಸುರಲೋಕ ಸುಕಕ್ಕೆ ಭಾಗಿ ಆ × × (ಎಕ. II, ೨೦–೧ ; ಸಂ. 700) ; ಈಶ್ವರನಂತೆ ಪಾವಂ ತೊಟ್ಟಿರ್ದ ಬೇತಾಳರಿಂ . . . ಅತಿಭಯಂಕರಾಕಾರಮಪ್ಪುದು (ಕಾವ್ಯಾ. ೫೨೯ ಶೂದ್ರಕ) ; ತಗುಳ್ದು ಪಾಲನೆಱಿವಿರ್ ಪಾವಿಂಗೆ ದಾಯಾದ್ಯರಂ ಪಿರಿಯ ಮರ್ಾಡಿದಿರ್ (ಶುಕಭಾ. ೨–೮೯). ೨. ರಾಹು : ನೆರೆಯ ಬೆಳ್ದಿಂಗಳನು ಪಾವು ಗಿಡಿದಂತೆ . . . ಎತ್ತಣಿಂದೆರಗಿತೋ ಮೃತ್ಯು ! (ಹೂಂಗಳು. ೨೭–೯). **ಹಾವು:** ೧. ಗರುಡನಂತೆ ಹಾವಿನ ಹಟವಿಗೆಯನಾರಯ್ದು ನೋಡಿಯುಂ (ಗರಾಯು. ೬–೨೮ ವ) ; ಹಾವಿನ ಬಾಯ ಹಲ್ಲ ಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯ (ಮಹಾದೇ. ಬ. ೬೯–೧೫೬) ; ಬೇವು ಬೆಲ್ಲದೊಳಿಡಲೇನು ಫಲ ಹಾವಿಗೆ ಹಾಲೆಱಿದೇನು ಫಲ (ಪುರಂದ. ೧–೬೦ ಪಲ್ಲವಿ); ಎಲೆ ಹಾವೆ ! ಹೊಟ್ಟೆ ಹೊಸೆಯುವ ಜಂತು ! ನಿನಗೆ ಕಿವಿಯಿಲ್ಲ ; ನಾಲಗೆಯೆರಡು ; ಹಲ್ಲೊಳಿದೆ ವಿಷವು (ಉಮ್ಮೂರ. ೩೨–೯). ೩. ಒಂದು ಬಗೆಯ ವಿಮಾನು ; ಹಾವುವಿಮಾನು : ಬಂಗಡೆ ಹಾವು . . . ಹಂದೆಗನಾನೆಮೊಗ ನೆಂಬ ಪರಿಪರಿಯ ವಿಮಾನ್ಗಳಂ ಗುದಿಗೆಯ್ದರು (ಹಕಶಾ. ೫–೯೫).

[ದೇ.॥ ತಮಿ. ಪಾಮ್ಬು; ಮಲ. ಪಾಮ್ಬು; ತುಳು. ಹಾವು ; ಕೊಡ. ಪಾಂಬ್; ತೆಲು. ಪಾಮು ; ಕೋಲಾ. ಸಾಯ್ಕು. ಪಾವ್ ; ಪರ್ಜಿ. ಬಾವ್; ಗಡಬ. ಬಾವ್, ಬಾಮು / ಪ್ರಾ. ಪಾವ]

**ಪಾವು₂** (ನಾ). ೧. ನಾಲ್ಕನೆಯ ಒಂದು ಭಾಗ ; ಕಾಲುಭಾಗ ; ಚತುರ್ಥಾಂಶ : ಪಾವು ಗುಂಜಿ ತೂಕ (ಮುಂಬಯಿ. ೬. ೯–೧೯೯).

'ಪಾವುಸೇರು' ಪರಾ. ೨. ಕಾಲುಸೇರಿನ ಅಳತೆ ಮತ್ತು ಅದನ್ನು ಅಳೆಯುವ ಸಾಧನ : ಮುಂಡೆ ಸವಾಸೇರು ಮೂವತ್ತೆರಡು ಚತುಃಷಷ್ಟಿ ಯರ್ಧ ಸೇರರ್ಧಪಾವು ಸಂಧಿಸಿದ ಸೇರು ನಾಲ್ವತ್ತು ಗದ್ಯಾಣವಂ ಬಾದಿಪದು (ಲಾಸ್ಕರ. ೬೩-೯) : ತೊವೆಗೆ ಹೆಸರು ಜನ ೧ಕ್ಕೆ ಪಾವಿನಲ್ಲು ಕಾಲ ೧ಕ್ಕೆ ವ ೪೦॥ ಗ ಗ ಳ ತುಪ್ಪ ದಿನ ೧ಕ್ಕೆ ಜನ ೧ಕ್ಕೆ ಪಾವು ಅರೆ (ಎಕ. VI ಶೃಂಗೇರಿ. ೧೧- ಶಿಲೆ ೩೬೨ : 1652) : ಪಡಿಯಲ್ಲೇ ಹಿಡಿತ ಹಿಡಿಯುದವನು ಪಾವಲ್ಲಿ ಓಡಿಯೋ ಪಾಪವುಟೀ (ಹುಟ್ಟಿಹ. ೦೯೨). ೩. ಪಾದ : ಕಾಲು : 'ಪಾವುಗೊಂಡು' ಪರಾ.

[< ಪ್ರಾ. ಪಾಅ / ಹಿಂ. ಮರಾ. ಪಾವ್ / ಸಂ. ಪಾದ]

**ಪಾವುಂಜೆ.** ಪಾವುಜ (ನಾ). ಒಂದು ಬಗೆಯ ವಾದ್ಯ : ಜಂಚೆಯ ಚಿನುಚಂಪೆ ಕುಕ್ಕುರು ತುಡುವು ಪಾವುಂಜೆ[ಜೆ] ಕಿಂಕಿಣಿಗಳನೆತ್ತಿ ಜಂಡೆಕು ಕಕದಿಕ ತೋ ದಿಗಿದಿವಿಕೇರು ರಂಜನೆ ಮಿಗೆ ಕೇಳಿಸಿದರು (ಶರತ. ೦೩-೦೬) : ಕುಕ್ಕುರು ಡುಮುಡುವು ಪಾವುಂಜೆಯ ಜೇನು ಡಕ್ಕೆ ನಾಟ್ಯಾನಕ ಚಂಪ (ಶ್ರೀನತ. ೪೦-೦೦೩). **ಪಾವುಜ :** ತಾಳ ಮದ್ದಳೆ ಪಾವುಜ ಶ್ರುತಿ ಮುಖ ವೀಣೆ ಸಾರಂಗ ಶುದ್ಧಗಾನೆಯರ . . . ಮನೆಗಳೊಪ್ಪಿದುವು (ನೋಂಕಹ. ೩-೩೦). [ ?. / ಪ್ರಾ. ಪಾವಯ ]

**ಪಾವುಕೊರಡು** 'ಪಾವುಗೊಂಡು' ನೋ.

**ಪಾವುಗಿಜು** (ಕ್ರಿ). ಹಾವೆಂದು ಭ್ರಮಿಸು : ಹಾವೆಂದು ಎಣಿಸು : ಧೂಪಧೂಮಯಷ್ಟಿಗೆ ನವಿಲೊಸೆದೆಜಿಗುವುದು ಪಾವ[ಪಾಠಾಂ. ಪಿ.ವೆ]ಗೆತ್ತಾ ಪುರದೊಳ್ (ಅಜಿಪು. ೨-೦೯). [ಪಾವು+ಗಿಜು]

**ಪಾವುಗುಲಿ** (ನಾ). ಹಾವನ್ನು ಕೊಲ್ಲುವಂತಹುದು : ನವಿಲು. ಮುಂಗುಸಿ ಮುಂತಾದುವು : ಪಾವುಗುಲಿ ನಕುಲೋ ಮಯೂರೋ ವಾ(ಶಬ್ದಾನು. ೫೫೭ ವ್ಯಾಖ್ಯ). [ಪಾವು₁ + -ಕುಲಿ₁]

**ಪಾವುಗೆ.** ಹಾವಿಗೆ. ಹಾವುಗೆ₁ (ನಾ). (ಮರ. ಚರ್ಮ ಇತ್ಯಾದಿಗಳಿಂದ ಮಾಡಿದ) ಮೆಟ್ಟು : ಪಾದುಕೆ ; ಪಾದರಕ್ಷೆ : P ಸಾಮಾನ್ಯವಾಗಿ ವಿರಕ್ತರು ಧರಿಸುವ ಪಾದುಕೆಗೆ ಈ ಹೆಸರನ್ನು ಹೇಳುತ್ತಾರೆ : ವಿಷಮೋಚಕಗಳೆಂಬ ಪಾವುಗೆಗಳುಮಭೇದ್ಯಮೆಂಬ ಕವಚಮುಂ . . . ಪದಿವೆನ್ನಾಸಿರ ಮ್ಲೇಚ್ಛರಾಜರುಮಾತ್ಮೀಯಸಾಮ್ರಾಜ್ಯಪರಿಚ್ಛೇದವಾಗೆ (ಆದಿಪು ೧೩-೩ ವ). ಅನಂಗಟಂಕೃತಿಸ್ವರವೆನೆ ಪೊಣ್ಮೆ ಪಾವುಗೆಯ ಗೆಜ್ಜೆಯ ಮೆಲ್ಲುಲಿ ಬಂದಳಂದಳಂಕರಣಗ್ರಹಕ್ಕೆ . . . ದೇವಿ ಲೀಲೆಯಿಂ (ತಂತ್ರಪ. ೦೨-೬) : ನೆತ್ತರ ತಳ್ಪ ಬಲ್ಲುಲಿಯ ಬಂದಿಗೆ ಪಾವುಗೆ ಪಂಚವರ್ಣ್ನನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕ ಬತ್ತಲೆ ಜರ್ಪಗೊಪ್ಪಿದಳ್ (ಕಾವ್ಯಸಾ. ೫೩೩). **ಹಾವಿಗೆ :** ಎನ್ನ ನಾಲಗೆಯ ನಿಮ್ಮಯ ಮನ್ನಣೆಯ ಮಹಾನು ಭಾವಿಗಳ ಚರಣಕ್ಕಂ ಹೊನ್ನಹಾವಿಗೆಯ ಮಾಡಲಿ ಎನ್ನಗರಟಕಾ (ಶಂಕರಾಂ. ೩); ಎನ್ನ ಮನ ಪ್ರಾಣಗಳು ಹೊನ್ನ ಹಾವಿಗೆಯಾಗಿ ನಿನ್ನ ಚರಣಕೆ ಯೋಗ್ಯ ಮೆಟ್ಟಾಗಲಿ (ಮುಕಾರ. ೦೦-೩) : ಹಿತವಾಗಿ ಬಂದ ಭರತಗೆ ಹಾವಿಗೆ ಕೊಟ್ಟು ವ್ರತವ ಧರಿಸಿದ ಉನ್ನತಮಹಿಮಾ (ಬಕ್ಕಿಸು. ೬-೩). **ಹಾವುಗೆ₁ :** "ಪಾದುಕಾ. ಅನುಪದೀನಾ ... ಈ ೨ ಹಾವುಗೆ" (ಕರಣಾದು. ೫೨-೦೫೬) : ಹೊನ್ನ ಹಾವುಗೆಯ ಮೆಟ್ಟಿದವನ ಪಿಡಿ ಮುಟ್ಟಿದ ಕೆಂಜೆಡೆಯವನ . . . ಕೂಡಲಸಂಗಯ್ಯನೆಂಬವನ (ಬಸವ. ೫೦೩) : ಕೆಲದೊಳಿಕ್ಕಿದ ಹವಳದ ಹಾವುಗೆಯುಂ ಮೆಟ್ಟಿ ನಿಲುವುದುಂ (ಶಬರಶ. ೧೧-೪೪ ವ) : ಹಾವುಗೆಯ ಹೀಗಾರಿಯಾ . . . ಕನ್ನಡಿಯ ವಿವಿಧ ಸಮಿಪಿಳಾಸಿಯರ ಕದಂಬಕವೈದಿ ತೊಗ್ಗಿನಲಿ (ಕೂಷ್ಮಾಅ. ೦೩-೪೩). [< ಪ್ರಾ. ಪಾಉಆ. ಸಂ. ಪಾದುಕಾ]

**ಪಾವುಗೊಂಡು.** ಪಾವುಕೊರಡು (ನಾ). ಮರದ ಪಾದುಕೆ: ಕಡಾವಿಗೆ : ಶ್ರೀವಿಭಲಿಂಗಸ್ನಾನವ ಮಾಡಿ ಪಾವುಗೊಂಡ ಮೆಟ್ಟಿ ಪಾವಡವಾಗಲಿ ಪರ್ಣಾಸನವಾಗಲಿ ವರ್ಭೆ ಬೆತ್ತ ಮೊದಲಾದಾಸನದಲ್ಲಿ ಪಾರಂಹವ ಮಾಡಿ (ಚನ್ನಸ. ೪. ೩೩-೦೬೬). **ಪಾವುಕೊರಡು :** ಒಂದೇ ಮರದ ತುಂಡನ್ನು ಕೆತ್ತಿ ಮಾಡಿದ ಪಾದರಕ್ಷೆ : ಮರದ ಅರೆಜೋಡು ; ಪಾವುಕೊರಡು (ನಿಘಂಟು. ಇಂಕರಿ). [ಪಾವು₁ + ಕೊಂಡು (< ಕೊಂಡು)]

**ಪಾವುಜ** 'ಪಾವುಂಜೆ' ನೋ.

**ಪಾವುಡ₁.** ಪವಡೆ, ಪವಾಡ₂, ಪಾಗುಡ₁, ಪಾವಡ₁, ಪಾವಡೆ, ಪಾವಾಡೆ, ಪಾವುಡೆ₁, ಪಾಹುಡ₁ (ನಾ). ೧. ಬಟ್ಟೆ ; ವಸ್ತ್ರ : ಕಾ ಗಾಂಧಾರಿ ವಲ್ಲಭನಿಳೆಯೊಳಾರುವ ಕಾಣನೆಂಬುದನಳುಕಿ ಕಂಡಳು ತನ್ನ ಕಣ್ಣಿಗೆಪಾವುಡವ ಕಟ್ಟಿ ನಳಿನಮುಖಿ ತನ್ನಾತ್ಮಧರ್ಮದ ಕಳೆಯ ಕೆಡಿಸದೆ ನಡೆವುತಿಪ್ಪಳು (ಕಂಠಿಕ. ೦೯-೨೪); ವರಚಂದ್ರಿಕೆಯ ಪಾವುಡಕೆ ಶೋಭಿಸುವ ಪೊಂಬರಹದ ತುಳು ದೂಮಟವ ಸ್ಮರಬಾಣಗಳಿಯಂತೆ ನಿಜವಿಡಿದುಡಿಸಿದರ್ ದರಹಾಸ ಮುಖಿಗೆ ಸಂಭ್ರಮದೆ (ಸೋಹಕ. ೨೩-೦೩); ಪಾವುಡ ಕುಂಚ ಕಾಳಂಜಿ ಕನ್ನಡಿ ನೆಟ್ ಹೂವಿನ ಬೀಸಣಿಗೆಗಳ ಭಾವಕಿಯರು ಪಿಡಿದಾಕ್ಷಣ ಶ್ರೀರಂಗದೇವನ ನೋಲೈಸುತಿಹರು (ಕಂಸಪ. ೩-೦೦೫) : ಮಹಾರಾಜರು ಕುಳಿತುಕೊಳ್ಳುವ ಉಚ್ಚಾಸನದ ಪಾವಟಿಗೆಯಿಂದ ಮೊದಲು ಮಾಡಿ ಓಲಗಸಾಲೆಯ ಮುಂಬಾಗಿಲವರೆಗೂ ದಾರಿಯನ್ನು ಗುರುತಿಸುವಂತೆ ಹಾಕಿದ್ದ ಕೆಂಪು ಮಖಮಲ್ಲಿನ ಪಾವುಡ (ರಾಜಯೋ. ೩೬). ೨. ತಲೆಗೆ ಸುತ್ತುವ ವಸ್ತ್ರ; ಪಟಗಾ : ರುಮಾಲು : ಪೇಟ : ತಿಳಿಗಾವಿಯಂಗಿಯಿಂ ಶಾಟ ಪಾವುಡ ಗಳಿಂ . . . ರಾಜಿಸಿ ಪೋಪ ಚೆಲುವ ಹರೆಯದ ಸತ್ಕಶೋಧಕನ ವೇಷಮಂ ನೆಲದೊಳೀಕ್ಷಿಪರ ಕಂಗಳ್ತಣಿಯವೇ (ಕುಮಾಪು. ೪-೨೦) : ಈ ಪಾವುಡ ಹರಿದುಬಿಟ್ಟಿದೆ. ಎಂದು ಪಾವುಡವನ್ನು ತೋರಿಸಿದನು (ಐಯುಂಕ.೮೬). **ಪವಡೆ :** ೧. ಇವನೆಲ್ಲಾ ಸಮಾನಂ ಕೊಂಡು ಪುಡಿಮಾಡಿ . . . ಕಂಚಿನ ಹರಿವಾಣದಲ್ಲಿ ಹಾಕಿ ತಾಮ್ರದ ಚೊಂಬಿನಿಂದ ಮರ್ದಿಸಿ ಆಮೇಲೆ ಸಣ್ಣಾ ಪವಡೆಗೆ ಹಾಕಿ (ಕೌತುಕಂ. ೩೯-೬). **ಪವಾಡ₂ :** ೧. ಜೋಡಿಸಿದ ಜಾಂಬೂನವದ ಪರಿಪಾಡುಗಳ ಪಲ್ಲವದ ಫಳಿಯ ಪವಾಡಗಳ ಕೇತನ ನಿಕೇತನವೆಸೆವವಲ್ಲಲ್ಲಿ (ಕೊರಡು. ೫-೨-೨೫). **ಪಾಗುಡ₁ :** ೨. "ಮುಂಡಾಸ. ರುಮಾಲ. ಪಾಗು. ಪಾಗುಡ (ಪಾವುಡ). ಪಾಗೋಟೆ. ಪಗಡಿ" (ಕಂಪತು. ೯೦). **ಪಾವಡ₁ :** ೧. ಶಿವನ ಗ್ರಹಣೆಯುಂ ಶೋಧಿಸುವುದಿಲ್ಲವೂ ಪಾವಡವ[ಪಾಠಾಂ. ಡೆಯ]ನಿಕ್ಕಿ (ಬಸಪು. ೪೬-೦೫) : ಕುಂಭಪೊಡೆವಡೆ ಮೇಲುಮುಸುಕಿರ್ದ ಪಾವಡದಿ ಅಂಬು ಗಟ್ಟಿಯುಮಾಗಿ ನೆಲಕೆ ಬೀಳದೆ ಇರಲು ಕುಂಭಿನೀಶಗೆ ಪೇಳಲು (ಶ್ರೀರಾ. ೦೦-೩೬); ಪೊಳೆವ ದುಗುಲದ ಪಾವಡವನೆಡಬಲದೆ ಪಿಡಿದರು (ಶಾಪೇಮು. ೬೫-೦೦). ೨. ಬೋಳುಮುಂಡೆಯು ಬೊಡದೆ ಪುಸ್ತಕ ತೋಳ ನಲ್ಲಾಧಾರ ಕಾವಿಯ ಹೋಳು ಪಾವಡವದ್ದಾಡಿಯ ಅಧಿಕ ಮಟ್ಟಲದ ಭಾಳಲೋಚನ ಬ್ರಹ್ಮರೆಂಬೊಲು . . . ಸುವಿರಕ್ತಮೂರ್ತಿಗಳೊದಗಿ ತಮ ಲಕ್ಷ (ಶರಂ. ೫೯೩-೩); ನೀರಲ್ಲಿ ನಿಂತಿರುವ ನೀಲಿಪಾವಡದಣ್ಣ ನೀರು ಕೆಟ್ಟಾವು ಬದಿಗಾಗೊ (ಹೆಜಾ. ೯೯). ೩. ಹೆಂಗಸರ ಒಳ ವಸ್ತ್ರ; ಒಳಲಂಗ : (೧). ೪. (?) : ತಾನು ಜಂಗಮಾರ್ಚನೆಯ ಮಾಡುತ ಮಾನಿಸಿಗೆ ಮೆಚ್ಚಿದೆಯೆನುತಲಿ ಆಸ್ಥಾನಕೆ ನಡೆವಾಗ ಪಾವಡವ ಮಾಡುತಲಿ (ಸಂಬಂ. ೪ ಸೂಕಸ). **ಪಾವಡೆ :** ೧. ಭಾಜನದ ಕಂಠಕ್ಕೆ ಪಾವಡೆಯ ಬಣ್ಣಿಸಲಾಗಿ ವ್ರತಕ್ಕೆ ಬೀಜ ಮೊದಲಾಯಿತ್ತು (ಸರ್ವವ. ೧೮೮-೬೭೫); ಭಾವಿಪುದಜಪಿತ್ರದೊಳಂ ಪಾವಡೆ[ಪಾಠಾಂ. ಟ] ಯೊಳ್ ಕಟ್ಟಿ ಪೊಗೆಯೊಳಿಟ್ಟುದನಿಂಬಿಂ ಪಾವಡದರ್ಮ ಪಿಡಿಯೆ ದುಯ್ಯಾಟ್ ಪಾವಂಗಂ ಮಾಟ್ಟಿದೊಂದು ಚೋದ್ಯಮುಂ (ಜಮರು. ೯-೫೩); ಮಡಿಕೆ ತುಂಬಿ ಪಾವಡೆಯ ಕಟ್ಟುವರಲ್ಲದೆ ಸರ್ವಾಂಗವ ಸದಾಚಾರದ ಪಾವಡದಲ್ಲಿ ಕಟ್ಟುವರನಾರನೂ ಕಾಣೆನಯ್ಯ (ಸಿದ್ಧೇವ. ೧೦೦-೩೦೭); ಬಟ್ಟೆಗಳಸಿಗೆಗೆ ಸೀರ್ಮೆಯಿಂದು ಪಾವಡೆಯುಮಂ ಕಟ್ಟಿ . . . ಬೇಯಿಸಲು ಸೀರ್ಮತ್ತಿಗೆಯ

ಪೆಸರನಾಂತು ಸುಖತರವಾಗಿರ್ಪುದು (ಸೂಕ್ತಿಸು. ೧-೦೯). ೨. ಕರದೊಳಗಣಾ ಕಡುಗತ್ತಿ ಕಂಬಳಿಯನು ಹರುಷದಿಂ ಹೊದ್ದು ಪಾವಡೆಯ ಶಿರದೊಳು ಕಟ್ಟಿದ ಹುಳಿಗಾಜನು ಭಸ್ಮನೆರಪಿಯ ನೋಡುತಲಿರ್ದ (ಜೀವಂಧರ. ೨ ೦೩). ೩. ನಡೆಮಡಿ: ಹಡದಿ: ವಸುಂಧರಾವಳಯಪಾವನಸುಚರಿತ್ರಂಗೆ ಪಾವಡೆಯಂ ಹಾಸಲುಂ . . . ಆತ್ಮೀಯಪರಿಜನಮಂ ಪೆಸರ್ವೆಸರೊಳ್ ಕರೆದು ನೆರಪಿಸಿ ಬೆಸಸಿದಾಗಳ್ (ವರ್ಧಮಾ. ೧೧-೫೨ ವ); ಮುಸುಂಬಿಯ ಹಡಪ ಚಾಮರ ಕುಂಚ ಕಾಳಾಂಜಿ ಪೊಸಪಟ್ಟೆಯ ಪಾವಡೆಯ ಜಸದಟ್ಟೊಳಿಗದವರ ಮೇಳದೊಳಾಗ ವಸುಧೇಶ ಸಾರಿಗೈದಿದನು (ಕಂಸವ. ೨೨ ೮೮).
**ಪಾವಾಡೆ:** ೧. ಪೂಜೆಯ ಮಾಡಿ ಪೂರ್ವೆ ಪಾವಾಡೆ ಮೇಲೆ ತಟ್ಟೆ ಕಾವ ತುಪ್ಪದಲ್ಲಿ ಹಾಕಿ . . . ಕೆಂಪಾಯಿತೆಂದಡೆ ತೆಗೆದುಕೊಂಬುದು (ಸೂಪಶಾ. ೧೩). ೨. ಲಂಗ: ಪರಕಾರ: ಹಿಂದೆ ಸಿಲ್ಕು ಪಾವಾಡೆ ಸಿಲ್ಕು ಜಾಕೆಟ್ಟು ಪೊಸಲಾದ ಥಳಕು ಬಳಕುಗಳಿಂದ ಹಾರಾಡುತ್ತಿದ್ದವಳು ಈಗ ಅದೆಷ್ಟು ಸ್ಥಿರಮೂರ್ತಿಯಾಗಿ ಶೋಭಿಸುತ್ತಿದ್ದಾಳೆ ! (ಬಿ. ೩೯).
**ಪಾವುಡೆ$_1$:** ೧. ಚರಣಾರವಿಂದದ ಪಡಿಗಡೆ ತೊಳೆದು ಗಂಧ ಕಸ್ತೂರಿಯಿಂದೆ ತಿಗುರಿಕ್ಕಿ ಪಾವುಡೆಯಿಂದೊರಸಿದರು ಸೌಖ್ಯದಲಿ (ಮೋಹತ. ೨೬ ೩); ಕುಡಿಕೆಯಿಂದ ಪಾವಲಿ ತೆಗೆದು ಅರಿಸಿನದ ಪಾವುಡೆಯಲ್ಲಿ ಕಟ್ಟಿಟ್ಟಳು (ಸರ್ವಮಂ. ೧೨೮). ೨. "(ಹೆಂಗಸಿನ) ಲಂಗ, ಪಾವುಡೆ" (skirt. ಇಂಕಿ): ನಿರಿಗೆ ಹಿಡಿದ ಪಾವುಡೆಯನ್ನುಟ್ಟ . . . ಹೆಂಗಸರಿಬ್ಬರು ನೆಲವನ್ನುಜ್ಜಿ ತೊಳೆಯುತ್ತಿದ್ದು ಪಕ್ಕದ ಬಾಗಿಲಿಂದ ಹೊರಗೆ ಬಂದರು (ಪ್ರಸರು. ೩೪). **ಪಾಹುಡ$_1$:** ೧. ಮಂಟಪದಲ್ಲಿ ಇಡಬೇಕಾದ ಜಿನಾಗಮಕ್ಕೆ ಹೊಸ ಪಾಹುಡವನ್ನು ಕಟ್ಟಿ ಸಿದ್ಧಗೊಳಿಸುವುದು (ಶ್ರೀಯೋಗ. ೨೩).
[< ಪ್ರಾ. ಪಾಹುಡ./ಸಂ. ಪ್ರಾವೃತ]

**ಪಾವುಡ$_2$**, ಪಾಗುಡ$_2$. ಪಾವಡ$_2$, ಪಾವುಡೆ$_2$. ಪಾಹುಡ$_2$ (ನಾ). ೧. ಉಡುಗೊರೆ ; ಉಪಾಯನ : ಗೌರವಸೂಚಕವಾಗಿ ಕೊಡುವ ಕಾಣಿಕೆ : "ಪಾವುಡಮುಪಾಯನಮುಪಗ್ರಾಹ್ಯಮುಪದಾ ಪ್ರಾಭೃತಕಮೆಂದೆನಿಕ್ಕುಂ" (ಮಂಗರಾ. ೮೦-೮); ಬಂದುವು ಪಾವುಡಂ ನೃಪತಿಗೆಂಬುದುಂ (ಕವಿರಾ. ೧_೦೦೬); ಉತ್ತರಮಧುರಾಪುರಾಧಿನಾಯಕಂಗೆ ಸಂವಾಹದೋಲೆಯುಂ ಪಾವುಡಮುಂ ಕೊಂಡು ಬಂದು (ವರ್ಧಮಾ. ೨-೪೪ ವ); ಈ ಮಹಿಯೊಳಾವನುಂ ಸಮವಲ್ಲದಂತಿಪ್ಪ ಅರಸುಗಳು ಪ್ರೀಯಿಕ್ಕಿ ಪಾವುಡವನಟ್ಟುವರ್ (ಶಾಮರ. ೨೧೧-೮); ಒಳ್ಳೆ ಗಡ ಪಾವುಡವ ಮಾಸುಕಿಯಲ್ಲಿಗಟ್ಟಿತು (ಕುವ್ಯದ್ರೋ. ೫-೫೩). **ಪಾಗುಡ$_2$:** ೧. "ಪ್ರಾಭೃತಂ, ಪ್ರದೇಶನಂ__ಈ ೨ ಪಾಗುಡದ ಪೆಸರು" (ಶಾಶರಾ. ೦೩೫): ಪರಮಂಡಲಿಕರ್ ಪಲರ್ ಪಾಗುಡಂಗಳುಮೋಲೆಗಳುಂ ಪೆರ್ಗಡೆಗಳುಮನನವರತಂ ಕೂಸುಗಳಂ ಬೇಡಿಯಟ್ಟುತ್ತಿರ್ಪರ್ (ವಡ್ಡಾರಾ. ೧೩೧-೮); ತನ್ನ ಬಂದ ಬರವನಜಿಯೆ ಬಿನ್ನಪಂಗೆಯ್ದು ತನ್ನ ತಂದ ಪಾಗುಡಮುಂ . . . ಅಮಾತ್ಯೋತ್ತಮನ ಕೆಯ್ಯೊಳ್ ಕುಡುವುದುಂ (ಶಾಂತಿಪು. ೨-೨೨ ವ): ನಿಮ್ಮ ತಂದೀ ಪಾಗುಡಮನಿಂತೆ ಕೊಂಡು ಪೋಗಿಂ (ಚಂಪು. ೯-೫೯ ವ). **ಪಾವಡ$_2$:** (ಕ). **ಪಾವುಡೆ$_2$:** ೧. ನೃಪಸಂಕುಳಕೆ ಲೇಖಿಪ ಬರೆಸಿ ಪಾವುಡಗಳನೆಸಗಿ . . . ಹೊಳಲಿಗೈತಪುದೆಂದು ಸಾಜಿಸಲು (ಜೀವಂತ. ೭-೨೦); ಓಲೆಕಾಜರ್ ಬಂದು ಮುನಿಗೆಜಗಿ ಪಾವುಡೆಯುಮಂ ಕಟ್ಟೋಲೆಯುಮನೊಪ್ಪಿಸಿದರ್ (ರಾಮಾಶ್ವ. ೬೯-೨೬). **ಪಾಹುಡ$_2$:** ೨. [ಜೈನ] ಆಗಮಗ್ರಂಥದ ಭಾಗ,-ಪರಿಚ್ಛೇದ,-ಅಧ್ಯಾಯ : ಪ್ರತಿಯೊಂದು ಪೂರ್ವದಲ್ಲೂ ಅನೇಕ ಪ್ರಕರಣಗಳಿವೆ. ಈ ಪ್ರಕರಣಗಳಿಗೆ 'ವಸ್ತು' ಗಳೆಂದು ಹೆಸರು. ಈ ಪ್ರತಿಯೊಂದು ವಸ್ತುಗಳಲ್ಲೂ ಮತ್ತೆ ಇಪ್ಪತ್ತು ಇಪ್ಪತ್ತು ವಿಭಾಗಗಳಿವೆ. ಈ ವಿಭಾಗಗಳಿಗೆ 'ಪಾಹುಡ' ಗಳೆಂದು ಅನ್ನುವರು (ಕ್ಷನಪ. ೩೩೬). [< ಪ್ರಾ. ಪಾಹುಡ. / ಸಂ. ಪ್ರಾಭೃತ./ತೆಲು. ಪಾವಡ]

**ಪಾವುಡ$_3$** 'ಪಾವುಳ' ನೋ.

**ಪಾವುಡ$_4$** 'ಪಾಪಡ$_4$' ನೋ.

**ಪಾವುಡ$_5$** (ನಾ). ಗೋಧಿಹಿಟ್ಟಿನಿಂದ ಮಾಡುವ ಒಂದು ಬಗೆಯ ಭಕ್ಷ್ಯ,-ಉಂಡೆ : ನೆಜೆ ಸಣ್ಣಗೋದುಮೆಯ ಹಿಟ್ಟ . . . ಬಜೆ ಮೊಸರುಕೆನೆಯದಜೊಳು ಕಲಸಿವುಂಡೆಯಂತೆಜೆಯೆ ಪಾವುಡವಾಯ್ತು (ಸೂಪಶಾ. ೧-೩೩). [?]

**ಪಾವುಡಂಗಟ್ಟು** (ಕ್ರಿ). ಕಾಣಿಕೆಯನ್ನು ಕಳಿಸು: ಉಡುಗೊರೆ ಕಳಿಸು : ಸರಸಶೀತಳಪರಿಮಳಮಂ ಪಾವುಗಳರ್ದಲ್ಲಿಗೆ ಪಾವುಡಂಗಟ್ಟುವ ಮಳಯಜ ತರುಗಳುಂ (ಲೀಲಾವ. ೬ ೬೦ ವ). [ಪಾವುಡ$_2$ + ಕಟ್ಟು (< ಕಟ್ಟು$_1$)]

**ಪಾವುಡೆ$_1$** 'ಪಾವುಡ$_1$' ನೋ.

**ಪಾವುಡೆ$_2$** 'ಪಾವುಡ$_2$' ನೋ.

**ಪಾವುಣ**, ಪಾವಣೆ$_1$, ಪೌಣ (ನಾ). ೧. ಮುಕ್ಕಾಲು ; ಮುಪ್ಪಾಗ: ಒಂದು ಚೀಲ ಹಿಡಿದು ನೂರದ ಪರಿಗೆ ದರ ಚೀಲಕ್ಕೆ ಪಾವುಣ . . . ಆಣೆ (ಮುಂಬವ್ಯಾ. ೨೪೧). **ಪಾವಣೆ$_1$:** ೨. ಕಾಲಿಲ್ಲದ ಕಡಮೆಯಿರುವುದು. P ಸಮಾಸದಲ್ಲಿ ಪೂರ್ವಪದವಾಗಿದ್ದು. ಈ ಶಬ್ದ ಮುಂದಿನ ಪದವಾದ ಸಂಖ್ಯೆಗೆ ೧/೪ ರಷ್ಟು ಕಡಮೆಯೆಂಬರ್ಥವನ್ನು ಸೂಚಿಸುತ್ತದೆ : ಈ ಕಾರಣದಿಂದ ದರ ಒಂದು ಪಟ್ಟಿಯಲ್ಲಿ . . . ಪಾವಣೆ ಎರಡು ಆಣೆಯಂತೆ ಕೂಲಿ ಬರದು (ಮುಂಬವ್ಯಾ. ೨೪೯). **ಪೌಣೆ :** ೩. ಮುಕ್ಕಾಲಿನ ಮಗ್ಗಿ : ಕಾಲು, ಅರ್ಧ, ಪೌಣೆ, ಸವ್ವಾ, ದೀಡೆ. ಅಡೀಚಿಗಳನ್ನೂ ಕಂಠಪಾಠ ಮಾಡಿಸಿದ್ದರು (ಗಾಳಿಪ. ೧೭೮).
[← ಮರಾ. ಪಾಉಣ. ಪಾಊಣ. ಪೌಣ ; ಹಿಂ. ಪೌನ, ಪೌನೆ./ ಪ್ರಾ. ಪಾಊಣ. ಪಾವೂನ./ಸಂ. ಪಾದೋನ]

**ಪಾವುಣಿ** (ನಾ). ಹಾವುಗಳನ್ನು ತಿನ್ನುವಂಥದು : ನವಿಲು : ಪಾವುಣಿ__ಭುಜಂಗಭುಕ್ ಮಯೂರ ಇತಿ ಯಾವತ್ (ಶಬ್ದಾನು. ೫೪೬ ವ್ಯಾಖ್ಯಾ).
[ಪಾವು$_1$ + -ಉಣಿ]

**ಪಾವುಣೆ**, ಪಾವಣೆ$_2$ (ನಾ). ೧. ಅತಿಥಿ: ನಮ್ಮ ಮನೆಗೆ ದೊಡ್ಡ ಪಾವುಣೆ (ಅತಿಥಿ) ಬರುವವರಿದ್ದಾರೆ (ಇತಿಶ್ರೀ. ೬೩). **ಪಾವಣೆ$_2$ :** ೨. ಆಪ್ತ : ಸಂಬಂಧಿಕ : ಪಾವಣೇರ ಅಂತ ಹೂವಣ್ಣನ ಮಾರಿ ನೋಡೇ ಬಿಟ್ಟ. ಇಲ್ಲದರ ಚಾಪಡಿಗಿ ತರಾಂವ ಮೆಟ್ಟಿನ ಹೂರೀ ಸಂಗಡಾ (ಬಿಸಗ. ೫೯): ಪಾವಣೇರು (ಅಪ್ತರು)-ಮನ್ಯಾಗ ಪಾವಣೇರು ಬಯಿಂದಾರ (ಮನೆಯೊಳಗೆ ಅಪ್ತರು ಬಂದಿದ್ದಾರೆ) (ಸುವರ್ಣ. ೩೨೫).
[← ಮರಾ. ಪಾಹುಣಾ./ಪ್ರಾ. ಪಹುಣ, ಪಾಹುಣಅ./ಪಾಲಿ. ಪಾಹುನ. ಸಂ. ಪ್ರಾಘುಣ]

**ಪಾವುದೊಡವು** (ನಾ). ಹಾವುಗಳ ಆಭರಣ : ಸ್ಫುರಿಸುವಾತ್ಮಕಳಾತತಿಯಿಂದಿ ಲೋಕಪನಲಂಕರಿಸಿಕೊಂಡಿರ್ಪ ಮಹಾಮಹಿಮಂಗಂ ನಿರಂತರ ಪಾವುದೊಡವು ಗಡ ಸಾಕೆಂದು (ಸಂದಿವಾ. ೦೭-೪೩). [ಪಾವು$_1$ + ತೊಡವು]

**ಪಾವುಮೀನ್.** ಹಾವುಮೀನು (ನಾ). ಹಾವಿನಂತೆ ಉದ್ದವಾದ ದೇಹವಿರುವ ಒಂದು ಬಗೆಯ ಮೀನು : ಪವಳವಾಯುಂ ಪಾಸಮೀನ್ ಪಾವುಮೀನ್ ಕಿಜುಮೀನ್ . . . ಎನಿಪಿವೆಲ್ಲಂ ಬೀಳ್ವುವಾ ತಾಣದೊಳ್ (ರಾಜಶೇ. ೫-೦೦೫). **ಹಾವುಮೀನು :** "ಹಾವಿನ ರೂಪದ, ಮೀನು, ಹಾವುಮೀನು" (Eel. ಇಂಕಿ): ನದಿಯ ನೀರಲ್ಲಿ, ಒಂದು ಜಾತಿಯ ಹಾವುಮೀನು (Eel) ಇದೆ. ಇದು ೬-೭ ಅಡಿ ಉದ್ದವಾಗಿದ್ದು, ಅರಂಗುಲ ದಷ್ಟು ದಪ್ಪವಾಗಿ ಬೆಳೆಯುವುದು. ಇದರ ಪ್ರೈಯನ್ನು ನಾವು ಮುಟ್ಟಿದರೆ ಸಾಕು, ಪ್ರಾಣಾಪಾಯವಿದೆ (ಜಾಂತ್ರ. 1. ೮೦). [ಪಾವು$_1$ + ಮೀನ್$_2$]

**ಪಾವುಮೆಕ್ಕೆ**, ಹಾವೆಕ್ಕೆ. ಹಾವುಮುಕ್ಕಿ. ಹಾವುಮೆಕ್ಕೆ. ಹಾವ್ರೆಕ್ಕೆ (ನಾ). ಒಂದು ಬಗೆಯ ಮೆಕ್ಕೆಯ ಬಳ್ಳಿ ಮಂತ್ರ್ ಬಹಳ ಕಹಿಯಾಗಿ

ರುವ ಅವರ ಕಾಯಿ : ಇಂದ್ರವಾರುಣಿ : **p** ಇದು ವಿಷಾಪ ಹಾರಿಯಾದುದು : ಪಾವುಮೆಕ್ಕೆಯು ಕಂಪಿನಂತೆ ತಿಪ್ಪೆಯು ನೀರಂತೆ ಬಡವನ ಮುಖಿಮೆಯುಂತೆ . . . ಫೊಜಿಗಣ್ಗೆ ರಂಜಿಸುವ ಬಹಿರಾಳಾಪದ ಮೋಂಬನೊಲ್ಲದೆ (ಧರ್ಮಾಮೃ. ೬-೯೪). **ಹಾವೆಮೆಕ್ಕೆ :** ಹಾವೆಮೆಕ್ಕೆಯ ಹಣ್ಣೊಳಕಿಕ್ಷೇಪುದೊಳಿರಿಸಿಟ್ಟ ಸುಂಟಿ ಹಿಪ್ಪಲಿ ಮೆಣಸೆಂಬೀ ಮೂಱಂ . . . ನಸ್ಯಂಗೆಯ್ವಂ (ಪಶುವ. ೯-೦೦೦): **p** ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ. **ಹಾವುಮಕ್ಕಿ:** ದೊಡ್ಡಹಾಲ್ಮೆಕ್ಕೆ. ಹಾವು ಮಕ್ಕಿಕಾಯಿ. ಇಂದ್ರಾವರುಣಿ (ವೃಕ್ಷಿಗ. ೨೨-೪೦೦). **ಹಾವುಮೆಕ್ಕೆ:** "ವಿಶಾಲಾ, ಇಂದ್ರವಾರುಣೀ—ಈ ೨ ಹಾವುಮೆಕ್ಕೆ " (ಚಾಶಬ್ದ. ೦೦೨); ಪವನಜೀದು ಪುರಿದು ತಿಲತೈಲದೆ ನಿಶೆ ಪೆಡೆಮೆಕ್ಕೆಯೆಂಬಿವಂ ಮೇಣ್ ಗೋಮೂತ್ರದೆ ಹಾವುಮೆಕ್ಕೆ[ಪಾಠಾಂ. ಹಾವೆಮೆಕ್ಕೆ]ಯುಂ ಬ್ರಹ್ಮದಂಡೆಯುಂ ಮಸರೆದು ಪೂಸೆ ಪುಣ್ಣಳ್ ಕಿಡುಗುಂ (ಲೋಕೋಪ. ೯-೬೦): ಫಲವಾದರೇನು ಹಾವುಮೆಕ್ಕೆಯ ಕಾಯಿ (ಬಸವ. ೦೨೦): ಬೇವು ತಾ ಪರಿಪಕ್ವವಾದರೆ ಹಾವುಮೆಕ್ಕೆಗೆ ಸಾಕ್ಷಿ ಗಡ (ಕುಮಾರ. ೦೬-೧೫): ಒಳಗೆ ಕಾಠಿಣ್ಯವು ಹೊರಗೆ ಸುಪಕ್ವವು ಹಾವುಮೆಕ್ಕೆಯು ಗಿಡದಂತೆ (ಇಂಡಾಪ. ೧೮೮-೨೬). **ಹಾವ್ಮೆಕ್ಕೆ :** ಅದಱೊಳು ಹುಟ್ಟಿದನು ಕೊಲಿಗಡಿಗ ಹಾವಿನ ಹುತ್ತದಲಿ ಹಾವ್ಮೆಕ್ಕೆ ಬೆಳೆದಂತೆ (ಕುಮಾರವ್ಯಾ. ೦೪-೦೮). [ಹಾವು₁ + ಮೆಕ್ಕೆ₁]

**ಪಾವುವಡಗೆ** (ನಾ). ಹಾವಿನ ಬುಟ್ಟಿ : ಹಾವಿನ ಹೇಳಿಗೆ : (ಕಿ). [ಹಾವು₁ + ಪಡಗೆ (<ಪೆಟ್ಟಿಗೆ)]

**ಪಾವುಸೇರು** (ನಾ). ಕಾಲು ಸೇರು : ಸೇರಿನ ಕಾಲುಭಾಗ : ಪಾವು : ಆ ಕನಸಿನಲ್ಲಿ ಅವರ ಸಮ್ಮರುಗಳು ಕಾಣಿಸಿಕೊಂಡು ಅವರಿಗೆ 'ಊಟಕ್ಕಾಗಿ ಪಾವುಸೇರು ತುಪ್ಪವನ್ನು ಬೇಡಿದರಂತೆ' (ಪರಶಿ. ೦೪೮).

[ಪಾವು₂ + ಸೇರು₃]

**ಪಾವುಳ**, ಪಾವುಡ₃(ನಾ). ದೇವಸ್ಥಾನದ ಪ್ರಾಕಾರದಲ್ಲಿಯೇ ವಾಸಿಸುವ ಕೆಳವರ್ಗದ ಸೇವಕರ ಗುಂಪು.—ವರ್ಗ : ದೇವರ ತ್ರಿಕಾಲಪೂಜೆಗಂ ತಪೋಧನರ ವಿದ್ಯಾರ್ಥಿವರ್ಣಿಗಳಾಹಾರದಾನಕ್ಕಂ ಪಾವುಳಪರಿವಾರದ ಜೀವಿತಕ್ಕಂ ದೇಗುಲದ ಖಂಡಸ್ಫುಟಿತ ನವಕರ್ಮಕ್ಕವೆಂದು ಕೊಟ್ಟ ಅಲ್ಲಿಯ ಘಳೆಯ ಮತ್ತರು ೫೦ (ಪಾಂಡೇಶ್. ೩-೨೨ ವ: 1047): ಜೀರ್ಣೋದ್ಧಾರ ನವಸುಧಾಕರ್ಮಕ್ಕಂ ಪಾವುಳವರ್ಗಕ್ಕಂ (ಇಆ. VIII, ೨೦-೨ನೆಯ ಕಲ; 1077): ದೇವರಂಗಭೋಗಕ್ಕಂ ಪಾವುಳಕ್ಕಂ ಬಿಟ್ಟ ಪಿರಿಯ ಸೋಗೆಯ ಮೂರು (ಸೌಇಇ. IX-1, ೦೬೦-೬೯; 1092): ಬ್ರಹ್ಮಪುರಿಯ ಬ್ರಾಹ್ಮಣರಿಗೆ ಮತ್ತರು ಪ ೧೦ . . . ಪಾವುಳಕ್ಕೆ ಮತ್ತರು ಪ ೧೦ (ಸೌಇಇ. IX-1, ೨೪೦-೦೪: 1142). **ಪಾವುಡ₃ :** ಆಹಾರದಾನಕ್ಕಂ ಪಾವುಡಕ್ಕಂ . . . ಬಿಟ್ಟ ಕರಿಯ ನೆಲಂ (ಸೌಇಇ. IX-1. ೦೫೦-೨೯; 1081).

[<ಪ್ರಾ. ಪಾಉಲ./ಸಂ. ಪಾಪಕುಲ]

**ಪಾವೆಱೆಯ** (ನಾ). ಹಾವುಗಳ ಒಡೆಯ : ಆದಿಶೇಷ : ವಾಸುಕಿ : ಭಾವಿಸೆ ಕನೆ ಬಲ್ಲಿಂತಿರೆ ಪಾವೆಱೆಯನ ಮೆಯ್ಯು ಪಾಸೆ ಪವಡಿಸಿ ಸೊಗದಿಂ ದೇವತೆಗಳ ಮೊರೆಯಾಲಿಪ ಠಾವೆನೆ ಪಾಲ್ಗಡಲದೊಂದು ಪರಮಸ್ಥಾನಂ (ಜಗದ. ೫-೦೪೩): ಅನಂತನೆಂದುಂ . . . ಶೇಷನೆಂದು ನೆಗಱ್ತೆವೆತ್ತು ಮುಕ್ಕುಱಪಱ್ತಿಯುಂ ಕೀಪಿವ ಪಾವೆಱೆಯನೆಂಬ ಮಿಱ್ತಾಸುಗೆಯುಮುಂ ಭಾವಿಸಿದು (ಜಗದಂ. ೮೬-೧೫). [ಹಾವು₁ + ಎಱೆಯ]

**ಪಾಶ** (ನಾ). ೧. (ಕಟ್ಟಲು ಉಪಯೋಗಿಸುವ) ಹಗ್ಗ ; ನೇಣು : "ಬಂಧಾ ರಿ ದಾಮಪಾಶವುಂ" (ಶಬ್ದಾರ. ೩೪) : ಸುಮಿದುಮಿಪಾಶದಿಂ ಜೀವರನು ಬಂಧಿಸುವೆ ನಾಂ ಭಾವದಂ (ಪಶ್ವಾಂಗ. ೨೬-೬೨೮). ೨. ಕೊರಳಿಗೆ ಹಾಕಿ ಎಳೆಯುವ ನೇಣಿನ ಕುಣಿಕೆ : ಹಾಗೆ ಎಳೆಯುವುದಕ್ಕೆ ನಿರ್ಮಿಸಿಕೊಂಡ ನೇಣಿನ ಸಾಧನ : ಒಂದು ಆಯುಧ : ಸುರಪನಗ್ನಿ ಯಮ ನಿರುತಿ ವರುಣ ಮರುತ ಧನದನೀಶಾನ್ಯರೆಂಬವರ ಪವಿಶಕ್ತಿದಂಡ ವರಕೊಂತ ಪಾಶ ಧ್ವಜಂ ಖಡ್ಗಶೂಲತತಿವೆರಸಿ . . . ಸೆಳೆದು ಕಹನು ತತ್ತಡೆ ಹರಿಶ್ಚಂದ್ರನೃಪನು (ಹರಿಶ್ಚ. ೦-೪೩) ; ಖಡ್ಗ . . . ಪಾಶ . . . ಎಂಬ ಬತ್ತೀಸಾಯುಧಗಳಿಂ (ಶಬರ. ೨೬೨). 'ಯಮಪಾಶ' ವರಾ. ೩. ಬಂಧನ ; ಸೆರೆ : ಸಾಕು ಇನ್ನುಱದೆ ತ್ರಿವಿಧ ಪಾಶವ ಹಱದೆ (ಅವತಾ. ೦೫೬-೬೨೦): ಪಾಶವಱತು ಗುರುವಾಗಬೇಕು ವೇಶವಱತು ಚರವಾಗಬೇಕು (ಶದಗೂ. ೦೦೫-೫೧): ಈ ಪಾಶದಿಂದ ಮುಕ್ತವಾಗುವ ದಾರಿಯಿಲ್ಲವೆ? (ಧರ್ಮಕಾ. ೨೬೨). ೪. ಬಲೆ ; ಜಾಲ : "ಪಾಶಃ, ಬಂಧನಗ್ರಂಥಿಃ, ವಾಗುರಾ, ಮೃಗಜಾಲಿಕಾ-ಈ ೪ ಬೆಳ್ವಾರಂ" (ಹಲಾಯು. ೯೮-೪೪೩). ೫. ತಲೆಗೂದಲು ; ಮುಡಿ ; ತುರುಬು : "ಹಸ್ತಂ ಪಾಶಂ ಪಕ್ಷಂ ಶಸ್ತ್ರಕಚಪ್ರಚಯವಾಚಕಂ" (ಪಸ್ತುಕೋ. ೬೦-೦೯); " ಹಸ್ತಃ, ಪಕ್ಷಃ, ಪಾಶಃ—ಈ ೩ ಹಿಮ್ಮುಡಿ" (ಹಲಾಯು. ೮೬-೩೬೬); "ಹಸ್ತಕಂ ತುಱುಬು ಹಿಣಿಲು ಪಾಶಂ" (ಮಂಗರಾ. ೯೪-೬). ೬. ನಾಶಕ್ಕೆ ಸೆಳೆಯುವ ಆಕರ್ಷಣೆ : ಸಮುದ್ರತೀರದಲ್ಲಿ ಓಡಾಡುತ್ತಿದ್ದ ಅವನಿಗೆ ನೀರಿನ ಸೌಂದರ್ಯವು, ಈಜುವ ಆಸೆಯಿಂದ, ಪಾಶವಾಗಿ ಪರಿಣಮಿಸಿತು (ರೂಢಿ). ೭. ಲೆತ್ತದ ದಾಳ. ೮. (ಸಮಾಸಗಳ ಉತ್ತರಪದ ವಾದಾಗ) ಸೌಂದರ್ಯ, ಹೆಚ್ಚಳ, ತಿರಸ್ಕಾರ ಮೊದಲಾದುವನ್ನು ಸೂಚಿಸುವ ಶಬ್ದ : 'ಕರ್ಣಪಾಶ', 'ಕೇಶಪಾಶ' ವರಾ. ೯. [ಶೈವ] ಶೈವಾಗಮದ ಪಶು, ಪಾಶ, ಪತಿಯೆಂಬ ಮೂರು ತತ್ವಗಳಲ್ಲಿ ಒಂದು ; ಸಂಸಾರಬಂಧನ : ಜೀವನೇ ಪಶುವು, ಅವನನ್ನು ಆವರಿಸಿರುವ ಸಂಸಾರಬಂಧನವೇ ಪಾಶ, ಜೀವನ ಸಂಸಾರಪಾಶವನ್ನು ಕಳೆದು ಉದ್ಧರಿಸುವವನೇ ಪತಿಯಾದ ಪರಮೇಶ್ವರ (ಶಾಕದ. ೬೩). ೧೦. ಷಟ್ಪದಾರ್ಥಗಳಲ್ಲಿ ಒಂದು : ಸಕಲಾಗಮಂಗಳಲ್ಲಿಯೂ ಪತಿ ಕುಂಡಲಿನಿ ಮಾಯೆ ಪಶು ಪಾಶ ಕಾಂಕ್ಷೆಯೆಂಬ ಷಟ್ಪದಾರ್ಥಂಗಳುಂ ಅಕ್ಕುಂ (ಶಿವೇಶ. ೬೨). ೧೧.=ಪಾಶಯೋಗ : ನಿಲೆ ಸಪ್ತಗ್ರಹವೊಂದೆ ರಾಶಿಯೊಳ್ ಯೋಗಂ ಗೋಳನಾಮಂ . . . ಅಯ್ದದು ಗೇಹದೊಳಿರಲ್ ಪಾಶಂ (ಜಾತಿ. ೦೩-೫). ೧೨. [ನಾಟ್ಯ] ಇಪ್ಪತ್ತುನಾಲ್ಕು ಬಗೆಯ ಸಂಯುತಹಸ್ತಗಳಲ್ಲಿ ಒಂದು : ೧. ಅಂಜಲಿ . . . ೧೫. ಪಾಶ . . . ೨೪. ಅವಹಿತ್ಥ (ಅಕಾವ್ಯ. ೪೮). [ಸಂ.]

**ಪಾಶಕ** (ನಾ). ೧. ಲೆತ್ತದ ದಾಳ : "ಅಕ್ಷಃ, ದೇವಕಃ, ಪಾಶಕಃ — ೩ ಪಾಚಿಕೆಗಳ ಹೆಸರುಗಳು, ಲೆತ್ತಗಳು" (ಸಿದ್ಧಾಂತಿ. ೩೨೦). ೨. ಲೆತ್ತದ ಆಟ ; ಪಗಡೆಯಾಟ : 'ಪಾಶಕಶಾರಿ' ವರಾ. ೩. (ಸಮಾಸದಲ್ಲಿ ಉತ್ತರಪದವಾದಾಗ) ಬಲೆ : ಜಾಲ. [ಸಂ.]

**ಪಾಶಕಶಾರಿ** (ನಾ). ಲೆತ್ತದಾಟದ ಕಾಯಿ ; ಪಗಡೆಕಾಯಿ : ಬಹು ನಾಯಿಗಳಿರುವೀ ಗ್ರಾಮದೊಳು ಬಾಲೆ ಪಾಶಕಶಾರಿಯವೋಲೆ ಏನಗಾಗಿ ಮನೆಮನೆಗಲೆವಂದು ಸುಕುಮಾರಿ ತಿಂದಾವು ನಾಯಿಗಳೆಗರಿ (ಗಾಥಾ. ೩೫-೩೮). [ಪಾಶಕ + ಶಾರಿ]

**ಪಾಶಜ** (ನಾ). [ಜ್ಯೋತಿ] ಪಾಶಯೋಗದಲ್ಲಿ ಹುಟ್ಟಿದವನು : ಧನಸಂವರ್ಧನಶೀಲ ಭೃತ್ಯಸುಹೃದಾಢ್ಯಂ ಪಾಶಜಂ (ಜಾತಿ. ೦೩-೦೬). [ಸಂ.]

**ಪಾಶಪಾಣಿ** (ನಾ). ೧. ಪಾಶವನ್ನು ಆಯುಧವಾಗಿ ಹಿಡಿದಿರುವವನು : ವರುಣ : "ವರುಣಂ ಪಶ್ಚಿಮದಿಕ್ಪತಿ ಶರನಿಧಿಪತಿ ಪಾಶಪಾಣಿ ಯಾದೋನಾಥಂ ವರುಣಾನೀರಮಣಂ [ವಾರಿರಾಶಿ]ನಿಳಯಂ ಪ್ರಚೇತಸಂ ಪೆಸರಿಂದಂ" (ಪಸ್ತುಕೋ. ೬-೪೩). ೨. ಯಮ ; ಅಂತಕ : ನಿನ್ನುಮನಿರಿಸದೆ ಕುರುವಂಶಾನಿಮಿತ್ತರಿಪು ಪಾಶಪಾಣಿ ಸವಿ ನೋಡಿದನೇ (ಗದಾಯು. ೩-೬೯).

[ಪಾಶ + ಪಾಣಿ₂]

**ಪಾಶಬಂಧ** (ನಾ). ನೇಣಿನಿಂದ ಕಟ್ಟುವುದು; ಹಗ್ಗದಿಂದ ಬಿಗಿಯುವುದು: ಅಂತು ಕೃತಾಂತಪಾಶಬಂಧಂಗಳಾದಂತೆಕ್ಕಲುಂ ತಳರದೆ ತೀವ್ರಪತತ್ರಿ ಭರಮಂ ಪೇಟಿ³ (ಶಾಂತಿಪು. ೯-೧೬ವ). [ಪಾಶ+ಬಂಧ]

**ಪಾಶಯೋಗ** (ನಾ). [ಜ್ಯೋತಿ] ಏಳುಗ್ರಹಗಳು ಐದುರಾಶಿಗಳಲ್ಲಿ ಹಂಚಿಕೊಂಡಿರುವ ಒಂದು ಯೋಗ ; ಒಂದೇ ರಾಶಿಯಲ್ಲಿ ಇರುವ ಗ್ರಹಗಳ ಸಂಖ್ಯೆ ಬೇರೆಬೇರೆಯಾದಂತೆ ಆ ಸ್ಥಿತಿಗೆ ಬೇರೆಬೇರೆ ಹೆಸರುಗಳನ್ನು ಜ್ಯೋತಿಶ್ಶಾಸ್ತ್ರದಲ್ಲಿ ನಿರೂಪಿಸುತ್ತಾರೆ: ಪಾಶಯೋಗದಲ್ಲಿ ಹುಟ್ಟಿದವನು ಹಣವನ್ನು ಅಭಿವೃದ್ಧಿಪಡಿಸುವ ಸ್ವಭಾವವುಳ್ಳವನೂ, ಸೇವಕರು ಮತ್ತು ಸ್ನೇಹಿತರಿಂದ ಕೂಡಿರುವವನೂ ಆಗುತ್ತಾನೆ (ಜಾತಕ. ೧೩-೧೬ ಅಡಿ); ೫ ರಾಶಿಗಳಲ್ಲಿ ಗ್ರಹರಿರಲೂ ಪಾಶಯೋಗಂ (ಆಯುಜೀ. ೨೯.೫). [ಪಾಶ+ಯೋಗ]

**ಪಾಶವಾರ**, ಪಾಶವಾರು (ನಾ). ಒಂದು ಬಗೆಯ ತೆರಿಗೆ : ಮನೆದೆರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು. (೧) ಮನೆದೆರಿಗೆ. (೨) ಹುಲ್ಲುಹಣ . . . (೧೬) ಪಾಶಾವಾರ. (೧೭) ಮದುವೆದೆರಿಗೆ, (೧೮) ಉಪ್ಪಿನ ಮೋಳಿ, (೧೯) ಕೌದಿಯ ತೆರಿಗೆ (ಮುಜಾವಂ. ೧, ೧೨೪) ಪಾಶವಾರು : ಇವು ಪೂರ್ವಕಾಲದ ತೆರಿಗೆಗಳು : ಮನೆತೆರಿಗೆ . . . ಪಾಶವಾರು. ಗುಳುವಿನ ಪೊಮ್ಮು, ಕೆರದ ಜಾಗಿನ ಹೊನ್ನು (ಸಮ್ಮುಸು. ೨೯೩). [?]

**ಪಾಶವಾರು** 'ಪಾಶವಾರ' ನೋ.

**ಪಾಶವಿಕ** (ಗು). ೧. ಪಶುವಿಗೆ ಸಂಬಂಧಿಸಿದ. ೨. ಪಶುವಿನಂತಹ; ಕಾಡುತನದ: ಒರಟುತನವುಳ್ಳ : ಆ ಪ್ರಾಯದಲ್ಲಿ ಎಂಥ ಪಾಶವಿಕ ಆನಂದಗಳನ್ನು ಜಾಗೃತಗೊಳಿಸಿದ್ದಳಲ್ಲ ಆ ವೇಶ್ಯೆ (ಅಶ್ರುಮ. ೬). [ಸಂ.]

**ಪಾಶವೀಪ್ರವೃತ್ತಿ** (ನಾ). ಪಶುವಿನಂತಹ ಒರಟುಸ್ವಭಾವ ; ವಿವೇಕದ ಹಿಡಿತವಿಲ್ಲದ, ಪ್ರಾಣಿಸಹಜವಾದ ವೃತ್ತಿ : ಸಂದಿಗ್ಧಜೀವನದ ಹಿಂಸಾ ಕೃತ್ಯದ ಪಾಶವೀಪ್ರವೃತ್ತಿಯು ಅವಳ ತಂದೆ (ಪ್ರಪರು. ೧೩೦). [ಸಂ.]

**ಪಾಶವೀವೃತ್ತಿ** (ನಾ). ಪಶುಸಹಜವಾದ ಸ್ವಭಾವ,–ನಡವಳಿಕೆ : ನಿಯೋಗಿಯದು ಪಾಶವೀವೃತ್ತಿ; ಅದು ಹೀನೂನ ದೃಷ್ಟಿಯಲ್ಲಿ ಸುಖದ ಹಾದಿಯಲ್ಲ (ಕಮಜೀ. ೬೬೩). [ಸಂ.]

**ಪಾಶಹರ** (ಗು). ಬಂಧನವನ್ನು ಪರಿಹರಿಸುವ ; ಕಟ್ಟನ್ನು ಬಿಚ್ಚಿ ಮುಕ್ತಗೊಳಿಸುವ : ಮರಿತಮೋಜನಶಿವರು ಲೋಕೇಶ್ವರಶಿವರು ಶ್ರೀಕಂಠಶಿವರುಂ ಪಾಶ [ಶಾಕಾಂ. ಪ] ಹರಶಿವರು (ಬಸವು. ೫೮-೧೭). [ಸಂ.]

**ಪಾಶಹಸ್ತ** (ನಾ). ಪಶ್ಚಿಮದಿಕ್ಕಿನ ಅಧಿಪತಿ ; ವರುಣ : ನಯನೌಘಜ್ವಲದಿಂದೆ ನೈದಿಲೆಸಟಿಂ ಶಕ್ರಂ ಮುಸುಂಕಿಟ್ಟನೈದೆ ಯಮಂ ಛಾಯೆಯನೊಂದು ನಿತ್ತಗಲದಿರ್ಪಂ ಪಾಶಹಸ್ತಂ ಪಯೋಧಿಯನಾಶ್ರೈಸಿದಂ . . . ಆವರ್ತಿಸ ತಳ್ತು ನಾಲ್ದೆಸೆಯುಮಂ ಗ್ರೀಷ್ಮ ಪ್ರತಾಪೋದಯಂ (ಚಂದ್ರಪು. ೯-೬೭). 'ಪಾಶಪಾಣಿ' ಪರಾ. [ಪಾಶ + ಹಸ್ತ]

**ಪಾಶಾಂಡಿ** 'ಪಾಷಂಡಿ' ನೋ.

**ಪಾಶಾಣ** 'ಪಾಸಾಣ' ನೋ.

**ಪಾಶಾಣಿ** (ನಾ). (ಆಲಂ) ಕಲ್ಲಿನಂತಹ ಮನಸ್ಸಿನವನು : ಕ್ರೂರ ವ್ಯಕ್ತಿ : ನೀವಿಷ್ಟು ಹೃದಯಹೀನರು, ಚಾಂಡಾಲರು, ಪಾಶಾಣಿಗಳೆಂದು ನನಗೆ ತಿಳಿದಿರಲಿಲ್ಲ (ಕಾವೇಂ. ೨೦೬). [ಪಾಶಾಣ (< ಪಾಸಾಣ) + –ಇ₃]

**ಪಾಶಿ₁** (ನಾ). ೧. ವರುಣ ; ಪಾಶಪಾಣಿ : "ಪ್ರಚೇತಸಂ ವಾರ್ಧಿಪಿಭು ಪಾಶಿ ಪ್ರತ್ಯಗ್ದಿಶಾರಮಣನೆನೆ ವರುಣನಕ್ಕುಂ" (ಮಂಗರಾ. ೦೫ ೦೦) ; ಇಂದ್ರನಗ್ನಿ ಯಮನೈರುತಿ ಪಾಶಿಮರುತ್ತು ಕುಬೇರಮಂಜುಳ ಶಿಶಿಕಂಠನೆಂಬಖಿಳದಿಕ್ಪತಿಗಳ್ ನಡೆದರ್ ಸಭಾಶೆಯೊಳ್ (ಶಾರಪು. ೧೬-೩೨೭); ಒಂದೆಸೆಯಿಂದ್ರನದೊಂದೆಸೆಯನಲನು . . . ಒಂದೆಸೆ ಪಾಶಿಯದೊಂದೆಸೆಯನಿಲನದೊಂದೆಸೆ ತ್ರ್ಯಂಬಕಸಖನು (ಶೈರವೇ. ೫-೨೮). ೨. ಯಮ. [ಸಂ. ಪಾಶಿನ್]

**ಪಾಶಿ₂** 'ಫಾಸಿ' ನೋ.

**ಪಾಶಿಸಜಾ** (ನಾ). ಗಲ್ಲಿನ ಶಿಕ್ಷೆ : (ಕಿ). [ಪಾಶಿ₂ (< ಫಾಸಿ) + ಸಜಾ]

**ಪಾಶುಪತ** (ಗು). ೧. ಶಿವನಿಗೆ ಸಂಬಂಧಿಸಿದ : ಶೈವಾಚಾರಕ್ಕೆ ಸಂಬಂಧಿಸಿದ : ಸಮಂಚಿತಪಾಶುಪತಸುವ್ರತನಿರತನು ಪುಣ್ಯಚರಿತ್ರನು . . . ಕೊಂಡಾಡಿ (ಬಸವು. ೪೭-೭೨) ; ಶ್ರೀಶಂ . . . ಪಾಶುಪತ ಸುವ್ರತದಿನಾರ್ತ ಸುತೀಶನಂ ಭಜಿಸುವನು (ಬಸವು. ೫೪-೬೦). (ನಾ). ೨. ಶೈವಪಂಥಗಳಲ್ಲಿ ಒಂದು : ಕ್ರಮದಿಂ ಪರ್ತಿಸುವಾ ಕಾಳಾಮುಖಾಖ್ಯ ಕಪಾಳಿ ಪಾಶುಪತ ಶೈವರೊಳೋರ್ವ ಮಹಾಬ್ರತಿಗೊರವಂ ರುದ್ರಮಾರ್ಗದಿಂ ನಡೆವರುಚಿದ ಮೂರ್ವರ್ನಡೆಯರ್ (ಸಮಕ. ೦೪-೫೦); ಪಾಶುಪತಾದಿ ಶಾಸನಧಾರಕರು ಬಂದು . . . ತಮತಮಗೆ ಲಿಂಗೈಕ್ಯರುಗಳಾಗೆಯ್ದಿ (ಬಸವು. ೫೮-೦೫) ; ಪಾಶುಪತ ಕಾಪಾಲಿಕ ಮಹಾವ್ರತಂಗಳೆಂಬವೇ ಅತಿಮಾರ್ಗಿಕ ಶಾಸ್ತ್ರತ್ರಯ ಮಾಗಿರ್ಪುದು ಅವಚ್ಚೊಳ್ ಪಾಶುಪತವು ಪಾಮವೇಶಕರ್ಮನಾಮಕ ಪಾಶದ್ವಯಾದಿಗಳಂ ನಿರ್ವಹಿಸುವುದು (೭ಪ್ರೀಕ. ೧೦) ; ಶೈವಾಗಮಗಳು ಒಂದೊಂದು ಬಾರಿ ಶೈವಮಾತ್ರವನ್ನು . . . ಪಾಶುಪತ, ಕಾಪಾಲಿಕ ಮತ್ತು ಕಾಳಾಮುಖ ಎಂದೂ ವಿಂಗಡಿಸುತ್ತವೆ (ಶಕ್ತಿಬ. ೧೨೩). ೩. ಪಾಶುಪತ ಪಂಥವನ್ನು ಅನುಸರಿಸುವ ಶೈವ : ಅಲ್ಲಿ ಪಾಶುಪತರು ಧ್ಯಾನಮಾಡುತ್ತಿದ್ದರೆಂದೂ ಹೇಳಿದೆ (ಕಶಾಆ. ೧೨೭). ೪. ಒಂದು ಬಾಣದ ಹೆಸರು : ಶಿವನು ಅರ್ಜುನನಿಗೆ ಅನುಗ್ರಹಿಸಿದ ಒಂದು ಮಂತ್ರಾಸ್ತ್ರ : ತುಡು ಪಾಶುಪತಮನೆನೆ ನರನೆಡೆಮಡಗದೆ ತುಡೆ ದಿಶಾಳಿ ನಡುಗಿದುದು (ಕಂಶಭಾ. ೧೧-೧೫೨) ; ಮೃಡಸಮಾನರು ನೀವು ಪಕ್ಷಿಗೆ ತೊಡಬದೇತಕೆ ಪಾಶುಪತಮಂ (ಬಸವು. ೨೨-೪೧) ; ಈತನೆಮ್ಮಯ ಪಾಶುಪತವಿಖ್ಯಾತ ಬಾಣವ ಬೇಡಿ ತಪದಲಿ ವೀತರಾಗದ್ವೇಷಿಯಾದನು (ಕುವ್ಯಾಅ. ೬-೨೬). ೫. ಒಂದು ಬಗೆಯ ಸಸ್ಯ : ಕೊಕ್ಕರೆಹೂವಿನ ಗಿಡ : "ಶಿವಮಲ್ಲಿ, ಪಾಶುಪತಃ, ಏಕಾಷ್ಠೀಲಃ, ಬಕಃ, ವಸುಃ–೫ ಬಕಪುಷ್ಪದ ಹೆಸರು ; ಕೊಕ್ಕರೇ ಹುವ್ವಿನ ಗಿಡ" (ಸಿದ್ಧಾಂತಿ. ೧೩೦). [ಸಂ.]

**ಪಾಶುಪತಾಸ್ತ್ರ** (ನಾ). =ಪಾಶುಪತ ೪ : ಪೆಜತೇನುಮಮನೊಲ್ಲೆನೆನಗೆ ನಿಮ್ಮ ಪಾಶುಪತಾಸ್ತ್ರಮಂ ದಯೆಗೆಯ್ವುದು (ಕಂಶಭಾ. ೮-೨೫ ವ) : ಸಲಿಸು ಪಾಶುಪತಾಸ್ತ್ರವನು ವೆಗ್ಗಳದ ಬೊಮ್ಮಶಿರೋಸ್ತ್ರವನು ಕೈಗೊಳಿಸುವುದು ಕೃಪೆಯುಳ್ಳೊಡೆ (ಕುವ್ಯಾಅ. ೬-೯೭). [ಪಾಶುಪತ+ಅಸ್ತ್ರ]

**ಪಾಶುಪತಿ** (ನಾ). ೧. ಪಶುಪತಿ : ಶಿವ : ಈಶತತ್ವ ಬ್ರಹ್ಮಮಯ ಪಶು ಪಾಶುಪತಿಗೆ ಸಮಾನವೇ ತತ್‌ಕೇಶವಂ ಬ್ರಹ್ಮಾದಿ ಪಶುಗಳು (ಬಸವು. ೫೪-೨೨) : ನಿನಗೆ ಪತಿ ಪಾಶುಪತಿಯಿರೆ ತೊಟ್ಟನೆ ಪಶುಗಳಂ ಕೊಲುವ ಮೆಲುವ ಕುಮನದ ಪಶುಕರ್ಮಿಗಳ ದುಃಕರ್ಮಂಗಳೊಳಗಿರಲು ಮನಸಿಜಾಂತಕನಂತವನನುಸಿಕನೆ ಬಿಡುವನೆ (ಬಸವು. ೬೦-೪೦). ೨. = ಪಾಶುಪತ ೩ : ಶೈವ ಸ್ವೈವಜಗಾದ ಪಾಶುಪತಿ ಪಥಪಟ್ಟಿಯ ಕಾಳಾಮುಖ ಕಂಗಟ್ಟಿ (ಪನ್ನವ. ೪. ೨೫೦-೫೪೫). [< ಸಂ. ಪಶುಪತಿ]

**ಪಾಶುಪಾಲ್ಯ** (ನಾ). ದನಕರುಗಳನ್ನು ಸಾಕುವಿಕೆ : ಪಶುಪಾಲನೆಯ ಉದ್ಯೋಗ : "ಪಾಶುಪಾಲ್ಯಂ–ಗೋಮಹಿಷ್ಯಾದಿಗಳನ್ನು ಪಾಲಿಸುವಿಕೆ" (ಸಿದ್ಧಾಂತಿ. ೨೭೩) : ನಿಖಿಲಕ್ಷತ್ರಿಯಸಮೂಹಕ್ಕೆ ಶಸ್ತ್ರಕರ್ಮಮುಮಂ ವಣಿಗ್ವಂಶಕ್ಕೆ ಪಾಶುಪಾಲ್ಯ ಕೃಷಿ ಪಣ್ಯಕರ್ಮಂಗಳುಮಂ . . . ಉಪದೇಶಂಗೆಯ್ದು (ಆದಿಪು. ೮-೬೪ ವ) ; ಅರ್ಥಕಲ್ಪನೆಯ ಉದ್ಯೋಗಗಳು ಐದುವಿಧ : ೧) ಪಾಶುಪಾಲ್ಯ ಅಥವಾ ಗೋರಕ್ಷ . . . ೫) ಕುಸೀದ– ಲೇವಾದೇವಿ (ಶಾರರ. ೩೫೭). [ಸಂ.]

**ಪಾಶುರ** (ನಾ). (ತಮಿಳುಭಾಷೆಯ) ಭಕ್ತಿಗೀತೆ : ಶ್ರೀವೈಷ್ಣವದೇವಸ್ಥಾನಗಳಲ್ಲಿ ವೇದಮಂತ್ರಗಳೊಡನೆ ಆಳ್ವಾರರ ಪಾಶುರಗಳನ್ನು ಹೇಳುವುದು ಅರ್ಚನಾವಿಧಿಯ ಮುಖ್ಯಭಾಗವಾಗಿದೆ (ಶಾರದ. ೩೯೯) ; ಈ ಪಾಶುರಗಳನ್ನು ನಮ್ಮ ಜ್ಞಾನವಿಷಯಗಳನ್ನಾಗಿ ಮಾಡಿಕೊಳ್ಳಬಾರದು ಎಂದಲ್ಲ (ಹಿಶಿೆ. ೮೭). [← ತಮಿ. ಪಾಚುರ]

**ಪಾಶ್ಚಾತ್ಯ** (ಗು). ೧. ಹಿಂಭಾಗದ; ಹಿಂದುಗಡೆಯ. ೨. ಆಮೇಲೆ ಬರುವ ; ತರುವಾಯದ. ೩. ಪಡುವಣದ ; ಪಶ್ಚಿಮದಿಕ್ಕಿನ : ಪಶ್ಚಿಮದೇಶಗಳಿಗೆ ಸಂಬಂಧಿಸಿದ : ಪಾಶ್ಚಾತ್ಯ ನಾಗರಿಕತೆಗೂ ಏಷ್ಯಾಖಂಡದ ದೇಶಗಳ (ಪೌರಸ್ತ್ಯ) ನಾಗರಿಕತೆಗಳಿಗೂ ಮೂಲಭಾವನೆಗಳಲ್ಲಿ ಪರಸ್ಪರ ವ್ಯತ್ಯಾಸಗಳವೆ (ಶ್ರೀಯೂಶಿ. ೧೩೩). (ನಾ). ೪. ಪಶ್ಚಿಮದ ನಾಡಿನವನು ; ಪಶ್ಚಿಮದೇಶಸ್ಥ : ಸಮಂದಂಥರಪ್ಪ ಪಾಶ್ಚಾತ್ಯರುವಶ್ಯಸಾಧನದೊಳಾದುದು ವಲ್ ತುಮುಲಂ ಮಹಾಹವಂ (ಶಾಂತಿಪು. ೧೦-೨೩). [ಸಂ.]

**ಪಾಶ್ಯ** (ನಾ). ಬಲೆ ; ಜಾಲ : ತೌಳಿಕಕ್ಕೊಗ್ಗುವದು ಲೋಕಂ ಕಾಳಿಕಕ್ಕೊಗ್ಗುವದು ಪಾಶ್ಯ ವಿಶಾಲಮೋಹಕ್ಕೊಗ್ಗುವದು ತತ್ತ್ವವನು ಪೇಳ್ವರೆ ಕೇಳಲಾರದು (ಏವೀಶ. ೧೧-೭೦). [ಸಂ. ಪಾಶ್ಯಾ]

**ಪಾಶ್ಯೆ** (ನಾ). ೧. ಬಲೆ ; ಜಾಲ. ೨. ಪಾಶಗಳ ಸಮೂಹ : ನೇಣುಗಳ ಗುಂಪು. ೩. ಹೆಣೆದ ಕೂದಲು ; ಜಡೆ : ವೇಣಿ. [ಸಂ. ಪಾಶ್ಯಾ]

**ಪಾಷ** 'ಪಾತಶಹ' ನೋ.

**ಪಾಷಂಡ** (ಗು). ೧. ವೈದಿಕಸಂಪ್ರದಾಯವಿರೋಧಿಯಾದ : ಧರ್ಮಖಂಡವಾದ. (ನಾ). ೨. ವೇದವಿರುದ್ಧವಾದ ಮತ ; ಧರ್ಮಖಂಡಮತ : ವೇದಶಾಸ್ತ್ರದ ಹೊಲಬನರಿಯದೆ ಭೇದವಾದವ ಮಾಡಿ ಪಾಷಂಡಾದಿ ಮತದಲಿ ನಡೆದು ದಂಭಾಚಾರಪರನಾಗಿ . . . ರಾಮನ ಬೋಳಗೆ ಬೋಧೆಯೇತಕೆ (ಅಪ್ಪಕ. ೧-೩೦). ೩. ವೈದಿಕಸಂಪ್ರದಾಯವನ್ನು ಮೀರುವವನು ; ಪಾಷಂಡಮತದ ಅನುಯಾಯಿ ; ಮ್ಲೇಚ್ಛ : ಮುಟ್ಟಾಳ–ಪಾಪಿ, ಪತಿತ–ಪಾಷಂಡರ ಅಂತ್ಯಗತ್ರಿಯೋ ಜ್ಞಾನಿ–ವಿಜ್ಞಾನಿ, ಪಂಡಿತ—ಪರೋಪಕಾರಿಗಳಿಗೂ ಉಂಟಾಗುತ್ತದೆ (ಕೀವಾಜ್ಞಾ. ೫) ; ಈ ಚಕ್ರೇಶ್ವರನು ಶುದ್ಧ ಪಾಷಂಡ (ಶ್ರೀಶಾಯ. ೧೪೦). 'ಪಾಖಂಡ' ಪರಾ. [ಸಂ.]

**ಪಾಷಂಡಮತ** (ನಾ). = ಪಾಷಂಡ ೨ : ಈ ಮಧ್ಯದೇಶದಲ್ಲಿ ನಮ್ಮ ಮತಕ್ಕೆ ವಿರುದ್ಧವಾದ ತೊಂಬತ್ತಾರು ಪಾಷಂಡಮತಗಳಿವೆ (ಕೃವಾ. ೧-೦೬೦). [ಪಾಷಂಡ + ಮತ]

**ಪಾಷಂಡಿ** (ನಾ). ೧. = ಪಾಷಂಡ ೩ : ಸಂನ್ಯಾಸಿ ಪಾಷಂಡಿಯಾದ ಕಾಪಾಲಿ ಮರುಳಾಗಿ ತಿರುಗಿದ (ಶಿಮೂಪ. ೪. ೨೫೦-೩೪೫) ; ಮೋಕ್ಷೋಪಾಯಮಾರ್ಗದ ಭಿಕ್ಷುವ ಪಾಷಂಡಿ (ಶತಾರ. ೪೭೩) ; ಚೋರಂ ಚಂದ್ರಹಾಸಂ ಸೋಂಬಂ ಮಗಲಂ, ಪಾಷಂಡಿ ವೇದಂಗಳಂ ಪೞಿವಂತಿರಕ್ಕುಂ (ರಾಮಾಶ್ವ. ೫೪-೩) ; ಧರ್ಮಸಮನ್ವಯದ ನಾಡಿನಲ್ಲಿ ಪಾಷಂಡಿಗಳ ಅವತಾರವಾಗಿತ್ತು (ರಾಕ್ಟೋರ. ೪೩). ೨. (?) : ಬೀದಿಬೀದಿಯೊಳೆಲ್ಲವೋಲೈಸಿ ಗಂಡಿ . . . ಆದಮೊಪ್ಪಿದುದು ಪಲತೆಜವ ಪಾಷಂಡಿಯುಂ (ಆನಪು. ೪-೭೮೯). 'ಪಾಖಂಡಿ' ಪರಾ. [ಸಂ. ಪಾಷಂಡಿನ್]

**ಪಾಷಾಂಡಿ** 'ಪಾಸಂಡಿ' ನೋ.

**ಪಾಷಾಣ** (ನಾ). ೧. ಕಲ್ಲು ; ಶಿಲೆ : "ಶಿಲೆ ಪಾಷಾಣಂ ಗ್ರಾವೋಪಲಾಶ್ಮದೃಷದಾಖ್ಯಮಕ್ಕುಂ" (ಶಬ್ದಮಣಿ. ೨೮-೪) ; ಆ ವಾಕ್ಯಮಂ ವಿಜ್ಞಾನದಿಂ ಮೆಯ್ಯಪ್ಪೊಡೆ ಪೂರ್ವೋಕ್ತದೋಷಪಾಷಾಣಸಂಚೂರ್ಣಿತಮಹಿಮ್ನ (ಆದಿಪು. ೨-೦೦ ಪ) ; ನೀಳಾದಿ ಪಾಷಾಣಸಂಕುಲದೊಳ್ ದುರ್ವಿದರಂತು ಪೊಳೆಯಿಸುವೇಸೆ ರೂಪಂ ಯಶೋಭದ್ರೆಯಾ (ಸುಕುಮಾ. ೯-೯೪) ; ಪುಣ್ಯವಳ್ಳ ಕಾಲಕ್ಕೆ ಪಾಷಾಣ ಪರುಷವಪ್ಪುದು ನೋಡಯ್ಯ (ಅವಚ. ೨೦೭-೯೩೨) ; ನಿರ್ದೈವ ರಂಗೈತಳಕೆ ಬಂದರೆ ಪರುಷ ಪಾಷಾಣ (ಕುವ್ಯಾದ್ರೋ. ೦೪-೪೬) ; ಪರ್ವತಗಳ ಹೊಟ್ಟೆಯೊಳಗೆ ಕಬ್ಬಿಣ ಮುಂತಾದ ಲೋಹಗಳುಳ್ಳ ಪಾಷಾಣಗಳು (ಅದುರುಗಳು) ಇರುತ್ತವೆ (ಮುಂಬರು. ೬-೪೦). ೨. ಮಣಿ : ರತ್ನ : ಪಾಷಾಣಪರೀಕ್ಷೆವಂತನಂತೆ . . . ಗುರುವುಳ್ಳವರ ನಿಜವಿಂತುಟು (ಅಶವ. ೯೨೭). ೩. ಒಂದು ಬಗೆಯ ವಿಷ : 'ಇಲಿಪಾಷಾಣ' ಪರಾ. [ಸಂ.]

**ಪಾಷಾಣದಾರಣ** (ನಾ). ಕಲ್ಲನ್ನು ಸೀಳುವ ಸಾಧನ : ಉಳಿ : ಟಂಕ : "ಟಂಕಃ, ಪಾಷಾಣದಾರಣಃ ೨ ಕಲ್ಲು ಕಡಿಯುವ ಉಳಿಯ ಹೆಸರು" (ಸಿದ್ಧಾಂತಿ. ೩೦೭). [ಪಾಷಾಣ + ದಾರಣ]

**ಪಾಷಾಣಬೇರು** (ನಾ). ಒಂದು ಬಗೆಯ ಸಸ್ಯ : "ಪಾಷಾಣಬೇರು, ಕಿರಿಯಾತು" (ಶಸ್ಯಪಿ. ೬೪). [ಪಾಷಾಣ + ಬೇರು (< ಬೇರ್)]

**ಪಾಷಾಣಭೇದಿ** (ನಾ). ಒಂದು ಬಗೆಯ ಸಸ್ಯ : ಕಲ್ಲುಕರಗ : ಚಕ್ಷುರೋಗಕ್ಕೆ . . . ನೆಲ್ಲಿಯ ಚಟ್ಟು, ಪಾಷಾಣಭೇದಿ, ನೇಜಲು ತ್ರಿಕ್ಕುಇವು ಕಷಾಯಮಂ ಮಾಡಿ ತೊಳೆಯುವುದು (ಏವ್ಯಪಿ. ೧೮೦) ; ಹಿಪ್ಪಲಿಕೆ ಬೇರು, ತಗ್ಗಿಬೇರು, ಪಾಷಾಣಭೇದಿ ಇವುಗಳನ್ನರೆದು ಮಜ್ಜಿಗೆಯಲ್ಲಿ ಕದಡಿ ಇಂಗನಿಕ್ಕಿ ಕಾಯಿಸಿ ಕುಡಿಯೆ ಶೀತಜ್ವರಂ ಶೀಘ್ರಂ (ಸಕವ್ಯ. ೬೩). [ಸಂ. ಪಾಷಾಣಭೇದಿ]

**ಪಾಷಾಣಸಂಧಿ** (ನಾ). ೧. ಬಂಡೆಯಲ್ಲಿರುವ ಬಿರುಕು : (?). ೨. ಗವಿ ; ಗುಹೆ : "ಗುಹಾ, ಪಾಷಾಣಸಂಧಿಃ—ಈ ೨ ಗುಹೆ" (ಕರಾಮು. ೨೮-೦೩). [ಪಾಷಾಣ + ಸಂಧಿ]

**ಪಾಷಾಣಹೃದಯ** (ನಾ). ಕಲ್ಲುಮನಸ್ಸಿನವನು ; ಕಲ್ಲೆದೆಯವನು ; ಕಠಿಣಹೃದಯನಾದವನು : ಪಾಷಾಣಹೃದಯರಪ್ಪೊಡೆ ಮೂಪಿಸಿ ಮತ್ಸ್ಯಾಪ್ಯಮಂ ಪರೀಕ್ಷಿಸುಗೆ ಗುಣಾನ್ವೇಷಿಗಳಪ್ಪೊಡೆ ಕಸನಿಸಿಕಾರದೊಳೀಂ ನಿಕಷಪ್ಪಪಮಾಜನಪರೊಳರೇ (ಲೀಲಾವ. ೧-೬೯). [ಪಾಷಾಣ + ಹೃದಯ]

**ಪಾಸ್** 'ಪಾಸ್$_1$' ನೋ.

**ಪಾಸ$_1$**, ಪಾಸು$_3$, ಹಾಸ$_1$, ಹಾಸು$_1$ (ನಾ). ಹಗ್ಗ ; ನೇಣು : ನಾಯುಬಿಡು ಪದೆಸಿಸು ಮೀಂಗಳಂ ಪಾಸದಿಂ ಪಾಗುರಿಯಂ ಬೀಸು (ಹರಿ. ೧೬-೮೭) ; ಬಿಸಿಲಿಸದೆ ಬಿಗಿವ ಪಾಸದಿಂದೆಂಬಂತೆ ನೀಳ್ದ ಕಂಜೆಡೆಗಳೊಳಂ (ಕಬ್ಬಿಕಾ. ೧೭೭) ; ಅವಂ ತಾಂ ಪಾಸದೊಳ್ವರ್ ಜಾಯಿಲನು ತೋಱಿಸಿ (ದೀಕು. ೬-೧೦೭೭). **ಪಾಸು$_3$** : ಆ ಕುಕ್ಕುರಂಗಳಂ ಕಟ್ಟಿರ್ದ ಪಾಸಿನ ನೇಣು ನಿನ್ನ ಕರ್ಣಪ್ರಾಂದೊಳ್ ಬಂಧಿಸಿಕೊಳ್ಳು (ಕಂಠಕಾ. ೨೮-೩). **ಹಾಸ$_1$** : ಎಲೆಯಿಯನುತ್ತ ಬೇಡರು ನಾಯ ಹಾಸವಂ ಶಿವಿದು . . . ಬೆಂಸಾರಿದೆ ಒಂದು ಕಿನ್ನಗ್ಗೆಕ್ಕೆ ನೋಡಿತ್ತು ನಾಬ್ಬಸೆಯನ್ನು (ಹವಕಾ. ೬-೩) ; ಹಾಸಗಳ ಏಡಿವಳಿದ ನಾಯ್ಗಳ ಬಿಸಾಂದಲೆಗಳ . . . ಬೀಸಿದರು ಬೇಂಟೆಗರು (ಕುವ್ಯಾಶ. ೩-೯) ; ಆ ಸಾರಂಗಮುಖ್ಯಮೃಗಯೋಡಲು ನಾಯ ಹಾಸವ ಕಳಚಿದರು (ಪೊಠನ. ೦೯-೦೪) ; ಬರ್ಪ ಪುಳಿಂದ ತನ್ನ ಪೆಸರ ಪೇರಡಿಯ ಹಾಸವಂ ಕಳೆದು ದ್ವಾರಪಾಪಿ ಕೈ ಚಿಟುಕಿಗೆಯ್ದು ಘಲ್ಲಿಯಂ ತೋಱಿಪಟಲು (ರಾಜಶೇ. ೫ ೭೩೨). **ಹಾಸು$_1$** : "ಕುಕ್ಕುರಂಗೊರಲ ಬಂಧನದೊಳಂ ತಳ್ಗದೊಳು ಹಾಸು" (ಶಬ್ದಮಂ. ೧೧೧) ; ಕೊರಳ ಹಾಸಂ ಬಿಡಲೊಡನೆ . . . ಕಿರಿದುಪಾಯ್ದಣಸಾತಂ ಜಾಯಿಲಂಗಳು ಪಾಯುವೇಗದಲಿ ಪರಿದು ಕವಿಯುದು (ರಾಪು. ೩೪-೨೪) ; ಪೆಸರ ನಾಯ್ಗಳ ಹಾಸ ಹರ್ಜಾಮ್ಬುಸದಲುಳಿ ಗದವಿಪಿರಿ ಪಿಡಿದ್ಯಾಗ ಸಿಂಸಗವಪು ಪವಿಲುಗಳೊಳವವು ಪದೆಯ ಹರಿವಿಸಲಿ (ಕುವ್ಯಾಶ. ೦೩-೩೦) ; ಕಾಲ ಕಣ್ಣಗಳ ಬಡಿಕೋಲ ಹೊರಲಿಗಳ ಸೊಪ್ಪಿ ನುಡುಗಿಯ ಹಾಸಗಳನಾರತಿ ಪರಿವ ಕುನ್ನಿಗಳ ಶ್ಯಾಬರಗಣಂ ಬಿಡದೆ ಪೊಜಪಟ್ಟುದಾಕ್ಷಣಂ (ತರಪು. ೩೩-೦೦).

[< ಪ್ರಾ. ಪಾಸ./ಸಂ. ಪಾಶ]

**ಪಾಸ್₂** ‘ ಪೋಸ ’ ನೋ.

**ಪಾಸಂಗ** (ನಾ). ೧. ತಕ್ಕಡಿಯಲ್ಲಿ ಪೇರು ಕಟ್ಟುವ ಕಾಣೆ. ೨. ತೀರ ಅಲ್ಪವಾದುದಂ,—ಕಡಮೆಯಾದುದಂ : ಒಂದು ಜೀವಕ್ಕೆ ಇನ್ನೊಂದು ಜೀವವು ಕೊಡಬಹುದಾದ ಆನಂದದ ಪಾಸಂಗಕ್ಕೆ ನಿಖಿಲಕಲಾನಂದವೂ ಬಾರದು (ಶಾಹಿಸಂ. ೨೧) ; ನಮಗೆ ತಿಳಿದೆಲ್ಲ ಸಂಗತಿಗಳನ್ನು ಕೂಡಿ ಹಾಕಿದರೂ ತಿಳಿಯಬೇಕಾದುದರ ಪಾಸಂಗಕ್ಕೂ ಸರಿಹೋಗುವುದಿಲ್ಲ (ವಿಶಾಮಂ. ೪೦).

**ಪಾಸಂಗಕ್ಕೆ ಹತ್ತು** = ಸರಿಸಮಾನವಾದ ಯೋಗ್ಯತೆಯನ್ನು ಪಡೆ ; ಸದೃಶವಾಗು : ಅದರ ತಲೆಯೊಳಗಿನ ಮಿದುಳು ನಮ್ಮ ಮಿದುಳಿನ ಪಾಸಂಗಕ್ಕೆ ಹತ್ತುವ ಹಾಗಿಲ್ಲ (ಮುಂಬಯಿ. ೬-೪೦೦) ; ವಿಷ್ಣುವರ್ಧನನು ಪುಲಿಕೇಶಿಯ ಪಾಸಂಗಕ್ಕೆ ಹತ್ತುವಂತಹನಿರಲಿಲ್ಲ (ಚಿಕಸಂ. ೯೦).

[← ಪಾರ. ಹಿಂ. ಮರಾ. ಪಾಸಂಗ್]

**ಪಾಸಂಗಿ** ‘ ಪಾಸಂಗೆ ’ ನೋ.

**ಪಾಸಂಗೆ**, ಪಾಚಿಕೆ, ಪಾಸಂಗಿ, ಪಾಸಗೆ₁, ಪಾಸುಗೆ₂, ಹಾಸಂಗಿ, ಹಾಸಗಿ (ನಾ). ೧. ಜೂಜಿನ ದಾಳ ; ಲೆತ್ತ ; ಪಗಡೆಯ ದಾಳ ; ಅಕ್ಷ : ದುರ್ಯೋಧನನೊಕ್ಕಲಂ ಪುಡಿಯೊಳ್ ಪೊರಳ್ಚುವಂತೆ ಪಾಸಂಗೆಯುಂ ಪೊರಳ್ಚಿ . . . ದಾಯುಮನಾಡೆ (ಪಂಪಭಾ. ೬-೭೧ ವ). **ಪಾಚಿಕೆ** : ೧. “ಅಕ್ಷಃ, ದೇವಕಃ, ಪಾಶಕಃ—೩ ಪಾಚಿಕೆಗಳ ಹೆಸರು, ಲೆತ್ತಗಳು” (ಸಿದ್ಧಾಂತಿ. ೩೨೦). **ಪಾಸಂಗಿ** : ೧. ಸಾರಿಯನಿಡುತ ತಪ್ಪಿದೆನೆಂದೊ ಪಾಸಂಗಿಗಳ ನಾನಿಂತೊಂದ ನೊಂದಂ ಪಿಡಿದು ತಪ್ಪಿಸಿ ಹಾಯಿಕಿದೆನೆಂದೊ (ದಸಕೃ. ೯೩-೦೩); ಅಂತು ಲಜ್ಜಾನತಾನನೆ ನೆತ್ತದಾಟವಮನುಳಿದು ನೆತ್ತವಲಗೆಯ ಮೇಲೆ ಪಾಸಂಗಿಗಳ ನೊಯ್ಯನಿರಿಸಿ (ವೃಷಬಿ. ೨೯-೫೨ ವ). **ಪಾಸಗೆ₁** : ೧. “ದುಂದುಭಿ ಮೃದಂಗಮುಂ ಪಾಸಗೆಯುಂ” (ವಸ್ತುಕೋ. ೦೨೨-೨೬) ; ಭಯಮಱಿಯದ ಕಲಿಯುಂ ಚಾಗಿಯುಮೆನಿಸದೆ ನಾಡೆ ಲೋಭಿಯುಂ ಪಂದೆಯುಮಾಗಿಯೆ ಬಾಳ್ವಂಗಲ್ಲದೆ ಸೂಳೆಯ ಕಣ್ ಪಾಸಗೆಯ ಕಣ್ಣುಮೇನುಱುಗುಗುಮೇ (ಪಂಪಭಾ. ೬-೩೩) ; ಅಂಗುಲೀನಖಚಯಕಾಂತಿಗಳನವಗಯ್ಸಿ ಸಲೆ ಪಾಸಗೆಯ ದೆಸೆದೆಸೆಗೆ ಪೊರಳ್ದುದಂ ಪಾತ್ರೋತ್ವರ್ಗಂ (ಶಾಂತಿಪು. ೫-೦೦೫) ; ಆಡಲೊಸೆದು ಪೂಡಿ ಸಾರಿಯನೋಸರಿಸಿ ಪಾಸಗೆಯನಿಕ್ಕಲ್ (ನೇಮಿಪು. ೦೦-೨೮ ವ). **ಪಾಸುಗೆ₂** : ೧. ಒಯ್ಯನೆ ಪಾಸುಗೆಗಳನಂತಿರಿಸಿ . . . ನಗುವುಜ್ಜುಗವೇನ ದನುಸುರುಸುರೆಂದಾ ಸಜ್ಜನದಲೆವಣಿ ತನ್ನಿನಿಯನ ಸಿರಿವಜ್ಜೆಗಳಂ ಪಿಡಿದು (ಉದ್ಭದೇ. ೩-೦೬). **ಹಾಸಂಗಿ** : ೧. “ಅಕ್ಷಃ, ದೇವನಃ, ಪಾಶಕಃ—ಈ ೩ ಹಾಸಂಗಿ” (ನಾಚಿರಾ. ೬) ; ಹಾಸಂಗಿಯನಿಳಿಪುತೆ ಹೊರೆಯೊಳಿದಲ್ ಲೇಸಾಯ್ತಾಟವೆನುತ್ತುಂ ನುಡಿದಲ್ (ಉದ್ಭಕ. ಹ. ೦೬೬-೨೩) ; ಹಲಗೆಯ್ಯ ಕುರುಭೂಮಿ ಕೌರವಕುಲದ ತಲೆ ಸಾರಿಗಳು ನೆಱೆಯುಲಿ ಗೆಲಲು ಬಂದೆನು ಕೊಳ್ಳ ಹಾಸಂಗಿಗಳನು (ಕುಮಾದ್ರೋ. ೦೦-೯೯); ಕರಗಿ ಕಂದುತ ಮನವಿಳಿದು ಲೆತ್ತದ ಹಾಸಂಗಿಯನಂತಿರಿಸಿ . . . ಇಂತೆಂದಳು (ಶೃಂಚೂ. I, ೯೮) ೨. ಪಗಡೆಯ ಹಾಸು ; ಪಗಡೆಪಟ್ಟ : ಹರಹು ಹಾಸಂಗಿಗಳನಾಡುವೆವು (ವಳದ. ೯-೨೬) ; ಲೋಕೇಶನಾ ಪುರಲಕ್ಷ್ಮಿಯಾಡಲ್ಕೆಂದು ಹಾಸಿದ ಹಾಸಂಗಿ ಯಂತೆ ನಾಕಲೋಕವ ಜಱೆವುತ ಸೊಬಗಿನಿಂದಾನೇಕ ಚವ್ವೀದಿ ರಾಜಿಪುದು (ಜ್ಞಾವಶ. ೦-೦೨೬) ; ಒಂದೆಡೆಯಲ್ಲಿ ಹಾಸಂಗಿಯಂ ಪಾಸಿದಂದದಿಂದೆ . . . ಒಪ್ಪಿದುವು ಪೂಗಿಡುಗಳು (ಕೀಶರಾ. ೭-೦೨) ; ಹಾಸಂಗಿಯನ್ನು ಹಾಸಿದರು. ಸಾರಿಯ ಸಾಲನ್ನು ಜೋಡಿಸಿದರು (ರಾಜಸೂ. ೯೬) ; ಹಗಲಿರುಳ ಹಾಸಂಗಿ ಯೊಡ್ಡಿ ಮಾನವರಂ ಬಿಸುಗೆಯಾಗಿಸಿ ನಿಯತಿಯಾಡಿಸುವುದವರಂ (ಗೀಖಂ. ೦೨೨-೩೫). **ಹಾಸಗಿ** : ೧. ಇಳೆಯಾಧಿಪರ ಮನವನರಿದಾ ನೆತ್ತವಲಗೆಯ ಶಕುನಿ ತಂದಿರಿಸಿ ನಿಲಿಸಿ ಸಾರಿಯನು ಹಾಸಗಿಯನೀಯಲು ಕೈಗೆ ಚಲದಂಕ ರಂದಾಡಿದರು (ಶೇಖಸಂ. ೨೯-೨೬).

[< ಪ್ರಾ. ಪಾಸಗ./ಸಂ. ಪಾಶಕ./ಪಾಲಿ. ಪಾಸಕ]

**ಪಾಸಂಡಿ**, ಪಾಶಾಂಡಿ, ಪಾಷಾಂಡಿ (ನಾ). ೧. ವ್ರತಿ : ಸಂನ್ಯಾಸಿ : ಲೇಸೆನಿಸಿದ ಮೂಱುಮನಾಶ್ರೀಸೆಯೊಳಂ ಕಱೆಯುಲಿಱಿಗೆ ಸೀರ್ಗಮದುಚಿತಂ ಪಾಸಂಡಿಗೆ ಶಿಶುಗಳ್ ಸಂತೋಸದೆ ತಾನಿರ್ಕೆಮೆಂದಪನೊಳ್ಪಿನ ಬಟ್ಟಂ (ಅಬ್ಬಿಮ ೬-೯೫). ೨. ಪಾಷಂಡ ೩ : ಪಾಷಂಡಿ ಪಾಸಂಡಿ (ಶಮದ. ೨೫೩ ಪ್ರಯೋ). **ಪಾಶಾಂಡಿ** : ೨. ಪಾಶಾಂಡಿಗೆ ಲೋಕವಿಲ್ಲ. ಪಾಷಾಣಕ್ಕೆ ರೋಗವಿಲ್ಲ (ಗಾದೆ). **ಪಾಷಾಂಡಿ** : ೨. ಪಾಷಾಂಡಿಗಳಪ್ಪ ಪಾಶವ ಹೊತ್ತು ತಿರುಗುವ ವೇಷಧಾರಿಗಳೆಲ್ಲರು ಜಂಗಮವಲ್ಲದೆ ಜ್ಞಾನ ಜಂಗಮವಲ್ಲ (ಪೋಳಿವಾ. ೦೫೫-೫೮೩). [< ಪ್ರಾ. ಪಾಸಂಡಿ. / ಸಂ. ಪಾಷಂಡಿನ್]

**ಪಾಸಗೆ₁** ‘ ಪಾಸಂಗೆ ’ ನೋ.

**ಪಾಸಗೆ₂** (ನಾ). ಮಲ್ಲಯುದ್ಧದ ಒಂದು ಪಟ್ಟು,—ಹಿಡಿತ : ಪಾಸಗೆ ವನ್ನಿಮುಂಟ್ಟೆ ಚಟ್ಟು ಸಿರಣಪಟ್ಟೆ ಬಾಹುದಣೆ ಖಿಮ್ಮರಿ ಕತ್ತರಿ . . . ಎನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (?) (ಚಂದ್ರಪು. ೫-೭೮) ; ಕಮ್ಮರಿ ಮುಹುಡಂ ಜವತ್ಸವಡಿ ಪಾಸಗೆ ಕಕ್ಕವಡುಪು . . . ಎನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಪುಬಿ. ೨೬-೦೮). [?]

**ಪಾಸಟಿ** (ನಾ). ಸರಿ ; ಸಾಟಿ ; ಸಮ : “ಸರಿ, ದೊರೆ, ಪಡಿ, ಗೆಡೆ, ಪಾಟಿ, ಪಾಸಟಿ . . . ಸಂಗಡಂ—ಈ ೧೮ ಸಮಾನಕ್ಕೆ ಪೆಸರ್” (ಕಬಸಾ. ೫೯-೨೯) ; ಪವನಸುತಂಗೆ ಪಾಸಟಿಗಳೊರ್ವರುಮಿಲ್ಲ (ಪಂಪಭಾ. ೦೨.೦೨೦) ; ಬಾಯಿಬಡಿಕರು ಬಗುಳಿದರೆ ಹರಿಯಾಯಕಿಕೆ ಪಾಸಟಿಯೆ (ಕುಮಾಸ. ೯-೯೭); ರೂಪಿನಲಿ ನೀನತಿಚೆಲುವ ನಿನಗವಳು ಪಾಸಟಿ ಸತಿಗೆ ನೀನೇ ರಮಣನಲ್ಲದೆ ಕಾಣೆನಿತರರನು (ನಳಚ. ೨-೨೫).

**ಪಾಸಟಿಕೆ** (ನಾ). ಸಮಾನತೆ (?) : ಮೊದಲೊಳ್ ತಾಂ ಮಾನಸನಾಗಿ ದೇವಕ್ಕಳಂ ಭಕ್ತಿಯಿಂದಂ ಪದೆದು ತನಗಿಳಿಪಿಕೊಂಡಂತೆ ಮಯಿಂದೆತ್ತಿ ಕೊಂಡುಂ ಕೀಳ್ಗುದಿವರನಾ ಕೀಳಿಲಿಂ ಬಳಿಕೆ ರೂಢಿಸುತೆ ಪಾಸಟಿಕೆಯುಂ ಪುದುವಿನಾ ನಣ್ಪನೆಲ್ಲರುಮಂ ಕವಿ ಸತ್ಯಲೋಕದೊಳಾಳ್ವಂ (ಪಂಸಕ. ೦೨-೩೦).

[ಪಾಸಟಿ + - ಇಕೆ]

**ಪಾಸಟಿಗಾಣು** (ಕ್ರಿ). ಸದೃಶವಾದುದನ್ನು ಕಾಣು ; ಸಮಾನವಾದು ದನ್ನು ನೋಡು : ನರನಟನೆ ತೋರಿದ ಲಕ್ಷ್ಮೀನಲ್ಲನಾ ಪಾಸಟಿಗಾಣೆ ಅಪ್ರತಿಮಲ್ಲ (ಜಗದಾ. ೩೯೦). [ಪಾಸಟಿ + ಕಾಣು (<ಕಾಣ್)]

**ಪಾಸರೆ** ‘ ಪಾಸಱೆ ’ ನೋ.

**ಪಾಸಲೆ** ‘ ಫಾಸಲೆ ’ ನೋ.

**ಪಾಸಱೆ**, ಪಾಸರೆ, ಹಾಸರೆ, ಹಾಸಱೆ (ನಾ). ಅಗಲವಾದ ಕಲ್ಲು ; ಹಾಸುಗಲ್ಲು ; ಹಾಸುಬಂಡೆ : ಪಾಸಱೆ ಸಿಂಹಪೀಠಮಾಗಿರುತಿ ಮುಂಗಳ ಗೀತಿ ಭೂತಳರ ಪಾಸು (ಪಂಪಭಾ. ೭-೨೯) ; ಒಗೆವನೊ ಬೀಸಿ ಪಾಸಱೆ ಯೊಳ್ (ಪಂರಾಮಾ. ೯-೦೭) ; ಪರಲೆಲ್ಲಂ ಮುತ್ತು ಮಾಣಿಕಂ ಪಾಸಱೆಗಳ್ ಪರುಸಂಗಳ್ (ಶಮದ. ೬೯ ಪ್ರಯೋ) ; ಬಜಸಿಡಿಲೆಱಗೆ ಪಾಸಱೆ ಬಿರಿವಂತೆ ಪೊಚ್ಚರಿಸಿ ಸೀಳಾಯ್ತು ಮತ್ತೊಡನೆ . . . ತೆಱೆದುದಾ ವಜ್ರಕವಾಟ (ಧರ್ಮ. ೨೯-೭೫). **ಪಾಸರೆ** : ಹೊಳೆಯೊಳು ನೀರೊಳಗಿರುವ ಪಾಸರೆಯೊಳು ಮರೆ ಯಾಗಿ ಮೀನಿರುವಂತೆ . . . ಪಾಪಾಗಿ ನಾನಿಹೆನಲ್ತ (ಇಂಶಾಶ. ೨೯೦-೯೫) ; ಅಷ್ಟರಲ್ಲಿ ಶಿಷ್ಯವೃಂದವು ಆ ಪಾಸರೆಯನ್ನು ಸಮೀಪಿಸಿತ್ತು (ಪಂಮಕೂ. ೭೮). **ಹಾಸರೆ** : ಆ ಹೆದ್ದಾರಿಯೇ ಮೇರೆಯಾಗಿ ನಡೆದು ಹಾಸರೆಯಲ್ಲಿ ನಿಂದು ಅಲ್ಲಿಂದ ಮೂಡ ಮುಂತಾಗಿ (ಎಕ. III, ಶ್ರೀರಂಗ. ೦೩೩-೭೫ ; 1458) ; ಸಮೀಪದ ಹೆದ್ದಾರಿಯ ಒತ್ತಿರಿಣ ಕರಿಯ ಕಲ್ಲ ಹಾಸರೆ (ಎಕ. VII, ಶಿವಮೊ. ೨೬-೨೫೭ ; 1524); ನೆಲದ ಹಾಸರೆಯೊಳಂ ತಳೆದ ಮಣಿವಾವುಗೆಯ ಕುರುಹ ಲೇಸಿನಿಂ ವಸುನೀರಿನಿಂದೆ ಚಿತ್ರಿಸಿದರೆಂಬಂತೆ ಸಲೆ ರಾಜಿಸುತಿರೆ (ಪವಮೋ. ೨೯-೬೦) ; ಮಳೆ ಗಾಳಿಗಳ ನಿರಂತರ ಆಘಾತದಿಂದ ಪಾಸರೆಯಾದರೂ ಒಂದು ದಿನ ಬಿರಿಯುವುದು (ಶಾಹುತ. ೯೯). **ಹಾಸಱೆ** : ಒಡಗಣ

ಭಾಗದ ಹಾಸಱಿ (ತೌಇಂ. IX-1, ೨೫೦-೬೩ ; 1148) ; ಹಾಱುವ ಮೊರಡಿಗಳನೆದ್ದು ಹರಿದಿಡುವ ಹಾಸಱಿಗಳ . . . ಸಿದ್ಧರಾಮಂಗೆ ತೋಱುತ್ತ ನಡೆತಂದನಾ ದಿಗಂಬರವೀರನು (ಸಿದ್ಧರಾ. ೩-೨) ; ಸೂಸಕದ ಮುತ್ತುಗಳು ತಾರಾರಾಶಿಗಳ ಹಬ್ಬುಗೆಯ ನೀಲದ ಹಾಸಱಿಗಳು ಪೋಲುತಿಪ್ಪವು ಗಗನಮಂಡಲವ (ಕುವ್ಯಾಕ. ೦೩-೩೦) ; ಕಾಳಕೂಟದ ಮಡುವಿನೊಳು ಮುಳುಗುವೆನೊ ಹಾಸಱಿಯೊಳಗೆ ಬೀಳುವೆನೊ (ತಳತ. ೫-೨೩). [ಪಾಸು₁+ಅಱಿ₄]

**ಪಾಸಱಿಗಲ್ಲು**, ಹಾಸರೆಗಲ್ಲು, ಹಾಸಱಿಗಲು, ಹಾಸಱಿಗಲ್ಲು (ನಾ). = ಪಾಸಱಿ : ಅದಱ ಸೀಮೆ . . . ಮೂಡ ಪಾಸಱಿಗಲ್ಲು ತೆಂಕ ಅಪ್ಪೋಪವಾಸಿಗಟ್ಟು ಪಡುವ ನಟ್ಟ ಕಲ್ಲು (ಎಕ. VII. ಶಿಕಾ. ೦೨೦-೦೯ ; 1048) ; ಅರಿಯುಮಸ್ನೈತಂದುದಯಾದ್ರಿಯ ಪಾಸಱಿಗಲ್ಲ ಮೇಲೆ ಮಂಡಿಸಿದ (ಶಂಪ. ೯-೨೦೯). **ಹಾಸರೆಗಲ್ಲು** : ಕರಸಿದರು ಹುಡಿಗಲ್ಲು ನಿಡುಗಲ್ಲು ಬಡಿಗಲ್ಲು ಭರ ಹಾಸರೆಗಲ್ಲು ಬಿರಿಗಲ್ಲುಗಳನು (ನವಮೋ. ೩೨-೩೩). **ಹಾಸಱಿಗಲು** : ಕೆಱೆಯೇರಿಯ ಕೆಳಗಣೆರಡುಂ ಹಾಸಱಿಗಲುಗಳ ನಡುವಣ ಗದ್ದೆ[ಯ] ಮತ್ತರೆರಡುಂ (ಕಇಳ. ೬೨-೦೩-೯೩ ; 1117). **ಹಾಸಱಿಗಲ್ಲು** : ಆ ಗದ್ದೆಯಿಂ ಮೂಡಲು ನಟ್ಟ ಕಲ್ಲು ಅಲ್ಲಿಂ ತೆಂಕ ಹಾಸಱಿಗಲ್ಲು (ಎಕ. II. ೩೩೯-೨೭ ; 1282) ; ನಿಡಿಗಲ್ಲು ನಿಶಿತ ಹಾಸಱಿಗಲ್ಲು ಚೌಕದ ಬಿಡಿಗಲ್ಲು ಬಟ್ಟುಗಲ್ಲು ಬೀಳ ತುಡುಕಿದ ಪಷ್ರವರ್ಗಣದಿಂದೆ ಶ್ರೀಕೃಷ್ಣ ಹುಡಿಯೇಳಲೆಚ್ಚು ಹಾಱಿಸಿದ (ಪೋಪತ. ೪೦-೬೩). [ಪಾಸಱಿ + ಕಲ್ಲು (< ಕಲ್₃)]

**ಪಾಸಾಣ**, ಪಾಶಾಣ (ನಾ). ೧. ಕಲ್ಲು : ಶಿಲೆ : “ಪಾಸಾಣಂ ಶಿಲೆ” (ಕರ್ಣಾ. ೬೦) ; ಪಾಷಾಣ—ಪಾಸಾಣ (ಶಮದ. ೨೫೩ ವೃತ್ತಿ). ೨. ಅಶ್ಮರೀ ರೋಗದಿಂದ ಉಂಟಾಗುವ ಮೂತ್ರವಿಕಾರ ; ಮೂತ್ರದೊಳಗಿನ ಕಲ್ಲು : ನಿರುತಂ ಜಾಜಿಯ ಬೇರಂ ಕರಿಯಾಡಿನ ಹಾಲೊಳರೆದು ಮೂಱುದಿನಂ ಶರ್ಕರೆವೆರಸು ಕುಡಿಯೆ ಪಾಸಾ(ಸ)ಣದ ರೋಗಮುಂ ಮೂತ್ರಕೃಚ್ಛ್ರಮುಂ ಪ್ರಶಮಿಸುಗುಂ (ಲೋಕೋಪ. ೯-೦೩೫). **ಪಾಶಾಣ** : ೧. ‘ಪಾಶಾಣ’ ಪರಾ. [< ಪ್ರಾ. ಪಾಸಾಣ, / ಸಂ. ಪಾಷಾಣ]

**ಪಾಸಾಲೆ** (ನಾ). ಬಾಯಿ ಅಗಲವಾಗಿರುವ ಪಾತ್ರೆ : ಬಿಂದಿಗೆ ಪಾಸಾಲೆ ಅಡ್ಡಣಿಗೆಗಳನು ತಂದು ಹಂವಣದೊಳಿರಿಸಿ (ಪಾರ್ಶ್ವಜಾ. ೩-೯೭) ; ಚಿನ್ನದ ಕೊಪ್ಪರಿಗೆ ಗಿಂಡಿ ಪಾಸಾಲೆ ತಟ್ಟೆ ಅನೇಕ ಬಟ್ಟಲುಗಳು (ತಾಪಮ. ೩೦೨) ; ಬಳಿಕ ಕೋಪನು ಲಿಂಗಮುಖಿಯಿಂದಗ್ಗಣಿಯನಾಗ ಸೆಳೆದು ಪಾಸಾಲೆಯಲಿ ದ್ರವ್ಯಗಳನೆಱಸಿ ತುಂಬಿದನು (ಶರ. ೨೨೯-೦೦). [?. ತೆಲು. ಬಾಸನ. / ಸಂ. ಭಾಜನ ?]

**ಪಾಸಿ₁** ‘ಪಾವಸೆ’ ನೋ.

**ಪಾಸಿ₂** (ನಾ). =ಪಾಸಿ₁ ೧ : ಸಾಧುರೋಹಣ ಪಾಸಿಯಂತೆ ರತ್ನಾಧಿಕರು ಮಾಧುರ್ಯಯುಕ್ತ ಹರಿಶ್ಚಂದ್ರ ಚೋಳರುಪ್ಪೋಲುಂ ಸತ್ಯರಿಹರಾ ಪುರದೊಳು (ಶ್ರರಂ. ೩-೩೨). [< ಸಂ. ಪಾಶಿನ್]

**ಪಾಸಿ₃** ‘ಫಾಸಿ’ ನೋ.

**ಪಾಸಿ₄** ‘ಘಾಸೆ’ ನೋ.

**ಪಾಸಿಕೆ**, ಹಾಸಿಕೆ₁ (ನಾ). ಹಾಸುಗೆ : ಶಯ್ಯೆ : ಬಟ್ಟೆಪೋಪರ್ ಬಱಲ್ಕೆಗಟ್ಟಿದಾನನಱೆಪುವ ಬಾಡುಂದಳಿರ ಪಾಸಿಕೆಗಳುಮಂ . . . ಒಳಕೆಯ್ದು ಬಿತ್ತಿದ ಪಳ್ಳಂಗಳೊಳಮತಿರಾದ್ರುಮಾದ ಪೇರಡವಿಯೊಳಗೆ ಬರ್ಪರ್ಗಳ್ (ಕಾದಂಬ. ೨೬೬) ; ಅಂಗಸಂಭವಮಾನಳಸ್ಸೊಲಪ್ಪ ಕೆಂದಳಿರ ಪಾಸಿಕೆಯುಂ ವಿಷನಾಮವುಳ್ಳ ಶೀತಳಜಳಮುಂ . . . ಅಕ್ಕ ಕೇವಳ ಮೆಸಗಾಭಿಚಾರಪಚಾರಮಿದೇಂ ಶಿಶಿರೋಪಚಾರಮೋ (ಜಗಪಿ. ೦೦-೪೪) ; ಕೌಶಿಕಂ . . . ಪವಡಿಸಿದ ತೃಣರಚಿತ ಪಾಸಿಕೆಯೊಳು (ಪಂಕಾರಾ. ೦-೦೨-೫೩). **ಹಾಸಿಕೆ₁** : ಹಾಸಿಕೆ ಪೊರಸೇಕೆ ಲೇಸೇಕೆ ನಿಮ್ಮ ಭೃತ್ಯನಿಗೆ (ದೇವಾವ. ೩೦-೫೨) ; ಆ ಶಿಖಂಡಿಯ ತೋಱೆ ಸರಳಿನ ಹಾಸಿಕೆಯಲೊಬ್ಬನನು ಪಾತಿನ ಪಾಸಿಯಿಂದೊಬ್ಬನನು ಮುನ್ನಿನ ಕುಲವನೆಚ್ಚಱಿಸಿ ಘಾಸಿ ಮಾಡಿದನೊಬ್ಬನನು (ಕುವ್ಯಾಕ. ೦-೩೫) ; ಹಾಸಿಕಿಲ್ಲದೆ ಹಾವಿನ ಮೇಲೆ ಒಱಗಿದವ (ಪುರಂದ. ೨-೦೦-೦).

ಹಾಸಿಕೆಪಥ್ಯ = (ವೈದ್ಯಕೀಯ ಕಾರಣಗಳಿಂದ) ಸಂಭೋಗವನ್ನು ವರ್ಜಿಸುವಿಕೆ : ಹಾಸಿಗೆಪಥ್ಯ : ಹಾಸಿಕೆಪಥ್ಯ ಇಪ್ಪತ್ತನಾಲ್ಕು ದಿವಸ (ಕಾಮಶಾ. ೨೬೬). [ಪಾಸು₁+ —ಇಕೆ]

**ಪಾಸಿಕೆಗೆಯ್ಮೆ** (ನಾ). ರತಿಕ್ರೀಡೆ ; ಸುರತ : ಎಳೆದು ಪಾಸಿಕೆಗೆಯ್ಮೆಗಳಸಿ ಮೆಯ್ಯುಗ್ಗದಂತೆ ತಳರಿಸಿ ಪೆಣ್ಣನವನುವ ಬಱಿಕವನೆಸಗುವ ಬಲ್ಮೆಗೆ ಬಱಿಸಂದೊಳಸರಿದೊಡಲನೊಪ್ಪಿಪುದು (ತಳಪಿ. ೬-೩೦ ಶಾಂಗಕ).
[ಪಾಸಿಕೆ+ಗೆಯ್ಮೆ (<ಕೈಮೆ₁)]

**ಪಾಸಿಗೆ** ‘ಪಾಸಂಗ₁’ ನೋ.

**ಪಾಸಿಸು** (ಕ್ರಿ). ಆವರಿಸು ; ವ್ಯಾಪಿಸು (?) : ಓಲೈಸಿಕೊಳುತ ನಿಜದೇಹ ಕಾಂತಿಯೊಳೆಸೆವುತಾಲಸಿತ ಹಾಟಕೇಶ್ವರರುದ್ರನಿರ್ಪರೊಡನೇಳು ಪಾತಾಳಂಗಳಂ ಪಾಸಿಸುತ್ತ ಭೂಪ್ರಸ್ಥಾಂತವಾಗಿರುತಿಹ ಮೇಲುಗಡೆಯೊಂದು ಕೋಟಿಯು ಯೋಜನಂ (ತತುಕಿ. ೫-೦-೨೦). [ಪಾಸು₁ ? + —ಇಸು₃]

**ಪಾಸಿಱು** (ಕ್ರಿ). ಹರಡಿಕೊಂಡಿರು ; ಪಸರಿಸು : ವ್ಯಾಪಿಸು : ತಳಿರತಾಗುವ ತೆರೆದುಱುಂಗಲಲೆಪದಿಂ ಸೂಸಿ ಪಾಸಿಱಿದು ಬಣ್ಣಮ್ಪರಂ ತೀವಿದಂತೆ ಬೆಡಂಗುವಡೆದ ಬಣ್ಣವಣ್ಣಿಗೆಯ ನೀರ್ಪೂಗಳ ರಜಂಗಳುಮನೊಳದೊಂಡಿವ ಪಾಲ್ಗಳುಮಂ ಪೀರ್ದು (ಕಾದಂಬ. ೫೨೬).
[ಪಾಸು₁+ಇಱು₁]

**ಪಾಸು₁**, ಹಾಸು₁ (ಕ್ರಿ). ೧. ಬಿಚ್ಚಿ ಹರಡು : ಅಗಲವಾಗಿ ಬಿಡಿಸು ; ಪಸರಿಸು: “ಪಾಸು—ಆಸ್ತರಣಕ್ರಿಯಾಯಾಂ, ತಲ್ಪೇ ಚ” (ಶಮಂ) ; ಅರಸರ್ ಬರ್ಪ ಬಟ್ಟೆಯೊಳೆಲ್ಲಂ ಪಂಚರತ್ನಂಗಳಿಂ ರಂಗವಲ್ಲಿಯನಿಕ್ಕಿ ನೇತ್ರವಟ್ಟು ದುಕೂಲ ಚೀನಾದಿ ದಿವ್ಯವಸ್ತ್ರಂಗಳಂ ಪಾಸಿ (ವಡ್ಡಾರಾ. ೨೬-೩) ; ಕುಳಿರ್ವ ಶಿಳಿನೀರನುಡುಗದೆ ತಳಿ ತಳಿರಂ ಪಾಸು ಜಳದೆಯಿಂ ಬೀಸು (ಅಂಕು. ೨-೦೫) ; ಬಲಿಯುಂ ಪಾಸಿ ಬಲಿಹರಣಂಗೆಯ್ವಂತೆ ಕೂಱಂ ಸೂಸಿ ಪೋಪುದುಂ (ಶಂತತಂ. ೨೬೯-೦೪) ; ಪಾಸಿದ ದಳಿಂಬಮುಂಗುರ್ಗಳ ಕೇಸಡಿಗಳ ಚರಣಭೂಷಣಂಗಳ ರುಚಿಯುಂ ಬಾಸಣಿಸಿ ಚಿತ್ರಪಟಮಂ ಪಾಸಿದವೊಲಿರೆ ವಧೂವರರ್ ನಡೆತಂದರ್ (ಅನಂತ. ೬-೫೪). ೨. ಒಡ್ಡು : ಎದುರಿಗೆ ಹಿಡಿ : ಮದುವೆಯಾಗಲೆವೇಳ್ಕುಮೆಂದು [ಮೇಲುದಂ ಪಾಸಿ] ಬೇಡುವುದುಂ (ಧರ್ಮಾಮೃ. ೩-೨೬೬). ೩. ನೀಡು ; ಚಾಚು : ತನುವಲ್ಲದತನು ತಾಮ ತನುಮಂ ಸುಡೆ ನಿಲಿಸಲೆಂತುಮಾಱದೆ ತನುವಂ ತನುಮಧ್ಯೆಯ ರಲರ್ವಾಸಿನ ನನೆವಾಸಿನ ಮೇಲೆ ಪಾಸಿದರ್ ತನುತನುವಂ (ಮಲ್ಲಿಕ. ೩-೩೩); ಕರಡಿ ಪಿಪೀಳಿಕಾವಳಿಗೆ ನಾಲಗೆ ಪಾಸುವವೋಲ್ ಭಯಮಂ ಭಯಂಕರರಸನಾಗ್ರಮಂ ಧರೆಗೆ ಪಾಸಿದಂ (ಶಮಕ. ೦೫-೯೬); ಪೊನ್ನ ಬಣ್ಣದ ನವಕರ್ಣಿಕಾರ ಕುಸುಮಕ್ಕೆಱಗಿರ್ದ ಮದಾಳಿ ಕಂಪುಗಾಣದೆ ಕಱಿವತ್ತು ಪೆಣ್ಣ ಪೊಸರೂಪಿನ ಪಾಪೆಗೆ ಪಾಸಿ ಬಿರ್ದ ಬಱಿಕ್ಕೊದವಿಸಿದಿಂಪುಗಾಣದಬಲಿಂ ಪೆಱಪಿಂಗುವ ಕೇಳಸಂದದಿಂ (ಲೀಲಾವ. ೯-೦೦೯); ಬಱಿಲ್ಕೋಲೆಗೆ ಹೇಸಿದರ್ ಸುಧರಗಳ ದಿಡ್ಡಿಯೊಳ್ ಕೈಗಳಂ ಪಾಸಿದರ್ ( ತಂತು. ೪೨-೩೬ ). ೪. ಅಡ್ಡಲಾಗಿ ಚಾಚಿಕೊಂಡಿರು ; ಕೆಡೆ : ಬಿದ್ದಿರು : ನೆಲನಂ ಮಾಱುದ್ದಿ ಕಿಯ್ಯಂ ಧರಾತಳದೊಳ್ ಪಾಸಿದ ತನ್ನ ತೀವ್ರಗದೆಯಂ ಕಂಡೆತ್ತಿಕೊಂಡು . . . ಮುಳಿದಿಟ್ಟಂ ಕಲಿಸತ್ತಿಗಂ (ಗದಾಯು. ೬-೩೬). **ಹಾಸು₁** : ೧. ಸಂಗಯ್ಯ ಒಲಿದಾನೊ ಒಲಿಯನೊ ಎಂಬ ಚಿಂತೆ ಹಾಸಲುಂಟು ಹೊದೆಯಲುಂಟು (ಬಸವ. ೫೨೦); ಅಂದವರಿಗಿಲ್ಲರಸ ಹಾಸಲಿಕೊಂಡು ವಸ್ತ್ರಗಳಿಲ್ಲ ಹೊದೆಯಲಿಕೆ (ಸಂಕಥ. ೨೨-೬); ಹಾಸಿಗೆಯನು ತಂದು ಹಾಸುವೆನೆಂದರೆ ಶೇಷನ ಮೇಲೆ ನೀ ಪವಡಿಸಿರ್ಪೆ (ಪುರಂದ. ೨-೬೬-೪); ಹಾಸೀಗಿ ಹಾಸೆಂದ ಮಲ್ಲೀಗಿ

ಮುಡಿಯೆಂದ (ಗಕಿ. ೭೭). ೨. ಆತನ ಪ್ರಸಾದಕ್ಕೆನ್ನ ಸೆಜಗ ಹಾಸಿ ಆರೋಗಿಸಿ ಸುಖಿಯಾದೆನು (ಸಿದ್ಧ.ವ.೪.೩೦೬-೦೦೩೭). ೫. ಹರಡಿಕೊಳ್ಳು : ಅರ್ಜುನನಂಬಿನುಜುಬೆಗೆ ಹೆಣನ ದಾವಣಿ ಹಾಸಿದವು ಸೂಸಿದವು ಬೊಂಡೆಗಳು (ಕುವ್ಯಾದ್ರೋ. ೦೦-೩).

**ಹಾಸಿ ದುಡಿ**= ಮೈ ಒಡ್ಡಿ ದುಡಿ : ಕಷ್ಟಪಟ್ಟು ಕೆಲಸ ಮಾಡು : ಹಾಸಿ ದುಡಿದರೆ ತನಗುಂಟು ತನ್ನ ಸ್ರುಪಂಚಗುಂಟು (ಬಸವ. ೩೨೪). **ಹಾಸಿ ಹೊದೆ**= ಸಂಪೂರ್ಣವಾಗಿ ಒಂದರಲ್ಲಿಯೇ ಮಗ್ನವಾಗು, —ತನ್ಮಯವಾಗು : ಚನ್ನಮಲ್ಲಿಕಾರ್ಜುನ ನಿಮ್ಮ ಪ್ರಸಾದವ ಹಾಸಿ ಹೊದೆದುಕೊಂಡಿಪ್ಪೆ (ಮಹಾದೇ. ೨. ೧೦೨-೨೩೩).

[ದೇ.॥ ತಮಿ. ಪಾಯ್, ಪಾವು]

**ಪಾಸು₂**, ಹಾಸು₃ (ನಾ). ೧. ಹಾಸುಗೆ ; ಶಯ್ಯೆ : "ತಳ್ಪಂ, ತಳಿಮಂ— ಈ ೨ ಪಾ(ಹಾ)ಸು" (ಶಬ್ದಮ. ೩೦-೦೩೨) ; ಎರಡು ಘಟಿಗೆಯಿಂದೊಳಗೆ ಪಾಸಿನ ಪೊರೆಯೊಳ್ ಪುಟ್ಟಿ . . . ಮಹರ್ಧಿಕದೇವರಾಗಿ (ವಡ್ಡಾರಾ. ೯೬-೩); ತಳಿರ್ಗಳ ಕಂಡವಟಂಗಳಿ ತಳಿರ್ಗಳ ಪಾಸುಗಳಿ ತಳಿರ್ಗಳೋವರಿಗಳಿ (ಆದಿಪು. ೦೦-೭೭) ; ಚಂದ್ರಾಪೀಡಂ . . . ಅಡಕಿಲ್ಗೊಂಡೊಪ್ಪುವ ಕೌಳುಡೆಯಿಂ ಸೊಗಯಿಸುವ ಪಾಸಿನೊಳ್ ಪಟ್ಟಿರ್ದಂ (ಕಾದಂಬ ೯೯) ; ಮಣೆಯೊಳ್ ಪಡುವುದರಿದೋ ಪಾಸಿನೊಳ್ ಪಡುವುದರಿದೋ (ಧರ್ಮಾಮೃ. ೭-೯೦). ೨. ಮಗ್ಗದಲ್ಲಿ ಉದ್ದಕ್ಕೆ ಹಾಕಿರುವ ಎಳೆಗಳ ಸಾಲು : ಪಟ್ಟುಗಾಜಿನ ಪಾಸಂ ತವೆ ತೋಡುವಂತೆ ಕರುಳಂ ನೀಂ ತೋಡಿದೈ ದೈತ್ಯನಾ (ಕಾವ್ಯಾವ. ೩೩೩) ; ಆಸುರದೊಳಿಂದ್ರಜಾಲದ ಕೂಸುಗಳಂ ಕಂಸನೆಸಗಿದನಜೆಯೊಳ್ ನೆತ್ತರ್ ಸೂಸೆ ದೆಸೆದೆಸೆಗೆ ಕೆಂಪಿನ ಪಾಸಂ ಪಿಡಿದೊಗೆವ ಪಟ್ಟುಗಾಜಿನ ತೆಱದಿಂ (ಅರ್ಜನೇ. ೭-೩೦). 'ಪೊಕ್ಕು₂' ಪರಾ. **ಹಾಸು₃** : ೧. "ಶಯ್ಯೆ, ಶಯನೀಯ, ಶಯನ—ಹಾಸು" (ಹಾಡಿಣ. ೬) ; ಹಾಸನಡಿದು ಕಂಥೆಯಂ ಪೊಲಿಸುವ ಮೆದೆಯುಂ ಸುಟ್ಟುರೆಳಂ ಕುಜುಕುವ ತುಪ್ಪವನೊಕ್ಕು ಸಗಣವುಂ ಕೊಳ್ವ . . . ಎಗ್ಗನಂ ಪೋಲ್ವೆಂ (ಧರ್ಮಾಮೃ. ೩-೨೦) ; ಹಾಸಿನೊಳು ಪವಡಿಸುವಾತನೆಂತು ಕಲುನೆಲದೊಳೊಜಗುವೆ (ಹರಿಶ. ೯-೭) ; ಹಾಲ ಸಾಗರ ಮನೆಯು ಸಜ್ಜೆಯು ಮೇಲೆ ಶೇಷನ ಹಾಸು (ಸಂಧಶ. ೭-೦). ೨. ಕಾಸಿ ಕಮ್ಮಾಜನಾದ ಬೇಸಿ ಮಡಿವಾಳನಾದ ಹಾಸನಿಕ್ಕಿ ಸಾಲಿಗನಾದ (ಬಸವ. ೩೯೦). ೩. ಪಗಡೆಆಟದಲ್ಲಿ ಹಾಸುವ, ಮನೆಗಳುಳ್ಳ ಪಟ ; ಪಗಡೆಪಟ್ಟ : ಪಗಡೆಯ ಕಾಯಿ ಹಾಸನ್ನೆಲ್ಲ ಸುತ್ತಿ ಬಂದು ಹಣ್ಣಾಯಿತು! (ಬಿಂಕಿವು. ೨೯೯) ; ಆಟಕ್ಕೆ ಹಾಸು ಹಾಸಿದೆ ಬಾ ಆಡೋಣ (ವ್ಯಾಸಪಿ. ೦೨೦). ಕೆಲವು ಸಾಮಂತರು ಪಗಡೆಯಾಡಲು ಹಾಸನ್ನು ಬಿಚ್ಚುತ್ತಿದ್ದರು (ಶಾಂತಿ. ೨೩೪). ೪. ಚಾಪೆ, ಜಮಖಾನೆ ಮುಂತಾದ ಹಾಸುವ ಸಾಧನ : 'ನಿಡುಹಾಸು' ಪರಾ.

**ಪಾಸುಪೊಕ್ಕು₁, ಪಾಸುವೊಕ್ಕು₁, ಹಾಸುಹೊಕ್ಕು**= ೧. ಮಗ್ಗದಲ್ಲಿರುವ ಉದ್ದ ಎಳೆ ಹಾಗೂ ಅಡ್ಡ ಎಳೆ. ೨. ಮಗ್ಗದ ನೇಯ್ಗೆಯಲ್ಲಿ ಎಳೆಗಳು ಒಂದರಲ್ಲೊಂದು ಹೆಣೆದುಕೊಂಡಿರುವಿಕೆ. ೩. ಬಿಗಿಯಾದ ಹೊಂದಿಕೆ : ಸರ್ವರಾ ಸರ್ವಕರ್ಮಗಳ ಪಾಸುಪೊಕ್ಕಿನ ಜಟಿಲಜಾಲವೆ ಕೃತಿಪದಲ್ತೆ ನಡೆವೀ ಜಗನ್ನಾಟ್ಯಮುಂ! (ಶ್ರೀರಾಮಾ. ೩೨೦-೩೬೦) ; ಸೆಕಂಡು, ಮಿನಿಟು, ತಾಸುಗಳ ಹಾಸುಹೊಕ್ಕಿನಲಿ ಅಲ್ಲೊಂದು ಇಲ್ಲೊಂದು ಬಣ್ಣದ ನೂಲು (ನೆಂಮು. ೩೦-೨೪) ; ಭಾವದ ಒಂದೊಂದೂ ಸುಳಿವು ಎಳೆಎಳೆಯಾಗಿ ಬಿಡಿಸಿ ಬಂದು, ಹಾಸುಹೊಕ್ಕಾಗಿ ಹೆಣೆದು, ಹೊನ್ನ ಪೊರೆಯಾಗಿ ಕಣ್ಣನ್ನು, ಮನಸ್ಸನ್ನು ಮುತ್ತುತ್ತಿದ್ದಿತು (ನವಿ. ೩). ೪. ಸಮಗ್ರವಾದುದು : ಎನ್ನೊಳಿಂತಿದು ಪಾಸುಪೊಕ್ಕು (ರಾಮಾಶ್ವ. ೦೦೭-೨೭); ಬೀಡು ಕಾಣಿಕೆಯಿತ್ತು ಕಂಡುದು ನಾಡೆ ಕಾಣಿಸಿದನು ಪುರೋಚನ ಕೂಡೆ ಸಂದನು ಹಾಸುಹೊಕ್ಕಾಗವರ ಮನವಜಿದು (ಕುವ್ಯಾಕ. ೬-೮೪). **ಹಾಸಿನ ನುಲಿ**— ತಿರುಚಿಕೊಂಡಿರುವ ಮಗ್ಗದ ನೂಲು : (೬). **ಹಾಸುಹೊದ್ದು**— (ಸಂಪೂರ್ಣವಾಗಿ) ಹೊಂದಿರುವಿಕೆ ; ರೂಢಿಯಾಗಿರುವಿಕೆ. ಅಭ್ಯಾಸ : ಹುಡುಗತನದಿಂದಲೂ ಅದೇ ಹಾಸುಹೊದ್ದಾಗಿ ಹೋಗಿದೆ ನನಗೆ (ಮಹೋಶಂ. ೯೯). [<ಪಾಸು₁]

**ಪಾಸು₃** 'ಪಾಸ₁' ನೋ.

**ಪಾಸು₄**, ಪಾಸ್ (ನಾ). ೧. ತೇರ್ಗಡೆ ; ಉತ್ತೀರ್ಣವಾಗುವಿಕೆ ; ಸಫಲತೆ : ಅಷ್ಟೆಲ್ಲ ಓದಿಸಿ ಪಾಸಾಯಿತೆನುವಾಗ ಇಲ್ಲದೆ ಹೋದರು ತಂದೆ (ಬಂಗಾಶ. ೨೨-೯೭) ; ಗೋಪಾಲರಾಯ ಮೆಟ್ರಿಕ್ ಪಾಸಾದ ಅಧ್ಯಾಪಕ (ಮುಂಗಾಮು. ೨೪). ೨. ಒಪ್ಪಿಗೆ ; ಪಸಂದಾಗುವಿಕೆ ; ಮೆಚ್ಚಾಗುವಿಕೆ : ಯಾವ ಕನ್ಯೆಯೂ ಅವನಿಗೆ ಪಾಸು ಎನಿಸಲಿಲ್ಲ ; ಇನ್ನೂ 'ವರ'ನಾಗಿಯೆ ಉಳಿದಿದ್ದಾನೆ (ರೂಢಿ). ೩. ಅಪ್ಪಣೆಚೀಟಿ; ಅನುಜ್ಞಾಪತ್ರ ; ಪರವಾನೆ ; ರಹದಾರಿ : ಸರ್ಕಾರಿನೌಕರನಾದುದರಿಂದ ಅವನಿಗೆ ಪ್ರವಾಸಕ್ಕೆ ಪಾಸು ಕೊಟ್ಟೇ ಕೊಡುತ್ತಾರೆ (ರೂಢಿ). ೪. ನಾಟಕ, ಸಿನಿಮಾ ಮೊದಲಾದಂವುಗಳಿಗೆ ವಿಶೇಷ ವ್ಯಕ್ತಿಗಳಿಗೆ ನೀಡುವ (ಶುಲ್ಕವಿಲ್ಲದ) ಪ್ರವೇಶಪತ್ರ : ಜೇಬಿನಿಂದ ಪಾಸುಗಳನ್ನು ತೆಗೆಯುತ್ತ . . . ಇವೇನು ಕಾಂಪ್ಲಿಮೆಂಟರಿ ಆಗೋದಿಲ್ಲ ಎನ್ನುತ್ತ ಪಾಸುಗಳನ್ನು ಕೊಡಬಂದ (ರಂಗಜಾ. ೯೩). **ಪಾಸ್** : ೧. ನಾನಾದರೂ ಪಾಸ್ ಆದವರಲ್ಲಿ ಒಂಬತ್ತನೆಯವನು (ಕೋಳಮು. ೨೨೭).

**ಪಾಸಾಗು**= ತೇರ್ಗಡೆಯನ್ನು ಹೊಂದು; ಉತ್ತೀರ್ಣತೆಯನ್ನು ಪಡೆ : ಸಫಲವಾಗು : ಅವನು ಪರೀಕ್ಷೆಯಲ್ಲಿ ಪಾಸಾಗುವ ನಿರೀಕ್ಷೆ ಇಲ್ಲ (ರೂಢಿ). **ಪಾಸು ಬೀಳು**= ಮನಸ್ಸಿಗೆ ಬರು : ಅಂಗಡಿಕಾರನು ತೋರಿಸಿದ ಯಾವ ಸೀರೆಯೂ ಅವಳಿಗೆ ಪಾಸು ಬೀಳಲಿಲ್ಲ (ರೂಢಿ). **ಪಾಸು ಮಾಡು**= ೧. ಒಪ್ಪು ; ಮೆಚ್ಚು : ವರ ಪಾಸು ಮಾಡುವ ಗುಂಗಿನಲ್ಲಿಯೇ ಇವನನ್ನು ತಮ್ಮ ಪಾಸಲಿಸ್ಟಿನೊಳಗೇರಿಸಿದರು (ಅಶಜಾ. ೦೦). ೨. ಮಂಜೂರು ಮಾಡು ; ನಿರ್ಣಯಿಸು ; ಠರಾಯಿಸು : ಕವಡ ಗಂಟಕರು ಕೂಡಿ ತಮಗೆ ಅನುಕೂಲವಾಗುವಂತೆ ಠರಾವು ಪಾಸು ಮಾಡಿಕೊಳ್ಳುವ ನಾಟಕವೂ ಅಲ್ಲ (ಅಶಜಾ. ೪). [←ಇಂ. Pass]

**ಪಾಸುಂದೊವಲ್** (ನಾ). ಹಾಸುವ ಚರ್ಮ ; ಕೃಷ್ಣಾಜಿನ : ಆ ಜೋಗವಟ್ಟಿಗೆಯುಮಾ ಬೆಳ್ಪಡೆಯುಮಾ ಬೆಂಬೂದಿಯ ಪೂಸುಂ . . . ಮೇಣಾ ಪಾಸುಂದೊವಲುಮೆನ್ನೀ ಎಸುಗೆಯ ಕೂರಂಬಿನ ಮನೆಗೊಂದು ಕುತ್ತಿಸಳ ಜಾಲಿಗೆ ಸೀಕರಿವೋಗದೇಂ ಮಾಣ್ಗುಂ (ಲಾಮಾಶ. ೩೬-೦೩).

[ಪಾಸು₁+ತೊವಲ್₂ (<ತೋಲ್₁)]

**ಪಾಸುಂಪೊಕ್ಕುಂ, ಪಾಸುಪೊಕ್ಕು₂, ಪಾಸುವೊಕ್ಕುಂ, ಹಾಸುಹೊಕ್ಕು₂** (ಅ). ಅಡ್ಡಕ್ಕೂ ಹಾಗೂ ಉದ್ದಕ್ಕೂ ; ಓತಪ್ರೋತವಾಗಿ : ಅತ್ತಲೂ ಇತ್ತಲೂ ; ಉದ್ದಗಲವಾಗಿ: ಆ ಸಭೆಯೊಳ್ ಹರಿಕರವಿನ್ಯಾಸಂಗಳ್ ನುಡಿಯನಡಕುವಂತಿರೆ ನುಡಿದಂ ಪಾಸುಂಪೊಕ್ಕುಂ ಪರೆದು ಸಭಾಸದನಂ ತೊಳಗಿ ಬೆಳಗೆ ದಂತಪ್ರಭೆಗಳ್ (ಹಂಪಿಶ. ೯-೩೪) ; ಪಾಸುಂಪೊಕ್ಕುಂ ಬಂದು ನಿಚಿತವಚನಕದಂಬಕಮೆರ್ದೆಗೊಳಿಸೆ ಸಭೆಯ ವಿಬುಧಾವಳಿಯಂ (ಶಾಂತಿಪು.೯-೦೨೪) : ಅಂತಿದಿರುಂ ಬಟಿಯುಂ ಪಾಸುಂಪೊಕ್ಕುಂ . . . ಪರಿದು (ಗದಾಯು. ೭-೨೯ ಪ). **ಪಾಸುಪೊಕ್ಕು₂** : ತೊಳಲಿದರ್ ತೊಳತೊಳಲಿ, ಬಗೆಯದೆ ಬಳಲ್ಕೆಯಂ ಬೆಮೆಗೊಂಡ ಪಾಂಗಿನಿಂ ಪಾಸುಪೊಕ್ಕಾಗಿ ಬನ ಬೆಟ್ಟಗಳಲೆಲ್ಲೆಲ್ಲಿಯುಂ (ಕರ್ಣಾಂಗ. ೩೨-೦೯೨೭). **ಪಾಸುಪೊಕ್ಕುಂ** ಪಾಱುಂ ಬಟಿಯುಂ, ಪಾಸುವೊಕ್ಕುಂ (ಕರ್ಣಾಪು. ೬೩ ವ್ಯಾಖ್ಯಾ). **ಹಾಸುಹೊಕ್ಕು₂** : ಎಡಹುತ್ತ ತಾಗುತ್ತಲಿಲುಗಳಂ ಮೆಟ್ಟಿ ತನ್ನಡಿಗಳಳುಕಿತ್ತನೆಜಿಯದೆ ಹಾಸುಹೊಕ್ಕು ಹರಿದಾಡಿದಂ ಭೂಪಾಲನು (ಹರಿಶ. ೦೦-೯೨) ; ದಿಕ್ಕು ದಿಕ್ಕಿಗೆ ಕದಲಿಸುವನಶ್ವವ ಹಾಸುಹೊಕ್ಕಾಗಿ ತಾಂಡುತಾಂಡಾಗಿ ಸಕ್ಕನೆ

ಸರಿತದೊಳೇಜಿ ತೋಜಿದನೆವೆಯುಕ್ಕುವಪ್ಪುಜಿಗೊಳೆರಲ್ಪಾರಿ (ಶಶ. ೩೦-೭೩).
[ಪಾಸು$_2$+ಪೊಕ್ಕು$_2$]

**ಪಾಸುಂಬಲೆ.** ಪಾಸುವಲೆ. ಹಾಸುವಲೆ (ನಾ). ಒಂದು ಬಗೆಯ ಬಲೆ : ತಡಿಕೆವಲೆಯು ಬೀಸುಂಬಲೆಯು ಪಾಸುಂಬಲೆಯು ಕಣ್ಣಿವಲೆಯು . . . ಬಲ್ಲೊ ಜಿಪೊತ್ತು (ರಾವಶ್ಕ. ೬೩-೨೮). **ಪಾಸುವಲೆ :** ಬಡಿಕೋಲು ಜಾಯಿಲಂ ಪಾಸುವಲೆ ಬೀಸುವಲೆ. . . ಪಿಡಿದು . . . ಅಟವಿಯೊಳು ಬೇಂಟೆ ಯಾಡುತ್ತಿರ್ದರು (ರಾಶತ. ೦೭-೬೬). **ಹಾಸುವಲೆ :** ತಡಿಕೆವಲೆ ಕಟ್ಟಿವಲೆ ಹಾಸುವಲೆ ಬೀಸುವಲೆ . . . ಮುಂದಾಸಿನವಲೆಯು ಪೋಜಿಗಳ ಬೇಡವಡೆ ನೆರೆದುದು (ಹಶಣಾ. ೩-೮) ; ಹಾಸುವಲೆಗಳಿಂದ ಹರಿವಲೆಯಿಂದ . . . ಬೇಂಟೆಯು ಜನರಲ್ಲಿ ಘಾಸಿ ಮಾಡುವರು ಮೃಗಗಳ (ರಾವುವಿ. ೦೩-೬೩) ; ಹಾಸುವಲೆಯು ಹರಿವಲೆಯುಂಟು . . . ವಾರಣದಿಂದ ಎಸೆವರು ವಿಪಿನದೊಳ್ ಚರರು (ಅನ್ನಲಿ. ೩-೨೬). [ಪಾಸು$_1$+ಬಲೆ$_1$]

**ಪಾಸುಗಲ್,** ಹಾಸುಕಲ್ಲು, ಹಾಸುಗಲ್ಲು (ನಾ). ೧. ಅಗಲವಾದ ಚಪ್ಪಟೆಕಲ್ಲು : ಹಾಸರೆಗಲ್ಲು : ಮಾಣಿಕಗುಂಬದೋಳಿಯಿಂದಾರ್ಚಿದ ಪಚ್ಚೆಯ ಪಾಸುಗಲ್ಲ ಬಿನ್ನಾಣದಿನಿಂದ್ರನೀಲಮಣಿವೇದಿಕೆಯಿಂ . . . ಬಗೆಗೆ ಕೌತುಕವಾಯ್ತು ವಿವಾಹಮಂಟಪಂ (ಜನ್ನಲಿ. ೬-೯). **ಹಾಸುಕಲ್ಲು:** ೧. ಪಚ್ಚೆಯ ಹಾಸುಕಲ್ಲುಗಳಿಂ ಕುರುವಿಂದದ ಜಗತಿಗಳಿಂದ ಕಟ್ಟಿ ಚಿನ್ನದ ಗಾರೆಯಿಂ ಮಾಡಿ (ಕೌಗಂ೦. ೩೩೯-೩). **ಹಾಸುಗಲ್ಲು :** ೧. ಅಪ್ಪಾಜಿಯು ಎದ್ದು . . . ಹಾಸುಗಲ್ಲಿನ ಮೇಲೆ ಕುಳಿತುಕೊಂಡರು (ಕೆಂಗಾಳ್ಕ. ೯) ; ನಾಲ್ಕಾಳ ಅಗಳಿಗೆ ಬಿದ್ದು ಒಡೆದ ಹಾಸುಗಲ್ಲು ತಗಲಿ ಉಳಿಯುವುದೆಂದರೇನು ? (ಕಾಉಕಿ. ೦೦ ಕಥಾಶಾರ). ೨. ನೆಲಕ್ಕೆ ಹೊಂದಿಸಿರುವ ಕಲ್ಲು; ನೆಲಕ್ಕೆ ಮಟ್ಟಿರುವ ಕಲ್ಲು: ಅವರ ಮನೆಯಲ್ಲಿ ಅಂಗಳಕ್ಕೆ ಹಾಸುಗಲ್ಲು ಹಾಕಿದ್ದಾರೆ (ರೂ೨). ೩. ಕಲ್ಲಿನಿಂದ ಮಾಡಿದ ಆಸನ.—ಬೆಂಚು: ಉದ್ಯಾನದಲ್ಲಿ ಹಾಸುಗಲ್ಲುಗಳಿರುವುದರಿಂದ ಸಂಜೆ ಕುಳಿತುಕೊಳ್ಳಲು ಅನುಕೂಲವಾಗಿರುತ್ತದೆ (ರೂ೨). [ಪಾಸು$_1$+ಕಲ್$_3$]

**ಪಾಸುಗೆ$_1$,** ಪಾಸಿಗೆ, ಹಾಸಿಗೆ, ಹಾಸುಗೆ (ನಾ). =ಪಾಸಿಕೆ : ಕಾಂಚನ ಮಂಚದ ಮೇಲೆ ಚೆಲ್ವುವೆತ್ತಂಚೆಯ ತುಪ್ಪುಳಿಂ ಸಮೆದ ಪಾಸುಗೆಗಳೇಬುಮನಿಕ್ಕಿ . . . ದುಕೂಲಪರಿಚ್ಛದಂಗಳಂ ಪ್ರಾಂಚಿತಮಾಗಿ ಪಾಸಿದೊಡೆ (ಶಾರಶ್ರೀ. ೬-೦೦೭) ; ಬಸವೇಶ ತನ್ನ ಮಂದಿರಕೆ ಪಾಸುಗೆ ಯಿಂದಲಿ ಬಿಜಮಾಡಿಸಿ ತಂದನು ಮೆಸೆವ ಶರಣಜನಸಹಿತ (ನನ್ನಶಾ. ೦-೯೦). **ಪಾಸಿಗೆ :** ಪಾಸಿಗೆ ನಾಂಬ ಮುಂಬದವುಳುಂಬಂ ಕೂಟದೊಳ್ ನಲ್ಲರಾ (ಶಂಶ್ರತೃ. ೬-೭೬) ; ಬೀಸುವುದೊಮ್ಮೆ ಪಿಡಿದು ಬಿಜ್ಜಣಿಗೆಯು ಪಾಸುವುದೊಮ್ಮೆ ಪಾಸಿಗೆಯು (ಹಬಿ೨. ೯-೦೬). **ಹಾಸಿಗೆ :** "ಶಯ್ಯಾ. ಶಯನೀಯಂ. ಶಯನಂ—ಈ ೩ ಹಾಸಿಗೆ" (ನಾ೨ರಾ. ೦೨೩) ; ಹರಿಯ ಹಾಸಿಗೆಯಾದನಂತನ ಮಹಿಮೆ ಗೋಚರವೆ (ಸಂಭಶ. ೭-೨) ; ಹಾವು ಎನ್ನ ಹಾಸಿಗೆಯಂತೆ ಕದ್ದು ಬೆಣ್ಣೆಯ ನಾ ತಿಂದೆನಂತೆ (ಶುರಂದ. ೨-೦೯-೩) ; ಹರಿಗೆ ಹಾಸಿಗೆಯಾಗಬೇಕೆಂದು ಪಾತಾಳಪುರದಿಂದಲುರಗೇಂದ್ರ ಬಂದ (ಕಂಶಶಿ. ೭-೦೦); ಬದಿಯ ಹಾಸಿಗೆಗಳಲ್ಲಿ ದೊಡ್ಡಮ್ಮ, ಸೋದರತ್ತೆ, ಗಾಢ ನಿದ್ದೆ ಸೇರಿದ್ದರು (ಮೂರುದಾ. ೩೦೦). **ಹಾಸುಗೆ :** "ಪ್ರವೇಣೀ, ಆಸ್ತರಣಂ — ಈ ೨ ಹಾಸುಗೆ" (ಹಲಾಯು. ೩೦-೦೩೩).

**ಹಾಸಿಗೆಪಥ್ಯ**=(ವೈದ್ಯಕೀಯ ಕಾರಣಗಳಿಂದ) ಸಂಭೋಗವನ್ನು ವರ್ಜಿಸುವಿಕೆ : ಹಾಸಿಗೆಪಥ್ಯ ಇಲವತ್ತು ದಿನ ಇದ್ದರೆ ವೀರ್ಯವೃದ್ಧಿ (ಕಾಮುಣಾ. ೨೬೬). **ಹಾಸಿಗೆಯ ಊಳಿಗ**=ಹಾಸಿಗೆಯನ್ನು ಸಿದ್ಧಪಡಿಸುವ ಕೆಲಸ.—ಊಳಿಗ : ಅರಮನೆಯಲ್ಲಿ ಸಮಯದೊಳು ನಿತ್ಯಕಟ್ಟಳೆಯಲ್ಲಿ ನಡೆಯುವ ಊಳಿಗಗಳು...ಪಟ್ಟೆಪಾವುಡೆಯ ಊಳಿಗ. ಹಾಸಿಗೆಯ ಊಳಿಗ (ಮಹಾವಂ. I. ೯೩). **ಹಾಸಿಗೆಯಿದ್ದಷ್ಟು ಕಾಲು ಚಾಚು**=ಆದಾಯಕ್ಕೆ ತಕ್ಕಂತೆ ವೆಚ್ಚ ಮಾಡು : ಹಾಸಿಗೆಯಿದ್ದಷ್ಟು ಕಾಲು ಚಾಚಬೇಕಷ್ಟೆ (ಗ್ರಂಥಾ೧. ೦೦); ಪ್ರತಿಯೊಬ್ಬನೂ ತನ್ನ ಹಾಸಿಗೆಯಿದ್ದಷ್ಟು ಕಾಲು ಚಾಚಿ ಕೊಳ್ಳಬೇಕು (ಬಿಶವ್ಯ. ೭). **ಹಾಸುಗೆ ಹಿಡಿ**=ರೋಗದ ಕಾರಣದಿಂದ ಮಲಗು: ಬಾಯಿಲೆ ಬೀಳು: ಶೀತದ ಜೊತೆಗೆ ಜ್ವರ, ತಲೆನೋವುಗಳು ಸೇರಿಕೊಂಡವು. ಆತ ಹಾಸುಗೆ ಹಿಡಿಯಬೇಕಾಯಿತು (ಕುಡಿಕೂ. ೦೨೦).
[ಪಾಸು$_1$+ — ಗೆ. / ತುಳು. ಹಾಸಿಗೆ]

**ಪಾಸುಗೆ$_2$** 'ಪಾಸಂಗೆ' ನೋ.

**ಪಾಸುದಳಿರ್** (ನಾ). (ಹಾಸಿಗೆಯಂತೆ) ಹಾಸಿದ ಚಿಗುರೆಲೆ: ಪಾಸುದಳಿರ್ ಕರಿಂಕುವರಿದಂತಿರೆ ತೊಟ್ಟಲರ್ವಚ್ಚ ಮಾಕ್ಷಣಂ ಕೇಸುರಿ ಕೊಂಡವೊಲ್ ಬಿಗೆ ಮುರುಂಟೆ . . . ಕಾಸಿದ ಕಾಮಪುತ್ರಿಕೆಯೊಲಿರ್ದಳವಳ್ ವಿರಹೋಗ್ರ ವಹ್ನಿಯಿಂ (ಶಾಂತೀಶ್ಕ. ೩-೦೦೦). [ಪಾಸು$_1$+ತಳಿರ್$_2$]

**ಪಾಸುಪೊಕ್ಕು$_1$** 'ಪಾಸು$_2$' ಪರಾ.

**ಪಾಸುಪೊಕ್ಕು$_2$** 'ಪಾಸುಂಪೊಕ್ಕುಂ' ನೋ.

**ಪಾಸುಪೊಕ್ಕುಂ** 'ಪಾಸುಂಪೊಕ್ಕುಂ' ನೋ.

**ಪಾಸುಪೋರ್ಟು** 'ಪಾಸ್ಪೋರ್ಟು' ನೋ.

**ಪಾಸುವಂಚ** 'ಪಾಸುವಂಚ' ನೋ.

**ಪಾಸುವಣೆ.** ಹಾಸುವಣೆ (ನಾ). ೧. ಅಗಲವಾದ ಮಣೆ.—ಪೀಠ : ಹಾಸುವುಂಚವರಳ್ಗಳುಯ್ಯಾಲುವಾಸುವಣೆ[ಶಾಕಾಂ. ೯]ತಲೆಗಿಂಬು ಮೇಲ್ಮಡಿವಾಸು . . . ಒಪ್ಪೆ ವಿಳಾಸವಿಭ್ರಮದಂಗವಣೆಯ ವಿಳಾಸಿನೀವಾಸ (ಬಸಪು. ೦೨-೯). **ಹಾಸುವಣೆ :** ೧. Fungiಗಳಿಗೆ ಮಾನವನ ದೇಹದಲ್ಲಿ ಹಾಸುವಣೆ ಹಾಕಿದಂತಾಗಿದೆ (ಮನೋಶಂ. ೨೫೦). ೨. ಪಗಡೆಯಾಟದ ಹಲಗೆ : ಆ ಕಾಯಿಗಳೋ . . . ಹಾಸುವಣೆಯ ಮೇಲೆ ಮಾಯೆಯ ಕೆಂಡಗಳಂತೆ ಥುಮುಕುತ್ತವೆ (ಚಾಶಶ. ೨೩). ೩. ನೇಯ್ಗೆಯ ಹಾಸು ಇರುವ ಮಣೆ : ಬೆಳೆದು ಬಂದ ಹತ್ತೀನೇ ಹಿಡಿದು ; ಹತ್ತೀನೇ ಹಿಡಿ ವಕ್ಕೀ ಇಕ್ಕಿ ರಾಮರು ಪಿಡಿವೋ ಎಳ್ಳಿದ ಬಿಲ್ಲು ಜೋಳದ ಗಿಣಿಕೇಲ್ ಹಂಜೀ ಪಿಡಿದು ; ಹಾಸುವಣೆಯಂಬಿಗೆ ಆಧಾರ, ಅರಕಾಸಿಗೆ ಒಂದು ಕವರನೆ ಹೂಡಿ (ನಾಶರ. ೦೯೦). [ಪಾಸು$_1$+ವಣೆ]

**ಪಾಸುವಂಚ.** ಪಾಸುಮಂಚ. ಹಾಸುಮಂಚ (ನಾ). ಅಗಲವಾದ ಮಂಚ : ಸುಪ್ಪತ್ತಿಗೆಯ ಪಾಸುವಂಚದೊಳು ಸಲ್ಲಲಿತ ಸುಮಗಂಧಮಂ ಸೂಡಿ ತಾಂಬೂಲಮಂ ಮೆಲಲಿತ್ತು (ಮಹಾಂಶಿ. ೨೨-೩೩). **ಪಾಸುಮಂಚ :** ಕೊಟ್ಟಿಗೆ ಕೋಲ್ವಾರ ಕೀಲಾರ ಹೊಜೆಯ ತಾಳ್ದೊಟ್ಟಿಗಳ್ ಪಾಸುಮಂಚ ಗಳು ಪೆಟ್ಟಿಗೆ ಭಂಡಾರ ಬೊಕ್ಕಸ ಸಾಗಿ ಬಂದೊಟ್ಟುಗೂಡಿದುವು ಬೀಡಿ ನೊಳು (ಶರತ. ೨೩-೯೯). **ಹಾಸುಮಂಚ :** ರತಿಗೇಹಂ ಹಾಸುಮಂಚಂ . . . ವೀಣೆ ನೆತ್ತಂ ಸಹಚರಿಯಿವನುಳ್ಳಂಗದರ್ಗ್ಯಕರೂಪಾನ್ವಿತೆ ಜಾಣಾ ಳ್ಯಾಕೆ ಮಾಟ್ಕಿಂ ವಿಟಗಗ್ಧಭಿಮಾತವಂ ಕಾಮಸಾಮ್ರಾಜ್ಯದೊಳ್ಪಂ (ಸೂಕ್ತಿಸು. ೦೯-೨); ಗಿಳಿಗೆ ಹಾಸಿದಳು ಹಾಸುಮಂಚವ ಅಳಿಯನ ಪಂಜರ ದೊಳಗಿರಿಸಿ (ಶುರಂದ. ೦-೦೦೦-೩). [ಪಾಸು$_1$+ವಂಚ]

**ಪಾಸುವಲೆ** 'ಪಾಸುಂಬಲೆ' ನೋ.

**ಪಾಸುವೊಕ್ಕು** 'ಪಾಸು$_2$' ಪರಾ.

**ಪಾಸುಳಿ** (ಕ್ರಿ). ಹಗ್ಗವನ್ನು ಕಳಚು : ನಾಯ್ಗಳಂ ಪಾಸುಳಿದು ಬಿಡುವ . . . ಬಿಲ್ಲರರಲ್ಲಿಯ ತಂಡಮೆಸೆದುದು (ಶಕುಶ್ರೀ. ೨-೦-೨೩).
[ಪಾಸು$_3$ (<ಪಾಸ$_1$)+ಉಳಿ$_1$ (<ಉಟಿ$_1$)]

**ಪಾಸೆ$_1$** 'ಪಾವಸೆ' ನೋ.

**ಪಾಸೆ$_2$** 'ಫಾಸೆ' ನೋ.

**ಪಾಸೆವಿಳಿ** (ನಾ). ಹಾವಸೆಯ ಎಳೆ.—ನೂಲಂ : ಕುವಲಯಕುಟ್ಮಳಾ ವಳಿಯ ಪೆರ್ಗಳಿಯಂ ನೆಗೆದೇಜಿ ಲಾಗಿಸುತ್ತೆ . . . ಪಾಸೆವಿಳಿಯೊಳ್

ಮದ್ದಾಡಿ ತರಂಗಸಂಘಸಂಘಟಿತರವವಾದ್ಯಕಾಡಿದುದು ಕೂಡೆ ಝಷಂ ಪೊಸ ಡೊಂಬನೆಂಬಿನಂ (ರಾಜಶೇ. ೨-೬೨). [ ಪಾಸ್₁ (<ಪಾಪಸ್) + ಎಳಿ₂ ]

**ಪಾಸ್ಪೋರ್ಟ್**, ಪಾಸುಪೋರ್ಟ್ (ನಾ). ಇತರ ದೇಶಗಳಲ್ಲಿ ಪ್ರವಾಸ ಮಾಡುವುದಕ್ಕೂ ಹಾಗೆ ಪ್ರವಾಸ ಮಾಡುವಾಗ ತಕ್ಕ ಸಂರಕ್ಷಣೆಯನ್ನು ಪಡೆಯುವ ಹಕ್ಕಿರುವುದಕ್ಕೂ ಆ ದೇಶದ ನಿಯುಕ್ತಾಧಿಕಾರಿಯು ಕೊಡುವ ಪ್ರವಾಸಾಧಿಕಾರಪತ್ರ; ರಹದಾರಿ: "ಪ್ರವಾಸದ ರಹದಾರಿ; ಪ್ರವಾಸಪತ್ರ; ಪಾಸ್‌ಪೋರ್ಟ್" (Passport. ಶಕ್ತಿ. ೬೦). ಪಾಸುಪೋರ್ಟ್: 'ನಾನು ನಿಜಕ್ಕೂ ಬ್ರಿಟಿಷ್ ಪ್ರಜೆ.' ಪಾಸುಪೋರ್ಟನ್ನು ತಂದಿದ್ದರಾಗಿತ್ತು ಎಂದುಕೊಂಡ (ಹೊಸಕ್ಕ. ೨೬೩).

[ ←ಇಂ. Passport ]

**ಪಾಸ್ಬುಕ್** (ನಾ). ಬ್ಯಾಂಕಿನವರು, ಠೇವಣಿದಾರನು ತಮ್ಮ ಬ್ಯಾಂಕಿನಲ್ಲಿ ಇಟ್ಟ ಮತ್ತು ತೆಗೆದುಕೊಂಡ ಹಣದ ಲೆಕ್ಕವನ್ನು ಬರೆದುಕೊಡುವ ಲೆಕ್ಕದ ಪುಸ್ತಕ: ಇದನ್ನೆಲ್ಲ ಕಾಳಕ್ಕೆ ಪಾಸ್‌ಬುಕ್ ಎಂಬ ಲೆಕ್ಕದ ಪುಸ್ತಕದಲ್ಲೂ ಬರೆದು ಆಗಿಂದಾಗ್ಗೆ ತಿಳಿಸಿಕೊಡುವರು (ಹಣಕ್ಕೆ. ೪೩ ಅಡಿ). [ ←ಇಂ. Passbook ]

**ಪಾಹರೆ** 'ಪಹರೆ' ನೋ.

**ಪಾಹಿ** (ಅ). ಕಾಪಾಡು, ರಕ್ಷಿಸು ಎಂಬರ್ಥದ ಸಂಸ್ಕೃತ ಧಾತುವಿನ ವಿಧ್ಯರ್ಥದ ಆಖ್ಯಾತರೂಪ: ಇಂದುಧರನೇ ಪಾಹಿ ವಿಶ್ವೇಶ್ವರನೆ ಪಾಹಿ ಕಂದುಗೊರಳನೆ ಪಾಹಿ ಪಟನಾಟಃ ಪಾಹಿ (ಶ್ರೀ ಶಂ. ೨೦-೯೩). 'ದೇಹಿ' ಪರಾ. [ ಸಂ. ]

**ಪಾಹುಡ**₁ 'ಪಾವುಡ₁' ನೋ.

**ಪಾಹುಡ**₂ 'ಪಾವುಡ₂' ನೋ.

**ಪಾಳ್** 'ಪಾಟು' ನೋ.

**ಪಾಳ**₁ 'ಪಾಟ' ನೋ.

**ಪಾಳ**₂ 'ಪಾಲ₂' ನೋ.

**ಪಾಳಂಬಡು** 'ಪಾಟಂಬಡು' ನೋ.

**ಪಾಳಡವಿ** (ನಾ). ನಿರ್ಜನವಾದ ಅರಣ್ಯ; ಘೋರಾರಣ್ಯ: ಪಾಂ ಪಾಳಡವಿಯೊಳ್ಪಸುಳಿಯಂ ಕೊಂದುಬಹುದೆಂದು ಹೇಳಿದೊಡೆ ಚಂಡಾಲರಂದುಳುಹಿ ಬಂದರಹುದು (ಕೈಬಾಣ. ೨೯-೨೯).

[ಪಾಳ್ (<ಪಾಟು) + ಅಡವಿ]

Δ **ಪಾಳತ** 'ಹಾಳತ' ನೋ.

**ಪಾಳತಿ**, ಪಾಳ್ತಿ (ನಾ). (ಕಳ್ಳನಂತೆ) ಬೇರೆಯವರ ಚಲನವಲನಗಳನ್ನು ಗುಪ್ತವಾಗಿ ನೋಡುತ್ತಿರುವಿಕೆ; ಸಮಯಾವಕಾಶಗಳನ್ನು ಕಾದು ನೋಡುವಿಕೆ; ಹೊಂಚುಹಾಕುವಿಕೆ: ಸದ್ದು ಮಾಡದೆ ಎನಗೆ ತಿಳಿಯಾದಂತೆ ಕ್ರುದ್ಧಜನರು ಪಾಳತಿಯಲ್ಲಿ ಬಂದು ಒಳಬಿದ್ದು ಸಂಚರಿಸುವ ತೆರನಾಗಿದೆ (ಕೋಕಿಲಂ. ೯-೨೭); ಪಾಳತಿಯಲಿ ಬರುವಾ ಕರುಗಳ ಕಣ್ಣುಗಳನೆ ಬಿಡುವಾ ಬಾಲಕರನು ಬಡಿದೋಡುವ ಕಾಡುವ (ಶ್ರೀಕೃಷ್ಣ. ೬೦-೯). ಪಾಳ್ತಿ: ಇಬ್ಬರು ಬದ್ಮಾಷರು . . . ಹಿಂದಿನ ಜಂಕ್ಷನ್ನಿಂದ ಅವರ ಮ್ಯಾಲ ಪಾಳ್ತಿ ಇಟಗೆಂಡು ಬಂದಾರ (ಹೊಸಂಶಾ. ೦೦೬).

**ಪಾಳತಿಯಿಡು, ಪಾಳತಿ ಇಡು, ಪಾಳತಿಡು**=ಕಣ್ಣಿಡು; ಕಾವಲಿರು: ನಾವಿನ್ನು ಅವರ ಮೇಲೆ ಪಾಳತಿಯಿಡಬೇಕಲ್ಲ? (ಕೃಷ್ಣ. ೬೯); ಅವರು . . . ಅವನ ಮೇಲೆ ಸೂಕ್ಷ್ಮವಾಗಿ ಪಾಳತಿ ಇಟ್ಟರು (ಸವಾಜ. ೯೬೩); ನೀನು . . . ಗಂಡನ ಜೀವನದ ಬಗ್ಗೆ ಪಾಳತಿ ಇಡುವ ಧೈರ್ಯಶಾಲಿ (ಮುಕ್ತ್ಯಾರಿ. ೦೫೬); ಶ್ರೀನಿವಾಸ ನಿನ್ನ ಭಕ್ತಿ ಮಾಣದರ್ಥಾವಂತನೆಂದು ಹೀನಜನರ್ ಪಾಳತಿಟ್ಟರೇನು ಹೇಳಲ್ಯೋ? (ಶ್ರನಿಕ. ೨೨-೦).

[ ← ಮರಾ. ಪಾಳತ, ಪಾಳತೀ, ಪಾಳಥ, ಪಾಳಥೀ ]

**ಪಾಳತಿಗಾರ** (ನಾ). ಗುಪ್ತಚಾರ; ಬೇಹುಗಾರ: ಈ ಪಕ್ಷದವರ ವರ್ತಮಾನವನ್ನು ಆ ಪಕ್ಷದವರಿಗೂ, ಆ ಪಕ್ಷದವರ ವರ್ತಮಾನವನ್ನು ಈ ಪಕ್ಷದವರಿಗೂ ಹೇಳುತ್ತ ಅನೇಕ ಜನ ಪಾಳತಿಗಾರರು ಹೇರಳವಾದ ಹಣವನ್ನು ಸಂಪಾದಿಸಿಕೊಂಡರು (ಶಿರಂಗ. ೨೦೯).

[ ಪಾಳತಿ + -ಕಾರ₁ (< -ಕಾರ) ]

**ಪಾಳದಿವ್ಯ** (ನಾ). ಕಾಯಿಸಿದ ಕಬ್ಬಿಣದ ಕುಳವನ್ನು ಹಿಡಿದು ತಾನು ಸತ್ಯವಂತನೆಂದು ಸಿದ್ಧಪಡಿಸುವ ಒಂದು ದಿವ್ಯ: ಆ ಶಿವಶಕ್ತಿಗಳು ಪಾಳದಿವ್ಯಮಂ ಹಿಡಿದಿಹರೆಂದು (ಕಶಾಂಶಾ. IX, ೪೦೫; 12 ನೆಯ ಶ ?), ದಿವ್ಯಗಳಲ್ಲಿ ಬಹುಪ್ರಚಲಿತವಿದ್ದುದೆಂದರೆ 'ಪಾಳದಿವ್ಯ' ಅಥವಾ 'ಫಾಲದಿವ್ಯ'. ಕಾಸಿದ ಲೋಹವನ್ನು ಕೈಯಲ್ಲಿ ಹಿಡಿಯುವುದನ್ನೇ ಪಾಳದಿವ್ಯವೆಂದು ಕರೆದಿರುವುದು (ಕಶಾಶ. ೩೯೬). [ ಪಾಳ₂ (=ಪಾಲ₂) + ದಿವ್ಯ ]

**ಪಾಳಯ** 'ಪಾಳಿಯ' ನೋ.

**ಪಾಳಯಗಾರ** 'ಪಾಳೆಯಗಾರ' ನೋ.

**ಪಾಳಯಪಟ್ಟು** 'ಪಾಳೆಯಪಟ್ಟು' ನೋ.

**ಪಾಳವಿ** (ನಾ).=ಪಾಳವಿಗ: ತ್ರಿಕಾಲಭೋಗ ಮಾಡುವ ಪಾಳವಿಗರಿರ್ವ್ವರು ಮದ್ದಳೆಕಾರರು ನಾಲ್ವರ್ಗ್ಗಂ ಮತ್ತರು [೮]ಂ ಹಾಡುವ ಸವುಂದ್ರಯರೆಂರ್ದ್ಧರ್ಗ್ಗಂ ಮತ್ತರು ೬೦ ಪಾತ್ರವೆರತರ್ಕ್ಕಂ ಮತ್ತ ೪೦ (ಕ೨೩. ೯-೩-೬೨೩: 1085). P ಇದು 'ಪಾಳವಿಗರಿರ್ವರು' ಎಂದಿರಬಹುದೆ?

[< ಪಾಳವಿಗ ?]

**ಪಾಳವಿಗ** (ನಾ). ಮದ್ದಳೆ ಮುಂತಾದ ಚರ್ಮವಾದ್ಯಗಳನ್ನು ನುಡಿಸುವವನು(?): ಪೂಜಾರಿಗೆ ಮತ್ತರು ೧೦ ಫಳಿಗೆಯು ಮಾಣಿಯರ್ಗ್ಗೆ ಮತ್ತರು ೧೬ ಪಾಳವಿಗಂಗೆ ಮತ್ತರು ೧೨ ಪಾತ್ರಕ್ಕೆ ಮತ್ತರು ೧೨ (ಕಶಾ೨. IX-i, ೦೩೩-೨೯; 1068). [< ಪಟಹ₁ ? ]

**ಪಾಳಾಸ**, ಪಳಾಸ (ನಾ). ಕುದುರೆಯನ್ನು ಕಟ್ಟುವ ಹಗ್ಗ: ಮತ್ತಂ ಮಂದುರದೊಳ್ ನಟ್ಟ ಕಿಟ್ಟಿನ ಮುಂದಿಗೆ ಮುಚುಯೆ ಪಾಳಾಸಂ ಪಡುಯೆ ಪೊಜಮಟ್ಟು ನೆರವಿಯನುರವಣಿಸಿ ಪಾಯ್ದು ಬಿಡಿದಿರಿದಾಜಿಗೋಡು . . . ಪೊಜಕಾಲೊಳ್ ನಡೆವ ಸುಕಳಾಶ್ವಮಂ ಬೇಗದಿಂ ಬೇಗವಾಯ್ದು (ಗಿರಿಶ. ೨-೦೦೫ ವ); ಮುಂಡಿಗೆಯಂ ಮುಜುದು ಕರಂ ದೃಢವೆನಿಸಿದ ಪಾಳಾಸಮನಶ್ರಮದಿಂದಂ ಪಡುದು ಒಂದಿಡಿಕೊಳ್ಳೊಂದು ತೊಡಂಕಿ ಬಿಸಿಲುಹಾಡರೆಯಂದದಿ ಪರಿದವು ಪುರವೀಧಿಗಳೊಳು (ಕುಮುಶಾ. ೦೫-೩೩; ದಬ್ಬುಕ ಪಾಳಾಸದಸಿವಿಾಳೆ ಚೆಲ್ಲಹ ಕಬ್ಬಿ ತಾಪಣೆ ಮೇಲಕ್ಕೆ ಉಬ್ಬಲೀಯುವ ಕಬ್ಬನದ ಗುಂಡು ಪಾಡಿಗಲಬ್ಬರವಿಾರೆ ಸುಪ್ಪುನಿಹುದು (ಕಾಶಾಕಂ. ೯-೫೬). **ಪಳಾಸ**: ಆ ಭದ್ರಹಸ್ತಿ . . . ಕೆಲವು ತೇಜಗಳನು ತಿವಿಯೆ ಕಂಡೆದ್ದುವು ಕೆಲವು ಪಳಾಸವ ಕೊಂಡು (ಪಾಗನು. ೬-೯). [?]

**ಪಾಳಿ**₁ 'ಪಾಡಿ₂' ನೋ.

**ಪಾಳಿ**₂ 'ಪಾಟಿ₁' ನೋ.

**ಪಾಳಿ**₃ 'ಪಾಟಿ₂' ನೋ.

**ಪಾಳಿ**₄ (ನಾ). ಪುಡಿ; ಹುಡಿ; ಚೂರ್ಣ: ಕಾಶ್ಮೀರಸಾರಾಪಹಾಸಿಕರ್ಪೂರಪಾಳಿಸಮ್ಮಿಶ್ರಿತತಾಂಬೂಲರಾಗಪರಿಚುಂಬಿತಬಿಂಬಾಧರರಾಗವದನನುಂ . . . ದೂರೀಕೃತಸು[ರ]ಕುಮಾರಸೌಂದರ್ಯನುಮೆನಿಸಿ(ಸುಕುಶಾ. ೦೦-೦೩೩ವ).

[< ಸಂ. ಪಾಳೀ]

**ಪಾಳಿ**₅ 'ಪಾಲಿ₂' ನೋ.

**ಪಾಳಿ**₆ 'ಪಾಲಿ₃' ನೋ.

**ಪಾಳಿ**₇ (ನಾ). ಮೊಳಕಾಲಿನ ಸಂದು: ಬಾಹ್ಯದ ಮೊಣಕಾಲ್ ಕಟಕಕೆ ಬೇಹುದು ತಾಂ ಪಾಳ(ಳಿ)ಯೆಂಬ ಪೆಸರವಕಕ್ಕಂ (ಅಶ್ವಶಾ. ೯-೩೩); ಮೊಣಕಾಲ ಟಕಕ್ಕೆ ಪಾಳಿಯೆಂಬ ಪೆಸರಕ್ಕುಂ (ಅಶ್ವಶಾ. ೩೩-೨೦). [?]

**ಪಾಳಿಕಟ್ಟು** (ನಾ). ಒಂದು ಪ್ರದೇಶ (?) : ಆ ಸಮಸ್ತ ಪ್ರಜೆಗಳೆಯು ಬಡಗಣ ಕೋಡಿಯು ಪಡುವಲ್ಪಾಳಿಕಟ್ಟಿನ ಮೋ[ಗ]ಳಿಯು ಒಳಹು ತೋಂಟಮಾಗಿ ಪಡುವಣಾಭಗದೊಳ್ ಮೇಣ್ದೆಯು ಬಟ್ಟೆಯುಂ ಮುಟ್ಟೆ ಬಡಗಣ ಸೀಮೆ (ಕ್ಶಿಇ. XI-i, ೬೮-೩೦; ಕ್ರಿ. 1045). [ ? ]

**ಪಾಳಿಕೇತನ** (ನಾ). ೧. ಸಾಲಾಗಿರುವ ಧ್ವಜ : ಧವಳಹಾರಂಗಳಿನೆಸೆವ ಪೊಳಮಪೊ ಸವಿ ನಟಿ ನ್ರುಪಪಳಾವಳಿಪಾಳಿಕೇತನಪ್ರಚಯಂಗಳ್ (ವರ್ಧಕ. ೦೨-೬) ; ಪಾಳಿಕೇತನಪಾಳಿಗಳಿಂ ಮರುತ್ಪಾಳಿಚಾರುಕರಪಲ್ಲವಂಗಳಿಂ ಲೀಳೆಯಿಂ ತಳೆದು ರಂಜಿಸಿತ್ತು ತದ್ಭಾಳಿಕೋತ್ಸವದ ಮುಂದೆ ಸಂತ್ರಲುಂ (ವರ್ಧಕ. ೦೪-೯). ೨. ಚಾಲುಕ್ಯರ ಕಾಲದಲ್ಲಿದ್ದ, ಲೌಕಿಕಪಾರಮ್ಯೈಶ್ವರ್ಯಸೂಚಕವಾದ ಒಂದು ರಾಜಚಿಹ್ನೆ : ಮುಂದೆ ಪರಿಪ ಧವಳಚ್ಛತ್ರ ಚಂದ್ರಾದಿತ್ಯ ಪಾಳಿಕೇತನಾದಿ ರಾಜಚಿಹ್ನಂಗಳುಂ ಮೊಳಗುವ ಮಂಗಳತೂರ್ಯಂಗಳೆಸೆಯೆ (ಶಾಂತಪು. ೬-೯೮ ವ). P ಹಾರ, ವಸ್ತ್ರ, ನವಿಲು, ಕಮಲ, ಹಂಸ, ಗರುಡ, ಸಿಂಹ, ವೃಷಭ, ಆನೆ, ಚಕ್ರ–ಈ ೧೦ ಲಾಂಛನಗಳುಳ್ಳ ಧ್ವಜಗಳ ಹತ್ತು ಸಾಲುಗಳು ನಾಲ್ಕು ಕಡೆಗೆ ಚತುರಸ್ರವಾಗಿ ಇರುತ್ತವೆ ; ಪ್ರತಿಯೊಂದು ಸಾಲಿನಲ್ಲಿ ಒಂದೊಂದು ಲಾಂಛನದ ೧೦೮ ಧ್ವಜಗಳಿರುತ್ತವೆ ; ಎಂದರೆ ಒಂದು ದಿಕ್ಕಿಗೆ ೧೦೮೦ ಧ್ವಜಗಳಾಯಿತು. ಹೀಗೆ ನಾಲ್ಕು ದಿಕ್ಕುಗಳಿಗೂ ಕೂಡಿ ೪೩೨೦ ಧ್ವಜಗಳಾದುವು. ಈ ರೀತಿಯ ಧ್ವಜಗಳ ರಚನೆಗೆ ಪಾಳಿಕೇತನ ಎಂಬ ಪದಪ್ರಯೋಗ ಪೂರ್ವಪುರಾಣದಲ್ಲಿದೆ. 'ಪಾಳಿಧ್ವಜ' ಪರಾ. [ ಪಾಳಿ₅ (=ಪಾಲಿ₂) + ಕೇತನ ]

**ಪಾಳಿಕ್ಕು** (ಕ್ರಿ). ನಾಶ ಮಾಡು ; ಹಾಳುಗೆಡಹು : ಚೋಳನಳವಳಿದು ಪುರಮಂ ಪಾಳಿಕ್ಕಿ ಭಯಕ್ಕೆ ಮೆಚ್ಚುಂಬೊಡಲಿಗನೆನೆ ತಾನಿಳ × × × ಚಕ್ರದಂಡನಾಥಾಧಿಪನ (ಶಾಸಂ. ೦೯೩೦, ೭೬-೨೦; 1080).

[ ಪಾಳ್ (<ಪಾೞ್) + ಇಕ್ಕು₄ ]

**ಪಾಳಿಗೆಡು** 'ಪಾೞಿಗೆಡು' ನೋ.

**ಪಾಳಿತೋರಣ** (ನಾ). ಸಾಲಾಗಿರುವ ತೋರಣ : ಆಯತರಂಗವಲ್ಲಿಪರಿಶೋಭಿಯಸಂಚಿತ ಚಾರುಕೀರ್ಣಪರ್ಣಾವಳ್ಯಧ ಪಾಳಿತೋರಣವಿರಾಜಿತಮುಂ . . . ಸುಂದರರಾಜಮಾರ್ಗಮುಂ ಶ್ರೀಯ ನಿವಾಸಮಂ ಪುಗೆ ನೃಪೇಶ್ವರ ಕನ್ಯಕೆಯುಂ ಬಿವಾಹರನುಂ (ಚಂದ್ರಪ್ರ. ೬-೪). 'ಪಾಳಿಕೇತನ' ಪರಾ.

[ ಪಾಳಿ₅ (=ಪಾಲಿ₂) + ತೋರಣ ]

**ಪಾಳಿದಪ್ಪು** (ಕ್ರಿ). ೧. ಕ್ರಮ ತಪ್ಪು : ತಾಳಲಯಸಂಗೀತವಾದ್ಯಯುತಿಗಳ ಗತಿಗೆ ಪಾಳಿದಪ್ಪದೆ ನರ್ತನಂಗೆಯ್ದು ಕೇಳಿಸುವ ಕೇಳಿಕಗಳಿಂ (ಜಗ್ಗಣ. ೯-೩೬). ೨. ಕೆಟ್ಟುಹೋಗು ; ಹಾಳಾಗು : ಕಾರ್ಯದ ಹವನಿದು ಪಾಳಿದಪ್ಪುಗುಮು (ವರ್ಧಕ. ೦೨-೩೯). [ ಪಾಳಿ₃ (<ಪಾೞಿ₂) + ತಪ್ಪು₁ ]

**ಪಾಳಿಧ್ವಜ** (ನಾ). ೧. =ಪಾಳಿಕೇತನ ೧: ಬೆಳ್ಗೊಡೆಗಳುಂ ಪಾಳಿಧ್ವಜಂಗಳುಂ . . . ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ (ಪಂಪಭಾ. ೦೩೩-೧೯); ರಾಜಚಿಹ್ನ ಪಾಳಿಧ್ವಜಸಂಕುಲಮುಂ ಭಟಕಟಕಮುಂ ಪಾವಳಿಯೊಳ್ಪರೆ ಪಪ್ರವಾಹ ಪಯಣಂಬಂದು (ಶಾಂತಪು. ೨-೦೨). ೨. = ಪಾಳಿಕೇತನ ೨ : ಪಾಳಿಧ್ವಜಾದಿ ಸಮಸ್ತಪಾರಮ್ಯೈಶ್ವರ್ಯಚಿಹ್ನಸ್ಯ ವಿನಯಾದಿತ್ಯಸತ್ಯಾ[ಶ್ರ]ಯ ಶ್ರೀಪೃಥ್ವೀವಲ್ಲಭಮಹಾರಾಜಾಧಿರಾಜಪರಮೇಶ್ವರಭಟ್ಟಾರಕಃ ಸರ್ವಾನೇವ[ಮಾಜ್ಞಾ]ಪಯತಿ (ಕ್ಶಿಇ. XX. ೪-೭ ; 683). [ ಪಾಳಿ₅ (=ಪಾಲಿ₂) + ಧ್ವಜ ]

**ಪಾಳಿಮಹಾಧ್ವಜ** (ನಾ). =ಪಾಳಿಕೇತನ ೨ : ರಾಗದ ಪುಂಜದನ್ನ ಪಪ್ಪಸುಗೆಯ ಸಿಲ್ಕಿ ಕಂಪಳಿರೆ ಪಾಳಿಮಹಾಧ್ವಜಂ (ಶಾಂತಪು. ೦೪-೦೩); ಕಲ್ಪಜ ರೋಳಿಯೆ ಪಾಳಿಮಹಾಧ್ವಜಂಗಳುಂ ಪಿಡಿದು ಮುಂದಮುಂದನೆ ನಡೆದರ್ (ಆದಿಪು. ೪-೨೫). [ ಪಾಳಿ₅ (=ಪಾಲಿ₂) + ಮಹಾಧ್ವಜ ]

**ಪಾಳಿಲ್** 'ಪಾಟಿಲ್' ನೋ.

**ಪಾಳಿವ** (ನಾ). (?) : ಸೋಟಿನ ತೋಟಿನ ಪಟಹದ ಕೋಟಿನ ಪಾಳಿವದ ಗೋಂಡೆವೇಂಟೆಗೆ ಮತ್ತಂ ಚಾಪಪ್ರವೀಣರುದ್ಧತಕೋಪರ್ನಡೆತಂದರಲ್ಲಿ ಮುಂದೆ ಪುಳಿಂದರ್ (ಕುಸುಮಾ. ೩-೦೭). [?]

**ಪಾಳಿವೆಱು** (ಕ್ರಿ). ಸಾಲುಗಟ್ಟು ; ಸಾಲಾಗಿರು : ಅಂಬುಧಿಯ ತರಂಗದ ಬೆಂಬಳಿಯೊಳ್ ಪರಿವ ವಹಿತ್ರಂಗಳಂತೆ ತುರಂಗದ ಬೆಂಬಳಿಯೊಳ್ಪರಿದು ಪಾಳಿವೆತ್ತ ರಥಂಗಳಿಂ (ಗದಾಯು. ೬-೦೦ ವ).

[ಪಾಳಿ₅ (=ಪಾಲಿ₂) + ಪೆಱು₁]

**ಪಾಳಿಸು₁** 'ಪಾಟಿಸು₁' ನೋ.

**ಪಾಳಿಸು₂** (ಕ್ರಿ). ೧. ಸೀಳು ; ಸಿಗಿ : ಅತಂ ಶಸ್ತ್ರದಿಂ ಗಲ್ಲಮಂ ಪಾಳಿಸಿ ವ್ರಣವೆತ್ತಿಸಿಕೊಳ್ಳಮಂ ತೆಗೆದು ಕತ್ತಿಯಿಂದೆತ್ತಿ ತೊಱೆಯಿದು ತಡೆದುಲವ್ಯಾಧಿಯೆಂದು ಪೆಸರಿಟ್ಟು (ದಶಕು. ೯-೨೭ ವ); ತುರಗದ ಕಿವಿಯುಂ ಪಾಳಿಸಿ ಸುರಗೋಪಚ್ಛಾಯೆಯಿಂದಮರುಣಜಲಂ ಪಾಯ್ದುರುತಿರೆ ದೀರ್ಘಜೀವಿ (ಅಶ್ವಶಾ. ೩-೨೩) ; ಮಾಣಿಪ ಪರಿಭವ ಪಾಳಿಸುವ ಪರಶುವಿನ ಧಾಳಾಧೂಳಿ ಮಸಗಿತು (ಕುಮಾವ್ಯಾ. ೦೦-೯) ; ಶಾಕಟಿಕ ಪಾಳಿಸಿದ ನವಿಹತಿಯ ಚೂತ ಫಲಾಳಿ ಸಿಡಿದ ನಿಲಿಸುವವು ಪಥಿಕರ ಪಥಶ್ರಮವ (ಸೌಂದರ. ೫-೬-೦೩). ೨. ಕೊಲ್ಲು; ವಧಿಸು : ನಿಷ್ಠುರದವಲಿ ಪಾಳಿಸಿದಾಹಿತರನುಗಿವನುಸುರುಗಳ (ಕುಮಾವ್ಯಾದ್ರೋ. ೦೭-೨೭). ೩. ಹಿಮ್ಮೆಟ್ಟಿಸು ; ಸೋಲಿಸು : ಎಳಸಿ ಪುರ್ವದೊರೆಯಸುರಿರೋರುಹನಂಜ್ವಲಕಾಂಭಶೋಭಯುಂ ಪಾಳಿಸಿ ಲೋಚನಾಂತು ವಿಗ ಲಾಡೆಯನಾ ಜಯಕೇತುಲೀಲೆಯುಂ ಎಳಸಿ ಮೇಲುದಂದುಗೆಯ ಸುಣ್ಣನಿ ದುಂದುಭಿರಾವದಂದಮು ಚಾಳಿಸೆ ಬಂದು ತದ್ವಮಹಮಂಗಳಲಕ್ಷ್ಮಿಪೊಲಂದು ನೋಡಿದಳ್ (ತಂತ್ರಕ. ೦೨-೩); ಬಂದ ಮಾಕಂದದೊಳ್[ಪಾಠಾಂ. ಳ್]ಳಿಯುಂ ಪಾಳಿಸುವರ್ಥಪದ್ಗದ ಬಸಂತಕ್ಕಪ್ಪವೆಲ್ಲಂಗಳು ಜಜ್ಜರಿಪಂ ತಾಳ್ದು ಗುಣಂ ರಸಕ್ಕೆಸೆಯೆ ಪೇೞ್ದಂ . . . ಕಾವ್ಯಮಂ (ಅಪಂಕ. ೦-೪೭). [ < ಪಾಟಿಸು₂ ]

**ಪಾಳಿಸು₃** 'ಪಾಲಿಸು' ನೋ.

**ಪಾಳು** 'ಪಾೞ್' ನೋ.

**ಪಾಳುಕೋಡಕೆಱೆ** (ನಾ). ಒಂದು ಊರಿನ ಹೆಸರು : ಪೆರ್ಗ್ಗಡೆಗೌಡ ಶ್ರೀಪುಲಿ ಅಗಳಪನ್ನರಡುಮಾಳೆ ಪಾಳುಕೋಡಕೆಱೆಯು ಅಯ್ವರು ಕಾಮ ಪತ್ತೊಡ್ಡಿ ಪ್ರಸಾದಗೆಯ್ದೊರ್ (ಶಾಸಂ. ೦೯೨೬, ೦೨೪-೬ ; ೦ಸೆಯ ೬೫). [ ? + ಕೆಱೆ ]

**ಪಾಳುಗೆಡೆ** (ಕ್ರಿ). ಹಾಳಾಗು ; ನಾಶವಾಗು : ದೇಪಶಾಶಾಸ್ತ್ರಜ್ಞರ ಮತ್ತು ಕವಿಗಳ ನೆಲೆವೀಡೂ ಆಗಿದ್ದ ಪೂರ್ವಗ್ರಾಮನೆಲ್ಲ ಪಾಳುಗೆಡೆದು ನೆಲಸಮವಾಯಿತು (ಜಸ್ಮಂ. ೯೩). [ ಪಾಳು (<ಪಾೞ್) + ಕೆಡೆ₁ ]

**ಪಾಳುಗೈ** 'ಪಾಳ್ಗೆಯ್' ನೋ.

**ಪಾಳುಬೀಳು, ಹಾಳುಬೀಳು** (ಕ್ರಿ). ಹಾಳಾಗು ; ನಾಶವಾಗು : ದೇವರಿಲ್ಲದ ಗುಡಿಯು ಪಾಳುಬಿದ್ದಂಗಡಿಯು (ಕವಳ. ೩೦-೦) ; ಪೂಜಾರಿಯಿಲ್ಲದ ಗುಡಿ ಪಾಳುಬೀಳುವುದೆಂಬುದು ಅವನಿಗೂ ಗೊತ್ತು (ಅಂತಃ. ೦೯೩). ಹಾಳುಬೀಳು : ಬಹಳಸಂಪದ ಉಡುಗಿಹೋದುದು ಧಾನ್ಯವೌಷಧಕಿಲ್ಲದಂತಾಯ್ತು, ಹಿರಿಯ ಕಣಜಗಳಲ್ಲಿಗಲ್ಲಿಗೆ ಪರಿಕಿಸಲು ನೆಱೆ ಹಾಳುಬಿದ್ದವು (ಏಕೋ. ೨೩-೦೦); ಅಂದಿನಿಂದ ಈ ಮನೆ ಹಾಳುಬಿದ್ದಿತು (೪೪ಹು. ೩೬).

[ ಪಾಳು (<ಪಾೞ್) + ಬೀಳು₁ (<ಬೀೞ್₁) ]

**ಪಾಳುಭೂಮಿ** (ನಾ). ಬೀಳುನೆಲ ; ಸಾಗು ಮಾಡದೆ ಬಿಟ್ಟ ಭೂಮಿ ; ಹಾಳಾಗಿದ್ದ ಸೀಮೆ : ಆ ಉಗ್ರಬಾಹು ನನ್ನ ಪರಾಕ್ರಮಕ್ಕೆ ನಿಲ್ಲಲಾರದೆ ಪಾಳುಭೂಮಿಯೊಳ್ ನಾಯಿಪೊಲ್ಬು ಧೊರೆಯೆಂದು ಕುಣಿದಾಡುತ್ತಿರ್ದನು (ಕೌಸಂಧಿ. ೩೩೦-೦). [ಪಾಳು (<ಪಾೞ್) + ಭೂಮಿ]

**ಪಾಳುಮನೆ** 'ಪಾಳ್ಮನೆ' ನೋ.

**ಪಾಳೆ**$_1$, ಹಾಳೆ$_1$, ಹಾಳೆ$_1$ (ನಾ). ೧. ಅಡಕೆಯ ಗೊಂಚಲಿನ ಮೇಲಿರುವ ಪೊರೆ,–ಅಗಲವಾದ ಎಲೆಯಂತಹ ಆವರಣ ; ಅಡಕೆಪಟ್ಟೆ : ಸಂಪಗೆಯ ಮುಗುಳುಮಂ ಮಾವಿನ ಮಿಡಿಯ ಗೊಲೆಯುಮಂ ಅಡಕೆಯ ಪಾಳೆಗಳೊಳಂ ... ತಾವರೆಯೆಲೆ ಪಟ್ಟಲ್ಗಳೊಳವೊಟ್ಟಿ ಕಟ್ಟಿ (ಲೀಲಾವ. ೦೪–೩೬ ಪ); ಮಾನಿನ ಕಾಕ್ಕೆಯಿಂದ ಕೆಳಗಿಳಿದ ಉಪ್ಪುನೀರು ಪಾಳೆಯನ್ನು (ಅಡಕೆ ಮರದ ಸೋಗೆಯ ಬುಡ) ದಾಟ ... ಕವುರ ನಾತವನ್ನು ಹುಟ್ಟಿಸಿತ್ತು (ಹೊಸ್ತಿ. ೫೭). ೨. ಬಟ್ಟೆ ಮೊದಲಾದುವುಗಳ ಸೀಳು,–ತುಂಡು: ಅಂಗರಾಜಂ ... ಪಸಿಜು ನೇತ್ರದಸಿಯ ಪಾಳೆಯೊಳ್ ತಲೆಸವಿರಂ ಪಚ್ಚುಗಂಟಿಕ್ಕಿ ಮಣಿಮಯಮಕುಟಮಂ ಕಪದು (ಕಂಕಭಾ. ೦೨–೦೦೯ ವ). **ಹಾಳೆ**$_1$: ೩. ಗದ್ದೆ ಮೊದಲಾದ ಭೂಮಿಯ ಸೀಳು,–ಭಾಗ ; ಪಟ್ಟೆ : ಚೆಂದುವಾಲ್ಲಿ ಬಿಟ್ಟ ಬಾಳಿಗೆ ಗಡಿ ಮಾಡಲು ... ಹೆದಾರಿಯ ಸುಗ್ಗಿಯ ಗದ್ದೆಯ ಹಾಳಿ ಗಡಿ (ಶಿಇ. I, ೪೦–೪೦ ; 1417) ; ಯಿಾ ನಾಕು ಗಡಿಯೊಳಗೆ ಬಂಣೇಬ ಬಯಲು ತೊಲುವ ಹಾಳಿ ಸಹ ನಾಗಂ[ಡು]ಗದ್ದೆ ಮು ೬ (ಸೌಇಇ. IX–ii, ೪೬೩–೦೨ ; 1472). **ಹಾಳೆ**$_1$ : ೧. ಅಡಕ ಹಾಳೆಯ ಗುಣ—ಇದರಲ್ಲಿ ಊಟ ಮಾಡುವುದರಿಂದ ... ಸರ್ವಾಂಗವಾತ ರೋಗಂಗಳ್‌ ಹೋಗಲಾಡಿಸುವುದು (ಸಕಲ. ೯೮); ಒಡಕಲು ಅಕ್ಕಿ ಸ್ವಲ್ಪ ತೆಗೆದು ಒಂದು ಒಣಹಾಳೆಗೆ ಹಾಕಿಕೊಂಡು ... ಗಂಜಿ ಮಾಡಲು ಪ್ರಾರಂಭಿಸಿದಳು (ಬಾಳಪ್ಪ. ೦೦). ೩. ತೆಂಗಿನ ಇಸರಣನಾರ್ಯನ ಅಳಿಕೆ ಪಡುವಲು ಹಾಳೆ (ಶಿಇ. I, ೩೦–೩೯ ; 1432). ೪. ಕಾಗದ; ಪಾನು : ಮತದಾರರ ಪಟ್ಟಿಯ ಹಾಳೆಗಳು ಹರವಿ ಬಿದ್ದಿವೆ (ಅಕ್ಕಮ. ೯೦) ; ಹಗಲಿರುಳ ಹಾಳೆಗಳ ತೆರೆದು ಮುಚ್ಚುತ (ಕಾಲೂರ. ೦೬೭–೪೨೩). ೫. ಅಗಲವಾದ ಹಾಗೂ ತೆಳುವಾದ ತಗಡು,—ಹಲಗೆ : ಆ ರಸವನ್ನು ಒಂದು ಹರವಾದ ಹಲಿಗೆಯ ಮೇಲೆ ಸುರುವಿ, ಸಮ ಮಾಡಿ, ದೊಡ್ಡ ಹಾಳೆಯ ಮಾಡುತ್ತಾರೆ (ಮುಂಬಯಿ. ೪–೨೨೦). ೬. (ಊಟದ) ಎಲೆ : ಪೊಂಬಾಳೆಯ ಹಾಳೆಯೊಳಿಪ್ಪಾವಿನ ಕೊನೆಯುಮಂ ಪಲ್ಲಿಗೆಯ ನನೆಯುಮಂ ... ಸುತ್ತಿ (ಮಲ್ಲಿಕ ೩–೯೯); ತಾನುಂಡು ತನ್ನ ಗುಡ್ಡಂಗ ಹಾಳೆಯನಾಂತನು (ಸಿದ್ಧರಾ. ೯–೦೬); ದೊನ್ನೆಗಳ ಹರಹಿ ಬಾಳೆಲೆ ಹಾಳೆಯಂ ಹಾಕಿ (ಸಮ್ಮಗೌ. ೬–೨೩) ; ಹಾಳೆಯೊಳಗಣ ಶೇಷಮಂ ಶುನಕ ನುಣಲು (ಛಾಪಕಂ. ೬–೦೦).

ಪಾಳೆಯ ಕಡ್ಡಿ = "ನೆಲ ಸಾರಿಸಲು ಉಪಯೋಗಿಸುವ ಅಡಿಕೆಯ ಹಾಳೆಯ ತುಂಡು" (ಬಾಳಿಗ. ಕೋಶ) : ಒಲೆ ಮತ್ತು ಅಡಿಗೆಮನೆಗೆ ಸಗಣನೀರು ಕಲಡಿಸಿ ಪಾಳೆಯ ಕಡ್ಡಿಯಿಂದ ಸಾರಿಸಿ ಶುದ್ಧ ಮಾಡುವ, ಅವರ ಕೆಲಸ ಮುಗಿಯುತ್ತದೆ (ಬಾಳಿಗ. ೦೯).

[ ದೇ. ‖ ತಮಿ. ಪಾಳ್ಳೈ ; ಮಲ. ತೆಲು. ಪಾಳ ; ತುಳು. ಕೊಡ. ಪಾಳೆ ]

**ಪಾಳೆ**$_2$ 'ಪಾಳೆಯಂ' ನೋ.

**ಪಾಳೆ**$_3$, ಫಾಳೆ (ನಾ). ೧. ರೈತನು ಭೂಮಿಯ ಒಡೆಯನಿಗೆ ಕೊಡುವ ಹಣ ; ಗೇಣಿ; ಲಾವಣೆ : ಆ ರೈತ ನಿಮಗೆ ಪಾಳೆ ಕೊಡುವುದಿಲ್ಲವೇನು ? (ಪಾಕೋಲಿ. ೨೬೩) ; ನಾಕು ವರಸಾತು ಪಾಳೇನ ಕೊಡಾಕಿಲ್ಲ (ಮಣ್ಣು ಹ. ೩೭). **ಫಾಳೆ** : ೧. ಫಾಳೇದ ರೂಪಾಯಿ ತಂದಿ ದೋ. ಇಲ್ಲೋ ? (ರಕ್ತರ. ೬). ೨. ಕಂದಾಯ : ಉಪ್ಪಿನದು ಮುಗೀತು, ಸರಕಾರಿ ಫಾಳೇದ್ದೂ ಮುಗೀತು, ಇನ್ನು ಈ ಸಾಲ ಯಾತರದರೆಪಾ ಸತ್ಯಾಗ್ರಾ? (ಮುರಾರಿ. ೨೯).

[ ? ]

**ಪಾಳೆಗಾರ** 'ಪಾಳೆಯಂಗಾರ' ನೋ.

**ಪಾಳೆಗಾರಿಕೆ** 'ಪಾಳೆಯಂಗಾರಿಕೆ' ನೋ.

**ಪಾಳೆದೆ** (ನಾ). ಸುಡುಗಾಡು ; ಶ್ಮಶಾನ : ಅವರಿಂತೆರೆಂಬ ಮಾತುಗಳನಾಲಿಸಿ ಪಾಳೆದೆಗೈದಿ ರಾತ್ರಿಯೊಳ್ ಶವಕದಿನತ್ತಲಿತ್ತ ಮಂಗುಲ್ದಿಕ್ಕಿದಷ್ಟಿಗರ್ವರ್ ಎದ್ದಿರ್ಪರ್ವ ತಮ್ಮವಾಶಿಯರ್ವರ್ವೊಹೆಹುಜುಗಳರ್ಪವು ಭೂತವಟ್ಟಿ ಬರ್ಪವು ಧನವಾಸಿ ಮತ್ತೆ ಬಿಡಮೊಂದಿನಿತುಂ (ಕಂಠೀಕ. ೬೨).

[ ಪಾಳ್ (<ಪಾಟು) + ಎಡೆ ]

**ಪಾಳೆನಿಸು** 'ಪಾಳೆನಿಸು' ನೋ.

**ಪಾಳೆಯ**, ಪಾಳಯ, ಪಾಳ್ಯೆ, ಪಾಳ್ಯ, ಪಾಟೆಯ (ನಾ). ೧. ಪಡೆ; ಸೈನ್ಯ ; ದಂಡು : ಶತ್ರುಲೆಯ ಪಾಳೆಯಾವ ರವಿ ಹೊಕ್ಕಂತಾಯಿತ್ತಯ್ಯ (ಮುಕಾರೆ. ಬ. ೬೨–೦೫೩ ; ಕಲ್ಯಾಣದ ಘೋರ್ಷರವ ಪಾಳೆಯವೆತ್ತಿ ಬಿಟ್ಟುದು ಧರಣಿಯಗಲಕೆ ಧಾಳಿಯಿಟ್ಟುದು (ಸುಭಶ. ೩೬–೩೩); ತೆರಳಿಸಿದ ಹರನೆಡೆಗೆ ನಡೆವಾ ಸ್ಮರನ ಪಾಳೆಯದಂತೆ (ಕೊರಂ. ೦–೩–೫೬) ; ಶತ್ರುಲೆಯ ಪಾಳೆಯಂ ಬೀಡು ಬಿಡೆ ಧಾತ್ರಿಯಲಿ (ಶತ್ರುಂಗ. ೨–೩೩). ೨. ಸೈನ್ಯದ ಶಿಬಿರ ; ದಂಡಿನ ಠಾಣ್ಯ : ಗುತ್ತಿಯ ದಣ್ಣನಾಯಕಂ ಸಂಬು ದೇವನುಂ ಪಾಳೆಯದ ಸಾವಾಸಿ ಅನನ್ದ ಭಟ್ಟನುಂ ... ಇವ್ವಿನಿಬರುಮಿರ್ದ್ದು (ಸೌಇಇ. IX–i, ೨೩೨–೦೦; 1135) ; ಪಾಳೆಯಕೆ ತಿರುಗಿದರು ಕೃಷ್ಣಾರ್ಜುನರು ದುಗುಡದಲಿ (ಕುಮ್ಯಾಕ. ೦೬–೦); ಪುರೋದ್ಯಾನವೀಥಿಯೊಳ್ ಪಾಳೆಯಂ ಬಿಟ್ಟುದರ್ಜುನನ ಸೇನೆ ! (ಶತ್ರುಂಗ. ೬೨–೦೯೬೩); ಶತ್ರುಸೇನೆ ರಾಜಧಾನಿಗೆ ಸುಮಾರು ಮೂರುಗಾವುದಗಳ ದೂರದಲ್ಲಿ ಪಾಳೆಯ ಇಳಿಸಿತ್ತು (ಕಂಠೀರ. ೦೬೩). ೩. ಬೀಡು ; ಬಿಡಾರ : "ನಿವೇಶಃ, ಶಿಬಿರಃ, ಷಂಡಃ—ಈ ೩ ಅರಸು ಬಿಡುವ ಪಾಳೆಯ" (ನಾಚಿರಾ. ೦೬೩); ಇಂತು ಮಗಧಸೌಂದರಿ ತನ್ನ ಪಾಳೆಯದೊಳು ವಾಸಪಸಜ್ಜಿಕೆಯಾಗಿ (ಅರ್ಜನ. ೩–೦೦೬ ವ) ; ಮಹಾದಿವಸ ಮಂಡಲಾಶಿರೋಮಣಿ ಪರಮಸೌಭಾಗ್ಯದ ಸಮುದ್ರದ ಸಿರಿಯ ಪರಿಣಯವೆಂದು ಸಾಜಿತು ಪಾಳೆ[೨೮ ೧೦. ೪]ಯಂಗಳಲಿ (ಕುಮ್ಯಾಭಾ. ೦೩–೦); ದೇವನತ್ತಲು ಸತ್ಯಭಾಮಾದೇವಿಯರ ಪಾಳೆಯದೊಳಿರುತಿರ್ದ ವಿಲಾಸವ ನೋಡಿ ನಕ್ಕನು (ಸುಭಶ. ೩೬–೯೭); ವೈಶ್ಯಕುಲ ಸಂಭವರು ಹಾಟ್ಯಿವರಲ್ಲಿ ಗೂಡಾರವನು ಬಿಟ್ಟರು ಪಾಳೆಯವ (ನಳಶ. ೩–೯೯). ೪. ಸೀಮೆ ; ರಾಜ್ಯ : ರಥವನು ಕೊಂಡು ನಗರದ ಪೊಜವಳಯದಲಿ ಬಂದು ಹೊಕ್ಕರು ತಮ್ಮ ಪಾಳೆಯವ (ಕುಮ್ಯಾಸ. ೨–೦೨೩); ಬಂದು ಬಕ್ಕುಡಿ ... ಕಳಕಳವೆಂಬಿವು ಸರಸಿಜಂ ರತಿ ಸರಸಿ ಗಜೀವೂ ವಿಯೋಗ ಘನವಿರಹಿ ಜನದೊಳಗಲ್ಲದೇ ನೋಡಲಾ ನಾಡ ಹಿರಿಯೂರ ಪಟ್ಟಣದ ಪಾಳೆಯಾದ ಜನದೊಳಲ್ಲ (ಚಂದ್ರ. ೬–೪೨) ; ಮಲೆವರನೊಕ್ಕಲಿಕ್ಕಿ ಗುಡುಗಾಡಿಸಿ ಬೇಡರ ಪಾಳೆಯಂಗಳಂ ... ಪುರ್ದಿಸಿತ್ತು ಮಹಿಶೂರ ಭಟಾಳಿ ಮಂಟಾಟ ಕೋಟೆಯಂ (ಅಶ್ವತ. ೦೪–೪). **ಪಾಳಯ** : ೧. ಕಾಳಗೂಟಾರ್ಣವದ ಸೀಮಾಲಂಘನವೊ ಮೃತ್ಯುವಿನ ಪಾಳಯವೊ ಅಗ್ನಿ ಕುಸಿದುದು ನೆರೆದ ಸೇನೆಯ ಹಣಿಗೆ (ಕುಮ್ಯಾದ್ರೋ. ೯–೨೩) ; ಪಾಳಯದಿನಿದ ಕಾಣುತಾ ಗುಹನಾಳು ಕುದುರೆಯ ಕೂಡಿ ಗಮಿಸಿದ ಚಾಳಿ ಯಾವುದೊ ತಿಳಿಯಬೇಕೆನು ತಲ್ಲಿಗೈತಂದ (ತೊರಂ. ೨.೬–೧೧). ೨. ದ್ರೋಣ ನಿಜಬಲದಂದವನು ನೆಜೆ ನೋಡಿ ನೋಡಿ ... ಬರಹೇಳಿದು ಭಟ್ಟರನಟ್ಟಿದನು ಪಾಂಡರ ಪಾಳಯಕೆ (ಕುಮ್ಯಾದ್ರೋ. ೯–೨೮). ೩. ಪಾಳಯಂದ ಸೂಳೆಯರ ಪಾಳಯದಲ್ಲಿ ಮ್ಯಾಳವಂ ನೋಡುತ್ತ ನಾನಿಲ್ಲಿಯೊಂಯಿರುವೆನು (ಸೌಗಂಧಿ. ೧೯೦–೧೦). ೪. ಆದಿಯೂರು ಪಾಳಯಪ್ರದೇಶಕ್ಕೆ ನಾನು ಅಧಿಪತಿ (ಪ್ರತಾಪ. ೦೭) ; ಈ ನಗರದ ರಾಜ್ಯವು ಸತ್ವಶಾಲಿಗಳ ಪಾಳಯ (ರಾಬಿನ್. ೬೩). **ಪಾಳ್ಯೆ** : ೪. 'ಪಾಳೆಗಾರ' ಪರಾ. **ಪಾಳ್ಯ** : ೧. ಪ್ರಳಯಕ್ಕೆ ಹೆದರದವ ಪಾಳ್ಯಕ್ಕೆ ಹೆದರ್ವನೆ ? (ಗಾದೆ). ೨. ಮೆಜಿನುವಗ್ಗದ ವೀರರಾಮನ ಪಾಳ್ಯ ಬನದೊಳಗೆ (ರಾಮಾಶ. ೨೦–೬೮) ; ನಿಲ್ಲದೈತಂದು ಸತ್ಯಾಗಾಲದ ಪಾಳ್ಯವೆಲ್ಲವ ಸೂರೆಯಾಡಿದನು (ಕಂಪಿ.

ದೊಳಗೊಂದಾನೆಯನು ತಾನೇಱ ಬೊಬ್ಬಿಱಿದು (ಉತ್ತರ. ೩-೧೭) ; ತೋರದೊಡೆಗಳ . . . ಹೇರುರದ ಹಿಂಗಾಲು ಬಿರುದುಹಾಹೆಗಳಹುಂಕಾರ ದುಬ್ಬಿನ ದಡಿಗರಕ್ಕಸರ್ ಕೋಟಾನುಕೋಟಿಗಳದೇನೆಂಬೆನು (ಶಬರ. ೯೭-೦೮). ೨. ಸೀಳಿ ಹರಹಿತು ಕರಿಗಳನು ನೇಪಾಳಗುದುರೆಯ ಥಟ್ಟುಗಳ ಹಿಂಗಾಲಲಣೆಯಮು . . . ಸುಪ್ರತೀಕಗಜ (ಉತ್ತರಗೋ. ೩-೦೫) ; ಮುಗಿದ ಮುಂಗಾಲುಗಳ ಮುಂದಕೆ ಹೋಗುವ ಹಿಂಗಾಲುಗಳ . . . ಚಂಗುವಾಱುವ ಮೃಗವ್ಯಾಗಿನಿಕುರುಂಬದೊಳಗಡಹಾಯ್ದುದಗಲದಲಿ (ತೊರವೆ. ೩-೬-೪೫).

[ಪಿಂ (< ಪಿನ್) + ಕಾಲ್₁]

**ಓಂಗಿಸು, ಹಿಂಗಿಸು** (ಕ್ರಿ). ೧. ತೊಲಗಿಸು ; ತೆಗೆ ; ಸರಿಸು ; ದೂರಮಾಡು : ಅಗ್ರಾಸನದಿಂ ಚಾಣಕ್ಯನಂ ಪಿಂಗಿಸೆಂದೊಡೆ (ವಡ್ಡಾರಾ. ೦೧೫-೨೪); ಮದ್ದರ್ಶನೋತ್ಪನ್ನಲಜ್ಜಾರಸದಿಂದಂ ಮೇಲುದಂ ಪೆರ್ಮೊಲೆಗೆ ತೆಗೆವ ಭೂಷಾಮ್ಯಾಣಾಳಂಗಳು ಪಿಂಗಿಸಿ ತತ್ಕಾಲೋಪಜಾತ ಪ್ರಚುರ ಪುಲಕಮಂ ಭೂಷಣಶ್ರೀಗೆ ಪಕ್ಕಾಗಿಸುವೀ ವ್ಯಾಪಾರಸಾರಂ ಸಮನಿಸುಗುವ್ವೆ ಕಾದಂಬರೀದೇವಿಗಾಗಳ್ (ಕಾದಂಬ. ೫೦೭) ; ಸನೆಯಂಬಂ ಕಂತುವಿಂದಂ ಬಿಸುಡಿಸಿವಲರ್ಗಣ್ ಚಂದ್ರಬಿಂಬೋದಯಪ್ರಾರ್ಥನೆಯಂ ಕರ್ನೆಯ್ದಿಲಿಂ ಪಿಂಗಿಸಿ ಕಳೆದ ಪೊಗಂ . . . ಆ ನಾಡ ಪೆಂಡಿರ್ಗೆ ಸಾಜಂ (ಕೃಷ್ಣಪು ೩-೨೭) ; ಅಂಗಜಘಣ ಪೆರೆಯಂ ಬಿಸುಟಿಂದದಿ ಪಿಂಗಿಸಿ ಮೆಯ್ಯ ಮುಸುಕನಾ ಕನಕಲತಾಂಗಿಪಕಿಯು ನಿಜವದನಮನೀಕ್ಷಿಸೆ (ಜಗನ್ನಾ. ೨-೯೩). ೨. ನಿವಾರಿಸು ; ಹೋಗಲಾಡಿಸು ; ಪರಿಹರಿಸು : ಮುಂತೆ ಪೇಟ್ವ ಕುಜಿಪಂ ಕುಜಿಗೊಂಡು ಕವೀಶರಾರ್ಪಂತು ಪಿಂಗಿಸಂಗೆ ಕಾವ್ಯದಿನಾ ಲಘು ದೋಷಮಂ (ಕಬಿರಾ. ೦-೦೨೯) ; ನಿಮಗರಮನೆಗೆ ಪೋಗಿ ಕೊಟಂ ತಂದಪೆನೆನ್ನೆಪರಂ ನೀರಂ ಕುಡಿದು ತೃಷೆಯಂ ಪಿಂಗಿಸುವುದೆಂದೊಡೆ (ವಡ್ಡಾರಾ. ೦೦೯-೦) ; ವಿಗಳದ್ಬಾಷ್ಪಾಂಬುದೀನಾನನೆಯೆನಿಸಿದ ಲಕ್ಷ್ಮೀಮತೀ ದೇವಿಯಂ ಮೆಲ್ಲಗೆ ಸಂತೈಸುತ್ತುಪಾತ್ಯಾಸಾಜೆಮ ಮನದ ನಿರ್ವೇಗಮಂ ಪಿಂಗಿಸುತ್ತುಂ (ಆದಿಪು. ೫-೨೦) ; ತರುಕಾಂಡಂ ದೆಸೆಯಾನೆಗಳ್ಗೆ ಕಟ್ಟಕಂಡೊ ವ್ಯಾಪ್ತಿಯಂ ಪಿಂಗಿಸುತ್ತಿರೆ (ಜಗು. ೦೬-೩೫); ಈ ನೃಪತಿಗಂತ್ರಕನ ಬಾಧೆಯಂ ಪಿಂಗಿಸುವೆ ನಾನೆನುತ್ತ (ಶಂಪು. ೫೦-೦೨). ೩. ಬಿಡು ; ತೊರೆ ; ತ್ಯಜಿಸು : ಸದ್ಭಾಕ್ಯದತಿಚಾರಂಗಳ್ ಶಂಕಾದ್ಯಷ್ಟಮಲಂಗಳುಮೆಂಟು ಮದಂಗಳುಂ ಮಹಾಜುಮಾಮೂಢಮುಪಾಜಾನಾಯತನಸೇವೆಗಳುಮೆಂದಿಂತಿ ವಿಪರ್ತ್ಯಯ್ದಕ್ಕುಮವಂ ಪಿಂಗಿಸಿ ನಿಶ್ಶಂಕಾದ್ಯಷ್ಟಗುಣಂಗಳಿಂ ಕೂಡಿದ ಶುದ್ಧಮಪ್ಪ ಸಮ್ಯಕ್ತ್ವಪೂರ್ವಕಂ ವ್ರತಂಗಳನೇಱಿಸಿಕೊಂಡು (ವಡ್ಡಾರಾ. ೨೦೨೬-೦) ; ಅಂಗನೆಯರ್ಗಳ ಸವತಿ ಜರಾಂಗನೆ ತಾಸವಳ ಸವತಿ ಸಂದಿರ್ದ ನಿಯಮ್ಯಂಗನೆಯಾ ಸವತಿಯುಮಂ ಪಿಂಗಿಸಿ ಪುದುವಾಱ್ವೆನಕ್ಕೆ ಮುಕ್ತ್ಯಂಗನೆಯೊಳ್ (ಅಜಪು. ೨-೬೫) ; ಕೃತಿಯಂ ಆಲಿಸಿ ಕೇಳ್ದಲ್ಲದುದಂ ಪಿಂಗಿಸಿ ಲೀಲೆಯಿನೊಳ್ಳಿತ್ತುಂ ಪಿಡಿವಾ ಬುಧಜಾಲಂ (ಜಗನ್ನಾ. ೦-೨೨). ೪. (ಸಮಯವನ್ನು) ಕಳೆ ; ತಳ್ಳು ; ನೂಕು : ವನಿತಾಸೂತನ ಗೀತನರ್ತನವಿಲೋಕವ್ಯಾಪ್ತಿಯೊಳ್ ಪಿಂಗಿಪರ್ ದಿನಮಂ ಮನ್ಮಥರೂಪ ರೂರ್ಜಿತಯಶರ್ ನಾನಾವಿನೋದಂಗಳಿಂ (ಪುಣ್ಯಾಸ್ರ. ೦-೬೨). **ಹಿಂಗಿಸು.:** ೨. ಚಿತ್ತದ ಪ್ರವೃತ್ತಿಯ ಹಿಂಗಿಸಿ ಮುಕ್ತಿಪಥವ ತೋಱಿದನಲ್ಲಾ ಅಸಂಖ್ಯಾತರುಗಳಿಗೆ (ಮಹಾದೇ. ಬ. ೬೨-೦೫೩) ; ಹಿಂಗಿಸುವೆನೆಲ್ಲರ ಮನೋ ಮುಮುದಂಗದೊಳಹೊಱಗಿಡಿದ ತಮದ ತರಂಗಗಳನೆಂದೆನುತ (ಕೃಷ್ಣಲೀ. ೧೦-೨) ; ತಾಪವನು ಹಿಂಗಿಸುವಶೋಕೆಯ ತೋಪಿನಲಿ . . . ಇರಿಸಿದನು ತೊರವೆರಾಯನಂಗನೆಯ (ತೊರವೆ. ೩-೦೦-೯೯) ; ಅಂಗಡಿಯಿಂದ ಅವ ಲಕ್ಕಿ ಕೊಂಡು ತಿಂದು ನೀರು ಕುಡಿದು ಹಸಿವೆ ಹಿಂಗಿಸಿದರು (ಒಬ್ಬ.ಉ. ೦೭). ೫. ಹಿಂದೆ ಹಾಕು ; ಹಿಮ್ಮೆಟ್ಟಿಸು ; ಸೋಲಿಸು : ಹೊಂಗರಾರಿಯ ಕೋಲುವಿಡಿದುಲ್ಲಂಘಿಸುತ ಜಡಿದಡಿದು ಚಿಮ್ಮುತ ಹೊಂಗಿ . . . ಸಂಗಡಿಗರಂ ಹಿಂಗಿಸುತ ತನ್ನಂಗವಂ ತಾನೇಱಲಿಳಿಯಲು ನೋಡುತಾಡುತ್ತ (ಜಕಪು. ೨೬-೦೨) ; ಸರಳು ಮೂಱಿರಲೆಚ್ಚು ರಿಪುವನು ಧುರದಿ ಹಿಂಗಿಸಿ ಹಂಸಮಯು ಮೋಹರದೊಳಗೆ ಮೊಳಗಿದನು (ಉತ್ತರಗೋ. ೦೦-೦೫). ೬. ಕಡಮೆಯಾಗಿಸು ; ಮೊಟಕುಗೊಳಿಸು : ತೊರೆಯುರೆಯಾ ; ಏಕೆ ನಿನ್ನ ಹೊತ್ತಿಗಲ್ಲದೆ ಬಾರೆ ಮುನ್ನ ? ಹೊತ್ತ ಹಿಂಗಿಸಿ ಹಾಯಿಸೆನ್ನ ಕಂಬನಿಯ ಕರೆ ಕೇಳದೆ ? (ಗೀತಂ. ೫೫-೩೬). ೭. ಬೇರೆ ಮಾಡು ; ಬೇರ್ಪಡಿಸು (?) : ಎರಡು ಭಾಗಿಸಿ ಹಿಂಗಿಸಿ ಸ್ಥಳ ಕದ್ದಳಗೆರೆ ಮು × × ಗುಳಿಯ ಕೆಱೆ ದೊಡ್ಡಿಗಟ್ಟ ಗವುಡಿಗೆರೆ . . . ಆ ಕದ್ದಳೆಗೆಱೆಯ ಲಕ್ಷುಮಿ ನಾರಾಯಣದೇವರ × × × ಯ ಮೂಲಸಿದ್ಧಾಯವನೂ ಆ ದೇವರಿಗೆ ಕೊಟ್ಟದು (ಎಕ. III, ಶ್ರೀರಂಗ. ೦೦೯-೩೪; ಸು. 1200); ಆ ಸೋಮನಾಥಪುರದ ಮಹಾಜನಂಗಳು ತತ್ತು ವಿಭಾಗವಲ್ಲೆ ಹಿಂಗಿಸಿ ಕೊಟ್ಟ ಬಂಡೂರ ತತ್ತಿನ ವೃತ್ತಿಯುಪ್ಪತ್ತೊಂದರೊಳಗೆ (ಎಕ. III, ತಿರುಮ. ೧೯-೦೬; 1300).

[ಪಿಂಗು₁ + — ಇಸು₃]

**ಓಂಗು₁, ಹಿಂಗು₁** (ಕ್ರಿ). ೧. ಹಿಂದಕ್ಕೆ ಹೋಗು ; ಹಿಂದೆ ಸರಿ ; ಹಿಂದಿರುಗು : "ಪಿಂಗು—ಅಪಸರಣೇ (ಹಿಂದಿರುಗು)" (ಶಮ್ದ); ಅಲನೆಯ ೞದಪುಗಳೊಳ್ ಮಾರ್ಗಿಲೆದೊಡಜಂ ಪಿಂಗವೇಟ್ಟು [ಪಾಠಾಂ. ಪಿಳ್ಳುವೇಳೆ] ಮಾಗರಿದುದೆಱುಂದೆಲೆಗಳ ಲೋಕದೊಳೆಲ್ಲಿಯುಮೆಲೆಗಳ ಮಾಗರವುಮಾದುದಂದಿಂ ಬೞಿಯಿಂ (ಕಾವ್ಯಾವ. ೩೨೬ ಟೀಕು); ನಿನ್ನ ಬೀಗಿ ಬಿಗಿದಿರ್ದ ಕುಚದ್ವಯಮಧ್ಯದಲ್ಲಿ ತಾಂ ಪಿಂಗದೆ ನಟ್ಟ ದಿಟ್ಟಿಯನವಂ ಕಿಟಲೆಂದನಾಗೆಯ್ದು ತೂಗಿದಂ (ಅಜಪು. ೦೨-೦೩) ; ಎಳಸಿ ಪಿಪಾಸೆಯಿಂ ಮೃಗಚಯಂ ಪರಿತಂದೊಳಸಾರ್ದು . . . ಪಿಂಗುವುದು ಇದು ಜಲಶೂನ್ಯವಿದೆಂದು (ಉಸುಮ. ೦-೯೦) ; ಕಳಿಂಗ ಪಿಂಗು ಕಡೆ ನಿಲ್ ಕರ್ಣಾಟಕಾಧೀಶ ಬಂದೊಲ್ಗೈ ಕೇರಳ ಪಾಂಡ್ಯ ನೀಂ ಗಳವದಿರ್ . . . ಎನುತ್ತಲ್ಲಿ ಕಂಚುಕಿಗಳು ಗರ್ಜಿಸುತ್ತಿಪ್ಪರ್ (ರಾಜಶೇ. ೫-೨೦). ೨. ಕಡಮೆಯಾಗು ; ತಗ್ಗು ; ಕ್ಷಯಿಸು : ಪಿಂಗದೆ ಬೆಳಗುವ ಗುಣಮದು ಪಿಂಗಲೊಡಂ ಜ್ಯೋತಿಸಂಗ ಭೂಜಂಗಳ ತೇಜಂಗಳ್ ಮಸುಳ್ದುವು (ಅಜಪು. ೬-೫೦); ಅಡವಿ ಮಾಗು ವಟ್ಟಿರ್ದುದು ಬೇಟೆಯೊಳಾದ ಕಳಕಳಂ ಪಿಂಗುವಿನಂ (ಕಾದಂಬ. ೬೩) ; ತುಂಗಪರಾಕ್ರಮಂ ಪಿಂಗದು ಮನದಿಂ ತ್ರಿಪುರಂಗಳನಿಟ್ಟಾತನಭಯಮಕ್ಕೆ (ಶಾಸನ. XX, ೨೯-೨೯; 1034) ; ಪಿಂಗದ ಬೆಳ್ದಿಂಗಳ್ ಕಳ್ವಂಗೆಂತಂತೆ ಶೋಭೆವಡೆಯುದು (ಧರ್ಮಾಮೃ. ೦೯-೦೯೦). ೩. ಕುಸಿ ; ಕುಗ್ಗು : ಬಲ ಭಾರಕ್ಕೆಹಿನಾಥನಳ್ಕೆ ತಲೆದೂಗಲ್ ಪಿಂಗಲಲ್ಲಾಡೆ ಭೂಮಂಡಲಂ ಬಾಲದ ಮೇಲೆ ಬಿರ್ದು ಕಡುನೊಂದು (ಕಾವ್ಯಸಾ. ೫೫೯; ರಮೀಕಾಂ. ೩-೦೦ ನೋ). ೪. ಬಿಟ್ಟುಹೋಗು ; ಹೊರಟುಹೋಗು : ತನ್ನಂ ಕಾಳಿಕೆ ಪಿಂಗಿದ ಪೊನ್ನಿನ ತೆಱದಂತೆ ಕಾಂತೆ ಕರಮೆಸೆದಿರ್ದಳ್ (ಗದಾಯು. ೯-೬೦) ; ನಿಜರಾಜ್ಯಭಾರದಿಂ ಪಿಂಗಿ . . . ಧರಾಧೀಶ್ವರಂ ಪುರದಿಂದಂ ಪೊಱಮಟ್ಟಂ (ವರ್ಧಪು. ೦-೦೮೩ ವ) ; ಗಗನದಿಂದಿಳಿವಂಗಃಧಾರವಾಗುತ್ತೆ ತಪ್ಪುವರೆ ಕಾಳ್ಕಿಚ್ಚಿನಿಂ ಬೇವಳಗೆ ತಂಪಿನ ಸೋನೆಯ ಮಳೆಯಾಗುತ್ತೆ ಮಾಣ್ಬರೆ ಇಂತು ನಡುಗಡಲೊಳಾಳುವಂಗೆ ತೆಪ್ಪವಾಗುತ್ತೆ ಪಿಂಗುವರೆ (ಬಸವ. ೯-೩೦) ; ಅವರ್ಗಂ ಪಿಂಗಿದಾ ಸ್ವರಂ ನಾಮಿಯಿಂದು ಪೇಟಲ್ಪಡುಗುಂ (ಮಧು. ೯). ೫. ಕಾಣದಂತಾಗು ; ಮರೆಯಾಗು : ಪಿಂಗಿ[ಪಾಠಾಂ. ಪೊಂಗಿ]ಪೋದುದು ಪಳಿಶ್ರಿತಯಂ . . . ಅನನಂ ಮಿಸುಗೆ ಬೆಳತುರ್ಪೂರ್ಣಶಶಿಕಾಂತಿಯನಾಂತುದು ಗರ್ಭದೇಟ್ಗಿಯೊಳ್ (ಶಂತಕಂ. ೩೩೯-೦೨) ; ಖ್ಯಾತಿ ಧರಿತ್ರಿಗಾಗೆ ಕುಮಾರತಾರ್ಕಗಣಂಗಳಡಂಗಿ ಪಿಂಗೆ ತದ್ವ್ಯಾಪಿತಮಸ್ತಮಂ ಬೆವಱಿ ಪೋಗೆ (ಸುಕುಮಾ. ೯-೬೩). ೬. ತೊರೆ ; ತ್ಯಜಿಸು : ತೆಂಗಿನ ಪೊಸನೇಣೊಂದಱುದಿಂಗಳ್ಕರೆಮುಡಿಸಿ ಕಂಬಿಯಿಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಱು ನಾಯ ಬಾಲದ ತೆಱದಿಂ

ಘಡಘಡೆಲವೊ ಭೀಮಸೇನನೆ ವೃಡನ ವರ ಹಿಂಗುವುದೆ ಏಗೆ ತನ್ನೊಡೆಯ ಮುನಿಪನ ಕರುಣ ಪಿರಿದುಂಟೆನುತಲಸುರಪತಿ . . . ಕಾದಿದನು ಹದಿನೆಂಟು ಸೂಳಿನಲಿ (ಕುಮಾ.ಭ. ೬೦೫. ೨-೫೪೬) ; ಬಯಕೆಗಳು ಬಸಿರುಗಳು ಹಡೆದದ್ದು ಹಿಂಗಿದ್ದು ಮೂವತ್ತುಮೂರುಕೋಟಿ (ಗಾ. ೫೦-೯). ೧೯. ವ್ಯುತ ವಾಗು ; ಸಾಯು ; ಮಡಿ : ಹಿರಿಯ ಮಗನ ಕಾಲ ಮುಚಿದು ನಡುವಳ ಮಗನ ಕಯ್ಯ ಮುಚಿದು . . . ಅವರು ಹಿಂಗಿ ನಾ ಬದುಕಿದೆನೆಂದು ತ್ರಿವಿಧದ ಸಂದ ಬಿಟ್ಟು ಸದಾಶಿವಮೂರ್ತಿಲಿಂಗದಲ್ಲಿಗೆ ಸಂದಿತು ಚಿತ್ತ (ಅಕಾಶಾ. ೪. ೮೯೬-೦೩೬) ; ಅದೆಸಿದಾಪತ್ತಿನಲಿ ಧೈರ್ಯವ ಹಿಡಿವುದೆ ಸುಪೌರುಷ ಸಾಕಿನ್ನೊಡಲು ಕರಗಿದೊಡೇಳಲೆಬಿವನೆ ಹಿಂಗಿದಭಿ ಮಾನ್ಯ (ಕುಮಾ.ದ್ರೋ. ೭-೨೩) ; ಸತ್ತು ಹುಟ್ಟುವ ಹುಟ್ಟಿ ಹಿಂಗುವ ಸುತ್ತ ತೊಡಕನು ಮಾಣಿಸಲೆ ಪುರುಷೋತ್ತಮನೆ (ಜಾಭಾ. ೬೦).

[ದೇ.₃ ತಮಿ. ಪಿನ್ನು ; ತುಳು. ಹಿಂಗು]

**ಪಿಂಗು₂** (ನಾ). ಹಿಮ್ಮೆಟ್ಟುವಿಕೆ ; ಹಿಂಜರಿಯುವಿಕೆ : ಸಿಂಗದ ಮುಂಚುವುಂ ಮೇಷದ ಪಿಂಗುಂ ವಯುವಿದರ ವಿನಯಮಿಂತಿವು ಮೂಱುಂ ಭಂಗಮೆನಿ ಸಲ್ಕೆ ಪಡೆಯವು ಕಂಗೆಡಿಕುಂ ಭರದಿನಹಿತರದಟಂ ಧುರದೊಳ್ (ಶಾಶಕ. ೨೬೮.೫) ; ಸಿಂಗದ ಹಳಿಗುಂ ಮೇಷದ ಪಿಂಗುಂ ಕೋವಿದರ ಭೀತಿಯೆಂಬೀ ಮೂರುಂ ಭಂಗವೆನಿಸಲ್ಕೆ ಪಡೆಯವು ಕಂಗೆಡಿಸಿಯೆ ಕೊಲ್ಲದಿರವು (ಶಾಶಾ. ೨೬೬). [< ಪಿಂಗು₁]

**ಪಿಂಗುಗೆ** (ನಾ). ತೊರೆಯುವಿಕೆ ; ತ್ಯಜಿಸುವಿಕೆ ; ವಿಸರ್ಜನೆ : ಅಂಗಾದಿ ದ್ವಿತಯಂಗಳ ಪಿಂಗುಗೆಯಂ ಮಾಡದಾತನಜ್ಞಾನಿ ಗಡ (ಜಜಚ. ೦೬-೩೦). [ಪಿಂಗು₁ + -ಗೆ]

**ಪಿಂಗುಡಿ**, ಹಿಂಗುಡಿ (ನಾ). ಹಿಂದಿನ ಭಾಗ ; ಹಿಂಭಾಗ : ನಾರಾಚವಲಿ ಬಲನೆಡನ ಕೀಲಿಸಿ ಪಿಂಗುಡಿಯ ಮುಂಗುಡಿಯ ಕಟ್ಟಿದನಂಬಿನಲಿ (ಕುಮಾ.ಕ. ೨೦-೨೭) ; ಹಾಯೆನುತ ಭಟರೊಚಿಲಿದರು ಪಿಂಗುಡಿಗೆ ಬಿದ್ದುದು ಸಮರಸೌರಂಭ (೭ಭಾಗ. ೦೦-೫೬-೦೬). ಹಿಂಗುಡಿ : ಹರಿಯೊಡನೆಯಾಹವದ ಕೆಲಸಕೆ ತರಳನುತ ಹಿಂಗುಡಿಗೆ ಮಹಿಪನ ಮರಳಿಸಿದನೇನೆಂಬೆನಾಹವದುರು ವಿಡಂಬನವ (೭ಭಾಗ. ೦೦-೭೦-೨೪). [ ಪಿಂ (< ಪಿನ್) + ಕುಡಿ₂ ]

**ಪಿಂಗುರು** 'ಪೊಂಗುರು' ನೋ.

**ಪಿಂಗೊಳೆಯ** (ನಾ). ಹಿಂಭಾಗದಲ್ಲಿ ಇರುವ ಗುಂಪು : ಆರ್ತ ರೌದ್ರ ಧ್ಯಾನಮೆಂಬ ಮುಂಗೊಳೆಯದ ನಾಯಕರ್ವೆರಸು ದುರ್ಜನರ ಕೂಟ ಮೆಂಬ ಪಿಂಗೊಳೆಯದ ವೀರರ್ವೆರಸು . . . ನಿಲ್ಲದಲ್ಲಿಯುಂ ಬೆನ್ನಟ್ಟಿ (ರಚರ್ಮಾವ್ಯ. ೦೦-೬೭). [ಪಿಂ (<ಪಿನ್) + ಗೊಳೆಯ]

**ಪಿಂಗೊಳಿಸು** (ಕ್ರಿ). ಹಿಂದಿರುಗುವಂತೆ ಮಾಡು; ಮರುಕಳಿಸು : ಅಂಗಜನ ಕೇಳಿಯಾಲಯನಿಕೇತನದಿ ದೀಪಂಗಳುರಿಮುರಿದು ಭುಗಿಭುಗಿನುಂಡ ಕತ್ತಲೆಯ ಪಿಂಗೊಳಿಸಿ ಕಾರುವೋಲ್ ಕಜ್ಜಲವ ತೋರುತಿಹುದು (ಕಸಭು. ೫೦-೬). [ಪಿಂ (< ಪಿನ್) + ಕೊಳ್₁ + –ಇಸು₃]

**ಪಿಂಗೋಳ್** (ನಾ). ಹಿಂದುಗಡೆ ; ಹಿಂದಿನ ಭಾಗ ; ಹಿಂಭಾಗ : ಕೇಳಯ ವಿಷಯಾಧೀಶ್ವರರಪ್ಪ ಕೈ[ಕ]ಯರಯ್ಯರುಮೊಂದಕ್ಷೋಹಿಣೀಬಲದೊಡನೆ ಸಿಡಿಲನುರುಳಿ ಮಾಡಿದಂತು ಪಿಂಗೋಳೊಳ್ ನಡೆಯೆ (ಶಂಪಚಾ. ೯-೯೩ ಪ). [ಪಿಂ (<ಪಿನ್) + ಕೋಳ್]

**ಪಿಂಛ** (ನಾ). = ಪಿಂಥ ೨ : ಪಿಂಚವ ಮಡಗಿ ಮಾಂಡಗೆ ವಿನುತಗುಣ ತನ್ನೊಳಗೆ ಸನ್ಯಾಸನವ ತಾಳಿಯು ಮುನಿಪನಂಘ್ರಿಯ ನೆನೆಯುತಿರ್ದ (೮೦ಪ. ೦೨-೬) ; ಮೈಮೇಲೆ ಚೆಲ್ಲಿದ್ದ ಕುರುಳನ್ನೆಲ್ಲ ಪಿಂಚದಿಂದ ಮೃದು ವಾಗಿ ಜಾಡಿಸಿಕೊಂಡರು (ದಾಪತಂ. ೦). [< ಸಂ. ಪಿಂಛ]

**ಪಿಂಚಣಿ** 'ಪೆನ್ಷನ್ನು' ನೋ.

**ಪಿಂಚಣಿದಾರ** 'ಪೆನ್ಷನ್‌ದಾರ' ನೋ.

**ಪಿಂಚನ್** 'ಪೆನ್ಷನ್ನು' ನೋ.

**ಪಿಂಚನಿ** 'ಪೆನ್ಷನ್ನು' ನೋ.

**ಪಿಂಚನೂರ್**, ಹಿಂಚನೂರು (ನಾ). ಒಂದು ಊರಿನ ಹೆಸರು : ಈ ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕಿನ ಈಗಿನ ಹೀಚ ನೂರು : ಸಿಯಗೆಲ್ಲರ್ ಮಚುಗೆರೆನಾಡು ಮೂಱನೂಱುಮಳೆ ಮೂಱು ಕೊಡೆ ಅಣ್ಣೆಯರ್ಪಿಣ್ಚನೂರಾ ಏಱನುಳ್ಳೆಱದು ಬಿಟ್ಟಾರ್ (ಎಕ. XVI. ತುರುಕೂ. ೯೬-೯ ; ಸು. 750) ; ಪಿಣ್ಚನೂರುಳ್ಳನ್ನರ[ಸ]ರುಳೆಱದು ಸತ್ತನ್ (ಎಕ. XVI. ತುರುಕೂ. ೯೭-೩ ; ಸು. 750). ಹಿಂಚನೂರು : ಹಿಣ್ಚನೂರ ತೊಣ್ಣಗೌಡನ ಸುಪುತ್ರನೇಚಗೌಣ್ಡನಾತನ ಸುತ ಹೊನ್ನಗೌಣ್ಡನು ಹಿಣ್ಚ ನೂರ ಕಲಿದೇವರಿಗೆ . . . ಧಾರಾಪೂರ್ವಕಂ ಮಾಡಿ ಬಿಟ್ಟ ದತ್ತಿ (ಎಕ. XII. ತಿಪಟೂ. ೩೬-೩೩ ; ಸು. 1120). [ ? + ಊರ್ ]

**ಪಿಂಚನ್ನು** 'ಪೆನ್ಷನ್ನು' ನೋ.

**ಪಿಂಚು₁**, ಹಿಂಚು₁ (ಕ್ರಿ). ೧. ಹಿಂದೆ ಉಳಿ ; ಹಿಂದೆ ಬೀಳು ; ಹಿಂದುಗು : "ಪಿಂಚು–ಪಶ್ಚಾದರ್ಥೇ: (ಹಿಂದುಳಿ)" (ಕಧಾಮಾ) ; ಇಂಚರಿಯ ಪಸವಿನ ಬಱದ ಕಲಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ಏರಿಂಚಿಯ ಕಿಯ್ಯುಡಿವೊಂದಾದುದಾ ನಾಡರ್ಗಳ್ (ಶಂಪಚಾ. ೯-೩೦) ; ತೀರ್ಥಜಲಂಗಳ್ ಪಿಂಚಿದರ್ಗಿಲ್ಲೆಂಬ ತಿರೆ ಮುಂಚಿದರಲ್ಲಲ್ಲಿ ಪೊಗೆ ಯಲ್ಲಿ ವಿಜಿರ್ (ಅಸಂಭಿ. ೫ ೭೩) ; ಅನುಮಾನಿಸದೆ ಚಕ್ರದಿಂದಿಟ್ಟು ಕೊಲ್ಲೆಂಬ ದನ ಪಿಂಚಲವಳ ತಲೆ ಮುಂಚಿ ಬೀಳ್ವನಿಮಿಡಲ್ . . . ಖ್ಯಾತಿಯ ಜೀವನಂ ಪೋಯ್ತು ನಿಮಿಷದೊಳಗೆ (ಚಂಭಿ. ೨೦-೨೭) ; ಸೀತೆಗೆ ವೈಮಾನಸರ ಮುತ್ತೈದೆಯರನೇವೊಲ್ತಿಂಗೆ ಕಾಣ್ಬೆನೋ ಎಂದೊಂದು ತವಕದಿಂ ನಡೆ ಮುಂಚಿದುದು ಲಕ್ಷ್ಮಣಂಗೆ . . . ಎಂತು ದೇವಿಯಂ ತೋರ್ಪೆನೊ ಎಂದೊಂದು ದುಗುಡದಿಂ ಪಿಂಚಿದುದು (ರಾಮಾಶ್ವ. ೩೩ ೩). ೨. ಮರಳು ; ಹಿಂದಿರುಗು : ಮುಂಚಿದ ಷಡ್ರುತು ಮತ್ತಂ ಪಿಂಚುವುದಸ್ತಕೆ ಪೋದಂ ಪಿಂಚುವನೀಗದಿರಂ ತಾಂ ಮತ್ತಂ ಮುಂಚಿದ ಪೊಳ್ತದ ನೀರಂ ಮಾನವನಾ ಯೌವನಮುಂ ಪಿಂಚದು (ಶಾಶಂತ. ೯-೨೬). ೩. ಹಿಂದೆ ಸರಿ; ಹಿಮ್ಮೆಟ್ಟು : ರಣದಿಂದೆ ಪಿಂಚದತಿವೀರಕ್ಷತ್ರಿಯರ್ (ಶಿಪ್ಪುಕ. ೦ ೨-೩೫). ೪. "ತಡವಾಗು ; ತಡಮಾಡು" (ಕೃಶಬ್ದ). ಹಿಂಚು₁ : ೧. ಏನೆಂಬೆ ನೇನೆಂಬೆನೇನಾದಿನಾಥನಂ ಅನಜಿಯೆನಾನಜಿಯೆನುತವಣಿಪ ಧೀರನಂ ಸಾಟಿ ಹಿಂಚಿತು ಮುಂಚಿತವನ ತಲೆ ಕಳನೊಳಗೆ (ಶಶಾರ. ದೀ. ೦೦೬-೩) ; ಹೋಗೆಂಬ ನುಡಿ ಹಿಂಚಿ ಮುಂಚಿ ಜೀವಂ ನೆಗೆದು ತಾಗಿ ನಡುನೆತ್ತಿಯಂ ಬಗಿದು ಬಾದಣಗೆದು ವೇಗದವರ್ ಗಗನಕ್ಕೆ ದಂಡಾಯಮಾನದುರಿಯಾಗಿ ನೆಗೆಯಲ್ಕೆ (ಸಿದ್ಧಕಾ. ೯-೩೬) ; ವಾತು ಹಿಂಚಿತು ಮುಂಚಿ ಸುಭಟವ್ರಾತ ಹೊಕ್ಕುದು (ಕುಮಾ.ದ್ರೋ. ೫-೨೩). ೩. ಪಂಚಮಹಾಪಾತಕಿಯಂ ಸಂಗತ ದೊಳ್ ಹಿಂಚುವನು ಪುಟಿಗೊಂಡದ ಸಚದೊಳಿಕ್ಕಾವ ಕಾಲಮೋಟದ ತೆಚದಿಂ (ರಕಾಸ. ೩-೦೬) ; ಭಲರೆ ಭಲರತಿಬಲರೆ ಹಿಂಚದಿರಿನ್ನು ಹೊಯ್ ಹೊಯ್ ಚೂಣೆಗರನೆನುತ ಬಲಜಲಧಿ ಮುಕ್ಕುಳಿಸಿ ಏಗೆ ಹೆಕ್ಕಳಿಸಿ ಕವಿದುದು (ಕುಮಾ.ಭೀ. ೯-೩) ; ವೃಕ್ಷವ ಕಂಡ ಕರ್ಣನದರಲ್ಲಿಗಿಸೆ ಮಡಿಯ ದುರುಳುವುದೆಂದು ಬಗೆಗುಂದಿ ಹಿಂಚಲಿದೊ ಕಂಡ ಕಣ್ಣಿಗೆ ಪಾರ್ಥನದರ ಕಂಠದ ಮಣಿಯ ಕುರಿತೆಸೆಯೆ, ಕಣ್ಣಾಗಿದು ನೆಲಕೆ ಹೊರಳಿತು ಹಕ್ಕಿ ! (ಹಕ್ಕರ. ೯-೦೬). ೪. ಸಚಿವರ ಸತಿಯರ್ ನಾಲ್ವರ್ . . . ಪುತ್ರರನೆರ ಡೆರಡು ತಿಂಗಳಿಂ ಹಿಂಚಿ ಪಡೆದರನುನಯಮೆಸೆಯಲ್ (ರಕಾಸ. ೨-೭) ; ಕೋಕಿಳನು ಪಂಚಸ್ವರದೆ ಕೂಗಲು ಹಿಂಚದೆ ಪಂಚಬಾಣನು ಬಂದೆದ್ದುದನು (೮೦ಪ. ೯-೦೯೩). ೫. ಬಿಡು; ಉಳಿ: ನೆಟ್ಟೆ ಮಿಂಚುವ ಬೊಲ್ಲ ಬೋರನನು ಪಂಚಬಾಣನ ಪೆಸರಿನ ಪೇಘವರ್ಣನ ಹಿಂಚದೆ ನಡೆಸಿ ತೋಱದರು (೮೦ಪ. ೬-೩೩). 'ಮುಂಚು' ಪರಾ. [ಪಿಂ (<ಪಿನ್)+–ಚು₁]

**ಪಿಂಚು₂**, ಹಿಂಚು₂ (ನಾ). ೧. ಹಿಂದಕ್ಕೆ ಇರುವಂತಹುದು; ಹಿಂದಿನದು: (ಅ). **ಹಿಂಚು₂ :** ೨. ತಡ ; ಸಾವಕಾಶ : ಏಟು ಮುಂಚು ಮಾತು ಹಿಂಚು, ಎಂದುಕೊಂಡು . . . ಇದ್ದ ಈ ಉಪಾಧ್ಯಾಯನ ಕೈಯಿಂದ ಯಾವಾಗಲಾದರೂ ಮಹಾದೇವನಿಗೆ ಒಂದೊಂದು ಪೆಟ್ಟು ಬೀಳುತಿತ್ತು (ಸುಮುಣ. ೩೦) ; ಊಟಕ್ಕೆ ಮುಂಚು ದುಡಿಗೆ ಹಿಂಚು (ಗಾದೆ).

**ಪಿಂಚುಮುಂಚು**, ಹಿಂಚುಮುಂಚು = ಹಿಂದುಮುಂದು : ಕೂದಲ್ ದುಮ್ಮನಿತದೊಸರಿ ತೆಗೆವತ್ರಲೊವಗಿ ತಳದೋಲಿವಿರ್ಗಳೊಳ್ ಪಿಂಚು ಮುಂಚೆನಿಸದೆ ಸರಿಯೆನಿಸಿ ಕೂಡಿ (ಲೀಲಾ. ೧೦-೩೦) : ಆವ ಬೀಜವ ಬಿತ್ತಿದರೂ ಮೊಳೆಯು ಮುಖ ಹಿಂಚುಮುಂಚುಂಟೇ? (ಶೂನ್ಯಸಂ. ೨೨೯-೩೨) ; ಹಿಂಚುಮುಂಚೇನಕ್ಕ ನಿನಗೆನಗೆಂದಳದೇ ಚಮರೆಯೊ ಪಟ್ಟವರಸಿ (ಅಜ. ೪೨-೩೦): ಶಿವನಯಿಪ್ಪತ್ತೈದು ಲೀಲಾಕಥಾಕ್ರಮಂ ವಿವರಿಸಲು ಹಿಂಚು ಮುಂಚೆನ್ನದಿರಿ ಕೋವಿದರು (ಗುರುಚಾ. ೪-೪೬) ; ಇವುಗಳ ಕಾಲ ಬಹುಶಃ . . ಕ್ರಿ. ಶ. ೧೦-೨ನೆಯ ಶಕ ಅಥವಾ ಸ್ವಲ್ಪ ಹಿಂಚುಮುಂಚು ಇರಬಹುದೆಂದು ತಿಳಿಯಬಹುದು (ದ್ರಾ.ಶಿ. ೫೩). **ಹಿಂಚಾಗು** = ಹಿಂದೆ ಉಳಿ ; ಹಿಂದಾಗು : ಈ ಸಂಚಿತವನಜಿಯದೆ ಮುಂಚಿ ತಾನುಂಬ ಅಶನಕ್ಕೆ ನೀಡಿ ತಾ ಹಿಂಚಾಗಿ ಕೊಂಬ ಪ್ರಸಾದಿಯ ನೋಡಾ (ಸೋಣಮಾ. ೭೦-೨೭೬) ; ಹಿಂಚಾದುದಾಹವದೊಳು ನಿನ್ನ ಮಾತೆಂದು ಪಂಚಾಸ್ಯ ನಗುತೆ ಕೋಲ್ಗಳಿಂದ (ಪೋಪಹ. ೩೯ ೩೨). **ಹಿಂಚು ಮಾಡು** = ಹಿಂದೆ ಸರಿಯುವಂತೆ ಮಾಡು ; ಹಿಂದೆಗೆಸು ; ಹಿಮ್ಮೆಟ್ಟಿಸು : ಮಿಂಚುಗಳ ಸಂಚಯವ ಹಿಂಚು ಮಾಳ್ಪ ಮಳತರ ಚಂಚಲದ್ಯಗಂಚಲದ . . . ಚಪಳೆಯರಿರ್ದರ್ (ಸೌಂ.ಕ. ೦೭ ೩೫). **ಹಿಂಚುಮುಂಚಾಗು** = ಹಿಂದುಮುಂದಾಗು : ಉಂಚಯ . . . ಚಟ್ಟ ದಕಿಗಳಂ ಚದುರರು ತಂದಲ್ಲಿ ಹಿಂಚುಮುಂಚಾ[ಪಾಠಾಂ. ಚಿ]ಗೆ ಪಾಟಿಸುತಿಹರು (ಕುಮಾರಾಂ. ೪-೯೪) ; ನವಗ್ರಹಗಳೊಂದೊಂದು ಮೂಜು ನಕ್ಷತ್ರಂಗಳೊಡಗೂಡುತಾ ತಾಂ ಚಮತ್ಕೃತಿಯೊಳಿರ್ಪತ್ತೇಳನೊಳಕೊಂಡು ಹಿಂಚು ಮುಂಚಾಗಿಹವು (ಚಿಕ್ಕದೇ. ೪-೬ ೩೦); ನೂರರೊಳರಪತ್ತು ದೈವದ ಯತ್ನವು ಪುರುಷಯತ್ನವು ನಲವತ್ತು ಇದು ಹಿಂಚುಮುಂಚಾದರೆಮಗಾಗ ವಿಜಯವು ಕೇವಲ ಕನಸಿನ ಸೊತ್ತು (ಹಂತ್ರಾಣಿ. ೦೯೦-೬೯). [<ಪಿಂಚು₁]

**ಪಿಂಚು₃** ' ಪಿಂಚೆಯು ' ನೋ.

**ಪಿಂಚೆಯು**, ಪಿಂಚು₃, ಪಿಂಜ಼್₂, ಪೆಂಚೆ, ಪೆಂಚೆಯ (ನಾ). ೧. ನವಿಲುಗರಿ : ಪಿಂ[ಪಾಠಾಂ. ಪೆಂ]ಚೆಯುದ ದಂಡೆ ಸುತ್ತಿದ ಚಂಚತ್ಕಟಿಸೂತ್ರವೊಪ್ಪೆ . . ಬ್ರುಚಿತಿಯಂ ವಿಪ್ರರಾಜಪಥು ಕಂಡಾಗಳ್ (ಕೃಷ್ಣಾಸ್ತ್ರ. ೦೨ ೩೨). **ಪಿಂಚು₃ :** ೨. ಅನ್ನದ ಗಂಜಿ : ಪಂಚಪಾಯಸ ಪಕ್ವಫಲ ಚತುಷ್ಕಂ ಒಹುಳದಿಂ ಚೆಲ್ವ ಸವಿನೊಡುವ ನವರಸಾವಳಿಯುಮಳ ಪಿಂಚೊಗೆದು ರುಚಿಯೊಡುವ ರಾಜಾನ್ನ ತೊಗೆ ತುಪ್ಪಮಂ ಚದುರಿನಿಂದ ನೀಡಿ (ಅಂಗಜ. ೦೬-೦೩). **ಪಿಂಜ಼್₂ :** ೩. (ನವಿಲಿನ ಗರಿಯ) ಕುಂಚ ; ಪಿಂಛ : ಕಣ್ಗೆ ಪರ್ವಿಳೀ ಲಳಿತಲತಾಂಗಿಯಂಗಜನ ಬಿಜ್ಜೆಯ ಪೀಲಿಯ ಪಿಂಜೆಯೆಂಬಿನಂ (ಚಿಂ. ೬-೦೬೦). **ಪೆಂಚೆ :** ೧. ಕನ್ನಡಿ ಇದುಗ ಪೆಂಚೆಯ ಕುಂಚ . . . ಹೊಂಗಟ್ಟುಬೆತ್ತಗಳ ಪಿಡಿದು ಸೇವಕಜನರು ಕಣ್ಣೆವೆಯಿಡದೆ ಹರಿಯ ನಿರೀಕ್ಷಿಸುತ ಬಂದು (ಅನಂತಾ. ೦-೩-೪೨). ೪. ನವಿಲು : ಅಂಚೆಗಳ್ಕೊಳರ್ಪಕ್ಕಿಗಳ್ಕೊನ್ನಪಕ್ಕಿಗಳ್ಪೆಂ[ಪಾಠಾಂ. ಕ್ಪಿಂ] ಚೆಗಳ್ಗಿಳಿಗಳೆಣೆಪಕ್ಕಿಗಳ್ಜಲಮೆಗಳ್ಕೊಂಚೆಗಳ್ಕೋಗಿಲೆಗಳಲ್ಲಲ್ಲಿಗೊಪ್ಪಿದುವು ಸಜ್ಜೀವಭಾವದಿಂದೆ (ಕೈಬಿಖಾ. ೦೭-೨೫). **ಪೆಂಚೆಯ :** . ನಿಂಬಪಾಲೆಯ ಕಿವಿವೀಲಿಯ ಪೆಂಚೆಯದ ಕೇಶಬಂಧದೊಳು . . . ಪಸದನಂಗೆಯ್ದು (ಚಾಣಿ. ೪-೬೦ ಚ).

[< ಸಂ. ಪಿಚ್ಛ, ಪಿಚ್ಛಾ]

**ಪಿಂಛ** (ನಾ). ೧. ಹಕ್ಕಿಗಳ ರೆಕ್ಕೆ,–ಗರಿ : " ತನೂರುಹಃ . . . ಛದಃ, ಪಿಂಛಂ, ವಾಜಃ, ಪಕ್ಷಃ—ಈ ೯ ಎಚಿ(೧)ಕೆ " (ಹಲಾಯು. ೪೦–೯೩) ; " ತನೂರುಹಃ, ಪಿಂಛ . . . ವಾಜಮೆನೆ ಪಕ್ಷಿಗಳ ಗರಿಯಕ್ಕು" (ಮಂಗರಾ. ೫೦–೨). ೨. ನವಿಲುಗರಿ ; ಪೀಲಿ : ' ಪಿಂಛಾತಪತ್ರ' ಪರಾ. ೩. ನವಿಲುಗರಿಯ ಕುಂಚ : ಪಿಂಛ ಕಮಂಡಲಾದಿ ವ್ಯವಹರಣ ವಿಲೋಕನಮುದೆಂಬಿವು ಮೊದಲಾದ ಸತ್ಕಲ್ಪಮಂ ಕಲ್ಪಿಸಿ ಪೇಟ್ದ ಶ್ವೇತಪಟಯಾಪನೀಯ ಕಾಷ್ಠ ದ್ರಾವಿಡ . . . ಇಂದ್ರಸಮಯ ಸಮುಚ್ಚಯಮಪ್ಪ ಸಂಶಯಮಿಥ್ಯಾತ್ವಮುಂ (ಚಿಂ. ೩). [ಸಂ.]

**ಪಿಂಛಚ್ಛತ್ರ** (ನಾ). ನವಿಲುಗರಿಯಿಂದ ಮಾಡಿದ ಕೊಡೆ,–ಛತ್ರಿ : ಧ್ವಜೋತ್ಕರಸಂದೋಹ ಮುಮುಂ ಬಿಸುಟ್ಟುಡುಗಿ ಪಿಂಛಚ್ಛತ್ರಮುಂ . . . ಬಂದರ್ ಭಯಭ್ರಾಂತಿಯಿಂ (ಅಜಿತ. ೦೨-೬೬). [ಪಿಂಛ + ಛತ್ರ]

**ಪಿಂಛಧ್ವಜ** (ನಾ). ನವಿಲುಗರಿಯಿಂದ ಮಾಡಿದ ಧ್ವಜ,—ಬಾವುಟ : ಕುಂಡಲಾಲಪುರವರೆ ಶ್ವರಃ . . . ಭಗವದರ್ಹನ್ಮುಖುಕ್ಷ್ಗೆ ಪಿಂಛಧ್ವಜ ವಿಭೂಷಣಂ (ಇಶ. XVIII. ೩೦೦-೫ ; 11ನೆಯ ಶತ). [ಪಿಂಛ + ಧ್ವಜ]

**ಪಿಂಛನು** ' ಪೆನ್ನನ್ನು ' ನೋ.

**ಪಿಂಛಾತಪತ್ರ** (ನಾ). = ಪಿಂಛಚ್ಛತ್ರ : ಗಗನತಳದೊಳ್ ವಡ್ರುಸಾರಮಂಬ ರಥಮನೇಱ ಛತ್ರಚಾಮರ ಪಿಂಛಾತಪತ್ರ ಪಾಳಿಧ್ವಜ ಪತಾಕಾದ್ಯನೇಕ ಮಹಾವಿಭೂತಿಯೊಳ್ ಕೂಡಿ (ವರ್ಧಮಾ. ೬೨-೭) ; ಇದಱೊಳ್ ಮೂರ್ಧಾಭಿಷೇಕಂ ತನಗೆ ಗತ ಸಮಂತಾಯ್ತು ಪಿಂಛಾತಪತ್ರಂ ಪುದಿದತ್ತಂ ತಣ್ಣಿಟಿಲ್ಮಾಡುವುದು ಗಡಂ (ಶಂಕರಾ. ೦೬-೯೯) ; ಛವಿಸೆ ಪೊಲ್ತುದು . . . ಜಲದೇವಿಯು ಪಿಂಛಾತಪತ್ರಮನೆ ಶತಪತ್ರಂ (ಗದಾಯು. ೬-೪೦) ; ಬಾರುಳೊಳ್ತುಂಬಿದ ಪುಡಿಗತ್ತುರಿಯಂ ಸುಳಿಗಾಳಿ ಪೂಸಿ ಮೇಲಕ್ಕೆತ್ತಲ್ ತರುಣಿಯ ಮುಖಲಕ್ಷ್ಮಿಗೆ ಪಿಡಿದುರುತರ ಪಿಂಛಾತಪತ್ರಮೆನೆ ಚಿಣ್ಣಸೆಗುಂ (ಶ್ರೀಕಂ. ೩-೦೦೨). [ಪಿಂಛ + ಆತಪತ್ರ]

**ಪಿಂಜ** (ಗು). ೧. ದಿಗ್ಭ್ರಮೆಗೊಂಡ ; ಭ್ರಾಂತಿಗೊಂಡ ; ತಬ್ಬಿಬ್ಬಾದ. (ನಾ). ೨. ಮನಸ್ಸಿನ ಗೊಂದಲ ; ದಿಗ್ಭ್ರಮೆ. ೩. ಚಂದ್ರ. ೪. ಶಕ್ತಿ. ೫. ಒಂದು ಬಗೆಯ ಕರ್ಪೂರ. ೬. ಕೊಲ್ಲುವಿಕೆ. [ಸಂ.]

**ಪಿಂಜಡಿ** (ಕ್ರಿ). ಹಿಂದಕ್ಕೆ ತಂಗು,—ಬಡಿ,—ಅಪ್ಪಳಿಸು : ವನಜಾಕ್ಷಿಯಳ ವದನಚಂದ್ರಮನ ರಾಹು ತಾಂ ಕಿನಿಸಿಂದೆ ಪಿಡಿದು ನಿಂದಿರ್ಪಂತೆ ನಿಡಿದಾದ ವೆಣಲು ಪಿಂಜಡಿವುತಿರೆ (ನವಮೋ. ೦೫-೩೭). [ಪಿಂ (< ಪಿನ್) + ಜಡಿ₂]

**ಪಿಂಜಣಿಗ** (ನಾ). ಒಂದು ಬಗೆಯ ವೃತ್ತಿ ಮತ್ತು ಆ ವೃತ್ತಿಯನ್ನು ಕೈಗೊಂಡವನು : ಪಿಂಜಣಿಗರು ಅಸಗರು ಸಹ × × × ನಾಡ ದಳವಾಕಿ . . . ಸಮರ್ಪಿಸಿಯಿರಲಾಗಿ (ಎಕ. XI. ಮೊಳಕಾ. ೧-೦೪ ; 1557).

**ಪಿಂಜಣಿಗಂಗುತುಗೆ** = ಪಿಂಜಣಿಗ ವೃತ್ತಿಯವರ ಮೇಲೆ ಹಾಕುವ ತೆರಿಗೆ : ನಾಡ ತಳವಾರಿಕೆ ವರ್ತನೆ ಪಿಂಜಣಿಗಂಗುತುಗೆ ಯಾಲೆಯ ಮಮಂ ಮಹರ್ನವಮಿ ಉಲುಪೆ . . . ಕಾಣಿಕೆ ಇಪ್ಪಗಳು ಸಹವಾಗಿ ಯೆಂನ ಉಂಟಾದ ಯಾತಿಬಾಧೆಗಳನು ಬಿಟು (ಸೌಇಇ. IX—II, ೬೬೩-೦೮ ; 1550).

[ ? ]

**ಪಿಂಜರ** (ಗು). ೧. ಕಂದುಬಣ್ಣದಿಂದ ಕೂಡಿದ ; ಮಾಸಲುಕೆಂಪುಬಣ್ಣದ : ಪಿಂಜರತನುಗಳ್ ಕೊಳದಿಂ ಕೊಳಕ್ಕೆಮಯ್ದುವಿಕತಿಗಳ್ ಮನಮೊಸದು . . . ಅನುಕರಿಸಿಕ್ಕಿಂ (ಪರ್ವಮಾ. ೧-೫೪) ; ಮುಂದಿದ ಜಡೆಗಳ ರಜಃಪಿಂಜರದ ಸಂತತಂ ಸುರನರೋರಗ ಶುಃಪಿಕಾಳಿಗಾಶ್ರಯಮಾದ ಪರಮಪುಪಾವಿರೂಪಾಕ್ಷ ಲ್ಪದ್ರುಮಂ ಪೊರೆಯಂಲಾಪತ್ರಜನರನು (ಚಿಕ್ಕ. ೫ ೦). ೨. ಹಳದಿ ಬಣ್ಣದಿಂದ ಕೂಡಿದ ; ಹೊಂಬಣ್ಣದ : ಅಮೇಯ ಕನಕಾಬ್ಜಪಿಂಜರಪರಾಗದಿಂ ಗಾತ್ರದೊಳ್ ತೆಮಟ್ದಿ ಕೊಳದಿಂ ಕೊಳಕ್ಕೆ ಬಗುತಿರ್ಪ . . . ಭ್ರಮರಸಂಕುಳಂ (ಸುಕುಮಾ. ೪-೫೦). (ನಾ). ೩. ಕೆಂಪು ಮಿಶ್ರಿತವಾದ ಹಸುರು ; ಹಳದಿ ಬಣ್ಣ : "ಕಂಬಸುರೆಸೆದಿರೆ ಪಿಂಜರಮೆಂಬುದು" (ವಸ್ತುಕೋ. ೦೦೯-೬೬). ೪. ಪಂಜರ ; ಬೋನು :

ಆ ಗಿಳಿಯು ಮೂಋುವುನೆಯು ಪಿಂಜರದಲ್ಲಿ ಕೂತು ಕುರುಷ್ನ ಲಿಂಗ ಪೂಜಾಂಲಿಂಗ ಪೂಜಾಂ ಎಂಬುತ್ತಿದೆ (ಸಿದ್ಧವ. ಕ. ೬೫-೨೦೧) : ಹೊನ್ನ ಮಾಣಿಕವ ನುಡಿ ಕಾಳಿ ತದಕಿನ ಪಿಂಜರದ ಮುನ್ನೆರಡು ಕಾಳಿ ನುಡಿದಾವ ಹೆಬ್ಬಾಗಿಲಕ (ಕೋಳಗೀ. ೧೯೯) : ಆದಿಮಧ್ಯಾಂತವಿಲ್ಲದವನನ್ನು ಸಣ್ಣದಾದೀ ನಮ್ಮ ಮನಸ್ಸೆಂಬ ಪಿಂಜರದಲ್ಲಿ ಹೊಗಿಸಲಾರೆವು (ದೇಜೀಕಾ. ೫೯). ೫. ಒಂದು ಬಗೆಯ ಹಕ್ಕಿ : ಗಳಿಗಳಂಟಿಗೆ ಸಿಲುಕಿದವು ಪಿಕ್ಕಳಿಗ ಪಿಂಜರ ಮಂಜರಿಗ ಮಿಾಂಬುಲಿಗ ಲಾವುಗ ಸರಲೆ ಬುಬುಲಿಗಳೆಚ್ಚ ಮಿಂಟಿಯಲಿ (ಕೊರಾ. ೩-೩-೧೬). ೬. ಒಂದು ಬಗೆಯ ಕುದುರೆ. ೭. ಎಲುಬಿನ ಗೂಡು ; ಅಸ್ಥಿಪಂಜರ. ೮. ಬಂಗಾರ : ಚಿನ್ನ. ೯. ಹಳದಿಯ ಬಣ್ಣವಾಗಿ ಉಪಯೋಗಿಸುವ ಒಂದು ಬಗೆಯ ಖನಿಜ : ಹರಿದಾಳ. [ಸಂ.]

**ಪಿಂಜರಾಪೋಲು** ' ಪಾಂಜರಪೋಳ ' ನೋ.

**ಪಿಂಜರಿ$_1$.** ಹಿಂಜರಿ (ಕ್ರಿ). ಹಿಂದಕ್ಕೆ ಸರಿ ; ಹಿಮ್ಮೆಟ್ಟು : ಒಡನೆಯ ಸುಧ್ವಜನುಂ ಪಿಂಜರಿದರಿಯ ಕೈಯುಂ ಕುಟ್ಟಿದಂ (ರಾಮಾಶ್ವ. ೯೫-೨೬) : ಪಿಂಜರಿದು ಸಾವಿನತ್ತಲೆ ಪೋಪ ಪಯಣ ? ತೆಗೆ, ತೆಗೆ, ಒಲ್ಲೆನ್ (ಅಕ್ರೂರಾ. ೧೯-೪೦೦). **ಹಿಂಜರಿ :** ಮಾನಕೆ ಮಾನಿಷ್ಠರಂಜಿ ಹಿಂಜರಿದರೆ . . . ತನಗೆಯೆ ಅಂಜಿ ಹಿಂಜರಿದರು ಭಾಪುರೆ ಎಂದುಬ್ಬಿ ಮೆರೆವನು ಖೋಡಿ (ಇಂಕಾಕ. ೯೪-೫೯) ; ಅವಳ ಧೈರ್ಯವೇ ಧೈರ್ಯ, ಯಾವುದಕ್ಕೂ ಹಿಂಜರಿಯುತ್ತಲೇ ಇರಲಿಲ್ಲ (ಅಂಹೂ. ೩೭) : ಚಣಚಣಕೆ ವೈರಿಯು ದಳೇ ಬಲ ಗುಂದುತಳಿದುಳಿದು ಹಿಂಜರಿಯುತೋಡುತಿದೆ ಲೆಕ್ಕಿಸದೆ ವೀರ ಪಾರ್ಥನ ವೀರವಾಣಿಯುಂ (ಚಿತ್ರಾಂಗ. ೯೩-೨೨೯೯).

[ ಪಿಂ (< ಪಿನ್) + ಜರಿ$_1$ (< ಸರಿ$_1$) ]

**ಪಿಂಜರಿ$_2$** (ನಾ). ಒಂದು ಬಗೆಯ ಸರ್ಪ : ಪಿಂಜರಿ ಕಂಧರಕೋಟ ಧನಂಜಯ ಪಾಂಡುರ ಕಿಶಾಲಿ ಪಿಂಡಾಂಶುಕ ಚಿತ್ರಾಂಜನ . . . ಮಣಿಂಜಯ ಸಮದಂಗಳಾದಿಯಾದಹಿನಿವಹಂ (ವೃಷಕ. ೩೦-೨೮).

[ ←ತೆಲು. ಪಿಂಜರ./ಸಂ. ಪಿಂಜರಕ ]

**ಪಿಂಜರಿ$_3$** (ನಾ). ೧. ಚಿನ್ನ ; ಬಂಗಾರ : ವಾಸವದಿಕ್ತಟಂ ಸಮೆದ ಮಾಷೆ . . . ಸಮೀರನೇರಣಗನಾಗೆ ಸಿದಾಘದ ದೀಪವರ್ತಿಯೊಳ್ ಕಾಸೆ ತೆರಳ್ದ ಪಿಂಜರಿಯವೋಲ್ ಕಿಸುಸಂಜೆ ತೆರಳ್ದಿನಂ (ಅಜಪು. ೬-೭೦). ೨. ಬೆಳ್ಳಿ ; ರಜತ : " ಪಿಂಜರಿಯೆಂದು ಬೆಳ್ಳಿ " (ಕಶಸಾ. ೫೦-೬೨) ; ಪಿಂಜರಿಯ ನಗಮೊ . . . ಸುಧೆಯಾ ರಂಜಿಪ ರಾಶಿಯೊ ತಾನೆನೆ ನಂಜುಂಡನ ಸದನಮೊಂದು ಸಲೆ ಶೋಭಿಸುಗುಂ (ಹಮ್ಮಿರ. ೯-೩೪) ; ಕಿಸುಪೊನ್ನ ಪಿಂಜರಿಯ ಚೆಂದವಗಲ್ದ ಕೋಂಟೆಯ ಮಾಪಳಿಸಿನಗಟ್ಟೀದೊಳಗೆ . . . ಸಿಂಗರದೊಂದು ದೇಗುಲಂ ಕಣ್ಗೆಡ್ಡವಾಗಿ ರಂಜಿಕುಂ (ರಾಮಾಶ್ವ. ೫೪-೧೯). [<ಸಂ. ಪಿಂಜರ]

**ಪಿಂಜರಿ$_4$** (ನಾ). ಮೇಲ್ಕಟ್ಟು ; ವಿತಾನ : " ಪಿಂಜರೀ—ಮೇಲ್ಕಟ್ಟು " (ಕಾಶಕ್ಕ. ೨೮೦). [ಸಂ. ಪಿಂಜರೀ ?]

**ಪಿಂಜರಿತ** (ಗು). ೧. ಹೊಂಬಣ್ಣದಿಂದ ಕೂಡಿದ ; ಹಳದಿ ಮಿಶ್ರಿತ ಕೆಂಪುಬಣ್ಣದ : ಆಭರಣದ ಮಾಣಿಕಂಗಳ ಪೊದಟ್ದರುಣಾಂಶುಗಳಿಂದ ಮಂದು ಪಿಂಜರಿತಪಿಶಂಗಿತಾರುಣಿತದಿಙ್ಮುಖಮಾದುದು ತನ್ನ ಹೋತ್ಸವಂ (ಅಜಪು. ೭-೧೧೪) ; ಸುರಭವುಲಯರುಹಪಂಕಪಿಂಜರಿತ ರಜತಶುಕ್ತಿಕಗಳಿಂ (ಶಂರಾಮಾ. ೧೨-೨ ವ) ; ಕಿಂಜಲ್ಕಮಂಜರೀಪಿಂಜರಿತದಿಶಾವಲಯಂ (ಹಕಕಾ. ಶಂ. ೨೩೦). (ನಾ). ೨. ಹಳದಿಮಿಶ್ರಿತವಾದ ಕೆಂಪುಬಣ್ಣವುಳ್ಳುದು; ಹೊಂಬಣ್ಣವುಳ್ಳುದು : ವಿಯತ್ತಳಂ ಬಗೆದು ನೋಟಿಸ್ಪೊಡೆ ನಾಡೆ ಪತತ್ಪತತ್ರಿಜರ್ಝರಿತಮೆ ದಿಕ್ತಟಂ ರಿಪುನರಾಧಿಪರಕ್ತಧುನೀಪ್ರವಾಹಪಿಂಜರಿತಮೆ ಬೀರಮಂ ಪೊಗಟ್ದನೇವೊಗಟ್ದಂ ಕದನತ್ರಿನೇತ್ರನಾ (ಶಂಕಶಾ. ೧೯-೪) ; ಮೇಣಲ್ಲಲ್ಲಿ ಮಂಜುಮೆಯ್ ರವಿಕಿರಣರಾಗದಿಂ ಕಿಂಜಲ್ಕಪಿಂಜರಿತವಾಯ್ತು (ಶ್ರೀರಾಮಾ. ೨೫೮-೮೦). [ಸಂ.]

**ಪಿಂಜರಿವಟ್ಟಲ್** (ನಾ). ಬೆಳ್ಳಿಯ ಬಟ್ಟಲು : ಪಿಂಜರಿವಟ್ಟಲೊಳ್ಳಿಱೆ ಸೀಧುವನೀಂಟುತೆ ನೋಡಲ್ಲಿ ಮೇಣ್ಮುಂಜುವುಂಬೇಂದು ಬಿಂಬಿಸೆ ಸುಧಾರುಚಿ ಸಿಲ್ಕಿದನೆಂದು ನೋಟ್ಪ ತತ್ಕುಂಜದಳಾಕ್ಷಿಯುಂ (ಉದ್ಭಟ. ೬-೩೮).

[ಪಿಂಜರಿ$_3$ + ಬಟ್ಟಲ್]

**ಪಿಂಜರಿವೆಟ್ಟು, ಪಿಂಜರಿವೆಟ್ಟು** (ನಾ). ಬೆಳ್ಳಿಯ ಬೆಟ್ಟ ; ರಜತಾದ್ರಿ : " ರಜತಾದ್ರಿಯಕ್ಕುಂ ಪಿಂಜರಿವೆಟ್ಟುವೆನಲು " (ಕಶ. ೬೬). **ಪಿಂಜರಿವೆಟ್ಟು :** " ಪಿಂಜರಿವೆಟ್ಟೆಂದು ಬೆಳ್ವೆಟ್ಟಂ " (ಕಶಸಾ. ೪೯-೯೨); ಪಿಂದುಂ ರೂಪಿಪ ಲಿಂಗದೊಂದು ಪರಿಜಂ ತಾಳ್ದೆಲ್ಲರಂ ರಕ್ಕಸರ್ ನಂಜು ಪಿಂಜರಿವೆಟ್ಟುವೇ ಮಂಚಿತದೇಂ ಕಂಗೊಳ್ವನೋ ಮ್ಮೆಮೆಯಿಂ (ಪ್ರಸೂಕು. ೨-೧೫).

[ ಪಿಂಜರಿ$_3$ + ಬೆಟ್ಟು ]

**ಪಿಂಜರಿವೆಟ್ಟು** ' ಪಿಂಜರಿವೆಟ್ಟು ' ನೋ.

**ಪಿಂಜರಿಸು** (ಕ್ರಿ). ಹೊಂಬಣ್ಣದಿಂದ ಆವರಿಸು,—ವ್ಯಾಪಿಸು : ಜಂಬೂದ್ವೀಪದ ಮೇರುವಿನ ಸಮುಕ್ಷದೊಳು ಸಂಜನಿಯಿಸಿದಾ ಜಂಬೂಫಲರಜಿ ಪಿಂಜರಿಸಿದುದೋ ಭುವನತಳವುನನೆ ರಂಜಿಸಿದುದು ಕಳ್ತಲೆ (ಜಮಿಭಾ. ೧೩-೬೨). [ಪಿಂಜರ + — ಇಸು]

**ಪಿಂಜಲ, ಪಿಂಜಳ** (ಗು). ೧. ಅತಿಯಾಗಿ ದಿಗ್ಭ್ರಮೆಗೊಂಡ; ಕಂಗೆಟ್ಟ; ತಬ್ಬಿಬ್ಬಾದ. **ಪಿಂಜಳ:** (ನಾ). ೨. ಧೂಳು ; ಹುಡಿ : ಅಂಜನಗಿರಿಯಂ ಚೂರ್ಣಿಸಿ ಪಿಂಜಳಮುಪ್ಪಂಕಿಯುದಂ ಮೆಯ್ಯುತ್ತದವೋಲ್ ರಂಜಿಪ ಜಾಂಡಕರಂಡದೊಳಂಜನವುಂ ತುಂಬಿ ಬೊಮ್ಮನಿರಿಸಿದನೋ . . . ಎಂಬಂತೆ ದಿಕ್ಚಕ್ರದೊಳ್ ಕಳಾಭೀಳಮುಹಾಂಧಕಾರಮೆಸಗುಂ (ಕಮಿಶ. ೩-೧೫). [ಸಂ.]

**ಪಿಂಜಳ** ' ಪಿಂಜಲ ' ನೋ.

**ಪಿಂಜಳಕ** (ನಾ). ಧೂಳು ; ಹುಡಿ : " ಧರಣೀಸಮುತ್ಥಿತಂ ಪಾಂಸುರೇಣುಚೂರ್ಣಾಭಿಧಾನಕಂ ಕ್ಷೋದಂ ಧೂಳಿ ರಜಂ ಪರಾಗಮೆಂದಿವು ತೆರಳ್ದು ಪುದಿದಿರ್ದುದಕ್ಕುಮದು ಪಿಂಜಳಕಂ " (ಶಬ್ದಮಣಿ. ೪೦-೦೩).

[ಸಂ. ಪಿಂಜಲಕ]

**ಪಿಂಜಾರ, ಪಿಂಜಾರಿ** (ನಾ). ೧. ಹಿಂಜುವವನು ; ಹೆಕ್ಕುವವನು : " ಪಿಂಜಾರಃ = ಹಿಕ್ಕುವಂ " (ಕಾಶಕ್ಕ. ೨೮೦). ೨. ಅರಳೆಯನ್ನು ಬಿಡಿಸುವವನು,— ಹಿಂಜುವವನು: "ಪಿಂಜಾರಃ —ಅರಳೆಯನೆಕ್ಕುವಂ" (ಕಾಶಕ್ಕ. ೨೫೭); ಕುಂಬಾಐ ಹೊಟ್ಟೆಯುಳಿ ಪಿಂಜಾರ ತಾ ಹುಟ್ಟಿ ಕುಂಭಿಕುಂಭಿಗಳನಳಿಯುತ್ತ ಕುಂಭಿನಿಯೊಳಿಂಬುಗೊಂಡಾನು (ಸರ್ವಜ್ಞ. ೧೧೯೪); ಅವಹೊನಿದ್ದೆ ಹೋದಾಗ ತುರುಗಳು ಊರ ಪಿಂಜಾರನ ಹೊಲ ಹೊಕ್ಕು ಬೆಳೆ ತಿಂದುಬಿಡುವುವು (ಹಕ. ೬೧೭); ನಮ್ಮ ದೇಶದಲ್ಲಿ ವಸ್ತ್ರವನ್ನು ಹುಟ್ಟಿಸುವ ಕೆಲಸದಲ್ಲಿ ಪಿಂಜಾರ … ನೇಕಾರ ಮುಂತಾದ ಕೈಕೆಲಸದವರು ಬೇರೆಬೇರೆ ಭಾಗಗಳನ್ನು ವಹಿಸಿಕೊಂಡು ಅಷ್ಟೇ ಮುಗಿಸುತ್ತಾ ಹೋಗುತ್ತಾರೆ (ಮುಂಜಯು. ೫-೨೫೩). ೩. ಸೇವಕ ; ಗುಲಾಮ ; ಆಳು : ಸಾವಿರ ಕುದುರೆಯ ಸರದಾರ್ರ ಮನೆಯ ಹೆಂಡತಿಗೆ ಪಿಂಜಾರ (ಜಂಜಾಪ. ೦೩೭). **ಪಿಂಜಾರಿ:** ೨. ಪಿಂಜಾರಿಯರು ಪಸಾರಿಯರು . . . ಮೊದಲಾದ ನಾನಾ ಜಾತಿ (ಕಾಗಂಧ. ೦೨೫-೯). ೩. ಪಲ್ಲಕ್ಕಿಯ ಮೇಲ್ಮುಸುಕು,— ಆಚ್ಛಾದನೆ : " ಪಿಂಜಾರಿಃ = ದಂಡಿಕೋರ್ಧ್ವಾಚ್ಛಾದನಂ " (ಕಾಶಕ್ಕ. ೨೫೭).

[←ಹಿಂ. ಪಿಂಜಾರ; ಮರಾ. ಪಿಂಜಾರೀ]

**ಪಿಂಜಾರಿ** 'ಪಿಂಜಾರ' ನೋ.

**ಪಿಂಜಾರಿಕೆ** (ನಾ). ಅರಳೆಯನ್ನು ಹಿಂಜುವ ಕೆಲಸ ; ಹಾಸುಗೆ, ಗಾದಿ ಮೊದಲಾದುವುಗಳನ್ನು ಮಾಡುವ ಕೆಲಸ,—ಉದ್ಯೋಗ : ಸಂಯುಕ್ತ ಪ್ರಾಂತದ ಹೊರತಾಗಿ ಉಳಿದ ಕಡೆಯಲ್ಲೆಲ್ಲ ಒಹುಶಃ ಪಿಂಜಾರನು ಮುಸಲ್ಮಾನನೇ ಇರುವುದರಿಂದ ಈ ಪಿಂಜಾರಿಕೆಯು ಉದ್ಯೋಗವು

ಮುಸಲ್ಮಾನರ ಆಳಿಕೆಯಲ್ಲಿ ಉದಯವಾಯಿತೆಂಬುದು ಸ್ಪಷ್ಟವಾಗುವುದು (ಜಾಕಾ. ೨೩). [ಪಿಂಜಾರ + –ಇಕೆ]

**ಪಿಂಜಾವಳಿ** (ನಾ). ಒಂದು ಬಗೆಯ ವಸ್ತ್ರ : ಮಲಯಜ ಶ್ರೀಗಂಧ ಗೊಳೆಯುಂ ... ಚಂದ್ರಾತಪಂ ಭೂತಿಳಕವುಂ ಮಣಿವಟ್ಟು ಪಿಂಜಾವಳಿಯುಂ ಸಂಧ್ಯಾರಾಗವುಂ ಕೈದೊಡಕುದಯರಾಗ (ಚಂಪು. ೧೦–೨೯). [? + ವಳಿ₄ (<ವಟ್ಟು₁)]

**ಪಿಂಜಿ₁** 'ಪಿಂಜು₁' ನೋ.

**ಪಿಂಜಿ₂**, ಹಿಂಜಿ (ನಾ). ಅರಳೆಯ ಸುರುಳಿ ; ಹಂಜಿ : (೧). ಪಿಂಜಿ : ಹತ್ತಿಯ ಹಿಂಜಿ (Sliver)ಯಲ್ಲಿ ಎಳೆಗಳೆಲ್ಲವು ಅಸ್ತವ್ಯಸ್ತವಾಗಿ ಇದ್ದರೆ ಉಪಯೋಗವಿಲ್ಲ (ಜಾಂಕ್ರ. I, ೪೧೭); ಹಾಸುಹೊಕ್ಕಿಗೆ ಪಕ್ಕಾದ, ಗಂಜಿಗೆ ಹಿಂಜಿಯಾದ, ನನ್ನೀ ಕೈಲಾಳಿಯ ಮಗ್ಗಕ್ಕೆ ಪಂಜಾದ ನನ್ನೂರಿನ ಹಿರಿಯ ರೆಲ್ಲರ ಕ್ಷಮಾಪಣೆ ಹಾಗೂ ಆಶೀರ್ವಾದ ಕೋರುತ್ತೇನೆ (ನನ್ನೂರು. ೩೬೩೬. ೦೫). [<ಸಂ. ಪಿಂಜಾ]

**ಪಿಂಜು₁**, ಹಿಂಜು (ಕ್ರಿ). ೧. ಬೇರೆ ಬೇರೆ ಮಾಡು ; ವಿಭಾಗಿಸು : "ಪಿಂಜು–ಪೃಥಕ್ಕರಣೇ" (ಶಮದ); ಹೊಂಜಾಳಿಗೆಯನಿತ್ತು ರಂಗಶೇಖರ ಗಾಗ ಪಿಂಜಿ ಮನ್ನಿಸಿದ ಮೇಳವನು ಸಿಂಜನಿ ಶಿಖರಿಣಿಯರಿಗೆ ಮುತ್ತೊಲಿದ ಪರಂಜಿಯಾಭರಣವನಿತ್ತ (ಕರಕ. ೦೩–೧೯೫). ೨. ಅರಳೆಯನ್ನು ಹೆಕ್ಕು,—ಬಿಡಿಸು,–ಚೊಕ್ಕಟ ಮಾಡು : "ಪಸುಗೆಯೊಳ್ ಕಾರ್ಪಾಸ ವಿವರಣದೊಳಂ ಪಿಂಜು" (ಕಠ್ಠಮಂ. ೮೮). ೩. ಬೇರೆ ಬೇರೆ ಯಾಗು ; ಬಿಡಿಬಿಡಿಯಾಗು ; ವಿರಳವಾಗು ; ದೂರವಾಗು : ಮಂಜು ಮುಸುಂಕಿ ಕೊಂಕುಗೊಂಡಿರಿಂ ಮಸುಳ್ದಿಂಗಂಡ ಬಿಸಪ್ರಸೂನವೋ ಪಿಂಜದೆ ಪೂಣ್ದು ಪೊಣ್ಮಿ ಪೊಗೆಸುತ್ತಿದ ಪುತ್ರಳಿಯೋ . . . ಎನಲ್ (ಚಳಂ. ೩–೩೦). ಹಿಂಜು : ೧. ಮೋಡವ ಹಿಂಜಿ ಜನರಿಗೆ ಅಂಜಿ ರವಿ ಅಡಗಿದನೆಂದು (ಅರಳು. ೧೪೪–೦೫). ೨. ಹಿಂಜಿದರಳೆಯ ಹಿಂಡೊ ? ಐರಾವತದ ದಂಡೊ ? ಮಂಜೊ ? . . . ಮಲೆಯ ಕಲೆಯಾ ಬಂಡೆಯಲ್ಲೀನ ನಾ ಕಂಡೆ ? (ಅಂಕೇ. ೯–೦೩); ತೆರೆತೆರೆ ಯಾಗಿ ಹಿಂಜಿದ ಅರಳೆಯಂತೆ ಮೋಡಗಳು ತೇಲಿ ತೇಲಿ ಹೋಗುತ್ತಲಿ ದ್ದವು (ನಾಗು. ೦೩) ; ಶಾಂತಾಳು ಹಿಂಜಿದ ಹತ್ತಿಯಂತೆ . . . ಬಂಡೆಗಲ್ಲಿನೊಳಗಿಂದ ತಿಳಿನೀರು ಜುಳು–ಜುಳು ಹರಿದಂತೆ ಸಕ್ಕದ್ದೂ ಕೂಡಿತು (ಆಕಾ. ೦೦೮); ಹಳತು–ಹೊಸತನು ಹಿಂಜಿ ಹೊಸೆದು ಹೊತ್ತಿಸಿ ಹಿಡಿದ ಶಾಂತಿ–ಪಣತಿ (ಸಂಕು. ೫೦–೧೧) : ಹಿಂಜಿದ ಹತ್ತಿಯ ಚೂರುಗಳಂ ತಿರುವ ಮೋಡದ ಚುಕ್ಕೆಗಳು . . . ಕರಗಿಸಿಕೊಳ್ಳುತ್ತವೆ (ಹಮಹೂ. ೨೫೩)' ೪. ತೆಳುವಾಗು ; ಚೊಕ್ಕಟವಾಗು ; ಶುದ್ಧವಾಗು : ಕಸರು ಕಳೆದ್ದು ಕಮ ಹಿಂಜಿ ಬಂತು ರವಿಕಿರಣ ನೂಲುವಂತೆ (ಅರಳು. ೧೦೯–೮) ; ಹೊಗೆ ಮೋಡ ಹಿಂಜಿ ಕನ್ನಾರಿಯಾಗುವಂತೆ ನೆನಸಿದ ರೂಪ ಹುಡಿಯಾಗುತಿದೆ (ಉದ್ಯಾಂಕಿ. ೪.೦); ಮುತ್ತಿದ ಮೋಡ ಚದರಿ, ಹಿಂಜಿ ಹೋಗಿ ಸಾಂದ್ರ ಚಂದ್ರಿಕೆ ಚೆಲ್ಲಬು ನು (೦೬೭೮. II, ೨೦೯). ೫. ಬಟ್ಟೆಯ ಎಳೆ ಗಳು ದೂರವಾಗು ; ಜಾಳಾಗು : ಮೊನ್ನೆ ತಾನೇ ತೆಗೆದುಕೊಂಡ ಸೀರೆ ನೀರಿಗೆ ಹಾಕಿದ ಕೂಡಲೆ ಹಿಂಜಿ ಹೋಯಿತು (ರೂಢಿ). ೬. ವಿಸ್ತಾರ ಮಾಡು ; ವಿಸ್ತರಿಸು : ಓಡುತ್ತಿರುವ ಕುದುರೆಯ ಒಂದು ನಿಮಿಷವನ್ನು ಹಿಂಜಿ ಹತ್ತು ಘಂಟೆಯ ಕಾಲವನ್ನಾಗಿ ಮಾಡಬಲ್ಲೆನಾದರೆ (ಶಿಸಂತ. I, ೨೫೭). ೭. ಸೂಕ್ಷ್ಮವಾಗಿ ಪರಿಶೀಲಿಸು ; ಕೂಲಂಕಷ ವಾಗಿ ವಿಚಾರ ಮಾಡು : ಈ ಪ್ರಶ್ನೆಯನ್ನು ಇನ್ನೂ ಅಷ್ಟು ಹಿಂಜಿ ತೋರಿಸೋಣ (ಬಾಹಾದ. VI. ಎರಡು ಬಾಕುಗಳು); ತನ್ನ ಚಿಂತೆಗಳ ಒಳಪದರ್ರು ಗಳನ್ನು ಹಿಂಜುವುದರಲ್ಲಿ ಒಂದಾದಳು (ಕುರುಡು. ೫೦); ನನ್ನ ಬುದ್ಧಿ ಗೇನೋ ದೌರ್ಬಲ್ಯ ಬಂದು . . . ಸಣ್ಣಮಾತನ್ನೇ ಹಿಡಿದು ಹಿಂಜುತ್ತಿದೆ (ಶಿಕಂಠ. ೨೫); ಈ ಹಾಡನ್ನು ಹಿಂಜಿ ಅರ್ಥ ಮಾಡಿ ನೋಡಿದರೆ ಈ ಕೊಡಕು ಬಗೆಹರಿದು ಹೋಗುವುದು (ಕನ್ನಕಾ. ೪೫).

[ದೇ.॥ ಮಲ. ಪಿಚ್ಚು, ಪೀಚ್ಚು ; ತೆಲು. ಪಿಂಜು]

**ಪಿಂಜು₂**, ಪಿಂಜಿ₁ (ನಾ). ಹೀಚುಗಾಯಿ ; ಮಿಡಿ : (೧). ಪಿಂಜಿ₁ : " ಪಿಂಜಿ ತೀರ = ಸಣ್ಣ ಕಾಯಿ " (ಶಾಸಕೋ. ೧೫). ' ಪೀಚು₂ ' ಪರಾ. [ದೇ.॥ ತಮಿ. ಪಿಞ್ಚು ; ಮಲ. ಪಿಞ್ಚು ; ತೆಲು. ಪಿಂದಿಯ, ಪಿಂದೆ]

**ಪಿಂಜೂಲ** (ನಾ). ದರ್ಭೆಗಳ ಕಟ್ಟು : ಮುತ್ತುಗದ ದೊನ್ನೆಗಳಲ್ಲಿ ನೀರು ತುಂಬಿಕೊಂಡು ದರ್ಭೆ ಪಿಂಜೂಲಗಳನ್ನು ಹಿಡಿದು ಮಂತ್ರಜಲವನ್ನು ಪ್ರೋಕ್ಷಿಸುತ್ತ ಬಂದರು (ಮಹಾಪಾ. ೯೮). [ಸಂ.]

**ಪಿಂಜೂಷ** (ನಾ). ಕಿವಿಯ ಮಲ ; ಗುಗ್ಗೆ. [ಸಂ.]

**ಪಿಂಚೆ₁** (ನಾ). ನೆರಿಗೆ ಹಾಕಿ ಕಟ್ಟಿದ ಕಚ್ಚೆ. ' ಪಂಚಕಚ್ಚೆ ' ಪರಾ.
ಪಿಂಚೆ ಹಾಕಿ ಧೋತ್ರವನ್ನುಡು=ಒಳ ಅಂಗಿಯ ಮೇಲೆ ಬರುವಂತೆ ಮಡಿಕೆಗಳನ್ನು ಒಳಸೇರಿಸು,—ಸಿಕ್ಕಿಸು : (ಸ್ಯಾಂಡರ್).
[← ತೆಲು. ಪಿಂಚೆ, ಪಿಂಚೆಯ]

**ಪಿಂಚೆ₂** 'ಪಿಂಚೆಯ' ನೋ.

**ಪಿಂಜೆ₃** (ನಾ). ೧. ಬಾಧೆ ; ನೋವು. ೨. ಅರಿಸಿನದ ಪುಡಿ,—ಹುಡಿ. ೩. ಅರಿಸಿನದ ಬಣ್ಣ : ಮೆಯ್ಯ ಬಣ್ಣಮುಂ ಪುಣ್ಯಮುಮರಿಸಿನದ ಪಿಂಜೆ[ಪಾಠಾಂ. ಜೆ]ಯಂತೆ ಪಾಜು ಪೋಕುಂ (ಅರ್ಥಸೀ. ೫–೪ ವ). ೪. ಅರಳೆ; ಹತ್ತಿ. ೫. ಬೆತ್ತ ; ಸೆಳೆ. [ಸಂ. ಪಿಂಜಾ]

**ಪಿಂಜೆಜಿಂಗು** (ನಾ). ಹಿಂಭಾಗದ ಸೆರಗು : ಪೊಂಜೆಳೆ, ಪಿಂಜೆಜಿಂಗು (ಕಬ್ಬಾಪು. ೯೩ ಪ್ರಯೋ). 'ಮುಂಜೆಜಿಂಗು' ಪರಾ. [ಪಿಂ (<ಪಿನ್) + ಸೆಜಿಂಗು]

**ಪಿಂಡ** (ನಾ). ೧. ಮುದ್ದೆ ; ಉಂಡೆ : ಕುಂಡಲಿಯ ಕಂಡಾತ ಹೆಂಡತಿಗೆ ಒಲಿಯುವನೆ ಕಂಡಿತದೊಳಿಪ್ಪ ಶಿವಯೋಗಿ ಮಾಂಸದ ಪಿಂಡಕೊಲಿಯುವನೆ (ಸರ್ವಜ್ಞ. ೫೦೫). ೨. ಗುಂಪು ; ಸಮೂಹ : "ಪಿಂಡಂ ಸಲೆ ಸಂತೆ ನೆರವಿ ಜಾಳಿಗೆ ತೆಪ್ಪಲ್" (ಕವಿಕಂ. ೧೦೩); ಅದೇಂ ಕನ್ನೊಳಿಸಿ ದುದೊ ವಿನ[ಕ್ಷ]ತ್ರಕಚ್ಛತ್ರಪಿಂಡಂ[ಪಾಠಾಂ. ಸಿಧಂ] (ಶಂಕರಾ. ೦೩–೩೮) ; ರವಿಹಯಲಾಲಾಪಿಂಡಂ ದಿವಿಜನದೀಫೇನವಾಲೆ . . . ಎಂಬಿನಮುಲ್ಲಲ್ಲಿಗೆ ಧವಳಾಂಬುದಪಟಲಮೆಸೆದುದು (ಅಗಪು. ೪–೩೧). ೩. ಆಹಾರ ; ಊಣಿಸು : ರುಚಿಯಲ್ಲದ ಪಿಂಡಂ ಕುದಿರೆಗೆ ತಾಂ ಪೊಲ್ಲದನಿಪ ಕವಳಮನಿಷ್ಟಂ (ಅಕ್ಕನಾ. ೭–೮೧); ದಂಡ ತಪ್ಪಿಸುತ ಪಿಂಡ ಗಳಿಸಿ ಉಂಡಾಡಿಭಟ್ಟನಾಗಿ . . . ದಪ್ಪ ಅಕ್ಷರದ ಪದವಿ ಪಡೆದು ಇಹ ಮೇಲು ಸಾಲಿನಲ್ಲಿ (ಅರಳು. ೪೨೯–೫) ; ನಾವು ಹೀಗೆ ಮತ್ತೊಬ್ಬರು ಹಾಕಿದ ಪಿಂಡವನ್ನು ತಿಂದುಕೊಂಡು ಸದಾ ನರಕವನ್ನು ಅನುಭವಿಸದಂತೆ ಬೇಗ ಏನಾದರೂ ಏರ್ಪಾಡು ಮಾಡು (ನಕಾ. ೨೮). ೪. ಒಂದು ಸಲಕ್ಕೆ ನುಂಗುವಷ್ಟು ಆಹಾರ ; ತುತ್ತು ; ಕಬಳ : ಒಂದು ಅನ್ನದ ಪಿಂಡವನ್ನು ನನ್ನನ್ನು ಳಿಸಲು ನೀಡುವವರಿಲ್ಲದಾಗ ಅದೇ ಸುಖವಾದ ಸುಲಭ ಹಾದಿ ಎಂದು ಕೊಂಡಿದ್ದೆ (೩೬ಸರ. ೩೦೦). ೫. (ದೇವತೆಗಳಿಗೆ, ಪಿತೃಗಳಿಗೆ ಅರ್ಪಿಸ ಲಾಗುವ) ಅನ್ನದ ಮುದ್ದೆ ; ನೈವೇದ್ಯ : ಕುತ್ತುಮಂ ಕಿಡಿಸುವ ನಿಮಿತ್ತ ಚಂಡಿಕೆಗೆ ಪಿಂಡಮನಿಟ್ಟುಂ . . . ರೌದ್ರದೇವತೆಗಳಂ ಕೊಂಡಾಡಿ ದುಃಖದಿಂದಾಳುತ್ತುಂ ಮುಳುಗುತ್ತುಂ ಇಪ್ಪರು (ಶಾಸ್ತ್ರಸಾ. ೪೭–೮); ಇವನಿಂದ ಸತ್ತ ಮ್ಯಾಲ ಅಷ್ಟು ಪಿಂಡಾ ಕಂಡೇವು ಅನ್ನೋ ಒಂದು ಭರವಸೆ ಹುಟ್ಟಿತದ (ಗಂಡುಗು. ೦೦೭). ೬. ಗರ್ಭದಲ್ಲಿರುವ ಭ್ರೂಣ : ಅಂಡಜವೆಂಬ ತತ್ತಿಯೊಡೆದು ಪಿಂ[ಪಾಠಾಂ. ಬಂ]ಡ ಪಲ್ಲಟವಾಗಿ ಗಂಡ ಗಂಡರನಟಿಸಿ ತೊಳಲಿ ಬಳಲುತ್ತೈದಾರೆ (ಅವತಾ. ೬–೦೩) : ಕ್ಷಯರೋಗದ ರೋಗಾಣುಗಳು ತಾಯಿಯಿಂದ ಪಿಂಡಕ್ಕೆ

(**Foetus**) ಹೋಗುವುದಿಲ್ಲ (ಶಂಬೋ. ೮ ಉಪೋದ್ಘಾತ); ಮನುಷ್ಯನೊಡನೆ ಮನುಷ್ಯ ಶಿಕ್ಷಾದಿ ತೀರ ಒಂದು ಪಿಂಡವನ್ನು ಸೃಷ್ಟಿಸಿಡಲಿಲ್ಲ (ಶಿಶಂದ. I, ೬೮). ೭. ಶಿಶು ; ಹಸುಳೆ ; ಮಗು : ಜಗಕೆ ಚೋದ್ಯದ ತನುಜೆ ಜನಿಸಲು ಬಗದು ನಮ್ಮಯ ಹೆಸರನಿಡುವುದು ಅಗಣಿತದ ಗಂಡೊಂದು **ಪಿಂಡವು** ಜನಿಸುವುದು ಬಳಿಕ (ಕಚಾ. ೯-೨೩); ಅವ ನಿನ್ನ ಕೊಲ್ಲದೆ ವಾಣ ಶಿಶುವೆಂದುದಾಸೀನ ಬ್ಯಾಡ ಮಾಯ ಮಂತ್ರದ **ಪಿಂಡವು** (ಜಪಮೋ. ೧೧-೨೩). ೮. ದೇಹ ; ಶರೀರ : "ತನುಃ, ತನೂಃ . . . ಪಿಂಡಂ, ಕ್ಷೇತ್ರಂ, ಗಾತ್ರಃ, ಅಪಘನಃ, ಮೂರ್ತಿಃ—ಈ ೧೭ ಶರೀರಂ" (ಕಶಾಯ. ೮೯-೩೬೬) ; ಆ ಗುಂಗುಬ ಬಾಯಲ್ಲಿ ಕತ್ತರಿವಾಣಿ ಕಾಲಿನಲ್ಲಿ ಕಂಡೆಹ ಅಂಡದಲ್ಲಿ ಕಾಳಕೂಟ ಪಿಂಡವೆಲ್ಲವೂ ಅಸಿಯ ಬಳಗ (ಅಕಾಸೂ. ೪. ೦೬೬-೦೦೮); ಪಿಂಡವೆಂದರೆ ಶರೀರವು (ಪ್ರಶ್ನಶಾ. ೩೯೮ ಅಡಿ). ೯. (ಶರೀರದ) ಒಂದು ಭಾಗ ; ಅಂಗ : Brain (ಮೆದುಳು) ಎಂಬುದು ಶರೀರದ ಒಂದು ಪಿಂಡ (ಜೀವಾತ್ಮ. ೦೦೮). ೧೦. ದಪ್ಪ ; ಗಾತ್ರ : ಗೋಡೆಯ ಯೆತ್ತರವು ೩೦ ರಿಂದ ೫೦ ಘೂಟಿನವರೆಗೆ ; ಪಿಂಡವು ಸರಾಸರೀ ಮಾನದಿಂದ ೨೦ ಘೂಟು ಇರುತ್ತದೆಂದು ಹೇಳಬಹುದು (ಕಭಾಗ. ೩೬). ೧೧. ಗಟ್ಟಿಯಾದುದು. ೧೨. ಒಂದು ಬಗೆಯ ಸುವಾಸನಾ ದ್ರವ್ಯ ; ಸಾಂಬ್ರಾಣಿ. ೧೩. ಕಬ್ಬಿಣ.

**ಪಿಂಡ ಒಗೆ**=ಶರೀರವನ್ನು ಬಿಡು ; ಸಾಯು : ದೂರದ ಊರಿನಿಂದ ಮಗ ಬರುವ ಹೊತ್ತಿಗೆ ತೀರಾ ಸುಸ್ತಾಗಿದ್ದ ಅವರು ಪಿಂಡ ಒಗೆದು ನಡೆದಿದ್ದರು (ಕೂಶಿ). [ ಸಂ. ]

**ಪಿಂಡಂಗೆಯ್** (ಕ್ರಿ). ಮುದ್ದೆ ಮಾಡು; ಉಂಡೆಯಾಗಿ ಮಾಡು : ಆಕಾಶದೊಳ್ಚಂದ್ರನಂ ಮುನ್ನಂ ನಾಲ್ಕೊಗನೊಪ್ಪವಿಟ್ಟು ಬಗೆಯೋ . . ಚಿನ್ನಂ ಪೊಂದಿದ ಬೆಣ್ಣೆಯಂ ತೆಗೆದು ಪಿಂಡಂಗೆಯ್ದು ಮೇಲಿಟ್ಟನೋ (ಹರಿಶ್ಚ. ೨-೩೮). [ ಪಿಂಡ + ಕೆಯ್$_1$ ]

**ಪಿಂಡಕ** (ನಾ). ಒಂದಂ ಬಗೆಯ ಸುಗಂಧವಸ್ತು ; ಲೋಬಾನ. [ಸಂ.]

**ಪಿಂಡಖರ್ಜೂರ** (ನಾ). ಒಂದು ಬಗೆಯ ಖರ್ಜೂರ ; ಮೆದುವಾಗಿ ಇರುವ, ಉತ್ತಮದರ್ಜೆಯ ಖರ್ಜೂರ : ಪಿಂಡಖರ್ಜೂರದಲ್ಲಿ ಬೇಸರಪಟ್ಟು ಹುಣಿಸೆಹಣ್ಣನ್ನು ತಿನ್ನಲು ಬಯಸಿದವನಂತೆ ರಾಣೀವಾಸದ ಉತ್ತಮಾಂಗನೆಯರನ್ನು ತಿರಸ್ಕರಿಸಿ ನೀನು ಮುನಿಪುತ್ರಿಯನ್ನು ಬಯಸುವವನಾದೆ ! (ಶಾಕುಂತ. ೨೯-೦೮). [ ಪಿಂಡ + ಖರ್ಜೂರ ]

**ಪಿಂಡಗಲ್** (ಕ್ರಿ). ಗುಂಪಿನಿಂದ ದೂರವಾಗು ; ಒಂಟಿಯಾಗು : ನೆಗಟೆ ಕಳಸ್ವನಂ ಕಳಮದಿಂ ಕಳಮಕ್ಕೆ ವನಾಳಿಯಿಂ ವನಾಳಿಗೆ . . . ಪಿಂಡಗಲದೆ ಪಾಱುತಿರ್ಪುವಿದಿರುಂಬಟಿಯುಂ ಶುಕಭೃಂಗಹಂಸಕೇಕಿಗಳ್ (ಜಗ. ೯-೮೭). [ ಪಿಂಡು$_3$ + ಅಗಲ್$_1$ ]

**ಪಿಂಡಗೊಳ್ಳು** (ಕ್ರಿ). ಒಟ್ಟಾಗಿ ಸೇರು ; ಒಂದಾಗು : 'ಕಾಮಾಕ್ಷಿ'ಯ ಮುನ್ನುಡಿಯಲ್ಲಿ ನಾನು ಹೇಳಿದ ಮಾತು ಇಂದೂ ಹೇಳಬಹುದು ; ಜಾತಿ ಅದೇ. ಆದರೆ ಒಗರು-ಪೊಗರು ಕಣ-ಕಣದಲ್ಲಿ ಪಿಂಡಗೊಂಡಿದೆ (ಕಿರಂಪು. IV, ಕಾಲ್ಕು ಮಾತು); ನಿರ್ದುಷ್ಟಸತ್ತ್ವವು ನವನೀತದಂತೆ ಪಿಂಡಗೊಂಡು ಮೂರ್ತಿಯಾಗಿ ರಾಜಬೀದ 'ತಾನೇ ಈಶ್ವರ' ನೆಂಬ ಅಹಂಭಾವಕ್ಕೆ ಮುದ್ದಾಗುವವರೆಗೆ ಮಲೆನಾಡಿನ ಕತೆಯೇನು ? (ಮಲೆಕಂ. ೬ ಮುನ್ನುಡಿ). [ ಪಿಂಡ + ಕೊಳ್ಳು$_{1}$ (< ಕೊಳ್$_1$) ]

**ಪಿಂಡಚ್ಚನೆ** (ನಾ). (ಅರ್ಚನಾರೂಪವಾಗಿ ಮಾಡುವ) ಸಮೂಹ ನೃತ್ಯ ; ಮೇಳನರ್ತನ : ಪಂಡಿತವನೇಜಪವನವಾರ್ತಂಡಂಗಾಲಂಬಿಹಾರ ಸುಮನೋಮಾಲಂ ಪೆಂಡಿರ ಕುಚಕೋಕಚಯಂ ಪಿಂಡಚ್ಚನೆಯಾಡುವಂತೆ ನರ್ತಿಸಿತಾಗಳ್ (ಲೀಲಾ. ೦೨-೦೦). 'ಗೊಂದಳವೆಕ್ಕಣ' ಪರಾ. [ ಪಿಂಡು$_3$ + ಅಚ್ಚನೆ$_1$ (< ಅರ್ಚನೆ) ]

**ಪಿಂಡಚ್ಛೇದ** (ನಾ). ಪಿತೃಗಳಿಗೆ ಪಿಂಡಪ್ರದಾನ ಮಾಡುವುದಕ್ಕೆ ಯಾರೂ ಇಲ್ಲದಂತಾಗುವುದು,—ಪಿಂಡ ಹಾಕುವುದು ನಿಂತುಹೋಗುವಿಕೆ : ಮಗಳನೀವೆನಪ್ಪೊಡೆ ಕೊಡಗೂಸೆಂಬುದು ಪೆಱರೊಡವೆ ಮಗನನೀವೆನಪ್ಪೊಡೆ ಸಂತತಿಚ್ಛೇದಮುಂ ಪಿಂಡಚ್ಛೇದಮುಮಕ್ಕುಮಿದಱಿಂದೆನ್ನನೆ ಕುಡಲ್ವೇಟ್ಕುಂ (ಪಂಪಭಾ. ೩-೨೫ ವ). [ ಪಿಂಡ + ಛೇದ ]

**ಪಿಂಡಜ** (ನಾ). ಭ್ರೂಣದಿಂದ ಹುಟ್ಟಿ ಬರುವ ಮನುಷ್ಯ, ಪಶು ಮೊದಲಾದುವು : ಆಕಾಶ ಒಂದಂಡಜ ಪೃಥ್ವಿ ಒಂದು ಪಿಂಡಜ ಎರಡರ ಮಧ್ಯದಲ್ಲಿ ಪಕ್ಷಿ ಮಱಿಗಳನಿಕ್ಕಿತ್ತ ಕಂಡೆ (ಅಪಕಂ. ೦೬೦-೭೬೮); ಅಂಡಜ ಇಪ್ಪತ್ತೊಂದು ಲಕ್ಷ ಪಿಂಡಜ ಇಪ್ಪತ್ತೊಂದು ಲಕ್ಷ . . . ಇಂತು ಎಂಬತ್ತು ನಾಲ್ಕು ಲಕ್ಷ ಜೀವರಾಸಿಗಳೊಳಗೆ (ಅಬಂತೇ. ೯-೭). [ಸಂ.]

**ಪಿಂಡಪಾತ** (ನಾ). ೧. ಪಿಂಡವನ್ನು ಕೊಡುವುದು. ೨. "ಭಿಕ್ಷಾಪಾತ್ರದಲ್ಲಿ ದೊರೆತ ಅನ್ನ" (ವೃಶಾಪ. ಟಿಪ್ಪಣಿ. ೯೩) : ಅವ ಪಿಂಡವನ್ನುಂಡವನೆ ಸುಗತ ನಿರುಪಧಿಶೇಷ ನಿರ್ವಾಣವಡೆದಪನೊ. ಅರಿಯಿರ್ರೆ ಆ ಪಿಂಡಪಾತದ್ವಯಂ ಪಿಂಡಪಾತಾಂತರದಿನೆನಿತೊ ಆಯುಷ್ಕರಂ. ಯಶಸ್ಕರತರಂ . . . ಮಹಾಫಲತರಂ ! (ವೃಶಾಪ. ೬೩-೫೩೮). [ಸಂ.]

**ಪಿಂಡಪಾದ**(ನಾ). ದಪ್ಪವಾದ ಕಾಲುಗಳನ್ನುಳ್ಳುದು; ಆನೆ. [ಸಂ.]

**ಪಿಂಡಪ್ರದಾನ** (ನಾ). ಶ್ರಾದ್ಧದಲ್ಲಿ ಪಿತೃಗಳಿಗೆ ಪಿಂಡವನ್ನು ಅರ್ಪಿಸುವುದು : "ನಿವಾಪಃ—೧ ಪಿತೃದಾನಂ—ಪಿತೃ ಪಿತೃತ್ವವನ್ನು ಹೊಂದಿದವರು, ತೃಪ್ತಿಪಡುವದಕ್ಕೋಸ್ಕರ ಮಾಡಲ್ಪಡುವ ದಾನಂ, ತಿಲೋದಕ ಪಿಂಡಪ್ರದಾನಗಳ ಹೆಸರು" (ಸಿದ್ಧಾಂತಿ. ೨೨೩); ಮುಂದ ತಂಮಡಿಯಕ್ಕ ಮೋಚಲಮಹಾದೇವಿಯರು ಸ್ವರ್ಗಸ್ಥರಾದವರ ಪಿಂಡಪ್ರದಾನದಲು ನೀರ ದೇವಾಲ್ಯದಲು . . . ಧಾರೆ ಎರ [ದ] ೧೨ ಡು (ಕ್ಷೇಶಾ. VII,೦೭೭-೮; 1302); ಈ ಸಖನ ಕಳೇವರಮಂ ದಹಿಸಿ ಅಸ್ಥಿಯಂ ವಾರಣಾಸಿಯಲ್ಲಿ ಬಿಟ್ಟು ಗಯೆಯಲ್ಲಿ ಪಿಂಡಪ್ರದಾನಂ ಮಾಡಿ (ಪಪ್ಪಕಾ. ೬-೦೫೮ ವ). [ ಪಿಂಡ + ಪ್ರದಾನ ]

**ಪಿಂಡಮರ್ದನ** (ನಾ). ಮುದ್ದೆಯಾಗುವಂತೆ ಬಡಿಯುವುದು,—ಚಚ್ಚುವುದು; ನಜ್ಜುಗುಜ್ಜು ಮಾಡುವುದು : ನಿನ್ನುಮಂ ಸೆಱೆಗೊಂಡು ಕೊಂಡು ಪಿಂಡಮರ್ದನಂ ಮಾಡದೆ ಬಿಡುವೆನೆ, ನೋಡೆಂದು ಪೊಂಗಱಿಯ ಕೂರಂಬುಗಳನಾರ್ದೆಚ್ಚಂ (ರಾಮಾಶ್ವ. ೦೫೭-೨೯). [ ಪಿಂಡ + ಮರ್ದನ ]

**ಪಿಂಡಮೂಲ** (ನಾ). ಕೆಂಪುಮೂಲಂಗಿ ; ಕ್ಯಾರಟ್ಟು : "ಪಿಂಡೀತಕಂ—ಪಿಂಡಮೂಲ" (ಟಿಕಂ. ೯೭). [ಸಂ.]

**ಪಿಂಡರಂಗ** (ನಾ). ವಜ್ರದ ಹೊರಮೈ ಅಥವಾ ಹೊರಭಾಗದ ಕಾಂತಿ : ಲಾಲಿಸ್ಸಿ ಬಾಹಿರದಿ ಪ್ರಜ್ವಲಿಪ ಪ್ರಭೆಯಿರಲು ಲೀಲೆಯಿಂ ತಿಳಿಯದನು ಪಿಂಡರಂಗವದೆಂದು ಬಾಲಾರ್ಕನಿದಿರಿನೊಳು ಪಿಡಿಯೆ ರತ್ನದ ಮಧ್ಯೆ ಛಾಯೆ ತಾ ತೋರುತಿರಲದು ಛಾಯರಂಗಮದೆಂದು (ರತ್ನಶಾ. ೦೦-೦೩). [ ಪಿಂಡ + ರಂಗ ]

**ಪಿಂಡರಿಕೆ** (ನಾ). ಮೊಳಕಾಲಿನ ಕೆಳಭಾಗ ; ಮೀನಖಂಡ : ಪ್ರತಿಹುಂಕಾರಕ್ಕೆ—ಪ್ರತಿಕ್ರಂದನದ ಸೆಳೆತಕ್ಕೆ ನಡುಗುವ ಕಾಲ ಪಿಂಡರಿಕೆಗಳು ಮೊದಲು ಅಧೀರವಾಗಿ ಬರುತ್ತ ನಿರ್ಧಾರವಾಗಿ ನಡೆಯಹತ್ತಿದವು (ಶಕ್ರಶ್ರ. ೩೯೩); ಪಿಂಡರಿಕೆಗಳಿಗೆ ಬಿದ್ದ ಬಾರಕೋಲ ಹೊಡೆತ ಕಾಲುಗಳನ್ನು ತ್ವರಿತವಾಗಿ ಓಡಿಸುತ್ತಿದ್ದವು (ಶಾಂ. ೮೪). [ ←ಹಿಂ. ಪಿಂಡಲೀ. ಪಿಂಡಲೀ ; ಮರಾ. ಪಿಂಡರೀ. ಪಿಂಢರೀ]

**ಪಿಂಡಲು**, ಪಿಂಡಿಲು, ಹಿಂಡಲು, ಹಿಂಡಿಲು (ನಾ). ೧. ಮೊತ್ತ; ರಾಶಿ : ತೊರೆದುಗುವ ತೋರಮೊಲೆಗಳನುಂಡು ಕರು ಪಿಂಗೆ ಪಾಲಧಾರೆಗಳೊಕ್ಕು ಸೋರೆಯ ಪಿಂಡಲು ಪೊಂಗೆ (ಅಪಂತ. ೯-೦೭ ಚಣ). **ಪಿಂಡಿಲು**: ೨. ಪೊದರು; ಮೆಳೆ: ಸಿಡಿಲಿನ ಕುಡಿವಾಲಿಗೆಯೊಲು ಮಿರುವ

ಬಿಡುಗ ಬರಲು ಕೈಕೊಂಡು . . . ಪೊಡೆದನಾ ಶಂಭುಕನದರ್ಗಿರ್ದ ಬಿದಿರ ಪಿಂಡಿಲನು (ಅಂಜ. ೧೩-೩೩)· ಹಿಂಡಲು : ೨. ಬಿದಿರಿನ ಹಿಂಡಲಿನಲ್ಲಿ ಅಡಗಿ ಕುಳಿತರೆ, ಯಾರಿಗೆ ತಿಳಿದೀತು ? ಹಿಂಡಲಲ್ಲಿ ಹುಲಿಯ ಹೆದರಿಕೆಗೆ ಗಂಟೆ ಸಹ ಬರಲಾರದು (ಸ್ವಕ್ಕಹೂ. ೩೦) ; ಕೊಳದ ಮೂಡಿಗೆ ಕೇದಿಗೆಯ ಹಿಂಡಲು ಇಲ್ಲವೇನಮ್ಮ. ಆ ದಾರಿಯಲ್ಲಿ ನಡೆಯಿತು ನೋಡಿ ಎಂದಳು (ಜಿನ್ಯ.ಕ. ೧೫); ಗಡಿಬೇಲಿಯ ಮುಂದುಗಡ ಹಿಂಡಲಿನಲ್ಲಿ ಕಣ್ಮರೆಯಾಗಿದ್ದ ಕಾಲುದಾರಿಯ ಸಮೆದ ನುಣ್ಣನ ಬೂದುಬಣ್ಣದ ರೇಖೆ (ಮಲೆಮ. ೯೩)· ಹಿಂಡಿಲು : ೧. ತನ್ನ ಮದುವೆಯ ಕೆಂಜಿಗೆ ಹಿಂಡಿಲನ್ನು ಕಡಿದು ನನ್ನ ಮೇಲೆ ತಳ್ಳುತ್ತಿದ್ದಾನಲ್ಲಾ ಎಂಬ ಸಿಡುಕೂ ಅವರ ಸಿಟ್ಟಿನ ನುಡಿಗಳಿಗೆ ಕಾರಣವಾಗಿತ್ತು (ಮಲೆಮ. ೩೯೫)· ೨. ಬಿದಿರ ಹಿಂಡಿಲ ಮುಳ್ಳು ಗುಜುಜು ನಿಟ್ಟಿಣದೊಳಗ್ಗದ ಕಾಲಗತ್ತಲೆಯೊಳಂ ಪೊಗಬೇಕಲಾ. . .ಪಾಪಿಗಳು (ಶೀಕೃಪು. ೯-೦೬-೦೬) ; ಬಿದಿರ ಹಿಂಡಿಲುಗಳಾವರಿಸಿ ಬೆಳೆದಿಹ ಬಿಂಡಿಲುಗಳೊತ್ತೊತ್ತಿಲುಬುಬಿದ ತಂಡ ತಂಡದ ಬಳ್ಳಿ ಗಿಡು ಮಳೆ ಮೆಚೆದುದ್ದೊಗ್ಗಿನಲಿ (ಶ್ರೀಹ್ಯಾ.ಕ. ೯-೦೦); ಬೆತ್ತದ ಹಿಂಡಿಲು, ವಾಟೆಯ ಹಿಂಡಿಲು, ಬಿದಿರ ಹಿಂಡಿಲು, ಗುರಗಿ ಹಳು ಎಲ್ಲ ಕಿಕ್ಕಿರಿದು-ಬೆಳೆದಿದ್ದು, ಯಾವಾಗಲೂ ಸರಲು ನೀರು ಹರಿಯುತ್ತಿದ್ದ ತಾಣ (ಮಲೆಮ. ೬೫)· [ ಪಿಂಡು₂ + -ಅಲು (<-ಅಲ್₂) ]

**ಪಿಂಡಸ್ಥ** (ನಾ). [ಜೈನ] ಧ್ಯಾನದ ಪದಸ್ಥ, ಪಿಂಡಸ್ಥ, ರೂಪಸ್ಥ ಮತ್ತು ರೂಪಾತೀತಗಳೆಂಬ ನಾಲ್ಕುವಿಧಗಳಲ್ಲಿ ಒಂದು ; ಆತ್ಮ ಚಿಂತನೆಯಿಂದ ಸಂಸಾರಬಂಧನವನ್ನು ನಷ್ಟಗೊಳಿಸುವುದು : ಪದಸ್ಥಂ ಪಿಂಡಸ್ಥಂ ರೂಪಸ್ಥಂ ರೂಪಾತೀತಂ ಎಂದು ಧ್ಯಾನಂ ಚತುರ್ವಿಧ ಮಕ್ಕುಂ (ಶಬ್ದಾರ. ೫೭೩)· [ ಸಂ. ]

**ಪಿಂಡಳಿಗೆ** (ನಾ). ಒಂದು ಬಗೆಯ ತೆರಿಗೆ.—ಸಂಂಕ : ಪ್ರತಿವರುಷವು ಪಿಂಡಳಿಗೆಯಾಗಿ ತಿಬುವ ಗ ೧೮ (ಪೊಂಕಣ. ೦೯೩೩. ಹಾವೇರಿ. ೪೨—೮; 1191)· [ ? ]

**ಪಿಂಡಟ್** (ಕ್ರಿ). ಗುಂಪು ಚೆದರಿ ಹೋಗು,—ಚೆಲ್ಲಾಪಿಲ್ಲಿಯಾಗು ; ಹಿಂಡೊಡೆ : ದಿವಿಜಕುಜಂಗಳಾರವೆಗಳಾದುವು ಸಿದ್ಧರಸಂ ತಟಾಕಮಾದುವು ಸುರಧೇನು ಪಿಂಡಟೆಯದೊಂದೆಡೆಯೊಳ್ ನೆರೆದಿರ್ದುವು (ಶಂಕಾಪು.೩-೧೧೯)· [ ಪಿಂಡು₂ + ಅಟು₁ ]

**ಪಿಂಡಾಂಡ** (ನಾ). ದೇಹ; ಶರೀರ : ಪಿಂಡಾಂಡವೆಸೆದುದು ಸ್ಥೂಲಕಾರಣ ಸೂಕ್ಷ್ಮ ತನುವಿನಲಿ (ಹಂಪ. ೯೭); ನಿಃಕಲ ಪರಶಿವನಿಗೆ ಮುನ್ನಿನಂತೆ ಜಗತ್ ಸೃಷ್ಟಿ ಮಾಡುವ ಲೀಲೆದೋಱಲು ಆ ವೃಷಭೇಂದ್ರನಿಗೆ ನಿನ್ನ ಸದ್ಧರ್ಮ ದಿಂದ ಪಿಂಡಾಂಡಗಳ ನಿರ್ಮಿಸು ಎಂದು ಪೇಳಲು (ಶೃರಸ. I. ೬೨); ಎಂದು ಅಷ್ಟತನುಗಳು ನಿರ್ಮಿತವಾಗಿ ಪಿಂಡಾಂಡವಾದುವು ಅಂದು ಇಂದು ಪರಿಯಂತರ ಬಂದೆನಯ್ಯ ಬಹುಜನ್ಮಂಗಳಲ್ಲಿ (ಆಜಂಜಿ. ೬-೩)· [ಪಿಂಡ + ಅಂಡ₂]

**ಪಿಂಡಾಕ್ಷರ** (ನಾ). ಸಂಯುಕ್ತ ವ್ಯಂಜನಾಕ್ಷರ : ಉಳಿದ ಪಿಂಡಾಕ್ಷರಂಗಳು ಆಕರ್ಷಣಕರ್ಮದೊಳಂ ಅಹುದು ಐಂಕಾರದಿಂದಂ ಸಾರಸ್ವತಸಿದ್ಧಿಯಕ್ಕುಂ (ಪ್ರತಿಷ್ಠಾ. ೦೦-೦೩)· [ ಪಿಂಡ + ಅಕ್ಷರ ]

**ಪಿಂಡಾದಾನ** (ನಾ). ಆಹಾರವಸ್ತು, ಪಡಿ ಅಥವಾ ಕೂಲಿಯನ್ನು ಕೊಡುವುದು : ೫೦ ಗದ್ಯಾಣ ಪೊಂನಂ ಪಿಂಡಾದಾನದಿಂದಂ ಧರ್ಮ್ಮವತ್ತ ಳೆಯಿಂ ತಿಬುವಂತಾಗಿ ಧಾರಾಪೂರ್ವಕಂ ಮಾಡಿ . . . ಕೊಟ್ಟರ್ (ಶಾಇ. XI-ii. ೦೫೯-೬೩; 1104); ಸರ್ವ್ವಬಾಧಾಪರಿಹಾರವಾಗಿ ಪಿಂಡಾದಾನವಾಗಿ ಕೊಟ್ಟರು (ಪ್ಯಕಂ. ೦೯೩೭, ೯೦-೨೫ ; 1226): ನಿಯತಿ ಪಿಂಡಾದಾನ [ಕ್ರ]ಮದಿಂ ಸ್ಥಳವೃತ್ತಿ ಕ್ಷೇತ್ರನಿಳಯಂಗಳಂ . . . ಸರ್ವ್ವಬಾಧೆ ಪರಿಹಾರವೆನಿಸಿ . . . [ವಿಳ]ಸಜ್ಜಳಧಾರಾಪೂರ್ವ್ವಕಂ ಪುನರ್ವೃತ್ತಿ ಮಾಡಿ (ಶಾಇ. XX. ೨೦೫-೪೯; 1247); ಕಟ್ಟುಗುತ್ತಗೆ ಪಿಂಡಾದಾನಯು ಪಟ್ಟಣಕ್ಕೆ ಒಡಂಬಟ್ಟು ಕೊಟ್ಟರು (ಎಕ. XIV. ಮುಳ. ೦೯೨-೨೨ ; ಸು. 1281). [ಪಿಂಡ+ಆದಾನ]

**ಪಿಂಡಾನೆ**, ಹಿಂಡಾನೆ (ನಾ). ಹಿಂಡಿಗೆ ಸೇರಿದ ಆನೆ : ಕಾಱಯುಲ್ಲದೆ ಬಂದು ಪಿಂಡಾನೆಗಳೊಂದುಗೂಡಿ ಶಿಕ್ಷೋಪಕರಣಂಬೆರಸು . . . ವನ ಗಜಂಗಳಂ ಪಣ್ಣಿ ಕೈಗೈದು ಪೂರ್ವಾಸವಮನವಷ್ಟಂಭಿಸಿ ಸಂಭ್ರಮಂ ಮಿಗೆ ನೆರಪಿದಾಗಳ್ (ರಾಜಶೇ. ೬-೧೦೦ ವ). ಹಿಂಡಾನೆ : ಗಜಘಟಾಪ್ರವೃತ್ತಿ ಮಾನದಲಿ ಕೋದಂಬುಗಳು ಹಿಂಡಾನೆಗಳನೇಳಿಂಟನೊದೆದೋಡಿದವು (ಕುವ್ಯಾ.ಕ. ೩-೦೫). [ಪಿಂಡು₂+ಆನೆ₁]

**ಪಿಂಡಾಯು** (ನಾ). [ಜ್ಯೋತಿ] ಸೂರ್ಯಾದಿ ಗ್ರಹಗಳ ಬಲಾಬಲಗಳ ಮೇರೆಗೆ ನಿರ್ಣಯಿಸಿ ಲೆಕ್ಕ ಹಾಕುವ ಆಯುಸ್ಸಿನ ಪ್ರಮಾಣ,— ಪರಿಮಿತಿ : ಇರೆ ನೀಚದೊಳರ್ಧಮನಪಹರಿಸುಗುಮೂ ನೀಚರಾಶಿಯಿಂದಂ ಪೂರ್ವಾಪರದೊಳನುಪಾತದಿಂ ಪಂಹರಿಸುಗುಮಖಿಳ ಗ್ರಹಾ[ಯು] ಪಿಂಡಾಯುವಿನೊಳ್ (ಜಾತಕ. ೯-೦೨). [ಪಿಂಡ+ಆಯು₁]

**ಪಿಂಡಾಯುಷ್ಯ** (ನಾ). = ಪಿಂಡಾಯು : ಧರಣೀಜಂ ಪದಿನೈದು ಘಮರ್ ರುಚಿ ಪತ್ತೊಂಬತ್ತು ಶಶಾಂಕಿ ಪನ್ನೆರಡಿಪ್ಪತ್ತು ದಿನಾಧಿನಾಥಸುತಂ. . . ದೈತ್ಯಗುರುವಿಪ್ಪತ್ತೊಂದುಸಂವತ್ಸರಂ ಪರಮೋಚ್ಚಾಂಶದೊಳೊಂದಿ ನಿಂದೊಡದು ಪಿಂಡಾಯುಷ್ಯಮಕ್ಕುಂ ಧ್ರುವಂ (ಜಾತಕ. ೯-೦೦). [ಪಿಂಡ+ಆಯುಷ್ಯ]

**ಪಿಂಡಾರಿ**, ಪೆಂಡಾರಿ (ನಾ). ಹಾದಿ ತಡೆಯುವಂಥ ಕಳ್ಳರ ಗುಂಪು,— ಪುಡುಗರ ಸಮೂಹ : ಇಂಡಿಯಾದೇಶದ ಅಭಿವೃದ್ಧಿಯನ್ನು ಸಾಧಿಸಲು ಪಿಂಡಾರಿಗಳನ್ನು ಬಿಡಬೇಕೆಂದು ನಿನ್ನ ಹಂಚಿಕೆಯೋನು? (ರಾಧಾಕ. ೦೫೯). ಪೆಂಡಾರಿ : ಪೆಂಡಾರಿಯರು ಬರುವಾಗ ಹೆಂಡಿರ ಗೊಡವೆಯೇನು ? (ಗಾದೆ). [←ಹಿಂ. ಪಿಂಡಾರಾ, ಪಿಂಡಾರೀ; ಮರಾ. ಪೆಂಢಾರಾ, ಪೆಂಢಾರೀ./ ತಮಿ. ಪಿಣ್ಡಾರಿ, ಪೆಣ್ಡಾರಿ; ತೆಲು. ಪಿಂಡಾರಿ]

**ಪಿಂಡಾಲು** (ನಾ). ಒಂದು ಸಸ್ಯ ಬಗೆಯ ಮತ್ತು ಅದರ ಗೆಡ್ಡೆ : "ಕಂದಗ್ರಂಥಿ—ಪಿಂಡಾಲು" (೬ಶಂ. ೨೫); "ರೋಮಾಲುಃ—ಪಿಂಡಾಲು" (೬ಶಂ. ೦೯೦). [ಸಂ.]

**ಪಿಂಡಿ₁**, ಹಿಂಡಿ₁ (ನಾ). ೧. ಎಣ್ಣೆಯ ಕಾಳುಗಳಿಂದ ರಸ ತೆಗೆದ ಮೇಲೆ ಉಳಿಯುವ ಶೇಷ : ಬೂದಿಯಾದ ಪುಳ್ಳಿಯಂತೆ ಪಿಂಡಿಯಾದ ಎಳ್ಳಿನಂತೆ ಬಸಿಱಂ ಪೊಕ್ಕ ಕೂಟನಂತೆ (ವಡ್ಡಾರಾ. ೯-೨೩); ಪಿಂಡಿಯಿಂದೆಮ್ಮೆಯ ಪಾಲ್ ಪೆರ್ಚುವಂತೆ ಪೊಲೆವಾಱಂ ಮಕ್ಕಳ್ ಪೆರ್ಚುವಂತೆ (ವಡ್ಡಾರಾ. ೦೯-೦೦೯). ಹಿಂಡಿ₁ : ೧. "ತೈಲಕಂ ಹಿಂಡಿ" (ಹುಂಗನಿ.೦೨೦-೩); ಹಿಂಡಿಯಂ ನಂಬಿ ಎಣ್ಣೆಯನುಗುವ ತೆಲ್ಲಿಗನುಮಂ (ವಡ್ಡಾರಾ. ೮-೩೦); ಬೆಂಡಿತನವೆಂಬ ಹಿಂಡಿ ಇಡಬೇಕು ದಿಂಡತನವೆಂಬ ಪೆಂಡೆ ಮೇವು . . . ಪಾಂಡುರಂಗ ಗುಂಡಿ ಒಳಗೆ ಹಿಂಡಿಕೋಬೇಕು (ಪುರಂದ. ೨-೫೫-೨); ಮಿಂಡೆಯ ಗಂಡ ಹಾದಂಡಿಗೆ ಹೋಗಿಹರೆ ಹಿಂಡಿಯು ಹೆಡಿಗೆಗೆ ಕೋಣನ ತಂದು ಕಣಾಗಂಡಿತಹೊಡೆದಂತೆ (ಸರ್ವಜ್ಞ. ೦೯೬೩); ಹಿಂಡಿಯನ್ನೂ ಆಡಿನ ಹಾಲನ್ನೂ ಅಂಕೋಲೆ ಬೀಜಗಳೊಡನೆ ಅರೆದು (ಶಾಗಂಂ. ೯೩೮-೮); ಸಂತೆಗೆ ಹೋದನು ಭೀಮಣ್ಣ ಹಿಂಡಿಯ ಕೊಂಡನು ಹತ್ತು ಮಣ (ಶಿಶಿ. ೩-೬೬). ೨. ನಂಜಿಕೊಳ್ಳಲು ಮಾಡುವ ಒಂದು ಬಗೆಯ ಖಾರವಾದ ವ್ಯಂಜನಪದಾರ್ಥ; "ಚಟ್ನಿ, ಖಾರ" (ಜಾನಕೋ. ೫೭) ; ಒಳ್ಳಿತೆನಿಸಿದ ತೈಲ ಕುಂಭಕೋಟಿಗಳ ತಂದರು ಹಿಂಡಿ ಕಚಡಿಗಾಗಿ (ಸಿದ್ಧರಾ. ೮-೩೦); ಹುಗ್ಗಿ ಕಿಚ್ಚಡಿಯಚೆಯುಪ್ಪ ಸೇವಗೆ ಹಿಂಡಿ ಗುಗ್ಗರಿ . . . ದೋಸೆಯ ಸಬ್ಬಲಿಗ್ಗೆಯಹುತಿಯೊಪ್ಪಿತಲ್ಲಿ (ಕರಶ. ೨೦-೦೨೬); ಆ ಹುಡುಗಿ ಒಳಗಿನಿಂದ ರೊಟ್ಟಿ, ಬೇಳೆ, ಹಿಂಡಿ, ಎರಡು ಉಳ್ಳಾಗಡ್ಡಿ ತೆಗೆದುಕೊಂಡು ಬಂದಿತು (ಪಂಂಡು. ೨೦). ೩. ಒಂದು ಬಗೆಯ ಸಿಹಿಯಾದ ಖಾದ್ಯ : ಕಳಕಳನೆ ಪೊಲೆವಾಲನರ್ಘ್ಯ ಅಳುತಪಿಂಡಿ

ಬಾಲಕನ ಕೈಯಲಿ ಮೆಲುವ ಹಿಂಡಿಯ ಕರಣೆಯಂ ಕೊಟ್ಟಂತು ತಾಯ್ತನ್ನ ಮೊಲೆಯನುಣ್ ಪಜಿಬಿಟ್ಟು ಮೆಲ್ಲನೆ ತೊಲಗುವಂದದಿ (ಬಸಪು. ೨೯-೬೮). ಹಿಂಡಿಯ ಕಜ್ಜರಿ = ಒಂದು ಬಗೆಯ ಸಿಹಿಯಾದ ಖಾದ್ಯ: ಅದಕ್ಕೆ ಬಾಗಿದ ಕೂಳು ಸೇಪಗೆಯ ಪಾಯಸ ಪುೞಕ್ಕಡಲೆಯ ಹುಗ್ಗಿ ಹಿಂಡಿಯ ಕಜ್ಜರಿ ಅಲಸಂದೆಯ ಗುಗ್ಗುರಿ ಜೇನುತುಪ್ಪ . . . ಮಂತ್ರ ಸಮನ್ವಿತವಾಗಿ . . . ನಿವಾಳಿಸಿ (ಶಾಂಶ. ೦೨೯-೨); ಸೊಸಲುಂಡಿಗೆ ಹಿಂಡಿಯ ಕಜ್ಜರಿ ಜೇನತುಪ್ಪ ಬೆಲ್ಲ ಕಬ್ಬಿನ ಹಾಲು . . . ಇವಂ ಮಂತ್ರ ಸಮನ್ವಿತವಾಗಿ ಶಿಶುವಿಗೆ . . . ನಿವಾಳಿಸಿ (ಶಾಂಶ. ೦೬೦-೨೦).

[< ಪಿಂಡು₁ / ತವಿ. ಮಲ. ಪಿಣ್ಣ; ತುಳು. ಪಿಂಡಿ, ಪುಂಡಿ, ಹಿಂಡಿ; ತೆಲು. ಪಿಂಡಿ]

**ಪಿಂಡಿ₂** 'ಪುಂಡಿ' ನೋ.

**ಪಿಂಡಿ₃** (ನಾ). ೧. ಮುದ್ದೆ ; **ಉಂಡೆ** : ಮಂ(ಮುಂ)ಡುೞೆಗೆಯ ದಲಮಂ ತಂದರೆದು ತೊಳೆದು ಮಣ್ಣಿನ ಬಾಯೊಳ್ ನಿಲೆ ಪಿಂಡಿಯ ನಿಕ್ಕಲೊಡಂ ತೊಲಗೆ ವಿಷಂ ಸುಖದಿನಿರ್ಪನಾ ದಷ್ಟನವಂ (ಚಿಪುರ. ೧೬-೧೦೦). ೨. ಗುಂಪು; ಸಮೂಹ : ಗುತ್ತಿ ನೋಡುತ್ತಾನೆ, ಇಂಬಳ ಗಳ ಪಿಂಡಿ! (ಮರಿಮ. ೧೮). ೩. ಕಟ್ಟು ; ಹೊರೆ : ಹುಲ್ಲ ಹೊರೆಯ ಮಾರುವ ಭಂಡಿಗಳಲಿ ಕಲ್ಲು ತರುವ ಸಾದೆಯ ಪಿಂಡಿಯ ಪುರದಲ್ಲಿಯೇ ತಿರುಗಿಪ (ಕಕೃಸ. IV. ೦೯-೫); ಅವನ ವಿಸಾಸೆಯ ಕೂದಲು . . . ಹುಲ್ಲಿನ ಪಿಂಡಿ ಇಟ್ಟಾಗ ನೇತಾಡುವ ಹುಲ್ಲಿನಂತೆ ಇದ್ದವು (ಋಹಾತ್ಕ. ೦೯); ಕಮಲಪ್ಪನವರ ಯಜಮಾನರು ವೀಳೆಯದೆಲೆ ಸಾಹುಕಾರರು. ಪಿಂಡಿ ಗಳಲ್ಲಿ ಸೊಗಸಾಗಿರುವುದನ್ನು ಆರಿಸಿ ತಂದು ಹೆಂಡತಿಗೆ ಕೊಡುತ್ತಾರೆ (ಶಾಯುಕ. ೩೦). [ಸಂ.]

**ಪಿಂಡಿಕ** (ನಾ). ಊತ ; ಬಾವು : "ಕರ್ಮವಲಯೆಂದೆನಲು ಕಾಮಾಲೆ ಪಿಂಡಿ [ಶಾಕಾಂ. ಪಾಂಡು]ಕಂ" (ಮಂಗರಾ. ೦೦೪-೪). [ಸಂ. ಪಿಂಡಿಕಾ]

**ಪಿಂಡಿಕಾಯಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ : ಪಿಂಡಿಕಾಯಿ. ರಾಮಗೋಟು (ಪ್ಸಕಿಗಿ. ೫೫-೦೦೦೪).

[ಪಿಂಡಿ₂ (< ಪುಂಡಿ) + ಕಾಯಿ₄ (< ಕಾಯ್₄)]

**ಪಿಂಡಿಕೆ** (ನಾ). ೧. ಊತ : ಬಾವು. ೨. ಕಾಲಿನ ಮೀನಖಂಡ ; ಕಣಕಾಲು : ಪ್ರೋದ್ವದ್ಧಪಿಂಡಿಕಾಃ . . . ಗಂಟುಕಟ್ಟಿದ ಮಣಿ ಕಾಲುಳ್ಳವರು (ವ್ಯರ್ಥಸಾ. I. ೦೯). ೩. ಚಕ್ರದ ನಾಭಿ; ಗುಂಬ : "ನಾಭಿ ಪಿಂಡಿಕೆಯೆನಲು ಕೂಲುಂದುಂಬಕ್ಕು [ಶಾಕಾಂ. ಪಿಂಡಕೈಯ್ಯೆನಲು ಕೂಡಲುಂಬಕ್ಕು]" (ಮಂಗರಾ. ೮೯-೨೪). ೪. ಪೀಠ; ಆಸನ. ೫. (ದೇವರ ಪ್ರತಿಮೆ, ಲಿಂಗ ಮೊದಲಾದುವುಗಳ) ಆಧಾರಪೀಠ ; ಗದ್ದುಗೆ : ಇಷ್ಟಲಿಂಗವು ಅರ್ಥಾತ್ ಒಂದು ಭೌತಿಕ ಲಿಂಗವು. ಅದರ ಪೀಠ, ಪಿಂಡಿಕೆ ಹಾಗು ಗೋಮುಖಗಳು ಬಿಂದು-ನಾದ-ಕಲೆಗಳ ಪ್ರತಿನಿಧಿ ಗಳು (ಶರಶ. ೧೯೪); ಟಿಬೇಟದಲ್ಲಿ ಹಿಮಾಲಯದಂಥ ಶೈಲಶ್ರೇಣಿ ಯೊಂದು ಹಬ್ಬಿದೆ . . . ಇದರ ಆಕಾರವು ಮಹಾದೇವರ ಪಿಂಡಿಕೆಯಂತಿದೆ (ಕೈಲಾಸ. ೩೨); ನಕ್ಷತ್ರಾಕಾರದ ತಲವಿನ್ಯಾಸದ ಮೇಲೆ ಚತುರಸ್ರಾಕಾರ ವಾಗಿ ಗರ್ಭಗುಡಿ ಇರುತ್ತದೆ. ಇದರ ಮಧ್ಯದಲ್ಲಿ ಪಿಂಡಿಕೆಯನ್ನಿಟ್ಟು . . . ಮೂಲಬೇರವನ್ನು ಸ್ಥಾಪಿಸಿರುವರು (ಹೊಯ್ಸಳಾ. ೦೯). [ಸಂ. ಪಿಂಡಿಕಾ]

**ಪಿಂಡಿಗೆ**, ಹಿಂಡಿಕೆ, ಹಿಂಡಿಗೆ (ನಾ). ೧. (ದೇವರ ಪ್ರತಿಮೆ, ಲಿಂಗ ಮೊದಲಾದುವುಗಳ) ಆಧಾರಪೀಠ ; ಗದ್ದುಗೆ : ಜಲವೆ ಪದಶಿಲೆ ಪೃಥ್ವಿಯೆ ಪಿಂಡಿಗೆ ಆಕಾಶವೆ ಲಿಂಗ (ಅಪಶಂ. ೦೫೫-೨೦೦); ದೇಪ ಸಜ್ಜೆ ಯನು ಉಪ್ಪರಿಸಿಮೆನೆ . . . ಬಸವ ಭಾವಂ ಬಲಿದು ಮುನ್ನಮೇ ಸಜ್ಜೆಯೊಳು ಎಸೆವ ಲಿಂಗಂಗಳಾಗುತ್ತಮಿರೆ ಸಜ್ಜೆಯೊಳು ತೊಟ್ಟು ಪಿಂಡಿಗೆ [ಶಾಕಾಂ. ಪಿಡಿಕೆ] ಯಾಗೆ ಫಲಮೆ ಲಿಂಗಮದಾಗೆ (ಬಸರ. ೯-೫೭) ; ಕಕಾರಕ್ಕೆ ಗಕಾರಂ . . . ಪಿಂಡಿಕಾ-ಪಿಂಡಿಗೆ (ಚುರ. ೨೫೫ ಕೃಡೋ). ೨. **ಗುಂಪು**; ರಾಶಿ ; ಸಮೂಹ : "ಪಿಂಡಿಗೆ—ಪಿಂಡಿಕಾ—ಉರುಳೆ, **ಗುಂಪು**" (ಕರ್ಣಕೋ. ೨೬); ಮೇರುವಿನೊಳಚ್ಚೊತ್ತಿದ ಹೊಸ ಪೊನ್ನ ಪಿಂಡಿಗೆ ಯೊಡನೆ . . . ನವರತ್ನವೃಷ್ಟಿಯಂ ಶಿವಂ ಕಱೆದನೆಂಬಂತೆ (ಚಿಪುರ. ೦೨-೬೦). ೩. ಕಟ್ಟು; **ಪೆಂಡಿ** : ಪಸಿಯರಿಸಿನದ ಪಿಡಿಯೆಲೆಯ ಪಿಂಡಿಗೆಯಿಂ ಕರ್ಪೂರಳದ ಕಟ್ಟುಗಳಿಂ ಸುರ್ಬುಗೊಂಡ ಕರ್ಬಿನ ತಟ್ಟೆಗಳಿಂ . . . ತಿರುಳೆಲೆಯ ತೆರೆಸುತ್ತಿನೊಳಮೆಸೆವ ಪಸುರ್ವರ್ಣಂದರೊಳಗೆ (೦೬ಲಾಪ. ೦೦-೫೫). **ಹಿಂಡಿಕೆ** : ೩. ತಲೆಯ ಮೇಲೆ ಹಂಡೆ, ಹೆಗಲ ಮೇಲೆ ಒಗೆದ ಬಟ್ಟೆಗಳ ಹಿಂಡಿಕೆ (ಸ್ವಸ್ತಿಕ. ೪೨). **ಹಿಂಡಿಗೆ** : ೨. ಮಱುಗೊಂಡ ಕುತ್ತಮಡಂಗಿ ಪದುಳಮಿರ್ಪ ತೋಟಿಯ ತೋಳ್ವಲನ ನರದ ಹಿಂಡಿಗೆಯ ಬಲ್ಪಿಂತ ಕೊಂದು ಬಲ್ಪಿಂ ಮೈವೆರ್ಚಿ . . . ಪೋಪೋಪ ಕುದುರೆಗೆ (ಶಾಬೂಕ್ತ. ೦೬೮-೨೮)

ಹಿಂಡಿಗೆ ಬಿಗಿ = ಒಟ್ಟಾಗಿ ಸೇರಿಸಂ ; ಒಂದಂಗೊಳಿಸು : ಹೂಡಿ ದೆಲು ಮರಮುಟ್ಟು ಮಾಂಸದ ಗೋಡೆ ಚರ್ಮದ ಹೊದಿಕೆ ನರವಿಂ ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು (ಶಂಶಾ. ೫೫).

[< ಸಂ. ಪಿಂಡಿಕಾ]

**ಪಿಂಡಿತ** (ಗು). ೧. ಮುದ್ದೆಯಾಗಿ ಮಾಡಿದ; **ಉಂಡೆಯಾಗಿ ಮಾಡಿದ**. ೨. ಗುಂಪುಗೂಡಿದ ; ಒಟ್ಟಾಗಿ ಸೇರಿದ. [ಸಂ.]

**ಪಿಂಡಿತಕ** (ನಾ). ಒಂದು ಬಗೆಯ ಸಸ್ಯ; ಪಿಂಡೀತಕ : ಪಿಂಡಿತಕ ಮಂಗಾರವಲ್ಲರಿ ಪುಂಡ್ರ ಬಿಲ್ವಜ ವೀರಣಾಳಿಯ ಖಂಡದರಾಶ್ವಕುಷ್ಠಬರ್ಹದ ವೃಕ್ಷ ಗಂಧಚಯ. . .ಎಸೆದುವಾ ವನದಿ ? (ಶೋಗರು. ೪-೪೦)

[<ಸಂ. ಪಿಂಡೀತಕ]

**ಪಿಂಡಿಲು** 'ಪಿಂಡಲು' ನೋ.

**ಪಿಂಡಿವಳ** 'ಬಿಂಡಿವಾಳ' ನೋ.

**ಪಿಂಡಿವಾಳ** 'ಬಿಂಡಿವಾಳ' ನೋ.

**ಪಿಂಡಿಶೂರ** (ನಾ). ಮನೆಯಲ್ಲಿ ಮಾತ್ರ ಶೌರ್ಯ ತೋರಂವವನು; ಜಂಭ ಕೊಚ್ಚುವುದರಲ್ಲಿ ಶೂರನಾದವನು : "ಚೀಱ್ ಗೃಹದೊಳು ಗರ್ಜಿಪಂ ಪಿಂಡಿಶೂರನಕ್ಕು" (ಮಂಗರಾ. ೬೦-೦೫). [< ಸಂ. ಪಿಂಡೀಶೂರ]

**ಪಿಂಡಿಸು** (ಕ್ರಿ). ಕುಗ್ಗಿಸು ; ದುರ್ಬಲಗೊಳಿಸು : ಜರೆ ನಿಜಶಕ್ತಿಯಿಂ ಪಿಟಾದು ಪಿಂಡಿಸದನ್ನೆಗಂ. . . ನೆನೆವುದಿಂದ್ರನರೇಂದ್ರಫಣೀಂದ್ರವಂದ್ಯನಂ (ಸಮಚ. ೧-೧೦೫). [ಪಿಂಡು₁ + -ಇಸು₁]

**ಪಿಂಡಿಸೊಪ್ಪು**, ಪಿಂಡೀಸೊಪ್ಪು, ಹಿಂಡಿಸೊಪ್ಪು (ನಾ). ಒಂದು ಬಗೆಯ ಸೊಪ್ಪು : (೩). **ಪಿಂಡೀಸೊಪ್ಪು** : ಮಣಿತುತ್ತೀಗಿಡ, ಪಿಂಡೀಸೊಪ್ಪು (ಪ್ಸಕಿಗಿ. ೪೬-೬೨). **ಹಿಂಡಿಸೊಪ್ಪು** : ನೆಗ್ಗಿಲ ಬೇರು, ಹಿಂಡಿಸೊಪ್ಪಿನ ಬೇರು ಸಹ ೧ ಪಡಿ ನೀರಲ್ಲಿ ಹಾಕಿ . . . ಶರ್ಕರೆವೆರಸಿ ತೆಗೆದುಕೊಳ್ಳಲು ಮೂತ್ರಕಟ್ಟು ಬಿಡುವುದು (ಸಕವ್ಯ. ೩೭೪).

[ಪಿಂಡಿ₂ (< ಪುಂಡಿ) + ಸೊಪ್ಪು₁₂]

**ಪಿಂಡೀತಕ** (ನಾ). ಒಂದು ಬಗೆಯ ಸಸ್ಯ : "ಬೋನಗಾರೇ-ಪಿಂಡೀತಕ, ಮರುಪಕ, ಶ್ವಸನ, ಕರಹಾಟಕ, ಶಲ್ಯ, ಮದನ" (ಶಾಶಾ. ೬); "ಪಿಂಡೀತಕಃ, ಮರುವಕಃ . . . ಮದನಃ—ಈ ೭ ಮಂಗಾರೆಗಿಡದ, ಬೋನಗಾರೆಮರದ ಹೆಸರುಗಳು" (ನಿಘಂಟು. ೦೨೪). [ಸಂ.]

**ಪಿಂಡೀಶೂರ** (ನಾ). ೧. ಮನೆಯಲ್ಲಿ ಮಾತ್ರ ಶೌರ್ಯ ತೋರು ವವನು,-ಜಂಬ ಕೊಚ್ಚುವುದರಲ್ಲಿ ಶೂರನಾದವನು: "ಗೇಹೇನರ್ದೀ, ಗೃಹೇಶೂರಃ, ಪಿಂಡೀಶೂರಃ—ಈ ೩ ಗೃಹಗರ್ಜನೆಗೆಯ್ವವಂ" (ಕರಾಯು. ೬೯-೨೦೨). ೨. ಊಟದ ವಿಷಯದಲ್ಲಿ ಮಾತ್ರ ಶೌರ್ಯವುಳ್ಳವನು. [ಸಂ.]

**ಪಿಂಡೀಸೊಪ್ಪು** 'ಪಿಂಡಿಸೊಪ್ಪು' ನೋ.

**ಪಿಂಡು$_1$, ಹಿಂಡು$_1$** (ಕ್ರಿ). ೧. ರಸ ಒಸರುವಂತೆ ಗಟ್ಟಿಯಾಗಿ ಹಿಸುಕು,–ಅದುಮು; ನೀರು ಹೊರಬರುವಂತೆ ನುಲಿ : ಪಿಂಡುವ ನಿಂಬೆಯ ಪಣ್ ವಿಧುಮಂಡಲದೊಳಜೊನ್ನಮೊಟೆವ ನೀರ್ಪೊನಲೆನಿಕುಂ (ಚಂದ್ರ. ೬-೨೪) ; ತೆಂಗಾಯ ಬಲುಹಿಂದ ಭಿನ್ನಿಸಲೆನೀರ ಸೇವಿಸಬೇಕು ರಸದಾಳಿ ಕೆತ್ತಬೇಕು ಒಲಿದು ಪಿಂಡಲಿಬೇಕು ಮಾವಣ್ಣು ಬಾಳೆಪಣ್ಣುಲಿಯ ಬೇಕೊಡೆಯುದೆ ಕೆತ್ತದೆ ಪಿಂಡದೇ ಸುಲಿಯದೇ ದ್ರಾಕ್ಷಫಳವನ್ನು ಸವಿದಂತಾಯ್ತು (ಶಶಪೊ. ೨೬-೪). ೨. ನುಲಿಚು ; ತಿರುಚು : ವಿಭು ಸಾಯೆ ಪೊಯ್ದು ಕಿವಿಯಂ ಪಿಂಡಿ ದೂಡಲೊಡರ್ಚಿ ಬಂದನೇ (ಸುಕುಮಾ. ೨-೬೩). ೩. ಸುರಿ ; ಎರೆ ; ಹೊಯ್ಯು : ಕಲ್ಲಲ್ಲಿ ನಾರೆತ್ತುವರ್ ಮರುಳಂ ಪೋ ಪುರುಳಾಗಿಪರ್ ಕಿವಿಗಳೊಳ್ ಪೀಯೂಷಮಂ ಪಿಂಡಲುವರ್ದರೆಯೊಳ್ ಸಂದ ಕವಿಪ್ರವೇಕರೆ ಪಲಂ ಬಲ್ಲರ್ ಪೆಱರ್ ಬಲ್ಲರೇ (ರೀಜಾವ. ೧-೧೪); ಆ ಕಾಂತಾಕಚಶ್ರೇಣಿಗೊಯ್ಯನೆ ಮುಂದಿಕ್ಕಿದ ಚಂದನಾಂಬುವನಲಂಪಂಬೆತ್ತು ತಾಂ ಪಿಂಡಿದಳ್ (ಉದ್ಭಟ. ೯-೨೦) ; ಪರಿಪರಿಯ ಸಿಂಗಾರದಲಿ ನೋಳ್ಪರ ಬಗೆಯನಿರ್ಕುಳಿಗೊಳುಪ ಕೇಳ್ವರ ಕಿವಿಗೆ ವಾಕ್ಸುಧೆಯ ಪಿಂಡುತ ಬಂದರರವುನೆಗೆ (ಸಾಳ್ವಶಾ. ೪೨-೦೮). ೪. (ಆಲಂ) ನಿರ್ಬಲಗೊಳಿಸು ; ನಿಸ್ಸತ್ವಗೊಳಿಸು : ಈ ತೆಱದಿಂದಂ ನಿನ್ನಂ ಘಾಶಿಸಿ ಬಿಡದಲೆದು ಪಿಟಿದು ಪಿಂಡಿದ ದುಃಖವ್ರಾತವಿದು ಮಗಳೆ (ಅಂಕು. ೪-೪೮). **ಹಿಂಡು$_1$** : ೧. "ಹಿಂಡು–ನಿಷ್ಪೀಡನೇ, ಗೋಸಮೂಹೇ ಚ" (ಕಮಿತಾ) : ಮಳಲೊಳ್ ತೈಲಂಗಳಂ ಹಿಂಡಲುಕ್ಕಡವೀಸಿಂಗವ ಕಿದ್ದಲಕ್ಕು ಕಱೆಯಲ್ ಬಕ್ಕುಗ್ರದ ವ್ಯಾಘ್ರವಂ ಕಡುಮೂರ್ಖಂ ಹಿತ ಕೇಳ್ವನೇ (ಸೋಮೇಶ. ೪೯) ; ಮೇಘಂ ಹಿಂಡಿ ಹರಹಿದಂತಿವೆ ನಭದೊಳ್ (ಗಂ೪. ೯-೬೨); ಹೊಸ ನಿಂಬೆಹಣ್ಣು ಹುಳಿಯಂ ಹಿಂಡಿಯರಿಸಿನವ ಬೆರಸಿ . . . ಬೋನದೊಳಿಕ್ಕಿ ಬಣ್ಣಿಸಿಯದಂ ಕಲಸಿ ಬಳಿಯುಪ್ಪನಿಕ್ಕಲದು ಸಾಸುವೆಯ ಕಟ್ಟೊಗ್ಗರ (ಸೂಪಶಾ. ೩-೨೦) ; ಸ್ಪಂಜಿನ ಕೆರದೊಳು ದೊಡ್ಡವರಿರುವರು . . . ತಮ್ಮೊಳಗಿರುವುದನೀಯರು ಹಿಡಿದೊತ್ತಿ ಹಿಂಡಿದ ಹೊರತು (ಸಂಚಾಶ. ೦೯೯-೯೯). ೨. ಕೆಲವರು . . . ಅವನ ಜುಟ್ಟನ್ನೆಳೆಯುತ್ತಲೂ, ಮತ್ತೆ ಕೆಲವರು ಕಿವಿಯನ್ನು ಹಿಂಡುತ್ತಲೂ ಹಿಂಸೆ ಮಾಡುತ್ತಿದ್ದರು (ರಾಜಿ. ೨೦). ೩. ಬೆಂಡಿನಂದದ ಲಘುಕಿನ್ನರಿಯೊಳು ಸ್ವರಮಂಡಲದೊಳು ಶ್ರುತಿಗೂಡಿ ಗಂಡುಗೋಗಿಲೆಯಂತೆ ಹೆಣ್ದುಂಬಿಯಂತಾಗ ಹಿಂಡಿದರಾತ್ಮಸಾರವನು (ಹರಿ. ೦೯-೧೬೭). ೪. ಪಾಂಡುತನಯರ ನಂದನರು ತಾವ್ವೈವರೀತನ ಹಿಂದುಳುಹಿ ಹಿಂಡಿದರು ಹೇರಾಳದ ಚತುರ್ಬಲವ (ಕುವ್ಯಾಕ. ೪-೦೬) ; ಕೊಳನ ಹೊಕ್ಕಿಭದಂತೆ. . .ಬಲವನರಿಭಟ ಸುಳಿದು ತುಳಿದನು ಹಿಳಿದು ಹಿಂಡಿದನು (ಕಾಶಿರಾ. ೪೬-೦೭); ವಿರಕ್ತರ ಮನದ ಶಾಂತರಸದೊಬ್ಬುಳಿಯನು ಹಿಂಡಿ ಕೆಡಿಸುವ . . . ಮುಂಡಿಕೆಯ ರೂಪುಯೌವನವಿಲಾಸವನು ಬಣ್ಣಪರಾರು (ಸಮ್ಯಕ್ತ್ವ. ೮-೦೦) ೫. (ಹಾಲನ್ನು) ಕರೆ : ನಿತ್ಯವೂ ಸ್ವಲ್ಪ ಸ್ವಲ್ಪ ಹಿಂಡಿಕೊಂಡು ಕುಡಿಯುತ್ತಾರೆ (ಕಿಂಕಿ. ೦೩) ; ಹಾಲನ್ನು ಹಿಂಡುವ ಅಥವಾ ಸರಬರಾಯಿ ಮಾಡುವ ಹೊಲಸು ವಿಧಾನಗಳಿಂದಾಗಿ ಹಾಲಿನೊಡನೆ ರೋಗಾಣುಗಳು . . . ಹೆಚ್ಚಾಗಿರುತ್ತದೆ (ಅಡುಶಾ. ೮೩); ಹಿತ್ತಲಿನಲ್ಲಿ, ಹಿಂಡುವ ಹೊತ್ತು ಮಾರಿ . . . ಆಕಳ ಕರು ಒಂದೇ ಸಮನೆ ಒದರ ಹತ್ತಿತ್ತು (ಗಂಗಾಸಾ. ೨೦). ೬. (ಹಾಲನ್ನು) ಕೊಡು : ಅದು ಹಾಲು ಹಿಂಡುತ್ತದೆ (ಮುಂಬಯಿ. ೪-೨೪) ; ಅವರಿಗೆ ಆಗ ಉಳಿದ ಉಡುಗರೆಗಳೆಂದರೆ . . . ಎರಡು ಹಿಂಡುವ ಆಕಳು (ಹಬ್ಬಶ. ೨೬). ೭. ಒತ್ತು ; ನೋವು ಮಾಡು : ತುರುಕರ ದಿಂಡುಗುಂಡಿಗೆಯ ಹಿಂಡಿದ ನಿನ್ನಯ ಬಾಹುದಂಡವಂ ಪೊಗಳ್ವೆನೆ ? (ಗೀಜಿಂ. ೫೨-೯) ; ಎಲ್ಲಿಂದಲೋ ಒಳಸೇರಿದ ಕಸವಿಸಿಯು ಅವನ ಹೃದಯವನ್ನು ಹಿಂಡತೊಡಗುವುದು (ಶಬ್ದಹೂ. ೫೫) : ತನ್ನ ಗೆಳೆಯರೆಲ್ಲರೂ ದಸ್ತಗಿರಿಯಾದ ಸುದ್ದಿ ಅಜಯನ ಹೃದಯವನ್ನು ಹಿಂಡುತ್ತಲಿತ್ತು (ಅಶ್ವಶಿ. ೧೬೫). ೮. ಕಾಡು ; ಪೀಡಿಸು ; ಹಿಂಸಿಸು ; ನುಗ್ಗುಮಾಡು : ಉಂಡೆವ್ವ ಸಮಚಿತ್ತದಲಿ ನೀವ್ ಕೊಂಡಿರ್ದ್ದ ಘಾಯಗಳನೆಡೆಯಲಿ ಹಿಂಡುವಿರಲ್ಲೈ ನಾವು ಸಹಿತೀ ಊರ ಹಾರುವರ (ಕುವ್ಯಾಅ. ೧೦-೩೫) ; ವ್ಯಸನಕ್ಕೆ ಪ್ರೌಢ ನೊಳೆಱಗದಿರೆಂದು ರಕ್ಕಿಸುಮುಂಡೆ ಮಗಳ ಹಿಂಡಿದಳು (ಮೋಹತ. ೦೮-೬೫). ೯. ಹೀರು : ಜೇನುಹುಳು . . . ನಾಲಗೆಯ ಮೇಲಿನ ಮಕರಂದ ಶೀರ್ಷಕಗಳಿಂದ ಹಿಂಡಿ ಜಿಹ್ವೆಯ ಬುಡದಲ್ಲಿ ಒಂದು ಸಣ್ಣ ಕುಳಿಯೊಳಗೆ ಸಂಗ್ರಹಿಸುತ್ತದೆ (ಕೀಟಶ. ೯೦). ೧೦. ಇಲ್ಲವಾಗಿಸು ; ಮುಗಿಸು ; ನಾಶಪಡಿಸು ; ಧ್ವಂಸ ಮಾಡು : ಕೊಂಡು ತಾನುರಿಲಿಂಗವಾದಸುಖಂಡತೇಜೋಮಯನು ನಿಮಿಷಕೆ ಹಿಂಡಿದನು ಹದಿನಾಲ್ಕು ಲೋಕವನುರುಹಿ ಘೋಳಿಡಿಸೆ (ಸಂಭಶ. ೬-೫) ; ಇವನು ಗಡ ಚಿಕ್ಕಂದು ಮೊಲೆಗೊಟ್ಟವಳ ಹಿಂಡಿದ ಗಂಡಬಂಡಿಯ ಜವಳಿಗಾಲಲಿ ಮುಱಿದನೈ ಮಾಮಾ ಸಮರ್ಥನಲೆ (ಕುವ್ಯಾಸ. ೧೦-೧೪).

**ಹಿಂಡಿ ಹಿಟ್** = ೧. ಚೆನ್ನಾಗಿ ಹಿಂಡು. ೨. ಅತಿಯಾಗಿ ಹಿಂಸಿಸು : ಒಲ್ಲಣಿಗೆಯಂ ಹಿಟಿವಂತೆ ಪಿಂಡಿ ಪಿಟಿವ ಪಗೆಗೆ . . . ಈ ಪದದೊಳ್ ಕಡಿದೊಟ್ಟದಾಗಳ್ ಗೆಲಲಾಱೆ (ಶಂಶಭಾ. ೧೨-೨೦೬ ವ); ಶತಬಲಿಯೆಂಬಸುರ ಮಹೀಪತಿ ಸುರರಂ ಪಿಂಡಿ ಪಿಟಿ[ಪಾಠಾ. ಹಿಂಡಿ ಹಿಟಿ]ದು ತನ್ನಯ ಪದವಂ ಸುತನೆನಿಪ ಸಹಸ್ರಬಲಿಕ್ಷಿತಿಪತಿಗಿತ್ತೊಂದು ಗಿರಿಯೊಳಿರ್ದಂ ತಪದಿಂ (ಧರ್ಮಶ. ೪-೧೬). **ಹಿಂಡಿ ಹಿಪ್ಪಲಿ ಮಾಡು** = ಕುಗ್ಗುವಂತೆ ಮಾಡು : ಕುಗ್ಗಿಸು ; ನಿಸ್ಸತ್ವಗೊಳಿಸು : ಅವನ ಹೃದಯವನ್ನು ಕಟುಕರು ಕರುಣೆಯಿಲ್ಲದೆ ಹಿಂಡಿ ಹಿಪ್ಪಲಿ ಮಾಡಿದಂತಾಗಿದ್ದಿತು (ಬಂದಕೀ. ೮). **ಹಿಂಡಿ ಹಿಪ್ಪೆ ಮಾಡು** = ಹಿಂಡಿ ಹಿಪ್ಪಲಿ ಮಾಡು : ರಾಜನೂ ರಾಜಪ್ರತಿನಿಧಿಗಳೂ ಅದಾವಾಗ . . . ಪ್ರಜೆಗಳನ್ನು ಹಿಂಡಿ ಹಿಪ್ಪೆ ಮಾಡಲು ಯತ್ನಿಸುವರೊ ಆಗ ರಾಜ್ಯಕ್ರಾಂತಿಯ ಕಾಲವು ಸಮೀಪಿಸಿತೆಂದು ತಿಳಿಯತಕ್ಕದ್ದೆ ! (ವಿಜಾ. ೨೫).
[ ದೇ. ॥ ತುಳು. ಪಿಂಟು, ಪುಂಟು ; **ಕೊಡ.** ಪುಂಡ್ ; **ತೆಲು.** ಪಿಂಡು ; **ಕೋಲಾ.** ನಾಯ್ಕಿ. ಪಿಂಡ್ ]

**ಪಿಂಡು$_2$, ಹಿಂಡು$_2$, ಹಿಂಡೆ** (ನಾ). ೧. ಗುಂಪು ; ಸಮೂಹ ; ರಾಶಿ : " ಬಂಬಲ್ . . . ಪಿಂಡು[ಪಾಠಾಂ. ಡಿ] ತೆರಳ್ಕೆ . . . ಈ ೪೦ ಸಮೂಹಂ " (ಕಶಸಾ. ೫೬-೨೨೨) ; ಗೋಮಂಡಲದಂತಿರ್ದ ಕಡವಿನ ಕಾಡೆಮ್ಮೆಯ ಪಿಂಡುಗಳಿಂದಂ . . . ಅತಿಭಯಂಕರಾಕಾರಮಪ್ಪ ದ್ವೈತವನಕ್ಕೆ ಬಂದು (ಶಂಶಭಾ. ೭-೨೯ ವ) ; ಪಂಚಾಗ್ನಿತಾಪತಪ್ತಮಾನಸರಪ್ಪ ತಪೋಧನಜನಕ್ಕೆ ತಪನತಾಪಮನಾಗಲೀಯದೆ ತಳಿರ್ದುಱುಗಲಂ ಪೊತ್ತು ನಭದೊಳ್ ನಲಿದಾಡುವ ನೋಗೆನವಿಲ್ಗಳ ಪಿಂಡುಗಳುಮಂ (ಶಂಕಶಂ. ೧೧೮-೧೧) ; ಜವದಿಂ ಪಾಪದ ಪಿಂಡಿನಂತಳಿಕುಳಂ ಬಿಟ್ಟೋಡೆ (ಅರ್ಧನೇ. ೧-೮) ; ನೆಗೆದು ನಿಂದಂಚೆಯ ಪಿಂಡೆಂಬಂತಿರೆ ಬೆಳ್ಮುಗಿಲದಱಿಂ ಬೀಳ್ವ ತುಷಾರಮದಱ ಗಱಿವನಿಯೆನಿಕುಂ (ರಾಜಶೇ. ೬-೬). ೨. ಶ್ರಾದ್ಧದ ದಿನಗಳಲ್ಲಿ ಪಿತೃಗಳಿಗೆ ಅರ್ಪಿಸುವ ಅನ್ನದ ಮುದ್ದೆ : 'ಪಿಂಡುಗೊಟ್ಟು' ಪರಾ. **ಹಿಂಡು$_2$** : ೧. ಸುತ್ತಲುಂ ಗಿಳಿಗಳ ಹಿಂಡುಗಳ್ ನೆರೆದು ಕೂಡಿಯುಮಲ್ಲಿ ಸಹಸ್ರಮುಂ ನಿರಾಕುಳಮನುರಾಗದಿಂ . . . ಇರ್ಪುವು (ಕಾದಂಪೂ. ೧೨೬) ; ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯ (ಮಹಾದೇ. ಶಿ. ೧೪೮-೪೧೪) ; ಕುಱಿಯ ಹಿಂಡಿನ ತೋಳನೈ ನಿನ್ನಾನೆ (ಕುವ್ಯಾದ್ರೋ. ೪-೨೬) ; ಹಾಲುಬತ್ತಕೆ ಕವಿವರಗಿಳಿಗಳ ಹಿಂಡ ಮೇಲಕಬ್ಬಿಸುವ ನಾರಿಯರ ಪೇಳಲಳವೆ (ಕಂವಿ. ೫-೬೪) ; ಘಾತನಾಡುವುದನ್ನೇ ಮರೆತು ಕಿಡಿಕಿಯ ಹೊರಗೆ ಒತ್ತಾಗಿ ಬೆಳೆದ ಬಾಳೆಯ ಹಿಂಡುಗಳಲ್ಲಿ ದೃಷ್ಟಿ ನೆಟ್ಟ ಕೂತ (ಮೂರುದಾ. ೧೪೮). ೪. (ದನದ) ಮಂದೆ ; (ಗೋ)

ಸಮೂಹ : "ತುಱು ಮಂದೆಯೊಳು ನಿಟ್ಟೀಡನದೊಳು ಹಿಂಡೆಂದೆನಿಕು" (ಶಬ್ದಮಂ. ೯೭) ; ಪೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ ಬಳಿದಪ್ಪಿದ ಪಶು ತನ್ನ ಹಿಂಡನಱಸುವಂತೆ ಬಯಸುತಿರ್ದೆನಯ್ಯ ನಿಮ್ಮ ಶರಣರ ಬರವನು (ಬಸವ. ೩೬೫) ; ಹಿಂಡ ಬಿಟ್ಟೆಂದೆಂದು ಹಿಂದಿನಿಂ ಬಿಹುವಲ್ಲ ಕಂಡವರ ಹೊಲಕಿಳಿವ ತೊಂಡುದನವುಲ್ಲ (ಕಾಂಜಿರ. ೮೦-೧೩೩). ಹಿಂಡೆ : ೨. "ಹಿಂಡೆ — ಪಿಂಡ=ಪಿಂಡದ ಮುದ್ದೆ" (ಶಬ್ದಕೋ. ೯೯) ; ಬಯಕೆಗೆ ಪಶುವಂ ಕೊಲ್ವವರಯಸಕ್ಕಂಜುವರೆ ಕೊಂದು ಕೊಳ್ವಾತಂ ಹಿಂಡೆಯ ಕೊಟ್ಟಿಗೆ ಹೇಸುವನೆ (ಸಮಯ. ೧೪-೧೩೫) ; ಅಳಿದ ಕಲ್ಲಿಗೆ ಹೆಂಟೆ ಹಿಂಡೆಯ ಕೂಳನಟ್ಟು ಉಂಬವರಿಲ್ಲದೆ ಅಳುತ್ತಿದ್ದಿತ್ತು (ಮನುಗುಂ. ೪. ೨೪೯-೦೩) : ಎನ್ನ ಮಕ್ಕಳು ಕೊಂದು ಹಿಂಡೆಯ ಕೂಳನುಂಬರು ಹೇಸುವವರಲ್ಲ (ಸಂಕರ. ೨೦-೭೮).

ಹಿಂಡುಹಿಂಡು (ದ್ವಿರುಕ್ತಿ): ಇಂದು ಮಾಡಿಸುವೆಂ ಮಹೋತ್ಸವದಿಂದೆ ಸಾವಿರ ಹೊಂಗಳಿಗೆ ಬಲಿತಂದು ಕುಱಿಗಳ ಹಿಂಡುಹಿಂಡಿನ ಥಂದದಲಿ ನೆರಹಿ (ಬಸವ. ೨೮-೨೨) ; ಹಿಂಡುಹಿಂಡಿನರೇಣೆಯ ಮೇಲೇಱ ಮುಂಕೊಂಡುಬಬಿಪ ರಿಪುಬಲವ ಖಂಡಿಸಿ ಸಿರಗಳ ಮರುಳ್ಗಳ ಕೊರಳಿಗೆ ದಂಡೆಯ ಹಾಕಿದರಾಗ (ಕಂಕಪ. ೦೪-೬೦) ; ತುಂಡುತುಂಡು ದೊರೆಗಳು ಕೂಡಿ ಹಿಂಡುಹಿಂಡು ಸೈನ್ಯ ಕೂಡಿಸಿದರು (ಗಾದೆ). ಪಿಂಡಾಗು=ಗುಂಪಾಗು; ಗುಂಪುಗೂಡು: ಕಟ್ಟಾನೆ ಬೀದಿಯೊಳಟ್ಟಿಕೊಂಡು ಪೋಗಿ ನಟ್ಟಾರಣ್ಯಮಂ ಪೊಗುವುದುಂ ಪರಿಜನಂಗಳೆಲ್ಲಂ ವಿಸ್ಮಯಂಬಟ್ಟು ಪಿಂಡಾ[ಪಾಠಾಂ. ದಾ]ಗಿಪ್ಪುದುಂ (ಶೃಂಗಾಸ್ತ. ೨-೩೭ ವ). ಹಿಂಡಾನುಹಿಂಡು=ಭಾರಿ ಸಮೂಹ,— ಗುಂಪು : ಹಿಂಡಾನುಹಿಂಡು ಬೌದ್ಧಭಿಕ್ಷುಗಳಲ್ಲಿ ಮಹಾತ್ಮರಾದ ಭಿಕ್ಷುಗಳು ಎಲ್ಲಿ ಅಡಗಿರುವರೋ ಯಾರಿಗೆ ಗೊತ್ತು (ಧರ್ಮರ. ೦೩೩).

[< ಸಂ. ಪಿಂಡ]

**ಪಿಂದುಗಂಕಣ**, ಹಿಂದುಗಂಕಣ (ನಾ). ೧. ಒಂದು ಬಗೆಯ ಬಳೆ,— ಕಂಕಣ : ಮಾಣಿಕದ ಮುತ್ತಿನ ಪಿಂದುಗಂಕಣಮಂ ಕೊಟ್ಟ ಕೈಯಿಂದಂ ಪೊನ್ನ ಸಟ್ಟುಗಮಂ ಕೀವಿ ಭೈಕ್ಷಮಂ ಪಿಡಿಯೆಂದು ನೀಡಿದ ಕೈಯನಿತನೆ ಕಂಡು (ವಡ್ಡಾರಾ. ೯೮-೭) ; ಬಾಣಸಿಗೆಯರ್ ಪಿಂದುಗಂಕಣಂಗಳಂ ನೂಂಕಿ ನೂಲ ತೊಂಗಲನೆತ್ತಿ . . . ಪಂಕ್ತಿಯೊಳುಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೦೦-೨೯ ವ); ತನ್ನ ನಿದ್ರೆಯೊಡನೆ ಕಟ್ಟಲೆ ಪರೆಯುತ್ತುಂ ಕಣ್ಮಲರೊಡನೆ ಕಮಲದಳಮಲರೆ ತನ್ನ ಪಿಂದುಗಂಕಣದೊಡನೆ ಕೋರ್ವಕ್ಕಿಗಳುಲಿಯೆ . . . ಸಜ್ಜೆಯಿನುಜ್ಜುಗದಿನೆರ್ದು ಶೃಂಗಾರಗೇಹದೊಳ್ ಶೃಂಗಾರಂಗೆಯ್ಯುತ್ತುಮಿರ್ದಳ್ (ಅರ್ಜನೇ. ೨-೦೬ ವ); ನಲ್ದೊಡವುಗಳೊಳ್ ಎಕ್ಕಸರಂ ಶ್ರುತಕೀರ್ತಿಗೆ ದುಕ್ಕಂಪಡದ ಪಿಂದುಗಂಕಣಂ ಮಾಳವಿಗಾ ಜಕ್ಕಸರಂ ನಿನ್ನರಸಿಗೆ (ರಾಮಾಶ್ವ. ೩೬-೦೭). ೨. ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ: ಸಿರಿಸದ ಬಾಸಿಗಮಂ ಮಾಂಕರಿಸುವ ನಳತೋಳ ಪಿಂದುಗಂಕಣದ ಸರಂ ಮೊರೆವಳಿಗಳ ಸರವಂ ಚಪ್ಪರಿಸುವಿನಂ ಚೆನ್ನೆ ಪೊನ್ನೆಯರಲಂ ಕೊಯ್ದಳ್ (ಆದಿಪು. ೦೦-೯೯ ಅಡಿಟಿಪ್ಪ) ; ವಿನ್ನಂತಃಪುರದ ಕಾಂತಾಜನದ ಕದಂಪಿನೊಳ್ ಮೃಗಮದಪತ್ರಲೇಖೆಯಂ ಬರೆಯಲುಂ ಬಾಹುಲತೆಯೊಳ್ ಪಿಂದುಗಂಕಣಮನೇಱಸಲುಂ (ಸಂರಾಮ. ೦೪-೨೦೦ ವ). ಹಿಂದುಗಂಕಣ : ೧. "ಗುಬ್ಬಿಗಂಕಣ ಹಿಂದುಗಂಕಣಮವು ಮೆಂದು ಮಣಿಗಂಕಣಂ ಹಸ್ತಗಂಕಣವು" (ಶಬ್ದಕೈ. ೯೭).

[ಪಿಂದು$_{2}$ + ಕಂಕಣ]

**ಪಿಂದುಗಜ್ಜುರ** (ನಾ). = ಪಿಂಡಖರ್ಜೂರ : ಬಿತ್ತರಂಬಡೆದ ಪನಿನೀರಳ ನೀರ್ ಪಿಂದುಗಜ್ಜುರ ದ್ರಾಕ್ಷಿ ರಸವಾಳೆ ದಾಳಿಂಬ ಪಲಸಿಮ್ಮಾವರನೇಱಲ್ ಮೊದಲಾದ ಫಳಕುಳಂಗಳಿಂ (ಹಾಲಷ್ಟ. ೦-೬-೨೭ ವ).

[ಪಿಂದು$_{2}$ + ಕಜ್ಜುರ (< ಕರ್ಜೂರ)]

**ಪಿಂದುಗೂಡು**, ಹಿಂದುಗೂಡು (ಕ್ರಿ). ಒಟ್ಟುಗೂಡು ; ಒಟ್ಟಾಗಿ ಸೇರು ; ಗುಂಪಾಗು : ನಿಜದಿಂದಂ ಪಿಂದುಗೂಡಿರ್ದಲೆ ತೃಣಗಣಮಂ ಮೇದು ಸತ್ಪಾನಮಂ ಪೀರ್ದಜಪೋತಂ ಲೀಲೆಯಿಂದಂ ನಲಿವಪ್ಪೊಲ್ (ಧರ್ಮಾಶ. ೦೦-೦೪). ಹಿಂದುಗೂಡು : ಕಂಡಕಂಡವರ ಮನೆಯಲ್ಲಿ ಕೊಂಡಾಡಬೇಕೆಂದು ಹಿಂದುಗೂಡಿ ಕೂಳನಿಕ್ಕುವ ಭಂಡರಿಗೆಲ್ಲಿಯದೋ ಭಕ್ತಿ (ಮೋಕ್ಷಮಾ. ೦೬-೫೯) ; ಆಗಾಗ್ಗೆ ಹಿಂದುಗೂಡುತ್ತಿದ್ದ ಮೋಡಗಳಲ್ಲಿ ಸೂರ್ಯ ಮರೆಯಾಗುತ್ತಿದ್ದನು (ಪ್ರಪರು. ೨೭೬). [ಪಿಂದು$_{2}$ + ಕೂಡು$_{1}$]

**ಪಿಂದುಗೂಟು**, ಹಿಂಡೆಕೂಳು, ಹಿಂಡೆಗೂಳು (ನಾ). ೧. ಮುದ್ದೆಯಾದ ಅನ್ನ : ಮಿಾಯದೆ ಮೆಯ್ಯೊಳ್ ಶ್ರೀಖಂಡಮಂ ಪೂಸುವೆನೆಂಬ ಪಿಂದುಗೂಟಿಳಗಗುಬನುಣ್ಬೆನೆಂಬ (ಧರ್ಮಾಶ್ವ. ೦೨-೨೪). ಹಿಂಡೆಕೂಳು : ೨. ಶ್ರಾದ್ಧದ ದಿನಗಳಲ್ಲಿ ಪಿತೃಗಳಿಗೆ ಇರಿಸಲಾಗುವ ಅನ್ನದ ಮುದ್ದೆ : "ಹಿಂಡೆಕೂಳು=ಪಿಂಡಾನ್ನ, ಶ್ರಾದ್ಧದ ಊಟ, ಹೀನವಾದ ಊಟ" (ಶಮಾಣಂ. ೭೪೯) ; ಹಿಂಡೆಕೂಳು ಮುಂಡೆಗೆ ಆದೀತೇ ? (ಗಾದೆ). ಹಿಂಡೆಗೂಳು : ೨. ಹಿಂಡೇಗೂಳಾ ಗುಂಡೀದಂಡೇಲುಂಡೂ ಕೈಯ್ಯಾ ಜೋಡೀಸೂವೆಂ (ವೃಸೂಮ. ೨-೯೪). [ಪಿಂದು$_{3}$ + ಕೂಟು$_{1}$]

**ಪಿಂದುಗೊಳ್**, ಹಿಂದುಗೊಳ್ (ಕ್ರಿ). ಒಟ್ಟುಗೂಡು ; ಗುಂಪಾಗು : ಮೇಳದ ಕೆಳದಿಯರ್ ಪಿಂದುಗೊಂಡು ತದ್ಯೋಗ್ಯ . . . ಮಂಗಳೋಪಕರಣಂಗಳಂ ಪಿಡಿದಾ ಸ್ಯಂದನದ ಸುತ್ತಲುಂ ಮಂದೈಸಿ ನಡೆಯೆ (ಹರಿಪು. ೦೦-೭೫ ವ) ; ಪಿಂದುಗೊಂಡು ಜೊಂಡೀಳ್ದ ಕಾಳ್ಪಿದುಳ ಕೋಳ್ಗೆ ಸಱುಂದರೆದೆಱಿದ ಕಣ್ಗಳಿಂ ... ಪಾಸಿ ಪಸರಿಸಿದಂತೆ ಬಿಳ್ದ ಪರ್ಣಂಗಳಿಂದತಿ ಭಯಾವಹಮಾದ ಬಟ್ಟೆಯಂ ನಿಟ್ಟಿಸುತ್ತಿರೆ (ರಾಜಶೇ. ೫-೦೨೦ ವ). ಹಿಂದುಗೊಳ್ : ಎನಿತು ಸುರರಾಗರೆನಿತಸುರರಾಗರಂ ನೆನೆಯೆ ಎನಿತು ದೇವರ ದೊಡ್ಡ ಹಿಂದುಗೊಳ್ಳದು ನೆನೆಯೆ (ರುದ್ರಕ. ರೇ. ೨೦೬-೦೪).

[ಪಿಂದು$_{2}$ + ಕೊಳ್$_{1}$]

**ಪಿಂದುಮಾತು**, ಹಿಂದುಮಾತು (ನಾ). ಹೆಚ್ಚು ಮಾತು ; ಬಹಳವಾದ ಮಾತು : ಕೊಂಡಾಡುವಾಗಾನು ಭಟ್ಟನಲ್ಲೊಳ್ಳಿತ ಕಂಡು ಸೋಲದ ಸುಖಿ ಯಾರು ಪಿಂದುಮಾತಿನ ಜೋಲಿಯೇನು ನೀನೊಬ್ಬನೆ ಮುಂಡೆ ದೂಗಿಸದೆ ಮೂಱಜಗವ (ಭರತ. ೬೦-೭೮). ಹಿಂದುಮಾತು : ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ . . . ತಂಡತಂಡದ ವಾರ್ತೆ ವಾರಿಜಾಕ್ಷನ ಕೀರ್ತಿ ಹಿಂದುಮಾತುಗಳೆಲ್ಲ ಹರಿಯ ನಾಮ (ಹರಿಕೃ. ೨೫-೦).

[ಪಿಂದು$_{2}$ + ಮಾತು$_{1}$]

**ಪಿಂಡೋತ್ಪತ್ತಿ** (ನಾ). ಭ್ರೂಣದ ಉತ್ಪತ್ತಿ,— ಹುಟ್ಟು : ಪಿಂಡೋತ್ಪತ್ತಿ (ಏಕೋಶ. ೨೫೫). [ಪಿಂಡ + ಉತ್ಪತ್ತಿ]

**ಪಿಂತಟ್ಟು**, ಹಿಂದಟ್ಟು (ಕ್ರಿ). ೧. ಹಿಂದಕ್ಕೆ ಕಳುಹಿಸಿರಿ ; ಹಿಂದೆ ಹೋಗುವಂತೆ ಮಾಡು : ಇದು ಸಿದ ೦ ಬದ್ಧಮೆಂದು ಪೊಣ್ದು ನುಡಿದು ಬಂದ ನಿಯೋಗಿಯಂ ಪಿಂತಟ್ಟಲೊಡಂ (ರಾಮಾಶ್ವ. ೦೯೩-೦೪). ಹಿಂದಟ್ಟು : ೧. ಬೆಟ್ಟ ಬರುತಿದೆ ಮುಂದೆ ಹೊಯ್ ಹೊಯ್ ಮೆಟ್ಟು ಹಿಂದಟ್ಟಿದಲ ವೃಕುವ ಹೊಟ್ಟುಗಳ ಹೊಯ್ಯೆನುತ ರಣದೊಳಗಟ್ಟಿಯಾಡಿದರು (ಕೌರಾ. ೩೨-೨೨). ೨. ದಾಟಿ ಮುಂದೆ ಹೋಗು ; ಹಿಂದೆ ಹಾಕು : ಅಕ್ಕಪಕ್ಕದ ಮರಗಿಡಗಳನ್ನು ಹಿಂದಟ್ಟುತ್ತಾ ರೈಲು ಮುಂದಕ್ಕೋಡುತ್ತಿತ್ತು (ರೂಪಿ).

[ಪಿಂತು$_{2}$ + ಅಟ್ಟು$_{2}$]

**ಪಿಂತಡಿ**, ಪಿಂದಡಿ (ನಾ). ಹಿಂದಕ್ಕೆ ಇಡುವ ಹೆಜ್ಜೆ : 'ಪಿಂತಡಿಯಿಡು' ಪರಾ. ಪಿಂದಡಿ : 'ಪಿಂದಡಿಯಿಡು' ಪರಾ. [ಪಿಂತು + ಅಡಿ]

**ಪಿಂತಡಿಯಿಡು**, ಪಿಂದಡಿಯಿಡು (ಕ್ರಿ). ಹಿಂದೆ ಸರಿ ; ಹಿಮ್ಮೆಟ್ಟು : ನ[ಮ]ಗಾಜಿರಂಗದೊಳು ಪರಿಭವವಾಗಿ ಮುಂಪಡಿಯ ಪಿಂತಡಿಯಿಟ್ಟುದೆ ನಂಮ ಪೂರ್ವ್ವದಾ ಪುರುಷರು ನಾಕಮಾಸಿಗಳಪ್ಪೊಡೆಗೊಳಿಯಿಯ್ಯುವರು

(ಶಾಇ. V. ೪೨-೩೩ : 1228) ; ವಿಸಸನದಲ್ಲಿ ಮುನ್ನಣಡಿಯಂ ಸಲೆ ಪಿನ್ನಡಿಯಿಟ್ಟು ಪೋಗದೊಂದೆಸಕಮನಾನ್ತಮಂಗೆ ಪೆಸರಾವುದು (ಶಾಇ. XX. ೪೭-೪೮ ; ?). **ಪಿಂದಡಿಯಿಡು :** ಇಱಿವಲ್ಲಿ ಮೆಯ್ಸೆಡೆದು ಪಿಂದಡಿಯಿಟ್ಟೊಡಮನ್ಯಕಾಂತೆ ಬಂದೊಡಮಾಳಿಪಿಂದೆ ಸೋಲ್ತೊಡಮಾದಾಗದೆ ಅಂಬುಧಿ ಮೇರೆದಪ್ಪುಗುಂ (ಗದಾಯು. ೧೦-೬). [ಪಿಂತ್ರಡಿ + ಇಡು$_1$]

**ಪಿಂತನೆ** (ಅ). ೧. ಹಿಂದೆಯೇ : ನೆಗಬ್ದರಿಘೂರ್ಜರ ದ್ವಿಪಘಟಾಳಿಗೆ ತನ್ನಯ ಸೂಚಿಯಾನೆ ತೊಟ್ಟಗೆ ಸಮರಾಗ್ರದೊಳ್ ಪರಿಯೆ ಪಿಂತನೆ [ಪಾಠಾಂ. ಣೆ] ಸಂದುವು ರಾಜಪುತ್ರರು (ಗದಾಯು. ೧-೧೬) : ಒಡನೆಯ್ದು ಮೆಲರ್ಗಣ್ಗಳ್ ಬಿಡಿದು ಮನಂ ಪೋಯ್ತು ಮನದ ಪಿಂತನೆ [ಪಾಠಾಂ. ಣೆ] ಧೈರ್ಯಂ ನಡೆಗೊಂಡುದು (ಜಗಾ. ೩-೯೮). ೨. ತಡಮಾಡದೆ : ಸುಹೃತ್ಸ್ನೇಹದಿಂ ಪತ್ತೆಯುಂ ಪಿಂತನೆ ಬಂದೈ ನೀನೆನುತ್ತಮ್ಮೞಿಗೊಳಿ ಕೆಳೆಯನೊಳ್ ಮಾತನಾಡುತ್ತಮಿರ್ದಂ (ಕಾದಂಬ. ೭೯೩).

**ಪಿಂತಪಿಂತನೆ** (ದ್ವಿರುಕ್ತಿ) : ಈ ಚೋದ್ಯಮಂ ನೋೞ್ಪೆನೆಂದಾನುಮಂ ಪಜ ಪಿಂತಪಿಂತನೆ ಪೋದೆಂ (ಶಂಕಶಂ. ೨೨೭-೯). [ಪಿಂತು + – ಅನೆ$_1$]

**ಪಿಂತರ್** (ಕ್ರಿ). ಹಿಂದಕ್ಕೆ ತರು : ಸುಗ್ರೀವಂ ವೀರರ ಸಾಸಕೆ ಪೊಗೞ್ದು ಒಡನೆಯ ಸೀತೆಯಂ ಪಿಂತರ್ಪ ಕಜ್ಜಮನಣೆಗೆಯ್ದು, ಪಲವೆಡೆಯ ವಾನರಂ ನೆರೆಯಿಸಿದಂ (ಅಭ್ಯುಕ. ೩೭-೭). [ಪಿಂ (< ಪಿನ್) + ತರ್]

**ಪಿಂತಿಕ್ಕು, ಪಿಂದಿಕ್ಕು, ಹಿಂತಿಕ್ಕು, ಹಿಂದಿಕ್ಕು$_1$** (ಕ್ರಿ). ೧. ಹಿಂದೆ ಸರಿಸು ; ಹಿಂದೆ ಹಾಕು. ೨. ಮರಳಿಸು ; ಹಿಂದಿರುಗಿಸು : ಕರಿಸಂಘಾತಮುಮಂ ಹಯವ್ರಜಮುಮಂ ಪಿಂತಿಕ್ಕಿ . . . ಧ್ವಜೋತ್ಕರ ಸಂದೋಹಮುಮಂ ಬಿಸುಟ್ಟುಡುಗಿ ಪಿಂಛಚ್ಛತ್ರಮಂ ಪುಶ್ರುಯಾಕರ ವೇಷೋಚಿತರಘ್ಯಹಸ್ತರಿದಿರಂ ಬಂದರ್ ಭಯಭ್ರಾಂತಿಯಿಂ (ಆದಿಪು. ೦೨-೬೮); ಶುಬುವಂ ಪಿನ್ನಿಕ್ಕಿ ಪರಿಯಂ ಮಾಕೂರ್ಗಿಣ್ದು ತಾಗಿ ತಳ್ತಿಱಿದು (ಎಕ. VIII, ಸೊರಬ. ೦೬-೩ ; 1015). ೩. ಕಡೆಗಣಿಸು ; ಅಲಕ್ಷ್ಯ ಮಾಡು : ಭಯಮುಂ ಲೋಭಮುಮೆಂಬ ತಮ್ಮತೆರಡುಂ ಮಾಪಕ್ಕೆ ಪಕ್ಕಾಗೆ ಪಾಟಿಯನೊಕ್ಕಳ್ದನಗೆಯ್ದು ಸತ್ಯತಮುಮಂ ಪಿಂತಿಕ್ಕಿ ಜೋಳಕ್ಕೆ ತಪ್ಪಿಯುಮೀ ಬಾಟ್ಟುದೆ (ಶಂಕಶಾ. ೯-೮೪). **ಪಿಂದಿಕ್ಕು :** ೧. ಪರಿದ್ಯದಿ ಬಲವಮ್ಮನಮೊಲ್ದಲಿಸಿ ಮುನ್ನಣ ಪುಯ್ಯಲ ಪಿನ್ನಿಕ್ಕಿ ಮುನ್ನಾಗಿ ಸಿರಿವಸದ ಹಳಮೆಗೆ ತುಱುವನಿಕ್ಕಿಸಿ ಮಂಗುಟ್ಟು ಬರುತಿಱಿದ್ದೊಡೆ (ಎಕ. XII, ತಿಪಟೂ. ೦೦-೮; ಸು. 930 ?); ಸಂಭ್ರಮಂಬೆರಸು ಮುನ್ನಿರ್ದ ಕುಸುಮಾಶಯನಮಂ ಪಿಂದಿಕ್ಕಿ ಕಂಪಿಸುತ್ತಮೆನಗಿದಿರೆಟ್ದು ಕಾದಂಬರೀದೇವಿಯುಂ ಕಣ್ಣಾರೆ ನೋಡಿ . . . ಸಾಫಲ್ಯಮಂ ಸಾಧಿಸುವೆಂ (ಕಾದಂಬ. ೫೦೯). ೪. ದಾಟು ; ಮುಂದೆ ಹೋಗು: ಗಾಡಿಪಡೆದ ಕಾಡಂ ಪಿಂದಿಕ್ಕಿ ಮೆಲ್ಲಮೆಲ್ಲನೆ ನಡೆವಾಗಳ್ (ಕಬ್ಬಿಗ. ೨೦೯). **ಹಿಂತಿಕ್ಕು :** ೨. ಪಂಕದೇವನಾಯಕನಪರು ಯೆಡೆನಾಡ ಹಿಡಣೆಯಂ ಹಾಯ್ದು ಸೞಿಯುಂ ಜೀವಧನಮನುಂ ಕೊಣ್ದು ಹೋಪಲ್ಲಿ . . . ತಮ್ಮ ಒಡೆಯ ಯೆಡಗಾವುಣ್ಡನು ಸಹಿತಂ ಹರಿದು ಸೞಿಯುಂ ಜೀವಧನವುನುಂ ಹಿಂತಿಕ್ಕಿ ಹಲವು ಕುದುರೆ ಹಲಬರು ವೀರಭಟರುಂ ಕೆಡಪಿ (ಎಕ. VIII, ಸೊರಬ. ೨೨೦-೦೩ ; 1231). **ಹಿಂದಿಕ್ಕು$_1$ :** ೧. ಪಾಂಡ್ಯ ಕೃಕೆಯ ಕೇರಳರ ಹಿಂದಿಕ್ಕಿ ಪಡಿಬಲವಾದನಾ ಭೀಮ (ಕುಮಾಕ. ೩-೦೩) ; ಹಂಸಾರೂಢ ನಾರದನ ಹಿಂದಿಕ್ಕಿ ನೋಡಲಾಕ್ಷಣ ಪುಷ್ಪಕವೇಱದುವು ದೇವಚೂಡಾಮಣಿಯ ಪಟ್ಟಣಕೆ (ಮೋಹತ. ೦೩-೦೯). ೫. ಸೋಲಿಸು ; ಹಿಮ್ಮೆಟ್ಟಿಸು: ತರ್ಕಶಾಸ್ತ್ರದಲೆಸೆವ ವಾಕ್ಯಗಳಕ್ಕಜಗಳಿಂದನ್ಯರನು ಹಿಂದಿಕ್ಕಿ . . . ಸೊಕ್ಕಿನಲಿ ಬೆರತಿಹರಿಗೆಂದಿಗು ಪಕ್ವಮಪ್ಪುದೆ ಮನವು (ಗಗತಾ. ೦೩-೦೯). ೬. (ಆಲಂ) ಬೆನ್ನಿಗೆ ಇಟ್ಟುಕೊಳ್ಳು : ಕಾಪಾಡು : ರಕ್ಷಿಸು : ನಿನ್ನ ಬಾಂಧವಜನಸಹಿತ ಹಿಂಡುವೆನು ಹಿಂದಿಕ್ಕುವನ ತೋಱು (ಕುಮಾಕ. ೯-೦೮).

**ಹಿಂದಿಕ್ಕಿಕೊಳ್ಳು** = ೧. ಕಾಪಾಡು ; ರಕ್ಷಿಸು : ನಿಕ್ಕ ಮಾತೇಕಿನ್ನು ನೀ ಹಿಂದಿಕ್ಕಿಕೊಂಬರೆ ಕೊಲುವನಾವನು (ಕುಮಾಕ. ೧-೨೨) ; ಸಿಕ್ಕದಿನ್ನಲ್ಲಿಗೆ ಪೋದಪನವನ ಹಿಂದಿಕ್ಕಿಕೊಂಬರಸುಗಳುಂಟೆ (ಕುರಾಶಾಂ. ೧೮-೧೩೦) ; ಎಕ್ಕತುಳದಲಿ ತನ್ನನೇ ಮುಱಿಯೊಕ್ಕು ನೀನಿರು ಸಾಕು ತಾ ಹಿಂದಿಕ್ಕಿಕೊಂಬೆನು ತಾಯೆ (ಶಿಶಾಗ. ೩-೦೩-೦೬). ೨. ಕಾಣದಂತೆ ಬಚ್ಚಿಡು : ತನುಮನಧನವ ಹಿಂದಿಕ್ಕಿಕೊಂಡು ಮಾತಿನ ಬಣಬೆಯ ಒಳಲೊಟ್ಟೆಯ ನುಡಿವರು ನೀವೆಲ್ಲ ಕೇಳಿರೆ (ಬಸವ. ೨೦೩). [ಪಿಂತ್ರ$_2$ + ಇಕ್ಕು$_1$]

**ಪಿಂತಿರಿಸು, ಪಿಂದಿರಿಸು. ಹಿಂದಿರಿಸು** (ಕ್ರಿ). ೧. ಹಿಂದುಗಡೆಯಲ್ಲಿ ಇರುವಂತೆ ಮಾಡು ; ಹಿಂಭಾಗದಲ್ಲಿ ಇರಿಸು : ನೂರ್ವರ್ ತಮ್ಮಂದಿರುಮಂ ಪಿಂತಿರಿಸಿ ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಮಂ ಮುಂತಿರಿಸಿ (ಶಂಕಶಾ. ೯-೨೮ ವ) ; ತನಗಾಗಳ್ಪೊಡಮಟ್ಟಳಂ ಪದಪಿನಿಂ ಪೊಣ್ಮುತ್ತ ಬಾಯಿತ್ತ ಬಾಯೆನುತಂ ತನ್ನ ಕಲಕ್ಕೆ ಕಾಂತೆ ಕರೆದಾದಂ ಭ್ರಾಂತಿಯಿಂದಂ ಸಖೀಜನಮೆಲ್ಲಂ ನಡೆನೋಡೆ ಪಿಂತಿರಿಸಿಕೊಂಡು (ಕಾದಂಬ. ೨೪೦). ೨. ಹಿಂದೆ ಬಿಟ್ಟು ಹೋಗು : ಬೞಿಕಂತಿಳೇಶ ಪಿಂತಿರಿಸುವ ಮೆಯ್ಯ ಪಿಂತೆ ನೆಟಲಿರ್ಪುದೆ ಬಾರದೆ ಮಾಣಮೆಂದು ಪೊಣ್ಡರಸಿಯರೇಱಿದರ್ ನೃಪನ ಕೂಡೆ ಪಲರ್ ಪಿರಿಯಂದಣಂಗಳಂ (ಅಪಕಾ. ೪-೨). **ಪಿಂದಿರಿಸು :** ೨. ಇರಿಸಲ್ವೇಡಿರ್ದರಂ ಪಿಂದಿರಿಸಿ . . . ಎಲ್ಲಿಯುಂ ನಿಲ್ಲದೆ ಕೆಲದಿವಸಕ್ಕಯ್ದಿದಂ ಪದ್ಮಪತ್ರೋತ್ಕರಕಾಂತಿಪ್ರಚ್ಛದಾಚ್ಛಾದಿತಜಲ ಮಾನಿಪಚ್ಛೋದಮಂ ಸಾರ್ವಭೌಮಂ (ಕಾದಂಬ. ೬೬೦). **ಹಿಂದಿರಿಸು :** ೨. ತನ್ನೊಡತಣ ಶಬರರು ಹಿಂ[ಪಾಠಾಂ. ಪಿಂ]ದಿರಿಸಿಯೊರ್ವನೆ ಬರುತ (ಬಸಪು. ೧೮-೩). [ಪಿಂತ್ರ$_2$ + ಇರಿಸು]

**ಪಿಂತಿರುಗು** 'ಪಿಂದಿರುಗು' ನೋ.

**ಪಿಂತಿಲ್, ಪಿತ್ತಲ್. ಪಿತ್ತಿಲ್, ಹಿತ್ತಲ್, ಹಿತ್ತಲು, ಹಿತ್ತಿಲ್. ಹಿತ್ತಿಲು** (ನಾ). ೧. ಹಿಂದುಗಡೆ ; ಹಿಂಭಾಗ : "ಪೆಡೆಮೆಟ್ಟು, ಪೆಱಗು. ಪೆಱತು. ಪಿಂತಿಲ್ — ಈ ೪ ಪಿಂಗಡೆಗೆ ಪೆಸರ್" (ಶಶಾ. ೬೩-೪೩೩); "ಪೆಱತು ಪಿಂಗಡೆ ಪೆಡಂಮೆಟ್ಟುಱಿ ಪೆಱಗು ಪಿಂತೆ ಪಿಂತಿಲೆನೆ ಹಿಂದೆನಿಕುಂ" (ಕಶಕಂ. ೦೯೬). **ಪಿತ್ತಲ್ :** ೧. ಬಲಿನಗರಕ್ಕೆ ಮೂಡಗಿನಿಸಿದಾ ತ್ರಿಪುರಾಂತಕ ದೇವತಾಲಯಮಾವೞಿ ಪತಿಸಿಪ . . . ಪಿತ್ತಲಸೆತಯಿಲ್ಲದಲ್ಲುಗುತಮಿಱ್ದದ ನಿಕ್ಷೆಪ (ಶಾಇ. IX-i, ೦೭೦-೩೬ ; 1092). ೨. (ತರಕಾರಿ, ಹೂಗಿಡಗಳು ಮುಂತಾದುವನ್ನು ಬೆಳೆಸುವ) ಮನೆಯ ಹಿಂದಿನ ಜಾಗ : ಮನೆಯ ಹಿಂಭಾಗದ ಸ್ಥಳ : ಮುನಿಪನ ಬರವಂ ದೂರದೊಳನುಸಯದಿ ಕಂಡು . . . ನಿಲಿಸನೆ ವನಜಾನನೆ ಪಿತ್ತಲತ್ತಲೋಡಿದಾಗಳ್ (ರಮಾಸ್ಮ. ೪-೧೧೦) ; ಶಿವಲಿಂಗಯುಜನಕೊಪ್ಪುವ ಪೊಸ ಕಪ್ಪುರಲಂ ತಿಱಿಯಲ್ಪಿತ್ತ[ಪಾಠಾಂ. ತ್ತಿ]ಲನಿರದೆಯ್ದು ವಿನೋದದಿಂದೆ ಪೂಗೊಯ್ದುಪನೋ. (ವೃಕಾ. ೩೩-೨೮). **ಪಿತ್ತಿಲ್ :** ೨. ಪದಿಂಬರ್ ದೇವಡಿತಿಯರ್ಗಂ ತಮಗಂ ಮನೆಗಂ ಅಂಗಣಕ್ಕಂ ಪಿತ್ತಿಲ ಬಿಟ್ಟಿಗಂ . . . ಕೂಚಿಭಟ್ಟಾರರ ಕಾಲಂ ಕರ್ಚ್ಚಿ ಧಾರೆಮಾಡಿಱಿದು ಬಿಟ್ಟು ಕೊಟ್ಟರ್ (ಎಕ. IX, ಶಾಮರಾ. ೦೮-೯ ; ಸು. 1000?) ; ಮನೆಯ ಪಿತ್ತಿಲೊಳೇತನಂ ಪಿಡಿದೊಯ್ದು ಭೋಂಕನೆ ಕೊಂದು . . . ಪೂಟ್ಟುದೆಂದು ಕಷಾಯದಿಂ ಬರೆದೋಲೆಯಂ (ರಮಾಸ್ಮ. ೧೦-೧೬೨) ; ಎಳೆಯಳ್ ಪಿತ್ತಿಲ ಬಾಟಿಗಳಲೆಯೊಳ್ . . . ಅಗ್ರಂ ತಳಿರೆಸೆಯುತಿರ್ಪ ಕದಳೀದಳಮಂ ಮೆಲ್ಪನೆಯ ಚಿವುಟ ತಂದಳ್ ಬೇಗಂ (ರಕಳು. ೦೨-೧೨೮). **ಹಿತ್ತಲ್ :** ೨. "ಹಿತ್ತ[ಪಾಠಾಂ. ತ್ತಿ]ಲಂ ನಿಮ್ಮೆಟಮಂದೆಂಬುದು" (ಮಂಗರಾ. ೧೪೧-೧೬) ; ಹಿತ್ತಲ ದೆಸೆಯೊಳ್ ಬಿಸದೋಡುವಾಕೆ ಕಾಣದೆ ಕಡೆದಳ್ (ರಮಾಸ್ಮ. ೨-೪೪). **ಹಿತ್ತಲು :** ೨. ಮನೆಮನೆಯ ಹಿತ್ತ[ಪಾಠಾಂ. ತ್ತಿ]ಲುಗಳಿಡುಮಾಡುಕನೊಳಗೊಬ್ಬನೆ ಸಾರ್ದ (ಬಸಪು. ೩೦-೩) : ಗಂಗಾಸಾನಿ ಸುಭಗೆಯನ್ನು ಜಾಲುಮೆಯಿಂದ

ಹಿತ್ತಿಲಿಗೆ ಕರೆದುಕೊಂಡು ಹೋದಳು (ಗಂಗಾಜಾ. ೨೨) ; ನಮ್ಮದೇ ಆದ ಮನೆಯಿದೆ, ಹಿತ್ತಿಲಿದೆ, ತೋಟವಿದೆ (ಮೂರುದಾ. ೧೨೩) ; ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಿಲಿಗೆ ಹೋಗಿ ಮೊಳ ಹಾಕಿದ (ಗಾದೆ) ; ಹಿತ್ತಿಲ ಗಿಡ ಮದ್ದಲ್ಲ, ಮನೆಹೆಂಡತಿ ಮುದ್ದಲ್ಲ (ಗಾದೆ). **ಹಿತ್ತಿಲ್** : ೧. ಬಡಗಣ ಕೊಪ್ಪಲ ಹಿತ್ತಿಲಲು ... ಹಿರಣ್ಯಪೂರ್ವ್ವಕವಾರಾಧಿಸಿ ಸರ್ವ್ವನಮಸ್ಯವಾಗಿರೆ ಪಡೆದು ಬಿಟ್ಟರ್ (ಕ್ನಾಇ. V. ೬೩೦-೪೩ ; 1162). ೨. "ಹಿತ್ತಿಲಲ್ಲಿಯುಂ ನಿಮ್ಮಿಟವೆಂಬುದು" (ಹರಾಚು. ೧೩೭-೩೦) ; ಪಕ್ಕಿದ ಗಂಡರ ಚಿತ್ತವ ಕಿಡಲೀಯದಿತ್ತುದೇ ಕೋಟಿ ತನಗೆಂಬ ಸೂಳೆಯ ಹಿತ್ತಿಲಲ್ಲಿರದೆ ಸುರಭೂಜ (ಕೀಲಾಪ. ೨-೩೫). **ಹಿತ್ತಿಲು** : ೨. ನಿನಗೆ ಕರವೆತ್ತಿ ಪೊಡೆವಡುವ ಭಕ್ತ ಮನೆಯ ಹಿತ್ತಿಲ ಬೇಲಿಯಾಗಿಪ್ಪೆನ್ನೆ ರಾಮನಾಥಾ (ದೇವಾಪ. ೨೯-೪೯) ಹಿತ್ತಿಲೊಳ್ಸಂಜೀವನೌಷಧಿ ಬೆಳೆದು ರಂಜಿಸುತ್ತಿರಲು (ಸೌಂದಪು. ೦೫-೬೭) ; ಮನೆಯೊಳ್ ಸುರಧೇನು ಕಟ್ಟಿಯುತಿರ್ಪುದು...ದಿವಿಜಾನೋಕಹವೋವದೆ ಕಂಡುವುದು ಬೇಡಿದುದಂ ಹಿತ್ತಿಲೊಳು (ಜಯಕಾ. ೦೨-೩೭) ; ಹಿತ್ತಿಲಲಿ ಮರ ಹಾರುವನು ಅಳಲಿನಂತೆ (ಕಲಪು. ೦೦-೯).

**ಹಿತ್ತಿಲ ವನ, ಹಿತ್ತಿಲ ಬನ, ಹಿತ್ತಿಲ ವನ** = ಮನೆಯ ಹಿಂಭಾಗದಲ್ಲಿರುವ ತೋಟ ; ಕೈದೋಟ : ಶ್ರೀವೀರಜಿನೇಂದ್ರಸಮವಸರಣಂ ಬಂದೀ ಆವಾಸದ ಹಿತ್ತಿಲ ವನದೊಳಿವರಿಯೊಳ್ ನೆಲಸಿತಖಿಲಸುರಗಣಸಹಿತಂ (ಕನ್ನಾಕು. ೩೦ ಕೃಯೋ) ; ಕೃಷ್ಣನವನ ಕರಕೊಂಡು ಹಿತ್ತಿಲ ಬನಕೆಯ್ದಿ ತೊಂಡುಗೆಡೆವ ಗಿಳಿಯಿಲ್ಲದ ಠಾವಲಿ ಮಂಡಿಸಿದನು ರಾಯಕುವರ (ಹರಿಕ. ೩-೩) ; ಆ ತರಳಾಕ್ಷಿ ಹಿತ್ತಿ[ಪಾಠಾಂ. ತ್ರ]ಲ ವನಕವಳನಂದು ತುರದಿಂದೆಯ್ದಿಸಿದಳು (ಕುಕಾಠಾಂ. ೨೩-೬೬). **ಹಿತ್ತಲ ಕಾಯಿ** = ಮನೆಯ ಹಿಂಭಾಗವನ್ನು ಕಾಯುವವನು : ಎಂದಿನಂತೆ ಅವನಿಗೆ 'ಹಿತ್ತಲ ಕಾಯಿ' ಪದವಿ ಕಾದಿರುತಿತ್ತು (ಬಾಪುಕ. ೨೬). **ಹಿತ್ತಲ ಬಾಗಿಲ್** = ಮನೆಯ ಹಿಂಭಾಗಕ್ಕೆ ಇರುವ ಬಾಗಿಲು; ಹಿತ್ತಲಿಗೆ ಇರುವ ಬಾಗಿಲು ; ಹಿಂಬಾಗಿಲು : ತನ್ನರಮನೆಯ ಹಿತ್ತ[ಪಾಠಾಂ. ತ್ರಿ]ಲ ಬಾಗಿಲಲಿ ಲಿಂಗಪ್ರಸಾದವನು ಜನನಿ ತಂದವನಿಯಲಿ ಸುರಿಯಲು (ಜಸಪು. ೬೦-೨೦). **ಹಿತ್ತಲ ಮನೆ** = ಮನೆಯ ಹಿಂಭಾಗದ ಅಂಗಳದಲ್ಲ ಕಟ್ಟಿರುವ ಮನೆ : ಸಿಲುಕಿತಲ್ಲಾ ನೀರೆನುತ ಕೋಮಳೆ ತವಕದಿಂ ತನ್ನ ಕೈಗೊಟ್ಟಳಲುತಂ ಹಿತ್ತ[ಪಾಠಾಂ. ತ್ರಿ]ಲ ಮನೆಗೆವೊಡಗೊಂಡು ಕಾನೆಯ್ದಿ (ಜಸಪು. ೪೨-೩೦) ; ಅಂಗಳದಿಂದ ಹಿತ್ತಲ ಮನೆಯವರೆಗೂ ಗಡಿಬಿಡಿ ಆರಂಭವಾಗಿಬಿಟ್ಟಿತ್ತು (ಕೃಪಿ. ೯) ; ತಾಯಿಯೂ ಮಗಳೂ ಆಗ ಕರೆದ ಎರಡು ದೊಡ್ಡ ಮಡಿಕೆ ಹಾಲನ್ನು ಹೊತ್ತುಕೊಂಡು ಹಿತ್ತಲ ಮನೆಗೆ ಹೋಗುತ್ತಾರೆ (ಮಲೆನಾ. ೨೭). **ಹಿತ್ತಲು ಗುಡಿಸು** = ನಿಂದಿಸು ; ದೂಷಿಸು : ನಿಮ್ಮ ನಿಮ್ಮ ಭಾವನ ಜಗಳದಲ್ಲಿ ನೀವು ನಮ್ಮ ತಂದೆ ತಾಯಿ ಹೆಸರು ಹಿಡಿದು ಹಿತ್ತಲು ಗುಡಿಸಬೇಡಿ (ಜಕರಾ. ೨೧೩). **ಹಿತ್ತಿಲು ಮನೆಯ ಊಳಿಗ** = ಹಿತ್ತಲ ಮನೆಯನ್ನು ಕಾಯುವ ಕೆಲಸ : ಅರಮನೆಯಲ್ಲಿ ಪಮುಖದೊಳು ನಿತ್ಯಕಟ್ಟಳೆಯಲ್ಲಿ ನಡೆಯುವ ಊಳಿಗಗಳು . . . ರಜದ ಊಳಿಗ, ಹಿತ್ತಿಲು ಮನೆಯ ಊಳಿಗ (ಮಹಾವಾ. I. ೪೩).

[ಪಿಂತು + – ಇಲ್ಲ್. / ತುಳು. ಪಿತ್ತಿಲ್, ಬಿತ್ತಿಲ್]

**ಪಿಂತು, ಪಿಂದು, ಹಿಂದು₁** (ನಾ). ೧. ಹಿಂಭಾಗ ; ಹಿಂಬದಿ : "ಬೆಂಗಡೆಗೆ ಪಿಂತೆನಿಕ್ಕುಂ" (ಶಕರ. ೬೩) ; ಕಿಚ್ಚಿನುರಿಯುಂ ಪೊಗೆಯುಂ ದುಷ್ಪ್ರಾಪ್ಯದ ಮುಂತುಂ ಪಿಂತುಂ ಬೆಟ್ಟುಮನೇಱುವುದುಮಿೞಿವುದುಂ (ಧರ್ಮಾಮೃ. ೯-೧೩೨) ; ತುಕಾರಕ್ಕೆ – ಮುಂದು, ಮುಂತು ; ಪಿಂದು, ಪಿಂತು (ಶಮುದ. ೦೨೦ ಕೃಯೋ). ೨. ಹಿಂಜರಿಯುಮಿಕೆ: ವೀರದಿನೊಡ್ಡಪ್ಪವ ಸಾಮಂತ ಜಗದಾಳ ಮಲೆಯ ತೊತ್ತುಳಿದುಳಿವ ಯತ್ತಿದ ಮೊನೆಗೆ ಮುನ್ನು ಕಡಿಕಾಳಗಕ್ಕೆ ಪಿನ್ನು (ಎಕ. XII, ತಿಪಟೂ. ೦೦೯-೨೪ ; 1130). **ಪಿಂದು** : ೧. ಎಡಗಲಱಿಯದೆ ಜಣ್ಪುಕಮ್ಮಗುಬ್ಬಂ ಬರಲಣಮಱಿಯದೆ ತಪ್ಪಂ ಪಿನ್ದಂ ತೆಱನನಱಿಯದೆ . . . ಪೊಯಿಸಿದನು (ಎಕ. II. ೦೪೩-೦೩೮ ; 982) ಒಂದಟ ಪಿಂದೊಂದಡಸಿ ಗುಡುಗುಡನೆ ಸುರಿವಾನಂದಜಲಬಿಂದುಗಳೆಸೆ ನಿರತಿಶಯಹರ್ಷಮಂ ಪ್ರಕಟಿಸುತ್ತಿರಲ್ (ಕಾಪಂಪೂ. ೮೬೫) ; ಪಾರ್ದು ಸರುಪಂ ಕಟ್ಟೆಂಬ ಮುಟ್ಟೆಂಬ ಪಿಂ[ಪಾಠಾಂ. ಬಿ]ವಡಸೆಂಬೊತ್ತರಿಸೆಂಬ . . . ಪುಳಿಂದವೃಂದನಿನದಂ ಪೊಣ್ಮಿತ್ತು ಕಾಂತಾರದೊಳ್ (ಗಿರಿಕ. ೧-೮೨). **ಪಿಂದು₁** : ೧. ಪೆಡೆ ಗಂಗೆಯ ಸ್ಥಾನ ನೊಸಲು ಚಂದ್ರನ ಸ್ಥಾನ ಹಿಂದು ಸೂರ್ಯನ ಸ್ಥಾನ (ಶಿಸಪ. ೮೯೪) ; ಹಿಂತ ಬಿಟ್ಟಿಂದೆಂದು ಹಿಂದಿನಿಂ ಬಹುವಲ್ಲ ಕಂಡವರ ಪೊಲಕೆಳೆವ ತೊಂಡುವದನವು (ಕಾಲಾರ. ೫೦-೦೫೨). ೨. ಕಡ್ಲೆಗೆ ಮುಂದು ಕಡಿವಾಣಕ್ಕೆ ಹಿಂದು (ಗಾದೆ). ೩. ಕೊನೆಯದು ; ಅಂತ್ಯ : ನೀರ ಕ್ಷೀರದಂತೆ ನೀನಿಪ್ಪೆಯಾಗಿ ಆವುದು ಮುಂದು ಆವುದು ಹಿಂದು ಎಂದಱಿಯೆನು (ಮಹಾದೇ. ೩. ೦೩-೧೦) ; ಮುಂದನಱಿಯದ ಗುರುವು ಹಿಂದನಱಿಯದ ಶಿಷ್ಯ (ಸರ್ವಜ್ಞ. ೮೪). ೪. ಹಿಂದೆ ನಡೆದುದು : ಹಿಂದ ನೆನೆಯಾ ಖೂಳ . . . ಎನುತ ಹೆಟ್ಟಿಯಂಬಿಂದ ಕಡಿದಿಳುಹಿದನು ಪಾಂಚಾಲಾಧಿಪನ ಶಿರವ (ಕುವ್ಯಾದ್ರೋ. ೦೭-೬೬).

**ಪಿಂತಣ್, ಹಿಂದಣ್** = ಹಿಂಭಾಗ ; ಹಿಂಬದಿ :- ಅಕ್ಕುಳಿಸಿತೆಂದುಂ . . . ಪಿಂತಣ್ಗೆವಂದುದೆಂದುಂ . . . ಪಾರೆಗೆಯ್ದೆಂದುಂ — ಈ ೧೩ ಅಪಸರಣಕ್ಕೆ ಪೆಸರ್ (ಶಶಾ. ೬೨-೬೪೯); ಒಳಸೋರ್ದುದು . . . ಮೆಯ್ದೆಗೆದುದು ಘಟಾಳಿನೆ ಪಿಂತಣ್ಗೆವಂದುದುಂ ಜಗುಱಿದುದುಂ (ಶಪಂಕಾ. ೨೫೨); ಬೆಜಗಡರಿ ಮುಖದಿರುಹಿ ಹಿಂದಣೆನಿಱಿದ ಕರ್ಣನ ನೋಡಿ ಮುಖದಲಿ ಕಿಱುನಗೆಯ ಕೇವಣಿಸಿ (ಕುವ್ಯಾದ್ರೋ. ೬-೩೩) ; ಕರ್ಣ ಹಿಂದಣಿಲಿಚ್ಚು ಕೂರಂಬಿನೊಳ್ದನುವ ಖಂಡಿಸಿದನು (ಕುರಂಗ. ೫೨-೩೦). **ಪಿಂತಣ, ಪಿಂತಳ, ಪಿಂದಣ, ಹಿಂದಣ, ಹಿಂದಳ** = ೧. ಹಿಂಭಾಗಕ್ಕೆ ಇರುವ ; ಹಿಂಬದಿಯ : ತನ್ನರಸಿ ಚಿಕ್ಕಟ್ಟಿಗೆ ಬಡಗನ್ನಿಕೆಱಿಯ ಬಡಗಣ ಬದರಿಯ ಪಿನ್ನಣಕಟ್ಟಿ ಯುಮ್ಮಿಟ್ಟ (ಎಕ. VII, ಶಿವಮೊ. ೯೬-೨೨ ; ಸು. 915); ಇರ್ಕೆಲದ ಮುಂದ್ದಣ ಪಿನ್ದಣಮಣ್ಡಳಕ್ಕೆ ಭೀಷಣಮತಿರೌದ್ರಮದ್ಭುತಮುಗುರ್ವ್ವಿನ ತೇಜದಳುರ್ಕ್ಕೆ ಧಳ್ಳನ (ಕ್ನಾಇ. XI-i, ೫೨-೯ , 1007) ; ಹಿಂದಡೆಕೊಡ್ಡನು ಝಾಡಿಸಿದವೀ ಕ್ಷೇಮಧೂರ್ತಿನೃಪಾಲನಾನೆಗಳು (ಕುವ್ಯಾಕ. ೨-೦೨) ; ನಿಂದನೈ ಬಳಿಕೀತನಾ ಹೆಬ್ಬಂದಿಯಿದಿರಲಿ ಮೆಲ್ಲಮೆಲ್ಲನೆ ಹಿಂದಣಡಿಗಳಲಂಡುಗೊಂಡುದು ಶಂಭುಕಾಸುರನ (ಕೊರರಾ. ೩-೩-೨೦). ೨. ಹಿಂದಿನ ; ಮೊದಲಿನ : ಪಿಂತಣ ಭವದೊಳಾನೆಸಗಿದ ಪಾತಕಸಂತತಿಯೊರ್ಮೊದಲೊಳಗೆ ಭ್ರಾಂತಿ ಪಡೆದು ಕೆಡಲೆಂದೆಟಗುವೆ (ಅಂಜತ. ೦-೯) ; ಖಚರೇಶನ ಪಿಂತಣ ಪುಣ್ಯದ ಫಲದಿಂ . . . ವಿಮಲಚಾರಣರೆಯ್ತರಲು (ಶಾಂತೀತ. ೨-೯೯) ; ಪಿಂತಣ ಕಾಲದಲ್ಲಿ ಭೂಮಿಯಂ ಪರಿಪಾಲನೆಗೆಯ್ದ ಭೂಪೋತ್ತಮರ ಮಹಾತ್ಮ್ಯಮಂ ಚೆನ್ನಾಗಿ ಕಿವಿಗೊಳಿಸು (ಧಾರಕಾಂ. ೦೯೪) ; ನೂಂಕುವುದೊಮ್ಮೊಮ್ಮೆ ನರಕಕ್ಕೆ . . . ಒಮ್ಮೆ ಮಾನುಷಕೆ ಪಿಂತಳ ಪಾಪಪಂಕದ ತೀವ್ರವದೆಂತೊ (ಪರಿಕ. ೩-೩೦); ಹಿಂದಣ ಜನ್ಮವ ತೊಡೆದು ಮುಂದಣ ಪಥವ ತೋಱಿದನೆನ್ನ ತಂದೆ (ಮಹಾದೇ. ೬. ೨೯-೪೪) ; ಆ ಜಾಗ, ಹಿಂದಣ ವರ್ಷ ಕುಮಾರಿ ಬೆಳೆದ ತಾವಿನಿಂದ ಮೈಲು ದೂರದ ಇನ್ನೊಂದು ಬೆಟ್ಟದಲ್ಲಿದೆ (ಕುಡಿಕೂ. ೦೦). ೩. ಮೊದಲು ; ಪೂರ್ವ : ಅಲ್ಲಿಗೆ ಮತ್ತೊಂದು ಕಡೆಯಿಂದ ಇನ್ನೂ ಹಿಂದಣದಲ್ಲಿ ಬಂದವರು (ಯಕ್ಷಪ. ೨); ಹಿಂದಳ ಸುಖ ಮುಂದಳ ದುಃಖಂಗಳು ಮುಂದಳ ಸುಖ ಹಿಂದಳ ದುಃಖಂಗಳು ಇವ ತಾ ಸಂಧಿಸಿ ಅನುಭವಿಸಿದಲ್ಲಿ (ಪಾಪೊಮ್ಮ. ೯. ೫೫೬-೨೦). **ಪಿಂತಣಂ** – ೧. ಹಿಂಭಾಗದಲ್ಲಿರುವವನು; ಹಿಂದಿನವನು : (೬). ೨. ಪೂರ್ವ ಕಾಲದವನು : ಅಕಾರಕ್ಕೆ . . . ಪಿಂತಣಂ, ಅತ್ತಣಂ, ಇತ್ತಣಂ (ಶಮುದ. ೨೦೦ ಕೃಯೋ). **ಪಿಂತಣರ್** = ಹಿಂದಿನವರು; ಪೂರ್ವ

ದವರು : ಪಿಂತಣರ ಕಬ್ಬಗಳ ಸೇವ್ಯಮಪ ವನ್ನ್ಯಂ (ಸಂಸಃ. ೬-೦). **ಪಿಂತಾಗು, ಹಿಂತಾಗು, ಹಿಂದಾಗು**=೧. ಹಿಂದೆ ನಡೆದಿರು,—ಘಟಿಸಿರು : ಪಿಂತಾದ ದುಸ್ಸಹಾವಸ್ಥಾಂತರ ಸಂತತಿಯನಾಗಣನುಭವಿಸುತ ಮಿರ್ವಂತಿರ್ದಳ್ ಚೈತನ್ಯಮನಂತಾಗಳ್ ಹರಿಯಿಸಿತ್ತು ಮೂರ್ಛಾವೇಗಂ (ಕಾದಂಸಂ. ೯೨೬). ೨. ಹಿಂದೆ ಉಳಿ : ಹಿಂದೆ ಬೀಳು : ಅದು ಪಿಂತಾಗಿರೆ ಮತ್ತಮೊಂದು ಶರಮೆಯ್ದಿತ್ತಂತದಂ ಪಿಂದುಗೆಯ್ದೊದ ಉತ್ತುಂ ಪೆಜತೊಂದು ಮಾರ್ಗಣಮಮುಂಬಂ ಪಾಯ್ದುದು (ಜಾಶಂ. ೬-೪೦) ; ಲಿಂಗ ಮುಂತಾಗಿ ಮನ ಹಿಂತಾಗಿ ಅಂಗಭಾವವಳಿದು ಅರ್ಪಿಸಿಕೊಳಬಲ್ಲ ಪ್ರಸಾದಿಯು ಪರಮಪರಿಣಾಮವೆ ಪ್ರಸಾದ (ಅದಪ. ೨೩-೬೩); ಪಡುರಥರುರವಣಿಯು ಹಿಂದಾಯ್ತು ರಾಯರ ಗುರುವ ಕಂಡವರಿಲ್ಲನುತ ಕುರುರಾಯ ಚಿಂತಿಸಿದ (ಕುಮ್ಮಾದ್ರೋ. ೬-೫೬). **ಪಿಂದುಮುಂದು, ಹಿಂದುಮುಂದು**=೧. ಹಿಂದಿನ ಭಾಗ ಮತ್ತು ಮುಂದಿನ ಭಾಗ : ಪಿಂದುಮುಂದು [ ಪಾಠಾಂ. ಪಿಂತುಮುಂತು ]ಮನೆಡ ಬಲನುಮಂ ಬೆರ್ಚಿದಂತೆ ನೋಟ್ಟುಮಪ್ಪೊಡಾಗಳ್ ನಿಮಗೆ ಕಪ್ಪಲ್ಪಗೆದು ಬಂದನೆಂದಜಿಯಿಮೆಂದು ಪೇಟ್ದುದುಂ (ಪಂಶಕಂ. ೦೫೨-೩); ಹಿಂದುಮುಂದ ವಗಡಿಸಿದಾ ಮಾದ್ರೇಯ ರವಿಸುತರೊಡಲೊಳಂಬನು ಹೂಳಿದನು (ಕುಮಾದ್ರೋ. ೬-೦೬). ೨. ಅಗುಹೋಗು : ಶಿವಶಿವ ಪಿಂದುಮುಂದೆಣಿ ಸದೆ ಇನಿತುಬ್ಬುವರೆ (ಶಂಶು. ೯೭-೨೩); ಮನೆಗೆಲಸಮಂ ಮಾಣ್ದು ಮೇಣ್ ಮಾಳ್ಪಳವಳು ಕೊನೆಮುಳ್ಗಳಂತಾಗೆ ಹಿಂದುಮುಂದುಗಳೆಲ್ಲ ಕೊನೆದು ಬಾಡಿದ ನಿರತಯಂ ಮಾಲಿಸುವಳು (ಕಾಬಾರ. ೦೦೩-೨೩೫). ೩. ಹಿಂಭಾಗವು ಮುಂಭಾಗಕ್ಕೂ ಮುಂಭಾಗವು ಹಿಂಭಾಗಕ್ಕೂ ಬದಲಾದ ಸ್ಥಿತಿ ; ಏರುಪೇರು ; ಹೆಚ್ಚು ಕಡಮೆ ; ವಿಪರೀತ : ಬಂದ ಶರಣರ ನಿಲವನಜೆದು ಸಂದು ಸಂಶಯವಳಿದು ನಂಬದಿದ್ದರೆ ಹಿಂದು ಮುಂದಾಗಿ ಹೋಹನು ಕಾಣಾ ನಮ್ಮ ಗೊಹೇಶ್ವರಲಿಂಗವು (ಅಕಸಂ. ೨೦೬-೯೭೬); **ಹಿಂದಕ ಮುಂದಕ ಮಾಡಿಕೊಳ್ಳು** = ವಾಂತಿ ಹಾಗೂ ಭೇದಿಯನ್ನು ಮಾಡಿಕೊಳ್ಳು : ಈ ಕಾಳಿನ ಹಿಟ್ಟಲೇ ಮಾಡಿದ ರೊಟ್ಟಿತುಣುಕು ತಿಂದು ಮಕ್ಕಳೆಲ್ಲಾ ಹಿಂದಕ ಮುಂದಕ ಮಾಡಿಕೊಂಡ ನೆಲಪಟ್ಟಿ ಬಿದ್ದಾವರಿ (ಗ್ರಾಮಾಯ. ೦೯೬). **ಹಿಂದಲಿನವರು**=ಹಿಂದಿನ ಕಾಲದವರು ; ಪೂರ್ವಕಾಲದವರು : ಹಿಂದಲಿನವರು ಮಾಡಿರುವ ಕವನಗಳು ಮುಗಿದು ಹೋದರೆ ತಾವೇ ಹೊಸಹೊಸದಾಗಿ ಅಲ್ಲೇ ಕವನಗಳನ್ನು ಗತ್ತಿಗೆ ಸರಿಯಾಗಿ ಹೆಣೆಯುತ್ತಿದ್ದರು (ಜುಟ್ಟುಕ. ೨೨). **ಹಿಂದಲು**=೧. ಹಿಂಭಾಗ ; ಹಿಂಬದಿ : ತಂದೆ ಹೊಡೆಯುವರೆಂದು ಹೆದರಿ ಮನೆಯ ಹಿಂದಲೀಂದ ಒಳಗೆ ಬಂದು ರೂಮು ಸೇರಿದ್ದನು (ಜೂ). ೨. ಬಳಿಕ ; ತರುವಾಯ : ವೃದ್ಧನು ಆ ಸಮಾಚಾರವನ್ನು ಅವನ ಊರಿಂದ ಬಂದಿದ್ದ ಪ್ರಯಾಣಿಕರಿಂದ ಹಿಂದಲಿಂದ ತಿಳಿದುಕೊಂಡಿದ್ದನು (ಕಹಾಕುಂ. ೨). **ಹಿಂದಲೇಟು ಹೊಡೆ**=ಹಿಂಜರಿ ; ಹಿಮ್ಮೆಟ್ಟು : ಮಂಜಯ್ಯನ ಕರೆಗೆಹಿಂದಲೇಟು ಹೊಡೆಯುವುದರಿಂದ ತನ್ನ ಹೇಡಿತನ ಸ್ಥಾಪಿತವಾಗುವುದೆಂದು ಹೆದರಿದ (ಕಪಸಂ. ೨೦೪). **ಹಿಂದುಮುಂದುಗಾಣು**=ದಿಕ್ಕುತೋಚು ; ದಾರಿಗಾಣು: ಸಮುದ್ರಯಾನದಲ್ಲಿ ದಾರಿ ತಪ್ಪಿ ಹಿಂದುಮುಂದುಗಾ ಣದೆ ಪೇಚಾಡುವ ನಾವಿಕರಿಗೆ ಇದೇ ದೈವ (ಕನ್ನೇತಿರ್. ೨೬) ; **ಹಿಂದುಮುಂದು ನೋಡು, ಹಿಂದುಮುಂದೆ ನೋಡು**=೧. "ಅನಿಶ್ಚಯದಿಂದಿರು : ಅರೆಮನಸ್ಸಾಗಿರು; ಶಂಕಿಸು ; ಹಿಂಜರಿ ; ಹಿಂದುಮುಂದು ನೋಡು " (Hesitate. ಇಂಕಂ). ೨. ಎಚ್ಚರಿಕೆಯಿಂದಿರು : ಜಾಗರೂಕನಾಗಿರು : (ಕ). [<ಪಿನ್]

**ಪಿಂತೆ₁** (ನಾ). ೧. ಹಿಂದುಗಡೆ ; ಹಿಂಬದಿ ; ಹಿಂಭಾಗ : "ಪೆಜತು ಪಿಂಗಡೆ ಪೆಡಂಮೆಟ್ಟುಬಿ ಪೆಜಗುಂ ಪಿಂತೆ ಪಿಂತಿಲೆನೆ ಹಿಂದೆನಿಕುಂ" (ಶಬಶಂ. ೦೫೩). [<ಪಿಂತು ]

**ಪಿಂತೆ₂, ಪಿಂದೆ, ಹಿಂತೆ, ಹಿಂದೆ** (ಅ). ೧. ಹಿಂಬದಿಯಲ್ಲಿ ; ಹಿಂಭಾಗದಲ್ಲಿ ; ಹಿಂದುಗಡೆಯಲ್ಲಿ : ಸಿಂಧುರದ ಹಾರದ ಮಾಲೆಯ ಕಾಂತಿ ತಳ್ತು ಪಜ್ಜಳಿಸುವ ಕುಂಭಮಂ ತಳೆದು ಪಿಂತೆಸೆದಿರ್ದುದು ಗಂಧ ಸಿಂಧುರಂ (ಕಾದಂಸಂ. ೫೯೭); ಇವರ್ಗೆ ತಕ್ಕುದು ಮಾಟ್ಪೆನೆಂದಾಗಳ್ ಪೋಗಿ ಚಿಂತಾಸಿದ್ಧಿ ವಿನಾಯಕನ ಪಿಂತೆ ಕುಳ್ಳಿರ್ಪುದುಂ (ಶಂಕಪಂ. ೩೬೨-೦೦); ಇಂತು ನೆರೆದುದು ಚಾತುರಂಗಬಲ ಬಲಿದೆಕ್ಕ ಪಿಂತೆ ಪತಿಹಿತಪತಿ ಸಹಿತಂ ಬರುತ ಛವನತ್ತ (ಚಾಕ. ದೀ. ೬೯-೩). ೨. ಮೊದಲಲ್ಲಿ ; ಪೂರ್ವದಲ್ಲಿ ; ಮುಂಚೆ : ಪಿಂತೆ ಕೆಲಕಾಲದೊಳೊಂದುದಿವಸಂ ನಂದಿ ಭೃಂಗಿ . . . ಗಿರಿಜಾತೆಸಹಿತೀ ಕ್ರಮದೊಳು ಓಲಗಂಗೊಟ್ಟಿರ್ಪ ಸಮಯದೊಳ್ (ಶಂಕು. ೩-೬); ರಾಘವಂ ಪಿಂತೆ ರಾವಣನು ವಧಿಸಿ ವಾಜಿಮೇಧದೊಳ್ಪೂರ್ವರಂ ತಣಿಸಿದಂ (ಕೃಮಿಜಾ. ೨-೨೫); ಬಲಿಯು ದಾನವ ಗೈದ ಚರಿತೆಯನು ಪಿಂತೆ ಕಲಿಯಲಿಲ್ಲವೆ ನೀವು ? (ಕುಕು. ೦೬-೪). ೩. ಪರೋಕ್ಷದಲ್ಲಿ : ಪಿಂತೊರ್ವರು ಬಾಣಾಸಾಸ್ತ್ರನದೆ ಬುದ್ಧಿವಂತರಿಲ್ಲೆಂದಾಡುವರು ಮುಂತಣ ರಾಜಕಾರ್ಯವನುಸಿರುವ ಭೂಪಾಲಂತೆ ಕೇಳೆಂದು ಕೈಮುಗಿದ (ಸೋಶಕ. ೩೬-೩೬). **ಪಿಂದೆ** : ೧. ಅಯ್ಯ ಚಂದ್ರನೆ ನಾಂ ಕಪಿಂಜಲಕ ನೀನೀ ಪುಂಡರೀಕಾರ್ಥವಿಂ ತೆಜದಿಂ ಪಿಂದೆಯಿದೇಕೆ ಬಂದೆ ಗಡ (ಕಾದಂಉ. ೬೦೯); ಪುಟಿಲ ತಣ್ಪಂ ಸಾರುತುಂ ಪಿಂದೆ ನಿಂದಳಿವೃಂದಂ ಬರೆ ಪಾರುತುಂ (ಕೃಕೃ. ೨-೫೯). ೨. ತಪ್ಪನೆಸಗಿದ ಪಿಂದೆ ಜಡಧರಿತನಾಗಿ (ಶ್ರೀಜಾಕು. ೩-೦೪); ಕಾಳೆಗಕ್ಕೆ ಬೆದರಿ ತನ್ನಡಿ ಶರಣ್ಬೊಕ್ಕರೊಡಾಂ ಪಿಂದೆ ಕಂಡಂತೆ ಕಂಡುದಾಸೀನದಿಂ ವರ್ತಿಸೆ (ಜಕ್ಕಾಂಗ. ೬೬-೨೦೯೬). ೩. ಗುರುವಂ ಮುಂದೆ ಪೊಗಟ್ದುದು ಮಿತ್ರರಂ ಬಂಧುಗಳಂ ಪಿಂದೆ ಪೊಗಟ್ದುದು (ಪಂಶಕಂ. ೫೬-೦೬). **ಹಿಂತೆ** : ೧. " ಪಿಂತೆ=ಹಿಂತೆ [ ಪಾಠಾಂ. ದೆ ] " (ಶಬ್ದ. ೨೪೦ ೫೬೪). ೪. ಅನಂತರ ; ತರುವಾಯ ; ಆಮೇಲೆ : ಅಂತಪ್ಪನಂತಕೋಟಿಗಣಂಗಳೆಲ್ಲರಂ ಮುಂತೆ ಸೃಷ್ಟಿಸಿದರಾ ಮನಂತದೇವತೆಗಳಂ ಹಿಂತೆಯು (ಚೆಕ್ಕಶು. ೬-೨೦-೬೬). **ಹಿಂದೆ** : ೧. ಮರ್ಮವನಜಿತು ಮಾಡದ ಭಕ್ತಿ ಸೊಣಗನ ಹಿಂದೆ ಸೊಣಗ ಹರಿದಂತಾಯಿತ್ತಯ್ಯ (ಅದಪ. ೦೦-೦೯); ಯಾವಗಹುದಿದು ಹಿಂದೆ ಬಂದೆಸುಮೀ ವಿಗಡತನ ನಿನಗೆ ಮೆಚಿಪುದು ಕರ್ಣ (ಕುಮಾದ್ರೋ. ೬-೩೪); ದಕ್ಷಿಣಕೆ ನಡೆದುದು ವಾಜಿ ಚಂಪಕಾಪುರಕಂದು ಹಿಂದೆ ಬಹ ಪಡೆ ಸಹಿತ ವಹಿಲದಿಂದೆ (ಕೃಮಿಜಾ. ೦೦-೬೩). ೨. ಇನ್ನು ಪಾನೆತ್ತ ಮಗನಂ ಹಡೆವುದೆತ್ತಲು . . . ಲೋಕಂ ನಗುವ ಮಾತನಾಡಿದಿರಿ ಹುಟ್ಟುವಡೆ ಹುಟ್ಟನೆ ಹಿಂದೆ ಹೇಳೆಂದಳು (ಸಿದ್ಧರಾ. ೦-೪೦); ಹಿಂದೆ ಪರಸತಿಗಾಗಿ ಹಿಡಿವಡೆದ್ದುದು ಭಂಗಿಸುವಲ್ಲಿ ದೃಗುಜಲಬಿಂದುವೊಂದುಂ ಹೊಜಿಮಡದು . . . ಇಂದದೇನು ನಿಮಿತ್ತ ಸಲಿಲಂ ನಿನ್ನ ನಯನದಲಿ(ಜಕು. ೦೯-೩೩); ಎಲವೊ ಕೌರವ ಹಿಂದೆ ವಂಚಿಸಿ ಕಳವಿನಲಿ ಜೂಜಾಡಿ ರಾಜ್ಯವ ಗೆಲಿದ ಗರ್ವವನುಗುಳು (ಕುಮಾದ್ರೋ. ೦೦-೯೯). ೩. ಹಿಂದೆ ಗಳಹುವನಿವನು ಬಾಯಿಗೆ ಬಂದ ಪರಿಯಲಿ (ಕುಮಾಅ. ೦-೦೦); ಹಿಂದೆ ಬಯ್ಯಬಾರದು, ಮುಂದೆ ಹೊಗಳಬಾರದು (ಗಾದೆ). ೪. ಹೊಸ್ಸದೇವರು ಬೆಸಸಲು ಕಾದಿ ಸುರಲೋಕಪ್ರಾಪ್ತನಾದ ಹಿಂನ್ದಾದನ್ತ ಹವರಂ ಲೇಸಾಗಿ ನಡಹುವರು (ಮೈಶಿಂ. ೦೯೬೨, ೩೦-೪; ಹು. 1126); ಪಾರ್ಷ್ಣಿಗ್ರಾಹ—ತಾನು ಹಗೆಯ ಮೇಲೆ ಎತ್ತಿ ಹೋಹಲ್ಲಿ ಹಿಂದೆ ರಾಜ್ಯವಂ ಉಪದ್ರವ ಮಾಡುವವನು (ಕಾಶಾ. ೪) ; ಆ ಬಾಳೇಎಲೆಗಳ ನಡುವೆ ಗಿಡದೊಳಗಿಂದ ಒಂದರ ಹಿಂದೆ ಒಂದು ಹೊಸ ಸುಳಿ ಏಳುತ್ತವೆ (ಮುಂಜಯ.೨-೩೬).

**ಹಿಂದೆ ಕಳುಹು** = ಹಿಂದಕ್ಕೆ ಕಳುಹಿಸು : ವಾಪಸು ಕಳುಹಿಸು : ಬರೆದು ಕೊಡುವೆನು ಸ್ಥಿರ ಚರಾಸ್ತಿಯ ಉಂಬಳಿ ಎಂದುಸುರಿ ಮನತಂದು ಬಿರುಮನ ಕಂದನಹ ಕಡೆಕಂಚಿಯಾ ಒಂದೆಮಳು

ಹಿದ ಹಿಂದೆ ಕಳುಹಿದ ಇಂದುನಾಥಾಧೀಶನು (ಕುಶು. ೨೦-೯೨). **ಹಿಂದೆ ಬೀಳು**=೧. ಹಿಂದೆ ಉಳಿ,—ಆಗು : ಜಗದ ಜೀವನರಥವು ಮುಂದಿರೆ ಹಿಂದೆ ಬೀಳದು ಭಾರತ (ನಂಕಮು. ೩೨-೦೩). ೨. ಹಿಂಬಾಲಿಸು ; ಅನುಸರಿಸು : ಈ ನರಸ ಬಹಳ ದಿನದಿಂದಲೂ ಆಕೆಯ ಹಿಂದೆ ಬಿದ್ದಿರುವುದು ನನಗೆ ಗೊತ್ತಿದ್ದರೂ ವಿಷಯ ಹೀಗೆ ವಿಕೋಪಕ್ಕೆ ಹೋಗುತ್ತದೆ ಎಂದು ಭಾವಿಸಿರಲಿಲ್ಲ (ಡಿವಹಂ. ೯೭). ೩. ಕೆಳಮಟ್ಟದಲ್ಲಿರು ; ಇರು : ಓದಿನಲ್ಲಿ ಈ ಹುಡುಗ ಬಹಳ ಹಿಂದೆ ಬಿದ್ದಿದ್ದಾನೆ (ರೂ). **ಹಿಂದೆ ಮುಂದೆ**=೧. ಹಿಂಭಾಗಕ್ಕೆ ಮತ್ತು ಮುಂಭಾಗಕ್ಕೆ : ಹಿಂದೆ ಮುಂದೆ ಮರಳಿ ಮರಳಿ ಬೆಗಡೊಂದಿ ನಡೆವುತ ಗಾಳಿಯದು . . . ಪೌಳಿಯ ಕಡೆಗೆ ನಸುಸಾರ್ದು (ಚಕೃ. ೨೬-೪೦). ೨. ಆಗುಹೋಗುಗಳನ್ನು ಕುರಿತು: ಈ ಜನ . . . ಅಧಿಕಾರಿಗಳಾಗಿದ್ದ ಪಕ್ಷಕ್ಕೆ ಇಷ್ಟೊಂದು ದಗೆಯಲ್ಲಿ ದೊಡ್ಡ ಗುಂಪನ್ನು ಹೊರಗಟ್ಟುವುದಕ್ಕೆ ಮುಂಚೆ ಇಪ್ಪತ್ತು ಸಾರಿಯಾದರೂ ಹಿಂದೆ ಮುಂದೆ ಯೋಚಿಸುತ್ತಿದ್ದರು (ಕುಪರು. ೯೬೩). **ಹಿಂದೆಮುಂದೆ ನೋಡು**=ಹಿಂದೆಗೆ ; ಹಿಂಜರಿ ; ಅನುಮಾನಿಸು : ಅವರೂ ಉಳ್ಳವರಲ್ಲ. ಅದರಲ್ಲೂ ಹರೆಯದ ಅವಿವಾಹಿತ ಅಬಲೆಯೊಬ್ಬಳನ್ನು ಸಲಹಲು ಹಿಂದೆ ಮುಂದೆ ನೋಡಿದರು (ಕೂಬಿಕಾ. ೩೭) ; ನಮ್ಮನ್ನು ಆಜ್ಞಾಪಿಸಲು ಪ್ರಭುಗಳು ಹಿಂದೆ ಮುಂದೆ ನೋಡಬಾರದು (ತುಳಸೀ. ೦೫೦). **ಹಿಂದೆ ಹತ್ತು**=ಹಿಂದೆ ಬರು ; ಹಿಂಬಾಲಿಸು; ಬೆನ್ನಟ್ಟು : ಕುಜಿಯುಂರವಣಿಸಿ . . . ಅಚ್ಯುತಭವನ ಭವನವಂ ಪುಗಲುಜಿದೆ ವಿಂಡನು ಹಿಂದೆ ಹತ್ತಲು ಮುಜುಗುತ್ತಾಗಳು ಕಿನ್ನರಯ್ಯಂ ಕರುಣದಲಿ ನೋಡಿ (ಚಕೃ. ೨೮-೦೦) ; ಕರೂಪದ ಕೊಬ್ಬಿನವದಿರು ಹಿಂದೆ ಹತ್ತಿದರೆ ಮರಳಬಲ್ಲನೆ ಭೀಮನು (ಕುಮ್ಮಾ. ೬-೨); ತಂದೆಯನು ಕೊಂದವಗೆ ಮೋಹಿಸಿ ಹಿಂದೆ ಹತ್ತಿದಳೆಂದು ಹೆಣ್ಣು ಕೊಡೆಂದು ನಮ್ಮಯ ತಂಗಿಯಿಂದಟ್ಟುವುದುಚಿತವಹುದು (ಶಾಕ್ಕಾ. ೩೦-೦೦). **ಹಿಂದೆ ಹಾಕು**=ಹಿಂದೆ ಉಳಿಯುವಂತೆ ಮಾಡಂ ; ದಾಟು ; ಕ್ರಮಿಸು: ಕಾಡುಮೇಡುಗಳನ್ನು ಹಿಂದೆ ಹಾಕಿ ತೋಡುಗಳನ್ನೂ ಪಾಲಗಳನ್ನೂ ದಾಟಿದರು (ಕಾಬೂರ. ೦೬ ಕಹಾಣಿ). **ಹಿಂದೆ ಹೋಗು**=೧. ಹಿಂದಕ್ಕೆ ಹೋಗು ; ಮರಳು : ಬೋಳನು ದಾರಿ ತಪ್ಪಿ ನಡೆದಿದ್ದನು . . . ಹಿಂದೆ ಹೋಗುವುದೇಕೆ ? ಈ ದಾರಿಯನ್ನೂ ಬಲ್ಲೆನಲ್ಲವೆ! ಎಂದು ಒಂದು ಪಾಲದೆಡೆಗೆ ಬಂದನು (ಕಾಬೂರ. ೦೦ ಕಹಾಣಿ). ೨. ಹಿಂಬಾಲಿಸು ; ಅನುಸರಿಸು : ಅಂದು ಮೈಗೆಟ್ಟವನಿಸುರನಿರುಳೊಂದು ಪಶುವಿನ ಹಿಂದೆ ಹೋಗುತ (ಚಕೃ. ೩೭-೩೨). **ಹಿಂದೇಟು ಹಾಕು**=ಹಿಂಜರಿ; ಅನುಮಾನಿಸು: ಅಷ್ಟೊಂದು ಬಂಡವಾಳವನ್ನು ತಾನೊಬ್ಬನೇ ಸುರಿದು ಸಾಹಸ ಮಾಡಲು ಸ್ವಲ್ಪ ಹಿಂದೇಟು ಹಾಕುತ್ತಿದ್ದನು (ನಿತಲು. ೭೭). **ಹಿಂದೇಟು ಹೊಡೆ**=ಹಿಂದೇಟು ಹಾಕು : ನಾನು ಕೊಂಚವಾದರೂ ಹಿಂದೇಟು ಹೊಡೆಯದೆ ಎಲ್ಲ ಕಾರ್ಯವನ್ನೂ ಮಾಡುತ್ತಿದ್ದೆ (ಅಂಕೂ. ೬೯). [ <ಪಿಂತೆ$_1$ ]

**ಪಿಂತೆಗೆ** ' ಪಿಂದೆಗೆ ' ನೋ.

**ಪಿಂತೊಲೆ** (ನಾ). ಒಲೆಯ ಹಿಂಭಾಗ : ಅಂಗಯಿ . . . ಪಿಂತಿಲ್, ಪಿಂತೊಲೆ (ಕುಡ. ೦೬೩ ಕ್ರಿಯೋ). [ ಪಿಂತು+ಒಲೆ$_4$ ]

**ಪಿಂದಡಿ** ' ಪಿಂತಡಿ ' ನೋ.

**ಪಿಂದಡಿಯಿಡು** ' ಪಿಂತಡಿಯಿಡು ' ನೋ.

**ಪಿಂದಯ್ದು**, ಪಿಂದ್ಯೆದು (ಕ್ರಿ). ಹಿಂದೆ ಹೋಗು ; ಹಿಂಬಾಲಿಸು : ಬಟ್ಟಸಲ್—ಪಿಂದಯ್ದಿ ಪೋಪುದು (ಶಶು. ೬. I. ೬೩). **ಪಿಂದ್ಯೆದು** : ಊರುವೇಗದೊಳುದ್ಬಿ ಮುಂದ್ಯೆದಲಾ ಗಿರಿಯ ಸಾರವತ್ತಾದ ವೃಕ್ಷಗಳೆಲ್ಲಾ ಪಿಂದ್ಯೆದುತೋರಂತೆ ನಿಜಬಂಧುಗಳನು ಬೀಳ್ಕೊಡುವಂತೆ ಮೌಹೂರ್ತ ಮನುಸರಿಸಲು (ಶಂಕಾ. ೩-೦-೨೦).

[ ಪಿಂದು (<ಪಿಂತು) + ಅಯ್ಯು$_1$ (<ಎಯ್ದು) ]

**ಪಿಂದಲೆ**, ಹಿಂತಲೆ, ಹಿಂದಲೆ (ನಾ). ೧. ತಲೆಯ ಹಿಂಭಾಗ ; ಹೆಡತಲೆ : ರಾಹುವದನ ಶಶಿಬಿಂಬದ ಪಿಂದಲೆಯೊಳೆನೆ ತೋರಮುತ್ತಿನ ತಲೆದುಡುಗೆಯಿನೆಸೆದುದಲರ ಸೋರ್ಮುಡಿ ಸಖಿಯಾ (ಕುಶ್ಯ. ೩-೩೭) ; ತಲೆಯ ಪಿಂದು, ಪಿಂದಲೆ (ಕಬ್ಬಾಸ. ೩೯೯ ಕ್ರಿಯೋ). **ಹಿಂತಲೆ** : ೧. ಯಶೋದೆಯ ಹಿಂತಲೆಗೆ ಬಲವಾದ ಏಟು ಬಿತ್ತು (ವಾತ್ಸ್ಯ. ೨೯೩). **ಹಿಂದಲೆ** : ೧. ಹಿಂದಲೆಯನ್ನು ಸರಿಯಾಗಿ ಬಾಚಿಕೊಂಡಿಲ್ಲ (ರೂ). ೨. ಹಿಂಭಾಗದಲ್ಲಿರುವಂತಹುದು : ಹಿಂಬದಿಯಲ್ಲಿರುವುದು : ಬಲಗಡೆಗಿದ್ದ ಹಿಂದಲೆ ಹಟ್ಟಿಯ ಬಾಗಿಲಿಂದ ಬಂಡಿಗಾರರ ಗುಟುರುಗೊರಕೆ ತೂರಿ ಬರುತ್ತಿತು (ಕುಪರು. ೩೯೯). ' ಮುಂದಲೆ ' ಪರಾ.

[ ಪಿಂ (<ಪಿನ್) + ತಲೆ$_1$ ]

**ಪಿಂದಳೆ** (ಕ್ರಿ). ಅನುಸರಿಸು ; ಹಿಂಬಾಲಿಸು : ತಂದೆಯ ಕೆಳೆಯನ ಕಂದಂ ಪಿಂದಳೆದೆಡೆವಿಡದೆ ದೂಳಿಯಾಟಂ ಮೊದಲೆನ್ನಿಂದಮ ಏಟ್ಟಿಗೆ ವಂದಪನೆಂದಿಪನಂ ವೇಪುವಡಿಕುಮುಪ್ರತಿಮಾಂಕಂ (ಚಳಂ. ೫-೯೬).

[ ಪಿಂ (<ಪಿನ್) + ತಳೆ$_1$ ]

**ಪಿಂದಿಕ್ಕು** ' ಪಿಂತಿಕ್ಕು ' ನೋ.

**ಪಿಂದಿರಿಸು** ' ಪಿಂತಿರಿಸು ' ನೋ.

**ಪಿಂದಿರುಗು**, ಪಿಂತಿರುಗು, ಹಿಂತಿರುಗು, ಹಿಂದಿರುಗು (ಕ್ರಿ). ೧. ಹಿಂದಕ್ಕೆ ತಿರುಗು ; ಹಿಮ್ಮುಖವಾಗು : (ಕ). ೨. ಹಿಂದಕ್ಕೆ ತೆರಳು ; ವಾಪಸ್ಸಾಗು ; ಮರಳು : ಮಾಂಡವ್ಯ ಪಿಂದಿರುಗಿ ಪೋಗಿ ಸಲಹಿಕೊ ಶರೀರವಂ (ವಂಕಾರಾ. ೫-೩-೦೦). ೩. ಹಿಂದೆಗೆ ; ಹಿಂಜರಿ : "ಪೆಜಿತೆಗೆದುದಕೆ ಪಿಂದಿರುಗಿತೆಂದಕ್ಕು" (ಕಾವ್ಯ. ೭೦). **ಪಿಂತಿರುಗು** : ೧. ಪಿಂತಿರುಗಿ ನೋಡಲೊ ವಿಶಾಲಾಕ್ಷ ಮೋಹರಸಮಂ ತಾಳ್ದಿ ನುಡಿಸೊ ಸವಿನುಡಿಜಾಣ (ಚಕೃ. ೦೯-೩೭). ೨. ರೋಷದುಃಖದ್ವಂದ್ವದಲಿ ಬೆಂದು ಮಣಿಪುರಕೆ ಪಿಂತಿರುಗಿ ಬಂದಳತಿಭೀಷಣಮನಃಸ್ಥಿತಿಯಲಿ ! (ಚಕ್ರಾಂಗ. ೬೯-೦೭೩೭). **ಹಿಂತಿರುಗು** : ೨. ಇನ್ನು ಮೇಲೆ ನನಗೂ ನನ್ನ ದೊಡ್ಡಿಗೂ ಗತಿ ಯಾರು! ಎಂದು ಅಳುತಾ ತನ್ನ ಊರಿಗೆ ಹಿಂತಿರುಗಿದನು (ಕಿಕಿಂ. VII, ೯). **ಹಿಂದಿರುಗು** : ೧. ಗಣಪತಿ ಹಿಂದಿರುಗಿ ನೋಡಲಾಗಿ (ಮುಂಬಯು. ೯-೬೯). ೨. ಅರ್ಜುನಂ ನೋಡುತಿರಲಾ ಭಾಮೆ ಬಂದವೊಲೆ ಹಿಂದಿರುಗಿ ನಿಬಿಡಕಾಂತಾರದಲಿ ತರುಗುಲ್ಮಪರ್ಣಗರ್ಭಂಬೊಕ್ಕು . . . ಮರೆಯಾದಳಿರದೆ (ಚಕ್ರಾಂಗ. ೬೯-೧೦೯) ; ಜಯಸೇನನು ತಡಮಾಡದೆ ಬೇಕಾದಷ್ಟು ಹೊಂಗೂದಲನ್ನು ಖಡ್ಗದಿಂದ ಕತ್ತರಿಸಿ ತೆಗೆದುಕೊಂಡು ಹಿಂದಿರುಗಿದನು (ಮುಚಿ. ೯೬). [ ಪಿಂ (<ಪಿನ್) + ತಿರುಗು$_1$ ]

**ಪಿಂದು** ' ಪಿಂತು ' ನೋ.

**ಪಿಂದುಗಡೆ**, ಹಿಂದುಗಡೆ$_1$ (ನಾ). ಹಿಂಭಾಗದ ಸ್ಥಳ ; ಹಿಂದಿನ ಭಾಗ : ಪೆಜಗೆ=ಅತ್ತದ ಪಿಂದುಗಡೆಯಲ್ಲಿ, ಇತ್ತಂ=ಇಕಾರಂ ಹುಟ್ಟುವುದು (ಕಮದ. ೦೬೯ ಟೀಕೆ). **ಹಿಂದುಗಡೆ$_1$** : ಪಿಂತೆ=ಹಿಂದುಗಡೆಯಲ್ಲಿ (ಕಮದ. ೯೨ ಟೀಕೆ) ; ತರಕಾರಿ ಬೆಳೆಯಲು . . . ಸ್ಥಳ ಮನೆಯ ಹಿಂದುಗಡೆ ಆದರೆ ಒಳ್ಳೆಯದು (ಅಡುಗೆ. ೦೨೩) ; ನಿಮ್ಮನ್ನೆಲ್ಲಾ ನೋಡಿಕೊಂಡು ಹಿಂದುಗಡೆ ಬರುತ್ತೇನೆಂದು ಬೆಕ್ಕು ಹಿಂದೆ ಹೋಗುತಾ, ತಾನೇ ಹಿಂದೆ ನಿಂತ ಒಂದು ಇಲಿಯನ್ನು ಬಕ್ಕನೆ ಬಾಯಿಗೆ ಹಾಕಿಕೊಳ್ಳುತಾ ಬಂತು (ಕಿಕಿಂ. IV, ೨೭).

[ ಪಿಂದು (<ಪಿಂತು) + ಕಡೆ$_2$ ]

**ಪಿಂದುಗಳೆ**, ಹಿಂದುಗಳೆ (ಕ್ರಿ). ೧. ಹಿಂಜರಿ; ಹಿಂದೆಗೆ; ಹಿಮ್ಮೆಟ್ಟು. ೨. ತಿರಸ್ಕರಿಸು; ಜರೆ ; ಹೀಯಾಳಿಸು : ಕಂದರ್ಪನಂ ಪಿಂದುಗಳೆವಂದವಂ ತಳೆದು ನಿಂದ ರಾಜಪುತ್ರರಿಂದೆ (ರಾಜಕೀ. ೩-೦೯ ವ). **ಹಿಂದುಗಳೆ** : ೧. ನೊಂದವರು ನಿಲಿ ಸ್ವಾಮಿಕಾರ್ಯಕೆ ಹಿಂದುಗಳೆದರು ಮರಳಿ (ಕುಮ್ಮಾ. ೬-೨೯) ; ಈಗಳಾನೆಂತು ರಣಕೆ ಹಿಂದುಗಳೆದಪೆನು (ಕೃಬಾ. ೨೩-೬೬).

೨. ಕೋವಿದರು ಪೇಳೆಂದೆನಲವರ ನುಡಿಯನು ಹಿಂದುಗಳೆಯಲವ್ಮ್ಯದೀ ರಾಮನಾಥನ ಸಂದ ಕಥೆಯನುಸುರಿದೆನು (ಕುಮಾರಾಂ. ೦-೬೬); ಬುದ್ಧಿಯನು ಹೇಳಿದರೆ . . . ಹಿಂದುಗಳೆಯದಿರು ಮಗನೆ (ಹಂಹಾಂ. ೦-೯೯); ಹಿಂದುಗಳೆಯದಿರೆನ್ನ ಮಾತನು (ಕೃಬಿಖಾ. ೨೬-೩೦). ೩. ಅತಿಕ್ರಮಿಸಂ; ವಿಮಾರು: ತರಣಿಯ ತೇರ ತೇಜಿಯ ಹಿಂದುಗಳೆವ ಸಾಸಿರಘೋಟಕಾನ್ವಿತರಥವ ಭರವಸದಿಂದೇಱ ತೆರಳಿದ ಶೋಣಿತಪುರಪತಿ ವಾದ್ಯಘೋಷದಲಿ (ಸೋಹಕ. ೯೦-೩). ೪. ಮುಗಿದು ಹೋಗು; ತೀರು: ತನಗಿಂದು ಮೂವತ್ತಾಱುವತ್ಸರ ಹಿಂದುಗಳೆದವು (ಸಂಹಕ. ೩-೨೨). ೫. (ಸಮಯವನ್ನು) ದಾಟು; ಕ್ರಮಿಸು: ಒಂದೊಂದುದಿನವನೊಂದೊಂದುವರುಷವಾಗಿ ಹಿಂದುಗಳೆದು ರಾಯ ತನ್ನ ಇಂದುಮುಖಿಯ ನೋಡುವ ಕಡುಕಾತುರದಿಂದ ದುರ್ಗಕೆ ತೆರಳಿದನು (ಕುಮಾರಾಂ. ೩೯-೫); ಹಿಂದುಗಳೆದಳು ಬಾಲ್ಯವನು ಪಿತೃಮಂದಿರದಲಿರಲು ಯವ್ವನ ಕಂದೆಱದುದು (ಶಿಹಗ. ೪-೫-೦೦). [ ಪಿಂದು (<ಪಿಂತು) + ಕಳೆ$_1$ ]

**ಪಿಂದುಗೆಯ್** (ಕ್ರಿ). ಹಿಂದೆ ಉಳಿಯುವಂತೆ ಮಾಡು; ಹಿಂದೆ ಹಾಕು: ಬಳೆನಂ ರಾಜ್ಯೋಚಿತಸುಖದೊಳ್ಳಿಲ್ಲಿಯುಂ ಪಿಂದುಗೆಯ್ಕಲಱಿಯದನೆಯ ದೇಂ ಗಳ ಪರಲೋಕದ ಸುಖಮಗ್ಗಳಮೇಂ ಬಲುಪಿಂದೆ ಪಿಂದುಗೆಯ್ವುದು ಗುಣಮೇ (ಶರೇಕ್ಷ. ೯-೬೪); ಅದು ಪಿಂತಾಗಿರೆ ಮಾತ್ರಮೊಂದು ಶರಮೆಯ್ದಿತ್ತಂತದಂ ಪಿಂದುಗೆಯ್ದೊದಱುತ್ತುಂ ಪೆಱತೊಂದು ಮಾರ್ಗಣ ಮಳುಂಬಂ ಪಾಯ್ವುದು (ಕಹಂ. ೪-೯೦). [ಪಿಂದು (<ಪಿಂತು) + ಕೆಯ್$_1$]

**ಪಿಂದುಗೊಳ್**, ಹಿಂದುಗೊಳ್ (ಕ್ರಿ). ಹಿಂಬಾಲಿಸು; ಅನುಸರಿಸು: ಎಯ್ದಿದತ್ತು ತತ್ತರುಣಿಯ ಪಿಂದುಗೊಂಡಖಿಳಬಂಧುಜನಂ ಪಿತೃಮಾತೃ ಸೋದರರ್ (ದಶಳು. ೬-೦೦); ಕಾಮುರ್ಗಿಲ್ಗೆ ಕರ್ಬುವಿಲ್ಲಂ ಕೈವೀಸಿ ಕರೆದು ಕಳುಪಲೊಡನೆ ತಾನುಂ ಸಂಗಡಮಾಗಿ ಪೋಗಿ ಪೊತ್ತಿತ್ತುವ ಗಂಧವಹನ ಪಿಂದುಗೊಂಡು ಮಂಡಳಿಸಿ ಮಱಿಮುಗಿಲಂತೆ ಪಾರ್ವ ಮಾದಪಾಧುಕರ ಪ್ರಕರದಿಂ (ರಾಜಶೇ. ೦-೦೩೫ ವ). **ಹಿಂದುಗೊಳ್**: ಹಿಂದುಗೊಂಡೇ ಬಪ್ಪೆನೆನ್ನ ಸುಕೃತದ ಸುಧೆಯ (ಬಸರ. ೫-೩೨); ಬಂದುದೀ ಮೃಗಪೋತ ಭೀತಿಯ ಮಂದಗತಿಯಾಲಿ ಮೃಗಸುನೇತ್ರಿಯ ಹಿಂದುಗೊಂಡು[ಪಾಠಾಂ. ಹಿಂದನೊಂದ] (ಕೊರಾ. ೩-೯-೨೯); ಒಡೆಯನ ಲಲಿತಮೂರ್ತಿಯನಗಲ ಲಾಱದೆ ಹಿಂದುಗೊಂಡಳುತ ತೊಳಲಿ ಬರುತ (ಶಿಹಗ. ೩-೨-೫೦); ಗೀರ್ವಾಣ ಪತಿನಂದನ ಬಹಳದೇಶವನಪರ್ವತನದೀನದಂಗಳನುತ್ತರಿಸಿ ಕುದುರೆಗಳ ಹಿಂದುಗೊಂಡು ಬರಲು (ಕೃಬಿಖಾ. ೨೯-೬).

[ ಪಿಂದು (<ಪಿಂತು) + ಕೊಳ್$_1$ ]

**ಪಿಂದುಳ್**, ಹಿಂದುಳಿ (ಕ್ರಿ). ಹಿಂದೆ ಉಳಿ,—ನಿಲ್ಲು; ಹಿಂದಾಗು: ಮುಂದಾಗಿ ದಿನಪನುದಯಾನಂದದೊಳಸ್ತಮಯಸಮಯದೊಳ್ ಸಂಜೆಕರಂ ಪಿಂದುಳಿದುದಂತೆ ಕೆಲರೊಡವಂದಾದುದಯದೊಳೆ ಸಾರ್ವರೆಡೆಱೊಳಗಲ್ವರ್ (ಶಾಶ್ಯಹಾ. ೪೯೯ ಪೂದ್ರಕ); ಬಗೆವರ ಬಗೆ ಪಿಂದುಳಿಯೆ . . . ಮುಗಿಲ ಪೊಱೆಯಿಂ ಸುರಿವ ಮುತ್ತುಗಳಂ ಕಾರ ಮುಂಬನಿಯ ತಂದಲೆಂದು ಬಂದು ನುಂಗಲಿಂಗೈಸುವ ಚಾದಗೆಯ ಮಱಿಗಳುಮಂ (ಕಶ್ಯಕಾ. ೨೩೪). **ಹಿಂದುಳಿ**: ಸಕಲೇಂದ್ರಿಯಗಳುಬ್ಬಟೆ ಬಲಿದ ವಿವರುಪಚಾರದಲಿ ಹಿಂದುಳಿದುದುಗ್ರತಪಃಪ್ರಭಾವದ ಬೆಳಗು ನಿಮಿಷದಲಿ (ಕೊರಾ. ೦-೫-೨೫); ನಾವು ನಾಳೆ ಹಿಂದುಳಿಯಬಾರದು ಕದನಕನುವಾಗಿರಲಿ ಪಾಯದಳವೆಂದು ನುಡಿದಂ(ಕೃಬಿಖಾ. ೧೬-೩೦): ಸಭೆಯೊಳು ಮೇಲೆದ್ದು ಕಣೆವನು ಬಹುಭಾಷಿ ಹಿಂದುಳಿವನು ಮಿತಭಾಷಿ (ಇಂಜಾಕ. ೨೦೫-೬೩).

**ಹಿಂದುಳಿದ ಪಂಗಡ**—ಪ್ರಗತಿಗೆ ಸಹಾಯಹೊಂದದಿರುವ ಗುಂಪು: ಮಿಡಲ್‌ಸ್ಕೂಲಿನಲ್ಲಿ ಸ್ಕಾಲರ್‌ಶಿಪ್ಪುಗಳ ಹಂಚಿಕೆ ಹಿಂದುಳಿದ ಪಂಗಡಗಳಿಗೆ ಇವೆಯಲ್ಲ (ಕಂಗಳ. ೧೦೪). **ಹಿಂದುಳಿದ ಪ್ರದೇಶ**—ಪ್ರಗತಿಯಾಗದಿರುವ ಪ್ರಾಂತ,—ಸ್ಥಳ; ಕೆಳಮಟ್ಟದ ಅಥವಾ ಹೀನಸ್ಥಿತಿಯಲ್ಲಿರುವ ಪ್ರದೇಶ: ಹಿಂದುಳಿದ ಪ್ರದೇಶಗಳಲ್ಲಿ ಅಡುಗೆಮನೆಯ ಹೊಗೆಯು ಒಂದು ಜಾಗತಿಕ ಸಮಸ್ಯೆಯಾಗಿರುವುದರಿಂದ . . . "ರಾಜೂಚೂಲಾ" ಅನೇಕ ದೇಶಗಳಲ್ಲಿ ಜನಪ್ರಿಯವಾಗುತ್ತಿದೆ (ಅಹುಗ.೨೨).

[ಪಿಂದೆ (<ಪಿಂತೆ$_2$) + ಉೞ್$_1$]

**ಪಿಂದೆ** ' ಪಿಂತೆ$_2$ ' ನೋ.

**ಪಿಂದೆಗೆ**, ಪಿಂತೆಗೆ, ಹಿಂದೆಗೆ (ಕ್ರಿ). ೧. ಹಿಂದಕ್ಕೆ ಸರಿ; ಹಿಂಜರಿ; ಹಿಮ್ಮೆಟ್ಟು: ಪೊಗುವ ಕೊಡಂಕುಮೆತ್ತುವ ಬಿದಿರ್ಚುವದಿರ್ಚುವ ಪಾಯ್ವು ಪೊಯ್ವ ಪಿಂದೆಗೆವ ಮಾರಲ್ಪ ಮೇಲ್ವರಿವ . . . ಬಿನ್ನಣಮೊಪ್ಪೆ ಪಗಲ್ಪು ಕಾದಿದರ್ (ಕಹಂ. ೪-೭೪); ರಾಯನ ನುಡಿಗಾನು ವಿನಯಗೂಡಿ ಪಿಂದೆಗೆದಿರೆ ಪಟ್ಟದರಸಿ . . . ಕಟ್ಪಾಣೆ ಪೆಣ್ಮಣಿಯೆ ಬಾರೆಂದು ಮುಂದಕೆ ಬರಿಸಿದಳು (ಹರಿ. ೦-೨೬). **ಪಿಂತೆಗೆ**: ೧. ಯುಕ್ತಾಯುಕ್ತವಿವೇಕಕ್ಕೆ ಪಿಂತೆಗೆದು ಉನ್ಮತ್ತನಂತಚ್ಚಬೆಳ್ದಿಂಗಳೊಳೊಯ್ಯನೊಯ್ಯನೆ ಬರುತಿರ್ದನನಾಂ ದೂರದೊಳ್ ಕಂಡು (ಕಾದಂಅ. ೫೬೫); ಅತಿಭೀತಿಯಿಂದನುಗೆಟ್ಟು ಪಿಂತೆಗೆಯದೆ ಮಿತಿಮಿಱ ಮೇಲುಮರಿಯದೆ . . . ಪತಿಸೇವೆಗೈದು ಬಾಳುವುದು (ಹರಿ. ೩-೩೦). ೨. ಹಿಂದಕ್ಕೆ ತೆಗೆದುಕೊಳ್ಳು: ಆ ಕ್ರೋಡನುರುತರಕ್ರೋಧವಿಹ್ವಲನಾಗಿ ಮುಂಗಾಲ್ಗಳಂ ಪಿಂತೆ[ಪಾಠಾಂ.ದೆ] ಗೆಯದಿದಿರ್ಚಿದ (ಮಹಾಂ. ೭-೨೪). **ಹಿಂದೆಗೆ**: ೧. ಶ್ರೀಮಂತರಾದ ಪಾಂಡವರು . . . ಹಿಂದೆಗೆಯದೇ ಯುದ್ಧವನ್ನು ಮಾಡುವರು (ಕೃಬಾಕೀ. ೦೦೪); ಚೋಳರಾಜಾಧಿರಾಜನು ಯುದ್ಧದಲ್ಲಿ ಗಾಯಗೊಂಡು ಹಿಂದೆಗೆದನು (ಸೊಳಂಅ. ೫೮); ಹಾದಿಯಲಿ ಹಳ್ಳವಿದೆ ಮುಳ್ಳಿಡಿದ ಕೊಳ್ಳವಿದೆ ಎಂದಳುಕಿ ಹಿಂದೆಗೆಯದಿರು (ಶಾಂಕಹ. ೪೬-೦೫); ವಿಜಯ ದುರ್ದೈವದ ದಂಡು ಹಿಂದೆಗೆಯಿತು (ಇಂಜಾಕ. ೩೨-೪೭). [ಪಿಂ (<ಪಿನ್) + ತೆಗೆ$_1$]

**ಪಿಂದೆಸೆ**, ಹಿಂದೆಸೆ (ನಾ). ಹಿಂದಿನ ಭಾಗ; ಹಿಂಭಾಗ: ಮುಂಗ್ಗುರಿಸಿ ನಿಲ್ಲುತುಂ ಪಿಂದೆಸೆಗೆ ನೋಡುತುಂ . . . ಮುಂಬರಿದನೆಂತಾನುಮೆದೆಯ ಚಾಂಚಲ್ಯಮಂ ನಿಗ್ರಹಿಸಿ ವ್ಯಗ್ರಮನದಿಂ (ಜಕ್ಕಾಂಗ. ೫೦-೦೭೮); ಮುಂದಕೆ ಪೋಪುದು ತನುವಿದು ಪಿಂದೆಸೆಗೋಡುವುದು ಬಳಕೆಗೈದದ ಮನವೇನೆಂದಪೆನೊ (ಕಾಕುಂತ. ೧೮-೩೪). **ಹಿಂದೆಸೆ**: ಪೂರ್ವ ಆದಿಯ ಇಪ್ಪದಲ್ಲಿ ಮಧ್ಯಭಾವ ಆತ್ಮನಲ್ಲಿ ಉತ್ತರ ತುತ್ತತುದಿಯಲ್ಲಿ ಮೆಟ್ಟಿ ನೋಡಲಾಗಿ ಹಿಂದೆಸೆಯಲ್ಲಿ ಕಂಡೆ (ಕೊಳವಾ. ೧೪೯-೫೬೬); ತತ್ ಸರಸಿಜಾನನೆ ವಲ್ಲಭನ ಹಿಂದೆಸೆಯೊಳಿರುತಿರಲು (ಬಸಪು. ೪೨-೩೬).

[ಪಿಂ (<ಪಿನ್) + ದೆಸೆ$_2$]

**ಪಿಂದೈದು** ' ಪಿಂದಯ್ದು ' ನೋ.

**ಪಿಂದೊಡೆ**, ಹಿಂತೊಡೆ (ನಾ). ತೊಡೆಯ ಹಿಂಭಾಗ, — ಹಿಂಬದಿ: ಮೋದೆ ಸಿತಾಸಿಯಿಂ ಪಱಿಯೆ ಕೈ ಕೆಲವಂದು ಮಹಾವರಾಹನಂತಾದುವು ಕೂಡೆ ಕುಕ್ಕುಱಿಸಿ ಪಿಂದೊಡೆಗಳ್ ಕೆಲವೇಕದಂತನಂತಾದುವು (ಶಂರ್ಪ್ರಪು. ೧೦-೯೬). **ಹಿಂತೊಡೆ**: "ತೊಡೆಯ ಹಿಂಭಾಗ; ಹಿಂತೊಡೆ; ಹಿಂತೊಡೆ ಮತ್ತು ಪಿರ್ರೆ" (Ham. ೩೦೫೦). [ಪಿಂ (<ಪಿನ್) + ತೊಡೆ$_2$]

**ಪಿಂಪಿಣೆ** (ನಾ). ಹಿಂಭಾಗದಲ್ಲಿರುವ ಜಡೆ: ಮುಗುದೆಯಿಂದುವದನೆ ಪಿಂಪಿಣೆಯಿಂದೊಗೆದಿಲ್ದಾ ಮುತ್ತಿನ ಬಟ್ಟೊಪ್ಪಿತ್ತಗಲದೆ ಪಿಂತಣ ದೆಸೆಯಿಂ ತಾಳಿದ ರಾಹುವಿನ ನಾಲಿಗೆಯಂತೆ (ಜ್ಞಾಸಹಂ. ೬-೬೪).

[ಪಿಂ (<ಪಿನ್) + ಪಿಣ್ಣೆ. / ತೆಲು. ಪಿಂಪಿಣೀ=ನಾಲ್ಕು ಕಾಲಿನ ಜಡೆ]

**ಪಿಂಬಕ್ಕ** (ನಾ). ಹಿಂಬದಿ; ಹಿಂಭಾಗ: ಪೊಂಬೆಸದ ಬೆಸುಗೆಯ ಪಿಂಬಕ್ಕ[ಪಾಠಾಂ. ಪೆಂಪಿಂ ಚಬುಕ]ದೊಳೆ ನಿಗುಂಬಿಸಿದ ಕರಿಯ ಬಿಳಿಯ ರ್‍ಶುಲ್ಲರಿಯ ಪುಲ್ಲಿಯ ಕದಳಿಕೆಯ ಕಡುಪಿನಿಂ (ಅಪಂಪು.೧೪-೬ ಪ).

[ಪಿಂ (<ಪಿನ್) + ಪಕ್ಕ]

**ಪಿಂಬಗಲ್**, ಪಿಂಬಗಲಂ, ಹಿಂಬಗಲಂ (ನಾ). ಹಗಲಿನ ಕಡೆಯ ಭಾಗ ; ಸಂಜೆ : ಬಳೆದ ವಿಮೋಹದಿಂ . . . ಕರುಣಂ ಪಿರಿದಾಗಿ ಪಿಂಬಗಲ್ ಕಳೆವಿನವಿರ್ದನಾ ಪರವಯೋಗಿಗವಂತುಟು ಮೋಹವಾಗದೇ (ಸುಕುಮಾ. ೯-೬೩) ; ಜಾಂಬವನಂ ಪಿಂಬಗಲಾದಿತ್ಯನಂತೆ ತೇಜಂಗಿಡಿಸಿ (ರಾಮಾಭ್ಯು. ೭-೯೩) ; ಮುಂಬಗಲ್ ಪಿಂಬಗಲ್ ಸುಳಿಸುಳಿವ ತಂಬೆಲರ್ ಚೆಂಬಾನೆ ಕುಂಬಿಡುವ ಬೆಟ್ಟಗಳ ಸಾಲು (ಜಾಂಬ. ೨೩-೦೨). **ಪಿಂಬಗಲು** : " ಪಿಂಬಗಲೆನಲ್ ಸಾಯಾಹ್ನಾಭಿಧಾನವು " (ಕಶಕ. ೬೩). **ಹಿಂಬಗಲು** : ಉದಯದಿ ಸಾಧನೆ ಹಿಂಬಗಲೋದು ನಕ್ಷತ್ರದೊಳೋದಿದೋದಿನ ಚಿಂತೆ ವ್ಯಾದುವ್ಯಾದುವಾಗಿ ನಡೆವುದು (ಶರಶ. ೨೭-೯೧) ; ನಾಳೆ ಹಿಂಬಗಲವರೆಗೆ ಹರಿಬಕ್ಕ ನನ್ನತ್ತ ಉಸಿರೆತ್ತುವುದಿಲ್ಲವೆಂದು ನೀವು ಪ್ರತಿಜ್ಞೆ ಮಾಡಿ ಕೊಟ್ಟರೆ ಮಾತ್ರ ಈಗ ನನ್ನ ಮರುನುಡಿಯುಂಟು (ಮಂತ್ರಕ. ೫೮-೫). ' ಮುಂಬಗಲ್ ' ಪರಾ. [ಪಿಂ (<ಪಿನ್) + ಪಗಲ್]

**ಪಿಂಬಗಲು** ' ಪಿಂಬಗಲ್ ' ನೋ.

**ಪಿಂಬಡು₁** (ಕ್ರಿ). ಹಿಂದೆ ಹೋಗು ; ಹಿಂಬಾಲಿಸು ; ಅನುಸರಿಸು : ತನ್ನಿಚ್ಛೆಯಿಂ ಮುಂತೆಮುಂತೆ ಪೋಪೋಪ ಕುದುರೆಗೆ ಕಿಂಗಳೆಂಬಾಗಳೊಡಂ ಅಂಗವಂಗಾದಿ ದೇಶಂಗಳ್ ಕಂಗೆಟ್ಟು ಕಪ್ಪಂಗೊಟ್ಟು ಪಿಂಬಟ್ಟೋಲಯಿಸುತ್ತೆ ಬರುತಮಿರ್ಪುದುಂ (ರಾಮಾಭ್ಯು. ೧೩೯-೧).

[ಪಿಂ (<ಪಿನ್) + ಪಡು₁]

**ಪಿಂಬಡು₂** (ನಾ). ಅನಂತರ ; ತರುವಾಯ : ಎನ್ನ ಪಿಂಬಡಿನೊಳೆ [ನಣ್ಪೆ]ನಯ್ಯ ನಿಮಗಂ ಮಗನಲ್ಲನೆ ಧರ್ಮನಂದನಂ (ಪಂಪಭಾ. ೦೩-೦೮); ಕಾಸನರ ಭೀಮಂ . . . ತಳ್ತಿಱಿದು ಸುರಲೋಕಕ್ಕೆ ಸಂದನಾತನ ಪಿಂಬಡಿನೊಳಾತನ ಮಗಂ ಕಚ್ಚವರ ಕರವಣ್ಣ ಕಲ್ಲ ನಿಱಿದಮ್ಮಂಗಳ (ಎಕ. VIII (೩). ಸೊರಬ. ೫೭೩-೫ ; 981) : ಬರಲವರ್ ಪಿಂಬಡಿಂ ಮುನ್ನಮಾನೈದುವೆನ್ (ಶ್ರೀಣಪು. ೦೨೭-೨೯). [<ಪಿಂಬಡು₁]

**ಪಿಂಬರೆಯ** (ನಾ). ಕಳೆದು ಹೋದ ತಾರುಣ್ಯ ; ಹಿಂದಕ್ಕೆ ಸರಿದ ಯೌವನ, -ಪ್ರಾಯ : ತರುವಲಿ ಬೇಡ ಪಿಂಬರೆಯದಂಗನೆಯಾದೊಡೆ ಬೇಡ ಜವ್ವನಂ ಗರಗರನಪ್ಪ ಸೊಂಪುತನವುಳ್ಳವಳಾದೊಡೆ ಬಂದು ಮುಂದೆ ಸಂಚರಿಸುಗೆ (ಸೂಕ್ತಿಸು. ೮-೯೦೭).

[ಪಿಂ (<ಪಿನ್) + ಪರೆಯ₂ (<ಪರಯ)]

**ಪಿಂಬವಣಿ** (ನಾ). ಹಿಂದೆ ಅನುಭವಿಸಿದ ಕಷ್ಟ, -ಬವಣೆ : ಶಂಬರ ಶರನಿಧಿಯೊಳು ತನ್ನ ಕೆಡಹಿದ ಪಿಂಬವಣಿಯನು ತೋಱುವರೇ ಚೆಂಬಣ್ಣ ಗಂಧೋದಕದಲ್ಲಿ ಸ್ಮರ ತನ್ನ ಕುಂಭಕುಚೆಯನು ನೂಂಕಿದನು (ಮೋಹತ. ೦೯-೬೬). [ಪಿಂ (<ಪಿನ್) + ಬವಣಿ]

**ಪಿಂಬಳಿ**, ಹಿಂಬಳಿ₁, ಹಿಂಬಟಿ (ನಾ). ೧. ಹಿಂದಿನ ಸ್ಥಳ ; ಹಿಂಬದಿ ; ಹಿಂಭಾಗ : ಅರಲಂಬುಗಳಿನಾದಮಿಡಿದ ಬತ್ತಳಿಕೆ ಭುಜಶಿರದ ಪಿಂಬಳಿಯಲ್ಲಿ ಕಣ್ಗೊಳಿಸಲಾ . . . ಸುಮುದ ರಾಜನ ಮೇಲೆ ದಾಳಿಟ್ಟನು (ಕೀತಶಾ. ೭-೨೭). **ಹಿಂಬಳಿ₁** : ೧. ಕಱು ಕಾಯ ಹಿಂಬಳಿಯನಱಿವಂತಿರಱಿದು ಸೌಂದರಗಣಾಧೀಶ್ವರಂ ಬೆಂಬಿಡಿದು ಬಂದು (ಸೌಂದಪು. ೧೧-೦೨). **ಹಿಂಬಟಿ** : ೨. ಪರೋಕ್ಷ : ಪರೋಕ್ಷೇ=ಹಿಂಬಟಿಯೊಳ್ (ಪೀಠಿಕಾ. ೩೦-೯). [ಪಿಂ (<ಪಿನ್) + ಬಳ್ಳಿ₃ (<ಬಟ್ಟಿ₃)]

**ಪಿಂಬಱಿಗೇಸ** (ನಾ). ಹಿಂಭಾಗದ ಹರುಕು ಹರುಕಾದ ಕೂದಲು : ಕೊಱೆವಲ್ ಬಿತ್ತಿದ ಕಾಲ್ ಪಿಂಬ[ಪಾಠಾಂ. ಸಿಂಪಿ]ಱಿಗೇಸಂ ನೆಕ್ಕ ಕದಪು ಪೊಕ್ಕಿರ್ದ ಬಸಿಱ್ ತೆಱಿದ ಮುಖಕುಹರವರ್ಬಿಸೆ ಪಿಱಿಕಿನಿಗಳ ಬಳಗ ಮೆಯ್ಮೆ ತಂದುದು ಮುನಿಯಂ (ಶಾಂತಿಪು. ೪೩೦).

[ಪಿಂ (<ಪಿನ್) + ಪಱಿ₁ + ಕೇಸ₂]

**ಪಿಂಬಾಲಿಸು** ' ಹಿಂಬಾಲಿಸು ' ನೋ.

**ಪಿಂಬೂಣಿಸು** (ಕ್ರಿ). ಹಿಂದಿನಿಂದ ಬಾಣ ಬಿಡು : ಏಣನ ಮುನಿನಾಥ ಕಾಣುತ ಬಂದು ಪೆಂ[ಪಿಂ]ಬೂಣಿಸಿ ನಿಂದ ಪೇಟಕನ ಕಾಣುತ (ಕೃಕಾಜ. ೩-೦೯೯). [ಪಿಂ (<ಪಿನ್) + ಪೂಣಿಸು]

**ಪಿಂಬೆದೆ**, ಹಿಂಬೆದೆ (ನಾ). ಬಿತ್ತನೆ ಮಾಡಬೇಕಾದ ತರುವಾಯದ ಕಾಲ ; ಬಿತ್ತನೆ ವೇಳೆ ಮೀರಿದ ಕಾಲ : ಪಿಂಬೆದೆ, ಪಿಂಬೊಟ್ಟು (ಕಪುರ. ೦೬೬ ಕ್ರಿಯೋ). **ಹಿಂಬೆದೆ** : ಹಿಂಬೆದೆಯೊಳಗೆ ಬಿತ್ತಿದ್ದರಿಂದ ಸರಿಯಾದ ಬೆಳೆಯಾಗಲಿಲ್ಲ (ಲೂಾ). [ಪಿಂ (<ಪಿನ್) + ಬೆದೆ]

**ಪಿಂಬೊಟ್ಟು**, ಹಿಂಬೊತ್ತು (ನಾ). ೧. ಮುಳುಗುತ್ತಿರುವ ಸೂರ್ಯ ; ಸಂಜೆಯ ಸೂರ್ಯ : " ಪಿಂಬೊಟ್ಟೆಂದು ಪಡುನೇಸರ್ " (ಕಶಾ. ೩೭-೨೫೩) ; ಅಂಗಯರ್, ಅಂಗಾಲ್ . . . ಪಿಂಬೆದೆ, ಪಿಂಬೊಟ್ಟು (ಕಪುರ. ೦೬೬ ಕ್ರಿಯೋ). ೨. ಹಿಂದಿನ ಕಾಲ ; ಪೂರ್ವ ಕಾಲ : ಕುರುರಾಯಂ ಬಹುವಿತ್ತಮಂ ಕುಡುವನಾ ಕರ್ಣಂಗೆ ಮತ್ತಾ ಸಹೋದರರ್ಗೆ ಪಾಂಡವರ್ಗೇನುಮಂ ಕುಡನದೇಂ ಪಿಂಬೊಟ್ಟಿನೊಳ್ಕರ್ಣನುರ್ವರೆದಾರಿದ್ರನೆನಲ್ಕೆ ಸಂದಂ (ರಕ್ಷಾಕ. ೯೮). **ಹಿಂಬೊತ್ತು** : ೩. ಸಂಜೆ ; ಸಾಯಂಕಾಲ : ಉಪ್ಪರಿಗೆಯನೇಱ ಹಿಂಬೊತ್ತಿಗಾನಂದದಿಂದಬ್ಜಿಯ ನೋಳ್ಪ . . . ಏಳರಂದೆದ್ದನಬಲೆಯರ್ವೆರಸಿ (ಶರಶ. ೨೩-೮೫).

[ಪಿಂ (<ಪಿನ್) + ಪೊಟ್ಟು]

**ಪಿಕ್‌ನಿಕ್** ' ಪಿಕನಿಕ್ಕು ' ನೋ.

**ಪಿಕ್‌ಪಾಕೆಟ್ಟು** (ನಾ). ಜೇಬಿನಲ್ಲಿರುವ ಹಣ ಅಥವಾ ಹಣದ ಪಾಕೆಟ್ಟನ್ನು ಅಪಹರಿಸುವಿಕೆ ; ಜೇಬುಗಳ್ಳತನ : ಬಸ್ಸಿನಲ್ಲಿ ಬರುವಾಗ ಅಂಗಿಯ ಒಳಜೇಬನ್ನೇ ಕತ್ತರಿಸಿ ಪಿಕ್‌ಪಾಕೆಟ್ಟು ಮಾಡಿದ್ದರು (ಲೂಾ).

[←ಇಂ. Pick Pocket]

**ಪಿಕ** (ನಾ). ಕೋಗಿಲೆ ; ಕಳಕಂಠ : " ಅನ್ಯಭೃತಃ, ಪರಪುಷ್ಟ:, ಕಳಕಂಠಃ, ಕೋಕಿಳಃ, ಪಿಕಃ—ಈ ೫ ಕೋಗಿಲೆ " (ಕರ್ಣಾಯು. ೧೦-೯೬) ; ತನಿಮಾಲನುಂಡು ಬಳೆವರಗಿಳಿಗಳುಕ್ಕಿನಿಂ ಕೊನರಂ ಕರ್ದುಂಕಿ ಕೂಗುವ ಪಿಕದ ಸೊಕ್ಕಿನಿಂ (ಕಿರು. ೭೭. ೨-೦೨) ; ಪಿಕ ಶುಕ ಕೋಕ ಸಾರಸ . . . ಕುರರೀಪ್ರವಪ್ರಕರದಿಂದೆ ವಿರಾಜಿಕುಮುನ್ನತಂ ವನಂ (ಚಮ್ಮಾಕ. ೯-೬೨); ಶುಕ ಪಿಕ ವಿಹಂಗ ಗೀತಾಂಜಲಿಯನರ್ಪಿಸುತೆ . . . ಪ್ರಕೃತಿದೇವಿಯು ತಾನು ರತಿಯು ರೂಪದಿ ನಿನ್ನ ಪೂಜಿಸುವಳನುದಿನಂ ! (ಚಕ್ರಾಂಗ. ೬೬-೯೯೦).

[ಸಂ.]

**ಪಿಕನಿಕ್ಕು**, ಪಿಕ್‌ನಿಕ್ (ನಾ). ವನಭೋಜನ ; ಬಯಲೂಟ : ಮಕ್ಕಳು ಸ್ಕೂಲಿನಿಂದ ಪಿಕನಿಕ್ಕಿಗೆ ಹೋಗಿದ್ದಾರೆ (ಲೂಾ). **ಪಿಕ್‌ನಿಕ್** : ಬಹುದಿನಗಳ ಹಿಂದೆ ನಾವೆಲ್ಲ ಪಿಕ್‌ನಿಕ್ ಹೋಗಿದ್ದಾಗ . . . ಗೋವಿಂದ ತನ್ನ ಫೋಟೊ ತೆಗೆದಿದ್ದುದು ಅವಳ ಜ್ಞಾಪಕಕ್ಕೆ ಬಂತು (ಪಿತಾ. ೯೩).

[ ←ಇಂ. Picnic ]

**ಪಿಕನಿಸ್ವನೆ** (ನಾ). ಕೋಗಿಲೆಯಂಥ ಇಂಪಾದ ಸ್ವರವನ್ನುಳ್ಳವಳು : ಪಿಕನಿಸ್ವನೆ ವಧು ತಳ್ತಿಡದ ಕೆಲದೊಳಿರೆ . . . ನೃಪನೊಂದೆ ಕೊಂಬು ಕೆಯ್ಯಿಂದ ಚೂತಶಾಖೆವೊಲಿರ್ದಂ (ಪರಾಕ್ರ. ೭-೦೮). [ ಸಂ. ಪಿಕನಿಸ್ವನಾ ]

**ಪಿಕಲಾಟ** ' ಪೀಕಲಾಟ ' ನೋ.

**ಪಿಕಲಾರಿ**, ಪಿಕಳಾರ, ಪಿಕಳಾರಿ (ನಾ). ಒಂದು ಬಗೆಯ ಹಕ್ಕಿ : (೩). **ಪಿಕಳಾರ** : ಕಾಮಳ್ಳಿ ಕಾಜಾಣ ಪಿಕಳಾರ ಗಿಳಿ ಚೋರೆ ಕೋಗಿಲೆಗಳುಲಿಹಕ್ಕಿ ನಲಿಯುತುಂ (ಚಕ್ರಾಂಗ. ೬೨-೦೦೬೦) ; ಕೋಗಿಲೆ ಕಾಜಾಣ ಪಿಕಳಾರ ಕಾಮಳ್ಳಿಗಳ ದನಿಗಡಲಿನ ನಡುವೆ ದೀವಿಯುವೊಲಿಹುದೀ ನಮ್ಮ ಹೊಸ ಹಳ್ಳಿ (ಚಂದ್ರವೀ. ೦೬೦-೯೦). **ಪಿಕಳಾರಿ** : ಇತರ ಕವನಗಳಲ್ಲಿ ಆಗಾಗ ಕೇನೆ, ಕಾಜಾಣ, ಗಿಳಿ, ಕಾಮಳ್ಳಿ, ಪಿಕಳಾರಿ, ಕೋಗಿಲೆ, ಮಾಲೆವಕ್ಕಿಗಳ ಉಲ್ಲೇಖ ಬರುತ್ತಿದೆ (ಜಾನಪು. ೯೩). [ <ಪಿಕಳ ? ]

**ಪಿಕಳ, ಪಿಕ್ಕಳ** (ನಾ). ಒಂದು ಬಗೆಯ ಹಕ್ಕಿ : ಗರುಡಂ . . . ಪಿಕಳಂ ಬಕಂ ಶಿಖಿ ಶುಕಂ ಬಾನಾಡಿ ಪೆರ್ಬಕ್ಕಿ ಹೆಂಗುರು ಕಾಕಂ ಚಿಲುಕೂಲಿ ರತ್ನ ಖಗಮಿರ್ಕುಂ ತದ್ವನಾಗೌಘದೊಳ್ (ರಾಜಶೇ. ೩-೩೯); " ಕಾಗೆ " (ರಾಜಶೇ. ಕೋಶ); ಗರುಡಂ ಗೀಜಗನಂಚೆ ಸೋರೆ ಪಿಕಳಂ [ಪಾಠಾಂ. ಕೆಕಂ] ಕಾಕಂ ಬಕಂ . . . ಚಿಲುಕೂಲಿ ಚಾತಕವಮಿರ್ಕುಂ ತತ್ತರುವ್ರಾತದೊಳ್ (ಭೂರಚಂ. ೪-೪೬). **ಪಿಕ್ಕಳ :** ಪಿಕ್ಕಳದ್ವಿತಯ ಲಾವುಗೆ ತೋರ ಗಿರುಜೆಯು ಕುಕ್ಕುಟ ತಗಜು ಕೋಣಗಳ ಸೊಕ್ಕಾನೆಗಳ ಕಾದಿಸುತಿರ್ದ ದೊರೆಗಳ ಮಕ್ಕಳ ಕೂಡೆ ಬೀದಿಯಲಿ (ಪೋಚಕ. ೦೭-೮೨); ಶುಕ ಪಿಕ ಕೇಕಿ ಕಾರಂಡ ಕೆಂಬೂತ ಕಾಗೆ . . . ಕಾಡ್ಗೋಳಿ ಪಿಕ್ಕಳಂ ಕಬ್ಬಕ್ಕಿಗಳ್ ಮೆಱೆದವು (ಚಕುಶ್ರೀ. ೨-೧-೦೭). [←ತೆಲು. ಪಿಕಿಲಿ, ಪಿಕ್ಕಿಲಿ]

**ಪಿಕಳಾರ** ' ಪಿಕಲಾರಿ ' ನೋ.

**ಪಿಕಳಾರಿ** ' ಪಿಕಲಾರಿ ' ನೋ.

**ಪಿಕಾಸಿ, ಪಿಕ್ಕಾಸ್, ಪಿಕ್ಕಾಸು** (ನಾ). ಒಂದು ಕಡೆಯಲ್ಲಿ ಚುಚ್ಚುವ, ಮತ್ತೊಂದು ಕಡೆಯಲ್ಲಿ ಕೆದಕುವ ಮೊನೆಗಳಿಂದ ಕೂಡಿದ, ನೆಲವನ್ನು ಅಗೆಯುವ ಒಂದು ಬಗೆಯ ಸಾಧನ : ಆ ಬಳಿಕ ಮಹಮ್ಮದನು ಪಿಕಾಸಿಯನ್ನು ಹಿಡಿದು ಕಲ್ಲನ್ನೊಡೆಯಲು ಪ್ರಯತ್ನಿಸಿದನು (ಕ್ರೈಗಂಚ. ೬೯); ಒಂದು ಪಿಕಾಸಿ, ಗುದ್ದಲಿ ತರಿಸಿರಿ ಎಂದನು (ಶಾಲೀಮು. ೨೯), ಹಾರೆ, ಗುದ್ದಲಿ, ಪಿಕಾಸಿ . . . ರೈತನ ಸಾಧನಗಳೂ ಹೌದು (ಕಬಕೋ. I. ೬೪೯). **ಪಿಕ್ಕಾಸ್ :** ಅವರು ಹಾರೆ ಪಿಕ್ಕಾಸ್ ಹಿಡಿದು ಹೊರಟಾಗ ಬೀಜಗಳ ಗಂಟನ್ನಿಟ್ಟು ಬುಟ್ಟಿಯನ್ನು ಮೋಹನ ಹೊತ್ತು ತರುತ್ತಾನೆ (ಪಾಳಿ. ೭೬). **ಪಿಕ್ಕಾಸು :** ತೋಟದ ಮಣ್ಣನ್ನು ಆಳವಾಗಿ ಉಳುವ ನೇಗಿಲುಗಳಿಂದಾಗಲಿ, ಪಿಕ್ಕಾಸುಗಳಿಂದಾಗಲಿ . . . ಉತ್ತು ನೆಲದಲ್ಲಿ ಗೊಬ್ಬರವನ್ನು ಬೆರೆಯಿಸಬೇಕು (ಪಾಂಕ್ರ. I. ೨೯೬); ತೋಟದಲ್ಲಿ ಕೆಲಸ ಮಾಡುವ ಹಾರೆ ಪಿಕ್ಕಾಸು ಇತ್ಯಾದಿ ಸಾಮಗ್ರಿಗಳ ಕಳವು ಹೆಚ್ಚಾಗತೊಡಗಿತು (ರತ್ನರೂ. ೬೯). [ ←ಇಂ. Pickaxe ]

**ಪಿಕಾಳಿ** (ನಾ). ಕೋಗಿಲೆಗಳ ಗುಂಪು–ಸಮೂಹ : ಇದು ಬನಮಿದು ನೃಪಗೃಹಮೆಂಬುದು . . . ಷಟ್ಪದ ಶುಕ ಪಿಕಾಳಿಗೆನೆ ನೃಪಸದನಂ ಸೊಗಯಿಪುದು (ಜಗಿ. ೨-೩೭); ತಮಾಳವನಂ ಜಳಬುದ್ಬುದಪ್ರಘೋಷಮನೊಳಕೊಂಡು ಕಟ್ಟಲಿಸೆ ಕಂಡು ಘನಾಗಮಮಾದುದೆಂದು ಸಂಭ್ರಮಿಸಿ ಪಿಕಾಳಿ ಮೂಗುವಡೆ (ಶ್ರೀಕೃಷ್ಣ. ೬-೦೯). [ ಪಿಕ+ಆಳಿ (=ಆಲಿ) ]

**ಪಿಕಿ** (ನಾ). ಜೋಗಿಗಳ ಹತ್ತಿರವಿರುವ ಒಂದು ಬಗೆಯ ಕೊಂಬಿನ ವಾದ್ಯ (?) : ಕೊರಲ ಶಂಕಿನ ಸರವೆರಲೆಗೊಂಬಿನ ಪಿಕಿ [ಪಾಠಾಂ. ಕೆ] ಸೋರೆಯೋಡು ಕೆಲದಜೀವಾಗಿ ಕರದ ತ್ರಿಶೂಲದ ಕಿಱುಜಡೆವೊತ್ತ ಜೋಗಿಗಳರಲೊಪ್ಪಿತಾ ರುದ್ರಭೂಮಿ (ಶ್ರೀಪಾಂ. ೬-೦೯). [ ? ]

**ಪಿಕೀರು** ' ಫಿಕೀರು ' ನೋ.

**ಪಿಕೆಟ್** (ನಾ). ಕಾವಲಿಗಿರುವ ಸಣ್ಣ ಸೈನ್ಯ ; ಕಾವಲುದಳ : "ಕಾವಲುಪಡೆ, ಗಸ್ತುಪಡೆ ; ತಡೆಕಾವಲುಗಾರರು, ಪಿಕೆಟ್" (Picket. ಶಕ್ತ್ರಿ. ೬೨).

**ಪಿಕೆಟ್ ಮಾಡು**=ಕಾವಲಿರುವಂತೆ ಮಾಡು : "ಕಾವಲುಹಾಕು, ಪಿಕೆಟ್ ಮಾಡು" (Picket. ಶಕ್ತ್ರಿ. ೬೨). [ ←ಇಂ. Picket ]

**ಪಿಕೆಟಿಂಗ್** (ನಾ). ಒಳಗೆ ಹೋಗದಂತೆ ಅಥವಾ ಹೊರಗೆ ಬರದಂತೆ ತಡೆಯುವುದು : ಅಂದಿನಿಂದಲೇ ಕರನಿರಾಕರಣೆ, ಉಪ್ಪಿನ ಸತ್ಯಾಗ್ರಹ, ಪಿಕೆಟಿಂಗ್‌ಗಳು . . . ಆರಂಭವಾಗಬೇಕೆಂದು ಗಾಂಧೀಜಿ ತಿಳಿಸಿದರು (ಆತ್ಮಾಕ. ೦೬೭); ಮದ್ಯನಿಷೇಧದ ಪಿಕೆಟಿಂಗ್ ನಡೆಸುವಾಗಲೂ ಸಭೆ ಮೆರವಣಿಗೆಗಳನ್ನು ಮಾಡುವಾಗಲೂ ಆತಂಕಗಳನ್ನು ತಂದೊಡ್ಡತೊಡಗಿದರು (ಕುರುಳಾ. ೦೬೨). [ ←ಇಂ. Picketting ]

**ಪಿಕ್ಕ** ' ಪಿಕ್ಕಾ ' ನೋ.

**ಪಿಕ್ಕಮಾತು** (ನಾ). ಹುರುಳಿಲ್ಲದ ಮಾತು,–ನುಡಿ : ಹಿರಿಯರಾಗಲಿ ಕಿರಿಯರಾಗಲಿ ಯಜಮಾನನೊಡನೆ . . . ಪಿಕ್ಕಮಾತುಗಳನ್ನು ಸರ್ವಥಾ ಆಡಬಾರದು, ವಾದಿಸಬಾರದು (ಕುಬುಂಬ. ೬೯).

[ಪಿಕ್ಕ (<ಪಿಕ್ಕಾ)+ಮಾತು]

**ಪಿಕ್ಕಳ** ' ಪಿಕಳ ' ನೋ.

**ಪಿಕ್ಕಳಿ** (ನಾ). (?) : ಕಟ್ಟುಗಳ ಮಱಿ ಸಮ್ಮದೆಕ್ಕಡದ ಪೊಸಪೀಲಿಯುಟ್ಟಿಗೆಯ ಪಿಕ್ಕಳಿಯ ಪೂಮುಡಿಯ ಜವ್ವನದ ದಿಟ್ಟವೇಡತಿಯರಾಣ್ಮರ ಪಿಂದೆ ನಡೆದರಟ್ಟಟ್ಟಿ ಮಿಗಗಳ ಕಡಪುತ (ಮದೇಕ್ರಿ. ೩೨-೨೯). [?]

**ಪಿಕ್ಕಾ, ಪಿಕ್ಕ** (ಗು). ೧. ಕಾಂತಿಹೀನವಾದ ; ದುರ್ಬಲವಾದ; ಅಶಕ್ತವಾದ : (೪). ೨. ಹುರುಳಿಲ್ಲದ ; ನಿಸ್ಸತ್ತ್ವವಾದ : (೪). **ಪಿಕ್ಕ :** ೨. ' ಪಿಕ್ಕಮಾತು ' ಪರಾ. [ ←ಮರಾ. ಫಿಕ್ಕಾ ]

**ಪಿಕ್ಕಾಸ್** ' ಪಿಕಾಸಿ ' ನೋ.

**ಪಿಕ್ಕಾಸು** ' ಪಿಕಾಸಿ ' ನೋ.

**ಪಿಕ್ಕು, ಪಿರ್ಕು, ಹಿಕ್ಕು₁, ಹೆಕ್ಕು₁** (ಕ್ರಿ). ೧. ಬೇರ್ಪಡಿಸು; ಪ್ರತ್ಯೇಕಿಸು; ಬಿಡಿಸು; ವಿಭಾಗ ಮಾಡು : "ಪಿಕ್ಕು—ವಿವರಣೇ (ಬಿಡಿಸು)" (ಶಮಂಜ); ಪುದಿದೊದವಿದ ಜನ್ಮಾಂತರಸ್ನೇಹಮೊಂದೇ ನುಡಿಯೊಳ್ ಪಿಕ್ಕಲ್ಕದೊಂದಲ್ತೆ [ಪಾಠಾಂ. ವೈಕಲ್ಪದಂತಲ್ತೆ]ನಲಿದ ಪೆರ್ಗಿನ್ನಿಲ್ಲ (ಆಂಕ್ರಿ. ೪-೨೬); ಮಿದುಱು ಕೋಟ್ಗಿಸಱುಗೊಳ್ಳೊಕ್ಕು ಕರುಳ ಮೆದೆಯುಂ ಪಿಕ್ಕಿ ಪರಸಿ ಪೋಡಿಯುಂ (ಗದಾಯು. ೬-೨೪ ಪ); ಈಟ್ಡುಂ ಪಟ್ಟಿಯ ಮೊತ್ತಮಂ ಕಳೆ ಕಸಂ ನೂಂಕುತ್ತೆ ಯೆಕ್ಕುತ್ತೆ ಮೇಣ್ ನೋಟ್ಟು ಬೀಜವನೆತ್ತಿ ಪಿಕ್ಕಿ ಕಳೆದುಂ ನೂಲ್ನೂಲ್ವ ಜಂತ್ರಗಳುಂ . . . ಮೈಸೂರಿನಲ್ಲೊಪ್ಪುಗುಂ (ಮೈಕೂಮು. ೩-೩೬). ೨. (ಕೂದಲನ್ನು) ಸಿಕ್ಕು ಬಿಡಿಸು; ಬಾಚು : ತಲೆಯನಿರುಳ್ಪಿಕ್ಕಿದೊಡೆತ್ತಲಾನುಮೊಂದಲ್ಲಿ ಭಾಗ್ಯಮುಳ್ಳಾ ರೋಮಂ ತಲೆಯಿಂದುದಿದೊಡೆ ಬಱಿಯುಂ ನಿಲಲರಿಯದು ಭಾಗ್ಯಮೆಂಬರಱಿವಿಲ್ಲದವರ್ (ಕಮಚ. ಅಮುಕಂಕ. I. ೩೩೩–೪೩); ತದ್ರುಮಣಿಯ ಕಚಮಂ ಪಿಕ್ಕಿದಳಮಳಿನನಖನಿಕರದಿ ವಧೂಮಣಿಯೊರ್ವಳ್ (ಉದ್ಯಟಿ.೬-೨೩); ಸೋರ್ಮುಡಿಯನಾಗಳ್ ಪಿಕ್ಕಿ ಪೂದೊಡಂಬೆಯುಂ ಮುಡಿಯಿಸುವರಾರ್ (ರಾಜಾಕ್ಯ. ೬೬-೨೨). ೩. ಕಿತ್ತು ಹೊರಕ್ಕೆ ತೆಗೆ ; ಕೀಳು ; ಸೆಳೆ : ಪೆಣದೆರೆಗೆ ಅಲೆತರ್ಪ ರಣಪದರ ಕರೆಯದೆಯೆ ಬರ್ಪತಿಥಿ . . . ವಿನತಂಗಪ್ರತ್ಯಂಗಗಳ ಪಿರಿಯ ಅವಶೇಷಂಗಳನೆ ಪಿಕ್ಕಿ ಪಱಿದಿಕ್ಕುವುದು (ಶಿವಕೃ. ೩೪-೦೦೮೬); ಎಲ್ಲಮುಮರ್ ಪೊಲೆಗಳಸಿಯಿರ್ದತ್ತು. . .ಮಗನ ಪೆಣದಿನ್ ಪದರ್ಗಳ್ ನಾಯ್ಗಳುಮರ್ ಪಿಕ್ಕಿದರೆಯಿನ್ (ಅಂತಿಗೊ. ೪೩–೯೬೪). ೪. ತೆರೆದು ನೋಡು ; ಬಿಡಿಸಿ ನೋಡು ; ಬಗೆದು ನೋಡು : ಮುನ್ನೇಱಿದ ಕೋಡಂ ನೋಡಿ ಹಲ್ಲಂ ಕಿರಿದಗಿದುರವಂ ಪಿಕ್ಕಿ ಪೇನಿಂದೆ ತಿನ್ನುರ್ವಿದ ಮೆಯ್ಯಂ ಕಯ್ಯೊಳೆತ್ತಂ ತುಱಿಸಿ . . . ಕುಳ್ಳಿರ್ದುದು ಕೋಡಂ (ಸೂಕ್ತಿಸು. ೩-೦೯೩). ೫. (ಭೇದವನ್ನು) ಎದ್ದು ಕಾಣುವಂತೆ ಮಾಡು ; ಎತ್ತಿ ತೋರಿಸು ; ಕೆದಕು ; ಬೆದಕು : ಕುಲಮೆಂಬುದುಂಟೆ ಬೀರಮೆ ಕುಲಮಲ್ಲದೆ ಕುಲಮಂ ನಿಂತು ಪಿಕ್ಕದಿರಿಂ (ಕಂಪಭಾ. ೨-೬೩); ಇಂದಿನವರಂದಿನವರ್ ಕೆಲರೆಂದು ಪಿಕ್ಕು [ಪಾಠಾಂ. ರ್ಕು]ವೀ ದಂದುಗದಿಂದಮೇ ನಮಗನಿಂದ್ಯಕವೀಂದ್ರರೆ ಮಂದ್ಯರಾಪಗಂ (ಧರ್ಮಾಪ. ೧-೪೨). ೬. ದೂರವಾಗು ; ಪ್ರತ್ಯೇಕವಾಗು : ಅಸ್ಥ್ಯಾಘವಾತನ ಮೆಯ್ಯಿಂ ಕಿಡಿ ಸೂಸೆ ತಾಗಿ ಸಿಡಿದುಂ ಪಿಮ್ಮೆಟ್ಟಿಯುಂ ಪಿಕ್ಕಿ ಪಿಂತನೆ ಬಂದು ಕಿಱುವಾಯ್ಗೆ ಪೊರ್ದಿಯುಂ ಮಂಗುರ್ವಾದತ್ತು (ಜಗಿ. ೯-೩೮). ೭. ಸೂಸು (?) : ಅದಂ ಗೀತದ ಬಣ್ಣಂ ನಾದದೊಳಕ್ಕರಮುಮುಮೆಯ್ದೆ ಶಬ್ದದೊಳಱಿಯಲ್ಕಾದಪುದನೆ ಬಾಜಿಸುವರ್ ವಾದಕರುಂ ಪಿಕ್ಕಿ ಗೀತಸಮಮುಮಮದಿಂಪಂ (ಚಂಕ್ರ.

೦೫-೭೪). ಪಿರ್ಕುಳ್ : ೧. ಅರ್ಕಂಗಾರಕ ಧಾತುಂ ಶುಕ್ರಂ ಬುಧ ಸೋಮ ನಿಂದಾ ಬೆಳ್ಳಿಯುಮಕ್ಕುಂ ಪಿರ್ಕಿದ ಲೋಹಂ ಶನಿಯೊಳಗಕ್ಕುಮಿದೆಂದರಿದು ವೇಳು (ಜಾಹಿಂ. ೬೫). ೨. ವಿಳಯಂಗುಡುವ ಮೇಲುದಂ ಪಿಡಿ ವಣ್ಣಕ್ಕುವ ತಲೆಯಂ ಪಿರ್ಕುವ ನೆಲನನುಗ್ಗಡಿಸುತಂ ಬರ್ಪ ಚಮರಜವು ನಿಕ್ಕುತಿರ್ಪ ಮೇಳದಿಂ (ಜಾಕ್ಕಳ್ವು. ೧೨-೬ ಪ); ಮುಡಿಯನೊಯ್ಯನೆ ಪಿರ್ಕಿಯಲುರ್ವುದಿಗಳ ತಳದು . . . ಬಿಂಕಕಾರ್ತಿಯರಲ್ಲಿ ಕಡುಗಾಡಿವೆತ್ತಿರು ತಿಹರು (ಕುರಾಜಾ೦. ೩-೩೫). ಹಿಕ್ಕು₁ : ೧. ಕಾಸು ಚುಚ್ಚು ಸುಡು ಹಿಂಡಿ ಹಿಳಿ ಹಿಕ್ಕು ಹರಹೆಂದುಬ ಫಲ್ಲಣೆಗಳ . . . ನಾನಾರವಂಗಳಿಂ ನರಕವದ್ಭುತ ವಾದುದು (ಸಿದ್ಧರಾ. ೬-೨೭); ಹಱಿವ ಹಿಕ್ಕುವ ಮುಕ್ಕುವೊಕ್ಕುವ ಮುಱಿವ . .. ಧ್ವನಿಗಳವನಿಗೆ ಭಯಾವನೀವುತಿರೆ (ಜಾಕಂತ. ೮-೦೨); ಸೊಕ್ಕಿದೀ ಭೀಮಾರ್ಜುನರ ಕೌರವರ ಕೈಯಿಂದ ಹಿಕ್ಕಿ ಕೊಲಿಸುವೆನೆಂಬ ಭೀಷ್ಮಕೆ ತಕ್ಕುದಾಯಿತೆನುತ್ತ . . . ಕುಣಿದನು ಶಕುನಿ ಮನದೊಳಗೆ (ಕುವ್ಯಾಸ. ೬೦೨. ೧೧-೯೮); ಹೊಕ್ಕು ಲೀಲಾಸರಸಿಗಳನಿರದೆ ಕಯ್ಯಿಕ್ಕಿ ಹೊದಱುಗಳೆಡೆಯುನು ಹಿಕ್ಕಿ ಹೆಮ್ಮಳೆಗಳನಱಸಿ ನೋಡಿದೆವು (ಕುರಾಜಾಂ. ೩೨-೨೪). ೨. ಪರಿಪರಿಯ ನೀಳ್ದ ಕಂಚೆಡೆಗಳನಲಂಗರಿಸಿ ಎಳೆಯ ಶಶಿಕಳೆ ನೋಯದಂತೆ ಮೆಲ್ಲನೆ ಹಿ[ಜಾಹಿಂ.ಪಿ]ಕ್ಕಿ (ಭಕ್ತರ. ಜ. ೩೨೬-೧೨); ಆ ಸುದೇಷ್ಣಾದೇವಿಯರೆ ನಿಡುಕೇಶವನು ಹಿಕ್ಕುವಳು (ಕುವ್ಯಾ.ಶಿ. ೬೦೨. ೨-೩); ಮಂಡೆಯ ಕುರುಳ ಹಿಕ್ಕುವರೊಂದು ಕೆಲರು ಪೂಮಂಡೆಯ ಮುಡಿಸುವರ್ ಕೆಲರು (ಸೋಚಕ. ೨೭-೩೪); ಬಲಗಡೆಗೆ ಬೈತಲೆ ತೆಗೆದು ಹಿಕ್ಕಿದ್ದರೂ ಗಾಳಿಗೆ ಸ್ವಲ್ಪ ಹಾರಾಡುತ್ತಿದ್ದ ಕ್ರಾಪು (ಕೂಂಚಿ. ೬೭). ೩. ಬೆಕ್ಕಿನ ದೃಕ್ಕನು ಕುಕ್ಕಬೇಕು ಹಕ್ಕಿಯ ಪಕ್ಕವ ಹಿಕ್ಕಬೇಕು (ಮುಪಾದೇ. ೩. ೦೬೭-೩). ೫. ಅಕ್ಕಟೀ ಕುಲಪಿಡಿದು ಸತ್ಕುಲಕೆ ಹೋರುವರೆ ಹಿಕ್ಕಿದಡೆ [ಜಾಹಿಂ. ಹಕ್ಕಿದರೆ] ಶುದ್ಧಹೊರೆಗಿಕ್ಕಿ ಮಾತಾಡುವರೆ (ಬಿಜ್ಜಾಸೋ. ೯೨-೨೪); ಆ ಸವತಿಯರೇನು ಜಾಣೆಯರೊ ಅವರಾ ತಂತ್ರವ ಬಲ್ಲರಹುದದ ಹಿಕ್ಕದೆ ಸುವಿನಯ ಮಿಗೆ ಕಳುಹಿದರು (ಕರಾಕ. ೬-೭೬). ೮. ತೆರೆ; ಬಿಚ್ಚು: ರಾಮನ ರೂಪಲ್ಲದೆ ಮಿಕ್ಕ ಚೆಲ್ವರ್ದರ್ಪ ರೂಪುಗಳ ಲೆಕ್ಕಿಸದೆನ್ನ ಕಣ್ಣೆಂದಂತ ರಂಗವ ಹಿಕ್ಕಿ ಕೆಳದಿಯೊಳಾಡಿದಳು (ಕುರಾಜಾಂ. ೨೩-೧೧). ೯. ಕೆರೆ; ತುರಿಸು: ಪಕ್ಕದ್ವಂದ್ವಂಗಳು ಝಾಡಿಸಿ ಕೆಲಕೆ ನಿವಿರ್ದೊತ್ತಿ ಮೂಗಿಂದ ಗೋಣಂ ಹಿಕ್ಕುತ್ತಂ ಬೀದು ಗೇಹಂಗಳನಡರಿ . . . ಕೂಗಿತಾ ತಾಮ್ರ ಚೂಡಂ (ಸೂಕ್ತಿಸು. ೯-೩೦). ಹೆಕ್ಕು₁ : ೧. ಸರಳು ಹೊಕ್ಕವು ಹೆಕ್ಕಿದವು ಕೇಚರಬಲಪನೊಕ್ಕಿದವು ತೂಱಿದಪರಿಘುನ ಚುಚ್ಚಿದವು ಹೆಚ್ಚಿದವೆಲು ದೆಸೆಗಳಲಿ (ಕುವ್ಯಾಅ. ೨೦-೨೨).

ಪಿಕ್ಕಿ ನೋಡು, ಹಿಕ್ಕಿ ನೋಡು = ೧. ಬಗೆದು ನೋಡು; ವಿಂಗಡಿಸಿ ಪರೀಕ್ಷಿಸು; ವಿವೇಚಿಸು: ಎಂತೆಂತು ಪಿಕ್ಕಿ ನೋಟಱ್ಪೊಡಮಂತಂತೆ ವಿಚಾರಸಹಮಾನಾ × × × ದ್ಯಂತಂ ಜೈನಾಗಮಮನದಂತಿಂತುಂತೆಂದೆ ನಲ್ಮದೆಂ. ಬಂದವುದೇ (ಸಮುತ. ೩-೨೪); ಕೆಲವರು ಮಾತ್ರ ಎಲ್ಲವನ್ನೂ ಪಿಕ್ಕಿ ನೋಡುವ, ಯಾವುದನ್ನಾದರೂ ತೂಕ ಮಾಡಲು ತವಕಿಸುವ . . . ನಿಷ್ಪಕ್ಷಪಾತಪ್ರಕೃತಿಯವರು (ಕಚಾ. IV. ೩೮೮೪); ತನ್ನ ಸಮಕಾಲೀನ ವಾದ ಸಮಯ ಅಥವಾ ಮತಗಳನ್ನು ಹಿಕ್ಕಿ ನೋಡುವುದು . . . ಅವನ ಗ್ರಂಥದ ಮುಖ್ಯೋದ್ದೇಶ (ಸಂಶೋತ. ೫೦). ೨. ಬಿಡಿಸಿ ನೋಡು; ವಿಭಾಗ ಮಾಡಿ ನೋಡು; ಸೀಳಿ ನೋಡು: ಒದವಿ ಕೊಯ್ದುಂ ಕೊಱೆದುಮ್ ಹಿಕ್ಕಿ ನೋಡಿದೊಡೆ ಸದಮಲಾಮೃತವನೇ ಕಾಣಿಸುತೆ ಪಲಸುಗಳ್ ವಿದಿತಸಜ್ಜನರಂತೆ ಮೆಱೆದುವು (ಕದ್ಮರಾ. ೯-೨೪).

[ದೇ. ೫ ಕೊಡ. ಪಿಕ್, ಪಿಗ್]

ಪಿಕ್ಕುಳಿಕೆ, ಪಿಕ್ಕುಳಿಕೆ, ಪಿಕ್ಕುಳಿಗ, ಪೆಕ್ಕಳಿಗ (ನಾ). ಒಂದು ಬಗೆಯ ಹಕ್ಕಿ; ಪಿಕಳ: ಗಳೆಗಳಂಟಿಗೆ ಸಿಲುಕಿದವು ಪಿಕ್ಕುಳಿಕೆ[ಜಾಹಿಂ. ಗ] ಪಂಜರ ಮಂಜರಿಗ ಮಿಮ್ಮುಲಿಗ ಲಾವುಗೆ ಸರಲೆ ಬಾಱುಲಿಗಳೆಚ್ಚ ಮಿಂಚಿಯಾಲಿ (ಪಿಂಪಾ. ೩-೩-೦೮); ಪಿಕ್ಕುಳಿಕ ಚಂದೋತ ಗೀಜಗ ಕುಕ್ಕುಕೋಗಿಲೆ . . . ಕಂಡವಕ್ಕಿಗಳವಱೊಳೊಪ್ಪಿದುದು (ಜಾಳ್ಮರಾ. ೩-೨೨). ಪಿಕ್ಕುಳಿಕೆ: " ರಕ್ತ ಚ್ಛದಂ ಪಿಕ್ಕುಳಿಕೆ " (ಜುಂಗಾ. ೩೨-೯). ಪಿಕ್ಕುಳಿಗ: ಮೇಲಿನ 'ತೊರರಾ' ಪ್ರಯೋಗದ ಪಾಠಾಂತರವನ್ನು ನೋಡಿ. ಪೆಕ್ಕಳಿಗ: ಪೆಕ್ಕಳಿಗ ಗಿಳಿ ಗುಬ್ಬಿ ಸಾಳುವ (ಅತ್ತರಾ. ೦೦-೨೩). [ <ಪಿಕಳ ]

ಪಿಕ್ಕುಳಿಕೆ 'ಪಿಕ್ಕುಳಿಕ' ನೋ.

ಪಿಕ್ಕುಳಿಗ 'ಪಿಕ್ಕುಳಿಕ' ನೋ.

ಪಿಕ್ಕೆ₁ 'ಪಿಳ್ಕೆ' ನೋ.

ಪಿಕ್ಕೆ₂ (ನಾ). ಒಂದು ಬಗೆಯ ಸಸ್ಯ ಮತ್ತು ಅದರಿಂದ ಉತ್ಪನ್ನವಾಗುವ ಸುಗಂಧದ್ರವ್ಯ: " ಜಾತಿಮಾಲತಿ ವಾಸಂತಿ ಮಾಧವಿ ಮಲ್ಲಿಗೆ ವಿಚಕಿಳಂ . . . ಮತ್ತದು ವಿಳಕ್ಕಿಳಭಿಕೆ ಪಿಕ್ಕೆಯುಕ್ಕುಂ " (ಚ್ಯುತಕೋ. ೩೮-೩೪); ಅರೆದಾಸವದಿಂದಂ ಬೋಟರಸಂ ಲಘು ಪಿಕ್ಕೆಯೆಂಬಿವಂ ಬೆರಸಿ ಮನೋ ಹರಮಾಗಿ ಧೂಪಮುಂ ಕುಡೆ (ಲೋಕೋಪ. ೭-೫೬). [ <ಸಂ. ಸ್ಪೃಕ್ಕಾ]

ಪಿಕ್ಚರ್ 'ಪಿಕ್ಚರು' ನೋ.

ಪಿಕ್ಚರು, ಪಿಕ್ಚರ್ (ನಾ). ಚಲನಚಿತ್ರ; ಸಿನಿಮಾ: ನನ್ನ ಮಗಳು ಅವಳ ಸ್ನೇಹಿತೆಯರೊಡನೆ ಪಿಕ್ಚರಿಗೆ ಹೋಗಿದ್ದಾಳೆ (ಜನ). ಪಿಕ್ಚರ್: ಪಿಕ್ಚರ್ ಶುರುವಾಗುವುದು ಆರೂವರೆಗೆ (ದೂಕಟ್ಟ. ೨೫೮). [ ←ಇಂ. Picture ]

ಪಿಗಳ (ನಾ). ಒಬ್ಬಾತನ ಹೆಸರು: ಕುನ್ದತೂರ ತುಱುಗೊಳೊಳಾ ನ್ರಿಱಿದು ಸತ್ತೊ ತಾಮ್ಮಯ ಪಿಗಳಂ (ಎಳ. X. ಕುಳಾ. ೨೪೪-೫; ಸು. 890 ). [ ? ]

ಪಿಗ್ಗು 'ಪಿಳ್ಗು' ನೋ.

ಪಿಚ್₁ (ನಾ). ಒಂದು ಅನುಕರಣ ಶಬ್ದ: 'ಪಿಚ್ಚೆನ್ನು' ಪರಾ.

ಪಿಚ್₂ (ನಾ). (ಕ್ರಿಕೆಟ್ ಆಟದಲ್ಲಿ) ಗುರಿಕೋಲುಗಳ ಮಧ್ಯದ ಸ್ಥಳ: ಮಳೆ ಬಂದು ಪಿಚ್ ಬಹಳ ಕೆಟ್ಟದ್ದರಿಂದ ಇಂಗ್ಲೀಷ್ ಆಟಗಾರರಲ್ಲಿ ಐದು ಮಂದಿ . . . ಔಟಾದರು (ಪಾಂಗೇ. ೧೫೦). [ ←ಇಂ. Pitch]

ಪಿಚಂಡ (ನಾ). ೧. ಹೊಟ್ಟೆ; ಉದರ: ಶ್ರೀಮತ್ಕಾಂಡಜಜಾಂಡಮಂಡಲ ಪಿಚಂಡಾಪ್ಯಾಯ ಮಾಜಿಷ್ಠರಂ (ಹಮ್ಮಾರ. ೧-೧); ಪಾಹಿ ಭುವನತ್ರಯ ಪಿಚಂಡಚಿದಖಂಡಾ (ಜಾಪಾಕ. ೧-೨-೫೫). ೨. ಸ್ಥೂಲವಾದ ತೊಡೆ: "ಊರುಃ, ಸಕ್ಥಿಃ, ಪಿಚಂಡಂ ?__ ಈ ೩ ಹೆರ್ದೊಡೆ" (ಕಲಾಡು. ೫೫-೩೬೧). [ ಸಂ. ]

ಪಿಚಂಡಿ₁ (ನಾ). = ಪಿಚಂಡ ೨: "ಊರುಗಳು ಪಿಚಂಡಿಗಳೆನಲು ಪೆರ್ದೊಡೆಗೆ ನಾಮಮುಕ್ಕುಂ" (ಚುಂಗಾ. ೯೪-೦೭). [ ಸಂ. ಪಿಚಂಡಿನ್ ]

ಪಿಚಂಡಿ₂ 'ಪಿಚಾಡಿ' ನೋ.

ಪಿಚಂಡಿಲ, ಪಿಚಂಡಿಳ (ಗು). ೧. ಸ್ಥೂಲವಾದ; ದಪ್ಪ; ತೋರ. ಪಿಚಂಡಿಳ: (ನಾ). ೨. ಸ್ಥೂಲವಾದ ಹೊಟ್ಟೆಯುಳ್ಳವನು; ಡೊಳ್ಳುಹೊಟ್ಟೆಯವನು: "ಪಿಚಂಡಿಳಃ, ಬೃಹತ್ಕುಕ್ಷಿಃ, ತುಂದಿಲಃ, ಉದರಿಳಃ __ಈ ೪ ಹೊಟ್ಟೆಗಂ" (ಕಲಾಡು. ೯೯-೧೩೪). [ ಸಂ. ]

ಪಿಚಂಡಿಳ 'ಪಿಚಂಡಿಲ' ನೋ.

ಪಿಚಕ್ (ನಾ). ಒಂದು ಅನುಕರಣ ಶಬ್ದ: " ಪಿಚಕ್ ಎನಿಸುವುದು (ಪಿಚಕಾರಿ, ಜೀಕಳಿ) " (ಶಾತಕೋ. ೧೭); ಪಿಚಕ್ ಪಿಚಿಕ್ಕೆಂದು . . . ಹಾರು ತ್ತಿದ್ದ ಕೆಸರಿನಲ್ಲಿ, ಎಚ್ಚರಿಕೆಯಿಂದ, ಆದರೂ ಆವಷ್ಟು ಬೇಗಬೇಗನೆ, ಕಾಲು ಹಾಕಿದಳು (ಮಲೆಮ. ೬೫೮). 'ಪಿಚಕ್ಕನೆ' ಪರಾ.

ಪಿಚಕಾರಿ (ನಾ). ೧. ನೀರು, ಓಕುಳಿ ಮುಂತಾದುವನ್ನು ಎರಚುವುದ ಕ್ಕಾಗಿ ಬಳಸುವ ಒಂದು ಬಗೆಯ ಸಾಧನ; ಜೀರ್ಕೊಳವಿ; ಜೀಕಳಿ: ನೀರು ನಿಂತ ಪಕ್ಷದಲ್ಲಿ ಡಿ.ಡಿ.ಟಿ. ಅಥವಾ ಸೀಮೆಯೆಣ್ಣೆಗಳನ್ನು ಈ ಸ್ಥಳ

ಗಳಲ್ಲಿ ಪಿಚಕಾರಿ ಹೊಡೆಸಬೇಕು (ಗೃಹಚಿ. ೧೪೬); ಈ ಬಣ್ಣಗಳ ತೀರ್ಥವನ್ನು ನಿತ್ಯವೂ ನೆತ್ತಿಗೆ ಪಿಚಕಾರಿಯಿಂದ ಹೊಡೆಯಬೇಕು (ಅದೇ. ೧೩). ೨. ಮಲಬದ್ಧತೆಯ ಪರಿಹಾರಕ್ಕಾಗಿ ಗುದಪ್ರದೇಶಕ್ಕೆ ನೀರು ಪ್ರವೇಶಿಸುವಂತೆ ಮಾಡುವ ಸಾಧನ: **ಪಿಚಕಾರಿ ಹೊಡೆದು** ಮಲ ವಿಸರ್ಜನೆ ಮಾಡಿಸಬೇಕು (ಗ್ರಾಮಾಕ. ೧೨೪). ೩. (ಆಲಂ) (ಬಾಯಿಯಿಂದ) ಚಿಮ್ಮಿಸಿದುದು: ಕುರ್ಚಿಯ ಹಿಮ್ಮಗ್ಗುಲು ಇರುವ ಕಿಟಕಿಯಲ್ಲಿ ತಂಬುಲದ ಪಿಚಕಾರಿಯನ್ನು ಬಿಡುತ್ತಿದ್ದರು (ರಂಗರೋ. ೧); ಪಾನಪಟ್ಟಿಯ ಪಿಚಕಾರಿಯನ್ನು ಹೊಡೆದು, ಸಿಗರೇಟಿನ ಒಂದು ಝುರುಕಿಯನ್ನು ಎಳೆದು . . . ಕೇಳಿದ (ದೀಶಹ. II. ೨೦೩). [←ಹಿಂ. ಮರಾ. ಪಿಚಕಾರೀ./ತುಳು. ಪಿಚ್ಕಾರಿ, ಪಿಸ್ಕಾರಿ; ತೆಲು. ಪಿಚಿಕಾರು. ಪಿಚ್ಚಿಕಾರು]

**ಪಿಚಕ್ಕನೆ** (ಅ). ಪಿಚಕ್ ಎಂದು ಶಬ್ದವಾಗುವ ಹಾಗೆ: ಅಂಗಾತನಾಗಿ ಬಿದ್ದ. ವ್ಯ ಆಳದ ಗೊಜ್ಜೆಯಲ್ಲಿ ಬಿದ್ದಾಗ ಪಿಚಕ್ಕನೆ ಗೊಜ್ಜು ಚಿಮ್ಮಿ . . . ಅಲ್ಲಿಂದ ಎದ್ದು ಕಾಲೆತ್ತಿ ಎಳೆದು ದಾಟುವುದರಲ್ಲಿ ಹೋದ ಪ್ರಾಣ ಕೈಗೆ ಬಂತು (ಕಥಾ. II. ೧೨೩೩); ಬಾಯಲ್ಲಿಯ ತಂಬಾಕನ್ನು ಪಿಚಕ್ಕನೆ ಉಗುಳಿ . . . ಕುದುರೆಯ ವೇಗವನ್ನು ಹೆಚ್ಚಿಸಿದನು (ಅಂಗಾಕ. ೫೪).
[ಪಿಚಕ್ + –ಅನ್ನೆ]

**ಪಿಚವ್ಯ** (ನಾ). ೧. ಹತ್ತಿಯ ಗಿಡ; ಅರಳೆಯ ಗಿಡ. ೨. ಹತ್ತಿ; ಅರಳೆ: "ಪಿಚವ್ಯಃ, ಬಾದರಃ, ಕಾರ್ಪಾಸಃ—ಈ ೩ ಪಟ್ಟು (ಹತ್ತಿ)" (ಹಲಾಯು. ೩೪–೪೪). [ಸಂ.]

**ಪಿಚಾಡಿ, ಪಿಚಂಡಿ$_2$, ಪೀಚಾಡಿ** (ನಾ). ೧. ಹಿಂಭಾಗ; ಹಿಂಬದಿ: ಫಾಜಲ್‌ಖಾನನು ತನ್ನ ದಂಡು ತೆಗೆದುಕೊಂಡು ಅಗಾಡಿಗೆ ಆಗಿಕೊಂಡು ಪಿಚಾಡಿಗೆ ಜಾನ್ ಕಸ್ತೂರಿ ಆಗಿಕೊಂಡು ಮಧ್ಯಗುನುಗು ಹಾಕಿಕೊಂಡು . . . ಹೋಗುತ್ತಾ ಇದ್ದಲ್ಲಿ (ರಾಕೇಂದ್ರ. ೪೦). ೨. ಕುದುರೆಯ ಹಿಂದಿನ ಕಾಲು,—ಹಿಂಗಾಲು: (೪). ೩. ಕುದುರೆಯ ಹಿಂಗಾಲುಗಳನ್ನು ಕಟ್ಟುವ ಹಗ್ಗ: ಪೇಟೆಗೆ ಹೋಗಿ . . . ಕುದುರೆಯ ಮುಂಗಾಲು ಹಿಂಗಾಲುಗಳಿಗೆ ಕಟ್ಟುವ ಅಗಾಡಿ ಪಿಚಾಡಿ ಹಗ್ಗಗಳನ್ನು ತೆಗೆದುಕೊಂಡು ಬಂದರು (ಕಗಗ. ೩೧); ಸಾಳೋನರಸಿಂಗರಾಯನ ಖಾಸಾಕುದುರೆಯನ್ನು ಕಟ್ಟಿದ್ದ ಕಡೆಗೆ ಹೋಗಿ ಸ್ವಲ್ಪವೂ ಗದ್ದಲವಾಗದಂತೆ ಅವರ ಅಗಾಡಿಯನ್ನೂ ಪಿಚಾಡಿಯನ್ನೂ ಬಿಚ್ಚುತ್ತಾ ಇದ್ದನು (ಐತ್ರಾ. ೧೧). ಪಿಚಂಡಿ$_1$: (೪). **ಪೀಚಾಡಿ**: ೧. ಮೆಟ್ಟಿ ಸೌಧಾಗ್ರತರುತುದಿಗಳಂ ಸಾರೆ ಹಯದೊಟ್ಟು ಪೀಚಾಡಿಯಾ ಗಾಡಿಯಂ ಕಿತ್ತು ಘುರಕೇರಿದವು (ಚಕಮು. ೫–೪); ಬೀಗೆ ನಿರ್ವಸನ ರಕ್ತಾಂಭ್ರುಯೋಳ್ ವತ್ತಲಾಗಾಡಿ ಪೀಚಾಡಿ ಕಿತ್ತು (ಚಕಮು. ೧೨–೧೪).

**ಪಿಚಂಡಿ ಬಿಗಿ**=ಹಿಂದಿನಿಂದ ಕೈಗಳನ್ನು ಕಟ್ಟು; ಹಿಮ್ಮುಖವಾಗಿ ಕಟ್ಟು: "ಹೆಡೆಮುರಿ ಕಟ್ಟು" (ಚಾಕಕೋ. ೦೬).
[←ಹಿಂ. ಪಿಛಾಡೀ, ಪೀಛವಾಡೀ; ಮರಾ. ಪಿಛಾಡೀ]

**ಪಿಚಿ** (ನಾ). ಒಂದು ಅನುಕರಣ ಶಬ್ದ: (೪).
ಪಿಚಿಪಿಚಿ (ದ್ವಿರುಕ್ತಿ): ಮಾತುಮಾತಿಗೊಮ್ಮೆ ಪಿಚಿಪಿಚಿ ಉಗುಳುವ ಈ ಮಹಾಪುರುಷರ ಸಹವಾಸ ಬೇಡ (ಗಾಳಿಗು. ೩೨); ಮಳೆ ಬಂದು ನೆಲವೆಲ್ಲ ಪಿಚಿಪಿಚಿಯಾಗಿದೆ (ರೂಢಿ).

**ಪಿಚಂಡ** (ನಾ). ಹೊಟ್ಟೆ; ಉದರ: "ಪಿಚಂಡಃ, ಕುಕ್ಷಿಃ, ಜಠರಂ, ಉದರಂ, ತುಂದಂ ೫ ಹೊಟ್ಟೆ, ಬೊಜ್ಜೆ" (ಸಿದ್ಧಾಂತಿ. ೧೯೧). [ಸಂ.]

**ಪಿಚಂಡಿಲ** (ಗು). ಸ್ಥೂಲವಾದ ಹೊಟ್ಟೆಯನ್ನು ಉಳ್ಳ; ಡೊಳ್ಳು ಹೊಟ್ಟೆಯಿಂದ ಕೂಡಿದ. [ಸಂ.]

**ಪಿಟಿಕೆ, ಪಿಟ್ಟಿಕೆ, ಹಿಚಿಕೆ** (ನಾ). ಪಕ್ಷಿ ಅಥವಾ ಪ್ರಾಣಿಗಳ ಹಿಕ್ಕೆ,—ಮಲ: ಈ ಹಕ್ಕಿ . . . ತನ್ನ ಪಿಟಿಕೆ ಯಾರಿಗೂ ಸಿಕ್ಕದಿರಲೆಂದು ಅದನ್ನು ನೆಲವಲ್ಲಿ ಹೂಳುತ್ತದೆ (ಕೃಪಾ. I, ೨೦): ಅಕಸ್ಮಾತ್ ಮಾಂಸದ ಚೂರುಗಳನ್ನು ಹದ್ದುಗಳು ನುಂಗಿಬಿಟ್ಟರೆ . . . ಬೆಳಗಾದ ಮೇಲೆ ಅವುಗಳ ಪಿಟಿಕೆಯನ್ನು ಹುಡುಕಿ ವಜ್ರಗಳನ್ನು ಆಯ್ದುಕೊಳ್ಳುತ್ತಾರೆ (ಕೃಪಾ. II, ೩೪). **ಪಿಟ್ಟಿಕೆ**: (ರಘುಕಾಂ. ೩೯೩). **ಹಿಚಿಕೆ**: ಮೀರೆಯ ಗದ್ದೆಗೆ ಗೊಬ್ಬರವಾದೀತೆ ಗುಬ್ಬಿಯ ಸಾವಿರ ಹಿಚಿಕೆ (ಇಂಕಾಕ. ೧೪೯–೬೪); ಎಷ್ಟೋ ಸಾರಿ ಅದು ಎಲೆಯ ಮೇಲೆ ಹಕ್ಕಿಗಳ ಹಿಚಿಕೆಯಂತೆ ಬಿದ್ದಿರುವುದು (ಪಾಂಶ್ರ. II. ೧೦೨೩); ಅರ್ಧ ಬೆಂದ ಅನ್ನ . . . ಪ್ರಾಣಿಗಳ ಹಿಚಿಕೆ, ಜಿರಳೆ, ಕೂದಲುಗಳಿಂದ ತುಂಬಿದ ಆಹಾರ (ಅಕ್ಕಾಸ. ೭). [< ಪಿಳ್ಕೆ]

**ಪಿಚಿಗುಟ್ಟು** (ಕ್ರಿ). ಕೆಸರಿನಿಂದ ಗಲೀಜಾಗು,–ಕೊಳಕಾಗು: ಹೆಚ್ಚಾದ ಮಳೆ ಬಿದ್ದು ನೆಲವೆಲ್ಲ ಪಿಚಿಗುಟ್ಟುತ್ತಿತ್ತು (ರೂಢಿ). [ಪಿಚಿ + ಕುಟ್ಟು$_1$]

**ಪಿಚು** (ನಾ). ೧. ಅರಳೆ; ಹತ್ತಿ: "ತೂಲಕಂ, ಪಿಚುಃ — ಈ ೨ ಅರಳೆ" (ಹಲಾಯು. ೩೪–೪೪). ೨. ಹತ್ತಿಯ ಗಿಡ. ೩. ಎರಡು ತೊಲೆಗಳ ತೂಕ. [ಸಂ.]

**ಪಿಚುತೂಲ** (ನಾ).=ಪಿಚು ೧. [ಸಂ.]

**ಪಿಚುತೂಳಕ** (ನಾ).=ಪಿಚು ೧: "ಹತ್ತಿ ಕಾರ್ಪಾಸಂ ಪಿಚವ್ಯಮಾ ಬಾದರಂ ಅರಳೆ ಪಿಚುತೂಳಕಾಖ್ಯಂ" (ಕಂಗರಾ. ೩೬–೨೬). [ಸಂ. ಪಿಚುತೂಲಕ]

**ಪಿಚುಮಂದ** (ನಾ). ಬೇವಿನ ಮರ: "ಅರಿಷ್ಟಃ, ಪಿಚುಮಂದಃ — ಈ ೨ ಬೇವು" (ಹಲಾಯು. ೩೩–೪೩); ಚುಚುರ ಪಿಚುಮಂದಪಲ್ಲವಸಮುಲ್ಲಸಿತಂ ಮುಸಲೋರುಸೀರಡಂಬರಯುತಮೋಂ ಮನಕ್ಕೊಲವನಿತ್ತುದೊ ಬಾಗಿಲರಿಷ್ಟಸದ್ಮದಾ (ಕುಂದ್ರಶ. ೩–೪೭); ಮಾವು ರಸಾಲ ಪಿಚುಮಂದ . . . ಮರುಗ ಪಚ್ಚೆಯ ದವನ ಬಿಲ್ವ ಬೆಳವಲ ನಿಂಬೆ ಹೀರಳೆಯು (ಕೋರಾ. ೧–೦೭); ಪಿಚುಮಂದಪತ್ರವ ಪವಿತ್ರಮನೊಲಿದು ಬಿನ್ನವಿಲ್ಲದೆ ಪಿಡಿಸಿ (ನವವೋ. ೧೫–೨೦). [ಸಂ.]

**ಪಿಚುಮರ್ದ** (ನಾ).=ಪಿಚುಮಂದ: "ಅರಿಷ್ಟಃ, ಸರ್ವತೋಭದ್ರಃ, ಹಿಂಗುನಿರ್ಯಾಸಃ, ಮಾಲಕಃ, ಪಿಚುಮರ್ದಃ, ನಿಂಬಃ — ೬ ಬೇವಿನ ಗಿಡದ ಹೆಸರುಗಳು" (ಸಿದ್ಧಾಂತಿ. ೧೨೬). [ಸಂ.]

**ಪಿಚುಲ, ಪಿಚುಳ** (ನಾ). ೧. ಅರಳೆ; ಹತ್ತಿ. ೨. ಹುಣಿಸೆಮರ. ೩. ಒಂದು ಬಗೆಯ ಸಸ್ಯ; ನೀರುಕಣಗಿಲೆ. ೪. ಒಂದು ಬಗೆಯ ಸಸ್ಯ; ಕಕ್ಕೆಗಿಡ: "ಝಾವುಕಃ, ಪಿಚುಲಃ–ಈ ೨ ಪಿಚುಲಂ?" (ಹಲಾಯು. ೩೨–೪೨); "ಪಿಚುಲಃ, ಝಾಬುಕಃ—೨ ಕಕ್ಕೇಗಿಡದ ಹೆಸರುಗಳು" (ಸಿದ್ಧಾಂತಿ. ೦೨೦). ೫. ಒಂದು ಬಗೆಯ ಕಾಗೆ; ಸಂಬಾರ ಕಾಗೆ. **ಪಿಚುಳ**: ೩. "ತೊಡಿಗಣಗಿಲಾ ಲೋಮಕಂ ಪಿಚುಳಮುದು" (ಕಂಗರಾ. ೩೪–೧೧). [ಸಂ.]

**ಪಿಚುಸೋದ** (ನಾ). ಹತ್ತಿಯನ್ನು ಎಕ್ಕುವ ಕೋಲು; ಕುಡುಹು: "ಪಿಚುಸೋದಮೆನೆ ಕುಡುಹು" (ಕಂಗರಾ. ೬೦–೪೯). [ಪಿಚು + ಸೋದ]

**ಪಿಚುಳ** 'ಪಿಚುಲ' ನೋ.

**ಪಿಚ್ಚ$_1$** (ನಾ). ೧. ಬುದ್ಧಿಕೆಟ್ಟವನು; ಹುಚ್ಚ: ಎಲೆಲೆ ಪಿಚ್ಚ ಬ್ರಾಹ್ಮಣ ನಾನೆ ನಿನಗೆ ತೊತ್ತಿನ ಮಗ ನಾನೆ ನಾನೆಯೆನೆ (ಶಂಕರ. ೬–೦೩೨). ೨. ಶಿವ: ಪರಮನೇ ಪಿಚ್ಚನೇ ಪಚ್ಚದಾಳ್ದ ಪಶುಪತಿಯೆ . . . ಎಂದು ನಾಂದೀ ಪದವ ಪಾಡಿದನು ನಂಬಿ ಶಂಭುವಿನಿದಿರೊಳು (ಸೌಂದಕ. ೫–೨೬). [ದೇ.॥ ತಮಿ. ಮಲ. ಪಿಚ್ಚನ್; ತೆಲು. ಪಿಚ್ಚ, ಪಿಚ್ಚಿ = ಉನ್ಮಾದ]

**ಪಿಚ್ಚ$_2$** 'ಪಿಸಿತ$_1$' ನೋ.

**ಪಿಚ್ಚಂಬಕ** (ನಾ). ೧. ಗೀಜು ತುಂಬಿದ ಕಣ್ಣು; ಪಿಸರುಗಣ್ಣು. ೨. ಪಿಸರುಗಣ್ಣಿನವನು; ಗೀಜುಗಣ್ಣನ್ನು ಹೊಂದಿರುವವನು: ನಂಬಿ ಕೋಪದೊಳು ಪಿಚ್ಚಂಬಕನ ನೋಡಿದು ಪೇಳೆ (ತ್ರಿಪಾ. ೦೬–೨೨).
[ಪಿಚ್ಚು + ಅಂಬಕ]

**ಪಿಚ್ಚಕಾಯಿ** (ನಾ). ಒಂದು ಬಗೆಯ ಮಾವು: ಮಾವಿನ ಜಾತಿಗಳು: ಗೋಳಕಾಯಿ, ಬಾದಾಮಿ, ರಸಪುರಿ, ಜೀರಿಗೆ, ಪಿಚ್ಚಕಾಯಿ, ಕರೀಕಾಯಿ (ಸಮ್ಮಸು. ೨೩೭). [ ಪಿಚ್ಚ ? + ಕಾಯಿ (< ಕಾಯ್) ]

**ಪಿಚ್ಚಟ** (ಗು). ೧. (ಒತ್ತಿದುದರಿಂದ) ಚಪ್ಪಟೆಯಾದ; ಅಗಲವಾದ. (ನಾ). ೨. (ಒತ್ತುವಿಕೆಯಿಂದ) ಚಪ್ಪಟೆಯಾದ ವಸ್ತು. ೩. ಕಣ್ಣಿನ ಒಂದು ಬಗೆಯ ರೋಗ. ೪. ತವರ. [ಸಂ.]

**ಪಿಚ್ಚವುಣಿಗ** (ನಾ). ೧. ಮಾಂಸವನ್ನು ತಿನ್ನುವವನು. ೨. ದೈತ್ಯ; ರಾಕ್ಷಸ: "ಪಿಚ್ಚವುಣಿಗನೆಂದೊಡೆ ನಿರುತಿವೆಸರಕ್ಕು" (ಕನ್ನ. ೦೪).
[ ಪಿಚ್ಚ (< ಪಿಶಿತ) + - ಉಣಿಗ ]

**ಪಿಚ್ಚ$_1$** (ನಾ). ಒಂದು ಅನುಕರಣ ಶಬ್ದ.

**ಪಿಚ್ಚಹಾಗು** = (ಕರಾ) ತೆಳ್ಳಗಾಗು; ತೆಳುವಾಗು: ನೀರು ಸ್ವಲ್ಪ ಹೆಚ್ಚಾಗಿದ್ದಿರಬೇಕು. ಹಿಟ್ಟೆಲ್ಲ ಪಿಚ್ಚೆಯಾಗಿದೆ. ರೊಟ್ಟಿ ತಟ್ಟಲು ಬಾರದು (ಲೋಕ).

**ಪಿಚ್ಚ$_2$** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು: "ರಕ್ತಪುಷ್ಪೀ—ಪಿಚ್ಚ, ಉತ್ಪಲರ್ಣಾ, ದಾಸಾಳ" (ಚಿಕಂ. ೦೬೪); ಜಡೆಗೆ ಪಿಚ್ಚದ [ಪಾಠಾಂ. ಪೀಚಿದ]ಲಚಾಯನೆಂದೊ ಪಿಡಿದ ದಂಡವನುಡಿದನೆಂದೊ ಮುಡಿದನೆಂದೊ ಮಾಸಲಾದ ಪ್ರಸೂನ ಪತ್ರಗಳ (ಬಸವೇಶ. ೩-೩೦).
[ ದೇ. ॥ ತಮಿ. ಪಿಚ್ಚಿ=ದೊಡ್ಡಗಾತ್ರದ ಮಲ್ಲಿಗೆ ]

**ಪಿಚ್ಚ$_3$** (ನಾ). ವೃಷಣ; ತರಡು: ಅವನು ಬರಲಿ. ಪಿಚ್ಚಗಳು ಎಗರುಸ್ತೀನಿ—ಸುಮ್ಮನೆ ಬಿಡ್ತೀನಿ ಅಂತ ತಿಳಿದಿದ್ದೀರಾ? (ಉಣಚೆ. ೦೪೩).
[ ದೇ. ॥ ತುಳು. ಪಿಚ್ಚ; ತೆಲು. ಪಿಚ್ಚ ]

**ಪಿಚ್ಚ$_4$** (ನಾ). (ವೀಳೆಯದೆಲೆಯ) ಕಟ್ಟು: ತುಪ್ಪ ಏನು ಮಾಡೀತರ್ಲೋ ಒಂದು ಪಿಚ್ಚ ವೀಳೇದೆಲೆ ಒಗದರ . . . ಎಂದನು ರಾಮರಾಯ (ಜಪಮಾಯ. ೦೬೬). [ ? ]

**ಪಿಚ್ಚಕೆ** 'ಪಿಚಿಕೆ' ನೋ.

**ಪಿಚ್ಚಹೂ** (ನಾ). ಒಂದು ಬಗೆಯ ಹೂವು: "ರಾಜಕೇ, ರಾಹಕಃ—ಈ ಯೆರಡುಂ ಪಿಚ್ಚಹೂ" (ಚಿಕಂ. ೦೩೭). [ ಪಿಚ್ಚ$_2$ + ಹೂ (< ಪೂ) ]

**ಪಿಚ್ಚು** (ನಾ). ಕಣ್ಣಿನ ಕೊಳೆ, - ಹೊಲಸು; ಪಿಸರು: ಅಂಗವೆಲ್ಲವು ನೇತ್ರರೋಸರಿ ನಾರುತ್ತಿಹುದು ಕಂಗಳಲಿ ಪಿಚ್ಚು ಸುರಿವುತ ಸುಗಿದ ಮೈಯ ವಯವಂಗಳೊಳು ಕೀವು ಸೋರುವ ಬೇನೆಯನ್ನು ತಾನಂಗೈಸಿಕೊಂಡಿರುತಿರೆ (ತ್ರಿಕಾ. ೩೦-೫೬); ಈ ನೀರು ಕಣ್ಣಿಗೆ ದೊರೆಯದಿದ್ದರೆ ಕ್ಷಣಮಾತ್ರದೊಳಗೆ ಪಿಚ್ಚಿನ ತರವು ಕಣ್ಣಿನ ಮೇಲೆ ಕೂತು ಅದು ಕೆಟ್ಟುಹೋಗಿರುತ್ತಿತ್ತು (ಕುಂಬಾಯು. ೪-೩೬): ಆ ಮುದುಕ ವಿಧವೆಯಾದ ರೇಣಮ್ಮನಂತೆ ಕಣ್ಣಿನಲ್ಲಿ ಪಿಚ್ಚು ಇಟ್ಟು ಬಾಯಲ್ಲಿ ಜೊಲ್ಲು ಸೋರಿಸುವುದಿಲ್ಲ (ಸೋಜಿಪ. ೨೬). 'ಪಿಳಿಚು' ಪರಾ.
[ ದೇ. ॥ ತಮಿ. ಪೀಳೈ; ತುಳು. ಪೇಂಚಿ=ಕೊಳೆ, ಹೊಲಸು; ಪ್ರಾಕೃತ. ಪಿಚ್ ]

**ಪಿಚ್ಚುಗಣ್ಣು** (ನಾ). ಪಿಸರಿನಿಂದ ಕೂಡಿದ ಕಣ್ಣು: ಗೀಜು ತುಂಬಿರುವ ಕಣ್ಣು: ಶಿಶುವಿನಾಳಿಧೀಶನ ಮುಂದೆ ಕೊಸರಿ ಕೊಸರಿ ಹೋಗದಿರು ಹಸನವಿಲ್ಲ ಹರೆಯವು ವಿಪರಿದ ಪಿಸುರು ಪಿಚ್ಚುಗಣ್ಣಿನ ಮುದಕೀ (ಶಂಠ. ೩೩-೩). [ ಪಿಚ್ಚು + ಕಣ್ಣು (< ಕಣ್) ]

**ಪಿಚ್ಚಿ** (ನಾ). ೧. ಅಳತೆ ಅಥವಾ ತೂಕದಲ್ಲಿ ಕಡಮೆಯಿರುವುದು: (೩). ೨. ನಾಣ್ಯವು ತೂಕ, ಬಣ್ಣ ಇವುಗಳಲ್ಲಿ ಕಡಮೆ ತರಗತಿಯಾಗಿರುವುದರಿಂದ ಅದನ್ನು ಮುರಿಸಬೇಕಾದಾಗ, ಕೊಡಬೇಕಾದ ಶುಲ್ಕ,—ವಟ್ಟ: ವಾಗೀಶರವರು ಕೊಡುವ ಮೊಹರೀ ಪಿಚ್ಚಿಯಿಲ್ಲದೇ ಮಾರುತ್ತದೆ. ತಾವು ಕೊಡುವುದು ಪಿಚ್ಚಿ ಕೊಟ್ಟು ಮುರಿಸಿಕೊಳ್ಳಬೇಕಾಗಿರುವುದರಿಂದ ಒಂದೇ ಕಡೆಯಲ್ಲದೆ ಹತ್ತುಕಡೆ ತಿರುಗಿ ಮುರಿಸಿ ಪದಾರ್ಥಂಗಳನ್ನು ತರಬೇಕಾಗಿರುವುದು (ಪ್ರಾಂ. ೦೩೩).

**ಪಿಚ್ಚಿಸೇರು** = ಕಡಮೆ ಅಳತೆಯ ಸೇರು: (೩).
[ ದೇ. ॥ ತೆಲು. ಪಿಚ್ಚ, ಪಿಚ್ಚಿ ]

**ಪಿಚ್ಚೆನ್ನಿಸು** (ಕ್ರಿ). ಏನೂ ಇಲ್ಲದಂತೆ ಭಾಸವಾಗು; ಖಾಲಿಯಾದಂತೆ ತೋರು,—ಕಾಣಿಸು: ಜೋಗದ ಜಲಪಾತವನ್ನು ತಳದಲ್ಲಿ ನಿಂತು ಘಂಟೆಗಟ್ಟಳೆ ನೋಡಿದ ಕಣ್ಣುಗಳಿಗೆ ನಯಾಗರದ ನೋಟ ಪಿಚ್ಚೆನ್ನಿಸಿತು (ಶಂಟರು. ೦೨೪). [ ಪಿಚ್$_1$ + ಎನ್ನಿಸು (< ಎನಿಸು$_1$) ]

**ಪಿಚ್ಚೆನ್ನು** (ಕ್ರಿ). = ಪಿಚ್ಚೆನ್ನಿಸು: ಅದನ್ನು ನೋಡಿ ದೈವಭಕ್ತನಾದ ಸಣ್ಣಪ್ಪನ ಮನಸ್ಸು ಪಿಚ್ಚೆಂದಿತು (ಕೃಷಿಕ. ೦೩೭).
[ ಪಿಚ್$_1$ + ಎನ್ನು (< ಎನ್$_1$) ]

**ಪಿಚ್ಛ** (ನಾ). ೧. (ಹಕ್ಕಿಗಳ) ರೆಕ್ಕೆ; ಗರಿ. ೨. ನವಿಲಿನ ಪುಚ್ಛ, - ಬಾಲ. ೩. ಬಾಣದ ಗರಿ. [ ಸಂ. ]

**ಪಿಚ್ಛಂದ** (ನಾ). ಅರಸರ ಮನೆ; ಅರಮನೆ. [ಸಂ.]

**ಪಿಚ್ಛಂದಕ** (ನಾ). = ಪಿಚ್ಛಂದ: ಈಶ್ವರಸದ್ಮನಾಂ ಪಿಚ್ಛಂದಕ ಪ್ರಭೇದಾಃ ಭವಂತಿ—ಅರಸುಗಳ ಮನೆಗಳಲ್ಲಿಯೂ ದೇವಸ್ಥಾನ ಮುಂತಾದವುಗಳಲ್ಲಿ ಅಲಂಕಾರವಾಗಿಯೂ ಚಿತ್ರವಾಗಿಯೂ ರಚಿಸಲ್ಪಟ್ಟಿರುವ ಬಾಗಿಲು, ಲೋವೆ ಮುಂತಾದ ತರಹಾಗಳ ವಿಶೇಷಗಳ ಹೆಸರುಗಳು (ಶಿಲ್ಪಂಕ. ೦೦೦). [ ಸಂ. ]

**ಪಿಚ್ಛಲ** (ಗು). ೧. ಜಾರುವ; ಜಾರಿಕೆಯುಳ್ಳ. ೨. ಗಟ್ಟಿಯಾದ: ಗಡ್ಡೆಗಡ್ಡೆಯಾಗಿರುವ. (ನಾ). ೩. ಕೆಸರುನೀರು; ರಾಡಿ; ಬಗ್ಗಡ; "ಪಿಚ್ಛಲ[ ಪಾಠಾಂ. ಪ್ಪಿಲ ]ಮೆನಲ್ಕೆಸಜನೀರೆಂದೆನಿಕ್ಕುಂ" (ಶಬ್ದಮ. ೦೨೪-೦೩). [ ಸಂ. ]

**ಪಿಚ್ಛಿಲ**(ಗು). ೧. = ಪಿಚ್ಛಲ ೧. (ನಾ). ೨. = ಪಿಚ್ಛಲ ೩. ಕೆಸರಿನಿಂದ ಕೂಡಿದ ಎಡೆ,—ಜಾಗ: "ಪಿಚ್ಛಿಲಂ, ವಿಜಲಕಂ—ಈ ೨ ಕೆಸಱುಳ್ಳೆಡೆ" (ಹಲಾಯು. ೦೨೨-೩೬). ೪. ಗಟ್ಟಿಯಾದ ಅಥವಾ ಗಡ್ಡೆಗಡ್ಡೆಯಾಗಿರುವ ಮೊಸರು: ಭೋಜ್ಯ ಭಕ್ಷ್ಯಂ ಪೇಯ ಲಲಿತ ಲೇಹ್ಯಂ ಚೋಷ್ಯ ಪಿಚ್ಛಿಲ ಷಡ್ರಸಗಳಂ ವಿಳಸವನುಗುಣದ ರುಚಿಯಂ ಮೇಳಿಯಾಱವವರ ಚರಣಾಂಬುಜಕ್ಕೆ ಶರಣಾ (ಬಸಕಂ. ೩೯-೨೮). [ ಸಂ. ]

**ಪಿಚ್ಛಿಲೆ** (ನಾ). ೧. ಒಂದು ಬಗೆಯ ಮರ; ಬೂರುಗದ ಮರ. ೨. ಅನ್ನದ ಗಂಜಿ. ೩. ಒಂದು ಬಗೆಯ ಮರ; ಕರೀಮರ: (೩).
[ಸಂ. ಪಿಚ್ಛಿಲಾ]

**ಪಿಚ್ಛೆ** (ನಾ). ೧. ಅನ್ನದ ಗಂಜಿ. ೨. ಬೂರುಗದ ಮರದ ಅಂಟು; ಎಲವದ ಮೇಣ: "ಪಿಚ್ಛಾ, ಶಾಲ್ಮಲೀವೇಷ್ಟಃ—೨ ಬೂರಗಂಟಿಂಕೆ ಹೆಸರು, ಎಲವದ ಮ್ಯಾಣ" (ಶಬ್ದಾಂಕ. ೦೨೩). ೩. ಹಾವಿನ ವಿಷಪೂರಿತವಾದ ಜೊಲ್ಲು. [ಸಂ. ಪಿಚ್ಛಾ]

**ಪಿಜ** (ನಾ). ದೊಡ್ಡಗಾತ್ರದ ಹಲಸು; ಹೆಬ್ಬಲಸು: ಪಿಲ (ಹಲಸು), ಪಿಜ (ಹೆಬ್ಬಲಸು) . . . ಉರೀ (ಜಂಕಿ) ಇತ್ಯಾದಿಗಳನ್ನು ಸಂಕೇತವಾಗಿರಿಸಿಕೊಂಡವರೆಂಬ ಅರ್ಥದಿಂದಲೋ . . . ಬಂದ ಕುಲನಾಮಗಳು, ಪಿಲತ್ತಾಯ, ಪಿಜತ್ತಾಯ . . . ಇತ್ಯಾದಿ (ತುಜಾಪ. ೦೩೩).
[ ← ತುಳು. ಪಿಜ, ಪೆಜ=ಕಾಡುಹಲಸು]

**ಪಿಜ್ಜ** 'ಪಜ್ಜ' ನೋ.

**ಪಿಟ$_1$** (ನಾ). ಒಂದು ಅನುಕರಣಶಬ್ದ: 'ಪಿಟಿಗುಟ್ಟು' ಪರಾ.

**ಪಿಟಪಿಟ** (ದ್ವಿರುಕ್ತಿ): ಬಾಯಿ ಪಿಟಪಿಟ ಎನ್ನುತ್ತಿದೆ (ಲೋಕ).

**ಪಿಟ$_2$** (ನಾ). ೧. ಧಾನ್ಯಗಳನ್ನು ತುಂಬಲು ಉಪಯೋಗಿಸುವ ಬಿದಿರಿನ ಬುಟ್ಟಿ; ಗಳಿಗೆ. ೨. ಛಾವಣಿ; ಮಾಡು. ೩. ಮನೆ; ಗೃಹ. [ಸಂ.]

**ಪಿಟಕ್** (ನಾ). ಒಂದು ಅನುಕರಣ ಶಬ್ದ : ಊರ್ವಿಳೆಯನ್ನು ಯಾರೂ ಪಿಟಕ್ ಎಂದು ಮಾತನಾಡಿಸಲಿಲ್ಲ (ಪೂಗು. ೪೪).

**ಪಿಟಕ$_1$** (ನಾ). ೧. ಬುಟ್ಟಿ ; ಪೆಟಾರಿ : ಮುಂತ್ಯೆದುಮಂ ಭೃತ್ಯನಂತೆ ಪಂಥಾನಮಂ ಸಂತಸದಿ ತೋರುತ ಖನಿತ್ರ ಪಿಟಕಂಗಳಂ ತಾಂ ತಳೆದು ಫಲಮೂಲಪುಷ್ಪೋಪಹಾರಂಗಳನ್ನರ್ಪಿಸುತ್ತಲಡಿಗೆ (ಪಂಶಾಶ. ೨-೦೦-೩೮); ಮಿಾಯಲ್ಕೃದಲ್ಕಿರ್ವರುಂ ಕೊಳೆ, ಮುದುಕಿ ಕೌತುಕವಾಗಿ ಮುಟ್ಟಿ ನೋಡಿದಳವರ ಪಿಟಕನಂ (ಶ್ರೀಚಿಶು. ೨೭೦-೨೦೫); ಪಿಟಕವೆಂದರೆ, ಪೇಟಕಾ, ಪೆಟ್ಟಿಗೆ (ಹಿಂದಶಾ. ೨೪); ರಜನಿಯೊಳ್ ಭದ್ರವಾಗಿಹ ಪಿಟಕದೊಳಗೆ (ಪಂಶಿಪ. ೦೩೩). ೨. ಗುಳ್ಳೆ ; ಬೊಕ್ಕೆ : "ಪಿಟಕಃ, ಸ್ಫೋಟಕಃ, ಗಂಡಃ-ಈ ೩ ಪು(ಹು) [ಪುಗು] ಟು" (ಪಟಾಪು. ೪೪-೪೫೦); ಜ್ವರದಾಹ ಶ್ವಾಸಕಾಸ ಬ್ರಣ ಪಿಟಕ ಶಿರೋರೋಗ ಸರ್ವಾಂಗಶೂಲಾದಿ ರುಜಾಸಂದೋಹ ಪಿಂಡಾಭರದಿನೊಳಯಿಸುಶುಂ (ಪರ್ಶಾ. ೦೦-೨೮). ೩. [ಬೌದ್ಧ] ಬೌದ್ಧಮತದ ಪವಿತ್ರ ಗ್ರಂಥ ; ೯ ಸೂತ್ರಪಿಟಕ, ವಿನಯಪಿಟಕ ಮತ್ತು ಅಭಿಧರ್ಮಪಿಟಕಗಳೆಂಬುವು ಮೂರು ಪ್ರಸಿದ್ಧವಾದ ಪಿಟಕಗಳು : ಚೀಣಾಭುಕ್ತಿಯಲ್ಲಿ ವಿನಿತಪ್ರಭಾ ಎಂಬ ಹೆಸರಾಂತ ಪಂಡಿತನಿದ್ದ. ಮೂರು ಪಿಟಕಗಳನ್ನೂ ಕರಗತ ಮಾಡಿಕೊಂಡಿದ್ದ (ಶ್ರಪಾಶ. I. ೨೦೬) ; ಪಿಟಕಗಳಿಗೂ ಅಟ್ಠಕತೆಗಳಿಗೂ ನಡುವೆ ಸೃಷ್ಟಿಯಾದ ಈ ಸಾಹಿತ್ಯದಲ್ಲಿ ಕೆಲವು ಗ್ರಂಥಗಳು ಉಳಿದಿವೆ (ಬುಶ್ಶ. ಪುಂಂ೮. ೩ ಶ್ರಪೀಠ); ಪ್ರಾಚೀನಕಾಲದ ಬೌದ್ಧವನ್ನು ತಿಳಿಯಲು ನಮಗೆ ಪಿಟಕಗಳೆ ಆಧಾರ (ಶೀಶಿಕ. ೦೦೦). 'ತ್ರಿಪಿಟಕ' ಪರಾ. [ಸಂ.]

**ಪಿಟಕ$_2$** (ನಾ). ಒಂದು ಬಗೆಯ ಹಕ್ಕಿ ; ಗೀಜಗ : (೪). [?]

**ಪಿಟಕಾರ್ಬುದ** (ನಾ). ಒಂದು ಬಗೆಯ ವ್ರಣದಿಂದ ಕೂಡಿದ, ಗಂಟಲಿನ ಕ್ಯಾನ್ಸರ್ ರೋಗ : ಕಟವಾಯು ನಡುವಿನ ಪ್ರದೇಶದಲ್ಲಿ ಬಾವು ತೋರಿ . . . ಅನ್ನ ಪಾನಗಳ ಹೋಗಲೀಸದೇ ಕೊರಳ ಬಂಧಿಸಿಕೊಂಡು ಇಹುದು. ಈ ಪ್ರಕಾರದಲ್ಲಿದ್ದರೆ ಪಿಟಕಾರ್ಬುದ ಎನಿಸಿಕೊಂಬುದು (ಶ್ವದ್ಯಶಾ. II. ೦೦೫). [ಸಂ.]

**ಪಿಟಗುಟ್ಟು** (ಕ್ರಿ). ಪಿಟಪಿಟ ಎಂದು ಶಬ್ದ ಮಾಡು ; ಗುಣುಗುಟ್ಟು : ದ್ಯೆಸಿ . . . ಪಿಟಗುಟ್ಟುತ್ತಿದ್ದಳು (ಹಸುಹೂ. ೬೪). [ಪಿಟ್ಟು + ಕುಟ್ಟು$_1$]

**ಪಿಟಾರಿ, ಪಿಠಾರಿ, ಪೆಟಾರಿ, ಪೆಟಾರಿಗೆ, ಪೆಟ್ಟಾರಿ, ಪೆಠಾರಿ** (ನಾ). ೧. (ವಸ್ತುಗಳನ್ನು ತುಂಬಿಡಲು ಮಾಡಿದ ಲೋಹದ ಅಥವಾ ಮರದ) ಪೆಟ್ಟಿಗೆ,-ಸಂದೂಕ : ತನ್ನ ಬಳಿ ಅದನ್ನೆಲ್ಲ ಭದ್ರವಾಗಿ ಇಡಲು ಪಿಟಾರಿ ಇಲ್ಲ ಎಂಬ ನೆವ ಹೇಳಿ . . . ಅವಳ ಕೈಗೇ ಕೊಟ್ಟಿದ್ದಳು (ಪುಣಿಶು. ೨೦೬) ; ಪಡಸಾಲೆಯಲ್ಲಿ ಪಿಟಾರಿಯ ಬಾಗಿಲು ತೆಗೆದುಕೊಂಡು ಅದರ ಮುಂದೆ ಕುಳಿತಿದ್ದಳು (ಶದ್ಯಸ. ೦೬೭) : 'ಉಲನ್' ಕೋಟುಗಳು ಆಗ ತಾನೆ ಪಿಟಾರಿಯಿಂದ ಹೊರಬಿದ್ದು ಕೋರುಹುಡುಗರನ್ನು ಅಲಂಕರಿಸಿದ್ದುವು (ಸುಪಾಂ. ೪೩) ; ಮೂರು ವರ್ಷ ಸಂದರೂ ಅವರ ಪಿಟಾರಿಯಲ್ಲಿ ಇನ್ನೂ ಹತ್ತು ರೂಪಾಯಿನ ನೋಟೀ ಬರುವುದಕ್ಕೆ ನಿರಾಕರಿಸಿತ್ತು (ರೀಚಹಂ. ೬೦). **ಪಿಠಾರಿ** : ೧. ಪಿಠಾರಿಯನ್ನು ತೆಗೆದು ಹುಡುಕಿ ಒಂದು ಜತೆ ಚಿನ್ನದ ಬುಗುಡಿಗಳನ್ನೂ ಸ್ವಲ್ಪ ಹುಡಿಚಿನ್ನವನ್ನೂ ತಂದು ಅವನ ಕೈಗೆ ಕೊಟ್ಟು (ಕಂಗಾಕ್ಕ. ೦೩೦). **ಪೆಟಾರಿ** : ೧. ಹಜಾರದ 'ಪೆಟಾರಿ'ಯ ಮೇಲೆ ರಗ್ಗು ಹಾಸಿ ಮಲಗಿ ಬಿಟ್ಟನು (ಹಾಂಶು. ೦೫೬) ; ಮನೆತನದ ವ್ಯವಹಾರಕ್ಕೆ ಸಂಬಂಧಿಸಿದ ಕಾಗದಪತ್ರಗಳನ್ನು ಕ್ರಮವಾಗಿ ಜೋಡಿಸಿ ಮರದ ಪೆಟಾರಿಯಲ್ಲಿಟ್ಟು (ಪಂಹ್ಯ. ೦೦೪). **ಪೆಟಾರಿಗೆ** : ೨. ಬಿದಿರಿನಿಂದ ಮಾಡಿದ ಪೆಟ್ಟಿಗೆ,-ಬುಟ್ಟಿ : ಶಿವಾಜಿಯು ಹಣ್ಣುಗಳ ಪೆಟಾರಿಗೆಯೊಳಗೆ ಕೂತು ಯುಕ್ತಿಯಿಂದ ಪಾರಾಗಿ ಬಂದನು (ಕಠಾಗ. ೩೫೫). **ಪೆಟ್ಟಾರಿ** : ೧. 'ಪೆಟ್ಟಾರಿ'ಯಿಂದ . . . ಪಟ್ಟೆಯ ವಸ್ತ್ರವನ್ನೂ ಶಾಲನ್ನೂ ತಂದು ತುಂಬಿದ ಸಭೆಯಲ್ಲಿ ಆ ವಿದ್ವಾಂಸನಿಗೆ ಹೊದಿಸುವವರು ! (ಗಾಕಳ. ೨). **ಪೆಠಾರಿ** : ೧. ಅನರ್ಘ್ಯ ವಸ್ತ್ರಾಭರಣಗಳು ರಾಯರ ಪೆಠಾರಿಗಳನ್ನು ಸೇರಿದವು (೪೪೬. ೨೪೦) ; ಅವರು ಯಾವ ಪೆಠಾರಿ ತೆಗೆದು ನೋಡಲಿ ಅದು ಕೆದರಿ ಗೂರಾಡಿರಬಾರದು (ಕೃಕ್ಷಕ. ೪೪) ; ನನ್ರೀದ್ದೀನನು ಆತುರಗಾರತನದ ಕಂಬಳಿಯನ್ನು ಸುತ್ತಿ ನಿರೀಕ್ಷಣೆಯ ಪೆಠಾರಿಯಲ್ಲಿಟ್ಟು ಮುಚ್ಚಿಟ್ಟನು (ಕಗಹೂ. ೦೬೪) ; ಮನುಷ್ಯನ ಪರವಾದ ಅದೇ ಶ್ರದ್ಧೆಯನ್ನು ಸಾಂಪ್ರದಾಯಿಕ ಪೆಠಾರಿಗಳಲ್ಲಿ ಬೀಗ ಹಾಕಿದ್ದೇವೆ (ಪಿಶಂಶ. I. ೮).
[←ಹಿಂ. ಪಿಟಾರೀ, ಪೆಟಾರೀ ; ಮರಾ. ಪೆಟಾರೀ]

**ಪಿಟಿಕೆ** (ನಾ). (ಮುಖದ ಮೇಲೆ ಏಳುವ) ಗುಳ್ಳೆ; ಮೊಡವೆ : ಹಿರೇಮದ್ದು ಜಟಾಮಾಂಸಿ . . . ಹುಣಿಸೇಬೀಜದ ಸಿಪ್ಪೆ ಇವುಗಳ ಸಮಭಾಗ ಚೂರ್ಣ ಮಾಡಿ ಸೇವಿಸಲು . . . ಪಿಟಿಕೆ; ಮೇಹ ಮೊದಲಾದ ರೋಗಗಳು ಗುಣವಾಗಿ ಶುಕ್ರವೃದ್ಧಿಯುಂಟಾಗುವುದು (ಕಳಕ್ಯ. ಶಂ. ೪೦೮); ಮುಖದ ತುಂಬ ಪಿಟಿಕೆಗಳಿದ್ದ ಉರುಟುತಲೆಯ ವ್ಯಕ್ತಿ (ಕಾಯ. ೩೨೦); ಮುಖದ ಮೇಲೆ ಹೇರಳವಾಗಿ ಮೂಡಿದ ತಾರುಣ್ಯಪಿಟಿಕೆಗಳು ಅವನ ಸೌಂದರ್ಯದಿಂದ ಹುಡುಗತನವನ್ನು ಕಸಿದುಕೊಂಡುವು (ರಹಿಶ. ೦೨೫).
[< ಸಂ. ಪಿಟಕ]

**ಪಿಟಿಪಿಟಿ** (ನಾ). ೧. ಒಂದು ಅನುಕರಣ ಶಬ್ದ. ೨. (ಆಲಂ) ದಡ್ಡ; ತಿಳಿಗೇಡಿ : ಇವನು ಶುದ್ಧ ಪಿಟಿಪಿಟಿ (ಪೂತಿ).

**ಪಿಟೀಲು** (ನಾ). ಕಮಾನಿನಿಂದ ನುಡಿಸಲಾಗುವ ಒಂದು ಬಗೆಯ ತಂತ್ರಿವಾದ್ಯ : ಚಂದದಿಂ ಮುಖವೀಣೆ ಮೋರ್ಚಿಂಗ್ ಪಿಟೀಲುಗಳ ಪಿಂದೆ ನುಡಿ ಪಿಮ್ಮೇಳದವರೊಡನೆಯೊಲಪಿನಿಂ ನಿಂದು ಕುಣಿಯುತ್ತಿರುವ ವಾರಕಾಂತಾವೃಂದಮಂ ನೋಡು (ಅಕಿಚಂ. ೨೪-೩೦); ಧನುರ್ವೀಣೆ ಅಥವಾ ಪಿಟೀಲಿನ ಪೂರ್ವಮಾದರಿಯಾದ ರಾವಣಾಸ್ತ್ರವು ಇಂದಿನ ಪಾಶ್ಚಾತ್ಯ ಪಿಟೀಲು ರೂಪಿತವಾದುದರಲ್ಲಿ ಬಹುಪ್ರಭಾವವನ್ನು ಬೀರಿದೆ (ಶಾರದ. ೫೪೫); ಕರೀಮಾನ ಹತ್ತಿರ ಒಂದು ಪಿಟೀಲು ಇದೆ (ಶಂಕಂ. ೩೨).
[←ಇಂ. Fiddle]

**ಪಿಟೀಲುವಾದಕ** (ನಾ). ಪಿಟೀಲನ್ನು ನುಡಿಸುವವನು : ಹಲವಾರು ಬಾರಿ ಇವರ ಕಚೇರಿಗಳಿಗೆ ಸುಪ್ರಸಿದ್ಧ ಪಿಟೀಲುವಾದಕರಾದ ತಿರುಕ್ಕೋಡಿಕಾವಲ್ ಕೃಷ್ಣಅಯ್ಯರ್ ಅವರೂ ಪಿಟೀಲು ನುಡಿಸುತ್ತಿದ್ದರು (ಸಂಗೀಶ. ೩೩).
[ಪಿಟೀಲು+ವಾದಕ]

**ಪಿಟೀಲುವಾದನ** (ನಾ). ಪಿಟೀಲನ್ನು ನುಡಿಸುವಿಕೆ ; ಪಿಟೀಲು ಕಚೇರಿ : ಕರೀಮಾನ ಪಿಟೀಲುವಾದನವೆಂದರೆ . . . ಒಂದು ಸಲವಲ್ಲ, ನೂರೆಂಟು ಸಲ ಆ ಪಿಟೀಲುವಾದನ ಕೇಳಬೇಕೆನ್ನುತ್ತಾರೆ (ಶಂಕಂ. ೩೨) ; ಪರಮೇಶ್ವರ ಭಾಗವತರು ವೀಣಾವಾದನ, ಪಿಟೀಲುವಾದನ ಮತ್ತು ಸ್ವರಬಾತ್‌ನ ವಾದನಗಳಲ್ಲಿ ಬಹಳ ಪರಿಶ್ರಮ ಪಡೆದಿದ್ದರು (ಸಂಗೀಶ. ೪೩).
[ಪಿಟೀಲು+ವಾದನ]

**ಪಿಟುಗುಟ್ಟು** (ಕ್ರಿ). ಪಿಟಿಪಿಟಿ ಎಂದು ಶಬ್ದ ಮಾಡು ; ಗುಣುಗುಟ್ಟು : ಅಪ್ಪಾಜಿಯು ಇನ್ನೂ ಕಣ್ಣು ಮುಚ್ಚಿಕೊಂಡೆ ಬಾಯಿನಲ್ಲಿ ಪಿಟುಗುಟ್ಟುತ್ತಾ ಪೂಜೆಯಲ್ಲಿ ಮಗ್ನರಾಗಿದ್ದರು (ಕಂಗಾಕ್ಕ. ೦೬೪).
[ಪಿಟ್ಟು$_6$+ಕುಟ್ಟು$_1$]

**ಪಿಟ್ಟು$_1$** 'ಪಿಟ್ಟು' ನೋ.

**ಪಿಟ್ಟು$_2$** (ನಾ). ಒಬ್ಬಾತನ ಹೆಸರು : ಚಿತ್ರಭಾನುಸಂವತ್ಸರದಾಧಿಕಾಷಾಢ ಬಹುಳದಶಮಿಾದಿನದೊಳ್ ಗುರುಚರಣಮೂಳದೊಳ್ ಸುಭಪರಿಣಾಮದೆ ಪಿಟ್ಟನಿನ್ದ್ರಲೋಕಕ್ಕೊಗದವನ್ (ಎಕ. II. ೦೩೪-೭೨; ಶು. ೫೮೭). [?]

**ಪಿಟ್ಟಗ** (ನಾ). ಒಬ್ಬಾತನ ಹೆಸರು : ಪಿಟ್ಟಗಂ ಸಲೆ ನೆಗರ್ದಂ (ಶಾಸಂಶಾ. X. ೨೦೫-೦೨: ೫೮೩). 'ಪಿಟ್ಟುಗ' ಪರಾ. [ಪಿಟ್ಟು$_2$+-ಗ$_2$]

**ಪಿಟ್ಟಗೆಱೆ** (ನಾ). ಒಂದು ಊರಿನ ಹೆಸರು : ಪಿಟ್ಟಗೆಱೆ ಪನ್ನೆರಡು ಗಾಮುಣ್ಡ ಪ್ರಜೆರ್ಸಕ್ಷಿ (ಎಕ. XI. ಹಿರ್ಯದು. ೨೪-೦; ಸು. 500 ?). [ಪಿಟ್ಟು$_{1?}$ + ಕೆಱೆ]

**ಪಿಟ್ಟಬೆ** (ನಾ). ಒಬ್ಬಾಕೆಯ ಹೆಸರು : ಅಮ್ಮಣಗಾವುಣ್ಡನುಂ ಪೆಣ್ಡತಿ ಪಿಟ್ಟಬೆಗಾವುಣ್ಡಿಯುಂ ಲಿಂಗಪ್ರತಿಷ್ಠೆಯುಂ ದೇಗುಲಮಂ ಮಾಡಿಸಿ ಸಾಸನಮಂ ನಿಱಿಸಿದಂ (ಎಕ. VIII. ಸೊರಬ. ೬೬೦-೦೦; 1012). [ಪಿಟ್ಟು$_1$ + ಅಬೆ (<ಅಬ್ಬೆ)]

**ಪಿಟ್ಟಯ್ಯ** (ನಾ). ಒಬ್ಬಾತನ ಹೆಸರು : ಊರೊಡೆಯ ಪಿಟ್ಟಯ್ಯಂ ಕಾಲ್ಗೆಱೆಯ . . . ಪನ್ನಿಮ್ಮತ್ತಕೇಯ್ಯಂ ಕೊಟ್ಟರ್ (ಇಇ. XII. ೨೩೬-೦೦ ; 951). [ಪಿಟ್ಟು$_1$ + ಅಯ್ಯ$_1$]

**ಪಿಟ್ಟಿ** 'ಪಿಟ್ಟು' ನೋ.

**ಪಿಟ್ಟಿವ** (ನಾ). ಒಂದು ಬಗೆಯ ಬಣ್ಣ : ಅರ್ಜುನನ ಮಾವ ಚಿತ್ರರಥನು ಕೊಟ್ಟ ಪಿಟ್ಟಿವ ಬಣ್ಣದ ಕುದುರೆಗಳನು ಹತ್ತುಸಾವಿರವನು . . . ಧರ್ಮ ಸೂನುತನು (ಕೃಕಾಸೂ. I. ೦೦೦). [ ? ]

**ಪಿಟ್ಟು, ಪಿಟ್ಟಿ$_1$, ಪಿಟ್ಟಿ, ಪಿಟ್ಟೆ, ಹಿಟು, ಹಿಟ್ಟು** (ನಾ). ೧. (ಧಾನ್ಯದ) ನಯವಾದ ಪುಡಿ ; ಪಿಷ್ಟ : "ಪಿಟ್ಟದು ಪಿಷ್ಟಂ ಚೂರ್ಣಿತಂ" (ಪಮ್ಪಾಶ. ೯೩-೨೦) : ದಿವ್ಯೌಷಧಿಗಳಿಂದಂ ಮಾಡಿದುಂಡೆಗಳಂ ಪಿಟ್ಟನೊಳ್[ಶಾಕಾಂ. ಪದಿನಾಱು] ಸಾಸಿರ್ವರರಸಿಯರ್ಕಳ ಮನೆಗಳೊಳ್ ಪ್ರಯೋಗಿಸಿ (ಪಣ್ಪಾರಾ. ೦೬೦-೨೪) : ಕರಿಹಸ್ತಚರ್ಮಮಂ ಮೇಣ್ ಕರಿದಂತವನರೆದು ಬಟ್ಟ ಗಡಲೆಯ ಪಿಟ್ಟಂ ಬೆರಸಿಕ್ಕುಗೆ (ಲೋಕೋಪ. ೬-೩೨) ; ಪಿಟ್ಟಿನ ಕೋಟೆಯಾ ದೊಡವಿಂದೊಂದನಿಕ್ಕವೇಟ್ಟುದು (ಹುತೋಶ. ೩-೨೦). ೨. ಜೀವಿಕೆ ; ವೃತ್ತಿ : ಸ್ಥಾನಂ ಮಾನ್ಯಂ ಪಿಟ್ಟಂ ಭೂನುತರಪ್ಪಱುವತೊಕ್ಕಲುಂಬಂಮರಸು . . . ಮೂಲಿಗರುಂ ಪ್ರಭುಗಳೆಂಟು ಹಿಟ್ಟುಂ ಮಾನ್ಯಂ (ಕೊಪ್ಪಾಶಾ. ೦೭-೬೯ : 1196). ೩. ಆಯಾ ವೃತ್ತಿಗೆ ಸಂಬಂಧಿಸಿದ ಮುಖ್ಯಸ್ಥ : ನಾಗರಸಂ ಪಗುಡಿಯತಳವಮು[೦]ತಾಯಂಗಳು ಅಱುವತೊಕ್ಕಲು ಎಂಟುಪಿಟ್ಟು ಕಾರಣಂಗಳು ಮುಖ್ಯವಾಗಿಯವರನುಮತದಿ . . . ಮಾಡಿಸಿದ ಬಸದಿ (ಕಾ. V. ೩೩-೨೨; 1176). **ಪಿಟ್ಟಿ$_1$** : ೪. (ಕಲಸಿದ) ಹಿಟ್ಟಿನ ಉಂಡೆ ; ಪಿಡಿಚೆ : ದೀವಂಗಳಂ ವಿರಚಿಸಿಯನಂತಫಲಮಧಿಕಮಿವು ಪೊನ್ನಾರತಿಯೆನೆಂದು ಪಿಟ್ಟಿ[ಶಾಕಾಂ. ಷ]ದಿಂದಂ ಸರಳ ನೀರಾಜನಂಗೆಯ್ದು ಪಾತ್ರೆಯೊಳಿರಿಸಿ (ಅಶಾತ. ೦-೦೦-೦೦). **ಪಿಟ್ಟಿ** : ೪. ಆ ಕಲ್ಮಕೆಂಡದ ಅಂಗರೋಳಿಗೆಯ . . . ಕೆಂಡದ ಮೇಲೆಯಿಟ್ಟು ಪಿಟ್ಟಿ ಸೀವ ಹಾಗೆ ಸುಡುವುದು (ಶಿವಮಸೂ. ೦೩); ಸಕ್ಕರೆಯನಿಕ್ಕಿ ಉಂಡೆಯ ಮಾಡಿ, ಕಣೀದ ಪಿಟ್ಟಿಯಲಿ ಮುಚ್ಚುವುದು (ಶಿವಮಸೂ. ೦೭). **ಪಿಟ್ಟೆ** : ೪. ಪಿಟ್ಟಿಯಂ ತೆಗೆದು ತಱಿವಳಲು ರವೆಯದ ವಜ್ರ ಬಟ್ಟಮುತ್ತಿನ ಹರಳು ನುಚ್ಚಕ್ಕಿಯಂದದಿಂ ಕಟ್ಟಾಣಿಯಪ್ಪ ತರುಣಿಯರು ಸೊಜ್ಜಿಗೆದೆಗೆದು ಕಜ್ಜಾಯಮಂ ಮಾಳ್ಪುದು (ಸೂಶಕಾ. ೦-೯); ಹಪ್ಪಳವ ಸವನಾಗಿ ಪೊತ್ತಿಯಿಮ್ಮೆಯ್ಗೆ ಬೆಣ್ಣೆಯ ತೊಡೆದು ನಾಲ್ಕೈದನಡು ಕಲಿಕ್ಕಿ ಅವಚಿರಡು ಮೆಯ್ಗೆ ಪಿಟ್ಟಿಯ ಬಟ್ಟಲಂ ಕವಿಸಿ ಹವಣಱಿದು ಹಂಚಿನೊಳು ಸುಟ್ಟು ಪಿಟ್ಟಿಯನು ತೆಗೆದು (ಸೂಶಕಾ. ೧-೦೨) ; ಮೂಲ ವ್ಯಾಧಿಗೆ . . . ಅರಿಸಿನವಂ ಚೂರ್ಣವಂ ಮಾಡಿ ಕಳ್ಳಿಹಾಲಲ್ಲಿ ಕಲಸಿ ಪಿಟ್ಟಿಯಂ ಮಾಡಿ ಮೊಳೆಗೆ ಉಣ್ಣೆಯಂ ತೊಡೆದು ಆ ಪಿಟ್ಟಿಯಂ ತೊಡೆಯಲು ಎಲ್ಲಾ ಮೊಳೆಗಳುಂ ಕೆಡುಗುಂ (ವೈಸಂ. ೦೩೩); ನೇರಿಲ ಚಕ್ಕೆ, ಬಾಳೆಯ ಹೂವನು ಸಹ ಕುಪ್ಪ ಬಟ್ಟು ಕುಟ್ಟಿ ಮುದ್ದೆಯ ಮಾಡಿ ಪಿಟ್ಟಿಯ ಕುಟ್ಟಿ ಬೇಯಿಸಿ ಜೇನುತುಪ್ಪವಂ ಕಲಸಿ ಸೇವಿಸೆ ಅತಿಸಾರಂ ಕೆಡುಗುಂ (ಕಳವೈ. ೩೨೩). **ಹಿಟು** : ೩. [ಮೂ]ಲಸ್ಥಾನ ದೇ[ವ]ಗ್ಗೆಯಂಗ ಭೋಗ ನಿವೆದ್ಯಕ್ಕಂ ಎ[೦]ಟುಹಿಟು (ಕಾಇಇ. XV. ೩೦-೨೪; 1145); ಹುನೆರಡು ಹಿಟು ಸಹಿತ (ಕೊಲಕಶಾ. ೦೯೩೩, ಶಾಕೇಂ. ೦೯೩-೩೬; ?); ಗೋವ ಗಉಡ ಹುನೆರಡು ಹಿಟು ಮುಂದಿಟ್ಟು ಕೊಟ್ಟನು (ಎಕ. VII. ಶಿಕಾಪೂ ೯೬-೯; ?). **ಹಿಟ್ಟು** : ೧. ಪಿಷ್ಟ-ಹಿಟ್ಟು (ಕಂಪ. ೨೬೬ ಕೃದಂಕ); ಬೇಳೆ ಗಳ್ಕೆಯ ಸಣ್ಣ ಹಿಟ್ಟ ಸೋದಿಸಿ ಹುರಿದು ಕೊಳಲು (ಸೂಶಾ. ೦-೨೪); ಹೆಡಗೆ ಹೇಱಿನಲಕ್ಕಿ ಹುಡಿ ಹಿಟ್ಟುಗಳ ತುಂಬಿ ಕೊಡಗು ವಱಿಯ ಸಾರಿದರು (ಕಂಪೂ. ೦೦-೯೩); ಹಿಟ್ಟುಗಳನ್ನು ಮಿಶ್ರ ಮಾಡುವುದು, ತರಕಾರಿಗಳನ್ನು ತುಂಡು ಮಾಡುವುದು . . . ಈ ಕೇಂದ್ರದಲ್ಲಿಯೇ (ಅಪಸ. ೦೪). ೨. ಎಂಟುಹಿಟ್ಟು ಪಂಚಮಠ ಉಂಟು ಧರೆಯ ಮೇಲೆ (ಅವಸ. ೯೯-೩೯೬); ಶ್ರೀಸೋಮನಾಥ ದೇವರ ನನ್ದಾದೀವಿಗೆಗೆ ಮಾರೋಜ ತನ್ನ ಅಕ್ಕಸಾಲಿಕೆಯ ಹಿಟ್ಟಿನ ಭೂಮಿಯ ಒಳಗೆ ಕಾನೂರ ದಾರಿಯ ಮೂಡಣ ಕೆಯ್ಯ ದಕ್ಷಿಣವಾಗಿ ಬಿಟ್ಟ (ಎಕ. VI. ಕಡೂರು ೦೦೩-೦೨೩; ?). ೩. ಸೇನಗೌಡನಮಗ ಚಿಕ್ಕಗೌಡನು ತಮ್ಮ ಮಾವ ನೇಮಗೌಡನುಂ ಅಱುವತೊಕ್ಕಲು ಹನ್ನೆರಡು ಹಿಟ್ಟು ಸಹಿತು ಪೂಜಾರಿ ನಾಗಯ್ಯನ ಕರೆದು . . . ಕೊಟ್ಟರು (ಕಾಇಇ. IX-II. ೩೩-೯; ಸು. 1093); ಮಸಣಗಾವುಂಡ ಈಚಗಾವುಂಡ ಮುಖ್ಯವಾದ ಹಂನೆರಡು ಹಿಟ್ಟು ಸಹಿತ ಬಿಟ್ಟ ಧರ್ಮ್ಮ (ಎಇ. XIX. ೦೯೩-೩೩ ; 1210). ೫. ಆಹಾರ ; ಉಣಿಸು ; ಊಟ : ನರಸುಂದಾದಿಗಳಲ್ಲ ಸಭೆಗರ ಹೊತ್ತು ಬಾದ್ಯೆದಾರೆ ಹಿಟ್ಟು ನಷ್ಟ ಮಠ ಹಾಳು ಊರಿಗುಪಟಳ (ಅಶಂ. ೯೯-೩೯೦); ಹೊಟ್ಟೆಗೆ ಹಿಟ್ಟು ಸಿಕ್ಕದ ಇಂಥಾ ದಿನಗಳಲ್ಲಿ ವರ್ಷ ಕ್ಕೊಂದು ಬಾಣಂತನವು ಬೇರೆ ! (ಕೃಶಕ. ೩); ಹೊಟ್ಟೆಗೆ ಹಿಟ್ಟಿಲ್ಲ ಜುಟ್ಟಿಗೆ ಮಲ್ಲಿಗೆ ಹೂವು (ಗಾದೆ). ೬. (ರಾಗಿ, ಜೋಳ ಇತ್ಯಾದಿ ಧಾನ್ಯಗಳ) ಹಿಟ್ಟಿನಿಂದ ಮಾಡುವ ಒಂದು ಬಗೆಯ ಆಹಾರ ; ಮುದ್ದೆ : ಬಾಣಲಿ . . . ಹಿಟ್ಟು ತೊಳಸುವ ಬಾನೆ (ಸಿದ್ಧಾಂತಿ. ೨೯೩) ; ಆಗ ರೈತನು ಒಳಗೆ ಸುತೋಷವಟ್ಟು 'ಹಿಟ್ಟಂ ತಿಂದು ಬಿಟ್ಟಂ ಕಿತ್ತಿಟ್ಟಂ, ಹಿಟ್ಟಂ ಬಿಟ್ಟಂ ಕಿಟ್ಟಂ' ಎಂದು ಹೇಳಿದನು (ಕಂಕಥೆ. ೦೩೩); ಮನೆಗೆ ಬಂದ ಮೇಲೆ ಹಿಟ್ಟುಂಡು ಕೆಲವರು ಯಕ್ಷಗಾನದ ಆಟ ಕಲಿಯುವ ಮನೆಗೆ ಹೋಗುತ್ತಿದ್ದರು (ಹುಟ್ಟಿಹ. ೬೯). ೭. ಒಂದು ಬಗೆಯ ತೆರಿಗೆ : ಪುರವನು ಕಟ್ಟಿಸಿ ದೇವರ ಹಿಟ್ಟು ಹುಗ್ಗಿ ತೆಱಿಗೆನು ಬಿಟ್ಟು (ಎಕ. VI. ಚಿಕ್ಕಮ. ೯೩-೦೯; 1549) ; ಬಿರಾಡ ಹಿಟ್ಟು ಹುಗ್ಗಿ ಬೀಜವರಿ ಇವೆಲ್ಲವನು . . . ಸರ್ವ್ವಮಾನ್ಯವಾಗಿ ಶಾಸನವನು ಪ್ರತಿಷ್ಠೆಯನು ಮಾಡಿದರು (ಎಕ. V. ಹಾಸನ. ೨-೨೯; 1563).

ಪಿಟ್ಟುಂಪಿಟ್ಟು, ಪಿಟ್ಟುಪಿಟ್ಟು, ಹಿಟ್ಟುಹಿಟ್ಟು (ದ್ವಿರುಕ್ತಿ) : ಕಟ್ಟೋಡಿ ಪಾಡಿಯೊಲ್ಲಂ ಪಿಟ್ಟುಂಪಿಟ್ಟಾಗಿ ಪೋದೊಡಂ . . . ವೆಱದೆಗೆ ಯದೀಸನೊರ್ವನೆ ನಿಂದು (ಕಲ್ಯಾ. ೨೯೩) ; ಪೊಯ್ಯನೆ ಬಿಟ್ಟಂ ಪಿಟ್ಟು ಪಿಟ್ಟಾಗಿರೆ ಸಮರದೋಳ್ ವೀರವೆರ್ಮಾಡಿದೇವಂ (ಎಕ. VII. ಶಿಕಾಪೂ. ೪-೯೪ ; 1122) ; ಬೆಟ್ಟಿಲ್ಲೆಯುಂ ಕುಟ್ಟಿದ ತೆಱದೆ ಕರಂ ಪಿಟ್ಟುಪಿಟ್ಟಾಗಿ ಪಾಱಿಬ್ಬುದು . . . ಪಟುತರಸೂನುಸೇನಾಪ್ರತಾನಂ (ಶಾಂತೀಶ್ವ. ೧೨-೦೦); ಅವಳು ಹಾಕುವ ಒಂದು ಒನಕೆಯ ಏಟಿಗೇ ಕಾಳುಗಳು ಹಿಟ್ಟುಹಿಟ್ಟಾಗು ತ್ತವೆ (ದೂಕಿ). ಪಿಟ್ಟಾಗು = ೧. ಪುಡಿಯಾಗು. ೨. (ಅಲಂ) ನಾಶವಾಗು : ಪಿಟ್ಟಾಪ ಪೀಱಾದ ಸಿಂಧುರದಿಂ ತಟ್ಟಿಗ್ಗಿದ ಮುಱಿಗ್ಗಿನನ್ನರಥದಿಂ ಕಣ್ಗಂ ಮನಕ್ಕಂ ಭಯಂಕರಮಾದಾಜಿಯೊಳ್ (ಶಂಲಾಮಾ. ೯-೦೨೪). ಪಿಟ್ಟುಪೀಱಾಗು = ಹಾಳಾಗು ; ನಾಶವಾಗು : ಪಂಡಿತೆ ಬಟ್ಟಯ್ಯಪ್ಪ ಪುಗುವುದುಂ ದಾರವಟ್ಟಗೆ ದಟ್ಟಿಸಿ ಕೊರಳು ಪಿಡಿದು ನೂಂಕೆ ಪಂಡಿತೆ ಬಿರ್ದು ಪೆಗಲ ಮೇಗಣ ರೂಪು ಪಿಟ್ಟುಪೀಱಾಗೆ (ಕೃಷ್ಣಾಸ್ವ. ೩-೨೬ ವ). ಪಿಟ್ಟಿಹಿಟ್ಟು = ಹಿಟ್ಟಿನಿಂದ ಕಲಸಿದ ಮುದ್ದೆ : ಅಂದಿನಿಂದ ಬೀಗರ ಹಾಡುಗಳ ಹೊಡೆದಾಟ, ಪಿಟ್ಟಿಹಿಟ್ಟಿನ ಪೆಟ್ಟಾಟ, ಹಪ್ಪಳದ ಹುಡಿಯಾಟಗಳೆಲ್ಲಾ ನಿಂತೇ ಹೋದವು (ಸಂಪ್ರಾ. ೬೪). ಹಿಟ್ಟಿನ ಹಾದಿ = ಜೀವನೋಪಾಯ : ಹಿಟ್ಟಿನ ಹಾದಿಯ ಹುಡುಕಿದ ದೇಶದ ಹೆಣ್ಣಿನ

5 10 15 20 25 30 35 40 45

ಬರವನು ನೋಡು (ಶಂಕಾರ ೩೦೮-೨೬). ಹಿಟ್ಟಿನಾರತಿ = (ಅಕ್ಕಿಯ) ಹಿಟ್ಟಿನಿಂದ ಮಾಡಿದ ಸೊಡಲುಗಳ ಆರತಿ : ರಂಗವಾಲೆ ಹಿಟ್ಟಿನಾರತಿಗೆ ವೋಲಗ ಸಾಲ್ಕಕ್ಕಂ ಗದ್ಯಾಣಂ ಹದಿನಾಱು (ಎಕ. III, ತಿರುಮ. ೯೬-೯೯ ; 1276). ಪಿಟ್ಟುಪಿಟ್ಟಿ = ಊಟವನ್ನು ಹಾಕಿ ಅದರ ಬದಲಾಗಿ ಮಾಡಿಸಿಕೊಳ್ಳುವ ಕೆಲಸ: (ಕ್ರಿ). ಹಿಟ್ಟು ಹಿಡಿಬೂದಿಯಾಗು = ಹಾಳಾಗು : ಇವರಿಂದ ಭಾರತೀಯಸಂಸ್ಕೃತಿಗೆ ಬಲವಾದ ಪೆಟ್ಟು ಬಿದ್ದಿತಲ್ಲದೆ ಹೆಣ್ಣಿನ ಜೀವನವು ಹಿಟ್ಟು ಹಿಡಿ ಬೂದಿಯಾಯಿತು (ಅಲ್ಪ. ೨೪). ಹಿಟ್ಟೆತ್ತು = ೧. ಭಿಕ್ಷೆ ಎತ್ತು ; ತಿರುಪೆ ಬೇಡು. ೨. ಕಂಡವರ ಮನೆಯಲ್ಲಿ ಬಿಟ್ಟಿ ಊಟ ಮಾಡಿಕೊಂಡು ಇರು : ಅವರಿವರ ಮನೆ ಹಿಟ್ಟೆತ್ತಿಕೊಂಡು ಹಂಗಿನ ಕೂಳು ತಿಂದುಕೊಂಡು ವಿದ್ಯಾಭ್ಯಾಸ ಮಾಡದಿದ್ದರೂ ಅಗ್ಗದೆ (ಕಂಗಾಳ್. ೬).

[< ಸಂ. ಪಿಷ್ಟ/ಪ್ರಾ. ಪಿಟ್ಠ]

**ಪಿಟ್ಟುಕಾರ**, ಹಿಟುಕಾಱ, ಹಿಟ್ಟುಕಾಱ, ಹಿಟ್ಟುಕಾಱ (ನಾ). (ಎಂಟು ಅಥವಾ ಹನ್ನೆರಡು ಬಗೆಯ ಕಸಬುಗಳ) ಕಸಬುದಾರರ ಗುಂಪಿನ ಸದಸ್ಯ : ಅಂದನೆಗೆಯ ಕಲ್ಲಗೌಂಡನುಂ ನಿಡುಗುಂದಿಯ ಸಮಸ್ತಪ್ರಜೆ ಪಿ(ಹಿ?)ಟ್ಟುಕಾರರುಂ ಅನೆವಾಳ ಪ್ರಜೆ ಪಿ(ಹಿ?)ಟ್ಟುಕಾರರುಂ ಇನ್ನಿವರ ಸಮಕ್ಷದಲ್ಲಿ . . . ಬೊಮ್ಮಗೌಂಡನು ಪಡೆದನು (ಕಕಂಶಂ. ೪೫೫-೦೬ ; ಸು. 1050). **ಹಿಟುಕಾಱ:** ಶ್ರೀಮಂನ್ಮಾಳ್ವಭು ಬಾಳೂರ ಕೇಸಪಗೌಡನು ಸಮಸ್ತ ಪ್ರಜೆಗಳು ಹನ್ನೆರಡು ಹಿಟುಕಾಱರ ಸಮಕ್ಷದಲಿ . . . ಕಾದಿ ಸುರಲೋಕ ಪ್ರಾಪ್ತನಾದ (ಕಇ. V, ೯೫-೪ ; 1269). **ಹಿಟ್ಟುಕಾರ :** ಹಾಗ ಎಂಟು ಹಿಟ್ಟುಕಾರ ನಾಡೊಕ್ಕಲಿಂಗೆ (ಇಎ. ೦೯೪೬, ಬೈರ್‌ಹಾವಿನಗಲ್. ೩೪೯-೪೬ ; 1086). **ಹಿಟ್ಟುಕಾಱ :** ಬಡಗಿತಸಕ್ಕಾರು ನಿಂನ್ನವರು ಹಿಟ್ಟುಕಾಱ ಬಡಗಿ ಕಲ್ಲೋಜ ಬಿಟ್ಟ ಧರ್ಮಮಂ . . . ಪ್ರತಿಪಾಲಿಸುವನು (ಕಾಇ. XV, ೬೯-೬ ; 1186) ; ಸೋದರ ಸೋವಣಗೌಡ ಹಿಟ್ಟುಕಾಱರಿಗೆ ಅಜುಮಣ ಮತ್ತರಿಂಗೆ ಪಂನೆರಡು ಹೊಂನ ಮಾರಿಯಾದೆ ಕೋಲು ಕೊಳಗ ದೇವರಿಗೆ . . . (ಮಾನ್ಯ)ವಾಗಿ ಕೊಟ್ಟರು (ಎಇ. XXIII. ೦೯೫-೬೦ ; 1265) ; ಸಮಸ್ತ ಪ್ರಜೆ ಹಿಟ್ಟುಕಾಱರುಂ (ಇಎ. ೦೯೪೬, ಹಾವಗಲ್. ೨೨೬-೦೯ ; ?).

[ಪಿಟ್ಟು + – ಕಾರ₁ (< – ಕಾಱ)]

**ಪಿಟ್ಟುಗ** (ನಾ). ಒಬ್ಬಾತನ ಹೆಸರು : ನಿಜ್ಜಿತವೈರಿಪ್ರಜನೆನಿಸಿ ಪಿಟ್ಟುಗಂ ಸಲೆ ನೆಗೞ್ದಂ (ಕಾಇ. XX. ೦೪-೦೨ ; 980) ; ನೆಗೞ್ದ ಪಿಟ್ಟುಗಂ ಬೀಡಿನ ಸಾಟೀರನೊ ಪ್ರಚಣ್ಡಭುಜದಣ್ಡಂ ಮಾವನ ಗನ್ಧಹಸ್ತಿ ಕವಿಜನವಿನುತಂ ಮೊನೆ ಮುಟ್ಟೆ ಗಣ್ಡನಾಹವಸೌಣ್ಡ (ಎಕ. II, ೦೩೪-೬೬ ; ಸು. 982). 'ಪಿಟ್ಟಗ' ಪಠಾ. [ಪಿಟ್ಟು ? + – ಗ₂]

**ಪಿಟ್ಟುಗುಟ್ಟು**, ಹಿಟ್ಟುಂಗುಟ್ಟು, ಹಿಟ್ಟುಗುಟ್ಟು (ಕ್ರಿ). ೧. ಪುಡಿಯಾಗುವಂತೆ ಕುಟ್ಟು ; ಹಿಟ್ಟಾಗಿ ಮಾಡು : ಸುಂದಶ್ರೀಯುಮಂ ಕೊಂಡು ಪಿಟ್ಟುಗುಟ್ಟಿ[ಪಾಠಾಂ. ಪಿಟ್ಟಂ ಕುಟ್ಟಿ]ಅವುಗಳನಟ್ಟು (ಕುಕ್ಕಾಸ್ತ್ರ. ೩-೦೮ ವ). **ಹಿಟ್ಟುಂಗುಟ್ಟು :** ೧. ಹಿಟ್ಟುಂಗುಟ್ಟುತ್ತೆಳಿಂ ಬೆಟ್ಟಗಳಂ ಕಡಲ್ಗಳೆಳ ರೊಳ್ಕಲಸುತ್ತುಂ ಬೊಟ್ಟಿಟ್ಟುಕೊಳ್ವ ಮಗನಂ ನಿಟ್ಟಿಸಿ ಗಿರಿವರತನೂಜೆ ಓಗ್ಗತಿರ್ದಳ್ (ಶಿಶಿಶು. ೬-೯೬). **ಹಿಟ್ಟುಗುಟ್ಟು :** ೧. ಸುಡುವುದು ಸುಟ್ಟು ತೂಱುವುದು ತೂಱಿದ ಬೞಿಯಿಂ ಹಿಟ್ಟುಗುಟ್ಟಿ ಬೊಟ್ಟಿಡುವುದು (ಅವಂಕೃ. ೬-೩೬) ; ಅಹಿತಬಲದೊಳಗಾನೆವರಿವರಿದು ಹಿಟ್ಟುಗುಟ್ಟುತ . . . ಕಳನ ಚೌಕದಲಟ್ಟಿಯಾಡಿಸಬಲ್ಲವನೆ ರಾವುತನು (ಕುಮಾವ್ಯಾ. ೦-೬೩) ; ವಜ್ರದ ಕದವಾ ಹಿಟ್ಟುಗುಟ್ಟುವೆನೆಂಬ ನುಡಿ ಬೆದಱಿಸಿತ್ತು (ಕಠಕ. ೨೪-೬೩). ೨. (ಅಲಂ). ನಾಶಮಾಡು ; ಧ್ವಂಸಮಾಡು : ಅಷ್ಟಮದಂಗಳ ಹಿಟ್ಟುಗುಟ್ಟಿ ವಸ್ತುವ ಕಾಣಬೇಕೆಂಬುದು (ಶೋಶಶಮಾ. ೦೦೦-೪೩೯).

[ಪಿಟ್ಟು + ಕುಟ್ಟು₁]

**ಪಿಟ್ಟುಗೆಯ್** (ಕ್ರಿ). ಪುಡಿ ಮಾಡು ; ಹಿಟ್ಟು ಮಾಡು : ಸಿಡಿಲಿಂದೀ ಹಸ್ತದಿಂ ನೀನಡಸಿ ಪೊಡೆದು ಕಲ್ಕಂಬಮಂ ಪಿಟ್ಟುಗೆಯ್ದಾ ಕಡುಬಲ್ಪೆನೆತ್ತ ಪೋಯ್ತೋ (ಶಾಂತೀಶ್ವ. ೩-೩೫). [ಪಿಟ್ಟು + ಕೆಯ್₁]

**ಪಿಟ್ಟುಪಿಡುಗು** (ನಾ). ಹೆಚ್ಚಿನ ಕೇಡು ; ದೊಡ್ಡ ತೊಂದರೆ. ಪಿಟ್ಟು ಪಿಡುಗನೆ ಸಾಯು = (ಸಿಡಿಲಿಗೆ ಸಿಕ್ಕ ಹಾಗೆ) ಇದ್ದಕ್ಕಿದ್ದಂತೆ ಸಾಯು ; ಅನಿರೀಕ್ಷಿತವಾಗಿ ಮರಣ ಹೊಂದು : (ಕ). ಪಿಟ್ಟು ಪಿಡುಗಾಗಿ ಸಾಯು=ಪಿಟ್ಟು ಪಿಡುಗನೆ ಸಾಯು : (ಕ).

[ ← ತೆಲು. ಪಿಟ್ಟಪಿಡುಗು ]

**ಪಿಟ್ಟೆ₁** 'ಪೆಂಟೆ₁' ನೋ.

**ಪಿಟ್ಟೆ₂** 'ಪಿಟ್ಟು' ನೋ.

**ಪಿಟ್ಟೆನ್**, ಪಿಟ್ಟೆನ್ನು (ಕ್ರಿ). ಏನನ್ನಾದರೂ ಹೇಳು ; ಸ್ವಲ್ಪವಾದರೂ ಮಾತನಾಡು : ನೃಪಸಭಾಮಧ್ಯದೊಳ್ ಪೆರ್ಚಿ ವಾಗ್ಗುಂಭದೊಳಿಗಳ್ ಬೆಟ್ಟನಲ್ಪಿಟ್ಟೆನಲಿದೆಗಡದಾಶ್ಚರ್ಯಮಂ ತಾಳ್ದಿ ನಿಂದು (ಸಂಕಸೂ. ೨-೦೫) **ಪಿಟ್ಟೆನ್ನು :** ಆದರೂ ಅವಳು ಅವನಿಗೆ ಪಿಟ್ಟೆನ್ನಲಿಲ್ಲ (ಕೇರುಂಶ. ೦೯೫) ; ಗೋವರ್ಧನ ಪಿಟ್ಟೆನ್ನಲಿಲ್ಲ (ಮುಗಿಮ. ೦೦೬) ; ಅವರು . . . ಪಿಟ್ಟೆನ್ನದೆ ಹೋದರು (ಮುಗಿಯು. ೨೩೫).

ಪಿಟ್ಟೆನ್ನಗೊಡು = ಏನಾದರೂ ಹೇಳಲು ಅವಕಾಶ ಕೊಡು ; ಮಾತನಾಡಗೊಡು: ಅವರಿಗೆ ಪಿಟ್ಟೆನ್ನಗೊಡುವುದಿಲ್ಲ ಅವಳು (ಕಕಕ. ೨).

[ಪಿಟ್$_0$ + ಎನ್₁]

**ಪಿಟ್ಟೆನ್ನು** 'ಪಿಟ್ಟೆನ್' ನೋ.

**ಪಿಟ್ಲೆ₁** (ನಾ). (ಉಕ) (ಹಾಗಲಕಾಯಿಯ) ಮೇಲೋಗರ : ಹೆಚ್ಚು ಗಟ್ಟಲೆಯ ಅಡಿಗೆಯಲ್ಲಿ ಹಾಗಲಕಾಯಿಯ ಪಿಟ್ಲೆಯೂ ಸೇರಿತ್ತು (ಕೂಕಿ).

[← ತಮಿ. ಪಿಠಲೇ = ಕಾಳಿನ ಮೇಲೋಗರ]

**ಪಿಟ್ಲೆ₂** (ನಾ). (ಕರಾ) ಸಣ್ಣಕಾಯಿ : ಹೀಚು : ಈ ವರ್ಷ ಮರಕ್ಕೆ ತುಂಬ ಕಾಯಿಯಾಗಿತ್ತು. ಆದರೆ ಎಲ್ಲ ಪಿಟ್ಲೆ. ರೂಪಾಯಿಗೆ ಇಪ್ಪತ್ತೈದು ಕೊಟ್ಟರೂ ಖರ್ಚಾಗುವ ಹಾಗಿಲ್ಲ (ಕೂಕಿ). [?]

**ಪಿಠರ** (ನಾ). ೧. ಮಡಕೆ ; ಕುಂಭ : "ಉಖಾ, ಸ್ಥಾಲೀ, ಚರುಃ, ಕುಂಭೀ, ಪಿಠರಂ, ಕುಂಡಂ—ಈ ೬ ಮಡಕೆ" (ಹಲಾಯು. ೩೨-೦೫೯) ; "ಚರು ಕುಂಭ ಕುಂಡಮುಖೆ ಪಿಠರ[ಪಾಠಾಂ. ಡಾರ]ಮಾ ಸ್ಥಾಲಿ ಭಾಂಡಂ ಮಡಕೆಯೆಂದೆನಿಕ್ಕುಂ" (ಮಂಗರಾ. ೬೨-೨೨). ೨. ಕಡೆಗೋಲು; ಮಂತು. ೩. ಒಂದು ಬಗೆಯ ಮೂಲಿಕೆ ; ಕೊನ್ನಾರಿಗಡ್ಡೆ ; ಭದ್ರಮುಸ್ತೆಯ ಬೇರು. [ಸಂ.]

**ಪಿಠಾರಿ** 'ಪಿಟಾರಿ' ನೋ.

**ಪಿಡಿ₁**, ಹಿಡಿ₁ (ಕ್ರಿ). ೧. (ಕೈಯಲ್ಲಿ) ಹಿಡಿದುಕೊಳ್ಳು ; ಗ್ರಹಿಸು ; ತಳೆ ; ಧರಿಸು : "ಪಿಡಿ–ಗ್ರಹಣೇ, ಕರಿಣ್ಯಾಂಚ (ಹೆಣ್ಣಾನೆ)" (ಶಮ) : ಆಜಿಯೊಳುರ್ಚಿ ಕೈದುವಂ ಪಿಡಿವವರೆಲ್ಲಮುಣ್ಮುವೊಡಮಾ ಯುಗಮೇಕೆ ಕನಿಷ್ಟಮುಪ್ಪದೋ (ಕಾವ್ಯಸಾ. ೪೨೩ ಕೂರ್ವ೪) ; ಮರಂಗಳಂ ಪೋಟ್ಟುಂತೆ ಕರಗಸಂಗಳಿಂದಮುದ್ದಂ ಪಿಡಿದು[ಪಾಠಾಂ. ಬರಿಯೊ]ಪೋಟ್ಟುದುಂ (ಪಶ್ಮಾರಾ. ೯೬-೦) ; ಪಿರಿದು ನಚ್ಚಿನೊಳ್ ಪಿಡಿದು ದಂಡರತ್ನಮನಾಗಳ್ (ಆದಿಪು. ೦೩-೩೪); ಭಯದಿಂದೋಡುತ್ತಿರೆ ಕಾಡೊಳೊಂದು ಮರದ ಕೊಂಕು ಗೊಂಬಾತನ ತುಱುಂಬಂ ಪಿಡಿವು ತಡೆಯೆ (ಧರ್ಮಾಕ್ಯು. ೨-೩೬). ೨. ತೆಗೆದುಕೊಳ್ಳು ; ಕೈಕೊಳ್ಳು ; ಸ್ವೀಕರಿಸು : ಭೈಕ್ಷಮಂ ಪಿಡಿಯೆಂದು ನೀಡಿದ ಕೈಯನಿತನೆ ಕಂಡು (ಪಶ್ಮಾರಾ. ೯೯-೬); ಪುರೋಹಿತಂ ವಿವಿಧಾಗಮ ವಿದನಿದುವೆ ಭಾವಿಪುತ್ರಾವಾಪ್ತಿಶ್ರೀಗೆ ನಿಮಿತ್ತಂ ಪಿಡಿ ನೀಂ ಧಾಗ ದೊಳೆಂದೆನ್ನ ಕೆಯ್ಗೆ ಪರಸುತ್ತಿತ್ತಂ (ಕುಶ್ವತಿ. ೩-೦೦೪). ೩. ಸ್ವಾಧೀನ ಪಡಿಸಿಕೊಳ್ಳು ; ವಶಪಡಿಸಿಕೊಳ್ಳು : ತನ್ನಿಚ್ಛೆಕಾರ್ತಿ ಗಡ ಕಡುಚಿನ್ನೆ

ಗಡಂ ಪಿಡಿದೊತ್ತಳಿಸಿ ತಾಂ ಪೇಟ್ದುದುಗೆಯ್ವುನ್ನಳ್ಗಡ ದೊರೆಕೊಂಡೊಡೆ ಪನ್ನಿಸದರ್ಪನೆ ವಿಚಿತ್ರದೂರಾ ಜಾರಂ (ಸಮಸ. ೩-೩೬). ೪. ಆಶ್ರಯಿಸು ; ಅವಲಂಬಿಸು ; ತಾಳು : ಬಲಂಬಿಡಿವುದನೆಯ್ದೆ ಮುಂ ಪಿಡಿದುದು ಪಿಡಿದಂ (ಶಂಕಪು. ೦೩-೯೬); ಸ್ತ್ರೀಯರ್ಕಳ್ ಆವನೊರ್ವಂ ಕೆಲದೊಳಿರ್ಪವನವನನೇ ಪಿಡಿಪರ್ ಲತೆಗಳ್ ಸಮೀಪದಲಾವ ಮರನಿರ್ಪುದದನೇ ಪಿಡಿವುವು (ಶಂಕಶಂ. ೩೨-೨೦); ತೊಟ್ಟಿಯೊಳ್ಪೋವು ತಪ್ಪದೆ ಗೆತ್ತಹಿಯುನೆಯ್ದಿ ಪಿಡಿಪಂತಕ್ಕುಂ (ಸಮಸ. ೩-೫೯); ಮುನಿಗಳಂತೆ ಮೌನ ಪಿಡಿದನೆ ಘನಗೋವು ಕಾಯ್ದಾಗ ಗಾಳಿ ಸೋಕಿತೇನೆ (ಕುರಂತ. ೨-೩೯-೨). ೫. ಸೆರೆಹಿಡಿ : ಬಂಧಿಸು : ಸ್ವಸ್ತಿಶ್ರೀಬಾಲಾದಿತ್ಯರಾಳು ಶ್ರೀ ಮುಂಜ್ಯನೆವ್ಪೊನ್ನಿಲಸಿನ್ದ ಮನಸಿಜರಾನಿಱಿದು ಪಿಡಿದು ತಾನೊಪ್ಪಿದಾನ್ (ಪ್ಯಕಂ. ೦೯೩೦, ೨-೪ ; ಶು. ೩ನೆಯ ಶತ); ಅರಸನ ಕೋಪಾಗ್ನಿಗಾರದ ಕರಣಂಗಳ ಕಾಪನೆಯ್ದೆ ಬಂಚಿಸಿ ಕಳ್ದಂ ಕರೆದುವೊಳಗೊಳಗೆ ಸುಟ್ಟಿಯುತ್ತಿರೆ ನೃಪನವನನಱಿದು ಪಿಡಿದು ತರವೇಟ್ದಾಗಳ್ (ಅಂಕ. ೩-೦೩); ಮುನ್ನಮಾ ನಿನ್ನನೆನ್ನಳೆಂದಱಿಯದೆ ಪೊಲ್ಲಮಾನಸಯೆಂದೆ ಬಗೆದು ಪಿಡಿದೆಂ (ಸುಕುಮಾ. ೬-೨೪ ವ); ಪಿಡಿದು ಪ್ರತಾಪತಪನು ಬಾವುಂಡಭೂಪಾಳಕಂ (ಎಚ. XX. ೦೦೬-೨೩; 1167). ೬. ಅನುಸರಿಸು : ಸಟೆ ದಿಟವೆಂಬುವೆರಡುವಿಡಿದು ನಡೆವುದೀ ಲೋಕವೆಲ್ಲವು ಸಟೆದಿಟವೆಂಬುವೆರಡುವಿಡಿದು ನಡೆವನೇ ಲೋಕದೊಡನೆ ಶರಣನು (ಶಾಸಾರ. ಬ ೩೬-೦೯೦); ಕಪಿಲೇಶ್ವರನ ಬಲ ಪಿಡಿದುದು ಬಂದ ದಾರಿಯುನು (ಶಂಪುಶಾಂ. ೦೬೬೦-). ೭. ರಕ್ಷಿಸು; ಸಲಹು ; ಕಾಪಾಡು : ಎಂತಾದೊಡಮೆನ್ನ ಕೆಳೆಯನಸುವಂ ಪಿಡಿವುದು ಸೆಱಗೊಡ್ಡಿ ಬೇಡಿದಂ ಮೃಗನಯನೇ (ಕಾದಂಪೂ. ೬೬೯). ೮. (ಹಾವು) ಕಚ್ಚು ; ಕಡಿ : ಒಯ್ಯನೆ ಬಂದು ಬಾಗಿಲಂ ನುಗುಳ್ವಳ ನೆತ್ತಿಯಂ ಪಿಡಿದುದಾಕ್ಷಣದೊಳ್ಕೆಳಸಿಂ ಮಹೋರಗಂ (ಸುಕುಮಾ. ೬-೯); ಇಂದು ಧರನಾಜ್ಞೆಯಿಂದುರಗಂ ಪಿಡಿಯಲಲ್ಲಿ . . . ಪಿಡಿದುರಗನಿಂ ಪಡಿದ ಮಗನನೀಕ್ಷಿಸುತುದು (ಇಳರ. ದೀ. ೩೯-೦೬). ೯. ಆವರಿಸು; ಮೈಮೇಲೆ ಬರು ; ಮೆಟ್ಟಿಕೊಳ್ಳು : ಬಂದಿಕಾಱನಂತೆ ತೆಱಪುವಾದರ್ ಪಿಡಿಪ ಶಾಕಿನಿಯರಿಂ (ಕಾವ್ಯಸಾ. ೩೨೯ ಕೂಡ್ರ); ಪಿಶಾಚು ಪೀಡಿಸಿತ್ತು ಭೂತಂ ಪಿಡಿದುದು (ಕಬ್ಬ. ಸು. ೦೦೯ ಕ್ರಯೋ). ೧೦. ಊದು ; ಧ್ವನಿ ಮಾಡು: ನಿಶಾಪಸಾನಸಮಯದೊಳ್ ಪಮಣದ ಸೂಬಂಗಾಳೆಗಳಂ ಪಿಡಿದು ಬೀಡೆತ್ತಲುದ್ಯೋಗಂಗೆಯ್ವುದಂ ಕಂಡು (ಶಂಕಶಂ. ೦೨೬-೧೨). ೧೧. ಪ್ರಾರಂಭವಾಗು ; ಮೊದಲುಗೊಳ್ಳು : ಒಡನೆ ಕಪ್ಪಿನ ಕೌಂಡಿನ ಹೇಮಾದ್ರಿವಿಡಿದು ಸಮಸ್ತ ನದಿಗಳ ಸಡಗರದೊಳಗೊಳಕೊಂಡು ಮುಕ್ತಿಸ್ಥಾನಕಡೆಯಾಗಿಹಳು ಕಾವೇರಿ (ಶಂಕಪ. ೨-೩೯). ೧೨. ಕಂಡುಹಿಡಿ ; ಗುರುತಿಸು ; ತಿಳಿ : ಶಕುನಮನೊಳ್ಕಿತ್ತುಪಾಯಮಂ ಪಿಡಿಪಂದೀತನೆ ಪಂದಿ (ಶಂಕಭಾ. ೩-೪೬). 'ತಪ್ಪುವಿಡಿ' ಪರಾ. ಹಿಡಿ₁: ೧. ಹಿಡಿದ ಹೆಜ್ಜೊಡತನಿಂದುಬಿಂಬಂ ಪೋಲ್ತುದು (ಸಿದ್ಧರಾ. ೦-೩೪); ಹಲಗೆ ಬಳಪವ ಹಿ[ಶಾಕಾ. ಪಿ]ಡಿಪುದೊಂದಗ್ಗಳಿಕೆ (ಶುಪ್ನಾಳ. ೧-೦೩); ಹಿಡಿವ ಕನ್ನಡಿ ಕಳಸಗಳ ಕೆಲಕಡುತ . . . ಬಂದಳು ಕೌಸಲಾದೇವಿ (ಕೊರರಾ. ೨-೩-೨). ೨. ಉಂಬ ಜಂಗಮ ಬಂದರೆ ನಡೆಯೆಂಬರು ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯ (ಬಸವ. ೦೯೪); ಹಿಡಿಯೆನ್ನ ಪರ ವ್ಯರ್ಥವಾಗದು (ಮೋಹತ. ೩೬-೪೬). ೩. ಹಿಡಿದು ಹೆಣ್ಣುಗಳ ದೇವರ ಶಿಲೆಗಳ ತಲೆಯೊಡೆದು ಪುರವ ಸೂಱೆ ಮಾಡಿ (ಶಂಕವ. ೦೦-೬); ಕುಮಾರನು ಓಡಿ ಹೋದರೆ ಅವನ್ನು ಹಿಡಿಯುವ ಕ್ರಮ (ಮುಂಡವಾ. ೪-೬೪). ೪. ಸಂಗವೆರಡುಂಟು ಒಂದ ಬಿಡು ಒಂದ ಹಿಡಿ (ಬಸವ. ೦೩೪); ಅಡಸಿದಾಪತ್ತಿನಲಿ ಧೈರ್ಯ ಹಿಡಿವುದೆ ಸಂಪ್ರೌಢಿ (ಶುಪ್ನಾದ್ರೌ. ೬-೨೩); ಹರಿ ಹೋಗಿ ಹಾವಿನ ಹಾಸಿಗೆ ಹಿಡಿವನು ಶಿವ ಹಿಮಗಿರಿಯ ಹತ್ತಿದನು (ಇಂತಾಕ. ೦೦೯-೬೪). ೫. ದ್ರೋಣಾದಿಗಳು ಹೊಕ್ಕುದು ಧರ್ಮಪುತ್ರನ ಹಿಡಿವ ತಪಕದಲಿ (ಶುಪ್ನಾದ್ರೌ. ೩-೪೨); ತರುಪಲಿಯು ಕೊಡಿಪಿಡಿದಲ್ಲಯೆನುತ (ಶುಪ್ನಾದ್ರೌ. ೩-೬). ೬. ಇಲ್ಲಿಯುವರೆಗೂ ಬಂದು ಲಾಭವನ್ನೇನೂ ಪಡೆಯದೆ ಬಂದ ದಾರಿಯನ್ನು ಹಿಡಿದು ಸಾಗಬೇಕಾಯಿತು (ಕೂಶಿ). ೮. ಘಟಸರ್ಪನಲ್ಲಿ ಕೈದುಡುಕಿದರೆ ಹಿಡಿವುದ ಮಾಣ್ಬುದೆ (ಬಸವ. ೨೧೨); ಹಿಡಿವ ಫಣಿಯನು ಹೊಡೆವ ಸಿಡಿಲನು . . . ಸುಖದುಃಖದುದಯದ ಕಡೆಮೊದಲ ಕಾಣಿಸುವನಾವವನೆಂದನಾ ಶಕುನಿ (ಶುಪ್ನಾಳ. ೯-೩೦). ೯. ನಾನೇನು ಮಾಡಿದ್ದೆ ಎಂದು ಶಕಣಿ ನನ್ನನ್ನು ಹಿಡಿಯಿತು ? (ಶವ್ಯಸ. ೦೩೨). ೧೧.° ೧೩ನೆಯ ಶತಮಾನದಿಂದ ಹಿಡಿದು ೧೭ನೆಯ ಶತಮಾನದ ಕೊನೆಯವರೆಗೆ . . . ನಿರೂಪಿಸಲಾಗಿದೆ (ಕ್ರಶಾಇ. II. ೬ ಕ್ರಶಾಪಿ). ೧೩. ತೊಡಗು ; ಆರಂಭಿಸು : ಉದಯವಾಗದ ಮುನ್ನ ಬವರವ ಹಿಡಿಯಬೇಹುದು (ಶುಪ್ನಾದ್ರೌ. ೦-೩೪): ಕರ್ಣನು ಭೀಮಸೇನನ ರಥವನಱಸುತ ಬಂದು ಪುನರಪಿ ಕಾಳೆಗವ ಹಿಡಿದ (ಶುಪ್ನಾದ್ರೌ. ೦೩-೪೦). ೧೪. (ಕರಾರಿಗೆ ಒಳಪಟ್ಟು) ಪಡೆ ; ಹೊಂದು : ಹಿಡಿದ ಹೂಲಕ್ಕೆ ಒಡವೆಯ ಕೊಡೆನೆಂದಡೆ ಬಡುವರೇ ಪೊಸವಿಯೊಡೆಯುತ (ಶೋಕಮಾ. ೦೦೯-೪೩೦). ೧೫. ಆವರಿಸು ; ಕವಿ : ಹಿಡಿದ ದುಗುಡದಲ್ಪರ್ಜುನನು ಮನ ಮಿಡುಕಿದನು (ಶುಪ್ನಾದ್ರೌ. ೦೪-೨೪). ೧೬. ತಡೆ; ನಿರೋಧಿಸು; ನಿಯಂತ್ರಿಸು : ತುಟಿ ಕಚ್ಚಿ ಹಿಡಿಯದಿರು ಬಿಕ್ಕ (ಪಾದಶೀ. ೩೯-೨೨): ಪಾಂಡವರ ಸಹಕಾರದೊಡನೆ ನೀನು ಧರ್ಮಾರ್ಥಗಳಿಂದ ರಾಜ್ಯ ವಾಳುವುದಕ್ಕೆ ಮೊದಲು ಮಾಡಿದರೆ ನಿನ್ನನ್ನು ಹಿಡಿಯುವವರಾರು? (ಶಕಭಾ. ೨೩೨). ೧೭. ಮಿತಿಗೊಳಿಸು : ಕೈಗೆರಡು ಕಾಸು ಬಂದಿತೆಂದು ಮಿತಿ ಮೀರಿದ ಖರ್ಚಿಗಿಳಿಯಬೇಡ, ಸ್ವಲ್ಪ ಹಿಡಿದು ಖರ್ಚು ಮಾಡುವುದನ್ನು ಕಲಿ (ಕೂಶಿ). ೧೮. ಸಾಕಾಗು ; ಒಳಕೊಳ್ಳು ; ಹಿಡಿಸು : ಅಡವಿ ಗಿರಿಗಳ ನುಂಗುವನ ಬಾಯ್ ಹಿಡಿಯದಿಹುದೇ ಹಣ್ಣುಹಂಪಲ (ಶುಪ್ನಾದ್ರೌ. ೦೬-೪೦): ಒಗರವ ತಾ ತೋಯೆಯನಿಕ್ಕು ಹಸನಾಯ್ತು ಮೇಲೋಗರವ ಬಡಿಸು ದೊನ್ನೆಗಳು ಹಿಡಿವಂತೆ (ಸಶ್ಯಳ. ೬-೨೬); ಒಳಪುಗುವುದಕೆ ಗುದ್ದಾಡಿದರು ಬಾಗಿಲು ಹಿಡಿಯದೆ ಪೊಕ್ಕು ಗದ್ದುಗೆ ಎಡಿವರಿಕ್ಕೆಲದಿ (ಮೋಹತ. ೩-೪೯). ೧೯. ಬೇಕಾಗು; ಆವಶ್ಯಕವಾಗು : ಈ ಕೆಲಸ ಮುಗಿಯಲು ಕಡೆಯ ಪಕ್ಷ ಎಂಟು ದಿನಗಳಾದರೂ ಹಿಡಿಯುತ್ತದೆ (ಕೂಶಿ). ೨೦. ಒಪ್ಪು ; ಪುರಸ್ಕರಿಸು : ಪರದೇಶದವರು ಈ ನಾಣ್ಯಗಳನ್ನು ಹಿಡಿಯಲಿಲ್ಲ (ಹಿಂಮುಶ. ೬೩). ೨೧. ಒಗ್ಗು ; ಸರಿಬೀಳು: ಆ ಊರಿನ ನೀರು ನನಗೆ ಹಿಡಿಯುವುದಿಲ್ಲ (ಕೂಶಿ); ಈ ಔಷಧಿ ನನಗೆ ಹಿಡಿಯಲಿಲ್ಲ (ಕೂಶಿ). ೨೨. ಕಾಯು; ಹೊಂಚು; ಎದುರುನೋಡು: ಸಮಯವನ್ನು ಹಿಡಿದು ಬೆಟ್ಟದ ಒಡೆಯರ ಮೇಲೆ ಬಿದ್ದು ಅವರನ್ನು ಬಂಧಿಸಿ ರಾಜಒಡೆಯರ ಎದುರಿಗೆ ಕರೆದೊಯ್ದರು (ಒಕಳ. ೨೩). ೨೩. ಎಡೆಬಿಡದಿರು ; ಸತತವಾಗಿರು : ದಿನ ಪೂರ್ತಿ ಹಿಡಿದ ಮಳೆ ಬಿಟ್ಟಿಲ್ಲ (ಕೂಶಿ); ಸುಮಾರು ಹೊತ್ತು ಒಡಿದಿದ್ದ ರಚ್ಚೆಯನ್ನು ಮಗು ಬಿಡಲಿಲ್ಲ (ಕೂಶಿ).

**ಪಿಡಿವಿಡಿ, ಪಿಡಿಪಿಡಿ, ಹಿಡಿಹಿಡಿ₁** (ದ್ವಿರುಕ್ತಿ): ಪಿ[ಶಾಕಾ. ಹಿ]ಡಿವಿಡಿಯ ಕರಗುವುದು ಐಯ್ವಾತ್ತೆ ಮಸಿಯಾಗಿರ್ಪುದು . . . ಧನವೆ ಜಗತ್ಯ ದುಃಖಸಾಧನಪಾಲ್ತೀ (ಸಂಪ್ರಕ. ೯-೦೨) ; ದಜದಱನೆಟ್ಟಿಯೆಟ್ಟ ಪಿಡಿಪಿಡಿ ತಱಿತಱಿ (ಅಕೃ. ೦೦-೯); ಎಲೆಲೆ ಹಿಡಿಹಿಡಿ ಭೀಮನನು ತೆಗೆ ಕೆಲಕೆ ದುರ್ಯೋಧನನ (ಶುಪ್ನಾಳ. ೬-೩೬): ಗುರುಗಳ ಚರಣವ ಹಿಡಿಹಿಡಿ (ಕುರಾದ. ೧-೦೩೪-೦); ಬೀತ್ರುದು ಶಿಮುರಾಸ್ತ್ರವೆನವೇಡ ಬೇಡ ಮುಂದೆ ತ್ರಕೋ ಹಿಡಿಹಿಡಿಯೆನುತೆ . . . ಇಕ್ಕಿದನು (ಮೋಹತ. ೪೦-೯೪): ಹಿಡಿ ಹಿಡೀಲೆ ರೊಕ್ಕಾ ತಗವು ಹಿಡಿಹಿಡಿ ಅನ್ನಾಂವಾ ಖರೇ ಅ... ಕೈ ಮಾಡಿದರ ಒಡದ ಬಿಡಾಂವಾ (ಸಜನಿ. ೬೨-೦೩) **ಪಿಡಿದುಕೊಳ್**

**ಪಿಡಿಕೊಳ್, ಹಿಡಕೊಳ್ಳು, ಹಿಡಿದು ಕೊಳ್ಳು** – ೧. ಕೈಯಲ್ಲಿ ಹಿಡಿ : ದುಕೂಲಂಗಳನುಡೆ ಕೊಟ್ಟು ಹಾರಮಂ ಪಿಡಿದುಕೊಂಡಿಂತೆಂದಳ್ (ಕಾದಂಬ. ೦೦೯) : ಆ ವಿಭೂತಿಯುಂ . . . ಎಡದ ಹಸ್ತದೊಳ್ಪಿಡಿದು ಕೊಂಡು ಬಲದ ಹಸ್ತದಿಂ ಮುಚ್ಚಿಕೊಂಡು (ಅವಚ. ೦೮–೯೩): ನಿರ್ಮಿದರ್ಪ ಕರಾಗ್ರದಿಂ ಪಿಡಿದುಕೊಂಡಲಗೊಂಚಲಂ (ಕುಸುಮಾ. ೫–೦೦೯) ; ಗೋವ ಳರು ಗುಡಿಗಟ್ಟಿ ಸಂತಸದಿಂದ ಬಂದಾ ಘಣಿಯ ಹೆಣವನು ತಾವರೆಯ ಪಿಡಿಕೊಂಡು ಬರೆ ಹರಿ ತಂದೆಗೊಪ್ಪಿಸಲು (ಕೃಷ್ಣಕಾ. ೨೨–೯೬) : ಹುಲಿಯು ಮೀಸೆಯ ಹಿಡಿದುಕೊಂಡು ಒಲಿದುಯ್ಯಾಲೆಯಾಡುವಂತೆ ಕೂಡಲಸಂಗನ ಶರಣರೊಡನೆ ಮಚ್ಚಿದು ಸರಸವಾಡಿದರೆ ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿ ಕೊಂಡು ಮಡುವ ಬಿದ್ದಂತೆ (ಬಸವ. ೬೬೦ ಅ); ಗೋಪಾಲನೂ ಇವಳ ಜೊತೆಯಲ್ಲೇ ಬೆಳ್ಳಿಯ ಲೋಟವನ್ನು ಹಿಡಿದುಕೊಂಡು ಹೊರ ಟದ್ದನು. (ಶಾಳಹೊ. ೦೦೩). ೨. **ಸೆರೆಹಿಡಿ : ಬಂಧಿಸು** : ಕೆಲರ್ ಕಂಡೊಡೆ ಕರೆಗುಮೆಂದು ಕೆಲದ ಮರಂಗಳನೊತ್ತುಗೊಂಡು ಕೆಲಬರೆಮ್ಮನೆಪ್ಪಟ್ಟಿ ಪಿಡಿದುಕೊಳ್ಗುಮೆಂದು ಮಗುಟ್ದು ನೋಡುತ್ತುಂ (ಆದಿಪು. ೯–೯೨ ವ): ಇವನ ಹಿಡಕೊಂಡು ಹೋಗೆಲೋ ಜೋಗಿ ಇವ ನಮ್ಮ ಮಾತ ಕೇಳದೆ ಪುಂಡನಾದ (ಕುಂದ. ೩–೦೯ ಹಲ್ಲಿ). ೩. **ಅಮರಿ ಕೊಳ್ಳು ; ಮೆಟ್ಟಿಕೊಳ್ಳು** : ಸತ್ತವರು ದಕಣಿಯಾಗಿ ಬಂದು ಬದು ಕಿದ್ದವರನ್ನು ಹಿಡಿದುಕೊಳ್ಳುತ್ತದೆ ಎಂದು ಕೇಳಿದ್ದೆ (ಕದ್ಯಕ. ೦೨೬).

**ಪಿಡಿದುಯ್** – ಸೆರೆಹಿಡಿದು ಕರೆದೊಯ್ಯು ; ಬಂಧಿಸಿಕೊಂಡು ಹೋಗು: ಪಿಡಿದುಯ್ವುದು ಗಂಧರ್ವರ ಪಡೆ ಗಡ ನಿಮ್ಮಣ್ಣನಂ (ಕುಶಭಾ. ೭–೩೭).

**ಪಿಡಿದೆತ್ತು, ಹಿಡಿದೆತ್ತು** = ೧. (ಕೈಯಲ್ಲಿ) ಹಿಡಿದು **ಮೇಲಕ್ಕೆತ್ತು** : ಶಾರ್ಙ್ಗವ ಪಿಡಿದೆತ್ತಿ ಶಿಂಜಿನಿಗೊಳಿಸಿ (ಲೋಹಕ. ೩೯–೨೩); ಪಿಡಿದೆತ್ತಿ ಕಲೆಯು ಕೊರಲಂ ತೀಡಿ ಕೈಗಳಿಂ (ಕಾಮೂಕ. ೦೬೩–೩೬೭); ಹತ್ತಿದ ಮೆಯ್ಯೊಳ್ಳ ಕೂಡಹಿ ಕರವ ಹಿಡಿದೆತ್ತಿದಳಬುಜಾಯತಾಕ್ಷಿ (ಲೋಹಕ. ೯–೨೬) ಟಾಗಿ ನಮಸ್ಕರಿಸುತ್ತಿದ್ದ ಪ್ರಿಯತಮೆಯನ್ನು ಹಿಡಿದೆತ್ತಿ (ಕದೀಶ. ೦೬೮) ; ಮೆಲ್ಲಗವಳನು ಮುಟ್ಟಿ, ಮರುಗಿ ಹಿಡಿದೆತ್ತು (ಇಂಗೀಶ. ೩೦–೬). ೨. **ಎದ್ದು ಕಾಣುವಂತೆ ಮಾಡು; ಎತ್ತಿ ತೋರಿಸು** : ನುಣ್ಗೊಗಮಿರ ಗಬ್ಬದಾವರೆಯ ಮೆಯ್ಸಿರಿಯಂ ಪಿಡಿದೆತ್ತೆ (ಶಬ್ದಮ. ೯೦). **ಪಿಡಿದೆಟ್, ಪಿಡಿದೆಳೆ** – ಹಿಡಿದು ಜಗ್ಗು : ಕೃಷ್ಣೆಯ ಮುಂದಲೆಯಂ ಪಿಡಿದೆಟ್ಪಲ್ಲಿಯು ತಲೆವಿಡಿದರ್ ನಮ್ಮ ಬೀರಮಂ ಕೌರವರುಂ (ಶಂಕರಾ. ೬–೩೬) ; ಅವನನು ಕಂಡ ಸೀಚಿಯು ಪಂಚೇಂದ್ರಿಯ ಪಿಡಿದೆಳೆದು ಮುಂಚುತಲಿವೆ ಕೂಟಕೆ (ಕಂಪಾ. ೯–೫೧) ; ಬಿಡಿಸಿ ಸೆರಗಂ ನಿರಿಯಂ ಪಿಡಿದೆಳೆದು ನಡೆಯುಪರ್ ತೋರ್ದೊಡಲ ಬಿಗಿಯಂ (ಕಾಂಚಿಕ. ೧೯೯–೨೬೨). **ಪಿಡಿದೊತ್ತು, ಹಿಡಿದೊತ್ತು** = ೧. (ಕೈಯಲ್ಲಿ) ಹಿಡಿದುಕೊಂಡು ಒತ್ತು : ಪಿಡಿದೊ [ತಾ. ದ]ತ್ತಿ ಪೊಡೆಯ ನೇಗಿಲ್ ನಡೆಮೊನೆಯೊಳ್ ನೆಗದ ಳಶವಂ ಕಡು (ಕೀರ್ತಸಂ. ೦೯೯–೧೮). ೨. **ಒತ್ತಾಯ ಮಾಡು ; ಬಲಾತ್ಕರಿಸು** : ಸ್ಪಂಜಿನ ತೆರದೊಳು ದೊಡ್ಡವರಿರುವರು . . . ತಾವಾಗಿ ತಮ್ಮೊಳಗಿರುವುವನೀಯರು ಹಿಡಿದೊತ್ತಿ ಹಿಂಡದ ಹೊರತು (ಇಂಕಾಶ. ೦೯೯–೯೯). ೩. **ವಶಪಡಿಸಿಕೊಳ್ಳು ; ಸ್ವಾಧೀನ ಮಾಡಿ ಕೊಳ್ಳು** : ಗೂವಯುಸನೋಡಿಸಿ ಭಟ್ಟುಪ[ಸೆಕ್ಕಿ]ಮೆಟ್ಟಿ × × × ಮದೇಭಹೇಮ × × ಮುಂ ಹಯಮುಂ ಹಿಡಿದೊತ್ತಿ ತಂದು (ಕೌಇ. XI–1, ೫೦–೮೩; 1006). ☞ ಈ ಧಾತು ಅನೇಕ ಪದಗಳೊಡನೆ ಸೇರಿ ಅನೇಕಾರ್ಥಗಳನ್ನು ಕೊಡುತ್ತದೆ. ಉದಾ. 'ಕಾಲ್ವಿಡಿ', 'ಕೆಯ್ವಿಡಿ', 'ಗೀಳು ಹಿಡಿ' ಇತ್ಯಾದಿ.

[ದೇ. ‖ ತಮಿ. ಪಿಟಿ ; ಮಲ. ಪಿಡಿ; ಕೊಡ. ಪುಡಿ; ತೆಲು. ಪಿಡಿ; ತೊದ. ಇಡಿ ]

**ಪಿಡಿ₂, ಹಿಡಿ₂** (ನಾ). ೧. ಹಿಡಿಯುವಿಕೆ; ಗ್ರಹಿಸುವಿಕೆ : 'ಪಿಡಿವೆಟು' ಪರಾ. ೨. ಹಿಡಿದುಕೊಳ್ಳಲು ಅನುಕೂಲಿಸುವಂತೆ ಇರುವ ವಸ್ತು ವಿನ ಭಾಗ ; ಕಾವು; ಹಿಡಿಕೆ; "ತ್ಸರುಃ, ಮುಷ್ಟಿಃ–ಈ ೨ ಹಿ(ಪಿ)ಡಿ" (ಹಲಾಯು. ೩೮–೩೦೯): ಮುಖದರ್ಪಣಕ್ಕೆ ತಂದಿಕ್ಕಿದ ರನ್ನದ ಪಿಡಿ ಸಂದಯಂಮೇನೆನೆ ಸುದತಿಯ ಕಮನೀಯ ಲಂಬಾಂಧರಮೆಸೆಗು (ಕುಲ್ಲಪು. ೩–೩೩); ಅವಳ ಕೊರಲ್ ಜನವಾದಮೆಸವಿನಂ ಭಾಜನವಾದತ್ತು ಪಮೆಗಾಸ್ಯಮುಕುರದ ಪಿಡಿಯೊಳ್ (ಅಗಪು. ೦೦–೩೫); ಬೆಳ್ಳಿಯ ಪಿಡಿಯ ಕತ್ತಿಯ ತಂದು ಹೊಕ್ಕುಳ ಬಳ್ಳಿಯ ಕೊಯ್ದರರ್ಭಕನ (ಲೋಹಕ. ೦೬–೨೧). ೩. **ಮುಷ್ಟಿ; ಮುಟ್ಟಿಗೆ** : ಉಡಲುಂ ತುಡಲುಂ ಕೊಟ್ಟುಂ ಪಿಡಿ ಕೀವಿದ ಪೊನ್ನನಿತ್ತುಂ (ಸಮುಶ. ೭–೩೧); ಪಿಡಿ ಪಣೆ ತೋಳ್ ತುದಿ ಪೊಳೆ ಮೊಳೆ ವಿಡಿಯೆನೆ ತೋಱತ್ತು ವಿರಹಿ ಕೌರಪಬಲಮಂ ಬಡಿವಲ್ಲಿ ಕಾಮುಭೀಮಂ ಪಿಡಿದ ಗದಾದಂಡಮೆನಿಸಿ ಮಾಮರನಿದಿರೊಳ್ (ಶಂಪ್ರಕು. ೭–೮೬); ಮಡ ದಿಯ ಸಳೆನಡು . . . ಪಿಡಿಗೊಳಗಾಗಿರ್ಪುದು (ಚಕಳು. ೩–೩೭); ಪೆರ್ಗವತ ಸೇರೆ ಪಿಡಿ ಶರಭಂಗಳೆನಿಪವರೊಳಭಿನಯಿಸಿ ತೋಱಸಲ್ಕೆದುಪಾಣಿವನದ ಮಂ ಸೃಷ್ಟಿಸಿದನೆಂಬ ಚೆಲ್ವಿನ ಕೋಮಲೆಯರಲ್ಲಿ ಕಣ್ಗೆಸೆದರು (ಕ್ಷ ಬಾಲ. ೬–೨೦). ೪. **ಮುಷ್ಟಿಯಲ್ಲಿ ಹಿಡಿಯಬಹುದಾದಷ್ಟು ಪ್ರಮಾಣ ; ಮುಷ್ಟಿಗ್ರಾಹ್ಯವಾಗುವಷ್ಟು ಪ್ರಮಾಣ** : "ಪಿಡಿಯೆನಿಪ್ಪ ನುಡಿ ಮುಷ್ಟಿಗ್ರಾಹ್ಯದ ಪೆಸರು" (ಕಸುಬಿ. ೧೯); ಗಾಮುಣ್ಡರು ಪಾರ್ವರು ತಮ್ಮ ಕೆಱಯ ಮಣ್ಣೊಳೆಕ್ಕಣ್ಡುಗ ಮಣ್ಣುವಿಪ್ಪಿಡಿಭತ್ತಮು . . . ಚನ್ದ್ರಸೂರ್ಯಕಾಲಮ್ಬರಂ ಸಲ್ವನ್ತೆ ಕೊಟ್ಟರ್ (ಕೌಇ. IX–1, ೦೮–೧೩; ೯೬೨); ನಡುವೊಂದು ಪಿಡಿಯೆನಲು ದಮ್ಮನದ ಸೊಕ್ಕಾನೆಯಿಡುಕುಜನ ಮೊಲೆವೆಟ್ಟನೊಳು ತನ್ನ ತಲೆಯನಿಟ್ಟೊಡನಳುವ ಪುರುಷಸಿಂಹಂ (ಶಾಕುಂ. ೬–೨೨): ಪಿಡಿಯೆಂಬ ನುಡಿ ತಳೋದರಿಯುರುರುಮಧ್ಯದೊಳ್ (ಶ್ರಕುಪ. ೩–೧೧). 'ಒರ್ಪಿಡಿ' ಪರಾ. ೫. **ಇಸ್ಪೀಟು ಎಲೆಗಳ ಕಟ್ಟು** : ಕೈಯಲ್ಲಿ ಹಿಡಿದ ಪಿಡಿಯಿಂದ ಜಾಕಿಯನ್ನು ತೆಗೆದು ಹಾಕುತ್ತಾ ಗೋವು ನುಡಿದ (ಕಾಂಯೂ. ೨); ಒಳಗಡೆ . . . ಬಂದು ಕಸೂತಿಯ ವಸ್ತ್ರ ಸೂಲು ಸೂಜಿ ಇಸ್ಪೀಟುಪಿಡಿ ಇವೆಕ್ಕಿವೆ (ಶ್ರಿರಾಳ. ೧೨); ಇಸ್ಪೀಟು ಆಟದಲ್ಲಿ ಅವನು ನಿಸ್ಸೀಮ. ಮನೆಯಿಂದ ಹಳೆಯ ಪಿಡಿಯೊಂದನ್ನು ಕೊಂಡು ಬಂದು, ಮರದ ನೆರಳಿಗೆ ಬಿಡಿಸಿ . . . ಎಲೆಗಳನ್ನು ಇಳಿಸು ವಾಗ, ಅವನ ಉತ್ಸಾಹ ತುರೀಯಾವಸ್ಥೆಗೆ ಮುಟ್ಟುತ್ತದೆ (ಸ್ವಕ್ಸಹೊ. ೩೮). ೬. **ಬಂಧನ ; ಸೆರೆ**; 'ಪಿಡಿವಡೆ' ಪರಾ. ೭. **ಕಸಪೊರಕೆ** : ಅಶ್ಲ ಮಷಿ ಲಶ(ಷು) ಪಿಡಿ ಪಿಡೀಲ್ ಲಸಿಯುಂ ಪುರಿಯೋಡು ಕೋಡಂ ಕಾವಲಿ ನಲಿಯುಂ ಬೆಸಗೊಂಬರ್ ಪಿಡಿದಿರೆಯುಂ ಪುಸಿವರ ಕೂಲು ಜಗಕ್ಕೆ ಮುಱಯಿಲ್ಲೆಂದಂ (ಅಲ್ಕುಶು. ೭–೪೪). ೮. **ಒಂದು ಬಗೆಯ ಆಯುಧ. ಕಠಾರಿ** : ಹೊಳೆವ ಕಠಾರಿ ಕೈಗತ್ತಿ ತೋಮರ ಬಿಲ್ಲು ಬಲುದಡಿ ಪಿಡಿ ಚಕ್ರದಲಿ ಕಳಬಂಟ ಕಂಠಪಿಚ್ಛೇದವಿನೋದದ ತಳವಱರೂರ ಕಾದಿಹರು (ಲೋಹಕ. ೦೮–೦೦೩); ಕೊರಳ ಯಜ್ಞೋಪ ವೀತದ ಮುಡಿಹೂಗಳ ಪರಿಮಳಿಸುವ ಗಂಧದಿಂದ ಕರದೊಳು ಪಿಡಿಯನಾಂತರಸುಮರ್ಕಳುಗಳು ಧುರಕನುವಾದರು (ಕಂಪಾ. ೧೬–೪೨). ೯. **ಸಣ್ಣದು ; ಚಿಕ್ಕದು** : 'ಪಿಡಿಗಲ್', 'ಪಿಡಿಗುಂಡು' ಪರಾ.

**ಹಿಡಿ₂** : ೨. "ತ್ಸರುಃ,–ಖಡ್ಗಾದಿ ಮುಷ್ಟಾ ಕತ್ತಿ ಮೊದಲಾದವುಗಳ ಹಿಡಿಗೆ ಹೆಸರು, ಕತ್ತಿಯ ಪಿಡಿ, ಆಯುಧದ ಕೈಪಿಡಿ" (ಸಿದ್ಧಾಂತಿ. ೨೬೫): ಹಿಡಿಯಿಲ್ಲದ ಶಸ್ತ್ರ ಕೀಲಿಲ್ಲದ ಕತ್ತರಿ (ಸರ್ವಜ್ಞ. ೦೨೫–೬೪೦): ಕತ್ತಿ ತಮ್ಮದೆನೆ ಹಿಡಿ ತಮ್ಮದಲ್ಲವೆ ದೇವ ? (ಹಬ್ಬರ. ೩೦–೦೨೦): ಪಾತ್ರೆಗಳ ಹಿಡಿ, ಸೊಂಡಿನಳಿಗೆ, ಸುದಂಗೆರೆ ಇತ್ಯಾದಿಗಳ ಕಡೆಗೆ ವಿಶೇಷಗಮನ ಕೊಡಬೇಕು (ಅಡುಗೆ. ೯೫). ೩. ಹಿಡಿಯೊಳಗುವಷ್ಟು ತುಂಬಿ ಆಸೆ

ಮಾಡುವನೆಗ್ಗ (ಶಶಿಕ. ೩೬–೩೦೭); ಜಗವಿದೆಲ್ಲವು ನನ್ನ ಮಾಯೆಯೊಳೊಗೆದು ತೋಱಿಸಿ ಸಂಗಿಸೆ ಸಂಗಿವುದು ಹಿಡಿಯಲಡಗುವುದು (ಶುಮ್ನಾಶೀ. ೩–೫೭); ಹಿಡಿಹಿಡಿಯೆಂದರೆ ಹಿಡಿಯಲಿ ಸಿಗುವನೆ ಬ್ರಹ್ಮಾಂಡವೇ ಆತ (ಸಂಶು. ೩೯–೭); ಹಿಡಿ ತುಂಬ ಹಣ ಕೊಟ್ಟರೂ ನುಡಿ ಚೆನ್ನಾಗಿರಬೇಕು (ಗಾದೆ). ೭. 'ಹಿಡಿವಡೆ' ಪರಾ. ೭. "ಹಿಡಿ–ಕಸಬರಿಗೆ" (ಜಾಸಕೋ. ೩೭); ಮರದ ಹಸಿ ಅಡರುಗಳಿಂದ ಒಂದು ಗುಡಿಸುವ ಹಿಡಿ ಮಾಡಿ, ತರಗೆಲೆ ಗುಡಿಸಿದಳು (ಮಶುಕು. ೨೭). ೯. 'ಹಿಡಿಗಲ್ಲು' ಪರಾ. ೧೦. ಮಿಾಸಲು; ಮುಡಿಪು: ಹಿಡಿಯೆಂಬ ನುಡಿ ಮಿಾಸಲೆಲ್ಲುಂಟು ನಿಚ್ಚಲು ಜಡಿಯುಂಬ ಶಬ್ದ ಮಳೆಯೊಳು (ಕೃಷ್ಣಕ. ೯–೩೩). 'ಹಿಡಿಮಂದಿ' ಪರಾ.

ಹಿಡಿಹಿಡಿ₂ (ದ್ವಿರುಕ್ತಿ): ಇನ್ನೂ ಯಾಕ ಬರಲಿಲ್ಲವ್ವಾ . . . ಹಿಡಿಹಿಡೀಲೆ ರೊಕ್ಕಾ ತಗದು ಹಿಡಿಹಿಡಿ ಅನ್ನಾಂವಾ ಖರೇ ಅಂತ ಕೈಮಾಡಿದರ ಹಿಡದ ಬಿಡಾಂವಾ (ಸಂಚೀಗೀ. ೯೨–೦೫); ಕೆಲವು ನಿದರ್ಶನಗಳು ಬಿಡಿಬಿಡಿಯಾಗಿ ಸಿಗುತ್ತವೆ; ಗ್ರಂಥರೂಪದಲ್ಲಿ ಹಿಡಿಹಿಡಿಯಾಗಿ ಏನು ಸಿಗುತ್ತಿಲ್ಲ (ದ್ರಾಕಶಿ. ೩೦).

[<ಪಿಡಿ₁/ತಮಿ. ಪಿಟಿ; ಮಲ. ಪಿಡಿ; ತುಳು. ಪುಡ, ಪುಡಿ, ಹಿಡಿ; ಕೊಡ. ಪುಡಿ; ತೆಲು. ಪಿಡಿ]

**ಪಿಡಿ₃**, ಹಿಡಿ₃ (ನಾ). ೧. ಹೆಣ್ಣಾನೆ; ಕರಿಣಿ: "ಪಿಡಿಯೆಂದು ಪೆಣ್ಣಾನೆ" (ಕಶಾ. ೩೦–೯೩); ಜಬೀರಕಾಂತಂ . . . ಎನ್ನ ಪೆಂಡತಿ ಮಲಯಾಪತಿಯಪ್ಪ ಪಿಡಿ ಪುರುಡಿನಿಂದಂ ಚಂದನಮಲಯಮೆಂಬ ಪರ್ವತದ ಶಿಖರದಿಂದಂ ತನ್ನನಿಕ್ಕಿ ಸತ್ತಂತೆ ನಿನ್ನ ಪೆಂಡತಿಯುಂ ಸತ್ತಳೆಂದು ಪೇಟ್ಟು (ವಡ್ಡಾರಾ. ೩೯–೦೦); ತಲೆವರಿದೋಡಿಯ ಪಿಡಿಯನೇಱಿ ಪೆಂಡವಾಸದೊಳ್ಪೆಂಡಿರ್ ಬಳಸಿ ಬರೆ (ಸಂಶಶಾ. ೩–೯೬ ಶ); ಪೊಡೆಯೆಂಬಿದು ಬೆಳೆಗೆಯ್ಯೊಳ್ಪಿಡಿಯೆಂಬಿದು ಕರಿಣಿಯೊಳ್ . . . ಅಲ್ಲದಿಲ್ಲಾ ನಾಡೊಳ್ (ಶಾರಶ್ರೀ. ೦–೯೫); ೨. ಯಾವುದೇ ಪ್ರಾಣಿಯ ಜಾತಿಯಲ್ಲಿ ಹೆಣ್ಣನ್ನು ಸೂಚಿಸಲು ಉಪಯೋಗಿಸುವ ಪದ; ☞ 'ಪಿಡಿ' ಎಂಬುದರ ಮೂಲಾರ್ಥ 'ಹೆಣ್ಣಾನೆ' ಎಂದಿದ್ದರೂ ಕ್ರಮೇಣ ಈ ಪದವನ್ನು ಇತರ ಪ್ರಾಣಿಗಳ ಹೆಣ್ಣುಗಳನ್ನು ಸೂಚಿಸುವಾಗ ಉಪಯೋಗಿಸಿರುವ ಉದಾಹರಣೆಗಳು ಅನೇಕವಾಗಿವೆ. ಮಲಯಾಳ, ತೆಲುಗುಭಾಷೆಗಳಲ್ಲಿಯೂ ಇದನ್ನು ಕಾಣಬಹುದು: 'ಪಿಡಿ' ಎಂಬುದು ಮೃಗಗಳೊಳಗಿನ ಸ್ತ್ರೀತ್ವಸೂಚಕವಾಗಿ ಪೂರ್ವಕಾಲದಲ್ಲಿ ರೂಢವಾಗಿದ್ದ ಹೆಸರೆಂದು ಭಾವಿಸಬಹುದು (ಜಾಕೋಪ. ೩೦೭). 'ಪಿಡಿಗುದುರೆ' ಪರಾ. ಹಿಡಿ₃: ೨. 'ಹಿಡಿಗುದುರೆ', 'ಹಿಡಿಯಾನೆ' ಪರಾ.

[ದೇ. ‖ ತಮಿ. ಪಿಟಿ; ಮಲ. ತೆಲು. ಪಿಡಿ]

**ಪಿಡಿಕಟ್ಟು** 'ಪಿಡಿಗಟ್ಟು' ನೋ.

**ಪಿಡಿಕಲ್** 'ಪಿಡಿಗಲ್' ನೋ.

**ಪಿಡಿಕಿಸು** 'ಪಿಡಿಕೆಯ್ಸು' ನೋ.

**ಪಿಡಿಕುತ್ತು₁** (ನಾ). ೧. ಹಿಡಿಯುಳ್ಳ ಒಂದು ಬಗೆಯ ಚುಚ್ಚುವ ಆಯುಧ: ಇದುವಿಟ್ಟಿಯು ಪಿಡಿಕುತ್ತಿನ ಕಕ್ಕಡೆಯು ಕೋಲ್ಗಿ ಮರ ಮಟಲಂ ಪಾಯ್ದು (ಸಂಶಶಾ. ೦೨–೬೦). ೨. ಚುಚ್ಚುವಿಕೆ; ತಿವಿತ: ಎಡಗಯ್ಯೊಳ್ ಮುಂದಲೆಯುಂ ಪಿಡಿದಿಱಿದು ಮರಲ್ಚಿಯೊತ್ತಿ ಸುರಿಗೆಯೊಳುರಮಂ ಪಿಡಿಕುತ್ತುಗುತ್ತಿ ನೆತ್ತರನುಡುಪಾನನೆ ಕುಡಿದು ತಣಿದು ಮಾರ್ಭಿಗೆ ಸಂದಳ್ (ಬಂಹಂ. ೩–೯೦). [ಪಿಡಿ₁ + ಕುತ್ತು₂]

**ಪಿಡಿಕುತ್ತು₂** (ನಾ). (ಆನೆಗೆ ಸಂಬಂಧಿಸಿದಂತೆ) ಬೆದೆ (?): ದುವಾಳಿಗಳೊಳೆ ತೊಡರ್ವ ಸಿಕ್ಕರ್ ನೆಗಟ್ದ ಒರಿಗಳೊಳ್ ಪಿಡಿಕುತ್ತು ಏರಭೂಷಣಂಗಳೊಳ್ ಮುತ್ತು (ಬಂಹಂ. ೦–೦೯ ಕಗೆ).

[ಪಿಡಿ₃ + ಕುತ್ತು₃ (< ಕುತ್ತ್ರ)]

**ಪಿಡಿಕೆ**, ಹಿಡಿಕೆ (ನಾ). ೧. ಹಿಡಿತ; ಬಂಧನ; ಸೆರೆ: 'ಪಿಡಿಕೆವೆಱು' ಪರಾ. ಹಿಡಿಕೆ: ೨. ಹಿಡಿದುಕೊಳ್ಳುವ ಸಾಧನ; ಕಾವು; ಹಿಡಿ: ಹೋತಿನ ಕೋಡುಗಳು ಚೂರೀ ಹಿಡಿಕೆಗೆ ಬರುತ್ತವೆ (ಶುಂಆಯ. ೩–೦೨); ಆ ವ್ಯಕ್ತಿ ಏಳುಪಿರನೆ ಮಿಂಚುತ್ತಿದ್ದ ಹಿಡಿಕೆಯುಳ್ಳ ನಡೆಗೋಲನ್ನು . . . ಊರುತ್ತ ಹಳ್ಳಿಯ ಬೀದಿಯಲ್ಲಿ ನಡೆದು ಬರುತ್ತಿದ್ದನು (ಶ್ರೀಕಟು. ೨೬೬). ೩. ಹಿಡಿ; ಮುಷ್ಟಿ: ಬದ್ದಯೂ ಮುಷ್ಟುಕ್ಕ–ಹಿಡಿಕೆಯಲ್ಲಿ ಹಿಡಿದು ಅಳೆವ ಮೊಬ (ಜಾಜಾ. ೦೨೨); ಅಡಕೆಯಷ್ಟು ಅಳಣ್ಣಾ ಹಿಡಿಕೆಯಷ್ಟು ಕಚ್ಚಲಣ್ಣಾ ಕಬಿದಾರ ಕಚಿತ್ಕೃತಿ ರಂಜಣಗಿ ಹಾಲಣ್ಣಾ (ಕಶಕ. ೨೨೦–೩). ೪. ಮುಷ್ಟಿಯಲ್ಲಿ ಹಿಡಿಯಬಹುದಾದಷ್ಟು ಪ್ರಮಾಣ; ಒಂದು ಹಿಡಿಯಷ್ಟು ಪ್ರಮಾಣ: ಮಡಿದ ಕಿವಿ ಸಣ್ಣರೋಮಂ ಹಿಡಿಕೆಯ ನಡು . . . ಅಡಿ ಮುಂಚುವ ನಾಯ್ಗಳಂ ನೃಪಾಲಂ ಕಂಡಂ (ಶಕಶಂ. ೬೨).

[ಪಿಡಿ₁ + –ಕೆ]

**ಪಿಡಿಕೆಯ್**, ಹಿಡಿಗಯ್, ಹಿಡಿಗೆಯ್₂ (ನಾ). ೧. ಹಿಡಿ; ಮುಷ್ಟಿ; ಮುಟ್ಟಿಗೆ: ಪಿಡಿಕೆಯ್ ತೀವಿದ ಲೂಗಣೆ . . . ಬೆಡಂಗನೆಸೆವುಕೊಳೆ ಧನುರ್ಧರರ್ ಪೆಣೆದೆಚ್ಚರ್ (ಶಂಶಶಾ. ೦೦–೬೦). ಹಿಡಿಗಯ್: ೨. (ಅಲಂ) ಅಧೀನ; ವಶ: ಹಿಡಿಗ[ಶಾಶಾಂ. ಗೆ] ಯ್ಯೊಳಿರ್ದಸುರರಿಪು ಪಾರ್ಥನಂ ಕರೆದು . . . ನೇಮಿಸಲು (ಕೃಬಿಶಾ. ೨೫–೩೯). ಹಿಡಿಗೆಯ್₂: (೧).

[ಪಿಡಿ₁ + ಕೆಯ್₂]

**ಪಿಡಿಕೆಯ್ಸು**, ಪಿಡಿಕಿಸು, ಪಿಡಿಕೈಸು, ಹಿಡಿಕಿಸು, ಹಿಡಿಕೆಯ್ಸು, ಹಿಡಿಕೈಸು (ಕ್ರಿ). ೧. ಹಿಡಿದುಕೊಳ್ಳುವಂತೆ ಮಾಡು: (೧). ೨. ಕೈಯಲ್ಲಿ ಹಿಡಿದುಕೊಳ್ಳು, –ತೆಗೆದುಕೊಳ್ಳು: ಕಡುಕಂಪು ಪಿಡಿಕೆಯ್ಸುಬರ್ಕುಮೆ ಬಟಲ್ದೈತಂದ ತಂಗಾಳಿಯುಂ ಪಿಡಿಯಲ್ ಬರ್ಕುಮೆ (ಅರ್ಜಕೇ. ೦–೩೭). ೩. ಮುಷ್ಟಿಯನ್ನು ಗಟ್ಟಿಯಾಗಿ ಹಿಡಿ, –ಬಿಗಿಮಾಡು: ಪಿಡಿದಡಸಿ . . . ಒದೆದೊದೆದು ಗುದ್ದಿಗುದ್ದಿಯೆ ಕೊಲಲೆಂದಡಹಡಿಸು ಪಂತಿರಿರ್ದುವು ಪಿಡಿಕೆಯ್ಸಿ[ಶಾಶಾಂ. ಕಿಯಿಸಿ]ದ ಕೆಯ್ಯುಮೊದವ ಕಾಲುಂ ಹರಿಯಾ (ಅರ್ಜಕೇ. ೬–೫೭). ಪಿಡಿಕಿಸು: ೨. ಬಿಸದ ಸುಚರಿತ್ರದಿಂದಂ ನಡೆದ ಶುದ್ಧಾತ್ಮನಪ್ಪನದನೊಲ್ಲದೆ ಮಿಂದಡೆ ಶುದ್ಧನಲ್ಲ ಮಲಮಂ ಪಿಡಿಕಿಸಿ ಪೊಱಗಯ್ಯನೊರಸಿ ಕಚ್ಚಿದ ತೆಱದಿಂ (ಸಶುಕ. ಅಶುಬಂಶಿ. ೬೩೩–೩). ೩. ಎರಡುಗಯ್ಯಂ ಪಿಡಿಕಿಸಿ ನಿಲ್ವುದುಂ ತಲೆಯುಂ ತೂಗುತ್ತೆ ನಿಲ್ವುದುಂ . . . ಇಂತಿವೆಲ್ಲಮಂ ಪರಿಹರಿಸಿ ಜಿನಪ್ರತಿಮೆಯಂತೆ ನಿಲ್ವುದು ತೃತೀಯಸಾಮಾಯಿಕನೆಂಬ ಶ್ರಾವಕನ ಸ್ವರೂಪಂ (ಶಜಾಕ. ೩೪೫); ಚರಣದಂದುಗೆಕಿಂಕಿಣಿಗಳಿಂ ಚರಣದೊಂದೆರಡಡಿಯನಿಡುತಂ ತರುಣಿಯರು ಪಾಡಲ್ಕೆ ತೋಳಾಡುತ್ತೆ ಪಿಡಿಕಿಸುತೆ ಶಿರಪೊಲೆಯುತ್ತ ನರ್ತಿಸುತಲಿ (ಕುಶಶಾ. ೦೬–೩೨). ೪. ಒತ್ತು; ಅದುಮು: ಅಡಿಯಂ ಬಲ್ಪಿಡಿದುವು ನುಣ್ಗೊಡೆಯಂ ಪಿಡಿಕಿಸಿದುವಡರ್ದು ಕಾವನ ತೋಳಂ ಬಿಡದಪ್ಪಿದುವು . . . ಪೊಳೆವ ತುಱುಗೆಮೆಗಣ್ಗಳ್ (ಕಡ್ಯಕಾ. ೩೨೫). ಪಿಡಿಕೈಸು: ೨. ಕೂಡೆ ಮುಸುಱುವ ಮಱಿದುಂಬಿಯ ಬಂಬಲಿಂ ಲತೆಗಳು ಒರಿಯ ದಡ್ಡಿಯಂ ಕವಿದುತೆಯುಮಪಾಗೆ ಪಿಡಿಕೈಸಲಪ್ಪ ಪಂಪಿಂ ತೀವಿದಂತಾಗಿ (ಕಾರಂಉ. ೨೦೯); ಅಂತು ಪುಡಿಗತ್ತುರಿಯೆಂದು ಪಿಡಿಕೈಸಿ ಪೂಸಲುಂ ಪಾಸಿ ಮೊಟ್ಟೆಗಟ್ಟಲುಂ ವಿಹರಂಗವಿಂದುಗುಂ ಗುದ್ದಲಿ ಗೊಂಡುಗುಟ್ಟಿ ಪೊಱಗಾಗಲುಮಪ್ಪ ಕಾಳದ ಕಟ್ಟಲೆಯೊಳ್ (ಅರ್ಜಕೇ. ೩–೦೯ ಶ). ೪. ಮಣಿಮಯಮಪ್ಪ ಪೀಠದ ಬೆಟ್ಟಿತೆಂಬಂತಿರಗಲೆ ನೂಂಕಿ ಮೆಲ್ಲಿದುವಪ್ಪ ತನ್ನ ನುಣ್ಗೊಡೆಗಳನರಸನ ಪಾದಪಲ್ಲವಕ್ಕೆ ಸಾರ್ಚಿ ಪಾಣಿಪಲ್ಲವಂಗಳಿಂ ಪಿಡಿಕೈಸುತ್ತುಮಿರ್ಪುದುಂ (ಅರ್ಜಕೇ. ೦–೦೦೦ ಶ); ಲಕ್ಷ್ಮೀ ಲಲನೆಯ ತೆಱದಿಂ ಲೀಲೆಯಿಂ ತನ್ನ ಕಾಲಂ ಪಿಡಿಕೈಸುತ್ತಿರ್ದಳಂ ಕನ್ನೆಯನೆ ಕನಸಿನೊಳ್ ಕಂಡಂ (ಅರ್ಜಕೇ. ೫–೫೯). ಪಿಡಿಕಿಸು: ೪.

ಅರ್ಜುನನ ಯಮಳರ ಪದವನೆಚ್ಚು ಬಿದಂತೆ ಹಿಡಿಕಿಸುತ . . . ಘನಕಾನನದ ಮಧ್ಯದಲೀತನಿದ್ದನು (ಕುಮಾ.ಕ. ೯-೬); ಅರ್ಜುನ ನಕುಲ ಸಹದೇವ ರೆಚ್ಚರಾಗದ ತೆರದಿ ಹಿಡಿಕಿಸುತ್ತ (ಲಕ್ಷ್ಮಿ.ಭಾ. ೩೯-೧೧). ೫. ಹಿಂಡು; ಹಿಸುಕು: ಕೊಡು ಬೆಸನನಹಿಪತಿಯು ತುಡುಕುವೆ ತಡೆವೆರ್ನನ ಕಾಲನಸುವನು ಹಿಡಿಕಿ[ಪಾಠಾಂ. ಸಡಿಲಿ]ಸುವೆ (ಕೊರಚ. ೫೦. ೬೦೯).

**ಹಿಡಿಕೆಯ್ಸು**: ೨. ಅತುಳಶಿವಸುಖಸುಧೆಯನಾತ್ಮಸ್ಥಿತಿಗೆ ಕೈಕೈಯಿಂದೆ ಹಿಡಿಕೆಯ್ಸಿ [ಪಾಠಾಂ. ಕೈಸು]ತವೆ ಸವಿಯಂ ನೋಳ್ಪವೊಲು ಹಸ್ತಂಗಳಂ ಪೀರ್ವ ವಿತತ ಲಿಂಗಧ್ಯಾನಿ (ಬಸವ. ೩-೩೫). ೩. ಹಿಡಿಕೆಯ್ಸದ ದೊಟನಂ ರಕ್ಷಿಯೆಂಬುದು (ಹರಿಹರ. ೯೮-೩೪೮); ಪಿ(ಹಿ)ಡಿಕೆಯ್ಸದ ಕೆಯ್ಯ ಕುಡಿಕೆಯುಂ ಮುಷ್ಟಿಯೆಂಬುದು (ಹರಿಹರ. ೯೮-೩೯೩). **ಹಿಡಿಕೈಸು**: ೧. ಮೇಲಿನ 'ಹಿಡಿಕೆಯ್ಸು' ಉಲ್ಲೇಖದ 'ಬಸವ' ಪ್ರಯೋಗದ ಪಾಠಾಂತರವನ್ನು ನೋಡಿ. [ಪಿಡಿ$_1$ + ಕೆಯ್ಸು]

**ಪಿಡಿಕೆವೆಱು** (ಕ್ರಿ). ಹಿಡಿತಕ್ಕೆ ಒಳಗಾಗು; ಬಂದಿಯಾಗು: ಅತ್ಯಾಸಕ್ತಿಯಿಂ ಮರವಟ್ಟಿರುತೆಯುಂ ಚಿತ್ರಿಸಿದರಂತೆಯುಂ ಮೂರ್ಛೆ ವೋದರಂತೆಯುಂ ಆರಾನುಂ ಪಿಡಿಕವೆತ್ತರಂತೆಯುಂ ಮಿಡುಕದೆ ನೋಡುತಿರ್ದೆಂ (ಕಾದಂಬ. ೩೯೬). [ಪಿಡಿಕೆ + ಪೆಱು$_1$]

**ಪಿಡಿಕೈಸು** 'ಪಿಡಿಕೆಯ್ಸು' ನೋ.

**ಪಿಡಿಖಂಡ**, ಹಿಡಿಖಂಡ (ನಾ). ೧. ಸಣ್ಣ ಚೂರು,-ತುಂಡು: 'ಪಿಡಿಖಂಡಂಗೊಯ್' ಪರಾ. ೨. ಮಾಂಸದ ಸಣ್ಣ ಚೂರು,-ತುಣುಕು: 'ಪಿಡಿಖಂಡಂಗೊಳ್' ಪರಾ. **ಹಿಡಿಖಂಡ**: ೨. ಕೈ ಇಲ್ಲದ ಮೋಟ ಹಿಡಿಖಂಡವ ಕೊಯ್ದು ನಾಲಿಗೆ ಇಲ್ಲದ ಬಾಯಲ್ಲಿ ಮೆದ್ದ (ಷೋಡಶ. ೨೦೩-೬೬೦). [ಪಿಡಿ$_3$ + ಖಂಡ]

**ಪಿಡಿಖಂಡಂಗೊಯ್**, ಹಿಡಿಖಂಡಂಗೊಯ್ಯು, ಹಿಡಿಖಂಡಗೊಯ್ಯು (ಕ್ರಿ). ಸಣ್ಣ ಸಣ್ಣ ಚೂರುಗಳಾಗಿ ಕತ್ತರಿಸು; ತುಂಡುತುಂಡಾಗಿ ಮಾಡು: ಬೇವ ಪೆಣಮುರಿವ ಬಾಯ್ಗೊಂಡದೊಳ್ ತಮ್ಮ ತನುವಂ ಪಿಡಿಖಂಡಂಗೊಯ್ದು ಬೀಟ್ವ ಸಾಧಕರುಮಂ (ಅರ್ಜುನ. ೫-೯೦ ವ). **ಹಿಡಿಖಂಡಂಗೊಯ್ಯು**: ಇನ್ನೆನ್ನಂಗದ ಮೇಲೆ ಬರಲಿ ಹಿಡಿಖಂ[ಪಾಠಾಂ. ಗಂ]ಡಂಗೊಯ್ಯಲಿ . . . ಮತ್ತೆಯೂ ಲಿಂಗಾರಾಧನೆಯ ಮಾಡುವೆ (ಬಸವ. ೬೦೬). **ಹಿಡಿಖಂಡಗೊಯ್ಯು**: ಪರಧನಕ್ಕೆಳಸಿದವರ ಹಿಡಿಖಂ[ಪಾಠಾಂ. ಕಂ]ಡಗೊಯ್ಯನೆ (ಬಸವ. ೫೬೬); ಕಂಡು ಸೈರಿಸಿ ಬಿಡುವುದೇಟು ಭಂಡತನ ಬಲುವೀರರಿಗೆ ಹಿಡಿ[ಪಾಠಾಂ. ಕಡಿ]ಖಂಡಗೊಯ್ಯಲುಬೇಕು ಬಲ್ಲಡೆ ಶಾಸ್ತ್ರಸಿದ್ಧವಿದು (ಕೊರಚ. ೫-೬-೩೫).

[ಪಿಡಿಖಂಡ + ಕೊಯ್]

**ಪಿಡಿಖಂಡಂಗೊಳ್** (ಕ್ರಿ). ೧. ಸಣ್ಣ ಸಣ್ಣ ಚೂರುಗಳಾಗಿ ಕತ್ತರಿಸು,-ತುಂಡರಿಸು: ಪಿಡಿಖಂಡಂಗೊಳೆ ಮನದೊಳ್ ಪೊಡರ್ಪುಗೆಟ್ಟಿರದು ಬೆಗಡುಗೊಂಡವಧಾನಕ್ಕೊಡರಿಸೆ ಭಂಗಪಂದಂದವರೊಡವುಟ್ಟಿರೆ ಪುಟ್ಟುಗುಂ ವಿಭಂಗಜ್ಞಾನಂ (ಶಾಂತಿ. ೬-೯೦); ಅಡಗಿನ ಕಡುವೆಸನಿಗ ತಿನ್ನಡಗಂ ನಿನ್ನಡಗನೆಂದು ಪೇಸೇಟ್ವೆಸೆಗಂ ಪಿ[ಪಿ]ಡಿಖಂಡಂಗೊಂಡುಗಿಬಗಿದಿಡ[ದಿ]ಡದೆಡೆವಿಡದೆ ಕೂಳುಗೊಳ್ವರ್ ಬಾಯೊಳ್ (ಸುಕುಮಾ. ೧೧-೯೨). ೨. ಮಾಂಸದ ಸಣ್ಣ ಚೂರನ್ನು ತೆಗೆದುಕೊಳ್ಳು: ದೆಪಸದೊಳೆಯ್ದಿ ಅರಸನಂ ಜಾಮಿಸಿ ನುಂಪುತ್ತಿಟ್ಟುದಂ ಕಣ್ಡು ಕೀಟುಗೆಯ್ಯೆಯಾಗಲ್ಕ[ಡ]ದುವಮಂ ಕುಡುವೆನೆನ್ದು ಪಿಡಿಖಣ್ಡ[ಂ]ಗೊಣ್ಡು ದೆಸೆವಲಿಗೆಪೊಟ್ಡು (ಶಾಸನ. XI-1, ೧೧-೨೦; ೬೬೬). [ಪಿಡಿಖಂಡ + ಕೊಳ್$_1$]

**ಪಿಡಿಗಟ್ಟು**, ಪಿಡಿಕಟ್ಟು, ಹಿಡಿಕಟ್ಟು (ನಾ). ೧. ಹಿಡಿತ; ಸೆರೆ; ಬಂಧನ: ಪಾರ್ಥನವನಂ ನೋಡಿ ಪಿಡಿಗಟ್ಟಂಗೊಳಗಾಗದವನಿವನ ವಧ್ಯನೆಂದು . . . ಕಳಿಪುವುದುಂ (ಮಹಾಭಾ. ೧೧-೩೬ ವ). **ಪಿಡಿಕಟ್ಟು**: ೧. 'ಈ ಪ್ರಸೂನಂಗಳನೂನಸೌರಭಕ್ಕಂ ಸುಕುಮಾರತೆಗಂ ಸೈರಿಸದೆ ನಿಚ್ಚಂ ಮಚ್ಚರಿಸುವುವೆಂದು ಪಿಡಿಕ[ಪಾಠಾಂ. ಗ]ಟ್ಟಂಗೊಳಗುಮಾಡಿದು ದೇಬಂತೆ ಪುಷ್ಪಲಾವೀಕದಂಬಂ ಪುಷ್ಪಮಾಲೆಗಳಂ ಪಿಡಿದಿರ್ದವುದೆಂದು ತ್ರೇಕ್ಷಿಸುತ್ತುಂ (ಪಾರ್ಶ್ವ. ೧೧-೯೩ ವ); ಬಟನಿಲ್ಲಾಟಡಿಯಿಲ್ಲ ಕಳ್ಳರ ಭಯಂ ಮುನ್ನಿಲ್ಲ . . . ನಿರೋಧಮಿಲ್ಲ ಪಿಡಿಕಟ್ಟಿಲ್ಲುದ್ಯಸಂಪತ್ತಿಯಿಂ ಮೆಚ್ಚಿವಾ ಪೂರ್ವವಿದೇಹದೊಳ್ (ಭಾರತ. ೯-೭). **ಹಿಡಿಕಟ್ಟು**: ೨. ಕಟ್ಟುಪಾಡು; ಕಟ್ಟಳೆ; ವ್ಯವಸ್ಥೆ: ನಮ್ಮೂರಿನ ಹಿಡಿಕಟ್ಟು ಯಾವೂರಲ್ಲೂ ಇರಲಿಲ್ಲ (ಹುಟ್ಟಿಹ. ೦೫೩); ಆರ್ಥಿಕ ಅನುಕೂಲತೆಗೋಸ್ಕರ ಮಾಡಿಕೊಂಡ ಆಡಳಿತದ ಹಿಡಿಕಟ್ಟು ಎನ್ನುವ ಸಂಕುಚಿತ ನೋಟದಿಂದ ನೋಡುವುದನ್ನು ಬಿಟ್ಟು ಸಮಗ್ರರೀತಿಯಲ್ಲಿ ನೋಡು (ರರ್ಮಶ್ರೀ. ೬೮). [ಪಿಡಿ$_3$ + ಕಟ್ಟು$_3$]

**ಪಿಡಿಗಲ್**, ಪಿಡಿಕಲ್, ಹಿಡಿಗಲ್ಲು (ನಾ). ೧. ಸಣ್ಣಕಲ್ಲು: ಕಾಲಿಂದ ನೆಲನ ಪೊಯ್ವಾಡೆ ಪಿಡಿಗಲ್ಗಳ್ ಮಾಲೆಯಾಡಿದ ತಟದಿಂದ ಮೇಲಿಸೆದಿಹ ಮಂಬರದೊಳೆನಲದಟ ತರಾಳತನವನೇನನೆಂಬೆ (ಶುರಾಣಾಂ. ೯-೯೯). **ಪಿಡಿಕಲ್**: ೨. ಕುಂಬಾರನು ಮಡಕೆಯನ್ನು ಮಾಡಲು ಉಪಯೋಗಿಸುವ ಕಲ್ಲು; ಮಣ್ಣು ತಟ್ಟುವ ಕಲ್ಲು: ಅಸಿ ಮುಷಿ ಕುಶೆ(ಷು) ಪಿಡಿ ಪಿಡಿಕಲ್ ಕುಸಿಯುಂ ಪುರಿಯೋಡು ಕೋಡು ಕಾವಲಿ ನುಲಿಯುಂ ಬೆಸಗೊಂಬರ್ ಪಿಡಿದಿರೆಯುಂ ಪುಸಿವರ ಶೂಲಂ ಜಗಕ್ಕೆ ಮುಟ್ಟಿಯಿಲ್ಲೆಂದಂ (ಜಟ್ಟಿಪು. ೦-೯೯). **ಹಿಡಿಗಲ್ಲು**: ೧. ಮುಂಡದ ಹಲಗೆ ಹೆಣದ ಎಲುವಿನ ಕತ್ತಿ . . . ಖಂಡದ ಹಿಡಿಗಲ್ಲು ನರದ ಚಬುಕುಗಳ ಗಂಡುಭೂತಗಳೆದ್ದವಾಗ (ಹರಿಶಾಂ. ೩-೫೬); ಆರಿಸಿ ತೆಗೆದ ಹಿಡಿಗಲ್ಲುಗಳದೇ ಎರೆಗೊಂದು ರಾಸಿಯಾಯಿತು (ಚೆಳುವು ೬೫); ಆಕೆ ಹೊರಗೆ ಬಂದು ನಾಲ್ಕಾರು 'ಹಿಡಿಗಲ್ಲು'ಗಳನ್ನು ಎತ್ತಿಕೊಂಡಳು (ಬಸಿಹಾ. ೦೦೦).

[ಪಿಡಿ$_3$ + ಕಲ್$_3$. / ತಮಿ. ಪಿಟಿಕಲ್]

**ಪಿಡಿಗುಂಡು** (ನಾ). = ಪಿಡಿಗಲ್ ೧: ಪಿಡಿಗುಂಡಿಟ್ಟು ಕವಣೆಯಾಂತ ಸತಿಯರ ನಿಡುತೋಳ್ಗಳೆಸೆದುವು (ಶ್ರೀಪಾಂ. ೦-೫೩); ಪಿಡಿಗುಂಡು ಬಡಿಗುಂಡು ಜಡಿದು ಪೊಯಿವ ಗುಂಡು ಒಡನೆತ್ತಿ ಹಾಕುವ ಗುಂಡು (ಅನಂತ. ೦೮-೯೬); ಕನಕಾದ್ರಿಯಂ ಪಿಡಿಗುಂಡ ಮಾಳ್ಪ . . . ಸೂರ್ಯಮಂಡಲವ ನೊಡೆವ ಘುಡುಘುಡಿವ ಸಿಡಿಲಂ ಸೀಳ್ವ ರುದ್ರಗಣಮೆಚಿವಿಡದೆ ಒಗ್ಗಸೆದುದು (ಶಬರ. ೨-೨೪); ಪಿ[ಪಾಠಾಂ. ಸಿ]ಡಿಗುಂಡು ಬಡಿಕೋಲ್ಗಳುಬುಬೆಯಿಂದಿಬುಬೆಯಿಂ . . . ಜಡಿದಾರ್ದು (ಕೈಟಭ. ೨೮-೯೬). [ಪಿಡಿ$_3$ + ಗುಂಡು]

**ಪಿಡಿಗುದುರೆ**, ಹಿಡಿಗುದುರೆ (ನಾ). ಹೆಣ್ಣುಕುದುರೆ: ಪಿಡಿಗಳನೇಱಿ ಕೆಲಂಬರ್ . . . ಕೆಲರ್ಪಿಡಿಗುದುರೆಗಳೊಳ್ ಪೆಱವರ್ಪೊಡವಿಯೊಳಡಿಯಿಟ್ಟು ತಳರ್ದರ್ (ರಾಜಶೇ. ೧೧-೦೩). **ಹಿಡಿಗುದುರೆ**: ಎಕ್ಕಟಿಗರೇಱಿ ಹಿಡಿಗುದುರೆಗಳನು ಎಣಿಕೆ ಮಾಡದೆ ಹಿಡಿವ ರಾಯರಾವುತರು . . . ಹೊತ್ತಬಿಯುದಟ್ಟಿಡುವ ಮಹಾರಥಿಕರೆಸೆದರಲ್ಲಿ (ಸಮ್ಯಕ್. ೬-೯೯); ಹಿಡಿವರು ಹಿಡಿಗುದುರೆಯ [ಪಾಠಾಂ. ಬಲುಖಾನರ] ರಾವುತರನು ಕೆಡಹಿದರು (ಶುರಾಣಾಂ. ೯೨-೬೬). [ಪಿಡಿ$_3$+ಕುದುರೆ]

**ಪಿಡಿಗುದ್ದು** (ನಾ). ಮುಷ್ಟಿಯನ್ನು ಬಿಗಿದು ಕೊಡುವ ಪೆಟ್ಟು,-ಹೊಡೆತ: ಈ ಬಸಪ್ಪನನ್ನು ಹಿಡಿಸಿ ಚೆನ್ನಾಗಿ ಪಿಡಿಗುದ್ದಿನ ಸೇವೆಯನ್ನು ಮಾಡಿಸಲೇಬೇಕೆಂದು ನಿಷ್ಕರ್ಷೆ ಮಾಡಿಕೊಂಡು (ಮುದ್ದಣ. ೬೩).

[ಪಿಡಿ$_3$+ಗುದ್ದು$_2$(< ಗುರ್ದು$_3$). / ತೆಲು. ಪಿಡಿಗುದ್ದು, ಪಿಡಿಗ್ರುದ್ದು]

**ಪಿಡಿಗೋಲ್**, ಪಿಡಿಗೋಲು, ಹಿಡಿಕೋಲು, ಹಿಡಿಗೋಲು (ನಾ). ಹಿಡಿದುಕೊಳ್ಳುವ (ಸಣ್ಣ)-ಕೋಲು, ದೊಣ್ಣೆ: ದಟ್ಟಿಯೊಳ್ಸುತ್ತಿರ್ದ ನಾಗರ ಮರಿಯೆಂಬ ಕೂರಸಿಯಂ ಕೊಂಡು ಪಿಡಿಗೋಲ್ಗೊಳಿಸಿ ಫಳ್ಳಿಸುತ್ತಂ ಕುಶಮಾನಂಗಿದಿರ್ಚೆ ನಿಲಲ್ (ಕಳಕ್ಷ. ೩-೨೮). **ಪಿಡಿಗೋಲು**: ಶಾಂತಲಾದೇವಿ

. . . ಪಕ್ಕದ ದಂತದ ಪಿಡಿಗೋಲನ್ನು ಮೆಲ್ಲಗೆ ತೆಗೆದುಕೊಂಡು ಜೇಗಟೆಯ ಮೇಲೆ ಮೃದುವಾಗಿ ಬಡಿದಳು (ಸವತಿ. ೨೦೦). **ಹಿಡಿಕೋಲು :** ನಾಲು: ಸಿಂಹದ ಮಾರಿ ಹಿಡಿಕೋಲು. ಐದು: ಒಂದು ಭಾರಿ ಛತ್ರಿ (ಹೂಹಂಶ. ೦೦೬). **ಹಿಡಿಗೋಲು :** ಒಡೆಯರ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೇ ಪ್ರಾಣದಲ್ಲಿ ಹಿಡಿಗೋಲ (ರಣಾಶ. ೯೪–೯೬). [ಪಿಡಿ$_1$ + ಕೋಲ್$_1$]

**ಪಿಡಿಗೋಲು** 'ಪಿಡಿಗೋಲ್' ನೋ.

**ಪಿಡಿಚಿ** 'ಪಿಡಿತೆ' ನೋ.

**ಪಿಡಿಚೆಂಡುವೊಯ್** (ಕ್ರಿ). ತಲೆಯನ್ನು ಹಿಡಿದುಕೊಂಡಂ ಕತ್ತರಿಸು : ದುರ್ಜನರೆಲ್ಲಂ ಉರವಣಿಸಿ ಬಂದಿರಪ್ಪಡೆ ತಲೆಯಂ ಪಿಡಿಚೆಣ್ಡುವೊಯ್ವ ನಜ್ಜುನನನುಜಂ (ಎಕ. VI, ಕಡೂರು. ೩೮–೪೭; 1191).
[ಪಿಡಿ$_1$+ಚೆಂಡು (<ಸೆಂಡು) + ಪೊಯ್$_1$]

**ಪಿಡಿತ,** ಹಿಡಿತ (ನಾ). ೧. ಹಿಡಿದುಕೊಳ್ಳುವಿಕೆ : 'ಕಾಲ್ವಿಡಿತ' ಪರಾ. **ಹಿಡಿತ :** ೨. ಅಂಕೆ ; ಹತೋಟಿ ; ಅಧೀನ : ಆತ್ಮನಾಪೆಡೆ ಯಲ್ಲಿದ್ದಿತ್ತು ಷಡುವರ್ಣದೊಳಗಲ್ಲ ನಡೆ ನುಡಿ ಚೈತನ್ಯವಲ್ಲ ಹಿಡಿತಕ್ಕೆ ಬರಲಿಲ್ಲ ಇನ್ನೆಂತಿಪ್ಪುದೋ (ಅರವ. ಶು. ೨೦೫–೩೬೫); ಸ್ಫುಟದಿ ಹಿಡಿಯೆ ಹಿಡಿತಕೆ ಸಿಕ್ಕದಿಹ ಹಸ್ತಪುಟದೊಳಕ್ಷಿತ್ತ ರಥವಲ್ಲಿಸುವ (ಶರಶ. ೧೬–೬೫). ೩. ಕಟ್ಟುಪಾಡು ; ವ್ಯವಸ್ಥೆ : ಒಟ್ಟಿನಲ್ಲಿ ನಮ್ಮೂರ ರೈತರು ಒಂದು ಹಿಡಿತದಿಂದ ಊರನ್ನು ಆಳುತ್ತಿದ್ದರು(ಹುಟ್ಟಿಹ. ೧೭). ೪. ಕುಸ್ತಿವರಸೆಯ ಒಂದು ಪಟ್ಟು : ಸುಗ್ರೀವನು ಅನೇಕ ಹಿಡಿತಗಳಿಂದ ತನ್ನ ಸಾಮರ್ಥ್ಯ ವನ್ನು ತೋರಿಸಿದರೂ ಕಡೆಗೆ ವಾಲಿಗೆ ಅಂಜಿ ಆತನು ಹಿಂದಕ್ಕೆ ಸರಿಯ ಹತ್ತಿದನು (ತುಳಸೀ. ೨೫೦). [ಪಿಡಿ$_1$+ – ತ$_2$]

**ಪಿಡಿತರ್,** ಹಿಡಿತರ್, ಹಿಡಿತರು (ಕ್ರಿ). ೧. (ಕೈಯಲ್ಲಿ) ಹಿಡಿದು ಕೊಂಡು ಬರು : ಎಮ್ಮ ಭಕ್ತರು ಕೊಟ್ಟ ಪಾತ್ರೆಯಂ ಪಿಡಿತಂದು . . . ಬಯ್ಚಿಟ್ಟು ಕೊಡಿಯೆಂದು (ಶಿವರ. ರೇ. ೧೬–೩). ೨. ಸೆರೆ ಹಿಡಿದು ತರು ; ಬಲಾತ್ಕಾರದಿಂದ ಕರೆತರು : ಎನ್ನಣುಗದಮ್ಮನ ನಿಕ್ಕಿದನು ಪೊರಳ್ಚಿ ಕೊಂದಂದಡಂಯಟ್ಟಿ ಮುಟ್ಟಿ ಪಿಡಿತಂದು (ಸರಾಹು. ೦–೧೯); ರುದ್ರಸಖಮುಖ್ಯಸುರರಂ ಬಡಿದು ಪಿಡಿತಂದು (ಶಿಶಿಪ್ರ. ೦–೯); ನರರಕ್ಕಸರನಿಜಾದೋಡಿಸಿ ಪಿಡಿತೇದ ವರವಮದಗಜದ ಶಾಲೆಗಳು ಮೆಟಿ ದುವು (ಕಂಶಪ. ೬–೨೮). **ಹಿಡಿತರ್ :** ೨. ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ (ಬಸವರೇ. ೩. ೭೮–೧೭೪). **ಹಿಡಿತರು :** ೧. ಆ ಬಟೆಯು ಬಟ್ಟಲನಬಳಿ ಹಿಡಿತರಲು (ಜಕಪು. ೧೪–೨೩). ೨. ನಾವು ಹಿಡಿತಂದುದು ಮೊದಲು ನೀರ್ಗುಡಿಯಲೊಲ್ಲವು (ಜಕಪು. ೬೦–೨೪); ಪಾಂಡವವಿಭುವ ಹಿಡಿತಹೆನೆಂದು ಕೌರವಸಭೆಗೆ ಭಾಷೆಯ ಕೊಟ್ಟು (ಕುಮಾವ್ಯಾ. ೨ ಸೂಚನ). [ಪಿಡಿ$_1$+ತರ್]

**ಪಿಡಿತರಿಸು,** ಹಿಡಿತರಿಸು (ಕ್ರಿ). ಸೆರೆಹಿಡಿದುಕೊಂಡು ಬರುವಂತೆ ಮಾಡು ; ಸೆರೆ ಹಿಡಿಸು : ಕೊಟ್ಟಾರದ ಕರಣಂ(ಣ)ಗಳಂ ಬಂಚಿಸಿ ಕಳ್ದು ದ್ರವ್ಯಮಂ ಸೂಳೆಗೆ ಕೊಟ್ಟೊಡರಸಂ ಪಿಡಿತರಿಸಿ ಹತಿಯಿಸೆ (ಜಾಪುಂಕ. ೨೬); ಜಿನಮುನಿಗಳಂ ಪಿಡಿತರಿಸಿ ಕಬ್ಬುನದ ಶೂಲಂಗಳಲಿ ತೆಗೆಸಿದನು (ಬಸಪು. ೫೦–೫೦). **ಹಿಡಿತರಿಸು :** ಒಡೆಯರು ವೀರಾಜಯ್ಯ ನನ್ನು ಶಿಕ್ಷಿಸಬೇಕೆಂದು ನಿಶ್ಚಯ ಮಾಡಿ ಅವನನ್ನು ಹಿಡಿತರಿಸಿ (ಬಕಳ.೦೬).
[ಪಿಡಿತರ್+ – ಇಸು$_1$]

**ಪಿಡಿತೆ,** ಪಿಡಿಚಿ, ಹಿಡಿತೆ (ನಾ). ೧. ಹಿಡಿದುಕೊಳ್ಳುವಿಕೆ ; ವಶಪಡಿಸಿ ಕೊಳ್ಳುವಿಕೆ ; ಸ್ವಾಧೀನ ಮಾಡಿಕೊಳ್ಳುವಿಕೆ : (ಕಿ). **ಪಿಡಿಚಿ :** ೨. ಒಂದು ಹಿಡಿಯಷ್ಟು ಪ್ರಮಾಣದ ಪಟುದ್ದೆ,—ಉಂಡೆ : ಕಾಡು ಮಾರದ ಸೊಪ್ಪು ನೆರಳ ಕಟ್ಟೆಯೆಡೆಯ ನೀರ ತಂದು ಮಾಡಿ ಮಣ್ಣ ಪಿಡಿಚೆಯಲಿ ಕೂಡಿ ನಿನ್ನ ಪೂಜಿಸೆ (ಕೆಶ್ರೀಸ. II. ೩೦–೦); ಪಿಡಿಚೆಯನು ಮಾಡುತಲಿ ಶಿಖೆಗಳ ಪಿಡಿದು ತೂಗುತ ಹತ್ತುಮೊಗಗಳ ಮಿಡಿತ ನೀನಾರೆಂದು ಕೇಳಿದಳವಳು ದಶಗಳನ (ಉತ್ತರ. ೩೬–೩೩). **ಹಿಡಿತೆ :** ೧. ಚಿಮ್ಮುಟಿಗೆಯಲಿ ಮುಳ್ಳನುಪೊತ್ತಿ ಅಮರಿಸಿದಂತೆ ಧೊನೆಗಾವಿಂದ ವಸ್ತು ವನು ಮತ್ತೆ ಹಿಡಿದಂದದಲಿ ಮೊಳೆಗಳನೊತ್ತಿಯಿಕ್ಕಳದಿಂದ ಹಿಡಿದಂತೊತ್ತಿ ಬೆಳಗಲಿ ಚಿತ್ತು ಹಿಡಿವುದೆ ಹಿಡಿತ್ತಿ[ತ್ತೆ]ಕೇಳು (ಜ್ಞಾಪಸಿಂ. ೦೯–೪೩) ; ಲಕ್ಷ್ಯದ ಹಿಡಿತ್ತಿ[ತ್ತೆ]ಯನರಿಯುವಳ ಲಕ್ಷ್ಯ ನಿಂತ ನೀನೆ ಬ್ರಹ್ಮಾಗಿ ಹೊಳೆಯು (ಶರಾಶ. ೫೬–೩). ೩. ಹಿಡಿಕೆ ; ಕಾವು ; ಹಿಡಿ : ಹಿಡಿತೆಯ ಹಿಡಿದು ಇಟಿಯಬೇಕಲ್ಲದೆ ಮೊನೆಯ ಹಿಡಿದು ಇಟಿದವರುಂಟೇ (ಸೋಲಪಪು. ೦೨೭–೯೯೪). ೪. ಬಂಧನ ; ಹಿಡಿತ : ಇವನ ಕಾದಲೆ ಯೊಡನೆಯಿಂವಂ ಪರನ್ನಪರ ಹಿಡಿತೆಗೊಳಗಾದನು (ಶಾಸೋಶ್ಚಪು. ೦೩–೬).

**ಪಿಡಿತೆಬಡಿತೆ**=ಸೆರೆ ಹಿಡಿಯುವಿಕೆ ಮತ್ತು ದಂಡಿಸುವಿಕೆ : ಜನ ನಾಥನೇ ನೊಂದನಾದರುಂ ಪಿಡಿತೆಬಡಿತೆಗಳಿಂದ ಜನವಸೀಕೃತಗ್ಗೆವುದು (ಶಂಕಶಾ. ೬–೦೩–೬). **ಹಿಡಿತೆಬಡಿತೆ**=ಹಿಡಿಯುವಿಕೆ ಮತ್ತು ಬಿಡುವಿಕೆ : **ಹಿಡಿತೆಬಿಡಿತೆ** ಕೊಳುಕೊಡೆಯು . . . ಜಡಿಮುಂದಿ ಗಾಡಿವೋದಿಗಳು ಕ್ಷತ್ರಿಯಗೆ ಸಂಗಡಿಸಿರಬೇಕು (ಜಕಶ. ೩೯–೦೦೫); ಬಲ್ಲ ಸೊಲ್ಲಿನ ಹಿಡಿತೆ ಬಿಡಿತೆಗಳೆಲ್ಲ ತ್ರಿಜಗದೊಡೆಯ ತಾ ಬಲ್ಲ (ಗಗಶಾ. ೨–೮೪).
[ಪಿಡಿ$_1$+ – ತೆ$_2$]

**ಪಿಡಿನಡು** (ನಾ). ಹಿಡಿಯಲ್ಲಿ ಹಿಡಿಯಬಹುದಾದಷ್ಟು ತೆಳುವಾದ ಸೊಂಟ ; ತೆಳುನಡು : ಉಡುಮಧ್ಯದ ರೋಹಿಣಿಗೆ ಪಡಿಯೆನಿಸಿದ ಕೆಳದಿಯರ ನಡುವೆ ಪಿಡಿನಡುವಿನ ನೀಟಿಯ ಕಂಡು (ಜೀವಂಧಾ. ೨–೬೩); ತರುಣಭ್ರುಮರಸವಿತಿಯ ಬೆಡಂಗು ಪಿರಿದುಂ ಗೆಲೆವಂದುದು ಪಿಡಿನಡುವಿನ ಕುವರಿಯು ಕುರುಳೋಳಿ (ಜಯಶಾ. ೩–೫೦); ಬಾಯ್ದುಡುವ ಪೆಣ್ಣೀನ ತಂದವಳು ಪಿಡಿನಡುವಿನ ಮಾಯಾಂಗನೆಗತ್ತು ಬೇಗಡಿಗೆಯ ಮಾತ ಹೇಳಿದಳು (ಸೋಚಶ. ೦೦–೩೬); ಕೊಬ್ಬಿದ ಪೊಂಬಾಟು ಪಿಡಿನಡು ಕೊಂಕಿದ ಹುಬ್ಬಿನ ಪೆಣ್ಣು (ಜಕಶ. ೨–೪೮). [ಪಿಡಿ$_1$+ನಡು$_1$]

**ಪಿಡಿನಡೆ** (ನಾ). ಆನೆಯ ಗಂಭೀರವಾದ ನಡಿಗೆ,—ಮಂದಗಮನ : ಅಣಾಗಿ ಎನಸುಂ ನಾಣ್ಚಿ ಟಿರೆದೊಳ್ ಪೂಮಾಲೆಗೊಂಡು ಪಿಡಿನಡೆಯಂತೆ ಸಹಚರಿಯರ್ವೆರಸು ಮೆಲ್ಲನವರಿರ್ವರ ಸನಿಯಮಂ ಸಾರ್ದು (ಅದ್ಭುತ. ೦೦–೦೦). [ಪಿಡಿ$_1$+ನಡೆ$_1$]

**ಪಿಡಿಪಡು** 'ಪಿಡಿವಡು' ನೋ.

**ಪಿಡಿಪೀ** (ಕ್ರಿ). ಅಧೀನಪಡಿಸು ; ವಶಕ್ಕೆ ಕೊಡು : ಕಾದುವ ಕೂರ್ಪುದೋರ್ಪ ಬೆಸನಂ ರಘುಜಂ ಬೆಸವೇಟ್ಟನಿಲ್ಲ . . . ಆನೀ ದನು ಜಾತ್ಮಜಂಗೆ ಪಿಡಿಪಿತ್ತು ದಶಾನನನಳ್ಕಿ ಬಳ್ಕಿ ಲಂಕಾದಹನಕ್ಕೊಡರ್ಚುವೆಂ (ಶಂರಾಮಾ. ೦೦–೦೩೩); ಬಗೆಯದೆ ದಾಸವಾಧಿಪನ ದೋರ್ಬಲಮಂ ಖಚರಪ್ರವೀರರಂ ಬಗೆಯದೆ ನಟ್ಟ ತನ್ನಳವನಿಂದಗಿಗಾಂ ಪಿಡಿಪೀವೆ ನೆಂಬುದಂ ಬಗೆದಂ (ಶಂರಾಮಾ. ೦೦–೦೩೯). [ಪಿಡಿವು+ಈ$_1$]

**ಪಿಡಿಪು,** ಹಿಡಿಹು, ಹಿಡಿಹಂ (ನಾ). ೧. ಹಿಡಿದುಕೊಳ್ಳುವಿಕೆ ; ಹಿಡಿತ : ಪತಿಯಾಣತಿಗೆ ಪ್ರತಿನುಡಿಯಲಾರದೆ ಪತಿವ್ರತೆ ಮಹಾಸ್ತ್ರದಿ ಸಡಿಲಿಸನಿಯುನ ಮುಷ್ಟಿಯಂ, ಪಿಡಿಪನೋಸರಿಸಿ (ಶ್ರೀರಾಮಾ. ೮೦೩–೫೫). **ಹಿಡಿಹು :** ೧. ತೊಡೆಯ ಹಿಡಿಹಿನ ವಾಜಿ ತೊಂಡಿಯನೊಗಡಿ ಲಂಘಿಪ ತೇಜಿ (ಕೃಷ್ಣಾಕಾ. ೦೩–೦೦). ೨. ಹಿಡಿ ; ಮುಷ್ಟಿ : ಕಂಗಳು ಹೊಳೆಯೆ ಮಟಿಮಿಗನೆಂದು ಹೆಕ್ಕಳಿಸಿದರು ಹಿಡಿ[ಹಾಠಾಂ.ಡು]ಹಿನಲಿ ಅಲರಿದಂಬುಜವೊಂದು ವದನಕೆ ನಿಲುಕಿ ತುಂಬಿಗಳೆಂದು ಕುರುಳಿಂಗಳುತಿ ಕೈಗಳ ತೆಟಿದರತಿ ಮುಗುದೆಯರು (ಕುವ್ಯಾಕ. ೦೦–೨೮). ೩. ಹತೋಟಿ ; ಅಂಕೆ : ಬಲುಕಣೆಯ ಹಿಡಿ[ಹಾಠಾಂ.ಡು]ಹಿಂಗೆ ಲಾಗಿಸು

ತಿರ್ದಿದಾ ನಂತಿ (ಕುವ್ಯಾದ್ರೋ. ೩-೩೭); ಆವಗು ಕೈಯಲ್ಲಿ ಪಿಡಿಯೆ ಹಿಡಿ ಹಿಗೆ ಸಿಕ್ಕದು (ಶಂಕ್ಷೆ. ೬-೫-೩೯). ೪. ಸೆರೆ ; ಬಂಧನ : ಎಸುತ ನಡೆದಿಟ್ಟಳಿಸಿ ಪಿಡಿಹಿಂಗೊಳಗುವಪಾಡಿ ವಿಘಾತಿಯಲಿ ತಡೆಯೆ (ಕುವ್ಯಾದ್ರೋ. ೨-೩). ಹಿಡುಹು : ೨. ಮೇಲಿನ ಉಲ್ಲೇಖದ 'ಕುವ್ಯಾಅ. ೧೧-೨೮' ರ ಪ್ರಯೋಗದ ಪಾಠಾಂತರವನ್ನು ನೋಡಿ. ೩. ಮೇಲಿನ ಉಲ್ಲೇಖದ 'ಕುವ್ಯಾದ್ರೋ. ೩-೩೭' ರ ಪ್ರಯೋಗದ ಪಾಠಾಂತರವನ್ನು ನೋಡಿ. [ಪಿಡಿ₁ + – ವು₂]

**ಪಿಡಿಪೇಟು** 'ಪಿಡಿವೇಟು' ನೋ.

**ಪಿಡಿಪೊನ್.** ಹಿಡಿಹೊನ್ನು (ನಾ). ಹಿಡಿ ತುಂಬುವಷ್ಟು ಚಿನ್ನದ ನಾಣ್ಯ : ನಿಲ್ಲಿಂದ ಪಡಿಯಜರಿಗೆ ಪಿಡಿಪೊನ್ನ [ಪಾಠಾಂ ಹೋಗ]ಳ ಚೆಲ್ಲುತ ಚತುರಭೂಮಿವರು ನಿಲ್ಲದೆಯ್ಯಂದರು (ಕಜಾಸಾಜ. ೦೬-೩೦). **ಹಿಡಿಹೊನ್ನು :** ಬಡವನಾದರು ಚಿಂತೆ ಬಲಿದನಾದರು ಚಿಂತೆ ಪಿಡಿಹೊನ್ನು ಕೈಯೊಳಾದರು ಚಿಂತೆಯು (ಕುಲಂದ. ೦-೯೫-೩); ವಾಳೆಯುವಾಳೆಯದೊಳಗೆ ಚೆಲ್ಲಿತು ಸೂಜಿ ಲೀಳೆಯ ಹಿಡಿಹೊನ್ನು ವರಹ (ಮೋಹತ. ೦೬-೩೬); ದೀನದಲಿತರಿಗೀತೂ ಹಿಡಿಹೊನ್ನು, ಬೊಗಸೆಹೊನ್ನು ದೊರೆತುವು (ಕೇತುಕೊ. ೭): ಕಡೆಗಣ್ಣ ಭಾವಕ್ಕೆ ಹಿಡಿಹೊನ್ನ ಕೊಟ್ಟೇನು (ಹಳ್ಳಿಹಾ. ೬೦). [ಪಿಡಿ₂ + ಪೊನ್]

**ಪಿಡಿಯಂಬು, ಹಿಡಿಯಂಬು** (ನಾ). ೧. ಹಿಡಿದಿರುವ ಬಾಣ : ಪಿಡಿಯಿಂದಿಟ್ಟಿದಲ್ . . . ವಧು ಮದನನ ಕೈಪಿಡಿಯಂಬೆಸೆದೀಕ್ಷಿಪರಂ ಪಿಡಿಯಂಬಿಂ ಕಾವನಾರ್ದು ಸಾರ್ದಿಸುವಿನೆಗಂ (ಶಗಾಪ. ೦೪-೩೬). ಹಿಡಿಯಂಬು : ೧. ಕತ್ತಿ ಬಳಹು...ಕತ್ತರಿ ಮಳಲು ಚಂಡವೇದಿಯು ಕಿತ್ತ ಹಿಡಿಯಂ ಬಿಡುವ ಕಲ್ಲುಂ ಮತ್ತೆ ಮುಖ ಮಾಯದತಿಲಕವುಂ ಕರ್ಕಟಿಯು ರಜ್ಜು (ಬಸಪು.೩೦-೩). ೨. ಹಿಡಿ ತುಂಬುವಷ್ಟು ಬಾಣ: ಹಿಡಿಯಂಬಂ ಕಟ್ಟಿ ಬಾರಿಂದುಡೆದೊವಲೆಡೆಯೊಳ್ ಬಿಲ್ಲುಮಂ ಕೌಂಕುಳ್ಳಂದಡಸಿಟ್ಟೆಯ್ದೊತ್ತಿಯಂಬಂ ತಿರುಪುತೆ . . . ಎಡಬಲನಂ ನೋಡುತುಂ ಪೋದನೊರ್ವಂ ಕಡುಪಿಂದಂ ಬೇಂಟೆಯ ಕ್ರೀಡೆಗೆ ದರವಿಳಸತ್ಕಿಂಕಿರಾತಂ ಕಿರಾತಂ (ಚಾರಪು. ೦೦-೦೦೩). [ಪಿಡಿ₁ + ಅಂಬು₂]

**ಪಿಡಿಯಚ್ಚುವಿಡಿ** (ಕ್ರಿ). ಹಿಡಿದುದನ್ನೇ ಬಲವಾಗಿ ಹಿಡಿ,—ದೃಢವಾಗಿ ನಂಬು : ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಯತಿಕಯೋಗಾಚಾರವಾಧ್ಯಮಿಕಮತವಿತಥಾಭಿದಾಯಿಗಳ್ ಜೀವಾಭಾವಮನೆ ಪಿಡಿಯಚ್ಚುವಿಡಿದು (ಆದಿಪು. ೨-೭ ವ); ಪುರಜನಂಗಳೆಲ್ಲಮೋರೊರ್ವರನೆ ಪಿಡಿಯಚ್ಚುವಿಡಿದು ನುಡಿಯೆ (ಕಂಕಹಾ. ೨-೫೬ ವ); ಎಂದೊಡದನೆ ಪಿಡಿಯಚ್ಚುವಿಡಿದುಂಟುವಪಾಡಿ ದಂಡಂಗೊಂಡು ತಿಳಿದೊಳಂ ಕಂಡು ಯುವರಾಜಪ್ರಭೃತಿಗಳೆತ್ತ ಮೆಟ್ಟಿತ್ತ ಚಪ್ಪಟೆಯೆಂದು ನಗುತಂ ಪೋಗಿ (ಶಾಂತಿಪು. ೬-೫೯ ವ); ಪಾಪಹೇತುವಪ್ಪ ದುರ್ಮಾರ್ಗಮಂ ಪಿಡಿಯಚ್ಚುವಿಡಿಯದೆ . . ಸುಖಹೇತುವಪ್ಪ ಸನ್ಮಾರ್ಗದೊಳ್ನೆಗಟ್ಟುದು (ಧರ್ಮಾಮೃ. ೪-೩೬). [ಪಿಡಿ₁ + ಅಚ್ಚು₃ + ಪಿಡಿ₁]

**ಪಿಡಿಯಾನೆ, ಹಿಡಿಯಾನೆ** (ನಾ). ಹೆಣ್ಣು ಆನೆ ; ಪಿಡಿ ; ಕರಿಣಿ : ಪಿಡಿಯಾನೆಯಲ್ಲಿಯುಂ ಧೇನುಕಾ, ಗಣಿಕಾ ಎಂಬುದು (ಶಬ್ದಮ. ೦೩೩-೦೩). ಇಕ್ಷುಚಾಪನ ಪರಿವಾರದೇವತೆಯರಂತೆಸೆದಿರ್ಪ ವಿಳಾಸಿನೀಜನಂ ತನತನಗಾಗಳೆಯ್ದೆ ಪಿಡಿಯಾನೆಗಳಂ ಪಗೆಪಿಂದಮೇಱಿದರ್ (ಕುಸುಪಾ. ೫-೩೩). **ಹಿಡಿಯಾನೆ :** "ಹಸ್ತಿನೀ, ವಶಾ__ಈ ೨ ಹಿಡಿಯಾನೆ" (ಶಬ್ದಮ. ೩೯-೬೨). [ಪಿಡಿ₃ + ಆನೆ₁]

**ಪಿಡಿಯಾಳ್, ಪಿಡಿಯಾಳು, ಹಿಡಿಯಾಳು** (ನಾ). ಬಂದಿ ; ಸೆರೆಯಾಳು: 'ಪಿಡಿಯಾಳ್ಗೆಯ್ಸು' ಪರಾ. **ಪಿಡಿಯಾಳು :** ಪಿಡಿಯಾಳಾಗಿ ಪೋಪೆನು (ಅಜಿತ. ೦೯-೦೩೫): ಅಂಜದ ಪಿಡಿಯಾಳಾಗಿ ಹಿಡಿದು ನಿಮ್ಮಡಿ[ಗೊಪ್ಪಿಪ] ಪಡಗರ ವೆನಗಿರುತಿರಲ್ (ತ್ರಿಶುಕಾಂ. ೦೯-೦೩೩); ತರಣಿಯಂ ಬೆನ್ನಟ್ಟಲೊಡನೆ ಪಿಡಿಯಾಳಾದ ಕಿರಣಂಗಳಂ ಸೆಱೆಯಿನಲ್ಲಿಟ್ಟುದೋ ತಮಂ (ಶಂಕ್ಷೆ ೯-೬). **ಹಿಡಿಯಾಳು :** ಚಂದ್ರಸೂರ್ಯರನಡ್ಡವಿಸಿ ಹಿಡಿಯಾಳ ಹಿಡಿದವು ಮುಗಿಲ ಚೂಣೆಗಳು (ಕುವ್ಯಾಶ. ೦೯-೦೬); ರಾಮನ ಹಿಡಿಯಾಳ ಹಿಡಿದವು (ಕುರಾಕಾಂ. ೦೯-೦೨೩); ಹಿಡಿಯಾಳಾಗಿ ಸಿಕ್ಕಿದ ಚಿಕ್ಕಪ್ಪನ ಕಡಿದಡೆ ಕಳಪವಿಲ್ಲನುತ (ಮೋಹತ. ೩೬-೦೯). [ಪಿಡಿ₂ + ಆಳ್₃]

**ಪಿಡಿಯಾಳು** ಪಿಡಿಯಾಳ್' ನೋ.

**ಪಿಡಿಯಾಳ್ಗೆಯ್ಸು** (ಕ್ರಿ). ಸೆರೆಯಾಳನ್ನಾಗಿ ಮಾಡು ; ಬಂಧಿಸು ; ಸೆರೆಹಿಡಿ : ಪಿಡಿಯಾಳ್ಗೆಯ್ಸುವೆಂ ನೆರೆದ ನಿನ್ನ ತತ್ತಿಗರನೆನುತಾ ಖಳಂ ಕೋಲ್ಗಱೆದನು (ಶಂಪು. ೪೯-೨೦). [ಪಿಡಿಯಾಳ್ + ಕೈಸು (< ಕೆಯ್ಸು)]

**ಪಿಡಿಯಿಸು, ಪಿಡಿಸು, ಹಿಡಿಸು** (ಕ್ರಿ). ೧. ಹಿಡಿದುಕೊಳ್ಳುವಂತೆ ಮಾಡು ; ಹಿಡಿಯುವಂತೆ ಮಾಡು : ಪಿಡಿಯೆಂ ಚಕ್ರಮನೆಂಬ ಚಕ್ರಿಯನಿಳಾಚಕ್ರಂ ಭಯಂಗೊಳ್ವಿನಂ ಪಿಡಿಯಿಪ್ಪೆಂ ಕರಚಕ್ರಮಂ (ಕಂಕಹಾ. ೦೦-೨೩); ಪರಲೋಕಾಲೋಕನಮಂ ಪರಿಹರಿಸಿದೆವಲ್ತೆ ನೋಡಿ ಮೆಂದೀಗಳುದಾಹರಿಸುವ ತೆಱದಿಂ ಪಿಡಿಯಿಪರರಸುಗಳೆಡೆವಿಡದೆ ಮೇಘಡಂಬರತತಿಯಂ (ಕಾದಂಪೂ. ೩೩೩); ಗಂಡಿಗಂ ಶಾಪಸನವರನೊಡಗೊಂಡು ಬಾದತಿಪೂತಜಲದಲಿ ದಂಡಮಂ ಪಿಡಿಯಿಸಿ ಮುಳುಂಕಿಸಲು (ಬಸಪು. ೨೬-೬೩). ೨. ಬಳಿ ; ಲೇಪಿಸು ; ಸವರು : ನಾಗರಮನರೆದು ಕರಮಿಂಬಾಗಿರೆ ಗಾಳಿಸಿ ಬಟ್ಟಕ್ಕೆ ನಸ್ಯಾಂಜನವಂ ಬೇಗಂ ಮಾಱ್ಪುದು ನೀರೊಳಗಾಗಳೆ ಪಿಡಿಯಿಸುಗೆ ಮೂತ್ರಕೃಚ್ಛ್ರಾಪಹರಂ (ಅಶ್ವಶಾ. ೦೦-೨೨). **ಪಿಡಿಸು :** ೧. ತನ್ನುಡೆಗಟ್ಟೆಯನು ಬಲುಹಾಗಿ ಪಿಡಿಸುತ್ತಾತನಂ ತಲೆವಾಗಿಸುತ್ತಂ (ಬಸಪು. ೨೬-೨೫); ಪೊಯ್ ತ್ರಿವಿ ಪಿಡಿಸು ಬಸುರ್ಗಳಂ ಬಗಿ ಕರುಳನುಗಿ . . . ಎನುತ್ತೆ ಕವಿದುದು ಸುರಪದಾತಿ ಮಸಗಿ (ಶಂಪು. ೩೯-೫). ೩. ಸೆರೆಹಿಡಿಯುವಂತೆ ಮಾಡು ; **ಸೆರೆಹಿಡಿಸು :** ಬೇಡಿದರ್ಗಿಲ್ಲೆಂಬುದುಂ ಕಾದಿ ಸೋಲ್ವುದುಂ ಪೆಱವೆಣ್ಣಂ ಪಿಡಿಸುವುದುಂ ಕನಸಿನೊಳಪ್ಪೊಡಮಿಲ್ಲಂ (ಗದಾಯು. ೨-೩ ವ). ೪. ಒಳಗೊಳ್ಳಲು ಸಮರ್ಥವಾಗು ; ಸಾಕಷ್ಟು ಅವಕಾಶವನ್ನು ಹೊಂದಿರು ; ಸಾಕಾಗು : ಕೆಡೆದುದೊ ಮುಂದರಂ ಧರೆಗೆ ಬಿಟ್ಟುದೊ ಭಾನುರಥಂ ನಭಸ್ಥಲಂ ಪಿಡಿಸಿ[ಪಾಠಾಂ. ೧]ದುದೋ . . . ಎನಲ್ ನಭಮಂ ಪುದಿದತ್ತು ನೀವಿ ಜೇವೊಡೆಯ ಬಲಾಚ್ಯುತರ್ ತ್ರಿಭುವನೈಕಭಯಂಕೃತಚಾಪಟಂಕೃತಂ (ಶಂಪುರಾ. ೬-೯೬). **ಹಿಡಿಸು :** ೧. ಜಡವಿರಹಿತಂ ನಿಃಪ್ರಪಂಚದ ಬೆಡಗಿನೊಳ್ಪಿನ ಮತಿಯ ಕೀಲಂ ಹಿ[ಪಾಠಾಂ. ಪಿ]ಡಿಸಿ ಲಿಂಗಪ್ರಾಣಮಥನ ಸವನುಭವಪನಜಾಹಿ (ಬಸಪು. ೨೯-೩೩); ದಂಡಿಗೆ ಬೆತ್ತ ಹಿಡಿಯುವುವಕ್ಕೆ ಮುಂದೆ ಮಾಚಿ ನಾಚುತಿದ್ದೆ ಹೆಂಡತಿ ಸಂತತಿ ಸಾವಿರವಾಗಲು ದಂಡಿಗೆ ಬೆತ್ತ ಹಿಡಿಸಿದಳಯ್ಯ (ಕುಲಂದ. ೦-೯೫-೦). ೪. ದೋಣಿಯಲ್ಲಿ ಅದು ಹಿಡಿಸುವುದಕ್ಕಿಂತಲೂ ಹೆಚ್ಚಾಗಿ ಜನ ತುಂಬಿದ್ದರು (ಕಂಗಾಳ್ವ ೯೯೯). ೫. ಒಳಹೊಗಲು ಸಮರ್ಥವಾಗು ; ಅಳವಡು ; ಹೊಂದಿಕೆಯಾಗು ; ಆ ಪಾತ್ರದೊಳಗೆ ನದಿಯ ಬೋರೆ ಹಿಡಿಸಲಿಲ್ಲ (ಮುಂಬಯಿ. ೩-೯೫); ಈ ಡಬ್ಬದಲ್ಲಿ ಹತ್ತು ಸೇರು ಅಕ್ಕಿ ಹಿಡಿಸುತ್ತದೆ (ರೂಢಿ). ೬. ಬೇಕಾಗು ; ಅವಶ್ಯವಾಗು ; ಅಗತ್ಯವಾಗು : ಈ ಕೆಲಸಕ್ಕೆ ನಾಲ್ಕು ದಿನ ಹಿಡಿಸುತ್ತದೆ (ರೂಢಿ) ; ಈ ಭಕ್ಷ್ಯಕ್ಕೆ ಎರಡು ಸೇರು ಸಕ್ಕರೆ ಹಿಡಿಸುತ್ತದೆ (ರೂಢಿ). ೭. ಒಪ್ಪಿಗೆಯಾಗು ; ಮನಸ್ಸಿಗೆ ಬರು : ಅವರಿಗೆ ನಾನು ಹೇಳಿದ್ದು ಹಿಡಿಸಿತು (ಅಪಾಶ. ೩ ಹಿಕ್ಕರಿ).

**ಪಿಡಿಯಿಸಿಕೊಳ್, ಪಿಡಿಸಿಕೊಳ್, ಹಿಡಿಸಿಕೊಳ್ಳು** = ಹಿಡಿದುಕೊಳ್ಳುವಂತೆ ಮಾಡು : ಅನ್ನೆಗಂ ಭೀಮಸೇನನುಂ ಬೋನವೇಳೆಗೆಯುಂ ಸಟ್ಟುಗಮು

ವನೊರ್ವ ಪರಿಚಾರಕನಿಂ ಪಿಡಿಯಿಸಿಕೊಂಡು ಬಂದು ನಿಂದನಂ ಕಂಡು (ಶಂಕರಾ. ೬-೩೩ ವ) ; ಮಂಡಲಿಕರ ಕೈಯ ಹಡಪ ಹಾವುಗೆ ಕುಂಚ ಗಿಂಡಿಯ ಪಿಡಿಸಿಕೊಂಬವನು . . ನಡೆದನು ಗುರುವಿಗೆ ಗಿಂಡಿಯಂತೆಗವವನಾಗಿ (ಶಿಶ. ೩-೯) ; ತತ್ಕಾಲಪ್ರೇಮುವವನಜ್ಯದೆ ವಿಭವಕ್ಕೆ ಮಾಡಿದವನ ಭಕ್ತಿ ಇರುಳು ಸತ್ತಿಗೆಯ ಹಿಡಿಸಿಕೊಂಡಂತೆ (ಶಿಶು. ೨೨೭) ; ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧರಾತ್ರಿಯಲ್ಲಿ ಕೊಡೆ ಹಿಡಿಸಿಕೊಂಡ (ಗಾದೆ).

[ ಪಿಡಿ$_1$ + – ಇಸು$_3$ ]

**ಪಿಡಿವಗೆ** (ನಾ). ಕಡುವೈರಿ ; ಪ್ರಬಲವಿರೋಧಿ : ಪೊರ್ಕುಳ್ ಸುಳಿಯನಟ್ಟಹಾಸಂಗೆಯ್ಯೆ ಕಿಱುದೆಱೆಯ ಮುಱುಕಮುಂ ತ್ರಿವಳಿ ಸಂದೇಹ ಮಧ್ಯಂ ನೆಟ್ಟನೊರ್ಪಡಿಯೆಂಬ ನುಡಿಗೆ ಪಿಡಿವಗೆಯಾಗೆ (ಕವ್ಯಾ. ೩-೨೮).

[ ಪಿಡಿ$_1$ + ಪಗೆ$_2$ ]

**ಪಿಡಿವಡು, ಪಿಡಿಪಡು** (ಕ್ರಿ). ಸೆರೆಗೆ ಸಿಗು ; ಬಂಧನಕ್ಕೊಳಗಾಗು : ಎಮ್ಮಂ ಪಿಡಿದೆಱೆವಂದಿನ ನಿಮ್ಮದಟುಗಳೀಗಳೆತ್ತವೋದುವೊ ಪಿಡಿವಟ್ಟವ್ಮ ಬಟಲ್ಲಿರೆ ಕಂಡರೆ ನಿಮ್ಮಳವಂ ನಿಮಗುವಿಗಾಳೀಯೆಡರಾಯ್ತೇ (ಶಂಕರಾ. ೩-೩೯) ; ರಣಲೋಳನಿಳಾತಳಕೆ ಪಾಯ್ದು ರಥದಿಂದೊರೆಯಿಂ ಬಾಳಂ ಕಿಟ್ಟಿಯ್ದುವಿನಂ ಬಾಳಂ ಪಿಡಿವಡೆವ ಮಾಟ್ಕೆಯಿಂ ಪಿಡಿವಟ್ಟಂ[ಪಾಠಾಂ. ವೆತ್ತಂ] (ಜಗ. ೧೧-೯೯). **ಪಿಡಿಪಡು :** ಒಟ್ಟಜೆಗಟ್ಟು ಕಾರ್ಯವಶದಿಂ ಖಚರಂ ಪಿಡಿಪಟ್ಟು ಪಲ್ಲಣಂಗಟ್ಟಿಸಿಕೊಂಡುಂ (ಶಂಕರಾ. ೯-೧೧೩); ತೊಡಕು ತಿದ್ದುವುದೇಳಿಯೇಳಿಯೆಂದೆನಲುದು ಪಿಡಿವಟ್ಟ[ಪಾಠಾಂ. ವೆತ್ತ] ತೆಱದೆ ತಿರುನೀಲಕಂಠರು ನೊಂದು (ತಿಶರ. ರ. ೨೦-೧೪); ಕದನಕ್ಷೇತ್ರದೊಳಾಂತ ಶತ್ರು ಪಿಡಿಪಟ್ಟಂ (ಧರ್ಮ. ೩-೧೮). [ ಪಿಡಿ$_2$ + ಪಡು$_1$ ]

**ಪಿಡಿವಡೆ, ಹಿಡಿವಡೆ, ಹಿಡಿಹಡೆ** (ಕ್ರಿ). ಬಂಧನವನ್ನು ಹೊಂದು ; ಸೆರೆಗೆ ಒಳಗಾಗು : ರಣಲೋಳನಿಳಾತಳಕೆ ಪಾಯ್ದು ರಥದಿಂದೊರೆಯಿಂ ಬಾಳಂ ಕಿಟ್ಟಿಯ್ದುವಿನಂ ಬಾಳಂ ಪಿಡಿವಡೆವ ಮಾಟ್ಕೆಯಿಂ ಪಿಡಿವಟ್ಟಂ (ಜಗ. ೧೧-೯೯) ; ಪಿಡಿವಡೆದ ಸುರರಿಂದಸುರರಿಂದೆ ನರರಿಂದೆ . . . ಆ ರಣಾಂಕಣವೆಸೆದುದು (ಶಾಂತಿ. ೩೨-೧೮). **ಹಿಡಿವಡೆ :** ಬಿಟ್ಟ ಕಣ್ಣು ಬಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಕಟ್ಟು ಗುಡಿಯ ಕೂಡಲಸಂಗಮದೇವ ಹಿಡಿವಡೆದ (ಬಸವ. ೬೦೪); ಹೆಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯಾ (ಮಹಾದೇ. ಪ. ೦೩೬-೪೦೩) ; ಬಟ್ಟೆಯೊಳು ಕಳ್ಳರಿಂ ಹಿಡಿವಡೆದನೋ (ಸಿದ್ಧರಾ. ೨-೯೩); ಭೂಪನಿಂ ಹಿಡಿವಡೆವಂದದಿಂ ಬೆದಱಿ ನಿಂದುದು ಹಂಸೆ ಸರೋಜಷಂಡದೊಳ್ (ನಳಚಂ. ೯೯). **ಹಿಡಿಹಡೆ:** ಪಕ್ಷಿ ಹಿಡಿಹಡೆಯೆ ಬಪ್ಪ ಪಡೆಯಂತೆ ಕಱುಗಳು ಹಾದಿಯೆಡೆವಱಿದು ತಮಗೆ ತಾವೇ ಬಪ್ಪುದಂ ಕಂಡು (ಸಿದ್ಧರಾ. ೨-೯೪). [ ಪಿಡಿ$_2$+ಪಡೆ$_1$ ]

**ಪಿಡಿವಲೆ** (ನಾ). ಒಂದು ಬಗೆಯ ಬಲೆ : ಪಿಡಿವಲೆ ಸೆಳೆವಲೆ . . . ಬಡಿವಲೆ ಬಲುವಲೆಗಾಱರು ಕೂಗಿ ಬೊಬ್ಬಿಡುತಲೈದಿದರು (ಪೋಹಕ. ೦೯-೦೬).

[ ಪಿಡಿ$_1$+ಬಲೆ$_1$ ]

**ಪಿಡಿವಿಡಿ** (ಕ್ರಿ). ಮುಷ್ಟಿಯನ್ನು ಬಿಗಿ ಹಿಡಿ : ಪಿಡಿವಿಡಿದು ಗುರ್ದಿದ ರವನ ಬೆನ್ನುರಿಯಿಮವಂತೆ (ಕಾಂಚನರ. ೦೩೩-೩೬೨) ; ತಡೆಯೆನಲ್ ಕೇಳ್ವನೇಂ ದಡಿಗ ಪಿಡಿವಿಡಿದು (ಕಾಂಚನರ. ೦೩೦-೩೬೦). [ಪಿಡಿ$_2$ + ಪಿಡಿ$_1$]

**ಪಿಡಿವೆಱು, ಪಿಡಿಪೆಱು** (ಕ್ರಿ). ೧. ಸೆರೆ ಸಿಗು ; ಬಂದಿಯಾಗು ; ವಶವಾಗು : ಪಿಡಿವೆತ್ತ ಕಳ್ಳನಂತೆ ಸಿಡಿಮಿಡಿಗೊಳ್ಳುತ್ತಿರ್ದುಂ (ಶಂಕರಾ. ೦೯-೨೦) ; ಪಿಡಿವೆತ್ತ ಕಳ್ಳನಂತೆ ತಲ್ಲಣಿಸಿ (ರಾಮಾಶ್ವ. ೦-೦೬೪). ೨. ಪಡೆ ; ಹೊಂದು : ಆಪತ್ತಂ ಪಿಡಿವೆತ್ತ ಕುಂಭಕರ್ಣಾದಿಗಳೊಳ್ ಮತ್ತೇನೊಡರಿಸುವರ್ (ಶಂಕರಾ. ೦೯-೭೬). **ಪಿಡಿಪೆಱು :** ೧. ಎಮ್ಮರಸನಂ ಕೊಂದವನಂ ನೀಂ ಸಜೀವಂ ಬಿಡದೆ ಪೇಟಲ್ಲದಿರ್ದೊಡೆ ನಿಮ್ಮಂ ಕೊಲಿಸುವಪ್ಪೆನೆಂದೊಡೆ ಭಯದಿಂ ಪಿಡಿಪೆತ್ತುಮಾತನಿಂತೆಂದು ಪೇಳ್ದಂ (ವಡ್ಡಾರಾ. ೦೬೨-೦) ; ಗುಣಹತ ಕರಯುಗ ಕುಳಿಮಕಳಂಗಳೆಸೆದೀತನೊಳ್ ರಿಪುಶ್ರೀ ಪಿಡಿವೆತ್ತ ನೆಯರಮಟಲೆ ಪನಿತಶೋಷಣಸಾಂಜನದಿಂದುವೆಂಬ ಬಗೆಯಂ ಪಡೆಗುಂ (ಶಾಂತಿ. ೩-೦೩೯) ; ರಾಜ್ಯಕಾಲಂ ಸಲೆ ಬಾರಿಯೋಳ್ಪಿಡಿವೆತ್ತ ಗಜವ್ಯತಿಕರವಂ ಕೇಳ್ದು (ಶಾಂತಿ. ೦೦೨). [ಪಿಡಿ$_2$ + ಪೆಱು$_1$]

**ಪಿಡಿಸು** ' ಪಿಡಿಯಿಸು ' ನೋ.

**ಪಿಡಿಹ, ಹಿಡಿಹ** (ನಾ). ಹಿಡಿಯುವಿಕೆ ; ನಿಗ್ರಹ ; ಬಂಧನ : ' ಬಂದಿವಿಡಿಹ ' ಪರಾ. **ಹಿಡಿಹ :** " ನಿಗ್ರಹಂ ಪೀಡನಂ ಸ್ಪರ್ಶನಂ ಗ್ರಹಣಮೆನಲು ಹಿಡಿಹಂ " (ಶಬ್ದಮ. ೦೪೦-೦೬). [ಪಿಡಿ$_1$ + – ಹ$_1$(< – ಪ$_2$)]

**ಪಿಡಿಹಾರ, ಹಿಡಿಹಾರ** (ನಾ). ತುಂಬಿದ ಹಿಡಿ,—ಕೈ ; ಭರ್ತಿಯಾದ ಮುಷ್ಟಿ : ಆರತಿಯನೆತ್ತಿದ ಮಹಾಸತೀಜನಕೆ ಪಿಡಿಹಾರದಿಂ ಪೊಂಗಳಂ ವಸ್ತ್ರಂಗಳಂ . . . ಮಹಾಭೂಷಣಪ್ರತತಿಗಳನು ಅರಯ್ದು ಕೊಡಿಸಿ (ಶಾಂತಿ. ೩-೦೬). **ಹಿಡಿಹಾರ :** ನಲಿವ ಸಖೀಸಖಿವ್ರಜಕೆ . . . ಎತ್ತಿ ಪೊನ್ನ ಬಟ್ಟಲೊಳೆಱೆದೀವ ಕುಂಕುಮರಸಂ ಹಿಡಿಹಾರದಿನೀವ ಚೊಕ್ಕ ದಂಬುಲವೆಸೆವನ್ನೆಗಂ ನುಱೆದಳಂದು ವಿಲಾಸಿನಿ ತದ್ವಿಲಾಸವಂ (ಶಂದ್ರಪು. ೬-೯೩). [< ಪಿಡಿ$_2$]

**ಪಿಡುಕು** (ಕ್ರಿ). ಚಿಮ್ಮು ; ಮಿಡುಕು ; ಚಡಪಡಿಸು (?) : ಬಿಜ್ಜೋದರಂ . . . ಬರೆ ಕಂಡು ಕಂದರ್ಪಂ ನೆಲೆಮಿಂಚು ಮಿಂಚಿತಮುಮಾ ಗೊಲೆನೂಂಕಿದು ಎಂದು ಸೈಪುಗೊಂಗುಗಳಮುಮಾ ಪೊಲವಿಡಿದುದು ಬಗೆಯುಮಮಾ ಬಲೆಯೊಳ್ ಕಣ್ಬಾಳೆ ತೊಡರೆ ಪಿಡುಕುವುದಮುಮಾ ಎಂದು ನಿರವಿಸಿ (ಶಶಿಂ. ೩-೦೩೯). ' ಪಿಡುಗು$_1$ ' ಪರಾ. [ ? ]

**ಪಿಡುಗು$_1$** (ಕ್ರಿ). ೧. ಸಿಡಿಲಿನ ಹಾಗೆ ಸಿಡಿ,—ಆಸ್ಫೋಟಗೊಳ್ಳು : ಅಂತು ನುಡಿದು ಕಾಯ್ಪಿನೊಳ್ ಪಿಡುಗಿ ನಡನಡನಡುಗಿ . . . ಉಗುಬ್ಬ ನಸುರನುರಿವ ಪಟಗಳಂ (ಶಂಕರಾ. ೬-೩೩ ವ). ೨. ಸೀಳು; ಬಿರಿ ; ಒಡೆ : ಉರ್ವರೆ ನಡುಗಿತ್ತಜಾಂಡಮೊಡೆದತ್ತು ನೆಲಂ ಪಿಡುಗಿತ್ತು ಸಪ್ತಸಾಗರ ಮುಡುಗಿತ್ತು (ಶಂಕರಾ. ೬೨-೨೦೨) ; ಈ ಶಂಖಮನಿನ್ನುಂ ಪಿಡಿದೊಡೆ ಜಗಂ ಪಿಡುಗಿ ಕೆಡುಗು[ಪಾಠಾಂ. ಪಿಡಿಗಿ ಕೆಡುಗು, ಪಿಡಿಗಿಡುಗು] ವೆಂದು . . . ಶಾರ್ಙ್ಗಶಂಖಮನಿಱಿಪಿ ನಾಗಶಯ್ಯೆಯಿಂದಿೞಿದು ಪೋಪುದಂ ಕಂಡು (ಅರ್ಜುನ. ೬-೩೯ ವ).

**ಪಿಡುಗು$_2$** (ನಾ). ೧. ಸಿಡಿಲು : ಗುಡುಗು ಜನರೆದೆ ನಡುಗು ಮೃಗಪತಿ ಯುಡುಗು ಬೀಳುವ ಪಿಡುಗು ಮಿಂಚಿನ ಕಡುಗು ಕತ್ತಿಯ ಬೆಡಗು ಮಳೆ ನೀರ್ ಕರಿಕರಾಯತದಿ (ಭೈರವಶಾ. ೨-೬೮); ಅವರೇ . . . ಬಂದರೆ ಶತ್ರುಗಳ ಪಾಲಿಗೆ ಪಿಡುಗು ಬಿದ್ದಂತೆಯೆ (ಶಾಂತಲಾ. ೫೩). ೨. ಕೇಡು ; ತೊಂದರೆ; ಹಿಂಸೆ : ನಿನ್ನ ಸಂಪದಕೇ ಪಿಡುಗ ತಂದೊಡ್ಡುವನು ಪಾತಕರೊಡೆಯನು (ಕಪಟಾ. ೩೬-೨೫) : ನಮ್ಮೂರೊಳಗ ಪ್ಲೇಗು ಅಂತ ಈ ಊರಿಗೆ ಬಂದರ . . . ಇಲ್ಲೇ ತಿರುಕರ ಪಿಡುಗು (ಶಿಡುಗು. ೦೫) ; ಅರ್ಚಕರು ಇದೇನೋ ಪಿಡುಗು ಬಂತೆಂದು ನಡುಗುತ್ತ (ಶರಣ. ೦೯೫). ೩. ಪ್ಲೇಗು, ಸಿಡುಬು, ಕಾಲರಾ ಮುಂತಾದ ಘೋರವಾದ ಸಾಂಕ್ರಾಮಿಕರೋಗ,—ಅಂಟು ಜಾಡ್ಯ : ನಾರಣಪ್ಪ ಪ್ಲೇಗನ್ನು ತಂದ. ಅದು ಕಾಳ್ಗಿಚ್ಚಿನಂತೆ ಹರಡುವ ಪಿಡುಗು (ಸಂಸ್ಕಾರ. ೧೦೯) ; ಈ ಬರದೊಡನೆ ಅನೇಕ ಪಿಡುಗುಗಳೂ ಪ್ರಾರಂಭವಾದವು (ಕಳಕು. ೦೦೦) : ಮೊನ್ನೆ ಮೊನ್ನೆ ನಮ್ಮಲ್ಲಿ ಟಾಯಿಫಾಯಿಡ್ ಪಿಡುಗಾಗಿ ಎಷ್ಟು ಜನ ವೃಥಾ ಸಾಯಲಿಲ್ಲ ? (ಅಕಾ. ೦).

[ದೇ. ॥ ತಮಿ. ಪಿಟಾಕು ; ತೆಲು. ಪಿಡುಗು]

**ಪಿಡುಗುಬೇನೆ** (ನಾ). = ಪಿಡುಗು$_2$ ೩ : ಆತನ ತಂದೆ ಪಿಡುಗುಬೇನೆಯಿಂದ ಕಾಲವಾದರು (ಹಾಡುಹು. ೬೯). [ಪಿಡುಗು$_2$ + ಬೇನೆ]

**ಪಿಡ್ಡ** (ನಾ). (ಉಕ) ಧಾನ್ಯವನ್ನು ಕೂರಿಗೆಯಿಂದ ಬಿತ್ತುವಾಗ ಬೇರೆ ಎಡೆಗೆ ಬೀಳದಂತೆ ನಾಳದ ಬಾಯಿಯನ್ನು ಮುಚ್ಚುವ ಬೆಣೆ :

ಕೂರಿಗೆಯು ಬಾಯಿಗೆ ಪಿಡ್ಡ ಹಾಕಿ ಬಿತ್ತದಿದ್ದರೆ ರಾಗಿ ಅಕ್ಕಡಿ ಸಾಲಿ ನಲ್ಲಿಯೂ ಬೆಳೆಯುತ್ತದೆ (ಕೂಕಿ.. [ ? ]

**ಪಿಣ** (ನಾ). ಒಂದು ಬಗೆಯ ಲೋಹ ; ಕಬ್ಬಿಣ : (೪).

[< ಸಂ. ಪಿಂಡ ? ]

**ಪಿಣಕುಟಿ, ಪಿಣಕುಟೆ** (ನಾ). (ಕರಾ) ಸಣ್ಣದು ; ಚಿಕ್ಕದು ; ಎಳೆಯ ದಾಗಿ ಪೀಚುಪೀಚಾಗಿರುವುದು : ಅದು ಸಣ್ಣ ಪಿಣಕುಟಿಯಾಗಿರುವಾಗ ಕಂಡ ನೆನಪು, ಅದಕ್ಕೆ ಮದುವೆಯಂತೆ! (ಕುರಕು. ೩೩). **ಪಿಣಕುಟೆ** : ಪಿಣಕುಟೆ ಎಂದೂ ಇರಲಿಕ್ಕಿಲ್ಲ . . . ಅದೂ ಬೊಚ್ಚಲು ಮಗು, ಎಂದೂ ಪಿಣಕುಟೆಯಂತೆ ಇರಲಿಕ್ಕಿಲ್ಲ (ಕುಕಕು. ೦೦೪). - [ ← ತುಳು. ಪುಣಕಟ್ ]

**ಪಿಣಕುಟೆ** ‘ ಪಿಣಕುಟಿ ’ ನೋ.

**ಪಿಣಿ₁** (ಕ್ರಿ). ಕಟ್ಟು ; ಬಂಧಿಸು : ಅರಿಸಿನದಂತೆ ಮೆಯ್ಯಸ್ತ್ರಿ ಪಿಣಿವರ್ ಕಾಜಿಯಂತೆ ಕೊರಲಂ ಪತ್ತಿ ಕೊಯ್ಯರ್ ಗರಗಸದಂತೆ ಮೆಯ್ಯಂ ಕೊಜಿ ವರ್ (ಧರ್ಮಾಮೃ. ೩-೩೩) ; ಶೀತಮಯೂಖಮಾಲಿ ತಾಂ ಸನ್ನಿಹಿತಂ ನಭ ಸ್ಥಳದೊಳೆಯ್ದಿರಲುಂ ಪಗಲುಂ ನಿರಂತರಂ ತನ್ನ ಕುರಂಗಮಂ ಪಿಣಿದು ನಿಲ್ಲದೆ ಸುತ್ತಿ ಬರುತ್ತಮಿರ್ಕುಮಂ (ಪಾರ್ಶ್ವಪು. ೦-೦೩೩).

[ ದೇ. ॥ ತಮಿ. ಪಿಣಿ ]

**ಪಿಣಿ₂** (ನಾ). ಜಡೆ ; ಹೆರಳು : “ ಪಿಣಿ ಬಲ್ಲುಮ್ಮಡಿಯೊಳ್ ” (ಶಬ್ದಮಣಿ. ೩೩). ‘ಪಿಣಿಲ್₂’ ಪರಾ. [ ದೇ. ॥ ತಮಿ. ಪಿಣಿ ]

**ಪಿಣಿ₃** ‘ ಪಿಣಿಲ್₂ ’ ನೋ.

**ಪಿಣಿಲ್₁** (ಕ್ರಿ). ಜಡೆ ಹಾಕು.–ಹೆಣೆ : ಸರಿದ ನೀಲವಿಭಾಸುರಕುಂತಳಂಗಳಂ ಒತ್ತಿ ಪಿಣಿಲ್ದು ಪೂಸಿ ಪುನ್ನಾಗು . . . ಚಿತ್ರಜತಾಪಮಂ ಕಳೆವರೆಂದೊಡೆ ಕಾಂತೆಯರೇಂ ವಿಚಿತ್ರಮೋ (ಲೀಲಾವ. ೨-೩೯). ‘ ಪೆಣ್ಣೆ ’ ಪರಾ.

**ಪಿಣಿಲ್₂, ಪಿಣಿಲು₁, ಹಿಣಿಲ್₁, ಹಿಣಿಲು₁** (ನಾ). ೧. ಒಂದಕ್ಕೊಂದು ಹೆಣೆದುಕೊಂಡಿರುವಂತಹುದು,—ತೊ ಡ ಕಿ ಕೊ ೦ ಡಿ ರು ವು ದು : ಮುಡಿಯಂ ಪಿಡಿದೆಟಿದಪನಂ ಮಡಿಯಿಸಿ ಮತ್ತವನ ಕರುಳ ಪಿಣಿಲಿಂ ದೆನ್ನಂ ಮುಡಿಯಿಸುವಿನೆಗಂ ಮುಡಿಯಂ ಮುಡಿಯೆಂ ಗಡ (ಪಂಪಭಾ. ೩-೦೩) ; ಕರುಳ ಪಿಣಿಲಂ ತೆಗೆವ ಪರ್ದುಗಳುಮಂ (ಗದಾಯು. ೫ ೩ ಶ) ; ಬಸಿಱಂ ಪೋಱ್ದುಂ ಕರುಳ ಪಿಣಿಲ್ಗಳನುರ್ಚಿಯುಂ (ಪಂಪಾರ. ೦೫೦). ೨. ಹೆರಳು ; ಹೆಳಲು ; ಜಡೆ : ಬಿಡೆ ಪಿಣಿಲಂ ಕುರುಧ್ವಜಿನಿ ತೊಟ್ಟನೆ ಬಾಯನೆ ಬಿಟ್ಟುದೆಂದು (ಪಂಪಭಾ. ೪-೦೦೦) ; ಉಗುರಿಸಿ ಬೆಂಗೆ ಬಿಟ್ಟ ಪಿಣಿ ಲೊತ್ತಿದ ಬೈತಲ ಸಣ್ಣ ಪುರ್ಬು (ಲೀಲಾವ. ೪-೩೬) ; ಬಡಿಸಿ ಕಂಡು ಮನಂ ಗೊಂಡು ಕಯ್ಯೊಂಡು ಜಡೆಗೊಂಡ ಪಿಣಿಲಂ ತಾನೆ ಬಿಡಿಸಿ . . . ಸುಖ ವಿರಿಸಿ (ಅಂಹಂ. ೪-೯೩ ಶ) ; ಸಿಂಜಿನಿಯಂ ತೆಗೆದಿಟ್ಟ ಪುಷ್ಪಮಾರ್ಗಣನ ಧನುಃಶಲಾಕೆ . . . ನಭೋಮಣಿತುಚಿಯು ತೆಱಬೊಳೆವ ಪದ್ಮಿನಿ ತಾನೆನಿ ಸುತ್ತೆ ತಾಳ್ದ ಸನ್ನಣಿ ಪಿಣಿಲಚ್ಚಮುತ್ತು ಕನಕಾಂಬರದಿಂ ಕಮಲಾಕ್ಷಿ ತೋಱಿದಳ್ (ಶಾಂತೀಶ. ೦೦-೦೩). **ಪಿಣಿಲು₁** : ೧. ಸೂರ್ಯೋದಯವಾಗಿ ಹೊಂಬಿಸಿಲು . . . ಪಿಣಿಲಾಗಿ ಹೆಣೆದುಕೊಂಡಿದ್ದ ಬಳ್ಳಿ ಹೊದರುಗಳ ಮೇಲೆಯೂ ಶುಷ್ಕಪರ್ಣಾವೃತ್ತವಾಗಿದ್ದ ನೆಲದ ಮೇಲೆಯೂ ಬಿದ್ದಿತು (ಕಾನೂರು. ೪೩). **ಹಿಣಿಲ್₁** : ೧. ಕರುಳ ಹಿಣಿಲಂ ಹಿಕ್ಕಿ ತಿಂದು ತೊಡೆ ಯಡಗನವುಡಿ ಬೆಸೆದು (ಹರಿಶ್ಚಂ. ೬-೦೩). ೨. ಹೂದುಱುಬಿನ ಹಿಣಿಲ್ಗಳ ದಂಡೆಗಳ ಮುಮ್ಮೊನೆಯ ಮುಂಜೆಱಗುಗಳ . . . ವನಿತೆಯರು ಬಳಸಿದರು (ಕೂರ್ಮಾ. ೦-೦೩-೫೨). **ಹಿಣಿಲು₁** : ೨. ಏತಕೀ ಬಳೆಗ್ಗೆಗೆ ಬಿಲು ಹಿಣಿಲೇತಕೀ ಜೊಲ್ಲೆಹಕೆ ಚಲ್ಲಣವೇತಕೀ ಹೆಣ್ಣುಡಿಗೆಗೆ (ಉತ್ತರ. ೨೨-೨೫) ; ಬೆಡಗಿನಿಂ ಹಿಣಿಲ ಹೊಸಪರಿಯಿಂದ ಶೃಂಗರಿಸಿ (ತುರಂಗ. ೩೩-೫೦) ; ಪಿಣಿಲು ಪವಣಿಸದೆ ಬರಿ ಮುಡಿಯನ್ನೆ ಕಟ್ಟಿ ಕೊಂಡು (ಪಾಂಡವ. ೩). ೩. ಬಿಗಿದು ಸುತ್ತಿದ ತಲೆಗೂದಲು ; ಮುಡಿ ; ತುರುಱುಬು : ಕಱಿಣಿದ ತೊಡರಿನ ಪೆಂಡೆಯದ ಡೊಂಗಣೆಯ ಬಿರುದರ ನೂಕುನೂಕಿನ ಹಿಣಿಲ ಬಾವುಲಿಗಾಱರು . . . ಸಾರಿದರು (ಉತ್ತರ. ೯-೩೯). ೪. ಹೆಣೆದಿರುವುದು ; ಜಡೆಯಂತಿರುವುದು : ಪಕ್ಕಗುಱಿಗಳ ತುಳುಕಿನುಗ್ಗಡಣೆಗಳ ಹಿಣಿಲಿನ ಬಲುವೊಡೆಗಳ ಬಾರಸಕಲೆಗಳನು ಬಿಗಿದರು ಜೋಡಿಸಿದರುಬ್ಬರದ ಪಾದಗಜವ (ಉತ್ತರಗೋ. ೩-೨). ೫. (ನವಿಲಿನ) ಗರಿ ; ಪುಚ್ಛ ; ಸೋಗೆ : ಬಿಗಿದ ಹುಬ್ಬುಗಳ ಪೆಱೆನೊಸಲ ತಿಲಕದ ನವಿಲ ಹಿಣಿಲ ಕಾಂತಿಯಿಂದೆ . . . ತೋಳಗುಂದ ಸಂಹನನ . . . ಶಿರದ ಪಿಡಿದೆತ್ತಿಕೊಂಡು (ಕೃಷ್ಣರಾ. ೦೩-೫೦). ‘ ಪೆಣಲ್ ’ ಪರಾ.

[ < ಪಿಣಿಲ್₁ / ತಮಿ. ಪಿನ್ನಲ್ ]

**ಪಿಣಿಲ್₃, ಪಿಣಿ₃, ಪಿಣಿಲು₂, ಪಿಳಿಲು₁, ಹಿಣಿ, ಹಿಣಿಲ್₂, ಹಿಣಿಲು₂, ಹಿಳಲು, ಹಿಳಿಲ್, ಹಿಳಿಲು₁, ಹೆಣಲು₂, ಹೆರಳು₂** (ನಾ). ೧. ಎತ್ತು, ಒಂಟೆ ಮೊದಲಾದ ಪ್ರಾಣಿಗಳ ಬೆನ್ನಿನ ಮೇಲಿನ ಡುಬ್ಬ,—ಇಣಿ : ಎತ್ತಿಂಗೆ ಪಿಣಿಲೊಪ್ಪುಗುಮಲ್ಲದೆ ಕೆಚ್ಚಲೊಪ್ಪದಾವಿಂಗೆ ಕೆಚ್ಚಲೊ ಪ್ಪುಗುಮಲ್ಲದೆ ಪಿಣಿಲೊಪ್ಪದು (ಧರ್ಮಾಮೃ. ೬-೨೨೩) ; ವೇದಾಂತಂ ಪಿಣಿಲ್ ತೀರ್ಥಸ್ಮೃತಿ ಸುಮಂತ್ರಂಗಳೇ ರೋಮಂ ಶಿವಾಗಮವೆ ಪ್ರಾಣಮೆಂತಾದಿ ವೃಷಭಂ ಮೆಱೆದನು (ಚೆಂಪು. ೦೩-೨೨). **ಪಿಣಿ₃** : ೧. ‘ ಪಿಂಪಿಣಿ ’ ಪರಾ. **ಪಿಣಿಲು₂** : ೧. ಸಿಂಗರಮಾದ ಪಿಣಿಲಿನಿಂದೆಸೆವ ವೃಷಪುಂಗವನೆಯ್ತಂದು ದೊಂದು (ಚಂದ್ರಸಾಂ. ೨-೩೫). ೨. ಬೆನ್ನು : ಸೊಕ್ಕಾನೆಯ ಪಿಣಿಲಿಂದಿಳು ಪಿದರಾ ಚಿಕ್ಕಜವ್ವನದ ಚೆನ್ನಿಗನಾ (ಕ್ರಿಶಂಸಾ. ೨-೯೯) ; ಅನುರಾಗದಿಂದಾ ಖಗನು ಮನುಜೇಶನ ತನ್ನಯ ಪಿಣಿಲೊಳಗಿಟ್ಟು ಘನಮಾರ್ಗಕೆ ಲಂಘಿಸಿ ದನು (ಕ್ರೀಡಾಂ. ೬-೦೪೯). **ಪಿಳಿಲು₁** : ೧. ವೇಗಲುರಮಚಕ ಖಾತ ಕೋಡು ಕಾಲ್ಗಳೆನ್ಗೊಗ ಪಣೆ ಪಚ್ಚಳ ಪಿಳಿಲು ಸೊಗಯಿಸೆ ಮೆಱೆದಮಂದಲ್ಲಿ ಬಿಲಾಯಗಳಗಲದೆ ಕಾಡೆಮ್ಮೆವಿಂಡು (ಕುಮಾರಾ. ೨೩-೬೦). **ಹಿಣಿ** : ೧. “ ಅಂಸಕೂಟಃ, ಕಕುತ್—ಈ ೨ ಹಿಣಿ[ಶಾಶಾಂ. ಹಿಣಿಲು] ” (ಕರ್ಣಾಟ. ೪೪-೦೦೦). ‘ ಇಣಿ ’ ಪರಾ. **ಹಿಣಿಲ್₂** : ೧. “ಹಿಣಿ[ಲದು] ಕಕುದು ” (ಪಟ್ಟಕೋ. ೬೯-೦). **ಹಿಣಿಲು₂** : ೧. “ಅಂಸಕೂಟಃ, ಕಕುತ್—ಈ ೨ ಹಿಣಿಲು [ಶಾಶಾಂ. ಹಿಣಿ]” (ಕರ್ಣಾಟ ೪೪-೦೦೦) ; “ ಹಿಣಿಲು ಕಕುದು ” (ಚುಂಗಿಶಾ. ೩೩-೨) ; ಗೂಳಿಯ ಹಿಣಿಲಂತಿರೆ ಹೆಗಲುವರಿಗೆ, ಮುಡಿಯ ಮುಟ್ಟುವ ತೋಳ್ದಿಂದು (ಅಹಲ್ಯ. ೬೬-೦೩). **ಹಿಳಲು** : ೧. “ ವಹಃ, ಅಸ್ಕಸ್ಕಂಧಪ್ರದೇಶಃ —ಈ ೨ ಎತ್ತಿನ ಹೆಗಲ ಹೆಸರು, ಎತ್ತಿನ ಭುಜಶಿರಸ್ಸು, ಹೆಗ್ಗತ್ತು, ಹಿಳಲು ” (ಸಿದ್ಧಾಂತಿ. ೨೪೩). ೩. ಮಣ್ಣಿನ ದಿಬ್ಬ, _ಗುಡ್ಡ (?) : ಪೊಡವಿವ ಹಿಳಲ ಮೇಲೆ ಮಣ್ಣಲ್ಲನಾಯಕನ ಮೂಲವಾಗಿ ಆಳುತಿದ ಹಿಳಿಲ ಮೇಲೆ ಕಾಯಕನಿಯ ಶ್ರೀಪಾ೦[ವ]ದೇವರಿಗೆ ದೇವಪೂಜೆಗೆ ಶ್ರೀಗಂಧಕ್ಕೆ . . . ೪ ಹಣವ ಆಚಂದ್ರಾರ್ಕಸ್ಥಾಯಿಯಾಗಿ ನಡೆಸಿ [ಹೋ] ಹೆನೆಂದು ಮಯಿಲುನಾಯಕ ಮಾಡಿದ ಧರ್ಮ್ಮ (ಕಇ. I, ೫೦-೪೪ ; 1432 ?). **ಹಿಳಿಲ್** : (೪). **ಹಿಳಿಲು₁** : ೧. ಅತೀತವಪ್ಪ ಪರಶಿವನು ಬಸವಣ್ಣನ ಹಿಳಿಲ ಕೆಳಗೆ ಸೂಕ್ಷ್ಮರೂಪಾಗಿರ್ಪನು ನೋಡಾ (ಅಶಸಂ. ೦೪೪-೪೦೦) ; ಅತ್ಯುನ್ನತ ವಾದ ಹಿಳಿಲಿನಿಂದ ಒಪ್ಪುತಲಿರುವ ಮಹಾವೃಷಭದೊಡನೆ (ಕೃಪಾಶ. ೪೩). **ಹೆಣಲು₂** : ೧. ಸಹಸ್ರ ಕವಿಲೆಯಂ ಕೊಡುಮಂ ಕೊಳಗುಮಂ ಹೊಲುಱು ಬೆಳ್ಳಿಯ(೦)ಲುಂ (ಬೋಳಶಾ. ೦೪೩೦, ಮುದ್ರಿತಶಾಳ್. ೬೯-೦೪ ; 1033). **ಹೆರಳು₂** : ೪. ವೀಣೆ ಮುಂತಾದ ತಂತೀವಾದ್ಯಗಳಲ್ಲಿ ನಾದವನ್ನು ಹೆಚ್ಚಿಸುವುದಕ್ಕಾಗಿ ಅಳವಡಿಸಿರುವ ಬುರುಡೆ: “ ಕಕುಭಃ, ಪ್ರಸೇವಕಃ —೨ ವೀಣೆಯ ಹೆರಳಿನ ಹೆಸರುಗಳು” (ಸಿದ್ಧಾಂತಿ. ೫೪). ☞ ಇಲ್ಲಿ ಕುಳಸಹಿತ ವಾದ ಶಬ್ದ ಸ್ವತಂತ್ರವಾಗಿ ಸಿಕ್ಕುವುದು ಇತ್ತೀಚಿನದಾದುದರಿಂದ ‘ ಣ ’ ಸಹಿತವಾದ ಶಬ್ದವನ್ನೇ ಪ್ರಧಾನಉಲ್ಲೇಖವಾಗಿ ಪರಿಗಣಿಸ ಲಾಗಿದೆ.

**ಪಿಣಿಲಿಚು**, ಹಿಣಿಲಿಚು (ಕ್ರಿ). ೧. ಒಂದಕ್ಕೊಂದು ಹೆಣೆದುಕೊಳ್ಳು : ಮಲ್ಲಿಕಾಲತೆಯ ಮುಗುಳ್ಗುಡಿಗಳೊಳಂ ಚಂಪಕಲತೆಯಲರ್ಗುಡಿಗಳೊಳಂ ಪಿಣಿಲಿಚಿದು ಪೆಣೆದು ಪರ್ವಿ ಪಸರಿಸಿದ ಪೊಂಬಾಳೆಯ ಕಂಬಂಗಳ ತುಱುಂಬಿನೊಳ್ ಬಳ್ಳ ಬೆಳೆದ ಮೃದ್ವೀಕಾಲತೆಯ ಕಾಯಮಾನಂ ಕಾಮನ ರತಿಯ ವಿವಾಹಕ್ಕೆ ಚೈತ್ರನೆಂಬ ಚಿತ್ರಕಂ ಬಣ್ಣವಿಟ್ಟು ಕಿಣ್ಣಂ ಸವೆದ ಪಸುರ್ವಂದರದಂತಿರೆ (ಅನಂತ. ೬-೧೦ ಪ). ೨. ಜಡೆಹಾಕು; ಹೆಣಲು ಹಾಕು : ನೀಲಪಟದಿಂದೊಲಿದು ಚಲ್ಲಣಮನುಟ್ಟಲ್ಲಿ ಲೀಲೆಯಿಂ ಕೇಶಮುಂ ಪಿಣಿಲಿಚಿದುಕೊಂಡಲ್ಲಿ (ಶಿವಸಂ. ೩೯-೪); ರಸಸಿದ್ಧನಂಗಳಂ ಬಿಸುಟಸುಪಟಿ ಪಿಣಿಲಿಚಿದು ಕೇಶಮಂ ಕಾಸೆಯನುಟ್ಟು (ಶಂತಂ. ೪-೩೦).
**ಹಿಣಿಲಿಚು** : ೧. ಹೆಣಗಿ ಪಿಣಿಲಿಚಿದಭ್ರದಲಿ ಸಂದಣಿಸಿ ಕಣೆ ಕೈಕೊಂಡ ವಂಬರಮಣಿಗೆ ನಡೆದುದೊ ಕಿಮಿರರಾಜನ ದಂಡು ಮಂಡಳಿಸಿ (ಕುಮಾ. ಕೌ. ೪-೦೬). ೨. ನಿರ್ಮಳಬ್ರಹ್ಮಚಾರಿಗಳ ಬಿಗಿವ ಪಾಶವೋ ನಾರಿ ಹಿಣಿಲಿಚಿದ ಕೇಶವೋ (ಸೌಂದ. ೩೩); ಧರಿಸಿ ದಿವ್ಯಾಂಬರವ . . . ಸಿಡುಕೇಶವಂ ಹಿಣಿಲಿಚಿದು (ಸೌಂದ. ೬-೩೩). [ ಪಿಣಿಲ್$_2$+ಇಚು$_1$ ]

**ಪಿಣಿಲು**$_1$ ‘ ಪಿಣಿಲ್$_1$ ’ ನೋ.

**ಪಿಣಿಲು**$_2$ ‘ ಪಿಣಿಲ್$_2$ ’ ನೋ.

**ಪಿಣಿಲೇಱು**$_1$ (ಕ್ರಿ). = ಪಿಣಿಲಿಚು ೧ : ಪಂಚಾಯುಧದ ಮಲ್ಲಿಗೆಯ ತೊಂಗಲ ಸೆಱಂಗು ನಾಂದು ಪಿಣಿಲೇಱಿದೆಱಲ್ದಿದ ವೇಣಿಯೊಳ್ಪೆಣೆದು ಮಿಂಚಿನಂಚಿ ವೆರಸು ಕಾರ್ಮುಗಿಲ ಬಿಟಿಱು ಕಾಲೂಱಿದಂತೆ ಮೇಲೆ ಮೆಱೆಯೆಯುಂ (ಅನಂತ. ೨-೩೯ ಪ). [ಪಿಣಿಲ್$_2$ + ಏಱು$_1$ (< ಏಱುಚ್$_1$) ]

**ಪಿಣಿಲೇಱು**$_2$ (ಕ್ರಿ). ಡುಬ್ಬದವರೆಗೂ ಏರು, ― ಬೆಳೆ : ಬಂಗುಡಂ ಪಿಣಿಲೇಱಿ ರೋಮಮಂಡಿರ್ದಿರ್ಪನ್ನಾಗೆ ಮುಂಗಾಲುಗಲ್ಲರೆ . . . ಕೋಟ್ಟುಟ್ಟ ಪೆರ್ನೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ತೇಕರಂ ಸೂಕರಂ (ಶಂ ಪ್ರ ಕೌ. -೬೦). [ಪಿಣಿಲ್$_3$ + ಏಱು$_1$ (< ಏಱುಚ್$_1$) ]

**ಪಿಣಿಲ್ಗಂಡ** (ನಾ). ಹಿಣಿಲಿನ ಮಾಂಸಖಂಡ; ಹೆಗಲಿನ ಮಾಂಸ : ನೊರೆವೀಟಲ್ ದಾಡೆಗುಟ್ಟುತ್ತೆರಡುಬರಿ ಪಿಣಿಲ್ಗಂಡಮುಂ ಪೇಱಿ ಕೊರ್ವಿಂ ಬಿರಿಯುತ್ತುಂ ಲೋಹಸೂಚೀಸಮುಸಮುಚಿತರೋಮೋತ್ಕರ ಸ್ಕಂಧಭಾರೋದ್ಧುರನಪ್ರಾಸ್ಯಂ . . . ಪಿರಿದಾಶ್ಚರ್ಯಕ್ಕೆ ಪಕ್ಕಾಗಿರೆ ನೆರೆದು ಸಮುತ್ಕೇಸರಂ ಸೂಕರೌಘಂ (ಶಾಂತೀಶ. ೩-೬೭).
[ಪಿಣಿಲ್ + ಏಂಡ$_1$]

**ಪಿಣೆ** (ಕ್ರಿ). (?): ನೆಗಬ್ದ ಮಾರ್ಗ್ಗದೆ ಗೆಲ್ವುಮೆ ಪಿಣೆದಲ್ಲಿ ಕೀರ್ತಿ ನಾರಾಯಣನಂ (ಎಕ. II. ೦೩೩-೦೪೪ ; 982).
[ಈ ಇದು ‘ ಪೆಣೆ ’ ಎಂಬುದರ ಅಪಲಿಖಿತವಿರಬಹುದು]

**ಪಿಣ್ಣ** (ಗು). ತೋರವಾದ; ದೊಡ್ಡ ಗಾತ್ರದ : ಬಣ್ಣವಣ್ಣಿಗೆ ಯಱಿವೆಯ ತೊಟ್ಟಿಲೊಳಿಟ್ಟು ಬಣ್ಣ ಸವಿಯ ಸೂಱೆಗೊಂಡು ಪಿಣ್ಣ ಕುಚೆಯುರು ಜೋಗುಳವಾಡಿ ತೂಗುವ ಬಣ್ಣಿಗೆ ಬಯಲಾದಂದಕಟ (ವರ್ಧ. ೧೧-೩೪). [< ಪ್ರಾ. ಪೀಣ. / ಸಂ. ಪೀನ]

**ಪಿಣ್ಯಾಕ** (ನಾ). ೧. (ಎಣ್ಣೆ ತೆಗೆದ ಮೇಲೆ ಉಳಿಯುವ) ಹಿಂಡಿ : ಚರಟ; ನಿಸ್ಸಾರವಾದ ವಸ್ತು : ವಿವಿಧಸರಸಾನ್ನವನು ಪಿಣ್ಯಾಕವನು ಸರಿಯೆಂದುಂಡು . . . ನವವೆಸಿಪ ಚೀನಾಂಬರವನೊತ್ತುವ ಕರಿಸವಲ್ಕಲವ ಸರಿಯೆಂದವನಜಗರವ್ರತಿಯಹನು (ತಿಮ್ಮ. ಶಾಂ. ೫-೩೦); ಶಿಲಪ ಮಥನಿಸೆ ತೈಲ ಪಿಣ್ಯಾಕ ಬೇಱಾದವೊಲು ಸ್ಮೃತಿಯಮಾಥನದಿಂ ಲೌಕಿಕಾಚಾರ ತೊಲಗಿ ಲಿಂಗಾಚಾರವಂಗಕ್ಕೆ ಪ್ರತ್ಯಕ್ಷವಪ್ಪುದಱಿವಿನ ಮಥನದಿಂ (ಪಶಿಂ. ೦೬ ೬); ಸಾವಿ ವಡವನು ಬಳಿಕ ವನದೊಳಗಾಱಿಯಿದು ತಂದೆಲಚಹಣ್ಣನು ಸೇರಿಸು ತ್ರಿಂಗುದಿಯ ಪಿಣ್ಯಾಕವನು ಜತೆಗದರ (ರಾಮಾಸಂ. ೨-೫-೧೦). ೨. ಹಾಲು ಮಡ್ಡಿ ಮುಂತಾದ ಸುಗಂಧದ್ರವ್ಯ. [ಸಂ.]

**ಪಿತ** (ನಾ). ತಂದೆ ; ಅಪ್ಪ : ಸ್ವಧರ್ಮದಲ್ಲಿ ಗಳಿಸಿದ ಪಿತನ ಧನವ ಅಧರ್ಮದಲ್ಲಿ ಕೆಡಿಸುವ ಸುತನಂತೆ (ಜಿಪ. ೨೦೩); ಶ್ರೀಮಂತೆಯರಸನೆ ವಿಮಲರಾಜೀವಪೀಠನ ಪಿತನೆ . . . ಕಾವೃದಾನತಜನವ ಗದುಗಿನ ವೀರ ನಾರಯಣ (ಕುಮಾ. ೧-೧); ಪಿತನಂ ಕೋಪಕೃತಾಪರಾಧಯುತನಂ ಕೊಂದಿಕ್ಕಲೆಂದು ಮಹಾಮತಿ ಕೈಕೊಂಡು ಕುಠಾರಮಂ ಜಡಿಯೆ (ಕೃಪಕ. ೬-೦೬). [< ಸಂ. ಪಿತೃ]

**ಪಿತರ** (ನಾ). ಸ್ವರ್ಗಸ್ಥನಾದ ಹಿರಿಯ ; ಪಿತೃ : ನೆಗಱ್ತೆಯ ಬೀರರೆಲ್ಲಂ ಜಿಡಪರ ಪಿತರರಂತೆ ಮಿಳ್ಳಿಳ ನೋಡುತ್ತಿರೆ (ಕಂಕಪ. ೬-೩೩ ಪ); ಮುನ್ನಿನ ಭವದೊಳ್ ಕುಡದರ್ ಕಣ್ಬಡಿನೊಳ್ ಧೃತಿಗಿಡೆ ಬಡವರ ಪಿತರರಂತೆ ಮಱು ಗುತ್ತಿರ್ಪಂ (ಕಾಮ್ಯ. ೦೬೦); ಮಾತರರುಂ ಪಿತರರುಮಾ ಭ್ರಾತರರುಂ . . . ಎಲ್ಲರುಂ ಸಲೆ ಸ್ವೀಕರಿರ್ಪರ್ ಜವನನಾರುಮೇಂ ಬಾರಿಪರೇ (ಕಮಾ. ೦೨೨ ಕೃಪ). [ಸಂ. ಪಿತೃ]

**ಪಿತಲಾಟ** ‘ ಪಿತ್ರಲಾಟ ’ ನೋ.

**ಪಿತಾಜಿ** (ನಾ). (ಗೌರವಾರ್ಥದಲ್ಲಿ) ತಂದೆ : ವಿಜಯದಾಸ ಹೊರಗಿನಿಂದ ಬಂದವನೆ ಪಿತಾಜಿಯ ವಿಚಿತ್ರರೂಪವನ್ನು ನೋಡಿ—ನೀನು ಅತ್ತೆಯಾ . . . ಎಂದು ಕೇಳಿದನು (ಕಂಬಕು. ೯೩). ‘ ಅಪ್ಪಾಜಿ ’ ಪರಾ.
[< ಪಿತ + ― ಜಿ]

**ಪಿತಾಮಹ** (ನಾ). ೧. ತಂದೆಯ ತಂದೆ ; ಅಜ್ಜ ; ತಾತ : “ ತಂದೆಯ ಪಿತ ಪಿತಾಮಹಂ ” (ಕುಂಗರಾ. ೯೩-೦೪) ; ನೆಗಱ್ತೆಯ ಪುರುಷೋತ್ತಮನ ಪಿತಾಮಹಂಗೆ ಶೂರಂಗೆ ಮಗಳ್ ಮತ್ತಗಜಗಮನೆ ಯದುವಂಶೋತ್ತಮೆ ಯೆನೆ ಕುಂತಿ ಕುಂತೀಭೋಜನ ಮನೆಯೊಳ್ ಬಳೆಯುತ್ತಿರ್ಪನ್ನೆಗಂ (ಕಂಕಪ. ೦-೬೬); ಧೀರನಿಧಿ ಬಿಟ್ಟದೇವನೊಳೋರಗೆ ಬಲ್ಲಾಳನಿಂತು ನರಸಿಂಹನುತಂಗಾರೆಣೆ ಗಗನಂ ಗಗನಾಕಾರಮೆನಲ್ಪಮೊಳೆಣೆ ಪಿತಾಮಹ ಪೌತ್ರರ್ (ಹುಕೋಶ. ೦-೦೩) ; ಎಲೆ ಭೂಪ ನಿನ್ನ ಪಿತಾಮಹರು ಹಿಂದಕೆ ಮುನಿಶಾಪದಿಂದಳಿದು ಭೂತಂಗಳಾಗಿರ್ಪರೆನಲು (ಕ್ರಿ. ಠಾ. ೮-೯೫). ೨. ಬ್ರಹ್ಮ : “ ಬ್ರಹ್ಮಾ, ಸ್ರಷ್ಟಾ, ಧಾತಾ, ಪರಮೇಷ್ಠೀ, ಪದ್ಮಭೂಃ . . . ಪಿತಾಮಹಃ, ಜಗತ್ಕರ್ತಾ, ವಿಶ್ವಾತ್ಮಾ, ಕಮಲಾಸನಃ ― ಈ ೨೦ ಬ್ರಹ್ಮನ ಪೆಸರ್ ” (ಹಲಾಯು. ೨-೬) ; ಬಣ್ಣಿಸುವ ಪಿತಾಮಹಂಗಮರಿದೆಗ್ಗ ಮೊಗ್ಗೆ ನಿನಗಮದೇನಗು (ಶಾಂತಿ. ೦-೬೦) ; ಚಕ್ರಧರತ್ವಮಂ ಸಫಲಂ . . . ಆ ವಿಕ್ರಮಸಾಲ್ವನಂ ನವಿಸಿದಂದಿದ ನಾನಱಿದೆಂ ಪಿತಾಮಹಾ (ಜಗ. ೦-೬೩); ಶ್ರೀಮಂಗಜಾನಯನಕ್ಕೆರವ . . . ಪಿತಾಮಹಾದಿ ಸಂಪರ್ಸಂಕುಳಸವಿತ್ರಪಾದಾಬ್ಜ . . . ಕೃಪಾಪದನಂ (ಕಂಕಪ. ೦ ೦). ೩. ರಾಜ ; ಅರಸ. ೪. ಬೇರೆಯವರ ಮನಸ್ಸಿನ ಲ್ಲಿರುವುದನ್ನು ತಿಳಿಯುವವನು : “ ಧಾತೃ ಭೂನಾಥ ತಾತ ಮನೋಜ್ಞಾನಿ ಪಿತಾಮಹಾಹ್ವಯಂ ” (ನಾನಾರ. ೨೩). [ ಸಂ. ]

**ಪಿತುಮೆ** (ನಾ). ಒಳಸಂಚು ; ಕುತಂತ್ರ ; ಪಿತೂರಿ : ನಿಜಸಂಸ್ಥಾನ ದೊಳಿರ್ಪ ಕುಹಕಿನಿಯೋಗಿಗಳೊಡರ್ಚಿದ ಪಿತುಮೆ[ಕಾಣಂ. ತೂರಿ]ಯುಂ ವಿಜಯಪುರವರ್ತಿಯೆನಿಸುವ ಮುಜಬರಖಾನಂ ತೆರಳ್ದೆ (ಕೆಳದಿ. ೯-೩೩) ; ಜಾನಂತರಾಯಂ ಪಿತುಮೆಯ ಮೇಲೆ ವಿವಾಸಖಾನನು ಕೊಲಿಸಿ ತಾನೇ ಮುಖ್ಯನಾಗಿ ಪಾತುಶಾಹಿಯ ಬಂದುಕುಂಗಳಂ ನಡೆಸಿದು (ಕೆಳದಿ. ೯-೩೪).
[ ← ಮರಾ. ಫಿತವಾ, ಫಿತಾವಾ]

**ಪಿತೂರಿ** ‘ ಫಿತೂರಿ ’ ನೋ.

**ಪಿತೂರಿಗಾರ** (ನಾ). ಒಳಸಂಚನ್ನು ಹೂಡುವವನು ; ಸಂಚುಗಾರ ; ಮೋಸಗಾರ : ಇಂದಿನ ಫ್ರೆಂಚ್ ಜನಾಂಗದವರಷ್ಟು . . . ಪಿತೂರಿಗಾರ ಜನ ಈವರೆಗೆ ಯಾವ ರಾಷ್ಟ್ರದಲ್ಲಿಯೂ ಹುಟ್ಟಲ್ಲ (ಕೃ. ಕೃ. ಕಥಾ. ೬೬).
[ಪಿತೂರಿ (< ಫಿತೂರಿ) + ― ಗಾರ (< ― ಕಾರ) ]

**ಪಿತೂರಿವ್ಯಾಪಾರ** (ನಾ). ಒಳಸಂಚಿನ ವ್ಯವಹಾರ: ಇದೆಲ್ಲ ಪಿತೂರಿ ವ್ಯಾಪಾರವಾಗಿಯಿದೆ (ಹೃದಿ. ೩೮).

[ಪಿತೂರಿ (< ಫಿತೂರಿ) + ವ್ಯಾಪಾರ]

**ಪಿತೃ** (ನಾ). ೧. ತಂದೆ; **ಪಿತ**: "ಜನಕನಾ ಪಿತೃ ವಪ್ಪ್ಯ ತಾತನೆನೆ ತಂದೆ" (ಶುಂಗರಾ. ೯೦–೯); ಪಿತೃವರಣಜಾತದುಃಖಿವನೀಗಳ್ ಮಚಿದು ಪವನಂ ನೀರ್ಗುಡಿಯಲ್ ಮಲುಗಿದವನು (ಕಾವಂಭೂ. ೦೯೬); ಪಿತೃ ಪವನಂಜಯಂ ಖಚರಪಲ್ಲಭನಂಜನೆ ಪೆತ್ತ ತಾಯ್ ಮಹಾಸತಿ ಹನುಮಂತನೆಂ ಪೆಸರೊಳಾಂ (ಶಂರಾಪು. ೦೦–೯೩); ಪಿತೃ ಕೃತಕೃತ್ಯನಾಗೆ ಪಸವಂ ಜನಸಂತತಿ ನೀಗೆ ಶತ್ರುಸಂತತಿ ತಲೆವಾಗೆ . . . ತಳೆದಂ ಭುವನ ಪ್ರಭಾ ರಾಜ್ಯಲಕ್ಷ್ಮಿಯಂ (ಕುಕೃಕು. ೦೩–೨); ಪಿತೃಸಮೋಭ್ರಾತ ಎನಿಪ್ಪುದು ಶ್ರುತಿವಚನವು (ಕುವ್ಯಾ.ಕ. ೦೬–೨೦). ೨. ಹಿಂದಿನವನು; **ಪೂರ್ವಜ**: ಪಿತೃಗಳುಪಾರ್ಜಿಸಿಟ್ಟ ಸಿರಿ ಜವ್ವನದೇಟ್ಗೆ ಪೆಜಂಗಿಲ್ಲನಿಪ್ಪತಿಶಯರೂಪು ಶಕ್ತಿಗಳಿವಲ್ಲವೆ ಹಾನಿಯ ಬಳ್ಳಿವಳ್ಳಿ (ಕಾರಂಭೂ. ೩೩೯). ೩. ಸ್ವರ್ಗಸ್ಥನಾದ **ಹಿರಿಯ**: ಪಿತೃ ಪಿತಾಮಹ ಪ್ರಪಿತಾಮಹರೆಂಬ ಮೂರುವಿಧ ಪಿತೃಗಳಿಗೆ ಅಧಿಪತಿಗಳು ವಸುಗಣ, ರುದ್ರಗಣ, ಆದಿತ್ಯಗಣ ಎಂಬ ಮೂರು ಗಣಗಳು (ಹಚಾರ. ೦೯–೦ ತಾತ್ಪರ್ಯ); ಪಿತೃಭಕ್ತಿವಿಹೀನರಾದ ಸಂಕರಸಂತಾನದಿಂದ ಪಿತೃಲೋಕದಲ್ಲಿರುವ ಪಿತೃಗಳು ಲುಪ್ತಪಿಂಡೋದಕರಾಗಿ ನರಕಗತರಾಗುತ್ತಾರೆ (ಕಾರಕ. ೦೦೨); ಮುಕ್ತಿಯೋಗ್ಯರಲ್ಲಿ ದೇವ, ಮನುಷ್ಯ, ಪಿತೃ, ಚಕ್ರವರ್ತಿ, ಮನುಷ್ಯೋತ್ತಮ ಎಂದು ಐದು ವಿಧಗಳು (ಹಿಂದಚಾ. ೨೬೩). ೪. [ಜ್ಯೋತಿ] ಮಘಾನಕ್ಷತ್ರದ ಅಧಿದೇವತೆ. ೫. ಮಘಾನಕ್ಷತ್ರ: ಪಿತೃ ಮೂಲಂ ಪೂರ್ವೆ ವೈಪಸ್ತತಮಿನಿತುಮವುಗ್ರಂ (ಲೋಕೋಪ. ೦–೯).

[ಸಂ.]

**ಪಿತೃಋಣ** (ನಾ). ದೇವಋಣ, ಋಷಿಋಣ, ಪಿತೃಋಣಗಳೆಂಬ ಋಣತ್ರಯಗಳಲ್ಲಿ ಒಂದು; ಮನುಷ್ಯನು ಸಂತಾನವನ್ನು ಪಡೆದು ತನ್ನ ಪಿತೃಗಳಿಗೆ ಸಲ್ಲಿಸಬೇಕಾದ ಋಣ: ಪಿತೃಋಣ ಗುರುಋಣ ದೇವಋಣ ಇತ್ಯಾದಿ ಎಲ್ಲ ಋಣದ ಭಾರವನ್ನು ನಿಮ್ಮೊಬ್ಬರ ತಲೆಯ ಮೇಲೆ ಹೊರಿಸಬೇಕಾಗುತ್ತದೆ (ಹೊಸಕ್ಕಿ. ೨೩೨). 'ಋಣತ್ರಯ' ಪರಾ.

[ಸಂ.]

**ಪಿತೃಕರ್ಮ** (ನಾ). ಸ್ವರ್ಗಸ್ಥರಾದ ಹಿರಿಯರಿಗೆ ಪಿಂಡ ಮುಂತಾದುವನ್ನು ಅರ್ಪಿಸುವಿಕೆ; ಶ್ರಾದ್ಧ: ಪರಂಪರಾನುಗತವಾದ ಸತ್ಸಂತಾನದಿಂದಲೇ ಪಿತೃಕರ್ಮಗಳು ನಡೆಯಬೇಕು (ಕಾರಕ. ೦೦೨).

[ಸಂ. ಪಿತೃಕರ್ಮನ್]

**ಪಿತೃಕಾನನ** (ನಾ). ಸುಡುಗಾಡು; ಶ್ಮಶಾನ: ಪಿತೃಕಾನನಗಳಲಿ ದೇವಾಲಯಗಳಲಿ ಜನಿಸಿದುದ್ಗಮರಾಜಿಗಳು ಸಲ್ಲವು ವಿವಾಹಕ್ಕೆ (ಶಿವ್ಯಪು. ೬–೩೩).

[ಸಂ.]

**ಪಿತೃಕಾರ್ಯ** (ನಾ). = **ಪಿತೃಕರ್ಮ**: ಅಂಧನೃಪಾಲ ವಿದುರಗೆ ತಿಳುಹಿದನು . . . ಕೊಳುಗುಳಕೆ ಪೋದವರೆಯಲ್ಲಿ ಮೃತರಾಕ್ಕಳಿಗೆ ಪಿತೃಕಾರ್ಯಗಳ ಮಾಡು ಪೆಂದು ನಿಯಮಿಸಿದ (ಶಿವ್ಯಸ್ತ್ರೀ. ೧–೯೦).

[ಸಂ.]

**ಪಿತೃಗ್ರಹ** (ನಾ). ಸ್ವರ್ಗಸ್ಥರಾದ ಪಿತೃಗಳಿಂದ ಉಂಟಾಗುವುದೆಂದು ನಂಬಲಾದ ಪೀಡೆ: ಎಳ್ಳು, ಉದ್ದು, ಬೆಲ್ಲ ಇವುಗಳಲ್ಲಿ ಪ್ರೀತಿ, ಅಪರ ಕೃತ್ಯದ ವ್ಯಾಪಾರದಲ್ಲಿ ಪ್ರೀತಿ, ಶಾಂತನಾಗಿಹನು, ಪೂರ್ವಾಹ್ಣದಲ್ಲಿ ಸುಮ್ಮನಿದ್ದು ಅಪರಾಹ್ಣದಲ್ಲಿಯೇ ಸಂಚಾರದ ವ್ಯಾಪಾರವು ಈ ಲಕ್ಷಣಗಳುಂಟಾಗಿಹುದು ಪಿತೃಗ್ರಹವೆಂದರಿವುದು (ವೈದ್ಯಸಾ. II. ೬೬). 'ದೇವಗ್ರಹ' ಪರಾ.

[ಸಂ.]

**ಪಿತೃತರ್ಪಣ** (ನಾ). ಸ್ವರ್ಗಸ್ಥರಾದ ಹಿರಿಯರಿಗೆ ಕೊಡುವ ತರ್ಪಣ,- ಎಳ್ಳು ನೀರು: "ನಿವಾಪಃ, ಪಿತೃತರ್ಪಣಂ—ಈ ೨ ನೀರ್ಗುಡುವುದು" (ಹಲಾಯು. ೦೦೩– ೦೬); ಬಿಸುಟಾನ ಬಿಸಿಯ ರಕುತವನು ಎಚಿದು ಪಿತೃತರ್ಪಣವ ನೀಡುವೆ (ಕೌಶಿರಾ. ೩೫–೨೦); ಸಸಿನೆ ಸಂಧ್ಯಾನ ಜಪ ಹೋಮಸ್ವಾಧ್ಯಾಯಮಂ ಪಿತೃತರ್ಪಣಮಂ ರೀತ್ಯಾ . . . ಸದಾಚಾರ ತಪ್ಪದೆ ಮಾಡುತಿಹರು ಸದ್ಧರ್ಮದೊಡನೆ (ಪಪಮೋ. ೨–೩೬).

[ಸಂ.]

**ಪಿತೃದಾನ** (ನಾ). ಸ್ವರ್ಗಸ್ಥರಾದ ಹಿರಿಯರಿಗೆ ಸಲ್ಲಿಸುವ ತಿಲೋದಕ, ಪಿಂಡಪ್ರದಾನ ಇತ್ಯಾದಿಗಳು: "ನಿವಾಪಃ–ಪಿತೃದಾನ–ಪಿತೃ ಪಿತೃತ್ವವನ್ನು ಹೊಂದಿದವರು, ತೃಪ್ತಿಪಡುವುದಕ್ಕೋಸ್ಕರ ಮಾಡಲ್ಪಡುವ ದಾನ, ತಿಲೋದಕ ಪಿಂಡಪ್ರದಾನಗಳ ಹೆಸರು" (ಸಿದ್ಧಾಂತಿ. ೨೨೨).

[ಸಂ.]

**ಪಿತೃದಿನ** (ನಾ). ಶ್ರಾದ್ಧದ ದಿನ; ತದ್ದಿನ: ಇಂದು ಪಿತೃದಿನವಿಂದು ಸಂಕ್ರಮಣವಿಂದು ಸೂರ್ಯಗ್ರಹಣ ಹರಿದಿನವಿಂದು ಯಜ್ಞಾರಂಭದಿನ ಪಡ್ಡಂತಿ ಲೇಸೆಂದು . . . ತಿಂದು ಕೊಬ್ಬಿದ ನಿಮಗೆ ಸುಭಟರ ಮಾತದೇಕೆ (ಕುವ್ಯಾ.ವಿ. ೬–೦೩).

[ಸಂ.]

**ಪಿತೃದ್ವಂದ್ವ** (ನಾ). ತಂದೆ ಮತ್ತು ತಾಯಿ; ಮಾತಾಪಿತೃಗಳು: ನವಮಾಸಾವಶೇಷಾಯುಷ್ಯರಾಗಿ ನೆಲಸಿರ್ದ ಗರ್ಭಂ ತದವಸಾನದೊಳ್ ಪುಟ್ಟಲೊಡಂ ಪಿತೃದ್ವಂದ್ವಂ ಕ್ಷುತಜೃಂಭಣವ್ಯಾಜದಿಂ ಪರಾಸುಗಳಕ್ಕುಮೆಂದು ಪೇಟ್ (ಶಂಪ್ರಕು. ೩–೩೮ ವ); ಇದು ಸರ್ವೋರ್ವೀಗಪುತ್ರ ಪೂರ್ವಮೆನೆ. . . ಪೂಜಿಸಿದನಿಂದ್ರಂ ತತ್ಪಿತೃದ್ವಂದ್ವಮಂ (ಕುಕೃಕು. ೦೨–೦೩).

[ಸಂ.]

**ಪಿತೃಧನ** (ನಾ). ತಂದೆಯಿಂದ ಅಥವಾ ಪೂರ್ವಜರಿಂದ ಪಡೆಯುವ ಆಸ್ತಿ; ಪಿತ್ರಾರ್ಜಿತ ಸ್ವತ್ತು: ಸುತಂ ಪಿತೃಧನಮುದಮುತ್ತಂ ಮೂರ್ಖನೆಂದೊಡೇನಬಿಸುವುದೋ (ಕಾವ್ಯಾವ. ೦೬೨).

[ಸಂ.]

**ಪಿತೃಪಕ್ಷ** (ನಾ). ೧. ತಂದೆಯ ಕಡೆಯ ಬಂಧು: ಪಕ್ಷವೆರಡೇ ಲೋಕದೊಳ್ ಪಿತೃಪಕ್ಷ ಮೇಣಾ ಮಾತೃಪಕ್ಷ ವಿಪಕ್ಷ ತಂದೆಯ ದೆಸೆ ಸಪಕ್ಷವು ತಾಯ ದೆಸೆಯವರು (ಕುವ್ಯಾ.ಕ. ೮–೦೬). ೨. ಭಾದ್ರಪದಮಾಸದ ಕೃಷ್ಣಪಕ್ಷ; ಹಿರಿಯರಿಗೆ ತರ್ಪಣ ಕೊಡುವ ಕಾಲ: ಪಿತೃಪಕ್ಷ, ಮಹಾಲಯಾಅಮಾವಾಸ್ಯೆಗಳಲ್ಲಿ ನಾವು ಮಾಡುವ ಪಿತೃಪಕ್ಷ ಶ್ರಾದ್ಧಗಳ ಮೂಲದಲ್ಲಿ ಈ ಕೃತಜ್ಞತಾದರ್ಶನವೇ ಇದೆ ಎಂಬುದನ್ನು ಮರೆಯುವಂತಿಲ್ಲ (ಶಾಹ್ಮ. ೦೨೯); ಪಿತೃಪಕ್ಷ, ಯುಗಾದಿಹಬ್ಬಗಳಲ್ಲಿ ಅವನ್ನು ತಿಂದ ಮಾರನೆಯ ದಿನ ಮಾಮಯ್ಯ ಕಾಲುವೇ ಪರೀ ಮೇಲೇ ಇರುತ್ತಿದ್ದ (ನಮ್ಮೂರು. ೨೨೦).

[ಸಂ.]

**ಪಿತೃಪತಿ** (ನಾ). ಪಿತೃಗಳ ಒಡೆಯ; ಯಮ: "ಶಮನಃ, ಸಮವರ್ತೀ ಪ್ರೇತಪತಿಃ, ಪಿತೃಪತಿಃ . . . ಈ ೧೬ ಜಮನ ಪೆಸರ್" (ಹಲಾಯು. ೦೩–೨೦); ನುತ ಸುರಪತಿಯುಂ ಸ್ವಾಹಾಪತಿಯುಂ ಪಿತೃಪತಿಯುಂ . . . ಪಶುಪತಿಯುಮೆನಿಸಿದಾಶಾಪತಿಗಳ್ (ಕುಕೃಕು. ೦೬–೬೦); ಬಿದ್ದವರನೊಡೆತಳಿದು ಮೇಲುಬ್ಬೆದ್ದು ಕವಿವಿದಾಳುಕುದುರೆಯ ಜಡ್ಡಿನಲಿ ಬೇಸಱಿಸಿದನು ಪಿತೃಪತಿಯ ಪರಿಜನವ (ಕುವ್ಯಾ.ಕ. ೦೦–೩೬); ಅಡರಿದನು ಪಿತೃಪತಿ ಮಾಹಾರಥವ (ಉತ್ತರಾ. ೬–೨೬).

[ಸಂ.]

**ಪಿತೃಪದೇಶ** (ನಾ). ಯಮನ ದೇಶ; ಯಮಲೋಕ: ಸಂದೇಹಿಗಳ್ಗೆ ಪಲ್ಗಿರಿವವರ ಶರಣರಂ ನಿಂದಿಸಿ ಪಿತೃಪದೇಶಕೊಕ್ಕಲಾದವರ ಮಾಯಾಂಧಕಾರದೊಳು ಕಂಗಾಣದರ ಸಂಗವಿಜಾಕಿನೊಳು ಸಿಕ್ಕಿದೊಲು (ಕಹಿಂ. ೦೩–೨೦).

[ಸಂ.]

**ಪಿತೃಪ್ರಸು** (ನಾ). ೧. ತಂದೆಯ ತಾಯಿ; ಪಿತಾಮಹಿ; ಅಜ್ಜಿ. ೨. ಸೂರ್ಯಾಸ್ತದ ಸಮಯ; ಮುಸ್ಸಂಜೆ: "ಸಂಧ್ಯಾ, ಪಿತೃಪ್ರಸೂಃ– ೨ ಸಂಧ್ಯಾಕಾಲದ ಪೆಸರುಗಳು. ಅಂದರೆ ಸಂಜೆ" (ಸಿದ್ಧಾಂತಿ. ೩೫).

[ಸಂ. ಪಿತೃಪ್ರಸೂ]

**ಪಿತೃಪ್ರಿಯ** (ನಾ). ಪಿತೃಗಳಿಗೆ ಪ್ರಿಯನಾದವನು; ಪಿತೃಪತಿ; ಯಮ: "ಪ್ರೇತಪತಿ ಸಮವರ್ತಿ . . . ಶಮನನಿನಜಾತಂ ಪಿತೃಪ್ರಿಯಂ ಹರಿ ದಂಡಪಾಣಿ ಕೀನಾಶಂ ಕೃತಾಂತನಕ್ಕುಂ" (ಮಂಗರಾ. ೦೩-೦೦). [ಸಂ.]

**ಪಿತೃಭಕ್ತತೆ** (ನಾ). ತಂದೆಯಲ್ಲಿ ಇಟ್ಟಿರುವ ಭಕ್ತಿ,—ಪೂಜ್ಯಭಾವ: ಸಂದ ದಾನಚಿಂತಾಮಣಿ ತನ್ನದೊಂದು ಪಿತೃಭಕ್ತತೆಯಂ ಮೆಚಿ‍್ಚಯಲ್ ಪುರಾಣಚೂಡಾಮಣಿಯಂ ನಿರ್ಮಿರ್ಚಿದಳ್ (ಶಾಂತಿಪು. ಶ. ೦-೦). [ಸಂ. ಪಿತೃಭಕ್ತತಾ]

**ಪಿತೃಭಕ್ತಿ** (ನಾ). = ಪಿತೃಭಕ್ತತೆ: ಉದಾತ್ತನೀ ಮಲ್ಲಪಯ್ಯನೊಳೊಪ್ಪುಗುಂ ಪಿತೃಭಕ್ತಿಯುಂ ವಿನಯೋಕ್ತಿಯುಂ (ಶಾಂತಿಪು. ೦-೪೦); ಪಿತೃಭಕ್ತಿವಿಹೀನರಾದ ಸಂಕರಸಂತಾನದಿಂದ . . . ಪಿತೃಗಳು ಲುಪ್ತಪಿಂಡೋದಕರಾಗಿ ನರಕಗತರಾಗುತ್ತಾರೆ (ಭಾರದ. ೦೦೨). [ಸಂ.]

**ಪಿತೃಭೂಮಿ** (ನಾ). ಸುಡುಗಾಡು; ಶ್ಮಶಾನ: ಆ ನಡುರಾತ್ರಿಯಲ್ಲಿ ರಾಜಮಾತೆಯ ಚಿತಾದರ್ಶನಕ್ಕೆಂದು ರಾಜಕುಲದ ಪಿತೃಭೂಮಿಗೆ ನಡೆದು ಹೋದನು (ಶಾಂತಲಾ. ೦೬೯). [ಸಂ.]

**ಪಿತೃಮೇಧ** (ನಾ). ೧. = ಪಿತೃಯಜ್ಞ ೧: ಇಂದು ದೇವತೆಗಳನ್ನು ಪ್ರಾರ್ಥಿಸುವ ಪಿತೃಮೇಧ ಎಂಬ ಯಜ್ಞವು ಕಲ್ಯಾಣಕಾರಕವಾಗಿ ಅಗಲಿ (ಪುಣ್ಯಾ.ರ. ೩೨೭). ೨. = ಪಿತೃಯಜ್ಞ ೨: ವಿವಿಧಭಕ್ತಿಯಲಿಂತು ಪಿತೃಮೇಧವನು ವಿಹಿತವಿದೆನಲನುಪ್ಕಿಸಿಯವರು . . . ಅವುರನದೀತಟಾಕಗಳ ಗೈದಿದರು (ತಿಪ್ಪು.ಕ. ೦೦-೩೯). [ಸಂ.]

**ಪಿತೃಯಜ್ಞ** (ನಾ). ೧. ಗೃಹಸ್ಥನು ಮಾಡಬೇಕಾದ ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತಯಜ್ಞ ಮತ್ತು ಬ್ರಹ್ಮಯಜ್ಞಗಳೆಂಬ ಪಂಚಮಹಾಯಜ್ಞಗಳಲ್ಲಿ ಒಂದು; ಸ್ವರ್ಗಸ್ಥರಾದ ಹಿರಿಯರಿಗೆ ನೀಡುವ ತರ್ಪಣ: ದೇವಯಜ್ಞ, ಪಿತೃಯಜ್ಞ . . . ಬ್ರಹ್ಮಯಜ್ಞಾದಿಗಳಂ ಮಾಳ್ಪಾತನಾಗಿ (ವಿವೇಕ. ೦೩೪); ಬ್ರಹ್ಮಯಜ್ಞ, ಪಿತೃಯಜ್ಞ ... ಮನುಷ್ಯಯಜ್ಞ—ಈ ಐದು ಮಹಾಯಜ್ಞಗಳು ... ಪಿತೃತರ್ಪಣವು ಪಿತೃಯಜ್ಞವು (ಆರ್ಯಧ. ೦೬೭); ಭೂತಯಜ್ಞ, ಮನುಷ್ಯಯಜ್ಞ, ಪಿತೃಯಜ್ಞ . . . ಎಂಬ ದೈನಂದಿನದ ಕರ್ತವ್ಯನಿರ್ವಹಣದಿಂದ ಗೃಹಸ್ಥನು ಲೋಕಸಂಗ್ರಹನಿರತನಾಗಿರಬೇಕು (ಪುಣ್ಯಾ.ರ. ೯೦ ಟೀಕೆ). ೨. ಸತ್ತವರಿಗೆ ಮಾಡುವ ಕರ್ಮ; ಅಪರಕರ್ಮ; ಅಂತ್ಯಕ್ರಿಯೆ: ವಿಧ್ಯುಕ್ತವಾಗಿ ಪಿತೃಯಜ್ಞ ನಡೆಯಿತು. ಹೀಗೆ ಅಗ್ನಿಸಂಸ್ಕಾರವಾದ ಮೇಲೆ ಎಲ್ಲರೂ ಗಂಗಾತೀರಕ್ಕೆ ಹೋಗಿ ತರ್ಪಣ ಕೊಟ್ಟರು (ವಚಕಾ. ೩೩೩). [ಸಂ.]

**ಪಿತೃಯಾಣ** (ನಾ.) = ಪಿತೃಯಾನ ೨: ಇಷ್ಟಾಪೂರ್ತಗಳನ್ನು ಮಾಡಿದವರ ಪಿತೃಯಾಣ (ಇದಕ್ಕೆ ಕೃಷ್ಣಮಾರ್ಗವೆಂದೂ ಧೂಮಮಾರ್ಗವೆಂದೂ ಹೆಸರು) (ಅಮೃತ. ೭-೨೨ ಟೀಕು); ಬ್ರಹ್ಮದೊಂದಿಗೆ ಐಕ್ಯವನ್ನು ಪಡೆದ ಜೀವಾತ್ಮನು ಪಿತೃಯಾಣಕ್ಕಿಂತ ಭಿನ್ನವಾದ ದೇವಯಾನದಲ್ಲಿ ಹೋಗುತ್ತಾನೆಂದು ಹೇಳಿದೆ; ಪಿತೃಯಾಣವು ಪುನರ್ಜನ್ಮಕ್ಕೆ ಒಳಗಾಗಿರುವ ಬದ್ಧಜೀವನಿಗೆ ಸೇರಿದ್ದು (ತತ್ವಪ್ರಾ, ೬೩). [ಸಂ.]

**ಪಿತೃಯಾನ** (ನಾ). ೧. ಪಿತೃಗಳು ಸಂಚರಿಸುವ ವಾಹನ. ೨. [ವೇದಾಂತ] ಪುನರ್ಜನ್ಮಕ್ಕೆ ಒಳಗಾಗುವ ಬದ್ಧಜೀವನು ಪಡೆಯುವ ಒಂದು ಗತಿ; ಪಿತೃಗಳು ಹೋಗುವ ಮಾರ್ಗ; ಕೃಷ್ಣಗತಿ: ಹುಟ್ಟಿದ ಪ್ರಜೆಗಳು ಸತ್ತ ಬಳಿಕ ಬೇರೆಬೇರೆಯಾಗಿ ಹೋಗುವರೆಂಬುದನ್ನು ಬಲ್ಲೆಯಾ . . . ದೇವಯಾನ ಪಿತೃಯಾನಮಾರ್ಗಗಳ (ಮರಣಾನಂತರ ಆತ್ಮನ ಗತಿಗಳು) ಸಾಧನಗಳೇನೆಂಬುದನ್ನು ಬಲ್ಲೆಯಾ? (ಭಾರದ. ೪೦). 'ದೇವಯಾನ' ನೋಡಿ. [ಸಂ.]

**ಪಿತೃರೇಖೆ** (ನಾ). [ಸಾಮುದ್ರಿ] ಹಸ್ತರೇಖೆಗಳಲ್ಲಿ ಒಂದು: ಮಧ್ಯಮದ ಆದಿಯಲ್ಲಿ ಪಿತೃರೇಖೆಯಿರುವದು (ಸಾಮುಂ. ೯೭-೦೩). [ಸಂ. ಪಿತೃರೇಖಾ]

**ಪಿತೃಲೋಕ** (ನಾ). ಮೃತರಾದ ಪಿತೃಗಳು ಇರುವ ಲೋಕ; ಚಂದ್ರಲೋಕಕ್ಕಿಂತ ಮೇಲಿರುವುದೆನ್ನಲಾದ ಒಂದು ಲೋಕ: ಮುಂದೆ ಪಿತೃಲೋಕಮಾರ್ಗಂ ದೂರಮಪ್ಪುದೆನಗೆಂದು ಬಗೆಯದೆ . . . ಸಲೆ ಸಂದ ಸತ್ಕುಲಕಂಜಕೆ ಕೊಡಲಿಯಾದಳ್ ಭಾವಿಸೆ (ಅರಾತ. ೦-೭-೨೪); ಶ್ರೋತ್ರಂಗಳಲಿ ಪ್ರಾಣವು ಪೋಗೆ ಪಿತೃಲೋಕದಲಿ ಸಂಚರಿಸುವರು (ಗಗಶಾ. ೬-೩೯); ಪಿತೃಭಕ್ತಿವಿಹೀನರಾದ ಸಂಕರಸಂತಾನದಿಂದ ಪಿತೃಲೋಕದಲ್ಲಿರುವ ಪಿತೃಗಳು ಲುಪ್ತಪಿಂಡೋದಕರಾಗಿ ನರಕಗತರಾಗುತ್ತಾರೆ (ಭಾರದ. ೦೦೨). [ಸಂ.]

**ಪಿತೃವಂಚಿತ** (ನಾ). ೧. ತಂದೆಯಿಂದ ವಂಚಿತನಾದವನು. ೨. ತಂದೆಯನ್ನು ಕಳೆದುಕೊಂಡವನು: ಅವನ ತೀಕ್ಷ್ಣಬುದ್ಧಿ ಮತ್ತು ಪ್ರತಿಭೆಗಳಿಗಾಗಿ ಎಷ್ಟು ಪ್ರೀತಿಸುತ್ತಿದ್ದರೋ ಅಷ್ಟೇ ಪಿತೃವಂಚಿತನಾದ ಅವನ ಬಡತನದ ಬಾಳಿಗಾಗಿ ಮರುಕಪಡುತ್ತಿದ್ದರು (ಬಾಪಿಬ. ೨೦). [ಸಂ.]

**ಪಿತೃವನ** (ನಾ). ಶ್ಮಶಾನ; ಪಿತೃಭೂಮಿ: "ಶ್ಮಶಾನಂ, ಪಿತೃವನಂ—ಈ ೨ ಮಸಣಗಾಡು" (ಹಲಾಯು. ೦೦೩-೦೬); ಗಿರಿಗುಹೋದರ ಕಂದರ ವಿಟಪಿ . . . ಪಿತೃವನ ಜೀರ್ಣದ್ವಾರ ಶೂನ್ಯಗೃಹಾದಿಗಳೊಳ್ (ಅಜಿತಪು. ೬-೨೯ ವ); ಪಿತೃವನಮುಮಾ[ಶಾಶಾಂ. ಪರೇತವನಮುಮಾ ಪರಿಭವನಮುಮಾ]ಯ್ತುಂಬುಜವನಂ (೯೦೮ಚ. ೬-೬೩); ಲಲನೆನಂದನರನು ಮಹೀಸುರನಿಳಯದಲಿ ಮಾಚಿದನು ತಾನೇ ಹೊಲೆಯನಾಳಾಗಿದ್ದನಾ ಪಿತೃವನಪತಿತ್ವದಲಿ (ಹರಿಶ. ೩-೨-೨೪). [ಸಂ.]

**ಪಿತೃವಾಕ್ಯ** (ನಾ). ತಂದೆಯ ಮಾತು,—ನುಡಿ: ಪಿತೃವಾಕ್ಯಮನುಲ್ಲಂಘಿಪ ಸುತನೆ ಮಹಾಜ್ಞಾನಿಯಾದೊಡಂ ವಿಬುಧರ ಸಮ್ಮತಮಲ್ತವಂಗೆ ನರಕದ ಗತಿ ತಪ್ಪದು (ಪಿಪ್ಪು.ಪು. ೦-೩-೨೩೬).

**ಪಿತೃವಾಕ್ಯಪರಿಪಾಲನೆ** = ತಂದೆಯ ಮಾತನ್ನು ನಡೆಸುವಿಕೆ; ತಂದೆಯ ಆಜ್ಞೆಯನ್ನು ಪಾಲಿಸುವಿಕೆ: ರಾಮನ ಪಿತೃವಾಕ್ಯಪರಿಪಾಲನೆಯು ರಾಮಾಯಣಕ್ಕೆ ನಾಂದಿಯಾಯಿತು (ರೂ). [ಸಂ.]

**ಪಿತೃವಿತ್ತ** (ನಾ). ಪಿತ್ರಾರ್ಜಿತವಾಗಿ ಬಂದ ಹಣ,–ಸಂಪತ್ತು: ತಾಂ ಪಿತೃವಿತ್ತಮದೋನ್ಮತ್ತಧರ್ಮದೊಳ್ ಬಹಿರ್ಮುಖನುಂ . . . ಮೋಕ್ಷದೊಳ್ ನಿರಪೇಕ್ಷಕನುಮಾಗಿ (ಶಂತತಂ. ೨೬-೩); ಪಿತೃವಿತ್ತಭೋಗಿ ಕುನಖಿಂ ಮೆಲ್ಪಿಂದೆ ಬಲ್ಪಿಂದೆ ಸಾಧಿಸೆ ಸಾಧ್ಯಂ ನಿಪುಣಂ ಮಹೋದ್ಯಮಿ ನಿಗೂಢಾಂಸಂ ಧನುರ್ಗೇಹಜಂ (ಜಾತಿತಿ. ೦೬-೯). [ಸಂ.]

**ಪಿತೃವಿಯೋಗ** (ನಾ). ತಂದೆಯನ್ನು ಕಳೆದುಕೊಳ್ಳುವಿಕೆ; ತಂದೆಯ ಮರಣ, – ಸಾವು: ಗುರುವಿರಪಜನಿತಚಿಂತಾತರಂಗಿಣೀರಯಮನಾತ್ಮಕುಲವೃದ್ಧವಚಸ್ತರಣಿಯಿನೆಂತಾನುಮಧಃಕರಿಯಿಸಿದಂ ಪಿತೃವಿಯೋಗಮೇಂ ದುಸ್ತರಮೋ (ಚಂದ್ರಪ್ರ. ೨-೬೦). [ಸಂ.]

**ಪಿತೃವ್ಯ** (ನಾ). ತಂದೆಯ ಸಹೋದರ; ಚಿಕ್ಕಪ್ಪ ಅಥವಾ ದೊಡ್ಡಪ್ಪ: "ತಾತನೊಡಹುಟ್ಟಿದಾತಂ ಪಿತೃವ್ಯನೆನಿಕ್ಕು (ಮಂಗರಾ. ೯೨-೦೩); ಅಂಕುಶನೊಳ್ ನಿರಂಕುಶಂ ಲಕ್ಷ್ಮಣಂ ಪಿತೃವ್ಯಂ ದಶಕಂಧರನೊಳ್ ನೆರೆವಂತಿರೆ . . . ಮೊಚಿ‍್ಚದು ಕಾದುತ್ತಿರ್ದಂ (ಶಂರಾವಾ. ೦೬-೦೩); ಚರಣಾಂಭೋಜಾತಮಂ ಪೂಜಿಸಿದ ತನಯನಂ ತತ್ಪಿತೃವ್ಯಂ ಧರಾಧೀಶ್ವರ ನಾಶೀರ್ವಾಕ್ಸಮೇತಂ ತೆಗೆದು ಬಿಗಿದು ತಟಕ್ಕೈಸಿದಂ ಪ್ರೀತಿಯಿಂದಂ (ವರ್ಧಪು. ೨-೪೪); ನೀನಲಾ ಗುರುವಂದ್ಯನೆಮಗತಿಮಾನನೀಯನಲಾ ಪಿತೃವ್ಯನದೇನ ಹೇಳಿದೆ ತಂದೆ ಲಾಲನಪೋಷಕಾರ್ಹರಿಗೆ (ಕಿಭಾಗ. ೦೦-೪೩-೩೩). [ಸಂ.]

**ಪಿತೃಶೇಷ** (ನಾ). ಶ್ರಾದ್ಧದಲ್ಲಿ ಪಿತೃಗಳಿಗೆ ಅರ್ಪಿಸಿದ ನೈವೇದ್ಯ. [ಸಂ.]

**ಪಿತ್ತ** (ನಾ). ೧. ಶರೀರದ (ವಾತ, ಪಿತ್ತ, ಶ್ಲೇಷ್ಮಗಳೆಂಬ) ಮೂರು ಬಗೆಯ ಧಾತುಗಳಲ್ಲಿ ಒಂದು: "ವಾಯುಃ, ಪಿತ್ತಂ – ಈ ೨ ಪಿತ್ತಂ" (ಹಲಾಯು. ೯೯-೧೭೦). ೨. ಪಿತ್ತಾಧಿಕ್ಯದಿಂದ ಉಂಟಾಗುವ ಬೇನೆ,– ರೋಗ: ಪಿತ್ತವಿಕಾರ : ಸಿತವಂ ದ್ರಾಕ್ಷೆಯುಮಂ ಮಧುಯುಂತವಾಗಿರೆ ತಿಂದು ಬೞಿಕೆ ತಣ್ಣೀರ್ಗುಡಿಯಲ್ ಹತಿಯಿಸುಗುಮಧಿಕಪಿತ್ತಮಂ (ಲೋಕೋಪ. ೯-೦೦); ವಾತಂ ಪಿತ್ತಂ ಕಫಮೆಂಬೀ ತೆಱದಿಂ ಮೂಱು ದೋಷಮಾದ್ಯಂತ ಸಮಾಖ್ಯಾತಂಗಳವುಷ್ಣದಿನಶೀತದಿನುಪಶಮಿಕುಮಲ್ಲಿ ಮಧ್ಯಮದೊಂದುಂ (ಕಾವ್ಯಾವ. ೪೬೦); ತೊಂಡೆಯ ಹೂವು . . . ಈ ಎಲೆರಸ ಸಕ್ಕರೆ ಸಹ ಹಾಲಲ್ಲಿ ಕುಡಿಯೆ ಪಿತ್ತ ಮಾಣ್ಗುಂ (ವೈ.ಶಿ. ೩). ೩. ಕೋಪ ; ಸಿಟ್ಟು : ಬಿಚ್ಚಿ ಬಿಟ್ಟಂತಾಯ್ತು ಕಿವಿ ಥಟ್ಟುಚಿ ಹೋಯಿತು ಘೋರರಭಸಕೆ ಹೆಚ್ಚಿ ಪಿತ್ತವು ತಲೆಯನೇಱಿದವೋಲ್ಲು ಶಿರುಗಿದರು (ಕೌಶಿರಾ. ೦೯-೦೨); ಪುಂಡರ ಪುಂಡತನ ಇವುಗಳ ನಿರ್ಭೀತಚಿತ್ರ ಧಾರ್ಮಿಕರೆಂಬವರ ಪಿತ್ತವನ್ನು ಹೆಚ್ಚಿಸಿದೆ (ಸಾಸವಾ. ೦೨); ಬರೆದ ಉತ್ತರವು ಆಚಾರ್ಯರ ಪಿತ್ತವನ್ನು ಕೆರಳಿಸಿತು (ಮಸಿಶ. ೯೩). ೪. ಮರುಳುತನ ; ಹುಚ್ಚು : ಇದೇನು, ನಿಮಗೆ ಕ್ಷಣಚಿತ್ತ ಕ್ಷಣಪಿತ್ತ? (ನಾಕೀಕಂ. ೩೬). ೫. ಹುಚ್ಚು ತಲೆಗೇರಿದವನು ; ಹುಚ್ಚ : ನಂಜುಂಡಪುರದ ಪವದಲ್ಲಿ ಕೋಪದಿಂ ಪಿತ್ತನೆಯೆಂದು ಬೈದಂತೆ ಪಾಡು (ತ್ರಿಶಂ. ೨-೦೦೯ ಪ). 'ಪಿಚ್ಚ$_1$' ಪರಾ.

**ಪಿತ್ತ ತಲೆಗೇಱು, ಪಿತ್ತ ತಲೆಗೇರು**=೧. ಹುಚ್ಚು ಹಿಡಿ : ವಿಷಯದ ಪಿತ್ತ ತಲೆಗೇಱಿದಲ್ಲಿ ವಿವೇಕವೆಂಬ ದೃಷ್ಟಿ ನಷ್ಟವಾಗಿ ಪಶುಪತಿಯು ನೆನೆಹು ಕೆಟ್ಟು ಮತಿ ಮಂದವಾದಲ್ಲಿ (ದೇರಾವ. ೨೭-೯೬). ೨. ಸಿಟ್ಟು ಹೆಚ್ಚಾಗಂ ; ಅತಿಶಯವಾಗಿ ಕೋಪ ಬರು : ಪಿತ್ತ ತಲೆಗೇರಿದವನಿಗೆ ಶಂಖ ಕರ್ರಗೆ ಕಂಡರೆ ಅದರ ಬಣ್ಣ ಕೆಟ್ಟೀತೇ? (ಗಾದೆ). **ಪಿತ್ತದ ಗಂದೆ**=ಪಿತ್ತಾಧಿಕ್ಯದಿಂದ ಮೈಮೇಲೆ ಏಳುವ ಬೊಕ್ಕೆ,–ಗುಳ್ಳೆ : ಅವನ ಮೈಮೇಲೆಲ್ಲಾ ಪಿತ್ತದ ಗಂದೆಗಳಿದ್ದಿವೆ (ರೂಢಿ). **ಪಿತ್ತ ನೆತ್ತಿಗೇರು**=ಪಿತ್ತ ತಲೆಗೇಱು ೨ : ನನಗಂತೂ ಪಿತ್ತ ನೆತ್ತಿಗೇರಿಬಿಡುತ್ತದೆ (ಸುವಸಂ. ೦೯) ; ಬಸಗೋಂಡನ ಹೆಂಡತಿ, ಬಸವಂತಿಯ ಈ ನಿತ್ಯಸ್ನಾನ, ವಾಸಾಂತಿಯ ಬದಲಾವಣೆ, ಪಿತ್ತ ನೆತ್ತಿಗೇರಲು ಕಾರಣವಾಗಿದ್ದವು (ವೀಚಪ. II. ೦೯೨). [ಸಂ.]

**ಪಿತ್ತಕ** (ನಾ). ಒಂದು ಬಗೆಯ ಕೀಳುತರದ ರತ್ನ : ಪಿತ್ತಕವೆಂಬುವದ ಗಿಣಿಯ ರೆಕ್ಕೆಯಂತೆಯಿರುವುದು (ಸೌಗಂಧಿ. ೩೬-೦೫). [ಸಂ.]

**ಪಿತ್ತಕಲ್ಲು** (ನಾ). ಪಿತ್ತಕೋಶದಲ್ಲಿ ಬೆಳೆಯುವ ಒಂದು ಬಗೆಯ ಕಲ್ಲಿನಂತಹ ವಸ್ತು ಮತ್ತು ಅದಕ್ಕೆ ಸಂಬಂಧಪಟ್ಟ ರೋಗ : ಇಂತಹವರು ಟೈಫಾಯ್ಡ್ ವಾಹಕರಾಗುವುದಲ್ಲದೆ, ಕೆಲವು ವೇಳೆ ಪಿತ್ತಕಲ್ಲು (Gall Stone)ಗಳಿಂದ ನರಳುತ್ತಾರೆ (ಕಂಬೋ. ೬೦).
[ಪಿತ್ತ+ಕಲ್ಲು (<ಕಲ್$^3$)]

**ಪಿತ್ತಕೋಶ** (ನಾ). (ಕಶೇರುಕಪ್ರಾಣಿಗಳ) ಜಠರದ ಬಲಭಾಗದಲ್ಲಿ ಇರುವ, ಪಿತ್ತರಸವನ್ನು ಉತ್ಪತ್ತಿ ಮಾಡುವ, ಆಹಾರವು ಜೀರ್ಣವಾಗುವುದಕ್ಕೆ ಸಹಾಯಕವಾದ ಒಂದು ಮುಖ್ಯಾಂಗ ; ಪಿತ್ತಜನಕಾಂಗ : ಒಂದು ಯಕೃತ್ತಿನಿಂದ (Liver) ಪಿತ್ತಕೋಶವನ್ನು ಸೇರಿ (Gall-bladder) ಅಲ್ಲಿಂದ ಹರಿದು ಬರುವ ಪಿತ್ತರಸ (ಶಾಲಕ್ರ. I. ೨೫೦) ; ಪಿತ್ತದಲ್ಲಿ ಈ ರೋಗಾಣುಗಳು ಬಹು ಬೇಗ ಬೆಳೆದು ಪಿತ್ತ ಕೋಶದಲ್ಲಿ ಆಶ್ರಯವನ್ನು ಪಡೆಯುತ್ತವೆ (ಕಂಬೋ. ೬೦). [ಸಂ.]

**ಪಿತ್ತಕ್ಷೋಭ** (ನಾ). ಪಿತ್ತದ ಉದ್ರೇಕ ; ಪಿತ್ತಪ್ರಕೋಪ : ಮಲ ಮೂತ್ರಗಳ ದುರ್ಗಂಧದಿಂದ ನಮಗೆ ಪಿತ್ತಕ್ಷೋಭವಾಗಿ ಓಕರಿಕೆ ಬರುತ್ತದೆ (ಮುಂಬಡಾ. ೫-೦೫೬). [ಸಂ.]

**ಪಿತ್ತಗ್ರಹಣಿ** (ನಾ). ಪಿತ್ತದಿಂದ ಉಂಟಾಗುವ ಅತಿಸಾರ,–ಆಮಶಂಕೆ ; ಪಿತ್ತಾತಿಸಾರ: ಬೆಲ್ಲವತ್ತದ ತಿರುಳು, ಕೊಡಸಿಗೆಬೀಜ, ಕೊಡಸಿಗೆ ತಿಗುಡು, ಧಾತಕೀಕುಸುಮ, ಕಟುಕರೋಹಿಣಿ, ಶುಂಠಿ ಇವಂ ಚೂರ್ಣಿಸಿ ಅಕ್ಕಿ ಗಚ್ಚಿನಲ್ಲಿ ಕಲಸಿ ಜೇನುತುಪ್ಪವೆರಸಿ ಕುಡಿಯೆ ಪಿತ್ತಗ್ರಹಣಿ, ಮೂಲರೋಗ, ಪ್ರವಾಹವಾದ ಅತಿಸಾರ, ಹೊಟ್ಟೆಬೇನೆ ಸಹ ಪರಿಹರವಕ್ಕುಂ (ಸಕವೈ. ೩೯೩). [ಸಂ.]

**ಪಿತ್ತಘ್ನಿ** (ನಾ). ಒಂದು ಬಗೆಯ ಸಸ್ಯ ; ಗುಡೂಚಿ. [ಸಂ. ಪಿತ್ತಘ್ನೀ]

**ಪಿತ್ತಜನಕಾಂಗ** (ನಾ). ಪಿತ್ತರಸವನ್ನು ಉತ್ಪತ್ತಿ ಮಾಡುವ ಒಂದು ಜೀರ್ಣಾಂಗ ; ಪಿತ್ತಕೋಶ : ವಿಷವಂತೆ ದೇಹದಲ್ಲಿ ಹೆಚ್ಚಾದಾಗ ಹೃದಯಃಕ್ರಿಯೆ ನಿಲ್ಲುತ್ತದೆ . . . ಪಿತ್ತಜನಕಾಂಗ ಊದಿಕೊಳ್ಳುತ್ತದೆ (ಕಂಬೋ. ೨೨) ; ಆಹಾರದಲ್ಲಿ ಪ್ರೋಟೀನು ಅಭಾವವಾದರೆ . . . ಪಿತ್ತ ಜನಕಾಂಗ, ರಕ್ತ, ಚರ್ಮ ದುರ್ಬಲವಾಗುತ್ತವೆ (ಗೃಹಶಾ. ೦೦) ; ದೇಹದಲ್ಲಿ ಪಿತ್ತಜನಕಾಂಗವೂ ಈ ಕೆರೋಟಿನ್ ವಸ್ತುವನ್ನು Vitamin 'A' ರೂಪಕ್ಕೆ ಮಾರ್ಪಡಿಸುತ್ತದೆ (ಶಿಮ್ಮದ್ಯ. ೦೨೦). [ಸಂ.]

**ಪಿತ್ತಜಿಹ್ವೆ** (ನಾ). ಪಿತ್ತಾಧಿಕ್ಯದಿಂದ ನಾಲಿಗೆಯ ರುಚಿ ಕೆಡುವ ಒಂದು ಬಗೆಯ ರೋಗ : ಜಿಹ್ವಾಲಸವೆಂದು, ಅಧಿಜಿಹ್ವೆ ಎಂದು, ಉಪಜಿಹ್ವೆ ಎಂದು, ವಾತಜಿಹ್ವೆ, ಪಿತ್ತಜಿಹ್ವೆ, ಶ್ಲೇಷ್ಮಜಿಹ್ವೆ ಎಂದು ಆಱು ತೆಱ (ಕೃದ್ಯಶಾ. II. ೦೦೬) ; ಪಿತ್ತಜಿಹ್ವೆ ಎಂಬುದು ಹಳದಿವರ್ಣವಾಗಿ ಬೆಂದ ಹಾಗೆ ಇಹುದು(ಕೃದ್ಯಶಾ. II. ೦೦೭). [ಸಂ. ಪಿತ್ತಜಿಹ್ವಾ]

**ಪಿತ್ತಜ್ಜ** (ನಾ). (ಕರಾ). ತಂದೆಯ ಅಜ್ಜ ; ಮುತ್ತಜ್ಜ : ಹೆಗಡೆಯ ಪಿತ್ತಜ್ಜನ ಜನ್ಮಸ್ಥಳ ಗುಳ್ವಾಡಿ (ದೇಪಶಂ. ೦೩೯). 'ಪಿಜ್ಜ' ಪರಾ.
[<ಪಿತ+ಅಜ್ಜ$_1$]

**ಪಿತ್ತಜ್ವರ** (ನಾ). ಪಿತ್ತದಿಂದ ಉಂಟಾಗುವ ಜ್ವರ : ಸಿರಿಕಂಡಂ ದೊಡ್ಡಿಪತ್ರೆ . . . ಕೊತ್ತುಂಬರಿ ಈ ಔಷಧಂಗಳಂ ಸಮಭಾಗಿಯಾಗೆ ಕೊಂಡು ಅಷ್ಟಾವಶೇಷ ಕಷಾಯಮಂ ಮಾಡಿ ಕುಡಿಯೆ ಪಿತ್ತಜ್ವರಂ ಕಿಡುವುದು (ಲೋಕೋಪ. ೯-೦೭ ಟೀಕೆ) ; ಪಿತ್ತಜ್ವರಂಬಡೆದವರ್ಗೆ ಪಾಲೋಗರದ ತುತ್ತು ಕಹಿಯಾದಂತೆ (ಸಮ್ಯಕೌ. ೯-೫೬) ; ವಾತಜ್ವರ, ಪಿತ್ತಜ್ವರ, ಶ್ಲೇಷ್ಮಜ್ವರ . . . ಆಗಂತುಕಜ್ವರವೆಂದು ಎಂಟು ಪ್ರಕಾರವಾಗಿರುವುದು (ಸಕವೈ. ೬೨). [ಸಂ.]

**ಪಿತ್ತದೋಷ** (ನಾ). (ವಾತ, ಪಿತ್ತ, ಶ್ಲೇಷ್ಮಗಳೆಂಬ) ತ್ರಿದೋಷಗಳಲ್ಲಿ ಒಂದು: ಪಿತ್ತದೋಷಂ ಗೋಮೂತ್ರವರ್ಣವಾಗಿರುವುದು (ಸಕವೈ. ೦೬೨). [ಸಂ.]

**ಪಿತ್ತನಾಡಿ** (ನಾ). ಶರೀರದ ನಾಡಿಗಳಲ್ಲಿ ಒಂದು : ಪಿತ್ತಾಧಿಕವಾದ ಕಾಲದಲ್ಲಿ ಮಧ್ಯನಾಡಿಯೂ ಪಿತ್ತನಾಡಿಯೂ ಪ್ರಬಳವಾಗಿ ನಡೆವುದು (ಸಕವೈ. ೦೦) ; ಮಧ್ಯಾಹ್ನದಲ್ಲಿ ಪಿತ್ತನಾಡಿ ಅಧಿಕವಾಗಿ ಆಡುವುದು (ಸಕವೈ. ೦೩). [ಸಂ.]

**ಪಿತ್ತಪಾಪಟ** 'ಪಿತ್ತಪಾಪಡಾ' ನೋ.

**ಪಿತ್ತಪಾಪಡಾ, ಪಿತ್ತಪಾಪಟ** (ನಾ). ಪಿತ್ತವನ್ನು ಶಮನ ಮಾಡುವ ಒಂದು ಬಗೆಯ ವನಸ್ಪತಿ, –ಮೂಲಿಕೆ : ಸೂರ್ತಿ ಚವಾಳಾಮಣದ ಮೇಲೆ ಕಿಮ್ಮತ್ತು ಇರತಕ್ಕ ಜಿನಸಗಳು . . . ೧೨೬. ಪಾದೆಲೋಣ ; ೧೨೭. ಪಿತ್ತಪಾಪಡಾ (ಮುಂಬವ್ಯಾ. ೦೨೬). **ಪಿತ್ತಪಾಪಟ** : ಅಮೃತಬಳ್ಳಿ ಕಿರಾತಕಡ್ಡಿ, ಪಿತ್ತಪಾಪಟ, ನಾಗರಮೋಥ, ಶುಂಠಿ ಇವನ್ನು ಮುಕ್ಕಾಲು ತೊಲೆಯಂತೆ ಜಜ್ಜಿಹಾಕಿ . . . ಜೇನು ಕೂಡಿಸಿ ಮೂರುಸಲಕ್ಕೆ ಉಪ ಯೋಗಿಸುವುದು (ಮಸಿಮ. ೨೩).
[→ಹಿಂ. ಪಿತಪಾಪಡಾ ; ಮರಾ. ಪಿತ್ತಪಾಪಡಾ]

**ಪಿತ್ತಪ್ರಕೃತಿ** (ನಾ). ಹೆಚ್ಚು ಪಿತ್ತದಿಂದ ಕೂಡಿದ ದೇಹಸ್ಥಿತಿ: ಈ ಪ್ರಕೃತಿಯನ್ನು ಉಳ್ಳವರು_ಮುಂಗೋಪಿಗಳಾಗಿರುವುದು, ಹೆಚ್ಚು ಬುದ್ಧಿಯುಳ್ಳವರಾಗಿರುವುದು, ವೃದ್ಧಾಪ್ಯವಿಲ್ಲದೆಯೂ ಕೂದಲು ನರೆತವರಾಗಿರುವುದು ಮುಂತಾದ ಲಕ್ಷಣಗಳಿಂದ ಕೂಡಿರುತ್ತಾರೆ: ಬಸುಮೆಯ್ಯ . . . ಶೈತ್ಯದೆಡೆಗೊಸೆವ ಪಲತೆಱಗಳನೆಸಲುಪಲವೆ ಪಿತ್ತಪ್ರಕೃತಿಯ ಪೆಣ್ಣು (ಜಜಮ. ೫-೨೦); ವಾತಪ್ರಕೃತಿ, ಪಿತ್ತಪ್ರಕೃತಿ, ಶ್ಲೇಷ್ಮಪ್ರಕೃತಿ, ಮಿಶ್ರಪ್ರಕೃತಿ ಎಂದು ಪ್ರಕೃತಿಯು ನಾಲ್ಕುತೆರನಾಗಿರುವುದು . . . ಮುಂಗೋಪಿಯಾಗಿರುವುದು, ಬುದ್ಧಿಯುಳ್ಳವನಾಗಿರುವುದು, ಸ್ವಪ್ನದಲ್ಲಿ ಕಿಚ್ಚು, ಕಿಡಿ ಮೊದಲಾದ ಜ್ಯೋತಿಸ್ಸುಗಳ ಕಾಂಬುದು, ಈ ಲಕ್ಷಣವುಳ್ಳವನನ್ನು ಪಿತ್ತಪ್ರಕೃತಿಯುಳ್ಳವನೆಂದು ತಿಳಿವುದು (ಸಕವ್ಯ. ೦೬); ಮೊದಲೇ ಪಿತ್ತಪ್ರಕೃತಿ. ಸಾಲದ್ದಕ್ಕೆ ಜೇಬಿನಲ್ಲಿ ಕಡಲೇಕಾಯಿ ತುಂಬಿ ಹಸಿದ ಹೊಟ್ಟೆಯಲ್ಲಿ ತಿನ್ನೋದು (ಹಣ್ಣೊಂತ. ೬೪). [ಸಂ.]

**ಪಿತ್ತಪ್ರಕೋಪ** (ನಾ). ಪಿತ್ತವು ಹೆಚ್ಚಾಗುವಿಕೆ,–ಉದ್ರೇಕಗೊಳ್ಳುವಿಕೆ; ಪಿತ್ತೋದ್ರೇಕ: ಉರಗಿಯ ಪಿತ್ತಾಕ್ಷೀಯ ಭಿನ್ನರುಹದ ಕೊಳುಗುಳಿಕೆಯ ರಸದೊಳೊಂದನೆ ಸಕ್ಕರೆವೆರಸು ಕುಡಿಯೆ ಕರುಬ್ಬುರಿಸಿದ ಪಿತ್ತಪ್ರಕೋಪ ವಿರದುಪಶಮಿಸುಗು (ಲೋಕೋಪ. ೯-೯); ಕಾರ, ಹುಳಿ . . . ವಿಷವನ್ನ ಭೋಜನ ಮುಂತಾದವುಗಳಿಂದಲೂ ಶರತ್ಕಾಲದಿಂದಲೂ ಪಿತ್ತಪ್ರಕೋಪವಾಗುವುದು (ಸಕವ್ಯ. ೨೦); ಬೆಳಿಗ್ಗೆ ಎದ್ದ ಬಳಿಕ ಅನ್ನಾಶಯವು ತೆರವಾಗಿರುತ್ತದೆ. ಆಗ ಹಗುರಾದ ಆಹಾರವನ್ನು ಸ್ವಲ್ಪ ತಕ್ಕೊಂಡರೆ ಪಿತ್ತಪ್ರಕೋಪವಾಗುವುದಿಲ್ಲ (ಕಲಾಂಬಿ. ೫-೦೬೯). [ಸಂ.]

**ಪಿತ್ತರಸ** (ನಾ). ಜೀರ್ಣರಸಗಳಲ್ಲಿ ಒಂದು; ಪಿತ್ತಜನಕಾಂಗವು ಉತ್ಪತ್ತಿ ಮಾಡುವ ಒಂದು ಜೀರ್ಣರಸ: ಪಿತ್ತರಸವೆತ್ತಂ ತಳ್ಪೋಲ್ ಪಚ್ಚನಾಗಿ ರಸಾಪೇಕ್ಷಿತ ಮುಷ್ಟಿಮಾತ್ರದೆಳವುಲ್ಲಲ್ಲಿ ವಿಭ್ರಾಜಿಕು- (ಕಚಬಕಾ. ೨-೯೭); ಕಿಬ್ಬೊಟ್ಟೆಯಲ್ಲಿ ಆಹಾರದೊಡನೆ ಪಿತ್ತರಸ, ಮೇದೋಜೀರಕಗಳು ಸೇರಿ ಹೆಚ್ಚಿನ ಯಾವತ್ತು ಪದಾರ್ಥಗಳು, ಶರೀರದ ಸ್ವೀಕಾರಕ್ಕೆ ಬೇಕಾದ ರೀತಿಯಲ್ಲಿ ರೂಪುಗೊಳ್ಳುವುವು (ಪಾಚಕ್ರ. I. ೨೫೦): ಆಹಾರ ಜೀರ್ಣಕ್ಕಾಗಿ ಯಕೃತ್ತು ಸ್ರವಿಸುವ ಕಹಿಯಾದ ಹಳದಿಯ ಹಸಿರು ರಸ: ಪಿತ್ತರಸ (Bile. ಜಂಶಾ). [ಸಂ.]

**ಪಿತ್ತರೋಗ** (ನಾ). ಪಿತ್ತದಿಂದ ಉಂಟಾಗುವ ಕಾಯಿಲೆ: ಕಾಪಾರ್ಸನಚೂರ್ಣ — ಹಿತ್ತಿಲಿಪ್ಪದ ಚೂರ್ಣ ಗ ೪ ತೂ . . . ಸಕ್ಕರೆ ಗ ೧ ತೂ, ಇಷ್ಟನ್ನೂ ಒಟ್ಟು ಚೂರ್ಣ ಮಾಡಿ ಸೇವಿಸಲು ಪಿತ್ತರೋಗಗಳು ನಾಶವಾಗುವುವು (ಸಕವ್ಯ. ಶಾ. ೯೦೭). [ಸಂ.]

**ಪಿತ್ತರೋಗಿ** (ನಾ). ಪಿತ್ತೋದ್ರೇಕದಿಂದ ಉಂಟಾಗುವ ರೋಗಕ್ಕೆ ಒಳಗಾದವನು; ಪಿತ್ತರೋಗದಿಂದ ನರಳುವವನು: ಪಿತ್ತರೋಗಿ, ಜ್ವರರೋಗಿ, ಹಸಿದವನು, ವಾತರೋಗಿ . . . ವೇಹರೋಗಿ ಇವೇ ಮೊದಲಾದ ರೋಗವುಳ್ಳವರು ವಾರ್ಧಕಕ್ಕೆ ಅಯೋಗ್ಯರು (ಸಕವ್ಯ. ೪೦). [ಸಂ. ಪಿತ್ತರೋಗಿನ್]

**ಪಿತ್ತಲ್** 'ಪಿತ್ತಿಲ್' ನೋ.

**ಪಿತ್ತಲ** (ಗು). ೧. ಪಿತ್ತಕ್ಕೆ ಸಂಬಂಧಿಸಿದ. (ನಾ). ೨. ತಾಮ್ರ ಮತ್ತು ಸತುವು ಸೇರಿ ಆಗುವ ಒಂದು ಬಗೆಯ ಹಳದಿಯ ಬಣ್ಣದಿಂದ ಕೂಡಿದ ಮಿಶ್ರಲೋಹ: ಹಿತ್ತಾಳೆ. ೩. ಹಳದಿಯಿಂದ ಕೂಡಿದ ಒಂದು ಮಿಶ್ರವರ್ಣ: ಸುವರ್ಣಲತಾಂತೆಯೊ ಸೊಗಸನಾಂತಿರೆ ಪಿತ್ತಲಂ ಸಲೆ ಮಂಗ್ಗುಳಾ ಪೃಥಕಂ ಮಹಾಸಿಗಮಾಸನ್ನುತವಾದ ಲಕ್ಷಣವಾಂ ಸಲಂ ಮೆಸಿಸಿಂ . . . ಗೂಢ ಸುದಲ್ಲಿದ ಪಿತ್ತಲಂ ಶುಕಪಾಕ್ಷಿಪಂ (ಶಾಲಕ್ಕ. ೨-೦೬೬). ೪. (ಆಲಂ) ಠಕ್ಕಿನ ನಡತೆ: ವಂಚನೆ: 'ಪಿತ್ತಲಾಟ' ನೋ. [ಸಂ.]

**ಪಿತ್ತಲಾಟ, ಪಿತಲಾಟ** (ನಾ). (ಆಲಂ) ಠಕ್ಕು; ಮೋಸ; ವಂಚನೆ: ಇದೆಲ್ಲಾ ಆ ಸರದ ಹೋಬಳಿ ಶಾನುಬೋಗರವರ ಪಿತ್ತಲಾಟದಿಂದ ನಡೆದಿದೆ ಎಂದು ವಿಶೇಷವಾಗಿ ಮನಸ್ಸಿಗೆ ತಟ್ಟಿತು (ಮುಸಗ. ೬೩). **ಪಿತಲಾಟ**: ಈಚೀಚೆಗೆ ಅವನ ಪಿತಲಾಟ ಹೆಚ್ಚಾಗುತ್ತಿದೆ (ಕೂ).
[ಪಿತ್ತಲ+ಆಟ. / ತಮಿ. ಪಿತ್ತಲಾಟ್ಟಮ್, 'ಪಿತ್ತಲಾಟಕಮ್'; ಮಲ. ಪಿತ್ತಲಾಟ್ಟಮ್; ತೆಲು. ಪಿತಲಾಟ, ಪಿತಲಾಟಕ]

**ಪಿತ್ತವಿಕಾರ** (ನಾ). ಪಿತ್ತವು ಹೆಚ್ಚಾಗಿ ಉಂಟಾಗುವ ತಲೆ ತಿರುಗುವಿಕೆ ಮುಂತಾದುವು: ದ್ರಾಕ್ಷಿಹಣ್ಣು, ಇಪ್ಪೆಹೂವು . . . ಪ್ರತಿದಿನ ಉದಯ ಕಾಲದಲ್ಲಿ ಕಿಟ್ಟ ಸಹ ನಾಲ್ಕು ವರಹ ತೂಕದ ಸೇವಿಸಲು ಪಿತ್ತಗುಲ್ಮ ಹತ. ಸಕಲ ಪಿತ್ತವಿಕಾರಗಳು ಕೆಡುವವು (ಸ್ವರ್ಣಕಾ. I. ೩೦೩); ಒಂದಿಷ್ಟು ಹಿಚ್ಚಿಗೆ ಸುಣ್ಣವನ್ನು ಗುಡಾಕಿಗೆ ಸವು ಬಾಯಿಗೆ ಹಾಕಿಕೊಂಡ. ಗುಡಾಕಿನ ಜೋರಿಗೆ ತಲೆ ತಿರುಗತೊಡಗಿತು. ಪಿತ್ತವಿಕಾರದಿಂದ ಹೆಗಡೆ ಕಂಗಾಲಾದ (ರೇಖಹಂ. ೦೬೬). [ಸಂ.]

**ಪಿತ್ತವೇರಿಸು** (ಕ್ರಿ). ಪಿತ್ತವೇರುವಂತೆ ಮಾಡು; ಪಿತ್ತವನ್ನು ಕೆರಳಿಸು: ಶಿವಮೊಗ್ಗದಲ್ಲಿ ಪಿತ್ತವೇರಿಸುವ ತುಂಗಾಪಾನವನ್ನು ನಿತ್ಯವೂ ಮಾಡಿ (ರಂಗಳ. ೧). [ಪಿತ್ತ+ಏರಿಸು (<ಏಱಿಸು)]

**ಪಿತ್ತವೇಱು** (ಕ್ರಿ). ಪಿತ್ತವು ಹೆಚ್ಚಾಗು; ಹುಚ್ಚು ಹಿಡಿ: ಸತ್ತ ಬಳಿಕಾ ಜೀವವೆತ್ತ ಹೋಹುದನಱಿಯ ಅತ್ತ ಪರಲೋಕವೆಂಬುವರ ತಲೆಯಲ್ಲಿ ಪಿತ್ತವೇಱಿಹುದು (ಸರ್ವಜ್ಞ. ೩೭೨). [ಪಿತ್ತ+ಏಱು (<ಏಱ್$_1$)]

**ಪಿತ್ತಶಮನ** (ನಾ). ಪಿತ್ತವಿಕಾರವು ನಾಶವಾಗುವಿಕೆ,–ಇಲ್ಲವಾಗುವಿಕೆ: ಕಹಿ ಸಿಹಿ ತೊಗರು . . . ಪರಿಮಳಪುಷ್ಪಗಂಧಾಲ್ಯಾಲಂಕಾರ ಮುಂತಾದವು ಗಳೆಲ್ಲವೂ ಪಿತ್ತಶಮನವಸ್ತುಗಳು (ಸಕವ್ಯ. ೨೦). [ಸಂ.]

**ಪಿತ್ತಸನ್ನಿ** (ನಾ). ಪಿತ್ತದಿಂದ ಉಂಟಾಗುವ ಸನ್ನಿ,–ಬುದ್ಧಿಭ್ರಮಣೆ: ಅಂತರ್ದಾಹವು, ಭ್ರಮೆಯು . . . ಇವು ಮುಂತಾದ ಚಿಹ್ನೆಗಳೊಡನೆ ಕೂಡಿಕೊಂಡಿರುವುದೆ ಪಿತ್ತಸನ್ನಿಯ ಲಕ್ಷಣವೆಂದರಿವುದು (ಸಕವ್ಯ. ೦೬೪) [ಪಿತ್ತ+ಸನ್ನಿ$_2$]

**ಪಿತ್ತಹರ** (ನಾ). ಪಿತ್ತವನ್ನು ನಾಶಪಡಿಸುವಂತಹುದು; ಪಿತ್ತಶಮನವನ್ನು ಮಾಡುವ ವಸ್ತು: ಶೀತವೀರ್ಯದ ಗುಣ–ಮನಸ್ಸಿಗೆ ಸಂತೋಷಕರವಾಗಿಯೂ ಪಿತ್ತಹರವಾಗಿಯೂ . . . ಇರುವುವು (ಸಕವ್ಯ. ೩೪); ಪಿತ್ತಹರ, ಪಿತ್ತನಾಶಕ (Antibilious. ಇಂಕಶ). [ಸಂ.]

**ಪಿತ್ತಳೆ, ಪಿತ್ತಾಳೆ, ಹಿತ್ತಳೆ, ಹಿತ್ತಾಳೆ** (ನಾ). ಎರಡು ಭಾಗ ತಾಮ್ರ ಮತ್ತು ಒಂದು ಭಾಗ ಸತುವು ಸೇರಿ ಆಗುವ, ಒಂದು ಬಗೆಯ ಹಳದಿಬಣ್ಣದಿಂದ ಕೂಡಿದ ಮಿಶ್ರಲೋಹ; ಪಿತ್ತಲ: ಎಂತುಂ ನೇರಾಣಿಯ ಪೊನ್ನಂತಿರೆ ಲೇಸೆನಿಪುದೆಂತು ಪರಿಕಿಪೊಡದೊನಿಪ್ಪಂತದು ಧರ್ಮಂ ಪಿತ್ತಳೆಯಂತಿಸವುದು ಧರ್ಮವಾಗಿ ಸಲಲಱಿವುದೇ (ಸಮಚ. ೦೫-೨೦); ಪಿತ್ತಳೆ ಪೊನ್ನಾಗಿಯುಂ ಪೊನ್ನಲ್ಲದಂತೆ (ಧರ್ಮಾಮೃ. ೦೦-೦೬೬); ತನ್ನ ಶವರಾಯನೆಯ ಚರಿತ್ರ ಪಿತ್ತಳೆ ಪೊನ್ನೆಂದು ಬಗೆದು ಪೂಜಿಸುವ ಕನ್ನೆಯರೊಳು ಕಡುಗೂರ್ಮೆಯನೊಡರಿಸಿ ಪೊನ್ನುರನ್ನದೊಳು ಪೂಜಿಪುದು (ಶಂಶ. ೫ ೨೨). **ಪಿತ್ತಾಳೆ**: 'ಹೊಂಬಿತ್ತಾಳೆ' ನೋ. **ಹಿತ್ತಳೆ**: "ಅರಕೂಟ, ರೀತಿ–ಈ ೨ ಹಿ[ಶಾಕಾಂ. ಪಿ]ತ್ತಳೆ" (ಹಶಾಮು. ೨೬-೦೬); ಹಿತ್ತಳೆಗೆ ಬೆಳ್ಳಿಯುತ್ತಮುತ್ತಮುದದಱಿಂ ಸುವರ್ಣವೆಂಬುವೊಲ್ (ಸಮಚ. ೦೫-೦೬). **ಹಿತ್ತಾಳೆ**: "ಹಿತ್ತಾಳೆಯೊಳು . . . ವಿಮಾನದೊಳು ಪುಷ್ಪಕವೆನಿಸ್ಕು" (ಮಂಗರಾ. ೦೫೩-೬೩); ಉತ್ತಮಸುವರ್ಣವದು ಹಿತ್ತಾಳೆಯಹಗಹುದು ಹಿತ್ತಾಳೆಯೆನಿಸಿ ಕನಕವುಂ ತಾನದೆಹಗಹುದು (ಜೀವ್ನೂಶೋ. ೪೪-೦೦); ಹಿತ್ತಾಳೆಯಮುಲಿಂಗನಂ ತಾಗಿಯೆಗವರಾವಶ್ಯವಾದೊಳಧಿದ್ದ ವುಳ್ಳುದದು ದೈವವಲ್ಲ (ಪಾಲ್ಕುಶ. ೪-೩-೪೦); ಐದನೆ ಕೋಟೆ ಹಿತ್ತಾಳೆಯದರಲ್ಲಿ ಮೋದದಿ

ಶರದನು ನೆಲಸಿ (ಶಾಗಂಶ. ೩-೨೩) ; ಎರಡನೆಯದರಲ್ಲಿ . . . ಪಿತ್ತಾಳೆ ಮಾತ್ರ ಮಿಶ್ರಲೋಹವಾದ್ದರಿಂದ ಆ ವರ್ಗಕ್ಕೆ ಅದು ಸೇರುತ್ತಿಲ್ಲ (ಶಿಕ್ಷಕ. ೩೩೬).

**ಪಿತ್ತಾಳೆಕಿವಿಯವನು** (ಆಲಂ) = ಚಾಡಿಮಾತುಗಳನ್ನು ಕೇಳುವವನು: ಪಿತ್ತಾಳೆಕಿವಿಯವನೆಂಬ ನಾಮಾಂಕಿತವೂ . . . ಹೆಡ್ಡನಿಗೆ ಸಜ್ಜನರು ಕೊಟ್ಟ ಹೆಸರು (ಗೋಪಶಾಸ್ತ್ರ. ೩೩). **ಪಿತ್ತಾಳೆಯ ಕಿವಿ** = (ಆಲಂ) ಚಾಡಿಯ ಮಾತುಗಳಿಗೆ ಬಗ್ಗುವ ಕಿವಿ: ಚಾಡಿಯ ಮಾತನ್ನು ಕೇಳುವ ಸ್ವಭಾವ: ನನ್ನದು ಪೂರಾ "ಪಿತ್ತಾಳೆಯ ಕಿವಿ"ಯಾಯಿತು (ಕೆಪೋಕ. ೬೩). [<ಸಂ. ಪಿತ್ತಲ]

**ಪಿತ್ತಾತಿಸಾರ** (ನಾ). ಪಿತ್ತದಿಂದ ಉಂಟಾಗುವ ಅತಿಸಾರ ; ಪಿತ್ತಗ್ರಹಣಿ: ಮತ್ತಂ ರಕ್ತ ಕೂಡಿಕೊಂಡು ಕಪ್ಪುವರ್ಣ ಹಳದಿವರ್ಣ ವಾಗಿಯೂ . . . ಬೆವರು ಬಾಯಾರಿಕೆಯೂ ಉಂಟಾಗಿ ತೋರ್ಪುದೆ ಪಿತ್ತಾತಿಸಾರವೆನಿಸಿಕೊಳ್ಳುವುದು (ಸಕವೈ. ೩೦೬). [ಸಂ.]

**ಪಿತ್ತಾಧಿಕ** (ನಾ). ೧. ಪಿತ್ತಾಧಿಕ್ಯದಿಂದ ಕೂಡಿರುದು ; ಪಿತ್ತವಿಕಾರ ವುಳ್ಳುದು: ಪಿತ್ತಾಧಿಕವಾದ ನಾಡಿಯು ಕಪ್ಪೆಯ ಮರ್ಯಾದೆಯಲ್ಲೂ ನವಿಲಂತೆಯೂ ತೀವ್ರವಾಗಿ ಉಷ್ಣವಾಗಿ ನಡೆವುದು (ಸಕವೈ. ೦೩). ೨. ಪಿತ್ತವು ತಲೆಗೇರಿದವನು ; ಹುಚ್ಚು ಹಿಡಿದವನು ; ಹುಚ್ಚ: ಪಿತ್ತಾಧಿಕನು ತಿರುಗುತ ಲೋಕ ತಿರುಗುವುದೆಂಬ ತೆಱನಂತೆ (ಕುಮಾ೧೮೧. ೩ ೩೩). [ಸಂ.]

**ಪಿತ್ತಾಧಿಕ್ಯ** (ನಾ). ಪಿತ್ತವು ಹೆಚ್ಚಾಗಿ ಇರುವಿಕೆ ; ಪಿತ್ತದ ಹೆಚ್ಚಳ: ಬಲದ ಕೈಯ ಹೆಬ್ಬೆರಳಿನ ಮೂಲದಲ್ಲಿರ್ದ ನಾಡಿಯನ್ನು ಪರೀಕ್ಷಿಸಲಾಗಿ (ಆ ನಾಡಿಯು) . . . ಪಿತ್ತಾಧಿಕ್ಯವಾದೊಡೆ ಅತಿವೇಗದಿಂ ಚಂಚಲವಾಗಿ ನಡೆವುದು (ಸಕವೈ. ೦೦) ; ಪಿತ್ತಾಧಿಕ್ಯದಿಂದ ದೇಹ ಮಧ್ಯಮ, ಶ್ಲೇಷ್ಮಾಧಿಕ್ಯದಿಂದ ದೇಹವು ಸ್ಥೂಲವಾಗಿರುವುದು (ಸಕವೈ. ೦೮). [ಸಂ.]

**ಪಿತ್ತಾವರಣ** (ನಾ). ಪಿತ್ತದಿಂದ ಉಂಟಾಗುವ ಒಂದು ಬಗೆಯ ರೋಗ: ದ್ರಾಕ್ಷಿ ಯಷ್ಟಿಮಧುಕ . . . ಸಮರಸವ ಮಾಡಿ, ಉದಯಕಾಲದಲ್ಲಿ ಆ ಲೇಹ್ಯವನ್ನು ಸೇವಿಸೆ ಪಿತ್ತಾವರಣ ಸಕಲವಾದಾವರಣರೋಗ ರಕ್ತಪಿತ್ತ ಸಹ ಗುಣಮಕ್ಕುಂ (ಸಕವೈ. ೦೯೬). [ಸಂ.]

**ಪಿತ್ತಾವಿಳ** (ನಾ). ಪಿತ್ತದಿಂದ ಕೂಡಿದವನು ; ಪಿತ್ತರೋಗಿ: ತೊಳಗುವ ನಭದೊಳ್ ಪಿತ್ತಾವಿಳದೃಷ್ಟಿಗವಿದ್ಯಮಾನವೇಚಕರುಚಿ ಯೊಂದೆಳಸಿ ಪಿಂಗೆ ತೋರ್ಪ ತೆಱದಿಂ ಖಳಂಗೆ ಪೊಲಸಲ್ತೆ ಕೃತಿಯೊಳಿಲ್ಲದ ದೋಷಂ (ಕುಸ್ಕಚಿ. ೦-೯೬). [ಸಂ. ಪಿತಾವಿಲ]

**ಪಿತ್ತಾಶಯ** (ನಾ). ಪಿತ್ತಜನಕಾಂಗ ; ಪಿತ್ತಕೋಶ: ಬಿ ಜೀವಸತ್ವ . . . ಇದು ಹಾಲು, ಹಣ್ಣು, ಪಿತ್ತಾಶಯ (Liver), ಮೊಟ್ಟೆಗಳು, ಪಾಲಿಶ್ ಮಾಡದೆ ಇದ್ದ ಅಕ್ಕಿ ಮತ್ತು ಇತರ ಧಾನ್ಯಗಳಲ್ಲಿ ಸಿಕ್ಕುತ್ತದೆ (ಪಿಜಾ. ೨೬). [ಸಂ.]

**ಪಿತ್ತಾಳೆ** 'ಪಿತ್ತಳೆ' ನೋ.

**ಪಿತ್ತಿಲ್** 'ಪಿಂತಿಲ್' ನೋ.

**ಪಿತ್ತಿಲ್ತೋಂಟ** (ನಾ). ಪಿತ್ತಲಿನ ತೋಟ, -ಉದ್ಯಾನ: ಬಸದಿಯ ಪೂಜಿಗಾ ಪಿತ್ತಿಲ್ತೋಟ್ಟಮುಂ ತೆಮ್ಮಾಳದೊಳು . . . ಕೊಟ್ಟ ಮಣ್ಣು (ಎಕ. X. ಕೋಲಾರ. ೯೦-೯೦; 903).

[ಪಿತ್ತಿಲ್ (<ಪಿಂತಿಲ್) + ತೋಂಟ]

**ಪಿತ್ತು,** **ಪಿತ್ಥು** (ನಾ). ೧. = ಪಿತ್ತ ೧. ೨. = ಪಿತ್ತ ೩: ಪಿತ್ತು ನೆತ್ತಿಗೇನಾದರೂ ಹತ್ತಿದೆಯೋ (ಮುಖವೂ. ೨) ; ಒಂದುಗಳಿ ಕೂಡಿ ಒಂಬತ್ತರವರೆಗೆ ಏರಿದುವು ; ಪಿತ್ತಿನಂತೆ. ಅವಕ್ಕೊಂದು ಸೊಕ್ಕೆ ಬಂದು ಸೇರಿ ಹತ್ತಾಯಿತು. ಕಫದ ಕೆಮ್ಮಿನಂತೆ (ಕಕಿದಾ I. ೪೩೯). ಪಿತ್ಥು: ೧. ಪಿತ್ತ ಹೆಚ್ಚಾದಾಗ ಹೊಟ್ಟೆ ತೊಳಸುತ್ತದೆ (ಲಂಕ). ೨. ಸುಳ್ಳೇ ನನ್ನ ಪಿತ್ತ ಕೆಣಕಬೇಡಾ . . . ಎಂದವರೇ ಟೀಕತಲ್ಲಿಂದ ಎದ್ದು ಹೊರಗೆ ಹೋಗುವ ಉಡುಪನ್ನು ಧರಿಸ ಹತ್ತಿದರು (ಮೂರುದಾ. ೯೦). ೩. = ಪಿತ್ತ ೫: ಕುಲಕೋಟಿಯೆಂಜಲು ತಿಂಬವ ಪಿತ್ಥನೊ (ದಕ್ಕರಾ. ೬-೨೦೬). ೪. ಕೊಬ್ಬು ; ಸೊಕ್ಕು: ಗರ್ವ: ಆಯಿತು. ಬರುವುದಾದರೆ ಬಾ. ನಿನ್ನ ಪಿತ್ಥ ಇಳಿಸದೆ ಬಿಡಲಾರೆ (ಕಕ್ರರಿಜ. ೬೪) ; ಈವತ್ತು ಇವರು ಸರಿಯಾಗಿ ಪಿತ್ಥ ಇಳಿಸಿದ್ದಾರೆ (ಮುಖಿದಾ. ೬೪). [<ಸಂ. ಪಿತ್ತ]

**ಪಿತ್ತೋದರ** (ನಾ). ಪಿತ್ತದಿಂದ ಉಂಟಾಗುವ ಒಂದು ಬಗೆಯ ಹೊಟ್ಟೆಯ ರೋಗ, – ಉದರಬೇನೆ: ತಾರೇಕಾಯಿ, ಹುಣಿಸೇಬೀಜದ ಸಿಪ್ಪೆ, ಇವುಗಳ ಸಮಭಾಗ ಚೂರ್ಣ ಮಾಡಿ ಸೇವಿಸಲು ಸರ್ವಾಂಗದಾಹ, ಕೈಕಾಲು ಮತ್ತು ಕಣ್ಣುಗಳ ಉರಿ, ಪಿತ್ತೋದರ . . . ಮೊದಲಾದ ರೋಗಗಳು ಗುಣವಾಗಿ ಶುಕ್ಲವೃದ್ಧಿಯುಂಟಾಗುವುದು (ಸಕವೈ. ಪಂ. ೯೦೬). [ಸಂ.]

**ಪಿತ್ತೋದ್ರೇಕ** (ನಾ). ೧. ಪಿತ್ತವು ಹೆಚ್ಚಾಗುವಿಕೆ ; ಪಿತ್ತಪ್ರಕೋಪ: ಪಿತ್ತೋದ್ರೇಕವುಳ್ಳವನಾಗಿ ತೀವ್ರವಾದ ತೃಷ್ಣೆಯೂ ಹಸಿವೂ ಉಂಟಾದವನಾಗಿ . . . ಕೆಂಪಾಗುವ ಕಣ್ಣುಗಳುಳ್ಳವನಾಗಿ ಇರುವವನೇ ಪಿತ್ತಪ್ರಕೃತಿಯುಳ್ಳವನೆಂದರಿವುದು (ಸಕವೈ. ೦೩). ೨. ಪಿತ್ತವು ತಲೆಗೇರುವಿಕೆ ; ಮತಿವಿಕಾರ ; ಬುದ್ಧಿಭ್ರಮಣೆ: ಪಿತ್ತೋದ್ರೇಕಂ ಪುಗುಱುಂ ಚಿತ್ತಭ್ರಮೆಯುಂಬಿವಕ್ಕುಂ (ಜಮರ. ೦೩-೩) ; ಬರೆ ಕರೆ ಬೇಗ್ಗಣಕೀರ್ತಿಯನಿಂದಾ ತರುಣ ಬಂದೊಡನೆ ಕೈಮುಗಿಯೆ ಹಂದಾಡಿ ಬಳಲಿದೆ ಮಗನೆ ಪಿತ್ತೋದ್ರೇಕ ತಿರುಗಿಸಿದುದೆ ನಿನ್ನನೆಂದ (ಶರತ. ೩೦-೦೦೦). [ಸಂ.]

**ಪಿತ್ಥ** 'ಪಿತ್ತು' ನೋ.

**ಪಿತ್ರಾರ್ಜಿತ** (ಗು). ೧. ತಂದೆಯು ಗಳಿಸಿದ, – ಸಂಪಾದಿಸಿದ. ೨. ವಂಶದ ಪೂರ್ವಿಕರು ಗಳಿಸಿದ: ಈ ದಿನ ನಾವು ನಮ್ಮ ಪಿತ್ರಾರ್ಜಿತ ಭೂಮಿಗಾಗಿಯೂ ನಮ್ಮ ನಮ್ಮ ಮಡದಿ ಮಕ್ಕಳ ಸಂರಕ್ಷಣಾರ್ಥವಾಗಿಯೂ ಪ್ರಾಣಗಳನ್ನು ಮುಡುಪಿಟ್ಟು ಯುದ್ಧಕ್ಕೆ ಹೋಗುತ್ತಿರುವೆವು (ಚಾಂಕಲಾ. ೦೬೪); ಒಂದಿಷ್ಟು ಪಿತ್ರಾರ್ಜಿತ ಹೊಲಗದ್ದೆಗಳೂ ಬಂದಿದ್ದವು (ಕಂಡಸು. ೨೩). (ನಾ). ೩. ತಂದೆಯು ಸಂಪಾದಿಸಿದುದು ; ತಂದೆಯ ಆಸ್ತಿ. ೪. ವಂಶದ ಪೂರ್ವಿಕರು ಅರ್ಜಿಸಿದ ಸಂಪತ್ತು: ಪಿತ್ರಾರ್ಜಿತವನ್ನು ಅನುಭವಿಸುತ್ತಿರುವ ಅವನು ಆಸ್ತಿಸಂಪಾದನೆಗೆ ಬವಣೆಪಡಬೇಕಾದುದೇನೂ ಇಲ್ಲ (ಲಂಕ). [ಸಂ.]

**ಪಿತ್ರುಧನ** (ನಾ). ಪಿತ್ರಾರ್ಜಿತವಾಗಿ ಬಂದ ಹಣ, - ಸ್ವತ್ತು: ಸೋಮೇಶ್ವರಭಟ್ಟರು ತಮ್ಮ ಪಿತ್ರುಧನಂ ಶುಕ್ಲದ್ರವ್ಯಮಪ್ಪ ದಸವಂಧದ ಸರ್ವಬಾಧಾಪರಿಹಾರಂ ಮಾನ್ಯದ ಏಳುಸ್ಥಳದ ಭೂಮಿಯುಂ . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಕಇಅ. ೬೮–1088).

[<ಸಂ. ಪಿತೃಧನ]

**ಪಿತ್ರ್ಯ** (ಗು). ೧. ಪಿತೃಸಂಬಂಧವಾದ: ಪಿತ್ರಾರ್ಜಿತವಾಗಿ ಬಂದ. (ನಾ). ೨. ಪಿತೃಗಳಿಗೆ ಮಾಡಬೇಕಾದುದು: ಶ್ರಾದ್ಧ ; ತಿಥಿ. [ಸಂ.]

**ಪಿದರ** (ನಾ). "ಕೀರುಗಳನ್ನು ಬಿಗಿದು ಹಿಡಿಯುವ ಅಡ್ಡಮರ ; ಬಿಗಿಮರ: ದೂಲ; ಅಡ್ಡಕೋಲು" (ಅನಂನಾ).

[←ತುಳು. ಪಿತ್ತರ, ಪಿದರ, ಪಿದಾರ]

**ಪಿದೆಗ** (ನಾ). ಒಂದು ಬಗೆಯ ಪಕ್ಷಿ: ಕುಳಿಗೆಯ್ಯ ಕೊಳರ್ವಕ್ಕಿ ಕಾಪ ಪಿದೆಗಂ ಬಿಸಿಲ್ವಕ್ಕಿಯುವು ಮೊದಲಾಗಿ ಪಾಪನಂ ವನದೊಳುಂ ಪಾಪನಕ್ಕವ ನೈದಿ ಜೀವಿಪುವು ಭಯವನುಳಿದು (ಕೃಕುಚಿ. ೩-೦೪). [?]

**ಪಿಧಾನ** (ನಾ). ೧. ಮುಚ್ಚುವಿಕೆ; ಹೊದಿಸುವಿಕೆ. ೨. ಮುಚ್ಚುವಂತಹ ಸಾಧನ; ಮುಚ್ಚಳ: "ಪಿಧಾನಂ, ಉದಂಚನಂ — ಈ ೨ ಎಸಮುರ್ಚ್ಚು" (ಶಬ್ದಮ. ೩೩-೧೬೦); ಈ ಭುಕ್ತ್ಯನ್ನಕ್ಕೆ ಅಮೃತವು ಪಿಧಾನವಾಗಲಿ (ಶುಚಿತಾ. ೩೦೨). [ಸಂ.]

**ಪಿನ್**, ಪಿಂ, ಹಿಂ, ಹಿನ್ (ಗು). ೧. ಹಿಂಬದಿಯ; ಹಿಂಭಾಗದ: 'ಪಿನ್ನೆಲೆ' ಪರಾ. (ನಾ). ೨. ಹಿಂಬದಿ; ಹಿಂಭಾಗ. ೩. ಮೊದಲು; ಮುಂಚೆ: ಪಿನ್ ಮಾಲುಮೋಗೀಶ್ವರನುಳ್ಳಿ ಕದಿ ತಣಿದ ನಾಗನನ್ನ (ಶಾಸನ. IX-1, ೩೧೨-೯; ೩ನೆಯ ೩೩). ೪. ಮೊದಲಿನದು; ಮುಂಚಿನದು; ಹಿಂದಿನದು: 'ಪಿನ್ನೀಕ್ಷಿಸು', 'ಪಿನ್ನೋ' ಪರಾ. **ಪಿಂ**: ೧. 'ಪಿಂಗಡೆ', 'ಪಿಂಗಾಲ್' ಪರಾ. ೨. ನುಡಿಸಲ್ ಕೇಳಿ ಶುಕಾಳಿಯೊಳ್ ನುಡಿವ ಸೋಂಕಲ್ ಪಿಂಗೆ ಸಾರ್ದಿರ್ದ ಕೌಳುಡೆಯಂ ಸೋಂಕುವ ... ಓವಳದೊಂದು ಭಾವರಸ ಗರ್ಭಕ್ರೀಡೆಯುಂ ವ್ರೀಡೆಯುಂ ಪಡೆವನ್ನಂ ಮುದಮಂ ಮುಕುಂದನತಿರಾಗೋದ್ರೇಕಮಂ ತಾಳ್ದಿದಂ (ಜಗನ್ನಾ. ೧೦-೧೩೬). **ಹಿಂ**: ೧. 'ಹಿಂಗಚ್ಚೆ', 'ಹಿಂಗಟ್ಟು' ಪರಾ. ೩. ಹಿಂ ಭವವನೊಳಿಸಿದರ ಮುಂಜಗದೊಳನಿಂದಭವನ ಕೃಪೆ ಪಡೆವವರ ಮುಂ ಭವನ ಮೆಚ್ಚಿ ಪದಪಾದಾಬ್ಜಕೆ ವಂದಿಪೆನಾನತಿಮುದದಿಂದೆ (ಶ್ರೀಕುಹ. ೦-೦೩). **ಹಿನ್**: ೧. 'ಹಿನ್ನೆಲೆ' ಪರಾ.

**ಪಿನ್ನ** = ಮೊದಲಿನ; ಮುಂಚಿನ; ಹಿಂದಿನ: ನೀರಿಲ್ಲದ ಕೆಱೆಯ ನಡುವಂ ಕಂಡುದಱಿಂ ತೀರ್ಥಂಕರಚಕ್ರವರ್ತಿಗಳ ಪುಟ್ಟಿದ ಮಧ್ಯ ದೇಶದೊಳ್ ಪಿನ್ನ[ಪಾಠಾಂ. ಧರ್ಮದ]ನೆಗಟ್ಟಿಯಾಗದು (ಶಬ್ದಾ.ರಾ. ೬೬-೦೯).

[ದೇ. ॥ ತಮಿ. ಮಲ. ಕೋತ. ತೊದ. ಪಿನ್]

**ಪಿನದ್ಧ** (ಗು). ೧. ಕಟ್ಟಿರುವ; ಬಂಧಿಸಿರುವ: ಪಿನದ್ಧ ವಿವಿಧ ಮಣಿದರ್ಪಣಾಧ್ವಜಂಗಳುಂ . . . ಆಮೋದಕುಸುಮದಾಮನಿಕಾಮಕಮನೀಯಂಗಳುಮಪ್ಪ ತೋರಣಂಗಳನೆ ನುಗುಳುತ್ತುಂ (ಆದಿಪು. ೯-೨೬ ವ); ಪರಿಚಿತಭೂತಿರೇಖಮುಖದರ್ಶಿತ ಸರ್ಪಪವುಂಜಮಂಜನೋಪರಚಿತಬದ್ಧ ಪೇಟಕಸಮುದ್ಭಟವಿದ್ಧಪಿನದ್ಧಭಿತ್ತಿ . . . ದಿಂ ಪುಸಕ್ಕೊಲಪನಿತ್ಯದೊ ಬಾಗಿಲರಿಷ್ಟಸದ್ಮದಾ (ಕಂದ್ರಪ್ರ. ೩-೯೭). ೨. ಕೂಡಿದ; ಸೇರಿದ: ಆಗಳಾತನುಂ . . . ಅಶೋಕ ಪುನ್ನಾಗ ಬಕುಲ ಚಂಪಕ ಸಹಕಾರ ಲವಂಗ ಕ್ರಮುಕ ನಾರಿಕೇರ ನಾಗವಲ್ಲೀ ಪಿನದ್ಧದ್ರುಮ ಷಂಡ ಮಂಡಿತಮನಿಂದ್ರವನದೊಳೋರಂತವಪ್ಪುದಂ ನೋಡುತುಂ (ಶಬ್ದಾ.ರಾ. ೩೯-೨೩). ೩. ಹದಿಸಿದ; ಮೆಟ್ಟಿದ; ತೆತ್ತಿಸಿದ: ಸುರತರುನಂದನಂಗಳರ ರತ್ನಪಿನದ್ಧ ವಿಮಾನಕುಟ್ಟಿಮಾಂತರಸುರಕಾಂಚಯುಗರ . . . ಕದುಕೆಯ್ದು ಕೃತಾಂತನಿಂತು ನಿರ್ನಿರಮೆಟೆದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪರೇ (ಆದಿಪು. ೩-೯); ಸುರುಚಿರಚಂದ್ರಕಾಂತದ ಪಿನದ್ಧತಳಂ ವಿಕಸದ್ವಿನೀಳನೀರರುಹವಳಾಮಭಾಸಿ ತಟರೂಢತಮಾಳಲತಾ ಮನೋಹರಂ (ಹರಿಶ್ಚ. ೨-೦೩). ೪. ಆವರಣವನ್ನು ಹೊಂದಿದ; ಮುಚ್ಚಿದ. ೫. ಚುಚ್ಚಿದ; ನಾಟಿದ. ೬. ಅಡಗಿದ; ಗುಪ್ತವಾದ. ೭. ಬಟ್ಟೆ, ಕವಚ ಮುಂತಾದುವನ್ನು ಧರಿಸಿದ. (ನಾ). ೮. ಕಟ್ಟುವಿಕೆಗೆ ಒಳಗಾದುದು: "ಬದ್ಧಂ, ಪಿನದ್ಧಂ, ಆಮುಕ್ತಂ, ಅಪಿನದ್ಧಂ—ಈ ೪ ಬಟ್ಟೆಪಟ್ಟದು" (ಶಬ್ದಮ. ೦೨೩-೬೨). ೯. ಕಟ್ಟು; ಬಂಧನ: "ಅಪಿನದ್ಧಮೆನೆ ಪಿನದ್ಧಂ ಬದ್ಧಮೆನೆ ಕಟ್ಟು" (ಶಬ್ದಾಂಗ. ೦೩೯-೩೩). ೧೦. ಬಟ್ಟೆ, ಕವಚ ಮುಂತಾದುವನ್ನು ಧರಿಸಿದವನು: "ಆಮುಕ್ತಃ, ಪತಿಮುಕ್ತಃ ಪಿನದ್ಧಃ, ಅಪಿನದ್ಧಃ—೪ ಬಟ್ಟೆಗಳನ್ನು ತೊಟ್ಟುಟ್ಟು ಕಟ್ಟಿಕೊಂಡವನ ಹೆಸರುಗಳು" (ಸಿದ್ಧಾಂತಿ. ೨೩೬). 'ಅಪಿನದ್ಧ' ಪರಾ. [ಸಂ.]

**ಪಿನಪಾಲ** 'ಪಿನಿವಾಲ' ನೋ.

**ಪಿನಾಕ** (ನಾ). ೧. ಶಿವನ ಒಂದು ಆಯುಧ; ತ್ರಿಶೂಲ. ೨. ಶಿವನ ಧನುಸ್ಸು, —ಬಿಲ್ಲು: "ಪಿನಾಕಂ, ಅಜಗವಂ (ಸ್ತ್ರೀತ್) — ಈ ೨ ಮಹಾದೇವರ ಬಿಲ್(ಲ್ಲು)" (ಶಬ್ದಮ. ೯-೦೯): ಮರಕು ತ್ರಿಶೂಲ ಡಮರುಗ ತರವಾರಿ ಪಿನಾಕಬಾಣ ಖಟ್ವಾಂಗ ಕಪಾಲ ರಥಾಂಗ ವಜ್ರ ಧರನಪ್ಪುರುತರ ದಶಬಾಹು ಲಸಿತ ಜಯ ಶಿವಲಿಂಗಾ (ಶ್ರೀಶೈ. ೩೩-೦೬೬); ಅಭವಂ ಪಿನಾಕಮಂ ನೆಗಪಿ ಜೇವೊಡೆದೊಂದು ಬಾಣಮಂ ಪೂಡಿ ತೆಗೆದೆಸಲ್ (ಕಬಿಶ್ರ. ೫೦-೪೦). [ಸಂ.]

**ಪಿನಾಕಧರ** (ನಾ). ಪಿನಾಕವನ್ನು ಧರಿಸಿರುವವನು: ಶಿವ: ತಾನುದ್ರೇಕಿಸಿಯೆ ಸಮರದಲಿ ನಿಲಲು ಪಿನಾಕಧರನಿಗೆ ನೂಕದೆಂದನು ಸತಿಯುರಿದಿರಿನಲಿ (ಕುಮಾ.ರಾ. ೫-೦೩); ದರ್ಪಿತರೇಕೋರಮುಖರ್ವಿಪಿನಾಕಧರ . . . ಸುಸರ್ವ ಜಯಸಿದ್ಧನಂಜ (ಗುರುಚಿತಾ. ೦೯-೦). [ಸಂ.]

**ಪಿನಾಕಪಾಣಿ** (ನಾ). = ಪಿನಾಕಧರ: ಅಜಯಮಂ ಬಿಲ್ಲ ಬಿನ್ನಣಕೆ ಗಾಂಡಿವಿಯಲ್ತು ಪಿನಾಕಪಾಣಿಯುಂ ನೆಱೆಯನಿದಿರ್ಚಿ ನಿವ್ವೊಡನೆ ಕಾದಿ ಗೆಲಲ್ಕೆ (ಗದಾಯು. ೪-೯೯). [ಸಂ.]

**ಪಿನಾಕಾಯುಧ** (ನಾ). ಪಿನಾಕವೆಂಬ ಆಯುಧವನ್ನು ಉಳ್ಳವನು; ಶಿವ: ಬಿಲ್ಲೋಳ್ ಮುನ್ನಂ ಪಿನಾಕಾಯುಧನೆ ಸಲೆ ಚಕ್ರಾಯುಧಂ ಜಾಮದಗ್ನ್ಯಂ ಬಲ್ಲಂ . . . ಇಂದ್ರಾತ್ಮಜಾತಂ ಬಲ್ಲಂ ಕೇಳ್ಗ ಬಲ್ಲಾಳನೆ ಕಲಿಗಳ ದೇವಂ(ಎಕ. VI. ೨೫ಮು. ೩೭-೩೩; 1180). [ಸಂ.]

**ಪಿನಾಕಿ**₁ (ನಾ). = ಪಿನಾಕಾಯುಧ: ಲೋಕವೀರರೊಳಿಕೆ ನೆಱೆ ಬಲ್ಲಿದನು ಪಿನಾಕಿಯೆಂಬರು ಕಥೆಯೊಳಗೆ (ಕೃಷ್ಣರಾಂ. ೩-೨೯); ನೀನೆನಗೋಪನಾದರೆ ಸಾಕು ಪಾಲೆತಡೆಯಾ ಪಿನಾಕಿಗೆ ತೆರಳುವೆನೆ ಬಳಲ್ಲಿ ನೋಡೆಂದ (ಕುಮಾ.ರಾ. ೨-೨೯); ತೃಣಪಂಟೀರದ ಮಧ್ಯೆ ಬೇಡತಿರ್ದಳ್ ಬಿಡದೆ ಫಣಿಧರ ಪಿನಾಕಿಯುಂ ತನ್ನಭೀಷ್ಟ ಸಫಲಮಾಕ್ಕೊಂದು (ಶಬ್ದಾಂಗ. ೬೨-೨೨೬೦).

[ಸಂ. ಪಿನಾಕಿನ್]

**ಪಿನಾಕಿ**₂ (ನಾ). ೧. ಒಂದು ಬಗೆಯ ವಾದ್ಯ: ಚಿನ್ನ ತಿತ್ತಿರಿ ಜಾಂಚಿ ಮಂಜು ತಾವು ಹೆಗ್ಗಾಳೆ ಮನ್ನೆಯಂಗಳ ಪಿನಾಕಿ ಉನ್ನತವಹ ಶಂಖಪಟಹ ಡಿಂಡಿಮ ಮದ್ದು ಸನ್ನಾಹಭೇರಿ ಮೊಳಗಲು (ರಾಮಾ. ೬-೭೦); ಕೊಂಬು ತಿತ್ತಿರಿ ಕಾಳೆ ತುಡುಮು ಪಿನಾಕಿಯಾಡಂಬರದೊಳು ಪೊಕ್ಕ ಪುರವ (ಭರತ. ೫೭.೬೩); ಜೋಕೆವಿಡಿದು ಸೇನೆ ನಾಲ್ಕುದಿಕ್ಕಿನಲಿ ವಿವೇಕವಿಲ್ಲದೆ ಪಂತರಲು ನೂಕುತ ಕನಲಿ ಪಿನಾಕಿಗಜೆವ ವಾದ್ಯದಾ ಕೂಗು ಬೊಬ್ಬೆ ರಂಜಿಸಿತು (ಪಿತಾಸಾಂ. ೪-೬೦). ೨. ಒಂದು ಬಗೆಯ ವೀಣೆ: ಪ್ರಾಚೀನ ಗ್ರಂಥಗಳು, ಕಿನ್ನರಿ, ಪಿನಾಕಿ, ರುದ್ರವೀಣೆ . . . ಭುಜಂಗವಿಣೆ, ರಾವಣಹಸ್ತ ಮುಂತಾಗಿ ನಾನಾರೀತಿಯ ವೀಣೆಗಳನ್ನು ನಿರೂಪಿಸುತ್ತವೆ (ಸಂಗೀತಂ. ೩೦೦). [ಸಂ. ಪಿನಾಕಿ]

**ಪಿನಾಕಿವೀಣೆ** (ನಾ). ಒಂದು ಬಗೆಯ ವೀಣೆ: ತಂತ್ರೀವಾದ್ಯಕಳಾಪಾಹಿತ ನಾದ ಮಾದರಸ ರಾವಣವೀಣೆ, ರುದ್ರವೀಣೆ . . . ಕಿನ್ನರವೀಣೆ, ಪಿನಾಕಿ ವೀಣೆ ಮೊದಲಾದ ಮೂವತ್ತೆರಡು ವೀಣೆಗಳನ್ನೂ ವೇಣುಸ್ವರಮಂಡಲ ಗಳನ್ನೂ ಶ್ರುತಿಗೊಳಿಸಿ (ಚತ. ೨೬೫). [ಪಿನಾಕಿ₂+ವೀಣೆ₁]

**ಪಿನಾಶಿ** 'ಪೀನಾಶಿ' ನೋ.

**ಪಿನಾಸಿ** 'ಪೀನಾಶಿ' ನೋ.

**ಪಿನಿಕ್ಷೀರ** (ನಾ). ಒಂದು ಬಗೆಯ ಸಸ್ಯ: ಪಯಸ್ವಿನೀ...ಕ್ಷೀರಕಂದ. ಬೆಳ್ಳಿ (ಬಿಳಿ?)ಯ ಸೂರಣ, ದುಗ್ಧಿ, ಪಿನಿಕ್ಷೀರ, ಕಾಕೋಳಿ, ಹಾಲಂಗಾಬಳ, ಎಮ್ಮೆ, ಆಡು, ಆಡಿನ ಹಾಲಿ" (೬೫೭. ೯೦). [ಪಿನಿ ? + ಕ್ಷೀರ]

**ಪಿನಿವಾಲ**, ಪಿನಪಾಲ, ಪಿನ್ನಿವಾಲ (ನಾ). ಒಂದು ಬಗೆಯ ಮರ: ಪಿನಿವಾಲ . . . ನಿಬಿಡವಾದ ಛಾಯೆಯುಳ್ಳದ್ದಾಗಿ ಬಹುಮನೋಹರ ವಿರುತ್ತದೆ. ಕಟ್ಟಿಗೆ ಮಿದು, ಕೆಲಸಕ್ಕೆ ಬಾರದ್ದು (ಕಿಕಾನ. ೪೩).

ಪಿನಪಾಲ : ಪಿಲಾಲದ ಮರ, ಕಿರಿಗೋಳಿ, ಜೀವಿ, ಪಿನಪಾಲ (ಪ್ರ.ಕಿ. ೩೬-೬೨೪). ಪಿನ್ನಿವಾಲ : (೪). [?]

ಪಿನಿಹುಲ್ಲು (ನಾ). ಒಂದು ಬಗೆಯ ಹುಲ್ಲು : ಕಾಡುಗಸಗಸೆಹುಲ್ಲು, ಪಿನಿಹುಲ್ಲು (ಪ್ರ.ಕಿ. ೩೪-೬೩೩). [ಪಿನಿ ? +ಹುಲ್ಲು (<ಪುಲ್)]

ಪಿನ್ನಲ್‌ಕೋಲಾಟ (ನಾ). ಒಂದು ಬಗೆಯ ಕೋಲಾಟ; ಜಡೆ ಕೋಲಾಟ; ೨ "ಕಲಾವಿದರು ಒಂದು ಕೈಯಲ್ಲಿ ದಾರವನ್ನು ಮತ್ತೊಂದು ಕೈಯಲ್ಲಿ ಒಂದು ಜತೆ ಕೋಲುಗಳನ್ನು ಹಿಡಿದು ನರ್ತಿಸುತ್ತಾರೆ. ಎತ್ತರದ ಪ್ರದೇಶಕ್ಕೆ ಅಥವಾ ಅಟ್ಟಕ್ಕೆ ವಿವಿಧ ಬಣ್ಣಗಳ ದಾರಗಳನ್ನು ತೂಗು ಹಾಕಿ ನರ್ತಕರು ತಮ್ಮ ತಾಳಬದ್ಧ ಚಲನೆಯಿಂದ ಆ ದಾರಗಳನ್ನು ಜಡೆ ನೇದಂತೆ ನೇಯುವ ಹಾಗೂ ಜಡೆ ಬಿಡಿಸುವ ಚಲನೆಗಳು ಪಿನ್ನಲ್‌ಕೋಲಾಟದಲ್ಲಿವೆ" (ಜಾಕಶ. ೧೨೬): ಹಾಡಿಗೆ ಅನುಗುಣವಾಗಿ ಅಭಿನಯಿಸಲ್ಪಡುವ ಪಿನ್ನಲ್‌ಕೋಲಾಟದಲ್ಲಿ ಹಲವು ರೂಪದವುಗಳಿವೆ (ಜಾಕಶ. ೧೨೬).

[ ←ತಮಿ. ಪಿನ್ನಲ್ಕೋಲಾಟ್ಟಮ್ ]

ಪಿನ್ನಿ, ಪಿನ್ನೆ₁ (ನಾ). ಮಣ್ಣಿನ ಪಾತ್ರೆ : ಹನ್ನೆರಡುವರ್ಷದ ತಂಗಳ ಕೂಳನು ಪಿನ್ನಿದೊಳಚಿದು ನಾಲಗೆಲಿ ಕುನ್ನಿಯಂದದಿ ನೆಕ್ಕಿ ಮೈಗೊರಸಿ ಕೊಂಬೋದು ಮುನ್ನ ಮಾಡಿದ ಪಾಪವೈಸೆ (ಜೈಮಿ. ೬.೬೨); ಮುನ್ನ ಉಂಬ ಶರಣರು ಪ್ಯಾಳ್ಯಾಳ್ಯಕೆ ಚಿನ್ನ ಬೆಳ್ಳಿ ಪಾತ್ರದೊಳಗೆ ಇನ್ನು ಹಂಚಿ ಲುಂಬಂತಾಯ್ತು ಬನ್ನಿಯೆಂದು ಪಿನ್ನಿಯೊಳಂಬಲಿಯೆಱೆಯ (ಜೈಮಿ. ೦೦-೨೩). ಪಿನ್ನೆ₁ : ನಾಯಿ ಮಣ್ಣಪಿನ್ನೆಯುಲ್ಲಿ ಅಂಬಲಿಯನ್ನು ಕುಡಿಯುತ್ತಿದೆ (ಬೂಕಿ) [?]

ಪಿನ್ನಿವಾಲ 'ಪಿನಿವಾಲ' ನೋ.

ಪಿನ್ನೀಕ್ಷಿಸು (ಕ್ರಿ). ಮತ್ತೆ ನೋಡು; ಮರಳಿ ನೋಡು : ಜನಪನಾದ ವಿರಾಟನೆದುರೊಳಗನುವು ಸಾಗದು ನಿಮ್ಮ ನೃಪಗನುಮನದಿ ಪಿನ್ನೀಕ್ಷಿಸು ತಲೆದೂಗುವುದೆನಲು ಗೋಪಾಲರು (ಜಪಶಾ. ೩೬-೧೪). [ಪಿನ್‌+ಈಕ್ಷಿಸು]

ಪಿನ್ನು (ನಾ). (ಉಡುಪಿನ ಭಾಗಗಳು, ಕಾಗದಗಳು, ತಲೆಯ ಕೂದಲು ಇತ್ಯಾದಿಗಳನ್ನು ಚುಚ್ಚಿ ಸೇರಿಸಲು ಉಪಯೋಗಿಸುವ) ಒಂದು ಬಗೆಯ ಸೂಜಿಯಂತಹ ಲೋಹದ ವಸ್ತು; ಗುಂಡುಸೂಜಿ ಇತ್ಯಾದಿ : ತಲೆಗೆ ಕೆಂಪುರಿಬ್ಬನ್ ಕಟ್ಟಿಕೊಂಡು, ತಲೆಯಲ್ಲಿ ಹತ್ತೆಂಟು ಕಡೆಗೆ ಅಡ್ಡತಿಡ್ಡ ಪಿನ್ನು ಚುಚ್ಚಿಕೊಂಡಿದ್ದಳು (ಗಂಜಾಮು. ೮೩); ಬುಸದ ಮಧ್ಯೆಯ ಗುಬ್ಬಿ ಕಳಚಿ ಹೋಗಿದ್ದಕ್ಕೆ, ಕೊರಳಲ್ಲಿಯ ಬೆಳ್ಳಿ ಎಳೆಯುಲ್ಲಿದ್ದ 'ಪಿನ್ನ'ನ್ನು ಹಾಕಿ 'ಫಿಟ್' ಮಾಡಿದಳು (ಹೂಕ್ಕೆ. ೪೬); ಪಿನ್ನು ಕಳಚಿ ಹೋಗಿ ಪುಸ್ತಕದ ಹಾಳೆಗಳೆಲ್ಲ ಅದಲುಬದಲಾದುವು (ಬೂಕಿ).

[ ← ಇಂ. pin ]

ಪಿನ್ನೆ₁, ಹಿನ್ನಿ, ಹಿನ್ನೆ (ನಾ). ೧. ಸೂಜಿಯ ಹಿಂಭಾಗ,—ರಂಧ್ರವಿರುವ ಭಾಗ : ಸೂಜಿಯ ಪಿನ್ನೆಯೊಳಂ ಮಣಿಯ ದ್ವಾರದೊಳು ನುಸುಳ್ದಿರ್ಪರಿರ್ದೆಡೆಯೊಳೊರ್ಪಂ ಕಳ್ಳಂತಪ್ಪ ಕಳ್ಳರ ಕಳ್ಳನಿವಂ (ಧರ್ಮಾಮೃ. ೬-೧೯). ಹಿನ್ನಿ : ೧. ಸೂಜಿಯ ಮೊನೆಯಲ್ಲಿ ದಾರ ವೇಱ ಹಿನ್ನಿ[ಪಾಠಾಂ. ನ್ನೆ]ಯ ಹಂಗ ಬಿಡಿಸಿತ್ತು ನೋಡಾ (ಅಜಾಕು.೪. ೧೩೬-೩೨೪); ಸೂಜಿಯ ಹಿನ್ನಿಯಲ್ಲಿ ಮುಗಿಲ ತೋರದ ದಾರ ಹಿಡಿಯಿತ್ತು (ಸಂಕಲಂ. ೪. ೬೬೦-೮೩); ಬೊನೆ ಮೂಱು ಹಿನ್ನಿಯೊಂದು ಆ ಸೂಜಿಯಲ್ಲಿ ಹೊರಿದಿಹನೆಂದಡೆ ಕುಪ್ಪಸಕ್ಕೆ ಬಿಪ್ಪ ಒಡಗೂಡವು ನೋಡಾ (ಸರ್ವಶ. ೦೩೩-೬೬೦). ೨. (ಬಾಣದ) ಹಿಂಭಾಗ; ಗರಿ; "ಕರ್ತರಿ, ಪುಂಖ" (ಪಾಶಾಶ. ೬). ಹಿನ್ನೆ : ೩. ಹಿಂಬದಿ; ಹಿಂಭಾಗ : ಕಾಳ್ಗಿಯ ಹಿನ್ನೆಯಿಂದ ಸೊಸೆಯ ತಲೇ ಮೇಲೆ ಕುಕ್ಕಿದಳು (ಬೂಕಿ). ೮೬).

[ ದೇ. ಮಲ. ತುಳು. ಪಿನ್ನೆ ]

ಪಿನ್ನೆ₂ 'ಪಿನ್ನಿ' ನೋ.

ಪಿನ್ನೆಣಿಕೆ (ನಾ). ಹಿಂದಾದುದನ್ನು ಕುರಿತು ಯೋಚಿಸುವುದು; ಪಶ್ಚಿಮಬುದ್ಧಿ : ಪಿನ್ನೆಣಿಕೆ ಮುಂನ್ ಬಗೆಯನೊತ್ತಿ ಪುಸಿ ಮಾಡ್ಪುದು (ಅಂತಿಗೂ. ೧೬-೩೬೬). [ಪಿನ್‌+ಎಣಿಕೆ]

ಪಿನ್ನೆತ್ತಿ (ನಾ). ನೆತ್ತಿಯ ಹಿಂಭಾಗ : ಪಿನ್ನೆತ್ತಿಯೊಳ್ ತುಱುಬನಿಕ್ಕಿದಳು (ಪೂಕಕ. ೬-೨೬). [ಪಿನ್‌+ನೆತ್ತಿ]

ಪಿನ್ನೆಲೆ, ಹಿನ್ನೆಲೆ (ನಾ) ೧. ಹಿಂದಿನ ನೆಲೆ,—ಸ್ಥಳ; ಹಿಂಬದಿ; ಹಿಂಭಾಗ : ಪೊರ್ದಲಿಱದರ್ ನೂಂಕಿದರ್ ಮರಳಿ ಪಿನ್ನೆಲೆಗೆ ಸಾರ್ದು ಪೋಯೆಂದುಱುಬಿ ತಮತಮಗೆ ಪೊಯ್ದಾಡುತಿರ್ದು (ಪಂಪಭಾ. ೪೬-೨೩); ಪ್ರವೀರನು ತೆಗೆಸಿದರ್ಪಿನ್ನೆಲೆಗೆ (ಜೈಮಿ. ೬-೩೦). ಹಿನ್ನೆಲೆ : ೧. ಕರಿ ಘಟೆಯ ಮಱಿಪೊಕ್ಕು ನಿಂದರು ನರರು ತೇಜಿಗಳೋಡಿ ತೇರಿನ ಮಱಯ ಸಾರ್ದವು ತೇರು ಹಾಯ್ದುವು ದೊರೆಯ ಹಿನ್ನೆಲೆಗೆ (ಕುವ್ಯಾ. ೪. ೧೩-೩೬); ಮದಗಜಗವನೊರ್ವಳು ಚರಿಪಮಧ್ಯಯೊಳೊದಗಿ ಸರಸ ಕೈತುಂದು ಬೆದಱ ಹಿನ್ನೆಲೆಗೈದೆ (ಕಂಶು. ೨೩-೧೨೬); ಘಟನೆಗಳ ನಿರೂಪಣೆ ಮತ್ತು ಪಾತ್ರಸೃಷ್ಟಿಗಳೇ ಅಲ್ಲಿನ ಮುಖ್ಯೋದ್ದೇಶ. ಇವುಗಳನ್ನು ಅತ್ಯಂತ ಸ್ಪಷ್ಟವಾಗಿ ನಮ್ಮ ಕಲ್ಪನೆಗೆ ದೊರಕುವಂತೆ ಮಾಡಿ ಕವಿ ಹಿನ್ನೆಲೆಗೆ ಸರಿಯುತ್ತಾನೆ (ಜಾಶಗ. ೫). ೨. ಯುದ್ಧಭೂಮಿಯ ಹಿಂಭಾಗಕ್ಕೆ ಇರುವ ಸ್ಥಳ : ಮುಱದ ಚೂಣಿಯ ಭಟರು ತಂದರು ಬಿಱಸಿನರನೆಲೆಗಿದು ನಿಹಾರದೊಳಿಱಮ ನೆಱ ಸೊಪ್ಪಾಗಿ ಸಾರಿತು ಸರಿದು ಹಿನ್ನೆಲೆಗೆ (ಕುವ್ಯಾ. ೪. ೧೯-೧೨); ಲಗ್ಗೆಯೊಳಗೆ ನೊಂದು ರಿಪುಭೂಪರ ಸೇನೆಯೊಗ್ಗೊಡೆದೋಡಿ ಹಿನ್ನೆಲೆಗೆ ಹಿಗ್ಗುದೆಗೆಯ ದೂರ ಚೌದಿಕ್ಕಿನೊಳಾಗ ಬೊಗ್ಗನೆ ಪಾಳ್ಯವಿಳಿದರು (ಕಂಶಪ. ೪-೬೦). ೩. "ಮುಂದುಗಡೆ ಇರುವ ಮುಖ್ಯವ್ಯಕ್ತಿಗಳಿಗೆ ಅಥವಾ ವಸ್ತುಗಳಿಗೆ ಪ್ರಾಧಾನ್ಯ ಕೊಡುವಂಥ ದೃಶ್ಯ ಚಿತ್ರ ಅಥವಾ ವರ್ಣನೆ" (Back-ground. ಇಂಕಪ): ಶುದ್ಧವಾದ ಅಂತರಿಕ್ಷದ ಹಿನ್ನೆಲೆಯಲ್ಲಿ ಅವು ಮರಳ ರೆಕ್ಕೆಗಳಂತೆ ಕೊಂಬೆಗಳಂತೆ ತೋರುತ್ತಿದ್ದವು (ಪುಕಶ. ೪೨). ೪. ಭೂಮಿಕೆ; ತಳಹದಿ; ಬುನಾದಿ; ಸನ್ನಿವೇಶ : ಈ ಗ್ರಂಥದ ಸ್ವರೂಪವನ್ನು ಅರಿಯಬೇಕಾದರೆ ಅದು ಹುಟ್ಟಿದ ಹಿನ್ನೆಲೆಯನ್ನು ಅರಿಯಬೇಕಾದುದು ಅತ್ಯಗತ್ಯ (ಪೂಕ್ಕ೪ು. ೧); ಗೊಟೆಲ್ ಯಾವ ಒಂದು ವಿಷಯ ಪ್ರತಿಪಾದನೆ ಮಾಡುವಾಗಲೂ ಅದರ ಚಾರಿತ್ರ್ಯ ಮತ್ತು ಹಿನ್ನೆಲೆಗೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿದ್ದನು (ಸಸ್ಕ೪. ೪೬); ಕನ್ನಡದಲ್ಲಿ ಪಹ ಆದುದಕ್ಕೆ ಒಂದು ಐತಿಹಾಸಿಕ ಹಿನ್ನೆಲೆ, ಬೆಳವಣಿಗೆ ಇದೆ (ದ್ರಾಶಿ. ೩೩೬); ಶಂಕರ ರಾಮಾನುಜರಿಗೆ ಅವರವರ ಮತಸ್ಥಾಪನೆಗೆ ಹಿನ್ನೆಲೆ ಏರ್ಪಾಡಾಗಿತ್ತು (ಜಾಕದ. ೨೫೬); ಇಂದು ಈ ಹಣ ಯಶೋದೆಗಾಗಿರಬಹುದು ಎಂಬ ಸಂದೇಹದ ಹಿನ್ನೆಲೆಯಲ್ಲಿ ಈ ಮಾತು (ಪಾಕ್ಯ. ೪೪).

[ ಪಿನ್‌+ನೆಲ₁ ]

ಪಿನ್ನೇಕಾಯಿ (ನಾ). ಒಂದು ಬಗೆಯ ಮರ : ಸುರಹೊನ್ನೆ, ಪಿನ್ನೇಕಾಯಿ, ಪುನ್ನಾಗ, ಸುಡಾಬು, ಹೂಹೊನ್ನೆ (ಪ್ರ.ಕಿ. ೦೩-೨೩೬); ಕಲ್‌ಹೊನ್ನೆ, ಕಿರಿಹೊನ್ನೆ . . . ಪಿನ್ನೇಕಾಯಿ, ಪುನ್ನಾಗ, ಬೊಬ್ಬಿ, ಶ್ರೀಹೊನ್ನೆ, ನಾಮೇರು, ಸುಡಾಬು, ಇರ್ಕ್ಯ (ಸಸ್ಯ೩. ೨೬).

[ ಪಿನ್ನ₀ (೨←ತಮಿ ಪಿನ್ನೈ) +ಕಾಯಿ (<ಕಾಯ್) ]

ಪಿನ್ನೇಸಱು (ನಾ). ಪಶ್ಚಿಮಕ್ಕೆ ಇರುವ ಸೂರ್ಯ; ಮುಳುಗುತ್ತಿರುವ ಸೂರ್ಯ: ಇನ್ನೊಮ್ಮೆ ಶರವ ತಿರುವಿಗಿಟ್ಟು ನೋಡೆಂದು ತನ್ನ ದಿವ್ಯಾಸ್ತ್ರ ದಿನವನ ಪಿನ್ನೇಸಱು ಪಿಂಗದಲೊಳಗಗುಳದ ಮುನ್ನ . . . ಅವನುತ್ತಮಾಂಗವನಾಗಸದ ಅತ್ತ ಹಾಱುವ ತೆಱದಿಂದೆಚ್ಚನು (ನೇಮಿಜಿ. ೨೪-೦೪೬).

[ಪಿನ್ + ನೇಸಱು (<ನೇಸಱ್)]

**ಪಿನ್ನೋ** (ಕ್ರಿ). ಹಿಂದೆ ಆದುದಕ್ಕಾಗಿ ವ್ಯಥೆಯನ್ನು ಹೊಂದು; ಪಶ್ಚಾತ್ತಾಪ ಪಡು: ಎಂತು ನೀನ್ ಪಿನ್ನೋಯದೆಯೆ ಪೋಪೆ? (ಅಂತಿಗೂ. ೧೦-೨೦೨). [ಪಿನ್ + ನೋ]

**ಪಿನ್ನೋಡು** (ಕ್ರಿ). ಹಿಂದಕ್ಕೆ ಹೊರಳಿ ನೋಡು; ಹಿಂದಿರುಗಿ ನೋಡು: ಎನಗೆ ಅಂಜಿಕೆಯೆಂಬುದಿಲ್ಲ. ಅದಱಿಂದೆ ನೀನ್ ಬಂದ ದಾರಿಯೊಳೆ ಪಿನ್ನೋಡದೋಡು! (ಅದ್ಭಕ್ರ. ೫೦-೦೦೦೪). [ಪಿನ್ + ನೋಡು]

**ಪಿಪಾಸ** (ನಾ). ನೀರಡಿಕೆ; ಬಾಯಾರಿಕೆ; ದಾಹ: "ನೀರಡಿಕೆ ತರ್ಷಂ ಪಿಪಾಸವೆನಿಸಿಕ್ಕುಂ" (ಮಂಗರಾ. ೬೦-೦೪); ಸತ್ಯಗುಪ್ತನು ಆ ಜಲವನ್ನು ಹಿಂಗಿ ಪಿಪಾಸವನ್ನು ಸ್ವಲ್ಪ ಶಮನ ಮಾಡಿಕೊಂಡು ಸುತ್ತಲೂ ನೋಡುತಾ ಕೂತುಕೊಂಡನು (ಶೀಲಮ. ೫). [ಸಂ. ಪಿಪಾಸಾ]

**ಪಿಪಾಸಿತ** (ಗು). ೧. ಬಾಯಾರಿದ; ನೀರಡಿಸಿದ. (ನಾ). ೨. ಬಾಯಾರಿದವನು; ನೀರಡಿಸಿದವನು: "ತೃಷಿತಃ, ತರ್ಷಿತಃ, ಪಿಪಾ(ಸುಃ), ಪಿಪಾಸಿತಃ—ಈ ೪ ನೀರಡಿಸಿದಾತಂ" (ಹಲಾಯು. ೫೪-೨೦೭). [ಸಂ.]

**ಪಿಪಾಸು** (ಗು). ೧. = ಪಿಪಾಸಿತ ೧. (ನಾ). ೨. = ಪಿಪಾಸಿತ ೨: "ತೃಷಿತಃ, ತರ್ಷಿತಃ, ಪಿಪಾ(ಸುಃ), ಪಿಪಾಸಿತಃ—ಈ ೪ ನೀರಡಿಸಿದಾತಂ" (ಹಲಾಯು. ೫೪-೨೦೭). [ಸಂ.]

**ಪಿಪಾಸೆ** (ನಾ). ೧. ನೀರಡಿಕೆ; ಬಾಯಾರಿಕೆ; ತೃಷೆ: "ಉದನ್ಯಾ, ತರ್ಷಃ ... ಪಿಪಾಸಾ—ಈ ೫ ನೀರಟ್ಕೆ" (ಹಲಾಯು. ೬೦-೨೦೪); ಅಂತಳವಿಗಟಿದ ಪಿಪಾಸೆಯುಂ ಪಸಿವುಮಸವುಯಂಬಡೆದು ... ನೀರ್ಗಲನಱಸಿ ... ನಡೆವಾಗಳ್ (ಅಂಲಾವ. ೬-೯೨ ವ). ೨. (ಅಲಂ) ತಿಳಿದುಕೊಳ್ಳಬೇಕೆಂಬ ಇಚ್ಛೆ—ಬಯಕೆ: ಅಂತೆಯೆ ಮುಂದೆ ಅದು ಶಾಶ್ವತವಾದ ಆನಂದದ ಬಗೆಗೆ ಪಿಪಾಸೆಯನ್ನು ಹುಟ್ಟಿಸುತ್ತದೆ (ಮಹಾಯೋ. ೦೭೩). [ಸಂ. ಪಿಪಾಸಾ]

**ಪಿಪಿಲೆ, ಪಿಪ್ಪಿಲ** (ನಾ). ಇರುವೆ; ಪಿಪೀಲಿಕಿ: ತರುಗಿರಿಯನೆಲ್ಲ ತಱಗೆಲೆಯಂತೆ ಹಾಱಿಸುವ ಪುರುಶತರದ ಪ್ರಳಯಮಾರುತನೊಳಂ ಪಿಪಿಲೆಗಳು ಹರುಷದಿಂದಿದಿರೊಡ್ಡಿ ನಿಲ್ವ ಸತ್ವವದುಂಟೆ (ಪ್ರಭುಲಿ. ೬-೦೨). ಪಿಪ್ಪಿಲ: ಉನ್ನತದ ಪಿಪ್ಪಿ[ಪಾಠಾಂ. ಪ್ಪ]ಲ ಪ್ರಸಾದದಗುಳು ಕಚ್ಚಿ ಬರೆ ಕಾಣುತದಕೆ ಬಸವಂ ಮನ್ನಣೆಯೊಳಂ ಸಕ್ಕರೆಯ ತಳಿಯೆ (ಪ್ರಭುಲಿ. ೬-೩೪).

[< ಸಂ. ಪಿಪೀಲ]

**ಪಿಪೀಲಕ** (ನಾ). ೧. ದೊಡ್ಡ ಕಪ್ಪುಇರುವೆ; ಗೊದ್ದ. ೨. (ಅಲಂ) ಅಲ್ಪವ್ಯಕ್ತಿ; ಕ್ಷುದ್ರಜೀವಿ: ಈ ಸುಶರ್ಮಕ ಶಕುನಿ ಸಲೆ ದುಶ್ಶಾಸನಾದಿ ಪಿಪೀಲಕರು ತಮಗೇಸು ಬಲುಹುಂಟೈಸನೊದಗಲಿ ಎಂದರಪರು (ಕುಮಾ್ಯ. ೦೫-೦೫). [ಸಂ.]

**ಪಿಪೀಲಿಕ** (ನಾ). ೧. (ಹೆಣ್ಣು) ಇರುವೆ: "ಪಿಪೀಲಿಕಂ ಕ್ಷುದ್ರದೊಂದೆ ನಲ್ಕಿಱುಹೆಯಕ್ಕುಂ" (ಮಂಗರಾ. ೪೯-೦೬); ಅಲ್ಲಿಗೆ ಮರ್ಕಟನಂತಾಗದೆ ಇಲ್ಲಿಗೆ ವಿಹಂಗನಂತಾಗದೆ ಈಱೆಯಲ್ಲಿಗೆ ಪಿಪೀಲಿಕನಂತಾಗದೆ (ಪೋಳೀಮ. ೦೦೦-೪೩೯); ಬೆಲ್ಲದ ರಸವಂ ದಾರವಂ ಪೂಸಿ ಪವಳದ ಛಿದ್ರ ಮೊದಲೊಳಿಟ್ಟು ಇಱುಂಬೆಗಳುಳ್ಳ ಠಾವಿನೊಳಿರಿಸಲ್ ಪಿಪೀಲಿಕಂಗಳು ದಾರವಂ ಪೆಱಗಣ ಛಿದ್ರಕ್ಕೆ ತೆಗತಪ್ಪುದುಂ (ಶುಕ್ಲಾಸ್ತ್ರ. ೩-೨೦ ವ); ಆ ಲಿಂಗದ ಮೇಲೊಂದು ಪಿಪೀಲಿನಿರೆ ಕಂಡು ಬೆದಱಿ ... ಶೂಲಿ ಕರಂ ನೊಂದನೆಂದು ಬಳಲುತ್ತಿರ್ದಂ (ಪ್ರಭುಲಿ. ೦೬-೭). ೨. (ಇರುವೆಗಳು ಸಂಗ್ರಹಿಸುವುವೆಂದು ಭಾವಿಸಲಾದ) ಒಂದು ಬಗೆಯ ಚಿನ್ನ. [ಸಂ.]

**ಪಿಪೀಲಿಕಾನ್ಯಾಯ** (ನಾ). ಇರುವೆಯಂತೆ ಸಾವಧಾನವಾಗಿ, ನಿರಂತರವಾಗಿ ಕೆಲಸವನ್ನು ಪೂರೈಸುವಿಕೆ: ಎನಿತೊ ಸೋಜಿಗದ ಬಿಲ್ಲಾರಿಕೆಯ ಕೆಯ್ಪುಗಳ ಕಂಡಗೆ ಪಿಪೀಲಿಕಾನ್ಯಾಯದಿಂ ತಾನುಮಂತೆಸಗಬೇಕೆಂಬುದು ಸ್ಫೂರ್ತಿಯಾದರೆ ತಪ್ಪೊ ಅಚ್ಚರಿಯೊ ಏನಂತೆ? (ಹಕ್ಕಿರ. ೦೭-೦೦). [ಸಂ.]

**ಪಿಪೀಲಿಕಾಸ್ತ್ರ** (ನಾ). ಇರುವೆಗಳನ್ನು ಉತ್ಪತ್ತಿ ಮಾಡುವ ಒಂದು ಬಗೆಯ ಅಸ್ತ್ರ: ಕೊಟ್ಟು ತೆಗೆದೆಚ್ಚಂ ಪಿಪೀಲಿಕಾಸ್ತ್ರವನೊಡನೆ ಟಿಟ್ಟಿಱುಹೆ ಮುತ್ತಿದುವು ಘಣೆಗಳಂ (ಕೃಷಿಯ. ೨೪-೩೪). [ಸಂ.]

**ಪಿಪೀಲಿಕೆ** (ನಾ). ಇರುವೆ: ಕ್ರಿಮಿಪಿಪೀಲಿಕಾಭ್ರಮರಮನುಷ್ಯಾದಿ ವಿಭೇದಮಾಗಿ ದ್ವೀಂದ್ರಿಯಾದಿ ತ್ರಸಂಗಳ್ (ಸುಕುಮಾ. ೬-೬ ವ); ಯಮದಂಡದದೇಂ ಮಾಣ್ಬುದೆ ಪಿಪೀಲಿಕಾಪಥವಿಧಿಯಂ (ಜಗ. ೨-೩೪); ಧಾರುಣಿಯೊಳು ಪಿಪೀಲಿಕೆಯು ವಿಸ್ತಾರದಲಿ ಮಾಡಿದ ಮನೆಯ ಕಾಳೋರಗನು ಹೊಗುವಂತೆ ರಿಪುಕುಂತೀಕುಮಾರಕರು ವೈರದಲಿ ಸಪ್ತಾಂಗವನು ಕೈಸೂಱೆಗೊಂಬರು (ಕುಮಾ್ಯ. ೪-೦೪). [ಸಂ. ಪಿಪೀಲಿಕಾ]

**ಪಿಪ್ಪರಗೆ** (ನಾ). ಒಂದು ಊರಿನ ಹೆಸರು; ಬಿಜಾಪುರಜಿಲ್ಲೆಯ ಈಗಿನ ಹೂವಿನ ಹಿಪ್ಪರಿಗೆ: ಬಾಸುರಿಕೋಡು ಇಂಗಳಿಸರ ಬಾಗೆವಾಡಿ ಸಾಮಳವಾಡಿಗೆ ಒಡ್ಡವೊಡಿಗೆ ಮಧ್ಯವತ್ತಿ [F] ಪಿಪ್ಪರಗೆ ನಾಮುಗ್ರಮೋ (ಶಾಇಇ. XI-i. ೯-೨೦; 862); [ಪೊ]ಲದ ಸಾಳವಾಡಿಗೆಯ x x ಯಿಂ ಪಡುವ ಪಿಪ್ಪರ[ಗೆ]ಯ ಸೀಮೆಯಿಂ ತೆಂಕ ಸರ್ವ್ವ[ನಮ]ಶ್ಯಂ ಬಿಟ್ಟಿರಿಯ ನೆಲ ಮತ್ತರ್ ೫೫ (ಶಾಇಇ. XI-i. ೬೯-೨೭; ಸು. 1062). [?]

**ಪಿಪ್ಪಲ, ಪಿಪ್ಪಳ** (ನಾ). ೧. ಒಂದು ಬಗೆಯ ಮರ; ಅರಳಿ; ಅಶ್ವತ್ಥ: "ಶ್ರೀವೃಕ್ಷಃ, ಪಿಪ್ಪಲಃ, ಅಶ್ವತ್ಥಃ, ಬೋಧಿಃ—ಈ ೪ ಅರಳಿ" (ಹಲಾಯು. ೩೩-೯೩); "ಪಿಪ್ಪಲಂ ಬೋಧಿಯಶ್ವತ್ಥ ಮೆನಲರಳಿಯಕ್ಕುಂ" (ಮಂಗರಾ. ೪೯-೦೦); ಉರುಪಯೋಧರಬಿಲ್ವವನು ಹೊಯ್ದೊರಸಿ ಕದಳಿಯ ನುಣ್ದೊಡೆಯನಿಟ್ಟೊರಸಿ ರಮಿಸಿತು ವನಸಿರಿಯ ಪಿಪ್ಪಲದಳಂಗದಲಿ (ಕುಮಾ್ಯ. ೨೦-೫೦); ಜಾಲಿ ಜೇನೊಡವಿಪ್ಪೆ ಪಿಪ್ಪಲ ಮಾಲೆಯವ ನೋಡಬಲ (ಶೂರರಾ. ೩-೦-೨೮); ಖದಿರು ಬಿಲ್ವ ತಮಾಲ ತಂಡಸಿ ಬಿದಿರು ಬೆತ್ತ ಪಲಾಶ ಪಿಪ್ಪಲ ಮಧುಕ ಹೊನ್ನ ಕದಂಬ ಗುಗ್ಗುಳ ನಾಗ ಪುನ್ನಾಗ (ಉತ್ತಕ. ೦೧-೪). ೨. ನೀರು; ಜಲ. ೩. ಜವುಗಿನ ನೆಲ—ಭೂಮಿ. ೪. ಮೈಲಿಗೆ. ೫. ಯತಿ; ಸಂನ್ಯಾಸಿ: "ಉಜಭೇದಂ ಶ್ಲಕ್ಷ್ಣ ಯೋಗೀಶ್ವರ ಜಲ ಮಲಿನಂ ಪಿಪ್ಪಲಾಖ್ಯಾನಂ" (ನಾನಾರ. ೩೩). ಪಿಪ್ಪಳ: ೧. ನನೆವೊತ್ತಿತ್ತದಿರ್ಗಂತೆ ಪಲ್ಲವಿಸಿದತ್ತುದ್ಯತ್ತಮಾಳಂ ಕರಂ ಕೊನರೇಱಿತ್ತುರು ಪಿಪ್ಪಳಂ ... ಘನತಾರಾಂಕುರಭಾರವಂ ಬಂರವಕಂ ಪೆತ್ತತ್ತು ಟಿಣ್ಣೊಪ್ಪಿದಂ (ಬಾಲಚ. ೦೪-೨೮); ಸಾಳ ರಸಾಳ ತಾಳ ತಿಲಕಾಮಳ ಪಿಪ್ಪಳ[ಪಾಠಾಂ. ಲ] ... ತರುಸಂತತಿಯಿಂ ವನಬೃಂದವೊಪ್ಪುಗುಂ (ಹುಲರಮ. ೧-೫೩). ೬. ಒಂದು ಊರಿನ ಹೆಸರು: ಪಿಪ್ಪಳಗ್ರಾಮನಾಮಾಗ್ರಹಾರಸಮುತ್ಪನ್ನಃ (ಪ್ಪಾಅಂ. ೦೪೨೧, ೦೦-೦೯೫, 947). [ಸಂ.]

**ಪಿಪ್ಪಲಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು; ಹಿಪ್ಪಲಿ; ಬಾಲಮೆಣಸು: "ಕೃಷ್ಣಾ, ಉಪಕುಲ್ಯಾ, ವೈದೇಹೀ, ಮಾಗಧೀ, ಪಿಪ್ಪಲೀ, ಕಣಾ—ಈ ೬ ಪಿಪ್ಪಲಿ" (ಹಲಾಯು. ೦೦೦-೪೬೦); ಚಕೋರಪಂಜರಂಗಳೊಳ್ ಪಿಪ್ಪ[ಪಾಠಾಂ. ಪ್ಪಿ]ಲೀತಂಡುಲಂಗಳ ಬಿಱಂ ಸೂಸಲುಂ (ಕಾದಂಬ. ೦೦೦೬); ಪಿಪ್ಪಲಿ ಚಲ್ಲಗಾಯ್ ಮೆಣಸು ಮಾಗುಳಿವೇರ್ಮೊಳಿಯುಲ್ಲದೇಲೆ ... ಅರಿಸಮಾಮಫಲಂಗಳಾವಿಯಾದು ಪ್ಪನ ಕಾಯ್ಗಳಂ ಮಂಗಮಗಿಪ್ಪವಸಿಕ್ಕಿದನಚ್ಚಪಕ್ರದೊಳ್ (೮೦ಲಾವ. ೫-೩೩); ಜ್ವರಮೇಱಿದು—ಮಾಣ್ಗುಂ ಪಿಪ್ಪಲಿಗೂಡಿದ ಪಾಲ್ ಕಾಮಾಱಿಸಿಡಿಗೆ ಶರ್ಕರೆಯಿಂದಂ (ಕಲ್ಯಾಕಾ. ೩-೯೩). [ಸಂ.]

**ಪಿಪ್ಪಲಿಗ** (ನಾ). ಹಿಪ್ಪಲಿಯನ್ನು ಮಾರುವವನು; ಬಾಲಮೆಣಸಿನ ವ್ಯಾಪಾರಿ: ತಂಬುಳವಂ ಕೊಳ್ವಂ ಮಾಱುವಂ ಮೋಣ್, ತಂಬುಲಿಗಂ. ಏವಂ ದವಸಿಗಂ, ಗಂದಿಗಂ, ಮೆಣಸಿಗಂ, ಪಿಪ್ಪಲಿಗಂ (ಕಲ್ಯಾಸು. ೪೦೯ ಪ್ರಯೋ). [ಪಿಪ್ಪಲಿ + -ಗ]

**ಪಿಪ್ಪಲಿಗಾಯಿ** (ನಾ). ಹಿಪ್ಪಲಿಕಾಯಿ : ಸುಂಟೆ ಕೂಗಲಿ ಪಿಪ್ಪಲ[ಿ] ಗಾಯು ಕೊಯ್ವರು ನಿಂಬೆಯು ಕಳವಣ್ಣಳೊಡನೆ (ಮೋಹತ. ೯-೬೦).
[ ಪಿಪ್ಪಲಿ+ಕಾಯಿ₄ ( ಕ ಎಯ್ದ್₄) ]

**ಪಿಪ್ಪಲೀಪತ್ರ** (ನಾ). ಅರಳಿಯ ಎಲೆ.–ಪತ್ರ ; **ಪಿಪ್ಪಲದಳ** : ಅಯಃಪಿಪ್ಪಲೀಪತ್ರಮಾಲಾಂಚಿತಮುದ್ವೃತ್ತಾಬ್ದಪೀಠಾನ್ವಿತವಶಿಧವಳ ಪೃಥ್ವ ದಾಚ್ಛಾಧಿತಂ ವಿ[ಸ್ತೃ]ತಮಾದುತ್ತುಂಗಗರ್ಭೋಚಿತಶಯನ]ದೊಳಾ ಕಾಂತೆ ಏಣ್ಗೆಡ್ಡಮಾದಳ್ (ಕಾದಂಪೂ. ೩೯೪). [ಸಂ.]

**ಪಿಪ್ಪಲೆ** (ನಾ).=ಪಿಪ್ಪಲ ೧ : ಪಿಪ್ಪಲೆ ಆಲಾಮೇರು ಫಲಾಸೇನ ಮುತ್ತುಗ ಮೇರು (ಕೃತಿಶಾ. ೬-೬). [ ಸಂ. ಪಿಪ್ಪಲ ]

**ಪಿಪ್ಪಳ** ' ಪಿಪ್ಪಲ ' ನೋ.

**ಪಿಪ್ಪಿಲ** ' ಪಿಪಿಲೆ ' ನೋ.

**ಪಿಪ್ಪು** (ನಾ). ಮಚ್ಚೆ ; ಗುರುತು : " ಜಟುಲಃ . . . ಪಿಪ್ಪುಃ, ತಿಲಕಃ, ತಿಲಕಾಲಃ — ಈ ತಿಲಕಾಕಾರಗಳಾದ ಕರೀಮಚ್ಚೆಗಳ ಹೆಸರುಗಳು. ಸಂಗಾತೀಮಚ್ಚೆ, ಹುಟ್ಟುಮಚ್ಚೆ "(ಸಿದ್ಧಾಂತಿ. ೦೬೪). [ಸಂ.]

**ಪಿಮ್ಮಡ,** ಪಿಮ್ಮಡಿ, ಹಿಂಬಡ, ಹಿಮ್ಮಡ, ಹಿಮ್ಮಡಿ, ಹಿಮ್ಮಡು (ನಾ). ೧. ಅಡಿಯ ಹಿಂಭಾಗ ; ಪಾದದ ಹಿಂಬದಿ : ಧೃತಿ ಕೆಡದೆ ಮನದ ಬಲ್ಪುಡುಗದೇ ಪಿಮ್ಮಡದೊಳಧೈರ್ಯದಿಂ ನಡೆದು ಪೋಪಂ (ಅರಾಕ. ೨-೯-೫೭); ಪಿಮ್ಮಡದಿಂದೆ ಕೆಲವು ದೂರಂ ನಡೆದು ತುದಿಗಾಲೊಳಿನಿತು ದೂರಂ ಬರುತೆ ಕಾಲೋರೆಯಿಂದಡಿಯಿಡುತ ನಡೆವುತಿರೆ (ಕಾಸೋಕ. ೭-೫೭); ಚಂದದ ಪಿಮ್ಮಡ ಸೊಬಗಾಂತ ಬೆರಳುಗಳಿಂದೆಸೆವುವ ಪಜ್ಜೆ ಯವನ (ಶಾಗಳು. ೨೫-೯೩). **ಪಿಮ್ಮಡಿ** : ೧. ತಲೆಕೆಟಗಾಗಿ ಟಿಟ್ಟದಲಗೊ ಬರ್ಬೆಯನುರ್ಚಿ ಬೀಟೆ ಪಿಮ್ಮಡಿಯುಮಂ ಪಜ್ಜೆಯ ಪೆಜಗಂ ನೋಡುತ್ತುಂ ಪರಿವ ಪೆರ್ಬುಂಟುಮಂ . . . ಕಂಡು (ರಾಜಶೇ. ೫-೧೦೯ ಶ). **ಹಿಂಬಡ** : ೧. ಮೊದಲು ನಾವು ಸ್ಥಿರಾಸನದಲ್ಲಿ ಕೂಡಲು ಪ್ರಾರಂಭಿಸಬೇಕೆಂದು ಹೇಳಲಾಗಿದೆ . . . ಇದರಲ್ಲಿ ಎರಡು ರೀತಿಗಳಿರುವುವು ; ನಾವು ಬೇಕಾದರೆ ಎಡದ ಹಿಂಬಡವನ್ನು ಒತ್ತಬಹುದು ಇಲ್ಲವೇ ಬಲದ ಹಿಂಬಡವನ್ನು ಒತ್ತಬಹುದು (ಶರಶ. ೯೪) ಅಂಗುಷ್ಠ ಎಂಬುದಕ ಮುಂದ ಪಾದವ ಬರಿ ಹಿಂಬಡಕ ಕಾಲು ಭೇದಾದ ನಡ ಧಡ . . . ಹತ್ತು ಶಿರಗಳ ಬರೆದಾಳು ಮುಂದೆರಡು ಪಾದ ಬರೆದಳು (ಕವಾಗ. ೨೬೦). **ಹಿಮ್ಮಡ** : ೧. ತವೆ ಹಿಮ್ಮಡಂಗಳು ಮಿಗುವ ಘನವೇಣಿಲತೆ (ಕಂಶ. ೬-೯೩); ಅಣೆಯರವೆತ್ತ ಹಿಮ್ಮಡದ ಎಣೆತೊಣೆಯಿಲ್ಲದಡಿಯ ರಂಗಾಯೆಂಬ [ರ]ಮಣಿ ಪ್ಯೆದೋ ರ್ವಳಿನ್ನೆಂದೊ (ಕತಶಾಂ. ೨೨-೧೧); ನೀಲ ಆಡಿನನು ತನ್ನ ಹಿಮ್ಮಡದಿಂದ ಸಾವಕಾಶವಾಗಿ ಒದುರಿಗೆ ತಿವಿದನು (ಐಂಗಾಹ. ೨). ೨. ಚಪ್ಪಲಿಯ ಹಿಂಭಾಗದ ಅಟ್ಟೆ : ಆ ಚಪ್ಪಲಿಗಳು ಕೊಂಚ ಅವನತಿಯನ್ನು ಹೊಂದಿ ದ್ದುದರಿಂದ, ಮತ್ತೆ ಅವಕ್ಕೆ ಹಿಮ್ಮಡ ಟಟ್ಟಿಸಿ ಹೊಳಪು ಕೊಡಿಸಿದ್ದೆ (ಮುಂಗಾಶ. ೦೦); ಒಕ್ಕಲಿಗನು ಬಾಗಿಲಲ್ಲಿ ಎತ್ತರವಾದ ಹಿಮ್ಮಡದ ತನ್ನ ಮೆಟ್ಟುಗಳನ್ನು ಬಿಟ್ಟು ಒಳಕ್ಕೆ ಹೋದನು (ರಕ್ತರ್ಮ. ೦). **ಹಿಮ್ಮಡಿ** : ೧. ಅಟ್ಟ ಹರಿದು ಹರಿಯ ಹಿಮ್ಮಡಿಯ ಹಿಡಿದು ಕೊಂಡು ಬಟ್ಟೆನು ಟಟ್ಟಿ ಯಾಳಿದೆ ರುಪ್ರನೇಬವನ (ಸಕವ. II, ೨೪೬-೨೭); ವೇಣೀವಲ್ಲರಿ ಘುಡುಕಿ ಹಿಮ್ಮಡಿಯ (ಕಂಸತಿ. ೯-೬೭); ಹಿಮ್ಮಡಿಗಳಲ್ಲಿರುವ ಸುಳಿಗಳೆರಡು ಸ್ತ್ರೀಗೆ ನಾಶಕರಗಳಾಗುವುವು (ಕೌಗಂಧಿ. ೩೦೭-೨೦). ೨. ರಬ್ಬರಿನ ಹಿಮ್ಮಡಿಯುಳ್ಳ ಮೆಟ್ಟು . . . ಪಾದರಕ್ಷೆಗೆ ಬೇಕಾಗುವ ಹಾಳೆ, ಹಿಮ್ಮಡಿ, ಬಾರು–ಎಲ್ಲ ವನ್ನೂ ರಬ್ಬರಿನಿಂದ ಮಾಡಲು ಬರುತ್ತದೆ (ಜಾಲಕ್ರ. I, ೩೪); ಕೂಲಿಂಗ್ ಗ್ಲಾಸ್, ಹಿಮ್ಮಡಿ ಎತ್ತಿದ ಎಕ್ಕಡ . . . ಇಣುಕುಹಾಕುತ್ತವೆ (ಪಪ್ಪೂರು. ೩೦೫). **ಹಿಮ್ಮಡು** : ೧. ವಿಪಾದಿಕೆ—ಕಾಲ ಹಿಮ್ಮಡು ಒಡೆಯುವ ರೋಗ (ಗಂಗಾಶು. ೨೪೧). [ಪಿಂ (<ಪಿನ್)+ಮಡ್ಡ]

**ಪಿಮ್ಮಡಿ** ' ಪಿಮ್ಮಡ ' ನೋ.

**ಪಿಮ್ಮೆಟ್ಟು,** ಹಿಮ್ಮೆಟ್ಟು (ಕ್ರಿ). (ಹೆದರಿ) ಹಿಂದಕ್ಕೆ ಸರಿ ; **ಹಿಂಜರಿ** : ವಸುಧಾಚಕ್ರಂ ಪದಾಕ್ರಾಂತಿಯಿನದಿರೆ ಭುಜಾಕ್ರಾಂತಿಯಿಂ ದಿಗ್ಗಜಂಗಳ್ ದೆಸೆಯಿಂ ಪಿಮ್ಮೆಟ್ಟೆ (ಜಗಪು. ೯-೭೬); ತೇರೊಳ್ ಪೂಡಿದ ತೇಜಿಗಳ್ ಸರಲ ಕೂರ್ಪಿಂಗಳ್ಕಿ ಪಿಮ್ಮೆಟ್ಟೆ (ಕಬ್ಬಿಗಾ. ೨೭೬); ಇಟ್ಟಡಿಯು ನೆಟ್ಟನಿನಿಸಂ ಪಿಮ್ಮೆಟ್ಟ ದಟವಟ್ಟಡರೆಯುಟ್ಟಳಿವರಂ ಕೈಗೊಟ್ಟು ಪ್ಪಯಿಲಿಟ್ಟರ್ (ಶಕಶಿ. ೨-೯೩). **ಹಿಮ್ಮೆಟ್ಟು** : " ಹಿಮ್ಮೆಟ್ಟುತಕ್ಕೆ ಪೆಡಮೆಟ್ಟುತೆಂದಕ್ಕು " (ಕಬ್ಬಿಕೈ. ೬೪); ಇಂತಿಜಿದು ಕೈಮಿಟ್ಟು ಪಾತಕಂ ಹಿಮ್ಮೆಟ್ಟೆ ಮುಂತೆ ಹೂಮಳೆನೆರೆಸಿ ಶಂಕರಂ ನಿಜ ಪುಟ್ಟೆ(ಐಹಾರ. ರೇ. ೦೨೩-೦೫); ದುರ್ಬಲನೊಡನೆ ಭಂಗಪ್ಪಾಪ್ಟಿ ತನ್ನನು ಸುಗಲೆನುತ ಹಿಮ್ಮೆಟ್ಟಿ ಮಮ್ಮಲಮಜುಗಿದನು ಭೀಮ (ಕುಬ್ಬಾಅ. ೪೦-೨೦); ಹಣ ಬಾಯಿ ಬಡಿಯಿತು ಸೋತು ಹಿಮ್ಮೆಟ್ಟಿತು ಗುಣವು (ಜಂಹಾಶ. ೨೦೩-೨). [ ಪಿಂ (<ಪಿನ್)+ಮೆಟ್ಟು₁ ]

**ಪಿಮ್ಮೆಯ್,** ಹಿಮ್ಮೆಯ್ (ನಾ). ೧. ದೇಹದ ಹಿಂಭಾಗ. ೨. ಹಿಂದಿನ ಜನ್ಮ ; **ಪೂರ್ವಜನ್ಮ** : ವಿಷ್ಣುದೂತರಾ ತುಂಬುರನಂ ಕೆಯ್ವಿಡಿದು ಕರೆದುಯ್ಯೆ, ಪಿಮ್ಮೆಯ್ಯೊಳೇಂ ನೋಂತನೋ ! ಎನುತೆ ಬಲ್ಗಗೆಯೊಳ್ ಮುಂಬಲಿಸಿ (ಅದ್ಭುತ. ೨೦-೧೧). **ಹಿಮ್ಮೆಯ್** : ೧. ಹಿಮ್ಮೆಯ್ಯ ಮುಮ್ಮೆಯ್ಯ ಶೋಧಿಪೆಯಲ್ತೆ ನೀನೊಮ್ಮೆ ಮೈದೋಜೆಂಬರು (ಶರಕ. ೯೨-೦೭೪).
[ ಪಿಂ (<ಪಿನ್) + ಮೆಯ್₂ ]

**ಪಿಮ್ಮೊನೆದೋಱು** (ಕ್ರಿ). ಹಿಂಭಾಗದಲ್ಲಿ ಮೊನೆದೋರು ; ಹಿಂದುಗಡೆ ಯಲ್ಲಿ ತುದಿ ಕಾಣಿಸು : ಬಿಮ್ಮನೆ ಬಿಗುಪೇಱ ವಿಷಾಣ ಪೊಣ್ಮುವ ಮೊಲೆಗಳ್ ಪಿಮ್ಮೊನೆದೋರ್ಪಿನೆಗಂ ಮನದುಮ್ಮಹದಿಂ ಬಿಗಿದು ಬಿಗಿದು ಬೆಂಡೇಱುಪೆನೋ (ಶಕಶಿ. ೬-೨೦೪). [ ಪಿಂ (<ಪಿನ್) + ಮೊನೆದೋಱು ]

**ಪಿಮ್ಮೋರೆ** (ನಾ). ೧. ಹಿಂದಕ್ಕೆ ತಿರುಗಿದ ಮುಖ. ೨. ಹಿಂದಕ್ಕೆ ಮುಖ ಮಾಡಿದವನು.

**ಪಿಮ್ಮೋರೆಯರ್** = ಹಿಂಜರಿಯುವವರು : ಪಿಮ್ಮೋರೆಯರ್ ಸ್ವಾರ್ಥದಲ್ಲಿಯುತ್ಸಾಹಕೃರನರ್ಥದೊಳ್ ಭಯದೊಳ್ ತಲ್ಲಣಿಸರ್ (ಕೌಸಂದ. ೦೯-೯೦). [ಪಿಂ (<ಪಿನ್)+ಮೋರೆ (<ಮೋಱೆ) ]

**ಪಿಯಣ** (ನಾ). ಒಬ್ಬಾತನ ಹೆಸರು : ಪಿಯಣನಾಳುತ್ತಿರೆ ತೈಲಪದೇವಂ ರಾಜ್ಯಂಗೆಯೆ . . . ಬನೂರುಮ್ಮ ಮಾಡಿಸಿದ ಕಪ್ಪ (ಎಕ. VIII, ಸೊರಬ. ೫೨೯-೫ ; 985). [?]

**ಪಿಯಾನೊ** (ನಾ). ಹಾರ್ಮೋನಿಯಂನಂತೆ ನುಡಿಸುವ ಒಂದು ಬಗೆಯ ವಾದ್ಯ ; P " ಹಲಗೆಯ ಮೇಲೆ ಅಳವಡಿಸಿರುವ ಕೀಲಿಕೈಗಳನ್ನು ಒತ್ತುವುದರಿಂದ ಆಯಾ ಸನ್ನೆಗಳು ಮಿಾಟಲ್ಪಟ್ಟು ಅವಕ್ಕೆ ಹೊಂದಿ ಸಿರುವ ಸುತ್ತಿಗೆಗಳು ತಂತಿಗಳನ್ನು ಬಡಿದು ನಾದವುಂಟುಮಾಡುವ. (ಮತ್ತು ತಂತಿಗಳ ಸ್ಪಂದನವನ್ನು ನಿಲ್ಲಿಸಲು ತಕ್ಕ ತಡೆಗಳನ್ನು ಅಳವಡಿಸಿರುವ) ಮತ್ತು ಸಾ., ಧ್ವನಿಗುಂಫನವನ್ನು ತಕ್ಕಂತೆ ಅನು ಗೊಳಿಸಲು ಕಾಲೊತ್ತುಗಳಿರುವ, ಒಂದು ವಾದ್ಯ "(Piano. ಇಂಕನಿ) : ಮಧ್ಯವಯಸ್ಸಿನ ತೋರವಾದ ಹೆಂಗಸು ಮಿರುಗುವ ಬಗಿಯಾದ ಬಟ್ಟೆ ಯನ್ನು ತೊಟ್ಟು ಪಿಯಾನೊ ಬಾರಿಸುತ್ತಿದ್ದಳು (ಹೂಸಕ್ಕೆ. ೨೪೦); ಶ್ರುತಿ ತಪ್ಪಿದ ಪಿಯಾನೊ, ಗೋಡೆಯನ್ನಲಂಕರಿಸಿದ್ದ ಹಡಗಿನ ಹಳದಿ ತಿರುಗಿದ ಚಿತ್ರಗಳು ಎಲ್ಲವರ ಬಗೆಗೂ ಒಂದು ಅಭಿಮಾನ ಮನೆ ಮಾಡಿತ್ತು (ಐಲಿಚ್. ೬೪) ; ಭಾರತದ ವಾದ್ಯದ ಅನುಕರಣ ಮಾಡಿರುವ ಈಗಿನ ಪರದೇಶವಾದ್ಯ ವಾದ ಪಿಯಾನೋ (ಸಂಗೀಶಂ. ೦೨೦). [ ←ಇಂ. Piano ]

**ಪಿಯಾಲ** (ನಾ). ಒಂದು ಬಗೆಯ ಸಸ್ಯ ; ಪ್ರಿಯಾಲ : " ಮೊಜಲೆ— ರಾಜಾದನಂ, ಪಿಯಾಲಃ, ಸನ್ನಕದ್ರುಃ, ಧನುಃಪಟಃ " (ನಾಶರಾ. ೬). ಪ್ರಿಯಾಲ ' ಪರಾ. [ಸಂ.]

**ಪಿರಂಗಿ** ' ಫಿರಂಗಿ ' ನೋ.

**ಪಿರಂಗಿಗೆಲಸ** (ನಾ). ಪಾಶ್ಚಿಮಾತ್ಯರ ಕೌಶಲ,—ಕುಶಲಕೆಲಸ : ಕರುಮಾಡದ ಮೊತ್ತಮೊದಲ ನೆಲೆಯೇಱಿಯಲ್ಲಿ ರಂಗುವಡೆದ ಪಿರಂಗಿ ಗೆಲಸದ ಹ್ವಾಲಾಂತರದೊಳವರಿಸಿದ ಸವಡಿಗನ್ನಡಿಗೊಟವಿಯೆಡೆಯಂ ನೋಡಿ (ಶಶಿಶ. ೬-೧೯೯ ವ). [ ಪಿರಂಗಿ (<ಫಿರಂಗಿ) + ಕೆಲಸ ]

**ಪಿರಕಣೆ, ಪಿರುಕಣೆ** (ನಾ). ಒತ್ತಾಯವನ್ನು ನಿರೀಕ್ಷಿಸಿ ಆಡುವ ಮಾತು; ಬಲವಂತದ ನಿರೀಕ್ಷೆಯಿಂದ ಕೂಡಿದ ನಡವಳಿಕೆ : ಈ ಹೆಂಗಸರ ಬಲವಂತದ ಮಾತುಗಳೂ ಪಿರಕಣೆಗಳೂ ರಾಮಯ್ಯನವರ ಕಿವಿಗೆ ಬಿತ್ತು (ಇಂದು. ೦೦೫). **ಪಿರುಕಣೆ** : ಏನೂ ಬರದೆ ನಾಟಕದಲ್ಲಿ ಪಾರ್ಟ್ ಮಾಡೋದಕ್ಕೆ ಹೊರಟಿದ್ದೀಯಾ—ಹಾಡು. ಇರಲಿ ಈ ಪಿರುಕಣೆ (ಶಬಾ. ೨೫). [ ? ]

**ಪಿರಚಲು** (ನಾ). (ಮೇಲೆ ಮೇಲೆ ಬರುವ ರೋಗದಿಂದ ಉಂಟಾದ) ತೊಂದರೆ; ಕಾಟ ; ಹಿಂಸೆ : ಮಧ್ಯೆ ಮಧ್ಯೆ ಕಾಹಿಲೆ ಬೇರೆ ಬೀಳುತ್ತಿದ್ದರು. ಕಾಹಿಲೆಯ ' ಪಿರಚಲು ' ಬೇರೆ ಗಂಟುಬಿತ್ತು (ಕಾಯಿಶ. ೧೬೨); ನನಗೆ ಕೆಟ್ಟ ಪಿರಚಲು ಬಂದು ಬಿಟ್ಟಿದೆ (ಗೃಹಂ. ೨೬೫). [ ? ]

**ಪಿರದು** (ನಾ) ಪಿರ್ರೆ ; ನಿತಂಬ : ಅವನ ಸ್ತ್ರೀಯು ಕೃಶವಾದ ನಡುವುಳ್ಳವಳು. ದೊಡ್ಡದಾದ ಪಿರದುಗಳುಳ್ಳವಳು (ಬುಕಸ. ೭).

[ ದೇ. ‖ ತೆಲು. ಪಿರುದು, ಪಿಱುದು ]

**ಪಿರಮಿಡ್ಡು** (ನಾ). " (ಮು. ಪುರಾತನ ಈಜಿಪ್ಟಿನಲ್ಲಿ) ಬಹುಭುಜಾಕೃತಿಯ ಅಥವಾ (ಸಾ.) ಚೌಕನೆಯ ತಳಹದಿಯ ಮೇಲೆ ಪಕ್ಕಗೋಡೆಗಳು ಇಳಿಜಾರಾಗಿರುವಂತೆಯೂ ಮೇಲಕ್ಕೆ ಹೋಗುತ್ತ ಹೋಗುತ್ತ ಕೊನೆಗೆ ಸೂಚ್ಯಗ್ರವಾಗಿ ಮುಗಿಯುವಂತೆಯೂ ಕಲ್ಲು ಮೊ.ಗಳಿಂದ ರಾಜರ ಸಮಾಧಿಗಳಾಗಿ ಕಟ್ಟಿದ ಸ್ಮಾರಕ ಕಟ್ಟಡ : ಗೋಪುರಾಕೃತಿಯ ಕಟ್ಟಡ " (Pyramid- ಇಂಕಣ) ; P ಇದು ಪ್ರಪಂಚದ ಏಳು ಅದ್ಭುತಗಳಲ್ಲಿ ಒಂದು ಎಂದು ಪರಿಗಣಿತವಾಗಿದೆ : ಸುಮಾರು ಕ್ರಿ.ಪೂ. ೨೯೦೦ರಲ್ಲಿ ಜಗದ್ವಿಖ್ಯಾತವಾದ ಈಜಿಪ್ಟಿನ ಪಿರಮಿಡ್ಡುಗಳಲ್ಲಿ ಒಂದಾದ ಗಿಸೆಯ ಪಿರಮಿಡ್ಡು . . . ಕಟ್ಟಲ್ಪಟ್ಟಿತು (ಶಿಕಶ. ೧); ದ್ರಾವಿಡನಮೂನೆಯ ಶಿಖರವು ಅಡ್ಡಡ್ಡವಾದ ಹಂತಗಳಿಂದ ಕೂಡಿ, ಪಿರಮಿಡ್ಡಿನ ಆಕಾರವನ್ನು ಹೊಂದಿದೆ (ಕಾರದ. ೪೯೨).

[ ←ಇಂ. Pyramid ]

**ಪಿರಿ₁, ಹಿರಿ₁** (ಕ್ರಿ). ೧. ತರಿ ; ಕೀಳು ; ತರಚು : ಪಿರಿದ [ ಪಾಠಾಂ. ತಱಿದು, ಬಿರಿತ, ಬಿರಿದ ] ತುಪ್ಪುಳಿನ ಕೊರಳ ಮಿಡುಕಿನ . . . ಪತಿಯ ಸುತ್ತಲು ತಿರುಗಿ ಚೀಱುವ ವಿಹಗಸತಿಯನು ಕಂಡನಾ ಮುನಿಪ (ತೊರರಾ. ೧-೨-೦೯). ೨. ಹೊರಕ್ಕೆ ಎಳೆ ; ಸೆಳೆ ; ಕಿತ್ತು ತೆಗೆ : ಸೂರಾಂಬಿಕೆಯ ಮನೆಯ ಕೀರಂ ಕೆಡಪಿ . . . ತೊನೆದು ಸೂರಂ ಸೇರಿ ಪಿರಿಯುತ್ತು ಮಂತ್ಯಜನನನುನಯದೆ ಪಿಡಿದು ಪೆಡಗುಡಿಗಟ್ಟಿ ತನ್ನಮೆಂದೆನಸುವಿರದಿಂತು ನುಡಿಯುತ್ತಿರ್ಪ ವೇಳೆಯೊಳ್ (ಅರಾಶ. ೦-೬-೨೫); ಒಱೆಯಿಂದ ಮಿರ್ಬಾಯ ಖಡ್ಗಮನ್ ಪಿರಿದು (ಅಶ್ವತ್ಥಾ. ೨-೩೬). ೩. ಹಾಳಾಗು ; ನಾಶವಾಗು ; ಇಲ್ಲವಾಗು : ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱದೋಲ್ ಮಂಜುವೋಲ್ಬೋಱಿ ಬೇಗಂ ಪಿರಿಗುಂ ಶ್ರೀರೂಪಲೀಲಾಧನವಿಭವಮಹಾರಾತಿಗಳ್ನಿಲ್ಲವಾಗ್ಗಂ (ಎಶಿ. II, ೮೪—೧; ಸು. ೭೧೧); ತಾಂ ಬಱಿದೆಂತು ಬಂದನೀ ಬಿಸಿಲೊಳದೇಕೆ ಮೆಯ್ಯುರಿಸಿನಂ ಪಿರಿದಕ್ಕಟ ತಳ್ಳಬಾಸುಟುಂ ಪಕಿಯುವು ನೊಂದನೆಂದು ನುಡಿದಳ್ ತಡೆದೊಯ್ಯನೆ ಬಂದ ನಲ್ಲನಂ (ಲೀಲಾಪ. ೨-೫೭); ಆ ಸುಖಾನುಭಾಸಮುಂ ಪಿರಿಗುಂ (ಪಂಪರಾಜ. ೦೩೭—೦೨೩೪). **ಹಿರಿ₁** : ೨. ಉರುಗದೆಯಿಂದ ಕೌರವನ ತೊಡೆಗಳನು ಮುಱಿದೆ ದುರುಳ ದುಶ್ಶಾಸನನ ಕರುಳುಗಳ ನೀ ಹಿರಿದೆ (ವಾರಿಕೀ. ೫೦-೨); ಹಿರಿದ ಕತ್ತಿಯೊಡನೆ ಅರಸನೂ ಪ್ರಚ್ಛನ್ನವಾಗಿ ಅವಳ "ಬೆನ್ನೊಳೆ ಪೋದಂ ದೋಷದ ಬೆನ್ನೊಳೆ ಸಂಧಿಸುವ ದಂಡದಂತೆ" (ಕಾವ್ಯಸ. ೬೦); ತಗ್ಗಿನ ಸಲುವಾಗಿ ನೀರಿನ ಕುದಿಯನು ತಣ್ಣೀರು ಸುರಿಯುವ ಬದಲು ಒಲೆಯೊಳಗುರಿಯುವ ಸೌದೆಯೊಳೆರಡನು ಬೇಗನೆ ಹಿರಿವುದೆ ಮೇಲು (ಇಂಕಾಶ. ೨೦೪-೫೫). ೪. ಕತ್ತರಿಸು ; ತುಂಡುಮಾಡು : ಬಾಳೆಯ ಹೊಡೆಯ ಹಿರಿದು ಹಸನಾಗಿ ಪಾಕಂ ಮಾಡಿಯುದಡಿಡಕೆದಾಳಿಲವೆಸರ ಕರೆವುದು (ಸೂಶಶಾ. ೫-೨೨). ೫. ಒಡೆ : ಬಿರಿ ; ಸೀಳು : ಎರಡು ಮೋಟಕರಂಗಳಿಂ . . . ಹೊಡೆವುತ್ತ ಬಡಿವುತ್ತ ಮುರಳೆ ಮತ್ತೆಯು ಕುಟ್ಟುತಿರೆ ತಲೆ ಹಿರಿದು ಬುಗುಟಿಗಳೆದ್ದೊಡೆದು ನೆತ್ತರು ಬಿಡದೆ ಜೋರನೆ ಸುರಿಯೆ (ಬಸತ್ತು. ೬೮-೨೮). ೬. ಲೂಟಿಮಾಡು ; ಕಿತ್ತುಕೊಳ್ಳು : ಎನ್ನ ಸತಿಯು ಎನ್ನ ಸುತರು ಎನ್ನ ಬಂಧು ಬಳಗವು ಇನ್ನು ಸಾಕಿ ಸಲಹು ಎಂದು ಎನ್ನ ಹಿ [ ಪಾಠಾಂ. ಹ] ರಿದು ತಿಂಬರು (ಪುರಂದ. ೦-೧೬೬-೪); ನಿಂತರೆ ಕುಳಿತರೆ ದುಡ್ಡು ಹಿರಿಯ್ತಾ ಏರಿ (ಗೃಹಂ. ೧೬೯); ಬೆಂದ ಮನೆಯಲ್ಲಿ ಹಿರಿದದ್ದೇ ಲಾಭ (ಗಾದೆ). ೭. (ಸಂತೆ, ಜಾತ್ರೆ ಮುಂತಾದುವು) ಚೆದರು ; ಮುಕ್ತಾಯವಾಗು : ಜಾತ್ರೆಯು ಹಿರಿದ ಮೇಲೆ, ಚೋಮನ ಮನೆಯವರು ಕುಕ್ಕರಳ್ಳಿಗೆ ಬಂದು, ನಾಲ್ಕು ದಿನ ಇದ್ದು ಹೋದರು (ಕುರುಶಾ. ೪೯೨); ಕೊಳ್ಳಲಿ ಹುದನು ಕೊಂಡೆನೆಲ್ಲ ಹಿರಿವುದೆಂದೀ ಸಂತೆ ಬಲ್ಲರಾರು ನೆರಸಿದನಲ್ಲದೆ ? (ನಿಶಂ. ೫೯-೩).

**ಪಿರಿದಿಡು, ಹಿರಿದಿಡು**—ಬೇರೆ ಮಾಡಿ ಇಡು ; ಕಿತ್ತಿಡು ; ಪ್ರತ್ಯೇಕಿಸು : ಬೆಳಕಲ್ಲ ತಳಕಲ್ಲ ಕಳೆಯಲ್ಲ ಕಲೆಯಲ್ಲ—ನಷ್ಟವಹುದೂಯಿಲ್ಲಿ ಪ್ರಕೃತಿಯಿಂ ಪುರುಷನಿವ ತನ್ನ ತಾಂ ಪಿರಿದಿಡುವ ಶ್ರೀಮೂರ್ತಿ ತಂತ್ರದಲ್ಲಿ (ಕುಲಿದ. ೨೮-೦೦); ನಿನ್ನ ದುರಹಂಕಾರವನ್ನೆಲ್ಲ ಅಡಗಿಸಿ ಆಡವೀಪಾಲು ಮಾಡ್ದೇ ಇದ್ರೆ ನನ್ನ ನಾಲಿಗೆ ಹಿರಿದಿಟ್ಟುಬಿಡ್ತೀನೆ (ಅಶೋ. ೧೬೨).

[ದೇ. ‖ ತಮಿ. ಮಲ. ಪಿರಿ]

**ಪಿರಿ₂** ' ಪಿಱಿ ' ನೋ .

**ಪಿರಿ₃** (ನಾ) ನವಿಲುಗರಿ ; ಪೀಲಿ : ಅಂತು ಬರ್ಪಂತಃಪುರಕಾಂತೆಯರ ನಡುವೆ ಪಿರಿ [ ಪಾಠಾಂ. ಪೀಲಿದಟಿ]ಯ ತುಱುಂಗಲೊಳುದ್ಯಾನವಂಡಂ ಬೆರಸು ವನದೇವತೆಯ ಬರ್ಪಂತೆ . . . ಬಂದಳ್ (ಪರಪ. ೫-೯೯ ವ); ಪಣ್ಣಿದ ರಣದೊಳ್ನಿನ್ನಯ ಕಣ್ಣೆಲ್ಲಮನೊಂದುನಿವಿಷಮಾತ್ರದೆ ಪಿರಿಯಾ ಕಣ್ಣನಿಸಿ ತೋಱಿದೊಡೆ ಮುಕ್ಕಣ್ಣಂ ನಾನಲ್ತು (ಶಬಶ. ೧೧-೬೬).

[ದೇ. ‖ ತೆಲು. ಪಿರಿ]

**ಪಿರಿ₄, ಪೆರ್, ಪೆರ್ು₂, ಪೇರ್₁, ಹಿರಿ₂, ಹೆರ್, ಹೇರ್₁** (ಸಪೂರೂ). ' ಪಿರಿದು ' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : ' ಪಿರಿತನ ', ' ಪಿರಿಯಕ್ಕರ ' ಪರಾ. **ಪೆರ್** : ' ಪೆರ್ಗರಡಿ ' ' ಪೆರ್ಗಿಚ್ಚು ' ಪರಾ. **ಪೆರ್ು** : ' ಪೆರಂದಟ್ಟಾರ ' ಪರಾ. **ಪೇರ್₁** : ' ಪೇರಡವಿ ', ' ಪೇರಡಿ ' ಪರಾ. **ಹಿರಿ₂** : ' ಹಿರಿಗನಸು ', ' ಹಿರಿಗೆಯ್ಮೆ ' ಪರಾ. **ಹೆರ್** : 'ಹೆರ್ಗಂಬ' ಪರಾ. **ಹೇರ್₁** : 'ಹೇರಂಬು', ' ಹೇರಿಟ್ಟಿ ' ಪರಾ. [<ಪಿರಿದು₁]

**ಪಿರಿಕಿ₁, ಬಿರಿಕಿ** (ನಾ). ೧. ತಿರುಗಣೆ ; ಮರಸುತ್ತು : ಬಾಗಿಲುಗಳಿಗೆ ಇನ್ನೂ ಪಿರಿಕಿ ಹಾಕಿಲ್ಲ (ರೂಢಿ). **ಬಿರಿಕಿ** : ೨. ನೂಲು ತೆಗೆಯುವ ಸಾಧನ ; ತಕಲಿ : ಸಣ್ಣೆಳಗಳಂ ತೆಗೆದು ಸುತ್ತುತ್ತ ಬಿರಿಕಿಯಂ ತಿಣ್ಣನೇ ತಿರುಹುತಿರೆ (ದುಕಥ. ೯-೧೨).

[ದೇ. ‖ ತುಳು. ಪಿರಿಕಿ, ಪಿರಿಕಿ—ತಿರಿಚುವಿಕೆ, ತಿರುಗಿಸುವಿಕೆ]

**ಪಿರಿಕಿ₂, ಪಿರ್ಕಿ** (ನಾ). ೧. ಭಯ ; ದಿಗಿಲು : 'ಪಿರಿಕಿತನ' ಪರಾ. ೨. ಭಯಪಡುವವನು ; ಅಂಜುವ ಸ್ವಭಾವದವನು; **ಪುಕ್ಕಲ** : " ತ್ರಸ್ನುಃ, ಭೀರುಃ, ಭೀರುಕಃ, ಭೀಲುಕಃ— ೪ ಹೆದರುವವನ ಹೆಸರು.

ಭಯಪಡುವ ಪಿರಿಕಿ" (ಪಿವ್ಯಾ೦೩. ೪೨೯) ; ಪಿರಿಕಿ. ಪುರುಕ: ತಮಿಳಿನಲ್ಲಿ ಉ ಬಹುವೇಳೆ ಇ ಆಗಿ ಉಚ್ಚಾರವಾಗುತ್ತವೆ. ಪುಲಿ ಪಿಲಿ; ಇದರಂತೆ ಪುರುಕಿ ಪಿರಿಕಿ ಆಗಿದೆ. ಅರ್ಥ ಪುಕ್ಕಲುಮನುಷ್ಯ (ಹಮ್ನುಕು. ೧೦೭). **ಪಿರ್ಕಿ**: ೩. ಹುಚ್ಚು; ಮರುಳು: ಅವರಿಗೆ ಪಿರ್ಕಿಯೆಂದು (ಹುಚ್ಚೆಂದು) ನನಗೂ ಪಿರ್ಕಿಯೇ ? (ಗಂಗಾವ. ೧೭೩). ೪. ಹುಚ್ಚ ; ಮರುಳ : ಆತ ಏನಾದರೂ ಪಿರ್ಕಿಯ ಹಾಗೆ ಮಾತಾಡಲಿಕ್ಕೆ ಹತ್ತಿದನೆಂದರೆ ಕೂಡಲೇ . . . ಕುಂಕುಮವನ್ನು ಸ್ವಲ್ಪ ಅವನ ಮೇಲೆ ಹಾರಿಸಿಬಿಡಿ (ಕೃಮೂಂಗ. ೨೭); ಸಾಣೆಕರ್‌ನಂತಹ ಮಿತ್ರರೇ "ಅದೊಂದು ಪಿರ್ಕಿ ಅಲ್ಲವೇ" ಎಂದು ಅನ್ನುವುದೂ ಉಂಟು (ಶಿವಾಉ. ೨೭).

[ ದೇ. ॥ ತಮಿ. ಪಿಱುಕ್ಕ ; ತೆಲು. ಪಿರಿಕಿ, ಪಿಱಿಕಿ ]

**ಪಿರಿಕಿತನ** (ನಾ). ಭಯ ; ಅಂಜಿಕೆ: ಇಷ್ಟಾದ ಮೇಲೂ ನಮ್ಮ ಕಷ್ಟ ನಿವಾರಣೆಯಾಗಲಿಲ್ಲ ; ನಮ್ಮ ಪಿರಿಕಿತನ ದೂರವಾಗಲಿಲ್ಲ (ಕಂಚುಕ್ರ. ೩).

[ಪಿರಿಕಿ$_2$ + —ತನ]

**ಪಿರಿಕಿಸ್ವಭಾವ** (ನಾ). ಅಂಜುವ ಸ್ವಭಾವ ; ಪುಕ್ಕಲುತನ : "ಪಿರಿಕಿ ಸ್ವಭಾವದ ; ದಿಗಿಲು ಬೀಳುವ ; ಠೇಗುವ" (Jumpy. ೩೦೯೩).

[ ಪಿರಿಕಿ$_2$ + ಸ್ವಭಾವ ]

**ಪಿರಿಕೆಱ್** (ನಾ). ಒಂದು ಊರಿನ ಹೆಸರು : ಅವಿನೀತಮಹಾಧಿರಾಜೇನ ದತ್ತೇನ ಪಡಿಯೇಟಱ್ಳೊಳಂ ಊರೂರೊಳ್ವಿನ್ನಿರ್ಕ್ಕಣ್ಣುಗಱ್ಗೆಯ್ದು ಅಪ್ಪಲಿಮಣ್ಣಾಂ ತಳವನಪುರದೊಳ್ಮಲವಿತ್ತಿಯ ಮಣ್ಪೊಗರಿಗೆಱ್ಯೊಳ್ಪ ನ್ನಿರ್ಕ್ಕಣ್ಣುಗಂ ಪಿರಿಕೆಱ್ಯೊಳಂ ರಾಜಮಾನಂ . . . ದತ್ತಂ (ಎಕ. I. ೦-೨೦ ; ೬೦೦). [ ಪಿರಿ$_4$(< ಪಿರಿದು$_1$) + ಕೆಱ್ ]

**ಪಿರಿಚು**, ಪಿರುಚು, ಪಿಱಿಚು, ಪಿಱುಚು (ಕ್ರಿ). ೧. ಬೇರೆ ಮಾಡು ; ಪ್ರತ್ಯೇಕಿಸು : ಪೊಱಗೇನಾದೊಡಂ ಕಱಿತು ತದ್ರೂಪಮಂ ಪಿರಿಚುತದ ಱಸ್ತಿಭಾತಿಗಳನಾತ್ಮನೆಂದಱಿಯಲೊಂದನೆಯ ಸವಿಕಲ್ಪ (ಅಸಪಾ. ೬-೪-೦೦); ಬಱಿದೆ ಹೋಗದಿರು ಬಾ ಬಾರೆಂದು ಕರೆದೊಂದು ಮಿಱುಗುವ ಪದಕವ ಕೊಟ್ಟ ಪಿರಿಚಿ ಮಾತ್ರವಳೊಡನಿದ್ದರ ಮನ್ನಿಸಿ ನೆಱೆಜಾಣ ಬೀಳ್ಕೊಟ್ಟನೊಡನೆ (ಶಶಕ. ೪೯-೬೬). ೨. ಬೇರೆಯಾಗು ; ಅಗಲು ; ಬಿಟ್ಟುಹೋಗು : ಮಱಸಿದೆ ತಾಯಿತಂದೆಯ ನಿಜದೇಶವ ತೊಱಸಿದೆ ಸಕಲಸುಖಗಳಿಂದ ನೆಱೆ ನಿನ್ನ ನಲ್ಗುಣಗಳ ಮೆಚ್ಚಿದೆನಿನ್ನು ಪಿರಿಚಿ ಸೈರಿಪೆ ನೆಂತೊ (ಸೊಬಸೋ. ೯-೬೨); ನೆಱೆಯದಿರಕ್ಕ ಬೇಗದಿ ನೆಱೆದಾಗೆಮ್ಮ ಪಿರಿಚಿ ಹೋಹಿರಿ (ಶಶಕ. ೧೩-೯೩). P ಮೇಲಿನ ಎಲ್ಲ ಪ್ರಯೋಗಗಳಲ್ಲಿ ಶಕಟರೇಫದ ಪ್ರಾಸವಿರುವುದು ವಿಮರ್ಶಾರ್ಹವಾಗಿದೆ. **ಪಿರುಚು** : ೧. ಪೊರಗಣ ಘಟಾದಿ ವಿಷಯದ ನಾಮರೂಪಗಳ ಪಿರುಚುತುಳಿದಸ್ತಿಭಾತಿ ಪ್ರಿಯಗಳ ಸ್ಮರಿಸುವುದೆ . . . ಸವಿಕಲ್ಪಕಸಮಾಧಿಯಹುದು (ಕೈಕಶ. ೩-೬೭-೦). Δ **ಪಿಱಿಚು** : ೧. ಕಟುಗೊಡಗೆಯನೂ ಪಿಱಿಚಿ (ಕೌಶಿ. ೧೯೬೪, ಪುಂಗನೂರು. ೦೩೬-೦೦ ; 1419). Δ **ಪಿಱುಚು** : ೧. ಅರಸಣ್ಣ ಹೆಗ್ಗಡೆ ತಾನು ತೆಱುವ ಭಂಡಾರಸ್ಥಳದ ನೆಲುವಾಗಿಲಿಗೆ ಒಕ್ಕಲನು ವಿಂಗಡಿಸಿ ಕೊಂಡು ಧರ್ಮಸ್ಥಳವಾದ ತುಂಬುರವಳ್ಳಿಗೆ ಒಕ್ಕಲ ಪಿಱುಚಿ ಕೊಟ್ಟು (ಮೈಆಲ. ೦೯೬೨, ೪೨-೩೦; 1418); ಪಟ್ಟದ ಗ್ರಾಮಕ್ಕೆ ಬಾರಕೂರ ರಾಜ್ಯ ದೊಳಗೆ ಯಿಂನೂಱ ಅಯಿವತ್ತು ವರಹನ ಹುಟ್ಟುವಳಿಯ ಗ್ರಾಮವನೂ ಪಿಱುಚಿ ಕೊಡ ಹೇಳಿ (ಮೈಆಲ. ೦೯೬೪, ೩೦-೭ ; 1451). [ಪಿರಿ$_1$ + —ಚು$_1$]

**ಪಿರಿತನ**, ಹಿರಿತನ (ನಾ). ೧. ಹಿರಿಮೆ; ಮೇಲ್ಮೆ; ಶ್ರೇಷ್ಠತೆ : ವಯಸ್ಸಿ ಗೇಂ ಪಿರಿತನಮೆ ? ನಿನ್ನ ಪೆರ್ಮೆಗೆ ವಂದಿ ನಿನ್ನಾತ್ಮದೊಱೆ ; ಮೇಣ್ ನಿನ್ನ ತೇಜಕ್ಕೆ ಸಾಕ್ಷಿ ನಿನ್ನಕ್ಷಿ ಕಮಲಾಕ್ಷ ! (ಶ್ರೀರಾಮಪಾ. ೦೩೩-೨೫೯). **ಹಿರಿತನ** : ೧. ಅಪಕಾರಿಗುಪಕಾರವೆಸಗುವುದಾದರೆ ಅದರೊಳು ಹಿರಿತನವುಂಟು (ಜಂಕಾತ. ೨೨-೯೯) ; ಹಿರಿತನಕ್ಕೂ ಕಿಱೆತನವೇ ವಿಗಿಲು ಇದರೊಳಿಲ್ಲ ಔಚಿತ್ಯದ ದಿಗಿಲು (ಗಜೇಶ. ೨-೨೭). ೨. ಒಡೆತನ ; ಯಜಮಾನಿಕೆ : ಹಿರಿತನಕ್ಕೊಲ್ಲೇಗುತ್ತಿ ಗರುವಿಕೆ ಮಾಡುತ್ತಿ ನೆರೆಹೊರೆಯರ ಕೂಡ ಬಡಿ ದಾಡುತ್ತಿ (ತುರಂಡ. ೪-೦೩-೩) ; ತೊತ್ತಿಗೇತಕೆ ಮನೆಯ ಹಿರಿತನ (ಶ್ಯಾಕಹಂ. ೦-೩೦). ೩. ಪ್ರಾಚೀನತೆ : ಈ ಕಾವು ಶಬ್ದದ ಹಿರಿತನವು (ಪ್ರಾಚೀ ನತೆಯು) ಕಾವೂರು, ಕಾವಾಡಿ . . . ಇತ್ಯಾದಿ ಊರ ಹೆಸರುಗಳ ಮೂಲಕವೂ, ಕಾವಕ್ಕ, ಕಾವಮ್ಮ, ಕಾವು ಎಂಬ ಹೆಂಗಸರಲ್ಲಿ ಬರುವ ಹೆಸರುಗಳ ಮೂಲಕವೂ ಉಳಿದು ಬಂದಿದೆ (ಕುಕುಶಾ. ೨೦೯).

[ಪಿರಿ$_4$ (< ಪಿರಿದು$_1$) + —ತನ]

**ಪಿರಿತಿನಿ** ' ಪಿಱಿತಿನಿ ' ನೋ.

**ಪಿರಿತಿನಿಸು** (ನಾ). ಮಾಂಸಾಹಾರ : ನರಿಗೇನು ಪಿರಿತಿನಿಸೊ ಕಾಯಂಗಳೊ ಬೇಕೆರಡು (ಕಾಲಜ. ೩೬-೬೦). [ಪಿರಿ$_2$ (< ಪಿಱಿ) + ತಿನಿಸು$_1$]

**ಪಿರಿದೀ** (ಕ್ರಿ). ಹೇರಳವಾಗಿ ಕೊಡು ; ಹೆಚ್ಚಾಗಿ ಕೊಡು ; ಅಧಿಕವಾಗಿ ನೀಡು : ಅವಂದಿರ್ಗೆ ಪಿರಿದಿತ್ತು ಕಳಿಪುತೆ (ಜಂಅಪು. ೦೨-೦೯೬೫) ; ಧನಮಂ ಪಿರಿದಿತ್ತಪೆನೆಂಬ ಮಾಳ್ಕೆಯಂ ಮನದೊಳಮರ್ಚಿ (ಶಾಂತಿ. ೦೦-೦೬೩). [ ಪಿರಿದು$_2$ (< ಪಿರಿದುಂ) + ಈ$_2$ ]

**ಪಿರಿದು$_1$**, ಹಿರಿದು$_1$ (ನಾ). ೧. ದೊಡ್ಡದು ; ಗಾತ್ರವಾದುದು ; ಘನ ವಾದುದು : ಎಣ್ಬರಿಂದಂ ತಳರ್ಚಲಾಱದಂತಪ್ಪ ಪಿರಿದೊಂದು ಸಿಲೆಯಂ ತಂದು ತಲೆಯುತ್ತಿಟ್ಟು ಪಟ್ಟಿರ್ದುದಂ . . . ಕಂಡು (ವಡ್ಡಾರಾ. ೬೩-೨೭) ; ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾರತ ಮನಪೂರ್ವಮಾಗೆ ಸಲೆ ಪೇಳ್ದ [ಕವೀಶ್ವರರಿ]ಲ್ಲ (ಪಂಪಭಾ. ೦-೦೦); ಪಿರಿದೊಂದು ವಸ್ತು ದೊರೆಕೊಂಡುದು ಬಾರ್ಪುರೆ ಬರ್ದನೆಂದು ರಕ್ಕಸ ನಿದಿರೆರ್ದು ಕೊಲ್ವ ಪದದೊಳ್ (ಸುಕುಮಾ. ೭-೦೭). ೨. ಮಿಗಿಲಾದುದು ; ಹೆಚ್ಚಾದುದು ; ಅತಿಶಯವಾದುದು : ಇಂತಪ್ಪ ಕ್ಷತ್ರಿಯಪುತ್ರಪ್ರದಿ ಗಳೆಲ್ಲಮೆನಗೆಱಗಿ ಪೊಡೆವಟ್ಟು ಕಿಂಕರ್ವಾರ್ಣಂಗೆಯ್ದಪ್ಪರುಣ್ಬುದರ್ಕೇನೀ ಗಳ್ ಸಂಕಟಮಿಪ್ಪ ತಪದ ಫಲಮಿನ್ನುಂ ಮುಂದೆ ಪಿರಿದುಂಟೆಂದು ಬಗೆ ದಿಂದುಪವಾಸಂಗೆಯ್ದಪ್ಪ (ವಡ್ಡಾರಾ. ೬೨-೦೭) ; ಮುಳಿಸೆಂಬುದೆನಗೆ ಕೌರವರೊಳೆ ಪಿರಿದು (ಪಂಪಭಾ. ೬-೬೨) ; ಪಿರಿದಪ್ಪ ಸಂತಸಮನೆಯ್ದೆ ಬಸಂತಂ . . . ನಿಷ್ಪಾಳಿಮಂ ಸೂಟ್ಸಿಸವೇಟಲ್ (ಅನ್ನಾಚಾ. ೩೨೦); ಬೆಟ್ಟಗಳ ಕಪಿನಿಕರ ತಂದೊಡೆ ಕಟ್ಟಿದನು ನಳ ರಾಮ ಶರಧಿಯ ಕಟ್ಟಿದುದು ಪಿರಿದಲ್ಲ (ಸಂಶಕ. ೨೦-೬೬). ೩. ಶ್ರೇಷ್ಠವಾದುದು ; ಮೇಲಾದುದು : ಕತೆ ಕಿಱಿದಾದೊಡಂ ಕತೆಯ ನಾಯಕನುನ್ನತವಂಶವೀರ್ಯವಿಶ್ರುತ ಮಹಿಮಪ್ರಪಂಚಿತಗುಣಂ ಪಿರಿದು (ತತ್ವಕ್ರು. ೦-೯೬). (ಗು). ೪. ಹೆಚ್ಚಾದ ; ಅಧಿಕವಾದ ; ಬಹಳವಾದ : ಕುದಿಕುಱಿದತ್ತಣಂ ಕುದುರೆ ನ್ನೂಱಱೊಳು ಬಲದಾನೆ ಪತ್ತು ತಾಗಿದುವೆನೆ ದೋಷಮಾ ಪಿರಿದುಸಂಖ್ಯೆಯೊಳೇಕಬಹುತ್ವಸಂಗದಿಂ (ಕಪಿರಾ. ೦-೦೨೦); ಪಿರಿದು ಮಾಹೇಕೆ ಸಿಲುಕಿದವೆಮಗೊಡೆಯರಿಲ್ಲ (ಶಶಿರ. ದೇ. ೦೭-೦೦); ಪಿರಿದು ಭಂಗವನಾಂತೆನೆನುತಬ್ಧಿ ತಗ್ಗಿ ತಾಂ ಹೆಚ್ಚುಕುಂದಿನೊಳೆಸೆದುದು (ಶಂತ್ರಿ. ೨-೩). ೫. ಶ್ರೇಷ್ಠವಾದ ; ಮೇಲಾದ : ಪಿರಿದೈರಾವತವನು ಪೂರ್ಣ ಚಂದ್ರನ . . . ಕಂಡು ನೆಱೆ ಕಣ್ದೆಱೆದಳು (ಶಂಪಪು. ೪-೩೨). ೬. ಅತಿಶಯ ವಾದ; ಮಿಗಿಲಾದ; ವಿಶೇಷವಾದ : ಕಿಱಿದಱೊಳೆ ಪಿರಿದುಮರ್ಥ ಮನಱಿಪಲ್ ನೆಱೆವಾತನಾತನಿಂದಂ ನಿಪುಣಂ (ಶಬರಾ. ೦-೦೩) ; ನೀಲ ನಿಷಧಮುಮನೆಯ್ದಿಪ ನೀಲದ ಗಜದಂತಗಿರಿಗಳಾಳ್ದುವು ಪಿರಿದುಂ ಲೀಲೆಯಂ (ಅದಿಪು. ೨-೨೬); ತಪದ ಪಿರಿದಟ್ಟುಯಿಂದಿದನಮರ್ವಿರಾರುಮ ಱಿಯೆ ನೆಱೆಯೆ ಪೇಱಿಸಿ (ಜಾಂತಿಪು. ೦-೩೩). **ಹಿರಿದು$_1$** : ೧. "ವಳ— ಸ್ಥೌಲ್ಯೇ, ಹಿರಿದರೊಳಂ, ಕಿರಿದರೊಳಂ" (ಕಾಶಕ್ಕ. ೨೦); ಅಲ್ಪವೊ ಭೂಮಪೊ ಹಿರಿದೋ ಕಿರಿದೋ . . . ರಸಪ್ರಯೋಜಪ ಭುವನಂ

ಕವನಂ : ಭಗವಂತನೆ ಕವಿ, ಸಹೃದಯನಾಂ! (ಅಜಿಇ. ೩೦-೧) ೨. ಪಿರಿದಪ್ಪ ಸ್ನೇಹಂ ಸಿಂಹಕ್ಕಂ ವೃಷಭಕ್ಕಂ ಕಾಂತಾರದೊಳಾಗಿರಲ್ (ಪಂತಂ. ೨೦.೦೦); ಹಾನಿ ಪಿರಿದುಂಟೆಱೆವೆನಂಗಸ್ಪಂದಶಕುನದಲಿ (ಸಂಕಿಕ. ೦೬-೦೯); ಪರಿಕಿಸಲು ಕೋಡಗದ ಮಾಂಸವು ನರಪತಿಗಳಿಗೆ ಯೋಗ್ಯವೇ ಹೇಳರಸ ಪಿರಿದಹ ಹೇಸಿಕೆಯ ಕೈಕೊಂಡೆ (ಕುಠಿರಾ. ೪-೪-೩೬). ೪. ಪಿರಿದು ದುಃಖವಹ ಧನದಿಂ ಕಪಟಿಯಾದ ಮಿತ್ರನಿಂದೇಂ ಪ್ರಯೋಜನಂ (ಪಂತಂ. ೧೧೧-೦೫); ಲಸತ್ಕ್ಷಿತಿಯಿದನಾಂ ಪುಣ್ಯನಿಮಿತ್ತಂ ಪಿರಿದುಂ ಹರಿಸದೊಳುಸಿರಿದೆನು (ಜಯುಣ. ೦-೨೬). ೫. ಪಂಚಭೂತಮಯವಾದ ಬ್ರಹ್ಮಾಂಡ ಶರಣಸಂಗದಲ್ಲಿ ಪಂಚಬ್ರಹ್ಮಮಯವಾಯಿತ್ತಾಗಿ ಇಷ್ಟಖಂಡಿತವಾಗಿ ಸೌರಾಷ್ಟ್ರ ಸೋಮೇಶ್ವರನ ಶರಣರಿಗೆ ಪಿರಿದೊಂದು ಘನವಿಲ್ಲ (ಆದವ. ೪೩-೧೧೧). 'ಕಿಱಿದು' ಪರಾ.

**ಪಿರಿಪಿರಿದು, ಹಿರಿಹಿರಿದು** (ದ್ವಿರುಕ್ತಿ) : ಪಿರಿಪಿರಿದಾಗಿ ಗಡಣಿಸಿದೆನುತ . . . ಒಳಗಿಹ ಕೊಪ್ಪರಿಗೆಗಳನನಿತುಮಂ ತರಹೇಳು ಬೇಗದೊಳೆನುತ (ಬಸತ್ಕ. ೫೪-೦೬); ಗುಹೇಶ್ವರಲಿಂಗವ ಕಿಱಿಕಿಱಿದಾಗಿ ನೆನೆದರೆ ಹಿರಿಹಿರಿದಾಗಿ ಕಾಡುವದು ನೋಡಾ ಮಱಹು (ಶೂನ್ಯಸಂ. ೦೩೩-೪). **ಪಿರಿದಾಗು, ಹಿರಿದಾಗು** = ಹೆಚ್ಚಾಗು; ವೃದ್ಧಿಯಾಗಂ; ಬೆಳೆ : ರಾಗಂ ಪಿರಿದಾಯ್ತು ವಸಂತಾಗಮದೊಳ್ (ಪುಣ್ಯಕ. ೫-೬); ಒರ್ವ ಬಾಲೆ ಮುಗ್ಧೆ ಹರೆಯಂ ಕಿಱಿದು ಯೌವನಂ ಪಿರಿದಾಗಿ ಮುಖವೆಲ್ಲಂ ಕಣ್ಣು . . . ನೋಟವೆಲ್ಲಂ ಬೇಟವೆನಿಸಿ (ಸಂಬರ. ೪-೫೬); ಎನಿತೆನಿತು ಭೂಮಿ ಕ್ರಮದಿಂ ಮಾಱ ಕಿಱಿದಾಗೆ ಅನಿತನಿತು ತನ್ನಯ ಮನಂ ಹೆಚ್ಚಿ ಹಿರಿದಾಗೆ (ತೀಠ. ದೀ. ೫೦-೨); ಇತ್ತ ದಿನ ಹಿರಿದಾದವೀಗಳು ಹೊತ್ತ ಕಾರ್ಯದ ಹೊಱಗೆ ಯಾವುದೊ ಹದನ ಹರಿ ಬಲ್ಲ (ಸಂಭಕ. ೫-೬೩). **ಪಿರಿದು ಮಾಡು** = ಹೆಚ್ಚು ಮಾಡು; ವಿಸ್ತರಿಸು; ದೊಡ್ಡದಂ ಮಾಡು : ಮಹಾದ್ಭುತಭಯರೌದ್ರ ಭಯಾನಕವೀರರಸಂಗಳನೆ ಕಪಟಕ್ರಿಯೆಯಿಂ ಪಿರಿದು ಮಾಡಿ ಪೇೞ್ವುದುಂ (ಪಂತಂ. ೪೬-೦೯). **ಪಿರಿಯ, ಹಿರಿಯ** = ೧. (ವಯಸ್ಸು, ಪ್ರಭಾವ, ವಂಶ, ಗುಣ ಮೊದಲಾದುವುಗಳಲ್ಲಿ) ದೊಡ್ಡವನು; ಶ್ರೇಷ್ಠ : ಏಂ ಪಿರಿಯನೋ ಖಗೇಂದ್ರಾಧೀಶಂ (ಶಾಂತಿಪು. ೩-೯೩); ಕುಲಗಳೊಳು ಕಿಱಿಯಂ ಮನದೊಳು ಪಿರಿಯಂ (ತಿರುನಾ. ದೀ. ೨೦೫-೦೫); ಧರ್ಮಶಾಸ್ತ್ರದೊಳು ಭೇದಿಸಿ ಪಿರಿಯರು ಪೇಳಿದುದನೆ ಕೃತಿಗೈದಾನು ಕಿವಿಗೊಳಿಸಿದೆನು (ಜಿದಿಬ. ೦-೫೦); ಮನಸು ಹೇಸದೆ ಕೂಡಿಕೊಂಡಿಪ್ಪನುವ ನೋಡಾ ಹರಹರಾ ತನಗನುಮತಮಾಯಿದು ತಾವು ಸರ್ಬಕೆ ಹಿರಿಯರಾಗಿರ್ದು (ಬಸತ್ಕ. ೫೬-೯) ; ಅರಸನಾಗಲಿ ಧನಿಕನಾಗಲಿ ಹಿರಿಯನಾಗಲಿ ಬಡವನಾಗಲಿ ಮರಣ ಜನಿಸಿದ ಬಳಿಕ ತಪ್ಪದು (ಕುಮಾವ್ಯದ್ರೋ. ೬-೨೪) ; ವಿಜಯದಾಸರು ಮನೆಯ ಹಿರಿಯರಿದ್ದಂತೆ ಊರಿನ ಹಿರಿಯರೂ ಆಗಿದ್ದರು (ಕಂಜಹು. ೦). ೨. ಮೊದಲನೆಯ ಮಗ; ಜ್ಯೇಷ್ಠಪುತ್ರ : ಹಿರಿಯನಲಿ ಜನಕಂಗೆ ಮೋಹವು ಕಿಱಿಯನಲಿ ಕಡುಮೋಹ ಜನನಿಗೆ (ಸಂಭಕ. ಶಂ. ೦-೩೯). ೩. ಪತಿ; ಯಜಮಾನ : "ಹಿರಿಯ . . . ಹಿರಿಯ" ಅವಳ ನಾಲಗೆ ಆ ಅಕ್ಷರಗಳನ್ನು ಉಚ್ಚರಿಸಬೇಕಾದರೆ ಏಕೋ ತೊದಲಿದ ಹಾಗೆನ್ನಿಸಿತು (ಗೂಗಾಗ. ೦೩೦); ನಮ್ಮ ಹಿರಿಯಾ ಮೊದಲಿನ ಗುಣಾ ಬಿಟ್ಟು ಸಂಭಾಯತ ಆಗಿದ್ದ. ಈಗ ಗೌಡರು ಬರಾಣಾ ಮತ್ತ ಕುಡಿಯೂದು, ನನ್ನ ಹೊಡಿಯೂದು, ನಡಿಸ್ಯಾನ (ಗ್ರಾಮಾಹು. ೫೨೦). ೪. ಬ್ರಾಹ್ಮಣ; ದ್ವಿಜ : "ದಿಮ್ಮಿದರುಮೆನಲ್ ಸ್ಯೆದರೆನೆ ಗನಹರೆನೆ ಪೇರಿದರ್ ಪಾರ್ವರೆನೆ ಪಿರಿಯರೆನೆ ದ್ವಿಜರ ನಾಮಂ" (ಕಬ್ಬಮಂ. ೫೩). **ಪಿರಿಯ ಕೋಲ್, ಹಿರಿಯ ಕೋಲ್** = ೧. ದೊಡ್ಡ ಕೋಲು; ಬಲವಾದ ದೊಣ್ಣೆ. ೨. ಭೂಮಿಯನ್ನು ಅಳೆಯಲು ಉಪಯೋಗಿಸುವ ಒಂದು ಬಗೆಯ ಅಳತೆಗೋಲು : ಸುಗನ್ಧವರ್ತಿಸೀಮೆಯಿನ್ದ ಪಡುವಲು ಪಿರಿಯ ಕೋಲಲು ಮತ್ತರು ೬ (ಶಾಇಇ. XX. ೦೩-೪ : 875) ; ಸರ್ವ್ವನಮಸ್ಯ ಸರ್ವ್ವಬಾಧಾಪರಿಹಾರವಾಗಿ ಬಿಟ್ಟ ಕೆಯಿ ಹಿರಿಯ ಕೋಲ ಮತ್ತರೇಳು (ಇಇ. II. ೨೪-೩೨; 1167). **ಪಿರಿಯ ಪಾಲಾಳ್** = ದೊಡ್ಡವಂಶಕ್ಕೆ ಸೇರಿದ ವ್ಯಕ್ತಿ; ಉತ್ತಮಕುಲಕ್ಕೆ ಸೇರಿದವನು : ನೀನ್ ಕಂಡಪಯ್ ! ಪಿರಿಯ ಪಾಲ್ ಆಳ್ಗಳ್ ಕೀೞ್ವೞಿಯ ಕೊಳ್ಗಿಯನ್ ತಾಮೆಂದುಮುಱಿಯರ್. ಪಿರಿದೞಿವರೆಂದು (ಅಂಚಿಗೂ. ೦೫-೨೪೦). **ಪಿರಿಯ ಮಗ, ಹಿರಿಯ ಮಗ, ಹಿರೀಮಗ, ಹಿರೇಮಗ** = ದೊಡ್ಡ ಮಗ; ಮೊದಲನೆಯ ಮಗ; ಜ್ಯೇಷ್ಠಪುತ್ರ : ಹರಿಶ್ಚಂದ್ರನೆಂಬ ತನ್ನ ಪಿರಿಯ ಮಗನಂ ಕರೆದು ... ಪೇೞ್ದೊಡೆ (ಅದಿಪು. ೨-೦೪ ಪ); ಅರಸನ ಪಿರಿಯ ಮಗನನೀಗಳೆ ಪೋಗಿ ಕೊಂದಪೆಂ (ಪಂತಂ. ೦೦೩-೩); ಧುರವಿಶಾರದನಹೆ ವಿರಾಟನ ಹಿರಿಯ ಮಗ ನೀನೆಂದು ಗೋಕುಲಹರಣದಲಿ ಕಲಿಯಾಗಿ ಕಾದಿದೆಯೆನುತ ತೆಗೆದೆಚ್ಚ (ಕುಮಾವ್ಯವಿ. ೫-೨೫); ನೃಪೋತ್ತಮನ ಹಿರಿಯ ಮಗ ತಾನೀಗ ತನ್ನಂತರದಲಾ ಭರತಂಗೆ ಸೇರಿತು ಧರಣಿ (ಕುಠಿರಾ. ೪-೨-೨) : ಅವರ ಹಿರೀಮಗ ದೊಡ್ಡ ಕೆಲಸದಲ್ಲಿದ್ದಾನೆ (ಕೂಶ); ಹಿರೇಮಗ ಮಹಮದಶಾಬಾಸಾಹೇಬರು . . . ಈ ವರ್ತಮಾನವೆಲ್ಲ ಹೇಳಿದರು (ಸ್ವದಕ. ೨೯). **ಪಿರಿಯವು** (ಬಹುವ) = (ವಯಸ್ಸು, ಆಕಾರ, ಗಾತ್ರ, ನೀಳತೆ ಮೊದಲಾದುವುಗಳಲ್ಲಿ) ದೊಡ್ಡದಾದುವು : ನಿಡಿಯಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯವಪ್ಪವಾ ಪುರವರದೊಳ್ (ಕಾವ್ಯಸಾ. ೦೬೯ ಕುಂದ್ರ೪) ; ವಾಯುಭೂತಿಯುಂ . . . ವಿದ್ಯಾಧರ ಲಿಂಗಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪುಟ್ಟಿ ಪಿರಿಯವಪ್ಪ ಪೊಱೆಗಳಂ ಪೊತ್ತು ಪೋಗಿ (ವಡ್ಡಾರಾ. ೯-೧). **ಪಿರಿಯಾಕೆ, ಹಿರಿಯಾಕೆ** = ದೊಡ್ಡವಳು; ಜ್ಯೇಷ್ಠಳಂ : ಎಲ್ಲರಿಂ ಪಿರಿಯಾಕೆ ನಿನ್ನನಲ್ಲದೆ ಪೆಱರನೊಲ್ಲೆನೆಂದಿರ್ದೊಡೆ ಮತ್ತಿನಿರ್ವರುಮಂ ಮದುವೆಯಂ ಮಾಡಿ (ಪಂಪಭಾ. ೦-೬೪ ವ); ಆಕೆಯೇ ಆ ಮನೆಗೆಲ್ಲಾ ಹಿರಿಯಾಕೆ (ಕೂಶ). **ಪಿರಿಯಾತ** = ದೊಡ್ಡವನು ; ಜ್ಯೇಷ್ಠ : ಪಿರಿಯಾತಂ ಸ್ವಭಾವದಿಂ ಋಜುಮಾರ್ಗವೃತ್ತಿಯುಂ ತಳೆದು ವಿನಯವಿಭೂಷಣನಾದಂ (ಸುಕುಮಾ. ೨-೫೭ ವ). **ಪಿರಿಯೊಟ್ಜಿ, ಪಿರಿಯೊಟವೆ, ಹಿರಿಯೊಬ್ಬೆ** = ದೊಡ್ಡ ಮಂಳಗ್ಳ ಪೊದರು,—ಬೇಲಿ(?) : ಪೆರ್ಬೞ ದೊಳಗಣ ಬಾದುಪೊಲದಿನ್ದ ಪಿರಿಯೊಟ್ಜಿಯ ಕೈವರದೊಳ್ ಒನ್ದು ಮಾನ್ಯಂ (ಎಕ. X (೪), ಶಿಕ್ಯ. ೧೦೬-೭೨ ; 850) ; ಪೆರ್ಬೞದೊಳಗಣ ಬಾದುಪೊಲದಿಂದೆ ಪಿರಿಯೊಟವೆಯ ಕೈಪರದೊಳೊಂದು ಮಾನ್ಯಮ್ (ಕ್ಯಾಅ. ೦೯೦೪, ೦೩-೭೨ ; 806) : ಅಲ್ಲಿಂ ತೆಂಕ ಹಿರಿಯೊಬ್ಬೆಯಿಂ ಪೋಗಲು ಬಿಂಬಿಸೆಟ್ಟಿಯ ಕೆಱೆಯ ಕೋಡಿಯ ಕೀೞ್ಬಯಲು . . . ಅಲ್ಲಿಂ ಹಡವಲು ಹಿರಿಯೊಬ್ಬೆಯ ಸೆಳ್ಳಮೊಱಡಿಯ ಹಡುವಣ ಬಳ್ಳಿಯ ಕೆಱೆಯ ತೆಂಕಣ ಕೋಡಿಯ ಬಳರಿಯ ಬನ (ಎಕ. II, ೩೪೫-೬೦; ಕಿ. 1159). **ಪೆರ್ಗಾಪಂ** = ಅತಿಶಯವಾಗಿ ಕಾಪಾಡುವವನು ; ವಿಷ್ಣು : ಸೃಷ್ಟಿಸುವ ಸಮರ್ಥ ಪೆರ್ಗಾಪನೈಶ್ವರ್ಯಕರ್ತಳೀತನ ರಾಣಿ ನಿಖಿಳಮೈಭೋಗವು ವ್ಯರ್ಥ ದ್ವಾರಕಿ ದೊಡ್ಡಿತಹುದೆ (ಮೋಚಕ. ೨೯-೨೭). **ಹಿರಿದಾಗಿ** = ಹೆಚ್ಚಾಗಿ ; ಬಹಳವಾಗಿ : ಹೆಮ್ಮೆಯಲಿ ಹಿರಿದಾಗಿ ಕೆಡುವರು (ಸಂಕಿಕ. ೩-೦೨) ; ವಿಪ್ರರಿಳೆಯನು ಮಂದಮತಿ ಕೈಕೊಂಡು ಕವರಿದನವರ ಹಿರಿದಾಗಿ (ಸಂಕಿಕ. ೨೬-೫೭). **ಹಿರಿದು ಕಿಱಿದು** = ಮೇಲು ಕೀಳು : ಕಿಱಿಯರಾದಡೇನು ಹಿರಿಯರಾದಡೇನು ಅಱಿವಿಂಗೆ ಹಿರಿದು ಕಿಱಿದುಂಟೆ (ಶೂನ್ಯಸಂ. ೦೬೦-೭೨). **ಹಿರಿಯ ಗಡಿಂಬ** = ಭೂಮಿಯ ಒಂದು ಅಳತೆ : [ಹಿ]ರಿಯ ಗಡಿಂಬದ ಕೋಲೊಳ್ ಬಿಟ್ಟ ಮತ್ತ ೬೦ (ಶಾಇಇ. XX. ೩೯-೪೦; 1064) **ಹಿರಿಯ ಗಳೆ** = ೧. ದೊಡ್ಡ ಕೋಲು. ೨. = ಪಿರಿಯ ಕೋಲ್ ೨ : ಹಿರಿಯ ಗಳೆಯಲು ಗದ್ದೆ ಕಮ್ಮ (ಎಇ. ೦೯೪೬.

ಕಾಪಗಲ್. ೨೨೯-೨೪; ೪). ಹಿರಿಯಾತನ, ಹಿರೇತನ = ೧. ದೊಡ್ಡತನ ; ಘನತೆ: ಹೆಚ್ಚುಗಾರಿಕೆ : ನಿಮ್ಮ ಹಿರಿಯತನಕೆ ಪಡಿಯುಂಟೆ (ಶಿವಕ. ಕೀ. ೦೧-೨) ; ತಿರುಗಿ ನೋಡಿದಡೀಗ ಸನ್ನೆಯ ಹಿರಿಯತನವಳಿವುದೆ (ಶಿಕತ್ತ. ೩೯-೨೨); ಹಿರಿಯತನದಲಿ ನೋಡೆ ಸರಸಿಜೋದ್ಭವನಯ್ಯ ಗುರುವುತನದಲಿ ನೋಡೆ ಜಗದಾದಿಗುರುವು (ತೊರೆಂಿಕ. ೨-೦೬೯-೦). ೨. ದೊಡ್ಡಸ್ತಿಕೆ ; ಅಹಂಕಾರ : ಈ ಕಾಂಗ್ರೆಸ ಚಂಡಾಲರು ಹಿರೇತನ ಮಾಡಿ ಯಾರಿಗೂ ಬಿರುದುಗಳು ಇರಬಾರದು ಅಂದ್ರು (ಹಕ್ಕೋಕ. ೨೬). ಹಿರಿಯ ಮಗಳು, ಹಿರೀ ಮಗಳು = ದೊಡ್ಡ ಮಗಳು ; ಜ್ಯೇಷ್ಠಪುತ್ರಿ: ಅವರ ಹಿರಿಯ ಮಗಳು ಊರಿಗೆ ಬಂದಿದ್ದಾಳೆ (ಕೂಅ) ; ನಾಳೆ ಅವರ ಹಿರೀಮಗಳ ಮದುವೆ (ಕೂಅ). ಹಿರಿಯ ಮಣೆ, ಹಿರಿಯ ಮಣಿ, ಹಿರೇ ಮಣಿ — "ಪಾಠಶಾಲೆಯಲ್ಲಿ ತರಗತಿಯ ಶಿಸ್ತು ನೋಡಿಕೊಳ್ಳುವ ಹಿರಿಯ ವಿದ್ಯಾರ್ಥಿ: ಹಿರೇಮಣಿ (ಹಿರಿಯ ಮಣಿ )" (Monitor, ೩೦೪೦): (ಪಾಠಶಾಲೆಯ) ಹಿರಿಯ ಮಣಿ (Captain. ೩೦೪೦) ; ಎರಡು ಮೂರು ವರುಷಗಳ ಕಾಲದಲ್ಲಿಯೇ ಈ ಹುಡುಗನು . . . ಪಾಠಶಾಲೆಯಲ್ಲಿ 'ಹಿರೇಮಣಿ'ಯಾದವನು (ಗುಚಿಶಾ. ೭). ಹಿರಿಯ ಸೊಳಸ = ಒಂದು ಅಳತೆಯ ಪ್ರಮಾಣ : ಮೂಲೆವತ್ತಂ ಹೇಱಿಂಗೆ ಹಿರಿಯ ಸೊಳಸ-೨ . . . ಮೆಳಸು ಹೇಱಿಂಗೆ ಹಿರಿಯ ಸೊಳಸ ೨ ಜೀರಗೆ ಹೇಱಿಂಗೆ ಹಿರಿಯ ಸೊಳಸ ೨ (ಸೌಇಇ. IX–1, ೦೭೨–೩೦; 1106). ಹಿರೆ ಹುದ್ದರಿ = ದೊಡ್ಡ ಎದುರಾಳಿ,–ಪ್ರತಿಸ್ಪರ್ಧಿ; ಹಿರಿಯ ಹುದ್ದರಿ: ರಾಮನೂ ಶೀನನೂ ಹಿರೆ ಹುದ್ದರಿಯಾಗಿ ತಿಳ್ಳಿಯಾಟವನ್ನು ಹೂಡಿರುವರು (ಶಿರಾಕ. ೯೬). ಹಿರೇ ರೋಗ = ೧. ದನಗಳಿಗೆ ಬರುವ ಒಂದು ಬಗೆಯ ಸಾಂಕ್ರಾಮಿಕ ಕರುಳುಬೇನೆ : (೩). ೨. ಒಂದು ಬಗೆಯ ಕಂಪ್ಪರೋಗ : (೩).

[ದೇ.॥ ತಮಿ. ಪೆರಿತು; ಮಲ. ಪೆರು ; ತುಳು. ಪೆರಿ ; ತೆಲು . ಪೇರು]

**ಪಿರಿದು₃** 'ಪಿರಿದಂ' ನೋ.

**ಪಿರಿದಂ, ಪಿರಿದು₃, ಹಿರಿದು₃** (ಅ). ೧. ಹೆಚ್ಚಾಗಿ ; ಅಧಿಕವಾಗಿ; ಬಹಳವಾಗಿ : ಕರಂ ಪಿರಿದಂ ಗಟಪುತ್ರಮಿರ್ಪಳಂ ಸಾರಿಕೆಯಂಬರಲ್ಲದಭಿಸಾರಿಕೆಯೆಂಬರೆ ಬುದ್ಧಿಯುಳ್ಳವರ್ (ಶಂಕಥಾ. ೪–೯೩); ಘನತೇಜೋಗರ್ಭದರ್ಬಿಂದಱಿಯದೆ ಪಿರಿದಂ ತನ್ನ ಪಾದಂಗಳಿಂ ಸನ್ಮುನಿಸ್ಪಂದಾಗಣ್ಯಪುಣ್ಯಾಪಾಳತನುತತಿಯಂ ಮುಟ್ಟಿಯುಂ (ಶಂಸಂಪು. ೦–೪೦) ; ಕಡೆ ಮೊದಲಳಿದ ಗಗನದ ನಡುವೆ ಪಿರಿದಂ ಬಳಸಿದಾ ವಾಯುತ್ರಿತಯದೊಳ್ (ಸಾಶ್ವಶಾ. ೦–೩೦). **ಪಿರಿದು₃** : ೧. ಅವನೀತಳಾದೊಡಂ ಪಲ್ಗಿಱಿದು ಪಿ[ಕಾಶಂ.ಬ]ರಿದು ಬಾಯಿಂದೆ ದೈನ್ಯಾಕ್ಷರಂ ಸಂಭವಿಸುತ್ತಿನ್ನಾಳ್ದ ಸಂದೇಶಮನೆ ಕರುಣಿಸಂದಲ್ಲಿ (ರಕ್ಷಾಶ. ೨೦) ; ಪಿರಿಯಂ ಅಃ ಪಿರಿದೀವನಿತ್ತುದಂ ನೆನೆವನೆ ಚೀ ಅದಂ ನೆನೆಯಂ (ಕಮುದ. ೦೫೨ ಶ್ರಿ.ಹೊ.) ; ಸರಳ ಹತಿಯಲಿ ನಕುಲ ಸಾತ್ಯಕಿ ಬಿರುದ ಸಹದೇವಾದಿ ವೀರರು ಪಿರಿದು ನೊಂದರು (ಕುಮ್ಮಾಶ. ೦೩–೪೨). ೨. ಅತಿಶಯವಾಗಿ ; ವಿಶೇಷವಾಗಿ ; ವಿಂಗಿಲಾಗಿ : ಅಂತು ಪಿರಿದೋಲಗಂಗೊಟ್ಟಿರ್ಪನ್ನೆಗಂ (ಶಂಕಥಾ. ೯–೨೮ ಪ). **ಹಿರಿದು₃** : ೧. ಅಳು ಹಿರಿದಿದ್ದೇನು ಫಲ ಹೀಹಾಳಿದ್ದೈವಕೆ ಬೇಱೆ ಪರಿಯ ವಿಚಾರವಿಲ್ಲ ವಿಪಕ್ಷದೊಳು (ಕುಮ್ಮಾಶ. ೦೩–೬); ನೊಂದಿರಿ ಪಿರಿದು ನಿಷದಱಿಂದ (ಕೊರೆಂ. ೦–೬–೬೩).

[< ಪಿರಿದು₁]

**ಪಿರಿಪಿರಿ** (ನಾ). ಒಂದು ಅನುಕರಣಶಬ್ದ : ಆತರು ಯಾವಾಗಲೂ ಪಿರಿಪಿರಿ ಎನ್ನುತ್ತಾರೆ (ತ್ಯಾಗಮು. ೦೩೬): ನೀವು ಇತ್ತಿತ್ತಲಾಗಿ ಎಂತದೋ ಪಿರಿಪಿರಿ ಮಾತಾಡುತ್ತೀರಪ್ಪ (ಹೊಸತ್ತ. ೬೬). 'ಕಿಱಿಕಿಱಿ' ಪರಾ.

**ಪಿರಿಪಿರಿ ತಿರುಗು** = ಸಮ್ಮನೆ ತಿರುಗಾಡು ; ಅತ್ತಿಂದಿತ್ತ ಅಲೆ : ದಿನದ ಇಪ್ಪತ್ತಾಲ್ಕು ತಾಸು ಪಿರಿಪಿರಿ ತಿರುಗಿ ದೇಶಮುದ್ಧಾರಕ್ಕೆ ದೇಹವನು ತೇಯ ಬಲ್ಲ (ಕಂಬು. ೨೮–೨೩) ; ಯಾವುದರ ಸಂಧಾನದಲ್ಲಿ ಎಷ್ಟೋ ವರ್ಷ ಅವಿಶ್ರಾಂತವಾಗಿ ಪಿರಿಪಿರಿ ತಿರುಗಿದ್ದೆನೋ ಅದರ ಸುಳಿವು ಈಗ ಹತ್ತುತ್ತಿದೆ (ಇತ್ಯಶ. ೩೪೬). **ಪಿರಿಪಿರಿ ಮಾಡು** = ತೊಂದರೆ ಕೊಡು ; ಪೀಡಿಸಂ ; ಕಿರಿಕಿರಿ ಮಾಡು : ಯಾವಾಗಲೂ ಏನೋ ಪಿರಿಪಿರಿ ಮಾಡುತ್ತ ಕಾಳಿತಿರುತ್ತಾಳೆ (ಹಳ್ಳಿಶಾ. ೦೦೬) ; ಬಸ್ಸಿನಲ್ಲಿ ಹೋಗೋಣ ಎಂದರೆ ಕಂಡೆಕಟ್ರು ಮಿಸಾನು ಬಸ್ಸಿನಲ್ಲಿದಲು ಪಿರಿಪಿರಿ ಮಾಡೋದು ಬೇರೆ (ಹೊಸತ್ತ. ೩೬) ; ನೆಟಸ್ತಿಕೆ ವಿಷಯ ಇನ್ನು ಪಿರಿಪಿರಿ ಮಾಡಬೇಡ (ಸರಸ. ೬೩).

**ಪಿರಿಯಕ್ಕರ** (ನಾ). [ಛಂದ] ದೇಸಿಛಂದಸ್ಸಿನ ಅಕ್ಷರವೃತ್ತದ ಐದಂಪ್ರಕಾರಗಳಲ್ಲಿ ಒಂದು ; ಪ್ರತಿಪಾದದಲ್ಲಿಯೂ ಮೊದಲು ಒಂದು ಬ್ರಹ್ಮಗಣ, ನಂತರ ಐದು ವಿಷ್ಣುಗಣ, ಕೊನೆಯಲ್ಲಿ ಒಂದು ರುದ್ರಗಣ–ಹೀಗೆ ಒಟ್ಟು ಏಳು ಗಣಗಳಿಂದ ಕೂಡಿದ, ನಾಲ್ಕು ಪಾದಗಳನ್ನುಳ್ಳ ವೃತ್ತ : ಮೊದಲೊಳಜಗಣಂ ಕುಂದದೆ ಬಳಿಕ್ಕೆತ್ತಮಯ್ದುಗಣಂಗಳೆ ವಿಷ್ಣುವಕ್ಕುಂ ತುದಿಯೊಳೆಂಬ ತಾಣದೊಳೆಲ್ಲಿಯುಂ ಕಂದರ್ಪರಿಪುಗಣಂ ನೆಲೆನೆಲಸಿ ನಿಲೆ . . . ಪಿರಿಯಕ್ಕರಂ (ಛಂದೋಂಬು. ೩–೨೪೨) ; ನಾಗವರ್ಮನು ೫ ಅಕ್ಕರಗಳನ್ನು ಹೇಳಿರುವನು :– ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿಱಿಯಕ್ಕರ (ಕೈಶಿಶಾ. ೦೨೩) 'ಕಿಱಿಯಕ್ಕರ' ಪರಾ. [ಪಿರಿ₄ (< ಪಿರಿದು₁) + ಅಕ್ಕರ₃]

**ಪಿರಿಯಣ್ಣ, ಹಿರಿಯಣ್ಣ** (ನಾ). ೧. ಹಿರಿಯ ಸಹೋದರ ; ದೊಡ್ಡಣ್ಣ : ಪಿರಿಯಣ್ಣಂಗೆಱಗುವುದೇಂ ಪರಿಭವವೇ (ಅಜಿತ. ೦೪–೬೩); ಪಿರಿಯಣ್ಣನ ನನ್ನಿಯನಾದರದಿಂ ಕಾಯಲ್ಕೆ ಪೆಱರ್ಗೆ ಬಾಣಸುಗೆಯ್ದಂ (ಗದಾಯು. ೬–೩೯) ; ಧರಣೇಶಾ ಕೇಳ್ಮನ್ನಿನ ಭವದೊಳ್ ಪಿರಿಯಣ್ಣಂ ನಾಂ ನಿನಗೆ (ಶಮುಶಾ. ೩–೬೮). **ಹಿರಿಯಣ್ಣ** : ೧. ಅವನು ಹಿರಿಯಣ್ಣನ ಮಾತಿಗೆ ಎಂದೂ ಎದುರಾಡಿದವನಲ್ಲ (ಕೂಅ). ೨. ಒಂದು ಕ್ಷುದ್ರದೇವತೆಯ ಹೆಸರು : ಎಲ್ಲಾಯಿ ಯಕನಾತಿ ಬನದ ಶಂಕರಿ ಮಲ್ಲಗ ಜಟ್ಟಿಂಗ . . . ಕಲ್ಲದ ಚವಡಿಕಿ ಮಾರಿ ಮಸಣ ಜಕ್ಕಿ ಸಲ್ಲದ ಹಿರಿಯಣ್ಣ ಗುರುವ ಜಲದೇವಿ (ಶಿಕಾಸು. ೩೯–೨). [ಪಿರಿ₄ (< ಪಿರಿದು₁) + ಅಣ್ಣ₁]

**ಪಿರಿಯಪಸುಂಡಿ** (ನಾ). ಒಂದು ಊರಿನ ಹೆಸರು : ವಿಜಯಬ್ಬರಸಿ ತನ್ನ ಮಗಂ ಶಾನ್ತಿವರ್ಮ್ಮರಸಂ ಮಾಡಿಸಿ[ದ] ಪಿರಿಯ ಬಸದಿಗೆ ತನ್ನ ಸೀವಟಂ ಪಿರಿಯ ಪಸುಂಡಿಗೆ ಪೋದ ಬಟ್ಟೆಯಿಂ ತೆಂಕ ಕಾಡಿಯೂರ ಪೊಲ[ದ] × × × ನೂಱಿಯ್ವತ್ತು ಮ[ತ್ತ]ರ್ಕ್ಕೆಯ್ಯಂ ನಮಸ್ಯಮಾಗಿ ಬಿಟ್ಟಳ್ (ಸೌಇಇ. XX, ೦೮–೪೦ ; 980). [< ಪಿರಿದು₁ + ಪಸುಂಡಿ]

**ಪಿರಿಯಬಾಣಗೆಱೆ** (ನಾ). ಒಂದು ಊರಿನ ಹೆಸರು : ಪಿರಿಯ ಬಾಣಗೆಱೆ ಯಮ್ನುತ್ತರಾಯಣಸಂಕ್ರಾನ್ತಿಯೊಳ್ವಕ್ಕಾಣಿಭಟಾರರ ಶಿಷ್ಯರ್ ಚೆಲ್ಲುಕ ಭಟಾರರ ಕಾಲು ಕರ್ಚಿ ಕೊಟ್ಟ ಮರ್ಯಾದೆಯೊಳಗೆ (ಎಕ. XII, ತಿಪ. ೨೮–೩೩ ; 943). [<ಪಿರಿದು₁ + ಬಾಣಗೆಱೆ ?]

**ಪಿರಿಯಬಿದಿರೂರ್** (ನಾ). ಒಂದು ಊರಿನ ಹೆಸರು : ಬೀರನೊಳಂಬ ನೊಚ್ಚಿ ಕಿಬ್ಬನಾಡ ಪಿರಿಯಬಿದಿರೂರ ಕಲ್ನಡುಗೊಟ್ಟು (ಎಕ. X, ಗೌರಿಬಿ. ೪–೨೨ ; ಸು. 920). [< ಪಿರಿದು₁ + ಬಿದಿರೂರ್]

**ಪಿರಿಯಬ್ಬೆ** (ನಾ). ದೊಡ್ಡ ತಾಯಿ ; ದೊಡ್ಡಮ್ಮ : ಆತನ ಪೂರ್ವಭವದ ಪಿರಿಯಬ್ಬೆ ದೇವಶ್ರೀಯೆಂಬಳ್ ಯಕ್ಷಿಯಾಗಿರ್ದಾಕೆ ಬಂದು (ಶಾಂತೀಶ್ವ. ೬೮). 'ಕಿಱಿಯಬ್ಬೆ' ಪರಾ. [ಪಿರಿ₄ (< ಪಿರಿದು₁) + ಅಬ್ಬೆ₁]

**ಪಿರಿಯಮಾಗುಂಡೆ** (ನಾ). ಒಂದು ಊರಿನ ಹೆಸರು ; ೯ ಶಿವಮೊಗ್ಗ ಜಿಲ್ಲೆಯ ಸೊರಬತಾಲ್ಲೂಕಿನ ಈಗಿನ ಹಿರೇಮಾಗಡಿ : ಅಯ್ಯಣ ಪುತ್ರ ನಾಗರಮಣ್ಣ ಎಟ್ಟಿತ್ತು ಆಳುತಿಟ್ಟು ಪಿರಿಯಮಾಗುಣ್ಡೆಯ ಪೊಲಗ ಊರ್ಗ್ಗಾಮುಣ್ಡ ಗೆಯ್ಯುತ್ತಿರೆ (ಎಕ. VIII, ಸೊರಬ. ೪೦೩–೦೫ ; ೯೬೦).

[< ಪಿರಿದು₁ + ಮಾಗುಂಡೆ (< ಮಾಗುಂಡಿ) ]

**ಪಿರಿಯಮುಗುಳಿ** (ನಾ). ಒಂದು ಊರಿನ ಹೆಸರು : ᑭ ಈಗಿನ ಚಿಕ್ಕಮಗಳೂರು ಜಿಲ್ಲೆಯ ಹಿರೇಮಗಳೂರು : ಪಿರಿಯಮುಗುಳಿಯ [ಕೊ] ಮರಯ್ಯನು [೦] (ಎಇ. VIII, ೫೯-೦೩ ; ಸು. 1000) 'ಕಿಱಿಯ ಮುಗುಳಿ' ಪರಾ. [ < ಪಿರಿದು$_1$ + ಮುಗುಳಿ$_1$ ]

**ಪಿರಿಯಮೊಟಪಿ** (ನಾ). ಒಂದು ಊರಿನ ಹೆಸರು : ಶ್ರೀಮತ್ ಮೊಟ್ಟ(೦)ಮ್ಮಾಧಿರಾಜರ್ ಪಿರಿಯಮೊಟಪಿಯ ಬಾಳಶೋಮಭಟರ್ಗೆ ಕೊಟ್ಟ ಸ್ಥಿತಿ ಎನ್ತೆನ್ದೊಡೆ (ಸೌಇಇ. IX-1, ೩೨-೭; ಸು. 10ನೆಯ ಶಶ).

[ < ಪಿರಿದು$_1$ + ಮೊಟಪಿ ]

**ಪಿರಿಯಯ್ಯ, ಹಿರಿಯಯ್ಯ** (ನಾ). ೧. ದೊಡ್ಡಪ್ಪ : ನಮ್ಮ ಪಿರಿಯಯ್ಯ ತಳೆದ ನಮ್ಮಯ್ಯನ ವಸುಧೆಯನು ಸೆಳೆದುಕೊಂಡನು ತನ್ನ ವಿದ್ಯಾಬಲದಿನಾತಂಗಳುಕಿ ಮತ್ತಿತನೀ ಪುರದೊಳಿಹನು (ಸಾಳ್ವಭಾ. ೦೬-೨೭) ; ಭೀಮಂ ನಿನಗೆ ಪಿರಿಯಯ್ಯನಹನೆ (ಅಕುಚ. ೦೯-೦೭). ೨. ಒಬ್ಬಾತನ ಹೆಸರು : ಮಟ್ಟಿಕೆಱೆಯ ತೆಂಕಣ ಕಡೆಯಿಂ ಪಿರಿಯಯ್ಯ ಪುಣಸೆಮರಂ ನಟ್ಟ ಒಳಿಗಲ್ಲಿನ್ದಂ ಪಡುವಣ ತವರಿಂದೊಳಗೆ ಆಯ್ದು ಕೊಳಗ ಬೆದೆ ಪೂಂಬೊಲನುಮಿದು ಚನ್ದ್ರಾರ್ಕತಾರಂಬರಂ ಸಲ್ವುದು (ಎಕ. IV, ಹಗ್ಗಡ. ೦೩-೦೯ ; 1021) ; ಶ್ರೀಮತ್ಕಂಚಲಮಹಾದೇವಿಯರು ಶ್ರೀಮತ್ಪಿರಿಯಯ್ಯಂಗಳ್ ಮೊದಲಾಗಿ ಸಮಸ್ತಪ್ರಧಾನರುಂ . . . ಪುನರ್ದತ್ತಿ ಮಾಡಿ (ಸೌಇಇ. XX. ೪೩-೩೯ ; 1072). **ಹಿರಿಯಯ್ಯ** : ೧. ಕೆಲಬರೊಡಹುಟ್ಟಿದರು ಗುರುಗಳು ಕೆಲರು ಕೆಲಬರು ಮಾವ ಮೈದುನ ನಳಿಯ ಮಗ ಹಿರಿಯಯ್ಯ ಮುತ್ತಯ ಮೊಮ್ಮನೆನಿಸುವರು (ಕುವ್ಯಾಶೀ. ೩-೨೬) ; ತಾತ ಕೇಳ್ ಪಾರ್ಥ ನಿನಗೆ ಹಿರಿಯಯ್ಯನಹನೀತ ಕಣಾ ಧರ್ಮರಾಜನೀ ನೃಪನ ಜಾಮಾತನಾಗಿರ್ದಪ (ಕೈಜಭಾ. ೨೭-೧೧).

[ ಪಿರಿ$_4$ (< ಪಿರಿದು$_1$ ) + ಅಯ್ಯ$_{11}$ ]

**ಪಿರಿಯರ** (ನಾ). ದೇವಸ್ಥಾನ ಮುಂತಾದ ಪವಿತ್ರಸ್ಥಳಗಳಲ್ಲಿಯ ಹಿರಿಯ ಅಧಿಕಾರಿ,—ಧರ್ಮಾಧಿಕಾರಿ : ಪುರದ ಪೆರ್ಗ್ಗಡೆಗೆ ಮತ್ತ ರಾಜು ಪಿರಿಯರಂಗೆ ಮತ್ತರಾಜು (ಎಇ. XIII, ೦೭೨-೪೮ ; 1055).

**ಪಿರಿಯರಮಾಳಸೂಳೆ** = ಧರ್ಮಾಧಿಕಾರಿಗಳ ಪಾಲನೆಯಲ್ಲಿರುವ, ದೇವರ ಹೆಸರಿನಲ್ಲಿ ಬಿಟ್ಟ ವೇಶ್ಯೆ,—ಸೂಳೆ : ದೇವರ ಭೋಗಕ್ಕೆ ನಡೆವ ಪಿರಿಯರಮಾಳ ಸೂಳೆಗೆ ಮತ್ತರಿಪ್ಪತ್ತು (ಎಇ. XV. ೯೯-೪೪ ; 1060).

[ಪಿರಿ$_4$ (< ಪಿರಿದು$_1$) + ಅರ$_2$ (< ಅಱ$_2$)]

**ಪಿರಿಯರವಣ** (ನಾ). ಒಂದು ಬಗೆಯ ತೆರಿಗೆ ; ಹಿರಿಯ ಧರ್ಮಾಧಿಕಾರಿಗಳಿಗೆ ಕೊಡುವ ತೆರಿಗೆ (?) : ಅಲ್ಲಿ ಮನ್ನೆಯ ನಿಬನ್ಧದ ಕಿಱುದೆಱೆಗಳಾವುವೆನ್ದಡೆ ಮನೆವಣಂ ಪಿರಿಯರವಣಂ ಧನಬಳಂ . . . ಇನ್ತೀ ನಡೆವ ತೆಱೆಗಳ್ಮಂ . . . ಸರ್ವ್ವಬಾಧಾಪರಿಹಾರವಾಗಿ ಬಿಟ್ಟು ನಡೆಯಿಸಿದ (ಸೌಇಇ. XX. ೪೭-೩೬, 1074). [ ಪಿರಿಯರ + ವಣ$_3$ ]

**ಪಿರಿಯರಸಿ, ಹಿರಿಯರಸಿ** (ನಾ). ದೊಡ್ಡ ರಾಣಿ : ಪಟ್ಟದ ರಾಣಿ ; ಅಗ್ರಮಹಿಷಿ : ಪಿರಿಯರಸಿಯ ಪಟವೇಟದ ಪರಿವಿಡಿ ಪುಗುಟ್ದಂ ಕೊನರ್ತುದು (ಶಾಂತಿಪು. ೭-೫೨) ; ಪಡಿಯಱ ದೊರಪಯ್ಯನ ಪಿರಿಯರಸಿ ಪಾಂಬಬ್ಬೆ ತಳೆವಱದು ಮೂವತ್ತು ವರಿಸಂ ತಪಂಗೆಯ್ದುಯ್ದಂ ನೋಂಪ್ಪುಚ್ಯುಮಾಣಮೇಱದರ್ (ಎಕ. VI, ಕಡೂರು. ೧-೧೯ : 971) ; ಮದನಂ ಪಿರಿಯರಸಿಯ ಪೆರ್ಗಡೆಗಳ ಬರವಿನ ಕಾರಣಮನಱದು (ಶಂಹಂ. ೯-೩೬). **ಹಿರಿಯರಸಿ** : ಅಕ್ಕತಂಗಿಯರೈವರು ಒಬ್ಬನ ಅರಸಿಯರು ಕಿಱಯಕ್ಕನ ಕಣಿಡುವರೆ ಹಿರಿಯರಸಿ ಕಂಟಣಿ ಹಿರಿಯರಸಿಯ ಕೂಡುವರೆ ಕಿಱಯರಸಿ ಕಂಟಣಿ (ಕೊಸ್ನಸಂ. ೨೨೨-೫೯) ; ಸೇರಿದವು ಪೂರ್ಣಾಂಶ ಭಾಗಗಳು ಹಿರಿಯರಸಿ ಕಿಱಯರಸಿಯರಿಬ್ಬರಿಗೆ (ಕೊರರಾ. ೧-೭-೫೯). 'ಕಿಱಯರಸಿ' ಪರಾ. [ ಪಿರಿ$_4$ (< ಪಿರಿದು$_1$) + ಅರಸಿ ]

**ಪಿರಿಯರಾಜಾನ್ನ** (ನಾ). ಒಂದು ಬಗೆಯ ಬತ್ತ : ಪಿರಿಯರಾಜಾನ್ನ ಜೀರಿಗೆರಾಜಾನ್ನವು ಪುರುತರ ಸೊಗಸು ರಾಜಾನ್ನ ಪರಿಶೋಭಿಸುವ ಕಸ್ತೂರಿ ರಾಜಾನ್ನದ ಪರಶಾಲಿಯ ಗದ್ದೆಯಿಹುವು (ಕಂಸಂ. ೫-೬೯).

[< ಪಿರಿದು$_1$ + ರಾಜಾನ್ನ]

**ಪಿರಿಯಹೊಟ್ಟ** (ನಾ). ಒಂದು ಊರಿನ ಹೆಸರು; ᑭ ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಈಗಿನ ದೊಡ್ಡಹೊಮ್ಮ : ಎಡೆನಾಡ ಪಿರಿಯ ಹೊಟ್ಟದ ಪನ್ನಿಬ್ಬರುಂ . . . ಕೂಚಿಭಟರ್ಗೆ . . . ಕಾಲಂ ಕರ್ಚ್ಚಿ ಧಾರೆಯೆಱದು ಕೊಟ್ಟರ್ (ಎಕ. III, ನಂಜನ. ೦೮೩-೫; 977).

[< ಪಿರಿದು$_1$ + ಹೊಟ್ಟ$_0$ (< ಪೊಟ್ಟ) ]

**ಪಿರಿಯಾದಿ** 'ಪಿರ್ಯಾದು' ನೋ.

**ಪಿರಿಯಾಯ್ಚ** (ನಾ). ಒಬ್ಬಾತನ ಹೆಸರು : ನಯಮುಂ ಮೆಱವಂ ಕತ್ತುತನಯನಾಯ [೦] ಪರನೆನಿಸಿ ನೆಗಟ್ದ ಪಿರಿಯಾಯ್ಚನನಾಶ್ರಯಣೀಯ ನಾದನಾ ಕ್ಷತ್ರಿಯಾದಿಗಂ ಸಕಳ ಸಮಯಿ[ಗಂ ಬು] ಧಜನಕಂ (ಸೌಇಇ. XI-1. ೪೫-೧೧; 980).

[ಪಿರಿ$_4$ (< ಪಿರಿದು$_1$) + ಆಯ್ಚ$_0$ (ᑭ ← ಸಂ. ಆದಿತ್ಯ)]

**ಪಿರಿಯಿಂಡಿ** (ನಾ). ಒಂದು ಊರಿನ ಹೆಸರು; ᑭ ಈಗಿನ ಬಿಜಾಪುರ ಜಿಲ್ಲೆಯ ಇಂಡಿ : ಅಳಂಪೂರ ಬಟ್ಟೆಯಿಂ ಪಡುವ ಕಿಱಯಿಣ್ಡಿಯ ಬಟ್ಟೆಯಿಂ ಪಿರಿಯಿಣ್ಡಿಯ ಸೀಮೆಯಿಂ ಮೂಡಲನ್ತರಡುಂ ಬಟ್ಟೆಯಿಂ ದೊಳಗೆ . . . ಧಾರಾಪೂರ್ವ್ವಕಂ ಮಾಡಿ ಬಿಟ್ಟ ನೆಲಂ (ಸೌಇಇ. XX. ೨೦-೬೦ : 1019). [ ಪಿರಿ$_4$ (< ಪಿರಿದು$_1$) + ಇಂಡಿ$_0$ ]

**ಪಿರಿಯಾಚಲ್, ಹಿರಿಯಾಚಲು, ಹಿರೀಚಲು** (ನಾ). ಒಂದು ಬಗೆಯ ಈಚಲುಮರ; ದೊಡ್ಡ ಈಚಲು : ಪಿರಿಯಾಚಲ ಪಣ್ಣಂ ಸರಿಕನ ಬಿತ್ತುಮರ್ದುವಳ್ಳಿ ಮೂಲಂಗಿಯ ಬೇರರಿಸಿನ ಮಡುವಾಗಲ್ ವಿಷಹರ ಮಕ್ಕುಂ (ಶಕುದ. ೫-೦೦೯). **ಹಿರಿಯಾಚಲು** : "ಇಂದ್ರಾಸಂ—ಹಿರಿಯಾಚಲು" (೬ಕಧ. ೦೩). **ಹಿರೀಚಲು** : "ಅಶೋಕಃ—ಅರಳಿ, ಅಶೋಕೆ, ಹಿರೀಚಲು" (೬ಕಧ. ೩). 'ಕಿಱೀಚಲ್' ಪರಾ.

[ಪಿರಿ$_4$ (< ಪಿರಿದು$_1$) + ಈಚಲ್ (< ಈಂಚಲ್)]

**ಪಿರಿಯುಬ್ಬಣ, ಹಿರಿಯುಬ್ಬಣ** (ನಾ). ಒಂದು ಬಗೆಯ ದೊಡ್ಡ ಮೊನಚಾದ ಆಯುಧ (?) : ಪಿರಿಯ [ಯು]ಬ್ಬಣ ಕಠಾರಿಯಿಂ ತಿವಿದಾಡಿ ಗದೆಗಳಿಂದ ಧುರದೊಳಿಬ್ಬರು ಹೆಣಗಿ ಬಹುಲಾಗುವೇಗದಿಂ . . . ಕಾದಿದರು ಖಾತಿಯಿಂದುಭಯಭಟರು (ಕುರಂಗ. ೬೬-೨೯). **ಹಿರಿಯುಬ್ಬಣ** : ಹಿರಿಯುಬ್ಬಣದ ಸಬಳದ ಶೂಲ ಸುರಗಿಯ ಕಣೆಯ ಹೊಱ ಚಾಚಿದವು ಕಟಕಾಚಾರ್ಯನಿದಿರಿನಲಿ (ಕುವ್ಯಾದ್ರೋ. ೦೫-೦೯); ಹಿರಿಯುಬ್ಬಣವ ಜಡಿವುತ ಕುದುರೆಯ ಮೇಲೆ ಹರುಷದಿ ಬಹನಾರಿವನು (ಕುರಾಶಾಂ. ೨೦-೪೦) ; ಹಿರಿಯುಬ್ಬಣವ ಜಳಿಪಿಸಿ ವಿಜಾಸೆಯ ಮೇಲೆ ಬೆರಳಿಡುತತುಳಪೌರುಷದ ಬಿರುದಿನಗ್ಗಳಿಕೆಗಳನು ಪೊಗಳಿಸಿಕೊಳ್ಳ ದೊರೆ ಯಾವನುಸಿರು (ಕಂಸಂ. ೦೩-೩೮). [ಪಿರಿ$_4$ (< ಪಿರಿದು$_1$) + ಉಬ್ಬಣ$_1$]

**ಪಿರಿಸಂದಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಅಣುವಶ × × × ಯಲೋಕನೆಮ್ಬುದು ಎಬ್ಬಿತ್ತಿದು ಪಸ್ದಿಯಂ ಕೊನ್ದತ್ತು ಇದುಮೆರಸಿಯಾ ನಾಯಕಧಳಗನೆಮ್ಬುದು ಪಿರಿಸನ್ದಿ ಮಗ ಯಿಪ್ಪತ್ತಱ ಪನ್ದಿಯಂ ಕೊನ್ದನ್ (ಎಕ. X. ಮುಳಬಾ. ೯೫-೨; ಸು. 975). [ಪಿರಿ$_4$(< ಪಿರಿದು$_1$) + ಸಂದಿ?]

**ಪಿರುಕಣೆ** 'ಪಿರಕಣೆ' ನೋ.

**ಪಿರುಚು** 'ಪಿರಿಚು' ನೋ.

**ಪಿರ್ಕಿ** 'ಪಿರಿಕಿ$_2$' ನೋ.

Δ **ಪಿರ್ಕು** 'ಪಿರ್ಕ್ಯ' ನೋ.

**ಪಿಗುರ್$_1$** 'ಪಿಳ್ಗು' ನೋ.

**ಪಿರ್ಗು₂**, ಹಿಗ್ಗು₂, ಹಿರ್ಗು, ಹಿಳ್ಗು₂ (ನಾ). ಸಂತೋಷ ; ಆನಂದ : ಇಂತಪ್ಪ ಪಿರ್ಗಿಂದಮೇ ಪೆರ್ಚುಗೆನ್ನಲ್ಲ ಪಗೆಗಳುಂ ಮೇಣ್ ನೀನುಮವ ರೊಳಗೆ ಒರ್ವನ್! (ಧರ್ಮಾಮೃ. ೫೦-೦೦೨೦). ಹಿಗ್ಗು₂ : ಹಿಗ್ಗು ಬಡವಗೆ ಹೊಲ್ಲ ಸುಗ್ಗಿ ಸೂಳೆಗೆ ಹೊಲ್ಲ ನುಗ್ಗಿಯು ಹೂಗೆ ಮಳೆ ಹೊಲ್ಲ (ಸರ್ವಜ್ಞ. ೮೨೪); ಆನಂದ ಅಲೆಯಾದಾಗ ಹಿಗ್ಗಾಗಿಯೂ ಘನೀಭೂತವಾದಾಗ ಸೌಂದರ್ಯವಾಗಿಯೂ ಪರಿಣಮಿಸುತ್ತದೆ (ಸೌಂದಕ. ೦೬); ನಿಸರ್ಗವನ್ನುಂಡ ಅವನ ಸರಳ ಹೃದಯವು ಅದನ್ನು ಬಣ್ಣಿಸುವುದರಲ್ಲಿ ಹಿಗ್ಗಿನ ಬುಗ್ಗೆಯಾಗಿದೆ (ಕನ್ನಕಾ. ೨೦೦). ಹಿರ್ಗು : ತನುಜಾತೆರೂರ್ಗಿಸುತ ವೈವಾಹ ಹಿರ್ಗಿನನುಸುರ್ಗಿ ಸಂಪರ್ಗಳಿಂದೈದಿ ಬರುತ (ಜನಮು. ೩೨-೪). ಹಿಳ್ಗು₂ : "ಹರ್ಷಃ . . . ಹೃಷ್ಟಂ, ಹೃಷ್ಟಿಃ — ಈ ೭ ಹಿಳ್ಗು" (ಶಬ್ದ. ೦೯೫). [<ಪಿಳ್ಗು]

**ಪಿರ್ರ** (ನಾ). ಅಂಡು ; ಕುಂಡಿ ; ನಿತಂಬ : ಕಟಿಃ, "ಕಟೀ, ಶ್ರೋಣಿಃ, ಶ್ರೋಣೀ, ಕಕುದ್ಮತೀ—ಅಂಡುಗಳ ಹೆಸರುಗಳು, ಪಿರ್ರಗಳು" (ನಿಘಂ. ೦೯೦). [ ದೇ. ‖ ತೆಲು. ಪಿಱ್ಱ ; ಕೋಲಾ. ನಾಯ್ಕಿ. ಪಿರ್ರ ]

**ಪಿಲ** (ನಾ). ಹಲಸಿನ ಮರ : ಪಿಲ (ಹಲಸು), ಪಿಜ (ಹೆಬ್ಬಲಸು) . . . ಇತ್ಯಾದಿಗಳನ್ನು ಸಂಕೇತವಾಗಿರಿಸಿಕೊಂಡವರೆಂಬ ಅರ್ಥದಿಂದಲೋ . . . ಅಥವಾ ಅವುಗಳನ್ನು ವಿಶೇಷವಾಗಿ ಪೋಷಿಸುತ್ತಿದ್ದವೆಂಬರ್ಥದಿಂದಲೋ ಬಂದ ಕುಲನಾಮಗಳು, ಪಿಲತ್ತಾಯ, ಪಿಜತ್ತಾಯ (ತುಳುನಾ. ೦೫೩).

[ ದೇ. ‖ ಮಲ. ಪಿಲಾವು ; ತುಳು. ಪಿಲ, ಪೆಲ ]

**ಪಿಲಿಕಂದೋಡಿ** (ನಾ). ಒಂದು ಬಗೆಯ ಮಂಡಲದ ಹಾವು ; ದೊಡ್ಡ ಜಾತಿಯ ಕನ್ನಡಿ ಹಾವು : ನಾಗರ ಹಾವಲ್ಲ. ಚಿಟ್ಟೆಹುಲಿಯಂತೆ ಅದರ ಮೈಮೇಲೆ ಪಟ್ಟೆಮುದ್ರೆ . . , ಅಯ್ಯೊ ಇದು ಪಿಲಿಕಂದೋಡಿ (ಜಾಳಿ. ೬೦). [ ದೇ. ‖ ತುಳು. ಪಿಲಿಕಂದೊಡಿ ]

**ಪಿಲಿಚಾಮುಂಡಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಈತನ ಮನೆಯೊಳಗೆ ಕೆಂಪುವರ್ಣದ ಪಿಲಿಚಾಮುಂಡಿ ಬಂದು ಗಡಬಡಗುಟ್ಟುತ್ತಾ ಹೋಗುತ್ತದೆ (ಹಾಸ್ಯಮು. ೨೪).

[ ಪಿಲಿ?(೯ ← ತುಳು. ಪಿಲಿ=ಹುಲಿ) + ಚಾಮುಂಡಿ ]

**ಪಿಲು** (ನಾ). ೧. ಒಂದು ಬಗೆಯ ಮರ ; ಉಗುನಿ ; ಪೀಲು : "ಪಿಲು ಸಹಸ್ರಾಂಶುಮೆನಲುಗಿನಿ" (ಜಾಂಗಲ. ೪೬-೪೪). ೨. ಹುಲ್ಲು ; ತೃಣ. ೩. ಕಲ್ಲು ; ಶಿಲೆ : "ಕುಜಾತಂ ತೃಣಂ ಅಶ್ಮಂಗಳ್ ಪಿಲುವಕ್ಕುಂ" (ಜಾಪಾರ. ೦೬೬). 'ಪೀಲು₁' ಪರಾ. [ ಸಂ. ]

**ಪಿಲ್ಲ** (ನಾ). ರೋಗದಿಂದ ನೀರು ಸುರಿಯುವ ಕಣ್ಣನವನು ; ಸೋರು ಗಣ್ಣನವನು : "ಪಿಲ್ಲಃ, ಚಿಲ್ಲಃ, ಚುಲ್ಲಃ — ಈ ೩ ಅಟುಗಣ್ಣವಂ" (ಹಲಾಯು. ೯೯-೪೫೩). [ ಸಂ. ]

**ಪಿಲ್ಲಕೆ** (ನಾ). ಹೆಣ್ಣಾನೆ; ಪಿಡಿ. [ ಸಂ. ಪಿಲ್ಲಕಾ ]

**ಪಿಲ್ಲಣೆ** (ನಾ). ಒಂದು ಬಗೆಯ ಆಯುಧ ; ಪರಿಘ : ನನೆಯಂಬನೆಂಬ ಮಲ್ಲನ ಕನಕದ ಪಿಲ್ಲಣೆಗಳುಪಮೆಗೇವಯಿಸಿದುವೆಂದೆನಿಸಿ ನಸುಮಾಗಿ ಜಂಫು ಗಳೆನಸುಂ ಬಣ್ಣೋಳಿಪುವು (ಶಾಂತೀಶ್ವ. ೦೩-೦೮೮); ಮಲ್ಲರ ಸದನದ ಕೈಗಳ ಪಿಲ್ಲಣೆಗಳ ಕಾಯಬಲದ ಕಳನಂ ಪುಗುತಪ್ಪಲ್ಲಿಯಭಿನಯದಗುರ್ವುಗಳೆಲ್ಲರ ಬಗೆಗೀಯೆ ಬಹಳ ನಯಮುಂ ಭಯಮುಂ (ಮುಹಾಸೀ. ೬-೬೫). [ ? ]

**ಪಿಲ್ಲಣೆಗೆ** (ನಾ). =ಪಿಲ್ಲಣೆ : "ಪರಿಘಮೆನೆ ಪಿಲ್ಲಣೆಗೆ" (ಜಾಂಗಲ. ೮೮-೩೬); ಸೋಕ್ಮನೆಯು ಕೆಯ್ಮ ಕರಿಯ ಪಿಲ್ಲಣೆಗೆಯುಮಗುರ್ವುಮದ್ಭುತಮಾಗೆ (ಅರ್ಜನೀ. ೮-೬೬ ಪ); ಪಿಲ್ಲಣೆಗೆ ಹರಿಗೆ ಚಕ್ರಂ ಭಲ್ಲೆಯಮುಸಿತಾದ್ರಿಮುದ್ಗರಂ ಕ್ಷುರಿಕೆಗಳೆಂಬೆಲ್ಲಾ ಶಸ್ತ್ರಮನಾಂತತಿಭುಲ್ಲವದಿಂ ವೀರರದಟನಿಂ ಪರಿಯಿಟ್ಟರ್ (ತ್ರಿಷಷ್ಟಿ. ೬-೬). [ಪಿಲ್ಲಣೆ+ —ಗೆ]

**ಪಿಲ್ಲಿ₁**, **ಪಿಲ್ಲೆ** (ನಾ). (ಹೆಂಗಸರು) ಕಾಲಿನ ಬೆರಳಿಗೆ ತೊಡುವ (ಉಂಗುರ ದಂತಹ) ಒಂದು ಆಭರಣ : ಮುತ್ತಿನ ದಂಡೆ . . . ಮುತ್ತಿನುಂಗುರಂ ಮುತ್ತಿನ ಪಿಲ್ಲಿಯೆಂಬ ಸದಲಂಕರಣಂಗಳನೆಯ್ದೆ ತೊಟ್ಟು ತಾಂ ಮುತ್ತಿನ ಬೊಂಬೆಯೆಂಬ ಬಗೆಯಂ ನೆಱೆ ಪುಟ್ಟಿಸುತಿರ್ದಳಾಕ್ಷಣಂ (ಜಾರತ. ೬-೦೦೪); ವರ ಹಸ್ತಕಡಗ ಮಂಟಿಗೆ ಪಿಲ್ಲಿ ಕಾಲುಂಗುರಗಳಿಂ ಕುವರಿಯೊಪ್ಪಿದಳು (ಸಂಕ್ರಜಾಂ. ೯-೦೨); ಪಿಲ್ಲಿ ಕಾಲಿನೋಳೆ ಚೆಲ್ಲಿದ ನೆರಿಗ್ಯೋಳೆ ಕಲ್ಮೇಲೆ ಕಾಲ ತೊಳೆಯೋಳೆ ಲಕ್ಕವ್ವ ಪಿಲ್ಲಿ ಹೋಳೆದವು ಬಿಸಿಲಿಗೆ (ಜಾಗೀ. ೨೩). ಪಿಲ್ಲೆ : ಅಳವಡಿಸಿ ತೋಳ ಬಾಪುರಿ ಬಂದಿ ಭುಜಕೀರ್ತಿಗಳನು . . . ಕಾಂಚಿದಾಮ ರಾಳಿಯಾಯಂದಿಗೆ ಪಿಲ್ಲೆ ಮೆಂಟಿಕೆಗಳು (ಜಮೋ. ೦೦-೨೫); ಕಾಲ ಕಡಗ ಪಿಲ್ಲೆ ಕಿವಿಯಾಗ್ಬಿತ್ತಾಳೆ ವಾಲಿ. . . ಜಾಣೆ ನೀ ಯಾ ನಾಡದ ಕೊರವೇ (ಜುಲ್ಗಿ. ೦೬); "ಪಜ್ಜರ ಹಚ್ಚಿದ ವಾಲೆ ಗೆಜ್ಜೆ ಹಚ್ಚಿದ ಪಿಲ್ಲೆ ಹೆಜ್ಜೆ ಹೆಜ್ಜೆಗೆ ನಗಿಸುವ ರಾಯರೊಡನೆ ಮಾಡಿದ ಬಾಳು" ನಿಟ್ಟುನಿಟ್ಟು ಜ್ಞಾಪಕ ಬಂದು ವಿಧವೆಗೆ ಜೀವನದಲ್ಲಿ ಬೇಸರಿಕೆಯನ್ನು ಹುಟ್ಟಿಸುವುದು (ಜನಪ. ೬೯).; 'ಕಿರುಪಿಲ್ಲಿ' ಪರಾ.

[ದೇ.‖ ತಮಿ. ಪಿಲ್ಲಾಣಿ ಬೀಲ; ಮಲ. ಪೀಲಿ; ತುಳು. ಪಿಲ್ಲಿ, ಪಿಲ್ಲಿ ತೆಲು. ಪಿಲ್ಲಾಡಿ, ಪಿಲ್ಲಾಣಿ]

**ಪಿಲ್ಲಿ₂** (ನಾ). ಬೆಕ್ಕು : ಮಾನವ ಮುಱಿದು ರಣದಲ್ಲಿ ಪಿಲ್ಲಿಸನ್ನಿಭನಿವನ ಮಾಳ್ಪನು (ಕಜಿಕ. ೪-೩೫). [ದೇ.‖. ತಮಿ. ತೆಲು. ಕೋಲಾ. ನಾಯ್ಕಿ. ಪಿಲ್ಲಿ; ಪರ್ಜ. ಬಿಲಿಯ್./ಹಿಂ. ಬಿಲ್ಲಾ, ಬಿಲ್ಲೀ./ಸಂ. ಬಿಡಾಲ]

**ಪಿಲ್ಲಿಪೆಸರ**, **ಪಿಲ್ಲಿಹೆಸರು** (ನಾ). ಒಂದು ಬಗೆಯ ಸಸ್ಯ; ಕಾಡುಹೆಸರು ; ಮುಂದ್ಗಪರ್ಣಿ : ನರಿಹೆಸರು, ಪಿಲ್ಲಿಪೆಸರ (ವೈದ್ಯಾಂ ೬೦-೦೨೫೬). ಪಿಲ್ಲಿಹೆಸರು: "ನರಿಹೆಸರು, ಪಿಲ್ಲಿಹೆಸರು, ವನಮುದ್ಗ" (ವೈದ್ಯ. ೦೦೪).

[ ←ತೆಲು. ಪಿಲ್ಲಪೆಸರ ]

**ಪಿಲ್ಲಿಯುಂಗುರ** (ನಾ). = ಪಿಲ್ಲಿ₁ : ಪಿಲ್ಲಿಯುಂಗುರವು ಕಣ್ಗೆಸೆಯೆ ಸಲ್ಲಲಿ ತಾಂಗಿಯ ಕೆಂಬಣ್ಣ ಮೆಱೆದುವು ಚೆಲ್ಲುವಂತನುರಾಗರಸವ (ಕಜಿ. ೪೦-೬೨).

[ ಪಿಲ್ಲಿ₁ + ಉಂಗುರ ]

**ಪಿಲ್ಲಿಹೆಸರು** 'ಪಿಲ್ಲಿಪೆಸರ' ನೋ.

**ಪಿಲ್ಲೆ** 'ಪಿಲ್ಲಿ₁' ನೋ.

**ಪಿಶಂಗ** (ಗು). ೧. ಕೆಂಪು ಮಿಶ್ರಿತವಾದ ಕಂದುಬಣ್ಣದ : ಭಾಸ್ಕರ ತನೂಜೆಯನುಭಯತಟನಿಕಟ ಕುಸುಮನಿವಹ ತತ್ಪರಾಗಪಟಳಪಿಶಂಗತರತ್ತ ರಂಗಸರೋಜೆಯುಂ ಮೆಚ್ಚಿ (ಕುಶಲ. ೫-೫೮ ಪ). ೨. ನಸುಕೆಂಪಾದ : ಹರಿನೀಲಾಚಲದಿಂ . . . ಪಿಶಂಗಕಮಳಶ್ರೀಲೀಲೆಯಿಂ ಪಂಚರತ್ನರುಚಿ ವ್ಯಾಪ್ತಿ ನಿರಂತರಂ ನೆಗಟ್ಟುನು (ಅಜಿತ. ೦೦-೨೨). 'ಪಿಶಂಗತಲ' ಪರಾ. (ನಾ). ೩. ಕಂದುಬಣ್ಣ ; ಕಪಿಲವರ್ಣ : "ಪಿಂಗಃ, ಪಿಶಂಗಃ—ಈ ೨ ಕಪಿಲವರ್ಣಂ" (ಹಲಾಯು. ೦೨೦-೫೦); "ಪಿಂಗಳಂ ಕದ್ರು ಕಡಾರ ಚಂಡಸೀಮ ನಸುಗೆಂಪು ಪಿಂಗಂ ಪಿಶಂಗಂ ಕವಿಲು ಶ್ಯಾಮಮೆನೆ ಹಸುರುಗೆಂಪದು" (ಜಾಂಗಲ. ೦೩೦-೨೦). ೪. ಕೆಂಪು ಬೆರೆತ ಹಳದಿಯ ಬಣ್ಣ ; ಹೊಂಬಣ್ಣ : ನೀರಾಜನದೀಪಕಳಿಕಾಶ್ರೇಣೀಶೋಣಾಂಶುಬಾಲಾತಪ ಪ್ರಸರಪಿಶಂಗಮುಂ . . . ಎನಿಸಿ ಗೋವರ್ಧನನಗಂ ಸೊಗಯಿಸೆ (ಜಗಂ. ೪-೮೨ ಪ) ; ಒಂದೆಡೆಯಲ್ಲಿ ಮಜ್ಜದಿಭದಾನದ ಕೂಟದಿನೆಯ್ದೆ ಕೃಷ್ಣಮಾಯ್ತೊಂದೆಡೆಯಲ್ಲಿ ವಾರಿಜರಜೋವ್ರಜದಿಂದೆ ಪಿಶಂಗಮಾಯ್ತು . . . ಜಾತಿಕಾವಳಿಯಮೊಪ್ಪಿ ಮನೋಹರಮಾದುದೆತ್ತಲುಂ (ಜಾರತ. ೦-೦೦೬) ; ಇಂದುಬಿಂಬಂ ಸಾಲಾಗಿಯರುಣಂ ಪಿಶಂಗಮಾಸಿತರುಚಿಗಳೋ ಲ್ಮೆಸಿ ಪೂರ್ವಾದ್ರಿಯೆಂಬ ದೇವಗೃಹದ ಮೇಲಿಟ್ಟ ಮಣಿಗಳಸ ಪೊಂಗಳಸ ರಜತಕಳಶಂಗಳೆನೆ ಚೆಲ್ವಾದುದು (ಕಂಠ. ೯-೦೮). [ಸಂ.]

**ಪಿಶಂಗತಲ** (ನಾ). ನಸುಕೆಂಪುಬಣ್ಣದ ಅಂಗಾಲು : ದಾಲಕನ ಪಿಶಂಗತಲಂ ಬಾಲಕನ ಸ್ಖಲಿತಚಲನವಿನ್ಯಾಸದ ಲೀಲಾಲಸಮುಂ ಕಾಣದ ದುರ್ಲೀಲಮೆನಿಪ್ಪೊಂದು ಜೀವನಂ ಜೀವನಮೇ (ಜುಲ್ಲ. ೬-೦೦೬). [ಸಂ.]

**ಪಿಶಂಗತೆ** (ನಾ). =ಪಿಶಂಗ ೪ : ತುಂಗತೆಯಿಂ ಕನಕಾಂಶು ಪಿಶಂಗತೆ ಯಿಂದಙ್ಯಲಾದುದಿಲ್ಲಖಿಳ ಮರುತ್ತುಂಗವನ ನೆಗೆದ ಭುಜಶಿಖರಂ ಗಳುಮಂ ಮೇರುಶಿಖರಿಶಿಖರಂಗಳುಮಂ (ಅಜಿಪು. ೯-೯೯). [ಸಂ. ಪಿಶಂಗತಾ]

**ಪಿಶಂಗಾಶ್ಮ** (ನಾ). ಒಂದು ಬಗೆಯ ರತ್ನ ; ಗೋಮೇದಕ : "ಬಂಧುರ ಪಿಶಂಗಾಶ್ಮವೆನೆ ಗೋಮೇಧಿಕಂ" (ಶಬ್ದಮ. ೩೦-೬). [ಸಂ. ಪಿಶಂಗಾಶ್ಮನ್]

**ಪಿಶಂಗಿತ** (ಗು). ಹೊಂಬಣ್ಣದಿಂದ ಕೂಡಿದ : ಕುಸುಮಕಿಸಲಯಪರಾಗ ಪಿಶಂಗಿತರಂಗತ್ತರಂಗಮಾದಂತೆ (ಅಜಿಪು. ೬-೦೦೦ ವ); ಸ್ವಸ್ತಿ ಸಮಸ್ತಮಂಡಳಿಕ ಮಸ್ತಕವುಷ್ಪರಜಃಪಿಶಂಗಿತಾಂಘ್ರಿಸ್ತಬಕದ್ವಯಂ (ಶಾಂತಿಪು. ೦೦-೬೯) ; ದಳಿತಾಂಭೋಜರಜಃಪಿಶಂಗಿತಲಸದ್ಗಂಧಾದಿ ತೀರ್ಥೋದಕಂ (ಶಂಕ್ರಪು. ೦೩-೦೦೬). [ಸಂ.]

**ಪಿಶನಾರಿ** 'ಪಿಸನಾರಿ' ನೋ.

**ಪಿಶವಿ** 'ಪಿಸಿವಿ' ನೋ.

**ಪಿಶಾಚ** (ನಾ). ೧. (ಸ್ವಂತವಾದ ಭೌತಿಕಶರೀರವಿಲ್ಲದೆ, ಇತರ ಭೌತಿಕ ಶರೀರಗಳ ಮೂಲಕ ತನ್ನ ಪ್ರಭಾವವನ್ನು ವ್ಯಕ್ತಪಡಿಸುವುದೆಂದು ನಂಬಲಾದ) ಒಂದು ಬಗೆಯ ಅಮಾನುಷಶಕ್ತಿ ; ದೆವ್ವ ; ಭೂತ : ಪಿಶಾಚವೇಷಮಂ ಕೈಕೊಂಡರಮನೆಯಂಗಣದೊಳಿರ್ದು (ವಡ್ಡಾರಾ. ೪೯-೨೩); ನಿಜಜೀವಂ ಪರಲೋಕದೊಳ್ ನಿಜಮಹಾಮಾಂಸಂ ಪಿಶಾಚಾಸ್ಯದೊಳ್ . . . ನಿಜಕಾಯಂ ಕುರುಭೂಮಿಯೊಳ್ ನೆಲಸೆ (ಗದಾಯು. ೫-೩); ಅರ್ವ ಪಿಶಾಚರಬ್ಬರಿಪ ಜಟ್ಟಿಗರುಬ್ಬುವ ಚಂಡಿ ರಕ್ತಮಂ ಪೀರ್ವ ಕರಾಳಿ (ಕ್ರಿಪು. ೨೯-೩೬೬) ; ಪಿಶಾಚ ಬಿಟ್ಟರೂ ನಿಶಾಚರ ಬಿಡ (ಗಾದೆ). ೨. (ಶ್ಮಶಾನವಾಸಿಗಳಾದ) ಈಶ್ವರನ ಭೂತಗಣ : ಮಿಯುನ್ನದಿಯೊಳ್ ಮುಟುಂಗೆ ಮುಂದಲೆ ಜಡೆಗಟ್ಟಿ . . . ವಾಮತನು ಪೆಣ್ಗಿಡೆಯಾಗಿ ಪಿಶಾಚಸಂಗಮಗ್ಗಳಿಸಿರೆ ಪುಟ್ಟುಪೊಂದಿಗೆಡೆಯಲ್ಲದೆ ತೋರ್ಪರಿದಲ್ತೆ ವಿಸ್ಮಯಂ (ರಕಳು. ೯-೬). ೩. ದೇವಯೋನಿಗಳಲ್ಲಿ ಒಂದು ವರ್ಗ : "ಕಿನ್ನರರು ಗಂಧರ್ವರಪ್ಸರರು . . . ಪಿಶಾಚರು . . . ಭೂತನಾಮಿಗಳು ದೇವ ಯೋನಿಗಳೆನಿಕ್ಕುಂ" (ಶಬ್ದಮ. ೦೬-೦೬); ಹರಿ ನುಡಿದನಂದು ಪಿಶಾಚ ಗುತ್ತರವ (ಕಭಾಗ. ೦೦-೬೦-೨೬); ತಮೋಯೋಗ್ಯರಲ್ಲಿ ದೈತ್ಯ, ರಾಕ್ಷಸ, ಪಿಶಾಚ, ಮನುಷ್ಯಾಧಮ ಎಂದು ನಾಲ್ಕು ಪ್ರಕಾರಗಳು (ಹಿಂದಸಾ. ೨೬೬). ೪. ಒಂದು ಜನಾಂಗದ ಹೆಸರು : ಆರ್ಯರು ವಾಯುವ್ಯಪ್ರಾಂತದಲ್ಲಿ ಪಿಶಾಚರೆಂಬ ಜನರೊಡನೆ ಕಾದಾಡಬೇಕಾಯಿತು (ಭಾಇಸ. ೩೩). [ಸಂ.]

**ಪಿಶಾಚಕೋಶಾತಕಿ** (ನಾ). ಒಂದು ಬಗೆಯ ಸಸ್ಯ ; ಕಹಿಹೀರೆ : "ಪಿಶಾಚಕೋಶಾತಕೀ-ಕಹಿಹೀರೆ" (ಪಿಶಂ. ೯೯). [ಸಂ. ಪಿಶಾಚಕೋಶಾತಕೀ]

**ಪಿಶಾಚಗ್ರಹ** (ನಾ). ದೆವ್ವದ ತೊಂದರೆ ; ಭೂತದ ಕಾಟ : ಪ್ರಲಾಪ ಉಂಟಾಗಿಹಣ, ನಿಷ್ಠುರಭಾಷೆಯನಾಡುವಣ, ಭಯಂಕರವಾಗಿಹಣ , . . ಮಲಿನವಾಗಿಹಣ, ಜಿತೇಂದ್ರಿಯನಾಗಿಹಣ, ಹೀಗಿದ್ದರೆ ಪಿಶಾಚಗ್ರಹ ವೆಂದರಿವುದು (ವೈದ್ಯಸಾ. II. ೬೬). 'ದೇವಗ್ರಹ' ಪರಾ. [ಸಂ.]

**ಪಿಶಾಚಪ್ರಾಪ್ತ** (ನಾ). ಪಿಶಾಚಿ ಹಿಡಿದವನು ; ದೆವ್ವ ಮೆಟ್ಟಿಕೊಂಡ ವನು : ಗುರು ಲಗ್ನಸ್ಥಿತನಾಗೆ . . . ಮೇಣ್ ತ್ರಿಕೋಣಾಗ್ಯಹದೊಳ್ ಪಾಪಗ್ರಹಂಗಳ್ ಸುಧಾಕಿರಣಂ ಕರ್ಕಿ ವಿಲಗ್ನದೊಳ್ ನಿಲೆ ಪಿಶಾಚಪ್ರಾಪ್ತ ನಕ್ಕುಂ ನರಂ (ಜಾತಕ. ೨೦-೦೬). [ಸಂ.]

**ಪಿಶಾಚಬಾಧೆ** (ನಾ). =ಪಿಶಾಚಗ್ರಹ : ಜನನಕಾಲದಲ್ಲಿ ಗುರು ಲಗ್ನದಲ್ಲೂ ಏಳನೆಯ ಸ್ಥಾನದಲ್ಲಿ ಅಂಗಾರಕನೂ ಇದ್ದರೆ . . . ಜಾತಕನಿಗೆ ಪಿಶಾಚಬಾಧೆ ಇರುತ್ತದೆ (ಜಾತಕ. ೨೦-೦೬ ಅನು). [ಸಂ. ಪಿಶಾಚಬಾಧ]

**ಪಿಶಾಚಲಿಪಿ** (ನಾ). ಒಂದು ಬಗೆಯ ಲಿಪಿ : ಜಲಲಿಪಿ ಪಿಶಾಚಲಿಪಿ . . . ಈ ಅಗಣಿತಲಿಪಿಗಳ ನೋಡಲರಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳ ಗೊಳುತಿದ್ದರು ವಿದ್ವಾಂಸರುಗಳೆಲ್ಲ (ಬಸವಪು. ೬೬-೯). [ಸಂ.]

**ಪಿಶಾಚಶೈಲ** (ನಾ). ಶೈಲೇಂದ್ರ, ದ್ವಿಶಿಖರ, ಮಹಾಶೈಲ, ಗಜಶೈಲ, ಪಿನಾಕಶೈಲ, ಪಿಶಾಚಶೈಲ, ಪಂಚಶೈಲ, ಕೈಲಾಸ, ವಾಸೋತ್ತರ ಮತ್ತು ಹಿಮಾದ್ರಿ ಎಂಬ ಹತ್ತು ಕುಲಪರ್ವತಗಳಲ್ಲಿ ಒಂದು ; ಈ ಕುಲಪರ್ವತಗಳ ಸಂಖ್ಯೆ ಮತ್ತು ಹೆಸರುಗಳ ಬಗ್ಗೆ ಪ್ರಾಚೀನಕವಿ ಗಳಲ್ಲಿ ಭಿನ್ನಾಭಿಪ್ರಾಯಗಳಿವೆ : ಶೈಲೇಂದ್ರ . . . ಪಿಶಾಚಶೈಲ . . . ಹಿಮಾದ್ರಿಗಳೆಂಬ ದಶಕುಲಪರ್ವತಂಗಳೇ ಪೂರ್ವೋಕ್ತ ಗಂಧಮಾದನ ಮೆಂಬ ಕೀಲಕಪರ್ವತಕ್ಕೆ ತೆಂಕಣದಿಕ್ಕಿನಲ್ಲಿಹವು (ಪಲೀಳ. ೨೦೩). [ಸಂ.]

**ಪಿಶಾಚಸತ್ವ** (ನಾ). [ಕಾಮಶಾ] (ಸ್ತ್ರೀಯರ) ಹನ್ನೆರಡು ಬಗೆಯ ಸ್ವಭಾವಗಳಲ್ಲಿ ಒಂದು ; ತಮೋಗುಣಪ್ರಧಾನವಾದ ಸ್ವಭಾವ : ಅಸಿಯ ನಡುವಿನ ಮಿಸುಗುವೆಸಳ್ಗಣ್ಣ ಪಿರಿದುಂಬ ಬಿಸುಮೆಯ್ಯ ಮದ್ಯ ಮಾಂಸ ಪ್ರೀತಿಯ ಪುಸಿಗೇಳ್ದಿರುಳ್ ತೊಳಲ್ವ ಸುನಿರದೆ ಲಜ್ಜೆಯಳಿದೆಸೆವಳ್ ಪಿಶಾಚಸತ್ವದವಳ್ (ಅಪಚ. ೫-೩೯); ದೇವಸತ್ವ ಯಕ್ಷಸತ್ವ . . . ಪಿಶಾಚಸತ್ವ ರಾಕ್ಷಸಸತ್ವ ಕಿನ್ನರಸತ್ವ ಖಚರಸತ್ವವೆಂಬ ದ್ವಾದಶಸತ್ವಸಕಿಯರಿಂ (ಪಲೀಳ. ೦೯೩). 'ದ್ವಾದಶಸತ್ವ' ಪರಾ. [ಸಂ.]

**ಪಿಶಾಚಸ್ತ್ರೀ** (ನಾ). ೧. ಹೆಣ್ಣು ಪಿಶಾಚಿ. ೨. [ಕಾಮಶಾ] ಸ್ತ್ರೀಯರಲ್ಲಿ ಒಂದು ಬಗೆ ; ತಮೋಗುಣಪ್ರಧಾನವಾದ ಸ್ವಭಾವವುಳ್ಳವಳು : ಲಜ್ಜೆಗೆಟ್ಟವಳು ಹಿರಿದನುಂಬುವಳು ದೇಹವುಂ ಬಿಸುಪಾದವಳು ಮದ್ಯ ಮಾಂಸವನುಂಬಳು ಇವಳು ಪಿಶಾಚಸ್ತ್ರೀ (ಕಾಮಶಾ. ೨೦೬). [ಸಂ.]

**ಪಿಶಾಚಿ**$_1$ (ನಾ). ಹೆಣ್ಣು ದೆವ್ವ : "ಪಿಶಾಚೀ, ಪಿಶಾಚಿಕಾ, ಈ ೨ ಹೆಣ್ದೆವ್ವ" (ಕಾಕಶ. ೨೦೯); ರಕ್ಕಸಿಯರಾಶಾಪಿಶಾಚಿಯರಿಚ್ಚೆಗಾತಿಯರು (ಅಜಿಪು. ೧೦-೫೨). [ಸಂ. ಪಿಶಾಚೀ]

**ಪಿಶಾಚಿ**$_2$ (ನಾ). = ಪಿಶಾಚ ೧ : ಅರ್ವ ಪಿಶಾಚಿಯರ್ಕಳನಸುಂಗೊಳೆ ಬೇವ ಪೆಣಕ್ಕೆ ಕೋಪದಿಂ ಪೋರ್ವ ಮರುಳ್ಗಳಂ . . . ಈಕ್ಷಿಸಿದಂ ಪ್ರತಿರೂಪಶೂದ್ರಕಂ (ಕಾವ್ಯಸಾ. ೫೩೯); ಬೆನ್ನು ಬಿಡದ ಪಿಶಾಚಿ ಹೊನ್ನು ಕೊಟ್ಟರೆ ನಿಂತೀತೇ? (ಗಾದೆ). [ಸಂ.]

**ಪಿಶಾಚಿಕೆ**$_1$ (ನಾ). (ಆಲಂ) ದುಷ್ಟತನ ; ಕ್ರೌರ್ಯ : ನಾವನಾರ್ಯರು ಮೆಸಗದೀ ಪಿಶಾಚಿಕೆಯನಕಟೆಸಗಿದಿರೆ? (ಹಕ್ಕರ. ೩೩-೦೯). [ಪಿಶಾಚ + -ಇಕೆ]

**ಪಿಶಾಚಿಕೆ**$_2$ (ನಾ). ೧. ಹೆಣ್ಣುದೆವ್ವ : "ಪಿಶಾಚೀ, ಪಿಶಾಚಿಕಾ, ಈ ೨ ಹೆಣ್ದೆವ್ವ" (ಕಾಕಶ. ೨೦೯). ೨. ಒಂದು ಬಗೆಯ ಸಸ್ಯ ; ಕಾಸರಿಕೆ : "ಪಿಶಾಚಿಕಾ—ಕಾಸರಿಕೆ, ನಸುಗುನ್ನಿ, ಮರುಳ್" (ಪಿಶಂ. ೯೯). [ಸಂ. ಪಿಶಾಚಿಕಾ]

**ಪಿಶಿತ** (ನಾ). ೧. ಮಾಂಸ ; ಬಾಡು ; ಅಡಗು : "ಪಲಲಂ, ಜಾಂಗಲಂ . . . ಪಿಶಿತಂ, ಆಮಿಷಂ, ಕ್ರವ್ಯಂ, ತರಸಂ, ಈ ೮ ಮಾಂಸಂ" (ಕಠಾಯು. ೦೦೯-೯) ; ಆತನುಂ ನಾಲಗೆಯಿಂದಂ ಪಿಶಿತದ ಖಂಡಮಂ ಬಾಯೊಳಿಡೆ (ವಡ್ಡಾರಾ. ೨೦-೦) ; ಸೀಳ್ದೊಟ್ಟಿಂ ವೈರಿಯನೊಡ್ಡಿ ತತ್ಪಿಶಿತದಿಂದಾತಂಗೆ ನೀಂ ಕೂರ್ಪೊಡೆಗೆಟ್ಟಿತ್ತಿನ್ನಡೆ ಮಾಡು ತದ್ದ್ವಿಜಗಣಕ್ಕಾಹಾರಮಂ ಭೂಪತೀ (ಶಂಕಠಾ. ೦೩-೬೦) ; ಧುರದೆಡೆ . . . ಕರುಳ್ಗಳೆ ತೋರಣಂ ಪಿಶಿತದೊಬ್ಬುಳೆಗಳ್ ನೆರಪಿರ್ದ ಬುತ್ತಿ ನೆತ್ತರೆ ಜಳಮಾಗಲಂತು . . . ಉಣುತಿರ್ದುವು ಭೂತಸಂಕುಳಂ (ಕ್ರಿಪು. ೨೯-೩೬೯). ೨. ಮಾಂಸದ ಅಡುಗೆ ; ಪಾಕ : ನಡುವಿರುಳ್ಪೋಗಿ ಪಣಿಜರನೊಟ್ಟೈಯ್ದಿ ವಂಚಿಸಿ ಕುರಿದಂದೆನೆಂದನೊರ್ವಂ ಪಿಡಿದು ತಂದಿತ್ತ ಕುರಿಯಾನಾರಿಕೆ ಕೊಂದು ಪಿಶಿತಮಂ ಮಾಡಿದೆನೆಂದ ನೊರ್ವಂ (ಸುಕುಮಾಚ. ೬-೦೩). [ಸಂ.]

**ಪಿಶಿತಖಂಡ** (ನಾ). ಮಾಂಸದ ಚೂರು : ಬಸುನೆತ್ತರುಮಂ ಕಂಡ ದಿಂಡೆಯುಮಂ ಕಂಡು ಕ್ಷುಧಾರ್ತನಪ್ಪದೊಂದು ಮೃಗಧೂರ್ತಂ ಪಿಶಿತ ಖಂಡಕ್ಕೆ ಸಾರ್ದು (ಶಂಕಕಂ. ೬೨-೧೬). [ಸಂ.]

**ಪಿಶಿತಭೋಜನ** (ನಾ). ಮಾಂಸದ ಊಟ : ಪಿಶಿತಭೋಜನದಲ್ಲಿಗೆ ನಲ್ಲ ದೆಕ್ಕೆಯಿಂ ಸಾರ್ವ ನಿಶಾಚರೀಜನಮಂ . . . ಈಕ್ಷಿಸಿದಂ ಪ್ರತಿರೂಪ ಶೂದ್ರಕಂ (ಕಾವ್ಯಸಾ. ೩೩೪). [ ಸಂ. ]

**ಪಿಶಿತಾಶ** (ನಾ). ೧. ಮಾಂಸವನ್ನು ಭಕ್ಷಿಸುವವನು ; ಮಾಂಸಭಕ್ಷಕ : ಕಡುಭಕ್ತರ್ಪಿಶಿತಾಶರಪ್ಪರಸುಗಳ್ ಮರ್ತ್ಯರ್ಕೆಲವರ್ಮಾಂಸದಿಂದೊಡ ಗೂಡಿರ್ದ ನಿವೇದ್ಯಮಂ . . . ಕುಡರೇ (ಕಸಾರ. ೨೧೩). ೨. ರಾಕ್ಷಸ ; ನಿಶಾಚರ : ಯಮಪಾಶದಿಂ ಪಾಪಕರ್ಮಂ ಮೊದಲೆ ಬಿಗಿದ ಪಿಶಿತಾಶರಂ ತೇಜಪ್ಪ ರಾಮನ್ . . . ಸಂಹರಿಸಿ ಧರ್ಮಲಾಭಕೆ ಯಶೋದೀಪ್ತಿಯಂ ಮೆರೆವನಯ್ (ಕ್ರೀರಾಮಾ. ೨೮-೨೦) : ಕೀಸಿದಾ ಕೂರಂಬುಗಳಿಗೊಂದಿನಿತ ಘಾಸಿಯಾಗುತ್ತೆ ಪಿಶಿತಾಶನುರಿದೆದ್ದನ್ (ಕ್ರೀರಾಮಾ. ೦೬೦-೦೩೦). [ಸಂ.]

**ಪಿಶಿತಾಶನ** (ನಾ). ೧. ಮಾಂಸವನ್ನು ತಿನ್ನುವುದು. ೨. ಪಿಶಾಚಿ. ೩. ರಾಕ್ಷಸ : ಪಿಶಿತಾಶನನು ಕಂಗಳ ಮುಚ್ಚಿ . . . ವಿವರಿಸಿದ (ಅಭಾಗ. ೦೦-೬೦-೨೮). [ಸಂ.]

**ಪಿಶಿತಾಶಿ** (ನಾ). ೧. = ಪಿಶಿತಾಶ ೧ : ವಸುಧಾಜನಂಗಳೆಲ್ಲಂ ಮಸಣ ಮದೆಂದೆಡೆ ಭಯಸ್ಥರಪ್ಪರದೇಂ ಪೇಟು ಪಿಶಿತಾಶಿಯ ತನುವಂತದೆ ಮಸಣಂ ಮಸಣಕ್ಕೆ ಬೇಟ ಕೋಡೆರಡೊಳವೇ (ಕಸಾರ. ೨೯೬). ೨. ರಾಕ್ಷಸ. ೩. ನೈಋತ್ಯದಿಕ್ಕಿನ ಅಧಿಪತಿ ; ನಿರುತಿ : ಇಂದ್ರನ ಮುಂದುಗೆಡಿಸಿ . . . ಪಂದೆಯೆನಿಸಿ ಯಮನನು ಪಿಶಿತಾಶಿಯ ತಂದನು ಪಿಡಿಯಾಳಾಗಿ (ಕ್ರಿಕೃಸಾಂ. ೬೬೩). ೨, ೩ : ಎನಗೆ ವಿಜಾತಿ ಕೌಶಿಕನುಮಿಾ ತೃಣಕಾಷ್ಠಸಮೂಹಭೋಜಿಯಾಯನಲನನಾರತಂ ಕೊಲುವ ನಿರ್ಘೃಣ (ನೆ:) ಪಿಶಿತಾಶಿ ದೈತ್ಯನೀ ವನಧಿಯೊಳಿರ್ಪ ಜಂಬುಕನುಮಿಾ ಸಲೆ ಚಂಚಳನಪ್ಪ ವಾಯುವೀ ಧನಪತಿಯಪ್ಪ ತದ್ದನದನೀ ಬಡಭೌತಿಕನುಂ ಸಮಾನರೇ (ಶೇಬಪು. ೨-೦೦೪). [ಸಂ. ಪಿಶಿತಾಶಿನ್]

**ಪಿಶಿತಾಹಾರ** (ನಾ). = ಪಿಶಿತಭೋಜನ: ಮೃದುಪಿಶಿತಾಹಾರಮಂ ಪಡೆದುಂ ಮೆಚ್ಚಿ ಕರುಣಿಸಿ ತಿನಲೊಲ್ಲದೆ ಕಾದು ಕಟೊಪಿದ ರಕ್ತಸಂಗೆ ಮಿಕ್ಕವರುಳ್ಕೊಡ ಪೇಟುದೆಂದಂ (ಸುಕುಮಾ. ೬-೨೬ ವ). [ಸಂ.]

**ಪಿಶಿತೆ** (ನಾ) ಒಂದು ಬಗೆಯ ಔಷಧೀದ್ರವ್ಯ ; ಜಟಾಮಾಂಸಿ : "ಜಟಾಮಾಂಸಿ ಪಿಶಿತೆಯೆನಿಕ್ಕು" (ಮಂಗರಾ. ೯೩-೯೦). [ಸಂ. ಪಿಶಿತಾ]

**ಪಿಶುನ** (ನಾ). ೧. ತಿಳಿಯುವಂತೆ ಮಾಡುವುದು ; ಸೂಚಿಸುವಿಕೆ ; ಸ್ಪಷ್ಟಗೊಳಿಸುವುದು. ೨. ಸೂಚನೆ ; ಚಿಹ್ನೆ : 'ಸಂಗರಪಿಶುನ' ಪರಾ. ೩. ಚಾಡಿ ಹೇಳುವಿಕೆ ; ದೂರುವಿಕೆ : ಇದು ಅತಿಶಯೋಕ್ತಿ ಎಂದು ಕೆಲವು ಪಿಶುನಪ್ರವೀಣರು ಹೇಳಿ ಹಾಸ್ಯ ಮಾಡಿದಾಗ್ಯೂ . . . ಚಿಂತೆ ಇಲ್ಲ (ಜಮುಸುಗ. ೩೬). ೪. ಚಾಡಿ ಹೇಳುವವನು; ಚಾಡಿಕೋರ : "ಕರ್ಣೇಜಪಃ, ಸೂಚಕಃ, ಪಿಶುನಃ – ೩ ಚಾಡೀ ಹೇಳುವವನು, ಕ್ಷುದ್ರಗಾರ" (ಸಿದ್ಧಾಂತಿ. ೩೬೬) ; ನಿಶ್ಚಿತ್ರಮಿದೆನಗೆ ಸಕಲವಚಶ್ಚತುರ ಜನೋಪದೇಶದಿಂ ಪಿಶುನವಚೋವೃಶ್ಚಿಕವಿಷಹರಮುಖವಿಪಶ್ಚಿನ್ಮುನಿಮಂತ್ರ ಮೆಂಬುದಿನ್ನುಂ ಮುನ್ನುಂ (ಲೀಲಾವ.೦-೦೪); ಕೊಂಡೆಯುಮಂ ಕೇಳಲ್ ಮನಂದರಲ್ ಪಿಶುನರ್ ಪೊರ್ದಿಯಿಂತೆಂದರ್ (ರಕಕು. ೯-೬೩ ವ). ೫. ನೀಚ ; ದುಷ್ಟ ; ಕ್ರೂರಿ : "ಪಿಶುನಃ—೧ ದುರ್ಜನ, ಚಾಡೀ ಕೋರ " (ಸಿದ್ಧಾಂತಿ. ೪೦೪); ಸತ್ತ್ವಂ ಪಿಶುನಂ ಪೆಜರ್ಗಾಪತ್ತಂ ಮಾಡ ದಿರನೆಂದು ಮಱುಗಿದಪುದು ಮಚ್ಚಿತ್ತಂ (ಲೀಲಾವ. ೦-೬೭); ನಿಷ್ಠುರಿಗಳಿಗೆ ಪಿಶುನ[ಕಾಶಂ.೧]ರಿಗಯೋಗ್ಯರಿಗಿದನು ಪೇಳದಲೆ . . . ಪರಮ ಭಗವದ್ದಾಸರಿಗೆ ತಿಳಿಸುವುದು ಈ ರಹಸ್ಯ (ಹಸಾರ. ೧೩-೩೨) ; ತಂದೆ-

ತಾಯಿ, ಬಂಧು, ಗುರು ಇವರನ್ನು ದ್ವೇಷಿಸುವವರೂ ಆದ ಪಿಶುನರು ಶೋಚನೀಯರಾಗಿರುವರು (ಕುಳಸಿ. ೧೬೨). ೬. ಕುಂಕುಮಕೇಸರಿ ; ಕೇಶರ : "ಪಿಶುನ–ಕುಂಕುಮ, ಕೊಂಡೆಯನು" (ಓಸಂ. ೯೬). [ಸಂ.]

**ಪಿಶುನತ್ವ** (ನಾ). ಚಾಡಿ ಹೇಳುವುದು; ದೂರು ಹೇಳುವಿಕೆ. [ಸಂ.]

**ಪಿಶುನೆ** (ನಾ). ಒಂದು ಬಗೆಯ ಸಸ್ಯ; ಸಂಕೇಬೇರು : "ಮರುನ್ಮಾಲಾ . . . ಪಿಶುನಾ, ಸ್ಪೃಕ್ಕಾ . . . ಕೋಟಿವರ್ಷಾ, ಲಂಕೋಯಿಕಾ . . . ೧೦ ಸ್ಪೃಕ್ಕೆಯೆಂಬ ಗ್ರಂಥದ್ರವ್ಯ, ಸಂಕೇಬೇರು" (ಸಿದ್ಧಾಂತಿ. ೦೪೩). [ಸಂ. ಪಿಶುನಾ]

**ಪಿಷ್ಟ** (ನಾ). ೧. (ಧಾನ್ಯ ಮೊದಲಾದುವುಗಳ) ಹಿಟ್ಟು ; ಪುಡಿ : "ಪಿಟ್ಟದು ಪಿಷ್ಟಂ ಚೂರ್ಣತು" (ವಸ್ತುಕೋ. ೬೩-೨೦) ; ಅಂತು ಧರ್ಮತೀರ್ಥಪ್ರವರ್ಧ ನಂಗೆ ಸುಗಂಧಶುಷ್ಕಚೂರ್ಣ ಪಿಷ್ಟದಿನುದ್ವರ್ತನವಿಧಿಯಂ ನಿರ್ವರ್ತಿಸಿ (ಆಕಪು. ೯-೬೮ ವ) ; ಪಿಷ್ಟ – ಹಿಟ್ಟು (ಕಮರ. ೨೬೮ ಕ್ರಿಯೋ). ೨. ಅಕ್ಕಿ, ಗೋಧಿ, ರಾಗಿ ಮೊದಲಾದ ಧಾನ್ಯಗಳ ಹಿಟ್ಟಿನಿಂದ ತಯಾರಿಸಿದ ಆಹಾರಪದಾರ್ಥ. ೩. ಒಂದು ಬಗೆಯ ಲೋಹ ; ಸೀಸ. ೪. ರಾಸಾಯನಿಕವಾಗಿ 'ಕಾರ್ಬೋಹೈಡ್ರೇಟ್' ಎಂದು ನಿರ್ದೇಶಿ ಸುವ ವಸ್ತು,—ಅಂಶ: ಧಾನ್ಯಗಳು ಮತ್ತು ಆಲೂಗೆಡ್ಡೆ, ಮರಗೆಣಸು, ಗೆಣಸು ಮೊದಲಾದ ಗೆಡ್ಡೆಗೆಣಸುಗಳಲ್ಲಿ ಬಹಳ ಪ್ರಮಾಣದಲ್ಲಿ ಪಿಷ್ಟವಿದೆ (ಆರುಸಾ. ೩೬). [ಸಂ.]

**ಪಿಷ್ಟಕುಟ್ಟ** (ನಾ). [ನಾಟ್ಯ] ಭ್ರಮರ, ಆಸ್ಕಂದಿತ, ಆವರ್ತ, ಶಕಟಾಸ್ಯ, ಅಡ್ಡಿತ, ಸಮೋಸರಿತ, ಅಧ್ಯರ್ಧಿಕ, ಏಲಕಾಕ್ರೀಡಿತ, ಪಿಷ್ಟಕುಟ್ಟ ಮತ್ತು ಚಾಷಗತಿ ಎಂಬ ಹತ್ತುಬಗೆಯ ಭೌಮ ಮಂಡಲಗಳಲ್ಲಿ ಒಂದು ; ಪ ಸೂಚಿ, ಅಪಕ್ರಾಂತ, ಭುಜಂಗತ್ರಾಸಿತ ಗಳೆಂಬ ಚಾರಿಗಳನ್ನು ಕ್ರಮವಾಗಿ ಮಾಡಿ, ಮಂಡಲಾಕಾರವಾಗಿ ಸಂತ್ತುವುದು : ಬಲ[ಪದ]ದೊಳ್ ಸೂಚಿಯನೆಡಗಲದೊಳಪಕ್ರಾಂತ ಚಾರಿಯಂ ಬಲನೆಡದೊಳ್ ಸಲೆ ಭುಜಗತ್ರಾಸಿತಮಂ ವಿಲಸಿತದಿಂದೆಸೆವ ಮಂಡಲಭ್ರಾಂತಿಯುಮಂ ಕಡೆಯೊಳ್ ಸಮೆಯುಲ್ ಕೇಳಿದು ಬಡದೆಸೆವೀ ಪಿಷ್ಟಕುಟ್ಟಮಂಡಲಮನಿಕುಂ (ಲಾಸ್ಯರಂ. ೬-೩೦). [ಸಂ.]

**ಪಿಷ್ಟಚರ್ಚೆ** (ನಾ). ಹಿಟ್ಟಿನ ರಂಗವಲ್ಲಿ,—ರಂಗೋಲೆ : ಮುನಿಕುಮಾರಿ ಯರಿಕ್ಕಿದ ಪಿಷ್ಟಚರ್ಚೆಯಿಂ . . . ಎಸೆದು ತೋಱುದುದಾಗಳಶೋಕಭೂರುಹಂ (ಕಾದಂಪೂ. ೨೨೬). [ಸಂ. ಪಿಷ್ಟಚರ್ಚಾ]

**ಪಿಷ್ಟಪಚನ** (ನಾ). (ಧಾನ್ಯದ) ಹಿಟ್ಟನ್ನು ಬೇಯಿಸಲು ಉಪಯೋಗಿ ಸುವ ಪಾತ್ರೆ : "ಋಂಜೀಷಂ, ಪಿಷ್ಟಪಚನಂ—೨ ಬಾಣಲಿ, ಗಾದಿಗೇ ಮುಚ್ಚಳ, ಕಡುಬುಮುಚ್ಚಳ, ಹಿಟ್ಟು ತೊಳಸುವ ಬಾನ". (ಸಿದ್ಧಾಂತಿ. ೨೮೩) [ಸಂ.]

**ಪಿಷ್ಟಪದಾರ್ಥ** (ನಾ). 'ಕಾರ್ಬೋಹೈಡ್ರೇಟ್'ನ ಅಂಶವು ಹೆಚ್ಚಾಗಿರುವ ಪದಾರ್ಥ : ಜೀರ್ಣಶಕ್ತಿ ಕಡಿಮೆಯಾಗಿರುವವರಿಗೆ ಪಿಷ್ಟ ಪದಾರ್ಥಗಳು ಅನಾರೋಗ್ಯಕಾರಿ (ಶರಶ. ೩೦). [ಸಂ.]

**ಪಿಷ್ಟಪೇಷಣ** (ನಾ). ೧. ಹಿಟ್ಟನ್ನು ಪುನಃ ಪುಡಿ ಮಾಡುವುದು. ೨. (ಅಲಂ) ಮಾಡಿದುದನ್ನೇ ಮಾಡುವಿಕೆ : ಉಪಯೋಗವಿಲ್ಲದ ಕೆಲಸಮಾಡುವುದು ; ವ್ಯರ್ಥವಾದ ಪುನರಾವೃತ್ತಿ : ನಿಚ್ಚಮಿಾ ಪಿಷ್ಟ ಪೇಷಣಮಿಾ ಚರ್ವಿತಚರ್ವಣಂ ಸುಮಿಾದೇ ನಿನ್ನಂ ಮರುಳ್ ಮಾಡಿತೋ (ಆದಿಪು. ೩-೬೯) ; ಉಣಸಿಂ ತಂಬುಲದಿಂ ಭೂಷಣ ಗಣಿಕಾಗಾನ ವಸ್ತ್ರ ಮಾಲ್ಯಾದಿಗಳಿಂ ತಣಿಯೆನಣಂ ಚರ್ವಿತಚರ್ವಣಮಾ ಪಿಷ್ಟಪೇಷಣಕ್ಕಂ ಮಾಂಧಾಂ (ಸಮುಶ. ೬-೩೦); ಇವನ ಕವನಗಳಲ್ಲಿ ಪಿಷ್ಟಪೇಷಣವಿರಲಿಲ್ಲ (ಉರ್ದುಸಾ. ೦೦೩) ; ದೇವಪುತ್ರರಿಗೆ ನರರ ಬಾಂಧವ್ಯಮೆಂತಹುದು ? ಪಿಷ್ಟಪೇಷಣವೇಕೆ ? (ಭಾಸನಾ. ೯೪). 'ಚರ್ವಿತ ಚರ್ವಣ ' 'ತವಡುಕುಟ್ಟು' ಪರಾ. [ಸಂ.]

**ಪಿಷ್ಟಾತ** (ನಾ). (ಆಭರಣ, ವಸ್ತ್ರ ಮೊದಲಾದುವುಗಳನ್ನು ಸುವಾಸನೆಯಿಂದ ಕೂಡಿರುವಂತೆ ಮಾಡಲು ಬಳಸುವ) ಸುಗಂಧಯುಕ್ತವಾದ ಪುಡಿ; ಬುಕ್ಕಿಟ್ಟು: "ಪಿಷ್ಟಾತಃ, ಪಟವಾಸಕಃ — ೨ ಬಟ್ಟೆಗೆಗೆ ಹಾಕುವಳ ಕಟ್ಟುವ ಗಂಧದ್ರವ್ಯದ ಹೆಸರು" (ನಿಘಂ. ೨೦೦). 'ಪಟವಾಸ' ಪರಾ. [ಸಂ].

**ಪಿಷ್ಟಾತಕ** (ನಾ). = ಪಿಷ್ಟಾತ: ಜಗತ್ಕುಶೇಶಯನಿವಾಸಿನೀಪ್ರಮದ ಮುಷ್ಟಿಪಿಷ್ಟಾತಕಂ ವಿಶಾಲತರತರಂಗಸೌಧತಳಸಂಗಿಪೌರಾಂಗನಾವಶೀಕರಣ ಚೂರ್ಣಮಾದುದು ಬಲೌಘಧೂಳೀಚಯಂ (ಅಜಿತ. ೧೦-೦೫): ಕೆದಱುದ ಪಿಷ್ಟಾತಕದಿಂದೊದವಿದ ಪಟವಾಸಚೂರ್ಣದಿಂ . . . ಪದೆಪಂ ಪುಟ್ಟಿಸಿದುದಿಟ್ಟಳಂ ನೃಪಸದನಂ (ಶಂಖಪುರಾ. ೯-೨೭); ಪಿಂಜರಿತಪಿಷ್ಟಾತಕಂ ದೆಸೆದೆಸೆಗೆ ಪಸರಿಸೆಯುಂ (ಚಂದ್ರಪ್ರ. ೦೨-೩೩ ವ). [ಸಂ.]

**ಪಿಷ್ಟಾತಕಕೇಳಿ** (ನಾ). (ಉತ್ಸವಸಂದರ್ಭಗಳಲ್ಲಿ) ಸುವಾಸನೆಯ ಪುಡಿಯನ್ನು ಪರಸ್ಪರ ಎರಚುವಿಕೆ: ದಿವಿಜೇಂದ್ರವೃಂದಂಬೆರಸಿಂದ್ರನೊಸಗೆ ಮರುಳ್ಗೊಂಡು ಪಿಷ್ಟಾತಕಕೇಳೀವಿಧಾನಾನಂತರಂ (ಶಾಂತಿಪು. ೦೦-೬೯ ವ). [ಸಂ. ಪಿಷ್ಟಾತಕಕೇಳಿ]

**ಪಿಷ್ಟಾತಕಚೂರ್ಣ** (ನಾ). = ಪಿಷ್ಟಾತ: ದಿಕ್ಪಾಲಕರ ಕೆದಱುವ ಪಿಷ್ಟಾತಕಚೂರ್ಣಮೆನಿಸುವ ರಜಃಪುಂಜಮುಮಂ . . . ನೋಡುತ್ತುಂ ನಡೆಯೆ (ಅಜಿತ. ೦೬-೯೯ ವ); ಕಾಮಸಾಮ್ರಾಜ್ಯದೊಸಗೆಯೊಳ್ ಪಸರಿಸಿದ ಪಿಷ್ಟಾತಕಚೂರ್ಣದಂತೆ ಮಂದವಾದ ಪೊಂದಾವರೆಯ ರಜದೊಳಂ (ಮಲ್ಲಿ. ೨-೩೨ ವ); ಕೆದಱುದ ಪಿಷ್ಟಾತಕಚೂರ್ಣದೊಳ ಪಟವಾಸಚೂರ್ಣದೊಳಮಪ್ಪದಿಶಾವದನಮುಮಾ ನಭಮುಂ ಪಡೆದುದು ನಾನಾವರ್ಣರುಚಿರರಚನಾಚ್ಛವಿಯಂ (ಕೃಷ್ಣ. ೯-೩೨). [ಸಂ.]

**ಪಿಷ್ಟಿ** (ನಾ). ಪುಡಿ; ಹಂಡಿ; ಚೂರ್ಣ: ಕ್ರಿಮಿ ಮೇಣ್ ಭಸ್ಮಂ ಮೇಣ್ಪಿಷ್ಟಿ ಮೇಣ್ ಶರೀರಕ್ಕೆ ನಿಟ್ಟೆಯಾ ದೊರೆಯಿದಱೊಳ್ ಕಮನೀಯ ಮೊಂದುಮಿಲ್ಲ (ಅಜಿತ. ೨-೩೩). [ಸಂ.]

**ಪಿಷ್ಟೋದಕ** (ನಾ). ಹಿಟ್ಟನೊಡನೆ ಬೆರಸಿದ ನೀರು: ಪಿಷ್ಟೋದಕಗುಡಧಾತಕೀಸಂಯೋಗದಿಂದಮೆಂತು ಮದವಿಕಾರಮೆಸೆದಪ್ಪುದು (ಅಜಿತ. ೨-೯ ವ); ಪಿಷ್ಟೋದಕಗುಡಧಾತಕ್ಯಾದಿಯತ್ರಣಂ ಮದಶಕ್ತಿ ಪುಟ್ಟುವಂತೆ (ಶಾಂತಿಪು. ೯-೦೨ವ). [ಸಂ.]

**ಪಿಸನಾರಿ, ಪಿಶನಾರಿ** (ನಾ). ಜಿಪುಣ; ಲೋಭಿ: ಎಂಥಾ ಪಿಸನಾರೀನಪ್ಪಾ ಇವನು ಅಂತ ಅಂದುಕೊಳ್ತಾರೆ (ಪಪ್ಪು. ೨೦). ಪಿಶನಾರಿ: ಜುಗ್ಗ, ಜಿಪುಣ; ಪಿಶನಾರಿ (skinflint. ಇಂಕಿಕ); ಇತರರೆಲ್ಲರೂ ಪಿಶನಾರಿಗಳೆಂದು ಹೇಳಬೇಕಾಗಿ ಬರುತ್ತದೆ (ಸಾಹಿತಿ. ೭೭). 'ಪೀನಾರಿ₂' ಪರಾ.
[ದೇ. ‖ ತಮಿ. ಪಿಚಿನಾಱಿ, ಪಿಚಿನೇಱಿ, ಪಿಚುನಾಱಿ; ತೆಲು. ಪಿಸಿನಾರಿ]

**ಪಿಸರು₁, ಪಿಸರಂ₁** (ನಾ). ೧. ದೇಹದ ಕೊಳೆ, —ಕಶ್ಮಲ; "ಶರೀರದ ಹೊಲಸು" (ಶಾಸಕೋ. ೦೭). ೨. ಕಣ್ಣು, ಮೂಗುಗಳ ಕೊಳೆ,— ಮಲ; ಗೀಜು: (*). 'ಪಿಚ್ಚು₁' ಪರಾ. ಪಿಸುರು₁: ೧. ಹಸನವಿಲ್ಲ ಹರೆಯವು ಪಾರಿದ ಪಿಸುರು ಪಿಚ್ಚುಗಣ್ಣಿನ ಮುದುಕಿ (ಕಥೀಚ. ೩೩-೦೭). ೨. ಸಾಮಾನ್ಯಜನರು ಮಕ್ಕಳು ಹುಟ್ಟಿದ ಕೆಲವು ದಿನಗಳಲ್ಲಿ ಕಣ್ಣಿನಲ್ಲಿ ಪಿಸುರು ಮತ್ತು ಕೆಂಪು ಕಂಡರೂ ಕೂಡಾ . . . ಕಣ್ಕಪ್ಪು ನೇತ್ರಾಂಜನಗಳನ್ನು ಕಣ್ಣಿಗೆ ಹಚ್ಚಿ ಕಣ್ಣು ಪೂರ್ತಿ ಇಂಗಿ ಹೋದ ಮೇಲೆ ವೈದ್ಯರಲ್ಲಿಗೆ ಚಿಕಿತ್ಸೆಗೆ ಕರೆದುಕೊಂಡು ಬಂದಿರುವ ಪ್ರಸಂಗಗಳು ಎಷ್ಟೋ ಉಂಟು (ಪಿಷ್ಟು. ೦೩). 'ಕಿಸುರ್₂' ಪರಾ.
[ದೇ. ‖ ತೆಲು. ಪಿಸರು]

**ಪಿಸರು₂, ಪಿಸುರು₂** (ನಾ). ೧. ಆವೇಶ; ಉನ್ಮತ್ತತೆ: (*). ೨. ಸೊಕ್ಕು; "ಪಿಸರು — ಪಿಪಾರ್ಲಿ ಸೊಕ್ಕು; ಉಪದ್ಯಾಪಿತನ; ತುಂಟತನ" (ಶಾಸಕೋ. ೦೭). ೩. ಹಟಮಾರಿತನ; ಮೊಂಡುತನ: (*). ಪಿಸುರು₂: ೨. ಪಿಸುರು ಇದ್ದವರ ಹತ್ತಿರ ಉಸುರಬಾರದು (ಗಾದೆ).

ಪಿಸರು ತೆಗೆ = (ಅಲಂ) ನಿಂದಿಸು; ತೆಗಳು; ಬಯ್ಯು: ಪಿಸರು ತೆಗೆದರೂ ಪಿಶಾಚ ಬಿಡುವುದಿಲ್ಲ (ಗಾದೆ).
[?. / ತುಳು. ಪಿಸ್‌ರ್, ಪಿಸರ್]

**ಪಿಸರುಗಣ್ಣು** (ನಾ). ಹೆಚ್ಚು ಪಿಸರು ಬರುವ ಕಣ್ಣಿನ ಒಂದು ಬಗೆಯ ರೋಗ: ಅವನು ಪಿಸರುಗಣ್ಣಿನ ಬಾಧೆಯಿಂದ ನೇತ್ರವೈದ್ಯರಲ್ಲಿಗೆ ಹೋಗಿದ್ದಾನೆ (ಕೂಂ). 'ಪಿಳಿಚಲುಕಣ್ಣು' ಪರಾ.
[ಪಿಸರು₁ + ಕಣ್ಣು ( < ಕಣ್ )]

**ಪಿಸಾಂಟಿ, ಪಿಸಾಂಟು, ಪಿಸಾಡಿ, ಪಿಸಾಳಿ** (ನಾ). (ಉಕ) ತಲೆ ಕೆಟ್ಟ ವ್ಯಕ್ತಿ; ಹುಚ್ಚ: ಯಾರೋ ಹುಡುಗಿ ಹೆಚ್ಚಾದ ಅಪ್ಪನೊಬ್ಬ ಈ ಪಿಸಾಂಟನ ಕೊರಳಿಗೆ ತನ್ನ ಮಗಳನ್ನು ಕಟ್ಟುವ ಧೈರ್ಯ ಮಾಡಿದ (ಹುಲಿರುದಾ. ೦೫೨). ಪಿಸಾಂಟು: ಬಸ್ಲೀ ತಪ್ಪುದು ಅಂತ ತಿಳ್ಕೊಂಡಿದ್ದೊ ಪಿಸಾಂಟುಗಳು (ಹೊಸಕ್ಕೆ. ೩೩). ಪಿಸಾಡಿ: ಈ ಪಿಸಾಡಿನ್ನ ಯಾರು ಕೇಳತಾರ್ರೀ? (ಪಡಿಕೋ. ೩೭). ಪಿಸಾಳಿ: ಈ ದಾಂಡಿಗ ಜವಾನ ಪಿಸಾಳಿಗಳ ಕಯ್ಯಲ್ಲಿ ಸಿಕ್ಕು ನಾನು ಒದ್ದಾಡಲಾರೆನಪ್ಪಾ (ಶೀಲಾ. ೦೨೯).
[← ತುಳು. ಪಿಸಂಟೆ, ಪಿಸಿಂಟೆ = ಮುಂಗೋಪಿ. / ಮರಾ. ಪಿಸಾಟ್ = ಹುಚ್ಚು]

**ಪಿಸಾಂಟು** 'ಪಿಸಾಂಟಿ' ನೋ.

**ಪಿಸಾಡಿ** 'ಪಿಸಾಂಟಿ' ನೋ.

**ಪಿಸಾಳಿ** 'ಪಿಸಾಂಟಿ' ನೋ.

**ಪಿಸಿ₁, ಹಿಸಿ** (ಕ್ರಿ). ೧. ಸಿಗಿ; ಕಿತ್ತು ತೆಗೆ; ಹರಿದು ಹಾಕು: "ಹರಿ, ಮುರಿ, ಒಡೆ, ಪಿಸಿ [ಹಿಸಿ]" (ಕಂಸುಹು. ೯೦). ೨. (ಬಟ್ಟೆ, ಮೊದಲಾದುವು) ಹಿಂಜು; ಹರಿದುಹೋಗು; ಕಿತ್ತುಹೋಗು: ಒಣಲು ಉಡಿಗೆಗಳಂತೆ ಮಾಸಿ ಪಿಸಿವುದು (ಉದ್ಭಟಕಾ. ೩೩-೯). 'ಪಿಸುಂಕು' ಪರಾ. ಹಿಸಿ: ೧. ಶಿಶುವ ಸಲಹಿದು ಸುರವಿರೋಧಿಯ ಬಸುಱ ಬಗಿದೆಳೆಗರುಳ ನುಗುರಲಿ ಹಿಸಿ [ಪಾಠಾಂ. ನಸಿ, ಸಸಿ]ದು ಕೊರಳಲಿ ಹಾಯ್ಕಿದನು ನರಹರಿಯ ರೂಪಿನಲಿ (ಕೊರಣಾ. ೬-೨-೩೦); ಅವರ ಬಾಯಿಂದ ಆ ಮಾತು ಬರುವ ಮುಂಚೆ ಅವರ ಕಟವಾಯ್ಗಳನ್ನು ಹಿಸಿದಲ್ಲದೆ ನನಗೆ ನಿದ್ರೆ ಬಾರದು (ಅಗ್ರಹ. ೩೦); ಮಿತ್ತು . . . ಶಿಶುವನು ಕಿತ್ತು ಹಿಸಿದು ತಿಂಬುದ ಕಂಡು (ಪಾಂಚಜ. ೨೯-೦೫). ೨. "ಹಿಂಜು, ಹಿಕ್ಕು, ಬಾಚು, ಹಿಸಿ [ಪಿಸಿ]" (ಕಂಸುಹು. ೯೨); ಕುಪ್ಪಸ ಹಿಸಿಪಂತೆ ಮೈಯುಬ್ಬಿ ಕೈ ಮುಗಿದೊಪ್ಪದಿ ಸಾಗಿದರವರು (ಭರತ. ೩೯-೦೦೦); ಸುಲಭವಾಗಿ ಹಿಸಿಯುವ ದಾರಗಳಿಂದ ಮಾಡಿದ ಬಟ್ಟೆ ಬಾಳಿಕೆ ಬರುವುದಿಲ್ಲ (ಗೃಹವಿ. ೭೯). ೩. (ಹಣ್ಣು ಮೊದಲಾದುವು) ಸೀಳಿಕೊಳ್ಳು; ಬಿರಿ; ಒಡೆ: ಅಸಿದಾದ ಬವನೆಯೊಳಿಪದದ ಕಾಯ್ಗಳನು ನಾಲ್ಕೆಸಳಾಗಿ ಕುಯಿದು ತುಪದೊಳಗುಕ್ಕರಿಸಿಯವು ಹಿಸಿಯದಂದದಿ ಹಿಕ್ಕಿ (ಸೂಪಶಾ. ೯-೯); ಮೆಱೆವ ಪೋಗೊಡಮೊಲೆಯನವನ ವಕ್ಷಃಸ್ಥಳದೊಳೊತ್ತಿ ದೊಡೆ ಹಿಸಿದೊಳಗಣ ತನಿಸುಧೆಯೊಸರ್ದು ತೊಟ್ಟಿಡುವ ಬಿಂದುಗಳ ಸಾಲಿದೆನಲು ಕಡಿಕಿ ಪಱಿದುಗುವ ಹಾರದ ಮುತ್ತುಗಳ ಮಣಿಗಳಿಡೆವಿಡವೆ ಸೂಸುತಿತೆ (ಕೃಷ್ಣಭಾ. ೦೦-೦೭); ಕಾಲೊಂದನಾ ದಾರಿಗಿನ್ನೊಂದನೀ ದಾರಿಗೆಂದೇಕಾಲದೊಳೂರಿ ನಡೆಯುವುದಾದರೆ ಎರಡಡಿ ಹೋದೀರಿ ಸೊಂಟವು ಹಿಸಿದು ಬಿದ್ದೀರಿ (ಇಂಕಿಸಾಕ. ೨೩೭-೬೯). ೪. ಬಿರಿಯುವಂತೆ ಮಾಡು; ಎರಡಾಗಿ ಸೀಳು: ಹಿರಿದಾಗಿಯದ ಹಿಸಿದು ನಾರುವದನು ಮಾಡಿ ಅರಗಿನಂದದೊಳು ಸರಿಗೆಯ ಮಾಡಿಕೊಂಡು ಕತ್ತರಿಸುವುದು (ಸೂಪಶಾ. ೦-೯೦); ತುಂಬಿದಕ್ಕರಿನದೆಯ ಹಿಸಿಯುತ ಹಿಂಡಿ ಬಾಳನು ಬಸಿವರು (ದ್ರಾಕ್ಷಿಪಾ. ೩೩-೦೭); ಹಲಸಿನ ಹಣ್ಣಿನ ತೆರನಿರೆ ನಿನ್ನನು ಹಿಸಿವರು ಬಂಧುಬಾಂಧವರು (ಇಂಕಿಸಾಕ. ೨೨೯-೩೫).

೫. ಅವಮುಕು ; ಒತ್ತು ; ಹಿಂಡಂ : ಕಕ್ಕಸದಿಂದ ಕಡಿವ ಚಿವುಟುವವನು ಗುರಿಕ್ಕುವ ಹಸಿವ ಹೆಟ್ಟುವನು ಚಿಕ್ಕವರುಗಳನೆಲ್ಲರನು (ಶೀಟಸಂ. ೦೩-೦೦೯).

ಪಿಸಿಪಿಸಿ (ದ್ವಿರುಕ್ತಿ) : ಆಶೆಯೆಂಬ ಪಾಪಿಯು ಕೂಸು ಪಿಸಿಪಿಸಿದು ತಿನುತ್ತಿರ್ಪುದು (ಅವಶಂ. ೨೫೬-೦೦೬೬). ಪಿಸಿದು ಬೀಳು = ಬಿರಿದು ಬೀಳು; ಒಡೆದಂ ಬೀಳಂ : ಮಳೆಯು ಮುಗಿಲೇ ಪಿಸಿದು ಬೀಳುವಂತೆ ಸುರಿಯುತ್ತಿತ್ತು (ಮಳೆವ. ೬೨೯). ಪಿಸಿದು ಹೋಗು = ಸೀಳಿಹೋಗಂ ; ಬಿರಿ : ಅವರನ್ನು ನೋಡುವುದಕ್ಕೆ ಜನವು ಊರೇ ಪಿಸಿದು ಹೋಗುವಂತೆ ಕಿಕ್ಕಿರಿದು ಬಿಟ್ಟಿತು (ವಕಥಾ. ೬೬).

**ಪಿಸಿ₂** (ನಾ). ಒಂದು ಬಗೆಯ ಔಷಧದ್ರವ್ಯ ; ಜಟಾಮಾಂಸಿ : "ಪಿಸೀ— ಜಟಾಮಾಂಸಿ" (ಟಿಶಂ. ೯೭). [< ಸಂ. ಪಿಶೀ]

**ಪಿಸಿ₃** (ನಾ). ತಲೆ ಕೆಟ್ಟವನಂ ; ಹುಚ್ಚ : ಹೀಗೇಕೆ ತಲೆ ಕೆಟ್ಟವರಂತೆ ಮಾಡಿದರೊ ಏನೋ. ಮಹಾ ಪಿಸಿ ಇರಬೇಕು ಈ ಪೋಲೀಸ ಅಧಿಕಾರಿ (ವೃಶಿ. ೯೮೨). [← ಮರಾ. ಪಿಸಾ = ತಲೆ ಕೆಟ್ಟಿರುವ]

**ಪಿಸಿತ₁, ಪಿಚ್ಚ₂** (ನಾ). ಮಾಂಸ ; ಅಡಗಂ ; ಪಿಶಿತ : ಗಗನಗಳಯಲ್ಲಿ ತಿರುಗುವ ಖಗರಾಜಂ ಕಂಡು ಪಿಸಿತಮೆಂದದ ಮನದೊಳ್ ಬಗೆದೆತ್ತಿ ಕೊಂಡು ಪೋಪುದು ಮೃಗಶಾಬೇಕ್ಷಣೆಯು ಪಾಮಚರಣದ ಮೆಟ್ಟಂ (ಕುಶ್ಯಾಸ್ತ್ರ. ೬-೬೯) ; ಪಿಸಿತದ ಮಧುರವೆಂತಹುದೊ (ಕಕುಪು. ೯-೦೨-೩೦). ಪಿಚ್ಚ₂ : "ಪಿಚ್ಚ — (ಪಿಸಿತ) — ಪಿಶಿತ = ಮಾಂಸ" (ಕರ್ಣಕೋ. ೨೬). 'ಪಿಚ್ಚವುಣಿಗೆ' ಪರಾ. [< ಸಂ. ಪಿಶಿತ]

**ಪಿಸಿತ₂** (ನಾ). ಕೆಟ್ಟ ನಡತೆ (?) : ಹುಸಿ ಕೊಲೆ ಕಳವು ಪಾರದಾರ ಇಂತೀ ಪಿಸಿತವ ಹೆಚಾಯೊ ನೀಕಳಂಕ ಮಲ್ಲಿಕಾರ್ಜುನಾ (ಮೋಳಿಶವ. ೬೩-೨೬೩). [ ? ]

**ಪಿಸಿತಾಂಗ** (ನಾ). ಮಾಂಸಮಯವಾದ ದೇಹ ; ಭೌತಿಕಶರೀರ : ಜ್ಞಾನಾಗಿ[ಗ್ನಿ]ಯೋಳ್ದಹನವಾದ ಪಿಸಿತಾಂಗ ವಿಗೆ ಪಾನಿತ ಸುಮಂತ್ರವಾಗೆ ಗುರುಕರುಣದಿ (ಬಕೋಪು. ೬-೬೩). [ಪಿಸಿತ₁ + ಅಂಗ₂]

**ಪಿಸಿಪಿಸಿ** (ನಾ). ಒಂದು ಅನುಕರಣಶಬ್ದ : ಉಲಿಯ ಡೊಂಬನು, ಕೆಲರ ಪಿಸಿಪಿಸಿ, ಕೆಲರ ಗುಜುಗುಜು, ಕೆಲವರಾ ಗಲಭೆ ಕಳಕಳ ಆಟದಾ ಕಳದಲಿ ವಿಶಾಲಕೆ ತುಂಬಿತು (ಕಂಪು. ೩೯-೨೩) ; ಗುಜುಗುಜು ಮಾತಾಡಿ ಪಿಸಿಪಿಸಿ ನಗುವುತ ಸೆರಗ ತಮ್ಮುಸಕ ಎಳೆದಾರ (ಕನ್ನಡಾ. ೬೬೨).

ಪಿಸಿಪಿಸಿ ಮಾತಾಡು = ತುಂಬ ಮೆಲ್ಲಗೆ ಮಾತಾಡಂ ; ಪಿಸುಗುಟ್ಟು : (*). ಪಿಸಿಪಿಸಿವಾತು, ಪಿಸಿಪಿಸಿಮಾತು = ತುಂಬ ಮೆಲ್ಲಗೆ ಆಡುವ ಮಾತು ; ಪಿಸುಮಾತು : ಅಯ್ಯಾ ನಿನ್ನ ಬಿನ್ನಣದ ಪಿಸಿಪಿಸಿವಾತಂತಿರ್ಕೆ (ಶಕಂ. ೬-೦೩೯ ಶ) ; ಕಿಸಿಕಿಸಿನಗು, ಪಿಸಿಪಿಸಿಮಾತು . . . ಅವಳ ಜೀವನಕ್ಕೆ ಚಿಟುಕುಮುಳ್ಳಾಗಿದ್ದವು (ದೀಕಹ. II, ೦೯೦).

**ಪಿಸಿವಿ, ಪಿಶವಿ** (ನಾ). (ಉಕ) ಕೈಚೀಲ : ಪಿಸಿವಿಯಲ್ಲಿ ಅಕ್ಕಿ ತಂದೆ (ಊ). ಪಿಶವಿ : ಪಿಶವಿಯೊಳಗಿನ ಪುಸ್ತಕಗಳನ್ನೂ ಪಾಟಿಯನ್ನೂ ಹೊರತೆಗೆದು ಚಾಪೆಯ ಮೇಲೆ ಹರವಿ . . . ನೋಡತೊಡಗಿದ (ಕ್ಷಿತಿಜ. ೯೩).
[← ಮರಾ. ಪಿಸವೀ, ಪಿಶವೀ]

**ಪಿಸು** (ನಾ). ಒಂದು ಅನುಕರಣ ಶಬ್ದ : 'ಪಿಸುಗುಟ್ಟು' ಪರಾ.

**ಪಿಸುಂಕು, ಪಿಸುಕು, ಪಿಸುಗಂ, ಪಿಚಕು, ಪಿಚಿಕು, ಪಿಚಿಗು, ಹಿಚುಕು, ಹಿಜಿಗು, ಹಿಸಕು, ಹಿಸಿಕಂ, ಹಿಸುಕು₁, ಹಿಸುಗು** (ಕ್ರಿ). ೧. ನೀವು ; ಶೀಡಂ ; ಮರ್ದಿಸಂ : ರುಂಬತೀತಿ ಪಿಸುಂಕಿದಪುದೆಂಬುದು (ಶಾಲ್ಶ. ೩೦). ೨. ಅಲಕ್ಷ್ಯ ಮಾಡು ; ಅನಾದರದಿಂದ ಕಾಣು ; ಅವಮಾನಿಸಂ ; ತಿರಸ್ಕರಿಸು : "ಪಿಸುಕು, ಪಿಸುಂಕು— ಅಪಜ್ಞಾತಿಶಯೋ (ಅಪಮಾನ ಮಾಡು)" (ಶಮಣಾ) ; ಪಿಸುಂಕಿ ಕಳೆದಟ್ಟ ಚೈತ್ರಋತುರಾಜನಂ ಭೂತಳಂ ಬಸಂಬಡೆ ನಿದಾಘ ಭೂರಮಣನೇಳ್ಗೆಯಂ ತಾಳ್ದಿದಂ (ಶಂಕ್ರಳ್ಶು. ೬-೦೦೬). 'ಪಿಸಿ₁' ಪರಾ. ಪಿಸುಕು : ೨. ಮೇಲಿನ 'ಪಿಸುಂಕು' ಉಲ್ಲೇಖದ 'ಶಮಂಥಾ' ಪ್ರಯೋಗವನ್ನು ನೋಡಿ. ೩. (ಹಣ್ಣಿನಂತೆ) ಕಿವುಚು ; ಹಿಂಡಂ : (*). ೪. ಅದುಮಂ ; ಒತ್ತು : (*). ೫. ಹರಿದು ಹಾಕಂ : (*). ಪಿಸುಗು : ೧. ತಳಿರ್ಹಾಸಿಗೆ ಮಾಡಿ ಮಲಗಿಸಿ ಬಳಿಕದಿ ನೀ ಪಾದ ಪಿಸುಗೆ ನಿದ್ರೆಯ ಗೈವೆಂ (ಶಮುಹ. ೩೪). ಹಿಚಕು : ೩. "ಹಿಚಕು—ಹಿಂಡು" (ಶಾಕಕೋ. ೩೬) ; ಹಿಡಿದ ವಿಷಯವನ್ನು ಅವರು ಹೇಗೋ ಎತ್ತಿತ್ತೊ ಹಾರಿಸಬಲ್ಲರು, ಎಲ್ಲಿಲ್ಲೋ ಹಿಚಕಬಲ್ಲರು (ಗಾಳಿಶ. vii, ಮುನ್ನುಗಿದು ಮಾತು). ಹಿಚಿಕು : ೩. ಸ್ವಲ್ಪ ಅರಳಿ ಮುಷ್ಟಿಯಲ್ಲಿ ತಕ್ಕೊಂಡು ಕಿವಿಯ ಹತ್ತಿರ ವೈದು ಹಿಚಿಕಿ ನೋಡಬೇಕು (ಮುಂಬವ್ಯಾ. ೯೦). ೪. ಕರಡಿಗಳು ಅವರ ಕುತ್ತಿಗೆ ಹಿಚಿಕಿ (ಮುಂಬಯಿ. ೯. ೩-೦೦೯). ಹಿಚಿಗು : ೪. ಮುಂದ ಅವರು ಕುತಗೀ ಹಿಚಿಗಿ-ಪತಗೀ ಹಿಚಿಗಿ ಮಾಡಬಾರದೂ ಅಂತ ನಿಮ್ಮ ಮನಸಿನಾಗ ಇದ್ರ, ಈಗ ಆ ಹುಡಿಗೀ ಕಡಿಯಿಂದ . . . ಜವಾಬು ತಗೊಂಡು ಬಿಡೋಣ (ಗಂಗಾಕಾ. ೦೩೨). ಹಿಚುಕು : ೪. ಹಿರಿಯರಿರೆ ಕಿಚಾಯಿಂಗೆ ಪಟ್ಟವೆ ಕೊಜಿಕಿರ್ವರ್ಗಟಾ ಹಿಚುಕಿ ಕೊರಳನು . . . ಎಂದು ಭರತನು ಹಿರಿದು ಹಲುಬಿದನು (ಕೌಶಿರಾ. ೯-೦೯) ; ಆ ವ್ಯಕ್ತಿ, ಆಗ ನನ್ನ ಕುತ್ತಿಗೆ ಯನ್ನು ಹಿಚುಕಬಹುದೆನಿಸಿತು (ಶಿಂಮುಟಿ. ೦೦೬) ; ರಾಮಣ್ಣನ ಕೈಯನ್ನು ಹಿಚುಕಿ ಕೇಳಿದಳು (ಕನಕ. ೬೨). ಹಿಜಿಗು : ೪. ಕುತ್ತಿಗೆಯನ್ನು ಹಿಜಿಗಿ ಪ್ರಾಣ ತೆಗೆಯುತ್ತೀನೆ (ದೌಂಶ್. ೯೦೬). ಹಿಸಕು : ೩. "ಹಿಸಕು—ಹಿಚಕು, ಹಿಂಡು" (ಶಾಕಕೋ. ೩೬). ಹಿಸಿಕು : ೪. ಹೆದರದೆ ಕೊಟ್ಟಿಹ ಹಣವನು ಕೇಳ ಬಂದ ಭಕ್ತನ ಕೊರಳು ಹಿಸಿಕಿ ಯಮುನೆಯ ಹಿಂದೆ ಸಮಾಧಿಯ ತೆಗೆದು (ಕೊಲ್ಲಿಶಾ. ೦೨೦-೦). ೬. ಪರಿಶೀಲಿಸಿ ನೋಡು ; ಪರೀಕ್ಷಿಸು : ಭೂಮಿಪಾಲೋತ್ತಂಸರೊಳಗೆ ಹಿಂದಂ ಹಿಸಿಕಿ ನೋಳ್ಪರೇ ಬಲ್ಲವರ್ಧರಣಿಪಾಲ (ಶಮ್ಮಕೌ. ೯-೦೬). ಹಿಸುಕು₁ : ೩. ಬೆರಳು ತಾಳ ಹಣ್ಣ ಹಿಸುಕಿದಡೆ[ಪಾಠಾಂ. ಹಿಸಿದಡೆ, ಹಿಸಿಕಿದಡೆ]ಮೆಲಲುಂಟೆ (ಶುಹಾರೇ, ೪, ೦೨-೨೯) ; ಅಸಮಾಸ್ತ್ರ ನಾಣ್ಚ ಜನನ ಮುಂದೆ ಸಿಹಿವಿಲ್ಲ ಹಿಸುಕಿ ಬೀಸಾಡಿ ಸಾರ್ವಂತೆ ರಸದಾಳಿಗಬ್ಬಿನ ರಸದೊಳಾ ನೃಪತಿ ಮಿಾಯಿಸುವಂದ ಮೆಚ್ಚಿ ದುದಾ ಜನನ (ಶಶಿ. ೦೬-೭೬) ; ಕಂದಯ್ಯ ಹಣ್ಣನ್ನು ಒಡೆದು ತಿರುಳನ್ನು ಹಿಸುಕಿ ತೋರಿಸಿದರು (ಶಮಹೊ. ೩೪). ೪. ಎನಿತೋ ಕೋಗಿಲೆಗಳ ನುಣ್ಗೊರಳನು ಹಿಸುಕಲು ತಳುಹದ ಕಲಿಘಟನಿವನು ! (ಶಂಕಾ, ೯೨-೩) ; ದೈತ್ಯಬಾಹು ಮುಗ್ಧತೆಯನು ಹಿಸುಕಲು ಚಾಚಿತು ಹಲವಾರಿ (ಶಂಮು. ೩೯-೦೩) ; ರಾಣಿ ಸಂಗಾಮಿಯ ಕೈ ಹಿಡಿದು ಹಿಸುಕಿ, ಕೃಪಾಕಟಾಕ್ಷವನ್ನು ಬೀರಿದಳು (ಶಶಿದಾ. II, ೯೬೩). ಹಿಸುಗು : ೪. ಯಾರನ್ನು ಕಂಡರೆ ಕತ್ತು ಹಿಸುಗಬೇಕೆನಿಸುತ್ತದೆ ನಿಮಗೆ ? (ಹುಚ್ಚುಹು. ೩೬). 'ಹಿದುಂಕು' ಪರಾ.

[ದೇ. ॥ ತಮಿ. ಪಿಚುಕ್ಕು ; ತುಳು. ಪಿಸ್ಕು ; ತೆಲು. ಪಿಸುಕು ; ಗಡಬ. ಪಿಸ್ಕೊಲ್ಪೆ ; ಗೊಂಡಿ. ಪಿಸ್ಕಾನಾ ; ಕುರುಖ್. ಪಿಚ್ಕಾನಾ ]

**ಪಿಸುಕ** (ನಾ). ಒಂದು ಬಗೆಯ ಕೀಟ : ತುಂಬಿ ಪತಂಗ . . . ಪಿಸುಕ ವಿಳಂಬಿ . . . ಕೊಟ್ಟಾರಿಗಂ ಯೆಡೆವುಬುಯೆಂದಿತ್ತೀಪವಾದಿಗಳಿಳೊಂ ಸ್ಪರ್ಶರಸಗಂಧರೂಪಶಬ್ದಂಗಳೆಂಬೀಯಯ್ದುಮನಜಾಪ (ಶಪಾಶ. ೯೯).
[ < ಪ್ರಾ. ಪಿಸುಅ / ಸಂ. ಪಿಶುಕ ]

**ಪಿಸುಕು** 'ಪಿಸುಂಕು' ನೋ.

**ಪಿಸುಗು** 'ಪಿಸುಂಕು' ನೋ.

**ಪಿಸುಗುಟ್ಟು** (ಕ್ರಿ). (ಕಿವಿಯಲ್ಲಿ) ಮೆಲ್ಲಗೆ ಹೇಳು : ಪಿಸಂದನಿಯಲ್ಲಿ ಗುಟ್ಟಾಗಿ ಹೇಳು. ಪಿಸುಮಾತನ್ನಾಡು: "ಮಿನುಕು—ಅಂತರ್ಗತಸ್ವನೇ (ಪಿಸುಗುಟ್ಟು). ಕಾಂತ್ಯೌ ಚ (ಪ್ರಕಾಶಿಸು)" (ಶಮಣಾ) ; ಆ ಎಲೆಗಳು

ಗಾಳಿಯು ಕಿವಿಯಲ್ಲಿ ಹೀಗೆ ಪಿಸುಗುಟ್ಟಿದಂತೆ (ರಾಮರಾ. ೩೫); ಪಿಸುಗುಟ್ಟಿದರೂ ಕೇಳುವಷ್ಟು ಹತ್ತಿರ ಇದ್ದರು (ಜ್ಞಾನಸ್ಮೃ. ೨೦); ಅರ್ಚಕನ ಅನಾಚಾರ ಕುರಿತು ಹೊಸೂರಿನ ಜನರು ಪಿಸುಗುಟ್ಟುತ್ತಿದ್ದರು (ಹೊಸೂಹ. ೨೩). 'ಗೊಣಗುಟ್ಟು' ಪರಾ. [ಪಿಸು+ಕುಟ್ಟು$_1$]

**ಪಿಸುಗುಡು** (ಕ್ರಿ). = ಪಿಸುಗುಟ್ಟು : 'ಅದು ಸರಿಯಲ್ಲ' ವೆಂದು ಅವನ ಸಮಸ್ತಚೇತನವೂ ಪಿಸುಗುಡುತ್ತಿತ್ತು (ಕ್ರಿಸರು. ೩೬೪); ಇನ್ನೊಬ್ಬರ ಕಿವಿಯಲ್ಲಿ ಗುಟ್ಟಾಗಿ ಪಿಸುಗುಡುವಾಗ ... ಹಠಾತ್ತಾಗಿ ಆಸ್ಫೋಟವಾಗುವ ಸೀನಿನಿಂದ ಏನು ಅವಾಂತರವಾದೀತು (ದೇಶಸ್ವ. ೦೨). 'ಗೊಣಗುಡು' ಪರಾ. [ಪಿಸು+ಕುಡು$_1$ (< ಕೊಡು$_1$)]

**ಪಿಸುಣ್**, ಪಿಸುಣ$_1$, ಪಿಸುಣಂ, ಹಿಸುಣ$_1$, ಹಿಸುಣು (ನಾ). ಚಾಡಿ; ಚಾಡಿಯ ಮಾತು; ಕುತ್ಸಿತ : "ಪಿಸುಣೆಂದು ಕುತ್ಸಿತಂ" (ಶಶಾ. ೬೨-೬೪೭); ಅಳ್ಳೆಸಕಗಿಯೆ ನುಡಿದನೆಂಬೀ ಪಿಸುಣನನಂ ಕೇಳ್ದಿನಿಲ್ಲ ಬೀಡಿನೊಳವನಾ (ಶಂಕಶ. ೬-೯೨); ಪುಸಿಗೆ ಪಿಸುಣ್ಗೆ ಪೋರಟಿಗೆ ಮಾಯೆಗೆ ಹಿಂಸೆಗೆ ... ಬಸಗಡಿದೀವ್ವ ಕಾಟ್ಟಿಸನದಟ್ಟುಳಿಗಂ ಪುಗದಂತಿರಲ್ಲರಂ ಪುಸಯಿಸಿ ಕಾರ್ತವೀರ್ಯನೆಸಕಂಬಡೆದಂ ದೊಡದೇವಭೂವರಂ (ಚಕಿಪ. ೩-೦೫); ಸವತಿಯೊಂದು ಪಿಸುಣ್ಗೆ ಎಟೆಯುಂ ಮಾಡುವೋದನೆಂಬೊಂದುಬ್ಬೆಗದಿಂ ಕೊರಗಿದಳೆನೆ ಪದ್ಮಿನಿ ನಾಡೆ ಬಾಡೆ (ರಾಮಕಾವ್ಯ. ೨೨-೯). ಪಿಸುಣ$_1$ : ಪಿಸುಣಂ ಪರಾಭವಂ ಕಲಹಮುಂ ಕಪಟಮುಳಿಜಸಮತಿಕ್ರೂರಮನ್ಯಾಯಮಿವು ಪೆರ್ಚೆ ತದ್ವಸುಮತೀವನಿತೆ ತಾಳದೆ ಕಂಪಿಸುತ್ತಿರ್ಪಳು (ಶಬ್ದ. -೦೦). ಪಿಸುಣು : ಪಿಸುಣಂಗೆ ಮುಳಿವಂ ವಾದ್ಯವಿದ್ಯಾಧರಂ ... ಸಿಂಗನ ಗರುಡ ನಾ[ಪಾ]ದಿ ಸಮಸ್ತಪ್ರಶಸ್ತಿಸಹಿತಂ (ಎಕ. XIX, ೦೬೪-೦೨; 1040); ವಿಕಾಳಿಸಿತೆ ಕೌರವನ ಬುದ್ಧಿ ವಿಟಾಳಸಂಗತಿಯಾಯ್ತು ಲಾ ಪಿಸುಣಾರ ಕರಳಿಚಿದು (ಕುಮ್ಮಾಸ. ೦೨-೯೭); ಕಲಹಿಸದಿರಾರೊಡನೆ ಪಿಸುಣನುಳಿ ಪರಧನಕ್ಕಳುಪದಿರು ತಪವಸಗು (ಕ್ಶಕಸ. ೩-೨-೩). ಹಿಸುಣ : ಕಂಗಳು ಹಿಸುಣವ ಹೇಳಿಹವೆಂದು ನೋಡಲವ್ವೆನವ್ವಾ (ಸರ್ವಶಿ. ೭೦-೩೮೦); ಹಿಸುಣವನು ಹೇಳುವ ಕೇಳುವರಿಗಿನ್ನಾವುದೈ ಪ್ರಾಯಶ್ಚಿತ್ತವಿಧಿಯೆಂದ (ಸಂಕಶ. ೦೫-೭೦). ಹಿಸುಣು: ಹಿಸುಣು ಧರ್ಮದ್ರೋಹ ರುಜೆ ಕೈಮಸಕ ಪಳಿವನ್ಯಾಯವೆಂಬಿವರೆಸಕ ಹೊದ್ದದಯೋಧಿಪನ ಧರಣೀತಳಾಗ್ರದಲಿ (ಕೊರಶಾ. ೦-೩-೨೬). [< ಸಂ. ಪಿಶುನ]

**ಪಿಸುಣ$_1$** 'ಪಿಸುಣ್' ನೋ.

**ಪಿಸುಣ$_2$**, ಹಿಸುಣ$_2$ (ನಾ). ೧. ಚಾಡಿ ಹೇಳುವವನು; ಚಾಡಿಕೋರ: "ಪಿಸುಣನೆನಲ್ ಪೈಶೂನ್ಯಂ" (ಶಶಾ. ೨೦೬); ಪಿಸುಣರ ಪೊಸೆವೊ ಕುಶಿ(ಟ)ಲಂ ಪೊ × × ಪ ಈಯುದೆ ಈಜ್(ಇಜ್)ಯು[ದೆ] ನನ್ನಿ ನುಡಿಯುದೆ ನಣ್ಪ(ನ್ನಿ)ದೇವಂಗಟಿಸ್ಸಿಮುಯ್ಯುಮ್ಬುಡೆದೊಂಗರ ಅಲೆದೊಂ ಮೂಡಲಿ ಪೊಂ (ಎಕ. XXIV, ೦೯೩-೦೨; ಸು. 885); ದೈವ ಗುರು ದ್ವಿಜರ ಚರಣಸೇವೆಯಲಾರ್ತಿಯು ಪಿಸುಣರ ನುಡಿಗಳಲಿ ಮಾರ್ಚುತೆಯು ನೀ ವಿರಚಿಪೆಯೊ ಬೇಸಟುವೆಯೋ (ಕುಮ್ಮಾಸ. ೦-೩೭); ಪುದಿದಿರ್ಪುದು ತೇಟಿಗೆ ವಿಷಂ ತುದಿವಾಲದೊಳ್ಳಿದೆ ಫಣಿಗೆ ತುದಿದಾಡೆಗಳೊಳ್ ತುದಿನಾಲಗೆಯೊಳ್ಪಿಸುಣಂಗಿದು ಸರಿಯವು ಸೋಂಕೆ ಕೊಲ್ವುವಿವು ಸೋಂಕದೊಡಂ (ಚಕಿಪ. ೦-೩೫); ಪಿಸುಣನ ಹತ್ತಿರ ಉಸುರಬಾರದು (ಗಾದೆ). ೨. ನೀಚ; ದುಷ್ಟ : "ದುರ್ಜನಃ, ಪಿಶುನಃ, ಕ್ಷುದ್ರಃ, ನೀಚಃ, ಕರ್ಣೇಜಪಃ, ಖಳಃ—ಈ ೬ ಪಿಸುಣಂ" (ಹಲಾಯು. ೫೭-೦೯೦); ಪಿಸುಣನೆ ಪಾತಕ ಪರಸತಿಯರಿಗೆ ಮೋಹಿಸುವನಧಮ ದುರ್ಮಾಡಿಯ ಉಸುರುವನೇ ಕ್ರೂರ ಚಾರಿತ್ರಭ್ರಷ್ಟನೆ ವಸುಧೆಗೆ ಪಾಪಿಯೆನಿಸುವ (ಜೀವಂಶಾಂ. ೬-೫೬); ಬಂಜೆ ಪ್ರಸವದ ನೋವಟಿವಳೆ ಪಿಸುಣಂ ಸಿರಿಗಳಿಂ ಜಸದೊಳಿಪ್ಪವನ ಸೈರಿಪನೆ (ಕುಮ್ಮಾಂಗ. ೦-೦೩); ಪಿಸುಣನ ದ್ರವ್ಯ ಲೋಭಿ ಬಯಸಿದ ಹಾಗೆ (ಗಾದೆ).

೩. ಶಕುನವನ್ನು ಸೂಚಿಸುವುದೆನ್ನಲಾದ ಒಂದು ಬಗೆಯ ಹಕ್ಕಿ; ಹಂಗನ ಹಕ್ಕಿ : ಗೊರವ ಗಿಳಿ ಜಾಗರಿಗ ಹರಡೆ ಹಸುಬಂ ಪಿ[ಹಾಲಾ ಹಿ]ಸುಣ ಹೆಬ್ಬಕ್ಕಿ ಗಿಡುಗ ... ಹಕ್ಕಿಗಳ ಮಳೆ ಕಱೆದುದಡವಿಯೊಳಗೆ (ಸೋಮಶ. ೩-೯). ಹಿಸುಣ$_2$ : ೧. "ಹಿಸುಣ—ಪಿಶುನ=ಪಿಸುಣ" (ಶಬ್ದಕೋ. ೯೯); ಸಸಿನವೇ ನಿನ್ನಟೆತಖಳರಿಗೆ ಹಿಸುಣರಿಗೆ ವಂಚಕರಿಗಜ್ಞರಿಗುಸುರಿಯಲೆ ನಿನ್ನಂತರಂಗವನೆಂದನಾ ಮುನಿಪ (ಕುಮ್ಮಾಸ. ೬೦೩. ೦-೩೪); ಹಿಸುಣರ ಜಾಳಿಗರ ಚದುರೋಕ್ತಿ ಸಮಗೇಕೆಂದಳವರೊಡನೆ (ಕೊರಶಾ. ೨-೦-೨೬). ೨. ಚೋರನನು ಕಂಟಕನ ಹಿಸುಣನ ಜಾರನನು ಮೂಢನನು ಸಮಯ ವಿಕಾರಭೇದಿಯನಿಂತಹುವರನು ಕಂಡು ಮನ್ನಿಸದೆ ದೂರದಲಿ ವರ್ಜಿಸುವುದು (ಕುಮ್ಮಾಅ. ೯-೯೭). ೩. ಮೇಲಿನ 'ಸೋಮಶ. ೩-೯' ರ ಪ್ರಯೋಗದ ಪಾಠಾಂತರವನ್ನು ನೋಡಿ.

[ ಪಿಸುಣ್ + — ಅ$_7$]

**ಪಿಸುಣತನ** (ನಾ). ಚಾಡಿಕೋರತನ; ಪಿಶುನತ್ವ : ನಿಜಬಂಧುಗಳು ಅಳಿಯೆ, ಪಿಸುಣತನ ಅಡಗಿತೇ ? (ಕಂಪ್ರ. ೫೦); ಸಂಗೀತದಲ್ಲಿ ಓಡದಿದ್ದ ಅವರ ಬುದ್ಧಿ ಪಿಸುಣತನದಲ್ಲಿ ಚುರುಕಾಯಿತು (ಕೊಶಕ. ೦೫೪).

[ ಪಿಸುಣ$_1$ (<ಪಿಸುಣ್) + — ತನ ]

**ಪಿಸುಣತೆ**, ಹಿಸುಣತೆ (ನಾ). (ಒಬ್ಬರ ಬಗ್ಗೆ) ಆಡಿಕೊಳ್ಳುವುದು,—ದೂರುವುದು ; ಚಾಡಿ ಹೇಳುವುದು : ಇಳಿಯೊಳು ... ಸಂಚಲಚಿತ್ತವಂಥತ್ವ ಮುಳಿಸು ಹೊರೆ ವ್ಯಾಪೆ ರೌದ್ರವವು ದುರ್ಬಲವೆ ಜೀವನ್ಮೃತವು ಪಿಸುಣತೆ ಕೊಲೆಯದೆಲಿ ಸುಕುಮಾರ ಕೇಳಿಂದಟುಹಿದನು ಮುನಿಪ (ಜಿವಂಶ. ೫-೬೦); ರಾಮಂಗೆ ಪಟ್ಟಗಟ್ಟುವ ಪ್ರೇಮದೆ ದಶರಥನೃಪಾಲನನುಮಾಡಿಸುತಿರಲಾ ಮಂಥರೆ ಪಿಸುಣತೆಯಿಂ ಕಾಮಿನಿ ಕೈಕಯಿಗೆ ಪೇಳಲಾಕ್ಷಣದೊಳಗೆ (ದಶಾಪ. ೯-೦೯೯). ಹಿಸುಣತೆ : ಹಿಸುಣತೆಯ ಹಿಂಗಿಸಿ ಮನಸ್ಸಿನ ಮಸಕವನು ಮಾಣಿಸಿ ವಿಕಾರದ ವಿಷಯ ವಿಧಿಗಳನುಟೆ ವಿಸರ್ಜಿಸಿ ... ಸಸಿನೆ ಸತ್ಯದಿ ನಡೆವಗಲ್ಲದೆ ಹುಸಿಯ ನುಡಿವಗೆ ಭಕ್ತಿಯಹುದೇ (ಕೃಕುಂ. ೦೬-೯೦).

[ಪಿಸುಣ$_1$ (<ಪಿಸುಣ್) +—ತೆ$_3$ / ಸಂ. ಪಿಶುನತಾ]

**ಪಿಸುಣತ್ವ** (ನಾ). = ಪಿಸುಣತನ : ವಿಷಮವಿಶ್ವಾಮಿತ್ರಮುನಿ ಮುನಿದು ತಪ್ಪ ಸಾಧಿಸಿದಪ್ಪನಜಿದಿರೆಂದಜಾಪಬೇಕಜಾಹಿದಡೆ ಪಿಸುಣತ್ವ ವಜಾಪದಿರ್ದಡೆ ನೃಪನ ಕೇಡ ನಾನೇತುಪೇಕ್ಷಿಸಿದಾತನು ... ಇದ ಪೇಳದಂತೆ ಪೇಳ್ದಪೆನೆಂದು ನೆನೆದನಾ ಮುನಿನಾಥನು (ಹಕಚ. ೫-೬೨).

[< ಸಂ. ಪಿಶುನತ್ವ]

**ಪಿಸುಣಾಡು**, ಹಿಸುಣಾಡು (ಕ್ರಿ). ಚಾಡಿ ಹೇಳು ; ದೂರು ಹೇಳು ; ದೂರು : ಮೂಡಿದ ಮೊಡವಿ ಮುಗುಳ್ಗೊಗವಿಡಿಜಪುನ್ನಂಜರೀಸ್ತನಂ ತೋಳ್ಗೊದಲೊಳ್ ತೀಡುವ ನಜಾಗುಂಪೇಂ ಪಿಸುಣಾಡಿದುದೋ ಸಕಿಗೆ ಪುಷ್ಪಸಮಯೋದಯಮಂ (ಕುಸ್ವಕ್ಶ. ೩-೦೦೫); ಅದಜಕೊಳ್ಳಿದ್ದಾಧರ ಮಿಥುನಂ ಕೂಡಿದುವನರಸನೊಳ್ಪಿಸುಣಾಡುವೊಲ್ ... ಆ ನಪ ಶಾಂಧಕೆ ಪದೆದೆಜಗುವ ಪೊಸಪಜವೆಗಳ ಪಸುಳೆಯಂಚಿರವೊಪ್ಪಿದುವು (ಜಯುಶಾ. ೯-೯); ನಿನ್ನ ಹಿಂಗಡೆಯೊಳು ಪಿಸುಣಾಡುವವನನು ಒಡಿದೀಯು ತಡೆದೀಯ ನೀನು (೨ಂಶಾಕ. ೬೬-೬೨). ಹಿಸುಣಾಡು : ದುಡಿದು ಹಣ್ಣಾದ ದೇಹ ಮನದ ಬೇಸರದ ಭಾವನೆಯನ್ನು ಹಿಸುಣಾಡುವಂತಿವೆ (ಮೋಶವು. ೯೬ ಕೃಷ್ಣಾ ವಸಿ). [ಪಿಸುಣ್ + ಆಡು$_1$]

**ಪಿಸುಣಾಡುಹ** (ನಾ). ಚಾಡಿ ಹೇಳುವುದು; ಬೇರೆಯವರ ಬಗ್ಗೆ ದೂರುವುದು ; ದೂರು ಹೇಳುವುದು : "ಪಿಶುನಭಾವಃ—ಪಿಸುಣಾಡುಹಂ. ಕೊಡೆಯು" (ಅಚಿಪ. ೨೬-೦೫).

[ಪಿಸುಣಾಡು + — ಹ$_2$ (< — ಪ$_2$)]

**ಪಿಸುಣ** (ನಾ). ೧. ಕೆಟ್ಟ ವ್ಯಕ್ತಿ ; ನೀಚ ; ದುಷ್ಟ : ಬೇಡಿದರೆ ಬೇಡುವದು ಮಾಡುವ ಧರ್ಮಿಯನು ಮೂಢಮೂರ್ಖರನು ಪಿಸುಣಗಳ ಪೀಡಿಸಿ ಬೇಡಬೇಡೆಂದ (ಸರ್ವಜ್ಞ. ೬೦೩). (ಗು). ೨. ಕೆಟ್ಟದಾದ ; ನೀಚವಾದ ; ದುಷ್ಟ : ಹಸಿದವರನು ಕೂಡಿ ಪುರುಷ ಮನೆಗೆ ಬಂದು ಅಸಿಯಳ ಕೇಳಲಾಕ್ಷಣದಿ ಗುಸುಗುಟ್ಟಿ ಕೊನರುವ ಪಿಸುಣಮನದ ಹೆಣ್ಣು ಕಸವೆಂದು ಸೀಯಿ ನಾನವಳ (ಸರ್ವಜ್ಞ.೬೮೯–೬೩). [ಪಿಸುಣ್ + –ಅ₃]

**ಪಿಸುಣಗ, ಹಿಸುಣಗ** (ನಾ). ಚಾಡಿಮಾತನ್ನು ಹೇಳುವವನು ; ಚಾಡಿಕೋರ : ಶ್ವಾನಬಾಲವು ಡೊಂಕು ಹೀನಮಾನವದು ಡೊಂಕು ಕಾನನದ ಹರಿವ ಹೊಳೆ ಡೊಂಕು ಪಿಸುಣಗನು ತಾನೆ ಡೊಂಕೆಂದ (ಸರ್ವಜ್ಞ. ೭೯೬೩); ಯಾವಿನಾನಂಥ ಪಿಸುಣಗರ ಒಂದು ಪರಿವಾರವೆ ದರ್ಬಾರಿನ ಸುತ್ತಲೂ ಆದರ ಬಿಗುಹನ್ನು ಶಿಥಿಲಮಾಡಲು ಸುಳಿದಾಡುತ್ತಿದೆ (ಪೂರ್ವ. ೩೩). ಹಿಸುಣಗ : ಮಿತ್ರಂಗೆರಡು ಬಗೆದವನ ಹಿಸುಣಗನ ಕೃಪಣನ ವೃಥಾ ಕೋಪಿಸುವವನ ದುರ್ಗತಿಗಳಾಗಲಿ ಶಶಿಮುಖಿಯೆ ನಾ ಮರಳಿ ನಿನಗಳು ಪಿದ್ದರೆ (ಕೃಷ್ಣ. ೦೦–೦೩). [ಪಿಸುಣ್+–ಅಗ]

**ಪಿಸುಣಿಸು** (ಕ್ರಿ). ಚಾಡಿ ಹೇಳು ; ದೂರು ಹೇಳು ; ದೂರು : ಇಂದಿವನ ಮೇಲೆ ಪಿಸುಣಿಸಿದವರ್ ಬಲ್ಬನ್ನವುಂ ದಿಟಂ ತಾಳ್ದರಲ್ಲದೆಯಾ ಮಹಿಪನಿನಿಸು ಕುಂದನಾಂಪನೆಯೆಂಬರ್ . . . ಕೆಲಂಬರಲ್ಲಿ (ಶಬ್ದಮ. ೬–೩೨). [ಪಿಸುಣ್ + — ಇಸು₂]

**ಪಿಸುಣು** 'ಪಿಸುಣ್' ನೋ.

**ಪಿಸುಣೆ** (ನಾ). ಚಾಡಿ ಹೇಳುವವಳು ; ಚಾಡಿಕೋರಿ : ಪಿಸುಣೆ ದುರಾತ್ಮೆ ದುಶ್ಚರಿತೆ ದುರ್ಭಗೆ ದುರ್ಮತಿ ದುಷ್ಟೆ . . . ದುರಾತ್ಮೆಯುಪ್ಪ ವಧು ಸಜ್ಜನಮೇ (ಮುನಿ. ೬–೬). [ಪಿಸುಣ್ + — ಎ₂]

**ಪಿಸುಣ್ಗಿಡೆ** (ಕ್ರಿ). (ಬೇರೆಯವರ ಮೇಲೆ) ಅಪವಾದವನ್ನು ಹೊರಿಸು ; ನಿಂದಿಸು ; ದೂರು : ಅನುನಯಾಭಿವಾದನಸಮನ್ವಿತಂ ಮಧುಕೈಟಭಂ ಕಳಿಪೆ ನಾರದ ನಾರದಂ ನುಡಿದರೆಂಬಂತೆ ಪಿಸುಣ್ಗಿಡೆದು ಸನ್ಮಾರ್ಗಾನುವರ್ತಿಯಾಗಿ (ಅನಂತ. ೦೩–೨೨ ವ) ; ಬಿಜ್ಜಳಂ ಸಭಾಸದ ರೊಡನೆ ಕಂಡು ಕೌತುಕಂಗೊಂಡು ಪಿಸುಣ್ಗಿಡೆ[ಪಾಠಾಂ. ಣ್ಗೈ]ದ ಖಳರಂ ತರ್ಜನಂಗೈದು ಮತ್ಸರದೊಳನ್ಯಾಯವಾದೊಡವಿಂತು ಬಸವನಂ ಕೂರ್ತು ಪಿಸುಣ್ಗಿಡೆಯೆ ಜಿಹ್ವಾಚ್ಛೇದನಂಗೈವೆನೆಂದು ಪೂಣ್ದು ನುಡಿದು (ಬಸವ. ೬–೦೬ ವ). [ಪಿಸುಣ್ + ಕಿಡೆ₂]

**ಪಿಸುಣ್ಪೇಟ್** (ಕ್ರಿ). ಚಾಡಿಯನ್ನು ಹೇಳು,–ನುಡಿ ; ದೂರು : ಧರ್ಮಿಗಂ ಕೊಲೆಯೇ ಮಂತ್ರಿಗಮಿಚ್ಛಕಾಚತನಮೇ ತರ್ಕಂ ಪಿಸುಣ್ಪೇಟ್ವನೇ ಚಲಮಂ ಗಂಡುಮನಪ್ಪುಕೆಯ್ವನಗಮಾ ಕೌಂತೇಯರೊಳ್ ಸಂಧಿಯೇ (ಗದಾಯು. ೩–೯೬) ; ಈತನನುದಾಸೀನಂ ಮಾಡಿ ಕಳಪಿದನೆ ಪ್ಪೊಡೇನಾನುಮಂ ಪುಸಿದು ಪಿಸುಣ್ಪೇಟ್ದಪು (ಕಂತಕ. ೩೦–೦೯) ; ಕೆಳದಿಯ ನಡಂಗಿ ಕಾಡಲ್ ಮುಂಬಂಕ ಮತ್ತ್ವಾರ್ವಳೇಂ ಪಿಸುಣ್ಪೇಟ್ದಪೊ ಕೋಪಮುಳಿಯಿರ್ದೆಡೆಯುಂ ತತ್ಪರಿಮಳಕ್ಕೆ ಮೇಗೆಳಸಿ ಸುಟೀವ ಮಧುಕರ ನಿಕರಂ (ಚಂದ್ರಪು. ೬–೦೯೦). [ಪಿಸುಣ್ + ಪೇಟ್]

**ಪಿಸುದನಿ** (ನಾ). ತಗ್ಗಿದ ಧ್ವನಿ,—ಸ್ವರ : ಪಿಸುದನಿಯಲ್ಲಿ ಆಡಿದ ಮಾತುಗಳನ್ನೂ ಇವರು ಕೇಳಬಲ್ಲರು (ಅಶ್ವಮು. ೮೯) ; ಅದಾಗ ತಂದೆಯು ವರು ಪಿಸುದನಿಯಲ್ಲಿ ಅಮ್ಮನ ಹತ್ತಿರ ಮಾತನಾಡಹತ್ತಿದರು (ಆಕೋಲ. ೩). [ಪಿಸು + ದನಿ₁]

**ಪಿಸುನುಡಿ₁** (ಕ್ರಿ). (ಕಿವಿಯಲ್ಲಿ) ಮೆಲ್ಲಗೆ ಹೇಳು ; ತಗ್ಗಿದ ಧ್ವನಿಯಲ್ಲಿ ಮಾತನಾಡು : ತಾಯಿಗಳಲುತಿರೆ ಮುಂದೆ ತಂಗಾಳಿಯೆನೆ ಬಂದು ಕಾಯುವಳ್ ಪಿಸುನುಡಿದು ಕಾಲೂರ ಚೆಲುವೆ (ಕಾಂತಾರ. ೦೩೬–೨೨). [ಪಿಸು + ನುಡಿ₁]

**ಪಿಸುನುಡಿ₂** (ನಾ). ಕಿವಿಮಾತು; ಗುಟ್ಟು : ನಡೆದಿವೆ ಹೆಣ್ಗಂಡಿನ ಕಾಲುಗಳು . . . ಪಿಸುನುಡಿಗಳ ಮಾರ್ದನಿಗಳ ಕಿರುಗೋಣೆಗಳಿಂದ ಕಾಣದ ಗಡಿಗಾಡುಗಳಿಂದ (ದ್ಯಾಕ್ಷಿಣ. ೦–೦೦); ಹೊರಗಡೆಗೊಯ್ಯೊಡೆ ವ್ಯತ ವ್ಯತ್ಯಿಕೆಯ ಗೋಡೆ ಒಳಗುಸುಂದ ಪಿಸುನುಡಿಯ ಇಲ್ಲಿ ನೀ ಪ್ರಾರ್ಥಿಸಿ ಮೆಲ್ಲನೆ ಬೇಳ್ವೊಡೆ ಕೇಳಿಸಿಕೊಳನೆ ಆ ಒಡೆಯ (ತಂಪಾಳ. ೧೩೦–೪೪). [ಪಿಸು+ನುಡಿ₁]

**ಪಿಸುಮಾತು** 'ಪಿಸುವಾತು' ನೋ.

**ಪಿಸುರು₁** 'ಪಿಸರು₁' ನೋ.

**ಪಿಸುರು₂** 'ಪಿಸರು₂' ನೋ.

**ಪಿಸುವಾತು, ಪಿಸುಮಾತು** (ನಾ). ಕಿವಿಮಾತು; ಪಿಸುನುಡಿ : ಮುಂಜಾವದುದಯದಲಿ ಕಮ್ಮಲರ ಪಿಸುವಾತು ಭೃಂಗಜೀವನವನೆಳ್ಚರಿಸು ವಂತೆ . . . ಬಾ ಎನ್ನ ಬಯಲುಗುಡಿಗೆ ! (ಕಲಿಕ. ೬೬–೦). **ಪಿಸುಮಾತು** : ಪಿಸುಮಾತೊಲು ದೆಸೆದೆಸೆಯೊಳು ಹಬ್ಬಿದೆ ಎಲೆಯ ದನಿ (ಹಂಪೆಯ. ೪೨–೦೯); ಕಂಪಿತಸ್ವರದಿಂದ ಮೆಲ್ಲನೆ ಪಿಸುಮಾತಿನಲ್ಲಿ "ಶಿವು" ಎಂದ (ರಾಜಾಪ. ೦೦೩); ಅವನು . . . ಆಗಾಗ್ಗೆ ಪಿಸುಮಾತಿನಲ್ಲಿ ಏನಾದರೂ ಹೇಳುತ್ತಿದ್ದನ (ಮರಳಾ. ೦೦೬); ಕುಡಿದವನು ಬಲ್ಲನೆ ಪಿಸುಮಾತ ? (ಗಾದೆ). [ಪಿಸು+ಮಾತು₁]

**ಪಿಸುಟು** (ಕ್ರಿ).೧. ಸಿಗಿ; ಸೀಳಿ-ಹಾಕು; ಕಿತ್ತು ತೆಗೆ: ನೆಲಕ್ಕೆ ಬಾಳನಲ್ಲಾಡೆ ನೆಗಟ್ಟಿಕೊಂಡು ತೊಡೆಗಾ ನರಸಿಂಹನವೊಂಕ ಕಂಭದಿಂ ಮಾಡಿದ ಕಾಳರಕ್ಕಸ ನನಿಕ್ಕುವವೋಲ್ ನಖದಿಂ ಕರುಳ್ಗಳಂ ತೋಡಿ ಪಿಸುಟ್ದು ಸೀಳ್ದು ಬಿಸುಟಂ ಕಲಿಕಂಸನನಬ್ಜಲೋಚನಂ (ಅರ್ಜನ. ೬–೦೦೬). ೨. ಹಿಸಿದು ಹೋಗು; ಹಿಂಜಿ ಹೋಗು; ಹರಿದು ಹೋಗು : ಪೆರ್ಬುಲಿ ಬಾಯೆ ಕಂಠಗತ ಜೀವಿತರಾದವರೆಕ್ಕಲಂ ಕನಲ್ದು ಬಿರ್ಬಿ ಪಿಸುಟ್ದ ದೊಂಡೆಗರುಳಂ ತಳಿದಿರ್ಪವರ್ . . . ಬರ್ಪವರೊಪ್ಪಿದರ್ (ದಳವ. ೩–೯೦). ೩. ಸೀಳಿ ಹೋಗು ; ಬಿರಿದು ಹೋಗು; ಒಡೆ : ಚುರ್ಚು ಮಾರ್ನುಡಿಯದೆ ಗಾಣದೊಳ್ ಪಿಟ್ ಪಿಸುಟ್ದಿರೆ [ಪೊ]ಟಾಸು ಪಿಂತಿವಾಳದೊಳ್ (ಸುಕುಮಾ. ೬–೩೨); ಪರ್ಬಿದ ದುಸ್ತಮಸ್ತಮೋನ್ಮದಕರಿಯಾಕ್ಷಮಂ ಪೆಳಚಿ ಪೊಟೆ ಪಿಸುಟ್ದ ತದುತ್ತಮಾಂಗದಿಂ ಕೆದಱಿದ ಮೌಕ್ತಿಕಾವಳಿವೊಲಾದುವು ಮೂಡಣ ತಾರಕಾಳಿಗಳ್ (ಕಾವ್ಯಾವ. ೯೦೩); ನೃಪಂ . . . ಆ ನೆತ್ತರದ ಮಣೆಯಿಂದಿಱ ದೊಡೆ ನೆತ್ತಿ ಪಿಸುಟ್ದತ್ತು ಸತ್ತುಪಂತಾಯೆರಡುಂ (ಯಶೋಧ. ೩–೯೬).

**ಪಿಸ್ತಾ, ಪಿಸ್ತೆ** (ನಾ). ಒಂದು ಬಗೆಯ ಮರ ಮತ್ತು ಬಾದಾಮಿ ಯಂತಹ ಅದರ ಬೀಜ; ಕೆಲವು ಸಿಹಿತಿಂಡಿಗಳನ್ನು ತಯಾರಿಸು ವಾಗ ಈ ಬೀಜವನ್ನು ಬಳಸುತ್ತಾರೆ : ಇಷ್ಟರಲ್ಲೇ ಅವನು ಪ್ರತಿ ದಿನವೂ ಬಂದು ಪಿಸ್ತಾ, ಬಾದಾಮು ಲಂಚ ಕೊಟ್ಟು ಕೊಟ್ಟು ಮಿನಿಯ ಪುಟ್ಟಹೃದಯವನ್ನು ಅದೆಷ್ಟೋ ಆಕ್ರಮಿಸಿಕೊಂಡು ಬಿಟ್ಟಿದ್ದಾನೆ (ಇಶ್ಕ. ೩೪); ೨೦ ಸೂರ್ಕಿ ೪೨ ಬೇತಾಳಮಣದ ಜೀನಸಗಳು . . . ೮ ಪಿಸ್ತಾ (ಮುಂಬಯಿ. ೦೨೩). **ಪಿಸ್ತೆ** : ಈ ಹಡಗಗಳಲ್ಲಿ ಅರಬಸ್ತಾನದಿಂದ ಉತ್ತತ್ತಿ, ಖಜೂರ, ದಾಳಿಂಬ, ಬದಾಮು, ರಾಳ, ಮಿಠಾಯಿ, ಮನೂಕ, ಪಿಸ್ತೆ ಮುಂತಾದ ಸರಕುಗಳು ಬರುತ್ತವೆ (ಕಥಾಗ. ೩೦೬); ಗೋಡಂಬಿ, ಮನೂಕ, ಮುಂಬೈಯ ಪಿಸ್ತೆ, ಹಾಗು ಹತ್ತೆಂಟು ಹಣ್ಣುಗಳ ಶೀಕರಣೆ ಯನ್ನು ತಿನ್ನುವಾಗ ವಸಂತರಾಯನ ಆದರ ವಿನಯಗಳು ಉಕ್ಕೇರಿದವು (ಗಂಪಾಯ. ೨೦೩). [←ಪಾರ. ಹಿಂ. ಮರಾ. ಪಿಸ್ತಾ]

**ಪಿಸ್ತೂಲು** (ನಾ). ಸಣ್ಣ ತುಪಾಕಿ,–ಬಂದೂಕು : ಜನರಲ್ ವೋಂಡೂಸ್‌ಸಾಹೇಬ್‌ಬಹಾದ್ದೂರವರು ಒಡಂಬಡದೆ ತಮ್ಮ ಕೈಯಿಂದ ಪಿಸ್ತೂಲಿನ ಗುಂಡಿನಿಂದ ತಮ್ಮ ಮೈಗೆ ತಾವೇ ಹೊಡೆದು ಜಖಮಿ ಮಾಡಿಕೊಂಡು (ರಾಜೇಂದ್ರ. ೮೩); ಪಿಸ್ತೂಲನ್ನು ದೊರಕಿಸ

ಬೇಕಾದರೆ ಸಾಕುಸಾಕಾಗಿ ಹೋಯಿತು(ಅಮಗಾ. ೩೦). [←ಇಂ. Pistol]

**ಪಿಸ್ತೈ** 'ಪಿಸ್ತಾ' ನೋ.

**ಪಿಹಿತ** (ಗು). ೧. ಮುಚ್ಚಿದ; ಮರೆ ಮಾಡಿದ: ಅನೇಕಸೇವಕ ಕ್ಷತ್ರಿಯಾತಪತ್ರಮಂಡಲಪಿಹಿತದಿನಕರನುಮುಚ್ಛಲಿತ ಬಹಲಧೂಳೀಪಟಲ ಪಿಹಿತರಿಪುನೃಪತಿನಗರನುಂ . . . ಆಗಿ ನಡೆಯೆ(ಆದಿಪು. ೦೨-೬೦ ವ); ನಿರ್ದಯ ಪ್ಪೋಗು ಬೇಗಮೆಂಬಂತೆಯುಮೆನ್ನನಶ್ರುಪಿಹಿತಾಂಕುಲದೃಷ್ಟಿಗಳಿಂದೆ ನೋಡಿ ದಳ್ (ಕಾದಂಬ. ೩೬೩); ಕಾಂತಾಕೀರ್ಣಪಿಪ್ಪಾತಕಪಿಹಿತಲತಾಂತಂಗಳೊಳ್ ಪಾಯ್ದು ಮೆಯ್ ಶಂಕಿಸೆ (ಲೀಲಾವ. ೦೯-೨೦). (ನಾ). ೨. ಮುಚ್ಚುವಿಕೆ; ಮರೆಮಾಡುವಿಕೆ: "ಅಪವಾರಿತಂ, ಸಂವೃತಂ ಸಂದಿತಂ ಪಿಹಿತಮೆನಲು ಮುಚ್ಚಲ್ಕೆ ನಾಮಂ" (ಮಂಗರಾ. ೦೩೦-೦೯). ೩. ಮುಚ್ಚಿರುವಂತಹುದು; ಮುಚ್ಚಿದುದು: "ಅಪವಾರಿತಂ, ಪಿಹಿತಂ, ಸಂವಿತಂ, ಸಂವೃತಂ, ಸ್ಥಗಿತಂ-- ಈ ೫ ಮುಚ್ಚಿದುದು" (ಹಲಾಯು. ೦೨೨-೩೮). [ಸಂ.]

**ಪಿಳಕಾರಿ** (ನಾ). ಒಂದು ಬಗೆಯ ಹೂವಿನ ಗಿಡ; ಕಣಗಿಲೆ: "ಪಿಳಕಾರಿ-ಗಣಜಿಲು" (ಓಷ. ೯೬). [?]

**ಪಿಳಕಿಸು**, ಪಿಳಿಕಿಸು, ಪಿಳುಂಕಿಸು (ಕ್ರಿ). (ರೆಪ್ಪೆಯನ್ನು ಒಂದೇ ಸಮನೆ) ಬಡಿ; ಮಿಟುಕಿಸು: ಪೆಜತ್ತಾಯರೂ ಕಣ್ಣು ಪಿಳಕಿಸಿ ಕೊಂಡು . . . ಕುಳಿತಿದ್ದರು (ಗಂಗಾವ. ೨೩): ಎಚ್ಚರ, ಕಣ್ಣು ಪಿಳಕಿಸ ಬಾರದು; ಉಗುಳು ನುಂಗಬಾರದು; ಇಲ್ಲವಾದರೆ ಸತ್ತಿಯೇ ದು ತಿಳಿ! (ಕುಂಹಿಂ. ೨೬). **ಪಿಳಿಕಿಸು**: ಗೋವರ್ಧನನಿಗೆ ತಾನಾವುದೋ ಗೂಡನ್ನು ಸೇರಿದ ಅರಿವಾಗಿ ಕಣ್ಣು ಪಿಳಿಕಿಸಲು (ಮುಂಗಡು. ೦೦೬). **ಪಿಳುಂಕಿಸು**: ಚಾರು ತುಂಬ ಸಿಡಿಮಿಡಿಗೊಂಡು ಮಂಚದ ಮೇಲೆ ಕುಳಿತು ಕಣ್ಣು ಪಳಪಳ ಪಿಳುಕಿಸಿ . . . ದುರುದುರು ನೋಡಹತ್ತಿದಳು (ಇಕ್ಕಳ. ೨೮೮); ಪಿಳುಕಿಸದ ಸಿರಿಗಣ್ಣು ಸುತ್ತು ಚಿನ್ನದ ರೇಖೆ ಬೆಳ್ಳಿ ಮಿರುಗಿನ ಮೈಯ ಕಾಂತಿ ನಿನಗೆ (ಕವಲ. ೦೦-೯) 'ಪಿಳಿಪಿಳಿ' ಪರಾ. [ಪಿಳಕು₀ + —ಇಸು₃]

**ಪಿಳಗು** 'ಪಿಳ್ಗು' ನೋ.

**ಪಿಳಚಲು** (ನಾ). ಕಣ್ಣು (ಪಿಸರಿನಿಂದ ಕೂಡಿ) ಗುಳಿ ಬಿದ್ದಿರುವುದು; ಕಾಂತಿಹೀನವಾದುದು: ಅವನ ಕಣ್ಣು ಯಾವಾಗಲೂ ಪಿಳಚಲು (ಲೂತಿ). 'ಪಿಳಚಲುಕಣ್ಣು' ಪರಾ. [ಪಿಳಚು + —ಅಲು(<—ಅಲ್₂)]

**ಪಿಳಚಲುಕಣ್ಣು** (ನಾ). (ಪಿಸರಿನಿಂದ ಕೂಡಿ) ಗುಳಿ ಬಿದ್ದ ಕಣ್ಣು; ಕಾಂತಿಹೀನವಾದ ಕಣ್ಣು: ಹಣೆಯಲ್ಲಿ ಎದ್ದು ಕಾಣುವ ಗಂಧಾಕ್ಷತೆ, ಪಿಳಚಲುಕಣ್ಣಿಗೆ ಕನ್ನಡಕ . . . ಇವುಗಳಿಂದ ಅಲಂಕೃತರಾದ ಸೀತಾ ರಾಮಯ್ಯ (ಸೋತುಗೆ. ೩). 'ಪಿಸರುಗಣ್ಣು' ಪರಾ.
[ಪಿಳಚಲು + ಕಣ್ಣು (<ಕಣ್). / ತಮಿ. ಪಿಳಿಚ್ಚೈಕ್ಕಣ್]

**ಪಿಳಚು** (ನಾ). ಕಣ್ಣು (ಪಿಸರಿನಿಂದ ಕೂಡಿ) ಆಕರ್ಷಣೆಯ ಶಕ್ತಿಯನ್ನು ಕಳೆದುಕೊಂಡಿರುವುದು;-ಕಾಂತಿಹೀನವಾದುದು: ಕಣ್ಣೇನೋ ಪಿಳಚು ದಿಟ, ಹಣ ಪಿಳಚೆ? (ವಜ್ರರ. ೫). [ದೇ.॥ ತಮಿ. ಪಿಳಿಚ್ಚೈ]

**ಪಿಳಪಿಳನೆ** 'ಪಿಳ್ಪಿಳನೆ' ನೋ.

**ಪಿಳಿ₁** 'ಪಿಟಿ' ನೋ.

**ಪಿಳಿ₂**, ಹಿಳಿ₂ (ಕ್ರಿ). ಒಡೆ: ಸೀಳು; ಬಿರಿ: ಒಡೆಯಲಜಾಂಡಂ ಕುಲಗಿರಿ ಕೆಡೆಯಲ್ ಪಿಳಿಯಲ್ಕೆ ಧಾತ್ರಿ ದಿವಿಜರ್ನಡುಗಲ್ಕೆ . . . ಸಿಂಹನಾದಂಗೆಯ್ದಂ (ಗದಾಯು. ೬-೦೬). **ಪಿಳಿ₂**: ಇಳೆ ಪಿಳಿಯಲು ಜಪ ಜರಿಯಲು . . . ಹರಿ ಬೊಮ್ಮರು ಕಂಬನಿದುಂಬಿದರೆನೆಯಪಜಯ ಗಜಬಜವು (ಲೀರೇಶ. ೨ ೩೯); ಪರ್ವತ ಹಿಳಿಯೆ ಹೆಚ್ಚಿದ ಪಟಹ ಪಣಹ ಮೃದಂಗ ಡಿಂಡಿಮದ ಉಲಿಯ . . . ಗೊಂದಳದ ಕಳಗರ್ಚಾಯ್ತು ಕೌರವಸೈನ್ಯಶರಧಿಯಲಿ (ಕುಮಾವ್ಯ. ೯-೨೬). 'ಪಿಳ್ಗು' ಪರಾ.
[ದೇ.॥ ತಮಿ. ಪಿಳ್. ಪಿಳ; ಮಲ. ಪಿಳ]

**ಪಿಳಿಕಿಸು** 'ಪಿಳಕಿಸು' ನೋ.

**ಪಿಳಿಕು** 'ಪಿಳ್ಕು' ನೋ.

**ಪಿಳಿಗು** 'ಪಿಳ್ಗು' ನೋ.

**ಪಿಳಿಪಿಳಿ** (ನಾ). ಒಂದು ಅನುಕರಣ ಶಬ್ದ: ಅವನು ಪಿಳಿಪಿಳಿ ನನ್ನನ್ನೇ ನೋಡುತ್ತಿದ್ದ (ದೀಶರ. ೮೭).

**ಪಿಳಿಪಿಳಿ ಕಣ್ಣು ಬಿಡು** = (ಆಶ್ಚರ್ಯ ಅಥವಾ ಅಸಹಾಯಕತೆ ಗಳಿಂದ) ಕಣ್ಣನ್ನು ಪಿಳಕಿಸು; ಒಂದೇ ಸಮನೆ ನೋಡು: ಬಿಂದಣ್ಣ ಪಿಳಿಪಿಳಿ ಕಣ್ಣು ಬಿಟ್ಟರು (ವೃ.ಕ. ೩೩೦); ನಾನೊಬ್ಬನೇ ಪಿಳಿಪಿಳಿ ಕಣ್ಣು ಬಿಡಬೇಕಾಗಿದೆ! (ಶಾರದಾ. ೬೬). 'ಪಿಳ್ಪಿಳನೆ' ಪರಾ.

**ಪಿಳಿಲ್** 'ಪಿಟಿಲ್' ನೋ.

**ಪಿಳಿಲು₁** 'ಪಿಣಿಲ್' ನೋ.

**ಪಿಳಿಲು₂** (ನಾ). ಕುತರ (?): ಇಂದುವದನೆಯರು ದೂರದೊಳಲ್ಲಮನ ಮಹಾಸೌಂದರ್ಯವೆತ್ತ ಶ್ರೀಪಾದಪದ್ಮಗಳಾನಂದದಿಂ ಕಂಡು ವಿಮಳೆಗೆ ಮಾಯೆಗಂ ಪೇಳಿ ಜೀವದೊಳು ಪಿಳಿಲನಾಂತು (ಪ್ರಭುಲಿಂ. ೫-೦೯೩). [?]

**ಪಿಳುಂಕಿಸು** 'ಪಿಳಕಿಸು' ನೋ.

**ಪಿಳುಕು₁** 'ಪಿಳ್ಕು' ನೋ.

**ಪಿಳುಕು₂** (ನಾ). ಮರಿ; ಶಾಬ; ಪೋತ: ಬೇಡಂ ಪಿಳುಕೊತ್ತಿನ ತಾಯೋಡಲ್ ಬಿಟ್ಟಲ್ಲಿ ಪಿಡಿದನಂತಾ ಪಿಳುಕಂ ಬೇಡಿತಿಗೆ ಸಲಹಲಿತ್ತೊಡೆ ಗೂಡಿನೊಳದು ಬಳೆದು ತಳೆದುದಂಗಚ್ಛವಿಯಂ (ಯಶೋಧ. ೩-೩೬). 'ಪಿಳು ಗಾಡಿಸು', 'ಪಿಳ್ಳೆ' ಪರಾ. [<ಪ್ರಾ. ಪೀಲುಅ./ಸಂ. ಪೀಲುಕ]

**ಪಿಳುಕು₃** (ನಾ). (ಸಸ್ಯದ) ಅಡಿಭಾಗ; ಬುಡದ ಭಾಗ; ಕೂಳೆ (?): ಮತ್ತಮಾಸಮದುಬೀಯ ಪಟಹದ ಪಿಳುಕುಬೀಯ ಕೋಲಂಬಿಯ ಕೂಕಂಬದ ಕೋಡುಂಬೆಯ ಮುಡಿಗೆಯ ತಾಣಂಗಳೊಳ್ ಮೇದು ಮೆಯ್ವೆರ್ಚಿ ಸೊವಡಿಂಗೆ ಸೋಲ್ತು ಕೂಡದೆ ಕವಲ್ದು ಮೇದು ತಣಿದು ಕೊಟ[ಣ]ಕಿಟ್ಟಾಡುವ ಮೃಗಂಗಳೊಳ್ (ಅನಂಪು. ೦೦-೩೯ ವ). [?]

**ಪಿಳುಗಾಡಿಸು**, ಹಿಳುಗಾಡಿಸು (ಕ್ರಿ). ಮರಿಯನ್ನು ಆಡಿಸು.– ಮಂದ್ರಾಡಂ: ಅಳಿಗಳ ರತ್ನಕದಂಬದ ಬೆಳಗಿಂ ಬಹುವರ್ಣಜಲಮನಾಂತ ಕಟಾಹಂಗಳ ನಡುವೆ ಪೆತ್ತ ಮರಿಯಂ ಪಿಳುಗಾಡಿಸು[ಪಾಠಾಂ. ಬಳುಕಾಡಿಸು] ವಂತೆ ಸರಸಿ ಪಡೆಮುದು ಪವಮಂ (ಅನಂಪು. ೬-೨೩; ಸೂಕ್ತಿಸು. ೦೨-೫ ನೋ); ಪಾಡಿ ನಲಿವಾಜಿಸಿ ತೋಜಿಸಿ ಸೋಂಕಿ ನೂಂಕಿ ಕೌಮುದಿಯೊಳದೇಂ ಚಕೋರಿ ಪಿ[ಪಾಠಾಂ. ಹಿ]ಳುಗಾಡಿಸಿದತ್ತೊ ನಿಜಾಗ್ರಶಾಬಮಂ (ಅನಂಪು. ೬-೯೦; ಸೂಕ್ತಿಸು. ೮-೨೯೬ ನೋ). **ಹಿಳುಗಾಡಿಸು**: ಮೇಲಿನ 'ಅನಂಪು. ೭-೨೧'ರ ಪ್ರಯೋಗದ ಪಾಠಾಂತರವನ್ನು ನೋಡಿ.
[<ಪಿಳುಕು₂+ಆಡಿಸು]

**ಪಿಳ್ಕು**, ಪಿಳಿಕು, ಪಿಳುಕು₁, ಹಿಳ್ಕು, ಹಿಳಿಕು, ಹಿಳುಕು₁, ಹಿಳ್ಕು (ನಾ). ೧. ಗರಿಗಳಿಂದ ಕೂಡಿದ ಬಾಣದ ಭಾಗ: ಪುಂಖ: "ಪಿಳ್ಕೆಂದು ಸಾಯಕಪುಂಖಂ" (ಶಬ್ದಮ. ೩೨-೦೦೬); ವಿಶ್ರಮಾಸಾದಿತ ವಿಶ್ವಲೋಕ ವಿಜಯ ಕುಲಿಶಾಸ್ತ್ರದ ಪಿಳ್ಕು ನಾರಿಯೊಳ್ ಕೂಡು ಕದಂಪನೆಯ್ದೆ ಧನುವಂ ತೆಗೆವರ್ಷಿಸಿದ ಜನಾರ್ದನಂ (ಪಂಪಭಾ. ೦೯-೦೬೫); ಶರಮಂ ತೂಣೀರದಿಂದುರ್ಚಿ ತೊಟ್ಟನೆ ಪಿಳ್ಕಂ ತಿರುವಾಯ್ಗೆಡಂ ತೆಗೆದಾ ಕರ್ಣಾಂತಮಂ ತಾಗೆ ಕೋಲಿನ ಪಿಂತಂ ನೆಜೆ ಕೋಲ್ಗಳಟ್ಟುವಿನಮೆಚ್ಚಂ (ಪುಣ್ಯಾಶ್ರ. ೦೨-೦೦೯); ಪಿಳ್ಕು ಪೆಜಗಾಗಿ ಬರ್ಪ ಶರಮಂ ತನ್ನೊಂದಂಬಿನಿಂ ಮುಱಿದು (ಜಗನ್ನಾಥ. ೦೯೫-೦೬). ೨. ಬಿಲ್ಲಿನ ತಂದಿ; ಕೊಪ್ಪು; ಗೊಲೆ: "ಕೊಪ್ಪು ಪಿಳ್ಕೆನೆ ಕೋಟಿಯು" (ಕರ್ಣಾಟ. ೪೪). ೩. ಬಾಣ; ಅಂಬು; ಸರಳು: ಕಾವಲರಂ ಪಳಂಚಲೆದ ಪಂಚಶರಕ್ಕದಿಱಿಂಕುಱಂ (ಪುಣಂ) ಬಾದುದು . . . ಪೂದೊಡಂಬೆ ಪಿಳ್ಕಾದುದು (ಶೃಂಗಾ. ೬-೬೦). **ಪಿಳಿಕು**:

೧. "ಬಾಣದ ಪಿಳಿಕದು ಪುಂಖಂ" (ವಸ್ತುಕೋ. ೬೩-೦೯). ಪಿಳುಕು₁: ೧. ಒರ್ವನ್ಯ ಇರವಿನಿಂ ನೆಟ್ಟಿ ನಿಂದು ಕೂರ್ಗಣೆ ಪಿಳುಕನಾಯುತದಿ ತಿರುವಿನೆಡೆಯೊಳು ತೊಡಚಿ (ಶಾಕ್ಮಲ. ೩-೨೬); ಮರದ ಕೊಂಬು, ಸರಲ ಪಿಳುಕು (ಶಬ್ದಾನು. ೪೦೭ ವ್ಯಾಖ್ಯಾ); ಸೆಳೆಯು ಸವಿ ಬೇಟಿ, ಪೊನ್ನ ಪಿಳುಕಿನ ಬಲ್ಗಣೆಯು ಸವಿ ಬೇಟಿ (ರಾಮಾಶ್ವ. ೦೫೩-೨೬). ಹಿಳಿಕು: ೩. ಎಲೆ ಧನಂಜಯ ನಿಲ್ಲು ನಿಲ್ಲೆನುತ ಕೋಪದಿಂ ಹಿಳಕ ಸುರಿದನು ಫಡಫಡೆಂದೆನುತ ರಾಧೇಯ (ತುರಂಗ. ೬೯-೩೩). ಹಿಳಿಕು: ೧. "ತೆತ್ತಿಸುವ ಹಿಳಿ[ಪಾಠಾಂ. ಳು]ಕು ಕರ್ತರಿ ಪುಂಖಮಕ್ಕು" (ಪಂಗರಾ. ೮೬-೩೯); ಕಾಮನ ಅಂಬಿನ ಕಣೆಯಲ್ಲಿ ಮೂವರು ಬಾಲೆಯರು ಹುಟ್ಟಿದ ವಿವರ ಹಿಳಿಕಿನಲ್ಲಿ ತಾಯಿ ಹುಟ್ಟಿದಳು (ಅಜಾಪುರಾ. ೪. ೦೯೦-೩೩೬); ಎಸಳಂಬುಗಳ ಹಿಳಿಕು ಹಿಡಿದಾಗಳ್ ರಸದಾಳಿಯ ಬಿಲ್ ಬಾಗುವವೋಲ್ ನವರಸಿಕನ ರೂಪು ಕರಂ ಬಗೆದಾಗಳ್ ಪುಟ್ಟಿದ ಲಜ್ಜೆಯೊಳು ಪೊಸ ಜೌವನೆ ಸಿರಿವೊಗ ಬಾಗಲು (ಜಯುಶಾ. ೩-೩೯). ೨. ನಾರಿಯು ಹೂಳುವ ಹಿಳಿಕು ಹೋಳಾಯಿತ್ತು (ಪಶಶಾ. I, ೬೨-೦೦). ೪. ಒಂದು ಬಗೆಯ ಬಾಣ,–ಸರಳು: ಹಿಳಿ[ಪಾಠಾಂ. ಳು]ಕು ಕವಲಂಬು ಬೋಳವಿದಿರಲೆ ವಿಟ್ಟಿಯಾ ಮೊಳೆ ತೊಡಕು ನಾರಾಚ . . . ಬಿಸುಗದಿರು ಸವಿಮಾಯನೆಂಬ ನಾನಾ ಸರಳನು ಸೆಳೆದು (ಕೋಟಿಪುಶ. ೩-೨೬). ಹಿಳುಕು₁: ೧. ಅಂಬೊಂದು ಹಿಳುಕು ಮೂಟು ಅಲಗಾಟು ಮೊನೆಯ್ದದು (ಪುರುಷ. ೪. ೪೨-೦೩೦); ಎಲವೊ ಓಡಿಪಿಡಿ ಧನುವ ತಿರುವಿಗೆ ಹಿಳುಕ ತೊಡುತೊಡು ಕಾದಲಾಪರೆ (ಕೌಶಿರಾ. ೩-೦೬); ಸರಳ ಹಿಳುಕಿನ ಹೊಂಗರಿಯ ತುದಿವೆರಳಲೊಯ್ಯಾರಿಸುತ ಬಾಣವ ತಿರುಪಿ ತಿದ್ದುತ ಕೂರಲಗು ಧಾರೆಯ ನಿರೀಕ್ಷಿಸುತ ಇರಲು ಸಾರಿದಳಿವಳು (ಕೊರಂ. ೩-೪-೦೩). ೨. ಹಿಳುಕ ಕೆನ್ನೆಗೆ ಸೇರಿ ಬೊಬ್ಬೆಯುಬ್ಬರದಿಂದ ತಳುವದೆ ಬಾಣವಲ್ಲು ಕರು ನಿಲುನಿಲು ಹೋಗದಿರೆನುತೆಚ್ಚು ತಮ್ಮ ಕೈಯಳವ ತೋರಿದರು ಬಾದುರಗೆ (ಕುಂಠಸಾಂ. ೦೮-೦೪೨); ಹಿಳುಕ ಬಿಟ್ಟಂಬು ಹಿಂದಕೆ ತಿರುಗು ವದೇಕೆ ಕಳಿತ ಹಣ್ಣುಗಳು ಕಾಯಹವೆ ಎಳೆಯು ಮಾನವರಾಗುವರೆ ವೃದ್ಧಾಪ್ಯರು (ಅಮುಸಾಂ. ೩-೦೬); ಹಿಳುಕ ಕೆನ್ನೆಗೆ ಸೇರಿ ತಾಗಿದನಾಳಿದು ಸಹಭವನ (ಅಂಬಿಕಾ. ೦೭-೯೬). ೩. ಹಿಳುಉವಿಡಿದರಿಯ ವೋಲಧಿಕ ಚಾಪಪಾ ಬಿಡದೊತ್ತಿ ದೃಷ್ಟಿಯಂ ಕೀಲಿಸುತ ಮುಷ್ಟಿ ಶರಸಂಧಾನದಿಂದ ಬೊಬ್ಬಿರಿದೆಚ್ಚನಾ ಮನ್ಮಥಂ (ಶೀಕೃಪು. ೨-೪-೨೪); ಹಿಳುಕ ಹಿಸುಕಿಂದರಿದು ದೈತ್ಯನ ನಿಲುಕಿ ಷಣ್ಮುಖದೇವನೆಂದನು (ಅಂಬಿಕಾ. ೨೬-೯೬); ಪಾರ್ಥ ಭಾನುಜನ ಹಿಳುಕಿನೋಳ್ಕಡುನೊಂದು ವ್ಯೋಮರೆತು ಮೂರ್ಛೆಯೊಳ್ಮಲಗಿದನು (ತುರಂಗ. ೬೯-೦). ಹಿಳ್ಕು: ೧. ಕದಿರೊಡೆದ ಬೆಳೆದ ಕಟವೆಯು ಕದಿರ್ಗಾಪಿಂಗೆಟಗಿ ಪಟವೇಗಳ್ಪಟ್ಟಿಯಿಸುಗುಂ ಮದನಂ ಮಡದಿ[ಲ್ತಿ]ರಾದಿಟಾಪಿದ ಹೊದೆಯಂಬಿನ ಸರಲ ಗರಿಯ ಹಿಳ್ಕಿನ ತೆಱನಂ (ಅಸಂಪು. ೦-೬೦).

ಹಿಳುಕುಹಿಳುಕು (ದ್ವಿರುಕ್ತಿ): ಹಿಳುಕುಹಿಳುಕುಗಳಡಸಿ ದೆಸೆ ಕತ್ತಲಿಸಿ ಕೈಕೊಂಡವು ಪತತ್ರಾವಳಿಯು ಪವನನ ಹೊಯ್ಲಿನಲಿ ಬಾಯ್ದೊರೆ ಕಿಡಿಯೋಳಿ ಬಳಸರಳ ಬಿಲ್ಲಾಳ ದಡ್ಡಿಯ ಬಲುಹು ತಱುಬಿತು ಪಡಿಮುಖದ ಮಂಡಳಿಕರೆಸುಗೆಯನಮವು ಸಾತಳಿಸಿತ್ತು ರಣಕೇಳಿ (ಕುಮಾರಿ. ೬-೪೨); ಹಿಳುಕುಹಿಳುಕುಗಳೊರಸೊರಸು ಮುಂಕೊಳಿಸೆ ಹಿಂದಣೆಸಂಬನಂಬುಚ್ಚಳಿಸ ಲೆಚ್ಚನು ಭೀಮ ರವಿ ನಂದನನ ನಂದನನ (ಕುಮಾ. ೪. ೨೦-೮). ಹಿಳುಕಿನೋಲೆ = ಬಾಣಕ್ಕೆ ಸಿಕ್ಕಿಸಿ ಕಳುಹಿಸುವ ಪತ್ರ; ಬಾಣಕ್ಕೆ ಸಿಕ್ಕಿಸಿ ಕಳುಹಿಸುವ ಕಾಗದ: ಹಿಳುಕಿನೋಲೆಯ ತನ್ನಿರೆಂದಾ ಅಳುಕುತಳುಕುತೊಬ್ಬನದಱಕೊತ್ತಿಗೆಯ್ಯಂದನೆಳಸಿ ಕೊಟ್ಟನು ಕರಣಿಕಗೆ (ಶರಶ. ೨೪-೪೦).

ಪಿಳ್ಕುಗೊಯ್ (ಕ್ರಿ). ಬಾಣದ ಗರಿಯನ್ನು ಕತ್ತರಿಸು: ಬಿಲ್ಲನೊರೆವ ಸರಳ ತಿದ್ದುವ ಪಿಳ್ಕುಗೊಯ್ವ ಸಂವಣಾ ಕೂಡೆ ಕರಮೆಸೆದುದು ದುರ್ಗದೊಳಗೆ (ಕುರಾಸಾಂ. ೩೭-೫೭). [ಪಿಳ್ಕು + ಕೊಯ್]

ಪಿಳ್ಕೆ, ಪಿಕ್ಕೆ₁, ಹಿಕ್ಕೆ₁ (ನಾ). (ಕುರಿ, ಆಡು, ಜಿಂಕೆ, ಇಲಿ ಮೊದಲಾದ) ಪ್ರಾಣಿಗಳ ಮಲ; ಪಿಚಿಕೆ: ಕಾಟಿಯ ಪಿಳ್ಕೆ [ಪಾಠಾಂ. ಕ್ಕೆ, ಳ್ಕೆ] ಯನಿಂತು ಭಾವಿಸಿ ಲಿಂಗಮಂ ಪಿಂಗೆ ಮಾಡಿದಂ (ಬ್ರ ಶಿಪು. ೬-೦೯). ಪಿಕ್ಕೆ₁: ಹಡಪವಳನ ಹಡಪದೊಳಿರ್ದಡಕೆಗಳಂ ಮಾಡಿಯಾಡ ಪಿಕ್ಕೆಗಳಂ (ಪ್ರಭುಸ್ತ. ೮-೩೬). ಹಿಕ್ಕೆ₁: ಹಿಕ್ಕೆಯ ಹಡಿಗೆಯ ಬಿಟ್ಟು ಕಂದಲ ಹೊತ್ತು ಚಕ್ಕನೆ ಮುಂದಕೆ ನಡೆತರಲು (ಅವಶಂ. ೩೦೦-೦೩೦೭); ಕಾಟಕೋಟನೆನಿಪ್ಪ ಗೊಲ್ಲರ ಮೇಟಿ ಆಡಿನ ಹಿಕ್ಕೆಯಂ ಶಶಿಜೂಟನೀಶ್ವರನೆಂದು ಪಾಲಂ ತಾನದಱ ಮೇಲೆ . . . ಎಱೆದು (ಬಸಪು. ೯-೦೨); ನೀರಿನಲ್ಲಿ ತೌಡು ಹೊಟ್ಟು ಕೋಳಿ ಹಿಕ್ಕೆಗಳನ್ನು ಕವರಿ ಆ ನೀರನ್ನು ದ್ರಾಕ್ಷಿಗಿಡವ ಬೇರಿಗೆ ಹಾಕಿದರೆ ವೃದ್ಧಿಯು ಹೊಂದುವದು (ಸೌಗಂಧಿ. ೪೩೯-೦೭); ಏನು ಅಂದದ್ದಕ್ಕೆ ಹುಲಿ ಹಾಕಿದ ಹಿಕ್ಕೆ ಎಂದರು (ಶ್ರೀಕೃ. ೯೬).

[ದೇ.॥ ತಮಿ. ಪಿಚುಕ್ಕೈ; ಮಲ. ಪಿಟುಕ; ತೆಲು. ಪಿಡಕ, ಪಿಡುಕ]

ಪಿಳ್ಗಿಸು, ಹಿಗ್ಗಿಸು (ಕ್ರಿ). ೧. ದೊಡ್ಡದನ್ನಾಗಿ ಮಾಡು; ವಿಶಾಲವಾಗಿಸು: ದೆಸೆಯಂಟುಂ ಪಿಳ್ಗಿಸುತ್ತಗ್ಗಳಮೆನೆ ಪರದಿರ್ಪಳ್ಕೆಗೊಂಬೇಟ್ಗ ಯಿಂದಾಗಸಮುಂ ಪೊತ್ತಿರ್ಪ ಮೇಲ್ಗೊಂಬು (ವಿಳಸು. ೨-೯೬). ಹಿಗ್ಗಿಸು: ೧. ಹಲವು ಪದಗಳು ಬಳಕೆಯಾಗುತ್ತಿದ್ದ ಅರ್ಥವನ್ನು ಕ್ರಮೇಣ ಹಿಗ್ಗಿಸಿ ಕೊಂಡು ವಿಶಾಲಾರ್ಥವನ್ನು ಪಡೆಯಬಹುದು (ಸೌಂದರ. ೯೨). ೨. (ಆಲಂ) ಹಿಗ್ಗುವಂತೆ ಮಾಡು; ಸಂತೋಷಪಡಿಸು: ಪುತ್ರಲಾಭದ ಫಲವಿಶೇಷಿತ ಶಕುನ ಹಿಗ್ಗಿಸಿತವನಿಪನ ಮನವ (ಕೊರಂ. ೦-೩-೬). ೩. (ಎರಡು ಹಲಗೆಗಳ ನಡುವೆ ಉಳಿಯನ್ನಿಟ್ಟು ಬೇರ್ಪಡಿಸುವಂತೆ) ಬೇರ್ಪಡಿಸು; ಪ್ರತ್ಯೇಕಿಸು: (*). ೪. (ಕಟ್ಟಿಗೆಯ ಹೊರೆಯಂ ಕಟ್ಟನ್ನು ಸಡಿಲಗೊಳಿಸುವಂತೆ) ಸಡಿಲಗೊಳಿಸು: (*). [ಪಿಳ್ಗು + —ಇಸು₁]

ಪಿಳ್ಗು, ಪಿಗ್ಗು, ಪಿರ್ಗು₁, ಪಿಳಗು, ಪಿಳಿಗಂ, ಹಿಗ್ಗು₁, ಹಿಳಗು, ಹಿಳ್ಗು₁ (ಕ್ರಿ). ೧. ಬಿರಿ; ಸೀಳು; ಹಿಸಿ; ಒಡೆ: ಫಳರಸಂಗಳನೆ ತೆಗೆವಲ್ಲಿ ಹಿಟಿಯೊನೆ ಬಟಂ ಪಿಳ್ಗಿ ಬಿರಿವೆಡೆಯೊಳ್ ಕುಳಂ (ಸಂಜೀವ. ೨೪). ೨. ದೊಡ್ಡದಾಗು; ಅಗಲವಾಗು: ಎರಡಳ್ಕೆ ಪಿಳ್ಗಿ ತೇಗುಬ್ಬರಿಸಲ್ ಕುಳಿರ್ವಮಳಜಲಪೂನೀಂಟಿದಂ (ದಕಳು. ೪-೩೪); ನಿರಂತರಂ ಸುರಿವ ಸುಣ್ಣೆನೆವಾಲ್ಗಳ ಧಾರೆಗೊಡ್ಡಿ ಚಂಚುರ ನಿಜಚಂಚುವಿಂ ಸವಿದು ಸಂತಸದಿಂದೆರಡಳ್ಕೆ ಪಿಳ್ಗಿ[ಪಾಠಾಂ. ಗ್ಗಿ]ಮಂದರಗತಿಯಿಂ ಮರಳ್ದು ಸುಟಾದಾಡುಗುವಲ್ಲಿ ಮರಾಳಮಂಡಲಂ (ಕಾವ್ಯಸಾ. ೦೦೪; ಧರ್ಮಾ. ೨-೪೦ ನೋ). ೩. (ಆಲಂ) ಸಂತೋಷದಿಂದ ಉಬ್ಬು; ಆನಂದಿಸು; ಬೀಗು: ಪ್ರೌಢಿಗೆ ಪಿಳ್ಗುತ್ತರಸಂ ಗಾಢೋತ್ಸುಕನಾದನಾತ್ಮಜಾಲೋಕನದೊಳ್ (ಕಳಂ. ೪-೩೯); ಸುಮ್ಮನೆದೊಳೆ ಪಿಳ್ಗಿ ನಲ್ಮೆಗಡಲೊಳ್ ಮುಂಬುಗಾಡಿ ವಿಚಿಂತನಾಗಿ ಕೆಮ್ಮನೆ ಸತಿಗೂಡಿಯಾಟ್ಟಿ (ಶಸ್ತ್ರಪು. ೩-೨೪). ಪಿಗ್ಗು: ೨. ಸರ್ವಜನಂ ಬೆದಱಿ ಮನಂ ಮುಱುಗುತಕಟದೇನಾಯ್ತೆನಲಳ್ಕದೆ ಸೇದಿರಾಜನಾನಂದದ ಸಲಗಂ ನೋಡಿ ಮೆಚ್ಚಿ ಪಿಗ್ಗುತ್ತಿರ್ದಂ (ಶ್ರೀಪು. ೨೩-೩೩). ಪಿರ್ಗು₁: ೨. ಬಲಿನಗರಕ್ಕೆ ಮೂಗಿನಿಸಿದಾ ತ್ರಿಪುರಾಂತಕದೇವಾಲಯಾವಳಿ ಮುನಿವ ತ್ರಿಲೋಚನನ ಭೂಪತಿರಾಜಿಯ ಪಿಂದೆ ಪಿರ್ಗಿ ಪತ್ತಲಿಸಿತೆಯಿಲ್ಲ ದಲ್ಲುಗುತಮಿಱ್ದದನೀಕ್ಷಿಸಿ ಬಿಚ್ಚಿ ಮಾಡೆ ಮಂಡಲಿಕಲಲಾಮನೇಂ ನಿಲಿಸೆ ನಿನ್ನವೊ ಬೆಳ್ಳಿಯ ಬೆಟ್ಟ ನಿಲ್ವವೋಲ್ (ಸೌಇಇ. IX-i, ೦೬೦-೩೩; 1092). ೩. ಗೆಯ್ದು ಗೆಯ್ಗೆಗೆ ಪಿರ್ಗಿ, ಬಾಯ್ ಕೊರ್ಚಿ ನಲಿಪಳ್ (ಅಂತಿಗೊ. ೨೨-೦೬೩); ನಗುಗೆ, ಪಿರ್ಗುಗೆ, ನಲಿಗೆ, ಅಣಕಿಸುಗೆ, ಇವನಟಲ್ಗೆ ಆ ಪಿರಿಯ ಸಜ್ಜನರ್! (ಅಕ್ಕಾ. ೩೯-೦); ನಿನ್ನ ಈಗಳಿನ ದೆಸೆಗೆ ನೀನ್ ಪಿರ್ಗುವೋಲ್ ಕಂಡಪುದು

(ಶಿವ್ವಕ್ರ. ೩೦-೦೦೦೧). **ಪಿಳಗು**: ೧. ಒಡೆದುದೊ ಪದ್ಮಜಾಂಡಮವನೀ ವಳಯಂ ಪಿಳ [ಶಾಂತಿ.೪]ಗಿತ್ತೊ ಮೇರು ಮೇಣ್ ಕಿಡೆದುದೊ ವಾರ್ಧಿ ಯುರ್ಕಿದುದೊ (ಕಂದ್ರಶ್ರಿ. ೬-೩೦). **ಪಿಳಿಗು**: ೧. ಗೋತ್ರನಗಂ ಪಿಳಿಗಿತ್ತೊ ಸಾಗರಂ ತಳರ್ದುದೊ ಮೇರೆಯಿಂದಂ. . .ಎನಲ್ ವಿಘೂರ್ಣಿಸಿದುರ್ದಿಬಲ ದೊಳ್ ಸಮರಾನಕಸ್ವನಂ (ಕಂರಾಪು. ೦೩-೩೫); ಕುಳಿಕಕ್ ಕರ್ಗಿದ ನಾಸಿಕಂ . . .ಪಿಳಿಗಿರ್ದಂಭ್ರುತಲಂ ಕೊರಂಟುದಲೆ ಕೊಕ್ಕೋಡಿರ್ದ ಗೋಣಿನ್ನನೋಳ್ ಕಟಿಯಿಂ ಪಾಪಮನರ್ಚಿಸಿರ್ದಬಲೆಯುಕ್ಕುಂ ಮಿಕ್ಕುಳೀನಕ್ಕುಮೇ(ಪುಷ್ಪಾಶಿ ೩-೦೫೩). **ಹಿಗ್ಗು**$_1$: ೧. ತಗ್ಗಿದುದು ದಿಗ್ದಂತಿ ಭೋಗಿರಾಜನ ಕೊರಲ್ಸುಗ್ಗಿದುದು ಧರಣಿತಲಮಿಟ್ಟಾಗವಾಗಿ ಸಲೆ ಹಿಗ್ಗಿದುದು ಪೋಗೆನಲ್ಪೊಯ್ದನುರುಗದೆಯಿಂದ ಪರಸೈನ್ಯ ಮಂ ಭೀಮಂ (ಕೈಮಿಭಾ. ೬-೪೬). ೨. ಬಾಗುತೆ ಬಲಿಯುತ ಪೊಳೆದಿನಿದಾಗುತೆ ದಳವೇಱುತಿಡಿದಿಡಿದು ಹಿಗ್ಗುತೆ ಪಣ್ಣಾಗುತೆ ಕಾಯ್ಗಳ್ ಪೊಱಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಿರಿಶ. ೨-೩೦); ಕೊರಳ ಸೆರೆ ಹಿಗ್ಗಿದವು ಕಂಬನಿದುಱುಗಿದವು . . . ಆಕಸ್ಮಿಕದ ಭಯವಾಯ್ತು ಪಾರ್ಥಂಗೆ (ಕುಮಾವ್ಯಾ. ೮-೬); ಹೃದಯ ಹಿಗ್ಗಿಕೊಂಡು, ರೋಗ ಪ್ರಬಲವಾದರೆ ಹೃತ್ಕ್ರಿಯೆ ನಿಂತು ಹೋಗುತ್ತದೆ (ಗೃವೈ. ೩೪). ೩. ಅಯ್ಯ ನೀ ನೋಡಿದರೆ ನೋಡು ನೋಡದಿದ್ದರೆ ಮಾಣು ನಾ ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾಱೆನಯ್ಯ (ಪುಶಾದೇ. ೬.೩೯-೯೩); ಭೀಮಸೇನನ ವಿಕಟಸಿಂಹಧ್ವನಿಯನಾಲಿಸಿ ಹಿಗ್ಗಿದನು ಪಾರ್ಥ (ಕುವ್ಯಾದ್ರೋ. ೦೩-೦೬); ಹಿಗ್ಗುವೆ ಯಾಕೋ ಈ ದೇಹಕ್ಕೆ ಹಿಗ್ಗುವೆ ಯಾಕೋ . . . ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ (ಪುರಂದ. ೦-೦೨೨ ಕಲ್ಯಾ). **ಪಿಳಗು**: ೧. ಬಲಿತ ತೆಂಗಿನಕಾಯಿ ಬಿಸಿಲಿನ ಝಳಕ್ಕೆ ಹಿಳಗಿದೆ (ರೂಢಿ). **ಹಿಳ್ಗು**$_1$: ಹೋ. ಹೃಷ್ಯತಿ=ಹಿಗ್ಗಿದವಂ; ಹೃಷ್ಟಃ, ಹೃಷ್ಟವಾನ್, ಹರ್ಷಕಃ, ಹರ್ಷಾಪ್, ಹರ್ಷನ್—ಈ ೫ ಹಿಗ್ಗಿದಂ (ಶಾಕಕ್ಕ. ೦೯೫).

ಹಿಗ್ಗಿ ನುಗ್ಗೆಕಾಯಿಯಾಗು = (ಅಲಂ) ಅತಿಶಯವಾಗಿ ಆನಂದಿಸು; ಆನಂದದಿಂದ ಉಬ್ಬು: ಸಣ್ಣದುರುಗಪ್ಪನು ಹಿಗ್ಗಿ ನುಗ್ಗೆಕಾಯಿಯಾದ (ಕಂದಜೀ. ೦೦೮). ಹಿಗ್ಗಿ **ಹತ್ತಾಗು** = ಹಿಗ್ಗಿ ನುಗ್ಗೆಕಾಯಿಯಾಗಂ: ಈ ಇಬ್ಬರು ಸ್ನೇಹಜೀವಿಗಳ ನಡುವಿನ ಅದೇ ಆ ಹಳೆಯ ನಗೆಯಾಟ ನಡೆದಾಗ ನನ್ನ ಹೃದಯ ಹಿಗ್ಗಿ ಹತ್ತಾಗುತ್ತದೆ (ಇಪ್ಪಳ. ೩೬); ಭೂಪತಿಯು ಹಿಗ್ಗಿ ಹತ್ತಾಗಿ, ತನ್ನ ಉತ್ತರೀಯದ ಮುಸುಕಿನಿಂದ ತನ್ನ ಸ್ವಂತರಚನೆಯ ಪುಸ್ತಕ ಹೊರದೆಗೆದು ... ಎಂದನು (ಇಪ್ಪಳ. ೨೮೮). ಹಿಗ್ಗಿ ಹೀರೇಕಾಯಾಗು, ಹಿಗ್ಗಿ ಹೀರೇಕಾಯಿ ಆಗು, ಹಿಗ್ಗಿ ಹೀರೇಕಾಯಿಯಾಗು = ಹಿಗ್ಗಿ ನುಗ್ಗೆಕಾಯಿಯಾಗಂ: ಪೋರ್ಚುಗೀಸ್ ರಾಜ ತನಗೆ ಬಂದ ವರದಿಗಳಿಂದ ಹಿಗ್ಗಿ ಹೀರೇಕಾಯಾದ(ಕೃವಾಇ.II, ೨೦೦); ನೆಕ್ಕಲ ದೋಪನ ಎದೆ ಹಿಗ್ಗಿ ಹೀರೇಕಾಯಿ ಆಯಿತು (ಪುಶಸ. ೩೦೦); ಕಾಮಾಕ್ಷಮ್ಮನ ಮುಖ 'ಹಿಗ್ಗಿ ಹೀರೇಕಾಯಿ' ಯಾಯಿತು (ಶಂರಜಿ. ೩೮). ಹಿಗ್ಗಿ **ಹೆಬ್ಬಾಗಿಲಾಗು** = (ಅಲಂ) ಅತಿಶಯವಾಗಿ ಆನಂದಿಸಂ; ಆನಂದದಿಂದ ಉಬ್ಬು: ದ್ಯಾವೇಗೌಡರು ಚಿನ್ನಪ್ಪಗೌಡರ ಮಾತನ್ನು ನಂಬಿ ಹಿಗ್ಗಿ ಹೆಬ್ಬಾಗಿಲಾಗಿದ್ದರು (ಕಂಹಕಂ. ೩೪).

[< ಪಿಳ್$_2$ ]

**ಪಿಳ್ಳೋಟೆ** (ನಾ). ಸಣ್ಣ ಕೋಟೆ; ಕಿರಿದಾದ ದುರ್ಗ: ರಕ್ಕಸರೊಳ ಪೊಗದಂತೆ ಪಿಳ್ಳೋಟೆಗೆ ಉಕ್ಕಿನ ತನೆ ಪೆಟಲಂಬು ಸಿಕ್ಕಿನ ಕತ್ತರಿ ದೆಸೆಗೆ ಕುಸಿಯ ಶೂಲ ಸೊಕ್ಕಿದರಿಯ ಗೆಲ್ವ ತೆರದಿ (ಶ್ರೀಂರಕಾ. ೩-೩೯).

[ < ಪಿಳ್ಳೆ + ಕೋಟೆ$_1$ ( < ಕೋಂಟೆ ) ]

**ಪಿಳ್ಜುಟ್ಟು, ಪಿಳ್ಳೆಂಜುಟ್ಟು, ಪಿಳ್ಳೆಜುಟ್ಟು** (ನಾ). (ಗಂಡಸರು) ತಲೆಯ ಹಿಂದೆ ಮೇಲ್ಭಾಗದಲ್ಲಿ ಬಿಡುವ ಸಣ್ಣ ಜುಟ್ಟು: ಅವರ ಪಿಳ್ಜುಟ್ಟು ಗಾಳಿಗೆ ಹಾರಾಡುತ್ತಿದೆ (ರೂಢಿ). **ಪಿಳ್ಳೆಂಜುಟ್ಟು**: ವಿಶಾಲವಾದ ಹಣೆ, ಮುಖದ ಅಂದವಾದ ನಿಲುವಿಗೆ ಒಪ್ಪುತ್ತಿದ್ದ ಪಿಳ್ಳೆಂಜುಟ್ಟು (ಅಕಕಂ. ೦೨೮). **ಪಿಳ್ಳೆಜುಟ್ಟು**: ತಬಲಾ ಬಾರಿಸುವವನ ಪಿಳ್ಳೆಜುಟ್ಟು ಹೇಗೆ ಹಾರಾಡುತ್ತಿದೆ ಎಂಬುದನ್ನು ನೋಡಲು ಬಂದಿದ್ದಾರೆ (ಶಾಂಗೀ. ೦೩೬); ವಜ್ರಮುಷ್ಟಿಗಳ ಮೊನೆಯಿಂದ ಪಿಳ್ಳೆಜುಟ್ಟುಗಳು ಕುಣಿದಾಡುವ ಬೋಳುತಲೆಗಳ ಮೇಲೆ ಹೊಡೆದು (ಕರ್ಣಾಟು. IV. ೨).

[< ಪಿಳ್ಳೆ + ಜುಟ್ಟು]

**ಪಿಳ್ಳಿಳನೆ, ಪಿಳಪಿಳನೆ** (ಅ). (ಆಶ್ಚರ್ಯ ಅಥವಾ ಅಸಹಾಯಕತೆಗಳಿಂದ) ಕಣ್ಣನ್ನು ಪಿಳಕಿಸುತ್ತ; ಒಂದೇ ಸಮನೆ ರೆಪ್ಪೆಯನ್ನು ಬಡಿಯುತ್ತ: ಜನರು ಪಿಳ್ಳಿಳನೆ ನೋಡುತ್ತಿರುವರು (ಕುಂಗಿಳ. ೦೩೬). **ಪಿಳಪಿಳನೆ**: ಕ್ಷಣಕಾಲ ಆಕೆ ಪಿಳಪಿಳನೆ ನನ್ನನ್ನೇ ನೋಡುತ್ತಿದ್ದುಬಿಟ್ಟಳು (ಶರಣ. ೦೯೬). [< ಪಿಳಿಪಿಳಿ + — ಅನೆ$_1$]

**ಪಿಳ್ಳಂಗೋವಿ** (ನಾ). ಒಂದು ಬಗೆಯ ಚಿಕ್ಕ ಊದುವ ವಾದ್ಯ; ಕೊಳಲು: ಪಿಳ್ಳಂಗೋವಿಯ ಚೆಲ್ವ ಕೃಷ್ಣನ ಎಲ್ಲಿ ನೋಡಿದಿರಿ (ಪುರಂದ. ೦-೦೩೬ ಕಲ್ಯಾ); ಗೊಲ್ಲನ ಪಿಳ್ಳಂಗೋವಿಯಿಂದ ಆರಂಭವಾದ ಪುಟ್ಟಪ್ಪನವರ ಕವಿತಾವಿಲಾಸ . . . 'ಸೋವಿಯಟ್ ರಶಿಯಾ'ದ ವರೆಗೂ ಕೈ ಚಾಚಿದೆ (ಶಾಸವು. ೬೭); ಕೊಳಲಿಗೆ ಪಿಳ್ಳಂಗೋವಿಯೆಂದೂ ಹೆಸರು (ಸಂಗೀತಂ. ೦೦೬).
[< ಪಿಳ್ಳೆ+ಕೋವಿ$_1$. / ತಮಿ. ಪಿಳ್ಳಾಂಕುಟಲ್; ತೆಲು. ಪಿಲ್ಲಂಗ್ರೋವಿ. ಪಿಲ್ಲಗ್ರೋವಿ, ಪಿಲ್ಲನಗ್ರೋವಿ]

**ಪಿಳ್ಳೆಂಜುಟ್ಟು** 'ಪಿಳ್ಜುಟ್ಟು' ನೋ.

**ಪಿಳ್ಳಗುಸೆ** (ನಾ). ಕೋಟೆಯ ದೊಡ್ಡ ಬಾಗಿಲಿನಲ್ಲಿರುವ ಚಿಕ್ಕ ಬಾಗಿಲು: ಸಮಸ್ತಕಾರ್ಯಕುಶಲರಿಂ ಕೋಟೆ . . . ಪಿಳ್ಳಗುಸೆ ದಿಡ್ಡಿಮೊಳೆಗದಂಗಳ್ ನಿರ್ಮಿತಮಾಗಲು (ಹಾಲಾಸ್ಯ. ೦-೪-೬೫ ವ). [ಪಿಳ್ಳೆ + ಅಗುಸೆ]

**ಪಿಳ್ಳಯ** (ನಾ). ಒಬ್ಬಾತನ ಹೆಸರಂ: ಜೂಮಾಡಿಯ ತಳಾಱು ವಿಣ್ಣ ಪೋದಿಯ ಪಿಳ್ಳಯ (ಎಕ. X. ಗೌರಿಬಿ. ೬೩-೪; ಸು. ೯೦೦).

[ಪಿಳ್ಳೆ + ಅಯ$_1$ (< ಅಯ್ಯ$_1$) ]

**ಪಿಳ್ಳಾರಿ** (ನಾ). ೧. ಚಿಕ್ಕದು; ಸಣ್ಣದಂ. ೨. ಗಣೇಶ; ಬೆನಕ: 'ಪಿಳ್ಳಾರಿಗೀತ' ಪರಾ.

ಪಿಳ್ಳಾರಿ ಜುಟ್ಟು = ಪಿಳ್ಜುಟ್ಟು: ಅವನ ಪಿಳ್ಳಾರಿ ಜುಟ್ಟನ್ನು ನೋಡಿ ಮಕ್ಕಳು ಗೇಲಿ ಮಾಡಿದರು (ರೂಢಿ).

[<ಪಿಳ್ಳೆ./ ತಮಿ. ಪಿಳ್ಳೈಯಾರ್; ಮಲ. ಪಿಳ್ಳಯಾರ್; ತುಳು. ಪಿಳ್ಳಾರಿ; ತೆಲು. ಪಿಲ್ಲಾರಿ]

**ಪಿಳ್ಳಾರಿಗೀತ** (ನಾ). ಕರ್ನಾಟಕಸಂಗೀತದಲ್ಲಿ ಪುರಂದರದಾಸರು ರಚಿಸಿದ (ಗಣಪತಿಯನ್ನು ಕುರಿತ) ಚಿಕ್ಕ ಗೀತೆ: ಪುರಂದರದಾಸರು ಸಂಗೀತಾಭ್ಯಾಸಕ್ರಮ ವ್ಯವಸ್ಥೆಗೊಳಿಸಿ, 'ಪಿಳ್ಳಾರಿಗೀತಗಳು' ಎಂಬ ಅಭಿಧಾನದಿಂದ ಕೆಲವಾರು ಗೀತಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ (ಸಂಗೀತಂ.೬೦); ಕರ್ನಾಟಕಸಂಗೀತಸಂಪ್ರದಾಯಕ್ಕೆ ಪಿಳ್ಳಾರಿಗೀತೆಗಳನ್ನು ಮಾತ್ರವಲ್ಲ ಪುರಂದರದಾಸನು ಸಾವಿರಾರು ರಸಾನುಗುಣವಾದ ತಾಲಭೇದವುಳ್ಳ ಪ್ರಬಂಧಗಳನ್ನು ಒದಗಿಸಿಕೊಟ್ಟನು (ಕಸಾಶ. ೨೯೮). [ಪಿಳ್ಳಾರಿ + ಗೀತ]

**ಪಿಳ್ಳಾರಿಗೀತೆ** (ನಾ). = ಪಿಳ್ಳಾರಿಗೀತ: ಕರ್ನಾಟಕಸಂಗೀತ ಒಂದು ವೈಶಿಷ್ಟ್ಯಪೂರ್ಣವಾದ ರೂಪ. ಇದರಲ್ಲಿ ಪ್ರಮುಖವಾಗಿ ಕೀರ್ತನೆಗಳು, ಉಗಾಭೋಗ, ಸುಳಾದಿ, ಪಿಳ್ಳಾರಿಗೀತೆಗಳು ಎಂದು ನಾಲ್ಕು ರೂಪಗಳು ಕಾಣಿಸುತ್ತವೆ (ಹೀಪುಕೂ. ೦೦೪); ದಾಸರ ಗೀತೆಗಳಲ್ಲಿ ಪಿಳ್ಳಾರಿಗೀತೆ ಮೊದಲಾದ ಕೆಲವು ಗೀತೆಗಳು ಮಾತ್ರವಲ್ಲದೆ ತಾನವರ್ಣಗಳಾಗಲೀ ದಾಸರ ತಿಲ್ಲಾನಗಳಾಗಲೀ ಈಗ ಉಪಲಬ್ಧವಿಲ್ಲ (ಕಶಂ. ೨೩೦). [ ಪಿಳ್ಳಾರಿ + ಗೀತೆ ]

**ಪಿಳ್ಳೆಮಯ್ಯ** (ನಾ). ಒಬ್ಬಾತನ ಹೆಸರಂ: ಆ ವಿಭುಗಾತ್ಮಜಂ ನೆಱೆಯೆ ಪುಟ್ಟದೆ ಪುಟ್ಟಿದ ಪಿಳ್ಳೆಮಯ್ಯಂ (ಎಕ. XI. ಚಳ್ಳಕೆರು. ೬೪-೩; ೯೮೮).

[ < ಪಿಳ್ಳೆ + ಅಮ (< ಅಮ್ಮ$_1$ ) + ಅಯ್ಯ$_1$ ]

**ಪಿಳ್ಳು** 'ಪಿಳ್ಳೆ' ನೋ.

**ಪಿಳ್ಳುಜುಟ್ಟು** 'ಪಿಳ್ಳುಟ್ಟು' ನೋ.

**ಪಿಳ್ಳೆ, ಪಿಳ್ಳು, ಹಿಳ್ಳು, ಹಿಳ್ಳೆ₁** (ನಾ). ೧. ಚಿಕ್ಕದಾಗಿರುವಂತಹದು; ಸಣ್ಣದು: (*). ೨. (ಯಾವುದಾದರೂ ಪ್ರಾಣಿಯ) ಮರಿ; ಶಾಬ; ಪೋತ: ಕರಮೋಟ್ಟೆಯುಳ್ಳ ಪಿಳ್ಳೆಗಳೆರಡುಮನೋಲಗಿ ಸುವಂ ನೃಪಂಗಲ್ಲಿಯ ಮಾದರನಿತ್ತ ಚಂಡಕರ್ಮಂಗರಸನವಂಗೆ ನೋಡಿ ಸಲಹು ನೀನೆಂದಿತ್ತಂ (ಯಶೋಚ. ೩-೭೭); ನೀಡುಂ ನೀಡದ ಪಕ್ಕಿಯು ಮೆನ್ನಂ ಬಂಜೆಯೆನುತೀಡಿಪಂತಿರೆನ್ನಿದಿರೊಳ್ ಪಿಳ್ಳೆಯಂ ಮುದ್ದುಗೆಯ್ದುಂ (ರಾಜಶೇ. ೦೪-೬); ಕಳ್ಳನಿಗೆ ಒಂದು ಪಿಳ್ಳೆ ನೆವ (ಗಾದೆ). ೩. ಕೂಸು; ಮಗಂ; ಶಿಶು: ಜವನೊಳ್ ಸೆಣಸಿಲ್ಲದ ಪೋಗಿ ತಾಗಿ ತಂದಂ ಗಡ ವಿಶ್ರುವಾರ್ಜುನನೆ ಪಾರ್ವರ ಪಿಳ್ಳೆಯು ಪೋದ ಜೀವವಂ (ಶಂಕಪು. ೬-೨); ಪರಿದಿಂದಂತಕನೊಳ್ ಪಾರ್ವರ ಪಿಳ್ಳೆಯ ಪೋದ ಜೀವವಂ ತಂದಂ (ಗದಾಯು. ೨-೩೫); ನೀವು ಬೇಕಿದ್ದರೆ ಹೋಗಿ ಬನ್ನಿ . . . ಈ ಪಿಳ್ಳೆಗಳನ್ನು ಕಟ್ಟಿಕೊಂಡು ನಾನು ಎಲ್ಲಿಗೂ ಹೊರಡುವುದಿಲ್ಲ (ದೇವಹಂ ೨೫೩). ೪. ಗಣಪತಿ; ವಿನಾಯಕ: ಇಂದುಮವಳಿಯ ಹಿರಿಯ ಪುತ್ರನಾ ವಿಘ್ನೇಶ್ವರಂ ಗಜಾನನ ಸದ್ಗುಣಿ ಸೌಂದರ್ಯನಿಧಿಯಾತನಂ ಭಜಿಸಿ ಸುತನನಾನಂದದಿಂ ಪಡೆಯುವೇಳ್ಕೆನುತ ದಂಪತಿಗಳುಚಿ ಬಂದರಶಿವೈಭವದೆ ಬಂದು ವಿಪ್ರರು ಸಹಿತಲಾ ಪಿಳ್ಳೆಯರ ಭವನಕೆ (ಶೀಕೃತ. ೩-೦೫-೮). ೫. ಭೈರವ: (*). ೬. ತೋಟಗಳಲ್ಲಿ ನೀರು ಹರಿಯಲು ಅನುಕೂಲವಾಗುವಂತೆ ತೋಡಿರುವ ಸಣ್ಣ ನಾಲೆ: ಪಿಳ್ಳೆ ದಾಟುವಾಗ ಜೋಪಾನ, ತುಂಬ ಜಾರುತ್ತದೆ (ಕೂಡು). **ಪಿಳ್ಳು**: ೨. ಬಲೆಯಿಂ ತಪ್ಪಿದ ಮೊಲದಂತೆಯುಂ ಬಾಲಂ ಪಱಿದ ಪಿಳ್ಳಿನಂತೆಯುಂ . . . ಪಿಂದಿರುಗಿ ನೋಡದೆ ಓಡಿ ತನ್ನ ಬೀಡಂ ಸಾರ್ದಂ (ಜಗನ್ನ. ೫೯-೬). (ಗು). ೭. ಚಿಕ್ಕದಾದ; ಸಣ್ಣ: 'ಪಿಳ್ಳುಜುಟ್ಟು' ಪರಾ. **ಹಿಳ್ಳು**: ೨. ಹದ್ದಿನ ಬರವ ಕಾಣುತ ಕೋಳಿಗಳ ಹಿಳ್ಳೆದ್ದೋಡುವಂತೆ [ಪಾಠಾಂ. ಕುಕ್ಕುಟಸರ್ಪಯೆದ್ದೋಡುವಂತೆ] ಭೂಭುಜರು ಬಿದ್ದ ಬಂಗಾರವ ಬಿಟ್ಟು ತೆರಳಿದರು (ರಾಮಚ. ೬-೦೭೬) ೮. ಒಂದು ಬಗೆಯ ಆಟ; ಚಿಣ್ಣಿಕೋಲಾಟ: ಗೋಪನಂದನರನು ಕೂಡಿ ಹಿಡಿಗವಡಿಕೆ ಹಿಳ್ಳು ಲಗ್ಗೆ ಸಡುಗುಡು ಮೊದಲಾದ ಮಕ್ಕಳಾಟವ ಕಡುಸಡಗರದಿಂದಾಡುತಿಹನು (ಪೇಮಸಂ. ೦೫-೦೦೭) **ಹಿಳ್ಳೆ₁**: ೨. ಒಂದು ಹಸ್ತದೊಳು ಮುಷ್ಟಿಗನ ಹಿಡಿದು ಮತ್ತೊಂದು ಕೈಯೊಳು ಮೊತ್ತಮೊದಲು ಅಂದದಿ ಹಿಡಿದ ಕೇಸರಿಯು ಹಿಳ್ಳೆಯ ಹೊಡೆ ವಂದದಿ ಹೊಡೆದಿಡಲಾಗ (ಪೇಮಸಂ. ೦೬-೦೩೦); ಗುಹೆವುಗುವ ಸಿಂಗ . . . ಹಸಿದು ಬಾಯಂ ಬಿಡುವ ಹಿಳ್ಳೆಗಳ ಬಳಿಗೆ ಹಾಱುವ ಸಾಳುವ . . . ತದ್ವನಾಂತದೊಳ್ ಸೊಗಯಿಸಿದುವು (ಸಮ್ಯಕ್ತ್ವ. ೦೦-೨೫).; ತಗರ ಪೊಯ್ಸಾಟ ಹಿಳ್ಳೆಗಳೋಟ ಸಿಪಿಲೆಗಚ್ಚುಗಳ ಸರಸಾಟ ಜಾಣಾಂಕಿಗಳ ಕೋಳಿಗಳೆಗ (ಲಕ್ಷ್ಮೀಶ. ೨೮-೫). ೯. ಮಕ್ಕಳು ಆಟಕ್ಕೆ ಬಳಸುವ ಮರದ ಸಣ್ಣ ತುಂಡು; ಚಿಣ್ಣ: ನಿಮ್ಮ ಧನುರ್ವಿದ್ಯಾಕೌಶಲವು ಈ ಭಾವಿಯಲ್ಲಿ ಬಿದ್ದಿರುವ ಹಿಳ್ಳೆಯನ್ನೂ ಉಂಗುರವನ್ನೂ ಎತ್ತದೆ ಇರುವುದರಿಂದ ವ್ಯರ್ಥವಾಗಿ ತೋರುತ್ತಲಿದೆ (ಕೃಪಾಅ. ೨೯೩).

ಪಿಳ್ಳನೆ = ಚಿಕ್ಕದಾದ; ಪುಟ್ಟ; ಸಣ್ಣ: ಟೋಪಿ ಪೇಟವ ತೊರೆದು ಪಿಳ್ಳನೆ ಜುಟ್ಟ ತೋರುವ ಊರೊಳು (ಗಕೇಶ. ೭೨-೬). **ಪಿಳ್ಳೆ ಪೆಸರಿಲ್ಲದಂತು** = ಹೆಸರು ಹೇಳಲು ಒಂದು ಮಗುವೂ ಉಳಿಯದಂತೆ; ನಿರ್ವಂಶವಾಗುವಂತೆ: ಮುನ್ನಂ ಪರಶುರಾಮನೀ ಕೆಲದೊಳುಳ್ಳರಸುಮಕ್ಕಳೆಲ್ಲರುಮನಿರ್ಪತ್ತೊಂದು ಸೂಳ್ವರೆಗಂ ಪಿಳ್ಳೆ ಪೆಸರಿಲ್ಲದಂತು ಕೊಂದು (ಗದಾಯು. ೬-೨೮ ವ). **ಪಿಳ್ಳೆ ಪೆಸರಿಲ್ಲಾಗು**=ಹೆಸರು ಹೇಳಲು ಒಂದು ಮಗುವೂ ಉಳಿಯದಾಗು; ನಿರ್ವಂಶವಾಗು: ಪಿಳ್ಳೆ ಪೆಸರಿಲ್ಲಾಯ್ತು ಕೌರವಕುಲಶ್ರೀ! (ಅಭ್ಯರ್ಥಾ. ೩೪-೬೫೫).

[ದೇ.॥ ತಮಿ. ಪಿಳ್ಳೈ; ಮಲ. ಪಿಳ್ಳ; ತುಳು. ಪಿಳ್ಳೆ; ತೆಲು. ಕೋಲಾ. ನಾಯ್ಕಿ. ಪಿಲ್ಲ; ಗೊಂಡಿ. ಪಿಲಾ; ಕುರುಖ್. ಪೆಲ್ಲೋ; ಬ್ರಾಹುಈ. ಪಿಲ್ಲೋಟ; ಪರ್ಜಿ. ಪಿಲ್ಲಕ, ಪಿಲ್ಲಿಕ]

**ಪಿಳ್ಳೆಕಾಲು, ಹಿಳ್ಳೆಗಾಲ್, ಹಿಳ್ಳೆಗಾಲಂ** (ನಾ). ೧. ಮನೆಯ ಮೇಲ್ಛಾವಣಿಗೆ ಆಧಾರವಾಗಿ ಕೊಡುವ ತೊಲೆಯ ಮೇಲ್ಭಾಗದ ಸಣ್ಣ ಕಂಭ: ಈ ಭಾವಣಿಗೆ ನಾಲ್ಕು ಪಿಳ್ಳೆಕಾಲು ಕೊಡಬೇಕು (ಕೂಡು). **ಹಿಳ್ಳೆಗಾಲ್**: ೨. ಸಣ್ಣಗಿರುವ ಕಾಲಂ; ಬಡಕಲಾದ ಕಾಲು: 'ಹಿಳ್ಳೆಗಾಲ' ಪರಾ. **ಹಿಳ್ಳೆಗಾಲು**: ೨. ಬತ್ತಿದ ಬಡ ಪೊಟ್ಟೆವಾಲ ಬಲ್ಸೆರೆ ಸುತ್ತಿ ಹತ್ತಿದ ಹಿಳ್ಳೆಗಾಲುಗಳ . . . ನಳ್ಳಿಮಾರಿಗನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ಪೇಮಸಂ. ೬-೦೦೪).

[ಪಿಳ್ಳೆ+ಕಾಲು₁ (<ಕಾಲ್₁)]

**ಪಿಟ್, ಪಿರ್₂** (ನಾ). (ಹೆಣದ) ಬಾಡಂ; ಮಾಂಸ: ಪೊಯ್ದಾಡಿ ಮಡಿದ ಕಲಿಗಳ ಶರೀರಂಗಳಂ ಪೊಯ್ದೆಳೆದು ಪಿಟ್‌ತಿಂಬ ಮರುಳ್ಗಳಂ . . . ಕಾಣುತೆ (ಕೃಷ್ಣಚ. ೮-೩೩). **ಪಿರ್₂**: 'ಪಿರಿತಿನಿ' ಪರಾ.

△ **ಪಿಟ್‌ಚು** 'ಪಿರಿಚು' ನೋ.

**ಪಿಟ್‌ತಿನಿ, ಪಿರಿತಿನಿ** (ನಾ). (ಹೆಣದ ಮಾಂಸವನ್ನು ತಿನ್ನುವ) ಮರುಳಂ; ದೆವ್ವ: "ಪಿಟ್‌ತಿನಿಯೆಂದು ಮರುಳ್" (ಶಬ್ದಮ. ೬೫-೧೩೦); ಪಸಿದ ಪುಲ್ಮರುಳ್ ಪಿಟ್‌ತಿನಿಗಳ್ ಬೇಯುತ್ತುಮಿರ್ದ ಪೆಣನಂ ನಾಯುಗಿವಂತುಗಿದು ತಿಂದುಪೋರೊಂದೆಡೆಯೊಳ್ (ಕಾವ್ಯಸಾ. ೫೩೬ ಟಿಪ್ಪಣಿ); ಎಲೆ ಪಿಟ್‌ತಿನಿ ಪೋ ಮುಟ್ಟದೆ ತೊಲಗು (ಶಂಕಪು. ೮-೯೩); ನೀಂ ಪಿಟ್‌ತಿನಿಯಂ ಪಾಂಗಿನಿಂ ಎಲ್ಲವಂ ತಿಂದು ಸಾವುದೆಂದು ಬೈದಂ (ರಾಜಶೇ. ೬೫-೮). **ಪಿರಿತಿನಿ**: "ಪಿರಿತಿನಿಯೆನಲ್ ಪಿಶಾಚಿಯ ನಾಮಮಕ್ಕು" (ಕಕಕ. ೬೬); ಪಿರಿತಿನಿ ಖಗಪಕ್ಷವೀಜಿತಂಗಳನಾಗಳ್ ಪರಚಂದನವಾರಿಗಳಿಂ ಸುರುಚಿರ ಸುರವೃಕ್ಷವಲ್ಕವೀಜಿತದೇಹರ್ . . . ಸುಂದರಿಯರ್ ತೋರಿಸೆ ಬೆರಳಿಂದಂ ಕಂಡರ್ ಸ್ವದೇಹಮಂ ಕೊಳುಗುಳದೊಳ್ (ಧನ್ಯಕೋ. ೦೮೪); ಪಿರಿತಿನಿಯು ನಾಲಗೆಗೆಲ್ಲಿ ಕೊನೆಗಂಡ ಮಚ್ಚು (ಕಾಲೂರ. ೦೪೫-೪೨೦).

ಪಿಟ್‌ತಿನಿಯಾಳ್ಮ, ಪಿರಿತಿನಿಯಾಣ್ಮ, ಪಿಟ್‌ತಿನಿಯಾಣ್ಮ=೧. ಮರುಳುಗಳ ಒಡೆಯ; ಶಿವ: "ಗನಹ ಮಾದೇವ ಕಣ್ಣಡಿಯ ಕಟ್‌ಗೊರಲ ಪಿಟ್‌ತಿನಿಯಾಳ್ಮ [ಪಾಠಾಂ. ಣ್ಮ]ದಪ್ಪಕವಗೆಯ . . . ಎಂದೆಂಬಿವೀಶ್ವರನ ನಾಮಂ" (ಕಬ್ಬಿಗ. ೪); ಪಿರಿತಿನಿಯಾಣ್ಮನೆಂದರೆ ಚಂದ್ರಶೇಖರನಾದ ಚಂದ್ರನುಳ್ಳ ಈಶ್ವರನೆಂದು ಇರಬೇಕು (ಶಾಹಿಸಂ. ೦೯೨); "ಪಿಟ್‌ತಿನಿಯಾಣ್ಮ . . . ಬೆಳ್ಪಡಿಯುನೆನೆ ಶಿವಗೆ ಪೆಸರ್" (ಕಬ್ಬಿಗ. ೩). ೨. ಗಣಪತಿ; ವಿನಾಯಕ: "ಪಿರಿತಿನಿಯಾಣ್ಮನೆಂದೆನಲದುಂ ಗಜಾನನಗೆ ಪೆಸರಕ್ಕು" (ಕಕಕ. ೬೩). ಪಿಟ್‌ತಿನಿಯೊಡೆಯ=ಪಿಟ್‌ತಿನಿಯಾಳ್ಮ ೧: ಕೊಟಿತೆಗಳನಿಂತು ತಾಳ್ದಚ್ಯುತನಡಿಯ ನೀರ ಪಿಟ್‌ತಿನಿಯೊಡೆಯನೇ ಪರಿಯೊಳು ಧರಿಸುವನೆ ತಾಂ (ಸಿದ್ಧೇಶ್ವ. ೬-೬೫). [ಪಿಟ್+—ತಿನ್₂]

△ **ಪಿಟುಚು** 'ಪಿರಿಚು' ನೋ.

**ಪಿಟಿ, ಪಿಳಿ₁, ಹಿಳಿ₁, ಹಿಟಿ** (ಕ್ರಿ). ೧. ಹಿಸುಕಿ ರಸವನ್ನು ತೆಗೆ; ಹಿಂಡು: ಎಳ್ಳ ಗಾಣಂಗಳೊಳಿಟ್ಟೆಯುಮ್ಮನಿರ್ದರ್ ಖಾಣಿಯರ್ಕಳಂ ಪಿಟಿ [ಪಾಠಾಂ. ರಿ]ದು ಕೊಂದಂ (ವಡ್ಡಾರಾ. ೦೬೯-೬); ಒಲ್ಲಣಿಗೆಯಂ ಪಿಟಿವಂತೆ ಪಿಂಡಿ ಪಿಟಿದ ಪಗೆಗೆ ರಥಚಕ್ರಮಂ ನುಂಗುವುದುಂ (ಶಂಕಪು. ೦೨-೨೦೬ ವ); ಮಾಮರನೆಳದಳಿರ ರಸಮಂ ಪಿಟಿದು ಕಳಕಂಠನ ಕಂಠನಾಳಕ್ಕೆಱಿದುಬ್ಬಸಮಂ ಕಳೆದು (ರಾಜಶೇ. ೦೬-೦೫). **ಪಿಳಿ₁**: ೧. ಕಿವಿಯುಗಿದುಂ ಪೈರಿಂದಱಿದು ಗಾಣದೊಳ್ ಪಿಳಿದು (ರಕ್ಷಕ. ೨-೪ ವ); ಬೆಳೆದ ಕಬ್ಬುಂಗಳವೆ ಪೊಲದಿಂ ಪಿಳಿದರೊಮ್ಮನೆ ರಸವೊಗುವ ಕಡು ಬೆಳೆದ ಕಬ್ಬಿನ ಕೆಯಿಗಳಂ

ಸೊಗಯಿಸುವುದಾ ವಿಷಯಂ (ಕಾವ್ಯಾ. ೧–೫೭). ೨. ಕರೆ ; ಸುರಿಸು; ವರ್ಷಿಸು : ಕೊಳದಂಬು ಬತ್ತೆ ಬುಯ್ಯೆಂದೊಳಗಣ ನಳಿನಾಳಿ ಒರಿಕುವರಿಗು ಮೆನುತ್ತಂ ಜಳಜಸಖಂ ಜಳಕಿರಣಾವಳಿಯಂ ಪಿಳಿದಂತೆವೋಲ್ ಮರೀಚಿಕೆ ಮೆಱೆಗುಂ (ರಾಜಶೇ. ೫–೩೮). ಹಿಳಿ$_1$. ೧. ಪರಸ್ತ್ರೀಗಳಂಟಿ ದವರ ಗಾಣದಲ್ಲಿಕ್ಕಿ ಪಿಳಿಯನೆ (ಬಸವ. ೫೭೭) ; ಬಿಸಿಲಂ ಹಿಳಿಯಲ್ ಬೆನ್ನೀರೊಸರ್ವಂತಿರ್ದುದು ಮರೀಚಿಕಾಜಲಮೆತ್ತಂ (ಗಂಶ. ೯–೧೮); ಕಳಿದ ಹಲಸಿನ ಹಣ್ಣ ತೊಳೆಗಳಂ ಸಲೆ ಕಿವುಚಿ ಹಿಳಿದ ರಸದಲ್ಲಿ ಮತ್ತಾ ತೊಳೆಯ ಹಾಕ್ಕಿ ಪರಿಮಳಿಸುವುದು (ಸೂಶಾ. ೫–೫೭). ೨. ಸಾಹಸ್ರಕೋಟಿಶುಭ್ರಾಂಶು ಗಳ ರುಚಿರಸಮನಾ ಹರಂ ಹಿಳಿದು ತನ್ನಯ ಕಳೆಯ ಕೂಡಿ ಕಣ್ಗಾ ಹಿನಿಂ ಘಟ್ಟಿಗೊಳಿಸಿದ ಪುಣ್ಯಘಟಿಕೆಯೋ . . . . ಎನಲ್ ಕೈಲಾಸಪರ್ವತಂ ರಾಮಣೀಯಕಮಾದುದು (ಕಬತ್ತಿ. ೨–೧೧). ೩. (ಅಲಂ) ನಾಶಪಡಿಸು ; ಧ್ವಂಸಮಾಡು ; ಹಾಳುಮಾಡು : ಧರಣಿಯನೊಕ್ಕಲಿಕ್ಕಿ ದಿಗಧೀಶರ ಗಂಟಲನೊತ್ತಿ ಮೆಟ್ಟಿ ಭೀಕರಫಣಿಲೋಕಮಂ ಹಿಳಿದು ನಾಕಮನೋಡಿಸಿ . . . ನೆಗಳ್ದನಕ್ರಮಕಾರಿ ಜಿತಾರಿ ತಾರಕಂ (ಗಂಶ. ೬–೫) ; ಎಲೆ ಕಕುತ್ಸ್ಥ ಡ ಕೇಳು ಲೋಕವ ಹಿಳಿವಳಿವಳಂದದಲಿ ಹಿಂದಣ ಬಲಿಯ ತಂಗಿ . . . ಕಡುಗಲಿಯೆ ಗೆಲಿದನು ಶಕ್ರನವಳನು (ತೊರವೆ. ೧–೧೧–೧೧); ಈ ಪರಿಯ ಲವನಖಿಳಪರವನು ತಾ ಪಡೆದು ಸಂತಸದಿ ಸದ್ವೀರ್ಯೋಪಲಾಲಿತನಾಗಿ ಸಕಲಾವನಿಗಳನು ಹಿಳಿಯೆ (ಕೋಗಯ. ೯–೨೦). ೪. ನಾಶವಾಗು ; ಹಾಳಾಗು : ಮಳೆಗೆ ಹೆಚ್ಚಿದ ಧೂಳಿನಬ್ಬರವಳಿವವೊಲು ವಿಜಯಾಸ್ತ್ರಹತಿ ಯಲಿ ಹಿಳಿವ ಕರಿನರತುರಗದೊಡಲರುಣಾಂಬುಧಾರೆಯಲಿ ಕಳಚಿತೀ ಕೆಂಧೂಳಿ (ಕುವ್ಯಾಕ. ೨೪–೬೮). ೫. ಹೋಗಲಾಡಿಸು; ನಿವಾರಿಸು: ತುಳಿದನಃ ಭವಂಗಳಂ ತೊಳದನು ತಮಂಗಳಂ ಹಿಳಿದ ಸಂಶಯಂಗಳಂ ತಳೆದ ಮೋಕ್ಷಂಗಳಂ (ಶೀಘ್ರಬೋ. ೦೨೬–೦೪). ೬. ಕೊಲ್ಲು ; ಸಂಹರಿಸು: ಮೊಲೆಯನುಂಬಂದೊಬ್ಬ ದನುಜೆಯ ಹಿಳಿದವೊದೆದವು ಶಕಟನನು (ಕುವ್ಯಾಉ. ೦–೩೭); ಅಳಿವೆನೋ ಹದಿನಾಲ್ಕುಲೋಕವ ಹಿಳಿವೆನೋ ಹರಿ ಯಜಭವಾದ್ಯರ . . . ಎನುತುರಿಗೊಳುಪ ಕಡುಗೋಪದಲಿ ಕಿಡಿಕಿಡಿ ಯೋದನಸುರೇಂದ್ರ (ತೊರವೆ. ೩–೭–೦೪). ೭. ಕುಗ್ಗು; ನಿಸ್ಸತ್ವಗೊಳ್ಳು: ಹಿಳಿದ ಛಲದ ವಿಡಾಯಿ ಧೈರ್ಯದ ತಳಿದ ಭೀತಿಗೆ ಕಾಲುವೊಳಿಯಾದಳಿ ಮನದ ಭೂಪಾಲನಿರವನು ಕಂಡನಾ ಪಾರ್ಥ (ಕುವ್ಯಾದ್ರೋ. ೧೪–೯). ಹಿಟಿ: ೧. "ಹಿಟಿ—ನಿರ್ಗುಪಕರಣೇ (ಹಿಂಡು), ದಲನಾರ್ಥೇ ('ಸೀಳು' ಎಂಬರ್ಥದಲ್ಲಿ) ಕುಳಂ" (ಕಧಾ) ; ತಮಾಲಪಾದಪದಪಲ್ಲವಮಂ ಹಿಟಿದೊಂದು ನಿರ್ಮಲೋಪಲತಲದಲ್ಲಿ ತದ್ರುಸದಿನಾಗಳೆ ನೋಡಿ ನಿಜೋತ್ತರೀಯವಲ್ಕಲವಸನ್ಯೇದೇಶಮನೆ ಸೀಳ್ದದಱೊಳ್ ಬರೆದಂ (ಕಾದಂಪೂ. ೬೯೭) ; ಕೂತಸಿಗಳಿಂದೆತ್ತಿ ಕುತ್ತುವುದುಂ ಪಿರಿಯ ಗಾಣಂ ಗೊಳಿಕ್ಕಿ ಹಿಟಿವುದುಂ . . . ಉಕ್ಕಿನ ಬಡಿಗೆಗಳಿಂ ಪೊಡೆಸೆಂಡನಾಡು ವುದುಂ (ಕಾಂಶೀಕ್ಕ. ೯–೧೧೧ ಪ).

ಪಿಟಿದು ಪಿಂಡಿಸು=ಕುಗ್ಗಿಸು ; ದುರ್ಬಲಗೊಳಿಸು : ಜರೆ ನಿಜ ಶಕ್ತಿಯಿಂ ಪಿಟಿದು ಪಿಂ[ಕಾಶಾಂ.ಹಿಂ]ಡಿಸದನ್ನೆಗಮಾತ್ಮ ದೇಹದೊಳ್ನರೆ ತೆರೆದೋಱದನ್ನೆಗಂ . . . ಅರ್ಚಿಪುದರ್ಥಿಯಿಂ ಜಿನೇಶ್ವರನಂ (ಸಮುಶ. ೧–೧೧೫). ಪಿಟಿದು ಪಿಂಡು, ಹಿಳಿದು ಹಿಂಡು=೧. ಅತಿಯಾಗಿ ಹಿಂಸಿಸು,– ನೋವುಂಟುಮಾಡು : ಈ ತೆಱದಿಂದಂ ನಿನ್ನಂ ಘಾತಿಸಿ ಬಿಡದಲೆದು ಪಿಟಿದು ಪಿಂಡಿದ ದುಃಖವ್ರಾತಮಿದು ಮಗಳೆ ನಿನ್ನ ಪುರಾತನದುಷ್ಕರ್ಮವಿಟಪಿಕಟುಕಫಲಂಗಳ್ (ಅಂಕ್ಕು. ೩–೩೮) ; ಬಲವನರಿ ಭಟ ಸುಳಿದು ತುಳಿದನು ಹಿಳಿದು ಹಿಂಡಿದನು (ಕೌಶಿರಾ. ೩೬–೦೭). ೨. ಬಲವಾಗಿ ಹಿಂಡು ; ಚೆನ್ನಾಗಿ ನುಲಿ; ಕಿರಿಚಿ ಹಿಂಡು: ಒಗೆದ ನಾದ ವೆಯ್ಬಿದವರ ಪಾಪ ಓಡಿಹೋಗಲೊಗೆದ ಏಕನಿಷ್ಠೆಯಿಂದ ಕಿರಿಹಿ ಮುರಿಹಿ ಹಿಳಿದು ಹಿಂಡಿ ಮತ್ತೆ ಏಕನಭವನೆಂಬ ದಿಟದ ಬಿಸಿಲೊಳೊಣಗಿಸುತ್ತೆ ಪಾಕ್ತೆ (ಶಿಚುಕೋ. ದೀ. ೨೩೩–೧೧) ; ತಳಿತ ತಲೆಯೋಡಿನೊಳು ಶೋಣಿತಜಲವ ಕಾಸಿದರಳೆಯ ಕರುಳನು ಹಿಳಿದು ಹಿಂಡಿದರು (ಕುವ್ಯಾಕ. ೫–೩೭). ಹಿಳಿದುಕೊಳ್=(ರಸವನ್ನು) ಹಿಂಡಿಕೊಳ್ಳು : ದೋಸೆವದದಿ ಸೊಗಯಿ ಸುವ ಸಕ್ಕರೆಗಳೆಳನೀರ ಕುಯಿದಿಳುಪಿ ತಣ್ಣಸವಾದ ಕಾಣದೋಳಗಿರಿಸಿ ಮಱುದಿನ ಮೊಗಳ ಕಳೆದು ನಿಂಬೆಯ ಹಣ್ಣಿನಾ ಹೊಸ ಹುಳಿಯು ಹಿಳಿದುಕೊಂಬುದು (ಸೂಶಾ. ೨–೩೦). [ದೇ.೫ ತಮಿ.ಮಲ. ಪಿಟ್]

**ಪಿಟಿನೀರು** (ನಾ). ಹಿಂಡಿದ ನೀರು : ವಿಂದೊಲ್ಲಣಿಗೆಯ ಪಿಟ್ [ಕಾಶಾಂ. ಹಿಟಿ] ನೀರಿಂದಂ ಕಾಲ್ಗಚ್ಚಿ ನೆಲದೊಳಿರ್ದಾ ಕೊಟಿನೀರಿಂದಂ ಪಾವರ ಮಡಗಂಟಿಂದಂ ಪಿತ್ತಶುಷ್ಕಿಯಕ್ಕುಮೆಂಬಪಾರ್ವರ್ (ಸಮುಶ. ೧೧–೦೨೭). [ಪಿಟ್ + ನೀರು$_1$ (<ನೀರ್)]

**ಪಿಟಿಯಿಸು, ಪಿಟಿಸು, ಹಿಳಿಸು** (ಕ್ರಿ). ಹಿಂಡುವಂತೆ ಮಾಡು ; ಹಿಂಡಿಸು : ಇಕ್ಷುಯಂತ್ರಂಗಳೊಳು ಕಡಿದು ಪಿಟಿಯಿಸಿಯುಂ (ಜಜಚ. ೩೦೭). ಪಿಟಿಸು : ದಿನಂತರಸಂತಪ್ರಕಣಾಕಾರಿಗಳಪ್ಪ ಇಕ್ಷುಯಂತ್ರದೊಳಿಕ್ಕಿ ಪಿಟಿಸುತ್ತುಂ (ಅಕ್ತು. ೧೧–೧೦ ಪ). ಹಿಳಿಸು : ಕೊಳಲಿನ ಸರಗಳು . . . ಹೃದಯದಲ್ಲಿ ನರ್ತಿಸುತ್ತಾ ಬಗೆಬಗೆಯ ರಸವನ್ನು ಹಿಳಿಸುತ್ತಿವೆ (ನೋಟ. vi ಮುನ್ನುಡಿ). [ ಪಿಟಿ + –ಇಸು$_3$ ]

**ಪಿಟಿಲ್, ಪಿಳಿಲ್** (ಕ್ರಿ). ಕೈಯಿಂದ ಬಿಡು,—ಎಸೆ : "ಬ(ಪಿ)ಟಿಲ್—ಹಸ್ತೋನ್ಮುಕ್ತೌ" (ಕಮಧಾ. ಮ). ಪಿಳಿಲ್ : "ಪಿಳಿಲ್—ಹಸ್ತೋನ್ಮುಕ್ತೌ (ಕೈಯಿಂದ ಬಿಡು)" (ಕಧಾ) P ಇಲ್ಲಿ ಶಬ್ದರೂಪ ನಿರ್ಧಾರವಿಲ್ಲದು ದರಿಂದ ಎರಡು ರೂಪಗಳನ್ನೂ ಸೂಚಿಸಿದೆ. [ ? ]

**ಪಿಟಿಸು** 'ಪಿಟಿಯಿಸು' ನೋ.

**ಪಿಟ್ಕಿಕುಱುಕ್ಕಿ** 'ಪಿಟ್ಕಿಕುಱುಕ್ಕಿ' ನೋ.

**ಪಿಟ್ಕಿಕುಱುಕ್ಕಿ, ಪಿಟ್ಕಿಕುಱುಕ್ಕಿ** (ನಾ). ಒಂದು ಸ್ಥಳದ ಹೆಸರು : ಅರಕೆಱೆಯ ಪಿಟ್ಕಿಕುಱುಕ್ಕಿಯ . . . ಪೊಲ ಮೇರೆ (ಕನ್ನಡಂ. ೫೯೮೪, ೧೩–೭೭ ; ೬೦೮). ಪಿಟ್ಕಿಕುಱುಕ್ಕಿ : ಸೀಯಮಂಗಲದ ಪೊಲ ಮೇರೆ ಇಸಾನದ ದೆಸೆ ನಡುಗಲ್ಲೆ ಅವ್ವಲತಿಣ್ಣೆಯಿನ್ತೆಂಕಾಯ್ ಪೇರೊಟ್ಟಿಯ ಅರಕೆಱೆಯ ಪಿಟ್ಕಿಕುಱುಕ್ಕಿಯ (ಎಕ. X(S). ಹಕ್ಕ.ಬ. ೧೧೬–೭೭ ; ೩೬೦). 'ಪುಲಿಕುಱುಕಿ' ಪಠಾ. [ ಪಿಟ್ಕಿ? + ಕುಱುಕ್ಕಿ (<ಕುಱುಕಿ) ]

Δ **ಪಿಟ್ಟುವಿ** 'ಪೃಥುವಿ' ನೋ.

**ಪಿಟ್ಟುವಿರಾಜ್ಯಂಗೆಯ್** (ಕ್ರಿ). ಭೂಮಿಯನ್ನು ಆಳು ; ರಾಜ್ಯಭಾರ ಮಾಡು : ಸ್ವಸ್ತಿಶ್ರೀಚತ್ತವಾಕ್ಯಪೆಮ್ಮಾರ್ಡಿ ಪಿಟ್ಟುವಿರಾಜ್ಯಂಗೆಯೆ (ಎಕ. V (R), ಅರಸ. ೩೦೩ ; ಸು. ೬ನೆಯ ಶತ).

[ ಪಿಟ್ಟುವಿ (<ಪೃಥುವಿ) + ರಾಜ್ಯಂಗೆಯ್ ]

**ಪಿಟ್ಟುವಬ್ಬೆ** (ನಾ). ಒಬ್ಬಾಕೆಯ ಹೆಸರು : ಕೋಟಿಗವಳ್ಳಿಯ ಕಣ್ಣಮ್ಮಂಗ ಪಿಟ್ಟುವಬ್ಬೆಗಂ ಪುಟ್ಟಿದ ಕನ್ನಯ್ಯನ್ (ಎಕ. VIII, ಸೊರಬ. ೪೪–೭ ; 971). [ ಪಿಟ್ಟುವಿ (<ಪೃಥುವಿ) + ಅಬ್ಬೆ$_1$ ]

Δ **ಪಿಟ್ಟುವಿ** 'ಪೃಥುವಿ' ನೋ.

**ಪಿಟ್ಟುವಿಗಂಗ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಅಸಗ ಗಂಗಯಾನ ಮಗಂ ಪಿಟ್ಟುವಿಗಙ್ಗಂ ಭಟ ಸ್ವಿತಿ (ಎಕ.III(R), ಶಂಶಪ. ೨೦೫–೨; ೯ನೆಯ ಶತ).

[ ಪಿಟ್ಟುವಿ (<ಪೃಥುವಿ) + ಗಂಗ ]

**ಪಿಟ್ಟುವಿಗಾವುಂಡ** (ನಾ). ಒಬ್ಬಾತನ ಹೆಸರು : ಸಂಗಮದ ಪೆಂಮರ್ಮನಡಿಗಾವುಣ್ಡರುಂ ರಣವಿಕ್ರಮಗಾವುಣ್ಡರುಂ . . . ಪಿಟ್ಟುವಿಗಾವುಣ್ಡರುಂ ಪೆರ್ಮ್ಮಯಲ ಕೆಟಿರುಂ ತನನ್ನಾಕರುಂ ಕೊಳನೆಲ್ಲೂರ ಸಾಲತ್ತರುಂ ಮಾರದಗುಂ ಎನೆವ್ವರುಂ ನರಸಾಕ್ಷಿ (ಎಕ. IV, ಎಡತೊ. ೬೦–೩೦; ಸು. ೮೯೦). [ ಪಿಟ್ಟುವಿ (<ಪೃಥುವಿ) + ಗಾವುಂಡ ]

**ಪಿಟ್ಟುವಿಪತಿ** 'ಪೊಡವಿಪತಿ' ನೋ.

**ಪಿಟ್ಟುವೆಯ್ಯ** (ನಾ). ಒಬ್ಬಾತನ ಹೆಸರು : ಚೋಟರ ಪಿಟ್ಟುವೆಯ್ಯ ಪೆರ್ಮಾಳ್ಳಿಯ ತುಱುಗೊಳೊಳ್ ಸ್ವರ್ಗಸ್ಥನಾದಂದು (ಎಕ. XI, ಹೊಳಲ್ಕೆ. ೬೫-೬; 977). [ಪಿಟ್ಟುವಿ (<ಪೃಥುವಿ) + <ಅಯ್ಯ₁]

**ಪೀ** (ನಾ). ಹೇಲು; ಮಲ : (೬).
[ದೇ.॥ ತಮಿ. ಮಲ. ತುಳು. ನಾಯ್ಕ. ಪರ್ಜಿ. ಗದಬ. ಪೀ; ತೆಲು. ಪೀಯಿ, ಪೀಯ್ಯಿ; ಕೋಲಾ. ಪಿಯಾ]

**ಪೀಕಜಾಲಿ** (ನಾ). ಒಂದು ಬಗೆಯ ಜಾಲಿ: ಪೀಕಜಾಲಿ, ತಂಬಟಿಜಾಲಿ (ವೃಕೋ. ೦-೦೨). [ಪೀಕ + ಜಾಲಿ₁]

**ಪೀಕದಾಣಿ** 'ಪೀಕದಾನಿ' ನೋ.

**ಪೀಕದಾನಿ, ಪೀಕದಾಣಿ, ಪೀಕುದಾನಿ** (ನಾ). ಉಗುಳುವ ಪಾತ್ರೆ; ಥೂಕದಾನಿ; ಪಡಿಗ: ಹಾಸಿಗೆಯ ಕಾಲುದೆಸೆಯಲ್ಲಿ ಬೆಳ್ಳಿಯ ಪತದ್ಗ್ರಹ (ಪೀಕದಾನಿ) ಇಡಲ್ಪಟ್ಟಿತ್ತು (ರಾಜಾಕ. ೧೦); ರಾಜನ ಎಡಗೈಯಲ್ಲಿ ಚಿನ್ನದ ಪೀಕದಾನಿ ಇತ್ತು . . . ತಾಂಬೂಲವನ್ನು ರಾಜ ಅದರಲ್ಲಿ ಉಗಿಯುತ್ತಿದ್ದ (ಕ್ರನಾ. II. ೨೦೨). **ಪೀಕದಾಣಿ:** ಪುಚ್ಛರ—ದಾಣಿ, ಗುಲಾಬ—ದಾಣಿ, ಪೀಕ—ದಾಣಿ, ಅತ್ತರ—ದಾಣಿ, ತಬಲ್—ಜಿ—ದಾಣಿ ಈ ಮೊದಲಾದವುಗಳಲ್ಲಿ ಕಂಡುಬರುವ ಪ್ರತ್ಯಯಗಳೂ 'ಪಾರಸಿ' ಆಗಿವೆ (ಕಾಶಾಶಾ. ೦೬೬). **ಪೀಕುದಾನಿ** : ಮಗ್ಗುಲಲ್ಲಿರುವ ಪೀಕುದಾನಿಯೊಳಕ್ಕೆ ಉಗಿಯುತ್ತಾ (ಒಕಿಮು. ೦).
[← ಹಿಂ. ಪೀಕದಾನ್; ಮರಾ. ಪೀಕದಾನೀ, ಪೀಕದಾಣೀ]

**ಪೀಕಲಾಟ, ಪಿಕಲಾಟ** (ನಾ). ೧. ಪೇಚು ; ತೊಂದರೆ ; ಪೇಚಾಟ ; ಒದ್ದಾಟ : ಕಾಕತಾಳದಂತೆ ನಿನ್ನ ಮಾತು ತಾಂ ಲೋಕದಲ್ಲಿ ಸಿದ್ಧಮೋದು ವೇಳೆಯ್ಯೆ ಪೀಕಲಾಟಮೆಯ್ದೆ ಬರ್ಕುಮಿಾಗಳೀ ಪೋಕುನಿನ್ನವಲ್ತೆ ಸರ್ವಭೂಮಿಯೊಳ್ (ಹಾಲಾಸ್ಯ. ೯-೦೫-೯೦); ಇವರಿಗೇನು ಬಂದಿತಪ್ಪ ಅಂತಹ ಪೀಕಲಾಟ! (ಮುಂಗಾರು. ೬೩). ೨. ಜಗಳ : (೬).
**ಪಿಕಲಾಟ** : ೧. ಹೊಟ್ಟೆಗಿಲ್ಲದಿದ್ದರೂ ನಿಮ್ಮ 'ಪಿಕಲಾಟ' ಇದ್ದೇ ಇದೆ (ಜಗುಬ. ೦೦); ಇದು ನಾನು ಕಂಡ ಪಿಕಲಾಟ ! (ಕೈಲಾಕ. ೦೪).
**ಪೀಕಲಾಟಕ್ಕಿಟ್ಟುಕೊಳ್ಳು**=ತುಂಬ ಇಕ್ಕಟ್ಟಿನ ಪ್ರಸಂಗವಾಗು : ಅಧಿಕಾರಿಗಳಿಗೆ ಪೀಕಲಾಟಕ್ಕಿಟ್ಟುಕೊಂಡಿತು (ಆರ್ಗ್ಯ. ೦೫); ತರಗತಿಯಲ್ಲಿ ಪ್ರಶ್ನೆ ಕೇಳಿದಾಗ ಪೀಕಲಾಟಕ್ಕಿಟ್ಟುಕೊಳ್ಳುತ್ತದೆ (ಶಾರಮ. ೪೬).
[<ಪೀಕು₁ / ತೆಲು. ಪೀಕಲಾಟ]

**ಪೀಕಿಸು** (ಕ್ರಿ) (ಹಣ ಮೊದಲಾದುವನ್ನು) ಬಲಾತ್ಕಾರದಿಂದ ಕೊಡುವಂತೆ ಮಾಡು,–ತೆರುವಂತೆ ಮಾಡು : ಈ ದಿವಸ ಸಿನಿಮಾಕ್ಕೆ ಅವನ ಕೈಯಿಂದಲೇ ದುಡ್ಡು ಪೀಕಿಸುತ್ತೇನೆ (ರೂಶಿ). [ಪೀಕು₁+–ಇಸು₃]

**ಪೀಕು₁** (ಕ್ರಿ). ೧. ಹೊರಕೆ ಎಳೆ,–ಜಗ್ಗು : ಚತುಷ್ಪಾದಿಗಳನ್ನೆದೆ ಬಿಡೆ ಸಿಡಿಲ ಬಳಗದಂತಾರ್ದು ತಾಕಿದವು ಘುಡುಘುಡಿಸಿ ಪೀಕಿದವು ಕಟನಿಕರವ (ಕಶು. ೨೦-೩೦). ೨. (ಕೂದಲು ಮೊದಲಾದುವನ್ನು ಎಳೆಯುವುದರಿಂದ) ನೋವಾಗು,—ಅಳುಕು : ಕೂದಲಿನ ಸಿಕ್ಕು ಬಿಡಿಸುವಾಗ ಪೀಕುತ್ತದೆ (ರೂಶಿ). ೩. ಆವರಿಸು ; ಆಕ್ರಮಿಸು : ಭುವರಲೋಕವ ತಾಕಿ ನಾಲ್ದೆಸೆ ಸುವರಲೋಕವ ಪೀಕಿ ಖತಿಯಿಂ ಕವರಿ ಮಹಲೋಕವನು ಧಟ್ಟಿಸಿ ಜನರ ಲೋಕವನು ಕವಿದು ತಪಲೋಕಕ್ಕೆ ನಿಲುಕಿತು ಕವಕವಿಸಿ ನೆರೆ ಸತ್ಯಲೋಕಕೆ ಶಿವಮಹಾದೇವೆಂದು ಶೋಣಿತಬೀಜಸಂತಾನ (ಶಿಂಬಿಕಾ. ೯೨-೯೫). ೪. ಹೊರದೂಡು; ಬಹಿಷ್ಕರಿಸು : (೬). ೫. ಕಷ್ಟಪಡು; ಹೆಣಗು : ಸಾಕು ರಣಸುಖವೆಂದು ಮಿಕ್ಕಿನ ಲೋಕಪಾಲರು ಹರಿಭವಾದ್ಯರು ಪೀಕಿ ರಂಗದ ಕುರಿಗಳಾದರು ಏಳರ ತೋಟಿಯಲಿ (ಶಿಂಬಿಕಾ. ೯೨-೩೯). ೬. (ಹಣ ಮೊದಲಾದುವನ್ನು) ಬಲವಂತದಿಂದ ಕೊಡು,–ತೆರು : ಅವನು ಪಂದ್ಯದಲ್ಲಿ ಸೋತುದರಿಂದ ಹತ್ತುರೂಪಾಯಿಗಳನ್ನು ಪೀಕಬೇಕಾಯಿತು (ರೂಶಿ). 'ಪೀಕಿಸು' ಪರಾ.
[ದೇ.॥ ತೆಲು. ಪೀಕು ; ನಾಯ್ಕ. ಪೀಕ್]

**ಪೀಕು₂** (ನಾ). ಬೆಳೆ ; ಪೈರು : ಮೊನ್ನೆ ರೈತರು ಪೀಕನ್ನು ಮನೆಗೆ ತಂದು ಹಚ್ಚಿದರು (ಅರಿಮ. ೬೦) ; ನನ್ನ ಮಗನಿಗೆ ಮಠದ ಭೂಮಿಯಲ್ಲಿ ಬೆಳೆದ ಎಲ್ಲ ಪೀಕು ಸಲ್ಲತಕ್ಕದ್ದು (ಮುಕಿಕ. ೬೩).
[← ಹಿಂ. ಪೀಕಾ = ಚಿಗುರು : ಮರಾ. ಪೀಕ್]

**ಪೀಕುದಾನಿ** 'ಪೀಕದಾನಿ' ನೋ.

**ಪೀಕೆ** (ನಾ). ಬಾಣದ ಗರಿ : ಇಱುಂಬಿನೊಳು ಸಿಕ್ಕಿಡಿದೆ ಬಲುಗಜಂ ನೋಡೆನುತ ಪೀಕೆಯಿಂ ಸನ್ನೆಗೆಯ್ದು . . . ಪರಿಚರರು ನುಡಿವುತಿರ್ದರ್ (ಲಕಿಶ. ೨೩-೦೬). [<ಪಿಳ್ಳು]

**ಪೀಚ** (ನಾ). (ಆಲಂ) ಸಣ್ಣ ಮನುಷ್ಯ ; ಅಲ್ಪನಾದವನು ; ಕ್ಷುದ್ರ : ಭೂಚರರ ಗೋಚರರಗೊಳಿಸದಸುರಾನ್ವಯದ ಪೀಚನಲ್ಲ (ಕವಮು. ೩೫-೦). [ಪೀಚು₂ + —ಅ₇]

**ಪೀಚಕತ್ತಿ** (ನಾ). ಚಿಕ್ಕ ಕಠಾರಿ ; ಕಿರುಗತ್ತಿ : ನೀನು . . . ನಡುವಿಗೆ ದಟ್ಟಿಯನ್ನು ಬಿಗಿದು ಪೀಚಕತ್ತಿಯನ್ನು ಸಿಕ್ಕಿಸಿಕೊಂಡು ಬಾದೆ (ಸರದಾ. II. ೦೦೬೨) ; ದಟ್ಟಿಗೆ ಪೀಚಕತ್ತಿಯನ್ನು ಸಿಕ್ಕಿಸಿರಲಿಲ್ಲ (ಹುಂಕಾ. ೫).
[< ಪೀಚು₂ + ಕತ್ತಿ / ತಮಿ. ಪೀಚ್ಚಾಙ್ಕತ್ತಿ, ಪೀಚ್ಚಾಕ್ಕತ್ತಿ ; ಮಲ. ಪೀಚ್ಚಾಙ್ಕತ್ತಿ]

**ಪೀಚಲು** (ನಾ). ಚೆನ್ನಾಗಿ ಬೆಳೆಯದಿರುವುದು ; ಬಡಕಲು : ಪೀಚಲಾದ ಸರಳವಾದ ಉಡುಪಿನ ಚಿಕ್ಕ ಮನುಷ್ಯನೊಬ್ಬನು . . . ಬಳಲಿದ ಕಣ್ಣುಗಳಿಂದ ನೋಡುತ್ತಿದ್ದಾನೆ (ಮಲಿನಾ. ೦).
[ಪೀಚು₂ + —ಅಲು (< —ಅಲ್₂)]

**ಪೀಚಾಡಿ** 'ಪಿಚಾಡಿ' ನೋ.

**ಪೀಚಾಳು** (ನಾ). ಸರಿಯಾಗಿ ಬೆಳೆಯದ ವ್ಯಕ್ತಿ ; ಸಣಕಲು ಮೈಕಟ್ಟಿನವನು : ಪೀಚಾಳೊಬ್ಬ ತನ್ನ ಕವಲುತೋಕೆಯ ಅಂಗಿಯನ್ನು ಕಳಚಿ ಬಿಸಾಡಿ ಬಿಕ್ಕುತ್ತ ಬಂದು ಅವಳನ್ನು ಬಿಗಿದಪ್ಪಿಕೊಂಡನು (ಕೃಷರು. ೩೨೫).
[ಪೀಚು₂ + ಆಳು₃ (< ಆಳ್₃)]

**ಪೀಚು₁** (ಕ್ರಿ). (ದ್ರವ ಪದಾರ್ಥಗಳನ್ನು) ಪಿಚಕಾರಿ, ಜೀಕಳಿ ಮೊದಲಾದುವುಗಳಿಂದ ಚಿಮ್ಮು,—ಚಿಂರುಕಿ ಬಿಡು : 'ಪೀಚುಗೊಳವಿ' ಪರಾ. [ದೇ.॥ ತಮಿ. ಪೀಚ್ಚು, ಪೀಚ್ಚುರ್ಗ ; ಮಲ. ಪೀಚ್ಚು]

**ಪೀಚು₂, ಪೀಚೆ, ಹೀಚು** (ನಾ). ೧. ಸಣ್ಣದಾಗಿರುವಿಕೆ ; ಸರಿಯಾಗಿ ಬೆಳೆಯದಿರುವಿಕೆ : (೬). ೨. ಬಡಕಲು ; ಸಣಕಲು : ಅವರ ಮಗು ತುಂಬ ಪೀಚು (ರೂಶಿ). ೩. ಶೀರ ಎಳೆಯ ಕಾಯಿ ; ಮಿಡಿ : "ಪೀಚಿನಲ್ಲಿರಕವಾದು ಮಿಡಿಗೆ" (೪ಕಕ. ೬೬) ; ಚಿಗುರೆಲೆ ಪೀಚು ಕಾಯ್ ಬಲಿತ ದೋರೆಗಳುಂ ಪಿಳಿವಣ್ಣುಗಳುಂ ಸೊಗಯಿಸೆ (ಹಾಲಾಸ್ಯ. ೩-೦-೯). (ಗು). ೪. ಸಣಕಲಾದ; ಬಡಕಲಾದ : ಮಗುವಿಗೆ ರಿಕೆಟ್ಸ್ ತರಹ ಆಗಿರುವಂತಿದೆ ; ತುಂಬಾ ಪೀಚುಮಗು (ಶಿಂದಿಸ. ೦೨); ಆ ಒಬ್ಬ ಪೀಚು ಮನುಷ್ಯನೊಬ್ಬ . . . ತವುಗೆಲ್ಲ ನಿಷ್ಕಾರಣವಾಗಿ ಕಠಿಣಹಿಂಸೆಯಾಗುತ್ತಿತ್ತೆಂದು ಹೇಳಲಾರಂಭಿಸಿದನು (ಕೃಷರು. ೨೩೫). **ಪೀಚೆ** : ೨. "ಅದೇನೂ ಪೀಚೆಯಲ್ಲ; ಸರಿಯಾದ ಎತ್ತರವೆ" ಎಂದು ವರ್ತಕ ಉತ್ಸಾಹದಿಂದ ನೆಕ್ಕುದೋವ್‍ನ ಕಿವಿಯಲ್ಲುಸುರಿದನು (ಕೃಷರು. ೬೬). ೪. ಆ ಪೀಚೆ ಮನುಷ್ಯ ನಿರಾಶೆಯಿಂದ ಚೀರಿದನು (ಕೃಷರು ೨೩೫). **ಹೀಚು₂** : ೩. "ಎಳೆಗಾಯಿ ಮಿಡಿ ಹದಿರು ಹೀಚು" (ಕಬ್ಬಮು. ೨೩) ; ಬೀಜಕೆ ಬಿಡುವುದ ಹೀಚಿನೊಳಜಿಯೆಂಬುದೀ ಜಗದೊಳಗುಳ್ಳ ಗಾದೆ (ಶರಕ. ೨೫-೪೬); ವೃಕ್ಷದ ಬುಡಕ್ಕೆ ನೀರನೆರೆದಲ್ಲಿ ಆ ಉದಕಸಾರವು ಎಲೆ, ಹೀಚು, ಕಾಯಿ ಹಣ್ಣುಗಳೊಳಗೆಲ್ಲ ವ್ಯಾಪಿಸಿಕೊಂಡಿರುವ

ಹಾಗೆ (ಬೋಳಬಾ. ೧೩೦-೯೭೯ ೦೯೯); ಹಣ್ಣಿನ ಗುಣವೆಲ್ಲ ಹೀಚಿನಲ್ಲಿ (ಶಾಬ್ದಾರ. ೧೯). (ನಾ). ೫. ಸಣಕಲು ವ್ಯಕ್ತಿ; ನರಪೇತಲ: ನಿನ್ನ ತಪ್ಪು ಹೀಚೇನೂ ಅಲ್ಲ. ನೋಡುವುದಕ್ಕೆ ಇಪ್ಪತ್ತೈದು ವರ್ಷದ ಆಳು (ಶಾಂಕಲಾ. ೧೯೦). ೬. (ಅಲಂ) ಅನುಭವವಿಲ್ಲದ ವ್ಯಕ್ತಿ: ಇದಕ್ಕೆಲ್ಲ ಕತೆ ಬರೆದ ಹೀಚುಗಳ ಅಮೋಘವಾದ ಅಪರಿಮಿತ ಅಜ್ಞಾನವೇ ಕಾರಣ (ಮುಹೋಲಂ. ೧೩೯). [ದೇ.॥ ಪಾಲ. ಪೀಚ್ಛ]

**ಪೀಚುಗದ್ದೆ** (ನಾ). ಸರಿಯಾಗಿ ಬೆಳೆಯದ ಗದ್ದೆ; ಕುರುಚಲುದಾಡಿ: (?). [ಪೀಚು$_2$ + ಗದ್ದೆ$_1$]

**ಪೀಚುಗೊಳವಿ** (ನಾ). ಪಿಚಕಾರಿ; ಜೀಕಳಿ; ಜೀರ್ಕೊಳವೆ: (?). [ಪೀಚು$_1$ + ಕೊಳವಿ (< ಕೊಟವಿ)]

**ಪೀಚೆ** 'ಪೀಚು$_2$' ನೋ.

**ಪೀಠ** (ನಾ). ೧. (ಕುಳಿತುಕೊಳ್ಳಲು ಮಾಡಿದ) ಮಣೆ; ಆಸನ: "ವಿಷ್ಟರಂ, ಪೀಠಂ, ಆಸನಂ—ಈ ೩ ಮಣೆ" (ಹಲಾಯು. ೩೨-೧೩೩); "ಆಸಂದಿ ವಿಷ್ಟರಂ ವೇತ್ರಾಸನಕಂ ಪೀಠಮಾಸನಂ ಪೆಸರಿಂ" (ಶಬ್ದಕೋ. ೯೯-೨೩). ೨. ದೇವರ ಪ್ರತಿಮೆಯನ್ನು ಇಡುವ ವೇದಿಕೆ: ಎಸೆವ ಪೀಠವನಿಳಿದು ರುದ್ರಾಣಿ ಬೆಚ್ಚರದೊಳ್ಕೈತಂದು ಕಯ್ಯ ಬಾಳಂ ಪಿಡಿದು . . . ಎರಡು ವರವನಿತ್ತಪೆನೆಂದಳು (ಕೈಬಿಭಾ. ೩೦-೬೮). ೩. ದೇವರ ಮುಂದೆ ನೈವೇದ್ಯ, ಬಲಿ ಮೊದಲಾದುವುಗಳನ್ನು ಇಡುವ ವರ್ತುಲಾಕಾರದ ವೇದಿಕೆ: 'ಬಲಿಪೀಠ' ಪರಾ. ೪. ತಳಪಾಯ; ಬುನಾದಿ; ಅಡಿಪಾಯ. ೫. ಗುರುಗಳು, ಸ್ವಾಮಿಗಳು, ಅರಸರು ಮೊದಲಾದವರ ಗದ್ದುಗೆ,—ಅಧಿಕಾರಸ್ಥಾನ: ಪೀಠ ಮೂಢಗೆ ಹೊಲ್ಲ ಕೀಟ ನಿದ್ದೆಗೆ ಹೊಲ್ಲ (ಸರ್ವಜ್ಞ. ೯೩೦); ಪೀಠ ಸಿಕ್ಕಿದರೂ ಕಾಟಕತನ ಬಿಟ್ಟಾನೆಯೇ? (ಗಾದೆ). ೬. ವಿದ್ಯಾಕೇಂದ್ರ; ವಿದ್ಯಾಕ್ಷೇತ್ರ: ಮಯೂರಶರ್ಮನು ವ್ಯಾಸಂಗ ಮಾಡುತ್ತಿದ್ದುದು ಈ ಪೀಠದಲ್ಲಿಯೇ (ಕರ್ನಾಟ. ೩). 'ವಿದ್ಯಾಪೀಠ' ಪರಾ. ೭. ವಿಶೇಷ ಅಧ್ಯಯನಕ್ಕಾಗಿ ಗೊತ್ತುಮಾಡಿರುವ ಒಂದು ಅಧಿಕಾರ,—ಪ್ರಾಧ್ಯಾಪಕಸ್ಥಾನ: ಜೈನಶಾಸ್ತ್ರಾಭ್ಯಾಸಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಒಂದು ಪೀಠವಿದೆ (ರೂಢಿ). [ಸಂ.]

**ಪೀಠಕ** (ನಾ). ೧. ಆಸನ; ಮಣೆ. ೨. "ಸ್ಥಾನ" (ಅರಾಕ. ೯೦೫): ಅಂತೆ ಜನನೀಜಠರಪೀಠಕ[ಪಾಠಾಂ. ಪಿಠರ]ಮನೆಯ್ದನೋರಂತಿದುಂ ಪರಮಾರ್ಥಮಕ್ಕುಂ (ಅರಾಕ. ೯-೯-೭೦). ೩. [ನಾಟ್ಯ] ನೃತ್ಯದಲ್ಲಿಯ ಒಂದು ಭಂಗಿ: ಕಾಲುಗಳು ಪೀಠಕದಲ್ಲೇ ನಿಂತಿರಬೇಕು . . . ಅವು ನೇರಾಗ ಕೂಡದು (ಬಿಜ್ಞಶಾ. ೧೩೭). [ಸಂ.]

**ಪೀಠಮರ್ದ** (ನಾ). [ಕಾವ್ಯಮೀ] ಶೃಂಗಾರವಿಷಯಗಳಲ್ಲಿ ನಾಯಕನಿಗೆ ಸಹಾಯಕರಾಗಿ ಬರುವ ನಾಗರಕ, ವಿಟ, ವಿದೂಷಕ ಮತ್ತು ಪೀಠಮರ್ದ ಎಂಬ ನಾಲ್ವರಲ್ಲಿ ಒಬ್ಬ; ಕೋಪಗೊಂಡ ನಾಯಿಕೆಯನ್ನು ಸಂತೈಸುವುದರಲ್ಲಿ ನಿಪುಣನಾದವನು: ಒಡನೊಡನೆ ಪೊರೆದು ಕಾಳ್ಪಿರ್ದಡೆಯೊಳ್ತಂದೇಱಲಿಕ್ಕಿ ಕಾಲ ಪಿಡಿದೋಗಡಿಸದೆ ಮಿದಿಮಿದಿದಟ್ಟಿಯನೊಡರಿಸುತಿರ್ಪವನೆ ಪೀಠಮರ್ದನೆನಿಕ್ಕುಂ (ಶೃಂಗಾರ. ೯-೧೨); ಮಗುಳ್ದು ಸರಸೋಕ್ತಿಗಳ ವಿರಚಿಪಂ ನಾಗರಿಕನಂತೆ ಪೀಠಮರ್ದನ ಪಾಂಗಿನಿಂ (ಅರಾಕ. ೯-೬-೩೬). [ಸಂ.]

**ಪೀಠಮರ್ದಕ** (ನಾ). = ಪೀಠಮರ್ದ: ತನ್ನಂ ಕಾಣಲೊಡಮಾಱದು ನುಡಿಯಿಸಿ ಮೆಚ್ಚಿ ಮೇಳದ ನಾಗರಿಕವಿಟವಿದೂಷಕಪೀಠಮರ್ದಕರ್ಕಳ್ವೆರಸು . . . ಸೂಳೆಗೇರಿಯೊಳಗನೆ ಬರ್ಪುದುಂ (ಕಾಕಥಾ. ೯-೬೯ ವ); ದೀನಜನಕಲ್ಪಾಂಘ್ರಿಪಂ ನಾಗರಕವಿಟವಿದೂಷಕ ಪೀಠಮರ್ದಕರ್ಕಳ್ವೆರಸು . . . ಬರ್ಪೊಂ (ಕಾಂಜಿತ. ೯-೭೨ ವ); ಪೀಠಮರ್ದಕ ವಿಟ ಚೇಟ ವಿದೂಷಕರೆಂದು ಮುಂ ಪೇಟ್ದವರಲ್ಲಿ ರಾಜನಿಂದಣಮೆ ಕಿಱಿದಾದ ಗುಣವಂತಂ ತನ್ನೃಪನ ಪೀಠಮನಣಿಮುತ್ತೊತ್ತಿ ಕುಳ್ಳಿರ್ಪುದಱಿಂ ಪೀಠಮರ್ದಕಂ (ಕಶಕ. ೩-೯೩ ವ). [ಸಂ.]

**ಪೀಠಮರ್ದನ** (ನಾ). = ಪೀಠಮರ್ದ: ಎಸೆವ ನಾಗರಿಕ ವಿಟ ವಿದೂಷಕ ಪೀಠಮರ್ದನ ನಟ ಗಮಕಿ ಗಾಯಕರು ಮಿಗೆ ಸಂಕಟಿಸಿ ಬೆಱದರು ಚಪ್ಪರದೊಳು (ಜೀಮೂತ. ೬-೩೭); ಮೂಢಲದು ವಿಟನಿಂಗೆ ಬಡಗಲದು ವಿದೂಷಕಗೆ ಪಡುವಲದು ನಾಗರಿಕಗಂ ತೆಂಕಲದು ಪೀಠಮರ್ದನಗೆ (ಸರ್ವಜ್ಞ. ೧೬೩೦). [ಸಂ.]

**ಪೀಠವರ್ಧನ** (ನಾ). = ಪೀಠಮರ್ದ: ಪೀನಕ್ಷು ರಕ್ತಕರ್ದಮಪೂತ ಸುಗಂಧಾಧಿಕಾರಮರ್ದನಕುಶಲಂ ಶಾನಿಂಗಿತಜ್ಞನುಂ ವಿಜ್ಞಾನಹಿತಂ ಶಾಟಿ ಪೀಠವರ್ಧನನೆನಿಕುಂ (ಸುಕು. ೧೧-೯೦); ಮನುಮಾರ್ಗಿ ಪರಹಿತಾವನಿ ಸತ್ಯವಾಣ . . . ಸಜ್ಜನನೆನಿಪ ಪೀಠವರ್ಧನನೊರ್ವ ಕೆಳೆಯಂ (ಜಕತ. ೬-೯): ವಿಟವಿದೂಷಕಪೀಠವರ್ಧನರೆಂದೆಂಬ ನಟನೆಯ ನಾಗಲಿಕರಿಗೆ ಘಟಕ ಕಾಮನು ಕಾವಲಿರಿಸಿದನೆಂಬಂತೆ ಕುಟಿಲಾಕ್ಷಿಯರ ಮೊತ್ತವೆಸೆಯೆ (ಅಕ್ಕಿ. ೩-೬೯). [< ಪೀಠಮರ್ದನ]

**ಪೀಠಾಧಿಪತಿ** (ನಾ). ಮಠದ ಅಧಿಕಾರವನ್ನು ವಹಿಸಿಕೊಂಡ ವ್ಯಕ್ತಿ; ಪೀಠಾಧಿಕಾರಿ; ಜಗದ್ಗುರು: ಮೊನ್ನೆ ಶಿವಗಂಗೆಯ ಪೀಠಾಧಿಪತಿಗಳ ಉಪನ್ಯಾಸವಿತ್ತು (ರೂಢಿ). [ಸಂ.]

**ಪೀಠಿಕಾಪ್ರಕರಣ** (ನಾ). ಆರಂಭದ ಘಟನೆ: ಧರೆಗವತರಿಸುವ ಲಕ್ಷ್ಮೀವರನವತಾರಕ್ಕೆ ಪೀಠಿಕಾಪ್ರಕರಣದಂತಿರೆ ಬಂದನಂತಭೋಗೀಶ್ವರನಾ ದೇವಕಿಯ ಗರ್ಭದೊಳ್ ಜನಿಯಿಸಿದಂ (ಜಗಾ. ೨-೬೦). [ಸಂ.]

**ಪೀಠಿಕಾಸಂಧಿ** (ನಾ). (ಕಾವ್ಯದಲ್ಲಿ) ಆರಂಭದ ಸಂಧಿ; ಮೊದಲನೆಯ ಸಂಧಿ: ಪ್ರಾಚೀನಕವಿಗಳೆಲ್ಲ ತಮ್ಮ ಕಾವ್ಯದ ಪೀಠಿಕಾಸಂಧಿಯಲ್ಲಿ ತಮ್ಮ ಇಷ್ಟದೇವತೆಗಳನ್ನು ಸ್ಮರಿಸಿದ್ದಾರೆ (ರೂಢಿ). [ಸಂ.]

**ಪೀಠಿಕೆ** (ನಾ). ೧. ಆಸನ; ಪೀಠ: ಪ್ರತಿನಂದಿ . . . ಪೊಂದಾವರೆಯ ಪೂಗಳಿಂ ಪೀಠಿಕೆಯುಂ ಸಮೆದು ಜಿನಪ್ರತಿಮೆಯನಲ್ಲಿ ನಿಲಿಸಿಯರ್ಚಿಸುತ್ತಿರ್ಪನ್ನೆಗಂ (ಶಾಂತಿಪು. ೧೬-೭೩ ವ). ೨. ಶಿವಲಿಂಗದ ಪಾಣಿವಟ್ಟಲು; ಪಾಣಿಪೀಠ; ಪಿಂಡಿಗೆ: ದೇಹವೇ ಪೀಠಿಕೆ [ಪಾಠಾಂ. ಪಿಂಡಿಗೆ, ಪೀಠಕ್ಕೆ, ಪೀಠಿಗೆ] ಜೀವವೇ ಲಿಂಗ (ಬಸವ. ೯೩-೧೯೯). ೩. ಯಾವುದಾದರೊಂದು ವಿಷಯದ ಸಮಗ್ರವಿವರದ ಸಂಗ್ರಹ,– ಸಮಸ್ತವಿವರದ ಸಾರ. ೪. ಮುನ್ನುಡಿ; ಉಪೋದ್ಘಾತ: ಈ ಗ್ರಂಥದ ಪೀಠಿಕೆಯನ್ನು ಬರೆದವರು ದೊಡ್ಡ ವಿದ್ವಾಂಸರು (ರೂಢಿ).

**ಪೀಠಿಕೆ ಹಾಕು** = ಮುಂದಿನ ಕಾರ್ಯಕ್ಕೆ ಅನುಕೂಲವಾದ ಹಿನ್ನೆಲೆಯನ್ನು ರಚಿಸು; ಪೂರ್ವರಂಗವನ್ನು ನಿರ್ಮಿಸು: ಆ ಮನೆಯನ್ನು ಅವರ ತಲೆಗೆ ಕಟ್ಟುವುದಕ್ಕೆ ಏಜೆಂಟ್ . . . ಪೀಠಿಕೆ ಹಾಕಿದ್ದನು (ಯೋಧ. ೨೩); ಅವರೇ ಜವಾಬುದಾರಿ ಹೊತ್ತು ಇವಳನ್ನು ಈ ಊರಿಗೆ ತಂದದ್ದಲ್ಲವೆ? ಎಂದು ಪೀಠಿಕೆ ಹಾಕಿ ಕತೆ ಹೇಳಿದ್ದ (ಮೂಕಿಂಚಾ. ೬೯). [ಸಂ. ಪೀಠಿಕಾ]

**ಪೀಠೋಪಕರಣ** (ನಾ). ಮಣೆ, ಕುರ್ಚಿ, ಮೇಜು ಮೊದಲಾದ ವಸ್ತುಗಳು: (ಮನೆಯ, ಕೊಠಡಿಯ,—ಕುರ್ಚಿ, ಮೇಜು, ಮೊ. ದ) ಪೀಠೋಪಕರಣ (Furniture, ಇಂಕೋ); ಅನಂತರ ಜಮಖಾನೆಗಳನ್ನೂ ಪೀಠೋಪಕರಣಗಳನ್ನೂ ಹೊರಗೆ ತರಲಾಯಿತು (ಕೃಕಲು. ೨೬೦). [ಸಂ.]

**ಪೀಡ** (ನಾ). ಒಂದು ಬಗೆಯ ಮರ; ಸರಳವೃಕ್ಷ: "ಪೀತಂಪದಾ ಅಂದಳ, ಸುರಹೊನ್ನೆ, ಜೀರಗೆ, ಪೀಡ, ಅಕ್ಷಿ" (ಚಿತ್ರ. ೯೯). [ಸಂ. ಪೀಡಾ]

**ಪೀಡನ** (ನಾ). ೧. ಹಿಸುಕುವುದು ; ಹಿಂಡುವುದು ; ಒತ್ತುವುದು : ಋಷಭಗೆ ಹರಣ ಹಿಂಡಿದುದವನ ಬಾಹುಪೀಡನದಿ (ತ್ರೀರಾಮಾ. ೬೮೬–೨೨೦). ೨. ನೋಯಿಸುವುದು ; ಹಿಂಸಿಸುವುದು ; ಕಾಡುವುದು : "ನಿಗ್ರಹಂ ಪೀಡನಂ" (ಮಂಗರಾ. ೧೫೦–೧೭). ೩. ಹಿಡಿಯುವುದು : 'ಪಾಣಿಪೀಡನ' ಪರಾ. ೪. [ಕಾಮಶಾ] ಹನ್ನೆರಡು ಬಗೆಯ ಆಲಿಂಗನಗಳಲ್ಲಿ ಒಂದು : ಸಹಜಮೆಂಬ ತೆಱದಿ ನಡೆದು ಬಹಳಮೆನಿಪ ಮುಂದಿಯೆಡೆಯ ಮಹಿಳೆಯೊಡಲನೊಲ್ದು ಸೋಂಕಿ ತೆಕ್ಕೆಗಾನಿಸಿ ಅಹ ಇದಾರೆನಲ್ಕೆ ಬಿಡುವ ಬಹುವಿದಗ್ಧಪುರುಷನಿಂದ ಮಹಿಗೆ ಕಾಣಿಸಿದುದು ಪೀಡನಂ (ಜನವ. ೭–೫); ಪುಷ್ಕರ ವಿವಿಧಕ ಧೃಷ್ಟಕ ಪೀಡನ ವೃಕ್ಷಾರೋಹಣ ಲತಾವೇಷ್ಟನ ತಿಲತಂಡು ಲಾಖ್ಯ ಕ್ಷೀರನೀರ ಊರೂಪಗೂಢ ಜಘನೋಪಗೂಢ ಸ್ತನಾಶ್ಲೇಷ ಲಲಾಟಕಮೆಂಬ ದ್ವಾದಶಾಲಿಂಗನಾಲಿಂಗಿಗಳಂ (ವಿವೇಕ. ೧೮೩); ಅಲ್ಲಿರ್ದ ಕಾಮಿನೀ ಸ್ತ್ರೀಪುರುಷರೋರೊರ್ವರನೊತ್ತಿ ಕೊಂಡು ಹೋಗಿ ಆ ಬಾಧೆಗೆ ಆಲಿಂಗನಂಗೈವುದಂ ಪೀಡನಮೆಂಬರು (ಕಾಮಶಾ. ೨೨೦). ೫. ದಂತಕ್ಷತದ ಭೇದಗಳಲ್ಲಿ ಒಂದು : ಎಡಗಲ್ಲದಲ್ಲಿ ಅಡಿಗಡಿಗೆ ದಂತಕ್ಷತಗೈವುದು ಪೀಡನ ಮೆಂಬುದು (ಕಾಮಶಾ. ೨೨೬). ೬. ಸುರತದ ಆಸನಗಳಲ್ಲಿ ಒಂದು : ಅವಳ್ಗೆ ದಣಿವಿಲ್ಲದೊಡ ಅವಳು ಮೇಲಪ್ಪುದು. ತಾಂ ಕೆಳಗಪ್ಪುದು. ಆ ಧ್ವಜಾಧಿಪ ಮೆಲ್ಲನವುಕೆ ಪೀಡನಂ (ಕಾಮಶಾ. ೨೩೬). [ ಸಂ. ]

**ಪೀಡನಕ** (ನಾ). ೧. = ಪೀಡನ ೪ : ನೆರವಿಯೊಳ್ ಪೂರ್ದಿ ಪೆಣ್ಣಂ ಸರ ಸಾಟದಿ ಭಿತ್ತಿಗೌಂಕಿಯಹಹಮೆನುತ್ತಾದರದಿಂ ಬಿಗಿಬಿಗಿದಪ್ಪುತ್ತಿರಲದೆ ಪೀಡನಕಮೆಂದೆನಿಪ್ಪಾಶ್ಲೇಷಂ (ಮನ್ಮವಿ. ೧೦–೭). ೨. = ಪೀಡನ ೫ : ಎಡದ ಗಲ್ಲಮನೊತ್ತಿ ಪಿಡಿಯೆ ಪೀಡನಕಮದು (ಜನವ. ೭–೪೦). [ ಸಂ. ]

**ಪೀಡನೆ** (ನಾ). ಕಾಟ ; ಹಿಂಸೆ ; ಪೀಡೆ : ಯುರೋಪಿಯನರ ಪೀಡನೆ ಗೊಳಗಾಗಿರುವ ರಾಷ್ಟ್ರಗಳಲ್ಲಿ ತಮ್ಮ ಶಕ್ತಿಯ ವಿಚಾರದಲ್ಲಿ ಒಂದು ಬಗೆಯ ನವೀನವಿಶ್ವಾಸವು ಹುಟ್ಟುವುದು (ಜಗಸಂ. ೩೭). [ ಸಂ. ಪೀಡನ ]

**ಪೀಡಿ, ಪೀಢಿ** (ನಾ). ಪೀಳಿಗೆ ; ಪರಂಪರೆ ; ತಲೆಮಾರು : ನೀವು ಪೀಡಿ ದರಪೀಡಿಯಿಂದ ಈವೂರಲ್ಲಿದ್ದವರು (ಕತ್ರಶಾ. ೬೦). ಪೀಢಿ: ಹಳೆ ಹೆಂಗಸರಿಗೆ ಈ ತರುಣಪೀಢಿಯ ನಡತಿ ತಿಳಿಯೂದಿಲ್ಲ (ಗಂಪಾಮು. ೨೦).

[ ← ಮರಾ. ಪಿಢೀ ]

**ಪೀಡಿತ** (ಗು). ೧. ನೋಯಿಸಲ್ಪಟ್ಟ; ಬಾಧೆಗೊಳಗಾದ ; ಹಿಂಸೆಗೆ ಗುರಿಯಾದ : ನಿಜವಕ್ತ್ರೋಜನಿಕ್ಷಿಪ್ತಕ್ಷ್ವೇಡಪೀಡಿತಲೋಕಘಾತಿನಿಯಪ್ಪ ಪೂತನಿಯುಮಂ . . . ಕರೆದು (ಜಗಿಪ. ೩–೨೨). (ನಾ). ೨. ಪೀಡೆ ಗೊಳಗಾದವನು ; ನೊಂದವನು : ವಿದ್ಯಾಗರ್ವಗ್ರಹಪೀಡಿತರ್ ಸ್ವಪರ ಬಾಧಾಹೇತುವಂ ದುಸ್ತರೋದ್ಯೋಗಕ್ಲೇಶಿತರಾಗಿ ಬಿತ್ತಿ ಬೆಳೆವಂತಕ್ಕುಂ ವಿಷೋದ್ಯಾನಮಂ (ಶಬ್ದಾನು. ೦–೪೮) : ಅವನುರುದೀಪ್ತಿಗೆ ಕೀರ್ತಿಗೆ ರವಿರಾಜರ್ ಕಂದಿ ಬಲ್ಕಱುಂಬಿದ ದೆಸೆಯಿಂದವಧಿಯನೆಂದುಂ ಕಾಣದೆ ತವೆ ರಾಹುಗ್ರಹಣಗಾಢಪೀಡಿತರಾದರ್ (ಹಮ್ಮಿಕ. ೨–೫೩). ೩. ನೋಯಿಸ ಲ್ಪಟ್ಟುದು : "ತುನ್ನಂ, ಪೀಡಿತಂ—ಈ ೨ ನೋಯಿಸಲ್ಪಟ್ಟುದು" (ಹಲಾಯು. ೦೨೬–೮೨); ಅತ್ಯಂತ ಪೀಡಿತವಾದ, ಅಶಾಂತವಾದ ಗುರುಚರಣರ ಹೃದಯದ ಮೇಲೆ ಗಿರೀಂದ್ರನ ಮಾತುಗಳು ಚೆನ್ನಾಗಿ ಮುದ್ರೆಯನ್ನು ಹಾಕುತ್ತಿದ್ದವು (ಶಂಕೇ. ೩೫). ೪. ನೋವು; ಬಾಧೆ; ಹಿಂಸೆ : "ಪೀಡಿತಂ ತುನ್ನಮೆನೆ ನೋವಕ್ಕು" (ಮಂಗರಾ. ೦೫೨–೨೬). ೫. [ಕಾಮಶಾ] ಚುಂಬನದ ಹನ್ನೆರಡು ಬಗೆಗಳಲ್ಲಿ ಒಂದು ; ಇದರ ಸಂಖ್ಯೆ ಮಂತ್ರಂ ಹೆಸರುಗಳಲ್ಲಿ ಭಿನ್ನಾಭಿಪ್ರಾಯಗಳಿವೆ : ಸ್ತ್ರೀಯೆರಡು ತುಟಿಯುಂ ತನ್ನೆರಡುತುಟಿಯಿಂದೊತ್ತಿ ಪೀರ್ವುದು ತೋರ್ಪುದು ಬಲ್ಪಿಡಿವುದು ಚುಂಬಿಸುವುದು ಇದು ಪೀಡಿತಮೆಂಬ ಚುಂಬನ (ಕಾಮಶಾ. ೩೩೩). 'ಜಿಹ್ವಕ' ಪರಾ. ೬. ರತಿಬಂಧಗಳಲ್ಲಿ ಒಂದು : ಪೀನಸ್ತನ ದ್ವಯದೊಳಿನೆ ನಿನ್ನೆದೆಯನನುಮಾನವಿಲ್ಲದೆ ಶಿವಿವೆನೆಂದೊಱಗಿದ ಮಾನಿ ನಿಯ ತೊಡೆಯನವಧಾನದಿಂ ಮೆಟ್ಟಿ ನೆರೆವಾ ನಿಪುಣನಿಂದೆ ಪೀಡಿತಮದಂ (ಜನವ. ೯–೩೭); ಮೆಲ್ಲನೆ ಮಲಗಿರ್ದವಳು ಪುರುಷಂ ತನ್ನೆಡಗಾಲಿಂ ಮೆಟ್ಟಿ ರಮಿಸೆ ಪೀಡಿತಮೆಂಬ ಕರಣಂ (ಕಾಮಶಾ. ೨೪೬). [ಸಂ.]

**ಪೀಡಿತಕ** (ನಾ). – ಪೀಡಿತ ೫ : ಸವಡಿದುಟವಿಡಿದು ನಲ್ಲಂ ತವಕದಿ ನಂಗುಷ್ಠ ತರ್ಜನಿಗಳಿಂ ಸೊಗಸುಣ್ಮುವಿನಂ ತೊಡರ್ದೊತ್ತಂಬಡೆ ಸವಿ ಯಲ್ ಪೀಡಿತಕಚುಂಬನಂ ತಾನೆನಿಕುಂ (ಮನ್ಮವಿ. ೦೨–೦೦). [ಸಂ].

**ಪೀಡಿಸು** (ಕ್ರಿ). ೧. ನೋಯಿಸು; ಬಾಧೆಗೊಳಿಸು : ಅವಧ್ಯದ ಲುಂಬವನ ವ್ಯಾಧಿಗಳ್ ಪೀಡಿಸುವುವು (ಶಂಕಕಂ. ೦೬೪–೦೦); ಸರಸಿಜಾಕ್ಷನೆ ಸರಸ ನೀನಾದರೆ ದುರಿತಗಳೆನ್ನನು ಪೀಡಿಪುದುಂಟೆ (ಪುರಂದ. ೨–೭೦–೨); ಕಿಚ್ಚುಗಣ್ಣನ ತಪವಳಿವುದು ಪೂಗೋಲೊಳೆಚ್ಚು ಮನ್ಮಥ ಪೀಡಿಸಲು (ಪೋಹಕ. ೫–೦೯) ೨. ಕಾಡು; ಕಾಟ ಕೊಡು : ಮನುಷ್ಯರ ಪಿಡಿದು ಪೀಡಿಸಿ . . . ಈಡಾಡಿದ ಕೊಳಂಬಲಿಯನಾಯ್ದು ಕಟುಕುವ ಹೇಸಿ ದೈವಂಗಳ ಬೇಡಿ ಬೇಡಿ ನಿರರ್ಥಕ ಕಡಬೇಡ ಎಲವೋ (ಬಸವ. ೫೫೬); ಪುರುಷಪರಮೇಶ್ವರನ ಕಾಲಂ ಪಿಡಿದು ಬಡದೆಲ್ಲರ್ಗೆ ಪಲವು ದೇಶಂಗಳಂ ಕೊಟ್ಟರಿ ನಮಗೆ ಕಿಱುದು ನಾಡಂ ಕುಡಿಮೆಂದು ಬೇಡಿ ಪೀಡಿಸುತ್ತಿರಲು (ಕೃಷ್ಣಾಸ್ರ. ೦೦–೨೦೪) ; ಪುಟ್ಟಿಸಬೇಡೆಲೊ ದೇವ . . . ಪರರ ಪೀಡಿಸಿ ತಿಂಬ ಪಾಪಿಜೀವನವ (ಪುರಂದ. ೦–೦೬೯–೦). ೩. ಹಿಸುಕು ; ಹಿಂಡು ; ಒತ್ತು : ನೆಟ್ಟನೆ ಮೊಗ ನೋಡಿ ಮುದ್ದಿಪ ತರಳನ . . . ಬಾಯೊಳ ಬಾಯನಿಟ್ಟು ಗಲ್ಲವ ಪೀಡಿವಳು (ಪೋಹಕ. ೦೦–೫೬); ತೆಕ್ಕೆಗೊಂಡೆನ ಪೀಡಿಸಬೇಡ ಕಡುಶ್ಯೈತ್ಯವಕ್ಕೆಯೊಳಿರಿಸಿ (ಪೋಹಕ. ೨೭–೫೯).

[ಪೀಡನ + —ಇಸು]

**ಪೀಡಿಸುಹ** (ನಾ). ಕಾಡುವಿಕೆ; ಪೀಡನೆ : "ಅಭಿಯೋಗಃ–ಪೀಡಿಸುಹಂ" (ಶಬ್ದಾ. ೦೭–೫೭). [ಪೀಡಿಸು + —ಹ (<—ವ)]

**ಪೀಡೆ** (ನಾ). ೧. ನೋವು; ಬಾಧೆ : "ಆಬಾಧಾ, ವೇದನಾ, ದುಃಖಂ, ಆರ್ತಿಃ, ಪೀಡಾ, ವ್ಯಥಾ—ಈ ೬ ದುಃಖಂ" (ಹಲಾಯು. ೦೦೩–೪) ಜ್ಞಾನಮಯಂ ತೇಜೋನಿಧಿ ತಾನಿರ್ದುಂ ತಾಯ ಗರ್ಭದೊಳ್ ಪೀಡೆಯು; ನಂತೇನಂ ಮಾಡಿದನಿಲ್ಲ (ಆದಿಪು. ೭–೩೨); ಇಂದು ಪಿಂಗಿದುವೆಮ್ಮ ಪೀಡೆ [ಪಾಠಾಂ. ದೇಸೆ, ಸೇದೆ]ಗಳಿಂದು ಸಾರ್ದುವು ಸಯ್ಪು (ಕಾವ್ಯಾಪ. ೩೬೫). ೨. ಕಾಟ ; ತೊಂದರೆ : ಪುಣ್ಣನಂತೆ ನೋವಂ ಮಾಟ್ಪುದು ಗ್ರಹದಂತೆ ಪೀಡೆಯುಂ ಮಾಟ್ಪುದು (ಧರ್ಮಾಮೃ. ೪–೦೬೫) ; ಸದಾಶಿವನಿಗೆ ಅಣ್ಣನ ಪೀಡೆಯೆ ಅಧಿಕ (ತ್ಯಾಗಮು. ೦೬೫) ; ಸದ್ಯಕ್ಕಂತೂ ಪೀಡೆ ತಪ್ಪಿತಲ್ಲ! (ಕಟ್ಟಿಹೂ. ೬೩). ೩. ಅರಿಷ್ಟ ; ಅನಿಷ್ಟ : ವೆಂಕಮ್ಮ . . . ಪೀಡೆ ತಪ್ಪಿತು ಎಂದು ಬಾಯಿ ಬಿಟ್ಟು ಹೇಳಿದ್ದರು. ಆದರೆ ಪೀಡೆ ಅಷ್ಟು ಸುಲಭವಾಗಿ ತೊಲಗಿರಲಿಲ್ಲ (ಕದ್ವಸ. ೫೦) ; ತನ್ನ ತಂದೆ ತಾಯಿಗಳನ್ನು ಕಳೆದುಕೊಂಡ ಈ ಘೋರ ಅನಿಷ್ಟವಾಗಿಯೇ ಅವಳಿಗೆ ಕಾಣುತ್ತಿದ್ದ. ಅದರಿಂದ ಇದೊಂದು ಪೀಡೆ ಎಂದೇ ಅವಳ ಭಾವನೆ (ಹೊಸಕ್ಷಿ. ೨೬). ೪. ಕಾಡುವ ವ್ಯಕ್ತಿ ; ಗೋಳು ಹೊಯ್ದುಕೊಳ್ಳುವ ವ್ಯಕ್ತಿ : ಕೋಡಿಗಾಸಿಸಿ ಕಾಡಿ ಬೇಡುವ ಪೀಡೆ ವೇಶ್ಯಾಮಾತೆ ದಿಟ್ಟಿಸಿ ನೋಡಿ ಅಳಿಯನ ಕೂಡೆ ತಾನಿಂತೆಂದಳಣಕದಲಿ (ಬಸಪು. ೧೨–೬) ; ನಾವು ಇಂತಹ ಪೀಡೆಯನ್ನು ಎಂದೂ ನೋಡಲಿಲ್ಲ (ಮುರಿಶಾ. ೫೬); ೫. ಪಿಶಾಚಿ ; ಭೂತ. ೬. ಹಾಳು; ನಾಶ ; ಧ್ವಂಸ. ೭. ಅಡ್ಡಿ ; ತಡೆ. ೮. ಒಂದು ಬಗೆಯ ಮರ; ಸರಳದೇವದಾರು.

**ಪೀಡೆ ಕೊಡು** = ತೊಂದರೆಯನ್ನು ಕೊಡು ; ಬಾಧೆಯನ್ನುಂಟು ಮಾಡು : ನೋಡಲಿಕ್ಕೆ ಬೈರಾಗಿಗಳ ಹಾಗೆಯೇ ಇದ್ದವರು . . . ಹಾಗೇತ ಜನರಿಗೆ ಪೀಡೆ ಕೊಟ್ಟವರಲ್ಲ (ಮುಳಿಕ್ಕ. ೨೦೯). **ಪೀಡೆ ಮಾಡು**=

ಪೀಡಿಸು ; ತೊಂದರೆ ಕೊಡು : ಎರಡನೆಯವರಿಗಾದರೂ ನೀನು ಪೀಡೆ ಮಾಡಬಾರದು (ಮುಂಂಐು. ೨-೪೪). [ಸಂ. ಪೀಡಾ]

**ಪೀಡೆಗೆಯ್** (ಕ್ರಿ). ತೊಂದರೆಗೊಳಿಸು ; ಬಾಧಿಸು ; ಪೀಡಿಸು : ಆಶ್ವಯುಜಕಾರ್ತಿಕದೊಳ್ ಪಿತ್ತಂ ಪೆರ್ಚುಗುವಂತದು ಕುತ್ತಕ್ಕೆಡೆಯಾಗಿ ಪೀಡೆಗೆಯ್ಗುಂ ಪಯಮಂ (ಅಶ್ವಶಾ. ೬-೨೩). [ಪೀಡೆ + ಕೆಯ್$_1$]

**ಪೀಡೆಗೊಳ್** (ಕ್ರಿ). ತೊಂದರೆಯನ್ನು ಅನುಭವಿಸು ; ಬಾಧೆಪಡು : ಅಪ್ರಸ್ತುತವಾದ (ಅಚೇತನ) ಕಬ್ಬಿನ ಪರವಾಗಿ ಅರ್ಥಮಾಡುವಾಗ 'ಪೀಡೆಗೊಂಡು' ಎಂಬ ಲಕ್ಷ್ಯಾರ್ಥ ಸ್ಫುರಿಸುತ್ತದೆ (ಕೃಷ್ಣಾಲೋ. ೪೪ ಅಡಿ). [ಪೀಡೆ + ಕೊಳ್$_1$]

**ಪೀಢಿ** 'ಪೀಡಿ' ನೋ.

**ಪೀತ$_1$** (ನಾ). ೧. ಅರಿಸಿನದ ಬಣ್ಣ ; ಹಳದಿ : "ಪೀತಂ, ಹಾರಿದ್ರಂ— ಈ ೨ ಅರಿಸಿನದ ಬಣ್ಣಂ" (ಹಲಾಯು. ೧೨೦-೩೦) ; ಶುಕ್ಲ ರಕ್ತ ಪೀತ ಕೃಷ್ಣ ಎಂಬ ನಾಲ್ಕು ಬಣ್ಣಗಳಿಂದ ಜಾತಿವಿಭಾಗವೆಂದು ಮಹಾಭಾಷ್ಯದಿಂದ ತಿಳಿದುಬರುತ್ತದೆ (ಪೀಠಿಕಾ. ೧೫೬). ೨. ನವರತ್ನಗಳಲ್ಲಿ ಒಂದು ; ಗೋಮೇದಕ. ೩. ಗೋರೋಚನ. ೪. ಚಿನ್ನ ; ಬಂಗಾರ. ೫. ಒಂದು ಬಗೆಯ ಸಸ್ಯ ; ಹಳದಿಗೋರಂಟೆ : "ಪೀತಮಾ ಸಹಚರಿಯುಂ ಕೆಂಪುಗೋರಟೆ" (ಮಂಗರಾ. ೩೬-೨೨). 'ಪೀತೆ' ಪರಾ. [ಸಂ. ಪೀತಾ]

**ಪೀತ$_2$** (ಗು). ಕುಡಿದ ; ಹೀರಿಕೊಂಡ : ಚಳಚ್ಚಾಮರವಾತಪೀತನಿಜಘರ್ಮಾಂಭಃಕಣಂ . . . ಇರ್ದನೆಂದು ಸುಖದಿಂ ವಿದ್ವಿಷ್ಟವಿದ್ರಾವಣಂ (ಶಂಕರಾ. ೩-೬೫). [ಸಂ.]

**ಪೀತಕ** (ಗು). ೧. ಅರಿಸಿನದ ಬಣ್ಣವುಳ್ಳ ; ಹಳದಿ ಬಣ್ಣದ. (ನಾ). ೨. ಜವೆಗೋಧಿ ; ಯವಧಾನ್ಯ : "ಯವಮದು ಪೀತಕಂ" (ವಸ್ತುಕೋ. ೪೪-೧೭). [ಸಂ.]

**ಪೀತಕಾಂತ** (ನಾ). ನವರತ್ನಗಳಲ್ಲಿ ಒಂದು ; ಪುಷ್ಯರಾಗ : "ಪೀತಕಾಂತಮೆನೆ ಪುಷ್ಯರಾಗಂ" (ಮಂಗರಾ. ೩೦-೬). [ಸಂ.]

**ಪೀತಗಂಧ** (ನಾ). ಹಳದಿಬಣ್ಣದ ಚಂದನ : "ಮಾಧವಪ್ರಿಯಂ— ಪೀತಗಂಧ" (ಚಿತ್ರ. ೦೨೫). [ಸಂ.]

**ಪೀತದಾರು** (ನಾ). ಒಂದು ಬಗೆಯ ಮರ ; ದೇವದಾರು : "ಚಕ್ರಪಾದಪಃ . . . ಪೀತದಾರು, ದಾರು, ಪೂತಿಕಾಷ್ಠಂ — ೭ ದೇವದಾರುವೃಕ್ಷದ ಹೆಸರು" (ನಿಘಂ. ೦೨೪) ; ಪರ್ವತಗಳಲ್ಲಿ ಸಿಕ್ಕುವ ಪೈನ್ ಎಂಬ ಪೀತದಾರುವಿನಿಂದ ಸೊಗಸಾದ, ಮೃದುವಾದ ಮರ, ದಿಮ್ಮಿ, ರಾಳ (Resin) ಸಿಕ್ಕುತ್ತವೆ (ಭೂವಿವ. ೨೬೩). [ಸಂ.]

**ಪೀತದ್ರು** (ನಾ). ೧. ಒಂದು ಬಗೆಯ ಮರ ; ಸರಳವೃಕ್ಷ : "ಸರಳಂ ಪೀತದ್ರು ಮಹಾತರುವಕ್ಕುಂ" (ವಸ್ತುಕೋ. ೩೬-೨೦). ೨. ಒಂದು ಬಗೆಯ ಮರ ; ಹರಿದ್ರೆ : "ಪೀತದ್ರುಃ . . . ಪರ್ಜನೀ — ೭ ಮರದರಿಸಿನ . . . ಕಾಡುಅರಿಸಿನ" (ನಿಘಂ. ೦೩೫). [ಸಂ.]

**ಪೀತನ** (ನಾ). ೧. ಒಂದು ಬಗೆಯ ಮರ ಮತ್ತು ಅದರ ಕಾಯಿ ; ಅಮಟೆ : "ಪೀತನಃ, ಕಪೀತನಃ, ಆಮ್ರಾತಕಃ—೩ ಅಂಬಟೀಗಿಡದ ಹೆಸರು" (ನಿಘಂ. ೦೦೬). ೨. ಕುಂಕುಮಕೇಸರಿ ; ಕೇಶರ. [ಸಂ.]

**ಪೀತನಕ** (ನಾ). = ಪೀತನ ೧ : "ಆಮ್ರಾತಕ ಪೀತನಕಂ" (ವಸ್ತುಕೋ. ೩೩-೩). [ಸಂ.]

**ಪೀತಪುಷ್ಪ** (ನಾ). ಹಾಗಲ ಬಳ್ಳಿ : "ಹಾಗಲು ಪೀತಪುಷ್ಪ" (ಮಂಗರಾ. ೪೪-೪೪). [ಸಂ.]

**ಪೀತಫೇನ** (ನಾ). ಅರಿಟಾಳದ ಮರ ; ಅಂಟುವಾಳ : "ಅರಿಟಾಳಮದರಿಷ್ಟಕಂ ಪೀತಫೇನಮೆನಿಕ್ಕು" (ಮಂಗರಾ. ೪೨-೩೯). [ಸಂ.]

**ಪೀತಲ, ಪೀತಳ** (ನಾ). ೧. ಅರಿಸಿನದ ಬಣ್ಣ ; ಹಳದಿ : ಹೊಸಮಳೆಯಲ್ಲಿ ಮಿಂದ ಪ್ರಕೃತಿ . . . ಪೀತಲ ಪೀತಲತರವಾಗಿ ಶೋಭಾಯಮಾನವಾಗಿತ್ತು (ಕೃಕಾ. ೪೬೬). ೨. ಒಂದು ಬಗೆಯ ಲೋಹ ; ಹಿತ್ತಾಳೆ. ಪೀತಳ : ೧. ಬರೆವುದಂತೆ ಕರ್ಣಿಕೆಯಂ ಪೀತಳಸಿತರಸದಿಂ (ಹಾರಾಶ್ಕ. ೪-೦೬-೦೪). [ಸಂ.]

**ಪೀತವಸನ** (ನಾ). ೧. ಪೀತಾಂಬರ ; ಪಟ್ಟೆವಸ್ತ್ರ : ಉಟ್ಟು ಮಲ್ಲಗಚ್ಚೆಯ ಪೀತವಸನವಂ, ಶಿರುಗುತಿರ ಚಿತ್ರಾಂಗಿ, ಕಾನನದ ರಾಣಿ ಕಾನೆಂಬವೊಲ್ (ಚಿತ್ರಾಂಗ. ೩-೬೪). ೨. ಪೀತಾಂಬರವನ್ನುಟ್ಟವನು ; ಪೀತಾಂಬರಧಾರಿ : ಪೀತವಸನಂ . . . ಉಪೇಂದ್ರಂ ದುರ್ಜಯಂ ರಾಮಚಂದ್ರನ ಪಿಂದಂ ನಡೆತಂದನಾಯತಸಿತಾಂಭೋಜೇಕ್ಷಣಂ ಲಕ್ಷ್ಮಣಂ (ಶಂರಾಮಾ. ೬-೬೬). [ಸಂ.]

**ಪೀತವಾಸ** (ನಾ). ೧. ಹಳದಿಯ ರೇಷ್ಮೆಬಟ್ಟೆ ; ಪೀತಾಂಬರ. ೨. ಪೀತಾಂಬರಧಾರಿ ; ವಿಷ್ಣು : "ವಿಷ್ಣುಃ . . . ಪೀತವಾಸಾಃ . . . ಗದಾಧರಃ — ಈ ೪೫ ನಾರಾಯಣನ ಪೆಸರ್" (ಹಲಾಯು. ೩-೨೨) ; ಪೀತವಾಸಂ ಕೃಷ್ಣನಾಗಿ ಕಿರಾತನೆಚ್ಚ ನಿಶಾತಶರನಿರ್ಘಾತಪಾತದಿ ಮಡಿದನಲ್ಲಾ ಭೂತಳಾಗ್ರದೊಳು (ಬಸಪು. ೫೪-೪೪) ; ಧೃತಕೌಸ್ತುಭೋದ್ಭಾಸನಂ ಪೀತವಾಸನಂ ನೂತ್ನಸಮಸ್ತಾಭರಣನಂ ಘೃಣ್ಯಾಚರಣನಂ ಕಲಿಸುಧನ್ವಂ ಕಂಡನು (ಕೃಮಿಜ. ೦೬-೩೬). [ಸಂ. ಪೀತವಾಸಸ್]

**ಪೀತಸಾರ** (ನಾ). ೧. ಹೊನ್ನೆಮರ : "ಪೀತಸಾ(ಲ)ರಃ, ಅಸನಃ— ಈ ೨ ಹೊನ್ನೆ" (ಹಲಾಯು. ೩೩-೯೬). ೨. = ಪೀತಗಂಧ. ೩. ಗೋಮೇದಕ. [ಸಂ.]

**ಪೀತಸಾಲ** (ನಾ). = ಪೀತಸಾರ ೧ : "ಪೀತಸಾ(ಲ)ರಃ, ಅಸನಃ — ಈ ೨ ಹೊನ್ನೆ" (ಹಲಾಯು. ೩೩-೯೬). [ಸಂ.]

**ಪೀತಸಾಲಕ** (ನಾ). = ಪೀತಸಾರ ೧ : "ಪೀತಸಾಲಕಃ, ಸರ್ಜಕಃ . . . ಜೀವಕಃ—೭ ಹೊನ್ನೇಮರದ ಹೆಸರುಗಳು" (ನಿಘಂ. ೦೨೨). [ಸಂ.]

**ಪೀತಳ** 'ಪೀತಲ' ನೋ.

**ಪೀತಾಂಬರ** (ನಾ). ೧. ಹಳದಿಬಣ್ಣದ ಬಟ್ಟೆ. ೨. ಪಟ್ಟೆವಸ್ತ್ರ ; ರೇಷ್ಮೆಯ ಬಟ್ಟೆ : ನವನೀಲೋತ್ಪಲಸನ್ನಿಭಾಂಗರುಚಿಯಿಂ ಸಕ್ಕಿಂಕಿರಾತೋದ್ಗಮಚ್ಛವಿಪೀತಾಂಬರಕಾಂತಿಯಿಂ . . . ಚೆಲ್ವಾದನಬ್ಜೋದರಂ (ಜಗನ್. ೦-೪೪) ; ಕಂಸಾಂತಕಂ . . . ಜಗುಳ್ದ ಪೀತಾಂಬರವನು ಅಂಸದೊಳ್ ಸಾರ್ಚುತ್ತೆ ವರೂಥಮನಿಳಿದು . . . ಐತಂದನು (ಕೃಮಿಜ. ೦೪-೨೩). ೩. (ಬೆಲೆ ಬಾಳುವ) ರೇಷ್ಮೆಯ ಸೀರೆ : ಬಣ್ಣಬಣ್ಣದ ಪಟ್ಟೆವಸ್ತ್ರ ಪೀತಾಂಬರಗಳೂ, ಕುದುರೆ ಒಂಟೆ ಆನೆಗಳ ಮೇಲೆ ಹೇರಿ ಹೇರಿ ಬಂದುವು (ಕಾಂತಕಾ. ೦೦೦). ೪. (ಹಳದಿಯ) ಪಟ್ಟೆವಸ್ತ್ರವನ್ನು ಧರಿಸಿದವನು ; ವಿಷ್ಣು : "ಶ್ರೀವತ್ಸಂ . . . ಪೀತಾಂಬರಂ ಚಕ್ರಭೃದ್ಗೋವಿಂದಂ" (ವಸ್ತುಕೋ. ೪-೨೨) ; ಸ್ಫುರಿತತೋದ್ಯತ್ಕನಕಪ್ರಭಾಪ್ರಸರದಿಂ ಪೀತಾಂಬರಂ ಪದ್ಮವಿಷ್ಟರದಿಂ ಪಂಕಜವಿಷ್ಟರಂ ನತವಿನೇಯವ್ರಾತಚೇತಸ್ಸಮೋಹರನಾಗಿ ದುರ್ದಟಿಂ ಹರಂ ಭವಹರಂ (ಅಂಪು. ೦೬-೬) ; ಮಧುರಾಪುರದ ಪೊಜವೊಟಲೊಳ್ ಪೀತಾಂಬರನಿರ್ದಂ (ಜಗನ್. ೯-೨೬). ೫. [ಜೈನ] ವಾಸುದೇವ : ಪರಾಭವಿಸಿದಂ . . . ಸುರೇಂದ್ರಧನು ಮೂಡಿದಂಬರಮನಂದು ಪೀತಾಂಬರಂ (ಶಂರಾಮಾ. ೩-೦೦೦). [ಸಂ.]

**ಪೀತಾಂಬರಧರ** (ನಾ). = ಪೀತಾಂಬರ ೪ : ಪೀತಾಂಬರಧರನಂ ಪುರುಹೂತಶಿಲೀಮುಖನಿಕಾಯಮೆಜಗಿದುದು (ಜಗನ್. ೦೩-೪೦). [ಸಂ.]

**ಪೀತಾಂಬ್ರ** (ನಾ). = ಪೀತಾಂಬರ ೩ : ಪೀತಾಂಬ್ರ ೧೮ಕ್ಕೆ, ತಟ್ಟು ಸಿಜುಗು ಲತೆ ಹೂಗಳು ಸಹಾ ತೂಂಕ ೧೮೯೭ಕ್ಕೆ ವಿವರ (ಶಾಇಇ. IX-ii, ೫೪೬-೩ ; 1682). [ < ಪೀತಾಂಬರ ]

**ಪೀತಾಂಶುಕ** (ನಾ). ೧.=ಪೀತಾಂಬರ ೪. ೨. ಹೊಂಬಣ್ಣದ ಕಿರಣಗಳುಳ್ಳವನು; ಅಗ್ನಿ. ೧, ೨: ದಂತವಕ್ತ್ರಂ ನಿಸರ್ಗವೈರದಿಂದ ಸುರವೈರಿಯಾ ವಿಸರ್ಗಳೆ ತನಗಸಹ್ಯಂಗಳಾಗೆ ಹರಿನಾಮಯುಕ್ತನೆಂದು ಶಕ್ರನಿನಾಗ್ನಿಮಿಸಿಯುಂ ಪೀತಾಂಶುಕನೆಂದು ಪಾವಕನಂ ಮೂದಲಿಸಿಯುಂ . . . ಕಾಳಿಯಸರ್ಪದರ್ಪದಳನನದಿರದಿದಿರೊಳ್ ಕಂಡು (ಜಗಂ· ೯–೩೩ ವ). [ಸಂ.]

**ಪೀತೆ** (ನಾ). ೧. ಅರಿಸಿನ: "ಪೀತಾಭಿಖ್ಯಂ ಹರಿದ್ರೈ" (ವಸ್ತುಕೋ· ೬೬–೨೫). ೨. ಒಂದು ಬಗೆಯ ಗಿಡ; ಹಳದಿಗೋರಂಟೆ: "ಪೀತಾ, ಸಹಚರೀ– ಈ ೨ ಹೊಂಬಣ್ಣದ ಗೋರಂಟೆ" (ಕರಾಯು· ೩೪–೩೨). [ಸಂ. ಪೀತಾ]

**ಪೀನ** (ಗು). ೧. ದಪ್ಪವಾದ; ಪುಷ್ಟವಾದ; ಸ್ಥೂಲವಾದ: ಉತ್ತುಂಗಪೀನನಿಜಾಂಸಾರ್ಪಿತಲಂಬಹಾರನವನಾ ಪಾಂಡ್ಯಂ (ಶಂಕಥಾ· ೩–೫೯); ಆ ನೃಪವೀರನುರಸ್ಥಳಕ್ಕೆ ಲಕ್ಷ್ಮೀವಧು ಪೀನಬಾಹುಯುಗಳಕ್ಕೆ ಜಯಾಂಗನೆ ತನ್ಮುಖಕ್ಕೆ ವಾಕ್ಶ್ರೀವಧುವಾಗಿ ರಂಜಿಸಿ ಮಹೋನ್ನತಿಯಂ ಪಡೆದುದ್ದ ಕೀರ್ತಿಲೀಲಾವತಿಯೆಂದು ಬಣ್ಣಿಪುದು ಲಚ್ಚಲದೇವಿಯನೀ ಜಗಜ್ಜನ (ಎಕ· XIII, ೦೨೦–೨೩; 1066); ಈ ಸುದೃಢಪೀನಪಯೋಧರಂಗಳ್ಗೇ ತೆಱನ ಕಂಪನಮೇತರ್ಕಾಯ್ತು? (ಲಾಡಕಾ· ೦೯–೩೦). ೨. ದೊಡ್ಡ; ಘನವಾದ; ಮಹತ್ತಾದ: ಶಿವದಾಸಿಯರು ವಕ್ತ್ರಪದಂಗೆ ನೇಮಿಸಲು . . . ಕರೆದು ತಂದವನು ಪೀನ[ಪಾಠಾಂ· ದಾನಿ]ಶಿವಶರಣವ್ರಜವನನುವಾನಿಸದೆ ಗಂಗೆಯನು ಭಗಿರಥ ಕೋಡು ಬಂದಂತೆ (ಕಂಕೆದಾ· ೬–೨೯). (ನಾ). ೩. ದೊಡ್ಡದು; ಸ್ಥೂಲವಾದುದು: "ಬಹುಳಃ, ಸ್ಥೂಳಃ, ಪೀನಃ, ಪೀವಾ. ಪೀವರಃ—ಈ ೫ ದೊಡ್ಡಿ(ತು)" (ಕರಾಯು· ೫೬–೦೯೬); ಆ ನಗಚರಯುಗಮಲ್ಲಿಯುಮಾ ನಗದೊಳೆ ಕಲ್ಲೋಳಿರ್ದ ಸಲಿಲನಿಮಿತ್ತಂ ಪೀನಂಗಳ್ ಕಾದಲ್ ಸಲೆ ಕೀನಾಶನಿವಾಸಮೆಯ್ದಿತೊಂದಾಕ್ಷಣದೊಳ್ (ಸೀಬಾಕ· ೩–೬೪). ೪. ದಪ್ಪವಾಗಿರುವವನು; ಸ್ಥೂಲಕಾಯ: "ಪೀವರನೆನಲ್ ಸ್ಥೂಲನೆನೆ ಬಹುಲನೆನೆ(ಪೀನನೆನೆ) ದೊಡ್ಡತಪ್ಪುವನೆನಿಕ್ಕುಂ" (ತುಂಗಂಗಾ· ೬೯–೦೦). [ಸಂ.]

**ಪೀನಂ** (ಅ). ಅಧಿಕವಾಗಿ; ವಿಶೇಷವಾಗಿ; ಹೆಚ್ಚಾಗಿ: ಪೀನಂ ಲಲಾಟಾಗ್ರದೊಳ್ ನೆಲೆಗೊಂಡೊಪ್ಪುವ ವೀರಪಟ್ಟಪಾದಯುಂಗೆಯ್ವಿಂದುಪಂ· · ·ಗಲೆ ಪೋಲ್ತುತ್ತು ತಳಪ್ರಹಾರಿಯ ಶಿರಂ ಹೇಮಾದ್ರಿಯಾಕಾರಮಂ (ಕಾವ್ಯಸಾ· ೩೨೫ ಪೂರ್ವ೪); ಅಲಸದೆ ಪೀನಂ ಪದೆಯದೆ ಪಾಂಗಱದು ದೋಷಮಂ ಪಿಂಗಿಸಿ ತಪ್ಪದೆ ಬಗೆದು ಪೇಟ್ಟುದು (ಕಬಂಗಾ· ೦–೯೯); ಲಯಮಂ ಕರ್ಮತಮಸ್ಸಮಕ್ಕೆ ಜಯಮಂ ಧರ್ಮಕ್ಕೆ ಪೀನಂ ಪರಾಜಯಮಂ ದೋಷಗಣಕ್ಕೆ ಲಕ್ಕತೆಱದಿಂ ಮಾಂ ಮಾಡಿ ಸರ್ವಾರ್ಥಸಿದ್ಧಿಯನೀಯಲ್ಕೆ . . . ಬಗೆದಂ ಸಂಸಾರಸಾರೋತಯಂ (ಅದಿಪು· ೬–೦೦೯); ಮಾನಸದ ನಲ್ಮೆಯಾಗಂ ಮಾನಸರ್ಗಪವರ್ಗಸುಖಮನದಱೀವ ಗುಣಂ ಪೀನಂ ಪೆರ್ಚುಗುಮಮಲಗುಣಾನೀಕವಿಭೂಷರೊಳ್ ಸಮಾಗಮದಿಂದಂ (ಸೀತಿಪಂ· II· ೩೦೯). [<ಪೀನ]

**ಪೀನಕ್ಷು** (ನಾ). ೧. ಡೊಳ್ಳುಹೊಟ್ಟೆ. ೨. ದೊಡ್ಡಹೊಟ್ಟೆಯವನು; ಮಹೋದರ: ಪೀನಕ್ಷು . . . ತಾನಿಂಗಿತಜ್ಞನುಂ ವಿಜ್ಞಾನಹಿತಂ ಶೌಚ . . . ಪೀಠವರ್ಧನನೆನಿಕುಂ (ಸುರಕ· ೦೦–೪೦). [ಸಂ.]

**ಪೀನಸ** (ನಾ). ೧. ಶೀತಬಾಧೆ; ನೆಗಡಿ: "ಪೀನಸಮೆನೆ ನೆಗಡಿ ತಾಂ ಪ್ರತಿಶ್ಯಾಯಂ" (ವಸ್ತುಕೋ· ೬೬–೩೫); ನಲ್ಲಲರ ಕಂಪು ಪೀನಸದಲ್ಲೊಂದಿದವಂಗೆ ಸೊಗಸದಿರೆ ಕೆಟ್ಟಪುದೇ (ಅಕೃಟ· ೧–೦೭); ಗಂಧಕ, ಹುಲಿಯುಗುರು . . . ಅಜಮೂತ್ರದಲ್ಲಿ ಬೆರಸಿ ಅಟ್ಟು ನಸ್ಯಂಗೆಯ್ಯೆ ಪೀನಸ ಮಾಣ್ಗುಂ (ಅಶ್ವಶಾ· ೬೬); ಚೆಂಡಿಕೆಯು ಕೊಯ್ದುಡಾ ಶಿರಬೇನೆ ಬಿಡುವುದೆ ಪೀನಸದ ವ್ಯಾಧಿ ಮೂಗಿರಿದಡಂ ಬಿಡುವುದೆ (ಹರಿಂ· ೦೩–೨೬). ೨. ಮೂಗು ಕೊಳೆತು ಹೋಗುವ ಒಂದು ಬಗೆಯ ರೋಗ: ಹೂವುಗಳನ್ನು ಮೂಗಿಗೆ ತುಂಬಾ ಹತ್ತಿರದಲ್ಲಿಟ್ಟುಕೊಂಡು ಮೂಸಿ ನೋಡಿದರೆ ಪೀನಸ ಬರುತ್ತದೆಂದು ಹೇಳುತ್ತಾರೆ (ರೂಢಿ). [ಸಂ.]

**ಪೀನಸರೋಗ** (ನಾ).=ಪೀನಸ ೨: ಪ್ರೀತಿಭೇದಗಳು ಮಾತು ತಪ್ಪಿದವಗೆ ಪೀನಸರೋಗ (ಸಪಕ· ೦೯೨–೨); ಪೀನಸರೋಗದವರು . . . ವಿಷದ ರೋಗದವರು ಇವರಿಷ್ಟೂ ವಮನಯೋಗ್ಯರೆಂದರಿವುದು (ಸಕವೈ· ೨೩). [ಸಂ.]

**ಪೀನಸಿ** (ನಾ). ೧. ನೆಗಡಿ ಬಂದವನು: ಗಂಧಕ ಪೀನಸಿಯು ಸಂಪದವನೊಂದಿಸಿ ರಸದ ಬಳಕೆಗೆ ಹವಮಲದಿಂದವೆ ಕಾವ್ಯಜಿಹ್ವೆಯು ತೆರನನನುವಿಡಿದು (ಗಗಚಾ· ೦೬–೦೦). ೨. ಪೀನಸರೋಗದಿಂದ ಬಳಲುವವನು. [ಸಂ. ಪೀನಸಿನ್]

**ಪೀನಾರಿ$_1$**, ಪೇನಾರಿ (ನಾ). ಒಂದು ಬಗೆಯ ಮರ: ಪೇನಾರಿಮರ, ಪೀನಾರಿ, ಪಾತಾಳಮರ, ಭೇತಾಳ, ತೊಕಡಕನ ಮರ, ಭಾತಾಳ (ವೃಕಿನಿ. ೬೨–೦೪೬೨). **ಪೇನಾರಿ**: ಪೇನಾರಿಮರ . . . ತೊಕಡಕನ ಮರ, ಭಾತಾಳ (ವೃಕಿನಿ. ೬೨–೦೪೬೨). [ದೇ.॥ ತಮಿ. ಪೀನಾಱು; ಮಲ. ತುಳು. ಪೀನಾರಿ]

**ಪೀನಾರಿ$_2$** (ನಾ). ಜಿಪುಣ; ಜೀನ; ಕೃಪಣ: ನನ್ನ ಭಾವ ಆಸೆಯ ಪೀನಾರಿಯಲ್ಲ. ಅವನು ಮಡಕೇರಿಯಲ್ಲಿ ದೊರೆಯುವ ಏಳ್ಳನ್ನೆಲ್ಲ ತಂದು ಗುಡಾಣಗಳಲ್ಲಿ ತುಂಬಿಸಿಟ್ಟಿದ್ದಾನೆ (ಹುಂಚಾ. ೨೨೩). 'ಪಿಸನಾರಿ' ಪರಾ. [←ತುಳು. ಪೀನಾರಿ]

**ಪೀನಾಶಿ**, ಪಿನಾಶಿ, ಪಿನಾಸಿ (ನಾ). ಮೂಗು ಕೊಳೆತು ಹೋಗುವ ಒಂದು ಬಗೆಯ ರೋಗ: ಪೂಜೆಗೆಯ್ಯುವ ಪುಷ್ಪಗಳನು ಸೋಜಿಗದಿ ತಾ ಮೂಸಿ ನೋಡಿದ ಮೂಜಗದಿ ಪೀನಾಶಿಪೊಂದುವನು (ಶಾಸಂಗ. ೨೦). **ಪಿನಾಶಿ**: ವಾಸನೆಯುಳ್ಳ ಹೂವುಗಳನ್ನು ಮೂಸಬೇಡ. ಪಿನಾಶಿ ಬರುತ್ತದೆ (ರೂಢಿ). **ಪಿನಾಸಿ**: ಪೀನಸ ಎಂಬುದನ್ನೇ ಕೆಲವರು ಪಿನಾಸಿ ಎಂದು ಹೇಳುತ್ತಾರೆ (ರೂಢಿ). [<ಪೀನಸ]

**ಪೀನಾಸಿ** (ನಾ). ೧. ದುರಾಸೆಯುಳ್ಳ ವ್ಯಕ್ತಿ: ಏನೇನ ತಂದರು ಸಾಲದೆ ಮಂಗಳೊಳು ಪೀನಾಸಿಯರಗೊಡಲೆಂದು ಆನೆಯ ಮುಂದಕೆ ಮುದಿಸೂಳೆಯು ನೆತ್ತಿ ತಾನಿಟ್ಟು ಸುಖದೊಳಗಿಹನು (ಬ್ರಕಪ. ೦೯–೯೬). ೨. ಅತಿಯಾಗಿ ಕಾಡುವ ವ್ಯಕ್ತಿ: ಆ ಪೀನಾಸಿ ತನಗೆ ಬರಬೇಕಾದ ಹಣ ವಸೂಲು ಮಾಡುವುದರಲ್ಲಿ ತುಂಬಾ ಗಟ್ಟಿಗ (ರೂಢಿ). 'ಪೀನಾರಿ$_2$' ಪರಾ. [ ? ]

**ಪೀನೋದರ** (ನಾ). ೧. ದೊಡ್ಡ ಹೊಟ್ಟೆ; ಡೊಳ್ಳುಹೊಟ್ಟೆ. ೨. ದೊಡ್ಡ ಹೊಟ್ಟೆಯುಳ್ಳವನು; ಡೊಳ್ಳುಹೊಟ್ಟೆಯವನು: ದ್ರುತಯಾನೋತ್ಕಂಪಿಪೀನೋದರನಪನಿಪನೊಡ್ಡೋಲಗಕ್ಕೈದೆ ವಂದಂ ಪ್ರತಿಹಾರಂ (ಕಂಪ್ರಕೃ· ೨–೬೪); ಚಂಚತ್ಕುಂಡಲಮಂಡಿತಂ ಗತಿಚಲಶ್ರೀನೋದರಂ ದೀರ್ಘದೇಹಂ . . . ಬಂದಂ ಪ್ರತೀಹಾರಕಂ (ರಾಜಶೇ. ೫–೨೩). [ಸಂ.]

**ಪೀನೋಧ್ನಿ** (ನಾ). ದೊಡ್ಡ ಕೆಚ್ಚಲುಳ್ಳ ಹಸು,–ಆಕಳು: "ಪೀನೋಧ್ನೀ, ಪೀವರಸ್ತನೀ–ಈ ೨ ಹೆಗ್ಗೆಚ್ಚಲಾವು" (ಕರಾಯು. ೪೫–೨೦೦). [ಸಂ. ಪೀನೋಧ್ನೀ]

**ಪೀಪ**, ಪೀಪಾಯಿ, ಪೀಪು, ಪೀಪೆ (ನಾ). ಮದ್ಯ, ಎಣ್ಣೆ ಮೊದಲಾದ ದ್ರವಪದಾರ್ಥಗಳನ್ನು ತುಂಬಿಡಲು ಬಳಸುವ, ಮರ ಅಥವಾ ಲೋಹದಿಂದ ಮಾಡಿದ ದೊಡ್ಡ ಆಕಾರದ ಸಾಧನ; ದ್ರಮ್ಮು: ಹೇಸರಗತ್ತೆಯ ಮೇಲೆ ಬಂಗಿಯ ಹೇರು ಸಾಸಿರ ಗಂಗಸಾರಗಳ ಸೂಸುವ ಸಾರಾಯಿಯ ಪೀಪಗಳ ಲೆಕ್ಕವಿಸೆಂದು ಪೇಳ್ವರಾರದನು (ಕಂಪಶಂ· ೦೦–೩೮); ಕೆಲಕೆಲವದರ ಬೆಲೆಯು ಸಹ ಪೀಪಗಳ ಮೇಲೆ ಇಲ್ಲವೆ ಪೆಟ್ಟಿಗೆಗಳ ಮೇಲೆ

ಇರುತ್ತದೆ (ಮುಂಬ...). **ಪೀಪಾಯಿ** : ಒಂದು ದೊಡ್ಡ ಪೀಪಾಯಿ ಯೊಳಗೆ . . . ನೀರು . . . ತುಂಬುತ್ತಾರೆ (...); ಒಂದೊಂದು ಅಲೆಯೂ ಇವಳನ್ನು ಪೀಪಾಯಿಯಂತೆ ಎತ್ತಿ ಹಾಕುತ್ತಿದ್ದಿತು (...). **ಪೀಪು** : ನೀರು ತುಂಬಿದ್ದೊಂದು ಪೀಪಿನೊಳಗೆ ಇಳಿದು ಕೊಡ್ರಲಾಗಿ (...). **ಪೀಪೆ** : ಭೋಜನಸಮಾರಂಭವು ಮುಗಿಯಿತು. ಬೆಲೆಯುಳ್ಳ ಸಾರಾಯಿಗಳ ಪೀಪೆಗಳು ಹಾರಿ ಹೋದವು (...). [ ← ಹಿಂ. ಪೀಪಾ; ಮರಾ. ಪೀಪ. / ಪೋರ್ಚು. pipa ]

**ಪೀಪರಿ** (ನಾ). = ಪೀಪಿ ೧ : ನಿನ್ನೆ ಸಂಜೆ ನಿನ್ನ ಓಟಿ ಪೀಪರಿ ಸಮನಾಗಿ ಕೇಳಿಸಿತ್ತು ನನಗೆ (...). [ < ಪೀಪಿ ]

**ಪೀಪಾಯಿ** 'ಪೀಪ' ನೋ.

**ಪೀಪಿ** (ನಾ). ೧. ಪೀ ಪೀ ಎಂದು ಶಬ್ದ ಹೊರಡಿಸುವ, ಸೀಟಿಯಂತೆ ಊದುವ ಒಂದು ಸಾಧನ : ನಾರಾಯಣಸ್ವಾಮಿ ಆ ಕೊಳಲನ್ನು ಕೈಯಲ್ಲಿ ತೆಗೆದುಕೊಂಡು ಪರೀಕ್ಷೆ ಮಾಡುತ್ತ "ಇದು ಏನು ? ಪೀಪಿ ಅಲ್ಲವೇ ?" ಎಂದು ಕೇಳಿದ (...). ೨. ನಾಗಸ್ವರ, ಶಹನಾಯಿ ಮುಂತಾದ ಊದುವ ವಾದ್ಯಗಳ ತುದಿಯಲ್ಲಿ, ನಾದವನ್ನು ಹೊಮ್ಮಿಸಲು ಸಿಕ್ಕಿಸುವ ಎರಡು ಚಪ್ಪಟೆಯಾದ ಬಿದಿರಿನ ಪಟ್ಟಿಗಳು : ಈ ವಾದ್ಯ ಸುಮಾರು ಎರಡು ಅಡಿಗಳಿಂದ ಎರಡೂವರೆ ಅಡಿಗಳ ಉದ್ದವಿದ್ದು ...ಚೂಪು ಕೊನೆಯಲ್ಲಿ ಈ ವಾದ್ಯಕ್ಕೆ ಪೀಪಿ (reed) ಸೇರಿಸಿರುತ್ತದೆ (...). ೩. ಬಾಳೆ ಎಲೆ, ತೆಂಗಿನ ಗರಿಗಳನ್ನು ಸುತ್ತಿ, ನಾದ ಹೊಮ್ಮುವಂತೆ ಮಾಡಿದ ಸಂರುಳಿ : ನಸ್ಯದ ಡಬ್ಬಿ, ಬಾಳೆಎಲೆ ಪೀಪಿ ಇವುಗಳಿಂದ . . . ಅಳುವ ಮಕ್ಕಳನ್ನು ಸಮಾಧಾನ ಪಡಿಸುವ ಕೆಲಸ ಇವರ ಮೇಲೆ ಬಿದ್ದಿರುತ್ತ (...). ೪. (ಆಲಂ) ಗಂಟಲು : ಆ ಸಂಗೀತಗಾರನ ಪೀಪಿ ಕುಗ್ಗಿಹೋಗಿದೆ (...). [ ← ತುಳು. ಪೀಪಿ./ಹಿಂ. ಪೀಪಿಯಾ ]

**ಪೀಪು** 'ಪೀಪ' ನೋ.

**ಪೀಪೆ** 'ಪೀಪ' ನೋ.

**ಪೀಯೂಷ** (ನಾ). ೧. ಅಮೃತ ; ಸುಧೆ : "ಅಮೃತಂ, ತ್ರಿದಶಾಹಾರಂ, ಸುಧಾ, ಪೀಯೂಷಂ—ಈ ೪ ಅಮರ್ದಿನ ಪೆಸರ್" (...); ಆ ತ್ರಿದಶಜಯಮಹೀಭುಜಂ . . . ಮುಕ್ತ್ಯಂಗನಾಭುಜಪಾಶಕ್ಕೊಳಗಾಗಿ ಪೀರ್ದನೊಲವಿಂ ತದ್ವಕ್ತ್ರಪೀಯೂಷಮಂ (...); ಶಿವಕಥಾಪೀಯೂಷಮಂ ಕರ್ಣದಿಂ ಸವಿವುತ್ತಂ . . . ಪಥೂವಲ್ಲಭರಿರ್ದರುತ್ಸವಯುತರ್ (...); ಮಿಮಾಯಿಸಿದರವನಂ ದಿವ್ಯೋಧುನಿಯ ಪೀಯೂಷತೀರ್ಥದಿಂ (...). ೨. ಹಾಲು ; ಕ್ಷೀರ : ಜಗಮೆಲ್ಲಂ ... ಪೀಯೂಷದೆ ತಣಿದುದೊ ಬೆಳ್ದಿಂಗಳೊಳ್ ಸಂದುದೋ ಸಂದೆಗಮೇನೆಂಬಂತದೇಂ ಪರ್ಬಿಯಿದೊ ಸ್ಫುರನೆಶಿಸ್ಫೂರ್ತಿಕೀರ್ತಿಪ್ರತಾನಂ (...); ಭೈರವಾಂಕ . . . ಪೀಯೂಷದಲ್ಲೀಶಗಭಿಷೇಕವೆಚಿದ (...). ೩. ಕರು ಹಾಕಿದ ಏಳು ದಿವಸಗಳೊಳಗಿನ ಆಕಳ ಹಾಲು ; ಗಿಣ್ಣುಹಾಲು : "ಪೀಯೂಷಃ, ಅಭಿನವಂಪಯಃ— ಈದ ೭ ದಿನಗಳ ಒಳಗಾಗಿ ಹಸುವಿನ ಗಿಣ್ಣುಹಾಲು" (...). [ ಸಂ. ]

**ಪೀಯೂಷಪಿಂಡ** (ನಾ). ಒಂದು ಬಗೆಯ ಭಕ್ಷ್ಯ ; ಹಾಲುಂಡೆ : "ಪೀಯೂಷಪಿಂಡ[ಕಾಶಾಂ.ಪಿಷ್ಟ]ಮೆನೆ ಹಾಲುಂಡೆಯೆನಿಸಿಕ್ಕು" (...). [ ಸಂ. ]

**ಪೀಯೂಷಹಸ್ತ** (ನಾ). ಅಮೃತಕಿರಣ ; ಚಂದ್ರ : ಈ ದೈತ್ಯಶತ್ರು ಮಹೀಭೃನ್ಮತ್ತರ್ಣಿಕಾಕುವಳಯಕ್ಕಾ ತನ್ನ ಪೀಯೂಷಹಸ್ತಮೆ ತಾನಾಶ್ರಯಮೆಂದೊಡೇವೊಗಟ್ಟುದೋ ಶ್ರೀವೀರಬಲ್ಲಾಳನಂ (... ; 1183). [ಸಂ.]

**ಪೀರ್, ಪೀರಂ$_1$, ಹೀರ್$_1$, ಹೀರು$_1$** (ಕ್ರಿ). ೧. ಹಾಲು, ನೀರು ಮೊದಲಾದ ದ್ರವಪದಾರ್ಥಗಳನ್ನು (ಬಾಯಿಯಿಂದ) **ಸೇದಿಕೊಳ್ಳು,—ಎಳೆದುಕೊಳ್ಳು** : ಪೀರೆ ತವದುಣ್ಣುವ ಸೌರಭಮೆಂದು ಪೀರ್ದುರ್ ಪೀರ್ದಪಟಬದೇಂ ತೆಱಂದಿರಿದು ಪಾಯ್ವುದೊ ಕೇತಕಿಯೊಳ್ ಮದಾಳಿಗಳ್ (...); ರಕ್ತವರ್ಣದಿಂ ಕೂಡಿದ ಕಣ್ಗಳಿಂ ಶುಕನಿಕಾಯದ ಜೀವಮನೆಯ್ದೆ ಪೀರ್ವವೊಲ್ . . . ನೋಡಿದನಾ ಜರಚ್ಛಬರನಾಯಕಂ (...); ಹಱಗಟ್ಟಲೆಯಂ ತವೆ ಪೀರುತುಂ . . . ಬಂದವಯಾದ್ರಿಯಸರ್ಪನೇಱಿದಂ (...). ೨. ಆಸ್ವಾದಿಸು; ಚಪ್ಪರಿಸು ಸವಿ : ಪಾಲ್ವೊರೆದ ನುಣ್ಬರಲಂ ಪೊಲೆಗಿತ್ತು ಪೀರ್ದು ಕಣ್ದೆಱೆಯದ ಕಂದನಂದೆನಗೆ ಕಣ್ದೆಱೆಯಪ್ಪನೊ ಮಂದಹಾಸಮಂ (...); ಪಥಿಕನೊರ್ವ ತರುಣಿಯ ಲಾವಣ್ಯರಸಮನಕ್ಷಿಗಳಿಂದಂ ಬರೆ ಪೀರ್ದು ದಣಿದು ಬಟ್ಟೆಯ ಪರಿಶ್ರಮಮನ್ಯಥಯನಱಿಯದಿರ್ದಂ ಸುಖದೊಳ್ (...); ಪೊಸಗಂಪೇಱಿದ ಬಿಂಬಫಲವ ಗಿಳಿ ಮಸಗಿ ಸುತಸದಿ ಪೀರ್ವಂತೆ (...). ೩. ಕುಡಿ ; ಈಂಟು : ಜಿಗುಟಿಯಂತೆ ನೆತ್ತರನೆ ಪೀರ್ವ ಡಾಕಿನಿಯರಿಂ . . . ರಣದೇವತೆಯ ೧ಂದತಿಭಯಂಕರಾಕಾರಮಪ್ಪುದು (...); ಯುವರಾಜನ ನೆತ್ತರಂ ಕುರುಧ್ವಜಿನಿಯೆ ನೋಡೆ ಪೀರ್ದು (...); ಹಂಸನೆಂತು ಪಾಲುಂ ನೀರುಂವೆರಸಿದಲ್ಲಿ ನೀರಿರೆ ಪಾಲನೆ ಪೀರ್ಗುಂ (...). ಪೀರು$_1$ : ೧. ನೀರಧಿಯ ಪೀರುವವೊಲ್ಕೆತಪ್ಪ ಮಾರುತಿಯ ನಿಟ್ಟಿಸುತ ನಕ್ರಕೂರ್ಮಂಗಳೆಲ್ಲ ತೋರಭಯದಿಂದೊಂದನೊಂದೊರಸಿ ವಿತಳವಂ ಸಾರುತಿರಲು (...). ೩. ಅಂಬುಹಾರಗಳನೊಂದೆ ಗುಟುಕಿನೊಳ್ಪೀರಬೇಕು (...). ಹೀರ್$_1$ : ೨. "ಹೀರ್ (ಪೀರ್)— ರಸಾಸ್ವಾದನೇ, (ಭೂಷಣೇ ಚ)" (...). ಹೀರು$_1$ : ೧. ತನ್ನನುದರದೊಳು ಗರ್ಭೀಕರಿಸಿಕೊಂಡಿರ್ದ ಮುನ್ನೀರನಾ ವಡಬಶಿಖಿ ಹೀರುವಂದದಿಂ . . . ಸನ್ನುತಗುಣಾಭರಣಭೂಷಿತಂಗಾ ದುಷ್ಟವಾಹನಸಂ ಕೇಡನೆಣಿಸಿ (...); ಬಣ್ಣದ ಚಿಟ್ಟೆ ಪುಷ್ಪದಿಂ ಪುಷ್ಪಕ್ಕೆ ಹಾರಿ ಬಂಡನು ಹೀರಿ ಕಂಗೊಳಿಸುತಿರೆ (...); ಹತ್ತಿನಾರು ತಕ್ಕಮಟ್ಟಿಗೆ ಬೇಗ ನೀರನ್ನು ಹೀರುತ್ತದೆ . . . ಬಣ್ಣಗಳನ್ನು ಚೆನ್ನಾಗಿ ಹೀರುತ್ತದೆ (...). ೨. ಕರಡಿ ತಣಿದಾದಿ ಹೋದುದಿಲ್ಲಿ ನೆರೆ ದಿಟಹೆಗಳ ಹೀರಲೊಡೆದ ಹುತ್ತವಿದೆ (...). ೩. ಘೋರ ಪಾತಕಿ ದುಃಶಾಸನನ ರಕುತವ ಹೀರಿ ಮುದದಿ ಮುರವೈರಿಯ ಭಜಿಸಿದ (...); ಮೊಲೆಯುಂಬಂದದಲಿ ಕೆನ್ನೆತ್ತರನು ಹರಿ ಹೀರೆ... ಬೆದಱಿ ಪೂತನಿ ಪೋಯ್ತು ದೃಶ್ಯದಲಿ (...); ಕಾಲಕೂಟವ; ನಿನ್ನ ತುಟಿಗೊತ್ತಿ ಕಾಲಂ, ಜುಣುಗದಲೆ ಹೀರದಂ (...).

ಹೀರಿ ಹಿಪ್ಪೆ ಮಾಡು, ಹೀರಿ ಹಿಪ್ಪೆಯ ಮಾಡು=ನಿಸ್ಸಾರಗೊಳಿಸಂ ; ಸತ್ತ್ವಹೀನವಾಗಿಸಂ : ಗೂಢಚಾರರು...ನಮ್ಮ ದೇಶದ ಸಾರವನ್ನು ಹೀರಿ ಹಿಪ್ಪೆ ಮಾಡುತ್ತಿರುವರು (...); ಅರಿರಾಯರುಗಳೆಂಬ ನವಧವಳೇಕ್ಷುದಂಡವನು ತವಕದೆ ಹೀರಿ ಹಿಪ್ಪೆಯ ಮಾಡಿ (...); ಮಾಯೆಯೆಂಬ ರಕ್ಕಸಿ ಸಕಲಪ್ರಾಣಿಗಳ ಸಾರವ ಹೀರಿ ಹಿಪ್ಪೆಯ ಮಾಡಿ (...).

[ದೇ.॥ ತುಳು. ಹೀರು; ತೆಲು. ಪೀರುಚು, ಪೀರ್ಚು, ಪೀಲುಚು]

**ಪೀರಖಾನಿ** (ನಾ). ಪೂರ್ವಕಾಲದಲ್ಲಿ ಬಳಕೆಯಲ್ಲಿದ್ದ ಹದಿನಾರು ಬಗೆಯ ರೂಪಾಯಿಗಳಲ್ಲಿ ಒಂದು ಬಗೆ : ಸನ್ ೧೮೪೦ರ ವರೆಗೆ ಹದಿನಾರುಪ್ರಕಾರದ ರೂಪಾಯಿಗಳು ನಡಿಯುತ್ತಿದ್ದವು. ಅವು— ಔರಂಗಾಬಾದಿ...೧೫. ಗೋವಿಂದ ಬಕ್ಷಿ, ೧೬. ಪೀರಖಾನಿ (...). [?]

**ಪೀರಿಯಡ್ಡು** (ನಾ). ಶಾಲೆ, ಕಾಲೇಜುಗಳ ದೈನಂದಿನ ಪಾಠಕ್ರಮಕ್ಕಾಗಿ ವಿಭಾಗಿಸಿಕೊಂಡ (ಮುಕ್ಕಾಲುಗಂಟೆ, ಒಂದು ಗಂಟೆ ಮುಂತಾಗಿ ಅಧಿಕಾರ ವರ್ಗದವರು ತಮ್ಮ ತಮ್ಮ ಅನುಕೂಲತೆಯ ಮೇರೆಗೆ ನಿಗದಿಪಡಿಸಿಕೊಂಡ) ಪಾಠಕಾಲ : ಬುದ್ಧಪೂರ್ವಕಾಲದ ವಿವರವನ್ನು ೨-೩ ಪೀರಿಯಡ್ಡುಗಳಲ್ಲಿ ಮುಗಿಸಿಬಿಡುವುದು ಘೋರವಾದ ದೋಷವೆನಿಸುತ್ತದೆ (ಬಾಇಕ್ರ. ೫). [ ←ಇಂ. period ]

**ಪೀರು₁** 'ಪೀರ್' ನೋ.

**ಪೀರು₂** 'ಪೀಱು₁' ನೋ.

**ಪೀರೆ, ಹೀರೆ₁** (ನಾ). ಒಂದು ಬಗೆಯ ತರಕಾರಿಬಳ್ಳಿ ಹಾಗೂ ಅದರ ಕಾಯಿ : " ಪೀರೆ ಜಾಲಿನ " (ವಸ್ತುಕೋ. ೩೬-೨೦); ನೆಲ್ಲಿಯ ಸೆಟ್ಟು... ಪೊಸಪೀರೆಯು ಬಿತ್ತಿನೊಳಾದ ಬೂದಿಯಂ ನಿಲ್ಲದೆ ಬಾವಿಯೊಳ್ ಕಲಸಲುಟ್ಟಿನ ಕೈವೆಯು ಕಾ(ಖಾ)ರಗೂಜಲೊ(ದೊ)ಳ್ ಪೊಲ್ಲವಿವೆಂಬ ಬಾವಿಗಳ ನೀರಮೃತೋಪಮಮಪ್ಪುದೆಂಗೆ (ಅಭ್ಯಮಾ. ೦೦-೬೩). 'ಕಾಟ್ಪೀರೆ', 'ಕೈಪೆಪೀರೆ' ಪರಾ. **ಹೀರೆ₁** : ಆ ರಾಜಗೃಹಾಂಗಣದೊಳ್ ಹೀರೆಯ ಹೂವಿಂದೆ ಸಮೆದ ಪೊಸಪೂವಲಿಯೊಳ್ ಕಾಲಿಲ್ಲದೆಯುಂ ಉಱುವ ನೇರಾಣಿಯ ಹೊನ್ನ ಮಟಿ (ಅನಂತ. ೪-೬೮); ಹೀರೆಯೆಳೆಗಾಯ ಕಾಯಿದಾಕ್ಷಣದಿ ತಂದದಟ ಧಾರೆಯಂ ಕಿತ್ತಿ ಸಂಬಳಿಸಿ (ಸೂಶಪಾ. ೫-೦); ಹೀರೆ ಸೌತೆ ಕೂಷ್ಮಾಂಡಿಗೆಳುಗೂಗುರಿ... ಸಂಭಾರಂಬೆರೆದುಪ್ಪಿನಕಾಯಿಗಳಡೆ ಮಾಡಿದಳು (ಮಾದೇವ. ೨೬-೬). [ದೇ.॥ ತಮಿ. ಪೀರ್ಕ್ಕೈ, ಪಿ.ರ್, ಪೀರ; ಮಲ. ಪೀರ, ಪೀರವ್ವ್; ತುಳು. ಪೀರೆ ; ತೆಲು. ಬೀರ ; ಕೋಲಾ. ಬೀರಾ; ಪರ್ಜಿ. ಬೀರ]

**ಪೀರ್ತರ್** (ಕ್ರಿ). ಹೀರಲ್ಪಡು ; ಬರಿದಾಗು : ಮದನಾಗ್ನಿಜ್ವಾಲೆಯಿಂ ಮುಗ್ಗಿದುದೋ... ಸುಯ್ಯೋಟ್ಟಂದ ಭೃಂಗಾವಳಿಯನಿರದೆ ಪೀರ್ತಂದುದೋ ಪೇೞುವೆಂಬಂದದೆ ಲಜ್ಜಾಮುಗ್ಧೆಗೇನುಂ ನುಡಿ ಪೊಱಮಡದಾಯ್ತು (ಕಾದಂಬ. ೨೯೦). [ ಪೀರ್ + ತರ್ ]

**ಪೀಲಕ** (ನಾ). ಕರಿಯ ಬಣ್ಣದ ದೊಡ್ಡ ಇರುವೆ ; ಕಟ್ಟಿರುವೆ. [ಸಂ.]

**ಪೀಲಿ, ಹೀಲಿ** (ನಾ). ೧. ನವಿಲುಗರಿ : ಎಮೆಯಿಕ್ಕದೆ ನೋಟ್ಪ ಕಣ್ಗಳ್ ಪೀಲಿವೊಲಾಗೆ ಬಂದು ಪೆಱತೊಂದು ಮನಂಬುಗೆ ಪತ್ತಿ ಚಿತ್ತದೊಳ್ ಕೀಲಿಸೆ ಕಾವನಂಬು (ಶಂಶಪಾ. ೪-೪೩); ಸೋಗೆಯ ಚೆಲ್ವು ಕಣ್ದೆಱೆದುದೋ ಪೇೞೆಂಬಿನಂ ಪೀಲಿಗಳ ಕರದಿಂ ಕಣ್ಗೊಳಿಸಲ್ಕೆ ನರ್ತಿಸುಗು ಮುದ್ಯಾನಂಗಳೊಳ್ ಸೋಗೆಗಳ್ (ಕಾದಂಪೂ. ೨೯೬) ; ವನಲಕ್ಷ್ಮಿಗೆತ್ತಿದ ಪೀಲಿಯ ಸತ್ತಿಗೆಯೋ... ಎನೆ ಚೂತವೊಪ್ಪುಗುಂ (ಗಿರಿ. ೨-೩೪). ೨. ನವಿಲಿನ ಸೋಗೆ,— ತೋಕೆ : ನೀಲಮುತ್ತಿನ ಸರಿಪಳಿಯೊಳು ಕೇಕಿಗಳ್ ಪೀಲಿಯನೆತ್ತಿ ಸಂತಸದಿ ಲೀಲೆಯಿಂ ಕುಣಿದುವು (ಅನಂತ. ೫-೨೦); ನವಿಲ್ ನೀಳ್ದ ಪೀಲಿಯ ಚಮರಿಯಿಂದಮದೊ ಗುಡಿಸುತಿದೆ (ಶ್ರೀರಾಮಪ. ೦೩೨-೦೩೩). ೩. ನವಿಲುಗರಿಯಲ್ಲಿರುವ ಕಣ್ಣಿನಂತಿರುವ ನಡುವಿನ ಭಾಗ ; ಚಂದ್ರಕ : (?). **ಹೀಲಿ** : ೧. ಶಿವ ನಿಮ್ಮ ನೋಡದವನ ಕಣ್ಣು ಹೀಲಿಯ ಕಣ್ಣು (ಸರ್ವಜ್ಞ. ೦೬೪-೬೯೩); ಬರುದಿನ ಕತ್ತರಿಯ ಹೀಲಿಗಳ ಝುಲ್ಲರಿ ಮುಸುಕಿದವು ಗಜವ (ಕುಮಾರವ್ಯಾ. ೩-೬); ಸುತ್ತಿ ಸುಳಿದು ತುಂಬಿಗಳು ಮೇಲೆ ಹೀಲಿಯ ಸತ್ತಿಗೆಯಂತೆ ರಾಜಿಸಲು (ಶಠಕ. ೫-೪೪). ೨. ಹೀಲಿಯನಡ್ಡಗಟ್ಟಿ ಬಿಡದಾಡುವ ಪೆಣ್ಣವಿಲೆಂದು ಕೇಕಿ ಬಂದಾ ಲಲಿತೋಲ್ಲಸತ್ಕಬರಿಗೊಯ್ಯನೆ ಜೋಡಿಸೆ (ಅದ್ಯಟ. ೨-೯೮).

[ದೇ.॥ ತಮಿ. ಮಲ. ತುಳು. ಕೊತ. ತೆಲು. ಪೀಲಿ]

**ಪೀಲಿಕಣ್** (ನಾ). ನವಿಲುಗರಿಯ ಮಧ್ಯದಲ್ಲಿರುವ ಕಪ್ಪುಬಿಂಬ : ಅಲರ್ದ ತಾವರೆಯ ತನಿವಂಡಿನ ಪನಿಗಳಿಂ ಪಸರಿಸುವ ಪೀಲಿಗಣ್ಗಳೊಳಂ . . ರಂಜಿಸುವುದು (ಕಾದಂಪೂ. ೦೦೬). [ ಪೀಲಿ+ಕಣ್ ]

**ಪೀಲಿಗರಗ, ಹೀಲಿಕರಗ** (ನಾ). ನವಿಲುಗರಿಗಳಿಂದ ಅಲಂಕರಿಸಿದ ಕುಂಭ; ಪರಿಜನಂಗಳ್ ತಳೆವ ಪೀಲಿಗರಗದಾಲಿಗುಡುವ ನೀರ ತೋರವನಿಯ ತಂದಲೊಂದುಗೆಯೊಳಮೆಂತಾನುಂ ಹಮ್ಮುದದಿನಗಲ್ದು (ಚಂದ್ರಶೇ. ೫-೦೯ ವ). **ಹೀಲಿಕರಗ** : ಖಜ್ಜಯದ ಹೀಲಿಕರಗದ ಬೋಸದ ಪರಿಯಣದ . . . ನೆಲನನುಗ್ಗಡಿಪ ಪಲವುಂ ನಿಯೋಗದನ್ನಯಾಗತೆಯರುಂ (ಚಂದ್ರಶೇ. ೬-೮೫ ವ).

[ ಪೀಲಿ + ಕರಗ ]

**ಪೀಲಿಗೊಡೆ, ಹೀಲಿಗೊಡೆ** (ನಾ). ನವಿಲುಗರಿಗಳಿಂದ ಮಾಡಿದ ಕೊಡೆ,—ಛತ್ರಿ : ಕಂಪಿಂಗೆಳಸಿ ಮುಡಿಗೆ ಮುಸುಱುವ ಭೃಂಗಂಗಳ್ ನೆಗೆದ ಪೀಲಿಗೊಡೆಯನೆ ತೋರ್ಕುಂ (ರಸರ. ೨-೯೬). **ಹೀಲಿಗೊಡೆ** : ಮುಡಿಯ ಬಾಸಿಗಂಪಿಗೆಳೆದುಂಬಿಯಾಡೆ ಬೆಳ್ಗೊಡೆ ಮೇಲೆ ಮೆಱೆಯೆ ಭಾವಜನು ಅಡಕಟ್ಟು ಬೆಳುಗೊಡೆ ಹೀಲಿಗೊಡೆಯು ನೆಳಲಡಿಯೊಳಿರ್ದ ನೊಯೆನಲೆಸೆದ (ಶಠಕ. ೫೦ -೯೫) [ಪೀಲಿ+ಕೊಡೆ₂]

**ಪೀಲಿದಲೆ** (ನಾ). ನವಿಲಿನ ಸೋಗೆಯಾಕಾರದ ಮುಡಿ,—ಕೂದಲು : ಬಂಡುಣಿಗಾರುಳ್ಗಳ ಪರಪಿಕಾಲಾಪದ ಪೀಲಿದಲೆಯ ಲಲನೆಯನೀಕ್ಷಿಸಿದನು (ಕೃಶಂಪಾ. ४-೦೯). [ಪೀಲಿ+ತಲೆ₁]

**ಪೀಲಿದಳೆ** 'ಪೀಲಿದಟೆ' ನೋ.

**ಪೀಲಿದಳೆವಿಡಿ** (ಕ್ರಿ). ನವಿಲುಗರಿಗಳ ಕೊಡೆಯನ್ನು ಹಿಡಿ : ಪೀಲಿದಳೆವಿಡಿವಂತೆ ಮೃಗಂಪಿಗಳಿಕುಳಂ ಮೇಲೆತ್ತಿ ಬರೆ... ಒಂದು ಲೀಲಾಬ್ಜಮಂ ಪಿಡಿದು ಬರ್ಪಳೊಪ್ಪಿರ್ದಳು (ಕಾದಂಪೂ. ೦೯-೨೩).

[ ಪೀಲಿದಳೆ (<ಪೀಲಿದಟೆ)+ಪಿಡಿ₁ ]

**ಪೀಲಿದಟೆ, ಪೀಲಿದಳೆ, ಹೀಲಿದಳೆ** (ನಾ). ನವಿಲುಗರಿಗಳ ಕೊಡೆ ಪಿಂಛಾತಪತ್ರ : ಆ ಪುರದುಪವನದೊಳ್ . . . ವನದೇವತೆಗೆ ಪೀಲಿದಟೆಯನೆತ್ತನ ಸೋಗೆಸವಿಲ್ಲದಿಲ್ಲ (ಶಂರಾಮಾ. ೦-೦೦೬ ವ); ಮಱದುಂಬಿಯ ಬಂಬಲ್ ಎತ್ತಿ ಪಿಡಿದ ಪೀಲಿದಟೆಯಾಗೆ (ಶಬ್ದಕಾ. ೯೬). **ಪೀಲಿದಳೆ** : ನೆಗೆದು ಸುತ್ತಂ ಪರಿಮಳಿಸುವ ಗಂಧಂಗಳೊಳು ಮುಡಿ ಗೆಱಗುವಳಿಕುಳಂಗಳ ಪೀಲಿದಳೆಯೊಳಗೆ . . . ಮೆಱೆವುತಿರೆ (ಪಂಪರಾ. ದೀ. ೬೨-೦೯). **ಹೀಲಿದಳೆ** : ನೂತನೋದ್ಗತನರ್ತನಕ್ಕೆ ಮುಯ್ಯಾನುತುಂ ಗೊಡೆ ಹೀಲಿದಳೆಯಣುಕುಗಳ ನಡುವೆ ಮೆಱೆವುತಂ (ಶಂಬರ. ೩-೬೩) ತಳಿತ ಬೆಳುಗೊಡೆಯ ತುಱುಗಿದ ಹೀಲಿದಳೆಯ ಮಂಡಲಿಸಿದಣುಕುಗಳ ನೆಳಲೊಳು . . . ನಡೆನಡೆನಪ್ರತಿಮನಚಳಿತಸಿದ್ಧನು (ಸಿದ್ಧರಾ. ೬-೨೦)

[ ಪೀಲಿ+ತಟೆ ]

**ಪೀಲಿದುಱುಬು** (ನಾ). = ಪೀಲಿದಲೆ : ನಿಡುಗಣ್ಗಳ ನಿಬಿಡಸ್ತನಗಳ ಪಿಡಿ ನಡುವಿನ ಪೀಲಿದುಱುಬಿನ ಕಡುಚೆಲ್ವುವಡೆದ ಸೊಬಗುಗಾತಿ ಮೆಲ್ಲನೆ ನಡೆತಂದಳಾ ನೃಪನೆಡೆಗೆ (ನೇಮಿಸಂ. ೦೨-೫೦).

[ ಪೀಲಿ+ತುಱುಬು₂ (<ತುಱುಂಬು₂) ]

**ಪೀಲಿಬಿಜ್ಜಣಿಗೆ** 'ಪೀಲಿವಿಜ್ಜಣಿಗೆ' ನೋ.

**ಪೀಲಿವಿಜ್ಜಣಿಗೆ, ಪೀಲಿಬಿಜ್ಜಣಿಗೆ** (ನಾ). ನವಿಲುಗರಿಗಳಿಂದ ಮಾಡಿದ ಬೀಸಣಿಗೆ : ಪೀಲಿವಿಜ್ಜಣಿಗೆ ತಣ್ಪಿನ ನೀರ ಸೆಱಿಯಾದ ಪೊಂಗಳಂತಿಗೆಯಿರೆ ಸಜ್ಜೆಯೋವರಿಯಿದೋಱಿ ಮಾಡಿತು ಕಂತುಗೆಮ್ಮುಗಂ (ಚಂದ್ರಶೇ. ೬-೬೦). **ಪೀಲಿಬಿಜ್ಜಣಿಗೆ** : ಅನುನಯದಿಂ ವಾರವಿಲಾಸಿನಿಯರ್ ಮೆಲ್ಲಲರ ಪೀಲಿಬಿಜ್ಜಣಿಗೆಯನೊಯ್ಯನೆ ಬೀಸುತ್ತಿರೆ ನೃಪನಂದನನಿನಿಸಿನಿಸಂ ಬಬಲ್ಕೆಗೆಟ್ಟಯುತ್ತಿರ್ದಂ (ಕಾದಂಪೂ. ೪೫೫). [ ಪೀಲಿ + ಬಿಜ್ಜಣಿಗೆ ]

**ಪೀಲಿವೊಜೆ** (ನಾ). ನವಿಲುಗರಿಗಳ ಹೊರೆ,—ಪೆಂಡೆ : ಕರಿದಂತಂಗಳ ನಾಂತು ಪೀಲಿವೊಜೆಯಂ ತಟ್ಟೈಸಿ ಗಂಧೇಭಮುಕ್ತಾಫಳಭಾರಮಂ ತಳೆದು . . . ಬಂದರನೇಕರ್ ಬೞಿಸಂದು ಕಾಡೊಡೆಯನಂ ಕಾಂತಾರದೊಳ್ ಲುಬ್ಧಕರ್ (ಕಾದಂಪೂ. ೦೬೯). [ ಪೀಲಿ + ಪೊಜೆ ]

**ಪೀಲು₁** (ನಾ). ೧. ಒಂದು ಬಗೆಯ ಮರ ; ಅಕ್ಷೋಟವೃಕ್ಷ; ಉಗುನಿ: "ಪೀಲುವನಲ್ ಗುಡಫಲಂ" (ಪಶ್ವಶಾಲೋ. ೩೪-೮). ೨. ಹೂವು. ೩. ಬಾಣ. ೪. ಆನೆ : "ಪೀಲು ಪಿನದ್ವಿರದಾಂಕಂ" (ಪಶ್ವಶಾಲೋ. ೦೩೦-೬೩); "ಪೀಲುಃ — ಪುಂದೀಗಿಡ, ಆನೆ, ಸರಳು, ಹುವ್ವು" (ಸಿದ್ಧಾಂತಿ. ೪೦೯). ೫. ಹುಳು; ಕ್ರಿಮಿ. ೬. ಕಣ; ಅಣು : ಸೆರೆಮನೆ ಎನುವುದು ಏತಕೊ ಒಡಲಿಗೆ ಕಾಂಬುದು ಅರಮನೆ ತುಣುಕು ಅದು ಕೀಲುಕೀಲದಲಿ ಪೀಲುಪೀಲಿನಲಿ ರನ್ನದ ಕಣಕಣ ಮಿಣುಕುವದು (ಅರಳು. ೦೪೩-೮). ೭. ಹುಲ್ಲು : "ಹುಲ್ಲಿನಲ್ಲಿ ಮರದಲಿ ಪೀಲು" (ಮಂಗಲಾ. ೦೪೩-೨೩). [ಸಂ.]

**ಪೀಲು₂** (ನಾ). [ಸಂಗೀತ] ಒಂದು ರಾಗದ ಹೆಸರು : ಬರಖತ್ತುಲ್ಲಾ ಖಾನರು ಇವರ ಮನೆಯಲ್ಲಿ 'ಪೀಲು'ರಾಗವನ್ನು ನುಡಿಸಿದಾಗ (ಗಾಳಿ. ೨); ಅವನು ಪೀಲುರಾಗದಲ್ಲಿ ಕಟ್ಟಿದ ಪದವು ಹಳ್ಳಿಗಳಲ್ಲಿ ಎಷ್ಟೋ ದಿನ ಲೋಕಪ್ರಿಯವಾಗಿತ್ತು (ಗಂಧಹಾಯು. ೨೩೨). [←ಹಿಂ. ಮರಾ. ಪೀಲು]

**ಪೀಲುಕ** (ನಾ). ೧. ಒಂದು ಬಗೆಯ ಮರ : 'ಕಾಕಪೀಲುಕ' ಪರಾ. ೨. ಇರುವೆ. [ಸಂ.]

**ಪೀಲುಪರ್ಣಿ** (ನಾ). ೧. ಒಂದು ಬಗೆಯ ಸಸ್ಯ; ಹೆಗ್ಗುರುಟಿಕೆ : "ಮೂರ್ವಾ, ದೇವೀ . . . ಗೋಕರ್ಣೀ, ಪೀಲುಪರ್ಣೀ—೧೦ ಹೆಗ್ಗುರುಟಿಕೆಯ ಹೆಸರುಗಳು" (ಸಿದ್ಧಾಂತಿ. ೦೩೦). ೨. ತೊಂಡೆ ಗಿಡ : "ತುಂಡಿಕೇರೀ, ರಕ್ತಫಲಾ, ಬಿಂಬಿಕಾ, ಪೀಲುಪರ್ಣೀ—೪ ದೊಂಡೇಗಿಡದ ಹೆಸರು" (ಸಿದ್ಧಾಂತಿ. ೦೪೪). [ಸಂ. ಪೀಲುಪರ್ಣೀ]

**ಪೀವ** (ನಾ). ದೊಡ್ಡದು ; ಸ್ಥೂಲವಾದುದು : "ಬಹುಳಃ . . . ಪೀವಾ, ಪೀವರಃ—ಈ ೫ ದೊಡ್ಡ(ತು)" (ಹಲಾಯು. ೬-೦೪೬). [ಸಂ.]

**ಪೀವಡಿ**, **ಪೆವಡಿ** (ನಾ). ೧. ಅರಿಸಿನಬಣ್ಣದ ಮಣ್ಣು; ಹಳದಿ ಮಣ್ಣು : ಘಟಕ, ಮುಶಿಯ ಮಣ್ಣು, ಕುಂಬಾರರ ಮಣ್ಣು, ಕಾವಿ, ಪೀವಡಿ ಮುಂತಾದ ವ್ಯುತ್ಪತ್ತಿಕೆಗಳು ಈ ಧಾತುವಿನಿಂದ (aluminium) ಹುಟ್ಟುತ್ತವೆ (ಮುಂಬಯು. ೬-೦೬). **ಪೆವಡಿ** : ೨. ಹಳದಿಬಣ್ಣ : ರತಲಿನ ಮೇಲೆ ಕಿಮ್ಮತ್ತು ಲಗತಕ್ಕ ಜಿನಸಗಳು. ೧, ಅಗರ . . . ೫೧, ಹಿತ್ತಾಳಿ ತಂತಿ; ೫೨. ಪೆವಡಿಬಣ್ಣ (ಹಳದಿಬಣ್ಣ) (ಮುಂಬಯ್ಯ. ೦೨೯). [←ಮರಾ. ಪಿವಡೀ, ಪೇವಡೀ]

**ಪೀವರ** (ಗು). ೧. ಕೊಬ್ಬಿದ ; ಸ್ಥೂಲವಾದ ; ತೋರವಾದ : ಆಕೆಗಳ ಪೀವರತುಂಗನಿತಂಬಬಿಂಬದೊಂದಗಲದ ವೃದ್ಧಿ ಪೆರ್ಚೆ ನೆಲೆವೆರ್ಚದುದೀ ಕೊಳಂ (ಶಾಂತಿಪು. ೮-೨೮). 'ಪೀವರಸ್ತನಿ' ಪರಾ. (ನಾ). ೨. ದೊಡ್ಡದು ; ಸ್ಥೂಲವಾದುದು : "ಬಹುಳಃ, ಸ್ಥೂಳಃ . . . ಪೀವರಃ—ಈ ೫ ದೊಡ್ಡ (ತು)" (ಹಲಾಯು. ೫೬-೦೪೬); ಅತಿನಿಬಿಡಂಗಳ್ ವೃತ್ತೋನ್ನತಂಗಳತಿಪೀವರಂಗಳತಿಕಠಿನಂಗಳ್ . . . ಅವಳ ಕುಚಂಗಳ್ (ಗದಾಯು. ೬-೫೬). ೩. ಸ್ಥೂಲನಾದವನು ; ದಪ್ಪನಾದವನು : "ಪೀವರನೆನಲ್ ಸ್ಥೂಲನೆನೆ ಬಹುಲನೆನೆ (ಪೀನನೆನೆ) ದೊಡ್ಡಿತಪ್ಪವನೆನಿಕ್ಕುಂ" (ಮಂಗಲಾ. ೬೯-೦೦). [ಸಂ.]

**ಪೀವರಸ್ತನಿ** (ನಾ). ೧. ಪುಷ್ಟವಾದ ಮೊಲೆಗಳುಳ್ಳವಳು. ೨. ದೊಡ್ಡ ಕೆಚ್ಚಲುಳ್ಳ ಹಸು : "ಪೀನೋಧ್ನೀ, ಪೀವರಸ್ತನೀ—ಈ ೨ ಹೆಗ್ಗೆಚ್ಚಲಾವು" (ಹಲಾಯು. ೪೫-೦೦೬). [ಸಂ. ಪೀವರಸ್ತನೀ]

**ಪೀವರೋಧ್ನಿ** (ನಾ). = ಪೀವರಸ್ತನಿ ೨ : "ಪೀವರಸ್ತನಿ ಪೀವರೋಧ್ನಿಯೆನೆ ಹೆಗ್ಗೆಚ್ಚಲಾವು" (ಮಂಗಲಾ. ೫೪-೫). [ಸಂ. ಪೀವರೋಧ್ನೀ]

**ಪೀಳಿಗೆ** (ನಾ). ೧. ವಂಶ ; ಕುಲ : ರವಿಕುಲದ ಪೀಳಿಗೆಯೊಳೊಗೆದ ರಾಯರ್ಗೆ ಪಟ್ಟವ ಕಟ್ಟುವಂದಿದಿಲ್ಲದೊಡರಸುತನ ಸಲ್ಲದು (ತತಳಾ. ೬-೦೦) ದೇವಕೀಸುತನೇನು ಬಂಡಿಯ ಬೋವಗುಲದಲಿ ಜನಿಸಿದನೆ ಮೇಣಾ ವಿರಿಂಚಿಯದಾವ ಸಾರಥಿಕುಲದ ಪೀಳಿಗೆಯೊ (ಕುಮಾ್ಯ. ೫-೩೪); ತೆಗೆಸಿದನು ಬಳಿಕಿನಕುಲದ ಪೀಳಿಗೆಯ ನೃಪರಾರ್ಜಿಸಿದ ನಾನಾಯುಗ ಯುಗಂಗಳ . . . ನಾಣೆಯಂಗಳನಖಿಳವಸ್ತುಗಳ (ಕೋರಿಣ ೦-೬-೪). ೨. ತಲೆಮಾರು : ತಲೆಯಿಂದ ತಲೆಗೆ, ಪೀಳಿಗೆಯಿಂದ ಪೀಳಿಗೆಗೆ . . . ಇಳಿಯುತಿದೆ ಯುಗದಿಂದ ಯುಗಕೆ ಮಾನವಧರ್ಮನಿಲದವ್ಯುತಧಾರೆಯದು (ಮಂಳುಳ. ೪೦೮); ಹಿಂದಿನವರ ಆದರ್ಶಗಳು ಬರುವ ಪೀಳಿಗೆಗೆ ಮೇಲ್ಪಂಕ್ತಿಯಾಗುತ್ತವೆ (ಶಿಷ್ಟರ. ೩೨೦). ೩. ವಂಶಕ್ಕೆ ಸೇರಿದವನು ; ವಂಶಜ : ನಿರೀಕ್ಷಿಸುತನಿಬರಿಂಗಿತವ ಮೇಲುಮೊಗದ ಗಭೀರಗತಿಯ ಭಡಾಳವನು ಕಂಡಿವರು ರಾಯರ ಪೀಳಿಗೆಗಳಹುದೆಂದು ನಿಶ್ಚಯಿಸಿದನು ಮನದೊಳಗೆ (ಕುಮಾ್ಯ. ೦೬-೨೬). 'ಪೀಟಿಗೆ' ಪರಾ.

**ಪೀಳ್ಕುದುರೆ** (ನಾ). [ ಸಂಗೀತ ] ಪಿಟೀಲಿನ ಧ್ವನಿಪೆಟ್ಟಿಗೆಯ ಮಧ್ಯಭಾಗಕ್ಕಿಂತ ಸ್ವಲ್ಪ ಮೇಲುಗಡೆಯಲ್ಲಿ ತಂತಿಗಳು ಹಾದು ಹೋಗಲು ಅಂಬವಾಗಿ ಅಳವಡಿಸಿರುವ ಕುದುರೆಗೆ ಸಿಕ್ಕಿಸುವ ಒಂದು ಉಪಕುದುರೆ ; ೯ ನಾದವನ್ನು ಕಡಮೆ ಮಾಡುವುದಕ್ಕಾಗಿ ಈ ಉಪ ಕುದುರೆಯನ್ನು ಸಿಕ್ಕಿಸುತ್ತಾರೆ : ಅವರ ಸಾಧಕ ಅತಿ ಗೋಪ್ಯ ಪಿಟೀಲಿಗೆ ಪೀಳ್ಕುದುರೆಯನ್ನು ಸಿಕ್ಕಿಸಿ ಸಣ್ಣನಾದದಲ್ಲಿ ಅಭ್ಯಾಸಮಾಡುತ್ತಿದ್ದರು (ಪಾಳಲಾ. ೨೦). [ < ಪಿಳ್ಳೆ + ಕುದುರೆ ]

**ಪೀಱು₁**, **ಪೀರು₂** (ಕ್ರಿ). ಕೆದರು ; ಚೆದರು ; ಚೆಲ್ಲಾಪಿಲ್ಲಿಯಾಗು ; ಅಸ್ತವ್ಯಸ್ತವಾಗು : "ಪೀಱು—ವಿಕೀರ್ಣೇ" (ಶಮನಾ.ಪ) ; ತೊಡಂಕಿ ಪೀಱಿದ ಕುರುಳ್ಗಳಿ ಚಿತ್ರದೊಳಾದ ಬೇಸಱಂ ನುಡಿವವೊಲಾಗೆ ಬರ್ಪ ಕಮಳಾಯತನೇತ್ರೆಯನಿಂದುವಕ್ತ್ರೆಯಂ ಕಂಡು (ಶಂಕಭಾ. ೦೩-೪೪) ; ಸುಬರ್ಗೊಂಡ ಗಡ್ಡಮುಮಂ ಮೀಸೆಯುಮನಗಲೆ ನೂಂಕಿ ಪೀಱಿದ ತಲೆಯೋಱಂತಿರ್ದ ಬಾಯೊಳಡ್ಡಗೈಯನಿಡುವುದುಂ (ಲೀಲಾವ. ೬-೫೬ ವ). **ಪೀರು₂** : ಕಪ್ಪುಕುರುಳುಗಳಿಂದ ತಲೆಯ ಪೀರಿದರು ಒಪ್ಪುವೊಲು ತಾರೆಗಳ ನಡುವೆ ತೂರಿಹಳು ರಾತ್ರಿಯೆಂಬಿಪಳಾವ ಧಾತ್ರಿ ? (ಬಾಸಿಗ. ೩೫-೪) [ ದೇ.॥ ತಮಿ. ಪೀಱು = ಬಿರಿ, ಸೀಳು ; ಮಲ. ಪೀರು = ಹರಿ ]

**ಪೀಱು₂** (ನಾ). ೧. ಚೆದರುವಿಕೆ ; ಚೆಲ್ಲಾಪಿಲ್ಲಿಯಾಗುವಿಕೆ ; ಅಸ್ತವ್ಯಸ್ತವಾಗುವಿಕೆ : ಪಿಟ್ಟಾದ ಪೀಱಾದ ಸಿಂಧುರದಿಂ ತಟ್ಟಿಗದ ಮುಟ್ಟಿಗದನ್ಯರಥದಿಂ ಕಣ್ಗಂ ಮನಕ್ಕಂ ಭಯಂಕರಮಾದಾಜಿಯೊಳಟ್ಟಿ ತಿಂಬ ಜವನೆಂಬಂತಿರ್ದನಬ್ಜೋದರಂ (ಶಂಲಾಪು. ೪-೦೨೪). ೨. ಇರಚಲು ; ಇರಿಸಲು : ಪಾಱುವ ವಿಮಾನದೊಂದಳ್ಳೇಱಿಂ ಪಱಿದುಗುವ ಮುಗಿಲ ನೀರ್ಗಳ ಪಲವುಂ ಪೀ[ ಪಾಠಾಂ. ಜೀ, ಬೀ ]ಱುಗಳೊಳೆಳಸಿ ಖಚರರನಾಱಿಸಿದುದು ಗಗನದೊಳ್ ವಿಯತ್ತಳಪವನಂ (ಆದಿಪು. ೪-೮೬). [ < ಪೀಱು₁ ]

**ಪೀಟಿಗೆ** (ನಾ). ಸಿಂಹಾಸನ ; ಪೀಠ : "ಪೀಠಿಕೆಗೆ ಪೀಟಿಗೆಯೆನಿಕ್ಕುಂ" (ಸಂಜೀವ. ೦೪) ; ನೀನುಳ್ಳೊಡುಂಟು ರಾಜ್ಯಂ . . . ನೀನುಳ್ಳೊಡುಂಟು ಪೀಟಿಗೆ ನೀನಿಲ್ಲದಿವೆಲ್ಲಮೊಳವೆ (ಗದಾಯು. ೫-೨೦) ; ಬೇಡಿದೊಡೀಯನಂತಡಿಱಿಯಂ ಮಱಿವೊಕ್ಕೊಡೆ ಕಾಯನಂತವಂ ನಾಡರಸಾಗಿ ಪೀಟಿಗೆಯನೇಱಿದೊಡೇನವನಗ್ರಗಣ್ಯನೇ (ಸೂಕ್ತಿಸು. ೦೬-೨೩) ; ಪೀಠಿಕಾ—ಪೀಟಿಗೆ (ಕಕುದ. ೨೫೬ ಪ್ರಯೋ). 'ಪೀಳಿಗೆ' ಪರಾ. [ < ಸಂ. ಪೀಠಿಕಾ ]

**—ಪು₁**, **—ಹು₁** (ಪ್ರ). ಪ್ರೇರಣಾರ್ಥದಲ್ಲಿ ಧಾತುಗಳ ಮೇಲೆ ಹತ್ತುವ ಒಂದು ಪ್ರತ್ಯಯ : 'ಅಱಿಪು', 'ತಿಳಿಪು₁', 'ನಡಪು₁' ಪರಾ. — ಹು₁ : 'ಕಳುಹು', 'ತಿಳುಹು₁' ಪರಾ.

**—ಪು₂**, **—ಹು₂** (ಪ್ರ). ಒಂದು ಭಾವನಾಮವಾಚಕಪ್ರತ್ಯಯ : 'ಒಳ್ಪು', 'ತೆಳ್ಪು', 'ನಣ್ಪು' ಪರಾ. —ಹು₂ : 'ತೆಗಹು', 'ತೊಡಹು₂' ಪರಾ.

**ಪುಂ** (ನಾ). ೧. ಗಂಡಸು ; ಪುರುಷ : ಪುಂ ಪೆಂಗಳಿಂದ (ಪುಂ ಪೆಣ್ಗಳಿಂದ) ಪುಟ್ಟಿದ ದೇಹವನು ತಿಳಿ . . . ಇಂಪಾಗಿದೆಯೆಂದು ಹಿಗ್ಗದಿರೆಲವೊ ಹೊಲೆಗಂಪು ನಾರುವುದು ತೊಳೆಯದೆ ಇರಲು (ರಿದಾಕ್ಕ. ೯–೦). ೨. ಗಂಡುಸಂತಾನವಿಲ್ಲದವರಿಗೆ ಪ್ರಾಪ್ತವಾಗುವುದೆಂದು ಹೇಳಲಾದ ಒಂದು ನರಕ. ೩. [ವ್ಯಾಕ] ಪುಲ್ಲಿಂಗ : ನೀನಜು ಕರ್ಣಾಟಕದೊಳ್. ಪೀನಂ ಸ್ತ್ರೀ ಪುಂ ನಪುಂಸಕೋಭಯ ಪುಂಸ್ತ್ರೀ ಸ್ತ್ರೀನಪ್ಸವುಸ್ತ್ರವಾಚ್ಯಾನ್ಯೂನಾಪ್ಪ್ಯಯವೆಂದು ಲಿಂಗಮೊಂಬತ್ತು ತೆಜು (ಶಮದ. ೯೯).

[ ಸಂ. ಪುಂಸ್ ]

**ಪುಂಕಿಸು** (ಕ್ರಿ). ಧ್ವನಿ ಮಾಡು ; ಸ್ವರವನ್ನು ಹೊರಡಿಸು : ಸುಷಿರವಾದ್ಯವಾದನವಿಶಾರದನಪ್ಪ ಕಿನ್ನರಂ ತನ್ನಯ ಸೊಳಹೆಯೆಂಬ ವಾಸವಂ ಕೊಂಡು ಹೆಲ್ಲಣಿಯಂ ಸುದ್ದವಾಗಿ ಪುಂಕಿಸಿ ಬಿಂಕಂಬಡೆಯೆ ಮುಹಚಾರೆಯುಮಂ ಮಾಡಿ ರೂಢಿವಡೆದ ಮಧ್ಯಮಾದಿಯೆಂಬಾದಿರಾಗಮಂ ರೂಹುಗೊಳಿಪುದುಂ (ಶಾಂತೀಶ್ವ. ೦೩–೬೬ ವ); ಪುಂಕಿಸಿದ ಮಾಂಸ[ವಾಂಶ]ಕಾರನ ಪುಂಕೃತಿಯುಮಂ ಶ್ರುತಿಯುಮೆಂದು ಭೇದಿಸಲಿನ್ನಾರ್ಗಂ ಕರಮರಿದೆನೆ ಭಾರತಿಯಿಂ ಕಿಜಿಯಳಿವಲ್ಲಿರೆನಿಸಿ ಸಮಗಾಯಿನಿಯರ್ ತಾರಯ್ಸುವುದುಂ (ಮಹಾಶೀ. ೯–೩೪).

[< ಪುಂಖಿಸು]

**ಪುಂಕೃತಿ** (ನಾ). ಸ್ವರ ; ನಾದ : ಪುಂಕಿಸಿದ ಮಾಂಸ[ವಾಂಶ]ಕಾರನ ಪುಂಕೃತಿಯುಮಂ ಶ್ರುತಿಯುಮೆಂದು ಭೇದಿಸಲಿನ್ನಾರ್ಗಂ ಕರಮರಿದೆನೆ ಭಾರತಿಯಿಂ ಕಿಜಿಯಳಿವಲ್ಲಿರೆನಿಸಿ ಸಮಗಾಯಿನಿಯರ್ ತಾರಯ್ಸುವುದುಂ (ಮಹಾಶೀ. ೯–೩೪). 'ಹುಂಕೃತಿ' ಪರಾ. [ಪುಂ + ಕೃತಿ]

**ಪುಂಖ** (ನಾ). ೧. ಬಾಣದ ಹಿಂಭಾಗ ; ಹಿಳಿಕು : "ಬಾಣದ ಪಿಳಿಕದು ಪುಂಖಂ" (ವಸ್ತು.ಕೋ. ೬೫–೦೯) ; ವಿರಹಜ್ವರದಿಂ ಪುಳಕೋತ್ಕರಮೊಗೆದುವು ರೋಮಕೂಪಮೆನಿತನಿತಜುಳೊಳಂ ಸ್ಮರನ ಸರಲ್ಗಳ್ ನಾಂಟಲ್ ಶರೀರಮಂ ಪತ್ತಿ ನಿಂದ ಪುಂಖಂಗಳವೋಲ್ (ಕಾದಂಪೂ. ೯೩೪) ; ಮಿಸುಪ ಕಲಧೌತ ಪುಂಖಪ್ರಸರಂ ಖದ್ಯೋತತತಿವೊಲಾದುದು ನಭದೊಳ್ (ಜಗ೦. ೦೨–೦೨). ೨. ಗಿಡುಗ. ೩. ಮಂಗಳಕಾರ್ಯ. ೪. [ಸಂಗೀತ] ನಾದ ; ಸ್ವರ : ಪುಂಖಶುದ್ಧಮೆನೆ ಭೋಂಕನೆ ಪುಂಖಿಸಿ ಮಧ್ಯಮಾದಿಯಂ ಚಾಳಿಸಿ . . . ಮೃದುಸ್ವರಂ ಪಾಳಿಯನೊಪ್ಪುವಂತೆಸೆಯೆ ಬಾಜಿಸಿದಳ್ ಸುವಿಲಾಸೆ ವೀಣೆಯಂ (ಸೂಕ್ತಿಸು. ೩–೦೯). [ಸಂ.]

**ಪುಂಖಾನುಪುಂಖ** (ನಾ). ಒಂದರ ಹಿಂದೆ ಒಂದರಂತೆ ಎಡೆಬಿಡದೆ ಬರುವ ಬಾಣಪರಂಪರೆ,—ಬಾಣಗಳ ಸಾಲು : ನೈಷ್ಠಿಕವೆಂಬ ಮುಷ್ಟಿಯೊಳಂ ಪುಂಖಾನುಪುಂಖವೆಂಬ ಶರಸಂಧಾನದೊಳವಯವದೊಳ್ ತೆಗೆದೊಡೆ (ಸಂಕಠಾ.೨–೩೨ ವ) ; ಏನ ಹೇಳುವೆ ಭಟನ ಶರಸಂಧಾನವನು ಪುಂಖಾನುಪುಂಖವಿಧಾನವನು ಝೇಂಕಾರಶರಜಾಳಪ್ರಸಾರಣವ (ಕುವ್ಯಾಕ. ೩–೯೩).

**ಪುಂಖಾನುಪುಂಖವಾಗಿ** = ಒಂದರ ಹಿಂದೆ ಒಂದರಂತೆ ; ಎಡೆಬಿಡದೆ ; ನಿರಂತರವಾಗಿ : ವಿಚಾರಗಳು ಪುಂಖಾನುಪುಂಖವಾಗಿ ಏಳುತ್ತಿದ್ದವು (ಕಾಮಧೇನು. ೯೬) ; ಇದರ ಅರ್ಥವಿವರಣೆಗೆ ತೊಡಗಿದರೆ ಪುಂಖಾನುಪುಂಖವಾಗಿ ಜಿಜ್ಞಾಸೆಯೇಳುವುದು ಸಹಜ (ಕಾವ್ಯಕು. ೦೬).

[ ಸಂ. ]

**ಪುಂಖಾನುಪುಂಖಂ** (ಅ). ಒಂದರ ಹಿಂದೊಂದು ಎಡೆಬಿಡದೆ ಬಾಣಗಳು ಬರುವಂತೆ : ಬಟಿಯಿಂ ಮೆಯ್ಗಂಡು ಪುಂಖಾನುಪುಂಖಮಿಸುತ್ತಿರ್ಪೆಡೆಯೊಳ್ ತೆರಳ್ಚಿದುವಗುರ್ವಿಂ ಪರ್ವಿ ಬಂದಿರ್ದ ಮೇಘಮುಖಾಹೀಂದ್ರರ ಪೊಂಕಮಂ ಜಯಕುಮಾರೋನ್ಮುಕ್ತಬಾಣಾಳಿಗಳ್ (ಆಂಪು. ೦೩ ೬೦) ; ಅಂತು ಪುಂಖಾನುಪುಂಖಮಿಸುವುದುಂ (ಶಂಠಾಪು. ೦೯–೦೩೪ ವ).

[< ಪುಂಖಾನುಪುಂಖ]

**ಪುಂಖಾನುಪುಂಖಿತೆ** (ನಾ). ಎಡೆಬಿಡದಂತಿರುವ ಬಾಣಪ್ರಯೋಗ : ಏಕ್ಕಟಿಗ ಪುಂಖಾನುಪುಂಖಿತೆಯಿಕ್ಕಿ ಹಾಕಿದನೈದಿದಂಬುಗಳಿಕ್ಕಡಿಗೆ ತುಂಬಾಗುತಿರ್ದವು ಪಾರ್ಥನೆಸುಗೆಯಲಿ (ಜಕಥಾ. ೯೩–೬೩).

[ಸಂ. ಪುಂಖಾನುಪುಂಖಿತಾ]

**ಪುಂಖಿ**, ಪುಂಗ (ನಾ). ಒಂದು ಬಗೆಯ ಮರ : "ಪುಂದ್ರಃ—ತಿಲಕವೃಕ್ಷ. ಗೋಳಿಯ ಮರ, ಪುಂಖಿ, ಕೊಗ್ಗೆ" (೬ಕಂ. ೦೦೦). **ಪುಂಗ** : ಪುಂಗ— Pongamia glabra (ಹೊಂಗೆ) (ಶಾಸನ.೯). 'ಹೊಂಗೆ' ಪರಾ.

[← ತಮಿ. ಪುಙ್ಕು]

**ಪುಂಖಿತೆ** (ನಾ). (ಬಾಣವನ್ನು ಬಿಡುವ) ಕೌಶಲ ; ಕೈಚಳಕ : ತೊಡುವ ಚಿತ್ಕಾರವನು ಬಾಣವ ಬಿಡುವ ಪುಂಖಿತೆಗಳನು ಕಣ್ಣಿವೆಯಿಡದೆ ನೋಡಿದರ ಮರಸಭೆಯೊಳಗೆಲ್ಲ ಕಾಣದಲೆ (ಜಕಥಾ. ೯೩–೩೪).

[ಸಂ. ಪುಂಖಿತ = ಬಾಣದಂತೆ ಗರಿಗಳಿಂದ ಕೂಡಿದುದು]

**ಪುಂಖಿಸು** (ಕ್ರಿ). = ಪುಂಕಿಸು : ಕಳಿಪ ಮಯಣಮಂ ನುಣ್ಪಾಗೆ ತಿರ್ದಿ ಪುಂಖಿಸಿ ಹೊ[ಹೆ]ಲ್ಲಣಿಯ ಶುದ್ಧವಾಗಿ ಮುಹಚಾಳಿಯುಮುಮಾಡಿ . . . ಸಮಯೋಚಿತರಾಗಮಂ ಸುವ್ಯಕ್ತಿವೆತ್ತು ನಿಡ ತೋರ್ಕೆಗೊಳಿಸುವುದುಂ (ಶಾಂತೀಶ್ವ. ೭–೯೩ ವ) ; ಪುಂಖಶುದ್ಧಮೆನೆ ಭೋಂಕನೆ ಪುಂಖಿಸಿ ಮಧ್ಯಮಾದಿಯಂ ಚಾಳಿಸಿ . . . ಬಾಜಿಸಿದಳ್ ಸುವಿಲಾಸೆ ವೀಣೆಯಂ (ಸೂಕ್ತಿಸು. ೩–೦೯). [ಪುಂಖ + — ಇಸು]

**ಪುಂಗ** 'ಪುಂಖಿ' ನೋ.

**ಪುಂಗವ** (ನಾ). ೧. ಗೂಳಿ ; ಹೋರಿ ; ವೃಷಭ : ವೃಷಾಂಕಪುಂಗವ ವಿಘಟ್ಟಿತೋತ್ತೀರಮಂತದೊಂದದೆ (ಕಾದಂಪೂ. ೬೯೦) ; ಓರ್ಮೆಯೆ ಮುಟ್ಟಿ ವಂದುದು . . . ಪುಂಗವಂ (ಜಗ೦. ೩–೬೬). ೨. (ಸಮಾಸದ ಕೊನೆಯ ಅಂಗವಾದಾಗ) ಒಡೆಯ ; ನಾಯಕ : "ಸ್ವಕುಲಪ್ರಧಾನ ಗಜವಾಜಿ ಕುಂಜರಂ ವಿಭು ವೃಷಾಖ್ಯ ಪುಂಗವಮುಕ್ಯಂ" (ವಸ್ತುಕೋ. ೬೨೦–೦೬). 'ಮುನಿಪುಂಗವ' ಪರಾ. ೩. ನಂದಿವೃಕ್ಷ : "ಪುಂಗವಮೆನಲ್ ನಂದಿ" (ಮಂಗರಾ. ೩೬–೦೯). [ಸಂ.]

**ಪುಂಗವಧ್ವಜ** (ನಾ). ೧. ನಂದಿಯ ಚಿಹ್ನೆಯುಳ್ಳ ಬಾವುಟ : ಮುಂಗಡೆಯ ನಪನೆಲೆಯ ಗೋಪುರ ಪುಂಗವಧ್ವಜಗುಡಿಗಳಿಂದಂ ರಂಗೊಳಿಪ ಶಿವಭವನಮಂ ನಲವಿಂದ ನೋಡಿದರು (ಕಂಕಿದಾ. ೨–೬೦). ೨. ನಂದಿಧ್ವಜವುಳ್ಳವನು ; ಶಿವ : ಪುರುಷಪುಂಗವಂ ಪುಂಗವಧ್ವಜಂ ಗಾತ್ರಾರ್ಪಣಂಗೆಯ್ದನಿಸಾನುಂ ಪೊಳ್ತನಿಮಿಷಾಕ್ಷಿಯಿಂ ನಿರೀಕ್ಷಿಸಿ (ರಾಜಶೇ. ೦೩–೩೪ ವ). [ಸಂ.]

**ಪುಂಗಳಿ** (ನಾ). ಒಂದು ಬಗೆಯ ಸಸ್ಯ (?) : "ಬೇಳ ಪುಂಗ [ಶಾಕಾಂ. ಜ್ಯ]ಳಿ ತಿಳುಬನಿಯೆನಿಕ್ಕು" (ಮಂಗರಾ. ೯೦–೬೦). [?]

**ಪುಂಗಿ** (ನಾ). ೧. (ಸಾಮಾನ್ಯವಾಗಿ ಹಾವಾಡಿಗರು ಊದುವ) ಸೋರೆಬುರುಡೆಯಿಂದ ಮಾಡಿದ ಒಂದು ಬಗೆಯ ವಾದ್ಯ : ವಿಷ್ಣುನ ಮಾತನ್ನು ಕೇಳುತ್ತ ಶೀನು ಸ್ತಂಭಿತನಾಗಿ ಕುಳಿತ. ಹಾವಾಡಿಗ ನೋರ್ವ ಪುಂಗಿಯನ್ನೂದಿದಂತಿತ್ತು (ಸಮಜ. ೯೬೦) ; ಪುಂಗಿ ನಾದಕ ನಾಗ ಹಿಂಗ ಹಡೆಯೆತ್ತಿದಂಗ (ಕನ್ನಕಾ. ೬೬೨). ೨. (ಆಲಂ) ಪ್ರಭಾವ ಬೀರಿ, ಮೋಹಗೊಳಿಸುವ ಯುಕ್ತಿ : ಮೊನ್ನೆ ಸಂಜೆಯಿಂದ ನಿಂತಿದೆ ಅವಳ ನಾಲಿಗೆಯ ಆಲೆದಾಟ, ಅವಳ ಮಾತಿನ ಪುಂಗಿ (ತ್ರಿಶಂ. ೬೦). ೩. ಸೊನ್ನೆ ; ಶೂನ್ಯ : ಬೇಕಾಬೇಕಾದವರಿಗೆ ದುಂದು, ಮನೀಮಂದಿಗೆ ಮಾತ್ರ ಪುಂಗಿ (ಗಂಪಾಯ. ೯೬). [← ಮರಾ. ಪುಂಗೀ. / ಪ್ರಾ. ಪುಙ್ಗ]

**ಪುಂಗಿಸೊಗೆ** (ನಾ). ಒಂದು ಊರಿನ ಹೆಸರು : ಕುದುಗೂನಾಡೊಳ್ ಪೂರ್ವ್ವಮಧ್ಯದೇಶೇ ಪುಂಗಿಸೊಗೆನಾಮಗ್ರಾಮಂ(ಮಃ) (ಇಕ. XVIII. ೩೬೬–೦೩ : ೭ನೆಯ ೬೪). [?]

**ಪುಂಚ** (ನಾ). (ಕರಾ) ಹುತ್ತ ; ವಲ್ಮೀಕ : ಅಲ್ಲಲ್ಲಿ ದೊಡ್ಡ ದೊಡ್ಡ ಪುಂಚ (ಹುತ್ತ) ಗಳನ್ನು ನೋಡಿದರೆ ಅರಿಯದವರಿಗೆ ಮೈ ನಡುಗು ಹುಟ್ಟುವುದುಂಟು (ದಂಬಿನಾ· ೧೬) ; ತೆಂಕಲಲ್ಲಿ ಒಂದು ಪುಂಚವಿತ್ತಂತೆ (ಒಡ್ಡಿಅ. ೧೬೩). 'ಪುತ್ತ₁' ಪರಾ. [ ←ತುಳು. ಪುಂಚ ]

**ಪುಂಚೈ**, ಪುಂಜ₁, ಪುಂಜೆ₁, ಪುಣಜ, ಪುಣಜಿ, ಪುಣುಜಿ (ನಾ). ಒಣ ಭೂಮಿ ; ಖುಷ್ಕಿ ಜಮೀನು : ಚತುಸ್ಸೀಮೆಗೆ ಸಲುವ ನಂಚೈ ಪುಂಚೈ ವಾನ್‌ಪಯಿರು ಪುಂಪೌರು . . . ಮುಂತಾದ ಸಕಲಸುವರ್ಣಾದಾಯ ಸಕಲಭತ್ತಾದಾಯ . . . ಸೇರಿಸಿ (ಎಇ. XVII, ೦೦೩-೬೦; 1428). ಈ 'ಪುಂಚೈ' ಎಂಬ ಪದಪ್ರಯೋಗವು ತಮಿಳುನಾಡಿನ ಸಾಮೀಪ್ಯದ ಪ್ರಭಾವದಿಂದ ಆಗಿರಬಹುದು. **ಪುಂಜ₁** : ಎಲ್ಲ ನಂಜವಾ ? ಪುಂಜವಾ ? ಬೈಲುಗದ್ದೆ, ಬೆಟ್ಟುಗದ್ದೆ, ಕಾಡು, ಬೀಡು ಎಲ್ಲ ಕೂಡಿ ಅಷ್ಟಾಗುತ್ತದೆಯೊ ? (ಬಾಳಗ· ೦೩)· **ಪುಂಜೆ₁**: ನಂಚೈ (ಜೈ) ಪುಂಜೆ (ಜೈ) ಕಮುಕು ತೆಣ್ಣ್ ವೈಪ್ಪು . . . ನಿಧಿನಿಕ್ಷೇಪ ಜಲಪಾಷಾಣ ಅಕ್ಷೀಣಿ ಆಗಾಮಿ ಸಿದ್ಧಸಾಧ್ಯಂಗಳುಂ (ಎಇ· XVIII, ೦೯೨-೯೮ ; 1434); ಯಿಾ ಗ್ರಾಮದ ಚತ್ರುಸ್ಸೀಮೆಗೆ ಸಲುವ ನಂಜೆ **ಪುಂಜೆ** ವಾನ್‌ಪಯಿರು ಪುನ್‌ಪಯಿರು ವಾಸಿಲುವರಿ . . . ಹಲ ಉಪಾಧಿಗಳೂ ಸಹ ಸೇರ್ಸಿ ಕೊಟ್ಟೆವು (ಸೌಇಇ. IX–ii, ೯೬೬–೭ ; 1470) ; ನಂಜೆ ಪುಂಜೆ ವಾನ್‌ಪಯಿರು ಪುನ್‌ಪಯಿರು . . . ಮೊದಲಾದ ಹಲ ಉಪಾಧಿಗಳು ಸಹ . . . ಅನುಭವಿಸಿಕೊಂಡು (ಸೌಇಇ· IX–II, ೯೬೬-೩; 1472). **ಪುಣಜ** : ಪೆರಿಯ ಪುಂಗಿಯ ಪೇರೊಬ್ಬೆಯ ಮುರಿದು ಕಿಡಿವ ಗುಣ್ಡಿಯ ಬಬ್ಬಾಗಿಲ ದ್ವಿಸನ್ಧಿಯ ಪುಣಜ ಪರಳನ್ದಿಯ ನಾಡ . . . ಕೂಡಿತ್ತು (ಎಕ· III (R), ನಂಜನ· ೨೬೨-೨೯; 969).
**ಪುಣಜಿ** : (ಕ). **ಪುಣುಜಿ** : (ಕ). 'ನಂಜೆ' ಪರಾ.
[ ದೇ. ‖ ತಮಿ. ಪುಞ್ಚೈ, ಪುನ್‌ಚೆಯ್; ಮಲ. ಪುಞ್ಜ ; ತುಳು. ಪುಂಜೊ ]

**ಪುಂಜ₁** 'ಪುಂಚೈ' ನೋ.

**ಪುಂಜ₂**, ಹುಂಜ₁ (ನಾ)· ೧. ಗಂಡುಕೋಳಿ : ಸುಪಕ್ಷದಿಂದೆ ರಂಜಿಒದುದು ಪುಂಜನಗ್ಗದ ಸುವಸ್ತುವಿನಂತಿರೆ ತಟ್ಟು ಹೇಂಟೆಯೊಳ್ (ಮುಕೋಕ· ೩-೭೮)· ೨. (ಆಲಂ) ಸಮರ್ಥ ; ಗಟ್ಟಿಗ : ಆಗ, ಇವ ಪುಂಜ. ಇವನ ಮೇಲೆ ಬಿದ್ದರೆ ಸಣ್ಣಕಲ್ಲು ದೊಡ್ಡ ಕಲ್ಲ ಮೇಗೆ ಬಿದ್ದಂಗೆ (ಶಾಟೀಮು. ೬೦) ; ಅವ ಪುಂಜ, ಅವನ್ಗೇನು, ನನ್ನ ಬಯ್ದ, ಹೊಡೆದ (ಶಾಟೀಮು. ೬೩)· **ಹುಂಜ₁** : ೧. ಅಂತು ಗಂಡು ತೊಂಡೇಟಿದ ಹುಂಜನಂ ಕೊಂಡು ಪೋಗಿ ಶ್ರೇಣಿಕನ ಮುಂದೆ ಅಭಯಕುಮಾರೋಪದೇಶದಿಂ ಬಿಟ್ಟು (ಶುಶಾಸ್ತ್ರ. ೩-೩೦ ವ) ; ಸಂಜೋಗದಶ್ವಗಳತ್ತಿತ್ತ ಕೋಳಿಯ ಹುಂಜ ನಂದದಿ ಪಾಟ್ ಹರಿಯೆ (ಶರಚ. ೨೨-೨೧) ; ನಾನೊಂದು . . . . ಕುದುರೆಯನ್ನು ಕಂಡೆ· ಅದು . . . ಹುಂಜದಂತೆ ತಲೆಯೆತ್ತಿಕೊಂಡು ಹೇಗೆ ನಡೆಯುತ್ತಿತ್ತು ಅಂತೀರಿ ! (ಅಶ್ರಮ. ೯೦).
[ದೇ. ‖ ತುಳು. ಪೂಂಜೆ ; ತೆಲು. ಪುಂಜು ; ಕೋತ. ಬೂಜ್]

**ಪುಂಜ₃** (ನಾ). ೧. ಗುಂಪು ; ರಾಶಿ ; ಸಮೂಹ : "ನಿಕರಃ . . . ಪುಂಜಃ . . . ಸ್ತೋಮಃ—ಈ ೩೯ ಸಮೂಹಂ" (ಹಲಾಯು. ೧೧೯-೧) : ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಶಂಶಭಾ· ೦-೩೮ ರಗಳೆ) ; ಈ ಪುಣ್ಯದ ಪುಂಜವನೆನಗೆ ಕೊಟ್ಟೊಡೆ ನಿಮ್ಮ ಬಡತನಂ ತೀರ್ವುದೆನ್ನ ಮನೋರಥವಪ್ಪುದು (ನಂಬಿರ. ೨-೭೯) ; ಭೂವನಿತೆಯ ಪುಣ್ಯದ ಪುಂಜ ಮಾನುಷಭಾವವ ಪಡೆದುದೆಂಬಂತೆ . . . ಎಸೆದನು ಚಿಕ್ಕದೇವರಾಜನು ತೇಜದೊಳು (ಹದಿಬ· ೦-೦೦). ೨. ಮಗ್ಗದ ಹಾಸಿನಲ್ಲಿರುವ ರೇಷ್ಮೆಯ ಅಥವಾ ನೂಲಿನ ಲಡಿ,—ಎಪ್ಪತ್ತರಿಂದ ಎಂಬತ್ತು ಎಳೆಗಳ ಸಮೂಹ : 'ಪುಂಜಣಿಗ' ಪರಾ. [ಸಂ.]

**ಪುಂಜಗೊಳ್** (ಕ್ರಿ). ಒಟ್ಟಾಗು ; ಒಂದಾಗಿ ಸೇರು ; ಒಗ್ಗೂಡು : ಕಣ್ಗೆ ಮುತ್ತಿಟ್ಟುದಿಕ್ಕೆಲದಲ್ಲಿ ತಾಯಕ್ಕರೆಯ ಸಕ್ಕರೆಯ ಪುಂಜಗೊಂಡಂತೆ ಪೋಲ್ ಚಿತ್ರಮಯಧವಳಿಮಪುಳಿನರಾಶಿ (ಶ್ರೀರಾಮಾ. ೦೩೦-೨೦೯).
[ಪುಂಜ₃ + ಕೊಳ್₁]

**ಪುಂಜಣಿಗ** (ನಾ). ರೇಷ್ಮೆಯನ್ನು ಮಾರುವವನು ; ರೇಷ್ಮೆ ವ್ಯಾಪಾರಿ: ಪಿಂಜಾರ ಕರ್ಪಾಸ ಮಾರುವ ಪುಂಜಣಿಗ ರೇಶಿಮೆಯ ಮಾರುವ ರಂಜಿಸಿ ಜರತಾರ ಮಾಡುವ ಥಾಲು ಆಯುಧವ (ಸಂದಿಲೀ. ೯-೦೩).
[ಪುಂಜ₃ + < ವಣಿಗ₁]

**ಪುಂಜೆ** (ನಾ). ಉಂಡೆ ; ಮುದ್ದೆ ; ಪಿಂಡ : ಪದಂಗಾಸಿದ ಪೊನ್ನ ಪುಂಜೆಯ ಪೋಲಿದಿರ್ದುದು ಕಣ್ಗೆ ಹಿಮಾಂಶುಮಂಡಲಂ (ಶಂಶಭಾ. ೩-೯೦). [ಸಂ.]

**ಪುಂಜಿಕೆ** (ನಾ). ೧. ಒಟ್ಟಿಲು ; ರಾಶಿ : ದೆಸೆಗಳ್ ನಿಜಾಂಶುವಿಂ ರಂಜಿಸುತಿರೆ ಪುಂಜಿಸಿದ ಪೊನ್ನ ಪುಂಜಿಕೆಯಿಂದಂ ಕೊಸಗಿನ ಮರದಂಜುಗಲರಲ್ದೆಸೆದಂತೆಸೆದಿರ್ಪುವಲ್ಲಿ ಬಜ್ಜರವಸರಂ (ಜಗಚ. ೯-೦೧೬). ೨. ಗೊಂಚಲು ; ಕುಚ್ಚು : ತ್ರಿದಶಾಂಗನೆ ಜಿನಜನನಿಗೆ ಪದೆಪಿಂ ತಾರಾವತಂಸಮಂ ಭೂಷಿಸೆ ತಪ್ಪದ ನೇಂದುಮಂಡಲದ ಜೊನ್ನದ ಪುಂಜಿಕೆಯಂತಿರೆಸೆದುವೆರಡುಂ ಕೆಲದೊಳ್ (ಶಾಂತೀಶ್ವ. ೦೩-೨೦೮). [ಸಂ. ಪುಂಜಿಕಾ]

**ಪುಂಜಿಗೆ**, ಹುಂಜಿಕೆ (ನಾ). = ಪುಂಜಿಕೆ ೧ : ದಳ್ಳುರಿಯುಗ್ಗಡಂ ಪೊಗೆಯ ಕತ್ತಲೆ ಬೂದಿಯ ತೋರ್ಕೆವೆಟ್ಟು . . . ತಲೆಯ ಪುಂಜಿಗೆ ಕುಂದವು ತತ್ಪ್ರದೇಶದೊಳ್ (ಕಾವ್ಯಸಾ. ೩೬೦ ಶೂದ್ರಕ) ; ಅಗ್ನೇಯಕ್ಕೆ ಕಲ್ಲ ಪುಂಜಿಗೆ ತೆಂಕಲು ಲಿಂಗದ ಕಲ್ಲು . . . ಪಡುವ ಜಾಲಗಟ್ಟದ ಕೆಱೆಯುಂ ಶೀ(ಸೀ)ಮೆ (ಎಇ· XIII, ೦೭೨-೯೨ : 1055). **ಹುಂಜಿಕೆ** : ಅಲ್ಲಿಂ ಮುಂತೆ ಹೆರಹಿನ ಕೋಡಿಯ ಕಲ್ಲ ಹುಂಜಿಕೆಯ ಮೇಲ್ ನಟ್ಟ ಕಲ್ (ಎಇ. XIII, ೩೦-೯೯ : 1204)· [ < ಸಂ. ಪುಂಜಿಕಾ ]

**ಪುಂಜಿಸು** (ಕ್ರಿ). ೧. ಒಗ್ಗೂಡಿಸು; ಒಟ್ಟು; ರಾಶಿ ಹಾಕು : "ಪುಂಜಿಸು— ರಾಶೌ" (ಶಮದ); ನಿತ್ಯದಾನಕ್ಕೆಂದು ನಿಯೋಗಿಗಳ್ ತಂದು ಪುಂಜಿಸಿದ ಪಂಚರತ್ನದ ಪೊನ್ನ ರಾಶಿಗಳನರ್ಥಿಜನಕ್ಕೆ ಗೋಸನೆಯಿಟ್ಟು ಸೂಡವೇಟ್ಟು (ಶಂಶಭಾ. ೦೨-೩೨ ವ); ತರವೇಟುವ್ ಮಾಣಿಕ್ಯಭಂಡಾರದ ಪುಡಿಕೆಗಳಂ ಪುಂಜಿಸವೇಟುವ್ ಸುವರ್ಣೋತ್ಕರಮಂ (ಕಾವ್ಯಾವ. ೨೯೯) ; ಬಿಳಿಯ ಮುಗಿಲ್ಗಳ್ ಪಟ್ಟಿಯ ತೊಳೆಯಂ ಪುಂಜಿಸಿದ ಪಾಟಿಯಿಂದಂಬರದೊಳ್ ತೊಳತೊಳಗುವ ಮಿಂಚಿಂದಂದಿಳಿಯೊಳ್ ಜಲಪ್ರಳಯಮಪ್ಪಿನಂ ಮುಟಿಕೊಳ್ಗುಂ (ಅಟ್ಟಮ. ೬-೦೩)· ೨. ಒಟ್ಟುಗೂಡಿಸು : ಸಂಗ್ರಹಿಸು : ಅತ್ಯುತ್ಸವದಿಂದಂ ಮರ್ತ್ಯಭೋಗಂಗಳನನುಭವಿಸಲ್ ನೋಂತರಿಂತೀಗಳಿಂತುಂತವರಂತೇಂ ಪುಣ್ಯಮಂ ಪುಂಜಿಸಿದರೊ ಪಿರಿದುಂ ಶ್ರೀಮತೀ ವಜ್ರಜಂಘರ್ (ಆದಿಪು. ೯-೬೦)· ೩. ಒತ್ತಿ ತುಂಬು ; ತುರುಕು ; ಗಿಡಿ : ಮಸಿಯುಂ ಪುಂಜಿಸಿದಂತಾಟಪ್ಪ ತನು ನೀಳಾಂಭೋಧರಂ ದಾಡೆಗಳ್ ಪೊಸಮಿಂಚುಗ್ರವಿಲೋಚನಂ ದಿವಿಜಗೋಪಂ ಕಾರೊ ಮೇಣ್ ಕಾಳರಕ್ಕಸನೋ ಪೇಟಿನೆ ಬಂದು ತಾಗೆ ಗದೆಯಂ ಕೊಂಡೆಟ್ದು ಭೀಮಂ . . . ಪೊಯ್ದು ನೆಳೆಯೊಳ್ ಕಮ್ಮಾರನಂ (ಕುಶಭಾ. ೭-೨೭); ಕಂಜಭವಂ ಕರಂ ಕಮಲವೈರಿಗೆ ಕಾಯ್ದು ತದೀಯತೇಜಮಂ ಭಂಜಿಸಲೆಂದು ಕತ್ತಲೆಯನಂಜನದಿಂ ಮಿದಿದೆಯ್ದೆ ಲೋಕದೊಳ್ ಪುಂಜಿಸಿದಂತಿರರ್ಪಿಸುವ ದುಸ್ತಮದೊಳ್ ಪೊಲಗೆಟ್ಟು ನಿಂದ ದಿಕ್ಕುಂಜರಯುಗ್ಮದಂತೆ ಬಳನುಂ ವಸುದೇವನುಮಿರ್ದರ್ (ನೇಮಿಪು. ೬-೭೦) : ಕಂಜಗರ್ಭನು ತಮೋಗುಣವನೀ ಲೋಕದೊಳು ಪುಂಜಿಸಿದನೋ ತಥ್ಯಮೆನಲಂಧಕಾರದಿ ಬ್ರಹ್ಮಾಂಡಲೋಕವೆಸೆಯೆ (ಸೌಂದಪು. ೦೭-೦೭). [ ಪುಂಜ₃ + —ಇಸು₃ ]

**ಪುಂಜೀಕರಣ** (ನಾ). ಒಟ್ಟುವಿಕೆ; ಒಗ್ಗೂಡಿಸುವಿಕೆ ; ರಾಶಿ ಮಾಡುವಿಕೆ: 'ಪುಂಜೀಕರಿಸು' ಪರಾ. [ಸಂ.]

**ಪುಂಜೀಕರಿಸು** (ಕ್ರಿ). ಒಗ್ಗೂಡಿಸಂ; **ಶೇಖರಿಸು**: ಅಲ್ಲೊಂದು ಇಲ್ಲೊಂದು ಕಡೆ ನೋಡಿ ಮೆಚ್ಚಿ, ಶ್ಲಾಘಿಸಿದ ಅಂಶಗಳನ್ನೆಲ್ಲಾ ಪುಂಜೀಕರಿಸಿ ನಿರ್ಮಿಸಿದ ಸುಖನಿಕೇತನ ಅದು (ಹೂಬಿಸು. ೦೬).
[ ಪುಂಜೀಕರಣ + —ಇಸು₂ ]

**ಪುಂಚೈ** 'ಪುಂಚೈ' ನೋ.

**ಪುಂಚೈ₂** (ನಾ). ಒಂದು ಬಗೆಯ ಮರ: ಪುಂಜ (ಪೂಯಿ)—ಇಪ್ಪತ್ತು ಘೂಟಿಗಿಂತ ಎತ್ತರವಾಗುವದಿಲ್ಲ . . . ಕಟ್ಟಿಗೆಸಾಮಾನುಗಳನ್ನು ಮಣಾವು ಮಾಡುವುದಕ್ಕೋಸ್ಕರ ಇದರ ಎಲೆಗಳಿಂದ ತಿಕ್ಕುವರು (ಕಚಾಗಿ. ೪೩). [ ? ]

**ಪುಂಡ** (ನಾ). ೧. ತುಂಟ; ದುಷ್ಟ: ವೇದವೆಂಬುದು ಓದಿನ ಮಾತು ಶಾಸ್ತ್ರವೆಂಬುದು ಸಂತೆಯ ಸುದ್ದಿ ಪುರಾಣವೆಂಬುದು ಪುಂಡರ ಗೋಷ್ಠಿ (ಶವಸಂ. ೦೦೩-೯೬೫); ಇವನ ಹಿಡಕೊಂಡು ಹೋಗೆಲೊ ಜೋಗಿ ಇವ ನಮ್ಮ ಮಾತ ಕೇಳದೆ ಪುಂಡನಾದ (ಪುರಂದ. ೩-೦೯ ಅಮಚಕ್ಕಲ); ಅವನ ಗೆಳೆಯರೆಲ್ಲಾ ಮನೆಮಾರಿನ ಯೋಚನೆ ಬಿಟ್ಟ ಹಳ್ಳಿಯ ಪುಂಡರು (ಜ್ವಾಗಮು. ೨೯). ೨. ನೀತಿಗೆಟ್ಟವನು; ನಿಯಮಬಾಹಿರ: (ಶ). (ಗು). ೩. ತುಂಟತನದ; **ಪೋಕರಿಸ್ವಭಾವದ**: ಭೀಮಪ್ಪ ತೋಟದ ಕಬಜಾ ತಗೊಳ್ಳುವ ಬಗ್ಗೆ ಪುಂಡ ಜನರನ್ನು ಕೂಡಿಸ ತೊಡಗಿದನು (ಸುಕಕ. ೮); ದಾರಿಯಲ್ಲಿ ಪುಂಡಜನರ ಹಾವಳಿ (ಹೇಮುಂಕ. ೨೪೫).
[ ದೇ.₂ ತುಳು. ಪುಂಡೆ; ಕೊಡ. ಪುಂಡ. / ಮರಾ. ಪುಂಡ ]

**ಪುಂಡಗಂಡಾಯ** 'ಪುಂಡಂಗಂಡಾಯ' ನೋ.

**ಪುಂಡಗಾತಿ** (ನಾ). ಹಾದರಗಿತ್ತಿ; ಜಾರೆ: (ಶ). [ಪುಂಡ + —ಕಾತಿ₂]

**ಪುಂಡಗಾರ** 'ಪುಂಡುಗಾರ' ನೋ.

**ಪುಂಡಗಾರ್ತಿ** (ನಾ). = ಪುಂಡಗಾತಿ: (ಶ).
[ಪುಂಡಗಾರ (<ಪುಂಡುಗಾರ) + —ತಿ₁ (< —ಇತ್ತಿ)]

**ಪುಂಡತನ** 'ಪುಂಡುತನ' ನೋ.

**ಪುಂಡರೀಕ** (ನಾ). ೧. ಬಿಳಿಯ ತಾವರೆ; ಬಿಳಿಯ ಬಣ್ಣದ ಕಮಲ: "ಪುಂಡರೀಕಮೆನಿಕುಂ ಸಿತಾಂಬುಜಂ" (ಶಬ್ದಮಣಿ. ೨೫-೨೦). ೨. ಬಿಳಿಯ ಕೊಡೆ; ಬೆಳ್ಗೊಡೆ: ಕನತ್ಕನಕದಂಡಮಂಡಿತಪುಂಡರೀಕನಿಕರವಾವರಿಸಿ ತಳರ್ದತ್ತಲುಂ (ಶಬರಂ. ೬-೦೦೫ ವ). ೩. ಹುಲಿ; ವ್ಯಾಘ್ರ: "ವ್ಯಾಘ್ರಃ, ದ್ವೀಪೀ, ಪುಂಡರೀಕಃ . . . ಮೃಗಾರಿಃ—ಈ ೭ ಹುಲಿ" (ಹಲಾಯು. ೩೯-೭೩); ಲಂಲಾಯ ಪುಂಡರೀಕಂಗಳಿಗಂ ತಕ್ಕದಿರುತಿರ್ಪ ದೀವಸ ಮಿಕ್ಕ ಮೃಗಂಗಳಲಿ ಭಯಮುದಿನಿತಿಲ್ಲವನೊಳ್ (ಪಪ್ಪಕಾ. ೫-೯೩). ೨. ೩. ರಿಪುನಗರಂ ಕರಂ ವಿಜನವಾಗಿಯುಮಜ್ಜನರಾಜಿರಾಜಿತಂ . . . ಚಪಳಭುಜಂಗಭಿಃಮನಕುಳಾಶ್ರಯಮುದ್ಗತಪುಂಡರೀಕಮಿನ್ನುಪಮೆಗೆ ಚಿತ್ರವಾಯ್ತೆನಿಪುದೀ ವಿಭು ಕಾವಣದಂಡನಾಥನ (ಎಕ. XI, ದಾವಣ. ೯೯-೩೬; ಸು. 1180). ೪. ಹಣೆಯ ಮೇಲೆ ಇಟ್ಟುಕೊಳ್ಳುವ ಮಣ್ಣಿಯ ಗುರುತು; ಪುಂಡ್ರ. ೫. ಕಪ್ಪೆ. ೬. ಕಲ್ಪವೃಕ್ಷ. ೧, ೨, ೩, ೬: ಹರಿಸಂದೋಹವಿರಾಜಿತಂ ವಿವಿಧಪದ್ಮಾಲಂಕೃತಂ ಹಂಸಸಂಚರಣ ಪ್ರಉಡ ಉದಾತ್ತವಿಕ್ರಮಗುಣೋದ್ಯತ್ಪುಂಡರೀಕಾಂಕ(೦) ಸೌಂದರವಾಗಿಪ್ಪುದ ಜಿಂದೆ ಪದ್ಮವನವಂದು ಭಾವಿಸಲ್ ವಿಷ್ಣುಭೂವರರಿಪ್ಪಾ - ಪುರಮುಂ ಸುರೇಂದ್ರಪುರಮುಂ ವಿದ್ವಿಟ್ಪುರಾನೀಕಮುಂ(ಎಕ. V, ಅರಸೀ.೩೯-೩; 1185). ೭. ಆಗ್ನೇಯ ದಿಕ್ಕಿನ ದಿಗ್ಗಜ: "ಐರಾವತಃ, ಪುಂಡರೀಕಃ 'ಕುಮುದಃ' ಸಾರ್ವಭೌಮಃ . . . ಸುಪ್ರತೀಕಃ —ಈ ೮ ಮೂಡಣಿಂ ಕ್ರಮದಿನಿರ್ದ ದೆಸೆಯಾನೆಗಳ್" (ಹಲಾಯು. ೦೯-೦೦೯); ಬೆದಜಿದುದಭ್ರಮೂರಮಣ ನೊಟ್ಟಜೆಗೆಟ್ಟುದು ಪುಂಡರೀಕಮುಬ್ಬುದು ಕುಮುದಂ . . . ಅದಿರ್ದುದು ಸುಪ್ರತೀಕಮಿರದಾಲಿಸಿ ತತ್ಪಟಹಪ್ರಣಾದಮು (ಶಿಕ್ಕಸ್ತಿ. ೫-೬); ಇಂದ್ರಾದಿ ದಿಕ್ಕೆಂಟಱಲ್ಲಿ ಕ್ರಮದಿಂದೈರಾವತ ಪುಂಡರೀಕ . . . ಸುಪ್ರತೀಕ ಮೆಂದೆಂಟು ದಿಗ್ಗಜಗಳಾದೊಡೆ . . . ಭೂಮಿಯಂ ವಹಿಸಿರ್ಪವು (ಶಿಶಂಕ. ೦೯೯). ೩, ೭: ಆ ವನಂ . . . ದಾನಧಾರೆಯಂತೆ ಪುಂಡರೀಕಗಂಡಕ ಮಂಡಿತಮುಂ . . . ಎನಿಸಿರ್ದುದು (ರಾಜಶೇ. ೫-೬೮ ವ). ೮. ಬಾವುಟ; ಧ್ವಜ. ೯. ಬ್ರಹ್ಮ. ೧೦. ಕಂದುರೆಯ ಕೆನೆತ; ಹೇಷಾರವ. ೧೧. ಒಂದು ಬಗೆಯ ಸಸ್ಯ. ೧೨. ಹಂತ್ರ; ಹಲ್ಮೀಕ: "ದಿಗ್ಗಜದೊಳು ಮುನೀಂದ್ರನೊಳು ಪುಲಿಯೊಳು ಸಿತಾಬ್ಜದೊಳು ಛತ್ರದೊಳು ಭೇಕದೊಳು ಸಲೆ ಪುಂಡರೀಕಮಕ್ಕು" (ಶುಂಗಣಾ. ೦೯೬-೬೦); "ಹುತ್ತ ಹುಲಿ ಕಪ್ಪೆ ಕಮಲಂ ಸತ್ತಿಗೆ ಮುನಿ ವಿಷ್ಣು ಬ್ರಹ್ಮ ಸುರಕುಜ ಸುರವಂ ಉತ್ತಮ ಕರಿ ಧ್ವಜ ಕಬ್ಬು ತತ್ತೀಜಧ್ವನಿ ಪುಂಡರೀಕ- ತ್ರಿಪಂಚಂ" (ಕಾಚಾಕಂ. ೬).
[ಸಂ.]

**ಪುಂಡರೀಕೋದ್ಭವ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಪುಂಡರೀಕೋದ್ಭವನ ಶಿರವನು ಕಡಿದು ತುಂಡಿಸಿದ ಖಂಡಪರಶುವು ರುದ್ರ ಭೂಮಿಯೊಳೆಂಡಲೆದು ತಿರುಗುವವನು (ಹಂಸಾ. ೬.೨). [ಸಂ.]

**ಪುಂಡರ್ಯ** (ನಾ). ಒಂದು ಬಗೆಯ ಸಸ್ಯ ಮತ್ತು ಕಣ್ಣಿನ ರೋಗಗಳಿಗೆ ಔಷಧಿಯಾಗಿ ಬಳಸುವ ಅದರ ಗಡ್ಡೆ: "ಪೌಂಡರೀಕಂ, ಪುಂಡರ್ಯಂ— ೨ ಪುಂಡರೀಕವೆಂಬುವ ಗಂಧದ್ರವ್ಯದ ಹೆಸರುಗಳು" (ಸಿದ್ಧಾಂತಿ. ೦೯೦). [ಸಂ.]

**ಪುಂಡಾಟ** (ನಾ). ಪುಂಡುತನ; ತುಂಟತನ: ಇವನು ಅರಮನೆಯೊಳರಘಳಿಗೆ ಯಿರದೆ ಸ್ತ್ರೀಚೇಟಿಯೊಳು ಮೆರೆವುತಿಹ ಪುಂಡಾಟಗಳನು (ಕಂದ್ರಾವ. ೫೦); ಇನ್ನು ಪುಂಡಾಟ ಮಾಡಕೂಡದು (ಕವುಕ. ೦೬೯).
[ ಪುಂಡು₁ + ಆಟ ]

**ಪುಂಡಾಟಿಕೆ** (ನಾ). ೧. = ಪುಂಡಾಟ: ಅವಳ ಚಿಕ್ಕಂದಿನ ಪುಂಡಾಟಿಕೆ ನೆನೆದರೆ ಬಾಳಿನಲ್ಲಿ ತುಂಬ ಆಸ್ಥೆ ಇರಬೇಕಾದವಳು (ಮೂರುದಾ. ೦೨೦); ಇವನ ಪುಂಡಾಟಿಕೆಗೆ ಹೆದರಿಕೊಂಡರೆ ಈ ಊರಲ್ಲಿ ಬದುಕುವುದೇ ಕಷ್ಟ (ದೇವಹಂ. ೦೨೨). ೨. ಬಂಡಾಯ; ದಂಗೆ: ಪಿತೂರಿ ಪುಂಡಾಟಿಕೆಗಳು ತಲೆಯೆತ್ತುವ ಲಕ್ಷಣಗಳು ಕಾಣಬರುತ್ತಿದೆ (ಕೂರೀಟಾ. ೦೯೩).
[ಪುಂಡಾಟ + —ಇಕೆ]

**ಪುಂಡಿ**, ಹಿಂಡಿ₂, ಪೂಂಡಿ, ಹಿಂಡ್ಡಿ₂ (ನಾ). ೧. ಸಾಮಾನ್ಯವಾಗಿ ಹೊಲಗಳಲ್ಲಿ ಬೆಳೆದುಕೊಳ್ಳುವ ಸೆಣಬಿನಂತಹ ಒಂದು ಸಸ್ಯ: ಇದರ ಸೊಪ್ಪನ್ನು ತರಕಾರಿಯಾಗಿಯೂ ಇದರ ಕಾಂಡವನ್ನು ನಾರಿಗಾಗಿಯೂ ಬಳಸಲಾಗುತ್ತದೆ: ಲೋಲತರ ಕಿರುಕಸಾಲೆಯ ಪುಂಡಿ ತುಂಬಿ ಬಸಳೆಯ ಭಂಗಿಸೊಪ್ಪುಗಳನು . . . ಬಟ್ಟನಾ ಗುರುವರಂ (ಮಹಾಶಿ. ೦೦-೩೫); ಪುಂಡಿ ಬೆಳೆದ ಭೂಮಿಯಲ್ಲಿ ಗೋದಿಯು ಎಂದಿಗೂ ಬೆಳೆಯಲಿಕ್ಕಿಲ್ಲ (ಮುಂಬಯು. ೬-೨೬೦); ಕಿವಿಯ ಹತ್ತಿರ ಏನೋ ನಾಲ್ಕಾರು ಕೂದಲು ಪುಂಡಿಯ ನಾರಿನಂತೆ ಸುರುಳಿ ಸುತ್ತಿವೆ (ಕುಂಹಿಂ. ೦೦೦). ೨. ಒಂದು ಬಗೆಯ ಸಸ್ಯ: (ಶ). ೩. ಒಂದು ಬಗೆಯ ಮರ: "ಪೀಲುಃ—ಪುಂಡೀಗಿಡ" (ಸಿದ್ಧಾಂತಿ. ೯೦೬). **ಹಿಂಡ್ಡಿ₂**: ೨. (ವೃತಿಗ. ೯೦-೬೦೯). 'ಹಿಂಡಿಸೊಪ್ಪು' ಪರಾ. **ಪೂಂಡಿ**: ೨. ಅಮಟಿ, ಪುಂಡಿ (ವೃತಿಗ. ೬೦-೦೯೬೬); ಸೊಪ್ಪುಗಳು: ಅಗಸೆ. . . ಕೊತ್ತಂಬರಿ, ಪುಂಡಿ (ಪುಂಡ ರೀಕ), ಕೆಂಪು, ಸುಗ್ಗಿ, ತುಂಬೆ (ಪಪ್ಪುಮು. ೨೩೬). **ಹಿಂಡ್ಡಿ₂**: ೧. 'ದೊಡ್ಡಹಿಂಡಿಗಿಡ', 'ಹಿಂಡಿಸೊಪ್ಪು' ಪರಾ.

**ಹಿಂಡಿಯ ಸೊಪ್ಪು** = ಪುಂಡಿಸೊಪ್ಪಿನಿಂದ ತಯಾರಿಸುವ ಒಂದು ಬಗೆಯ ವ್ಯಂಜನಪದಾರ್ಥ: ಹಾಲು ಮೊಸರು ತುಪ್ಪ ಉದ್ದಿನ ಕಡುಬು ಹಿಂಡಿಯ ಸೊಪ್ಪು . . . ಇವಂ ಮಂತ್ರಸಹಿತಂ ಶಿಶುವಿಂಗೆ ಮೂಜಿಬಸೂಳು ನಿವಾಳಿಸಿ (ಬಾಲಗ್ರ. ೦೩೫-೯); ಅಪ್ಪ ಕೊಳ್ಳಲಪ್ಪೂ

ಅಗ್ರಜ ಕೊಳ್ಳೊ ಹಿಂದಿಯ ಸೊಪ್ಪು ಕೋ ಸುಲಿವಣ್ಣಗಿವೆ ಕೋ (ಹೋಚಕ. ೧೮–೯೯).

**ಪುಂಡಿನಾರು** (ನಾ). ಪುಂಡಿಗಿಡದ ಕಾಂಡದಿಂದ ತೆಗೆದ ನಾರು : ನಾಡಿಯೆಂದರೆ ಪುಂಡಿನಾರಿನಂತಿಪ್ಪುದು (ಅದ್ಯೋಕ್ತ. ೩-೨೪-೦೬) ; ಕೂಡಲೆ ಪುಂಡಿನಾರಿನಂಥ ತಲೆ ರಂತಸೇವಳ ಹಿಂದೆ ಇಣುಕಿತು (ಭೂಚರು. ೩೩೯). [ ಪುಂಡಿ + ನಾರು₁ (<ನಾರ್) ]

**ಪುಂಡು₁** (ನಾ). ೧. ಪುಂಡತನ ; ತುಂಟಾಟ : ಬೆಕ್ಕಿನಂವದಿ ಪೋಗಿ ಮನೆಮನೆ ಪೊಕ್ಕು ಊಟಿಯ ಗೈವ ಸಮುಯದಿ ತಕ್ಕ ಮಾಡದೆ ನೀವು ಪುಂಡಿಗೆಯಿಕ್ಕಿದಿರಿ ಪಥವ (ಕಂಡ್ರಾವ. ೬) ; ಈ ಊರಲ್ಲಿ ಈ ದೊಡ್ಡ ಮನುಷ್ಯರ ಪುಂಡು ಅಡಗಬೇಕು (ಮಕೆ. ೦೬೩). ೨. ಬಂಡಾಯ; ದಂಗೆ : ಅದೇ ಸಮಯದಲ್ಲಿ ಕೊಡಗರು ಯಾವತ್ತೂ ಪುಂಡುವಿದ್ದು . . . ಸೀಮೆಯನ್ನು ಕಟ್ಟಿಕೊಂಡು ಇರುತಿರುವಲ್ಲಿ (ರಾಜೇಂದ್ರ. ೨೬); ಕೂಡಲೇ ರಾಯನು ಸೈನ್ಯವನ್ನು ಕಳುಹಿಸಿ ಅವನ ಪುಂಡನ್ನಡಗಿಸಿದನು (ಕೃದೇವ. ೦೬). (ಗು). ೩. ಪುಂಡಾಟಿಕೆಯುಳ್ಳ ; ಗೂಂಡಾಗಿರಿಯ ಸ್ವಭಾವದ : ಇಂಥ ಪುಂಡು ಉಪಾಧ್ಯಾಯರನ್ನು ಹತೋಟಿಗೆ ತಂದುಕೊಳ್ಳುವುದು ಹೇಗೆ ? (ಕಂಗಳ. ೫೬). [ಪುಂಡ+ –ಉ₁]

**ಪುಂಡು₂** 'ಪುಣ್' ನೋ.

**ಪುಂಡುಗಂದಾಯ**, ಪುಂಡಗಂದಾಯ (ನಾ). ತುಂಟಾಟದಿಂದ ಶಾಂತಿಗೆ ಭಂಗ ತಂದವರ ಊರಿನ ಮೇಲೆ ಸರಕಾರದವರು ಹೇರುವ ಒತ್ತಾಯದ ತೆರಿಗೆ : ಪುಂಡುಗಂದಾಯ ಹೊರಿಸಿ ಕಾಂಗ್ರೆಸ್ಸಿನ ಸಂಪರ್ಕವಿರುವವರನ್ನು ಸಹ ಗತಿಹೀನರಾಗುವಂತೆ ಮಾಡಿಸದಿರಲಾರೆ (ಕಸೆಟು. ೦೨೨). **ಪುಂಡಗಂದಾಯ :** ೩೫೦೦೦ ರೂಪಾಯಿ ಪುಂಡ ಗಂದಾಯ (ಪ್ಯೂನಿಟಿವ್ ಟ್ಯಾಕ್ಸ್) ಅವರಿಂದ ವಸೂಲ ಮಾಡಲಾಯಿತು (ಕಕಂ. ೨೫೦). [ಪುಂಡು₁+ ಕಂದಾಯ]

**ಪುಂಡುಗರಡಿ**, ಹುಂಡಗರಡಿ (ನಾ). ೧. ತುಂಟ ಕರಡಿ; ದುಷ್ಟಸ್ವಭಾವದ ಕರಡಿ : ವೈದೋಙ್ಪವು ಪುಂಡುಗರಡಿ ಶೈಲಾಂತರದೊಳ್ (ಸೋತ್ರ. ಸು. ೩–೦೫೦). **ಹುಂಡಗರಡಿ :** ೨. ಸ್ವೇಚ್ಛೆಯಾದ ಕರಡಿ : ನೀಲತನುಗಳ ಹುಂಡಗರಡಿಗಳೊಳಗಿಸಿ ಬರೆ ರಾಘವೇಶ್ವರನೋಲಗಕೆ ಜುಂಬವರು ಬಂದರು (ಉತ್ತರಾ. ೨೬–೫೩). [ಪುಂಡು₁+ಕರಡಿ₁]

**ಪುಂಡುಗಾರ** 'ಪುಂಡುಗಾಜ' ನೋ.

**ಪುಂಡುಗಾಜ**, ಪುಂಡಗಾರ, ಪುಂಡುಗಾರ (ನಾ). ತುಂಟ; ದುಷ್ಟ : ಪುಂಡುಗಾಜರು ನಮಗಲ್ಲೆಂದು ಸಗ್ಗದ ಪುಂಡರೀಕಾಯತಾಕ್ಷಿಯರ ಪಂಡೆಯೆನಿಸಿ ಕೊಟ್ಟನು ರಣದೊಳು ಕಡಿಖಂಡವಡೆದು ಬಂದವರಿಗೆ (ಕುಮಾಸಾಂ. ೦೨–೬೯). **ಪುಂಡಗಾರ :** (೬). **ಪುಂಡುಗಾರ** : ಪುಂಡುಗಾರನಾದ ಜಯಂತನಂ ಕೂಡಿ ನಳಕೂಬರನು ದೇವವೇಶಿಯರೊಡನೆ ಮನಸ್ಸು ಬಂದಂತೆ ಯೆಲ್ಲಿಗೊ ಪೊರಟುಪೋದರು (ಶಾಗಂಂ. ೫೬೨–೨೦); ಪುಂಡು ಗಾರನವ ಭಂಡನ ಸುದ್ದಿಯ ಬಿಡುಬಿಡು ಪ್ರಿಯತಮ (ಪತಿ. ೧,೪೦೬). [ಪುಂಡು₁ + –ಕಾಜ]

**ಪುಂಡುತನ**, ಪುಂಡತನ (ನಾ). ತುಂಟತನ ; ಗೂಂಡಾಗಿರಿ : ಪರಸತಿಯ ಬೇಟೆಯ ಪುಂಡು[ಜಾತಾಂ. ದ್ಯುತನದಲಿ ಹೆಂಡಿರನು ಬಿಟ್ಟರ್ಪ ಪೋಟರಿಗೆ . . . ಹೇಳದಿರು ಮಜಿದೀ ಅನುಭವಾಮೃತವ (ಅನುತ. ೨–೨); ಹೆಂಡತಿಗೆ ನೀನಳುಪಿ ಅಳುಪದ ಪುಂಡುತನವನು ತೋಱಿದ್ದೆ (ಕೃಷ್ಣಾ. ೨–೨–೬); ಮಾಲೀಕನನ್ನು . . . ಪುಂಡುತನ ಮಾಡುವುದರಿಂದ ರೊಚ್ಚಿಗೆಬ್ಬಿಸಿದ್ದರು (ಅರು. ೯೩). **ಪುಂಡತನ :** ಚಂಡಿತನವೆಂಬ ಹಿಂಡಿ ಇಡಬೇಕು . . . ಪುಂಡತನವೆಂಬೊ ಪಿಂಡಿ ರುಬ್ಬಿಡಬೇಕು (ಪುರಂದ. ೨–೫೫–೨); ಪುಂಡತನವಮೊಡನೆ ಮಾಡ್ದವಂ ಫಲವನುಣಲಿ (ಕುಶಂಗ. ೩–೯೬); ಇದು ಸಾಹುಕಾರ ಮಾಡಿಸುವ ಪುಂಡತನವೆಂದು ರಾಜಪ್ಪನಿಗೆ ತಿಳಿಯುವುದು ತಡವಾಗಲಿಲ್ಲ (ಅನುಕಾ. ೨೦೬); ಪುಂಡತನ ಮಾಡಿದವ ಭಂಡತನ ಬಿಟ್ಟಾನೇ ? (ಗಾದೆ). [ಪುಂಡು₁+ –ತನ]

**ಪುಂಡುಪೋಕರಿ** (ನಾ). ನೀತಿನಿಯಮಗಳಿಲ್ಲದವನು : ಪುಂಡುಪೋಕರಿ ಗುಂಟು ಹೆಂಡತಿಮಕ್ಕಳಿಗಿಲ್ಲೀ ಕಾಲ (ಪುರಂದ. ೦–೦೨೦–೦); ನೀನು ಮಾತ್ರ ಪುಂಡುಪೋಕರಿಯಾಗಿ ಸೋದರಿಯೊಬ್ಬಳನ್ನು ಛಲಿಸಲು ಮುಂದಾಗಬೇಕೆ ? (ರಂಗಕೋ. ೦೦೯). [ಪುಂಡು₁+ ಪೋಕರಿ]

**ಪುಂಡೆ** (ನಾ). ಪುಂಡಾಟವಾಡುವ ಹೆಣ್ಣು : ಹೆಂಡತಿಯಿಲ್ಲದ ಪುಂಡ ಬಂದು ಅವನಂಗವ ಹೊಯ್ಯಲಾಗಿ ಕಂಡರು ಗಣ್ಯಮಾದ ಪುಂಡೆ[ಜಾತಾಂ. ೮] ಯರೆಲ್ಲರೂ ಕೂಡಿ (ಮನುಗಂ. ೪. ೨೫೩–೨೯). [ಪುಂಡ+ –ಎ₂]

**ಪುಂಡೇಳ್** (ಕ್ರಿ). ದಂಗೆಯೇಳು ; ಬಂಡಾಯ ಹೂಡು : ಮೂಡದಿಕ್ಕಿನೊಳ್ ಶಬರರುಂ ಮತ್ತಂ ಕಿಲುಂಬರ್ ತುಂಡುಮನ್ನೆಯರುಮೊಂದಾಗಿ ಪುಂಡೆದ್ದು ದಾಳಿವರಿದಾರವಂ ಬಗೆಯದೆ ರಾಜ್ಯಮಂ ಬಾಧಿಸುತ್ತು ಮಿರಲ್ (ಕಳನ್ನ. ೦–೬೨). [ಪುಂಡು₁+ಏಳ್₁ (<ಎೞ್₁)]

**ಪುಂಡ್ರ** (ನಾ). ೧. ಬಿಳಿಯಪಟ್ಟೆಗಳುಳ್ಳ ಒಂದು ಬಗೆಯ ಕೆಂಪುಬಣ್ಣದ ಕಬ್ಬು : 'ಪುಂಡ್ರೇಕ್ಷು' ಪರಾ. ೨. ಹಣೆಗೆ ಇಟ್ಟುಕೊಳ್ಳುವ ಗಂಧ, ವಿಭೂತಿ, ತಿಲಕ ಮೊದಲಾದ ಲಾಂಛನ : "ತಿಲಕಂ, ತಮಾಳಪತ್ರಂ, ಚಿತ್ರಕಂ, ವಿಶೇಷಕಂ ,ಪುಂಡ್ರಂ, ಲಲಾಟಿಕಾ—ಈ ೬ ಬೊಟ್ಟು" (ಶಠಾಯು. ೯೯–೩೯೬); ನೊಸಲಲಿ ಅಸ್ಥ ಪುಂಡ್ರವ ಪಟ್ಟಿಕೊಂಡವ ಹೊಲೆಯ (ಬಸಾಚ. ೬೦–೩) ; ಮುಖದೊಳ್ ಪುಂಡ್ರಮನಿಟ್ಟು (ಶಾಗಂಂ. ೦೯೯–೦೬). ೩. (ಕಪ್ಪು, ಕಂದು ಮೊದಲಾದ ಬಣ್ಣದ) ಕುದುರೆಯ ಮೈ ಮೇಲಿರುವ ಬಿಳಿಯ ಪಟ್ಟಿ : ಕಟಿ ಶಂಖಕರ್ಣಮಸ್ತಕನಿಟಿಲತಟೀ ಪುಟದೊಳ್ ಶಶಾಂಕದ್ಯುತಿಯಿಂ ಘಟಿಯಿಸಿದ ಪುಂಡ್ರವೊಳ್ಪಂ ಘಟಯಿಸುಗುಂ (ಅಶ್ವಶಾ. ೩–೬). ೪. ಒಂದು ದೇಶದ ಹೆಸರು ; ಇದು ಈಗಿನ ಬಂಗಾಳ, ಬಿಹಾರ ಪ್ರದೇಶ. ೫. ಚಿತ್ರ: "ಜನಪದದೊಳುಂ ಶಿಲೆದೊಳಂ ಚಿತ್ರದೊಳಂ ಪುಂಡ್ರಮುಕ್ಕು" (ಶಬ್ದಗರಾ. ೦೫೨–೫೬). ೬. ಹುಳು. ೭. ತಾವರೆ. ೮. ಬಿಳಿಯ ಕಮಲ : 'ಪುಂಡ್ರಾಂಬುಜ' ಪರಾ. ೯. ಹೊಳೆ ; ನದಿ : (೬). ೧೦. ಒಡವೆ : (೬). [ಸಂ.]

**ಪುಂಡ್ರಕ** (ನಾ). ೧. ಕೆಂಪು ಕಬ್ಬು. ೨. ಹಣೆಯ ಮೇಲಿಟ್ಟುಕೊಳ್ಳುವ ತಿಲಕ ಮೊದಲಾದುವು. ೩. ಪುಂಡ್ರವೆಂಬ ದೇಶ ಹಾಗೂ ಅಲ್ಲಿಯ ಜನ. ೪. ಒಂದು ಬಗೆಯ ಬಳ್ಳಿ : "ಅತಿಮುಕ್ತಃ ಪುಂಡ್ರಕಃ ವಾಸಂತೀ, ಮಾಧವೀ, ಲತಾ—೫ ಕಾಡುಯಿರುವಂತಿಗೆ ಹೆಸರುಗಳು" (ಸಿದ್ಧಾಂತಿ. ೦೨೬); ತವಕ್ಷೀರ, ಪುಂಡ್ರುಕ, ಪದ್ಮಕ . . . ಇವಂ ಚೂರ್ಣವಂ ಮಾಡಿ ಹಾಕಿ ಹದವಲ್ಲಿಳುಹಿಕೊಂಡು ಆ ತುಪ್ಪವಂ ಪ್ರತಿದಿನವೂ ಸೇವಿಸೆ ಕ್ಷಯವ್ಯಾಧಿ . . . ಗುಣಮಪ್ಪುಂ (ಕಕಪ್ಪ. ೨೫೦). ೫. = ಪುಂಡ್ರ ೩ : ಆನನವಲ್ಲದೆ ಧವಳಸ್ಥಾನ ತಾನಾದೊಡಕ್ಕುಮಾವ ಕಂಠತೆಯುಂ ಸ್ಥಾನದೊಳಂಗದೆ ವಿರ(ಮ)ಳಸ್ಥಾನ ಪುಟ್ಟಿದೊಡೆ ಲಲಿತ ಪುಂಡ್ರಕ ನಾಮಂ (ಅಶ್ವಶಾ. ೩–೩). [ಸಂ.]

**ಪುಂಡ್ರಲಕ್ಷ್ಮ** (ನಾ). ಕುದುರೆಯ ಮೈಮೇಲೆ ಇರುವ ಬಿಳಿಯ ಪಟ್ಟೆಯ ಚಿಹ್ನೆ : ಚಾಪಂ ಶ್ರೀವೃಕ್ಷಂ ಸ್ರುವೆಯೂಪಂ ಸ್ವಸ್ತಿಮುದಗ್ರವಜ್ರ ಮುಮೆಂದೀ ರೂಪಕದ ಪುಂಡ್ರಲಕ್ಷ್ಮನಿರೂಪಕಮಾ ವಾಜಿ (ಅಶ್ವಶಾ. ೩–೫). [ಸಂ. ಪುಂಡ್ರಲಕ್ಷ್ಮನ್]

**ಪುಂಡ್ರಾಂಬುಜ** (ನಾ). ಬಿಳಿಯ ತಾವರೆ : ಶರನ್ನೀರದಸ್ತೋಮಃ ಪೋಬರುತಿರ್ನುದೀಗಳೆನಲುದ್ಯಾನಸಸ್ಥಾನದಿಂ ತಾಮೆಟ್ಟೆಂದು ಮರಾಳ ಜಾಲಮೆನಸುಂ ಪೊರ್ದಿತ್ತು ಪುಂಡ್ರಾಂಬುಜೋದ್ದಾಮಶ್ರೀಯ ವಿಳಾಸವಂ ದ್ವಿಗುಣಿಸುತ್ತಬ್ಜಾಕರಶ್ರೇಣಿಯೊಳ್ (ಕುಸುಮಾ. ೬–೪೯). [ಸಂ.]

**ಪುಂಡ್ರಿಕೆ** (ನಾ). = ಪುಂಡಿ ೧ : ಹೊಲದ ಪುಂಡ್ರಿಕೆ, ಪುಂಡ್ರಿಕೆ, ಗೋಗು, ಪುಂಡಿ (ವ್ಯಾಕಿ. ೪೩-೬೫೦). [<ಸಂ. ಪುಂಡ್ರಕ?]

**ಪುಂಡ್ರೇಕ್ಷು** (ನಾ). = ಪುಂಡ್ರ ೧ : ಉಗುವೆಳನೀರಿಂದಂ ಕದಳಿಗಳಾ ಕದಳಿಗಳ ಪಣ್ಣ ರಸದಿಂ ಪುಂಡ್ರೇಕ್ಷುಗಳ್ . . . ಬಳೆಗು (೧೦೪. ೨-೦೪.) [ಸಂ.]

**ಪುಂಡ್ರೇಕ್ಷುಚಾಪ** (ನಾ). ಮನ್ಮಥ ; ಕಾಮ : ಪುಂಡ್ರೇಕ್ಷುಚಾಪನ ಮಾರ್ದಪ್ಪ . . . ಮುಂಗುರುಳ್ತಿದ್ದಿ (ನವಮೋ. ೫-೨೫). [ಸಂ.]

**ಪುಂಡ್ರೇಕ್ಷುದಂಡ** (ನಾ). ಪಟ್ಟೆಕಬ್ಬಿನ ಜಲ್ಲೆ : ಪುಂಡ್ರೇಕ್ಷು[ಶಾಕಾಂ ರಸದಿಕ್ಷು]ದಾಡದಿ ಪಣ್ಣನಜಿಸುವರೆ (ಪಂಪಾ. ೦೩-೫) ; ಸೋಗೆವೆರಸಿದ ಪುಂಡ್ರೇಕ್ಷುದಂಡಗಳನಮರ್ಚಿ ಬಾಳವೇರ್ಗಳಿಂ ಬಿಗಿದು . . . ಅಳವಡಿಸಿದ ಸುರಯಿಯರಲ ಪರಾಗದ ಪೊಂಜಗಲಿಯ ಮೇಲಣಸುಗೆದಳಿರಲರ್ವಾಸಿ ನೊಳರಸಿವೆರಸಿ ಕುಳ್ಳಿರ್ದು (ಧರ್ಮಶೇ. ೦೦-೩೦ ವ). [ಸಂ.]

**ಪುಂನಪುಂಸಕಲಿಂಗ** (ನಾ). [ವ್ಯಾಕ] ಪುಲ್ಲಿಂಗ ಹಾಗೂ ನಪುಂಸಕ ಲಿಂಗ : ಪುಂನಪುಂಸಕಲಿಂಗಕ್ಕೆ—ರವಿ ಮೂಡಿದಂ, ರವಿ ಮೂಡಿದುದು (ಶಮದ. ೬೬ ಪ್ರಯೋ). [ಸಂ.]

**ಪುಂನಪ್ಪು** (ನಾ). = ಪುಂನಪುಂಸಕಲಿಂಗ : ಪುದಿಗುಮದಂತಕೆ ಪುಲ್ಲಿಂಗದ ಪೋಲ್ ಕಿಡದೆಡೆಗಳಲ್ಲಿಯುಲ್ಲಂ ಸ್ತ್ರೀಲಿಂಗದೊಳಂ ಪುಂನಪ್ಪನೊಳಂ ಪುದಿಗುಂ ತಿಳಿ (ಶಮದ. ೦೨೦ ವ). [ಪುಂ + ನಪ್ಪು]

**ಪುಂಬುಚ್ಚ** 'ಪೊಂಬುಚ್ಚ' ನೋ.

**ಪುಂಭಾವ** (ನಾ). ೧. ತಾನು ಪುರುಷನಾಗಿರಬೇಕಾಗಿತ್ತು ಎಂಬ ಭಾವನೆ; ಗಂಡಸಿನ ಮನೋವೃತ್ತಿ : ನಾಂದಮರೆ ಪತ್ತಿದಂಬರದಿಂ ದೆಸೆವರಸಿಯು ನಿತಂಬಬಿಂಬಮನಬಳಾವೃಂದಮದೀಕ್ಷಿಸಿ ಹೃದಯ ದೊಳಂದೇಂ ಪುಂಭಾವಮಂ ಪುದುಂಗೊಳಿಸಿದುದೋ (ಚಂದ್ರಪ್ರ. ೬-೦೩೧). ೨. [ಕಾಮಶಾ] ಪುರುಷಾಯತವೆಂಬ ಸುರತಬಂಧ : ಒರ್ವ ಗುರು ಕುಚೆ ವೃದ್ಧವಿಪ್ರನೊಳ್ ಪುಂಭಾವದಿ ಸುರತದೊಳಿರೆ (ಪ್ರಾ ಸಾ. ೩೪-೯೬). [ಸಂ.]

**ಪುಂವೇದ** (ನಾ). [ಜೈನ] ಗಂಡುಜೀವಕ್ಕೆ ಹೆಣ್ಣಿನ ಮೋಹವುಂಟು ಮಾಡುವ ಕರ್ಮ ; ೯ ಚಾರಿತ್ರಮೋಹನೀಯದ ಭೇದವಾದ ವೇದನೋಕಷಾಯದ ಉದಯದಿಂದ ಕಾಮಭಾವ ಹುಟ್ಟುತ್ತದೆ. ಪುಂವೇದ ಅಥವಾ ಪುರುಷವೇದದ ಉದಯದಿಂದ ಸ್ತ್ರೀಯ ಬಯಕೆಯೂ ಸ್ತ್ರೀವೇದದ ಉದಯದಿಂದ ಪುರುಷನ ಬಯಕೆಯೂ ಉಂಟಾಗುತ್ತದೆ : ಕಿಡಿಕಿಡಿದು ಬೇಗದಿಂ ಕ್ರಮಕ್ರಮದೊಳೆ ನಪುಂಸಕ ವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ . . . ಘಾತಿಸಿ (ಆದಿಪು. ೦೦-೦೪ ವ) ; ಸಮನಂತರದೊಳ್ ಪುಂವೇದಪೂರ್ವಸತ್ಕರ್ಮಪರಂ ಪರಮೊಜಿಸಿ ಕಿಡಿಸಿದು ಹಾಸ್ಯರತ್ಯರತಿಶೋಕಭಯಜುಗುಪ್ಸೆಗಳಾಜಿಂ (ಚಂದ್ರಪ್ರ. ೦೪-೭೦). [ಸಂ.]

**ಪುಂಶಿಲೆ** (ನಾ). [ಶಿಲ್ಪಶಾ] ವಿಗ್ರಹನಿರ್ಮಾಣಕ್ಕಾಗಿ ಆಯ್ದುಕೊಳ್ಳುವ ಕಲ್ಲುಗಳಲ್ಲಿ ಒಂದು ಪ್ರಕಾರ ; ಗಟ್ಟಿಕಲ್ಲು : ಶಿಲೆಯಲ್ಲಿ ಪುಂಶಿಲೆ, ಸ್ತ್ರೀಶಿಲೆ, ನಪುಂಸಕಶಿಲೆಯೆಂದು ಮೂರುವಿಧ; ಕಂಚಿನ ತಾಳದ ನಾದ ದಂತೆ ಧ್ವನಿ ಕೊಡುವ ಶಿಲೆಯು 'ಪುಂಶಿಲೆ'ಯೆಂದೂ, ಘಂಟಾನಾದದಂತೆ ಧ್ವನಿತವಾಗುವ ಶಿಲೆಯು 'ಸ್ತ್ರೀಶಿಲೆ'ಯೆಂದೂ, ತಾಳವಿಹೀನವಾದ ಶಿಲೆಯು 'ನಪುಂಸಕಶಿಲೆ' ಯೆಂದೂ ಉಕ್ತಿಯಿದೆ. ಪುರುಷದೇವತಾವಿಗ್ರಹಗಳನ್ನು ಪುಂಶಿಲೆಯಿಂದಲೂ ಸ್ತ್ರೀದೇವತಾವಿಗ್ರಹಗಳನ್ನು ಸ್ತ್ರೀಶಿಲೆಯಿಂದಲೂ ಆಧಾರಪೀಠಾದಿಗಳನ್ನು ನಪುಂಸಕಶಿಲೆಯಿಂದಲೂ ಮಾಡಬೇಕೆಂದು ವಿಧಿಸಿದೆ (ಭಾರದ. ೭೭). [ಸಂ. ಪುಂಶಿಲಾ]

**ಪುಂಶ್ಚಲಿ, ಪುಂಶ್ಚಳಿ** (ನಾ). ಹಾದರಗಿತ್ತಿ ; ಜಾರೆ : "ಪುಂಶ್ಚಲಿ ಕುಲಟೆಯಸತಿ ಕುಲಪಾಂಸುಳೆ ಬಂಧಕಿ ಜಾರೆ ಪಾಣ್ಬೆಯಿತ್ವರಿಕೆಯುಮಳ್" (ವಸ್ತುಕೋ. ೫೨-೪); ಉಡಿಯಂ ಸಡಿಲಿಸಿಯುಡುವಡೆ ನಡೆ ನೋಟ್ಪಡೆ ತನ್ನ ಕಿವಿಯುಮಂ ತಲೆಯುಮನಂತಡಿಗಡಿಗೆ ತುರಿಸಿಕೊಳ್ವಡೆ ಪಡಿಮಾತೇಂ ನಿರ್ವಿಚಾರ ಪುಂಶ್ಚಲಿಯಕ್ಕುಂ (ಮದಕ. ೬-೪೦); ಭಾವಕನುಂ ಸೋಲ್ತು ಕಣ್ಣಿಡದು ಪುಂಶ್ಚಲಿಯಂ ಜಡಿದಳ್ ರಹಸ್ಯದೊಳ್ (ಶಕ್ತಪು. ೫-೩೪). ಪುಂಶ್ಚಳಿ : "ಪಾಂಸುಳಾ, ಬಂಧಕೀ, ಸ್ವೈರಿಣೀ, ಅಸತೀ, ಪುಂಶ್ಚಳೀ... ಅಭಿಸಾರಿಕಾ—ಈ ೧೦ ಹಾದರಿಗಿತ್ತಿ" (ಹಲಾಯು. ೬೦-೩೪೨) ; ಪುಂಶ್ಚಳಿ ಯಂತೆ ನೀನೆಲ್ಲಿಗೆ ಪೋಗಿ ಬರ್ಪೆ (ಶಾಪುಂಪು. ೪೦೭) ; ಪುಂಶ್ಚಳಿಯರ್ ಬಂದುಮಕಾಂತಸೂಚಿತನಿಶಾಂತಾಂತಂಗಳಂ ಪೊದ್ದಿದರ್ (ಧರ್ಮಪ. ೦೦-೨೪). [ಸಂ. ಪುಂಶ್ಚಲೀ]

**ಪುಂಶ್ಚಳಿ** 'ಪುಂಶ್ಚಲಿ' ನೋ.

**ಪುಂಶ್ಚಾಂಕ** (ನಾ). ಲಿಂಗರೂಪಿಯಾದವನು : ಪುಂಶ್ಚಾಂಕ ಸದ್ಭಕ್ತ ವಾತ್ಸಲ್ಯ ಭಜಕ ಜನರಿಚ್ಛಾಸುಫಲದಾಯಿ ಸಚ್ಚಿದಾನಂದರೂಪ . . . ಪೊರೆಗೆ (ಗುರುರಾ. ೦-೫). [ಸಂ.]

**ಪುಂಸ** (ನಾ). ೧. ಗಂಡಸು ; ಪುರುಷ : ಹಿಂಸಾನಂದ ಆಸ್ತೇಯಾನಂದ ವ್ಯಾಷೆ ಮತ್ತೆ ವಿಷಯಸಂರಕ್ಷಣಾನಂದ ಸಂಶಯವಿಲ್ಲದೆ ನಾಲ್ಕು ರೌದ್ರ ಧ್ಯಾನ ಪುಂಸರೆಯ್ದುವರು ನರಕಕೆ (ದ್ಯಾಶಾ. ೬-೬೪) ; ಆಸೆಯನು ನಿಜದಾಸಗೈದಿಹ ಪುಂಸರೆಲ್ಲರು ದಾಸರೆನಿಸುವರು (ಜಗದಾ. ೫೬). ೨. ಗಂಡಸುತನ ; ಪುರುಷತ್ವ ; ಪುಂಸ್ತ್ವ : ಆ ಹೆಣ್ಣುಡನ್ನದೊಳು ವಡೆದತಿಶಯವಾಕೆ ಪುಂಸವ ಪಡೆದುದಾಗಿರೆ ನಿಮ್ಮ ಸುತರವರಡಿಯ ಕಾಯ್ವರು (ಜರಾಪಾ. ೦೩೫-೬೬). [ಸಂ. ಪುಂಸ್]

**ಪುಂಸತ್ವ** (ನಾ). ಪುರುಷತ್ವ ; ಗಂಡುತನ : ಅವುಗಳು ತಂತಮ್ಮ ಕೆಲಸ ವನ್ನು ಮಾಡದೆ ಹೋದರೆ . . . ಪುಂಸತ್ವ ಇಲ್ಲದಾಗುವುದು (ಪ್ರಾಂಶಪ್ರ. I, ೪೬೨). [<ಸಂ. ಪುಂಸ್ತ್ವ]

**ಪುಂಸವನ** (ನಾ). ೧. ಷೋಡಶಸಂಸ್ಕಾರಗಳಲ್ಲಿ ಒಂದು ; ಗರ್ಭಿಣಿ ಯಾದವಳಿಗೆ ಗಂಡುಮಗು ಆಗಲೆಂದು ಮಾಡುವ ಒಂದು ಶುಭ ಸಂಸ್ಕಾರ ; ಸೀಮಂತ : ಅವನೀಶ್ವರನಾಗಳ್ ಪುಂಸವನಂ ಮೊದ ಲಾದ ಸಕಲಮಾಂಗಲ್ಯಮಹೋತ್ಸವಮಂ ಮೆಚ್ಚಿದಂ (ಶಂಪಾಪು. ೩-೦೦೩); ಇನಕುಲಾಧೀಶ್ವರಂ . . . ಪುಂಸವನಸೀಮಂತಮಂ ತಾಂ ಚಾರುಲೋಚನೆಗೆ ವಿಸ್ತರಿಸಿದಂ (ಕೈವಲ್ಯ. ೦೬-೩೭) ; "ಪುಂಸವನ" ವೆಂದರೆ ಗಂಡು ಮಗುವು ಆಗಬೇಕೆಂದು ಮಾಡುವ ಸಂಸ್ಕಾರವು (ಆಯುರ್ವೇ. ೧೨೨). ೨. ಗಂಡಸಿನ ಸ್ನಾನ. ೧, ೨. ಸುವಿದಿತಮಿನಿತುದಿನಂ ಸ್ತ್ರೀಸವನಂ ನಿನಗೆಂದು ಕಾಂತೆ ಪುಂಸವನಂ ಮಾಡುವುದೆಂದರ್ಥಾಂತರದಿಂದ ಮನೀಶಂ ಸರಸವಾಡಿ ಕಾಡುಗುಮೆಂದೋ (ಶಕ್ತಪು. ೩-೬೬). [ಸಂ.]

**ಪುಂಸ್ಕೋಕಿಲ, ಪುಂಸ್ಕೋಕಿಳ** (ನಾ). ಗಂಡುಕೋಗಿಲೆ : ಉನ್ಮದ ಮಧುಕರಝಂಕಾರಮಂ ಕೌಮುದೀಸಂಪದಮಂ ಪುಂಸ್ಕೋಕಿಲಾಲಾಪ ಮನಲೆವೆಲರಂ ಬಾರ್ತೆಗೆಯ್ಯಂ ಮನೋಜಂ (ಬುಲ್ಲಪು. ೩-೨೪); ತಿಳಿವಲ್ ವಾಸಂತಿಯಂ ಸಂದಿಸಿ ಪುಗಲೆನೆ ಪುಂಸ್ಕೋಕಿಲಂ . . . ತಿಳಿಪಿದಂ ಪ್ರೇಮ ಕಾಂತಂ ವಸಂತಂ (ಅಪಂಪು. ೬-೬೪). ಪುಂಸ್ಕೋಕಿಳ : ಮಧುಕರ ನಿಕ ರಮುಂ ಪುಂಸ್ಕೋಕಿಳಕಳಾಪಮುಂ ರಾಜಕೀರಕದಂಬಕಮುಂ ಮುಂದೆ ನಡೆಯಲೆದೋಲಗಿಸುತ್ತುಂ ಬರೆ (ಶಾಂತಿಪು. ೭-೦೨೬ ವ). [ಸಂ.]

**ಪುಂಸ್ಕೋಕಿಳ** 'ಪುಂಸ್ಕೋಕಿಲ' ನೋ.

**ಪುಂಸ್ತ್ರೀಲಿಂಗ** (ನಾ). [ವ್ಯಾಕ] ಪುಲ್ಲಿಂಗ ಹಾಗೂ ಸ್ತ್ರೀಲಿಂಗ : ಪುಂಸ್ತ್ರೀ ಲಿಂಗಕ್ಕೆ—ಇವರ್ ಪುರುಷರ್, ಇವರ್ ಸ್ತ್ರೀಯರ್ (ಶಮದ. ೬೬ ಪ್ರಯೋ). [ಸಂ.]

**ಪುಂಸ್ತ್ವ** (ನಾ). ೧. ಪುರುಷತ್ವ ; ಗಂಡುತನ. ೨. ವೀರ್ಯ; ರೇತಸ್ಸು. ೩. [ವ್ಯಾಕ] ಪುಲ್ಲಿಂಗ. [ಸಂ.]

**ಪುಕಪುಕ** (ನಾ). ಹೆದರಿಕೆಯಿಂದ ಎದೆ ಬಡಿದುಕೊಳ್ಳುವುದನ್ನು ಸೂಚಿಸುವ ಒಂದು ಅನುಕರಣಪದ : ಧೈರ್ಯ ಮಾಡಿ ಹೊರಟಿದ್ದೇನೋ ಸರಿ ; ಆದರೆ ಒಳಗೆ ಪುಕಪುಕ ಎನ್ನುತ್ತಲೇ ಇದೆ (ರೂಶಿ).

**ಪುಕಸಟ್ಟೆ** 'ಪುಕ್ಕಟೆ' ನೋ.

**ಪುಕಸಾಟೆ** 'ಪುಕ್ಕಟೆ' ನೋ.

**ಪುಕಳಿ** 'ಪುಕುಳಿ' ನೋ.

**ಪುಕಾರಿಸು** (ಕ್ರಿ). ೧. ಕೂಗು ; **ಚೀರು** ; **ಕಿರಿಚು** : ಆ ಪದಕವಂ . . . ಪ್ರೀತಿಯಿಂ ಧರಿಸಲದು ಸಪಾಶಕ್ಯತೆಯಾಗಿ ಫೂತ್ಕರಂಗೈಯಲದಂ ಬಿಸುಟೋಡಿ ಪುಕಾರಿಸಲ್ ಅರಸನರಿದು ಬೆರಗಾಗಿ (ರವಿವ್ಯಾ. ೨೨೨-೦೪). ೨. ಸಾರು ; ಕೂಗಿ ಹೇಳು : ದುಡ್ಡಿನ ಚೀಲ ಹೊತ್ತುಕೊಂಡು ಸಾಲ ಬೇಕೆ ಎಂದು ಸವಾಲು ಪುಕಾರಿಸುತ್ತ ತಿರುಗುತ್ತಿದ್ದರೆ ? (ದೀಶಹ. I, ೦೦). [ಪುಕಾರು + —ಇಸು₃]

**ಪುಕಾರು, ಪುಕಾರೆ** (ನಾ). ೧. ಗದ್ದಲ ; ಗಲಾಟೆ : ಕಿಲ್ಲೆದಾರರುಂ ಕೊತ್ವಾಲರುಂ ನಾಳೆ ಬರುವ ಬಳ್ಳಾರಿ ಲಷ್ಕರ ಸರಬರಾಯಿಯುಂ ತುಸ ಪುಕಾರಿಲ್ಲದಂತೆಸಗ ಪೇಳು (ಅಶ್ವಾಪ. ೩೧-೩೯). ೨. ಆಕ್ಷೇಪಣೆ ; ತಕರಾರು ; ದೂರು : ಅವರ ಗೈರ್‌ಹಾಜರಿ ಕಾಲದಲ್ಲಿ ಪುಕಾರಿಲ್ಲದೆ ಕೆಲಸ ನಡೆಯಲು ತಮ್ಮ ಬಂಧುಮಿತ್ರರನ್ನು ತಮ್ಮ ಜವಾಬ್ದಾರಿಯ ಮೇಲೆ ನೇಮಿಸಬೇಕು (ಗ್ರಾಮಾಕ. ೬) ; ನಾಳೆಯ ದಿನ ಇಲ್ಲದ ಪುಕಾರುಗಳಿಗೆ ಅವಕಾಶವಾಗುತ್ತೆ (ಮರೆ೪. ೦೦) ; ಪ್ರತಿದಿನವೂ ಇವನ ಮೇಲೆ ಒಂದಲ್ಲ ಒಂದು ಪುಕಾರು ಇದ್ದೇ ಇರುತ್ತದೆ (ಕಲ್ಲಕಾ. ೬೪). ೩. ಅಪವಾದ ; ಆಡಿಕೆ : ಇನ್ನೂ ಏನೋ ಇರಬೇಕು, ಇಲ್ಲದಿದ್ದರೆ ಇಷ್ಟು ಪುಕಾರು ಹೇಗೆ ಹುಟ್ಟೀತು ? (ಅನಾಥ. ೩೯) : ಪುಕಾರು ಇಲ್ಲದಂತೆ ನೋಡಿಕೊಳ್ಳಿ (ಸಾವಿತ್ರಿ. ೫೬). **ಪುಕಾರೆ** : ೧. ಕಳ್ಳರು ಬಂದಂತೆ ಏನಾದರೂ ಪುಕಾರೇ ಯುಂಟಾದ ಕೂಡ್ಲೆ . . . ತಾಕೀದ್ ಮಾಡುವದು ಸಹ ಪೋಲೀಸ್ ಪಟೇಲನ ಕಾರ್ಯವಾಗಿರತಕ್ಕದ್ದು (ಗ್ರಾಮಾಕ. ೪ ೬೬೦೯). ೩. ನೀವೇ ಅವರಾಗಿ ಇದ್ದಿದ್ದರೆ ಈ ಏಲು ದೇಶದಲ್ಲೆಲ್ಲ ಪುಕಾರೆ ಎಬ್ಬಿಸುತ್ತಿತ್ತಲ್ಲ ! (ಅಶ್ವಮ. ೦೪೬).

**ಪುಕಾರಾಗು, ಪುಕಾರು ಆಗು**=ಗಲಾಟೆಯಾಗು ; ವಿಷಯವು ಬಯಲಾಗಿ ಎಲ್ಲರ ಕಿವಿಗೂ ಬೀಳು : ಈರ ಒಂದು ದಿನ. . .ಹೆಂಡತಿಯನ್ನು ಚೆನ್ನಾಗಿ ಬಡಿದ. ಅದು ಊರಲ್ಲೆಲ್ಲಾ ಪುಕಾರಾಯಿತು (ಶಿವರಾ. ೬೪) ; ಕಳಲೆಯ ನಂಜರಾಜನು ಮಾತ್ರ ಕೊಂಚವೂ ಪುಕಾರಾಗದಂತೆ ಹತ್ತುಸಹಸ್ರ ಸೈನ್ಯವನ್ನು ಸಿದ್ಧಗೊಳಿಸಿಬಿಟ್ಟನು (ಶ್ರೀರಾಯ. ೦೦೬) : ಪುಕಾರು ಆಗದೆ ಇದ್ದ ಹಾಂಗೆ ಅವನ್ನ ಸುಟ್ಟು ಹಾಕಿ ಬಿಟ್ರಂತೆ ಕಾಡಿನಾಗೆ (ಮಲೆಮ. ೩೦೩). **ಪುಕಾರು ಮಾಡು** = ಗಲಾಟೆ ಮಾಡು ; ಕೂಗೆಬ್ಬಿಸು : ಗರಡಿಮನೆ ಹೊರಸೂರಿನಲ್ಲಿ ಬೆಂಕಿ ಉರಿ ಎದ್ದದ್ದು ಕಂಡು, ಪುಕಾರು ಮಾಡಿದ್ದರಿಂದ, ಬೆಂಕಿ ಹಾಕಿದವನು ಕಾಡೊಳಗೆ ಓಡಿಹೋದ (ರಾಜೇಂದ್ರ. ೨೬೫) ; ಉಣಲಿಕ್ಕೆಂದು ಕಾಡಿದೊಡೆ ಶಂಕೆಯಿಂದಿವರು ರಾಕ್ಷಸರುದಿಸಿದರೆಂದು ಮೋಡಿ ಪೋಗಿ ಪುಕಾರು ಮಾಡುವುದಂ ಜನರೆಲ್ಲಾ ನೆರೆದು ವಿಚಾರಿಸಿ (ರವಿವ್ಯಾ. ೬-೦೩೮) : ಮಾವನೂ ನೀನೂ ಸೇರಿಕೊಂಡು ಏನೇನೊ ಪುಕಾರು ಮಾಡ್ತಿದ್ದೀರಂತೆ ? (ಮಲೆಮ. ೫೩೦). [← ಹಿಂ. ಮರಾ. ಪುಕಾರ್]

**ಪುಕಾರೆ** 'ಪುಕಾರು' ನೋ.

**ಪುಕುಳಿ, ಪುಕಳಿ** (ನಾ). ೧. ಸ್ತ್ರೀಯ ಜನನೇಂದ್ರಿಯ ; ಯೋನಿ : (ಕ). ೨. ಮಲದ್ವಾರ : (ಕ). **ಪುಕಳಿ** : (ಕ). 'ಪೂಕು', 'ಮುಕುಳಿ' ಪರಾ. [ದೇ. ॥ ತುಳು. ಪುಕುಳಿ]

**ಪುಕ್ಕ₁** (ನಾ). ೧. ಹೇಡಿ ; ಅಂಜುಬುರುಕ : ಪುಕ್ಕನೆ ನಕ್ಕರದಂ ಕಂಡಕ್ಕಜ ಪಿಂಗೆ ಗೊಳ್ಳನೆಲ್ಲರುಂ ಕೈವೊಯ್ದು ಪುಕ್ಕಮಹ ಜೈನಪತ್ರಿಕೆದಕ್ಕಂ ನೋಡಿದುದು ನಗ್ನಕುಲೃಕಂ ಚಿತ್ರಂ (ಹಾರಾಸ್ಕ. ೪-೦೫-೬೦) ; ನಾನು ಅವರ ಜೊತೆಗೆ ಹೋಗುತ್ತೇನೆ. ಅವರೇನೂ ನಿಮ್ಮಂತೆ ಪುಕ್ಕರಲ್ಲ (ಕೀಶ್ರಕ್ಕೆ. ೦೦೯) ; ಅಷ್ಟು ಪುಕ್ಕನಾಗಿದ್ದರೆ ಉಮೇದಿನಿಂದ ಹೊರಟದ್ದು ಯಾಕೆ ನೀನು ? (ಮೂಕಜ್ಜ. ೬೦). (ಗು). ೨. ಅಂಜುವ ; ಹೆದರುವ : ಈ ಜನಸ್ಥಾನವು ನಮ್ಮಂಥ ಪುಕ್ಕಜನರಾದರೂ ನಿರ್ಭೀತಿಯಿಂದ ಸಂಚಾರ ಮಾಡಲಿಕ್ಕೆ ಯೋಗ್ಯವಾಗಿರುತ್ತದೆ (ಉರಾಚ. ೫೦) ; ನಿನ್ನ ಜಾತಿಯೇ ಪುಕ್ಕಜಾತಿ (ಬಾಣಅ. ೦೦೦). [ಪುಕು₄₁ + — ಅ₇]

**ಪುಕ್ಕ₂** 'ಪುಚ್ಚ₂' ನೋ.

**ಪುಕ್ಕಟೆ, ಪುಕಸಟ್ಟೆ, ಪುಕಸಾಟೆ, ಪುಕ್ಕಟ್ಟೆ, ಪುಕ್ಕಸಾಟೆ, ಪುಗಸಟ್ಟೆ, ಪುಗಸಾಟೆ, ಪುಕ್ಕಟೆ** (ಅ). ೧. ಬಿಟ್ಟಿಯಾಗಿ; ಉಚಿತವಾಗಿ; ಧರ್ಮಾರ್ಥವಾಗಿ : ಇಕ್ಕದೆಜೀಯದೆ ಬಿತ್ತಿ ಬೆಳೆಯದೆ ಪುಕ್ಕಟೆಯ ಸ್ವರ್ಗಾದಿ ಭೋಗವು ಸಿಕ್ಕಲರಿವುದೆ (ಕುಮ್ಯಾಉ. ೪-೪೬) : ಪಕ್ಕಿಕೋದುಪವಾಸ ಪುಕ್ಕಟೆ ಶ್ರೀತೊಲಸಿ ಸಿಕ್ಕಸಿಕ್ಕದಲಿ ಹರಿನಾಮ ಭವಭವದಿ ಸಿಕ್ಕಿ ಸಾಯುವದು (ಸರ್ವಜ್ಞ. ೪೦೪) ; ನಾನು ಔಷಧಿಗೆ ಬಂದೆ . . . ನೀವೂ ಪುಕ್ಕಟೆ ಕೊಡಬೇಕಾಗಿಲ್ಲ (ಕುಸುಸಂ. ೮೦). ೨. ವ್ಯರ್ಥವಾಗಿ ; ಸುಮ್ಮಸುಮ್ಮನೆ ; ನಿಷ್ಪ್ರಯೋಜಕವಾಗಿ : ನೀವು—ನಿಮ್ಮ ಮಗ, ಮನಸಿನಿಂದ ಪ್ರೇಮದಿಂದ ಕಲಿಸುತ್ತೀರಿ, ಇತರರು ಏಕೆ ಪುಕ್ಕಟೆ ತಲೆಯೊಡಕೊಳ್ಳಬೇಕು (ಶ್ರೀಮಾಶ್ರ. ೨೪೬) ; ಇಲ್ಲಿಗೆ ಬಂದು ನಾನು ಪುಕ್ಕಟೆ ಮೆಯ್ಯುತ್ತಿರಲಿಲ್ಲ (ದೀಶಹ. II, ೨೬). **ಪುಕಸಟ್ಟೆ** : ೧. ಪಂಚಾಯ್ತಿಮೆಂಬರುಗಳಿಗೆಲ್ಲ ಪುಕಸಟ್ಟೆ ಕ್ಷೌರ ಮಾಡುತ್ತೇನೆ (ರಂಗಕ. ೬೩). **ಪುಕಸಾಟೆ** : (ಕ). **ಪುಕ್ಕಟ್ಟೆ** : ೧. ಸ್ವಾಮಿ, ಇವರು ಪುಕ್ಕಟ್ಟೆ ಕೆಲಸ ಮಾಡುತ್ತಿದ್ದಾರೆ (ಘೂರಾಚ. ೦೬೦) ; ಸಿಪಾಯಿಗಳಾದವರಿಗೆ ಪುಕ್ಕಟ್ಟೆ ಪ್ರಯಾಣದ ಸೌಕರ್ಯವಲ್ಲದೆ ಮತ್ತಾವ ಸೌಕರ್ಯವನ್ನೂ ಒದಗಿಸುವುದಿಲ್ಲ (ಕ್ರವಾ೩. II, ೪೯೦). **ಪುಕ್ಕಸಾಟೆ** : ೧. ಅದೇನು ಪುಕ್ಕಸಾಟೆ ಬಂದು ಬಿಡುತ್ತೇನು ? (ರೂಶಿ). **ಪುಗಸಟ್ಟೆ** : ೧. ರಾಜಶ್ರೀಮಿಲ್ಲಿನ ಷೇರುಗಳನ್ನು ಪುಗಸಟ್ಟೆ ಕೊಟ್ಟರೂ ಕೊಳ್ಳುವವರಿರಲಿಲ್ಲ (ಸಾವಿಶ. ೨) ; ಸುಮ್ಮನೆ ಪುಗಸಟ್ಟೆ ಅನ್ನ ಹಾಕುತಾ ಇರಲಿಲ್ಲ (ಸಾಹೇಬ್. ೬೩). **ಪುಗಸಾಟೆ** : ೧. ಇನ್ನೊಂದು ಸಾರಿ ಹುಟ್ಟಿ ಬರಬೇಕು ಪುಗಸಾಟೆ (ದುಂಬಿಕ. ೧೦೫). **ಪುಕ್ಕಟೆ** : ೨. ಪುಕ್ಕಟೆ ಕಳೆದ ಕಾಲೇಜದಲ್ಲಿ ಸಮಯವನ್ನು (ಸ್ವಕ್ಷ್ಮದ. ೦೦೯) ; ಬಂಜೆಯಾಗಿ ಬಂದ ಗಿರಿಜಾ ಸಪ್ತ ಅಪತ್ಯದ ಪುಕ್ಕಟೆ ಅಭಿಧಾನದಿಂದ ಖುಷಿಯಾಗುತ್ತಿದ್ದಳು (ದೀಶಹ. II, ೪೪೬).

**ಪುಕ್ಕಟೆ ಬಸವ** = (ಆಲಂ) ಬಿಟ್ಟಿಯಾಗಿ ಕೆಲಸ ಮಾಡುವ ವ್ಯಕ್ತಿ : ಬಿಟ್ಟಿ ಕೆಲಸವನ್ನು ಮಾಡಿಸಿಕೊಳ್ಳುವವರು ಈ 'ಪುಕ್ಕಟೆಬಸವ' ನಿಗಾಗಿ ಅಲೆದಲೆದು ಹುಡುಕಬೇಕಾಗಿರಲಿಲ್ಲ (ಬೆಳುಮ. ೩).

[ ←ಮರಾ. ಪುಕಟ್, ಪುಕಾಸಾಠೀ./ತುಳು. ಪೊಕ್ಕಡೆ ]

**ಪುಕ್ಕಟ್ಟೆ** 'ಪುಕ್ಕಟೆ' ನೋ.

**ಪುಕ್ಕತನ** (ನಾ). ಅಂಜುಗುಳಿತನ ; ಪುಕ್ಕಲು : ಅತಿಸೂಕ್ಷ್ಮತನವು ಪುಕ್ಕತನಕ್ಕೆಳಿಸುತ್ತದಲ್ಲವೆ ? (ಗಾ೪ಗು. ೬೮) : ಮೊದಲಿನ ಪುಕ್ಕತನ ಈಗ ಅವನಲ್ಲಿ ಉಳಿದಿರಲಿಲ್ಲ (ಮಣಿಬಿ. ೧೩೮). [ಪುಕ್ಕ₁ + — ತನ]

**ಪುಕ್ಕಲ** (ನಾ). ಹೇಡಿ ; ಪುಕ್ಕ : ಮೊದಲು ಧೈರ್ಯದಿಂದಿದ್ದ ಕೆಲವರು ಈ ಗೋಳಾಟವನ್ನು ಕೇಳಿ ಪುಕ್ಕಲರಾಗುತ್ತಿದ್ದರು (ರಾಬಿ೫. ೦೬೩). [ಪುಕ್ಕಲು + —ಅ₇]

**ಪುಕ್ಕಲತನ** 'ಪುಕ್ಕಲುತನ' ನೋ.

**ಪುಕ್ಕಲಿ** (ನಾ). ಹೆದರುವ ಸ್ವಭಾವದವಳು; ಅಂಜುಬುರುಕಿ : ಅಯ್ಯೋ ಪುಕ್ಕಲಿ, ಕೆನ್ನೆಗೆ ಅರಿಶಿನ ಹಚ್ಚಿಕೊಂಡು ಅಡಿಗೆಮನೇಲಿ ಬಿದ್ದಿರೋಕೆ ಸರಿ ನೀನು (ಕಂಕಣ. ೦೪೪). [ಪುಕ್ಕಲು + — ಇ₃]

**ಪುಕ್ಕಲು** (ನಾ). ೧. ಅಂಜಿಕೆ ; ಭಯ ; ಭೀತಿ : ಭರಮ್ಮೆಹೆಗ್ಗಡೆಯವರು ಶ್ರೀಮಂತರಾಗಿದ್ದರೂ ಸರಕಾರ, ಪೋಲೀಸು ಎಂದರೆ ಅವರಿಗೆ ತುಂಬ ಪುಕ್ಕಲು (ಮಲೆಮ. ೫೩೮). (ಗ್ರಾ). ೨. ಅಂಜಿಕೆಯುಳ್ಳ; ಹೆದರುವ : ಅಪರಾಧಿಗಳು ಯಾವಾಗಲೂ ಪುಕ್ಕಲು ಸ್ವಭಾವದವರು (ಚೆನ್ನಬೇ. ೦೮೪); ಈ ಪುಕ್ಕಲುಮಾತುಗಳು ನಿನಗೆ ಸಲ್ಲವು (ಶಾಂತಲಾ. ೨೬); ಮೊದಲೇ ಅವಳದ್ದು ಪುಕ್ಕಲು ಜೀವ. ಅದೂ ಆ ಹೊತ್ತಿನಲ್ಲಿ ಬಂದರೆ ಹೆದರುವುದು ಸ್ವಾಭಾವಿಕ (ದೇವಹಂ. ೨೧೩).

[ಪುಕ್ಕು₁ + –ಅಲು (< –ಅಲ್₂). /ತುಳು. ಪುಕ್ಕಲೆ; ಕೊಡ. ಪುಕ್ಕೀಲೇ]

**ಪುಕ್ಕಲುತನ, ಪುಕ್ಕಲತನ** (ನಾ). = ಪುಕ್ಕತನ : ಛೆ! ಎಲ್ಲಾ ಪುಕ್ಕಲುತನ (ಋಣಮು. ೧೯೭); ವಾರ್ತಾಪತ್ರಿಕೆಗಳ ಪುಕ್ಕಲುತನವನ್ನೂ ಮುಂದಾಳುಗಳ ಡೋಲಾಯಮಾನವಾದ ನೀತಿಯನ್ನೂ ಕಂಡು, ಸ್ವತಂತ್ರವಾದ ಮತ್ತು ಧೈರ್ಯದಿಂದ ಕೂಡಿದ ಪತ್ರಿಕೆಯ ಅಗತ್ಯದ ವಿಷಯದಲ್ಲಿ ಅವನಿಗೆ ಸಂಶಯ ಉಳಿಯಲಿಲ್ಲ (ದಾದಾಸ. ೩೦). **ಪುಕ್ಕಲತನ :** ಅವಳ ಪುಕ್ಕಲತನಕ್ಕೆ ಚಪ್ಪಾಳೆ ತಟ್ಟಿ ನಗಬೇಕು! (ಮರುಸ. ೦೦೨); ಅವಳ ತೌರುಮನೆಯವರೂ ಕೂಡ ಅವಳ ಈ ಅತಿಯಾದ ಪುಕ್ಕಲತನಕ್ಕೆ ಹಾಸ್ಯ ಮಾಡಿದ್ದುಂಟು (ಕಾಗಕ. ೦೦೧). [ಪುಕ್ಕಲು + – ತನ]

**ಪುಕ್ಕಸಾಟೆ** 'ಪುಕ್ಕಟೆ' ನೋ.

**ಪುಕ್ಕಿ** (ನಾ). = ಪುಕ್ಕಲಿ : ಕುಮುದಿನಿಯು ಎಷ್ಟಾದರೂ ಹೆಂಗಸು, ಆಕೆಯು ಪ್ರಸಂಗವಿಶೇಷದಲ್ಲಿ ಪುಕ್ಕಿಯಾದಳೆಂದೂ ಅನ್ನಬಹುದು (ಕುಮುದಿ. ೧೭೧)

[ ಪುಕ್ಕ₁ + – ಇ₂ ]

**ಪುಕ್ಕು₁** (ನಾ). ಅಂಜಿಕೆ ; ಹೆದರಿಕೆ ; ಭಯ : "ಭೀರುತ್ವದೊಳ್ ಯೋನಿಯೊಳ್ ಪುಕ್ಕು" (ಶಬ್ದಮಂ. ೭೯); ಇನ್ನು ಕಾನೊಬ್ಬಳೇ ಹೋಗಬೇಕು. ಕಮ್ಮಣ್ಣು ಕಳಿಯುವವರೆಗೆ ಮಾತ್ರ ಸ್ವಲ್ಪ ಪುಕ್ಕು (ಹೊಸಕ್ಷ. ೪೯); ಜನ ರಕ್ಷಿರೆಂದೆನಿಸಿದರೂ ಅವರಲ್ಲಿ ಬೇಗನೆ ಪುಕ್ಕು, ಹೇಡಿತನಗಳು ಮೆಲ್ಲನೆ ಸೇರಿಕೊಳ್ಳುವುವು (ಯುಕ್ಷತ್ರ. ೩೧).

**ಪುಕ್ಕಾಗು** = ಹೆದರು ; ಅಂಜು : ಬ್ರಾಹ್ಮಣರೆಲ್ಲ ಅದಕ್ಕೆ ಪುಕ್ಕಾಗಿ . . . ನಾರಣಪ್ಪನ ಮನೆಯೆದುರು ಬಂದು ನಿಂತು ತೆರೆದ ಹೆಬ್ಬಾಗಿಲನ್ನು ನೋಡಿ ಭಯಗ್ರಸ್ತರಾದರು (ಸಂಸ್ಕಾರ. ೫೭).

[ ದೇ.॥ ತುಳು. ಪುಕ್ಕು, ಪುಕ್ಕ್; ಪರ್ಜಿ. ಪುರ್ಕ್ ]

**ಪುಕ್ಕು₂** 'ಪೂಕು' ನೋ.

**ಪುಕ್ಕೊಳ್ಳಿ** (ನಾ). ಒಂದು ಬಗೆಯ ಭೂಮಿ : ಸ್ವಸ್ತಿಶ್ರೀವಸಿತಾಲಯುರ ಅಬ್ಬರಾನಾರದಿಗೆ ಕಕ್ಕಿಪಳ್ಳಿಯೋನ್ ಪುಕ್ಕೊಳ್ಳಿ ಕೊಟ್ಟು ಸರ್ವ್ವಪರಿಹಾರಮ್ ಕೊಮ್ಬರ್ (ಎಕ. VI. ಮೂಡಗೆ. ೨೭–೪; ಸು. 950 ?). [?]

**ಪುಗಡಿ** 'ಪುಗಡಿ' ನೋ.

**ಪುಗರಿ** (ನಾ). (?) : ಈಶಾನ್ಯಗೆ ಸೀಮೆ ನೆಡುಮೊಜಿಡಿಯಾ ಪುಣುಸೆ ಪುಗರಿಯಾ ಎಡೆಯೆ ಬೀಟ್ಟಿನ್ಸ ಪಳ್ಳಮೆ (ಎಕ. IX (8), ಬೆಂಗಳೂ. ೧೫೧–೪೯; 828). [ ? ]

**ಪುಗಲ್** 'ಪುಗಿಲ್₂' ನೋ.

**ಪುಗಸಟ್ಟೆ** 'ಪುಕ್ಕಟೆ' ನೋ.

**ಪುಗಸಾಟೆ** 'ಪುಕ್ಕಟೆ' ನೋ.

**ಪುಗಿಯಿಸು** 'ಪೊಗಿಸು' ನೋ.

**ಪುಗಿಲ್₁, ಪುಗಿಲು₁, ಹುಂಗಲು, ಹುಗಿಲು, ಹುಗುಲು, ಹೊಗುಳು** (ನಾ). ೧. ಪ್ರವೇಶ : ರಾಜಪ್ರರುಷರ್ಗೆ ಪುಗಿಲಿಲ್ಲ (ಇಕ. X, ೧೭೭–೫ ; 7ನೆಯ ಶತ) ; ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ. . . ಎನೆ ಪೊಸಯಿಸಿದಳಾಕೆ ನಾಟ್ಯಾಂಗಮಂ (ಆದಿಪು. ೯–೨೫); ರಸಭಾವದ ಕೊಬ್ಬುರಮೆನೆ ಪೊಸದೆಸೆಯ[ು]ಪೊಕ್ಕ ಪುಗಿಲಿದೆನೆ ಚಿತ್ರಮಿದಂ ಪೊಸಯಿಸಿ ನರ್ತಿಸಿದಳ್ (ವರ್ಧಮಾ. ೧೦–೪೯) ; ಪುದಿದ ನೆತ್ತರ ಕೆಂಪಾಗಸದೊಳ್ ತೋಱುವುದಿನ್ನುಂ ಕಿಸುಸಂಜೆಯು ನೆಪದೆ ದಿನದ ರಾತ್ರಿಯ ಪುಗಿಲೊಳ್ (ಜಗಬ. ೬–೪೪). ೨. ಬಾಗಿಲು ; ಪ್ರವೇಶದ್ವಾರ : ಆ ವ್ಯೂಹದ್ವಾರದೊಳ್ ಗುಹೆಯ ಪುಗಿಲೊಳ್ ಮಹೋಗ್ರಜರತ್ಸಿಂಹವಿರ್ಪಂತಿರ್ದ ಭಾರದ್ವಾಜನಾಜಿವೀರನಭಿಮನ್ಯುಕುಮಾರನನೆಟ್ಟಿರಮ್ಪುಗಂಡಾಗಳ್ (ನೇಮಿ ಪು. ೧೨–೩೪ ವ). ೩. ಆರಂಭ ; ಉಪಕ್ರಮ ; ಪ್ರಾರಂಭ : ಯಾತ್ರಗಮನೀತಲಪತಿಯಂ ಪೆರ್ಚಿಸಿತಳ್ಪುಪುಗಿಲೊಳ್ ಶರದಂ (ಶಾಂತಿಪು. ೧೧–೧೪೦); ಪೋದುದು ಸುಣ್ಣನಿ ಪವಿಟ್ಟಿಂಶರದದ ಪುಗಿಲೋಳ್ (ಶಮದ. ೨೪೨ ಪ್ರಯೋ); ಹೇಮಳಂಬಿಸಂವತ್ಸರ(ದೊಳ್)ದಾ ಪುಗಿಲೊಳ್ ಮುಟ್ಟಿ ಕೊಳ್ಳುಂ (ಅಬ್ಬಿಮು. ೭–೦೪). ೪. ಮುಂಭಾಗ ; ಮುಂದೆಸೆ : ಪುಗಿಲ ಪುಲ್ಲೆಯ ಮೊದಲುರಮುಮಂ ಪೆಱಗಣ ಪುಲ್ಲೆಯ ನಡುವುಮನಯ್ದಱೊಳ್ ಮೂಱುಮಂ ಮೂಱೊಳೆರಡುಮನೆರಡಱೊಳೊಂದುಮನೆಚ್ಚು ಬಿಲ್ಲಬಲ್ಮೆಯಂ ಮೆಱೆದು (ಕಂಶಕಾ. ೫–೪೭ ವ). ೫. ಸಂದರ್ಭ ; ಸಮಯ ; ಹೊತ್ತು : ನಡುವಗಲ ಪುಗಿಲ ಬಿಸಿಲೊಳ್ ಬಿಡ ನಾಲಗೆಗಿಟ್ಟು ತೇಂಕಿ ತನ್ನಯ ನೆಟಿಲಂ ಕಡುಗಪ್ಪಲೆಂದು ಪೊರಳಲ್ಕೊಡರಿಸಿ ಮೆಯ್ಯಿಕ್ಕಲಿರ್ದವನ್ಯಲುಲಾಯಂ (ಪುಷ್ಪಕೃ. ೬–೭೭) ; ಇಂದಿರೆ ಪದ್ಮಮಂದಿರದೊಳಿರ್ದ ಮಹಾಪ್ರಣಯಪ್ರಕೋಪದಿಂದೊಂದಿರುಳಿಕ್ಕೆ ಮುಚ್ಚಳವನಾ ಪುಗಿಲೊಳ್ ತೆಱವಾಗೆ ಸೂಚಿಗ್ಗೆ ಕೃಷ್ಣಂ ದಯೆಯಿಂದೆ ಬಂದು ಬಿಗಿಯಪ್ಪೆ ಧರಾಂಗನೆಯಂ ತದಂಗಕಾಷ್ಣ್ಯಂ ದಿಟದಿಂ ಕವಲ್ತುದೆನೆ ಪರ್ವಿದುದುರ್ವಿಯ ಚಿತ್ರಮುಂ ತಮಂ (ದಶಕು. ೫–೩೪). ೬. ಖಡ್ಗಯುದ್ಧದ ಒಂದು ವರಸೆ : ರೂಪುಗೊಂಡುದೆನೆ ಚಾರಿ ಪುಗಿಲ್ ನೆಲೆ ನೋರ್ಪು ದಂಡೆ ಸೂಟುಳ್ ನಿಱಿಸು ನಿಘಾತಮಾಂಕೆ ಬಗೆ ಬಗ್ಗಣೆ ಮಂಚನೆ ಬಂಧಮೆಂಬಿವಂ ಮೆಱೆವೋಪಜರ್ಕಳೇಂ ಕಲಿಸುತಿರ್ಪರೊ ಚಟ್ಟರನಟ್ಟಿಮಟ್ಟರಂ (ಪುಷ್ಪಕೃ. ೨–೬೦). **ಪುಗಿಲು₁ :** ೨. ಮಿಕ್ಕೊಂದಿನಂ ಪುಗಿಲಿನೊಳೆ ಕುಳಿತು ಧ್ಯಾನಾರೂಢನಾಗಿ . . . ಪ್ರಾಣ ನಿರ್ಗಯಲಾಯಿತು (ಶ್ರೀಶುಪು. ೭–೦೭೬). ೭. ಆಶ್ರಯ ; ನೆಲೆ : ವಾರಣಾಸಿಗೆಯು ವಿುಗಿಲಾದ ಪಂಪಾಪುರಂ ಮಾರಾರಿಗಂತು ಪುಗಿಲಾದ ಪಂಪಾಪುರಂ (ಶರಶ. ೫೨೧–೯). ೮. ಕಾಂತಿ ; ಶೋಭೆ : ನೈದಿಲ ಸುಮಾಲಂಕೃತದಿ ಪುಗಿಲಿಂದೆ ಚಿತ್ರವರ್ಣದ ವಿಷ್ಟರಾಗ್ರಹದೊಳಗಿಹಂ (ಶ್ರೀಶುಪು. ೧–೪೦). 'ಪುಗಿಲುಮೆಱು' ಪರಾ. **ಹುಗಲು :** ೯. ರಂಧ್ರ ; ತೂತು ; ಕಂಡಿ : ಹಸಿಯ ಜಾಲಿಯ ಕಟ್ಟಿಗೆಗಳನ್ನಾಗಲಿ ಬಸರಿಯ ಕಟ್ಟಿಗೆಗಳನ್ನಾಗಲಿ ತಂದು ಅವುಗಳಿಗೆ ಹುಗಲನ್ನು ಹೊಡೆದು (ಕೃಷಿಕ್ರ. ೪೦). **ಹುಗಿಲು :** ೭. ನಿಗಳದೊಳು ಸಿಕ್ಕಿದಗೆ ಕೊಳನ ಹುಗಿಲಿನೊಳು ಪೊಕ್ಕವಗೆ (ಸ್ವರೂಪಾ. ೩–೪); ಭಾಗವತಾಭಿಮಾನದ ಹುಗಿಲು ಪರಮಾನಂದರಸ ವಿಶ್ರಮದ ತನಿಮುಗಿಲು . . . ತಾನೆನಲೆಸವ ವೈಕುಂಠವನು ನೆಱೆ ಕಂಡ (ಸಿರಾಗ. ೧೦–೩೫–೦೭). ೯. ಹೊಗಿಸಿದರು ಕಾಡೆಮ್ಮೆ . . . ದೊಡ್ಡಗಳ ವಿಗಡರಕ್ಕಸ ಭಟನ ಮೂಗಿನ ಹುಗಿಲಿನಲಿ (ಕೊರರಾ. ೬–೨೬–೩೮) ; ಕಾವ್ಯಾರ್ಥವೆಂಬೆರಡು ನೊಗನ ಹುಗಿಲಾದವ್ಯ (ಪೀಶ್ವಕು. ೨–೦೦–೧೧). ೧೦. ಸೀಳಿರುವ ಸ್ಥಿತಿ ; ಬಿರುಕು ; ಹೋಳಂ : 'ಹುಗಿಲುಗಳೆ' ಪರಾ. **ಹುಗುಲು :** ೯. ಹಸಿಯ ಬಸರೀಕಟ್ಟಿಗೆಗಳಿಗೆ ದೊಡ್ಡ ಹುಗುಲು ಹೊಡೆದು ಹಾಗು ಹಿಂದೆ ಮುಂದೆ ಗೂಟಗಳನ್ನು ಹೊಡೆದು (ಕೃಷಿಕ್ರ. ೦೦೭) ; [ಹಲಗೆ, ಮೊಗಳ . . . ಬೆಣೆ, ಮೊನ್ನು ಕೂರಿಸುವುದಕ್ಕಾಗಿ ಒಂದು ಚೌಕಟ್ಟಿನಲ್ಲಿ ಮಾಡಿರುವ] ವೆಜ್ಜ, ಉಗಿಲು, ಹುಗುಲು (Mortise. ಇಂಕಪ). **ಹೊಗುಳು:** ೯. ತೋಡಿಗೆ ಹಾಕಿದ ಕಟ್ಟೆಯಲ್ಲಿ ಹೊಗುಳು ತಲೆದೋರಿದಾಗ, ಚಿಮ್ಮಿ ಹಾರುವ ಅವಿರತಜಲಧಾರೆಯಂತೆ, ದುರುಳರ ಸಮೂಹ ನೆಲ್ಲಕ್ಕಿ ಬಾಡೆಯೊಳಗೆ ನುಗ್ಗಿತು (ಹುಲಿಪಾ. ೪೦).

[ಪುಗು (< ಪೊಗು) + ಇಲ್₂. / ತಮಿ. ಪುಕ್ಕಿಲ್, ಪುಕಲ್]

**ಪುಗಿಲ್₂, ಪುಗಲ್** (ನಾ). ೧. ಧ್ವನಿ ; ಸದ್ದು : 'ಪುಗಿಲ್ಗರೆ' ಪರಾ. ೨. **ಕೋಗಿಲೆಯ ಧ್ವನಿ** : "ಕಂಕಿಲ್ಲುದೆಂದುಂ ಪುಗಿಲ್ ಪುಗಿಲೆಂದುಂ **ಕೋಕಿಲಾಲಾಪಂ**" (ಶಬಾ. ೩೩-೨೦೬) ; ತದಾಶ್ರಮದ ತರುಗಳ ಮೇಗಿರ್ದು ಪುಗಿಲ್ ಪುಗಿಲೆಂದಿತ್ತ ಬನ್ನಿಮಿರಿಮೆಂಬ ಪೊಂಬಣ್ಣದ **ಕೋಗಿಲೆಗಳುಮಂ** . . . **ನೋಡಿ** (ಶಂಕಶಾ. ೦-೦೦೩ ಪ) ; ಪುಗಿಲ್ ಪುಗಿಲೆಂಬ ಪಿಕಸ್ವನಂಗಳಂ ಮನಸಿಜನೊಲ್ದು ಕೇಳ್ದು (ರಾಜಶೇ. ೯-೭೪). **ಪುಗಲ್**: ೨. ಪೋ ಪು[ಗ][ಪಾಠಾಂ. ಗಿ]ಲ್ ಪು[ಗ]ಲೆನುತಿರ್ಪ ಪಕ್ಕಿ ಮನವಂ ಕವರುತ್ತಿರೆ (ಶಂಕಶಾ. ೩-೩೩) ; ಭೋರ್ಗರೆದೆತ್ತಂ ಪುಗಲೆಂಬ ಕೋಕಿಲೆ . . . ಸುಸ್ವರದಿಂದೋದುವ ಕೀರವಾರ ಬಗೆಗಂ ಸಮ್ಮೋಹವಂ ಮಾಡವೇ (ಸುಕುಮಾ. ೦-೭೩); ಬನದಲ್ಲಿ ಪುಗಲ್ ಪುಗಲೆಂಬ ಗಂಡುಗೋಗಿಲೆ (ಕಬುಡ. ೨೬೯ ಕೃಷೋ.). [ದೇ.॥ ತಮಿ. ಪುಕಲ್ ; ಮಲ. ಪುಕಲು = ಹೇಳು]

**ಪುಗಿಲ ?** (ನಾ). (?): ಪುಗಿಲಂ ಕ್ರೀಡನಶೀಲನಕ್ಕರಿಗನಾದಂ ಪಲ್ಲವ ಗ್ರಾಹಿ ಮಾಸುಗಿ ನಮ್ಮಾದುದನಾಗಲುಂ ನವೆಯಲುಂ ಮೆಯ್ದೆರ್ಕುಮೇ ಕಾರವೆಂಬ ಗಡಾ (ಕಾವ್ಯಾ.ಕ. ೦೩೯). [ ? ]

**ಪುಗಿಲು₁** 'ಪುಗಿಲ್₁' ನೋ.

**ಪುಗಿಲು₂** (ನಾ). (?) : ಪೆನನಿರಕ್ಕಂ ಪುಗಿಲುಮಂದಪ ಪವಣಂ (ಅ.ಪು. ೦೯೪೭, ಕಾಪಗಲ್. ೨೨೯-೨೦ ; ೧). [ ? ]

**ಪುಗಿಲುವೆಡು** (ಕ್ರಿ). **ಶೋಭಿಸು** ; ಹೆಸರಾಗು ; ಪ್ರಸಿದ್ಧವಾಗು : ಅಗುಳುತಿರೆ ಕಾಮಾಟದವರುಮಂಪರೊತ್ತಿನೊಳು ಪುಗಿಲುವೆತ್ತತಿಮಂತ್ರ ವಾದಿಗಳು ಮಂತ್ರಿಸಲುಮಗಿದವರಿಗೆಯು ಮಹಾಭೂತ ಪೊಯ್ಯಲು (ಕೃಕುಪು. ೩-೨೩). [ಪುಗಿಲು₁ (< ಪುಗಿಲ್₁) + ಪೆಡು₁]

**ಪುಗಿಲ್ಗರೆ** (ಕ್ರಿ). ಧ್ವನಿ ಮಾಡು; ಸದ್ದು ಮಾಡು : ಮೆಯ್ಯ ಮಸಿ ಕೊರಲ ಬಕ್ಕಳೆ ಪೊಯ್ಯ ಪುಗಿಲ್ಗರೆವ[ಪಾಠಾಂ. ಕನಲ್ಗರೆವ, ಫರಿಲ್ಗರೆವ]ಕೆಯ್ಯ ಕಂಕರಿಕ ಕರಂ ರಯ್ಯಾ೬ (ಕಾವ್ಯಾ.ಕ. ೩೦೯). [ಪುಗಿಲ್₂ + ಕರೆ₁]

**ಪುಗಿಲ್ಬಟ್ಟೆ** (ನಾ). ಪ್ರವೇಶದ್ವಾರ ; ಕಂಡಿ : ಬಿಲಸಗ್ಗಂ ಗವಿಸಂದಿ ಡೋಣೆ ಪರಿಚಾರೇರುಂ ಪುಗಿಲ್ಬಟ್ಟೆ ಮೇಖಳೆ ಕಾಳ್ಪಾಸಜಿ ಗಂಡಶೈಲಮಡಕಿಲ್ಕೂಟಂ ಕರಲ್ಕಟ್ಟು . . . ಅಜಸ್ರಂ ರಯ್ಯಮಾ ಬೆಟ್ಟದೊಳ್ (ಸೂಕ್ತಿಸು. ೩-೨). [ಪುಗಿಲ್₁ + ಬಟ್ಟೆ₁]

**ಪುಗಿಲ್ವಿಡು** (ಕ್ರಿ). ಎಡೆ ಬಿಡು ; ಅವಕಾಶ ಕೊಡು : ಸಿಡಿಲ್ಪನಿಪೊಯ್ಲಿನಿಂ ಪುಗಿ[ಪಾಠಾಂ. ಪೊಯ್ಲನಿಂಪುನಿ]ಲ್ವಿಡದೊಡೆದತ್ತು ತಟ್ಟ ಘನಮಂಡಲ ಮೆಂದೆನೆ ವಾರಿಧಾರೆಗಳ್ . . . ಸುರಿಯುತ್ತುಮಿರ್ದುದು (ಕಸುಕುಮಾ. ೩-೨೭). [ಪುಗಿಲ್₁ + ಬಿಡು₁]

**ಪುಗಿಸು** 'ಪೊಗಿಸು' ನೋ.

**ಪುಗು** 'ಪೊಗು' ನೋ.

**ಪುಗುಡಿ** 'ಪುಗಡಿ' ನೋ.

**ಪುಗುತರ್** 'ಪೊಗುತರ್' ನೋ.

**ಪುಗುತೆ** 'ಪೊಗುತೆ' ನೋ.

**ಪುಗುದೆಸೆ, ಹೊಗದೆಸೆ** (ನಾ). ಹೋಗಬೇಕಾದ ದಿಕ್ಕು ; ಪಾರಾಗುವ ಹಾದಿ : ಮುಳಿದುದೆಮ್ಮಯ ಸೇನೆ ಸಪುರದೊಳ್ ಪೊಕ್ಕು ಮೈಗುಜಿಹ ಕಾಣಿಸಿಕೊಂಬರಂ ಕಾಣೆವಗ್ನಿಜನ ಬಳಿದ ಕರೆತಂದೆಪಕಟಕಟ ಪುಗುದೆಸೆ ಯಾವುದೆಮಗೆ (ಕಅಪು. ೩೯-೯). **ಹೊಗದೆಸೆ** : ಜಗವೆಲ್ಲವನೂರ ಮಾಡಿ ಊರೆಲ್ಲವ ಮನೆಯ ಮಾಡಿ ಹೊ[ಪಾಠಾಂ. ಹೋ]ಗದೆಸೆಯಿಲ್ಲದ ಸುಳುಹು ನೋಡಾ (ಅಶಕಂ ೨೬೯-೧೩೦೦) ; ಹೊಗದೆಸೆಯೂನು ಕಾಣದಬ್ಬುಲ್ಲಹಾನ ಬಹುಬಗೆಯಲಿ ಕಂಗೆಟ್ಟಾಗ ಮಿಗ ಹುಲಿಯೂರ ಬಳಿಯ ಬಿಟ್ಟು ಪಾಳೆಯ ದೆಗೆದೋಡಿದನು (ಕಂಶಂ. ೦೩-೫೭). [ಪುಗು (< ಪೊಗು) + ದೆಸೆ₂]

**ಪುಗುಳ್₁** (ಕ್ರಿ). ಗುಳ್ಳೆಯೇಳು ; ಬೊಕ್ಕೆಯಾಗು : ಓರೊರ್ವರ್ ಕುಳಿರ್ವ ಕಪ್ಪುರದ ಪಚ್ಚೆಮನವರ್ಚೆ ಮನ್ಮಥಜ್ವಲನಪಾತದಿಂ ಮೆಯ್ ಮಿಗೆ ಪುಗುಳ್ವುದೆಂಬ ಸಂಕೆಯಿಂ ಕೆಳದಿಯರ್ಗೆ ಬಳಯಿಸುವಳ್ (ಪರಕಿ. ೯-೩೯ ಪ) ; ಮುಳಿದುಟುದೋಪರಳ್ಳಿರ್ದೆ ಪುಗುಳ್ವುರಿವಂತೆ ಮುಗುಳ್ವು ಸಂದ ನಾಣೊಳಗು ಸಡಿಲ್ಪಿನಂ ಪೊರೆ ಸಡಿಲ್ದು ಕದಂಪು ಬೆಳರ್ತು ಬಾಡಿ ಪೊಟ್ಟಳಿಸಿ ಬೆಳರ್ತು ಮುದ್ರಿಸಿದ ಬಾಯ್ಗಳಲರ್ವಿರಿವಂತು ಕಂಪು ಕೈಕೊಳೆ ಬಿರಿದತ್ತು ತುಂಬಿ ನೆರೆವಲ್ಲಿಗೆ ಮಲ್ಲಿಗೆ ಸಂತೆಯಂತೆವೊಲ್ (ಆಸಂಪು. ೬-೮೯). [ದೇ. ॥ ತಮಿ. ಮಲ. ಪೊಕ್ಕುಳ್]

**ಪುಗುಳ್₂**, ಪುಗುಳು, ಪೊಕ್ಕೆ, ಹುಗುಳು (ನಾ). ಉಷ್ಣತೆಯಿಂದ ಅಥವಾ ಘರ್ಷಣೆಯಿಂದ ಮೈಮೇಲೆ ಹಾಗೂ ಬಾಯಲ್ಲಿ ಏಳುವ ಗುಳ್ಳೆ,—ಬೊಕ್ಕೆ : ಬಿರಿದಪ್ಪ ನಂಜುಪುಗುಳುರ್ಬಿದಮಂಗಸಿತಾಹಿದಂಶ ಮಾದುದು ದಿಟಂ (ಕಾದಂಪು. ೩೩೩) ; ನಡೆದಡಿಗಳ್ ಪುಗುಳ್ಗೆದುಪುಗ್ಗಡ ಮಾಯ್ಯು ನಿದಾಘಂ (ಅಣಪ. ೧-೯೭) ; ತಂಬುಲದ ಚೂರ್ಣದಧಿಕತೆಯಿಂ ಬಾಯ್ ನೆಜಿ ಬೇದು ಪುಗುಳ್ಗಳಾದೊಡೆ . . . ತೈಲದೊಂದಳಿಂದಂ ಕಿಡುಗುಂ (ಜಿಸುಪ. ೨-೧೩೭). **ಪುಗುಳು** : ಶವನನ ಮೆಯ್ಯೊಳ್ ಪುಗುಳುಗಳು ಪವಿಸೆ ಪಾವಕನ ತನುವಿನೊಳ್ ಮಹಾಸ್ಫೋಟಕವಾತಪದ ಕಡುಪಿಂದೆ ನೆಗೆತಂದವುವೆನೆ ಬೇಸಗೆಯ ಬಿಸಿಲನದನೇನೆಂಬಂ (ಗಂಶ. ೯-೨೩) ; ಅಂಬು ಜಾಕ್ಷಿಯರುರಗಳಧರಚುಂಬನಕ್ಕೆ ಎನ್ನ ಜಿಹ್ವೆ ಹಂಬಲಿಸದ ಹಾಗೆ ಸೀಳೆ ಪುಗುಳವೇಳಲ್ಕೆ (ಸುಜಾಕ. ೧೦-೯). **ಪೊಕ್ಕೆ** : ಗುಳಿ ಸೇರಿದ್ದ ಕೆನ್ನೆಗಳೂ ಉಬ್ಬಿದ್ದುವು—ಕೆಂಡ ಬಿದ್ದು ಬಂದ ಪೊಕ್ಕದಂತೆ (ಚಾಶಿ. ೦೦೬). **ಹುಗುಳು**: "ವಿಸ್ಫೋಟಃ, ಪಿಟಕಃ—ಈ ೨ ಹುಗುಳು" (ಪಾಶಿನಿ. ೦೩೦) ; ಕಿಚ್ಚಿಗೆ ಮೈಯಿ ಹುಗುಳುವುಟ್ಟಿತ್ತು ಉದಕಕ್ಕೆ ಧಳಿಯಾಗಿ ಸ್ಫಟಿಕಗಿರಿಯಲ್ಲಿ ಹಣ್ಣು ಹುಟ್ಟಿತ್ತು (ಅಶಕಂ. ೦೭೯-೮೦೩) ; ಕರ್ಪೂರದ ಮಣಿಗಳನನುಕರಿಪ ಹುಗುಳು ಗಳು ಮೊಳೆಯೆ (ಬಸಪು. ೦೩-೨೦) ; ತೀಂಟೆಯಿಂತಪ್ಪ ತುಜಿಯ ಹುಗುಳು ಗಳೊಡೆಯೆ (ಚಿಕ್ಕಪು. ೯-೨೩-೭).

[< ಪುಗುಳ್₁ ./ತಮಿ. ಪೊಕ್ಕುಳ್ ; ಮಲ. ಪೊಕ್ಕುಳ್, ಪೊಕ್ಕಿಳ್ ; ಕೊಡ. ಪೊಕ್ಕಳ್ ; ಕೋತ. ಪೊಗ್ಳ್]

**ಪುಗುಳು** 'ಪುಗುಳ್₂' ನೋ.

**ಪುಗುಳೇಳ್** 'ಪುಗುಳೇಟ್' ನೋ.

**ಪುಗುಳೇಟ್**, ಪುಗುಳೇಳ್, ಹುಗುಳೇಳು (ಕ್ರಿ). =ಪುಗುಳ್₁: ತದ್ವಿಷಾ ಗ್ನಿಯ ಕಿಡಿಯಿಂದೊಡನೆಯ ಗೋಪರ್ ತಂತಮ್ಮೊಡಲೊಳ್ ಪುಗುಳೇಟ್ ಪೋಗಿ ಪುಯ್ಯಲ್ಪುವುದುಂ (ಜಗಪ. ೩-೮೭). **ಪುಗುಳೇಳ್** : ನೆಗೆದ ತುಂತು ವರ್ಣಿಗಳೇ ಮುಗಿಲ ಮೆಯ್ ಪುಗುಳೇಳೆ ಪುಷ್ಕರದಿಂ ಪೂತ್ಕರಿಸುವ . . . ಕಟ್ಟಣಕದ ದುಷ್ಪಗಜಮಂ (ಗಂಶ. ೨-೦೦೩ ಪ). **ಹುಗುಳೇಳು** : ಇನ್ನುಬರ ಹುಗುಳೆದ್ದು ನೋವುತಿರ್ಪುದೊ ತಳಂ (ಕಂಶಾ. ದೇ. ೩೦೦-೪); ಶಿವಶಿವೇಗುವೆ ನಿನ್ನು ಹುಗುಳೇಳುವವಲಾ ಶಿವನಾಗವೆನುತಂ ಶಿವನ ತನುವಂ ನೋಡಿ ತೂತೂ ಎಂದು ತೂಪಿಟಿದ (ಬಸಪು. ೦೩-೨೦). [ಪುಗುಳ್₂ + ಏಟು₁]

**ಪುಗುಳೊಡೆ** (ಕ್ರಿ). = ಪುಗುಳ್₁ : ಕಠಿನಭೂಮಿಯೊಳ್ ನಡೆದೊಡೆ ಕಿಱುಗಲ್ಗಳುಂ ಪೆಟ್ಟಿಗಳುಮಂಗುಬ್ಬು ಪುಗುಳೊಡೆದು (ಪಞ್ಚಾರಾ. ೨೯-೦೦). [ ಪುಗುಳ್₂ + ಒಡೆ₁ ]

**ಪುಗುಳ್ಗುತ್ತ** (ನಾ). ಮೈಮೇಲೆ ಬೊಕ್ಕೆಯಾಗುವ ಒಂದು ಬಗೆಯ ರೋಗ : ಗುರು ಮಂದ ಶುಕ್ರರೊ(ನೊ)ಡನಿರೆ ಸುರನದಿ ಹೈ(ಹಿ) ಮಾದ್ರಿಯೆಡೆಯ ನಾಡೊಳಗೆಲ್ಲಂ ಬಿರಿದು ಭಯಪಾಕ್ಕುಮಲ್ಲಿಯ ನರರ್ಗಂ ಪುಟುಗು(ಪುಗುಳ್ಗು)ತ್ತುಮಕ್ಕುಮಿದು ಪರಮಾರ್ಥಂ (ಅಲ್ಪಿತು. ೭-೫೩). [ ಪುಗುಳ್₂ + ಕುತ್ತ₁ ]

**ಪುಗ್ಗಾಯಿಲ**, ಪುಗ್ಗಾಯ್ಲ (ನಾ). ಸೊಕ್ಕಿದವನು ; ಅಹಂಕಾರಿ ; ಗರ್ವಿಷ್ಠ : ಮನ್ನೆಯರ್ಕುಱುಂಬರ್ ಪುಗ್ಗಾಯಿಲರೆನಿಸುವ[ರ]ಸುಮಕ್ಕಳ್

ಪಲರುಂ ಬಂದಿರ್ದರಾ ನೃಪಾಸ್ಥಾಯಿಕೆಯೊಳ್ (ಪರ್ವಶಾ. ೩-೫೨) ; ಅಯಿಲ ಪುತ್ಕಯಕ್ಕೆ—ಗೋಬಾಯಿಲು, ಪುಗ್ಗಾಯಿಲು (ಕಮುದ. ೨೦೫ ಶೃಂಗಾ) ; ತಾಯುಂ ನಾಗನಿಂ ಕೊಲಿಸದೆ . . . ಬಾಯಿಂ ಸೈವರ ಪೊಸ ಪುಗ್ಗಾಯಿಲನಂ ಕೊಂದು ಕೂಗಿಸದೆ ಬಿದಿ ಸತತಂ (ಪಳಶಂ. ೬೪೨). ಪುಗ್ಗಾಯ್ಲ್ಲ : " ಪುಗ್ಗಾಯ್ಲಂ—ಗರ್ವಿತಂ " (ಕಮುದ. ಶಂ. ೨) ; " ಗರ್ವಿತನಲ್ಲಿ ಪುಗ್ಗಾಯ್ಲ ನೆಂದಕ್ಕುಂ " (ಕರ್ನಾ. ೬೬). [ ಪುಗ್ಗು₂ + ಆಯಿಲು₂ ]

**ಪುಗ್ಗಾಯಿಲತನ** (ನಾ). ಸೊಕ್ಕು ; ಗರ್ವ ; ಉದ್ಧಟತನ : ಇನಿತೇಕೀ ಪುಗ್ಗಾಯಿಲತನಮಿದಜಂದಸ್ಮದಾಜ್ಞೆಯಂ ಮಿಾಱಿದೆ ನೀಂ (ಪಸ್ಕಾ. ೩-೦-೦೫೫). [ ಪುಗ್ಗಾಯಿಲ + —ತನ ]

**ಪುಗ್ಗಾಯ್ಲ** 'ಪುಗ್ಗಾಯಿಲ' ನೋ.

**ಪುಗ್ಗಿ** 'ಪುಟಿಗ' ನೋ.

**ಪುಗ್ಗಿಡು** ? (ಕ್ರಿ). (?) : ಪುಡುಕುನೀರೊಳರ್ದಯುಂ ಪುಟಪಾಕಂ ಸುಡೆಯುಂ ಮಡು ಪುಗ್ಗಿಡೆಯೆಯುಂ ಬಾಳಿತ್ತಿ ಸೀಳೆಯುಂ ಗುಗ್ಗುಳಂ ಬೊತ್ತಿಸೆಯುಂ (ಅಜಿತ. ೧೧-೧೯ ವ). [ ? ]

**ಪುಗ್ಗು₁** 'ಪುಟ್ಟಿಗ' ನೋ.

**ಪುಗ್ಗು₂, ಹುಗ್ಗು₂** (ನಾ). ಸೊಕ್ಕು ; ಗರ್ವ ; ಅಹಂಕಾರ : "ಉಕ್ಕೆಸಂ, ಬಿಂಕಂ, ಪುಗ್ಗು, ಪಂತ, ಹಮ್ಮು, ಗಬ್ಬು, ಅದಟು—ಈ ೭ ಗರ್ವಂ" (ಕರಸಾ. ೫೬-೨೩೦) ; "ಹಮ್ಮುದಟು . . . ಪುಗ್ಗುಮುಂಕ್ಕೆಪಮೆಸ್ಸಲ್ ಗಮ್ಮನೆ ಗರ್ವಮಿದಕ್ಕುಂ" (ಕಂಕಂ ೧೧೩) ; ಅಗ್ಗದ ಪುಗ್ಗಿನ ಚಂಪೆಗನನಜಿಸಿ ರಾಜಜಾಂತು . . . ಬಲ್ಗೋಲ್ಗಳಂ ತಿಱುವಾಯ್ಕೆ ಸಂಧಿಸುತೆಚ್ಚಂ (ರಾಮಾಶ್ವ. ೧೯೫-೧೦). 'ಪುಗ್ಗಾಯಿಲ' ಪರಾ. ಹುಗ್ಗು₂ : 'ಹುಗ್ಗಿಗ' ಪರಾ. [ ದೇ.॥ ತಮಿ. ಪೊಲ್ಲು ]

**ಪುಗ್ಗೆ** (ನಾ). ೧. (ಉಕ) ಕಡಲೆಹಿಟ್ಟಿಗೆ ಉಪ್ಪು, ಕಾರ ಮೊದಲಾದುವನ್ನು ಬೆರೆಸಿ ದುಂಡಗೆ ಉಬ್ಬುವಂತೆ ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ಖಾದ್ಯ ; ಬೂರುಬುರಿ : ಹಸಿವಾಗಿದೆಯೆಂದು ಪುಗ್ಗೆ ಕೊಳ್ಳಲು ಗಂಗೆ ಕಳಗಿಳಿದು ಹೋಗಿದ್ದಾಳೆ (ಗಂಗಾಗಾ. ೦೦೯) ; ನಾಲ್ಕಾಣೆಯ ಪುಗ್ಗೆ ತಿಂದು ಮುಗಿಸುವಷ್ಟರಲ್ಲಿ ಶಾಲೆ ಬಿಟ್ಟಿತು (ಗಾಳಕ. ೬೬೩). ೨. ಗಾಳಿ ತುಂಬಿ ಉಬ್ಬಿಸಿದ ರಬ್ಬರುಚೀಲ ; ಬಲೂನು : ಒಂದೇ ಒಂದಾದರೂ ಅಂತಹ ರಬ್ಬರ್ ಚೆಂಡೋ ಪ್ಲಾಸ್ಟಿಕ್ ಹಕ್ಕಿಯೋ, ಬಣ್ಣದ ಪುಗ್ಗೆಯೋ ತನಗೆ ದೊರೆಯಬಾರದೆ (ಮುಂಗಾರು. ೨೬). ೩. (ಆಲಂ) ಉಬ್ಬು ; ಉತ್ಸಾಹ : ಪುಗ್ಗೆಯನ್ನಿತ್ತದೆಗೆ ಲಗ್ಗೆಯನು ಹಾಕಿದೆನು ; ಸಗ್ಗದಲ್ಲೆಹ ನೀನು ಬಗ್ಗಲಿಲ್ಲ ! (ಕಲಶ. ೫೩). [ ← ಮರಾ. ಫುಗಾ ]

**ಪುಚ್ಚ₁, ಹುಚ್ಚ₁** (ನಾ). ೧. ಬುದ್ಧಿಭ್ರಮಣೆಯಾದವನು ; ಉನ್ಮಾದ ರೋಗಿ : ಒರೊರ್ಮೆ ಪುಚ್ಚನಂತಚ್ಚರಿಯೊಳಾಡುವನದೋರೋರ್ಮೆ ಮಾತ್ರನಂತೊತ್ತರಿಸಿ ಮೇಲ್ಸರಿಸನು (ಕೊಟ್ಟೂರು. ೬-೩೬). ಹುಚ್ಚ₁ : ೧. "ಮ್ರೇಡೀರಃ = ಹುಚ್ಚಂ" (ಕಾಕರ್ನ. ೦೫). ೨. ತಿಳಿಗೇಡಿ ; ಮರುಳ ; ದಡ್ಡ : ಹೆಚ್ಚಿನ ಸತಿಯರ ಕಚ್ಚೆಯ ಬಿಚ್ಚುವ ಹುಚ್ಚನೇನೆ (ಭೂರಂದ. ೨-೯೩-೦) ; ಹುಚ್ಚರಿರ ಚಂದನವಿರೆ ಬಿದಿರ ಸಾರುವರೆ (ಕೃಹಾ. ೫ ೩.೦೦) ; ಹೀಗೆ ಹುಚ್ಚನಂತೆ ತಿರುಗಾಡುವುದು ತರವಲ್ಲ (ಮುಂಜಾಯ. ೩-೦೨೫). ೩. ಮರುಳುಗೊಂಡವನು ; ಮೋಹಿತನಾದವನು : ವಿವೇಕಾನಂದರು . . . ಸಂಬೋಧಿಸಿದ ರೀತಿ ಅಮೇರಿಕೆಯ ಜನರನ್ನು ಹುಚ್ಚರನ್ನಾಗಿ ಮಾಡಿತು (ಧರ್ಮಸಾ. ೪೪). (ಗು). ೪. ಅರಿವಿಲ್ಲದ ; ಬುದ್ಧಿಗೇಡಿಯಾದ : ಅಪ್ಪ ಸತ್ತ ಆರುತಿಂಗಳಿಗೆ ಹುಚ್ಚುಮಾವ ಬಂದು ಕೊರಳು ಕಟ್ಟಿಕೊಂಡು ಅತ್ತ (ಗಾದೆ). [ಪುಚ್ಚು₁ (<ಪುರ್ಚು) + —ಅ₇]

**ಪುಚ್ಚ₂, ಪುಕ್ಕ₂, ಪುಚ್ಚು₂** (ನಾ). ೧. ಹಕ್ಕಿಯ ಗರಿ : ತುಪ್ಪುಳು : ಹಾರುಹಕ್ಕಿಯ ಪುಚ್ಚಮಣಿಸಲಳಿಸಿ ಬೆಡಗಿ ! (ಉಡುಪ್ಯಾಲೆ. ೦೨-೫) ; ಸೀಗೆ ಹುಣ್ಣಿಮೆಗೂ ಮಸೂರಿಯು ಹಸುರುಪುಚ್ಚವ ತೆರೆಯಿತು (ಕಂದು. ೦೨-೦೫) ; ಅಂದರಲ್ಲೊಬ್ಬಳ ಮೈ ತುಂಬ ಪುಚ್ಚ ಹತ್ತಿದ್ದನ್ನು ಕಂಡೆ (ಕೃತಿ. ೨೫೬). ೨. (ಪಕ್ಷಿಗಳ) ಬಾಲದ ತುದಿ : "ಪುಚ್ಛ (ಸ)— ಪುಚ್ಚ = ಬಾಲ" (ಕನ್ನಕೋ. ೨೬) ; ಹೀಗಡೆ ಬಣ್ಣದ ಪುಚ್ಚವ ಹಚ್ಚು (ಕಕತ. ೦, ೪೫). ಪುಕ್ಕ₂ : ೧. ದೈವ್ಯಪೆಯಿಂದ ಆ ಮಹಾಪರ್ವತವು ಈಗ ತನ್ನಷ್ಟಕ್ಕೆ ಹಕ್ಕಿಯ ಪುಕ್ಕದಷ್ಟು ಹಗುರವೂ ಮೃದುವೂ ಆಯಿತಲ್ಲವೆ! (ಶಾಂಕಲಾ. ೯೪) ; ಭವಿತವ್ಯತೆಯಿನಂತೆ ಓಡಿ ತಪ್ಪಿಸಿಕೊಳ್ಳಲಿರಿದು ಹಕ್ಕಿಯ ಪುಕ್ಕಕೆ ಹತ್ತಿದ ಉರಿಯಂತೆ ಅದು ನಿನ್ನ ಬೆನ್ನಟ್ಟಿ ಬಹುದು (ಬಂಗಾಕ. ೦೦೬-೦೬). ೨. ಒಂದು ಆಶ್ಚರ್ಯಕರವಾದ ಪಕ್ಷಿಯಿದೆ: ಇದು ಕಾಡುಪಾರಿವಾಳದಷ್ಟಿದೆ . . . ಪುಕ್ಕ ಉದ್ದವಾಗಿರುತ್ತದೆ (ಕೃಷಾ. II. ೦೩೨) ; ನವಿಲು ಆಡಿದರೆ ಕಂಬೋತ ಪುಕ್ಕ ತೆರೆಕೊಂಡಿತು (ಗಾದೆ). ಪುಚ್ಚು₂. ಪುಚ್ಚ ಎಣಿಸು = ಸಂಪೂರ್ಣವಾಗಿ ತಿಳಿ : ನಿನ್ನ ಪುಚ್ಚು ಎಣಿಸೂದು . . . ಶಕ್ಯ ಆಗತಿತ್ತೇನು ? (ಅಜಿಹ. II. ೬೦೩). ಪುಚ್ಚ ಬಲಿ, ಪುಚ್ಚುಬಲಿ=೧. ಹಕ್ಕಿಯ ಗರಿಯಂ ಬೆಳೆ : ಇನ್ನೂ ಪುಚ್ಚ ಬಲಿಯದ ಆ ಗುಬ್ಬಚ್ಚಿ ಹಾರಲಾಗದೆ ಒದ್ದಾಡುತ್ತಿದೆ (ಊರು) ; ಅದಕ್ಕೆ ಇನ್ನೂ ಪುಚ್ಚು ಬಲಿತಿಲ್ಲ (ಮುಂಜಾಯ. ೫-೩೦೦). ೨. (ಆಲಂ) ಸಾಮರ್ಥ್ಯ ಹೆಚ್ಚಾಗಂ ; ಶಕ್ತಿ ವರ್ಧಿಸು : ಅವನಿಗೆ ಮುಗಿಲು ಮೂರೇ ಗೇಣು ಉಳಿದಂತೆ ಭಾಸವಾಯಿತು. ಅವನ ಪುಚ್ಚ ಬಲಿತಿತು (ಕೃತಿಶ. ೩೬೦). [ ಸಂ. < ಪುಚ್ಛ ]

**ಪುಚ್ಚಣೆ** 'ಪುಚ್ಚಟಿ₂' ನೋ.

**ಪುಚ್ಚವಣ, ಪಚ್ಚವಣ, ಪುಚ್ಚವಣೆ** (ನಾ). ೧. ಪರೀಕ್ಷಿಸುವಿಕೆ ; ಪರೀಕ್ಷೆ : "ಪುಚ್ಚವಣಂ = ಪರೀಕ್ಷೆ ; ಅಣ್ಮು " (ಕಮುದ. ಶಂ. ೨) : ಪು[ಶಾಂ. ಪ]ಚ್ಚವಣಂ ನೋಡುವೆನೆನ್ನಿಚ್ಚೆಯೊಳೀ ಮುನಿಯ ವರದ ಮಹಿಮೆಯು (ರಿಶಶಾ. ೧-೯೦) ; ಆಗಳ್ ಪುಚ್ಚವಣವಾಗೆ ನೆರೆದ ಪಡಿಯ ಜತಿಯರ್—ಇವನಿನ್ನೆವರಂ ಸ್ವರಜ್ಞಾನಮೇ ಪುಟ್ಟತಿಲ್ಲವೆಂದು ತಳ್ಳಿದರ್ (ಅದ್ಭುತ. ೨೬-೨೫) ; ದೈವಮೆ ನೋಡೆ ಪುಚ್ಚವಣಮಂ ಗೆಯ್ವನ್ನವಂ ಕಾಣಿರೇ (ಪ್ರಸೂಮ. ೯-೩೪). ೨. ಪೌರುಷ ; ಶಕ್ತಿ ; ಸಾಮರ್ಥ್ಯ : "ಪುಚ್ಚವಣ=ಪರೀಕ್ಷೆ ; ಅಣ್ಮು" (ಕಮುದ. ಶಂ. ೨) ; "ಪುಚ್ಚವಣ—ಪೌಸ್ತ್ಯ =ಪೌರುಷ" (ಕನ್ನಕೋ. ೨೬). ಪಚ್ಚವಣ : ೧. "ಪುಚ್ಚವಣ (ಪಚ್ಚವಣ)—ಪರೀಕ್ಷಣ" (ಕನ್ನಕೋ. ೨೬). ೨. "ಪೌರುಷಂ ಪಚ್ಚವಣಂ" (ಕಶಾರ. ೫೫) ; ಬಿರಿವದಂ ಪಚ್ಚವಣಮಂ ನೋಡಲಾ ಸಿದ್ಧಂ . . . ಪರಿತುಷ್ಟನಾಗುತ್ತೆ (ಅರಾತ. ೨-೦೩-೨೦). ಪುಚ್ಚವಣೆ : ೧. "ಪುಚ್ಚವಣೆಯ ಪರೀಕ್ಷೆಯು" (ಶಬ್ದಾ. ೦೯೨). [ < ಪ್ರಾ. ಪುಚ್ಛಣ./ಸಂ. ಪೃಚ್ಛನ ]

**ಪುಚ್ಚವಣಿಸು** (ಕ್ರಿ). ಪರೀಕ್ಷಿಸು : ತಚ್ಚೈಲದಲಘುತರಮಹಿಮೆಯಂ ಪುಚ್ಚವಣಿಸಲ್ ಶಕ್ಯಮೋ ಸೂರಸಚಿವಾಗ್ರಣಿ (ಶಾಸೋಕ. ೫-೯೨). [ಪುಚ್ಚವಣ + —ಇಸು₃]

**ಪುಚ್ಚವಣೆ** 'ಪುಚ್ಚವಣ' ನೋ.

**ಪುಚ್ಚಳಿ₁** 'ಪುಚ್ಚಟಿ₁' ನೋ.

**ಪುಚ್ಚಳಿ₂** 'ಪುಚ್ಚಟಿ₂' ನೋ.

**ಪುಚ್ಚಳಿಸು** 'ಪುಚ್ಚಟಿಸು' ನೋ.

**ಪುಚ್ಚಟಿ₁, ಪುಚ್ಚಳಿ₁** (ಕ್ರಿ). ೧. ಹಾಳಾಗು ; ಕೆಡು ; ಭಂಗವಾಗು : ಶರದದ ಬಿಸಿಲಳುರೆ ಪೊಣ್ಮಿದ ಘರ್ಮಬಿಂದುಗಳಿಂ ನಾಂದು ಪುಚ್ಚಟಿದರೆ ಪೊರೆನಾದ ಕುಂಕುಮಪತ್ರಭಂಗದ ಕೊರಗಿದ ನಗೆಮೊಗಂಗಳುಂ . . . ಅಡಿಗಡಿಗೆ ತಡವಡಪಪ್ಪ ನಡೆಗಳುಂ ಬೆರಸು (ಅಂಪು. ೧೧-೬೮ವ) ; ಕಟಿ ಪೂವಾಗಲೊಡಂ ಪುಚ್ಚಟಿದೊರ್ಮೆಯೆ ಮಾಜಿ ಪೋಪ ಕಂಪಿನ ತೆಜದಿಂ ೬ಟಕಂಟಮಾದೊಡಲಿಂ ಪಾಂಗುಂಟಿಯದೆ ಪಜಪಟ್ಟು ಪೋದುದದಸು

ಮುನಿಪತಿ[ಯಾ] (ಧರ್ಮಾ. ೧೦-೫೯) ; ಕುತ್ತವಿಲ್ಲದೆ ಬೇನೆಯಿಲ್ಲದೊಂದು ಟಣ್ಣ ನೀಸರ್ಗಿಗುಮಪ್ಪೊದೆತ್ತವಿರ್ದೆಡೆಯುಂ ಪುಚ್ಚಟಿದು ಬರ್ದಿರ್ದಂತೆ ಗೆಯ್ದು ಕಿವಿಗಳಪ್ಪೊಡಂ . . . ಒಂದು ತಿಂಗಳಾಯು (ಕಹಾಕೆ. [illegible]). ೨. ಪ್ರತಿಜ್ಞೆ ಮೊದಲಾದುವನ್ನು ಮುರಿ,–ಕೆಡಿಸು,–ಭಂಗಿಸು: ಪೊಲ್ಲದು ಪೂಣ್ದು ಪುಚ್ಚಟಿಯದರ್ಕಿದ ಕೌರವರಂ ಪೊರಳ್ಚಿ ಕೊಂದು ... ಎಲ್ಲಮುಂ ನೆಱಿದೆಂ (ಶಂಕರಾ. ೦೨-೧೬೦); ಶೀಲವತಿ ಸೀತೆ ಪೂಣ್ದುದನೆಂತುಂ ಪುಚ್ಚಟಿಯಲ್ (ಶಂಠಾಮ. ೦೬-೬೫). ಪುಚ್ಚಳಿ₁ : ೨. ಟಂಪರಲಕ್ಷ್ಮ ಚಂದ್ರೋಪರನೊಳ್ಳು ಮಾಳ್ಕೆಯಿಂ ಭಾಸೆಯ ನಿತ್ತು ಪುಚ್ಚಳಿವರಲ್ಲದ ಭಾಸೆಯುಮುದ್ಧರಿಪ್ಪರೇ (ಎಕ. ೪. ಶಿಂ೦ಂರು. ೦೦೨-೦೦೪; 1220).

[ಪುಚ್ಚು₁ (P ← ತೆಲು. ಪುಚ್ಚು = ಕೊಳೆತಾಹೋಗು) + ಅಟು₁]

**ಪುಚ್ಚಟು₂**, ಪುಚ್ಚಣೆ, ಪುಚ್ಚಳಿ₂ (ನಾ). ಕೇಡು; ಹಾನಿ; ನಾಶ : "ಪುಚ್ಚಟಿಯೆಂಬ ಕೇಡು" (ಶಬ್ದ. ೬೩-೪೪೪); ಎಲೆಲೆ ಸಪ್ಪೆಂಗುಂದಿದ ಪುಚ್ಚಟಿಯು ಬಾಬ್ಬಬದೆ! (ರಾಮಾಶ್ವ. ೦೦೨-೦೫): ಅಬಲಂ ಪೆಜಂಗೆ ದೊರೆಕೊಳೆಪಟಿಗೆಯ್ಪುಂಮನೆಸಗಳೆನಪವೇಡಣೆಪೊಡೆ ಕೇಳಬಲಂ ನಿನಗೊದವಿಪ ಪುಚ್ಚಟಿಯನೊಡರ್ಚಲ್ಕೆ ನೆನೆಗುಂದಾಗಳೆ ಧರ್ಮಂ (ಶಿಕ್ಷಾರಂ. II, ೦೬೪). ಪುಚ್ಚಣೆ : ನಚ್ಚಣಿಗರ ನಟನೆಗೆ ಮೋಹಿಸಿದೊಡೆ ಪುಚ್ಚಣೆಯಹುದೆಂತೆರ್ದಲ್ ಪುಂಗೈದುಂಸಿರಿದಳು ವಿದಗ್ಧೆ (ಶಲಜಾ. ೦೪-೩೦). ಪುಚ್ಚಳಿ₂ : ಇಚ್ಚೆಗಳಸುಗಿದೊಡೀಗಳ್ ಪುಚ್ಚಳಿ ನಿನಗಪ್ಪುದು (ಚಿಲು. ೬-೬೩,; ಧರಿಸು . . . ಪುಚ್ಚಳಿಗಳವು ತೊಲಗೆ ಸುಖದಿಂದಿರ್ದನು (ಶೀಕರಾ. ೯-೨೨); ಅಂತು ಸಮನಿಸಿರ್ದ ಪುಚ್ಚಳಿ ಟಳಿಯಲಿಲ್ಲರುಂ . . . ಸಮಾಧಾನಸ್ಥಿತಿಯೊಳಿರ್ಪನು (ಮಲಾಕ. ೯-೫೭). [<ಪುಚ್ಚಟು₁]

**ಪುಚ್ಚಟಿಸು**, ಪುಚ್ಚಳಿಸು (ಕ್ರಿ). ೧. ಹಾಳಾಗು; ನಾಶವಾಗು : "ಪುಚ್ಚಟಿಸು — ವಿಲಯೇ (ಕರಗಿ ಹೋಗು, ನಾಶವಾಗು)" (ಶಮಂ). ಪುಚ್ಚಳಿಸು : ೧. ಆತ್ಮಂ ಸಲೆ ಸೂಕ್ಷ್ಮತನುವಂ ತಳೆದು ಶುಭಾಶುಭ ಕರ್ಮಗಳ ಫಲಮನುಣುತೆ ತತ್ಸೂಕ್ಷ್ಮಾಂಗಮೆಯ್ದೆ ಪುಚ್ಚಳಿಸೆ ಮೋಕ್ಷಪದಮಪ್ಪು[ಪ್ಪು]ತೀರ್ಪನು (ಪಾಸೋಕ್ಕು. ೯-೮೫): ಕಬ್ಬಿಗಂ ಕೊರಗಿರೆ ಪುಚ್ಚಳಿಸೆ ಭಾವಿಕಾವ್ಯಮೇ ಬರಿದಕ್ಕುಂ (ಸಂಕಕ. ೬-೦೦). ೨. ನಾಶಗೊಳಿಸು; ಧ್ವಂಸಮಾಡು; ಭಂಗಿಸು : ಅವಿಚ್ಛಾಪಮಂ ಪುಚ್ಚಳಿಪುದು ಸರ್ವಕ್ಕೆ ತಾಂ ಸಲೆ ಕಾರಣಮದೆನಿಸಿ . . . ಒಟ್ಟಿರ್ದುದು ಶಿಳಿ ವಿಭೂತಿಯ ಘನಮನು (ಪಾಸೋಕು. ೦೩-೦೦೦); ಹಸಿವೆಗೆ ನಾಡ ಹುಲಿ ಪುಚ್ಚಳಿಸಿತು (ಕಾವ್ಯರ. ೬೬-೦೪೭). [ಪುಚ್ಚಟು₂ + –ಇಸು₃]

**ಪುಚ್ಚಿ**, ಪುಚ್ಚೆ, ಹುಚ್ಚಿ₂ (ನಾ). ೧. ಯೋನಿ : (೩). ೨. ಕುಂಡೆ : (೩). ೩. ಗೋಲಿಯಾಟದಲ್ಲಿ ಗೋಲಿಯನ್ನು ತಳ್ಳುವ ಕುಳಿ ; ಬದ್ದು. ೪. ಚಿಣ್ಣಿಕೋಲಾಟದಲ್ಲಿ ಚಿಣ್ಣಿಯನ್ನು ಇಟ್ಟು ಚಿಮ್ಮುವುದಕ್ಕಾಗಿ ನೆಲದಲ್ಲಿ ಮಾಡಿದ ಕುಳಿ. ಪುಚ್ಚೆ : (೩). ಹುಚ್ಚಿ₂ : ೫. ಪಶುಗಳ ಯೋನಿ. [ದೇ.॥ ತಮಿ. ಪೊಚ್ಚು; ಮಲ. ಪೂಚ್ಚಿ, ಪೂಚ್ಚು; ಕೋತ. ಪೂಚ್; ಬ್ರಾಹುಈ. ಪೋಸ್]

**ಪುಚ್ಚು₁** 'ಪುರ್ಚು' ನೋ.

**ಪುಚ್ಚು₂** 'ಪುಚ್ಚ'₂ ನೋ.

**ಪುಚ್ಚುಂಗೊಳಿಸು₁**, ಪುಚ್ಚುಗೊಳಿಸು, ಹುಚ್ಚುಗೊಳಿಸು (ಕ್ರಿ). ಬುದ್ಧಿ ಭ್ರಮಣೆಯಾಗುವಂತೆ ಮಾಡು : ನಚ್ಚಿನ ಮಂತ್ರೀಶ್ವರನಂ ಪುಚ್ಚುಂಗೊಳಿಸುವುದಿದಾವ ಮತಂ (ಟಿಐಚಿ. ೬-೬೩). ಪುಚ್ಚುಗೊಳಿಸು : ಅಡವಿಯ ತೊಗಲಿತ್ತು, ಹುಡುಕಿನೀರಲದ್ದಿತ್ತು, ಜಡೆಗಟ್ಟಿ ಭಸ್ಮವ ತೊಡಿಸಿತ್ತು, ಎವೆ ಪುಚ್ಚುಗೊಳಿಸಿತ್ತು (ವಚಶಾ. I, ೨೩೬-೦೬). ಹುಚ್ಚುಗೊಳಿಸು : ಬಿಡಿಮೊತ್ತಿ ಕೇಶವ ಕೀಳಿಸಿತ್ತು, ಹುಡಿ ಹುಚ್ಚುಗೊಳಿಸಿತ್ತು (ವಚಶಾ. I, ೨೩೬-೦೬). [ಪುಚ್ಚು₁ (< ಪುರ್ಚು) + ಕೊಳ್₁ + –ಇಸು₃]

**ಪುಚ್ಚುಗುನ್ನಿ**, ಹುಚ್ಚುಕುನ್ನಿ (ನಾ). (ಆಲಂ) ತಿಳಿಗೇಡಿ; ಅವಿವೇಕಿ : ಪೊಗರಿಂಪು ನುಣ್ಪು ಪೆಂಪಿನ . . . ಸದಲಂಕಾರಾದಿಗೆ ಸಲ್ಲ ಚೆಲ್ವ ಕಾವ್ಯದ ಬಗೆಯಜಾಯದ ಪುಚ್ಚುಗುನ್ನಿ ಕೂಗಿದೊಡಳ್ಕೇಂ (ಹುಬ್ಬಾರ. ೦-೦೪). ಹುಚ್ಚುಕುನ್ನಿ : ಆ ಹುಚ್ಚುಕುನ್ನಿ ಮಾತು ಅಂದರೆ ಯಾರಿಗೆ ತಾನೆ ಲಕ್ಷ್ಯವಿರುತ್ತೆ? (ಲಂ೦). [ಪುಚ್ಚು₁ (< ಪುರ್ಚು) + ಕುನ್ನಿ₁]

**ಪುಚ್ಚುಗೊಳ್** 'ಪುರ್ಚಗೊಳ್' ನೋ.

**ಪುಚ್ಚುಗೊಳಿಸು** 'ಪುಚ್ಚುಂಗೊಳಿಸು' ನೋ.

**ಪುಚ್ಚುತನ**, ಹುಚ್ಚುತನ (ನಾ). ದಡ್ಡತನ; ಅವಿವೇಕ : ಇಚ್ಚೆಯಿಂ ಬಾಯ್ಗೆ ಬಂದಂತೆ ಗಳಪುವುದು ತಾಂ ಪುಚ್ಚ[ಚ್ಚು]ತನಂ (ಮುಹಾಚಿ. ೦೪-೩೯). ಹುಚ್ಚುತನ : ನಿನ್ನ ಹುಚ್ಚುತನದಿಂದ ನೀನು ಹಾಳಾಗಬೇಡ (ಕಿಮನ. ೦೫೬); ಅವನು...ತನ್ನ ಹುಚ್ಚುತನವನ್ನು ಆಲೋಚಿಸಿ ಕಣ್ಣೀರು ಸುರಿಸಲಾರಂಭಿಸಿದನು (ಮಂಡಕ. ೨೪). [ಪುಚ್ಚು₁(<ಪುರ್ಚು) + –ತನ]

**ಪುಚ್ಚೆ** 'ಪುಚ್ಚಿ' ನೋ.

**ಪುಚ್ಛ** (ನಾ). ೧. ಬಾಲ; ಲಾಂಗೂಲ : "ಪುಚ್ಛಃ...ವಾಲಧಿಃ — ಈ ಕುದುರೆ ಮುಂತಾದ ಜಂತುಗಳ ಬಾಲದ ಹೆಸರುಗಳು" (ಸಿದ್ಧಾಂತ ೨೫೦). ೨. ಪಕ್ಷಿಗಳ ಪುಕ್ಕ. ೩. ಹಿಂಭಾಗ. ೪. ತುದಿ; ಕೊನೆ. ೫. ಅನುಬಂಧ : (Appendage. ಶಾಂಶಾ ೫). [ಸಂ]

**ಪುಚ್ಛದಂಡ** (ನಾ). ಬಾಲ : ಜಘನದಿಂದ ಕೆಳಗು ಬಗೆ ಬಾಲು ಪುಚ್ಛದಂಡ ಮೆಂಬೀ ಹೆಸರಿಂ (ಅಶ್ವಶಾ. ೯-೪೫). [ಸಂ.]

**ಪುಟ₁** (ನಾ). ಪುಟಿಗೆ; ನೆಗೆತ; ಪುಟಿದೇಳುವಿಕೆ : ಕುರುವಂಶಾಗ್ರಣಿ ಪೊಯ್ದು ಪೊಯ್ಲ್ಗೆ ಕೆಡೆದಂ ಭೀಮಂ ರಣೋರ್ವೀತಳಂ ಬಿರಿಯಲ್ ಪಾಱಿದನಂತರಕ್ಕೆ ಪು[ಪಾಠಾಂ. ಫು]ಟಮುಂ ದುರ್ಯೋಧನಂ (ಜಗಹಾಚೀ. ೦೩-೨೪); ಪುಟದ ಕಂತುಕದಂತೆ ಘೂಣಾ ಉಟಕಟಸಲೌಕಿತು (ಕುಮಾರಿ. ಬಿ೦ಡ. ೦೪-೩೭). 'ಪುಟಂನೆಗೆ' ಪರಾ. [<ಪುಟಿ₁]

**ಪುಟ₂** (ನಾ). ಬರೆಯುವ ಅಥವಾ ಅಚ್ಚಿನ ಹಾಳೆಯ ಒಂದು ಮಗ್ಗುಲು,–ಪಕ್ಕ : ಗೀತೆಯ ಪುಟಗಳನ್ನು ಪುನಃ ಪುನಃ ತಿರುವಿದಾಗ ಮುಖ್ಯಸಂದೇಶ 'ಕರ್ಮಯೋಗ' ಎಂಬುದು ಸ್ಫುಟವಾಗುತ್ತದೆ (ರಮಗ. ೦೦೩); ಪುಟದಡಿಯ ಟಿಪ್ಪಣಿಗಳಲ್ಲಿ ಸಹ ಇವರು ಉಲ್ಲೇಖಿಸಬ್ಬಿದರು (ಚಾರವ. ೫೩೩). [<ಪ್ರಾ. ಪುಟ್ಠ/ಸಂ. ಪೃಷ್ಠ/ತಮಿ. ಪುಟ, ಪುಟ್ಟ; ಮಲ. ಪುಟ; ತುಳು. ಪುಡೆ; ತೆಲು. ಪಡ]

**ಪುಟ₃** (ನಾ). ೧. ಮಡಿಕೆ; ಪದರ. ೨. ತಗ್ಗಾದುದು; ಹಳ್ಳ. ೩. ಎಲೆಯಿಂದ ಮಾಡಿದ ಬಟ್ಟಲು; ದೊನ್ನೆ : ನಳಿನದಳಪುಟದೆ ನೀರಂ ನಳಿನಿಗಳವು ರೂಪುಗೊಂಡು ಸುರಿವಪುವು (ಕಾದಂಪೂ. ೬೩). ೪. ಎಲೆಯಿಂದ ಮಾಡಿದ ಪೊಟ್ಟಣ. ೫. ಆಳವಿಲ್ಲದ ಬಟ್ಟಲಂತಹ ಪಾತ್ರೆ. ೬. ಕೈಗಳಂತೆ ಜೋಡಿಸಿ ಮಾಡಿದ ರಚನೆ : 'ಕರಪುಟ' ಪರಾ. ೭. ಮುಚ್ಚಳ; ಪಿಧಾನ : 'ಕವಾಟಪುಟ' ಪರಾ. ೮. ಗುಪ್ತಾಂಗವನ್ನು ಮುಚ್ಚುವ ಬಟ್ಟೆ; ಕಟಿವಸ್ತ್ರ; ಕೌಪೀನ : 'ಪುಟಗೋಸಿ' ಪರಾ. ೯. ಕಣ್ಣಿವೆ. ೧೦. ಸಸ್ಯಗಳ ಹೊಡೆ. ೧೧. ಕರಂಡಕ; ಭರಣಿ; ಸಂಪುಟ. ೧೨. ಕುದುರೆಯ ಗೊರಸು; ಕೊಳಗು : 'ಖುರಪುಟ' ಪರಾ. ೧೩. ಜಾಜಿಕಾಯಿ. ೧೪. ಮೂಗಿನ ಹೊರಳೆ,–ಹೊಳ್ಳೆ : 'ನಾಸಾಪುಟ' ಹೋ. ೧೫. ಲೋಹಗಳನ್ನು ಕರಗಿಸಲು ಬಳಸುವ ಪಾತ್ರೆ; ಮೂಸೆ : ಪುಟಂಗಳೊ[ಪಾಠಾಂ. ಮುಂಬ್ಬಿಗೆಯೊ]ಳಿಟ್ಟು ತೆಗೆಪುವುದುಂ (ವಡ್ಡಾರಾ. ೯೬-೨೭). ೧೬. ಔಷಧಗಳ ಸಿದ್ಧತೆಯಲ್ಲಿ ಒಂದು ಸಲ ಕುದಿಸುವುದು,–ಭಟ್ಟಿಯಿಳಿಸುವುದು : ಮಾತುಳಂಗಮಂ ನೆಱೆ ಮಗುಟ್ಟಿ ಪುಟದಿಂ ಮಂದಾನಿಳನಿಂದೆ ಸುಟ್ಟು ಮುಖದೊಳ್ ತಳೆದೊಡೆ ಮುಖವಾಸಮಿಂತಿದತಿಶಯಮಕ್ಕುಂ

(ಲೋಕೋಪ. ೭-೬). ೧೭. ಗೋಡೆ ಕಟ್ಟುವಾಗ ಒಂದು ಸಲಕ್ಕೆ ಹಾಕುವ ಮಣ್ಣಿನ ಸ್ತರ: (?). ೧೮. ಚಿನ್ನವನ್ನು ಬೆಂಕಿಯಲ್ಲಿಟ್ಟು ಶುದ್ಧಗೊಳಿಸಿ ಹೊಳಪುಕೊಡುವಿಕೆ ಮತ್ತು ಅದರಿಂದುಂಟಾಗುವ ಹೊಳಪು : "ಪುಟಂ=ಬಣ್ಣಂ" (ಶಾಶಕ್ಮ. ೨೬೯) ; ದೇಹವು ಮಿಸುನಿಯಂದದಿ ಪುಟವನಿಟ್ಟುದು (ಕೌಶಿಕಾ. ೨೨-೬೯) ; ತೋಱಿದನು ತಾ ಬಳಿಕವಗೆ ಹದಿನಾಱುಬಣ್ಣದ ಪುಟದ ಚಿನ್ನಕೆ ನೂಱುಮಡಿಯೆನೆ ಹೊಳೆಹೊಳೆವ ಹೊಮ್ಮಿಱಿಯ ರೂಪಕವ (ಕೊರಡಾ. ೩-೬-೦೯) ; ಕಿಟ್ಟಗಟ್ಟಿದ ಕಬ್ಬಿಣಕ್ಕೆ ಪುಟವ ಹಾಕಿಸೊ ಉತ್ಕೃಷ್ಟ ಬಂಗಾರದೊಳು ಎನ್ನ ಸೇರಿಸೊ (ಪುರಂದ. ೨-೨೩-೩). ೧೯. [ನಾಟ್ಯ] ಕಾಲಿನ ಒಂದು ಭಂಗಿ : "ಪುಟವದೊತ್ತಿ ತೋಱುವ ಹಜ್ಜೆಯೆನಿಕ್ಕು" (ಸಂಗೀತಾ. ೨೩-೯). ೨೦. [ಛಂದ] ಪ್ರತಿಯೊಂದು ಚರಣದಲ್ಲಿ ಹನ್ನೆರಡು ಅಕ್ಷರಗಳಿರುವ ಸಮವೃತ್ತಗಳಲ್ಲಿ ಒಂದು : ನನಮಯ ಗಣಮಿಂತೀ ನಾಲ್ಕು ಮತ್ತಂ ಜನಿಯಿಸೆ ಯತಿ ಸಪ್ತಸ್ಥಾನದಿಂದಂ...ಈ ಪಾಂಗಿನೊಳ್ ಕಾಮಿನಿ ಬಗೆ ಪು[ಪಾಠಾಂ. ಪ್ಲು]ಟಂ (ಛಂದೋಂಬು. ೨-೦೩೬). ೨೧. (?) : ಶ್ರೀರತೀಶ್ವರನಶೋಕೆಯ ತಳಿರ ಸರಲ್ಗಳಿಗೆಪೋರಂತೆ ಮಿರುಗುವ ಸಿಪಾಗಮಂ ತೊಡಿವಂತೆ ತಾರಾಳಿಯ ಮೊಗ್ಗೆ ಕಂಚುಕಿಯಪ ತೊಡಿಸಿ ಪುಟವಂ ಬಿಗಿದು ಬಂಧಿಸಿದರು (ಪಪಮೋ. ೨೩-೩೨).

ಪುಟ ಇಳಿಸು=ಭಟ್ಟಿ ಇಳಿಸು : ಅಷ್ಟುಮಿಯ ರಾತ್ರಿ ಇಬ್ಬರು ಕುಳಿತು ಏನೋ ಪುಟ ಇಳಿಸುತ್ತಿದ್ದರು. ಮಡಕೆಯೊಂದಕ್ಕೆ ಮುಚ್ಚಳ ಹಾಕಿ . . . ಬೆಂಕಿಯ ಗುಳಿಯಲ್ಲಿ ಪುಟಕ್ಕೆ ಇಟ್ಟಿದ್ದರು (ಜಲೀಲ. ೦೨೯). ಪುಟಕ್ಕೆ ಹಾಕು= ೧. ಚಿನ್ನ ಮೊದಲಾದುವನ್ನು ಬೆಂಕಿಯಲ್ಲಿಟ್ಟು ಹೊಳಪು ಕೊಡು : ಅವಳ ಸೌಂದರ್ಯವು ಪುಟಕ್ಕೆ ಹಾಕಿದ ಚಿನ್ನದಂತೆ ಹೆಚ್ಚಿತು (ಮುಂಬಿಮಾ. ೬೯) ; ಬಂಗಾರ ಬೆಳ್ಳಿ ಮೊದಲಾದ ಪಂಚಲೋಹಗಳು ಪುಟಕ್ಕೆ ಹಾಕಿ ತೆಗೆಯದಿದ್ದರೆ ಅವುಗಳಿಗೆ ಕಾಂತಿ ಬರುತ್ತದೆಯೆ ? (ಕೃಶಾಪ. ೩). ೨. ಮೂಸೆಯಲ್ಲಿಟ್ಟು ಸುಡು : ಒಬ್ಬಿಣದ ಕಿಟ್ಟ ತಂದು ಪುಟಕ್ಕೆ ಹಾಕಿ ಲೋಹಭಸ್ಮ ಮಾಡುವರು (ಮುಂಬಿಮು. ೯-೦೯೩). ಪುಟ ಮಾಡು = ಹೊತ್ತಿದ ಬೆಂಕಿಯಂನ್ನು ಉಜ್ವಲಗೊಳಿಸು : ಜಾಂಬವಾದಿಗಳ್ ಕುಂಡಮುನಗುಟ್ಟು ಕಾಳಾಗರುಚಂದನಾದಿಯಿಂಧನಂಗಳಂ ಒಟ್ಟಿಯಗ್ನಿಯಂ ಪುಟ ಮಾಡಿ (ಭುಜ್ಯಾಸ್ತ್ರ. ೭-೨೯ ಪ) ; ಅವರು . . . ಸಡಗರದಿ ಪುಂಜಂಗಳ ಪುಟ ಮಾಡುತ (ಕೃಶುಕು. ೯-೨೦೨). [ಸಂ.]

**ಪುಟಂನೆಗೆ, ಪುಟನೆಗೆ** (ಕ್ರಿ). ಪುಟಚೆಂಡಿನಂತೆ ನೆಗೆ ; ಟಣ್ಣನೆ ಹಾರು : ತನ್ನ ಮುಂ ನೆರಪಿದ ಪಾಪಮೆ ಕೋಪದಿಂ ಪೂಡೆಸೆಂಡುಪೊಡೆಯುತಿರ್ದುದೆಂಬಂತೆ ಪೂಡರದೆ ಪುಟಂನೆಗೆದು ಮುಗುಟ್ ಮುಗುಟೂ ಶಿಲೆಯ ಮೇಲೆ ನುಚ್ಚುನೂಱಾಗಿ ಬಿಟ್ಟಿಂ (ಪಾರ್ಶ್ವಪು. ೬-೯೯ ಪ) ; ಒದೆದಿಳಿಯಂ ಪುಟಂನೆಗೆದು . . . ಅಪ್ಪಳಿಪ ಬಗ್ಗದ ಗಂಡಿಕೆಗಂಡು ನೆತ್ತಿಯಗ್ರದೆ ಮೊನೆಯುರ್ಚೆ ಕಿಯಪ್ಪುರಿಗೆಯಿಂದಿರದಿಕ್ಕಿದನಾ ವನೇಚರಂ (ಕಬಕಂ. ೩-೩೯). ಪುಟನೆಗೆ: ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆದಂತಾಯಿತ್ತು (ಬೇದಾಪ. ೨೦-೩೯) ; ಪುಟನೆಗೆದೆದ್ದು ಪಳಯುವ ಕೊಡಹಿ ನಿಂದವು ವೇದವಾಜಿಗಳು (ಉಷ್ಣಾಕ. ೭-೨೨) ; ನೆಲಕತ್ತಿ ಹೊಡೆದರು ಮೇಲಕೆ ಪುಟನೆಗೆದೇಳುವ ಕಂದುಕದಂತೆ (ಬಂತಾಕ. ೨೨೦-೯೩). [ಪುಟ$_1$+ನೆಗೆ$_1$]

**ಪುಟಕ** (ನಾ). ೧. ಮಡಿಕೆ ; ಪದರ. ೨. ಹಳ್ಳವಾಗಿರುವಂಥದು. ೩. ದೊನ್ನೆ. ೪. ಎಲೆಯ ಪೊಟ್ಟಣ. ೫. ಕರಂಡ ; ಸಂಪುಟ. ೬. ತಾವರೆ ; ಕಮಲ. ೭. ಜಾಜಿಕಾಯಿ. [ಸಂ.]

**ಪುಟಕೊಡು** 'ಪುಟಗೊಡು' ನೋ.

**ಪುಟಕೋಸಿ** 'ಪುಟಗೋಸಿ' ನೋ.

**ಪುಟಕ್ಕನೆ** (ಅ). ತಟ್ಟನೆ ; ಕೂಡಲೆ : ಮಲ್ಲಿ ಬೆಂಕಿಪೆಟ್ಟಿಗೆ ಹೊರಗೆ ಒಗೆದು ಮತ್ತೆ ಪುಟಕ್ಕನೆ ಒಳಗೆ ಹೋದಳು (ಜೀವರು. ೨೩).
[ ಪುಟಕ್$_0$ + — ಅನೆ$_1$ ]

**ಪುಟಗೈ** (ಕ್ರಿ). ಬೆಂಕಿಯನ್ನು ಉಜ್ವಲಗೊಳಿಸು,—ಪ್ರಕಾಶಮಯವಾಗುವಂತೆ ಮಾಡು : ದೀಪಗಳನತಿಪುಟಗೈದು ನರವರಕುಮಾರಕರ ಚಿತ್ರಪನುಪೋದೊಂದ ತರುಣಿ ತೋರಲು ನೋಡಿ ನೋಡಿ ಬೇಸತ್ತುಂ (ಪಪಮೋ. ೨೬-೩೯). [ ಪುಟ$_3$ + ಗೈ (<ಕೆಯ್$_1$) ]

**ಪುಟಗೊಡು, ಪುಟಕೊಡು** (ಕ್ರಿ). ೧. (ಆಲಂ) ಬೆಂಬಲವಾಗು ; ಪುಷ್ಟಿಕೊಡು : ಅವಳು ತನ್ನ ಮನೆಗಿಂತ ಹೊರಗಿನವಳಲ್ಲ ಎಂಬ ಭಾವನೆಗೆ ಇದು ಮತ್ತಷ್ಟು ಪುಟಗೊಟ್ಟಿತು (ತ್ಯಾಗಮ. ೦೬೬) ; ವಾರ್ತಾಸಂಗ್ರಹದ ಪುಟವು ಮಾತ್ರ ಅವನಿಗೆ ಪುಟಗೊಡುತ್ತಿತ್ತು (ಕೂಹಾಗಾ. ೬೯) ; ರಾಯರ ಈ ದೊಡ್ಡ ನಡತೆಗೆ ಅವರ ಮನೆಯವರೆಲ್ಲ ಪುಟಗೊಟ್ಟು . . . ಕೂಡಿಕೊಳ್ಳುತ್ತಿದ್ದರು (ಕಂಬಂಹು. ೦೨೦). ಪುಟಕೊಡು : ೧. ಭಾವ ಕೃಷ್ಣರಾಯ ಈ ಯೋಚನೆಗೆ ಪುಟಕೊಟ್ಟ, ಅರ್ಧಾಂಗಿ ತಿದಿಯೂದಿದಳು (ಕುರುಕಾ. ೦೫೨) ; ಅವರು ಅವನಿಗೆ ಕಲಿಸುತ್ತಿದ್ದ ರೀತಿಯೂ ಅವನ ಉತ್ಸಾಹಕ್ಕೆ ಪುಟಕೊಡುವಂತಿತ್ತು (ಚಕಂಹಾ. ೦೦೭). ೨. ಲೋಹಗಳನ್ನು ಬೆಂಕಿಯಲ್ಲಿಟ್ಟು ಶುದ್ಧಗೊಳಿಸಿ ಹೊಳಪು ಕೊಡು : ಪರಾಕ್ರಮಶಾಲಿಗಳಿಗೆ ಯುದ್ಧವು ಸಂಭವಿಸಿದರೆ ಅಗ್ನಿಯಲ್ಲಿ ಚಿನ್ನಕ್ಕೆ ಪುಟಕೊಟ್ಟಂತಾಗುತ್ತದೆ (ಶ್ರೀರಾಮು. ೩೦೯). ೩. (ಬೆಂಕಿಯನ್ನು) ಪಟುಮಾಡು; ಉತ್ತೇಜಿಸು : ಫಕೀರಪ್ಪನು ಇಸ್ತ್ರಿಯ ಬೆಂಕಿಗೆ ಗಾಳಿ ಹಾಕಿ ಪುಟ ಕೊಡುತ್ತಿದ್ದನು (ದಾಶಹು. ೨೨). [ಪುಟ$_3$ + ಕೊಡು$_1$]

**ಪುಟಗೊಳಿಸು** (ಕ್ರಿ). ೧. ಬೆಂಕಿಯಂನ್ನು ಹೊತ್ತಿಸು ; ಪಟುಮಾಡು : ಬರುಹಿಯಿಂಧ್ಮಸ್ರುವಗಳಿಂ ಸತ್ಕರಿಸಿ ವಿಧಿಪೂರ್ವಕದಿ ಮುಖಬಂಧುರ ತರೇಂಧನದಿಂದ ಪುಟ [ಪಾಠಾಂ. ಪಟು] ಗೊಳಿಸಿದರು ಹುತವಹನ (ಕೊರಡಾ. ೦-೬-೯೩) ; ಅವನು ಆ ಒಲೆಯನ್ನು ಪುಟಗೊಳಿಸುತ್ತಿದ್ದನು (ಭೂಪಹು. ೩೨೦). ೨. (ಆಲಂ) ಏರಿಸು ; ವೃದ್ಧಿಗೊಳಿಸು : ಸ್ಥಳಮಹಿಮೆಗೆ ಸಂಬಂಧಿಸಿದ ದೇಶಪ್ರೇಮವನ್ನು ಪುಟಗೊಳಿಸಿ ಪರಿಪೋಷಿಸುವ ಹಲವು ಯಕ್ಷಗಾನಗಳನ್ನು ಈ ಪಂಗಡಕ್ಕೆ ಸೇರಿಸಬಹುದು (ಯಕ್ಷಗಾ. ೦೯) ; ಆ ಅವರಣ ಅವನ ಮನಸ್ಸಿನ ವೇದನೆಯನ್ನು ಪುಟಗೊಳಿಸೀತು (ರೂಪಕ. ೬೦).
[ಪುಟ$_3$ + ಕೊಳ್$_1$ +— ಇಸು$_3$]

**ಪುಟಗೋಸಿ, ಪುಟಕೋಸಿ** (ನಾ). ೧. ಲಂಗೋಟಿ ; ಕೌಪೀನ : ಪುಟಗೋಸಿಗಿಂತ ದರಿದ್ರವಿಲ್ಲ, ಮರಣಕ್ಕಿಂತ ಶಿಕ್ಷೆ ಇಲ್ಲ (ಗಾದೆ). (ಗಂ). ೨. ಚಿಕ್ಕವಯಸ್ಸಿನ ; ಹತ್ತುವರುಷದ ಪುಟಗೋಸಿ ಬ್ರಹ್ಮಚಾರಿ ದೇಖಿಲು ಶ್ರೀವೈಷ್ಣವರಿಗೆಲ್ಲರಿಗೂ ತೀರ್ಥಪ್ರಸಾದ ವಿನಿಯೋಗವಾದ ಮೇಲೆ ಬಾಕಿಯವರ ಮಾತು (ಕಂಪ. ೩೯೦). ೩. (ಆಲಂ) ಕೆಲಸಕ್ಕೆ ಬಾರದ ; ಬೆಲೆಯಿಲ್ಲದ ; ಕ್ಷುದ್ರವಾದ : ಈ ಪುಟಗೋಸಿ ವಿಷಯಕ್ಕೆ ಯಾಕೆ ತಲೆ ಕೆಡಿಸಿಕೊಳ್ಳುತ್ತಿದ್ದಿ ? (ರೂಹಿ). ಪುಟಕೋಸಿ : ೧. ಪುಟಕೋಸಿಗೂ ಗತಿಯಿಲ್ಲದವನು ಮಹಾಮಹಾ ಮಾತನಾಡುತ್ತಾನೆ (ರೂಹಿ).
[ ಪುಟ$_3$+ಗೋಸಿ (< ಗೋಚಿ)./ತೆಲು. ಪುಟ್ಟಗೋಂಚಿ ]

**ಪುಟದೋಷ** (ನಾ). ರತ್ನದ ಒಂದು ದೋಷ, —ಅವಗುಣ : ಕರ್ಕರಂ ಕೋಮಲಂ ಮಂದದೀಪ್ತಿ ಹೊಗೆಯಂ ನಕ್ಕಲಿನ ಬಣ್ಣಮದು ಮೂರು ರತ್ನಂಗಳೊಳು ಪೊಕ್ಕು ಮಿಶ್ರಿತವಾಗಿ ದೋಷಮಮ್ಮೆಸಗಿತಾ ಮೂರರೊಳ್ ಬೇರೆ ಬೇರೆ ಅಕ್ಕರಿಂ ಧರಿಸಿದವರಿಗೆ ಫಲವ ಪೇಳುವೆಂ ಕರ್ಕರಕೆ ಭಿನ್ನವೆಂದೊಡದು ಹುಟಿದುದೆಂದು ಅಕ್ಕಜದ ಮೊರಬು ಬಿಳಿಯಾಣ ಸಸುನಗಳೆಂದು ಪುಟದೋಷವೆಂದಿರ್ಪುದು (ರತ್ನಶಾ. ೯-೩). [ ಸಂ. ]

**ಪುಟದೋಱು** (ಕ್ರಿ). (ಆಲಂ) ವ್ಯಕ್ತವಾಗು ; ಪ್ರಕಟಗೊಳ್ಳು : ಸುಗುಣ ನಿನ್ನಯ ಕೆಂಬಲ್ಲ ಕೆಂಡ ಮುಂಗುಳ್ನಗೆಯಿಂದವೆ ಪರಿಪರಿಮಳ ಪುಟದೋಱ್

ವಿಂಗೆ ಉರದೊಳು ಉರ ಒತ್ತಿಕೋ ಬಾ ಬಾ (ಹರಗ. ೧೬೯-೬೨೩).

[ ಪುಟ್ಟ + ತೋಱು ]

**ಪುಟನೆಗೆ** 'ಪುಟಂನೆಗೆ' ನೋ.

**ಪುಟಪಡು** (ಕ್ರಿ). ಪುಟಕ್ಕೆ ಬೀಳಂ ; ಪುಟಕ್ಕೆ ಹಾಕಲ್ಪಡು : ಚಳಕ ಚಳವಾಗ ಖಾಱಂ ಸೆಳೆವೆಳೆವೇ ಪಟ್ಟಿಸಂಡಿ ಪುಟಪಟ್ಟಿರೆ ಕೆಚ್ಚಲುರ್ದಟಿಲೋಹದ ಪೊಲ್ ಕಂಕಳತೋಹಂ ಕರಗಿ ಕೊರಗಿದಂ ಚಾಣೂರಂ (ಅರ್ಜಕ. ೮-೧೦೬).

[ ಪುಟ್ಟ + ಪಡು ]

**ಪುಟಪಾಕ** (ನಾ). ೧. ಬೇರೆ ಬೇರೆ ಔಷಧದ್ರವ್ಯಗಳನ್ನು ಎಲೆಗಳಿಂದ ಸುತ್ತಿ, ಮಣ್ಣು ಮೆತ್ತಿ ಬೆಂಕಿಯಲ್ಲಿ ಇಟ್ಟು ಬೇಯಿಸುವ ಒಂದು ಕ್ರಮ,—ವಿಧಾನ : ಪಸಿಯ ತೊವಲ ತಿದಿಯೊಳ್ ಪುದಿದು ಪುಟಪಾಕಂ ಸುಡುವವರುಂ (ಅರಿಪು. ೫-೬೫ ವ) ; ಕೆಂಗಲಿಸುವ ಕೆಂಡದೊಳ್ ಪೂಱ್ದು ಪುಟಪಾಕಂ ಸುಡೆಯೆಯುಂ (ಪರ್ವಪು. ೫ ೩೧ ವ); ಕಾಯ್ದೆಣ್ಣೆಯೊಳದ್ದುವರು ಲೋಹರಸದೊಳು ತೊಯ್ದಿಕ್ಕಿ ಪುಟಪಾಕದಿಂದ ಒಯ್ದು ತಾಳಿಪರು ಕಾವಲಿಯೊಳು (ಶರಕ. ೬-೬೬). ೨. (ಅಲಂ) ಒಳಗೊಳಗೇ ಬೇಯಂವುದು : ಕಣ್ವಋಷಿಯು ಕರುಳಿನಲ್ಲಿ ಎಂತಹ ಪುಟಪಾಕ ನಡೆದಿತ್ತೆಂಬುದನ್ನು ಹೆಣ್ಣು ಹೆಡೆದವರೆಲ್ಲರೂ ಬಲ್ಲರು (ಗಾ೪೫.೦೫೬). [ಸಂ.]

**ಪುಟಪಾಕಂಗೈ** (ಕ್ರಿ). ಪುಟಪಾಕ ಮಾಡು : ತಾಳೀಸಪತ್ರ, ಮೆಣಸು . . . ಸಮಸಕ್ಕರೆವೆರೆಸಿ ಪುಟಪಾಕಂಗೈದು (ಕಳನ್ನ. ೨೩೯).

[ಪುಟಪಾಕ+ಗೈ (<ಕೆಯ್$_1$)]

**ಪುಟಪಾಕವಾನು** (ಕ್ರಿ). (ಅಲಂ) ಬೇಯು ; ಶುದ್ಧಗೊಳ್ಳು : ಹೊಸ ಹೊಸಬನಾಗುವನನುಕ್ಷಣಂ ಮೊನವನು ವಸುಧೆಯಾ ಮೂಸೆಯಲಿ ಪುಟಪಾಕವಾಂತು ರಸಮೂರ್ತಿಯಾಗುವನು ಜಗದಾತ್ಮಮಂತಿ ಬೆಳೆಯೆ (ಜುಂಕೊಳ. ೩೦೯).

[ಪುಟಪಾಕ+ಆನ್ಸು (<ಆನ್$_1$)]

**ಪುಟಪುಟ** (ನಾ). ಒಂದು ಅನುಕರಣ ಪದ ; ಪುಟಪುಟನೆ' ಪರಾ.

**ಪುಟಪುಟನೆ** (ಅ). ಪುಟಪುಟ ಎಂದು : ರತ್ನದ ರಸದಾ ಕಾರಂಜೀಯೂ ಪುಟಪುಟನೆ ಪುಟಿದು (ಗಂ. ೦-೬).

[ಪುಟಪುಟ+—ಅನೆ$_1$]

**ಪುಟಪುಟಿಸು** 'ಪುಟುಂಪುಟಿಸು' ನೋ.

**ಪುಟಬಾಳೆ** 'ಪುಟ್ಟಬಾಳೆ' ನೋ.

**ಪುಟಬೀಜ** (ನಾ). ಒಂದು ಬಗೆಯ ಸಸ್ಯ : "ಪುಟಬೀಜಂ—ಹರಳು ವೀರೆ" (ಟಕಧ. ೦೦೦).

[?]

**ಪುಟಭೇದ** (ನಾ). ೧. ನದಿ ಮೊದಲಾದ ಜಲಾಶಯಗಳಲ್ಲಿರುವ ಶಿರುವು,—ಸುಳಿ,—ಚಕ್ರ : "ಚಕ್ರಾದಿ, ಪುಟಭೇದಃ–ಈ ೨ ತೋಯೆಯಾ ಮುರಿವು" (ಹಲಾಯು. ೦೦೦–೯೯). ೨. ನಗರ; ಪಟ್ಟಣ. ೩. ಒಂದು ಬಗೆಯ ವಾದ್ಯ.

[ಸಂ.]

**ಪುಟಭೇದನ** (ನಾ). =ಪುಟಭೇದ ೨ : "ಪತ್ತನಂ ಪುಟಭೇದನಂ . . . ಪುರೀ—ಈ ೧೧ ಪಟ್ಟಣಂ" (ಹಲಾಯು. ೯೩-೦೩೦); ತನ್ನ ಪುಟಭೇದನಕೆ ಪೋದನು ಮೇಘಸಂಧಿಧರಾಧಿನಾಯಕನು (ತಿಮ್ಮಪ. ೭-೦೦).

[ಸಂ.]

**ಪುಟವಿಕ್ಕು**, ಪುಟವಿಕ್ಕು (ಕ್ರಿ). ಪುಟಕ್ಕೆ ಹಾಕಂ; ಹೊಳಪುಗೊಡು : ಪುಟವಿಕ್ಕಿ ವಿಱುಗುವ ಕಡೆಯಾಣೆಯ ವಿಸುನಿಯಿಂ ಸಮದು ಥಳಥಳಿಸಿ ಪೊಳೆವ ನೆಲೆವಾಡದ ಮೇಲೆ . . . ಒಡ್ಡೋಲಗಂಗೊಟ್ಟು ಲೀಲೆಯಿಂದಿರ್ಪುದುಂ (ಚಾರಪು. ೦೦-೦ ವ). ಪುಟವಿಕ್ಕು : ಒರೆಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ (ಬಸವ. ೨೫೦).

[ಪುಟ್ಟ+ಇಕ್ಕು]

**ಪುಟವಿಂಗು** (ಕ್ರಿ). (ಅಲಂ) ಅಧಿಕವಾಗು; ಹೆಚ್ಚಾಗಂ; ಅತಿಶಯಿಸಂ : ಬೆಱಗಾಗಿ ಪುಟವಿಂಗೆ ಡೆಂಡೆಣಿಸಿ ತೊದಲಿಸುತ ಭಕ್ತಿಕರಂತ ಪೊಗಳಿದ ಪಾಡಿದಂ ಶ್ರೀ ಜಡೆಯ ಶಂಕರನ (ಶಂಕರಾ. ೫-೩).

[ಪುಟ್ಟ+ಏಂಗು]

**ಪುಟವಾಳೆ** 'ಪುಟ್ಟಬಾಳೆ' ನೋ.

**ಪುಟವಿಕ್ಕು** 'ಪುಟವಿಂಕ್ಕು' ನೋ.

**ಪುಟವಿಡು** (ಕ್ರಿ). ೧. =ಪುಟವಿಕ್ಕು : ಪುಟವಿಟ್ಟಳೆವಟ್ಟ ಮಿಸುನಿ ಪೊಲ್ ಮಂಗಳನಿರ್ಮಳರುಚಿರರೂಪ ಕಣ್ಗಸೆದಿರ್ದಳ್ (ಗಿರಿಕ. ೩-೨೪); ನೆನೆದ ಮಾತವನು ತನ್ನ ತಂದೆಯ ಮನದ ಮಚ್ಚದೊಳೂರದು ಕರ್ಣನ ನೆನಹಿಂಸಲ ಪುಟವಿಟ್ಟು ಶಕುನಿಯ ನೀತಿಯಲಿ ನಿಗುಚಿ . . . ವೈರಿದುನನ ನುಡಿಯಲಿ ಬಣ್ಣವಿಟ್ಟನು (ಕುಮ್ಮಾಭಾ. ೨-೨೨); ನವಿ ಪುಟವಿಟ್ಟ ವಿಸುನಿಯ ಗುಬ್ಬಿಗಳ ಕಟ್ಟಿದ ಹೊಕ್ಕುಳ ಗಂಟೆಯ ತೇಜಗಳಟ್ಟಣಿಸು ತಲೈದಿದುವು (ಕಂಸವ. ೨೩-೯೯); ಕಾಳಿದಾಸನು ಜೀವಕಳೆ ತುಂಬಿ ನಿರ್ಮಿಸಿದ ಶಕುಂತಲೆ ಪುಟವಿಟ್ಟ ಸ್ವರ್ಣಪ್ರತಿಮೆ(ಶಾಕದ. ೯೬೭). ೨. (ಅಲಂ) ಉತ್ತೇಜನಗೊಳಿಸಂ; ಪ್ರೋತ್ಸಾಹಿಸು : ರಾಮಚಂದ್ರಗೆ ವನಿತೆಯನು ಕೊಡದೇಕೆ ಮನದಲಿ ಖತಿಯ ಪುಟವಿಟ್ಟು ದಿನದಿನಂಪ್ರತಿ ವೈರಭಾವವನೆನಗೆ ಹುಟ್ಟಿಸಿ ಸಂಹರಿಸುವನು (ಕಾತಿರಾ. ೨೩-೦೬); ನಾರಾಯಣವಸಾಸ್ತ್ರರೊಡನೆ ವ್ಯತಿರಿಕ್ತವಾಗಿ ಕೂಡಿಕೊಂಡು ನಕ್ಕು, ಸಡಗರದಿಂದ ಮಾತನಾಡುವುದು ದಿನದಿಂದ ದಿನಕ್ಕೆ ಪುಟವಿಟ್ಟಂತಾಯ್ತು (ಶಾಕಂ೦. ೬೩).

[ಪುಟ್ಟ + ಇಡು$_1$]

**ಪುಟವಿಳಿ** (ಕ್ರಿ). ಬೆಂಕಿಯಿಂದ ಕಾಂತಿ ಪಡೆದು ಹೊರಬರು: ಬಿನ್ನಣದಿ ಪುಟವಿಳಿದ ಸೊನ್ನೆಯ ತಿರಸ್ಕರಿಪ ಚೆನ್ನೆಯರ್ . . . ನಡೆತಂದರು (ಸಂಪಿಷಾ. ೯-೯).

[ಪುಟ್ಟ + ಇಳಿ$_1$ (<ಇೞ್$_1$)]

**ಪುಟವೇರಿಸು** (ಕ್ರಿ). ೧. ಬೆಂಕಿಯಂಲ್ಲಿ ಹಾಕಂ ; ಸುಡಂ ; ದಹಿಸು : ಅವರನ್ನು ಹಿಡಿದು ಪುಟವೇರಿಸೋಣ ! (ಶಿಗಿಹ. ೩೨-೨೨). ೨. (ಅಲಂ) ಉತ್ಸಾಹಗೊಳಿಸು ; ಚೇತರಿಸಂ : ಸಾವಿ ನೀವೀಗಲು ಪರೀಕ್ಷಿಸ ಮನವ ಕಲಿಯೇರಿಸಿಯೆ ನೀತಿವಚನಂಗಳಿಂದಲವನ ಪುಟವೇರಿಸಿಯೆ ದುಗುಡವಂ ಬಿಡಿಸಿ(ತುರಂಗ. ೯೩-೨೨).

[ಪುಟ್ಟ + ಏರಿಸು (<ಏಱಿಸು)]

**ಪುಟವೇಳ್**$_1$, ಪುಟವೇಳು (ಕ್ರಿ). ಪುಟಿದು ಏಳಂ ; ಮೇಲಕ್ಕೆ ಹಾರು : ಘಟಶತಕ್ಕಿಗಳ ಗುಂಡುಂಗಳುಱೆ ಮೇಲಕ್ಕೆ ಪುಟವೆದ್ದು ನಡೆದುವು (ಕಂಕಹ. ೦೨-೦೮). ಪುಟವೇಳು : ಚೆಂಡು ತೂತಾಗಿರುವುದರಿಂದ ಪುಟವೇಳುತ್ತಿಲ್ಲ (ಲೂ೦).

[ಪುಟ್ಟ + ಏಳ್$_1$ (<ಏೞ್$_1$)]

**ಪುಟವೇಳ್**$_2$ 'ಪುಟವೇೞ್' ನೋ.

**ಪುಟವೇಳು** 'ಪುಟವೇಳ್$_1$' ನೋ.

**ಪುಟವೇಱು** (ಕ್ರಿ) ೧. (ಅಲಂ) ಕಾಂತಿಯಂನ್ನು ಹೊಂದು ; ಶೋಭೆಯನ್ನು ಪಡೆ : ಇನಿಸಿನಿಸಾ ಗರ್ಭಂ ಪ್ರತಿದಿನವೊಯ್ಯನೆ ಬಳೆಯೆ ನಯದೆ ಪುಟವೇಱೆ ನಿತಂಬಿನಿ ಕಾರೊಳೆಸೆವ ಕಾದಂಬಿನಿಯಂದದೆ ಮಂದಮಂದ ಗಮನದೆ ನಡೆದಳ್ (ಕಾದಂಪೂ. ೩೮೦). ೨. ಹೆಚ್ಚಾಗು ; ವೃದ್ಧಿಯಾಗಂ : ಪುಳಕಂ ಪುಟವೇಱೆ ಭೋಂಕನೆದ್ದುನ್ನತಾಸನವೇಱೆ (ಏಕರ. ೦೦-೫).

[ಪುಟ್ಟ + ಏಱು$_1$ (<ಏಱ್$_1$)]

**ಪುಟವೇೞ್**, ಪುಟವೇಳ್$_2$ (ಕ್ರಿ). (ಅಲಂ) ಉಬ್ಬು; ಉತ್ಸಾಹ ಪಡು: ಪೆರ್ಚುವನಪ್ಪುವಂ ನಲಿವಂ . . . ಪುಟವೇೞ್ವನತಿಪ್ರಮೋದವಾಂತರ್ಚಿಪನುದ್ಭಟಕ್ಕಿತಿಪಂ (ಅದ್ಭುಟ. ೦೦-೨). ಪುಟವೇಳ್$_2$ : ಗಿರಿರಾಜನೊಡಂಬಟ್ಟಾವರದೀಂದಂ ಪುಳಕಿಸುತ್ತೆ ಪುಟವೇಳುತ್ತುಂ ಪರಿಚಾರಪಟುಗಳೆನಿಸುವ ತರುಣಿಯರಂ ಕೂಡಿ ಕೊಟ್ಟು ಸಂತಸದಿಂದಂ (ಗಿರಿಕ. ೩-೯); ಪೂಜೆಯಂ ಮಾಡಿ ಪುಟವೆದ್ದಾಡುವರ್ ಕೆಲರ್ (ಏಕರ. ೭-೯೭).

[ಪುಟ್ಟ+ಏೞ್$_1$]

**ಪುಟಸಂಸ್ಕಾರ** (ನಾ). ಲೋಹಾದಿಗಳನ್ನು ಬೆಂಕಿಯಂಲ್ಲಿಟ್ಟು ಕಾಯಿಸಿ ಶುದ್ಧಗೊಳಿಸುವಿಕೆ ; ಪುಟಕ್ಕೆ ಹಾಕುವಿಕೆ : ನಿನಗುಳಿದ ಜಗವ ಮುಟ್ಟಿಸುವ ಸೇತು ಸಂಸಾರ ಮನಕೆ ಪುಟಸಂಸ್ಕಾರ (ಜುಂಕೊಳ. ೩೦೦).

[ಸಂ.]

**ಪುಟಸನ್ನೆಗೈ** (ಕ್ರಿ). ಕೈಯಿಂದ ಚಪ್ಪರಿಸಿ ಸನ್ನೆ ಮಾಡು : ವಾಯುವೇಗದ ತುರಂಗಗಳನಡರ್ದು ಸಲ ವೈಯರಾದಿಂದೆ ಪುಟಸನ್ನೆಗೈದೊಲವಿ

ನಿಂದಾಯೆನುತೆ ಕಂದವಾಂ ತಟ್ಟುತ್ತೆ (ಕೋಲಾಸು. ೧೨-೬).
[ಪುಟ್₃ + ಸನ್ನೆಗೈ (< ಸನ್ನೆಗೆಯ್)]

**ಪುಟಾಣಿ₂** 'ಪುಟ್ಟಾಣಿ' ನೋ.

**ಪುಟಾಣಿ₃** 'ಪುಠಾಣಿ' ನೋ.

**ಪುಟಿ₁** (ಕ್ರಿ). ಮೇಲಕ್ಕೆ ಚಿಮ್ಮು; ನೆಗೆ ; ಹಾರು : ಕುಂದ ಮಂದರ ಇಳಿದು . . . ಗಂಧಮಾದನಗಿರಿಗೆ ಹಿಂಗದೆ ಪುಟಿದು ವಾರಿನಿಧಿಯು ನೆರೆದ ಗಂಗೆಗಾರುತಿಯು ಬೆಳಗಿರೇ (ಬಕಕೀ. ೦೭-೬); ಹಾಸ್ಯ ಅಂದರೆ ಬುಗ್ಗೆಯಾಗಿ ಪುಟಿಯುತ್ತದೆ (ಆಕೋಲೀ. ೦೫೭); ನೀರಿನ ಕಾರಂಜಿ ಪುಟಿಯುವುದನ್ನು ಈಕ್ಷಿಸುತ್ತ ರೇಣು ಕೇಳಿದಳು (ಹೇಮಂತ. ೨೪೮).

**ಪುಟಪುಟ** (ದ್ವಿರುಕ್ತಿ) : ಭರದೆ ವಾರಿಧಿಯಲ್ಲಿ ಹಾರಲು ಶಿರದ ಛಿದ್ರದ್ವಾರದಿಂದೆತ್ತರದೆ ನೀರ್ಪುಟಪುಟಿದು ಕಣ್ಣಿಗೆ ಚಂದಗಾಣುವದು (ರಕುಮಾ. ೦೪೦-೧೦).

**ಪುಟಿ₂** (ನಾ). ಚಕ್ರದ ಆರೆಕಾಲು : ಜನಪದಸಾಹಿತ್ಯವೆನ್ನುವುದು ಜಾನಪದಚಕ್ರದ ಒಂದು ಪುಟ . . . ಹಲವು ಪುಟಗಳು ಕೂಡಿ ತಾನೆ ಒಂದು ರಥದ ಚಕ್ರ ? (ಹುವರ್ಣ. ೨೨). [?]

**ಪುಟಿಕೆ** (ನಾ). ೧. ಕರಂಡ; ಭರಣಿ; ಡಬ್ಬಿ: ಮದನನ ಸುಗಂಧಭಂಡಾರದ ಪುಟಿಕೆಗಳೆನಿಸಿ ಕಂಪು ಮಗಮಗಿಪಲರ್ವೆಟ್ಟಿದ ಪಡಲಿಗೆಗಳನೊಟ್ಟೈಸಿದನ ವನಚ್ಯುತನ ಮುಂದೆ ಮಾಲಾಕಾರಂ (ಜಗಪು. ೬-೦೭) : ತರವೇಟ್ಯಾಣಿಕ್ಯ ಭಂಡಾರದ ಪುಟಿಕೆಗಳಂ (ಕಮುದ. ೨೪೯ ಕೃಪೋ). ೨. ದೊನ್ನೆ ; ಎಲೆಯ್ಯ ಬಟ್ಟಲು : ಪೂವಿಗೆ ಪು [ಶಾಕಾಂ. ಘುಟಿಕೆಯು ಮಾಳ್ಪೆನೆಂದಾಗ ಜಯಾವತಿಯುಶಿಹರುಷದೊಳು ಆ ವನರುಹದೊಂದೆಲೆಗೊಯ್ದು ಬೆಳ್ಗೊಡೆಯಾ ವಸುಧಾಪತಿಗಾಯ್ತು (ಕ್ರೀಶಾಂ. ೧೨-೪೮). 'ಪತ್ರಪುಟಿಕೆ' ಪರಾ. ೩. ಜಾಕಾಯಿ; ಜಾಯಿಕಾಯಿ : ಎಕ್ಕೆಹಾಲಿನಲ್ಲಿ ಚತುಷ್ಕಶಃ ಟಂಕಣವನ್ನಾಗಲೀ ಪುಟಿಕೆಯನ್ನಾಗಲೀ ಹಾಕಿ ಮರ್ದಿಸಿ ಗಜಪುಟವನ್ನು ೨೦ ಕೊಟ್ಟರೆ ಭಸ್ಮವಹುದು (ಅಶ್ವಶಾ. ೨೨). ೪. ಏಲಕ್ಕಿ. [ಸಂ. ಪುಟಿಕಾ]

**ಪುಟಿಗಾಲು** (ನಾ). ನೆಗೆಯುವ ಕಾಲು ; ಪುಟಿದೇಳುವ ಕಾಲು : ನಿನ್ನ ಪುಟಿಗಾಲಿನಲಿ ಹರ್ಷ ದುಃಖದ ಋತು (ನೆಂಕುು. ೮೧-೩).
[ ಪುಟಿ₁ + ಕಾಲು₁ (<ಕಾಲ್₁) ]

**ಪುಟಿಗೆ** (ನಾ). ೧. ಪುಟಿಯುವಿಕೆ ; ನೆಗೆತ. ೨. ವಿನಾಟು ; ಜೀಕು : ಕಮಲಾಬಾಯಿಯರ ಕೈಗೆ ಪುಟಿಗೆ ಕೊಟ್ಟು ಉಷೆಯು ಸುಶೀಲೆಯೆಡೆಗೆ ಸಾಗರವರಿದಳು (ಸಬುಜ. ೬೨೪). 'ಮುಂಗಾಲ್ಪುಟಿಗೆ' ಪರಾ.
[ಪುಟಿ₁ + – ಗೆ]

**ಪುಟಿತ** (ಗು). ೧. ಹೆಣೆದ ; ಜೋಡಿಸಿದ. ೨. ಮಡಿಚಿದ. ೩. ಹೊಲಿದ ; ಕೂಡಿಸಿ ಕಟ್ಟಿದ. ೪. ಉಜ್ಜಿ ಪುಡಿ ಮಾಡಿದ; ಹುಡಿಗೊಳಿಸಿದ. ೫. ಸಂಕುಚಿತವಾದ ; ಸಂಕೋಚಗೊಳಿಸಿದ. ೬. ಪ್ರಕಟಿಸಿದ ; ವ್ಯಕ್ತಪಡಿಸಿದ. ೭. ಹೇಳಿದ; ನುಡಿದ. [ಸಂ.]

**ಪುಟಿಯಿಸು,** **ಪುಟಿಸು** (ಕ್ರಿ). ಚಿಮ್ಮಿಸು; ನೆಗೆಸು : ನಾಲ್ವತ್ತು ಗೆಳೆಯರ ಕೈ ಉಬ್ಬಿಸಿದವನ ತಲೆಯಿಂದ ನೆತ್ತರು ಪುಟಿಯಿಸದಿದ್ದರೆ ನಾನು ಜಾತಿವಂತ ಅಂಬಿಗನಲ್ಲ (ರಂಗಕೋ. ೧೨). **ಪುಟಿಸು** : ನಮ್ಮ ಹಳ್ಳಿಗರು ಆಗಾಗ ಹಾಸ್ಯದ ಬುಗ್ಗೆಯಾಗಿ ಚಿಡಗುಗಳನ್ನೊಳಗೊಂಡ ಹಾಡುಗಳ ಕಾರಂಜಿಯನ್ನು . . . ರಸಕವಿಗಳಾಗಿ ಪುಟಿಸಿದ್ದಾರೆ (ಕನ್ನಜಾ. ೪೯)
[ ಪುಟಿ₁ + – ಇಸು₂ ]

**ಪುಟಿಸು** 'ಪುಟಿಯಿಸು' ನೋ.

**ಪುಟೀಪು** (ನಾ). ಗೋಡೆ ಅಥವಾ ಹಲಗೆಯ ಮೇಲೆ (ಚಿತ್ರ, ಸುಳುಹಂ ಮೊದಲಾದಂವುಗಳ ರಚನೆಗಾಗಿ) ಸುತ್ತಣ ಮಟ್ಟಕ್ಕಿಂತ ಉಬ್ಬಾಗಿ ಅಥವಾ ತಗ್ಗಾಗಿ ಮಾಡಿದ ವಿಭಾಗ,—ಅಂಕಣ : ಇದನ್ನು ಮಹಡಿಯ ಮೆಟ್ಟಿಲುಗಳ ಪುಟೀಪುಗಳ (Panels) ಮತ್ತು ಕೆಳಗೋಡೆಗಳಲ್ಲಿಯೂ ಉಪಯೋಗಿಸುತ್ತಾರೆ (ಶಿಲ್ಪಶಾ. ೩೨೪) ; ಎರಡು ಪಟ್ಟಿಕೆ ಅಥವಾ ಪುಟೀಪುಗಳಲ್ಲಿ (Panels) ನಟರಾಜನ ನಾಟ್ಯಭಂಗಿಗಳು ಶಿಲ್ಪಿತವಾಗಿವೆ (ಸೋಲಂಪ. ೯೬). [ ? ]

**ಪುಟು** (ನಾ). ಒಂದು ಅನುಕರಣಪದ : 'ಪುಟಂಗುಟ್ಟು' ಪರಾ.

**ಪುಟುಗುಟ್ಟು** (ಕ್ರಿ). ಪುಟುಪುಟು ಎಂದು ಬಡಿದುಕೊಳ್ಳು : ಪುಟುಗುಟ್ಟುತ್ತಿರಲಿದೆ ತುಟಿ ಕಚ್ಚಿ ಹಿಡಿದಿದ್ದೆ ನಸ್ನಲ್ಲೆ ನಾನಿಲ್ಲ ಎಂಬಂತಿರೆ (ಸಣೀಲೀ. ೨೯-೩೪೩). [ಪುಟು + ಕುಟ್ಟು₁]

**ಪುಟುಪುಟಿಸು,** ಪುಟಪುಟಿಸು (ಕ್ರಿ). ವಟಗುಡು ; ಗೊಣಗು : ಮೂರ್ತಿ ಮೆಲ್ಲಗೆ ನೆಲಕ್ಕೆ ಹಣೆ ಹಚ್ಚಿ ನಮಸ್ಕಾರ ಮಾಡಿ ಮನಸ್ಸಿನಲ್ಲಿಯೇ ಪುಟು ಪುಟಿಸಿದ (ಬರ್ಲೋಟಿ. ೨೦) ; ಭೀಮಪ್ಪ . . . ಬಾಯಲ್ಲಿಯೇ ಏನೇನೋ ಪುಟುಪುಟಿಸಿದ (ಮಣ್ಣು.ಹ. ೧). **ಪುಟಪುಟಿಸು** : ಬಾಯಲ್ಲೇ ಏನೋ ಪುಟಪುಟಿಸುತ್ತ ಅಂಗಡಿಯತ್ತ ನಡೆದೇ ಬಿಟ್ಟರು (ಮೂರುದಾ. ೨೪೮).
[ < ಪುಟು + – ಇಸು₂ ]

**ಪುಟುವು** (ನಾ). (ಆಲಂ) ಪ್ರೋತ್ಸಾಹ; ಬೆಂಬಲ: ಅವನ ಮದುವೆ ಮಾಡಬೇಕೆಂದು ರಾಯರ ಹಂಬಲ ; ಆಚಾರ್ಯರ ಪುಟುವು (ಶ್ರೀರಂಗ. ೦೯); ಅವರೇ ಶ್ಯಾಮರಾಯನಿಗೆ ಪುಟುವು ಕೊಡುತ್ತಿದ್ದ ವಾರ್ತೆ ಗೌಡರಿಗೂ ಹತ್ತಿತ್ತು (ದೀಪಹ. II. ೦೦೦). [ < ಪುಟ್₂ + – ವು ]

**ಪುಟೆಗಳ್ಳ** (ನಾ). ಒಬ್ಬಾತನ ಹೆಸರು : ಅಯ್ಯಣಯ್ಯನ ಮಗಂ ಪುಟೆಗಳ್ಳನ್ನಾಗೆಡೊಡೆ (ಎಪಿಇಂ. IX-1. ೬೩-೧೦; 947). [ ? ]

**ಪುಟ್ಟ₁** (ನಾ). ೧. ಚಿಕ್ಕವನು ; ಸಣ್ಣವನು : ಹೊಟ್ಟೆಯ ಕರುಳ ಹಾರವ ಮಾಡಿ ಪುಟ್ಟಗೆ ವರವ ಕೊಟ್ಟಾನ್ನಾ (ಕಪಕ. ೭೭-೪) ; ರತಿಯು ಪರಿಪಾಲಿಸುವ ಪುಟ್ಟನನ್ನು ಕರೆತರ್ಪುದು (ಕಪಮೋ. ೦೨-೩೦) ; ಹೋದ ಪುಟ್ಟ ಬಂದ ಪುಟ್ಟ, ಪುಟ್ಟನ ಹೆಜ್ಜೆ ಕಂಡೋರಿಲ್ಲ (ಗಾದೆ). ೨. ಮಕ್ಕಳನ್ನು ಪ್ರೀತಿಯಿಂದ ಕರೆಯುವಾಗ ಬಳಸುವ ಒಂದು ಪದ : ಊಟ ಮಾಡು ಬಾ ಪುಟ್ಟ (ಊರ). (ಗು). ೩. ಚಿಕ್ಕ ; ಸಣ್ಣ : ತರಳನ ಪುಟ್ಟ ಪಾದದೊಳಿರ್ದ ತಾವರೆಯರಲನು ನೊಸಲಿಗೊತ್ತುವಳು (ಬೋಧಕ. ೦೭-೬೪) ; ಅರ್ಭಕನ ಕಣ್ಗೆ ಪುಟ್ಟ ಸಾಲಗ್ರಾಮದೊಂದು ರಮಣೀಯ ಶಿಲೆ ಕಟ್ಟಸಕದಿಂದೆ ಕಾಣಿಸಲದಂ ತಾನೆತ್ತಿಕೊಂಡು . . . ಬೈಚಿಟ್ಟುಕೊಂಬಂ ಬಾಯೊಳನವರತಂ (ಕೈಪಿಡಾ. ೨೪-೨೬) ; ನಂಜಮ್ಮ . . . ಮಗುವಿನ ಕೈಕಾಲುಗಳಿಗೆ ಪುಟ್ಟ ಹೊನ್ನ ಬಳೆಗಳನ್ನು ತೊಡಿಸಿದಳು (ಹಾಪುಕ್ಕ. ೪೦).

**ಪುಟ್ಟದು**=ಚಿಕ್ಕದು ; ಸಣ್ಣದು : ಮಕ್ಕಳ ಕೈ ಪುಟ್ಟದು. ಅದರ ಗ್ರಹಣ ಶಕ್ತಿ ಅದಕ್ಕೆ ತಕ್ಕಂತೆ ಅಲ್ಪ (ಜೀವಾಶ್ಕ. ೦೭೩) ; ಬಿಲ್ಲಿನಂತೆ ಬಾಗಿದ್ದ ತುಟಿ; ಪುಟ್ಟದಾದ ಬಾಯಿ (ಕೆಳಹು. ೨).
[ದೇ.॥ ತುಳು. ಪುಟ್ಟ ; ತೆಲು. ಪೊಟ್ಟಿ, ಪೊಟಿ./ಸಂ. ಪುಟ್ಟ್ = ಚಿಕ್ಕದಾಗು]

**ಪುಟ್ಟ₂** (ಗು). ೧. ಪೋಷಿತ ; ಪುಷ್ಟ : " ಪುಟ್ಟ – ಪುಷ್ಟ = ಪುಷ್ಟಿಯಾದ " (ಶಬ್ದಕೋ. ೨೬). (ನಾ). ೨. ಪೋಷಣೆ ಹೊಂದಿದುದು : 'ಪರಪುಟ್ಟ' ಹೋ. [< ಸಂ. ಪುಷ್ಟ/ಪ್ರಾ. ಪುಟ್ಟ]

**ಪುಟ್ಟಂಪುರಳೆ** (ನಾ). ಒಂದು ಬಗೆಯ ತರಕಾರಿ ಸಸ್ಯ ; **ಪುಳ್ಳಂಪುರಚಿ** : ಉಪ್ಪು, ಉಪ್ಪಿನ ಸೊಪ್ಪು, ಪುಟ್ಟಂಪುರಳೆ, ಪುಳ್ಳಂಪುರಚಿಸೊಪ್ಪು, ಹುಳಿಚಿಕ್ಕ (ಬ್ಯಾಕಿಣ. ೫೯-೦೧೬೭). [ ? ]

**ಪುಟ್ಟಗಾವುಂಡ** (ನಾ). ಒಬ್ಬಾತನ ಹೆಸರು : ತೊಟ್ಟಿಲ ಪುಟ್ಟಗಾವುಣ್ಡನುಂ ಎಚಿಯಣ್ಣ ಪೆರ್ಮ್ಮಾಡಿ ಕೆಱೆಯ ಕಟ್ಟ ಕಲ್ಲ ತುಂಬನಿಕಿಸಿದ (ಬ್ಯಾಕಂ. ೦೯೬೨, ೧೧-೪ ; ಸು. ೧೫ನೆಯ ಶತ). [ಪುಟ್ಟ₁ + ಗಾವುಂಡ (< ಗಾವುಂಡ)]

**ಪುಟ್ಟಗೆ** 'ಪುಟ್ಟಗೈ' ನೋ.

**ಪುಟ್ಟಜ**, ಹುಟ್ಟಜೆ (ನಾ). ಹುಟ್ಟಿದ ಸ್ಥಳ; ತವರುಮನೆ; ಜನ್ಮಸ್ಥಾನ : ಮದನನ ಕೈದುವಲ್ಲಿದು . . . ಚದುರ ಪುಟ್ಟದನೆ [ಟ್ಟಜವು] ಲ್ಲಿದಂ (ಅರಿಕೃ. ೩-೦೩); ಸಿರಿಯ ತವರ್ಮನೆ ಹವಳದ ಹರವರಿ ಮುತ್ತಿನ ಪುಟ್ಟಜಂ ಶಶಿಯಯ್ಯಂ ಹರಿಯಿಪ್ಪ ಸೆಜ್ಜೆವನೆ . . . ಎನಿಪಂಭೋನಿಧಿ ಸುತ್ತುವೊಪ್ಪೆ(ಪ್ಪ)ತ್ತಿರೆ ಜಂಬೂದ್ವೀಪವೊಪ್ಪಿಪ್ಪುದು (ಶಿಇ. I. ೨೩-೯ : 1180); ಜಗತೀಕಾಂತನ ಮಾದೇವಿ ಲಕ್ಷ್ಮಿಕಾದೇವಿ . . . ಚದುರ ಪುಟ್ಟಜ [ಪುಟ್ಟಜ]ವೆನಿಪಳ್ (ಚಂದ್ರಪ್ರ. ೦೦-೯೦). **ಹುಟ್ಟಜೆ :** ಸಿರಿಯ ತವರ್ಮನೆ ಹವಳದ ಹರವರಿ ಮುತ್ತುಗಳ ಹುಟ್ಟಜೆ ಚಂದ್ರನ ತಾಯಿ ಹರಿಯಿರ್ಪ ಸೆಜ್ಜೆವ[ನೆ] ರತ್ನರಾಶಿಯುಮರ್ದಿನ ನಿಧಾನಂ . . . ಎನೆ ಚೆಲ್ವಿಂ ಜಳರಾಶಿ ಸುತ್ತುವಿರೆ ಜಂಬೂದ್ವೀಪವೊಪ್ಪಿಪ್ಪುದು (ಶಾಇ. XV. ೨೪೦-೩ ; 1174).

**ಪುಟ್ಟಣೆ** 'ಪುಠಾಣಿ' ನೋ.

**ಪುಟ್ಟಬಾಳೆ**, ಪುಟಬಾಳೆ, ಪುಟವಾಳೆ (ನಾ). ಸಣ್ಣಗಾತ್ರದ ಹಣ್ಣುಗಳನ್ನು ಬಿಡುವ ಒಂದು ಜಾತಿಯ ಬಾಳೆ : ಬಾಳೆಯಲ್ಲಿ ಅನೇಕ ಜಾತಿಗಳಿವೆ—ರಸಬಾಳೆ, ಚಂದ್ರಬಾಳೆ, ರಾಜಬಾಳೆ, ಪುಟ್ಟಬಾಳೆ, ಏಲಕ್ಕಿಬಾಳೆ, ಮಧುರಂಗಬಾಳೆ, ಸೀಲಂಬಾಳೆ ಇವೇ ಮೊದಲಾದವು (ಕೃಷಮ. ೩೭); ಹಟ್ಟೀ ಕಲ್ಲೊಳ್ಳಿಗೆ ಬಟ್ಟುಗಂಧವನಿಟ್ಟು ಪುಟ್ಟಬಾಳೆ ಹಣ್ಣ ಸುಲಿದಿಟ್ಟು (ಜಾಜನ. ೧೨೪). **ಪುಟಬಾಳೆ :** ಹಟ್ಟಿ ಕಲ್ಲಿಗೆ ಪುಟ್ಟು ಗಂಧಾವನಿಕ್ಕಿ ಪುಟಬಾಳೇ ಹಣ್ಣಾ ಸುಲಿದಿಕ್ಕಿ ಒಳಗೀರೋ ನಿನ್ನೆ ಬಂದಕ್ಕಿ ತೊಳೆಸಾರೊ (ಹುಟ್ಟಿಹ ೩೦). **ಪುಟವಾಳೆ :** ರಸವಾಳೆ ಪುಟವಾಳೆ ರಾಜವಾಳೆ ಸಕ್ಕರೆಯಸೆವಾದೇವಾಳೆ ಬ್ಬಾಳೆ ಹಸುರುಗುಂದದ ಪಚ್ಚೆಗಾಡವು ಮಧುರಂಗ ಪಸರಿಸಿ ಮೆಚಿಮುಪರ್ತಿಯಲಿ (ಕಂಷಪ. ೩-೮೬).

[ಪುಟ್ಟ$_1$ + ಬಾಳೆ$_1$ (< ಬಾಟಿ$^3$). / ತಮಿ. ಪುಟ್ಟುವಾಟ್ಟೈ]

**ಪುಟ್ಟವಳ** (ನಾ). ಹುಟ್ಟುವಳಿ; ಆದಾಯ; ಉತ್ಪನ್ನ : ಧಾರಾಪೂರ್ವಕಮ್ಮಾಡಿಕೊಟ್ಟು ಕೊನ್ನಾ ಪೊಗದ್ಯಾಣ ನೂಜ ಮೂಜು ಇಂತಿ ಪುಟ್ಟವಳದಲು ನಿಚ್ಚಂ ನಾಲ್ವರ್ಗೆ ಸತ್ರಮಂ ನಡೆಸಂತಾಗಿ ಬಿಟ್ಟುಕೊಟ್ಟನು (ಶಾಇ. IX-1. ೮೯-೨೦ ; 1035) : ಮಾಲಗಾಜ ಬರ್ಮಯ್ಯಮೊನ್ನು ಪಸದನದ ಪುಟ್ಟವಳನುಂ ಬಿಟ್ಟ (ಎಇ. XVI. ೩೩೦-೨೩ : 1077).

[ ?·/ ಪುಟ್ಟು$_1$ + < ಪಣ$_3$ ]

**ಪುಟ್ಟಱಿವು**, ಹುಟ್ಟರಿವು (ನಾ). ಹುಟ್ಟಿನಿಂದ ಬಂದ ತಿಳಿವಳಿಕೆ; ನೈಸರ್ಗಿಕವಾದ ಬುದ್ಧಿ : ಕೇಡಡಸೆ ಪುಟ್ಟಱಿವುಮುಱಿಯದೆಯೆ ನೆಲೆ ತಪ್ಪಿ ಪೋಕುವ (ಅಂತಿಗೊ. ೨೭-೩೯೦). **ಹುಟ್ಟರಿವು :** ಪ್ರಾಚ್ಯ ದೇಶ ಬಂಧುಗಳ ಹೃದಯದಲ್ಲಿ ಹುಟ್ಟರಿವಾಗಿ ಬಂದು, ಅವರ ಜೀವನಕ್ರಮವನ್ನೇ ವ್ಯಾಪಿಸಿ ನಿಯಂತ್ರಿಸುವ ನಂಬಿಕೆಗಳು—ದೇವರು . . . ಪರಲೋಕ ಇವುಗಳೆಂದು ಒಟ್ಟನಲ್ಲಿ ಹೇಳಬಹುದು (ಭಾರತ. ೪); ಹಾವುಗಳು ಸ್ವಪ್ರದೇಶಪ್ರೇಮಿಗಳು. ಆಗಂತುಕರನ್ನು ಶತ್ರುಗಳೆಂದೇ ಭಾವಿಸುವ ಹುಟ್ಟರಿವು ಇವುಗಳ ಸಹಜಸ್ವಭಾವ (ಹಸುಹೂ. ೬೬).

[ ಪುಟ್ಟು$_2$ + ಅಱಿವು ]

**ಪುಟ್ಟಾಣಿ**, ಪುಟಾಣಿ$_1$ (ನಾ). ೧. ಚಿಕ್ಕವನು; ಸಣ್ಣವನು : ಪುಟ್ಟಾಣಿ, ನಿನ್ನ ಹೆಸರೇನು ? (ರೂಢಿ). (ಗ್ರಾ). ೨. ಎಳೆಯ; ಚಿಕ್ಕವಯಸ್ಸಿನ : ಅಳಿಯನನ್ನೇ ಮನೆಯಲ್ಲಿ ನಿಲ್ಲಿಸಿಕೊಳ್ಳುವೆ, ಈ ಪುಟ್ಟಾಣಿ ಮಗಳನ್ನು ಕಳಿಸುವುದಿಲ್ಲ (ಕಕೃಹು. ೩೬); ನೀನಿನ್ನೂ ಸಣ್ಣಾವನು. ನಿನ್ನ ಪುಟ್ಟಾಣಿ ಕೈಲಿ ಇಂಥಾ ಕೆಲಸ ಆಗುಲ್ಲ (ಪುಟ್ಟಿಕ. ೨೦). **ಪುಟಾಣಿ$_1$ :** ೧. ಗಿಡ್ಡಪುಟಾಣಿ ಮಜ್ಜಿಗೆ ದೋಣಿ (ಗಾದೆ). [ < ಪುಟ್ಟ$_1$ ]

**ಪುಟ್ಟಾರಿ** (ನಾ). ಚಿಕ್ಕ ಮಗು : ಪುಟ್ಟಾರಿಗೆ ಎಳೆದುಕೊಂಡು ಆಡುವುದಕ್ಕೆ ಅವನ ತಂದೆ ಒಂದು ಕೈಬಂಡಿಯನ್ನು ತಂದುಕೊಟ್ಟಿದ್ದರು (ಶಿಂಚಿ. ೦೯೬). 'ಚಿನ್ನಾರಿ' ಹೋ. [ < ಪುಟ್ಟ$_1$ ]

**ಪುಟ್ಟಿ$_1$**, ಬುಟ್ಟಿ (ನಾ). ೧. ತೆಂಗು, ತಾಳೆಗಳ ಗರಿ ಅಥವಾ ಬಿದಿರಿನಿಂದ ಹೆಣೆದು ಮಾಡಿದ ಗೂಡೆ, ಮಂಕರಿ ಮುಂತಾದುವು . ಅನೇಕ ಸುರಭಿಕುಸುಮಂಗಳಂ ಸಜ್ಜುಗೆಮಪ್ಪುವಂ ಪುಟ್ಟಿಯೊಳ್ ತೀವಿಕೊಂಡು (ಶಂಕಕಂ. ೧೦೬-೬); ನೆತ್ತರ ಮಡು ನಾಡಿಗಳ ಸುತ್ತುವಳಿ ನರವಿನ ನೆಣಜಂತ್ರ ಮಾಂಸದ ಪುಟ್ಟಿಯ ತೆಪ್ಪ . . . ಮೋಹದ ಬಲೆ ತೋಱಿ ಕೆಡುವ ತನು ಇದು (ಶಶಸಂ. ೪೩-೬೨); ಹೊಟ್ಟೆಯಿಂದಸ ಪುಟ್ಟಿಸಿಂಗನ ಮುಟ್ಟಿವಿನೆ ಕೊರಳಾಣೆ ಪುಟ್ಟಿಯ ಮೇಲಾಣೆ ಕಟ್ಟಿದ ತಾಯಿತದಾಣೆ (ಶ್ರೀಕೃಶಾ. ೬೩) : ಪುಟ್ಟಿ ಕಿರಿದೇನು ಹಡಗೆ ಹೆಚ್ಚೇನು ? (ಗಾದೆ). **ಬುಟ್ಟಿ :** ೧. ಈಕೆಯ ತಲೆ ನೋಡು ಹೇಗೆ ಬುಟ್ಟಿ ಆಗಿದೆ ! (ಮುಂಬಯಿ. ೦.೦೩); ಅನ್ನದ ರಾಶಿಗಾಗಿ ದೊಡ್ಡ ಬುಟ್ಟಿ ಬಾಯಿ ತೆರೆದು ನಿಂತಿತ್ತು (ಹಲ್ಲಿ. ೫); ಕೆಲವರು ಹೆಂಗಸರು ತಲೆಯ ಮೇಲೆ ಬುಟ್ಟಿಗಳನ್ನು ಹೊತ್ತುಕೊಂಡು ಬರುತ್ತಿದ್ದರು (ರಂಗಳ. ೨೭). ೨. ಬಿದಿರಿನ ಬುಟ್ಟಿಯಾಕಾರದ ನಾವೆ : ಬುಟ್ಟಿಯು ದೊಡ್ಡ ಸೆಳವಿನ ಸುಳಿಯನ್ನು ದಾಟಿ ಆಚೆಯ ದಂಡೆಯ ಸಮೀಪಕ್ಕೆ ಬಂದಿತ್ತು (ಶಶಿಗಳ. ೧೦೨).

ಬುಟ್ಟಿಗೆ **ಹಾಕಿಕೊಳ್ಳು** = (ಅಲಂ) ಉಪಾಯವಾಗಿ ಸ್ವಾಧೀನಪಡಿಸಿಕೊಳ್ಳು ; ಯುಕ್ತಿಯಿಂದ ವಶಪಡಿಸಿಕೊಳ್ಳು : ಅವನು ವ್ಯವಹಾರಕುಶಲ . . . ಹೇಗೋ ಅವಳನ್ನು ತನ್ನ ಬುಟ್ಟಿಗೆ ಹಾಕಿಕೊಂಡನು (ಪುಷರು. ೯); ಲಿಪ್ಪನ ಬೇಳೆ ನ್ಯಾಯಾಧೀಶರ ಬಳಿ ಬೇಯುವ ಹಾಗಿದ್ದರೆ ಅವರನ್ನು ತನ್ನ ಬುಟ್ಟಿಗೆ ಹಾಕಿಕೊಳ್ಳುತ್ತಿದ್ದನು (ಶಂಕಶಂ. ೨೦೪).

[ ದೇ.॥ ತಮಿ. ಪುಟ್ಟಿಲ್; ತುಳು. ಪುಟ್ಟಿ. ಬುಟ್ಟಿ ; ತೆಲು. ಪುಟಿ, ಪುಟ್ಟಿ, ಬುಟ್ಟ, ಬುಟ್ಟಿ ; ಕೊಡ. ಪುಟಿ ]

**ಪುಟ್ಟಿ$_2$** (ನಾ). ೧. ಚಿಕ್ಕವಳು; ಚಿಕ್ಕವಯಸ್ಸಿನವಳು. ೨. ಹೆಣ್ಣುಮಗು : ಗಂಡುಮಕ್ಕಳಿಗೆ "ಪುಟಾಣಿ", ಹೆಣ್ಣುಮಕ್ಕಳಿಗೆ "ಪುಟ್ಟಿ" ಯೆಂದೆನ್ನುವರು (ಕಥಾಗ. ೬೩). [ಪುಟ್ಟ$_1$ + — ಇ$_2$]

**ಪುಟ್ಟಿ$_3$** (ನಾ). ಒಂದು ಅಳತೆಯ ಪ್ರಮಾಣ : ಬಸಗೆ ಉಕ್ಕಾಹಂಗಳ್ಗೆ ಒನ್ದೊಕ್ಕಲೊನ್ನು ಪುಟ್ಟಿಗೆ (ಎಇ. XIV. ೨೯೦ ೦೬; 765); ಸಜ್ಜುರಕ್ಕೆ [ಪು]ಟ್ಟಿಗೆ ಒನ್ದರೆ ಮಳವೆಗೆ ಪೆಟ್ಟಿ ಪಡಿನಾಜುಪಲು (ಎಇ. IX. ೨೨-೬; ಸು. 800). [ದೇ.॥ ತಮಿ. ತೆಲು. ಪುಟ್ಟಿ]

**ಪುಟ್ಟಿ$_4$**, ಪುಟ್ಟು$_4$, ಹುಟ್ಟಿ, ಹುಟ್ಟು$_4$ (ನಾ). ೧. (ವಿಶೇಷವಾಗಿ) ಜೇನಿನ ಗೂಡು : ಪೂಮ್ದು ಪೊಯ್ದುಗಳಿಂ ನೆಗೆದು ಮುಗಿಲ್ಗಳಟ್ಟೆಡೆಗಳೊಳ್ ತಳೆಗಳ್ ತೊಡರ್ದಿರ್ದ ಜೇನ ಪುಟ್ಟಿಗಳನೆ ಪೋಲ್ತುವು (ಶಂದಶ. ೧೦.೬೦); ಪಂದಲೆಗಳ ಜೇನ ಪುಟ್ಟಿಯೆನೆ ಕೊರ್ವಿದ ಕೊಂಬುಗಳಲ್ಲಿ ಪಕ್ಕಿಪೋರಿ ಚಿಲಿಮಿಲಿಯೆಂದುವೆರ್ದ ಕೂಲೆಗಳ್ಗಣಪಾಲಯದಾಲದೋಳ ಯೊಳ್ (ಅರ್ಗಪ. ೩-೩೭); ತಲೆ ಕೆಟುಗಾಗಿ(ರ್ದ) ಪೆರ್ಜೇನ ಪುಟ್ಟಿಗಳಂ ತಿರ್ದ ಪುಟ್ಟಿ(ಅಟ್ಟು)ಗಳೊಳ್ ಪುಟ್ಟ (ಶಿಪ್ಸಪ. ೯೯-೦೦). **ಪುಟ್ಟು$_4$ :** ೧. ಕಲ್ಲ ಪೊಗಱಿಯೊಳಿಟ್ಟ ಕಾರ್ಮುಗಿಲ ಮೊಟ್ಟೆಗಳ್ ತಾಮೆನಿಸಿ ಪರ್ಬಿದುವು ಪೆರ್ಜೇನ ಪುಟ್ಟುಗಳ್ (ಅಶಂಪು. ೯-೦೭). **ಹುಟ್ಟಿ :** ೧. ಬಡಂಬಡ ಹುಟ್ಟಿಯು ಕಿಣಿಕಿವಂತೆಯುಂ (ಎಕ. VIII. ಸೊರಬ. ೦೬೩-೬; 1156); ಪಕ್ವಫಲಂಗಳ ನಾಯ್ದುಕೊಂಡು . . . ಜೇನ ಹುಟ್ಟಿ [ಹಾಹು. ಟ್ಟು]ಗಳನ್ನಿಟ್ಟೆಲ್ಲಸವೆ . ಕಲಸಿ ತಣಿವಿನಂ ತಿಂದು ತೇಗಿ(ರಿಂಶ.೦-೦೨೮ ಶ). ೨. ಗೂಡು : ವಿಷದ ಹುಟ್ಟಿಯೊಳಿಟಗಿ ನೊಣ ಜೀವಿಸುವುದೇ (ಕುಮ್ಯಾದ್ರೋ. ೬-೪೦). **ಹುಟ್ಟು$_4$ :** ೧. ಜೇನ ಹುಟ್ಟಿನ ಹುಳುವಿ ಬಡಿದ ಸಗುಣತನ ತಾನೇನು ಜಾಣೆಯ ಸೇನೆಗೀನೆಯ ಸಪಜರಾಯಿತ ಶೌರ್ಯಸಿರಿ ನಿಂಗೆ (ಕುಮ್ಯಾರ. ೬-೩೪); ಕೆಟ್ಟಮ್ಮೆ ಹೆಂಗಸನು ಬಟ್ಟೆಯಲಿ ತುಱುಚಿಯನು ಅಟ್ಟಿಟ್ಟಿ ಕಡಿಪ ಕದಪಿನ ಹುಟ್ಟನ್ನು ಮುಟ್ಟಬೇಡ (ಸರ್ವಜ್ಞ. ೮೩೩೦); ಆ . . . ಟೊಂಗೆಯನ್ನು ಕಡಿಯುವಾಗ ತಪ್ಪಿ ನನ್ನ ಕಾಲಿಗೆ ಕುಡುಗೋಲು ತಾಕಿತು (ಕುಂಬಾರಯ್ಯ. ೦-೦೮).

**ಪುಟ್ಟಿ**₆ (ನಾ). ಬಟ್ಟೆ; ವಸ್ತ್ರ : ಅಲ್ಲಿ ಮಹೇಶ್ವರಾಲಯದಂತೆ ಗೊರವು ... ಭೂಮಿ ಪರ್ವಿದಂತೆ ಸೀಗೆ ಪುಟ್ಟಿಯನಳಿವನಂತೆ ಮೊಳಗೆ ಕುರುಕಲ್ಕಿಕ್ಕುವ ಪಯಣದಂತಿರ್ದಿಡು (ಹಂಹಂ. ೨-೩೬ ವ); ಮೂಲಾತ್ಸಾರಧ್ವ-ಧ್ವಜದ ಮೂಲಂ ಮೊದಲುಗೊಂಡು ತತ್‌ಪಾರ್ಶ್ವೇ—ಆ ಶಿಖೆಯಿಕ್ಕೆಲದೊಳ್ ಕ್ರಮಹೀನಃ-ಕ್ರಮದಿಂ ಕುಂದುತ್ತಂ ಬಂದು ಅಗ್ರಪೌಷ್ಟಿಕಾತ್-ಕಡೆಯ ಪುಟ್ಟಿಯತ್ತಣಿಂದ (ಶ್ರೀಶಿಲ. ೧೯-೧೯). [<ಪುಟ್ಟಿಗೆ₁]

**ಪುಟ್ಟಿಕೆ** 'ಪುಡಿಕೆ' ನೋ.

**ಪುಟ್ಟಿಗೆ₁** 'ಪುಡಿಕೆ' ನೋ.

**ಪುಟ್ಟಿಗೆ₂**, ಪುಟ್ಟಗೆ, ಹುಟ್ಟಗೆ, ಹುಟ್ಟಿಗೆ, ಹುಟ್ಟುಗೆ (ನಾ). ೧. ಬಟ್ಟೆ; ಉಡುವ ವಸ್ತ್ರ : ವಿದ್ಯುಚ್ಚೋರಂ . . . ಸ್ವಾಭಾವಿಕಮಪ್ಪ ಮುನ್ನಿನ ರೂಪು ಕೈಕೊಂಡು ಪುಟ್ಟಿಗೆಯನುಟ್ಟು ಮೆಯ್ಯಂ ಪೂಸಿ ಪೂವಂ ಮುಡಿದು (ವಡ್ಡಾರಾ. ೧೨೩-೧); ಇಂತುಟಪ್ಪ ಮೆಯ್ವಣ್ಣಕ್ಕಂತೀ ಪೂವಿನೊಳೀ ತುಡುಗೆಯೊಳೀ ಪುಟ್ಟಿಗೆಯೊಳ್ ಬೆಡಂಗುವಡೆದೆಸೆದಿರ್ಕುಂ (ಶಂಶಅಾ. ೩-೯೫)। ಪುಟ್ಟಿಗೆಯುಮಂ ಪೂವುಮಂ ತಳಿಗೆಯೊಳಿಟ್ಟುಕೊಂಡು ಪೋಪುದಂ ಕಂಡು (ಜೀಶಸಂ. ೨೨೬-೧೬). **ಪುಟ್ಟಗೆ** : ೧. ಆದರದಿಂದಂ ಭೂಮಿ ಪೊಂ ಪುಟ್ಟಗೆ ವಸು ಧನಮಂ ನೀಡುತ್ತಂ . . . ಧರೆಯೆಲ್ಲಂ ಮೆಚ್ಚಿ ನಿಚ್ಚಂ ಪೊಗಳೆ ನೆಗಳುತಂ ದೇವಲೋಕಕ್ಕೆ ಪೋದರ್ (ಎಕ. IV, ಹಗ್ಗಡ. ೧೮-೨೩ ; 1057). **ಹುಟ್ಟಗೆ** : ೧. ಈಕೆ ಹುಟ್ಟುಗೆಟ್ಟ ಹುಟ್ಟಗೆಯಂತೆ ಹಡಣಂ (ಶೀಲಾವ. ೨-೧೦೭ ವ). **ಹುಟ್ಟಿಗೆ** : ೧. "ಹುಟ್ಟಿಗೆ, ದುಗುಲಂ, ಪಟ್ಟಣಿಗೆ, ಉಳ್ಳುಡಿಗೆ—ಈ ೪ ವಸನಕ್ಕೆ ಪೆಸರ್" (ಕಶಕಾ ೩೩-೩೯೨); ನಿನ್ನಯ ನಣ್ಪೆ ದಲೆಂದು ತಂದ ಹುಟ್ಟಿಗೆಯಿಟೆದೆಟ್ಟೊಟ್ಟಂಗಟಿದು ಸೇದೆಯ ಬಾವಿಯೊ ಬಂದ ದಾವೆಯೋ (ಉಲಾಪ. ೨-೦೦೦) ; ಹುಟ್ಟಿಗೆಯ ನಿದ್ದಂತೆ ಕೊಡು ಕೊಡು ಹುಟ್ಟಿಗೆಯನಯ್ಯಂಗೆ ಕೊಟ್ಟೊಡೆ ಹುಟ್ಟಿ ವಿನ್ನಾವು (ಬಸಪು. ೧೧-೩೩). ೨. ದೇವತೆಯ ಹರಕೆಗಾಗಿ ಉಡುಗೆಯಂತೆ ಧರಿಸುವ ಬೇವಿನ ಸೊಪ್ಪು : ದೇವತೆಗೆ ಹರಿಕೆ ಹೊತ್ತವರು, ಮುಖ್ಯವಾಗಿ ಹೆಂಗಸರು, ಗಂಧದ ಇಲ್ಲವೆ ಬೇವಿನ ಹುಟ್ಟಿಗೆಯ ಉಟ್ಟು ಕೊಂಡು ದರ್ಶನಕ್ಕೆ ಹೋಗುತ್ತಾರೆ (ಕಜಾಗ. ೫೦೬) ; ಪೂಜೆಯ ಕಾಲಕ್ಕೆ ಹುಟ್ಟಿಗೆ ಕಟ್ಟಿಕೊಳ್ಳುವ ವಾಡಿಕೆ ಅನೇಕ ಮನೆತನಗಳಲ್ಲಿವೆ (ಕಜಾಪ. ೪೯). ೩. ಬೇವಿನ ಸೊಪ್ಪಿನ ಉಡುಗೆಯನ್ನು ಧರಿಸುವ ಹಬ್ಬ : ಮನೆಯಲ್ಲಿ ಹುಟ್ಟಿಗೆ ಮಾಡುವುದರಿಂದ ತಮ್ಮೆಲ್ಲರನ್ನು ಕರೆದುಕೊಂಡು ಬರಬೇಕೆಂದು ಹಿರಿಯರು ಕಳಿಸಿಕೊಟ್ಟಿರುವರು (ಗ್ರಾಜುಶಂ. ೩೬). **ಹುಟ್ಟುಗೆ** : ೧. "ಹುಟ್ಟುಗೆ ವಸ್ತ್ರದೊಳ್" (ಕಶಾಗ. ೨೯) ; "ಹುಟ್ಟುಗೆಯೆನೆ ಸೀರೆ" (ಕಶುಶ. ೭೯).

[ < ಸಂ.ಪುಟ್ಟಿಕಾ, ಪುಟ್ಟಕ./ತಮಿ. ಪುಟ್ಟಕ ]

**ಪುಟ್ಟಿಗೆ₃** (ನಾ). ಆದಾಯ ; ಉತ್ಪನ್ನ (?) : ಎರಡು ಗದ್ಯಾಣಂ ಪೊನ್ನು ಇರ್ಪತ್ತುಗಣ್ಣುಗು ಭಕ್ತಮುಂ ಇಕ್ಕೋರ್ಣದಿ ಕಟಿಗೋಡು ಪುಟ್ಟಿಗೆಯುಂ ತಸ್ಯ ಸೀಮಾನ್ತರಂ (ಎಕ. XVI, ಗುಬ್ಬಿ. ೬೩-೯೯ ; 733).

[<ಪುಟ್ಟು₁ , + — ಗೆ]

**ಪುಟ್ಟಿಗೋಲ್** (ನಾ). ಸಣ್ಣ ಕೋಲು,—ದಂಡ : ಮುನಿಯಂದೆ ನಮಃ ಶಿವಾ ಎಂಬುದೆಂದೆನುತಲೆಚ್ಚಱಿಸಿ ಭಸಿತದ ಪುಟ್ಟಿಗೋಲ ಳಿಂದಡಿಗಡಿಗೆ ಶಿವಿಪರ್ವರು ಚೋಳನ (ಬಾಪಕಂ. ೬-೬) ; ಮಿಸುನಿವೆಸದ ಪುಟ್ಟಿ ಗೋಲ್ಗಳಂ ಪಿಡಿದು ಜಡಿದೊಟ್ಟಜಿಯುಂದಿಟ್ಟಣಿಸಿ (ರಾಜಶೇ. ೧೩-೬೩ ವ).

[ಪುಟ್ಟಿ₀ (ಪ ←ತೆಲು. ಪೊಟ್ಟಿ = ಸಣ್ಣದು) + ಕೋಲ್₁]

**ಪುಟ್ಟಿಸು**, ಹುಟ್ಟಿಸು (ಕ್ರಿ). ೧. ಹುಟ್ಟುವಂತೆ ಮಾಡು; ಸೃಷ್ಟಿಸು ; ಜನ್ಮ ಕೊಡು : ನಿನ್ನಂ ಪುಟ್ಟಿಸಿದ ಬಿದಿ ನೆಗಟ್ತೆಯ ಜೆಟ್ಟಿಗನೊಳ್ ನೆರಪುಗೀಗಳರಿಕೇಸರಿಯೊಳ್ (ಶಂಶಅಾ. ೩-೯೮) ; ನಿನ್ನನಿಂತು ಮಗುಟ್ಟಂ ಮಗುಟ್ದಂ ಕೊಲವೇಟ್ಟುದೆಂದು ಪೇಟಿನ್ನನಿದಿಂತು ಪುಟ್ಟಿಸಿದನೇ ವಿಧಿ ರಕ್ಕಸಿಯಂ (ಕಾದಂಅ. ೬೨೦) ; ಬಸನದ ಬಸದಿಂದ ಪುಟ್ಟಿಸಿದಂ ಜನಕನೆ ...ಅಱಿನಂ ತಿಳಿಪುವಾ ಮಹಾತ್ಮಂ ಜನಕಂ (ಕಶುಶ. ೮-೯೨). ೨. ಉಂಟು ಮಾಡು ; ಬರಿಸು ; ಒದಗಿಸು : ಉಪಚಾರದ ನುಡಿ ಸಂದೇಹ ಬುದ್ಧಿಯಂ ಪುಟ್ಟಿಸದೇ (ಕಾದಂಉ. ೧೫೭), ಎನಿತು ಶಕ್ತಿಯು ಳ್ಳೊಡವಮೌಷಧಂ ತಱುಂಬುದಲೆಯೊಳ್ ರೋಗಮುಮಂ ಪುಟ್ಟಿಸಲಾಱದು (ಕರ್ಣಾಪ್ರ. ೬-೩೬) ; ಬುಧಗ್ಗುರ್ಗ್ಗತ್ಸವಮಂ ಪುಟ್ಟಿಸಿದಂ (ಎಕ. VII, ಶಿಕಾರಿ. ೪-೪೦ ; 1122) ; ಪರಿತಾಪವ ಪುಟ್ಟಿಸಿ ಪೋಗಲುಂದೆಯ (ಕುಣಕಶ. ೪-೬೨). ೩. ರಚಿಸು ; ನಿರ್ಮಿಸು: ಚೌಪಳಿಗಳ್ ಪಲವಂ ಸಮೆದಲ್ಲಿ ರತ್ನದಿಂ ಬೆರಸಿದ ಬಣ್ಣದೊಳ್ ಮಾಱಿಯ ಕಟ್ಟಿಸಿ ಪುಟ್ಟಿಸಿ ರಂಗ ಭೂಮಿಯುಂ (ಶಂಶಅಾ. ೩-೪೦). **ಹುಟ್ಟಿಸು** : ೧. ಏಕೆ ಹುಟ್ಟಿಸಿದೆ ಇಹಲೋಕದುಃಖಿಯ ಪರಲೋಕದೂರನ ಏಕೆ ಹುಟ್ಟಿಸಿದೆ (ಬಶವ. ೬೯); ದೇವ ಇಂತಹ ಬಸುಱೊಳೆನ್ನುವನು ನೀವು ಹುಟ್ಟಿಸಲಹುದೆ (ಬಸಪು. ೫೦-೬೯). ಆ ಮಹಾಮೃತ್ಯುವನು ಹುಟ್ಟಿಸಿದಾ ಮಹಾದೇವಾದಿದೇವರು ಕಾಮಿನಿಯ ಕಳುಹಲ್ಕೆ ಬಾರದೆನುತ್ತ ಬೋಧಿಸಲು (ಕುಮಾರವ್ಯಾ. ೬-೩೬); ಹುಟ್ಟಿಸಿದ ದೇವ ತಾ ಹೊಣೆಗಾಱನಾಗಿರಲು ಗಟ್ಟಾಗಿ ರಕ್ಷಿಪನು ಇದಕ್ಕೆ ಸಂಶಯವಿಲ್ಲ (ಕಶಕ.೬೦-೦); ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೇ? (ಗಾದೆ). ೨. ನಾಸಿಕೇಂದ್ರಿಯ ನಿನ್ನ ತನುಗಂಧಕಳಸಿ ಮೇಲ್ಪೊಸಿದ ಪುನುಗು ಕಸ್ತುರಿಯ ವಾಸನೆವಿಡಿಯದು ನೀನಗಲದೆ ಸಂತೋಷವ ನೆಱೆ ಹುಟ್ಟಿಸಿದಕೆ (ಕಂಶಪ. ೯-೦೫೨) ; ಆ ಕಲ್ಲುಗಳು ನನಗೆ ಒಂದು ತೆರನಾದ... ಅಸಹ್ಯವನ್ನು ಹುಟ್ಟಿಸಿದುವು (ಕಂಗಾಳ್ಕ. ೪೦).

**ಪುಟ್ಟಿಸಿದರ್** = ಹೆತ್ತವರು ; ಜನ್ಮವಿತ್ತವರು: ಪುಟ್ಟಿಸಿದರ್ ತಾವೆಂದು ಬಗೆದು ಮುದ್ದಾಡುವ ತಾಯ್ತಂದೆಗಳ ಮೊಗಮಂ ನೋಡಿ ನಗುವಂತೆ ಮುಗುಳ್ನಗೆ ನಗುತ್ತುಂ (ಸಂಬಶ. ೨-೮). **ಹುಟ್ಟಿಸಿಕೊಳ್ಳು** = ೧. ನಿರ್ಮಿಸಿಕೊಳ್ಳು; ಹುಟ್ಟುವಂತೆ ಮಾಡಿಕೊಳ್ಳು : ಉತ್ಪತ್ತಿಕಾರಣದ ಒಡೆಯ ನಾದಡೆ ಶಿರಸುವಂ ತಾನೊಡನೆ ಹುಟ್ಟಿಸಿಕೊಳ್ಳನೇ (ಬಸಪು. ೫೯-೬). ೨. ಇಲ್ಲದುದನ್ನು ಸೃಷ್ಟಿಸು ; ಕಲ್ಪಿಸು ; ಬನಾವಟಿ ಮಾಡು : ಅವನು ಹೇಳುವುದನ್ನು ನಂಬುವಿರಾ ? ಎಲ್ಲ ಹುಟ್ಟಿಸಿಕೊಂಡು ಹೇಳು ತ್ತಾನೆ (ರೂಢಿ).

[ಪುಟ್ಟು₁ + — ಇಸು₃]

**ಪುಟ್ಟಿಹಣ್ಣು** (ನಾ). ಸವುತೆ ಜಾತಿಗೆ ಸೇರಿದ ಒಂದು ಬಗೆಯ ಹಣ್ಣು ; ಕೆಕ್ಕರ ಹಣ್ಣು ; ಕೆಕ್ಕರಿಕೆ : (ಕ). [ಪುಟ್ಟಿ₀+ಹಣ್ಣು₃ (<ಪಣ್ಣ₃)]

**ಪುಟ್ಟು₁**, ಹುಟ್ಟು₁ (ಕ್ರಿ). ೧. ಜನ್ಮ ತಾಳು ; ಜನಿಸು ; ಜನ್ಮಿಸು : "ಪುಟ್ಟು—ಉತ್ಪತೌ, ದಾರುಹಸ್ತೇ (ಚ ದೋಣಿ ನಡೆಯಿಸುವ ಮರಗೈ)" (ಶಮದ); ಇದೊಂದ್ ಕಡಿಸಿದೊನ್ ಪಞ್ಚಮಹಾಪಾತಕನಕ್ಕು ತನೊಕ್ಕಲುಳ್ ಪೊತ್ತಿ ಮಕ್ಕಳ್ಪುಟ್ಟದೆ ಕೆಡುಗ (ಎಕ. III, ಮೈಸೂರು.೩೩-೨೦; ಸು.740); ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನಮಾನಟ್ಟು ಬಡಿಸು ನಾಮಱಿಯ ದೆನಸುಂ ಸವಿಯುಂ ಪುಟ್ಟದಾರುಮಱಿಯದದಱ ಪೆಸರೊಳಟ್ಟುದಂ ಪೇಱಿ ಕೇಳ್ದೆನೆಂದಱಿಯೆಂ (ಕಚಾ. ೨-೦೯೭); ಟಿಃ ಸತ್ತರೇಂ ಪುಟ್ಟರೆ ಪೊಱಮಡು ನೀಂ ಕೈದುಗೊಳ್ (ಗದಾಯು.೬-೦೩). ೨. ಬೆಳೆ ; ಮೂಡು : ಚರಿಪಾರಣ್ಯದ ಪಕ್ಷಿಗೊಂದು ತರು ಗೊಡ್ಡಾಗಲ್ ಫಲಂ ಶೀವಿದಾ ಮರಗಳ್ ಪುಟ್ಟವೆ (ಸೋಮೇಶ. ೨೬). ೩. ಉಂಟಾಗು; ಒದಗು; ಉತ್ಪನ್ನವಾಗು: ಶಂಕೆ ಪುಟ್ಟದುದೀಗಳ್ (ಕಾದಂಪೂ. ೯೬೦); ಎರಡು ಪದಂಗಳ ನಡುವೆ ಬೇಱೊಂದು ದುಷ್ಟಶೀತಿ ಪುಟ್ಟುವೊಡೆ ಸಂಧಿಯಂ ಮಾಡಲಾಗದು (ಶಶುಶ. ೬೨-ವೃತ್ತಿ); ನಿಟ್ಟಿಸಲು... ಪುಟ್ಟಿತು ಗದ್ಗದ ಮೆಯ್ಯೆ ಝುಮ್ಮು ಝುಮ್ಮೆಂದು ತಟ್ಟಿತು ಮನ ಮೂರ್ಛೆ ರತಿಗೆ (ಪೋಹಕ. ೦೦-೪೨). **ಹುಟ್ಟು₁** : ೧. ಹೆಂಡಿರೊಳ್ ಮನೆಗೊರ್ವ್ವರುದಾರೆಯರಣ್ಣ ಹುಟ್ಟರೇ (ಎಕ. VII, ಶಿಕಾರಿ.

೬-೬೪; 1112 ?); ಮುತ್ತು ನೀರಲಿ ಹುಟ್ಟಿ ಮತ್ತೆ ನೀರಪ್ಪುದೆ (ಶಶಿ. ೬೬೬); ರಾಜಕುಲದಲಿ ಹುಟ್ಟಿದರೆ ಕಲಿಲೀಸು ಚಪಳತೆ ಯಾರಿಗುಂಟು (ಕುಮಾ.ರಿಸ್ಕ್ರೀ. ೩-೬೪); ಹುಟ್ಟಿತ್ತು ತಮ್ಮ, ಬೆಳೆದಂತೆ ದಾಯಾದಿ (ಗಾದೆ). ೩. ಆ ಊರಲು ಹುಟ್ಟಿದ ಫಲದೆಲ್ಲವು ಸಕಳಾಯ ಸಹಿತ ತ್ರಿಭಾಗಂಮಾಡಿದ ಲ್ಲಿಯ ದೇವಗ್ರೊಂದು ಭಾಗ . . . ನಡೆಯಿಸುವರು (ಶಾಸ. IX—1, ೫೫೧—೫೯; 1148); ನಿಟ್ಟಿಸಿ ನೋಡಿದ ವೇಳೆ ದಶಾವಸ್ಥೆ ಹುಟ್ಟುವುದು (ಕಂಹು. ೬-೪೪); ಲವಲವಿಕೆ ಅವನಲ್ಲಿ ಹುಟ್ಟಿತು (ಕುಂಶಯು. ೪-೫೦).

**ಹುಟ್ಟಿಲ್ಲವೆನ್ನಿಸು**=**ಕೊಲ್ಲು**; ಸಾಯಿಸು: ನೀನು ಹೀಗೆ ತೊಂದರೆ ಕೊಡುತ್ತಿದ್ದರೆ ನಿನ್ನನ್ನು ಹುಟ್ಟಿಲ್ಲವೆನ್ನಿಸಿಬಿಡುತ್ತೇನೆ (ಕೂಹ). **ಹುಟ್ಟಿದ ದಿನ**=೧. ಜನ್ಮದಿನ: ಶ್ರಾವಣಬಹುಳಅಷ್ಟಮಿ ಶ್ರೀಕೃಷ್ಣನ ಹುಟ್ಟಿದ ದಿನ (ಕೂಹ). ೨. (ಅಲಂ) ಅತ್ಯಂತ ಕಷ್ಟದ ಸಂದರ್ಭ; ಇಕ್ಕಟ್ಟು: ಮುಂದೆ ಮಡು ಹಿಂದೆ ತಗರುಯಿರಡಬಿಡೆಯಲ್ಲಿ ನಿಂದು ನಿತ್ಯರಿಸ ಬಹುದೇ ಅದು ನಿಮಿತ್ತವೆಮಗಿಂದು ಹುಟ್ಟಿದ ದಿನಂ ಬಂದಿತೆಂದಾ ಜನಂ ತಳ್ಳಂಕಗೊಂಡುದು (ಹಮ್ಮೀ. ೩-೨೦). **ಹುಟ್ಟಿದ ಹಬ್ಬ**=೧. ಜನ್ಮದಿನ: ಮಗುವಿನ ಹುಟ್ಟಿದ ಹಬ್ಬವನ್ನು ಅವರು ಸಡಗರದಿಂದ ಮಾಡಿದರು (ಕೂಹ). ೨. (ಅಲಂ) ಶಾಸ್ತಿ: ಅಮ್ಮನಿಗೆ ಹೇಳಿ ನಿನಗೆ ಹುಟ್ಟಿದ ಹಬ್ಬ ಮಾಡಿಸು ತ್ತೇನೆ (ಕೂಹ).

[ದೇ. ೩ ತಮಿ. ಪುಟು; ಮಲ. ಪೊಡಿ; ತುಳು. ತೆಲು. ಪುಟ್ಟು; ಕೊಡ. ಕೋಲಾ. ನಾಯ್ಕಿ. ಗೊಂಡಿ. ಪುಟ್; ಕೊಡ. ಪುಟ್]

**ಪುಟ್ಟು₃**, ಹುಟ್ಟು₃ (ನಾ). ೧. ಹುಟ್ಟುವಿಕೆ; ಉದ್ಭವ; ಜನನ: ಸಾವುಂ ಪುಟ್ಟುಮದಿಲ್ಲದನಾದನವಂ ದೇವನಾತನೆಂದುದೆ ತತ್ತ್ವಂ (ಹಂಶತ. ೦೨೦-೩); ದೇವಿ ತ್ವತ್ಪಾದಪಂಕೇಜಮನನವರತಂ ಧ್ಯಾನಿಸುತ್ತಿರ್ಪ ಭಕ್ತರ್ ಸಾವುಂ ಪುಟ್ಟುಂಬ ವಿದ್ಯಾದ್ವಯಮನಱಿಯದಿರ್ಪರ್ (ಅಭ್ಯಕ. ೩-೯೬); ಸಿರಿ ಬಡತನಕ್ಕೆ ಪುಟ್ಟುಂ ಮರಣಕ್ಕೆ . . . ಯೌವನಮದು ಮುಪ್ಪಿಂಗುರು ಕಾರಣಾ (ಜಗನ್ನಾ. ೫-೪೨). ೨. ಬದುಕು; ಜೀವನ: ಕಾದಂಬರೀ ದೇವಿಯಾ ಚರಣೋಪಾಸನಸೌಖ್ಯಮಾದೊಡೆನಗಾದತ್ತಿಲ್ಲಮಾ ಪುಟ್ಟಿನೊಳ್ (ಕಾದಂಬ. ೩೬೬); ಪುಟ್ಟಿಂದು ಸಫಲವಾದುದು (ಶಾಕು. ೫-೩೯). ೩. ಹುಟ್ಟುವ ಸ್ಥಳ,—ನೆಲೆ; ತವರು: ನರಕದ ನೆಲೆ ವೇಸಿಕೆಗಳ ಕರು ಮಸಣದ ಪುಟ್ಟು ಪಾಪದೆಱ ಪಾತಕದಾಗರಮದು ನೆನೆವರ್ಗೆ ಭಯಂಕರ ವತಿಪಾಪಕರಮಾದುದುದ್ವೇಗಕರಂ (ಕಾದಂಕಾ. ೬೪೬). **ಹುಟ್ಟು₄**: ೧. ಮುಂದೆ ಬೋಳಾದೊಡೇನೊ ಹುಟ್ಟು ಬೋಳಾಗದಿಕ್ಕೃರ (ಅಜಿ. ೬-೦೩); ಸಿವಾತಕವಚರ ಘುಟ್ಟು ಹುಡಿಹುಡಿಯಾಯ್ತು ದನುಜರ ಹುಟ್ಟುವುರಿದುದು (ಕುಮಾ.ರಿ. ೧೨-೫೪); ಅವ್ಯಕ್ತವಾಗಿದ್ದ ಆತ್ಮ ದೇಹಸ್ಥವಾಗಿ ವ್ಯಕ್ತವಾಗು ವುದು ಹುಟ್ಟು (ಜಕಶ. ೧೧೪). ೪. ವೇಷ; ಇರಸರಿಕೆ: ನಿನ್ನ ಹುಟ್ಟು ನೋಡಲಾರೆ (ಕೂಹ). ೫. ಹುಟ್ಟುವಳಿ; ಆದಾಯ; ಉತ್ಪನ್ನ: ಗಡಿ ನಿಡಿ ಹುಟ್ಟು ಕಟ್ಟಳಿಯ ವಿವರ (ಶಾಸ. IX—ii. ೪೫೬—೧೦; 1456); ಅದರಲ್ಲಿ ಒಂದು ಸರವನ್ನು ಇಟ್ಟುಕೊಳ್ಳುವ. ಉಳಿದವುಗಳನ್ನು ಮಾರಿ ಹಣ ಬಡ್ಡಿಗೆ ಕೊಟ್ಟರೆ ಅಷ್ಟಿಷ್ಟಾದರೂ ಹುಟ್ಟು ಬಂದೀತು (ಮುಂಗಾರು. ೬೦).

**ಪುಟ್ಟುಪುಟ್ಟು** (ದ್ವಿರುಕ್ತಿ): ಮುಂಬರಿದನನುಸರಿಸುತಾ . . . ಪುಟ್ಟುಪುಟ್ಟುಂ ಬಿಡದೆ ಬೆಂಬತ್ತುಮಾ ದಿವ್ಯಸಂಶಯದ ಛಾಯಾಶಕುನ ಸುಪ್ಷ್ನೆಯೋಲ್ (ಶ್ರೀರಾಮ. ೪೨೩-೯೪). **ಹುಟ್ಟು ಇಲ್ಲದಂತೆ ಮಾಡು**= ಸಾಯಿಸು: ಉಗ್ರಬಾಹುವಿನ ಹುಟ್ಟು ಇಲ್ಲದಂತೆ ಮಾಡಿ ಬಂದ ಮಹಾನುಭಾವ ನೀನಲ್ಲವೇ (ಶಾಗಂಂ. ೫೪೬-೦೩).

[<ಪುಟ್ಟು₁/ತೆಲು. ಪುಟ್ಟು; ಕೊಡ. ಪುಟ್; ಕೊಡ. ಉಟ್]

**ಪುಟ್ಟು₃**, ಹುಟ್ಟು₃ (ನಾ). ೧. ಮರದ ಸಟ್ಟುಗ; ದಾರು: ಪುಟ್ಟುಗಳಂತೆ ಕಯರ್ ಬೇಗುವೋ (ಶಾಂತಿಪು. ೬-೩೩); ಪುಟ್ಟುಂ ಸಟ್ಟುಗವುಂ ಕೊಂಡಟ್ಟು ಱಿ ಬೋನವಿಟ್ಟು ಬಂದೆಯೊ (ಗದಾಯು. ೬-೩೬); ಪುಟ್ಟಿರ್ದಂತೆ ಕೆಯ್ ಬೇಯಲೇಕೆಯೊ (ಪಾರ್ಶ್ವನಾ. ೩-೮). ೨. ನಾವೆಯನ್ನು ನಡೆಸುವ ಕೋಲು: "ಪುಟ್ಟು—ಉತ್ಪತ್ರಾ, ದಾರುಹಸ್ತೇ ಚ (ದೋಣಿ ನಡೆಯಿ ಸುವ ಮರಗೈ)" (ಶನು:೮೧); ನೆರೆದು ನಿಶಾಟರೆಲ್ಲರುಱಿಯೆ ತಿಂದ ಗಜಂ ಗಳೆ ನಾವೆಯಾಗೆ ಪುಲ್ಲರುಳ ಕುಟುಂಬಮಂ ಪೆಣದ ಕೈಗಳೆ ಪುಟ್ಟುಗಳಾಗೆ . . . ನೆತ್ತರ ತೊಱೆಯಂ ಮರುಳ್ವೊಲ್ತಿಱಿ ಪಾಯಿಸುತ್ತಿರ್ದುವು ಯುದ್ಧ ಭೂಮಿಯೊಳ್ (ಹಂಪಾಪು. ೦೩-೬೬); ಗುಡಿಲಂತೆ ಬಾಗಿದ ಬೆನ್ನುಂ ಪುಟ್ಟಿ ನಂತೆ ಬೆರಲ್ಗಳಿಲ್ಲದ ತಳಮುಂ (ಧರ್ಮಾಮೃ. ೪-೩೫); ಓರ್ವಣಿಗನ ಪುತ್ರಿ ಕನ್ನಿಕೆ ಯಿರಲ್ ಕಂಡಾಕೆಯಂ ಬೇಗದಿಂ ಕರೆದೀ ನಾವೆಗೆ ಪುಟ್ಟನಿಕ್ಕುವುದೆನಲ್ಕೆ (ಧರ್ಮಾಶ. ೬-೨೩). 'ನೀರ್ವುಟ್ಟು' ಪರಾ. **ಹುಟ್ಟು₃**: ೧. ಅಡಗನಾಯಿದು ಕಿದಱ ರಕುತವ ತುಡುಕಿ ಚೆಲ್ಲುವ ಕರಿಯ ಬರಿಕ್ಕೆ ಬಿಡಿಸಿದವು ಹುಟ್ಟಾಗಿ ಯಮರಾಜನ ಪರಿಗ್ರಹಕೆ (ಕುಮಾ.ಕಿ. ೪-೬೨); ಶಿವನು ಜಂಗಮವಾಗಿ ಭಿಕ್ಷಕ್ಕೆ ಬಂದು ಹರಿ ಎನ್ನಲೊಡನೆ ಹರನ ಬಾಯ ಹುಟ್ಟಿನಲ್ಲಿ ತಿವಿದಳು (ಶಿಶರ. ೦೮-೦೬); ಹುಟ್ಟು ಇರುವಾಗ ಕೈ ಸುಟ್ಟುಕೊಳ್ಳಬೇಕೆ ? (ಗಾದೆ). ೨. "ಅರಿತ್ರಂ. ಕೇನಿಪಾತಕಃ—ಈ ೨ ನಾವೆ ನಡಸುವ ಹುಟ್ಟಿನ ಹೆಸರು" (ಚಾಕಶಾ. ೦೦೦); ಹಱಗೋಲನೆ ಹಱಿದು ಹುಟ್ಟಿ ಮುಱಿದು . . . ಕೆಱ ಬತ್ತಿ ಮೆಯ್ಯಱಿದಲ್ಲದೆ ಆ ಮಹಾಘನವ ಕಾಣಬಾರದು (ಶಂಗಾ. ೪. ೬೩-೩೩); ರತ್ನದಿಂ ನಿರ್ಮಿತವಾದ ನೀರು ಕೆಗೆಯುವ ಹುಟ್ಟುಗಳಿಂ ಹಿಡಿದು (ಶಾಗಂಂ. ೦೦೦-೦೬); ಗಾಳಿಗೆಮ್ಮ ಹರಿದೀತು ಹಾಹ ಹುಟ್ಟಿಲ್ಲದಾಗೆ ಹಡಗ ? (ಅರಳು. ೪೦೯-೨).

**ಪುಟ್ಟು₄** 'ಪುಟ್ಟಿ₄' ನೋ.

**ಪುಟ್ಟುಂಗವಿ**, ಹುಟ್ಟುಕವಿ (ನಾ). ಹುಟ್ಟಿನಿಂದಲೇ ಕವಿಯಾದವನು; ಅಜನ್ಮಕವಿ: ನರನ ತೊಡರ ಕಲೆಗಳೆಲ್ಲಂ ಬಳಿಯಮಿಮ ಭುವನಂ ಪಡೆಯು ತ್ತಿರ್ಪುದು ಪುಟ್ಟುಂಗವಿಗಳನೇ ಅಯಿಡೆ ಕವಿತಾಸ್ವರ್ಗಮಾಗಲೆವೇಳ್ಕುಂ (ಹಂಶತ. ೫-೮). **ಹುಟ್ಟುಕವಿ**: ಆ ಹುಟ್ಟುಕವಿ ... ಸರಸ್ವತೀಪ್ರಸಾದದ ಪೂರ್ಣಾರವುಣೀಯತೆಯನ್ನು ಸಹೃದಯರಿಗೆ ಅನುಭವ ಮಾಡಿಸಿ ಬಿಟ್ಟಿರುವರು (ಕಬಿಶಾ. XX ೩೬೫). [ಪುಟ್ಟು₃ + ಕವಿ₁]

**ಪುಟ್ಟುಂಗುರುಡ**, ಪುಟ್ಟುಗುರುಡ, ಹುಟ್ಟುಕುರುಡ, ಹುಟ್ಟುಗುರುಡ (ನಾ). ಹುಟ್ಟಿನಿಂದಲೇ ಕುರುಡನಾದವನು; ಜನ್ಮಾಂಧ: ಪುಟ್ಟುಂಗುರುಡಂ ಕಣ್ಣಾನೆ ಬಟ್ಟೆಯನವಂಗಾಕ್ಷನಂತೆ (ಅರ್ಥಶೀ. ೪-೩೩); ಪುಟ್ಟುಂಗುರುಡನಂಧಕಾರದ ಸಟ್ಟಿರುಳು ನಟ್ಟನೆ ಕಂಡನೆಂಬಂತೆ (ಹರಿಶ. ೯೩೪); ಆ ಸುದತಿಗೆ ಪತಿಯಾದಂ ... ಧೃತರಾಷ್ಟ್ರನೆಂಬ ಪುಟ್ಟುಂಗುರುಡಂ (ಜಿಮಾಪು. ೬-೦೩). **ಪುಟ್ಟುಗುರುಡ**: ಪುಟ್ಟುಗುರುಡನಂತೇನುಮಂ ಕಾಣದೆ (ಧರ್ಮಾಮೃ. ೨-೦೩೩); ರಕ್ಷಿಸೈ ಕಂಡು ಕಾಣದ ಪುಟ್ಟುಗುರುಡರಂ ರಕ್ಷಿಸೈ ಕೇಳ್ದು ಕೇಳದ ಮೂಱಿಬಧಿರರಂ (ಕಬಪು. ೨೦-೩೩). **ಹುಟ್ಟು ಕುರುಡ**: ಶಿವಶಿವಾ ದಶ್ರಾಮಹಾರದ ತವಕದಲಿ ನಿಜಬಂಧುವರ್ಗವ ಸವಱ ಸೆಳೆದವು ಹುಟ್ಟುಕುರುಡನ ಕೈಯ ಕೋಲುಗಳ (ಕಿಮ್ಮಾಕಾಂ. ೦-೬); ಅಂತರಂಗದಲ್ಲಿ ಹರಿಯ ಕಾಣದವ ಹುಟ್ಟುಕುರುಡನೋ (ಕಶಹ. ೦೦೬). **ಹುಟ್ಟುಗುರುಡ**: ಹುಟ್ಟುಗುರುಡನ ಕಯ್ಗೆ ಕೋಲ ಕೊಟ್ಟು ನಡೆಸು ವಂತೆ ನಡೆಸಯ್ಯಾ ಎನ್ನಾ (ಶಶಶ. ೨೬೫); ಈಗ ನಿಮ್ಮ ಕೃಪಾವಲೋಕದಿ ಹುಟ್ಟುಗುರುಡಂಗೆ ಅಗಲಲರವೆ ವೃಷ್ಟಿಗಳು (ಜಸಪು. ೪೬-೬೩).

[ಪುಟ್ಟು₃+ಕುರುಡ]

**ಪುಟ್ಟುಂಗುರುಡಿ**, ಹುಟ್ಟುಕುರುಡಿ (ನಾ). ಹುಟ್ಟಿನಿಂದಲೇ ಕುರುಡಿ ಯಾದವಳು; ಜನ್ಮಾಂಧೆ: ಮಗಳ್ ದುರೂಪೆ ದುರ್ವರ್ಣೆ . . . ಪುಟ್ಟುಂಗುರುಡಿ ಪೊಲತಿಯಾಗಿ ಪುಟ್ಟಿ (ಶಮ್ಮಾಶ. ೬-೬). **ಹುಟ್ಟುಕುರುಡಿ**:

ಅವಳೊಬ್ಬಳು ಹುಟ್ಟುಕುರುಡಿ (ರೂಢಿ). [ಪುಟ್ಟು$_2$+ಕುರುಡಿ]

**ಪುಟ್ಟುಗಣೆ** (ನಾ). ಮೂಲನೆಲೆ,–ಸ್ಥಾನ: ಕನ್ನಡದ ಪುಟ್ಟುಗಣೆ [ಪಾಠಾಂ. ಪುಟ್ಟಗುಣಿ, ಪುಟ್ಟುಗುಣಿ] . . . ಎನ್ನದೀ ಕೃತಿಯುನಿಳಿವನ್ನರನೆ ಬಿದಿ ಮುನ್ನ ಬೆನ್ನೊಳ್ದರಲೆಯದಿರನು (ಜಪಪ. ೦-೨೩). [ಪುಟ್ಟು$_2$+ಕಣ್ಕೆ]

**ಪುಟ್ಟುಗುರುಡ** 'ಪುಟ್ಟುಂಗುರುಡ' ನೋ.

**ಪುಟ್ಟುಗೆ** (ನಾ). ಹುಟ್ಟುವಿಕೆ ; ಜನನ : ದೋಷಸಂಭವಃ_ದೋಷದ ಪುಟ್ಟುಗೆ (ಶೀತಿವಾ. ೯-೦೧೭) ; ಸ್ಮರಪರಿತಾಪದಿಂ ನೆಟ್ಟ ಮರುಳ್ಳಸದಿಂದಜ ತಾತನೆನ್ನೊಳಂ ಬೆರಸಿದನಿ: ವಧೂಭವದ ಪುಟ್ಟುಗೆ ಪೂಲ್ಲೆನುತಿಲ್ಲಿ ರಾಗದೊಳ್ ನಿರುಪಮನಪ್ಪ ಮಂಗವಿಭುವಾದನೊ ಭಾರತಿ (ಖಮುದ. ೦೫-೨).

[ಪುಟ್ಟು$_1$ + –ಗೆ]

**ಪುಟ್ಟುವೆಟ್ಟು** (ನಾ). ಸೂರ್ಯನು ಮೂಡುವ ಪರ್ವತ ; ಉದಯಾದ್ರಿ : ಕಟ್ಟನಿಯುಳ ಮುದ್ದುಸುಂತಂತೆಲರ್ವಟ್ಟೆಯನೆಯ್ದಲ್ ಪುಟ್ಟುವೆಟ್ಟನಸರ್ವನಿಗದಿರೆಂತಂತೆ . . . ಈ ಕೃತಿ ಚತುರರ ಬಗೆಗೀಗೊಗುವಿಗೆಯುಂ (ಉದ್ಯದೀ. ೦-೨೯). [ಪುಟ್ಟು$_1$+ಬೆಟ್ಟು$_2$ (<ಬೆಟ್ಟ)]

**ಪುಟ್ಟುಹ, ಪುಟ್ಟುಹ** (ನಾ). ಜನನ; ಜನ್ಮ: (ನಾಶರಾ. ೬). **ಹುಟ್ಟುಹ :** ಮರಳಿಮರಳಿ ಹುಟ್ಟುಹ (ತ್ರಾನಾರ. ೬. ೦೧೪ ಟೀಕು).

[ಪುಟ್ಟು$_1$ + –ಹ$_2$ (< –ಪ್ಪ)]

**ಪುಠಾಣಿ, ಪುಟಾಣ್ಕಿ, ಪುಟ್ಟಣೆ** (ನಾ). ೧. ನೀರಿನಲ್ಲಿ ನೆನೆಸಿ ಹುರಿದ ಕಡಲೆ; ಹುರಿಗಡಲೆ: ಹಸೀಕಡ್ಲಿ ಫಕ್ತ ಪುಠಾಣಿ ಮಾಡುವದರ ಸಲುವಾಗಿ ಜಾತ್ರಿ ಹಂಗಾಮಿನಲ್ಲಿ ಸ್ವಲ್ಪ ಖರ್ಚು ಆಗುತ್ತಿರುತ್ತದೆ (ಮುಂಬಿಪ್ರಾ. ೨೮೫) ; ಕೊನೆಗೆ ಮಂತಕ್ಕಿ ಪುಠಾಣಿಗಳಿಂದ ಮಧ್ಯಾಹ್ನ ನೀಗಿಸುತ್ತಾ ಟಟ್ಟಕಡೆಗೆ ಅಖಂಡನಿರಾಹಾರವ್ರತವೇ . . . ಘಟಿಸಹತ್ತಿತ್ತು (ಪೋಜೀಪ. ೫). **ಪುಟಾಣ್ಕಿ :** ೧. ತೆಂಗಿನಕಾಯಿ ಚಟ್ಣಿ ಮಾಡುವಾಗ ಸ್ವಲ್ಪ ಪುಟಾಣಿಯನ್ನು ಹಾಕಿದರೆ ಚೆನ್ನಾಗಿರುತ್ತದೆ (ರೂಢಿ). ೨. ಬಟ್ಟೆಯ ಮೇಲೆ ಕಡಲೆಯಾಕಾರದಲ್ಲಿ ನೇಯ್ದಿರುವ ನೇಯ್ಗೆ : ಅವಳು ಪುಟಾಣಿ ಸೀರೆ ಉಟ್ಟಿದ್ದಾಳೆ (ರೂಢಿ). **ಪುಟ್ಟಣೆ:** ೨. ಬಟ್ಟಕುಂಚೆಯೊರ್ವ ಸತಿ ಪುಟ್ಟಣೆಯು ರವಿಕೆಯನು ತೊಟ್ಟು ಕಾಲಿನೊಳವಳು ಪಟ್ಟೆಸೀರೆಯನು ಪೊದೆದು ಬೆನ್ನೊಳು ನೃಪನ ಮುದವ ನೋಡುವ ಭರದಿ ಪದಗಿ ಮಾರ್ಗದಿ ಬರಲು (ಹಮುಕ. ೨೪೫).

**ಪುಠಾಣಿ ತಿಂದು ಬಿಡು** = (ಆಲಂ) ಆಸೆಯನ್ನು ಬಿಡು : ಊರು ಬಿಟ್ಟು ಹೋದ ಉಡಾಳ ತಮ್ಮನು ತಮ್ಮ ಪಾಲಿಗೆ ಸತ್ತನೆಂದು ಅವರಿಬ್ಬರೂ ದಂಪತಿಗಳು ಪುಠಾಣಿ ತಿಂದು ಬಿಟ್ಟಿದ್ದರು (ಬಿಟ್ಟಿಹೊ. ೪೫).

[←ಮರಾ. ಫುಟಾಣಾ]

**ಪುಡಪುಡ** (ನಾ). ಸುಡುವುದನ್ನು ಸೂಚಿಸುವ ಒಂದು ಅನುಕರಣಪದ: 'ಪುಡಪುಡನೆ' ಪರಾ.

**ಪುಡಪುಡನೆ** (ಅ). ಪುಡಪುಡ ಎಂದು : ಸಂಗತಧೂಮಾವಳಿಯನಿಭಂಗಳೆಗೆತ್ತೊಳಜು ಪಾಯ್ದು ಪೊಗೆ ಪುಗೆ ಕಣ್ಣಂ ಸಿಂಗಂಗಳುರೆ ಗರ್ಜಿಸಿ ಲಂಗಿಸಿ ಪುಡಪುಡನೆ ಪುಟ್ಟಿ ಸತ್ತುವು ಪಲವುಂ (ಶಂಶಪಾ. ೫-೪೨).

[ಪುಡಪುಡ + –ಅನೆ$_1$]

**ಪುಡವಿ** 'ಪೃಥುವಿ' ನೋ.

**ಪುಡವಿಪ** 'ಪೊಡವಿಪ' ನೋ.

**ಪುಡಾರಿ** 'ಪುಢಾರಿ' ನೋ.

**ಪುಡಿ, ಹುಡಿ** (ನಾ). ೧. ಹಿಟ್ಟು ; ಚೂರ್ಣ : ಬದ್ದವಣದ ಪುಡಿಪೊಲ್ ಬೆನ್ನೊಳ್ ಬಿಡದಲುಗೆ ಕುಸುಮಕುಳರಜಂ (ಆದಿಪು. ೭-೭೩) ; ಪುಡಿಯ ಕತ್ತುರಿ ಕುಂಕುಮಕಪ್ಪುರವುಡಿ ಬಿಡುಮುತ್ತು ಪಾಣಿಗದೊಡನೆ ಹಿಡಿಹೊನ್ನ ಸೂಜೆಯ ಬಿಟ್ಟುರಿಕ್ಕಲವಂಗಡಿಗರತೀವವೋಪದಲಿ (ಪೋಹಶ. ೪೨-೨೮); ಡಿ.ಡಿ.ಟಿ. ಡಬ್ಬಿಯಿಂದ ಪುಡಿಯನ್ನು ಸುತ್ತಲೂ ಚಿಮುಕಿಸಿ . . . ಪ್ಯಯನ್ನು ಚಾಚಿದೆನು (ಪಂಟಯ. ೯೮). ೨. ರವೆಯಂತೆ ತರಿತರಿಯಾದ ಹಿಟ್ಟು; ತರಿ: ಕುಡಿಬಿದಿರ ಕುಡಿಯ ಮಾವಿನ ಮಿಡಿಯ ಮಾತುಡಿನ ಮೆಣಸುಗಡಲೆಯ ಪುಡಿ[ಪಾಠಾಂ.ಳಿ]ಯೊಳಡಸಿದಲ್ಲವಲ್ಲಣೆಗೆಯ ಚಕ್ಕಣಂಗಳಂ ಸವಿಸವಿದು (ಶಂಶಪಾ. ೪-೬೭೪); ಕುಂಕುಮದ ಕತ್ತುರಿಯ ಪುಡಿಯಂ ಕನಕದ ಪುಡಿಯಿನಾಗ ಪಿಷ್ಟಾತಕವುಂ ಬಿಂಕದೆ ಕೆದಱಿಸುತಂ ನಡೆವಂ ಕವುತಂ (ಪಾರ್ಶ್ವಕ. ೩-೩೦); ಘಟ್ಟಿಮೆಣಸುಳ್ಳಿ ಮೊದಲಾದ ಸಂಭಾರಗಳನಿಟ್ಟು ತಾಳಿಸಿದ ಪುಡಿಗಳನದ[ಜ್ಕೊ]ಳು ತುಂಬಲಿಟ್ಟು (ಸೂಶಶಾ. ೪-೧೯). ೩. ಸಣ್ಣ ಮರಳಿನಂತೆ (ಉದುರಾಗಿರುವ) ಮಣ್ಣು : ಏಗೆಯ್ದುಂ ಪರೆದ ಪುಡಿಯೆಲ್ಲಮಂ ನೀರ್ ನೆರೆದು ಕೆಸರ್ಮಾಡದನ್ನೆಗಂ ನೆಲಸುಗುಮೇ (ಕಬಿರಾ. ೩-೦೩೦); ಆ ಬಾಲೆ ಕಾಯ್ದ ಪುಡಿಯೊಳಗೆ ಬಿಸುಟ್ಟೆಳವಾಟಿಯಂತೆ . . . ಬೇಟದೊಳ್ ಮಮ್ಮಲಮಱುಗುತ್ತಿರ್ದಳ್ (ಶಂಶಪಾ. ೫-೦೦೪); ದ್ರುಪದಾತ್ಮಜಾತನೋವದೆ ಪುಡಿಯೊಳ್ ಪೊರಳ್ಚಿ ತಲೆಯಂ ತೆಗೆವಲ್ಲಿ ಪಿನಾಕವೆತ್ತಪೋದುದೊ (ಗದಾಯು. ೪-೩೦); ಪುಡಿಯೊಳಗೆ ಪುಡಿಯ ಪುಡಿಯಾದೆನ್ ನಾಣ ಸುಡಿಯಾದೆನ್ (ಅಶ್ಮತ್ತಾ. ೦೭-೩೭೭). ೪. ನಸ್ಯ : ಬೀಡಿ ಕಟ್ಟುವವನೂ ಪುಡಿ (ನಸ್ಯ) ಸೇದುವವನು (ಪೂವಾದ. ೦೦೭). ೫. ಹೊಗೆಸೊಪ್ಪು : ಪುಡಿ ಕುಟ್ಟುವವನೂ ಬೀಡಿ ಬೇಡುವವನು (ಪೂವಾದ. ೦೦೭). **ಹುಡಿ :** ೧. ಕರಿಬೇವು ಬಡಗಸಂಡಗೆಯುಂಗು ಕಡಲೆವಿಟ್ಟರಿಸಿನದ ಹುಡಿ . . . ಮೆಂತೆಯದ ಚೂರ್ಣ ಹಪ್ಪಳು ಸಂಭಾರವಸ್ತುವಹವು (ಸೂಶಶಾ. ೪-೦). ೩. ಎನ್ನಿಂದಲೆ ಆಯಿತ್ತು ಎನ್ನಿಂದಲೆ ಹೋಯಿತ್ತು ಎಂಬವನ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಣ್ಬನೆ (ಬಸವ. ೨೨೫); ಇಟ್ಟೊರೆಸಿ ಹುಡಿಯುಲಿ ಹೂಳಿದನು ಕಿವ್ಮಾರದಾನವನ (ಕುವ್ಯಾಅ. ೧-೪೪); ಹುಡಿಯಲ್ಲಿ ಕಮಲ ಬೆಳೆದಂದು ಹೆಣ್ಣಿನ ನುಡಿಯ ನಂಬುವದು (ಸರ್ವಜ್ಞ. ೦೭೭೦) ೪. "ಹುಡಿ . . . ನಸ್ಯ, ನಾಸೀಪುಡಿ" (ಸಿಂಕೋ. ೫೩೦) ; ಕರಾವಳಿಯ ಜನ ನಶ್ಯವನ್ನು ಹುಡಿ ಎಂದು ಹೇಳುತ್ತಾರೆ (ರೂಢಿ).

**ಪುಡಿಪುಡಿ, ಪುಡಿಪುಡಿ, ಹುಡಿಹುಡಿ** (ದ್ವಿರುಕ್ತಿ) : ಅಂತಾತಂ . . . ನಡೆವ ತಳರ್ನಡೆಯೊಳ್ ಪುಡಿಪುಡಿಯಾದುವು ಶಿಲೆಗಳೊಡೆದು (ಶುಶಪಾ. ೨-೫) ; ಕೆಡೆವ ಭಟಬ್ರ್ಯಟಾಂತ್ರವೃತ್ತದಿಂದಮುರುಳ್ವ ಹಯುಂ ಹಯಾಳಿಯಿಂ ಪುಡಿಪುಡಿಯಾಗೆ ಮೆಟ್ಟುವ ಗಜಂ( ಎಕ. VIII, ಸೊರಬ. ೦೮೪-೯ ; 1033) ; ಬಸ್ಸಿನ ನುಗ್ಗಾಟದಲ್ಲಿ ಬಳೆಗಳೆಲ್ಲಾ ಪುಡಿಪುಡಿಯಾದುವು (ರೂಢಿ) ; ಕಾಯವನುರುಹಿ ಹುಡಿಹುಡಿ ಮಾಡಿ ಬಿಱು ಗಾಳಿಯುಲಿ ಚೆಲ್ಲು (ಬಸಕೃ. ೪೫-೩೦) ; ರಥಕುಳವೆಲ್ಲ ಹುಡಿಹುಡಿ ಪಾಯದಳ ನಿರ್ನಾಮವಾಯ್ತು (ಕುವ್ಯಾಭೀ. ೭-೨). **ಪುಡಿ ಮಾಡು, ಹುಡಿ ಮಾಡು** = ೧. ಹಿಟ್ಟಾಗುವಂತೆ ನುರಿಸು : ಪುಡಿ ಮಾಡಿದ ಉಪ್ಪು ಪ್ಯಾಕೆಟ್ಟುಗಳಲ್ಲಿ ದೊರೆಯುತ್ತದೆ (ರೂಢಿ). ೨. ಧ್ವಂಸಮಾಡು : ಪುಷ್ಪಶರನಂ ಹುಡಿ ಮಾಡಿದ ವಿರೂಪಾಕ್ಷ (ಮುಡಿಗ. ೬) ; ಹುಡಿ ಮಾಡಿದನು ರಥವ (ಕುವ್ಯಾಭೀ. ೬-೪೬). **ಪುಡಿಯಾಗು, ಹುಡಿಯಾಗು** = ನುರಿದು ಹಿಟ್ಟಾಗಂ : ಒತ್ತಿ ಮೆಟ್ಟಿ ಪುಡಿಯಾಗಿರೆ ತಿನ್ನದೆ ಪೋಗಲೀವರೇ (ಧರ್ಮಾಮೃ. ೭-೦೫೪) ; ಮುನಿಗಳ ಧೈರ್ಯಭೂಮಿ ರಜಮಪ್ಪನೆಗಂ ಮನುಚೇತನಾದ್ರಿ ಭೋಂಕನೆ ಪುಡಿಯಪ್ಪಿನಂ . . . ರತೀಶನ ಚತುರಂಗಸೇನೆ ನಡೆದತ್ತು (ಗಿರಿಕ. ೮-೭) ; ಪಡೆಯ ಕಾಲ್ತುಳಿದಾಗ ಗಿಡು ಬಳ್ಳಿ ಪೆಮ್ಮರ ಪುಡಿಯಾಗೆ . . . ಚೆನ್ನಪಟ್ಟಣದ ಮುಂಗಡೆ ಬೀಡಿಳಿವನು (ಕಂಪಾ. ೧೨-೬) ; ಹುಡಿಯಾಗಲುರ್ವಿ ಪರ್ವತ ಸಪ್ತಶರಧಿಗಳಡಿಮಳಲಾಗೆ . . . ಮಹೇಶ್ವರ ಒಡಿದನು ಪರತ್ರಿಶೂಲವ (ಪೋಹಶ. ೩೯-೩೯). **ಪುಡಿಯಾಳು** = ಕೆಲಸಕ್ಕೆ ಬಾರದವನು ; ಅಪ್ರಯೋಜಕ : ಅವನೊಬ್ಬ ಪುಡಿಯಾಳು (ರೂಢಿ). **ಹುಡಿಯ ಮುಕ್ಕು** = ೧. ಮಣ್ಣು ತಿನ್ನು. ೨. (ಆಲಂ) ಹಾಳಾಗು ;

ಕಂಸನು ಪುಡಿಯು ಮುಕ್ಕುವನೆಂಬ ತೆಱದಿಂ ಮಡದಿ ದೇವಕಿ ಬಯಸಿ ಮಸ್ಸೆಂಬಳು (ಶಾಕ್ಯಶಾ. ೨೨-೬). ಪುಡಿ ಹಾರಿಸು ೧. ಧೂಳೆಬ್ಬಿಸು. ೨. (ಅಲಂ) ಧನವ್ಯಯ ಮಾಡಿ ಆಡಂಬರದಿಂದ ಕಾರ್ಯವನ್ನು ನಡೆಸು : ಗಮ್ಮತ್ತಿನಲ್ಲಿ ಮಂಮುವೆ ಪುಡಿ ಹಾರಿಸಿ ನಮ್ಮ ಬಿಡಾರದಿಂದ ನರಹುಳುವೂ ಬರಲಾರದು (ಹೊಸಸ್ಟೆ. ೬೮). ೩. ವ್ಯರ್ಥವೆಚ್ಚ ಮಾಡು; ಧಂಂದುವೆಚ್ಚ ಮಾಡು : ಅಚ್ಯುತನ ಕೈಯಲ್ಲಿ ಬಹಳ ದಮ್ಮಡಿಗಳು ಕುಣಿದಾಡುತ್ತಿರಲಿಲ್ಲ . . . ನಾಗರಾಜನಂತೆ ಬೀಡಾ ಸಿಗರೇಟುಗಳನ್ನು ಪುಡಿ ಹಾರಿಸಬೇಕೆಂಬ ಹಂಬಲವಿರಲಿಲ್ಲ (ಮುಂಗಿಯು. ೩).

[ ದೇ.॥ ತಮಿ. ಮಲ. ಪೊಟಿ ; ತುಳು. ಕೊಡ. ತೆಲು. ಪೊಡಿ ]

**ಪುಡಿಕಾಸು** ' ಪುಡಿಗಾಸು ' ನೋ.

**ಪುಡಿಕೆ,** ಪುಟ್ಟಿಕೆ, ಪುಟ್ಟಿಗೆ$_1$, ಪುಡುಕೆ, ಬಂಡಿಗೆ, ಬುಡುಕೆ, ಹುಡುಕೆ (ನಾ). ೧. ಕರಂಡ ; ಭರಣಿ ; ಡಬ್ಬಿ : ತಲೆದೆಸೆಯೊಳಿರಿಸಿರ್ದ ಪುಡಿಕೆಯಂ ತೆಱೆದು ಹಾರವಂ ಕೊಂಡರಮನೆಯಿಂ ಪೊಱಮಟ್ಟು ಪೋಗಿ (ವಡ್ಡಾರಾ. ೦೩೬-೦೨) ; ಆ ಕಳ್ಳರ್ . . . ಪೊನ್ನ ಪುಡಿಕೆಯುಮಂ ನುಂಗುರಮುಮಂ ಬಟಪವುಮುಮಂ ಅಲ್ಲಿ ಪಟ್ಟಿರ್ದ ಭಟ್ಟನ ಮುಂದೆ ತಂದಿಕ್ಕಿ (ಕಂಪಕಂ. ೨೩೨ ೬) ; ತರವೇಟ್ಬಂಬೀಗೊಳ್ಬನೆಡಭಂಡಾರದ ಪುಡಿಕೆಗಳಂ (ಕಾವ್ಯಾವ. ೨೮೯). ೨. ಪೊಟ್ಟಣ : ಪುಷ್ಪದಾಭರಣವ ಪುಡಿಕೆಯೊಳಗೆ ತಂದು ಒಪ್ಪಿಸಿದರು ಜಿನಗವರು (ಅನಂತ. ೯-೬೫) ; ರಾಜೇಶ . . . ಪುಡಿಕೆಯನ್ನು ಬಿಚ್ಚಿ ಅಪಳೆಡೆಗೆ ಹಿಡಿದ (ಸ್ವಪ್ನದ. ೦೯೯) ; ಖಾದರನು ಕೈಚೀಲದಲ್ಲಿ ಪೇಡೆಯ ಪುಡಿಕೆಗಳನ್ನು ತಂದಿಟ್ಟನು (ಮುಕ್ತ್ಯರ. ೦೬೭). ೩. ಕಂತೆ ; ಸಿವುಡು; ಪಿಂಡಿ : ಪರತಪಮಂ ಕಸವೆಂದಾ ಪುರಾಣಮಂ ಪುಸಿಯ ಪುಡಿಕೆಯೆಂದಂ ದವರಾಪ್ಪರೆ ಅಕ್ಕರೆಯು ಬಗೆವನೆ ನಿರುತಂ ದರ್ಶನಿಕನಪ್ಪನಲ್ಲದನಲ್ಲಂ (ಸಮಪ. ೪-೨೫೮) ; ೨೫೦ ಸೂಜಿಗಳೆಗೊಂದರಂತೆ ಪುಡಿಕೆಗಳನ್ನು ಕಟ್ಟುವನು (ಮುಂಬಯಿ. ೧-೦೫೩) ; ಅವನ ಪೆಟ್ಟಿಗೆಯಲ್ಲಿ ಎರಡು ಪುಡಿಕೆ ಪತ್ರಗಳಿದ್ದವು (ಇಕ್ಕ್. ೩೮೭). **ಪುಟ್ಟಿಕೆ :** ೧. ಹೊಸ ಪುಟ್ಟಿಕೆಯಲ್ಲಿ ಒಂದು ವಡೆ ಮಾತ್ರ ಬಿಗಿಸಿ ಮಂಟ್ಟಿಟ್ಟು (ಕಥಾಮಂ. IV, ೮೩). **ಪುಟ್ಟಿಗೆ$_1$ :** ೧. ' ಪೂಪುಟ್ಟಿಗೆ ' ಪರಾ. ೪. ದೊನ್ನೆ ; ಎಲೆವಟ್ಟಲು : ' ಪತ್ರಪುಟ್ಟಿಗೆ ' ಪರಾ. **ಪುಡುಕೆ :** ೧. ದೇಹವುಂಂ ಧಾತುಗಳ ಪುಡುಕೆ ವಿದ್ಯುಲ್ಲತಾಸಂಚಳಂ ಜೀವನು (ವಲ್ಲಕೃ. ೯-೭೭) ; ಮರಕತದ ಪುಡುಕೆಯಲಿರ್ಪ್ಪದ ಸಿರಿರತುನಗಳ ಕಿ ವಿ (ಶಾಕ್ಯಶಾ. ೩೦-೦೯). ೩. ಅವನ ಜೇಬಿನಲ್ಲಿ ಯಾವಾಗಲೂ ನೋಟಿನ ಪುಡುಕೆಗಳಿರುತ್ತಿದ್ದವು (ರಕ್ತರ್ಕ. ೯೩). **೫.** ಪೆಟ್ಟಿಗೆ; ಸಂದೂಕ : ಭಂಡಾರದ ಮನೆಯೊಳ್ ಕನ್ನಮಿಕ್ಕಿಸಿ ಭಂಡಾರದ ಪುಡುಕೆಗಳಂ ಪೋಟ್ಟು [ದ್ರ]ವ್ಯಮುಮಂ ಪೊನ್ನುಂ ತುಡುಗೆಗಳುಮಂ . . . ಕೊಂಡು ಪೋಗಿ (ವಡ್ಡಾರಾ. ೦೬೭-೪); ಪುಡುಕೆಯು ಪೊಂಗಳಾರೊಡನೆ ಭೂತಳಮಾರೊಡನೆ . . . ವಿಭೂತಿಯಾರೊಡನೆ ಪೋದುವು (ಅಕಪು. ೨-೦೦೩). ೬. ಬುಟ್ಟಿ ; ಹೇಳಿಗೆ : ಉಡಿಯದ ಪಾಟ್ಟುನೆಯಿಲ್ಲಂ ಪಿಡಿದುರ್ಚುವ ತೆಱದಿನುರ್ಚಿ ರಿಪುಗಜರದಮಂ ಸಿಡಿಲಡಸಿ ಪೊಡೆದ ಜಂತ್ರದ ಪುಡುಕೆಯೊಳಿರೆ ಪೊಡೆವೆನಹಿತರಥಸಂಕುಳಮಂ (ಪರ್ವಪು. ೭-೩೦). **ಬುಡಿಗೆ :** ೭. ಕಂಡಿಕೆ ; ಮಂಡಿಕೆಗಳನ್ನೆಲ್ಲಾ ಮಾರಿಕೊಂಡು ಬುಡಿಗೆ ತುಂಬಿಸಬೇಕೆಂದು ಎಣಿಸಿಕೊಂಡೆಯೋ (ಕಥಾಮಂ. IV, 22). **ಬುಡುಕೆ. ಹುಡುಕೆ :** ೮. ನೆಲೆ ; ಆಶ್ರಯ : ಹಲವು ಹಡಿಕೆಯ ಹುಡುಕೆ ಕೀಳಿದು ಹೊಲಸಿನಾಲಯ (ಕವಿತ. III, ೨೪೪ ಸುಜ್ಞಾನಜಂಜಾವತಿ).

· **ಪುಡುಕೆಯ ಮೊಲ, ಬುಡುಕೆಯ ಮೊಲ**=ಅತ್ತಿತ್ತ ಹೋಗಲಾಗದೆ ಬುಟ್ಟಿಯಲ್ಲೇ ತೊಳಲುತ್ತಿರುವ ಮೊಲ : ಪುಡು[ಪಾಠಾಂ. ಡಿ]ಕೆಯ ಮೊಲನಂತೆ ತುಂಬುತಿರ್ಪರ್ಪರ್ಗೆವರ್ (ಶಾಪುಂಪು. ೯) ; ನಿನ್ನ ಕೂರಸಿಯೆಂಬೀ ಪಡೆವಾತುಗಳ್ದು ಗೋಣುಗ ಪುಡುಕೆಯ ಮೊಲದಂತೆ . . . ಇರ್ಪರ್ ಮಾತೆಪರ್ (ಎಕ. VIII, ಸಾಗರ. ೦೦೯-೦೯ 1042) ; ತೊಡರಲ್ಕಣ್ಮದೆ ಕೆಮ್ಮನೆ ಬುಡುಕೆಯ ಮೊಲದಂತೆ[ ಮೊಲನಂತೆ] ತುಂಬುತಿರ್ಪರನೇಕರುಂ ತೊಡೆತಾಗಿ ದಮ್ಮಟ್ಟರಯ್ಯರುವೊಡನೆನ್ನಯ್ಯುಂ ಬೆರಲ್ಗೆ ನೆರೆದೊಡೆ ಸಾಲ್ಗುಂ (ಶಾಂತಂ. ೦೦-೨೧). [ <ಸಂ. ಪುಟಕಾ./ತೆಲು. ಬುಡಿಗ, ಬುಡಿಗೆ ]

**ಪುಡಿಖರ್ಚು** (ನಾ). ಚಿಲ್ಲರೆವೆಚ್ಚ ; ಚಿಕ್ಕಪುಟ್ಟ ಮೇಲುಖರ್ಚು : ಪುಡಿಖರ್ಚಿಗಾಗಿ ಇಪ್ಪತ್ತುರೂಪಾಯಿಗಳನ್ನೂ ಹತ್ತಿರವಿಟ್ಟುಕೊಂಡನು (ಮುನಿವಾ. ೯೮). [ ಪುಡಿ + ಖರ್ಚು (<ಖರ್ಚ್) ]

**ಪುಡಿಗತ್ತುರಿ** (ನಾ). ಕಸ್ತೂರಿಯ ಹುಡಿ ; ಕಸ್ತೂರೀಚೂರ್ಣ : ಪುಡಿಗತ್ತುರಿಯಂ ತಲೆಯೊಳ್ ತೀವೆ ಪೊಯ್ಯು... ನೆಱೆಯೆ ಕೆಯ್ಗೆಯ್ದು ಬಂದು (ಶಂಕಶಾ. ೧೨-೦೦೮ ವ); ಕಚಾವಳಿಗಳಂ ಬಗಿಬಗಿದು ಪುಡಿಗತ್ತುರಿಯ ನೆಯ್ದೆ ತಳಿದು . . . ಬಲ್ಮುಱಂಬಂ ನಿವಿರ್ಚಿ (ಕರ್ನಾಶಾ. ೩-೪೪).

[ ಪುಡಿ + ಕತ್ತುರಿ ]

**ಪುಡಿಗಪ್ಪುರ, ಪುಡಿಗರ್ಪೂರ** (ನಾ). ಕರ್ಪೂರದ ಹುಡಿ,-ಚೂರ್ಣ : ಒಸಿಕೆ ವಾಡಿನ ತಾಳಕ್ಕೆ ಕುಣುಕಿದ ಪುಡಿಗಪ್ಪುರದ ಕೈರದಂಬುಲವನ್ನು...ಆ ನಿನ್ನ ಚೋಡಬಾಯ್ಗೆ ಮೆಲ್ಲಮೆಲ್ಲಗೆ ಊಡಿ (ಮಂತ್ರಶ. ೭೦-೦೭). **ಪುಡಿಗರ್ಪೂರ :** ಪುಡಿಗರ್ಪೂರಂಬೊರೆದ ಚೆಂದುಟಿಯ ಕುಂಕುಮಂದೊಡೆವ ಪೆರ್ದೊಲೆಯ . . . ವಿಲಾಸಿನಿಯರೆಲ್ಲಂದರು (ಸೌಂದಪು. ೭-೪೧).

[ ಪುಡಿ + ಕಪ್ಪುರ ]

**ಪುಡಿಗರ್ಪೂರ** ' ಪುಡಿಗಪ್ಪುರ ' ನೋ.

**ಪುಡಿಗಾಸು, ಪುಡಿಕಾಸು** (ನಾ). ಚಿಲ್ಲರೆ ನಾಣ್ಯ : ತನ್ನ ಹತ್ತಿರ ಪುಡಿಗಾಸೂ ಇಲ್ಲವಲ್ಲಾ (ಸ್ವಾಮಿಸ್ವೇ. ೭೪); ಕಷ್ಟಪಟ್ಟು ಸಂಪಾದಿಸಿದ್ದ ಪುಡಿಗಾಸನ್ನು ಖರ್ಚುಮಾಡಿಯಾಗಿತ್ತು (ಜಾಗೀರ. ೨). **ಪುಡಿಕಾಸು :** ನಾಲ್ಕಾರು ತಿಂಗಳು ಕೈಯಲ್ಲಿ ಪುಡಿಕಾಸು ಓಡಾಡಿದಾಕ್ಷಣ 'ನಾನು ಪ್ರಬುದ್ಧ' ... ಎಂದು ನೀನು ಭಾವಿಸಿದೆಯೇನು ? (ವಾತ್ಸಲ್ಯ. ೩೦೦) ; ಆದರೆ ಎಲ್ಲ ಯತ್ನಗಳೂ ಪರಿಚಯವಿದ್ದವರಿಂದೆಲ್ಲಾ ಪುಡಿಕಾಸು ಸಾಲ ಪಡೆಯು ವುದರಲ್ಲೇ ಮುಕ್ತಾಯವಾಗುತ್ತಿದ್ದುವು (ರಂಗವ. ೩೭).

[ ಪುಡಿ + ಕಾಸು$_2$ ]

**ಪುಡಿಗಿರಾಕಿ** (ನಾ). ಚಿಲ್ಲರೆ ಗಿರಾಕಿ; ಚಿಲ್ಲರೆಗ್ರಾಹಕ : ಈ ಅಂಗಡಿಕಾರನು ತನ್ನ ಸರಕುಗಳನ್ನು ದೊರಕಿಸುವುದು —ಇಡಿಯ ದರದ ಅಂಗಡಿಗಳಿಂದ ; ಆದರೆ ಅವುಗಳನ್ನು ಪೂರೈಸುವುದು ಪುಡಿಗಿರಾಕಿಗಳಿಗೆ (ಕಕ್ಕಾ. ೨೨).

[ ಪುಡಿ + ಗಿರಾಕಿ ]

**ಪುಡಿಗುಟ್ಟಿಸು** (ಕ್ರಿ). ಹಿಟ್ಟುಹಿಟ್ಟಾಗುವಂತೆ ಹೊಡೆಯಿಸು,— ಅರೆಯಿಸು : ಕಡಿದು ಕಿಱಿಕಿಱಿದನೆಲುವಂ ಪುಡಿಗುಟ್ಟಿಸಿ ತೊವಲನುಗಿದು ಕರುಳ ತೊಡಂಕಂ ಬಿಡಿಸಿ ನಡೆನೋಟ್ಟಿಂ (ಯಶೋಚ. ೪-೦೯).

[ ಪುಡಿಗುಟ್ಟು +— ಇಸು$_3$ ]

**ಪುಡಿಗುಟ್ಟು,** ಹುಡಿಗುಟ್ಟು (ಕ್ರಿ). ೧. ಕುಟ್ಟಿ ಪುಡಿಮಾಡು : ಆ ಚಿತ್ರರಥನಂದನೆಯ ಮದನಾನಲಂ . . . ಎಡವಱಿಯದೆ ಪುಡಿಗುಟ್ಟಿದ ಮುತ್ತಿನ ಮಳಲ್ಗೆ ದಱಿದ ಮಣಿಕುಟ್ಟಿಮದೊಳಂ ಮಾಣದೆ(ಕಾದಂಬ. ೩೨೭); ಕಾಳಂ ಜಜ್ಜುತೆ. . ಪುಡಿಗುಟ್ಟಿ ಕಾಸಿ ಪಿಱಿದಂ ಶ್ರೀಖಂಡಖಂಡಂಗಳಂ ನೋಳುಂ ತೈಲವನೀವ ಜಂತ್ರಗಡಣಂ ಲೆಕ್ಕಕ್ಕೆ ಲಕ್ಕಂಗಳೇ (ವೃಷಭಪು. ೩-೩೯). ೨. ನಾಶಗೊಳಿಸು ; ಧ್ವಂಸಮಾಡು : ಅನನ್ಯಪಾಳಂ . . . ಅಱಿಯಟ್ಟಿ ಕಟ್ಟಿದಿರೊಳಿಯ್ದದ ಕಂಟಕರದನ್ನ × × ತಾವಿನ್ನಿದಿ[ಜಾ] ಳಿಯೆಲ್ಲಮಂ ನಿಜಭುಜಾಗ್ರಾಳದಿಂ ಪುಡಿಗುಟ್ಟಿ ತೂಱಿದ (ಕಹ. V, ೦೪-೦೦; 1099); ಕೃಷ್ಣನು ತಾನಾಗಿ ಬಂದು ಬಾಣನ ಕೋಟೆಯನ್ನು ಪುಡಿಗುಟ್ಟುವ ನೆಂದು ತಿಳಿಸು! (ಗುರುಕೆ. ೦೦೩). **ಹುಡಿಗುಟ್ಟು :** ೧. ಮಾರನ ಗರ್ವವೆಂಬ ವರಪರ್ವತವಂ ಹು[ಪಾಠಾಂ. ಪು]ಡಿಗುಟ್ಟಿ ರಾಜಿತಾಚಾರವಿಶೇಷವೆಂಬ ಕುಲಿಶಾಯುಧದಿಂದೆತಪಃಪ್ರಭಾವವಂ ಧಾರಿಣಿಯೊಳ್ ಕರಂ ತಳೆದನುತ್ತಮ

ಭೂರಿಗುಣಾಭಿಶೋಭಿತಂ (ಶಾರಶ್ರೀ. ೧_೫೦) ; ನಿಜಗದೆಯಲಾತನ ರಥವ ಪುಡಿಗುಟ್ಟಿದನು (ಕುಮಾರ್ಸ್ವಾ. ೦೨_೧೯). ೨. ಧರೆಯ ಬೇಸಟಿನಳಿದು ದೋಷಮಂ ಪುಡಿಗುಟ್ಟಲೆಂದು ಪುಟ್ಟಿದ ನಿನ್ನ ನಾನಿಲ್ಲಿ ಮಡಗುವೆನೆ ಮಗನೆ (ಸಿದ್ಧರಾ. ೩-೧೬) ; ಹುಟ್ಟಿದ ದಿನವೇಳಟಿೂಳಗೆ ಷಣ್ಮುಖ ಪುಡಿಗುಟ್ಟಿದು ತಾರಕಾಸುರನ ನೆಟ್ಟನೆ ಮುಟಿದು ನಿರ್ಜರರಿಗೆ ಪಟ್ಟವ ಕಟ್ಟಿದ ಕತೆಯ ಕೇಳ್ದರಿಯಾ (ವೀರಶತ. ೦೨_೦೬). [ಪುಡಿ+ಕುಟ್ಟು$_1$]

**ಪುಡಿಗೂಡಿಸು,** ಹುಡಿಗೂಡಿಸು (ಕ್ರಿ). ನಾಶಗೊಳಿಸು ; ಧ್ವಂಸ ಮಾಡು : ಆ ಗುಡ್ಡವನ್ನು ತಮ್ಮ ಸ್ವಾಧೀನ ಮಾಡಿಕೊಂಡರೆ ಮೈಸೂರು ಸೇನೆಯನ್ನು ಪುಡಿಗೂಡಿಸುವುದು ಸುಲಭ (ಕದೀಶ. ೦೬೦). **ಹುಡಿಗೂಡಿಸು :** ಕೈಯಲ್ಲಿ ಕಾಸಿದ್ದರೆ ಹುಡುಗರು ಕೋತಿಯಂತೆ ಕಟ್ಟಾಣಿಯನ್ನೂ ಹುಡಿಗೂಡಿಸುವರು (ಪುಠುಪು. ೨೦) ; ತನ್ನ ಬಾಳು ಹುಡಿಗೂಡಿಸಲು ಅವಳನ್ನು ಪ್ರೇರೇಪಿಸಿದ್ದು ಇಂದಿನ ಸಮಾಜವಲ್ಲವೆ? (ಕಥ್ವಾಕ. ೦೮). [ಪುಡಿ+ಕೂಡಿಸು]

**ಪುಡಿಗೆಯ್,** ಪುಡಿಗೈ, ಹುಡಿಗೆಯ್, ಹಂಡಿಗೈ (ಕ್ರಿ). ೧. = ಪುಡಿಗುಟ್ಟು ೧: ಕಲ್ಪವೃಕ್ಷಮಂ ಕಡಿದರೇ . . . ಮಾಣಿಕವನು ಪುಡಿಗೆಯ್ದರೇ (ಕಂಪ್ರಿ. ೩೫_೨೪). **ಪುಡಿಗೈ :** ೨. = ಪುಡಿಗುಟ್ಟು ೨ : ವೀರಲಕ್ಷ್ಮಣನಿಸುವ ಕೂರಂಬನೆಲ್ಲಮಂ . . . ಧೀರನಹ ಸೀತಾಕುಮಾರಕಂ ಸಾಯಕದ ಸಾರದಿಂ ಪುಡಿಗೈದನು (ಕೈಪಿಚಿ. ೨೦_೩೯) ; ಗರುವ ತರುವರಕುಲಂ ಮೂಲಮಂ ಕಿರಿಪಿ ಮಿಾಂಟಿದವೋಲ್ ನೆಲಕ್ಕುರುಳಿದವು, ಪೊದರ್ ಗಿಡುಗಳಂ ಪುಡಿಗೈದು (ಚಿತ್ರಾಂಗ. ೪೬-೦೬೦೭). **ಹುಡಿಗೆಯ್ :** ೨. ಹೆಚ್ಚಿನ ಮರುಳಾಟದ ಮಟಿವಿಂ ಲೋಕಂಗಳನು ಹುಡಿಗೆಯ್ಯುತ್ತಿಹ ನರಸಿಂಹನ ಹಣೆಯಾ ಲಿಪಿ ತೊಡೆದಾ ವೀರೇಶನ ಲೀಲಾಕಥನವ ಪದವಿಡುವೆನು (ಬಿರೇಶ. ೧-೭). **ಹುಡಿಗೈ :** ೨. ವಿರಾಗಿಯರ್ಜುನನೆದೆಯ ಕೋಂಟೆಯಂ ಹುಡಿಗೈದ ಶೃಂಗಾರವೈತರಲಿ (ಚಿತ್ರಾಂಗ. ೨೯-೬೯೩). [ಪುಡಿ+ಕೆಯ್$_1$]

**ಪುಡಿಗೈ** 'ಪುಡಿಗೆಯ್' ನೋ.

**ಪುಡಿಚಂಡಿಕೆ** (ನಾ). ಕುರುಚಲುಕೂದಲು : ಚಿಕ್ಕ ಚಂಡಿಕೆ : ಅವನ ಪುಡಿಚಂಡಿಕೆಗಳು ತಲೆಯ ಮೇಲೆ ಹೋಚಿನ ಗಡ್ಡದಂತೆ ಹಾರಾಡುತ್ತಿದ್ದವು (ಸವತಿಶ. ೩೯೯). [ಪುಡಿ+ಚಂಡಿಕೆ$_1$ (<ಚಂಡಿಕೆ)]

**ಪುಡಿಚಟ್ನಿ** (ನಾ). ಕಡಲೆಬೇಳೆ, ಉದ್ದಿನ ಬೇಳೆ, ಮೆಣಸಿನಕಾಯಿ ಮೊದಲಾದುವನ್ನು ಹುರಿದು, ಕುಟ್ಟಿ, ವ್ಯಂಜನವಾಗಿ ಉಪಯೋಗಿಸುವ ಪುಡಿ : 'ಚಟ್ನಿಪುಡಿ' ಪರಾ. [ಪುಡಿ+ಚಟ್ನಿ (<ಚಟ್ನಿಣಿ)]

**ಪುಡಿದುಡ್ಡು** (ನಾ). = ಪುಡಿಗಾಸು : ಗೋಲಕದ ಪುಡಿದುಡ್ಡು ಇದೆಲ್ಲಾ ಸೂರಯ್ಯನಿಗೆ ದೊರೆಯುತ್ತಿತ್ತು (ಶೀತಿಶಂ. II. ೨೪); ಕೆಲವರು ತಮ್ಮಲ್ಲಿದ್ದ ಪುಡಿದುಡ್ಡುಗಳಿಗೆ ಎಣ್ಣೆಯನ್ನು ಕೊಂಡು ತಂದರು (ರಾಟಿಶ. ೨೨). [ಪುಡಿ+ದುಡ್ಡು$_1$]

**ಪುಡಿಯಾಟ,** ಹುಡಿಯಾಟ (ನಾ). ೧. ಧೂಳೆಬ್ಬಿಸುವ ಆಟ ; ಧೂಳಾಟ : ಪುಡಿಯಾಟವಮನಾಡಿ ಚರಾಚರಂಗಳಂ ಕರಿಮುರಿಯಪ್ಪಿನಂ ಪುರಿವ ಹಂಚುವೊಲಿರ್ದೆಳೆಯೊಳ್ ಕೃತಾಂತನೆಚ್ಚುರಿಗಣೆಯಂತೆ ಬಂದುದು ಲಯಾನಿಳಕಲ್ಪನಿದಾಘಜಾನಿಳಂ (?) (ಅರ್ಜನಿ. ೪-೩೪). **ಹುಡಿಯಾಟ :** ೨. ಧೂಳಿನಲ್ಲಿ ಆಡುವ ಆಟ ; ಮಣ್ಣಾಟ : ಮೊಲೆಹಾಲು ಕುಡಿದು ದಿನವೇಸು ತಂಗೆವ್ವ ಹುಡಿಯಾಟವಾಡಿ ದಿನವೇಸ (ಮೂಲಕಿರಾ. ೪೧-೮). [ಪುಡಿ + ಆಟ]

**ಪುಡಿಯಾಡು** (ಕ್ರಿ). ಧೂಳಿನಲ್ಲಿ ಆಡು ; ಮಣ್ಣಾಟವಾಡು : ಪುಡಿಯಾಡುವ ತೊದಲೊದವೆ ನುಡಿವ ನಗಿಸುವ ಬಾಲಕ್ರೀಡೆ ಮುರಾರಿಯ ಬಾಲಕ್ರೀಡೆಯನನುಕರಿಪುದಾದುದರಿಕೇಸರಿಯಾ (ಶಂಕಕಾ. ೨-೭). [ಪುಡಿ + ಆಡು$_1$]

**ಪುಡಿಯಿಡು** (ಕ್ರಿ). ಹೊಟ್ಟು ಹಾರು; ಹುರುಪು ಏಳು : ಪುಡಿಯಿಡುತ್ತುಂ. ವರಾಂಗಂ ಸುರುಳ್ದಿಕ್ಕುಂ . . . ಮುಖಂ ಕಂದಿ ಕುಂದಿಕ್ಕುಂ (ಕುಮಾ. ೦೦-೩). [ಪುಡಿ + ಇಡು$_1$]

**ಪುಡಿಯೇಳು,** ಹುಡಿಯೇಳು (ಕ್ರಿ). ೧. ನಾಶವಾಗು ; ಧ್ವಂಸಗೊಳ್ಳು: ತಲೆ ಸೀಳಾಗಿ ಮಿಡಿಸಿ ಸಿಂಗಾಡಿ ದೊಣೆಯುಂಬು ಪುಡಿಯೆದ್ದು ದಿಂಡುರುಳಿತಾ ಖಾನರಾಜಿ (ಕುವಕಾ. ೦೪-೭೪). **ಹುಡಿಯೇಳು :** ೨. ಪುಡಿಯಾಗು : ನಿಡಿಗಲ್ಲು ನಿಶಿತ ಹಾಸಟಿಗಲ್ಲು ಚೌಕದ ಬಡಿಗಲ್ಲು ಬಟುಗಲ್ಲು ಬೇಳೆ ತುಡುಕಿದ ವಜ್ರಮಾರ್ಗಣದಿಂದೆ ಶ್ರೀಕೃಷ್ಣ ಹುಡಿಯೇಳಲೆಚ್ಚು ಹಾಟಿಸಿದ (ಮೋಕಕ. ೪೦-೭೬). [ಪುಡಿ + ಏಳು$_1$ (< ಏಟು$_1$)]

**ಪುಡಿವಡು** (ಕ್ರಿ). = ಪುಡಿಯೇಳು ೨ : 'ಕರ್ಪೂರದ ಬಿಡುವೀಳೆಯ ದಂಬುಲ ವಿರಹಾಗ್ನಿಗೆ ಪುಡಿವಟ್ಟುದೇನ ಬಣ್ಣಿಸುವೆ (ಕಂಪಕಾ. ೪-೦೭೨). [ಪುಡಿ + ಪಡು$_1$]

**ಪುಡಿವಡೆ** (ಕ್ರಿ). ೧. = ಪುಡಿಯೇಳು ೧: ಅವನ ಮಾಯೆಯುಂ ತಡೆವರಿಲ್ಲಾ ಬಲಂ ಪುಡಿವಡೆದುದು (ಕೈಪಿಚಾ. ೪-೨೩). ೨. = ಪುಡಿಯೇಳು ೨ : ವ್ಯೆಗಳುಂ ಸೋಂಕಿ ಪುಡಿವಡೆದ ಕುಂಕುಮುಸುಗಂಧಾನುಲೇಪನದ ಚೂರ್ಣಂಗಳೋ . . . ಎಂಬಿನಂ . . . ಕೆಂಧೂಳಿ ಮುಸಗಿತಾಗ (ಕೈಪಿಚಾ. ೦೨-೭). [ಪುಡಿ + ಪಡೆ$_1$]

**ಪುಡಿವಿಟ್ಟು** (ನಾ). ನುಣ್ಣಗಿರುವ ಹಿಟ್ಟು : ಪಸಿವಾಗೆ ಮುನ್ನಿನ ತೆಱದೊಳವ್ಯುತಾನ್ನವನು ಬೇಡಿ ಕುಡಲಾ ವನಿತೆ ಪುಡಿವಿಟ್ಟನೊಳು ಪಸಿದನಿಗೆ ನೀರ್ವೆರಸಿ ಪಾಲಿದೆಯೆನುತ್ತಿತ್ತಳು (ಶಾಂದಕಿ. ೪-೩೮). [ಪುಡಿ + ಪಿಟ್ಟು]

**ಪುಡಿವಿಡು** (ಕ್ರಿ). ೧. = ಪುಡಿಯೇಳು ೧: ಕದಡಿ ಪದಾತಿಘಟ್ಟನದ ಕೋಟಕ್ಕಿಸಟಾಗಿ ತುರಂಗಮಾಂಘ್ರಿಪಾತದೆ ಪುಡಿವಿಟ್ಟು ಕೂಡೆ ರಥಘಾತದೆ ತೀವಿ ಬಟಕ್ಕೆ ದಂಶಿದಾನದ ಕರಿದಾದುದಿಂತು ಯಮುನಾನದಿ ಕೆಮ್ಮನೆ ದೇಸೆಗಾಯ್ತು ಕರ್ಪಿದಟಿೂಳ್ (ಜಗಪ್ರ. ೦೬-೭೦). ೨. ನಿರ್ದ್ರವವಾಗು ; ಒಣಗು : ಕಡುಮಿಸಿಲೊಳಿರ್ದು ತಾಳುಗೆ ಪುಡಿವಿಡೆ ಮುಖಮೊಣಗೆ . . . ತುರಗಕೆ ತಾಳುರೋಗಂ ತೋರ್ಕುಂ (ಅಶ್ವಶಾ. ೦೪-೦). [ಪುಡಿ + ಬಿಡು$_1$]

**ಪುಡಿಸಕ್ಕರೆ** (ನಾ). ಹಿಟ್ಟಿನಂತೆ ನಯವಾದ ಸಕ್ಕರೆ : (೩). [ಪುಡಿ + ಸಕ್ಕರೆ]

**ಪುಡಿಹಣ** (ನಾ). = ಪುಡಿಗಾಸು : ಅವನು ಕೇಳಿದ ಪುಡಿಹಣಕ್ಕೆ ಅವಳೆಂದೂ ಅಡ್ಡಿಯಾಡಿರಲಿಲ್ಲ (ಸಿಹಿಬಿ. ೩೪). [ಪುಡಿ + ಹಣ (< ಪಣವು$_1$)]

**ಪುಡುಂಕು,** ಪುಡುಕು, ಹುಡುಕು$_1$ (ಕ್ರಿ). ೧. ಕೈಯಿಂದ ತಡಕಾಡು ; ತಡವರಿಸು : "ಪುಡುಕು, ಪುಡುಂಕು___ಕರಾನ್ವೇಷಣೇ" (ಶಮಂ). ೨. ಅರಸು ; ಶೋಧಿಸು : "ಪುಡುಂಕೆನಲ್ಪುಡುಕುವುದಕಪ್ಪುದು" (ಶಿಶ. ೬೬); ಐಕ್ಯಸವೇಡನೋರ್ವನುಟಿ ಬೇಂಟೆಯನಾಡಲೊಡಂ ಪುಡುಂಕಿ ಬಲ್‌ಪಕ್ಕಿಗಳಂದು ಸಿಕ್ಕಿದುವು (ಹಮ್ಮಿರ. ೪-೬೨) ; ಭೂಮಿಯೊಳುಂಟಾದ ಪಾರ್ಥಿವರೆಲ್ಲರಂ ಮೂಟೇಳ್ವೇಳೆ ಪುಡುಕಿ ಪುಡುಂಕಿ ಸಂಹಾರಂಗೆಯ್ದನೋ ಆ ಬಗೆಯ ಕ್ರೋಧಾತ್ಮಂಗೆ ಸಾಷ್ಟಾಂಗವಾಗಿ ನಮಸ್ಕಾರಂಗೆಯ್ದನು (ಭಾರತಾಂ. ೩೨೪-೪೭). **ಪುಡುಕು :** ೨. "ಪುಡುಕೆಂದು ಅಱಸುವುದು" (ಕಕಶಾ. ೬೮-೩೪೭); ತಡವಡಿಸಿ ಪುಡುಕಿ ಪಂಜಿನ ನಡುಬೀದಿಯೊಳಿರ್ದು ಮಱುಗುತಿರೆ ಕಂಡು (ಸುಕುಮಾ. ೪-೩೮) ; ಮತ್ತೊಮ್ಮೆ ತೊಳಲಿ ನೋಡುವೆನೆನುತ ಪುಡುಕಲುಜ್ಜುಗಗೊಂಡನು (ಪಂಪರಾ. ೩-೩-೦೬) ; ಮಡದಿ ಪಿಂದೆ ನಿನ್ನಂ ಪುಡುಕಿವರೆ ತೊಡಕಿ ಬಿಲ ಸೂರ್ದು ಸಂದೆಗಂಬಡೆ ಸಾರಿ ಪುತ್ರಿಮುಂದಿರಕ್ಕಿದ . . . ಬಂದೆ (ಶ್ರೀಣಾಪು. ೩-೩೬). **ಹುಡುಕು$_1$ :** ೧. ತಾನೊಡನೆ ಕರಯುಗದಿಂದೆ ಹುಡುಕುತ ಲಿಂಗಮೂರ್ತಿಯನಱಸುತವೆ ಮುನ್ನ

(ಶಶಿಪು. ೫೦-೬೮). ೨. "ಮೃಗಯುತೇ=ಹುಡುಕಿದವುದು" (ಶಾಶ್ವ. ೨೯೬); ಇರುವೆಗಳು ಯಾವಾಗಲೂ ಆಹಾರ ಹುಡುಕುತ್ತಿರುತ್ತವೆ(ಮುಂಜಾಯು. ೨-೮); ಆಚ್ಚರಿಯ ಬಟ್ಟೆಟ್ಟು ಹುಡುಕ ಹಚ್ಚದೆ ಬಾಳ ನೀಳಪಯಣದ ಹಾದಿ (ಹೊಂಡು. ೬೬-೯).

[ದೇ.॥ ತೆಲು. ಪುಡುಕು,' ಪುಣುಕು ; ಕೋಲಾ. ಪುಡ್ಕ್ = ಮುಟ್ಟು : ನಾಯ್ಕಿ. ಪುರ್ಕ್ = ಮುಟ್ಟು]

**ಪುದುಂಕುನೀರ್** 'ಪುಡಂಕುನೀರ್' ನೋ.

**ಪುದುಕು** 'ಪುಡುಂಕು' ನೋ.

**ಪುದುಕುನೀರ್, ಪುಡಂಕುನೀರ್, ಹುಡುಂಕುನೀರ್** (ನಾ). ಕುದಿಯುವ ನೀರು; ಸುಡುನೀರು: 'ಪುಡುಕುನೀರಟ್ಟು' ಪರಾ. **ಪುದುಂಕುನೀರ್**: ಒಡೆದು ಕಲಂಕಿ ಪಾಯ್ವ ಪದದೊಳ್ ಪದವೆತ್ತು ಪುಡುಂಕುನೀರನರ್ದಿ ದಳುಚಿ ಮೋದಿ ಮುಂದಲೆಗೆ ಪಾಯ್ದು ಪೊರಳ್ಚಿದಳ್ (ಲೀಲಾವ. ೦೫-೨೨). **ಹುಡುಕುನೀರ್** : ಅಡವಿಯ ಹೊಗಿಸಿತ್ತು, ಹುಡುಕುನೀರಲದ್ದಿತ್ತು... ಊರೊಳಗೆಲ್ಲ ಈ ಬೆಡಗಿನ ಮಾಯೆಯ ಬಡಿಹೋರಿಸಮಯಿಗಳ ನುಡಿಗೆ ನಾಚುವೆನು (ವಚನಾ. I. ೨೫೮-೦೬) ; ಮೂಡೆಗಟ್ಟಂ ಕಟ್ಟಿ ಹುಡುಕು ನೀರೊಳ್ ಮೆಟ್ಟಿ ಕಾಡುತಿಹ ಪಾಪಮರರ ಕೈವಿಡಿತೆಗೊಳ್ಳಗಾಗಿ ... ಪುಲ್ಲರ್ಚಿ ಕಂಟಕಂಬಡೆದವು (ಶಾವಚಂ. ೨-೮) ; ನಮ್ಮ ನಿಮ್ಮಂದಖಿಳಶುಭಪ್ರಯೋಜನ ವಿರಲು ನಿಮ್ಮುಮಂ ಸೀಳಿ ಪೋಳ್ಗಿದು ಕುದಿಸುತ್ತಿಹರು ತಮ್ಮ ಮೂಗರಿದು ಮುಡಿಗಟ್ಟುತ್ತ ಹುಡುಕುನೀರೊಳಗದ್ದಿ ಬಳಲಿಸುತಿರೆ ಹೆಮ್ಮೆಯುಳಿದೀ ಲೋಕದೊಳಗಿಹುದೆ ಕಷ್ಟವೆಂದುಂ ಮುಳಿದು ಸ್ವರ್ಗಕೆ ಪರಿದು ಪೋಗುವ ತೆರದಿ ನೆಮ್ಮಿ ಗಗನವ ತುಡುಕಿ ಪುನ್ನಾಗ ನಾಗವಳ್ಳಿಯ ಪೊಲಂ ಕಂಗೆಸೆದುವು (ಪಪಪೋ. ೯-೩೦). **P** "ಪಂಪನ ಪದ್ಯದಲ್ಲಿರುವ 'ಪುಡಪುಡನೆ' ಎಂಬ ಶಬ್ದ ಪುಡು ಎಂಬ ಮೂಲಧಾತುವಿದ್ದಿರ ಬೇಕೆಂಬುದನ್ನು ವಿಶದಗೊಳಿಸುತ್ತದೆ. ಇದರಿಂದಲೇ 'ಪುಡಂಕು' ಎಂಬ ಧಾತು ಬಂದು ಕುದಿ, ಬೇಯು ಎಂಬರ್ಥವನ್ನು ಪಡೆದಿರ ಬೇಕೆಂದು ಅರಿವಾಗುತ್ತದೆ. ಪುಡಂಕುನೀರ್ ಎಂದರೆ ಕುದಿನೀರು, ಬಿಸಿನೀರು, ಸುಡುನೀರು ಎಂದರ್ಥ" (ಕಪ್ರಾಪಿ. ೦೬).

[< ಪುಟ್ಟು + ನೀರ್]

**ಪುದುಕುನೀರದರ್ಜು** 'ಪುಡುಕುನೀರಟ್ಟು' ನೋ.

**ಪುದುಕುನೀರಟ್ಟು, ಪುಡುಕುನೀರದರ್ಜು, ಹುಡುಕುನೀರದ್ದು** (ಕ್ರಿ). ಕುದಿಯುವ ನೀರಿನಲ್ಲಿ ಮುಳುಗಿಸು; ಬಿಸಿನೀರಿನಲ್ಲಿ ಅದ್ದು : ಸಮುದ್ರದೊಳ್ ಮಹಾಪಾತಕದ ಮೊದಲೊಳಿಕ್ಕಿ ಪುಡುಕುನೀರಟ್ಟು [ಪಾಠಾಂ. ದರ್ಜು] ತ್ತುಂ ಪಿರಿದುಂ ಬೇಗಂ ದುಃಖಮನೆಯ್ದಿಸಿ ಕಾಡಿ ಕೊಲೆ (ವಡ್ಡಾರಾ. ೦೯೩-೦೨) ; ಮುಳಿಸಿನಿಗೆ ಪಾಳವೇಶನ ಒಳವೆಲ್ಲಮನುಯ್ದು ಪುಡುಕುನೀರಟ್ಟುವೆಂ (ರಘುಪ್ಯ. ೯-೨೯೩). **ಪುದುಕುನೀರದರ್ಜು** : ಪುಡುಕುನೀರದರ್ದೆ [ಪಾಠಾಂ. ನೀರೊಳದರ್ದೆ] ಯುಂ ಪುಟಪಾಕಂ ಸುಡೆಯುಂ (ಅಜಪು. ೦೦-೦೦ ವ): ಕಡುಸೀಜು ಜಂತ್ರದಂಚಿಯನಡಿಗಡಿಗಾ ನೀರೊಳರ್ದಿದಳ್ ನಡೆವೆಡೆಯೊಳ್ ಗಡ ನಾಣ್ಚದೆ ಪುರುಡಿಪುದೆನ್ನೊಡನೆಂದುಯ್ದಲ್ಲಿ ಪುಡುಕು ನೀರದರ್ಜುವವೊಲ್ (ಮಲ್ಲಿಪು. ೬-೦೦೦) ; ಕೇಸರಿಗಳಂ ಪಿಡಿದು ಪುಡುಕು [ಪಾಠಾಂ. ಡಿತೆ]ನೀರದರ್ಜು[ಪಾಠಾಂ. ನೀರೊಳಟ್ಟು]ವಂತೆ . . . ಸುಚಿ ಗೊಂಡದರ್ಜುವ ಸುಚಿಗಳೊಳಂ (ಲೀಲಾವ. ೮-೧೯ ವ). **ಹುಡುಕುನೀರದ್ದು** : ಶಿವನಂ ನೆನೆಯುತಿಡೆಯೊಳನ್ಯಾಯಮುಮಂ ಮಾಡಿ ಮತ್ತಂ ನೆನೆಯುತಿರ್ದೊಡಾ ಶಿವನ ನಾಮಂ ಹುಡುಕುನೀರದ್ದದಿಹುದೇ (ಸಿದ್ಧರಾ. ೬-೦೮) ; ಸುಡುವೆ ಲಂಕೆಯ ಸಹಿತವೆಲ್ಲರ ಹುಡುಕುನೀರದ್ದುವೆನು (ತೊರೆರಾ. ೯-೩೦); ಗಂಗೆಯ ನಡುಗಡಲಲೀಕ್ಷಣನೆ ಖಳರನು ಹುಡುಕುನೀರದ್ದುವೆನು ಕೌರವ ಕುನ್ನಿಗಳನು (ಶಿವಾಗ. ೦೦-೬೩-೩೭). [ಪುಡುಕುನೀರ್ + ಅಟ್ಟು]

**ಪುದುಕೆ** 'ಪುಡಿಕೆ' ನೋ.

**ಪುದುಕೆಗಟ್ಟಿಸು** (ಕ್ರಿ). (ಆಲಂ) ಗಂಟು ಕಟ್ಟಿಕೊಂಡು ಓಡಿ ಹೋಗು ವಂತೆ ಮಾಡು ; ಎತ್ತಂಗಡಿ ಮಾಡಿಸು : ಮಾಳವಮೋಳುವಮಂ ಪುಡುಕೆಗಟ್ಟಿಸಿದತ್ತಜಿಯಟ್ಟಿ ಚೇರನುಂ ಚೋಳನುಮಂ ಸಮುದ್ರ ದೊಳಗದ್ದಿರ್ದುದು . . . ತೇಜದುಬ್ಬು (ಎಕ. VII, ಶಿಕಾ. ೦೪೩-೦೬ : 1019). [ಪುಡುಕೆ (< ಪುಡಿಕೆ) + ಕಟ್ಟಿಸು]

Δ **ಪುದುಗ** 'ಹುಡುಗ' ನೋ.

**ಪುದುತಕೇಶ, ಪುಡ್ತಕೇಶ** (ನಾ). ಪೋರ್ಚುಗಲ್ಲು ದೇಶದವನು : ತಾವು ಪರಾಯ ತಾಲ್ಲೂಕು ಪುಡುತಕೇಶನ ಆಶ್ರಯದಲ್ಲಿ ಇದ್ದೀರಿ(ರಾಜೇಂದ್ರ. ೨೦೦). **ಪುಡ್ತಕೇಶ** : ಗೋವೆ ಪುಡ್ತಕೇಶ ಪಾವಂದ ಗವರ್‌ನರ ಹೆಸರಿಗೆ ಒಂದು ತಾಕೀತಿ ಆದರೆ ಆ ಅರಸುಗಳು ಇಲ್ಲಿಗೆ ಬಂದು ತಲಪ್ಪಾರು (ರಾಜೇಂದ್ರ. ೨೦೩). 'ಪೋರ್ಚುಗೀಸ್' ಪರಾ.

[←ಇಂ. Portuguese /ತೆಲು. ಬುಡುತಕೀಚು]

**ಪುದುಪುದನೆ** (ಅ). ಪುಡುಪುಡು ಎಂದು : ಸಿಂಧುನಂದನನ ಕೋಪಶಿಖಿ ಶಿಖಾಳಾಪಂಗಳೊಳ್ ಪುಡುಪುಡನಟ್ಟಿ ಸಾಯಲೆಂದು ಪಾಯ್ವ ಪತಂಗಂಗಳಂತೆ ಸೋಮಕ ಶ್ರೀಜಯಪ್ರಮುಖನಾಯಕರೊದಕ್ಕೋಹಿಣೀ ಬಲಂಬೆರಸು ಭರಂಗೆಯ್ದಾಂತೊಡೆ (ಪಂಪಭಾ. ೧೦-೩೯ ವ); ಎನ್ನ ಮಕ್ಕಳು ಮಾನುಂ ದುಃಖಾಗ್ನಿಯೊಳ್ ಪುಡುಪುಡನೆ ಪುರ್ಗಿ ನಮೆವ ಪಾಪದ ಫಲಮಂ ನೀನವೋಘಮುಣ್ಬೆ (ಸುಕುಮಾ. ೫-೭ ವ). [ಪುಡುಪುಡು + — ಅನೆ$_1$]

**ಪುದುಪುದು** (ನಾ). ಒಂದು ಅನುಕರಣಪದ : ನಡನಡನಡುಗಿ ಮಿಡು ಮಿಡುಮಿಡುಕಿ ಪುಡುಪುಡು ಪುಗ್ಗಿ . . . ಪುಯ್ಯಲಿಡುತ್ತುಂ (ಅಜಪು. ೦೦-೦೦ ವ).

**ಪುಡೆ** (ಅ). ಸ್ಪಷ್ಟವಾಗಿ ; ನಿಶ್ಚಿತವಾಗಿ : ಚಂಡಿಮಯ್ಯಂಗೆ ಶ್ರೀವನಿತೆಗೆ ತಾನಾಗಿ ಶ್ರೀವಿಶಾಲನೆ ಪುಟ್ಟುವಂತೆ ಪುಡೆ ಪುಟ್ಟಿದಂ ಚಾವು[ಂ]ಡ (ಕಇಕ. ೦೦-೯-೯೭ ; ಸು. 1093).

[< ಪ್ರಾ. ಪುಡ./ಸಂ. ಸ್ಫುಟ./ತಮಿ. ಪುಟ್ಟೈ=ವ್ಯಕ್ತವಾಗು]

**ಪುಡೆಯ** 'ಪುಡೆಹ' ನೋ.

**ಪುಡೆಹ, ಪುಡೆಯ** (ನಾ). ಹಲಸು, ಕುಂಬಳ, ನೆಲ್ಲಿಕಾಯಿ ಮೊದಲಾದುವುಗಳಿಂದ ತಯಾರಿಸುವ ಒಂದು ಬಗೆಯ ಮೇಲೋಗರ : ಕಡುಮೆತ್ತನುಕ್ಕರಿಸಿಕೊಂಡ ಹಲಸಿನ ಕಾಯಿ ಕಡಲೆ ಯುಂದದೊಳು ಕತ್ತರಿಸಿಯುಪ್ಪಿಂಗು ಹುಳಿಯೊಡನೆ ತುಪ್ಪವನೆಚಿದು ತಾಳಿಸಿಯುಪರೆಯಂತೆ ಕತ್ತರಿಸಿ ಬಲಿದ ಹಾಲ ಬಡಗಸುಡಗೆಯುಳ್ಳ ತೆಂಗಾಯಿ ಶುಂಠಿಗಳ ಹುಡಿಯಿವೆಲ್ಲವನು ತುಪ್ಪದಿ ಹುರಿದು ಹದಮೆಣಸ ಜಿಡಿದ ಮೊಸರೊಳೆಲಸಿ ತುಪ್ಪದೊಳಗಟ್ಟುವೊಗ್ಗರಿಸಿ ಪುಡೆಹ[ಪಾಠಾ. ಡಿಯ]ವ ಮಾಳ್ಪುದು (ಸೂಪಶಾ. ೫-೧೨). **ಪುಡೆಯ** : ನೆಟಿ ಸಣ್ಣನಾಗಿ ಕುಂಬಳಕಾಯನುತ್ತರಿಸಿ . . . ಸಂಭಾರವುಂ ತಳಿದುವೊಗ್ಗರಿಸಿ ಪುಡೆಯವ ಮಾಳ್ಪುದು (ಸೂಪಶಾ. ೫-೨೯) ; ಎಳೆಯ ಹಲಸಿನ ಕಾಯ ಸಿಪ್ಪೆಯಂ ತೆಗೆದು ಸಂಚಳಿಸಿ . . . ಬೇಯಿಸಿಕೊಂಡು ಬಳಿಕ ತಾಳಿಲ ಕೊಣಬು ಪುಡೆಯಂ ಮುಂತಾದ ಮೇಲೋಗರವನು ಮಾಳ್ಪುದು (ಸೂಪಶಾ. ೫-೩೭).

[ ? ]

**ಪುಡ್ತಕೇಶ** 'ಪುಡುತಕೇಶ' ನೋ.

**ಪುಧಾಕಾರ** (ನಾ). ಮುಂದಾಳುತನ ; ನೇತೃತ್ವ : ಈ ಎಲ್ಲ ಮಾತುಕತೆ ಗಳಲ್ಲಿ ತುಂಗಕ್ಕನದೇ ಪುಧಾಕಾರವಿತ್ತು (ಮೂರುದಾ. ೧೯೦) ; ನಾಲ್ವತ್ತು ವರ್ಷ ವಯಸ್ಸಾಗುವವರೆಗೆ ಹೋಳೀಹುಣ್ಣಿಮೆಯ ಚಟುವಟಿಕೆಗಳಲ್ಲಿ ಅವನ ಪುಧಾಕಾರವಿರುತ್ತಿತ್ತು (ಗಂಮಾಯಿ. ೫೪).

[ ←ಮರಾ. ಪುಧಾಕಾರ ]

**ಪುಢಾರಿ** ಪುಡಾರಿ (ನಾ). ಮುಂದಾಳು ; ನೇತಾರ ; ಮುಖಂಡ : ಹಳ್ಳಿಯ ಪುಢಾರಿಗಳು—ಹಿರಿಯರು—ಹುಂಬರು ಎಲ್ಲಾ ಸೇರಿದ ಬೃಹ್ತ ಸಭೆ ಅದು (ಕಂಠಪು. ೬೮) ; 'ಬರಾಕು'ಗಳ 'ಪುಢಾರಿ'ಗಳಲ್ಲಿ ಒಬ್ಬೊಬ್ಬ ರಾಗಿ ಮುಂದೆ ಬಂದು ಜಿಗಿಜಿಗಿದು ಭಾಷಣ ಮಾಡಿದುದಾಯಿತು (ಅಗಸ್ತ್ಯ. ೩೩). **ಪುಡಾರಿ** : ದೇಶದ ಮುಖಂಡರೂ ಅವನಿಗೆ ಗೊತ್ತು ; ನಾಡಿನ ಪುಡಾರಿಗಳೂ ಅವನಿಗೆ ಗೊತ್ತು (ಅಳಿ. ೨೯) ; ಹೋಹಾಗ ಬರಂ ವಂತೆ ಬರುವಾಗ ಹೋಹಂತೆ ತೋರ್ಪವರೀ ಮೂರು ನೋಡಿ ಒಬ್ಬ ಪುಡಾರಿ ಮತ್ತೊಬ್ಬಳು ವಯ್ಯಾರಿ ಮತ್ತಿನದಿನ್ನೊಂದು ಎಡಿ (ಶಂಠಿಪ. ೧೯೬-೧೬). [ ← ಮರಾ. ಪುಢಾರೀ, ಪುಢಾಕಾರೀ ]

**ಪುಢಾರಿಕೆ** (ನಾ). ಮುಂದಾಳುತನ ; ಮುಖಂಡತ್ವ : ಅವನಿಗೆ ಜನತೆ ಯಲ್ಲಿ ಗಣ್ಯವಾದ ಸ್ಥಾನ ದೊರಕಿತ್ತು ; ದೇಶದಲ್ಲಿ ಪುಢಾರಿಕೆ ಬಂದಿತು (ಸ್ವಯಂವ. ೧೦). [ಪುಢಾರಿ + –ಇಕೆ]

**ಪುಢಾರಿತನ** (ನಾ). = ಪುಢಾರಿಕೆ : ಮಧ್ಯಮರು ಪುಢಾರಿತನದ ಯಜ್ಞ ದಲ್ಲಿ ಯಾರನ್ನೋ ದೂಗಿಸಿ . . . ಅವರು ಮೈಮರೆಸಿ ಕೊಳ್ಳುವುದು . . . ವಾಡಿಕೆಯದೇ ಆಗಿದೆ (ಕಂಠಪಂ. ೬ ಮುನ್ನುಡಿ). [ಪುಢಾರಿ+–ತನ]

**ಪುಣ್**, ಪುಂಡು$_2$, ಪುಣ್ಣು, ಹಂಣ್, ಹಂಣ್ಣು (ನಾ). ೧. ವ್ರಣ : "ಅರುಃ, ವ್ರಣಃ —ಈ ೨ ಪುಣ್ (ಹುಣ್ಣು)" (ಶಬ್ದಾಯು. ೦೦೯-೬); ಒಳ್ಳನುರಿವ ಪುಣ್ಗಳೊಳ್ ಕ್ಷಾರವಾರಿಗಳನೆಱೆದೊರಸಿ ಕರ್ಚುವರುಂ (ಅಂಕ್ಷಿ. ೫-೯೫ ವ); ಪುಣ್ಣೊಳ್ ನೊಣಂ ಪುಪ್ಪದೊಳ್ ಪ್ರಣಯಂ ಮಾಟ್ಪುದು ತುಂಬಿ (ಸೂಕ್ತಿಸು. ೧-೬೩) ; ಮನದೊಳ್ ದಯವಿಲ್ಲದವನ ಕಣ್ಣೀಂ ಪುಣ್ಣೀಂ (ಕವಿರ. ೬೯ ಕೃಯೋ). ೨. ಗಾಯಂ ; ಏರಂ ; ಕ್ಷತ : ಶಾಗದೆ ಪಲ್ಗಳ ತುದಿ ಪು[ಣಾಂ.ಹು]ಣ್ಣಾಗದೆ ನಡುಕಂದದೊಳಗು ನೋಯದೆ ಸವಿಗಿಂಬಾಗಿ ರತಿರಾಗದುರುಳಿವೊಲಾಗೆ ಕರಂ ಬೀಗಿ ಬಾಯ್ಗಳಂ ಚುಂಬಿಸಿದರ್ (ಕಾವ್ಯಸಾ. ೬೭೭ ಕೂರ್ತ್ಕ); ಚತುರ್ಬಲಂಗಳ ಮೆಯ್ಗಳೊಳ್ ಬಗಿದಸುಂಗೊಳೆ ಸುಯ್ದು ಕೆತ್ತುವ ಪುಣ್ಣ ಬಾಯ್ಗಳೆ ಬೀರಮಂ ಪೊಗಟ್ವ ಬಾಯ್ಗಳೆನಿಪ್ಪುವು (ಕಾವ್ಯಾವ. ೩೩). **ಪುಂಡು$_2$** : ೩. (ಅಲಂ) ವ್ಯರ್ಥ ; ವಿಫಲ : ಪದುಳಿದನಲ್ಲದನಂ ಕಲಿಸಿದೊಡಂ ತಿಳಿಪಿದೊಡಮೇಂ ನಿಲ್ಕುಱು ಗುಮೆ ಚಿತ್ರದೊಳಾಪ್ತನ ವಚನಮದು ಪುಸಿದೊಡಂ ಪುಂಡಾಗಲೆಂತು ಮಱುಯದ ತೆಱದಿಂ (ಸವಾಚ. ೦೦–೦೫೯). **ಪುಣ್ಣು** : ೧. ಪುಣ್ಣನಂತೆ ನೋವಂ ಮಾಟ್ಪುದು (ಧರ್ಮಾಮೃ. ೯-೦೬೩). ೨. ಕಾಸಿದೆಣ್ಣೆಯ ಪೊಯಿಲ್ಗೆ ಪಟುಭಟರ ಮೈದೊಗಲ್ ಕೀಸಿದುದು ಮಳಲ ಮಳೆಯಿಂದೆ ಪುಣ್ಣಾದುವು (ಪಂಪ. ೯೨–೪೯). **ಹುಣ್** : ೧. "ವ್ರಣಂ–ಹುಣ್" (ಶಾಶಕ್ಯ. ೨೯೦). ೨. ಸುಱುದು ಕಿತ್ತುವ ಹುಣ್ಪೆರಸಾಡುವಟ್ಟೆಯಿಂ ಚರಮೊಸೆಯಲ್ಕೆ (ಎಶಿ. XVIII, ೨೦೩–೩೩;1162). **ಹುಣ್ಣು** : ೧. "ವ್ರಣಃ, ಈರ್ಮಂ, ಅರುಃ—ಈ ೩ ಹುಣ್ಣು" (ಪಾಕಾರ. ೩೨೦); ಅಂಬುಳುವಾದಡೆ ಪಣ್ಮುಖನೆಂಬರು ಸೀವಳಿಗೆಯಾಗೆ ಸಲೆ ಮಾರಿಯ ಹುಣ್ಣೆಂಬರು ತುಱುಯಾದಡೆ ಘಣಿಯೆಂಬರ್ ಮತಿಹೀನಜನರದೇನಂ ಮಾಡರ್ (ಸಮಚ. ೯-೨೬); ಬೆಂದ ಹುಣ್ಣ ಕಂಬಿಯಲ್ಲಿ ಕೀಸುವರೆ (ಬಸವ. ೩೧೬); ಬೆಂದ ಹುಣ್ಣಲಿ ಸಾಸಿವೆಯು ಬಳಿಯದಿರು ಸಂಜಯ (ಕುಮಾರವ್ಯಾ. ೦-೮); ಅಂಗೈ ಹುಣ್ಣಿಗೆ ಕನ್ನಡಿ ಯಾಕೆ ? (ಗಾದೆ).

[ದೇ.॥ ತಮಿ. ಮಲ. ಕೋತ. ಪುಣ್ ; ತುಳು. ಪುಡಿ ; ಕೊಡ. ಪುಣ್ಣ್, ಪುಣ್ಣೀ ; ತೆಲು. ಪುಂಡು ; ಕೋಲಾ. ನಾಯ್ಕಿ. ಪುನ್ ; ಮಾಲ್ತೊ. ಪುನು]

**ಪುಣಂಬು** 'ಪುಳುಂಬು' ನೋ.

**ಪುಣಗು** 'ಪುಣುಗು' ನೋ.

**ಪುಣಜ** 'ಪುಂಚೈ' ನೋ.

**ಪುಣಜಿ** 'ಪುಂಚೈ' ನೋ.

**ಪುಣಪುಣನೆ** (ಅ). ಪುಣಪುಣ ಎಂದು : ಅಳಿಲು ಪುಣಪುಣನೆ ಮರ ಹತ್ತಿ ಬಾದಾಮಿ ಮತ್ತು ಖರ್ಜೂರಗಳನ್ನೆಲ್ಲ ಪಟಪಟ ಉದುರಿಸಿತು (ಪುತ್ಥಿರ. ೨೪).

[ ಪುಣಪುಣ$_2$ + –ಅನೆ$_1$ ]

**ಪುಣಸುಗ** (ನಾ). ಒಬ್ಬಾತನ ಹೆಸರು : ಅವಚವಾಡಿಯ ಪೆರ್ಮ್ಮಾಡಿ ಗಾವುಣ್ಡನ ಲಕೊಳಾದಿತ್ಯನ ಮೆಳೆಯ ಪುಣಸುಗ ಸತ್ತಂ (ಎಕ. IV. ಪಾಕುರಾ. ೦೩೯-೦೦; 893). [ ? ]

**ಪುಣಸೆ** 'ಪುಳಿಸೆ' ನೋ.

**ಪುಣಿ**, ಹುಣಿ (ನಾ). (ಕರಾ) ಹೊಲಗದ್ದೆಗಳ ಬದು; ಒಡ್ಡು; ಏರಿ : ಜಾರಪ್ಪ, ಆ ದೃಶ್ಯವನ್ನು ನೋಡಲಾರದೆ ಗದ್ದೆಯ ಪುಣಿಯ ಮೇಲೆ ಕುಸಿದು ಬಿದ್ದನು (ಕರಾವ. ೭೮) ; ಮೇಲಾಳುಗಳು ಒಬ್ಬೊಬ್ಬರಾಗಿ ಬಂದು ಗದ್ದೆಯ ಪುಣಿಯಲ್ಲಿ ನಿಂತರು (ಹುಂಚಾ. ೨೯). **ಹುಣಿ** : ನೀನು ಗಳಿಸುವುದು ಎಲ್ಲಿಂದ ? ಬಂದರಿನಲ್ಲಿ ಹೊರೆ ಹೊತ್ತೋ ? ಗದ್ದೆಯ ಹುಣಿ (ಏರಿ) ಕಡಿದೋ ? (ಸೋಲು. ೫೭) ; ಕೆಲವರು ಗದ್ದೆಯ ಹುಣಿಯಲ್ಲಿ, ಕೆಸರಲ್ಲಿ ಹೊರಳಾಡುತ್ತಲಿರುವವರು (ಪಗುರ. ೭). [ ← ತುಳು. ಪುಣಿ ]

**ಪುಣಿಚು** 'ಪುಳಿಂಚು' ನೋ.

**ಪುಣಿಚೇಟು** 'ಪುಳಿಚೇಟು' ನೋ.

**ಪುಣಿಜ** (ನಾ). ಒಂದು ಬಗೆಯ ಕೀಟ : 'ಪಟ್ಟಪುಣಿಜ' ಪರಾ೬

[ ದೇ. ॥ ತೆಲು. ಪುಣುಜು. ಪುಣುದು ]

**ಪುಣಿಜೆ** 'ಪುಳಿಂಚೆ' ನೋ.

**ಪುಣಿಲ್** 'ಪುಟಿಲ್$_2$' ನೋ.

**ಪುಣಿವುಲ್** (ನಾ). ಒಂದು ಬಗೆಯ ಪಕ್ಷಿ : ಪರ್ದು ಮರವಂ ಮರ ಕುಟಿಗಂ ಪುಲಿಲೆ ಬುಱುಗಿ ಹಸುಬಂ ಪುಣಿವುಲ್ (ಸೂಕ್ತಿಸು. ೩–೧೦೬). [?]

**ಪುಣಿಸೂರ್** (ನಾ). ಒಂದು ಊರಿನ ಹೆಸರು : ಪುಣಿಸೂರ್ಪೊಲನೆಲ್ಲು ಪಾಣ್ಡಿಯುಂವಳೆವದು ಸರ್ವಪರಿಹಾರ (ಪ್ರಾ ೮೦; ೦೯೩೦. ೩೬-೭; 8ನೆಯ ಶ).

[ ಪುಣಿಸೆ (< ಪುಳಿಸೆ ) + ಊರ್ ]

**ಪುಣಿಸೆ** 'ಪುಳಿಸೆ' ನೋ.

**ಪುಣಿಸೆಯಮ್ಮ** (ನಾ). ಒಬ್ಬಾತನ ಹೆಸರು : ಸತ್ತಿವಂಗಲದ ಸಾಮಿಯ ಸಮ್ಮನ್ದಂ ಮಾರಯ್ಯನುಂ ಪುಣಿಸೆಯಮ್ಮನುವಿಟ್ಟು ತಮ್ಮಲೋಪಾದಿ ಗೊಟ್ಟರ್ (ಎಕ. IX. ಹೊಸಕೋ. ೦೦೦–೭;997).

[ ಪುಣಿಸೆ (<ಪುಳಿಸೆ) + ಅಮ್ಮ$_1$ ]

**ಪುಣಿಸೆವಣ್**, ಹುಣಸೆಹಣ್ಣು, ಹುಣಿಸೆವಣ್ಣು, ಹುಣಿಸೆಹಣ್ಣು (ನಾ). ೧. ಹುಣಸೆಮರದ ಹಣ್ಣು ; ತಿಂತ್ರಿಣೀಫಲ ; ಅಡುಗೆಯಲ್ಲಿ ಇದನ್ನು ವಿಶೇಷವಾಗಿ ಬಳಸುತ್ತಾರೆ : ಜೇನ್ಪುಣಿಸೆವಣ್ಪೊಸನಾರ್ . . . ಪೀಲಿ ಯೆಂಬಿವಂ ತುಂಬಿದ ಕಂಬಿಯಂ ತಳೆದದೇಂ ತಳರ್ದತ್ತೊ ಪುಳಿಂದಸಂಕುಳಂ (ರಾಜಶೇ. ೫–೦೦೯). **ಹುಣಸೆಹಣ್ಣು** : ೧. ಈಗ ಹುಣಸೆಹಣ್ಣು ತುಟ್ಟಿಯಾಗಿದೆ (ರೂಢಿ). **ಹುಣಿಸೆವಣ್ಣು** : ೧. ಒಂದು ಮಾನಿಣ್ಣಯೊಳು ಹುಣಿಸೆವಣ್ಣನ ಹುಳಿಯನೊಂದಿಸಿಯದನುವೊಪಿಯೊಳಿಂಗುಸಹಿತಂ ಕಾಸಿ (ಸೂಶಾ. ೩–೦೬). **ಹುಣಿಸೆಹಣ್ಣು** : ೧. ಹೋಳಿಯಲ್ಲಿ ಹುಣಿಸೆಹಣ್ಣು ತೋರಿದ ಹಾಗೆ (ಗಾದೆ). ೨. (ಅಲಂ) ಗರ್ವ ; ಸೊಕ್ಕು : ಅವನ ತಲೆಯಲ್ಲಿ ತುಂಬಿದ್ದ ಹುಣಿಸೆ ಹಣ್ಣು ಸ್ವಲ್ಪವೇ ? (ಸ್ವಕ್ಷಕೊ. ೧೬೪). [ಪುಣಿಸೆ (<ಪುಳಿಸೆ) + ಪಣ್$_2$]

**ಪುಣುಂಬು** 'ಪುಳುಂಬು' ನೋ.

**ಪುಣುಗು**, ಪುಣಗಂ, ಪುನಗು, ಪುನುಗಂ, ಪುಳಗಂ, ಪುಳುಗು (ನಾ). ಒಂದು ಬಗೆಯ ಕಾಡುಬೆಕ್ಕಿನ ಗುಂದಗ್ರಂಥಿಯಿಂದ ಪಡೆಯುವ ಸಂಗಂಧದ್ರವ್ಯ ; ಜವಾದಿ : "ಪುಣುಗು ಮಾರ್ಜಾಲಿಯೆನೆ ಜವಾದಿಯೆನಿಕ್ಕು" (ಮಂಗರಾ. ೯೯–೨೨); ಪುರದೊಳಗೆ ಉಳ್ಳ ಪುಣುಗೆಲ್ಲವಂ

ಶರಿಸುತಂ ಪುರಹರಗೆ ಸಹಸ್ರಾಭಿಷೇಕಮಂ ಮಾಡುತಂ (ತಿಪಾಂ. ೨೫೬-೧೦); ಕರ್ಪೂರ ಕಸ್ತೂರಿ ಜೀರ್ಣ ಜವಾಜಿ ಪುಣುಗು ಬಹುತೈಲ ಸೋಜಿಗಪಡೆದ ಸುಗಂಧದಂಗಡಿಗಳು [ರಾಜಿಸುತಿರ್ದುವಿಕ್ಕೆಲದಿ] (ಮೋಹತ. ೩-೧೮). **ಪುಣಾಗು :** ನಾಸಿಕೇಂದ್ರಿಯ ನಿನ್ನ ತನುಗಂಧಕೆಳಸಿ ಮೇಲೆ ಸೂಸಿದ ಪುಣಾಗು ಕಸ್ತೂರಿಯ ವಾಸವಿಡಿಯದು (ಕಂಪಹ. ೯-೧೮೨); ಮೆಯ್ಯ ಮೇಲೆಯಿಲಿಯ ಆಕಾರದ್ದು ಗಂಟುಗಳು ಯೇಳುವದು. ವ್ಯೆಯಲ್ಲಿ ಪುಣಾಗಿನ ಗಂಧವು ವುಂಟಾಗಿಯಿಹುದು (ಚಿಕತ. ೨೦ ೨). **ಪುನಗು :** ಪಿನುತಕತ್ತುರಿ ಸಾದಿಸಿಂದ ತಿದ್ದಿದ ಪಟ್ಟೆ ಪುನಗಿನಗ್ಗಣಿ ಚಳೆಗಳಿಂ ಮಿನುಗುತಿಹ . . . ರಂಗವಲ್ಲಿಯಿಂ (ಸವಮೋ. ೮೬ ೩೪); ಪುನಗಿದ್ದರೆ ಪಿತ್ತಲಾಗಾದರೂ ಹಚ್ಚಿಕೊಳ್ಳಬಹುದು (ಹುಟ್ಟಿಹ. ೧೪೨). **ಪುನುಗು :** ಕಸ್ತೂರಿ. ಪುನುಗು . . . ಪನ್ನೀರು ಮುಂತಾದ ಸಹಜ ಸುಗಂಧದ್ರವ್ಯಗಳಲ್ಲಿ ಮುಳುಗಿ ತೇಲಿದವರು ಆ ಕಾಲದವರು (ಸಾಹಿಜೀ. ೫೨); ಹಚ್ಚಿಕೊಳ್ಳಿ ಪರಿಮಳಗಳಿಂ ಗಂಧ ಅತ್ತರು ಪುನುಗು ಕಸ್ತೂರಿ ಇತ್ಯಾದಿ ತರತರದ ಭೋಗವಂ! (ಕೋಗಿಲೆ. ೧೮ ೨). **ಪುಳಗು :** 'ಪುಳಗುಕಾಪು' ಪರಾ. **ಪುಳುಗು :** 'ಪುಳುಗುಗಾಪು' ಪರಾ.

**ಪುಣಾಗಿನ ಚಟ್ಟು, ಪುಣಾಗಿನ ಚಿಟ್ಟು** ಪುಣಾಗಿನ ಲೇಪನದ್ರವ್ಯ : ಪುಣಾಗಿನ ಚಟ್ಟಿನ ಗುಣ . . . ತ್ರಿವಿಧ ವಿಷರೋಗಗಳೇ ಮೊದಲಾದವು ಗಳನ್ನು ಹೋಗಲಾಡಿಸುವುದರಲ್ಲಿ ಬಹಳ ಪರಿಶ್ರಮವುಳ್ಳದ್ದು ಪುಣಾಗು (ಸಕವ್ಯ ೪೦); ಕತ್ತುರಿಯೇಣ ಪುಣಾಗಿನ ಚಿಟ್ಟು ಹರಿಣಗೋರೋಜನ ಕೃಷ್ಣಾಜಿನ ಪುಲಿಚರ್ಮ ನರಿಗೊಂಬುಗಳನಿತ್ತರೊಲಿದು (ಮೋಹತ. ೧೯ ೬೫). **ಪುಣಾಗಿನ ಬೆಕ್ಕು**=ಪುಣುಗನ್ನು ಒದಗಿಸುವ ಒಂದು ಬಗೆಯ ಬೆಕ್ಕು : ಕಸ್ತೂರಿಬೆಕ್ಕು : "ಗಂಧಮಾರ್ಜಾಲಃ—ಕಸ್ತೂರಿಬೆಕ್ಕು, ಪುಣಾಗಿನ ಬೆಕ್ಕು" (೬ಕಂ. ೪೬).

[ ದೇ.॥ ತಮಿ. ಪುನುಕು. ಪುಟುಕು : ಮಲ. ಪುಟುಕು. ಪುಟು : ತುಳು. ಪುಣಾಂಗು, ಪುಣಾಗು, ಪುನುಗು : ತೆಲು. ಪುನುಂಗು ]

**ಪುಣುಗುಕಾಪು,** ಪುಳಗುಕಾಪು, ಪುಳುಗುಗಾಪು (ನಾ). (ದೇವರಿಗೆ ಮಾಡುವ) ಪುಣಾಗಿನ ಲೇಪನ : ತಿರುನಕ್ಷತ್ರ ೧ಳಕ್ಕೆ ಸಲ್ಲುವದು ಗ ೬೦ ಶ್ರೀ ಏಕಾದಶಿಯ ಪುಣುಗುಕಾಪು ವರುಷವೊಂದಕೆ ೧೨೭ (ಎಕ. XIV. ಶ್ರೀರಂಗ. ೩೫೭-೬: 1564). **ಪುಳಗುಕಾಪು :** ಶ್ರೀಕಾಳಹಸ್ತಿಯಿಶ್ವರದೇವರಿಗೆ ಪುಳಗುಕಾಪುಗೂ . . . ಸಮರ್ಪಿಸ್ತ (ಸೌಇಇ. IX-ii. ೫೫೦-೩; 1562). **ಪುಳುಗುಗಾಪು :** ಪುಳುಗುಗಾಪಿಗೆ ತಿಂಗಳುತಿಂಗಳಿಗೆ ಮೃಗಶಿರಾನಕ್ಷತ್ರದಲ್ಲಿ ಅಭಿಷೇಕ್ಕೆ ಜೇನುತುಪ್ಪ ಪಡಿ ॥ (ಸೌಇಇ. IX-ii. ೫೫೦-೬: 1562).

[ ಪುಣುಗು + ಕಾಪು ]

**ಪುಣುಜೆ** 'ಪುಂಚ್ಚೆ' ನೋ.

**ಪುಣುಬು** 'ಪುಳುಂಬು' ನೋ.

**ಪುಣುಶೆಪಡಿ** (ನಾ). ಒಂದು ಸ್ಥಳದ ಹೆಸರು : ಅನ್ತೆ ಬನ್ದು ಕೊಟ್ರಲಿ ಪಳ್ಳದ ಅಲಿಕಿಜುಕೆಯು . . . ಕಗ್ಗಲೊಟ್ಟಿಯು ಪುಣುಶೆಪಡಿಯು ಭೂರಪಡಿಯು ಬಳಿಪುಣುಶೆಯು . . . ಬಂದಿತ್ತು (ಎಕ. XVI, ತಿಪಟೂ. ೧೪೦-೬೨: 900). [?]

**ಪುಣುಸಿ** 'ಪುಳಿಸೆ' ನೋ.

**ಪುಣುಸೆ** 'ಪುಳಿಸೆ' ನೋ.

**ಪುಣುಸೆಪಟ್ಟಿ** (ನಾ). ಒಂದು ಊರಿನ ಹೆಸರು : ಪುಣುಸೆಪಟ್ಟಿಸಹಿತಂ ಪಲ್ಲವತಟಾಕಮಿತಿ ಗ್ರಾಮಸ್ಯ ನಾಮಧೇಯಂ ಕೃತ್ವಾ . . . ಉದಕ ಪೂರ್ವ್ವನ್ದತ್ತಃ (ಎಕ. III, ಮಂಡ್ಯ. ೧೦೩-೩೬: 713).

[ಪುಣುಸೆ (<ಪುಳಿಸೆ) + ಪಟ್ಟಿ$_1$]

**ಪುಣ್ಗಲೆ** (ನಾ). ಗಾಯದ ಗುರುತು : ಬಿರುದಿನ ಬೀರದ ಪೆಸರಕ್ಕರಮುಂ ಪರಸ್ಪರ ಮೆಯ್ಯ ಪುಣ್ಗಲೆಗಳ್ ಪೋಲ್ತಿರೆ ತೋಳ್ವಲಕ್ಕೆ ಪಡೆದಂ ನರಶಾಸನಮಂ ನರೇಂದ್ರಚೂಡಾರತ್ನಂ (ಮಲ್ಲಿಪು. ೩-೧೪); ಕವಿಲ ಬಿಳಿಲ್ಗಳೇಂ ಮಿಜಿಸಲಾತ್ತುರ್ವೊ ತೀವ್ರಕರಾಭಿಘಾತದಿಂದವನಿಯ ಬೇದ ಪುಣ್ಗಲೆಗಳೊಯ್ಯನೆ ಕೆಂಗಲೆಗಟ್ಟಿವಂದದಮಂ (ಅನಂಪು. ೬-೩೦).

[ ಪುಣ್ + ಕಲೆ$_2$ ]

**ಪುಣ್ಚು** (ಕ್ರಿ). ಗಾಯಗೊಳಿಸು : ಜಾಣ್ಚಿದುರನೊದವಿಸುತ್ತಿರೆ ನಾಣ್ಚಿಲಮಂ ಪಡೆಯೆ ನೆಗಟ್ದ ಗಂಡರನೆ ಕರಂ ಪುಣ್ಚುವವುಟುದವರಂ ಕಡೆಗಣ್ಚುವುವು (ಶಂಪಂ. ೧೧-೪೫). [ ಪುಣ್ + — ಚು$_1$ ]

**ಪುಣ್ಣಮಿ** 'ಪುಣ್ಣಮೆ' ನೋ.

**ಪುಣ್ಣಮಿವೆಟ್**[3] 'ಪುಣ್ಣಮೆವೆಟ್'[3] ನೋ.

**ಪುಣ್ಣಮೆ,** ಪುಣ್ಣಮಿ. ಪುಣ್ಣವೆ, ಪುಣ್ಣೆಮೆ, ಪುಣ್ಣೆವೆ. ಪುಣ್ಣುಮೆ, ಪುಣ್ಣುವೆ. ಪುಣ್ಯಮೆ. ಪುನ್ನಮಿ, ಪೂರ್ಣಮಿ. ಹುಣೆಮೆ. ಹುಣೆವೆ, ಹುಣುಮೆ. ಹುಣ್ಣಮಿ. ಹುಣ್ಣಮೆ. ಹುಣ್ಣವೆ. ಹುಣ್ಣೆಮೆ. ಹುಣ್ಣೆವೆ. ಹುಣ್ಣುಮೆ. ಹುಣ್ಣುವೆ. ಹೂಣ್ಣವೆ (ನಾ). **ಪೂರ್ಣ** ಚಂದ್ರನು ಉದಯವಾಗುವ ದಿವಸ : ಪೌರ್ಣಮೆ : ಪ್ರಥಮ ವಿಜಯಸಮ್ವತ್ಸರಂ ಕಾತ್ತಿಗೆ ಪುಣ್ಣಮೆ ಅಸ್ದು (ಎಕ. III, ತಿರುಮ. ೦-೪ ; ೯೭೬) ; ಕಾರ್ತಿಕದ ಪುಣ್ಣಮೆಯ ಮೃಗಶಿರನಕ್ಷತ್ರಮುಂ ಸೌಮ್ಯಯೋಗ ಮುಮಾಗೆ (ಶಾಪುಂಪು. ೯೮) ; ಪುಣ್ಣಮೆಯಾದುದು ಮುಖಚಂದ್ರ ಮಂಡಲ (ಮೋಹತ. ೦೩-೨೫). **ಪುಣ್ಣಮಿ :** ಸುಕುಮಾರಸ್ವಾಮಿಯುಂ . . . ಕಾರ್ತಿಕಮಾಸದ ಪುಣ್ಣಮಿಯಂದು ಸುಖದಿಂದೆ ಉಂದಿರ್ದ (ಪದ್ಮಾರಾ. ೨೫-೬) ; ಹೆಮ್ಮಗ್ಗಿಯ ಪುಣ್ಣಮಿ ಸೋಮ ವಾರದನ್ದಿನ ಶುಭಲಗ್ನದೊಳ್ (ಇಆ. X, ೨೫೨-೩೯ : 1108) ; ಪಾಡಿವದೆಳೆವೆಟ್[3] ಪುಣ್ಣಮಿವರೆಗು ರೂಡಿಸಿ . . . ಬಳೆದು ಕುವಲಯಹಿತ್ಯಾನಂದಮನೀವಂದದೊಳು ನಾಡೆಜ[3]ಯಿನ ಸುಕುಮಾರಂ . . . ವಿರಾಜಿಸಿದಂ (ಜಯಕಾ. ೨-೬೫). **ಪುಣ್ಣವೆ :** ರಮಣಿಯ ಮುಖಕ್ಕೆ ಮಣಿಮುಕುರ ಮನೊಪ್ಪಿರೆ ತೋರ್ಪ ದಿವಿಜವಧೂಸಮ್ಮುಖಮಂ ಹಿಮಕಿರಣಂಗಂ ರವಿಗಂ ಸಮನಿಪ ಪುಣ್ಣವೆಯ ಸಂಜೆವೆಣ್ಣಂ ಪೋಲ್ತಳ್ (ಚಂದ್ರಪ್ರ. ೧೦-೦೩೪) ; ಸಸಿಯಂ ಪುಣ್ಣವೆ ಪೊಂಗುವ ಪೊಸನೇಸಜಿನಾಂತು ಮೂಡದೆಸೆ ಮಸಗುವ ಪೊಲ್ ಬಸಿರ್ವೊತ್ತು ಬಣ್ಣವೆಣಿವ ಬಿಸಜಾಕ್ಷಿನಿಸಮ್ವೃತಮಾಂಬೆ ಪೆಂಪಿಡಿ ದೆಸೆದಳ್ (ಶಕಪ. ೪-೫). **ಪುಣ್ಣೆಮೆ :** ಕೈಲಾಸಕ್ಕೆ ಮಂದು ಸಿದ್ಧಶಿಖರತಳ ದೊಳು ಪೌಷ್ಯಮಾಸದ ಪುಣ್ಣೆಮೆ [ಪಾಠಾಂ. ಣ್ಣಮಿ]ಯೊಳು ಅಪಗತವಿಹರಣ ನಾಗಿರ್ದು (ಶಾಪುಂಪು. ೮೩) ; ಪುಣ್ಣೆಮೆಯಂತಿರೆ ಶಶಿಮುಖಿ ನಡೆತಂದ ಳೊರ್ಪಳ್ (ಧರ್ಮಾಮೃ. ೬-೧೯೧). **ಪುಣ್ಣೆವೆ :** ಆಶ್ವಯುಜದ ಪುಣ್ಣೆವೆ ಸೋಮಗ್ರಹಣದಂದು (ಎಇ. XVI. ೬೦-೯ ; 1074) : ದಿನದಿನದೊಳ್ ಚುರ್ಚಿತ್ತಿಹ ಜನಪ ಶ್ರೀಕೃಷ್ಣವಿಭುವ ಜಸಮಂ ನದಂ ಕಂಡನುಸರಿಸದ ಚಿಂತೆಯೊಳೇ ಮಿಸುಗುವ ಪುಣ್ಣೆವೆಯ ಬಿದು ಕೃಶತ್ವಮನಾಂಪಂ (ನರಕ. ೩೦-೫೬). **ಪುಣ್ಣುಮೆ:** ಕಾರ್ತಿಕದ ಪುಣ್ಣುಮೆ[ಪಾಠಾಂ. ಣ್ಣಮಿ]ಯೊಳಾ ನರುಪಮರುಷಕ್ಕೆ ವರ್ತಿಸುವ ಕೌಮುದೀಪರ್ವ ಬರಲು (ಸಮ್ಯಕ. ೦-೩೨). **ಪುಣ್ಣುವೆ :** ಪುಣ್ಣುವೆಯ ಸಂಪೂರ್ಣ ಜೊನ್ನೊಡಲಿನುದಿಸಿ ಸಂಪನ್ನತಲೆಯೊಳು ಕ್ಷೀರವಾರಿಧಿ ಪರ್ದೆರೆ ಪುಟ್ಟಿ ಸಂತೋಷಿಸುವೊಲು (ಸವಮೋ. ೦-೩). **ಪುಣ್ಯಮೆ :** ಪೌಷ್ಯ ಸುದ್ಧ ಪುಣ್ಯಮೆ ಸೋಮವಾರ ಸೋಮಗ್ರಹಣ ಸಂಕ್ರಾಂತಿ ನಿಮಿತ್ತ್ಯದಂದು (ಕಇಆ. ೩೩-೪೬-೦೯ : 1097). **ಪುನ್ನಮಿ :** ಪುಷ್ಯಶುದ್ಧ ಪುನ್ನಮಿ ಸೋಮವಾರ ಪುತ್ತುರಾಯಣಸಂಕ್ರಮಣದಂದು (ಶಾಸಪ. ೩೩-೩೦;?). **ಪೂರ್ಣಮಿ :** ವೈಶಾಖಪೂರ್ಣಮಿಗೆ ಜನಿಸಿ ಮೇಣೊಂದಿಗ್ಗದೆ ವೈಶಾಖ ಪೂರ್ಣಮಿಯೊಳಿರುಳು ಪರಿನಿರ್ವಾಣ ಹೊಂದುಪೆನ್ನಾತನನ್ನಿರುಳಾದ್ದು ಕೊನೆಗೊಮ್ಮೆ ಕಣ್ದೆರೆವ ಕಾಂಬೆನಿಂದು (ವೈಶಾಖ. ೬೯-೪೨೫). **ಹುಣೆಮೆ :** (೪).

**ಹುಣವೆ :** "ರಾಕಾ = ಹುಣವೆ" (ಕಾಕ್ಟ. ೨೬೩). **ಹುಣುವೆ :** ಮಗನೆ ಕೇಳ್ ಚೈತ್ರಮಾಸದ ಹುಣುವೆಗೆಲ್ಲರನೊಡಗೊಂಡು ಬಹುದು ಗಜಪುರಿಗೆ (ತುರಂಗ. ೬೨-೯೩). **ಹುಣ್ಣಮಿ :** ಪೊಳೆವ ಪೊಂಗುಟಿಗಳಿಂ ದೊಪ್ಪುವಾನೆ ಉಂಗೊಳಿಸುತಿರ್ದುದು ಹುಣ್ಣಮಿಯು ಮುಳುಗುವ ನೇಸಱಿಂ ಮೂಡುವ ತಿಂಗಳಿಂ ಚೆಲುವನಾಂತಾಗಸದಂತೆ (ಶಂಕ್ರಸಾಂ. ೨೦-೪೩). **ಹುಣ್ಣಮೆ :** ಗಗನದೊಳಗೆ ಹುಣ್ಣಮೆ ಹೋದ ಮಱುದಿನ ಪಗಲೆಸೆದಿರ ಲಾತನೊಡಲ ಮೃಗಮೊಲಗುಡು ಮೊಗ್ಗಿಸುವೊಂದಂದದಿ ಮೊಗಮೆತ್ತಿ ಗಳಪುತಯ್ದುದಾವು (ಮೋಹತ. ೧೯-೦೩); ಹುಣ್ಣಮೆ[ಪಾಠಾಂ. ವೆ]ಯ ಶಶಿಯಂತೆ ಚೆಲುಚೆಲುವೆಣ್ಣುಗಳು ಸಹ ಬಂದನೆಂದೀಕ್ಷಿಸಿತು ಪುರಜನವು (ಶಾಶ್ವತ. ೦೮-೯೭). **ಹುಣ್ಣವೆ :** ಹು[ಪಾಠಾಂ. ಪು]ಣ್ಣವೆಯಲ್ಲಿ ಚಂದ್ರ ಮುಖಿಯರ್ ನೆಲೆಮಾಡದ ಚೂಳಿಕಾಗ್ರದೊಳ್ ತಣ್ಣೆಲರಾಸೆಯಿಂದಿರೆ ನಿಶೀಥಿನಿಯೊಳ್ ಖಳರಾಹು ಬಂದು . . . ತನ್ನ ಮೇಂದುಗಳನೀಕ್ಷಿಸಿ ಶಂಕೆಯುನೆಯ್ದಿದಂ ಕ್ಷಣಂ (ಪಾರಕೃ. ೮-೩೯); ಮುನ್ನ ಸಂರತಕ್ಕೆ ತ್ರೀಸವೃಂದವು ಹುಣ್ಣವೆಯ ಪ್ರತಿಮಾಸಪೂಜೆಗೆ ಭಿನ್ನವಿಲ್ಲದೆ ಲೋಕ ಹೋಗಲು ದೈತ್ಯನೊಬ್ಬವನು ಬೆನ್ನ ಬಂದಪನು (ಶಂಕಕ. ೧೩-೯೯); ಸವೆಯದ ಕರ್ಗತ್ತಲೆಯ ತುಂಬಿದಳು ಹುಣ್ಣವೆಯ ಬೆಳ್ದಿಂಗಳ ಕಿಡಿಸಿ (ಮೋಹತ. ೨೯-೮). **ಹುಣ್ಣೆಮೆ :** ಎಸೆದಿರೆ ನಂದೀಶ್ವರಮುಂ ಬಸಂತದೊಳ್ ಮಾಡಿ ಬಟ್ಟ ಹುಣ್ಣೆಮೆ[ಪಾಠಾಂ. ಪುಣ್ಣಮಿ, ಪೌರ್ಣಮಿ]ಯೊಳ್ ದೇವಸಮಾಜ ಮೋಕುಳಿಯನಾಡೆ ಸಿಂಪಿಣಿಯುದೊಂದು ಮಾಡುವರ್ ತದ್ದಿನದೊಳ್ (ಸಪುಶ. ೨-೯೩); ನುಣ್ಮಾತ್ರಿನಕ್ಷತೆಯ ತಿಲಕ ಹುಣ್ಣೆಮೆಯ ಸಂಧ್ಯಾಲಕ್ಷ್ಮಿ ಚಂದ್ರಮಂಡಲ ಸೂರ್ಯಮಂಡಲವನು ತಳೆದಂತೆ (ಸೌಂದಕೃ. ೬-೨೫). **ಹುಣ್ಣೆವೆ :** ಚೈತ್ರಶುದ್ಧಹುಣ್ಣೆವೆ ಹನುಮಂತದೇವರ ಜನ್ಮದಿವಸ (ಶಾಸಚ್ಛ. ೬೬). **ಹುಣ್ಣುಮೆ :** "ಪೂರ್ಣಿಮಾ–ಹುಣ್ಣುಮೆ" (ಕಾಕ್ಟ. ೩೫); ಸೂರ್ಯನು ತನ್ನ ಸುಷುಮ್ನೆಯೆಂಬ ಕಿರಣಸೂತ್ರದಿಂದಾ ಚಂದ್ರನಂ ಶುಕ್ಲಪಕ್ಷದ ಪಾಡ್ಯಂ ಮೊದಲು ಹುಣ್ಣುಮೆಯ ಪರ್ಯಂತರಂ ದಿನದಿನಕ್ಕೆ ವರ್ಧಿಸುತ್ತಿರ್ಪಂ (ಶಿವೀಕ. ೨೧೯); ಕಾಮನ ಹುಣ್ಣುಮೆಗೆ ಕಲಕುನೀರು (ಗಾದೆ). **ಹುಣ್ಣುವೆ :** ಹಾಲಂತೆ ಹೞಹಳಚನೆ ಹೊಳೆವ ಹುಣ್ಣುವೆ [ಪಾಠಾಂ. ಣ್ಣಮೆ]ಯ ತಿಂಗಳ ಬೆಳಗಿನೊಳ್ ... ನಡೆತಂದರಾ ಮಹೀವಲ್ಲಭನುಮಾ ಸಚಿವನು (ಸಪ್ತಕೌ. ೨-೧೦೨); ಹುಣ್ಣುವೆ ಅಮಾವಾಸಿಯಲ್ಲಿ ಯೆರಡಷ್ಟಮಿಗಳಲ್ಲಿ ಪಾಡ್ಯದಲ್ಲಿ ಸಾಧನೆಯು ... ಮಾಡಲು ತಕ್ಕಂಥಾದ್ದಲ್ಲ (ಐನ್ಸಟಿ. ೫-೬೦). **ಹೂಣ್ಣವೆ :** ರಕ್ತಾಕ್ಷಿಸಂವಛರದ ಪ್ರಥಮ ಪಡ ಶ್ರಾವಣದ ಹೂಣ್ಣವೆ ಸೋಮಗ್ರಹಣ ಪ × ಹರಿಹರದೇವರ × × × ದಲು (ಶಾಇಇ. IX-i, ೨೬೯-೫ ; 1144).

ಹುಣ್ಣಮೆಯಾಳ್ದ = ಪೌರ್ಣಮೆಯ ಅಧಿಪತಿ ; ಚಂದ್ರ : ಹುಣ್ಣಮೆಯಾಳ್ದ ತನ್ನೆಸಕವನವರೆಸಳ್ಗಣ್ಣೊಳು ಸಾರ್ಚಿದಂತಿಹುದು (ಮೋಹತ. ೦೯ ೬೨). [< ಸಂ. ಪೂರ್ಣಮಾ, ಪೂರ್ಣಿಮಾ]

**ಪುಣ್ಣಮೆವೆಱ್[3].** ಪುಣ್ಣಮಿವೆಱ್[3] (ನಾ). ಹುಣ್ಣೆಮೆಯ ಚಂದ್ರ ; ಪೂರ್ಣಚಂದ್ರ : ತಳತ್ತಳಿಸುವ ಪುಣ್ಣಮೆವೆಱ್ಮೊಗದ ಮಿಸುಪ ಚೆನ್ನೇಸಱದಿರ ಕುಂದಣದಾಮರೆಮೊಗದ . . . ಕಡುಮುಗುದೆಯರಾ ಶುಕವಚನೆ ಸಂಯೋಜನೆಯೊಡನೊಲ್ದಿಯ್ದಿದರು (ಜಯಸಾ. ೫-೬೫). **ಪುಣ್ಣಮಿವೆಱ್[3]:** ಬಣ್ಣಿಗಗಾಲ ಪುಣ್ಣಮಿವೆಱ್ಮೊಗದೆಳವೆಣ್ಣುಗಳೆಯ್ದೆಂದ ರೊಡನೆ (ಶಂಕ್ರಸಾಂ. ೧೨-೦೯೦). [ಪುಣ್ಣಮೆ + ವೆಱ್[3]]

**ಪುಣ್ಣವೆ** 'ಪುಣ್ಣಮೆ' ನೋ.

**ಪುಣೆವೆ** 'ಪುಣ್ಣಮೆ' ನೋ.

**ಪುಣ್ಣೆವೆ** 'ಪುಣ್ಣಮೆ' ನೋ.

**ಪುಣ್ಣು** 'ಪುಣ್' ನೋ.

**ಪುಣ್ಣುಮೆ** 'ಪುಣ್ಣಮೆ' ನೋ.

**ಪುಣ್ಣುವೆ** 'ಪುಣ್ಣಮೆ' ನೋ.

**ಪುಣ್ಬಡಿಸು** (ಕ್ರಿ). ಗಾಯಗೊಳಿಸು : ಏಜಗೀಮು ಬಲ್ಪಿನಿಂ ಋಕ್ಷಜನಂ ಸೆಱವಿಡಿಯೆ ಕಂಡು ಕಾಯ್ದೆಱಗಿದ ಸೂರ್ಯಜನಂ ಪುಣ್ಬಡಿಸಿದಂ (ಕಂರಾಕಥಾ. ೦೦-೦೬೦). [ಪುಣ್ಬಡು + –ಇಸು[3]]

**ಪುಣ್ಬಡು** (ಕ್ರಿ). ಗಾಯಗೊಳ್ಳು : × ಮಟ್ಟ ವಕ್ಕದೊಡ್ಡು ಪುಣ್ಬಡುವಿನ ಎಬ್ದು ಸನ್ನು ಸವಕಟ್ಟಳಱದಲ್ಲಿಗೆ ನೂಂಕಿ ಬೀರಮುಚ್ಚಟಿರ್ವಿನಮಾಮೆ ತಳ್ತಱದು ಗೆಲ್ದೆವರಾತಿಯನೆನ್ದು ಪೊಚ್ಚಱ ನುಡಿಮಟ್ಟಗಣ್ದರಂ ನಗುವ ದೊಟ್ಟಜಿ ಮಾವನ ಗನ್ಧಹಸ್ತಿಯುಂ (ಎಕ. II, ೦೩೯-೪೯ ; ಸಂ. 982); ಕೆಱದು ಸಮಯದಿನಾ ವಿರಾಟನ ಬಲಂ ಪುಣ್ಬಟ್ಟು ಚಲಂಗೆಟ್ಟು ತೊಲಗುವುದುಂ (ಪೇಬಾಕೃ. ೦೦-೦೯೬ ಪ); ನುಣ್ಬಣೆ ಮೆಲ್ಗದಪು ಮರಲ್ಗಣ್ ಬಾಯ್ದೆಱ ತುಂಬುಗಂದವಿುಂಬಿಡಿದೆರ್ದೆಗಳ್ ಪುಣ್ಬಡುವಿನೆಗಂ ಬಿಗಿದು (ಕಳಂ. ೬-೨೦೩). [ಪುಣ್ + ಪಡು[1]]

**ಪುಣ್ಬಡೆ** (ಕ್ರಿ). = ಪುಣ್ಬಡುಂ: ಪೂತಲವಕ್ಕೆ ಪೌರವನಭೂರುಹಂ . . . ಸಂಧ್ಯಾತಪನಂಗೆ ತೋರಣಕನನ್ಮಕುರಂ ದೊರೆಯಾಗಿ ತೋಱದತ್ತಾತನೊಳಾಂತು ಪುಣ್ಬಡೆದ ಖೇಚರಸೇನೆಯ ರಕ್ತಸೇಕದಿಂ (ಚಂದ್ರಕೃ. ೬-೪೬). [ಪುಣ್ + ಪಡೆ[1]]

**ಪುಣ್ಬು** 'ಪುಳುಂಬು' ನೋ.

**ಪುಣ್ಪೆಱು** (ಕ್ರಿ). = ಪುಣ್ಬಡು : ಇಸೆ ಲಕ್ಷ್ಮಣಂ ಏಯುಚ್ಚರಸೈನ್ಯಂ ಸತ್ತುದು ಪುಣ್ಪೆತ್ತುದು ಬೆನ್ನಿತ್ತುದು (ಕಂರಾಕಥಾ. ೯-೩೯). [ಪುಣ್ + ಪೆಱು[1]]

**ಪುಣ್ಪೊಲಸು** (ನಾ). ಹುಣ್ಣಿನ ಕೊಳೆ,–ಹೊಲಸು : ಎಱಗುತ್ತುಮಿರ್ಪ ನೊಱಮುಣ್ಮುವ ಪುಣ್ಪೊಲಸಂಬಿಮೆಯ್ದೆ ಕೊಕ್ಕರಿಕೆಯನೀಯೆ (ಚಂದ್ರಕೃ. ೦೦-೦೦೬). [ಪುಣ್ + ಪೊಲಸು]

**ಪುಣ್ಮವೆಣ** (ನಾ). (?) : ಸಾಹಸಭೀಮ . . . ನಿಜಭುಜಾಗ್ರಗದಾಪರಿಘ ಪ್ರಹಾರದಿಂ ಪಱಪಱಯಾಗಿ ಪುಣ್ಮ[ಪಾಠಾಂ. ಣ್ಣು]ವೆಣನಾಗಿ ಮರುಳ್ಗಣೆ ಸಾಗಿ ಯುದ್ಧದೊಳ್ ಕಱದಱಯಾಗಿ ಬಿದ್ದಿರಿಬಲಂಗಳೆ ಪೇೞವೆ ನಿನ್ನ ಬೀರಮಂ (ಗದಾಯು. ೨-೩). P ಇಲ್ಲಿ ಪಾಠಕ್ಲೇಶವಿದೆ. 'ಪುಣ್ಣುವೆಣ' ಎಂಬುದು ಹೆಚ್ಚು ಸ್ವೀಕಾರಾರ್ಹವಾದ ಪಾಠವೆನ್ನಬಹುದು.

[ ? ]

**ಪುಣ್ಯ** (ಗು). ೧. ಚೆಲುವಾದ ; ಸುಂದರವಾದ ; ಮೋಹಕವಾದ : ಏಕಕಾಲಕಳಿತ ಚಕ್ರಧರತೀರ್ಥಕರಕುಸುಮಶರಾಗ್ರಗಣ್ಯಪುಣ್ಯತನುವಪ್ಪ ಶಾಂತೀಶ್ವರಂ . . . ದ್ವಾದಶಗಣವಿನೇಯಜನಂಗಳಂ ನರನಾಕನಾಗಲೋಕೆ ಗಮನಕ್ಕೆ ಪರಸಿ ವಿಸರ್ಜಿಸಿ (ಶಾಂತಿಕೃ. ೧೨-೨೯ ವ). ೨. ಒಳ್ಳೆಯ ; ಶ್ರೇಷ್ಠವಾದ ; ಉತ್ಕೃಷ್ಟವಾದ : ಆಸೆಗೆ ಹುಟ್ಟಿದ ಪ್ರಾಣಿ ಆಸೆಯನೆ ಕಲಿತು ಪುಣ್ಯಪದವಿಯ ಬಯಸಿದರೆ ಭವಮಾಲೆಯ ಭರವು ತಪ್ಪದು (ಬಸವ. ೦೨೮) : ಅರ್ಜುನನ ಮುಖವನ್ನು ಇಂದ್ರನು ಪ್ರೇಮದಿಂದ ತನ್ನ ಪುಣ್ಯಗಂಧವುಳ್ಳ ಕೈಯಿಂದ ತಡವುತ್ತಾ . . . ಇದ್ದನು (ರಕಥಾ. ೦೨೭). ೩. ಪವಿತ್ರವಾದ ; ಪಾವನವಾದ ; ಶುದ್ಧವಾದ : ನಿಸ್ಪೃಹತೆಯನಾ ಮಹೀಪತಿಗೆ ತಂದುದು ಭವ್ಯತೆ ಪುಣ್ಯಜೀವಮಂ ಸಹಜಸುಖಾಸ್ಪದಂ ಬರೆಗಮುಯ್ವನಮಾಲ್ಪಿ ತೊಡಂಕಲೀಗುಮೋ (ಅರಿಕೃ. ೬-೨೫) ; ಬಸವನ ಪುಣ್ಯಕೀರ್ತಿಲತೆ ಬೇರ್ವರಿಯುತ್ತುರಗೇಂದ್ರಲೋಕದೊಳ್ ದೆಸೆಗಳನಗ್ಗಳಂ ಮುಸುಕಿ ಪರ್ವಿಮುದಾಗಳೆ ಮರ್ತ್ಯಲೋಕದೊಳ್ (ಬಸವ. ೧೨ ಸೂಚನೆ). ೪. ಧರ್ಮಿಷ್ಠವಾದ; ಸದ್ಗುಣಯುಕ್ತವಾದ. ೫. ಮಂಗಳಕರವಾದ; ಶುಭಕರವಾದ. ೬. ಸಂತೋಷವುಂಟುಮಾಡುವ. (ನಾ). ೭. ಸದಾಚಾರ, ಪರೋಪಕಾರ ಮೊದಲಾದುವುಗಳಿಂದ ಆತ್ಮನಿಗೆ ದೊರೆಯುವ ಫಲ ; ಸ್ವೈಪು ; ಸುಕೃತ : "ಧರ್ಮಃ, ಪುಣ್ಯಂ, ವೃಷಃ, ಶ್ರೇಯಃ

ಸುಕೃತಂ—ಈ ೫ ಪುಣ್ಯದ ಪೆಸರ್" (ಶಬ್ದಮ. ೨೦-೦೨೫); ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲದೊಡಾಳ್ದನಾಳ್ ಸರೋಗನರೋಗಂ . . . ಎಂಬೀ ಲೋಕಯಾತ್ರೆ ಕಿಡದೆ ಮಹಾತ್ಮಾ (ಶಾಂತಿಪು. ೬-೦೮೦); ನೀನೊಲಿಯುತ್ತೀ ಪುಣ್ಯ ನೀನೊಲ್ಲದುದೇ ಪಾಪ ಕಂಡಯ್ಯಾ (ಬಸವ. ೫೦೬); ಒರ್ವನ ಪುಣ್ಯದ ಫಲವಂ ಪಲರನುಭವಿಸುವರ್ (ಪಾರ್ಶ್ವಪು. ೦೫-೯೯). ೮. ಪವಿತ್ರವಾದುದು; ಪಾವನವಾದುದು: "ಶುಚಿ, ಮೇಧ್ಯಂ, ಪವಿತ್ರಂ, ಪುಣ್ಯಂ, ಪಾವನಂ—ಈ ೫ ಶುದ್ಧಮಪ್ಪ ವಸ್ತು" (ಶಬ್ದಮ. ೨೨-೦೬೨); ಪುಣ್ಯವಹುದೆಮ್ಮ ಧರೆ ವಲ್ಲಭನ ಪದಧೂಳಿಯಿಂ (ಶಶ್ರಾಂಗ. ೬೦-೦೬೪೨). ೯. ಒಳ್ಳೆಯ ಕರ್ಮದ ಫಲವಾಗಿ ಬರುವ ಸುಖ; ಭಾಗ್ಯ: ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ (ಶಶಿಕ. ೯-೦೦); ಅಂದಿನಾನಂದ ದೊಂದೊದವಿಂಗಂದಿವ ಪುಣ್ಯಕಂದಿನೆಸಕಕ್ಕುಂತಾವಳುಂ ನೋಂತಳೇ (ಕೃಷ್ಣಪು. ೦೦-೬೦); ಒಳ್ಳೆಯ ಕಾರ್ಯ ಮತ್ತು ಅದರ ಫಲವಾದ ಸುಖ—ಇವುಗಳ ಸಂಕೀರ್ಣಸಂಬಂಧಕ್ಕೆ ಪುಣ್ಯವೆಂದೂ . . . ಹೆಸರು (ಶಿಕಲು. ೨೪೬). ೧೦. ಧರ್ಮ; ದಾನ: ಪುಣ್ಯಕ್ಕೆ ಸೀರೆ ಉಡಿಸಿದರೆ ಹನ್ನೆರಡು ಮೊಳ ಅಂದಳು (ಗಾದೆ). ೧೧. ಭಾಗ್ಯವಂತ; ಅದೃಷ್ಟಶಾಲಿ: ಪಾಡುವರು ಕೆಲರಲ್ಲಿ ಹರಿಯನು ನೋಡುವರು ನಿಜದೃಷ್ಟಿ ದಣಿಯಲು ಆಡುವರು ತಮ್ಮಿಂದ ಪುಣ್ಯರದಾರು ಲೋಕದಲಿ (ಕೌಶಿಕಾ. ೪೪-೦೬). ೧೨. ಸಜ್ಜನ; ಪುಣ್ಯಪುರುಷ: ತರುಣಿಯರ ಬಾಯಿಗೆಂಪಂ ಸರಿಮಾಟ್ಪರ್ ಕವಿಗಳಾಗೆ ಪುಣ್ಯರೆನುತ್ತಂ ಪರಿಹಾಸ್ಯ ಮಾಟ್ಪ ವಿಕಸಿತಸರಸಪ್ರಸವಂಗಳಿಂದೆ ಬಂದುಗೆ ಯೆಸೆಗುಂ (ಮಲ್ಲಿಕಾ. ೯-೪೯೯). ೧೩. ಶುಚಿ; ನೈರ್ಮಲ್ಯ. ೧೪. ಶುಭ; ಮಂಗಳ. ೧೫. ಚೆಲುವು; ಸೌಂದರ್ಯ. ೧೬. ಪ್ರಖ್ಯಾತಿ; ಪ್ರಸಿದ್ಧಿ. ೧೭. ಮನೆ; ಆವಾಸ. ೧೮. [ಜೈನ] ನವಪದಾರ್ಥಗಳಲ್ಲಿ ಒಂದು: ಜೀವಾಜೀವಪುಣ್ಯಪಾಪಾಸ್ರವಸಂವರನಿರ್ಜರಬಂಧಮೋಕ್ಷವೆಂದಿಂತು ನವಪದಾರ್ಥಂಗಳುಂ (ಪದ್ಮಾಚ. ೬-೦೫); "ಅಕಳಂಕಯುದ್ಧದೊಳು ಸೌಮ್ಯದೊಳು ಧರ್ಮದೊಳು ಸುಕೃತದೊಳು ಪುಣ್ಯಮಕ್ಕುಂ" (ಮಂಗರಾ. ೦೫೨-೩೬); "ಧರ್ಮ ಸುಕೃತಂ ಪ್ರಖ್ಯಾತ ನೈರ್ಮಲ್ಯ ಚೆಲ್ವಾವಾಸಂಗಳು ಪುಣ್ಯಮಕ್ಕು" (ನಾನಾರ. ೬೯).

**ಪುಣ್ಯ ಕಟ್ಟಿಕೊಳ್ಳು** = ಉಪಕಾರ ಮಾಡಿ ಪುಣ್ಯವನ್ನು ಗಳಿಸಿಕೊಳ್ಳು: ವಿದ್ಯಾಭ್ಯಾಸಕ್ಕೆ . . . ಪ್ರತಿವರ್ಷವೂ ಎರಡುಸಾವಿರರೂಪಾಯಿಗಳನ್ನು ಕೊಡಲು ಕೋರ್ಟಿನವರು ಒಪ್ಪುವಂತೆ ಮಾಡಿ ಆ ಲಾಯರ್ ಪುಣ್ಯ ಕಟ್ಟಿಕೊಂಡರು (ದೂರಶಿ. ೪೩). [ಸಂ.]

**ಪುಣ್ಯಂಗೆಯ್, ಪುಣ್ಯಂಗೈ** (ಕ್ರಿ). ಸತ್ಕಾರ್ಯವನ್ನು ಮಾಡು; ಪುಣ್ಯ ಬರುವ ಕೆಲಸವನ್ನು ಮಾಡು: ಎನಿತು ಪುಣ್ಯಂಗೆಯ್ದಿಪೋ ಮಜ್ಜನನಸಾಫಲ್ಯತ್ವವಾಯ್ತು (ಶಶಿಪು. ೫-೫೦). **ಪುಣ್ಯಂಗೈ**: ಸುಂದರಿಯೆ. ಪೇಳಾವ ಪುಣ್ಯಂಗೈದುದಾ ಬಯಕೆ (ಶಶ್ರಾಂಗ. ೩೬-೯೭೬).

[ಪುಣ್ಯ+ಕೆಯ್$_1$]

**ಪುಣ್ಯಂಗೈ** 'ಪುಣ್ಯಂಗೆಯ್' ನೋ.

**ಪುಣ್ಯಂಗೊಳ್** (ಕ್ರಿ). ಸುಕೃತವನ್ನು ಹೊಂದು.—ಪಡೆ: ಅಹ, ಧೃಷ್ಟದ್ಯುಮ್ನ. ಗುರುವನಿಂತಲ್ಲೆ ಕೊಂದು ಪುಣ್ಯಂಗೊಂಡೆ! (ಅಶ್ವತ್ಥಾ. ೩-೫೦). [ಪುಣ್ಯ+ಕೊಳ್$_1$]

**ಪುಣ್ಯಕರ್ಮ** (ನಾ). ಶ್ರೇಯಸ್ಸನ್ನುಂಟುಮಾಡುವ ಕೆಲಸ; ಸುಕೃತ: ಮುಂ ಪುಣ್ಯಕರ್ಮಮನಂತಾಗಿರೆ ಮಾಡದೀಗಳಟಲಿಂ ಪೇಟೆಂತಟುಕ್ತಿ ರ್ವಳಕ್ಕುಮೆ (ಕಾರುಪೂ. ೩೪೭); ಸಚಿಂತೆಯಿಂದೂ ಸವಿಶೇಷಚಿಂತೆಯಿಂದೂ . . . ಭಕ್ತಿಜ್ಞಾನವೈರಾಗ್ಯಚಿಂತೆಯಿಂದೂ — ಇವು ಮನಸ್ಸಿನಿಂದ ಮಾಡಲ್ಪಟ್ಟಂಥ ಪುಣ್ಯಕರ್ಮವೆನಿಸುವುದು (ವೀರಾಶ. ೨೦).

[ಸಂ. ಪುಣ್ಯಕರ್ಮನ್]

**ಪುಣ್ಯಕಾರಿ** (ನಾ). ಒಳ್ಳೆಯ ಕಾರ್ಯ ಮಾಡುವವನು: ಅಕ್ಕ ಧಾರುಣಿಯೊಳವ ಪುಣ್ಯಕಾರಿ (ಕಂಕ. ೩೦-೩); ಪುಣ್ಯಕೋಟಿಯು ನಲಿದು ಕರುವಿಗೆ ಪುಣ್ಯಕಾರಿ ಎನುತ ಬೇಗದಿ ಚೆನ್ನಗೌಡನ ಕಂಡು ತಾನು ಉನ್ನತಾದಿಂದೆಂದಿತು (ಗೋಹಾಡು. ೦೦೮). [ಸಂ. ಪುಣ್ಯಕಾರಿನ್]

**ಪುಣ್ಯಕಾಲ** (ನಾ). ಪವಿತ್ರವಾದ ಸಮಯ; ಪುಣ್ಯಕಾರ್ಯಕ್ಕೆ ಪ್ರಶಸ್ತವಾದ ಕಾಲ: 'ದಕ್ಷಿಣಾಯನಪುಣ್ಯಕಾಲ' ಪರಾ. [ಸಂ.]

**ಪುಣ್ಯಕ್ಷಯ** (ನಾ). ಗಳಿಸಿದ ಪುಣ್ಯ ತೀರಿಹೋಗುವಿಕೆ: ಪುಣ್ಯಕ್ಷಯದೊಳ್ ತನ್ನ ವಿದ್ಯೆಗಳುಂ ತನಗೆ ಬೆಸಕೆಯ್ಯದಿರೆ (ಆದಿಪು. ೨-೦೪ ವ). [ಸಂ.]

**ಪುಣ್ಯಕ್ಷೇತ್ರ** (ನಾ). ಪವಿತ್ರಸ್ಥಳ: ಪಾವನವಾದ ಯಾತ್ರಾಸ್ಥಳ: ಇದು ಪುಣ್ಯಕ್ಷೇತ್ರಮಿಾ ಇರ್ದುದೆ ದುರಿತಹರಕ್ಷೇತ್ರಮಿಾ ಮೆಯ್ಯೊಳೀ ತೋರ್ಪುದೆ ಸಿದ್ಧಕ್ಷೇತ್ರಂ (ಸುಕುಮಾ. ೪-೪೬). [ಸಂ.]

**ಪುಣ್ಯಚರಿತೆ** (ನಾ). ೧. ಪಾವನಗೊಳಿಸುವ ಕಥೆ; ಪುಣ್ಯಕಥೆ: ಮೇದಿನಿಯೊಳೀ ಪುಣ್ಯಚರಿತೆಯನಾದರಿಸಿ ಬರೆದೋದಿ ಕೇಳುವ ಸಾಧುಸಜ್ಜನರಾದವರಿಗಹುದಖಿಳಕೈವಲ್ಯ (ನಳಚ. ೯-೬೨). ೨. ಉತ್ತಮವಾದ ನಡವಳಿಕೆಯುಳ್ಳವಳು; ಶುದ್ಧವಾದ ಜೀವನವನ್ನು ನಡೆಸುವವಳು: ಆ ಪುಣ್ಯಚರಿತೆಯ ಭುವನಮಾತೆಯನುಪಚರಿಸಿಕೊಂಡಿರ್ದನೊಲವಿನಲಿ (ಹರಿಶ್ಚಂ. ೦-೩-೬). [ಪುಣ್ಯ + ಚರಿತೆ]

**ಪುಣ್ಯಜನ** (ನಾ). ೧. ಒಳ್ಳೆಯ ಮನುಷ್ಯ; ಸಜ್ಜನ. ೨. ಕುಬೇರನ ಸೇವಕ; ಯಕ್ಷ: 'ಪುಣ್ಯಜನೇಶ್ವರ' ಪರಾ. ೩. ನೈಋತಿ: "ರಾಕ್ಷಸಃ, ಕೋಣಪಃ . . . ಪುಣ್ಯಜನಃ, ನೈರೃತಃ, ಯಾತು, ರಕ್ಷಃ—೧೫ ನೈಋತಿ ಹೆಸರುಗಳು" (ನಿಘಂಟು. ೬೪). ೪. ರಾಕ್ಷಸ: "ರಕ್ಕಸರಲ್ಲಿಯುಂ ಪುಣ್ಯಜನಮೆಂಬುದು" (ಶಬ್ದಮ. ೦೩೦-೪). [ಸಂ.]

**ಪುಣ್ಯಜನೇಶ್ವರ** (ನಾ). ಯಕ್ಷರಾಜನಾದ ಕುಬೇರ: "ಐಳಬಿಲಃ . . . ಪುಣ್ಯಜನೇಶ್ವರಃ—ಈ ೧೭ ಕುಬೇರನ ಪೆಸರ್" (ಶಬ್ದಮ. ೦೪-೬೯); ಶಿವಾನುಬಂಧಸಯುಕ್ತನಾಗಿಯುಂ ದಶಾನನಾಪ್ತಂಗತಪ್ರಾಭವನಲ್ಲದ ಪುಣ್ಯಜನೇಶ್ವರನುಮೆನಿಸಿ ದೇವತಾಸ್ವರೂಪನಾದಂ (ಕೃಷ್ಣಪು. ೩-೨೦ ವ). [ಸಂ.]

**ಪುಣ್ಯಜಲ** (ನಾ). ಪವಿತ್ರವಾದ ನೀರು; ತೀರ್ಥ: ಉದ್ದಾಮಮುನಿಜನರಚಿತ ಮಂತ್ರಸ್ತೋಮಪುಷ್ಪಲಪೂತಪುಣ್ಯಜಲಾಭಿಷೇಚನದ ಶ್ರೀಮುಡಿಗೆ ಕೈಯಿಕ್ಕಿದನು (ಕುಮಾ.ಸ. ೦೪-೬೬). [ಸಂ.]

**ಪುಣ್ಯತಿಥಿ** (ನಾ). ಶ್ರಾದ್ಧದ ದಿನ: ಹಿರಿಯರ ಪುಣ್ಯತಿಥಿಯಂದು ಮಕ್ಕಳಿಗೆ ಸಿಹಿಯನ್ನು ಹಂಚಿದರು (ರೂಢಿ). [ಸಂ.]

**ಪುಣ್ಯದಿನ** (ನಾ). ೧. ಶುಭದಿವಸ; ಮಂಗಳಕರವಾದ ದಿವಸ: ಅಕ್ಷಯತೃತೀಯೆಯೆಂದಖಿಳಕ್ಷಿತಿಗಂ ನೆಗಟ್ದುದಲ್ತೆ ತತ್ಪುಣ್ಯದಿನಂ (ಆದಿಪು. ೦೦-೬); ಪುಶ್ಯದಮಾಸೆ ಸೂರ್ಯಗ್ರಹಣ ಸಂಕ್ರಾಂತಿ ಬ್ಯತೀಪಾತಗಳೆಂಬ ಸಕಳ ಪುಣ್ಯದಿನಂ ದೊರೆಕೊಣ್ಡಂದು (ಎಕ. XII. ಗುಬ್ಬಿ. ೦೦-೪೩; 1226). ೨. ಆಚಾರ್ಯಪುರುಷನು ಅವಸಾನ ಹೊಂದಿದ ದಿನದ ನೆನಪಿಗಾಗಿ ಮತೀಯ ಆಚರಣೆಯನ್ನು ಮಾಡುವ ದಿನ: ಇಂದು ಟೀಕಾಚಾರ್ಯರ ಪುಣ್ಯದಿನ (ರೂಢಿ). [ಸಂ.]

**ಪುಣ್ಯದೇವತೆ** (ನಾ). ಪುಣ್ಯದ ಅಧಿದೇವತೆ: ಇರೆ ಹರಿಯ ಪುಣ್ಯದೇವತೆಯಿರಲೆಡೆಯುಂ ಪೇಟ್ದು ತಾನೆ ಮಾಡುಗುಮೆನೆ ತನ್ನಿರವದ್ಯನ ಸೂಕ್ತಿಯನಾದರದಿಂದಾಂತರ್ ಮಹತ್ತರರ್ ಭೂಕಾಂತರ್ (ಶೀಬಪು. ೭-೨೪). [ಸಂ. ಪುಣ್ಯದೇವತಾ]

**ಪುಣ್ಯನದಿ** (ನಾ). ಪವಿತ್ರವಾದ ಹೊಳೆ; ಪಾವನವಾದ ನದಿ: ಪುಣ್ಯನದೀನದನಗ[ರಾ]ಪಣ್ಯವಿಭೂಷಣೆಯನೊಲ್ದು ನೋಡುತ್ತುಮಿಳಾಪುಣ್ಯಸ್ತ್ರೀಯಂ ಸಂಚಿತಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ (ಶಂಪಪು. ೩-೬೬). [ಸಂ. ಪುಣ್ಯನದೀ]

**ಪುಣ್ಯಪದಾರ್ಥ** (ನಾ). [ಜೈನ] ನವಪದಾರ್ಥಗಳಲ್ಲಿ ಒಂದು : ಜೀವಪದಾರ್ಥಮಜೀವಪದಾರ್ಥಂ . . . . ಪುಣ್ಯಪದಾರ್ಥಂ ಪಾಪ ಪದಾರ್ಥಮೆಂಬ ನವಪದಾರ್ಥಮುಮಂ . . . ಕೈಕೊಂಡು (ಸುಕುಮಾ. ೩-೭೯ ವ). [ಸಂ.]

**ಪುಣ್ಯಪಾಠಕ** (ನಾ). ಶುಭವನ್ನು ಕೋರುವವನು ; ಮಂಗಳಪಾಠಕ ; ಸ್ತೋತ್ರಪಾಠಕ ; ವಂದಿ : ಕುಬ್ಜವಾಮನಬಧಿರಮೂಕಕಿರಾತೋನ್ಮತ್ತ ಜಡಜನಂಗಳುಮಂ ಗಾಯಕವಾದಕನರ್ತಕಕಥಕಪುಣ್ಯಪಾಠಕವೈತಾಲಿಕ ನಿಕರಮುಮಂ ಕೊಟ್ಟು (ಆದಿಪು. ೯-೩೫ವ) ; ಭಜಿಯಿಸುವ ಪುಣ್ಯಪಾಠಕರ ಪರಕೆಗಳೊಳಗೆ . . . . ಬರುತಿರ್ದನಪ್ರತಿಮಸುಕುಮಾರಶೇಖರಂ (ನಂಬಿರ. ೩-೬೦). [ಸಂ.]

**ಪುಣ್ಯಪ್ರವರ** (ನಾ). ೧. ಮಹಾಪುಣ್ಯಶಾಲಿ : ಶಿವನ ಕರುಣಾಲಾಭ ಪುಣ್ಯಪ್ರವರಪಾರ್ಥನ ಮುನ್ನಿನಂದದಲವನಿಳುಹಿದ ನಿಖಿಳದಿವ್ಯಾಯುಧದ ವೇದಿಕೆಗೆ (ಕುಮ್ಮಾದ್ರೋ. ೯-೬). ೨. ಅತ್ಯಂತ ಪವಿತ್ರನಾದವನು : ಪಾಂಡವರಿಗಾವುದು ಕೊಱತೆ ಪುಣ್ಯಪ್ರವರ ಗದುಗಿನ ವೀರನಾರಾಯಣನ ಕರುಣದಲಿ (ಕುಮ್ಮಾಗ. ೪-೩೦). [ಸಂ.]

**ಪುಣ್ಯಫಲ** (ನಾ). ಒಳ್ಳೆಯ ಕಾರ್ಯಾಚರಣೆಯಿಂದ ಬರುವ ಫಲ : ಶರನಿಧಿಯ ವಡಬಾನಳನ ದಳ್ಳುರಿಯ ವರ್ಮವ ತಿವಿವ ತಂಬಿಗೆ ಮರಳುದಲೆಯುಂಟಾದಡದು ಭವಭವದ ಪುಣ್ಯಫಲ (ಕುಮ್ಮಾದ್ರೋ. ೯-೪೬), ; ಅನ್ನಪಾನವ ನೀಡಿ ವಿಪ್ರರಿಗೊಲಿಯುತಿಷ್ಟಾಪೂರ್ತಗಳ ಮುಗಿಸಿ ಖೋಡಿಯಿಲ್ಲದ ಪುಣ್ಯಫಲ ಕೈಗೂಡೆ (ಅಮೃ.ಶ. ೨-೦೦೦). [ಸಂ.]

**ಪುಣ್ಯಭೂಮಿ** (ನಾ). ಪವಿತ್ರವಾದ ಭೂಮಿ ; ಆರ್ಯಾವರ್ತ : "ಆರ್ಯಾವರ್ತಃ = ಪುಣ್ಯಭೂಮಿ" (ಕಾಕಕ್ಕ. ೦೭೭) ; "ಆರ್ಯಾವರ್ತಃ, ಪುಣ್ಯಭೂಮಿಃ_೨ . . . ವಿಂಧ್ಯಪರ್ವತಕ್ಕೂ ಹಿಮಗಿರಿಗೂ ಮೂಡಲು ಪಡುವಲು ಕಡಲುಗಳಿಗೂ ನಡುವೆಯಿರುವ ಭೂಮಿ" (ಸಿದ್ಧಾಂತಿ. ೯೪). [ಸಂ.]

**ಪುಣ್ಯಮೆ** 'ಪುಣ್ಣಮೆ' ನೋ.

**ಪುಣ್ಯಯಜ್ಞ** (ನಾ). [ಜೈನ] ದೀಕ್ಷೆಗೊಂಡವನು ಮಾಡುವ ಚತುರ್ದಶ ಪೂರ್ವಗಳ ಪಠಣ ಹಾಗೂ ಶ್ರವಣ ; ದೀಕ್ಷಾನ್ವಯಕ್ರಿಯೆಗಳಲ್ಲಿ ಆರನೆಯದು : ಅವತಾರವೃತ್ತಿಲಾಭ ಸ್ಥಾನಲಾಭಗಣಗ್ರಹಣಪೂಜಾರಾಧ್ಯ ಪುಣ್ಯಯಜ್ಞದೃಢಚರ್ಯೋಪಯೋಗತ್ವಮೆಂಬೆಂಟುಂಬೆರಸು . . . ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಗಳುಮಂ (ಆದಿಪು. ೦೩-೦೭ ವ) ; ಪೂರ್ವೋಪವಾಸಪೂರ್ವಕಂ ಬ್ರಹ್ಮಚಾರಿಯಾಗಿ ಪೂರ್ವಂಗಳಂ ಕೇಳ್ವುದು ಪುಣ್ಯಯಜ್ಞ ಕ್ರಿಯೆ (ಚಾವುಂಪು. ೨೨೩). [ಸಂ.]

**ಪುಣ್ಯಲೋಕ** (ನಾ). ಪುಣ್ಯವಂತನು ಸೇರುವ ಲೋಕ ; ದೇವಲೋಕ ; ಸ್ವರ್ಗ : ಭಕ್ತಿಬಲಮೇ ಪುಣ್ಯಲೋಕವ್ಯಕ್ತಿಯಂ ತೋರುಪದು (ಗಗಚಾ. ೦೦-೦೭). [ಸಂ.]

**ಪುಣ್ಯವಂತ** (ನಾ). ಪುಣ್ಯಸಂಪಾದನೆ ಮಾಡಿದವನು ; ಪುಣ್ಯಶಾಲಿ : ಭರತಂ ಶ್ರೇಯಾಂಸನಂ ನೀನೆ ಪುಣ್ಯವಂತನೆಯೆಂದು ಪೊಗಟ್ಟು ಪೂಜಿಸಿ ಪೋದಂ (ಚಾವುಂಪು. ೪೦) ; ನಯವಿದರೆಲ್ಲಮಲ್ಲಿಯೆ ಕಳಾನ್ವಿತರಲ್ಲಿಯೆ ಪುಣ್ಯವಂತರಲ್ಲಿಯೆ . . . ಎಂಬಿನೆಗಮಾ ಮಹಿ ಪೋಲ್ವುದು ಭೋಗಭೂಮಿಯಂ (ಪುಷ್ಪಪು. ೯-೦೭). ೨. ಅದೃಷ್ಟಶಾಲಿ ; ಭಾಗ್ಯವಂತ ; ಸುದೈವಿ : ಅವರು ಗತಿ ಇಲ್ಲದ ಜನ, ತಾವು ಪುಣ್ಯವಂತರು (ಸಣ್ಣ.ಕ. ೧, ೯೩) : ಈಗಿನ ಕಾಲದಲ್ಲಿ ಹೆಣ್ಣು ಹೆತ್ತೋರೇ ಪುಣ್ಯವಂತರು (ಕಂಕಕೊ. ೬). [ಸಂ. ಪುಣ್ಯವತ್]

**ಪುಣ್ಯವಂತೆ** (ನಾ). ೧. ಸಜ್ಜನೆ ; ಒಳ್ಳೆಯ ನಡತೆಯುಳ್ಳವಳು. ೨. ಅದೃಷ್ಟವಂತೆ ; ಭಾಗ್ಯವಂತೆ : ಒಂದು ವಿಷಯದಲ್ಲಿ ನನಗಿಂತಲೂ ನೀನು ಪುಣ್ಯವಂತೆ (ಆರ್ಯ.ಕ. ೪೦). [ಪುಣ್ಯವಂತ + –ಎ]

**ಪುಣ್ಯವತಿ** (ನಾ). = ಪುಣ್ಯವಂತೆ ೧ : ಆ ಪುಣ್ಯವತಿಯರಿರ್ವರುಮಾ ಪರಮೇಶ್ವರನ ಮನಮನೆನಿರ್ಕುಟಿಗೊಳೆ ಮತ್ತಾ ಪೀನವೃಷಸ್ಕಂಧನುಮಾ ಪದ್ಮಾಸ್ಯೆಯರ ಮನಮನಿರ್ಕುಟಿಗೊಂಡಂ (ಆದಿಪು. ೯-೨೫); ಪುಣ್ಯವತಿ ನೃಪೇಂದ್ರಕಾಂತೆ ನವಕಲ್ಪಲತಾಕೃತಿಯಿಂದಮೊಪ್ಪಿದಳ್ (ಶಾಂತಿಪು. ೯-೨೦೦). [ಸಂ. ಪುಣ್ಯವತೀ]

**ಪುಣ್ಯವಾಸರ** (ನಾ). = ಪುಣ್ಯದಿನ ೧ : ತತ್ಪೂಜಕರಣಪುಣ್ಯವಾಸರಂಗಳೊಳುಪವಾಸನಿರತಂ . . . ಅಭಿಷೇಕಂಗೆಯ್ದು (ಆದಿಪು. ೦೭-೦ ವ) ; ಒಂದು ಪುಣ್ಯವಾಸರಪ್ರಥಮಪ್ರಹರದೊಳ್ . . . ತಾನಿರ್ದನಾಸ್ಥಾನಿಯೊಳಮಳ ಸರಃಕಲ್ಪದೊಳ್ ರಾಜಹಂಸಂ (ಚಂದ್ರಪು. ೨-೭೨). [ಸಂ.]

**ಪುಣ್ಯಶ್ಲೋಕ** (ನಾ). ೧. ಯಾರ ಸ್ತುತಿಯಿಂದ ಪುಣ್ಯ ಬರುವುದೋ ಅಂತಹವನು ; ಸತ್ಕೃತಿಗಳಿಂದ ಪ್ರಸಿದ್ಧನಾದವನು : ಪರಮಪುಣ್ಯ ಶ್ಲೋಕ ಜಯ ಜಗಭರಿತ ನಿರ್ಮಳರೂಪ ಜಯ ಜಯ ಕರುಣಿ ರಕ್ಷಿಸು (ಕುಮ್ಮಾಅ. ೨೩-೩೩). ೨. ಹರಿಶ್ಚಂದ್ರ, ನಳ, ಪುರುಕುತ್ಸ, ಪುರೂರವ, ಸಗರ ಮತ್ತು ಕಾರ್ತವೀರ್ಯ ಎಂಬ ಆರು ಜನ ಚಕ್ರವರ್ತಿಗಳಲ್ಲಿ ಪ್ರತಿಯೊಬ್ಬನಿಗೂ ಇರುವ ಹೆಸರು : "ವಿವರಿಸೆ ಹರಿಶ್ಚಂದ್ರ ನಳ . . . ಕಾರ್ತವೀರ್ಯರೆನಿಪ್ಪ ರಜುವರತ್ಕವಿರಳದ ಚಕ್ರವರ್ತಿಗಳಕ್ಕವರ್ಗೆ ಪುಣ್ಯಶ್ಲೋಕರೆಂಬ ನಾಮಂ" (ಮಂಗರಾ. ೭೯-೨) ; ಸೋಕಿತೇ ಕಡುನಿಂದೆ ಪುಣ್ಯಶ್ಲೋಕನಿ[ಪಾಲಾಂ ೧]ಗೆ (ತೊರವಾ. ೩-೨-೦೯). ℙ 'ಪುಣ್ಯಶ್ಲೋಕ' ಎಂದು ಧರ್ಮರಾಜನಿಗೂ ಜನಾರ್ದನನಿಗೂ ಹೇಳುತ್ತಾರೆ. [ಸಂ.]

**ಪುಣ್ಯಶ್ಲೋಕೆ** (ನಾ). ಪವಿತ್ರವಾದ ನಡವಳಿಕೆಯಿಂದ ಖ್ಯಾತಳಾದವಳು ; ಸದಾಚಾರಸಂಪನ್ನೆ : ಬಲ್ಲಂ ಬಲ್ಲನವಳಯೋನಿಜೆಯೆಂಬುದಂ ಪಾವನೆಯೆಂಬುದಂ ಪುಣ್ಯಶ್ಲೋಕೆಯೆಂಬುದಂ (ರಾಮಾಶ್ವ. ೨೩-೨೬). ℙ ಇದು ಸೀತೆ ಹಾಗೂ ದ್ರೌಪದಿ – ಈ ಇಬ್ಬರಿಗೂ ಅನ್ವಯಿಸುತ್ತದೆ. [ಸಂ. ಪುಣ್ಯಶ್ಲೋಕಾ]

**ಪುಣ್ಯಸ್ತ್ರೀ** (ನಾ). ಮಡದಿ ; ಹೆಂಡತಿ : ಖತಿಯ ಹಿಡಿದವ ಬಳಿಕಲಾ ರಘುಪತಿಯ ಪುಣ್ಯಸ್ತ್ರೀಯ ಕೊಲುವಾಯತದಲ್ಲೆದಿದನವನು ಬನವನು ಜನಕಸಂಪನೆಯ (ತೊರವಾ. ೭-೯೩-೨೯); ಮೋಳಿಗೆಮಾರಯ್ಯಗಳ ಪುಣ್ಯಸ್ತ್ರೀ ವಚನ (ಸರ್ವ. ೦೯೪). [ಸಂ.]

**ಪುಣ್ಯಾಂಗನೆ** (ನಾ). ಸಚ್ಚರಿತೆ ; ಸಜ್ಜನೆ : ಮುಪ್ಪುರ ಪಡಿಬರಿಸಿ ಪೋರಿದುದು ಪುರದೊಳಗಿರ್ಪ ಪುಣ್ಯಾಂಗನೆಯರ ಸಚ್ಚರಿತದ ಸಲಿಗೆಯಿಂದೈಸೆ (ಹರಿಬ. ೨-೪೬). [ಸಂ. ಪುಣ್ಯಾಂಗನಾ]

**ಪುಣ್ಯಾತಗಿತ್ತಿ, ಪುಣ್ಯಾತ್ಗಿತ್ತಿ** (ನಾ). = ಪುಣ್ಯಾಂಗನೆ: ನಮ್ಮ ಗೆಣೆಕಾತಿ ಹೊನ್ನೂರ ಬಣಜಿಗಿತಿ ಪುಣ್ಯಾತಗಿತ್ತಿ ಪುರುಷರ ತೊಡೆ ಮ್ಯಾಲೆ ನಮ ಹಂಬಲವ ಮರತಳೆ (ಜಾಪದ. ೭೯); ಪುಣ್ಯಾತಗಿತ್ತಿ ಎರಡು ಹೆಜ್ಜೆ ಒಂದು ಕಡೆ ಇಟ್ಟು ನಿಂತಿದ್ದರೆ ತಾನೇ ಕೇಳುವುದು (ರೂಪಕ. ೩೩೬). ಪುಣ್ಯಾತ್ಗಿತ್ತಿ : ನನಗೆ ಬಂದ ತೊಂದರೆಯೆಲ್ಲಾ ಆ ಪುಣ್ಯಾತ್ಗಿತ್ತಿಯಿಂದ ಪರಿಹಾರವಾಯಿತು (ರೂಢಿ). [<ಪುಣ್ಯಾತ್ಮ + –ಗಿತ್ತಿ]

**ಪುಣ್ಯಾತ್ಗಿತ್ತಿ** 'ಪುಣ್ಯಾತಗಿತ್ತಿ' ನೋ.

**ಪುಣ್ಯಾತ್ಮ** (ನಾ). = ಪುಣ್ಯವಂತ : ಆ ಪುಣ್ಯಾತ್ಮನನ್ನು ತಂಪುಹೊತ್ತಿನಲ್ಲಿ ನೆನೆಯಬೇಕು (ರೂಢಿ). [ಸಂ. ಪುಣ್ಯಾತ್ಮನ್]

**ಪುಣ್ಯಾರ್ಥ** (ನಾ). ಪುಣ್ಯವನ್ನು ಗಳಿಸಬೇಕೆಂಬ ಗುರಿ, – ಉದ್ದೇಶ : ಎಳಸಿ ಪುಣ್ಯಾರ್ಥದಿಂ ವಂದನೆ ನಿಮಿತ್ತ ಗುರುನಿಳಯಕ್ಕೆ ಶಿಷ್ಯನೆಯ್ತಪ್ಪುದಕೆ ಸಾಹಸದ ಬಲವೇಕೆ ತಂದೆ (ಹಕಚಾ. ೯-೬). [ಸಂ.]

**ಪುಣ್ಯಾಸ್ರವ** (ನಾ). ೧. ನಾಗರಾಜಕವಿಯು ರಚಿಸಿದ ಒಂದು ಕನ್ನಡ ಕಾವ್ಯದ ಹೆಸರು : ವಿನಯನಿಧಿ ನಾಗರಾಜಂಗನುಪಮಗುಣನಿಧಿಯನಂತ

ವೀರ್ಯಬ್ರಾತಿಪಂ ಮನವೊಲಿದು ಪೇಳ್ದ ತೆಱದಿಂ ಜನಹಿತಮಂ ಪೇೞ್ವ ನೊಲಿದು ಪುಣ್ಯಾಸ್ರವಮಂ (ಪುಣ್ಯಾಸ್ರ. ೦-೩೪). ೨. [ಜೈನ] ಪುಣ್ಯವು ಜೀವನಲ್ಲಿ ಕೂಡಿಕೊಳ್ಳುವಿಕೆ ; ಪುಣ್ಯಸಂಪಾದನೆ: ಆಸ್ರವಮೆರಡು ತೆಱಂ ಪುಣ್ಯಾಸ್ರವಮೊಂದದಱ ವೈಪರೀತ್ಯಭವಂ ಪಾಪಾಸ್ರವಂ (ಶಾಂತಿಪು. ೦೨-೯); ಜಿನಸ್ತವಂಗಳೊಳಗೊಂಡಂ . . . ಒಱಲ್ದು ಚಿಂತಿಸಿದವಂಗಂ ಸಾರ್ವ ಪುಣ್ಯಾಸ್ರವಂ ಪವಣಿಲ್ಲ (ಸುಕುಮಾ. ೦-೩೯). [ಸಂ.]

**ಪುಣ್ಯಾಹ** (ನಾ). ೧.=ಪುಣ್ಯದಿನ : ಮಾಘಶುದ್ಧದಶಮಿಪುಣ್ಯಾಹಯುಕ್ತಂ ಪ್ರಜಾಪತಿಯೋಗಂ ಬೆರೆದಂದು ರೋಹಿಣಿಯೊಳ್ . . . ಆದುದಂದಜಿತ ತೀರ್ಥೇಶಾಬ್ಜಮಿತ್ರೋದಯಂ (ಅಜಿತ. ೩-೨೨). ೨.=ಪುಣ್ಯಾಹವಾಚನ : ಗಣಕಗಣ ಪುನಃಪುನರುಚ್ಚರಿತ ಪುಣ್ಯಾಹಪ್ರಶಸ್ತರವದೊಡನೆ . . . ಪುಣ್ಯಾಂಗನಾಜನದಾಶೀರ್ವಾದನಾದಮೊದವೆಯುಂ (ಶಂರಾಮ. ೫-೦೨೪ವ); ಚೈತ್ರಸಿತಪಂಚಮಿಯಲುತ್ತರಪೂರ್ವವೇದಿಯ ವಿಮಲಪುಣ್ಯಾಹದ ಮಹಾವಾಚನೆಯ ವಿಸ್ತರಿಸಿ (ಕೊರರಾ. ೦-೭-೪೦). [ಸಂ.]

**ಪುಣ್ಯಾಹವಾಚನ** (ನಾ). ಮದುವೆ ಮೊದಲಾದ ಮಂಗಳಕಾರ್ಯಗಳ ಆರಂಭದಲ್ಲಿ ಮಾಡುವ ಒಂದು ಶುಭಕರವಾದ ಧಾರ್ಮಿಕವಿಧಿ ; ಸ್ವಸ್ತಿವಾಚನ : ಪುಣ್ಯಾಹವಾಚನಕ್ಕೆ ಕುಳಿತ ಮನೆಯ ಯಜಮಾನನಂತೆ ಅವನು 'ಮಮ' ಎನ್ನುವುದನ್ನು ಅಷ್ಟೇ ರೂಢಿಸಿಕೊಂಡಿದ್ದ (ದೀಪಪ. I, ೬೩). [ಸಂ.]

**ಪುಣ್ಸೆ** 'ಪುಳಿಸೆ' ನೋ.

**ಪುತಪುತನೆ** (ಅ). ಒಂದು ಅನುಕರಣಾವ್ಯಯ : ಭೀಮಸೇನನು . . . ಮರವನ್ನು ಒದ್ದು ಅಲ್ಲಾಡಿಸುವನು ; ಹಣ್ಣುಗಳು ಪುತಪುತನೆ ಉದುರುವುವು (ವಕಥಾ. ೦೬). [ಪುತಪುತ₀+—ಅನೆ₁]

**ಪುತಲಿ** 'ಪುತ್ಥಳಿ' ನೋ.

**ಪುತಳಿ** 'ಪುತ್ಥಳಿ' ನೋ.

**ಪುತುಗು** (ಕ್ರಿ). ಚಡಪಡಿಸು ; ಕಳವಳಿಸು : ಮನದಲಿದ್ದಾಶೆಯಲಿ ಬಾಡಿದ ವದನಕಮಲದಲಿ ಮನದೊಳಗೆ ಪುತುಗುತ್ತ ನಿಲ್ಲದೆ ಮನಕತದಿ ಬಾಗಿಲಿಗೆ ಬರುತಾ ವನಿತೆ ಬಳಲಿದಳು (ಶಿಭಾಗ. ೦೦-೦೫-೨). [ ? ]

**ಪುತ್ತ** 'ಪುತ್ತು₁' ನೋ.

**ಪುತ್ತರಿ**, ಹುತ್ತರಿ (ನಾ). ೧. ಹೊಸ ಅಕ್ಕಿ : ಹುತ್ತರಿ ಅಥವಾ ಪುತ್ತರಿ ಎಂದರೆ ಹೊಸ ಅಕ್ಕಿ ಎಂದು ಅರ್ಥ (ಕಪಪು. ೪-೬೩). ೨. ಕೊಡಗರು ಹೊಸ ಅಕ್ಕಿಯನ್ನು ಮನೆಗೆ ತರುವಾಗ ಆಚರಿಸುವ ಹಬ್ಬ ; ಸುಗ್ಗಿ : ಪುತ್ತರಿಯ ದಿನ ಮುಂಜಾನೆಯೇ ಗ್ರಾಮದೇವಾಲಯದ ಅರ್ಚಕ ಮನೆಯೊಳಗೆ ತೀರ್ಥಜಲವನ್ನು ಪ್ರೋಕ್ಷಿಸಿ ಶುದ್ಧಿಗೊಳಿಸಿ ಹೋಗಿದ್ದ (ಹುಂಪಾ. ೦೬೬). **ಹುತ್ತರಿ** : ೧. ಹುತ್ತರಿ . . . ಎಂದರೆ ಹೊಸ ಅಕ್ಕಿ (ಕಪಪು. ೪-೬೩). ೨. ಹುತ್ತರಿ ಹತ್ತಿರ ಬಂದಂತೆ ಮನೆಯಲ್ಲಿ ತಿಂಗಳುಗಟ್ಟಲೆ ಅಕ್ಕಿಯ ದರ್ಶನವಾಗುತ್ತಿರಲಿಲ್ಲ (ಮಕಕೂ. ೦೬) ; ಹುತ್ತರಿಹಬ್ಬವು ಕೊಡಗರ ಸುಗ್ಗಿಯ ಹಬ್ಬ (ಕಪಪು. ೪-೬೩).

[ದೇ.॥ ಮಲ. ಪುತ್ತರಿ ; ಕೊಡ. ಪುತ್ತರಿ, ಪುತ್ತೇರಿ]

**ಪುತ್ತಲಿ**, ಪುತ್ತಳಿ (ನಾ). ೧. ಬೊಂಬೆ ; ವಿಗ್ರಹ ; ಮೂರ್ತಿ : ನವಕುಮಾರನು ಯಂತ್ರದ ಪುತ್ತಲಿಯಂತೆ ಅವಳ ಸಂಗಡ ನಡೆದನು (ಕಪಾಕುಂ. ೨೦). **ಪುತ್ತಳಿ** : ೧. "ಪುತ್ತಳಿಯೆನೆ ಪುತ್ರಿಕೆ" (ಕಬಿಕಂ. ೦೯೩) ; ಹೊಗೆ ಹತ್ತಿದ ಪುತ್ತಳಿಯಂತೆ ಬಂದನುದ್ಯಾನವನೊಪ್ಪದಿಂ ಕಳೆದು ರಾಜಕುಮಾರನಪಾರಚಿಂತೆಯಿಂ (ಶಂಬಲ. ೭ ಸೂಕಪ); ಪುತ್ತಳಿಯನೊಯ್ವಂತೆ ಯಾನದಿಯೆತ್ತಿ ತಂದರು ಖಳರು ಮೂದಲಿಸುತ್ತ ತೋಱಿದರಿರುಳು ರಣರೌರವವನವನಿಜೆಗೆ (ಕೌಶಿರಾ. ೨೮-೦) ; ಹುಡುಗಿ ಬೆಳೆದಳು ; ಯೌವನ ಬಂದು ಬಂಗಾರದ ಪುತ್ತಳಿಯಂತೆ ಶೋಭಿಸುವ ಹಾಗಾದಳು (ವಕಥಾ. ೦೬೬).

೨. ಬಂಗಾರ ; ಚಿನ್ನ : ಪರುಷದ ಪುತ್ತಳಿಯು ಇರವಿನಂತೆ . . . ಅನಲನ ನುಂಗಿದ ಶಿಲೆಯಂತೆ ಅರುಣನ ಕಿರಣವ ಕೊಂಡ ದ್ರವ್ಯದಂತೆ ಇನ್ನೇನುಪಮಿಸುವೆ (ಪ್ರೋಳಮಾ. ೬-೨೨).

[ಸಂ. ಪುತ್ತಲೀ./ ತುಳು. ಪುತ್ತೊಳಿ ; ತೆಲು. ಪುತ್ತಳಿ, ಪುತ್ತಡಿ]

**ಪುತ್ತಲಿಕೆ** (ನಾ). ಬೊಂಬೆ ; ಪುತ್ಥಳಿ. [ಸಂ. ಪುತ್ತಲಿಕಾ]

**ಪುತ್ತಲಿಗೊಂಬೆ**, ಪುತ್ತಳಿಗೊಂಬೆ (ನಾ). ಲೋಹ, ಮರ ಮೊದಲಾದುವುಗಳಿಂದ ಮಾಡಿದ ಗೊಂಬೆ : ನಮ್ಮೂರಿಗೆ ಹೆಣ್ಣು ವೇಷದವರು, ಪುತ್ತಲೀಗೊಂಬೆ ಆಟದವರು, ಚಕ್ಕಳಗೊಂಬೇ ಆಟದವರು ಮುಂತಾದವರು ಬರುತ್ತಿದ್ದರು (ಹುಬ್ಬಿಹ. ೯೦). **ಪುತ್ತಳಿಗೊಂಬೆ** : (೧). 'ಪುತ್ಥಳಿಬೊಂಬೆ' ಪರಾ. [ಪುತ್ತಲಿ+ಗೊಂಬೆ₁]

**ಪುತ್ತವುಗು** 'ಪುತ್ತುವೊಗು' ನೋ.

**ಪುತ್ತಳಿ** 'ಪುತ್ತಲಿ' ನೋ.

**ಪುತ್ತಳಿಗೆ** 'ಪುತ್ಥಳಿಕೆ' ನೋ.

**ಪುತ್ತಳಿಗೆಲಸ** (ನಾ). ಬೊಂಬೆಯಾಕಾರದ ಸುಳಿವುಗಳನ್ನು ಕಂಡರಿಸುವಿಕೆ: ಪುತ್ತಳಿಗೆಲಸದ ಬಾಗಿಲು ಕಾಂಚನಭಿತ್ತಿ ಮಾಣಿಕದ ಕಂಬಗಳು (ಭರತ. ೪೭-೩೬).

[ಪುತ್ತಳಿ (=ಪುತ್ತಲಿ) + ಕೆಲಸ]

**ಪುತ್ತಳಿಗೊಂಬೆ** 'ಪುತ್ತಲಿಗೊಂಬೆ' ನೋ.

**ಪುತ್ತಳಿಬಣ್ಣ** (ನಾ). ಚಿನ್ನದ ವರ್ಣ ; ಹೊಂಬಣ್ಣ : ಪುತ್ತಳಿಬಣ್ಣದ ಚಿತ್ರಶಾಲಿಯನುಟ್ಟು ಹಸ್ತಕಂಕಣ ನಲಿವುತ ಮದುವಳಿಗೆ ಮುತ್ತಿನಾರುತಿ ಬೆಳಗಿರೆ (ಲೋಕಗೀ. ೦೩). [ಪುತ್ತಳಿ (=ಪುತ್ತಲಿ) + ಬಣ್ಣ]

**ಪುತ್ತಳಿಬೊಂಬೆ** (ನಾ). ಚಿನ್ನದ ವಿಗ್ರಹ : ಕೌಶಿಕಾದೇವೀ ಪುತ್ತಳಿಬೊಂಬೆ ಯಂದದಿ ತೊಳಗಿದಳು ತಾನತ್ಯಂತಲಾವಣ್ಯದಿಂದ (ದೇವೀಕ್ಷ. ೪೬).

[ಪುತ್ತಳಿ (=ಪುತ್ತಲಿ) + ಬೊಂಬೆ]

Δ **ಪುತ್ತಟಿ** 'ಪುತ್ಥಳಿ' ನೋ.

Δ **ಪುತ್ತಟಿಗೆ** 'ಪುತ್ಥಳಿಕೆ' ನೋ.

**ಪುತ್ತಾರು** (ನಾ). ಗೌರವಸೂಚಕವಾದ ಒಂದು ವಸ್ತು ; ಸಾಧಾರಣ ಬಿರುದುಗಳು . . . ಪಂಚದೀವಟಿಗೆ, ಪೆಂಡ್ಯ, ಪಾದುಕೆ, ಪುತ್ತಾರು, ಅಂಬುಲಾಕುಳ, ಹಡಪ (ಗುರುದ. ೦೦). [ ? ]

**ಪುತ್ತಿಕೆ** (ನಾ). ೧. ಒಂದು ಬಗೆಯ ದುಂಬಿ : "ಪತಂಗಿಕಾ, ಪುತ್ತಿಕಾ-೨ ಹೆಣ್ಣುಪತಂಗದ ಹುಳುವಿಗೂ, ಈಚಲುಹುಳಕ್ಕೂ, ದೊಡ್ಡ ಜೇನು ನೊಣಕ್ಕೂ ಹೆಸರು" (ಸಿದ್ಧಾಂತ. ೦೬೦). ೨. ಬಿಳಿಇರುವೆ ; ಗೆದ್ದಲು ; ಒರಲೆ. ೩.=ಪುತ್ತಿಗೆ. [ಸಂ. ಪುತ್ತಿಕಾ]

**ಪುತ್ತಿಗೆ** (ನಾ). ಬೊಂಬೆ ; ವಿಗ್ರಹ : "ಪುತ್ತಿಗೆನೆ ಪುತ್ರಿಕೆಯೆ" (ಕಶಾಗಾ. ೩೮); ಪುತ್ರಿಕಾ—ಪುತ್ತಿಗೆ (ಕಮದ. ೨೬೦ ಕ್ರಿಯೋ). [< ಸಂ. ಪುತ್ರಿಕಾ]

**ಪುತ್ತಿಡು**, ಹುತ್ತಿಡು (ಕ್ರಿ). ಹುತ್ತವನ್ನು ಕಟ್ಟು : ಮೆಯ್ಯ ಮಣ್ ಕೊರಲ್ಗೆ ಪುತ್ತಿಡೆ ಪರ್ಬಿದ ಬಳ್ಳಿ ಸುತ್ತಲುಂ ಸೊಗಯಿಸೆ . . . ಜಾನಿಸುತ್ತಗಲದೆ ನಿಂದನೊರ್ವ ಸವಣಂ (ಕಬ್ಬಿಗಾ. ೨೨೭); ಒಱಲೆ ತಗುಳ್ದು ಪುತ್ತಿಡುವುದೆಯ್ದೆ . . . ಮುನೀಂದ್ರನ ನಿಶ್ಚಲಾಂಗದೊಳ್ (ಧರ್ಮ. ೨-೦೨೨). **ಹುತ್ತಿಡು** : ಗುಡುಗು ಬಿಡದಲೆ ಮೊಳಗೆ ಹುತ್ತಿಡಲೊಱಲೆ ಮಾಳದ ಬೆಕ್ಕು ವೊಱಲುತಿರೆ (ಕೌಶಿರಾ. ೦೯-೫). [ಪುತ್ತು₁+ಇಡು₁]

**ಪುತ್ತು₁**, ಪುತ್ತ, ಹುತ್ತ, ಹುತ್ತು (ನಾ). ೧. ಗೆದ್ದಲುಗಳು ಕಟ್ಟುವ ಮಣ್ಣಿನ ಗೂಡು ; ಹಾವು ವಾಸಿಸುವ ಗೂಡು : ಕೊಲ್ಲೆಂ ಬಿಸುಡಾಯುಧಮಂ ಪುಲ್ಲುಂ ಕರ್ಚೇಱು ಪುತ್ತಂ (ಕಬಿರಾ. ೩-೨೦೦) ; ಮಡಗಿಡಲೆಂದು ಪುತ್ತಿನೊಳಗೊಯ್ಯನೆ ಕುತ್ತಿದ ಕಯ್ಯನಾಗಳಾಗಳೆ . . . ಮಹೋರಗನೆಯ್ದೆ ಪಲ್ಗಳೆರ್ದೊಡೆ ಕಡಿದಿಟ್ ನೆತ್ತರೊಟ್ದುರ್ಗೆ ಕೊಡುದು ತತ್ಪಪ್ಪುದಿಯಂ (ಆದಿಪು. ೨-೪೦) ; ಬೆರಲಂ ಕರ್ಚುವ ಪುತ್ತಂ

**ಪೊಂಗುಪ್ಪೆ** (ನಾ). ಚಿನ್ನದ ಜಾಡಿ ; ಬಂಗಾರದ ಹೂಜಿ : ಪರಿಮಳಿಪ ಸೀತಳೋದಕವ ಪೊಂಗುಪ್ಪೆಯೊಳು ತುಂಬಿಡುತ್ತೆ (ಸಸಪೋ. ೦೯-೦೭).
[ಪೊಂ (< ಪೊನ್) + ಕುಪ್ಪೆ₃ (< ಕುಪ್ಪಿ₁)]

**ಪೊಂಗುಬ್ಬಿ** (ನಾ). ಚಿನ್ನದ ಗುಬುಟು,—ಗುಮಟು : ಅಂಗದೊಳ ಗಮರ್ದ ಬಣ್ಣಬಗೆಗಳ ಬೆಳ್ಪೊಂಗುಬ್ಬಿವರಿಗೆಯುಂ ತೊಡೆ ಚಾಟು ಗೊಳುತೆ (ಕಂಕ್ಕಿ. ೪೪-೩೦). [ಪೊಂ (< ಪೊನ್) + ಗುಬ್ಬಿ₁]

**ಪೊಂಗುರು**, ಪಿಂಗುರು, ಪೆಂಗುರು, ಹೆಂಗುರು, ಹೊಂಗರ್ರಿ, ಹೊಂಗುರು (ನಾ). ಕೊಕ್ಕರೆಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ : ಕೋಗಿಲೆ ಚಾದಗೆ ಪೋದಗೆ . . . ಕಾಗೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಕುಂದಂ ಬಲಾಕಿ ಲಾವುಗೆ ಸೇನಂ (ಶಬ್ದಸಾ. ೧೧೪೪ ಸೂತ್ರ). **ಪಿಂಗುರು** : ಪೊಣರ್ವಕ್ಕಿ ಪಿಂಗುರು[ಪಾಠಾಂ. ರಿ] ಗೂಗೆ ಮುಕುಂದ ಬಳಾಹಕ (ಸೂತ್ರಸು. ೩-೦೪೪). **ಪೆಂಗುರು** : ಗಿಳಿ ಪುರುಳಿ ಪೆಂಗುರು[ಪಾಠಾಂ. ಪಿಂಗುರಿ] ಕಾರಂಡವಪಾಂಡೆ ಮೊದಲಾಗೊಡೆಯ ಗಗನಚರಂ ಪಂಚೇಂದ್ರಿಯಂ ಗಳುವಾಗಿ (ಧಮ್ಮಾಮ. ೧೭-೯). **ಹೆಂಗುರು** : ಬಾನಾಡಿ ಪರ್ಬಕ್ಕಿ ಹೆಂ[ಪಾಠಾಂ. ಹಿಂ]ಗುರು ಕಾಕಂ . . . ಇಕರ್ಬಂ ತದ್ವನಾಗ್‌ಘದೊಳ್ (ರಾಜಶೇ. ೩-೩೯); ಕಾಕಂ ಬಕಂ ಕೊಂಚೆ ಹೆಂಗುರು . . . ಚಾತಕಮುವಿಕರ್ಬಂ ತತ್ಪುರು ವ್ರಾತದೊಳ್ (ಹರಿಶಕಂ. ೯-೯೬); ಪಾರಾವತಂ ಹೆಂಗುರು ಟೀವಂ ಟಿಟ್ಟಿಭಂ . . . ತದ್ವನಾಂತಸ್ಥಮಿರ್ಪುದು (ಕಂಕಿ. ೩-೩೩). **ಹೊಂಗರ್ರಿ** : ಹೊಂಗರಿ ಚರಣಾಯುಧಂ ಗಿಡುಗ ಗೀಜಗನಾ ಗಿಳಿ ಕಾಡ ಗುಬ್ಬಿಗಳ್ ಬರುತಿರೆ (ಸಸ್ಯಸಾ. ೬-೩೦೭). **ಹೊಂಗುರು** : ಹೊಂ[ಪಾಠಾಂ. ಹೆಂ]ಗುರು ಚರಣಾ ಯುಧಂ ಶಕುನಿ . . . ತಿತ್ತಿರಿ ಗಿಡುಗಂಗಳೆಂಬ ಖಗವೃಂದದಿನಲ್ಲಿಯರಣ್ಯ ಮೊಪ್ಪುಗುಂ (ಗಂಳ. ೦-೭೯ ; ಷುಗ್ಲಸಾ. ೩-೦೪೦ ನೋ); ಹರಡೆ ಹಸುಬ . . . ಹೊಂಗುರುವಕ್ಕಿಯೆಸೆದವಂದಲ್ಲಿ (ಶ್ರೀಪಾಂ. ೭-೦೬).
[<ಪ್ರಾ. ಪೋಕ್ಖರ./ಸಂ. ಪುಷ್ಕರ./ತೆಲು. ಪೆಗ್ಗುರು, ಬೆಗ್ಗುರು]

**ಪೊಂಗುರುಜು** (ನಾ). ಬಂಗಾರದ ಮಂಟಪ : ಕೇರಿಕೇರಿಯಲಿ ಪನ್ನೀರ ಚಳಯ ರನ್ನದೋರಣ ಪೊಂಗುರುಜುಗಳು ಮೇರೆಯಿಲ್ಲದೆ ಕಾಂತಿ ವಿಡಿದುವು (ಕಂಪಂ. ೨೩-೨೬). [ಪೊಂ (< ಪೊನ್) + ಕುರುಜು]

**ಪೊಂಗುಲ** (ನಾ). ೧. ಚಿನ್ನದ ಕೆಲಸ ಮಾಡುವವರ ಕುಲಕ್ಕೆ ಸೇರಿ ದವನು ; ಅಕ್ಕಸಾಲಿಗ : ಕಡೆಕೊಳಂದ ಮಣ್ಣಿಗಪ್ಪೊಂಗುಲಂ ಕೊಡ ಲಿಯಂ ಬಲ್ಲಸಿಯ ಕಮ್ಮಾರು ಮುಟ್ಟಗೆರಿಯೊಡೆಯೊಂ ಒದಲಪೋಲೆಯಂ ಮಬ್ಬಳಂ (ಪ್ಯಾಲಂ. ೦೯೩೪, ೩೯-೨೨ ; ಸು. 11ನೆಯ ಶ). ೨. ಒಬ್ಬಾತನ ಹೆಸರು : ಸಾಕ್ಷಿ ಕೂಡಲೂರ್ ಪೊಬ್ಗುಲರು ಎಳ್ವಡಿಯರು ಬದರಿಯರುಮ್ (ಪ್ಯಾಲಂ. ೦೯೦೬, ೦೩-೯ ; 726). [ಪೊಂ (< ಪೊನ್) + ಕುಲ]

**ಪೊಂಗುಲ್ವಟ್ರಿ** (ನಾ). ಒಂದು ಪ್ರದೇಶದ ಹೆಸರು (?) : ತೆನ್ಕಣ ಕೊನೆದು ಪೊನ್ಗುಲ್ವಟ್ರಿಯ ತೆನ್ನೊಳ್ಳೆ ತೆನ್ಕಣಸೀಮೆ (ಪ್ಯಾಲಂ. ೦೯೩೭, ೦೨೨-೩೦ ; 808 ೯). [ ? ]

**ಪೊಂಗುಳ** (ನಾ). ಚಿನ್ನದ ಕುಳ,—ಗುಳ : ಪೊಂಗುಳಂಗಳಂ ಕಬ್ಬಿಣದ ಗುಳವೆಂದು ಕೈಯಲೀಯೆ (ಶಕುಪು. ೬-೩-೨).
[ಪೊಂ (< ಪೊನ್) + ಕುಳ₁ (< ಕುಟು)]

**ಪೊಂಗುಳಿಗೆ** (ನಾ). ಚಿನ್ನದ ಗುಳಿಗೆ : ಪೊಂಗುಳಿಗೆಗಳ ಪರಿಯೊಳಂಗು ಷ್ಟಂಗಳೊಪ್ಪುಗು ನಿಮಿರ್ದ ಕೋಮಳದಂಗುಳಂಗಳು ಮೆಚುವವುದುಗಣ ದೊಲು ಪದನಖಾಳಿ (ಶಿಶು. ೯-೦೭). [ಪೊಂ (< ಪೊನ್) + ಗುಳಿಗೆ₁]

**ಪೊಂಗುಋವ** (ನಾ). ಚಿನ್ನದ ದ್ವೀಪ : ಪಾಲ್ಗಡಲೊಳಗಣ ಪೊಂಗು ಋವಂ ಗಡಮೆನಿಸಿದುದಮರನಗಮಿದೇನಚ್ಚರಿಯೋ (ಪರಶು. ೦೨-೩೩).
[ಪೊಂ (< ಪೊನ್) + ಕುಋುವ₁]

**ಪೊಂಗೆಜ್ಜೆ**, **ಹೊಂಗೆಜ್ಜೆ** (ನಾ). ಚಿನ್ನದ ಗೆಜ್ಜೆ : ಮಧುಪಾನದಿಂ ಸೊಕ್ಕಿದ ಮುತ್ತುಂಬಿಯ ಧ್ವನಿಗಳಂತೆ ಜರ್ಝರಿರವಮಾದ ಪೊಂಗೆಜ್ಜೆಗಳ ಮೊಲ್ಲುಲಿ ಯೊಳಂ (ಕಾದಂಪೂ. ೬೬); ಪೊಂಗೆಜ್ಜೆಯುಲಿವು ನೆಲಹುಗ್ಗಡಿಸುತ್ತಿಂದೆಸೆಯು . . . ನಡೆಕರುತಿರ್ದಳ್ (ಗಂಳ. ೩-೦೦೬); ಪೊಚ್‌ಯಲೊಡ್ಯಾಣದ ಪೊಂಗೆಜ್ಜೆಗಳ ದನಿ . . . ಪಾತುಂತ ಓಿದು ಸಂಭ್ರಮದ ಬೀಚ್‌ದರು (ಕಂಪಂ. ೨೦-೦೦೦). **ಹೊಂಗೆಜ್ಜೆ** : ಹೊಂಗೆಜ್ಜೆಗಳ ಮುಕುರದ ಘಂಟೆಗಳ . . . ವಜ್ರಮಯಧಾರಗಳಲೆಸೆದುದು ಭದ್ರಮಂಟಪ (ಕುಮ್ಮಾ. ೦೨-೦೨); ಪುಟ್ಟಪಾದಗಳ ಹೊಂಗೆಜ್ಜೆಗಳ್ ಘಲಿರೆನೆ ದಟ್ಟಡಿಯಿಡಕೊಡಗಿದನು (ಕೋಚಕ. ೦೭-೬೨); ಸುಗತಿಗುಲಿವ ಹೊಂಗೆಜ್ಜೆಗಳ ರಭಸದಿಂದೆಸೆವ ನಿರ್ಮಲ ವಾಜಿಯಂ ಸುವೇಗಂ ತುದು ನಿಲಿಸಿದಂ (ಕೃಬಿಜಾ. ೩-೦೦).
[ಪೊಂ (< ಪೊನ್) + ಗೆಜ್ಜೆ₁]

**ಪೊಂಗೆಲಸ**, ಹೊಂಗೆಲಸ (ನಾ). ಚಿನ್ನದ ರೇಕಿನ ಕೆಲಸ : ಪೊಸ ಪೊಂಗೆಲಸದ ಯೂಪಸ್ತಂಭಂಗಳ ಭಂಗಿಯನನುಕರಿಸಿದುವುಳ್ಳೊಡೆಯಾ ಕಮಲ ದಳಾಂಬಕಿಗೆ (ಜಯು. ೩-೩೦). **ಹೊಂಗೆಲಸ** : ತೀವಿದವು ಹೊಂಗೆಲಸ ಗತಿಯಲಿ ಲೋವೆಗಳು (ಕುಮ್ಮಾ. ೦೨-೯); ಹೊಂಗೆಲಸದ ಪೊಚ್ಚಪದುಮ ವಿಟ್ಟರದೊಳು ಮಂಗಲಮಜ್ಜನಗೆಯ್ದು (ಕೋಚಕ. ೨೦-೩).
[ಪೊಂ (< ಪೊನ್) + ಕೆಲಸ]

**ಪೊಂಗೇದಗೆ**, ಹೊಂಗೇದಗೆ (ನಾ). ಒಂದು ಬಗೆಯ ಕೇದಗೆ ; ಹೊಂಬಣ್ಣದ ತಾಳೆಹೂವು : ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆ ಯೆಂಬ ಪಲವು ಪೂವಾಲಿಗಳಂ ಬಗೆಯಚ್‌ದೋಲಗಿಪುದು ಮಾಲೆಗಾಜನಂ ಪೋಲ್ತುದಗ್ರಮಾಲ್ಯಮಹೀಜಂ (ಅದಿಪು. ೩-೩೬). ಸೋಮರ್ಪುಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಚ್ (ಕಂಠಾಪು. ೨-೦೩ ಅ); ವನಮ ನುಜ್ ಬಳಸಿ ಕಂಗೊಳಿಪ ಪೊಂಗೇದಗೆಗಳೊಪ್ಪಿದುವು (ಕಂಕ್ಕಿ. ೪೩-೦೬). **ಹೊಂಗೇದಗೆ** : ಕುರವಕದ ಪಕಳದೆಳೆಗೊಂಗಿನ ಹೊಂಗೇದಗೆಯ ಬಳಸಿ ನೊಳಂ . . . ಲತಾಮಂಟಪಂಗಳ್ ಮನಂಗೊಳಿಪುವು (ಕಾದಂಪೂ. ೯೭); ಈಟಿ ಹೊಂಗೇದಗೆಯ ಕಂಚಿಯ . . . ಕಿತ್ತೂರಸಿ ಹುಡಿಹುಡಿ ಮಾಡಿದನು (ಕೌಶಿಕ. ೦೦-೨೦) ; ಹೊಂಗೇದಗೆಯೆಸಳಂ ಮಾಸಿಸಿ (ಜಯು. ೨-೦೯).
[ಪೊಂ (< ಪೊನ್) + ಕೇದಗೆ]

**ಪೊಂಗೊಡ**, ಹೊಂಗೊಡ (ನಾ). ಚಿನ್ನದ ಕೊಡ ; ಸ್ವರ್ಣಕುಂಭ : ಪೊಂಗೊಡಂ ತವಮಾಳಪಲ್ಲವದೊಳೆ ಮುಚ್ಚಿದಂದದೊಳೆ ಚೂಚುಕ ಮಾಂತುದು ಕರ್ಪನಾಳೆಯಾ(ಕಂಕಥಾ. ೦-೦೨೩) ; ಬಿಳಿಯ ಸಾಸವೆ ಪೊಂಗೊಡ ನಪ್ಪಶೋಭೆ ಕನ್ನಡಿ . . . ಎಲ್ಲೆಡೆಗಳೊಳಲ್ಲಿಗಲ್ಲಿಗಧಿಕಂ ಪಡೆದತ್ತು ಜನಾನು ರಾಗಮಂ (ಶಾಪ್ಯಾ. ೬೩) ; ಕೀಲಾಲಮನುಚ್ ಸಾಸಿರಸೂಳ್ಪೊಂಗೊಡದಿಂ ತಂದು . . . ಅಭಿಷೇಕಂಗೆಯ್ದಂ (ಉದ್ಯಮ. ೩-೪೩). **ಹೊಂಗೊಡ** : ತೊಳೆದ ಹೊಂಗೊಡದೊಳಗ್ಗಣಿಗಳಂ ತುಂಬಿ ತಂದಿಳುಹಿದರು ಕಾಮಿನಿಯರು (ಹರಿಕಾ. ೩-೩೭) ; ಹೊಂಗೊಡದ ಹಿಡಿದೈತರಲಿ ನಾರಿಯರು (ಕುಮ್ಮಾದ್ಯೋ. ೦-೩೭) ; ಮಜ್ಜನಕುಷ್ಣಜಲ ಹೊಂಗೊಡದಲಿಳುಹಿದವು (ಕೂರಂ. ೩-೩-೩೯). [ಪೊಂ (< ಪೊನ್) + ಕೊಡ₂]

**ಪೊಂಗೊಡೆ** (ನಾ). ಚಿನ್ನದ ಛತ್ರಿ ; ಬಂಗಾರದ ಸತ್ತಿಗೆ : ಶಕ್ರಂಗೆತ್ತಿದ ಮಾಣಿಕಗೊಡೆ ಪೊಂಗೊಡೆ ಬೆಳ್ಗೊಡೆಯೆನಿಸಿದುದು ಶಶಿಬಿಂಬಂ (ಜಗಂ. ೦೩-೦೦೬) ; ಚಿತ್ರನೆತ್ತಿದ ಪಲವುಂ ಪೊಂಗೊಡೆಗಳೆನಿಸಿ ಪೂತು ಮನಂಗೊಳಿಸಿದುವೆಸೆವ ಕರ್ಣಿಕಾರಕುಜಂಗಳ್ (ಕುಸುಮಾ. ೩-೪೦).
[ಪೊಂ (< ಪೊನ್) + ಕೊಡೆ₁]

**ಪೊಂಗೊಳಗು** (ನಾ). ಪಶುಗಳ ಗೊರಸಿಗೆ ತೊಡಿಸುವ ಚಿನ್ನದ ಆಭರಣ : ಪೊಂಗೋಡು ಪೊಂಗೊಳಗು ಪೊಂಗೆಜ್ಜೆ ಘಂಟೆಗಳು ಪೊಂಗಲಶ ಪೊನ್ನ ಬಾಸಿಗ ತಂದು ವೃಷಭನಂ ಶಿಂಗರಿಸಿ (ಸಿಂಗರಾ. ೩-೦೩).
[ಪೊಂ (< ಪೊನ್) + ಕೊಳಗು]

ಬೆಲೆವೆಣ್ಣಳಿಸೆದರ್ (ಕುರಾಣಾಂ. ೨೩-೯೯). 'ಪುತ್ತುರಿ' ಪರಾ. [ ? ]

**ಪುತ್ತೂರ್** (ನಾ). ಒಂದು ಊರಿನ ಹೆಸರು : ಪುತ್ತೂರಾ ಚೆಟ್ಟಿವಂು ಗೊಳುತ್ತಿಟ್ಟು ಪುತ್ತೂರತ್ತಾಣಿಗೆ ಅಯ್ಯೂದ್ವಮ್ಪು ಕಟನಿಯುಂ ಅಯ್ಯೂದ್ವಮ್ಪು ತೊಟ್ಟಪ್ಪಟ್ಟುಂ ಕೊಟ್ಟರ್ (ಎಕ್. x. ಕೋಲಾರ. ೨೨೯-೩; ಸು. 750); ಪುತ್ತೂರುಡೆ ಶಿವವಾರಮ್ಮಂ . . . ಬಾಳೆ ತೊಟ್ಟಪಟ್ಟು ಬ್ರಹ್ಮದೇಯಂ ಕೊಟ್ಟೊದು (ಎಕ್. x. ಕೋಲಾರ. ೨೩೦-೨; ಸು. 800 ?). 'ಹುತ್ತೂರು' ಪರಾ. [ ? + ಊರ್ ]

**ಪುತ್ತೇಱು** (ಕ್ರಿ). (ಯುದ್ಧದಲ್ಲಿ ಸೋತು) ಶರಣಾಗುವುದನ್ನು ಸೂಚಿಸುವುದಕ್ಕಾಗಿ ಹುತ್ತದ ಮೇಲೆ ನಿಲ್ಲು : ಪುತ್ತೇಱಿದನಂ ಕೈದುವನಿತ್ತನನೇರ್ವೆತ್ತನಂ ರಣಾಂಗಣದೊಳ್ ಬೆನ್ನಿತ್ತನನಿಱಿಯರ ಪೋಘಂ ಮತ್ತೆನಿಸದೆ ತುಱಿಲ ಸಂದ ಜನವಂ ಜಗದೊಳ್ (ಕಂಠಕಂ. ೨೯೯-೦೩). [ಪುತ್ತು₁ + ಏಱು₁ (<ಏಱು₁)]

**ಪುತ್ಥಳಿ**, ಪುತಲಿ, ಪುತಳಿ, ಪುತ್ತಳಿ (ನಾ). ೧. ಬೊಂಬೆ; ವಿಗ್ರಹ; ಮೂರ್ತಿ: ಅರಗಿನ ಪುತ್ಥ[ಶಾಕಾಂ. ತ್ತ]ಳಿಯನುರಿಯ ನಾಲಗೆ ಹೊಯಿದು ಮಾತಾಡುವ ಸರಸ ಬೇಡ (ಏಶವ. ೬೬೦ ೮); ಅಱಿವು ಮಯಣಾಮಯದ ಭಿಕ್ತಿಯೊಳಿರಿಗಿಸಿದ ಪುತ್ಥಳಿಯವೊಲು ಕಡುಬೆಱಗ ಕೇಣಿಯ ಕೊಂಡು ಮೌನದೊಳಿದ್ದನಾ ವಿದುರ (ಕುವ್ಯಾ.ಉ. ೬-೦೩); ಪಾರಿಕಲ್ಲು ಪುತ್ಥಳಿ ಅಪ್ಪುವನೊಡಗೂಡಿದಂತೆ ಮಾಡಿತ್ತೆನ್ನ . . . ನಿಮ್ಮ ವಚನೋಪದೇಶ (ಅಂಬಿಗರ. ೨೦-೧೦). **ಪುತಲಿ :** ೨. ಹಳೆಯ ಕಾಲದ ಒಂದು ಚಿನ್ನದ ನಾಣ್ಯ; ವರಹ : ಇನ್ನೂ ಇತರ ಬಂಗಾರದ ನಾಣ್ಯಗಳು ವಿಶೇಷ ವಾಗಿದ್ದುವು. ಯಾವುವೆಂದರೆ—೧ ಗಬರು . . . ೧ ಪುತಲಿ (ಚಕ್ರಕಾ. ೧೦೯). **ಪುತಳಿ :** ೧. ನೂಲಿನ ನಂಬರ ೪೦. ಬಿಳೇದು . . . ಗೌಳಿಗಿತ್ತಿ ಛಾಪ, ಪುತಳಿಛಾಪ, ಚಕ್ರಛಾಪ (ಮುಂಬವ್ಯಾ. ೦೦೦). ೨. ನಾನು ನಿನಗೆ ಎರಡು ಪುತಳಿಗಳನ್ನು ಕೊಡುತ್ತೇನೆ . . . ವೆಚ್ಚ ಮಾಡಿಕೋ (ಮುಂಬಯಿ. ೩-೨೬೦). ೩. ಚಿನ್ನದ ನಾಣ್ಯಗಳಿಂದ ಮಾಡಿದ ಸರ : ಬಂಗಾರ ಬಂಗಾರ ಅನಲಿಕ್ಕೇನಂ ? ನಾಲ್ಕು ತೊಲೆ ಪುತಳಿ ಅವ. ಆರ ತೊಲೆ ಪಾಟಲಿ ಅವ (ಅಟೋಳ. ೦೦೯). Δ **ಪುತ್ತಳಿ :** ೧. " ಪುತ್ತಳಿಗೆ ಯೆಂದು ಪುತ್ತಳಿ" (ಕಶಾ. ೬೬-೯೬೮); ಸಿರಿಕಂಡದ ಕೋಟ್ಕೆಸಱಿಂ ಪುದಿದು ಜಂತದಿಂ ಕಡೆದು ಕಂಡರಿಸಿದ ಪುತ್ತಳಿಯಂತಿರ್ಪಳ್ (ಕಬ್ಬಿಕಾ. ೩೦೩); ಲೆಪ್ಪದ ಬೋಬೆಯುನೆರಕಂಬೊಯ್ದೊಪ್ಪಂಬೂಸಿದ ಪುತ್ತಳಿಯಂ ಬೇಱಾಗಿ ತೋಱುಗುಮಲ್ತೆ (ರಾಮಾಶ್ವ. ೦೦-೨೦).

ಪುತ್ಥಳಿ ಬೊಂಬೆ=ಸುಂದರವಾದ ವಿಗ್ರಹ : ಸಾಧುಸಜ್ಜನರ ಚಿತ್ತದಿ ಹೊಳೆವ ಪುತ್ಥಳಿಬೊಂಬೆ (ಪುರಂದ. ೧-೨೦೦-೩). ಪುತ್ಥಳಿಯ ಸರ=ಚಿನ್ನದ ನಾಣ್ಯಗಳಿಂದ ಮಾಡಿದ ಸರ : ಅದರಲ್ಲಿನ ವಸ್ತು ಒಡವೆಗಳು . . . ಬಂಗಾರದ ಕೈಬಳೆ, ಪುತ್ಥಳಿಯ ಸರ, ಗುಂಡಿನ ಟಿಕ್ಕಿ, ತೋಳಬಂದಿ, ಚಿಂತಾಕು (ಮಣ್ಣು.ಹ. ೨೦). [<ಸಂ. ಪುತ್ತಲೀ]

**ಪುತ್ಥಳಿಕೆ**, ಪುತ್ತಳಿಗೆ, ಪುತ್ತಟಿಗೆ (ನಾ). = ಪುತ್ತಲಿಕೆ : ತಳತಳಿಸಿ ತೊಳಗುವ ಪಳುಕಿನ ಪುತ್ಥಳಿಕೆಯಂತೆ ಕರಮೆಸೆದಿರ್ದಳ್ (ಕಾದಂಪೂ. ೬೬೮). **ಪುತ್ತಳಿಗೆ :** "ಪುತ್ತಳಿಗೆಯೆಂದು ಪುತ್ತಟಿ" (ಕಶಾ. ೬೬-೯೬೮); ದೂಳಿ ಗೊಂಡ ಪುತ್ತಳಿಗೆ ಮುಂಜುಗೊಂಡಬ್ಜಿನಿ ಕಾರ್ಮುಗಿಲೊಳಕೊಂಡೆಳ ವೆಱೆಯೆನೆ ಮೃಗಲೋಚನೆ ಸೀತೆ ನಾಡೆ ಪಾಡಳಿದಿರ್ದಳ್ (ಕಂರಾಮಾ. ೧೧-೯೩); ಕತ್ತುರಿಯ ಬೊಟ್ಟೆ ಮೋಣೆದು ಪುತ್ತಳಿಗೆಯೊ ನೀಳಮಣಿಯ ತೋಳ್ಗಮ್ಮುದೊಳೀ ತೆತ್ತಿಸಿದುದೆನಿಸಿ ಧರೆಯಂ ಪೊತ್ತುದು ಭುಜಪಜ್ರ ಕೋಟಿ ಸಿರಿವಲ್ಲಭನಾ (ಎಕ್. VIII. ನಗರ. ೩೭-೯೬; 1147 ; ಶಾಕಮಂ. ೩೦೦ ನೋ). Δ **ಪುತ್ತಟಿಗೆ :** " ಪಾಂಚಾಲಿಕಾ, ಪುತ್ರಿಕಾ—ಈ ೨ ಪುತ್ತಟಿಗೆ" (ಹಲಾಯು. ೮೦-೩೩೯). [<ಸಂ. ಪುತ್ತಲಿಕಾ]

**ಪುತ್ರ** (ನಾ). ೧. ಮಗ; ಕುಮಾರ : "ನಂದನ ತನುಜನ್ಮ ತೋಕ ಸುತ ಪುತ್ರ ತನೂಭವ ಸೂನುನಾಮಕಂ ತನಯಂ" (ಪಟ್ಟಕೋ. ೩೯-೦೬); ಇಳಾಪ್ರಭುವೊಗೆದನುದಿತ ಕಾಯಪ್ರಭೆಯೊಗೆದಿರೆ ದಳಿತಶತ್ರುಗೋತ್ರಂ ಪುತ್ರಂ (ಶಂಕಕಾ.೦-೦೨೬); ಪುತ್ರಕಳತ್ರ ಪರಿಗ್ರಹಗಾತ್ರಧನೈಶ್ವರ್ಯಮೆಂಬಿ ವಾರ್ಗಮನಿತ್ಯಂ (ತ್ರಿಷ್ಟಕ್ಷಿ. ೦೩-೨೬). ೨. (ಪ್ರಾಣಿಗಳ) ಮರಿ; ಪೋತ. ೩. ಚಿಕ್ಕವರನ್ನು ಪ್ರೀತಿಯಿಂದ ಸಂಬೋಧಿಸುವಾಗ ಬಳಸುವ ಶಬ್ದ. ೪. (ಸಮಾಸದ ಕೊನೆಯಲ್ಲಿದ್ದಾಗ) ಚಿಕ್ಕದು, ಸಣ್ಣದು ಎಂಬರ್ಥದಲ್ಲಿ ಬರುವ ಶಬ್ದ. ೫. [ಜ್ಯೋತಿ] ಜನ್ಮಕುಂಡಲಿ ಯಲ್ಲಿ ಐದನೆಯ ಸ್ಥಾನ : 'ಪುತ್ರಮಂದಿರ' ಪರಾ. [ಸಂ.]

**ಪುತ್ರಂಜಿ** 'ಪುತ್ರಂಜೀವಿ' ನೋ.

**ಪುತ್ರಂಜೀವ** (ನಾ). ಒಂದು ಬಗೆಯ ಸಸ್ಯ; P ಇದರ ಹೂವು ಅಥವಾ ಬೀಜಗಳಿಂದ ಮಾಡಿದ ಹಾರವನ್ನು ಧರಿಸುವುದರಿಂದ ಮಕ್ಕಳು ಆರೋಗ್ಯವಂತರಾಗಿ ಬದುಕುವರೆಂಬ ಭಾವನೆ ಇದೆ : ಪುತ್ರನಿಗೆ ಜೀವದಾನ ಮಾಡುವ ಗುಣ ಇದರ ಬೀಜಗಳಿಗಿವೆಯೆಂಬ ನಂಬಿಕೆ ಅವರಲ್ಲಿ ಊರಿತ್ತು. ಆದ್ದರಿಂದ ಮರಕ್ಕೆ ಪುತ್ರಂಜೀವ ಎಂದು ನಾಮಕರಣ ಮಾಡಿದರು (ತಸುಹೂ. ೩೦). [ಸಂ.]

**ಪುತ್ರಂಜೀವಿ**, ಪುತ್ರಂಜಿ, ಪುತ್ರಜೀವಿ (ನಾ). = ಪುತ್ರಂಜೀವ : " ಪುತ್ರಂಜೀವಿ, ಮೆಣಸಿನ ಕಾಳಿ " (ಸಸ್ಯಪ. ೦೦೦) ; (ಮೈಗಜ. ೬೩-೦೩೬). **ಪುತ್ರಂಜಿ :** ಪುತ್ರಂಜಿ—ಮಧ್ಯಮ ಆಕಾರದ್ದು...ಇದರ ಕಾಯಿಗಳನ್ನು ಹುಡುಗರ ಕೊರಳಲ್ಲಿ ಕಟ್ಟಿದರೆ ಬೇನೆ ಬರುವುದಿಲ್ಲವಂತೆ. ಆದರಿಂದ "ಪುತ್ರಜೀವಿ" ಎಂಬ ಹೆಸರು ಬಂದಿದೆ (ಕಾಗ. ೯೩). **ಪುತ್ರಜೀವಿ :** "ಪುತ್ರಜೀವಕಂ—ಪುತ್ರಜೀವಿ" (೬ತಧ. ೦೦೦) ; ಪುತ್ರಜೀವಿಯ ಮಣೆಯಂ ಸೀಗೆಕಾಯ ರಸದಲ್ಲಿ ಅರೆದು ಅಲ್ಪ ಕಾಸಿ ಕುಡಿಯಿಸಲು ಗುರುಗಂಜಿಯ ವಿಷ ಮಾಣ್ಗುಂ (ಖಶ್ಯವಿ. ೬೦) ; ಪುತ್ರಜೀವಿ ಬೀಜದ ತಿರುಳು ತಣ್ಣೀರಿನಲ್ಲಿ ಅರೆದು ನಸ್ಯ, ಅಂಜನ, ಪಾನ, ಲೇಪನಗಳಂ ಮಾಡಿಸಲು ಸಕಲವಿಷ ದೋಷಂಗಳು ಪರಿಹರವಹವು (ವೈದ್ಯಸಾ. II. ೦೬೬). [<ಸಂ. ಪುತ್ರಂಜೀವ]

**ಪುತ್ರಂಬಡೆ** (ಕ್ರಿ). ಮಗನನ್ನು ಪಡೆ ; ಪುತ್ರನನ್ನು ಹೊಂದು : ಪುತ್ರಂಬಡೆದೆನೆ ಪರಮಪವಿತ್ರೀಕೃತಭವಸುಧಾಮೃತಕನ್ಯಾನೀಗಳ್ ಪಾತ್ರಂ ಬಡೆದೆಂ (ಸುಕುಮಾ. ೧೦-೨೯). [ಪುತ್ರ + ಪಡೆ₁]

**ಪುತ್ರಕ** (ನಾ). ಮಗ : ಕೌರವರು ತಾಮಸರು ಸುತರಲ್ಲವವರೆನಗೆ... ಅತಿಪ್ರೇಮದಿಂ ಪುತ್ರಕನು ನೀನೆನಗೆ (ತಮ್ಮಸ್ತ್ರೀ. ೨-೯೯). [ಸಂ.]

**ಪುತ್ರಕಾಮೇಷ್ಟಿ** (ನಾ). ಮಗನನ್ನು ಪಡೆಯಬೇಕೆಂಬ ಉದ್ದೇಶದಿಂದ ಮಾಡುವ ಯಜ್ಞ : ಸಂತತಿಯ ಸೌಭಾಗ್ಯಸಿರಿಯ ನಿತಾಂತಕಿದೆಲಾ ನಿನಗೆ ಸಪ್ತಸುತಂತು ನಿರುಪಮ ಪುತ್ರಕಾಮೇಷ್ಟಿ ಪ್ರಸಿದ್ಧಕದ (ತೊರೆರಾ. ೧-೪-೦೦); ಅಯೋಧ್ಯಾಪುರದೊಳವತರಿಸಿದಂ ಮಹಾವಿಷ್ಣು ಸುತರೂಪದಿಂ ರಾಮಾಭಿಧಾನದೊಳ್ ಪುತ್ರಕಾಮೇಷ್ಟಿಯಿಂ ದಶರಥಂಗೆ (ಕೃಬಂಶಾ. ೦೪-೦); ಗುರುವಸಿಷ್ಠಂ ಪುತ್ರಕಾಮೇಷ್ಟಿಯಂ ಪೇಳ್ದು...ಯಜ್ಞಶಾಲೆಗೆ ನಡೆದನಲ್ಲಿಂದೆ (ಕ್ರೀರಾಮಾ. ೯-೨೩೪). [ ಸಂ. ]

**ಪುತ್ರಕಾಮ್ಯ** (ನಾ). ಮಗನನ್ನು ಪಡೆಯಬೇಕೆಂಬ ಅಪೇಕ್ಷೆ,—ಆಸೆ : ನಿನ್ನನುಗ್ರಹವಾದುದಾದರೆ ತದ್ವಿಧಾನದಲಾದರಿಸುವೆನು ಪುತ್ರಕಾಮ್ಯವನು (ಕುವ್ಯಾಆ. ೯-೩೪). [ಸಂ. ಪುತ್ರಕಾಮ್ಯಾ]

**ಪುತ್ರಘಾತಿನಿ** (ನಾ). ಮಗನನ್ನು ಕೊಲ್ಲುವವಳು ; ಶಿಶುಹತ್ಯ ಮಾಡು ವವಳು : ತಡೆ, ಪುತ್ರಘಾತಿನಿ! ಅದನ್ನು ಕೊಲ್ಲಬೇಡ! (ಪಡಶಾ. ೨). [ ಸಂ. ಪುತ್ರಘಾತಿನೀ ]

**ಪುತ್ರಜೀವಿ** 'ಪುತ್ರಂಜೀವಿ' ನೋ.

**ಪುತ್ರದಾತ್ರಿ** (ನಾ). (ಬಂಜೆತನವನ್ನು ನಿವಾರಿಸುವುದೆಂದು ನಂಬಲಾದ) ಒಂದು ಬಗೆಯ ಔಷಧೀ ಸಸ್ಯ ; ಶ್ವೇತಪುಷ್ಪಿಕೆ : "ವಾತಾರಿಃ—ಗಂಟು ಭಾರಂಗಿ, ಸೂರಣ, ಬಿಳಿಯಾಡಲ, ಪುತ್ರಧಾ [ ದಾ ] ತ್ರೀ" (ಓಷಂ. ೦೩೦); "ವೇಶೀಜಾತ—ಪುತ್ರಧಾ [ ದಾ ] ತ್ರಿ" (ಓಷಧಿ. ೦೩೬). [ಸಂ. ಪುತ್ರದಾತ್ರೀ]

**ಪುತ್ರದೆ** (ನಾ). ಒಂದು ಬಗೆಯ ಔಷಧೀಸಸ್ಯ; ವಂಧ್ಯಾಕರ್ಕೋಟಕಿ : "ದೃಷ್ಟಿಪ್ರಭಾ—ಪುತ್ರದೆ" (ಓಷಧಿ. ೬೯). [ಸಂ. ಪುತ್ರದಾ]

**ಪುತ್ರದೋಹದ** (ನಾ). ಗಂಡುಮಗುವನ್ನು ಪಡೆಯಬೇಕೆಂಬ ಬಯಕೆ ; ಗಂಡುಮಗುವು ಹುಟ್ಟಬೇಕೆಂದು ಉಂಟಾಗುವ ಹಂಬಲ : ಹರಿಹರದೇವಿಗೆ ಪುತ್ರದೋಹದ [ಪಾಠಾಂ. ಮೋಹವು]ಬಂದು ಭರದಿಂದ ಪುಟ್ಟಿತೆದೆಯೊಳು (ಕುಮಾರಾಂ. ೭ ಸೂಚನೆ). [ಸಂ.]

**ಪುತ್ರದೋಹಳ** (ನಾ). =ಪುತ್ರದೋಹದ : ತಮ್ಮ ಮೆಯ್ಯೊಳಿರ್ದಿವಿನ ವಿರ್ಬರುಂ ನಮೆದರೇನವರ್ಗಾದುದೊ ಪುತ್ರದೋಹಳಂ (ಶಂಕರಾ. ೦-೦೬೫); ತಾನುಂ ಪುತ್ರದೋಹಳಕುತೂಹಳೆಯುಮಾಗೆ (ಮಲ್ಲಿಕು. ೩-೦೦೫). [ ಸಂ. ಪುತ್ರದೋಹಲ ]

**ಪುತ್ರದೌಹೃದ** (ನಾ). = ಪುತ್ರದೋಹದ : ಇವು ಮೊದಲಾಗೆ ಪಲವುಂ ಪುತ್ರದೌಹೃದಂಗಳಂ ಪಂಬಲಿಸುತ್ತುಮಿರ್ದಳ್ (ಪುಷ್ಪಕು. ೩-೯೯ ವ). [ ಸಂ. ]

**ಪುತ್ರಮಂದಿರ** (ನಾ). [ಜ್ಯೋತಿ] ಜನನಕುಂಡಲಿಯಲ್ಲಿ ಐದನೆಯ ಸ್ಥಾನ ; ಜಾತಕನಿಗೆ ಪುತ್ರಪ್ರಾಪ್ತಿಯನ್ನು ಸೂಚಿಸುತ್ತದೆಂದು ನಂಬಲಾದ ಸ್ಥಾನ : ಮೇಣ್ ಬರೆ ತದ್ದ್ವಿತೀಯಮೆನಿಪಾ ದ್ರೇಕ್ಕಾಣಮಾ ಪುತ್ರಮಂದಿರದೊಳ್ ಮೇಣ್ ಬರೆ ತತ್ತೃತೀಯಮೆನಿಪಾ ದ್ರೇಕ್ಕಾಣಮಾ ಧರ್ಮಮಂದಿರದೊಳ್ ವಾಕ್ಪತಿಯಿರ್ದನೆಂದಱಿಗೆ (ಜಾತಕ. ೨೯-೨). [ ಸಂ. ]

**ಪುತ್ರವಂತ** (ನಾ). ಗಂಡುಸಂತತಿಯುಳ್ಳವನು. [ಸಂ. ಪುತ್ರವತ್]

**ಪುತ್ರವತಿ** (ನಾ). ಮಗನನ್ನು ಪಡೆದವಳು : ಪುತ್ರವತಿಯಹುದು ಜನ್ಮಾಂತರದ ಪುಣ್ಯಮೈಸಲೆ ಪೆಣ್ಗೆ (ಶೈಮಿಜಾ. ೦೬-೦೯); ಪುತ್ರವತಿಯಾದ ಶಕುಂತಳೆಯನ್ನು . . . ದುಷ್ಯಂತನು ಪರಿಗ್ರಹಿಸಿದನು (ಶಾಕುಂತ. ೦೦೫-೦೨). [ಸಂ. ಪುತ್ರವತೀ]

**ಪುತ್ರವಧು** (ನಾ). ಮಗನ ಹೆಂಡತಿ ; ಸೊಸೆ : " ಸ್ನುಷಾ, ಜನೀ, ಪುತ್ರವಧೂಃ, ವಧೂಃ—ಈ ೪ ಸೊಸೆ " (ಕರ್ಣಾಟಕ. ೬೩-೩೫೦). [ಸಂ. ಪುತ್ರವಧೂ]

**ಪುತ್ರವಾತ್ಸಲ್ಯ** (ನಾ). (ಹಿರಿಯರಿಗೆ) ಮಕ್ಕಳ ಮೇಲಿರುವ ಪ್ರೇಮ,—ಅಕ್ಕರೆ : ಎಲೈ ಮಿತ್ರನೆ, ಮಾತೃಶ್ರೀಯವರಿಗೆ ನಿನ್ನಲ್ಲಿ ಪುತ್ರವಾತ್ಸಲ್ಯವಿರುವುದು (ಶಾಕುಂತ. ೨೯-೦೫); ಮುಪ್ಪಿನ ತಂದೆಯು . . . ಪುತ್ರವಾತ್ಸಲ್ಯದಿಂದ ಆ ದುಃಖವನ್ನು ಮರೆತು ನನ್ನನ್ನು ಸಾಕಿಕೊಂಡಿರಲಾಗಿ (ವಚಕಾ. ೩). [ಸಂ.]

**ಪುತ್ರವಿಹೀನ** (ನಾ). ಮಗನಿಲ್ಲದವನು ; ಗಂಡುಸಂತಾನವಿಲ್ಲದವನು : ಕುಂಬಿನಿಯೊಳೆಮ್ಮ ಕುಲದೆ ತಿಲಾಂಬುವ ಮುಂದಕಟ ಕುಡುವನಾವನೆನುತ್ತುಂ ನಾಂ ಬಿಡೆ ಪುತ್ರವಿಹೀನಂ ಕಂಬನಿದೊಳೆದುಳಿದ ಜಲವ ಪಿತೃಗಳ್ ಪೀರ್ವರ್ (ಶಾಕುಂತ. ೯೪-೦೫೬). [ಸಂ.]

**ಪುತ್ರಸಂತತಿ** (ನಾ). ಗಂಡುಸಂತಾನ ; ಗಂಡುಮಕ್ಕಳ ಜನನ : ಗಾಂಧಾರಿ ಗಾಮದು ಪುತ್ರಸಂತತಿ (ಕುಮ್ಯಾ.ಆ. ೪-೩೦). [ಸಂ.]

**ಪುತ್ರಸಂತಾನ** (ನಾ). ಪುತ್ರಸಂತತಿ : ಗುರು ವಸಿಷ್ಠಂ . . . ಪುತ್ರಸಂತಾನವಹುದೆಂದು ನಂಬಿಗೆಗೊಟ್ಟು ಸಂತೈಸಿ ಯಜ್ಞಶಾಲೆಗೆ ನಡೆದನಲ್ಲಿಂದೆ (ಶ್ರೀರಾಮಾ. ೯-೨೫೫) ; ಸ್ಕಂದವರ್ಮನಿಗೆ ಪುತ್ರಸಂತಾನವಿದ್ದಿಲ್ಲ (ಕನಾಕಿಆ. ೧೪೦). [ಸಂ.]

**ಪುತ್ರಸ್ವೀಕಾರ** (ನಾ). ಬೇರೆಯವರ ಮಗನನ್ನು ತನ್ನ ಮಗನೆಂದು ಸ್ವೀಕರಿಸುವುದು,—ದತ್ತು ತೆಗೆದುಕೊಳ್ಳುವುದು : ನಾಲ್ವಡಿ ಕೃಷ್ಣರಾಜ ಒಡೆಯರು ಜಯಚಾಮರಾಜರನ್ನು ಪುತ್ರಸ್ವೀಕಾರ ಮಾಡಿಕೊಂಡು ಯುವರಾಜನನ್ನಾಗಿ ಮಾಡಿದರು (೧೬೨). [ಸಂ.]

**ಪುತ್ರಾಂತರಾಯ** (ನಾ). ಮಕ್ಕಳಾಗುವುದಕ್ಕೆ ಇರುವ ವಿಘ್ನ : ಈ ಪುತ್ರಾಂತರಾಯಂ ಪುರಾತನ ದುಷ್ಕರ್ಮವಿಪಾಕವೋ ಬೆಸಸಿಂ (ಸುಕುಮಾ.೯-೦೦೯). [ಸಂ.]

**ಪುತ್ರಿ**[1] (ನಾ). ಮಗನನ್ನುಳ್ಳವನು ; ಪುತ್ರವಂತ : ಸುವಿನೀತರ್ಕಳಿತಾ ಪ್ರವೀಣರಭಿರೂಪರ್ಸರ್ವಶಾಸ್ತ್ರಜ್ಞರಿಂತಿವರಿಂದೈಸೆ ಜಗಕ್ಕೆ ಸೌಮ್ಯ ನರಸಿಂಹಾರ್ಯೋತ್ತಮರ್ ಪುತ್ರಿಗಳ್ (ಖಿತ್ರಗೂಲ. ೩-೪). [ಸಂ. ಪುತ್ರಿನ್]

**ಪುತ್ರಿ**[2] (ನಾ). ೧. ಮಗಳು ; ಕುವರಿ : "ದುಹಿತೃ ನಂದನೆ ಪುತ್ರಿ ತನೂಜೆ ಸೂತಿ ತಾನೆನಿಕ್ಕುಂ" (ವಸ್ತುಕೋ. ೫೪-೦೭); ವರಪುತ್ರೀಸ್ಥಿರಭಾವಕಾಮ್ಯವಿಲಸತ್ಸನ್ಮಾನ್ಯೆಯಂ ಯಾನೆಯಂ . . . ಗಿರಿರಾಜಂ ಕಳಿಪುತ್ತುಮಿರ್ದನತಿಯೋಗಧ್ಯಾನೆಯಂ ಮೇನೆಯಂ (ಗಿರಿಕ. ೩-೦೦). ೨. (ಸಮಾಸದ ಕೊನೆಯಲ್ಲಿ ಬಂದಾಗ) ಚಿಕ್ಕದು ಎಂಬರ್ಥದ ಶಬ್ದ : ' ಅಸಿಪುತ್ರಿ ' ಪರಾ. [ಸಂ. ಪುತ್ರೀ]

**ಪುತ್ರಿಕೆ** (ನಾ). ೧. ಪುತ್ರಿ; ಮಗಳು : ದುರ್ವಿನೀತನ ತಾಯಿಯಾದ ಜ್ಯೇಷ್ಠಾದೇವಿಯು ಪುನ್ನಾಡ ಸ್ಕಂದವರ್ಮನ ' ಪುತ್ರಿಕೆ' (ಕನಾಕಿ. ೦೪೦). ೨. ಬೊಂಬೆ ; ವಿಗ್ರಹ : "ಪಾಂಚಾಲಿಕಾ, ಪುತ್ರಿಕಾ — ಈ ೨ ಪುತ್ಥಳಿಗೆ" (ಕರ್ಣಾಟಕ. ೮೧-೩೩೯); ಮೆಲ್ಲನೆ ನಡೆತರ್ಪ ನೀಲಮಣಿಪುತ್ರಿಕೆಯಂದದಿನಾದ ಮೊಪ್ಪಿದಳ್ (ಶಾದಂಕೂ. ೩೪); ನೀಂ ಪರವಣ್ಗಳನಪ್ಪುವುದನೆ ಬಯಸುತಿರ್ಪೆ ಯಪ್ಪೆಂದು ಕರಂ ಚಪ್ಪರಿಸಿ ನಾರಕರ್ ತಂದಪ್ಪಿಸುವರ್ ಕಾಯ್ದ ಲೋಹಮಯಪುತ್ರಿಕೆಯಂ (ಸುಕುಮಾ. ೦೦-೯೭); ಪೊಳೆವ ಮುತ್ತಿನ ಬೊಂಬೆಯೋ ತಿಂಗಳ ತಿರುಳ ಪುತ್ರಿಕೆಯೊ ಕಪ್ಪುರವಳುಕಿನಲಿ ಬಿದಿ ಕಡೆದು ತಿದ್ದಿದ ಸಾಲಭಂಜಿಕೆಯೋ (ಶಾಕ್ಯಕು. ೩೨-೪೫). ೩. ನಕಲು ; ಪ್ರತಿರೂಪ; ಪಡಿಯಚ್ಚು : ಇದು ಕೂಡ ಪಂಪನ ಮಾತೃಕೆಗೆ ಪುತ್ರಿಕೆಯಂತಿದೆ (ಸಾಹಿಸಂ. ೬೭) ; ನಮ್ಮ ಛಂದಸ್ಸು . . . ಆ ಲಲಿತರಗಳೆಯದೇ ನೆಟ್ಟನೆಯ ಪುತ್ರಿಕೆಯಲ್ಲದೆ ಸರ್ವಥಾ ಆಂಗ್ಲ ಸರಳರಗಳೆಯ ಅನುಕರಣೆಯಲ್ಲ (ಗೂಲ್ಗೊಥಾ. ೩೫ ಮುನ್ನುಡಿ). ೪. (ಸಮಾಸದ ಕೊನೆಯಲ್ಲಿ ಬಂದಾಗ) ಚಿಕ್ಕದು ಎಂಬರ್ಥದ ಶಬ್ದ. [ಸಂ. ಪುತ್ರಿಕಾ]

**ಪುತ್ರೀಧರ್ಮ** (ನಾ). ಮಗಳು ಪಾಲಿಸಬೇಕಾದ ಧರ್ಮಾಚರಣೆ : ತಂದೆಯನ್ನು ಪ್ರೀತಿಸುವುದು ಪುತ್ರೀಧರ್ಮ (ಕಬಿಕ. ೪೦). [ಸಂ.]

**ಪುತ್ರೇಷಣ** (ನಾ). ಮಗನಾಗಬೇಕೆಂಬ ಹಂಬಲ : ಪುತ್ರೇಷಣ ವಿತ್ತೇಷಣ ದಾರೇಷಣಂಗಳೆಂಬ ಈಷಣತ್ರಯವನುಳಿದು (ಆದವ. ಮು. ೯೦-೦೫೦) : ದಾರೇಷಣ, ಪುತ್ರೇಷಣ, ವಿತ್ತೇಷಣವೆಂಬ ಈಷಣತ್ರಯದಲ್ಲಿ ಆತ್ಮ, ಅಂತರಾತ್ಮ, ಪರಮಾತ್ಮನೆಂಬ ರೂಪತ್ರಯಗಳಿಂದ ವಾಸ ಮಾಡುವನು (ಹಸಾರ. ೨೪-೧೦ ತಾತ್ಪರ್ಯ). ' ಈಷಣತ್ರಯ' ಪರಾ. [ಪುತ್ರ + ಈಷಣ[1]]

**ಪುತ್ರೇಪ್ಸುತೆ** (ನಾ). ಪುತ್ರಲಾಭದ ಅಪೇಕ್ಷೆ : ಸಾವಧಾನದಲಿ ದುಃಖಾಶ್ರುಪಂ ತೊಡೆದು ಪುತ್ರೇಪ್ಸುತೆಯ ಭಾವವರಿದುಯಿಂತೆಂದನು (ಸವವೆ. ೦೦-೦೨). [ಸಂ. ಪುತ್ರೇಪ್ಸುತಾ]

**ಪುತ್ರೋತ್ಸವ** (ನಾ). ೧. ಮಗನು ಹುಟ್ಟಿದ ಸಂತೋಷದಿಂದ ಆಚರಿಸುವ ಉತ್ಸವ : ರಂಗರಸರ ಮನೆಯ ಪುತ್ರೋತ್ಸವದಲಿ ಕಲುರೆಟಿಯ ಮಹಾಜನಂಗಳು ಕೂರ್ತ್ತು ಅನಂತತೀರ್ಥದೇವರಿಗೆ ಕೊಟ್ಟ . . . ತೋಟ ೧ (ಸೌಇಇ. XX, ೨೦೬-೩; 1250); ಪುತ್ರೋತ್ಸವಂ ಮಾಡಿ ಕೆಲವು ದಿನಮಿರೆ . . . ಧರಿತ್ರೀಶ್ವರನ ರಾಜ್ಯಮಂ

ತೆಗೆದುಕೊಂಡಪಿತರಾಳ್ದರು (ಕೈಪಿಡಿ. ೨೬-೦೩). ೨. ಮಗನ ಜನನ; ಗಂಡುಮಗುವಿನ ಜನನ: ಪುತ್ರೋತ್ಸವಂ ಸೂತ್ಸವಂ ಕೆಳೆಯೋ ಸರ್ವರೊಳುತ್ತಮಂ (ಸೂಮಣೇ. ೦೪); ಹರಿದು ಪುತ್ರೋತ್ಸವದ ಸುಡಿ ಗಜಪುರದೊಳ್ಬರವಾಯ್ತು ಪಾಂಡುವಿನರಸಿಯಲಿ ಸಂತಾನ ಜನಿಸಿದು ದೆಂದು ಜನಜನಿತ (ಕುವ್ಯಾ.ಆ.೪-೪೦); ಪಂಪಿಗೆ ಪುತ್ರೋತ್ಸವವಾಗಲು ಮೊದಮೊದಲು ಅವನ ಮನಸ್ಸಿನೊಳಗೆ ತುಸು ಈರ್ಷೆಯ ವೇದನೆ ಹುಟ್ಟಿತ್ತು (ಇಕ್ಕ. ೪೦೭). [ಸಂ.]

**ಪುದಳ್ನಾಡು** (ನಾ). ಒಂದು ಸ್ಥಳದ ಹೆಸರು: ಪುದಳ್ನಾಡ ರಾಷ್ಟ್ರೇ ಕೊಳನ್ನೂರ್ನ್ನಾಮ ಗ್ರಾಮ (ಮ್ಯಾಆ. ೧೯೧೭, ೦೨-೩೦: ೧೧ನೆಯ ಶತ).
[ಪುದಳ್₀ + ನಾಡು]

**ಪುದಾರು** (ನಾ). ಒಂದು ಬಗೆಯ ಭೂಮಿ: ಕುಪ್ಪುಸೆಯ ಸಾಸಿರ್ವ್ವರ ಮಾಗತಿನ್ ಕೋಸಿಗರಾ ಜಯಮೆಲ್ಲ ಎಮ್ಮೋನ್ ಗೋಸಾಸಿ ಪುದಾರುಂ ಬೆದೆವುತ್ತಲುಂ ಪದಲ್ಲಾಣವುಮನ್ ಕೊಟ್ಟೋನ್ (ಎಕ. VIII, ಸೊರಬ. ೪೦-೩; ಸು. 910). [?]

**ಪುದಿ**₁, ಹುದಿ₁ (ಕ್ರಿ). ೧. ಒಳಸೇರು; ಒಳಗೊಂಡಿರು: ಪುದಿದ ತಾವರೆವಳ್ಳಿಯ ತಟ್ಟಿಸಿಂ ಪಸುರ್ಪಾಗೆ ನಿರಂತರಂ ಸೊಗಯಿಸಿರ್ಪುವು ಪೆರ್ಗಱಿಗಳ್ ನಿರಂತರಂ (ಪದ್ಮಸಾ. 11, ೬೯). ೨. ಅಂಟಿಕೊಳ್ಳು; ಹತ್ತು: ಮೊಲೆಯುಂಬ ಕುಮಾರನ ಕಣ್ಣ ಕಜ್ಜಳಂ ಪುದಿಯದುರೋಜ ಮೇಕೆ (ಅನಂಪು. ೦೨-೯೯). ೩. ತಾಕು; ತಗಲು: ದಿಗುವಸನರಡಿಗಳ್ ನೆಲನಮೊ[ನೊ]ಯ್ಯಗೆ ಪುದಿವುತಿರೆ ಚಂದ್ರಗತಿಯಿಂ ಸಂಗುಣಭೂಷಣ ಕುಕ್ಕುಟಾಸನ ದೇವನೇಳ್ದಂದ (ಸಾಳ್ವಭಾ. ೩-೪). ೪. ಕೂಡಿಕೊಂಡಿರು; ಬೆರೆತುಕೊಂಡಿರು; ಸೇರಿರು: ಕ್ರಿಯಾಕಾರಕದೊಳ್ ಪುದಿದರ್ಥವ್ಯಕ್ತಿಯ ನೀವುದು ಗದ್ಯಮನೇಕರೂಪಭೇದವಿವಿಕ್ತಂ (ಶಬ್ದಾ. ೦-೨೩); ಮಲೆವ ಪೊಸಗಂಪಿನೊಳ್ ಪುದಿದಲೆವೆಲರಾಱಿಪುದು ಖಚರದಂಪತಿಶತಮಂ (ಅಂಪು. ೦-೬೮); ಪೆರ್ಬುಸಿಯೊಳ್ ಪುದಿದಿರ್ದಧರ್ಮನಂದನನನೆ ಧರ್ಮ ನಂದನನೆನಲ್ಲೊರೆ (ಗದಾಯು. ೩-೩೨); ಅನೇಕಾಕ್ಷರದೊಳ್ ಪುದಿಯೆ ಲಘೂಪದೆ ಕೆಲಕೆಲವೊದವಿರ್ಕುಂ . . . ಶಿಥಿಲತೆಯಂ (ಶಮದ. ೪೩). ೫. ಆಗು; ಒದಗು; ಉದ್ಭವಿಸು: ಪುದಿದ ಪುಳಕಂಗಳಡ್ಡೈಸದಿ ರವೆನುತ್ತುಂಜಿದಂತೆ . . . ಕಾಂತೆ ಹೃದಯದಿಂದಪ್ಪಿದಳುತ್ಸುಕೆಯಾಗಿ (ಕಾದಂಸಂ. ೬೬); ತುದಿಯೊಳ್ ದೀರ್ಘಾದೇಶಂ ಪೊದಟ್ಟು ಷಷ್ಠೀವಿಭಕ್ತಿ ಗರೆಬರ ಮತದಿಂ ಪುದಿದಿರ್ಕುಂ (ಕಾವ್ಯಾವ. ೦೩೭); ಪುದಿದ ರೋಮಾಂಚ ದದ್ಭುತದ ಸೊಗಸಿನ ಮೋಹನದ . . . ನವರಸವನುಱಿ ಸವಿದು ಸೊಕ್ಕಿ ಮಱಿದರನ್ಯೋನ್ಯಭಾವವನವರ್ಗಳು (ಕೈಪಿಡಿ. ೦೦-೨೩). ೬. ಹೊದಿಸು; ಆಚ್ಛಾದಿಸು: "ಪುದ-ಆಚ್ಛಾದನೇ, ದ್ವಾರಪಾರ್ಶ್ವೇ ಚ" (ಶಮಧಾ); ಕರಡಿಯ ತೊವಲೊಳ್ ಪುದಿದ ಕರ್ಬೊನ್ನ ರಥಮುಂ (ಶಂಶಭಾ. ೦೨-೭ ವ); ಲಲಿತಚಂಪಕದಳಕೆ ಬೆಳುದಿಂಗಳ ತಗಡ ಪುದಿದಂತೆ (ಜೀವಂಧ. ೮-೩). ೭. ವ್ಯಾಪಿಸು; ಆವರಿಸು: ನಿಜಕೀರ್ತಿ ಲೋಕವಂ ಪುದಿದಿರೆ ಪೊಕ್ಕ ನಂದು ನಿಜಮಂದಿರಮಂ ಪರಸೈನ್ಯಭೈರವಂ (ಶಂಶಭಾ. ೩-೦೦೩); ಗದೆ ಗದೆಯಂ ಘಟ್ಟಿಸೆ ಪುಟ್ಟಿದ ಕೆಂಡದ ಕಿಡಿಯ ಕುಂಡಮೆಟಂದೆಸೆಯಂ ಪುದಿಯೆ (ಗದಾಯು. ೮-೦೩); ಉತ್ಕಟಕೋಪಹೂಂಕೃತಂ ವನಜ ಭವಾಂಡಮಂ ಪುದಿಯೆ (ಜಗಪು. ೦೫-೩). ೮. ಆವೃತವಾಗು; ವ್ಯಾಪ್ತ ವಾಗು: ನಟ್ಟ ಕರ್ಗಣೆಯ ಬಿಣ್ಪೊಱಿಯಿಂದೆ ಬಟಲ್ದನುರ್ವಿ ಪೆರ್ವಿ ದಿರ ಸಿಡಿಂಬಿನೊಳ್ ಪುದಿದದೊಂದು ಕುಳಾಚಳದಂತೆ ಸಿಂಧುಜಂ (ಶಂಶಭಾ. ೦೦-೪೩); ಸ್ಮರರಿಪುಲಲಾಟನೇತ್ರಸ್ಫುರದುರುಹುತವಹನಿನೆಯ್ದೆ ಬೇವುತ್ತಿರ್ದಾ ಸ್ಮರನ ಪೊಗೆಯಿಂದೆ ಪುದಿದಿರ್ದ ರತಿಯವೊಲ್ಕಾಂತೆ . . . ಎಸೆದಿರ್ದಳ್ (ಕಾದಂಪೂ. ೪೩); ಕಾಮಿನಿ ತನ್ನ ತುಂಗಕುಚತಟದ ಕಸ್ತೂರಿಯೊಳ್ ಪುದಿದ ಪ್ರಿಯನಂಗವುಂ ಕಂಡಿದೇತಕೆ ಕೃಷ್ಣರೂಪಾದೆ ನೀನೆಂದು ಬೆಸಗೊಳಲ್ಕೆ (ಕೈಪಿಡಿ. ೨೬-೨೦). ೯. ಹುದುಗಿಸು; ಮುಚ್ಚು: ತನ್ನ ಪಱಿದು ಬಿಸುಟ ಸಹಸ್ರಕುಂತಳಂಗಳಂ ತನ್ನ ತಳದೊಳ್ ತೆಮಳ್ದಿ ಕೊಂಡು ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗಳೊಳ್ ಪುದಿದು ಯ್ವಂತುಯ್ದು (ಆದಿಪು. ೨-೩೯ ವ); ಇಂದ್ರಿಯಕ್ಷರಣೆಯಾದೊಡದನೊಂದು ಕದಳೀಪತ್ರದೊಳ್ ಪುದಿದು . . . ಓಪಳಲ್ಲಿಗಟ್ಟಿದೊಡೆ (ಶಂಶಭಾ. ೧-೬೮ ವ). ೧೦. ಅವಿತುಕೊಳ್ಳು; ಅಡಗು; ಬಚ್ಚಿಟ್ಟುಕೊಳ್ಳು: ರಸಾತಳಂಬರಂ ಬೆದಕಿಯುಮೆಂತುಮುಪ್ಪಳಿಸಿ ಕೊಂದಪೆನೇಟ್ಟು[ಪಾಠಾಂ. ಟ್ಟು] ದಿದೇಂ ಸುಯೋಧನಾ (ಶಂಶಭಾ. ೦೩-೮೦); ಕರುಮಿಟ್ಟರೆ ತಾ ಟಿಟವಲ್ಲ ತನ್ನೊಳ್ಪುದಿ ದಿರೆ ಅದು ನಿಜವಲ್ಲ ಪುನರಪಿಯೊಳಂತಿರೆ ಅದು ಸಹಜವಲ್ಲ (ಸರ್ವವ. ೭೯-೪೩೯); ಚಂದ್ರವದನೆಯುರಂತರಂಗದೊಳ್ ಪುದಿದ ಕೆಚ್ಚಂ ನ್ಯವಿಸುವಂತೆ ರಂಜಿಸಿ ರಮಿಸುತಿಹ ಪುರುಷರಾ ಪುರದೊಳೆಸೆದಿರ್ದರು (ಕೈಪಿಡಿ. ೨೬-೦೭). ೧೧. ಹೊಂದು: ತಾಳು; ಪಡೆ: ಮಂದಿರಾ ರಸದಿಂದಂ ಬಾರ್ಚಿದರೋ ಪೇಱಿಸಿಸಿ ಪೊಳೆವ ತಲೆದುಡಿಗೆಯಾ ರಸ್ನದಿ ನೊಸರ್ವ ರಾಗರುಚಿಯಿಂ ಪುದಿದೆಸೆದುದು ಕೇಶಪಾಶಮಾ ಕಾಮಿನಿಯಾ (ಕಾದಂಸಂ. ೨೦). ೧೨. ತುಂಬು; ಇಡುಗು: ನೆಱಿದಟ್ಟ ಭಕ್ತಿ ದಯೆ ಪುದಿದಱಿವೌದಾರ್ಯಂ ಕ್ಷಮಾಗುಣಂ ಶಕ್ತಿಯುಮೆಂಬಱಿಕೆಯ ಗುಣ ಮೇಟಱಿಕೊಳಂ ನೆಱಿದಿತ್ತರ್ ಮುನಿಯುಂಗಕ್ಕೆ ದಾನಿಮನವರ್ಗಳ್ (ಆದಿಪು. ೪-೯೭); ಪುದಿದಟ್ಟಯಿಂದೆ ಪೊಡೆಮಡುವುದು ದಯೆಗೆಯ್ ಮಹಾಪ್ರಸಾದಮೆಂಬುದು (ಸುಕುಮಾ. ೧೦-೩); ಮದನಯಶಃಪಟಹಧ್ವನಿ ಪುದಿಯೆ ವಿಯಚ್ಚರರ ಕರ್ಣಮಂ ಹೃದಯಕ್ಕಯ್ದಿದುದಿಲ್ಲ ದಿವ್ಯವಚನಂ (ಶಂರಾಮಾ. ೯-೮೪); ಅಂಗಲತೆಯೊಳ್ ಪುದಿದ ಸಕಲಪರಿಮಳಕಜಿಗುಪಳಿಮಾಲೆ ಮೇಲೆ ಮಂಡಳಿಸಿ ನಿಲೆ (ಪಂಪು. ೬-೪). ೧೩. ಹೆಚ್ಚಾಗು; ಅಧಿಕವಾಗು; ಅತಿಶಯವಾಗು: ಆ ಕಂಪುಂ ಮನಸ್ತಾಪಮುಂ ಪುದಿದೆತ್ತಂ ಬರೆ ಸುಯ್ ಪೊದಟ್ಟು ಬಿಸಿದುಂ ಕಮ್ಮಿತ್ತುಮಾಯ್ತೋಪಳಾ (ಕಾವ್ಯಸಾ. ೩೩೮೦ ಕೂದ್ರಕ); ಪುದಿದವ್ವಳಿಪೆನ್ನ ಕಾಯ್ಪು ಪೋಪಿನಮಿರದೀಗಳೀಂಟುವೆನೊ ದಾಂಟುವೆನೋ ಲವಣಾಂಬುರಾಶಿಯಂ (ಆದಿಪು. ೦೨-೭೦); ಪುದಿದ ಸುತಮೋಹದಿಂದೆ . . . ಅಱಿಯದೆ ದುಷ್ಟಕಷ್ಟರೊಡನಾಡಿಸಿದೆಂ (ಧರ್ಮಾಮೃ. ೨-೮೦). ೧೪. ತುಂಬಿಸು; ತುಂಬಿಕೊಳ್ಳುವಂತೆ ಮಾಡು: ಅಖಂಡಲಸುತನೆಯ್ದೆ ನಭೋಮಂಡಲಮಂ ಪುದಿದನೆಯ್ದೆ ಶರಪಂಜರದಿಂ (ಜಗಪು. ೦೫-೩); ಸುಕಂಠೆ ಪಾಡಿ ಪುದಿದಳ್ ಮುದಮಂ ನರನಾಥಚಿತ್ತದೊಳ್ (ಕುಸುಮಾ. ೦-೩೭). ೧೫. ಹೊದೆ; ತೊಡು: ಅಸ್ಥಿ ಚರ್ಮವ ಪುದಿದ ಮಱಿಯ ಹರಿಗೆಯೊಳು ಅಸುಭಟನೆಂಬ ಬಂಟ (ಸುಂಕಂಪು. ೪. ೭೭೭-೭೭). ೧೬. ಒದಗಿಸು; ಪೂರೈಸು: ಕಿನ್ನರ ಪನ್ನಗ ಖೇಚರಾಮರಪ್ರಮದೆಯರೀಕ್ಷ ಣಾಳಿನಿಕರಕ್ಕೆ [ನವೀನಸುಮ]ಪ್ರತಾನದಿಂ ಪ್ರಮದವನಾವಗಂ ಪುದಿಪ ಪಾವನವೃಕ್ಷಸಮಾವೃತೋಲ್ಲಸತ್ಪ್ರಮದವನಂಗಳೋಳಿ ಪೊಳೆದೊಪ್ಪುವು ದಲ್ಲಿಯ ಚೈತ್ಯಧಾತ್ರಿಯೊಳ್ (ಶಾಂತೀಶ್ವ. ೦೭-೩೭). ೧೭. ಮೂಡು; ಕೆತ್ತನೆಯಾಗು: ಸಿರಿಗಾವುಣ್ಣನ ಎಟ್ಟು ಪುಡಿ[ದಿ?]ದುದು (ಇಆ. XII. ೨೦೯-೨೩; 814). **ಹುದಿ**₁: ೧. ಸುಬುದ್ಧಿಯ ರಸವು ಹಾಱಿತು ಹುದಿದ ರಾಗದ್ವೇಷವಹ್ನಿಯಲಿ (ಕುವ್ಯಾಸ. ೦೩-೪೪) ೮. ಕೆದಱುಗೇಶದ ಕಾಂತೆ ಹುದಿದಳು ಹರುಷಪುಳಕದಲಿ (ಕುವ್ಯಾಸ. ೦೫-೩೨). ೧೦. ಹಿಮಗಿರಿಯ ಕುಕ್ಷಿಯಲಿ ಹು[ಪಾಠಾಂ. ಪು]ದಿದ ನಾನಾದ್ರೋಣಿಗಳ ಮಧ್ಯದ ಕಿರಾತಪುಳಿಂದನಿಚಯವ ಸದೆದು ಹತ್ತಿದನಗ್ರಶಿಖರಕೆ ಪಾರ್ವತೀ ಪಿತನ (ಕುವ್ಯಾಸ. ೩-೨೯); ಈ ವರದಕರಮೆ ಮುನಿಹೃದಯಾವರಣದೆ ಹುದಿದು ನಿಂದು . . . ನಲಿಯಿಕುಮೆಮ್ಮಂ (ಪಶ್ವಂ. ೬). ೧೩. ಹುದಿದ ಮಱುಭೂಮಿಯಲಿ ಮಾನ್ಯನಾ ಖದಿರನಲ್ಲಿಗೆ ಗೂಗೆ ಕೋಗಿಲೆ (ಕುವ್ಯಾಸ.

೦೦–೩೯). ೧೪. ಕೇಳಿ, ಎದೆಯಲಿ ಹದಿಯುರಿ–ಹೊಸ ಆಳ ಬಾಳಲಿ ಹುದಿಯಿರಿ (ಹೊಂಗಳು. ೨–೦೨). ೧೫. ರಾಯನ ಹುದಿದ ಕವಚವ ಭೇದಿಸಿದವೊಳಬಿದ್ದವಂಬುಗಳು (ಕುವ್ಯಾ.ಕ. ೦೦–೩೪). ೧೬. ಕೆಚ್ಚು; ಮೆಟ್ಟು; ಕೂರಿಸು : ಈ ಉಂಗುರಕ್ಕೆ ಅನೇಕ ವಜ್ರಗಳನ್ನು ಹುದಿದಿದ್ದಾರೆ (ರೂಢಿ). 'ಪುದುಗು$_1$', 'ಪೊದೆ$_1$' ಪರಾ.

[ದೇ. ॥ ತಮಿ. ಪುತೈ; ಮಲ. ಪುದಯು]

**ಪುದಿ$_2$**, ಹುದಿ$_2$, ಹೊದಿ$_2$ (ನಾ). ೧. ಬಾಗಿಲಿನ ಪಕ್ಕ; ದ್ವಾರಪಾರ್ಶ್ವ: "ಪುದಿ-ಆಚ್ಛಾದನೇ, ದ್ವಾರಪಾರ್ಶ್ವೇ ಚ" (ಶಮದ); ಮಂದಿಲೊಳು ಮಣಿವಾಡದೊಳು ಪೊಂಬಾಗಿಲ ಪು[ಪಾಠಾಂ. ತು]ದಿಯೊಳು ಪಟ್ಟಶಾಲೆಯೊಳು ಮದನನ ಪೆಂಡ ವಾಸವೆನಲಾ ಪುರಸುದತಿಯರವನ ನೋಡಿದರು (ಶ್ರೀಪಾ. ೦೩–೩೯); ಮರಳಿ ಗೂಡಂ ಸಾರ್ದು ತಿರುಗಿ ಪುದಿಯಲ್ಲಿ ನಿಂದು ಮತ್ತೆ ನೋಡುವುದೊಮ್ಮೆ (ಕಬಿಪು. ೯೭–೬); ಆತಪತ್ರವನ್ನು ದೇಹಳಿಯ ಹೊರಗೆ ಕೊಡಕೊಡಹಿ, ಪುದಿಗೆ ಒರಗಿಸಿ ನಿಲಿಸಿ (ಮಂತ್ರಶ. ೩೦–೫). **ಹುದಿ$_2$**: ೧. ಸುಗ್ಗವ್ವೆ ಮಗನ ಬರವಂ ಪಾರ್ದು ಹೊಚಿಗೆ ಬಾಗಿಲ ಹುದಿಯನು ಹತ್ತಿ ನಿಂದಿರ್ದು . . . ಮಜುಗುತ್ತಮಿರಲು (ಸಿದ್ಧರಾ. ೨–೯೩); ಬಾಗಿಲ ಹುಡಿ[ದಿ]ಯಲ್ಲಿ ಭಂಗಿ ವಡೆದಂಗನೆ ನಿಂದು . . . ಒಪ್ಪಿದಳ್ (ಶಾಂತೀಶ್ವ. ೦೦–೬೪). ೨. ನೆಲೆ; ಆಶ್ರಯಂ; ಬೀಡು: ಹುರುಡಿನ ಹುತ್ತು ಹುಸಿಯ ಹುದಿ ಗದುಕಿ [ಪಾಠಾಂ. ೧]ನ ಗರುಡಿ ಗನ್ನದ ಗಡಿ . . . ಎನೆ ಕಣ್ಗಲ್ಲಿ ಕರಮೆಸೆದುದು ಸೂಳೆಗೇರಿ (ಕುರಾಸಾಂ. ೪–೧೦೨). ೩. (ಮಣ್ಣಿನ) ದಂಡೆ; ಕಟ್ಟೆ; ದಿಂಡು: ಮೆಣಸಿನ ಗಿಡಕ್ಕೆ ಹುದಿ ಏರಿಸುವುದಕ್ಕೆ ಹೋದವಳು . . . ಅಗಸೇ ಬಾಗಲಾಗೆ ಹಾದು ಬರಬೇಕೋ? (ಬೆಳುಮ. ೨೫). **ಹೊದಿ$_2$**: ೪. ಪಕ್ಕ; ಪಾರ್ಶ್ವ: ಭೋಗದೇವರಿಗೆ ಆ ತಿರುವಿಡಯಾತದೆ ಮೂಡಣ ಹೊದಿಯಲು ಗದ್ದೆ ಕಂ ೯೦೦ . . . ಸಲುಉದು (ಎಕ. XIV. ಎಳಂದೂ. ೦೭೦–೬; ಕ್ರಿ. 1376). [< ಪುದಿ$_1$ / ತಮಿ. ಪುದವು, ಪುದ = ಬಾಗಿಲು]

**ಪುದಿನ** 'ಪುದೀನ' ನೋ.

**ಪುದಿಯಣ್ಣ** (ನಾ). ಒಬ್ಬಾತನ ಹೆಸರು: ಮಾಚರಸರ ಮಗಂ ಪುದಿಯಣ್ಣ ಗಂಗೇಶ್ವರಕ್ಕೆ ಬಿಟ್ಟ ದೇವಭೋಗದ ಗಟ್ಡಿ ಮೂಗಣ್ಡುಗಂ (ಎಕ. X. ಶ್ರೀನಿವಾ. ೦೭–೦೩; ಕ್ರಿ. 1015). [ಪುದಿ$_0$ + ಅಣ್ಣ$_1$]

**ಪುದಿವಟು** 'ಪುದಿವಟ್ಟು' ನೋ.

**ಪುದಿವಟ್ಟು**, ಪುದಿವಟು, ಪುದಿವೆಟು, ಪುದಿವೊಟ್ಟು, ಪುದುವಟ್ಟು (ನಾ). ದೇವಾಲಯ, ಕೆರೆ, ಕಟ್ಟೆ ಮೊದಲಾದುವುಗಳ ಜೀರ್ಣೋದ್ಧಾರ ಇತ್ಯಾದಿ ಸಾರ್ವಜನಿಕಕಾರ್ಯಗಳಿಗಾಗಿ, ಉದಾರಿಗಳಿಂದ ದತ್ತಿಯಾಗಿ ಬಂದ (ಬಡ್ಡಿಯ ಉತ್ಪನ್ನವನ್ನು ಉಪಯೋಗಿಸಿಕೊಳ್ಳಬಹುದಾದ) ಕೂಡಿಟ್ಟ ನಿಧಿ, – ಸಂಪತ್ತು, – ಠೇವಣಾತಿ: ನಂಜಪ್ಪಯ್ಯನ ಪುತ್ರನಾದ ಕಪ್ಪಯ್ಯನು ಬರಕೊಟ್ಟ ಪುದಿವಟ್ಟಿನ ಬಿನ್ನವತ್ತಳೆ (ಎಕ. V. ಬೇಲೂರು. ೨೯–೯; 1717); ನಂಜುಂಡೇಶ್ವರನಿಗೆ ಮುತ್ತ್ಯಾಲಸೆಟ್ಟಿಯ ಹೆಸರಿನಲ್ಲಿ ಒಂದು ಸೇವೆ ನಡೆಯುವಂತೆ . . . ಮುನ್ನೂರುವರಹಗಳನ್ನು ಅದಕ್ಕೆ ಪುದಿವಟ್ಟಾಗಿಡುತ್ತೇನೆ (ಸೀತಿಶಾ. XI. ೦೬). **ಪುದಿವಟು**: ಮುದ್ದರಾಜಅಯ್ಯನವರು ಕೊಟ್ಟ ಪುದಿವಟು ಕಂ ಗ ೩೦ ಮುವ್ವತ್ತುವರಹಾ (ಎಕ. IV. ಎಳಂದೂ. ೦೭–೦೯; 1667). **ಪುದಿವೆಟು**: ವಿಠಲದೇವರ ಅಮ್ರುತಪಡಿ ಪುದಿವೆಟು ನೈವೇದ್ಯಕೆ (ಕಾಇಇ. IX–II. ೬೩೩–೦; 1554). **ಪುದಿವೊಟ್ಟು**: ಲಕ್ಷ್ಮೀನರಸಿಂಹಸ್ವಾಮಿಯವರ ಶ್ರೀಭಂಡಾರಕೆ ಧಾರಾದತ್ತವಾಗಿ ಸಮರ್ಪಣೆ ಮಾಡಿದ ಪುದಿವೊಟ್ಟಿನ ದ್ರುವ್ಯದಲಿ ದೇವಸ್ಥಾನಕೆ ಕ್ರಯಲಬ್ಧವಾಗಿ ತೆಗೆದುಕೊಂಡ ವೃತ್ತಿಗಳ ವಿವರಕೆ ಬರಸಿದ ಶಾಸನ (ಎಕ. XII. ತುಮಕೂ. ೯೭–೯೯; 1719). **ಪುದುವಟ್ಟು**: ಪುಟ್ಟದೇವರಾಜ್ಯೆಅರಸಿನವರು ೧೦೦ ವರಹ ಹಾಕಿರುವ ಪುದುವಟ್ಟಿನ ಸೇವೆಗೆ ಭದ್ರಂ ಭೂಯಾದ್ (ಎಕ. II. ೨೨೩–೨೪; 1827); ಸಾವಿರರೂಪಾಯಿ ಪುದುವಟ್ಟು ನಮ್ಮಪ್ಪನ ಹೆಸರಿನಲ್ಲಿ ಮಂಜುನಾಥನಿಗೆ ಕೊಟ್ಟುಬಿಡೋದು (ಒಡಮು. ೯೨); ಒಂದು ದೇವಸ್ಥಾನವನ್ನೂ ಒಂದು ಸತ್ರುವನ್ನೂ ಕಟ್ಟಿಸಿ ಅವಕ್ಕೂ ತಕ್ಕಷ್ಟು ವರಮಾನ ದೊರೆಯುವಂತೆ ಪುದುವಟ್ಟು ಹಾಕಿ ಸಮಿತಿಗಳನ್ನೇರ್ಪಡಿಸಿದನು (ಗುಹಾಸಾ. ೮೩). 'ಪುಲಿವೆಟ್ಟು' ಪರಾ. [ಪುದಿ$_1$ + ಪಟ್ಟು$_4$]

**ಪುದಿವು** (ನಾ). ೧. ಹೊಂದಿಕೆ; ಕೂಡಿಕೆ; ಸೇರುವಿಕೆ: ಕವಚನವರತ್ನದೀಧಿತಿನಿವಹಾರುಣಧವಳಕಿರಣಮಪರಾಜಿತನುತ್ತವಳನಿಸೆ ದೂರಪಾತೇಷುವೇಧದೊಳ್ ಪುಣ್ಣ ಸರಲ ಪುದಿವಂ ಪೋಲ್ಗುಂ (ಶಾಂತಿಪು. ೩–೦೦೦). ೨. ಗುಂಪು; ಸಮೂಹ: ಮಾಕಂದನಂದನದ ಬಳಸಿನೊಳಮಶೋಕವನದ ಪುದಿವಿನೊಳಂ ನಾಗಚಂಪಕವನದ ಸುತ್ತಿನೊಳಮತಿ ರಮಣೀಯಮಾಗಿ (ಶಂರಾಚೂ. ೪–೦೨೫ ವ); ಸಂಜನಿತಮುದರಲ್ಲಿ ಸುತ್ತಿದ ಘನಸಾರದ ಪುದಿವನಡರ್ದ ಲತೆಗಳ ಮನೆಯೊಳ್ ಪೊಕ್ಕಿರೆ (ಶೇಖುಪು. ೩–೩೧); ಪಂದಳಿರ ತೋರಣಂ ತಳ್ತೊಂದಿದ ಕೆಂಗುಡಿಯ ಪುದಿವು ಮುತ್ತಿನ ಕಡೆ ಚೆಲ್ವಿಂದೆಸೆವ ಮಂಗಳಾನಕದೊಂದು ರವಂ ಬಗೆಗೆವಂದು ದಂದರಮನೆಯೊಳ್ (ಕಾವ್ಯಾವ. ೨೩೯). ೩. ಮುಚ್ಚುವಿಕೆ; ಹೊದಿಸುವಿಕೆ; ಆಚ್ಛಾದನೆ: ಉದಿರ್ದ ಘನಸಾರನಿಚಯದ ಪುದಿವುಮನಲ್ಲೊಕ್ಕ ಮಲ್ಲಿಕಾಕುಟ್ಮಳದೊಂದೊದವುಮನುದಾತ್ತಮ್ಯಗಮದದುದಿತ ಸುಸೌರಭದ ಭಾರವಮಂ ತಳೆದುದುವಮಂ ಕಂಡು (ವೇಮಿಪು. ೪–೨೯). ೪. ಸಂಶ್ಲಿಷ್ಟಕೊಳ್ಳುವಿಕೆ; ಹೆಣೆದುಕೊಳ್ಳುವಿಕೆ: ಚದುರ ನಲ್ಲರ ಬಂಧ ಘಾತೆಗಳ ಪುದಿವು (ಶಾಶ್ವಶಾ. ೨೨–೭೦). [ಪುದಿ$_1$ + – ವು]

**ಪುದಿವೆಟು** 'ಪುದಿವಟ್ಟು' ನೋ.

**ಪುದಿವೊಟ್ಟು** 'ಪುದಿವಟ್ಟು' ನೋ.

**ಪುದೀನ**, ಪುದಿನ (ನಾ). ಔಷಧಿ, ಅಡುಗೆ ಮುಂತಾದುವಕ್ಕೆ ಬಳಸುವ, ವಾಸನೆಯುಳ್ಳ ಒಂದು ಬಗೆಯ ಸಸ್ಯ: ಪುದೀನ, ಚಟ್ನಿಸೊಪ್ಪು (ವೈಶಿ. ೩೩–೦೦೬೦). **ಪುದಿನ**: (೬).

[← ಪಾರ. ಪೂದಿನ; ಹಿಂ. ಪುದೀನಾ, ಪೂದನಾ, ಪೋದೀನಾ; ಮರಾ. ಪುದಿನಾ, ಪುದಾನಾ, ಪುದಾಣಾ]

**ಪುದು** 'ಪುದುವು' ನೋ.

Δ **ಪುದುಂಗಿಸು** 'ಪುದುಗಿಸಂ' ನೋ.

Δ **ಪುದುಂಗು** 'ಪುದುಗಂ$_1$' ನೋ.

**ಪುದುಂಗುಳಿಸು** 'ಪುದುಂಗೊಳಿಸು' ನೋ.

**ಪುದುಂಗೊಳ್**, ಪುದುಗೊಳ್ (ಕ್ರಿ). ಹೊಂದಿಕೊಳ್ಳು; ಕೂಡಿಕೊಳ್ಳು; ಬೆರೆತುಕೊಳ್ಳು: ಪಟಗನ್ನಡಂ ಪುದುಂಗೊಳೆ ಕೊಟಿಸಕ್ಕದಮಂ ತಗುಳ್ಚಿ ಜಾಣ್ಕಡೆ ಮುತ್ತಂ ಮೆಟಸಂ ಕೋದಂತಿರೆ ಪೇಟ್ವಟಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೋ (ಕಾವ್ಯಾವ. ೫೫); ಯಮುನಾಪ್ಲವಮಂ ಗಂಗೆಯ ವಿಮಲಪ್ಲವಮೊಂದಿದಂತೆ ಸಭೆಯಂ ಪುದಿದಂಗಮರೀಚಿಯನುಜ್ಜ್ವಲದಂತಮರೀಚಿ ಪುದುಂಗೊಳಲ್ಕೆ ಕೃಷ್ಣಂ ನುಡಿದಂ (ಜಗಪು. ೦೫–೫೭); ಬಗೆಯೆಂತಂತು ಪಾಡು ಪಾಡೆಂತಂತು ಹಾವಂ ಹಾವಮೆಂತಂತು ಭಾವಂ ಪುದುಂಗೊಳೆ . . . ಆಡುವ ನಟ್ಟವಿಗರ ಕೂಟದಿಂ (ರಾಪಾಶ್ವ. ೨೩–೦೬). **ಪುದುಗೊಳ್**: ಕೊಲಿಸುವ ಕೊಲ್ವ ಶಾಕ್ಯಪರಮಾಗಿಸುವಾಗುವ ಕಳ್ವ ಕಳ್ವರೊಳ್ ಸಲೆ ಪುದುಗೊಳ್ವ ಪಾದರವನಾಡಿಸು ಮಾಡುವ ಕಾಂಕ್ಷೆಯೊಳ್ ಮನಂ ಸಲಿಸುವ ಸ್ವಲ್ಪಪಾಪವರನುಂ ಶಠನುಂ ಖಳನುಂ ಕೃತಘ್ನನುಂ ಕಲುಷಿಯುಮುಟ್ಟುಮುಗ್ರನರಕಾಬ್ಧಿಗಭೀರಮನೆಯ್ದುವನ್ನೆಗಂ (ಸುಕುಮಾ. ೫–೪೪). [ಪುದು (< ಪುದುವು) + ಕೊಳ್$_1$]

**ಪುದುಂಗೊಳಿಸು**, ಪುದುಂಗುಳಿಸು, ಪುದುಗೊಳಿಸು (ಕ್ರಿ). ೧. ಕೂಡಿಸು; ಸೇರಿಸು; ಹೊಂದಿಸು: ಪಂಚರತ್ನಂಗಳುಮಂ ಪುದುಂ

ಗೊಳಿಸಿ ಪೊಂಗಳಸಂಗಳೊಳಿರ್ದ ಪುಣ್ಯತೋಯಂಗಳೊಳ್ಮುೞಿಂ ಮಿಸಿಸಿ ಕಟ್ಟಿದನಾ ವಿಭು ವೀರಪಟ್ಟಮಂ (ಶಂಕಥಾ. ೧೧-೨೫) ; ಅಜನಂ ಪಾಳಿಯುಮಂ ಪುದುಂಗೊಳಿಸಿಕೊಂಡೀ ಭೂಮಿಯುಂ ಭೂಮಿಪರ್ ನೆಱೆಯಾಳ್ಗೆಂದುಮಿಳಾತಳಂ ಬೆಳೆಯುತಿರ್ಕೆ (ಸಂದೋಂಬು. ೬-೨೬೮). ೨. ಬೆರೆತುಹೋಗು ; ಕೂಡಿಕೊಳ್ಳು ; ಒಂದಾಗು : ಮಲಯ ಸಮೀರಣೇರಣಚಲತ್ತರುಶಾಖೆಗಳೊರ್ಮೆಗೊರ್ಮೆ ನೀರೊಳಗೆ ಬಬಲ್ದು ಹೇಮಸರಸೀಜರಜಾರುಣವಾರಿಯಂ ಪುದುಂಗೊಳಿಸಿ . . . ತಣ್ಪು ವೆಸಕೆಯ್ವುವು ತೀರವನಾಂತರಾಳದೊಳ್ (ಆದಿಪು. ೧೧-೬೪) ; ಕನ್ನಡಿಯ ಕಲಶದ ಬಣ್ಣಪುರದಾರತಿಗಳೆಡೆಗೆಡೆಗಿಡಿಸಿದ ಪಂಚರತ್ನದ ಕದಿರ ಪೊದಱಿೊಳ್ ಪುದುಂಗೊಳಿಸಿ ನೆಗೆವ ಜಾಗದ ಪಡಲಿಗೆಗಳ ಅಗೆಯ ತುಱುಗಲಿಂ (ಅನಂಪು. ೬-೪೦ ವ). ೩. ಒತ್ತಾಗು ; ದಟ್ಟವಾಗು : ಅಳಿವಿಗಱಿಯ ಬಳಿದು ಪುದುಂಗೊಳಿಸಿದ ಬದಿರ ಸಿಡುಂಬನೆಡೆಗೊಳೆ ಕಡಿವ ಪೋಡುಂಗಾಱನಂತೆ (ಶಂಕಥಾ. ೦೨-೦೬೬ ವ) ; ಬಳಿಯಲರ್ಗಣ್ಗಳ್ ಬೆಳ್ಪಂ ಲಲನಾಜನದಧರ ಮಣಿಗೆ ಕೊಟ್ಟದೞ ಪುದುಂಗೊಳಿಸಿದ ಕೆಂಪಂ ನೀರ್ವೊಕುಳಿಯೊಳ್ ಪೊಱಮಾಡಿ ಕೊಂಡ ತೆಱದಿಂ ತೋರ್ಕುಂ (ಕಾವ್ಯಾವ. ೬೦೬). ೪. ಮುಸುಕು ; ಮುಚ್ಚು ; ಆವರಿಸು : ವಜ್ರದಂತನ ವಜ್ರದಂತೆ ಪೊಳೆವ ದಂತ ಪಂಕ್ತಿಗಳ ಕಾಂತಿಯಾ ಕಾಂತೆಯಂ ಪುದಿದು ಪುದುಂಗೊಳಿಸೆ ವಜ್ರದಂತನೆಂಬ ಪೆಸರಂ ನನ್ನಿ ಮಾಡಿ (ಆದಿಪು. ೩-೯೯ ವ). ೫. ತುಂಬು : ಬಬಲ್ಮುಡಿಯಂ ಸಡಿಲಿಸಿ ವನಮಂ ತನಿಗಂಪಿನಿಂ ಪುದುಂಗೊಳಿಸುತುಂ (ಶಾಂತೀಶ್ವ. ೦೫-೧೦೧ ವ). ೬. ಆಶ್ರಯ ಕೊಡು : ನಾಗಪಾಶಮನಶ್ರುಮದೊಳ್ ಪಱಿದು ಬಲದ ಕೆಯ್ಯೊಳ್ ನಿಜಪ್ರಾಣವಲ್ಲಭೆಯರಂ ಪುದುಂಗೊಳಿಸಿ (ಶಾಂತಿಪು. ೬-೩೦ ವ) ; ಉಳಿವ ತಳಿರೆಲೆಯ ದನಿಗೆ ಬೆರ್ಚುವ ಶಿಶುವನಾತ್ಮಪಕ್ಷಪುಟದೊಳ್ ಪುದುಂಗೊಳಿಸಿಯುಂ (ಮಲ್ಲಿಪು. ೩-೦೦೫). ೭. ಉಂಟುಮಾಡು ; ಹುಟ್ಟಿಸು : ಮರುಳ್ಗಳಾಟಮಂ ಪಳಪಳನೆವೆಯಿಕ್ಕದೆ ನೋಡಿ ಮುಗುಳ್ನಗೆ ನಗುವ ವೀರಭಟರ ಪಂದಲೆಗಳುಂ . . . ರೌದ್ರರಸಂಗಳಂ ಪುದುಂಗೊಳಿಸೆ (ಶಂಕಥಾ. ೧-೧೦೬ ವ) ; ರೂಪು ನೋಟಕರ ಕಣ್ಗಮೃತಾಂಜನಪುಂಜಮಂ ಪುದುಂಗೊಳಿಸೆ ನೃಪೇಂದ್ರನೋಲಗದೊಳಿರ್ದುದು ವಾರವಿಲಾಸಿನೀಜನಂ (ಅನಂಪು. ೩-೨೧). ೮. ಪಡೆ ; ಹೊಂದು ; ತಾಳು : ತೊಂಬತ್ತೊಂಬ್ಬೆ ಸಾಸಿರ ಯೋಜನಮಂ ನೆಗೆದೀ ಸುರಗಿರಿ ಪೆಂಪನೇಂ ಪುದುಂಗೊಳಿಸಿದುದೊ (ಆದಿಪು. ೭-೬೪) ; ಆರೋಗ್ಯಂ ಮಾಟ್ಟಮೃತಾಹಾರಮನಂಬಿಕೆಗೆ ಬೋನಮೆತ್ತುವ ದಿವಿಜಸ್ತ್ರೀರುಚಿರಭೋಜನಾಂಗಲತಾರಮಣೀಯತೆಯನೇಂ ಪುದುಂಗೊಳಿಸಿದಳೋ (ಶಾಂತಿಪು. ೯-೦೬೯) ; ನಾಂದಮರೆ ಪತ್ತಿದಂಬರದಿಂದೆಸೆ ವರಸಿಯ ನಿತಂಬಬಿಂಬಮನುಬಳಿಪಿಪ್ಪಂದಮುದಿಕ್ಷಿಸಿ ಹೃದಯದೊಳಂದೇಂ ಪುಂಭಾವಮಂ ಪುದುಂಗೊಳಿಸಿದುದೋ (ಚಂದ್ರಪು. ೬-೧೪೦). **ಪುದುಂಗುಳಿಸು:** ೮. ತನು ರುಚಿಯಂ ಪುದುಂಗುಳಿಸೆ ಸಂಸ್ಕೃತಿಭೋಗಮುಸಾರಮೆಂದು ನಿಟ್ಟಿಸಿ (ಎಕ. VII. ೬೩೦. ೭೦೯-೨೨: 918). **ಪುದುಗೊಳಿಸು :** ೧. ಕರಸ್ಥಳದಲ್ಲಿಪ್ಪ ಇಷ್ಟಲಿಂಗಲಕ್ಷಣವೆಂಬ ಕುಮಾರಮೂರ್ತಿಯಲ್ಲಿ ಪುದುಗೊಳಿಸಿ ಆ ಚಿತ್ಕಲಾ ಲಿಂಗವನ್ನು ಕೊಟ್ಟು ಸಂಬಂಧವ ಮಾಡಿತ್ತು (ವಚಶಾ. II. ೫೬) ; ಪುದುಂಗೊಳಿಸಿದಂ, ಪುದುಗೊಳಿಸಿದಂ (ಶಮದ. ೦೬೬ ಪ್ರಯೋ).

[ ಪುದುಂಗೊಳ್ + — ಇಸು₃ ]

**ಪುದುಕುಱಿ** (ಕ್ರಿ). ಕೂಡಿ ಯೋಚಿಸು ; ಜೊತೆಯಾಗಿ ವಿಚಾರ ಮಾಡು : ಸಾಮಿರ್ವರ್ ಪುದುವಾಱಿವೆ ಸಾಮಿರ್ವರ್ ಪುದುಕುಱಿಯೆವು (ಅಂತಿಗೊ. ೦೮-೬೬೪). [ ಪುದು (<ಪುದುವು) + ಕುಱಿ₁ ]

**ಪುದುಗಳ್ಳ** (ನಾ). ಜೊತೆಯ ಕಳ್ಳ : ವನಿತೆಯ ಮೋಹದಿಂ ಸುತರ ಮೋಹದಿನಿಪ್ಪರೊಳಾವ ಮೋಹದಿಂ ಧನಮನುಪಾರ್ಜಿಸಲ್ಕೆಱಗುವಂ ಕಳವಿಂ ಧನಲಾಭಮಾದೊಡಾ ವನಿತೆಯುಮಿಷ್ಟರುಂ ಸುತರುಮುಣ್ಬೆಡೆಯೊಳ್ ಪುದುಗಳ್ಳನೆಂದು ಭೋಂಕನೆ ಕಡಿದಿಕ್ಕೆ ಪೆರ್ದಸೆಯೊಳಿಲ್ಲಿದೆ [ ಯ ] ವರ್ಪುದು ವಾಗಳಾ [ ರಾ ] ಪರೇ (ಧರ್ಮಾಮೃ. ೬-೦೩೮).

[ ಪುದು (<ಪುದುವು) + ಕಳ್ಳ₁ ]

**ಪುದುಗಿಸು,** ಪುದುಂಗಿಸು, ಹುದುಗಿಸು (ಕ್ರಿ). ೧. ಬೆರಸು ; ಕೂಡಿಸು ; ಸೇರಿಸು : ಅದಕೆ ಸಕ್ಕರೆಯಿಕ್ಕಿ ಯಾಲಕ್ಕಿಪುಡಿಯುಮಂ ಪುದುಗಿಸುವುದು (ಸೂಪಶಾ. ೨-೩೭). ೨. ಮುಚ್ಚು ; ಅಡಗಿಸು : ಮರೆಮಾಡು : ತೊಟ್ಟಿಲೆಳವಕ್ಕಳನೊಂಕಿ ಜಿಪ್ಪಂಟಿ ಪತ್ತಮಂ ಪುದುಗಿಸಿ ತಾಯೊಳಾ ತೊರೆದ ಬೀಳ್ಕೊಲೆಯಂ ಸವಿದುರ್ಬಿ ಕೊರ್ಬುಗುಂ (ಜಕಪ. ೩-೫೬) ; ಒಂದು ಚಿಟಿಕೆ ನೀಡದೊಳಿರ್ದುಂ ಕಿಱುವುಱಿಯುಂ ಕುಟುಂಕಿತ್ತ ಱಂಕೆಯೊಳ್ ಪುದುಗಿಸಿಯುಂ (ರಾಜಶೇಖ. ೦೮-೨). **Δ ಪುದುಂಗಿಸು :** ೩. ಇರಿಸು : ಇವಂ . . . ಭಕ್ತಿಯುಂ ಪುರುಷೋತ್ತಮನೊಳ್ ಪುದುಂಗಿಸಿ ಪದುಳದೊಳಿರ್ಪಂ (ಜಕಪ. ೩-೧೧). **ಹುದುಗಿಸು :** ೨. ಪದುಮಕುಟ್ಮಲ ದೊಳಗೊಂದಱ ಲೆಕ್ಕವ ಹುದುಗಿಸಿ ಬರೆದವನಾರೊ ಚತುರರೆ ನೀ ಪೇಳು (ಕಂಪಾ. ೬-೦೬೨) ; ಬೂದಿಯೊಳು ಹುದುಗಿಸುತ ವೇದಿಸುತ ಮಱಿ ಮಾಡಿ ಕಾದಿರ್ದ ಚಿನ್ನದೊಳು ಬೆರಸಿ ಒರೆ ಹಚ್ಚಿ ಊದುತಲೆ ಬೋಸೆವ (ಸರ್ವಜ್ಞ. ೦೯೦೪) ; ಒಲೆಯ ಬದಿಯಲಿ ತಲೆಯ ಹುದುಗಿಸಿ ಮಲಗಿಕೊಂಡಿಹ ಬೆಕ್ಕಿಗೆ ಕನಸಿನಲ್ಲಿಯು ಇಲಿಯು ಬಾರದು (ನೀಮು. ೦೩-೦). ೪. ಕುಂದಣಿಸು ; ಕೆಚ್ಚು ; ಕೀಲಿಸು : ಗದಗದಿಪ ನವರತ್ನನಿಚಯವ ಹುದುಗಿಸಿದ ಸೌವರ್ಣ ಕಲಶದಿ ಮದನನಾ ನೆಲೆಯೆನಿಸಿ ಮೆಱೆದುದು ಪರಪರರೂಥನದು (ಪಕಶ. ೯-೦೯).

[ ಪುದುಗು₁ + — ಇಸು₃ ]

**ಪುದುಗು₁**, ಪುದುಂಗಂ, ಹುದುಂಗು, ಹುದುಗು₁ (ಕ್ರಿ). ೧. ಸೇರು ; ಕೂಡು : ಒಳಗೆ ಪುದುಗಿರ್ದ ಪರಿಮಳದೊಳೊಪ್ಪುವ ಲತಾಂತಕುಟ್ಮಲ ದಂತೆ ಪರಗರ್ಭಲಾಂಛನದ ಕಾಂತಿಯಂ ತಳೆವುದು (ತ್ರೈಬುಚಾ. ೦೮-೦೯) ; ಸವಿರಸ ಪುದುಗಿದ ಕಡುಫಲ ಸಹ ಪಲಸಿಹುವು (ಕಂಪಾ. ೩-೬೩). ೨. ಅಡಗು ; ಮರೆಯಾಗು : ಕುಕುಟಲಕಾಂಭೋರಾಶಿಯೊಳ್ ಸೈಂಧನಂ ಪುದುಗಲ್ ಬಾಟ್ದನೆ (ಸೋಮೇಶ. ೩೬) ; ಎತ್ತ ಬಲ್ಲರ್ ಸುಜನರೆಲೆ ಪಾರ್ಥೆ ಕಪಟಗಳ ಚಿತ್ತದೊಳ್ ಪುದುಗಿರ್ದ ಮಾಟವಂ (ತ್ರೈಬುಚಾ. ೨೯-೩೬) ; ಬೆದಱಿಯಾ ಮಾಧವಿ ಕುಶಲವತಿಯರ್ ಪೊನ್ನಂ ಕೊಂಡೋಡಿ ಕಡಗೋಣೆಯೊಳ್ ಪುದುಗಿದರ್ (ಜಕಪ. ೬-೨೬೩ ವ). ೩. ತುಂಬಿಕೊಂಡಿರು ; ಹೆಚ್ಚಾಗಿ ಸೇರಿರು : ಪವಕಚಪರಿಯಂತ ಕಟ್ಟಾಣಿಮುತ್ತುಗಳ ಪುದುಗಿದಾಭರಣ ಗಳಿಟ್ಟು ವಿಧುಮುಖಿಯೊರ್ವಳೊಪ್ಪಿದಳಾಗ ಬೆಳುದಿಂಗಳಧಿದೇವತೆ ಯುಂದದಲಿ (ಕಂಪಾ. ೬-೧೦೦). ೪. ಉಂಟಾಗು ; ಒದಗು ; ಹುಟ್ಟು : ಇದು ಗಿಳಿದೇರನ ದಾಳಿಯ ಭೀತಿಗೆ ಪುದುಗಿದ ನಡುಕವೊ (ಶಬರಾ. ೪-೦೯). ೫. ಒಳಸೇರಿಸು ; ತುಂಬಿಸು ; ಕೂಡಿಸಿ ಇಡು : ರಕ್ತಾರ್ದ್ರಮುಕ್ತೋ ತ್ಕರಮಂ ಮುತ್ತುಯ್ದು ಪುಣ್ಣತ್ತಿಯೊಳ್ ಪು[ಪಾಠಾಂ. ಹು]ದುಗಿ . . . ದುಃಖೋದ್ರೇಕದಿಂದಂ ಬಿಸಿ ಪರಪಸೆ ಬೀಸಿತ್ತು ಕರ್ಣಾಗ್ರದಿಂದಂ (೮೮೮ ೨೦) ; ತಲೆಯೊಳು ಬಿಲ್ವದಳಗಳಂ ಪುದುಗಿ ಬಾಯಲ್ಲಿಯುದಕವನು ಮುಕ್ಕುಳಿಸಿ ಕೊಂಡೆಯ್ತಂದು (ಪಾಸೋಪು. ೪-೪೦). ೬. ಅಡಗಿಸು ; ಮುಚ್ಚು ; ಮರೆಮಾಡು : ಹಿಡಿವಿಗವಕ್ಕಿಯ ತುಂಡುತುಂಡುಗಳನು ಸಡಿಲದೆ ಸೊಪ್ಪಿನೊಳ್ ಪುದುಗಿ ದಡಿಗಿಕ್ಕಿ ಹೊತ್ತವರನೆತ್ತಿನಿತೆಂಬುದ ಪಡಿ ಗಾಣ್ಬೊಡೆ ಶಕ್ಯವಲ್ಲ (ಪೋಹಶ. ೦೯-೮೬) ; ವಾಯಸಪ್ರತತಿ ಗಱಿಗಳಂ ಪೊದಿಸಿ ಮುಗ್ಗುಲೊಳಿಟ್ಟು ಕೋಗಿಲೆಯ ಮಱಿಗಳಂ ಮೈಯೊಳ್ ಪುದುಗಿಕೊಂಡು ಮಱುಕದಿಂದೈದೆ ಪಾಲಿಸುತಿರ್ದುವು (ತ್ರೈಬುಚಾ. ೨೬-೪). **Δ ಪುದುಂಗು :** ೧. ನೀನವನ ಗಂಟಲೊಳು ಸಿಕ್ಕಿ ಕೇರಿಸಿಯುಗುಳಲ್ ಶ್ಲೇಷ್ಮದೊಳ್ ಪುದುಂಗಿ ನಾನಾನಿರೋಧದಿಂ ಪೊರಳುತಿರೆ (ಚೆಕ್ಕಪು. ೩ ೬-೩) ; ಪೊರೆದರ್ ಕೊಂಗಣವರ್ಬರಾ ಬಟಿಕೆ ಬಲ್ಲಾಳರ್ ಕುಱುಂಬರ್ ತೆಲುಂಗರು

ಮಾಂದಿಗವರೊಳ್ ಪುದುಂಗದೆರವೆಂಬಾತಿರ್ದು ಸಾದರದಿಂ ಕನ್ನಡರಾಯು ರೀಳ್ವನೆಗವಿಾ ಕರ್ಣಾಟದೇಶಂ ಕರಂ ಹರಿಸಂಬೆತ್ತುದು (ಅಪ್ರಶಿ. ೯೯ ೨೨). ೨. ಇದಕಿನ್ನುಪಾಯವಾವುದು ನಮ್ಮ ಯಂತ್ರಮಂತ್ರದ ಬಲ್ಪು ಮೆಲ್ಪಾಯ್ತು ತಂತ್ರವೆಲ್ಲಂ ಪುದುಂಗಿದುದು (ಸಾಂಪಳ. ೦೨-೮೩); ಪಾಪಾಣ ದೊಳ್ ಪುದುಂಗಿದ ಚಿನ್ನದೊರೆವುದಿಯಂತೆ ರೂಪಬೀದಿರ್ಪ ಬದ್ಧಾತ್ಮ ವರ್ಗದ ದುರ್ಗತಿಯುಂ ಕಳೆಯಲೆಂದು . . . ಎಳಸಿ (ಜಿಶಂ. ೦-೬೦). **ಹುದುಂಗು**: ೨. ಪುಲ್ಲೆಯು ಹಿಂಡನೊಂದು ಪುಲಿ ಗೆಂಟಟೀಟೊಯ್ಯನೆ ಕಂಡು ಪಜ್ಜೆಯುಂ ಮೆಲ್ಲನೆ ಮೆಟ್ಟಿ ಪುಲ್ಲೊಳ್ ಹುದುಂಗಿ ಹುದುಂಗಿ . . . ಕೊರಲ್ಗೆ ಪಾಯ್ದು . . . ಎಟ್ಟಿದಿಕ್ಕದುದಿಕ್ಕದಾಣದೊಳ್ (ದಕಶಾ. ೨-೧೮೩).

**ಹುದುಗು₁**: ೧. ತಂಟನಗ್ಗಳಿಕೆಯು ವಿಘಾತಿಯು ರೈಣಂಬಿನಲಿ ಹುದುಗಿದ ಮಹೇಶನ ಕಂಡನಾ ಪಾರ್ಥ (ಕುವ್ಯಾಳ. ೧೬-೩). ೨. ಬ್ರಹ್ಮನ ಕರಕಮಂಡಲದೊಳಗೆ ಹುದುಗಲಿ ರವಿಯು ಮುಣಿಹೊಗಲಿ . . . ಕೊಲುವೆನು ವೈರಿ ಸೈಂಧವನ (ಕುವ್ಯಾದ್ರೋ. ೮-೩೩); ಹರಿಗಂಡ ಕರಿಯಂತೆ ಹುದುಗುತಿರಲು (ಕೃಕುಶ. ೩-೬೨); ಹೃದಯದಲ್ಲಿ ಹುದುಗಿದ್ದ ಗರ್ವ ತಲೆಯೆತ್ತಿ ನಿಂತಿತು (ಪಾಪಾಶ. ೬೨). ೩. ಕದಡಿತೆನ್ನಯ ಹೃದಯ ಹೃದಯವ ಹುದುಗಿಸಳು (ಕೊಶರಾ. ೨ ೩-೧೩); ಕದನಕರ್ಕಶಕರಿತುರಂಗಮಾಹೇರೊಡನೆ ಹುದುಗಿ ಬರೆ ನೆಲನೀದ ತೆಬಿದಿ (ಸಮ್ಯಕ್. ೮ ೨೩). ೫. ಕುಂಭಗಳ ಹುದುಗಿಕ್ಕಿದ ಕಿಚ್ಚು ಆ ಕುಂಭಗಳಿಗೆ ಒಳಗೆ ಮುಟ್ಟಿದವೂ ಹೊರಗೆ ಮುಟ್ಟದಡೂ ಪಾಕಪ್ರಯತ್ನ ತಪ್ಪದು (ಸಿದೇವ. ೨೬೬-೨೬); ಹುತವಹ ನೆಡೆಯೊಳು ಹುದುಗಿರ್ದ ಚಿನ್ನಕ್ಕೆ ಹಿತವಾಗಿ ಬಣ್ಣ ಬಂದಂತೆ ಚಿತಭಸ್ತೃಲಿಪ್ತ ದೇಹವಿರ್ದುದು ಪೂರಿತ ಹೇಮಕುಂಡಲದಂತೆ (ಮೋಹತ. ೮-೨೦); ಕಂಜಾಪ್ತಿಯು ದಿವ್ಯಸೌರಭ್ಯವನಪತಂಜಿಯೊಳಗೆ ಮಿಗೆ ಹುದುಗಿ ಕಂಜಜ ಕೈಗೈದ ಜೀವಪುತ್ರಳಿಯೊಲು ರಂಜಿಸಿವರು ಕೋಮಲೆಯರು (ಶಂಪಿ. ೨೯-೬). ೬. "ಹುದುಗು—ಗೋಪನೇ (ಮುಚ್ಚು)" (ಶಮರಾ); ಪೃಥ್ವಿಗೆ ಅಪ್ಪುವಿನ ಅಧಿಕವ ಮಾಡಿದರು ಅಗ್ನಿಯು ಹುದುಗಿದರು ವಾಯುವ ಬೀಜಿದರು ಆಕಾಶದಲ್ಲಿ (ಲಿಂಗಪ. ೪. ೬೯-೩೪). ೭. ತಡೆದು ನಿಲ್ಲಿಸು; ಸ್ತಂಭಿಸು: ಪ್ರಾಣಾಪಾನವಾಯುವ ಹುದುಗುವಸು . . . ಅವನಿಗದರಿಂದೆ (ಭರತ. ೬೩-೬೩).

**ಹುದುಂಗಿಕೊಳ್ಳು, ಹುದುಗಿಕೊಳ್ಳು** = ೧. ಅವಿತುಕೊಳ್ಳು; ಮರೆಯಾಗು: ಅಂತು ಪಾರಸಿನಂ ಪೇಟ್ದುಪಾಯದಿಂ ಪೊಕ್ಕು ಹುದುಂಗಿ ಕೊಂಡಿರ್ಪುದುಂ (ಮಸಾಪಿ. ೪-೧೬೨ ವ); ನೀನೆಲ್ಲಿ ಹುದುಗಿಕೊಳ್ವೆ (ಕೇಶರಾ. ೨೦-೨೮); ನನಗೆ ಭೂಮಿಯೊಳಗೆ ಹುದುಗಿಕೊಂಡುಬಿಡುವಷ್ಟು ನಾಚಿಕೆಯಾಯಿತು (ಶಾರಿಪು. ೦೬೯). ೨. ಸೇರಿಕೊಳ್ಳು; ಕೂಡಿಕೊಳ್ಳು: ಈ ವಿಶಾಲವಾದ ಪ್ರೇಮಭಾವನೆಯಲ್ಲಿಯೇ ದಯೆ, ಮಮತೆ, ಸಹನೆ, ಸಹಾನುಭೂತಿ, ಸಮತೆ, ಸಹಿಷ್ಣುತೆ—ಇವೆಲ್ಲ ಹುದುಗಿಕೊಂಡಿವೆ (ರರ್ಮಣಾ. ೬). **ಹುದುಗಿರಿಸು** = ಅಡಗಿಸಿಕೊಳ್ಳು; ತಾಳಿಕೊಳ್ಳು; ಸಹಿಸು: ಮುತ್ತಾಯಿ ಹುದುಗಲಾರದ ವಿರಹದುಃಖವನ್ನು ಹುದುಗಿರಿಸುತ್ತ ಗಂಡನ ಮನೆಗೆ ಹೊರಟುಹೋದಳು (ಕಪಾರ್. ೦೪೩). **ಹುದುಗಿಸಿಕೊಳ್ಳು** = ಹುದುಗಿರಿಸು: ತಾಯಿಯು ಎದೆಗೆ ಮುಖವನ್ನಿಟ್ಟು ತನ್ನ ದುಃಖವನ್ನು ಹುದುಗಿಸಿಕೊಂಡಳು (ಜೀವುಣ. ೨೭೦). [ ದೇ.॥ ತಮಿ. ಪೊತುಕ್ಕು; ಮಲ. ಪೊದಿಯು, ಪೊಡಿಕ್ಕ; ತೆಲು. ಪೊದುಗು, ಪೊದುವು]

**ಪುದುಗು₂, ಹುದುಗು₂** (ನಾ). ೧. ಅಧಿಕವಾದುದು; ಹೆಚ್ಚಾದುದು: ಸೂಳೆಯರ್ಗೆ ಬೊಜಗನಿಂ ಪೊನ್ನುಂ ಸೊಗಮುಂ ಬರ್ಕುಂ ಅದಟಿರೊಳ್ ಸೊಗಮಿರ್ಪರ್ಗಂ ಪುದುಗಾದುದಱಿಂದದರ್ಕಿರ್ಪರುಂ ಪೊಣ್ದಾಪರ್ (ಕಕಶ. ೬-೧೩೪ ಕೃತಿಗಳ ಪಂಕರದ ವಚನ). **ಹುದುಗು₂**: ೨. ಹೊಂದಿಕೆ; ಜೋಡಿ; ಸಾಮರಸ್ಯ: ಇವರೆಲ್ಲರು ಹುದುಗಿನ ಗಂಡಂದಿರು ಭೀಮಗೆ ಹೇಳ ಕಂಡುದ ಕಾಬೆನು (ಕೈರಸೂ. I. ೦೦೩). ೩. ಕೂಟ; ಸಂಬಂಧ; ಸ್ನೇಹ: ಪದವನಱಿಯದ ವಾಚಕ ಘಾತಕನ ಇರವು . . . ಈ ಅಱುವಿನ ಒಳಗನಱಿಯದ ಜೂಜಿನ ಹುದುಗಿಂಗೆ ಬಂದು ಸುರಿಗಾಯು ಸುರಿವವನ ವಿಧಿಯಂತೆ (ಮಮಗುಂ. ೪. ೨೬೩-೬೩); ಕುಜನರ ಹುದುಗು ಮಾಳ್ಪುದಱಿಂದ ಭಾವಿಪಡದು ಮಹಾಸಜ್ಜನವಿರೋಧವದೊಳ್ಪಿತು (ಬಸಪು. ೩೨-೬೩). ೪. ಬಯಕೆ; ಆಸೆ; ಬಂದ ಬಂದವರೆಲ್ಲರೂ ಅವಳ ಕಂಡು ಮನಸೋತು ಗಂಡನ ಕೊಂದು ಅವಳ ಕೊಂಡುಹೋಹಾಗ ಹುದುಗು ಹಿಂಗದೆ ಇವರೆಲ್ಲರೂ ಕೊಂದಾಡಿ ಸತ್ತರು (ಘುಮಗುಂ. ೪. ೨೪೮-೦೨). ೫. ಇಡ್ಡಲಿ, ದೋಸೆ ಇತ್ಯಾದಿಗಳು ಮೃದುವಾಗಲು ಹುಳಿ ಬರುವಂತೆ ಬಳಸುವ (ನೀರಿನಲ್ಲಿ ನೆನೆಸಿದ) ಉದ್ದು, ಮೆಂತ್ಯ ಮುಂತಾದ ಪದಾರ್ಥಗಳನ್ನು ರುಬ್ಬಿದಾಗ ಉಕ್ಕುವ ವಸ್ತು; ಸರಿ. 'ಒದಗು₂' ಪರಾ.

**ಹುದುಗು ಬರು** = ಇಡ್ಡಲಿ, ದೋಸೆ ಇತ್ಯಾದಿಗಳನ್ನು ತಯಾರಿಸುವಾಗ ಉದ್ದು, ಮೆಂತ್ಯ ಮುಂತಾದ ಪದಾರ್ಥಗಳನ್ನು ಸೇರಿಸಿ ರುಬ್ಬಿದಾಗ, ಹಿಟ್ಟು ಹುಳಿ ಬರು,—ಉಕ್ಕಿ ಬರು: ಹದವಾಗಿ ಹುದುಗು ಬಂದರೆ ಇಡ್ಲಿ, ದೋಸೆ ಮೃದುವಾಗಿರುತ್ತದೆ (ಜಾಪ್ರ). **ಹುದುಗು ಹಾಕು** = ಇಡ್ಡಲಿ, ದೋಸೆ ಇತ್ಯಾದಿಯನ್ನು ತಯಾರಿಸುವಾಗ ಹಿಟ್ಟು ಹುಳಿ ಬರಲು ಉದ್ದು, ಮೆಂತ್ಯ ಮುಂತಾದ ಪದಾರ್ಥಗಳನ್ನು ಸೇರಿಸು,—ಹಾಕು: ಹುದುಗು ಹಾಕುವಾಗ ಹೆಚ್ಚು ಕಡಿಮೆಯಾದರೆ ಕಾವಲಿಯಿಂದ ದೋಸೆ ಏಳುವುದೇ ಇಲ್ಲ (ಜಾಪ್ರ). [<ಪುದುವು]

**ಪುದುಗುಡು** (ಕ್ರಿ). ಪಾಲು ಕೊಡು; ಭಾಗವನ್ನು ಕೊಡು: ಪುದುಗುಡ ದಾರ್ಗ್ಗವೀ ಧರೆಯನೊರ್ವ್ವನೆ ದೋರ್ವ್ವಲದಿಂದೆ ಪಾಳಿಪೊಂದ ದಟನಳುರ್ಕ್ಕೆಯಿಂ . . . ಪುರೂರವನೆಂಬುದು ರಾಮಚಂದ್ರನೆಂಬುದು ಪೆಱತೊಂದನೇಂಬುದೆ ನೆಗರ್ತ್ತೆಯ ವಿಕ್ರಮಚಕ್ರವರ್ತ್ತಿಯ (ಕೂಶ್ಯಾಶಾ. ೬-೬; 1128). [ಪುದು (<ಪುದುವು) + ಕುಡು₁(<ಕೊಡು₁)]

**ಪುದುಗೂಡು** (ಕ್ರಿ). ಜೊತೆಗೂಡು; ಒಂದರೊಡನೊಂದು ಹೊಂದಿಕೊಳ್ಳು: ಮೃದುನುಡಿಗಳ ರಾಜಕೀರ ಕೋಕಿಲಸ್ವರ ಪುದುಗೂಡಿದಂತೆ ಗಾನೆಯರ ಮಧುರಾಳಾಪಗೀತವ ಕೇಳ್ದು ಖಳರಾಯ ಚದುರ ಮೆಯ್ಯುರಿದೆನ್ನ ನೊಲಿದು (ಮೋಹತ. ೨೨-೬೬). [ಪುದು (<ಪುದುವು) + ಕೂಡು₁]

**ಪುದುಗೊಳ್** 'ಪುದುಂಗೊಳ್' ನೋ.

**ಪುದುಗೊಳಿಸು** 'ಪುದುಂಗೊಳಿಸು' ನೋ.

**ಪುದುಮನೆ, ಹುದುಮನೆ** (ನಾ). ಬಚ್ಚಿಟ್ಟುಕೊಳ್ಳುವ ಜಾಗ; ಮರೆಯಾಗುವ ಸ್ಥಳ: ಬಸಕೆ ಮರಳ್ದೆ ನುರುಳೆ ನೀ ಪುದುಮನೆಯ ಹಾವನು ಹದ್ದು ಹಿಡಿವರೆ ಮನಕತವ ಮಾಡುವರೆ (ಕುವ್ಯಾಶ. ೨೦-೩೩). **ಹುದುಮನೆ**: ಬಗೆಯ ಮಾಡಿ ಮಾಸಳಿಸಿತು ವಿರಕೆ [ ಪಾಠಾಂ. ಚಿತ್ತಕೆ, ಬೆರಕೆಯ ] ಬೆಗಡು ಹುದುಮನೆಯಾಯ್ತು (ಕುವ್ಯಾಗ. ೨-೦೩). [<ಪುದುಗು₁ + ಮನೆ]

**ಪುದುಮಾಡ** (ನಾ). ಜೊತೆಜೊತೆಯಾಗಿರುವ ಮಹಡಿಯ ಮನೆ; ಸಾಲುಪ್ಪರಿಗೆ: ಇಲ್ಲಿ ದಿಕ್ಪತಿಗಳಿಲ್ಲಂ ಬಂದು . . . ಆಡುವ ಪಾಡು ವಗ್ಗಳಿಕೆಯೊಳ್ ಚೂಡಾಮಣೀಜ್ಯೋತ್ಸ್ನೆಯೊಳ್ ಪುದುಮಾಡುಗಳ ಮೇಲೆ ಚುಂಚುಲೋವೆಯೊಳ್ ವಿದ್ಯುಲ್ಲತಾಲಾಸ್ಯಮುಂ (ಅಪಂಪು. ೦೦-೨೯). [ಪುದು (<ಪುದುವು) + ಮಾಡ₁]

**ಪುದುಪಟ್ಟು** 'ಪುದಿಪಟ್ಟು' ನೋ.

**ಪುದುವಯಕೆ** (ನಾ). ಒಳಗಿನ ಆಸೆ; ಅಂತರಂಗದ ಅಪೇಕ್ಷೆ; ಮನಕೆ ಪುದುವಯಕೆ ಪುದುಂಗೊಳೆ ಸೀತೆ ಬಸಿಱಾದಳ್ (ರಾಮಾಶ್ವ. ೨೦-೦೦). [<ಪುದುಗು₁ + ಬಯಕೆ]

**ಪುದುವರ್** (ಕ್ರಿ). ಹೊಂದು; ಕೂಡು: ಮಸಕಂಬೆತ್ತ ಮತಿಪ್ರಕಾಶ

ಮನಲಂಪಿಂದಿತ್ತು ಮತ್ತಾವ ದುರ್ವ್ಯಸನಂಗಳ್ ಪುಗದಂತೆ ಪೊಣ್ಬು ಪುದುವಂದೇಕಾಂಗದಿಂ ತಾನೆ ಮಹಾಸದೊಳ್ ನಿಂದು ಜಿತಾರಿಪಕ್ಷನದಜಂ ಯಕ್ಷೋತ್ಸವಮಂ ಕೂರ್ತು ರಕ್ಷಿಸುಗೆ (ಧರ್ಮಾಪಾ. ೧-೯); ಪುದುವಂದುದೆಂದು ನೆಲೆವೆರ್ಚಿರೆ ಭಾವರಸಂ ರಸಜ್ಞೆಯೊಳ್ ಮೃದುಪದವಿಟ್ಟಳಕ್ಕುವೆನೆ ಭಾರತಿ ಬಂದು ಕಳಾವಿಳಾಸನಾ (ಧರ್ಮಾಪಾ. ೧ ೬೨).

[ಪುದು (<ಪುದುವು) + ವರ್]

**ಪುದುವಾಳ್$_1$** 'ಪುದುವಾಟು' ನೋ.

**ಪುದುವಾಳ್$_2$** ಪುದುವಾಳಂ (ನಾ). ಕೂಡಿಕೊಂಡು ಬಾಳುವಿಕೆ; ಹೊಂದಿಕೊಂಡು ಬದುಕುವಿಕೆ: ಭವವೇಕಾನೇಕಸತ್ವಾದಿಗುಣದ ಪುದುವಾಳೇಕದಾನೇಕೆ ಕಾವ್ಯೋತ್ಸವವೇಕಾನೇಕೆ (ರಕ್ಷಾಕ. ೫೭); ಪುದುವಾಳ್ಗಣದವರ್ಗೆ ತುಂಬಿಸಿಲೆನಿಪ ಬಾಲವಣ್ಗಳ್ ಗಮಕದಿಂ ತಳರ್ದರು (ಉದ್ಭಟಕೀ. ೩-೨೦). **ಪುದುವಾಳು:** ತರುಚರರ ಪುದುವಾಳು ಲೇಸೇ (ಕೌಶಿಕಾ. ೧೯-೬೨); ಆ ಮಿರುಳನ ಕೊರಲ ಕೊಯ್ಯುದೊಡೆ ಹೇಳಲೇನವ ನೊಳಗೆನಗೆ ಬಳಿಕ ಪುದುವಾಳೆ (ಕುರಂಗಾಂ. ೩೩ ೭೮).

[ಪುದು (<ಪುದುವು) + ಬಾಳ್$_2$ (<ಬಾಳ್$_3$)]

**ಪುದುವಾಳು** 'ಪುದುವಾಳ್$_2$' ನೋ.

**ಪುದುವಾಳ್ಕೆ** 'ಪುದುವಾಟ್ಕೆ' ನೋ.

**ಪುದುವಾಳ್ತನ** (ನಾ). = ಪುದುವಾಳ್$_2$: ಪುದುವಾಳ್ತನಂ ಗಡ ಸಖಿಗೆಂತಾದೊಡಂ ಮಿತ್ರರೊಳ್ (ರಾಜಶೇ. ೧೩-೨೭).

[ಪುದುವಾಳ್$_2$ + — ತನ]

**ಪುದುವಾಟು**, ಪುದುವಾಳ್$_1$, ಹುದುವಾಳ್ (ಕ್ರಿ). ೧. ಕೂಡಿ ಬಾಳು; ಸಹಜೀವನ ನಡೆಸು: ಆ ಪಣ್ಣಮಹಾಪಾತಕನ ಊರಿ[೦] ಕಳೆವುದು ಊರಾತನೆಂದಾತಂ ಪುದುವಾಟ ಸಲ್ಲಂ (ಕಾವ್ಯ. IX – i, ೨೯-೫೬; 936); ಉಡಿಸಿಯುಮೂಡಿಸಿಯುಮಟ್ಟಿಯುನೆಡೆಯುಂಡುಗದೆ ಸಲಿಸಿ ಪಲವುಕಾಲಂ ಪುದುವಾಟ್ಟೊಡಲಾತ್ಮನೊಡನೆ ಪೋಗದೆ ಕಡೆಗಣಿಸುವುದೆಂದೊಡುಟಿದರಂ ನಂಬುವುದೇ (ಆದಿಪು. ೩-೬೦); ಸಾದಿಸುವೆಂ ಫಲ್ಗುಣನಂ ಸಾದಿಸುವೆಂ ಪವನಸುತನ ಬಸಿಜಿಂ ಹಾ ಕರ್ಣಾ ಮಾಶ್ವಾಸನ ತೆಗೆವೆಂ ನಿರ್ದೋಷಿಗಳಿಕ್ಕಿ ಯುವುಜನೊಳ್ ಪುದುವಾಟಿಂ (ಗದಾಯು. ೯-೨೦); ರಾವಣನೊಳ್ ಪುದುವಾಟ್ಟ ದೋಷ ಹರಣಕ್ಕೆ ವಿಭೀಷಣನಮರನದಿಯೊಳಘಮರ್ಷಣಮಿರ್ದವೊಲಿರ್ದನಧಿಪನಂಗ ಪ್ರಭೆಯಿಂ (ಶಂರಾಪಾ. ೧೨-೯೪). ೨. ದಾಂಪತ್ಯ ನಡೆಸು; ಸಂಸಾರ ಮಾಡು: ಪಿರಿಯರರಸಿಯ ಪಟವೇಟದ ಪರಿವಿಡಿ ಮಗುಟ್ಟ್ಂ ಕೊನರ್ತುದಾ ಸತಿಯೊಡನಿಂ ನರಪತಿ ನಿನ್ನಂಗಾಲೊಳ್ ನರೆ ಬರ್ಪಿನಮುತ್ತರೋತ್ತರಂ ಪುದುವಾಟಾ (ಶಾಂತಿಪು. ೯-೫೨); ಪುದುವಾಟ್ವೆನಕ್ಕೆ ಮುಕ್ತ್ಯಂಗನೆಯೊಳ್ (ಆದಿಪು. ೨-೭೫); ಆತಂಗೆ ಪರಸೆಯೆಂಬಳ್ ಪಾತಕಿ ಕುಲವನಿತೆ ಬೆಂನಿಸಿ ಕಯನೆಂಬ ಮಹಾಪಾತಕನೊಳ್ ಪುದುವಾಟ್ಟಳ್ (ಶಂರಾಪಾ. ೬ ೩೩); ನಾಲ್ವರೊಳ್ ಮಿಟಿವಾಟ್ಟು ಕೊಂತಿ ಪಾಂಡುರಾಜಂಗೆ ಕುಲಸ್ತ್ರೀಯೆಂದು ಮನ್ನಿಸಿಕೊಂಬುದೆತ್ತ . . . ದ್ರೌಪದಿ ಪಾಂಡವರಯ್ವರೊಳ್ ಪುದುವಾಟ್ಟಳೆಂಬುದೆತ್ತ (ಶಂಹಂ. ೧-೨೯ವ). **ಪುದುವಾಳ್$_1$:** ೧. ಚೀ ಸವತಿಯೊಳ್ಪುದುವಾಳ್ವುದು ಕಷ್ಟಂ (ಎಪಿ. XVI, ೬೦-೩೨; 1081); ಸದಮಲಮಪ್ಪ ಭೂಚರರೊಳು ಮುದದಿಂ ಪುದುವಾಳ್ವೆನು (ನೇಮಿಜಿಸಂ. ೩-೩೭). ೨. ಒರ್ವಳೊಳ್ ಪುದುವಾಳಲಟಿಯದೆಕ್ಕತುಳಗೆಯ್ದೊರ್ವಳಂ ತರಲ್ (ಉದ್ಭಟಕೀ. ೪-೨); ದೇವ ನಿನ್ನೊಳು ಪುದುವಾಳ್ವ ಮೆಟಿವವರ್ಗೆ ಶಿಪುಣ್ಯ ಬೇಕು (ಜಗ. ೨೦-೦೦೩). **ಹುದುವಾಳ್:** ೧. ಅದು ಇದು ಎಂಬುದೆಲ್ಲ ಹದಪರಿತಿಲ್ಲಿ ಹುದುವಾಳ್ಗೆ! (ನೇಮಿಜಿ. ೬೦-೪).

[ಪುದು (<ಪುದುವು) + ಬಾಟು$_1$]

**ಪುದುವಾಟ್ಕೆ**, ಪುದುವಾಳ್ಕೆ, ಹುದುವಾಳಿಕೆ, ಹುದುವಾಳಿಗೆ (ನಾ). ೧. = ಪುದುವಾಳ್$_2$: ಪುದುವಾಟ್ಕೆಗೊಡಂಬಡಲೊಲ್ಲದಿನ್ನುಮವ್ವಳಿ ಸುವನೀಗಳಾತನನೆ ನೀಂ ಬೆಸಗೊಳ್ ಪುಸಿಯಂ ಸುಯೋಧನಂ (ಪಂಪಭಾ. ೧೩-೯೯); ನಾಂ ಗತ ಮಧ್ಯಸ್ಥಂ ನುಡಿವಂ ಗಡ ಪುದುವಾಟ್ಕೆಯೆನಗಮು ಪರ್ಗಂ ಸಂಧಾನಂ ಗಡ (ಗದಾಯು. ೭-೯೯). ೨. ದಾಂಪತ್ಯಜೀವನ; ಗಂಡ ಹೆಂಡಿರಾಗಿ ಬಾಳುವಿಕೆ: ಅವಳೆನ್ನಂ ಪರಿಗ್ರಹಿಸಿ ಧನಮಿತ್ರನ ನುದಾಸೀನಂಗೆಯ್ದುದಟೀನಾನವಳೊಳ್ ಪ್ರೀತಿಯಿಂ ಪುದುವಾಟ್ಕೆ ಯಿಂದಿತಲ್ (ಪಶು. ೬ ೮೫ ವ). **ಪುದುವಾಳ್ಕೆ:** ೧. ಬನ್ನಿಮೆನ್ನೊಡನೀಗ ಬೇರೊಂದು ಪುದುವಾಳ್ಕೆಗೆ (ಕಾಂಚಾರ. ೫೬-೯೯). **ಹುದುವಾಳಿಕೆ:** ೧. ಹೀಗೆ ಹುದುವಾಳಿಕೆಯಲ್ಲಿದ್ದ ಮಾಚಯ್ಯನಿಗೆ ಅಂತರಂಗದಲ್ಲಿ ಅವುದೋ ಅತೃಪ್ತಿ (ಕರಿಕ. ೪೦೩). **ಹುದುವಾಳಿಗೆ:** ೧. ಮನವೇ ಸರ್ವತನುವೇ ಹೇಳಿಗೆ ಹಾವಿನೊಡತಣ ಹುದುವಾಳಿಗೆ (ಬಸವ. ೧೬೦).

[ಪುದುವಾಟು + — ಕೆ]

**ಪುದುವಿರ್** (ಕ್ರಿ). = ಪುದುವಾಟು ೨: ಆಕೆ ಗಾಳಿಯೊಳ್ ಪುದುವಿರ್ದಳಿಂ ಬುದೆತ್ತ ಗಾಳಿಗವಾಕೆಗಂ ಭೀಮಂ ಪುಟ್ಟಿದನೆಂಬುದೆತ್ತ (ಶಂಹಂ. ೧-೨೯ ವ).

[ಪುದು (<ಪುದುವು) + ಇರ್$_1$]

**ಪುದುವೀ** (ಕ್ರಿ). ಹಂಚಿ ಕೊಡು; ಪಾಲು ಮಾಡಿಕೊಡು: ಧರೆಯಂ . . . ಕೈತವದಿಂದೈವರ ಕೆಯ್ಯೊಳೆಟಿದುಕೊಂಡುಂ ಕುರುರಾಜಂ ಮತ್ತಮವರ್ಗೆ ಪುದುವಿತ್ತಪನೇ [ಪಾಠಾಂ. ಪುದು ಮಾಡುವನೇ] (ಗದಾಯು. ೪.೦೦).

[ಪುದು (<ಪುದುವು) + ಈ$_2$]

**ಪುದುವು**, ಪುದು, ಹುದು$_1$, ಹುದುವು$_1$ (ನಾ). ೧. ಗುಂಪು; ರಾಶಿ; ಸಮೂಹ: ಅರಮೆ ಅರಲ್ದ ಬಯಲ್ದಾವರೆಗಳ ಪುದುವು ಗಳೊಳರಮೆ ಎಳದಳಿರ ಲತಾಂತರದೊಳುಟಿದುಟಿದು ಕಾಡುಗುಮಿರು ಳೆಪ್ಪಿನಮಟಿಸುವಿನಿಯಳಂ ಚಕ್ರಾಹ್ವಂ (ಕಾವ್ಯಾವ. ೯೭). **ಪುದು:** ೧. ಜಳದೇವತೆಗೆತ್ತಿದ ಪಚ್ಚೆಯ ಸತ್ತಿಗೆಗಳ ಪುದುವೆನಿಪುದು ವನಜವನದ ಕೊಡೆಯೆಲೆ ಪಲವು (ಆದಿಪು. ೧೦-೬೩); ಮುನಿಪತಿಯ ತೋರ್ಪ ಬರಿಯೆಲ್ವಿನ ಪುದುವಿಂ ಬೂದಿವಾಟುತ್ತಿರ್ಪಕಿರವಿಂ ಕಾಮನ ಸುಟ್ಟ ಕಾಡಿದೆನೆ ಕರ್ಗನೆ ಕನಿತುದು ಮಲದ ಮಸಿಯ ಮಸಕದಿನಂಗಂ (ಅರ್ಥನೇ. ೦-೬೬); ನನೆಗಳ ಪೊಸ ಪೂಗಳ ಕಾಯ್ಗಳ ಪುದುವಿಂದೆಸೆದುದಾ ವಿನೂತಂ ಚೂತಂ (ಶಾಂತೀಶ್ವ. ೦೦-೦೦೯). ೨. ಕೂಡುವಿಕೆ; ಸೇರುವೆ; ಹೊಂದಿಕೆ: ಉಟಿದ ಮೂಉವತ್ತುಗಳೊಳಮಪ್ಪುದುವಿನೊಳೆ ಪತ್ತೊನ್ದಿಯನಿಕ್ಕಿ ಉಗ್ಗೆ ಅಳವಿಯನಿಕ್ಕಿ ಉಣ್ಬೊ (ಎಪಿ. III, ಮಂತ್ರ. ೦೯-೮; 907); ಉದಯಿಸುಗುಂ ಶೂಲಂ ವಾತದಿಂ . . . ಆ ತ್ರಿದೋಷದ ಪುದುವಿಂದಾವಿಶ್ರಮಾಗಿ ತೋರ್ಕುಂ ತಮ್ಮೊಳ್ (ಲೋಕೋಪ. ೯-೩); ಮೆಯ್ಯುಮಿರ ಶುಟುಗಳೊಳ್ ತೊಡರ್ದೊಗೆದ ಬೆಮರ ಬಿಂದುಗಳ ಪುದುವಿಂ ಪನಿಪುಲ್ಬೊರೆದ ಶಾದ್ವಲ ಸ್ಥಳಿಯನಿಟಿಕೆಯ್ವಳ್ (ಧರ್ಮಪು. ೯-೫೮ ವ). ೩. ಸಹವಾಸ; ಸಂಬಂಧ; ನಂಟು: ಈ ದುರಾತ್ಮನೊಳ್ ಪುದುವೆನಗೇವುದೆಂದು ಬರುತಿರ್ದಪನಲ್ತೆ ಶರಣ್ಬುಗಲ್ . . . ಆ ವಿಭೀಷಣಂ (ಶಂರಾಪಾ. ೧೨-೭೭); ಆ ದುರ್ಮದನಶ್ವಗ್ರೀವನಾ ಕೋಟಲೆಯ ಪುದುವದೇತರ್ಕೆ (ಶಾಂತೀಶ್ವ. ೨-೦೦೯); ಪಾವಿನ ಪುದುವೊಳ್ಳಿತು ಮದಕಳದಂತಾವಳನೊಳು ಕೂಟ ಪತಿಲೇಸು . . . ಕುಲಟೆಯೊಳೋವಿ ಬಾಳ್ವ ಬಲ್ಲಿದನಾರೊ (ಶಂಬಸೋ. ೦೬-೬೪); ಮೊದಲು ಸಿಕ್ಕಿದುದೆ ಸಾಕೆಮಗಧಿಕರೊಳೇಕೆ ಪುದು (ಕರಿಕ. ೪೩ ೪೩). ೪. ಒಂಟಿ ಒಡೆತನ ಅಥವಾ ಸಾಮೂಹಿಕ ಸ್ವಾಮಿತ್ವಕ್ಕೆ ಒಳಪಟ್ಟುದು,–ಆಳವಟ್ಟುದು: ಪೊಲ್ಲಮೆಯುಂ ಗುಣಮುಂ ತಮಗಲ್ಲದೆ ಪುದುವಲ್ಲ ಮತ್ತೆ ತನಗುಂ ಪೆಱರ್ಗಂ (ಕಬಿರಾ. ೩-೦೬೪); ಇರ್ವರ್ ವಣಿಕ್ಪುತ್ರರ್ ಪುದುವಿನೊಳ್ ಪರದುವೋಗಿ ಪಿರಿದಪ್ಪ ಪೊನ್ನಂ ಪಡೆದು ಮಗುಟ್ಟಿ ಬಂದು (ಶಂತತು. ೦೭೦-೪); ಪುದುವೇಕನ್ಯಾರ್ಗ್ಯಮಾನೊರ್ಬ್ಬನೆ

ಕಳೆಯಲದಂ ಸಾಲ್ವನೆಸ್ಟು . . . ಅಖಿಳಧರಾಭಾರಮಂ ತನ್ನ ವಿಕ್ರಾಂತದ ಬಲ್ಪಿಂ ತನ್ನ ತೋಳೊಳ್ಪುದುವಿರಿಸಿದಂ ವಿಕ್ರಮಾದಿತ್ಯದೇವಂ (ಎಕ. VII, ಶಿಕಾರಿ. ೦೨೪-೯ ; 1077); ತೇಜಂ ಪುದುವಿಲ್ಲಿಸಿಸಿ ವಿರಾಜಿಸೆ ವರರಾಜಮಂಡಲಂ ತನ್ನಿಂ ನಿಸ್ತೇಜಂಬೆತ್ತಿರೆ ಬೆಳಗಿದನೀ ಜಗಮಂ ಭಾನುವೆಂಬಿನಂ ಭಾಸುರಥಂ (ಶಂಖಾಮಾ. ೨ ೬೬). ೫. = ಪುದಿಪಟ್ಟು : ಮುದದಿಂದಯೂರ್ಪ್ವರ್ಪುದು ಮೊದಲರ್ತ್ತ ಮನಿತ್ಯರೊಲ್ಪು ಸೋಮೇಶಂಗೆ (ಸೌಇಇ. IX-1, ೦೬೫ ೬೧ ; 1099). ೬. ಸಾಟಿ ; ಸಮ ; ಸದೃಶವಾದುದು : ಶಿಳಗೊಳದೊಳಗೆಡೆಯಾಡುವ ಕಳಹಂಸನ ಬಾಳಕೇಳಿ ಪುದುವೆನೆ ಮಧುಪಾಟಳನೇತ್ರಂ ಧವಳಾಂಗಂ ಪಳಿಕಿನ ಕುಟ್ಟಿಮದ ಮೇಲೆ ದಟ್ಟಡಿಯಿಟ್ಟಂ (ಶಂಖಾಮಾ. ೩-೦೨೮) ; ಕರಿ ಕೊರೆಯೊಳ್ ಜವಂಗೆ ಪುದು ಕಾಯ್ಪಿನೊಳಗ್ನಿಗೆ ದಾಯಿಗಂ ಸಹೋದರಪಳವಿಂ ಸಿಡಿಲ್ಗೆ ಮದದೊಳ್ ಕಳೆ ಕಾಳಿಗೆ (ಅರ್ಜನೀ. ೮-೫೬) ; ವೀರತೆಯುಂ ಶೂರತೆಯುಂ ರುಚಿರೋದಾರತೆಯುಂ ಗುಣಗಂಭೀರತೆಯುಂ ಧೀರತೆಯುಂ ಪುದುವಿಲ್ಲಿನೆ ತನ್ನೊಳು ಕೌಸಲ್ಯೆಯ ತನಯಂ ರಾರಾಜಿಸಿ[ಸೆ] (ಕುಮರಾ. ೪-೨೮). ೭.ಹೊಂದಿಕೊಳ್ಳುವ ವ್ಯಕ್ತಿ : ಎನಗೆಕ್ಕಬಾಗೆ ನೋಡೀಗಳೆಳಾಲತಾಂಗಿ ಪುದುವಲ್ಲಳ್ (ಶಂಕಶಾ. ೯-೪೬). ೮. (ಸುಖ, ರಾಜ್ಯ ಮುಂತಾದುವುಗಳ) ಪಾಲು ; ವಿಭಾಗ ; ಹಿಸ್ಸೆ : 'ಪುದುಗುಡು' ಪರಾ. ೯. ಪ್ರಭಾವ ; ವರ್ಚಸ್ಸು : ನಿನ್ನ ದಂಡನೀತಿಯು ಪುದುವೆ ಪಲಂ ದಂಡರತ್ನಮೆಂಬುದು ಪೆಂಪೇ (ಆದಿಪು. ೦೩ ೨೬). ಹುದು$_1$ : ೨. ಹುದು ನಡೆಯದಿವರೊಡನೆ ನಮ್ಮಲಿ ಕದನವೇ ಕೈಗಟ್ಟುವುದು (ಕುಮ್ಯಾಭಾ. ೮-೬); ಬಾಳ ಬೆಲೆ ಹುದುವೆಂದು ಕಲಿತು, ೯ಲಿತು (ಹೊಂಗಳು. ೫-೦೬). ೩. ಮಾಸಲು ಮುರಿಯದ ಒಲವಿಗೆ ಬಾಯ್ಬಿಡದೆ ಕಣ್ಣೊಡ್ಡಿ ಹುದುವಿನ ಸವಿ ಬೇಡಿದೆ (ಶಬರೀ. ೦೦-೦೦೪). ೪. ಕೌರವನೊಳಿಮಾಗೀ ವಸುಧೆ ಹುದುವಲ್ಲ ನೆಲನೇಕಾಧಿಪತ್ಯವಲೆ (ಕುಮ್ಯಾಭಾ. ೨-೫೫). ೬. ಹೆಣ್ಮಕ್ಕಳಬ್ಬರೆನ್ನಿದಿರಿನಲಿ . . . ಇಬ್ಬರೂ ಹುದುವಲ್ಲದಾಕಾರ (ಜಾರಸಿ. ೯-೨೦೨). ೮. ಎಲವೊ ಮಾರುತಿ ನಿಮ್ಮೊಳಗೆ ಕೋಪವಳೆಯ ಹುದುವನು ಮೆಚ್ಚಿ ನಮ್ಮೊಳಗಿಳೆಯ ಹುದುವನು ಬಯಸಿದ್ದೆ (ಕುಮ್ಯಾಭೀ. ೫-೦೨). ಹುದುವು$_1$ : ೨. ಧರೆ ಸಿರಿಗಳರ್ಪರಿಂ ನರರ್ಗೆ ಹುದುವಾಗಲೆಲೆ ಹರಿ ನಿನ್ನ ಭಕ್ತರಕ್ಷಣೆಗೆ ಬಲವು ನೆರೆಯದಿರಲೆಂದತ್ರಿ ವರಸೂನು ಹರಿಗಿತ್ತಿವೆರಡುಶಾಪವನೊರೆದ (ಜಾಸಂಕ. ೨-೮೯). ೪. ನಡುವಣ ಹುದುವಿನ ಹೊರದ ಮಣ್ಣು (ಪ್ಯಾಆಂ. ೯೪೩೩, ೩-೦೩ ; 1160); ಹೆಣ್ಣು ಹೊನ್ನು ಮಣ್ಣೆಂಬ ಜಗದ ಹುದುವಿನ ಒಡವೆಗೆ ಹೊಡೆದಾಡಲೇಕೆ (ಮೋಕ್ಷಶಾ. ೦೬೬-೬೨೪) ; ಹುದುವಿನ ಗಂಡುತನವಿದನು ಶಶಿವದನೆ ನುಡು (ಕುಮ್ಯಾಭಿ. ೩-೯೩).

**ಪುದು ಮಾಡು, ಹುದು ಮಾಡು** = ಹೊಂದಿಸು ; ಕೂಡಿಸು : ಸಂಬಂಧ ಮಾಡು : ದಮ್ಮಯ್ಯ ಎಂದು ಪುದು ಮಾಡಬೇಕಾದ ನೆಂಟಸ್ತಿಕೆ ಸೆಟ್ಟರೇ (ದೇಹಮು. ೧೦೨) ; ಸಧುಹೃದಯನ ತಂದು ನಿನ್ನವಯವದಲ್ಲಿ ಹುದ್ದು ಮಾಡಿದಪೆನು (ಮೋಹಶ. ೨೯ ೩೬). **ಪುದುವಾಗು** = ೧. ಅತಿಶಯವಾಗು; ಹೇರಳವಾಗು : ಪುದುವಾದ ರಾಗಸಂಪದವು ಹೃದಯದೊಳೆಸೆಯೆ (ಅರುಣ. ೫೪-೨). ೨. ಸೇರು ; ಈಡಾಗು : ಮದದಿ ತ್ರಿದಶದ್ವೇಷದಿಂದಳಿದಧೋಗತಿಗೆ ಪುದುವಾದರು (ನವಮೋ. ೦೮-೭). **ಹುದು ಹಾಕು** = ಜೊತೆ ಮಾಡು ; ಕೂಡಿಸು : ಇದಕ್ಕೆ ಮತ್ತೆ ಬೇರೆ ಮಾತುಗಳನ್ನು ಹುದು ಹಾಕಬಹುದು (ಜಾನಸಂ. ೦೨೪).

[ ದೇ.೫ ತಮಿ. ಪೊತು ; ಮಲ. ತುಳು. ಪೊದು ; ತೆಲು. ಪೊತ್ತು ]

**ಪುದುವುಗು** (ಕ್ರಿ). ಕೂಡಿಕೊಳ್ಳು ; ಹೊಂದಿಕೊಳ್ಳು : ಸಜ್ಜನಸುಭಾಷಿತದೊಳ್ ಪುದುವೊಕ್ಕು ಸೇಸೆಯಂ ಮನಮೊಸೆದಾಂತು . . . ವಿದೇಹಿಯುಂ ಜನಕನುಮೇಱಿದರ್ ಮಣಿವಿತಾನವಿರಾಜಿತಮಂ ವಿಮಾನಮಂ (ಶಂಖಾಮಾ. ೬-೪೫) ; ನಳಿನವಿಕಸನದೊಳ್ ಸೂರ್ಯೋದಯಕೆ ಸಹಾಯತ್ವಮನೂಮುವ ತಣ್ಣೆಲರುಮಲಸದೇಂ ಪುದುವುಗದೇ (೦ಬಾವ. ೪-೩೫).

[ ಪುದು (< ಪುದುವು) + ಪುಗು (< ಪೊಗು) ]

**ಪುದುವೆನಿಸು** (ಕ್ರಿ). ಸಮಾನವೆಂದು ತೋರು; ಸದೃಶವಾಗಿ ಕಾಣು: ತಾರಾವಳಿಯುಂ ತಳೆದ ನಭೋರಂಗದ ಭಂಗಿ ತನಗೆ ಪುದುವೆನಿಸಿದುದಂ ಪೇರುರಮನದೇಂ ಮೆಱೆದನೊ ಹಾರಮನೋಸರಿಸುವಂತೆ ನೃಪಸುತನೊರ್ವಂ (ಶಂಖಾಮಾ. ೫ ೫೫). [ಪುದು (< ಪುದುವು) + ಎನಿಸು$_1$]

**ಪುದುವೆಱು** (ಕ್ರಿ). ಸಮಾನವಾಗು ; ಸರಿಜೋಡಿಯಾಗು : ಪುದುವೆತ್ತಿ ಕ್ಯಟಗಾಳಿಗಂ ಸಮನಿಸಿತ್ತಿಮ್ಮಾ ಗದಾಯುದ್ಧಮಂ ತ್ರಿದಶರ್ ನೋಡಲೆ ಕೌತುಕಂಬೆರಸಿ ಬಂದಿರ್ದರ್ (ಗದಾಯು. ೬-೬೮).

[ ಪುದು (< ಪುದುವು) + ಪೆಱು$_1$ ]

**ಪುದುವೋಗು** (ಕ್ರಿ). ಹೊಂದಿಕೊಂಡು ಹೋಗು; ಜೊತೆಯಲ್ಲಿ ಬಾಳು: ಪೇರೂರ ಪೆಂಗೂಸು ಭವಿಗೆ ಸತಿಯಾಗಳೆ ಎಲೆ ವೈಜಕ್ಕವ್ವೆ ತಾಂ ಭವಿಗೆ ಪುದುವೋಗಳೇ ಎಲೆಲೆ ಮಂಗಕ್ಕರಸಿ ಪಾಂಡ್ಯನೊಳು ಕೂಡಳೇ (ಪುದೇರ. ೩-೦೬೯). [ಪುದು (<ಪುದುವು) + ಪೋಗು$_1$ (<ಪೋ$_1$)]

**ಪುದ್ಗಲ, ಪುದ್ಗಳ** (ಗು). ೧. ಸುಂದರವಾದ ; ರಮಣೀಯವಾದ. (ನಾ). ೨. ಅಣುವಿನ ತೀರ ಚಿಕ್ಕಭಾಗ; ಪರಮಾಣು. ೩. ದೇಹ; ಜಡಸತ್ತ್ವ : ಭಿಕ್ಷುವು ತನ್ನ ಚಿತ್ತದಿಂದ ಇತರ ಸತ್ತ್ವಗಳ, ಪುದ್ಗಲಗಳ ಚಿತ್ತಗಳನ್ನು ಹೊಕ್ಕು ತಿಳಿಯುವನು (ಬುತ್ತಶ. ೦೪೯). ೪. ಜೀವಾತ್ಮ; ಸಂಸಾರಿಯಾದ ಆತ್ಮ :"ಪುದ್ಗಲಃ–ಜೀವನು, ಪರಮಾಣುವು" (ಸಿದ್ಧಾಂತ. ೪೫೦). ೫. [ಜೈನ] ಪರಮಾಣುಗಳ ಸಂಯೋಗದಿಂದ ಉಂಟಾದ ಹಾಗೂ ಸ್ಪರ್ಶ, ರಸ, ಗಂಧ ಮತ್ತು ವರ್ಣಗಳನ್ನು ಹೊಂದಿದ ಅಜೀವತತ್ತ್ವ : ಚೇತನಾರಹಿತಮಜೀವತತ್ತ್ವಂ ಅದು ಗತಿಸ್ಥಿತ್ಯವಗಾಹಶರೀರಾದಿವರ್ತನಾಹೇತು ಧರ್ಮಾಧರ್ಮಾಕಾಶಪುದ್ಗಲ ಕಾಲಭೇದದಿಂ ಪಂಚವಿಧಂ (ಆದಿಪು. ೦೨-೬೩ ವ); ಅನಂತವರ್ಗಸ್ಥಾನಂ ಪೋದಲ್ಲಿ ಪುದ್ಗಲರಾಶಿ (ಎಂಬುದು) ಪುಟ್ಟುಗುಂ (ಜಾಪುಂಪು. ೨೬೦); ಬಲು ಕೊಡದೊಳು ತುಂಬಿಮುದಕದಂದದೊಳು ಪುದ್ಗಲ ವಸ್ತುಲೋಕ ತುಂಬಿಹುದು (ಭರಜ. ೬೮-೩೮); ಅಜೀವವು ಪುದ್ಗಲ . . . (ವಿಶ್ರಾಂತಿಯನ್ನುಂಟುಮಾಡುವ ವಸ್ತು), ಆಕಾಶ ಮತ್ತು ಕಾಲ ಎಂದು ಐದು ವಿಧ (ಭಾತತ್ತ್ವ. ೨೫೬). **ಪುದ್ಗಳ** : ೫. ನೆಲಸದ ಯೋನಿ ಮುಟ್ಟದೆಡೆ ಕಾಣದ ಕಾಲ ಮತತ್ತ್ವದೊಳ್ ಮನಂ ನಿಲಿಸದ ಭಾವಮುಳ್ಕಿಸದ ಪುದ್ಗಳಮಿಲ್ಲನೆ ಕರ್ಮಬಂಧದಿಂ . . . ತಿರಿತಪ್ಪುವು ಜೀವರಾಶಿಗಳ್ (ಸುಕುಮಾ. ೫-೩೨). [ಸಂ.]

**ಪುದ್ಗಲದ್ರವ್ಯ** (ನಾ). [ಜೈನ] ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲಗಳೆಂಬ ಆರು ಬಗೆಯ ದ್ರವ್ಯಗಳಲ್ಲಿ ಒಂದು : ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಮೆಂಬ ಷಡ್ದ್ರವ್ಯಂಗಳ ಗುಣಪರ್ಯಾಯಮುಮಂ . . . ವ್ಯಾಖ್ಯಾನಂಗೆಯ್ಯಲ್ (ಸುಕುಮಾ. ೩-೩೪ ವ); ಅಣುಗಳ ಪುಂಜವೇ ಪುದ್ಗಲ ದ್ರವ್ಯವು (ಹಿಂದಸಾ. ೬೨). 'ಷಡ್ದ್ರವ್ಯ' ಪರಾ. [ಸಂ.]

**ಪುದ್ಗಲಪುಂಜ** (ನಾ). [ಜೈನ] ಪುದ್ಗಲಪರಮಾಣುಗಳು ಸೇರಿ ಉಂಟಾದ ದ್ರವ್ಯ : ಪುದ್ಗಲ ಪರಮಾಣುಗಳು ಒಂದಕ್ಕೊಂದು ಸೇರಿದರೆ, ಪುದ್ಗಲಪುಂಜಗಳೆನಿಸುವುವು. ಇವುಗಳಿಗೆ ಪುದ್ಗಲಸ್ಕಂದಗಳೆಂದೂ ಕರೆಯುವರು (ಜೈನಪ. ೪೨೦). [ಸಂ.]

**ಪುದ್ಗಲವಿಪಾಕಿ** (ನಾ). [ಜೈನ] ಮೂರು ಬಗೆಯ ನಾಮಕರ್ಮಗಳಲ್ಲಿ ಒಂದು ಪ್ರಕಾರ : ಜೀವವಿಪಾಕಿಯುಂ ಪುದ್ಗಲವಿಪಾಕಿಯುಂ ಕ್ಷೇತ್ರವಿಪಾಕಿಯುಮೆಂದಿಂತು ನಾಮಕರ್ಮಂ ತ್ರಿವಿಧಮಕ್ಕುಂ (ಗೊಮ್ಮಸಾ. ೨-೭).

[ಸಂ. ಪುದ್ಗಲವಿಪಾಕಿನ್ ?]

**ಪುದ್ಗಲಾಸ್ತಿಕಾಯ** (ನಾ). [ಜೈನ] ಜೀವ, ಪುದ್ಗಲ, ಧರ್ಮ, ಅಧರ್ಮ ಮತ್ತು ಆಕಾಶ ಎಂಬ ಐದು ಬಗೆಯ ಅಸ್ತಿಕಾಯಗಳಲ್ಲಿ ಒಂದು : ಜೀವಾಸ್ತಿಕಾಯಂ ಪುದ್ಗಲಾಸ್ತಿಕಾಯಂ ಧರ್ಮಾಸ್ತಿಕಾಯಂ ಅಧರ್ಮಾಸ್ತಿಕಾಯಂ ಆಕಾಶಾಸ್ತಿಕಾಯಮೆಂಬ ಪಂಚಾಸ್ತಿಕಾಯನಿಕಾಯ ಮುಮಂ . . . ವ್ಯಾಖ್ಯಾನಂಗೆಯ್ಯಲ್ (ಸುಕುಮಾ. ೩-೩೯ಪ). 'ಪಂಚಾಸ್ತಿಕಾಯ' ಪರಾ. [ಸಂ.]

**ಪುದ್ಗಳ** 'ಪುದ್ಗಲ' ನೋ.

**ಪುನಃ** (ಅ). ಮತ್ತೆ ; ಮರಳಿ : ನೀನು ಪುನಃ ಇಲ್ಲಿಗೆ ಬಂದು ಹೋಗು (ಕೂಶಿ).

**ಪುನಃಪುನಃ** (ದ್ವಿರುಕ್ತಿ) : ಗೀತೆಯ ಪುಟಗಳನ್ನು ಪುನಃಪುನಃ ತಿರುವಿದಾಗ ಮುಖ್ಯಸಂದೇಶ 'ಕರ್ಮಯೋಗ' ಎಂಬುದು ಸ್ಫುಟವಾಗುತ್ತದೆ (ಧರ್ಮಸಾ. ೦೦೩). [ಸಂ. ಪುನರ್]

**ಪುನಃಶ್ರವಣ** (ನಾ). ಮತ್ತೆ ಕೇಳುವುದು ; ಇನ್ನೊಂದು ಸಾರಿ ಕೇಳುವುದು : ಹಿಂದೆ ಹೇಳಿದ ಎಷ್ಟೋ ಕತೆಗಳ ಪುನಃಶ್ರವಣವಾಯಿತು (ಮೂರುದಾ. ೦೪೦). [ಸಂ.]

**ಪುನಃಸಮಾಗಮ** (ನಾ). ಮರಳಿ ಕೂಡುವಿಕೆ ; ಪುನರ್ಮಿಲನ : ಹೇಮಕೂಟದ ದಿವ್ಯಾಶ್ರಮದಲ್ಲಿ ದಂಪತಿಗಳ ಪುನಃಸಮಾಗಮ (ಕಾವ್ಯಸ. ೩೦). [ಸಂ.]

**ಪುನಃಸ್ವಯಂವರ** (ನಾ). ಒಮ್ಮೆ ಸ್ವಯಂವರವಾಗಿ ಮದುವೆಯಾದವಳಿಗೆ ಮತ್ತೊಮ್ಮೆ ನಡೆಸುವ ಸ್ವಯಂವರ : ಸೃಜಿಸಿದನು ಸುದ್ದಿಯನು ನೃಪಭೂಭುಜರ ನಗರಂಗಳಲಿ ನಿಷಧನ ನಿಜಪನಿತೆಗೆ ಪುನಃಸ್ವಯಂವರವೆಂದು (ತೊರಲಾ. ೩-೨-೦೭). [ಸಂ.]

**ಪುನಕಾಲ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಜಗನಜ × × ಬಟ್ಟೆಯ ಪುನಕಾಲರ ಮಗಂ ಜೂರ್ನಿವನ ತಮ್ಮಂ ಚೋಟಿಪೆರ್ಮ್ಮಾಡಿಯರ ಮಣಿಲಾರದ ಗಣ್ಣ × × ಸಾವಿತರದೇವ (ಎ.ಕ. II, ೩೭೬-೨ ; ಶ. 1015). [?]

**ಪುನಗು** 'ಪುಣುಗು' ನೋ.

**ಪುನರಪಿ₁** (ನಾ). ೧. ಮತ್ತೊಂದಾವರ್ತಿ ; ಇನ್ನೊಂದು ಸಲ,—ಬಾರಿ : ಬಟ್ಟೆಯ ಮೆಟ್ಟಿ ಹೋಗಿ ಪುನರಪಿಯಾಗಿ ತಿರಿಗಿದಲ್ಲಿ ಊರ ಬಾಗಿಲ ಬಟ್ಟೆಯೊಂದಬಿಲ್ಲಿಯೇ ಹೋಗಬೇಕು (ಮಡಿವ. ೨೦೭-೩೩); ಹಿತ್ತಲ ಸೊಪ್ಪಿಗೆ ನೀರ ಹೊಯಿದು ಮತ್ತೆ ಪುನರಪಿಯಾಗಿ ಕೊಯಿವವನಂತೆ ಭಕ್ತರಿಗೆ ಬೋಧೆಯ ಹೇಳಿ ಚಿತ್ತವೃತ್ತಿಯನಱಿದು ಬೇಡುವಂಗೆ ಇನ್ನೆತ್ತಣ ಮುಕ್ತಿ (ಅಂಬಿವ. ಕ. ೩೭೪-೦೮). ೨. ಮತ್ತೆ ಮಾಡುವ ಪರಾಮರ್ಶೆ ; ಪುನರ್ವಿಮರ್ಶೆ : ಕುಱುಹಿನಿಂದ ಅಱಿದಿಹೆನೆಂದಡೆ ಆ ಅಱಿವು ಪುನರಪಿ ಗೊಳಗಾಯಿತ್ತು (ಪೋಳವಮ. ೭೩-೨೭೭). [< ಪುನರಪ್ಪಿ]

**ಪುನರಪಿ₂** (ಅ). ಮರಳಿ ; ಮತ್ತೆ ; ಪುನಃ : ಜನಮೇಜಯನು ಮುನ್ನಿನ ಅಗ್ರಹಾರವಿದಂ ಪುನರಪಿ ಸಮಗ್ರದಲ್ಲುದ್ಧರಿಸಿ (ಐತಿಹ್ಯ. ೫೭-೪೫) ; ಕರ್ಣನು ಭೀಮಸೇನನ ರಥವನಱಸುತ ಬಂದು ಪುನರಪಿ ಕಾಳಗವ ಹಿಡಿದ (ಕುಮಾ.ದ್ರೋ. ೦೩-೪೦) ; ನಾನು ಪುನರಪಿ ಅಲ್ಲಿಗೆ ಹೋದರೆ ಫಲವೇನು? (ಮಂಜು.ಕ. ೨೬). [ಸಂ.]

**ಪುನರಾಗಮನ** (ನಾ). ಮರಳಿ ಬರುವಿಕೆ : ಬೇಸಗಿನ ಮಳೆಗಾಲ ಪಂತಿರ್ಮಳಾ ಲಲನೆ ನರನ ಪುನರಾಗಮನದ ಶರತ್ತಸನ್ನತೆಗೆ ತಪಮಿರ್ದ ನೆಲಮೆಣ್ಣನಂತೆ (ಕನ್ನಾಂಗ. ೫೯-೦೬೦೬). [ಸಂ.]

**ಪುನರಾವರ್ತನೆ** (ನಾ). ಮತ್ತೊಂದು ಸಲ ಮಾಡುವುದು ಅಥವಾ ಆಗುವುದು : ಪಾಠದ ಪುನರಾವರ್ತನೆಯನ್ನು ಪ್ರಶ್ನೋತ್ತರಗಳ ಮೂಲಕ ವಾದರೂ ಮಾಡಿಸಬಹುದು (ಶಿಕ್ಷಣ. ೨೨೬). [ಸಂ. ಪುನರಾವರ್ತನ]

**ಪುನರಾವರ್ತಿಸು** (ಕ್ರಿ). ಮಾಡಿದುದನ್ನೇ ಮತ್ತೆ ಮಾಡು ಅಥವಾ ಆದುದೇ ಪುನಃ ಆಗು : ಆ ಅಂತಸ್ತುಗಳನ್ನೆಲ್ಲಾ ಇಂದಿನವರೂ ಪುನರಾವರ್ತಿಸುವುದು ವ್ಯರ್ಥ (ಶಿಕ್ಷಣ. ೦೨೩). [ಪುನರಾವರ್ತನೆ+—ಇಸು₃]

**ಪುನರಾವೃತ್ತಿ** (ನಾ). ಮತ್ತೊಂದು ಸಲ ಮೊದಲಿನಂತೆ ಆಗುವಿಕೆ ಅಥವಾ ಮಾಡುವಿಕೆ : ಸಾಗರದ ಸಂಪರಿಪೂರ್ಣಜಲದೊಳ್ವೆರೆದ ನದಿಗಳಿಗಿನ್ನು ಪುನರಾವೃತ್ತಿದೋರದ ತೆರದಿ (ಗಗಕಾ. ೦೭-೩೭) ; ಇಂತಹವರ ಪುನರಾವೃತ್ತಿಯಾಗದಂತೆ ಎಚ್ಚರ ತೆಗೆದುಕೊಳ್ಳಿರಿ (ರಂಗರೋ. ೩೦). [ಸಂ.]

**ಪುನರುಕ್ತ** (ಗು). ೧. ಮತ್ತೆ ಹೇಳಿದ ; ಪುನಃ ನುಡಿದ. (ನಾ). ೨. ಇನ್ನೊಮ್ಮೆ ಹೇಳಿದಂದು ; ಮತ್ತೆ ನುಡಿದುದು : ಮರನಲ್ಲದೆ ತಿಲಕಂ ಖೇಚರರ್ಗಂ ನೃಪನದಟ ಮೇಗೆ ಚಕ್ರಂ ಪುಟ್ಟಿರ್ದಿರೆ ಮೊದಲಗಣ್ಯ ಪುಣ್ಯಾಂತರಕ್ಕೆ ಪುನರುಕ್ತಮಾದುದೇಂ ವಿಸ್ಮಯಮೋ (ಶಾಂತಿಪು. ೨-೩೬) ; ಪೋಗೆ ಸಿರಿ ಬಂಧುಪಥೂತತಿ ವೃದ್ಧರಾಜ್ಯಮೆಂದೆಳಸದೆ ಕೂಡೆ ಬೇರ್ಪಡೆ ಬಟ್ಟಿಕ್ಕಿವನಾನುಚಿಪೊಂದು ಮಾತು ಭೂತಳಭರಧಾರಣಕ್ಷಮಭುಜಾಬಳ ಪೇಟು ಪುನರುಕ್ತಮಲ್ಲವೇ (ಚಂದ್ರಕ. ೨-೩೦). ೩. = ಪುನರುಕ್ತಿ ೨ : ಪುನರುಕ್ತಂ ಸಂಧಿದೋಷಂ ಸ್ವರತತಿ ಪದಪೂರ್ಣೋಕ್ತಿದೋಷಂಗಳೆಂದೆಂಬಿನಿತುಂ ದೋಷಂಗಳು ಬಿಟ್ಟು (ಸೂಕ್ತಿಸು. ೦೭-೩೯). [ಸಂ.]

**ಪುನರುಕ್ತಿ** (ನಾ). ೧. ಹೇಳಿದುದನ್ನೇ ಮತ್ತೆ ಹೇಳುವುದು. ೨. [ಕಾವ್ಯಮಿ] ಒಂದು ವಾಕ್ಯದೋಷ; ಅನಗತ್ಯವಾದ ಶಬ್ದಾರ್ಥಗಳ ಪುನರುಚ್ಚರಣೆ : ಪುನರುಕ್ತಿ—ವಿಶೇಷ ಪ್ರಯೋಜನವೇನೂ ಇಲ್ಲದೆ ಒಂದೇ ಅರ್ಥವುಳ್ಳ ಒಂದೇ ಪದವನ್ನು ಅನೇಕ ಸಾರಿ ಉಪಯೋಗಿಸಿರುವುದು (ಕೈಪಿಡಿ. ೨೨೬). ೩. (ಅಲಂ) ಬೇರೆ ಮಾತು : ನಾಲಿಗೆಗೆ ಪುನರುಕ್ತಿಯಾಗೆ ಪುರುಷ್ರಿ ನಗುವಳೆಲೆ ಮೊಲೆ ನಾವ್ ನುಡಿದೆಡೆಹವೆಂಬುದು ಮೇಲು ಮಾತಾಗಿಹುದು (ತೊರಲಾ. ೩-೮-೪೦). [ಸಂ.]

**ಪುನರುಚ್ಚರಿಸು** (ಕ್ರಿ). ಹೇಳಿದುದನ್ನು ಹೇಳಿದಂತೆಯೇ ಮತ್ತೆ ಹೇಳು : ಪರದೇಶದವರೂ ಅವರ ಅಭಿಪ್ರಾಯವನ್ನು ಮುಕ್ಕೀಕಾಮುಕ್ಕಿ ಪುನರುಚ್ಚರಿಸುವ ನಮ್ಮ ದೇಶದವರೂ ಹೇಳುವ ಮಾತುಗಳನ್ನು ನಾವು ನಂಬಬೇಕಾಗಿಲ್ಲ (ದೇಶಕನ್ನ. ೪೨); ಒಲೆನಿನ್ ಸಂತೋಷದಿಂದ ಆ ಮಾತುಗಳನ್ನೆಲ್ಲಾ ತನ್ನಷ್ಟಕ್ಕೆ ತಾನು ಪುನರುಚ್ಚರಿಸಿಕೊಂಡನು (ಮಲೆಸಾ. ೨೦೦). [ಸಂ. ಪುನರುಚ್ಚರಣ + — ಇಸು₃]

**ಪುನರುಜ್ಜೀವನ** (ನಾ). ಮತ್ತೆ ಏಳಿಗೆಯಾಗುವಂತೆ ಮಾಡುವಿಕೆ ; ಪುನರುದ್ಧಾರ : ಕೋರಿಯದಲ್ಲಿ ಲೋಕಮತಾನುಸಾರವಾಗಿ ಕೋರಿಯದ ರಾಜಮನೆತನದ ಪುನರುಜ್ಜೀವನಕ್ಕೊಪ್ಪಬೇಕಾಯಿತು (ಜಗಸಂ. ೬೦). [ಸಂ.]

**ಪುನರುಜ್ಜೀವಿತ** (ನಾ). ಪುನರುದ್ಧಾರ ಹೊಂದಿದುದು ; ಏಳಿಗೆಯನ್ನು ಪಡೆದುದು : ಆರ್ಯಸಂಸ್ಕೃತಿಯು ಪುನರುಜ್ಜೀವಿತವಾಗಿ . . . ಪುರುಷಾರ್ಥತತ್ವಗಳು ಎಲ್ಲಾ ವಿಧವಾದ ಕಾರ್ಯಗಳಲ್ಲೂ ಪ್ರವರ್ತಿಸತೊಡಗಿದರು (ರಾಷ್ಟ್ರೋದ. IV ಕೃತ್ಯಾವಳಿ). [ಸಂ.]

**ಪುನರುಜ್ಜೀವಿಸು** (ಕ್ರಿ). ಮತ್ತೆ ಪ್ರಚಾರಕ್ಕೆ ತರು ; ಪುನಶ್ಚೇತನಗೊಳಿಸು : ಱ ಮತ್ತು ೞ ಕಾರಗಳನ್ನು ಪುನರುಜ್ಜೀವಿಸುವ ವಿನಮ್ರ ಪ್ರಯತ್ನಗಳು . . . ಪಾಂಡಿತ್ಯಪ್ರಿಯಮಂಡಿತಮಂಡಳಿಯಿಂದ ನಡೆದಿವೆ (ದ್ರಾವಿಡ. ೩೩೭). [ಪುನರುಜ್ಜೀವನ + — ಇಸು₃]

**ಪುನರುತ್ಥಾನ** (ನಾ). ಚೈತನ್ಯವನ್ನು ಹೊಂದುವಿಕೆ ; ಅಭಿವೃದ್ಧಿಗೆ ಬರುವಿಕೆ : ಧಾರ್ಮಿಕಕ್ಷೇತ್ರದಲ್ಲಿ ದಕ್ಷಿಣಹಿಂದುಸ್ಥಾನದಲ್ಲಿ ಹಿಂದೂಧರ್ಮದ ಪುನರುತ್ಥಾನವು ಜೋರಿನಿಂದ ನಡೆದಿತ್ತು (ಸಾಹಿತ. ೦೩೪) ; ಹಿಂದೂಧರ್ಮವು ಪುನರುತ್ಥಾನವಾದ ಮೇಲೆ ಅಲ್ಲಿಗೆ ವೈದಿಕಮತವೂ ಹೋಗಿ, ಅಲ್ಲಿ ಹಿಂದೂರಾಜರು ರಾಜ್ಯ ಕಟ್ಟಿದರು (ದಿಗ್ದಶ. ೨೫). [ಸಂ.]

**ಪುನರ್ಘಟನೆ** (ನಾ). ಮರಳಿ ವ್ಯವಸ್ಥೆ ಮಾಡುವಿಕೆ : ಹೊಸ ಸಾಧಾರಣ ಚುನಾವಣೆ ನಡೆದು ಪರಿಷತ್ತಿನ ಪುನರ್ಘಟನೆಯಾಗುವವರೆಗೆ ರಾಜ್ಯಪಾಲರು . . . ನಿರ್ದಿಷ್ಟವಾಗಿರುವ ಕಾರ್ಯಕ್ರಮವನ್ನು ಕೈಕೊಳ್ಳಬಹುದು (ಭಾರಾಪ. ೨೬೪); ಆರ್ಥಿಕ, ಸಾಮಾಜಿಕ ಹಾಗು ರಾಜಕೀಯ ಪುನರ್ಘಟನೆಯಾಗದೆ ಹೋದರೆ ನವ್ಯಜೀವನಸಾಹಿತ್ಯಗಳ ವಿಕಾಸ ಬರಿ ಒಂದು ಮಧುರಸ್ವಪ್ನ. ಆದರೆ ಈ ಪುನರ್ಘಟನೆಯ ರೀತಿ ಯಾವುದು ? (ನವ್ಯಕಾ. ೧೬).

[ ಸಂ. ಪುನರ್ಘಟನಾ ]

**ಪುನರ್ಜನ್ಮ** (ನಾ). ಮರುಹುಟ್ಟು ; ಮತ್ತೊಂದು ಜನ್ಮ : ಮುನಿ ದೀಶಂ ತವೆ ಸುಟ್ಟು ಮುಂ ಕರುಣದಿಂದಿತ್ತಂ ಪುನರ್ಜನ್ಮಮಂ ನಿನಗೆ (ಕಂರಕಾ. ೪-೩೧) ; ನಿರ್ಜರೇಂದ್ರನ ಸೂನು . . . ವ್ಯೆಮುಚಿದು ಬಿದ್ದನಿಳೆಯೊಳ್ ಪುನರ್ಜನ್ಮಮೆನೆ ಕೂಡೆ ಚೇತರಿಸಿ ನರಸೆಚ್ಚು ಕಡಿದನಾತನ ಧನುವನು (ಕೃಶಿಃಶಾ. ೨೩-೩೩) ; ಪುನರ್ಜನ್ಮ ಪಡೆಯಿತು ! ಹರಿದು ಹಂಚಿ ಹೋದ ನಾಡು ಮತ್ತೆ ಒಂದಾಯಿತು ! (ಏಕದ. ೬೯-೦).

[ ಸಂ. ಪುನರ್ಜನ್ಮನ್ ]

**ಪುನರ್ಜಾತ** (ಗು). ೧. ಮರಳಿ ಹುಟ್ಟಿದ ; ಹೊಸಜನ್ಮವನ್ನು ಪಡೆದ. 'ಅಪುನರ್ಜಾತ' ಹೋ. (ನಾ). ೨. ಸಂಸ್ಕಾರದಿಂದ ಹೊಸ ಜೀವನವನ್ನು ಪಡೆದವನು : "ಪುನರ್ಜಾತಃ __ಶಿವದೀಕ್ಷೆ ಹೊಂದಿದವನು, ಗುರುಕೃಪೆ ಪಡೆದವನು" (ಕರಣ. ೨೪-೭) ; ಪೂರ್ವಪಳಿದು ಪುನರ್ಜಾತರ ಮಾಡಿದೆವೆಂಬಿರಿ ಪೂರ್ವಪಳಿದುದಕ್ಕೆ ಭವ ಹಿಂಗಬೇಕು (ಮೋಳಿಮೂ. ೬೯-೦೬೩) ; ನರ ಪಶು ಪ್ರಾಣಿಗಳಿಗೆ ಸುಜ್ಞಾನದೀಕ್ಷೆಯನಿತ್ತು ಪೂರ್ವಗುಣವಳಿದು ಪುನರ್ಜಾತರೆನಿಪ (ಪವಮೋ. ೦೮-೦೬). [ ಸಂ. ]

**ಪುನರ್ದತ್ತಿ** (ನಾ). ಮರಳಿ ಮಾಡುವ ದಾನ; ಪುನಃ ಕೊಡುವ ದಾನ : ಆನೆಸೆಜ್ಜೆಯ ಬಸದಿಗೆ ತಾಂಬ್ರಶಾಸನಮರ್ಯಾದೆಯಿಂದಾಳ್ದ ಗುಡಿಗೆಱೆಯ ಕಮ್ಮತಪಳಗಾಗಿಯಿಱೆ ಪೊಲನುಳ್ಳನಿತುಮನಿನ್ನಿಱಿಂ ಮೇರೆಯುಮ್ಮ ಧರ್ಮವಾಗಿ ಪುನರ್ದತ್ತಿ ಮಾಡಿ ಶ್ರೀನನ್ದಿಪಣ್ಡಿತದೇವರ್ಗ್ಗೆ ಹಸ್ತೋದಕಂಗೆಯ್ದು ಕೊಟ್ಟೆವು (ಸೌಇಇ. XX, ೯೬-೪೦ ; 1073); ಪುನರ್ದತ್ತಿಯಾಗಿ ನಾಲ್ಕುಂ ಸುಂಕದೊಳಪೆರಡೊಲ್ದೆಱೆ ಕೊಡವೀಸವ ಸಹಿತವಾಗಿ ಬಿಟ್ಟ ಉಪ್ಪಿನ ಪೆ[ಂಟೆ] ಅಱುವತ್ತು (ಸೌಇಇ. XX, ೬೦-೨೪ ; 1088). [ ಸಂ. ]

**ಪುನರ್ದರ್ಶನ** (ನಾ). ಮತ್ತೆ ಕಾಣುವಿಕೆ ; ಪುನಃ ಮಾಡುವ ಭೇಟಿ : ಪುನರ್ದರ್ಶನಮಕ್ಕೆಂದುಂ ಯಶಮಕ್ಕೆ ವಿಜಯಮಕ್ಕೆಂದೊಳ್ಪಕ್ಕೆಂದು . . . ಅಚ್ಯುತಕಲ್ಪಕಚ್ಯುತೇಂದ್ರಂ ಪೋದಂ (ಶಾಂತಿಪು. ೭-೧೧೬). [ ಸಂ. ]

**ಪುನರ್ಧಾರೆ** (ನಾ). ಮರಳಿ ಧಾರೆಯೆರೆದು ಕೊಡುವಿಕೆ ; ಪುನರ್ದತ್ತಿ : ಶ್ರೀಮೂಲಸ್ಥಾನಭೋಗೇಶ್ವರದೇವರಿಗೆ ಸರ್ವ್ವನಮಸ್ಯವಾಗಿ ಪುನರ್ಧಾರೆಯ ಮಾಡಿದರು (ಸೌಇಇ. XX, ೦೯೩-೪ ; 1215).

[ ಸಂ. ಪುನರ್ಧಾರಾ ]

**ಪುನರ್ನವ** (ಗು). ೧. ಮತ್ತೆ ಹೊಸತಾಗುವ. (ನಾ). ೨. ಮರಳಿ ಹೊಸತಾದುದು ; ಪುನಃ ಹುಟ್ಟಿ ಬೆಳೆದುದು : ಉಡಿದೀ ನಮ್ಮ್ರರ್ವರ ತೊಡರ್ಬಿಂದಂ ನೀಂ ಪುನರ್ನವಂ ಮಾಡಿನ್ನುಂ (ಶಾಂತಿಪು. ೭-೦೦೪). ೩. ಹೊಸ ಚೈತನ್ಯವನ್ನು ಪಡೆದವನು : ದಿನದಿನದ ಜಾಡ್ಯದಲ್ಲಿ ಹೊಸತೇನೊ ಒಂದು ಚೈತನ್ಯ ಚಿಗುರಿ ಪುನರ್ನವನಾಗಿ ಅವನು ಕೆಲಸಕ್ಕೆ ಮರಳಿದರೆ ಶ್ರೇಯಪಲ್ಲವೆ ? (ಗಾಳಿಕ. ೫೬). ೪. ಉಗುರು ; ನಖ : "ಕಾಮಾಂಕುಶಾಃ, ಕರರುಹಾಃ (ಪುನರ್ನವಾಃ) . . . ನಖರಾಃ__ಈ ೫ (೭?) ಉಗುರ್" (ಕಲಾಯು. ೯೪-೩೫೭). [ ಸಂ. ]

**ಪುನರ್ನವಿ** (ನಾ). ಒಂದು ಬಗೆಯ ಸಸ್ಯ : ಬಿಳಿಯ ಗಣಜಿಲೆ ; ಕೊಮ್ಮೆಗಿಡ: "ಗಣಜಿಲೆ ಪುನರ್ನವಿ ಶಿವಾಟಿಕೆಯೆನಿಕ್ಕು" (ಮಂಗರಾ ೪೦-೩೦); ಕನಕದ ಕಾಯನೊಂದುದೆವಸಂ ತಿಱಿದಟ್ಟುಱೆ ಸುಣ್ಣದೊಱಲೊಳ್ ದಿನಮಿರಿಸಿಟ್ಟು ಕರ್ಚೆ ಗುರುಗುಂಜಿ ಪುನರ್ನವಿ ಪದ್ಮಪತ್ರಮೆಂಬಿನಿತುಮನಿಕ್ಕಿ ಸುಣ್ಣದೊಳಮಂ ಪದಪಿಂ ತೆಗೆಪುತ್ತೆ . . . ಅಡುಗಾವ ಜಾಡಮಂ (ಲೋಕೋಪ. ೮-೩೦). [< ಸಂ. ಪುನರ್ನವಾ]

**ಪುನರ್ನವೆ** (ನಾ). = ಪುನರ್ನವಿ : "ಪುನರ್ನವಾ, ಶೋಥಘ್ನೀ— ೨ ಕೊಮ್ಮೆಗಿಡ" (ಸಿದ್ಧಾಂತಿ. ೦೯೬). [ಸಂ. ಪುನರ್ನವಾ]

**ಪುನರ್ಧರಣ** (ನಾ). ಮರಳಿ ನೆಲೆಗೊಳಿಸುವಿಕೆ ; ನವೀಕರಣ ; ಜೀರ್ಣೋದ್ಧಾರ : ಪ್ರಘಟ್ಟದಿಂ ಕೆಟ್ಟ ಸಮ್ಬನ್ಧಿಯಂ ಪುನರ್ಬ್ಬರಣಂ ಮಾಡಿ (ಎಇ. XV, ೭೯-೦೯; 1060) ; ಪುರಿಗೆಱೆಯೊಳ್ಪೆವರ್ಮಾಡಿಯ ಪುರವರಮಳಿದಿಱ್ದುದಂ ಗಜಾರಿಧ್ವಜನಾದರದಿನ್ದಮೆ ನೋಡಿ ಪುನರ್ಬ್ಬರಣಂ ಮಾಡಲ್ಕೆವೇಡಿ ಜಯಕೇಶಿನೃಪಂ . . . ಮಾಡಿದಂ ತತ್ಪುರಮಂ (ಸೌಇಇ. XX, ೪೭-೩೩ ; 1074); ರಾಯಮುರಾರಿ ಸೋವಿದೇವ . . . ಮಣೆಯೂರಂ ಪುನರ್ಬ್ಬರಣಂ ಮಾಡಿ ಮುತ್ತಗೆಯ ನಡುವಣ ದಕ್ಷಿಣ ಮುಖಿ ಶ್ರೀಚೆನ್ನಕೇಶವರ್ಗೆ ಧಾರಾಪೂರ್ವ್ವಕಂ ಕೊಟ್ಟಂ (ಕೊಲ್ಲಾಶಾ.೯-೪೫ ; 1170). [ಸಂ.]

**ಪುನರ್ಭವ** (ನಾ). ೧. ಮರುಹುಟ್ಟು : ಪುನರ್ಜನ್ಮ : ಜಾನಿಸುತ ಪರಪದದಲ್ಲಿ ಕೂಡಿರ್ದನಾದೊಡೀ ರಸೆಯೊಳಾತಂಗಂ ಪುನರ್ಭವಮುದಿಲ್ಲಂ (ಏಕೈಶ. ೬೩-೭೨). ೨. ಉಗುರು ; ನಖ : "ಪುನರ್ಭವಃ, ಕರರುಹಃ, ನಖಃ, ನಖರಃ . . . ೪ ಉಗುರುಗಳ ಹೆಸರುಗಳು" (ಸಿದ್ಧಾಂತಿ. ೦೯೩). ೩. ಕೂದಲು.

**ಪುನರ್ಭವನಾಗು**=ಮರಳಿ ಹುಟ್ಟುವವನಾಗು; ಸಾಯು : ದಿವಸಕರ ಚಂದ್ರಯುತ ಭಾರ್ಗವನಂ ಜನ್ಮಾವಸರದೊಳೀಕ್ಷಿಸುವಡೆ ದೇವವಿನೂತಂ ಪುಟ್ಟಿದ ಮಾನವನಿರದೆ ನವಾಬ್ದದಿಂ ಪುನರ್ಭವನಕ್ಕುಂ (ಜಾತಕ. ೭-೨೯). **ಪುನರ್ಭವನೆನಿಸು**=ಪುನರ್ಭವನಾಗು : ನಿಲೆ ತದುಶಾಧೀಶ್ವರಂ ಷಷ್ಠಗೇಹದೊಳಾ ಲಗ್ನಭವಂ ಪುನರ್ಭವನೆನಿಕ್ಕುಂ ತತ್ಸಮಾಕಾಹದಿಂ (ಜಾತಕ.೬-೩೭).

[ಸಂ.]

**ಪುನರ್ಭವಿಸು** (ಕ್ರಿ). ಮತ್ತೆ ಹುಟ್ಟಿ ಬರು : ನಿನ್ನ ಪತಿ . . . ದಹನವಾದಾ ನೀನು ಬಂದೆರಗಲಾವಿತ್ತಯಾಶೀರ್ವಚನವೇನು ಪುಸಿಯದು ಪುನರ್ಭವಿಸಿ ಬಾದಪನು (ಪಪಮೋ. ೭-೪೩). [ಪುನರ್ಭವ + — ಇಸು]

**ಪುನರ್ಭೂ** (ನಾ). ೧. ಮರಳಿ ಹುಟ್ಟಿ ಬಂದುದು ; ಪುನರ್ಜನ್ಮ ಹೊಂದಿದುದು. ೨. ಮರುಹುಟ್ಟು ; ಪುನರ್ಜನ್ಮ. ೩. ಮರುಮದುವೆಯಾದವಳು ; ಎರಡನೆಯ ಸಲ ಮದುವೆಯಾದವಳು : "ಪುನರ್ಭೂಃ, ದಿಧಿಷೂಃ__ಈ ೨ ಮರುಮಾಣವಳ್" (ಕಲಾಯು.೮೦-೩೩೦) ; ಪುನರ್ಭೂ ಎಂದರೆ ಮೊದಲು ಒಬ್ಬನನ್ನು ಮದುವೆಯಾಗಿ ಆಮೇಲೆ ಮತ್ತೊಬ್ಬನನ್ನು ಮದುವೆ ಮಾಡಿಕೊಂಡವಳು (ಅರ್ಥಶಾ. ೦೩೦). [ಸಂ.]

**ಪುನರ್ಮಿಲನ** (ನಾ). ಪುನಃ ಭೇಟಿಯಾಗುವಿಕೆ ; ಪುನಃಸಮಾಗಮ : ದುಷ್ಯಂತ . . . ತಮ್ಮ ಪುನರ್ಮಿಲನದ ಗುರುತಾಗಿ ಅದನ್ನು ತೊಡಿಸಲು ಬರುತ್ತಾನೆ (ಧರ್ಮಶಾ. ೭೩). [ಸಂ.]

**ಪುನರ್ರಚನೆ** (ನಾ). ಇದ್ದುದನ್ನು ನವೀಕರಿಸಿ ಪುನಃ ನಿರ್ಮಿಸುವಿಕೆ ; ಪುನರ್ನಿರ್ಮಾಣ : ಶಿಕ್ಷಣದ ಪುನರ್ರಚನೆಯಲ್ಲಿ ರಾಷ್ಟ್ರ ಈಗ ಎರಡು ಮುಖ್ಯ ಮುಂಬಾಗಿಲಲ್ಲಿ ಹೆಜ್ಜೆಯಿಡುತ್ತಿದೆ (ಶಿಕ್ಷಣ. VIII ಮುನ್ನುಡಿ).

[ ☞ 'ಪುನಾರಚನೆ' ಎಂಬುದು ಇದರ ಶುದ್ಧರೂಪ]

**ಪುನರ್ರಚಿಸು** (ಕ್ರಿ). ಮರಳಿ ನಿರ್ಮಿಸು ; ಪುನಃ ರಚಿಸು : ಪದಗಳ ಧ್ವನಿರೂಪವನ್ನು ಪುನರ್ರಚಿಸಲು ಈ ಎಲ್ಲ ದ್ರಾವಿಡಭಾಷೆಗಳ ರೂಪಗಳನ್ನು ತುಲನೆ ಮಾಡಿ ನೋಡಬೇಕು (ದ್ರಾಭಾಶಾ. ೦೦ ಹಿನ್ನಲೆ).

☞ ವ್ಯಾಕರಣದ ಪ್ರಕಾರ ಇದು ಅಸಾಧುರೂಪವಾದರೂ ಈಚೆಗೆ

ಇಂತಹ ಶಬ್ದಗಳು ಅಧಿಕವಾಗಿ ಪ್ರಯೋಗಗೊಳ್ಳುತ್ತಿವೆ. ಉದಾ ಹರಣೆಗೆ 'ಅಂತರ್ರಾಷ್ಟ್ರೀಯ' ಇತ್ಯಾದಿ. [ಪುನರ್ರಚನೆ + –ಇಸು]

**ಪುನರ್ದರಣ** (ನಾ). = ಪುನರ್ಭರಣ : ರುದ್ರಶಕ್ತಿಪಣ್ಡಿತರ್ಗ್ಗೆ ಧಾರಾ ಪೂರ್ವಕಂ ಸರ್ವ್ವನಮಸ್ಯಂ ಪುನರ್ವ್ವರಣವಮ್ಮಾಡಿ ಕೊಟ್ಟು ಪೂರ್ವ್ವವೃತ್ತಿಯು ಗರ್ದ್ದೆ ಮತ್ತರೆರಡು (ಎ.ಕ. ೧೧೨೯, ೬೫-೩೯ ; 1025).

[ಇದು 'ಪುನರ್ಭರಣ' ಎಂಬುದರ ಅಪಲಿಖಿತವಿರಬಹುದು]

**ಪುನರ್ವಸತಿ** (ನಾ). (ಪುನಶ್ಚೈತನ್ಯವನ್ನು ಪಡೆಯಲು ಒದಗಿಸುವ) ಮರುವಸತಿ : ಕಾಯಿಲೆಯಿಂದ ನರಳಿದ ರೋಗಿಗಳಿಗೆ ಪುನರ್ವಸತಿ ಯನ್ನು ಮಾಡಿಕೊಡಬೇಕು (ಕಂಠೀ. ೯೭). [ಸಂ.]

**ಪುನರ್ವಸು** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಏಳನೆ ಯದು ಮತ್ತು ಆ ರಾಶಿಯಲ್ಲಿ ಬರುವ ಮಳೆ : ಪುನರ್ವಸುಃ, ಅದಿತಿಃ, ಅದಿತ್ಯಂ, ಅಧಿದೈವತಂ ಈ ೪ ಪುನರ್ವಸು ನಕ್ಷತ್ರಕೆ ಪೆಸರು (ಶಾಸ್ತ್ರ. ೬೨-೯). [ಸಂ.]

**ಪುನರ್ವಿಮರ್ಶೆ** (ನಾ). ಮರಳಿ ಪರಾಮರ್ಶಿಸುವುದು : "ಪರಿಷ್ಕರಣ, ಪುನರ್ವಿಮರ್ಶೆ" (Revision. ಶಕ್ತಿ. ೬೦). [ಸಂ. ಪುನರ್ವಿಮರ್ಶಾ]

**ಪುನರ್ವಿವಾಹ** (ನಾ). ಮರುಮದುವೆ : ಕೆಲವು ಸಂದರ್ಭಗಳಲ್ಲಿ ಪುನರ್ವಿವಾಹವು ಯುಕ್ತವೆಂದು ಹೇಳಲ್ಪಟ್ಟಿದೆ (ಹಾರತ. ೩೩). [ಸಂ.]

**ಪುನರ್ವ್ಯವಸ್ಥೆ** (ನಾ). ಮೊದಲಿದ್ದುದನ್ನು ಬದಲಿಸಿ ಮರಳಿ ಮಾಡಿದ ಏರ್ಪಾಟು : ಮುಂದಿನ ನಮ್ಮ ಶಾಲೆಗಳು ಪುನರ್ವ್ಯವಸ್ಥೆಯಾಗಬೇಕಾ ಗಿದೆ (ಶಿಕ್ಷಣ. ೦೬೨) ; ತನ್ನ ಬಾಹ್ಯಜೀವನವನ್ನೆಲ್ಲ ಪುನರ್ವ್ಯವಸ್ಥೆಗೊಳಿಸ ಬೇಕೆಂದು ನೆಕ್ಲುದೊವ್ ಉದ್ದೇಶಿಸಿದ್ದನು (ಪುನರು. ೧೯೯).

[ಸಂ. ಪುನರ್ವ್ಯವಸ್ಥಾ]

**ಪುನಶ್ಚರಣೆ** (ನಾ). ಮಂತ್ರವನ್ನು ಪುನಃಪುನಃ ಉಚ್ಚರಿಸುವಿಕೆ ; ಜಪಿಸುವಿಕೆ : ಮಂತ್ರ ಕಲಿತಡೇನು ಪುನಶ್ಚರಣೆ ಮಾಡಿದಲ್ಲದೆ ಸಿದ್ಧಿಸದು (ಅವತಂ. ೧೯೩-೮೬೬) ; ವಸುರಜತಸ್ಫಟಿಕಮ್ಮಕ್ತಿಕಾಶಿಲಾಮಯಲಿಂಗಮಸು ವಿಟ್ಟು ಪೂಜಿಸುತೆ ತೇಜಪುನಶ್ಚರಣೆಯಿಂ ಪರಿಶುದ್ಧಿಯೊಡೆದು (ಶಬರೋ. ೨-೩೬). [< ಸಂ. ಪುರಶ್ಚರಣ]

**ಪುನಶ್ಚೇತನ** (ನಾ). ಮರಳಿ ಚೈತನ್ಯವನ್ನು ಹೊಂದುವಿಕೆ : ಶ್ರೀಮತಿ ರುಕ್ಮಿಣಿದೇವಿ ಮುಂತಾದವರು ಕಲಾಸಂಪ್ರದಾಯಗಳನ್ನು ಪುನಶ್ಚೇತನಗೊಳಿಸಿ ಬೆಳೆಸಲು ಪ್ರಶಂಸನೀಯವಾದ ಸೇವೆಯನ್ನು ಸಲ್ಲಿಸಿದರು (ಶಾರದ. ೫೫೨). [ಸಂ.]

**ಪುನಶ್ಚೇತನಗೊಳ್ಳು** (ಕ್ರಿ). ಮರಳಿ ಚೈತನ್ಯವನ್ನು ಪಡೆ,–ಉತ್ಸಾಹ ವನ್ನು ಹೊಂದು : ಮಳೆಯಿಂದ ಪುನಶ್ಚೇತನಗೊಂಡ ತೋಟ ಹೊಲ ಗಳ ದೃಶ್ಯದಿಂದ ಅವನು ಆನಂದಪುಲಕಿತನಾದನು (ಶಿವರು. ೯೬೬).

[ಪುನಶ್ಚೇತನ + ಕೊಳ್ಳು$_1$ (< ಕೊಳ್$_1$)]

**ಪುನಸ್ಸ್ವಯಂವರ** (ನಾ). = ಪುನಃಸ್ವಯಂವರ : ಎನಗೆಯುನ್ನು ಪುನಸ್ಸ್ವಯಂವರ ಮನದೊಳುಂಟೇ ನೀವು ಬರಬೇಕೆನುತ ವಾರ್ತೆಯ ಕಲ್ಪಿಸಿದೆ (ನಳಚ. ೬-೫೬). [ಸಂ.]

**ಪುನಹ** (ಅ). ಮತ್ತೆ ; ಪುನಃ ; ಮರಳಿ : ಮನಸ್ಸು ತೃಪ್ತಿಗೊಳ್ಳದೆ ಪುನಹ ಅದೇ ಪ್ರಶ್ನೆಯನ್ನು ಹಾಕುತ್ತಿತ್ತು (ಕಥಿದಾ. II, ೯೪೯). [< ಪುನಃ]

**ಪುನಾರಚನೆ** (ನಾ). ಮರಳಿ ರಚಿಸುವುದು ; ಪುನರ್ನಿರ್ಮಾಣ : ಶರೀರದ ಬೆಳವಣಿಗೆಗೆ ಮತ್ತು ಪುನಾರಚನೆಗೆ ಅವಶ್ಯಕವಾದ ಕಚ್ಚಾಮಾಲ ನ್ನೊದಗಿಸುವುದು—ಮುಖ್ಯವಾಗಿ ಸಸಾರಜನಕಗಳು ಮತ್ತು ವಿವಿಧ ಜಾತಿಯ ಲವಣಗಳು—ಈ ಕೆಲಸವನ್ನು ಮಾಡುತ್ತವೆ (ಆಹುಗ. ೫೬).

[ಸಂ. ಪುನಾರಚನ]

**ಪುನಾಲಿ** (ನಾ). ಒಂದು ಬಗೆಯ ಔಷಧೀಸಸ್ಯ : ಚೀನಾಬಿಳಿಮರ, ಪುನಾಲಿ, ಹುದಿಬಳ್ಳಿ (ವೃ.ಶಿ. ೨೯-೩೬೯). [?]

**ಪುನೀತ** (ಗು). ೧. ಪವಿತ್ರವಾದ : ಶುದ್ಧವಾದ : ಆತನಂ ನೋಡಿದೊಡೆ ಸಾಕು ಪುನೀತಭಕ್ತಿ ಗುಣತತ್ವಹುದು (ಬಸವ. ೬-೦೩) ; ಆ ಪ್ರೇಮವೆಂಬ ಪುನೀತವಸ್ತುವಿಗೆ ಪಕ್ಷಪಾತವಿಲ್ಲ, ತಾರತಮ್ಯವಿಲ್ಲ (ಸುಂದರಂ. ೦೯). (ನಾ). ೨. ಪರಿಶುದ್ಧವಾದುದು : ಪಾವನ : ಸದ್ಗುಣಚರಿತ್ರನಾಮಾಳಿಯಿಂ ಜಗಮಂ ಪುನೀತಮಂ ಮಾಳ್ಪ ನಿನ್ನೀಳಗೆಯನವನೆತ್ತ ಬಲ್ಲಂ (ಶ್ರೀ.ಬಸ. ೦೬-೪೪). ೩. ಪರಿಶುದ್ಧನಾದವನು : ಉತ್ತಮಕುಲದೊಳೊಗೆದು ಪುನೀತ ನಾಗಿ . . . ಬಾಳ್ದ (ಬಸವ. ೩-೫೬) ; ಮಂದಬುದ್ಧಿಯವರೂ ಶಿಕ್ಷಣ ದಿಂದ ಪುನೀತರಾಗುವಂತಾಯಿತು (ಶಿಕ್ಷಣ. ೬೪೯). [ಸಂ.]

**ಪುನೀತೆ** (ನಾ). ಪರಿಶುದ್ಧಳಾದವಳು ; ಪಾವನೆ : ಆತನುತ್ತಮಸತಿ ವಿಶೇಷಪುನೀತೆ ಮೂದಾಂಬಿಕೆ ಸವಿನಯಾನ್ವಿತೆ ಸತ್ಕುಲಜಾತೆ (ಬಸವ. ೨-೪೭).

[ಸಂ. ಪುನೀತಾ]

**ಪುನುಗು** 'ಪುಣುಗು' ನೋ.

**ಪುನುವಲವಳ್ಳಿ** (ನಾ). ಒಂದು ಊರಿನ ಹೆಸರು ; ಸೊರಬ ತಾಲ್ಲೂಕಿನ ಈಗಿನ ಹುನವಳ್ಳಿ : ಬಳಗಾಜಿರ ಕೋಕರಂ ಪುನುವಲವಳ್ಳಿ ಯಲ್ಲಿಟ್ಟು ಪುಯ್ಯಲಂ ಪರಿದು ಮಾರ್ಬ್ಬಲಮಂ ತಳ್ತಿರಿದು ಸ್ವರ್ಗಾ ಲಯಕ್ಕೆ ಸನ್ದಂ (ಎ.ಕ. VIII, ಸೊರಬ. ೫೩೦-೬ ; 979).

[ಪುನುವಲ್$_0$ + ಪಳ್ಳಿ$_1$]

**ಪುನೆ** (ನಾ). ಒಂದು ಬಗೆಯ ಸಸ್ಯ : ಸುರಗಿ, ಗರ್ದಂಡಿ, ಪುನ್ನಾಗ, ಪುನೆ (ವೃ.ಶಿ. ೫೭-೦೦೯೩). [?]

**ಪುನ್ನಮಿ** 'ಪುಣ್ಣಮೆ' ನೋ.

**ಪುನ್ನಾಗ** (ನಾ). ೧. ಪುರುಷರಲ್ಲಿ ಶ್ರೇಷ್ಠನಾದವನು. ೨. ಗಂಡು ಆನೆ. ೩. ಬಿಳಿಯ ಆನೆ. ೪. ಪಟ್ಟದ ಆನೆ. ೫. ಕೋಣ. ೬. ಹಾವು. ೭. ಒಂದು ಬಗೆಯ ಮರ ಮತ್ತು ಅದರ ಹೂವು ; ಸುರಹೊನ್ನೆ : "ಪುನ್ನಾಗಃ, ಸುರಪರ್ಣಿಕಾ—ಈ ೨ ಸುರಹೊನ್ನೆ" (ಕಬಾಯು. ೩೫-೫೫); ಅಪೂರ್ವಮಪ್ಪ ಪುನ್ನಾಗದ ಬಾಸಿಗಂ ಬಗೆದ ಬಣ್ಣದ ಪುಟ್ಟಿಗೆ ನಾಗಜಾಲವೆಂದಾಗಡೆ . . . ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣ ವನಂ ಮರುಳ್ಚಿದಳ್ (ಶಂಖಾ. ೪-೦೭) ; ಮುಳಿದು ಸ್ವರ್ಗಕೆ ಪರಿದು ಪೋಗುವ ತೆರದಿ ನೆಮ್ಮಿ ಗಗನವ ತುಡುಕಿ ಪುನ್ನಾಗ ನಾಗವಳ್ಳಿಯ ಪೊಲಂ ಕಂಗೆಸೆದುವು (ಶಬರೋ. ೪-೩೦). ೧, ೩, ೭ : ಏಗುವ ದ್ವಿಜಪರಿವಾರ ತಮಗಣಿತ ಪುನ್ನಾಗಸೇವ್ಯಮಾನಂ ವಂಶೋಪಗತಮೆನಿಸಿರ್ದ ಬೆಟ್ಟಂ ಸೊಗಯಿಸಿದುದು ರಾಜನಂತೆ ಲಕ್ಷ್ಮಿಯ ಪೆರ್ಚಿಂ (ಬಾರತ. ೦೦-೦೯೩). ೨, ೬, ೭ : ಪುನ್ನಾಗವಿರಾಜಿತಮಿದು ಪನ್ನಗವಧುಮಂ ಕರೇಣುಮಂ . . . ನೆನೆಯಿಪುದಖಿಳಮೃಗಶರಣ್ಯಮರಣ್ಯಂ (ಪುಷ್ಪ. ೫-೬೬) ; "ನರಶ್ರೇಷ್ಠಾ ವನೀಜಾತಭೇದ ಉಲ್ಲಾಯಂ ಫಣಿ ಪಟ್ಟವರ್ಧನಗಜಂ ಪುನ್ನಾಗಮಕ್ಕುಂ" (ಶಾಬರ. ೬೨). [ಸಂ.]

**ಪುನ್ನಾಗತೋಡಿ** (ನಾ). [ಸಂಗೀತ] ಒಂದು ರಾಗದ ಹೆಸರು : ರಾಗ ಪುನ್ನಾಗತೋಡಿ, ಆದಿತಾಳ (ಕಪುಕು. ೭೪). [ಸಂ. ಪುನ್ನಾಗತೋಡೀ]

**ಪುನ್ನಾಗವರಾಲಿ, ಪುನ್ನಾಗವರಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪುನ್ನಾಗವರಾಲಿಯಾದರೋ (೨) ಷಡ್ಜಗ್ರಹಸಹಿತವಾದುದು, ಸರ್ವಕಾಲವೂ (ಗಾನಯೋಗ್ಯವಾದುದು) (ಶಕುಪ್ರ. ೦೩೪). **ಪುನ್ನಾಗವರಾಳಿ** : ಪುನ್ನಾಗವರಾಳಿ : ೮ನೇ ಮೇಳಕರ್ತ ಹನುಮತೋಡಿಯಲ್ಲಿ ಜನ್ಯ (ಸಂಗೀತಂ. ೦೫೨); ಇವರು ಪುನ್ನಾಗವರಾಳಿರಾಗವನ್ನು ನುಡಿಸಿ, ಹುತ್ತ ಗಳಲ್ಲಿ ಮಲಗಿದ್ದ ಹಾವುಗಳನ್ನು ಮೇಲಕ್ಕೆ ಸೆಳೆದು, ತಮ್ಮ ಮುಂದೆ ಹೆಡೆ ಯಾಡಿಸಿ ನರ್ತನ ಮಾಡುವಂತೆ ಮಾಡಿದ್ದಾರೆ (ಸಂಗೀತ. ೯೨).

[ಸಂ. ಪುನ್ನಾಗವರಾಲೀ]

**ಪುನ್ನಾಗವರಾಳಿ** 'ಪುನ್ನಾಗವರಾಲಿ' ನೋ.

**ಪುನ್ನಾಟ** (ನಾ). ಒಂದು ನಾಡಿನ ಹೆಸರು: ಶ್ರೀಮತ್ಕೊಙ್ಗಣಿ ಮಹಾಧಿರಾಜಸ್ಯಾವಿನೀತನಾಮ್ನ[ಃ] ಪುತ್ರೇಣ ಪುನ್ನಾಟರಾ[ಜ]ಸ್ಕನ್ದವರ್ಮ್ಮಪ್ರಿಯಪುತ್ರಿಕಾಜನ್ಮನಾ . . . ಸಮಸ್ತ ಪುಣ್ಣಾಟ ಪುನ್ನಾಟಾಧಿಪತಿನಾ (ಶ್ರಮಂ. ೦೯೧೦, ೦ ೨೪: 788). [< ಪುನ್ನಾಡು]

**ಪುನ್ನಾಡಿ** (ನಾ). ದೇಹದಲ್ಲಿರುವ ಹನ್ನೆರಡು ನಾಡಿಗಳಲ್ಲಿ ಒಂದು: ೧. ಇಡಾನಾಡಿಯಲ್ಲಿ ಮಂದಾಕಿನೀ ... ೭. ಪುನ್ನಾಡಿನಾಡಿಯಲ್ಲಿ ಗಂಡಿಕೆ ... ೧೧. ವಾರುಣಿ–ಗೋದಾವರಿ, ೧೨. ಪೂಷಾ –ಪಯಸ್ವಿನೀ (ಹಠಾರ. ೮–೦೯ ಟಾತ್ಪರ್ಯ). [ಸಂ.]

**ಪುನ್ನಾಡು**, ಪೂನಾಡು (ನಾ). ಒಂದು ನಾಡಿನ ಹೆಸರು; ೯ ಕಾವೇರಿ ಮತ್ತು ಕಪಿನಿ ನದಿಗಳ ನಡುವೆ ಇರುವ, ನಂಜನಗೂಡು, ಹೆಗ್ಗಡದೇವನಕೋಟೆ ತಾಲ್ಲೂಕುಗಳ ಸುತ್ತಮುತ್ತಲಿರುವ ಜಾಗ: ಶ್ರೀಮತ್ಕೊಂಗಣಿ ಮಹಾಧಿರಾಜಸ್ಯ ಅವಿನೀತನಾಮ್ನಪುತ್ರೇಣ ಪುನ್ನಾಡರಾಜಸ್ಕನ್ದವರ್ಮ್ಮಪ್ರಿಯಪುತ್ರಿಕಾಜನ್ಮನಾ . . . ಬೆಮ್ಬುರೀಶ್ವರಸ್ಥಾನಮುದಳ ಪೂರ್ಬ್ಬ ದತ್ತ (ಇಸಿ. V, ೦೩೯–೩; 513); ಸ್ವಸ್ತಿಶ್ರೀ ಶಿವಮಾರ ಪೃಥುವೀರಾಜ್ಯಂಕೆಯೆ ಪುನ್ನಾಡಟುಸಾಸಿರಕ್ಕೆ ಎಱೆಯರ್ . . . ಸ್ತ್ರೀಱೆಯ ಮರಿಯಾದೆ ಕೊಟ್ಟರ್ (ಎಕ. III, ನಂಜನ. ೨೬–೨; ಸು. 810); ಪುನ್ನಾಡರಸರಾ ಮಗನ್ದಿರ್ ಸೀಮರಸ × × × (ಎಕ. IX, ದೇವನ. ೪೦.೨; ಸು. 900 ?). **ಪೂನಾಡು**: ತಳವನನಗರ ಶ್ರೀವಿಜಯಜಿನಾಲಯಕ್ಕೆ ಪೂನಾಡು ಛಾಸಹಸ್ರ ಎಡೆನಾಡು ಸಪ್ತರಿ ಮಧ್ಯೆ ಬದಣೆಗುಪ್ಪೆ ನಾಮ ಮಹಾಧಿರಾಜೇನ ದತ್ತೇನ ಪಡಿಯೋಲಿಱಿಸೊಳಂ (ಎಕ. I (R), ೦–೦೮; 466 ಕ್ರಿಶ); ಬೂತರಸ ಯುವರಾಜ ಪಥದುಳ್ ನಿನ್ದು ಕೊಙ್ಗಳ್ನಾಡು ಪೂನಾಡಮನಾಳುತಿಲ್ದು (ಎಕ. III, ನಂಜನ. ೭೩–೬; 870).

[ದೇ.॥ ತಮಿ. ಪುನನಾಟು; ಮಲ. ಪುನ್ನಾಡು]

**ಪುನ್ನಾಹ** (ನಾ). ಒಂದು ಬಗೆಯ ಕುದುರೆ: ಇಂದಿರನಕ್ಕುಮ್ ಪೂರಕವ್ಯಂದಚ್ಛಾಯಾವಿರಾಜಿತಂ ಕರ್ಗಲ್ಪಣ್ಣಂದದ ಕೇಸರಮಾ ನೊರೆಯಂದ ಮಾನನುಕರಿಸಿ ತೋರ್ಪುದದು ಪುನ್ನಾಹ (ಅಶ್ವಶಾ. ೨–೨೯). [?]

**ಪುನ್ನಿ** (ನಾ). ಒಬ್ಬಾತನ ಹೆಸರು: ಕೊಟಿಯಮ್ಮನ ಅಳಿಯಂ ಚಪ್ಪಯ್ಯನ ಮಗಂ ಪುನ್ನಿ ಗೋಸಾಸಿ ಕೆಱೆಯಂಮಾಡಿಸಿ ಕೊನಲ್ಲಿಯ ಮಹಾಜನಕೆ ಗೋಸಾಸಮಿಟ್ಟು (ಎಕ. VIII, ಸಾಗರ. ೦೦೦–೭; 986). [?]

**ಪುನ್ಪಯಿರು** (ನಾ). ಒಣಭೂಮಿ ಮತ್ತು ಅದರ ಮೇಲಿನ ಕಂದಾಯ; ಖುಷ್ಕಿಬೆಳೆ ಮತ್ತು ಅದರ ಮೇಲಿನ ಸುಂಕ: ಯಿ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ ವಾನ್‌ಪಯಿರು ಪುನ್‌ಪಯಿರು . . . ಉಂಟಾದ ಹಲ ಉಪಾಧಿಗಳೂ ಸಹ ಸೇರ್‍ಸಿ ಕೊಟ್ಟೆವು (ಕಾಇಇ. IX–ii, ೪೬೬–೭; 1470); ನಂಜೆ ಪುಂಜೆ ವಾನ್ ಪಯಿರು ಪುನ್‌ಪಯಿರು . . . ಮೊದಲಾದ ಹಲ ಉಪಾಧಿಗಳು ಸಹ (ಕಾಇಇ. IX-ii, ೪೬೬–೩; 1472). [← ತಮಿ. ಪುನ್ಪಯಿರ್]

**ಪುನ್ಪುಲ** 'ಪುನ್ಪೊಲ' ನೋ.

**ಪುನ್ಪೊಲ**, ಪುನ್ಪುಲ (ನಾ). ಒಣಭೂಮಿ; ನೀರಾವರಿಯಿಲ್ಲದೆ ಬೆಳೆಯುವ ಭೂಮಿ: ಕೊಟ್ಟೊದು ಬರನೂರಾಯು ತೆಱೆಯುಂ ಪುನ್ಪೊಲಮು ×ನ್ನ × × (ಎಕ. X (8), ಮುಳಬಾ. ೦೮೯–೩; 9ನೆಯ ಶತ). **ಪುನ್ಪುಲ**: ಕಱುಪೆನ್ನಿರ್ವ್ವಕ್ಕರ್ವಮ್ಪುನ್ಪುಲ್ಮೆಲ ಪತ್ತೊನ್ದಿವಿ × (ಎಕ. XIV, ತಿರುಮ. ೨೫೨–೩; ?). [← ತಮಿ. ಪುನ್ಪುಲ]

**ಪುಪ್ಪ**, ಪುಷ್ಪ, ಪುಪ್ಪ (ನಾ). ಹೂವು; ಪುಷ್ಪ: 'ಪುಪ್ಪಸರ', 'ಪುಪ್ಪುಡಿ' ಪರಾ. **ಪುಷ್ಪ**: ಪುಷ್ಪಕ್ಕೆ ಕೊಟ್ಟ ಗದ್ಯಾಣ ೧ (ಎಕ. II, ೬೨೬; 1076); ಶ್ರೀನಂದನಾದೀವಿಗೆಗಂ ಶ್ರೀಪದಪುಷ್ಪಕ್ಕಂ ನಂದನವನಕಂ . . . ಸಮಸ್ತವಸ್ತುಸುಂಕವನಾಚಂದ್ರಾರ್ಕತಾರಂಬರಂ ಸಧರ್ಮಮಂ ಪ್ರತಿಪಾಲಿಸಿದವಂ (ಎಕ. XIV, ಶ್ರೀರಂಗ. ೨೪೬.೩; ಸು. 1177). **ಪುಪ್ಪ**: ಆ ದೇವರ ಪೂಜೆಯ ಪುಪ್ಪಕ್ಕೆಂದು . . . ಹೂದೋಟಂ ಮತ್ತರು ೧ (ಸೌಇಇ. XX, ೦೦೯–೨೬; 1148).

[< ಪ್ರಾ. ಪುಪ್ಪ. / ಸಂ. ಪುಷ್ಪ]

**ಪುಪ್ಪಸರ** (ನಾ). ಹೂವಿನ ಬಾಣವನ್ನು ಹೊಂದಿದವನು; ಮನ್ಮಥ: ಪುಪ್ಪಸರನ ರಾಣಿಗೆ ಮೆಯ್ದೊಡವನುಪೊಪ್ಪಿಸಿ ತಾತಿಯ ಮಾಡಿದರು (ವೋಚಹತ. ೦೭–೧೩). [ಪುಪ್ಪ+ಸರ$_3$]

**ಪುಪ್ಪುಟ** (ನಾ). ಬಾಯಲ್ಲಿ ಆಗುವ ಒಂದು ಬಗೆಯ ಹುಣ್ಣು; 'ತಾಲುಪುಪ್ಪುಟ', 'ದಂತಪುಪ್ಪುಟ' ಪರಾ. [< ಸಂ. ಪುಪ್ಪುಟ]

**ಪುಪ್ಪುಡಿ** (ನಾ). ಹೂವಿನ ಹುಡಿ; ಪುಷ್ಪರಜ: ಕರಿಯ ಮಲ್ಲಿಗೆಯ ಪಾವನಕುಸುಮಪರಿಮಳವನುಂಡು ಶನ್ಮಕರಂದದೊಳ್ ಮಿಂದು ಪುಪ್ಪುಡಿಯೊಳು ಮನವೊಲ್ದು ಪೊರಳ್ದಂದಿನಿಂದ ಕಪ್ಪಾಗಿ . . . ಸಂಚರಿಪ ಷಟ್ಪದಿಗಳನುರಾಗಿಸುತ್ತಿರ್ದುವಾ ಪರವನಾಂತದೊಳ್ (ಸಂದಿಪಾ. ೩–೨೪); ತೆಂಬೆಲರಿಂದಲ್ಲಾಡುವ ತಳಿರ್ತೆಳವಾವಿನ ಪೂಗೊಂಚಲ ಪುಪ್ಪುಡಿಯ ಮೊತ್ತದಿಂ ತಟ್ಟ ಕಾಲ್ದಾರಿಗಳಿಂ . . . ಕಣ್ಗೊಳಿಕುಂ (ಚಿತ್ರಗೋ. ೦೨–೦೨).

[< ಪುಪ್ಪ + ಪುಡಿ]

**ಪುಪ್ಪುಸ** 'ಪುಪ್ಪುಸ' ನೋ.

**ಪುಪ್ಪುಸರೋಗ** (ನಾ). ಶ್ವಾಸಕೋಶದ ರೋಗ; ಉಬ್ಬಸ: ಅವಕ್ಕೆ ಬರುವ ಸಾಮಾನ್ಯರೋಗಗಳಲ್ಲಿ . . . ಶ್ವಾಸಕಾಂಗಗಳಿಗೆ ಸಂಬಂಧಪಟ್ಟ ಕೆಮ್ಮು, ಪುಪ್ಪುಸರೋಗಗಳೂ ಮುಖ್ಯವಾದುವು (ಕರಿಕೋ. I, ೭೨೯).

[ಪುಪ್ಪುಸ (< ಪುಪ್ಪುಸ) + ರೋಗ]

**ಪುಪ್ಪುಸರೋಗಿ** (ನಾ). ಪುಪ್ಪುಸದ ರೋಗವುಳ್ಳ ವ್ಯಕ್ತಿ: ಪುಪ್ಪುಸ ರೋಗಿಗಳ ಉಗುಳಲ್ಲೂ ಎಲ್ಲರ ಕರುಳುಗಳಲ್ಲೂ ಈ ಅಣಬೆಗಳು ಸಾಮಾನ್ಯವಾಗಿ ಇದ್ದೇ ಇರುವುವು (ಕರಿಕೋ. I, ೨೨೭).

[< ಸಂ. ಪುಪ್ಪುಸರೋಗಿನ್]

**ಪುಪ್ಪುಸ** (ನಾ). ೧. ಶ್ವಾಸಕೋಶ. ೨. ಕಮಲದ ಹೂವಿನ ಬೀಜಕೋಶ. [ಸಂ.]

**ಪುಬ್ಬ** 'ಪುಬ್ಬೆ' ನೋ.

**ಪುಬ್ಬಾಮಿಗ** (ನಾ). ಒಬ್ಬಾತನ ಹೆಸರು: ತೆಂಕಣವಳ್ಳಿಯ ಗುಡ್ಡದ ಪುಬ್ಬಾಮಿಗಂಗೆ ಮಾಳಿಂಗಿಗಾಮಿಗಿತ್ತಿಯಾಗೆ ಪುಟ್ಟಿದ ಶ್ರೀಮಾರಂ (ಎಕ. VII, ಶಿಕಾ೦. ೨೬೩–೪; ಸು. 830). [?]

**ಪುಬ್ಬು** 'ಪುರ್ವು' ನೋ.

**ಪುಬ್ಬೆ**, ಉಬ್ಬೆ$_3$, ಪುಬ್ಬ, ಪುರ್ಬ, ಪೂರುವ, ಹುಬ್ಬೆ (ನಾ). ೧. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಹನ್ನೊಂದನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ; ಪೂರ್ವಫಲ್ಗುಣಿ: ಪೂರ್ವೆ-ಪುಬ್ಬೆ (ಕಮಪ. ಮ. ೩೮೪ ಕ್ರಯೋ); ಪುಬ್ಬೆ ೨ ಪುತ್ತರೆ ಮಂಚದ ಪಾದದ ಹಾಗೆ (ಭಾಸ್ಕರ. ೬೦–೪); ಪುಬ್ಬೆ ಮಳೆ ಉಬ್ಬುಬ್ಬಿ ಹುಯ್ದರೂ ಗುಬ್ಬಿ ಪುಕ್ಕ ನೆನೆಯದು (ಗಾದೆ). **ಉಬ್ಬೆ$_3$**: ೧. ಉಬ್ಬೆಮಳೆ ಅಬ್ಬೇ ಹಾಲು (ಗಾದೆ). **ಪುಬ್ಬ**: ೧. ತ್ರಿಕೋಣದ ಕರ್ಣದ ಮೇಲಿನ ನಕ್ಷತ್ರ ಪುಬ್ಬ, ಕೆಳಗಿನದು ಉತ್ತರಾ (ಪಕ್ಷಕ್ರ. ೬೯). ೨. [ಜೈನ] ಒಂದು ದೊಡ್ಡ ಕಾಲಮಾನ; ಎಪ್ಪತ್ತುಲಕ್ಷ ಐವತ್ತಾರುಸಾವಿರಕೋಟಿ ವರ್ಷಗಳ ಅವಧಿ: ತೊಳಗದು ಪುಬ್ಬಕೋಟಿಪರಿಸಂಖ್ಯೆವರಂ ಪರಮಾಯು (ಆದಿಪು. ೧–೩೨); ನೀನುಮೊಂದು ಪುಬ್ಬಕೋಟಿಕಾಲಮರಸುಗೆಯ್ದು . . . ದೇವನಾದೈ (ಶಂತಾಪು. ೬–೫೭ ವ); ಮೂವತ್ತಾಱುಲಕ್ಷಪುಬ್ಬಂ ರಾಜ್ಯಂಗೆಯ್ದು (ಪೂರ್ವಪು. ೦೭). **ಪುರ್ಬ**: ೧. ಸಟಪುರದ ಅಯ್ದುವಿಮ್ಬಗ್ರ್ಗ ×

ಯೂಸು ಪುಬ್ಬುದಿನ್ನ ತುಪ್ಪದೆ[ಜೆ]ನುಟುದೋನ್ (ಶಾಶ. XI-1, ೦೨-೦೩ ; ೫೯೭). ೨. ಮಹಾಬಲಖಚರೇಂದ್ರಂ . . . ಮೂವತ್ತಾಱುಲಕ್ಕೆಪುರ್ಬಂ [ಪಾಠಾಂ. ಬ್ಬಂ] ರಾಜ್ಯಂಗೆಯ್ಯೆ (ಆದಿಪು. ೨-೨೩ ವ). **ಪೂರುವ :** ೩. ಹಿಂದಿನ ಕಾಲ ; ಪೂರ್ವಕಾಲ : ಆರು ನಿನ್ನಂದದಲಿ ತಪವನು ಪೂರುವದಲಾಚರಿಸಿದವರು (ಶಿಭಾಗ. ೬ ೨ ೩೪). **ಹುಬ್ಬೆ :** ೧. ಪೂರ್ವ—ಹುಬ್ಬೆ (ಶಪುದ. ೨೬೦ ಶ್ರದೋ): ಅಬ್ಬುವದು ರಕ್ತಾಕ್ಷಿಯಪುರದ ಹುಬ್ಬೆಯಾಲಿ ರವಿಯಿರಲಿಕಾತನ ಸರ್ಬಸೈನ್ಯದ ರಕ್ತದಿಂದವೆ ಹುಟ್ಟಿತಾ ನದಿಯು (ಸಂಭಶ. ೨೬-೩೪).

[<ಸಂ. ಪೂರ್ವ]

**ಪುಮಪತ್ಯ** (ನಾ). ಗಂಡುಮಗು. [ಸಂ.]

**ಪುಮಾಂಸ** (ನಾ). ಗಂಡಸು ; ಪುರುಷ : ಕುಶಲರಾ ಗತಿಗಿಂದ ಕಿಂಚಿತ್ಕುಶಲವಿಲ್ಲೆಣಿಸಲ್ಕೆ ವಿಷಯಾಪಶರ ಸಂಗತಿಯೊಂದಿಗಾಗುವದೊ ಪುಮಾಂಸರಿಗೆ (ಚವೇಶ. ೦೨-೦೦). [<ಸಂ. ಪುಮಾನ್]

**ಪುಮ್ಮೆ** (ನಾ). ಒಂದು ಬಗೆಯ ಆಟ : "ಚಿಟ್ಟುಮುರಿ ಪುಮ್ಮೆಯೊಳಕ್ಕುಂ" (ಕವಿಕಂ. ೨೨೭). [?]

**ಪುಯ್**, ಪುಯ್ಯಿ$_2$ (ನಾ). ಹುಸಿ ; ಮಾಯೆ : ವಸುಧೆಯ ಭಾರವುನಿಳುಪದೆ ಸಿಸುತನದಿಂ ಪೊಟ್ಟುಗಳೆವ ಪುಯ್ಯಂ ಕಂಡೆಟ್ಟಿಸಿ ಬಿಸರುಹನಾಭನೊಳಿಂತು ಸಿರ್ದರ್ ಬಿಡುಗಣ್ಣರುಚಿತಕಾರ್ಯೋದಯಮಂ (ಗಿಕಗೋ. ೬-೦೭).
**ಪುಯ್ಯಿ** : 'ಪುಯಿನಡು' ಪರಾ. 'ಪುಸಿ$_2$' ಹೋ.

[ದೇ.॥ ತಮಿ. ಮಲ. ಕೋತ. ಪೊಯ್]

**ಪುಯಲ್** 'ಪೊಯಲ್' ನೋ.

**ಪುಯಲ್ಚು** 'ಪುಯ್ಯಲ್ಚು' ನೋ.

**ಪುಯಲ್ದೋರು** (ಕ್ರಿ). ಕೂಗೆಬ್ಬಿಸು ; ಹುಯ್ಯಲಿಡು : ಬೊಬ್ಬಿರಿದು ಬಹುರವದಿ ಪುಯಲ್ದೋರುತಿರಲಶಿಕಶೋರಧ್ವಾನ ಕರ್ಣಯುಗದಲಿ ಪೊಕ್ಕು ಹೃದಯ ಕಂಡ ಕಡೆಗೆ ಪರಿದೋಡುತಿರೆ ಶಬರಾಳಿ ರಭಸದಿ ದೆ (ಪಪಮೋ. ೧೬-೨೦). [ಪುಯಲ್ (<ಪೊಯಲ್) + ತೋರು (<ತೋಱು)]

**ಪುಯಿ$_1$** 'ಪೊಯ್$_1$' ನೋ.

**ಪುಯಿ$_2$** 'ಪುಯ್' ನೋ.

**ಪುಯಿನಡು** (ನಾ). ಊಹೆ ಮಾಡಿಕೊಳ್ಳಬೇಕಾಗಿರುವಷ್ಟು ತೆಳ್ಳಗಿರುವ ನಡು : ಪುಸಿನಡುವಿನ ಪುಯಿನಡುವಿನ ಕಣ್ಗೆ ಕಾಣಿಸದ ನಡುವಿನ ಮೋಹಿಸುವ ಅಸಿಯ ನಡುವಿನುಂಗುರವಿಡಿನಡುವಿನ ಪೊಸಜವ್ವನೆಯರೆಯ್ದಿದರು (ಕುರಾಸಾಂ. ೨೧-೪೩). [ಪುಯಿ$_2$ (<ಪುಯ್) + ನಡು$_2$]

**ಪುಯಿಲ್** 'ಪೊಯಿಲ್' ನೋ.

**ಪುಯಿಲಿಡು**, ಹುಯಿಲಿಡು (ಕ್ರಿ). ೧. ಗರ್ಜಿಸು ; ವೀರಾವೇಶದಿಂದ ಕೂಗು : ಇಟ್ಟಡಿಯ ನೆಟ್ಟನಿಸಿಸಂ ಪಿಮ್ಮೆಟ್ಟಿ ಪಟಪಟ್ಟಡರೆಯುಟ್ಟಳೆವರಂ ಕೈಗೊಟ್ಟು ಪುಯಿಲಿಟ್ಟರೆನೆ ದಿಟ್ಟತನಮೆಂತೋ (ಜಕವಿ. ೨-೯೩). **ಹುಯಿಲಿಡು :** ೨. (ರಕ್ಷಣೆಗಾಗಿ) ಮೊರೆಯಿಡು : ಸೆರೆ ಬಿದ್ದಿಹ ಕಾಲ ಹುಯಿಲಿಡುವುದೊ ಎನೆ ಜಿರ್‍ನೆ ಜೀರುಂಡೆಯು ಮೇಳ ! (ಗಜೇಶ. ೨೮-೬).

[ಪುಯಿಲ್ (<ಪೊಯಿಲ್) + ಇಡು$_1$]

**ಪುಯಿಲ್ಚು** (ಕ್ರಿ). ೧. = ಪುಯಿಲಿಡು ೧ : ರಾಘವರಿಪರ್ವರಿಂದಿವರ್ ಬೇಸಜದಾಂಧ್ರಪನಿಪಾಲಿಮೂಲಸೈನ್ಯಂ ಬಜಿದಪ್ಪಂತೆ ಪುಯಿಲ್ಚಿ ಪೊಯ್ದುಗೆಲ್ವರ್ (ಜಕವಿ. ೨-೩೧). ೨. (ರಕ್ಷಣೆಗಾಗಿ) ಮೊರೆಯಿಡು : ಇಮ ವಸಂತಕನ ಪನಿಯಂತಿರ್ಪೂಮು . . . ಸಾಸಿಗರಿಂ ಮೋಸಂ ಬಂದುದರ್ಕೆ ಪುಯಿಲ್ಚುವನಾಗವೇಬ್ಸಿದಾ (ಜಕವಿ. ೬-೭೦ ವ).

[ಪುಯಿಲ್ (<ಪೊಯಿಲ್) + —ಚು$_1$]

**ಪುಯ್ಯಲ್** 'ಪೊಯಲ್' ನೋ.

**ಪುಯ್ಯಲಿಕ್ಕು**, ಪುಯ್ಲಿಕ್ಕು, ಹುಯ್ಯಲಿಕ್ಕು (ಕ್ರಿ). ೧. (ರಕ್ಷಣೆಗಾಗಿ) ಮೊರೆಯಿಡು ; ಗೋಳಿಡು : ನಾಗನಿಕರಮುಂ ಮರ್ತ್ಯನಿಕರಮುಂ ತರದಿಂ ದೇವನಿಕರಮುಂ ನಿಮ್ಮೊಳಿಗಮನೆ ಭರದಿಂ ಪುಯ್ಯಲಿಕ್ಕೆ ಕಳುಪಿದರೆನ್ನಂ (ಗಂಕ. ೬-೨೩) ; ಅಱುದಿಂಗಳು ಮೊದಲೀ ತಾಣದೊಳು ಬಂದು ಮಱೆಯದೆ ಪುಯ್ಯಲಿಕ್ಕುವೆನು (ನಾಗಕು. ೦೩-೯೨). **ಪುಯ್ಲಿಕ್ಕು :** ೧. ಕುಕ್ಕುಟೋರಗ ಕೊಂದುದೆಂದು ಸುತಾರೆಯು ಪುಯ್ಲಿಕ್ಕುವಂದದಿ ವೈತಾಳಿಯೊಳು ಅಕ್ಕಟ ಪ್ರಾಣಕಂಟಕವಾದುದೆಂಬಂತೆ ಠಕ್ಕ ಮಾಡಿರಿಸಿರಲಾಗ (ಶಾಂತೀಶ. ೦-೮೭). **ಹುಯ್ಯಲಿಕ್ಕು :** ೨. ಗದ್ದಲ ಮಾಡು ; ಹುಯ್ಯಲೆಬ್ಬಿಸು : ಕಳ್ಳಗೆ ಸುದು ಕೊಟ್ಟು ಒಡವೆಗೆ ಹುಯ್ಯಲಿಕ್ಕಿದ (ಗಾದೆ). [ಪುಯ್ಯಲ್ (<ಪೊಯಲ್) + ಇಕ್ಕು]

**ಪುಯ್ಯಲಿಗ** (ನಾ). ಮೊರೆಯಿಡುವವನು ; ಗೋಳಿಡುವವನು : ಧರ್ಮಜಂ ಮೆಚ್ಚಿ ನರನ ಕಜ್ಜಮನೆ ಕೆಯ್ಕೊಂಡು ಬೇಗಮೆದರ್ತಂತವಸ್ತ್ರಾಯುಧಂಗಳಂ ಕೊಂಡು ನಡೆಗೊಂಡು ಪುಯ್ಯಲಿಗರೊಡನೆ ಪೊಱಮಟ್ಟು ವಿರಾಟನ ಪೆಱಗಂ ಬರೆ (ಜಂಹಂ. ೦೨-೯೨ ವ).

[ಪುಯ್ಯಲ್ (<ಪೊಯಲ್) + —ಇಗ]

**ಪುಯ್ಯಲಿಡು**, ಪುಯ್ಲಿಡು, ಹುಯ್ಯಲಿಡು, ಹೊಯ್ಲಿಡು (ಕ್ರಿ). ೧. = ಪುಯ್ಯಲಿಕ್ಕು ೧ : ಬ[ರ್ದ] ಮನೆಯ ಮೇಗೇಱಿ ಕಳ್ಳರೆಂದು ಪುಯ್ಯಲಿಟ್ಟಾಗಳನಿಬರುಂ ತ್ರಸ್ತಾಭಿಭೂತರಾಗಿ ಪಟ್ಟನೆ ಪಾಱಿಯೋಡಿ . . . ಪಗೆಸಾಱಿರ್ದರ್ (ಪಪ್ಪಾರಾ. ೦೮-೨೩) ; ಸುಯೋಧನನ ಮಹಾದೇವಿ ಭಾನುಮತಿ ಬಾಯಱಿದು ಪುಯ್ಯಲಿಡುತುಂ ಬಂದು ಧರ್ಮನಂದನನ ಕಾಲ ಮೇಲೆ ಕವಿದು ಪಟ್ಟು (ಜಂಕಭಾ. ೬-೩೩ ವ); ತನ್ನ ಮಗನಕಾರಣಂ ಕೊಯ್ದನೆಂದು . . . ಹಾಹಾಕ್ರಂದನರವದಿಂ ಪುಯ್ಯಲಿಡುವ ಕರುಣಾರವಮಂ ಶ್ರಳವಾಜಂ ಕೇಳ್ದು (ಜಂಜಕಂ. ೭೮ ೨೨). ೨. ಒದರು ; ಅರಚು ; ಕಿರಿಚು : ತೊಲತೊಲಗಿ ವಿರಹಿಗಳ್ಗೆಚ್ಚರದೊಳೆಂದೆತ್ತಲುಂ ಪುಯ್ಯಲಿಡುವಂತೆ ಕೂಗುತಿವೆ ಕೋಗಿಲೆಗಳು (ಕೃಬಿಭಾ. ೩-೨೪). **ಪುಯ್ಲಿಡು :** ೧. ದುಷ್ಟಬುದ್ಧಿ ಮುನ್ನಮೆ ಹಾಹಾ ಕೆಟ್ಟೆನೆಂದು ಬಾಯಂ ಬಸಿಱಂ ಪೊಯ್ದುಕೊಂಡು ಪುಯ್ಲಿಟ್ಟು . . . ಕಾತರಿಸಿ ನುಡಿಯೆ (ಜಂಜಕಂ. ೧೭೧-೬). **ಹುಯ್ಯಲಿಡು:** ೧. ಕೆಟ್ಟೆನಿನ್ನೇವೆನೆನ್ನಣುಗನಡವಿಯೊಳು ಹೊಲಗೆಟ್ಟನೋ . . . ಬಟ್ಟೆಯೊಳು ಕಳ್ಳರಿಂ ಹಿಡಿವಡೆದನೋ ಹುಯ್ಯಲಿಟ್ಟಾರ್ಗಿದಂ ಪೇಳ್ವೆನು (ಸಿದ್ಧರಾ. ೨-೪೩) ; ಹುಯ್ಯಲಿಟ್ಟಳುವೊಡೆ ಕೇಳು ವರಿಲ್ಲೆಂದು ಬಾಯ ಬಿಟ್ಟಿತು ಕಪೋತಕನು (ಕಪೋತ. ೦೨-೯೨) ; ಚಳಿಗಾಲ ಕೊಣಗಿ ಬರಡಾದ ಗಿಡಗಂಟೆಯಲಿ ಹುಯ್ಯಲಿಟ್ಟಿತು ಗಾಳಿ ಈಸು ದಿವಸ (ನವಿವು. ೯೭-೦೦). **ಹೊಯ್ಲಿಡು :** ೧. ಹೊಯ್ಲಿಟ್ಟ ಋಷಿಗಳ ಮಾತ ಕೇಳ್ದು ರಘುನಂದನನು ನಸುನಗುತ ಬೆದರದಿರಿ . . . ಎಂದೊಡಂಬಡಿಸಿ (ವಾಲಕಾ. ೩). [ಪುಯ್ಯಲ್ (<ಪೊಯಲ್) + ಇಡು$_1$]

**ಪುಯ್ಯಲಿಸು** (ಕ್ರಿ). = ಪುಯ್ಯಲಿಕ್ಕು ೧ : ನೆಗಱ್ದಿನ್ನ ಗುಣಮಲಂಘ್ಯಂ ಜಗದೊಳವಂ ಕಿಡಿಸಿದಪ್ಪನೀ ನೃಪನೆಂದಜ್ಜಗದೊಳೆ ಪುಯ್ಯಲಿಪಂತೆ ಪೊಲೊಗೆದುದು ಚಲದನಿಲಹತಪಯೋನಿಧಿನಾದಂ (ಆದಿಪು. ೦೨-೭೬) ; ಲೋಕಕೋಟರಮಂ ತೀವಿದುದೆಂದು ಪುಯ್ಯಲಿಪಪೋಲ್ ಮೂಲೋಕದೊಳ್ ಚಕ್ರಿಗೀ ಧುರದೊಳ್ ನೆಟ್ಟನೆ ಕೇಡು ತಪ್ಪದೆನುತುಂ ಗಂಭೀರ ಭೇರೀರವಂ (ನೇಮಿಪು. ೦೧-೯೯).

[ಪುಯ್ಯಲ್ (<ಪೊಯಲ್) + —ಇಸು$_3$]

**ಪುಯ್ಯಲ್ಚು**, ಪುಯಲ್ಚು (ಕ್ರಿ). = ಪುಯ್ಯಲಿಕ್ಕು ೧ : ಶ್ರೀವಿಜಯನ ಪೆಸಗೊಂಡು ಪುಯ್ಯಲ್ಚುವ ವನಿತಾಕ್ರಂದನಮಂ ಕೇಳ್ದು (ಶಾಪುಂ. ೩೭); ಎಮಗಿನ್ನಾರ್ ಶರಣೆಂದು ಮಾಂಡಲಿಕರುಂ . . . ವಿಲಾಸಿನಿಯರುಂ ಬಾಯ್ವಿಟ್ಟು ಪುಯ್ಯಲ್ಚೆ (ಶಂರಾಮಾ. ೨-೪೯) ; ಗಿರಿಜೆಯ ಪದಯುಗದೊಳ್ ರತಿ ಪೊರಳ್ದು ಪುಯ್ಯಲ್ಚಿ ಪೆರ್ಚಿದಳಲಿರ್ಮಡಿಸುತ್ತಿರೆ ಮಳಯಿ

ಸುತುಂ (ಗಂಭೀ. ೯-೭೯). **ಪುಯಲ್ಚು** : "ಪುಯಲ್ಚು-ಆಕ್ರೋಶಧ್ವನೌ" (ಶಬ್ದ). [ಪುಯ್ಯಲ್ (< ಪೊಯಲ್) + –ಚು$_1$]

**ಪುಯ್ಯಲ್ವರಿ** (ಕ್ರಿ). ದಾಳಿಗೆ ನುಗ್ಗು ; ಕಾಳಗಕ್ಕೆ ನಡೆ : ಪೆರ್ವ್ವಯಲ ಕೊಬ್ಬುಗೆ ಪುಯ್ಯಲ್ವರಿದು ಬಯಲ್ಕುಡಿನಾಳ್ಕುದಿ ತುಱುವನಿಕ್ಕಿಸಿ . . . ಪೆರ್ಮ್ಮಾನಡಿಗಾವುಣ್ಣನ ಮಗಂ ರಾಮನಲ್ಲಿ ಸತ್ತೊಡೆ (ಎಕ. IV. ಹಗ್ಗ. ೦೦೩-೯; ಸು. 910); ಸಱಿಕ್ಕನೂರ ಎರ್ಮ್ಮೆ ತುಱು ಪರಿದಟ್ಟಿ ಪುಯ್ಯಲ್ವರಿದು ಪಗರೆಯಲ್ದಟ್ಟಿ ಕಾದಿ ತುಱುವಂ ಮಟ್ಟು (ಎಕ. IX. ಹೊಸಕೋ. ೦೦-೦೦; 1041). [ಪುಯ್ಯಲ್ (<ಪೊಯಲ್) + ಪರಿ$_2$]

**ಪುಯ್ಯಲ್ವೋಗು** (ಕ್ರಿ). = ಪುಯ್ಯಲ್ವರಿ : ಗಂಗಸೆಟ್ಟಿ ಕಳಸ್ಕಜ ಪನಟಿಯ ತುಱುಗೊಳೊಳೊಳ್ಕೊಂಡು ಪುಯ್ಯಲ್ವೋಗಿ ಅನ್ತಿಱಿದು ಸಗ್ಗವೇಱಿದರ್ (ಎಕ. X. ಕೋಲಾರ. ೨೬೫-೩ ; ೯೬೬) ; ಪುಯ್ಯಲ್ಗೆ ಪೋದಂ — ಪುಯ್ಯಲ್ವೋದಂ [ಪಾಠಾಂ. ಪುಯಲ್ಗೆ ಪೋದಂ—ಪುಯಲ್ವೋದಂ] (ಶಮದ. ೦೬೨ ಕ್ರಿಯೋ). [ ಪುಯ್ಯಲ್ (<ಪೊಯಲ್) + ಪೋಗು$_1$ (<ಪೋ$_1$)]

**ಪುಯ್ಯನಿಸು** (ಕ್ರಿ). ಸುಳ್ಳೆನಿಸಂ ; ಹುಸಿಗೊಳಿಸು ; ವ್ಯರ್ಥಗೊಳಿಸು : ಪೆತ್ತ ಗೆಲ್ಲವಂ ಪೆಱಸಾರ್ಚಿದಂ ಪೊತ್ತ ಜಸವುಂ ಪು[ಪಾಠಾಂ. ಪೊ]ಯ್ಯನಿಸಿದಂ ಪಕ್ಷಿದೇಟಿಗೆಯುಂ ಬಯಲ್ಗೆಯ್ದಂ (ಪಂಪಭಾ. ೫೬-೭).

[ಪುಯ್$_2$ + ಎನಿಸು$_1$]

**ಪುಯ್ಯೇಟಿಸು** (ಕ್ರಿ). ಗೋಳಾಡಿಸು ; ಗೋಳು ಹೊಯ್ದುಕೊಳ್ಳು : ಅನಿತಱೊಳಪಳ ಬಾಜಿಪ ಕೈಗಳಂ ಪಿಡಿದು ನಿಲಿಸಿ ಈ ಪೆಣಗುವ ಕಂಠಾಶ್ಲೇಷ ಪ್ರಣಯಿಯುಮನೀ ತೆಱದೆ ಪೊಯ್ದು ಪುಯ್ಯೇಟಿಪರೇ ಎಂದನಿಬರಂ ನಗಿಸಿ ಕಾಳ್ಪುರಿಸಿ (ಪಂಪಭಾ. ೭-೦೭೩). [<ಪುಯ್ಯಲ್ + ಏಟಿಸು]

**ಪುಯ್ಯೋಲಗ** (ನಾ). ಕಪಟದ ಓಲಗ : ಪೊಸಯಿಸಿ ಪುಯ್ಯೋಲಗವಂ ಪೊಸಕುದುರೆಯಪರ್ ಪೊಣರ್ಚೆ ಮಹಿಶೂರವರುಂ ಪಸುಧಾರೆಯಿಪಾಟ್ಟರೆಂದೇ ಬಸವಟಿದಂ ಬೆರ್ಚೆ ಬೆದಱಿ ಬದಿರೂಪ್ಪಸವಂ (ಅಕ್ರೂ. ೬೯-೭).

[ಪುಯ್$_2$ + ಓಲಗ$_1$]

**ಪುಯ್ಲಿಕ್ಕು** ' ಪುಯ್ಯಲಿಕ್ಕು ' ನೋ.

**ಪುಯ್ಲಿಡು** ' ಪುಯ್ಯಲಿಡು ' ನೋ.

**ಪುಯ್ವಗೆ** (ನಾ). ಕಪಟದ ಮನಸ್ಸು : ಕುಟಿಲಬುದ್ಧಿ : ಸಗಿವೊಗ ಸವಿನುಡಿ ಸಿರಿಮುದ್ದೊಗಸುಗಳಿಂ ಮೋಸಗೊಳಿಪ ಗೋಪಾಲನ ಪುಯ್ವಗೆಯುಂ ಬಯಲೆನಿಸುತೆ ಪಡಿವೊಗದೊಳ್ ಮೂದಲೆಯು ಮುಂದುಗೆಯ್ದಳ್ ಮತ್ತಂ (ಗೀತಗೋ. ೨೫-೪೫) ; ವ್ಯರ್ಥವಾಗಿ ವನವುಂ ದಹಿಸಿದವರುಂ ಪುಯ್ವಗೆಯಿಂದು ಬಿಜ್ಜೆಗಳು ಕಲ್ತವರುಂ (ಭಾರತಾಂ. ೨೯೫-೩೯).

[ಪುಯ್$_2$ + ಬಗೆ$_2$]

**ಪುರ$_1$**, ಪುರ$_1$, ಪೂರ$_1$ (ನಾ). ಹೊನಲು ; ಪ್ರವಾಹ ; ನೆರೆ : "ಪುರ [ಪಾಠಾಂ. ಹೂರಂ]ಹೊನಲ್ " (ಶಬ್ದಕೌ. ೦೨) ; "ಪುರ ಹೊನಲ್" (ಶಬ್ದಮಂ. ೩೬) 'ಕಾಲ್ಪೂರ' ಪರಾ. **ಹುರ$_1$** : ದಿವಿಜಾವಳಿಯು ದುಂದುಭಿರವದಲುಬ್ಬಿದ ಸಾಧುವಾದಗಳ ಕಳಕಳದ ಕೊಲ್ಲಣಿಗೆಯಲಿ ಹೂವಳೆಯು ಹುರದ ಹೊಸಲಿನಲಿ[ಪಾಠಾಂ. ಪೂವಳೆಯು ಪೂರದ ಹರಹಿನಲಿ]ಜನ ವಾಳುಗಿತು (ಕುಮಾವ್ಯಾ. ೯೫-೩೦) ; ಉರಿಗಣ್ಣ ಜ್ವಾಲೆ ದಳ್ಳಿಸೆ ನಿಚ್ಚ ಪಚ್ಚದ ಪಂದಲೆ ತೋಗಲಾಡೆ ಸಿರದ ಹುರಂ ಸೀಱುಂಬುಳ್ಳಿಡೆ . . . ಮೂರುತ್ತಿಗೆಪೊಗಂ ಮುಮ್ಮೊಗನಾಗಿ ಜಡಿದಂ (ರಾಮಾಶ್ವ. ೦೩೨-೮). **ಹೂರ$_1$** : "ಹೂರಬೊಂದು ಹೊಸಲ್" (ಕಶಸಾ. ೭೦-೫೯೯) ; ತಕ್ಕ ಸನ್ಮಾನವನು ಕೈಕೊಂಡೆಕ್ಕತುಳದಲಿ ಬಂದನವರರ ಹೆಕ್ಕಳದ ಹೂವಳೆಯು ಹೊನಲಿನ ಹೂ[ಪಾಠಾಂ. ಪೂ] ರದಲಿ ಹನುಮ (ಕೊರಟಾ. ೫ ೯-೬) ; ಪೊಸ ನೀರ ಹೂರದೊಳಗೆ ಮುಱಿವಿನ್ನಗಳು ಮುಸಗಿ ಮುಂ ಪೊಳೆದಾಡುವಂತೆ ಮಿಸುಗುವ ಪರಲಾವಣ್ಯಾಂಬುಪಲಿ **ಲಗ್ಗೆಸದುವ ಪೊಳಪೇಱ್** ಪಗುತ

(ಸೌಶಾ. ೦೨-೩೯). [<ಸಂ. ಪೂರ]

**ಪುರ$_2$** (ನಾ). ೧. ಕೋಟೆ ; ದುರ್ಗ. ೨. ಪಟ್ಟಣ ; ನಗರ : "ಪತ್ತನ ನಿಗಮ ನಗರ ಪುಟಭೇದನ ನಗರೀ ಪೂಃ ಸಮಾಹ್ವಯಂ ಪುರಮಕ್ಕುಂ" (ಶಬ್ದಕೋ. ೪೬-೫) ; ಪುಣ್ಯದ ಬೀಡೆನಿಪುದು ಪುರವಿದಂಬರೇಚರಪತಿಯೊ (ಶಾಂತಿಪು. ೬-೯) ; ಹರನ ಸಾಹಸಕಂಜದೆ ಪಲವಗಲು ಮುಪ್ಪುರ ಪಡಿಬರೂಪೋರಿದುದು ಪುರದೊಳಗಿರ್ಪ ಪುಣ್ಯಾಂಗನೆಯರ ಸಚ್ಚರಿತದ ಸಲಿಗೆಯಿಂದೈಸೆ (ಹರಿಬ. ೨-೪೯). ೩. ಮನೆ ; ಬೀಡು. ೪. ದೇಹ ; ಶರೀರ : "ತನುಃ . . . ಪುರಂ, ಪಿಂಡಂ . . . ಮೂರ್ತಿಃ—ಈ ೧೭ ಶರೀರಂ" (ಹಲಾಯು. ೯೪-೩೫೭). ೫. ಲಿಂಗಭೇದ : ಲಿಂಗ ವಿವರ : (?). ೬. ಗುಗ್ಗುಳ : "ಪುರಾಖ್ಯಂ . . . ಪಲಂಕಷಃ—ಈ ೪ ಗುಗ್ಗುಳಂ" (ಹಲಾಯು. ೦೦೦-೯೬೬). 'ಪುರವಂತ' ಪರಾ. ೭. ನಾಗರಮುಸ್ತೆ : ಮೊ(ಪೊ)ರಕೆಯು ಬೂದಿಯುಂ . . . ಕೋಡಸಾಲೆಯುತ್ತರಣೆ ಪುರಂಗಳೆಂಬನಿತುಮಂ ತಿಲತೈಲದೊಳಟ್ಟು ಪೂಸುಗೆ (ಲೋಕೋಪ. ೯-೨೦೬). ೮. ತಾರಕಾಸುರನ ಮಕ್ಕಳಾದ ತಾರಕಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿ ಎಂಬ ಮೂರು ಜನ ದೈತ್ಯರು ಕಟ್ಟಿಕೊಂಡ ಚಿನ್ನ, ಬೆಳ್ಳಿ ಮತ್ತು ಕಬ್ಬಿಣದ ಮೂರು ಪಟ್ಟಣಗಳು ; ತ್ರಿಪುರ : 'ಪುರವಿಜಯ', 'ಪುರಹರ' ಪರಾ. ೯. ದಾನವಾಗಿ ಕೊಟ್ಟ ಗ್ರಾಮ : ಅನ್ತೆರಡು [ಪುರದ] ಸಾಸಿರ್ವ್ವರುಂ ಪುರಸ್ಸರರಾಗಿ ನಡೆದು (ಸೌಇಇ. XI-1. ೬೪-೦೯; 1028) ; ಆ ಚವಡಿಸಟ್ಟಿಯರ ನಿಯಾಮದಿಂ ನಾಗರಸರು ಪುರದಿಂ ಪಡುಪಲು . . . ಕೊಟ್ಟ ಸಾಸನ (ಎಇ. XXI. ೨-೬೭ : 1260). ೧೦. ಪಟ್ಟಣದಲ್ಲಿ ನಿರ್ಮಿಸಿದ ವಿಸ್ತರಣ, ಬಡಾವಣೆ ಎಂಬ ಅರ್ಥದಲ್ಲಿ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ. ೧೧. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : "ಪುರ ವಹ್ನಿ ತ್ರಯ ಮೂಱು" (ಶುಂಗಶಾ. ೦೦೩-೪). 'ಪುರನಯನ' ಪರಾ. [ಸಂ.]

**ಪುರಂ** (ಅ). ೧. ಮೊದಲು ; ಪೂರ್ವದಲ್ಲಿ : "ಆದಿಃ, ಅಗ್ರಂ, ಪು(ರಾ)ರಂ . . . ಪುರಃ — ಈ ೭ ಮುನ್ನಂ" (ಹಲಾಯು. ೦೦೭-೨೨) ; "ಅಗ್ರಂ ಪುರಂ ಪ್ರಥಮಪೂರ್ವ ಪ್ರಾಕ್ ಪುರವೆಂದನುಗ್ರಹಿಸೆ ಪೂರ್ವಕ್ಕೆ ಪೆಸರಕ್ಕು" (ಶುಂಗಶಾ. ೦೨೭-೪). ೨. ಪೂರ್ವ ದಿಕ್ಕಿನಲ್ಲಿ. [ಸಂ. ಪುರಸ್]

**ಪುರಂತ$_1$** (ನಾ). ಪ್ರಾಚೀನ ಶಿವಶರಣ : ಇಂತು ಮಾನದೊಳಿಹುದುಚಿತವೆ ಪುರಂತರಾಣೆನ್ನಾಣೆ (ಬಸಪು. ೬೦-೫೯). 'ಪುರಾತ' ಪರಾ. [<ಪುರಾತನ]

**ಪುರಂತ$_2$** (ನಾ). [ವೀರಶೈ] ಮಠಮಾನ್ಯಗಳನ್ನು ಹೊಂದಿ ಒಂದು ಸ್ಥಾನದಲ್ಲಿ ನೆಲಸಿರುವ ಜಂಗಮ : ಆ ಪುರಂತರು ಒಡಪ ಹೇಳುತ ನಡೆದಾರ (ಜಾ.ಕಾ. ೫೬); ಪುರಂತರು ಪ್ರೀತಿಯಿಂದ ಹೇಳುವ ವಚನಗಳಿವು (ಕರಶ. ೭೨೯). [<ಪುರವಂತ]

**ಪುರಂದರ** (ನಾ). ೧. ಶತ್ರುಗಳ ನಗರಗಳನ್ನು ನಾಶ ಮಾಡಿದವನು ; ಇಂದ್ರ : ಉಜ್ವಳಮಣಿರತ್ನಭಾಸುರಸದನಂಗಳಿಂ ನೆಱೆದುದಂ ಸಮೆದಂ ಪುರಮಂ ಪುರಂದರಂ (ಆದಿಪು. ೬-೯೯) ; ಕರವೊಪ್ಪಿದುದಂದು ಪುರಂದರ ನೀಯೆ ಪುಳೋಮಸುತೆಯು ಕಟ್ಟಿದ ಕಂಠಾಭರಣಕ್ಕೆ ತಗುಳ್ಚಿದ ಪದ್ಮರಾಗನಾಯಕವಿದೆಂಬನ ರವಿಬಿಂಬು (ಶಾಂತಿಪು. ೯-೦೦೪) ; ವಿಂದು ಕಡು ಶುಚಿಯಾಗಿ . . . ಪುರಂದರನ ನೆನೆದಳು ಮುನೀಂದ್ರನ ಮಂತ್ರಶಕ್ತಿಯಲಿ (ಕ.ಭಾ. ೪ ೫೯). ೨. ಶಿವ. [ಸಂ.]

**ಪುರಂದರಚಾಪ** (ನಾ). ಇಂದ್ರಚಾಪ ; ಕಾಮನ ಬಿಲ್ಲು : ಅಂಬರಮಹಾಂಬುಧಿಪಾರದಪಾರರತ್ನರುಗ್ಮಿಸರಮೊ ಭಾವಿಪಂದಿದು ವಿಯಚ್ಚುಕಕಂಠದ ವರ್ಣರಾಜಿಯೊಂದೆಸಕವೊ ಶಾನಿದೆಂದೆನಿಸಿತಂದು ಪುರಂದರಚಾಪವಿಭ್ರಮಂ (ಶಂಪ್ರಪು. ೪-೫೦). [ಸಂ.]

**ಪುರಂದರಮಹ** (ನಾ). ಇಂದ್ರನ ಆರಾಧನೆಗಾಗಿ ಮಾಡುವ ಉತ್ಸವ;

ಇಂದ್ರಪೂಜೆ : ನಂದಾದಿಗೋಪರಿಂದು ಪುರಂದರಮಹಮೆಂದು ಹರ್ಷದಿಂ ಸಂಭ್ರಮಿಸಲ್ (ಜಗಹ. ೪-೭೬). [ಸಂ.]

**ಪುರಂದರವಂದ್ಯ** (ನಾ). ೧. ಇಂದ್ರನಿಂದ ವಂದನೆಯನ್ನು ಪಡೆಯು ತಕ್ಕವನು. ೨. ಗುರು ; ಬೃಹಸ್ಪತಿ : ಪುರಂದರವಂದ್ಯಂ ಪದಿನೈದು ದೈತ್ಯಗುರುವಿಪ್ಪತ್ತೊಂದು ಸಂವತ್ಸರಂ ಪರಮೋಚ್ಚಾಂಶದೊಳೊಂದಿ ನಿಂದೊಡವು ಘಾಡಾಯುಷ್ಯಮಕ್ಕುಂ ಧ್ರುವಂ (ಜಾತತಿ. ೬-೦೧). [ಸಂ.]

**ಪುರಂದರಾರ್ಚಿತ** (ನಾ). ೧. ಇಂದ್ರನಿಂದ ಪೂಜೆಗೊಂಡವನು : ಅರವಿಂದನಾಭ ಪುರಂದರಾರ್ಚಿತ ನಂದನಂದ . . . ರಕ್ಷಿಸು ನಮ್ಮನನವರತ (ಹಂಹಾ. ೦೨). ೨. ಗುರು ; ಬೃಹಸ್ಪತಿ : "ಪುರಂದರಾರ್ಚಿತ—ಗುರು" (ಜಾತತಿ. ಶಂ. ೩೯೦). [ಸಂ.]

**ಪುರಂಧ್ರಿ** (ನಾ). ೧. (ಗಂಡನೂ ಮಕ್ಕಳೂ ಉಳ್ಳ) ಹಿರಿಯ ಮುತ್ತೈದೆ : ಪೂರ್ಣಕಳಶಕಳಮಾವ್ಯತಕರಪಲ್ಲವೆಯರಪ್ಪ ಪುರಂಧ್ರಿಯರುಂ ಬದ್ಧವಣದ ಪಚ್ಚೆಗಳುಂಬೆರಸಿದಿರ್ವಂದು ಪೊಟಲಂ ಪುಗಿಸೆ (ಶಂಕಶಾ. ೩-೨೫); ಪುರಪುರಂಧ್ರಿಯರುಂ ಪುರೋಹಿತಪುರಸ್ಸರಂ ಧರಾಮರರುಂ ಪರಸಿ ಸೇಸೆ ಯನಿಕ್ಕೆ (ಪುತ್ರ‌ಕ್ತ. ೬-೩೫೮); ಪುರಂಧ್ರಿಯರು ಮಂಗಳಾರತಿಯನ್ನು ಮಾಡ ತೊಡಗಿದರು (ತುಳಸಿ. ೭೯). ೨. ಹೆಂಗಸು ; ಸ್ತ್ರೀ : "ಭಾಮಿನಿ ನಿತಂಬಿನಿ . . . ಪುರಂಧ್ರಿ ವಧು ಯುವತಿಯಂಗನೆ . . . ಮಹಿಳೆಯ ಬಳಿ ರಾಮೆ ವರವರ್ಣಿನಿಯೆಸಲ್ಕೆ ಹೆಂಗೂಸೆನಿಕ್ಕು" (ಕುಂಗರಾ. ೬೯-೧) ; ಮಕರಕೇತನರಾಜ್ಯಾಧಿದೇವತೆಯರುಮಪ್ಪ ನಿಜಾಂತಃಪುರಪುರಂಧ್ರಿಯ ರ್ವೆರಸು ಪೋಗಿ ಜಲಕ್ರೀಡೆಯಾಡುತಿರ್ಪುದುಂ (ಶಂತಶಂ. ೦೨೯-೩); ನಿಜಾಂತಃಪುರಪುರಂಧ್ರಿಯರ ಅಗಣ್ಯಲಾವಣ್ಯರಸವಿಸರದೆೊಳು (ಪುಣ್ಯತ. ೩-೯೫). ೩. ಹೆಂಡತಿ ; ಪತ್ನಿ : "ಸಹಚರಿ ಭಾರ್ಯೆ . . . ಪುರಂಧ್ರಿ ಕಳತ್ರಂ ಗೃಹಿಣಿ ಗೃಹಂ ಸಜ್ಜನಕ್ಕೆ ಪೆಸರಿಂತಿನಿಸುಂ" (ಪತ್ನ್ಯಕೋ. ೫೨-೩); ರಕ್ಷಿಸಿದ ಧನದಿಂ ಪುರಂಧ್ರಿಯ ರಕ್ಷಿಸುವುದು ಪುರಂಧ್ರಿಯಿಂದವೆ ರಕ್ಷಿಸುವುದಾತ್ಮನನು (ಕುವ್ಯಾಉ. ೩-೩೦); ನಮ್ಮಯ ಲೋಲಲೋಚನೆಗಾಡಿದುಕ್ತಿಯ ನಾಲಗೆಗೆ ಪುನರುಕ್ತಿಯಾಗೆ ಪುರಂಧ್ರಿ ನಗುವಳಲೆ (ತೊರರಾ. ೩-೬-೪೦). [ಸಂ. ಪುರಂಧ್ರೀ]

**ಪುರಃಪ್ರದರ್ಶಿತ** (ಗು). ಮುಂದಾಗಿ ತೋರಿಸಿದ ; ಮುಂದೆ ಬಂದು ವಿವರಿಸಿದ : ವನಪಾಲಪುರಃಪ್ರದರ್ಶಿತಾನಂತತರುಲತಾಸುದೋಹಸಂದರ್ಶನಾನಂದಕಂದಳಿತಹೃದಯಾರವಿಂದನುಂ . . . ಆಗಿ ನಡೆತರ್ಪಾಗಳ್ (೦ಜಾಹ. ೦೦-೦೫ ಅ). [ಸಂ.]

**ಪುರಃಸರ** (ಗು). ೧. ಮುಂದಾಗಿ ನಡೆಯುವ,—ಹೋಗುವ ; ಮುಂಭಾಗದಲ್ಲಿ ಚರಿಸುವ. (ನಾ). ೨. ಮುಂದಾಗಿ ಬಂದು ತಿಳಿಸುವ ಆಳು ; ವಾರ್ತಾಹರ ; ಸಂದೇಶವಾಹಕ. ೩. ತಾನೇ ಮುಂದಾಗಿ ನಡೆದು ಇತರರಿಗೆ ಮಾರ್ಗದರ್ಶನ ಮಾಡುವವನು; ಮುಂದಾಳು ; ಮುಖಂಡ: 'ಪುರಸ್ಸರ' ಪರಾ. [ಸಂ.]

—**ಪುರಕ** '—ಪುರುಕ' ನೋ.

**ಪುರಕ್ಷಯ** (ನಾ). ತ್ರಿಪುರಗಳನ್ನು ನಾಶಮಾಡಿದವನು ; ಶಿವ : ಇಕ್ಷುಕೋದಂಡಕ್ಷಯಾಯ ಪುರಕ್ಷಯಾಯ ಸಮುಕ್ಷಗತ ಮದ್ರಕ್ಷಣಾಯ ನಮೋ ನಮೋ ಗುರು ಸಂಗಮೇಶಾಯ (ಬಸಪು. ೬೦-೯೭). [ಸಂ.]

**ಪುರಗಣ** (ನಾ). ದೇವಾಲಯದ ಸೇವಾವರ್ಗ ಮತ್ತು ಅವರಿಗಾಗಿ (ದೇವಾಲಯದ ಸುತ್ತಣ ಪೌಳಿಯ ಗೋಡೆಯ ಒಳಗೆ ಇರುವ ಬಯಲುಪ್ರದೇಶದಲ್ಲಿ) ನಿರ್ಮಿಸಿದ ವಸತಿಸ್ಥಾನ,—ಬಿಡಾರಗಳು ; ಪುರವರ್ಗ (?) : ಪಂಡಿತಯ್ಯ ಗೋಪರಸ ಬಿಟ್ಟ ಕಿಯ ಹುಳಿಯರೆ ಮತ್ತ ೧ ಮೊದಲೇರಿಯ ಅಲದ ಗದೆ ಕಂಬ ೫೦ ದೇವರ ಸುತಲು ಪುರಗಣಯಿಂತೀ ಬಿಟ್ಟ ಧರ್ಮ್ಮವಂ ಪ್ರತಿಪಾಳಿಸುವರು (ಕ್ಕಶಿ. IX-i. ೨೭೪-೯೯ ; 1154). [ಸಂ.]

**ಪುರಜನ** (ನಾ). ಪಟ್ಟಣದ ಜನ ; ನಾಗರಿಕರ ವರ್ಗ : ಜನಪತಿಗೆ ಒಸಗೆಯಂ ಪುರಜನಮೆಲ್ಲಂ ಬೀಱುತ್ತಿರ್ಪರ್ (ಶಂಶಾ. ೧-೯೬) ; ಪುರಜನ ಮುಟ್ಟಿಯಿಂ ಮುಡಿವ ಕೊಡೆ ತುಱುಂಬುವ ಕಿಂಕಿರಾತಶೇಖರರಜದಿಂದಮಾದ ಪಟವಾಸದ ಧೂಳಿಯ ಪರ್ವಿನಿಂದಮಾಭರಣದ ಮಾಣಿಕಂಗಳ ಪೊದಟ್ದರುಣಾಂಶುಗಳಿಂದಮಂದು ಪಿಂಜರಿತಪಿಶಂಗಿತಾರುಣಿತದಿಙ್ಮುಖಮಾದುದು ತನ್ಮಹೋತ್ಸವಂ (ಅಂಕ. ೭-೦೦೪); ಪುರಜನಮುಂ ಪರಿಜನಮುಂ ನೆರೆದು ಮನಂಗೊಂಡು ಕೂರ್ತು ಕೀರ್ತಿಸೆ ಧರಣೀಶ್ವರರಯ್ಯೂರ್ವರ್ . . . ದೀಕ್ಷೆಯಂ ಕೈಕೊಂಡರ್ (ಸುಕುಮಾ. ೬-೩೯). [ಸಂ.]

**ಪುರಟ** (ನಾ). ಚಿನ್ನ ; ಬಂಗಾರ : ಹರೆಯದ ಸುಮುಹೂರ್ತ ವೀಕ್ಷಗಱಹಲ್ ಪಂಚಶರನಂಗಲಾವಣ್ಯಜಲಭಾಂಡದಲ್ಲಿಟ್ಟ ಪುರಟ ನಿರ್ಮಿತಮಾದ ಗಳಿಗೆಬಟ್ಟಲೊ ಪಯೋಧರಗಿರಿಗಳು ನೋಳ್ಪರ ಉರುದಿಟ್ಟಿ ಜಱಿದು ಬೀಳುವ ಗುಳಿಯೊ . . . ಎನಲ್ ಕಣ್ಗೆವಂದುದು ನಿಮ್ನತರ ನಾಭಿ ಶ್ರೀಪಾರ್ವತೀದೇವಿಯಾ (ಶಂಭಪು. ೬-೨೨). [ಸಂ.]

**ಪುರಟಪುರಾಣ** (ನಾ). ಸುಳ್ಳುಕಥೆ ; ಹುಟ್ಟಿಸಿಕೊಂಡು ಹೇಳುವ ಕಥೆ : ಅವನಪ್ಪ ಸತ್ತದ್ದು, ಜವಾಬ್ದಾರಿ ಹೊರಿಸಿದ್ದು—ಈ ಪುರಟಪುರಾಣ ಎಲ್ಲ ಯಾರಿಗೆ ಬೇಕು ?(ಮಹಾಗ. ೧೩೪).

[ಪುರಟು (ಪ್ರ←ತಮಿ. ಪುರಟ್ಟು = ಮೋಸ, ವಂಚನೆ) + ಪುರಾಣ]

**ಪುರಟವಸನ** (ನಾ). ಚಿನ್ನದ ಎಳೆಯುಳ್ಳ ಬಟ್ಟೆ ; ಜರತಾರಿವಸ್ತ್ರ : ಪುರಟವಸನದ ಮಧ್ಯ ಹೊಳೆವ ನಾನಾಭರಣ ಕರಕಂಜ ಕಂಬುಕಂಠ ಸರಸಮುಖಚಂದ್ರಶೋಭನಮೂರ್ತಿ ಹಯವದನ (ವಾದಿಕೀ. ೪೪-೩). [ಸಂ.]

**ಪುರಡಿ** (ನಾ). ಒಂದು ಬಗೆಯ ಪಕ್ಷಿ : ಭೇರುಂಡ ಬೆಳುವ ಸಾಳುವ ಹದ್ದು . . . ಸೋಗೆನವಿಲು ಪುರಡಿ [ಪಾಠಾಂ. ಪೂರುಡಿ] ಗವುಜ ಕರ್ಕರ ಲಾವುಗೆ ಗುಬ್ಬಿ ಆರಣ್ಯದೊಳಗವರಾಟ (ಚಿಪಾಂ. ೦-೩೯). 'ಪುರುಳಿ' ಪರಾ. [?]

**ಪುರತ್ರಯ** (ನಾ). = ಪುರ್ರ ೮ : ತಿರುಗುವ ಪುರತ್ರಯಮನಹಿಕಾಂತಕಟಕನು ಬೇಗೆಯಿಂ ಸುಡುವಂತೆ ಸುಟ್ಟನಲಾ (ಬಸಪು. ೫೪ ೫೯). [ಸಂ.]

**ಪುರತ್ರಯದಾಹ** (ನಾ). ತ್ರಿಪುರಗಳನ್ನು ಸುಟ್ಟವನು ; ಶಿವ : ಮದನಾಂತಕ ಪುರತ್ರಯದಾಹ ಹರಶಂಕರ ಮಹೇಶ ತ್ರಾಹಿ (ಕುವ್ಯಾಕ. ೭-೪೫). [ಸಂ.]

**ಪುರದರ್ಮ** (ನಾ). ಒಂದು ಬಗೆಯ ಸುಂಕ : ಪರಿಕಿಸದೀ ಧರ್ಮ್ಮದೊಳರಸರ ಕಾಣಿಕೆ ಕೊಳ್ಳಿಯರುವಣು ಕಿಱುಸುಂಕು ಪುರದ[ಧ]ರ್ಮ್ಮಂ ಬಣ್ಣಿಗೆಯುಂದರೆವೀಸಮನಳಿಪಿ ಕೊಣ್ಡವಂ ಚಾಣ್ಡಾಳ (ಎಕ. XXVII. ೭೪-೫೯ ; 1114). [ಪ್ರ ಇದು 'ಪುರದ್ರಮ್ಮ' ಎಂಬುದರ ತಪ್ಪುರೂಪ]

**ಪುರದಾನಿಕೆ** (ನಾ). ಒಂದು ಬಗೆಯ ತೆರಿಗೆ : ಸ್ವರರೂಮ ಪೆರ್ಮ್ಮಾಡಿಯ ಪುರವರದೊಳ್ ನಡೆವ ಮನ್ನೆಯದ ಕಿಱುದೆರೆಯುಂ ಪುರದಾನಿಕೆಯುಳ್ಳ ದೀಪು ಪರಿಹಾರಂ ಬಿಟ್ಟು ಮಾಡಿದು ತತ್ಪುರಮಂ (ಕ್ಕಶಿ. XX. ೪೭-೩೪ ; 1074). [?]

**ಪುರದೇವತೆ** (ನಾ). ಊರಿನ ದೇವತೆ ; ಗ್ರಾಮದೇವತೆ : ಪುರದೇವತೆಗಳ್ ಮುನಿಸಿಂ ಪರಿತಂದು ದುರಾತ್ಮನೆರಡುಕಣ್ಗಳುಮಂ ನಿಷ್ಠುರಮಾಗಿ ಪೊಯ್ಯೆ ತೊಟ್ಟನೆ ಕುರುಡಾದಂ (ಧರ್ಮಾಮೃ. ೦೦-೦೬೫). [ಸಂ. ಪುರದೇವತಾ]

**ಪುರದ್ರಮ್ಮ** (ನಾ). = ಪುರದರ್ಮ : ಆನೆಗೋಸನೆ ಸಲ್ವನ್ನೆಗಂ ಹಲವಣವುಂ ಪುರದ್ರಮ್ಮಮುಂ ಕೊಳ್ಳ ಸಲ್ಲು[ದು] (ಕಶಿ. ೪೭-೩-೦೫ ; ಸು. 1151). [ಪುರ್ರ + ದ್ರಮ್ಮ]

**ಪುರದ್ವಾರ** (ನಾ). (ಪಟ್ಟಣದ) ಹೆಬ್ಬಾಗಿಲು ; ಗೋಪುರ

"ಗೋಪುರಂ, ಪುರದ್ವಾರಂ—ಈ ೨ ಬಾಗಿಲುವಾಡಂ" (ಹರಾಯು. ೪೯-೧೩೩); ಅಡಿ ಮಗುಚಿ ಬಿದ್ದಳು ಪುರದ್ವಾರದ ಮಹಾಸೌಧ ಹುಡಿಗೆದಟಿ (ಕೋರಾ. ೩-೨-೧೦). [ಸಂ.]

**ಪುರಧ್ವಂಸಿ** (ನಾ). ತ್ರಿಪುರಗಳನ್ನು ನಾಶಮಾಡಿದವನು; ಶಿವ. [ಸಂ. ಪುರಧ್ವಂಸಿನ್]

**ಪುರನಯನ** (ನಾ). ಮೂರು ಕಣ್ಣುಗಳುಳ್ಳವನು; ಶಿವ: ಪುರನಯನ . . . ಪೊರೆವುದೀಕ್ಷಣವೆನ್ನ (ಕ್ರೌಕುಂ. ೦-೩೦). [ಸಂ.]

**ಪುರಭೃತ್ತು** (ನಾ). ಪುರದ ಒಡೆಯ, – ದೊರೆ: ಪೇಚರಸೈನ್ಯಂ ವಿಜಯಾರ್ಧಾಚಲತಟಧಾತುರೇಣಾರಕ್ತಂ ಪುರಭೃದ್ಗೋಚರಕೋಪಾಗ್ನಿ ಶಿಖಾರೂಣಿತಪಟಳೋಪಲಿಪ್ತಕುನಿಸಿದುದಾಗಳ್ (ಶಾಂತಿಪು. ೪-೬). [ಸಂ. ಪುರಭೃತ್]

**ಪುರಮಥನ** (ನಾ). ೧. ತ್ರಿಪುರಗಳನ್ನು ನಾಶ ಮಾಡಿದವನು; ಶಿವ: ಪುರಮಥನರೂಪದಿಂ ನೀಂ ಮರುಳ್ಗಳೊಡನಾಡಿದ್ದೆ (ಜಗಾ. ೪-೧೦೪); ಪುರಮಥನನ ವರಕೀರ್ತ್ಯಂಕುರವಿಾ ಗಿರಿಸುತೆಯ ವದನದೊಳ್ ಪೊಳೆ ತುದು ಸಾದರದಿಂ ತಾನೆಂಬಂತಿರೆ ಕರಮೆಸೆದುದು ವಿಮಳಮೌಕ್ತಿಕಂ ನಾಸಿಕದೊಳ್ (ಗಿರಿ. ೩-೬೩). ೨. [ಛಂದ] 'ಗುರು' ಎಂಬುದರ ಸಂಕೇತ (—): ಸ್ವರರ ಪಡೆ ನೆರೆದಿರಲು . . . ಪದಾಂತಂ ಪುರಮಥನ ವಿಡೆ ಬಬೀಸ ನೆರೆದು ಯತಿ ದಶಮದೊಳೆ (ಛಂದೋಂಬು. ೩-೨೦೫). [ಸಂ.]

**ಪುರಮರ್ದನ** (ನಾ). = ಪುರಮಥನ ೧: ಪುರಮರ್ದನಾಗೇಂದ್ರನಂ ನಿಂದು ಬೆಜಗಾಗಿಸಿತ್ತಮಲ ಧರ್ಮಜನ ಕೀರ್ತಿ (ಕೈಬಿಕು. ೨-೧೨). [ಸಂ.]

**ಪುರರಿಪು** (ನಾ). ತ್ರಿಪುರಗಳ ವೈರಿ; ಶಿವ: ಪುರರಿಪು ಸಾಮವೇದಿಯ ಪೊಳಲ್ವೆರಸೊಯ್ಯನೆ ತನ್ನ ಲೋಕಕಚ್ಚರಿಯೆನೆ ಘಂಟೆಗೂಡಿ ವಿಾಸು ಪೋಪಿಲನಂ ರಜತಾಚಲಕ್ಕೆ ಬಿತ್ತರದೊಳ್ ಕೊಂಡುಪೋಗನೆ (ವೃಷಾ. ೩೬-೦೨೫). [ಸಂ.]

**ಪುರಲಿ** 'ಪುಟಿಲ' ನೋ.

**ಪುರಲು** 'ಪುರುಳ್' ನೋ.

**ಪುರಲೆ, ಪುರುಳೆ** (ನಾ). ೧. ಒಣಗಿದ ಹುಲ್ಲು, ಸೌದೆಯ ಚಿಕ್ಕ ತುಂಡು ಮೊದಲಾದ ಉರುವಲು: ಗಿಡದಿಂದ ಅಡಿಗೆಗೆ ಬೇಕಾದ ಸೌದೆಯನ್ನೂ ಪುರಲೆಯನ್ನೂ ಆಯ್ದುಕೊಂಡು ಬರುವುದು (ಬೈಸರ್ವ. ೧೬); ಅವಳು ನೀರಿನ ಒಲೆಗೆ ಪುರಲೆಯನ್ನು ಹಾಕುತ್ತಿದ್ದಳು (ಸಮ್ಮೂರ. ೩); ಮನೆಯ ಕಡೆ ತರಲೆ, ಹೊಲದ ಕಡೆ ಪುರಲೆ (ಗಾದೆ). ೨. (ಅಲಂ) ಒಣಮಾತು; ಜಳ್ಳುನುಡಿ: ಸಂಗೀತದಲ್ಲಿ ಓದಿದ್ದ ಅವರ ಬುದ್ಧಿ ಪಿಸುಣತನದಲ್ಲಿ ಚುರುಕಾಯಿತು. ಅವರು ದಿನಕ್ಕೊಂದು ಪುರಲೆ ಹಾರಿಸತೊಡಗಿದರು (ಉಪಕ. ೦೩೪). **ಪುರುಳೆ**: ೧. ಪುರುಳೇ ಸೌದೆ ಇಲ್ಲದೆ ದೊಡ್ಡ ಸೌದೆ ಉರಿಯುತ್ತದೆಯೇ (ಹುಚ್ಚುಹ. ೦೪೨). 'ಪುಳ್ಳಿ' ಪರಾ.

**ಪುರುಳೆ ಹಚ್ಚಿಡು** = (ಅಲಂ) ಮನಸ್ತಾಪವನ್ನು ಉಂಟುಮಾಡು; ಜಗಳ ಹಚ್ಚಿಸು: ಆ ಈಶಿಸ್‌ದೇವತೆಗೋ ಮೊದಲೇ ಅನ್ಯೋನ್ಯವಾಗಿದ್ದವರ ಮಧ್ಯೆ ಪುರುಳೆ ಹಚ್ಚಿಡುವ ಸ್ವಭಾವ (ಕಲ್ಲಿಣಾ. ೦೩೪).

**ಪುರವಂತ** (ನಾ). ೧. ಗಂಗ್ಗುಳದ ಉತ್ಸವದ ಸಂದರ್ಭದಲ್ಲಿ ಮಾಡುವ ವೀರಭದ್ರನೃತ್ಯ: ಒಡ್ಡಿ ಬಾಜುತ್ರೀಲಿ ಪುರವಂತನಾಡಸ್ತ ಏಸೀರಿಲ್ಲೊಂಟಾರಲ್ಲ (ಮಲ್ಲಗಿ. ೩೬). ೨. ವೀರಭದ್ರನೃತ್ಯವನ್ನು ಮಾಡುವವನು; ೩ ಕುಣಿತದ ಮಧ್ಯೆ ಮಧ್ಯೆ ಒಡಪುಗಳನ್ನು ಹೇಳುವುದು ಈತನ ಸಂಪ್ರದಾಯ. ವಚನಗಳನ್ನೂ ಹಾಡುವುದುಂಟು: ಪುರವಂತರು ವೀರಭದ್ರನ ಅವತಾರವೆಂಬ ನಂಬಿಕೆಯಿದೆ (ಕಜಾಪ. ೦೦೨). [ಪುರ + — ವಂತ]

**ಪುರವಂತಿಕೆ** (ನಾ). ಶಿವಭಕ್ತನಾದ ಪುರವಂತನಿಂದ ನಡೆಯುವ ಒಂದು ಬಗೆಯ ನಾಟ್ಯಕಲೆ: ಉತ್ತರಕರ್ನಾಟಕದಲ್ಲಿ ಪ್ರಚಲಿತವಿರುವ ಶೈವ ಪರಂಪರೆಯ ವಿಶಿಷ್ಟವಾದ ಧಾರ್ಮಿಕ ಕಲೆ 'ಪುರವಂತಿಕೆ' (ಕಜಾಪ. ೦೦೨). [ಪುರವಂತ + — ಇಕೆ]

**ಪುರವಟಿ** 'ಪುರವಣೆ' ನೋ.

**ಪುರವಣೆ, ಪುರವಟ್ಟೆ, ಪುರೋಣಿ, ಪೂರೋಟಿ** (ನಾ). ೧. (ಉಕ) ಪೂರೈಕೆ; ಸರಬರಾಜು; ಒದಗಿಸುವಿಕೆ: ಬೇಕಾದಾಗ ಹಣದ ಪುರವಣೆಯನ್ನು ತಮಗೆ ಮಾಡಬೇಕೆಂದು ಅವರು ಬರೆದಿರುವರು (ಐತಿಪ್ರ. ೩೬); ಅವನ ನಿತ್ಯಾವಳೀ ಮನೆಯ ಗಂಡುಮಾಗಾಕ್ಕೆ ಜೋಡಿ ಒಂಟಿ ಲೆಕ್ಕದಿಂದ ಯಜ್ಞೋಪವೀತದ ವಾರ್ಷಿಕ ಪುರವಣೆಯಾಗಬೇಕು (ಐತಿಹ. II, ೯೯). ೨. ಸಮೃದ್ಧವಾಗಿರುವಿಕೆ; ವಿಪುಲವಾಗಿರುವಿಕೆ; ಸುಗ್ಗಿ: ನೀರು ಪುರವಣೆ ಅದ್ರ ಒಂದು ಮಗಿ ಎಲಿಬಳ್ಳಿ ಬೆಳೆಸೋಣ (ಬಾಬಂ. ೬); ಕಮಲಜ್ಜಿಗೆ ಈಗ ಎಂಬತ್ತು ಮೀರಿದ ವರುಷಗಳು. ಆಕೆಯು ನಿದ್ದೆಯ ಪುರವಣೆಯಲ್ಲಿ ಈಗ ಒಣಗಿದ್ದರೂ ನೆನಪಿನ ಶಕ್ತಿಯು ಮಾತ್ರ ಹಚ್ಚ ಹಸುರಾಗಿತ್ತು (ಕನ್ನಪ. ೩೬). **ಪುರವಟಿ**: ೧. ವಿದೇಶೀಬಟ್ಟೆಯನ್ನು ಸಂಪೂರ್ಣವಾಗಿ ಬಹಿಷ್ಕರಿಬೇಕಾದರೆ ಪ್ರತಿವರ್ಷ ೧,೫೦೦ ದಶಲಕ್ಷ ಯಾರ್ಡು ಬಟ್ಟೆಯ ಪುರವಟಿಯಾಗಬೇಕು (ಬಾಂಜ. ೯೬). **ಪುರೋಣಿ**: ೧. ಲೋಕಲ್ ಫಂಡು . . . ಇವರ ಹಣದಿಂದ ಶಿಕ್ಷಣ, ಹೊಸಮಾರ್ಗಗಳು, ನೀರಿನ ಪುರೋಣಿ, ಕಾವಲಿಗಳು, ಧರ್ಮಶಾಲೆ, ವೈದ್ಯಶಾಲೆಗಳು ಮುಂತಾದ ಸಾರ್ವಜನಿಕಹಿತದ ಕೆಲಸಗಳಾಗುತ್ತಿರುತ್ತವೆ (ಕರಾಗ. ೩೯೩). **ಪೂರೋಟಿ**: ೨. ಒಂದು ಬಾರಿ ನೀರು ಎಲ್ಲಾ ಕಡೆ ಪೂರೋಟಿ ಆಗಬೇಕಲ್ಲರಿ (ಬಾಬಂ. ೦೩). [← ಮರಾ. ಪುರವಟಾ, ಪುರವಠಾ]

**ಪುರವಣಿ** (ನಾ). ಪೂರಕಪತ್ರ; ಅನುಬಂಧ; ಪರಿಶಿಷ್ಟ: ಅದಕ್ಕೆ ಎರಡು ನೂರು ಪುಟದ ಪುರವಣಿಯನ್ನು ಜೋಡಿಸಬೇಕಾಗಿದೆ (ಮಹಾಹ. ೪); ಹೊಸ ಉಲ್ಲೇಖಗಳ ಪುರವಣಿಗಳನ್ನು (Supplements) ಕಾಲಕಾಲಕ್ಕೆ ಮುದ್ರಿಸಿ ಸೂಚಿಯು ನವೀನತೆಯನ್ನು ಕಾಯ್ದುಕೊಳ್ಳುತ್ತಿದವು (ಗ್ರಂಥಾಲ. ೪೨); ಪಾರ್ಸೀ ಪತ್ರಿಕೆಯಲ್ಲಿ ಒಂದು ಇಂಗ್ಲೀಷ್ ಪುರವಣಿ ಭಾಗವೂ ಇರುತ್ತಿತ್ತು (ಪತ್ರಿಕಾ. ೨೬). [← ಮರಾ. ಪುರವಣೀ]

**ಪುರವರ** (ನಾ). ಶ್ರೇಷ್ಠವಾದ ಪಟ್ಟಣ, —ನಗರ: ನಿಡಿಯುಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಗದ ತಡೆಯೆ ಪಗಲ್ ಪಿರಿಯವಪ್ಪುವಾ ಪುರವರದೊಳ್ (ಕಾವ್ಯಸಾ. ೦೬೪ ಕರ್ಣಾಕ); ಆ ಕೋಟೆಯೊಳಗೆ . . . ಏಕದ್ವಿತ್ರಿಚತುಶ್ಶಾಲಾಕೀರ್ಣಂ ಪುರವರಂ ಕರಂ ಸೊಗಯಿಸುಗುಂ (ಶಾಂತಿಪು. ೪-೦೯೬). [ಸಂ.]

**ಪುರವರ್ಗ** (ನಾ). ದೇವಾಲಯದ ಸೇವಾವರ್ಗ ಮತ್ತು ಅವರಿಗಾಗಿ ನಿರ್ಮಿಸಿದ ವಸತಿಸ್ಥಾನ, — ಬಡಾವಣೆ: ಮನ್ನೆಯದೊಳಗೆರಡು ಪೊನ್ನುಮಂ ದೇವರ ಪುರವರ್ಗ್ಗಫಳಿಯ ಭತ್ತಮುಮಂ . . . ಹನ್ನೆರ ಹಣಮುಮಂ ಬಿಟ್ಟರು (ಕಇ. IV, ೩೯-೨೬; 1111); ಜನನಿಗೆ ಚಂದಲೇಶ್ವರಮನೆತ್ತಿಸಿದಂ ಪುರವರ್ಗ್ಗಮಂ ಜಗಜ್ಜನನುತಮಾಗೆ ಕಾಮನೆಟ್ಟಿನೆ ಮಾಡಿಸಿದಂ . . . ಕಾಮಿನಿಯರನಾಯ್ದು ತಂದು ಪುರವರ್ಗ್ಗದ ಸೂಳೆಯರಾಗೆ ಮಾಡಿದಂ (ಎಇ. XIII, ೪೬-೬೩; 1112); ಗುಂಮ್ಮಣ್ಣನ ಹೆಸರಲಿ ಪುರವರ್ಗ್ಗವಾಗಿ ಸಂಭುದೇವರ ಮುಂದೆ ಆಯ್ದುಮನೆಯ ಕೊಟ್ಟು (ಮೈಶಾಂ. ೦೯೪೩, ೦೪-೦೦; 1318). [ಸಂ.]

**ಪುರವಾಸಿ** (ನಾ). ಪಟ್ಟಣದ ನಿವಾಸಿ; ಪಟ್ಟಣಿಗ; ನಗರವಾಸಿ: ಕರೆತಂದರ್ ಪುರವಾಸಿಗಳ್ ದೊರೆಯನುದ್ವೃತ್ತಾರಸೌರಂಭದಿಂ (ಹಾಕಾಪ್ರ. ೦-೩-೦೪). [ಸಂ. ಪುರವಾಸಿನ್]

**ಪುರವಿಜಯ** (ನಾ). ತ್ರಿಪುರಗಳನ್ನು ಗೆದ್ದವನು; ಶಿವ: ಪುರವಿಜಯಂಗೆ ತನ್ನ ಸುತೆಯಪ್ಪುವೆಯಂ ನಲವಿಂದಮಿತ್ತು ಭೂಧರಪತಿ ಮಾವ

ನೆಂದೆನಿಸಿದಂದದಿನೆನ್ನಯ ಕನ್ನೆಯಂ . . . ನಿಮ್ಮಡಿಗೆ ಕೊಟ್ಟು ವಿವಾಹ ಮನೊಪ್ಪೆ ಮಾಳ್ಪೆಂ (ತ್ರಿಪುರ. ೩೩.೦೩೯). [ಸಂ.]

**ಪುರವೈರಿ** (ನಾ). ತ್ರಿಪುರಗಳ ಶತ್ರು ; ಶಿವ : ಪುರವೈರಿ ಪೇಳ್ದರ್ ನಿಜ ಮಂದಿರದ ಕವಾಟದೊಳಿ ತಳ್ತ ಬೀಯಗಮನದಂ ಪರಿಹರಿಸಿ ತೆಗೆದು ಪುಳಿಲನೆ ಸರಭಸಮಾ ಜವಳಿಪಡಿಯನೇಂ ಬರ್ಚಿದನೊ (ಕೃಷ್ಣ. ೦೬–೪೦).
[ಸಂ. ಪುರವೈರಿನ್]

**ಪುರಶಾಸನ** (ನಾ). ತ್ರಿಪುರಗಳನ್ನು ದಂಡಿಸಿದವನು ; ಶಿವ. [ಸಂ.]

**ಪುರಶ್ಚರಣ** (ನಾ). ದೇವರ ಹೆಸರನ್ನು ಅಥವಾ ಮಂತ್ರವನ್ನು ಜಪಿಸುವುದು : ಪುರಶ್ಚರಣಂಗೆಯ್ಯದೆ ಸಂಖ್ಯಾನಿಯತಮಾಗಿ ದೇಹಾಂತ ಪರ್ಯಂತ ಮಾಳ್ಪುದೇ ನಿತ್ಯಜಪಮಹುದು ಕನಿಷ್ಠಮೆನಿಸುವುದು ಪುರಶ್ಚರಣಂ ಮಾಡಿ ಬಿಡುವುದೇ ಪುರಶ್ಚರಣಜಪಮದು ಮಧ್ಯಮಮೆನಿಸುವುದು ಪುರಶ್ಚರಣಂಗೈದು ಮೇಲೆ ಸಂಖ್ಯಾನಿಯಮದಿಂ ಪ್ರಾಣಾವಧಿ ಮಾಳ್ಪುದೇ ಪುರಶ್ಚರಣ ಪೂರ್ವಕ ನಿತ್ಯಜಪಮದುತ್ತಮಮೆನಿಸುವುದು (ವಿವೇಕ. ೮೭).
[ ಸಂ. ]

**ಪುರಶ್ಚರಣೆ** (ನಾ). ಮತ್ತೆ ಮತ್ತೆ ಜಪಿಸುವುದು,–ಹೇಳುವುದು : ನಿಶ್ಚಲಹೃದಯನಾಗಿ ವಿಷ್ಣುನಾಮಂಗಳ ಪುರಶ್ಚರಣೆಯಿಂದಮಂ ಸುಖದೊಳಿರುತಿರೆ (ಕೃಷ್ಣಾ. ೧೧-೩೯); ಅವನು ಆಕೆಯ ಕನ್ಯಾವಸ್ಥೆಯಲ್ಲಿ . . . ಸೂರ್ಯನ ಮಂತ್ರದ ಪುರಶ್ಚರಣೆಯ ಪ್ರಭಾವದಿಂದ ಹುಟ್ಟಿದವನು (ಬೀಗಟ್ಟಿ. ೨೦). [ಸಂ. ಪುರಶ್ಚರಣ]

**ಪುರಸತ್ತು**, ಪುರಸೊತ್ತು, ಪುರುಸತ್ತು, ಪುರುಸೊತ್ತು (ನಾ). ಬಿಡುವು ; ವಿರಾಮ : ವೀರರಾಜೇಂದ್ರಪೇಟೆ ಉಗ್ರಾಣಕ್ಕೆ ದಿವಾರಾತ್ರಿಯಲ್ಲೂ ಪುರಸತ್ತು ಇಲ್ಲದೆ, ಅಕ್ಕಿ ಹೊರುತ್ತಾರೆ (ರಾಜೇಂದ್ರ. ೦೩೭) ; ಪುರಸತ್ತಾದರೆ ಮಧ್ಯಾಹ್ನ ಅಕ್ಕನ ಮನೆಗೆ ಬರುತ್ತೇನೆ (ಪುರುದಾ. ೮೩೯); ಅವನಿಗೆ ಯೋಚನೆ ಮಾಡಲು ಆಗ ಪುರಸತ್ತಿರದು (ರಾಜ್ಯಾಂಗ. ೦೨೩). **ಪುರಸೊತ್ತು** : ವರ್ಷಕ್ಕೆ ಆರು ತಿಂಗಳು ರೈತರಿಗೆ ಕೆಲಸ. ಮಿಕ್ಕ ಸಮಯ ಪುರಸೊತ್ತಿನಿಂದಿರುತ್ತಾರೆ (ಗಂಗಾಳ. ೦೨) ; ರಸ್ತೆಯಲ್ಲೋ ಮಸ್ತು ಜನ, ಇಲ್ಲ ಪುರಸೊತ್ತು (ಕಂಠಮ. ೩೨–೦೨) ; ನಾವು ಪುರಸೊತ್ತೇ ಇಲ್ಲದೆ ಕೆಲಸ ಮಾಡುತ್ತಾ ಇದೀವಿ (ಮಂಜಿಮಾ. ೧೦೩). **ಪುರುಸತ್ತು** : ಹೆಂಗಸರಿಗೂ ಪುರುಸತ್ತಿಲ್ಲ, ಗಂಡಸರಿಗೂ ವಿರಾಮವಿಲ್ಲ (ಹುಚ್ಚಿಹ. ೭೦); ಚಹವನ್ನು ಕುಡಿದುಕೊಂಡು ಹೋಗುವುದಕ್ಕೂ ಬಾಳುವಿಗೆ ಪುರುಸತ್ತಿರಲಿಲ್ಲ (ಚಂದುಬ. ೩೯); ಅವಳು ಚೆಲುವೆಯೋ ಅಲ್ಲವೋ ಎಂದು ನಿಂತು ನೋಡುವುದಕ್ಕೆ ಪುರುಸತ್ತಿಲ್ಲ (ರಾಮಾನ. ೦೦೨). **ಪುರುಸೊತ್ತು** : ನನಗೆ ಮಧ್ಯಾಹ್ನ ಹನ್ನೆರಡು ಗಂಟೆಯವರೆಗೆ ಪುರುಸೊತ್ತೇ ಇಲ್ಲ (ಚಾರಿ. ೪) ; ನಿನ್ನ ಜೊತೆ ಮಾತಾಡೋಕೆ ಪುರುಸೊತ್ತಿಲ್ಲ (ಮಾಮಹಿ. ೩) : ಉಸಿರಾಡಿಕೊಳ್ಳಲಿಕ್ಕೆ ಸ್ವಲ್ಪ ಪುರುಸೊತ್ತು ಕೊಡು (ಮುಕಾಂ. ೪೩).

[← ಅರ. ಹಿಂ. ಪುರಸತ್, ಪುರ್ಸತ್; ಮರಾ. ಪುರಸತ್, ಪುರ್ಸತ್, ಪುರಸೂತ್, ಪುರ್ಸತೀ ]

**ಪುರಸಭೆ** (ನಾ). ಸ್ಥಳೀಯ ಅಧಿಕಾರವುಳ್ಳ, ಚುನಾಯಿತ ಸದಸ್ಯರನ್ನು ಹೊಂದಿದ ಪಟ್ಟಣದ ಸಂಸ್ಥೆ ; ನಗರಸಭೆ ; ಪೌರಸಭೆ : ಪುರಸಭೆಯಟ್ಟಿದ ನಾಯಿಗಾಡಿಯ ನೋಡಿ ಶುನಿ ಗಲ್ಲಿ ಬಿದ್ದೋಡುವಂತೆ ತನ್ನನ್ನು ಬೆನ್ನಟ್ಟಿ ಬಂದರೆಂದೀ ಖೋಡಿ ಅವಿತು ಕದ್ದೋಡುವನಲ್ತೆ (ಚಂದ್ರಕೀ. ೦೩೯–೬೯). [ಸಂ. ಪುರಸಭಾ]

**ಪುರಸೊತ್ತು** 'ಪುರಸತ್ತು' ನೋ.

**ಪುರಸ್ಕರಿಸು** (ಕ್ರಿ). ೧. ಮನ್ನಿಸಂ ; ಗೌರವಿಸು ; ಆದರಿಸು : ಪಾಂಡುಪುತ್ರರ ಸುಗುಣಗಳನ್ನು ಕಂಡು ಪ್ರಜೆಗಳು ಅವರನ್ನು ಅಖಂಡವಾಗಿ ಪ್ರೀತಿಸಿ ಪುರಸ್ಕರಿಸುತ್ತಿದ್ದರು (ಹಿಂಕಿರು. ೨); ನನ್ನನ್ನು ಪುರಸ್ಕರಿಸಲು ಸಾವಿರ ಜನರು ಮುಂದೆ ಬಂದಾರು (ರಂಗಕೋ. ೦೦೨); ಆ ಬ್ರಾಹ್ಮಣ . . . ನಾನು ದೇವಸ್ಥಾನಕ್ಕೆ ಬರಬೇಕೆಂದೂ, ಸಕಲಮರ್ಯಾದೆಗಳೊಡನೆ ಪುರಸ್ಕರಿಸುವನೆಂದೂ ಹೇಳಿದನು (ಚಂಗಾಳ. ೩೦೨). ೨. ಬೆಂಬಲಿಸು ; ಪ್ರೋತ್ಸಾಹಿಸು : ಈ ಪತ್ರಿಕೆಯು ಪುರಸ್ಕರಿಸುತ್ತಿದ್ದ ಐರ್ಲೆಂಡಿನ ಸ್ವಾತಂತ್ರ್ಯಚಳುವಳಿಯ ಬಗ್ಗೆ ಭಾರತದಲ್ಲಿಯ ಆಂಗ್ಲರಿಗೆ ಒಳ್ಳೇ ಅಭಿಪ್ರಾಯವಿರಲಿಲ್ಲ (ಚಿತ್ರಿ. ೨೩).
[ಪುರಸ್ಕರಣ + – ಇಸು]

**ಪುರಸ್ಕರ್ತ** (ನಾ). ಬೆಂಬಲಿಸುವವನು ; ಸಮರ್ಥಿಸುವವನು ; ಅನುಯಾಯಿ : ಆಧುನಿಕಕಾಲದೊಳಗಿನ ಸಮತೆಯ ಪುರಸ್ಕರ್ತರೂ ತಿಳಿದೂ ತಿಳಿಯದೆಯೂ ಇದೇ ಶ್ರದ್ಧೆಯ ಸ್ವೀಕಾರವನ್ನು ಮಾಡುತ್ತಿರುವರು (ಶ್ರೀಂದ. ೦೦೯) ; ಆಕ್ಸ್‌ಫರ್ಡಿಗೆ ಬಂದ ತಿಂಗಳೆರಡು ತಿಂಗಳಲ್ಲಿಯೇ ನಿಯೋಗಿಯು ಒಂದು ವಿಶಿಷ್ಟ ಧೋರಣದ ಪುರಸ್ಕರ್ತನಾದ (ಸಮುಜ. ೩೬೯). [ < ಸಂ. ಪುರಸ್ಕರ್ತೃ ]

**ಪುರಸ್ಕಾರ** (ನಾ). ೧. ಗೌರವ ; ಸನ್ಮಾನ ; ಮರ್ಯಾದೆ : ಹಳ್ಳಿಗೆ ಒಳ್ಳೆಯ ಪುರಸ್ಕಾರ ದೊರೆತ ಹಾಗಾಯಿತು (ರೂಪಸಂ. ೩೩); ನಿಸರ್ಗ ವಿಜ್ಞಾನಕ್ಕೆ ಹೆಚ್ಚಿನ ಪುರಸ್ಕಾರ ದೊರೆಯಿತು (ಶಿಕ್ಷದ. ೨೯). ೨. ಸ್ವೀಕಾರ : ವ್ಯಕ್ತಿತ್ವದ ವರ್ಗೀಕರಣವಿಧಾನಯತ್ನ ಅಷ್ಟಾಗಿ ಪುರಸ್ಕಾರ ಪಡೆದಿಲ್ಲ (ಶಿಕ್ಷದ. ೬೩೯). ೩. ಬಹುಮಾನ ; ಇನಾಮು : ರವಿಯ ಹಣವನ್ನು ಕಳವು ಮಾಡಿದ ವ್ಯಕ್ತಿಯೇ ಆ ಮಗುವಿನ ಕೊರಗನ್ನು ಕಂಡು ಮನ ಕರಗಿ ಬಾಲಕಿಗೆ ಪುರಸ್ಕಾರವಾಗಿ ಇವನ್ನು ಕಳುಹಿಸಿರಬಹುದೇ ? (ಕೊಗ್ಗು. ೦೩); ಮೋತಿಯು ಕಾಗದವನ್ನು ತಂದವನಿಗೆ ಸ್ವಲ್ಪ ಪುರಸ್ಕಾರ ಮಾಡಿ ಕಳುಹಿಸಿಕೊಟ್ಟು . . . ಕಾಗದವನ್ನೋದಿ ಹೇಳಿದಳು (ಕಮಳುಂ. ೬೦).
[ಸಂ.]

**ಪುರಸ್ಕೃತ** (ಗು). ೧. ಮುಂದೆ ಇಟ್ಟ ; ಮುಂದು ಮಾಡಿದ. ೨. ಗೌರವವನ್ನು ಪಡೆದ ; ಸನ್ಮಾನಿತ ; ಪೂಜಿತ. (ನಾ). ೩. ಶತ್ರುಗಳಿಂದ ಆಕ್ರಮಿಸಲ್ಪಟ್ಟವನು. ೨, ೩ : ನಾಡಿಗರೊಳೆಲ್ಲರುಂ . . . ಪುರಸ್ಕೃತರಭಿಪನ್ನರಲ್ತು (ರಾಮಾಶ್ವ. ೬–೨೩). [ಸಂ].

**ಪುರಸ್ಸರ** (ಗು). ೧. ಮುಂದೆ ಬರುವ ; ಅಗ್ರೇಸರವಾದ ; ಶ್ರೇಷ್ಠವಾದ : ವಿಜಯಾರಂಭಪುರಸ್ಸರವಿಜಯಗಜಂಗಳನೆ ಪಿಡಿದು ಘೂರ್ಜರ ರಾಜಧ್ವಜಿನಿಯನಿಱಿದೋಡಿಸಿ (ಶಂಕರಾ. ೧-೩೬). (ನಾ). ೨. ಸಹಿತವಾದುದು ; ಸಮೇತವಾದುದು : ವಿಶ್ರುತಶ್ರುತಕೀರ್ತ್ಯಾಚಾರ್ಯಪುರಸ್ಸರಮಪ್ಪಾಚಾರ್ಯಪರಂಪರೆಯೆ ಕುಡುಗೆ ಭವ್ಯೋತ್ಸವಮಂ (ಅಂತು. ೧–೦೨). 'ಪುರಃಸರ' ಪರಾ.

**ಪುರಸ್ಸರವಾಗಿ** = ಕೂಡಿಕೊಂಡು ; ಸಮೇತವಾಗಿ ; ಸಹಿತವಾಗಿ: ಬಾಚಿಮಯ್ಯನುಂ ಮಗ ಮಲ್ಲಿಯಣನುಂ ಪುರಸ್ಸರವಾಗಿ ಮಲ್ಲಿಕಾರ್ಜುನದೇವರ್ಗ್ಗೆ . . . ಬಿಟ್ಟ ಗದ್ದೆ (ಶಾಶಾ. IX–I, ೨೯೦.೨೬, 12ನೆಯ ಶಶ) ; ವಾತ್ಸಲ್ಯದಿಂದಲೂ ಅಧ್ಯವಸಾಯ ಪುರಸ್ಸರವಾಗಿಯೂ ಯುಧಿಷ್ಠಿರಾದಿ ಕುಮಾರರನ್ನು ಲಾಲಿಸಿ ಪಾಲಿಸಿದುದನ್ನೂ ನೆನೆನೆನೆದು ಅವನು ಕಣ್ಣೀರ ತುಂಬಿದನು (ಶೀಕ್ಯಕ. ೬೨). [ಸಂ.]

**ಪುರಸ್ಸರಂ** (ಅ). ಸಹಿತವಾಗಿ ; ಸಮೇತವಾಗಿ ; ಪೂರ್ವಕ : ಪರಸ್ಪರ ಕ್ಷೇಮಕುಶಲಭಾಷಾಪುರಸ್ಸರಂ ಅಮರ್ದಪ್ಪಿ (ಶಂರಾಮ. ೧೦–೩೩ ವ); ಸುಶ್ರುತನಂ ತಾಂಬೂಲದಾನಪುರಸ್ಸರಂ ವಿಸರ್ಜಿಸಿ (ಸುದ್ರಶ. ೩–೩೯ ವ).
[< ಪುರಸ್ಸರ]

**ಪುರಸ್ಸರತೆ** (ನಾ). ಕೂಡಿಕೊಂಡಿರುವಿಕೆ; ಸಹಿತವಾಗಿರುವಿಕೆ : ಚತುರ್ವಿಧಾರಾಧನಾಪುರಸ್ಸರತೆಯಿಂ ಸಮಾಧಿವಿಧಿಗೇಂ ಮಸಂದಂದಳೋ (ಸುಕುಮಾ. ೯–೦೩). [ಸಂ. ಪುರಸ್ಸರತಾ]

**ಪುರಹರ** (ನಾ). ತ್ರಿಪುರಗಳನ್ನು ನಾಶ ಮಾಡಿದವನು; ಶಿವ : ಪುರಹರ

ನೊಡೆ ಮುನ್ ತ್ರಿಪುರಮಂ ಪಲಕಾಲಮುಮೊಂದಿತ ವ್ರತಾಚರಣ ದೊಳಿರ್ದನಿಂಗಳುಪವಾಸದ ಪಾರಣೆ ವಾಯುಪುತ್ರನಿಂ ದೊರೆಕೊಳೆ ಲಂಕೆಯಂ ಶಿಖಿ ಶಿಖಾಪಧಿಯಪ್ಪಿನಮುಂಡು ತೇಗುವಂತಿರೆ ಪೊಡಿಪೊಣ್ಮಿದತ್ತು ಧಗಿಲೆಂಬ ಧಗದ್ಧಗಿಲೆಂಬ ನಿಸ್ವನಂ (ಶಂಠಾಮಾ. ೧೧-೧೪೬); ಪುರಹರನಿರ್ದಪಂ ನಿರುಪಮಾನತಪೋಮಯನಾಗಿ (೧೮೪. ೬-೧೩). 'ತ್ರಿಪುರಹರ' ಪರಾ.

**ಪುರಹರನಯನಮಣಿ**=ರುದ್ರಾಕ್ಷಿ : ನಿರಘಭಸಿತ ಪುರಹರನಯನಮಣಿ ಪಿಸರಪರಂ . . . ಶರಣನೆಸೆದಂ (ಹಾಲಾಸ್ಯ. ೧-೪-೬). [ಸಂ.]

**ಪುರಹರಸುತ** (ನಾ). ೧. ಶಿವನ ಮಗ; ಸ್ಕಂದ. ೨. ಸ್ಕಂದನ ಅವತಾರವೆನಿಸಿದ ತಿರುಜ್ಞಾನಸಂಬಂಧ ಎಂಬ ಪುರಾತನ ಶಿವಶರಣ : ಪುರಹರಸುತ ನೀನೆರೆದರ್ಗೆರದಿಪ್ಪವನೀವುದುಳ್ಳೊಡಿಂದೆನ ಗೊಲವಿಂದೆರೆದುದನೀವುದು (ತ್ರಿಷ. ೩೩-೧೩೬). [ಸಂ.]

**ಪುರಹರವಕ್ತ್ರ** (ನಾ). ೧. ಶಿವನ ಮುಖ. ೨. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ಪುರಹರವಕ್ತ್ರಂ ಪಂಚಂ . . . ಪುರವೈರಿಮುಖಂ ಗಳೈದಱ ನಾಮಂ (ವ್ಯವಹಾ. ೯-೩). [ಸಂ.]

**ಪುರಳಿಮರ** (ನಾ). ಒಂದು ಬಗೆಯ ಸಸ್ಯ : ಪಾದರಿ, ಕಾಲಾದ್ರಿ, ಪುರಳಿ ಮರ, ಕಲಿಹುಟ್ಟು, ಕಲ್ಲುಬುದಿ (ಮೈಶಿಗ. ೬೨-೧೪೬೬). [ಪುರಳಿ$_0$ + ಮರ$_1$]

**ಪುರಾಂಗನೆ** (ನಾ). ಪುರದಲ್ಲಿಯ ಹೆಂಗಸು; ಪುರಸ್ತ್ರೀ : ಓಲಗಶಾಲೆ ಪೂಗಿಡುಗಳೋಳಿಗೆ ನಾಟ್ಯಶಾಲೆ ಕುಸುಮಾಪಚಯಪ್ರಚಳತ್ಪುರಾಂಗನಾ ಲೋಲಕಟಾಕ್ಷಲಕ್ಷಿಗನಲೊಪ್ಪುವುವಲ್ಲಿಯ ಪುಷ್ಪವಾಟಿಗಳ್ (ಪುಣ್ಯ. ೧೨-೩೦). [ಸಂ. ಪುರಾಂಗನಾ]

**ಪುರಾಂತಕ** (ನಾ). = ಪುರಹರ : ಪುರಾಂತಕಧ್ಯಾನದಲಿ ವಿಮಲಸ್ವಾಂತ ನೇಕಾಗ್ರದಲಿ ಭಜಿಸಿದನಿಂದುಶೇಖರನ (ಕುವ್ಯಾ. ೨೨-೪೩). [ಸಂ.]

**ಪುರಾಕೃತ** (ಗು). ೧. ಹಿಂದೆ ಮಾಡಿದ; ಪೂರ್ವಜನ್ಮಗಳಲ್ಲಿ ಮಾಡಿದ : ವಾಂಛೆಯಿಲ್ಲದ ಜೀವಿತಮುಂ ಮುನ್ನೆಂಬುದಿಲ್ಲದ ವಿಕ್ರಮಮುಂ ಒಗಡಿಸಿದನುಭವಮುಂ ಪಗೆಯುಂ ಪೊಗಳಿಸುವ ಧೈರ್ಯಮುಂ ಪುರಾಕೃತ ಸುಕೃತ ಫಲಂಗಳ್ (ಶಾಂತಿಪು. ೪-೬೯ ವ); ತನ್ನನಿಂದ್ರನಾಗೆ ಬಗೆದು . . . ಪುರಾಕೃತ ಪುಣ್ಯದಿಂ ಸುಖಮನನುಭವಿಸುತ್ತಿರೆ (ಶಂಠಾಮಾ. ೧೨-೧೩೪ ವ); ಹಗೆಯೊಳಿಮ್ಮವರೊಳಗೆ ಎದೆಗಿಚ್ಚುಗಳ ಖುಲ್ಲಕುಠಾರರಪನಂಬುಗೆಯ ಬಳಸಿದರದು ಪುರಾಕೃತಕರ್ಮದವಶೇಷ (ಕುವ್ಯಾ. ೬-೧೧). (ನಾ). ೨. ಪೂರ್ವಜನ್ಮದಲ್ಲಿ ಮಾಡಿದ ಕರ್ಮ : ಒಳ್ಳಿತ್ತು ಕೆಯ್ವೊರಪ್ಪೊರ್ವಲ್ಲದುಮದ ಱಂತೆ ಬಲ್ಲಿತ್ತು ಕಲಿಗೆ ವಿಪರೀತಾ ಪುರಾಕೃತಮಿಲ್ಲಿ ಸಂಧಿಕ್ಕುಂ (ಇಸಿ. X, ೬೦-೯; ಸು. ೭೦೦); ಪುರಾಕೃತ ತಪ್ಪದೇನಾದುದಾಗಲಿ (ನವಮೋ. ೩-೧೧); ಅನುಬಂಧ ಜೀವಜೀವಕೆ ಪುರಾಕೃತದಿಂದ (ಮಂಕುಕ. ೧೬೬). [ಸಂ.]

**ಪುರಾಟಿಕ** (ನಾ). [ನಾಟ್ಯ] ಮೂವತ್ತೈದು ದೇಶೀಯಭೌಮಚಾರಿಗಳಲ್ಲಿ ಒಂದು; ▶ "ಕಾಲುಗಳನ್ನು ಮೇಲಕ್ಕೆತ್ತಿ ಒಂದನ್ನೊಂದು ತಟ್ಟುತ್ತಿರುವುದು" (ಚಾಸ್ಕರು. ೩೨೩ ಗದ್ಯಾನುವಾದ) : ರಥಚಕ್ರ, ಪರಾವೃತ್ತ ತಲ . . . ಪುರಾಟಿಕ, ಅರ್ಧಪುರಾಟಿಕ . . . ಸಮಸ್ಖಲಿತ; ಈ ಮೂವತ್ತೈದು ದೇಶೀಯಸಂಬಂಧದ ಭೌಮಚಾರಿಗಳು (ಚಾಸ್ಕರು. ೬-೧೬ ವ). [ಸಂ.]

**ಪುರಾಣ** (ಗು). ೧. ಹಳೆಯ ಕಾಲದ; ಪ್ರಾಚೀನಕಾಲಕ್ಕೆ ಸಂಬಂಧಿಸಿದ; ಪುರಾತನವಾದ : ದೊರೆಕೊಂಡಿರೆ ಸೊಗಯಿಸುಗುಂ ಪುರಾಣಕಾವ್ಯ ಪ್ರಯೋಗದೊಳ್ತತ್ಕಾಲದ ವಿರಸಂ ಕರಮವು ದೇಸಿಗೆ ಜರದ್ವಧೂವಿಷಯ ಸುರತರಸರಸಿಕತೆವೊಲ್ (ಕವಿರಾ. ೧-೩೦); ನೆರೆದಿಸುತಿರೆ ತೋಲ್ಪುಲ್ಲೆಯ ನಿರದದು ಬಿಟಿಸ್ದೊಡೆ ಪುರಾಣಕೂಪದೊಳ್ (ಶಂಶಭಾ. ೨-೩೦); ಕತೆಯೊಳಗಱಿಯದ ವಿಪರೀತತೆಯಿಂದಂ ಪೇಟ್ದ ಕೃತಿಗಳಿರ್ಕೆ ಪುರಾಣಸ್ಥಿತಿಯೊಳೆ ಕವಿರತ್ನನಿನನ್ವಿತಮಾದುದು ಸಗರಚಕ್ರವರ್ತಿಯ ಚರಿತಂ (ಅಜಿಪು. ೧೨-೨೬). ೨. ಉದ್ದವಾದ; ದೀರ್ಘವಾದ : "ಆದಿಕಥೆಯೊಳು ದೀರ್ಘದೊಳು ಜೀವದೊಳು ಪುರಾಣಂ" (ಮಂಗರಾ. ೧೩೦-೩೩). ೩. ಜರ್ಜರಿತವಾದ; ಜೀರ್ಣವಾದ. (ನಾ). ೪. ಹಳೆಯದು : ಪುರಾತನವಾದುದು: "ಜೀರ್ಣಂ, ಜರತ್, ಪುರಾಣಂ, ಪ್ರತ್ನಂ,ಪ್ರತನಂ, ಪುರಾತನಂ- ಈ ೬ ಪ(ಹ)ಳದು" (ಹಲಾಯು. ೧೧೬-೨೬); "ಜೀರ್ಣಮಾ ಜರತ್ಪ್ರತನಮರ್ಣವ ಮನವ್ಯಂ ಪುರಾಣಂ ಪುರಾತನಮೆನಲು ಹಳಿತಿಂಗೆ ನಾಮಮಕ್ಕುಂ" (ಮಂಗರಾ. ೧೨೯-೧೩). ೫. ಪೂರ್ವಕಾಲದಲ್ಲಿ ನಡೆದು ಹೋದ ಕಥೆ; ಪ್ರಾಚೀನವಾದ ಚರಿತ್ರೆಯನ್ನು ಹೊಂದಿದ ಕಾವ್ಯಪ್ರಕಾರ : ಅಸಮ ಬಸವಪುರಾಣಮಂ ಪಸರಿಸುವವು ಪಾಪಂಗಳಂ ಪ್ರಹರಿಸುವಂ (ಬಸಪು. ೬೦-೮೯); ಇಂದಿನ ಬಾಳು ನಾಳೆಗೆ ಚರಿತ್ರೆ, ನಾಡಿದ್ದಿಗೆ ಪುರಾಣ (ಸಾಹಿಜೀ. ೩೩). ೬. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ ಎಂಬ ಪಂಚಲಕ್ಷಣಗಳನ್ನು (ಅಥವಾ ಇನ್ನು ಕೆಲವರು ತಿಳಿಸುವಂತೆ ಸರ್ಗ, ವಿಸರ್ಗ, ವೃತ್ತಿ, ರಕ್ಷಾ, ಅಂತರ, ವಂಶ, ವಂಶಾನುಚರಿತ, ಸಂಸ್ಥೆ, ಹೇತು ಮತ್ತು ಅಪಾಶ್ರಯವೆಂಬ ದಶಲಕ್ಷಣಗಳನ್ನು) ಉಳ್ಳ ಪ್ರಸಿದ್ಧವಾದ, ವ್ಯಾಸಪ್ರಣೀತವೆಂದು ತಿಳಿಯಲಾದ ಹದಿನೆಂಟು ಮಹಾಪ್ರಬಂಧ : "ಜಗತ್ತಿನ ಉತ್ಪತ್ತಿಯನ್ನೂ ನಾಶವನ್ನೂ ವಂಶವನ್ನೂ ವಂಶಾನುಚರಿತವನ್ನೂ ಮನ್ವಂತರಗಳನ್ನೂ ಹೇಳುವ ಪ್ರಬಂಧವು ಪುರಾಣವೆನಿಸುಗು" (ಶಾಬರಾ. ೯೪); ಪುರಾಣದ ಭಟ್ಟವೃತ್ತಿಗೆ ಸರ್ಬ್ಬನಮಸ್ಯವಾಗಿ ಪಡೆದ ರೇವದಾಸಭಟ್ಟರ ಕೆಯ್ಯಂ ಬಡಗ ಬಿಟ್ಟ ಪಿರಿಯ ಕೋಲ ಮತ್ತ[ರ] (ಸೌಇಇ. XX, ೬೨-೧೧ : 1111); ಶಾಸ್ತ್ರ ಪುರಾಣವ ಕೇಳಿದೊಡೇನು . . . ಭಕ್ತಿಯಿಲ್ಲದವರನೊಲ್ಲ ಕೂಡಲ ಸಂಗಮದೇವ (ಬಸವ. ೧೮೬); ಹಲವು ವೇದ ಪುರಾಣ ಶಾಸ್ತ್ರವ ತಿಳಿದು ನೀ ಮರುಳಾದೆ (ಕೌಶಿರಾ. ೩೭-೧೬). 'ಅಷ್ಟಾದಶ ಪುರಾಣ' ಪರಾ. ೭. (ಆಲಂ) ವೈಯಕ್ತಿಕವಾದ ದೀರ್ಘಕಥೆ : ನಿನ್ನ ಪುರಾಣ ಇರಲಿ, ಮೂರ್ತಿ. ಚಹಾ ಎಂದೋ ಆರಿಹೋಗಿದೆ. ಮೊದಲು ಕುಡಿದು ಮಾತನಾಡು (ಸಿರೋಟಿ. ೩); ಶ್ರೋತಾಮಂಡಳಿ ಬಸವಂತಿಯ ಪುರಾಣವನ್ನು ಖಾಸಗೀ ಆಗಿ ನಡೆಸಿತ್ತು (ದೀಶಹ. II, ೧೪೮). ೮. ಹರಟೆ; ರಗಳೆ. ೯. [ಜೈನ] ಲೋಕಾಕಾರಕಥನ, ದೇಶನಿವೇಶ ವರ್ಣನ, ನಗರವರ್ಣನ, ರಾಜ್ಯವರ್ಣನ, ತೀರ್ಥಮಹಿಮೆ, ಚತುರ್ಗತಿಸ್ವರೂಪವಿವರಣೆ, ತಪೋದಾನವಿಧಾನ, ತಪಃಫಲವರ್ಣನೆ—ಎಂಬ ಎಂಟು ಅಂಗಗಳನ್ನು ಒಳಗೊಂಡ, ಅರ್ಹಂತನೇ ಮೊದಲಾದ ತ್ರಿಷಷ್ಟಿಶಲಾಕಾಪುರುಷರ ಕಥೆ : ಆ ಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸಂಪತ್ಪರಿವರ್ಣನಮುಂ ರಾಜ್ಯ ರಾಮಣೀಯಕಾಖ್ಯಾನಮುಂ ತೀರ್ಥಮಹಿಮಾಸಮರ್ಥನಮುಂ ಚತುರ್ಗತಿಸ್ವರೂಪನಿರೂಪಣಮುಂ ತಪೋದಾನವಿಧಾನವರ್ಣನಮುಂ ತತ್ಫಳಪ್ರಾಪ್ತಿಪ್ರಕಟನಮುಮೆಂದಿಂತಪಯಮಂಗಳೆಂಟಕ್ಕುಂ (ಆದಿಪು. ೧-೪೨ ವ); ಸದ್ಧರ್ಮಕಥಾಥನನಿಬದ್ಧಗ್ರಂಥಂ ಪುರಾಣಮಿತಿಹಾಸಾಖ್ಯಂ (ವಸ್ತುಕೋ. ೨-೯). [ಸಂ.]

**ಪುರಾಣಕವಿ** (ನಾ). ೧. ಹಿಂದೆ ಆಗಿ ಹೋದ ಕವಿ; ಪೂರ್ವಕಾಲದ ಕವಿ : ಪುರಾಣಕವಿ ಪ್ರಭು ಪ್ರಯೋಗಾವಿಳ ಸದ್ಗುಣೋದಯಮನಾಯ್ದು ಪೞಂ ಸಮೆದೊಂದು ಕಾವ್ಯದಿಂ . . . ಮುದಮಂ ತನಗಾಗಿಸಿದು ಕವೀಶ್ವರಂ (ಕವಿರಾ. ೨-೧೩೩); ಕವಿಗಳೊಳಾ ಪುರಾಣಕವಿಪುಂಗವರೊಳ್ಪಿದರೀಗಳಿಲ್ಲ (ಗದಾಯು. ೧-೪೭). ೨. ಪುರಾಣವನ್ನು ರಚಿಸಿದ ಕವಿ : ವಾಕ್‌ಶ್ರೀಸುಭಗಂ ಪುರಾಣಕವಿಯುಂ ಧರೆಗಾಗಿರೆಯುಣ್ಮಿ ಪೊಣ್ಮಿ ದೇಸಿಗಳುಂತೆ ನಾಡೊವಜನಾದನೊ ಪೇಟ್ ಕವಿತಾಗುಣಾರ್ಣವಂ (ಶಂಶಭಾ. ೧೪-೬೨). [ಸಂ.]

**ಪುರಾಣಚೂಡಾಮಣಿ** (ನಾ). ಪುರಾಣಗಳಲ್ಲಿ ಅತ್ಯುತ್ತಮವಾದುದು; ಶ್ರೇಷ್ಠವಾದ ಪುರಾಣ : ಶಾಂತಿಜಿನಜನ್ಮಜಲಧಿಗೆ ಶಾಂತಿಪುರಾಣಮೆ

ಪುರಾರ್ಥರತ್ನಮಿದಂ ಪೇಳ್ದಂತು ಕವಿಚಕ್ರವರ್ತಿಯೆ ನೋಂತಂ ಪೆಸರಿಂ ಪುರಾಣಚೂಡಾಮಣಿಯಂ (ಶಾಂತಿಪು. ೧-೧೨). [ಸಂ.]

**ಪುರಾಣಜ್ವರ** (ನಾ). ಬಹಳ ದಿನಗಳಿಂದ ಇರುವ ಜ್ವರ; ಹಳೆಯ ಜ್ವರ: ಏಳು ರಾತ್ರಿ ಪರ್ಯಂತರ ತರುಣಜ್ವರವೆನಿಸಿಕೊಂಬುದು. ಪತ್ತು ರಾತ್ರಿ ಪರ್ಯಂತರ ಮಧ್ಯಮಜ್ವರವೆನಿಸಿಕೊಂಬುದು. ಅದಱ ಮೇಲೆ ಪುರಾಣ[ಶಾಕಾಂ. ಪಳೇ]ಜ್ವರವೆನಿಸಿಕೊಂಬುದು (ವೈದ್ಯಸಾ. I. ೩೩); ಈ ಮಾತ್ರೆಗಳನ್ನು ಕೊಬ್ಬರಿರಸದಲ್ಲಿ ಕೊಡಲು ಜ್ವರಾತಿಸಾರ, ಪುರಾಣ ಜ್ವರಗಳು ಸಹ ನಿಲ್ಲುವುವು (ಸಕವೈ. ಶಂ. ೪೭೦). [ಸಂ.]

**ಪುರಾಣಪುರುಷ** (ನಾ). ೧. ಮುದುಕ; ವೃದ್ಧ: ಗಂಭೀರಸ್ವರದೊಳಂ ಭವ್ಯಾಕಾರದೊಳಮಾತಂ ಕಾರಣಪುರುಷನಾಗಲೆವೇಟ್ಕುಮೆಂದು ನಿಶ್ಚಯಿಸಿ ಪುರಾಣಪುರುಷನೊರ್ವನಿಂತೆಂದು (ಕಂಠಾಪಷಾ. ೮-೬೬ವ). ೨. ಆದಿಪುರುಷ; ವಿಷ್ಣು: ತಪನಕುಲಜಾತರ್ ಪುರಾಣಪುರುಷೋತ್ತಮನ ವಿಪುಲಸಂತತಿ ಅವರ್ (ಕೈಲಾಭಾ. ೨೧-೨೯); ನಾರದನುಂ ಪರ್ವತನುಂ ಪುರಾಣಪುರುಷನು ಕಂಡೆಱಗುತ (ಅಧ್ಯಾ.ಕ. ೧೩-೯); ಶ್ರೀಕೃಷ್ಣನು ಪುರಾಣಪುರುಷನೂ ನಿಜ; ಏಶಿಷ್ಟಾನಿಕವ್ಯಕ್ತಿಯೂ ನಿಜ (ಭಾರದ. ೧೦೯). ೩. ಶಿವ; ಈಶ್ವರ. [ಸಂ.]

**ಪುರಾಣಮಾರ್ಗ** (ನಾ). ಪ್ರಾಚೀನಕಾಲದಿಂದ ನಡೆದು ಬಂದ ರೀತಿ, ಸಂಪ್ರದಾಯ: ಉಚಿತಪುರಾಣಮಾರ್ಗಪದಪದ್ಧತಿಬಂಧುರಬಂಧಮೆಂಬಿನಂ ರಚಿಯಿಸೆ . . . ಕಾಳಿದಾಸನುಮಂನೇಳಿಸಿತೀ ಕೃತಿ ನಾಗವರ್ಮನಾ (ಛಂದೋಂಬು. ೧-೬). [ಸಂ.]

**ಪುರಾಣವಾಕ್ಯ** (ನಾ). ೧. ಬಹುಕಾಲದಿಂದ ಬಂದಿರುವ ಮಾತು; ಗಾದೆ: ಶರೀರಮಾದ್ಯಂ ಖಲುಧರ್ಮಸಾಧನಂ ಎಂಬ ಪುರಾಣವಾಕ್ಯ ಮುಂಟು (ಪಂಚತಂ. ೧೧೫-೧೩); ಕೇನಾಪ್ಯುಪಾಯೇನ ಫಳಂ ಹಿ ಸಾಧ್ಯಂ ತಾನೆಂಬುದುಂಟಲ್ತೆ ಪುರಾಣವಾಕ್ಯಂ (ಸುಕುಮಾ. ೩-೩೨). ೨. ಪುರಾಣ ದಲ್ಲಿರುವ ಮಾತು: ಬಿಸರುಹಾಕ್ಷನ ಹರನಿಱಿದನೆಂದುಸುರಲೊಲ್ಲನು ಸಹಜವಾದ ಪುರಾಣವಾಕ್ಯವನು (ಬಸಪು. ೩೭-೨೨). [ಸಂ.]

**ಪುರಾಣಶ್ರವಣ** (ನಾ). ಪುರಾಣವನ್ನು ಕೇಳುವಿಕೆ: ಮಠದಲ್ಲಿ ಶ್ರಾವಣಮಾಸದಲ್ಲಿ ಪುರಾಣಶ್ರವಣ ನಡೆಯುತ್ತದೆ (ರೂಢಿ). [ಸಂ.]

**ಪುರಾಣಿ** (ನಾ). ಪುರಾಣ ಹೇಳುವವನು; ಪುರಾಣಿಕ: ಯಥಾರ್ಥವ ನೊರೆಯಲೊಲ್ಲನು ಪಕ್ಷಪಾತಿ ಪುರಾಣಿ [ಶಾಕಾಂ. ಣ]ಭಟ್ಟನಲಾ (ಬಸಪು. ೩೭-೨೮); ಪೇಳಿದ ಪರಮ ಪುರಾಣಿ ರಾಯಂಗೆ ಶರಣಾಳಿಯ ಮೆಲ್ಲಗೆಗಳನು (ಮೋಕ್ಷಪು. ೨-೭೬). [< ಪುರಾಣ]

**ಪುರಾಣಿಕ** (ನಾ). ೧. ಪುರಾಣಗಳನ್ನು ಚೆನ್ನಾಗಿ ಓದಿ ತಿಳಿದವನು. ೨. ಪುರಾಣಗಳನ್ನು ವಿವರಿಸಿ ಹೇಳುವವನು; ಪೌರಾಣಿಕ: ಅವನಿಪನ ನಗರಾಗ್ರದಲಿ ಪೊಂದಿವಸವೋದುತ ಸತ್ಕವ ಹೇಳುವ ಪುರಾಣಿಕ ನಂತೆ ಕೆಲಬರು ಕೇಳುತಿರಲಾಗಿ (ಬಸಪು. ೩೭-೩೦); ಇಂದ್ರಲೋಕವು ಪುರಾಣಿಕರ ವರ್ಣನೆಯಂತೆ ಇರುವುದಾದರೆ ಅದು ಎಂದೋ ಸಿಗುವುದು (ನಿಶ್ಚಾಮ. ೪). [<ಸಂ. ಪೌರಾಣಿಕ]

**ಪುರಾತ** (ನಾ). =ಪುರಾತನ ೪: ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದರೆ ಎನ್ನ ಪಾತ್ರೆ ತುಂಬಿತ್ತು (ಬಸವ. ೩೯೪); ಪುರಾತರೊಳಗೊಲವಿಂ ಮಹಿಳೆ ಯರನಾತ್ಮಭವರಂ ತಮ್ಮುಮಂ ಕೊಟ್ಟವರೊಳರು ಶತಕೋಟಿಕೋಟಿಗಳು (ಬಸಪು. ೨೫-೭೭). 'ಪುರಂತ್ರ' ಪರಾ.

**ಪುರಾತಭಕ್ತರು**=ಪ್ರಾಚೀನ ಶರಣರು: ಮುನ್ನೆ ಪುರಾತಭಕ್ತರು ಪರಂಬಡೆದೀ ಸ್ಥಳಮೆಂದು ಕೀರ್ತಿಯಂ ಬಿನ್ನವಿಸಲ್ಕೆ (ಸೌಇಇ. XX. ೧೭೮-೧೭; 1192). [<ಸಂ. ಪುರಾತನ]

**ಪುರಾತನ** (ಗು). ೧. ಹಳೆಯ ಕಾಲದ; ಪ್ರಾಚೀನ; ಪೂರ್ವಕಾಲದ: ಉನ್ನಮೆ ಪುರಾತನ ಭವಸಂಬಂಧವೇದಿನಿ (ಶಾಂತಿಪು. ೬-೧೨ ವ); ಬುಧರಿರ್ದು ನೋಟ್ಪುದು ಪುರಾತನ ನೂತನ ಕಾವ್ಯರೇಖೆಯಂ (ಗದಾಯು. ೧-೪೬); ನಮ್ಮ ಜನರಲ್ಲಿ ಬಹು ಪುರಾತನ ನಡತೆಗಳೆಷ್ಟೋ ಉಂಟು (ಕುಂಬಾಯು. ೪-೧೮೩). (ನಾ). ೨. ಹಳೆಯದು; ಪೂರ್ವಕಾಲಕ್ಕೆ ಸಂಬಂಧಿಸಿದುದು; ಪ್ರಾಚೀನವಾದುದು: "ಜೀರ್ಣಂ, ಜರತ್, ಪುರಾಣಂ, ಪ್ರತ್ನಂ, ಪ್ರತನಂ, ಪುರಾತನಂ-ಈ ೬ ಪ(ಹ)ಬದು" (ಹಲಾಯು. ೧೧೮-೨೬); "ಜೀರ್ಣಮಾ ಜರತ್ಪ್ರತನಮರ್ಣವಮುನವ್ಯಂ ಪುರಾಣಂ ಪುರಾತನಮೆನಲು ಹಚಶಿಂಗೆ ನಾಮಮಾಕ್ಕಂ" (ಕುಂಗರಾ. ೧೨೯-೧೩); ಪುರಾತನದ ಕಥೆ ಕಿರಾತ ಏನು ಬಲ್ಲ? (ಗಾದೆ). ೩. ಪೂರ್ವಕಾಲದವನು; ಹಿಂದಿನವನು; ಪೂರ್ವಿಕ: ರಸವತ್ಕಾವ್ಯವಿದರ್ ಪುರಾತನರೊಳಾದು ಪೂಣ್ಕೆಯಿಂ ಪೇಟ್ದ ಜೋಯಿಸೆಗಬ್ಬಂಗಳನೆಬ್ಬಿ ರುಚಿಸಿದರಾರ್ (ಶಾಕಚ. ೨೪-೪೦); ಪೂರ್ವದ ಪುರಾತನರ ವಿಧಿಯು ವಿಸ್ಮರಿಸುವೆವು ಕೇಳ್ಳೆ (ಗಗಾ. ೧೮ ೪೩); ಈ ಕಥೆಗಳ ಮೂಲಕವಾಗಿ ಮಗು ಪುರಾತನರೊಡನೆ ಪ್ರೀತಿಯ ಸಂಬಂಧವನ್ನು ಬೆಳೆಸಿಕೊಳ್ಳುವನು (ಕಥಕ. ೩೭). ೪. [ವೀಶೈ] ಪೂರ್ವ ಕಾಲದಲ್ಲಿ ಆಗಿ ಹೋದ, 'ಅಱುವತ್ತುಮೂವರು ಪುರಾತನ' ರೆಂದು ಪ್ರಸಿದ್ಧಿ ಪಡೆದ ಶಿವಭಕ್ತರ ಗಣಕ್ಕೆ ಸೇರಿದವನು; ಪ್ರಾಚೀನ ಶಿವಶರಣ: ಮೃಡನೇ ನಿಮ್ಮ ಪುರಾತನರ ಕಾಣುತ್ತ ಒಡೆಯದೆ ಇದಿರೆದ್ದು ಪೊಡಮಡೆನಾಗಿ ಬಿಡದು ನಾಚಿಕೆ (ಅಪಕಂ. ೧೬೨-೭೩೪); ಬಂದಹರಯ್ಯಾ ಪುರಾತನರೆನ್ನ ಮನೆಗೆ ಬಂದಹರಯ್ಯಾ ಶರಣರೆನ್ನ ಮನೆಗೆ (ಬಸವ. ೩೭೦); ಶಿವಭಕ್ತಿಪಂಥವು . . . ತಮಿಳುನಾಡಿನಲ್ಲಿ ೬೩ ಮಂದಿ ಪುರಾತನರಿಂದ ಪ್ರಾರಂಭವಾಗುತ್ತದೆ (ಭಾರದ. ೩೦೬). [ಸಂ.]

**ಪುರಾತನಜ್ವರ** (ನಾ). = ಪುರಾಣಜ್ವರ: ಅರಳಿಮರದ ಒಳನಾರನ್ನು ಕಷಾಯಮಿಕ್ಕಿ ಕೊಡಲು ದಾಹಸಹಿತವಾದ ವಿಷಮಜ್ವರ, ಪುರಾತನಜ್ವರ, ಜ್ವರಾತಿಸಾರ ಸಹ ಶಮನವಹುದು (ಸಕವೈ. ೦೧೫). [ಸಂ.]

**ಪುರಾತನಪುರುಷ** (ನಾ). = ಪುರಾಣಪುರುಷ ೨: ಪುರಾತನಪುರುಷ ಪುಂಡರೀಕಾಕ್ಷನೆ ಪುರಂದರವಿಠಲನೆ ದಯಮಾಡೊ (ಪುರಂದ. ೨-೦೫೨-೫). [ಸಂ.]

**ಪುರಾತನಮತ** (ನಾ). ಪ್ರಾಚೀನರ ಅಭಿಪ್ರಾಯ, ಮಾರ್ಗ, ಸಂಪ್ರದಾಯ; ಆದಿಮಾರ್ಗ: ವ್ಯವಹರಿಪುವೆರಡು ರೂಪಿಂದವಕ್ಕರಂ ಶ್ರಾವಣಂ ಸ್ವನೈಕಾಕಾರಂ ವಿವಿಧಾಕಾರಂ ಲಿಪಿಭೇದವೃತ್ತಿಯಿಂ ಚಾಕ್ಷುಷಂ ಪುರಾತನಮತದಿಂ (ಶಮದ. ೩). [ಸಂ.]

**ಪುರಾತವಳಿ** (ನಾ). ಪುರಾತನ ಶರಣರ ಪರಂಪರೆ: ಗುರುಲಿಂಗ ಜಂಗಮಕೆ ಪರೀಕ್ಷೆ ಉಂಟಾಗಿಯೆ ಆತ ಮಾಹೇಶ್ವರ ಪುರಾತವಳಿ ಎಂಬ ಪರಮಬಂಧುಗಳಾತನ ನೆನೆದು ಬದುಕುವರು (ಬಸವ. ೬೬೮). [ಪುರಾತ + ಬಳಿ$_3$ (< ಬಟ್ಟಿ$_3$)]

**ಪುರಾಧೀಶ** (ನಾ). ಊರಿನ ಒಡೆಯ; ಪಟ್ಟಣಾಧಿಪತಿ: ತತ್ಪು ರಾಧೀಶಂ ದೃಢ(ಧೃತ)ಸೇನಂ ನಿಲಿಸಿ (ನಿಱಿಸಿ) ಭಕ್ತಿಪೂರ್ವಕದಿಂದ ಮಾಹಾರಂಗುಡೆ ಕೊಂಡು ಭಟ್ಟಾರಕನುಮಾತನಂ ಪರಸಿ ಬಿಜಯಂ ಗೆಯ್ಯುದುಂ (ಶಾಂತಿಪು. ೯-೨೦ ವ). [ಸಂ.]

**ಪುರಾಭವ** (ನಾ). ಹಿಂದಿನ ಜನ್ಮ; ಪೂರ್ವಜನ್ಮ; ಜನ್ಮಾಂತರ: ಅಬೋಧಪೂರ್ವಕಂ ನೆನೆವಪನಂತು ಭಾವದೊಳೆ ನಟ್ಟ ಪುರಾಭವ ಸೌಹೃದಂಗಳಂ (ಶಾಕುಂತ. ೬೦-೧೦೨). [ಸಂ.]

**ಪುರಾರಿ** (ನಾ). ೧. ತಾರಕಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿ ಯೆಂಬ ಮೂವರು ರಾಕ್ಷಸರ ಶತ್ರು; ತ್ರಿಪುರಾರಿ; ಶಿವ: ಸಿರಿವಿರಿಂಚಿ ಮರುತ್ಸುಪರ್ಣ ಪುರಾರಿವಂದಿತ ಚರಣಸರಸಿಜ (ಪುರಂದ.ರಾ. ೩-೨೧೬ ಅನುಕ್ರಮ). ೨. ವಿಷ್ಣು. ೩. [ಛಂದ] ನಡುವೆ ಗುರುವಿರುವ

ನಾಲ್ಕು ಮಾತ್ರೆಗಳ ಗಣ ; ಜಗಣ (υ—υ) : ಶಶಿಪುರವಿಷಯಾದ್ರಿಯೋಳರದರ್ಕೆ ಪುರಾರಿಯೆಂಬ ಗಣಮುಬ್ಜಮುಖೀ (ಛಂದೋಂಬು. ೪-೨೨೮). [ಸಂ.]

**ಪುರಾರ್ದನ** (ನಾ). ತ್ರಿಪುರಗಳನ್ನು ನಾಶಮಾಡಿದವನು ; ಶಿವ : ಕಾಲವೈರಿಪುರಾರ್ದನಾ . . . ಚಂದ್ರಶೇಖರ ಪಾಲಯ (ಹರಿಶ್ಚ. ೬-೪೭). [ಸಂ.]

**ಪುರಾವೃತ್ತ** (ನಾ). ೧. ಹಿಂದಿನ ನಡತೆ ; ಪೂರ್ವಪದ ತಿ : (*). ೨. ಪೂರ್ವಕಾಲದಲ್ಲಿ ನಡೆದು ಹೋದ ಸಂಗತಿ ; ಪುರಾಣ : ಪರಮಾತ್ಮನೇ ವ್ಯಾಸರೂಪಿಯಾಗಿ ಅವತರಿಸಿ ಭಾರತ ಪುರಾಣಾದಿಗಳನ್ನು, ಬ್ರಹ್ಮಸೂತ್ರಗ್ರಂಥವನ್ನು ರಚಿಸಿದನೆಂದು ಪುರಾವೃತ್ತಗಳು ತಿಳಿಸುತ್ತವೆ (ಶಾರದ. ೨೬೯). [ಸಂ.]

**ಪುರಾವೆ** (ನಾ). ಪ್ರಮಾಣ ; ಆಧಾರ; ನ್ಯಾಯನಿರ್ಣಯಕ್ಕೆ ಸಹಾಯಕವಾದ ಸಾಕ್ಷಿ ಮೊದಲಾದ ಸಹಾಯಕಸಾಮಗ್ರಿ : ಸರಿಯಾಗಿ ಪುರಾವೆಯಾದರೆ . . . ದಂಡವನ್ನು ಮಾಡಲಿಕ್ಕೂ ಮಾಜಿಸ್ಟ್ರೇಟನಿಗೆ ಅಧಿಕಾರವಿರುತ್ತದೆ (ಕಥಾಗ. ಶಂ. ೦೯) ; ಸಂಶಯವನ್ನು ಸಿದ್ಧಪಡಿಸಿ ಕೊಡುವ ಯಾವ ಪುರಾವೆಯೂ ಸಿಗಲಿಲ್ಲ (ರಂಗಪ. ೨೬೨) ; ಏನೂ ಪುರಾವೆ ಇಲ್ಲದೇ ತುಂಗಕ್ಕ ಅಷ್ಟು ಧೈರ್ಯದಿಂದ . . . ಮಾತನಾಡಬಹುದೆಂದು ನನಗಂತೂ ಅನಿಸುವುದಿಲ್ಲ (ಮೂರುದಾ. ೦೬೦). [←ಮರಾ. ಪುರಾವ್, ಪುರಾವಾ]

**ಪುರಿ₁**, ಹುರಿ₁ (ಕ್ರಿ). ೧. ಬಾಣಲೆ, ಓಡು ಅಥವಾ ಹಂಚಿನ ಮೇಲಾಗಲಿ, ಕಾಯಿಸಿದ ಮರಳಿನಲ್ಲಾಗಲಿ, ಕಾಳು, ಬೇಳೆ, ಬತ್ತ ಮೊದಲಾದುವನ್ನು ಕಾಯಿಸಿ ಹದಗೊಳಿಸು ; ಅರಳು ಮಾಡು : ನೆಲ್ಲಂ ಪುರಿದು ಮಾಣದೆ ಕಾಣದಂತಿರಿಸಂಗಡಿಯೊಳ್ (ಶಬರಾ. ೨-೦೩೭) ; ಪುರಿದಂತಾದುವು ಪೂವಿನಂಬುಮಿನಿವಿಲ್ ನಿಸ್ಸಾರಮಾದತ್ತು (ಪಂಪಾಭಾ. ೦-೦೬) ; ಎಕ್ಕಸರಂಗಳ ತೋರಮುತ್ತುಗಳ್ ಪುರಿದವೊಲಾದುವು (ಕಬ್ಬಿಗಕಾ. ೩೦೩). ೨. ಕಾಯಿಸು ; ತಪ್ತಗೊಳಿಸು : ಸರೋವರದ ಮಳಲ್ ಪುರಿಗಡಲೆಗೆ ಪುರಿದ ಮಳಲ್ಕ್ಯಾಪ್ಪು ತೆಱದೆ ಕಾಯ್ದತ್ತೆತ್ತಂ (ಗದಾಯು. ೭-೦೮) ; ಪುರಿದ ಮಣಲೊಳಂ ಪೂಣಿಸಿದ ಗಾಣದೊಳಂ ಬಿರ್ಚಿದ ಬೇರ್ಕೆಯೊಳಂ . . . ನೋಡಲರಿದೆನಿಸಿದ ಮಕರಮುಖದಾಡಾಯುಗ್ಗದಗ್ಗಳಿಕೆಯಂ ಕಂಡು (ಅನಂತಪು. ೦೦-೬೨ ವ) ; ಸುಣ್ಣವನೊರಸಿ ಮಿಗೆ ಪು[ಪಾಠಾಂ. ಹು]ರಿದ ಬಿಸಿಯ ಮಳಲಂ ತರಿಸಿ ಬಾಯ್ದುಂಬಿಸಿದಪೆಂ (ಚಕಪು. ೦೦-೦೯). ೩. ಸೀದು ಹೋಗು ; ಕರಿಕಾಗು ; ಸುಟ್ಟುಹೋಗು : ಒಕ್ಕಲುಳ್ಳೊತ್ತಿನ್ನಕ್ಕಳ್ಳು ಟ್ಟಿಲ್ಕಂ ಪುಟ್ಟದೊಂದು ಪುರಿಗ (ಎಕ. IV, ಹೆಗ್ಗಡ. ೬೭-೦೩ ; ಸು. 700). ೪. ಜಿಡ್ಡನ್ನು ಸವರಿ ತಾಳಿಸು,—ಬಾಡಿಸು : ತುಪ್ಪದೊಳ್ಪುರಿದಚ್ಚಗಂಪುಮರಲ್ . . . ಅಟ್ಟಿ ತಂದು ಪಾಡಂಗಿದಕ್ಷಿಣ್ಣಮಾಸನೀಯಾಯ ವೊಪ್ಪಿದುದು (ಉದ್ಭಟ. ೫-೬೭). ೫. (ಹಪ್ಪಳ ಮೊದಲಾದುವುಗಳನ್ನು) ಕೆಂಡದ ಮೇಲಿಟ್ಟು ಸುಡು : (*). ೬. ಎಣ್ಣೆ ಅಥವಾ ತುಪ್ಪದಲ್ಲಿ ಕರಿ: 'ಪುರಿಗಡುಬು' ಪರಾ. ಹುರಿ₁: ೧. "ಹುರಿ-ನಿರ್ದ್ರವಕರಣೇ" (ಶಮಂಥಾ) ; ಚರಾಚರಂಗಳಂ ಗರಿಮುರಿಮುಪ್ಪಿನಂ ಹುರಿವ ಹಂಚುವೊಲಿರ್ದಳೆಯೊಳ್ ಕೃತಾಂತನೆಚ್ಚುರಿಗಣೆಯಂತೆ ಬಂದುದು ಲಯಾನಿಳಕಲ್ಪನಿದಾಘಜಾನಿಳಂ (ಅರ್ಜನಸೇ. ೪-೬೪) ; ಹುರಿದು ಬಿತ್ತಿದ ಬೀಜ ಮೊಳೆವುದೆ (ಕರಿಕ. ೨-೩೩) ; ಉದ್ಯೋಗವಿಲ್ಲದ ತೊತ್ತು ಉದ್ದು ಹುರಿದು ತಿಂದಳು (ಗಾದೆ). ೨. ಕೆಲಬರು ಹುರಿದ ಮರಳನು ಮೇಲೆ ಚೆಲ್ಲಲು ಹರಹಿ ಸಾಸಿವೆ ರಸಗಳನುಪ್ಪು ಮೆಣಸುಗಳ ಹಿರಿಯ ಮೂಗಿನ ಹೋರು ತುಂಬಲು (ಕೌಶಿಕಾ. ೨೪-೩) ; ಹುರಿವ ಮಳಲಂ ಹುಯ್ದು ಹುಲ್ಲ ಕಿಚ್ಚಂ ಹಿಡಿದು ಹರಿವ ಹಾವಂ ಹಾಕಿ ಕಾಸಿದಂಬಲಿಯೆಱೆದು . . . ಹತ್ತುವಾಳ್ಗಳಂ ಧರೆಗುರುಳ್ವ ತೆಱದಿ ಕೊಂದಿಕ್ಕಿದರ್ (ಸಮ್ಯಕ್ತ್ವ. ೬-೩೩) ; ಹುರಿವ ಮಳಲಿನ ಕಾಸುವಂಬಲಿಯ ಬಿಸಿಯೆಣ್ಣೆವರವಿಗಳ ಪುದಿದ ಪುರ್ಬ್ಬೊಂದೆಗಳ . . . ಮೊತ್ತಂಗಳುಳ್ಳೇರಿಯೊಳ್ ಪಸರಿಸಿದುವು (ಶಬಪು. ೪೨-೦೦). ೩. ಎಮ್ಮ ಭಾಗ್ಯದ ಬಿತ್ತು ಹುರಿದರೆ ಬಿರುದ ಭಟರಿರ್ದೇನ ಮಾಡುವರು (ಕುಮಾವ್ಯಾ. ಕ. ೦-೨೦) ; ಹುರಿದುದು ಭವಬೀಜದುಷ್ಕರ್ಮದಂಕುರ ಹಱಿದುದು ಕಪಟದ ಬೇರು ಸುರಿದುದಾನಂದಾಶ್ರು (ಬೋಧಕ. ೪೨-೩೦). ೪. ಉಳ್ಳಿ ಶುಂಠಿ ಕೇದಗೆಯ ಹೂ ಹುರಿದ ಕರಿಬೇವು ಮಾದಲದ ಸೊಪ್ಪಿಕ್ಕಿ (ಸೂಪಶಾ. ೩-೨೮). ೬. 'ಹುರಿಗಡುಬು' ಪರಾ. ೭. (ಅಲಂ) ನಾಶಪಡಿಸು; ನಿವಾರಿಸು : ಕಂಗಳ ಕರುಳ ಕೊಯ್ದವತ ಮನದ ತಿರುಳ ಹುರಿದವರ ಮಾತಿನ ಮೊದಲಬಲ್ಲವರನೆನಗೊಮ್ಮೆ ತೋಱಾ (ಅಪಕಂ. ೦೦೦-೪೩೦). ೮. ನಾಶವಾಗು ; ಇಲ್ಲವಾಗು : ಹುರಿವ ಧೈರ್ಯದ ತಳ್ಳವಾಱುವ ತರಳಹೃದಯದ ದೇವರಿಂದ್ರನನಱಿಸಿ ಕಂಡರು (ಕುಮಾವ್ಯಾ. ಕ. ೬-೦೨).

**ಹುರಿದುಕೊಂಡು ತಿನ್ನು** =(ಅಲಂ) ಪೀಡಿಸು ; ಗೋಳಾಡಿಸು ; ಹಿಂಸಿಸು; ಗೋಳು ಹುಯ್ದುಕೊಳ್ಳು: ಮಲಮಗಳು ಇದ್ದಷ್ಟು ದಿನವೂ ಹುರಿದುಕೊಂಡು ತಿನ್ನುತ್ತಿದ್ದಳು (ಲೂಖಿ). **ಹುರಿದು ತಿನ್ನು** =ಹುರಿದುಕೊಂಡು ತಿನ್ನು : ರಾಜೇಶ್ವರಮ್ಮನು ಪ್ರತಿದಿನವೂ ಮಾತು ಮಾತಿಗೂ ಸೊಸೆಯ ದೋಷಗಳನ್ನು ಎಣಿಸಿ ಹುರಿದು ತಿನ್ನುತ್ತಿದ್ದಳು (ಲಕ್ಷ್ಮೀಕೃ. ೪೩). ಸಮಾಜವನ್ನು ಆಕ್ರಮಿಸಿ ಹುರಿದು ತಿನ್ನುತ್ತಿದ್ದ ಸಹಸ್ರರಾವಣರ ಸಂಹಾರ ಮಾಡಬಲ್ಲ ರಾಮನೊಬ್ಬನನ್ನು ಸೃಷ್ಟಿಸಬೇಕೆಂದು ನಿರ್ಧರಿಸಿದ (ಶಾರದ. ೪೬೦). **ಹುರಿದು ಮುಕ್ಕು** = ಹುರಿದುಕೊಂಡು ತಿನ್ನು : ಹುರಿದು ಮುಕ್ಕುವಂತಹ ಹವೆಯು ವಿಸ್ಫೋಟಿಸುತ್ತಿದ್ದಿತು (ರುಜುವಾತಿ. ೩೬೯).

[ದೇ.॥ ತಮಿ. ಪೊರಿ ; ಮಲ. ಪೊರಿಯು ; ತುಳು. ಪೊರಿ, ಪೊರಿಪು, ಪೊರಿಯು]

**ಪುರಿ₂**, ಪೊರಿ (ನಾ). ೧. ಹಂಚಿನಲ್ಲಿ ಅಥವಾ ಮರಳಲ್ಲಿಟ್ಟು ಕಾಯಿಸುವಿಕೆ, –ಹುರಿಯುವಿಕೆ : (*). ೨. ಮಂಡಕ್ಕಿ; ಚುರುಮುರಿ : ನಿಮಗೆ ಹಾಲೂ, ಹಣ್ಣೂ, ಕಡಲೆಕಾಯಿ, ಪುರಿ_ಮೊದಲಾದುವನ್ನು ಕೊಡಿಸುತ್ತೇನೆ (ರಂಗಳ. ೯೭). **ಪೊರಿ** : ೨. ಎಳ್ಳ ಪೆಱಂಗೆ ಬ ೧॥ ಮಾಱುವ ಪೊರಿಗಳ್ಗೆ ಏ ೧ (ಕಇಅ. ೦೦೫-೦೯-೩೭; 1057).

[< ಪುರಿ₁ / ತಮಿ. ಮಲ. ತುಳು. ಕೊಡ. ಪೊರಿ]

**ಪುರಿ₃**, ಹುರಿ₂ (ನಾ). ೧. (ದಾರ ಅಥವಾ ಹಗ್ಗದಂತೆ) ಹೊಸೆಯುವಿಕೆ ; ನುಲಿಯುವಿಕೆ : 'ಮುಪ್ಪುರಿ'₁ ಪರಾ. ೨. ಹೊಸೆದು ಮಾಡಿದ ನೇಣು,–ಹಗ್ಗ,–ರಜ್ಜು : ಅಸಗೆಟ್ಟುವೊ ಪುರಿ ಹೆರೆಯೆಣ್ಣೆ ತೀದುದೊ ಅಸಮಾಶ್ವಗಳು ಬಾಂದೊಱೆಯು ಕೆಸಱೊಳು ಬಿದ್ದೆಳಲಾಱದಾದುವೊ ಎಂದು ಬಿಸಜಾಕ್ಷಿ ರವಿಯ ನೋಡಿದಳು (ಬೋಧಕ. ೨೭-೦೪) ; ಹೊಸೆದ ಕಾಲ್ಗಣ್ಣಿವಲೆ ತಳ್ಳುವಲೆ ಪುರಿಯೊಕ್ಕಣ್ಣಿವಲೆ (ಶಾಕ್ಸತಾ. ೫-೦೮). ೩. ಕೆಚ್ಚು; ಬಲ; ಗಟ್ಟಿತನ : 'ಪುರಿಗಣೆ', 'ಪುರಿಯೇಱು' ಪರಾ. ೪. ಪ್ರೋತ್ಸಾಹ ; ಮೆಚ್ಚಿಕೆಯ ಕೊಂಡಾಟ : 'ಪುರಿಯಿಡು', 'ಪುರ್ರೆ₁' ಪರಾ. ಹುರಿ₂ : ೧. ಹರಿತಂದು ಬಂಡಿಯ ಶಿರದ ಹಲಗೆಯ ನಡರಿದನು ಬಲುಹುರಿಯ ಹಗ್ಗವ ಹಿಡಿದು ಜಡಿದನು ಪೂಡಿದೆತ್ತುಗಳ (ಕುಮಾವ್ಯಾ. ಆ. ೦೦-೨೭) ; ಹಗ್ಗ ಸುಟ್ಟರೆ ಹುರಿ ಹೋದೀತೇ? (ಗಾದೆ). ೨. "ಹುರಿ –ನಿರ್ದ್ರವಕರಣೇ, ರಜ್ಜುಭ್ರಮಣಕ್ರಿಯಾಯಾಮ್" (ಶಮಂಥಾ. ವ) ; ಕಾಳರಕ್ಕಸಿಯ ಮಗುವು ಚಂದ್ರ ಸೂರ್ಯರ ಜೂಟಾಳದ ಹುರಿಯೊಳಗೆ ತಿರುಗಿತ್ತು (ಅದಪ. ೦೫-೬೨) ; ಚೆಳಹಯಂಗಳು ಹುರಿಯ ವಾಘೆಯನಳವಡಿಸೆ ಬಲನೆಡಕ ವಾಜಿಯ ಸುಳಿಸಿ ಸಾರಥಿತನವ ತೋಱಿಸನೆಂದು ಕಲಿ ಶಲ್ಯ (ಕುಮಾವ್ಯಾ. ಕ. ೮-೨೩) ; ತೆಗೆದು ಡೊಂಬನು ಹುರಿಯ ಸುಂಬನು ಬಿಗಿದು ಬಟ್ಟಲನೇರಿಸಿ . . . ನೆಗೆದು ಕುಣಿವನು ಧಿಮಿಧಿಮಿ (ಕುಂಕೃ. ೩೬-೮). 'ಬೆನ್ನುಹುರಿ' ಪರಾ. ೩. ಹೂಣಿಗರು ಹುರಿ ಬಲಿದು ಹಾಣಾಹಾಣಿಯಲಿ

ಹೊಯ್ದಾಡಿದರು (ಕುಮಾ.ಭಾ. ೮-೦೫); ಹೇವದ ಹುರಿ ಬಲಿದುದೀತಂಗೆ ಹರಿಬದ ಸೂಳೆಬಂಟಿಕೆಯು ಧುರಕೆ ನಿಂದವು (ಕೊರಟಾ. ೪-೨-೨೫). ೫. ಹೊಸೆದು ಮಾಡಿದ ನಾರು, ಸೆಣಬು, ಕಾತಿ ಮೊದಲಾದುವುಗಳ ದಾರ: ಗುಂಡನು ಅದಕ್ಕೆ ಒಂದು ಹುರಿ ಕಟ್ಟಿ ಚೀಲವನ್ನು ಎಳೆಯುತ್ತ ಮನೆಗೆ ಹೋದನು (ಕಥಾ. ೩ ೪೫); ಹೂ ಮಾರಿದ ಊರಲ್ಲಿ ಹುರಿ ಮಾರಬಾರದು (ಗಾದೆ). ೬. (ಮೋಸದ) ಕಟ್ಟು; ಪಾಶ: ಬಲೆ: ಸಿಮ್ಮರಸುಗಳು ಭೀಮಂಗೆ ಮಾಡಿದ ಹುರಿಯನಾ ಹರಿ ಹಱಿದ ಪರಿಯನು ಮತ್ತೆ ಕೇಳು (ಸಂಕಹ. ೧೭ ೫೪). ೭. (ಹಗ್ಗದ ಎಳೆಗಳಂತೆ ಒತ್ತಾಗಿ) ಸೇರಿದುದು: ಹೆಣೆದುಕೊಂಡುದು: ಮೊಱೆದೆದ್ದು ಸಕಲರಾಣುವ ವೊಂದು ಹುರಿಯಾಗಿ[ಪಾಠಾಂ.ಗೂಡಿ] ಪುರಪರದೊಳಿತ್ತಿ ಹದಿಕೆಯನು ತದ್ವಿತ್ರದಿಂ ನರರೂಪನೊಂದನನುಗೆಯ್ಸಿ ಮಣಿದೊಡವಿಟ್ಟ ಬಳಿಕೊಂದು ರಥದ ಮೇಲೆ ಇರಿಸಿ (ಸಮ್ಯಕ್. ೨ ೫೯); ನಿನ್ನಯ ಮನೋವಾಕ್ಕಾಯವೊಂದು ಹುರಿಯಾಯ್ತು (ಲಂಗತ. ೫-೦೦); ಮದಿವಿ ಆಗದಿದ್ರ ಇಬ್ಬರೂ ಕೂಡಿ ಬೆಂಕೀವಳಗ ಹಾರಿಕೊಳ್ಳೋಣ ಅಂತ ಹೊಂಟಿದ್ದುವು ಅವೆರಡೂ. ಆಟು ಒಂದೇ ಹುರಿ ಜೀವನ (ಸಕಲ. I, ೩೨೨). ೮. ಬಿಗಿಪು; ಬಿಗುವು: ಅರ್ತ ಕದಂಪು ಒತ್ತಿದ ಕಾಲುಂ ಹುರಿಯುಱಿದಱಿವಿಳಿಯಿಸದ [ಯೆಸಕದ] ಸೆರೆಯುಂ (ಕಮುದ. ೨೪೮ ಶ್ರ ಯೋ); ಎಸೆವ ದಾಡೆಯು ಹುರಿಯ ಹುಬ್ಬುಗಳ ಇಡಿದ ಹೊಗರಿನ ಜವ್ವನದ . . . ರಕ್ಕಸರಾಯನೆಸೆದಿರ್ದ (ಕೊರಟಾ. ೩-೬ ೩). ೯. ಬಲವುಳ್ಳುದು: ಸತ್ತ್ವಶಾಲಿಯಾದುದು; ದೃಢವಾದುದು: ಸ್ನಾಯುಗಳು ಹುರಿಯಾಗಿ, ಶರೀರವು ಅಂದವಾಗಿಯೂ, ಬಲಾಢ್ಯವಾಗಿಯೂ ಕಾಣುವುದು (ಕನ್ನಶಾ. ೩೫). 'ಹುರಿಕಟ್ಟು' ಪರಾ. ೧೦. ಉತ್ಸಾಹ; ಹುರುಪು: 'ಹುರಿಗಟ್ಟು' ಪರಾ.

**ಹುರಿ ಮಾಡು**=ಹೊಸೆ; ನುಲಿ; ತೀಡು: ಕೆಮ್ಮೀಸೆಗಳ ಹುರಿ ಮಾಡಿ (ಶಾಗಂಧ. ೩೦-೦೪); ದೇಸಾಯಿಗೂ ಅಷ್ಟು ಗೊತ್ತಾಗಲಿ ಎಂದು ಮೀಸೆಯನ್ನು ಹುರಿ ಮಾಡಿಕೊಂಡನು (ಗಂಮಾಯು. ೧೯೬). **ಹುರಿಯಾಗು**=ಉತ್ಸಾಹಗೊಳ್ಳು; ಹುರುಪುಗೊಳ್ಳು: ವಿಶ್ರಾಂತಿ ಪಡೆದು ಹುರಿಯಾಗುವಷ್ಟರಲ್ಲಿ ಜೂಸತೀಗಳು ಬಂದಿತ್ತು (ಶ್ರೀರಂಗ. ೧೬೦); ಬಿಸಿಬಿಸಿ ಟೀ ಕುಡಿದ ನಂತರ ಅವರ ರಕ್ತ ಕಾವೇರಿ ಮೈ ಹುರಿಯಾಯಿತು (ವೃಸರು. ೫೩೦); ಪ್ರತಿಭಾ ಹುರಿಯಾದಳು (ವಾರತಿ. ೧೪).

[ದೇ.॥ ತಮಿ. ಮಲ. ತುಳು. ತೆಲು. ಪುರಿ, ೬ರಿ]

**ಪುರಿ₄** (ನಾ). ಪುರ; ಪಟ್ಟಣ; ನಗರ: "ಪತ್ತನಂ . . . ಪುರಂ, ಪುರೀ—ಈ ೧೧ ಪಟ್ಟಣಾ" (ಹಲಾಯು. ೪೮-೨೩೦); ಗುರುಕುಲಾದ್ಯರ ಪುರಿಗಳಿಂ ಘನಕವೀಶರ ರಾಜಧಾನಿಗಳಿಂ . . . ದೇಶಂ ಸಮಗ್ರಹಾತ್ಮಕವೆನಿಸಿತು (ಶಾಪಚಂ. ೨-೩). [ಸಂ.]

**ಪುರಿ₅** 'ಪೂರಿ' ನೋ.

**ಪುರಿಕರನಗರ** 'ಪುಲಿಕರನಗರ' ನೋ.

**ಪುರಿಗಡಲೆ**, ಹುರಿಗಡಲೆ (ನಾ). ನೀರಿನಲ್ಲಿ ನೆನೆಯಿಟ್ಟು, ಕಾದ ಮರಳಿನಲ್ಲಿ ಅರಳುವಂತೆ ಹುರಿದ ಕಡಲೆ; ಪುಟಾಣಿ: ಭೀಮಕೋಪಶಿಖಿ ಮುಟ್ಟಿ ಸರೋವರದ ಮಳಲ್ ಪುರಿಗಡಲೆಗೆ ಪುರಿದ ಮಳಲ್ಕೆಯ್ವ ತೆಱದೆ ಕಾಯ್ದತ್ತು (ಗದಾಯು. ೬-೦೯). **ಹುರಿಗಡಲೆ**: ಹುರಿಗಡಲೆ ಮುಂತಾದುವು ಕಾಯ್ವಾಜದೋಡಿನ ಜೋಳದೊಳ್ಕರಲರುವಂತಾದುದು . . . ಪೊಱಲ್ ಬಿಕರ್ಬಿಕರ್ನೆ ನಿಬ್ಬರಂ ಬಿರಿದೊಳಱುಗುಂ (ಶಾಂತಿಪು. ೬-೯೨); ಹಂಚಿನ ಹುರಿಗಡಲೆವೊಲೊಡೆದು ಪಾಱಿದುವು ಬೆಟ್ಟಂಗಳ್ (ಜಗಿ. ೦೬-೬೨); ಬದಿಯಲ್ಲಿಯೇ ಮಂಡಕ್ಕಿ ಹುರಿಗಡಲೆಯ ರಾಶಿಗಳು ಇದ್ದವು (ಕಥಾ. ೩-೨೫). [ಪುರಿ₁+ಕಡಲೆ]

**ಪುರಿಗಡುಬು**, ಹುರಿಗಡುಬು (ನಾ). ತುಪ್ಪ ಅಥವಾ ಎಣ್ಣೆಯಲ್ಲಿ ಕರಿದ ಕಡುಬು: ಪುರಿಗಡುಬು ತಱಗು ಚಕ್ಕುಲಿ ಕರಂಜಿಗಾಯ್ತಿರಸಂ ಚಿಗುಳಿ ಲಡ್ಡುಗೆ . . . ನೀಂ ಬಯಸೆ ಪೋಗಿ ತಂದಪೆನೀಗಳ್ (ಪ್ರಕಾ. ೯-೬೮); ಸಕ್ಕರೆ, ಜೇನು, ಬಾಳೆಹಣ್ಣು, ಪುರಿಗಡುಬು . . . ಸೀಕರಣೆ—ಏನು ಬೇಕು ಹೇಳು ತಂದೆ (ಜಕ. ೨೨). **ಹುರಿಗಡುಬು**: ಹಬ್ಬಕ್ಕೆ ಹುರಿಗಡುಬು ಮಾಡಬೇಕು (ರೂಢಿ). 'ಕರಿಗಡುಬು' ಪರಾ.

[ಪುರಿ₁+ಕಡುಬು (< ಕಡುಂಬು)]

**ಪುರಿಗಣೆ** (ನಾ). ಅತಿಶಯವಾದ ಶಕ್ತಿಯಿಂದ ಕೂಡಿದ ಬಾಣ; ವಿಶೇಷ ಶಕ್ತಿಯಿಂದ ಕೂಡಿದ ಬಾಣ: ಪುರಿಗಣೆಯ ದೊಣೆಗೆ ಕಯ್ಯಂ ನೀಡದೆ ರೌದ್ರಶರವ ದೊಣೆಗೆ ಕಯ್ಯಂ ನೀಡಿದಾಗಳ್ (ಶಂಪಶಾ. ೦೨-೧೯೦ ವ); ಪುರಿಗಣೆಯಪ್ಪ ಕಾರಣದಿನಂತದು ತಪ್ಪದೆನೆಂದು ನೊಂದು ಪಲ್ಮೊರೆದಹಿರೂಪದಿಂ ಮಗುಟ್ದು ಬಂದು (ಶಂಪಶಾ. ೦೨-೨೦೩); ಕೊಂತಿ ಬೇಡೆ ಬೆಚ್ಚದೆ ಕೊಟ್ಟಯ್ ಪು[ಪಾಠಾಂ. ಹು]ರಿಗಣೆಯಂ (ಗದಾಯು. ೫-೨೩); "ಪುರಿಗಣೆಯಪ್ಪ=ದಿವ್ಯಾಸ್ತ್ರವಾಗಿರುವ (?)" (ಶಂಪಟೀ. ೫೦೨); "ಪುರಿಗಣೆ—ಸುಡುವ ಬಾಣ (?), ಒಂದು ಬಗೆಯ ದಿವ್ಯಾಸ್ತ್ರ" (ಗದಾಸಂ. ಟಿಪ್ಪಣಿ. ೦೯೩).

[ಪುರಿ₃ + ಕಣೆ₁]

**ಪುರಿಗೆಯ್**, ಹುರಿಗೈ (ಕ್ರಿ). ೧. ಹೊಸೆ; ತಿರುವು; ಹುರಿಮಾಡು: ಮೀಸೆಗಳಂ ಪುರಿಗೆಯ್ದು ಕಣ್ಗಳಿಂದೆ ಭುಗಿಲಿಡುತ್ತ ಸೂಸೆ ಕಿಡಿಗಳ್ . . . ಅಭಿಮುಖರಾಗಿ ಸಿಂದರತಿಮುಷ್ಕರದಿಂದೆ ತುರುಷ್ಕರಲ್ಲದಿರ್ (ಕಳಂ. ೨-೦೦೬). **ಹುರಿಗೈ**: ೧. ಅವನು . . . ಚಾಟಿಯಂತೆ ಹುರಿಗೈದ ಕುಡಿಮೀಸೆಯ ತೇಜಃಪುಂಜಮುಖದ ಅಧಿಕಾರಿಯೊಬ್ಬನನ್ನು ನೋಡಿದನು (ವೃಸರು. ೩೧೨). ೨. ಉತ್ಸಾಹಗೊಳಿಸು; ಹುರಿದುಂಬಿಸು: ಓಡುವ ಸುರಾಳಿಯಂ ಕೂಡಿ ಹುರಿಗೈದನಂದು (ಶಂಪು. ೩೦-೨೮).

[ಪುರಿ₃ + ಕೆಯ್₁]

**ಪುರಿಗೆಱೆ³** 'ಪುಲಿಗೆಱೆ' ನೋ.

**ಪುರಿಗೊಳ್**, ಹುರಿಗೊಳ್, ಹುರಿಗೊಳ್ಳು (ಕ್ರಿ). ೧. (ಹುರಿಯಂತೆ ಹೊಸೆದು) ಕೂಡಿಸು; ಹೊಂದಿಸು; ಸೇರಿಸು: ಬಸವನು ಪಿರಿದು ಭಯಮುಮನತಿಸುಭಕ್ತಿಯುಮಂ ಚಿತ್ತದೊಳು ಪುರಿಗೊಂಡು . . . ನಮಿಸಿ (ಬಸಪು. ೪-೫೮). ೨. ಕೂಡಿಕೊಳ್ಳು; ಹೊಂದಿಕೊಳ್ಳು; ಸಮನ್ವಯವಾಗು: ಕೊರಲ ನುಣ್ಣನಿ ಬೀಣೆಯಿಂಚರಂ ಪುರಿಗೊಳೆ, ಮರ್ದಳೆಯ ತಾಳದ ಲಯಂ ಜತಿಗೂಡೆ (ಅಮಾತ್ಯ. ೨೩-೪). **ಹುರಿಗೊಳ್**: ೨. ಹೊರೆಯಿಲ್ಲದೆ ಮರುತೇಂದ್ರಿಯ ಸಂಶಯ ಕರಣಂಗಳು ತಮ್ಮೊಳಗೆ ಪರಃಪುರ ಹುರಿಗೊಂಡೇಕತ್ವದ ಸಮರಸದಿಂದಿಹವಶ್ರಾಂತದೊಳು (ಯೋಗಾಂಬ. ೨-೦೯). ೩. ಉತ್ಸಾಹಗೊಳ್ಳು; ಹುರುಪನ್ನು ಪಡೆ: ಸದ್ವೀರರಸೆಯ್ದೆ ಕೊಂದೆಸೆವ ಮೀಸೆಗಳಿಂ ಹುರಿಗೊಂಡ ಗಂಡಪೆಂಡಾರವು ನಾಳ್ದ ಸೀವಕುಳಮಂಡನನೊಳ್ಪಡಿಯಪ್ಪ ಗಂಡರಾರ್ (ಎಕ. XX. ೦೬-೨೪; 1167); ವಿಘಾತಿಯುಲಳಿದು ಹುರಿಗೊಂಡೊದಗಿ ಹಾಣಾಹಾಣಿಯಲಿ ಹೊಯ್ದಾಡಿತುಭಯಬಲ (ಕುಮಾರಭಾ. ೨-೨೫). ೪. ಬಲವಾಗು; ಶಕ್ತಿಗೂಡು: ಹುರಿಗೊಂಡುದಾತನ ಸತ್ವವಾತನ ದಂಡಿಯಲಿ ಬಹರಾರು (ಕುಮಾಗ. ೪-೩). **ಹುರಿಗೊಳ್ಳು**: ೨. ಜ್ಞಾನದೇವನ ಮನೆತನದಲ್ಲಿ ವಿಠ್ಠಲಭಕ್ತಿಯೂ ನಾಥದೀಕ್ಷೆಯೂ ಮೊದಲೇ ಹುರಿಗೊಂಡು ಬಂದಿದ್ದವು (ಮಹಾಹಿ. ೦೩). ೩. ಅವರೆಲ್ಲರೂ ಮತ್ತಷ್ಟು ಹುರಿಗೊಂಡರು (ಕೃಮಹ. ೬೫).

[ಪುರಿ₃ + ಕೊಳ್₁]

**ಪುರಿಗೊಳಿಸು**, ಹುರಿಕೊಳಿಸು, ಹುರಿಗೊಳಿಸು (ಕ್ರಿ). ೧. ಗಟ್ಟಿಗೊಳಿಸು; ದೃಢಗೊಳಿಸು; ಬಲಪಡಿಸು: ಭಿತ್ತಿಯಿಲ್ಲದೆ ಬರೆವಂತೆ ಚಿತ್ರವ ಬಗೆವೆತ್ತು ಪುಸಿಯ ಪುರಿಗೊಳಿಸಿ ಬಿತ್ತರಿಸಿದಳು ರಾಯನ ಮುಂದಾಕೆಯ ಪೆತ್ತಜನಾವನೆಂದಱಿಯೆ (ಕುಶಲಾಂ. ೩೪-೬೬). **ಹುರಿಕೊಳಿಸು**: ೨.

ಹುರಿದುಂಬು ; ಉತ್ಸಾಹಿಸು : ಮತಳಿಯೊಂಭತ್ತನೆಯ ಮಸು ತಾ ಹುರಿಕೊಳಿಸಿ ವರಯಜನ ಮೊದಲಾದುರುತರದ ಷಟ್ಕರ್ಮವೆಲ್ಲವ ಧರಣಿ ಸುರರಿಂದ ರೂಢಿ ಮಾಡಿಸ (ಸಂಕಶ. ೪-೩೩) ; ರಿಪುಂದವರು ಹತ್ತಿದರು ಹರವರ್ತವ ಹುರಿಕೊಳಿಸಿ [ಪಾಠಾಂ. ಹುರಿಕಟಿಸಿ, ಹುರಿಗೊಳಿಸಿ, ಸರಕಟಿಸಿ] (ಕೂಕರಾ. ೪-೯-೨೬). **ಹುರಿಗೊಳಿಸು :** ೧. ಪರಿಪಿಡಿಗಳಿಂ ತನ್ನ ನೂಲಿಂ ಕರೆಯುವೊಲು ಪೇಲ್ಕಟ್ಟನಂದದಿ ಪರಿವೃತ್ತೋನ್ನತವೃಕ್ಷಗುಲ್ಮಲತಾ ತೃಣಂಗಳಲಿ ಹುರಿಗೊಳಿಸಿ ಮೇಲಕೆ ಕಪೋತವನಿರೆ ರಚಿಸಿ ಕರುವಿಟ್ಟು . . . ಶಿಖರವಂ ನಿಲಿಸಿ (ಬಸಪು. ೧೮-೩೪); ಲಲಾಟೇಕ್ಷಣಾಗ್ನಿಯಂ ಹುರಿಗೊಳಿಸಿ ಪಾಶುಪತಬಾಣವಂ ಬಿಡೆ . . . ಉರಿಪಿದುದು ತತ್ಪುರಂಗಳ ಪರಿಕರಂಗಳಂ (ಶಬಪು. ೪೪-೪೯). ೩. ಹೊಸೆದು ಬಿಗಿಮಾಡು ; ಹುರಿ ಹಾಕು : ಕಣ್ಣಿದ್ದವರು ಮುತ್ತು ಹುಡುಕಿ, ಹಸುವಿದ್ದವರು ಹೊಸ ಎಳೆಯ ಹುರಿಗೊಳಿಸಿ, ನೋಡಿ ಗಾತ್ರ (ನಂಬಸು. ೨೩-೦೨). ೪. ಹೊಂದಿಸು; ಅಳವಡಿಸು : ಸಕಳವಂ ಹುರಿಗೊಳಿಸಿ ಲೀಲಾಸುಕರ ದಿಚ್ಛಾಮಾತ್ರದಿಂದಂ ವಿಕೃತಿಗಳನೆಯ್ದಿಸುವ ಮಹಿತಮಹಾಮಹಿಮಸೀತ (ಬಸಪು. ೩೦-೪೫) ; ಅಲ್ಲಮಪ್ರಭು ಲಿಂಗಸಂಗವನು ಹೃದಯದೊಳು ಹುರಿಗೊಳಿಸುವೊಡೆ ಬಳಿದಜ ಮಹಿಮೆಯನೇನ ಹೇಳುವೆ (ಪ್ರಭುಲೀ ೩-೨೦). ೫. ಹುರಿದುಂಬಿಸು ; ಉತ್ಸಾಹಗೊಳಿಸು ; ಹುರುಪು ಕೊಡು : ಸಾತ್ಯಕಿಯು ಅವರನ್ನು ಹುರಿಗೊಳಿಸಲು ದ್ರಾವಿಡಾಂಧ್ರನಿವಾಸಿಗಳಾದ ಬಲಗಳು ಒಮ್ಮಡಿಯಾಗಿ ಆ ಕರ್ಣನನ್ನು ಸುತ್ತ ಮುತ್ತಿಕೊಂಡಿರಲು (ಕೃವಾಕ. ೬೦); ಅರ್ಜುನನು ಶಿಖಂಡಿಯನ್ನು ಹುರಿಗೊಳಿಸುತ್ತ . . . ಎಂದನು (ವಕಕಾ. ೨೬೫) ; ರಣರಂಗದಲ್ಲಿ ವೀರಾಗ್ರೇಸರರನ್ನುದ್ರೇಕಿಸಿ ಹುರಿಗೊಳಿಸುವುದು ಸಂಗೀತವೇ ಅಲ್ಲವೇ? (ಟಗವಾ. ೬೨).

[ಪುರಿಗೊಳ್ + —ಇಸು$_3$]

**ಪುರಿನೇಣ್**, ಹುರಿನೇಣು (ನಾ). ಹೊಸೆದ ಹಗ್ಗ; ಹುರಿ ಮಾಡಿದ ಹಗ್ಗ : ನೆನೆಯ ಮತ್ತವನ ತಾಯಳ್—ಪೆಂಡತಿಯನ್!_ಇರ್ಮೊಜಿಯ ಪಸರನ್! — ಪುರಿನೇಣನುಸಿರ್ದಿರಿಚಿ ಪೊಲೆಗೆಯ್ದು ಬಾಟನೀಡಾಡಿದಳ್ (ಕಂಕಿಗೂ. ೩-೯೫). **ಹುರಿನೇಣು :** ತರಿಸಿ ಹುರಿನೇಣುಗಳನೀತನ ಕರವೆರಡ ಸೊಡೆಬಿಗಿದಡವದಿರು ಕೆರಳಿ ಮಾಡುವುದಾವುದು (ಕುವ್ಯಾಉ. ೯-೪೦).

[ಪುರಿ$_3$ + ನೇಣ್$_1$]

**ಪುರಿಯಿಡು** (ಕ್ರಿ). ಹುರಿದುಂಬಿಸು ; ಪ್ರೋತ್ಸಾಹಿಸು : (ಮೆಚ್ಚಿ) ಕೊಂಡಾಡು : ಭೃಂಗೀಶಮುಖ್ಯರಂ ಪುರಿಯಿಟ್ಟು ಸತ್ಕೃಪಾಪಾಂಗದಿಂ ನಿಜಕುಮಾರನ ಗುಹನನೀಕ್ಷಿಸುತ್ತುಂಗಜಾರಾತಿ ಬೊಮ್ಮನ ನೋಡಲಿದ್ದು ಕರಕಮಲವಂ ಮುಗಿದು ನಿಂದ (ಶಾವಕಂ. ೧ ೩೬); ನಾಟಕವ ಹರುಷದಿಂ ನೋಡಿ ಪುರಿಯಿಟ್ಟಂಗಚಿತ್ತವಂ ಕರುಣಿಸಿದನಂದಿನೊಡ್ಡೋಲಗದೊಳು ಶೂಲಿ (ಸಂಬಸಾ. ೫-೪೫). 'ಪುರೆಯಿಡು' ಪಾಠ. [ಪುರಿ$_3$ + ಇಡು$_1$]

**ಪುರಿಯೇಱು**, ಹುರಿಯೇರು, ಹುರಿಯೇಱು (ಕ್ರಿ). ೧. ಬಲವಾಗು ; ದೃಢವಾಗು ; ಗಟ್ಟಿಗೊಳ್ಳು : ನೆವಮಿಲ್ಲದಿರ್ಪ ಹರಿಕೃಪೆ ಪವಣಿಲ್ಲದೆ ಪಾಯ್ದು ಕವಿಯೆ ಪರಿಹರಿಸುವರಾರ್ ಭುವನದ ಪುಣ್ಯದ ಪುಂಜಂ ಸವನಿಸಿ ಪುರಿಯೇಱಿ ಬಿರ್ತಿ ಸಡಿಲಿಸುವರದಾರ್ (ಕಕಾ. ೩-೧೦೫). **ಹುರಿಯೇರು :** ೧. ಅಂತಃಕಲಹವು ಹುರಿಯೇರುತ್ತಿತ್ತು (ನಾಟಕೋಟ. ೩೨೮). ೨. ಹುರಿದುಂಬು ; ಉತ್ಸಾಹಗೊಳ್ಳು ; ಉಬ್ಬು : ಬೊಗರಿ ಚಂಡಾಟ ಗುರಿಸುಸಿಗಿಲು ಚಿಣಿಘಣೀ ಚದುರಂಗ ಪಗಡೆಗಳ ವಿರಾಗೊಳಿಸಿ ಹುರಿಯೇರು ತಾಡುತ್ತೆ ಗೆಲ್ದವಂ ಮಂದಿರಕ್ಕೈತಪ್ಪನು (ಶರಕು. ೪-೯). **ಹುರಿಯೇಱು :** ೧. ಕೆರಳಿದರೆ ಕಾಳಹುದು ಭೀಮನ ದುರುಳತನವೀ ಕೌರವೇಂದ್ರನ ಹುರುಡು [ಪಾಠಾಂ. ಳು] ಹುರಿಯೇಱುವುದು ಮತವಲ್ಲೆಂದನಂಧನೃಪ (ಕುವ್ಯಾಕ. ೦೬-೨೨). ೨. ತವತವಗೆ ಧುರತೋರಹತ್ತರು ತವಕಿಸುತ ಹುರಿಯೇಱಿದರು ಕೌರವರು ಕರ್ಣನ ಹರಿಬದಾಹವವೆಮಗೆ ತಮಗೆನುತ (ಕುವ್ಯಾಕ. ೦೯-೪೩); ಹರಿಕರಾಬ್ಜಸ್ಪರುಶಸುಖದಲಿ ಕರಗಿ ಮನ ಹುಂಕರಿಸಿ ಪುಳಕದ ಹರಹಿನಲಿ ಹುರಿಯೇಱಿ ಹೊಂಪುಳಿಯೋಗಿ ಬೆಱಗಾಗಿ . . . ಭಕ್ತಾಭರಣನಿದ್ದನು ಪರಮಭಕ್ತಿಯ ಪಾರವಶ್ಯದಲಿ (ಶಭಾಗ. ೬-೮-೪೪).

[ಪುರಿ$_3$+ಏಱು$_1$ (< ಏಱುಂ$_1$) ]

**ಪುರಿಯೋಡು**, ಹುರಿಯೋಡು (ನಾ). ಹುರಿಯುವುದಕ್ಕಾಗಿ ಬಳಸುವ ಲೋಹದ ಅಥವಾ ಮಣ್ಣಿನ ಬಾಣಲೆ : "ಸಿರಿವಂತಿಗೆಯೊಂದೆನಲ್ಕೆ ಪುರಿಯೋಡಕ್ಕುಂ" (ಶಬ್ದಾಸಿ. ೩೨) : ಬಱಗೊಡನೆಣ್ಣೆ ಪಟ್ಟಿ ನುರಿನೇಣ್ ಬಡಿಕೋಲ್ ಬಲೆಯಿರ್ದಿಲಿಲ್ವು ಸಾಪಱ ಪುರಿಯೋಡು ಸುಟ್ಟಡಗು . . . ಇದಿರೊಳ್ ಬರೆ ಕಾಣಲುಮಾಗದು (ಲೋಕೋಪ. ೦೨ ೦೦); ದೇವಂದಿಟದಿಂ ನಿರುತ್ತಮಿವನೆಂದು ಬಣ್ಣಿಸುತಿರೆ ಗುಣವಂ ಬಿಟ್ಟು ಕೆಟ್ಟು ಪುರಿಯೋಡಾದ್ಯೆ (ರಪೂರ್ಣವ್ಯ. ೬ ೧೨೬). **ಹುರಿಯೋಡು :** "ಸಿರಿವಂತಿಗೆಯೊಂದೆ [ನ]ಲ್ಕೆ ಹುರಿಯೋಡಕ್ಕು" (ರನ್ನಕಂ. ೨); ಮಸಿಯೆಂಬುದು ಹುರಿಯೋಡಿಂಗೆ ಪಣೆಕಟ್ಟೆಂಬುದು ಪೆಟವಲೆಟ್ಟಿಂಗೆ (ಅನುಪ ೨-೨೯ ವ); ಹುರಿಯೋಡಿನಂತಾದುದು ನೆಲನಾ ಗಿರಿವರನೊಳೇಳುವ ಕಿಚ್ಚಿನಿಂದ (ನೇಮಿಸ. ೦೦-೪೦).

[ಪುರಿ$_1$ + ಓಡು$_2$]

**ಪುರಿವರಲ್** (ನಾ). ಕಾದ ಕಲ್ಲು ; ಸುಡುವ ಕಲ್ಲು : ನಾನಲುಮಂ ಬಾನಲುಮಂ ಸಡಿಂಬಮುನಿಡಿಂಬಮುಂ ಪರಲುಮಂ ಪುರಿವರಲುಮಂ ಕಿಸುಗಾಡುಮಂ ನೆಗ್ಗಿಲ್ಗಡುಮಂ . . . ಕಳೆಯ ಪೋಗಿ (ಲೀಲಾವ. ೬-೦೬ ವ).

[ಪುರಿ$_1$ + ಪರಲ್]

**ಪುರಿವಳಲ್**, ಹುರಿಮರಳು, ಹುರಿಮಳಲು (ನಾ). ಚೆನ್ನಾಗಿ ಕಾದ ಮರಳು ; ಸುಡುವ ಮರಳು : ಸಱಿವಳೆಯಿಂ ಬಿಸದುರಿಯಿಂ ಬಿತಮ ಗುಳ್ವುರಗಗಳಿಂ ಸೂಸುವ ಪುರಿವಳಲಿಂ ಮಸೆದಸಿಯಿಂ . . . ಆ ಬಿಜ್ಜೋದರಿ ಮಸಗಿ ಕರಂ ದಾರುಣತರಮಪ್ಪುಪಸರ್ಗಂ ಮಾಡಿದಳು (ಜಗುಕಾ. ೦೬-೦೪). **ಹುರಿಮರಳು:** ಕರಿಯ ಮದ್ದಿನ ಪೊಟ್ಟಣ ಕಟ್ಟಿದಂಬಿನ ಹೊಱ ಹುರಿಮರಳಿನ ರಾಶಿ ಅರೆದ ಸಾಸವೆಗೊಡ ಕಾದಡವಿಯ ಬಹುಹರವಿಗಳೊಪ್ಪಿದುವಾಗ (ಕಂಪವ. ೦೧-೦೯೩) **ಹುರಿಮಳಲು :** ಕಾಸು ವೆಣ್ಣೆ ಹುರಿಮಳಲು ಕವಣೆದಸಿ ಸಾಸಿರಮುಖವಾಗಿಹವು (ಕಂಜಕ. ೩-೦೫).

[ಪುರಿ$_1$+ ಮಳಲ್$_2$ (<ಮಣಲ್)]

**ಪುರಿವಿಳಂಗಾಯಿ** (ನಾ). ೧. ತುಪ್ಪದಲ್ಲಿ ಕರಿದು ತಯಾರಿಸುವ ಒಂದು ಬಗೆಯ ಸಿಹಿ ಭಕ್ಷ್ಯ : ಹೆಸರುಬೇಳೆಯ ಹುರಿದು ಬೀಯಿಸಿಕೊಂಬುದು, ದೊಡ್ಡ ಸಜ್ಜಿಗೆಯ ಬೀಯಿಸಿಕೊಂಬುದು, ತೆಂಗಿನ ಕಾಯ ಹೆಸರ ತೋರದಲಿ ಕೊಯಿದು ಹಾಕಿ ಸಕ್ಕರೆಯ ಹಾಕಿ, ಮೆಣಸು ಏಲಕ್ಕಿ ಕರ್ಪೂರವ ತಳಿದು ಕಲಸುವುದು, ಅಡಕೆಯ ತೋರ ಉಂಡೆಯ ಮಾಡಿ, ಅಕ್ಕಿಯ ಹಿಟ್ಟ ಸಣ್ಣವಾಗಿ ಅರೆದು, ಗಟ್ಟಿಯಾಗಿ ಕಲಸಿ, ಈ ಉಂಡೆಗಳ ಆ ಹಿಟ್ಟಿನೊಳಗೆ ಅದ್ದಿ, ಕಾದ ತುಪ್ಪದಲ್ಲಿ ಹಾಕಿ ತೆಗೆವುದು. ಇದು ಪುರಿವಿಳಂಗಾಯಿಯೆನಿಸಿಕೊಂಬುದು (ಭೀಮಸೂ. ೨೪). ೨. ಹೆಸರುಹಿಟ್ಟಿನಿಂದ ತಯಾರಿಸುವ ಒಂದು ಬಗೆಯ ಸಿಹಿಭಕ್ಷ್ಯ,—ಉಂಡೆ. 'ಪುಳ್ಳಂಗಾಯಿ ಉಂಡೆ' ಪಾಠ. [ದೇ.॥ ತಮಿ. ಪೊರಿವಿಳಙ್ಗಾಯ್, ಪೊರಿವಿಳಾಙ್ಗಾಯ್; ತೆಲು. ಪೊರಿವಿಳಂಗಾಯಲು]

**ಪುರಿಸ** (ನಾ). ಅಮೇಧ್ಯ; ಮಲ : ಮುನಿರಾಯ ಕೇಳೆನ್ನ ತನು ಪೊಲಸು ಪುರಿಸವೇ ವಿನಯದಿಂ ನೋಡೆಂದುರವ ಬಗೆದು ತೋಱ ಘನ ತಸಿವಾಲು ಸೂಸೆ (ಪ್ರಭುಪು. ೨-೪೦). [< ಸಂ. ಪುರೀಷ]

**ಪುರಿಸಂಡಗೆ**, ಹುರಿಸಂಡಗೆ (ನಾ). ಒಂದು ಬಗೆಯ ಸಂಡಗೆ ; ಎಣ್ಣೆಯಲ್ಲಿ ಹುರಿಯುವ ಬತ್ತದ ಅರಳಿನ ಸಂಡಿಗೆ : ತೆಗೆ ತಿಲವನೌಪಾಸನದ ಕೊಳವಿಗಳ . . . ಹಪ್ಪಳವ ಪುರಿ[ಪಾಠಾಂ. ಮಿರಿ]ಸಂಡ[ಪಾಠಾಂ. ಡಿ]

ಗೆಯು ಹೂರಿಗೆಯು (ಕೊರಂಣ. ೩-೯-೬೦). **ಹುರಿಸಂಡಗೆ :** ನೊರೆಸಂಡಗೆಯನು ಹುರಿಸಂಡಗೆಯು ಬಾಳಕವನು ತಪ್ಪದೆಲ್ಲಾ ಸಾಧನವನು ಸಂವರಿಸಿ ತಂದೊಪ್ಪಿಸಿದಡೆ (ಸಿದ್ಧರಾ. ೬-೩೨). [ಪುರಿ1 + ಸಂಡಗೆ]

**ಪುರೀತತ್ತು** (ನಾ). ಕರುಳು : "ಅಂತ್ರಂ, ಪುರೀತತ್—ಈ ೨ ಕರುಳ್" (ಹಲಾಯು. ೧೧೯-೦೩). [ಸಂ. ಪುರೀತತ್]

**ಪುರೀಷ** (ನಾ). ೧. ಹೇಲು ; ಮಲ : "ವರ್ಚಃ . . . ಪುರೀಷಂ, ಶಮಲಂ, ಮಲಂ—ಈ ೧೩ ವಿಷ್ಟೆ" (ಹಲಾಯು. ೧೨೫-೦೫) ; ಆರಯೆ ಮೂತ್ರ ಪುರೀಷಾಗಾರಂ ಸಂಪ್ರಾಪ್ತಸಪ್ತಧಾತುವಿಕಾರಂ ಚಾರುಗುಣವಿದೂರಮತಿ ವಿಷಮಾರು ಶರೀರಂ ದುರಂತದುಃಖಾಧಾರಂ (ಅಜಿಪು. ೨-೩೦). ೨. ಕೊಳೆ ; ಹೊಲಸು : ಸಿಂಬುಳು ಕೀವು ಕೆರಂಕಸ್ರಗಂಬು ಮಲಂ ಮೂತ್ರಮಾ ಪುರೀಷಂ ಜೀವಂ ಬೆಂಬಿಡದೀ ಪಂದೊವಲ ಪಸುಂಬೆಯೊಳೀಯೊಡಲೊಳಾವ ಸುಖಕಿರ್ದಪುದೋ (ಅಜಿಪು. ೬-೫೫) ; ಕೀವಿನ ರುಧಿರ ಪುರೀಷದ ಬಾವಿಯೊಳಾವಾಸವಾಗಿ ನೆಲಸಿಹ ನಾನಾಜೀವಿಗಳ ನೋವ ನೋಡುತ್ತಾ ವಿಭು ಸಾವಂದತಂದೆ ಮಜುಗುತ್ತಿರ್ದಂ (ಪದ್ಮಣಾ. ೩-೦೩೦). [ಸಂ.]

**ಪುರು** (ಗು). ೧. ಹೇರಳವಾದ ; ವಿಪುಲವಾದ ; ಅಧಿಕವಾದ : ಪುರು ಪುಣ್ಯಂ ವಿಮಲೋರುಕೀರ್ತಿ . . . ನಾಕಿಗಂ (ವರ್ಧಮಾ. ೦-೩೦) ; ಪರಮಾರ್ಥಂ ಪುರುಧರ್ಮದಾನಫಲದಿಂ ಸ್ವರ್ಗಾಪವರ್ಗಕ್ಕಮಿಾಶ್ವರನಪ್ಪಂ ವರಪಾತ್ರ ಸಂತತಿಗೆ ದಾನಂಗೆಯ್ವುದಾನಂದದಿಂ (ಜಾತೀಶ್ವ. ೬-೦೦೮). ೨. ಮಹತ್ತಾದ ; ವಿಶಾಲವಾದ : ಪ್ರತ್ಯಹಮೊಪ್ಪುಗುಂ . . . ಆದಿತ್ಯಪುರಂ ಪುರಂದರಪುರಪ್ರತಿಮಂ ಪುರುರತ್ನಗೋಪುರಂ (ಚಂದ್ರಪ್ರ. ೬-೩). (ನಾ). ೩. ಹಿರಿದು ; ದೊಡ್ಡದು : "ಬೃಹತ್, ಉರು, ಗುರು, ವಿಸ್ತೀರ್ಣ, ಪುರು . . . ವರಿಷ್ಠಂ—ಈ ೧೨ ಹಿರಿದು" (ಹಲಾಯು. ೧೮೬-೧೯) : "ಬೃಹದುರು ಪುರು ಪೃಥುಳ ಪೃಥು ವಿಶಾಲಮುಮಾ ಗುರು ಮಹದತಿವ್ಯೂಢಮೆನೆ ವಿಸ್ತೀರ್ಣವೆಂದೆನಿಕು" (ಮಂಗರಾ. ೧೨೬-೮). ೪. ಚಂದ್ರವಂಶದ ಒಬ್ಬ ಪ್ರಸಿದ್ಧನಾದ ಅರಸು ; ಯಯಾತಿಯ ಮಗ ; ಕೌರವ, ಪಾಂಡವರ ವಂಶದ ಮೂಲಪುರುಷ : ಸರಿಯೆ ಪೇಳ್ವನಗಿದು ಭೂಪ ಓಹೋ ಪುರುವಂಶದೀಪ (ಶಾಕುಂತ. ೬೮ ಅವಿ). 'ಪುರುಕುಲ' ಪರಾ. ೫. [ಜೈನ] ಮೊದಲನೆಯ ತೀರ್ಥಂಕರನಾದ ವೃಷಭನಾಥ; ಆದಿತೀರ್ಥಂಕರ : ಪುರುಪರಮೇಶ್ವರನಿಳೆಗವತರಿಸಿದಂ (ಆದಿಪು. ೬-೩೬) ; ಪುರುವಂಶದ ಕುರುವಂಶದ ಹರಿವಂಶದ ನಾಥವಂಶದುಗ್ರಾನ್ವಯದುರ್ವರೆಯೊಡೆಯರಾದಿಯಾಗಿರೆ ನರನಾಥಸುತರ್ಕಳೆನಿಬರಾನುಂ ಬಂದರ್ (ಶಾಂತಿಪು. ೩-೩೬) ; ಪುರುವಂಶಾಭರಣಂ ತ್ರಿಪಿಷ್ಟನೃಪನಾ ವಿದ್ಯಾಧರೇಂದ್ರಂಗೆ ಸಾದರದಿಂ ತಾನಿದಿರ್ವಂದು (ಶಾಂತೀಶ್ವ. ೪-೨೦೩). [ಸಂ.]

**-ಪುರುಕ,-ಪುರಕ** (ಪ್ರ). ಭಾವನಾಮವಾಚಕವಾದ ಒಂದು ತದ್ಧಿತ ಪ್ರತ್ಯಯ : 'ಅಂಜುಪುರುಕ', 'ಅಳುಬುರುಕ' ಪರಾ.—**ಪುರಕ :** 'ಅಳುಬುರಕ', 'ಆಸೆಬುರಕ' ಪರಾ.

**-ಪುರುಕಿ** (ಪ್ರ). ಭಾವನಾಮವಾಚಿಯಾದ ಒಂದು ತದ್ಧಿತಪ್ರತ್ಯಯ : ಕಿಳಿ ಪ್ರತ್ಯಯವು ಯಾವ ಅರ್ಥದಲ್ಲಿ ಬರುತ್ತದೆಯೋ ಅದೇ ಅರ್ಥದಲ್ಲಿ ಪುರುಕಿ ಪ್ರತ್ಯಯ ಬರುತ್ತದೆ (ಹೊಸಗ. ೬೪). 'ಅಂಜುಪುರುಕಿ' ಪರಾ. [-ಪುರುಕ + — ಇ2]

**ಪುರುಕುಲ** (ನಾ). ಪುರುಮಹಾರಾಜನ ವಂಶ : ಎಲೆ ಪುರುಕುಲೋತ್ಪನ್ನನೆ . . . ಇಂಥ ಕಠಿನೋಕ್ತಿಗಳಿಂದ ತಿರಸ್ಕರಿಸುವುದು ನಿನಗೆ ಯುಕ್ತವಲ್ಲವಲ್ಲಾ ? (ಶಾಕುಂತ. ೬೬-೦೩). [ಸಂ.]

**ಪುರುಚಲಿಗಿಡ** (ನಾ). ಒಂದು ಬಗೆಯ ಸಸ್ಯ : ಹೇನುಬುರುವಿನ ಗಿಡ, ಪುರುಚಲಿಗಿಡ, ಪುಲ್ಸಾರೆ (ಮೈಶಿಗಿ. ೩೩-೦೦೦೬). [ಪುರುಚಲಿ + ಗಿಡ (< ಗಿಡು)]

**ಪುರುಚಲು** (ನಾ). ಕೆದರಿದುದು : ಕೂದಲು ಪುರುಚಲು ಪುರುಚಲಾಗಿದೆ (ಬೂಶಿ). [ಪುರುಚು ? + — ಅಲು (< — ಅಲ್1)]

**ಪುರುಜ** (ಗು). ಅಧಿಕವಾದ ; ಅನೇಕವಾದ. [ಸಂ.]

**ಪುರುಡಿ1** (ನಾ). ಮತ್ಸರವುಳ್ಳವಳು ; ಅಸೂಯೆಪಡುವವಳು ; ಈರ್ಷ್ಯೆಯುಳ್ಳವಳು : ಅವನ ಸತಿ ಪುರುಡಿ ನೆವದಿಂ ಬವರವನೆ ಪೊಣರ್ಚಿ ಮಾಱಿದತ್ತಾಶ್ಚೆ ಮಹಾಹವಶೀಲೆ ತನ್ನ ಮನೆಯಿಂದವೆ ಪೊಱಮಡಿಸಿದಳ್ ಕನಲ್ದು ಪದ್ಮಾವತಿಯಂ (ಪುಣ್ಯಾಸ್ರ. ೨-೪೩). [ಪುರುಡು1 + — ಇ2]

**ಪುರುಡಿ2 ?** (ನಾ). (?): ಕರ ಚರಣವನು ಮಿಸುಕಲಮ್ಮದೆ ಗರುಡಿಯೋಜನು ಪು [ಶಾತಾಂ. ಪ]ರುಡಿಯನು ಮರವಂತೆ ನಿಂದಿರ್ದ (ಶಾಕ್ತಶಾ. ೩೦-೬೨). [ ? ]

**ಪುರುಡಿಗ,** ಹುರುಡಿಗ (ನಾ). ಹೊಟ್ಟೆಕಿಚ್ಚಿನವನು; ಈರ್ಷ್ಯೆಪಡುವವನು ; ಮತ್ಸರಬುದ್ಧಿಯುಳ್ಳವನು : ಆಗಮಾರ್ಥಮನೇನೆಂದಱಿಯದರೊಳ್ ಪುರುಡಿಗರೊಳ್ ಬಱುದಲೆಯೆಂದೆಳೆಸಿ ಕೇಳಲಾಗದು ಪುರುಷಂ (ಧರ್ಮಾಮೃ. ೬-೨೧೩); ಪಾಱುವ ಪುರುಡಿಗನಂ ಪೂಣ್ದು ಬೇರ್ಕೆಯ್ದು ಲೋಭ್ಯೋಜ್ವಳನಂ ಜಿಗೋಡಾಡಿ ಪೋಗಾಡುವ . . . ಚಾತುರ್ಯದ ಪೊಸಬಗೆಯೆನ್ನೊಳ್ ನಿತಾಂತಂ ನಿಸರ್ಗಂ (ಪ್ರಪಂ. ೨೪-೨೪). **ಹುರುಡಿಗ :** "ಈರ್ಷ್ಯಾಳುಃ, ಕುಹಕಃ—ಈ ೨ ಹುರುಡಿಗಂ" (ಹಲಾಯು. ೬೩-೨೨೯) ; ಹುರುಡಿಗರನೇಕಾಂತದೊಳಗಾದರಿಸುವರು ಭೇದಕರ ಬುದ್ಧಿಗೆ ತೆಱಹುಗೊಡುವರು . . . ಈ ಧರೆಯರಸುಗಳಿಗಿದು ಸಹಜ (ಕುಮಾವ್ಯಾಸ. ೦-೬೩). [ಪುರುಡು1 + — ಇಗ]

**ಪುರುಡಿಸು,** ಹುರುಡಿಸು (ಕ್ರಿ). ೧. ಸ್ಪರ್ಧಿಸು; ಪೈಪೋಟಿ ನಡೆಸು : ಸ್ಥಿರನೇ ಮೇರುಗಿರೀಂದ್ರದೊಳ್ಪಣಸುವಂ ಗಂಭೀರನೇ ವಾರ್ಧಿಯೊಳ್ ಪುರುಡಿಪ್ಪಂ (ಎಕ. VII. ಶಿವಮೊ. ೦೦-೨೬ ; 1085 ?) ; ಉದಾರಗುಣದೊಳ್ ಪುರುಡಿಸುವಂ ಕಲ್ಪವೃಕ್ಷದೊಳ್ದ್ವಣೆಜಂ (ಧರ್ಮಾಮೃ. ೦-೯೦); ಹರಿಚಂದನ ಪಾರಿಜಾತ ಮಂದಾರದ ತರುಚಯದಿಂ ಸಿದ್ಧರಸದ ಸರಸಿಗಳಿಂದಾ ಗಿರಿ ಗೀರ್ವಾಣರ ಪುರದೊಡನದು ಪುರುಡಿಪುದು (ಸುರಾಶಾಂ. ೨-೦೪). ೨. ಹೊಟ್ಟೆಕಿಚ್ಚು ಪಡು ; ಮತ್ಸರಿಸು ; ಅಸೂಯೆ ಪಡು : ವಜ್ರದಾಡಂ ಕೇಳ್ದು ಮನದೊಳ್ ಮುಳಿದು ಪುರುಡಿಸಿ . . . ಬಾವಿಯು ಬಾಗಿಲೆಲ್ಲಮಂ ನಿಶ್ಛಿದ್ರಮಾಗಿ ಮುಚ್ಚಿ ಕವಿದಿಕ್ಕಿ ಪೋದಂ (ವಡ್ಡಾರಾ. ೧೩೬-೨೩); ನರನಂದನನಂ ಕಂಡು ವಿಕ್ರಮಕ್ಕಂ ಕ್ರಮಕ್ಕಂ ಪುರುಡಿಸುವ ಸುಯೋಧನನ ಮಕ್ಕಳ್ . . . ಸೂರ್ವರುಮೊಂದಾಗೆ ಬಂದು ತಾಗಿದಾಗಳ್ (ಪಂಪಭಾ. ೦೦-೯೯ ವ); ಸವತಿಗೆ ಸವತಿ ಪುರುಡಿಪಳ್ (ಕವಿತ. ೧೩೦ ಕೃಹೋ); ಗುಣಕೆ ಪುರುಡಿಪರೊಳರೇ (ರಸಿಕ. ೦-೬). **ಹುರುಡಿಸು :** ೧. ಕೈಲಾಸವದಕೆ ಹುರುಡಿಸುತಲಿರ್ಪುದು ನೋಡ ಮೇಲೆನಿಪ ಮೇರುವೆಣಸುತ್ತಿರ್ಪುದುಂ ನೋಡ (ತಿರುಕ. ದೀ. ೩-೨೦); ಎಳೆಯ ಮಿಂಚಿಪ ಕುಡಿಯ ಸೂಸುವ ನಳಿನದೃಶೆಯರು ಶಶಿಯು ಬಿಂಬವ ಹಳಿವ ಹುರುಡಿಸುವಬುಜಮುಖಿಯರು ಕೋಪಮಲಾಂಗಿಯರು . . . ಕುರುರಾಯ ನೆಡವಂಕವಲಿ ಮೋಹಿವರು (ಕುಮಾವ್ಯಾಉ. ೬-೪೪); ಚಕ್ರವರ್ತಿಯ ಸೇವೆಯೆಂದು ಪುಷ್ಪ ಪುಷ್ಪವೂ ಹುರುಡಿಸುತ್ತಿದೆಯೋ ಎಂಬಂತೆ ಪಾರಿಜಾತ, ಜಾಜಿ . . . ಜಲಜಗಳು ತಮ್ಮ ತಮ್ಮ ಸುಗಂಧವನ್ನು ಸೂರೆಗೊಡುತ್ತಿವೆ (ನಶಿದಾ. II. ೦೪೬೪). ೨. ಒಸೆದು ಕಮಲಿನಿ ನಗಲು ಮಿಗೆ ಹುರುಡಿಸುತ ಪೂರ್ವದಿಶಾನಿತಂಬಿನಿ ನಿಶಿತಕೋಪದ ಕಿಡಿಯನುಗುಳಿದಳೆನಲು ರವಿ ಮೆಱೆದ (ಕುಮಾವ್ಯಾದ್ರೋ. ೨-೦೩). [ಪುರುಡು1 + — ಇಸು1]

**ಪುರುಡು1,** ಹುರುಡು1 (ನಾ). ೧. ಸ್ಪರ್ಧೆ ; ಪೈಪೋಟಿ; ಮೇಲಾಟ : ಖೇಚರನುಂ ಕುಮಾರನಂ ಕಂಡು ಪುರುಡಿಂ ಮುಳಿಸು ಪೆರ್ಚಿ . . .

ಕೊಲ್ವೆನೆಂದು ಕಿಬ್ಬು ಬಾಳ್ವೆರಸು ಬಂದೆಱಗಿ ಇಱಿದು (ವಡ್ಡಾರಾ. ೫೯-೨೬); ಎಸಿತಾನುಂ ತೇಜದೊಳಳಿಪಿನ ಅಲ್ಲಿಯ ಚಿಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ ಕಾಲ್ವಿಡಿದುಮುಚಳಿತಧೈರ್ಯನ ಮಾನವುಂ ಚಳಿಯಿಸಲಾಱದೆ (ಶಂಶಕಾ. ೭-೬೪ವ); ನಿನಗಂ ಮದನಂಗಂ ರೂಪಿನ ಪುರುಡುಂಟು (ಅಸಂಪು. ೬-೩೭). ೨. ಹೊಟ್ಟೆಕಿಚ್ಚು; ಈರ್ಷ್ಯೆ; ಮತ್ಸರ: ಆತನ ಪ್ರಾಣೇಶ್ವರಿ ಪಪ್ರಮಾಳಿನಿ ಕಂಡು ಪುರುಡುಮುಂಬಲುಂಮೊಡವಳೆಯ ನಿಶಿತಾಸಿ ಧೇನುವಂ ಕಿಬ್ಬು ಬೆನ್ನಟ್ಟಿ ಮುಟ್ಟಿ ಬೆಱಗಿಲ್ಲದಾತನ ಬೆನ್ನಂ ಪನ್ನಿವರವಿಕ್ಕಿದಂ ತಿರೆ ಪೊಯ್ಯೆ (ಶಾಂತಿಪು. ೯-೯೭ ವ): ಪುರುಡಿಂ ಭಾರತೀಶನಂ ಸೋಂಕಲ್ . . . ವಿನೀತನಂ ದೂರದಿಂ ನೋಡಿ ಪಾತಕನಿವನೆಂದು ತೀದು ಪೋಗಳಿಂದಿರೆ ನಂಬದಿರ್ (ಕಾದಂಪೂ. ೩೯೯); ಉರ್ವಿಯೊಳ್ ನಿಖಿಲಪುಣ್ಯಾಂಭೋಧಿ ಯುಪ್ಪಾತನಂ ಪುರುಡಿಂದಂ ಕೊಲಲೆಂದು ಕಾಯ್ದು ನರನುಂ ಗಾಂಪಂ ಪೆಱರ್ ಗಾಂಪರೇ (ಧರ್ಮಾಮೃ. ೧೦-೨೦೬). ೩. ಹಟ; ಛಲ: ಪರೆದಾಗ ಕೊಡದಿಹುದು ನೆಲದ ಕಟ್ಟಳೆಗೇನು ಮರುಳೊ ಕರೆಯದೆ ಕೊಡುವ ಪುರುಡೇಕೆ ಬಿಡದು ? (ಅಬಂಚ. ೩೭-೯೦). **ಹುರುಡು₁**: ೧. ಕಮಳಪ್ರಭೆಗಂ ತನಗಂ ಹುರುಡಿಂದಮೋ ಪರಸ್ಪರಾನುರಾಗವಮಳವಿಗಬಿಯೆ (ಅರ್ಜನೀ. ೩-೧೦೫ ವ); ಹುರುಡು ಜಾಣುಮೆ ಚಳಬಳಿಕೆ ಚಪ್ಪರಣೆ ವಂಚನೆ ನೇಹವೇಬೀ ಪರಿಯ ಮಾಯಾಮಯದ ಮಹಿಳಾಜನ ವಿರಾಜಿಸಿತು (ಕೊರಟಾ. ೧-೫-೩೨); ಒಂದೊಂದು ಸಲ ಹೆಣ್ಣಾಳುಗಳಿಗೂ ಗಂಡಾಳುಗಳಿಗೂ ಹುರುಡು ಬಂದು ಬಿಡುತ್ತಿತ್ತು (ನಮ್ಮೂರ. ೧೯೨). ೨. ಹುಸಿಯಿಲ್ಲ ಹುರುಡಿಲ್ಲ . . . ಮತ್ಸರವಿಲ್ಲ ನೆರವಿಲ್ಲ ವಸುಧೆಯೊಳು ಸಿದ್ಧರಾಮಂಗೆಂಬ ಕೀರ್ತಿ ಪಸರಿಸಿತು ಮೂಲೋಕದೊಳಗೆ (ಸಿದ್ಧರಾ. ೭-೨೫); ಹುರುಡೇಕೆ ಗುಣದೊಳಗೆ (ಕುಮಾ. ೧-೨೫); ಹುರುಡು ಹುಟ್ಟಿದವೊಲು ಸಕಲಕಾಂತೆಯರೊಳು ಮಣಿಮಿಸಿರುತಿಹನಾಗಿ ಪುರುಷರೊಳುತ್ತಮನೀತನೆಂದಾತಗೆ ಪುರುಷೋತ್ತಮನೆಂಬ ನಾಮ (ಭರತ. ೦೫-೦೭). ೩. ಗುರುಗಳಿಂದ ಬಹುಭಾಸಗಿರಿ ಪಡೆಯಬೇಕೆಂಬ ಹುರುಡು ಸಂಜೀವಯ್ಯನಿಗೆ ಹತ್ತಿತ್ತು (ರಾಗಿಣಿ. ೫೫). ೪. ಆಸೆ; ಬಯಕೆ; ಇಚ್ಛೆ: ಇಂತಪ್ಪ ಸಿರಿಯನಾಂ ಪಡೆದೊಸೆದು ಸತ್ಪಾತ್ರಸಂತತಿಗೆ ದಾನವಂ ಕೊಡುವೆನೆಂದೆಂಬ ಹುರುಡಂತರಂಗದೊಳು ಸಂಜನಿಯಿಸಲ್ (ಸಮ್ಯಕ್. ೧೧-೬). ೫. ಲವಲವಿಕೆ; ಉತ್ಸಾಹ: ಎನ್ನನ್ನು ಮನ್ನಿಸುವ ದೊರೆಯಿಲ್ಲ ಹರಣದಲ್ಲಿ ಹುರುಡಿಲ್ಲ ಕರಣದಲ್ಲಿ ದೃಢವಿಲ್ಲ (ಶರಶ. ೨೪).

**ಹುರುಡು ಮಾಡು** = ೧. ಸ್ಪರ್ಧಿಸು; ಪೈಪೋಟಿ ಮಾಡು: ಸ್ವಯಂವರಮಂದಿರದೊಳಗೆ . . . ಒಬ್ಬರೊಡನೆ ಒಬ್ಬರು ಹುರುಡು ಮಾಡುತ್ತಾ ಎಲ್ಲ ರಾಜರೂ ಕುಳಿತಿದ್ದರು (ವಡ್ಡಾ. ೩೦); ಇಬ್ಬಣದವರೂ . . . ಹುರುಡು ಮಾಡುತ್ತಿರುವುದೂ ಈ ಕಾಲದ ವಿಶೇಷ ಲಕ್ಷಣ (ಬಸವ. V, ಮೊದಲಿನ ಮಾತು). ೨. ಉತ್ಸಾಹಗೊಳಿಸು; ಹುರಿದುಂಬಿಸು; ಚುರುಕುಗೊಳಿಸು; ಪ್ರಚೋದಿಸು: ಯುಧಿಷ್ಠಿರನು . . . ತಮ್ಮ ಸೈನಿಕರನ್ನು ಕರೆದು ಭೀಷ್ಮನನ್ನು ಸುತ್ತ ಮುತ್ತಿಕೊಂಡು ಸಂಹರಿಸುವುದಕ್ಕಾಗಿ ಹುರುಡು ಮಾಡಿದನು (ಕೃಷ್ಣಾಲಿ. ೦೩೩).

[ದೇ. ॥ ಕೊಡ. ಪುಡ್ರ್; ತೆಲು. ಪುರುಡು]

**ಪುರುಡು₂** (ನಾ). ೧. ಮಗುವಿನ ಜನನಸಂಬಂಧವಾದ ಮೈಲಿಗೆ; ಹುಟ್ಟುಸೂತಕ; ಜಾತಾಶೌಚ; ವೃದ್ಧಿ: ದೇಯಿಯು . . . ಅವಳಿ ಜವಳಿ ಗಂಡುಮಕ್ಕಳನ್ನು ಹೆತ್ತಳು. ಪುರುಡಿನ ದಿವಸಗಳು ಕಳೆದ ನಂತರ ಮಕ್ಕಳಿಗೆ ನಾಮಕರಣವಾಯಿತು (ಕೋಟಿಚ. ೫). ೨. ಮರಣಕ್ಕೆ ಸಂಬಂಧಪಟ್ಟ ಮೈಲಿಗೆ; ಮೃತಾಶೌಚ; ಸೂತಕ: ಹತ್ತುದಿವಸದವರೆಗೆ ಪುರುಡು. ಹತ್ತನೇ ದಿವಸ ಶುದ್ಧಕರ್ಮಾಂತರಗಳು (ತಂಗಾಳ್. ೨೦೬); ಬಿಗಿದುಡೆಯ ಬಿಡಲದಕೊ ಹುಟ್ಟು ಸಾವುಗಳಿಂದ ಆಗಳುಂ ಪುರುಡಾಗಿ ನೆಲೆವೆಣ್ಣೆ ಮಿಾಹು (ಶಾಂತೀಶ. ೪೭ ೬೩).

[ದೇ. ॥ ತಮಿ. ಪುರುಟು; ತೆಲು. ಪುರುಡು]

**ಪುರುಡುಗೆಯ್** (ಕ್ರಿ). ಅಸೂಯೆಗೊಳ್ಳು; ಮತ್ಸರಿಸು: ವಂಚಿಸದೆ ಪುಸಿಯದವಳುಪದೆ ಸಂಚಲಸದೆ ಪುರುಡುಗೆಯ್ಯದಿರದಿರದೆ ೬ರಂ ಬಂಚಿಸ ದಳಲಿಸದುಬ್ಬುಗಿಸುವಂ ಚದುರಂ ಸಜ್ಜನಂಗಳಂ (ಪುರಾ. ೮-೧೨).

[ಪುರುಡು₁ + ಕೆಯ್₁]

**ಪುರುಡುದೋಱು** (ಕ್ರಿ). ಹೊಟ್ಟೆಯುರಿಯನ್ನು ವ್ಯಕ್ತಪಡಿಸು; ಮಾತ್ಸರ್ಯವನ್ನು ತೋರಿಸು: ಇಂತು ಪಲ್ದಿಂದು ಗಜಱಿ ಗರ್ಜಿಸಿ ಪುರುಡುದೋಱಿ ಬಾಯ್ಗೆ ಬಂದಂತೆ ಗಳಪಿ ಮಾನಸಿಧಿಯಾದ ಮಲ್ಲಣನಂ ಮಲ್ಲಣಿಯ ಮಾತೆ ಮನೆಯಿಂ ಪೊಱಮಡಿಸಿ (ವೃತವಿ. ೨೯-೨೫ ವ).

[ಪುರುಡು₁ + ತೋಱು]

**ಪುರುಡುಮಾತು** (ನಾ). ಸ್ಪರ್ಧೆಯ ಮಾತು; ಪೈಪೋಟಿಯ ನುಡಿ: ಸಾರ್ದೆಳಸುತ್ತುಂ ಪೋರ್ವ ಬಿಂಕಂ ಪದಯುಗದೊಳಮಿಾ ವಿಶ್ವತಃಪಾದನೊಳ್ ಸಂಗಳಿಸಿತ್ರೀ ವಿಶ್ವತೋವಕ್ತ್ರನೊಳೆ ಪುರುಡುಮಾತೆನ್ನದೋ ಮದ್ವಿಮೋಹಂ (ಶರಶ. ೪-೧೭೦). [ಪುರುಡು₁ + ಮಾತು₁]

**ಪುರುಪಕ್ಷ** (ನಾ). ದೊಡ್ಡ ರೆಕ್ಕೆಯನ್ನುಳ್ಳದು; ನವಿಲು: "ಚಕ್ಷುಶ್ರ್ರವಾಶಂ ಕಳಾಪಿ ಶಿಖಿ ಕೇಕಿ ಪುರುಪಕ್ಷಂ ಮಯೂರಂ ಶಿಖಂಡಿ ಹರಿಕಂಠಂ ಶಿಖಾವಳಂ ನವಿಲೆನಿಕ್ಕುಂ" (ಮಂಗರಾ. ೩೦-೨). [ಸಂ.]

**ಪುರುಪಾತ್ರ** (ನಾ). ಅಗಲವಾದ ಪಾತ್ರೆ; ಹರಿವಾಣ: "ಪುರುಪಾತ್ರ ಮೆನೆ ಪರಿಯಾಣಮಕ್ಕು" (ಮಂಗರಾ. ೭೩-೨೫). [ಸಂ.]

**ಪುರುಪೃಷ್ಠ** (ನಾ). ಹಾವು; ಸರ್ಪ: "ಭುಜಂಗಮಂ ಪುರುಪೃಷ್ಠನಹಿ ಚಕ್ರಿ . . . ಎನಲು ಸರ್ಪಂಗೆ ನಾಮಂ" (ಮಂಗರಾ. ೦೦೮-೦). 'ದೀರ್ಘ ಪೃಷ್ಠ' ಪರಾ. [ಸಂ.]

**ಪುರುಲೆ₁** 'ಪುಜಲೆ' ನೋ.

**ಪುರುಲೆ₂** (ನಾ). ಒಂದು ಬಗೆಯ ಹಲ್ಲು: 'ಅಂಟುಪುರುಲೆ' ಪರಾ. [?]

**ಪುರುವಳ್ಳಿ**, ಪುರುಳಿ₁, ಹುರುವಲ್ಲಿ, ಹುರುವಳ್ಳಿ, ಹುರುಳಿ (ನಾ). ಒಂದು ಬಗೆಯ ದ್ವಿದಳಧಾನ್ಯ; ಕುಲತ್ಥ: ಜ್ವರದೇಟಿಗೆಯೊಳ್ ಕವುಡೆಯ ರಸಮಕ್ಕಿ ಲೊಕ್ಕಿಯನರಿಷ್ಟಫಲಂಗಳನಕ್ಕಿ ಮಂದಿಗಡ್ಡೆಯ ಪುರುವಳ್ಳಿಯೂಪ ಜಳಮಂಕ್ಕುಪಯೋಗಿಸಿದಂದು ಮಟ್ಟುಗುಂ (ಲೋಕೋಪ. ೯-೨೦೫); ಮೋಟೆ ಪುರುವಳ್ಳಿ ಎಲೆಯುತ್ಪಾಟಿಸಂಗುಂ ನಸ್ಯಕರ್ಮದೊಳ್ ವಿಷಮಂ (ಖಸುದ. ೬-೮೯). **ಪುರುಳಿ₁**: "ಶುಕ ಕುಳುತ್ಥಗಳೊಳಂ ಪುರುಳಿ" (ಕಬ್ಬಿಗಂ. ೦೦೪); ಪೆಸಱುಂ ಕಡಲೆಯುದ್ದುಂ ನೆಲ್ ಗೋದುಮೆ ಜವೆ ತಕ್ಕವರೆ ತೊಗರಿ ಪುರುಳಿ ಯುಮಿಕ್ಕಲಿಪಂ ಸವಿದು ಸವಿದು ನುಂಗಿದನಾಗಳ್ (ಹಾಲಕ್ಕ. ೦-೬-೨೦). **ಹುರುವಲ್ಲಿ**: .ಗೋಧಿ . . . ಉದ್ದು ತೊಗರಿ ಹುರುವಲ್ಲಿ ಮುಂತಾದ ಧಾನ್ಯಕ್ಕೆ (ಎಕ. ೪. ಬೇಲೂರು. ೬೫-೯೩; 1382). **ಹುರುವಳ್ಳಿ**: ಯವ-ಯವೆ, ಸರ್ಷಪ—ಸಾಸವೆ . . . ಕುಲತ್ಥ-ಹುರುವಳ್ಳಿ (ಕೃಷಿಶಾ. ೪-೨೬); ಬಿತ್ತುಗೆ ಹೆ(ಪ)ಸಱು ಹಸ್ತ(ದಿ)ದೆ ಮತ್ತಂ ಸಲೆ ಪೂರ್ವಷಾಢ(ದ)ಲಸಂದೆಗಳಂ ಸತ್ತ ಮನುರಾಧೆಯೊಳೆ ತಾಂ ಬಿತ್ತುಗೆ ಹುರುವಳ್ಳಿಯುಗಸೆಗಳ್ವಿನಿಯಕ್ಕುಂ (ಅಬ್ಬಿಪು. ೯-೪೭); ಹುರುಳಿಯ ವಿಷಕ್ಕೆ_ಹುರುವಳ್ಳಿ [ಪಾಠಾಂ. ಹುರಿವಳಿ, ಹುರುಳಿ]ಯ ಸೊರ್ಕಿಂಗಂ ಹರೀತಕೀಯುಕ್ತಮೋಘನಾದಿಯುಮುಂ ಮೋಣ್ ವರ ಹೂಗು ವಿಳಂಗಮನಿರದರೆದೀಂಟಲ್ ಪಾಲೊಳುಮವಿಷಂ ತಾಂ ಧರೆಯೊಳ್ (ಖಸುವ. ೨-೦೭೦). **ಹುರುಳಿ**: ಕರಿಬೇವು ಬಡಗಸಂಡಗೆಯಿಂಗು . . . ಹುರುಳಿ ಸಾಸುವೆ ಮೆಂತೆಯದ ಚೂರ್ಣ ಹಪ್ಪಳಂ ಸಂಭಾರವಸ್ತುವಹವು (ಸೂಶಾ. ೪-೦); ಹುರುಳಿ ಗುಗ್ಗುರಿ ಮುಕ್ಕಿ ಮೇಲೆ ಮಜ್ಜಿಗೆ ಕುಡಿದು ಹಿರಿಯ ಹೆಬ್ಬುಲಿಯಂತೆ ನಿದ್ರಿಪ ಜೋಡಿ (ಪುರುಷ. ೨-೩೬-೪); ಕುದುರೆ ಕುದುರೆಗೆ ಹುರಿದ ಹುರುಳಿ (ಗಾದೆ).

**ಪುರುಷ** (ನಾ). ೧. ನರ ; ಮನುಷ್ಯ ; ಮಾನವ : "ಮನುಷ್ಯಃ, ಮಾನುಷಃ . . . ಪುರುಷಃ, ಪೂರುಷಃ, ವಿಟ್— ಈ ೧೨ ಮಾನಸರ" (ಕರ್ಣಾಟ. ೩೩-೦೭೬); ಪುರುಷಂ ಧನಮನಗುಂಟೆಂದಿರಲಾಗದು ದ್ರವ್ಯಮುಳ್ಳೊಡಂ ದ್ರವ್ಯಮನಾರ್ಜಿಪುದು (ಧರ್ಮಾಮೃ. ೦-೯೩). ೨. ಮನುಷ್ಯಜಾತಿ; ಮಾನವಕುಲ. ೩. ಗಂಡಸು : "ಮಾನವಂ . . . ಪುರುಷನಾ ಪಂಚಜನಮಾ ನ್ನ ಮನುಜಂ ಗಂಡುಗೂಸಕ್ಕು" (ಪಂಗಾಡಿ. ೬೬-೦) ; ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ ಅಭಿಮಾನವಾಗಿ ಕಾಡಿತ್ತು ನೋಡಾ (ಬಸವ. ೩. ೩೧-೦೯೬) ; ಪುರುಷರ್ ಮಧುಗಳ್ಗೆ ಮಧೂತ್ಕರಮಾ ಪುರುಷರ್ಗೆ ಸೋಲ್ವುದುಚಿತಮದು (ಗಿರಿ. ೬-೨೩). ೪. ಗಂಡ; ಪತಿ: ಸಂಸ್ಕಾರಿಸಲೀ ವನಿತೆಯರ್ಗವರವರ ಪುರುಷರಂ ಕುಡವೇಟ್ಟುಂ (ಪಂಪಭಾ. ೦೯-೮); ಅರಸನ ಕಂಡು ತನ್ನ ಪುರುಷನ ಮಾಱಿದಡೆ ಮರನನೇಱಿ ಕೈ ಬಿಟ್ಟಂತಾದೆನಯ್ಯಾ (ಬಸವ. ೪೨೩) ; ಅರಿಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು ದೇವಾಂಗವನುಟ್ಟು ಪುರುಷ ಬಾರಾ (ಬಸವ. ೨. ೦೧೦-೩೨೦); ಪುರುಷನುಳ್ಳವಳು ನಾ ಪುರುಷರು ಕೇಳ್ಕಾರು ಗುಱುತು ಕಂಡರೆ ಕೊಲೆಯ ಕೊಂಡ್ಯಾರು (ಪುರಂತ. ೩-೬೯-೨). ೫. ಒಬ್ಬ ಮನುಷ್ಯನ ಎತ್ತರದಷ್ಟು ಪ್ರಮಾಣ ; ಸುಮಾರು ಆರು ಅಡಿ ; ಆಳುದ್ದ : ಕಂಟಕಕುಜ ವನದೊಳ್ ನಿಷ್ಕಂಟಕಕುಜಮಾಗೆ ಮೇಣ್ ವಿಕಂಟಕವನದೊಳ್ ಕಂಟಕಮಹೀಜಮಾದೊಡಮುಂಟೆಂದಱಿ ಪಡುವಲಯ್ದು ಪುರುಷದೊಳುದಕಂ (ಲೋಕೋಪ. ೩-೦೬); ಅತ್ತಿಯ ಪಡುವಲ್ ಮೂಗಯ್ಯೆತ್ತರಲ್ ನೀನಗುಟಿಸಿರದೆ ಪುರುಷದೆ ನೀರುಂ ಪಾತ್ರೊಂದು ಪುರುಷದೊಳ್ ಭುಜಗೋತ್ತಮನಂತಪ್ಪ ಕರಿಯಂ ಕಲ್ ಪಡುವ ಜಲಂ (ಅಭಿಪು. ೦೦-೯) ; ೧೧ "ಪುರುಷ"ಗಳ ಆಳತೆಯುಳ್ಳ ಹಗ್ಗದಿಂದ ೨೪ ಚದರ ಪುರುಷಗಳೂ (ಚಾಣಾಕ್ಷದ ಸೆಲೆ); ೨೧ ಪುರುಷಗಳ ಆಳತೆಯುಳ್ಳ ಹಗ್ಗದಿಂದ ೬೪ ಚದರ ಪುರುಷಗಳೂ ಉಂಟಾಗುತ್ತವೆ (ಗಣಿತ. ೦೯೯). 'ಪುರುಷಪ್ರಮಾಣ' ಪರಾ. ೬. ಪರಾಕ್ರಮಿ; ಗಂಡುಗಲಿ: ಪುರುಷರ ಪುರುಷನಲ್ಲಾ ಭೀಷ್ಮ ತನ್ನಯ ಪರಮಶುಕ್ಲಕೋದಯವಲಾ ನೀನೊಬ್ಬನು (ಕುಮಾ.ಭಾ. ೩-೭೬). ೭. ಗಂಡುತನ ; ಪೌರುಷ ; ಪುರುಷಶಕ್ತಿ : ಪುರುಷಮಂ ಸಮಕಟ್ಟುವಮಪ್ಪೊಡೆ ಪೂಣ್ಕೆಱೆಯಲಣ್ಮುವರಿಲ್ಲ (ಪಂಪಭಾ. ೬-೭೭ ವ). ೮. ಆತ್ಮ; ಜೀವಾತ್ಮ: "ಆ ಪಸ್ತು ಸಂಸಾರಿ ಚೇತನಂ ಕ್ಷೇತ್ರಜ್ಞ ಪುರುಷನೆಂಬಾತ್ಮನಕ್ಕುಂ" (ಮಂಗಾರಾ. ೯-೨೯); ಸೂಜಿಕಲ್ಲಿನ ಸನ್ನಿಧಿಯಲೇ ಸೂಜಿ ಚಲಿಸಿದಂತೆ ಪುರುಷನ ತೇಜದಿಂದಲಿ ಪ್ರಕೃತಿ ಚರಿಸುತ್ತಿಹುದು (ಜ್ಞಾಸಿಂ. ೨೭-೨೨). ೯. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಲ್ಲಿ ಪ್ರತಿಯೊಬ್ಬ: ಪುರುಷಮೂರ್ವರೊಳೊರ್ವನೆಂಬರ ಸುರಪ್ರಧ್ವಂಸಿಯೆಂಬರ್ಜಗದ್ಗುರುವೆಂಬರ್ಪರ್ಜಿಗೆ ತೇರನೆಸಪಂ (ಗದಾಯು. ೩-೯೩). ೧೦. ಪರಮಾತ್ಮ : ಅನಂತನಾದುದರಿಂದಲೂ ಪೂರ್ಣನಾದುದರಿಂದಲೂ ಪುರುಷನೆಂದು ಪರಮಾತ್ಮನಿಗೆ ಹೆಸರು (ತತ್ತ್ವ. ೬-೩ ತಾತ್ಪರ್ಯ). 'ಪುರುಷಸೂಕ್ತ' ಪರಾ. ೧೧. ಸುರಗಿ ಮರ ; ಪುನ್ನಾಗವೃಕ್ಷ : "ಪುನ್ನಾಗಃ, ಪುರುಷಃ, ತುಂಗಃ, ಕೇಸರಃ, ದೇವವಲ್ಲಭಃ—೫ ಸುರಗೀಮರ, ಸುರಹೊನ್ನೆ ಮರಕ್ಕೂ ಹೆಸರುಗಳು" (ಬಿಪ್ಲಾ.ಚಿ. ೦೦೭). ೧೨. ಗಂಡಸಿನ ಜನನಾಂಗ : 'ಪುರುಷವ್ಯಾಧಿ' ಪರಾ. ೧೩. [ಸಾಂಖ್ಯ] ಇಪ್ಪತ್ತೈದು ತತ್ತ್ವಗಳಲ್ಲಿ ಒಂದು : ಹೊದುತಿಹರಾ ಪುರುಷತತ್ತ್ವದಿ ನಿಂದು ತೋರುತಲಿರ್ಪ ಭುವನವ . . . ಪಾಶುಪತರಾದಿಯರು (ಗಣಿತಾ. ೩-೬೩) ; ಪಂಚವಿಂಶತಿತತ್ತ್ವಗಳು—೧ ಪ್ರಧಾನ, ೧ ಮಹತ್ತತ್ತ್ವ, ೧ ಅಹಂಕಾರತತ್ತ್ವ, ೫ ಭೂತತನ್ಮಾತ್ರೆಗಳು, ೫ ಮಹಾಭೂತಗಳು, ೧೧ ಇಂದ್ರಿಯಗಳು, ೧ ಪುರುಷ (ಅಮೃತ. ೩-೦೩೦ ಅಡಿ). ೧೪. [ವ್ಯಾಕ] ಪುರುಷವಾಚಕ ಲಿಂಗ ; ಪುಲ್ಲಿಂಗ: ಪುರುಷ ಪರವಪ್ಪೊಡೆ ತ್ವಂ ದೊರೆಕೊಳ್ಗುಂ (ಶಬ್ದ. ೦೦೦). ೧೫. ಸರ್ವನಾಮಗಳಲ್ಲಿ ಒಂದು ಪ್ರಕಾರ ; ಪುರುಷವಾಚಕ ಸರ್ವನಾಮ ; ☞ ಇದು ಉತ್ತಮ, ಮಧ್ಯಮ ಮತ್ತು ಪ್ರಥಮ ಎಂದು ಮೂರು ಬಗೆ. ನಾನು, ನಾವು— ಇವೆರಡು ಉತ್ತಮಪುರುಷ. ನೀನು, ನೀವು—ಇವೆರಡು ಮಧ್ಯಮಪುರುಷ. ಉಳಿದುವೆಲ್ಲ ಪ್ರಥಮಪುರುಷ : ಅವಱೊಳಗೆ ನಪುಂಸಕಲಿಂಗವಿಷಯಮಾದಲ್ಲಿ ಮೊದಲ ಪುರುಷಂಗುದುಮೆಂಬುವೆ ದಲ್ ಸಮನಿಸುಗುಂ (ಶಬ್ದಾ.ತ. ೩೧೦) ; ತಿಳಿ ತಾಂ ನೀನಾನೆಂಬರ್ಪಳೆಂಬಿಗಳ್ ಪ್ರಥಮ ಮಧ್ಯಮೋತ್ತಮ ಪುರುಷಂಗಳ್ (ಶಬ್ದ.೨೨೪). 'ಪುರುಷತ್ರಯ' ಪರಾ. [ಸಂ.]

**ಪುರುಷಕಾರ** (ನಾ). ೧. ಮನುಷ್ಯಪ್ರಯತ್ನ : ಪುರುಷನ ಸಾಹಸ : ಪುರುಷಕಾರದ ಪೆಂಪಂ ಬೆಂತಿಸಿ ತರಿಸಿ ಮಹೇಶನನೆತ್ತಪ್ಪೊಡಂ (ಪಂಪಭಾ. ೬-೩೯) ; ದೈವವಿಸೂತ್ರಮುಂ ಪುರುಷಕಾರಂ ಮಿಱಿವೇನಕ್ಕುಮೇ (ಜಗದ. ೩-೦೯) ; ಪುರುಷಕಾರಮೆ ಬಿದಿಗೆ ಬಾಳುಸಿರ್ (ಕ್ರೀಡಾವಾ. ೮೨-೦೦೯). ೨. ಪೌರುಷ ; ಪರಾಕ್ರಮ : ನಿಮ್ಮೊಳಗೆ ನೀಂ ಮುಳಿಯಲ್ವೇಡ ನಿಮ್ಮ ಪುರುಷಕಾರವನೆ ಬಗೆದು ನೆಗಳ್ವುದು (ಪಂಪಭಾ. ೦೨-೯೬ ವ); ಪುರುಷಾಕಾರಮದಿಲ್ಲೈ ಹರಿ ನಿನ್ನೊಳ್ ಪುರುಷಕಾರಮಂ ಕುಣಿಂ (ಗದಾಯು. ೬-೩೦) ; ಪುರುಷಕಾರದ ತಾಯ್ಗರು ಪೆಂಪಿನಾಗರಂ . . . ನೆಗಳ್ದ ಜಕ್ಕಣನೆಂದಡದಾರೊ ಪೋಲ್ವವರು (ಕಶಾ. IV, ೦೦-೩೩; 1121). [ಸಂ.]

**ಪುರುಷಗುಣ** (ನಾ). ಗಂಡುತನ ; ಗಂಡಸಿಗೆ ಯೋಗ್ಯವಾದ ಗುಣ ; ಪೌರುಷ : ಅಬಲೆಯರಳ್ಕಿರ್ದೆಗಳ್ ಪುರುಷಗುಣಮನಱಿದೆಱಗುಗುವೋ (ಅಜಿತ. ೮೨-೦೬) ; ಪುಟ್ಟಿದುದು ಪುಂಗನೂರೊಡಪುಟ್ಟಿದುದಪರಿಮಿತ ಪುರುಷಗುಣಗಣಮರ್ದೆಯೊಳ್ ಪುಟ್ಟಿದುದು ಜಿನಮತಂ ಗುಡಿಗಟ್ಟಿದುದಿಳೆ ಪುಟ್ಟೆ ನಾಗಮಯ್ಯನಜಯ್ಯಂ (ಶಾಂತಿಪು. ೦-೯೩) ; ಪುರುಷಗುಣಾಭರಣನು ಕುಡಲಾಪ್ಪನಧಿಕವ × × ×ಯೆನ್ದು ಪೊಗಳ್ದು ಧರೆ ಕಾಳಿಗನೆಸವನಾಪ್ಪ ನೊಳ್ಪ ಗುಣಮಂ (ಕಶಾ. XX, ೨೯-೦೬; 1034). [ಸಂ.]

**ಪುರುಷತನ** (ನಾ). ೧. ಗಂಡುತನ ; ಗಂಡಸುತನ ; ಪುರುಷತ್ವ : ಕೆಟ್ಟುದು ಪುರುಷತನವಿಂದ್ರುಂಗಹಲ್ಯಾದೇವಿ ಶಿಲೆಯಾಗಿ ಧರಿಸಿದಳು ನಿಜತನುವನು (ಕೊರಟಾ. ೦-೦೨-೦೮). ೨. ಗಂಡಸಿನ ರೂಪ ; ಪುರುಷಾಕೃತಿ: ಹರನ ಹಣೆಗಣ್ಣಿನ ಮಹಾನಲನುರಿಯ ಹೊಯ್ಲಲಿ ಸಾಯಲಾಱದೆ ಪುರುಷತನವನು ಬಿಸುಟು ಮಂಡೋದರಿಯ ರೂಪತವ ಧರಿಸಿದನೊ ಕಂದರ್ಪನೆನೆ . . . ಮೆಱೆದಿರ್ದಳಾ ಕಾಂತೆ (ಕೊರಟಾ. ೫-೨-೭೬). ೩. ಮನುಷ್ಯತ್ವ ; ಸಜ್ಜನಿಕೆ : ಪರಮಮಾಹೇಶ್ವರರು ನೀವೆಂದಾ ನಮಿಸಿ ಲೇಸಾಗಲೀ ಎಂದು ಹರಸಲೊಲ್ಲದೆ ಸುಮ್ಮನಿಹುದಿದು ಪುರುಷತನವೇ ಗುಣವೆ ಪೇಳ್ (ಬಸವ. ೯೬-೦೦). [ಪುರುಷ + — ತನ]

**ಪುರುಷತ್ರಯ** (ನಾ). ೧. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳು : ದೇವ ಪುರುಷತ್ರಯಾಕಾರಪ್ರಧಾನ ಜಯ (ಜಗದ. ೩-೦೦೭ ರಗಳೆ). ೨. ಉತ್ತಮ, ಮಧ್ಯಮ ಮತ್ತು ಅಧಮ ಎಂಬ ಮೂರು ವರ್ಗಗಳ ಮನುಷ್ಯರು: ಕ್ಷಿತಿಯೊಳುತ್ತಮ ಮಧ್ಯಮಾಧಮಗತಿಯ ಪುರುಷತ್ರಯಪವರಿಂಗಿತಪನವರಾಯತವನಱಿವೈ ಭೂಪ (ಕುಮಾ.ಉ. ೩-೨೭). ೩. [ವ್ಯಾಕ]ಉತ್ತಮ, ಮಧ್ಯಮ ಮತ್ತು ಪ್ರಥಮ ಎಂಬ ಮೂರು ಬಗೆಯ ಪುರುಷವಾಚಕ ಸರ್ವನಾಮ ; ಅವುರಯಿರೆನಿಪುಗಳಕ್ಕುಂ . . . ಆಖ್ಯಾತವರ್ಗದೊಳ್ ನೆಲಸಿ ನಿಂದ ಪುರುಷತ್ರಯಕಂ (ಶಬ್ದ. ೨೦೭). [ಸಂ.]

**ಪುರುಷತ್ವ** (ನಾ). ೧. ಗಂಡುತನ ; ಪುಂಭಾವ : ಭ್ರಮರಕೀಟನ್ಯಾಯ

ಭಾವದಿ ರಮಣಿಯೊಬ್ಬಳು ತನ್ನನಿಯನು ಕ್ರಮದಿ ನೆನೆಯಲು ನೆನೆಯಲಾ ಪುರುಷತ್ವವಳವಟ್ಟು ನಿಮಿರ್ದ ರತಿಕೇಳೀವಿನೋದದಿನವರ್ದುದಕ್ಕೆನ್ನಂತ ರಾಯತ್ತವುಮಪ್ಪುದೊ ತನಗೆನುತ . . . ಇನಿಯನಂ ತಾ ನೆನೆಯಲುಂಜುತ ನೆನೆವುತಂಜುತಲಿನಿಯಳಿದ್ದಳು (ಶಬ್ದ. ೩೩-೨೩). ೨. ಶಕ್ತಿ ; ಪೌರುಷ : ಹೆಗಡೆಯ ಹತ್ತಿರ ಹೋರಾಡುವುದಕ್ಕೆ ನಿಂತ ಮೇಲೆ ನಾವು ಗೆಲ್ಲಬೇಕು. ಇಲ್ಲವಾದರೆ ಪುರುಷತ್ವಕ್ಕೆ ಏನು ಬಂತು ಗೌರವ ? (ದೀವಹ. ೨೦೧). [ಸಂ.]

**ಪುರುಷದೋಷ** (ನಾ). ಮನುಷ್ಯನಿಂದ ಆಗುವ ತಪ್ಪು ; ಮನುಷ್ಯನ ಕೈವಾಡದಿಂದ ಉಂಟಾಗುವ ದೋಷ : ವೇದವು ಅನಾದಿಕಾಲದಿಂದ ಏಕರೀತಿಯಲ್ಲೇ ಇರುವುದರಿಂದ ಪುರುಷಸಂಬಂಧವಿಲ್ಲ, ಪುರುಷದೋಷವೂ ಇಲ್ಲ (ಹಂಪಾ. ೦೩೭). [ಸಂ.]

**ಪುರುಷದ್ವೇಷಿ** (ನಾ). ಗಂಡಸರನ್ನು ಕಂಡರಾಗದವಳು ; ಗಂಡಸರನ್ನು ದ್ವೇಷಿಸುವವಳು : ಬಾಲ್ಯದಲ್ಲಿ ನಡೆದ ಘಟನೆಗಳ ಪರಿಣಾಮವಾಗಿ ಅವಳು ಪುರುಷದ್ವೇಷಿಯಾಗಿಯೇ ಬೆಳೆದಳು (ರೂಢಿ). 'ಸ್ತ್ರೀದ್ವೇಷಿ' ಪರಾ. [ < ಸಂ. ಪುರುಷದ್ವೇಷಿನ್ ]

**ಪುರುಷದ್ವೇಷಿಣಿ** (ನಾ). = ಪುರುಷದ್ವೇಷಿ : ಸುಧ್ಯಾನಗರಪುರಾಧಿಪತಿ ಸಿಂಹೋದರನೆಂಬೊನಾತನ ಮಗಳ್ ಹಿಡಿಂಬೆಯೆಂಬೆನಾಂ ಪುರುಷ ದ್ವೇಷಿಣಿಯೆಂ (ಶಿಪು. ೦೦-೬ ವ). [ ಸಂ. ಪುರುಷದ್ವೇಷಿಣೀ ]

**ಪುರುಷಧರ್ಮ** (ನಾ). ೧. ಮನುಷ್ಯಧರ್ಮ : ಆಕೆಯ ಅಂತಸ್ತಿನ ಭವಿಷ್ಯವೆಲ್ಲ ನನ್ನ ಕೈಯೊಳಗಿರುವಾಗ್ಗೆ ನಾನೀಗ ಆಕೆಯನ್ನು ನಡುನೀರಲ್ಲಿ ಕೈಬಿಡುವುದೆ ? ಅದು ಪುರುಷಧರ್ಮವಲ್ಲ (ಪಡಶಾ. II, ೯೭೦). ೨. ಗಂಡ ನಾದವನು ಪಾಲಿಸಬೇಕಾದ ವ್ರತ ; ಪತಿಧರ್ಮ : ಪರಪುರಿಗ್ನಹೀತೆ ಗಳಿಪಂ ತರೆ ಪುರುಷಂ ಪುರುಷಧರ್ಮಮಟಿಗುಂ ಪಟಿಗುಂ ಧರೆ ದುರ್ಗತಿ ಸಮನಿಸುಗುಂ (ಶಂಪಾಪು. ೯-೧೯೨). [ಸಂ.]

**ಪುರುಷನಾಡಿ** (ನಾ). ದೇಹದ ಬಲಭಾಗದಲ್ಲಿರುವ ನಾಡಿ : ಎಡಭಾಗದ ನಾಡಿಗಳು ಸ್ತ್ರೀನಾಡಿಗಳೆಂತಲೂ, ಬಲಭಾಗದ ನಾಡಿಗಳಿಗೆ ಪುರುಷನಾಡಿ ಗಳೆಂತಲೂ ಹೆಸರು (ಹಸಾರ. ೪-೩ ತಾತ್ಪರ್ಯ). [ಸಂ.]

**ಪುರುಷನಿಧಿ** (ನಾ). ಪರಾಕ್ರಮದ ನೆಲೆ ; ಪೌರುಷದ ಆಕರ : ಪುರುಷನಿಧಿಯೆನಿಪನನ್ನಂ ಧರೆ ನಿಳ್ನಿನವಿಾ ಸ್ವಯಂಭುಸೋಮೇಶ್ವರದೇವರ ಮುನ್ದೆ ಭಕ್ತಿಯಿಂದಚ್ಚರಿಯಾಗಿರೆ ಸೂಳೆಕೇರಿಯಂ ಮಾಡಿಸಿದ (ಶಾಇ. XX, ೭೯.೨೭ ; 1112). [ಸಂ.]

**ಪುರುಷನಿರ್ವಾಣ** (ನಾ). ಗಂಡನ ಸಾವು ; ಪತಿಯ ಮರಣ : ಮುನ್ನಿನ ಪುರುಷವ್ರತಿಯರು ಒಲಿಸಿದ ಆಯಾತವ ಪರಿಪರಿಯಲಿ ಬಣ್ಣಿಸಲು ಬಹು ದಲ್ಲದೆ ಪುರುಷನಿರ್ವಾಣಕ್ಕುರಿವಗ್ನಿಯ ಬಂದು ಹೊಕ್ಕು ತೋಱಲು ಬಾರದು (ಶಸವ. ೭೭೯). [ಸಂ.]

**ಪುರುಷಪಕ್ಷಿಗ್ರಹ** (ನಾ). ಬಾಲಗ್ರಹದಲ್ಲಿಯ ನಾಲ್ಕು ಬಗೆಯ ಪಕ್ಷಿ ಗ್ರಹದೋಷಗಳಲ್ಲಿ ಒಂದು : ಕಣ್ಣುಗಳು ಗುಳಿ ಬೀಳುವವು. ಮೈ ತಾಜಾಪದು. ತಾಪ ಉಂಟಾಗಿಹವು. ಹಸುರಾಗಿ ಉಚ್ಚುವದು. ಬಾಯಾಜಿಕೆ ಉಂಟಾಗಿಹುದು. ನಾಲಿಗೆ ನೀಡಿಕೊಂಬುದು . . . ಇದು ಪುರುಷಪಕ್ಷಿ ಗ್ರಹಶಂಕೆ ಎಂದಱಿವುದು (ವೈಶಾ. II, ೦೩). 'ಪಕ್ಷಿಗ್ರಹ' ಪರಾ. [ಸಂ.]

**ಪುರುಷಪ್ರಮಾಣ** (ನಾ). ಒಂದಾಳು ಎತ್ತರದಷ್ಟು ಅಳತೆ ; ಸುಮಾರು ಆರುಅಡಿ: ಪುರುಷಪ್ರಮಾಣವೆಂತೆನೆ ಪುರುಷಂ ತನ್ನೆರಡು ಕೆಯ್ಯ ಮೇಲು ಕೈತ್ತಲ್ ಪುರುಷಪ್ರಮಾಣವೆನಿಸುಗು (ವ್ಯವಶಾ. ಅನುಬಂಧ. ೯) ; ಮಂದಿರದ ಮಧ್ಯದಲ್ಲಿ ಪುರುಷಪ್ರಮಾಣಕ್ಕಿಂತಲೂ ದೊಡ್ಡದಾದೊಂದು ಕರಾಳ ಕಾಳಿಕಾಮೂರ್ತಿಯು ಪ್ರತಿಷ್ಠಿತವಾಗಿದ್ದಿತು (ಕಹಾಕುಂ. ೩೦). [ಸಂ.]

**ಪುರುಷಪ್ರಯತ್ನ** (ನಾ). ಮನುಷ್ಯನ ಯತ್ನ,-ಸಾಹಸ ; ಪೌರುಷ : ಶತ್ರುಜಯಕ್ಕೆ ಪುರುಷಪ್ರಯತ್ನವೇ ಕಾರಣವಾಗಿರುವುದು (ಕೈಪಾಸ. ೨೭); ಪುರುಷಪ್ರಯತ್ನಮಂ ಬರ್ದುಕುವಾಸೆಯ ಕೂಡೆ ನೀಗಿ, ಕೈಮುಗಿವೆನಾ ವ್ಯೋಮಕ್ಕೆ ದೇವರಂ ಬೇಡಿ (ಶ್ರೀರಾಮಾ. ೭೭-೬೨೩). [ಸಂ.]

**ಪುರುಷಬ್ರತ** (ನಾ). ೧. ಬ್ರಹ್ಮಚರ್ಯವ್ರತ : ರಾವಣನು ಕೊಂದು ಜಯಶ್ರೀವಧುವಂ ತಾಳ್ದಿ ಮುಯ್ಪಿನೊಳ್ ವರಸೀತಾದೇವಿಯುಂ ತರ್ಪನ್ನೆಗಮೋವದೆ ಪುರುಷಬ್ರತೋಚಿತಂ ವಿರರಸಂ (ಕಬಿರಾ. ೩-೦೧೦). ೨. ಪತಿವ್ರತೆಯ ಆಚಾರ ; ಪತಿವ್ರತಾಧರ್ಮ (?): ಆತನ ಸತಿ ದೇವಿಯಕ್ಕಂ ಪುರುಷಬ್ರತಮಂ ಕೈಕೊಂಣ್ದು ಮಂಡಲಿ ಸಾಸಿರದ ಎಡತೊಱೆನಾಡ ಉತ್ತಮದ ಗ್ರಾಮಮಲು ಸುರಲೋಕಪ್ರಾಪ್ತಳಾದಳ್ (ಎಕ. VII, ಶಿವಮೊ. ೩೨-೮ ; 1134 ?). 'ಪುರುಷವ್ರತಿ' ಪರಾ. [ < ಸಂ. ಪುರುಷವ್ರತ]

**ಪುರುಷಭಾಷೆ** (ನಾ). ಪೌರುಷದ ವಾಣಿ; ಪುರುಷಪ್ರಯತ್ನದ ಮಾತು: ಸತ್ಯದನ್ನವನೆ ಉಂಡು ಬಾಳಿ ಎನ್ನುವುದು ಪುರುಷಭಾಷೆ (ಸೂರ್ಯಕಾ. ೦೭-೦೯). [ಸಂ. ಪುರುಷಭಾಷಾ]

**ಪುರುಷಭಿಕ್ಷ** (ನಾ) ಗಂಡನನ್ನು ಉಳಿಸಿ ಕೊಡುವುದು ; ಪತಿಭಿಕ್ಷೆ : ಪುರುಷಕಾರದ ಪೆಂಪು ಚಿಂತಿಸಿ ತರಿಸಿ ಮಹೀಶನನೆಂತಪ್ಪೊಡಮೆನಗೆ ಪುರುಷಭಿಕ್ಷಮನಿಕ್ಕಿಂ (ಶಂಶಶಾ. ೭-೩೪); ವನದೇವಿಯರಿರಾ ನೆರೆದೆಲ್ಲರು ಮೆನಗೆ ಪುರುಷಭಿಕ್ಷಮನಿಕ್ಕಿಂ (ಕಾದಂಪೂ. ೬೨೩); ಮುಳಿಸಂ ಪಿದಿಕ್ಕಿಯುಮಿಾ ಫಣಿಯಂ ಕೊಂದಿಕ್ಕದಿರಿಕ್ಕಿಮಗೆ ಪುರುಷಭಿಕ್ಷಮಂ (ಜಗಪು. ೩-೦೦೦). [ಸಂ. ಪುರುಷಭಿಕ್ಷಾ]

**ಪುರುಷಭೈಕ್ಷ** (ನಾ). = ಪುರುಷಭಿಕ್ಷ : ಎನಗಿಬ್ಬಱಂ ಪುರುಷಭೈಕ್ಷಮನಿಕ್ಕು (ಅರ್ಜನೀ. ೦-೯೦). [ಸಂ.]

**ಪುರುಷಭೈಕ್ಷೆ** (ನಾ). =ಪುರುಷಭಿಕ್ಷ: ಪ್ರಿಯಮಿತ್ರೆಯುಕಳಂಕಾಚಾರಸಾರನಪ್ಪ ಮೇಘರಥನರೇಂದ್ರಂಗೆ . . . ನಿಮ್ಮಡಿಗಂ ಕೈಯನೊಡ್ಡಿ ಪುರುಷ ಭೈಕ್ಷೆಯೆಂ ಬೇಡಿ ದೀಕ್ಷೆಯುಮಂ ನಿಸರ್ಗಸ್ನೇಹಿತೆಯಾದ ಕಾರಣಮುಮನಿದ ನಱಿಯೆ ಬೆಸಸುವುದೆನೆ (ಶಾಂತಿಪು. ೯-೬೩ ವ). [ಸಂ. ಪುರುಷಭೈಕ್ಷ]

**ಪುರುಷಮಿಗ** (ನಾ). = ಪುರುಷಾಮೃಗ : ಕಳಕಳಿಸಿ ನಗುತೆ ಕುಕ್ಕಿಲಿಲಿಯೆಂದುಬಿರದೆ ಕೂಗುತ್ತಡವಿಶಬರಿಯರು ಪುರುಷ ಮಿಗಮರಿಯಟ್ಟಿ ಸರಳ್ಗರೆವ ಮಾಳ್ಕೆಯಿಂ ತರುಣಿಯರು ತವಕದಿಂ ನೀರ್ಗರೆವುತೆ ಬರುತಿರಲು (ನವಮೋ. ೦೦-೬೨). [ < ಸಂ. ಪುರುಷಮೃಗ]

**ಪುರುಷಮೃಗ** (ನಾ). ೧. ಒಂದು ಬಗೆಯ ಜಿಂಕೆ. ೨. ಗಂಡು ಜಿಂಕೆ. ೩. = ಪುರುಷಾಮೃಗ : ಪುರುಷಮೃಗಂಗಳಲ್ಲಮಿವರಪ್ಪೊಡೆ ದಿವ್ಯ ಮುನೀಂದ್ರರೆಚ್ಚೊಡರಿ ಶರವಿದು ತಾಗಲಣ್ಮದಿವರಂ (ಅರ್ಜನೀ. ೩-೬೮); ನರಿ ಶಶಕಂ ವೃಕಂ . . . ಸೈರಿಭಂ ಪುರುಷಮೃಗಂ ಗಜ ಶರಭ ಸಿಂಹದಿ ನೊಪ್ಪುವುದಲ್ಲಿ ಕಾನನಂ (ಮಲ್ಲಿಕಾ. ೩-೦೩೯); ಅಲ್ಲಿ ಕಸ್ತೂರಿಮೃಗ ಚಮರೀ ಮೃಗ ಪುರುಷಮೃಗ ಸುವರ್ಣಮೃಗ . . . ಸಿದ್ಧಿಮೃಗಾದಿ ದೇವಾರ್ಹ ರಾಜಾರ್ಹ ಶುಭ್ರೀಯಸಾಧುಪವಿತ್ರಮೃಗಜಾತಿಗಳಂ (ವಿವೇಕ. ೨೦೨). [ಸಂ.]

**ಪುರುಷಮೇಧ** (ನಾ). ಮನುಷ್ಯನನ್ನು ಬಲಿ ಕೊಡುವ ಯಜ್ಞ ; ನರಬಲಿಯನ್ನು ಕೊಡುವ ಯಾಗ. [ಸಂ.]

**ಪುರುಷಯುಕ್ತ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ; ಸ್ತ್ರೀಯು ಪುಂಭಾವದಿಂದ ರಮಿಸುವಿಕೆ ; ಪುರುಷಾಯಿತ : ನಿದ್ದೆ ಗೈವಳು ತಾನು ಅವನ ನಿದ್ರೆಗೈಯಲೀಸಳು. ತಾಡನಂಗೈವಳು ರೇಕಾಪತನಮಂ ನಿಲ್ಲಿಸಲರಿಯದೆ ಕೋಪವಂ ಸೈರಿಸಲಾರದೆ ಅಂತರವಂ ಮಾಡಿರ್ದೊಡನಾಡೊಡೆ ಅವನ ಮೇಲೆ ರಮಿಸುವಳು. ಇದು

ಪುರುಷಯುಕ್ತಂ (ಕಾವ್ಯಾ. ೩೩೮). [ಸಂ.]

**ಪುರುಷಯುಗಕರಣ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ : ಓರ್ವಂ ಮೆಲ್ಲನೆ ಮಲಗಿರೆ ಆತನ ಮೇಲೇರಿ ರವಿಸುತ ನಿಂದಿರ್ದ ಮತ್ತೊರ್ವ ಪುರುಷನ ಲಿಂಗಮಂ ತನ್ನ ಬಾಯೊಳಗಿಕ್ಕಿ ಮುಖಸುರತಗೈಯುತ್ತಾಯಿರೆ ಪುರುಷಯುಗಕರಣಂ (ಕಾಮಶಾ. ೨೩೭). [ಸಂ.]

**ಪುರುಷರತುನ** (ನಾ). = ಪುರುಷರತ್ನ ೧ : ಪುರುಷರತುನಂ ಪುರಾತನ ಚರಿತಂ ಜಿನಚರಣಕಮಲಭೃಂಗಂ ಸತ್ಯಾಭರಣಂ ದಯಾಂಬುನಿಧಿ (ರಕರ್ಣಾಪು. ೪-೨೬೪). [< ಸಂ. ಪುರುಷರತ್ನ]

**ಪುರುಷರತ್ನ** (ನಾ). ೧. ಶ್ರೇಷ್ಠನಾದ ಮನುಷ್ಯ ; ನರೋತ್ತಮ ; ಪುರುಷಾಗ್ರಣಿ : ಸ್ತ್ರೀರತ್ನಮಿಾಗಳೀಕೆಯೆ ಧಾರಿಣಿಯೊಳ್ ಪುರುಷರತ್ನ ಮಿಾತನೆ ಸದ್ಯಶಾಕಾರರ್ (ಅಂಕ್ಷ. ೪-೨೫); ಪುರುಷರತ್ನಕ್ಕೆ ಸ್ತ್ರೀರತ್ನಮಲ್ಲದೆ ಸಾಮಾನ್ಯಮಣಿಯುಂ ಪಸುರ್ವಣಿಯುಂ ದೊರೆಯಲ್ಲಂ (ಶಾಂತಿಪು. ೪-೬೪ ವ). ೨. ಒಂದು ಬಗೆಯ ಸಸ್ಯ : (ವೃಕ್ಷಾ. ೯೬-೧೦೬). [ಸಂ.]

**ಪುರುಷರಾಗ** (ನಾ). [ಸಂಗೀತ] ರಾಗಗಳಲ್ಲಿ ಒಂದು ವರ್ಗ ; ಭೂಪಾಲಿ, ಭೈರವಿ, ಶ್ರೀರಾಗ, ಘಲವಂಜರಿ, ವಸಂತ, ಮಾಲವ, ಬಂಗಾಲ ಮತ್ತು ನಾಟಿ ಎಂಬುವು ಎಂಟು ಪುರುಷರಾಗಗಳು : ಸ್ತ್ರೀರಾಗಚತುರ್ವಿಂಶತಿಸೌರಾಷ್ಟ್ರಗಭೀರಪುರುಷರಾಗಂಗಳವಂ ಮಾರಿಜ ಮುಖಿಯರ್ ಪಾಡಿದರ್ (ಹರಿಶ್ಚಂ. ೨-೯೩). [ಸಂ.]

**ಪುರುಷರಾಶಿ** (ನಾ). [ಜ್ಯೋತಿ] ಜ್ಯೋತಿಶ್ಶಾಸ್ತ್ರದಲ್ಲಿರುವ ಹನ್ನೆರಡು ರಾಶಿಗಳಲ್ಲಿ ಆರು ರಾಶಿಗಳ ಒಂದು ವಿಭಾಗ; ಜ್ಯೋತಿಶ್ಶಾಸ್ತ್ರದಲ್ಲಿ ಹನ್ನೆರಡುರಾಶಿಗಳನ್ನು ಪುರುಷರಾಶಿ ಮತ್ತು ಸ್ತ್ರೀರಾಶಿ ಎಂದು ಎರಡು ವಿಭಾಗ ಮಾಡುತ್ತಾರೆ. ಮೇಷ, ಮಿಥುನ, ಸಿಂಹ, ತುಲಾ, ಧನುಸ್ಸು, ಕುಂಭ ಈ ಆರೂ ಪುರುಷರಾಶಿಗಳು. ವೃಷಭ ಕರ್ಕಾಟಕ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ಆರೂ ಸ್ತ್ರೀ ರಾಶಿಗಳು. ಜಾತಕನಿಗೆ ಪುರುಷರಾಶಿಗಳು ಕ್ರೂರವೆಂದೂ ಸ್ತ್ರೀರಾಶಿಗಳು ಸೌಮ್ಯವೆಂದೂ ನಂಬಲಾಗುತ್ತದೆ : ಹರಿ ಮಿಥುನ ತುಲಾಜ ಧನುರ್ಧರ ಘಟಮಿವು ಪುರುಷರಾಶಿಗಳ್ ಕ್ರೂರಂಗಳ್ (ಜಾತಕ. ೦-೨೨). [ಸಂ.]

**ಪುರುಷರೂಪು** (ನಾ). ಪುರುಷಾಕಾರ; ಪುರುಷಾಕೃತಿ : ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ (ಶಬರಾ. ೯.೦೦). [ಪುರುಷ + ರೂಪು]

**ಪುರುಷವಶ್ಯ** (ನಾ). ಗಂಡಸನ್ನು ವಶಮಾಡಿಕೊಳ್ಳುವುದು ; ಪುರುಷ ವಶೀಕರಣ : ವೃತ್ತಕುಚೆ ಮುಟ್ಟವೆಯ [ಕಾಕಾಂ, ಲಿನ] ನೆತ್ತರಿಂ ಭಾವನೆಯನಿತ್ತ ಗೋರೋಚನಮನದ ತೇದು ಚಿತ್ರಕ್ಕೆ ಬರ್ಪನಂ ಚಿತ್ರದೊಳ್ ನಿಲಿಸಿ ನೆನೆವುತ್ತಮಿಾ ತಿಲಕಮಿಡೆ ಪುರುಷವಶ್ಯಂ (ಜನವ. ೦೩-೬೩); ಕೆಂಬು ನೆಲ್ಲಿಯ ಅರ್ಚನೆ ಮಾಡಿ ತಂದು ಚೂರ್ಣಿಸಿ . . . ಅದನ್ನು ಬೆಣ್ಣೆಯಲ್ಲಿ ಕಲಸಿ ತುಪ್ಪದ ಕಾಸಿ ಊಟದಲ್ಲಿ ಆ ತುಪ್ಪವನಿಕ್ಕಲು ಹೆಂಡತಿಯನೊಲ್ಲದ ಪುರುಷನೊಲಿವನು. ಪುರುಷವಶ್ಯ ತಪ್ಪದು (ವಿಷ್ಣುಪ. ೨೦೦). [ಸಂ.]

**ಪುರುಷವಾಚಕ** (ನಾ). ೧. [ವ್ಯಾಕ] ಪುಲ್ಲಿಂಗಸೂಚಕವಾದ ಪದ : ಸಮುಚ್ಚಯದಿಂ ಅಪತ್ಯ, ಕಳತ್ರ—ಎಂಬ ಶಬ್ದಂಗಳ್ ಸ್ತ್ರೀವಾಚಕ ಮಾಗಿಯುಂ, ಜನಶಬ್ದ ಲೋಕಶಬ್ದಂಗಳ್ ಪುರುಷವಾಚಕಂಗಳಾಗಿಯುಂ ನಪುಂಸಕಂ (ಶಬ್ದಮ. ೦೫೫ ಪ್ರಯೋ). ೨. ಉತ್ತಮ, ಮಧ್ಯಮ ಮತ್ತು ಪ್ರಥಮ ಎಂಬ ಮೂರು ಸರ್ವನಾಮಗಳಿಗೆ ಅನುಕ್ರಮ ವಾಗಿ ಸೇರುವ ಆಖ್ಯಾತಪ್ರತ್ಯಯಗಳು : ಪುರುಷವಾಚಕಪ್ರತ್ಯಯ ಗಳು ವಚನವನ್ನೂ (ಪ್ರಥಮಪುರುಷದಲ್ಲಿ) ಲಿಂಗವನ್ನೂ ತಿಳಿಸುತ್ತವೆ (ಕೈಪಿಡಿ. ೪೩). ೩. ಉತ್ತಮ, ಮಧ್ಯಮ ಹಾಗೂ ಪ್ರಥಮಪುರುಷದ ಸರ್ವನಾಮ : ಈ ಮೂರು ಬಗೆಯ ಸರ್ವನಾಮಗಳನ್ನೂ ಒಟ್ಟಿಗೆ ಪುರುಷವಾಚಕಸರ್ವನಾಮಗಳೆಂದು ಕರೆಯುತ್ತಾರೆ (ಮಧ್ಯಮ. ೫೦). [ಸಂ.]

**ಪುರುಷವೇದ** (ನಾ). [ಜೈನ] ಮೋಹನೀಯಕರ್ಮದ ಇಪ್ಪತ್ತೆಂಟು ಪ್ರಕಾರಗಳಲ್ಲಿ ಒಂದು ; ಗಂಡಿಗೆ ಹೆಣ್ಣಿನ ಮೋಹವನ್ನುಂಟು ಮಾಡುವ ಕರ್ಮ : ಪುರುಷವೇದಮಂ ಸಂಜ್ವಳನಚತುಃಕ್ರೋಧ ಮಾನಮಾಯಾಲೋಭಂಗಳನೊರ್ಮೆಯೆ ನಿರ್ಮೂಲಿಸಿ ತಳೆದನಜೇಯುಂ ಜಯಾಂಗನಾಲಿಂಗನಮಂ (ಮಲ್ಲಿಪು. ೦೪-೬೩); ಸ್ತ್ರೀವೇದಂ ಪುರುಷಾಭಿಲಾಷೆಯಂ ಮಾಳ್ಪುದು ಪುರುಷವೇದಂ ಸ್ತ್ರೀಯಾಭಿಲಾಷೆಯಂ ಮಾಳ್ಪುದು ನಪುಂಸಕವೇದಮುಂಭಯಾಭಿಲಾಷೆಯುಂ ಮಾಳ್ಪುದು (ಕಸಾರ. ೦೨). [ಸಂ.]

**ಪುರುಷವ್ಯಾಧಿ** (ನಾ). ಗಂಡಸರಿಗೆ ತಗುಲುವ ಗುಹ್ಯರೋಗ,—ಲೈಂಗಿಕ ರೋಗ : ಪುರುಷವ್ಯಾಧಿಗೆ . . . ರಸ, ಹೊನ್ನೇತೊಕ್ಕು, ತುತ್ತ, ಪಟಿಕ ಮೂಱು ವರಹ ತೂಕ, ಮುಸ್ತಕಿ ಐದು ವರಹ ತೂಕ, ಧೂಪದ ಹಳುಕು ಮೂಱು ವರಹ ತೂಕ . . . ಇಷ್ಟನ್ನೂ ಒಳ್ಳೆಎಣ್ಣೆಯಲ್ಲಿ ಮರ್ದಿಸಿ, ಅಲ್ಲ, ಬಿಸಿನೀರ ಬಿಟ್ಟುಕೊಂಬುದು. ಇದು ಪುರುಷವ್ಯಾಧಿಗೆ ಸಿನ್ದ ಪ್ರಯೋಗ (ವಿಷ್ಣು. ೬೦). [ಸಂ.]

**ಪುರುಷವ್ರತ** (ನಾ). ೧. ಬ್ರಹ್ಮಚರ್ಯ : ಅಂಗಜೋತ್ಪತ್ತಿಸುಖಕ್ಕೆ ಸೋಲಬಟಿಗುಂ ಪುರುಷವ್ರತಂ (ಶಂಕರಾ. ೦ ೬೩); ಬಿಸುಡೆಂ ಮದೀಯ ಪುರುಷವ್ರತಮೊಂದುಮಂ (ಶಂಕರಾ. ೦-೬೩). ೨. ಇಂದ್ರಿಯನಿಗ್ರಹ : ಪುರುಷವ್ರತಕ್ಕೆ ಭಂಗಂ ಪರವಧುವಂ ನೋಡಿದಂದುಮುಳಿದು ಪರಸುಂದರಿ ನೀನೆಂಬುದನೀ ಕಾತರತೆಯ ಪೇಳ್ದಪುದು ಪೊಗು ಪಾತಕಿ ಬೇಗಂ (ಅನಾವ. ೦೪-೧೦೬). ೩. ಪಾತಿವ್ರತ್ಯ ; ಪತಿನಿಷ್ಠೆ : ಗಿರಿಜೆಯು ಪಾದಪದ್ಮಯುಗಳ ಜ್ವಲದಿಂದಮೆ ಕೊರ್ಬಿ ನೀತಿ ವಿಸ್ತರಿಸಿರೆ ಸೊಂಪುವೆತ್ತು ಪುರುಷವ್ರತದಿಂ ದಳಮೇಱ ಭಾಗ್ಯಮಂಜರಿಗಳನಾನ್ತು ರಂಜಿಸುವ ಶಾಂತಲದೇವಿಯ ರೂಪು ಕಲ್ಪವಲ್ಲರಿಯಡರ್ದತ್ತು ವಿಷ್ಣುನ್ರಿಪನೆಂಬ ಸಮುನ್ನತಕಲ್ಪವೃಕ್ಷಮಂ (ಎಕ. V. ಹಾಸನ. ೦೦೬-೩೦ ; 1123). [ಸಂ.]

**ಪುರುಷವ್ರತಿ** (ನಾ). ಪತಿವ್ರತಾಧರ್ಮವನ್ನು ಪಾಲಿಸುವವಳು ; ಪತಿವ್ರತೆ : ಮುನ್ನಿನ ಪುರುಷವ್ರತಿಯರು ಒಲಿಸಿದ ಆಯತದ ಪರಿಪರಿಯಲಿ ಬಣ್ಣಿಸಲು ಒಹುದಲ್ಲದೆ ಪುರುಷನಿರ್ವಾಣಕ್ಕುರಿವಗ್ನಿಯ ಬಂದು ಹೊಕ್ಕು ತೋಱಲು ಬಾರದು . . . ಇಂತೀ ಅರೆಬಿರುದಿನ ಬಂಟರು ಪುರುಷವ್ರತಿಯರು ಪುರಾತನರು ಬಱಿಯ ಮಾತನಾಡಿ ಹೊಱಗೆ ಮೆಱೆವರಲ್ಲ (ಬಸವ. ೬೭೬). [< ಪುರುಷವ್ರತ]

**ಪುರುಷಶೀಲೆ** (ನಾ). ಗಂಡಸಿನ ಸ್ವಭಾವವುಳ್ಳವಳು ; ಗಂಡುಬೀರಿ : ಜಲಜಕಚಸೂನು ಮಧ್ಯಮಬಲನೆನೆ ಬಲರಹಿತರೆನೆ ಸಿತೇಂದುಜಶಶಿಗಳ್ ಬಲಯುಕ್ತರನ್ಯರೆನೆ ವಿಷಮಲಗ್ನಮೆನೆ ವನಿತೆ ಪುರುಷಶೀಲೆಯೆನಿಕ್ಕುಂ (ಜಾತಕ. ೨೨-೨೨). [ಸಂ. ಪುರುಷಶೀಲಾ]

**ಪುರುಷಸೂಕ್ತ** (ನಾ). ಪರಮಾತ್ಮನ ವಿರಾಟ್‌ಸ್ವರೂಪವನ್ನು ವಿವರಿಸುವ ಒಂದು ವೇದಭಾಗ : ಸಾಹಸ್ರಶೀರ್ಷಾ ಪುರುಷನೆಂದೇ ಪುರುಷಸೂಕ್ತಂ (ಗಗಣಾ. ೦೬-೨೦); 'ಪುರುಷಸೂಕ್ತ'ದಲ್ಲಿ ದೇವತಾಭಾವನೆ ಇನ್ನೊಂದು ರೂಪದಲ್ಲಿದೆ. ವಿಶ್ವವನ್ನೇ ಒಬ್ಬ ಪುರುಷನೆಂದು ಭಾವಿಸಿ, ಅವನನ್ನೇ ದೇವತೆಗಳು ಪಶುವನ್ನಾಗಿ ಮಾಡಿ ಒಂದು ಮಹಾಯಜ್ಞವನ್ನು ನಡೆಸಿದ್ದರಿಂದ ಈ ವಿಶ್ವವು ಸೃಷ್ಟಿಯಾಯಿತು ಎಂಬ ಒಂದು ಅದ್ಭುತಕಲ್ಪನೆ ಇದೆ (ಭಾರದ. ೨೬). [ಸಂ.]

**ಪುರುಷಾಂಗ** (ನಾ). ಪೌರುಷ ; ಪುರುಷತನ : ಹೆಂಗುಸುಗಳಾವ್ ಬಲ್ಲೆವೇ ಪುರುಷಾಂಗ ನಿಮ್ಮದು ಪೌರುಷಾಂಗದ ತುಂಗಬಲರಿದೆ ನಿಮ್ಮ ಬಳಿಯಲಿ ಲಕ್ಕಸಂಖ್ಯೆಯಲಿ (ತೊರಂಬಾ. ೪-೦೦-೨೬). [ಸಂ.]

**ಪುರುಷಾಂತರ** (ನಾ). ೧. ಇನ್ನೊಬ್ಬ ಗಂಡಸು ; ಪರಪುರುಷ : ಪುರುಷಾಂತರಕ್ಕೆಳಸಿ ಪುಷ್ಪಶರತಾಪದಿಂ ಕರಗಿ ಕಾತರಿಸಿ ಮೆಲ್ಲನೆ ದೂತಿಯೊರ್ವಳಂ

ಕರೆದೊಡಂಬಡಿಸಿ . . . ಮದನಕೇಳಿಗೆ ಸಂದು ಮರಳಿ ಮಾನಿನಿಯರಂತಿರ ಬಲ್ಲರಪರೆ ಜಾರೆಯರ್ (ಶ್ರೀಪಾ. ೩-೩೯). ೨. (ಯೋಗ್ಯ ಮತ್ತು ಅಯೋಗ್ಯರಾದ) ಪುರುಷರ ನಡುವಣ ಭೇದ,—ತಾರತಮ್ಯ: ಅಗ್ಗಳದ ವಿವೇಕವಿಲ್ಲ ನಿನಗೆತ್ತಲಿವಾ ಪುರುಷಾಂತರಂಗಳಾ (ಗದಾಯು. ೯-೩); ಮರುಳೆ ಮದಾಂಧತೆಯೊಳುಲಿವೆ ಪುರುಷಾಂತರಮನರಿಯದೆಯ್ದದ ಧರಣಿಪನ ನೆರೆಯದಾದಳ್ ತರುಣಿಯೆಂದೆನುತ ನಿಮ್ಮ ನಗರೇ ಸರಿಯ ಸೂಳೆಯರಲ್ಲರ್ (ಕುಶಾಭ್ಯು. ೩-೭೯). [ಸಂ.]

**ಪುರುಷಾಂತರಸಂಧಿ** (ನಾ). [ರಾಜನೀ] ಸಂಪ್ರದಾನ, ಕಪಾಲ, ಉಪಹಾಸನ, ಸಂತಾನ, ಸಂಗತ, ಉಪನ್ಯಾಸ, ಪ್ರತೀಕಾರ, ಸಂಯೋಗ, ಪುರುಷಾಂತರ, ಅದೃಷ್ಟಪುರುಷ, ಆದಿಷ್ಟ, ಆತ್ಮಾಮಿಷ, ಉಪಗ್ರಹ, ಪರಿಕ್ರಮ, ಅರಿಪರದೂಷಣ ಮತ್ತು ಸ್ಕಂಧೋಪನಯ ಎಂಬ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು: ನಿನ್ನ ಸೇನಾನಾಯಕರಿಂದೆನ್ನ ಕಾರ್ಯಮಂ ಸಾಧಿಸಿದೊಡೆ ನುಡಿದ ಪಣಮಂ ಕುಡುವೆನೆಂಬುದು ಪುರುಷಾಂತರಸಂಧಿಯೆಂಬುದಕ್ಕುಂ (ಪಂಚತಂ. ೨೨-೦೩). [ಸಂ.]

**ಪುರುಷಾಕಾರ** (ನಾ). ಗಂಡಸಿನ ರೂಪ; ಗಂಡುರೂಪು: ಪುರುಷಾಕಾರಮದಿಲ್ಲ್ಲ ಹರಿ ನಿನ್ನೊಳ್ ಪುರುಷಕಾರಮಂ ಕಾಣೆಂ (ಗದಾಯು. ೭-೩೦); ನಿನ್ನ ಪುರುಷಾಕಾರಮುಂ ಮನೋಹರಾಕಾರಮುಮ ವಾರ್ಯವೀರ್ಯಮುಮಿನ್ನೆವರಂ ಶ್ರವಣಭೂಷಣಮಾಗಿರ್ದುವೀಗಳೆಮಗೆ ಪ್ರತ್ಯಕ್ಷಮಾದುವು (ಪಂಚತಂ. ೦೨-೩೩ ಪ); ಪುರುಷಾಕಾರದೊಳ್ ಪುರುಷಕಾರದೊಳಾರುಂ ನೆಗಟ್ಟಿದೀಶ್ವರಾರ್ಯ್ಯನಂ ಪೋಲ್ವಪರೇ (ಎಕ. VII, ಶಿಕಾ. ೦೩೨-೩೩; 1104). [ಸಂ.]

**ಪುರುಷಾಕೃತಿ** (ನಾ). ೧. = ಪುರುಷಾಕಾರ: ತಮ್ಮ ದಿವ್ಯಾಯುಧಂಗಳ ನೆಲ್ಲಮಂ...ಶಮೀವೃಕ್ಷದ ಮೇಲೆ ಪುರುಷಾಕೃತಿಯಾಗಿ ನೇಲ್ಗಟ್ಟಿ (ಪಂಪಭಾ. ೮-೩೨ ಪ); ಪೊಪುಟ್ಪೋಯ್ತು ದೀಪ್ತತಪಮೆಂಬಿನಮರ್ಕಕರಂಗಳತ್ತ ಮಿತ್ತ್ರಂ ಪುದಿದುಪ್ಪರಶ್ಮಿ ಪುರುಷಾಕೃತಿಯಂತಿರೆ ನಿತ್ಯಯೋಗನಿಷ್ಕಂಪಂ (ಶಾಂತಿಪು. ೯-೦೦೩); ಪುರುಷಾಕೃತಿಯಿಂ ತಾನವತರಿಸಿದ ಶಶಿಯೆಂದು ಬಂದು ಬಳಸಿದ ತಾರಾಪರಿಕರಮೆನೆ ಕಣ್ಗೆಸೆದುದು ಪಿರಿದುಂ ಬಾಲಕನ ಮೌಕ್ತಿಕದ ಕಟಿಸೂತ್ರಂ (ಶಾಂತೀಶ್ವ. ೪-೭೮). ೨. ಗಂಡಸಿನಂತೆ ಆಕಾರವುಳ್ಳವಳು: ಪುರುಷಾಕೃತಿಯೊಳೀಕೆ ಕರಂ ಪುರುಷಾಕೃತಿಯೆಂಬುದಿಂತು ನಾನಾಲಿಂಗಂ (ಕಬಿರಾ. ೩-೮೯). [ಸಂ.]

**ಪುರುಷಾಣು** (ನಾ). ವೀರ್ಯದ ಅಣು; ಶುಕ್ಲಾಣು: ತಾಯಿ ಗರ್ಭ ಧರಿಸಿದಾಗ ತಾಯಿಯ ಗರ್ಭಕೋಶದಲ್ಲಿರುವ ತತ್ತಿಯು ತಂದೆಯಿಂದ ಬಂದು ಸೇರಿದ ಪುರುಷಾಣುವಿನೊಡನೆ ಸಂಯೋಗ ಹೊಂದುವುದು (ಗೃಹ. ೦೨೭); ಪುರುಷಾಣುವಿನ ಸಂಬಂಧವಿಲ್ಲದೆಯೆ...ಸಂತಾನೋತ್ಪತ್ತಿಯನ್ನು ಮಾಡುವುದು ಎಷ್ಟೋ ಕೀಟಗಳಲ್ಲಿ ಕಂಡುಬರುತ್ತದೆ (ಕೀಟಲೋ. ೭). [ಸಂ.]

**ಪುರುಷಾದ** (ನಾ). ಮನುಷ್ಯಭಕ್ಷಕ; ನರಮಾಂಸಭಕ್ಷಕ. [ಸಂ.]

**ಪುರುಷಾದಕ** (ನಾ). =ಪುರುಷಾದ: ರಕ್ಕಸರನಿಬರೆಲ್ಲರುಂ ದೀರ್ಘದೇಹಿಗಳ್ ವೆಕ್ಕಸದ ಕೋಪಿಗಳ್ ಮೇಲೆ ಪುರುಷಾದಕರ್ (ಶ್ರೀಪಾ. ೦೩-೨೨). [ಸಂ.]

**ಪುರುಷಾಧಮ** (ನಾ). ನೀಚಮನುಷ್ಯ; ಕೀಳಾದ ವ್ಯಕ್ತಿ: ನಿಮಗೆ ಪೌರುಷವಿಲ್ಲ ನಳನಾಕ್ರಮಿಸಿಕೊಂಡನು ಸತಿಯ ಪುರುಷಾಧಮರು ನಿಮಗಿನ್ನೇಕೆ ಕೊಡಿ ಪಟ್ಟುವೇಷವನು ನಮಗೆ ಕಮಲಮುಖಿಯನು ನಿಮಗೆ ಪಟ್ಟದ ರಮಣಿಯನು ಮಾಡುವೆನು (ನಳಚ. ೪-೧೦). [ಸಂ.]

**ಪುರುಷಾಮೃಗ** (ನಾ). ಅರ್ಧ ಮನುಷ್ಯನಂತೆಯೂ ಅರ್ಧ ಮೃಗದಂತೆಯೂ ದೇಹವಿರುವುದೆಂದು ನಂಬಲಾದ ಒಂದು ಬಗೆಯ (ಪೌರಾಣಿಕ) ಪ್ರಾಣಿ: ಎಂಜಲಿನ ಶುದ್ಧತೆಗೆ ಹೇಳಿದಕೆ ಬುದ್ಧಿಯೆನೆ ತದ್ವನಮಾಲಿ ಪುರುಷಾಮೃಗವನಿಲ್ಲಿಗೆ ನಾಳೆ ಭೀಮನ ಕಳುಹಿ ತರಿಸೆನಲು (ಕುಮಾ. ಕ. ಓಂ೩. ೭-೬); ಇದಿರ ಮೃಗವೇನಾನುವವೆ ಕೆರಳಿದರೆ ಪುರುಷಾಮೃಗದ ಗಾವಳಿಗೆ (ಜೈಮಿ. ೬-೩೦-೪೪); ಮಿರಿವ ಪುರುಷಾಮೃಗಂಗಳಿಂ ನೆರೆದು ಮಿರಿವ ಕರಿಗಳಿಂ ... ಸರ್ವಪರ್ವತಸಾರ್ವಭೌಮನಖರ್ವಸಂಪದಂ ಮಿಗೆ ಮೆಟಿಸುತಿರ್ದುದು (ರಾಜಶೇ. ೦-೦೩೩ ಪ). [<ಪುರುಷ+ಮೃಗ]

**ಪುರುಷಾಮೃಕ** (ನಾ).=ಪುರುಷಾಮೃಗ: ಹಿರಿಯ ಆರತಿ ೮ ಪುರುಷಾಮೃಕದ ಆರತಿ ೩ ನಾಗಾರತಿ ೧ ಧೂಪಾರತಿ [೧] . . . ಅಂತು ಆರತಿ ೨೫ (ಸೌಇಇ. IV, ೨೭೩-೪೦; 1518).

[ < ತಮಿ. ಪುರುಷಾಮಿರುಕಮ್./ ಸಂ. ಪುರುಷಮೃಗ ]

**ಪುರುಷಾಯಿತ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ; ಸ್ತ್ರೀಯು ಪುರುಷನ ಸ್ಥಾನವನ್ನು ವಹಿಸಿ ನಡೆಸುವ ಸಂಭೋಗ; ವಿಪರೀತರತಿ: ಪೊದಟ್ದ ಕಬರೀಭರಂ ಪರೆದು ಪರ್ವೆ ತುಂಗಸ್ತನಂ ಕದಕ್ಕದಿಸೆ ಕಣ್ಮಲರ್ ಪೊಳೆಯೆ ಕಾಂತನು ಮೆಚ್ಚಿಸಲ್ ವಿದಗ್ಧೆ ಪುರುಷಾಯಿತಂ ತಗುಳೆ ನರ್ತಕೀಲೀಲೆಯಿಂದದೊಂದು ಪೊಸಗಾರ ಸೋಗೆ ಸವಿಲಾಸಮಂ ತೋಱುಪಲ್ (ಅಂಪು. ೦೨-೦೪); ಪೆರ್ಮೊಲೆಗಳ್ ಕದಕ್ಕದಿಸೆ ನರ್ತಿಸೆ ಕುಂಡಲಂ . . . ತನ್ವಿ ಪುರುಷಾಯಿತದೊಳ್ ಪ್ರಿಯನಂ ಮಂಗುಲ್ಚುದಳ್ (ಸೂಕ್ತಿಸು. ೦೪-೩೦); ಪುರುಷಾಯಿತದೊಳಾರು ತೊಡಗು ವರಪರಿಗೆ ಜಘನಭಾರದ ಸೇದೆಯಾದುದು (ಗಿರಿಜಾಕ. ೪೯-೯೬). [ಸಂ.]

**ಪುರುಷಾರ್ಥ** (ನಾ). ೧. ಮನುಷ್ಯನು ಸಾಧಿಸಬೇಕಾದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಪರಮಧ್ಯೇಯ: ಪುರುಷಾರ್ಥನಿಧಿ ಪುರಂದರಪರಮಪ್ರಿಯಮಿತ್ರನೋರ್ವನುದಯಿಸಿದಂ . . . ಹಂಸಂ (ಕಾದಂಪು. ೭೦೦); ಸುರಧೇನುಸ್ಪರ್ಶಾರದಂತೆ ಪುರುಷಾರ್ಥಂ ಮೂರ್ತಿಗೊಂಡಂತೆ ನಾಲ್ವರುವೋದಾಗಿರೆ ನಂದನರ್ ದಶರಥಂ . . . ಉತ್ಸಾಹಮುಂ ಶಾಲ್ದಿದಂ (ಪಂಚತಂ. ೩-೦೪೩); ಸ್ನೇಹಪೂರ್ವಕದಿಂದ ಮನದೊಳಗಾಹಿಸಲು ಲಕ್ಷ್ಮೀಶನವರಿಗೆ ಬೇಹ ಪುರುಷಾರ್ಥಂಗಳಹವೆಲ್ಲಿದ್ದರಲ್ಲಿ (ಕುಮಾ. ೩-೦೨೦). ೨. ಮೋಕ್ಷಮಾರ್ಗ; ಮುಕ್ತಿಪಥ: ಕುಲಿಶಾಸ್ತ್ರೋತ್ತಂಸಿತ ಪದನಲಿನಂಗೆ ತನುಜರಾಗಿ ಪುರುಷಾರ್ಥಮನುಜ್ಜಿಸದೆ ಮಾಣ್ಬಮೆ (ಅಂಪು. ೦೪-೩೩); ರಾಜ್ಯಲೋಭವಶದಿಂ ಪುರುಷಾರ್ಥಮನೊಕ್ಕು ಪಾರ್ಥಿವಾಗ್ರಣಿಗಳ ನೇಕರುಂ ಜವನ ದಾಡೆಯೊಳಟ್ಟಿದರ್ (ಧರ್ಮಪು. ೦೩-೬೪); ಬ್ರಹ್ಮದ ಅರಿವೇ ಪುರುಷಾರ್ಥವು (ಬ್ರಹ್ಮಸೂ. ೦೪). ೩. ಯೋಗ್ಯವಾದುದು; ಸಾರ್ಥಕವಾದುದು: ಮತ್ಸರಮಹೋರಗಕ್ಕಮಾಗ್ರಹಮಹಾಗ್ರಹಕ್ಕಂ ಕೋಪಮದಾನೇಕಪಕ್ಕಂ ಪಕ್ಕಾಗೆ ತನ್ನನೊಪ್ಪಿಸುವುದು ಮತಿವಂತಂಗೆ ಪುರುಷಾರ್ಥಮಲ್ತು (ಶಾಂತಿಪು. ೩-೭೨ ಪ); ಪುರುಷಾರ್ಥಮಲ್ತು ಪರನಿಂದೆಯುಮಾತ್ಮಗುಣಪ್ರಶಂಸೆಯುಂ (ಪಂಚತಂ. ೩-೨೪); ದಿವೌಕಸರ ಸಮ್ಮೇಳವೇ ಪುರುಷಾರ್ಥತನಗೆ (ಕುಮಾ. ದ್ರೋ. ೭-೦೬). ೪. ಮನುಷ್ಯಪ್ರಯತ್ನ: ಪುರುಷಾರ್ಥಂ ತನಗುಳ್ಳ ಮಾನವನವಂ ತಾನೆಂತುಮಿರ್ಕುಂ (ಪೀಬಾಪು. ೭-೦೫೭). ೫. ಸಂಪತ್ತು; ಧನ; ಹಣ: ಖಳರ ಪುರುಷಾರ್ಥಮುಂ ಕಾಮಿಸುವ ಯಾಚಕಾವಳಿಯಂತೆ ಪೊಳಲಿಂದೆ ಪೊಱಮಟ್ಟು ಸರಸಿಯೊಳ್ ಮುಳುಗುತಿರ್ಪಾನೆಗಳ ದಾನಾಭಿಲಾಷೆಯಂ ಬಿಟ್ಟಳಿಕುಳಂ ತೊಳಗಲು (ಶ್ರೀಪಾ. ೩-೩೯). ೬. ಉಪಕಾರ; ಸಹಾಯ: ಇದ್ದಪರೆ ಮೞಿದು ಪುರುಷಾರ್ಥಮಂ ಮಾಡದರನುದ್ಧಾಮಗುಣಮುಳ್ಳ ಜೀವಿಗಳ್ (ಶ್ರೀಪಾ. ೩-೩೦). ೭. ವಿಶೇಷವಾದ ಫಲ; ಹೆಚ್ಚಿನ ಪ್ರಯೋಜನ: ಗೋವಿಂದಭಟ್ಟನ ಅಪಲಕ್ಷಣತನ . . . ತಿಳಿದ ಬಗ್ಗೆ ಸಾಕ್ಷಿ ಸಾರುವುದರಲ್ಲಿ ಈಗ ಪುರುಷಾರ್ಥವೇ ಇರಲಿಲ್ಲ (ದೀಕಪ. II, ೭); ಪುಣ್ಯವಿಲ್ಲ, ಪುರುಷಾರ್ಥವಿಲ್ಲ (ಹಸುಹೊ. ೩೪೦). [ಸಂ.]

**ಪುರುಷಾರ್ಥಿ** (ನಾ). ೧. ಉತ್ತಮವಾದ ಧ್ಯೇಯಗಳಿಗಾಗಿ ಶ್ರಮಿಸುವವನು; ಸತ್ಪುರುಷ; ಸಜ್ಜನ : ದುರ್ಜನರು ಪುರುಷಾರ್ಥಿಗಳ ಹಾವಿಂಗನಿಲನೇ ಆಹಾರವಾದುದೆ ಬಿಟ್ಟುದೇ ವಿಷಮ (ಕುಮ್ಮಾ.ಕ. ೬ ೪); ಬೊಲಿಗೊಟ್ಟಿಳಸು ಗುಡಿದವಂ ಪುರುಷಾರ್ಥಿಯಾಪವನೆ (ಶ್ರೀಖಂಶಾ. ೬-೫೩). ೨. ಬಲಶಾಲಿ ; ಸತ್ತ್ವಶಾಲಿ : ನೀವು ಪುರುಷಾರ್ಥಿಗಳೂ ಮತ್ತು ಸ್ವತಂತ್ರರೂ ಆಗಬೇಕೆಂದು ಇಚ್ಛಿಸುವಿರೇನು ? (ಭ್ರಕ್ಷ.ಜೀ. ೮). [ಸಂ. ಪುರುಷಾರ್ಥಿನ್]

**ಪುರುಷೋತ್ತಮ** (ನಾ). ೧. ಮನುಷ್ಯರಲ್ಲಿ ಶ್ರೇಷ್ಠನಾದವನು ; ನರಶ್ರೇಷ್ಠ; ಮಹಾಪುರುಷ : ಆ ಪುರುಷೋತ್ತಮಂ ತಿಳಿಪಿದಂ ಓನಸಂ ನೆನಸಾಗೆ ರಾಗದಿಂ (ಶಾಂತಿಪು. ೯-೩೦೯) ; ಪುರುಷೋತ್ತಮನಾದರದಿಂ ಪರೋಪಕಾರಾರ್ಥಮಿತ್ತನಾತ್ಮೀಯಕಳೇಬರಮು ಸುತರಕ್ಷಾರ್ಥಂ ಶರೀರಮಂ ಜನಕನೀವುದಾವುದು ಚೋದ್ಯಂ (ಶಂತಕಂ.೭೭೬-೫). ೨. ವಿಷ್ಣು; ನಾರಾಯಣ : "ವನಜಾಕ್ಷಂ ಪುರುಷೋತ್ತಮಂ ನಗಧರಂ . . . ವೈಕುಂಠನಬ್ಜೋದರಂ" (ಪಮ್ಮುಕೋ. ೪-೩೦) ; ನೆಗಚ್ಚಿಯ ಪುರುಷೋತ್ತಮನ ಪಿತಾಮಹಂಗೆ ಶೂರಂಗೆ ಮಗಳ್ . . . ಕುಂತಿ (ಕಂಶಪಾ. ೧-೮೮) ; ಆ ಮಹಾರ್ಣವಂ . . . ಪುರುಷೋತ್ತಮನಂತೆ ಶಂಖಚಕ್ರಾಂಕಿತಮುಂ (ಜಗಪು. ೧-೪೪ ವ) ; ಪುರುಷೋತ್ತಮಂಗೆ ಕಮಲಂ ಕಣ್ (ಸೋಮೇಶ. ೬೭). ೧, ೨ : ಅಬ್ಜಾಯತನೇತ್ರನಾದಿಪುರುಷಂ ಪುರುಷೋತ್ತಮನೀ ಚಳುಕ್ಯನಾರಾಯಣದೇವನೀಗೆಮಗೆ ಮಂಗಳಕಾರಣಮುತ್ಸವಂಗಳಂ (ಗದಾಯು. ೧-೧). ೩. [ಜೈನ] ವಾಸುದೇವ ; ಲಕ್ಷ್ಮಣ : ಪುರುಷೋತ್ತಮನಿಸೆ ದಶಕಂಧರನಂ ಕೂರ್ಗಣೆಗಳುರ್ಚಲಾಟಿವೆ (ಶಂರಾಮಾ. ೦೪-೦೫೪). [ಸಂ.]

**ಪುರುಸ** (ನಾ). ೧. ಮಾನವ ; ಮನುಷ್ಯ : ಇದೇಂ ಗುಣವಂತನಿದೇಂ ಪುರುಸರನ್ನನೋ ಗಡ ಪುನ್ನಂ (ಶಾಂತಿಪು. ೧-೩೯); ಇದು ಮೇರುವಿಗೆಣೆ ಪುರುಸರೆಲ್ಲ ಸಾಜದ ಕಾರಣ ಧಾರುಣಿಯೊಳಗಣ ಜಂಗಮದಾರಾಧನೆ ಇಂದಯೆ ಸಾಕೀ ಜಗಕೆಲ್ಲಂ (ಎಕ. XI, ದಾವಣ. ೭೭೦-೪; 1266). ೨. ಗಂಡ ; ಪತಿ : ಮಾದಮ್ಮ ಪುರುಸಾಗೆ ಹೇಳು ತರುತಾನೆ (ಹಕ್ಕಕ. ೧೦೫). [ <ಪ್ರಾ. ಪುರುಸ. /ಸಂ. ಪುರುಷ ]

**ಪುರುಸತ್ತು** 'ಪುರಸತ್ತು' ನೋ.

**ಪುರುಸೊತ್ತು** 'ಪುರಸತ್ತು' ನೋ.

**ಪುರುಹ** (ನಾ). ಅಧಿಕವಾದುದು ; ವಿಪುಲವಾದುದು : "ಪ್ರಭೂತಂ, ಪ್ರಚುರಂ . . . ಪುರುಹಂ, ಪುರು, ಭೂಯಿಷ್ಠಂ, ಸ್ಫಾರಂ, ಭೂಯಃ, ಭೂರಿ — ೧೨ ಅಧಿಕವಾದದ್ದರ ಹೆಸರುಗಳು, ಬಹಳವಾದ್ದು" (ಸಿದ್ಧಾಂತಿ. ೩೪೦). [ಸಂ.]

**ಪುರುಹೂತ** (ನಾ). ಅನೇಕರಿಂದ ವಿಶೇಷವಾಗಿ ಪ್ರಾರ್ಥಿಸಲ್ಪಟ್ಟವನು ; ಇಂದ್ರ : "ಪುರುಹೂತಂ ಮಘವಂ ದಿವಸ್ಪತಿ . . . ವಾಸವಂ" (ಪಮ್ಮುಕೋ. ೬-೩೩) ; ಉತ್ಪತ್ಸ್ಯಮಾನ ಭಾವಿತೀರ್ಥಕರಪುಣ್ಯದೂತಾಹೂತಂ ಪುರುಹೂತಂ ಬಂದು (ಆದಿಪು. ೬-೮೮ ವ); ಮರುದೇವಿಗೆ ಪುಟ್ಟಿದಪಂ ಪುರುದೇವಂ ಬಂದು ದಿವದಿನೆಂಬಪಥಿಯಿನಾ ಪುರುಹೂತನಜಿದಯೋಧ್ಯಾಪುರಮಂ ನಾಡಾಡಿಯಲ್ಲದಂತಿರೆ ಪಡೆದಂ (ಕುರಾಮಾ. ೧-೯೯). [ಸಂ.]

**ಪುರುಹೂತಗಣ** (ನಾ). [ಛಂದ] ಮೂರು ಅಂಶಗಳ ಗಣ; ವಿಷ್ಣು ಗಣಕ್ಕೆ ಸಮಾನವಾದ ಗಣ ; P ತೆಲುಗಿನಲ್ಲಿ ಇದನ್ನು 'ಇಂದ್ರಗಣ' ವೆಂದು ಕರೆಯುತ್ತಾರೆ : ಪುರುಹೂತಗಣಗಳಾಱುಂ ಸರಸಿಜಸಖಗಣಗಳೆರಡು ಸಂಧಿಸಿ ಬರ್ಕುಂ ಚರಣಕ್ಕೆ ಸೀಸದಂತರದೊಳೊರಗಿಂತಹ ಸರಳತನ್ನೊಳೊಪ್ಪುವ ತೆಱದಿಂ (?) (ಕ್ಕವಿ. ೦೫೦). [ಸಂ.]

**ಪುರುಹೂತಜಾತ** (ನಾ). ೧. ಇಂದ್ರನ ಮಗ. ೨. ವಾಲಿ : ಸಂಭ್ರಮವಾಱಿ ನೋಡಿದರ್ ಪುರುಹೂತಜಾತನಂ . . . ಇಳೆಗುರುಳ್ದ ಬಿಲ್ಕಾತನಂ (ಶ್ರೀರಾಮಾ. ೬೦೨-೩೯೩). [ಸಂ.]

**ಪುರುಳ್**, ಪುರಲು, ಪುರುಳು, ಪೊರಳ್ಕು, ಪೊರುಳ್, ಹುರುಡು, ಹುರುಳ್, ಹುರುಳು (ನಾ). ೧. ವಸ್ತು ; ಪದಾರ್ಥ : ನಾಣನೆಳ್ಳನಿತುಂ ಕಾದೆನೆ ಬೇಡಿದೊಂದು ಪುರುಳಂ [ಪಾಠಾಂ. ಬೇಡಿದೊಂದೊಡಮೆಯುಂ] ಮಾರ್ಕೊಂಡನೇ . . . ಆನೆರೆದಟ್ಟಿಯುಂ ಬಗೆಯನೇ ಗಂಡುಮನಂಗೊಂಡನೋ (ಆದಿಪು. ೦೨-೩೬) ; ಮನವಿಚ್ಛೆಪಟ್ಟ ಪುರುಳಂ ಬೇಡಿಪೊಟ್ಟಮಿಲ್ಲದ ರಾಗರಸದಿಂ ಉಳಿಕೊಂಡಿ . . . ಪೊಟ್ಟುಗಳೆವುದು ನೃಪನಪೆಂಡವಾಸಂ ಕೂಡಿ (ಪುಷ್ಪಕು. ೨-೪೪); ಮುನಿಗಳೊಂದು ಜಪದ ತಪದಮಂತ್ರದ ಬಲ್ಮೆಯೇಂ ಕಿಡುದೆ! ಬೇಡಿದ ಪುರುಳನುಜಿದಿಂ ತಂದೀಗಂ (ರಾಮಾಶ್ವ. ೦೦೫-೨೯). ೨. ಸತ್ತ್ವ ; ಸಾರ ; ತಿರುಳು : ದೊರೆಯಲ್ಲದಂಗೆ ನುಡಿವುದು ಪುರುಳಲ್ಲದ ಮಾತನೆಮ್ಮೊಳಂ ನುಡಿವುದೆ (ಆದಿಪು. ೦೪-೬೦) ; ಮರುಳ ಮಾತಿನೊಳ್ಪುರುಳೇನೆಂದರಸಂ ಪೋಗೆಪೋಗೆ (ಗದಾಯು. ೪-೯೩ ವ); ಆನುಂ ನೋಟಟ್ಟಿಂ ಕತೆಯ ಪುರುಳೆಂತಿರ್ಕುಮೆಂದು (ರಾಮಾಶ್ವ. ೫-೨೮). ೩. ಕೆಚ್ಚು; ಶಕ್ತಿ ; ಚೈತನ್ಯ : ಅದಟನ ಪುರುಳಂ ಪೊಣರ್ಗಳಜಿವೆನುಗ್ರಾಹವದೊಳ್ (ಆದಿಪು. ೦೨-೯೯); ತೆರಳ್ದ ಮೊಗಂ ಕರ್ಗಿದ ಬಾಯ್ ಪುರುಳಿಲ್ಲದ ಮಿಳ್ಳಿಗಾಲ್ (ಧರ್ಮಾಮೃ. ೬-೨೪೪). ೪. ಬೆಲೆ ; ಮೌಲ್ಯ. ೨, ೪: ಪುರುಳುಂ ಲಕ್ಕಣಮುಂ ಮೆಯ್ಸಿರಿಯುಂ ತಳ್ತೆಸೆಯೆ ಪೇಟ್ಟ ಕಬ್ಬಮದೆಂತುಂ ಪುರುಳುಂ ಲಕ್ಕಣಮುಂ ಮೆಯ್ಸಿರಿಯುಂ ತಳ್ತೆಸೆವ ರನ್ನದಂತೆರ್ದೆವುಗದೇ (ಕಬ್ಬಿಕಾ. ೬). ೫. ಧನ ; ದ್ರವ್ಯ ; ಹಣ : ಪರಪಧುಗೆ ಸೋಲ್ತು ತಮ್ಮಯ ಪುರುಳೆಲ್ಲಮನಿತ್ತು ರಾಗದಿಂದಂ ದವರೊಳ್ ನೆರೆದು (ಸಮುಕ. ೫-೬೬) ; ಪುರುಳನಲ್ಲದೆ ಪುರುಷನನನುಭವಿಸಬಲ್ಲರೇ ಬೆಲೆವೆಣ್ಣಳ್ (ಅನಂಪು. ೮-೨೫) ; ಪುರುಳಂ ಪಡೆದೊಳ್ಗಿಯ್ಮಯೊಳೆ ಠೆವರ್ಗಿತ್ತುಟ್ಟು ತೊಟ್ಟು ಪೆಂಡಿರ್ ಮಕ್ಕಳ್ವೆರಸು . . . ಪದುಳದೊಳಿರ್ಕುಂ (ಜಕಪ. ೩-೭೯೦). ೬. ಸಂಪತ್ತು ; ಐಶ್ವರ್ಯ : ನೆಲನಿಮನೆಲನಂ ಪಾಲಿಸು ನೆಲದಿಂ ಪುರುಳಕ್ಕುಮಾರ್ ನೆಲಕ್ಕೆಜಗದಪರ್ (ಕಾವ್ಯಾವ. ೬೬) ; ತಮ್ಮ ಪುರುಳೆಂಬರ್ ತಮ್ಮಕ್ಕಳನ್ (ಕುಜಕ್. ೧-೬-೩). ೭. ಒಳಿತು ; ಲೇಸು : "ಪುರುಳೆನಲೊಳ್ಳಿತು" (ಶಾಕಂ. ೦೪) ; ಪುರುಳಿಲ್ಲದಂಗೆ ಜೈನಂ ದೊರೆಕೊಂಡುಂ ದುಶ್ಚರಿತ್ರಮಂ ಬಿಡದುದಱಿಂ ಚಿರಕಾಲಂ ನಿಲಲಱಿಯದು ಪರಿಕಿಸುವೊಡದಂತೆ ನಾಯ್ಗೆ ನೆಯ್ಯಕ್ಕುಗುಮೇ (ಸಮುಕ. ೯-೩೯) ; ಸುಜನರ್ಬ್ಭವ್ಯರೆ ತನಗಪರಜನ್ಮಮುತ್ತಂಸಮಪ್ಪ ಪುರುಳಿಂ ಬೊಪ್ಪಂ ಸುಜನೋತ್ತಂಸನೆನಿಪ್ಪಂ ಸುಜನಗ್ರ್ಗತ್ತಂಸಮೆಂಬ ಪುರುಳಿಂದೆನಿಸಂ (ಎಕ. II, ೨೩೪-೬೬ ; ಸು. 1180). ೮. ಚೆಲುವು ; ಚಂದ : "ಪುರುಳೆನೆ ಚಂದಮಕ್ಕು" (ಕಕರ. ೦೩೭). ೯. ಫಲ ; ಪ್ರಯೋಜನ : ತನುಗೆ ಪೊಜಿತುಡುಗೆ ನವಲೇಪನಮೆ ಮುಳಂ . . . ಇಂತಿನಿತಜಿೊಳವೊಂದಜಿೊಳ್ ಪುರುಳುಂಟೇ (ಆದಿಪು. ೯-೫೫) ; ನಾಲಗೆಯುಂ ಪಲ್ಲುಂ ತವುವನ್ನೆಗಮೋದಿದೊಡಂ ಕುತತ್ತ್ವದೊಳ್ ಪುರುಳುಂಟೆ (ಸುಕುಮಾ. ೩-೪೪) ; ಈ ಪುರುಳಿಲ್ಲದ ನಾಯೊಡಲಂ ಮರುಳೇ ಕರಮೊಲ್ದು ಕೂರ್ಪ ಮಾನಿಸರೊಳರೇ (ಧರ್ಮಾಮೃ. ೬-೦೯೨). ೧೦. ಬುದ್ಧಿವಂತಿಕೆ ; ಜ್ಞಾನ : ಪುರುಳಂ ಮರುಳಂ ಮಾಟ್ಪಂ ಶರನಿಧಿಯುಂ ಬೆಂಚಿ ಮಾಡುವಂ ಕೇಸರಿಯುಂ ನರಿ ಮಾಟ್ಪಂ . . . ಕುಸುಮಪತಾಕಂ (ಲೀಲಾವ. ೪-೨೫). ೧೧. ಜ್ಞಾನಿ ; ತಿಳಿವಳಿಕೆಯುಳ್ಳವನು : ಪುರುಳಾಗು, ಮರುಳಾಗು, ಕಲಿಯಾಗು, ಪೇಡಿಯಾಗಣ್ಣ, ನೀನೊರ್ವನಿರ್ದಪುದು (ಅಕ್ಕತಾ. ೨೦-೪೦೯). **ಪುರಲು** : ೧೨. ಶೋಭೆ ; ಕಾಂತಿ : ಎರಡು ತಿಂಗಳ ಹರೆಯ ಮಂಗಳ ಬರಲು—ತುಂಬಿತು ವತ್ಸಗೇ ಬಿರುಮನಂಗಳ ಸಿರಿಯು , ಕಂಗಳ ಪುರಲಿದೇ, ಕಡೆಕಂಜಿಯು (ಕುಪು. ೨೦-೩೪). **ಪುರುಳು** : ೧. ನಿನ್ನ ಪುರುಳೆಲ್ಲವನು ಬೇದಿಗಿಡು ಮಾರಿಬಿಡು ನಿನ್ನ ಸಿರಿಯೆಲ್ಲವನು ಬಡಪರಿಂಗೆರೆದು ಬಿಡು (ಕಗದ್ಯ. ೬೨). ೨. ನೀನುಪಜೀವಿನ ತಿರುಳು ನಾನು

ಮಱೆವೆಯು ಪುರುಳು (ಶ್ರೀಭುಪು. ೬-೧೯೨); ಎನ್ನ ಪ್ರಾಣದ ಪುರುಳನೆನ್ನ ಜೀವನರುಚಿಯುನೆನ್ನ ಗರಿಮೆಯು ತನೆಯು ಕಾಣುತಿಹೆ ಸುಖವ (ಪಸೀಗೀ. ೪೦-೫). ೮. ಪರಿಪರಿಯಾಗಿ ಸಿಂಗರಿಸಲೇಕಹುದೆಂದು ಪುರುಳಾಗಿ ಸಿಂಗರಿಸಿದರು (ಶರಷ. ೩೧-೪೯); ಪವಣಿಗೆಯೊಪ್ಪೆ ಪುರುಳು ಪೊಗರೇಱೆಯುಂಗವಿಸೆಯಲಂಕಾರಗಳು ಕವಿದು ಪರಿಯೆ ರಸದೊಳ್ಗಂಪು [ಕ]ಮ್ಮನೆ ಕವಿತೆಯೊಂದನು ಪೇಳಿಸಿಂದು (ಹದಿಬ. ೧-೨೬). ೧೩. ಆಶಯ; ಅಪೇಕ್ಷೆ; ಉದ್ದೇಶ: ಒಳ್‌ಬಗೆಯೊಳು, ಮಗನ, ನನ್ನ, ಮನೆಯ, ಹರಸಿ ನುಡಿದಿರಿ. ನಿಮ್ಮ ಪುರುಳು ನಡೆಯಲಣ್ಣ. ಹರಕೆಯಿಡಲು ತೆರಳುವೆ (ಶಾರಸಿ. ೧೧-೨೪೦). ೧೪. ಶಬ್ದದ ಅಭಿಪ್ರಾಯ; ಅರ್ಥ: "ಅನೇಕಾರ್ಥಾಃ—ಪಲವು ಪುರುಳುಳ್ಳವಾಗಿ" (ಕಾಶಕ. ೧); ಪುರುಳೊಂದೆಡೆ ಪದಮೊಂದೆಡೆ ಸಂಬಂಧದಿರವೊಂದೆಡೆಯೆನೆ ಕೃತಿಯ ವಿರಚಿಸಿ ಕುಕವಿಜನಗಳೇಕೆ ಮಾಳ್ಪರೊ ಶಿರಕೆ ಬೇನೆಯ ಸುಕವಿಗಳ (ಕುರಾಸಾಂ. ೧-೬೨). **ಪೊರಳು₂**: ೬. ಅಲಪಣವುಂ ಅಪುತ್ರಕ ಪೊರಳುಮಾನ್ ವಿಟ್ಟಾರ್ (ಇಇ. XIX, ೧೪೪-೬; 680). **ಪೊರುಳ್**: ೫. ನೆಲ್ಲಿಗೆಱೆಯ ಕೆಱೆಗೆ ಕೊಟ್ಟ . . . ನಾಲ್ವತ್ತೆರಡು ಪೊರುಳುಂ ಬ್ರಾಹ್ಮಣರ್ಗ್ಗಂ ತಪಸಿಯರ್ಗ್ಗಂ ಕೊಟ್ಟ ಪೊರುಳು ಮೂವತ್ತೇಳುಂ (ಎಕ. IX, ಹೊಸಕೋ. ೧೧-೧೪; 1023). **ಹುರುಡು₂**: ೨. ಇದಱೊಳು ಹೊಕ್ಕು ವಿಚಾರಿಸಿದೊಡೆ ಹುರುಡಿನಿತುಂಟೇ (ಕೃಕವ. ೨-೬ ಪಲ್ಲವಿ); ಈ ಗರುಡನ ಹುರುಡು ಗೊತ್ತಿಲ್ಲವೆಂದು ಕಾಣುತ್ತದೆ ಈ ಜನರಿಗೆ (ಜನಪ. ೫). **ಹುರುಳ್**: ೨. ನೀತಿಯೆಂಬುದು ನೀರ ಮೇಲೆ ತೇಲುವ ತೆಪ್ಪ ಮಾತ ಬಲ್ಲವರೆತ್ತ ತೆಗೆದಂತೆ ಬಹುದದು ಕೇಳಿದರೆ ಹುರುಳಾಗದು (ಸರ್ವಜ್ಞ. ೯-೧೮). ೬. ಗಂಡುಳಿವ ಸಿತಗರೆಲ್ಲಂ ಪೆಂಡಿರವೊಲು ಕರುಳ ಬೆರಳ ಹುರುಳಂ ಕೊಟ್ಟುಂ ಕಂಡುಂ ನಡೆವರು ಸಿತಗರ ಗಂಡಂ ಶ್ರೀಮಾಚಿ ಜಡಿವನಸಿಯನೆನುತ್ತಂ (ಎಕ. VII, ಶಿಕಾ. ೨೩೬-೭; 1174; ಶಾಶಮಂ. ೯೪೬ ನೋ). ೭. ಸನ್ನಿಂವಂ ಸಕಳಜಗಂ ಸುಖದಿಂದಿರ್ಪೊಡೆ ಹರಣದೊಂದು ಹುರುಳಱಿಸುವರೇ (ಗಿಂಕ. ೭-೩೨); ತರುಣನೆನ್ನೊಳು ತರಳನೆನ್ನೊಳು ದುರುಳನೆನ್ನೊಳು ಮರುಳನೆನ್ನೊಳು ಹುರುಳದೇನುಂಟೈ ಪರೀಕ್ಷಿಸೆ (ಸಾಮುಷ. ೪-೧೧೬). **ಹುರುಳು**: ೧. ಧರಧುರದೊಳಭಿಮಾನಹಾನಿಯು ಹುರುಳಹುದು ಬಿಲುಹೋರಟೆಗೆ ನಿಲಲರಿದೆನುತ್ತಂ ಗವಣೆಗುಂದಿತು ನೆರೆದ ನೃಪನಿಕರ (ಕುವ್ಯಾಆ. ೧೪-೧೬). ೨. ಗಱಿ ತೋಱಿ ಗಂಡರೆಂಬವರ ಕಾಣೆ ನಿಱಿ ಸೋಂಕಲು ಮಾನಿಯಿಲ್ಲ ನೋಡಯ್ಯಾ . . . ಹುಲ್ಲ ಕಿಚ್ಚು ಹೊಲೆಯನ ಮೇಳಾಪ ಅಲ್ಲಿ ಹುರುಳಿಲ್ಲ (ಬಸವ. ೧೧೨); ಸತ್ಯದ ಹುರುಳನಱಿಯದೆ ಕಾಳುಗೆಡೆದರೆ ಕಾರ್ಯವೆಂತಹುದು (ಕುವ್ಯಾಕ. ೧೬-೧೬); ಆ ಮಹಾತ್ಮನ ಹುರುಳ ನಾನೆಂತಱಿವೆನೆನುತಲಿ ಬಸವ ಚಿಂತಿಸಿದ (ಪ್ರಭುಲಿ. ೨೦-೬). ೩. ಹುರುಳು ಬಲ್ಲೆವು ಸಾಕು ಹೋಗು (ಕೌಶಿಂ. ೨೦-೨೦); ದಿಗ್ವಿಜಯದ ಪರಾಕ್ರಮದ ಹುರುಳು ನಿನಗುಂಟೆಂಬುದವ ಕೆಲಕಿರಿಸು (ಕೊರಾ. ೧-೯-೩೦); ಪುರುಷರಲಿ ಹುರುಳಿಲ್ಲ ಸಲಹೆಂದೊರಲಲಕ್ಷಯವೆಂದು ವಸ್ತ್ರವ ಕರುಣಿಸಿದ (ಕೋಗಯು. ೧೫-೩೦). ೭. ತುದಿಗೊನೆಯ ಚೆಂದೆಂಗು ಖರ್ಜೂರದಲಿ ಕಾಣೆನು ಹುರುಳ ನಾರಂಗದ ಪಿರಾಮವನೇನನೆಂಬೆನು ನಿಮಿಷಮಾತ್ರದಲಿ (ಕುವ್ಯಾಅ. ೧೮-೩೬); ಬಿಚ್ಚಿ ಹೇಳಲು ಹುರುಳ ಕಾಣೆನು ತುಚ್ಛತನುವಿದನು (ಅಮೃತ. ೨-೯೪). ೮. ಧಿಗಿಲೆಂದುದು ಧರಾಧೀಶ್ವರನ ತೇದೆಯು ಹೃದಯದಲಿ ಹುರುಳೇನು ಬಳಿಕುಳಿದವರ ಮೋಱೆಗಳ (ಕುವ್ಯಾಕ. ೧-೨). ೯. ಒಂದಿನ ಹಳೆಯ ಕತೆಯನ್ನು ಕೆದರುವುದರಲ್ಲಿ ಹುರುಳಿಲ್ಲ (ಹಾತುತ. ೪೦). ೧೩. ಮರುಳಲಾ ಮಱುಮಾತು ಕಡುವೃದ್ಧರಿಗದೇಕೆಂಬಂತೆ ಚಿತ್ರದ ಹುರುಳ ಬಲ್ಲೆನು ಮಥನ ಬಿಡಿ ಕೆಲಸಾರಿ ಸಾಕು (ಕುವ್ಯಾದ್ರೋ. ೧೭-೨೫). ೧೫. ನೆಲೆ; ಬೀಡಂ; ಆಶ್ರಯ: ಈ ಚರಾಚರ ನೆರೆದು ನಿಮ್ಮಯ ರೋಮಕೂಪದ ಪೊಱೆಯೊಳಗೆ ಪೊಳೆವಾಡುತಿಹುದೆಂಬಗ್ಗಳಿಕೆಗಳಿಗೆ ಹುರುಳೆನಿಪ ಹೇರಾಳದಂಗದ ಸಿರಿಯ ತೋಱೈ ಕೃಷ್ಣ (ಕುವ್ಯಾಭೀ. ೩-೬೨). ೧೬. ಮರ್ಮ; ರಹಸ್ಯ: ಶ್ರೀಕಂಠಶಾಸ್ತ್ರಿಗಳು ಸುಭಗೆಯೊಡನೆ ಅಧಿಕಪ್ರಾಸಂಗಿಕವಾಗಿ ವರ್ತಿಸಿದುದಕ್ಕಾಗಿ ತಮ್ಮ ಹುರುಳನ್ನು ಅವಳು ಬೈಲಿಗೆಳ್ದೆ ಎಳೆಯುವಳೋ ಎಂಬ ಭಯದಿಂದ ರಾತ್ರಿಯೆಲ್ಲ ನಿದ್ರೆ ಮಾಡಿದ್ದಿಲ್ಲ (ಗಂಗಾಸಾ. ೯೯). ೧೭. ನಾಯಕ; ಒಡೆಯ; ಮುಂದಾಳು: ಎಲೆಲೆ ವಿಲಯಕೃತಾಂತನೋ ನಮ್ಮಳವು ಕೊಳ್ಳದು ಬೆಂಗೊಡಲಿ ಮುಂಕೊಳಿಸದಿರಿ ಮರುಳಾಗದಿರಿ ಹುರುಳಾಗಿ ಹೆಂಡಿರಿಗೆ (ಕುವ್ಯಾಭೀ. ೫-೧೧); ವ್ಯಾಸಸ್ಫೂರ್ತಿಗೆ ನಡೆಕೋಲಾದನೆ ಮರುಳ್ಗಳ ಹುರುಳೇ ಎಡರಾಳುವನೇ ಏ ಬನದಕೆ ನನ್ನೆಡೆಗೈತಂದೆ (ಗಹೀಶ. ೨-೪೮). ೧೮. ಸತ್ವಶಾಲಿಯಾದವನಂ (?): ಧರೆಯೊಳು ಮೈಸೂರವರ ಕೂಡೆ ವೈರವ ಬೆರಸಿದವರು ಹುರುಳಹರೆ (ಕಂನವಿ. ೩-೪೬).

[ದೇ.॥ ತಮಿ. ಮಲ. ಪೊರುಳ್; ತುಳು. ಪೊಲರ್; ತೆಲು. ಪುರುಲು; ಕೋತ. ಪೊಲ್‌ರ್]

**ಪುರುಳಿ₁** 'ಪುರುವಳ್ಳಿ' ನೋ.

**ಪುರುಳಿ₂** (ನಾ). ೧. ಹೆಣ್ಣು ಗಿಳಿ; ಸಾರಿಕೆ: "ಪುರುಳಿಯೆಂದುಂ ಸಾರಿಕೆಯೆಂದುಂ ಪೆಣ್ಗಿಳಿ" (ಕಶಸಾ. ೫೫-೨೦೩); ಕಲ್ತೊಡನೋದುವುದಲ್ತೆ ಗಿಳಿಗಳುಂ ಪುರುಳಿಗಳುಂ (ಕವಿರಾ. ೧-೧೧); ತುಂಬಿ ಗಿಳಿ ಪುರುಳಿ ಕೋಗಿಲೆಯೆಂಬಿವುವೆರಸಖಿಲತರುಗಳಿಂದ್ರನ ಬೆಸದಿಂದಂ ಬಂದುವೆಂದೊಡುಪವನವುಂ ಬಣ್ಣಿಸಲೆನಗೆ ನಾಡೆಯುಂ ಕುಱಿಪಲ್ತೇ (ಆದಿಪು. ೬-೯೨); ಕೂರ್ತ ಧೂರ್ತ ಸುರಮಿಥುನಂಗಳ್ ನೆರೆದಳಸುಗಲಿಸೆ ಗಿಳಿಯುಂ ಪುರುಳಿಯುಮಳಸುವುವು ದೇವಭಾಷೆಗಳಳಸಂ (ಕಾವ್ಯಾವ. ೯೩೦). ೨. ಗಿಳಿ; ಶುಕ: "ಕನ್ನಡವಕ್ಕಿ ಪುರುಳಿ ಪಂಡಿತವಕ್ಕಿಯೆನಲು ಗಿಳಿ" (ಕಬ್ಬಿಕ್ಕಿ. ೨೩); "ಕನ್ನಡವಕ್ಕಿ ಪುರುಳಿ ಪಂಡಿತವಕ್ಕಿ ಗಿಳಿಯಕ್ಕು" (ಶಬ್ದಮಂ. ೨೪). ೩. ಗಿಳಿಯ ಮರಿ; ಮರಿಗಿಳಿ; "ಗಿಳಿವಱಿ" (ಷಕುನಿ. ಕ. I, ೨೦).

**ಪುರುಳಿ₃** (ನಾ). ಹಸು: ಪರವತ್ಸಂಗಳ ಬಱಿಯುಂ ಪರಿಗೊಳುತುಂ ತೊಱೆದ ಗೊಂತಮಂ ಬಿಡುತುಂ ಹೂಂಕರಿಸುತ್ತುಂ ಪೋಪಗ್ಗದ ಪು[ಶಾಕಾಂ. ಮ] ರುಳಿಗಳಂ ಮಿಗೆ ಮರಲ್ದು ನೋಡಿದನರಸಂ (ಲೀಲಾವ. ೫-೪೦). [?]

**ಪುರುಳು** 'ಪುರುಳ್' ನೋ.

**ಪುರುಳುಗಾಣು** 'ಪುರುಳ್ಗಾಣ್' ನೋ.

**ಪುರುಳುಗೆಡಿಸು**, ಹುರುಳುಗೆಡಿಸು (ಕ್ರಿ). ೧. ಬಲಗುಂದಿಸು; ನಿಸ್ತೇಜಗೊಳಿಸು; ನಿಶ್ಶಕ್ತಗೊಳಿಸು; ನಿಸ್ಸಾರವೆನ್ನುವಂತೆ ಮಾಡು: ವರುಣನ ಪುರುಳುಗೆಡಿಸಿ ವಾಯುವ್ಯನ ಮರುಳುಮಾಡುತ ಧನದನನು ದೊರೆಗೆಡಿಸಿದನು (ಶ್ರೀಕೃಸಾಂ. ೬-೩೬). ೨. ಹೀಯಾಳಿಸು; ಧಿಕ್ಕರಿಸಂ: ಪುರುಳಿಯ ಪುರುಳುಗೆಡಿಪ ನುಡಿ ಕದಳೀಸ್ತಂಭಮನೇಳಿಸುವೂರುಗಳೊಪ್ಪಿದುವಾ ಸತಿಗೆ (ಜಯುಕಾ. ೨-೮). **ಹುರುಳುಗೆಡಿಸು**: ೧. ಬಾಹ್ಲಿಕ ದುರುಳ ಸೌಬಲ ಸೋಮದತ್ತರ ಹುರುಳುಗೆಡಿಸಿದನೊಬ್ಬ ಶಿಶು ಗೆಲಿದನು ಮಹಾರಥರ (ಕುವ್ಯಾದ್ರೋ. ೫-೨೬); ವಿವಿಧ ವಿಟರನು ಹುರುಳುಗೆಡಿಸುವ ನವ ಯವ್ವನಭರದ ವನಿತೆಯರೊಪ್ಪಿದರು (ಕೋರಾ. ೧-೫-೨೬); ಆ ಸುರಾಧಿಪನ ಹುರುಳುಗೆಡಿಸುವೆನು (ಉತ್ತರಾ. ೬-೪). ೨. ಹುರುಳುಗೆ[ಶಾಕಾಂ. ೧]ಡಿಸು ವಿರಾವು ನುಡಿದೊಡೆ ಕರಗಿ ಕುಂತೀಮಕ್ಕಳೆಂದೊಡೆ ಹರಹಿಕೊಂಬಿರಿ (ಕುವ್ಯಾಉ. ೫-೧೮); ಹರುಹುಗೆಟ್ಟುದು ತೇರು ಸಾರಥಿ ಹುರುಳುಗೆಡಿಸಿಯೆ ನುಡಿದ ನಂಬಿನ ಕೊಱತೆ ತಾ ಮುನ್ನಾಯ್ತು ದೈವದ್ರೋಹಿಗಳು ನಿಮಗೆ ಅರಿವಿಜಯವೆಲ್ಲಿಯದು (ಕುವ್ಯಾಕ. ೧-೧೫). ೩. ಮನಸೋಲಿಸು: ಹರಿ ಹರ ಬ್ರಹ್ಮಾದಿ ದೇವರು . . . ಸುಮನಸರೆಲ್ಲರನು ಬಿಡದೆ ಹುರುಳುಗೆಡಿಸುವೆ ಸಾಕು ನಳಭೂವರನ ಮಾತೇನಿನ್ನು (ನಳಚ. ೪-೯). ೪. ಪೋಲುಮಾಡು; ಹಾಳುಮಾಡಂ: ವ್ಯರ್ಥಗೊಳಿಸಂ: ಆತನೆಚ್ಚುದು ಪಾಶುಪತ್ರವದ

ನಾತುಕೊಂಬವರಾರು ಬಱಿದೆ ಭಟಾತಿಶಯುವನು ಹುರುಳುಗೆಡಿಸುವಿರಿ (ಕುಮಾ.ದ್ರೋ. ೧೫-೧೪). [ ಪುರುಳುಗೆಡು + — ಇಸು₃ ]

**ಪುರುಳುಗೆಡು,** ಹುರುಳುಗೆಡು (ಕ್ರಿ). ೧. ಶಕ್ತಿಗುಂದು; ನಿಸ್ಸತ್ತ್ವವಾಗು; ಬಲಹೀನವಾಗು: 'ಪುರುಳುಗೆಡಿಸು' ಪರಾ. **ಹುರುಳುಗೆಡು:** ೧. ಅಭಿಮನ್ಯುವಿನ ಹೊಯ್ಲಲಿ ಹುರುಳುಗೆಟ್ಟುದು ಹೆಸರ ನಾಯಕವಾಡಿ (ಕುಮಾ.ದ್ರೋ. ೫-೩೫); ಮಹಾಮುನಿಯ ಪರಮಶಾಪವದೆಂತು ನೃಪನಲಿ ಹುರುಳುಗೆಟ್ಟುದು (ಚಿಶಾಗ. ೯-೩-೩). ೨. ಅವಹೇಳನವಾಗು; ಅವಮಾನವಾಗು: ದುರುಳತನದಿಂದಣ್ಣದೇವನ ಹುರುಳುಗೆಡೆ ನುಡಿದನು (ಕುಮಾ.ಕ. ೧೨-೩೦). [ ಪುರುಳು (< ಪುರುಳ್) + ಕೆಡು₁ ]

**ಪುರುಳುಗೊಳ್** 'ಪುರುಳ್ಗೊಳ್' ನೋ.

**ಪುರುಳುಗೊಳಿಸು** (ಕ್ರಿ). ಅರ್ಥಪೂರ್ಣವಾಗುವಂತೆ ಮಾಡು; ಸಾರವತ್ತಾಗಿ ಮಾಡು: ಅರಸಿಯರನಿಬರುಮಾದರದಿಂದೆನ್ನ ಸರಸಕಾವ್ಯವ ಸವಿಪಂತೆ ಪರಮಪತಿವ್ರತೆಯರ ನಡತೆಯನಿಲ್ಲಿ ಪುರುಳುಗೊಳಿಸಿ ಪೊಗಳುವೆನು (ಹರಿಬ. ೦-೪೭). [ಪುರುಳುಗೊಳ್ (< ಪುರುಳ್ಗೊಳ್) + —ಇಸು₃]

**ಪುರುಳೆ** 'ಪುರಲೆ' ನೋ.

**ಪುರುಳ್ಗಾಣ್,** ಪುರುಳುಗಾಣು (ಕ್ರಿ). ೧. ಪ್ರಯೋಜನವನ್ನು ಕಾಣು; ಫಲವನ್ನು ಪಡೆ: ನಾಡಿಗರೆ ದಿನದಿನಂ ಬೇಳ್ಪೊಂದು ಹವ್ಯಮನುಂಡು ಸವಿಗೊಂಡ ಬೋಟಿಯರೆಕ್ಕಾನುಮೊರ್ವನೀ ನಿಚ್ಚವಲಿಯೆಡೆಯಿಂ ಪುರುಳ್ಗಾಣದೆ ಪಚ್ಚವಿಟ್ಟು ಕಿರುಳಂ ಸಮಂತು ಪುರುಳಂ ತೋಱಪ ಜೋಗವೆಣ್ಗ ಸಂಚುಗ್ಗೆಯುಲ್ಲೋಡಂ ಕಱುಂಬಿ ನಿರ್ನೆರಮಾವುದು ಗಕ್ಕೆ ತಡೆವರ್ಪರ್ (ರಾಪೂಕ. ೫೭-೩೦). **ಪುರುಳುಗಾಣು:** ೨. ಧನವನ್ನು ಕಾಣು; ಐಶ್ವರ್ಯವನ್ನು ಪಡೆ: ಪುಟ್ಟಿದಂದಿಂದ ಪುರುಳುಗಾಣದವರು ನೆಟ್ಟನೆ ನಿಧಿಯು ಕಂಡಂತೆ ಕಟ್ಟೆಚಕದೊಳಿನಿಯನ ಕಾಣುತ ಮರವಟ್ಟು ಮೈಮಱತು ನಿಟ್ಟಿಪಳು (ಹರಿಬ. ೭-೪೦).

[ ಪುರುಳ್ + ಕಾಣ್ ]

**ಪುರುಳ್ಗೊಳ್,** ಪುರುಳುಗೊಳ್, ಹುರುಳುಗೊಳ್ಳು (ಕ್ರಿ). ೧. ಸತ್ತ್ವಯುತವಾಗು; ಹುರಿಯೇರು; ಕೆಚ್ಚುಗಟ್ಟು: ಮಹಾಸ್ವಾಮಿಯುವರ ಸೊಮ್ಮಿನ ಸಯ್ಪಿನ ಬಿರುದು ಕುಬೇರನನ್ನೂ ಕಲ್ಪವೃಕ್ಷ ಕಾಮಧೇನು ಚಿಂತಾಮಣಿಗಳನ್ನೂ ನಾಚಿಸುತ್ತ ಪುರುಳ್ಗೊಂಡಿರುವುದು ವಿಶ್ವವಿದಿತವಾಗಿದೆ (ಚಿಟ್ಟಿಂ. ೪೨-೬). ೨. ಧನವನ್ನು ಪಡೆ; ಹಣವನ್ನು ಗಳಿಸು: ಪುಯಿಲನೆಸಗುವಲ್ಲಿಯುಂ ಪೊಡವಿಯುಂ ಪೊರೆವಲ್ಲಿಯುಂ ಪುರುಳ್ಗೊಂಬಲ್ಲಿಯುಂ ಪುಸಿವುಗದೆ ಧರ್ಮಮನಾರಯ್ದು ನಡೆವುದು (ಚಕಮಂ. ೫೨-೧೧). **ಪುರುಳುಗೊಳ್:** ೧. 'ಪುರುಳುಗೊಳಿಸು' ಪರಾ. ೨. ಪುಟ್ಟಿದ ಮನೆಯೊಳು ಪೋರಿ ಪುರುಳುಗೊಂಬ ದಿಟ್ಟ ಗಂಡುಗಳಂತಿರಲಿ ಕೊಟ್ಟುದಱಿಂದ ತಣಿವ ಕುಪರಿಗೆ ಮನಮುಟ್ಟಿ ಕೊಡುವುದು ಕೋವಿದರು (ಹರಿಬ. ೫-೧೧). **ಹುರುಳುಗೊಳ್ಳು:** ೧. ಹುರುಳುಗೊಂಡ ತಿರುಳಿನಲ್ಲಿ ನನ್ನ ರುಚಿಯು ನೀನು ಕಂಡು ನಿನ್ನ ಸವಿಯ ನಾನು ಉಂಡು (ಅರಳು. ೪೪೭-೦೩). [ ಪುರುಳ್ + ಕೊಳ್₁ ]

**ಪುರುಳ್ತೊಡವು** (ನಾ). ಅರ್ಥಾಲಂಕಾರ: ನೂಱುಪುರುಳ್ತೊಡವುಗಳಂ ಬೇಱನೆ ಬಣ್ಣಿಸಿದನವಱ ಭೇದಂಗಳುಮಂ (ಅಕ್ಕಿತ. ೦-೦೭).

[ ಪುರುಳ್ + ತೊಡವು ]

**ಪುರೆ₁** (ನಾ). ಭಲೆ, ಶಹಬ್ಬಾಸ್ ಎಂಬರ್ಥದ ಒಂದು ಹೊಗಳಿಕೆಯ ನುಡಿ,—ಮೆಚ್ಚುಗೆಯ ಮಾತು: "ಅರರೇ ಭಾಪುರೆ ಮಝು . . . ಧಿರುರೇ ಪುರೆಯನೆ ಕೊಂಡಾಟಂ" (ಚತುರ. ೫೫); ಪುರೆ ಮಝು ದಾನವೆ ದಾತೃವೆ ಪಾತ್ರವೆ ಸರಿಯುಂಟೆ ನಿನಗೆ (ಶರತ. ೩-೧೧೧); ಹರ ಮೆಚ್ಚಿ ಹೋಹೊ ಭಾಪುರೆ ಪುರೆ ಪುರೆಯೆನೆ ಸುರಿವರ್ಪುಮಳೆಯ ನಿರ್ಜರರು (ಶ್ರೀರಸೂ. I, ೨೫೮). 'ಪುರಿ₃', 'ಪುರೆಯಿಡು' ಪರಾ.

[ ದೇ.॥ ತಮಿ. ಪುರೈ = ತಕ್ಕುದಾಗು, ಒಪ್ಪು; ತೆಲು. ಪುರೆ, ಪುರೇ ]

**ಪುರೆ₂** (ನಾ). (ಕರಾ) ಛಾವಣಿ; ಸೂರು: ಮಳೆಗಾಲ ಆರಂಭವಾಗಲು ಹಡಗಸಂಚಾರ ನಿಂತು ಹೋಯಿತು. ಮಂಜಿ ಪತ್ತೆಮಾರುಗಳನ್ನು ದಡಕ್ಕೆ ಎಳೆದು ಮಳೆಯಿಂದ ಒದ್ದೆಯಾಗದಂತೆ ಪುರೆ ಕಟ್ಟಿದರು (ಚೋಲು. ೭).

[ ← ತುಳು. ಪುರೆ, ಪೊರೆ ]

**ಪುರೆ₃** 'ಪೂರಿ' ನೋ.

**ಪುರೆ₄,** ಪುರೇ (ಅ). ಸಾಕು, ಇನ್ನು ಬೇಡ ಎಂಬರ್ಥದ ಮಾತು: ಶ್ರೀಕಂಠ ಹೋ ಪುರೆ ಸಾಕು ನಿಲ್ಲು ಎನುತ (ಶ್ರೀರವೇ. ೦-೨೬೪); ಪುರೆ ಸಾರು ನಿಲ್ಲು ಕುಳ್ಳಿರು ತೊಲಗೆಂದು ನಿರ್ಜರವೇತ್ರಧರರು ತಿದ್ದಿದರು (ಶರತ. ೫೪-೦೩). **ಪುರೇ:** ಹೋಹೋ ಪುರೇ ಪುರೇ ಸಾಕುಸಾಕ್ಕೆ ನಿನ್ನ ಸಾಹಸದ ಭಕ್ತಿಗೆಮ್ಮಯ ಮನಂ ಮಚ್ಚಿತು (ತರಿಪು. ೦೪-೦೬).

[ ← ಮರಾ. ಪುರೇ ]

**ಪುರೆಕಾಮ** (ನಾ). ಒಬ್ಬಾತನ ಹೆಸರು: ಬಾಣಸಾಮಿ ಮಗನ್ ಪುರೆಕಾಮನ್ . . . ಅಱಿದಿಯೊಳ್ಸತ್ತನ್ (ಎಕ. X, ಶ್ರೀಂಗ್. ೪೫-೭; ಸು. ೮೮೦?). [ ? + ಕಾಮ ]

**ಪುರೆಯಿಡು** (ಕ್ರಿ). ಭಲೆಯೆನ್ನು; ಕೊಂಡಾಡು: ನಿಮ್ಮ ದೊರೆಯೆಂತು ನಡೆವನಂತವನೆ ಪುರೆಯಿಟ್ಟು ಪೊಗಳ್ವರಿ (ಶರತ. ೪೭-೪೦); ಕೆದಱಿ ಜಂತ್ರದ ಪುಷ್ಪವೃಷ್ಟಿಗಳಾಸವ ಸುದತಿರನ್ನಳು ಪುರೆಯಿಟ್ಟು ಮದನಮಂಜರಿಯಾತ್ತ ಕೈನೀಡೆ ಕೊಟ್ಟಳಾ ಚದುರೆ ಮಂದಾರಮಾಲೆಯನು (ಶಾಗಳು. ೨೨-೧೧೬). 'ಪುರಿಯಿಡು' ಪರಾ. [ ಪುರೆ₁ + ಇಡು₁ ]

**ಪುರೇ** 'ಪುರೆ₄' ನೋ.

**ಪುರೋಖ್ತು,** ಪುರೋಕ್ತು, ಪ್ರೋಕ್ತು (ನಾ). ಮಾರಾಟ; ಬಿಕರಿ; ವಿಕ್ರಯ: ಅಮಾನೀ ದವಸ . . . ಜತನದಿಂದ ಇರಿಸಿ ಗಿರಾಕಿ ಬಂದ ಬಂವ ಪ್ರಕಾರ ಸರಕಾರಕ್ಕೆ ನಿರಖು ಜಾಸ್ತಿ ಕೂಡಿ ಬರುವ ಮೇರೆ ಪುರೋಖ್ತು ಮಾಡಬೇಕು (ಮಹಾಮಂ. II, ೭೩). **ಪುರೋಕ್ತು:** (೩). **ಪ್ರೋಕ್ತು:** (೩).

[ ← ಪಾರ. ಹಿಂ. ಫರೋಖ್ತ್ ]

**ಪುರೋಖ್ತಾನಿ** (ನಾ). ಎರಡನೆಯ ಸಲ ಆಗುವ ಮಾರಾಟ,—ಬಿಕರಿ: ಪುರೋಖ್ತಾನಿ ಆದ ದವಸ ಹೋಗಲಾಗಿ ಬಾಕಿ ನಿಂತ . . . ದವಸಕ್ಕೆ . . . ಬಂದೋಬಸ್ತು ಮಾಡಬೇಕು (ಮ.ಹಾಮಂ. II, ೭೩).

[ ← ಪಾರ. ಫರೋಖ್ತಾನೀ ]

**ಪುರೋಗ** (ಗು). ೧. ಮುಂದಿರುವ; ಅಗ್ರೇಸರ; ಮುಖ್ಯವಾದ. (ನಾ). ೨. ಮುಂದಾಳು; ನೇತಾರ; ಪ್ರಮುಖನಾದವನು: "ಅಗ್ರ್ಯಂ, ಪ್ರಧಾನಂ, ಪ್ರಮುಖಂ, ಪುರೋಗಂ, ಮುಖ್ಯಂ . . . ಅಗ್ರಣೀಃ — ಈ ೧೩ ಮುಖ್ಯಂ" (ಕರಾಮು. ೧೧೫-೫). [ ಸಂ. ]

**ಪುರೋಗಮ** (ನಾ). ಮುಂದಾಳು; ಮುಖಂಡ; ಪ್ರಮುಖ: "ಅಗ್ರೇಸರಂ ಪುರಸ್ಸರನಗ್ರಣಿ ಮುಖ್ಯಂ ಪುರೋಗಮಂ" (ವಸ್ತುಕೋ. ೮೩-೯); ಮುಕುಂದಂ . . . ಮುಂದೆ ನಿಂದಿರ್ದ ನಂದಗೋಪ ಪುರೋಗಮರನನುರಾಗದಿಂ ನೋಡಿ (ಜಗಮ. ೪-೮೦ ವ). [ಸಂ.]

**ಪುರೋಗಾಮಿ** (ನಾ). ೧. ಮುಂದೆ ಹೋಗುವವನು; ಅಗ್ರಗಾಮಿ: ಕೈಲಾಸದಲ್ಲಿ ಕಮ್ಯುನಿಷ್ಟರನ್ನು ಕಂಡು ಪುರೋಗಾಮಿಗಳಂತೆಯೇ ಪ್ರತಿಗಾಮಿಗಳೂ ಹೌಹಾರಬಹುದು (ಕೈಲಾಸ. ೧ ಮುನ್ನುಡಿ). ೨. ಮುಖಂಡ; ಮುಂದಾಳು. ೩. ಮುಂಭಾಗದಲ್ಲಿ ನಡೆಯುವ ಸೇವಕ: "ಪುರೋಗಃ, ಅಗ್ರೇಸರಃ...ಪುರೋಗಮಃ, ಪುರೋಗಾಮಿ—೭ ಮುಂದುಗಡೆ ನಡೆಯುವ ಊಳಿಗದವನು" (ಸಿದ್ಧಾಂತಿ. ೨೫೮). ೪. ಮೊದಲು ಬಂದುದು; ಪೂರ್ವಭಾವಿಯಾದುದು: ಡಾ॥ ವ್ಹಿಟ್ನಿ ಅವರ ಪ್ರಕಾರವಂತೂ ಕ್ರಿಯಾ

ರೂಪಗಳೇ ಭಾವಿಯ ಪುರೋಗಾವಿಗಳು (ಶಾಶಾಶಾ. ೨೭೬).

[ ಸಂ. ಪುರೋಗಾಮಿನ್ ]

**ಪುರೋಚಿ** (ನಾ). ೧. (ಉಕ) (ಕಲಿಯಬೇಕಾದ ಮಗ್ಗಿ, ಕೋಷ್ಟಕ ಮೊದಲಾದುವುಗಳನ್ನು ಕಂಠಪಾಠ ಮಾಡುವ ಉದ್ದೇಶದಿಂದ ಬೆಳಗಿನಲ್ಲಿ ಹಾಗೂ ಸಾಯಂಕಾಲದಲ್ಲಿ) ಪುನಃ ಪುನಃ ಸಾಮೂಹಿಕ ವಾಗಿ ಹೇಳುವುದು; ಸಂತೆ ಹೇಳುವುದು; ಪುರಶ್ಚರಣ: ಎಲ್ಲ ವಿದ್ಯಾರ್ಥಿಗಳನ್ನು ಸಾಲಾಗಿ ನಿಲ್ಲಿಸಿ "ಪುರೋಚಿ" ಹೇಳಿಸುವಾಗ ನನಗೆಂಥಹ ಉಬ್ಬು! (ಗಾಣಕ. ೮೬). ೨. ನಡೆದು ಹೋದ (ದುಃಖದ) ಸಂಗತಿ ಯನ್ನು ಪುನಃ ಹೇಳುವುದು; ಪುನರಾವರ್ತನೆ: ಅಣ್ಣಾ ತಂದೆ ತಾಯಿಗೆ ತಾರು ಕೊಟ್ಟೆ. ಅವರೂ ಬಂದರು. ಹೈದ್ರಾಬಾದಿನ ಕತೆಯ ಪುರೋಚಿ ಯಾಯಿತು (ದೀಕಥ. ೦೫೬); ಎಲ್ಲವನ್ನೂ ಮುಂಚಿನಿಂದ ನಾನು ಮತ್ತೆ ಪುರೋಚಿ ಹಾಡಿದೆ (ದೀಕಥ. II. ೦೮೫).

[ ← ಮರಾ. ಪರವಚಾ, ಪರವಾಚಾ, ಪರೋಚಾ ]

**ಪುರೋಡಿ** 'ಪುರವಡಿ' ನೋ.

**ಪುರೋಡಾಶ** (ನಾ). ೧. ಯಜ್ಞಯಾಗಾದಿ ಶ್ರೌತಕರ್ಮಗಳಲ್ಲಿ ದೇವತಾ ಪ್ರೀತ್ಯರ್ಥವಾಗಿ ಕೊಡುವ ಹವಿಸ್ಸು; ತುಪ್ಪದಲ್ಲಿ ಹುರಿದು ನೀರಲ್ಲಿ ನೆನಸಿದ ಹಿಟ್ಟು: ಆದರಿಸಿ ಪರಿಚಾರಕರು ಸಂಪಾದಿಸಿದ ಘೃತ ಚರು ಪುರೋಡಾಶಾದಿ ಸಂಭಾರಾಳಿಯವನುವಾಯಿತ್ತು ನಿಮಿಷದಲಿ (ಕುಮ್ಯಾ.ಕ. ೬ ೨೨); ಚರು ಪುರೋಡಾಶ ತಂಡುಲ ತಿಲ ವ್ರೀಹಿ ಘೃತದುರು ಹವಿರ್ಧಾಮದಿಂದರುಣಲೋಚನನಾಗಿ . . . ಯಜ್ಞ ಶಾಲೆಯೊಳಧ್ವರದೀಕ್ಷೆ ಯಿಂದೆ ಕುಳ್ಳಿರ್ದಸೆವ ರಾವಣನಂ ಕಂಡು ಚರರಿಂತೆಂದರು (ಕೈಜಾಆ. ೨೦-೩೩). ೨. ಹೋಮಂ ಮಾಡಿ ಉಳಿದ ಹವಿಸ್ಸು; ಹುತಶೇಷ: ಅಂತು ಪುರೋಡಾಶಪವಿತ್ರೋದರನುಂ ಸೋಮಪಾನಕಷಾಯಿತೋದರನುಮಾಗಿ ಮೂವತ್ತೆರಡುದಿವಸದೊಳ್ ಕ್ರತುವಂ ನಿರ್ವರ್ತಿಸಿ (ಶಂಕಥಾ. ೬-೩೬ ವ); ಪುರೋಡಾಶಭೋಜನಪವಿತ್ರೀಕೃತಗಾತ್ರನುಂ . . . ದೇವಶರ್ಮನೆಂಬ ಪಾರ್ವನಿರ್ಪಂ (ಕುಶಕಂ. ೦೮೯-೬). [ ಸಂ. ]

**ಪುರೋದ್ಯಾನ** (ನಾ). ನಗರದ ಉಪವನ; ನಗರೋದ್ಯಾನ: ಪಾಳೆಯಂ ಬಿಟ್ಟುದು ಪುರೋದ್ಯಾನವೀಥಿಗಳೊಳ್ (ಕೈಜಾಆ. ೦೭-೦೦); ಪುರೋದ್ಯಾನ ವೀಥಿಯೊಳ್ ಪಾಳೆಯಂ ಬಿಟ್ಟುದರ್ಜುನನ ಸೇನೆ! (ಜತ್ರಾಂಗ. ೬೨-೦೯೬).

[ ಸಂ. ]

**ಪುರೋಧ** (ನಾ). ಪುರೋಹಿತ: "ಸೌವಸ್ತಿಕಂ ಪುರೋಧಂ ಪುರೋಹಿತ ನಪ್ಪ" (ಮಂಗರಾ. ೬೯-೩). [ ಸಂ. ಪುರೋಧಸ್ ]

**ಪುರೋಧಸ** (ನಾ). ೧. ರಾಜಪುರೋಹಿತ. ೨. ಪುರೋಹಿತ: ಅಂತು ಬಿನ್ನವಿಸಿದ ಪುರೋಧಸಪುರಸ್ಸರಂ . . . ರಾಜ್ಯಾಭಿಷವಣಮಂಡಪದೊಳ್ ಮಂಗಳವಿಧಾನಮನವ್ಯವಧಾನಂ ಮಾಡಿಮಂದು ಕಟುಪಿದಾಗಳ್ (ಅಪಂಪು. ೩-೯೨ ವ); ಶರ್ಯಾತಿರಾಜಂ . . . ಜನ್ನಕ್ಕೆ ತನ್ನಳಿಯನನೆ ಪುರೋಧಸ ನಾಗೆ ಬರವೇಟ್ಟು (ರಾಜಾಜ್ಮ. ೬೯-೨೩). [ ಸಂ. ಪುರೋಧಸ್ ]

**ಪುರೋಪಕಂಠ** (ನಾ). ಪಟ್ಟಣದ ಹತ್ತಿರದ ಪ್ರದೇಶ: ದನುಜಪುರೋಪ ಕಂಠದ ಕೊಲವತಿಗಳ ತೀರದಲಿ ಬಿಡಿಸಿದನು ಪಾಳೆಯವ (ಕುವ್ಯಾ.ಆ. ೦೨-೦೩); ರಾಜಶಿರೋಮಣಿಯು ಟಿಕಾಯ ಬಿಟ್ಟುದು ಬಳಿಕ . . . ಪುರೋಪಕಂಠವಲಿ (ಕೊರರಾ. ೦-೬-೦೨). [ ಸಂ. ]

**ಪುರೋಭಾಗ** (ನಾ). ೧. ಮುಂಭಾಗ; ಮುಂದಣ ಪ್ರದೇಶ: ಆನಿಂದ್ಯರಾಜಭವನಪುರೋಭಾಗದೊಳಿರ್ದು ನಡೆದೆರೆದರ(ವ)ನರೆನಿಸಿ ಲೋಭ ಕ್ಕಸರಪಸರವಿಲ್ಲದಿರ್ದ ಬಚ್ಚರ ಪಸರಂಗಳುಮಂ . . . ತೋಱುತ್ತುಂ ಬಂದು (ಶಾಂತಿಪು. ೩-೭೫ ವ); ಭಗವದಿಂದುಮರೀಚಿಯು ಪುರೋಭಾಗ ದೊಳ್ ನಿಂದು ಪೊಡೆಮಟ್ಟು (ಕಾದಂಪೂ. ೬೬೩); ಚಂದ್ರಾರ್ಕರಂ ಗೆಲೆ ವಂದಾ ಬರುತಿರ್ಪವರ್ ಭರತ ಶತ್ರುಘ್ನರ್ ಪುರೋಭಾಗದೊಳ್ (ಶಂರಾಮಾ. ೫-೦೦೦). ೨. ಮುಂಭಾಗದ ಸೈನ್ಯ; ಮುಂಚೂಣಿ: ಕಲಿಭೀಮನೆಡದಲಿ ಕಲಿಕಿದನು ಬಲವಂಕದಲಿ ಕೈವಳಿಸಿ ಕೊಂದನು ವರ ಪುರೋಭಾಗವ ವಿಭಾಡಿಸಿದ (ಕುವ್ಯಾ.ಕ. ೦೬-೦೪). ೩. (ತನಗೆ) ಸಂಬಂಧ ವಿಲ್ಲದ ವಿಷಯದಲ್ಲಿ ಬಾಯಿ ಹಾಕುವಿಕೆ; ಅಧಿಕಪ್ರಸಂಗತನ. ೪. ಹೊಟ್ಟೆಕಿಚ್ಚು; ಮತ್ಸರ. [ಸಂ.]

**ಪುರೋಭಾಗಿ** (ಗು). ೧. ಅಧಿಕಪ್ರಸಂಗ ಮಾಡುವ. ೨. ಕುಹಕ ಬುದ್ಧಿಯುಳ್ಳ; ರಂಧ್ರಾನ್ವೇಷಿಯಾದ; ಹುಳುಕುಗಳನ್ನು ಹುಡುಕುವ ಸ್ವಭಾವದ. (ನಾ). ೩. ಮತ್ಸರಬುದ್ಧಿಯುಳ್ಳ ವನು; ದೋಷೈಕದೃಷ್ಟಿಯವನು; ಛಿದ್ರಾನ್ವೇಷಿ: "ದೋಷಗ್ರಾಹಿ ಪುರೋಭಾಗಿ" (ಶಬ್ದಕೋ. ೦೦೦-೦೭). ೪. ಎರಡುನಾಲಗೆಯವನು; ಸುಳ್ಳುಗಾರ: "ಎರಡು ನುಡಿವವ ಪುರೋ[ಶಾಂ. ಪರೋ]ಭಾಗಿ ದ್ವಿಜಿಹ್ವಕಂ" (ಮಂಶಾ. ೬೯-೯). [ಸಂ. ಪುರೋಭಾಗಿನ್]

**ಪುರೋಭಿವೃದ್ಧಿ** (ನಾ). ಮುಂದಿನ ಏಳಿಗೆ; ಉತ್ತರೋತ್ತರ ಉನ್ನತಿ,— ಶ್ರೇಯಸ್ಸು: ಅವನು ಎಷ್ಟರ ಮಟ್ಟಿಗೆ ಪುರೋಭಿವೃದ್ಧಿ ಹೊಂದುವುದು ಸಾಧ್ಯವೋ ಅಷ್ಟು ಮಟ್ಟಿಗೆ ಪುರೋಭಿವೃದ್ಧಿ ಹೊಂದುವುದಕ್ಕಾಗುವುದಿಲ್ಲ (ಕ್ರಿಯಾಶ. ೦೫೯); ವ್ಯಕ್ತಿಯ ಪುರೋಭಿವೃದ್ಧಿ . . . ರಾಷ್ಟ್ರದ ಅಖಂಡ ಹಿತ (ಶಿಕ್ಷದ. ೨೬). [ಸಂ.]

**ಪುರೋಹಿತ** (ಗು). ೧. ಮುಂದೆ ಇರಿಸಿದ,—ಇಟ್ಟ. ೨. ನೇಮಕ ಮಾಡಿದ; ನಿಯಮಿಸಿದ. (ನಾ). ೩. ಕಾರ್ಯನಿರ್ವಹಣೆಗಾಗಿ ನಿಯಮಿತನಾದವನು. ೪. (ಒಂದು ಮನೆತನದ) ಎಲ್ಲ ಧಾರ್ಮಿಕ ವ್ರತಾದಿಗಳನ್ನು ತಾನೇ ಮುಂದಾಗಿ ನಿಂತು ಮಾಡಿಸುವವನು: "ಪ್ರಶಾಂತಿಹಿತಾನುಷ್ಠಾನರತಂ ಕೃತಶಾಂತಿವಿಧಾನಂ ಸೌವಸ್ತಿಕಂ ಪುರೋಹಿತ ನಾತಂ" (ಪದ್ಮಕೋ. ೬೦-೩೯); ಪುರೋಹಿತಂ . . . ಅಟ್ಟಲೆವೇಟ್ಟನವರ್ಗೆ ಶಾಸನಹರರಂ (ಆದಿಪು. ೦೯-೫೦); ನಾಮಕರಣೋತ್ಸವಮಂ ಮಾಡಲೆಂದು ಗಾರ್ಗ್ಯನೆಂಬ ಪುರೋಹಿತಂ . . . ಪರಸಿ ಪೋಪುದುಮಂ (ಜಗಾ. ೩-೨೬ ವ); ಪೊಡವಿಯೊಳಗೆ ಪುರೋಹಿತರನವಗಡಿಸಿ ಧರ್ಮದ ಬಲದಿ ನಾಕಕೆ ನಡೆವ ರಾಯರ ಹೊಯಿದಿಳಿಯಲಿಕ್ಕುವರಭೋಗತಿಗೆ . . . ನಿರ್ಜರರು (ಕುವ್ಯಾ.ಉ. ೪-೭೭). [ಸಂ.]

**ಪುರೋಹಿತಪ್ರಭುತ್ವ** (ನಾ). ಧರ್ಮಾಧಿಕಾರಿಗಳ ಅಧಿಕಾರ: "(ಧರ್ಮ ವಿಷಯಗಳಲ್ಲಿ) ಪುರೋಹಿತಪ್ರಭುತ್ವ" (Hierarchy. ೩೦೯೫). [ಸಂ.]

**ಪುರೋಹಿತರತ್ನ** (ನಾ). [ಜೈನ] ಚಕ್ರವರ್ತಿಗೆ ಒದಗುವ ಏಳು ಜೀವರತ್ನಗಳಲ್ಲಿ ಒಂದು; ಉತ್ತಮನಾದ ಪುರೋಹಿತ: ಶಾಂತಿಕಪೌಷ್ಟಿಕಕ್ರಿಯಾಕುಶಲನುಂ ಧರ್ಮಕಾರ್ಯಾದಿಕುಶಲನುಮಪ್ಪ ಬುದ್ಧಿಸಾಗರನೆಂಬ ಪುರೋಹಿತರತ್ನಮುಂ . . . ಮನೋಹರಮಪ್ಪ ಸ್ತ್ರೀರತ್ನಮುಮೆಂದಿಂತು ಜೀವಾಜೀವರತ್ನಂಗಳಂ . . . ಪೂಜಿಸಿ (ಅಂಪು. ೦೦-೩ ವ); ಚಕ್ರವರ್ತಿಯನೆಯ್ದಲೀಯದೆ ರಾಜ್ಯತಂತ್ರವೆಲ್ಲಮಂ ಸಂತಯ್ಸಿ ನಡೆಯಿಸುವ ಪುರೋಹಿತರತ್ನಮುಂ (ಜೀವಸಂ. ೦೭-೨೬). [ಸಂ.]

**ಪುರ್ಗಿ** 'ಪುಟ್ಗಿ' ನೋ.

**ಪುರ್ಗು** 'ಪುಟ್ಗು' ನೋ.

**ಪುರ್ಚು**, ಪುಚ್ಚು[1], ಹುಚ್ಚು (ನಾ). ೧. ಮರುಳು; ಬುದ್ಧಿಭ್ರಂಶ; ಮತಿಭ್ರಮಣೆ: ಸಂಭವಿಸಲ್ ವಾರುಣಿಯಿಂದೆ ಪುರ್ಚು ದಿನಪಂ ತಾಂ ಬಿಳ್ದನಸ್ತಾದ್ರಿಯೊಳ್ (ಚಂದ್ರಶ್ಮ. ೦೦-೩); ಇಂತೆಮಗೆ ಪೆರ್ಕೊರಗು —ಆ ಪುರ್ಚು ಪಱಿದೊಡಂ (ಅಕ್ಕಶ್ಯಾ. ೦೦-೨೩೫). 'ಪುರ್ಚುಗೊಳ್' ಪರಾ. ೨. ಮರುಳಂ ಹಿಡಿದ ವ್ಯಕ್ತಿ; ಬುದ್ಧಿಭ್ರಂಶವಾದವನು: ಅಕಟಾ, ಮನವೇ, ನೀಂ ಪುರ್ಚಲಾ! (ಕುಸೋಲ. ೦-೯ ಟೀಕು).

೩. ಹೆಚ್ಚಳ; ಆಧಿಕ್ಯ : 'ಪುರ್ಚುವೊಳೆ' ಪರಾ. ಪುಚ್ಚು₁ : ೧. ಎಲ್ಲಿಯ ಗಂಗೆ ನೀನಾರು ವಿಚಾರವೇನಿಲ್ಲವೆ ಗಿರಿಜೆಯ ಮಿಸಲ ಪುಲ್ಲಾಳಿಯು ಪೆಚ್ಚಿಸೆ ಪುಚ್ಚು ಪೆಚ್ಚಿತೆ (ಸೋಶಸೋ. ೦೨-೬೮); ಕಚ್ಚಿದುದಾ ಪರೀಕ್ಷಿತನ ತಕ್ಷಕನಂತದು ಪೋಗೆ ಚಿತ್ತದೊಳ್ ಪುಚ್ಚಿಡಗೊಂಡ ಮಾಳ್ಕೆಯೊಳು ಭೂಮಿಯೊಳಿಪ್ಪರಗಂಗಳೆಲ್ಲ ಕಣ್ಮುಚ್ಚಿಕೊಳ್ಳುತ್ತಲಂದು ಜನಮೇಜಯನಿಂ ಹತವಾದುದಿಲ್ಲವೇ ಕಿಚ್ಚಲಿ (ಕಹಕಿಂ. ೨೯). ೪. ಆಸಕ್ತಿಯನ್ನುಂಟು ಮಾಡುವಂತಹುದು ; ಮೋಹಕವಾದುದು : ಬುಧಜನರಿಗೆ ಪೆಚ್ಚು ದುರಿತವನಕೆ ಕಾಳ್ಕಿಚ್ಚು ವಿರಹಿಗಳಿಗೆ ಪುಚ್ಚು ವೀರರ್ಗೆ ನುಚ್ಚು ಕೇಳ್ವರಿಗಿದು ಕನಿಬೆಲ್ಲದಚ್ಚು (ಮೋಹತ. ೦-೩೯). ಹುಚ್ಚು : ೧. ಶರಧಿಗೆ ಮಿಗೆ ಪೆಚ್ಚಂ ರಥಾಂಗಕ್ಕೆ ಹುಚ್ಚಂ ಪಿರಿದ[ದಿ]ತ್ತುದ್ಧಾವಿಸಿತ್ತು ... ಸುಧಾಸೂತಿಬಿಂಬಂ (ಶ್ರೀಕೃ. ೨೪-೦೩೪); ರಚ್ಚೆನಿಂ ಕನಕಕಳ್ಕವ ರಕ್ತಗುಡಿಯುಲುರೆ ಹುಚ್ಚು ಪರಿವೇಷ್ಟಿಸಿತು ಜಾಣ್ಮೆಕೆಯು ಗತವಾಗಿ ತಿರ್ಯಕ್ಕು ಮೃಗವಾದೆಲಾ (ಜೈಮು. ೩-೦೭). ೨. ಮಾನಿನಿಯರಾತನ ರೂಪ ಕಂಡುದುಂಟಾದಡೆ ತಮ್ಮ ಗಂಡರ ಮಱೆದು ಹುಚ್ಚಹರು (ಮೋಹತ. ೨೮-೨೭). ೫. ಪೆಚ್ಚು ಮಾತು ; ಬುದ್ಧಿವಂತಿಕೆಯಿಲ್ಲದ ಬಾಲಿಶವಾದ ನುಡಿ : ಮೆಚ್ಚಿದ ನಿಯಳೊಂದು ಹುಚ್ಚ ನುಡಿದರೆ ನೊಚ್ಚಗಾಗಿಹುದು ನಲ್ಲರಿಗೆ (ಚರತ. ೦೦-೩೯). ೬. ಗೀಳು ; ಅತ್ಯಾಸಕ್ತಿ; ವ್ಯಾಮೋಹ : ಅನುಗಾಲ ಕಿಚ್ಚು ಭವದೊಳಗ್ಗಚ್ಚು ಅನುಭವದ ಕಿಚ್ಚು ಸವಿ ನೋಡೋ ಹುಚ್ಚು (ಪುರಂದ. ೨ ೩೩-೩); ವಿಜಯದಾಸರ ತಾತ ಮುತ್ತಾತಂದಿರಿಗಿದ್ದ ಈ ಹುಚ್ಚು ಅಚ್ಚಳಿಯದೆ ಇವರಿಗೂ ಅಂಟಿಕೊಂಡಿತ್ತು (ಕಂಬಹು. ೦). 'ಪಿಚ್ಚ₁', 'ಪೆಚ್ಚು₄' ಪರಾ.

ಹುಚ್ಚುಹುಚ್ಚು, ಹುಚ್ಚುಚ್ಚು (ದ್ವಿರುಕ್ತಿ) : ಅವನು ಯಾವಾಗಲೂ ಹೀಗೇ, ಹುಚ್ಚುಹುಚ್ಚು (ರೂಢಿ); ಹುಚ್ಚುಚ್ಚಾಗಿ ಮಾತಾಡಬೇಡ (ರೂಢಿ). ಹುಚ್ಚಾಗು = ಬುದ್ಧಿಗೇಡಿಯಾಗು ; ವಿಚಾರಶಕ್ತಿಯನ್ನು ಕಳೆದುಕೊಳ್ಳು : ಹುಚ್ಚಾಗಬೇಡ ಕಾಳಗದೊಳು ನೀನೆಂದಚ್ಚರಿಯಾಗಿ ನುಡಿದನು (ಅಹಂಚ. ೨೫-೩೭); ಅವರಿವರನು ಕಂಡು ಹುಚ್ಚಾಗದಿರು ಜೋಕೆ (ಇಂಜಾಶ. ೮೦೭-೨೩). ಹುಚ್ಚುಚ್ಚಾರ = ಮನಸ್ಸಿಗೆ ಬಂದಂತೆ ನಡೆದುಕೊಳ್ಳುವುದು; ಹತೋಟಿಯಿಲ್ಲದಂತೆ ಇರುವುದು : ಇಲ್ಲಿ ನಿಮ್ಮ ಹುಚ್ಚುಚ್ಚಾರವನ್ನು ಕಟ್ಟಿಡಿರಿ (ಅಂಬಕ. ೪೪); ನನಗೆ ಈಗಿನ ಹುಚ್ಚುಚ್ಚಾರ ಎಷ್ಟೂ ಸೇರಿಕೆ ಬರುದಿಲ್ಲ (ಅಕಪಾ. ೨೪೭). ಹುಚ್ಚು ಮಾಡು = ಬುದ್ಧಿಭ್ರಮಣೆಯಾಗುವಂತೆ ಮಾಡು ; ದಿಕ್ಕುಗೆಡಿಸು : ಪೆಣಗಳಂ ಪೆಚ್ಚಿದರ್ ಭೂತವೇತಾಳಸಂಕುಲಕೆ ವೆಱೆ ಹುಚ್ಚು ಮಾಡಿದರೊಂದು ನಿಮಿಷದೊಳ್ ದಿವಿಜರಂ ಖಳಭಟರ್ (ತೊರವೆ. ४೨-೩೩). ಹುಚ್ಚುಹುಚ್ಚಾಗು = ಕಳೆಗುಂದು; ವಿವರ್ಣವಾಗು : ನಿನ್ನ ಮುಖವೇಕೆ ಹೀಗೆ ಹುಚ್ಚುಹುಚ್ಚಾಗಿದೆ (ಅಹುಳ. ४೫).

[ದೇ. ೫ತಮಿ. ಮಲ. ಪಿಚ್ಚು ; ತೆಲು. ಪಿಚ್ಚ; ಕೋತ. ಪುಚ್]

**ಪುರ್ಚುಕುಣಿತ**, ಹುಚ್ಚುಕುಣಿತ (ನಾ). ಆವೇಶದ ಕುಣಿತ ; ಮನಸ್ಸು ಬಂದಂತೆ ಕುಣಿಯುವಿಕೆ : ಮುಂಗಾರ ಭೈರವಂ . . . ಧಿಮ್ಮೆಂದು ಧೀಂಕಿಟ್ಟು ಪದವೊತ್ತಿ ಪದಮಿಟ್ಟು ಪುರ್ಚುಕುಣಿತಂ ಕುಣಿದನಾ ತಲ್ಲಣಿಸೆ ಲಂಕೆ ! (ಶ್ರೀರಾಮಾ. ३३೯-೨೦೨). ಹುಚ್ಚುಕುಣಿತ : ಏ ರಘು, ಏನೋ ಅದು ಹುಚ್ಚುಕುಣಿತ ! (ತುಂಗಭ. ೨). [ಪುರ್ಚು + ಕುಣಿತ]

**ಪುರ್ಚುಗೊಳ್**, ಪುಚ್ಚುಗೊಳ್, ಹುಚ್ಚುಗೊಳ್ (ಕ್ರಿ). ೧. ಹುಚ್ಚು ಹಿಡಿ ; ಮತಿಭ್ರಂಶವಾಗು : ನೀಲಿಯ ಕನಕದ ಬೇರಂಕೋಲೆಯ ಬೇರೆಯಿವಂ ಸಮಂಗೊಂಡರೆ ನೀಂ ಪಾಲಿಂದೆ ಕುಡಿಸಲಂತದು ಸೋಲಿಸುಗುಂ ಪುರ್ಚು[ಪಾಠಾಂ. ಚ್ಚು]ಗೊಂಡ ನಾಯ್ಗಳ ವಿಷಮುಂ (ಖಚರ. ೦೩-೨೯); ಬಲ್ಲನೆ ಗಾನವುಂ ಬಧಿರಂ . . . ಪುರ್ಚುಗೊಂಡ ಮನುಜಂ ಭವತತ್ತ್ವಸದರ್ಥಸಾರಮುಂ ಬಲ್ಲನೆ (ವೃತಂ. ४೦-३೯). ಪುಚ್ಚುಗೊಳ್ : ೧. ಪುಚ್ಚುಗೊಂಡ ನಾಯಿ ಬಲ್ಲುದೇ ಸಾಕಿದೊಡೆಯನ (ಖುಠಶಾ. ೦३-೦७). ಹುಚ್ಚುಗೊಳ್ : ೧. ಪಚ್ಚವಿಲ್ಲಣ್ಣನೇನಾದ ಹುಚ್ಚುಗೊಂಡಂತೆಮ್ಮ ಬಿಸುಟು ಹೋದನೆ (ಜರ. ३२-३७). ೨. ಗೀಳು ಹಿಡಿ ; ಮೋಹವುಂಟಾಗು : ಮಚ್ಚ ಜಿಹ್ವಾಲಂಪಟದಿ ಗಜ ಕಚ್ಚೆಯಲಿ ನೇತ್ರದಲಿ ಶಲಭ ಶ್ರುತೇಚ್ಛೆಯಲಿ ದರ್ವೀಕರನು ಘ್ರಾಣೇಚ್ಛೆಯಲಿ ಭ್ರಮರ ಹುಚ್ಚುಗೊಂಡೊಂದೊಂದು ವಿಷಯಕೆ ಮೆಚ್ಚಿ ಕೆಟ್ಟವು ಪಂಚವಿಧವಿಷಯೇಚ್ಛೆಯಲಿ ತಗಲಿರ್ಪ ಮನುಜನು ಕೆಡುವುದೇನರಿದು (ಅಷ್ಟಕ. २-೯೯). ೩. ಮೋಹಗೊಳ್ಳು ; ಮನಸೋಲು ; ಮರುಳಾಗು : ಹುಚ್ಚುಗೊಂಡುದು ನೃಪರ ತಿಂಥಿಣಿ ಅಚ್ಚರಿಯ ಗಂಧರ್ವದತ್ತೆಯ ವೀಣೆಯನು ಕೇಳಿ (ಸಾಳ್ವಭಾ. ೦೮-೯).

[ಪುರ್ಚು + ಕೊಳ್₁]

**ಪುರ್ಚುವೊಳೆ**, ಹುಚ್ಚುಹೊಳೆ (ನಾ). (ಒಮ್ಮೆಂದೊಮ್ಮೆಲೆ) ಮಹಾಪೂರ ಬಂದ ಹೊಳೆ; ಉಕ್ಕಿ ಹರಿಯುವ ತೊರೆ : ಬಿಮ್ಮದೆ ತಡಂ ಪೊಡೆಗೆ ಮದ್ದು ನೆಗೆದುದು, ನನ್ನಿ ಪೊರಗೆ ! ಪರಿದುದು ಪುರ್ಚುವೊಳೆಯಂತೆ (ಶ್ರೀರಾಮಾ. ३७३-३०४). ಹುಚ್ಚುಹೊಳೆ : ಹುಚ್ಚುಹೊಳೆ ಮತ್ತತ್ತಣಿಂದಕಟ ನೂಕಿದುದು (ಜೈಶು. ೦३-२३); ಎಲ್ಲವನ್ನೂ ಕೊಚ್ಚುತ್ತೇನೆಂದು ಹೊರಟ ಈ ಹುಚ್ಚುಹೊಳೆಯನ್ನು ಲೋಕೋಪಕಾರಿಯಾಗುವಂತೆ ಮಾಡುವ ಮಾರ್ಗವೇನಾದರೂ ಇದೆಯೇ ? (ಕತಂಬಾ. ೦३७).

[ಪುರ್ಚು + ಪೊಳೆ₄ (< ಪೊಱೆ₁)]

**ಪುರ್ಚೇಱ್**, ಹುಚ್ಚೇಳು (ಕ್ರಿ). ೧. ಮರುಳು ಹಿಡಿ ; ಬುದ್ಧಿ ಕೆಟ್ಟುಹೋಗು : ತಣಿವೆಂಬುದೇ ಇದರ ತೊನಸೆಯಿಂ ಕೊರ್ವೊನೆಯ ಕುಟುಕಿಂದೆ ಪುರ್ಚುಪುರ್ಚೇಱ್ದು ನೆಗೆನೆಗೆದು ಓಡಿದೆನ್ ಸೆನ್ಕ್ರಿಯದ ತಣ್ಪೆಱೆವ ಪೊನಲೆಡೆಗೆ (ಖದ್ಯೋ. ३७-೭೭२). ಹುಚ್ಚೇಳು : ೧. ಕೃಷ್ಣನು ಹೇಳಿದ ಗೀತೆಯ ಪಾರ್ಥನು ಕೇಳಿದನಾಕಾಲ ನೀಗಿ ಅಭಿಮನ್ಯು ಮಡಿದಾಗ ಮಾತ್ರ ಹುಚ್ಚೆದ್ದನು (ಇಂಜಾಶ. ೦४೮-३೦). ೨. ಆವೇಶವು ಹೆಚ್ಚಾಗು; ಉದ್ರಿಕ್ತವಾಗು : ಕ್ರಾಂತಿ ಎಂಬುವ ಭೂತ ತಲೆಗೆದರಿ ಹುಚ್ಚೆದ್ದು ಸುತ್ತುತ್ತಿದೆ ಭೀಮಾಭ್ಯಾಯೆಯ ಚೆಲ್ಲಿ (ಶಾಂತಿಶ. ३२-೮); ಕೊಲೆ ಮಾಡಿದ ಆರೋಪಿಗಳಿಗೆ ಶಿಕ್ಷೆಯಾದ ಸುದ್ದಿ ಕೇಳಿ ಲಕ್ಷ್ಮಣ ಹುಚ್ಚೆದ್ದು . . . ಕುಣಿದಾಡಹತ್ತಿದನೆಂದು ಕೇಳಿದೆ (ಮುಕಶಿ. ३४). [ಪುರ್ಚು + ಎಱ್₁]

**ಪುರ್ತಿಯ** (ನಾ). ಒಬ್ಬಾತನ ಹೆಸರು : ನೋನ್ತು ತಾಮ್ ತಮಗೆ ಮೃತ್ಯುವರಮಾನಱೆದಂ ಶ್ರೀ ಪುರ್ತಿಯ (ಎಕ. II, ೦೦೫-३ ; ಸು. 700).

[ ? ]

**ಪುರ್ಪಾಲಿ** (ನಾ). ಒಂದು ಬಗೆಯ ಸಸ್ಯ : ಪುರ್ಪಾಲಿ, ಮುಳ್ಳುಹಣ್ಣು (ವೈಶಿಗ. ೭೯-೦೬२೮). [ ? ]

**ಪುರ್ಬೆ** 'ಪುಬ್ಬೆ' ನೋ.

**ಪುರ್ಬಿಕ್ಕು** 'ಪುರ್ವಿಕ್ಕು' ನೋ.

**ಪುರ್ಬು** 'ಪುರ್ವು' ನೋ.

**ಪುರ್ಬೇಱಿಸು**, ಹುಬ್ಬೇರಿಸು (ಕ್ರಿ). (ಆಶ್ಚರ್ಯ, ಗರ್ವ, ಕೋಪ ಇತ್ಯಾದಿಗಳಿಂದ) ಹುಬ್ಬನ್ನು ಎತ್ತರಿಸು : ಸಿರಿಮೊಗಮಂ ನಸು ಬಾಗಿ ಕರಂ ಭೂವರನಂ ಪುರ್ಬೇಱಿಸಿ ನಡೆ ನೋಡುವ ತರುಣಿಯ ನಡುಗಣ್ಣೆಳಗು . . . ಕರಮೆಸೆದುದು (ಶಯುಕಾ. ४-೦३). ಹುಬ್ಬೇರಿಸು : ಅವಳು ಹುಬ್ಬೇರಿಸಿ, ಏಕೆ, ಯಾರದೇನು ಹೆದರಿಕೆ ? ... ಎಂದಳು (ಶ್ರೀಮುತ್ರ. ३३).

[ಪುರ್ಬು (<ಪುರ್ವು) + ಏಱಿಸು]

**ಪುರ್ರನೆ** (ಅ). ಒಂದು ಅನುಕರಣ ಪದ : ಪುರ್ರನೆ ಪಾರುತ ಕಿರ್ರನೆ ಕಿರುಚುತ . . . ಚಿರ್ರನೆ ಚೀರುತಲಿ (ಹಮಕ. ೦೯). [ಪುರ್₆ + -ಅನೆ₁]

**ಪುರ್ವಸಿದ್ಧಾಯ** (ನಾ). ಪೂರ್ವಕಾಲದಿಂದ ಕೊಡುವ ತೆರಿಗೆ : ಕೊಪುಣಗೆಱೆಯ ಗವುಣ್ಡ ಬಳ್ಳಜ್ಜನ್ತನ್ನ × [ಮು]ಡಿಸಿದ ದೇಗುಲಕೆ ಬಿಟ್ಟ ಕೆಯುಂ

ಪುರ್ವ್ವಸಿ[ದ್ಧಾ]ಯು ಕಟಿದು[ಕೊ]ಣ್ಡಿರಪ್ಪಡೆ . . . ಲೋಕಕೆ ಸಲ್ಗ (ತೌಇಇ. XI-1, ೩೩-೪; 933) [ <ಪೂರ್ವ + ಸಿದ್ಧಾಯ ]

**ಪುರ್ವಿಕ್ಕು**, ಪುರ್ಬಿಕ್ಕು, ಹುಬ್ಬಿಕ್ಕು (ಕ್ರಿ). ೧. ಹುಬ್ಬು ಹಾರಿಸು ; ಹುಬ್ಬಿನಿಂದ ಸನ್ನೆ ಮಾಡು : ತನ್ನೊಳೋತಿರ್ದವರ್ ಕಟಿದಂದಾಕ್ಷಣದೊಳ್ ಧರಾರಮಣ ಮತ್ತೊರ್ವಂಗೆ ಪುರ್ವಿಕ್ಕುವಳ್ (ಶಂಶಾಪು. ೬-೬೯). ೨. ಹುಬ್ಬುಗಳನ್ನು ಎತ್ತರಿಸು ; ಹುಬ್ಬುಗಳ ಚಲನೆ ಮಾಡು ; ಹುಬ್ಬೇರಿಸು : ಬೆಟ್ಟುವನೆಡಿಸುತುಂ ಪುರ್ವಿಕ್ಕುವೊಡಂ ಕಣ್ಮುಟಲಿಯಂತದಾಗಳೆ ಮೂಣ್ಗುಂ (ಲೀಲೋಲ. ೯-೩೫) : ಬೆರಲನಾಡಿಸುತ್ತುಂ ಪುರ್ವಿಕ್ಕುತ್ತುಂ ಸೊಕ್ಕಿದರಂತೆ ಮರಳ್ಗೊಂಡವರಂತೆ ದೆಸೆಯಂ ನೋಡುತ್ತುಂ (ರವರ್ಮ. ೩-೦೩೭). **ಪುರ್ಬಿಕ್ಕು** : ೨. ಪುರ್ಬಿಕ್ಕಿ ಪಲ್ಗಿರಿದು ಹುಟ್ಟಿಂದು ಕಿರಾತಕಾಂತೆಯರಂ ಮಿಗೆ ನಗಿಸುತಿರ್ಪ ಮರ್ಕಟಪ್ರಕರದಿಂ (೧೦೪. ೦-೦೨೩ ವ); ಪುರ್ಬಿಕ್ಕಿ ಪಲ್ಗಳಂ ಕಿರಿದು . . . ಬಿಸಿಲ್ವರ್ಪಿರೆ ಕಾಯುತ್ತಿರ್ದುದು ಕೊರ್ಬಿದ ವೃಕ್ಷಾಗ್ರದಲ್ಲಿ ಮರ್ಕಟರಾಜಂ (ದಶಕು. ೨-೬೭ ); ಕೊಂಬನೇಟಿ ಪುರ್ಬಿಕ್ಕುವ ಮರ್ಕಟಂ ನಗದ ತಾಪಸರಂ ನಗಿಸಿತ್ತರಣ್ಯದೊಳ್ (ಕಾವ್ಯಸಾ. ೦೦೦೬). **ಹುಬ್ಬಿಕ್ಕು** : ೨. ನೆಗೆನೆಗೆದು ನಭಕುಪ್ಪರಿಸಿ ತಾರೆಗಳ ತಿಟಿದಂಭೋಜಮಿತ್ರನ ಮೊಗಕೆ ಹುಬ್ಬಿಕ್ಕುವವು (ಕೊರರಾ. ೬-೬-೩೪). [ಪುರ್ವು+ಇಕ್ಕು]

**ಪುರ್ವು**, ಪುಬ್ಬು, ಪುರ್ಬು, ಹುಬ್ಬು, ಹುರ್ವು (ನಾ). ಎರಡೂ ಕಣ್ಣುಗಳ ಮೇಲ್ಭಾಗದಲ್ಲಿ ಹಣೆಗೆ ಹೊಂದಿದಂತೆ ಇರುವ ಕಿರಂಗೂದಲಿನ ಸಾಲು ; ಭ್ರೂ : "ಪುರ್ವೆನೆ ಭ್ರೂಲತಾಹ್ವಯಂ" (ಶಬ್ದಾಗ. ೩೭); ಕುಡುಪುಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪುರ್ವಿಂ ಜತಿಯಂ ತೊಡರದೆ ನಡೆಯಿಸಿ ಪುರ್ವದೆ ಕುಡುಪೆನೆ ನರ್ತಕಿಯೆ ಸಭೆಗೆ ವಾದಕಿಯಾದಳ್ (ಅಂಕ್ಷಿ. ೯-೩೨) ; ಪುರ್ವಿನ ಗಂಟುಂ ಕಣ್ಣೊಳ್ ಪರ್ವಿದ ಕಿಸುಸೆರೆಗಳುಂ...ಕರವಾರ್ವಿಸೆ ಮುನಿಸಿಂ ಕುಮಾರನಂದಿಂತೆಂದಂ (ಶಂಶಾಪು. ೬೦-೦೨); ಪುರ್ವಿನ ಕೊರ್ವು ಕರ್ವುವಿಲ್ಲಂ ಕೀಳ್ಮಾಡೆ (೧೭೪. ೨-೦೦೩ ವ). **ಪುಬ್ಬು** : ಬಲವ ಕಣ್ಪುಬ್ಬು ಮೆಯ್ವೆಚ್ಚಿ ಕೆತ್ತುತ್ತಮಿರೆ (ಕವ್ಯ.ರ. ದೇ. ೦೨೬-೦೪). **ಪುರ್ಬು** : "ಪುರ್ಬುವಲ್ಲಿ ತಾಂ ಭ್ರೂಸಾಮಂ" (ವಸ್ತುಕೋ. ೭೦-೦೬); ಜರೆಯಿಂದಂ ಪುರ್ಬು ಜೋಲಲ್ (ಕಾದಂಪೂ. ೦೭೩); ಕರ್ಬಿನ ಬಿಲ್ಲಂ ಗೆಲೆ ಪುರ್ಬು . . . ದೇಸೆ ಪೊಚ್ಚ ಪೊಸತಾಯ್ತು (ಗದಾಯು. ೦-೬); ನೋಟದಲಿ ಮಾತಾಡಿ ಪುರ್ಬಿನ ಬೇಟದಲಿ ಬೆಳ್ಮಾಡಿ . . . ಬೇಟಕಾತಿಯರೊಪ್ಪಿದರು ನರನಾಥನಿದಿರಿನಲಿ (ಕೊರರಾ. ೦-೩-೪೦). **ಹುಬ್ಬು** : ಬಿಟ್ಟ ಕಣ್ಣು ಬಿಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಕಟ್ಟು ಗುಡಿಯ ಕೂಡಲಸಂಗಮದೇವ ಹಿಡಿವಡೆವ (ಬಸವ. ೬೦೪) ; ಕೆಂಪ ಕಾಟಿದಮಾಲಿಗಳು . . . ಗಂಟಿಕ್ಕಿದನು ಹುಬ್ಬುಗಳ (ಕುಮ್ಮಾಶೀ. ೩-೨೭) ; ನೋಟದಲಿ ಮದನಾಸ್ತ್ರವೆದೆಯಲಿ ನಾಟವವು ವಿಟರುಗಳ ಹುಬ್ಬಿನ ಬೇಟದಲಿ ಬೆಂಡಾದರಗ್ಗದ ನಿರ್ಜಿತೇಂದ್ರಿಯರು (ಕೊರರಾ. ೦-೦೪-೨೪). **ಹುರ್ವು** : ಹುರ್ವಿನ ಜರ್ವು ವಿಶಿಷ್ಟರ ಹರ್ವಿದ ಬಡತನದ ಕೊರ್ವ್ವನುಡುಗಿಸು ಮದಜಿಂ ಹುರ್ವಿನವರೆಂಬ ನಾಮದಗುರ್ವಿನ ಗೋವರ್ದ್ಧನಂಗೆ ನಂದನನೆನಿಪ . . . ನಾಗದೇವಂ (ಎಇ. V, ೦೭ ೨೩ ; 1142).

**ಪುರ್ವು ಗಂಟಿಕ್ಕು**, **ಪುರ್ಬು ಗಂಟಿಕ್ಕು**, **ಹುಬ್ಬು ಗಂಟಿಕ್ಕು**=ಕೋಪದಿಂದ ಮುಖವನ್ನು ಸಿಂಡರಿಸು : "ಭ್ರುಕುಟೀಃ, ಭ್ರೂಕುಟೀಃ—ಈ ೨ ಹುಬ್ಬು (ಪುರ್ವು) ಗಂಟಿಕ್ಕುವುದು" (ಹಲಾಯು. ೦೨೬-೯೪) ; ಬಳಿಕೊರ್ವಳಪರಾಧರಮಣನಂ ಕಂಡು ನೆಲೆವೊಲೆ ನಡುಗೆ ಪುರ್ಬು ಗಂಟಿಕ್ಕಿ . . . ಕಿಳಿವಲೆಂದೆಟಗಿದಿನಿಯನನೊದೆಯೆ (ಚಿಬಿಕ್ಕಿ. ೦೦-೩೯) ; ಪೋರದೆ ಪುರ್ಬು ಗಂಟಿಕ್ಕದೆ ಪುಸಿಯದೆ ಸೇರಿ ಸೇವೆಯಂನೆಸಗುವುದು (ಹರಿಚ. ೦-೨೩) ; ಹುಬ್ಬು ಗಂಟಿಕ್ಕಿದ ಮುಖ ಪುನಃ ಅರಳಿಕೊಂಡಿತು (ಶೇಪೋಡ. ೦೦೦);

ಪೋಡಂ ಮತ್ತೆ ಹುಬ್ಬು ಗಂಟಿಕ್ಕಿ ನುಡಿದರು (ದೂರಬೆಟ್ಟ. ೦೭). **ಹುಬ್ಬಾಡು** = ಹುಬ್ಬನ್ನು ಅಲುಗಾಡಿಸು : ಆಡಿಂಗ ಆಕೋಟಿಕೋಡಗಕ್ಕೊಂದು ದಿನ ಕೋಡಗವು ಕೋಟಿ ಮಡಿದಲ್ಲಿ ಬಳ್ಳು ಹುಬ್ಬಾಡಹೊತ್ತಿಲ್ಲ (ಸರ್ವಜ್ಞ. ೨೩೬). **ಹುಬ್ಬು ಕುಣಿಸು**=ಹುಬ್ಬನ್ನು ಎತ್ತರಿಸು ; ಹುಬ್ಬು ಹಾರಿಸು. **ಹುಬ್ಬುಗಂಟು ಹಾಕು**=ಪುರ್ವುಗಂಟಿಕ್ಕು : ಆಗ ಆವನು ಹುಬ್ಬುಗಂಟುಹಾಕಿಕೊಂಡು ನನಗೆ ಬಹಳ ಕೆಲಸವದೆ . . . ಎಂದು ಓಡ ಹತ್ತಿದನು (ಮುಂಬಯಿ. ೪-೩೭); ಆ ರಾಕ್ಷಸನು . . . ಹುಬ್ಬುಗಂಟುಹಾಕಿಕೊಂಡು ಅವುಡು ಕಚ್ಚಿ ಇದು ಯಾರು ಎಂದು ಗರ್ಜಿಸಿದನು (ವಕಛಾ. ೪೭). **ಹುಬ್ಬುಗೈಹಚ್ಚು** = (ದೂರದ ವಸ್ತುವು ಚೆನ್ನಾಗಿ ಕಾಣದಾದಾಗ) ಹುಬ್ಬಿನ ಬಳಿ ಅಂಗೈಯನ್ನಿಟ್ಟು ನೆರಳು ಮಾಡು : ದೂರದಲಿ ಯಾರೋ ಮಬ್ಬುಗತ್ತಲಲಿ ಹುಬ್ಬುಗೈಹಚ್ಚಿ ನೋಡುತಿದ್ದಾರೆ ಹೊರಳಿ ಹೊರಳಿ (ನಂಮು. ೦೭-೨೦). **ಹುಬ್ಬು ಹಾಟಿಸು**, **ಹುಬ್ಬು ಹಾರಿಸು** = ಹುಬ್ಬನ್ನು ಕುಣಿಸು : ಮೋಟಿಯೊಲೆದು ನೋಡಿ ನೃಪಸುತರಿಗೆ ಹುಬ್ಬು ಹಾಟಿಸುವಳು ನಸುನಗುತ (ಭರತ. ೦೨-೬೦); ಚೆಲುವಾದ ಪೋರಿ ಎಂದೊಬ್ಬ ಹುಬ್ಬು ಹಾರಿಸಿದನು (ಪುನರು. ೦೩೬) [ದೇ.॥ ತವಿ. ಪುರುವಮ್, ಪುರೂರ ; ಮಲ. ಪುರಿಗ; ತುಳು. ಪುರುಬು, ಪುರ್ಬು. / ಸಂ. ಭ್ರೂ]

**ಪುಲ್**, ಪುಲು, ಪುಲ್ಲು, ಹುಲು, ಹುಲ್ಲು (ನಾ). ೧. ಗರಿಕೆ; ತೃಣ; P ಸಾಮಾನ್ಯವಾಗಿ ದನ, ಕರು ಮುಂತಾದುವುಗಳ ಆಹಾರ : ಬೆಳೆಯೊಳ್ ಪುಲ್ಗಳ್ ಪಲವಕ್ಕುಂ (ವಡ್ಡಾರಾ. ೯೭-೦೪); ಶತಬಿಂದುವಿನ ಮಕ್ಕಳಪ್ಪಯ್ವರು ಗಾಳಿಗೊಡ್ಡಿದ ಪುಲ್ಲ ಬಿಂದುಗಳಂತೆ ನಕುಲಂ ನೆಲಕ್ಕೆ ಸೋವತಂ ಮಾಡಿದಂ (ಕಂಪಭಾ. ೦೩-೪೦ ವ); ಪಲ್ಲಂ ಸುಲಿವೊಡಂ ಕಿವಿ ತೀಂಬೊಡೆ ತುಟಿಸುವೊಡು ಪುಲ್ಲಿಂದೆನಿತುಂ ಪ್ರಯೋಜನಮುಂಟು(ಶಂಕಶಂ. ೩೪-೦೪). ೨. (ಅಲಂ) ಬೆಲೆಯಿಲ್ಲದ ವಸ್ತು; ನಿಕೃಷ್ಟವಾದುದು; ಕ್ಷುದ್ರವಾದುದು ; ಅಲ್ಪವಾದುದು : ಅಪನಂ ಪುಲ್ಲಂ ತಿಳಿದಂ . . . ಸ್ಮರಂ ಹರನಂ ಪುಲ್ಗೆ ಬಗೆದಂ (ಶಬ್ದಾನು. ೨೦೯ ಪ್ರಯೋ). **ಪುಲು** : ೧. ಕ್ಷೀರಶರಧಿಯೊಳಿಪ್ಪ ಹಂಸಂ ಕ್ಷಾರನೀರಂ ಸೇವಿಪುದೆ ಕಂಠೀರವಂ ಪುಲು[ಶಾಕಾಂ. ಲ್] ಮೇವುದೇ (ಬಸವು. ೦೦-೦೦); ಸುತನ ಸಾವಂ ಲೋಗರಚಿಯದ ಗತಿಯೊಳು ಗೋದಣದೊಳಗದಂ ಹಾಯ್ಕಿ ಪು[ಶಾಕಾಂ.ಹು]ಲು ಮುಚ್ಚಿ (ಬಸವು. ೨೪-೩೭). ೨. 'ಪುಲುಬೂತು' ಪರಾ. **ಪುಲ್ಲು** : ೧. ವ್ಯಳಕಟ್ಟುವಡರ ತಟ್ಗಿಯೂರಾಳ ಅವುಕ್ಕ ಇಯೂರೆ ಪಣ ಪುಲ್ಲು (ಎಕ. IV, ಗುಂಡ್ಲು.ಪೇ. ೯೭-೪; ಸು. 750); ಪಶುಗಳು ಬೆಳೆದ ಹೊಲದತ್ತ ತೆಗೆಯಲು ಸರಸಿಗಳು ತುಂಬಿರ್ದ ಬೆಂಚೆಗಳ ಒತ್ತಿನಲಿ ನಿಲಿಸಿದಡೆ ಬಾಯ್ದೆಟಿಯಿತ್ತೆ ಪುಲ್ಲಿಗೆ ಮೋಟಿಯುಂ ನೀಡಿತ್ತೆ ನೀರಿಂಗೆ (ಬಸವು. ೬೦-೨೩). **ಹುಲು** : ೧. ಎಂದಿನಂತುದಯಕಾಲದೊಳೆದ್ದು ಹುಲು ಹುಳ್ಳಿಗೆಂದರಣ್ಯಕ್ಕೆ ನಡೆದು (ಹಕಳಾ. ೦೨-೭). ೨. ಘಾಸಿಯಾದನು ದೈತ್ಯ ಲಜ್ಜೆಯ ನೀಗಿ ಹುಲುವಾಗಿ . . . ನಾಚಿ ಲಂಕೆಯ ಹೊಕ್ಕ ರಾವಣನು (ಕೌಶಿರಾ. ೨೨-೩೩); ನಂಟತನ ಕೂಡಿ ಬರುವ ಹುಲು ಆಸೆ ನಿನಗಿನ್ನು ಬೇಡ (ಕುರುಕು. ೦೭). 'ಹುಲುಮನುಜ' ಪರಾ. **ಹುಲ್ಲು** : ೧. ಹುಲ್ಲ ಕಿಚ್ಚು ಹೊಲೆಯನ ಮೇಳಾಪ ಅಲ್ಲಿ ಹುರುಳಿಲ್ಲ (ಬಸವ. ೦೦೨); ಹಳೆಯಮ್ಮ ಗೌಜವ ಸುಟ್ಟುದಾಸರಕೆತ್ತಿ ನಡೆವ ಬೀಡ ನಡೆಯಲೀಯದೆ ಕಾದುತ್ತಿರಲು . . . ಹುತ್ತಮೇಟಿ ಹುಲ್ಲಂ ಕಚ್ಚಿದರ ಕೊಲಲೊಲ್ಲದೆ ಕಾಯ್ದು ಕಳಿಹಿ ಸತ್ತು ಸುರಲೋಕಪ್ರಾಪ್ತನಾದ (ಮೈಶಿಂ. ೦೯೩೦, ೬೭-೯; 1164); ಹೂವ ತರುವರ ಮನೆಗೆ ಹುಲ್ಲ ತರುವ ಅವ್ವೆ ಲಕುಮಿಾರಮಣ ಇಪಗಿಲ್ಲ ಗರುವ (ಪುರಂದ. ೦-೦೯೭ ಶಲ್ಲಿ೦); ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು (ಮಂಕುಕ. ೭೬೯); ಹುಟ್ಟಿಸಿದ ದೇವರು ಹುಲ್ಲು ಮೇಯಿಸಿಯಾನೆ ?

(ಗಾದೆ). ೨. ನಿಮ್ಮ ಮಂಡೆಗೆ ಹೂವ ತಹನಲ್ಲದೆ ಹುಲ್ಲ ತಾರೆನು (ಮಹಾದೇ. ಬಿ. ೬೦-೧೯೮).

**ಪುಲ್ಲಂ ಕರ್ಚು**= (ಶರಣಾಗತಿಯನ್ನು ಸೂಚಿಸುವ ಸಲುವಾಗಿ) ಬಾಯಲ್ಲಿ ಹುಲ್ಲನ್ನು ಕಚ್ಚಿ ಹಿಡಿ : ಪುಲ್ಲಂ ಕರ್ಚೆಯಿಂ ಪುತ್ತನಡಿಗೆಱಗು (ಕವಿರಾ. ೩-೧೯೯); ಕೆಲರ್ ಶರಣೆಂದು ಕುಮಾರನ ಕಾಲ್ಗೆಱಗಿ ಪುಲ್ಲಂ ಕರ್ಚಿ ಪೊಡೆವಟ್ಟರ್ (ವಡ್ಡಾರಾ. ೬೨-೦೫). **ಪುಲ್ಲ ನೀರ್**=ಹುಲ್ಲಿನಲ್ಲಿ ನಿಂತಿರುವ (ಮಂಜು, ಮಳೆಹನಿ ಮೊದಲಾದುವುಗಳ) ನೀರು : ಪನಿವ ಪುಲ್ಲ ನೀರ್ಗಳ್ವೆರಸಲರುದುರುತ್ತಮಿರ್ದುವಂತಾ ಕ್ಷಣದೊಳ್ (ಕಾದಂಪೂ. ೦೧೪). 'ಪನಿನೀರ್' ಪರಾ. **ಪುಲ್ಲ ಬೆಂಟೆ**=ಹುಲ್ಲಿನ ಹಗ್ಗ : ಪುಲ್ಲ ಬೆಂ[ಪಾಠಾಂ. ಪುಲ್ಲ ಬೆರ, ಪೊಲ್ಲ ಬೆಂ]ಟೆಯಂ ಪೊಸೆದು ಕಿಚ್ಚುವೆಣ್ಣೆಯ ಕೊಡನುಂ ಬೆಂಟೆಯುಮಂ ಕೊಂಡು ಪೋಗಿ (ವಡ್ಡಾರಾ. ೦೫೩-೦೦). **ಪುಲ್ಲ ಮುಱಿ**=ಹುಲ್ಲಿನ ತುಂಡು ; ಗರುಕೆಯ ತುಂಡು : ಪುರಹರನಿಟ್ಟ ಪುಲ್ಲ ಮುಱಿಯಂ ಮುರವೈರಿ ವಿರಿಂಚಿಮುಖ್ಯನಿರ್ಜರರದನೆತ್ತಲಾಱದೆ ಪಲು ಧೃತಿಗುಂದಿದರ್ (ರಾಜಶೇ. ೦೩-೨೪).

[ದೇ. ॥ ತಮಿ. ಮಲ. ಕೋತ. ತೊದ. ಪುಲ್; ತುಳು. ಪುಲ್ಲು ; ಕೊಡ. ಪಿಲ್ಲ್; ತೆಲು. ಪುಲು, ಪುಲ್ಲು, ಪಿಲ್ಲು]

**ಪುಲ**, ಪುಳ$_2$ (ಗು). ೧. ದೊಡ್ಡ; ಬೃಹತ್ತಾದ. (ನಾ). ೨. ಗಾತ್ರ ; ಆಕಾರ. ೩. ನವಿರೇಳುವಿಕೆ ; ಪುಳಕ. **ಪುಳ$_2$**: ೩. ಕಸ್ತೂರಿಗೆ 'ತಾಯಿ' ಎಂಬ ಶಬ್ದ ಪುಳವನ್ನುಂಟುಮಾಡಿತು (ಚಂದಶೀ. ೦೨೬). [ಸಂ.]

**ಪುಲಕ**, ಪುಳಕ$_1$ (ನಾ). ೧. ಮೈನವಿರೇಳುವಿಕೆ ; ರೋಮಾಂಚನ : ಪುಲಕಂ ಜಾನಕಿಗುತ್ಸವಂ ಜನಕರಾಜಂಗೆ . . . ಆಯ್ತೇಱಿಸಿ ನೀವಿ ಜೇವೊಡೆಯೆ ವಜ್ರಾವರ್ತಮಾ ರಾಘವಂ (ಕಂರಾಮಾ. ೫-೮೯) ; ತೃಣರಾಶಿ ಮೈದೋರೆ ಪಚ್ಚೆಯ ಪುಲಕದಂತೆ (ಚತ್ರಾಂಗ. ೬೦-೦೬೭೫). ೨. (ಪ್ರಾಣಿಗಳ ಮೈಗೆ ಅಂಟಿಕೊಳ್ಳುವ) ಕ್ರಿಮಿ. ೩. ಅನ್ನದ ಉಂಡೆ. ೪. ಹಾರಕ ಮೊದಲಾದ ತೃಣಧಾನ್ಯ. **ಪುಳಕ$_1$** : ೧. "ಪೊಂಪುಱಿಯೆನೆ ಪುಳಕಾಖ್ಯಂ" (ಚತುನಿ. ೯); ತಿಳಿಪಲಡಿಗೆಱಗಿದೋಪನ ತಳಂಗಳಾ ತೀಟದಿಂ ಪವಂಗಳೊಳೊಗೆದಾ ಪುಳಕಚಯಂಗಳ್ ಕಳೆದುವು ಮುಳಿಸು ನಲ್ಲಳ್ಗೆ (ಕವಿರಾ. ೩-೦೦೬); ಪುಳಕಂ ಪುದಿದಿರೆ ರಾಗಂ ಪೊಳೆಪು ತನುರುಚಿಗೆ ಮಾಡೆ . . . ಕಳಿಕೆಯೊಳೆ ತುಱುಗಿ ತಳಿರೊಳೆ ತಳತಳಿಸಿದದೊಂದಶೋಕಲತೆಯನೆ ಪೋಲ್ತಳ್ (ಆದಿಪು. ೮-೨೯); ಮನ ಮನ ಬೆರಸಿದಲ್ಲಿ ತನು ಕರಗದಿದ್ದರೆ ಸೋಂಕಿನಲ್ಲಿ ಪುಳಕಂಗಳು ಹೊಱಹೊಮ್ಮದಿದ್ದರೆ . . . ಎನ್ನಲ್ಲಿವಿಲ್ಲವಾಗಿ ಆನು ಡಂಭಕ ಕಾಣಿರೇ (ಬಸವ. ೩೬೮). "ಅನ್ನದಗುಟಲ್ಲಿ ಧಾನ್ಯದಲಿ ಪುಳ[ಪಾಠಾಂ. ಳು]ಕವೊಂದೆನಿಕ್ಕು" (ಮಂಗರಾ. ೦೪೩-೨೨). ೫. ಅಕ್ಕರೆ; ಕಕುಲಾತಿ: ಈವತ್ತು ಒಮ್ಮಿಂದೊಮ್ಮೆಲೆ ಆ ಚಂದ್ರಭಾಗಕ್ಕನ ಬಗ್ಗೆ ಇಷ್ಟೊಂದು ಪುಳಕವೇಕೆ ? (ಮೂರುದಾ. ೫೦); ಆ ಹುಡುಗಿಯ ಬಗ್ಗೆ ಇಷ್ಟೇಕೆ ಪುಳಕವೋ (ಮೂರುದಾ. ೦೪೫). ೬. ಒಂದು ಬಗೆಯ ರತ್ನ. "ಪುಳಕಮೆನಿಕ್ಕುಂ ರತುನೋಪಳಮುಂ . . . ಕೀಟಕಮುಂ" (ವಸ್ತುಕೋ. ೦೨೯-೬೮). [ಸಂ.]

**ಪುಲಕಂಗೂಡು** (ಕ್ರಿ). ನವಿರೇಳು ; ರೋಮಾಂಚಿತವಾಗು : ನಿಮಿರ್ದತ್ತಿದೊಂದು ಪುರ್ವಿಂ ಮೆರೆವಿ ವದನಂ ಪುಲಕಂಗೂಡಿದ ಕದಪಿಂ ಕನ್ನಡಿಪುದೆನ್ನೊಳಿಪ್ಪಭಿರತಿಯಂ (ಶಾಕುಂತ. ೩೮-೬೬). [ಪುಲಕ + ಕೂಡು$_1$]

**ಪುಲಕವೇರು** (ಕ್ರಿ). ೧. ರೋಮಾಂಚನ ಹೊಂದು. ೨. (ಅಲಂ) ಚಿಗುರು ; ಮೊಳಕೆಯೊಡೆ : ನನ್ನ ಶರೀರ, ಮನಸ್ಸು ವಸಂತದ ಮಲಯಪವನಕ್ಕೆ ಪುಲಕವೇರುವ ಬಕುಲವನದ ನವಪಲ್ಲವರಾಶಿಯ ಹಾಗೆ ಕಂಪಿಸಿ ಕಂಪಿಸಿ ತತ್ತರಿಸಿ ಹೋಯ್ತು (ಇಷ್ಟಕ. ೪೪೮).

[ಪುಲಕ + ಏರು$_1$ (< ಏಱ್$_1$)]

**ಪುಲಕಾಂಕುರ**, ಪುಳಕಾಂಕುರ (ನಾ). = ಪುಲಕ ೧ : ಪುಲಕಾಂಕುರ ಮೊಗೆತರೆ ಕೋಮಲೆಯಪ್ಪಿದ ಕಾಂತಕುರವಕಂ ಕಣ್ದೆಱೆದಾ ಕುಲಟೆಯ ತಳ್ತಳೆಗೆತ್ತುಮ್ಮಳಿಸಿದನಿಂತಪ್ಪ ಪಾಪಭೀರುಗಳೊಳರೇ (ಲೀಲಾವ. ೦೪-೦೩೦). **ಪುಳಕಾಂಕುರ** : ಒದವೆ ಪುಳಕಾಂಕುರಂಗಳ್ . . . ಇದಿರೆಬ್ಬಿಳ್ ತರಳನಯನೆ ಸಂಭ್ರಮದಿಂದಂ (ಕಾದಂಬ. ೩೫); ಕೈಗನ್ನಡಿಯವೊಲೆಲ್ಲರ ಕೈಗೊಪ್ಪುವ ಮಗನನೆತ್ತಿ ಪುಳಕಾಂಕುರಮಂ ಮೈಗಗ್ಗಳಿಸವ ಕಾಂತೆಯ ಕೈಗವುದೇಂ ಭೇದಮುಂಟೆ ಸೀರೆಯ ಕೈಗು (ಮಲ್ಲಿಪು. ೩-೧೦೫) ; ನೆಗೆದ ಪುಳಕಾಂಕುರದ ನೆಱೆ ಮುಗುಳ್ದಕ್ಷಿಯ ಮಿಡುಕದಂಗದಿಳಿದೇಱದೆ ನೆಟ್ಟಗೆ ನಿಂದ ಸುಯ್ಯ ಸುಳಿಯದ ಬಗೆಯ ಪೊಡರ್ಪಸೆಯೆ ತಾಪಸಂ ತಪಮಿರ್ದಂ (ಶಬಶಂ. ೨-೯೪). [ಸಂ.]

**ಪುಲಕಿತ**, ಪುಳಕಿತ (ಗು). ೧. ರೋಮಾಂಚನ ಹೊಂದಿದ ; ರೋಮಾಂಚಿತವಾದ : ದಶರಥಮಹೀನಾಥು ಸುತಮುಖನಿರೀಕ್ಷಣಭರದಿಂ ಪಾರಿಜಾತಂ ಕೋರಕಿತವಾದಂತೆ ಪುಲಕಿತಶರೀರನಾಗಿ (ಕಂರಾಮಾ. ೩-೧೧೭ವ). (ನಾ). ೨. ರೋಮಾಂಚನಗೊಂಡ ವ್ಯಕ್ತಿ : ಅತ್ತಿಮಬ್ಬೆ ಪುಲಕಿತಳಾಗಿ ನುಡಿದಳು (ದಾನಚಿಂ. ೦೭೭); ತುಂಗಕ್ಕ . . . ತುಸು ಸಮಯದ ಮೇಲೆ ಥಟ್ಟನೆ ಹೊಳೆದ ಒಂದು ಹೊಸ ವಿಚಾರದಿಂದ ಪುಲಕಿತಳಾದಂತೆ ತ್ರುಟಿ ಕಚ್ಚಿಕೊಂಡಳು (ಮೂರುದಾ. ೫೦). **ಪುಳಕಿತ** : ೧. ಪುಳಕಿತಕಪೋಳಫಳಕಂ ವಿಳಸಿತಮದಿರಾರುಣೇಕ್ಷಣಂ ಸ್ಫುರಿತೋಷ್ಠಂ ಕೆಳದೀ ನಿನ್ನ ಮುಖಂ ತಳಮಳಗೊಳಿಸುಗುಮಿಂತು ನಿಭೃತಶೃಂಗಾರರಸಂ (ಕವಿರಾ. ೩-೦೯೨); ಮುನಿಕಾಂತಾದರ್ಶನೋತ್ಕಂಠೆ ಪುಳಕಿತಸರ್ವಾಂಗಿ ಇಂತಾತುರದೊಳಿರ್ದಳ್ (ರಾಮಾಶ್ವ. ೨೮-೪). ೩. ರೋಮಾಂಚಿತವಾದುದು: ಆಲಿಕಲ್ಲ ರೂಹಿನಂತೆ ಅರಗಿನ ಪುತ್ಥಳಿಯಂತೆ ತನು ಪುಳಕಿತವಾದ ಬೆವರುಬಿಂದುಗಳೆಲ್ಲಾ . . . ಮನವೊಲಿದು ನೆರೆವ ಭರವನೇನ ಹೇಳುವೆನಯ್ಯಾ (ಬಸವ. ೪೯೩) ; ಇಳೆಯೊಳ್ ಪಾರ್ವತಿಯುದಯಿಸೆ . . . ಪುಳಕಿತವಾಯ್ತಿಂದುಧರನ ವರವಾಮಾಂಗು (ಗಿಂಕ. ೩-೪೬). [ಸಂ.]

**ಪುಲಕಿತಗೊಳ್ಳು** (ಕ್ರಿ). ರೋಮಾಂಚನ ಹೊಂದು ; ಜುಮ್ಮೆನ್ನು : ಹದಿನಾರನೆಯ ಶತಮಾನದ ಉತ್ತರಾರ್ಧ ಮತ್ತು ಹದಿನೇಳನೆಯ ಶತಮಾನದ ಪೂರ್ವಾರ್ಧಗಳು ನೂತನ ಕಾವ್ಯಪ್ರವಾಹದಿಂದ ಪುಲಕಿತಗೊಂಡವು (ಶಾವಗೀ. ೫೩). [ಪುಲಕಿತ + ಕೊಳ್ಳು$_1$ (<ಕೊಳ್$_1$)]

**ಪುಲಕಿಸು**, ಪುಳಕಿಸು (ಕ್ರಿ). ೧. ಪುಲಕಿತಗೊಳ್ಳು ; ರೋಮಾಂಚಿತವಾಗು : ಅಲ್ಲಿ ಕುಳಿತನು ದೊಲ್ಲನೆಯು ತನುವೆಲ್ಲ ಪುಲಕಿಸಲು (ಗಗಶಾ. ೨-೨೨). **ಪುಳಕಿಸು** : ೧. ಗಿರಿರಾಜನೊಡಂಬಟ್ಟಾದರದಿಂದಂ ಪುಳಕಿಸುತ್ತೆ ಪುಟವೇಳುತ್ತುಂ ಪಾಚಾರಪಟುಗಳೆನಿಸುವ ತರುಣಿಯರಂ ಕೂಡಿಕೊಟ್ಟು ಸಂತಸದಿಂದಂ (ಗಿಂಕ. ೩-೯). ೨. ಸಂತೋಷಪಡು ; ಉತ್ಸಾಹಿಸು : ಹರನ ಕೃಪೆಯಾಯಿತೆಂದೆನುತೆ ಪುಳಕಿಸುತಿರಲು (ಬಸರ. ೦-೩೨); ಚೆಲುವಲರಿ ಪೋಪಂತೆ ಭಕ್ತರು ಪುಳಕಿಸುತ ಕೇಳಿಕೆಗಳಿಂ ತಾವಳವಡಿಸುತಾಡುತ್ತ ಪಾಡುತ ಹೋಗುತಿರಲು (ಬಸಪು. ೫೭-೪೬) ; ಗಂಗಾತನುಜನುಚಿತೋಕ್ತಿಗಳ ನೆನೆವಡಿಗಡಿಗೆ ಪುಳಕಿಸುತ ವಿನುತಮತಿ ನಡೆತರಲು (ಕುವ್ಯಾಭೀ. ೨-೨೯).

[ಪುಲಕ + –ಇಸು$_3$]

**ಪುಲಕೇಶಿ** 'ಪುಲಿಕೇಶಿ' ನೋ.

**ಪುಲವಡು** (ನಾ). ಹುಲ್ಲುಗಾವಲು ; ಗೋಮಾಳ : ದೇವರ್ಗ್ಗೆ ಸಾಸಿರ ಬಳ್ಳಿಯ ತೋಂಟ ದೇವರ ಸುತ್ತಣ ಬೆದ್ದಲೆ ತೋಟಗಟ್ಟ ಪುಲವಡು ಕೆಂಗಾಡು (ಶಾಇಇ. IX-1, ೨೦೬-೨೩ ; 1122). 'ಪುಲ್ಪಡಿ' ಪರಾ.

[ ?. / ತುಳು. ಪುಲವಾಡೆ, ಪುಲಾಡಿ ]

**ಪುಲಾಕ** (ನಾ). ೧. ಜೊಳ್ಳಾದ ಕಾಳು. ೨. ಅನ್ನದ ಮುದ್ದೆ.— ಓಡ : "ಫಳದುರ್ವಿವ ತುಷ ಧಾನ್ಯಾವಳಿ ಭಕ್ತಸಿಕ್ಥಕವಿವೆ ಪುಲಾ

ಕಾವ್ಯಂಗಳ್" (ವಸ್ತುಕೋ. ೦೨೯–೬೮). ೩. ಸಂಕ್ಷೇಪ; ಸಂಗ್ರಹಗೊಳಿಸಿದುದು. ೪. ಅಕ್ಕಿಯ ಗಂಜಿ. ೫. [ಜೈನ]ಐದು ಬಗೆಯ ಮುನಿವರ್ಗಗಳಲ್ಲಿ ಒಂದು; ₱ ಉತ್ತರಗುಣಭಾವನಾರಹಿತರೂ ವ್ರತಗಳಲ್ಲಿ ಪರಿಪೂರ್ಣತೆಯನ್ನು ಹೊಂದದೆ ಇರುವವರೂ ಆದ ಮುನಿಗಳು ಅಶುದ್ಧವಾದ ಪುಲಾಕ(=ಅನ್ನದ ಮುದ್ದೆ)ದಂತೆ ಇರುವುದರಿಂದ ಈ ಹೆಸರನ್ನು ಪಡೆದಿದ್ದಾರೆ: ಎತ್ತಾನುಂ ಅಪರಿಪೂರ್ಣವ್ರತರುಂ ಉತ್ತರಗುಣಭಾವನಾರಹಿತರುಂ ಅಪ್ಪ ಪುಲಾಕರುಂ (ತತ್ತ್ವಸೂ. ೩೫೬); ಮುನಿಗಳಲ್ಲಿ ಪುಲಾಕ, ಬಕುಶ, ಕುಶೀಲ, ನಿರ್ಗ್ರಂಥ, ಸ್ನಾತಕ ಎಂದು ಐದು ಪ್ರಕಾರಗಳು (ಜೈನಧ. ೯೯). [ಸಂ.]

**ಪುಲಾವು** 'ಪಲಾವ್' ನೋ.

**ಪುಲಿ**, ಹುಲಿ$_1$ (ನಾ). ೧. (ಅರಣ್ಯದಲ್ಲಿ ಬೇಟೆಯಾಡಿ ಜೀವಿಸುವ, ಮೈ ಮೇಲೆ ಕರಿಯ ಪಟ್ಟೆಗಳುಳ್ಳ ಹಳದಿಬಣ್ಣದ) ಒಂದು ಬಗೆಯ ಕ್ರೂರಮೃಗ; ವ್ಯಾಘ್ರ: ಪುಲಿ ಪುಲಿ ಪರಿವರಿ ಪೋಪೊ ಗೆಲೆ ಎಲೆ ಪೆಜಿಪಿಂಗು (ಕವಿರಾ.೨-೨೬); ತಪ್ಪುಗವೃಣ್ಣನು ಪುಲಿಯನ್ ಇಱಿದು × × × ಸತ್ತೊಡೆ (ಪ್ರಾಅ. ೦೯೭೬, ೪೪ ೩; 855); ಪೊಯ್ವ ಸಿಡಿಲ್ ತಿಂಬರೆವಾವು ಪಾಯ್ವ ಪುಲಿಯೆಂಬೀ ಬಾಧೆಯೊಳ್ ಮೆಯ್ಯನೊಡ್ಡಿಸೆ (ಆದಿಪು. ೬–೩೪); ಈಂದ ಪುಲಿಯೂ ಪೋಲಿರ್ದಳ್ (ಕವಿಮ. ೦೦೮ ಪ್ರಯೋ.). ೨. ಒಬ್ಬಾತನ ಹೆಸರು: ಪೆರ್ಗಡೆಗೌಡ ಶ್ರೀ ಪುಲಿ ಅಗಳಿ ಪನ್ನೆರಡುಮೂಳೆ ಪಾಳುಕೋಡ ಕೆಱೆಯುಂ ಅಯ್ದೊನ್ದಿ ಕಾಡು ಪತ್ತೊನ್ದಿ ಪ್ರಸಾದಂಗೆಯ್ದೊರ್ (ಪ್ರಾಅಂ. ೦೯೨೬, ೦೦೦ ೩; ೨ನೆಯ ೭೩). (ಗ್ರಾ). ೩. (ಆಲಂ) ದೊಡ್ಡದಾದ; ದೊಡ್ಡ: 'ಪುಲಿವಲೆ' ಪರಾ. ಹುಲಿ$_1$: ೧. "ವ್ಯಾಘ್ರಃ, ದ್ವೀಪೀ . . . ಮೃಗಾರಿಃ—ಈ ೭ ಹುಲಿ" (ಹಲಾಯು. ೯೩–೭೩); ಹುಲಿಯ ಹಾಲು ಹುಲಿಗಲ್ಲದೆ ಹೊಲದ ಹುಲ್ಲೆಗೆ ಉಣಬಾರದು (ಬಸವ. ೬೬೩) ಹುಲಿಯ ಏಱಿಗೊತ್ತಿದೊಡೆ ಪಶುಸಂಕುಲಕೆ ಸಂಕಟವೇನು (ಕುಮಾವ್ಯಾ. ೨೦–೩೦). ೪. ಒಂದು ಬಗೆಯ ಸಸ್ಯ: ಹುಲಿಯ ಬೀಜ, ಕರ್ಕಾಟಕಶೃಂಗಿ, ರಕ್ತಗಂಧಕ (ಔಷ್ಮವಿ. ೯೨).

**ಪುಲಿಯ ಬಾಲ**=ಒಂದು ಬಗೆಯ ಆಭರಣ: ಕುಜುಹಿನ ಪಟ ಕಿಱು ಘಂಟೆ ಪುಲಿಯ ಬಾಲ ಪೆಱೆಯ ಗಡೆಯುರೆಯ್ತಂದು . . . ಇಱಿದಾಡಿದರು ರಣದೊಳಗೆ (ಕುರಾಶಾಂ. ೦೨–೬೩). **ಹುಲಿಕುರಿ ಆಟ**=ನಾಲ್ಕು ಕಲ್ಲುಗಳನ್ನು ಹುಲಿಗಳಾಗಿಯೂ ಹದಿನೆಂಟು (ಹುಣಿಸೆ) ಬೀಜಗಳನ್ನು ಕುರಿಗಳಾಗಿಯೂ ಇಟ್ಟುಕೊಂಡು ಆಡುವ ಒಂದು ಬಗೆಯ ಆಟ: ಹಳ್ಳಿಗರು ಚೌಕಾಬಾರ, ಹುಲಿಕುರಿ ಆಟ ಮೊದಲಾದ ಆಟಗಳನ್ನು ಆಡುತ್ತಾರೆ (ರೂಢಿ). **ಹುಲಿಮನೆಯಾಟ**=ಹುಲಿಕುರಿಯಾಟ: (೬). **ಹುಲಿಯ ಜಂಗುಳಿ, ಹುಲಿಯ ಜ್ಯಗುಳಿ**=ಒಂದು ಬಿರುದು: ಸೊರಬದ ಹುಲಿಯ ಜಂಗುಳಿ ಬೀರಣ್ಣನ ಮಗ (ಎಕ. VIII, ಸೊರಬ. ೪೬–೪; 1018?); ಭಾಸೆಗೆ ತಪ್ಪುವ ಲೆಂಕರ ಗಂಡ ಹುಲಿಯ ಜ್ಯಗುಳಿಯ ಮೊತ್ತದ ಸೇನಾನಾಯಕಂ (ಎಕ. III, ಮಂಡ್ಯ. ೮೩–೨೬; 1305?).

[ದೇ. ॥ ತಮಿ. ಪುಲಿ, ಪುಲ್; ಮಲ. ಕೊಡ. ತೆಲು. ಪುಲಿ; ತುಳು. ಪಿಲಿ; ಕೋತ. ಪುಜ್; ಕೋಲಾ. ನಾಯ್ಕ್. ಪುಲ್; ಗೊಂಡಿ. ಪುರ್ಲೀ]

△ **ಪುಲಿಂಗಿಲ್** 'ಪುಲಿಗಿಲ್' ನೋ.

**ಪುಲಿಂದ**, ಪುಳಿಂದ (ನಾ). ೧. ಕಾಡಿನಲ್ಲಿ ವಾಸಿಸುವ ಒಂದು ಜನಾಂಗ; ಭಿಲ್ಲಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು; ಬೇಡ; ಶಬರ: 'ಪುಲಿಂದಿನಿ' ಪರಾ. **ಪುಳಿಂದ**: ೧. "ಕಿರಾತಃ, ಶಬರಃ, ನಿಷಾದಃ, ಪುಳಿಂದಃ, ನಾಹಳಃ, ಭಟಃ, ಮಾಲಾ, ಮ್ಲೇಚ್ಛಃ—ಈ ೮ ಬೇಡರ್ ಮೊದಲಾಗುಳ್ಳಂತ್ಯಜಾತಿಗಳ್" (ಹಲಾಯು ೯೮–೪೯೩); ಅವಯವದೆರ್ದೆಗೊಳ್ವುದಿದಾರುವನೆಂದೊಡೆ ಬಾಣಕೃತಿ ಪುಳಿಂದನ ಸಂಧಾನವನೆಯ್ದಿದತ್ತು ಮತ್ತಿನ ಕವಿಕುಳದೆರ್ದೆಗೊಳ್ವುದೆಂಬುದೊಂದಚ್ಚರಿಯೇ (ಕಾದಂಪೂ. ೪); ಆ ಮರದೊಳಿರ್ಪ ಕಪೋತಶಿಖಾಮಣಿ ಕಂಡು ಕರುಣಾರಸಾರ್ದ್ರಹೃದಯನಾಗಿ . . . ಚಂಚೂಪುಟದಿನೊಂದು ಕೊಳ್ಳಿಯಂ ಕರ್ಚಿ ತಂದು ಪುಳಿಂದನ ಮುಂದಿಟ್ಟು (ಕುತಕಂ. ೨೪೩–೦೭). ೨. ನಾವೆಯ ಒಂದು ಭಾಗ; ನೌಕಾಶಿರ: "ಪುಳಿಂದಃ, ಮಂಗಃ—ಈ ೨ ನಾವೆಯ ಬಿಸುಜು" (ಹಲಾಯು. ೦೦೧–೩೦); "ಹಡಗಿನಿದ್ದೆಸೆ ಪುಳಿಂದ[ಶಾಕಾಂ. ಪುಳಿಂಗಂ, ಪುಳಿನು] ಮಂಗಮುಕ್ಕು" (ಮಂಗರಾ. ೦೨೦–೩). [ಸಂ.]

**ಪುಲಿಂದಿನಿ**, ಪುಳಿಂದಿನಿ (ನಾ). ೧. ಬೇಡರವಳು; ಬೇಡಿತಿ; ಶಬರಿ: ಉಳಿದು ಪುಲಿಂ[ಶಾಕಾಂ. ಳಿಂ]ದಿನೀವಿಹಿತವಿಭ್ರಮಮಂ ಸುರಕಾಮಿನೀಜನಂ ಬಳಸಿರೆ ತಾನುಮಂತೆ ನಗನಂದನೆ . . . ನೆಲಸಿರ್ದಳುದಾರಶೋಭೆಯಿಂ (ಶಬಶಂ. ೩–೦೩). **ಪುಳಿಂದಿನಿ**: ೧. ಗಂಡನಂ ತೊಲಗದೆ ಪಿಂದೆ ಬಿಲ್ವಿಡಿದು ಬರ್ಪ ಪುಳಿಂದಿನಿಯೊರ್ವಳೊಪ್ಪಿದಳ್ (ಶಾಂತಿಪು. ೦೦–೦೦೬); ಅಚಲೇಂದ್ರ ಮೊಸೆದಿರ್ದುದು ಪುಳಿಂದಿನೀತನುಗಂಧಬಂಧುರದೊಳು (ಕೃಷ್ಣಬಾ. ೦೦–೪). ೨. [ಸಂಗೀತ] ಒಂದು ರಾಗದ ಹೆಸರು: ಕೌಶಿಕಿ ವೇಳಾವಳಿ . . . ಪುಳಿಂದಿನಿ . . . ಎಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದುವು (ಶಿವೇಕ. ೨೩೪). [< ಸಂ. ಪುಲಿಂದೀ]

**ಪುಲಿಕಡ್ಡ** (ನಾ). ಒಬ್ಬಾತನ ಹೆಸರು: ಕಿತ್ತರಸಂ ವಟ್ಟಗೆಟ್ಟನ ಮಗ ಪುಲಿಕಡ್ಡಅರಸರ್ ಸಿಯಗೆಲ್ಲಕ್ಕಾಗಿ ಕೊಮಾರನ್ ಕಿರ್ಕೊರಳತ್ತುಒಗ ಬಳ್ಳಿಯುಳೆಱಿದು ವಿಟ್ಟೋಂ (ಎಕ. XVI, ತುಮಕೂ. ೯೦–೯; ಸು. 775). [ ? ]

**ಪುಲಿಕರನಗರ**, ಪುರಿಕರನಗರ (ನಾ). ಒಂದು ಊರಿನ ಹೆಸರು; ₱ ಧಾರವಾಡಜಿಲ್ಲೆಯ ಈಗಿನ ಲಕ್ಷ್ಮೇಶ್ವರ: ಪುಲಿಕರನಗರಸ್ಯ ಶಂಖತೀರ್ಥವಸತೇಃ (ಇಆ. VII, ೦೦೭–೦೪; 10ನೆಯ ೭೩); ಪುಲಿಕರನಗರ ಶ್ರಿಶತ್‌ಗ್ರಾಮಾಂತರ್ವರ್ತ್ತಿ ಹುಲ್ಲುಂಗೂರು ಮುಖ್ಯ ಬಹುವಿಷಯಂ ಸಿಂಹಣರಾಯಾಲ್ಲಬ್ಧ್ವಾ (ಕಇ. IV, ೩೪–೨೪; 1245). **ಪುರಿಕರನಗರ**: ಶ್ರೀ ಬಿಕ್ಕಿರಾಣಕೇನ ಪುರಿಕರನಗರೇ . . . ಸೆಂಬೊಳಲ ನಾಮ ಗ್ರಾಮಂ ಸರ್ವ್ವಬಾಧಾಪರಿಹಾರಂ ದದೌ (ಸೌಇಇ. XX, ೩ ೨೬; 723); ಶ್ರೀಮಾತ್ ಪುರಿಕರನಗರ ಪ್ರಖ್ಯಾತ ಶ್ರೀಶಂಖಜಿನೇಂದ್ರ ನಿತ್ಯನೈಮಿತ್ತಿಕ ಪೂಜಾನಿಮಿತ್ತಂ . . . ಕದ್ದಮಗ್ರಾಮಂ ದತ್ತವಾನ್ (ಸೌಇಇ. XX, ೬–೦೯; 730). 'ಪುಲಿಗೆಱೆ' ಪರಾ.

[₱ ಇದು 'ಪುಲಿಗೆಱೆ' ಎಂಬ ಶಬ್ದದ ಸಂಸ್ಕೃತೀಕರಣ]

**ಪುಲಿಕಲ್ಲದಿ** (ನಾ). ಒಬ್ಬಾತನ ಹೆಸರು: ಕೊಙ್ಗಣಿವುತ್ತರಸರ್ಕ್ಕೆ ಇರ್ಪ್ಪತ್ತಾವಿಟಾನ ವರ್ಷದುಳ್ ಪುಲಿಕಲ್ಲದಿ ಅಪ್ಪದ ವಾರ್ಕ್ಕೆಉಳ್ ಸೆಗುಣ್ಣನೊಳ್ ಎಱಿದು ವಿಟ್ಟೊ (ಎಕ. X (8), ಕೋಲಾರ. ೭೮–೨; ಸು. 752). [ ? ]

**ಪುಲಿಕಲ್ಲು**, ಹುಲಿಕಲ್ಲು (ನಾ). ಎರಡು ಅಥವಾ ಮೂರು ಕಲ್ಲುಗಳನ್ನು ಹುಲಿಗಳಾಗಿಯೂ ಅವುಗಳಿಗಿಂತ ಚಿಕ್ಕವಾದ ಹನ್ನೆರಡು ಅಥವಾ ಹದಿನೈದು ಕಲ್ಲುಗಳನ್ನು ಕುರಿಗಳಾಗಿ ಅಥವಾ ಬೇಟೆಗಾರರಾಗಿಯೂ ಇಟ್ಟುಕೊಂಡು ಆಡುವ ಒಂದು ಬಗೆಯ ಆಟ; ಹುಲಿಘಟ್ಟದ ಆಟ; ಹುಲಿಮನೆ ಆಟ: (೬). **ಹುಲಿಕಲ್ಲು**: ಹುಲಿಕಲ್ಲೋ, ಚೌಕಾಬಾರವೋ ಯಾವುದು ಆಡೋಣ? (ರೂಢಿ). [ಪುಲಿ+ಕಲ್ಲು(<ಕಲ್$_3$)]

**ಪುಲಿಕುಜುಕಿ**, ಪುಲಿಕುಜುಕ್ಕಿ (ನಾ). ಒಂದು ಊರಿನ ಹೆಸರು: ಕಾಳೆಗದುಳ್ ಗಾರವರಾಳ್ ಅಧೀರರಾ ಮಗನ್ ಚಾತಗುದ್ದಿಯಾರುವ್ ಪುಲಿಕುಜುಕಿಯುರಾ ದುಗ್ಗಮಾರನ್ . . . ಅನ್ನಿಱಿದು ಸತ್ತರ್ (ಎಕ. X, ಶ್ರೀನಿವಾ. ೪೦–೩; ಸು. ೯೦೦). **ಪುಲಿಕುಜುಕ್ಕಿ**: ಬಾಣರಸರಾ ದಣ್ಣು

ಪುಲಿಕಂಚುಕ್ಕಿಯುಳ್ಳ ಎರಡು ದಣ್ಣು ಕಟ್ಟಿ ಎಚಿಯುತ್ತಿರೆ (ಎಕ. X, ಕೋಲಾರ. ೨೦೦-೭ ; ಸು. 890?). [ಪುಲಿ+ಕಂಚುಕಿ]

**ಪುಲಿಕಂಚುಂಕ್ಕಿ** ‘ಪುಲಿಕಂಚುಕಿ’ ನೋ.

**ಪುಲಿಕೇಶಿ**, ಪುಲಕೇಶಿ, ಪುಲೆಕೇಶಿ, ಪೊಲಕೇಶಿ, ಪೊಲಿಕೇಶಿ, ಪೊಲೆಕೇಶಿ, ಪೊಲೆಕೇಸಿ (ನಾ). ಕನ್ನಡನಾಡನ್ನು ಆಳಿದ ಸುಪ್ರಸಿದ್ಧನಾದ ಒಬ್ಬ ಅರಸನ ಹೆಸರು; ☞ ಇದು ಇಬ್ಬರು ಅರಸುಗಳ ಹೆಸರು. ಬಾದಾಮಿ ಚಾಳುಕ್ಯವಂಶದ ದೊರೆಗಳಲ್ಲಿ ಒಬ್ಬನಾದ ಒಂದನೆಯ ಜಯಸಿಂಹನ ಮಗ ಒಂದನೆಯ ಪುಲಿಕೇಶಿ (ಕ್ರಿ. ಶ. ೫೫೦) ; ಈತನ ಮೊಮ್ಮಗ ಅಂದರೆ ಒಂದನೆಯ ಕೀರ್ತಿವರ್ಮನ ಮಗ ಎರಡನೆಯ ಪುಲಿಕೇಶಿ (ಕ್ರಿ. ಶ. ೬೦೯-೬೪೨) : ಪುಲಿಕೇಶಿವಲ್ಲಭಮಹಾರಾಜಸ್ಯ ಪುತ್ರಃ (ಎಇ. XXVII. ೩೯-೬ ; 552). **ಪುಲಕೇಶಿ :** ಶ್ರೀಪುಲಕೇಶಿವಲ್ಲಭಮಹಾರಾಜಸ್ಯ ಪ್ರಪೌತ್ರಃ (ಎಇ. XXVII, ೦೦೭-೬; 597); ವಾತಾಪಿಪುರವರೇಶ್ವರನುಂ . . . ದ್ವೀಪಾಂತರಪ್ರಕಟಪ್ರಭಾವನುಮೆನಿಸಿದ ಪುಲಕೇಶಿದೇವನಿಂ (ಗದಾಯು. ೨-೭ಪ). **ಪುಲೆಕೇಶಿ:** ಶ್ರೀಮಾಂ ಸತ್ಯಾಶ್ರಯ ಪುಲೆಕೇಶಿವಲ್ಲಭಮಹಾರಾಜರಾಜ್ಯೇ ವರ್ತ್ತಮಾನೇ ಲಿಖಿತಮಿತಿ (ಎಇ. V, ೬-೩; ಸು. 650). **ಪೊಲಕೇಶಿ :** ಧರಾಚಕ್ರಮೆ ಮೆಚ್ಚೆ ಬಣ್ಣಿಸೆ ಜಸಂಬಡೆದಂ ಪೊಲಕೇಶಿವಲ್ಲಭಂ (ಕಾವ್ಯಾವ ೯೬೬). **ಪೊಲಿಕೇಶಿ :** ಶ್ರೀಪೊಲಿಕೇಶಿವಲ್ಲಭಮಹಾರಾಜಸ್ಯ ಪ್ರಿಯಸೂನು (ಇಅ. VII, ೦೦೩ ೩೯ ; 10ನೆಯ ಶತ). **ಪೊಲೆಕೇಶಿ :** ತನೂಜಃ ಪೊಲೆಕೇಶಿ (ಎಇ. VI, ೫-೩; 634). **ಪೊಲೆಕೇಸಿ :** ಪೊಲೆಕೇಸಿಅರಸರ × × × (ಎಕ. VII, ಶಿಕಾ. ೦೦-೨; ಸು. 640?); ಪೊಲೆಕೇಸಿಯ ಮೇಲೆ ಪೋಗಿ ಪುಲಿಮಟ್ಟಿಯಲ್ ಕಾದಿ (ಕ್ಯಶಿಂ. ೦೯೨೬, ೩೦-೮೦ ; 1056). [ ? ]

**ಪುಲಿಕ್ಕಲಯ್ಯ** (ನಾ). ಒಬ್ಬಾತನ ಹೆಸರು : ಶ್ರೀಪುಲಿಕ್ಕಲಯ್ಯ (ಎಕ. II, ೯೭೯, ಸು. 1000). [ ?+ಅಯ್ಯ$_{61}$ ]

**ಪುಲಿಗಾರ** (ನಾ). ಒಂದು ಸ್ಥಳದ ಹೆಸರು : ಪುಲ್ಪದಿಯೇ ಎಟಗಲ್ಲೆ ಪುಲಿಗಾರದ ಗೆಱೆ ಮುಱೂಡಲ್ (ಇಅ. XII. ೦೩-೨೦; 813). [?]

**ಪುಲಿಗಿಲ್**, ಪುಲಿಂಗಿಲ್, ಪುಲಿಗಿಲು, ಪುಲಿಗಿಲೆ, ಹುಲಗಲಿ, ಹುಲಿಗಿಲ್. ಹುಲಗಿಲು, ಹುಲಿಗಿಲ್, ಹುಲಿಗಿಲಿ, ಹುಲಿಗಿಲು, ಹುಲುಗಲ; ಹುಲುಗಿಲು (ನಾ). ಹೊಂಗೆಮರ; ತಮಾಲವೃಕ್ಷ: ಪುಲಿಗಿಲ ಕೆಲದೊಳ್ ಪನ್ನಗನಿಲಯಂ ಸಮನಿಸಿದೊಡದಱ ತೆಂಕಣದೆಸೆಯೊಳ್ ಜಲಮಕ್ಕುಂ (ಲೋಕೋಪ. ೫-೨೨) ; ಸಮನಾಗಿರೆ ಪೂಸುಗೆ ಪುಲಿಗಿಲೆಣ್ಣೆಯುಂ ಸುಣ್ಣಮುಮಂ (ಅಶ್ವಶಾ. ೦೩-೨೦). Δ**ಪುಲಿಂಗಿಲ್:** ಹೊನ್ನೆ ಚೆನ್ನೆ ಕವಳಂ ಕರಾಚಮಾಚು ಪುಲಿಂಗಿಲೆರಂ ಗುಗ್ಗುಳಮತ್ತಿ ಮತ್ತಿ ಮಧುಕಂ (ರಾಜಶೇ. ೫-೫೩). **ಪುಲಿಗಿಲು :** ನೆಗಟ್ದ ಪುಲಿಗಿಲೇಶಾನ್ಯದೊಳ್ (ದಲ್ಲು) ಬಿಳಿಯ ಕಲ್ ಕೂಡೆ ಪುತ್ತಿರ್ವಾಗಳ್ (ಬಗೆಯೆ) ನಡುವೊಪ್ಪುರುಷಪ್ರಮಾಣದೊಳ್ ಪಡುವ ಕುಸುಮದಂತೆ ಮಣ್ಣೆಸರ್ಚ (ಜಲ್ಪಮ. ೦೦-೦೩). **ಪುಲಿಗಿಲೆ :** ಪುಲಿಗಿಲೆ ಮಾವು ಬೇವು ಬೆಳಲಱಟೆ ನಿಂಬೆ . . . ಎತ್ತಲುಂ ಕಲಸಿರೆ ಕಾಡು ಕಳ್ತಲಿಸಿ ಕಂಗಳನಪ್ಪಿದುದು (ಶಾಲಾಕ್ಯ. ೦ ೯-೯). **ಹುಲಗಲಿ :** ಹುಲಗಲಿ (ಕರಂಜ) –ಎತ್ತರವಾಗಿ ಬೆಳೆಯುತ್ತದೆ. ಕಟ್ಟಿಗೆ ಹಗುರು (ಕರ್ಚಾಗ. ೫೦); ಮೈಸೂರು ಸೀಮೆಯಲ್ಲಿ ಹುಲಗಲಿಯ ಹಿಂಡಿಯನ್ನು ಹೊಲಗಳಿಗೆ ಹಾಕುತ್ತಾರೆ (ಮುಂಬಯಿ. ೩-೨೯೨). **ಹುಲಗಿಲ್** : ಕಂಚಿಮಾಲದ ಗಡಣಂ ಕೊಸಗಿಡೆ ಬಸಿಱೀ ಹುಲಗಿಲ್ಗೊರವಿ . . . ಹೊನ್ನೆಯ ತರುಗಳ್ (ಹರಿಶ್ಚ. ೯-೩೬). **ಹುಲಗಿಲು :** ಹುಲಗಿಲ ಬೇರ್ ತವಸದ ತಿಗುಡು ಲಕ್ಕಿ ಕಡಸಿಗೆಯ ಬೇರ್ ಮರುಂಗುಳಿಯೊಳಗಗ್ಗಲಿಸಿರೆ . . . ಬಲವರ್ಧನಮಕ್ಕುಮೆಗ್ನಿದೀಪನಮಕ್ಕುಂ (ಕಲ್ಯಾಣ. ೯-೨೨) ; ತೊಟ್ಟುಚ್ಯುತ ತೊಟ್ಟಿಡುತಿದೆ ಮೊಗ್ಗನು ಹೂ ಹಾಸಿ ಹುಲಗಿಲು ಗಾನನಿಮಗ್ನಧ್ಯಾನವ ಹೊಸ ದಾಸಿ (ಅರಳು. ೦೩೨-೦೦). **ಹುಲಿಗಿಲ್:** ಹುಲಿಗಿಲ್ ತಂಡಸು ನುಗ್ಗಿ . . . ಉತ್ತರಣೆಯಂ ಚೂರ್ಣಂಗಳಂ ಮಾಡಿ (ಖಮದ. ೦೭-೫೯); ಬರಿವದಣ ಲೊಕ್ಕಲೋಯಿ (ಹಿ) ಸರಮಣಲೆ ಗುಳೂಚಿ ಪಿಪ್ಪಲಿ ಹುಲಿಗಿಲ್ ವಿಷನಾಗರ ಲಶುನಂಗಳೊಳುಪ್ಪಂ ಬೆರಸುಗೆ ಪವಣಱಿಗೆ ಪಿಂಡಮಾರೋಗ್ಯಕರಂ (ಅಶ್ವಶಾ. ೭-೩೩). **ಹುಲಿಗಿಲಿ :** "ಚಿರಿಬಿಲ್ವ, ನಕ್ತಮಾಲಃ, ಕರಜಃ, ಕರಂಜಕಃ–ಳ ಹುಲಿಗಿಲಿಮರದ ಹೆಸರು" (ಸಿದ್ಧಾಂತ. ೦೨೩) ; ಹೊಂಗೆ, ಕರಂಜ, ಹುಲಿಗಿಲಿ ಮರ (ವೈಶಿಗ. ೬೯-೦೨೯೯). **ಹುಲಿಗಿಲು :** ಹುಲಿಗಿಲ ಸೊಪ್ಪು ಗುಗ್ಗುಳಯಿಂ ಧೂಪವಿಕ್ಕುವುದು (ಶಾಂಶ. ೦೨೬-೦೨). **ಹುಲುಗಲ :** ಚಿಗುರಿತು ಈ ಹುಲುಗಲ (ನೆರಮು. ೯-೦). **ಹುಲುಗಿಲು :** ‘ಬಿಳಿಹುಲುಗಿಲು’ ಪರಾ.

**ಪುಲಿಗಿಲು** ‘ಪುಲಿಗಿಲ್’ ನೋ.

**ಪುಲಿಗಿಲೆ** ‘ಪುಲಿಗಿಲ್’ ನೋ.

**ಪುಲಿಗೆಱೆ**, ಪುಱಿಗೆಱೆ, ಪೊಱಿಗೆಱೆ, ಹುಲಿಗೆಱೆ (ನಾ). ಒಂದು ಊರಿನ ಹೆಸರು ; ☞ ಧಾರವಾಡಜಿಲ್ಲೆಯ ಈಗಿನ ಲಕ್ಷ್ಮೇಶ್ವರ : ಗಜ್ಜಪುರ್ ಪುಲಿಗೆಱೆ ಗಣ್ಣುವಗ್ರಾಮ(ಮಾ) ಇತಿ ಅಸ್ಮಭುಕ್ತಿ( ಕ್ತಿಃ ) (ಇಅ. VIII, ೨೯೩-೦೬ ; ೬೮4) ; ಅದಱೊಳಗಂ ಕಿಸುವೊೞಲಾ ವಿದಿತ ಮಹಾಕೊಪಣನಗರದಾ ಪುಲಿ[ಶಾಕಾಂ. ರಿ]ಗೆಱೆಯಾ ಸದಭಿಸ್ತುತಮಪ್ಪೊಂಕುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೦-೩೭); ಪುಲಿಗೆಱೆನಗರಾತ್ ಪೂರ್ವಸ್ಯಾಂ ದಿಶಿ (ಇಅ. VII, ೦೦೫-೨೫ ; 10ನೆಯ ಶತ). **ಪುಱಿಗೆಱೆ :** ಪುಱಿಗೆಱೆಯಾ ಮೂಱುಜಿಕ್ಕೇರಿಯಾ (ಎಇ. VI. ೦೩೩-೩; ಸು. 763) ; ಪುಱಿಗೆಱೆಯಿಂ ಬನ್ದ ಪೊಱೆಯಣ್ಣನ ಶಿಲಾಕಮ್ಮ (ಸೌಇಇ. XI–i, ೦೦-೨೩; 865); ಶ್ರೀಮತ್ ಕುಂಕುಮಮಹಾದೇವಿ ಪುಱಿಗೆಱೆಯಲು ಮಾಡಿಸಿದ (ಇಅ. VII, ೩೯-೨೦; 999). **ಪೊಱಿಗೆಱೆ :** ಪೊಱಗೆಱೆಯಾ ಮಹಾಜನಕ್ಕಂ (ಎಇ. XIV, ೦೯೦-೨; 725). **ಹುಲಿಗೆಱೆ :** ಹುಲಿಗೆಱೆಯ ಸೋಮನಾಥದೇವರ ಕ್ಷೇತ್ರ(ಎಕ. VII, ಶಿಕಾಗ. ೩೨-೦೩೫; ಸು. 1050?). ‘ಪುಲಿಕರನಗರ’ ಪರಾ.

**ಪುಲಿಗೆಱೆಮೂನೂಱು**, **ಹುಲಿಗೆಱೆಮೂನೂಱು** = ಹುಲಿಗೆರೆಯೇ ಮುಖ್ಯವಾದ ಮುನ್ನೂರು ಹಳ್ಳಿಗಳ ನಾಡು : ಪೆರ್ಮ್ಮಾಡಿ ಬೂತಾಯ್ಯಂ ಗಂಗವಾಡಿ ತೊಂಭತ್ತಱುಸಾಸಿರಂ ಬೆಳ್ವೊಲಮೂನೂಱುಮ (ನಾಳು) ಪುಲಿಗೆಱೆಮೂನೂಱುಮನಾಳುತ್ತಿರೆ (ಸೌಇಇ. XI–i, ೩೭-೫; 942); ಶ್ರೀಸೋಭನರಸರು ಹುಲಿಗೆಱೆಮೂನೂಱ ಬೆಳುವಲ ಮೂನೂಱುಂ ಹಲಸಿಗೆ ಪನ್ನಿಚ್ಛಾಸಿರಮುಮನಾಳುತ್ತಮಿರೆ (ಸೌಇಇ. XI–i, ೫೦-೦೨; 1050). [ಪುಲಿ + ಕೆಱೆ]

**ಪುಲಿಗೋಣ** (ನಾ). (ಹುಲಿಯಂತೆ) ಬಲಿಷ್ಠವಾದ ಕೋಣ : ಆಯೆಯತ್ ಪಾಪಂ ಪಗೆ ಮಿಗೆ ತಿಂದುದು ಮೇಪಂತಿರೆ ಪುಲ್ಲ ಸರವಿಯುಂ ಪುಲಿ[ಶಾಕಾಂ. ಬಲ್]ಗೋಣಂ (ಚುಕೋಶ. ೩-೯೫). [ಪುಲಿ + ಕೋಣ$_1$]

**ಪುಲಿಚರ್ಮ**, **ಹುಲಿಚರ್ಮ** (ನಾ). ಹುಲಿಯ ತೊಗಲು ; ವ್ಯಾಘ್ರಚರ್ಮ : ಕೆಂಜೆಡೆಯ ಚಂದ್ರಕಳೆಯಾರಸನೊಪ್ಪುತ್ತಿರಲು ರಂಜಿಸುವ ಪುಲಿಚರ್ಮದಭವನೊಪ್ಪುತ್ತಿರಲು (ಬಸರ. ೧-೩); ಹರಿಣ ಗೋರೋಜನ ಕೃಷ್ಣಾಜಿನ ಪುಲಿಚರ್ಮ ನರಿಗೊಂಬುಗಳನಿತ್ತರೊಲಿದು (ಮೋಹತ. ೦೯-೭೫). **ಹುಲಿಚರ್ಮ:** ದಕ್ಷಿಣದವರಲ್ಲಿ ಕಂಬಳಿಯ ಕೋರೆ, ನಿಲುವಂಗಿ, ಕೊರಳಲ್ಲಿ ಭಂಡಾರ ಇಡುವ ಹುಲಿಚರ್ಮದ ಚೀಲ . . . ಕೈಯಲ್ಲಿ ಡಮರುಗ, ತ್ರಿಶೂಲ—ಇವು ಮುಖ್ಯವಾದುವು (ಕಜಕ. ೩೮). [ಪುಲಿ+ಚರ್ಮ]

**ಪುಲಿದೊಗಲ್** ‘ಪುಲಿದೋಲ್’ ನೋ.

**ಪುಲಿದೊಗಲು** ‘ಪುಲಿದೋಲ್’ ನೋ.

**ಪುಲಿದೊಡೆಯ** (ನಾ). ವ್ಯಾಘ್ರಾಸುರನನ್ನು ನಾಶಮಾಡಿದವನು; ಶಿವ ·

ಜಾಹ್ನವೀಗಂಗಪ್ರವೃತ್ತಶರನಿಧಿಯುಮನೆಱದರ್ಗೆ ತಪನಿಧಿಯು ಮೆಚ್ಚಿತ್ತ್ರಿ ಮೆಚ್ಚಿದ ಪುಲಿದೊಡೆಯ[ಪಾಠಾಂ. ಮೆಚ್ಚಿದೈ ಪುಲಿತ್ತೊಡೆಯ]ಶರಣಾ (ಶಾಪಾಂ. ೬-೭). [ಪುಲಿ + ತೊಡೆ$_1$ + —ಅ$_7$]

**ಪುಲಿದೊವಲ್** 'ಪುಲಿದೋಲ್' ನೋ.

**ಪುಲಿದೊವಲು** 'ಪುಲಿದೋಲ್' ನೋ.

**ಪುಲಿದೋಲ್, ಪುಲಿದೊಗಲ್, ಪುಲಿದೊಗಲು, ಪುಲಿದೊವಲ್, ಪುಲಿದೊವಲು, ಹುಲಿದೊಗಲು, ಹುಲಿದೊವಲು** (ನಾ). = ಪುಲಿಚರ್ಮ : ಮಾರುಳೊಡನಾಡುವಂ ಮಸಣದೊಳ್ಪಡುವಂ ಪುಲಿದೋಲನುಟ್ಟು ಭೀಕರಕರಿಚರ್ಮಮಂ ಪೊದೆವಂ (ಸಮಕ. ೧-೬೨). **ಪುಲಿದೊಗಲ್ :** ಪ್ರಭುಮಾಕೂಲದಂಕಿರ್ವ ಪುಲಿದೊಗಲಿಂದೊಪ್ಪಿ ಪಶುಪತಿ ಬಸವನ ಮನದ ಮೊನೆಯೊಳೊಪ್ಪೆ ಮೂರ್ತಿಗೊಂಡು (ಬಸರ. ೪-೨೦). **ಪುಲಿದೊಗಲು :** ಪುಲಿದೊಗಲು ಕೆಂಜೆಡೆಯು ಕೇವಣದಿಂದುಫಣಿಪತಿಯು . . . ಅಭಯದ ವರದಕರಪರಿಕಲಿತನೆಸೆದನು ಶಂಭು ಸದ್ಯೋಜಾತ ವಸ್ತ್ರದಲಿ (ಶುವ್ಯಾಕ. ೬-೬೪); ಕಳದರೀ ಚಂಡಾಂಶುವಂಶೋಜ್ವಲರು ಓಳಿಕಾ ಹಿಮಸಮಯುವನು ಪುಲಿದೊಗಲ ಹರಿಣಾಜಿನದ ಹಾಸಿಕೆಯ ಹೊದೆಪುಲಿ (ಕೊರಣಾ. ೩-೨-೩). **ಪುಲಿದೊವಲ್ :** ಉಡುವೊಡೆ ಸಂತತಂ ಪುಲಿದೊವಲ್ ನಿಮಗಲ್ಲದೊಡಾ ದಿಗಂಬರಂ ಪಡುವೊಡೆ ರುದ್ರಭೂಮಿ ನಿಮಗಲ್ಲದೊಡಾ ನಿಗಮೋತ್ತಮಾಂಗಂ (ಶಂಪಾಕ. ೨೦); ಪುಲಿದೊವಲ ಜೋಗವಟ್ಟಿಗೆ . . . ಮಾಯುವ ಕುಂಚಂ ನೆಲನನಲೆವುದಿಗೆ ರಂಜಿಸೆ ಸಲವಿಂ ಮಾಮಾವಿಯುಯ್ದುದಂ ನೃಪಸಭೆಯಂ (ದಕಶು. ೬-೦೩೦); ಪುಲಿದೊವಲಂ ಗಜದಜಿನಮನೆಲೆ ನೀನುಡದಿರ್ಪೆಂದು ಬಿಡಿಸುತೆ ಮೃಡನಂ ಸುಲಲಿತದಿವ್ಯಾಂಬರವಂ ಸಲಿದುಡುಸುವ ದೂಸಿಗರ್ ಕರಂ ನೆಲಸಿರ್ಪರ್ (ರಾಜಶೇ. ೨-೯೬). **ಪುಲಿದೊವಲು :** ಪೂಸಿದ ವಿಭೂತಿ ಕಯ್ಯಕ್ಕಳು ಪಾತ್ರಯೋಗಜೆಡೆ ಭಾಸುರದ ಪುಲಿದೊವಲು ರಾಕಳಂ ಚೆಲುವ ನಡೆ ಎಸೆವ ಭಕ್ತೌಕ ನೀಷಮುಮಾನೊಪ್ಪೆ ಕೈಕೊಂಡು (ಶರುರ. ದೇ. ೦೦-೦೦); **ತೊಟ್ಟ** ಬಿಳಿಯ ಜೋಡು ಮೆಯ್ಯಾಣ್ಮ ಬರಹದೊಳುಟ್ಟ ಕಾಸೆಯ ಪುಲಿದೊವಲು ಮುಟ್ಟೆ ಗಜಾಸುರನೊಳು ಕಾದಿ ಕೆಡವುತ ಕಟ್ಟಾಳು ಹರನಂತೆ ಮೆಱದ (ಜರ್ಜತ. ೬-೦೦೩). **ಹುಲಿದೊಗಲು :** ಸನ್ಯಾಸಿಯು . . . ನೆಲದ ಮೇಲೆ ತನ್ನ ಹುಲಿದೊಗಲು ಹಾಸಿ ಗಂಟು ತಲೆದಿಂಬಿಗೆ ಇಟ್ಟುಕೊಂಡು . . . ಅಡ್ಡಾದನು (ಮು.ರಾ ೪-೦೩೦). **ಹುಲಿದೊವಲು :** ಹುಲಿದೊವಲನುಟ್ಟು ಮುಂಡಿಗೆದರಿದ ಉನ್ಮಾದಮೂರ್ತಿ ಅರೆವುಬ್ಬಿನಲ್ಲಿ ಮೂಡಿ ಅಭಿನಯಿಸುತ್ತಾನೆ (ಶಾಂಚಿ. ೦೫-೦).

**ಪುಲಿದೊವಲುಡೆ**=ಹುಲಿಚರ್ಮದ ಉಡುಗೆ : ಪುಲಿದೊವಲುಡೆ ಭಸಿತಂ ಕುಂಡಲಮುಗ್ರತ್ರಿಶೂಲ ಡಮರುಗ ಕಿರುಜೆಡೆಗಳ್ ಸಲೆ ಮೆಱೆವ ರುದ್ರನಂ ಕಂಡೊಲವೆ ವಿಗಲ್ ಚರಣಕೆಱಗಿದಂ ಸಿರಿಯಾಳಂ (ತ್ರಿಪುತ. ೦೦-೯೩). **ಪುಲಿದೊವಲುಡೆಯ**=ಹುಲಿಯ ಚರ್ಮವನ್ನು ಉಟ್ಟಿರುವವನು ; ಶಿವ : ಪುಲಿದೊವಲುಡೆಯಂಗೆ ಪುನರಪಿ ರತ್ನಪ್ರಜ್ವಲದಾರತಿಗಳ ಬೆಳಗಿ ಸಲಿಲಜ ಮಂದಾರ ಮಲ್ಲಿಗೆ ಪುಷ್ಪಾಂಜಲಿಯ ಮಾಡಿದ ಮಹೋತ್ಸವದಿ (ಪೊಚಚಕ. ೨೦-೯೩). [ಪುಲಿ + ತೋಲ್$^1_1$]

**ಪುಲಿನ, ಪುಳಿನ** (ನಾ). ೧. ಮರಳಿನಿಂದ ಕೂಡಿದ ನದಿ, ಸಮುದ್ರ ಮುಂತಾದುವುಗಳ ತಟ, —ದಂಡೆ. ೨. ನೀರು ಕಡಮೆಯಾದಾಗ ನದಿಯ ಒಡಲಲ್ಲಿ ಅಥವಾ ದಂಡೆಯಲ್ಲಿ ಉಂಟಾಗುವ ಮಣ್ಣಿನ ದ್ವೀಪ ; ಸೈಕತದ್ವೀಪ. ೩. ನದೀತಟ; ನದೀತೀರ. ೪. ಮರಳು. **ಪುಳಿನ :** ೧. "ಸೈಕತಂ ಪುಳಿನಂ ದ್ವೀಪಂ (ಸಿಕತಾ)—ಈ ೩ ಮಳಲ ದೀಣೆ (ದಿಣ್ಣೆ)" (ಶಲಾಮು. ೦೦೦-೯೮); ಕೆಳೆವರ್ಪ ಪುಳಿನಂಗಳೊಳಂ ಕೋಡುವ ಭಾಂಡಿಗೃಹಂಗಳೊಳಂ ವಿಶ್ರಮಿಸಿ ಶಾತವಾತಪಮುಶ್ರಮಮಂ ಕಳೆಯೆ (ಆದಿಪು. ೦೦-೬೩ ವ). ೨. ನೀರೆಂಬ ಸೀರೆಯಂ ಪೆಱಸಾರಿಸುತಂ ಪುಳಿನ ಮೆಂಬ ಜಘನಸ್ಥಳದಿಂ ನಾರಿಯವೊಲ್ ನದಿ ಮೆಱೆಗುಂ ಶಾರದಸಮಯಂ ದಲೆಂಬ ವಿಟಸನ್ನಿಧಿಯೊಳ್ (ಶಾಂತಿಪು. ೪-೬೪). ೩. ಗಂಗಾನದೀಪುಳಿನ ಪರಿಸರಪ್ರದೇಶದೊಳ್ ಮಱದೊಱಗುವೈರಾವತದಂತೆ ಪವಡಿಸಿ (ಶಂಕಪು. ೪-೦೦೦ ವ). ೪. ಪಶ್ಚಿಮಾಂಭೋಧಿಯ ಪುಳಿನಚಯಂ ಬೆಳ್ಪನಾಳ್ದಿರ್ದ ವಾಗಳ್ (ಶಾಪಂಕು. ೦೯೨) ; ಕಣ್ಗೆ ಮುತ್ತಿಟ್ಟುದಿರ್ಕೆಲದಲ್ಲಿ . . . ಧವಳಿಮ ಪುಳಿನರಾಶಿ (ಶ್ರೀಶಾಪೂ. ೦೩೦-೨೨೦). [ಸಂ.]

**ಪುಲಿನಖ, ಹುಲಿನಖ** (ನಾ). ೧. ಹುಲಿಯ ಉಗುರು. ೨. (ಮಕ್ಕಳಿಗೆ ತೊಡಿಸುವ) ಹುಲಿಯುಗುರಿನಿಂದ ಮಾಡಿದ ಅಥವಾ ಹುಲಿಯುಗುರಿನಾಕಾರದ ಒಂದು ಆಭರಣ : ಬಿಂದಿಲರಳೆಲೆ ಗೆಜ್ಜೆಯನ್ನು ಪಾಲ್ಗಡಗ ಪೊಕ್ಕುಳ ಘಂಟೆ ಪುಲಿನಖಮನೂನಕಟಿಸೂತ್ರ ಮಾಗಾಯಿ ಮಣಿಮಯಮುದ್ರೆಗಳ ಬೆರಳ್ಗಳಿಗಮರ್ಚಿ (ಸವಪೋ. ೦೨-೦೬). **ಹುಲಿನಖ :** ೩. ಒಂದು ಬಗೆಯ ಔಷಧೀಸಸ್ಯ ; ಗರುಡಮೂಗಂ : ಹುಲಿನಖ, ಗರುಡಮೂಗು (ಪ್ರಸಿನಿ. ೩೨-೦೦೩೩). [ಪುಲಿ + ನಖ]

**ಪುಲಿನಾಡು** (ನಾ). ಒಂದು ಊರಿನ ಹೆಸರು : ದೊಸಿ ಅರಸರಾ ಕಳಿ ಪುಲಿನಾಡಮುವತ್ತುಂ ಪಡೆದು ಕೊಟ್ಟೊಡುಂ (ಎಕ. X, ಮುಳಬಾ. ೨೪೯-೯; ಸು. ೩೨೦); ಪುಲಿನಾಡು ರಾಸಮಯ್ಯ ಹಟಿಯೂರರಸರಂ ದಣ್ಣುವೆಟ್ಟೊಡೆ (ಎಕ. X, ಶ್ರೀನಿವಾ. ೬೫. ೪; ಸು. ೨೦೦೧). [ಪುಲಿ+ನಾಡು]

**ಪುಲಿಪಟು** 'ಪುಲಿವೆಟ್ಟು' ನೋ.

**ಪುಲಿಮುಖ, ಹುಲಿಮುಖ** (ನಾ). ಕೋಟೆಯ ಹೆಬ್ಬಾಗಿಲು,—ಪ್ರವೇಶದ್ವಾರ ; ೨ ಕೋಟೆಯ ಹೆಬ್ಬಾಗಿಲಿನಲ್ಲಿ ಸಾಮಾನ್ಯವಾಗಿ ಹುಲಿಯ ಮುಖದ ಆಕಾರದಲ್ಲಿರುವ ಒಂದು ಶಿಲ್ಪದ ಮಾದರಿ : ಪುಲಿಮುಖ ಜೋರ್ಕಂಡಿ ದಿಡ್ಡಿಗಳಿಂದ ಪೊಳಲ ನಾಲ್ದೆಸೆಯೊಳಲೆವುತ ಲಲಿತಗೋಪುರ ತೋರಣಗಳೆಸೆವ (ಜೀವಂಧಸಾಂ. ೦-೪೦); ಗಜದ ಭಾರಿಯಂ ಮಾಪುತರ್ ಪುಲಿಮುಖ[ಪಾಠಾಂ. ಪೊಗ]ಕೆ ನೂಂಕಿದರ್ (ಕಬಿಪು. ೪೨-೨೬); ಆಗಸವ ಸೋಂಕಿ ಸನ್ನುತಂ ಪಬ್ಬುವ ಪತಾಕೆ ಮುರಿಮುರಿದ ಕೊತ್ತಳ ಪುಲಿಮುಖಗಳಿಂದ (ಲುಕ್ಯಾಂಪ. ೩-೩). **ಹುಲಿಮುಖ :** ದುರ್ಗದ ಹಿರಿಯ ಹುಲಿಮುಖದೊಳಗೆ ಹೊಯ್ದರು ಬೇಹ ಬೇಹವರ (ಶುವ್ಯಾಕ. ೭ ೩೦); ಬಲಿದುದನಿತಕೆ ಕೋಟೆ ಪರಿಘಾವಳಿಯ ರಚನೆಯೊಲಾಳುವೇರಿಯ ಹುಲಿಮುಖದ ಮುಗಿಲಟ್ಟಳೆಯ ಸಾಲುಗಳ ಸೊಗಸಿನಲಿ (ಕೊರಣಾ. ೦-೦೩-೨); ಮಲೆತಿ: ಪುರಕೈತಹ ರಿಪುನೃಪಪಶುಕುಲಸಮೂಹವನಗಿದುಗುಳ್ದ ಸಲೆ ಶಾರ್ದೂಲವದನವೆನೆ ಹುಲಿಮುಖ ಬಲುಭಯಾಂಕುರವ ಬೀಱುವುವು (ಕುವಪ. ೨-೬೪). [ಪುಲಿ + ಮುಖ]

**ಪುಲಿವೊಗ, ಹುಲಿವೊಗ** (ನಾ). ೧. ಹುಲಿಯ ಬಾಯಿ : ಆ ಪುರದ ಮಿಸುಪ ಹುಲಿವೊಗವೊಪ್ಪಿದುದರಿಧರಣೀಪಾಲಪಶುಗಳಂ ನುಂಗುವ ಪುಲಿವೊಗವೆಂಬಂತೆ (ಶಮುಕಾ. ೦-೩೪). ೨. =ಪುಲಿಮುಖ : ಗೊಂಟು ಗೊಂಟಿನೊಳ್ ಬಳಸಿದ ಕೊತ್ತಳಂ ಸೊಗಯಿಪಾಳ್ವೇರಿ ಡೆಂಕಣಿ ಸಾರಮಾರಿ ಯಗ್ಗಳಿಸುವ ಗೋಪುರಂ ಪುಲಿವೊಗಂ ಮೆಱೆಗುಂ ಪುರದೊಳ್ ನಿರಂತರಂ (ನಿಚಿ. ೨-೬೮); ಅಗಳಾಳ್ವೇರಿ ಕೋಟೆಕೊತ್ತಳ ನೆಲದಿಡ್ಡಿ . . . ಪಲ ಪುಲಿವೊಗಗಳನನುಮಾಡಿಸಿದನು (ಕುರಾಸಾಂ. ೩೭-೩೦); ಸಮಸ್ತಕಾರ್ಯಕುಶಲರಿಂ ಕೋಟೆ ಕೊತ್ತಳ ಮುಗಿಲಟ್ಟಣೆ ಬುರುಜು ಪುಲಿವೊಗ ಡೆಂಕಣಿಯಗಳಾಳ್ವೇರಿ ಪಿಳ್ಳಗುಸೆ ದಿಡ್ಡಿವೊಳಗಿದಂಗಳ್ ನಿರ್ಮಿತವಾಗಲೊಡನೆ (ಶಾರಾಸ್ಕ. ೦-೪-೬೩ವ). **ಹುಲಿವೊಗ :** ೨. ಕೋಂಟೆ ಹೋಯ್ತೀಳೀಯೆನುತಿರದೆ ಕುಲಿಲಿಯೆಂದಾರಿ ಕೊಬ್ಬಿಱದು ಹುಲಿವೊಗದೊಳಗೆ ಹೊಗಲೊಡನೆ ಸೂತ್ರವಿಡಿದು (ಸಮ್ಯಕ್. ೬-೩೬) ; ತನ್ನದಿರ್ವರೆ ಪಿಡಿದು ಉಳಿದು ಹೊಯ್ಯಿ ವೆನೆಂಬ ರೌದ್ರದಿಂ ಕೋಟೆಯ ಹುಲಿವೊಗ

ಕಣ್ಗೆ ತನ್ನಿದಿರ್ವರೆ ರಂಜಿಸಿತು (ಪೋಪಕ. ೩-೯). [ಪುಲಿ+ಮೊಗ]

**ಪುಲಿಯಣ್ಣ** (ನಾ). ಒಬ್ಬಾತನ ಹೆಸರು : ಆವುಳನ್ವಯಾರುಂ ಕಣ್ಣ್ಬ ಕಳ್ಳಿಯುಂ ಪಾಣಿದರುಂ ಅಕ್ಕಸಾಲೆಯುರಾ ಪುಲಿಯಣ್ಣಂಗಳು ಎರೆಕಾಡನಳ ದೊರ್ (ಸೌಇ. IX–i, ೯೭–೧೫; ಸು. ೯೫೮ಯು ೩೩). [ಪುಲಿ + ಅಣ್ಣ$_1$]

**ಪುಲಿಯುಂಡಿಗೆ** (ನಾ). ಪುಲಿಯ ಚಿತ್ರವುಳ್ಳ ಮುದ್ರೆ : ಅವನಿನ್ದಿತ್ರಣ ತತ್ಕುಲದವನೀಶಗ್ರಾಗ್ರಿಯುನು ಹೊಯ್ಸಳಲಕ್ಷ್ಮಿಂ ಮತ್ತಂತಪರ್ಗೆ ಪುಲಿಯುಣ್ಡಿಗೆಯುಮಾದಿ(ರ)ವಿಜಾಜ್ಞ್ಯಾತೆಯೆನಿಪ ಶಶಪುರಂಬಿಕೆಯೊಲವಿಂ (ಎಕ. XI, ಜಕ್ಕ್ರಮ. ೬೯–೦೦; 1214 ?). [ಪುಲಿ+ಉಂಡಿಗೆ$_1$]

**ಪುಲಿಯುಗುರ್**, ಪುಲಿಯುಗುರು, ಹುಲಿಯುಗುರ್, ಹುಲಿಯುಗುರು (ನಾ). ೧. ಹುಲಿಯ ಪಂಜದ ಉಗುರು ; ವ್ಯಾಘ್ರನಖ : ಪುಲಿಯುಗುರೆಯ್ದೆ ನಾಂಟಲುರವಂ ಪುಲಿದೆಯ್ದೆ ಪುಳಿಂದನೊತ್ತೆ ಗಂಟಲನದು ಪಾಯೆ (ಪುಭ್ಭಕಾ. ೩-೩೧೯). ೨. (ಮಕ್ಕಳಿಗೆ ತೊಡಿಸುವ) ಹುಲಿಯ ಉಗುರಿನಿಂದ ಮಾಡಿದ ಅಥವಾ ಹುಲಿಯ ಉಗುರಿನಾಕಾರದ ಒಂದು ಆಭರಣ : ಅರಳೆಲೆ ಪೊಂಗುನೂಲ್ ಪುಲಿಯುಗುರ್ ಮಣಿಕಿಂಕಿಣಿ ಗೆಜ್ಜೆ . . . ಮನಂಗೊಳೆ ಭುವನೈಕವಂಡನನೋಳೆನಿಸೆ ದಿರ್ದುದೊ ಬಾಲಮಂಡನಂ (ಅಜಿತ. ೩-೬೨); ಅರಳೆಲೆ ಮುತ್ತಿನಾಯ್ ಪುಲಿಯುಗುರ್ ನವರತ್ನದ ಕಂಕಣಂಗಳ್ . . . ಒಪ್ಪಿರೆ ಚಿತ್ರವಾತ್ಯಗಳ್ಗೆ ಪಡೆದರ್ ತನಯರ್ ನಯನೋತ್ಸವಂಗಳಂ (ಶಂಕರಮಾ. ೩-೦೯೦); ಒಡವುಟ್ಟಿದ ಕೌಸ್ತುಭಮಿರ್ಪೆಡೆಗಂ ದಾಯಾದನಪ್ಪೆನೆನ್ನಗಮೆಂದಂದುಡು ಪತಿಳೆ ನೆಲೆಸಿತ್ತೆನೆ ಪೊಡೆಯರಲನ ಕೊರಲ ಪುಲಿಯುಗುರ್ ಕರಮೆಸೆಗುಂ (ಜಗಂ. ೩-೯೯). **ಪುಲಿಯುಗುರು** : ೨. ಬಾಲಶಶಾಂಕನಂದದ ಪುಲಿಯುಗುರನು ಥಾಳಿಪ ಬಂದಿ ರಂಜಿಸಿತು (ಅಂಜನ. ೯–೪೪); ಅರಳೆಲೆ ಪೊಗಾಯ್ದುಪುಲಿಯುಗುರೊಲಿಯುಂತ ಚರಣದಂದುಗೆ ಗೆಜ್ಜೆಗಳು ಕರದ ಕಂಕಣಗಳು ಘಲಿಘಲಿರೆನಲಾಡಿ ಬರುವಳು ತಂದೆಯ ಬಳಿಗೆ (ಕರ್ಣಾಕ. ೨೦೬). **ಹುಲಿಯುಗುರ್** : ೨. ಬಳೆದೋಳ ಭಾಗ್ಯಸಿಥಿ ಹುಲಿಯುಗುರ ಸುಲಭಗಂ ನಳನಳಿಪ ಲಾವಣ್ಯದಿಂದೆಸೆವ ಬಣ್ಣಗಂ (ಜಸರ. ೦–೦೫೦). **ಹುಲಿಯುಗುರು** : ೧. ನಮ್ಮ ದೇಶದ ಜನರು . . . ಹುಲಿಯುಗುರಿನ ಆಭರಣ ಮಾಡಿಸಿ ಮಕ್ಕಳ ಕೊರಳೊಳಗೆ ಹಾಕುತ್ತಾರೆ (ಮುಂಬಯಿ. ೯–೩೭); ತನ್ನ ಮೈಯೆಲ್ಲ ಹುಲಿಯುಗುರುಗಳ ಗಾಯದಿಂದ ಕೆಂಪಾಗಿದೆ (ಕಾಮೋರು. ೨೯೩). ೨. ಕರದಲ್ಲಿ ಕಂಣ ಬೆರಳಲ್ಲಿ ಉಂಗುರ ಕೊರಳಲ್ಲಿ ಹಾಕಿದ ಹುಲಿಯುಗುರವು ಅರಳೆಲೆ ಕನಕಕುಂಡಲ ಕಾಲಲಂದುಗೆ ಉರಗಶಯನ ಬಂದ ಕಾಣಿರೇನೆ (ಭಕಂದ. ೦–೦೯೦–೨); ಆತ್ತಿನಲ್ಲಿ ಅಡ್ಡಿಕೆ . . . ಹನುಮಾನ ತಾಳಿ, ಹುಲಿಯುಗುರು (ಮಲ್ಲ. ೯೦). ೩. ಸುಗಂಧವುಳ್ಳ ಒಂದು ಬಗೆಯ ಔಷಧೀ ಸಸ್ಯ : ಗಂಧಕ, ಹುಲಿಯುಗುರು, ಬಜೆ . . . ಪದಕ, ಎಣ್ಣೆ, ಅಜಮೂತ್ರದಲ್ಲಿ ಬೆರಸಿ ಅಟ್ಟು ನಸ್ಯಂಗೈಯೆ ಪೀನಸ ಮಾಣ್ಗುಂ (ಶಿವ್ಯ. ೬೯).

**ಪುಲಿಯುಗುರ ಪಟ್ಟು** = ಒಂದು ಬಗೆಯ ರೇಷ್ಮೆ ವಸ್ತ್ರ : ನೇತ್ರಾವಳಿಯು . . . ಗಜದಾಳ ಪುಲಿಯುಗುರ ಪಟ್ಟೆಂದ್ರರಾಗಂ ಲಲಿತವೀಣಾವಳಿಯು (ಜಸಖ. ೦೦–೨೫). [ಪುಲಿ + ಉಗುರ್]

**ಪುಲಿಯುಗುರು** ‘ ಪುಲಿಯುಗುರ್ ’ ನೋ.

**ಪುಲಿಯೂಟು** ‘ ಪುಲಿವೆಟ್ಟು ’ ನೋ.

**ಪುಲಿವಟ** ‘ ಪುಲಿವೆಟ್ಟು ’ ನೋ.

**ಪುಲಿವಟೆ** ‘ ಪುಲಿವೆಟ್ಟು ’ ನೋ.

**ಪುಲಿವಟ್ಟು** (ನಾ). ಒಂದು ಊರಿನ ಹೆಸರು : ಮೂಗುನ್ದವನ್ನೆರಡು ಪುಲಿವಟ್ಟುವನ್ನೆರಡುಂ ಕಲ್ವತ್ತಿಯೊಟುಂ ಸಾಸ್ಸಿರ್ಗೆಸಾಯಿರಮುಮಂ ದುಷ್ಟಾಟವಿಕನಿರ್ಮೂಳನಂಮಾಡಿ ಸುಖದಿಂ ರಾಜ್ಯಂಗೆಯ್ಯುತ್ತಿಪ್ಪ (ಎಕ. VIII, ಸೊರಬ. ೯೭೭–೨೩ ; 991). [ಪುಲಿ + ಪಟ್ಟ$_1$]

**ಪುಲಿವಟ್ಟೆ** ‘ಪುಲ್ಲಿಪಟ್ಟೆ’ ನೋ.

**ಪುಲಿವರೆ** (ಕ್ರಿ). (?) : ಮದಸಂ ಶ್ರೀಮಲ್ಲಿಭಟ್ಟಾರಕನ ವಿಮಳಬೋಧಾನಳಜ್ವಾಳೆಗಳ್ ಸೋಂಕದ ಮುನ್ನಂ ತತ್ರಪೋರಾಶಿಗೆ ಪುಲಿವರೆ[ಹಾಕಾಂ.ರ] ದತ್ತೆಂಬಿನಂ ಬೂದಿಯಾಗಿರ್ಪುದುಮಾಗಳ್ ಮೋದಿಕೊಂಡಳ್ ರತಿ ಮತಿ ಮಚಿದಳ್ ಮೆಯ್ಯನೀಡಾಡಿದಳ್ (ಮಲ್ಲಿಕ. ೦೯–೪೩). ‘ಹುಲಿವರಿ’ ನೋ. [ ? ]

**ಪುಲಿವಲೆ**. ಹುಲಿಬಲೆ (ನಾ). ಒಂದು ಬಗೆಯ ದೊಡ್ಡ ಬಲೆ : ಪುಲಿವಲೆ ಕೊಂಬು ಕಣ್ಣಿ ವಿಡಿಗಣ್ಣಿ ತೊವಲ್ವಲೆ ಸಿಕ್ಕು ದಕ್ಕು ಪೆರ್ವೊಲವಲೆ ಸಂದ ಹಾಸುವಲೆ ನೀರ್ವಲೆ ಮೇಲ್ವಲೆ . . . ಎಂಬಿನಿತಂ ಪೊಚಿಗಟ್ಟಿ ಕಾನನಸ್ಥಲದೊಳಗಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ರಕಕು. ೨–೦೦೫). **ಹುಲಿಬಲೆ** : ಅದಟಿಗೊಳಗಡಗಿಪ್ಪರೈವರು ಕಳ್ಳರು ಒಪ್ಪಸರಿಬರೆಯುವನೊಬ್ಬ ಹುಲಿಬಲೆಯುವ (ಕಲ್ಯಾಕಾಂ. ೦೦೯–೦೬). [ ಪುಲಿ + ಬಲೆ$_1$ ]

**ಪುಲಿವಾಲ್** (ನಾ). ಹುಲಿಯ ಹಾಲು : ಪುಲಿವಾಲಂ ಕುಡಿದಲ್ಲದೆ ಕಲಿಯಾಗಂ ಪುತ್ರನ್ (ಎಕ. XI, ದಾವಣ. ೪೩–೨೭ ; 1164); ಪುಲಿವಾಲಂ ನಲಿದುಣ್ಣ ಶಕ್ತಿ (ಎಇ. XIV, ೨೭೨–೨೯ ; 1173). [ ಪುಲಿ + ಪಾಲ್$_1$ ]

**ಪುಲಿವಾಲ** (ನಾ). ಹುಲಿಯ ಬಾಲ : ಪುದಿದು ತಳಿರುಡೆ ಸುರಗಿ ಪುಲಿವಾಲದಲಿ ವಿರಚಿಸಿದ ಹದುರುಗಂಟಣ ಖಡೆಯ ಪೆಂಡೆಯದೊದವಿನಿಂ . . . ಬಲಿವಿಡಿದಿಹನು ಬಿಯದರು (ಶಾಕ್ಯಾ. ೫-೭). [ ಪುಲಿ + ಬಾಲ ]

**ಪುಲಿವುತು** (ನಾ). ಒಂದು ಸ್ಥಳದ ಹೆಸರು : ಪೂರ್ವೋತ್ತರದಿಗ್ಭಾಗೇ ಸಿರಿಗಾಳಗ್ರಾಮಸೀಮ್ನಿ ಪುಲಿವುತು ತತ ಅಗತ್ಯ ಕವ್ವಸುರಿಗೊಳಂ ತತಃ ಪೆಬ್ಬುರ್ತು (ಎಕ. XI, ದಾವಣ. ೬೬–೪೦ ; 694). [ ? ]

**ಪುಲಿವೆಟ್ಟು**, ಪುಲಿಪಟು, ಪುಲಿಯೂಟಂ, ಪುಲಿವಟ, ಪುಲಿವಟೆ, ಪುಲಿವೇಟು, ಪುಲ್ಲಿವೆಟು, ಪುಲ್ಲಿವೇಟಂ (ನಾ). ದೇವಾಲಯಂ, ಕೆರೆ, ಕಟ್ಟೆ ಮುಂತಾದುವುಗಳ ಜೀರ್ಣೋದ್ಧಾರ ಇತ್ಯಾದಿ ಸಾರ್ವಜನಿಕ ಕಾರ್ಯಗಳಿಗಾಗಿ ಉದಾರಿಗಳಿಂದ ದತ್ತಿಯಾಗಿ ಬಂದು, (ಬಡ್ಡಿಯ ಉತ್ಪನ್ನವನ್ನು ಉಪಯೋಗಿಸಿಕೊಳ್ಳಬಹುದಾದ) ಕೊಡಿಟ್ಟ ನಿಧಿ,-ಸಂಪತ್ತು,-ಠೇವಣಾತಿ : ೧೦೦ಜುವರಹಂನು ಕೊಟ್ಟು ದೇವರ ಗುಡಿಯಲ್ಲೂ ಮಾಡಿಸಿದ ಪುಲಿವೆಟ್ಟು (ಸೌಇ. IX-ii, ೫೩೩–೯ ; 1534). **ಪುಲಿಪಟು**: ಶ್ರೀವಿಠಲದೇವರ ಅಮೃತಪಡಿಗೆ ಪುಲಿಪಟು ನೈವೇದ್ಯಕೆ . . . ಧಾರಾಗ್ರಹೀತವಾಗಿ ಬಂದ ತೆಕ್ಕಲಕೋಟಿಸೀಮೆಯೊಳಗಣ ನಿಟೂರಗ್ರಾಮ ೧ (ಸೌಇ. IX–ii, ೩೦೭–೨ ; 1543). **ಪುಲಿಯೂಟು** : ನಮ್ಮ ಧರ್ಮವಾಗಿ ಸ್ವಾಮಿಯ ಸನ್ನಿಧಿಯಲೂ ಪುಲಿಯೂಟಾಗಿ ನಡವ ಕಟ್ಟಳೆಯ ವಿವರ (ಎಕ. XIV, ಶ್ರೀರಂಗ. ೨೫೬–೭ ; 1544); ಶ್ರೀಚಲಪತಿರಾಯರ ಸನ್ನಿಧಿಯಲಿ ನಡವ ಪುಲಿಯೂಟ ಕಟ್ಟಳೆಯ ವಿವರ (ಎಕ.XIV, ಶ್ರೀರಂಗ. ೨೬೦–೫ ; 1551). **ಪುಲಿವಟ** : ಪುಲಿವಟವಾಗಿ ಶ್ರೀವಿಠಲದೇವರ ಭಂಡಾರಕ್ಕೆ ಸಮರ್ಪಿಸ್ತಧು ಘಟವರಹಯಿಂನೂಋ (ಸೌಇ. IV, ೨೭೪–೦೫; 1530). **ಪುಲಿವಟೆ** : ಶ್ರೀವಿಠಲದೇವರ ಭಂಡಾರಕೆ ಪುಲಿವಟೆ ಆಗಿ ಸಮರ್ಪಿಸಿದ ರೊಕ್ಕ ವರಹ ಗ 100 ಋ (ಸೌಇ. IX–ii, ೫೩೩–೩ ; 1534). **ಪುಲಿವೇಟು** : ಶ್ರೀವಿಠಲದೇವರಿಗೆ . . . ಪುಲಿವೇಟುಗಳಿಗೆ ಸಮರ್ಪ್ಪಿಸಿದ ಗದೆಯ ಬಳಿಯಲೂ ಸಮರ್ಪಿಸಿದ ಬೀಜವರಿ ಗದ್ದೆ (ಸೌಇ. IV, ೨೭೩–೫; 1561). **ಪುಲ್ಲಿವೆಟು** : ಯಿಾ ಪುಲ್ಲಿವೆಟು ನಯಿವೇದ್ಯವಾದ ಖಜಾಯ ಪ್ರಸಾದ ಪಲ್ಲ ನಯಿವೇದ್ಯ ಶ್ರೀವಿಠಲದೇವರ ಭಂಡಾರದವರಿಗೆ ಪ[ಕ್ಕೆ] ಪಾಲು (ಸೌಇ. IV, ೨೭೩–೭ ; 1561). **ಪುಲ್ಲಿವೇಟು** : ಉದಗಿರಿ ತಿಂಮರಾಜಯ್ಯನವರು ಮಾಡಿಸಿದ ಪುಲ್ಲಿವೇಟು (ಸೌಇ. IV,

೨೭೩-೪; 1561). 'ಪುದಿವಟ್ಟು' ಪರಾ. [ದೇ.॥ ತಮಿ. ಪೊಲಿವೀಟು, ಪೂಲಿವೇಟು, ಪೂಲಿಯಾಟ್ಟು; ತೆಲು. ಪೊಲಿಪೆಟ್ಟು]

**ಪುಲಿವೇಟು** 'ಪುಲಿವೆಟ್ಟು' ನೋ.

**ಪುಲಿಸವ್ಮು** (ನಾ). ಹುಲಿಯ ತೊಗಲು : ಪುಲಿಸವ್ಮುದುಡುಗೆಯ ತೆಗೆದ ನೇಣುದ ಕೀಳ ಬಲಿಸುತ ಶಿವಪೂಜೆಗೆಯ್ದು . . . ಹೊಜವಟ್ಟ ಕಲಿಗಳ ದೇವ ಕಾಳೆಗಕೆ (ವೀರಚರ. ೧೦-೪); ಜನನಿಯುಳ್ಳೊಡೆ ಸರ್ವನಾಭರಣಂಗಳಂ ತಲೆಮಾಲೆಯಂ ತನಯನಂ ತೊಡಲೀವಳೇ . . . ಕರಿಕೃತ್ತಿಯುಂ ಪುಲಿಸವ್ಮುಮುಂ ತನುಗೆ ತಾಂ ಪೊದೆವಂತೆ ಮಾಳ್ಪಳೆ (ವೃಷಬ. ೯-೦೦೪).

[ಪುಲಿ+ಸವ್ಮು₂ (<ಚವ್ಮು)]

**ಪುಲಿಸು**, ಪುಲುಸು, ಹುಲಸು, ಹುಲಿಸ್ಸು₁, ಹುಲುಸು (ನಾ). ೧. (ಪೈರಿನ) ಹೆಚ್ಚಳ; ಸಮೃದ್ಧಿ; ಸೊಂಪು : ಧರೆಯೊಳೆ ಸಜ್ಜನಪ್ರತತಿ ಬೆಂಬುರು ಬಲ್ಮಸಿಸಬೆಮುಂ ನರೇಂದ್ರರ ಮನೆದೀಪದಂತೆ ಧನರಾಸಿ ದಿನಾ ಪುಲಿಸಿಂದಲೀಯದೇ (?) (ಮಲ್ಲಿಕಾ. ೦ ೩೪); ಓರಿವಂಚಿಯೋಗಿ ಕಿಡು ಕಿರ್ಪುರಾಗರ್ದೆಯಸೊಲ್ದು ಪೊಕ್ಕೊಡದು ಫಲಮಕ್ಕುಂ ನಿರುತಂ ಪುಲಿಸಪ್ಪುದು (ಕೃಷಿ. ೦೪-೬); ಫಳಿಕುಂ ತ್ರಿವರ್ಗಮುಂ ಕೈಗೊಳಿಕುಂ ತತ್ಫಾಧನಂಗಳುಂ ಸಂಗತಿಯಿಂ ಶಿಖಿಪಲ್ಕೆಂದೀ ರೀತಿಯನಳಮ ಕಡೆಗಣಿಸಿತಲ್ತೆ ಬೆಳೆಸುಂ ಪುಲಿಸುಂ (ಕಳಾ. ೪-೭೯). ೨. ಒಕ್ಕದೆ ಇರುವ ತೆನೆ : ಪುಲಿಸಂ ಪೊತ್ತಾತನೆ ಕಳದಲು ಪಡುವುದು ಭತ್ತಮುಳಿತ ಯುಪ್ಪಿನಮತ್ತಂ ತೊಲಗಲು ಸಲ್ಲದು (ಕಮಹ. ಅಮವಾರ. I, ೬೮೨-೯೩). **ಪುಲುಸು** : ೧. ಅರಿಸಿಂದುಬರುಬುವರ್ ಮಬೆಯೆಂಬ ವರುಮಾನ ಪುಲುಸುಗುಂದಿದುದು (ಕುಜೇ. ೦-೨-೪). **ಹುಲಸು** : ೧. ಬೆಳಸು ಹುಲಸಾತ ಜಗದಾಗ (ಜನಗೀ. ೭೩); ಹರಿಯುವ ಹೊಳೆಗೊಂದು ಕಟ್ಟೆಯ ವಿರಚಿಸಿ ಕೊಡದರೆ ಕೃಷಿಕರ್ಮ ಹುಲಸು (ಇಂಜಾಹ. ೦೬೮.೭೭). **ಹುಲಿಸ್ಸು₁** : ೧. ಅಧರಕ್ಷತವಂ . . . ಚುಂಬನವಳಯಂಗಳಂ ಪ್ರತಿಸಲಚ್ಚಣದಿಂ ಪ್ರತಿಯಿಟ್ಟು ನೋಡಿ ಕಾಮಿನಿ ಹುಲಿ[ಪಾಠಾಂ. ೧] ಸಾದ ಬೇಟವೆಳಸಂ ಕಡು ಸಂತಸದಂತಮೆಯ್ದಿದಳ್ (ಸೂಕ್ತಿಸು. ೦೪-೧೪); ಕಾಲನ ಹೆಬ್ಬೆಳಸು ಹುಲಿ[ಪಾಠಾಂ. ಲು] ಸಾಯ್ತು (ಕುಮಾರಾ. ೪-೦೨); ಮಾರಿಯ ಹೆಬ್ಬೆಳಸು ಹುಲಿಸಾಗಿ ಹಸರಿಸಿದ ಕಣನೆನಿಸಿ ಕಾಣಿಸಿತು ಸಮರಾಂಗಣವು (ಐಕ್ಯರಾ. ೨೨-೦೬). **ಹುಲುಸು** : ೧. ಫಲಪುಷ್ಪಗಳ ಬೆಳಸು ಹುಲುಸಾಯ್ತು (ರೀಇಕ. ೨ ೦೪); ಭಾರತದಲ್ಲಿ ಅನುಭಾವವಿದ್ಯೆಯು ಬಲು ಹುಲುಸಾಗಿ ಬೆಳೆಯಿತು (ತತ್ವಶಾ. ೫೩೩). ೨. ಒಕ್ಕಲಿಗನು ಕಣದ ಹುಲುಸನ್ನು ದನದ ಸಗಣಿಯ ಒಡ ಹೊರಗೆ ಒಗೆಯಬಾರದು (ತತ್ವಶಾ. ೦೫೩).

[ದೇ.॥ ತಮಿ. ಪೊಲಿಚ್ಚಿ=ಲಾಭ; ಮಲ. ಪೊಲಿಸ = ಬಡ್ಡಿಯಾಗಿ ಕೊಡುವ ಭತ್ತ; ತುಳು. ಪೊಲ್ಲುಸು=ಲಾಭ]

**ಪುಲಿಸುದಳೆ** (ಕ್ರಿ). ಸಮೃದ್ಧಿಯನ್ನು ಹೊಂದು; ಹುಲುಸಾಗಿ ಬೆಳೆ; ಸೊಂಪಾಗಿ ಬೆಳೆ : ಈಗಳ್ ಕೆಮ್ಗಲ್ ಪುಲಿಸುದಳೆದತ್ತೀಗಳಗ್ಗಂ ಪೊಡಮಟ್ಟತ್ತೀಗಳ್ ಸರ್ವಂ ಸಫಲಮೆನಿಸಿತ್ತೀಗಳೆಯ್ದಲ್ಲ ಗೆಲ್ಲಂ (ಕಳಾ. ೩-೦೦೦).

[ಪುಲಿಸು+ತಳೆ₁]

**ಪುಲು** 'ಪುಲ್' ನೋ.

**ಪುಲುಗರ್ಚು** 'ಪುಲ್ಗರ್ಚು' ನೋ.

**ಪುಲುಗುಡಿತೆ**, ಹುಲುಗುಡಿತೆ (ನಾ). ಒಂದು ಬಗೆಯ ಕೀಟ (?) : ವಿಲಸನ್ಮಂತ್ರಯುತಂ ಕೂದಲ ನೇಣಿಂ ಮಂಸಲ ಮಂಥಮಂ ಪೂರೆ ಪುದುಲೂಖಲಮಂ ಮೇಣ್ ಬಾಸುಬ್ಬಿಳ್ ಪುಲುಗುಡಿತೆಯ ಮೆಯ್ಯೊಳೇ ಬಿಗಿಂ ತತ್ಕ್ಷಣದಿಂ (ಬಜಾರ. ೦೬-೯೨). **ಹುಲುಗುಡಿತೆ** : ಒಸದೀ ಮಂತ್ರದೊಳಂ ಮಂತ್ರಿಸಿಕೊಂಡಿಡೆ ಭಸ್ಮಮಂ ಕವಿಯಾಲಯದಾ ದೆಸೆಗಂ ಹುಲುಗುಡಿತೆಗಳುಂ ಮಿಸುಗದೆ ಚಕಿತರ್ಕಳಾಗಿ ತೊಲಗುಗುಮಂದಚೀ (ಬಜಾರ. ೦೬-೯೩). [?]

**ಪುಲುದೇಗುಲ** 'ಪುಲ್ದೇಗುಲ' ನೋ.

**ಪುಲುದೊಂದೆ** 'ಪುಲ್ದೊಂದೆ' ನೋ.

**ಪುಲುಬೂತು** (ನಾ). ಅಲ್ಪನಾದ ಯಾಚಕ : ಪಾವಿನಂತೆ ಗೀತಕ್ಕೆಚಿಗದೆ ಪುಲುಬೂತಿನಂತೆ ಬಂಡರನೇನಾನುಮಂ ಬೇಡುತ್ತಿರದೆ (ಧರ್ಮಾಮೃ. ೩-೯೯).

[ಪುಲು (<ಪುಲ್) + ಬೂತು₁]

**ಪುಲುಮನೆ** 'ಪುಲ್ಮನೆ' ನೋ.

**ಪುಲುಮೃಗ** 'ಪುಲ್ಮೃಗ' ನೋ.

**ಪುಲುವಟ್ಟೆ** 'ಪುಲ್ವಟ್ಟೆ' ನೋ.

**ಪುಲುವಿಲು**, ಹುಲಿವಿಲಿ, ಹುಲಿವಿಲು, ಹುಲುವಿಲು, ಹುಲುವಿಲೆ (ನಾ). ಒಂದು ಬಗೆಯ ಮರ : ಬೇಲವರುಟಾಳ ಪುಲುವಿಲುಯೆ ಸಂದಿ[ಪಾಠಾಂ. ಹಲಸಿಲವ ಕಿಚಿಸಂದಿ] ಚಂದನ ಕಕ್ಕೆ ಬಿಕ್ಕೆ ತಚಿಯ . . . ನಾನಾಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಸೋಮಕ. ೬-೨). **ಹುಲಿವಿಲಿ** : "ಚಂಕ್ರಸಂದರಣಃ_ಹುಲಿವಿಲಿ" (೬ಕಥ. ೫೬). **ಹುಲಿವಿಲು** : "ರಥಿಕ_ಹುಲಿ(ಗಿ)ವಿಲು" (೬ಕಥ. ೦೫೩). **ಹುಲುವಿಲು** : "ಅಶ್ಮಗರ್ಭ–ಹುಲುವಿಲು, ಪಚ್ಚೆ" (೬ಕಾ. ೫). **ಹುಲುವಿಲೆ** : ಹುಲುವಿಲೆ ಮರ ಪ್ರಿಯಂಗು ದಾಳಿಂಬ ಮೊದಲಾದ ವೃಕ್ಷಂಗಳು (ಶೌಗಂಧಿ. ೪೨೩-೦೨). 'ಪುಲಿಗಿಲ್' ಪರಾ. [?]

**ಪುಲುವೀಡು** (ನಾ). ಹುಲ್ಲಿನ ಮನೆ; ಹುಲ್ಲುಜೋಪಡಿ : ಪುಲುವೀಡೊಳ್ ಪಲವುಂ ಪಗಲ್ ಪರದನಿರ್ದಾದಾಯಮಂ ಪೆತ್ತು ಬಾಳ್ದಿಲೆಯುಳ್ಳೊಂದೆಡೆ ಗೈದಲಾ ನೆಲೆಯುಮರ್ ನೋಪಂತೆ (ರತ್ನಾಕ. ೦೫).

[ಪುಲು (<ಪುಲ್) + ಬೀಡು₂]

**ಪುಲುಸು** 'ಪುಲಿಸು' ನೋ.

**ಪುಲುಸೋಗು** (ಕ್ರಿ). ಆಧಿಕ್ಯವು ಕುಂದು,–ಕಡಮೆಯಾಗು : ಒಡೆಯದ ಕಂತುಮುಂದ್ರೆ ಪುಲುಸೋಗದ ರಾಗದ ರಾಶಿ ನಿರ್ಜರರ್ ಕಡೆಯದ ಪಾಲ್ಗಡಲ್ ಗಿಳಿ ಕರ್ದುಂಕದ ಪಣ್ಗೊನೆ . . . ಕಾದಿ ಕೋಳ್ವಡೆಯದ ದುರ್ಗದಂತೆಸೆಯುತಿರ್ದಳು ಕನ್ನೆ ಕುಲಾಭಿಮಾನದಿಂ (ಮಲ್ಲಿಕಾ. ೬-೬೦).

[ಪುಲುಸು (<ಪುಲಿಸು) + <ಪೋಗು₁]

**ಪುಲಿಕೇಶಿ** 'ಪುಲಿಕೇಶಿ' ನೋ.

**ಪುಲ್ಕಸ** (ನಾ). ೧. ನಿಷಾದಜಾತಿಯವನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದವನು. ೨. ಮಾದಿಗ; ಶ್ವಪಚ : "ಶ್ವಪಚಃ, ಪುಲ್ಕಸಃ, ಮಾತಂಗಃ, ಪ್ಲವಕಃ—ಈ ೪ ಮಾದಿಗಂ" (ಹಲಾಯು. ೯೯-೪೪೪); ಪರದೇಪತೋಪಹಾರಕ್ಕತಿಥಿತರ್ಪಣಕೆ ವರವೈಶ್ವದೇವರ್ಗೆ ಪ್ರಾಕ್ಪಾಗ್ನಿಹೋತ್ರಕ್ಕೆ ಓರಿದು ಧರ್ಮಕ್ಕನರ್ಹಂ ಮತ್ತೆಯುಂ ಕೇಳಿರೆಲೆ ವಿಪ್ರ ಪುಲ್ಕಸರಿರ (ಅರಾಕ. ೦-೫ ೫೬); ಕ್ರೂರವಾದ ಕರ್ಮಗಳಿಂದ ರಜಕರಾಗಿ ಕುಂಭರರಾಗಿ ಸಾವರ್ನಕರಾಗಿ ಕುವಿಂದರಾಗಿ ಪುಲ್ಕಸರಾಗಿ ಕಿರಾತರಾಗಿ . . . ಪುಟ್ಟುವರು (ಶೀಶರ. ೦೮). [ಸಂ].

**ಪುಲ್ಕೊಂಥಬೋಯ** (ನಾ). ಒಬ್ಬಾತನ ಹೆಸರು : ಪುಲ್ಕೊನ್ನಬೋಯಸ್ಯ ಕಾಶ್ಯಾ(ಶ್ಯ)ಪಗೋತ್ರ (ಇಐ. VII, ೦೮೮-೯೯; ೮೮೪).

[ಪುಲ್ಕೊಂಥ₀+ಬೋಯ]

**ಪುಲ್ಗಚ್ಚು** 'ಪುಲ್ಗರ್ಚು' ನೋ.

**ಪುಲ್ಗರ್ಚು**, ಪುಲುಗರ್ಚು, ಪುಲ್ಗಚ್ಚು, ಹುಲುಗಚ್ಚು (ಕ್ರಿ). ೧. ಹುಲ್ಲಂ ಕಡ್ಡಿಯನ್ನು ಬಾಯಲ್ಲಿ ಕಚ್ಚಿ ಹಿಡಿ : ಪುಲ್ಗರ್ಚಿದ ಪುಲ್ಲೆಯಂ ಕುಜದ ಕೊಂಬಂ ಸಾರ್ದ ಸತ್ಪಕ್ಷಿಸಂಕುಲಮಂ ಕುಂದದೆ ಕೊಂದಪುಕ್ಕಿದೆ ಫಲಂ ನೋಡೆಂಬವೊಲ್ ಬೇಡರಂ ಬಲಿಗೊಂಡತ್ತು...ಉಗ್ರಕಂಠೀರವಂ (ರಾಜಶೇ. ೫.೦೨೨). ೨. (ಅಲಂ) ಹುಲ್ಲು ಕಚ್ಚಿ ಹಿಡಿಯುವುದರ ಮೂಲಕ

ಶರಣಾಗತಿಯನ್ನು ಸೂಚಿಸು,– ಸೋತೆನೆಂದು ತಿಳಿಸು : ಕರುಣಿಸಲೆ ಶಬರ ತಱಿದಿರು ಸರಲಂ ನೀನೆಂದೆನುತ್ತೆ ಪುಲ್ಲಗಚ್ಚಿದವೋಲ್ ಮರವಟ್ಟು ಸೃಕ್ಕಿದೂರ್ವಾಂಕುರನಾಗಿರ್ದುದು ಭಯಾತ್ಮಕರಣಂ ಹರಿಣಂ (ಕುಸುಮಾ. ೧೧-೪೨); ಪುಲ್ಲಗಚ್ಚಿದರುಮಂ ಪುತ್ರನೇಱಿದರುಮಂ . . . ತಲೆಗಾದು ಮನ್ನಿಸಿ (ಚಳವಂ. ೪೦-೩). **ಪುಲುಗಚ್ಚು : ೨.** ದೇಸಿಗನಪ್ಪನಂ ಭಯದಿನೋಡುವನಂ ಕರಮಂಜಿದಾತನಂ . . . ಪುಲುಂಗಚ್ಚಿದನಂ ಕೊಲಲಾಗದೆಂಬವಂ ಪೇಸದೆ ಪಱಿವುಳ್ಳನಿನಿತುಳ್ಳ ಮೃಗಂಗಳನೆಂತು ಕೊಲ್ವನೋ (ಕಸಾರ. ೨೯೮). **ಪುಲ್ಲಗಚ್ಚು : ೨.** ದೊರೆದೊರೆಗಳುಂ ಪಲಾಯನಮನನುಕರಿಸಿ ಕಡುಭೀತಿಯಿಂದೆ ಜಲದೊಳ್ ಮುಳುಂಗಿ ಪುಲ್ಲಗಚ್ಚಿ ಪೆರ್ವೂರ ಪುತ್ರಾಗಳನೇಱಿ ಕೈಗಳಂ ಮುಗಿದು . . . ಹಾಯ್ದರ್ ಕಂಡ ಕಡೆಗೆ (ಕಿರಪು. ೩೨-೪೨). **ಹುಲುಗಚ್ಚು :** ೧. ಉಚ್ಚಳಿಸುತಪ್ಪಳಿಸುತಂ ಹು[ಪಾಠಾಂ. ಪ]ಲುಗಚ್ಚಿ ಹಾಯ್ಕುತ ಮೆಲುಕಿಱಿದು . . . ನೆಗೆವುತಂ ಗೂಱಿಸಾಡುತಂ ನೆಲನ (ಚಸಪು. ೩೨-೨೬). [ಪುಲ್ + ಕರ್ಚು$_1$]

**ಪುಲ್ಲಗಬ್ಬು, ಹುಲ್ಲುಗಬ್ಬು (ನಾ).** ಒಂದು ಬಗೆಯ ಕಬ್ಬು : ತಮ್ಮಲ್ಲಿ ಪುಲ್ಲಗಬ್ಬನಾಪಗಮೊಂದಂ ಸವಿವಂತೆ ತಾವೆ ಜಗಕೆಲ್ಲಂ ದೇವರೆಂಬಂತೆ ಶೀವುಗುಮುತ್ತಾನಿತವಿಕ್ಷುಯಾತ್ರನಿನದಂ ದಿಕ್ಕಾವಿನೀಕರ್ಣಮಂ (ಮಲ್ಲಿಪು. ೨.೯೯). **ಹುಲ್ಲುಗಬ್ಬು :** ಕಬ್ಬಿನ ಜಾತಿಗಳು–ರಸದಾಳಿ, ರಾಮಗಬ್ಬು . . . ಬೆತ್ತಗಬ್ಬು ಅಥವಾ ಹುಲ್ಲುಗಬ್ಬು ಎಂದು ಅನೇಕವುಂಟು (ಮಲೆಂಚಯು. ೫-೨೦೦). [ಪುಲ್ + ಕಬ್ಬು (<ಕರ್ಬು$_1$)]

**ಪುಲ್ಲಲಿ, ಹುಲುಗಲಿ (ನಾ).** ಕ್ಷುದ್ರನಾದ ಯೋಧ; ನಾಡಾಡಿ ಬಂಟ : ಕಜ್ಜಮಂ ಕಾಲಮಂ ಪಾರ್ವ ಕಜ್ಜಗಲಿಗಳುಮಂ ಮಾರ್ಗಮಿಾಯದ ಬದಿರಿದ ಲೋಭಿಗಲಿಗಳುಮಂ ನೊಂದು ಪಲ್ಗಿರಿದೋಡುವ ಪುಲ್ಲಲಿಗಳುಮಂ ಮೋದಿ ಮೆಯ್ಯೊಳ್ ನಿಂದಿಱಿವಗಲಿಗಳುಮಂ . . . ನೋಡಿ (ಗದಾಯು. ೯-೪೯ ವ). **ಹುಲುಗಲಿ :** ಇವನೆಂದರೆ . . . ಹೊರಗಣವರಿಗೂ ಅವೊಬ್ಬ ದಳವಾಯಿಯಲ್ಲಿದ್ದ ಭಯಗೌರವಗಳೂ ಇಲ್ಲ.— ಆ ತೂಕದ ಹುಲುಗಲಿಯೆನಿಸಿಕೊಂಡಿದ್ದಾನೆ (ಮುಂತ್ರಿಕ. ೬೬-೦೩). [ಪುಲ್+ಕಲಿ$_2$]

**ಪುಲ್ಗಸ (ನಾ).** ಹುಲ್ಲು ಮೊದಲಾದ ಕಳೆ : ಕೆಯ್ಯ ಮರಗಸಂ ಪುಲ್ಗಸ ಮೆಂಬೆರಡುಮಂ ಕಳೆದು ಪದದೊಳ್ ಬಿತ್ತಿದೊಡಂ ಮನದೊಳುಳ್ಳ ರಾಗದ್ವೇಷಮೆಂಬೆರಡುಮಂ ಕಳೆದು ಶುದ್ಧಚಾರಿತ್ರದೊಳೆ ಪತ್ತೊಡಮಾತಂಗೆ ಬೆಳಸುಮಿಾತಂಗೆ ಸಂಗತಿಯುಮೆಂತಕ್ಕುಮೆಂಬುದಂ ಬಗೆವುದು (ಜೀವಸಂ. ೯೬-೦೯). [ಪುಲ್ + ಕಸ]

**ಪುಲ್ಗಾಡು (ನಾ).** ಹುಲ್ಲು ತುಂಬಿರುವ ಕಾಡು : ಕಂಡಿಯೊಳ್ ಕಡೆ ಕುತ್ತಿಲ್ಡಿಸು ಮೇಲೆ ಪಾಯ್ದು ಪುಲಿಯಂ ಪುಲ್ಗಾಡೊ[ಪಾಠಾಂ. ನೊ ]ಳ್ (ಸೂಕ್ತಿಸು. ೩-೦೦೩). [ಪುಲ್ + ಕಾಡು$_2$]

**ಪುಲ್ಗಿಚ್ಚು, ಹುಲುಗಿಚ್ಚು (ನಾ).** (ಹುಲ್ಲಿಗೆ ಬಿದ್ದ ಬೆಂಕಿಯಂತೆ) ಬೇಗನೆ ಆರಿ ಹೋಗುವ ಬೆಂಕಿ : ಸಿರಿಯಪ್ಪೊಡೆ ಪುಲ್ಗಿಚ್ಚಿನ ದೊರೆ ರಾಜ್ಯವಿಭೂತಿ ಮುಗಿಲ ನೆಬಲ ಸಮಾನಂ (ಧರ್ಮಾಮೃ. ೬-೦೩೯). **ಹುಲುಗಿಚ್ಚು :** ಹೊಲೆಯಗಿತ್ತಾ ಸಾಲ ಒಲೆಯ ಮೇಲಿನ ಹಾಲು ಲಲನೆಯರ ಒಲುಮೆ ಹುಲುಗಿಚ್ಚು ಇವು ನಾಲ್ಕು ನಿಲಲಿಲ್ಲವಯ್ಯ (ಸರ್ವಜ್ಞ. ೭೯೯೬). [ಪುಲ್ + ಕಿಚ್ಚು ]

**ಪುಲ್ಗುಡಿ (ನಾ).** ಹುಲ್ಲಿನ ಗುಡಿಸಲು ; ಪರ್ಣಶಾಲೆ : "ತೃಣಕುಟಿ ಪುಲ್ಗುಡಿ" (ವಸ್ತುಕೋ. ೯೬-೯). [ಪುಲ್ + ಗುಡಿ$_3$ ]

**ಪುಲ್ಗುಡಿಸಲ್** 'ಪುಲ್ಗುಡಿಸಿಲ್' ನೋ.

**ಪುಲ್ಗುಡಿಸಿಲ್, ಪುಲ್ಗುಡಿಸಲ್, ಪುಲ್ಗುಡಿಸಿಲು, ಹುಲುಗುಡಿಸಿಲು, ಹುಲ್ಲುಗುಡಿಸಲು (ನಾ). = ಪುಲ್ಗುಡಿ :** ಪುಲ್ಗುಡಿಸಿಲಿನೊಳಿರ್ಪಂಗೆ ಮಣಿಮಾಡಮಪ್ಪಂತೆ ನಾಯಕತನಂಗೆಯ್ವಂಗೆ ಚಕ್ರವರ್ತಿತ್ವಮಾದಂತೆ (ಧರ್ಮಾಮೃ. ೦೦-೨೮೩); ಜಗಮಿಾರೇಳುಮವದೊಂದು ಪುಲ್ಗುಡಿಸಿಲಂತಳ್ಕಾಡೆ ಕಲ್ಪಾಂತದೊಳ್ ನೆಗೆವೊಂದಗ್ನಿಯೊಳಿಂತಿದೊಂದೆಸಕಮಿಲ್ಲೆಂಬನ್ನೆಗಂ . . . ಜ್ವಾಲೆಯುಂ ಪೊಗೆಯುಂ ತಳ್ತೊಗೆವೀ ಶಿವಾಸ್ತ್ರಕರನೀ ಮೋಪಿಷ್ಠಿತಂ ಪಾವಕಂ (ಜಗಂ. ೦೩-೬೭). **ಪುಲ್ಗುಡಿಸಲ್ :** ಕರುಮಾಡಮಂ ಬಿಟ್ಟು ಪುಲ್ಗುಡಿಸಲನಾಶ್ರಯಿಸುವಂತೆ . . . ಸದ್ಧರ್ಮಮಂ ಬಿಟ್ಟು ಮಿಥ್ಯಾತ್ವಪ್ರೀತನಾಗಿರ್ಪುದುಂ (ಧರ್ಮಾಮೃ. ೦೦-೦೬೨). **ಪುಲ್ಗುಡಿಸಿಲು :** ತಂದೆ ತಾಯಿಲ್ಲದ ಅನಾಥನ್, ಅಜ್ಜಿಯೊಡನಿಹನಂತೆ, ಆ ಪಾಲ್ಗುಡಿಯ ಬಳಿಯ ಪುಲ್ಗುಡಿಸಿಲಲ್ಲಿ (ಶಂಕ್ರಸ. ೦೯-೨೯). **ಹುಲುಗುಡಿಸಿಲು :** ನೋಡಿರೆ ಹುಲುಗುಡಿಸಿಲಾತನ ರೂಢಿ ವಿಭವಗಳಿದಕೆ ಕಾರಣವು ನಾಡೆ ಏನೆನಲೊಳಗಣಾ ಕಳೆಯಿದಕೆ ಕಾರಣವು (ಸುಶಕ. ೨೯-೬೫). **ಹುಲ್ಲುಗುಡಿಸಲು :** ಹುಲ್ಲುಗುಡಿಸಲು ಅಲ್ಲಲ್ಲಿ ಸೋರತೊಡಗಿ, ಮನುಷ್ಯರಲ್ಲಿ ಕೆಲವರು ಸ್ಥಳ ಬದಲಿಸಬೇಕಾಯಿತು (ಚಾಮರಾ. ೦೯೯). [ಪುಲ್ + ಗುಡಿಸಿಲ್ ]

**ಪುಲ್ಗುಡಿಸಿಲು** 'ಪುಲ್ಗುಡಿಸಿಲ್' ನೋ.

**ಪುಲ್ಗೊನರ್ (ನಾ).** ಹುಲ್ಲಿನ ಚಿಗುರು, ಕುಡಿ : ಗಿಳಿಯೆಱಂಕೆಯ ಬಣ್ಣದ ಪುಲ್ಗೊನರ್ ಪೊವಟ್ಟುದು ಪೊಲದೊಳ್ (ಜಗಂ. ೯-೬).
[ಪುಲ್ + ಕೊನರ್$_2$ ]

**ಪುಲ್ಚೇಡು (ನಾ).** ಒಂದು ಊರಿನ ಹೆಸರು : ಅದಱ ಪೊಲಮೇರೆ ಮುಂಡಣದೆಸೆ ಪೆರ್ನಲ್ಚಿನ್ತೆ ಪುಲ್ಚೇಡು ಉದಿಚೇಡು ಚೇರಳಚಿನ್ತೆ (ಎಕ. XII, ಸಿರಾ. ೩೯-೩೩ ; 878). [ ? ]

**ಪುಲ್ದಂಡೆ (ನಾ).** ಒಂದು ಬಗೆಯ ಬೇಟೆಯ ಸಾಧನ ; ಹುಲ್ಲಿನ ಹಗ್ಗ : ಬಡಿಕೋಲ್ ಕಿರ್ಗಟ್ಟು ಪಾಸಂ ಶುನಕವಿತತಿ ಹೇರಿಟ್ಟಿ ಕುರಂಬುಗಳ್ ಕೆಯ್ಪೊಡೆ ಬಲ್ ಪುಲ್ದಂಡೆ ಬೆಳ್ಪಾರ್ಪಟಮೆರೆಬಲೆಗಳ್ ಸಾಳುಮಂ ಕೂಳೆಗಾಳಂ ಗಿಡುಗಂ ಬಲ್ಲೆಂಡಿಯೊಳ್ ದೀಹವ ಪುಲಿ ನಿಶಿತಾಸ್ತ್ರಂಗಳುಗ್ರತ್ವಮಂ ಸಂಗಡಿಸುತ್ತಿರ್ದೊಪ್ಪೆ ವಿಂಧ್ಯಾಟವಿಗೆ ನಡೆದುದುದ್ಯತ್ಕಿರಾತಪ್ರಜಾತಂ (ಗಿರಿಕ. ೦-೭೯). [ಪುಲ್ + ದಂಡೆ$_1$ ]

**ಪುಲ್ದೇಗುಲ, ಪುಲುದೇಗುಲ (ನಾ).** ಹುಲ್ಲಿನ ಛಾವಣಿಯಿರುವ ದೇವಾಲಯ : ಅಗಲೊಂದು ಪುಲ್ದೇಗುಲಮನವರವಸರವಸರದಿಂ ರಚಿಯಿಸಿ ಬಳ್ಳಮನೊಂದಂ ತಂದವಾಙ್ಮುಖವಾಗಿ ನಟ್ಟು ಕಾಡಲಗೊಂಚಲ್ಗಳಿಂ ಪೂಜೆಗೆಯ್ದು ಲಿಂಗಮಿಾಯೆಡೆಲೊಳ್ನಿನ್ನ ಪುಣ್ಯದಿನಿರ್ದುದೆಂದು ಶೆಟ್ಟಿಯುಂ . . . ಒಳಗಣ್ಗೆ ಪುಗಿಸಲೊಡನೆ (ವೃಷಂ. ೬-೯ ವ). **ಪುಲುದೇಗುಲ :** ಶಿವಲಿಂಗದರ್ಶನನಿಯತಿ ತಪ್ಪಿದೊಡೆ ಜೀವವಂ ತಾಂ ತ್ಯಜಿಸುವಂ ಗಡ ಭಾವನೆಂದತಿಕುಟಿಲಚಿತ್ತರು ಗಾವಿಲರು ಪುಲುದೇಗುಲವನೊಂದಂ ರಚಿಸಿ (ಚಸಪು. ೯-೬). [ಪುಲ್ + ದೇಗುಲ ]

**ಪುಲ್ದೊಂದೆ, ಪುಲುದೊಂದೆ (ನಾ).** ಹುಲ್ಲಿನ ಸಿವುಡಿನಿಂದ ಮಾಡಿದ ಪಂಜು,—ಸೂಟಿ : ಸುಡುವ ಮಳಲ ರಾಸಿ ಕಾಸುವಂಬಲಿಯೆಣ್ಣೆಗೊಡ ಸುಣ್ಣಾವರಲ ಕೊಪ್ಪರಿಗೆ . . . ಪುಲ್ದೊಂದೆ ಬಿಡದೆಸೆದವು ದುರ್ಗದೊಳಗೆ (ಕುಮಾರಾಮ. ೧೨-೩೮); ಬಿಸಿಯೆಣ್ಣೆವರವಿಗಳ ಪುದಿದ ಪುಲ್ದೊಂದೆಗಳ ತರತರದೋರಿಸಿರ್ದ ಬಲ್ಗೊಲೆಯ ಡೆಂಕಣಿಯ . . . ಮೊತ್ತಂಗಳಳ್ಳೇರಿಯೊಳ್ ಪಸರಿಸಿದುವು (ಕಿರಪು. ೪೨-೦೦). **ಪುಲುದೊಂದೆ :** ತೊಲೆ ಪಂದಿ ಪೊಟ್ಟೆಟ್ಟಿ ಭಂಡಿ ಡೊಂಕಣಿ ಪಂದಿದಳೆ ಭೀಮಗದೆ ಬಿಡದುರಿವ ಪುಲುದೊಂದೆ ಪುರಿದ ಮಳಲುಗಳಿಂದೊಳಗಣ ಕಲಿಗಳಳುಕದೆ ಕಾದಿದರು (ಕುಮಾರಾಮ. ೧೩-೬).
[ಪುಲ್ + ದೊಂದೆ]

**ಪುಲ್ಪಡಿ, ಪುಲ್ಪದಿ (ನಾ).** ಹುಲ್ಲುಗಾವಲು : ಕೊರವಂಗಲ ಕಱ ಪಳ್ಳಿಪರ್ ಪುಲ್ಪಡಿಯನ್ ಪಡುವಾಯೊಳ್ಪೆ (ಎಪಿಇಂ. ೦೯೨೯. ೬೦-೦೦೦; 799); ಅನೆದಲೊಗೆಱವಿ ಪುಲ್ಪಡಿಯೇ ಎಬಗಲ್ಲೇ ಪುಲಿಗಾವದ ಗೆಱ

ಮುತ್ತೂರತಲ್ ತತಃ ಪೂರ್ವ್ವತಃ ನಿಡುವಿಳಿಂಕ್ಕೆ × × ದವಿನ ಪುಲ್ಪಡಿಯೇ ಕನ್ನಗಾಱಗಲ್ಲೇ (ಇಅ. XII. ೦೬–೨೦; 813). **ಪುಲ್ಪದಿ :** ಮೂಡಾಯ್ಯು ದುವುಕಿಯ ಪೇರೊಬ್ಬಿ ತೆಜ್ಜುಯ್ಯು ಕಂಬಳ್ಳಂ ಪಡುವಾಯ್ಸುವಣಱಿಯುಂ ಪುಲ್ಪದಿಯುಂ (ಎಕ. IX. ನೆಂಮಂ. ೬೦-೬೨; 802).

[ಪುಲ್ + ಪಡಿ$_0$ (ಪ್ರ ← ತಮಿ. ಪಟಿ=ಭೂಮಿ)]

**ಪುಲ್ಪದಿ** 'ಪುಲ್ಪಡಿ' ನೋ.

**ಪುಲ್ಪಾಸು** (ನಾ). ಹುಲ್ಲಿನ ಹಾಸುಗೆ; ದರ್ಭಶಯನ : ಭರತನಂ ಪುಲ್ಪಾಸಿನೊಳ್ ಬಿಟ್ಟು ಗುರುಪಾದಕೆರಗಿ ಮಂತ್ರಿಗೆ ಮಚ್ಚುನುಚ್ಚರಿಸಿ (ಧರಹ. ೫೦೩). [ಪುಲ್ + ಪಾಸು$_2$]

**ಪುಲ್ಪೊದಱು**, ಹುಲುಂಪೊದಱು (ನಾ). ಹುಲ್ಲಿನ ಪೊದೆ : ತರುತತಿ ಬಳ್ಳಿ ಪುಲ್ಪೊದಱು ಪಕ್ಕಿ ಮೃಗಂ ಫಣಿ ಜೀನ್ ಮೃಗವ್ರಜಂ . . . ಕಿನ್ನರ ಮಿಥುನಾರ್ಗ್ಗಂ ವಿಹರಿಸುವೊಡಂತಿ ತೀರ್ವುದು ಶೈಲವರ್ಣನಂ (ಸೂಕ್ತಿಸು. ೩-೦). **ಹುಲುಂಪೊದಱು :** ಹೊಲಮೇರೆಗಳೊಳುಬ್ಬರದ ಹುಲುಂಪೊದಱುಗಳೊಳಗಲಕೆ ಹರಿದು ಹೋರಟೆಗುಟ್ಟಿದನು ಹೊಮ್ಮುಱಿಯ ಬೆನ್ನಿನಲಿ (ಕೊರಠಾ. ೩-೬-೩೭). [ಪುಲ್ + ಪೊದಱು (<ಪೊದಱ್)]

**ಪುಲ್ಪೊಱೆ** 'ಪುಲ್ವೊಱೆ' ನೋ.

**ಪುಲ್ಬಂಟ** (ನಾ). ಕ್ಷುದ್ರನಾದ ಯೋಧ; ತೀರ ಸಾಮಾನ್ಯನಾದ ಸೈನಿಕ : ಪುಲ್ಬಂಟನಂ ನುಬಿ ಬಲ್ಬಂಟನಂ ಬಿಡುವ ಪಗೆಗಾಱನುಮಂ . . . ತಣ್ಪಂ ಬಿಟ್ಟು ಬಿಸಿಲಂ ಕಾಯ್ವ ಪಿತ್ತಾಧಿಕನುಮಂ ಪೋಲ್ವಂ (ಧರ್ಮಾಮೃ. ೬-೫೨). [ಪುಲ್ + ಬಂಟ$_1$]

**ಪುಲ್ಬಗೆ** 'ಪುಲ್ವಗೆ' ನೋ.

**ಪುಲ್ಬನೆ** 'ಪುಲ್ವನೆ' ನೋ.

**ಪುಲ್ಮರುಳ್** (ನಾ). ಕ್ಷುದ್ರ ಪಿಶಾಚಿ; ಕ್ಷುಲ್ಲಕವಾದ ಭೂತ : ಸೀಯೆ ತಲೆ ಬೇಯೆ ಮೆಯ್ ಮುಲ್ಗಾಯೆ ಕರಂ ಪಸಿವ ಪುಲ್ಮರುಳ್ ಪಿಱಿತಿನಿಗಳ್ ಬೆಯುತ್ತುಮಿರ್ಪ ಪೆಣನಂ ನಾಯ್ನುಗಿವಂತುಗಿದು ತಿಂದುವು (ಕಾಕ್ಯಸಾ. ೫೩೭ ಟೂಪ್ರ); ಆಂ ಮರುಳನೊ . . . ಸೀಂ ಮರುಳಿಯೊ ಪೇಟ ಪೇಟ ದೊಡೆ ಪೋಗದಿರೀಶ್ವರನಾಣೆಯೆಂದು ಪುಲ್ಮರುಳಿನಿಸಾನುಮಂ ತೆಗೆದು ಕಾಡಿಮುದಲ್ಲಿ ಘಣೀಂದ್ರಕೇತುವು (ಕಂಪಶಾ. ೦೩-೫೫); ಮರುಳ್ಗಳ ಮೇಳದಲಿ ಪೆರ್ಮರುಳೊಂದಿರುತ್ತಿರಲ್ ಕಂಡು ಭಯಭಕ್ತಿಯಿಂ ಚರಣ ಕೆಱಗಿದುದೊಂದು ಪುಲ್ಮರುಳ್ ಶಿವನೆಂದು (ಶಿಪು. ೪೦-೨೬). [ಪುಲ್ + ಮರುಳ್$_3$]

**ಪುಲ್ಮಾನಸ** 'ಪುಲ್ಮಾನಿಸ' ನೋ.

**ಪುಲ್ಮಾನಸಿಗ** (ನಾ). ಕ್ಷುದ್ರನಾದ ಮನುಷ್ಯ; ಹುಲುಮನುಜ : ರಾಮನೆಂಬೊಂ ಪುಲ್ಮಾನಸಿಗನಪರಿಮಿತಬಲಂಬೆರಸು ಎಮ್ಮ ಮೇಲೆ ಬಂದಪ್ಪನೆಂದು ಕೇಳ್ದಂ (ಜಾಪುಕು. ೩೦೦). [ಪುಲ್ + ಮಾನಸಿಗ]

**ಪುಲ್ಮಿಗ** (ನಾ). ೧. ಹುಲ್ಲು ತಿಂದು ಬದುಕುವ ಪ್ರಾಣಿ; ಕ್ಷುದ್ರವಾದ ಪ್ರಾಣಿ : ಮೇಪಿಂ ಪುಲ್ಮಿಗಮುಂ ಬೆಳ್ಮಿಗಮುಂ ಪಲ್ಮಿಗಮುಂ ತಣಿಮುಮೆಯ್ದೆ ಕಾಪಿನ ಪೊಲದೊಳ್ (ಅನಂಪು. ೦೦-೩೯). ೨. ಜಿಂಕೆ; ಹರಿಣ : ಮಹಾದಂತಿಗಳಂ ಬೆಗಳ್ದೋಳಿಪ ಸಿಂಹಕೆ ಲಕ್ಷ್ಯಮೆ ಪುಲ್ಮಿಗಂ (ರಾಚಶೇ. ೫-೦೩೦). [ಪುಲ್ + ಮಿಗ]

**ಪುಲ್ಮೃಗ**, ಪುಲುಂಮೃಗ, ಹುಲುಂಮೃಗ (ನಾ). ೧. = ಪುಲ್ಮಿಗ ೧ : ಪುಲ್ಮೃಗಮುಂ ಬೆಳ್ಮೃಗಮುಂ ಬಲ್ಮೃಗಮುಂ ಶಿಲೆಗುಹೆಯೊಳಾದೊಡಂ ಪಿಡಿದಪ್ಪಂ (ಸೂಕ್ತಿಸು ೩-೪೦). **ಪುಲುಂಮೃಗ :** ೧. ಪಲುಂಮೃಗ ಬೆಳ್ಮೃಗ ಪುಲುಂಮೃಗ ಬಂದವು ನಲವಿಂದ ಕಾಪಿನ ಪೊಲಕೆ (ಅನಂಕ. ೦೬-೯). **ಹುಲುಂಮೃಗ : ೨. = ಪುಲ್ಮಿಗ ೨ :** ಹುಲುಂಮೃಗವ ಪಿಡಿವುಜ್ಜುಗದಿ ಪೆರ್ಬುಲಿ ಹುದುಗುವೊಲು ದುರ್ಜನಂ ವಿಂಗೆ ಹುದುಗಿಕೊಂಡಿಹ (ಶಂಕರಾ. ೦೬-೯೬). [ಪುಲ್ + ಮೃಗ]

**ಪುಲ್ಲ** (ಗು). ೧. ಅರಳಿದ; ವಿಕಸಿತವಾದ: (?). (ನಾ). ೨. ಹೂವು; ಪುಷ್ಪ : ಕುಳ್ಳಿರ್ದು ಬೆಳಗ ನೋಡುತ್ತಲ್ಲಾಡದೆ ಮುಗಿದ ಕೆಯ್ಗಳಂ ನೊಸಲಲಿಡುತ್ತಲ್ಲಿಯೆ ನಡುವುಂ ಬಾಟಿಯ ಪುಲ್ಲದವೊಲಿಟಿಯ ದಿರ್ದೊಡಱಿಯಬಾರದಿಂಗಳ್ (ಕರಾರ. ೩೬೦); ಇಱಿಭಕ್ತನು ದಿವ್ಯನೆ ನಾರುವಂ ಕೊಂದು ಬಱಿದಿರ್ದಪುವು ಕರಂಡದ ಪುಲ್ಲವಂ ಚೆಲ್ಲಿ ಕೊಱಚಾಡು ತಿರ್ಪ ಗಜವುಂ ದ್ರೋಹಿಯಂ (೮ಂಗಪು. ೨೯-೨೪). 'ಪುಲ್ಲಂಬ' ಪರಾ. [< ಸಂ. ಫುಲ್ಲ]

**ಪುಲ್ಲಂಗ** (ನಾ). ಒಂದು ಬಗೆಯ ಔಷಧೀಸಸ್ಯ : ಕಳ್ಳಂಗಡಲೆ, ಬೋಳಂಗಡಲೆ, ನಾಗಮುತ್ತು, ಪುಲ್ಲಂಗ . . . ಮರದರಿಶಿನ ಇವುಗಳನ್ನು ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಪಂಚಾಹಿಕಜ್ವರ ಗುಣಮಕ್ಕುಂ (ಸಕಶ್ಯ. ೦೦೩). [?]

**ಪುಲ್ಲಂಪುರಚಿ** 'ಪುಳ್ಳಂಪುಣಿಸೆ' ನೋ.

**ಪುಲ್ಲಂಪುರುಚಿ** 'ಪುಳ್ಳಂಪುಣಿಸೆ' ನೋ.

**ಪುಲ್ಲಂಬ** (ನಾ). ಹೂವಿನ ಬಾಣಗಳುಳ್ಳವನು; ಮನ್ಮಥ : ಮೆಲ್ಲನೆ ಕಳಹುಸ ತುಗೊಳವನಿಳಿವಂತೆ ಪುಲ್ಲಂಬನರಸಿಯ್ಯೆತಂದೊಂದು ಮೆಟ್ಟಗೆಯೊಳಲ್ಲಿ ಮುಡಿಸಿ (ಶವಶೋ. ೬-೩೬). [ಪುಲ್ಲ + ಅಂಬು$_1$ + –ಅ$_2$]

**ಪುಲ್ಲಗ** (ನಾ). ಒಂದು ಮನೆತನದ ಹೆಸರು : ಜ್ಯೇಷ್ಠದ ಪುಣ್ಣಮೆ ಆದಿತ್ಯವಾರದನ್ದು ಎಱಿಯ ಪುಲ್ಲಗರಣ್ಣಮಸೆಟ್ಟಿಯ ಮಗಂ ಪೆದ್ದಣ್ಣಂ ತುಱುಗೊಳ್ಳ್ ಕಾದಿ ಸತ್ತು ದೇವಲೋಕಕ್ಕೆ ಸನ್ದಂ (ಎಕ. VIII, ಸೊರಬ. ೩೬೬-೫ ; 1004). [?]

**ಪುಲ್ಲಡಕಿ** (ನಾ). ಹುಲ್ಲಂ ಹೊರುವವನು; ಹುಲ್ಲುಹೊರೆ ತಂದು ಉಪಜೀವನ ಸಾಗಿಸುವವನು : ರಾಜಕುಮಾರರ ಕೆಳೆಯಂ ಬಿಟ್ಟು ಪುಲ್ಲಡಕಿಯೊಳ್ ಕೆಳೆಗೊಳ್ವಂತೆ . . . ಸದ್ಧರ್ಮಮಂ ಬಿಟ್ಟು ಮಿಥ್ಯಾತ್ವ ಪ್ರೀತನಾಗಿರ್ಪುದುಂ (ಧರ್ಮಾಮೃ. ೦೦-೦೬೨). [ಪುಲ್ + ಅಡಕು$_1$ (<ಅಡಂಕು) + –ಇ$_2$]

**ಪುಲ್ಲಡಿಗ** (ನಾ). (?) : ಪುಲ್ಲಡಿಗ[ಪಾಠಾಂ.ಗೆ] ರೇಚಯ್ಯ ಮಲ್ಲಣ ಮೊಲ್ಲೆಯರ ಬೊಮ್ಮಯ್ಯ ಮಲ್ಲಣೆ ತಲ್ಲಿಗೇಶನ ಮಸಣಹುಳ್ಳಿಯ ಮಾರತಂದೆಗಳು (ಶಾಸಂಕ. ೬-೭೯). [< ಪುಲ್ಲವಡಿಗ ?]

**ಪುಲ್ಲತ್ತಿ** (ನಾ). ಒಂದು ಊರಿನ ಹೆಸರು; ಪ್ರ ಬೆಳಗಾವಿಜಿಲ್ಲೆಯ ಈಗಿನ ಹುಲ್ಲತ್ತಿ : ಮುದುಗೇಱಿಯ ಪೂರ್ವ್ವಶ್ರುಂಖ(ಗ)ದ ಪುಲ್ಲತ್ತಿಎ(ಯ) (ಇಅ. XIII, ೨೦೯-೬೮; 10ಶೆಯ ಶತ ?). [?]

**ಪುಲ್ಲಪ್ಪ** (ನಾ). ಒಬ್ಬಾತನ ಹೆಸರು : ಶ್ರೀ ಪುಲ್ಲಪ್ಪನ್ ಶ್ರೀ (?)ಮಾ(?)ಣದೇವಾಃಕ(ಕ)ಟಿತಪ್ರತಿಮಾ (ಇಅ. X. ೦೬೮ ; ಸು. 8ನೆಯ ಶತ).

[ ? + ಅಪ್ಪ$_1$ ]

**ಪುಲ್ಲಮಂಗಲ** (ನಾ). ಒಂದು ಊರಿನ ಹೆಸರು : × × × ಮರಸರು × × × ಕಡುಕಲ್ಲ ಪುಲ್ಲಮಂಗಲ ತೆಱಿದಾರ ಪುನ್ನಾಡನಾಳೆ (ಎಕ. IX. ದೇವನ. ೯೩ ೮; ಸು. ೯೦೦ ?). [ಪುಲ್ಲ + ಮಂಗಲ]

**ಪುಲ್ಲವಟುಕ** (ನಾ). ಹೂವನ್ನು ಮಾರುವ ಹುಡುಗ; ಹೂವಾಡಿಗ : ಸುರವಶಿಯೆಱಿವಸನರ್ಹತ್‌ಪರಮೇಶ್ವರಪಾದಸೇವೆ ಪಾಲಾ ಅವಿರ್ದು ಪಿರಿದು ಗಡಿದೆನಿಸಿ ತಂದರ್ ಸುರವಟ್ಟುಕರ್ ಪುಲ್ಲವಟುಕರಂತಿರೆ ಪೂವಂ (ಅಜಿಪು. ೫–೬೭). [ಪುಲ್ಲ + ವಟುಕ]

**ಪುಲ್ಲವಡ** (ನಾ). ಹೂವು ಮಾರುವವನು; ಹೂವಾಡಿಗ : ಕಱಿಗೊರಲನ ಪುಲ್ಲವಡ[ಪಾಠಾಂ. ಪುಲ್ಲವಳ, ಪುವ್ವಾಳ]ರೊಳು ವನಜನೆಂಬವನೊರ್ವನಾವನು (ಸೋಮಶೋ. ೦೨–೨೦). [ಪುಲ್ಲ + —ವಡ$_4$]

**ಪುಲ್ಲವಡಕಾಱ** (ನಾ). = **ಪುಲ್ಲವಡ :** "ಮುಲರ್ವಡಿಗನೆನಲ್ ಪುಲ್ಲವಡ

ಕಾಜಿ ಪೂವಳನೆಂದು ಪೂವಡಿಗನೆಂದೆನಿಕ್ಕುಂ" (ಕಬ್ಬಿಕ್ಕಿ. ೩೪); ಇರಿಸಿದೆನ ಪಳಡಿಯುಳಿ ಜಾಜಿಯು ಚೌಸರವನೆಂದನು ಪುಲ್ಲವಡಕಾ[ಪಾಠಾಂ.ವಡಿಗಾ, ಪೂಡೆಕಾ, ಶರಕಾ]ಟಿ (ಸೂಕಸೋ. ೦೨-೬೨). [ಪುಲ್ಲವಡ + — ಕಾಜಿ]

**ಪುಲ್ಲವಡಿಗ** (ನಾ). = ಪುಲ್ಲವಡ : "ಪೂವಡಿಗ ಪುಲ್ಲವಡಿಗಂ" (ಕಶಿಕಂ. ೨೬೯); ಕುಂಚವಡಿಗಂ, ಪುಲ್ಲವಡಿಗಂ (ಕಮುದ. ೦೯೯ ಪ್ರಯೋ); ಕುಸುಮಪುಠದ ಪುಲ್ಲವಡಿಗಂ ಕುಸುಮದತ್ತನೆಂಬವಂ . . . ಮಂದಸವಂ ಕೊಂಡು ಬಂದು ನಿಜವಧುವಪ್ಪ ಕುಸುಮಾವಳಿಗೆ ಕುಡುವುದುಂ (ಪುಣ್ಯಾಸ್ರ. ೨-೩೦ ವ).
[ಪುಲ್ಲ + —ವಡಿಗ]

**ಪುಲ್ಲವಡಿಗಿತಿ** (ನಾ). ಹೂವಾಡಗಿತ್ತಿ, ಮಾಲೆಗಾತಿ : ಪುಲ್ಲವಡಿಗಿತಿ ಯರ ಪಸರದಿನಂದಂಬಡೆದ ಸೂಳೆಗೇರಿಯು ಕೆಲದಲ್ಲಿ ಗರುವರ ಗೊಟ್ಟಿ ಗಾಜಿರ . . . ಆಗರಮೆನೆ ಪೆಂಪುಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿ ಗಳ್ (ಅಭಿಸಾ. ೯೦). [ಪುಲ್ಲವಡಿಗ+ —ಇತಿ₁ (< — ಇತ್ತಿ)]

**ಪುಲ್ಲವಡಿತಿ** (ನಾ). = ಪುಲ್ಲವಡಿಗಿತಿ : ಬಂದುಗೆಯೊಳ್ ನಯನದ್ಯುತಿ ಬಂದುಗೆ ಮಲ್ಲಿಗೆಯ ಪೂಗಳೆಂದಿಪರ್ ಕಂಪಂ ದಳವೇಱಿಪರಳಿಗೀಪಂ ದಳವಡೆ ಪುಲ್ಲವಡಿತಿಯರ್ ಸೊಗಯಿಸುವರ್ (ಜಗು. ೨-೨೭).
[ಪುಲ್ಲವಡ + — ಇತಿ₁ (< — ಇತ್ತಿ)]

**ಪುಲ್ಲವಡುಗ** (ನಾ). = ಪುಲ್ಲವಡ : ಪುಲ್ಲವಡುಗರೊಕ್ಕಲುಂ ಕಲುಕುಟಿಗ ರೊಕ್ಕಲುಂ ಸರ್ವ್ವಮಾನ್ಯವಾಗಿ ಬಿಟ್ಟರು (ಸೌಇಇ. IX — i, ೦೦೬-೩೯; ಸು. 1057); ಕಂಬೆ ಸ್ವರದೇಪರ ಪುಲ್ಲವಡುಗ ನಾಗಂಣಂಗೆ ಮತ್ತ ೩ [ಹ] (ಸೌಇಇ. IX — i, ೦೩೩-೦೪; ಸು. 1086).
[ಈ ಇದು 'ಪುಲ್ಲವಡಿಗ' ಎಂಬುದರ ಅಪಲಿಖಿತವಿರಬಹುದು]

**ಪುಲ್ಲವಿಸು** (ಕ್ರಿ). ಉತ್ಸಾಹಗೊಳ್ಳು (?): ನಲ್ಲ ಶ್ರೀಚಿಕದೇವನಾಥ ನಿನಗೊಲಿದೆನ್ನ ಮೆಲ್ಲದೆಯು ಹರುಷವೀ ಮೇರೆ ಎಂದು ಸೊಲ್ಲುವವಳೊಡ ನೊಡನೆ ಪುಲ್ಲವಿಸಿ (ಚಿಕಸ. ೯೭). [ಪುಲ್ಲ + — ಇಸು₃]

**ಪುಲ್ಲಶರ** (ನಾ). ಪುಷ್ಪಬಾಣ; ಮನ್ಮಥ : ಪುಲ್ಲಶರನಂಜಿ ಕರ್ಬಿನ ಬಿಲ್ಲಂ ತಲೆಚಿಮರಿವೆರಸು ಬಿಸುಟಂತೆ ತಪೋವಲ್ಲಭನ ಕೆಲದ ಮೇತ್ರುಲತೋಲ್ಲಸಿತ ಕಳಾಪಗುಚ್ಛಮೆಸೆದುದು ತುಚ್ಛಂ (ಅನಂಪು. ೩-೯೯). [< ಸಂ. ಪುಲ್ಲಶರ]

**ಪುಲ್ಲಶರಹರ** (ನಾ). ಮನ್ಮಥನನ್ನು ನಾಶ ಮಾಡಿದವನು; ಶಿವ : ಬಲ್ಲವರು . . . ಪುಲ್ಲಶರಹರಲಿಂಗಮರ್ಚಿಪರು (ನವಬೋ. ೨-೩೯).
[< ಸಂ. ಪುಲ್ಲಶರಹರ]

**ಪುಲ್ಲಸೊಜ್ಜಿಗೆ** (ನಾ). ನೆನೆದು ಅರಳಿದ ರವೆ : ಬಿಸಿನೀರನೆಱೆದು ಕಿವಿಚಿದ ಪುಲ್ಲ[ಪಾಠಾಂ. ಪುಲ್ಲ, ಪುಟ್ಟ] ಸೊಜ್ಜಿಗೆಯು ರಸದೊಳಗೆ ಅರೆದಕ್ಕಿಯ ಸಮಂಗೂಡಿ (ಸೂಶಾ. ೦-೩೭). [ಪುಲ್ಲ + ಸೊಜ್ಜಿಗೆ (< ಸಜ್ಜಿಗೆ)]

**ಪುಲ್ಲಾಯಟ್** (ನಾ). ಒಂದು ಊರಿನ ಹೆಸರು (?): ಪ್ರಾಚೀದೆಸೆ ಪನೆದ್ದುಗ್ಗೆಯಿನ್ನೂಡಾಯ್ ಕಡೆ ಆಗ್ನೇಯದೆಸೆ ಪುಲ್ಲಾಯಟ್‌ದಕ್ಷಿಣದೆಸೆತಳ (?) ಅಣ್ಣಾಯ್ ನೈರಿತ್ಯದೆಸೆ ನೆಲಮುಟ್ಟುಗೂರ್ (ಎಕ. X (8). ಮುಳಬಾ. ೩೨೮-೩೦; ಸು. 650; ಪ್ರೈಆಂ. ೦೯೦೭, ೯-೩೦ ನೋ). [ ? ]

**ಪುಲ್ಲಿ** (ನಾ). ಒಂದು ಬಗೆಯ ಬಟ್ಟೆ : ಅಲ್ಲಲ್ಲಿ ಕಟ್ಟಿದ ಪುಲ್ಲಿಯ ಪಟ್ಟೆಗಳ ಮೇಲೆ ಮೇಘವಣ್ಣಿಗೆಯ ಚೌಕದ ವಿಳಾಸದ ಕಥಾಯಿಯ ಸುಚ್ಛವಿಯನೀವ ಪಚ್ಚೆಯ ಪಟ್ಟೆಗಳ . . . ಸಕಲಸೌಂದರ್ಯಮನೊಳಕೊಂಡ ಮೇಲ್ಕಟ್ಟಿನ ಬಿರಕವೆಳಗು ಮಂಟಪದೊಳಗಂ ಪೂಜಿಗಂ ತೆಕ್ಕನೆ ಶೀವೆ (ಗಿಂಕ. ೦೦-೨೮ ವ); ತೋರಮುತ್ತುಗಳ ಹಾರಮುರಸ್ಥಳದೊಳ್ ಪ್ರಕಾಶಮಂ ಪಸರಿಸೆ ಪಂಚ ವಣ್ಣಿಗೆಯ ಪುಲ್ಲಿಯ ಚಲ್ಲಣದಿಂ ಕಟೀತಟಂ ನಸುಸಗೆ (ಮಹಾವೀ. ೩-೭೦); ಪಳಿ ಪಟ್ಟೆ ಪುಲ್ಲಿ ಚೀನಾಂಬರ ದಸರಿ ಗಬ್ಬುಳಗಂದಿ ಮೇಘವಣ್ಣಿಗೆಯಾ ತಲೆಯ ಮೇಲೆಲ್ಲರ್ಗೆ ಕಟಿದರು ವಸ್ತ್ರದ ಮಳೆ ಶಾನೆ ಕಱದುದೆಂಬಂತೆ (ಶರಚ. ೭೩-೦೦೩). [ ? ]

**ಪುಲ್ಲಿಊರ್** (ನಾ). ಒಂದು ಊರಿನ ಹೆಸರು : ಕೊರಿಕುನ್ದಭಾಗೇ ಪುಲ್ಲಿ ಊರನ್ನಾಮ ಗ್ರಾಮೇ ಮಹಾತಟಾಕಸ್ಯಾಧಸ್ತಾತ್ ಮೂಲಾಭ್ಯಾಶೇ ಶ್ರಮಣಕೇದಾರಸಹಿತಂ ಸಪ್ತಕಣ್ಡುಕಾವಾಪಮಾತ್ರಂ ಕ್ಷೇತ್ರಂ . . . ಪಾನೀಯಪಾತಪುರಸ್ಸರನ್ದತ್ತಂ (ಪ್ರೈಆಂ. ೦೯೩೯, ೦-೨೩; ಸು. 570).
[ಪುಲ್ಲಿ₀ + ಊರ್]

**ಪುಲ್ಲಿಂಗ** (ನಾ). [ವ್ಯಾಕ] ಪುರುಷರನ್ನು ಸೂಚಿಸುವ ಲಿಂಗ; ಪುರುಷವಾಚಕಲಿಂಗ : ಪುರುಷರೆ ಪುಲ್ಲಿಂಗ ಸ್ತ್ರೀಯರೆ ತಾಂ ಸ್ತ್ರೀಲಿಂಗ ಮುಟೆದುಮೆಲ್ಲಂ ನಪ್ಪಾಗಿರೆ ಸಲ್ಗುಂ ಕನ್ನಡದೊಳ್ (ಕಮುದ. ೯೦); ಗಂಡಸರನ್ನು ಹೇಳುವ ಪದಗಳಿಗೆ ಪುಲ್ಲಿಂಗವೆಂದೂ ಹೆಂಗಸರನ್ನು ಹೇಳುವ ಪದಗಳಿಗೆ ಸ್ತ್ರೀಲಿಂಗವೆಂದೂ ಹೆಸರು (ಮರ್ಕ್ಮಮ. ೩೦). [<ಸಂ. ಪುಂಲಿಂಗ]

**ಪುಲ್ಲಿಕೆ** 'ಪುಲ್ಲಿಗೆ₂' ನೋ.

**ಪುಲ್ಲಿಗೆ₁** (ನಾ). ೧. ಊಟದ ಎಲೆ : ರಸಂ ಬಂದೊಡೆ ತಂಬುಲಮಂ ಎಳ್ ಬಂದೊಡೆ ಕೊರದಳಿಯುಂ ಬೆಳಸು ಬಂದೊಡೆ ನೆಲನಂ ಸಾಲಂ ಬಂದೊಡೆ ಒಟ್ಟೆ ಗುತ್ತನಂ ಕೂಟನುಂಡೊಡೆ ಪುಲ್ಲಿಗೆಯುಂ[ಪಾಠಾಂ. ಪತ್ತ್ರಳಿಯುಂ] ಬಿಡುವಂತೆ ತನ್ನ ಕಾರ್ಯಂ ತೀರ್ದ ಬಟಿಕ್ಕೆ ಕಡೆಯೊಳ್ ಶರೀರಮುಮಂ ಪರಿಗ್ರಹ ಮುಮಂ ತ್ರಿಶುದ್ಧಿಯಿಂ ಬಿಟ್ಟು ಪರಿಚ್ಛೇದಿಯಪ್ಪುದು (ಧರ್ಮಾಮೃ.೦೪-೦೩೪). ೨. ಎಲೆಯಿಂ ಹೊದಿಕೆ,—ಮುಸುಕು : ನಾರು ಸುತ್ತಿ ಮಾದಳದ ತಳಿರ ಪುಲ್ಲಿಗೆಗಳಂ ಹೊದ್ದಿಸಿ ನೆಲದೊಳಗೆ ಪುಟವಿಕ್ಕಿ ಬಿಸಿಯಂ ಮಾಳ್ಪುದು (ಸೂಶಾ. ೩-೯೭); ನೆಲದ ಸೆಖೆಯಿಂದ ಬೆಂದ ಕಾಯ ತೆಗೆದು ಪುದಿದೆಲೆಯ ಪುಲ್ಲಿಗೆಯುಮಂ ಬಿಸುಟು (ಸೂಶಾ. ೩-೯೮). [←ತೆಲು. ಪುಲ್ಲಿಯ, ಪುಲ್ಲೆಯ]

**ಪುಲ್ಲಿಗೆ₂, ಪುಲ್ಲಿಕೆ** (ನಾ). ಒಂದು ಬಗೆಯ ಸಿಹಿಭಕ್ಷ್ಯ; ಹೋಳಿಗೆ : "ಪುಲ್ಲಿಗೆ—ಪೋಲಿಕಾ = ಒಂದು ಭಕ್ಷ್ಯ" (ಶಬ್ದಕೋ. ೨೭); ಪುಲ್ಲಿಗೆಯ ತತ್ತವಿಯ ಮಂಡಿಗೆಯಲ್ಲಿ ನವಘೃತಸೂಪದಂಶಕದಲ್ಲಿ ನೋಡಲಿ ನಮ್ಮ ನೆಂದುದು ಧೂರ್ತಪಟುನಿಕರ (ಕುವ್ಯಾಕ. ೦೫-೭); ಮಲ್ಲಿಗೆಯರಳಂತೆ ಬಿಚ್ಚೋಗರ ಮೊಸರೊಳ್ಳೆಯ ಬಹಳುಪ್ಪುಗಾಯಿ ಘಲ್ಲಿಸಿ ಗಟ್ಟಿಯ ಕಟ್ಟಿದ ಒರಿಯರು ಪುಲ್ಲಿಗೆಗಳು ತರತರಿಸೆ ರಸರಸಾಯನವ ಚಪ್ಪರಿದು ನೀರ್ವಾ ಜ್ಜಿಗೆ ಹಸಗೆಯ್ದು ರಲೀಂಟಿದರು (ಪೋಹತ. ೩-೫೭). **ಪುಲ್ಲಿಕೆ :** ತಾರವಣ್ಣದ ಬಟುವ ಕೀರವಣ್ಣದ ಕಟು ನೀರಜದ ಕೈತೊಡವ ಹೂರಣದ ಪ[ಪು]ಲ್ಲಿಕೆ ಯನಾರೋಗಣೆಗೆ ನೀಡಲು (ಲಿಂಗಪು ೬-೯). 'ಪೋಳಿಗೆ₁' ಪರಾ.
[< ಸಂ. ಪೂಲಿಕಾ]

**ಪುಲ್ಲಿಗೆ₃** (ನಾ). = ಪುಲ್ಲಿ : ಎರಲ್ವಟ್ಟೆಗೆತ್ತಿ ಸುಟ್ಟಿಸಿದ ಕೆಯ್ಯ ಸುಯ್ಯ ಭರದೊಳ್ ಸುಱದು ಸೂಸುವ ಪುಷ್ಕರದ ತುಂತುರಿಂ ತುಱುಗಿ ಸುತ್ತಿದ ಪಂಚಾಯುಧದ ಪುಲ್ಲಿಗೆಯ ತೊಂಗಲ ಸೆಱಗು ನಾಂದು ಪಿನೆಲೆಱದೆ ಬಲ್ಚಿದ ವೇಣಿಯೊಳ್ಪೆಸೆದು . . . ಮೇಲೆ ಮೆಱೆಯಿಯುಮಂ (ಅನಂಪು ೨-೨೪ವ). [< ಪುಲ್ಲಿ]

**ಪುಲ್ಲಿದೊಂಗಲ್** (ನಾ). ಒಂದು ಬಗೆಯ ಕೊಡೆ; ಪುಲ್ಲಿಯೆಂಬ ಬಟ್ಟೆ ಯಿಂದ ಮಾಡಿದ ಛತ್ರಿ,—ಸತ್ತಿಗೆ : ಮತ್ತವರ್ಗವರ್ಗೆ ಪಿಡಿದ ಮೇಘ ಡಂಬರದ ಝಲ್ಲರಿಯ ಪ[ಪು]ಲ್ಲಿದೊಂಗಲ ಚೌಕಸತ್ತಿಗೆಯ ಕೊಡೆಯ ಗಡಣಂಗಳುಂ (ಚಂದ್ರಪು. ೭-೮೦ವ). [ಪುಲ್ಲಿ + ತೊಂಗಲ್]

**ಪುಲ್ಲಿಪಟ್ಟೆ, ಪುಲಿವಟ್ಟೆ** (ನಾ). = ಪುಲ್ಲಿ : ಮಕರತೋರಣ ಓರಣಂಗೊಂಡ ವಲ್ಲಲ್ಲಿ ಸುಕರಮೆನೆ ಪುಲ್ಲಿಪಟ್ಟೆಗಳಿ[ಶ.ಕಾಂ. ಪಲ್ಲಯಿಸಿ]ರ್ದವಲ್ಲಲ್ಲಿ ಪೊಸ್ನಂ ವಿವಾಹವೇದಿಕೆ ಸವೆದುದಂತಲ್ಲಿ (ಪಾಂಸಾ. ದೇ. ೦೬೪-೦೯); ಅಲ್ಲಲ್ಲಿ ಕಟ್ಟಿದ ಚಿತ್ರಪಟಗಳಿಂದ ಝಲ್ಲಿಗಳಿಂದ ರಾಜಿಸುವ ಪುಲ್ಲಿ[ಪಾಠಾಂ. ಲ್ಲಿ]ಪಟ್ಟೆಯ ನೇಜೆಯಿಂದಲದ ತಳುವಿಲ್ಲದೆ ಸಿಂಗರಿಸಿದರು (ರಾಪುಂವಿ. ೬-೮೪); ಪುಲ್ಲಿ ಪಟ್ಟೆಯೊಳು ಸಂಧ್ಯಾರಾಗದೊಳು ಕಾಗಿನಲ್ಲಿ ದುರುಂಗಿ ಪಟ್ಟೆಯೊಳು ಚಲ್ಲಣ . . . ಚಲ್ಲಕಾಚಿಯಱಗೊಪ್ಪಿದುವು (ಭರತ. ೦೩-೯೯). **ಪುಲಿವಟ್ಟೆ :** ಜಲಧರ

ಬಣ್ಣದ ವರದೇವಾಂಗದ ಪುಲಿವಟ್ಟ[ಟ್ಟೆ]ಯ ಪಠ್ಠಾವಳಿ ಮಂಜಿಷ್ಟಿಯು (ಶಾಸಂ. ೬-೬೩). [ಪುಲ್ಲಿ + ಪಟ್ಟ]

**ಪುಲ್ಲಿವೇಟು** 'ಪುಲಿವೆಟ್ಟು' ನೋ.

**ಪುಲ್ಲಿವೇಟು** 'ಪುಲಿವೆಟ್ಟು' ನೋ.

**ಪುಲ್ಲು** 'ಪುಲ್' ನೋ.

**ಪುಲ್ಲುಂಗೂರ್** (ನಾ). ಒಂದು ಊರಿನ ಹೆಸರು ; ಇದು ಧಾರವಾಡ ಜಿಲ್ಲೆಯ ಈಗಿನ ಹುಲಗೂರು : ಮೂಡ ಬನ್ದಿಗಾವುಣ್ಡನ ಕೆಯಿ ತೆಂಕ ಪುಲ್ಲುಂಗೂರ ಬಟ್ಟೆ ಪಡುವ ಬಸದಿಯ ಕೆಯ್ಯು[o] (ಇಇ. XVIII, ೩೯-೨೮ ; ೯೯೯). [? + ಊರ್]

**ಪುಲ್ಲುಣೆ** (ನಾ). ಒಂದು ಊರಿನ ಹೆಸರು : ಬ್ರಂಹ್ಮರಾಸಿಪಣ್ಡಿತರ್ಗ್ಗೆ . . . ಕೊಟ್ಟಂ ಪುಲ್ಲುಣೆಯ ಮರ್ಯಾದೆ ಸಿರಿಗೆಱೆ ಪೊಸವೂರು ಸವಣೂರು ಕಿಱುಗೇರಿ ಇವು ಪೂರ್ವ್ವಮರ್ಯ್ಯಾದೆ (ಎಕ. XI, ದಾವಣ. ೧೧೯-೦೯ ; ೨೨೨). [?]

**ಪುಲ್ಲುರಿ** (ನಾ). ಹುಲ್ಲಿನ ಉರಿ,—ಜ್ವಾಲೆ : ಸಾಡೊಳಗೆ ಮಿಸೆದೆಱೆಯಂ ಬೇಡಿಸುವಂ ಬೀರರರಸಿಯರವೆಸರಿಂ ಕೂಸಾಡಿಸಲೀಯಂ ಪು[ಪಾಠಾಂ. ಹು]ಲ್ಲುರಿಯಾಡಿಸುವಂ ತೇಜದುರಿಯಿನರವಿಸಗೆಳಂ (ಆದಿಪು. ೬-೩೦). [ಪುಲ್ + ಉರಿ]

**ಪುಲ್ಲುಟ್ಟು** (ನಾ). ಒಂದು ಬಗೆಯ ತೆರಿಗೆ : ಪುಲ್ಲುಟ್ಟು ಬಾಲವಣವು ಮಾಯಿಬದೆಱೆಗಳುಮೆನ್ನಲದ ನೇಸಱ ಉಳ್ಳನೆಗ ಬಿಟ್ಟ ಇದು ಬಲ್ಲಹನ ದತ್ತಿ (ಸೌಇಇ. IX-i, ೩೯-೩ ; ೭ನೆಯ ಶತ). [?]

**ಪುಲ್ಲೆ**$_1$, ಹುಲ್ಲೆ (ನಾ). ಚಿಗರೆ ; ಜಿಂಕೆ ; ಎರಳೆ : ಒಡನೆ ನೆರೆದರಸು ಮಕ್ಕಳ ನಿಡುಗಣ್ಗಳ ಬೞಗವೆಱಗೆ ತನ್ನಯ ಮೆಯ್ಯೊಳ್ ನಡೆ ಬೞಸಿ ಪಲರುಮಂಬಂ ತುಡೆ ನಡುವಿರ್ದೊಂದು ಪುಲ್ಲೆಯಿರ್ಪಂತಿರ್ದಳ್ (ಶಂಕಪು. ೩-೩೦) ; ಪುಲ್ಲೆಯ ನೋಟದಂತೆ ಸಂಚಳನಾಗದೆ (ಧರ್ಮಾಮೃ. ೧೦-೩೭) ; ಪುಲ್ಲಂ ಕಚ್ಚಿದ ನರನಂ ಕೊಲ್ಲಂ ಭಟನಿವರ ಬಾಯೊಳಂ ಬಸಿಱೊಳಗಂ ಪುಲ್ಲೆ ಗಡ ಬಗೆವಡದಱಿಂ ಪುಲ್ಲೆಗಳೆನಿಸಿರ್ದುವಕ್ಕಟವನೇಕೆಚ್ಚೈ (ಬಂಹು. ೧೦-೬). **ಹುಲ್ಲೆ** : ಹುಲಿಯು ಬೆನ್ನಿನಲ್ಲಿ ಒಂದು ಹುಲ್ಲೆ ಹೋಗಿ ಮೇದು ಬಂದೆನೆಂದರೆ ಇದ ಕಂಡು ಬೆಱಗಾದೆ (ಅವಶಂ. ೬-೨೭) ; ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾದೆನೈ (ಕುಮ್ಯಾಸ. ೦೯-೧೨೨) ; ನಂದನನ ಕಾಣದೆ ಕಂಗೆಟ್ಟು ಹೊರಳ್ದಳು ಮುಮ್ಮೊನೆಬಾಣ ತಾಗಿದ ಹುಲ್ಲೆಯಂತೆ (ವೋಕಶ. ೪-೭೯).

**ಪುಲ್ಲೆಯ ಬಯಲ್**, **ಹುಲ್ಲೆಯ ಬಯಲ್** = ಜಿಂಕೆಗಳು ಓಡಾಡುವ ಪ್ರದೇಶ : ಜಿಡ್ಡುಳಿಗೆ ೭೦ ಱ ಬಳಿಯ ರಾಜಧಾನಿ ಬಳ್ಳಿಗಾವೆಯ ಪುಲ್ಲೆಯ ಬಯಲೊಳ್ ಭೇರುಣ್ಡಗಳೆಯೊಳ್ ಕೊಟ್ಟ ಗಟ್ಟಿ (ಎಕ. VII, ಶಿಕಾ. ೦೨೦-೦೬; 1048) ; ಬಳ್ಳಿಗಾವೆಯ ತಳದ ಹುಲ್ಲೆಯ ಬಯಲೊಳ್ ಕಚ್ಚವಿಯ ಗಡಿಂಬದ ಗಳೆಯೊಳಳೆದು ಕೊಟ್ಟ ಗಟ್ಟಿ ಮತ್ತರೆರಡು (ಮೈಆರ. ೧೯೨೯, ೬೩-೬ ; 1024). **ಪುಲ್ಲೆಯ ಮೊನೆ** = **ಪುಲ್ಲೆಯ ಬಯಲ್** : ವಿದ್ಯಾಕ್ತಿರ್ತ್ತಿಪಣ್ಡಿತರ್ಗ್ಗೆ ಪುಲ್ಲೆಯ ಮೊನೆಯಿಂ ಪಡುವಲ್ ಮತ್ತರ್ಪ್ಪದಿನಾಱು (ಸೌಇಇ. IX-i, ೦೦೬-೩೯ ; 1075). **ಹುಲ್ಲೆಯ ತೆವರ್** = **ಪುಲ್ಲೆಯ ಬಯಲ್** : ಹುಲ್ಲೆಯ ತೆವರಲಬ್ಬೆಯನವರ ಕೆಯಿಂ ಮೂಡಲುಕೇರಿಯ ಎಱಕನವರ ಕೆಯಿಂ ತೆಂಕಲು . . . ಮತ್ತರು ೧೨ ಶ್ರೀವಾನ್ಯ (ಸೌಇಇ. IX-i, ೩೭೦-೩೯; 1258). [ ದೇ.॥ ತಮಿ. ಪುಲ್ವಾಯ್; ತುಳು. ಪುಲ್ಲೆಮ್ರುಗ ]

**ಪುಲ್ಲೆ**$_2$ (ನಾ). (?) : ಬೆಳ್ಳಿಬಸವನ ಆಭರಣದ ಲೆಖ್ಖಾ . . . ಪುಲ್ಲೆಕಡ ಸಾವುಮಾನು ೧೬ ತಾಳಿಗಳು ೨ ಯಿದರ ಹಗ್ಗದ ಪಟ್ಟಿ (ಎಕ. XIV, ಶಂಶಪ. ೨೯೯,೩ನೆಯ ಆ೦೦; ಸು. 1848). [ ? ]

**ಪುಲ್ಲೆಗಣ್**, ಹುಲ್ಲೆಗಣ್, ಹುಲ್ಲೆಗಣ್ಣು (ನಾ). ೧. ಜಿಂಕೆಯ ಕಣ್ಣು. ೨. ಜಿಂಕೆಯ ಕಣ್ಣನಂತಿರುವ (ಚೆಲುವಾದ ಮತ್ತು ಚಂಚಲವಾದ) ಕಣ್ಣು : ಪು[ಪಾಠಾಂ. ಹು]ಲ್ಲೆಗಂಗಳ ಕೊಲ್ಲಿನೋಟದ ಮಲ್ಲಿಗೆಯ ಮೊಗ್ಗೆಗಳ ದಂತದ . . . ವಟಫಲಾಧರೆ ನಿಲ್ಲಲೆಸೆದಳು (ಜಾಗಪ. ೨-೦೩). **ಹುಲ್ಲೆಗಣ್** : ೨. ತವಕದಿ ಹುಲ್ಲೆಗಣ್ಣವಳೊರ್ವಳಂದಕವನಲ್ಲಸದಿ ಚೆಲ್ಲಿದಳು (ಜೀವಂಚ. ೦೬-೬೦); ಚೆಲ್ಲೆಗಣ್ಣವರಳ್ಗಣ್ಣವರ್ ನಿಡಿಗಣ್ಣ ಹುಲ್ಲೆಗಣ್ಣವರ್ ... ತೋರಧಮ್ಮಿಲ್ಲೆಯರೆಯ್ದಿತೊಗ್ಗಿನಲಿ (ವೋಕಶ. ೨೯-೧೨). **ಹುಲ್ಲೆಗಣ್ಣು** : ೨. ಹುಲ್ಲೆಗಣ್ಣುಗಳಿಂದ ನಳ್ಳಿನೋಟಗಳಿಂದ ಗಲ್ಲ ಕರಣೆಗಳಿಂದ ಬೆಳೆವ ಮೂರುತಿಯ ನಿನ್ನ ಕರುಣೆಯಿನೆನ್ನ ತೊಳೆದು ಹೋಗೈಯ (ಬಸವಾ. ೪೩-೦೩).

**ಪುಲ್ಲೆಗಣ್ಣಳ್**=ಜಿಂಕೆಯ ಕಣ್ಣಿನ ಹಾಗಿರುವ ಕಣ್ಣುಗಳುಳ್ಳವಳು; ಹರಿಣನೇತ್ರೆ : ಪುಲ್ಲೆಗಣ್ಣಳಿ ಕೇಳು (ಶಬಮೋ. ೦೦-೪೬).

[ ಪುಲ್ಲೆ$_1$ + ಕಣ್ ]

**ಪುಲ್ಲೆಗೋಡು** (ನಾ). ೧. ಜಿಂಕೆಯ ಕೊಂಬು,—ಕೋಡು. ೨. ಜಿಂಕೆಯ ಕೊಂಬಿನಾಕಾರದ ಒಂದು ಬಗೆಯ ಆಭರಣ : ವನಸಿಂ ಮುತ್ತಗಶಿಶುಗಂದನುನಯದಿಂ ಪುಲ್ಲೆಗೋಡು ಪುಲಿಯುಗುರ್ಗಳನೊಲ್ದು ನುರಾಗದಿಂದೆ ಕಟ್ಟಿದಳೆನೆ ನನೆ ಕಿಲವೆಸೆಯುತಿರ್ಪುವಾ ಮುತ್ತುಗದೊಳ್ (ಜಗ್ಗಿಪ. ೩-೩೬೩). [ ಪುಲ್ಲೆ$_1$ + ಕೋಡು ]

**ಪುಲ್ಲೆಮಱಿ** ' ಪುಲ್ಲೆವಱಿ ' ನೋ.

**ಪುಲ್ಲೆವರಿ** ' ಪುಲ್ಲೆವಱಿ ' ನೋ.

**ಪುಲ್ಲೆವಱಿ**, ಪುಲ್ಲೆಮಱಿ, ಪುಲ್ಲೆವರಿ, ಹುಲ್ಲೆಮರಿ (ನಾ). ಜಿಂಕೆಯ ಮರಿ ; ಚಿಗರೆಯ ಮರಿ : ಅಸು ಪೋಪ ಪುಲ್ಲೆವಱಿಯಂ ಕೈಯಿಂದದಂ ಕೊಂಡು ಬೇಡನಗುರ್ವಿಂ ನಡೆಗೊಂಡಂ (ಕುಸುಮಪು. ೦೯-೩೩). **ಪುಲ್ಲೆಮಱಿ** : ಬವರಂಗೆಯ್ದ ಗಜಂಗಳ ನಿಪಹದ ನಿಗ್ಗವಮುದುಡಿದು ಸೂಸಿರೆ ನೆಲದೊಳ್ ತವೆ ಪಸಿದ ಪುಲ್ಲೆಮಱಿಗಳ್ ತವಕದೆ ಬಿಸಮೆಂದು ತುಡುಕುಗುಂ ತದ್ವನದೊಳ್ (ರಾಜಶೇ. ೩-೭೦). **ಪುಲ್ಲೆವರಿ** : ಪುಲಿಯೊಡನೆ ಕಲಹವೇ ಪುಲ್ಲೆವರಿಗೆ (ಜೀಶರಾ. ೦೬-೩೩). **ಹುಲ್ಲೆಮರಿ** : ಅವನು ಹುಲ್ಲೆಮರಿಯನ್ನು ಅಟ್ಟಿಸಿಕೊಂಡು ಹೋಗಿ ದಟ್ಟವಾದ ಕಾಡಿನೊಳಗೆ ಸಿಕ್ಕಿಬಿದ್ದನು (ಕೂತ).

[ಪುಲ್ಲೆ$_1$ + ಮಱಿ]

**ಪುಲ್ಲೆವೆಚ್ಚು** (ನಾ). ಜಿಂಕೆಯಂತೆ ಗಾಬರಿಯಾಗುವಿಕೆ : 'ಪುಲ್ಲೆವೆಚ್ಚುವೆಚ್ಚು' ಪರಾ. [ಪುಲ್ಲೆ$_1$ + ಬೆಚ್ಚು$_2$ (< ಬೆರ್ಚು$_2$)]

**ಪುಲ್ಲೆವೆಚ್ಚುವೆಚ್ಚು** (ಕ್ರಿ). ಜಿಂಕೆಯಂತೆ ಗಾಬರಿಯಾಗು : ಕದನದೊಳನ್ನು ನಿನ್ನ ತರವಾರಿಯ ಧಾರೆಗೆ ಮೆಯ್ಯನೊಡ್ಡಲಾಱದೆ ನಱದಿನ್ನುವನ್ನದನೆ ಜಾನಿಸಿ ಜಾನಿಸಿ ಗಂಗ ತನ್ನ ನಮ್ಬಿದ ಸುವತೀಕದಮ್ಬಿರ್ದ್ದ ಪೌವನೆ ಪೋಗಿರೆ ಪುಲ್ಲೆವೆಚ್ಚುವೆಚ್ಚಿದಪನಹರ್ನಿಶಂ ತ್ರಿಗುಳ ದಾಮನರಣ್ಯಶರಣ್ಯವೃತ್ತಿಯಿಂ (ಎಕ. II, ೨೪೦-೨೯ ; ಸು. 1175).

[ಪುಲ್ಲೆವೆಚ್ಚು + ಬೆಚ್ಚು$_1$ (< ಬೆರ್ಚು$_1$)]

**ಪುಲ್ಲೋರಿ** (ನಾ). ಹೋರಿ ಕರು : ಕೆಲವ ಕೇಸಿಗ ನಿಱುವ ಹಂಡ ಹಾಱುವ ಚಿಂಚ ಮಲೆವ ಪುಲ್ಲೋರಿ ಬೆಚ್ಚುವ ಬೆಳ್ಳಿ . . . ನಾನಾಪರಿಯ ಕಬ್ಬಸಿಗಳೊಳಗಾದ ಪಲವುಪರಿಯೆತ್ತು ತೊಂಭತ್ತಾಱುಲಕ್ಷ ಮೇಳೈಸಿ ಪಿಡಿದುವು ಗ್ಗೆಲ್ಲಕೆ (ಸಿಂಗಿರಾ. ೩೩-೭). [ಪುಲ್ + < ಪೋರಿ$_2$]

**ಪುಲ್ವಕಿ** 'ಪುಲ್ವಕ್ಕಿ ' ನೋ.

**ಪುಲ್ವಕ್ಕಿ**, ಪುಲ್ವಕಿ (ನಾ). ಒಂದು ಪ್ರದೇಶದ ಹೆಸರು : ತಮ್ಮಪಲ್ ಪರಿದು ಪುಲ್ವಕ್ಕಿಯಲ್ಲಿ ಕಾದಿ ತುಱುವಮಲ್ ಮಗುಟ್ಪಿ (ಮೈಆರ. ೦೯೨೪, ೪೯-೩ ; ೯). **ಪುಲ್ವಕಿ** : ದುಗ್ಗಮಾರೆಱೆಯಪ್ಪೊ ಕೊವಳಾಲನಾಡು ಮೂನೂಱುಂ . . . ಪುಲ್ವಕಿನಾಡುಸಾಸಿರಮು ಬೆಪ್ಪೋದು ಸಾಸಿರಮು

× × × ನಾಡಬುವತ್ತುಮಾನಾಳುತ್ತಿರೆ (ಎಕ. X, ಶ್ರೀನಿವಾ. ೩೭-೫; ಸು. 770).

[?]

**ಪುಲ್ವಗೆ**, ಪುಲ್ಬಗೆ (ನಾ). ಹೀನವಾದ ವಿಚಾರ ; ಕೀಳಾದ ಯೋಚನೆ : ಅವಳ ಮನದ ಪುಲ್ವಗೆಯುಂ **ಪುಲ್ಲಮೆಯುಮುಮನಱಿಯದೆ** ಸಮಸ್ತ ಬಳಿಯೋದುಕ್ಕನಾಗಿ . . . ಮದಗಜೇಂದ್ರಪುರವನೆಯ್ದೆ ಬರೆ (ಶಂಶಶಾ. ೬-೬೬ ವ); ಮಾರಂ ವಿದ್ಯಾಶ್ರೀತನಪ್ಪುದಱಿಂ ತನ್ನ ನುಡಿಯುಂ ಕಡೆಗಣಿಸ ದೊಡಂಬಡುಗುಮೆಂಬ ಪುಲ್ವಗೆಯಿನಾ ಪಾಣ್ಬೆಯಿಂತೆಂದಳ್ (ಪಂಪಭಾ. ೬-೦೯೬ ವ). **ಪುಲ್ಬಗೆ** : ಅವರ ಪುಲ್ಬಗೆಯನ್ನೂ ಪುಲ್ಲದೆಯನ್ನೂ ಅರಿಯದೆ ಅವನು ಹಸ್ತಿನಾಪುರಕ್ಕೆ ಬರುವನು (ತವಿಶ. ೬೯). [ಪುಲ್ + ಬಗೆ₁]

**ಪುಲ್ವಟ್ಟೆ**, ಪುಲುವಟ್ಟೆ, ಹುಲುವಟ್ಟೆ (ನಾ). ೧. ಸಣ್ಣ ಹಾದಿ; ಕಿರು ದಾರಿ; ಕಾಲುದಾರಿ : ನೆತ್ತರುಂ ಬಸಿವುತ್ತಿರ್ಪುದು ಪೋದವಿಕ್ಕ ಮಱಿಯುಂ ಪುಲ್ಲ [ಲ್ವ] ಟ್ಟೆಯೊಳ್ ಪುಲ್ಲೆಗಳ್ (ಕಾದಂಪೂ. ೦೩೬); ಕಿರಾತರಾಜನಾ ಕನ್ನೆಯ ಪಾದಂಗಳು ಮಲತೆಱದಿಂದಿರ್ಪಿಸಿ. . ಪುಲ್ವಟ್ಟೆಯಿಂ ಪೆರಡವಿಯಿಂ **ಪೊಱಮಡಿಸಿ** ಕಿಱಿದುಂ ದೂರಂ **ಪೋಗಿ** (ಧರ್ಮಾಮೃ. ೩-೦೦೫); ನೆಟ್ಟನೆ ಸತ್ಪಥಂಬಿಡಿದು ಪೋಪ ನರಂ ಮತಿಗೆಟ್ಟು ಪಾಯ್ದು ಪುಲ್ವಟ್ಟೆಯ ನೆಯ್ದಿ ಪೋಗುತಿರೆ ಕಾನನದೊಳ್ (ಧರ್ಮಪ. ೦-೯೯). **ಪುಲುವಟ್ಟೆ** : ೧. ಒರ್ವ ವನಚರಂ ಮಹಾವನದೊಳ್. . . ಒಂದು ಮಹಾಹಿ ತೊಟ್ಟಗೆ ಬರೆ ಪುಲುವಟ್ಟೆಯೊಳ್ ಕೋಲಗಲಿಂಬಿಲ್ಲದೆ ಬಿಲ್ಲಂ ಕೊಂಡು ವಿಷದೂಷಿತ ಮಪ್ಪಂಬಂ ತೊಟ್ಟಿಸುವುದುಂ (ಶಂಕಕಂ. ೩೦೦-೦೯). **ಹುಲುವಟ್ಟೆ** . ೧. ಹುಲುವಟ್ಟೆಯೊಳು ಬೆಳೆದ ಹೆಮ್ಮರನ ಮಲಗಿಸಿ ನೀದ ಹುಳ್ಳಿಹೊಱೆಯಂ ಕಂಡಳು (ಹಕಶಾ. ೭೨-೨೦); ಪರಿಕಿಸಲು ಸ್ವರ್ಗಕ್ಕೆ ಪರಿವ ಹುಲುವಟ್ಟೆ ಗಳಪರಿಮಿತಂ ವಿಷ್ಣುಭಯವೀವವಸಿತುಂ (ಶಾಪಂಶ. ೩-೫). ೨. ಕ್ಷುದ್ರ ವಾದ ಹಾದಿ ; **ಕೆಟ್ಟ ಮಾರ್ಗ**: ಧರ್ಮಪಥ ಹುಲುವಟ್ಟೆಯೆನಿಸಿದ ಹಮ್ಮಿನಲಿ ಕೆಡಬೇಡ (ಕುಪ್ಪಾಉ. ೯-೦೩). [ಪುಲ್ + ಬಟ್ಟೆ₁]

**ಪುಲ್ವಟ್ಟೆವಿಡಿ**(ಕ್ರಿ). ಕಿರುದಾರಿಯನ್ನು ಅನುಸರಿಸು; ಕಾಲುದಾರಿಯನ್ನು **ಹಿಡಿ** : ಆ ಮಹಾಟವೀಮಧ್ಯದೊಳೊಂದು ಪುಲ್ವಟ್ಟೆವಿಡಿದು ನಡೆಯೆ (ಶಂದ್ರಪು. ೫-೩೨ ವ); ಕಟ್ಟೊಲ್ಮೆಯೊಳಿವೆಯಲುಗದೆ ನೀಡುಂ ನಿಟ್ಟಪ ನೀಱಿನ ಬಗ ದಾಸಿಯ ಪುಲ್ವಟ್ಟೆವಿಡಿದು ನಡೆಯುತ್ತಿರೆ (ಶಬಯಶಾ. ೯-೦೦); ಅವನಲ್ಲಿಂದ ಪುಲ್ವಟ್ಟೆವಿಡಿದು ನಿಲ್ಲದೆ ಪೋಗಿ ಕಂಡನು ಕಾನನಮಧ್ಯದಲ್ಲಿ ಮಹಾಸರೋವರವ (ವಾಗಳು. ೦೦-೬೬). [ಪುಲ್ವಟ್ಟೆ + ಪಿಡಿ₁]

**ಪುಲ್ವನೆ**, **ಪುಲುಮನೆ**, **ಪುಲ್ಮನೆ**, **ಹುಲ್ಲುಮನೆ** (ನಾ). ಹುಲ್ಲಿನ ಮನೆ; ಗುಡಿಸಲು ; **ಪರ್ಣಕುಟಿ** : ಕಲ್ವಾಟಿ, ಪುಲ್ವನೆ, ನೀರ್ವಾವು (ಶಾಶಾಭೂ. ೩೦ ಉದಾ). **ಪುಲುಮನೆ** : ಚಂದನೆಯುಂ . . . ಶೃಂಖಳಾಬಂಧನೆಯುಂ ಮಾಡಿ ತಲೆವಾಗಿಲ ಕೆಲದ ಪುಲುಮನೆಯೊಳಿರಿಸಿ ಕೊಚ್ಚನಿಕ್ಕಿ ನಡಸುತ್ತು ಮಿರ್ದಳ್ (ವರ್ಧಪು. ೦೫-೩೪ ವ). **ಪುಲ್ಮನೆ** : ಪುಲ್ಮನೆಯೊಳಿರ್ದವಂ ಕಿರ್ಚಿನ ಪೆರ್ಚನಿಚ್ಚೈಸಿದೊಡು ಸಂಸಾರದೊಳಗಿರ್ದಾತಂ ಕಷಾಯಂಗಳ ಪೆರ್ಚನಿಚ್ಚೈಸುವೊಡಂ ಆಯುರ್ವರುಂ ಬೇವುದುಂ ನೋವುದುಂ ಎಂ ಬಿರಿದೆ (ಶಾವಸಂ. ೦೪೩-೦೦). **ಹುಲ್ಲುಮನೆ** : ಕೆಳಕಾನೂರಿನ ಹುಲ್ಲು ಮನೆಯು ಮುಂದುಗಡೆ . . . ಸೇರೆಗಾರರೂ ಹೂವಯ್ಯನೂ ಉದ್ವೇಗ ದಿಂದ ಮಾತಾಡುತ್ತಿದ್ದರು (ಕಾಸೂರು. ೯೦೦) ; ಸಿದ್ದಣ್ಣನ ಹುಲ್ಲುಮನೆ ಸ್ಮಶಾನದಂತಾಗಿತ್ತು (ಕುಕಕು. ೭೦). [ಪುಲ್ + ಮನೆ]

**ಪುಲ್ವರಿ** (ನಾ). ಒಂದು ಬಗೆಯ ತೆರಿಗೆ ; (ದನಗಳನ್ನು) ಹುಲ್ಲು ಮೇಯಿಸಿದುದಕ್ಕಾಗಿ ಕೊಡುತ್ತಿದ್ದ ತೆರಿಗೆ : ಇಡತೊರ್ಶೆ ಪುಲ್ವರಿ ಮಂದೈ ಕಂಢೆ(ಡೆ) (ಎಕ. XVIII, ೦೯೨-೩೦; 1434).

[ಪುಲ್ + ಪರಿ₁./ತಮಿ. ಪುಲ್ವರಿ, ಪುಲ್ಲರಿ ; ತೆಲು. ಪುಲ್ಲರಿ]

**ಪುಲ್ಮಾನಿಸ**, **ಪುಲ್ಮಾನಸ**, ಹುಲುಮಾನಿಸ (ನಾ). ಅಲ್ಪನಾದ ವ್ಯಕ್ತಿ ; ಕ್ಷುದ್ರಮನುಷ್ಯ : ಕೆಟ್ಟೊಡಲಾಂತು ಕರ್ಮಭೋಗಂಗೆಯ್ದು ಕುತ್ತದಿಂ ಮಡಿವ ಪುಲ್ಮಾನಿಸರುಮಂ ಕ್ಷುದ್ರದೈವಮಂ ಪೊಗಳ್ದು ಮುನ್ನುಳ್ಳ ಮತಿಯುಂ ಕೆಡಿಸಿಕೊಳ್ವಧಮಕವಿಗಳ ಮಾತವೇಕಿಲ್ಲಿ (ಶಮ್ಯರಾ. ೦-೯೭). **ಪುಲ್ಮಾನಸ** : ಇಕ್ಷ್ವಾಕುವಂಶತಿಳಕನಪ್ಪ ರಾಮನಂ ಪುಲ್ಮಾನಸನೆಂದೇಕೇಳಿಸಿ . . . ನಾಣ್ಚದೆಂತು ನುಡಿವೆ (ಶಾಪುಂಪು. ೩೦೨) ; ಕಲ್ಮಷರಹಿತಂಗೆ ತಿಕ್ಕರಾಜಂ ಗುಳಿದೀ ಪುಲ್ಮಾನಸರಂ ದೊರೆಯೆನೆ ಕಲ್ಮಾಣಿಕದನ್ನುಟಿಂದದಂತಂತೆ ದಿಟಂ (ಎಕ. VII, ಶಿಕಾ೦. ೦೯-೩೮ ; 1181) ; ಪುಲ್ಮಾನಸನಾದ ಚಂಡಶಾಸನ ಪೆಸರಂ ಚಾಂಡಾಲ ನೀರೊಳೀತರ್ದಾಪರೇ (ಅಸಂಪು. ೦೦-೩೨). **ಹುಲುಮಾನಿಸ** : ಕಾಲಂಗನದಳದ ಕಲ್ಪಾಂತರುದ್ರನ ವಿಷಮನಯನಜ್ವಾಲೆ ಗಳುಕದ ವೀರಭಟರೊಡನೆ ಉಸುರಬಹುದೇ ಜೀಯ ಹುಲುಮಾನಿಸರ ಮೃದುರಣರಾಜಕಾರ್ಯವ (ಕೊರಂಶಾ. ೬-೨-೦೨).

[ಪುಲ್ + ಮಾನಿಸ₁ (<ಮಾನುಸ)]

**ಪುಲ್ವಿಡಿ**, ಹುಲುವಿಡಿ (ಕ್ರಿ). (ಅಲಂ) ಹುಲ್ಲನ್ನು ಕಚ್ಚಿ ಹಿಡಿಯುವುದರ ಮೂಲಕ ಶರಣಾಗತಿಯನ್ನು ಸೂಚಿಸು : ಪುಲ್ವಿಡಿಯೆ ಸಚಿವತನಯಂ ಕಾಲ್ವಿಡಿಯೆ ನಿಜೇಶಂ ... ಮಲಗೆವಿಡಿದಳ್ ಕಲ್ಪಾನಸೆ (ಲೀಲಾವ. ೦೯-೨೯) . **ಹುಲುವಿಡಿ** : ಬೊಮ್ಮನ ಮಡದಿಯು ನಾಸಿಕಪರೆಯಾಗಲಿ ವಿಕ್ಕರು ಹುಲುವಿಡಿಯಲಿ ದಿಗಧೀಶರು ಭಂಗಿತರಾಗಲಿ (ಶೀರೀಕ. ೦-೩೦).

[ಪುಲ್ + ಪಿಡಿ₁]

**ಪುಲ್ಪೊಱೆ**, **ಪುಲ್ಪೊಱೆ**, ಹುಲ್ಲುಹೊರೆ (ನಾ). ಹುಲ್ಲಿನ ಕಂತೆ,–ಕಟ್ಟು : ಕಲ್ಪೊಱೆದು ಸದೆಸಟ್ಟು ಪುಲ್ಪೊಱೆಗಳಾಂತವರ್ ನಿಲ್ಮಿದರ್ ಪುರದಗಳಂ (ಕಬಪು. ೧೨-೨೯) ; ಮಡಿದ ಪೆಣಗಳನೆಳೆದು ತುಂಬಿದರ್ ಪುಲ್ಪೊಱೆಗಳಂ ಕೊಱೆದುಗಳನೊಟ್ಟಿದರ್ ಕಲ್ಗುಂಡು ಮಣ್ಗಳಂ ಸುರಿದು ನೆಲಸರಿಮಾಡಿ ದರ್ (ಕಬಪು. ೧೨-೩೦). **ಪುಲ್ಪೊಱೆ** : ಪುಲ್ಪೊಱೆವೊತ್ತು ಶ್ರೀಪತೀಶನ ಪುರಕೆ ನಡೆಯುತಿರಲು (ಅರಾಕ. ೦-೯-೩). **ಹುಲ್ಲುಹೊರೆ** : ತೃಣ್ಯಾ, ತೃಣಾನಾಂ, ಸಂಹತೀ—ಹುಲ್ಲ ಮಾಮೆ, ಹುಲ್ಲುರಾಶಿ, ಹುಲ್ಲುಹೊರೆ, ಹುಲ್ಲ ಮೆದೆ, ಹುಲ್ಲುಮೂಟೆ, ಹುಲ್ಲಡಕ (ಸಿದ್ಧಾಂತಿ. ೦೩೨) ; ದೋಸೆ ತಿನ್ನುವ ಆಸೆಯಿಂದ ಬೇಗ ಹುಲ್ಲುಹೊರೆ ಹೊತ್ತುಕೊಂಡು ಸುಗ್ಗಿಗದ್ದೆಯಿಂದ ಮನೆಗೆ ಬಂದಿದ್ದಳು (ಶದ್ಯಸ. ೩೭). [ಪುಲ್ + ಪೊಱೆ³]

**ಪುಲ್ಸರವಿ**, ಹುಲುಸರವಿ (ನಾ). ಹುಲ್ಲನ್ನು ಹೊಸೆದು ಮಾಡಿದ ಹಗ್ಗ : ಪಲವು ಪುಲ್ಸರವಿಗಳ್ ಕೂಡಿ ದೃಢಮಪ್ಪೊಂದು ಲಳಿತರಥಪಾಶಕ್ಕೆ ಪಾಸಟಿಯೆನಿಕ್ಕುವೋ (ಅರಾಶ. ೩-೨-೯). **ಹುಲುಸರವಿ** : ನಿಮ್ಮ ನಂಬಿ ನಂಬದವನ ಬಾಳುವೆ ಹೊಲೆಯರ ನಾಯಿ ಹುಲುಸರವಿಯಿಂದ ಕರ ಕಷ್ಟ (ದೇರಾವ. ೨೦-೩೭) ; ಹುಲುಸರವಿಗಳನೆಯ್ದೆ ಹೊಸೆಹೊಸೆದು (ಬಸಪು. ೦೬-೨೦). [ಪುಲ್ + ಸರವಿ₁]

**ಪುಲ್ಸಾರೆ** (ನಾ). ಒಂದು ಬಗೆಯ ಔಷಧೀಸಸ್ಯ : " ಬೆಟ್ಟದುರುಳಿ, . . . ಪುರುಚಲಿಗಿಡ, ಪುಲ್ಸಾರೆ " (ಸಸ್ಯಕೆ.೯೨); ಹೇನುಕುರುವಿನ ಗಿಡ, ಪುರುಚಲಿಗಿಡ, ಪುಲ್ಸಾರೆ (ವೃಕ್ಷಿಗಿ. ೩೫-೦೦೦೬). [?]

**ಪುವಗಾಮ** (ನಾ). ಒಂದು ಊರಿನ ಹೆಸರು : ಶ್ರೀಪುರುಷಮಹಾರಾಜ ಪ್ರಿತುವೀರಾಜ್ಯಂಕೆಯ್ಯೆ . . . ಮುದುಗುನ್ನೂರ ಸಿಜ್ಜಡಿಅರಸ ಪುವಗಾಮ ಮಾಳ್ದುವಿದ್ದರ್ (ಎಕ. VII (R), ಮುಳಪ. ೦೨೨-೬ ; ಸು. 740).

[ ? + ಗಾಮ ]

**ಪುವ್ವು** ' ಪೂ₂ ' ನೋ.

**ಪುಷ್ಕರ** (ನಾ). ೧. ನೀಲಿಬಣ್ಣದ ತಾವರೆ. ೨. ಪದ್ಮ ; ಕಮಲ : " ಸಹಸ್ರಪತ್ರಂ . . . ಪುಷ್ಕರಂ, ರಾಜೀವಂ, ಅರವಿಂದಂ, ಪದ್ಮಂ, ಪಂಕಜಂ —ಈ ೧೭ ತಾವರೆ " (ಹಲಾಯು. ೦೦೨-೩೭) ; ಪುರಹರಂ ಪೂಜೆಗೆಯ್ದುವಸರ ದೊಳೊಂದು ಪುಷ್ಕರವಿಲ್ಲದಿರೆ ನೋಡಿ ತನ್ನ ಬೆಳತಿಗೆಗಣ್ಣನಿರದೆ

ಕಿಳ್ತಭವನಂಘ್ರುಗೆ ಪೂಜೆಗೆಯ್ದುದಗಿ (ಅರಾಕ. ೧-೩-೨೨). ೩. ಒಂದು ಬಗೆಯ ಮೂಲಿಕೆ; ಚಂಗಲಕೋಷ್ಠ: ಕೋಷ್ಟಂ ಪದ್ಮಕಂ ಕರ್ಪೂರ ಬಾಳದ ಬೇರು ಪುಷ್ಕರಂ ಭದ್ರಮುಸ್ತೆಯುಮಂ ಸರಿಗೊಂಡು . . . ಪೂಸಲು ಯೋನಿದೋಷ ಕೆಡುವುದು (ಕಾಲುಶಾ. ೨೭೫). ೪. ಆನೆಯ ಸೊಂಡಿಲಿನ ತುದಿ: "ಕರಾಗ್ರಂ, ಪುಷ್ಕರಂ—ಈ ೨ ತುದಿಗೈ" (ಹಲಾಯು. ೩೭-೬೬); ಕರಿಗಳ್ ಕೇಸರಿಗಳ್ಗೆ ಪುಷ್ಕರಧೃತಸ್ವಚ್ಛಾಂಬುವಂ ನೀಡೆ (ಆದಿಪು. ೯-೯೭); ಕರಪುಷ್ಕರಂಗಳಿಂ ತಂದು ಪೂಗಿಡುಗಳ್ಗೆ ನೀರೆಱೆವ ಮಱಿಯಾನೆಗಳಿಂ (ಕಾಧಂಪೂ. ೨೨೦); ಜಲಕರಿನಿಕರಂ ಪುಷ್ಕರಮಲರೆ ಕರಂ ನಿಮಿರೆ ಪೂತ್ಕರಿಸೆ ಸಿಡಿದ ಲಸಜ್ಜಲಕಣಮನಮಳಮುಕ್ತಾಫಳಮೆಂದುಱೆ ಮುಗ್ಧಖಚರಿಯರ್ ಕೈಯಿಡುವರ್ (ರಾಜಶೇ. ೧-೯೩). ೫. ಚರ್ಮವಾದ್ಯದ ಮುಖ. ೬. ಒಂದು ಬಗೆಯ ಚರ್ಮವಾದ್ಯ; ನಗಾರಿ: ನವಮೇಘಧ್ವನಿ ಪುಷ್ಕರಧ್ವನಿ ಲಸತ್ತಾರಾಳಿ ಪುಷ್ಪೋಪಹಾರವಿಲಾಸಂ (ಆದಿಪು. ೬-೭೨). ೭. ಡಮರುಗ: ನಯನತ್ರಯಾಂಚಿತಪಪುಷ್ಕರ ಪುಷ್ಕರಪುಷ್ಕರಾಂಕ (ರಾಜಶೇ. ೧೩-೫೨). ೮. ಪಾತ್ರೆ; ಭಾಂಡ. ೯. ಕೊಕ್ಕರೆ; ಸಾರಸಪಕ್ಷಿ: "ಪುಷ್ಕರಂ ಸಾರಸಂ" (ಪುಂಗಲಾ. ೫೦-೬). ೧೦. ಬಾಣ; ಅಂಬು. ೧೧. ಕತ್ತಿ; ಖಡ್ಗ. ೧೨. ಕತ್ತಿಯ ಅಲಗು,–ಧಾರೆ. ೧೩. ಕತ್ತಿಯ ಒರೆ; ಖಡ್ಗದ ಕೋಶ. ೧೪. ಯುದ್ಧ; ಕದನ. ೧೫. ಗಗನ; ಆಕಾಶ: "ಸುರಸರಣಿ ವಿಷ್ಣುಪದವಂಬರಂ ವಿಯತ್ ಖಂ ವಿಹಾಯಸಂ ಗಗನಂ ಪುಷ್ಕರಮಾಕಾಶಂ" (ಪಸ್ತುಕೋ. ೧೧-೫೭); ಮೊಱೆವ ದುಂದುಭಿರಭಸದಲಿ ಪುಷ್ಕರಕೆ ಪ್ರಸ್ಫುಕವಡರಿದುದು (ಕೊರಲಾ. ೬-೫೪-೧೧); ಖಣಿಖಟಿಲೆಂಬ ಶಬ್ದವತಿ ಪೂರಿಸೆ ಪುಷ್ಕರ ಭೂತಳಂಗಳಂ ಮಣಿವವು ಕೂಡೆ ದಿಗ್ಗಜ ಫಣೀಂದ್ರ ಮಹಾಕಮಠಂಗಳ್ (ಹರಿಶ್ಚಂ. ೩-೪೭). ೧೬. ನೀರು; ಜಲ. ೧೭. ಕೊಳ; ಸರೋವರ. ೧೮. ಒಂದು ಬಗೆಯ ಹಾವು,–ಸರ್ಪ. ೧೯. ಮದ; ಉನ್ಮಾದ. ೨, ೪, ೧೯: ಸಿರಿಗೆಡೆಯಾದ ಪುಷ್ಕರದೊಳೊಂದಿದ ದೀರ್ಘಸುವೃತ್ತಹಸ್ತದಿಂ . . . ಈ ನರಸಿಂಹಭೂಭುಜಂ ಪರಿಚಿತಭದ್ರಲಕ್ಷಣದಿನೊಪ್ಪುವ ಬಪ್ಪನ ಗನ್ಧವಾರಣಂ (ಎಕ. V, ಬೇಲೂರು. ೧೯೩-೫೦; 1161). ೨೦. ಕೆಂಪುಬಣ್ಣ: ಪಶ್ಚಿಮದಲ್ಲಿ ಕಂಡ ಪಚ್ಚೆಯ ಕಲ್ಲ ಉತ್ತರದಲ್ಲಿ ಕಂಡ ಪುಷ್ಕರದ ಕಲ್ಲ ಪೂರ್ವದಲ್ಲಿ ಕಂಡ ಬಿಳಿಯ ಕಲ್ಲ ಮೂಱೂ ಕೂಡಿ ಮಡಿಕೆಯ ಮಂಡೆಯ ಮೇಲಿರಿಸಲಾಗಿ ಕಂಡಿತ್ತು ಕಲ್ಲಿನ ಇರವು (ವಚನಸಂ. ೧೪೦-೭೭೯). ೨೧. ಶಿವನ ಒಂದು ಹೆಸರು: ನಯನತ್ರಯಾಂಚಿತವಪುಷ್ಕರಪುಷ್ಕರಪುಷ್ಕರಾಂಕ (ರಾಜಶೇ. ೧೩-೫೨). ೨೨. ಕೃಷ್ಣನ ಒಂದು ಹೆಸರು. ೨೩. ವರುಣನ ಮಗ. ೨೪. ನಳಮಹಾರಾಜನನ್ನು ದ್ಯೂತದಲ್ಲಿ ಸೋಲಿಸಿ ರಾಜ್ಯವನ್ನು ಕಿತ್ತುಕೊಂಡ ಅವನ ದಾಯಾದಿಯ ಹೆಸರು: ನಳನೃಪತಿಯ ದಾಯಾದಂ ಸಲೆ ಬಡವಟ್ಟವನಲ್ಲಿ ಪುಷ್ಕರನೆಂಬಂ (ನಳಚಂ. ೫೦೩). ೨೫. ಸೂರ್ಯ. ೨೬. ಗುಹೆ; ಗವಿ. ೨೭. ಭಾಗ; ವಿಭಾಗ. ೨೮. ಪವಿತ್ರ ಕ್ಷೇತ್ರಗಳಲ್ಲಿರುವ ನದಿ, ಸರೋವರ ಮುಂತಾದುವು; ಪುಣ್ಯತೀರ್ಥ. ೨೯. [ಜ್ಯೋತಿ] ಕೆಲವು ಗ್ರಹಗಳ ಕೂಟದಿಂದ ಉಂಟಾಗುವ ಅಶುಭಯೋಗ. ೩೦. [ಜೈನ] ಕಾಲೋದಧಿಯ ಆಚೆಗೆ ಇರುವ ಒಂದು ದ್ವೀಪ: ಕಾಳೋದಕಜಲಧಿ ಬೆಡಂಗಾಗೆ ತದ್ಬಾಹ್ಯದೊಳ್ ಪುಷ್ಕರನಾಮದ್ವೀಪಮಿರ್ಕುಂ (ಶಬ್ದಪು. ೧-೯೦). ೩೧. [ಕಾವ್ಯಮೀ] ಚಿತ್ರಕಾವ್ಯದಲ್ಲಿ ಒಂದು ಬಗೆ; ಪುಷ್ಕರವೆಂಬ ವಾದ್ಯದ ಆಕಾರದಲ್ಲಿ ಬರೆಯುವ ಪದ್ಯ: ಶರಶೂಲಚಾಪ ಚಕ್ರಾಸಿ ರೂಪಂ . . . ಮುರಜಂ ಗೋಮೂತ್ರಿಕೆ ಪುಷ್ಕರಮರ್ಧಭ್ರಮಣ ಸರ್ವತೋಭದ್ರಂಗಳ್ (ಕಾವ್ಯಾವ. ೫೬೯). "ಅಸಿಯೊಳು ಸುತೀರ್ಥದೊಳು ವಾದ್ಯಘಟತುಂಡದೊಳು ಜಸಜದೊಳು ಗಜಹಸ್ತದಗ್ರದೊಳು ಗಗನದೊಳು ಕುಶದೊಳೌಷಧದೊಳಾ ಪುಷ್ಕರಾಖ್ಯಂ" (ಪುಂಗಲಾ. ೧೪೭-೩೨); "ಕಮಲ ನಭ ವಾದ್ಯ ಭಾಂಡಂ ಉಮೆಯುರಸು ಸರ್ಪ ಮದಂ ಖಡ್ಗಂ ತೀರ್ಥೋತ್ತಮ ಭೇಷಜ ಕರಿಕರತುದಿ ಕ್ರಮದಿಂ ಪನ್ನೊಂದು ಪುಷ್ಕರಾಂಕಿತ ಶಬ್ದಂ" (ನಾನಾಕಂ. ೨೮). [ಸಂ.]

**ಪುಷ್ಕರಚಿಕುರ** (ನಾ). ಆಕಾಶವೇ ಕೂದಲಾಗುಳ್ಳವನು; ವ್ಯೋಮಕೇಶ; ಶಿವ: ಶರಣಾ ಪುಷ್ಕರಚಿಕುರ ಶಿವಭಕ್ತಿಮುಖಮುಕುರ (ಷಟಂ. ೧೧-೧). [ಸಂ.]

**ಪುಷ್ಕರಜ** (ನಾ). ೧. ನೀರಿನಲ್ಲಿ ಹುಟ್ಟಿದುದು; ಕಮಲ. ೨. ಕಮಲದಲ್ಲಿ ಹುಟ್ಟಿದವನು; ಬ್ರಹ್ಮ. ೧, ೨: ಹರಿ ಹುಸು ಕವಿ ಕೌಶಿಕಂ ಶಿಖಿ ಮಹೀಜಾತಂ ಶುಕಂ ಭೃಂಗ ಪುಷ್ಕರಜಂ ಚಕ್ರವಿನಾಯಕಂ . . . ರಂಜಿಸುತ್ತಿರ್ಪ ಶಂಕರನಾಸ್ಥಾನದ ಮಾಳ್ಕೆಯಿಂದೆ ಬಿರಿದೊಪ್ಪುತ್ತಿರ್ದುದಂತಾ ವನಂ (ತ್ರಿಪುರ. ೨-೧೨೬). [ಸಂ.]

**ಪುಷ್ಕರಮಿತ್ರ** (ನಾ). ತಾವರೆಯ ಗೆಳೆಯ; ಸೂರ್ಯ: ಪುಷ್ಕರಮಿತ್ರನಂ ದುದಯಪರ್ವತಮಂ ಪರಿವೇಱೆ ತಾರೆಗಳ್ ನಿಷ್ಕಳೆಯಾಗಿ ಪೋಗೆ ಪೊಗೆಸುತ್ತಿದ ಮುತ್ತಿನೊಲಿರ್ದುವಾಗಳಾ ಪುಷ್ಕರದೊಂದು ಪಾಂಡುರುಚಿಯುಂ ತಳೆದಿರ್ದುದು ಮೂಡಣಾಗಸಂ (ಬಲ್ಲಕಾ. ೯-೩೨). [ಸಂ.]

**ಪುಷ್ಕರಮೂಲ** (ನಾ). ಒಂದು ಬಗೆಯ ಮೂಲಿಕೆ; ಚಂಗಲಕೋಷ್ಠ: "ಪುಷ್ಕರಂ, ಕಾಶ್ಮೀರಂ, ಪದ್ಮಪತ್ರಂ, ಈ ೩ ಪುಷ್ಕರಮೂಲ" (ಪಾಶರಾ. ೧೧೧); ಶುಂಠಿ, ಪುಷ್ಕರಮೂಲ . . . ಇಷ್ಟನ್ನು ಕಷಾಯವ ಕಾಸಿ ಕುಡಿಸಲು ಕಾಸ, ಶ್ವಾಸ ... ಪರಿಹರವಹವು (ವೈದ್ಯಸಾ. II, ೬೦); ಶುಂಠಿ, ಪುಷ್ಕರಮೂಲ, ನೆಲಗುಳ್ಳ . . . ಕಷಾಯ ಕಾಯಿಸಿ ಜೇನುತುಪ್ಪಗೂಡಿ ಸೇವಿಸೆ ಶ್ಲೇಷ್ಮಜ್ವರ ಗುಣವಾಗುವುದು (ಸಕವೈ. ೮೮). [ಸಂ.]

**ಪುಷ್ಕರವಾಣಿ** (ನಾ). ಆಕಾಶದಿಂದ ಕೇಳಿ ಬರುವ ಮಾತು; ಆಕಾಶವಾಣಿ: ಪುಷ್ಕರವಾಣಿ ನುಡಿದುದೆಲೆ ಸುಸ್ಥಿರಭೂಪತಿ ಕೇಳೆನುತ್ತೆ (ಶಾಲಾಸ್ಯ. ೧-೪-೯೬). [ಸಂ.]

**ಪುಷ್ಕರಾವರ್ತಕ** (ನಾ). ಅತಿಯಾಗಿ ಮಳೆಯನ್ನು ಸುರಿಸುವ ಮೇಘಗಳ ಒಂದು ಗುಂಪು: ಜಗಕೆ ಜಗತ್ಪ್ರಳಯಂಬರಮೊಗೆದೊಡೆ ಸಂವರ್ತ ಪುಷ್ಕರಾವರ್ತಕಮಲ್ಲಿಗವೊಂದೆ ಮಾಟ್ಕೆಯಿಂ ನೆಟ್ಟಗೆ ಕಱೆಗುಂ ಜಲಧಿ ಜಲಧಿಯೊಳ್ ಕೂಡುವಿನು (ಅಜಿತಪು. ೮-೧೧). 'ಪುಷ್ಕಳಾವರ್ತಕ' ಪಾಠ. [ಸಂ.]

**ಪುಷ್ಕರಿ** (ನಾ). ಆನೆ; ಹಸ್ತಿ. [ಸಂ. ಪುಷ್ಕರಿನ್]

**ಪುಷ್ಕರಿಣಿ** (ನಾ). ೧. ಹೆಣ್ಣಾನೆ. ೨. (ತಾವರೆಯ) ಕೊಳ; ಕಲ್ಯಾಣಿ: "ಖಾತಾ, ಪುಷ್ಕರಿಣೀ—ಈ ೨ ಹೊಕ್ಕರಣೆ" (ಹಲಾಯು. ೧೧೧-೫೩); ಸಕಲರ್ತುಕವನದಿಂ ದೀರ್ಘಿಕೆಯಿಂ ಪುಷ್ಕರಿಣಿಯಿಂ ಸರೋವರದಿಂ ಕೌತುಕಮನವರ್ಕಂಡಕೌತುಕಮಂಗಳಪುರಮಂ (ಶಂಕರಮಾ. ೩-೩೪); ಅವಗಾಹಿತಪಥಿಕಜನಮನಕರುಣಿಗಳೆನಿಪ ಪುಷ್ಕರಿಣಿಗಳುಂ . . . ಅನೂನಶೋಭೆಯುಂ ಪಡೆಯೆ (ಕುಶಕೃ. ೯-೨೨ ವ); ಗಂಗೆಯ ನೀರು ಹರಿದು ಬಂದು ನಮ್ಮ ತೋಟದ ಪುಷ್ಕರಿಣಿಯಲ್ಲಿ ಝರಿಯಂತೆ ಧುಮುಕುತ್ತಿತ್ತು (ಶಿಬಂಧ. II, ೩). [ಸಂ. ಪುಷ್ಕರಿಣೀ]

**ಪುಷ್ಕಲ, ಪುಷ್ಕಳ** (ಗು). ೧. ಹೇರಳವಾದ; ಸಮೃದ್ಧವಾದ; ವಿಪುಲವಾದ: ಭೂಮಿಯಿಂದ ಪುಷ್ಕಲಬೆಳಸು ಬರಲು ಏನೇನನ್ನು ಮಾಡಬೇಕೋ ಎಲ್ಲವನ್ನೂ ಮಾಡಿದ ಹೊರತು ಅವನು ಏಳಿಗೆಗೆ ಬಾರನು (ಹಣಶ್ರ. ೦೩೬); ಶಿವಾಜಿಯು ಗೋಲ್ಕೊಂಡಕ್ಕೆ ದಂಡೆತ್ತಿ ಹೋಗಿ ಸುಲ್ತಾನನಿಂದ ಪುಷ್ಕಲಧನವನ್ನು ಕೈಗೆ ಹಾಕಿಸಿಕೊಂಡು ರಾಯಗಡಕ್ಕೆ ತಿರುಗಿದನು (ಛತ್ರಶಿ. ೦೨೩). ೨. ಉತ್ತಮವಾದ; ಶ್ರೇಷ್ಠವಾದ. (ನಾ). ೩. ಹೇರಳವಾದುದು; ಸಮೃದ್ಧವಾದುದು. ೪. ಶ್ರೇಷ್ಠನಾದವನು: "ಶ್ರೇಯಾನ್, ಶ್ರೇಷ್ಠಃ, ಪುಷ್ಕಲಃ, ಸತ್ತಮಃ, ಅತಿಶೋಭನಃ—೫

ಬಹಳ ಶ್ರೇಷ್ಠನಾದವನ ಹೆಸರುಗಳು" (ಸಿದ್ಧಾಂತಿ. ೩೩೬). ೫. ಶಿವ; ಪರಮೇಶ್ವರ. ೬. ರಾಮನ ತಮ್ಮನಾದ ಭರತನ ಮಗನ ಹೆಸರು: ಪುಷ್ಕಲಂ, ಆಗಳೆ ತಂದೆತಾಯ್ವಿರಡಿಯಾಣತಿವಡೆದು ಕಿಱಿಯಯ್ಯನ ಬೆಂಬಲಕ್ಕೆಂದು ಸಾಯಕಂಗಳನ್ನೆತ್ತಿ ಪೋಪವಸರದೊಳ್ (ರಾಮಾಶ್ವ. ೯೬-೧೯). **ಪುಷ್ಕಳ**: ೩. ರಾಯರು ... ನನ್ನ ಜತೆಯಲ್ಲಿಯೇ ಪುಷ್ಕಳವಾದ ಭೋಜನವನ್ನು ಮುಗಿಸಿದರು (ರಾಯಣ. ೪); ನಾನು ಅದನ್ನು ಪುಷ್ಕಳವಾಗಿ ತಿಂದೆ (ಗಂಕೃ. ೬). [ಸಂ.]

**ಪುಷ್ಕಲಾವರ್ತ**, ಪುಷ್ಕಳಾವರ್ತ (ನಾ). =ಪುಷ್ಕರಾವರ್ತಕ: ಅಮರಸಮಿತಿಯು ತಂದ ಪಾಲ್ಗಡಲ ಪುಷ್ಕಲಾವರ್ತ ಬಲಾಹಕಾಂಬುದಂಗಳ್ ಕನಕಾಚಳಚೂಳಿಕೆಯೊಳ್ ಸುರಿವುತಿರ್ಪಂತಿಂದ್ರರುಂ ಭಗವದುಷ್ಣೀಷದೊಳ್ ಸುರಿಯೆ (ಶಾಂತಿಪು. ೧೦-೯೩ ವ). **ಪುಷ್ಕಳಾವರ್ತ**: ಪೌಲೋಮಿಪತಿ... ಏಳಯಕಾಳಾಂಬುದದಂತೆ ಮೊಬಗುವಂ ಸಿಡಿಲ ಬಳಗಮನೊಳಕೊಂಡ ದ್ರೋಣ ಮಹಾದ್ರೋಣ ಪುಷ್ಕಳಾವರ್ತ ಸಂವರ್ತಕಂಗಳೆಂಬ ಮುಗಿಲ್ಗಳಂ ಬೆಸಸಿದಾಗಳ್ (ಶಂಕಹಾ. ೩-೯೩ ವ); ಆವರಿಸಿದವು ಪುಷ್ಕಳಾವರ್ತಾವಳಿಗಳೆನೆ ಬಹಳವಿಷಧೂಮಾವಳಿಯಲೇ ಧಾತುಗೆಟ್ಟುದು ಸಕಳಭುವನಜನ (ಕುಮಾ.ಕ. ೨೫-೭). [ಸಂ.]

**ಪುಷ್ಕಳ** 'ಪುಷ್ಕಲ' ನೋ.

**ಪುಷ್ಕಳಂ** (ಅ). ಅಧಿಕವಾಗಿ; ಅತಿಶಯವಾಗಿ: ಅಲಘುಭುಜಪ್ರತಾಪಂ . . . ಪುಷ್ಕಳಂ ಪುಷ್ಕಳನಂ ನೋಯಿಸಿದಂ (ರಾಮಾಶ್ವ. ೦೯೩-೩). [<ಪುಷ್ಕಳ]

**ಪುಷ್ಕಳಭೋಜನ** (ನಾ). ಸಮೃದ್ಧವಾದ ಊಟ,—ಭೋಜನ: ಎಲ್ಲಾ ಇಂದಿರಮ್ಮನ ದೆಶೆಯಿಂದ ನಮಗೆ ಪುಷ್ಕಳಭೋಜನವೆಂದುಕೊಂಡಿದ್ದಾರೆ (ಇಂದಿರೆ. ೦೭೩). [ಸಂ. ಪುಷ್ಕಲಭೋಜನ]

**ಪುಷ್ಕಳಾವರ್ತ** 'ಪುಷ್ಕಲಾವರ್ತ' ನೋ.

**ಪುಷ್ಕಳಾವರ್ತಕ** (ನಾ). =ಪುಷ್ಕರಾವರ್ತಕ: ಭೂಧರವಿರೋಧಿ ಭೂಧರಧರಂಗೆ ಕ್ರುದ್ಧನಾಗಿ ಪುಷ್ಕಳಾವರ್ತಕನಿಕಾಯಮಂ ಕರೆದು (ಜಗ. ೪-೯೪ ವ). [ಸಂ. ಪುಷ್ಕಲಾವರ್ತಕ]

**ಪುಷ್ಟ** (ಗು). ೧. ಚೆನ್ನಾಗಿ ಬೆಳೆಸಿದ,—ಪೋಷಿಸಿದ. ೨. ಶಕ್ತಿಸಂಪನ್ನವಾದ. ೩. ವಿಪುಲವಾದ; ಹೇರಳವಾದ; ಅಧಿಕವಾದ. ೪. ಸಮೃದ್ಧವಾದ; ಶ್ರೀಮಂತ. ೫. ಶ್ರೇಷ್ಠವಾದ; ಉತ್ತಮವಾದ. (ನಾ). ೬. ಹೆಚ್ಚಳ; ಆಧಿಕ್ಯ: "ಬಹುಳಂ ಪ್ರಭೂತಂ ಪ್ರಭೂತಿ ಬಹು ಪುಷ್ಕಳಂ ಪುಷ್ಟಮೆನೆ ಮೊತ್ತಮಕ್ಕುಂ" (ಕಂಗರಾ. ೦೨೬-೬). ೭. ಶಕ್ತಿವಂತ; ಸಮರ್ಥ: ಪ್ರಮದಾವಲ್ಲಭನಂತಮಧ್ಯ ಸುಖಿ ಪುಷ್ಟಂ ತ್ಯಾಗಿ . . . ಉತ್ಕೋದ್ಯಮಂ (ಜಾತಿ. ೦೭-೨). [ಸಂ.]

**ಪುಷ್ಟಿ** (ನಾ). ೧. ಬೆಳೆಸುವಿಕೆ; ಪೋಷಿಸುವಿಕೆ. ೨. ಆಧಾರ; ಊರೆ. ೩. ಚೆನ್ನಾಗಿ ಬೆಳೆದ ಸ್ಥಿತಿ; ಕೊಬ್ಬಿರುವಿಕೆ. ೪. ಬೆಳವಣಿಗೆ; ಏಳಿಗೆ; ಅಭಿವೃದ್ಧಿ: ವಚನಕಾರರಿಂದ ಕನ್ನಡಭಾಷೆಗೆ ಒದಗಿದ ಪುಷ್ಟಿ ಎಷ್ಟು ವಿಧವಾದುದು (ಒಸ್ಸಕಾ. ೦೩೭). ೫. ಒದಗಿಸುವಿಕೆ; ಪೂರೈಕೆ: ನಾಗರಿಕಮಾನವನ ರಕ್ತದ ರುಚಿಗೋ . . . ಆಹಾರದ ಪುಷ್ಟಿಗೋ ಮೋಹಿಸಿ ಅವನ ಜೊತೆಗೇ ಶಾಶ್ವತವಾಗಿ ಬಿಡಾರ ಹೂಡಿ ಕಾಡುವ ಅಲ್ಪಜಂತುಗಳು ಅನೇಕ ಇವೆ (ಕಂಬಿರು. ೯೨). ೬. ಪೂರ್ಣತೆ; ಪೂರ್ಣವಾಗಿ ಪ್ರಾಪ್ತವಾಗುವಿಕೆ: ಅನಂತಚತುಷ್ಟಯಪುಷ್ಟಿಪರಪುಷ್ಟ[ನುಂ] . . . ಅಪ್ಪ ಶಾಂತೀಶ್ವರಸಕಲಂಕಾಚಾರಸಾರಂ (ಶಾಂತಿಪು. ೦೨-೨೯ ವ). ೭. ಐಶ್ವರ್ಯ; ಸಂಪತ್ತು: ಸಮಸ್ತಭಾರತಕಥಾಸಂಬಂಧಮಂ ಬಾಜಿಸಲ್ . . . ಅಕ್ಕುಂ ಧೃತಿ ತುಷ್ಟಿ ಪುಷ್ಟಿ ವಿಭವಂ (ಶಂಕಹಾ. ೦೯-೬೩). ೮. ಸಂಪತ್ತಿನ ಸುಖಪ್ರಾಪ್ತಿಗಾಗಿ ಆಚರಿಸುವ ಒಂದು ಬಗೆಯ ಧಾರ್ಮಿಕಕರ್ಮ: ಅಥರ್ವಣವೇದವು ಯಾಗಕ್ಕೆ ಉಪಯೋಗವಿಲ್ಲ. ಅದರಲ್ಲಿ ಶಾಂತಿ ಪುಷ್ಟಿ ಮೊದಲಾದ ಕರ್ಮಗಳ ವಿಧಿಯಿರುತ್ತದೆ (ಹಿಂದಗಾ. ೦೩೭); ದಿನವೂ ಒಂದಲ್ಲ ಒಂದು ಶ್ರಾದ್ಧ—ಶಾಂತಿ, ಪುಷ್ಟಿ, ಹೀಗೆ ಅವರಿಗೆ ಕಾದಿದ್ದದ್ದೇ (ಹೂಕಕ. ೨೯). ೯. ಶಕ್ತಿ; ಸಾಮರ್ಥ್ಯ. ೧೦. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಚಂದ್ರನಾದೊಡೆ ಅಮೃತಾ ಮಾನದಾ ಪೂಷಾ ತುಷ್ಟಿ ಪುಷ್ಟಿ ರತಿ ಧೃತಿಶಶಿನಿ ಚಂದ್ರಿಕಾ ಕಾಂತಿ ಜ್ಯೋತ್ಸ್ನಾ ಶ್ರೀ ಅಂಗದಾ ಪೂರ್ಣಾ ಪೂರ್ಣಾಮೃತಾ ಕಾಮದಾಯಿನಿಯೆಂಬ ಷೋಡಶಕಲೆಗಳಿಂ ಭರಿತನಾಗಿ ಧವಳವರ್ಣ ಶರೀರದಿಂ . . . ರಂಜಿಸುತ್ತಿರ್ಪಂ (ಏಕೀ. ೨೬೭). [ಸಂ.]

**ಪುಷ್ಟಿಕರ** (ಗು). ೧. ಶಕ್ತಿದಾಯಕವಾದ; ಪೋಷಕವಾದ. (ನಾ). ೨. ಶಕ್ತಿದಾಯಕವಾದುದು: ನಮ್ಮದು ಮೊದಲೇ ಪುಷ್ಟಿಕರವಾದ ಆಹಾರಾಂಶಗಳಿಲ್ಲ ಇಲ್ಲದಿರುವ ಜನಾಂಗ (ಕಣಜ. ೬೩). [ಸಂ.]

**ಪುಷ್ಟಿಕಾರಕ** (ಗು). ಶಕ್ತಿಯನ್ನೊದಗಿಸುವ; ಪೋಷಣೆಯನ್ನುಂಟುಮಾಡುವ; ಸತ್ತ್ವಯುಕ್ತವಾದ: ಅಘ ತಿಂಬುವವರಿಗೆ ಹಾಲು ತುಪ್ಪ ಮುಂತಾದ ಪುಷ್ಟಿಕಾರಕ ಪದಾರ್ಥಗಳು . . . ಇಲ್ಲದೆ ಹೋದರೆ . . . ಮೈ ಒಣಗಿ ಹೋಗುವದು (ಮುಂಬಯಿ. ೪-೫೦). [ಸಂ.]

**ಪುಷ್ಟಿಕಾರಿ** (ನಾ). =ಪುಷ್ಟಿಕರ ೨: ಅತ್ಮಗುಪ್ತಾ . . . ಮರ್ಕಟೀ—ನಸಗುನ್ನೀಗಿಡ, ಕಪಿತುರಚೀಗಿಡವೆಂದು ಕೆಲವರನ್ನುವರು, ಇದರ ಬೀಜ ಪುಷ್ಟಿಕಾರಿ (ಸಿದ್ಧಾಂತಿ. ೦೩೨) [ಸಂ. ಪುಷ್ಟಿಕಾರಿನ್]

**ಪುಷ್ಟಿಕೊಡು** (ಕ್ರಿ). ೧. ಬೆಳೆಯಲು ಸಹಾಯ ಮಾಡು; ಬೆಳಸು. ೨. ಬೆಂಬಲಿಸು; ಸಮರ್ಥಿಸು; ಬಲಪಡಿಸು: ಆಂಗ್ಲರಾಜನೀತಿಜ್ಞರು ನಿರೂಪಿಸಿದ ವಿದ್ಯಾಭ್ಯಾಸವಿನ್ಯಾಸ ಇವೆರಡಕ್ಕೂ ಪುಷ್ಟಿ ಕೊಟ್ಟಿತು (ಹುಕ್ಕೇರಿ. ೧೦೪ ೬೩೪); ಆ ಶಂಕೆಗೆ ಪುಷ್ಟಿ ಕೊಡಲು ಯಶೋದೆಯ ವರ್ತನೆಯೂ ಬಹುಮಟ್ಟಿಗೆ ಕಾರಣವಾಯಿತು (ವಾತ್ಸಲ್ಯ. ೨೪೦). [ಪುಷ್ಟಿ+ಕೊಡು$_1$]

**ಪುಷ್ಟಿಗೊಳಿಸು** (ಕ್ರಿ). =ಪುಷ್ಟಿಕೊಡು ೨: ಕೆಂಪುದೇವಯ್ಯನು ರಾಜಮರ್ಯಾದೆಯೊಡನೆ ಅರಮನೆಗೆ ಹೋಗುತ್ತಿದ್ದುದೂ ಆ ವಾರ್ತೆಯನ್ನು ಪುಷ್ಟಿಗೊಳಿಸಿದುವು (ಕದೀವ. ೫೮). [ಪುಷ್ಟಿ+ಕೊಳ್$^1$+—ಇಸು$_1$]

**ಪುಷ್ಟಿಮಾರ್ಗ** (ನಾ). ಪರಮಾತ್ಮನ ಅನುಗ್ರಹಸಂಪಾದನೆಯೇ ಮುಖ್ಯವೆಂದು ಪ್ರತಿಪಾದಿಸುವ ವೈಷ್ಣವಮತ; ವಲ್ಲಭಾಚಾರ್ಯರು ಸ್ಥಾಪಿಸಿದ ಮತ: ಈಶ್ವರಾನುಗ್ರಹ ಸಂಪಾದಿಸಬೇಕಾದರೆ ಜೀವಿ . . . ಸರ್ವಸ್ವವನ್ನೂ ಅವನಿಗೆ ಅರ್ಪಿಸಬೇಕು. ಆಗ ಅವನು ಜೀವಿಯ ವಶವಾಗುತ್ತಾನೆ. ಇದಕ್ಕೆ ಅನುಗ್ರಹ, ಪುಷ್ಟಿ, ಪೋಷಣ ಎಂದು ಹೆಸರು. ವಲ್ಲಭಾಚಾರ್ಯರ ಮತವನ್ನು ಶುದ್ಧಾದ್ವೈತವೆಂದೂ ಪುಷ್ಟಿಮಾರ್ಗವೆಂದೂ ಕರೆಯುತ್ತಾರೆ (ಭಾರದ. ೨೪೪). [ಸಂ.]

**ಪುಷ್ಟೀಕರಿಸು** (ಕ್ರಿ). ಬಲಪಡಿಸು; ಬೆಂಬಲಿಸು; ಸಮರ್ಥಿಸು: ನಾನು ಅವರ ಅಭಿಪ್ರಾಯವನ್ನು ಪುಷ್ಟೀಕರಿಸಿದೆ (ಕಂಗಾಳ್ಮ. ೩೪೬); ಕ್ಯಾಂಬೆಲ್‌ನು . . . ಸಸ್ಯಗಳ ಬಗ್ಗೆ ನಡೆಸಿದ ಸಂಶೋಧನೆಗಳಿಂದ, ತನ್ನ ಹೊಸ ತತ್ತ್ವಗಳನ್ನು ಪುಷ್ಟೀಕರಿಸಿದನು (ಸಸ್ಯಕ. ೩೩). [ಪುಷ್ಟೀಕರಣ$_1$+—ಇಸು$_1$]

**ಪುಷ್ಪ** (ನಾ). ೧. ಹೂವು; ಕುಸುಮ: "ಪ್ರಸವಂ ಪ್ರಸೂನಕಂ ಸುಮನಸಂ ಪುಷ್ಪಮೆನೆ ಕುಸುಮಮವವು" (ಕಂಗರಾ. ೩೨-೩); ಲಳಿತವಿಚಿತ್ರಪತ್ರಫಲಪುಷ್ಪಯುತಾಟವಿ ಸೊರ್ಕಿದಾನೆಯಂ ಬೆಳೆವುದು (ಶಂಕಹಾ. ೦-೩೪); ಭೂಜಾಳಿ . . . ಪತ್ರಪುಷ್ಪಫಲಭಾರಾಕ್ರಾಂತವಾಗಿರ್ದುವು (ಜಗ. ೩-೬೭); ಪರಿಪರಿಯ ಪುಷ್ಪವಂ ಸಿರಿಮುಡಿಯೊಳಗೆ ಸೂಡಿ (ಶಂಬರ. ೫-೩೭). ೨. ಮುಟ್ಟು; ಋತುಸ್ರಾವ: ಪುಷ್ಪ ನಷ್ಟವಾದರೆ—ಎಕ್ಕೆಯ ಹಾಲು ಹನಿಸಿ ಬೆಲ್ಲವ ಬೆರಸಿ ಮೆದ್ದು ಮಧುರಾಹಾರವನುಣ್ಣೆ ೭ ದಿನಕ್ಕೆ ಮುಟ್ಟು ಗಾಂಬರು (ಪೃಷ್ಟಿ. ೯೦). ೩. ಒಂದು ಬಗೆಯ ಕಣ್ಣಿನ ರೋಗ. ೪. ಒಂದು ಬಗೆಯ ನೇತ್ರಾಂಜನ,—ಕಣ್ಣಿಗೆ ಲೇಪಿಸುವ ಕಾಡಿಗೆ:

"ಪುಷ್ಪಾಂಜನಂ—ಪುಷ್ಪ" (ಚಿತಾ. ೦೦೦). 'ಕುಸುಮಾಂಜನ' ಪರ್ಯಾ. ೫. ಕುದುರೆಯ ಮೈಮೇಲೆ ಇರುವ ಒಂದು ಬಗೆಯ ಚಿಹ್ನೆ : ತುರಗದ ಮೆಯ್ಯೊಳ್ ಪುಷ್ಪಂ ಇರಿದಾದಂದಶುಭಮಪ್ಪ ಬಣ್ಣದೊಳಂ ಪಾಂಡರಮಾದೊಡೆ ಶುಭಮಂದನಾದರಿಪುದು ಪರಿಹರಿಪುದಸಿತಪುಷ್ಪಾದಿಗಳಂ (ಅಶ್ವಶಾ. ೬-೦೩). ೬. ಒಂದು ಬಗೆಯ ನಾಣ್ಯ : ಪಂಚಪುಷ್ಪಾಣಿ ದೇಯಾನಿ ವಿವಾಹೇ ಸತಿ ತಜ್ಞನ್ಯೈಃ (ಎ. IV, ೬೦-೬೯; ೨೪೬). ೭. ಒಂದು ಬಗೆಯ ರತ್ನ ; ಪುಷ್ಪರಾಗ.

**ಪುಷ್ಪದಂಬಿನ ಚೆಲುವ** = ೧. ಮನ್ಮಥ. ೨. ಮನ್ಮಥನಂತೆ ಸುಂದರನಾದವನು : ಕೇಶವ ಪುಷ್ಪದಂಬಿನ ಚೆಲುವ ಸರ್ವಜ್ಞನೆಸದಿರ್ದ (ಶಿಭಾಗ. ೦೦-೦೩-೩). [ಸಂ.]

**ಪುಷ್ಪಂಗತಿ** (ನಾ). ಔನ್ನತ್ಯ ; ಊರ್ಧ್ವಮುಖತ್ವ: 'ಪುಷ್ಪಂಗತಿವಡೆ' ಪರ್ಯಾ. [ಸಂ.]

**ಪುಷ್ಪಂಗತಿವಡೆ** (ಕ್ರಿ). ಉನ್ನತವಾಗಿರು; ಊರ್ಧ್ವಮುಖವಾಗಿರು : ಲಿಂಗದ ಭಕ್ತನಾಗಿ ಪೊಸಬೋನವಮನರ್ಪಿಸಿಯೊಕ್ಕುದುಂಡು ಪುಷ್ಪಂಗತಿವೆತ್ತು ಬಾಳ್ವುದರಿದಲ್ಲೆನುತಂ ಘನಭಕ್ತಿಭಾವದಿಂ . . . ಅಮರನೀತಿಗಳ ರ್ಚಿಸುತಿರ್ಪರಾವಗಂ (ತ್ರಿಪುರ. ೯-೮). [ಪುಷ್ಪಂಗತಿ+ಪಡೆ]

**ಪುಷ್ಪಕ** (ನಾ). ೧. ಹೂವು ; ಕುಸುಮ : 'ಹೇಮಪುಷ್ಪಕ' ಪರ್ಯಾ. ೨. ಒಂದು ಬಗೆಯ ಕಣ್ಣಿನ ರೋಗ. ೩. ಒಂದು ಬಗೆಯ ನೇತ್ರಾಂಜನ. ೪. ಹಿತ್ತಾಳೆ. ೫. ಮಣಿ; ರತ್ನ. ೬. ಬಿಸಿಲು. ೭. (ಕರಿಯಂಬು ಬಳಸುವ) ಬಾಣಲೆ. ೮. ಬಾಣಂತಿ. ೯. ಕೈಬಳೆ ; ಕಂಕಣ. ೧೦. ಕುಬೇರನ ಬಳಿಯಲ್ಲಿದ್ದು, ಅವನಿಂದ ರಾವಣನಿಗೆ ವಶವಾಗಿದ್ದ ಸ್ವಯಂಚಾಲನಶಕ್ತಿಯುಳ್ಳ ವಿಮಾನ : "ಚೈತ್ರರಥಮೆಂಬುದು ಕುಬೇರನ ಬನಂ ಪುಷ್ಪಕಮೆಂಬುದಾತನ ವಿಮಾನಂ" (ಶಬ್ದಮ. ೦೩-೬೩); ರಕ್ಕಸರಾಯ ಪುಷ್ಪಕವೇಱಿ ನಭದಲಿ ನೋಡಲೈತಂದ (ತೊರೆರಾ. ೦೭-೦೪); ತರಿಸಿ ಧನಪನ ಪುಷ್ಪಕವ ಮುಂದಿರಿಸಿ ಬಿಜಯಂಗೈವುದೆಂದನು ನರಪತಿಗೆ ಕೈಮುಗಿದು ಲಂಕಾನಾಥನೊಲವಿನಲಿ (ತೊರೆರಾ. ೬-೩೪-೩). ೧೧. ಆಕಾಶದಲ್ಲಿ ಉಡ್ಡಾಣ ಮಾಡುವ ದೇವವಿಮಾನ : ಕಾಯವಿಲ್ಲದೆ ಪುಷ್ಪಕವ ಕಂಡ ನಮ್ಮ ಬಸವಯ್ಯನು (ಶೀಲವ.ಶ. ೦೯-೩೭) ; ಆ ಸಮಯದೊಳ್ಗಂಡ ಹೆಂಡತಿಗೆ ತನಯಂಗೆ ಭೂಸುರದ ಪುಷ್ಪಕಂಗಳ್ ಬಂದುವು (ಇಶೆರ. ೩೮. ೩೭-೨); ನೋಡುತಿರೆ ಪುಷ್ಪಕವೋದುರ್ದಾದಂಬರಕೆ ಜನತೆಯುತ್ಕಂಠೆಯಲಿ! (ಚಿತ್ರಾಂಗ. ೬೦-೨೯೬೦). ೧೨. ಹೂವುಗಳಿಂದ ಅಲಂಕರಿಸಿದ ರಥ; ಪುಷ್ಪರಥ : "ಅನೇಕವಿಧಕೇಳೀವಿಳಸನಹೇತು[ಪುಷ್ಪ]ಕಂ ಪುಷ್ಪರಥಂ" (ವಸ್ತುಕೋ. ೬೭-೨೭). ೧೩. ಕುಬೇರ. ೧೪. ಕುಲಪರ್ವತಗಳಲ್ಲಿ ಒಂದು : ಸುಗಂಧಿ ಶಿಖಿ ತ್ರಿಶೃಂಗಿ ಪುಷ್ಪಕ ಸುಪಕ್ಷ ಕಂಕುಶೈಲ ವೈಡೂರ್ಯ ಕಪಿಲ ಭದ್ರ ಕುಮುದ ಮಧುಮಾನ್ ಅಂಜನ ಮಕುಟ ಪಾಂಡುರ ಸಹಸ್ರಶಿಖರಿ ಪಾರಿಜಾತಮೆಂಬ ಹದಿನಾಱು ಕುಲಾಚಲಂಗಳೇ ಪೂರ್ವೋಕ್ತವಿಪುಳವೆಂಬ ಕೀಲಕಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿಹವು (ವಿವೇಕ. ೨೦೩). ೧೫. ಅರಮನೆಯ ಒಂದು ಭಾಗ : ಪರಿಮಳದ ಪೂರಾಯಮೆನಿಸುವ ಹಿರಿಯ ಪುಷ್ಪಕದೊಳಗೆ ಹೊಕ್ಕನು ಧರಣಿಜಾತೆಯನಱಸುತಿರೆ ಹನುಮಂತ (ತೊರೆರಾ. ೦೦-೯೦). "ಹಿತ್ತಾಳೆಯೊಳು ನಯನರೋಗದೊಳು ಬಾಣಲೆಯೊಳು ಕುಬೇರನೊಳು ರತ್ನದೊಳು ಕಂಕಣದೊಳು ಅಯನದ ವಿಮಾನದೊಳು ಪುಷ್ಪಕಮೆನಿಕ್ಕು" (ಮಂಗರಾ. ೧೩೩-೬೩); "ರೀತಿಕೆಯಕ್ಷಿರೋಗ ಧನದಂ ಮಣಿ ಸೂತಕಿ ಕಂಕಣಂ ವಿಮಾನಾತಪಯಂಬರೀಷಕುಸುಮಂಗಳು ಪುಷ್ಪಕಮಕ್ಕುಂ" (ಅಭಿನವ. ೦೨೪). [ಸಂ.]

**ಪುಷ್ಪಕರಂಡ** (ನಾ). ೧. ಹೂವಿನ ಪಾತ್ರೆ; ಹೂವನ್ನಿಡುವ ಬುಟ್ಟಿ. ೨. ಅಲಂಕಾರಕ್ಕಾಗಿ ಮೇಜುಗಳ ಮೇಲೆ ಜೋಡಿಸಿ ಇಡುವ ಹೂದಾನಿ; ಪುಷ್ಪಪಾತ್ರೆ : ಪುಷ್ಪಕರಂಡದಲ್ಲಿ ಜೋಡಿಸಿಟ್ಟ ಗುಲಾಬಿಗಳಿಂದುಂಟಾಗುವ ಅನುಭವ ನಿಜಕ್ಕೂ ಬೇರೆಯಾಗಿರುತ್ತದೆ (ಶ್ರೀಕೃಶ್ರ. ೦೦). [ಸಂ.]

**ಪುಷ್ಪಕವಿಮಾನ** (ನಾ). ೧. ರಾವಣನ ವಶಕ್ಕೆ ಬಂದ ಕುಬೇರನ ವಿಮಾನ : ಪುಷ್ಪಕವಿಮಾನದ ರತ್ನವಿಚಿತ್ರಪುತ್ರಿಕಾಸಂಕುಲಮಂಟ್ಯೊಡಬ್ಬುವು ಬೆಮರ್ತೊಡೆ ಕೂಡೆ ಬೆಮರ್ತುವು (ಕಂಠಾಪುರಾ. ೯-೦೦೯) ; ರಾವಣನು ಅವನ ಪುಷ್ಪಕವಿಮಾನವನ್ನು ಅಪಹರಿಸಿದನು (ಶಶಿಶಾ. ೪೦೯). ೨. ಇಂದ್ರನ ವಿಮಾನ : ವ್ಯಾವರ್ಣಿಸಲ್ ಬಲ್ಲನೇ ಮಹಿಯೊಳ್ ಮಾನವನೊಂದೆ ನಾಲಗೆಯೊಳಂತಾ ಭೂಭುಜಾಗಾರಮಂ ಬಹುವಿಸ್ತಾರಮನಿಂದ್ರಪುಷ್ಪಕ ವಿಮಾನಾಕಾರಮಂ (ಚಿತ್ರ. ೨-೩೭). [ಸಂ.]

**ಪುಷ್ಪಕಳಂಬ** (ನಾ). ೧. ಹೂವಿನ ಬಾಣ. ೨. ಹೂವಿನ ಬಾಣಗಳನ್ನುಳ್ಳವನು ; ಮನ್ಮಥ : ಜೇವಣಶಾಲೆ ತುಂಬಿಗಳ ಪುಷ್ಪಕಳಂಬನ ಶಸ್ತ್ರಶಾಲೆ . . . ಮಧುಭೂಭುಜನೋಲಗಶಾಲೆ ಮಾಮರಂ (ರಾಜಶೇ. ೯-೩೩). [ಸಂ. ಪುಷ್ಪ+ಕಲಂಬ]

**ಪುಷ್ಪಕಾಸೀಸ** (ನಾ). ೧. ಕಣ್ಣಿನ ದೋಷವನ್ನು ಪರಿಹರಿಸುವ ಒಂದು ಬಗೆಯ ಔಷಧದ್ರವ್ಯ,—ನೇತ್ರಾಂಜನ ; ಹಳದಿಬಣ್ಣದ ಕಾಸೀಸ "ವಿಸದಂ—ಪುಷ್ಪಕಾಸೀಸ" (ಚಿತಾ. ೦೩೩). ೨. ಒಂದು ಬಗೆಯ ಔಷಧೀಸಸ್ಯ: ಪುಷ್ಪಕಾಸೀಸ ಸಸ್ಯ . . . ಈ ಗಿಡವು ಜವುಗುಪ್ರದೇಶದಲ್ಲಿ ಬೆಳೆಯುತ್ತದೆ (ಸಸ್ಯಶಾ. ೪೭). [ಸಂ.]

**ಪುಷ್ಪಕೇತು** (ನಾ). ೧. = ಪುಷ್ಪಾಂಜನ : "ರೀತಿಪುಷ್ಪಂ, ಪುಷ್ಪಕೇತುಃ, ಪೌಷ್ಪಕಂ, ಕುಸುಮಾಂಜನಂ—೪ ಕುಸುಮಾಂಜನದ ಹೆಸರು" (ನಿಘಂ.ಚಿ. ೩೦೩). ೨. ಹಿತ್ತಾಳೆಯ ಭಸ್ಮ. ೩. ಕಾಮ ; ಮನ್ಮಥ. [ಸಂ.]

**ಪುಷ್ಪಗಣೆಯ** (ನಾ). ಹೂವಿನ ಬಾಣಗಳನ್ನುಳ್ಳವನು ; ಮನ್ಮಥ : ತ್ರಿಣಯನುರೆ ಹಣೆಗಿಚ್ಚಿನಿಂದ ಬೆಂದನಾ ಪುಷ್ಪಗಣೆಯಂಗೆ ಪೊಂದೆ ನಿಮಿಷಂ ದುಃಖಿ ಯಿಾ ರತಿವನಿತೆಯಳಿಗಾವರಿಸಿದತುಳದುಃಖಾನಲನು ಕೊಲ್ಲದೆ ಜೀವದೊಡನೆ (ಪಪಸೋ. ೬-೩೩). [ಪುಷ್ಪ + ಕಣೆ$_1$ + – ಅ$_1$]

**ಪುಷ್ಪಚಾಪ** (ನಾ). ೧. ಹೂವಿನ ಬಿಲ್ಲು : ಅತಿಮೃದುಪುಷ್ಪಚಾಪದಳಿನೀಗುಣಟಂಕೃತಿರಾವಮಾಗಮಾವ್ಯತಪರಿಪೂರ್ಣಕರ್ಣಯುಗನಂ ಸಲೆ ಕೇಳಿಸದು (ಕಂದ್ರಪ್ರ. ೦-೨೩). ೨. ಮನ್ಮಥ ; ಕಾಮ : ಪೊಸತಂ ಸ್ತ್ರೀರಾಜ್ಯಮಂ ಮೇಣ್ ಪಡೆದನೊ ಬಿದಿ ಲಾವಣ್ಯಸಿಂಧುಪ್ರವಾಹಂ ಪೊಸತೀಗಳ್ ಬಂದು ಬೆಳ್ಳಂಗೆಡೆದುದೊ ಗಣಿಕಾಸೃಷ್ಟಿಯಂ ಪುಷ್ಪಚಾಪಂ ಪೊಸತಂ ಮಾಡಿಟ್ಟನೋ (ಅರಿಕೃ. ೦-೬೩); ಅದೇಂ ಮಾಡಿದನೊ ವಿರಹಸಂತಾಪಮಂ ಪುಷ್ಪಚಾಪಂ (ಕಾದಂಪೂ. ೬೩೭). [ಸಂ.]

**ಪುಷ್ಪಣಂದಿ** (ನಾ). ಒಬ್ಬ ಜೈನಯಂತಿಯ ಹೆಸರು : ಶ್ರೀ ಪುಷ್ಪಣನ್ದಿ ನಿಸಿಧಿಗೆ (ಎಕ. II (R), ೪೩; ಶಿಸಯ ೬೩). [ಪುಷ್ಪ + < ನಂದಿ]

**ಪುಷ್ಪದಂತ** (ನಾ). ೧. ಶಿವನ ಪರಿಚಾರಕರಲ್ಲಿ ಒಬ್ಬ. ೨. ಅಷ್ಟದಿಗ್ಗಜಗಳಲ್ಲಿ ಒಂದು ; ವಾಯುವ್ಯದಿಕ್ಕಿನ ಆನೆ : "ಐರಾವತಃ . . . ಪುಷ್ಪದಂತಃ, ಸಾರ್ವಭೌಮಃ, ಸುಪ್ರತೀಕಃ—ಈ ೮ ಮೂಡಣಿಂ ಕ್ರಮದಿನಿರ್ದ ದೆಸೆಯಾನೆಗಳ್" (ಶಬ್ದಮ. ೦೩-೦೦೪) ; ಬೆದಱಿದುದಭ್ರಮೂರಮಣಂ . . . ಬಿದಿರ್ದುದು ಪುಷ್ಪದಂತಮತಿವಿಹ್ವಲಮಾದುದು ಸಾರ್ವಭೌಮಂದದಿರ್ದುದು ಸುಪ್ರತೀಕಮಿರದಾಲಿಸಿ ತತ್ಪಟಹಪ್ರಣಾದಮಂ (ಪುಕೃಪು. ೩-೬). ೩. ಸೂರ್ಯ ಮತ್ತು ಚಂದ್ರರಿಬ್ಬರಿಗೂ ಒಟ್ಟಾಗಿ ಇರುವ ಹೆಸರು : "ಚಂದ್ರ ಸೂರ್ಯರ್ಕಳನೊಂದಾಗಿ ಪೇೞ್ವೊಡೆ ಪುಷ್ಪದಂತರೆಂಬುದು" (ಶಬ್ದಮ. ೨೦-೦೨೦). ೪. [ಜೈನ] ವರ್ತಮಾನ ಕಾಲದ ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಒಂಬತ್ತನೆಯವನು : ಅನಶ್ವರಸುಖಧಾಮಮಮನೆಮಗೀಗೆ ಪುಷ್ಪದಂತಜಿನೇಂದ್ರಂ (ಶಾಪುಂಕ.

೦೨೬); ವರಪುಷ್ಪದಂತಜಿನಪತಿ ಪರಮಶ್ರೀಮುಕ್ತಿಲಕ್ಷ್ಮಿಯಂ ಕೆಯ್ಕೊಂಡು (ಶಕ್ಕಪು. ೦೯-೩೩). [ಸಂ. ]

**ಪುಷ್ಪದರ್ಶನ** (ನಾ). ೧. ಹೂವನ್ನು ನೋಡುವಿಕೆ. ೨. ಮುಟ್ಟಾಗುವಿಕೆ ; ರಜಸ್ವಲೆಯಾಗುವಿಕೆ : ಮಕ್ಕಳನೀಯದೆ ನೋಡೆ ನಾಡೆ ನೋಯಿಸಿದವುದಿಕ್ಷುಪುಷ್ಪದವೊಲೆನ್ನಯ ನಿಷ್ಫಲಪುಷ್ಪದರ್ಶನಂ (ಶಂಶಕಾ. ೦-೦೦೬). ೧, ೨ : ಪುಷ್ಪದರ್ಶನದಿಂ ಕೆಯ್ಕಾಸಿದನೆಂಬುದೀಕೆಗೆ ಪಾಟಿಯೆ ವಲಮೆಂದು ವಕ್ರೋಕ್ತಿಯಂ ನುಡಿದು (ಶಾಂತಿಪು. ೬-೬೨ ವ). [ಸಂ.]

**ಪುಷ್ಪದಾಮ** (ನಾ). ಹೂವಿನ ಸರ ; ಹೂಮಾಲೆ: ರತ್ನಾಭರಣತೋರಣಘಂಟಾಜಾಲಮುಕ್ತಾಲಂಬನಪುಷ್ಪದಾಮಷ್ಪಮಂಗಲನವನಿಧಿಪ್ರಧಾನಂಗಳುಂ (ಆದಿಪು. ೦೦-೬೨ ವ) ; ಲಲನೆಯರ್ಗಂಗರಾಗಮವದು ದುರ್ವಹಮುಂಶುಕಭಾರಮಂಗಸುಚಲತೆಗೆ ಕಾರಣಂ ಕುಸುಮಮಾಲಿಕೆಯುಂ ಪೊಱೆ ಪುಷ್ಪದಾಮಮೇಖಲೆ ನಡೆಗಡ್ಡಿ . . . ಎಂದೊಡೞಿಯೆಂ ಪೊಗಟಲ್ ಸುಕುಮಾರವೃತ್ತಿಯಂ (ಆದಿಪು. ೦೦೦೩) ; ಧರಣಿಸುತ ನವಪುಷ್ಪದಾಮವ ಹರಿಯ ಕಂಠದಲಿಕ್ಕಿ ಮಂಗಳಮಹಿಮನೊಪ್ಪಿದನು (ಕೌರಾ. ೨-೯೯). [ಸಂ. ಪುಷ್ಪದಾಮನ್]

**ಪುಷ್ಪಧನು** (ನಾ). (ಮನ್ಮಥನ) ಹೂವಿನ ಬಿಲ್ಲು : ರತಿಯಾರ್ತದಿಂದತನು ಪುಷ್ಪಧನುವಂ ಕೊಂಡು ಪತಿಯನಲ್ಲಡಸಿ ಮನದೊಳಗೆಸಲು ಪೂಗೊಂಡು (ಹರಿ. ದೀ. ೭-೨೦). [ಸಂ. ಪುಷ್ಪಧನುಸ್]

**ಪುಷ್ಪಧನ್ವ** (ನಾ). = ಪುಷ್ಪಚಾಪ ೨ : "ಪ್ರದ್ಯುಮ್ನಃ . . . ಪುಷ್ಪಧನ್ವಾ, ಮನೋಭವಃ– ಈ ೨೮ ಕಾಮ(ದೇವ)ನ ಪೆಸರ್" (ಹಲಾಯು. ೭-೩೯); ಪುಷ್ಪಧನ್ವನ ಕೃತಪುಣ್ಯಾಪುಣ್ಯಮೆನೆ ಕಣ್ಗೆಸೆದಿರ್ದುದು ಚಂದ್ರಮಂಡಲಂ (ಸೂಕ್ತಿಸು. ೬-೨೬೦). [ಸಂ. ಪುಷ್ಪಧನ್ವನ್]

**ಪುಷ್ಪಪುಟ** (ನಾ). ೧. ಹೂವಿನ ಕೋಶ. ೨. [ನಾಟ್ಯ] ಹದಿಮೂರು ಬಗೆಯ ಸಂಯುತಹಸ್ತಗಳಲ್ಲಿ ಒಂದು ; ಅರಳಿದ ಹೂವಿನಾಕಾರವಾಗುವಂತೆ ಎರಡಂ ಅಂಗೈಗಳನ್ನೂ ಜೋಡಿಸಿ ಹಿಡಿಯುವುದು : ಮಿಗೆ ಕೈಗಳಂ ಕುಚದಲ್ಲಿ ಪುಷ್ಪಪುಟದಂತಿರಿಸಿ (ಅಸ್ಕರಂ. ೯-೯೩), ಪುಷ್ಪಪುಟಹಸ್ತದಿಂ ಪುಷ್ಪಾಂಜಲಿಯಂ ಕೆದರ್ದು (ರಾಜಶೇ. ೩-೦೯೪). [ಸಂ. ]

**ಪುಷ್ಪಫಲ** (ನಾ). ಬೇಲದ ಮರ ; ಕಪಿತ್ಥವೃಕ್ಷ : "ಕಪಿತ್ಥಃ . . . ಪುಷ್ಪಫಲಃ, ದಂತಶಠಃ– ೭ ಬ್ಯಾಲದ ಮರಕ್ಕೆ ಪೆಸರುಗಳು" (ಟಿಪ್ಪಣಿ. ೦೦೬). [ಸಂ. ]

**ಪುಷ್ಪಬಾಣ** (ನಾ). ೧. (ಮನ್ಮಥನ) ಹೂವಿನ ಬಾಣ : ಸುಗ್ಗಿ ಬರ್ಪುದನೀ ನಂದನಕಾನೆ ಮುಂದುದೆಗೆದಂ ಪುಷ್ಪೇಷುಗಂ ಪುಷ್ಪಬಾಣದ ಮುಂಗಾಣಿಕೆಗೊಟ್ಟಿಂ (ಜಗಚ. ೦೯-೬೩); ಮದನಂ ಪುಷ್ಪಬಾಣಂಗಳಂ ಹೂಡಿದ ಬಿಲ್ಲಂ ಪೊತ್ತು ಪಿಂದಂ ಬರೆ (೧೧೬ಕ. ೯-೯೬). ೨. ಹೂವಿನ ಬಾಣಗಳನ್ನುಳ್ಳವನಂ ; ಮನ್ಮಥ ; ಕಾಮ : ನಲ್ಲಂಬಿಂದಿಸೆ ಪುಷ್ಪಬಾಣನೆರ್ದೆಯಂ (ಕಾವ್ಯಸಾ. ೩೩೦ ಕೂರ್ಮಿ). [ಸಂ. ]

**ಪುಷ್ಪಮಂಜರಿ** (ನಾ). ೧. ಹೂವುಗಳ ಗೊಂಚಲು ; ಪುಷ್ಪಗುಚ್ಛ : ಪುಷ್ಪಮಂಜರಿಯಂ ತನ್ನು ನಿಕರ್ಣಪೂರಕಮನತ್ಯಾಶ್ಚರ್ಯದಿಂ ನೋಡಿದಂ (ಆದಿಪು. ೬೯೦); ಅಮರಸ್ತ್ರೀನಿಚಯಂ ವಿಚಿತ್ರಲತೆಯಂ ಛತ್ರಾಳಿ ಭೂಜಂಗಳಂ ಚಮರೀಜಾವಳಿ ಪುಷ್ಪಮಂಜರಿಯಂ . . . ಪೋಲೆ ವಿಭ್ರಮದಿಂ ಬಂದನದೊಂದು ನಂದನವನಂ ಬರ್ಪಂತೆ ಸಂಕ್ರಂದನಂ (ಪುಷ್ಪಪು. ೦೯-೯೩); ಮಣಾಲ ಲಿಂಗದ ಮಸ್ತಕಾಗ್ರದ ಪುಷ್ಪಮಂಜರಿ ಮಾಣದೊಕ್ಷಣಮು ತಳ್ಕಡರ್ದು ಕಿರಾತನ ಮಂಡೆಯಾಲಿರೆ (ಚಂಶಂ. ೯-೦೦೬). ೨. ಒಂದು ಬಗೆಯ ಭತ್ತ,–ನೆಲ್ಲು : ಸೋಮಶಾಲಿಯು ಬಿಳುಮಲ್ಲಿಗೆ ಕೆಂಬೂತಿ ಹೇಮವರ್ಣದ ಕೊನೆವಾಳೆ ರಾಮಣೀಯಕಮಾದ ಪುಷ್ಪಮಂಜರಿಯ ಸನಾಮದ ತೆನೆಗಳೊಪ್ಪಿಹುವು (ಕಂಪಕಾ. ೩-೬೯). [ಸಂ. ಪುಷ್ಪಮಂಜರೀ]

**ಪುಷ್ಪಮಂಟಪ** (ನಾ). ಹೂವುಗಳಿಂದ ಅಲಂಕರಿಸಿದ ಮಂಡಪ : ಆ ವನಂಗಳಲ್ಲಿ ಚಿತ್ರಶಾಲೆ ಚಂದ್ರಶಾಲೆ ಶಿಶಿರಶಾಲೆ ಸುರಭಿಶಾಲೆಗಳಲ್ಲಿ ಪುಷ್ಪ[ಪಾಠಾಂ. ಲತಾ]ಮಂಟಪ . . . ತರುವಾಟಗಳ ಕಣ್ಗೆಳಲ್ಗಳೊಳಗೆಯುಂ (ವಿವೇಕ. ೨೦೩); ಒಂದು ಪುಷ್ಪಮಂಟಪವನ್ನು ಕಟ್ಟಿ ಅದರಲ್ಲಿ ಭಗವಾನ್ ವಿಶ್ವಾಮಿತ್ರರನ್ನು ಕುಳ್ಳಿರಿಸಿ ನಾವೆಲ್ಲರೂ ಆ ರಥವನ್ನು ಎಳೆದುಕೊಂಡು ಹೋಗಬೇಕು (ಮುಹಾಜ. ೩೦೦). [< ಸಂ. ಪುಷ್ಪಮಂಡಪ]

**ಪುಷ್ಪಮಾರ್ಗಣ** (ನಾ). ೧. ಹೂವಿನ ಬಾಣ. ೨. ಹೂವಿನ ಬಾಣಗಳನ್ನುಳ್ಳವನಂ; ಮನ್ಮಥ : ಮಣಿಮನೆ ಕಾತ ಕಲ್ಪಲತೆ ಸಿಂಜಿನಿಯಂ ತೆಗೆದಿಟ್ಟ ಪುಷ್ಪಮಾರ್ಗಣನ ಧನುಃಶಲಾಕೆ . . . ತಾನೆನಿಸುತ್ತೆ ತಾಳ್ದ ಸನ್ಮಣಿ ಪಿನಲಚ್ಚಮುತ್ತು ಕನಕಾಂಬರದಿಂ ಕಮಲಾಕ್ಷಿ ತೋಱಿದಳ್ (ರಾಜಶೇ. ೦೦-೦೬). [ಸಂ.]

**ಪುಷ್ಪಮಾಲೆ** (ನಾ). ೧. ಹೂವಿನ ದಂಡೆ,–ಮಾಲೆ ; ಹೂವಿನ ಹಾರ : ಹತ್ತಿರ ನಿಂತಿದ್ದ ಮಹಾಚಿಕಬ್ಬೆ ಮಗಳ ಕೈಗೆ ಪುಷ್ಪಮಾಲೆಯನ್ನು ತೆಗೆದು ಕೊಟ್ಟರು (ಶಾಂತಲಾ. ೦೦೯). ೨. ಒಂದು ಬಗೆಯ ಭತ್ತ,–ನೆಲ್ಲು : ಕುಂದದ ಚಂದ್ರಲೇಖೆ ನಸುಗುಂದದೆ ರಂಜಿಪ ಪುಷ್ಪಮಾಲೆ ಕಂದೊಂದದ ಸೋಮಶಾಲೆ . . . ನಿರಂತರಮೊಪ್ಪುವ ಧರ್ಮಗುತ್ತಿಯೆಂಬಂದದನೇಕ ನಾಮವೆಸೆಗುಂ ಮೃದುಬಂಧುರ ಗಂಧಶಾಲಿಗಳ್ (ಮಲ್ಲಿಕಾ. ೯-೬೩). [ಸಂ. ಪುಷ್ಪಮಾಲಾ]

**ಪುಷ್ಪಮಾಸ** (ನಾ). ಗಿಡಬಳ್ಳಿಗಳು ಹೂವು ಬಿಡುವ ಸಮಯಂ; ವಸಂತಕಾಲ ; ಚೈತ್ರಮಾಸ : ಪುಷ್ಪಮಾಸವು ಕಳೆಯೆ ಪುಷ್ಪವಿರಹಿತೆಯಾಗ ಭೂವಣವ ಕಳೆದಿಟ್ಟ ಕಾಂತೆಯಂತಿಹಳು (ಕೃಷ್ಣಾಲೀ. ೬೭). [ಸಂ.]

**ಪುಷ್ಪರಥ** (ನಾ). (ಸಂತೋಷವಿಹಾರಕ್ಕಾಗಿ) ಹೂವುಗಳಿಂದ ಸಿಂಗರಿಸಿದ ಬಂಡಿ : "ವಿನೋದದ ರಥಮಂ ಪುಷ್ಪರಥಮೆಂಬುದು" (ಹಲಾಯು. ೬೩-೨೯೨); ಮರುದಿನ ಪುಷ್ಪರಥವು ಸಿದ್ಧವಾಯಿತು (ಮುಹಾಜ. ೩೦೨). [ಸಂ.]

**ಪುಷ್ಪರಸ** (ನಾ). ೧. ಹೂವಿನಲ್ಲಿರುವ ಸಾರವೆತ್ತಾದ ದ್ರವ; ಮಕರಂದ : "ಮಕರಂದಃ, ಪುಷ್ಪರಸಃ—೨ ಹುವ್ವಿನ ಜೇನು, ಹುವ್ವಿನ ಬಂಡು" (ಸಿದ್ಧಾಂತಿ. ೦೦೩). ೨. ಜೇನುತುಪ್ಪ : "ಸಾರಘಂ, ಮಾಕ್ಷಿಕಂ, ಕ್ಷೌದ್ರಂ, ಮಧು, ಪುಷ್ಪರಸಃ–ಈ ೫ ಜೇನ ತುಪ್ಪಂ" (ಹಲಾಯು. ೦೦೨-೯೬೬). [ಸಂ.]

**ಪುಷ್ಪರಾಗ** (ನಾ). ನವರತ್ನಗಳಲ್ಲಿ ಒಂದು ; ನಸುಹಳದಿಬಣ್ಣದ ಒಂದು ಬಗೆಯ ಹರಳು ; ಪುಷ್ಯರಾಗ : "ಪೀತಮಣಿಃ—ಪುಷ್ಪರಾಗ" (ಟಿಪಂ. ೯೯). [ಸಂ.]

**ಪುಷ್ಪರಾಜ** (ನಾ). ೧. = ಪುಷ್ಪರಾಗ. ೨. ಹೂವುಗಳ ಅರಸ; ವಸಂತ (?) : ಆ ಲಲಿತಕುಸುಮತತಿಯಾ ಬಾಲಕಪದಪದ್ಮಮೂಲಮಂ ಬಳಸಿದುವೊಡ್ಡೋಲಗಕೆ ಪುಷ್ಪರಾಜನನೋಲಗಿಸಲ್ ಬೇದ ಪುಷ್ಪನಿಚಯದ ತೆಱದಿಂ (ಶಾಂತಿಪು. ೦೦-೬೦). [ಸಂ. ಪುಷ್ಪರಾಜನ್]

**ಪುಷ್ಪಲತೆ** (ನಾ). ಹೂವಿನ ಬಳ್ಳಿ : ಕಾಮಚಾಪದೀ ಜನಿಯಿಸಿದಿಕ್ಷು ಚೇದ್ರನಮರ್ದಿಂ ಮಡುಗೊಂಡ ಕೊಳಂ ದಿವಂ ತಮರ್ಮನೆ ತನಗೆಂಬ ಪುಷ್ಪಲತೆ ಕಲ್ಪಮಹೀಜದ ಬೀಜದುಷ್ಪ್ರಪಂ (ಶಕ್ಕಪು. ೨-೬೬). [ಸಂ. ಪುಷ್ಪಲತಾ]

**ಪುಷ್ಪಲಾವ** (ನಾ). ಹೂವುಗಳನ್ನು ಆಯ್ದು ತರುವವನಂ; ಹೂವಾಡಿಗ. [ಸಂ.]

**ಪುಷ್ಪಲಾವಕ** (ನಾ). = ಪುಷ್ಪಲಾವ : ಹರಿಯಂ ಕಾಣ್ಬುದುಮಾದುದು ಪರಮಜ್ಞತೆ ಪುಷ್ಪಲಾವಕಂಗಮಿದೇನಚ್ಚರಿ (ಜಗಚ. ೬-೦೯). [ಸಂ.]

**ಪುಷ್ಪಲಾವಿ** (ನಾ). ಹೂವಾಡಿಗಿತ್ತಿ; ಹೂವಡಿತಿ: ಮಾಲೆವೂವಂ ನೆಗಟ್ಟಿ ಸೊಗಯಿಸಿಕುಂ . . . ಪುಷ್ಪಲಾವೀಕದಂಬಂ (ಶಂರಾವಿ. ೦-೦೨೦); ಮಾಲೆಗಳಂ ತೋಳ್ಗಳೊಮೊಪ್ಪೆ ಕಣ್ಗೊಳಿಸುತಿರ್ಪುಂ ಪುಷ್ಪಲಾವೀಜನಂ (ಜಗ. ೯-೦೦೩). [ಸಂ. ಪುಷ್ಪಲಾವೀ]

**ಪುಷ್ಪಲಾವಿಕೆ** (ನಾ). =ಪುಷ್ಪಲಾವಿ: ಮದನನ ಪರಿಚಾರಿಕೆಯರಂತೆ ವಂತೆ ಪೂವನೆತ್ತುವ ಪುಷ್ಪಲಾವಿಕಾಚತುಷ್ಪಥದೊಳ್ (ಶಾಂತಿಪು. ೬-೭೨ ವ). [ಸಂ. ಪುಷ್ಪಲಾವಿಕಾ]

**ಪುಷ್ಪಲಿಹ** (ನಾ). ದುಂಬಿ; ಭ್ರಮರ: "ಅಳಿ ಚಂಚರೀಕಮಿಂದಿಂದಿರಂ ತುಂಬಿ ಪುಷ್ಪಲಿಹಂ . . . ಭ್ರಮರಮಕ್ಕುಂ" (ಮಂಗರಾ. ೩೨-೦೦). [ಸಂ. ಪುಷ್ಪಲಿಹ್]

**ಪುಷ್ಪವಂತ** (ಗು). ೧. ಹೂವುಗಳುಳ್ಳ; ಹೂವು ಬಿಡುವ: ಪುಷ್ಪವಂತ ಸಸ್ಯಗಳು . . . ಈ ಸಸ್ಯಗಳು ಹೂವುಗಳನ್ನು ಬಿಡುತ್ತವೆ(ಸಸ್ಯಶಾ. ೩). (ನಾ). ೨. ಹೂವುಗಳಿಂದ ಅಲಂಕಾರಮಾಡಿಕೊಂಡವನು. ೩. ಸೂರ್ಯ ಮತ್ತು ಚಂದ್ರರಿಬ್ಬರಿಗೂ ಕೂಡಿ ಇರುವ ಒಂದೇ ಹೆಸರು: ಅವನ ಮೆಯ್ಯೊಗರಿಂ ಈ ಪುಷ್ಪವಂತರ್ಗೆ ಪೊಳೆಪೊದವಿದತ್ತೋ . . . ಆ ವನಪಾಲ್ಕನ ದಿವ್ಯಮೂರ್ತಿಯಂ ಕಣ್ ತಣಿಯೆ ಕಂಡು (ಅದ್ಯುತ. ೬-೦೩). [ಸಂ. ಪುಷ್ಪವತ್]

**ಪುಷ್ಪವತಿ** (ನಾ). ೧. ಮುಟ್ಟಾದವಳು; ಋತುಮತಿ; ರಜಸ್ವಲೆ: "ಅವೀ, ಉದಕ್ಯಾ, ರಜಸ್ವಲಾ, ಆತ್ರೇಯಿಕಾ, ಪುಷ್ಪವತೀ — ಈ ೫ ಮುಟ್ಟುವೆಂಗಡವಳ್" (ಹಲಾಯು. ೬೦-೩೩೪); ಒಂದು ದಿವಸಂ ದೇವಕೀದೇವಿ ಪುಷ್ಪವತಿಯಾಗಿ (ಜಗ. ೨-೩೯ ವ); ನೀ ಪುಷ್ಪವತಿಯಾಗಲ್ಲಿ ಫಲವತಿಯಾಗು ನಡೆ ಕುರುರಾಯಭವನದಲಿ (ಕುಮಾವ್ಯಾ.ಸ. ೦೯ ೬೩). ೨. ಹೂವುಗಳನ್ನು ಉಳ್ಳ ಬಳ್ಳಿ; ಹೂವುಬಿಟ್ಟ ಬಳ್ಳಿ: "ಪುಷ್ಪವತೀ =ಹೂತ ಬಳ್ಳಿ" (ಕಾಶಕ್ಕೆ. ೦೬೩). ೧, ೨: ಪರಾಂಗಿ ಲತೆಯಂತೆ ಪುಷ್ಪವತಿಯಾಗಿರ್ಪುಂ (ಕೋಳೋಕ. ೯-೦೭೯); ಸಲೆ ಪಂಥ್ವಾಲಯದಂತಿರೆ ಪಲಕಾಲಂ ಪುಷ್ಪವತಿಯೆನಾದಪೆನೆಂದುಂ ಫಲವತಿಯಾದಪೆನಿಲ್ಲೆಂದು ಲತಾಬಲಿತಾಂಗಿ ಬಾಡಿ ಬಾಡಟದೆಂಗುಂ (ಸುಕುಮಾ. ೯-೧೮); ಪರಪುಷ್ಪವತಿಲತೆ ಬಾಗಿ ತಬ್ಬಿದಳೆಂದು ಮಿಂದೆದ್ದು ವಿಮಲವಾರಿಯನು ಮತ್ತೆ ಸೋಂಕುವಳೆದು ಅಂಜಿ ಮರಾಟುತನಿಂದು ಮೆಲ್ಲಮೆಲ್ಲನೆ ಬರುತಿಹಸು (೨ಂಡಾಶ. ೬೭-೭೨). [ಸಂ. ಪುಷ್ಪವತೀ]

**ಪುಷ್ಪವರ್ಷ** (ನಾ). ಹೂವಿನ ಮಳೆ; ಪುಷ್ಪವೃಷ್ಟಿ: ಜಯನಿನದಂ ಸುರದುಂದುಭಿಚಯನಿನದಂ ಪುಷ್ಪವರ್ಷಮೊರ್ಮೆಯೆ . ಸಕಲೋರ್ವಿಯನೆಯ್ದೆ ವರ್ತಿಸಿರೆ ಚಿತ್ರಯ ಸಿರಿಯಂತೆಚಿಗಿ ಪೋದುದವಮರಸಮಾಜಂ (ಆದಿಪು. ೦೯-೦೯೭); ಕರಂ ಸೊಗಯಿಪನ್ನೆಗವಾಗಳೆ ತೋರಿ ತನ್ನ ರೂಪಂ ಕಳೆದಂ ಬಟ್ಟುಕ್ಕಳವಿದಚ್ಛಿದ ಹರ್ಷದೆ ಪುಷ್ಪವರ್ಷಮಂ (ಚಂದ್ರಪ್ರಪು. ೫-೬೧). [ಸಂ.]

**ಪುಷ್ಪವಸೆ** (ನಾ). ಹೂವಿನ ಹಾಸುಗೆ; ಪುಷ್ಪಶಯ್ಯೆ: ಕೆಲವೆಡೆಗೆ ಕೆದರಿರ ಹಸೆಗಳು ಕೆಲವು ಕೆಲವೆಡೆ ಪುಷ್ಪವಸೆಗಳು (ಕೌಶಿಲಾ. ೦೦-೨೨). [ಪುಷ್ಪ + ಪಸ್ಸೆ]

**ಪುಷ್ಪವಾಟ** (ನಾ). ಹೂವಿನ ತೋಟ; ಹೂದೋಟ: ಇಕ್ಷು ಪುಷ್ಪವಾಟಂಗಳಿನಾವ ಮಂಡಲಮುಮಂ ಗೆಲೆವಂದುದು ಪೆಂಗಿಮಂಡಲಂ (ಅಜಿತ. ೦-೨೦); ಪುಷ್ಪವಾಟದಿನಗಲ್ದಬ್ಜಾಕರಕ್ಕಾಗಿ ಪೊರ್ದುವ ಮತ್ತ ಭ್ರಮರಾಳಿ . . . ಎತ್ತಲುಂ ಸೊಗಯಿಸಿಕುಂ ಚಂಪಾಪುರೋಪಾಂತದೊಳ್ (ಸುಕುಮಾ. ೯-೯೩). [ಸಂ.]

**ಪುಷ್ಪವಾಟಿ** (ನಾ). = ಪುಷ್ಪವಾಟ: "ಹೂವಿನ ತೋಂಟಮಂ ಪುಷ್ಪವಾಟಿಯೆಂಬುದು" (ಹಲಾಯು. ೩೬-೬೦); ಅಗಳುಂ ಮುಸುಕಿ ನಿಂದಳಿ ಮಾಲೆಯ ಗೀತನಿಸ್ವನಾಭೋಗದೆ ಪುಷ್ಪವಾಟಿ ಬಗೆಗೊಳ್ವುದನುಗನ ಗೀತಶಾಲೆಯೋಲ್ (ಜಗ. ೯-೯೩); ಅಲರ್ಗಣೆ ಪುಷ್ಪವಾಟಿಕುಲದೊಳ್ ಬಳೆದಿಪ್ಪುವು ವಿಮಾನಕೇತುಗಳ್ ಜಲರುಹಷಂಡದೊಳ್ ಮೆಚ್ಚಿವುತಿರ್ದಪುವು (ಅನಂಪು. ೩-೬). [ಸಂ. ಪುಷ್ಪವಾಟೀ]

**ಪುಷ್ಪವಾಟಿಕ** (ನಾ). = ಪುಷ್ಪವಾಟ: ಲಿಂಗಂಗಳಿಗೆ ಕೂರ್ತು ತಂದು ಪೂಜಿಪ ಪುಷ್ಪವಾಟಿಕವೃಂದಮುಂ ಲಿಂಗಂಗಳಿಗೆ ನಯವೊಂದಿ ಧೂಪವನೀವ ಗುಗ್ಗುಳತರುಸಮುಚ್ಚಯವು (ಬಸವು. ೦೯-೬೦). [ಸಂ. ಪುಷ್ಪವಾಟಿಕಾ]

**ಪುಷ್ಪವಾಟಿಕೆ** (ನಾ). = ಪುಷ್ಪವಾಟ: ಪುಷ್ಪವಾಟಿಕೆಗಳು ಮುರುಟಿದವು ಪಶುಗಳೆಚಿದುವು (ಬಸವು. ೩೭-೯೬); ಪೂಗಳಿಂದ ತಮ್ಮವಯವ ಸೌಂದರ್ಯಮಂ ವಿಟರಿಗೆ ತೋರಿಸುವಂತೆ ಮಾರುವ ಮಾಲೆಕಾರನ ಬಾಲೆಯರಿಂ ಮನೋಹರವಾದ ಪುಷ್ಪವಾಟಿಕೆಗಳಿಂ (ಸೌಗಂಧಿ. ೫-೦); ತುಂಬಿಗಳು ಪುಷ್ಪವಾಟಿಕೆಯ ಬಳಿ ಹಾಡುತ್ತಿವೆ (ಶಾಕ್ತ. ೬). [ಸಂ. ಪುಷ್ಪವಾಟಿಕಾ]

**ಪುಷ್ಪವಾಸ** (ನಾ). ಹೂವಿನ ವಾಸನೆ; ಪುಷ್ಪಗಂಧ: ಸುಕುಮಾರಂ . . . ಪುಷ್ಪವಾಸದಕ್ಕಿಯ ಕೂಟನಲ್ಲದೆ ಮತ್ತಿನಾಹಾರಮನುಂಡಱಿಯಂ (ಜೀವಸಂ. ೦೦೭-೩೫ ವ). [ಸಂ.]

**ಪುಷ್ಪವೃಷ್ಟಿ** (ನಾ). =ಪುಷ್ಪವರ್ಷ: ಆ ರಾಜಭವನದೊಳ್ ವಸುಧಾರೆಯ ತಣ್ಣಲರ ಪುಷ್ಪವೃಷ್ಟಿಯ ಸುರಭೇರೀರವದ ಪೊಗಟ್ಟು ದೇವರಹೋರಭಸದ ಪುದುವಿನಾಯ್ತು ಪಂಚಾಶ್ಚರ್ಯಂ (ಧರ್ಮಪು. ೦೯-೦೦); ಅಂತರಿಕ್ಷದಲ್ಲಿ ಅಮರರು ನೋಡಿ ಆಗ ಪುಷ್ಪವೃಷ್ಟಿಯನ್ನೆ ಕಱೆಯಲು (ಪುರಂತ. ೯-೬-೭); ಆಕಾಶದಲ್ಲಿ ದೇವತೆಗಳೂ ಋಷಿಗಳೂ ಅಪ್ಸರೆಯರೂ ಪುಷ್ಪವೃಷ್ಟಿ ಕರೆದು ಇವನು "ಭೀಷ್ಮ!" ಎಂದು ಹೊಗಳಿದರು (ವಚಭಾ. ೯). [ಸಂ.]

**ಪುಷ್ಪಶಯನ** (ನಾ). ಹೂವಿನ ಹಾಸುಗೆ: ಇದು ತಾನಾಕೆ ಪೊರಳ್ದ ಪುಷ್ಪಶಯನಂ . . . ಇದು ಹಸ್ತಾಬ್ಜದೆ ಜಾರಿದಾಕೆಯ ಮೃಣಾಳೀಕಂಕಣಂ (ಶಾಕುಂತ. ೯೩-೭೭). [ಸಂ.]

**ಪುಷ್ಪಶಯ್ಯೆ** (ನಾ). = ಪುಷ್ಪಶಯನ: ಜನತಾಸೇವೆಯೆಂದರೆ ಪುಷ್ಪಶಯ್ಯೆಯಲ್ಲ, ಮುಳ್ಳಿನ ಹಾಸಿಗೆ (ಚಕ್ರ. ೦೦೦). [ಸಂ. ಪುಷ್ಪಶಯ್ಯಾ]

**ಪುಷ್ಪಶರ** (ನಾ). ೧. (ಮನ್ಮಥನ) ಹೂವಿನ ಬಾಣ: ಪುಷ್ಪಶರತೀವ್ರತೆಯೆಂತು ರವಿಪ್ರತಾಪಮೆಂತೆಳಿಕುಳದಂಗನೀಳರುಚಿಯೆಂತು ನಿಜಂ ತನಗಂತು ಸದ್ಗುಣಾವಳಿ ಸಹಜಾತಂ (ಶಾಂತಿಪು. ೭-೦೯೯). ೨. ಮನ್ಮಥ; ಕಾಮ: ಜಿತಕಾಮರ್ ಮರುಳಾದರ್ ಪುಷ್ಪಶರನ ಪಡೆ ನಡೆವಾಗಳ್ (ಗಿರಿಜಾ. ೬-೬). [ಸಂ.]

**ಪುಷ್ಪಸಮಯ** (ನಾ). ೧. ಹೂವು ಬಿಡುವ ಕಾಲ; ವಸಂತಮಾಸ: "ವಸಂತಃ, ಪುಷ್ಪಸಮಯಃ, ಸುರಭಿಃ—೩ ವಸಂತಋತುವಿನ ಹೆಸರುಗಳು" (ನಿಘಂಶಿ. ೯೦). ೨. ಮುಟ್ಟಾಗುವ ಕಾಲ; ಋತುವಾಗುವ ಸಮಯ: ಮೂಡಿದ ಪೊಡವಿ ಮುಗುಳ್ಮೊಗವೀಡಿ ಜವುಮಂಜರೀಸ್ತನಂ ತೋಳ್ಮೊದಲೊಳ್ ಕೀಡುವ ನಱುಗಂಪೇಂ ಪಿಸುಣಾಡಿದುದೋ ಸತಿಗೆ ಪುಷ್ಪಸಮಯೋದಯಮುಂ (ಧರ್ಮಪು. ೩-೦೦೫). [ಸಂ.]

**ಪುಷ್ಪಸಾಯಕ** (ನಾ). ೧. (ಮನ್ಮಥನ) ಹೂವಿನ ಬಾಣ: ಪುಳಿಂದರಾರ್ದಿಸೆ ಸಿಡಿಲ್ದುಗುತಂದುವು ಪುಷ್ಪಸಾಯಕಂಗಳ ಪೊಗರ್ವಟ್ಟು ಚಂದ್ರಿಕೆಯ ಬಿಟ್ಟು . . . ಎಂಬ ವಾರಿಧರವಾರಣವೇಣುವರಾಹವೌಕ್ತಿಕಂ (ಜಗ. ೦೭-೨೬). ೨. ಕಾಮ; ಮನ್ಮಥ: ಬಿಲ್ ಪುರ್ವು ಬಾಣಂ ನಿಜಾಕ್ಷಿ ವನಕ್ರೀಡೆಗೆ ಪುಷ್ಪಸಾಯಕನಿಭಂ ತನ್ನಾಯಕಂ ಸಿಲ್ವುದುಂ (ಶಾಂತಿಪು. ೬-೦೦); ಇಂದುಪಯೋಜಜಂಗೆ ಕೃತಕೃತ್ಯತೆ ಸಾರ್ದುದು ಪುಷ್ಪಸಾಯಕಂಗಿಂದೊಳ

ಸೋರ್ಮದೇಸುವಸಂ . . . ಎಂದು ನೋಡಿವರ್ (ಶಂಪ್ರಶು. ೩-೬೯); ಪುಷ್ಪಸಾಯಕ ಜಗದೇಕವೀರನ ಮದಂಗಿಡೆ ಮರ್ದಿಸಿದ ಪ್ರತರ್ಕ್ಯನೊಳ್ . . . ಎಚ್ಚು ಗೆಲ್ದು ಬಗೆಯಾಂತೆನಿದೆನ್ನಯ ಮೋಹಮೆಂತುಟೋ (ಶಬಶಂ. ೯-೦೨೬). [ಸಂ.]

**ಪುಷ್ಪಸ್ರಜ** (ನಾ). ಹೂವಿನ ಮಾಲೆ: ಅನಲ್ಪಕಲ್ಪಲತಿಕಾಪುಷ್ಪಸ್ರಜಾ ವೋದಂ . . . ಸೌಗಂಧ್ಯವಂದೀಕೃತಭೃಂಗರಂ ತೆಕ್ಕನೆ ತೀವೆ ಗಂಧ ಮಯಮಾಯ್ತಂದಾ ಮಹಾಮಂಡಪಂ (ಪುಶ್ಚಕೃ. ೦೦-೯೦). [ಸಂ. ಪುಷ್ಪಸ್ರಜ್]

**ಪುಷ್ಪಹೀನೆ** (ನಾ). ಮುಟ್ಟು ನಿಂತು ಹೋದವಳು; ಮಕ್ಕಳಾಗುವ ವಯಸ್ಸನ್ನು ಮೀರಿದವಳು: "ಪುಷ್ಪಹೀನಾ, ನಿಷ್ಫಲಾ — ಈ ೨ ಮುಟ್ಟುವ ಮಣ್ಣಾವಳ್" (ಶಬಾಯು. ೬೨-೩೩೩). [ಸಂ. ಪುಷ್ಪಹೀನಾ]

**ಪುಷ್ಪಾಂಜನ** (ನಾ). ಹಿತ್ತಾಳೆಯ ಭಸ್ಮದಿಂದ ತಯಾರಿಸಿದ ಒಂದು ಬಗೆಯ ನೇತ್ರಾಂಜನ,–ಕಣ್ಣಿಗೆ ಲೇಪಿಸುವ ಕಾಡಿಗೆ: "ಪುಷ್ಪಕೇತು– ಪುಷ್ಪಾಂಜನ" (ಓತಂ. ೦೦೦). 'ಕುಸುಮಾಂಜನ' ಪರಾ. [ಸಂ.]

**ಪುಷ್ಪಾಂಜಲಿ, ಪುಷ್ಪಾಂಜಳಿ** (ನಾ). ೧. ಬೊಗಸೆಯ ತುಂಬ ಇರುವ ಹೂವು. ೨. ಬೊಗಸೆಯಲ್ಲಿ ಹೂವುಗಳನ್ನು ತಂದು ಅರ್ಪಿಸುವಿಕೆ; ☞ ನೃತ್ಯ, ನಾಟಕಪ್ರಯೋಗಗಳ ಆರಂಭದಲ್ಲಿ ರಂಗಪೂಜೆಯ ಅಂಗವಾಗಿ, ರಂಗಭೂಮಿಯ ಎಲ್ಲ ಭಾಗಗಳಿಗೂ ಬೊಗಸೆಯಿಂದ ಹೂವುಗಳನ್ನು ಚೆಲ್ಲುವ ಪರಿಪಾಟಿಯು 'ಪುಷ್ಪಾಂಜಲಿ' ಯೆನಿಸಿ ಕೊಂಡಿದೆ: ಕಂತು ಪುಷ್ಪಾಂಜಲಿಯಂ ಸೂಸಿದ ಪದದೊಳ್ ಸಭೆಗಂ ಸೂಸಿದನೊಡನೊಡನೆ ನನೆಯ ಮೊನೆಯಂಬುಗಳಂ (ಅದಿಪು. ೯-೩೦); ಬಸವ ರಾಜಂ ನಲಿದು ಪುಷ್ಪಾಂಜಲಿಯನೀಯೆ (ಬಸಪು. ೭-೯೦); ನಾಟ್ಯಕಾರರು ಪುಷ್ಪಾಂಜಲಿಯೊಡನೆ ಪ್ರಾರಂಭಿಸುತ್ತಾರೆ (ಭಾರತ. ೩೩೩). ಪುಷ್ಪಾಂಜಳಿ: ೨. ನಾಟಕಾರಂಭಪ್ರಸ್ತುತಪವಿತ್ರಸೂತ್ರಧಾರನೆ ಮುಂದೆ ನಿಂದು ಪುಷ್ಪಾಂಜಳಿಯಂ ಕೆದಱೆ (ಶಾಂತಿಪು. ೦೦-೬೦ ವ); ಸುರದ್ರುಮಪುಷ್ಪಪ್ರಕರದೆ ರಂಗಮಧ್ಯದೊಳ್ ಮಾಡಿ ಮುಂದೆ ಪುಷ್ಪಾಂಜಳಿಯಂ (ಅದಿಪು. ೩ ೬೦); ಇದು ಸಾಧ್ಯತಾಂಡವಾರಂಭದೊಳೀಶ್ವರಚಾಟುನರ್ತನಕ್ಷೇಪದೊಳುಣ್ಮಿದ ಪುಷ್ಪಾಂಜಳಿಯೆನಲೇನುಮಡಿಯಿಸಿದುದೊ ಗಗನದೊಳಗೆ ತಾರಾನಿಕರಂ (ಪುಶ್ಚಕೃ. ೨-೦೦೨). [ಸಂ.]

**ಪುಷ್ಪಾಂಜಳಿ** 'ಪುಷ್ಪಾಂಜಲಿ' ನೋ.

**ಪುಷ್ಪಾಂಜುಲಿ, ಪುಷ್ಪಾಂಜುಳಿ** (ನಾ). ೧. = ಪುಷ್ಪಾಂಜಲಿ ೧: ಒಲವು ಮಿಗೆ ಲಲಿತಾರ್ಘ್ಯಪುಷ್ಪಾಂಜುಲಿ[ಶಾಚಂ. ಳಿ]ಯನರ್ಪಿಸಿ (ಹಿಸಪು. ೬೦-೩೦). ೨. = ಪುಷ್ಪಾಂಜಲಿ ೨: ಒಲವಿನಿಂದಾ ಮೆಲ್ಲಡಿಗಳಂ ತೋಳಿದು ಪುಷ್ಪಾಂಜುಲಿ[ಚಾಚಂ. ಳಿ]ಗಳಂ ಕೈಗೊಳಿಸಿ (ಬಸಪು. ೬೨-೩೦); ಪುಷ್ಪಾಂಜುಳಿ: ೨. ಎಡೆಯಿಡದ ಪುಷ್ಪಾಂಜುಳಿಗಳಿ ಅಗ ಪೆರ್ಮಳೆಯಾಗೆ (ರಾಶಶ. ೯-೯). [< ಪುಷ್ಪಾಂಜಲಿ]

**ಪುಷ್ಪಾಂಜುಳಿ** 'ಪುಷ್ಪಾಂಜುಲಿ' ನೋ.

**ಪುಷ್ಪಾಪಚಯ** (ನಾ). ಗಿಡಬಳ್ಳಿಗಳಿಂದ ಹೂವುಗಳನ್ನು ಬಿಡಿಸು ವುದು,–ಕಿರಿಯುವುದು: ಮೇಘರಥಂ ವನವಿಹಾರದೊಳಿರೆ ತದೀ ಯಾಂತಃಪುರಾವರೋಧಜನಂ ಪುಷ್ಪಾಪಚಯಾಸಕ್ತಿಯಿಂ ವನಮಂ ತೊಟ ಲುತ್ತುಂ(ಶಾಂತಿಪು. ೯-೭೭ ವ); ಅಂತು ನಿರ್ವರ್ತಿತ ಪುಷ್ಪಾಪಚಯವಿನೋದ ದುರಾಗಿ (ಜಾಪು. ೦೯-೯೯ವ). [ಪುಷ್ಪ+ಅಪಚಯ]

**ಪುಷ್ಪಾಯುಧ** (ನಾ). ಹೂವಿನ ಬಾಣಗಳನ್ನುಳ್ಳವನು; ಕಾಮ; ಮನ್ಮಥ: "ಮನಸಿಜಂ ಮನ್ಮಥಂ ಕಂದರ್ಪನಂಗಜಂ . . . ದರ್ಪಕಂ ಪುಷ್ಪಾಯುಧಂ" (ಮಂಗನಿ. ೭-೨೨); ಪುಷ್ಪಾಯುಧನ ಕೋದ ಕೊಳ್ಗೊಳಸಂ ಪೋಲ್ತು ಪೂಗೊಳದೊಳ್ ಸಾಜನ್ಯಕಂದಾಂಕುರನುಮಪ್ಪ ವಜ್ರಾಯುಧಂ . . . ಜಳಕ್ರೀಡಾವಿನೋದದೊಳಿರೆ (ಶಾಂತಿಪು. ೯-೯೭ ವ); ಅಂಗಜಾಗೀ ತ್ರಿಜಗಮುಮಿದಿರಿಲ್ಲೆಂಬಿನಂ ಪೂವಿನಂಬಿಂ ತಿರುವಾಯೊಳ್ಪೂಡಿ ಪುಷ್ಪಾಯುಧನಿರೆ ಕೆಲದೊಳ್ ಲೀಲೆಯಿಂ ಬಾಲೆಯಿರ್ಪಳ್ (ಜಗಪು. ೦೦-೦೬); ನೋಡು ನೋಡಿದು ಪುಷ್ಪಾಯುಧಪದ್ಮರಾಗಮುಕುರಪ್ರದ್ಯೋತವೋ . . . ಎಂಬ ಸಂಪದವಂ ಬೀಱುದುದಿಂದ್ರದಿಗ್ವಿಪರದೊಳ್ ಚಂದ್ರದ್ಯುತಿ ಪ್ರಾಭವಂ (ಗಿಂಶ. ೯-೯೯). [ಸಂ.]

**ಪುಷ್ಪಾಯುಧಕೇಳಿ** (ನಾ). ಕಾಮಕೇಳಿ; ಸಂಭೋಗ: ಮತ್ತೀಯಸಿ ಯಂಪುವೆತ್ತ ತುಟಿಯಂ ದಯೆಯಿಂದವೆಂ ಪೀರ್ದನಲ್ತೆ ಪುಷ್ಪಾಯುಧ ಕೇಳಿಯೊಳ್ (ಕುಕುಂತ. ೯೦-೦೫೦). [ಸಂ. ಪುಷ್ಪಾಯುಧಕೇಲಿ]

**ಪುಷ್ಪಾಯುಧವೈರಿ** (ನಾ). ಕಾಮನ ಶತ್ರು; ಶಿವ: ಪೊಱಮಟ್ಟು ದಟಂ ನಡೆಗೊಂಡಲ್ಲಿ ಪುಷ್ಪಾಯುಧವೈರಿಯಂಘ್ರಿಗಳನಾಂತರ್ದೆಯೊಳ್ಳಿಗೆ ರಾಜಶೇಖರಂ (ರಾಜಶೇ. ೦೯-೯೩). [ಸಂ. ಪುಷ್ಪಾಯುಧವೈರಿನ್]

**ಪುಷ್ಪಾರ್ಘ್ಯ** (ನಾ). ಹೂವುಗಳ ಕಾಣಿಕೆ,—ಅರ್ಘ್ಯ: ಬಂದಿ ದಿರ್ಗೊಳ್ಳಂತಾಯ್ತು ಕಲ್ಪಕ್ಷಿತಿರುಹಚಹುಪುಷ್ಪಾರ್ಘ್ಯದಿಂದೆಂಬಿನಂ ಚೆಲ್ವಿದಿ ಗೋರ್ದಶಿತ್ತಿಂವ್ರಶ್ಯೈಲಕ್ಕತಿಶಯಮಹಿಮಂ ಬಾದೊಡಂದಾದಿದೇವಂ (ಅದಿಪು. ೭-೬೨). [ಸಂ.]

**ಪುಷ್ಪಾಸವ** (ನಾ). ಹೂವಿನ ರಸ; ಜೇನು; ಮಕರಂದ: ತೀರಸ್ಥ ಲವಂಗಚೂತಲವಲೀಪುಷ್ಪಾಸವಾಸ್ವಾದಿತಾಲಿಯೂತೋನ್ಮಾದೆಯ . . . ಸೀತೋದೆಯ ಪೋಲ್ವೆಗಿಲ್ಲ ತೊಱೆಗಳ್ ವಿಶ್ವಂಭರಾಭಾಗದೊಳ್ (ಅದಿಪು. ೦-೩೯); ಪುಷ್ಪಾಸವವನ್ನು ಕಳುವ-ತೊಕ್ಕಿನ ಕೂಸಾದ ಈ ದುರುದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು (ಶಾಕುಂತ. ೯೦-೦೬). [ಸಂ.]

**ಪುಷ್ಪಾಸಾರ** (ನಾ). ಹೂಮಳೆ; ಪುಷ್ಪವೃಷ್ಟಿ: ನುತ ಪುಷ್ಪಾಸಾರ ಮುದ್ಯದ್ದಿವಿಜಜಯನಿನಾದಂ . . . ಚಾರುಸಿಂಹಾಸನಮೆನೆ ನೆಗಟ್ದೀ ಪ್ರಾತಿಹಾರ್ಯಾಷ್ಟಕಂ ವಿಶ್ರುತಮಾಗಿರ್ದಂ ಸುರೇಂದ್ರೋಪಕೃತಮೆನಿಸಿ (ಸುಕುಮಾ. ೯-೫೦). [ಸಂ.]

**ಪುಷ್ಪಾಸ್ತ್ರ** (ನಾ). ೧. (ಕಾಮನ) ಹೂವಿನ ಬಾಣ: ಇದು ನಿನ್ನರ್ಚಿಸು ವಿಕ್ಷುಚಾಪವಿದು ನಿನ್ನೀ ಲೋಕಮಂ ಕೈಗೆ ಮಾಡಿದ ಪುಷ್ಪಾಸ್ತ್ರಂ (ಅದಿಪು. ೦೦-೦೭). ೨. ಕಾಮ; ಮನ್ಮಥ. [ಸಂ.]

**ಪುಷ್ಪಿಣಿ** (ನಾ). ೧. ಹೂವು ಬಿಟ್ಟಿರುವುದು; ಹೂತುದು. ೨. ಮುಟ್ಟಾ ದವಳು; ಋತುಮತಿ: "ಪುಷ್ಪಿಣೀ–ರಜಸ್ವಲೆ" (ಶಾಶಕ್ಕ. ೦೬೩). ೧, ೨: ಅವಗಂ ಪುಷ್ಪಿಣಿಯರಾಗಿರ್ದರಿಲ್ಲಿಯ ಲತಾವಧುಗಳಿವರ ಸೋಂಕಲೆ ಬಾರದೆಂದು ರಾಜೀವಮಿತ್ರಂ ತನ್ನ ನಿರ್ಮಲಕರಂಗಳಂ ಪೆಱ ದೆಗೆದಂ (ಕೈಬಿಚಾ. ೩-೨೩). [ಸಂ. ಪುಷ್ಪಿಣೀ]

**ಪುಷ್ಪಿತ** (ಗು). ೧. ಹೂವು ಬಿಟ್ಟ; ಹೂವರಳಿದ: ಏರಿದನು ಸೌಮಿತ್ರಿ . . . ವಿರಳ ವರ್ಣದ್ರುಮದ ಪುಷ್ಪಿತಶರೀರದಾ ಸ್ವರ್ಗಚುಂಬಿತಸಾಲಮುನ್ನತ ಶಿರದ ಕರದ ಗೋಪುರಕೆ (ಶ್ರೀರಾಮಾ. ೦೫೭-೦೯೬). (ನಾ). ೨. ಹೂವು ಬಿಟ್ಟಿರುವುದು; ಹೂತುದು: ಒದೆದಶೋಕೆಯಂ ಬಕುಳಮಂ ಮುಕ್ಕುಳಿಸಿ ಮದ್ಯದಿಂದೆ . . . ಪುಷ್ಪಿತಂ ಮಾಡಿ ತೋಱಿದರಂಬುಜಾಕ್ಷಿಯರ್ (ಕೈಬಿಚಾ. ೮-೦೬). [ಸಂ.]

**ಪುಷ್ಪಿತಾಗ್ರ** (ನಾ). [ಛಂದ] ಅರ್ಧಸಮವಾದ ಅಕ್ಷರವೃತ್ತಗಳಲ್ಲಿ ಒಂದು: ಪುಷ್ಪಿತಾಗ್ರ:–ಇದರ ವಿಷಮಪಾದಗಳಲ್ಲಿ ನನರಯ ಗಣಗಳೂ ಸಮಪಾದಗಳಲ್ಲಿ ನಜಜರ ಗಣಗಳೂ ಒಂದು ಗುರುವೂ ಬರುವುವು (ಕೈಬಿಚಾ. ೯೯). [ಸಂ. ಪುಷ್ಪಿತಾಗ್ರಾ]

**ಪುಷ್ಪಿತೆ** (ನಾ). =ಪುಷ್ಪಿಣಿ ೨: "ತುಱುಮಿಂಡಿಯೊಂದು ಪುಷ್ಪಿತೆಯಾದ ಕಾಂತೆ" (ಶಶಿಸಾ. ೬೨-೩೬೨); ಮೈನೆರೆಯದೆ ಬಹುಕಾಲ ಕಳೆದ ಸ್ತ್ರೀಯು ಈ

ಚೂರ್ಣವಂ ಸೇವಿಸೆ ಪುಷ್ಪಿತೆಯಂಹಳು (ಸಕವ್ಯ. ೧೯೬). [ಸಂ. ಪುಷ್ಪಿತಾ]

**ಪುಷ್ಪಿಸು** (ಕ್ರಿ). ಹೂವು ಬಿಡು; ಪುಷ್ಪಿತವಾಗು : ಅಲಕ್ತಕರಂಜಿತವಾದ ಚರಣಸ್ಪರ್ಶದ ಮಹಿಮೆಯಿಂದ ಪುಷ್ಪಿಸಿ ಸರ್ವದಾ ಪರಿಮಳಯುಕ್ತವಾಗಿರುವುದುಯಿದು (ಸೌಗಂಧಿ. ೨೬೨-೦೬); ಪುಷ್ಪಿಸಿದ, ಮರಗಳ ಮಧ್ಯದಲ್ಲಿ ಪರಾವಸುವಿನ ಹೆಂಡತಿ ತನಿಯಾಗಿ ನಡೆಯುತ್ತಾ ಇದ್ದಳು (ವ್ಯಾಸಕ. ೦೭೦). [ಪುಷ್ಪ + — ಇಸು$_1$]

**ಪುಷ್ಪೇಷು** (ನಾ). ೧. (ಕಾಮನ) ಹೂವಿನ ಬಾಣ : ಇವು ಕಂದರ್ಪಂಗೆ ದೋರ್ದರ್ಪವಂ . . . ಅಡರಿಸಂಗುಂ ತಮ್ಮ ಪುಷ್ಪೇಷುವಿಂ ತಮ್ಮ ವಿಕಾಸೋಲ್ಲಾಸದಿಂ ತಮ್ಮ ತಿಪರಿಮಳದಿಂ ತಮ್ಮ ಚೆಲ್ವಿಂದೆನಲ್ ಜಾತಿವನೇಜಾತಪ್ರಸೂನಾವಳಿಯನಿಟ್ಟಿಸಿ ಸಂಪತ್ತುವೆತ್ತಿರ್ದುದೆತ್ತಂ (ಜಗನ್ನಾ. ೯-೬೩). ೨. ಕಾಮ; ಮನ್ಮಥ : ಅದೆ ಕಂದರ್ಪಂಗೆ ದೋರ್ದರ್ಪದ ಮೊದಲದೆ ಪುಷ್ಪೇಷುಗೀ ಲೋಕಮಂ ಗೆಲ್ವದಟೆಂದೆತ್ತಿರ್ಪ ಚೈತ್ರಧ್ವಜ (ಅತಕ್ಕೃ. ೨-೯೬). [ಸಂ.]

**ಪುಷ್ಯ** (ನಾ). ೧. ಹೂವು; ಪುಷ್ಪ. ೨. ಪುಷ್ಯರಾಗವೆಂಬ ರತ್ನ. ೩. ಚಾಂದ್ರಮಾನತಿಂಗಳುಗಳಲ್ಲಿ ಹತ್ತನೆಯದು : ಅಮರ್ದಿರೆ ಪುಷ್ಯ ಪೂರ್ಣಮೆಯೊಳಂ ನಯಮಂಂತಶಿಶುದ್ಧಮಪ್ಪ ಕುಂಕುಮಮನ ಪೂರ್ವಮಪ್ಪ ಫಲಮಂ . . . ಪಿಡಿದಿರ್ದು ಮಾಜಲಾ ಕ್ರಮದೊಳಗಕ್ಕು ಮೂಜನೆಯ ತಿಂಗಳೊಳಯ್ದಿಡಲಾಭಮುತ್ತಮಂ (ಜಗ್ಗ. ೬-೯೦); ಆ ಮಾಸವೇ ಚೈತ್ರ ವೈಶಾಖ . . . ಪುಷ್ಯ ಮಾಘ ಫಾಲ್ಗುಣವೆಂದು ಹನ್ನೆರಡು ತೆಱನಾಗಿಹುದು (ವಿವೇಕ. ೩೨೦); ಪುಷ್ಯಪ್ರಭಾತದೊಳ್ ಕ್ರೌಂಚ ಪಕ್ಷಿಯ ಪಂಕ್ತಿ ನೆರೆದು . . . ದನಿಸಂತೆಗೈವಂತೆವೋಲ್ ! (ಕ್ರೀರಾಮ. ೯೦-೩೩೯). ೪. ಪೂಜೆ ; ಅರ್ಚನೆ. ೫. ಬೆಲೆ; ಕ್ರಯ. ೬. ಶೂನ್ಯ; ಅಮಂಗಳ : "ಬೆಲೆ ಶೂನ್ಯ ಮಾಸ ತಾರಕಿ ಕಲು ಪೂಜೆಯುಮಾಜು ಪುಷ್ಯ ಶಬ್ದಮದಕ್ಕುಂ" (ನಾನಾಕಂ. ೦೫೨); "ಶಿಳೆಯುಂ ತಾರಗೆ ಮಾಸಭೇದ ಬೆಲೆಶೂನ್ಯಂ ಪುಷ್ಯಮಕ್ಕುಂ" (ನಾನಾರ. ೦೫೦). ೭. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಎಂಟನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : "ಪುಷ್ಯಂ ತಿಷ್ಯಮೆಂದೆನಿಕ್ಕುಂ" (ಮಂಗರಾ. ೦೨-೬); ಪುಷ್ಯ ಅಂಗೀರಸ ತಿಷ್ಯಂ ವಾಚಸ್ಪತಿ ಬೃಹಸ್ಪತಿ—ಈ ೫ ಪುಷ್ಯನಕ್ಷತ್ರಕೆ ಹೆಸರು (ಭಾಸ್ಕರ. ೬೨-೦); ಪುಷ್ಯ ಪುಸಿಯದ ಕಾಳೆ (ಗಾದೆ). [ಸಂ.]

**ಪುಷ್ಯಮಾಸ** (ನಾ). ೧.= ಪುಷ್ಯ ೩: "ಪುಷ್ಯಮಾಸಮಂ ಸಹಸ್ಯಮೆಂಬುದು" (ಹಲಾಯು. ೦೯-೦೦೬). ೨. ಮಂಗಳಕಾರ್ಯಗಳು ನಡೆಯದ ತಿಂಗಳು; ಶೂನ್ಯಮಾಸ : ಪುಷ್ಯಮಾಸವೆಂದರೆ ಶೂನ್ಯಮಾಸ. ಮಂಗಳಕಾರ್ಯಗಳಿಗೆ ಪ್ರಶಸ್ತವಲ್ಲದ ತಿಂಗಳು (ರೂಢಿ). [ಸಂ.]

**ಪುಷ್ಯಮಿ** (ನಾ). ೧.= ಪುಷ್ಯ ೭ : ಆ ಖಗೋಳದಲ್ಲಿ ಅಶ್ವಿನಿ ಭರಣಿ ಕೃತ್ತಿಕಾ ರೋಹಿಣಿ ಮೃಗಶಿರಾ ಆರ್ದ್ರಾ ಪುನರ್ವಸು ಪುಷ್ಯಮಿ . . . ರೇವತಿ ಗಳೆಂಬಿಪ್ಪತ್ತೇಳು ತಾರೆಗಳು (ವಿವೇಕ. ೨೩೯); ಕಟಕದ ದೇಹವೇ ನಮ್ಮ ಪುಷ್ಯಮಿನಕ್ಷತ್ರ (ನಕ್ಷತ್ರ. ೭೬); (ಎಕವ್ಯ. XV. ೩೦). 'ಪಾಡ್ಯಮಿ' ಪರಾ. [< ಪುಷ್ಯ]

**ಪುಷ್ಯರಾಗ** (ನಾ). ೧. ಹಳದಿಬಣ್ಣದ ಒಂದು ಬಗೆಯ ರತ್ನ : "ಪೀತಕಾಂತಮೆನೆ ಪುಷ್ಯರಾಗಂ" (ಮಂಗರಾ. ೩೦-೬); ವಜ್ರದ ಕಂಬ ವಿದ್ರುಮದ ತೊಲೆ ಪುಷ್ಯರಾಗಮೊಪ್ಪುವ ಜಂತೆ ಮರಕತದ ಲೋವೆ ಮುತ್ತಿನ ಸೂಸಕ (ಹಕಕಾ. ೯-೬); ಸಲೆ ಪುಷ್ಯರಾಗದ ತೊಲೆಗಳೆಸೆವ ಮಾಣಿಕಂಗಳ ಲೋವೆ ಮುತ್ತುಗಳ ಸೂಸಕಂ . . . ರಂಜಿಸಿತು ಚಾವಡಿಯ ಚೌರಸದೆಡೆಯೊಳು (ಕೈಬಿಭಾ. ೦೭-೨೩). ೨. ಒಂದು ಕುಲಪರ್ವತದ ಹೆಸರು : ಶಂಖಕೂಟ . . . ಪುಷ್ಯರಾಗ . . . ಶೈಲೇಂದ್ರಮೆಂಬ ಹದಿನೇಳು ಕುಲಗೋತ್ರಂಗಳೇ ಪೂರ್ವೋಕ್ತ ಸುಪಾರ್ಶ್ವವೆಂಬ ಕೀಲಕ ಪರ್ವತಕ್ಕೆ ಬಡಗಣದಿಕ್ಕಿನಲ್ಲಿಹವು (ವಿವೇಕ. ೨೦೬). [ಸಂ.]

**ಪುಸ್** (ನಾ). ಒಂದು ಅನುಕರಣ ಪದ : ಮಳೆ ಬಂದು ಪಟಾಕಿಗಳೆಲ್ಲ 'ಪುಸ್' ಎಂದುವು (ರೂಢಿ).

**ಪುಸಕಿ** (ನಾ). ಕೈಲಾಗದವನು ; ದುರ್ಬಲ : ಹೋಗೋ ಲೇ. ಹೋಗೋ . . . ಕರೀ ಕುರೀ. ಹೆಣ್ಣಾ ಪುಸಕೀ. ಕೈಲಾಗದವನೇ ! (ನಕಬಾ. I. ೩೨೩). [← ಮರಾ. ಪುಸಕಾ]

**ಪುಸಕ್ಕನೆ** (ಅ). ಕೂಡಲೆ ; ಒಮ್ಮೆಲೆ ; ಒಮ್ಮಿಂದೊಮ್ಮೆಲೆ : ನಿನ್ನವ್ವ ಮನೇಲೇ ಇರಬಹುದಾಗಿತ್ತು. ಪುಸಕ್ಕನೆ ತೌರುಮನೆಗೆ ಹೊರಟುಹೋದರು (ಕಂಜಕಂ. ೯೧). [ಪುಸಕ್$_0$ + — ಅನೆ$_1$]

**ಪುಸಲತ್ತು, ಫುಸಲತ್ತು** (ನಾ). ೧. (ಉಕ) ಸಲಿಗೆ ; ಸದರ. ೨. ಬೆಂಬಲ ; ನೆರವು ; ಪ್ರೋತ್ಸಾಹ : ನಿನ್ನ ಪುಸಲತ್ತಿನಿಂದಲೇ ಈ ನಿನ್ನ ಬಂಧುವು ನನಗೆ ಕುಚೇಷ್ಟೆ ಮಾಡುತ್ತಿರುವನು (ಕುಳಸಿ. ೬೬); ಅತ್ತೆಯವರು ತಾವಾಗಿ ಹಿಂಗ ಇರವಲ್ಲರ್ಯಾಕ. ನೀವೂ ಅಷ್ಟು ಪುಸಲತ್ತು ಕೊಟ್ಟು ನನ್ನ ಕೆರಿಭಾವಿ ಪಾಲಾಗೂ ಹಂಗ ಮಾಡಬ್ಯಾಡಿರಿ (ಗಂವರಾಯ. ೦೩೩). **ಫುಸಲತ್ತು:** ೨. ಆಕೆಗೆ ನಿಮ್ಮ ಗೆಳತಿಯರ ಪುಸಲತ್ತು ಬಹಳ ಅದ (ಉತ್ತಗ್ಗ. ೬೬) ; ಗಂಡನ ಪುಸಲತ್ತು ಇದೆ, ಅದಕ್ಕಿಂತಲೇ ಪಾರ್ವತಿ ಹೀಗೆ ಮಾಡುವಳು (ಬಿಟ್ಟಹೂ. ೭೦). [← ಹಿಂ. ಪುಸಲಾನಾ = ಸವಿಮಾತುಗಳಿಂದ ಮನವೊಲಿಸು]

**ಪುಸಲಾಯಿಸು** (ಕ್ರಿ). ೧. ಸವಿಮಾತುಗಳಿಂದ ಮನವೊಲಿಸು,— ಪ್ರೇರಿಸು : ನಾವು ಇದಕ್ಕೂ ಸೊಗಸಾದ ಮತ್ತೊಂದು ಊರಿಗೆ ಹೋಗೋಣವೆಂದು ಮೆಲ್ಲನೆ ಪುಸಲಾಯಿಸುವನು (ಛಾತಕ್ತ. ೬) ; ರಾಜಣ್ಣ ಗೋಗರೆಯುವ ದನಿಯಲ್ಲಿ ಪ್ರಮೀಳಳನ್ನು ಪುಸಲಾಯಿಸತೊಡಗಿದ (ಮರೆ. ೩೭). ೨. ಎತ್ತಿ ಹಾಕು ; ಕಳವು ಮಾಡು : ಮನೆಮಕ್ಕಳು ಅಟ್ಟದ ಮೇಲಣ ಡಬ್ಬದಿಂದ ಲಾಡುಗಳನ್ನು ಪುಸಲಾಯಿಸಲು ಸದ್ದಿಲ್ಲದೆ ಮೆಲ್ಲಮೆಲ್ಲನೆ ಹೆಜ್ಜೆ ಹಾಕಿ ಹೋಗುವಂತೆ, ನಾವಿಬ್ಬರೂ ಕಲ್ಲಬ್ಬಿಗೆ ಹೋಗಲು ಸದ್ದಿಲ್ಲದ ಹೆಜ್ಜೆಯನ್ನು ಹಾಕಲು ಪ್ರಾರಂಭಿಸಿದೆವು (ನಕರಾ. II. ೬೬೦). [ಪುಸಲಾ$_0$ (ಗ ← ಹಿಂ. ಪುಸಲಾನಾ) + — ಇಸು$_1$]

**ಪುಸಲಾವಣೆ** (ನಾ). ಸವಿಮಾತುಗಳನ್ನಾಡಿ ವಶಪಡಿಸಿಕೊಳ್ಳುವಿಕೆ,— ತನ್ನ ಪಕ್ಷಕ್ಕೆ ಸೇರಿಸಿಕೊಳ್ಳುವಿಕೆ : ಅವರ ಪುಸಲಾವಣೆಗೆ ಮರುಳಾದವ ನಂತೆ ನಟಿಸಿ, ಅವರ ಮಾತನ್ನೆಲ್ಲಾ ಕೇಳಿ ನನಗೆ ವರದಿ ಮಾಡಬೇಕು (ಕೆಂಸ. ೦೦೦); ಇದೆಲ್ಲ ಎರಡನೆಯವರ ಪುಸಲಾವಣೆಯ ಫಲ (ಕ್ರೀಪಕ್ಷ. ೯೩); ಈ ಪುಸಲಾವಣೆಯ ವಿಷಯವನ್ನು ಇವರು ತಮ್ಮ ನಿಶೆಯ ಗುಂಗಿನಲ್ಲಿ ಸಾಹೇಬನರಿಗೆ ಹೇಳಿದರೆ ಎಲ್ಲ ದೋಷ ನಿಮ್ಮ ಮೇಲಲ್ಲವೇ ? (ಛಾರಿ. ೭೦). [ಪುಸಲಾಯಿಸು + — ಅಣೆ$_4$./ಮರಾ. ಪುಸಲಾವಣೇ]

**ಪುಸಿ$_1$, ಹುಸಿ$_1$** (ಕ್ರಿ). ೧. ಸುಳ್ಳಾಗು ; ನಿಷ್ಫಲವಾಗು ; ವ್ಯರ್ಥವಾಗು : ಪುಸಿಗುಮೆ ದೇವ ಮಂತ್ರಮುಲೋಹಿವಿಜಯ ಎಂಬೀ ವಾಕ್ಯಂ (ಕಂಚಕಂ. ೨೦೦-೯); ಋಷಿಗಳಾಡಿದ ಮಾತು ಪುಸಿಯದು (ಕೈಬಿಭಾ. ೩೦-೩೬); ಶಿವನ ಬೆಸನದು ಪುಸಿವುದೇ (ನವಮೋ. ೯-೩೯). ೨. ಕೊಟ್ಟ ಮಾತಿಗೆ ತಪ್ಪು ; ಕೈಕೊಂಡ ಪ್ರತಿಜ್ಞೆಯನ್ನು ಈಡೇರಿಸದಿರು ; ವಚನಭಂಗ ಮಾಡಂ : ಚಾಳುಕ್ಯವಂಶದೊಳೆಲ್ಲಿಯುಮಿನ್ನವರೆಗಂ ನುಡಿದು ಪುಸಿವುದುಂ ಆಡಿ ಅಳುಪುವುದುಂ . . . ಕನಸಿನೊಳಪ್ಪೊಡಮಿಲ್ಲಂ (ಗದಾಯು. ೨-೭ ವ); ಬಿಣ್ಣಾಳಿ ವಾಸುದೇವ ಮೂಳಭದ್ರೋದ್ಭವನ್ ನುಡಿದು ಪುಸಿಯತ್ತೊರ್ದಟ್ಟು ಕಾಸಿಯುಂ ಮಹಾಸಮುದ್ರದನ್ತೆ ಮೇರೆದಪ್ಪರ್ಬ್ಬಲದಲ್ ಮಹೇಶ್ವರನನ್ನರ್ (ಎಕ. IV. ಹೆಗ್ಗ. ೦೭-೦೨ ; 1033) ; ವಂಚಕನಂ ನುಡಿದು ಪುಸಿವನಂ ಸಂಗರದೋಳ್ ಹಿಂಚುವನಂ ಪುಟುಗೋಡದ ಸಂಚದೊಳಿಕ್ಕಾವ ಕಾಲುಮೇಟದ ತೆಱದಿಂ (ದಶಕು. ೩-೦೬). ೩. ಸುಳ್ಳು ಹೇಳು ; ಅಸತ್ಯವನ್ನು ನುಡಿ: ಪುಸಿಯುದುದು ಪರಾಂಗನೆಗಾಟಿಸದುದು ಕೊಲ್ಲದುದು

ಮೋಹಮಿಲ್ಲದುದಜೀವಂ ಪೊಸಯಿಸುವುದು ವೈರಾಗ್ಯದ ದೆಸೆಗೆಸವುದು ಧರ್ಮಂ (ಅಂಕ್ಷ. ೫-೭೯); ಇಲ್ಲದುದನೆಂತು ಪುಸಿದುಂಟೆಂಬೆಂ (ಸುಕುಮಾ. ೬-೪೬); ಕಡುಗಾಯ್ದ ಪಾರೆಯೆಂತುಂ ಸುಡಲರಿಯದು ಸತ್ಯಮುಳ್ಳನಂ ಪುಸಿವವನಂ ಸುಡುವುದು (ಧರ್ಮಾಮೃ. ೬-೦೪೦); ಪರಪ್ರಾಣಾರ್ಥಂ ಪುಸಿದೊಡೆ ದೋಷಮಿಲ್ಲ (ರಕಾ. ೨-೦೩೯ ಪ). ೪. ಮೋಸಗೊಳಿಸು; ವಂಚಿಸು: ಬಂಚಿಸಿ ತನ್ನನುಜೆಯ ಧನಮಂ ಚಪಲಂ ಕೊಂಡು ಪುಸಿದು ಕಳವಳಿಸಿ ಖಳಂ . . . ಈಗಳಲ್ತೆ ವಾನರನಾವಂ (ಅದಿಪು. ೫-೦೮); ಕೊಂದರಿಂದಿಂತೀಗಳ್ ಪುಸಿದೀ ಘಟೋದ್ಭವನನಾ ಕೌಂತೇಯರ್ (ಕಂಕಣ. ೧೨-೪೬). ಹುಸಿ₁: ೧. ಆಡಿ ಹುಸಿಯಲ್ಕೆಚ್ಚು ತಪ್ಪಲು ಮೋಡಿಗಾಂಬುದು ಲೋಕ (ಸಂಕಳ. ೨೦-೪೩); ಮುನಿವಚನವಿದು ಹುಸಿಯು[ಪಾಠಾಂ. ತಪ್ಪ] ದಾಸುರಜನನ ತಪ್ಪದು ನಿಮಗೆ (ತೊರವೆ. ೦-೯-೨೦); ಸುಕ್ಷೇತ್ರದೊಳು ಬಿತ್ತಿದ ಬೀಜ ಹುಸಿವುದೆ (ಭರತ.-೩-೪೭). ೨. ನುಡಿದು ಹುಸಿವನೆ ಶರಣನು (ಬಸವ. ೬೭೩); ತತ್ವಮುಸಿ ಹುಸಿದಿಹರೆ ಉತ್ತಮರು ಕುಸಿದಿಹರೆ ನಿತ್ಯರು ಕೇಡ ಬಗೆದಿಹರೆ ಸತ್ಯವನೆತ್ತಲಱಸುವುದು (ಸರ್ವಜ್ಞ. ೦೨೬೦). ೩. "ಹುಸಿ—ಅನೃತೇ" (ಶಬ್ದಾ); ಹುಸಿಯದ ಬೇಹಾರಿಯೇ ಇಲ್ಲ (ಕುಂಕುಂ. ೦೭೭-೦೦); ಒಡಲುಗೊಂಡವ ಹುಸಿವ ಒಡಲುಗೊಂಡವ ಹುಸಿವ ಒಡಲುಗೊಂಡವನೆಂದು ನೀನೆನ್ನ ಜಡಿದೊಮ್ಮೆ ನುಡಿಯದಿರು ನೀನೆ ಮ್ಮಂತೊಮ್ಮೆ ಒಡಲುಗೊಂಡು ನೋಡಾ (ದೇವಾಕ. ೫೯-೦೨೩); ಆರು ಕೊಟ್ಟರು ಶರವನಿದ ಮದನಾರಿಯೋ ನಿಮ್ಮಯ್ಯನಹ ಜಂಭಾರಿಯೋ ಪೇಳ್ ಕೃಷ್ಣದ್ರೋಣರೊ ಹೇಳು ಹುಸಿಯದಿರು (ಕುಮಾರವ್ಯಾ. ೦೪-೦೫).

**ಪುಸಿದು ನುಡಿವರ ಗಂಡ** = ಮಾತಿಗೆ ತಪ್ಪುವವರನ್ನು ಮೆಟ್ಟುವ ವೀರ; ಒಂದು ಬಿರುದು: ಸತ್ಯರಾಧೇಯ ಪುಸಿದು ನುಡಿವರ ಗಂಡ (ಶಾಸ. IV, ೪೯-೨೪; 1247). **ಪುಸಿವರ ಶೂಲ, ಹುಸಿವರ ಶೂಲ, ಹುಸಿವರ ಸೂಲ** = ಮಾತಿಗೆ ತಪ್ಪುವವರಿಗೆ ಶೂಲದಂತೆ ಇರುವವನು; ಒಂದು ಬಿರುದು: ಒಪ್ಪಿನ ಕಣಿ ನಿರ್ಮಲಕೀರ್ತಿನೇಮಿ ಪುಸಿವರ ಶೂಲಂ (ಅಜಿತಪು. ೦-೨೪); ಹುಸಿವರ ಶೂಲ ನಿಗಳಂಕಮಲ್ಲ ಚಲದಂಕರಾವು ರಾಯಗಂಡರ ದಾವಣಿ ಕಲಿಗಟ(ಳ) ಮೊಖದ ಕೈ ಸುಭಟಚೂಡಾಮಣಿ (ಎಪಿ. XXVII, ೧೬೦-೦೭; 1256); ಹುಸಿವರ ಸೂಲಂ ಗಂಡರ ದಾವಣಿ ನಿಗಳಂಕಮಲ್ಲ ಚಲದಂಕರಾವು ನಿಸ್ಸಂಕಮಲ್ಲರುಂ (ಶಾಸ. IV, ೪೯-೩೯; 1247); ಕಲಿಗಳ ಮುಖದ ಕೈ ಕಟಕಸೂಱೆಕಾಱ ಹುಸಿವರ ಸೂಲ ಕಡಿತಲೆಯ ಮಲ್ಲಂ . . . ಸಂಗಿರಾಯ ಒಡೆಯರು ದಳವತಿ ನಡದು ಬಟ್ಟಕಳದಲ್ಲಿ ಕೂಡಿದಲ್ಲಿ (ಶಾಸ. I, ೪೦-೬; 1415).

[ದೇ.॥ ತಮಿ. ಪೊಯ್; ಮಲ. ಕೊಡ. ಪೊಯ್=ಸುಳ್ಳು, ಭ್ರಮೆ; ಗೊಂಡಿ. ಬುಸಾನಾ]

**ಪುಸಿ₂, ಹುಸಿ₂** (ನಾ). ೧. ಸುಳ್ಳು; ಸಟೆ; ಅಸತ್ಯ: "ತೊದಳ್ ನೂಳೆಂದು ನೆಱೆ ಪುಸಿಯೆನಲ್ಕನೃತಮಕ್ಕು" (ಶಬ್ದಮ. ೩೯); ಕುಸುಮಂಗಳೆಂಬ ಮಾತದು ಪುಸಿ ದಹನಮಯಂಗಳಂಬುಗಳ್ ಮನಸಿಜನಾ (ಶಬ್ದಾ. ೩-೦೬೪); ಸತ್ತನೆ ಮತ್ತೆ ಪುಟ್ಟುವಂ ಗಡ ಪುಸಿ ಕಾಣ ಡಂಬಮಿದು ಪೇಚರ ಸೇನೆವನೆಂತು ನಂಬಿದೋ (ಅದಿಪು. ೨- ); ಪುಸಿ ಠಕ್ಕು ಠವುಳಿಗಳಿಲ್ಲಿ ಕಟ್ಟೆ ವಸೆದು ಕೊಲ್ಲುಪರೂ ನಿನ್ನವರು ಕೇಳಲ್ಲಿ (ಪುರಂದ. ೨-೩೯-೪). ೨. ತೋರಿಕೆ; ಕೃತ್ರಿಮತೆ; ಸೋಗು: ಬಸವರಾಜಂ ಪುಸಿಯ ಶಾಯ್ತಂದೆಗಳ್ ಪೋದುದಂ ಕಂಡಾದರಂ ಮಿಕ್ಕು ಸಂಸಾರದ ಭಾರವಳಿದು ನಲಿನಲಿದಾಡಿ (ಬಸವ. ೨-೬); ಕೂಡೆ ಮುಮ್ಮಲಮಱಗಿ ಪುಸಿಗೆ ನಸುನಗುತೆ . . . ನಿನ್ನ ಸುತನು ಕುಡು ಮೂಡಿತುತ್ಸವಮೆಂದನಾ ದುಷ್ಟಬುದ್ಧಿ (ಕೃಷ್ಣಪಾ. ೨೯-೩೪); ಮುಂಗುರುಳಗಳ ಕಣ್ಣವೊಳೊತ್ತಿ ಜಲವನು ಹಿಂಗದೆ ತಂದುಕೊಂಡಾಗ ಅಂಗನೆ ಪುಸಿಗೆ ದುಃಖಿಸುತ್ತಿದಿಯಾತನ ಮುಂಗಡೆಯುದ್ದಗಟ್ಟಿದಳು (೪೦೫೦. ೬-೦೭೬). ೩. ಸಾರವಿಲ್ಲದುದು; ನಿಸ್ಸತ್ತ್ವವಾದುದು; ನಿಷ್ಪ್ರಯೋಜಕವಾದುದು: ನಿನ್ನ ನಾಭಿ ವಳಯಕ್ಕೆ ಪೂಗೊಳಂ ಪುಸಿ ನಿನ್ನ ನಿತಂಬಕ್ಕೆ ಪುಳಿನಸ್ಥಳಂ ಪಳಿವು (ವಂದಿ. ೦೪-೦೭). ೪. (ಆಲಂ) ಅಸಾಧ್ಯ; ಅಸಂಭವ: ಇಂದಿನ ದಿನಂ ಸಕಲಜಗಕೆ ಕಡೆಗಾಲಮೇಂ ಬಂದುದೋ ಕಟಕಟಾ ಮತ್ಸುಭಟನಾವಂ ನಿಂದು ಕಾದುವನವನ ತಾಯ್ ಪುಸಿ (ಕಂಕ್ಷ. ೪೪-೬). ಹುಸಿ₂: ೧. ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ (ಬಸವ. ೨೩೫); ಕಂದನಶ್ವತ್ಥಾಮ ಹುಸಿಯೆನಗಿಂದು ಬೇಹ ಕುಮಾರ ನೀ ನಿನ್ನಿಂದ ತನ್ನಯ ಕೀರ್ತಿ ಮೆಱೆವುದು ಮೂಱುಲೋಕದಲಿ (ಕುಮಾರವ್ಯಾ. ೯-೫೦); ಬಲ್ಲೆನೆಂಬುವ ಮಾತು ಎಲ್ಲವೂ ಹುಸಿ ಕಾಣೊ ಬಲ್ಲರೆ ಬಲ್ಲೆನೆನಬೇಡ ಸುಮ್ಮನಿರಬಲ್ಲವನೆ ಬಲ್ಲ (ಸರ್ವಜ್ಞ. ೩೯೩). ೨. ಇವಳ ಕೆಣಕಿದು ಜೀವದಲಿ ಬದುಕುವ ಭವಬ್ರಹ್ಮಾಮರೇಂದ್ರರ ಹವಣು ಹುಸಿ (ತೊರವೆ. ೦-೦೦-೬). ೪. ಎಮ್ಮಯ ಪುರವನೊಂದಂಬಿನಲಿ ಗೆಲುವವೆ ಕಾಯ ಹುಸಿ (ಕುಮಾರ. ೬-೯). ೫. ಪುಸುಕಲು; ಲೊಡ್ಡು; ಪಿಸುಗು: ಪ್ರಸ್ಸಿನ ಕಟ್ಟು ಸಡಿಲವಾಗಿದ್ದರೆ, ಹಗ್ಗ ಹುಸಿಯಾಗಿದ್ದರೆ, ಒಳಗಿರುವ ಹಾಳೆಗಳೂ ಗಿಡ ಮೂದರಿಗಳೂ ಚಲ್ಲಾಪಿಲ್ಲಿಯಾಗಿ ಚದುರಿ ಕೈಗೆ ಸಿಕ್ಕದೆ ಹೋಗುತ್ತವೆ (ಹಾಹೂ. ೩೨೯). 'ಪೊಯ್' ನೋ.

**ಪುಸಿಗೆಗೊಯ್ವೊಂ** = ಒಂದು ಬಿರುದು: ಕೊಮರವಿಳಾಸಂ ತಿಬ್ಬಾವೆ ಮಲ್ಲ ನೊಟಮ್ಪುರ ಭೀಮಂ ಪುಸಿಗೆಗೊಯ್ವೊಂ ರಾಜರಾಜಾಶ್ರಯಂ ಶ್ರೀಮತ್ಪೊಟಲ್ಪೋರದೇವಂ (ಶಾಸ. IX-1, ೩೦-೩೨; ೯೬೬). **ಪುಸಿಗೆ ಪೇಸುವಂ, ಪುಸಿಗೆ ಪೇಸುವೊಂ** = ಅಸತ್ಯವನ್ನು ಕಂಡರೆ ಹೇಸುವವನು; ಒಂದು ಬಿರುದು: ಅದಟಜ್ಯಗಳ್ಳನ್ ಅಯ್ಯನ ಚಕ್ರಿ ಪುಸಿಗೆ ಪೇಸುವನ್ ಓಟಕ್ಕೆ ನಾಣ್ಬುವನ್ (ಪ್ರಿಯಂ. ೦೯೦೩; ೦೩. II, ೯; ೪೦೦); ಜಂಗಾಃಪ್ಪೂಂ ಪುಸಿಗೆ ಪೇಸುವೊಂ ಪಿಸುಣ್ಗೆ ಕಾಯ್ವ (ಶಾಸ. IX-1, ೩೭-೯; ೯೮೩). **ಪುಸಿ ಪೋದರ್** = ಹುಸಿ ಹೋಗು; ವ್ಯರ್ಥವಾಗು; ತಪ್ಪು: ಪುಸಿ ಪೋರ್ದ ತನ್ನೊಂದು ಬಾಣದಿಸುಗೆಯುಂ ರಾವಣ ಕುಂಭಕರ್ಣ ಮಾರೀಚ ಸುಬಾಹುಪ್ರಭೃತಿದಾನವರಂ ಶತ್ರುಜಿದಱದ ರಾಮನೇಂ ಗಾವಿಲನೇ (ರಾಮಾಶ್ವ. ೦೨೩-೬). **ಪುಸಿ ಮಾಡು, ಹುಸಿ ಮಾಡು** = ೧. ಸುಳ್ಳಾಗಿಸು: ಕುರುಕುಲಶೋಣಿತಪಾದಪದ್ಧತಳಂ ತಳೋದರಿಗೆ ವೃಕೋದರನಾಗಿಪು ಕಚಬಂಧಬಂಧುರತೆಯನಾತನ ಪೂಣ್ಕೆ ಪೂಣ್ಕೆ ಶಿಲಾತಳಾಕ್ಷರಮೆನಿಸಿರ್ಪ ಜನೋಕ್ತಿಯುಂ ಪುಸಿ ಮಾಳ್ಪನೇ (ಗದಾಯು. ೦-೬೦); ಎಡೆಮಱಯದೆ ವಾಚ್ಯಮನಾ ಪಾಟಕಮೊಡವೆರೆದಲ್ಲದೆ ಬೇರ್ಪಡಿಸಿರದೆಂದಾ ಗಡಿಗಸಿರ್ಪ ಬುಧರ ಬಲ್ಲವಿಕೆಯ ನುಡಿಯುಂ ಹುಸಿ ಮಾಡಿ (ಜಯನೃ. ೩-೩೬). ೨. ಸುಳ್ಳೆಂದು ಸಾಧಿಸು: ಇದುಚಿತಕವಿವಾಚಿತ್ರಪಾಟ:ಪಾಃವರಮಿದೆಮ್ಮ ಮನಮನಾರಯ್ದು ನಿಮಗೆ ನಮಮುವ್ವದೆಂದು ಪುಸಿ ಮಾಡಿ ನಸುನಗುವಪೇಂದ್ರನ ಮುಖೇಂದುಗೀದು ಮಂದಸ್ಮಿತಚಂದ್ರಿಕೆಯನೋಲಗಿಸಿ (ವರ್ಧಮಾ. ೪-೦೪೩). **ಪುಸಿಯಾಗು, ಹುಸಿಯಾಗು** = ಸುಳ್ಳಾಗು; ವ್ಯರ್ಥವಾಗು; ನಿಷ್ಫಲವಾಗು: ಒಡಲಿರಡೊಂದೆ ಜೀವಮಿವರ್ಗೆಂಬುದನೆಂಬುದು ಲೋಕಮಿಗಳಾ ನುಡಿ ಪುಸಿಯಾಯ್ತು (ಕುಸುಮಾ. ೦೩-೪); ಸ್ಥಿರಸತ್ಯವ್ರತಿಯೆಂದು ಧರ್ಮರುಚಿಯೆಂದಾ ಧರ್ಮಪುತ್ರಂ ದಯಾಪರನೆಂದೆಲ್ಲರ ಪೇಟ್ದ ಮಾತು ಪುಸಿಯಾಯ್ತು (ಗದಾಯು. ೩-೨೩); ಮೇಲುಜಗವೇಳೋಡಿದವು ಧ್ರುವನಾಲಯಕೆ ನೆಲೆದಪ್ಪಿದುದು ಗ್ರಹಮಾಲೆ ಹಾರಾರಾಸಿಜೋಯಸರೋದು ಹುಸಿಯಾಯ್ತು (ಕುಮಾರವ್ಯಾ. ೦೯-೦೯); ಭೂಮಿಯಲ್ಲಿ ಬೆಳೆ ಹುಸಿಯಾದೀತು (ಶಾಂಪು. ೪೬-೩). **ಪುಸಿಯಿಲ್ಲದಾತಂ** = ಸುಳ್ಳಾಡದವನು; ಸತ್ಯವಂತ; ಒಂದು ಬಿರುದು: ಮಹಾಸಾಮನ್ತಂ ಪ್ರತ್ಯಕ್ಷಧೂರ್ಜಿಕೃತಂ ಪುಸಿಯಿಲ್ಲದಾತಂ × × × ಗಾ೦

ಕನ್ನನ ಬಂಟಂ ಕಟಕಪ್ರಾಕಾರಂ ಗಿರಿದುರ್ಗಮಲ್ಲಂ ರಣವೀರಂ (ಶಾಇ. XI–i, ೯೬-೯ ; 1002) ; ಪ್ರತ್ಯಕ್ಷಭೂರಿಶ್ರವಂ ಪುಸಿಯಿಲ್ಲದಾತಂ ಕಂನನ ಬಂಟಂ ಕಟಕಪ್ರಾಕಾರಂ (ಶಾಇ. XI-i. ೫೨-೦೦ ; 1005). **ಪುಸಿಯುಳ್ಳಂ** = ಸುಳ್ಳುಗಾರ ; ಅನೃತವಾದಿ : ಪುಸಿಯುಳ್ಳಂ ಕರಡಿಯಾಗಿಯುಂ ಹಿಂಸಾನಂದಮುಳ್ಳಂ ಕಾಜಿಯಾಗಿಯುಂ . . . ನರಕದೊಳ್ ಪುಟ್ಟಿ ಪಲಕಾಲಂ ಸೈರಿಸಲ್ಬಾರದ ಮಹಾದುಃಖಕ್ಕೆ ಭಾಜನರಪ್ಪರ್ (ಧರ್ಮಾಮೃ. ೬-೦೮೮). **ಪುಸಿವಂ** = ಸುಳ್ಳು ಹೇಳುವವನು : ಅಸ್ಥಿರಂ ವಾಚಾಳಂ ಪುಸಿವಂ ಮೂರ್ಖಂ . . . ಪಿಶಾಚಸತ್ತ್ವಂ ಮನುಜಂ (ಲೋಕೋಪ. ೦೦-೩೯) ; ಪುಸಿವಂಗೆ ಮಾಡಿದ ಹಿತಮುಂ ಕಳ್ಳಂಗೆ ಮಾಡಿದುಪಕಾರಮುಂ . . . ವೃಥೆ (ಧರ್ಮಾಮೃ. ೦೩-೬೦). [<ಪುಸಿ$_1$./ತಮಿ. ಮಲ. ಕೊಡ. ಪೊಯ್ ]

**ಪುಸಿಕ**, ಹುಸಿಕ (ನಾ). ೧. ಸುಳ್ಳು ಹೇಳುವವನು ; ಸುಳ್ಳುಗಾರ : ಇಲ್ಲದ ಗುಣಮಂ ಪೆಱರೊಳ್ ಸೊಲ್ಲಿಸುವಂ ತನ್ನೊಳುಳ್ಳ ಗುಣಮಂ ತಾನಿಲ್ಲೆಂದಾತುವ ಪುಸಿಕಂಗೆಲ್ಲಿಂದಂ ಬಂದುದಮಾವು ಸುಜನತೆ ಚಿತ್ರಂ (ಶಶೃ. ೦-೩೬); ಹೆಂಗೊಲೆಗಂಜದು ಪಿಸುಣನತ್ಯಧಮಂ ಪುಸಿಕಂ . . . ಸರ್ವೆಡೆಯುಲ್ಲವೆ ವಾಜಿಮುಂದುರಂ (ಪಳಸಂ. ೬೩೫); ಪುಸಿಕನಿವಂ . . . ಪೆರ್ಬುಸಿಯುನೆ ಪೇಳ್ದಪಂ (ವೃಕಪಿ. ೩೮-೦೨೨). **ಹುಸಿಕ** : ೧. ಕುಶಲರೇ ಭೀಮಾರ್ಜುನರು ಪಾಲಿಸುವ ಬಿರುದೇ ಕೃಷ್ಣನದು ಹರಿ ಹುಸಿಕನೋ ಬೆಸಗೊಂಬೆನೆನುತಱಿಯಟ್ಟಿದನು ದ್ರೋಣ (ಕುಮಾವ್ಯಾ. ೦೭-೨೭); ತನುರುಚಿಯು ಮುಂದಿನಸ ರುಚಿ ಕಪ್ಪನುಪಮಾಕಾರದಲಿ ಹೃದ್ಯಾತನು ಕುರೂಪನು ಶಾಂತದಲಿ ಶಶಿ ಬಿಸಿ . . . ಸತ್ಯದಲಿ ಧರ್ಮನು ಹುಸಿಕನಹಿರೋಷದಲಿ ತಣ್ಣನೆ ದವಾನಳನೆಂದೊಡರಸನ ಪೊಗಳ್ವನಾರ್ (ಜೈಮಿ. ೨-೯೨); ಒಸೆದಣ್ಣಗೆಱಗಿ ಬಂದಪೆನೆಂದು ನಮ್ಮ ಬೀಳಿಸಿ ಪೋದ ನಿಮ್ಮ ಕುಮಾರ ಹುಸಿಕಗೆ ದೀಕ್ಷೆ ಸಲ್ಲದೆಯೆಂದು ಮಾವಾಜಿಗುಸುರ್ವೆವು (ಚಿಪ. ೫೨-೭೭). ೨. ವಂಚಕ ; ಕಪಟಿ : ಹುಸಿದ ದಿಂಡುಕಂಗೆ ಭಕ್ತಂಗೆ ಎಸೆದ ಧ್ಯಾನ ಉಂಟೇ . . . ಹುಸಿಧ್ಯಾನದಿಂದ ಜೀವದ ಅಸುಗಳ ಕೊಂಬವೃ ಇಾತಿವರುತ ಹುಸಿಕರ ಭಕ್ತಿ ಕಿಸುಕುಳರ ವಿರಕ್ತಿ ಇವು ಹುಸಿ ಎಂದೆ (ಪೋಲಪಾ. ೫೭-೨೩೮) ; ಸಕಲಮುನಿಜನದ ನಡುವಿತ್ತಿಯೆಯುನಿತ್ತು ದಿಲ್ಲೆಂದು ನುಡಿವಂತಾ ಹುಸಿಕನೇ[ಪಾಠಾಂ. ನುಡಿದು ಹುಸಿವಂತಾಗಿ] ನೀನು (ಹರಿಶ. ೬-೩೯). [ಪುಸಿ$_2$ + — ಕ$_2$]

**ಪುಸಿಗ**, ಹುಸಿಗ(ನಾ).=ಪುಸಿಕ ೧ : ಪಲಬರ್ ಜೀಯೆವೆ ನನ್ನಿಯುಂ ನುಡಿವನಂ ಪುಸಿಗನೆಂಬರ್ ಪುಮಾತುಗನುಂ ನೆಲದೋೀತನೆ ಪುಸಿಯಿಲ್ಲದವನೆಂಬರರಸುಗಳ್ಗದು ನೈಜಗುಣಮಾಗಿರ್ಕುಂ (ಕಂಕಸಂ. ೫೦-೮) ; ಅನೃತಕ್ಕೆ—ಅಟಪಟಣ, ಮಾಳಿಗಂ, ಪುಸಿಗಂ (ಕಪುದ. ೦೯೭ ಕ್ರಿಯೋ) ; ಪುಸಿಗನನೆಗ್ಗನಂ ಪುರುಡುಗಾಱನಂ . . . ಬಱುದೂಱುಗಾಱನಂ ಕಸಗಳೆದಿತ್ತು ಮನ್ನಿಪರ ಮಕ್ಕಳ ಪಟ್ಟಿಗೆ ತಂದು ಸೊರ್ಕಿಸಾ (ಶಲಿಪಾ. ೬-೦೦೯). **ಹುಸಿಗ** : ನಿನ್ನ ನಡೆಗೆ ನಲ್ಲರು ನಾರಿಯರೊಲಿವರು ಹುಸಿಗ ನಾನಲ್ಲ ರಾಜೇಂದ್ರ ನಿನ್ನಾಣೆ (ಚಿಪ. ೭೩-೩೯) ; ಹುಸಿಗನನ್ನು ದೂರದಲ್ಲಿಯೆ ಬಿಟ್ಟು ಕಳೆ (ಬಿಲ್ಹ. ೦೦೦-೦೩). [ಪುಸಿ$_2$ + — ಗ$_2$]

**ಪುಸಿಗಂಡು** (ನಾ). ತೋರಿಕೆಯ ಪರಾಕ್ರಮ ; ಸುಳ್ಳುಕಲಿತನ : ಪುಸಿಗಣ್ಡಿಂದಿದಿರಾನ್ತರಂ ತವಿಸಿ × × × ಸದ್ಭಕ್ತಿಯಿಂ ಬೆಸಸೇಂ ನೀಂ ಶರಣೆಂದು ಬಂದ ರಿಪುಭೂಪಾಳಕ್ಕರ್ಳಿಂ ಕಾದು (ಕಇಲೆ. ೯೦-೦-೦೯ ; 1082). [ಪುಸಿ$_2$ + ಗಂಡು]

**ಪುಸಿಗಾಣು** (ಕ್ರಿ). ೧. ಸುಳ್ಳೆಂದು ಭಾವಿಸು. ೨. ಮಾಯೆಯೆಂದು ತಿಳಿ : ಪ್ರಕೃತಿಯನೆ ಪುಸಿಗಾಣುವಿ: ಚಿನುಮಯ ಗುರುಸಿದ್ಧನವಶೇಷವಾನೆಂಬುವನುಭೂತಿಸಾಮ್ರಾಜ್ಯಪರವಶಲಹರಿಯೆ (ಕೈವ. ೫-೯೫-೫). [ಪುಸಿ$_2$ + ಕಾಣು (<ಕಾಣ್)]

**ಪುಸಿಗಾಳೆಗ**, ಹುಸಿಕಾಳಗ (ನಾ). ತೋರಿಕೆಯ ಯುದ್ಧ : ಸುಮ್ಮನೆ ಮಾಡುವ ಕದನ : ಕೇಳೆಲವೊ ಸುಗ್ರೀವ, ನೀಂ ತಮ್ಮನೆಂಬೊಲವರಕೆ . . . ಪುಸಿಗಾಳೆಗಂಗೊಟ್ಟೊಡತಿ ಮಲೆತು ಕೊಬ್ಬಿದೆಯಲಾ ! (ತೊರೆರಾಮಾ. ೩೦೭-೦೯೨). **ಹುಸಿಕಾಳಗ** : ಕರ್ಣನು ಎರಡು ಸಾರಿ ಗುರಿಯಿಟ್ಟು ಬಾಣ ಸಂಧಾನ ಮಾಡುವುದಿಲ್ಲ ; ನಮ್ಮಂಥವರು ಹುಸಿಕಾಳಗವನ್ನು ಮಾಡರು (ವಕಧಾ. ೨೯೯). [ಪುಸಿ$_2$ + ಕಾಳೆಗ]

**ಪುಸಿಗಾಱ** (ನಾ).=ಪುಸಿಕ ೧ : ವಂಚಕನಾಗಿ ನಡೆದುಕೊಂಡ ಬಳಿಕ್ಕಂ ನಿನ್ನನ್ನರಪ್ಪ ಪುಸಿಗಾಱರ ಸಮಾಪದೊಳಾನೊಂದು ನಿಮಿಷಮಾತ್ರಮಂ ನಿಲಲಾಱೆಂ (ಕಾರಲಾ. ೨೩). [ಪುಸಿ$_2$ + — ಕಾಱ]

**ಪುಸಿಗೂರ್ಮೆ** (ನಾ). ತೋರಿಕೆಯ ಪ್ರೇಮ ; ಕಪಟಸ್ನೇಹ : ಈತಂಗೆ ಪೊನ್ನೆತ್ತಣಿಂ ಬಪ್ಪುದಿವನಾರಯ್ವೆನೆಂದು ಪುಸಿಗೂರ್ಮೆಯಿಂದನೇಕ ಚಾಟುಕಾರದಿಂ ನಂಬಿಸಿ ಮೆಲ್ಲನೆ ಬೆಸಗೊಳ್ವುದುಂ (ಧರ್ಮಾಮೃ. ೨-೦೦೬) ; ಬಕವೇಸಿತನದಿಂದೊಡಲ ಸೂಡಿಂಗಿರಲಾಱದೆ ಪುಸಿಗೂರ್ಮೆಯಿಂದೋಪಳ ನಪ್ಪಿಕೊಂಡು ಮೆಲ್ಲನಿಂತೆಂದಂ (ಧರ್ಮಾಮೃ. ೩-೩೫). [ಪುಸಿ$_2$ + ಕೂರ್ಮೆ]

**ಪುಸಿಗೆಯ್**, ಪುಸಿಗೈ (ನಾ). ೧. ಮೋಸಗೊಳಿಸುವುದಕ್ಕಾಗಿ ಮಾಡಿದ ಹಸ್ತಚಲನೆ,—ಕೈಸನ್ನೆ : ಇದಿರ್ಚೆ ನಿಂದ ಚಳಕದೊಳ್ ಪುಸಿಗೆಯ್ಯಂ ತೋಱೆ ಆದರ್ಕಮಂ ತನ್ನುಳ್ಳ ಬಲ್ಪನಿತಱೊಳಂ ಮುಂತಣ್ಗೆ ನಿಂತು ತುಂಬಿಗೆಯ್ಯಿಕ್ಕುವಿನಂ (ಶಲಿಪಾ. ೦೬೯-೦೩). **ಪುಸಿಗೈ** : ೨. ದುರ್ಬಲವಾದ ತೋಳು ; ಸತ್ತ್ವಹೀನವಾದ ಬಾಹು : ನಿನ್ನಯ ಸತ್ತ್ವಸಮೃದ್ಧಿಯಪ್ಪಿನಂ ಮಣಿಯದೆ ಪೊತ್ತುದಿನ್ನೆವರಮಾ ಪುಸಿಗೈಯದಱೊಂದು ಪೇದಮುಂ ಕ್ಷಣದೊಳೆ ತೂಳ್ದಿ ತಾಳ್ದುವುದು ಪಿಂಗದೆ ಪುತ್ರ ಸಮಸ್ತಧಾತ್ರಿಯಂ (ಸಂತ್ರಶು. ೯-೦೯). [ಪುಸಿ$_2$ + ಕೆಯ್$_2$]

**ಪುಸಿಗೆಳೆ** (ನಾ). ಸುಳ್ಳು ಗೆಳೆತನ ; ಕಪಟಸ್ನೇಹ : ಒಳಗೊಳಗೆ ಕಳ್ವರಂ ಪುಸಿಗೆಳೆಯಿಂದೊಳಗೊಳಗೆ ಸುಟುವ ಪರವನಿತಾಸಂಕುಳದೊಳ್ ನೆರೆವರನ ವರಘಮೊಳಗೊಳಗಿಱಗುಂ ವಿಚಿತ್ರರೋಗಚ್ಛಲದಿಂ (ಪರ್ಮಶು. ೦೦-೨೭). [ಪುಸಿ$_2$ + ಕೆಳೆ$_2$]

**ಪುಸಿಗೈ** 'ಪುಸಿಗೆಯ್' ನೋ.

**ಪುಸಿಚರಿತ್ರ** (ನಾ). ಕಪಟದ ನಡವಳಿಕೆ; ವಂಚಿಸುವ ನಡವಳಿಕೆ; ಮೋಸದ ವ್ಯವಹಾರ : ಪುಸಿದೈವದ ಪುಸಿಯಱತದ ಪುಸಿಧರ್ಮದ ಪುಸಿಚರಿತ್ರದಾಗಮದೆಡೆಯೊಳ್ ಪುಸಿಜಿನಿಪ[ಪಾಠಾಂ. ಪುಸಿವ ಬಲ್ಮೆಯೋದುಗಳಂ ತಾಂ ಪಸರಿಸುವ] ಠಕ್ಕಸಮಯದ ದೆಸೆಪೋಗರದೆಂತುಮಾವ ತೆಱದಿಂ ಜೈನರ್ (ಸಮುಕ. ೬-೭೫). [ಪುಸಿ$_2$ + ಚರಿತ್ರ]

**ಪುಸಿದೈವ** (ನಾ). ಕ್ಷುದ್ರದೇವತೆ ; ಕೀಳುದೇವತೆ : ಪುಸಿದೈವದ ಪುಸಿಯಱತದ ಪುಸಿಧರ್ಮದ ಪುಸಿವ ಬಲ್ಮೆಯೋದುಗಳಂ ತಾಂ ಪಸರಿಸುವ ಠಕ್ಕಸಮಯದ ದೆಸೆಪೋಗರದೆಂತುಮಾವ ತೆಱದಿಂ ಜೈನರ್ (ಸಮುಕ. ೬-೭೫). [ ಪುಸಿ$_2$ + ದೈವ ]

**ಪುಸಿಧರ್ಮ** (ನಾ). ಹೀನವಾದ ಧರ್ಮ; ಹೇಯಧರ್ಮ : ಪುಸಿಧರ್ಮದ ಪುಸಿಚರಿತ್ರದಾಗಮದೆಡೆಯೊಳ್ . . . ದೆಸೆಪೋಗರದೆಂತುಮಾವ ತೆಱದಿಂ ಜೈನರ್ (ಸಮುಕ. ೬-೭೫). [ಪುಸಿ$_2$ + ಧರ್ಮ]

**ಪುಸಿನಡು**, ಹುಸಿನಡು (ನಾ). (ಇಲ್ಲವೇ ಇಲ್ಲವೆಂದು ಭಾಸವಾಗುವಷ್ಟು) ತೆಳುವಾದ ಸೊಂಟ : ಬಡನಡುವಿನ ಬಳುಕುವ ನಡುವಿನ ಸೆಳೆನಡುವಿನ ಸಿಂಗಮಸುಳಿನಡುವಿನ ಪುಸಿನಡುವಿನ ಸಂದೆಗನಡುವಿನ ಪಿಡಿನಡುವಿನ . . . ಮದಯೌವನೆಯರು ನಡೆದರು (ಜಯಕಾ. ೫-೩೩); ಸಸಿಮೊಗದ ಕಿಸುವಾಯ ಪುಸಿನಡುವಿನರಸಿ (ರಾಮಾಶ್ವ. ೮೭-೨೩). **ಹುಸಿನಡು** : ಹುಸಿನಗೆ ನಗುತ ಗಂಡನ ಕೂಡೆ ನುಡಿವರಾ ಹುಸಿನಡುವಿನ ಸೊಬಗೆಯರು (ಭರತ. ೯-೫೦). [ಪುಸಿ$_2$ + ನಡು$_2$]

**ಪುಸಿನಲ್ಮೆ** (ನಾ). = ಪುಸಿಗೂರ್ಮೆ : ತೆತ್ತುತನಕ್ಕೆ ತೆತ್ತುತನವುಂ ಪುಸಿನಲ್ಮೆಗೆ ದೋಂದಿ ನಲ್ಮೆಯುಂ ಜತ್ತುಕಟಿಂಗೆ ಜತ್ತುಕಟು . . . ಪೊಣರ್ಚುತ್ತುಮುಪಾಯದಿಂ ೞಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೧೬೩ ಕೂಪ್ರಕ); ಕೊಯ್ಕದೆ ವಾಣನೊಂದಿರುಳೆ ಉಂತಳವಂ ಪುಸಿನಲ್ಮೆದೋಱಿ (ಸುಕುಚ. ೭-೯೩). [ಪುಸಿ$_2$ + ನಲ್ಮೆ]

**ಪುಸಿನಿದ್ದೆ**, ಹುಸಿನಿದ್ದೆ (ನಾ). ಸುಳ್ಳುನಿದ್ದೆ; ನಿದ್ರೆಯ ಸೋಗು.; ಠಕ್ಕುನಿದ್ದೆ : ಬಗೆ ಗೆಲಲೆಂದು ಕಾದಿ ಪುಸಿನಿದ್ದೆಯೊಳಾನಿರೆ ಅಲ್ಲಿಗೆಯ್ದು . . . ಮೊಗಂ ಮೊಗದತ್ತ ಸಾರ್ಚಿ ಬೆಚ್ಚಗೆ ನಿಡುಸುಯ್ದು ನಲ್ಲಳ ಮುಖಾಂಬುಜಸೌರಭದೊಳ್ ಪೂದಟ್ಟದೇಂ ಮಗಮಗಿಸಿತ್ತೊ ಕತ್ತುರಿಯು ಕರ್ಪುರದೊಂದು ಕದಂಬದಂಬುಲಂ (ಶಂಕಥಾ. ೯-೦.೭). **ಹುಸಿನಿದ್ದೆ** : ಮಕ್ಕಳಿರ ಕೇಳಿ, ರಸ ಕುಡಿಯಲೇಳಿ, ಹುಸಿನಿದ್ದೆಗಿದ್ದೆ ಸಾಕು (ಅರಳು. ೦:೭-೭). [ಪುಸಿ$_2$ + ನಿದ್ದೆ]

**ಪುಸಿನುಡಿ$_1$**, ಹುಸಿನುಡಿ$_1$ (ಕ್ರಿ). ಸುಳ್ಳು ಹೇಳು ; ಸುಳ್ಳಾಡು : ಜನದೇವನ ಬಯಕೆಯಂ ಮಱೆಯಿಸಿ ಪುಸಿನುಡಿದ ಧನದೇವನ ಜಿಹ್ವೋತ್ಪಾಟನಂಗೆಯ್ವುದುಮಂ (ಧಾಪುಂಕು. ೬೬); ರಾಮಂ ಕಲಿಸಿದ ತೆಱದಿಂ ಆಮೆಗೆ ಪುಸಿನುಡಿದು ರಥಮನೇಱಿಸಿಕೊಂಡಾ ಭೀಮಪಟಮಿಯಂ . . . ಕೃತಾಂತಮುಖನೆಯ್ದಿದಂ (ಕುಂಃಚೂ. ೬೩-೭೩); ಪುಸಿನುಡಿವಂಗೆ ಬಾಯ್ನ ನಗಮೆಯ್ದುದು ನಾಲಗೆಯೊಂದು ಸಾಲದೆಂದೆಸಟಿಸಟಾಗಿ ಸೀಳ್ದು ನಿಡು ನಾಲಗೆಯಂ ಕಟದೆಲ್ವು ಸೀಳೆ ಸೀಳಿಸಿ ಟಟವಾಯ್ಗಳಂ ಹುಸಿಯೊಳಾದ ಫಳಂ ಸವಿನೋಡಿದೆಂದು ಗಾತ್ರಿಸುವರನೇಕರೂಕ್ಷವಿಷತೀಕ್ಷ್ಣಕಠೋರಮೆನಿಪ್ಪ ಖಾರಮಂ (ಅಪಃಕು. ೯-೩೭). **ಹುಸಿನುಡಿ$_1$** : ಅರಮನೆಯ ಸಭೆಯೊಳೆನ್ನಯ ಸಮಕ್ಷದೊಳು ಹುಸಿನುಡಿವರೇ ಕುಡದೆ ಎನ್ನಯ ಕುಮಾರಂಗೆ(ಏಕರ. ೦. ೩೯). [ಪುಸಿ$_2$ + ನುಡಿ$_1$]

**ಪುಸಿನುಡಿ$_2$**, ಹುಸಿನುಡಿ$_2$ (ನಾ). ಸುಳ್ಳುಮಾತು ; ಅಸತ್ಯದ ನುಡಿ : ಪುಸಿನುಡಿಯು ವಿಷ[ಪಾಠಾಂ. ಪುಸಿಯನೆ ನುಡಿವ]ವಿಪಾಕದ ಮುಕದೆ ಮುಖ ರೋಗವಾದವೋಲಿನಿತಾನುಂ ಬಸವಲ್ಲದುಸಿರ್ವರೆಂದುಂ ಪೊಸಸಿರಿಯಿಂ ಮ್ಮೆಮೆವೆತ್ತ ಮಾಯ್ದು ಮನುಷ್ಯರ್ (ಕಾದಂಪೂ. ೩೬೨); ದೇವಿಯರ್ಗೆನ್ನ ದೂಸಱಿಂ ಪುಸಿನುಡಿಯಂ ಮದೀಯ ಜನಕಂ ನುಡಿದಂದು ಜನಾಪ ವಾದವೆಣ್ದೆಸೆಗಮನರ್ಗಳಂ ಪರೆಗುಂ (ಕಂಠಾಪು. ೭-೦೦೯); ಶಿವಶರಣರಿಂದೆ ಪುಸಿನುಡಿ ಬರ್ಪುದೆ (ಕಂಥು. ೯-೨೪). **ಹುಸಿನುಡಿ$_2$** : ಅವನ ಹುಸಿನುಡಿಗಳನ್ನು ಕೇಳಿ ನನಗೆ ಬೇಸರವಾಗಿದೆ (ಕೂಶ). [ಪುಸಿ$_2$ + ನುಡಿ$_2$]

**ಪುಸಿಬಸನ** (ನಾ). ಸುಳ್ಳು ಹೇಳುವ ಚಟ ; ಸುಳ್ಳಾಡುವ ದುರ್ವ್ಯಸನ : ಪುಸಿಬಸನಮೆಂದು ಕೆಲಬರ್ ಕುಸಿವರ್ ನಾಲಗೆಯನಿಕ್ಕುಟಿರ್ಆಳ್ ಪರವಧುದುರ್ವ್ಯಸನಂ ನಿಸಗೆಂದಮರ್ದಪ್ಪಿಸುವರ್ ಕೆಂಪೆಸೆಯೆ ಕಾಯ್ದು ಯಃ ಪುತ್ರಿಕೆಯಂ (ಅಂಪು. ೩. ೯೭). [ಪುಸಿ$_2$+ಬಸನ (<ಬೆಸನ$_2$)]

**ಪುಸಿಬಾದಿ** (ನಾ). ಸುಮ್ಮನೆ ವಾದ ಮಾಡುವವನು ; ವಿತಂಡವಾದಿ : ಕಡುಚಾಗಿ, ಕಡುಗಲಸಿ, ಪುಸಿಬಾದಿ, ಬಲ್ಲುಜ್ಜುಗಿ (ಕಬ್ಬಾಮ. ೩೨೯ ಕ್ರಟೀ). [ಪುಸಿ$_2$+ಬಾದು$_1$+–ಇ$_2$]

**ಪುಸಿಮಾತು** 'ಪುಸಿವಾತು' ನೋ.

**ಪುಸಿಮುಳಿಸು** (ನಾ). ೧. ಸುಳ್ಳುಕೋಪ ; ತೋರಿಕೆಯ ಮುನಿಸು : ಅವಳೆನ್ನಂ ಮಂಚಿಸಿದಪರಾಧಮನಾಂ ಸೈರಿಸುವೆನೆ ನೋಡೆನುತಮೆಟ್ದು ಪುಸಿಮುಳಿಸಿಂದಂ (ಕಾದಂಪೂ. ೭೭೯); ಒರ್ವನಳವಿದಪ್ಪಿ ಕೂರ್ತೆಳೆಯಳಂ ಪಟೀಕೆಯ್ದೆಯೆಂದು ಪುಸಿಮುಳಿಸಂ ತಳೆವುದುಮವಳ್ ಬೆಚ್ಚಿ ಕಾಲ್ಗೆಱಗು ವುದುಂ (ಶಂಪ್ರಕು. ೬-೩೨ ವ). ೨. ನಿಷ್ಕಾರಣವಾದ ಕೋಪ : ಈ ಪುಸಿಮುಳಿಸೇಕೆ ಪೇೞ್ ಕೆಳೆಯ ನಿನ್ನಯ ಕೂರ್ಮೆಯದೆತ್ತವೋಯ್ತು ನೋಯಿಸದಿನಿಪೆಟ್ಟು, ನೋಡಿ ನುಡಿ (ಕಾದಂಪೂ. ೧೦೩). 'ಹುಸಿಮುನಿಸು'

ಪರಾ. [ಪುಸಿ$_2$ + ಮುಳಿಸು$_1$]

**ಪುಸಿಯುಮೆ** (ನಾ). ಸುಳ್ಳಾಡದಿರುವಿಕೆ ; ಸತ್ಯವಂತಿಕೆ : ಪುಸಿಯುಮೆ ಯನ್ನ ಪೊಗೞಲ್ಲಿಂ ನೋಯದವೋಲೆಲ್ಲಾ ಅಱಿಮುಮಂ ಕೊಡುಗುಂ (ಕುಜಳ್. ೦-೪೦-೭). [ಪುಸಿ$_1$ + – ಅಮ್ಮೆ$_2$]

**ಪುಸಿಯುಳವು** (ನಾ). ತೋರಿಕೆಯ ಸಾಮರ್ಥ್ಯ : ತವೆದೊಳ್ ಪುಸಿ ಯಳವು ತಕ್ಕೆಯೊಳ್ಕಳವು ಮಾಱುವ ನೇಹದೊಳ್ನುಸುಳು . . . ಸೇರುವೆಯಾಗಿ ನೆಲೆಗೊಂಡ ಗಣಿಕೆಯರ ತಂಡಮಿಾ ತೆಱದೆ ಚೆಲ್ವಿಂ ಪಡೆದುದು (ಕೃಖಿಚ. ೬-೪೭). [ಪುಸಿ$_2$ + ಅಳವು]

**ಪುಸಿಯಲಿಪು** (ನಾ). ಸುಳ್ಳು ಪ್ರೀತಿ ; ತೋರಿಕೆಯ ವ್ಯಾಮೋಹ : ಪುಸಿಯಲಿಪಂ ನಿಮಿರ್ಚಿ ತಮಗಿಲ್ಲದ ಬೇಟಮನುಂಟುಮಾಡಿ ಕೂರಿಸಿ ಕೂರ್ತವರಂತೆ ಪುರುಡಂ ಪೊಸೆದು . . . ಮುಟ್ಟದ ಮುನ್ನಮೆನ್ನರಂ ದೆಸೆವಲಿಗೆಯ್ದರೇನೊ ಕಡುಥಾಳೆಯರೊಂದಿರುಳಲ್ಲಿ ಸೂಳೆಯರ್ (ಧರ್ಮಾಕಾ. ೨-೦೦೩). [ಪುಸಿ$_2$ + ಅಲಿಪು$_2$]

**ಪುಸಿಯಾಡು**, ಹುಸಿಯಾಡು (ಕ್ರಿ). ಸುಳ್ಳು ಹೇಳು; ಸಟೆಯಾಡು : ಅಱಿಪದೆ ನಿನ್ನಂ ಪುಸಿಯಾ[ಪಾಠಾಂ. ವಾ]ಡಿ ಕಾದಲೆನಗೇಂ ದೊರೆಯೇ (ಶಂಕಥಾ. ೬-೪). **ಹುಸಿಯಾಡು** : ಹುಸಿಯಾಡಬೇಡ ಸುಳ್ಳ! (ಶಂಪ್ರಕ. ೦೦೦–೦೦). [ಪುಸಿ$_2$ + ಆಡು$_1$]

**ಪುಸಿಯುಸುಬು** (ನಾ). (ಮೇಲುನೋಟಕ್ಕೆ ಗಟ್ಟಿಯಾಗಿ ಕಂಡರೂ) ಕೆಳಗೆ ಕುಸಿಯುವ ಮರಳು; ಹುಸಿಮರಳು : ಕೆಸರಿನೊಳ್ ನೀರಿನೊಳ್ ಪುಸಿ ಯುಸುಬಿನೊಳ್ ಸಿಲ್ಕಿದಾ ಕಪಿಕಟಕದ ಪ್ರಕಟಸಂಕಟವನೇನೆಂಬೆನಕಟಾ ದಶಗ್ರೀವಸುತಶ್ರೀಷ್ಠಕೂಟವಿದ್ಯಾಟೋಪದಿಂ! (ಶ್ರೀರಾಮಾ. ೬೩೯-೦೩೭). [ಪುಸಿ$_2$+ಉಸುಬು (<ಉಸುಬು)]

**ಪುಸಿಯೊಲವು** (ನಾ). =ಪುಸಿಗೂರ್ಮೆ : ಪುಸಿಯೊಲವಿಂದಮೆನ್ನನಿರದೊಪ್ಪಿಸಿ ತೋರ್ಪುದಱಿಂದಮಾಂ ಪ್ರತಾರಿಸಿದವನಾಗದಿರ್ದಪನೆ ದೇವಿಯ ಚಿತ್ತಮಂ (ಕಾದಂಪೂ. ೯೦೩). [ಪುಸಿ$_2$+ಒಲವು$_1$]

**ಪುಸಿಯೋತ** (ನಾ). ಸುಳ್ಳಾದುದು ; ಅಸತ್ಯವಚನ : ಪುಸಿಯೋತದ ಮಾತಿನೊಂದು ಭೀತಿಯಿಂ ಮಾತೆಯಂ ತೋಱಿದೆನಾಣ್ಮನೊಳ್ ದ್ರೋಹದೆ ಣೆಕೆಯಿನಲ್ಲು (ರಾಮಾಕ್ಷ. ೬೩-೦೦). [ಪುಸಿ$_2$+ಓತ$_1$]

**ಪುಸಿವಡೆ** (ನಾ). ಕೃತಕಸೇನೆ; ಮಾಯಾಸೈನ್ಯ : ನಾಲ್ಕುಂ ತೆಱದ ಪುಸಿವಡೆಯಂ ಬಿಜ್ಜೆಯಿಂ ಪುಟ್ಟಿಸಿ (ಕಬ್ಬಿಗಕಾ. ೦೯೬); ತಿಸುಳೆ ಬೇಗದಿಂ ಪುಟ್ಟಿಸಿದಂ ಪುಸಿವಡೆಯಂ (ಕಬ್ಬಿಗಕಾ. ೨೯೯). [ಪುಸಿ$_2$+ಪಡೆ$_2$]

**ಪುಸಿವಾತು**, ಪುಸಿಮಾತು, ಹುಸಿಮಾತು (ನಾ). ಸುಳ್ಳು; ಸಟೆ; ಅನೃತವಚನ : ವಿಪ್ರನಶಿಥಿಲ್ಯರ್ಯಾತೆಯಂ ಮುಂತಿಟ್ಟು ೧ಬಿಜೆಯೊಡನು ಸಿರ್ದಂ ತಡಬಡಿಸುತೆ ಮಿಸುಪ ಪೊಸ ಪುಸಿವಾತಂ (೧೮೪. ೯ ೯೯) ; ಪುಸಿವಾತಿ ನಿಂದ ಬಹುಶಿಶುವಧೆಯಂ ಕರಲೇಸು (ಶವಮೋ. ೩-೬). **ಪುಸಿಮಾತು** : ಕೊಟ್ಟಿನೆಂದಾ ವೃಷಭಮುಖನಲ್ಲಿ ನುಡಿವುತಿರೆ ಕೊಟ್ಟುದಿಲ್ಲನಗೆ ಪುಸಿಮಾತ ದೇಕೆನುತಮಿರೆ (ಏಕರ. ೦-೯೮). **ಹುಸಿಮಾತು** : ಅವರ ಹುಸಿಮಾತು ಗಳನ್ನು ನಂಬಿ ಎಲ್ಲರೂ ಮೋಸ ಹೋದರು (ಕೂಶ). [ಪುಸಿ$_2$+ಮಾತು$_1$]

**ಪುಸಿವಾತುಗ** (ನಾ). ಸುಳ್ಳು ಹೇಳುವವನು; ಸುಳ್ಳ; ಹುಸಿಕ : ಪಲಬರ್ ಜೀಯೆನೆ ನನ್ನಿಯಂ ನುಡಿವನಂ ಪುಸಿಗನೆಂಬರ್ ಪುಸಿವಾತುಗನಂ ನೆಲ ದೋಳೀತನೆ ಪುಸಿಯಿಲ್ಲದವನೆಂಬರರಸಾಗಳ್ಗಿದು ನೈಜಗುಣವಾಗಿರ್ಕುಂ (ಶಂಕಶಂ. ೩೦-೬). [ಪುಸಿವಾತು+–ಗ$_2$]

**ಪುಸಿವಾರ್ತೆ** (ನಾ). ಸುಳ್ಳುಸುದ್ದಿ : ಮುನ್ನೆ ಬಂದೀತನೆನಗೆ ಸೇನಾ ಭಂಗಮಂ ಮನೋಭಂಗಮುಮಪ್ಪಂತು ಪುಸಿವಾರ್ತೆಯಂ ಪೇೞ್ದನೀ ಪುಸಿವನಂ ಕುಸಿಯೊತ್ತಿ . . . ದೆಸೆಯೊಳ್ವೆಗೆಯಿಂ (ಸುಕುಮಾ. ೭-೩ ವ). [ಪುಸಿ$_2$+ವಾರ್ತೆ]

**ಪುಸಿವುಗು** (ಕ್ರಿ). ಅಪ್ರಾಮಾಣಿಕವಾಗು ; ವಂಚನೆ ಮಾಡು : ಪುಡಿಯಲೆಸೆಗುವಲ್ಲಿಯುಂ ಪೊಡವಿಯುಂ ಪೊರೆವಲ್ಲಿಯುಂ ಪುರುಳ್ಗೊಂಬಲ್ಲಿಯುಂ ಪುಸಿವುಗದೆ ಧರ್ಮಮನಾರಯ್ದು ನಡೆವುದು (ಶಬರ. ೩೨-೧೦).

[ಪುಸಿ₂+ಪುಗು (<ಪೊಗು)]

**ಪುಸಿವೇಳ್** (ಕ್ರಿ). ಸುಳ್ಳು ಹೇಳು ; ಸುಳ್ಳಾಡು : ಅಜಗಳಸ್ತನದಂತೆಸೆವ ನಿನ್ನ ಪೌರುಷಂ ನಿಜವಾದೊಡಾಂ ಸೈರಿಸುವೆನಲ್ಲದಿರ್ದೊಡಾ ರಜದಿಂದೆ ಪುಸಿವೇಳ್ದ ನಾಲಗೆಯನರಿವೆನು (ಕೈಬಿಥ. ೨೦-೫೩).

[ಪುಸಿ₂+ಪೇಳ್ (<ಪೇೞ್)]

**ಪುಸಿವೋಗು, ಹುಸಿಹೋಗು** (ಕ್ರಿ). ನಿಷ್ಫಲವಾಗು; ವ್ಯರ್ಥವಾಗು; ಬರಡಾಗು : ಬಱಂ ಪೆಱವುಂ ಭಯಂಗಳಾಕುಲತೆಗಳಿಲ್ಲ ಧಾತ್ರಿ ಪುಸಿವೋಗದು . . . ಎಂದೊಡನ್ನಿಮಿರೆ ಬಣ್ಣಿಸಲಾನಱಿಯೆಂ ವಿದೇಹಮಂ (ಅಂತಿ. ೧-೫೨); ಧರೆ ಪುಸಿವೋಗದೆ ಬೆಳಗೀ ಧರೆಯಂ ಭುಜಬಳದಿನಾಳ್ದ ಭುಜಬಳಗಂಗಂ (ಎಕ. VII. ಶಿವಮೊ. ೯೭-೩೦; 1113). **ಹುಸಿಹೋಗು** : ದುಷ್ಟಬುದ್ಧಿಯ ಮತ್ತೊಂದು ಪ್ರಯತ್ನವೂ ಹುಸಿಹೋಗಿ ಅದಕ್ಕೆ ಮದನನೇ ಬಲಿಯಾದನು (ಕರ್ಣಾಕ. ೨೬೮); ಹೀಗೆ ಮಾಡಿದರೆ ಬೀಜವು ಹುಸಿಹೋಗದೆ, ನಾಟಿ ದೊಡ್ಡ ಬೆಳಸೂ ಬರುವದೆಂಬ ನಂಬಿಗೆಯೂ ಅವನಿಗಿದೆ (ಕನ್ನಜಾ. ೦೬೬); ಹುಸಿಹೋಗದೆಂಬ ಖಾತ್ರೀ ಇದ್ದ ಒಂದು ಮಹಾಸ್ತ್ರವನ್ನೂ ಅಭಿಮಂತ್ರಿಸಿ ಎಸೆದೆ (ಐಕಥ. II, ೦೬೬).

[ಪುಸಿ₂+ಪೋಗು₁ (<ಪೋ₁)]

**ಪುಸುಕಲು** (ನಾ). ೧. ಜಾಳುಜಾಳಾದುದು; ಜಾಳುಜಾಳಾದ, ಪುಸುಕಲಾದ (sleazy. ಇಂಕಅ). ೨. ದುರ್ಬಲನಾದ ವ್ಯಕ್ತಿ ; ಅಶಕ್ತ : ಒಂದು ದಿನದ ಜ್ವರಕ್ಕೇ ಇಷ್ಟು ಸೊರಗಿ ಹೋಗಿದ್ದಿ, ತುಂಬಾ ಪುಸುಕಲು ನೀನು (ಜಾಅ).

[←ಮರಾ. ಪುಸಕುಲ]

**ಪುಸುಗೂರ್** (ನಾ). ಒಂದು ಊರಿನ ಹೆಸರು : ಬ್ರಹ್ಮಶಿವಬಟರರು ಪುಸುಗೂರ ಆಳೆ (ಎಕ. X. ಚಿಕ್ಕಬ. ೫೯-೩; ಸು. ೯೦೦). [? + ಊರ್]

**ಪುಸ್ಕು** (ನಾ). ಏನೂ ಆಗದಿರುವುದು ; ವಿಫಲತೆ ; ಅವರೇ . . . ಇನ್ಸ್‌ಪೆಕ್ಟರರಿಗೆ ಶರಾಬು, ಕೋಳಿ, ಬಾಳೆಗೊನೆಗಳ ಸಮಾರಾಧನೆ ಮಾಡಿಸಿ ನಂಬ್ರ 'ಪುಸ್ಕು' ಮಾಡಿಸಿದ್ದು (ಹಾಪ. ೦೦೩). [←ತುಳು. ಪುಸ್ಕು, ಪುಸ್ಕ್]

**ಪುಸ್ತ** (ನಾ). ೧. (ಬಣ್ಣ ಮೊದಲಾದುವನ್ನು) ಬಳಿಯುವುದು ; ಲೇಪನ; ಲೆಪ್ಪದ ಕೆಲಸ : "ಪುಸ್ತಂ—೧. ಲೇಪ್ಯಾದಿಕರ್ಮಣಿ_ಬಳಿದು ಮೆತ್ತುವ ಕೆಲಸ" (ಸಿದ್ಧಾಂತಿ. ೩೭೫). ೨. ಬರೆವಣಿಗೆ; ಬರೆಹ ; ಲೇಖನ. ೩. ಮರ, ಲೋಹ, ಮಣ್ಣು, ಗಾಜು ಮೊದಲಾದುವುಗಳಿಂದ ತಯಾರಿಸಿದ ವಸ್ತು : "ಪುಸ್ತ = ಮಣೆ ಗಾಸ ಮೊದಲಾದವಱಿಂದ ಮಾಡಿದ ಪುತ್ಥಳಿ" (ಚಾಅಶಾ. ೬); ನೇಪಥ್ಯವ ಪುಸ್ತ, ಅಲಂಕಾರ, ಅಂಗರಚನಾ, ಸಜ್ಜೀವ ಎಂದು ನಾಲ್ಕು ವಿಧ. ವಾಹನ, ವಿಮಾನ, ಬಂಡೆ ಬೆಟ್ಟ, ಧ್ವಜ ಕವಚಾದಿ ಪದಾರ್ಥಗಳು 'ಪುಸ್ತ' (ಸಂಚಾಟಿ. ೦೨). ೪. ಪುಸ್ತಕ; ಗ್ರಂಥ. [ಸಂ.]

**ಪುಸ್ತಂಗ** (ನಾ). ಒಂದು ಬಗೆಯ ಅಲಂಕಾರದ ವಸ್ತ್ರ : ಮುತ್ತಿನ ದಗಲೆ ವಜ್ರದ ಜೋಡು ಸಿರದಲಿ ಬಿತ್ತರವಹ ಸೀಸಕದ ಪುಸ್ತಂಗ ತೊಡರಾಗಾವಳಿಯಿಂದ ಭೂಪೋತ್ತಮ ನಡೆದನುಬ್ಬಿನಲಿ (ಕೆಂಪಪ. ೦೩-೦೨).

[←ತೆಲು. ಪುಸ್ತುಂಗು]

**ಪುಸ್ತಕ** (ನಾ). ೧. ಕೈಬರೆಹದ ಅಥವಾ ಅಚ್ಚಾದ ಗ್ರಂಥ; ಹೊತ್ತಗೆ; ಬುಕ್ಕು : "ಶ್ರುತಂ ಲೇಪೆ ಭಿತ್ತಿಯೆನೆ ಪುಸ್ತಕಂ" (ಮಂಗರಾ. ೦೦೬-೦೩); ಅವಳ ಕಯ್ಯ ಪುಸ್ತದೊಳ್ಪುವು ಲೋಕದ ಸಾರಸೂಕ್ತಿ . . . ಅವಳುಗೆ ಕಾವ್ಯದ ನಾಂದಿಯೊಳ್ ಕೃತಿವೆತ್ತುಮೆ (ಹೊಸ್ತಶು. ೦-೬); ರಾಯ ಕೇಳ್ಳಿ ನಿಮ್ಮ ಪಾಂಡವರಾಯಚರಿತವನೆಂದು ವೈಶಂಪಾಯನಗೆ ಬೆಸಸಿದನು ಕೊಟ್ಟನು ಬಳಿಕ ಪುಸ್ತಕವ (ಕುವ್ಯಾಆ. ೨-೯); ಅಸ್ತಮಯಕೆ ಉಣ್ಣಬಾರದು ಎಂದೆಂಬ ಪುಸ್ತಕವನು ಪಿಡಿಕೊಂಡು ವಿಸ್ತರಿಸುತಪೋದುವಾರು ಹ್ಯರು ತಮ್ಮ ಬಸ್ತಿಯೊಳಗೆ ರಾಜಿಸಿದರು (ಅಶ್ಮಂಓ. ೩-೦೨೦). ೨. [ಜೈನ] ಮುನಿಗಳ ಒಂದು ವರ್ಗ : ಗಚ್ಛಗಳು : ಪೊಗರಿ, ಪುಸ್ತಕ . . . ಮೇಘ, ಪಾಷಾಣ (ಕಶಾಅ. ೯೩).

**ಪುಸ್ತಕದ ಬದನೆಕಾಯ್, ಪುಸ್ತಕದ ಬದನೆಕಾಯಿ** = ಪ್ರಯೋಗಕ್ಕೆ ಸಾಧ್ಯವಾಗದ ಜ್ಞಾನ,_ ತಿಳಿವಳಿಕೆ,_ ಅರಿವು : ಸಕಲಲಕ್ಷಣಕಾಗಿ ಬಱಸು ಮಾಡಿದರೆ ಪುಸ್ತಕದ ಬದನೆಕಾಯಹುದು (ಚಠ. ೦-೯); ಬರಿಯ ಪುಸ್ತಕದ ಬದನೆಕಾಯಿ ಹೇಳುವವನಾದರೆ ಪ್ರಯೋಜನವಿಲ್ಲ (ಹೋರಠು. ೨೩). **ಪುಸ್ತಕದ ಹುಳು**= ಪುಸ್ತಕಕೀಟ : ಅವನೊಬ್ಬ ಪುಸ್ತಕದ ಹುಳು, ಯಾರ ಜೊತೆಯೂ ಸೇರುವುದಿಲ್ಲ (ಜಾಅ). **ಪುಸ್ತಕ ನುಂಗು** = ಪುಸ್ತಕವನ್ನು ಪೂರ್ಣವಾಗಿ ಓದು : ಅವನೆಂದರೆ ನನ್ನ ಜನಾರ್ದನ. ಪುಸ್ತಕ ನುಂಗುವುದರಲ್ಲಿ ಬಕಪಕ್ಷಿ (ತುಹೋಕ್ಕ. ೦೩). **ಪುಸ್ತಕ ನೋಡಿಸು** = ಭವಿಷ್ಯ ಸೂಚನೆಗಾಗಿ ಪುಸ್ತಕದಲ್ಲಿ ಕಡ್ಡಿ ಹಾಕಿ ಓದಿಸಿ ತಿಳಿದುಕೊಳ್ಳು : 'ಪುಸ್ತಕನೋಟ' ಪರಾ. [ಸಂ.]

**ಪುಸ್ತಕಕೀಟ** (ನಾ). ಯಾವಾಗಲೂ ಓದುವುದರಲ್ಲೇ ಕಾಲ ಕಳೆಯುವವನು ; ಓದುವುದೊಂದನ್ನೇ ಹವ್ಯಾಸವಾಗಿಟ್ಟುಕೊಂಡಿರುವವನು : ಅವನೊಬ್ಬ ಪುಸ್ತಕಕೀಟ. ವ್ಯವಹಾರಜ್ಞಾನ ಏನೇನೂ ಸಾಲದು (ಜಾಅ). ☞ ಇದು 'Book-worm' ಎಂಬ ಇಂಗ್ಲಿಷ್ ಶಬ್ದದ ಅನುವಾದ. [ಸಂ.]

**ಪುಸ್ತಕಕ್ರಿಮಿ** (ನಾ). = ಪುಸ್ತಕಕೀಟ : "ಪುಸ್ತಕಕ್ರಿಮಿ ; ಪುಸ್ತಕಪಿಶಾಚಿ ; ಓದುಕುಳಿ ; ಗ್ರಂಥವ್ಯಸನಿ " (Book-worm. ಇಂಕಅ). [ಸಂ.]

**ಪುಸ್ತಕಗಚ್ಛ** (ನಾ). = ಪುಸ್ತಕ ೨ : ಅಲ್ಲಿಯ ದೇಸಿಗಗಣದ ಪುಸ್ತಕಗಚ್ಛದ ಬೋಧವಿಭವದ ಕುಕ್ಕುಟಾಸನ ಮಲಧಾರಿದೇವರ ಶಿಷ್ಯರ್ (ಎಕ. II, ೭೩-೪೦ ; 1118). [ಸಂ.]

**ಪುಸ್ತಕಘಥ** (ನಾ). = ಪುಸ್ತಕ ೨ : ಶ್ರೀಮೂಲಸಂಗದೇಸಿಯಗಣ ಪುಸ್ತಕಘಥ ಕೊಂಡಕುಂದಾನ್ವಯ ಇಂಗುಳೇಸ್ವರದ ಬಳಿಯ . . . ಪ್ರಭಾಚಂದ್ರದೇವರ ನಿಸಿಧಿ (ಎಕ. I (R), ೯೯-೧ ; 1044).

[☞ ಇದು 'ಪುಸ್ತಕಗಚ್ಛ' ಎಂಬುದರ ಅಪಲಿಖಿತ]

**ಪುಸ್ತಕನೋಟ** (ನಾ). ಇಕ್ಕಟ್ಟಿನ ಪ್ರಸಂಗಗಳಲ್ಲಿ ಮಾರ್ಗದರ್ಶನಕ್ಕಾಗಿ ಜ್ಯೋತಿಷ್ಯದ ಬದಲಾಗಿ, ರಾಮಾಯಣದಂತಹ ಪುಸ್ತಕದಲ್ಲಿಯೋ, ಭವಿಷ್ಯಸೂಚಕವಾದ ವಾಕ್ಯಗಳಿರುವ ಪುಸ್ತಕದಲ್ಲಿಯೋ ಕಡ್ಡಿ ಹಾಕಿ, ಆಯಾ ಪುಟದಲ್ಲಿರುವ ಮಾತುಗಳಿಂದ, ಸಂದರ್ಭಕ್ಕೆ ತಕ್ಕಂತೆ ಅರ್ಥವನ್ನು ತಿಳಿದುಕೊಳ್ಳುವಿಕೆ : ಈ ಮೇರೆ ಹದಿನೈದು ದಿವಸ ಕಟ್ಟಿದಾಗ್ಯೂ ನಿಲ್ಲದಿರಲು, ಇದೇನಾಶ್ಚರ್ಯವೆಂದು ಪುಸ್ತಕನೋಟ, ಶಕುನ ಮೊದಲಾದ್ದನ್ನು ನೋಡಿಸಲಾಗಿ (ಚಿತ್ರಜಾ. ೭). [ಪುಸ್ತಕ + ನೋಟ]

**ಪುಸ್ತಕಪಟ್ಟಿ** (ನಾ). " (ಸಾ., ಅಕಾರಾದಿಯಾಗಿ ಅಥವಾ ವಿಷಯಾನುಕ್ರಮವಾಗಿ, ಕೆಲವು ಸಂದರ್ಭಗಳಲ್ಲಿ ಸ್ವಲ್ಪ ವಿವರಣೆಯನ್ನು ಸೇರಿಸಿ ರಚಿಸಿದ) ಪೂರ್ಣಪಟ್ಟಿ ; ಪುಸ್ತಕಪಟ್ಟಿ "(Catalogue. ಇಂಕಅ).

[ಪುಸ್ತಕ + ಪಟ್ಟಿ]

**ಪುಸ್ತಕರ್ಮ** (ನಾ). ಬಳಿಯುವುದು ; ಸಾರಣೆ ; ಲೇಪನಕಾರ್ಯ : " ಲೆಪ್ಪ ಮೊದಲಾಗುಳ್ಳ ಕೆಲಸಮುಂ (ಹ)ಪುಸ್ತಕರ್ಮ ಎಂಬುದು " (ಹಲಾಯು. ೯೭-೪೩೭). [ಸಂ. ಪುಸ್ತಕರ್ಮನ್]

**ಪುಸ್ತಕವಲ್ಲಿ** (ನಾ). ಒಂದು ಬಗೆಯ ಸಸ್ಯ : "ದ್ರುಮಣಿ ಪುಸ್ತಕವಲ್ಲಿ " (ಮಂಗರಾ. ೪೪-೪೩). [ ? ]

**ಪುಸ್ತಿ, ಪುಸ್ತೆ** (ನಾ). ೧. ಶಾಲೆಯಲ್ಲಿ ಮಕ್ಕಳ ಬರೆವಣಿಗೆ ಎಷ್ಟು ಪ್ರಗತಿ

ಯಾಗಿದೆಯೆಂಬುದನ್ನು ತಿಳಿದುಕೊಳ್ಳಲು ನಿರ್ದಿಷ್ಟ ಹಾಗೂ ನಿಯತ ಕಾಲದಲ್ಲಿ ಅವರಿಂದ ಬರೆಯಿಸಿ ತೆಗೆದುಕೊಳ್ಳುವ ಶುದ್ಧಲೇಖನದ ಕಾಗದ ಮತ್ತು ಶುದ್ಧಲೇಖನ : ಅದರ ಮೇಲೆ ನಾನು ದಸರೆಯ ಹಬ್ಬದ ದಿನ ಒಂದು ಪುಸ್ತಿ ಬರೆಯುತ್ತೇನೆ (ಮುಂಬಯು. ೦–೩೦). ೨. ಬರವಣಿಗೆಗಾಗಿ ಇಟ್ಟುಕೊಂಡ ಒತ್ತುಕಾಗದಗಳ ಕಟ್ಟು : ಇವು ನಿಮ್ಮ ಪುಸ್ತಿಗಳಲ್ಲವೇ ? (ರೂಢಿ). ೩. ಕೊರಳಲ್ಲಿ ಹಾಕಿಕೊಳ್ಳುವ ಒಂದು ಬಗೆಯ ಆಭರಣ : ಹಾರ ತಿಸರ ಪವಸರ ಕಂಠಮಾಲೆಯು ಚಾರುಪದಕ. ಬಂದಿ ಲಂಳಿಯು ತೋರ ಮುತ್ತಿನ ಹತ್ತೆಗಟ್ಟು ಪುಸ್ತಿಯ[ ಪಾಠಾಂ. ತಾತಿಯು]ನಂದಾ ರಾಯನಿತ್ತ ನಂದನೆಗೆ ( ರಾಮಂಱ. ೬–೪೭); ಪಸ್ತಿಕ ವರ್ಣಕಕೃತಿಯು ಲಿಪಿಯು ಸಾಲು ಪುಸ್ತಕದೊಳಗೆಸೆವಂತೆ ಪುಸ್ತಿಯು ಚಿಂತಾಕು ಮಣಿಸರ ಬಂದಿ ಪ್ರಶಸ್ತಿ ಪಡೆದವು ಕಂಠದೊಳು (ಶರಣ. ೪೦–೩೪); ನವರತ್ನದ ಪುಸ್ತಿ ಕಟ್ಟಾಣಿಮುತ್ತಿನ ಖವಖವಿಸುವ ಪಂಚಸರದ್ಧ . . . ಪದಕದೆ ಕುವಲಯನೇತ್ರೆಯೊಪ್ಪಿದಳು (ಕಂಪಾ. ೬–೭೨). ಪುಸ್ತೆ : ೩. ಸುರಸತಿಯರು ಪುಸ್ತೆ[ಪಾಠಾಂ. ಸ್ತಿ] ಲಂಳಿಯಾಣಿಮುತ್ತಿನ ಸರ ಬಣ್ಣಸರ ಬಂದಿ ಪದಕ . . . ಮಂಟಿಕೆಗಳ ಪರಮನ ಜನನಿಗಿಕ್ಕಿದರು (ಶಂಕ್ರಸಾಂ. ೨೩–೯೯). [ <ಪುಸ್ತ. / ತೆಲು. ಪುಸ್ತೆ ]

**ಪುಸ್ತಿಕೆ** (ನಾ). ಚಿಕ್ಕ ಪುಸ್ತಕ; ಪುಟ್ಟಗ್ರಂಥ : ಈ ಅವಧಿಯಲ್ಲಿ ೭೦ ಪುಸ್ತಿಕೆಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ (ಶರಣ. III. ಮುನ್ನುಡಿ); ಈಗ ಈ ಮಾಲೆಯಲ್ಲಿ ಪ್ರಕಟವಾಗಿರುವ ಪುಸ್ತಿಕೆಗಳೆಲ್ಲ ಅಂಥವೇ (ಮುದ್ರಕ. III. ಮುನ್ನುಡಿ). [ಸಂ. ಪುಸ್ತಿಕಾ]

**ಪುಸ್ತಿ** 'ಪುಸ್ತಿ' ನೋ.

**ಪುಸ್ಯ, ಪೋಷ$_1$** (ನಾ). ೧.=ಪುಷ್ಯ ೪ : ಪುಸ್ಯವು ಹುಸಿದರೆ ಸಸ್ಯವು ಸಾಯಿತು ಎಂದೂ . . . ಪುನರ್ವಸು ಮಳೆಯು ಗುಡುಗಿದರೆ ಸುವೃಷ್ಟಿಯಾಗುವುದೆಂದೂ ತಿಳಿದಿದ್ದರು (ಹುಬ್ಬಹ. ೭೨). **ಪೋಷ$_1$** :೨.=ಪುಷ್ಯ ೫ : ತದ್ವರಿಷಾಭ್ಯಂತರದ ಪೋಷಸುದ್ಧಪಞ್ಚಮಿ ಈ ಬೃಹಸ್ಪತಿವಾರಮುತ್ತರಾಯಣದ ಸಂಕ್ರಾಂತಿಯಂದು ಶ್ರೀಮತ್ × × × ಲೋಕಯ್ಯ . . . ಆಳುತ್ತಿರೆ (ಎಕ. XI. ಹೊಳಲ್ಕೆ. ೩೦–೨; 964). [<ಸಂ. ಪುಷ್ಯ]

**ಪುಸ್ಸನೆ** (ಅ). 'ಪುಸ್' ಎಂಬ ಶಬ್ದದೊಡನೆ : ದಾರ ಬಿಚ್ಚಿಕೊಂಡ ಬಲೂನಿನಿಂದ ಗಾಳಿ ಪುಸ್ಸನೆ ಹೊರಕ್ಕೆ ಹೋಯಿತು (ರೂಢಿ).
[ಪುಸ್ + __ ಅನ್ನಿ$_1$]

**ಪುಳ$_1$** (ಗು). ೧. ಸ್ಫುಟವಾದ; ಸ್ಪಷ್ಟವಾದ : ಗುಳಿಗೆ ವರಾಳಂ ರಗಳೆ ಪುಳಂ—ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟ್ಟಿಯುಂ ಕುಳಂಗಳಾದುವು (ಶಬಮ. ೨೨ ವೃ.) (ನಾ). ೨. ನಿರ್ಮಲವಾದುದು; ಸ್ವಚ್ಛವಾದುದು: ಸುಖಜಲಮಾ ನೇತ್ರದಿಂ ಜಾರೆ ಚಿತ್ತಂ ಪುಳಮಾಗಲ್ ಬಾಹುಜಂ ತಾನರಿದು ಮನದೆ ವೈಕುಂಠಸಂಗಂಬೊಲಿರ್ದಂ (ಚಂದ್ರಶು. ೩–೪೯).
**ಪುಳಮಾಗಿ** = ಸ್ಫುಟವಾಗಿ : ಇದೆ ಕೊಳ್ಗಿಳಿವಜು . . . ಮೆಲ್ಲುಡಿಗೊಂಡಂದದೆ ಪುಳಮಾಗಿಲ್ಲಿ ನುಡಿಗುಂ (ಚಿತ್ರಗೋ. ೨೧–೪೨).
[ < ಪ್ರಾ. ಫುಲ. / ಸಂ. ಸ್ಫುಟ ]

**ಪುಳ$_2$** 'ಪುಲ' ನೋ.

**ಪುಳಂಪುಣಿಸೆ** 'ಪುಳ್ಳುಂಪುಣಿಸೆ' ನೋ.

**ಪುಳಂಪುರುಚೆ** 'ಪುಳ್ಳುಂಪುಣಿಸೆ' ನೋ.

**ಪುಳಂಬು** 'ಪುಳುಂಬು' ನೋ.

**ಪುಳಕ$_1$** 'ಪುಲಕ' ನೋ.

**ಪುಳಕ$_2$** (ನಾ). (ಕರಾ) ಗರಿಕಾರ; ಮುಖಂಡ. [?]

**ಪುಳಕಪ್ರಭೇದನ** (ನಾ). ರೋಮಾಂಚನವಾಗುವಿಕೆ; ನವಿರೇಳುವಿಕೆ : ಇದು ಪಿರಿದುಂ ಬುಧಾವಳಿಗೆ ಕರ್ಣರಸಾಯನಮಾತ್ಮಚಿತ್ತಸಮ್ಮದಜನಕಂ ಮುದಶ್ರುಜಲಕರ್ತೃಲಸತ್ಪುಳಕಪ್ರಭೇದನಪ್ರದಗುರು ಮಸ್ತಕಪ್ರಚುರ ಕಂಪನಶಿಕ್ಷಕನೆಂಬಿನಂ ಪ್ರಯತ್ನದೆ ಕೃತಿವೇಳ್ವುದು (ಚಂದ್ರಶು. ೦–೪೯).
[ಸಂ. ಪುಲಕಪ್ರಭೇದನ]

**ಪುಳಕಬಿಂದು** (ನಾ). ಬಹಳ ಸಂತೋಷದಿಂದ ಹೊಮ್ಮಿದ ಕಣ್ಣೀರಿನ ಹನಿ; ಆನಂದಬಾಷ್ಪದ ಬಿಂದು : ತ್ರಿಪುರಸಂಹಾರವ ಮಾಡುವಲ್ಲಿ ಶಿವನ ಉನ್ಮಿಷೋನ್ಮೀಲನದೃಷ್ಟಿಯಿಂ ಪುಳಕಬಿಂದು ಕಚ್ಚಟೆಯ ಮೇಲೆ ಬೀಳಲುಣ್ಮಿದ ರುದ್ರಾಕ್ಷಿ ಸರ್ವಕಾರಣಾಧಿಕ್ಯವೆಂಬುದನಱಿದು ರುದ್ರಾಕ್ಷಿಯ ಧರಿಸಿದಾತನೇ ಸರ್ವತೋರುದ್ರನಪ್ಪುದು ತಪ್ಪದು (ಆದವ. ೦೯–೪೬).
[ ಸಂ. ಪುಲಕಬಿಂದು ]

**ಪುಳಕಾಂಕುರ** 'ಪುಲಕಾಂಕುರ' ನೋ.

**ಪುಳಕಿತ** 'ಪುಲಕಿತ' ನೋ.

**ಪುಳಕಿಸು** 'ಪುಲಕಿಸು' ನೋ.

**ಪುಳಗಣ್** (ನಾ). ಒಂದು ಸ್ಥಳದ ಹೆಸರು : ಮಣ್ಣುಲೋರ ವಿಷಾಕೆ ಗಾಳೊಳ್ಕಾದಿ ಪುಳಗಣ್ಣೊಳು ಸತ್ತು ಸಗ್ಗಿಯಾದಂ (ಎಕ. X (೩). ಮುಳಬಾ. ೦೬೭–೦೩; 820). [?]

**ಪುಳಗು** 'ಪುಣುಗು' ನೋ.

**ಪುಳಗುಕಾಪು** 'ಪುಣುಂಗುಕಾಪು' ನೋ.

**ಪುಳಗುಳಕಲ್** (ನಾ). ಒಂದು ಪ್ರದೇಶದ ಹೆಸರು : ಸುದ್ದ ಪವುಷಮಾಸದೊಳ್ ಪುಳಗುಳಕಲ್ಲ ಮೇಗಿಟ್ಟು ಪಿರಿಯ ಮೇಟಪಿಗೆ × × × ಪಾದಪಂಯಾರವ × × × ಯನಟಿ (ತ್ರೈಮಾ. IX–1. ೩೨–೦೩; ಸು. 10ನೆಯ ಶತ). 
[ಪುಳಗುಳ್$_0$ + ಕಲ್$_3$]

**ಪುಳಯಿಸು** (ಕ್ರಿ). ನಿಲ್ಲಿಸು; ಸ್ಥಾಪಿಸು: ಕೆಲೆಯಬ್ಬೆಯ ಮಗ ಮಾರಾಜ . . . ಇದಿರ್ಚಿದ ಬಲಮಂ ಕೊನ್ದು ಸತ್ತಡೆ × × × ಸಂದಂಗುಜ್ಜಮ್ಮಡಿಗಾವುಂಡಂ ಕಲ್ಲಂ ಪುಳಯಿಸಿದ ಪರೋಕ್ಷದಲು (ಎಕ. ೪. ಕುಂಚಿ. ೪೪–೦೭; 1027 ?). [ಈ ಇದು 'ಪೂಣಿಸು' ಎಂಬುದರ ಅಪಲಿಖಿತ ವಿರಬಹುದು].

**ಪುಳವಿ** (ನಾ). [ಜೈನ] ಲೋಕಗಳನ್ನು ಒಳಗೊಳ್ಳುವ ಚೀಲಗಳಂತೆ ಇರುವ ಅತ್ಯಂತ ಬೃಹದಾಕಾರದ ಅವಕಾಶ; ಈ ಇವುಗಳಿಗೆ 'ನಿಗೋದ' ಎಂಬ ಹೆಸರೂ ಉಂಟು : ಸ್ಕಂಧಂಗಳ್ ಅಸಂಖ್ಯಾತ ಲೋಕಮಾತ್ರಂ ಏಕೈಕಸ್ಕಂಧದೊಳ್ . . . ಅಸಂಖ್ಯಾತಲೋಕಮಾತ್ರ ಪುಳವಿಗಳ್ ಒಂದೊಂದು ಪುಳವಿಯೊಳ್ ಅಸಂಖ್ಯಾತ ಲೋಕಪ್ರಮಿತ ನಿಗೋದಶರೀರಂಗಳ್ (ತತ್ತ್ವಸೂ. ೩೩೦). [ಸಂ. ಪುಲವಿ ? ]

**ಪುಳಿ$_1$** (ಕ್ರಿ). ಹುಳಿಯಾಗು; ಹುಳಿಯೊಡೆ : ಮಧು ಸೀತುಂ ಕಟುಸಿಱದು ಪೋ ಪುಳಿತ ಕಳ್ಗಳುಂ ಕರಂ ಕಯ್ಪು ಬರ್ಪುದು (ಕಂಪಣಾ. ೪–೮೮).
[ದೇ. ॥ ತಮಿ. ಮಲ. ಕೋತ. ತೊದ. ಪುಳಿ; ತುಳು. ಪುಳಿ, ಪುಲಿ; ತೆಲು. ಪುಳಿಯು, ಪುಲಿಯು ]

**ಪುಳಿ$_2$** 'ಪುಟಿ' ನೋ.

**ಪುಳಿ$_3$, ಹುಳಿ$_2$** (ನಾ). ೧. ಹುಳಿಯಾಗಿರುವಿಕೆ; ಆಮ್ಲತ್ವ: (+). ೨. ನಿಂಬೆಹಣ್ಣು, ಹುಣಿಸೆಹಣ್ಣು ಮೊದಲಾದುವುಗಳ ಆಮ್ಲರಸ; ಷಡ್ರಸಗಳಲ್ಲಿ ಒಂದು : ಪಾಲುಂ ಪುಳಿಯೊಳ್ ಬೆರಸಿದೊಡಿನಿದಕ್ಕುಮೆ (ಶಬಸಂ. ೦೬೦–೨೦); ಬದಗುಳಿಗನ ತೋಳ್ಮುಟ್ಟಿದ ಸುದತಿಯೊಲಿಂಬಾಗದಂತೆ ಕೆಟ್ಟುದು ಪುಳಿ ಮುಟ್ಟಿದ ದುಗ್ಧದಂತೆ ನೀಮುರ್ಚಿಟ್ಟಿದ ಜೇನೆಯ್ಯ ತಿಱಿದ ಪಕಿಗೆ ಶಯ್ಯಾತಳದೊಳ್ (ಯಕೋಚ. ೨–೫೯); ಪುಳಿಯಿಂದೆ ಪಾಲ್ ಬಹುಳಕೋಪದೆ ತಪಃಫಲಮುಂ . . . ಸಲೆ ಕಿಡುವವೋಲ್ ಕಿಡುವುದರಸಾಳ್ವ ಧರೆ ಪಿಸುಣರಿಂ (ಕೂಪು. ೬–೩). ೩. ಹುಣಿಸೆಹಣ್ಣು : ಪುಳಿಯೊಳಲೆದ .ಪವಳದ ಬಟ್ಟನಂತೆ ಸೊಗಯಿಸುವ ಸಾರೋದಯನ

ಬಿಂಬಾಧರಮನಂಗಶಾಗರಸಮುಳಿಯಂತಾಮುದು (ಶಂಶಶಾ. ೨-೩೯ ವ).
೪. ಹುಣಿಸೆಹಣ್ಣು ಸೇರಿಸಿ, ಬೇಳೆ, ತರಕಾರಿಗಳ ಸಹಿತವಾಗಿ ಮಾಡುವ ಮೇಲೋಗರ; ಆಮ್ರ : ಮಿಗಿಲೆನಿಸುವ ಪೊಸ ಸುಣ್ಣದೊಳಂಗುರ್ವಱ್ಲಿಯ ಬೇರನಿಕ್ಕಿ ಗರ್ದುಗಿನ ಕೊನೆಯಂ ತೆಗಪಿ ಪುಳಿಯಡುಗೆ ವೇೞ್ ಸಂಡಗೆಯಿಡುಗಾ ತೆಱದಿನವಱ ಬೀಜಂಗಳುಮಂ (ಲೋಕೋಪ. ೬-೨೯); ಲೋಕ್ಕಿಯ ಕೊನೆಯುನಕ್ಕಿ ಮೇಣ್ಗ್ಳ್ಳಿಯ ಕೊನೆಯಂ ತೆಗಪಿ ಪುಳಿಯ ಸಡೆ ಸವಿಯಕ್ಕುಂ (ಲೋಕೋಪ. ೬-೨೬). ಹುಳಿ೩: ೧. ಹುಲಿಯ ಹುಲ್ಲೆಯ ನೇಹ ಬಿಱುಗತ್ತಲೆಯ ಬೆಳಗಿನ ಮೈತ್ರಿ ಮಧುರದ ಹುಳಿಯ ಪರಿಸಂಬಂಧವಿದ್ದುವು ಬನದೊಳಾ ಮುನಿಯ (ತೊರಯ. ೦-೩-೯೩). ೨. ಕೆಡುಗು ಹುಳಿಯೆನಲಱಟ ಜಡವೆನಿಪ ಪಾಲ್ಗಡಲು (ಸಾಸಂತ. ೦ ೯೩); ಹುಳಿಗೆ ಹಾಲಳುಕಿದರೆ ಹಾಲಿನ ಜಲಧಿ ಕೆಡುವುದೆ (ಕುಮ್ಯಾಭಾ. ೨೦-೭); ಒಗರುಪ್ಪು ಸಿಹಿ ಕಹಿ ಹುಳಿ ಖಾರಗಳ ತೆಗೆತೆಗೆದೀವುಶಿಹನು ನಾಲಗೆಗೆ ದೃಗವಬೋಧನಶಕ್ತಿ ಸುಖವನಾತ್ಮಗೆ ಬಗೆಬಗೆದೀವುಶಿಹನು ಭಾವದೊಳು (ಭರತ. ೯-೯೩). ೩. ಉಪ್ಪು ಹುಳಿ ಮೆಣಸು ಸಂಬಾರ (ಶಾಶಾಸ. ಮಂಗಳೂರು. ೯೬೩-೩೯ ; 1312); ಉಪ್ಪು ಹುಳಿ ಬೆಲ್ಲ ಯೆಂಣೆ . . . ಜವಳಿ ಮುಂತಾಗಿ (ಎಕ. VII. ಶಿವಮೊ. ೨೬-೦೭; 1670); ಕಳ್ಳ ಕಳ್ಳಗೆ ನಂಟು, ಹುಳಿ ಮೆಣಸಿಗೆ ನಂಟು (ಗಾದೆ).
೪. ಗಂಗಾದೇವಿಯ ಹುಳಿ ಕಾಸಿ ಗೌರೀದೇವಿಯ ಕೂಳನಟ್ಟು ಭಕ್ತನ ಬಾಡನಟ್ಟು ದೇವನ ಸಾಸಮೆಗಲಸಿ . . . ಉಣ್ಣಲಿಕ್ಕಿ ಕೈಕಾಲು ಮುಱಿಯಿತ್ತು (ಅನಹು. ೦೨೩-೩೬೬); ಅವರೆಲ್ಲ . . . ತಟ್ಟೆಗಳಲ್ಲಿ ಅನ್ನ, ಪಾತ್ರಗಳಲ್ಲಿ ಹುಳಿ ತುಂಬಿಕೊಂಡು ಬಡಿಸುವುದಕ್ಕೆ ಸಿದ್ಧವಾಗಿ ನಿಂತಿದ್ದರು (ರಂಗಕ. ೯೦); ಹರಿವೆಯ ಸೊಪ್ಪಿನ ಹುಳಿ ಗಟುಲ ಕೆಳಗೆ ಇಳಿಯಲೇ ಇಲ್ಲ (ದೇವಹು. ೨೦೦). ೫. ಒಂದು ಬಗೆಯ ಸಸ್ಯ : ಕಿರೀಹುಳಿಪ, ಹುಳಿ, ಮುಂಗಿನ ಕೋಡುಸೊಪ್ಪು, ಸಣ್ಣಗೂಗೆ, ಬಿಳಿಕೊಮ್ಮೆ (ವೃಕಿಸಿ. ೬-೦೨೬). ೬. (ಅಲಂ) ಪೊಗರು; ಸೊಕ್ಕು; ದರ್ಪ : ಶೀನಪ್ಪಯ್ಯನ ಹುಳಿ ಉಗ್ಗುವ ರೀತಿಯಲ್ಲಿ ಶಾನೊಂದು ಉಪ್ಪರಿಗೆಮನೆಯನ್ನು ಕಟ್ಟಿಸಬೇಕು (ಮರವು. ೦೩೯). ೭. ಹುಳಿ ಹಿಂಡುವವನು ; ಕೆಡುಕ : ಯಾವನನು ಅಲ್ಲಿಂದಡೆ ಹದಿನೆ[೦]ಟ್ಟು ಸಮಯಕ್ಕೆ ಹೊಱಗೂ ದೇಸಕ್ಕೆ ಹುಳಿ (ಶಾಶಾಇ. IX–1. ೩೭೯-೭೭ ; 1279). (ಗು). ೮. ಹುಳಿಯಾಗಿರುವ ; ಹುಳ್ಳಗಿರುವ : 'ಹುಳಿದಾಳಲು', 'ಹುಳಿನೀರು' ಪರಾ.

ಹುಳಿ ಮುಟ್ಟಿದ ಹಾಲು=ಒಡೆದ ಹಾಲು ; ಕೆಟ್ಟುಹೋದ ಹಾಲು: ಹುಳಿ ಮುಟ್ಟಿದ ಹಾಲಿನಂತಾದ ಮೇಲೆ ಅವಳ ಮೈ ತನ್ನ ಬೆನ್ನಿಗೆ ಆಕಸ್ಮಿಕವಾಗಿ ಸೋಕಿದ ಮಾತ್ರಕ್ಕೆ ಕರ್ಕಶಸ್ಪರ್ಶವಾಗುವುದು (ಕಾವ್ಯಸ. ೬೨). ಹುಳಿಯನ್ನು ಹಿಂಡು=ಸ್ನೇಹ, ಸೌಹಾರ್ದ ವಾತಾವರಣವನ್ನು ಕೆಡಿಸು: ಇವೆಲ್ಲವೂ ನಮ್ಮ ನಿಮ್ಮಲ್ಲಿರುವ ಸಂಬಂಧಕ್ಕೆ ಹುಳಿಯನ್ನು ಹಿಂಡಲೋಸುಗ ಕಲ್ಪಿತವಾಗಿರುವ ಒಂದು ನಾಟಕ (ದ್ರೋಕಚ್ಕ. ೨೬೯). [<ಪುಳಿ$_1$. / ತವಿ. ಮಲ. ತೆಲು. ಪುಳಿ ; ತುಳು. ಪುೞಿ, ಹುಳಿ ]

**ಪುಳಿಂಚು**, ಪುಣಿಚು, ಪುಳಿಚು (ನಾ). ೧. ಆರ್ದ್ರಪದಾರ್ಥವು ಒಣಗಿ ಏಳುವ ಹಕ್ಕಳೆ; ಹುರುಪು: ಬಿಗಿದೊಗೆದ ನಿನ್ನ ಮೊಲೆಗಳ ಮೃಗಮದದ ಪುಳಿಂಚುಗಳ್ ವ[ಗಲ್ಲ್]ರಲೆತೆಯೂದಗಲುರಮ ನೆನಗೆ ಪಡೆದಜನೊಗಸುಗಮ ಕೈಲಗ್ಗೆ ನಿನ್ನನೆವಗೆಯೆ ಪಡೆದಂ (ಶಂಶಶಾ. ೬-೬೭); ಇಂಚರದಮರ್ದಿನ ಸವಿಯ ಪುಳಿಂಚಿನ ಕಿವಿಗಳ್ಗೆ ವೃತ್ತಕುಚಿ ಪತಿಯುರಮಂ ಮಿಂಚಿನವೊಲಪ್ಪಿ ಮಿಡಿದ ವಿಪಂಚಿಯೆನೆ ಪುಳಿಂದಿ ಪಾಡಿದಳ್ ಮಾನವನಂ (ಲೀಲಾವ. ೬-೩೯); ಎಸೆದುವು ತನುಲಕ್ಷ್ಮಿ ನಲಿಮ ಗುಡಿಗಟ್ಟಿದಂದದಿಂ ಪೂಸಿದ ಚಂದನದ ಪುಳಿಂಚುಗಳಂ ಪೊತ್ತು ನೆಗೆದ ಪುಳಕಾಂಕುರಂಗಳರಸನ ಮೆಯ್ಯೊಳ್ (ಶಂದ್ರಶ್ರಿ. ೦೨-೨೬). ಪುಣಿಚು : ೨. ಹಲ್ಲಿನ ಕಿಟ್ಟ,–ಕೊಳೆ : 'ಪುಣಿಚೇಟ್' ಪರಾ. ಪುಳಿಚು : ೧. 'ಪುಳಿಚೇಟ್' ಪರಾ. [ ? ]

**ಪುಳಿಂಚೆ**, ಪುಣಿಚೆ (ನಾ). ಬೇಡರ ಹೆಂಗಸು ; ಬೇಡಿತಿ (?) : ಪಂಚಮಮಂ ಪೊರೆವಮರ್ದ ಪುಳಿಂಚೆಯ ನುಣ್ಚರಮಂಗಲ್ದು ಪುಂಸ್ಕೋಕಿಲಗಳ್ ತಾಂ ಚೇಗದೆ ಪೆಣ್ಕೋಗಿಲೆಯಿಂಚರಮೆಂದಲ್ಲಿ ಸುತ್ತಿ ಮುತ್ತುಗುಮನಿತಂ (ಉದ್ಭಟ. ೨-೯೯). ಪುಣಿಚೆ : ದಂಗಟನ ಪುಣಿ[ಪಾಕಾಂ. ಣ]ಚೆಯರು ಹೊಂಗಱಿಯ ಬಿಲ್ಲುಕೋಲನೊಂದು ಕೈಯಲಿ ಪಿಡಿದು ಒಂದು ಕೈಯಲಿ ಬಿದಿರಕ್ಕಿಯ ಹಿಡಿದು ಮುಂದೆ ಬಂದಾಡುತಿರೆ (ಶನ್ನವ. ಕ. ೦೯೬-೩೩೨); ಬಯಸುವರು ಗೋಪಿಯರದಾವನ ಪಾದರೇಣುಗಳ ಬಯಸುವರು ಪುಣಿಚೆಯ [ಪಾಕಾಂ. ಪೂಜೆಯ, ಪೂಜೆಪ]ರು ತೃಣಸಂಚಯನಿಹಿತಪದ ರೇಣುಗಳನವ್ಯಯನಾವಗಲುವೆವದೆಂತೆಂದರು ಎಹಾತ್ಮೆಯರು (ಶಿಭಾಗ. ೧೦-೭೯-೩೭). [<ಪುಳಿಂದಿ ?]

**ಪುಳಿಂದ** 'ಪುಲಿಂದ' ನೋ.

**ಪುಳಿಂದಕ** (ನಾ). ಬೇಡರವನು; ಶಬರ : ಧುರಕ್ಕೆ ದಶರಥನೃಪತಿ ಸುತರಂ ಭರದೆ ಕಳುಹುಗುವೆಂಬ ಶಂಕೆಯಿನಿರದೆ ಕೆಟ್ಟುದು ಶಬರಬಲವೆಂದಂ ಪುಳಿಂದಕನು (ಕುಮುಂರಾ. ೯-೩೯); ಕಾಣಿಕೆಯ ಕೈಕೊಂಡು ಶಬರಶ್ರೇಣಿಯನು ಮನ್ನಿಸಿದನುಚಿತದ ವಾಣಿಯಲಿ ವೈವಸ್ವತಾನ್ವಯನಾ ಪುಳಿಂದಕರ (ತೊರರಾ. ೩-೩-೩). [ಸಂ. ಪುಲಿಂದಕ]

**ಪುಳಿಂದಿ** (ನಾ). ಬೇಡರ ಹೆಂಗಸು ; ಬೇಡಿತಿ : ಶಬರಿ : ವನಚರನಾಗಿ ಶಂಭು ಗಿರಿಜಾತೆಯನೋತು ಪುಳಿಂದಿ ಮಾಡಿ ನಚ್ಚಿನ ಗುಹನ ಕಿರಾತಬಲನಾಯಕನಾಗಿರೆ ಮಾಡಿ . . . ಕವಿದನಾ ಬನಮಂ (ಶಂಶಭಾ. ೬-೦೯); ಚಂಚಲಶಪಾಂಗದ ಪುಳಿಂದಿಯರ್ ತಮ್ಮ ತಮ್ಮ ಓಪರಂ ಬಳಿವಿಡಿದು ಬರುತಿರ್ದರಾಗ (ಜೈಮಿಭಾ. ೨೬-೯೨); ಪುಳಿಂದಿಯರಾದರಮರ್ತ್ಯಕಾಂತೆಯರ್ (ಶಬಶಂ. ೩-೯). [ಸಂ. ಪುಲಿಂದೀ]

**ಪುಳಿಂದಿನಿ** 'ಪುಲಿಂದಿನಿ' ನೋ.

**ಪುಳಿಕೆ** (ನಾ). ಒಂದು ಬಗೆಯ ಔಷಧೀಸಸ್ಯ : ಬಿಳಿಪೊಳಸು, ಬೂದಿತಾಳೆ, ಪುಳಿಕೆ, ಬಿಳಿತಾಳೆ, ತೆಲ್ಲಪುನಿ (ವೃಕಿಸಿ. ೩೯-೭೭೩). 'ಹುಳಿಗ' ಪರಾ. [?]

**ಪುಳಿಗರ್ಚು** (ಕ್ರಿ). ಹುಳಿ ಹಚ್ಚಿ ತೊಳೆ ; ಹುಳಿ ಹಾಕಿ ಬೆಳಗು,– ಬೆಳ್ಳಗೆ ಮಾಡು : ಕೊರ್ಬಿಂಬ ಕಿಟ್ಟಮುಂದುರೆ ಪಸುರ್ವಣ್ಣವೆಂಬ ಕಾಳಿಕೆ ಕಟಲೆ ವಿರಹಾಗ್ನಿಯಿಂ ಕಾಯ್ಸಿ . . . ಬೆಳ್ದಿಂಗಳಿಂ ಪುಳಿಗರ್ಚಿ ಕುಸುಮಶರನ ಶಾಣದೊಳ್ ಪೊಸವೆಳ್ಪು ಪಸರಿಸಿ ಕುಸುಮಶರನನೆ ಮಿಸುಗೆ ಮಸೆದಸಿಯಂತಿರೆಸೆವಸಿಯ ಮೆಯ್ಗೆ ಮೆಯ್ಸಿರಿಯಾದ ಬೆಳ್ಪಸನದಿಂ (ಲೀಲಾವ. ೧೦-೩೭ ವ); ಪುಳಿಗರ್ಚಿದಂಗಜಾಸ್ತ್ರಂಗಳ ಬಳಗಮಿದೆಂಬ ತೆಱದಿನಾರ್ದ್ರತೆವಡೆದುಜ್ಜ್ವಳಿಪಂಗಾವಳಿಯಿಂ ಕಣ್ಗೊಳಿಸಿರ್ದುದು ಬಳಸಿ ಪಾರನಾರೀನಿವಹಂ (ಕುಸುಮಾ. ೫-೦೫೯). [ಪುಳಿ$_3$ + ಕರ್ಚು$_2$ (<ಕಟ್ಟು)]

**ಪುಳಿಗೂಟ್** (ನಾ). ಹುಳಿ ಇರುವ ಆಹಾರ ; ಹುಳಿಯಂಬಲಿ : ಪುಳಿಗೂಟಿಂ[ಪಾಕಾಂ. ಹಳಿಗೂಳಂ]ತದಿಕಿನ ಕೆಂದಳಿರಂ ಪಾಲ್ಗೆನೆಯನೆಳೆಯ ಪುಲ್ಲುಂ ಕಬ್ಬುಂ ಬಲವಂತನಕ್ಕುಮೇಂದುಜ್ವಲಚಿತ್ತಂ ತಂದು ಪೊರೆವುದುಂ ಗಜಪತಿಶುಮಂ (ರವರ್ಮಾಮ್ಮ. ೦೨-೦೨೯); ಬೀಳಂಬಲಿಯೊಳ್ ಕಲಸಿದ ಜೋಳದ ಪುಳಿ[ಪಾಕಾಂ. ರಿ]ಗೂಟನಿಕ್ಕಿಮೊಡಲಿಡಿಯದವೋಲ್ ಕೇಳೆಳಗೆಯಿದು ಮಱವಡೆ ಮೇಳಿಸುಗುಂ ನಿನಗೆ ಕಾಷ್ಠದಂಡದ ಘಾಯಂ (ಪುಣ್ಯಾಸ್ರ. ೯-೭). [ ಪುಳಿ$_3$ + ಕೂಟ್$_1$ ]

**ಪುಳಿಚಾರು** 'ಪುಳಿಚಾಱು' ನೋ.

**ಪುಳಿಚಾಱು**, ಪುಳಿಚಾರು, ಪುಳ್ಚಾರು, ಹುಳಿಸಾರು (ನಾ). ೧. ಹುಣಿಸೆ ಹಣ್ಣಿನ ರಸ, ಸಂಬಾರದ್ರವ್ಯಗಳನ್ನು ಸೇರಿಸಿ ಮಾಡುವ ಸಾರು: ಬೆಂದ ಕುಂಬಳದ ಕಾಯ್ಗಳ ಪಲವು ತೆಱ ಮಾಡಿಯೊಂದು ಪು[ಪಾಕಾಂ. ಹು]ಳಿಚಾಱಾಗಿಯೊಂದು ಸಿಹಿಗಾಯಾಗಿಯೊಂದು ದಧಿಸಾರಿಕೆಯುಮಾಗಿ ಮತ್ತೊಂದು ದುಸ್ವಾಯಭಂಗಿಯನೆ ಮಾಡಿ . . . ಒಂ[ದಕೊಂ]ದೊಂದು ತೆಱದ

ಪರಿಮಳವಿಕ್ಕಿ ಪೂಡ್ಡಣಿಗೆಯಂ ಕೊಟ್ಟು ಹಸ ಮಾಳ್ಪುದು (ಸೂಶಾ. ೩-೩೨); ಪುಳಿಚಾಱು ಪೂರ್ಣವ[ಟ ಭುಗ್ನಭಂಜಿತ]ಶಾಕ ತುಳುವದಾಳಿಲ ಶಾಕವಂಗಿ ಶೂಲ್ಯಕ ಮಸಂಗೊಳಿಪ ದಧಿಸಾರಿಕೆ ವಿಚಿತ್ರಪಾಕಂ ಕಹರಿ ಯಡಕೆತಾಳಿಲವೆಸರನು ತಳೆದ ಪಾಕಂಗಳು (ಸೂಶಾ. ೬-೦೩).

**ಪುಳಿಚಾರು :** ೨. ಸಸ್ಯಾಹಾರ : ಪುಳಿಚಾರು ಊಟ ಮಾಡಿದರೆ (ಶಾಟಾಶಾಂ. ೦೭೩); ಎಂಟು ಹತ್ತು ದಿನಗಳಿಂದ ಪುಳಿಚಾರು ತಿಂದೂ ತಿಂದೂ ಬಾಯಿ ಕೆಟ್ಟುಹೋಗಿರುತ್ತದೆ ಎರಡೂ ಕಡೆಯವರಿಗೂ (ಪಮ್ಮರು. ೦೦೨). ೩. (ಆಲಂ) ಶಾಕಾಹಾರಿಯಾದ ಬ್ರಾಹ್ಮಣ : ಪುಳಿಚಾರು ಕುಟುಂಬಗಳಾದುದರಿಂದ ಸಹಿಸಿಕೊಂಡು ಸುಮ್ಮನಾದರು (ಪಮ್ಮರ. ೩). ೪. ಧೈರ್ಯವಿಲ್ಲದವನು; ಪುಕ್ಕ : ಬೆದರಿಕೆಗೆ ಅಡಗುವ ಪುಳಿಚಾರುಗಳೇ ಹೆಚ್ಚು ಈ ಗುಂಪಿನಲ್ಲಿ (ಬೂತಿ). **ಪುಳ್ಚಾರು :** ೩. ಶ್ಯಾನುಭೋಗರು ಪುಳ್ಚಾರು (ಕೃಸರ್ಪ. ೧೩). **ಹುಳಿಸಾರು :** ೫. ಹುಣಿಸೆಹಣ್ಣನ್ನು ಕಿವಿಚಿ ಅದರ ರಸಕ್ಕೆ ಉಪ್ಪು, ಕಾರ ಹಾಕಿ (ಬೇಳೆಯಿಲ್ಲದೆ) ಮಾಡುವ ಸಾರು; ಗೊಡ್ಡುಸಾರು : ಹುಳಿಸಾರು ಮಾಡದವ ನಳಪಾಕ ಮಾಡಿಯಾನೆ? (ಗಾದೆ).

**ಪುಳಿಚಾಱು ಬದನೆಯ ಕಾಯಿ** = ಬದನೆಕಾಯಿಯಿಂದ ಮಾಡುವ ಒಂದು ಬಗೆಯ ಭಕ್ಷ್ಯ; ಸಕ್ಕರೆಬದನೆಕಾಯಿ : ಉದಕದೊಳು ಹುಣಿಸೆಯ ಹುಳಿಯ ಹಾಕಿ ಸಲೆ ಕಿವುಚಿ ಹದನಱಿದು ಸಕ್ಕರೆಯನಿಕ್ಕಿ ಶುಂಠಿಯ ಹಾಕಿ . . . ತುಪ್ಪದೊಳುಕ್ಕರಿಸಿ ಸವಿಯುಮಂ ಹಡೆದ ಬದನೆಯೆಳೆಗಾಯ ಹೋಳಂ ಹಾಕಿಕೊಂಡು ತುಪ್ಪದೊಳು ಪರಿಮಳವಿಕ್ಕಿ ಪೂಡ್ಡಣಿಗೆಯಂ ಕೊಟ್ಟು ಸವಿ ಹೋಗದಂತಿರಿಸಲು ಅದುವೆ ಪುಳಿಚಾಱು ಬದನೆಯ ಕಾಯಿ ಕನ್ನಡಿಗರದನು ಸಕ್ಕರೆಬದನೆಗಾಯೆಂದು ಹೆಸರಿಡುವರು (ಸೂಶಾ. ೪-೬).

[ಪುಳಿ$_3$ + <ಸಾಱು$_1$./ತಮಿ. ಪುಳಿಚ್ಚಾಱು; ಮಲ. ಪುಳಿಞಾಱು; ತುಳು. ಪುಳಿಚಾರ್]

**ಪುಳಿಚು** 'ಪುಳಿಂಚು' ನೋ.

**ಪುಳಿಚೇಳ್** 'ಪುಳಿಚೇಟು' ನೋ.

**ಪುಳಿಚೇಟು, ಪುಣಿಚೇಟು, ಪುಳಿಚೇಳ್, ಪುಳ್ಚೇಟು** (ಕ್ರಿ). ೧. (ದ್ರವವು ಒಣಗಿ) ಹಕ್ಕಳಿಯೇಳು,–ಪದರ ಪದರವಾಗಿ ಮೇಲೇಳು : ಮೆಯ್ಯಿಂಕೆಯಿಂದೊಳಗು ಕಂದೆ ಕತ್ತುರಿಯ ಪಳಿಕಿನಂತೆ ಪು[ ಪಾ.ಭೇ. ಹ]ಳಿಚಿರ್ದ ಚಂದನದಣ್ಪುವೆರಸು ಪತ್ತಿದ ಪರಿಮಳವಮಂ (ಲೀಲಾತ. ೧೦–೬೪ವ). ೨. (ಬೊಬ್ಬೆಯುಂಟಾಗಿ) ಹೊಪ್ಪಳಿಯೇಳು ; ತೊಗಲು ಸುಲಿದು ಬರು : ಬಿಸುಸುಯ್ ನೀಳ್ದ ಲತಾಂಗವಿರ್ಪಟಿದು ಬಾಷ್ಪಂ ಕಾಟ್ಟುರಂಗೊಂಡ ವಕ್ತ್ರಸರೋಜಂ ಪೊಳಪೋಡಿ ಬಾಡಿ ಪುಳಿಚಿಟ್ಟೋಷ್ಠಂ ಕುರುಳ್ ಸೂಸುವೇಣಿ ಸಡಿಲ್ದೊಳ್ಪುಡೆ ಜೋಲ್ವ ಮೆಲ್ಲಿರ್ದೆಯಿಮಿಂತಾಗಲ್ಕೆ . . . ಅಬಲೆ ಮೆಯ್ಯಿಕ್ಕಿರ್ದಳಾ ಶಯ್ಯೆಯೊಳ್ (ಕುಸುಪಾ. ೦೩–೦೦೩); ಎಡುಗಾಯಿಯ್ದುಗ್ರಾತಪಜ್ವಾಳೆಗೆ ಮೀಗೆ ಪುಳಿಚೇಟಲ್ಕೆ ಬೆಂಬೆಂದು ಬಾಯಂ ಬಿಡುತುಂ ತೇಜಣ್ಪೆ ಜಿಹ್ವಾಲತೆಯುಟಲೆ ಪವಂಗುಂದುತುಂ . . . ಇರ್ದುವೆತ್ತಂ ಬಿಡದಡವಿಗಳೊಳ್ ಸ್ವೈರದಿಂ ಸೈರಿಭಂಗಳ್ (ಶಾಂತೀಕ್ಷ. ೧೨–೩೬); ಎಲೆಯಿಕ್ಕಿ ಪೆರ್ವರಂ ತಾಱದವಿಲ್ಲರಣ್ಯಮೃಗಯೂಥದ ಬೆನ್ ಪುಳಿಚಿರ್ದ [ಪಾಭೇ. ಫಳಿಲಿರ್ದ, ಪುಣಚಿರ್ದ, ಪುಣಲಿರ್ದ] ಬಾಯ್ಗಳಿವಾರ್ಱದವಿಲ್ಲ . . . ಅದೇಂ ಪ್ರಳಯಕಾಲವೊ ತೀವ್ರನಿದಾಘಕಾಲವೋ (ಸೂಕ್ತಿಸು. ೦೭–೦೦೦). **ಪುಣಿಚೇಟು:** ೩. (ಹಲ್ಲು) ಕಿಟ್ಟದಿಂದ ಕೂಡಿರು: ನೆಕ್ಕ ಕದಂಪು ಪತ್ತಿ ಪೆಡೆಗೊಂಡ ಕೊರಲ್ಪುಣಿಚಿರ್ದ ಕೀನಿವಲ್ ಪೊಕ್ಕಡಗಿರ್ದ ಕಣ್ಮರುಳಿಗೊಂಡರೆಬತ್ತಿದ ಬಾಯ್ . . . ಅಗುಮಿಸೆ ಬಂದನದೊರ್ವ ಪಾರ್ವಂ (ಲೀಲಾತ. ೬–೫೩). **ಪುಳಿಚೇಳ್ :** ೩. ನೊಳವೆಱಿವ ಕೊಳೆವಾಯ ಖಳರುಂ ಪುಳಿಚೆಳ್ದ ಕಿಣಿವಲ್ಲ ಷಂಡಾಷಾಢಮರುಂ (ಕೃತಶಿ. ೩೩-೩೩ ವ). **ಪುಳ್ಚೇಟು :** ೧. ಪೂಸೆಯುಂ ಕಾಯ್ದುರದೆಟ್ಟು ಚಂದನಾಲೇಪದ ತೆಗಳಿಕೆಗಳ್ ತಂಗದಿಪಾರ್ಱ ಪುಳ್ಚೆ[ಳ್ಚೆ]ರ್ದರದೋಷ್ಠಂ ಮುಚ್ಚಿದ ನಯನಯುಗಂ ಹೃತ್ತಟನ್ಯಸ್ತ ಹಸ್ತಾಂಬುರುಹ ವ್ಯಸ್ತಾಳಕಂಗಳ್ವೆರಸಲರ್ವಸೆಯೊಳ್ ಕಾಂತೆಯಿಂತಿರ್ದಳಾಗಳ್ (ಕುಸುಪಾ. ೦೩-೭೯).

[ಪುಳಿಚು (< ಪುಳಿಂಚು) + ಏಟು$_1$]

**ಪುಳಿಚೋರಯ್ಯ** (ನಾ). ಒಬ್ಬಾತನ ಹೆಸರು : ಪುಳಿಚೋರಯ್ಯಂ ಮಹಧ್ವಜದೋಜ × × ಮಣಿವಿತಾನದೋಜತೇಜಂ (ಎಇ. II, ೪೭೪-೧; ಸು. 1000).
[ ? + ಅಯ್ಯ$_{61}$ ]

**ಪುಳಿಚ್ಚುತ (?) ಬದನೆಗಾಯ್** (ನಾ). ಬದನೆಕಾಯಿಯಿಂದ ಮಾಡಿದ ಒಂದು ಬಗೆಯ ವ್ಯಂಜನಪದಾರ್ಥ : ಬದನೆಯೆಳಗಾಯ್ಗೆ ಕರಿಬೇವು ಹೊಸತುಪ್ಪಯಿನಿಸುದಕ ನೀರುಳ್ಳಿಯಿಟ್ಟುದಕವಿಂಗುವ ತೆಱದಿ ಹದನಾಗಿ ಯುಕ್ಕಱಿಸಿ . . . ತುಪ್ಪದೊಳೊಗ್ಗರಿಸಲ್ಕಂತದು ತಿಗುಳಿನೊಳು ಪುಳಿಚ್ಚುತ [ಪಾಭೇ. ಪುಳಿಚತ್ರ, ಪುಚ್ಚುತ್ರ] ಬದನೆಗಾಯೆಂದು ಪೆಸರನೊಲವಿಂ ಕರೆವುದು (ಸೂಶಾ. ೪-೦೩). ☞ 'ಪುಳಿಚ್ಚುತ' ಎನ್ನುವ ಶಬ್ದವು ತಮಿಳಿನ 'ಪುಳಿಚ್ಚಲ್=ಹುಳಿಯಾದುದು' ಎಂಬುದಕ್ಕೆ ಸಂಬಂಧಿಸಿರಬಹುದು.
[ ಪುಳಿಚ್ಚುತ$_0$ + ಬದನೆ + ಕಾಯ್$_4$]

**ಪುಳಿದೇಗು,** ಹುಳಿತೇಗು, ಹುಳಿದೇಗು (ನಾ). ಹೊಟ್ಟೆಯಲ್ಲಿ ಆಮ್ಲತೆ ಹೆಚ್ಚಾಗಿ ಬರುವ ತೇಗು ; ಅಜೀರ್ಣದ ತೇಗು : ನೆತ್ತರಂ ಕುಡಿದು . . . ನುಂಗಿ ಮಿದುಟಂ ತಣಿವಿಂ ಪುಳಿದೇಗುದೇಗುತ್ತುಮಿರ್ಪುವದಱೊಳ್ ರಜನೀಚರಕೋಟಿಗಳ್ (ಕಾವ್ಯಾವ. ೬೨೩). **ಹುಳಿತೇಗು :** ಹೊಟ್ಟೆಯಲ್ಲಿನ ಆಮ್ಲದ್ರವವು ಹೆಚ್ಚಾಗಿ ಹುಳಿತೇಗು ಬರುತ್ತಿದೆ (ಶುಶೋಷಂ. ೦೨೦) ; ಹುಡುಗರು ಇವಳನ್ನು ಹುಳಿ-ತೇಗಿನ ಲಕ್ಷ್ಮೀದೇವಮ್ಮನೆಂದು ಕರೆಯುತ್ತಾರೆ (ಸಂಪ್ಯಾರ. ೪೩). **ಹುಳಿದೇಗು :** ಶುಂಠಿ, ಭದ್ರಮುಸ್ತೆ, ಅತಿಬಜೆ, ಅಮೃತದ ಬಳ್ಳಿ ಇವಂ ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಆಮಗ್ರಹಿಣಿ, ಅಗ್ನಿಮಾಂದ್ಯ, ಹುಳಿದೇಗು ಮುಂತಾಗಿ ಗುಣವಕ್ಕುಂ (ಸಕವೈ. ೩೩೩). [ ಪುಳಿ$_3$ + ತೇಗು$_3$ ]

**ಪುಳಿದೊಡೆ** (ಕ್ರಿ). ಹುಳಿ ಹಚ್ಚು,–ಲೇಪಿಸು : ಚೆನ್ನಾಗಿ ಪುಳಿದೊಡೆದೊಪ್ಪವಿಕ್ಕಿದ ಚೊಕ್ಕಚಿನ್ನದ ಪ್ರತುಮೆಗಳಂತೆ ರನ್ನದ ಮುತ್ತ ಹಾರವನಿಟ್ಟು ಸುಗುಣಸಂಪನ್ನೆಯರಿರ್ದರಿಕ್ಕೆಲದಿ (ಮೋಹತ. ೦೬ ೩೬).
[ ಪುಳಿ$_3$ + ತೊಡೆ$_1$ ]

**ಪುಳಿದೊಳೆ** (ಕ್ರಿ). = ಪುಳಿಗರ್ಚು : ಮಳಯಜಗಂಧಿ ಮಜ್ಜನದ ಮಂದಿರದೊಳ್ ಪೊಸಪೊನ್ನ ಬೊಂಬೆಯಂ ಪುಳಿದೊಳೆದೊಪ್ಪವಿಟ್ಟ ತೆಱದಿಂ ತನುಕಾಂತಿ ದುಕೂಲದಿಂದಮುಚ್ಚಳಿಸೆ . . . ಬಂದೊಳಪುಗುವಂದು (ಶಾಕ್ಯಸಾ. ೩೪೪); ಪುಳಿದೊಳೆದೊಪ್ಪವನಿಕ್ಕಿದ ಹೊನ್ನ ಪುತ್ತಳಿಯಂತೆ ಮದವಕ್ಕಳೊಲಿದು ಗಲಿಲನೆ ಬಂದು ಶ್ರೀಕೃಷ್ಣದೇವರಾಯನ ಪಾದನಳಿನಕ್ಕೆ ಶಿರವ ಚಾಚಿದರು (ಮೋಹತ. ೪–೪೨).
[ ಪುಳಿ$_3$ + ತೊಳೆ$_1$ ]

**ಪುಳಿನ**'ಪುಲಿನ'ನೋ.

**ಪುಳಿನತಳ** (ನಾ). ಮರಳುದಿಣ್ಣೆ; ಪುಲಿನಸ್ಥಳ : ಉದ್ಯಾನದೊಳೊಂದು ದಿವಸಂ ತೊಟಲ್ದು ನೋಡುತ್ತುಂ ವೈಶ್ರವಣನಿಮಿತ್ತಮೊಂದು ಪುಳಿನತಳೋದ್ದೇಶದೊಳ್ ಕುಳ್ಳಿರೆ (ಶಾಂತಿಪು. ೭–೯ ವ); ಪುಳಿನತಳಂಗಳೊಳ್ ಸೆಳೆವ ನುಣ್ಮಳಲಂ ಜಳಶೀಕರಂಗಳಂ ತಳಿದು . . . ಪೂಗೊಳದೊಳಗಲ್ವ ಕೋಕವನಿತಾವ್ಯಥೆಗಿಂ ಶಿಶಿರೋಪಚಾರದೊಳ್ ಕೆಳದಿಯರಾದುವಾ ತಳರ್ವ ತಣ್ಣೆಲರಿಂ ತರಲೋರ್ಮಿಮಾಲೆಗಳ್ (ಅಪಂಪು. ೭–೩೦).
[<ಸಂ. ಪುಲಿನಸ್ಥಲ]

**ಪುಳಿನಸ್ಥಳ** (ನಾ). = ಪುಳಿನತಳ : ದೇವಾರಣ್ಯಂ ದೇವರ ದೇವನ

ಮಾಸಕಿಂಬನೀಯ ತನ್ನಂದನದೊಳ್ ದೇವರ್ ಸಿವಿಗೆಯನಾ ಪ್ರಸ್ತಾವನೆಯಂ ಕಟಿಪದಿಬಿಪೆ ಪುಳಿನಸ್ಥಳದೊಳ್ (ಶಾಂತಿ. ೬-೦೨೨); ಪುಳಿನಸ್ಥಳವಮಂ ಮಜಿಯಿಸಿ ತೊಳಗುವ ನಕ್ಷತ್ರಮಾಲೆಯಂತಿರೆ ಮಣಿಮೇಖಳೆ ಮದನ ಕುಂಭಿಕುಂಭಸ್ಥಳವಮಂ ನೆನೆಯಿಸುವುದಸಿಯುಳಲಘುನಿತಂಬಂ (ಜಗನ್ನಾ. ೩-೬೦). [ಸಂ. ಪುಲಿನಸ್ಥಲ]

**ಪುಳಿಬೋರೆ** (ನಾ). ಬೋರೆಯಲ್ಲಿ ಒಂದು ಬಗೆ; ಹುಳಿವಿಲಚಿ ಹಣ್ಣು ಮತ್ತು ಅದರ ಮರ: ಬೋರೆಯರಬೋರೆ **ಪುಳಿಬೋರೆ** ಸೀಬೋರೆಯಿಂ ರಾಯಬೋರೆಯು (ನವಮೋ. ೨೪-೫೦).
[ಪುಳಿ$_3$ + ಬೋರೆ$_2$]

**ಪುಳಿಮಾವು**, ಹುಳಿಮಾವು (ನಾ). ಮಾವಿನಲ್ಲಿ ಒಂದು ಬಗೆ; ಹುಳಿ ಮಾವಿನ ಹಣ್ಣು ಮತ್ತು ಅದರ ಮರ: ಮಾವು ಗೇವರ್ಮಾವು **ಪುಳಿ ಮಾವು** ಭಾವಿಸಲಡಿಕೆಮಾವು ಗಿಳಿಮಾವಿನ ಬೈತಲೆಮಾವು (ನವಮೋ. ೨೪-೪೯). **ಹುಳಿಮಾವು**: "ಆಮ್ಲಮಾಲುಕಃ — ಹುಳಿಮಾವು" (೬೩೦. ೮); ನನಗೆ ಹುಳಿಮಾವಿನ ಹಣ್ಣು ಅಂದರೆ ಇಷ್ಟ ಅಲ್ಲವೇ ? (ಮುಕುಮ. ೨೪).
[ಪುಳಿ$_3$ + ಮಾವು]

**ಪುಳಿಮೂಟೆ** (ನಾ). (ಆಲಂ) ಠೊಣಪನಾದ ವ್ಯಕ್ತಿ; ಧಡೂತಿ ಆಸಾಮಿ: ಅವಳೊಡನೆ ಪ್ರತಿನಿತ್ಯವೂ ಒಂದು ಗಂಟೆ ಮಾತನಾಡುವ ಭಾಗ್ಯ ಈ ಪುಳಿಮೂಟೆಗೆ ಸಿಕ್ಕಿದೆ (ಕೂನಕ್ಕ. ೦೬೩).
[ಪುಳಿ$_3$ + ಮೂಟೆ (< ಮೂಡೆ)]

**ಪುಳಿಮೊಸರ್**, ಹುಳಿಮೊಸರು (ನಾ). ಹುಳಿಯಾಗಿರುವ ಮೊಸರು: ಕಟ್ಟುಮೊಸರ್ ಸಜೀವ ಮೊಸರ್ ಘಟ್ಟಿಮೊಸರ್ ಕೆನೆಮೊಸರ್ ಕರಂ ತೊಳಿಮೊಸರಿಂ ಪಿಟ್ಟಮೊಸರ್ ಪುಳಿಮೊಸರೆಂದಿಟ್ಟರ್ ಬಟ್ಟಲ್ಗಳಿಂ ಸರೋಜಾನನೆಯರ್ (ನಳಕಂ. ೪೬೦). **ಹುಳಿಮೊಸರು**: ಎಳೆಯ ಬೆಳಸಿಯಿಂದ ನನ ಹೊಟ್ಟೆ ತುಂಬಿಲ್ಲ ಹುಳಿಮೊಸರು ಅನ್ನ ಉಣನೀಡು (ಸಿದ್ಧವು. ೩-೬೫).
[ಪುಳಿ$_3$ + ಮೊಸರ್]

**ಪುಳಿಯಣ್ಣ** (ನಾ). ಒಬ್ಬಾತನ ಹೆಸರು: ಪೊರವಕ್ಕನುಂ ಸೆವ್ವಕ್ಕನುಂ ಪಾಟಿಯಕ್ಕನ ಕೆಳದಿಯ ಪುಳಿಯಣ್ಣನೀ ಧರ್ಮಂ ನಡಯಿಸು × × × (ಎಕ. VIII, ಸಗರ. ೪೫-೦೩; ಸು. 950); **ಪುಳಿಯಣ್ಣ** (ಎಕ. II, ೪೩೬; 1000). 'ಪುಲಿಯಣ್ಣ' ಪರಾ. [ಪುಳಿ$_1$ + ಅಣ್ಣ$_1$]

**ಪುಳಿಯಣ್ಣನಂದಿ** (ನಾ). ಒಬ್ಬಾತನ ಹೆಸರು: ಐನೂವ್ವಾಟಾರಿಯ ಮಗಂ ಪುಳಿಯಣ್ಣನನ್ದಿಯ ಎಕಣದ ಬಾಗಿಯುಳಗನಾಗೆ × ಕ್ಕಟ್ಟು ಪಡೆದ ಸ್ಥಿತಿ (ಎಕ. X (s). ಶಕ್ಕಬಿ. ೨೬-೯; ೯ನೆಯ ಶತ).
[ಪುಳಿಯಣ್ಣ + ನಂದಿ]

**ಪುಳಿಯನ್ನ**, ಹುಳಿಯನ್ನ (ನಾ). ೧. ಹುಣಿಸೆಯ ಗೊಜ್ಜಿಗೆ ಸಂಬಾರ ಪದಾರ್ಥಗಳನ್ನು ಸೇರಿಸಿ ತಯಾರಿಸಿದ ಅನ್ನ; ಪುಳಿಯೋಗರೆ: ತಾನುಂಡು ಮಿಕ್ಕ ಪುಳಿಯನ್ನಗಳ ಸುಪವಿತ್ರದಂತೆಗಳ ಭಕ್ತರ್ಗೆ ಕೊಡಿಸುತಿರ್ಪನು ರಂಗಧಾಮನು (ಅಕ್ರೂರ. ೦-೦೨೬). **ಹುಳಿಯನ್ನ**: ೨. ಹುಣಿಸೆಯ ಗೊಜ್ಜಿಗೆ ಸಂಬಾರಪದಾರ್ಥಗಳನ್ನು ಬೆರಸಿ ತಯಾರಿಸುವ ಚಿತ್ರಾನ್ನದಂಥ ಅನ್ನ: ಮಧ್ಯಾಹ್ನ ಮಾಡಿಟ್ಟಿದ್ದ ಹುಳಿಯನ್ನವನ್ನೂ ಇನ್ನೊಂದು ತಟ್ಟೆಯಲ್ಲಿ ಮೊಸರನ್ನವನ್ನೂ ತಂದು . . . ಇಟ್ಟಳು (ಮನೋಸಂ. ೯೩). ೩. ಬೇಳೆ, ತರಕಾರಿಗಳನ್ನು ಹಾಕಿ ತಯಾರಿಸಿದ ಹುಳಿಯಲ್ಲಿ ಕಲಸಿದ ಅನ್ನ: ಹುಳಿಯನ್ನವನ್ನು ಉಣ್ಣುತ್ತ ಪಕ್ಕದ ಬ್ರಾಹ್ಮಣ ಹೇಳಿದ (ಸಂಸ್ಕಾರ. ೦೩೯).
[ಪುಳಿ$_3$ + ಅನ್ನ$_3$]

**ಪುಳಿಯಬ್ಬೆ** (ನಾ). ಒಬ್ಬಾಕೆಯ ಹೆಸರು: × × × ಪುಳಿಯಬ್ಬೆಗೆ × × × (ಸೌಇಇ. XX, ೦೫-೦೬; ೯೦೪). [ಪುಳಿ$_1$ + ಅಬ್ಬೆ$_1$]

**ಪುಳಿಯಳೆ**, ಪುಳ್ಳಳೆ (ನಾ). ಹುಳಿಯಾದ ಮಜ್ಜಿಗೆ: ಕಳಹಂಸನೆತ್ತ ಪುಳಿಯುಳಿಯೆತ್ತ ಬಿಸಿಲುಗ್ರಕಳಿಯೆತ್ತ ಜೊನ್ನವಕ್ಕಿಯದೆತ್ತ (ಸಂಅಮ. ೯-೬೬). **ಪುಳ್ಳಳೆ**: ಲವಣಂ ಪಿಪ್ಪಲಿ ಬಜೆ ಸಾಸಿವೆ ಬವ(ಬೋ)ನಂಗಾರೆ ಶುಂಠಿ ಪುಳ್ಳಳೆ ಕಟಿ (ತಿಲ)ತೈಲವೆನಿಪ್ಪವಜಿಂದು ನಸ್ಯವನಶ್ವಾವಗೆ ಮಾಡಿ (ಲೋಕೋಪ. ೯-೨೨೪); ಅಂತು ಪುಳ್ಳಳೆ ಪಾಲಂ ಕಿಡಿಸುವಂತುಗ್ರಸೇನನಂ ಕಿಡಿಸಿ . . . ಕಂಸಂ ವಸುದೇವನಂ ಬರಿಸಿ ಸಿಂಹಾಸನಾಲಂಕೃತನಂ ಮಾಡಿ (ಆರ್ಥಸಿ. ೬-೭೪ ಪ). [ಪುಳಿ$_3$ + ಅಳೆ$_2$]

**ಪುಳಿಯೋಗರೆ**, ಪುಳಿಯೋರೆ (ನಾ). = ಪುಳಿಯನ್ನ ೧: ಅವರ ಮಡಿ ಮತ್ತು ಆಚಾರಗಳಿಗೆ ನಾನೇಕೆ ಅಡ್ಡಿ ಬರಲಿ? ಪುಳಿಯೋಗರೆ ಕಟ್ಟಿಕೊಂಡು ಬಂದಿರಬಹುದು (ರಂಗಕ. ೮೬); **ಲಕ್ಷ್ಮಿ** ಮಾಡಿಟ್ಟ ಉಳುಂದೋಗರೆ, ಪುಳಿಯೋಗರೆಗಳನ್ನು ಸವಿದು ಪ್ರಭುಗಳು ಬೆಪ್ಪಾಗಿ ಹೋಗಿದ್ದರು (ಶಾಂತಲ. ೦೨೩). **ಪುಳಿಯೋರೆ**: ಪುಳಿಯೋರೆಯಿರದೆ ಮೊರೆಯುದ ಶಾತ್ತುಮೊರೆಗು ಕಣ್ಮುಚ್ಚಿ ಕೈಮುಗಿದು ಕೂಳ್ ಕಾಯ್ದು ನಿಮಗು ಮುಗಿಯದೇ ನಿಮ್ಮ ಮರೆಯೊಳು ಬಾಳ್ವ ನನಗು! (ಗಣೇಶ. ೬೦-೬); ಸರಸವ್ಮ ಮಾಡಿದ್ದ ಪುಳಿಯೋರೆಯು ಅಷ್ಟೇ ರುಚಿಯಾಗಿತ್ತು (ಕಂಸಂಹಂ. ೦೫೩). [ದೇ. ‖ ತಮಿ. ಪುಳಿಯೋಕರಮು, ಪುಳಿಯೋರೈ; ತೆಲು. ಪುಲಿ ಯೋಗಿರ, ಪುಲಿಯೋರ]

**ಪುಳಿಯೋರೆ** 'ಪುಳಿಯೋಗರೆ' ನೋ.

**ಪುಳಿಯ್ಯಮ್ಮ** (ನಾ). ಒಬ್ಬಾತನ ಹೆಸರು: ಶ್ರೀಮತ್ ಪೆಗ್ಗಡೆ ಪುಳಿಯ್ಯಮ್ಮ ತಾನಾಗುನಸ್ಥಾಕ್ಕಿರ್ಕಜಿಯಂ ಕಟ್ಟಿಸಿ (ಎಕ. VII, ಶಿಕಾರಿ. ೦೯೯-೦೦; ೯೩೬). [<ಪುಳಿ$_1$+ಅಮ್ಮ$_1$]

**ಪುಳಿಲ್** 'ಪುಟಿಲ್$_1$' ನೋ.

**ಪುಳಿಲು** 'ಪುಟಿಲ್$_2$' ನೋ.

**ಪುಳಿವಿ** (ಕ್ರಿ). ಹುಳಿಯನ್ನು ಹಿಂಡು, —ಬೆರಸು: ಕೆನೆವಾಲ ಕಡೆದು ನವನೀತವಂ ತೆಗೆದು ಬಾಯ್ಗಿನಿದಾಗಿ ಸವಿಯದದಜಿೋಳಗೆ **ಪುಳಿವಿ** [ಜಾತಾ.ದಿ]ದು ರಸವನೆ ಕಿಡಿಸಿದೊಡೆ ಕಜಿದ ಸುರಭಿಗವ್ಪುದೆ ಕೊಜಿಕೆ (ಕೃಪಾಪಾ. ೦-೬). [ಪುಳಿ$_3$+ಪಿಳಿ$_1$ (<ಪಿಟಿ)]

**ಪುಳಿವುಲ್** (ನಾ). ಒಂದು ಬಗೆಯ ಹುಲ್ಲು; ಮಜ್ಜಿಗೆಹುಲ್ಲು: ಪುಳಿವುಲ್ಕಜುಂಕೆ ಮೊಡೆಗುಜಳಿ ಕಣ್ಣಗೆ ಮಾರವಳ್ತಿ . . . ಬೆಳೆಥೊವ್ಪವ ಗಲಗುವೆಸರ ಪುಲ್ಲೆಸೆದಿರ್ಪಂ (ಕೃಷಿ. ೨೬-೨೦). [ಪುಳಿ$_3$ + ಪುಲ್]

**ಪುಳಿಸೆ**, ಪುಣಸೆ, ಪುಣಿಸೆ, ಪುಣುಸಿ, ಪುಣುಸೆ, ಪುಣ್ಸೆ, ಪುಳುಂಸೆ, ಹುಣಚಿ, ಹುಣಸಿ, ಹುಣಸೆ, ಹುಣೆಚಿ, ಹುಣೆಚೆ, ಹುಣೆಸೆ, ಹುಣುಸೆ, ಹುಳಿಸೆ (ನಾ). ೧. ಒಂದು ಬಗೆಯ ಮರ ಮತ್ತು (ಅಡಿಗೆಗೆ ಬಳಸುವ) ಅದರ ಹುಳಿಹಣ್ಣು; ತಿಂತ್ರಿಣಿ: ಸೂರಣದ ಗಡ್ಡೆಯಂ ಸೌವೀರದೆ ಮೇಣ್ ಕಲಸಿಕೊಂಡು ಪುಳಿಸೆಯ ಚಿಗುರಿಂ ನೀರೊಳ್ ಕುದಿಸಲ್ಕದು ಸಂಹಾರಿಕುಮಂತದಟ ವಿಷಮನಾ ಕ್ಷಣದಿಂದಂ (ಲೋಕೋಪ. ೬-೨೬). **ಪುಣಸೆ**: ೧. ಸಯ್ಯನೆ ಬನ್ದು ಪೊಲ ಪುಣಸೆ ಎಪ ಕೀಲೆ ಅನ್ತೆ ಪೋಯಿ ಏ ಬದಿರೂಗ್ಗೆಗೆಣ ಮುಕೊಡಲ್ (ಇಇ. XII, ೦೬-೦೯; 813); ಮಲಕಾಲದ ಪುಣಸೆಯ ವಣ್ಣ ಲೇಹ್ಯಮಂ ಮಾಡೆ (ಕಲ್ಯಾಣ. ೩-೫೦). **ಪುಣಿಸೆ**: ೧. ಮಲ್ಲದೇವನ್ ಕೊಟ್ಟ ಪ್ರಮ್ಮಧಯ ಬಾಣರಸನ್ ಇತ್ತ ಕಯಂ ಕೆಜಿಯುಂ ನಾಲ್ವತ್ತು ಪುಣಿಸೆ (ಸೌಇಇ. IX-1, ೦-೩; ೯ನೆಯ ಶತ ?); ಊರ ಮುಂದಿರ್ದ ಪುಣಿಸೆಯ ಮರದ ಪಿರಿದಪ್ಪ ಪೊಟರೆಯೊಳಡಂಗಿರ್ದಳ್ (ಹಂಸಕ. ೦೫೫-೬); ಪುಣಿಸೆಯುಪೂವೆಲ್ಲಂ ಕಾಯಪ್ಪವೇ ನೆಲನನಗುಟ್ಟಿದರೆಲ್ಲಂ ನಿಧಾನಮಂ ಕಾಣ್ಬರೇ ಕೈಕಾಲುಳ್ಳರೆಲ್ಲಂ ಚಕ್ರವರ್ತಿಗಳೇ (ವರ್ಧಮಾ. ೩-೨೩೯); ೨. ಇಂಥ ಮರಗಳು ಬೆಳೆದಿರುವ ಸ್ಥಳ,—ಜಾಗ: ದೇವರ ಕೆರೆಯ

**ಪುಣಸೆಯ** ಮಧ್ಯದಿ ಭೂಮಿಯುಂ ಮಾಱುಗೊಂಡ × × × ನೂಱುಪ್ಪರ್ತ್ತು ಮತ್ತ್ರಮದಱ ಹತ್ತಸಿನ ತನ್ನ ಬಳದೊಳಗೆ ಬಮ್ಮರ್ಯ್ಯಂ ವಿದ್ಯಾದಾನಕ್ಕೆ ಕೊಟ್ಟ ಮತ್ತರ್ಪ್ಪರ್ನ್ನೆರಡು (ಸೌಇಇ. IX-i, ೧೦೯-೦೬; 1046). **ಪುಣುಸಿ :** ೨. ಪುಣುಸಿಗೆ [ತೆಙ್ಕ]ಣ ಪಳ್ಳಂ ಸೊಗಿಲ್ಲಪಳ್ಳವೆ ಗುಡ್ಡೆ (ಸೌಇಇ. XI-i, ೯-೩೯; 862). **ಪುಣುಸೆ :** ೧. ಹಡುವ ಲಾಲದ ಮರಂ ಮೇರೆ ಬಡಗಲು ಪುಣುಸೆಯ ಮರಂ ಮೇರೆ (ಸೌಇಇ. XI-ii, ೦೨೬-೨೦; 1082). ೨. ತೇನನಾವ್ಡಕಕೂಳ್ತಾಲೆಯುಳ್ ಕುಡಿತ್ತು ಎರಟ್ಟಿಪುಣುಸೆವಿ ಮೂಡಾಯ್ಕೋಡಿ ನೀರಿೞಿವೆ ತಾೞ್ವಿ (ಎಕ. XVI, ಗುಬ್ಬಿ. ೭೩-೩೨; 733); ಚಾಲದಿನ್ದೆ ಬೆಳೆದ ನೆಪಿ ಪುಣುಸೆಯಿನ್ದೆ ಸಕ್ಕಿ ಕುಣ್ಟೆಯಿನ್ದೆ (ವ್ಯಾಅಂ. ೧೯೦೯, ೧೩-೬೯; 806): ಊರಿಂ ಮೂಡ ಲಡ್ಡಮಟ್ಟದ ಮೂಡಣ ಮೊನೆಯ ಪುಣುಸೆಯ ಕುಪ್ಪೆ (ಸೌಇಇ. XI-i, ೮೦೬-೨೩; 1075). **ಪುಣ್ಸೆ:** ೧. ಭತ್ತ ಭ ೧ಕ್ಕಂ ಹೆಜ್ಜುರ್ಕಂ ಪುಣ್ಸೆ . . . ಮೆಣಸಿನ ಭಾರಕ್ಕ ಗ ೧ ಅಡಿಕೆಯ ಹೇಱು ಹತ್ತಕ್ಕಂ × × × (ಸೌಇಇ. IX-ii, ೯೦೦-೦೭; 1366). **ಪುಳುಂಸೆ :** ೩. ಒಂದು ಊರಿನ ಹೆಸರು (?) : ದೋಣೆಯ ಅಟಿ ಅಲುಕುರಕೆಱಿ ಕುಸುಗಕೆಱಿಯ ಪುಳುಂಸೆ ಅಳರಿ ಅತ್ತಿನೆಲ್ವಾಗಿಲ್ಕೈಱಿಯು (ಇಆ. XIV, ೨೩೩-೭೦; ಕು. 9ನೆಯ ಶತ). **ಹುಣಚಿ :** ೧. ಬಸರಿ, ಹುಣಚಿ, ಅರಳೆ, ಅಲ, ನೇರಲ (ಕಭಾಗ. ೩೩); ಹಲಸು, ಹುಣಚಿ, ಬದಾಮು ಮುಂತಾದ ಫಲವೃಕ್ಷಗಳು (ಮುಂಬಯಿ. ೬-೨೭೭). **ಹುಣಸಿ :** ೧. ಹೂತದ ಹುಣಸಿಯಾ ಚಿಗುರು (ಸಱಗೀ. ೮೨-೦). **ಹುಣಸೆ :** ೧. "ಆಮ್ಲಿ-ಹುಣಸೆ" (ಓಕು. ೧೦); ಅತ್ತಿಯ ಹಣ್ಣು ಹುಣಸೆಯ ಹಣ್ಣು ಜೇನೆಯ ಹಣ್ಣುಱುಪ್ಪೆಯ ಹಣ್ಣದಱ ಹೂ ಮಧುರ ಮಧುವುಂಟು (ಬಸಕೃ. ೦೮-೨೭); ಹುಣಸೆ- ಈ ಹಣ್ಣು ಸುಣ್ಣ ಸಹ ಕಲಸಿ ಮೆಲ್ಲಲು ಕೆಮ್ಮು ಗುಣ (ಬಿಕ್ಕಿಬಿ. ೬); ಹುಣಸೆ ಮುಪ್ಪಾದರೆ ಹುಳಿ ಮುಪ್ಪೇ? (ಗಾದೆ). **ಹುಣೆಚಿ :** ೧. ಹುಣೆ[ಪಾಠಾಂ. ಣ]ಚಿಯ ಮರದ ಲ್ಲೊಂದು ಹಣೆ[ಪಾಠಾಂ. ಣ]ಚಿಯ ಬೆರಳಿಟ್ಟು ಹೋದಲ್ಲಿ ಆ ಹುಣಚಿಯ ಮರ ಹಣಚಿಯ ಮರವಾಗಿ ತಾ ಕಣಚಿ ಹೋದುದ ಕಂಡೆ (ಸಿದ್ಧವ. ೯. ೨೩೩-೭೭೨). **ಹುಣೆಚಿ :** ೧. ಸಕ್ಕರೆಯು ಸೀ, ಬೇವು ಕಹಿ, ಹುಣೆಚಿ ಹುಳಿ (ಬಸುಂಕ. ೩೨೩). **ಹುಣೆಸೆ :** ೧. "ಹುಣೆಸೆ ತಿಂತ್ರಿಣೀ ಚುಂಚಾಹ್ವಂ" (ವಸ್ತುಕೋ. ೩೫-೦೭); ವಿನಾಸಂ ಬಾರ್ತೆಗಲ್ಲದೆನಿಪರಳಿಗೊಲ್ದು ಪೊಡೆ ಪಡುವ ನರಂ ಚಿಗುರಿಂ ಪೂವಿಂ ಕಾಯಿಂ ಸೊಗಯಿಪ ಮಾವಿಂಗೆ ಹು[ಪಾಠಾಂ. ಪು]ಣಸೆಗೆಱಗಲ್ವೇಡಾ (ಸಮಹ. ೯-೩೭); ಹುಣೆಸೆಯ ಕಾಯುಂ ತಿಂದರಂತೆ ಚಳಿತು ಪಣ್ತ ಕಬ್ಬಿನಂತೆ ನೆಲನಂ ಪತ್ತಿ (ಧರ್ಮಾಮ್ಮ. ೦ ೦೭೮); ನಾರು ಬಲಿಯುವ ಹುಣೆಸೆ ಕಾಯ ಮಾವಿನ ಕಾಯನಾರೈದು ಕತ್ತಿ ಕಿಱಿದಾಗಿ ಹೋಳಿಸಿ ಸುಣ್ಣನೀರಿಂದೆ ಹುಳಿಯ ತೆಗೆದಟ್ಟ ಪಾಯಸಪಾಪಱ ಹೆಸರ ಪಾಯಸವಾದುದು (ಸೂಶಶಾ. ೩-೦೦). ೨. ಸಿವಮ್ಮೆಯನಾಯಕನು ದೇವರ ನಿವೇದ್ಯಕ್ಕೆ ಕಟ್ಟೆಯಿಂದೊಳಗೆ ಹುಣೆಸೆಯ ಗದ್ದೆ ಕಂಬ ಏಳುನೂಱ ಹದಿನಾಕುಮಂ ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಸೌಇಇ. IX-i, ೨೩೯-೭೦; 1148). **ಹುಣುಸೆ:** ೧. ಹುಣುಸೆ ಮುಪ್ಪಡಸಿದಡೆ ಹುಳಿ ತಗ್ಗದು (ಶರಶು. ೯-೯). **ಹುಳಿಸೆ :** ೧. "ತಿಂತ್ರಿಣೀ-ಹುಳಿಸೆ" (ಕಾಕ್ಕ. ೨೩೩); ಫಲದಿ ಪುಷ್ಪದಿ ತೆನೆಗಳಿಂದವೆ ತಳಿರ ತೋರಣದಂತೆ ಮೆಱೆದಿಹ ಹುಳಿಸೆಗಳ ತನಿವಣ್ಣು ತುಂಬಿದ ಮರನ ಕಪಿ ಮುಱಿದ (ಕೌಕಿರಾ. ೦೦-೦೬).

**ಪುಣುಸೆಯ ಗಂಗ** = ಒಬ್ಬಾತನ ಹೆಸರು : ಶ್ರೀ ಪುಣುಸೆಯ ಗಂಗ ಪ್ರಥಮನಾಮಧೇಯಃ ಕಲಿಯುಗಭೀಮಾಪರನಾಮಾ (ಮ್ಯಾಆ. ೦೯೨೦, ೦೦-೦೦೨; 967). 'ಪುೞಿಯ ಗಂಗ' ಪರಾ.

[< ಪುಳಿ₃ / ತುಳು. ಪುಣಿಕೆ]

**ಪುಳಿಹೀರೆ, ಹುಳಿಹೀರೆ** (ನಾ). ಒಂದು ಬಗೆಯ ಹೀರೆಕಾಯಿ ಮತ್ತು ಅದರ ಬಳ್ಳಿ : ಬೇರೂಱಿದರ್ ಪುಳಿಹೀರೆಯುಂ ನಯದೊಳಂ ತಂದಿರ್ದದಂ ಪತ್ರಮಿಂ ಪೇೞಲ್ಕಾವಿಕಗವ್ಯಮಾಹಿಷಮೆನಿಪ್ಪೀ ಕ್ಷೀರದಿಂದಟ್ಟು ಮೆಯ್ದೋಱಲ್ ತದ್ವಿಷಹಂ ಜಲಾಂಜನಲಸನ್ನಸ್ಯಪ್ರಯೋಗು ಹಿತಂ (ಖವೈದ. ೬-೦೦). **ಹುಳಿಹೀರೆ :** "ಕಂಪಿಲ್ಲಃ, ಕಂಪಿಲ್ಲಕಃ-ಅರಗು, ಹುಳಿಹೀರೆ" (ಓಕು. ೨೦).

[ಪುಳಿ₃ + ಹೀರೆ₁ (< ಪೀರೆ)]

**ಪುಳು** 'ಪುೞು' ನೋ.

**ಪುಳುಂಗಾಱ** (ನಾ). ಬಲೆಯನ್ನು ಬೀಸಿ ಹಕ್ಕಿಗಳನ್ನು ಹಿಡಿಯುವವನು: ಚಂಪಾನಗರದೊಳೊರ್ವ ಪುಳುಂ[ಪಾಠಾಂ. ಪೋಡುಂ]ಗಾಱಂ ಗರುಡವೇಗನೆಂಬೊಂ . . . ಕೊರಸು ಮೊದಲಾಗೊಡೆಯ ಪಕ್ಷಿಜಾತಿಗಳಂ ಬಲೆಯನೊಡ್ಡಿ ಪಿಡಿದು (ವಡ್ಡಾರಾ. ೦೩೦-೨೨).

[ಪುಳು₂ (ಪ ← ತಮಿ. ಮಲ. ಪುಳ್=ಪಕ್ಷಿ) + -ಕಾಱ]

**ಪುಳುಂಬು, ಪುಣಂಬು, ಪುಣುಂಬು, ಪುಣುಬು, ಪುಣ್ಬು, ಪುಳಂಬು, ಹುಣುಬು** (ನಾ). ೧. ಬಾಣ; ಅಂಬು; ಶರ : ಪೊಸನನೆಯ ಪುಳುಂಬಂ ಪೊಸೆದು ಸಲಿಸಿ . . . ಪೂಲಗೆಟ್ಟ ಕಾಮ-ದೇವನಂತೆ ವಸುದೇವನಾ ವನದೊಳಗೆ ವರ್ಪಾಗಳ್ (ಅರ್ಹನೇ. ೩-೩೩ ವ); ಅಡಿಯಲ್ಲಿ ಸಿಲ್ಕಿದ ಮುಳ್ಗಳಂ ನಿಲ್ಲದೊತ್ತಿ ಪುಳುಂಬಿನಿಂ ಕಳೆಯುತ್ತೆ . . . ಅರಣ್ಯ ಸಂಚರನೊಪ್ಪಿದಂ (ಉದ್ಭಟ. ೪-೧೨೦); ಮನ್ಮಥನೆಚ್ಚ ಪೂವಿನ ಪುಳುಂಬಿನೊಂದು ಪುಲ್ಗೊಂಡು ದೂಱುವ ಪೆಣ್ಬುಯ್ಯಲೆ ಪುಯಿಲಲ್ಲದಱಿಯೆಂ ಪುತ್ತಾವ ಬಯ್ಪ [ಬಲ್ಪ] ಯ್ಯಲಂ (ಧರ್ಮಪಾ. ೩-೨೧). ೨. (?) : ಕಂಬಿಯ ಬಿಲ್ಲುಂ ಪಿಡಿದ ಪುಳುಂಬಿನ ಮೂಱಂಬು ಪೆಗಲ ಬಲೆ . . . ತನಗಿರೆ ಶಂಬರರಿಪುವಂದು ಕೂಡೆ ವನಚರನಾದಂ (ಪೇಮಪು. ೭-೦೭೩); ಕುಟ್ಮಳಿತಚಂಪಕನಿಕಾಯಮಂ ಕಾಮನಿಸುವ ಕಾಯ್ದು ಪುಳುಂಬಿನಂಬುಗಳ [ಪಾಠಾಂ. ಪುಣುಂಬುಗಳ] ಪೊಡರ್ಕೆಯೆಂದು ಪೆಡಂಮೆಟ್ಟುತುಂ (ಕುಸುಮಾ. ೦೨-೦೩೮ ವ; ಶಾಂತೀಶ್ವ. ೦೦-೭೩ ವ ನೋ). **ಪುಣಂಬು:** ೧. "ಕಣೆ ಕೋಲ್ ಪುಣಂಬು ಸರಲೆನಲಂಬು" (ಶಬ್ದಮ. ೪೪). **ಪುಣುಂಬು:** ೧. "ಪುಣುಂಬು, ಸರಲ್, ಕಣೆ, ಕೋಲ್ – ಈ ೪ ಅಂಬಿಗೆ ಪೆಸರ್" (ಕಶಸಾ. ೩೨-೦೦೯); ಕಾಯ್ದು ಪುಣುಂಬುಗಳಂ ಕುಸುಮಾಸ್ತ್ರನಿಸುತಮಿರ್ದಪಂ (ಕಾದಂಪೂ. ೯೩೭); ವಿರಹಿಗಳಂ ತಾಗಿ ಥಟ್ಟುರ್ಚಿ ಮತ್ತಂ ಬೆನ್ನೊಳ್ ತದ್ರಕ್ತದಿಂ ತೊಯ್ದುಗಿದಲರ ಪುಣುಂಬು ರತಿಪ್ರಾರ್ಥಿಯಿಂದಂ ಚೆನ್ನಪ್ಪಂತ್ಯೆದೆ ತಾಂ ಕ್ಷಾಳಿಸುವ ವೊಲೆಳೆವೆಣ್ಣೊರ್ವಳಂದೊಲ್ದು ಪೊಯ್ದಳ್ ಬೆನ್ನೀರಂ (ಉದ್ಭಟ. ೬-೨೦); ಈ ಪುಣುಂಬರಿಯದಿರ್ದೊಡೆ ನಿನ್ನ ಶಿರಮಂ . . . ಕಾಪುರುಷನಘಮೆನ್ನೆ ನಂಟುವ್ವುದು (ಕೀಷರಾ. ೦೦-೩೯). **ಪುಣುಬು :** ೧. "ಪುಣುಬು ಕಣೆಯಂಬು ಸರಲ್ ತಾಮಕ್ಕು ಶರಸಮಾಹ್ವಯಂ" (ಕವಿಕಂ. ೮೨). **ಪುಣ್ಬು:** ೧. "ಕೋಲುಂ ಸರಲ್ ಪು[ಪಾಠಾಂ. ಪೂ]ಣ್ಬು ಮೇಣ್ ಕಣೆಯೆನಲ್ಕಂಬಕ್ಕು" (ಕಬ್ಬಿಕ್ಕ. ೩೯). **ಪುಳಂಬು :** ೧. ಪರಿಸಬೋಳೆಯ . . . ಸುಸಂಪಗೆಯ ಮುಗುಳಂಬು ದೊರೆವಡೆದ ಕಣಗಿಲ ಪುಳಂ[ಪಾಠಾಂ. ಳುಂ]ಬವು ತರದಿವಿದಿರೆಲೆಸರವಿ ಮಂತಿಳ್ತಿರಿಸಿದಾ ಬತ್ತಳಿಕೆಗಳು ನೆರೆದಿರ್ದವವರಲ್ಲಿ (ಸಾಳ್ವಭಾ. ೩-೧೯). **ಹುಣುಬು :** ೧. ಕೋಸಲಧರಿತ್ರೀಪಾಲಸುತ ಸುರವಂಶಕುಲ ಹೃತ್ಶೂಲ ನೆದೆಯಲಿ ಹುಣುಬುದೋಱಿತು ಹಗೆಯ ಹಮ್ಮುಗೆಯ (ತೊರರಾ. ೬-೨-೦).

[?]

**ಪುಳುಂಸೆ** 'ಪುಳಿಸೆ' ನೋ.

**ಪುಳುಕೊಂಡ** 'ಪುಳುಗೊಂಡ' ನೋ.

**ಪುಳುಗು** 'ಪುಣುಗು' ನೋ.

**ಪುಳುಗುಂಡ** (ನಾ). ಹುಳುಗಳಂ ತುಂಬಿದ ಗುಣಿ,—ಹೊಂಡ; ಒಂದು ನರಕ : ಲಿಂಗಜಂಗಮಕ್ಕೆ ನೀಡದೆ ಜಂಗಮಲಿಂಗಕ್ಕೆ ಕೊಡದೆ ತಾನೆ ಕೊಂಡಡೆ ಪುಳುಗುಂಡದೊಳಗಿಕ್ಕುವನು ಕೂಡಲ ಚೆನ್ನಸಂಗಮದೇವ

(ಕನ್ನವ. ೦೩-೪); ಪುಳುಗುಂಡದೊಳು ಹಾಕಿದರು ತನ್ನಯ ಗೆಳೆಯನ ಬಿಟ್ಟು ಪೋದವನ (ಪನ್ನಗಾ. ೨-೪೦). [ಪುಳು (<ಪುೞು)+ಕುಂಡ$_1$]

**ಪುಳುಗುಗಾಪು** 'ಪುಣುಗುಕಾಪು' ನೋ.

**ಪುಳುಗೊಂಡ,** ಪುಳುಕೊಂಡ, ಪುಳ್ಕೊಂಡ, ಹುಳುಗೊಂಡ (ನಾ). = ಪುಳುಗುಂಡ : ಯೀ ಸ್ಥಾನದಲು ಮಾನ್ಯವಾಗಿ ಊರುಗಳಂ ಭೂಮಿಗಳಂ ಧನಂಗಳಂ ಈ ಲಿಂಗಕ್ಕೆ ಹಸ್ತೋದಕವಂ ಮಾಡಿ ಕೊಟ್ಟುದುವಂ ಮನಂ ಪೇಸದೆ ಕಳೆದುಕೊಂ[ಡಪೆ]ನೆಂಬಾತನ ಆತನ ಮಾತಾಪಿತೃಗಳೆಲ್ಲ ಯಿಪ್ಪತ್ತೇಳುಕೋಟಿವರ್ಷಂಬರಂ ಪುಳುಗೊಂಡದ ನರಕದೊಳಗಿಕ್ಕಿ ನೀನಾ ಹುತಿಗೊಂಡಿರು ಕಂಡಾಯೆಲೆ ಪಾಪವೇ (ಸೌಇಇ. XX, ೦೭೭-೦೨; 1190) ; ಚಿತ್ರತರನರಕದೊಳಗಾಳುತೇಳುವ ಪ್ರಾಣಿಮಾತ್ರವುಮಂ ತೆಗೆದು ಪುಳುಗೊಂಡ ಮಂ ತೊಳೆವುದಕೆ ನೇತ್ರತ್ರಯಂಗೆ ಸಾವಿರ ಸೊಲಿಗೆ ತುಪ್ಪದಿಂ ಸ್ನಾನವಂ ಮಾಡಿಸಿದಪಂ (ಸಿದ್ಧರಾ. ೬-೫೭) ; ಆ ಯಮನ ಪಟ್ಟಣದೆ ಪುಳುಗೊಂಡವಾದಿ ಯುಗಣಿತಕೋಟಿಯವಟಿಗೊಳಗೆ ತಿಳಿಯಲಿಪ್ಪತ್ತೆಂಟುಕೋಟಿನಾಯಕನರಕಂ (ಶಬಕ. ೨೦-೧೦) ; ವಂಚಕನಂ ಸುಡಿದು ಹುಸಿವನಂ ... ಪುಳುಗೊಂಡದ ಸಂಚದಲಿರಿಸುವನು ಕಾಲನೇಳದ ತೆರದಿಂ (ಶೀಚಿಶಾ. ೪೪೪). **ಪುಳುಕೊಂಡ :** ಉಜಿದ ನಿಜದಂಮ್ಮಮಂ ಮೋಣ ಕಜುಪಿಂದ ಪೆಜರ ದಮ್ಮಮಂ ಮೋಣಳಿವಂ ತೆಜಿಗೊಳುವಂ ಪುಳುಕೊಂಣ್ಡದೊಳಜುವತ್ತುಸಹಸ್ರಮುದು ಭವಿಸಿತು (ಎಕ. VI, ತರೀಕೆ. ೬೨-೨೭ ; 1104 ?). **ಪುಳ್ಕೊಂಡ :** ನಿಜ ಧರ್ಮ್ಮವಮಂ ಮೇಣ್ ಕಜುಪಿನ್ದಂ ಪೆಜರ ಧರ್ಮ್ಮಮಂ ಮೇಣಳಿವಂ ಕೆಜಿ ಗೊಳ್ವಂ ಪುಳ್ಕೊಂಡದೊಳಜುವತ್ತುಸಹಸ್ರವರ್ಷವಾಳುತವಿಕ್ಕುಂ (ಎಕ. VI, ಕಡೂರು. ೦೫೭-೭೯ ; 1191). **ಹುಳುಗೊಂಡ :** ಭವಿಯ ಮನೆಯ ಅನ್ನ ಸವಿಯಾಯಿತ್ತೆಂದು ಉಂಡ ಭಕ್ತಂಗೆ ಅಘೋರನರಕ ತಪ್ಪದು ಆಗಳಂತೆ ಆ ಭವಿಗೆ ಮಾಡಿದ ಹುಳುಗೊಂಡವು ಆ ಭಕ್ತಂಗಪ್ಪುದು ತಪ್ಪದು (ದೇದಾವ. ೩೩-೦೦೪) ; ಉದ್ದಂಡತನದಲ್ಲಿ ನಡೆವ ಭಂಡರು ಹುಳುಗೊಂಡದಲ್ಲಿಕ್ಕುವ ಸೊಡ್ಡಳದೇವ (ಸಕಪ. ೦೭೯-೭೯೩). [ಪುಳು (<ಪುೞು)+ಕೊಂಡ$_2$]

**ಪುಳುಮಗೆ** 'ಪುೞುವಗೆ' ನೋ.

**ಪುಳುವಚ್ಚೆ** 'ಪುೞುವಚ್ಚೆ' ನೋ.

**ಪುಳ್ಕೊಂಡ** 'ಪುಳುಗೊಂಡ' ನೋ.

**ಪುಳ್ಕೊಟ್ಟೆ** (ನಾ). ಹುಣಿಸೆಬೀಜ : ಬಾಯೊಳಗೆ ಪುಳ್ಕೊಟ್ಟೆ ಹಾಕಿ ಕೊಂಡಿದ್ದಿಯಾ ಏನು ? ಹೇಳು (ಬಾಳಿಗಿ. ೦೦೩).

[ದೇ.॥ ತಮಿ. ಪುಳಿಕ್ಕೊಟ್ಟೈ = ಕೊಗಟೆ ಮತ್ತು ಬೀಜಗಳನ್ನು ತೆಗೆದು ಮುದ್ದೆ ಮಾಡಿದ ಹುಣಿಸೆಹಣ್ಣು ; ತುಳು. ಪುಣಿಕೊಟ್ಟೆ, ಪುರ್ಕೊಟ್ಟೆ, ಪುಳ್ಕೊಟ್ಟೆ]

**ಪುಳ್ಗಿ** 'ಪುೞ್ಗಿ' ನೋ.

**ಪುಳ್ಗಿಗ** (ನಾ). (?) : ಬಗೆಯದೆ ಪೆಜುವಟಿಮಾರ್ದಂ ಸುಗಂಧಿ ಕಲ್ಲುಪ್ಪು ಪುಳ್ಗಿಗಂ ಪುಳ್ಳಕೆ [ಪಾಠಾಂ.ಪುಗ್ಗಿಗಂ ಪುಳಕೆ] ಜೀರಗೆಯೆಂಬಿನಿತುಮಂ ಪೂಸುಗೆ ಕಜುಪಂ ನಕ್ಕಲೊಡನೆ ಪಸು ಕಜುಗೊಳ್ಗುಂ (ಲೋಕೋಪ. ೪-೦೯೩).

[?]

**ಪುಳ್ಗಿಯೋಗರ** (ನಾ). ಹುಗ್ಗಿಯ ಅನ್ನ ; ಹುಗ್ಗಿ ; ಪೊಂಗಲು : ಓಗರದ ಪುಳ್ಗಿ[ಪಾಠಾಂ. ಪುಲ್ಗಿ, ಹುಳಿ]ಯೋಗರದ ಪಲತೆಜದ ಪಾಲೋಗರದ ಕಟ್ಟೋಗರದ ಸೊಗಸುವಡೆದ ನೀರೋಗರದ ಮಿಸುಗುವಂಬಲಿಯ ವಿಧಮಂ ಮಧೂಜನವಜುವ ತೆಜದಿನೊರೆವೆಂ (ಸೂಶಕಾ. ೩ ಸೂಶಕ).

[ಪುಳ್ಗಿ (<ಪುೞ್ಗಿ)+ಓಗರ]

**ಪುಳ್ಗೆ** 'ಪುೞ್ಗೆ' ನೋ.

**ಪುಳ್ಚಾರು** 'ಪುಳಚಾಱು' ನೋ.

**ಪುಳ್ಚೇಱು** 'ಪುಳಚೇಱು' ನೋ.

**ಪುಳ್ಳಂಗಾಯಿಉಂಡೆ** (ನಾ). ಹೆಸರುಹಿಟ್ಟಿನೊಡನೆ ಬೆಲ್ಲ ಮುಂತಾದು ವನ್ನು ಸೇರಿಸಿ ಮಾಡುವ ಒಂದು ಬಗೆಯ ಉಂಡೆ : ಎದುರಿಗೆ ತಟ್ಟೆಯಲ್ಲಿ ಗರಿಗರಿಯ ಚಕ್ಕುಲಿ, ಖಾರವಾದ ತೇಂಗೊಳಲು, ಎರಡು ಪುಳ್ಳಂಗಾಯಿಉಂಡೆ ಹದವಾಗಿ ಹೊಳೆಯುತ್ತಿದ್ದುವು (ಸ್ವಪ್ನಶಿ. ೦೦೯). 'ಪುರಿವಿಳಂಗಾಯಿ' ಪರಾ. [ಪುಳ್ಳಂಗಾಯಿ$_0$ + ಉಂಡೆ]

**ಪುಳ್ಳಂಪುರಚಿ** 'ಪುಳ್ಳಂಪುಣಿಸೆ' ನೋ.

**ಪುಳ್ಳಂಪುರಿಚಿ** 'ಪುಳ್ಳಂಪುಣಿಸೆ' ನೋ.

**ಪುಳ್ಳಗತಿ** (ನಾ). (?) : ಪುಳ್ಳಗತಿಯ ಹೇಳಿ ನೀಚಜಾತಿಗಳನು ಒಳ್ಳಿವರೆನಿಸಿ ಲೋಕದೊಳು (ಬಿಜ್ಜರಾ. ೯-೭೩). [ ? ]

**ಪುಳ್ಳಪುರಸಿ** 'ಪುಳ್ಳಂಪುಣಿಸೆ' ನೋ.

**ಪುಳ್ಳಳೆ** 'ಪುಳಿಯಳೆ' ನೋ.

**ಪುಳ್ಳಿ,** ಪುಳ್ಳೆ, ಹುಳ್ಳಿ, ಹುಳ್ಳೆ (ನಾ). ೧. ಮರದಿಂದ ಉದುರಿದ ಚಿಕ್ಕ ಚಿಕ್ಕ ಒಣ ಕಡ್ಡಿ ; ಚುರು ಪಾರು ಸೌದೆ ; ಪುಡಿಸೌದೆ : ಧರ್ಮಬುದ್ಧಿ ಪುಲ್ಲಂ ಪುಳ್ಳಿಯಂ ತರಿಸಿಯಾ ಪೊಟಲೊಳಗಡಸಿ ತುಂಬಿ ... ಕಿಚ್ಚನಿಕ್ಕಲೊಡಂ (ಪಂಚತಂ. ೦೭೭-೦೭). ೨. ಸೌದೆ ; ಕಟ್ಟಿಗೆ ; ಉರುವಲು : ಕಾಷ್ಠಕೂಟ ನೆಂಬ ಬೆಸದವಂ ಪುಳ್ಳಿಯ ಪೊಜೆಯಂ ಪೊತ್ತು ಪೊಟಲ್ಗೆ ವರ್ಪೊನಂ ಕಂಡು (ವಡ್ಡಾರಾ. ೭೭-೨೩): ನೆತ್ತಿ ತಟಂಟಾಗೆ ಪುಳ್ಳಿಯನಡಕುವ ಬಡವರ್ಗಂ ಬಟ್ಟೆಗಟ್ಟಿ ಬಡಿವ ಬೇಡರ್ಗಂ ಸಿರಿಯೇಕಾಗದು (ಧರ್ಮಾಮೃ. ೭-೦೩೭); ಪುಳ್ಳೆಗಳ ತಂದದನು ಮಾಡುವ ಗಳ್ಳಗತಕವ ಬಲ್ಲೆಯಲ್ಲದೆ ಬಿಲ್ಲುವಿದ್ಯ ವಿದೇಕೆ ನಿನಗೆ (ಜೈಮಿನಿ. ೦೩-೯೭). 'ಪುಳ್ಳೆಗಡಿ' ಪರಾ. ೩. (ಆಲಂ) ಕ್ಷುದ್ರ ವಾದುದು ; ಹೀನವಾದುದು ; ಕ್ಷುಲ್ಲಕವಾದುದು : 'ಪುಳ್ಳಿವೇಡ' ಪರಾ. **ಪುಳ್ಳೆ :** ೧. ಮೂಡಣ ಗೋಪುರವಂ ಪೊಕ್ಕು ಪುಲ್ಲು ಪುಳ್ಳೆಯ ಹೊರೆಗಳನ್ನಿಳುಹಿ (ಧರ್ಮಾಮೃ. ೨-೩೦). ೨. ಪಾತಕಜೀವಂಗಳ್ ಎಳ್ಳಿನಂತೆ ಗಾಣಕ್ಕೆ ವಂದು ಕಳ್ಳರಂತೆ ಶೂಲಕ್ಕೆ ವಂದು ಪುಳ್ಳೆಯಂತೆ ಕಿಚ್ಚಿಂಗೆ ವಂದು . . . ಕಿಚ್ಚಿನೆ ಕಿರಿವುವು (ಧರ್ಮಾಮೃ. ೩-೭೭). **ಹುಳ್ಳಿ :** ೧. ಉದಯಕಾಲ ದೊಳೆದ್ದು ಹುಲುಹುಳ್ಳಿಗೆಂದರಣ್ಯಕ್ಕೆ ನಡೆದು (ಹಕಕಾ. ೦೨-೭). ೨. ಕಲ್ಲಿ ನೊಳಗಣ ದಳ್ಳುರಿಯು ಹುಳ್ಳಿಯ ಕಿಚ್ಚಿನಂತೆ ಅಲ್ಲಿಯೇ ಉರಿಯ ಬಲ್ಲುದೆ (ಪೋಕಪಾ. ೦೬೩-೬೯೦); ಹುಳ್ಳಿಯ ಹೊಜೆಯಂ ಹಲವಂ ತಂದು ಬಳಸಿ ನೊಳೆದದೆಜಪಿಲ್ಲದಿರಿಸಿ . . . ಆ ಖಳನೋವದೆ ಬಳ್ಳಿಗಿಚ್ಚಂ ನಾಲ್ದೆಸೆಯೊಳ ಗಿಟ್ಟುರುಪಿದನು (ಜಯಿಕಾ. ೦೩-೪೩). **ಹುಳ್ಳೆ :** ೨. ನಾನು ಹೊತ್ತ ಹುಳ್ಳೆಯ ಹೊಜೆಯನಂಬಲಿಗೆ ಕೊಂಬವರಿಲ್ಲ (ಐಕವ. ೪೬೦); ಹುಳ್ಳೆ [ಪಾಠಾಂ.ಳ್ಳಿ]ಯ ಹೊಳಲೊಳು ಮಾಜುವೆನು (ಜೀವಂಕಾಂ. ೨-೨೭). 'ಪುರಲೆ' ಪರಾ.

**ಪುಳ್ಳೆ ಇಡು** = (ಆಲಂ) ನಾಶಮಾಡು : ಅದರಾಶೆಗೆ ನಾನು ಪುಳ್ಳೆ ಇಟ್ಟೆ, ನನ್ನಾಶೆಗೆ ದೇವರು ಮಣ್ಣೆರಚಿದ (ಉಪಶಾಶಿ. ೪೦).

[ದೇ.॥ ತುಳು. ಪುಲ್ಲೆ; ಕೊಡ. ಪುಳ್ಳಿ; ತೆಲು. ಪುಲ್ಲ]

**ಪುಳ್ಳಿಗಡ** (ಕ್ರಿ). ಸೌದೆಯನ್ನು ಸೀಳು : ಆ ತಾಪಸಂ ಎರ್ದು ಮುಳಿದು ನಿಚ್ಚಂ ಪುಳ್ಳಿಗಡಿವ ತನ್ನ ಕೊಡಲಿಯಂ ಕೊಂಡು . . . ಕಿಚ್ಚಿನೊಳ್ ಬೇವ ಸವಿುಧೆಯೊಳಗಣ ಪೋಟಿಲೊಳಗೆ ಸೀಳ್ದು ನೋಡೆ (ಐಪಶಂ. ೩-೭೭ ಪ).

[ ಪುಳ್ಳಿ + ಕಡಿ]

**ಪುಳ್ಳಿಯಣ್ಣ** (ನಾ). ಒಬ್ಬಾತನ ಹೆಸರು : ಪುಳ್ಳಿಯಣ್ಣನ ಮಗು ರಾಚಿಯಂ (ಎಕ. XI, ಚಿತ್ರದು. ೬೩-೦೨ ; 941). [ ಪುಳ್ಳಿ$_?$ + ಅಣ್ಣ$_1$ ]

**ಪುಳ್ಳಿಯಯ್ಯ** (ನಾ). ಒಬ್ಬಾತನ ಹೆಸರು : ತಾಟಿವಡುಗುಡ್ಡಿಗಳ ಮಗಂ ಪುಳ್ಳಿಯಯ್ಯಂ ಮಾಡಿಸಿದ ತೂಮ್ಬು (ಎಕ. X (೩). ಮಾಲೂರು. ೧೬೦-೪; 10ನೆಯ ಶಕ). [ಪುಳ್ಳಿ$_?$ + ಅಯ್ಯ$_1$]

**ಪುಳ್ಳಿವೇಡ** (ನಾ). ಕ್ಷುದ್ರನಾದ ಶಬರ ; ನಾಡಾಡಿಯಾದ ಬೇಡ : ಕುರುಪತಿ ತನ್ನಾತ್ಮಜೆಯಂ ಸುರಪತಿನಿಭನಪ್ಪ ತನ್ನ ಪಿರಿಯ ಮಗಂ

ಗಾದರದಿಂ ಕುಡಲೆಂದೊಯ್ಯುತ್ತಿರೆ ಕಂಡಲೆ ಪುಳ್ಳಿವೇಡ ಸಂಕಂ ಬೇಟ್ಟ್ಪಿ ಎನೆ (ಶಂಶಾ. ೯-೧೬). [ಪುಳ್ಳಿ₁ + ಬೇಡ₁]

**ಪುಳ್ಳಂಪುಣಿಸೆ,** ಪುಲ್ಲಂಪುರಚಿ, ಪುಲ್ಲಂಪುರುಚಿ, ಪುಳಂಪುಣಿಸೆ, ಪುಳಂಪುರುಚಿ, ಪುಳ್ಳಂಪುರಚಿ, ಪುಳ್ಳಂಪುರಿಚಿ, ಪುಳ್ಳಪುರಸಿ, ಹುಳಿಹುಣಿಚಿ (ನಾ). ಒಂದು ಬಗೆಯ ಸಸ್ಯ: ಹುಳಿಸೊಪ್ಪು: "ಆಲೋಣಿಕೆ ಕ್ಷುಲ್ಲಕಾಮ್ಲಿ ಪುಳ್ಳಂಪುಣಿಸೆ" (ಮಂಗರಾ. ೯೨-೩೯); ಪುಳ್ಳಂಪುಣಿಸೆಯುಮಂ ಕೂಡೊಳ್ದಿದುವೆನಿಸಿರ್ಪ ಗೋಟಿಯುಂ ಕುಡು . . . ಕಣಿಗಿಲುಗ್ರತರವಿಷಮುಬ್ಗಾಗುಂ (ಖಮುತ. ೨ ೩೬). **ಪುಲ್ಲಂಪುರಚಿ :** "ಚಾಂಗೇರೀ . . . ಅಮ್ಲಲೋಣಿಕಾ-ಇ ಪುಲ್ಲಂಪುರಚೀಸೊಪ್ಪಿನ ಹೆಸರುಗಳು" (ನಿಘಂ.ಶಿ. ೧೯೯). **ಪುಲ್ಲಂಪುರುಚಿ :** ಯಷ್ಟಿಮಧುಕ, ಪುಲ್ಲಂಪುರುಚಿ, ಸೈಂಧವಲವಣ . . . ಇವುಗಳಲ್ಲಿ ನಾಲಿಗೆಗೆ ಗಂಡೂಷವನ್ನು ಮಾಡಲು ಪಿತ್ತಜ್ವರ . . . ಜಿಹ್ವಾರೋಗ ಇವುಗಳೇ ಮೊದಲಾದುವು ಗುಣವಾಗುವುವು (ಸಕವೈ. ೬೩). **ಪುಳಂಪುಣಿಸೆ :** ಚಂಡಾತ ಕಣಿಗಿಲು ಚಾಂಗೇರಿ ಪುಳಂಪುಣಿಸೆ (ಅಶಾ. ೦೦-೨೪). **ಪುಳಂಪುರುಚಿ :** ಚಿಲುಕೀರೆಸೊಪ್ಪು ಸಿಹಿಪಾಲೆಸೊಪ್ಪು ಚಕ್ರವರ್ತಿ ಪುಳಂಪುರುಚಿ ಜಾಂಗಲಮಾಂಸ . . . ಯಿಷ್ಟು ಪಥ್ಯಕರವಹುದು (ವೈಶಾ. ೦೪-೪). **ಪುಳ್ಳಂಪುರಚಿ :** ಹೊನ್ನಗನ್ನೆಸಪ್ಪು ಬಲಿತ ಕಾರೆಸಪ್ಪು ಪುಳ್ಳಂಪುರಚಿಸಪ್ಪು . . . ಇವಿಷ್ಟು ಶೋಣಿತವಾತಕ್ಕೆ ಶಮನ (ಚಿಕಿತ್ಸಾಶ. ೩-೪). **ಪುಳ್ಳಂಪುರಿಚಿ :** ಕೊಡಸೀಗೆಯು ಬೇರಚಿಲ್ಲಿಯ ಕಡುಗಾಯ್ದು ಕಷಾಯದಲ್ಲಿ ಮಧುಘೃತಯುಕ್ತಂ ಕೊಡು ಜೋಳದ ಕೂಳ್ಗೊಸರಂ ಕೊಡು ಪುಳ್ಳಂಪುರಿಚಿ ವೆರಸು ಬಸುರಿಂಬಕ್ಕುಂ (ಗೋವೈದ್ಯ. ೦೯೯-೨೩). **ಪುಳ್ಳಪುರಸಿ :** (ವೈದ್ಯಶಿ. ೮-೦೨೮). **ಹುಳಿಹುಣಿಚಿ :** (೯). [<ಪುಳ್ಳಿ₃ + ಪುಣಿಸೆ (<ಪುಳಿಸೆ)]

**ಪುಳ್ಳಿ** 'ಪುಳ್ಳಿ' ನೋ.

**ಪುಳ್ಳಿಮಾತು** (ನಾ). ಒಣಮಾತು; ಉಪಯೋಗವಿಲ್ಲದ ಮಾತು: (೯). [ಪುಳ್ಳಿ (<ಪುಳ್ಳಿ) + ಮಾತು₁]

**ಪುಱಲೆ,** ಪುರಲಿ, ಪುರುಲಿ₁, ಪುಱುಲೆ, ಬುರಲೆ, ಬುಱುಲಿ (ನಾ). ಒಂದು ಬಗೆಯ ಪಕ್ಷಿ: "ಚಂಚಲಂ ಪುಱಲೆಯಕ್ಕುಂ" (ಮಂಗರಾ. ೩೨-೯); ಪುರುಳಿ . . . ಪರ್ದು ಪಾರಿವಂ ಮರಕುಟಿಗಂ ಪುಱಲೆ ಬುಱುಗಿ ಹಸುಬಂ ಪುಣಿವುಲ್ (ಸೂಕ್ತಿಸು. ೩-೦೯೬). **ಪುರಲಿ :** ಪಕ್ಷಿಮೃಗಾವಲಯದ ಪುರಲಿಗಳು ಒಂದೇ ರೀತಿಯವು . . . ಅವುಗಳ ಮೇಲ್ನೋಕ್ಕಿನಲ್ಲಿ ಹಲ್ಲಿನಂತಹ ಒಂದು ಕಚ್ಚು ಇದೆ (ಪಕ್ಷಿ. ೦೩೦). **ಪುರುಲಿ₁ :** ಪಟಪಟನೆ ಹಾರಿ ಬಹ ಹೊರಸುಗಳ ಸಮುದಯಂ: ಪುರುಲಿಗಳ ಪೆರ್ವುಂದೆ (ಜಕ್ಕರಾಂಗ. ೩೩-೦೯೭೬). **ಪುಱುಲೆ :** 'ಕಾಬುಱುಲೆ' ಪರಾ. **ಬುರಲೆ :** ಬುರಲೆ ಟಿಟ್ಟಿಭ ಕೊಂಚೆ ಕೊಳರ್ವಕ್ಕಿಗಳು . . . ಸುಚಕ್ರವಾಕಗಳೆರಿದೆನಿಪ ಪಕ್ಷಿಗಳ ಭಾವದ ಪ್ರತಿಮೆ ಬೆಸೆದಿಹವು (ಕೊಂಗಡು. ೩-೩೫). **ಬುಱುಲಿ :** ತಾಱಿಟ್ಟಿರ್ದ ಪಾರಂಗಳ ತೂಱಿಲ ತುದಿಗೋಡೊಳಿರದೆ ಬುಱುಲಿಗಳಡ್ಡಂಬಾಱಿದುವು(ಖಗಪ ೧೭-೩೬); ಗಳಿಗಳಂಟಿಗೆ ಸಿಲುಕಿದವು ಪಿಕ್ಕಳಿಗ ಪಂಜರ ಮಂಜರಿಗ ವಿಸಾಸ್ಸುಲಿಗ ಲಾವುಗೆ ಸರಲೆ ಬುಱುಲಿಗಳು (ಕೈವರಾ. ೩-೩-೦೬); ಪಲಿಪಱಿಜು ಗಳರವದ ತಿತ್ತಿರಿ ಕೊಂಚೆ ಬುಱುಲಿಗಳ . . . ಕಂಡನಾ ರಾಮ (ಜಕ್ಕರಾ. ೩೩-೭). 'ಪುರುಳ್ಳಿ₂' ಪರಾ. [ ? ]

△ **ಪುಱುಕು** 'ಪಱುಕು' ನೋ.

**ಪುಱುಲೆ** 'ಪುಱಲೆ' ನೋ.

**ಪುಱ್ಪು** 'ಪುಪ್ಪು' ನೋ.

**ಪುಟಲೂರ್** (ನಾ). ಒಂದು ಸ್ಥಳದ ಹೆಸರು: ತೇಂಕಣದೆಸೆಗೆ ಸೀಮೆ ಪುಟಲೂರ್ಬಾಸಿ ಪುಣಸೆಯು ತೆಂಕಣ ಕೋಡ ಕೆಱಗೆ ಪಡುವ ನೋಡಿ ಪರಿದ ಪೇರೊಟ್ಟಿಯೆ (ಎಕ. IX (೩). ಶಿಂಗಳೂ. ೧೩೦-೩೬ ; 828). 'ಪುಟಿಯೊಲೂರ್' ಪರಾ. [? + ಊರ್]

**ಪುಟಿ.** ಪುಳ್ಳಿ₂, ಹುಳಿ₁, ಹುಟಿ (ಕ್ರಿ). ೧. (ಕೊಳೆತು) ಹುಳು ಹಿಡಿ; ಹುಳುಗಳಿಂದ ತುಂಬು; ಹುಳು ಬೀಳು: ಔದುಂಬರಕುಷ್ಠಮಾಗಿ ಪುಟಿತು ನಮೆದು . . . ಸತ್ತು ಜಾತ್ಯಂಧ ಪೊಲೆಯರ ಮಗಳಾಗಿ ಪುಟ್ಟಿದಳ್ (ಕಣ್ಣಾರಾ. ೦೦-೩); ಆ ನಾಯ್ . . . ಪುಟಿತು ಸತ್ತಿತ್ತಂತೆ ಕಾಲಾಂತದೊಳ್ (ಸುಕುಮಾ. ೩-೨೦); ಪಾತಕಿ ಪುಟಿತೊಡಲ್ಲದೇಂ ಸತ್ತಪಳೇ (ಚಂಕೋಶ. ೩-೩೬). ೨. (ಹುಳುಹಿಡಿದ ವಸ್ತುವಿನಂತೆ) ನಿರುಪಯೋಗಕ್ಕೆವಾಗು: ದೇವತೆಗೇಕೆ ಪೇಟೆ ಪರಸಿ ಗಂಡಂ ಬೇಡಿಕೊಂಡೆನ್ನ ಪೆಂಡತಿಗಿತ್ತೆ ಪುಟ್ ತೊಂದು ಪೆಣ್ಣಂ (ಅರ್ಧನೇ. ೬-೫೦). **ಪುಳ್ಳಿ₂ :** ೨. ಖರನಂ ಸೌಮಿತ್ರಿ ಪುಳಿತ ಕವಡೆಗೆ ಬಗೆದಂ (ಕಣ್ಣಾಸು. ೨೦೯ ಪ್ರಯೋ). **ಹುಳಿ₁ :** ೧. ಒಬ್ಬಳವನೆ ಬಿತ್ತಿ ಒಬ್ಬಳವನೆ ಬೆಳೆವಡೆ ಅಬ್ಬುನ ಹುಳಿವಡನ್ನೇವೆ ರಾಮನಾಥಾ (ದೇರಾವ. ೩೯-೬೩): ಇಳೆಯ ಮರ್ತ್ಯರು ಶಿವಶಿವಾ ತಗೆ ಪುಲು ಗುಣಗೆ ಸರಿಯೆಂಬವರ ಬಾಯ್ ಹುಳಿ[ಪಾಠಾಂ. ಳು]ವುದೋ ಗುಣಕೇಕೆ ಮತ್ಸರ (ಕುವ್ಯಾಪ. ೯-೩೭); ಬಾಯಿ ಹುಳಿವುವು ಇಂಥ ಬಯಲ ನುಡಿದರೆ (ತುರಂಗ. ೩೫-೩೪). ೨. ಹುಳಿತಿತೇ ಬೇಟವಂದ? (ಕಲಾವ. ೩೭-೬). **ಹುಟಿ :** ೧. ತಲೆ ಹುಟಿತ ನಾಯ ಸುಡು (ಸೂಕ್ತಿಸು. ೯-೪೨೩). ಹುಳಿದಾಡು=ಹುಳುವಿನಂತೆ ತೆವಳು: ಕಮಿಚಿದೀ ದೊಣ್ಣೆಯುಂ ಚಾನೆಂಬರಿಯೆ, ಅಳಿದುಳಿದು ಹುಳಿದಾಡುತಿಹೆಷ್ಟಿದರ ಮರೆಯ (ಗಿಶಂ. ೦೨೨-೩೯). ☞ ಜ್ಞಾತಿಶಬ್ದಗಳಲ್ಲಿ ಈ ಧಾತುರೂಪವು 'ಪುಟು' ಎಂದಿದೆಯಾದರೂ ಕನ್ನಡದಲ್ಲಿ ಇದರ ಬಳಕೆಯಿಲ್ಲ. [ದೇ.॥ ತಮಿ. ಮಲ. ಪುಟು]

**ಪುಟಿದೆಗಾವುಂಡ** (ನಾ). ಒಬ್ಬಾತನ ಹೆಸರು: [ಕದಲೆಕಥಿ]ವಾಣ್ಯಾ ಎಱೆಯಮ್ಮಂ ನಿವುದಿ ತುರುಗೊಳೊಳ್ ಕಾದಿ ಸತ್ತೊಂ ಈ ಕಲ್ಲ ಪುಟಿದೆಗಾವುಣ್ಡ[ನ] ತಮ್ಮ ಗುಱೆಯಮ್ಮ ನಿಱಿಸಿದೊ (ಎಕ. XXI. ೨೦೬ ೪ ; ಸಂ. 883). [ಪುಟಿದ್ + ಗಾವುಂಡ (<ಗಾವುಂಡ)]

**ಪುಟಿಯಗಂಗ** (ನಾ). ಒಬ್ಬಾತನ ಹೆಸರು: ಕೋಟೆಯ ಕೊಳ್ಳನ್ನು ಶಿಂಗವಣ್ಣನು ಪುಟಿಯಗಂಗ ಪ್ರಭುಮಲ್ಲನೊಬ್ಬಾಗುಣ್ಣನಳಿಯಮ್ಮಡಗಲು ಕೊಳ್ಳುತ್ತಿರೆ ××× ಕೊನ್ದು ××× (ಎಕ. XII, ಕುಣಿ. ೯೭-೭ ; ಸಂ. 880). [ ? + ಗಂಗ ]

**ಪುಟಿಲ್₁** (ನಾ). ಮರಗಳ ಗುಂಪು; ತೋಟ; ಉಪವನ: ಏಲಾಲವಂಗ ಕುಸುಮಮರಜೋಧೂಸರಮಬಲಾಲಕಸಂಚಲತರಲಂ ಪುಟಿಲೊಳಗೆ ಸುಟಿ ಪುದುಪವನಪವನು (ಆದಿಪು. ೬-೦೦೦); ಕುಳಿರ್ವ ಪುಟಿಲ್ಗಳಿಕ್ಕೆಗೆ ಲತಾಳಯದೋಪರಿಗಳ್ಗೆ . . . ಶೀತಶೀತಳಿಕೆಯ ಬೀಜನಕ್ಕೆ ಗುಱಿಯಾಯ್ತು [ವಿ]ಯೋಗಿಜನಂ ಬಸಂತದೊಳ್ (ಪರ್ಧಮಾ. ೦೦-೪೮); ತಮ್ಮಿರ್ದ ಲತಾಗಾರದ ಪುಟಿಲೆಡೆಯಂ ಸೀತಾರಮಣಿಗೆ ಸುಟ್ಟಿ ತೋಱೆದಂ ರಘುವೀರಂ (ಶಂರಾಮಾ. ೦೩-೨೪); ಅದಾರ ಕೂಗು ಪುಟಿಲ ನಡುವೆ ಕೇಳ್ವುದು ? (ಅಶ್ವತ್ಥಾ. ೩೭-೬೯೭). [ದೇ.॥ ತಮಿ. ಮಲ. ಪೊಟಿಲ್]

**ಪುಟಿಲ್₂,** ಪುಣಿಲ್, ಪುಳಿಲ್, ಪುಳಿಲು (ನಾ). ೧. ಉಸುಕು; ಮರಳು: ಪುಳಿನಂ-ಪುಟಿಲ್ (ಕಮರ. ೨೦ ಪ್ರಯೋ). ೨. ಮರಳು ದಿಣ್ಣೆ: "ಪುಟಿಲೆಂದು ಮರಲೊಟ್ಟಲ್" (ಕಶಾ. ೩೩-೦೬೨); ಪಾಡುವ ತುಂಬಿ ಕೋಡುವ ಪುಟಿಲ್ ನಡಪಾಡುವ ರಾಜಹಂಸೆ ಆರೆರ್ದೆಗವಾರ ಮನಕ್ಕೆ ಮನಂಗರಾಗಮಂ ಮಾಡೆ ಮನಕ್ಕೆ ಬಂದುದರಿಕೇಸರಿಗಲ್ಲಿಯ ನಂದನಾಳಿಗಳ್ (ಶಂಶಭಾ. ೩-೩೭); ತಾವರೆಯ ರಜಂಗಳೆಂಬ ಪೊಸನುಣ್ಣಿಳಲಿಂದೆ ಪುಟಿಲ್ಗಳಂ ಮನೋಹರಕೃತಕಪ್ರವಾಹಿನಿಯೊಳಂಗನೆ ಮಾಡಿಸುತಿರ್ದ ಳರ್ಥಿಯಿಂ (ಕಾದಂಬ. ೨೪); ನನೆಗಣೆಯನ ಗರುಡಿಯಂತಿರ್ಪ ಪೂವಿನ ಪುಡಿಯ ಪುಟಿಲ್ಗಳಿಂ (ಅರ್ಧನೇ. ೪-೬೮ ವ). **ಪುಣಿಲ್ :** ೨. ಪಾಱುವ ಪಳಿನೀತತಿ ಹಂಸಂ ರಥಾಂಗವಿಹಾ ತಾವರೆಯಿಂದಾ ತಾವರೆಗೀ ತಡಿಯಿಂದಾ

ತಡಿಗೀ ಪುಣಿಲಿನಾ ಪುಣಿಲ್ಗಾ ಕೊಳನೊಳ್ (ಪುಣ್ಯಶಾ. ೪-೦೭೬). **ಪುಳಿಲ್ :** ೨. ತೀರಭಾಸುರತರತಾಳನಂದನದಲಂಪು ಪುಳಿಲ್ಗಳದರ್ಪು ಚೆಲ್ವ ಬಿತ್ತರಿಸೆ . . . ಬಗೆಗೊಂಡುದು ಪೂರ್ಣಗುಣಾಂ ಮಹಾರ್ಣವಂ (ಕಬಕಾ. ೦-೩೪); ಮುಕುಳೀ ಕುಚಮುದ್ರ್ಯತರಂಗಸಂಚಯಂ ಪಳಿ ಜಘನಂ ಪುಳಿಲ್ (ಶಂಕ್ರಶ್ಮ. ೩-೨೦). **ಪುಳಿಲು :** ೧. "ಪುಳಿಲೆನಲು ಮರಳು" (ಅಭ್ಯಕ್ಷ. ೦೨). ೨. ತದ್ವನಲಕ್ಷ್ಮಿಯ ಮುಂದೆ ಮಂಗಳಂಬಾಡುವ ತುಂಬಿ ಕೋಡುವ ಪುಳಿಲು ನಡೆದಾಡುವ ಹಂಸೆ ರಾಗದಿಂದಾಡುವ ಸೋಗೆ (ಶಾಶ್ವ. IX-1. ೨೬೭-೨೩; 1160); ಪುಳಿಲೆಡೆಯಿಂದ ಹಂಸೆಯುತ್ತುಂಗ ಕೊಳನ ಪೊಗುವಂತೆ (ಅರಂಕ. ೩-೯೪). [?/ಸಂ. ಪುಲಿನ]

**ಪುಟಿಲ್ಗಟ್ಟು** (ಕ್ರಿ). ಮರಳಿನ ಸಾಲಾಗು; ಮರಳಿನ ಕಟ್ಟೆಯುಂಟಾಗು: ಮೊದಲೊಳ್ ವಾಗ್ದೇವಿಯನೊಲಿಸಿದ ತಿಲಕಂ ತಾನಿದೆನಿಪ ತಿಲಕಂ ನವಭಸ್ಮ ದಿನೆಸೆಯಲುಮ ಪುಟಿಲ್ಗಟ್ಟಿದ ಗಂಗೆಯ ಪೊನಲನನಿಸಿಸನುಕರಿಸಿರ್ದಂ (ಶಾರಂಥಾ. ೭೩೦); ಕರ್ಪೂರದ ರಜದ ಜಗುಲಿಯೊಳ್ ಜಗುಳ್ದು ಮುಡಿಯ ಮುಗುಳ್ಗಳೀ ಕಡೆಯುಕ್ಕೆಯುಮುದಜಿ ಕೆಲದೊಳ್ ಕೆಟಗೆ ಪುಟಿಲ್ಗಟ್ಟಿದ ಮುತ್ತಿನ ಪುಡಿಯ ನುಣ್ಮಳಲೊಳ್ (ಶೀಲಾವ. ೦೦-೬೩ ವ). [ಪುಟಿಲ್$_2$+ಕಟ್ಟು$_1$]

**ಪುಟಿಲ್ದಾಣ** (ನಾ). ಉಪವನ; ನಂದನ: [ಊರೂರೊಳ್ ಪ್ರ]ರಿಪಕ್ವ ಶಾಳಿವನಮೂರೂರೊಳ್ ಪುಟಿಲ್ದಾಣಮೂರೂರೊಳ್ ಪತ್ತಿಬಿರ್ದ ಪೂಗೊಳಗಳೂರೂರೊಳ್ ಮಹೋದ್ಯಾನಂ . . . ಎನೆ ಪೇಟಾರ್ ಮೆಚ್ಚುರಾ ದೇಶಮಂ (ಶರ್ಮಮಾ. ೧೧-೬). [ಪುಟಿಲ್$_2$+ತಾಣ]

**ಪುಟಿಲ್ದೊಡಿ** (ನಾ). (ಒಣಗಿ) ಮರಳಿನಿಂದ ತುಂಬಿದ ಹೊಳೆ: ಪೆರ್ದೊಡಿ ಕಾಲ್ದೊಡಿಯುಂ ಕಿಱುದೊಡಿ ಪುಟಿಲ್ದೊಡಿಯುಮಪಾಯ್ತು ನಾಡುಂ ಕಾಡುಂ ಬೀಡುಂ ಸೂಡಿಂ ಸೀಕರಿಪೋಯ್ತು (ರಾಮಾಶ್ವ. ೩೨-೦). [ಪುಟಿಲ್$_2$+ತೊಡಿ$_2$]

**ಪುಟಿಲ್ವಜ್ಜೆ** (ನಾ). ಮರಳಿನ ಮೇಲೆ ಮೂಡಿದ ಹೆಜ್ಜೆ: ದರಿಯಂ ಮಿಱಿರ್ದ ನೀರೊತ್ತಿಟತರೆ ತೊಡಿಗೆಲ್ಲಂ ಪುಟಿಲ್ವಜ್ಜೆ ಮೆಯ್ದೋಱಿರೆ ಸ್ಯೆವಾಳಂ ಮಳಲ್ದೀಂಟೆಗಳೆಸೆಯೆ . . . ತಿಳಿದತ್ತಂದು ಸಿಂಧುಪ್ರತಾನಂ (ಶಗಂ. ೪-೬೨). [ಪುಟಿಲ್$_2$+ಪಜ್ಜೆ]

**ಪುಟಿವಾಳಬಾಟ್** (ನಾ). ಒಂದು ಊರಿನ ಹೆಸರು: ಶ್ರೀಮತು [ಪು]ಟಿವಾಳಬಾಟ ಗ್ರಾಮ (ಶಾಶ್ವ. IX-i, ೨೪-೦೯; 936). [?]

**ಪುಟು, ಪುಳು, ಹುಳ, ಹುಳಂ, ಹುಟು** (ನಾ). ೧. ಕ್ರಿಮಿ; ಕೀಟ: "ಕೃಮಿಃ, ಕೀಟಃ, ನಿ ಲಂಗುಃ, ಪುಲ್ಲಕಃ—ಈ ೪ ಪು[ಹು]ಟು" (ಶಬ್ದಮ. ೦೦೩-೦೪); ಇತ್ರೊದಾನಬಿಪ್ಪೊನ್ ಪಞ್ಚಮಹಾಪಾತಕನಕ್ಕುಂ[ಕ್ಕುಂ] ಏಟನೆಯಾ ನರಕದಾ ಪುಟು ಆಕು[ಕ್ಕು]ವರ್ (ತಾಲ. ತ. ೬೦-೪; 578); ಜಾಗದೊಳ್ಪನಚ್ಚೊತ್ತದೆ ಪರ್ಣಾದ್ದ ಬಾಜ್ವ ಪುಟುವಾಸನನೆಂಬನ ಜಾಡಮೆಂಬುದೊಂದಸ್ತಿಯ ಪಣ್ಕೊಳ್ಪರ್ ಪುಟುವಲ್ಲದೆ ಮಾನಸನೇ (ಕಂಕಶಾ. ೩-೬೩); ನೀರಂ ಸೋಧಿಪುದಿಂಬಾಗಾರ್ಕೈವುದು ಪುಳ್ಳಿ ಬೆರಟಿ ಯೊಳಗಣ ಪುಟುವಂ ಸಾರ್ಕೆಸುವಲ್ಲಿ ದಯೆಯಿಂದಾರ್ಕೈವುದೆನಿಪ್ಪ ಮನೆಗಳಲ್ಲವೆ ತೀರ್ಥಂ (ಸಮಾಪ. ೬-೯೯). ೨. (ಅಲಂ) ಕ್ಷುದ್ರವಾದುದು: 'ಪುಟು ವಗೆ' ಪರಾ. **ಪುಳು :** ೧. ಬಳಿಕೆ ಪಞ್ಚಮವಟದೊಳ್ಪುಳುವಾಗಿ ನವೆಗುಂ (ಎಕ. VIII, ಪಗ. ೬೦-೦೦; 897); ಭೂರಿಭೂಜಂ ಪುಳು ಖಗಮೃಗ ವಾಗುತ್ತುಮೆಂತಕ್ಕೆ ಬಂದಂ ನರಜನ್ಮಕ್ಕಯ್ಯ (ರಕ್ಷಾಕ. ೨); ಇಂದ್ರಗೋಪದ ಪುಳುವುದುಂದುವು (ಮೋಹಶ. ೪-೩೬). ೩. ಕ್ಷುದ್ರವ್ಯಕ್ತಿ; ಕ್ಷುಲ್ಲಕನಾದ ವನಂ: ದ್ರುಪದ ವಿರಾಟರೆಂಬೀ ಪ[ಶಾಶಾಂ. ಹು]ಳುಗಳಪರಂತೋರೆಗೆಡ ದರು (ಕುಮ್ಮಾರ. ೨-೪೦). **ಹುಳ :** ೧. ಹೊನ್ನ ಹುಳವ ಕಂಡು ನರಿ ತನ್ನ ಬಾಲವ ಹುಣ್ಣು ಮಾಡಿಕೊಂಡರೆ ಹೋಲ ಬಹುದೆ (ಏಕಪ. ೨೬೭); ಒಂದು ಹುಳವು ಕಾಣಿಸಿಕೊಳ್ಳಲು ಆ ರಾಮನು . . . ಈ ಹುಳವಾದರೂ ತಕ್ಷಕನಾಗಿ ಕಚ್ಚಲಿ' ಅನ್ನಲು (ಕೃಪಾಕ. ೬೬); ಒಂದು ಸಣ್ಣ ಹುಳವಾದರೂ ಈ ಮನೆಯ ಕರ್ತನಾದ ದೇವರಿಂದ ರಕ್ಷಿಸಲ್ಪಡದೇ ಇರುವುದಿಲ್ಲ (ಮುಂಬಯಿ. ೪-೩೯); ಅತ್ತೀಯ ಹಣ್ಣು ಅತಿ ಕೆಂಪು ಇದ್ದರು ಒಡೆದು ನೋಡಿದರ ಹುಳ ಭಾಳ (ಗರಿಶ. ೦೨೯). **ಹುಳು :** ೧. ರೇಶಿಮೆಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸುತ್ತಿ ಸಾವ ತೆಱನಂತೆ (ಬಸವಾರೇ. ಬಿ. ೦೩-೦೭); ಜೇನ ಹುಟ್ಟಿನ ಹುಳುವ ಬಡಿದ ಸಗಾನತನ ತಾನೇನು ಚೂಣಿಯ ಸೇನೆಗೀನೆಯ ಸವಲಿಲಾಯಿತೆ ಶೌರ್ಯಸಿರಿ ನಿನಗೆ (ಕುಮ್ಮಾಭಾ. ೮-೩೪); ಮನದ ಕರಿನೆರೆಯ ಹುಳುಗಳೆಲ್ಲ ಹೊಕ್ಕೀರಿ ನಿದ್ದೆ ಶಿಳಿಯೆ (ಅರಳು. ೦೧೦-೨); ಒಂದು ಎಲೆಯಂತೆ ಇನ್ನೊಂದಿಲ್ಲ. ಕೆಲವನ್ನು ಹುಳುಗಳು ತಿಂದಿವೆ, ಕೆಲವಕ್ಕೆ ಕಜ್ಜಿ (ರಾಷ್ಟ್ರಕ. ೦೦೩). ೩. ಆವ ಬಲ್ಲವ ನಿನ್ನ ಮಹಿಮೆಯನಾವ ದೇವರು ನೆನೆಯಬಲ್ಲರು ಜೀವರಾಶಿಯೊಳೊಂದು ಹುಳು ತಾನೇನ ಬಲ್ಲವನು (ಸಂಥಪ. ೮-೮೮). ೪. ಹಾವು; ಸರ್ಪ: ಕಡಿಕ ಹುಳು ಕಚ್ಚಿತು ಮಗನಂ (ಏಕತ್ವ. ೪೮-೪). **ಹುಟು :** ೧. 'ಹಚ್ಚಿಂದು ಹುಟು' ಪರಾ.

**ಪುಟು ಪತ್ತು, ಹುಳ ಹತ್ತು, ಹುಳು ಹತ್ತು** — ೧. ಹುಳುಹಿಡಿ; ಹುಳುವುಂಟಾಗು: ಅದಱಜಗು ಮುಗ್ಗಿ ಪುಟು ಪತ್ತಿದೊಡಾಱಿಲ್ ಪರಪೆ ಕಾಗೆಯುಂ ನಾಯುಂ ಮುಟ್ಟಿದುದನೆ ಶುದ್ಧಮಂ ಮಾಱ್ಪುದನಿಂತೆಂದೋದಿ ದರ್ ಪುರೋಹಿತರೆಲ್ಲರ್ (ಮುಹೋಕ. ೩-೩೪); ಚೀಲದಲ್ಲಿದ್ದ ಕಾಳಿಗೆ ಹುಳ ಹತ್ತಿ ಹಾಳಾಗಿವೆ (ರೂಶಿ); ಗಿಡಕ್ಕೆ ಹುಳು ಹತ್ತಿದೆ (ರೂಶಿ). ೨. ಹಾಳಾಗು; ನಿಸ್ಸತ್ವವಾಗು: ವಂಚಕರಿಗಾದರೂ ... ಮೋಸ ಮಾಡಿದ ಗಳಿಗೆಯಿಂದ ಅವರ ವಿವೇಕಕ್ಕೆ ಹುಳ ಹತ್ತಿಬಿಡುತ್ತದೆ (ರೂಪಾಂಶಾ. ೬೪). **ಹುಳ ಹುಪ್ಪಡಿ, ಹುಳು ಹುಪ್ಪಟೆ, ಹುಳು ಹುಪ್ಪಡಿ** = ಕ್ರಿಮಿ ಕೀಟ: ಹುಳ ಹುಪ್ಪಡಿ ಮುಂತಾದವುಗಳು ಕಾಣಸದೆ, ಹೊಟ್ಟೆಯೊಳಗೆ ಹೋಗಿ ಬಾಧಿಸುತ್ತವೆ (ಮುಂಬಯಿ. ೩-೦೬೨); ಮನೆಯನ್ನು ಪರಿಶುದ್ಧವಾಗಿಟ್ಟುಕೊಳ್ಳುವುದರಿಂದ ಹುಳು ಹುಪ್ಪಟೆಗಳು ಸೇರಲು ಅವಕಾಶವಿರುವುದಿಲ್ಲ (ಗೃಹಶಿ. ೦೩೨); ಹುಪಾರು, ಹುಳು ಹುಪ್ಪಡಿ ಇದ್ದೀತು (ಪುರ್ನಗರ. ೮೬); ಮಣ್ಣು ಹುಳು ಹುಪ್ಪಡಿಯ ಅನ್ನ. ಹುಳು ಹುಪ್ಪಡಿ ಹಕ್ಕಿ ಪಕ್ಕಿಗಳ ಅನ್ನ (ಏಕಾಮಂ. ೩೩) [ದೇ. ೫ ತಮಿ. ಮಲ. ಪುಟು; ತುಳು. ಪುರಿ; ಕೊಡ. ಪುಳು; ತೆಲು. ಪುರುಗು, ಪುರ್ಗು, ಪುರುವು, ಪುರ್ವು, ಪ್ರುವ್ವು; ಕೋಲಾ. ನಾಯ್ಕಿ. ಪುರ್ರ; ಗೊಂಡಿ. ಪುರೀ; ಪರ್ಜಿ. ಪುರುತ್; ಗದಬ. ಪುರುತ್; ಕುಇ. ಪಿರು]

**ಪುಟುಂಕು** (ನಾ). ಕೊಳೆ; ಪಿಚ್ಚು; ಪಿಸುರು: 'ಕಣ್ಬುಟುಂಕು' ಪರಾ. [←ತುಳು. ಪುಳ್ಕು, ಪುರ್ಕು]

**ಪುಟುಕ, ಹುಳುಕ** (ನಾ). (ಅಲಂ) ಕ್ಷುದ್ರನಾದ ವ್ಯಕ್ತಿ; ಕ್ಷುಲ್ಲಕ ಮನುಷ್ಯ; ಕೀಳಾದವನಂ: ಪರನೃಪರಲ್ಲದೀ ಪುಟು[ಶಾಶಾಂ. ಟು] ಕರಱಿಪುದೆ ಮದ್ಬುಜಾಸಿ (ಯಶೋಕ. ೨-೩೪). **ಹುಳುಕ** ಭವಿ ಹೆಣ್ಣುಗಳ ಕೂಡುಂಡ ಬಾಯ ಹುಳುಕ ನಾನಯ್ಯ (ವಚಶಾ. I. ೨೬೭-೪); ಆ ಹುಳುಕರನ್ನು ಕೊಲ್ಲುವುದಕ್ಕೂ ಅವನು ಹೇಸಿದನು (ಕಾವ್ಯಸ. ೬೨). [ಪುಟುಕು + -ಅ$_7$]

**ಪುಟುಕು, ಹುಳುಕು** (ನಾ). ೧. ಹುಳು ಹಿಡಿದ ವಸ್ತು; ಹುಳು ತಿಂದು ಕೆಟ್ಟುದು. ೨. ಹುಳು ಹಿಡಿದಿರುವಿಕೆ; ಕೆಟ್ಟುಹೋಗಿರುವ ಸ್ಥಿತಿ. ೩. ಕ್ಷುದ್ರತನ; ಕ್ಷುಲ್ಲಕಸ್ವಭಾವ: 'ಪುಟುಕ' ಪರಾ. ೪. ಹುಣ್ಣು; ವ್ರಣ: (೬). (ಗು). ೫. ಕ್ಷುದ್ರವಾದ; ನೀಚವಾದ: ಎನಗಪ್ಪೊಡೆ ಮುನ್ನಿನ ಜವ್ವನಮುಂ ಲಾವಣ್ಯಮುಂ ವಿಳಾಸಮುಮಿಲ್ಲೀ ಪಾತಿಯರಲೋಪೋ ಪೆರ್ಗಣಮನಿಕ್ಕಿ ಮಸೆವಾಡು ವಂದಮಕುಂ ಕಡೆಯೊಳ್ [ಎಂದು ತನ್ನ ಪುಟುಕುಮನದಿಂ]ದಿರಿಸಿ

**ಪುಟ್ಟಿ** 'ಪುಷ್ಟಿ' ನೋ.

**ಪೂ**₁, ಹೂ₁ (ಕ್ರಿ). ಪೂತ₁, ಹೂತ₁ (ಭೂತಕೃ) ; ಪೂತು₁, ಹೂತು₁ (ಭೂತನ್ಯೂ) ; ಪೂವ₁ (ಭವಿಕೃ). ೧. (ಮರ, ಬಳ್ಳಿಗಳು) ಹೂವಿನಿಂದ ತುಂಬು ; ಹೂವು ಬಿಡು : "ಪೂ—ಪುಷ್ಪಸಂಭವೇ. ಪುಷ್ಪೇ ಚ" (ಶಬ್ದಾ) ; ಎಯ್ದೆ ಪೂತು ಕಿಕ್ಕಿಱಿಗಿಱಿದಿರ್ದ ಪಾದರಿಯಿಂ . . . ಒಪ್ಪಿ ತೋಱುಗು[೦] (ಎಪಿ. XIII. ೩೩೦-೨೭ : ೮೨೮) ; ಮನದೊಳಲಂಪನಾಳ್ದಿನಿಯನಟ್ಟಿದ ದೂದರ ಸೀಯನಪ್ಪ ಮಾತಿನ ರಸದೊಳ್ ಕೊನರ್ವುದು ತಳಿರ್ವುದು ಪೂವುದು ಕಾಯ್ತುದು . . . ಮನದೊಳ್ ತೊದಳಿಲ್ಲದ ನಲ್ಮೆಯೆಂಬ ನಂದನವನಮೋಪರೊಳ್ ನೆರೆದೊಡಂತು ರಸಂಬಿಡೆ ಪಣ್ತುದಾಗದೇ (ಶಂಕರಾ. ೪-೧೦೨); ಮಱಿದುಂಬಿ ಪೂತ ಚೂತದೊಳೆಱ ಗುಗುಮೆಱಗುಗುಮೆ ಸಲ್ಲಕೀಪಲ್ಲವದೊಳ್ (ಶಾಂತಿಪು. ೩-೨೯) ; ಆವ ಮರವಿದು . . . ಸಕಲರಿತುವೊಳು ಪೂವ ಪಣ್ವ ಮರವೇನು ? (ಗಿರಿಜಾ. ೨೮-೩೮). **ಹೂ**₁ : ೧. ಎಲವದ ಮರ ಹೂತು ಫಲವಾದ ತೆಱನಂತೆ ಸಿರಿಯಾದರೇನು ಶಿವಭಕ್ತಿಯಿಲ್ಲದವನ್ನ (ಬಸವ. ೧೨೦); ಹೂತ ಸಂಪಗೆವನವನಳಿಸಂಘಾತ ಮುತ್ತಿವದೇನು - (ಕುಮಾ.ಕ. ೧೩-೯) ; ಎನಿತು ಮಳೆಗರೆದೊಡೇಂ ಹಬ್ಬೆ ಹೂವ್ವುದೇ ದೇಪ (ಪಮ್ಮಿ. ೦೮-೬೦). ೨. ಅರಳು ; ವಿಕಾಸವಾಗು : ಹೆಚ್ಚಿದಾನಂದಾತಿರೇಕಕೆ ಚಿತ್ತ ನೆಱೆಯದು ಹೂತು ಹಿಗ್ಗುವ ಪುಳಕರಾಜಿಗೆ ದೇಹ ಕಿಱಿದು (ಕುಮಾ.ದ್ರೋ. ೦೩-೨).

**ಹೂತ ಹೊಕ್ಕುಳ** ಮಗ=(ಪುರಾಣಗಳಲ್ಲಿರುವಂತೆ, ವಿಷ್ಣುವಿನ) ನಾಭಿಕಮಲದಿಂದ ಹುಟ್ಟಿದವನು ; ಪದ್ಮನಾಭನ ಮಗ ; ಬ್ರಹ್ಮ : ಹೂತ ಹೊಕ್ಕುಳ ಮಗನು ಬಂದನು ತಂದೆಯಿದ್ದೆಡೆಗೆ (ಶಿಭಾಗ. ೬-೦೪-೨೭). [ದೇ. ॥ ತಮಿ. ಮಲ. ಪರ್ಜಿ. ಪೂ]

**ಪೂ**₂, ಪುವ್ವು, ಪೂವು, ಪುವ್ವು, ಹೂ₂, ಹೂವು (ನಾ). ೧. ಅರಳು ; ಮಲರು ; ಕುಸುಮ ; ಪುಷ್ಪ : ಸುವರ್ಣಪೂರ್ಣಕಳಶಮುಂ ಕನ್ನಡಿಯುಂ ಪೂವುಮಕ್ಕಿಯುಂ ಮಾದುಫಲಮುಂ ಮೊದಲಾಗೊಡೆಯ ನೇಕಾರ್ಚನೆಯಿಂದಿದಿರಂ ಬಂದು ನಿಱಿಸಿ ಬಲಗೊಂಡು ಬಂದು (ವಡ್ಡಾರಾ. ೭೮-೭); ತನ್ಮುನಿಗಳ ಪಾದಪ್ರಕ್ಷಾಳನೋದಕದೊಳ್ ಪೊರಳ್ದು ಪುಷ್ಪವರ್ಷ ಪೂಗಳೊಳ್ ಪುದಿದು . . . ಉಪಶಮಭಾವಮಂ ತಾಳ್ದಿ (ಆದಿಪು. ೩-೨ ವ) ; ಇಂಪಿಲ್ಲದ ಕೇದಗೆಯುಂ ಕಂಪಿಲ್ಲದ ಪೂ ಸುಪುತ್ರನಿಲ್ಲದ ಭವನಂ . . . ಏನೊಪ್ಪುಗುಮೇ (ಅಜಿತ. ೬-೬೨); ಕಂಪುಳ್ಳ ಸಂಪಗೆಯ ಪೂಗಳಂ ತಿಱಿತಂದು ಕಂಪಿನಿಂ ಶಶಿಧರನ ಸಿರಿಮುಡಿಗೆ ಬೇಕೆಂದು (ಬಸವ. ೦-೨೭). ೨. ತಾವರೆ ; ಕಮಲ : 'ಪೂಗೊಳ' ಪರಾ. ೩. ಕಣ್ಣುಗುಡ್ಡೆಯ ಮೇಲೆ ಉಂಟಾಗುವ ಬಿಳಿಯ ಚುಕ್ಕೆ ಮತ್ತು ಹಾಗೆ ಚುಕ್ಕೆ ಬಿದ್ದು ಉಂಟಾಗುವ ನೇತ್ರರೋಗ; ಕಾಚ : ಮೋತಿಬಿಂದು : ಅರೆದಂಬಾಗಿರೆ ತಾಱಿಯ ತಿರುಳಂ . . . ಜೇನೆಯ್ಯಂ ಕಪ್ಪುರಮುಂ ಬೆರಸೆಚ್ಚೆ ಕಣ್ಣ ಪೂಗಳ್ ಕಿಡುಗುಂ (ಲೋಕೋಪ. ೯-೭೭); ಕಣ್ಣೊಳೇತಱ ಪೂ . . . ಎಂದು ಬಾಯಂ ಕಿಸಿದಳ್ (ರಾಜಶೇ. ೬೭-೨೮). 'ಪೂಗಣ್' ಪರಾ. ೪. (ಅಲಂ)ಹಿತವಾದುದು; ಸುಖಕರವಾದುದು: 'ಪೂಗನಸು' ಪರಾ. **ಪುವ್ವು** : ೧. ಕಪ್ಪುರ ಕೆಸಣ್ಣನ ಮಗಳ್ × ಲಚಿಬದ ಜಟ್ಟಿ ಪುವ್ವ ಶಾಲೆ ಕಂಮಪಳ್ಳಿ ಆಮಾ ಸಾಸಿರ್ವರ್ಗರ್ಂ ಸಾಲೆ (ಎಕ. VII. ಶಿಕಾ. ೪೩೬-೭ ; ಸು. ೬೮೦ ?); ಪುವ್ವಿ[ಪಾಠಾಂ. ಪೂವಿ]ನೊಳ್ ಕಂಪು (ಬಾಪಾಭೂ. ೪-೮೮ ಪ್ರಯೋ). **ಪೂವು** : ೧. ಪೂವಿನಿಂ ಸಮೆದ ಪಕ್ಕಿಯಿಂದೆಂಬಿನವಾಗಳೊಂದು ಸಾರಿಕೆ ಪರಿತಂದುದು (ಕಾದಂಬ. ೬೦); ಈಕೆಯ ನಳಿತೋಳಿಂಗೊಲ್ದು ತಮ್ಮ ಚೆಲ್ವಿಕೆಯಂ ಕಂಡೆಳಲತೆಗಳ್ ಪೂವುಗಳಂ ತಳೆದಿರ್ದುಂ ತಳೆಯದಿರ್ಪುವಾ ಫಲಿನತೆಯಂ (ಧರ್ಮಾಮೃ. ೩-೦೫೩) ; ಪೂಜ್ಯವು, ಪೂಜಕ, ಪೂಜೆಯು, ಪೂವು ರೂಪರೂಪಗಳು ನಾವೂ ನೀವು (ಅರಳು. ೦೭೮-೦೦). **ಹುವ್ವು** : ೧. ಚೆನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮುಂಡೆಗೆ ಹುವ್ವ[ಪಾಠಾಂ. ಹೂವ] ತಾಹೆನಲ್ಲದೆ ಹುಲ್ಲ ತಾರೆನು (ಮಹಾದೇ. ೨.೬೦-೦೪೮); ಹುವ್ವ[ಪಾಠಾಂ. ಹೂವ] ತರುವರ ಮನೆಗೆ ಹುಲ್ಲ ತರುವ ಅವ್ವೆ ಲಕುಮಿಾರಮಣ ಇವಗಿಲ್ಲ ಗರುವ (ಹರಿಂದ. ೦-೦೪೭ ಕಲ್ಲ೩) : ಸುರರು ದುಂದುಭಿ ಮೊಳಗೆ ಹುವ್ವಿ[ಪಾಠಾಂ. ಹೂವಿ]ನ ಅರಳು ಸುರಿದರು (ರಾಮಚ. ೩೨-೦೦೭); ನಿನಗೆ ವೈಜಯಂತಿಯೆಂಬ ಒಂದು ದಿವ್ಯವಾದ ತಾವರೇ ಹುವ್ವಿನ ಮಾಲೆಯನ್ನು ಕೊಡುತ್ತಲಿದ್ದೇನೆ (ಕೃಪಾಲ. ೯೪). **ಹೂ**₂ : ೧. ಹೂ ಬಾಡಿದಲ್ಲಿ ಪರಿಮಳ ಮನಱಸುವರೆ (ಬಸವ. ೦೨೭) ; ಒಂದರಳು ಮಲ್ಲಿಗೆ ಒಂದು ಹೂ ಮಂದಾರ ಪುತ್ಪಲ ಒಂದು ಚೆನ್ನೆಯ್ದಿಲು ಬಕುಳ ಒಂದೊಂದು ಅರವಿಂದ (ಬಸವು. ೦೯-೭೩). ೨. 'ಹೂಗೊಳ' ಪರಾ. ೩. ಆಲಿ ನೋಡುದೊ ಕಣ್ಣ ಬೇನೆಯೊ ಮೈಲಗೆಯೊ ಹೂ ಹುಟ್ಟಿದುದೊ (ಬಸವು. ೦೭-೬೬). ೪. (ಕಾಗದ, ಬಟ್ಟೆ, ಬಟ್ಟೆ ಮುಂತಾದುವುಗಳ ಮೇಲೆ ರಚಿಸುವ) ಹೂವಿನಾಕಾರದ ಚಿತ್ರ : ಕರಿಯ ಮಾಯಲಿನ ಮೇಲೆ ತಾನೇ ಹೂ ಹಾಕಿದ ಪತ್ತಲದ ಸೀರೆಯೇ ಅಲ್ಲಿರಲಿಲ್ಲ (ಮುಕ್ತ್ಯ.ದ. ೨೪). ೬. ಎಳೆಯದು : ಕೋಮಲವಾದುದು ; ಮೃದು : 'ಹೂಮರಿ' ಪರಾ. **ಹೂವು** : ೧. ಸಿರಿಮುಡಿಗೆ ಹೂವನಡಕುತ್ತಮಿರು ನೀನು (ಸಂಚಿಕೆ. ೦-೩೩) ; ಕಳಿದ ಹೂವಿನ ತೊಡಬೆಯೋ ಕುಸಿದಲೆಯ ಬಿಟ್ಟಯ ಭಾರವೋ . . . ನಳಿನನಾಭನ ಮಾತು ಹಿಂಚಿತು ಕಳಚಿದವು ಕೈದುಗಳು (ಕುಮಾ.ದ್ರೋ. ೦೯-೩೮); ಜಡೆಗಳೊಳಗೆ ಮಲ್ಲಿಗೆಯ ಹೂವಿನ ಸರ ಬಿಡದುಟ್ಟ ಸಾಲಿಯ ಸೀರೆ ಕಡುಪರಿಮಳವಾಂತ ದಿವ್ಯಾಂಗದ ಚೆಲ್ವ ಮಡದಿರನ್ನೆಯರೊಪ್ಪಿದರು (ಕಂಸವ. ೨-೯೦) ; ಒಂದಾರ ಕೊಳಲಿಲ್ಲ ಲೋಕದ ಮಂದಿ ನಿಂದಾವ ಲೋಕದ ಬಲು ಹೂವು ಎಂದೇನೊ (ಜಾಸಿಗ. ೨೦-೨೦).

**ಪೂಗಳಿನಿದು** = ಪುಷ್ಪರಸ ; ಮಧು ; ಮಕರಂದ : "ಮಧು ಮಕರಂದಮೆನಲು ಪೂಗಳಿನಿದಕ್ಕು" (ಮಂಗರಾ. ೩೩-೬). **ಪೂವಿನಂಬು**= (ಮನ್ಮಥನ) ಹೂವಿನ ಬಾಣ: ಮದನನ ಪೂವಿನಂಬುಗಳ ಪೆಣ್ಬರಿಜೆಂಬ ಬೆಡಂಗನುಂಟುಮಾಡಿದ . . . ರಾಜಕನ್ಯಕೆಯರಂ ಪಲರಂ ತನಯಂಗೆ ಮಾಡಿದಂ (ಮಲ್ಲಿಪು. ೪-೦೪೦); ಆವನ ಪೂವಿನಂಬದಟರಂ ತಲೆವಾಗಿಸುತಿರ್ಪುದು . . . ಆತನೀಗಾವಗಮೆನ್ನ ಜಾಣ್ನುಡಿಗೆ ಮೆಯ್ಸಿರಿಯಂ (ಕಬ್ಬಿಗ. ೦). **ಪೂವಿನ ಪೊಟ್ತು, ಹೂವಿನ ಹೊತ್ತು**=(ಸಾಮಾನ್ಯವಾಗಿ) ಹೂವುಗಳು ಅರಳುವ ಸಮಯ ; ಸಾಯಂಕಾಲ : ಆಗಳಾ ಪೂವಿನ ಪೊಟ್ತಿನೊಳ್ ದೇವಕೀನಂದನಂ ಮಾಲೆಗಾಱಗೇರಿಯೊಳ್ ವಿಚಾರಿಸುತ್ತುಂ ಬಂದು (ಜಗವ. ೬-೦೦ ವ); ಪೂವಿನ ಪೊಟ್ತು ಸಾರಿವರೆ ಸಿಂಗರಗೈದನುರಾಗದಿಂ ಪ್ರಿಯಂ ಭಾವಜಮಮ್ಮಕೇಳಿಗೃಹಮಂ ಪುಗುತಂದು (ಮನ್ಮಪ. ೦೦-೯) ; ಪಗಲೊಳೆ ಚಂದದಿಂ ಮಲಗಿ ಹೂವಿನ ಹೊತ್ತಿನೊಳೆಬ್ದು . . . ಒರ್ವಳ ದೊತ್ತಗೆಯ್ದುದಳ್ (ಮಲ್ಲಿಕಾ. ೬-೪೮೭) ; ಸರಸಿಜಾಕ್ಷಿಯರು ಹೂವಿನ ಹೊತ್ತಿನೊಳಗಾಗ ಚರಿಸುವರಾ ಬೀದಿಯೊಳಗೆ (ಕಂಸವ. ೬-೦೦೨). **ಪೂವಿನ ಸುಗ್ಗಿ** = ಹೂವುಗಳ ಸಮೃದ್ಧಿಯ ಕಾಲ ; ವಸಂತಕಾಲ : ಪೂವಿನ ಸುಗ್ಗಿಯಲ್ತೆ ಪೊಸಮೇಟಂ (ಲೀಲಾವ. ೦೪-೪೩). **ಹೂವಾಗು**=೧. ಅರಳು ; ವಿಕಸಿತವಾಗು : ಮುತ್ತುಗನಿಡುಗೊನೆ ನಿಕರ ಹೂವಾದಂತೆ ನೆತ್ತರ ಬಣ್ಣ ತೋಱಸಲು ಚಿತ್ರಜನಾತ್ಮಸಂಭವನ ಕೀರ್ತಿಸಿದ ಖಳೋತ್ತಮ ಕಡುಮೆಚ್ಚಿ ನಗುತೆ (ಮೋಹತ. ೩೩-೪೦). ೨. ನಲಿ ; ಸಂತೋಷಪಡು : ಹೊಸಮನೆ ಹೂಡಿ ಸುಖಿಸುವ ನನ್ನ ಆಸೆ ಪೂರೈಸಿತೆಂದು ಹಿಗ್ಗಿ ಹೂವಾಗುತ್ತಿದ್ದೆ (ರೂಪಸಂ. ೦೩). ೩. ಮೃದುವಾಗು : ಮಗಳ ಪರಿಸ್ಥಿತಿಯನ್ನು ಕೇಳಿ ತಂದೆಯ ಮನಸ್ಸು ಹೂವಾಯಿತು (ರೂಪಿ). **ಹೂವಿನಕಾರ**=ಹೂವಾಡಿಗ (?) : ಶ್ರೀನಖರೇಶ್ವರದೇವರಲಿ ಮಾಡಿದ ಧರ್ಮ್ಮದ ವಿವರ . . . ಹಬರ ದೇವಸ್ವದ ಗಡಿಯಿಂದಂ ಪಡುವಲು

ತೆಂಕಲು ಮೂಱು ಕೇಯ್ಯ್‌ ಹಲರ ಹೂವಿನಕಾರ ದುಗುಣಸೆಟ್ಟಿಯು ಗಡಿಯಿಂದಂ ಬಡಗಲು ಪಡುವಲು (ಕರ್ನಾ. IX-ii, ೯೯೯-೦೨ : 1433). **ಹೂವಿನ ಕೆಲಸ**=ಕಲ್ಲು, ಮರ, ಬಟ್ಟೆ, ಗೋಡೆ ಮೊದಲಾದುವುಗಳ ಮೇಲೆ ಹೂವು, ಎಲೆ ಮೊದಲಾದ ಚಿತ್ರಗಳನ್ನು ಬಿಡಿಸುವ ಕೆಲಸ : ಕಡಕತೂರ ಸೇನಬೋವ ರಾಮರಸರ ಮಗ ಲಖಿಯನೂ ಜನಾರ್ದನ ದೇವರಿಗೆ ಹೂವಿನ ಕೆಲಸ ಮಾಡಿಸಿದನು (ಪ್ರಕಂ. ೧೯೬೬, ೬೨-೨ : 1754). **ಹೂವಿನ ಕೋಲು**=೧. ಹೂವಿನಿಂದ ಅಲಂಕೃತವಾದ ಕೋಲು. ೨. ಯಕ್ಷಗಾನ ಬಯಲಾಟಗಳಲ್ಲಿ ಒಂದು ಪ್ರಕಾರ: ☞ ಈ ಕಲೆಯನ್ನು ಅಭ್ಯಾಸ ಮಾಡಿದವರು ಶಿಷ್ಯರೊಂದಿಗೆ ನವರಾತ್ರಿಗೆ ಮನೆ ಮನೆಗೆ ಹೋಗಿ, ಪ್ರದರ್ಶನ ಮಾಡಿ ತೋರಿಸುತ್ತಾರೆ : ಆ ಶಿಷ್ಯರ ಕೈಯಲ್ಲಿ ಬೆಂಡಿನ ಹೂವುಗಳಿಂದ ಅಲಂಕೃತವಾದ ಒಂದೊಂದು ಕೋಲು ಇರುತ್ತದೆ. 'ಹೂವಿನ ಕೋಲು' ಎಂದು ಹೆಸರು ಇದಕ್ಕೆ. ಈ ಪ್ರದರ್ಶನ ಸಂಪ್ರದಾಯಕ್ಕೂ ಹೂವಿನ ಕೋಲು ಎಂದು ಹೆಸರು ಬಂದಿದೆ (ಯಕ್ಷಬ. ೨೦). **ಹೂವಿನ ಪಡಿ, ಹುವಿನ ಪಡಿ** = ಹೂವಾಡಿಗರಿಗೆ ಕೊಡುವ ಸಂಭಾವನೆ : ಶ್ರೀಗೋಮ್ಮಟದೇವರ ಪಾರಿಶ್ವದೇವರಿಗೆ ಪರ್ವನಿಬನ್ಧಿಯಾಗಿ ಹೂವಿನ ಪಡಿಗೆ ಬಾಕಿಹವಳಕ್ಕೆ ಕೊಲಗೆ ತಾ ೧ . . . ಯಿಂದ ಆಚಂದ್ರಾರ್ಕ್ಕರ್ ಕಾರಂಬರು ಸಲಿಸುವರು (ಎಕ. II, ೨೯೦-೨ ; ಸು. 1175) : ಶ್ರೀ ಗೊಮ್ಮಟದೇವರಯರ್ಚ್ಚನೆಗೆ ಹುವಿನ ಪಡಿಗೆ ಶ್ರೀಮನ್ಮಹಾಮಣ್ಡಲಾಚಾರ್ಯ್ಯರು (ಎಕ. II, ೨೩೯-೩ ; 1198 ?). **ಹೂವಿನ ಮಕ್ಕಳ ಕುಣಿತ** = ಒಂದು ಜಾನಪದ ಕಲೆ ; ☞ ಇದರಲ್ಲಿ ಕಲಾವಿದರು ಜಾತ್ರೆಯ ಸಮಯದಲ್ಲಿ ಕೆಂಪು ಹೂವಿನಿಂದ ಉದ್ದವಾದ ಮಾಲೆಯನ್ನು ಕಟ್ಟಿ ತಲೆ, ಕೊರಳು, ಮುಂಗೈ, ತೋಳು ಮೊದಲಾದುವುಗಳಿಗೆ ಹೂವಿನ ಅಲಂಕಾರ ಮಾಡಿಕೊಂಡು, ಹೂವಿನ ಹಾರ ಸುತ್ತಿದ 'ಅಂಬುಗತ್ತಿ'ಯನ್ನು ಹಿಡಿದು, ಕಲಶಗಳನ್ನು ಹೂವಿನಿಂದ ಸಿಂಗರಿಸಿ, ಡೋಲಿನ ಬಡಿತಕ್ಕೆ ಸರಿಯಾಗಿ ಗೆಜ್ಜೆ ಕಟ್ಟಿ ಹೆಜ್ಜೆ ಹಾಕುತ್ತಾ ವೃತ್ತಾಕಾರವಾಗಿ ಕುಣಿಯುವರು : ಉತ್ತರಕನ್ನಡಜಿಲ್ಲೆಯಲ್ಲಿ ವಾಸವಾಗಿರುವ 'ಪಟಗಾರ'ರಲ್ಲಿ ಮಾತ್ರ ಕಂಡುಬರುವ ಕಲೆ 'ಹೂವಿನ ಮಕ್ಕಳ ಕುಣಿತ' (ಕಜಕ. ೧೯೦). **ಹೂವಿನ ಮಳೆ**=ಪುಷ್ಪವೃಷ್ಟಿ : ನಳನೃಪನ ಕರೆಸಿದರು ಹೂವಿನ ಮಳೆಯು ಕಱೆದರು ದೇವದುಂದುಭಿ ಮೊಳಗಲರಸನ ಕೊರಳಿಗಿಟ್ಟರು ಪುಷ್ಪಮಾಲಿಕೆಯ (ನಳಚ. ೩-೬೭). **ಹೂವಿನ ಹಬ್ಬ** = ವಸಂತಕಾಲ : "ಹೂವಿನ ಹಬ್ಬ ಸುಗ್ಗಿ ಬಂದುದು ಬಸಂತಂ ದಲೆಂದೆನೆ ವಸಂತಕ್ಕೆ ಮಿಸುಗುವ ಪೆಸರ್" (ಶ್ಯಾಕೈ. ೦೭) : "ಹೂವಿನ ಹಬ್ಬವೆಂದು ಸುಗ್ಗಿಯು ಬಸಂತನುಮೆಂದು ಪೆಸರು ತಾನೊಂದುಗು ವಸಂತಾಖ್ಯದಲ್ಲಿ" (ಕಬ್ಬಿಮ. ೨೦). **ಹೂವಿನ ಹಾಸಿಗೆ**=೧. ಹೂವುಗಳಿಂದ ಮಾಡಿದ ಹಾಸುಗೆ ; ಪುಷ್ಪಶಯ್ಯೆ : ಶಶಿಕಾಂತ ವೇದಿಕೆಗಳಲ್ಲಿ ಹೂವಿನ ಹಾಸಿಗೆ[ಹಾಸುಂ. ೯]ಗಳಲ್ಲಿ . . . ನೆರೆದು (ಏವೇಕ. ೧೭೦). ೨. (ಆಲಂ) ಸುಗಮವಾದುದು; ಸುಲಭವಾದುದು ; ಸುಖಮಯವಾದುದು : ಜೀವನವೆಂದರೆ ಹೂವಿನ ಹಾಸಿಗೆಯಲ್ಲ (ರೂಢಿ).

[<ಪೂ₁ ./ ತಮಿ. ತುಳು. ಪೂ ; ಮಲ. ಪೂ. ಪೂವ ; ತೆಲು. ಪೂ. ಪುವ್ವು, ಪೂವ ; ಕೋಲಾ. ಪೂವ್ ; ಗದಬ. ಪೂ, ಪುವ್ವು ; ಮಲ್ತೊ. ಪೂಪು]

**ಪೂಂಡಿ** 'ಪುಂಡಿ' ನೋ.

**ಪೂಂಬಳಿ** ? (ನಾ). ಹೂವಿನ ಕಾಣಿಕೆ; ಪುಷ್ಪೋಪಹಾರ (?) : ಒರ್ವರ್ ಮುನಿದಿನಿಯನಂ ಕಿಳಿಪಲ್ ಕೆಳದಿಯಂ ನಂಬದೆ ತೆಂದೆಲರ್ಗೆ ಪೂಂಬಳಿಯಂ ಬಟ್ಟಿಯಟ್ಟುವಂತೆ ತನ್ನ ತಂಗಿಯನೆ ಬಟ್ಟಿಯಟ್ಟೆ (ಅಪಂಪು. ೯-೦೦ ವ).

[<ಪೂ₁ + ಬಳಿ₃ (=ಬಲಿ₃)]

**ಪೂಂಬೆ** (ನಾ). (ಕರಾ) ಬಾಳೆಯ ಹೂವು₁— ಮೋತೆ : ಬಾಳೆಗಿಡದ ಗೊನೆಯ ತುದಿಯಲ್ಲಿದ್ದ ಪೂಂಬೆಯನ್ನು ತಂದು ಅದನ್ನಾದರೂ ಬಜ್ಜಿ ಮಾಡೋಣ (ಬಾಳೆಗಿ. ೦೬೩) : ಬಾಳೆಗೊನೆಯ ತುಂಡಿಗೆ ನಮ್ಮಲ್ಲಿ 'ಪೂಂಬೆ' ಎಂಬ ಹೆಸರು (ಜಾಕೃಸು. ೯೩). [←ತುಳು. ಪೂಂಬೆ]

**ಪೂಂಬೆಕಿರೀಟ** (ನಾ). ಬಾಳೆಯ ಮೋತೆಯ ಆಕಾರದ ಕಿರೀಟ : 'ಪೂಂಬೆಯಂತಿರುವ ಕಿರೀಟ' ಎಂಬ ಅರ್ಥದಲ್ಲಿ 'ಪೂಂಬೆಕಿರೀಟ' ಎಂದೂ ಆಡುತ್ತಾರೆ (ಜಾಕೃಸು. ೯೩). [ಪೂಂಬೆ + ಕಿರೀಟ]

**ಪೂಂಬೊಲ** (ನಾ). ಹೂವಿನ ತೋಟ ; ಹೂದೋಟ : ಬಸವಸೆಟ್ಟಿ ಪದಿನಯ್ಗಳ ನೀರ್ಮ್ಮಣ್ಣು ಅಯ್ಗಳ ಪೂಮ್ಬೊಲನುಂ . . . ದೇಗುಲಕ್ಕೆ ಬಿಟ್ಟಂ (ಎಕ. IV, ಹಗ್ಗಡ. ೦೬-೦೦ ; 1021) : ಶ್ರೀದೇಕಬ್ಬೆ ಮಹಾದೇವರ್ಗ್ಗೆ ಬಿಟ್ಟ ಪೂಂಬೊಲಂ ತೋಣ್ಟಮಣ್ಣುಮುಮಂ . . . ಈ ಮಂಸದ[ಲ್] ಪುಟ್ಟಿದವರ್ ಕಾ[ದ]ಳಿಸುಗೆ (ಎಇ. VI, ೨೦೭-೩೩ : 1057). [<ಪೂ₁ + ಪೊಲ]

**ಪೂಕರೆ** (ನಾ). (ಕರಾ) ಅಲಂಕಾರದ (ಬಾಳೆಯ) ಕಂಬ : ಬುದ್ಧಿವಂತರ ಗದ್ದೆಯ ಬಿತ್ತವನ್ನು ದಂಡಿಗೆಯಲ್ಲಿಯೂ, ಬಿಲ್ಲರ ಗದ್ದೆಯ ಬಿತ್ತವನ್ನು ಕುಕ್ಕೆಯಲ್ಲಿಯೂ ತಂದು ಬಿತ್ತಿ, ಬಾಳೆಯ ಪೂಕರೆಯನ್ನು ಹಾಕಿದರು (ಕೋಟಿಚೆ. ೯); "ಗದ್ದೆ ಬಿತ್ತಿದ ತರುವಾಯ ಅದರ ಮಧ್ಯದಲ್ಲಿ ಒಂದು ಬಾಳೆಯ ಗಿಡವನ್ನು ತಂದು ಅಲಂಕರಿಸಿ ನಡುವ ಸಂಭ್ರಮ" (ಕೋಟಿಚೆ. ಕೋಶ). [←ತುಳು. ಪೂಕರೆ]

**ಪೂಕು**, ಪುಕ್ಕು₂ (ನಾ). ಸ್ತ್ರೀಯ ಜನನೇಂದ್ರಿಯ ; ಯೋನಿ : (*). **ಪುಕ್ಕು₂** : "ಭೂರುತ್ವದೊಳ್ ಯೋನಿಯೊಳ್ ಪುಕ್ಕು" (ಕಬ್ಬಿಮ. ೬೯).

[ದೇ. ॥ ತೆಲು. ಕೊಂಡ. ಪೂಕು]

**ಪೂಕುತಿತ್ತಿ** (ನಾ). ಶರಾಯಿ ; ಇಜಾರ ; ಚಲ್ಲಣ : (*). [?]

**ಪೂಗ** (ನಾ). ೧. ಗುಂಪು ; ಸಮೂಹ ; ಸಮುದಾಯ : "ನಿಕರಃ, ನಿಕಾಯಃ ... ಕದಂಬಕಃ, ಪೂಗಃ ... ಸ್ತೋಮಃ—ಈ ೩೯ ಸಮೂಹಂ" (ಹಲಾಯು. ೦೦೯-೦) ; ಪೂಗದ ನವನಾಗಲತಾಪೂಗದ ಫಲಪತ್ರದೊಡನೆ ಬಹುವಿಧಫಲದಿಂ ರಾಗಯುತಕ್ರಮವಿರಹನ ರಾಗಯುತಕ್ರಮಮನ ಮನಿಧುಜನರ್ಚಿಸಿದರು (ಕೃಷ್ಣಕು. ೦೯-೯); ರಾಘವನು ಮೈಮಱೆದ ಲಕ್ಷ್ಮಣ ಯೋಗನಿದ್ರೆಯ ತಾಳ್ದ ಕಪಿಗಳ ಪೂಗ ಜೀವನ್ಮುಕ್ತವಾದುದು (ತೊರೆರಾ. ೨೯-೬೩) ; ಶಿವಾಗಮಪೂಗದರ್ಥಮಂ ವಿವರಿಪ ಶೈವವರ್ಯವರರಿಂ ಮೆಱೆದತ್ತು ಪುರಂ (ರಾಜಶೇ. ೨-೯೩) ; ಇಂದ್ರಿಯಸುಖದ ಪೂಗಮಂ ಮಿಾರದ ಪೊಲ್ ನೆಗಳ್ವುದವಿರುದ್ಧಂ (ಶಂತ್ರಕು. ೦೨-೦೬). ೨. ಸಂಘ; ಸಮಿತಿ; ಮಂಡಳಿ: ಗುಂಪುಗಳ ಅಭಿಪ್ರಾಯದ ಮೇಲೆ ರಚಿಸಲ್ಪಟ್ಟ ಪೂಗ, ಶ್ರೇಣಿ, ಕುಲ ಎಂಬ ವಿಚಾರಣಾಸಮಿತಿಗಳಿದ್ದುವು. ರಾಜನ ನ್ಯಾಯಾಲಯವು ಈ ವಿಚಾರಣಾಸಮಿತಿಗಳ ಕಾರ್ಯಗಳನ್ನು ಪರಿಶೀಲಿಸುತ್ತಿತ್ತು (ನಾರದ. ೩೬). ೩. ಅಡಕೆ ; ಕ್ರಮುಕ : "ಪೂಗಂ ವ್ರಜಮುಂ ಕೌಂಗುಂ" (ಪಚ್ಚಕೋ. ೦೨೬-೫೦) ; ಬಾಲಸಹಕಾರತರು ನವಮಾಲಿಕಗಳಲಲಿತಪೂಗಭೂಜಾತಂ ತಾಂಬೂಲಲತೆಗೆಂಬವೋಲ್ ಸ್ಮರಲೀಲಂ ನಿಜತನಯನೆನ್ನ ತನುಜೆಗೆ ತಕ್ಕಂ (ಆದಿಪು. ೪-೨೮) ; ಲಸತ್ಪುಳಿನಮೋ ಪುನ್ನಾಗಮೋ ಪೂಗಮೋ . . . ಕದಿರೆ ಪೇಱೆಮೆಮ್ಮ ಪತಿಯಂ (ಸುಕುಮಾ. ೦೨-೨೦) ; ತುದಿಗೆ ಪರ್ವಿದೆಳೆವಳ್ಳಿಯಿಂದೆಸೆವ ಪೂಗಂ ನಾಡೆ ಕೊರ್ವಿ ತಿಂತಿಣಿವಣ್ಣಳಂತ ಕದಳಂ . . . ನಾಡೆ ಸಾರ್ವಕಾಲಂ ಕುಂದವು (ಚಂಪು. ೦೦-೨೩). ೪. ಒಂದು ಬಗೆಯ ಸಸ್ಯ ; **ಹೂವರಸೆ ಗಿಡ** : "ತೂದಃ, ಪೂಗಃ, ಕ್ರಮುಕಃ, ಬ್ರಹ್ಮಣ್ಯಃ, ಬ್ರಹ್ಮಮಾರು, ತೂಲಂ—೬ ಹುವ್ವರಿಸೆಗಿಡ, ಬೀಜವಿರುವ ಹುವ್ವರಿಸೇಗಿಡವೆಂದು ಕೆಲವರನ್ನುವರು" (ನಿಘಂಟಿ. ೦೨೦). [ಸಂ.]

**ಪೂಗಂಪು**, ಹೂಗಂಪು (ನಾ). ಹೂವಿನ ವಾಸನೆ; ಪುಷ್ಪಗಳ ಸುಗಂಧ,—ಸೌರಭ: ಪಾದರಿಪೂಗಂಪಿಂಗೆಱಪಾದರಿಪಳಿಗಳ ಕುಳಕ್ಕೆ ನಿರವಧಿರಾಗೋತ್ಪಾದಪಟುವಾಯ್ತು ವಿಳಸತ್ಪಾದಪಜಾತಿಯೊಳದೊಂದೆ ಸುಂದರಮಲ್ತೇ (ಶಬ್ದಮ.

೨-೯) ; ಸರದ ಪೂಗಂಪುಗಳ ಸೊಂಪುಗಳ ತಂಪುಗಳ ಸಿರಿಗಂಧ ಪನ್ನೀರೊಳು ಬೆರಸಿರ್ಪ ಚಳಿಯುದ . . . ಕೇರಿಗಳ ಭೂರಿಗಳ ಭೇರಿಗಳ ರಭಸದಿಂ ಪುರ ಮೆಸೆದುದು (ಕಂಕ. ೩-೩) ; ಸತತಕುಸುಮಿತತರುಲತಾಳಿಗಳ ಪೂಗಂಪ . . . ಪೊಚ್ಚ ಪೊಂದಾವರೆಗಳ ಧೂಳಿಗಳ ತನಿಗಂಪನುಂಡು ಮಿಂಡೆದ್ದ ಭೃಂಗಾಳಿಗಳ ಬಳಗಂ ಪರಿಯಲು (ಕೃಠಾ. ೩-೬). **ಹೂಗಂಪು :** ಅಸುಕೆಯ ಬನದ ಕಡೆಯಿಂದ ಉತ್ತಮದ ಹೂಗಂಪು ಬರುತಿರಲು (ಶಾಕಿರಾ. ೧೦-೯೯).

[ಪೂ₂ + ಕಂಪು]

**ಪೂಗಟ್ಟು**, ಹೂಕಟ್ಟು, ಹೂವುಕಟ್ಟು₁ (ಕ್ರಿ). ಹೂವುಗಳನ್ನು ಮಾಲೆಯಾಗಿ ರಚಿಸು,—ಹೆಣೆ : ಪರಡಕ್ಕವಾಜಿದೊಂದಜೊಳೆ ನೆಗಟ್ಟು ನಿರಂತರ ಸುಖಮಂ ಪಡೆವೆನೆಂಬ ನಿರ್ಬುದ್ಧಿ . . . ನಾರಿಲ್ಲದೆ ಪೂಗಟ್ಟುವೆನೆಂಬ ಪೆಗ್ಗವಿಲನಂ ಪೋಲ್ಕುಂ (ರಪುರಾಪು. ೩-೧೦೬). **ಹೂಕಟ್ಟು :** ಹೂಕಟ್ಟುವುದನ್ನು ನಿಲ್ಲಿಸಿ, ಹೂಮರಿಗಳನ್ನು ನೋಡಲು ಓಡಿ ಹೋಗಿದ್ದ ಚಿನ್ನಮ್ಮನಿಗೆ ಅವಳ ಅಜ್ಜಿ . . . ಆಜ್ಞೆ ಮಾಡಿದಳು (ಮಲೆಮ. ೨೭೦). **ಹೂವುಕಟ್ಟು₁ :** ಮನೆಯ . . . ಒಂದು ಮೂಲೆಯಲ್ಲಿ ಚಿನ್ನಮ್ಮ ಹೂವುಕಟ್ಟುವ ಕಾರ್ಯದಲ್ಲಿ ನಿರತಳಾಗಿದ್ದಳು (ಮಲೆಮ. ೨೬೯).

[ಪೂ₂ + ಕಟ್ಟು₁]

**ಪೂಗಣ್**, ಹೂಗಣ್ಣು, ಹೂವುಗಣ್ಣು (ನಾ). ೧. ತಾವರೆಯಂತೆ ಚೆಲುವಾದ ಕಣ್ಣು : 'ಪೂಗಣ್ಣ' ಪರಾ. ೨. ಹೂವು ಬಿದ್ದ ಕಣ್ಣು ; ಮೋತಿಬಿಂದುವಿರುವ ಕಣ್ಣು. ೧, ೨ : ಅಸಿದೊಡಲ ಪೂಗಣ್ಣ ಪೆಣ್; ಸಸಿವೊಗದ ಕಿಸುವಾಯ ಪುಸಿನಡುವಿನರಸಿ (ರಾಮಾಶ್ವ. ೬೭-೨೩). **ಹೂಗಣ್ಣು :** ೨. ಹೂಗಣ್ಣಿಗೆ ನಾಟ ಔಷಧಿ ಮಾಡಲು ಹೋಗಬಾರದು (ಕೂಶ). **ಹೂವುಗಣ್ಣು :** ೨. ಹೂವುಗಣ್ಣಿಗೆ : — ನೀಲಿಯ ರಸವಂ ಹಚ್ಚಿದರೆ ಹೂವುಗಣ್ಣು ಮಾಣ್ಗುಂ (ಚಿಸ್ವಂ. ೭೯). [ಪೂ₂+ಕಣ್]

**ಪೂಗಣ** (ನಾ). ಹೂಗೊಂಚಲು ; ಪುಷ್ಪಗುಚ್ಛ : ಸ್ಥಿರ ಹರಶಕ್ತಿ ದೇವಮುನಿಪ್ರೋತ್ತಮಹಸ್ತದೆ ದಾನದೀಕ್ಷೆಯುಂ ಸುರಕುಜವೀಕ್ಷಿಸಲು(ಲ್) ತಳೆದಪ್ಪೋಲೆಸುಗುಂ ಸುರಶೈಳದಲ್ಲಿ ಬಂಧುರತರವಪ್ಪ ಕೆಂದಳಿರೆ ಕೆಂಜೆಡೆ ಪೂಗಣ ಲಾಕುಳಂ ಸುಭಾಸುರವೆನಿಪಾ ವಿಭೂತಿಯೆ ಪರಾಗವಿಭೂತಿ ಫಳಂ ಕಮಂಡಳವು(ಂ) (ಎಕ. IV, ೦-೯೦ ; 1204). [ಪೂ₂+ಗಣ]

**ಪೂಗಣೆ**, ಹೂಗಣೆ, ಹೂವುಗಣೆ (ನಾ). (ಮನ್ಮಥನ) ಹೂವಿನ ಬಾಣ : ಅಂತು ತೊಟ್ಟ ಪೂದುಡುಗೆ ಮದನನ ತೊಟ್ಟ ಪೂಗಣೆಗೆಣೆಯಾಗಿರೆ (ಶಂಕರಾ. ೨-೧೬ ವ) ; ಪೂಗಣೆ ನಾಂಟಿದಂತೆ ತನು ಕಂಪಿಸುತಿರ್ಪುದು (ಕಾದಂಬ. ೬೯೭) ; ಮನ್ಮಥನಾಗ ಪೂಗಣೆಗಳನು ಸಂಧಿಸಿಯೆಚ್ಚನಂಗನೆಯು (ನಳಚ. ೦-೩೭). **ಹೂಗಣೆ :** ಎನ್ನ ತರಳಕಟಾಕ್ಷೇಕ್ಷಣಯುಗವಿರ್ದಂತೀ ಹೂ[ಪಾಠಾಂ. ನನೆ, ಪೂ]ಗಣೆಗಳ ಪರ್ಯಂತವೇಕೆ ಮಕರಪತಾಕಾ (ಗಿಂಕ. ೭-೩೩) ; ಮದನ ಮಸೆದೋಜಿದನು ಹೂಗಣೆ ಹೃದಯವನು ತಾಗಿದುದು (ಕುಮ್ಯಾವ. ೨-೩) ; ಹೂಗಣೆಯ ಹರವರಿಯನುಗುಳುವ ಸೋಗೆಗಂಗಳ ಬೆಳಗ ಹಸರಿಸಿ ರಾಗರಸದೊಳು ಮೂಡಿ ಮುಳುಗಾಡಿದಳು ಜಿನದತ್ತೆ (ಸಾಳ್ವಭಾ. ೩-೨೩). **ಹೂವುಗಣೆ :** ಬನವೆಣ್ಣೆ, ನಿನ್ನೊಳೇನಿದೆ ಎನಗೆ ಎಣೆಯಾಗಿ ? ಮೋಹನ್ನಿರ್ದಗೆ ಹೂವುಗಣೆಯಾಗಿ ? (ಕಜ್ಜಾಂಗ. ೨೯-೬೭೬).

**ಪೂಗಣೆಯವ** = ಪೂಗಣೆಯ : ಪೂಗಣೆಯವನ ಕಿಚ್ಚು ನೂರ್ಮಡಿಯಾಗಿ ಮುಂದೆಯುಪಾಯವಂ ಪರಿಯೋಗಿಸುವುದದನಜಿದು ಕೋಮಳೆ . . . ಮರುಗಿ (ಬಸಪು. ೯೩-೩). [ಪೂ₂ + ಕಣೆ₁]

**ಪೂಗಣೆಯ**, ಹೂಗಣೆಯ (ನಾ). ಹೂವಿನ ಬಾಣಗಳುಳ್ಳವನಂ ; ಮನ್ಮಥ : "ಪೂಗಣೆಯನಿಂಗೋಲ್ವಿಲ್ಲನಕ್ಕುಂ" (ಕಾವ್ಯಾವ. ೯) ; ಪೂಗಣೆಯನ ಚಾಮರವಂ ಸೀಗುರಿಯಂ ಪಿಡಿವಳಂತೆ ಸೆಳೆಗೊಂಬುಗಳಿಂಬಾಗೊತ್ತಿ ಗುಜ್ಜುಮಾವಿನ ಪೂಗೊಂಚಲನುಡಿದು ಪಿಡಿದಳಿ ಪೆರಸೊರ್ವಳ್ (ಲೀಲಾವ. ೦೩-೮೨) ; ಮುಟ್ಟಿತು ಸುಟ್ಟಿತು ತಿಂದು ತೇಗಿದತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ (ಗಿಂಕ. ೬-೯೭) ; ಎಸೆದುದು ಪೂಗಣೆಯನಾಡುಂಬೊಲನಪ್ಪೊಲು ತಕಪ್ಪರೋದ್ಯಾನ (ಕೂರಗಾ. ೦-೯-೦೩). **ಹೂಗಣೆಯ :** ಸುಗ್ಗಿಯಲಿ ತುಂಬುವೆರೆ ತೆಂಗಾಳಿ ಹೂಗಣೆಯರೊಡ್ಡಿದುರುಳಿಗೆ ಸಿಲುಕಿ ಅಳುಕದೆ ಇಹರು ಉಂಟೇ (ಶಂಪ್ರಸ. ೯೩-೦೭). [ಪೂಗಣೆ + — ಅ₇]

**ಪೂಗಣ್ಣ** (ನಾ). ೧. ತಾವರೆಯಂತೆ ಚೆಲುವಾದ ಕಣ್ಣುಗಳುಳ್ಳವನು ; ಕಮಲಲೋಚನ ; ವಿಷ್ಣು. ೨. ಕಣ್ಣಲ್ಲಿ ಹೂವು ಬಿದ್ದವನು ; ಕಣ್ಣಿನ ಕಾಚರೋಗವುಳ್ಳವನು. ೧, ೨ : ಅಳಿಯಂ ಪೂಗಣ್ಣನನ್ನೀ ಮಗಳೆ ಚಪಳೆ ಪುತ್ರಂ ಕರಂ ರಾಜಯುಕ್ಷ್ಮಾಕುಳನೆನ್ನೈಶ್ವರ್ಯಮಂ ನಿರ್ಜರರೆ ಕವರ್ದರ್ . . . ಎಂದೆಂದೊಳಗಂಭೋರಾಶಿ ಚಿಂತಾಗ್ನಿಯನೆ ತಳೆದಪ್ಪೋಲೌರ್ವನಂತಸ್ಥಮಿಕರ್ಗಂ (ರಾಜಶೇ. ೦-೦೦೨). [ಪೂಗಣ್ + — ಅ₇]

**ಪೂಗನಸು**, ಹೂಗನಸು (ನಾ). ಹಿತಕರವಾದ ಸ್ವಪ್ನ ; ಸುಖಕರವಾದ ಕನಸು : ಪಣ್ಬಾಗಲಿರ್ಪೊಂದು ಸಿರಿಯ ಪೂಗನಸಿಂದು ತನ್ನಿಷ್ಟದಾದರ್ಶವಂ ಪೂಜಿಸೋಲೈಸಿ ಬೆಂಬಾಲಿವುದೊ (ಶ್ರೀರಾಮಾ. ೦೨೭-೬೨). **ಹೂಗನಸು :** ಇಡಿ ವರುಷದ ಹೊಸ ಹರುಷಕೆ ಹೂಗನಸಿನ ತೇರು (ವಂಪು. ೯-೩).

[ಪೂ₂ + ಕನಸು]

**ಪೂಗಫಲ**, ಪೂಗಫಳ (ನಾ). ಅಡಕೆ ; ಕ್ರಮುಕ : ಅತಿಮಧುರ ಪೂಗಫಲಂಗಳೊಳಂ ಸರಸನಾಗವಲ್ಲೀದಳಂಗಳೊಳಮೆಸೆವ ತಾಂಬೂಲಿಕಾ ನಿಕೇತನಂಗಳೊಳ್ (ಶಿಶೃಕ. ೨-೯೦ ವ). **ಪೂಗಫಳ :** ಕುಲುಸೆಯ ದುಗ್ಧದೊಳೊಂದಿರೆ ಪಲುವುಂ ಸೂಟ್ ತೊಯ್ದ ಪೂಗಫಳಮಂ ಮೇಣ್ ಪಿಪ್ಪಲಿಯಂ ಬಿಸುನೀರೊಳ್ ಕುಡಿಯಲೊಡಂ ಪ್ಲೀಹಾದಿ ಜಠರರೋಗಂ ಕೆಡುಗುಂ (ಲೋಕೋಪ. ೯-೦೨೩) ; ಗಿಳಿ ಗಿಳಿವಣ್ಗೆ ಪೂಗಫಳಮಂ ಕಳಹಂಸೆಗೆ ಹಂಸನಬ್ಜಕಂದಳಮನಿಭಂ ಕರೇಣುಗೆ ಲವಂಗದಳಂಗಳನೀವ ಚಿತ್ರಮಂ ತಳೆದು ವಿಳಾಸಮಂ ತಳೆದ . . . ಮಣಿಭಿತ್ತಿ ಚೆಲ್ವನೊಳಕೊಂಡೊಳಕೊಂಡುದಪೂರ್ವಭಿತ್ತಿಯುಂ (ಮಲ್ಲಿಕ. ೨-೩೩). [ಸಂ.]

**ಪೂಗಫಳ** 'ಪೂಗಫಲ' ನೋ.

**ಪೂಗರಡಿಗೆ** (ನಾ). ಹೂವಿನ ಬುಟ್ಟಿ ; ಪುಷ್ಪಕರಂಡಕ : ಲಿಂಗವಂ ಮುಟ್ಟಿ ಪುಷ್ಪದ ದಂಡಿ ಲಿಂಗವಂ ಪೂಗರಡಿಗೆಯಲಿ ಬಡಿದು ಅಂಗುಗಯ್ಯನ ಗುರುವ ಶಿವ ತೋಜಿ (ಕಬಸ. ೩೭-೪೭). [ಪೂ₂ + ಕರಡಿಗೆ (<ಕರಂಡಿಗೆ)]

**ಪೂಗಲ್ಲು**, ಹೂಗಲ್ಲು (ನಾ). ಹೂವಿನಾಕಾರದ ಪಾಣಿಪೀಠದ ಕಲ್ಲು : ಅಗಳುಂ ನಿಮ್ನೋತ್ತಮಾಂಗದ ಭಾಗಕೀ ಕಲ್ಲುಗಳ ಪೂ[ಪಾಠಾಂ. ಹೂ]ಗಲ್ಲಾಗಿಯೆಲ್ಲಾ ದೇಗುಲಂಗಳೊಳಿರಿಸಿ ಪೂರೆ (ಬಸಪು. ೩೦-೭೩) ; ಗಮನಿಸುವ ಲಿಂಗಸಮುಚ್ಚಯಂ ಪೂಗಲ್ಲನಾಜ್ ಕಿಡೆನೂಂಕಿ ಪೊಜಮಡುವ ಅಚ್ಚಲಿಂಗವು (ಬಸಪು. ೩೭-೯೩). **ಹೂಗಲ್ಲು :** ಶಿವನ ಸದ್ಭಕ್ತನೆಂದೆನಿಪ ವೀರಣ್ಣನುಜ ಶಿವನಿಳಯದಲ್ಲಿರ್ದ ಹೂಗಲ್ಲ ಹಾಜಿಸುತ ಶಿವಲೋಕಕೈದಿದೆಡೆಯಂ ನೋಡಿ (ಸಿದ್ಧೇಶ. ೩-೨). [ಪೂ₂ + ಕಲ್ಲು (<ಕಲ್₂)]

**ಪೂಗವನ** (ನಾ). ಅಡಕೆಯ ತೋಟ : ಆ ಪುರದುಪವನದೊಳ್ . . . ಪಂಚಬಾಣ ಕೃಪಾಣ ಪಟ್ಟದೊಡನೆ ಕೊನೆಯ ಬಿಣ್ಪಂ ಜೋನೆದು ತೂಗುದ ಪೂಗವನವಿಲ್ಲ (ಶಂರಾಮಾ. ೧-೦೦೭ ವ) ; ಫಳಭರದಿಂ ಮನಂಗೊಳಿಪ ಪೂಗವನಂ . . . ಬನವಾಸಿದೇಸದೊಳು (ಎಕ. VIII, ಸೊರಬ. ೨೭೭-೯೩ ; ಸು. 1165) ; ಪರಿಪಕ್ವಾಂಬುವನೂಡಿ ಪೂಗವನಮಂ ಕಿಬ್ಜಿಕ್ಕಿ . . . ಮೆಜಿದುದುರ್ವೀಬಂಧುರಂ ಸಿಂಧುರಂ (ಶಿಶೃಕ. ೩-೭೯). [ಸಂ.]

**ಪೂಗವಸರ** (ನಾ). ಅಡಕೆಯ ಅಂಗಡಿ : ನಾಗವಲ್ಲಿಯ ದಲದೊಡಗೂಡಿ ನಲ್ಲರ ಬಾಯ್ದೆಜೆಗಳ ರಾಗಮಾಡುವ ಪೂಗವಸರ (ಪಾರ್ಶ್ವ. ೦-೦೦೨).

[ಪೂಗ + ಪಸರ]

**ಪೂಗಾರ,** ಹೂಗಾರ (ನಾ). ಹೂವು ಮಾರುವವನು; ಹೂವಾಡಿಗ : ಪೂಗಾರಗೊಲಿದ ಬಂಡುಗಾರ ಗೊಲ್ಲ (ಬಿದಾಳ್. ೦೩೩-೩) ; ಪೂಗಾರಗೊಲಿದ ಭಂಡುಗಾರ ಗೋವ (ಬಿಸ್ತೋಸು. ೨೬-೩). **ಹೂಗಾರ :** ಗೊರವರು–ಇವರಿಗೆ ಕೆಲವು ಕಡೆಯಲ್ಲಿ ಜೀರರೆಂತಲೂ ಕೆಲವು ಕಡೆಯಲ್ಲಿ ಹೂಗಾರರೆಂತಲೂ ಅನ್ನುವರು (ಕಥಾಗ. ೦೦೬) ; ಆ ಹೂಗಾರರವನು ಅವರಿಗೆ ಇರಲಿಕ್ಕೆ ಒಂದು ಕೋಣೆಯನ್ನು ಕೊಟ್ಟನು (ರಾಶಕಂ. ೦೬) ; ಹಳೆಯ ಕವಿತೆಯ ಬಂಧವು ಹೂಗಾರನು ಕಟ್ಟಿದ ಬಾಸಿಂಗದಂತಹನು (ಕಾಹಿಪ ೯೬).

[ಪೂ$_3$ + –ಆರ$_1$ (< –ಕಾರ)]

**ಪೂಗಿ** (ನಾ). ಅಡಕೆಯ ಮರ : ನಾಳಿಕೇರ ಪೂಗಿಯು ಫಲ ಪನಸೀಲೆ ಬಾಳೆ ಮಾವು ಮಾತುಳುಂಗ ಶಾಲಿಯಾದಿ ವನವೆಲ್ಲಾ ಕಡೆಯಲಿ ಲೀಲೆಯಿಂದ ಬಳಸಿಹವು (ದ್ಯಾದಶಾ. ೦೦-೯೯೩). [ಸಂ. ಪೂಗೀ]

**ಪೂಗಿದ** 'ಪೂಗಿಡು' ನೋ.

**ಪೂಗಿಡು,** ಪೂಗಿಪ, ಹೂಗಿಡ, ಹೂಗಿಡು (ನಾ). ಹೂವಿನ ಗಿಡ ; ಹೂವು ಬಿಡುವ ಸಸ್ಯ : ಕರಪುಷ್ಕರಂಗಳಿಂ ತಂದು ಪೂಗಿಡುಗಳ್ಗೆ ನೀರೆರೆವ ಮಾಲೆಯಾನೆಗಳಿಂ (ಕಾದಂಕ್ಕ. ೨೨೦); ಪೂಗಿಡುವೆಂಬ ಪೆಸರಿಂಗೆ ಕೊಳವಳ್ಳಿಯ ಗಿಡುಗಳಂ ನಟ್ಟು ನೀರೆರೆದು ನಡೆಪೆ ಮಲ್ಲಿಗೆಯ ಪೂವಿನಂತಾಗಲಾರಿಯದು (ಧರ್ಮಾಕ್ಕ. ೬-೭೯); ಓಲಗಶಾಲೆ ಪೂಗಿಡುಗಳೊಳಿಗೆ ಜೇವಣಶಾಲೆ ಮತ್ತ ಭೃಂಗಾಳಿಗೆ . . . ಎನಲೊಪ್ಪುವುವಲ್ಲಿಯ ಪುಷ್ಪವಾಟಿಗಳ್ (ಧರ್ಮಕ್ಕ. ೨-೫೦). **ಪೂಗಿಡ :** ಪೂಗಿಡದೊಳ್ ಸಿಲ್ಕಿದೊಡು ನಾರುಡೆಯುಂ ಬಿಡಿಸುತ್ತೆ ತಿರುಗಿ ನೋಡಿದಳೆನ್ನಂ (ಕಾಳಿಂಕ. ೨೬-೯೬). **ಹೂಗಿಡ :** ನಲ್ಲಿಯಂ ನಗುನಗುತ ಹೂಗಿಡಂ ತಲೆದೂಗುತಿಲ್ಲಿ ಬಾಬಾರೆಂದು ಕರೆಯುತಿಹುದಲ್ಲಿ (ಕಾಲೂರ. ೦೦೨-೨೩೨). **ಹೂಗಿಡು :** ಕೆರೆಬಾವಿ ಹೂಗಿಡುಮರಂಗಳಲ್ಲಿ ಗ್ರಾಮ ಮಧ್ಯಗಳಲ್ಲಿ ಚೌಪಥ ಪಟ್ಟಣಪ್ರದೇಶದಲ್ಲಿ ಹಿರಿಯಾಲದ ಮರದಲ್ಲಿ ಮನೆಯ ಮಾಡಿ (ಬಸವ. ೫೫೬) ; ಆವ ಗಿಡುವಂ ನೋಯಿಸಿದಡಂ ಭಾವಿಸುವಡಿದು ಹಿಂಸೆಯೆನುತಂತೋವಿ ಹೂಗಿಡುಗಳ ಕೆಳಗೆ ಸುತ್ತುವರೆ ಸಾರಿಸುತ . . . ತಮತಮಗೆ ಧರೆಯ ಮೇಲೆ ಬಿದ್ದೊಂದೊಂದರಳನಾ ಲೋಲದುಸಿದಲಿ ತಂದು ಶಿವನಂ ಕಾಲ ವೇಳೆಯನರಿದು ಪೂಜಿಪನು (ಶಸಕ್ಕ. ೩೪-೦೦). [ಪೂ$_3$ + ಗಿಡು]

**ಪೂಗಿಱು** (ಕ್ರಿ). ಹೂವೆಂದು ಭ್ರಮಿಸು ; ಪುಷ್ಪವೆಂದು ಭಾವಿಸು : ಪೂಗೊಯ್ವು ಖಚರ ಶಿಖರದ ಪೂಗಿಡುಗಳ ಕೊಂಬಿನಲ್ಲಿ ತೊಡರ್ದಿರೆ ಮಿನ್ನಳ್ ಪೂಗೆತ್ತು ತುಡುಂಕುವಳ್ (ಲೀಲಾಹ. ೯-೩೯). [ಪೂ$_3$ + ಗಿಱು]

**ಪೂಗು, ಹೂಗು** (ನಾ). ಹೂವು; ಪುಷ್ಪ : ಉಡಿಯ ಲಿಂಗದ ಬೋಳುದಲೆಗಳ ಪಿಡಿದರಿಸಿನದ ಪಾತ್ರೆ ಕಿವಿಯೊಳು ಜಡಿವ ಪೂಗಿನ ಕಂಬಳಿಯ ಟೊಪ್ಪಿಗೆಯ ಮೈಲಾರ . . . ಗೊರವರ ಗಣನಿವಿರರು ದೀವಟಿಗೆಯರು ಪೊಗ್ಗತತಿ ಗೂಡಿ ಬಂದು (ಹರಿಶಾ. ೦೩-೩೪). **ಹೂಗು :** " ಹೂಗೆಂಗುಂ ಹೂವಿಂಗೆ " (ಶಶಸಂ. ೦೬). [< ಪೂ$_3$]

**ಪೂಗುಡಿ** (ನಾ). ೧. ಹೂವಿನ ತುದಿ, –ಕೊನೆ : ರತಿಗವತಂಸಮಾದ ತಳಿರಾವ ಮರಕ್ಕೊಳವೆನ್ನ ಬಲ್ಲೆ ಸಂಗತಶರಮಾದ ಪೂಗುಡಿಪಳಾವ ಮರಕ್ಕೊಳವು . . . ಎಂದು ಮನ್ಮಥಂ ಸ್ತುತಿಯಿಸಿ ಮಾಮರಕ್ಕೆ ಕುಜರಾಜಸಮಾಖ್ಯೆಯನಿತ್ತನಲ್ಲಿಯಿಂ (ಚಂದ್ರಕ್ಕ. ೬-೯೩). ೨. ಹೂವಿನ ಗೊಂಚಲು; ಪುಷ್ಪಸ್ತಬಕ : ಪದಿನಾಱುಂ ಚಮರಜಮಂ ಪದಿನಱುವರ್ ಖಚರಕನ್ಯೆಯರ್ ಪೂಗುಡಿವೇಱಿದ ಜಂಗಮಲತೆಗಳೆನಲ್ ಬಿದಿರ್ದಿಕ್ಕಿದ ರೊಡನೆ ಮದನನಂಬಿಕ್ಕುವಿನಂ (ಶಂಶಾಪು. ೦೨-೨೩) ; ಅಗಲೆಡೆಗಿಱಿದ ಪೂಗುಡಿಯ ಗುಡಿಗಳೊಳಂ . . . ಪಾದರಿಯ ಚೌಕಿಗೆಗಳೊಳಂ ಬಟ್ಟ ಬೀಡು ಬರೆದಂತೆ ಕಂಡರಿಸಿದಂತೆ ಕಣ್ಗೆಸದಿರ್ದುದು (ಕಬ್ಬಿಕಾ. ೨೩೯) ; ಪಲ್ಲಟಿಸಿತ್ತು ಪೂಗುಡಿಗಳಂ ಗಿರಿಮಲ್ಲಿಗೆ ಬೀತು ಬಿನ್ನನಾಯ್ತೊಳ್ಳಿಹ ಮೊಲ್ಲೆ ಸೋಗೆನವಿಲೊಲ್ಲದೆ ಮಾಣ್ದುದು ನವ್ಯನಾಟ್ಯಮಂ . . . ಶರದಾಗಮನ ಪ್ರವೇಶದೊಳ್ (ಜಾರಕ್ಕ. ೯-೬೩). [ಪೂ$_3$ + ಕುಡಿ$_3$]

**ಪೂಗುವರ** (ನಾ). ಕಮಲದ ಹೂವಿನ ಪುತ್ರ ; ಬ್ರಹ್ಮ.

**ಪೂಗುವರತತ್ತಿ** = ಬ್ರಹ್ಮಾಂಡ : ನೀರ್ವರ್ಗಳ ಗಂಡನು ಪೆಂಡತಿ ಯೊಳಾಳ್ದ ಪನ್ನತಿಕೆಯಿಂ ಪರಿಜುವೆತ್ತ ಬಿಸುಗೊರಲ ರಕ್ಕಸು ಪೂಗುವರ ತತ್ತಿಯಂ (ಚಿಕಪ್ರಕ್ಕ. ೩-೩). [ಪೂ$_3$ + ಕುವರ$_3$]

**ಪೂಗೊಂಚಲ್,** ಪೂಗೊಂಚಲು, ಹೂಗೊಂಚಲು (ನಾ). ಹೂವುಗಳ ಗೊಂಚಲು : " ಆ ಗುಚ್ಛ ಗುಚ್ಛಕಂ ಸ್ತಬಕಮೆಂದೆನಲು ಪೂಗೊಂಚ ಲಕ್ಕು " (ಶಬ್ದಗಣ. ೩೩-೬); ಮಾಧವೀಲತೆಯನೆ ಸಂದದಿರ್ವರ್ತ್ತ್ತಿಯ ಪೂಗೊಂಚಲ ಪುದುವಿನೊಳೆಱಗಿದ ಮದಾಳಿಗಳ್ ಮಱೆದವುವೇ (ಅಂಕ್ಕ. ೦೦-೦೦೩) ; ಪೂಗೊಂಚಲಿಂದೆಯ್ದ ಹೇಮನಿಭದ್ಯೋತದಿನೊಪ್ಪುತಿರ್ಪ ಕಳಮಕ್ಷೇತ್ರಂಗಳಾ ದೇಶದೊಳ್ (ಕುಸುಮಾ. ೨-೯೨) ; ಲಂಚವಿಮಾದೆ ಪುರುಳಿ ನಿನಗೆ ಪೂಗೊಂಚಲುಂ (ಕಬ್ಬಿಕಾ. ೩೦೯). **ಪೂಗೊಂಚಲು :** ಮುಂದೆ ಕಂಡನು ದೂರದಲ್ಲಿಹ ನಂದನದ ಮೇಲೆ ತರುನಿಕಾಯದ ಸಂದಣಿಯ ಪೂಗೊಂಚಲಿನ ಪಲ್ಲವನಿಕಾಯದಲಿ ಗೊಂದಣದ ತರುಮಧ್ಯ ದಲ್ಲಿಹುದೊಂದು ಜಂಬೂವೃಕ್ಷ ಮೆಱೆದಿರೆ ನಿಂದು ನೋಡಿದ ಭೀಮ (ಕುಮಾ್ಯ. ೩-೦೨) ; ಪರಿಮಳಿತ ಪೂಗೊಂಚಲಿನ ಕೆಂಪೊರೆದ ಕಿಸಲಯ ವಲ್ಲರಿಯ . . . ಕೊಂಡಾಡಿದನು ಮನದಣಿಯೆ (ಕೂಠರಾ. ೫-೨-೯೧); ಕರುಳ ಪೂಗೊಂಚಲು ಖಂಡದ ಕಳಿಕೆ ಚಾಧುರದಲು ಶಾಖೆಗಳಾಗೆ ಪಿರಿದು ಚೆಂದೊರಳೆದಳ ಕಬಂಧದ್ರುಮ ಮೆಱೆದುವು ಖಡ್ಗಚೈತ್ರದಲಿ (ಕಂಶಪ. ೦೩-೫೦). **ಹೂಗೊಂಚಲು :** ಕರುಳ ಹೂಗೊಂಚಲಿನ ಮಾಲೆಯ ಬಿರಿಮುಗುಳ ನವಖಂಡದಿಂಡೆಯ ಕರತಳದ ತಳಿರೆಲೆಯ . . . ರಣವನ ವೆಸೆದುದೀತನ ಖಡ್ಗಚೈತ್ರದಲಿ (ಕುಮಾರದ್ರೋ. ೬-೯೨) ; ನಿನ್ನ ಸ್ಪರ್ಶ ಮಾತ್ರದಿಂದ ಪಲ್ಲವ — ಪುಲಕ ಪಡೆದೆ, ಕಂಪಿನ ಕಂಪನ ಪಡೆದೆ, ಹೂಗೊಂಚಲ ರೋಮಾಂಚನ ಪಡೆದೆ ! (ಕರೊಡ್ಡೋಂ. ೨೬-೨೬). [ಸಂ.]

**ಪೂಗೊಂಚಲು** ' ಪೂಗೊಂಚಲ್ ' ನೋ.

**ಪೂಗೊಯ್,** ಹೂಕೊಯ್, ಹೂಕೊಯ್ಯು (ಕ್ರಿ). ಹೂವುಗಳನ್ನು ಬಿಡಿಸು,–ಕಿರಿ : ಮರನ ಮೇಗಿರ್ದು ಪೂಗೊಯ್ವ ವಸಂತಕನೆಂಬ ಮಾಲೆಗಾಱನರಸನ ಸಾವಂ ಕಂಡು . . . ಭಯಸ್ಥನಾಗಿ (ವಡ್ಡಾರಾ. ೦೫೦-೨೩); ನಿಲುಕಿ ಪೂಗೊಯ್ವ ಲಲಿತಾಂಗಿಯ ಬಟ್ಟಬಲ್ಮೊಲೆಗಳಂ ಪೊಱಲಾಱದಸಿಯ ಸೆಳೆನಡುದಮಿ ಶಿಥಿಲು (ಕ್ಕಬಿಪಾ. ೯-೦೯) ; ಪೂಗೊಯ್ಯುದ ಸರಸಿಜಾನನೆ ಪೊಗಲ್ ನೆರೆ ಮುಗಿದುದಿಲ್ಲ ಬಂಧನಕೋಶಂ . . . ನಾಡೆ ಕಾಣೆಪುದಿನ್ನುಂ (ಕಾಕುಂತ. ೩೩-೫೬). **ಹೂಕೊಯ್ :** ಹೊಲಮನೆಯೊಳ್ಕೊಲವುಗಳ ಕಣಿ ಕಣಿಸಿ ಹೂಕೊಯ್ದು . . . ಮುಡಿಯುವಳ್ ನೇದು (ಕಾಲೂರ. ೩೩-೬೨). **ಹೂಕೊಯ್ಯು :** ನಾನು ಮಾಮರವನಪ್ಪಿರುವ ಮಲ್ಲಿಗೆಯ ಹೊದರ ಬಳ್ಳಿಯಲಿ ಹೂಕೊಯ್ಯುತಿದ್ದಾಗ ಅಲಿಸಿದೆ (ಚಂದ್ರಸ. ೬೩-೩).

[ಪೂ$_3$ + ಕೊಯ್]

**ಪೂಗೊಳ,** ಹೂಗೊಳ (ನಾ). ತಾವರೆಗಳುಳ್ಳ ಕೊಳ; ಕಮಲಸರೋವರ: ತಿಳಿಗೊಳನಂ ಪೂಗೊಳನನದಂ ನೆಗೞೆ ಮುಳಿದು ಕೊಳ್ವ ಬಳಸೆ ನಾನದಂ (ಕವಿರಾ. ೨-೦೩೯) ; ಎಂಟುಂ ಕೋಡವಱೊಳಂತೊಂದೊಂದಱೊಳ್ ಪೂಗೊಳಂ ನೆಗೞ್ದೊಂದೊಂದೆಸೆದಿರ್ಕುಂ (ಅಂಕ್ಕ. ೬-೫೩); ಸಿರಿಯ ಮೊಗರಸದ ಪೊಸ ಮೈಸಿರಿಯೆನಿಕುಂ ಪೂಗೊಳಂಗಳ್ (ಶಂಶಾವಿ. ೦-೬೯). **ಹೂಗೊಳ :** ಸುಳಿದುದಾ ಮೃಗಪೋತ . . . ಅವನೀನಂದನೆಯ ಹೂ[ಶಾಕಾಂ. ಪೂ] ಗೊಳನ ಹೊರೆಗಾಗಿ (ಕೂಠರಾ. ೩-೯-೦೮). [ಪೂ$_3$ + ಕೊಳ$_2$]

**ಪೂಗೋಲ್,** ಪೂಗೋಲು (ನಾ). ಹೂವಿನ ಬಾಣ ; ಪುಷ್ಪಬಾಣ : ಎಲ್ಲರುಂ ಬಾಯ್ಪಡೆ ಗಡಣದ ಪೂಗೋಲ್ಗಳ್ಕೈತಂದುವಾಗಳ್ (ಕಬ್ಬಿಕಾ. ೩೦೩) ;

ಗೀದೇಜಿಗಳಲ್ಲಿ ಕರ್ವಿಲ್ಲು ಮೊರೆವ ಬಾಲಳಿವದೆ ಪೂಗೋಲ್ಗಳಿಲ್ಲಿ (ವೋಹಕ. ೯-೬) ; ಖಳಂ ಕೈಮಾಡುವಂಗಜವ ಪೂಗೋಲ ಗಾಯದಿಂ ವ್ಯಾಮುಚಿದು . . . ಐವೊಗನ ರಾಣಿಯಂ ನಾಡಿಸಿದೊಡೆ (ಕೈಖಿಣ. ೦೫-೨೬). **ಪೂಗೋಲು :** ಕಿಚ್ಚುಗಣ್ಣನ ತಪವಳಿವುದು ಪೂಗೋಲೊಳಿಚ್ಚು ಮನ್ಮಥ **ಕೀಡಿಸಲು** (ವೋಹಕ. ೫-೦೯) ; ಬಾಳುಬಟ್ಟಲ ಪಿಡಿದೊಮ್ಮೊಮ್ಮೆ ಪೊನ್ನ **ಪೂಗೋಲು** ಪೊಂಬರಿಗೆಯಾಂತೊಮ್ಮೆ ಕಾಲಿಟ್ಟು ಹೊಳೆವುತಿದ್ದರು ಮನಸಿಜನ ಮಾಸಾಳುಗಳಂತೆ ದಿಟ್ಟೆಯರು (ಶಕಕ. ೦೨-೯೦). [ಪೂ + ಕೋಲ್[1]]

**ಪೂಗೋಲ** (ನಾ). ಹೂವಿನ ಬಾಣಗಳುಳ್ಳವನು ; ಮನ್ಮಥ : "ಮನ್ಮಥನೊಳಂ ಪೂಗೋಲನೆಂದಾಯ್ತು" (ಕಕಾಶ. ೯೨) ; ಪೊಸ ಪೂಗೋಲನಂತೆಸೆವ ಜೀವಕನನು ಶಶಿಮುಖಿ ಕಂಡು ಮದನನ ಕುಸುಮ ಶರಗಳಿಗೆ ತನುವಿತ್ತು ವಿರಹದುಬ್ಬಸದೊಳಗವಳೊಡಿಗಿದಳು (ಜೀವಂಸಾಂ. ೦೬-೦೯) ; ಬಾಯೆನುತೆ ಪೂಗೋಲನ ಬಿಗಿಯಪ್ಪಿ ಮುಂಗಾರಿಯಾದಾಗ ಮಾಂತರವ ವೇಳಿದಳು (ವೋಹಕ. ೦೦-೬೪) ; ಕಾಮಿನಿಯೊರ್ವಳ್ ಲೀಲೆಯಿನಲರ್ವಿಲ್ಲಂ ಪೂಗೋಲಂಗಿರದೆತ್ತಿ ಕೊಡುವ ರತಿಯಂ ಪೋಲ್ತಳ್ (ಕೃಕಾ. ೯-೯೬). [ಪೂಗೋಲ್ + –ಅ[7]]

**ಪೂಗೋಲು** 'ಪೂಗೋಲ್' ನೋ.

**ಪೂಗೌಂಗು** (ನಾ). ಮೃದುವಾದ ಅಡಕೆ ; ಉತ್ತಮವಾದ ಅಡಕೆ : ಲತೆಯೆಳಲತೆ ಮಾವಿಮ್ಮಾವು ತೆಂಗು ಚೆಂದೆಂಗು ಕೌಂಗು ಪೂಗೌಂಗು . . . ಪಲಸು ಬಕ್ಕೆವಲಸಾ ಬನದೊಳ್ (ಜಗಾ. ೨-೦೪).

[ಪೂ+ಕೌಂಗು (<ಕವುಂಗು)]

**ಪೂಚಂಡು** 'ಪೂಚೆಂಡು' ನೋ.

**ಪೂಚೆಂಡು,** ಪೂಚಂಡು, ಹೂಚೆಂಡು (ನಾ). ೧. ಹೂವುಗಳಿಂದ ರಚಿಸಿದ ಚೆಂಡು; ಹೂವಿನ ಚೆಂಡು : ಕಟ್ಟಿಲುಜ್ಜುಗವೆತ್ತ ಪೂಚೆಂಡು ಪನ್ನೀರ ಪೊಟ್ಟಣ ಯಕ್ಷಕರ್ದಮವ ಬಟ್ಟ ಕಂತುಕದಿಂದೆ ಬಲ್ಮೊಲೆ ಬಿದಿರುವಂತಿಟ್ಟಾಡಿದ್ದಾದು ಸಖಿನಿವಹ (ಕೋಹಕ. ೦೪-೯೬). **ಪೂಚಂಡು :** ೨. ಹೂವಿನ ಗೊಂಚಲು ; ಪುಷ್ಪಗುಚ್ಛ : ಮೆಟ್ಟಿದ ಪೊನ್ನ ಪಾವುಗೆ ಕರದೊಳಗಳವಟ್ಟ ಸಂಪಗೆಯ ಪೂಚುಡು ತೊಟ್ಟ ಮುತ್ತಿನ ಪೈಠಣೆಯಿಂದ ಚೆಲುವಿನ ಕಟ್ಟೆಬಿಕದೆ ನಡೆತಂದ (ಕಂಪಪ. ೯-೯೯). **ಹೂಚೆಂಡು :** ೨. ಮೇಲು ಮುತ್ತಿನ ಗೊಂಡೆ ! ಮಲ್ಲಿಗೆಯ ಹೂಚೆಂಡೆ ! ಹಾಳಾದೆ ಅಕಟ-ನಾ-ನಿಂದೋಡಾದೆ (ಕುಪ್ರ. ೯೨-೦). [ಪೂ+ಚೆಂಡು (<ಸೆಂಡು)]

**ಪೂಜಕ** (ಗು). ೧. ಪೂಜಿಸುವ ; ಆದರಿಸುವ : ಪೂಜಿತನಪ್ಪ ಶಿವಲಿಂಗಕ್ಕೆ ಸಂತತವು ನಮಿಸಿ ಪೂಜಿಸಿ ಉಂಬ ಪೂಜಕಸಮಿತಿ ದೊರೆಯೇ (ಬಸಪು. ೫೪-೨೪). (ನಾ). ೨. ಪೂಜೆ ಮಾಡುವವನಂ ; ಆರಾಧಿಸುವವನು : ಸ್ಥಾವರಜಂಗಮವಟಿಯದ ಪೂಜಕ ನಾನು (ಬಸವ. ೩೬೪) ; ಲೌಕಿಕಾರ್ಚನೆಯ ಮಾಡುವ ಪೂಜಕರ ಮೆಚ್ಚನೆಂದ . . . ನಿಃಕಳಂಕ ಮಲ್ಲಿಕಾರ್ಜುನಾ (ಮೋಳಿಮಾ. ೬೦ ೨೫೦) ; ಸಾಧ್ಯ ಸಾಧಕ ಪೂಜ್ಯ ಪೂಜಕ ದೇವ ದೇಹಿಕ ಎಂಬವರಾರೂ ಇಲ್ಲದ ಎರಡಿಲ್ಲದ ನಿರಾಳ ನೀನೆ (ಸಿದ್ಧೇವ. ೦೯೬-೫೬೦). [ಸಂ.]

**ಪೂಜನ** (ನಾ). ೧. ಪೂಜಿಸುವುದು; ಆರಾಧಿಸುವುದು. ೨. ಆರಾಧನೆ; **ಪೂಜೆ :** ಸಿದ್ಧಕೂಟದ ಜಿನಬಿಂಬಪೂಜನಾ [ಶಾಕಾಂ. ಪೂಜಾ] ನಂತರಂ . . . ಆಕಾಶಚಾರಣಋದ್ಧಿಪ್ರಾಪ್ತರಾಗಿರ್ದು (ಶಾಪುಂಶ. ೦೫೯). [ಸಂ.]

**ಪೂಜನೆ** (ನಾ). = ಪೂಜನ ೨ : ಬೇಗಬೇಗ ಅರ್ಚನೆ ಪೂಜನೆಯ ಮಾಡುವುದು (ಬಸವ. ೦೬೩). [ಸಂ. ಪೂಜನಾ]

**ಪೂಜಲ್ಲಿ,** ಹೂಜಲ್ಲಿ (ನಾ). ಹೂವಿನ ಕುಚ್ಚು : ರಂಗವಲ್ಲಿಗಳನಿಟ್ಟು ಪೂಜಲ್ಲಿಗಳಂ ಬಿಟ್ಟು (ಅದ್ಭುತ. ೦೦-೨೬). **ಹೂಜಲ್ಲಿ :** ಬಳ್ಳಿಬಳ್ಳಿ ಹೂಜಲ್ಲಿಯಲ್ಲಿ ಮುಂಬನಿಯ ತುಳುಕಿ ಚೆಲ್ಲು (ಕಪೋಳ. ೬-೨೦). [ಪೂ + ಜಲ್ಲಿ]

**ಪೂಜಾಕಾರಿ** (ನಾ). ಅರ್ಚಕ ; ಪೂಜಾರಿ : ನಖರ ಜಿನಾಲಯದ ಪೂಜಾಕಾರಿಗಳು ಒಡಮ್ಬಟ್ಟು ಬರಸಿದ ಸಾಸನದ ಕ್ರಮವೆನ್ತೆನ್ದಡೆ (ಎಕ. II, ೩೩೬-೬; 1279) ; ಕೊಡಕಣಿಯ ರಾಮಯಿದೇವರ ಪೂಜಾಕಾರಿ ರಾಮಯಿದೇವನ ಅಳಿಯ ಬೊಮ್ಮಿದೇವಗೆ ಕನ್ಯಾದಾನವಾಗಿ ಮದುವೆಯನು ಮಾಡಿ (ಎಕ. VIII, ಸೊರಬ. ೦೯-೩೧ ; 1449). [ಸಂ. ಪೂಜಾಕಾರಿನ್]

**ಪೂಜಾಗಜ** (ನಾ). ರಾಜನ ಪಟ್ಟಾಭಿಷೇಕಕಾಲದಲ್ಲಿ ಪೂಜೆ ಮಾಡಿಸಿಕೊಳ್ಳುವ ಆನೆ ; ಪಟ್ಟದಾನೆ ; ಪಟ್ಟವರ್ಧನ : "ಪೂಜಾಗಜಮೆನಲ್ ಪಟ್ಟವರ್ಧನಾಖ್ಯಂ" (ಶಬ್ದಕೈ. ೯೦) ; "ಪೂಜಾಗಜಮೆಂದೆನಿಪ್ಪುದು ಪಟ್ಟವರ್ಧನ ನಾಮ" (ಕಬ್ಬಿಮಂ. ೩೯). [ಸಂ.]

**ಪೂಜಾಗಾರ** (ನಾ). ದೇವರ ಪೂಜೆ ಮಾಡುವ ಸ್ಥಳ ; ದೇವಾಲಯ : ನಗರಗಳಲ್ಲಿ (ಬಹುಮಟ್ಟಿಗೆ ಹಳ್ಳಿಗಳಲ್ಲಿಯೂ) ಮೂರ್ತಿಯುತ ಅಥವಾ ಮೂರ್ತಿಗಳಿಲ್ಲದ ಪೂಜಾಗಾರಗಳಿದ್ದುವು. ಇವುಗಳಿಗೆ ಆಯತನ ಅಥವಾ ಚೈತ್ಯಗಳೆಂಬ ಹೆಸರಿತ್ತು (ಕಕ್ಕಪ್ರಾ. ೬೦). [ಸಂ.]

**ಪೂಜಾದ್ರವ್ಯ** (ನಾ). ಅರ್ಚನೆಗೆ ಬಳಸುವ ನೀರು, ಹೂವು, ಗಂಧ, ಪತ್ರೆ, ಧೂಪ, ದೀಪ ಮೊದಲಾದ ಪರಿಕರ : ಅರಮನೆಯ ಸುಮಂಗಲೆಯರೂ ಬ್ರಾಹ್ಮಣರೂ ವೇದಘೋಷಗಳೊಡನೆಯೂ ಪೂಜಾದ್ರವ್ಯಗಳೊಡನೆಯೂ ನಂದಿನಿಯ ಬಳಿ ಸಾರಿದರು (ಮಹಾಅ. ೨೪). [ಸಂ.]

**ಪೂಜಾಫಲ** (ನಾ). ಪೂಜೆ ಮಾಡುವುದರಿಂದ ಉಂಟಾಗುವ ಪರಿಣಾಮ,– ಸಂಪಾದಿಸುವ ಪುಣ್ಯ : ನಹುಷಾವನೀಶನೆಂಬವನಿತ್ತಲ್ ಪೂಜಾಫಲದಿಂ ಸಗ್ಗಕ್ಕೋಜೆಯಿನೆಯ್ತುವರ್ ಸಮಯದೊಳ್ (ಜಾಲಾಸ. ೧-೨-೫೬) ; ಹಾಗಾದರೆ ಪೂಜಾಫಲದಲ್ಲಿ ನನಗೂ ಅರ್ಧ (ಶಾಕುಂತ. ೮೦-೯). [ಸಂ.]

**ಪೂಜಾಮಂದಿರ** (ನಾ). ದೇವರ ಪೂಜೆಯನ್ನು ಮಾಡಲು ಇರುವ ಕೋಣೆ : ಬೆಳಕಿನ ಮೋಡದ ನಡುವೆ ತೂಗುವ ಹಸಿರು ಮನೆಯಲ್ಲಿ ಮೇನಕೆಯು ತನ್ನ ಪೂಜಾಮಂದಿರವನ್ನು ಕಟ್ಟಿದ್ದಾಳೆ (ಮಹಾಅ. ೦೬೮).

[ಸಂ.]

**ಪೂಜಾಮದ** (ನಾ). [ಜೈನ] ಎಂಟು ಬಗೆಯ ಮದಗಳಲ್ಲಿ ಒಂದು ; ತಾನು ಪೂಜ್ಯನೆಂಬ ಗರ್ವ : ಪೂಜಾಮದ . . . ತನಗೆ ಮಾನ ಮರ್ಯಾದೆಗಳು ದೊರಕಿದವೆಂಬ ವಿಷಯದಲ್ಲಿ ಹಲವರಿಗೆ ಸೊಕ್ಕು ಬರುತ್ತದೆ. ಇಂಥ ಸೊಕ್ಕನ್ನು ಸಮ್ಯಗ್‍ದೃಷ್ಟಿಯು ಮಾಡುವದಿಲ್ಲ (ಶ್ರಾವಕಾ. ೮೦). [ಸಂ.]

**ಪೂಜಾಯ** (ನಾ). ಅರ್ಚನೆಯ ಕ್ರಮ ; ಪೂಜಾವಿಧಿ : ರಾಯನು ರಾಯನ ಸುತರು ವಸ್ತುಗಳ ಪೂಜಾಯವಟಿದು ನೀಡಿ ಕೊಡಲು ತಾಯಿ ಪೂಜಿಸಿದಳಾ ಸ್ವಾಮಿಯನು (ಶರಣ. ೫೯-೨೦). [ಸಂ.]

**ಪೂಜಾರಾಧನ** (ನಾ). [ಜೈನ] ನಲವತ್ತೆಂಟು ಬಗೆಯ ದೀಕ್ಷಾನ್ವಯ ಕ್ರಿಯೆಗಳಲ್ಲಿ ಒಂದು ; ಗುರುಮುಖದಿಂದ ಧರ್ಮವನ್ನು ತಿಳಿಯುವುದಂ: ಎರಡನೆಯ ದೀಕ್ಷಾನ್ವಯಕ್ರಿಯೆಯೊಳಗವತಾರಮುಂ ವೃತ್ತಿ(ಧೃತಿ) ಲಾಭಮುಂ ಸ್ಥಾನಲಾಭಮುಂ ಗುಣಗ್ರಹಣಮುಂ ಪೂಜಾರಾಧನ [ಶಾಕಾಂ. ಪೂಜಾರಾಧ್ಯ]ಮುಂ . . . ಉಪಯೋಗಿತ್ವಮೆಂಬೆಂಟು ಗರ್ಭಾನ್ವಯ ಕ್ರಿಯೆಯೊಳ್ ಪೇಟ್ದ ಉಪನೀತಂ ಮೊದಲಾಗೆ ನಿವೃತ್ತಿಪರ್ಯಂತಮಪ್ಪ ನಾಲ್ವತ್ತುಮಂತು ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಯೊಳ್ (ಶಾಪುಂಶ. ೨೦೨). [ಸಂ.]

**ಪೂಜಾರಿ** (ನಾ). ಅರ್ಚಕ ; ಪೂಜಕ : "ಪೂಜಕಃ, ಪೂಜಾರೀ, ಪೂಜಾಕಾರಃ—ಈ ೩ ಅರ್ಚಕಂ" (ಶಾಶಕ್ಕ. ೨೬೫) ; ದೇವರ್ಗ್ಗೆ ಭಕ್ತರಪ್ಪರನೆ ಪೂಜಾರಿ ಮಾಡಿ . . . ನಡಸುವುದು (ಕೊಲ್ಪಾಶಾ. ೯-೦೯ ; 1083) ; ಅಚ್ಚಗುಗ್ಗುಳಮನರ್ಪಿಸುತೋಹಿಲದೇವನುದ್ದಂಡಭಕ್ತಿಯಿನಾ ಸೋಮೇಶ್ವರನ ಪೂಜಾರಿಗಳ್ಕಂಡು (ಉದ್ಭಟ. ೦೦-೯೩ ವ) ; ಪೂಜಾರಿಯು ಕರ್ತವ್ಯ

ಭ್ರಷ್ಟನಾದರೆ ಅವನನ್ನು ದೇವರು ಶಿಕ್ಷಿಸುತ್ತಾನೆ (ಪಲ್ಯಾ. ೨೯) ; ದೇವರು ವರ ಕೊಟ್ಟರೂ ಪೂಜಾರಿ ಕೊಡ (ಗಾದೆ). [<ಸಂ. ಪೂಜಾಕಾರಿನ್. / ಓಂ. ಮರಾ. ಪುಜಾರೀ. /ತೆಲು. ಪೂಜಾರಿ]

**ಪೂಜಾರಿಕೆ** (ನಾ). ಅರ್ಚಕನ ಕೆಲಸ ; ಪೂಜೆ ಮಾಡುವ ವೃತ್ತಿ : ನವಿರಂಗಳ ಆಯಿನೂರ್ಬ್ಬರ ಸಮಕ್ಷದಲ್ಲಿ ಕೊಟದು ೧೧ ಪೂಜಾರಿಕೆಗೆ ೧ (ಸೌಇಇ. XX, ೧೦೨-೦೪ ; 1132) ; ನಿಮ್ಮ ಓರಿಯುವರೇನೋ ನೀಲಕಂಠನ ಗುಡೀಲಿ ಪೂಜಾರಿಕೆ ಮಾಡ್ತಿದ್ದರಂತಲ್ಲ (ಚೇಮ. ೯೯). [ಪೂಜಾರಿ+—ಇಕೆ]

**ಪೂಜಾರ್ಹ** (ನಾ). ೧. ಪೂಜೆಗೆ ಯೋಗ್ಯವಾದುದು : ಕಳಾಹೀನವಾದ ಆ ಮೂರ್ತಿಯು ಪೂಜಾರ್ಹವಾಗುವುದಿಲ್ಲ (ಶಾರದ. ೮೯). ೨. ಮಾನ್ಯನಾದವನು ; ಪೂಜೆಗೆ ಯೋಗ್ಯನಾದವನು : ಎಲೈ ಅಗ್ನಿಯೇ, ನೀನು ಅಲೌಕಿಕವಾದ ಪ್ರಕಾಶವುಳ್ಳವನು. ಪೂಜಾರ್ಹನು (ಋಕ್ಸಾರ. ೨೩). [ಸಂ.]

**ಪೂಜಾವಚನ** (ನಾ). ಗೌರವಾರ್ಥವಾಗಿ ಬಳಸುವ ಮಾತು : "ತತ್ರಭವಾನ್ ಭಗವಾನ್—(ಇವೆರಡುಂ) ಈ ೨ ಪೂಜಾವಚನಂ. ಪಾದಃ, ದೇವಃ, ಭಟ್ಟಾರಕಃ—ಈ ಮೂಱುಂ ಪೆಸರ ಕಡೆಯೊಳ್ ಪೂಜಾವ(ಚ)ನಂ" (ಶಬ್ದಮ. ೨೩-೦೩೪). [ಸಂ.]

**ಪೂಜಾವಾಜಿ** (ನಾ). (ರಾಜನ ಪಟ್ಟಾಭಿಷೇಕಕಾಲದಲ್ಲಿ) ಪೂಜೆ ಮಾಡಿಸಿಕೊಳ್ಳುವ ಕುದುರೆ ; ಪಟ್ಟದ ಕುದುರೆ : ಪೂಜಾವಾಜಿ ವಿಲೋಚನವಿಗಳದಶ್ರುಬಿಂದುಗಳನಾನಂದಾಶ್ರುಬಿಂದುಗಳೆಂದುಂ . . . ಅಭೂತಪೂರ್ವಮುತ್ಪಾತಂಗಳನೇನುಮಂ ಬಗೆಯದೆ ಕೋಪಮನೆ ಬಗೆದು (ಶಂರಾಮಾ. ೦೪-೦೨೯ ವ). [ಸಂ.]

**ಪೂಜಾವಿಧಾನ** (ನಾ). ಪೂಜೆ ಮಾಡುವ ಕ್ರಮ : ಇಂದ್ರ ಚಕ್ರವರ್ತ್ಯಾದಿ ನಿತ್ಯನಿರ್ವರ್ತ್ಯಮಾನಂ ಮಹಾಮಹಸರ್ವತೋಭದ್ರಾದಿಕಂ ಪೂಜಾವಿಧಾನ ಮನೇಕವಿಧಂ (ಶಾಂತಿಪು. ೬-೪೯ ವ). [ಸಂ.]

**ಪೂಜಾವಿಧಿ** (ನಾ). ಆರಾಧನೆ; ಪೂಜಾಕಾರ್ಯ : ದ್ವಿಜರಿಂ ಪೂಜಾವಿಧಿ ಮಂತ್ರಪೂರ್ವಕಂ ಬಾಗಿಲೊಳ್ ತೋರಣಂಗಟ್ಟಿ . . . ಗೃಹವೇದಿಗಳಿಂ ಪ್ರಯೋಗಿಸುವುದು ಪ್ರೀತಿಕ್ರಿಯೆ (ಜಾಪುಂಪು. ೨೦೩) ; ಯಾರ ಹೆಸರಿನಲ್ಲಿ ಅಷ್ಟೆಲ್ಲ ಪೂಜಾವಿಧಿಗಳು ಜರುಗುತ್ತಿದ್ದುವೋ ಅವೆಲ್ಲ ಆ ಯೇಸುವಿನ ಮುಖಕ್ಕೆಸೆವ ಪರಿಹಾಸದಂತೆ ಮೈತಳೆದ ಪಾಷಂಡಿತನದಂತಿದ್ದುವು (ಕ್ರಿಸರು. ೦೭೯). [ಸಂ.]

**ಪೂಜೆ** (ನಾ). ೧. ಬಿಂದು ; ಅನುಸ್ವಾರ : ಜಾಜಿ ಪ್ರಶ್ನಾರ್ಥಕವು, ವಿಷ್ಣುಕ್ರಾಂತಿ ವಿಸರ್ಗ, ಪಾರಿಜಾತವೆ ಪೂಜೆ, ಅನುಸ್ವಾರವು ! (ಕರುಕಾ. ೨೩-೦೨). ೨. ಸೊನ್ನೆ ; ಶೂನ್ಯ : ಉತ್ತರ ನೂರು ಬರಬೇಕು. ಹತ್ತು ಬರೆದಿರುವಿ. ಮುಂದಿನ ಪೂಜೆ ಸ್ವಲ್ಪ ಅಳಿಸಿದ್ದೀತು! (ನಿರಾಶ. ೯೭) ; ಅವನ ಸಂಬಳ ದೊಡ್ಡದು, ಭೂಮಿಯು ಉತ್ಪನ್ನ ಬೇಕಾದಷ್ಟು. ಆದರೆ ಉಳಿಕೆ ಮಾತ್ರ ಪೂಜೆ (ಕವನ. ೩೦). [<ಪೂಜೆ]

**ಪೂಜಿಗ** (ನಾ). ಅರ್ಚಕ ; ಪೂಜಾರಿ : ಆ [ಪೂ]ಜಿಗಂಗ ಮುದ್ದಳಿ ಕಾಚಿರಿವ್ರ್ವರ್ಗ್ಗ ಎರೆ ಮತ್ತರ ೨೭ ವೊಗೆ ಮತ್ತ ೨೦ (ಸೌಇಇ. XX, ೩೦೦-೪ ; 12ನೆಯ ಶತ). [ಪೂಜೆ + —ಇಗ]

**ಪೂಜಿತ** (ಗು). ೧. ಅರ್ಚನೆಯನ್ನು ಪಡೆದ; ಪೂಜೆ ಮಾಡಿಸಿಕೊಂಡ: ಈ ವಿಚಾರಶಾಸ್ತ್ರವೂ ವೇದದಂತೆ ಪೂಜ್ಯವಾದುದರಿಂದ ಪೂಜಿತ ವಿಚಾರ ಶಾಸ್ತ್ರವೆಂದು ಇದನ್ನು ಕರೆಯುತ್ತಾರೆ (ಹಿಂದನಾ. ೦೪೯). (ನಾ). ೨. ಪೂಜೆಯನ್ನು ಪಡೆದುದು : ಸುರಪತಿಪೂಜಿತಂ . . . ಜಿನಸೇನಮುನೀಂದ್ರಪದಾಂಬುಜದ್ವಯಂ (ಆಪು. ೧-೭). ೩. ಪೂಜೆಯನ್ನು ಹೊಂದಿದವನು ಪೂಜ್ಯ : "ಪೂಜಿತಃ, ಅಪಚಿತಃ—ಈ ೨ ಪೂಜೆ ಪಡೆದವಂ" (ಶಬ್ದಮ. ೩೩ ೨೨೯) ; ಈ ದಿವ್ಯತೂರ್ಯಸ್ವರವೊ, ದಿವ್ಯಗಾಯನವೊ ಇವುಗಳಿಂ ಸುಗತನದೊ ಸತ್ಕೃತಂ, ಗುರುಕೃತಂ, ಮಾನಿತಂ, ಪೂಜಿತಂ ತಾನಲ್ಲ! (ವೈಕಾವಿ. ೭೩-೩೦೨). ೪. ಗೌರವ; ಮರ್ಯಾದೆ : 'ಪೂಜಿತಗೆಡಿಸಂ' ಪರಾ. [ಸಂ.]

**ಪೂಜಿತಗೆಡಿಸು** (ಕ್ರಿ). ಗೌರವವನ್ನು ಇಳಿಸಂ ; ಮರ್ಯಾದೆ ಕೆಡಿಸು; ಅಗೌರವಕ್ಕೆ ಗುರಿಮಾಡು : ರಾಜವಂಶೋದ್ಭವರನು ರಾಜರೆನ್ನದೆ ಪೂಜಿತಗೆಡಿಸಿ ಪೇಳ್ವಾಗ ರಾಜತ್ವಕದು ಭಂಗವಲ್ಲವೆ (ಭರತ. ೩೯-೦೦೦). [ಪೂಜಿತ + ಕೆಡಿಸು₁]

**ಪೂಜಿಸು** (ಕ್ರಿ). ೧. ಅರ್ಘ್ಯ, ಪಾದ್ಯ, ಗಂಧ, ಮಾಲೆ ಮೊದಲಾದುವುಗಳಿಂದ ಸತ್ಕರಿಸಂ ; ಪೂಜೆ ಮಾಡು : ಪ್ರತಿಮಾಯೋಗಂ ನಿಂದೊರು ದೇವರ್ಕಳುಂ ಮನುಷ್ಯರ್ಕಳುಂ ಬಂದು ಓರಿದಪ್ಪ ಪೂಜೆಯುಂ ಮಾಡಿಯರ್ಚಿಸಿ ಪೂಜಿಸಿ ಬಂದಿಸಿದೊಡೆ (ವಡ್ಡಾರಾ. ೭೪-೨೭) ; ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ ಮನದಲ್ಲಿ ದೃಢವಿಲ್ಲದನ್ನಕ್ಕ (ಬಸವ. ೯೯) ; ಕರ್ಣನಾಯುಧಶಾಲೆಯಲಿ ಶುಚಿಯಾಗಿ ಶಸ್ತ್ರಾಸ್ತ್ರವನು ಪೂಜಿಸಿದ (ಕುವ್ಯಾಕ. ೯-೭) ; ಪೂಜಿಸುವರೆಲ್ಲರೂ ಪೂಜ್ಯರೆನಗೆ : ಪೂಜ್ಯರಸು ಪೂಜಿಸುವುದೂ ಪೂಜೆ ನಿನಗೆ ! (ಅನಿಕೇ. ೩೭-೦). ೨. ಗುಣಿಸು; ಗುಣಾಕಾರಮಾಡು : "ಕಾದಿಸು ಪೂಜಿಸು ಉತ್ತಮದಿಂ ಪೇಟಿ ಮೊದಲ ಗುಣಕಾರಂಗಳ್" (ವ್ಯವಗ. ೦೦-೦೦). [ಪೂಜನ + — ಇಸು₃]

**ಪೂಜು** (ಕ್ರಿ). ೧. ಪೂಜೆಮಾಡು ; ಅರ್ಚಿಸು : ಹವಣೆಗಾರನು ಕಾರ್ಯ ಮಾಳ್ಪರೆ ಜವದಿ ಹರಿಯನು ಪೂಜೆ ನುತಿಸುವ ಕವಡು ಕುಟಿಲಗಳಿಲ್ಲ ಮನದೊಳು ಅರಸಿ ನೋಡಿದಡೆ (ಹಮುತ. ೦೦೭). ೨. ಗೌರವಿಸಂ; ಮನ್ನಿಸು: ತನ್ನ ಮನೆಯ ಮದುವೆಯೊಳು ಮುಂಗಲದೊಳು ತನ್ನ ಬಾಂಧವರೆಲ್ಲರನು ಅನ್ನಪಾನಂಗಳಿಂದಾದರಿವುದು ಮತ್ತೆ ಪೊನ್ನುಡೆಯಿತ್ತು ಪೂಜುವುದು (ಶದಬ. ೪-೩೯). [ < ಪೂಜೆ ]

**ಪೂಜೆ** (ನಾ.) ೧. ಅರ್ಚನೆ; ಆರಾಧನೆ : ದೇವರ್ಕಳುಂ ಮನುಷ್ಯರ್ಕಳುಂ ಬಂದು ಓರಿದಪ್ಪ ಪೂಜೆಯುಂ ಮಾಡಿ (ವಡ್ಡಾರಾ. ೭೪-೨೭); ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗಟ್ತೆ ಲಾಭಮೆಂಬಿವೆ ವಲಂ (ಆದಿಪು. ೦-೩೭); ಒಲವಿಲ್ಲದ ಪೂಜೆ ನೇಹವಿಲ್ಲದ ಮಾಟ ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣಾ (ಬಸವ. ೦೨೭). ೨. ಗೌರವ ; ಮನ್ನಣೆ : ಸೆಣಸಿ ಶೂರ ಸಂಗ್ರಾಮದಲಿ ಬಿಳ್ದೊಡಂ ಬಳ್ದೊಡಂ ಸನ್ಮಾನ್ಯನಾ ಕಲಿಯೆ, ಮೇಣುಳಿದ ಪಂದೆಗಳಿಗಾ ಪೂಜೆ ಸಲ್ಲದೈ (ಶತ್ರಾಂಗ. ೭೯-೨೧೯೭). ೩. ಸೊನ್ನೆ; ಶೂನ್ಯಚಿಹ್ನೆ: ಎಲ್ಲಕ್ಕೂ ಹತ್ತರಿನ ನಕ್ಷತ್ರವನ್ನು ಹೇಳಬೇಕಾದರೆ ಎರಡರ ಮುಂದೆ ಹದಿಮೂರು ಪೂಜೆಗಳನ್ನಿಡಬೇಕಾಗುವುದು (ಜ್ಯೋತಿಶಾ. ೦೨). ೪. (ಆಲಂ) ಶಾಸ್ತಿ ; ಶಿಕ್ಷೆ : ನಿಮ್ಮ ತಂದೆಯವರಿಗೆ ಹೇಳಿ ಬಿಡುತ್ತೇನೆ, ನಿನಗೆ ಪೂಜೆ ಆಗುತ್ತದೆ (ರೂಢಿ).

**ಪೂಜೆ ಪುನಸ್ಕಾರ, ಪೂಜೆ ಪುರಸ್ಕಾರ** = ಅರ್ಚನೆ ; ಆರಾಧನೆ : ಸನ್ಧಿವಿಗ್ರಹಿ ನಾಗದೇವಯ್ಯಂ . . . ಮೂಲಸ್ಥಾನದೇವರ್ಗ್ಗಂ ಮಲ್ಲಿಕಾರ್ಜುನದೇವರ್ಗ್ಗಂ ಪೂಜೆ ಪುನಸ್ಕಾರ ನಿವೇದ್ಯಕ್ಕಮಿವು ಬಿಟ್ಟ ದತ್ತಿ (ಎಕ. VI, ಕಡೂರು. ೦೪೨-೦೭; 1196); ತೌರುಮನೆಯಲ್ಲಿದ್ದರೆ ಏನೋ ಒಂದಿಷ್ಟು ಪೂಜೆ ಪುರಸ್ಕಾರಗಳನ್ನಾದರೂ ಮಾಡಬಹುದು (ಪಾತಬ. ೯೪). P ಇದೊಂದು ಕೂಡುನುಡಿ. **ಪೂಜೆ ಮಾಡು** = ೧. ಅರ್ಚಿಸು; ಪೂಜಿಸಂ: ಆರಾಧನೆ ಮಾಡು: ಶಾಂತಲೆ ಲಕ್ಷ್ಮಿಯರಿಬ್ಬರೂ ಸಹಸ್ರಸಹಸ್ರಪುಷ್ಪಗಳಿಂದ ಪರಮಾತ್ಮನ ಪೂಜೆ ಮಾಡಿ ಧನ್ಯರಾದರು (ಶಾಂತಲಾ. ೦೩೦); ಹುತ್ತಕ್ಕೆ ಹಾಲು ಹೊಯ್ದು ಪೂಜೆ ಮಾಡಿದರಂತೆ (ನಮ್ಮೂರು. ೩೦). ೨. (ಆಲಂ) ಶಾಸ್ತಿ ಮಾಡು: ಪಾಠ ಓದದೆ ಇದ್ದುದಕ್ಕೆ ಮೇಷ್ಟರು ಪೂಜೆ ಮಾಡಿದರು (ರೂಢಿ). **ಪೂಜೆ ಹಾಕು** = ೧. ತಾಂತ್ರಿಕ ಪೂಜೆ ಮಾಡಿ ಮೆಟ್ಟಿಕೊಂಡ ದೆವ್ವವನ್ನು ಬಿಡಿಸು : ಪೂಜೆ ಹಾಕಿದ

ನಂತರ ಅವಳಿಗೆ ಅರ್ಧ ಘಂಟೆ ಎಚ್ಚರ ತಪ್ಪಿತ್ತು (ಒಊ). ೨. ಮಂತ್ರ ಹಾಕು; ಮಂತ್ರಿಸು : ರೋಗಿಯನ್ನು ಕೂರಿಸಿ ೧೦೮ ಬಿಂದಿಗೆ ನೀರನ್ನು ರಪರಪ ಅಂತ ಎರಚಿ ಸ್ನಾನ ಮಾಡಿಸುತ್ತಿದ್ದರು; ಅನಂತರ ಪೂಜೆ ಹಾಕುತ್ತಿದ್ದರು (ಮಕೋಸ. ೩೩೫). [ಸಂ. ಪೂಜಾ]

**ಪೂಜೆಗ** (ನಾ). (ಆಲಂ) ಸತ್ವವಿಲ್ಲದವನು : ಅರಸುಗಳ್ಗೆ ವಿರಸಮಾದವ ಸರದೊಳ್ ಜಾಗಿಯುಂ ಲುಬ್ಧನೆಂಬರ್ ಭೋಗಿಯಪ್ಪನಂ ಪೂಜೆಗನೆಂಬರ್ ಸೌಭಾಗ್ಯಮುಳ್ಳವನಂ ಪಾಣ್ಬನೆಂಬರ್ ತ್ಯಾಗಿಯುಂ ಅರ್ಥದೂಷಕನೆಂಬರ್ ಅರ್ಥದೂಷಕನಂ ತ್ಯಾಗಿಯೆಂಬರ್ (ಹಂಶಸ. ೫೦-೦೦). 'ಹೂಜೆಗ' ನೋ. [ಪೂಜೆ + -ಗ₂]

**ಪೂಜೆಗಟ್ಟು** (ಕ್ರಿ). ಪೂಜೆ ಮಾಡು; ಅರ್ಚಿಸು : ಪೂಜೆಗಟ್ಟುವ ಭೂಪಾಂಗವಲ್ಲಿ . . . ಧಾರಾಪೂರ್ವ್ವಕಂ ಮಾಡಿ ಬಿಟ್ಟ ಬೆದ್ದಲೆ ಮತ್ತ ೫ (ಸೌಇಇ. IX—i, ೦೦೩-೦೨; 1054). [ಪೂಜೆ + ಕಟ್ಟು₁]

**ಪೂಜೆಗೆಯ್, ಪೂಜೆಗೈ** (ಕ್ರಿ). = ಪೂಜೆಗಟ್ಟು : ಅಗ್ರವಣಿಹೂಗಳಿಂ ಬೇಗಂ ತಂದಂತಂತೆ ಪೂಜೆಗೆಯ್ದು (ಶಶಿ. ೯-೯೦); ನೀನಲ್ಲದನ್ಯದೈವವ ಪೂಜೆಗೆಯ್ದು ಮತ್ತೇನ ಕಂಡರು ಖಿಳಾಧಮರು (ಕೋಶಶ. ೯೦-೬೨). ಪೂಜೆಗೈ : ಸಂಗಮೇಶ್ವರಂಗೆ . . . ಒಡೆಯಂ ಪೂಜೆಗೈದು ಪ್ರಸಾದಕಾಯನಾಗಿ ಸುಖದೊಳಿಪ್ಪುದು (ಜಶ. ೨-೬೮); ಪೂಜೆಗೈದು-ಮೊರೆಯಿಡುತಿಹರೆಲ್ಲ ಭಕುತರವೇ ಬೇಡಲು ಬಾಯಿಲ್ಲ (ಗಶಿಶ. ೨-೨೩). [ಪೂಜೆ + ಕೆಯ್₁]

**ಪೂಜೆಗೈ** 'ಪೂಜೆಗೆಯ್' ನೋ.

**ಪೂಜೆಗೈಸು** (ಕ್ರಿ). ಪೂಜೆ ಮಾಡಿಸು; ಅರ್ಚಿಸುವಂತೆ ಮಾಡು : ಕುತ್ಸಪಕಾಲಮಂ ಮಿಾಜಲೀಯೆ ನಾಂ ಬಂದ ವಿಪ್ರರನಾದರಿಸಿ ಪೂಜೆಗೈಸದಿರನು (ಕ್ರಿಬಿಶಾ. ೦೦-೨೯). [ಪೂಜೆ + ಕೈಸು (< ಕೆಯ್ಸು)]

**ಪೂಜೆಗೊಡಗಿ** (ನಾ). ದೇವರ ಪೂಜೆಗಾಗಿ ಕೊಟ್ಟ ಭೂಮಿ,—ಉಂಬಳಿ : ಚಮೆಯನಾಯಕಂಗೆ ಚತುರಣಸೀಮೆಯೊಳಗಾಗಿ ಕೊಟ ಪೂಜೆಗೊಡಗಿಯ ಕ್ರಮ (ಎಕ. XVI, ಕುಮುಕೂ. ೮೫-೦೯ ; ೧). [ಪೂಜೆ + ಕೊಡಗಿ (< ಕೊಡಂಗೆಯ್₂)]

**ಪೂಜೆಗೊಳ್** (ಕ್ರಿ). ಪೂಜಿಸಿಕೊಳ್ಳು ; ಪೂಜೆಯನ್ನು ಹೊಂದು : ಇಂತೀ ದ್ವಿವಿಧ ಒಂದಾಗದ ಮುನ್ನ ಕೂಡಲಸಂಗಮದೇವರು ಪೂಜೆಗೊಂಡರು (ಬಸವ. ೯೩೬); ಪೂಜೆಗೊಳಲ್ಕೆ ಬಂದು ನಿಜಮಂದಿರಮಂ ನೆಲೆವೀಡುಗೊಂಡು ರಾರಾಜಿಪ ನಂದನಂದನನ ಚಂದಮನೊಂದಿಸಿ ಚಿತ್ರಭಿತ್ತಿಯೊಳ್ (ಶಾಸಿ. ೫-೨೯). [ಪೂಜೆ + ಕೊಳ್₁]

**ಪೂಜೆವಂತ** (ನಾ). (ಆಡಂಬರದ) ಪೂಜೆ ಮಾಡುವವನು: ಗುಣವನರಿಯದಾಗಿ ಶೀಲವಂತಂಗೆ ನೇಮವಿಲ್ಲ ಘಾತಕಂಗೆ ಭಕ್ತಿಯಿಲ್ಲ ಪೂಜೆವಂತಂಗೆ ಲಿಂಗವಿಲ್ಲ ತ್ರಿವಿಧವ ಮಣಿಯದವಂಗೆ ಜಂಗಮವಿಲ್ಲ (ಮೋಳಿಮಾ. ೫೨-೨೦೬). 'ಪೂಜ್ಯವಂತ' ಪರಾ. [ಪೂಜೆ + -ವಂತ]

**ಪೂಜೆವಡೆ** (ಕ್ರಿ). ಪೂಜೆಯನ್ನು ಹೊಂದು ; ಪೂಜಿಸಿಕೊಳ್ಳು : ಈ ಮಹಾತ್ಮಂ ಧರೆಗಚ್ಚರಿಯಾಗೆ ಭಕ್ತಿಯಿಂದಂ ಸುರರಿಂದಂ ಪೂಜೆವಡೆದಂ (ರರ್ಮಾಮೃ. ೯-೨೬೫); ಈ ಪೊಡವಿಯೊಳಜಂ ಪೂಜೆವಡೆಯನೆ ಹೇಗುಲದೊಳಿದರ್ (ಬಸಪು. ೫೯-೬). [ಪೂಜೆ + ಪಡೆ₁]

**ಪೂಜೋತ್ಸಾಹ** (ನಾ). ೧. ಪೂಜೆ ಮಾಡುವುದರಲ್ಲಿರುವ ಉತ್ಸುಕತೆ. ೨. ಆರಾಧನೆಯಲ್ಲಿ ಉತ್ಸುಕನಾದವನು : ಷಟ್ಕರ್ಮ್ಮನಿರತರತಿಥಿ ಅಭ್ಯಾಗತವಿಶಿಷ್ಟಜನಪೂಜೋತ್ಸಾಹವ್ಯವಹಾರಚತುರ್ಮ್ಮುಖರ್ . . . ಅಪ್ಪ ಶ್ರೀಮತ್ ಪಟ್ಟಿಲನಾಲ್ವರ್ಜಿಪ್ಪರ್ದಿಂಬರ್ (ಸೌಇಇ. XX, ೫೬-೯; 1084). [ಸಂ.]

**ಪೂಜೋಪಕರಣ** (ನಾ). ಪೂಜೆ ಮಾಡಲು ಬೇಕಾಗುವ ಸಾಧನ,—ಸಲಕರಣೆ : ಚಿನ್ನ ಬೆಳ್ಳಿಗಳ ಪೂಜೋಪಕರಣ, ಸೇವೋಪಕರಣ . . . ಇವುಗಳನ್ನು ಒಪ್ಪಿಸಿ ದೇವತಾಸೇವೆಯನ್ನು ಮಾಡಿದರು (ಮಜಾಶಂ. II, ೦೨೯). [ಸಂ.]

**ಪೂಜ್ಯ** (ಗು). ೧. ಗೌರವಕ್ಕೆ ಯೋಗ್ಯವಾದ ; ಮಾನ್ಯ ; ಆದರಣೀಯ. (ನಾ). ೨. ಪೂಜೆಗೆ ಅರ್ಹನಾದವನು ; ಪೂಜನೀಯ ವ್ಯಕ್ತಿ : "ಪ್ರತೀಕ್ಷ್ಯ, ಪೂಜ್ಯ—ಈ ೨ ಪೂಜಿಸಲ್ಪಕ್ಕಮಂ" (ಹಣಯು. ೬೩-೨೨೯); ಉಟ್ಟು ತೊಟ್ಟು ಪೂಜ್ಯನಾಗಿ ಬಂದ ಜಂಗಮ ವಿಶೇಷವೆಂದು ಕಂಥೆಬೊಂತೆಯ ಜಂಗಮ ಬಂದರೆ ಹೀನವೆಂದು ಕಂಡನಾದರೆ ಪಂಚಮಹಾಪಾತಕ (ಬಸವ. ೯೦೦); ಪೂಜ್ಯರೆ, ತಮ್ಮಾಜ್ಞೆಯೇನು ? ಕರುಣಿಸಬೇಕು (ಶಾಕುಂತ. ೨೭-೨೦); ಪೂಜ್ಯನನ್ನು ಮಹನೀಯನೆಂದು ತಿಳಿಯುವುದೇ ಭಕ್ತಿ ಎನಿಸುವುದು (ಕಿತ್ರಿ. ೬೯). ೩. ಪತ್ನಿಯ ಅಥವಾ ಪತಿಯ ತಂದೆ ; ಮಾವ. ೪. ಆದರಣೀಯವಾದುದು ; ಮನ್ನಣೆಗೆ ಯೋಗ್ಯವಾದುದು : ಆಗಸದೊಳು ಚರಿಸುವ ಸುರಸತಿಯರ ಸೋಗೆ ಮುಡಿಗೆ ಪೂಜ್ಯವಾಗಿ ಆಗರಳಿದ ಕಸ್ತೂರಿ ಹೊಂಬಾಳೆಯ ಪೂಗವೃಕ್ಷಗಳೊಪ್ಪುತಿಹುವು (ಕಂಶಬ. ೨-೯೦); ಪ್ರಕೃತಿಹಿತಾರ್ಥಂ ಕ್ಷಿತಿಪಾಲಕರುದ್ಯೋಗಿಸುಗೆ ಪೂಜ್ಯಮೆನಿಸುಗೆ ಜಗದೊಳ್ ಸುಕವಿಗಳ ಸೂಕ್ತಿ (ಶಾಕುಂತ. ೦೦೬-೨೯೯). ೫. ಸೊನ್ನೆ ; ಶೂನ್ಯ : ರಾಜ್ಯಗೋಮಿನಿಯೊಳು ನೆಲಸಿರ್ದನೆಂದೊಡೆ ರಾಜ್ಯವು ತಾವದಸ್ಥಿರವು ಪೂಜ್ಯವಾಗಿರಬೇಕನಲಾಯಿತ್ತನು ಪೂಜ್ಯವಲ್ಲದೆ ಚಿರವಲ್ಲ (ಅಶಂಕ. ೩-೦೩೦) ; ಜನಾರ್ದನನ ಆಡಳಿತದಲ್ಲಿ ಸಂಪಾದನೆಯು ಪೂಜ್ಯವಾದುದರಿಂದ ಸಂಸಾರದಲ್ಲಿ ವ್ಯಾಜ್ಯಗಳೂ ದಿನದಿನಕ್ಕೆ ಅಧಿಕವಾಗ ತೊಡಗಿದುವು (ಮಿರಿಮು. ೦೦೯). [ಸಂ.]

**ಪೂಜ್ಯತೆ** (ನಾ). ಗೌರವ ; ಮನ್ನಣೆ : ಪೂಜ್ಯಪದರನಾರಾಧಿಪ ಜನಕ್ಕೆ ಪೂಜ್ಯತೆಯರಿದೇ (ಶಾಕ್ಯಕು. ೦೯-೦೦೬); ಧಾರ್ಮಿಕ ಮತ್ತು ಆಧ್ಯಾತ್ಮಿಕ ಮಹಾಪುರುಷರ ಆದರ್ಶದಲ್ಲಿ ಯುವಕರಿಗೆ ಪೂಜ್ಯತೆಯೂ ಆಸಕ್ತಿಯೂ ಇರುವುದರಿಂದ ಅವರ ಜೀವನಕಥನಗಳೂ ತತ್ತ್ವದೃಷ್ಟಿಗಳೂ ಪಠ್ಯವಸ್ತುವಿನಲ್ಲಿ ಅಳವಡಬೇಕು (ಶಿಕ್ಷಣ. ೦೭೦). [ಸಂ. ಪೂಜ್ಯತಾ]

**ಪೂಜ್ಯಪದ** (ನಾ). ೧. ಗೌರವದ ಸ್ಥಾನ; ಆದರಣೀಯವಾದ ಪದವಿ : ನನ್ನನ್ನು ಯಾವ ಗೃಹಿಣೀಪದದಿಂದ ನೀಚನಾದ ನೀನು ಒಮ್ಮೆ ಭ್ರಷ್ಟಗೊಳಿಸಿರುವೆಯೋ ಆ ಪೂಜ್ಯಪದವು ಜನ್ಮಜನ್ಮಾಂತರದಲ್ಲಿಯೂ ನನಗೆ ದುರ್ಲಭವಾಗಿಬಿಟ್ಟಿತು (ಅಂಬಿಕ. ೦೬). ೨. ಆದರಣೀಯವಾದ ಪದವಿಯಲ್ಲಿರುವವನು ; ಪೂಜನೀಯ ವ್ಯಕ್ತಿ : ಹರಿವಧು ನೂಪುರಮಂ ಜನಚರಣದೊಳಳವಡಿಸಿ ತಳೆಯೆ ಶಿರದೊಳ್ ಮಣಿಶೇಖರಮೆನಿಸಿತಂತೆ ಪೂಜ್ಯಪದರನಾರಾಧಿಪ ಜನಕ್ಕೆ ಪೂಜ್ಯತೆಯರಿದೇ (ಶಾಕ್ಯಕು. ೦೯-೦೦೬). [ಸಂ.]

**ಪೂಜ್ಯಪಾದ** (ನಾ). ೧. ಧರ್ಮಬೋಧಕರು, ಸಂನ್ಯಾಸಿಗಳುಂ ಮುಂತಾದವರನ್ನು ಸಂಬೋಧಿಸುವಾಗ ಗೌರವಕ್ಕಾಗಿ ಬಳಸುವ ಶಬ್ದ : ಪೂಜ್ಯಪಾದ ಶ್ರೀ ಶಿವಾನಂದಸ್ವಾಮಿಯವರು ಈ ಪೀಠದಲ್ಲಿ ಕುಳಿತುಕೊಳ್ಳಲಿ (ಒಊ). ೨. (ಕ್ರಿ. ಶ. ೬೦೦ರಲ್ಲಿ ಇದ್ದ, ಪ್ರಸಿದ್ಧನಾದ) ಒಬ್ಬ ಜೈನಮುನಿಯ ಹೆಸರು : ಪೂಜ್ಯಪಾದಸ್ವಾಮಿಗಳ ಪದಂಗಳೀಗೆ ಶಾಶ್ವತಪದಮಂ (ಆದಿಪು. ೧-೦೦); ಸುಕವಿಪ್ರಣುತವ್ಯಾಕರಣಕರ್ತೃಗಳ್ ಗಗನಗಮನಸಾಮರ್ಥ್ಯರ್ ತಾರ್ಕಿಕಶಿಖರೆಂದು ಪೊಗಟ್ವುದು ಸಕಳಜನಂ ಪೂಜ್ಯಪಾದಭಟ್ಟಾರಕರಂ (ಶಾಪುಂಪು. ೨). [ಸಂ.]

**ಪೂಜ್ಯಪಾದತೆ** (ನಾ). ೧. ಪಾದಗಳಿಗಿರುವ, ಪೂಜೆಯನ್ನು ಪಡೆಯುವ ಘನತೆ. ೨. ಪೂಜ್ಯಪಾದಮುನಿಯಂತೆ ಇರುವಿಕೆ. ೧, ೨ : ಕ್ಷಿತಿನಾಥವ್ರಜಪೂಜ್ಯಪಾದತೆ ನಿಜಾಚಾರ ಪ್ರತೀತಾಕಳಂಕತೆ ವಿದ್ವನ್ನುತ ವೀರಸೇನತೆ ನಿಜಂ ತಾಂ (ಕೂಡ್ರಕು. ೧-೩೦). [ಸಂ. ಪೂಜ್ಯಪಾದತಾ]

**ಪೂಜ್ಯಭಾವ** (ನಾ). ಗೌರವದ ಭಾವನೆ : ಆದರಭಾವ : ಅವಳ ಅಕ್ಕ

ಸುಂದರಿಯು . . . ಗುಣಶಾಲಿನಿಯಾಗಿದ್ದದ್ದರಿಂದ ಚಂದ್ರಶೇಖರನ ಯೋಗ್ಯತೆಯನ್ನು ಗ್ರಹಿಸಿ ಅವನನ್ನು ಪೂಜ್ಯಭಾವದಿಂದ ಕಾಣುತ್ತಿದ್ದಳು (ಬಂಕಿವು. ೨೦೦). [ಸಂ.]

**ಪೂಜ್ಯಭಾವನೆ** (ನಾ). = ಪೂಜ್ಯಭಾವ : ಗಡ್ಡವು ಎದೆಯವರೆಗೂ ಬೆಳೆದಿದ್ದು ನೋಡುವವರಿಗೆ ಒಂದು ಪೂಜ್ಯಭಾವನೆಯನ್ನುಂಟುಮಾಡು ತ್ತಿದ್ದುದು (ಕಳಹು. ೧). [ಸಂ. ಪೂಜ್ಯಭಾವನಾ]

**ಪೂಜ್ಯವಂತ** (ನಾ). ಗೌರವಾನ್ವಿತನಾದವನು ; ಮಾನ್ಯ : ಪೂಜೆಯಿಂದ ತಾ ಪೂಜ್ಯವಂತನಾದಿಹೆನೆಂದು ಮಾಡುವನಿರವು ಹೊಲಶಿ ತನ್ನ ಹೊಲೆಯು ಮಜ್ಜಿಸಿ ಶುದ್ಧ ನೀರ ಮಿಂದೆನೆಂದು ಕೆಲವರ ಮುಟ್ಟುವಂತೆ ಆ ವಿಧಿ ನಿಸ್ಫಲಯಿತ್ತು, ತ್ರಿಕರಣಶುದ್ಧವಿಲ್ಲದ ಪೂಜೆ (ವೀರಶವಾ. ೩೯-೧೮೨). [ಸಂ. ಪೂಜ್ಯವತ್]

**ಪೂಜ್ಯೆ** (ನಾ). ಗೌರವಾರ್ಹಳಾದವಳು ; ಆದರಕ್ಕೆ ಯೋಗ್ಯ ಳಾದವಳು; ಮಾನ್ಯೆ : ದಯೆಯು ತವರ್ಮನೆ ಭವ್ಯಪ್ರಿಯೆ ... ಭುವನೈಕ ಪೂಜ್ಯೆ ಚೇಳಿನಿ ಧರೆಯೊಳ್ (ರಸರ್ಮಾವು. ೭-೯) ; ಪೂಜ್ಯೆಯಾದ ದಾಕ್ಷಾಯಣಿ ಹೇಳದುದು ನನ್ನ ಕೋರಿಕೆಯೇ ಅಲ್ಲವೆ ? (ಶಾಕುಂತ. ೦೦೫-೯) ; ಪೂಜ್ಯೆಯುಂ ಪ್ರಾಣವಲ್ಲಭೆಯಾಗಿ ಪಡೆದ ನಾಂ ಧನ್ಯನ್ನೆ (ಶ್ರೀನಾಪೂ. ೭೨೭-೫೦೬). [ಸಂ. ಪೂಜ್ಯಾ]

**ಪೂಟ, ಪೂಟಿ, ಹೂಟ, ಹೂಟಿ, ಹೂಟೆ** (ನಾ). ೧. ಏರ್ಪಾಟು ; ಯೋಜನೆ : ಇನ್ನುಮೋಂದಂ ಬಯಸಿ ಪೂಟಮಂ ಪೂಡಿದರ್ (ಹೊಂಗಳು ೩೭-೦). **ಪೂಟ** : ೨. ಬಂಡಿ, ರಥ, ಕುಂಟೆ, ನೇಗಿಲು ಮೊದಲಾದುವು ಗಳನ್ನು ಎಳೆಯುವುದಕ್ಕಾಗಿ ಎತ್ತು, ಕುದುರೆ ಮೊದಲಾದುವು ಗಳನ್ನು ಅಳವಡಿಸಿ ಕಟ್ಟುವಿಕೆ,–ನೊಗ ಹೇರುವಿಕೆ : ಚಿತ್ರಂ ಪೂಟಿಯ ಪಲ್ಲುದುರೆಯ ತನ್ನ ರನ್ನದೇರಂ ನೂಂಕಿ ಕೋಲ ಹಂದರವನೊಡ್ಡಿ ... ನಿಲ್ಲೆಂದು ತಡೆದಂ (ರಾಜಶೇ. ೯೭-೩). **ಹೂಟ** : ೧. ಹೂಟ ಇನ್ನೇನು ಗದ್ದಿತು ಎನ್ನುವ ಹೊತ್ತಿನಲ್ಲಿ ಅದು ಹೀಗೆ ಕಾಲು ಜಾರಬೇಕೆ ? (ತಕರಾ. ೩೩೦) ; ಕಾಳು ಮನೆಗೆಯ್ದು ಮದುವೆಯು ಹೂಟಮಂ ತಿಳಿಸಿ ಕೇಳದಂ ಕಡೆಗೆ ಕಾರ್ಲ್‌ಗಟ್ಟಲಿಹ ಕೇಡಂ (ಕಾಲೂರ. ೦೮೦-೩೦೭). ೨. ಧುರ್ಯ: ಧೌರೇಯ:—ಈ ೨ ಹೂಟದೆತ್ತು (ಹರಿಭಕ್ತಿ. ೮೯-೦೦೦) ; ಹೂಟದೊಳು ಎರಂಡ ಕಟ್ಟದೊಳು ಹೆಟ್ಟಂ (ಅಭ್ಯವಂ. ೯೦). ೩. ತೋರಿಕೆ ; ನಟನೆ : ಶಿವನತ್ತ ಕಾಲಾಗಿ ಮಾಜಿದು ಹೂಟದ ಹೆಣನ ಮಾಳ್ಕೆಯಿಂದಿರ್ಪನಂ ಅಜಿಸಿಯುಟ್ಟೆ . . . ಕಾಲ್ವೆಗೆಯೆನಲು (ವೀರಕೃ. ೪-೬-೯). ೪. ಕುಯುಕ್ತಿ ; ಪಿತೂರಿ ; ಸಂಚು ; ಜಾಲ : ನಮ್ಮ ತಪವನು ಕೆಡಿಸೆ ಸುರರು ಹೂಡಿದ ಹೂಟ—ಇಂತಿಲ್ಲದಿನ್ನಿಲ್ಲ—ಬಲ್ಲೆ ನಾನವರಾಟ (ಅತಕ್ಕೆ. ೪೪-೪) ; ಎಲ್ಲ ತರಹದ ಹೂಟ ಆವುಟಗಳೂ ನಿಷ್ಫಲವಾದಾಗ ಅವನನ್ನು ಹಿಡಿದೆಳೆದು ರಂಪ ಮಾಡುತ್ತಾಳೆ (ನಂಜುಂತ. ೭೭). ಅವನನ್ನು ಕಳಿಸಿಬಿಡಲು ಹೂಡಿದ ಹೂಟ ಅದು (೭೩:ತರಾ. ೩೭೭) . ೫. ರಚನೆ; ಬಂಧ; ಸೇರುವೆ: ಸರಳ ಹರಹಿನ ಹೂಟವನು ಕಾಹುರದ ಕಡುಹಿನಲೊದೆದು ಬೊಬ್ಬಿಜಿ ದುರವಣಿಸಿದನು ಪಾರ್ಥನು (ಕುಪ್ರಾ.೪. ೦೯-೩೦). **ಹೂಟಿ** : ೨. 'ಎಳ ಹೂಟ' ಪರಾ. **ಹೂಟೆ** : ೨. ಧ್ವತಿಗೆಡಿಸಿ ಹೋರಿಗಳ ಒಡಿಸುಗಳ ಬಡಿದ ಸುನ್ನತ ಬಂಜೆಯಾಕಳಂ ಹೂಟೆಯುಂ ಹೇಜುವಾಶ್ರಿತರ ರಕ್ಷಿಸಲಜೀಯನು (ಲಿಚಿತಂ ೩೯-೨೦) ; ಮತ್ತೆ ಕಡಿದನು ರಥವ ಚಾಪವ ಮತ್ತೆ ಹೊಸ ಹೂಟೆ ಯೊಳು ಹೊಕ್ಕರು ತೆತ್ತು ಸವೆಯರು ಶೌರ್ಯದಭಿಮಾನವನು ಪಟು ಭಟರು (ಕುಪ್ರಾ.೮. ೬-೩೯). ೬. ಉಳುಮೆ; ಬೇಸಾಯ; ಸಾಗುವಳಿ : ಯೂರಯಾರ ಹೂಟೆಯುಲುಂ ಗ್ರಾಮಶಾನ್ತಿಯುಲುಂ ದೇವರ್ಗ್ಗೆ ಸಹಸ್ರ ಗಡುಗೆ ಪೂಜೆ ನಿವೇದ್ಯಕ್ಕೆ . . . ಯೆರೆ ಮತ್ತ ೧ ಕಂ ಳಿಶಿಂ (ಸೌಇಇ. IX—i. ೨೭೭– ೭; 1183); ಜಡಿಮಳೆಯಾದುದರಿಂದ ಯಾರೂ ಹೂಟೆಗೆ ಹೊರಡುವ ಹಾಗಿರಲಿಲ್ಲ (ನಕರಾ. II. ೦೨೨೭) ; ಬೀಜ ಬಿತ್ತುವ ಸಮಯವಾಗಲಿಲ್ಲವೆ ? ಗದ್ದೆ ಹೂಟೆಯಾಗಬೇಡವೇ? (ಮುಗಿಯ. ೪೩). ೭. ಭಾರ; ಹೇರು : ಭಣ್ಣಿಗೆ ದಣ್ಣಿಗೆ ವೊಂದು ಸೆವೆಯಯ್ದು ಹೂಟಿಯ ರಡರ್ಕ್ಕಂ ವಣ್ಣಿಗೆವೊಂಡು(ದು)ಸೆವೆಯೆರಡು (ಎಇ. XIX. ೩೪-೩೨; 1135). ೮. ಕಟ್ಟು; ಬಂಧನ : ಇಕ್ಕೆಲದೊಳು ಕಬ್ಬಿಯೊಳು ಕಟ್ಟಿ ನೇಲುತಿರ್ಪುಕ್ಕಿನ ಗುಂಡುಗಳಿಂದ ದಿಕ್ಕುದಿಕ್ಕಿನ ಹಗ್ಗದ ಹೂಟೆಯಿಂದತಿಕರ್ಕ್ಕಸದಿಂ ನಡೆಯುವರು (ಕುಮಾರಾಂ ೯–೪೬). ೯. (ಉದ್ಯೋಗದಲ್ಲಿ ಬಂಡವಾಳವನ್ನು) ತೊಡ ಗಿಸುವಿಕೆ ; ಹೂಡುವುದು : ಖಾಸಗಿ ಉದ್ಯಮಗಳಲ್ಲಿ ಬಂಡವಾಳ ಹೂಟೆಯು ಬೆಳೆಯುವುದಕ್ಕೆ ಉತ್ತೇಜನ ಕೊಡುವುದರ ಮೂಲಕ ಪ್ರಪಂಚದ ಆರ್ಥಿಕಾಭಿವೃದ್ಧಿಗೆ ಸಹಾಯ ನೀಡುವುದೇ ಕಾರ್ಪೊರೇಷನ್ನಿನ ಉದ್ದೇಶವಾಗಿದೆ (ಅಂಕಸಂ. ೦೦೪).

ಹೂಟ ಹಾರು = ಬಂಡಿಯ ಹಿಂಬದಿಗೆ ಭಾರ ಜಾಸ್ತಿಯಾಗಿ ನೊಗದ ಭಾಗ ಕಳಚಿಕೊಂಡು ಮೇಲಕ್ಕೆ ನೆಗೆ: (*).

[< ಪೂಡು]

**ಪೂಟರ್ಜಿ** (ನಾ). ಸಾರಾಂಶವನ್ನು ಒಳಗೊಂಡ ಅರ್ಜಿ : (*). [ಪೂಟು (< ಪೂಟು$_1$) + ಅರ್ಜಿ$_2$]

**ಪೂಟಲಾಯರಿ** 'ಫೂಟ್‌ಲಾಯರಿ' ನೋ.

**ಪೂಟಿ** 'ಪೂಟ' ನೋ.

**ಪೂಟು** 'ಫೂಟು$_1$' ನೋ.

**ಪೂಟುಲಾಯರು** 'ಫುಟ್‌ಲಾಯರು' ನೋ.

**ಪೂಡಿಸು, ಹೂಡಿಸು** (ಕ್ರಿ). ೧. ತೊಡಿಸಂ; ಸೇರಿಸಂ; ಹಾಕು : ಸೊಕ್ಕಿದರವನ ಭೃತ್ಯರವರೆಲ್ಲರಂ ತಂದು ಕಾರಾಗಾರದೊಳ್ನಿಗಳವಂ ಪೂಡಿಸುವೆನು (ಕೈಮಿಭಾ. ೨೯–೨೫). ೨. (ಬಂಡಿಯ ಮೇಲೆ ಹೇರಿ) ಸಾಗಿಸು; ರವಾನಿಸು : ಎಣ್ಣೆಸೆಯ ಸೀಮೆಗಳನೊತ್ತಿದಂ ಪೂಡಿಸಿದ ನವರವರ ಮನೆಗಳ ಸುವಸ್ತುಜಾಲಂಗಳಂ ತನ್ನ ಪುರಕೆ (ಕೈಮಿಭಾ. ೨೯–೯). ೩. ನಿರ್ಮಾಣ ಮಾಡಿಸು ; ರಚನೆಗೊಳಿಸು : ಧರಣಿ ಬೋಯಿತಿ ಧರೆಯೊಳ್ ಹೊಡೆಹುಲ್ಲ ಬೀಸಿ ಪೂಡಿಸಿ ಪಡೆದಳು ತುಂಗಭದ್ರ ಮಧ್ಯದ ವೊಳಿನಂ (ಎಕ. VII, ಹೊನ್ನಾ. ೬–೦೫; 1220). ೪. ತಂದು ಒದಗಿಸು; ತರಿಸು : ಶಕಟಸಂದೋಹದಿಂ ಪೂಡಿಸುವ ಸಂಭಾರನಿಕರಾಧಿ ಪತಿಯಾದನನಿರುದ್ಧನು (ಕೈಮಿಭಾ. ೩೪-೭). **ಹೂಡಿಸು** : ೨. ಆಂಧ್ರ ಜಾಲಾಂದ್ರಾಳಿಗಳನಪ್ಪಳಿಸಿ ಹೂಡಿಸಿದನು ಮಹಾಧನವ (ಕುಪ್ರಾ.ಸ. ೪–೦೦); ರೂಢಿಗುತ್ತರಕುರುಗಳರ್ಥವ ಹೂಡಿಸಿದನರಮನೆಗೆ ದೈತ್ಯರ ಬೀಡ ಬಿಜಿಗೈದನು (ಕುಪ್ರಾ.ಎ. ೭–೯). ೩. ಕಂದರ್ಪಾಂಧಕನನುಳುಹುವೊಡೆ ತನಗಿನ್ನಿಂಧನವ ಹೂ[ಶಾಕಂ. ಮಾ]ಡಿಸುವುದೈಸಲೆಯೊಂದನಾ ಭೀಮ (ಕುಪ್ರಾ.ಆ. ೨೨–೭೭). ೫. (ಕುದುರೆಗಳನ್ನು ಬಂಡಿಗೆ ಹೂಡಿ) ಅಣಿಗೊಳಿಸು; ಸಿದ್ಧಪಡಿಸು : ಈ ರಥವನೇ ಹೂಡಿಸಿದೆನೀ ಸಾರಥಿಯ ಬೆಸಸಿದೆನು (ಕುಪ್ರಾ.೦. ೦೨–೦೦). ೬. ನೊಗವನ್ನು ಹೇರಿ, ಎಳೆಯಲು ತೊಡಗಿಸು,–ಎಳೆಯಿಸು : ಅವನಿಸುರರೊಳೀ ಸೋಮಯಾಜಿಯೆನಿಪ್ಪನಂ ಕೊಯ್ದು ಇನಿತು ನೀರಂ ತೋಜಿಜೇ ಧಿಕ್ಕನೆ ಇದಕೆ ಅಜಿದಡೆ ನಿಮ್ಮಾಪನಿ ನಿಬರಂ ಪಟ್ಟಣದ ಸುತ್ತೆಳೆಹೂಟೆ ಹೂಡಿಸುವೆ [ಪಾಠಾಂ. ಹೂಟೆಯೊಳೆಳೆಸುವೆ] (ಬಸವು. ೩೭ ೬೦). ೭. ತೊಡಗಿಸು; ಆರಂಭಿಸು: ಬೇರೆ ಹವ್ಯಾಸ ಹೂಡಿಸ ಬೇಕು (ಮುಖಪೂ. ೬೦). [ಹೂಡು + — ಇಸು$_3$]

**ಪೂಡು, ಹೂಡು$_1$** (ಕ್ರಿ). ೧. ಬಂಡಿ, ರಥ, ರೆಂಟೆ, ಕುಂಟೆ ಮೊದ ಲಾದುವುಗಳನ್ನು ಎಳೆಯುವುದಕ್ಕಾಗಿ ಅವುಗಳಿಗೆ ಎತ್ತು, ಕುದುರೆ ಮೊದಲಾದುವನ್ನು ಹೊಂದಿಸು, —ಕಟ್ಟು ; ನೊಗ ಹೇರು : ಬೆಳ್ಗಟ್ಟಿ ಪೂಡಿದ ಪೊನ್ನ ರಥಮಂ ಬೆಳ್ಗಟ್ಟಿಯನರಸರ್ಕಳೇ

ಬುವುದುವಮಂ . . . ಕಂಡಂ (ವಜ್ರಾರಾ. ೬೩ ೩೦) ; ಆ ರಥದೊಳೊಡಂಬಡೆ ಪೂಡಿದ ಕುದುರೆಗಳುಂ . . . ಆಸದಳವೆುಸೆಯೆ (ಶಂಶಪು. ೦೦-೩೨ ವ) ; ಸಂಜೀವಕ ನಂದಕಾಖ್ಯ ವೃಷಭಂಗಳನಿಂಬೆನೆ ಪೂಡಿ . . . ತಳರ್ದಂ ವಣಿಗ್ವರಂ (ಕುಂತಸಂ. ೨೩-೬). ೨. ಅಣಿಗೊಳಿಸಂ ; ಸಿದ್ಧಗೊಳಿಸು : ಗಿಳಿಯ ಬಣ್ಣದ ಕುದುರೆಗಳೊಳ್ ಪೂಡಿದಜಿತಂಜಯಮೆಂಬ ರಥಮನೇಱ (ಅದಿಪು. ೦೨ ೭೯ ವ) ; ಎಯ್ದೆ ಪೂಡಿ ತರವೇಟಿಕ್ಕೆರೆಲ್ಲಮಂ (ಅರ್ಜನೇ. ೨-೩೩) ; ಪಲ್ಲಣಿಸು ಕುದುರೆಯಂ ಪೂಡು ತೇರಂ ಭಟರ್ ಕೈದುಗಳಂ ಕೈಕೊಳ್ಳಿಂ (ಜಗಪ. ೬-೬೩). ೩. (ಬಂಡಿಗಳಲ್ಲಿ ಸರಕುಗಳನ್ನು ಹೇರಿ)ಸಾಗಿಸು; ರವಾನಿಸು; ಕಳಿಸು : ನಿಚ್ಚಮೊಂದು ಮನೆಯೊಳಿರಡೆಮ್ಮೆ ಪೋರಿಯೊಳ್ ಪೂಡಿದ ಪನ್ನಿರ್ಛಂಡುಗದಕ್ಕಿಯು ಕೂಬುಮ[ನ]ದರ್ಕೆ ತಕ್ಕ ಪರಿಕರಮುಮನೊರ್ವ ಮಾನಸಂ ಕೊಂಡು ಪೋಪು (ಶಂಶಪು. ೩-೨೫ ವ). ೪. (ಬಂಡಿಯ ಮೇಲೆ) ಸಾಗು ; ರವಾನೆಯಾಗು : ಹರಿಯಜಪುರದ ಸರಕುಗಳ್ ಪೂಡಿದುವು ಶಿವಲೋಕಕೆ (ಶಬಪು. ೪೦-೩೦). ೫. ಜೋಡಿಸಂ ; ಸೇರಿಸು : ಕರಿಯ ರದನಂಗಳ್ಗೆ ತಲೆಯೊಡ ಸೊರೆಗಟ್ಟಿ ನರದ ತಂತ್ರಿಯು ಪೂಡಿ ದಂಡಿಗೆವಿಡಿದು ಪಾಡಿದುವು ಕೆಲವು (ಕೃಬಾಭಾ. ೨೨-೨೪). ೬. ಬಿಲ್ಲಿಗೆ ಬಾಣವನ್ನು ತೊಡು ; ಶರಸಂಧಾನ ಮಾಡು : ಪೂಡು [ಶಿತ]ಶರಸಂತತಿಯಂ ಬಿಲ್ಲೊಳ್ (ಸಂಶಪು. ೩-೬೩) ; ಅರ್ಜುನನದ್ರಿಬಾಣಮಂ ಪೂಡಿದಂ (ಕೃಬಾಭಾ. ೦೩-೦೩) ; ಮದನಶಬರ ಸಂಯಮಿಮೃಗಗಳಿಗಾಗ ಕದುಬಿ ಪೂಡಿದ ಪೂಸರಕೆ ಪುದುಗಿದ ಮಿಂಚಿಗಳಿನೆ ಪರಡುಗಳತಿಮುದವನಿತ್ತುವು ನೋಳ್ಪರಿಗೆ (ಸಂಸಪ. ೯-೦೯). ೭. ತೊಡಿಸು ; ಅಳವಡಿಸು : ಕಾಲಿಂದನಂ ದಂಡಿಸಿದನಾ ದುಷ್ಟಬುದ್ಧಿ . . . ಸೆಱಮನೆಗಿಕ್ಕಿ ನಿಗಳಮಂ ಕಾಲ್ಗೆ ಪೂಡಿ (ಕೃಬಾಭಾ. ೩೦-೨೬). ೮. (ಆಟ, ಕೆಲಸ ಮುಂತಾದುವನ್ನು) ಹಮ್ಮಿಕೊಳ್ಳು : ಪಿಂಗಾಕ್ಷನಕ್ಷಕ್ರೀಡೆಯಂ ಶಕುನಿಯೊಳ್ ಸಮಾಟ್ಟಿ ಪೂಡಲ್ವೇಟ್ದು (ಶಂಶಪು. ೬-೬೯೩). ೯. ತೊಡಗು ; ಮೊದಲಾಗು ; ಆರಂಭವಾಗು : ಪೂಡಿದುದು ಕರ್ಕಶದ ಕಾಳೆಗಂ ಸವ್ಯಸಾಚಿಗೆ ಬಭ್ರುವಾಹನನ ಕೂಡೆ (ಕೃಬಾಭಾ. ೦೭-೩೪). ೧೦. ಉಂಟುಮಾಡು ; ಆಗಿಸು : ಕಲೆಗಳ ವಿಲಾಸಮಂ ಪೂಡುತ್ತೆ ಕೂಡುತ್ತೆ ಕಣ್ಗೆಸೆದರೆಳವೆಣ್ಗಳು (ಕೃಬಾಭಾ. ೩೦-೦೮). ೧೧. ಗುರಿಯಿಡು ; ಚಾಚು : ನಿನ್ನನಿಲ್ಲಿ ಕೊಲ್ಲದೆ ಮಾಣೆನೆಂದು ಸುರಗಿಯಂ ಕಿಱ್ತು ಗಂಟಲ್ಗೆ ಪೂಡು [ಪಾಠಾಂ. ಮೋದು]ವುದುಂ (ಧರ್ಮಾಮೃ. ೨-೦೨೯). ೧೨. ಮುಚ್ಚು ; ಹಾಕು : ಕೂಡೆ ಗಜಬಜಮಾಯ್ತು ಮನೆಮನೆಯ ಕದಗಳಂ ಪೂಡಿದರ್ (ಶಚಕ. ೨೪-೨೮) ; ನಳಿನಾಳಿ. . .ಬಾಗಿಲ್ಗಳಂ ಪೂಡಿಕೊಳುತಿರ್ಪುದೆಂಬಂತೆ ಮುಗಿಯುತಿರ್ದುವು (ಕೃಬಾಭಾ. ೦೭-೨೦). ೧೩. ಪ್ರಯೋಗಿಸು ; ಪ್ರಯೋಗ ಮಾಡು : ಸುಂಕಿಗನಂಶಿರೆ ಪೂ[ಪಾಠಾಂ. ಹೂ]ಡಿ ರೇಖೆಯಂ ಭೋರೆನಲೊಡ್ಡಿ . . . ಭಾಷ್ಪನಿಸಲಾಡಿದರಿರ್ವರಿಗೇನೊ ಕೌತುಕಂ (ಪುಣ್ಯಾಸ್ರ. ೯-೦೬). ೧೪.

**ಹೂಡು** : ೧. ಅರಿಷಟ್ಕವರ್ಗಮಂ ತಂದು ಹೂಡುವೆತ್ರಂ ಮಾಡಿ (ಇಳಿಕೆ. ದೇ. ೪೬-೦೩) ; ಆ ರಥಾಗ್ರಕೆ ವೇದ ನಾಲುಕು ವಾರುವಂಗಳ ಹೂಡಿದರು (ಕುಮಾ.ಕ. ೬-೩). ೨. ಬಂಡಿ ಹೂಡುವವರಂತೆ ತೋರಣಂ ಗಟ್ಟುವವರಂತೆ ಬಾಗಿಲ್ಮಾಡುವರಂತೆ . . . ಮುನ್ನಿನ ದರ್ಶನಮುಂ ನಿಶ್ಶಂಕೆಯುಮೆಂಬೆರಡುಂ ಲೇಸು ಮಾಡುವುದು (ಧರ್ಮಾಮೃ. ೨-೪) ; ಬಱದೆ ಸೈನ್ಯವ ಹೂಡಿ ಹಲಬರ ಕೊಲಿಸಿ ಬಲವಕ್ಕಾಡೆ ಕುರುಪತಿ ಕಟ್ಟುವಡೆಯನೆ ಕಳನ ಮಧ್ಯದಲಿ (ಕುಮಾ.ಕ. ೯-೨೮). ೩. ಸಾರಥಿಗಳನು ಹೂಡಿತಂತಕಪುರಿಗೆ ತೇಜಿಗಳಸುವ ಕಾಱದವು (ಕುಮಾ.ಶ. ೯-೪೦). ೫. “ಹೂಡು-ಯೋಜನೇ” (ಶಮದ) ; ಧರಣಿಪತಿ ನಿನ್ನಿಂದ ಕರ್ಣನ ತುರಗಪಾಶ್ಚ್ಯಾಯ ಚಮ್ಮಟಿಗೆಗೀಕರವು ಹೂಡು[ಪಾಠಾಂ. ಹೊದ್ದು]ವುದಾಯ್ತು (ಕುಮಾ.ಕ. ೩-೨೯) ; ಹೂಡಿದೆಲುಮರಮುಟ್ಟು ಮಾಂಸದ ಗೋಡೆ . . . ನರವಿನ ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು (ಹಂಶಾ. ೬೩) ; ಮುಖದಲ್ಲಿ ನಗೆಯನ್ನು ಹೂಡಿದ್ದರೂ ಕೈಗಳು ಕಂಪಿಸುತ್ತಿದ್ದುವು (ಮಸೋಸಂ. ೦೫೩) ೬. ಮದನಂ ಪುಷ್ಪಬಾಣಂಗಳಂ ಹೂಡಿದ ಬಿಲ್ಲು ಪೊತ್ತು ಪಿಂದಂ ಬರೆ (೧೧೬೪. ೪-೯೬) ; ಗಾಂಡೀವದಲಿ ಹೂಡಿದನು ಫಲುಗುಣ ಪಾಶುಪತಶರವ (ಕುಮಾ.ದ್ರೋ. ೦೯-೩೪) ; ಹೂಡಿದ ಕರ್ಗಣೆಯಿಂದೆ ದೈತ್ಯನ ಮೆಯ್ಯ ತೋಡಿದನೈದಂಬಿನಲಿ (ಪೋಹಪ. ೩೪ ೦೪). ೭. ಎನ್ನ ಮನೆ ಎಂಬವಂಗೆ ಬ್ರಹ್ಮನಿಕ್ಕಿದ ಕೋಳವಾಯಿತ್ತು ಎನ್ನ ಸ್ತ್ರೀ ಎಂಬವಂಗೆ ವಿಷ್ಣುವಿಕ್ಕಿದ ಸಂಕಲೆ ಹೂಡಿತ್ತು (ಶಸ್ಯವ. ೪. ೨೯೩-೩೩೦) ; ಒಂಭತ್ತು ಬಾಗಿಲ ಕದವನಿಕ್ಕಿ ಬಲಿದು ಬೀಗವ ಹೂಡಿ ನವಸಾಸಿರ ಮಂದಿಯ ಕೊಂದುಳಿದನು ಗುಹೇಶ್ವರ (ಅವಸಂ. ೦೦೯-೩೪). ೮. ತಪ್ಪದೆ ಬಾಲಕೇಳಿಯೊಳು ಮೇಗುಲುಗುಲುಗುಪ್ಪಂಡೆಯ ಹೂಡಿದಂತೆ ಒಪ್ಪುವಡೆದ ಹಿನುದಿಂಡೆಗಳೆಸೆದುವು (ಪೋಹಕ. ೬.೩೦) ; ಮಕ್ಕಳು . . .ಹೊಸ ಹೊಸ ಕೆಲಸಗಳನ್ನು ತಾವೆ ಹೂಡಬಯಸುವಂತೆ ಮಾಡಬೇಕು (ಕೃಮಾಶಿ. ೯). ೯. ಚತುರ್ವಿಧ ಸೃಷ್ಟಿಯೊಡ್ಡಣೆ ನಿಗಮ ಮತದಲಿ ಹೂಡಿತು (ಕುಮಾ.ಅ. ೦೯-೩೩). ೧೦. ಲಜ್ಜೆಗೆ ನೆಲೆಯ ಮಾಡಿದೆ ಹೂಡಿದೈ ದುರಿಯಶವನೆನಗೆ (ಕುಮಾ.ಐ. ೬-೩೯). ೧೧. ಕೃಪಾಣವ ಜಡಿದು ಗಂಟಲ ಬಳಿಗೆ ಹೂಡಿದನರಿವುದಕೆ ಕೊರಳ (ಕುಮಾ.ದ್ರೋ. ೦೯-೦೦) ; ದೆಸೆಯಿಂದೆ ದೆಸೆಯಾವ ಠಾಣಕ್ಕೆ ಹೂಡಿದ ಹೊಸಮಸೆವೆತ್ತ ಖಡ್ಗದಲಿ ಕುಸಿವೆತ್ತು ಖಳನ ಮಸ್ತಕವ ಕೀಳ್ಪಡಿಸಿ ರಂಜಿಸೆ ಕಾಮದೇವ ನಿಟ್ಟಿಸಿದ (ಪೋಹಕ. ೦೦-೬೬). ೧೨. ಜಗವರಾಜಕವಾಯ್ತು ಕುಮುದಾಳಿಗಳ ಬಾಗಿಲು ಹೂಡಿದವು ಸೂಱೆಗರು ಕವಿದುದು ತುಂಬಿಗಳು ಸಿರಿವಂತರರಮನೆಯ (ಕುಮಾ.ದ್ರೋ. ೦-೪೩). ೧೩. ಶಿವ ಶರಣೆಂಬ ದಂಡೆಯ ಹೂಡಿ ಗಣಮೇಳಾಪವೆಂಬಲಗಿನಿಂದಿಱವೆ (ಶಸವ. ೬೯೯) ; ತೋಳ ಮೊದಲ ಚಪ್ಪಳೆಗೊಳಿಸಿ ದಂಡೆಯ ಹೂಡಿ ನಿಂದಿರುವೊಪ್ಪವನೇನ ಬಣ್ಣಿಪೆನು (ಪೋಹಕ. ೦೨-೪೪). ೧೪. (ಬಲೆಯನ್ನು) ಬೀಸು ; ಒಡ್ಡು : ಸಿಲುಕುವವು ಮೃಗಪಕ್ಷಿ ಹೂಡಿದ ಬಲೆಗಳಲಿ ಕಾಡಾನೆ ಬೀಸಿದ ಬಲೆಯ ಕೊಂಬುದೆ (ಕುಮಾ.ಶ. ೦೩-೦೪). ೧೫. ಆರಂಭಿಸು ; ಉಪಕ್ರಮಿಸು : ಮಿಂಡೇರಾಯನು ಮುಂದಾಗಿ ಕದನವನ್ನು ಹೂಡಿ ಹೈದರನನ್ನು ಚೆನ್ನಾಗಿ ಸೋಲಿಸಿಬಿಟ್ಟನು (ಚಕೆ. ೯೦) ; ಅಂತೂ ಮನೆ ಮಾಡಿಯಾಯಿತು—ಸಂಸಾರ ಹೂಡಿದೆವು (ರೂಶಸಂ. ೦೦). ೧೬. ರಚಿಸು ; ನಿರ್ಮಾಣಮಾಡು : ಕೊಳನ ತಡಿಯಲಿ ಹೂಡಿದನು ಶರವಳೆಯದಲಿ ಚಪ್ಪರವನು (ಕುಮಾ.ದ್ರೋ. ೦೦-೩೩) ; ಹೂಡುವ ಜಗವನೊಂದೆವೆಯಾಟದೆ ಬಯಲ್ಮಾಡುವ ಮರಳಿ ಸೃಷ್ಟಿಸುವ . . . ಒಳ ಹೊಱಗಾಡುವ ಚೇಷ್ಟಕನೀತ (ಪೋಹಕ. ೦೩-೬೯) ; ತ್ರಿಪುಟಿಯೆಂಬ ಒಲೆಯ ಹೂಡಿ . . . ಮಹಾಜ್ಞಾನವೆಂಬ ಪಾಕವ ಮಾಡಿ (ಶಶಂದೇ. ೩೦೯-೦೨). ೧೭. ಉಳು ; ನೇಗಿಲು ಹೊಡೆ : ಗೌಡಬಸವಪ್ಪಯ್ಯನಂಬವನು ಗದ್ದೆ ಹೂಡಿಕೊಂಡು ಕೃಷಿರೂಪದಿಂದ ಕಾಲಕ್ಷೇಪ ಮಾಡಿಕೊಂಡು (ಕೆಳವಂ. ೦-೩) ; ನಿನ್ನಪ್ಪನೂ ನಾನೂ ಹೂಡುತ್ತೇವೆ ; ನಡುತ್ತೇವೆ (ಸ್ವಪ್ನಹೂ. ೩) ; ಫಲ ನೋಡದೆ ಕೆಟ್ಟಿತು, ಹೊಲ ಹೂಡದೆ ಕೆಟ್ಟಿತು (ಗಾದೆ). ೧೮. ಊರು ; ನೆಡು : ಹುರುಳುಗೆಡದೆಚ್ಚಾಡಿದರು ಫಲುಗುಣನ ರಥದಲಿ ಹೂಡಿದರು ಹೊಗರಂಬುಗಳನುಚ್ಚೆದ್ದು ತಮತಮಗೆ (ಕುಮಾ.ದ್ರೋ. ೧-೬೩) ; ನೆಲದೊಳ ಗೊತ್ತಿ ಹೂಡಿದ ಕೈಗೋಲು ಹೊತ್ತು ಬೆಳ್ಳರೆಕೂದಲಾ ಮುದಿಸೂಳೆಯರ ಮೊತ್ತವೊಪ್ಪಿದುದು (ಕಂಸಪ. ೬-೯೯೦). ೧೯. ಸಿದ್ಧಗೊಳ್ಳು ; ಅಣಿಯಾಗು : ನಿಮಿಷಕೆ ಹೂಡಿದವು ತೇರುಗಳು (ಕುಮಾ.ದ್ರೋ. ೨-೦೪). ೨೦. (ಬ್ಯಾಂಕು, ವ್ಯಾಪಾರ, ವ್ಯವಹಾರ ಮೊದಲಾದುವುಗಳಲ್ಲಿ ಹಣವನ್ನು) ತೊಡಗಿಸು ; ವಿನಿಯೋಗಿಸು : ಹಣವಿರುವವರು ದೊಡ್ಡ ಕೆಲಸಗಳಿಗೆ ಹಣ ಹೂಡುವರು (ಹಣಪ್ರ. ೩).

[ದೇ.॥ ತಮಿ. ಪೂಟ್ಟು]

**ಪೂಡೆ** (ನಾ). ಒಂದು ಬಗೆಯ ಖಾದ್ಯ ; ⁋ ಅಕ್ಕಿಯ ನುಚ್ಚಿನಂತೆ ಸಣ್ಣಗೆ ಕತ್ತರಿಸಿದ ಬದನೆಕಾಯಿಯ ಚೂರುಗಳನ್ನು ಬೇರೆ ಬೇರೆ ಭಾಗ ಮಾಡಿ, ಒಂದೊಂದಕ್ಕೆ ಒಂದೊಂದು ಬಗೆಯ ಸಂಬಾರವನ್ನು ಸೇರಿಸಿ, ಚೆನ್ನಾಗಿ ಬೆರಸಿ, ಒಗ್ಗರಣೆ ಕೊಟ್ಟು ಒಂದೊಂದಕ್ಕೂ ಒಂದೊಂದು ಬಗೆಯ ಸುವಾಸನೆಯನ್ನು ಕೊಟ್ಟು ಬಿಸಿ ಆರದಂತೆ ಅರಿಸಿನದ ತರಗೆಲೆಯಲ್ಲಿ ಪ್ರತ್ಯೇಕವಾಗಿ ಕಟ್ಟಿ ಇರಿಸಿದುದು : ಕಡಿಯಕ್ಕಿಯಂತೆ ಕತ್ತರಿಸಿ ಬದನೆಯ ಕಾಯ . . . ಅರಿಸಿನದ ತಱಗಿಂದವಂ ಕಟ್ಟಿ ಬಿಸಿಯಾಱದಂತಿರಿಸಲವು ಪೂಡೆವೆಸರಂ ಪಡೆದವು (ಸೂಶಾ. ೪-೨೩).

[ < ಪೂಡು ? ]

**ಪೂಣ್₁**, ಹೂಣ್ಣು₁ (ಕ್ರಿ). ೧. ಹೂಡು ; ತೊಡು : ಕಬ್ಬುವಿಲ್ ತುಂಬಿವೆದೆ ಪೂಸರಲ್ ಪೂಣ್ದಸಲ್ಲಿಬ್ಬರುಮಿದೆಂದು ಮದನಂ ಮಾಲೆಗಾರ್ತಿಯರ ಹುಬ್ಬೆಂಬ ಚಾಪವಮಂ . . . ಅಳವಡಿಸಿಕೊಂಡು ಬಿಡದಬ್ಬರಿಸಿ . . . ಕೆಡಪುಶಿಹನಲ್ಲಿ ವಿಟರಕ್ಷಿಮೃಗಕುಲವನು (ಕೈಬಶಾ. ೬-೧೭). ೨. ಹೊಂದಿಸು ; ಅನ್ವಯಗೊಳಿಸು : ರಸಪ್ರಸರದೊಳು ಸವಿ ಸಂಗಳವಂತೆ ಪೂಣ್ದು ಪೇಟ್ಟುದು ಕೃತಿಯಂ (ಕುಕುಮಾ. ೧-೩). ೩. ಅಳವಡು ; ಹೊಂದಿಕೆಯಾಗು ; ಕೂಡಿಕೊಂಡಿರು : ಜಾಣ್ ಮನಂಗೊಳಿಸೆ ಪೂಣ್ದಿರದರ್ಥಕೃತಿಪ್ರಬಂಧವಂ ಕಿವಿಗಿನಿದಾಗೆ . . . ಪೇಟಲೊಡರ್ಚಿದನೀ ಪ್ರಬಂಧವಂ (ಉಮೋಂಉ. ೧-೧೧) ; ಇಟ್ಟ ನವಚಂದನದ ಬೊಟ್ಟಿಳವಟ್ಟಿರಲು ಪೂಣ್ದಣ್ಣಗಂಟಿನ ತೊಟ್ಟ ಜವಕೆಯ . . . ಉಟ್ಟ ಸಾಲೆಯ ಮೇಲುದೊಪ್ಪಿರೆ ದಿಟ್ಟೆಯೊರ್ವಳು ನಿಂದಳಂಗಜನಲಗಿನಂದದಲಿ (ಚೆಪಂಶ. ೧೭-೩೩). ೪. ಪಡೆ ; ಹೊಂದು : ಆ ಪೇಚರೇಂದ್ರಂಗವೇಂ ಬೆರಲಿಂದಗ್ಗಳಮಿವ ಕಾವ ಗುಣವಂ ಪೂಣ್ದಂದಭೂಪಾಳಕ (ಎಫ಼. XXVII, ೬೨-೩೦ ; 1114) ; ಬಂದುದಶಿವ್ಮುದುಗತಿಯಿಂ ಪೂಣ್ದೆಸೆವ ... ಬಟ್ಟದೊಡೆಗಳಬಲಾನೀಕಂ (ಶಗಂ. ೪-೧೦೬). ೫. ತೊಡಗಿಸು ; ಯೋಜಿಸು: ಬಲಸ್ಥನೊಳ್ ಬಲವುನೆ ಪೂಣ್ದುದುಂ [ಪಾಠಾಂ. ಮಾಟ್ಟುದುಂ, ಮಾಣ್ಣುದುಂ] ಪರಿಭವಕ್ಕೆ ಮೊದಲ್ (ಆದಿಪು. ೦೨-೦೦೩). ೬. ಉಂಟುಮಾಡು ; ಆಗಿಸು : ಪ್ರಭು ಕಿಱಿಯಾತನಂ ನಿಱಿಸಿ ರಾಜ್ಯದೊಳೆನ್ನನವಸ್ತು ಮಾಡಿ ಪೂಣ್ದಭಿಭವವಿಾಗಳೀ ಭವದೊಳಿಂತಿದು ನೀಗದು (ಆದಿಪು. ೨-೩೯). ೭. ಸುತ್ತುಗಟ್ಟು ; ಆವರಿಸು ; ಮುಚ್ಚು ; ಕವಿ : ಮೊನೆಯಂಬುಗಳೊಳೆ ಪೂಣ್ದಪನನಿಬರುಮಂ ಕಿಱಿದು ಬೇಗದಿಂ ಹರಿಗನದರ್ಕೆಸಗೆಡೆವೇಟ್ಕುಮೆ ಎಂಬಪೊಲನಿಬರುಮಂ ಪೂಣ್ದನ[ತನು] ನನೆಯಂಬುಗಳಿಂ (ಪಂಪಭಾ. ೩-೫೨) ; ಪಾರ್ಥಂ . . . ಶಲ್ಯನ ಪದಾತಿಯಂ ಪೂಣ್ದುದುಗ್ರಶರಸಂಹತಿಯಿಂ (ಮಹಾಪೇ. ೦೨-೯೨). ೮. ಉಪಕ್ರಮವಾಗು ; ಆರಂಭವಾಗು ; ತೊಡಗು : ತಪನಸುತನಂದನ ಸುಧನ್ವರ್ಗೆ ಕಾಳೆಗಂ ಪೂಣ್ದುದು (ಕೈಬಶಾ. ೦೨ ಸೂಕಪ). ೯. ಒಪ್ಪಿಕೊಳ್ಳು ; ಸಮ್ಮತಿಸು ; ಒಡಂಬಡು : ಇಱಿಯಲ್ವೇಡೆಮ್ಮನೆಮ್ಮೊಳ್ಳುದಂ ನೆಱೆ ಕೊಂಡೆಮ್ಮಯ ಬಾಟ್ವೆಯೊಳ್ ನಿಱಿಸುವಂ ನೀನೆಂದು ತಂದಿತ್ತು ಕಯ್ಕಾಣಿಯಂ ಕೊಟ್ಟಳವಟ್ಟ ಸಾರಧನಮಂ ಮೂಱಿಟ್ಟಿಗುಂ ಪೂಣ್ದು ಕಾಲ್ಗೆಱಗಿತ್ತಂತರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ (ಶಂಕಶಾ. ೬-೩೦) ; ಎನ್ನಾಳ್ದನಪ್ಪ ಮೃಗಾಧಿರಾಜಂ ಪಿಂಗಳಕನಂ ಕಾಣದೆಯುಂ ಆಳ್ತನಕ್ಕೆ ಪೂಣದೆಯುಮಿಲ್ಲಿ [ಪಾಠಾಂ. ಪೂಣ್ದಿಲ್ಲಿಯುಂ] ನಿನ್ನ ಬಾಟ್ಟುವಾಯುಮಾವುದು (ಶಂಕಶಂ. ೪೪-೦೩); ನಗರನಾರ್ಯನುನ್ನತಿ ತನ್ನಂ ಮುನ್ನಲೆಯುತ್ತಿರೆ ಮಂದರಂ . . . ಸೇವಾವೃತ್ತಿಗೆ ಪೂಣ್ದು ನಿತಾಂತಮೋಲಗಿಸಲಟ್ಟಿದ ಸಾನುವದೆತ್ತಂ ಬಂದೆಳಸಿರ್ಪುದೆಂಬಿನಂ ಸೊಗಯಿಪ್ಪುದು ಪೊಮ್ಮದಿಲ್ (ಧರ್ಮಪು. ೨-೧೦). ೧೦. (ಕೆಲಸ, ವ್ರತ, ನಿಯಮ ಮೊದಲಾದುವನ್ನು) ಕೈಕೊಳ್ಳು ; ಸ್ವೀಕರಿಸು : ಇರು ಮೌನವ್ರತವಂ ಪೂಣ್ದ[ಪಾಠಾಂ. ಕೊಂಡ, ತಳೆದ] ರಣ್ಮದೊಳಗಾರ್ಗೆ ಮೆಱೆದಪ್ಪೆ ನಿನ್ನೆಸೆವಿಾಚರಮಂ ಕಳಕೋಕಿಳೆ (ಆದಿಪು. ೧೧-೦೩೨) ; ಬೆಸನೆಂದು ಪೂಣ್ದು ದೇವರ ಬೆಸನಂ ಸುಕುಮಾರರೆನಿಪ ರಾಜಕುಮಾರರ್ ಬೆಸದಟ್ಟಿದರ್ (ಆದಿಪು. ೧೧-೩೨); ಆ ವಿಪಶ್ಚಿತ್ತಮಂ. . . ಮಾಸತ್ರಯಂಬರಂ ಪ್ರಾಯೋಪಗಮನವಿಧಿಯಂ ಪೂಣ್ದು (ಶಾಂತಿಪು. ೨-೬೪೨) ೧೧. ದೃಢವಾಗು ; ಸ್ಥಿರವಾಗು : ಪರಭೂಪಾಳಕರುರ್ಕಡಂಗೆ ಪಣವರ್ಪ್ಪರ್ [ತ]ಮ್ಮಿರ್ಕ್ಕೆಯೋಳ್ ಸುರ್ಕ್ಕೆ ಮಯ್ಗುರೆಯಲು ಗಣ್ಡನ ತೋಣ್ಡೆ ಸಂಕದಧಟಲ್ಪೊಂಕ್ಕಾಳ್ತನಂಬೂಣೆ ದಿಗ್ಭರಿತಾತ್ಮೋಜ್ವಳಕೀರ್ತ್ತಿ ಪರ್ವ್ವಿತಿರೆ ಲೋಕಾಲೋಕಮವಳ್ (ಹ್ಯಎಸಿ. XIII, ೨೭ ೬೩; 1090). ೧೨. ಆಣೆಮಾಡು; ಪ್ರತಿಜ್ಞೆಮಾಡು; ಶಪಥಮಾಡು: "ಪೂಣ್–ಪ್ರತಿಜ್ಞಾಯಾಂ" (ಶಮಧಾ) ; ಪಾಯ್ದು ಮಾಗಧನನೀಗಳೆ ಕಟ್ಟುವೆನಿಲ್ಲಿ ಪೂಣ್ದು ನಿಲ್ವನಿತುವರಂ ಸುರಂಗಹನಮೇ (ಆದಿಪು. ೦೨-೭೦); ಸಮಸ್ತಲೋಕಮಱಿದಂತಿರೆ ಪೂಣ್ದೆನಗಾಗದಂಗಜೋತ್ಪತ್ತಿಸುಖಕ್ಕೆ ಸೋಲಲ್ (ಶಂಶಕಾ.೦-೭೩) ; ಕುರುನಂದನನರು ಕೊಂದು ಕುರುಶಾಬಾನುಜನ ನೆತ್ತರಂ ಕುಡಿದೆಂ ಪೂಣ್ದರಡಂ ತೀರ್ಚಿದೆಂ (ಗದಾಯು. ೦-೬೯). ೧೩. ವಚನ ಕೊಡು ; ಭಾಷೆ ಕೊಡು; ಮಾತು ಕೊಡು: ಉಱಿಯಲಾಗದು ನೆಟ್ಟನೆ ಪೂಣ್ದುದಂ ಪುಸಿವರಾಗಿರದೆ ಮಾನಸರ್ (ಕಬ್ಬಿಗ.೦-೧೩೩); ಎನ್ನ ಬೇಡಿದುದನೀವೊಡೆ ನಿನ್ನಂ ಕಾವೆನೆಂದೊಡಾಕೆಯುಮಿಾವೆನೆಂದು ಪೂಣ್ಗೊಡೆ (ವಡ್ಡಾ. ೦೩-೨೩) ; ಇಂತಪ್ಪ ಬನಮನಿದನಿ[ನ್ನೆ]ಂತಶನಲನನೂಡಲೆಂದು ಪೂಣ್ದಯ್ ಮುಂ ಪೂಣ್ದಂತೂಡು (ಶಂಶಿಶಾ. ೩-೯೩) ; ಪೂಣ್ದುದು ವಿಫಳಮೆನಿಸದೇ ನೀತಿವಪ್ಪದಿಂ ನೆಗಟ್ಗೆ ಬಲ್ಲಪೊಲ್ ನಿನ್ನರಸು (ಪರ್ಶು. ೬-೩೦). ೧೪. ನಿರ್ಧಾರಮಾಡು; ನಿರ್ಣಯಿಸು: ತನುವಂ ತೆಯ್ದಪ್ಪಳಕ್ಕಂಬ್ರತದೊಳೆನುತೆ ಕನ್ಯಾವ್ರತಕ್ಕೆಂತೆ ಪೂಣ್ದರ್ದಂ (ಕಾಪಂಆ. ೩೯) ; ಈ ಕುಮಾರನಖಿಳೋರ್ವಿಗದೊರ್ವನೆ ವಲ್ಲಭಂ ಪ್ರತಾಪದೆ ಪೆಱನಿಲ್ಲೆನುತ್ತೆ ನೆಱೆ ಪೂಣ್ದು ವಿರಾಜಿಪ ರಾಜ್ಯಲಕ್ಷ್ಮಿ ರಾಗದೆ ಬೆರಲೆತ್ತಿದಂತೆ . . . ನವೀನಚೀನಚೇಲದ ಗುಡಿ ಕಣ್ಗವಂದುದು (ಕುಕುಮಾ. ೬-೭೭) ; ಬರ್ದಿಲದ ನಾಡ ಕಟ್ಟಕಡೆ ಬೀದಿಯ ಹಾದಿಯೊಳೊರ್ಮೆ ಸಲ್ವೆಮೆಂದೆರ್ದೆಯೊಳೆ ಪೂಣ್ದಪರ್ ಪಡದ ಪಾಡುಗಳಾವುದುಮಿಲ್ಲ (ಶಸಿಂ. ೦-೯೪). ಹೂಣ್ಣು₁ : ೧. ಅಲಗು ಮುಱಿಯಿತ್ತು ಗಱಿ ಜಾಱಿತ್ತು ನಾರಿಯ ಹೂಣಾವ ಹಿಳುಕು ಹೊಳ್ಳಾಯಿತ್ತು, ಗೊಹೇಶ್ವರನ ಶರಣ ಅಲ್ಲಮ ಹಿಡಿದ ಬಿಲ್ಲು ಮುಱಿಯಿತ್ತು (ಸರ್ವಶ. ೩೪-೦೩೯). ೨. ವೀಣೆಯ ನುಡಿಸುತ ಪಾಡಿದರಿವಳೀಗ ವೀಣೆಗಳೆರಡನೊಂದಾಗಿ ಹೂಣಿ ನುಡಿಸುತ್ತಿದ್ದಳಿಂಬೊಲಿಹುದು (ಭಶಕ. ೦೦-೭) ; ಅಣವಾದಿಯೊಳಿರಲು ಹೂಣೆ ಲಿಂಗದಿ ಮನವ ಕೇಣವಿಡದಿಹನು ವಿರತಿಯಲಿ ದೇಹದಿಹ ಪ್ರಾಣಲಿಂಗಿಯು ತಾ (ಸರ್ವಜ್ಞ. ೦೩೯). ೧೪. ಹೂಣಿ ಛಾಂದಸರ ನಟ್ಟದೆ ಕಾಮನೆಡೆಗೆ ಪ್ರವೀಣ ದಕ್ಷಿಣನನಟ್ಟಿದನು (ಭಶಕ. ೪೭-೩೦). ೧೫. ಒದಗು; ಉಂಟಾಗು : ಅತಿ ಚಿಂತಾತುರ ಹೂಣೆದುದಾ ಕಾಮಿನಿಗೆ (ಅಂಶಕ. ೭-೨); ಪಿಣಾಕ್ಷಿಯರನೆನೆಸಿಯೆದೆಗಟ್ಟ ಮೋಹಿಗಳು . . . ಉರ್ವೀತಳದೊಳಪಕೀರ್ತಿ ಹೂಣಿ ಹಬ್ಬುವುದೆಂಬುದಂ ನೆನೆಯರು (ಸಮ್ಮಶಾ. ೬-೨೨). ೧೬. ಎದುರಿಸು; ಹೋರಾಡು : ಹೂಣಿ ಹಿಡಿದು ಮೋಹಮಲ್ಲನ ಕೆಡಹಿ . . . ಗೋಣ ಮುಱಿದು ಹಾಕಿದ ಬಲ್ಲಿದನ ನಿರ್ವಾಣಪೂಜೆಯ ಮಾಡಿದರು (ಪ್ರಿತಾಂ. ೦೪-೬೩). ೧೭. ಹೇರಂ ; ಹೊರಿಸಂ: ಹೂಣಿದ ಹೊಱೆ ಜಾಱಿದಂತಾದುದೆನಗೆ (ಭಶಕ. ೬-೬).

**ಪೂಣೆ ಪುಗು, ಪೂಣೆ ಪೊಗು, ಹೂಣ ಹೊಗು, ಹೂಣಿ ಹೊಗು, ಹೂಣೆ ಹೊಗು, ಹೂಣೆಯ ಹೊಗು** = ೧ ಸುತ್ತುಗಟ್ಟಿ ದಾಳಿ ಮಾಡು.— ರಭಸದಿಂದ ನುಗ್ಗು : ಅರಾತಿಕಾಳಾನಳಂ . . . ತಾನುಂ ಭೀಮಸೇನನುಂ ದಿವ್ಯಶರಾಸನಂಗಳಂ ಕೊಂಡು ಪೂಣೆ ಪುಗುವರಾತಿಬಲವುಂ ಮಾರ್ಕೊಂಡು ತಗೆನೆಱೆದಿಸೆ (ಶಂಶಕಾ. ೩-೬೯ ವ); ಹೂಣಿ ಹೊಕ್ಕನು ಹಿಡಿದು ವೈರಿಕ್ಷೋಣಿಪನ ತಱುಬಿದನು (ಕುಮಾರರ್ಯ. ೪-೬); "ಹೂಣೆ

ಪೊಕ್ಕೊಂದಮೆನೆ ಸತ್ಪ್ರಾಣದಿನೊಳಪೊಕ್ಕನೆಂಬುದು" (ಹತುಂ. ೨೦೭): ಮಗ ನಳಲು ಮಿಗೆ ಹೂಣೆ ಹೊಕ್ಕನು ಮಂಗುಳಲಱಿಯನು ತಮ್ಮನೆನುತ ವನೀಶ ಚಿಂತಿಸಿದ (ಕುಮ್ಮಾ.ದ್ರೋ. ೦೨.೦); ಪ್ರಾಣನಾಯಕ ನಿನ್ನ ಸವಿನುಡಿ ಯಲ್ಲದೆ ವೀಣಾದಿಗಾನರವಗಳು ಸಾಣೆವಿಡಿದ ಶಲ್ಲಯಂತೆ ಕಿವಿಯೊಳು ಹೂಣೆ ಹೊಗ್ಗುವು ನಿನ್ನಾಣೆ (ಕುನಪು. ೯-೦೬೦). ೨. ಪೂರ್ತಿಯಾಗಿ ಒಳಪಡು (?) : ನೋಡಿದ ಮಂಡಿರೆಲ್ಲಾ ಕಾಮದೇವನೆಂಬ ಬೇಂಟೆ ಕಾಱಂಗೊಡ್ಡಿದ ಪುಲ್ಲೆಗಳಂತರಲಂಬಿನ ಮೊನೆಗೆ ಪೂಣೆ ಪೊಕ್ಕು ಪಕ್ಕಾಗಿರೆ (ಕಂಕಥಾ. ೪-೩೯ ಪ). ೩. ಒಂದಾಗು ; ತಲ್ಲೀನವಾಗು ; ತನ್ಮಯ ವಾಗು : ಅವುದು ನಿಮಿತ್ತ್ಯವಾದೊಡಂ ಬ್ರಹ್ಮದೊಳು ಹೂಣ ಹೊಗರಾ ಬ್ರಹ್ಮವಪ್ಪನು (ಏಕೈಶು. ೩ ೯-೨೦); ಚನ್ನಬಾಪ್ಪಿಕಾರ್ಜುನನ ಶರಣರ ಸಂಗದಲ್ಲಿ ಹೂಣಿ ಹೊಕ್ಕು ಬದುಕು ಕಂಡಾ ಮನವೆ (ಕುಹಾದೇ. ೪. ೩೦.೬೯); ಕಾಣಲಿಕೆ ಬಯಲೆಂಬ ಮೂರುತಿಯು ಕಾಸಲ್ಲ ಹೂಣೆ ಹೊಕ್ಕಿರಡಳದ ಲಿಂಗೈಕ್ಯನು (ಶಿವಗೀ. ೩೬ ೨೭೬); ಚತುರ್ವಿಧ ಫಲ ಪದಂಗಳಲ್ಲಿ ಹೂಣೆಯ ಹೊಗದೆ ಸುಖದುಃಖ ಆತುರಂಗಳಲ್ಲಿ ಭೇದಿಸಿ ಕೊಳ್ಳದೆ (ಸಗದೊ. ೪. ೩೩೩-೯೩). ೪. (?) : ಸಲಪ್ರಾಣಿಗಳಲತ್ಯಧಿಕ ನಾಗಿರುತಿರ್ದ ಜಡತೆಯಲಿ ಕೇಣವನು ಕೈಕೊಂಡು . . . ಮರುಳಹ ಹೂಹೆ [ಣೆ] ಹೊಕ್ಕಿರುತಿರ್ಪ ಪರಿಯೇನು (ಶಿಶಾಗ. ೦೦.೦೩-೬).

[ದೇ.॥ ತಮಿ. ಪೂಣ್, ಪೂಣಿ ; ಮಲ. ಪೂಣ್ ತೆಲು. ಪೂನು]

**ಪೂಣ್₃** 'ಪೂಟ್' ನೋ.

**ಪೂಣ್₄**, ಹೂಣೆ (ನಾ). ೧. ಪ್ರತಿಜ್ಞೆ; ಶಪಥ : "ಪೂಣೆಂದು ಪ್ರತಿಜ್ಞೆ" (ಶಶಾ. ೩೮-೨೬೦). **ಹೂಣೆ :** ೨. ಮಾತು; ವಚನ; ನುಡಿ : ಹೂಣೆಯೇಕವರೊಡನೆ ಸೆಣಸಿನ ಸಾಣೆಯಿಕ್ಕುವ ಮಸೆವ ಕದನವ ಕಾಣೆವೆಮ್ಮಜಿಕೆಯಲಿ . . . ಬಹೆವರಸ ನಿಮ್ಮಡಿಯಾಣೆಯೆಂದೊಡಬಡಿ ಸಿದರು (ಕುಮ್ಮಾ.ಕ. ೬೦೨. ೦೯-೨೩); ಶರಣಸಿಹ ಮರ್ತ್ಯವನು ಹರನ ಕೈಲಾಸವನು ಹಿರಿದು ಕಿರಿದಿನ ಹೂಣೆಯಿಂದೆ ಪ್ರಮಥರ್ಗೂಡಿ ಪರಿಕಿಸಲ್ ಬೇಕೆಂದು ನವಸೂತ್ರಧರ್ಮಚಿಂತಾಲಿನಿಂ ತೂಗಲೊಡನೆ (ಪ್ರೈ.ಲಾಕ. ೩.೦೪). ೩. (?) : ದಿನಗಳೆದು ದುರ್ವ್ಯಸನದಿಂ ಪಿರಿಯ ಹೂಣೆಯಂ ನೆನೆದು ... ಅಣ್ಣನಂ ನೋಯಿಪನುಜರ್ಗೆ ··· ತಪ್ಪದೆಂದೆಂದಿಗುಂ ನರಕವು (ಶ್ರೀರಾಮ. ೪.೪೪); "ಹೂಣೆಯ-ತ್ನ. ವೈಶೂನ್ಯ, ಹೊಟ್ಟೆಯ ಕಿಚ್ಚು" (ಶ್ರೀರಾಮ. ೬೯೬ ೨೭). [< ಪೂಣ್₁]

**ಪೂಣೆಕೆ** 'ಪೂಣ್ಕೆ' ನೋ.

**ಪೂಣೆಗ**, ಹೂಣೆಗ, ಹೂಣೆಗ (ನಾ). ೧. ಬಾಣವನ್ನು ಹೂಡುವವನು; ಬಿಲ್ಲುಗಾರ; ಧನುರ್ಧರ : ಎಚ್ಚು ಕಾದಿದುದು ತಗುಳ್ದು ಬಿಲ್ಪಡೆ ಪಡಲ್ಪಡೆ ಮಾಣದೆ ನಿಂದು ಪೂಣೆಗರ್ (ಕಂದ್ರಶು. ೦೦.೬೬); ಪೂಣೆಗರೆನಿಸಿದರಜಿಕೆಯ ಪ್ರಾಣದ ಬಿಲ್ಲೆಗೆದ ಬಲ್ಮೆಯಂತಾಱುವವೋಲ್ ಬಾಣಾ ನೆಱೆಗೊಳೆ ತೆಗೆದರ್ ಪ್ರಾಣಮನವಯವದಿನೆಚ್ಚು ರಿಪುನೃಪಬಲದೊಳ್ (ಪಾಶ್ವಕ್ತೆ. ೩-೦೦೯); ಲವಣಾಂತಕನೆಂತೆನೆಂತೆ ಕನಲ್ದು ತೇರನೇಱ ಬಂದು ಟೆಟ್ಟಿದಿರ ಪೂಣೆಗನಂ ಕಂಡು (ರಾಮಾಶ್ವ. ೦೩೬-೬). ೨. ಹೋರಾಟಗಾರ; ಸಾಹಸಿ ; ಶೂರ : ಪಿರಿಯರಂ ಪೂಣೆಗರಂ ಬಿರುದರನದಟಿನೊಳುಬ್ಬರಮುರಿವರ ನಾಯ್ದುಱಿಕಿಕೊಂಡುಪರಿಗನ ಕಣೆಗಳ್ (ಕಂಕಥಾ. ೦೨-೦೭೪); ಪೂಣೆಗರಂ [ತ]ಜೇಯರಥಟರ್ ಪುಗ್ನಾಯಿಲರ್ ಜಟ್ಟಿಗರ್ ಚಲವಂ ಪೂಣ್ದದರಳ್ಕಿ . . . ಶರಣೆಂದು ಬಂದೆಱಗಿದರ್ ಚಕ್ರೇಶ ಪಾದಂಗಳೊಳ್ (ಪರ್ವಶಾ. ೯-೬೦). ೩. ಹಟಮಾರಿ ; ಛಲವಾದಿ ; ತನ್ನ ರೀತಿಯೇ ಸರಿಯೆಂದು ವಾದಿಸುವವನು: ಜಾಣರ್ಕಳಲ್ಲದವರುಂ ಪೂಣೆಗರಜಿಯದೆಯುಮಱಿವ ವೋಲವಗುಣದಾ ತಾಣಮನಿನಿಸೆಡವೆತ್ತೊಡೆ ಮಾಣದೆ ಪಿಡಿಥಧನೆ ಕೃತಿಗಳಂ ಕಿಡೆನುಡಿದರ್ (ಕಾರಾ. ೦-೪೦). ೪. ರಚಿಸುವವನು ; ನಿರ್ಮಾಪಕ : ಕರ್ತೃ : ಕಾಣನೇಗೆಯ್ದುಂ ತನ್ನ ದೋಷಮಂ ಕಾಣದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯುಂ ಪೂಣೆಗನಾದುದಱಿಂ ಪೆಱರಿಂ ಜಾಣರಿನೋದಿಸಿ ಪೇಟ್ಟುದು ಕಬ್ಬಮಂ (ಕಶಾ. ೦-೪೩). **ಹೂಣೆಗ :** ೧. ಅರರೆ ಕವಿಕವಿದಂಬು ಕಡಿದವು . . . ಹೊಡೆಗೆಡೆದವು ಹೊಕ್ಕೆಸೆವ ಹೂಣಿಗರ (ಕುಮ್ಮಾ.ಶೀ. ೪-೦೩); ದ್ರೋಣ ಭೀಷ್ಮರ ಪೋಲು ನೆಟ್ಟನೆ ಹೂಣೆಗರು ರಾಧೇಯ ಮಾದ್ರಕ್ಷೋಣಿಪತಿಯೆಂದೆಂಬ ನುಡಿಯುಂಟೆರಡು ಥಟ್ಟಿನಲಿ (ಕುಮ್ಮಾ.ಕ. ೩ ೦೭). ೨. "ಹೂಣಿಗನೆನೆ ಸಾಹಸಿಗು" (ಕಾರು. ೨೬); ಸಾಣೆಗಂಡಲಗಿವನು ಸಮರಕೆ ಹೂಣೆಗನು (ಕುಮ್ಮಾ.ಕ. ೦೬-೨೧); ಆತನುರವಣೆಸೆ ಹೂಣೆಗರು ನೆರೆ ಮುಸುಕಿತು (ಕಹಂಗ. ೩೩-೪೯). ೩. ಜಾಣೆ ಗುಡ್ಡವ್ವೆಗಳು ವೀರಂ ಹೂಣೆಗಂ ಹೆಂದಯ್ಯನೋವದೆ ಕೇಣಿಗನ ಕೊದೆಸೆದ ಸಗರದ ಬೊಮ್ಮಿತಂದೆಗಳುಂ (ಶಾಸಂಕ. ೯-೬೩); ನೀವು ಹೂಣೆಗರಾಗಿ ರಿಪುವನು ಕಾವಡಿಕ್ಕಲೆ ತೊಲಗುವೆನು (ಕುಮ್ಮಾ.ದ್ರೋ. ೯-೩೦). ೫. ಪ್ರಯೋಗ ಸಾಧನ,-ಸಲಕರಣೆ : ಅಱೆ ಹೊದೆದ ಗೋಣಿ ಹೂಣಿಗನಾಯ್ತು ಕೊಲೆಗೆ ಸಲೆ ಉಱೆದಱಿಸಿಕೊಂಡ ತಲೆಗುಱೆ ನೆಱೆಯಿತಿಲ್ಲಿಗೆ (ಶಾಸಂಕ. ೪-೨೨೩); ಶಿವನ ಘಾಟದ ಶರ ಚತುರ್ದಶ ಭುವನಭಂಜನವಿದು ಮದೀಯಾಹವಕೆ ಹೂಣಿಗನಾಯ್ತಲಾ ಹೇರಾಳ ಸುಕೃತವಿದು (ಕುಮ್ಮಾ.ಕ. ೦೨-೬೪). **ಹೂಣೆಗ :** ೨. ಬರುದ ಭಟರಿಗೆ ಬೆಱಗು ಬಲಿದುದು ಹೂಣೆಗರ ಹೋರಟೆಗಳಳುಕಿದವು (ಕುಮ್ಮಾ.ಶೀ. ೬-೩).

**ಪೂಣೆಗಳ್** = ಪ್ರತಿಜ್ಞಾಬದ್ಧಳಾದವಳಂ : ಪೂಣೆಗಳಾಗಿ ಬರ್ದ ಪೊಗಟ್ದಿಪ್ಪ ವಿದಗ್ಧೆಯನೆಲ್ಲಿಮಾತನಂ ಕಾಣಲೊಡಂ ಕರಂ ಬಯಸಿ ತಾಮೆಱೆದಟ್ಟುವರಟ್ಟ ಕೂಡೆಯುಂ ನಾ[ಣ]ಲಿವನ್ನರಾದರೆನುತೊಂದು ವಿದಗ್ಧತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ ಬಾಲಕಿಯ ಯೆಂತುಗೆ ಕೂಡುತೆ ಗೆಲ್ದೆಯಾತನಂ (ಶಂಹಂ. ೩-೬೦). [ಪೂಣ್₁ + —ಇಗ]

**ಪೂಣೆಗತನ**, ಹೂಣೆಗತನ (ನಾ). ಸಾಹಸ; ಶೌರ್ಯ : ಪಲವು ದಿವಸಮಾಹಾರಂಬಡೆಯದೆ ಕೆಂಗೋಲ್ಮಸಗಿದ ಸಿಂಹಕ್ಕೆ ಪೂಣೆಗತನದಿಂದೇನಾ ನುಮೊಂದಂ ನುಡಿದೆನಪ್ಪೊಡೆನ್ನನೆ ಮುನ್ನಮಾಪೋಶನಂಗೊಳ್ಗಂ (ಶಂಕಕಂ. ೦೬೩-೨೦). **ಹೂಣೆಗತನ :** ಇವನ ಹೂಣೆಗತನವನಿವನಾಹವದ ಹೊಱಗೆಯನಿವನ ಭಾರಿಯ ಮೆಗ್ಗಳೆಯತನವ ದಿವಿಜರಾನಲು ನೂಕದಿದು ನಮ್ಮವರ ಪಾಡೇನೈ (ಕುಮ್ಮಾ.ದ್ರೋ. ೦೬-೦೪). [ಪೂಣೆಗ + — ತನ]

**ಪೂಣಿಸು₁**, ಹೂಣಿಸು₁ (ಕ್ರಿ). ೧. (ಬಿಲ್ಲಿಗೆ ಬಾಣವನ್ನು) ಹೂಡು,—ಸಂಧಾನಿಸು : ಧೃಷ್ಟದ್ಯುಮ್ನಂ ಪೂಣಿಸಿ ಕರ್ಣಾಣೆ ತಿರುವಾಯ್ಗಾಣಲೊಡಂ ತೀವಿ ತೆಗೆದು ಪೊಱಮುಯ್ಯುವರಂ ದ್ರೋಣನ ನೆಚ್ಚಂ (ಕುಹಾಶೀ. ೦೨-೨೦೩) ; ಶಂಬರಸೂದನನಾದ್ಯೆದಂಬುಗಳ್ಪೆ ಸಾಸಿರಂಬೆನಲ್ ಪೂಣಿಸಿಯಾರ್ಪಿಂ ಬಿಡದೆಚ್ಚವನೆನ್ನಂ (ದಶಕು. ೬-೨೬೪). ೨. ಹೊಂದಿಸು ; ಸಜ್ಜುಗೊಳಿಸು ; ಅಳವಡಿಸು : ಪೊಯ್ದು ಬೊಬ್ಬಱೆವ ಪಱೆಯೊಳಂ ತೆನೆಯಂ ತಳ್ತ ಪರಿಗೆಯೊಳಂ ಮೊನೆಯಂ ಪೂಣಿಸಿದ ಕೊಂತದೊಳಂ ಕೈಗೆಯ್ದು (ಅಕಂಕು. ೦೦-೬೨ ಪ). ೩. ಕೊಡು ; ನೀಡು ; ಅನುಗ್ರಹಿಸು : ಅವರ ದೇಶನಾಮಕುಲ ಗೋತ್ರಂಗಳನಱಿಯೆ ಬಿನ್ನಪಂಗೆಯ್ದು ಭೃತ್ಯಭಾವಮಂ ಪೂಣಿಸಿ ಸನ್ಮಾನ ದಾನಾದಿಗಳೊಳ್ ಸಂತಸಂಬಡಿಸಿ ತಂತಮ್ಮ ನೆಲೆಗಳ್ಗೆ ಪೋಗಲ್ವೇಟ್ದು (ಅಂಕು. ೦೩-೪೦ ಪ); ಮಾಣದಿತ್ತಳು ಮಾಂಗಲ್ಯಪಾಠಕಿಯರಿಗೇಣಲೋಚನೆ ಕರೆಕರೆದು ಪೂಣಿಸಿ ಕೊಟ್ಟಳಾರತಿಯತ್ತಿದವರ್ಗೆಲ್ಲ ಜಾಣೆ ರನ್ನದ ಭೂಷಣಗಳ (ಅಸಂಕ. ೬-೦೩೯). ೪. ನಿಯಮಿಸು ; ಆಜ್ಞಾಪಿಸು : ಬೆಸನನಿರ್ಮೆ ಕೇಳದಂತು ಪೂಣಿಸಿ ಕಟುಪಿ (ಅಂಕು. ೦೩-೬೦ ಪ); ವೇಱಗಣ ಕಾಪನೆನ್ನನೆ ಮಹೀಪತಿ ಪೂಣಿಸಿ ಪೋದಂ (ಕುಕಥಾ. ೬-೯೩). ೫. ತಡೆ ಗಟ್ಟು; ಎದುರಿಸು ; ಎದುರುಬೀಳು : ಮಾರ್ಬಲವಂ ಕಂಡು ಪೂಣಿಸಿ

ಜೀವ ಕಡುಗಲಿಗಳುಮಂ . . . ನೋಡಿ (ಗದಾಯು. ೯-೩೯ ವ); ಕಾಣದೆ ದೆಸೆಯುಂ ಬಂದಕ್ಷೋಣಿಬಳಂ ಚಂಚುಯುಗ್ಮದಿಂ ಘಾತಿಸೆ ತತ್ಕಾಣಂ ತಿದಿಯಂ ಬಿಸುಟುಂ ಪೂಣಿಸಿ ತಗುಳ್ದಿಯ್ದಿ ಮತ್ತೆ ತಿದಿಯಂ ಪಿಡಿಗುಂ (ನೇಮಿಪು. ೮-೧೦೭). ೬. ಲಕ್ಷ್ಯವಿಡು ; ಗುರಿಯಿಡು : ನರನೆಚ್ಚೊಡೆ ಪಱಿದು ಕರಂ ಕರವಾಳೊಡನಮರೆ ಕಾಸಿ ಬೆಚ್ಚಂತೆ ವಸುಂಧರೆಯೊಳ್ ಬಿಟ್ಟುದುರ್ಮದದೇಂ ತಿರವೋ ಪೂಣಿಸಿದ ಮುಂಪ್ಪಿ ಭೂರಿಶ್ರವನಾ (ಪಂಪಭಾ. ೧೧-೧೪೧) ; ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ ಖಡ್ಗದಿಂ ಪೂಣಿಸಿ ಬಿಸುಟುಂ ಪೊಯ್ದುಂ (ಧರ್ಮಾಮೃ. ೩-೭೩) ; ಪೂಣಿಸಿ ಕರವಮಂ ಶಿರಿಪಿ ಚಕ್ರದೊಳಿಟ್ಟೊಡೆ . . . ಶಿರಂ ಕರಿಯಿಂದೆ ನೆಲಕ್ಕೆ ಬೀಟಿ (ಚಂದ್ರಪ್ರ. ೧೧-೧೦೩). ೭. ಶಪಥ ಮಾಡಿಸು ; ಪ್ರತಿಜ್ಞೆ ಮಾಡಿಸು : ಅನಿನಿತಂ ನಿಮ್ಮ ಪೂಣಿಸಲೆ ಬಂದೆಂ (ಪಂಪಭಾ. ೧೧-೬೯ ವ). ಹೂಣಿಸು₁ : ೨. ಜಾಣಿಂದ ತಮ್ಮ ವಿಮಾನವ ಹೂಣಿಸಿ ಮಾಣದೆ ಮತ್ತೆ ನೋಡಿ ಪರು (ಅಂಜನಾ. ೧೧-೦೫೭). ೩. ವಾಣಿ ಕಲ್ಯಾಣಿ ಕಟ್ಟಾಣಿ ಮಾತಿನೊಳು ಸುಪ್ಪಾಣಿ ತಂದಿರಿಸು ನಿಲ್ಲಿಸದೆ . . . ಕಡುಜಾಣನುಡಿಯ ತಂದು ಹೂಣಿಸು ಕೃತಿಗೆ ಮಂಗಳದಿ (ಸೌಂದರಾ. ೦-೬). ೫. ಆರು ಲಕ್ಕಿಸಬಹುದು ಹೂಣಿ[ಪಾಠಾಂ.ಳಿ]ಸಿದಾರುಭಟೆಗಳ (ತೊರವ. ೭-೩೦-೦೬); ಭೂತೇಶ ತಾನಡ್ಡಬಂದು ಶ್ವೇತೋರಸ್ಥಲ ಬಲರಾಮ ತೊಲಗೆಂದು ಪೀತಾಂಬರಗೆ ಹೂಣಿಸಿದ (ಮೋಹತ. ೩೯-೨೦). ೬. ನೀಱಿ ನೂಕದಿರೆನ್ನ ಮನ ಮುಮ್ಮಾಱುವೋದುದು ನೀನು ಚಿತ್ತವ ಸೂಱಿಗೊಂಡೀ ಮದನ ಸಂಬಂಗೊಡಲ ಹೂಣಿಸುವೆ (ಶಬ್ದಾ.ವಿ. ೨-೩೯) ; ಅಲಗಂ ಪಿಡಿಯೊಳಳವಡಿಸಿ ಥಳಥಳಿಸಿ ತನ್ನ ಕಂಠಕೆ ಹೂಣಿಸುತ್ತ ಶಿವಶಿವ ಕೊಱಿಯಲನುಗೈದನು (ಬಾಪಚಂ. ೯-೧೧); ಹೂಣಿಸಿ ಕೊರ್ಗಣೆಯಿಂದೆಚ್ಚು ಬಱಿಗಾಯಗಾಣಿಸಿದರು (ಮೋಹತ. ೩೩-೦೨). ೭. ಹೂಣಿಸುತ್ತಿಂದು ತಾರಕನಡಗ ನಿನ್ನ ನಿಜಬಾಣ ಕಾಹುತಿಯ ಕೊಟ್ಟೆಮ್ಮನುಳಿಸು (ಶಿವಪು.೩೮-೨೦). ೮. ಕೂಡಿಸು; ಸೇರಿಸು; ಬೆರಸು : ರಿಪುಶ್ರೇಣಿಯ ತಱಿದ ರೋಹಿತದಿ ಹೂಣಿಸಿ ಕೆಸರ್ಗೂಡಿ ಕೋಟೆಯ ರಚಿಸಲ್ಕೆ ಶೋಣಿತಪುರವೆಂಬುದಾಯ್ತು (ಮೋಹತ. ೨೦-೩) ; ಕ್ಷೋಣಿಯೊಳು ಸತ್ಕೀರ್ತಿ ಬಪ್ಪುದು ಹೂಣಿಸುವೆನಗ್ನಿಯೊಳ್ ತನುವನು ಪ್ರಾಣವಾಚಿಂವ್ರಾರ್ಕವಿಹುದೆ ತಾಯೆ (ಉತ್ತ.ಕ.೧೪-೧೧). ೯. ಆಕ್ರಮಿಸು ; ದಾಳಿಮಾಡು : ಕಾಳರಕ್ಕಸಿ ತಿರುಗಿ ಹನುಮನ ಮೇಲೆ ಹೂಣಿಸಿ ಹನುಮನಾಬೆಯ ಕಾಲೆರಡ ಪಿಡಿದಭ್ರಮಂಡಲಕಿಟ್ಟನಬ್ಬರಿಸಿ (ತೊರವ. ೩-೧-೪). ೧೦. ಸ್ಪರ್ಧಿಸು ; ಹುರುಡಿಸು : ಜಾಣೆ ನಿನ್ನಯ ನಿಜವೇಷ ಮಾಣದೆ ನಿಂದ ವಿಲಾಸ ಹೂಣಿಸಿ ಬಲಿದ ಪ್ರಕಾಶ ನೆಱೆ ಕಾಣಿಸುತಿದೆ ಕೈಲಾಸ (ಶಿವಗೀ. ೦೭೬-೬೭೩) ; ಏರಿದು ಚೂಣಿಯ ಭಟರು ಹೂಣಿಸಿ ಬೆರಸಿ ಹೊಯ್ದಾಡಿತ್ತು (ಕೌಶಿಕಾ. ೩೭-೦೩); ಕಾಣುತ ಬೇಡರ ಪಡೆ ಹೆದೆವಿಲ್ಲಿಗೆ ಬಾಣವ ಹೂಡಿ ಬೊಬ್ಬಿಱಿದು ಹೂಣಿಸಿ ಕವಿದೆಸೆಯಲು ಮಥನನು ಬೆಂಗಾಣಿಸಿ ಮರಳಿದ ಪುರಿಗೆ (ಜೀವಂಧಸಾಂ. ೬-೨೬) ; ಕ್ಷೋಣಿಯೊಳೀ ಬಲ್ಪಿನಲಿಂದೆ ಕಡುಗಾದ ಬಾಣಲಿಯೊಣ್ಣೆಯೊಳಬುದಿ ಹೂಣಿಸಿ ಕುದಿಗೊಂಡು ಮರಳ್ದುದು (ಮೋಹತ. ೦೯-೯೩). ೧೧. ಆಣೆ ಮಾಡು ; ಶಪಥ ಮಾಡು : ಶೂಲಿಯೊಳು ತಾ ಹೂಣಿಸಿದ ಹೀಹಾಳಿಯನು ಮಱುಳಿಸಿ . . . ತಬ್ಬಿಬ್ಬುವೋಗುತಲಿರ್ದಳಾ ಮಾಯೆ (ಪ್ರಭುಲೀ. ೭-೨೬). ೧೨. ಹಂಗಿಸು; ಮೂದಲಿಸು : ಹೂಣಿಸಿ ಪೆಣ್ಣುಸುರಿದೊಡದನಾಲಿಪುದೇಣಾಂಕಾಂ ಕನವರ್ಗಿಸ್ಸೀ ಸುಡು ನಾಣಿಲಿತನವಿದೆನುತೆ (ಉದ್ಭಟೀ. ೩-೭೨). ೧೩. ಉಂಟಾಗು ; ಹುಟ್ಟು : ಕಾಣುತವೆ ರಾಯಸವ ದೊರೆಗಳು ಕ್ಷೋಣಿ ಪತಿಗಂಜುವವೊಲಾಗಳು ಹೂಣಿಸಿದ ಭೀತಿಯಿಂದ ಹೂಣಿಕೆಯು ನಾಯಕರು ಸಹಿತ (ಕೊಲ್ಹಾ.ಕ. ೦೯೬). [ಪೂಣ್₁ + — ಇಸು₃]

**ಪೂಣಿಸು₅, ಹೂಣಿಸು₂, ಹೂಳಿಸು** (ಕ್ರಿ). ೧. ನೆಡು ; ನಿಲ್ಲಿಸು : ಪುರದ ಮಣಲೊಳಂ ಪೂಣಿಸಿದ ಗಾಣದೊಳಂ . . . ಮೊನೆಯುಂ ಪೂಣಿಸಿದ ಕೊಂತದೊಳಂ ಕೈಗೆಯ್ದು (ಅಸಂಪು. ೧೨-೬೨ ವ). **ಹೂಣಿಸು₂** : ೨. (ಆಲಂ) ಅಡಗಿಸು ; ನಾಶಮಾಡು : ದೈತ್ಯನ ಮಹಾಗರ್ವವ ಹೂಣಿಸಿ ಎನ್ನ ಮೊಮ್ಮಗೆ ತಕ್ಕ ಸತಿ ಕಟ್ಟಾಣಿರತ್ನವ ತಂದೆ ಜೀಯ (ಮೋಹತ. ೯೨-೩೩). **ಹೂಳಿಸು** : ೨. ನಿಮ್ಮ ಮಾವನ ಆಶೆ ಯಾಕೆ ? ಇನ್ನು ಸಾಯಂಕಾಲ ದೊಳಗೆ ಅವನನ್ನು ಹೂಳಿಸಿ ಬಿಡುತ್ತೀನಿ (ಕಂಗಾಳ್. ೪೨೬). ೩. ಹುದುಗಿ ಹೋಗುವಂತೆ ಮಾಡು ; ಮುಚ್ಚಿಸು : ಅಬುಧಿಯ ಹರುಹ ಹೇಳ ದಿರೊಂದುನಿಮುಷಕೆ ಹೂಳಿಸುವೆನು (ತೊರವ. ೬-೪-೨); ಹೂಳಿಸಿ ಹುತ ವಹಕುಂಡವನು (ಶಂರಾಸಾಂ. ೩೬-೦೭೭).

[ಪೂಣ್₄(<ಪೂಟು) + — ಇಸು₃]

**ಪೂಣ್ಕೆ, ಪೂಣಿಕೆ, ಹೂಣಿಕೆ** (ನಾ). ೧. ಪರಿಶ್ರಮ ; ಸಾಧನೆ : ಕುಲವಿಲ್ಲೆಯೋ ನಮಗೆ ದಾಯಿಗರಲ್ಲರೊ ಶಸ್ತ್ರವಿದ್ಯೆಯೊಳ್ ಪೂಣ್ಕೆ ಗಳಿಲ್ಲೆಯೋ (ಪಂಪಭಾ. ೨-೯೦) ; ಪಲವುಂ ಪೂಣ್ಕೆಗಳಿಂದು ಚಲದಿಂದ ಸಹಾಯವಿಕ್ರಮಂ ತನ್ನಳವಂ ಕಲಿತನಮಂ ನಂಬಿ (ಧರ್ಮಾಮೃ. ೦೨-೦೯). ೨. ಸಮಗ್ರತೆ ; ಸಮಷ್ಟಿ : ಸಾಕಲ್ಯ : ಶಾಸ್ತ್ರದರ್ಥಮಂ ಬಿಸುಡದೆ ಪೂಣ್ಕೆಯಿಂನೋದುವೇಟೆಟ್ಟೊಡಾರ್ ಮೆಚ್ಚರಿದಂ (ಜಾತಕ. ೦-೦೨). ೩. ಆಣೆ ; ಶಪಥ ; ಪ್ರತಿಜ್ಞೆ: "ಪೂಣ್ಕೆಯದು ಪ್ರತಿಜ್ಞೆಯೊಳಕ್ಕುಂ" (ಕಬ್ಬಿಗಂ. ೦೨೯) ; ಆ ಕನ್ನೆಗೆ ಯೌವನಂ ನೆಱೆದುದು ಮದುವೆಯಾದೊಡೆ ತನ್ನ ಪೂಣ್ಕೆ[ಪಾಠಾಂ. ಪೂಣ್ದ ಪ್ರತಿಜ್ಞೆ]ಯಂ ನೆನೆದು . . . ವೈದುನ ನಿರ್ದಾಪಣಕ್ಕೆ ಪೋಪನ್ನೆಗಂ (ವಡ್ಡಾರಾ. ೦೩-೨೬); ತುದಿಯೊಯ್ದಿತ್ತೆನಗೆನ್ನ ಪೂಣ್ಕೆ ನಿನಗಂ ಪೂಣ್ಕೋದಯಂ ಸಾರ್ಚಿ ಬಂದುದು (ಆದಿಪು. ೯-೦೬) ; ಆತನ ಪೂಣ್ದ ಪೂಣ್ಕೆ ಶಿಲಾತಳಾಕ್ಷರಂ (ಗದಾಯು. ೦-೭೦). ೪. ದೃಢನಿರ್ಧಾರ; ಸಂಕಲ್ಪ : ಪೂಣ್ಕೆಯರಿದೋ ಮೆಚ್ಚದಂತೆ ನಡೆವುದರಿದೋ (ಧರ್ಮಾಮೃ. ೭-೩೦). **ಪೂಣಿಕೆ** : ೧. ವಿದಗ್ಧತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ ಬಾಲಕಿಯೆಯೆಂತಾಗೆ ಕೂಡುತೆ ಗೆಲ್ದೆಯಾತನು (ಬಂಪುಹಂ. ೩-೭೦). **ಹೂಣಿಕೆ**; ೩. ಹೂಣಿಕೆಯ ಸಬಳಿಗರೊಳಿಮ್ಮೈಗಾಣಿಕೆಯ ಬಲುಂಸೂತರಥಿಕರ ಜಾಣತಿಯ ಬಿಲ್ಲವರ ಧಾಳಾಧೂಳಿ ಬಲುಹಾಯ್ತು (ಶಬ್ದಾ.ಕ. ೨-೦೯); ಅಯಿತೇ ಕಡೆಯಾಟ ಹೂಣಿಕೆ ಹೋಯಿತೇ ಹುಸಿಯಾಗಿ (ಪ್ರಭುಲೀ. ೭-೩೯); ಕರ್ಣನು ಬಲ್ಪಿಡಿಯದ ಹೂಣಿಕೆ ಮಾಡುತ್ತಾನೆ (ಕಪಪ. ೬೭). ೫. ಹವಣಿಕೆ; ಏರ್ಪಾಡು ; ಯೋಜನೆ : ಕಟ್ಟೆಗೆಯ ಹೊರೆ ಹೊತ್ತು ಮಾರಿ ಜೀವನ ನಿರ್ವಹಿಸುವ ಹೂಣಿಕೆಯನ್ನು ಸ್ವಯಂಪ್ರೇರಣೆಯಿಂದ ಆರಿಸಿಕೊಂಡ ಕಾರಣದಿಂದ ಅದು ಆತನಿಗೆ ಸಹನೀಯವಾಯಿತು (ಬಾಳಬಿ. ೩೫) : ನಮ್ಮ ಅಂತಶ್ಶತ್ರುಗಳಾದ ಗಂಗರಾಜಾದಿಗಳು ಅಂಥದೇ ಹೂಣಿಕೆಯನ್ನು ಬೇರೊಂದು ಒಗೆಯಲ್ಲಿ ಪೋಣಿಸುತ್ತಿದ್ದಾರೆ (ಜೀಶಿಪಂ. ೬).

**ಪೂಣ್ಕೆಯಾಳ್** = ದೃಢಸಂಕಲ್ಪವುಳ್ಳ ಸೇವಕ : ಕುದಾನಪ್ರೀತಿಯೆಂಬ ಪೂಣ್ಕೆಯಾಳ್ಗೆರಸು ದುರ್ಬುದ್ಧಿಯೆಂಬ ಪೊಲಂಬಿಗರ್ವೆರಸು ನಿಲ್ಲದೆಲ್ಲಿಯುಂ ಬೆನ್ನಟ್ಟಿ ತಗುಳ್ದು (ಧರ್ಮಾಮೃ. ೧೦-೬೭). [ಪೂಣ್₁ + — ಕೆ]

**ಪೂಣ್ಕೆಗೆಯ್, ಪೂಣ್ಕೆಗೈ** (ಕ್ರಿ). ಆಣೆ ಮಾಡು ; ಶಪಥ ಮಾಡು ; ಪ್ರತಿಜ್ಞೆ ಮಾಡು: ತದೀಯ ಪ್ರಿಯಮಂ ನಿಮಿರ್ಚದೊಡೆ ಮನ್ಮಿತ್ರತ್ವಮೇ ಬಾೞಿಪ್ಪಿ ತತ್ಸತಿಯಂ ತಂದಪೆನೆಂದು ಮಂತ್ರಿತನಯಂ ತಾಂ ಪೂಣ್ಕೆಗೆಯ್ವಾ ಗಳುನ್ಮತ್ತ . . . ಭೇರೀಗಭೀರಸ್ವರಂ (ಕಾಸುಪವಾ. ೦೦-೦೦೯). **ಪೂಣ್ಕೆಗೈ** : ನಿನ್ನನರೆನಿಮಿಸದೊಳಗೆ ಧರೆಗೆ ನಾಂ ಕೆಡಹದಿರಲು . . . ದುರಿತಲಂಪಟನಾದ ದುರ್ಮತಿಯಂಘಂ ಘಟಿಸಲೆನಗೆಂದು ಪೂಣ್ಕೆಗೈದು (ಕೀಶಪಾ. ೨೦-೦೬).

[ಪೂಣ್ಕೆ + ಕೆಯ್₁]

**ಪೂಣ್ಕೆಗೈ** 'ಪೂಣ್ಕೆಗೆಯ್' ನೋ.

**ಪೂಣ್ಕೆದಪ್ಪು** (ಕ್ರಿ). ಪ್ರತಿಜ್ಞೆಯನ್ನು ಮೀರು: ಕದನೋದ್ಯೋಗದಿನಾಳ್ದನೆತ್ತಿ

ಬರೆಯುಂ ಬೆಳ್ಮುತ್ತು ಬೆನ್ನಿತ್ತನಿಲ್ಲ ದೃಢಾತ್ಮಂದಲೆದಂ ಪಲರ್ಪೊಗಟ್ಟಿನಂ ನಿಶ್ಶಂಕೆಯುಂ ಪೂಣ್ಕೆದಪ್ಪಿದನಿಲ್ಲ (ಶಂಖಾಪು. ೭-೩೭). [ಪೂಣ್ಕೆ+ತಪ್ಪು₁]

**ಪೂಣ್ಕೆವತ್ತಳೆ** (ನಾ). ಪ್ರತಿಜ್ಞೆಯ ಕಾಗದ; ಪ್ರತಿಜ್ಞಾಪತ್ರ: ಪೂಣ್ಕೆವತ್ತಳೆಯನ್ನೂ ಮುದ್ರೆಯನ್ನೂ ಲಿಂಗರಾಜನ ಬಗಸಗಿರಿಸುವನು (ಮಂತ್ರ.ಕ. ೧೭೬-೨೪). [ಪೂಣ್ಕೆ+ವತ್ತಳೆ₁]

**ಪೂಣ್ಕೆವೇಱು** (ಕ್ರಿ). ಪಟ್ಟುಹಿಡಿ; ಹಟತೊಡು: ಅಂತೆಸಗಿದೆಸಪ್ಪೊಡೋಪದೆ ಖಳರ್ನೆರೆತಂದು ಕಱುತ್ತು ಪೂಣ್ಕೆವೆತ್ತೊಸದೆಯೊಳಗಾಗಿ ಮೂಗನರಿದೀ ವಿಧಿಯಾಗಿರೆ ಮಾಡಿರ್ಪರೇ (ಸುಕುಮಾ. ೭-೩೩).
[ಪೂಣ್ಕೆ+ವೇಱು₁]

**ಪೂಣ್ಕೊಳ್** (ಕ್ರಿ). ನಿರ್ಧಾರ ಮಾಡು; ದೃಢನಿಶ್ಚಯವನ್ನು ಕೈಕೊಳ್ಳು: ಪೂಣ್ಕೊಂಡಕ್ಕಟಾ ಸಾರಿದಂ ನಡೆನೋಡುರ್ಚಿಸು ಕೀರ್ತಿಸಾದರಿಸು . . . ಎಂದುಂ ವಿರೂಪಾಕ್ಷನಂ (ಶಂಕಾಶ. ೬೨). [ಪೂಣ್₃+ಕೊಳ್₁]

**ಪೂತ₁** 'ಪೂ₁' ಪರಾ.

**ಪೂತ₂** (ಗು). ೧. ಶುದ್ಧಿಗೊಳಿಸಿದ; ಸ್ವಚ್ಛ ಮಾಡಿದ. ೨. ಧಾನ್ಯದ ಜಳ್ಳು ಹೋಗುವಂತೆ ಒಕ್ಕಿದ, ತೂರಿದ. ೩. ಪವಿತ್ರವಾದ; ಪಾವನವಾದ; ಪುಣ್ಯಕರವಾದ: ಶಿವಕಥಾಪೂತಪೌರಾಣವನಿವಂ ಪೇಳಿಸಿದನತಿಪ್ರೀತಿಯಿಂದಂ (ಶಿಂಪು. ೫೬-೧೭); ಆತನಂಗನೆ ಸೀತಮಾಂಬೆಯ ಪೂತಗರ್ಭದೊಳುದಿಸಿ ಕನ್ನೆಯ ರೀತಿಯೊನುತಲಿರ್ದಳೀ ಚೆಲ್ಲಾಂಬೆ ಧರೆಯೊಳಗೆ (ಕರ್ಣಾಕ. ೩೦೦). (ನಾ). ೪. ಒಕ್ಕಿದ ಧಾನ್ಯ; ತೂರಿದ ಧಾನ್ಯ: "ಪೂತಂ, ಬಹುಳೀಕೃತಂ—೨ ತೂರಿಕ್ಕಿದ ಧಾನ್ಯ" (ಸಿದ್ಧಾಂತಿ. ೨೮೦). ೫. ಪವಿತ್ರವಾದುದು; ಪಾವನವಾದುದು: "ಪವಿತ್ರಂ ಪೂತಂ" (ವಸ್ತುಕೋ. ೦೦೬-೬೦); ವನಜಾಕ್ಷಖ್ಯಾತಿಪೂತಂ ಕಥೆ ಕವಿ ಕವಿರಾಜಂ (ಜಗಂ. ೦-೨೨). ೬. ಪವಿತ್ರಾತ್ಮ; ಪುಣ್ಯವಂತ: ಪಾಪಿಯ ಪೀಡಿಪ ಪುರುಷನು ಪೂತನೆಂತೋ (ಶಕಸಾಂ. ೭೬-೯೦); ಆತನ ವ್ರತದ ನಿಟ್ಟೆಯ ಕಂಡು ಪಲಬರು ಪೂತರಾದರು (ಕರ್ಣಾಟ. ೦೨-೪೪). [ಸಂ.]

**ಪೂತಕ್ರತಾಯಿ** (ನಾ). ಇಂದ್ರನ ಹೆಂಡತಿ; ಶಚೀದೇವಿ: ಮಾಯಾಶಿಶುವಂ ತಂದಿಟ್ಟುಯೆಡೆಯೊಳ್ ಬೇಗನೆತ್ತಿಕೊಂಡಳ್ ಭುವನತ್ರಾಯಿಯನಾ ಜಿನಶಿಶುವಂ ತಾಯಿಲೆ ಪೂತಕ್ರತಾಯಿ ದಾದಿಯ ತೆಱದಿ (ವರ್ಧಮಾ. ೦೨-೮).
[ಸಂ. ಪೂತಕ್ರತಾಯೀ]

**ಪೂತತೆ** (ನಾ). ಪವಿತ್ರತೆ; ಪಾವನತೆ: ಸೊದರಪೊಲಸೂನಕಾಂತಿಯ ಕುಡಿಯಿಂದಂ ನಾಕದಂತೆ ಮಂದಾಕಿನಿಯಿಂ ನುಡಿಜಾಣಂ ವಿಬುಧನವೋಲ್ ಪಡೆದಂ ಪೂತತೆಯನಂತೆ ಶೋಭೆಯನವಳಿಂ (ರ್ದ್ಯಾಕೋ. ೨೦೪).
[ಸಂ. ಪೂತತಾ]

**ಪೂತನಾಂತಕ** (ನಾ). ಪೂತನೆಯೆಂಬ ರಾಕ್ಷಸಿಯನ್ನು ಕೊಂದವನು; ಕೃಷ್ಣ: ದಾರುಣಾಕೃತಿಪೂತನಾಂತಕನಾಡಿದಂ . . . ಮುರಾರಿ ಕೈಪಟಿಗಾಡಿದಂ (ಜಗಂ. ೩-೫೬). [ಸಂ.]

**ಪೂತನಿ** (ನಾ). ೧. (ಕೃಷ್ಣನು ಶಿಶುವಾಗಿದ್ದಾಗ ವಿಷವುಣಿಸಿ ಕೊಲ್ಲಲೆಂದು ಕಂಸನ ಆದೇಶದ ಮೇರೆಗೆ ಬಂದು, ಕೃಷ್ಣನಿಂದಲೇ ವಧೆಯಾದ) ಒಬ್ಬ ರಾಕ್ಷಸಿಯ ಹೆಸರು: ನಿಜಪಕ್ಷೋಜನಿಕ್ಷಿಪ್ತಕ್ಷ್ವೇಡಪೀಡಿತ ಲೋಕಘಾತಿನಿಯಪ್ಪ ಪೂತನಿಯುಮಂ . . . ಬೆಸಸಿ (ಜಗಂ. ೩-೨೨ ವ); ಶತ್ರುಘ್ನ ಲಕ್ಷ್ಮಣಾರ್ಗಖಳಸೇನೆ ಭಾವಿಸೆ ತವಾಕೃತಿಯ ಬಾಲಕರ ದೆಸೆಯಿಂದ ಗೋವರ್ಧನಂಗೆ ಮೊಲೆಗೊಟ್ಟ ಪೂತನಿವೊಲಾಯ್ತು (ಕೈಮಜಾ. ೨೦-೩). ೨. ಪಿಶಾಚಿ; ರಕ್ಕಸಿ; ರಾಕ್ಷಸಿ: ಸಂದಣಿಸಿ ಹರಿದೇಱ ಬಾಯ್ಗೆ ಳೊಳೊಂದಿ ಬಾಯ್ಗಳನಿಡುವ ಪೂತನಿವೃಂದವನು ಕಂಡೋಸರಿಸುವನದೊಂದು ದೆಸೆಗಾಗಿ (ಕುಮಾ.ಗ. ೩-೦೦). [< ಸಂ. ಪೂತನಾ]

**ಪೂತನೆ** (ನಾ). ೧. = ಪೂತನಿ ೧: ಪೂತನೆಯಂ ಕೊಂದಾ ಸ್ತ್ರೀಘಾತುಕವೃತ್ತಿಯುಮನೆನ್ನೊಳೇಂ ತೋಱಿದಪ್ಪೆ ಪೂತನೆಯ ತೆಱದೆ ನಿನಗಾನೇತಱ ಪೊಲ್ಲಮೆಯನರಸ ಬಗೆದೆಂ ಬಗೆಯೊಳ್ (ಜಗಂ. ೦೨-೯೬). ೨. = ಪೂತನಿ ೨. ೩. ಒಂದು ಬಗೆಯ ಮರ ಮತ್ತು ಅದರ ಕಾಯಿ; ಅಳಲೆ: "ಅಭಯಾ, ಅವ್ಯಥಾ, ಪಥ್ಯಾ, ವಯಸ್ಥಾ, ಪೂತನಾ, ಅಮೃತಾ . . . ಶಿವಾ—೧೧ ಅಳಲೇಗಿಡದ ಹೆಸರು; ಅಳಲೇಕಾಯಿ ಪ್ರಸಿದ್ಧವು" (ಸಿದ್ಧಾಂತಿ. ೦೨೩). ೪. ಮಕ್ಕಳು ನವೆದು ಅಶಕ್ತರಾಗುವ ಒಂದು ಬಗೆಯ ರೋಗ; ಹಕ್ಕಿರೋಗ; ಬಾಲಗ್ರಹ. ೫. ಬಾಲಗ್ರಹಕ್ಕೆ ಕಾರಣಳಾದವಳೆಂದು ಭಾವಿಸಲಾದ ದೇವತೆ.
[ಸಂ. ಪೂತನಾ]

**ಪೂತಾಚರಣ** (ನಾ). ಪರಿಶುದ್ಧವಾದ ಆಚಾರವುಳ್ಳವನು; ಸರಿಯಾದ ನಡವಳಿಕೆಯವನು: ಸಮರಜಿತಭೂಪ ಜೀಪಪ್ರದನುಂ ಅತಿಪೂತಾಚರಣಾ ರಿಪುಖಿತಕಿರಣಂ (ಎಕ. III. ಮಂಡ್ಯ. ೭೮ ೬; 1022). [ಸಂ.]

**ಪೂತಾತ್ಮ** (ನಾ). ಪರಿಶುದ್ಧವಾದ ಮನಸ್ಸುಳ್ಳವನು: ಪೂತಾತ್ಮಂ ಪರಿತೋಷಮಂಡಿತವರಂ . . . ರಾಜೇಂದ್ರಚಕ್ರೇಶ್ವರಂ (ಹರಿಶ್ಚಂ. ೦-೨೭).
[ಸಂ. ಪೂತಾತ್ಮನ್]

**ಪೂತಿ** (ಗು). ೧. ಹೊಲಸುವಾಸನೆಯುಳ್ಳ; ದುರ್ಗಂಧಮಯವಾದ: 'ಪೂತಿಗಂಧ' ಪರಾ. (ನಾ). ೨. ಕೊಳಕುನಾತ; ದುರ್ಗಂಧ; ದುರ್ವಾಸನೆ. ೩. ದುರ್ಗಂಧವುಳ್ಳ ದ್ರವ; ಕೀವು. ೪. (ದುರ್ಗಂಧಮಯವಾದ) ಒಂದು ನರಕದ ಹೆಸರು: ಕೊಲ್ವೋರುಂ ಕೊಣ್ಣುಉಕ್ವೋರುಂ ಪಞ್ಚಮಹಾಪಾತಕಸಂಯುಕ್ತನಾಗಿ ಪೂತಿ ಎನ್ಬ ನರಗಕ್ಕೆ ಸಲ್ಗೆ (ಎಕ. VI, ಕೊಪ್ಪ. ೩೭-೮; ಸು. 675 ?). ೫. ಒಂದು ಬಗೆಯ ಸಂಗಂಧ ದ್ರವ್ಯ; ಪುಣುಗು: ಕತ್ತುರಿ ಕಾಲಾಗುರು ಚಂದನಂ ಹಿಮಕರಂ ಜಾತೀಫಳಂ ಪೂತಿ . . . ಚೊಡಾರತ್ನಮೆಂಬೀ ವನಾಂತರಸಂಜಾತಮನಾತ ನೋಲಗಿಸಿದಂ (ಕೃಷ್ಣಪು. ೫-೦೦೨); ಪೂತಿ ಎಂಬ ಹುಲ್ಲುಜಾತಿಯನ್ನೂ ಒಳಗೊಂಡಿದ್ದ ಹಳ್ಳಿಯನ್ನು . . . ಗೋವಿಂದಚಂದ್ರದೇವನು ದಾನವಾಗಿ ಇತ್ತ (ಶಾಸಗ. ೬).

**ಪೂತಿಯ ಬೆಕ್ಕು** = ಪುಣುಗಿನ ಬೆಕ್ಕು: ಪೂತಿಯ ಬೆಕ್ಕಿರಳೆಯ ಮಱಿ ಮಾತಂಗದ ಮುತ್ತು . . . ಎನಿಪ್ಪುವನಾಂತು ಕಿರಾತರ ನಿಜಪಕ್ಕಣಕ್ಕೆ ನಡೆತರುತಿರ್ದರ್ (ಶ್ರೀಕೃಪು. ೨೭-೯೩). [ಸಂ.]

**ಪೂತಿಕ** (ಗು). ೧. ದುರ್ಗಂಧವುಳ್ಳ; ದುರ್ವಾಸನೆಯುಳ್ಳ. (ನಾ). ೨. ತಪಸಿ ಗಿಡ: "ಪ್ರಕೀರ್ಯ:, ಪೂತಿಕರಜ:, ಪೂತಿಕ:, ಕಲಿಕಾರಕ:—೪ ತಪಸೀಗಿಡದ ಹೆಸರುಗಳು" (ಸಿದ್ಧಾಂತಿ. ೦೨೩). ೩. ಮಲ; ವಿಷ್ಠೆ. [ಸಂ.]

**ಪೂತಿಕರಜ** (ನಾ). ಒಂದು ಬಗೆಯ ಸಸ್ಯ; ತಪಸಿಗಿಡ: "ಪ್ರಕೀರ್ಯ:, ಪೂತಿಕರಜ:, ಪೂತಿಕ:, ಕಲಿಕಾರಕ:—೪ ತಪಸೀಗಿಡದ ಹೆಸರುಗಳು" (ಸಿದ್ಧಾಂತಿ. ೦೨೩). [ಸಂ.]

**ಪೂತಿಕಾಷ್ಠ** (ನಾ). ೧. ಒಂದು ಬಗೆಯ ಮರ; ದೇವದಾರುವೃಕ್ಷ: "ಸರಳಮದು ಪೂತಿಕಾಷ್ಠಮೆನಿಕ್ಕು" (ಮಂಗರಾ. ೩೯-೨೬). ೨. ಒಂದು ಬಗೆಯ ಮರ; ಪೀತದಾರು; ಪೈನ್‌ಮರ. [ಸಂ.]

**ಪೂತಿಗಂಧ** (ನಾ). ೧. ದುರ್ವಾಸನೆ; ದುರ್ಗಂಧ: ಆ ವಿವಿಧ ಭಕ್ಷೋಪದಂಶಪ್ರಾಯಮಪ್ಪ ದಿವ್ಯಾಹಾರಮೆತ್ತಲೀ ಕ[ನಿ]ತ ಪೂತಿಗಂಧಮಪ್ಪ ಮೃಗಪಿಶಿತಪೇಶಿಯೆತ್ತಲ್ (ವರ್ಧಮಾ. ೬-೪ ವ); ಆಮೋದ ಗಂಧದೊಳ್ ಪೊರೆದಾ ಮಣ್ಣಂ ತಳೆಯೆ ಪೂತಿಗಂಧದ ಗಿಡುಗಳ್ ಗೋಮಯ ತೋಯಮನೆಱೆಯಲ್ಕಾಮೋದಸುಗಂಧಪುಷ್ಪಮಾಗಳೆ ಬರ್ಕುಂ (ಲೋಕೋಪ. ೩-೩೦). ೨. ದುರ್ಗಂಧದ ವಸ್ತು: "ಪೂತಿಗಂಧ:, ದುರ್ಗಂಧ:—೨ ಕೆಟ್ಟನಾತವುಳ್ಳ ವಸ್ತುವಿನ ಹೆಸರುಗಳು" (ಸಿದ್ಧಾಂತಿ. ೪೭). ೩. ಗಾರೆಗಿಡ; ಇಂಗುದೀ ವೃಕ್ಷ. [ಸಂ.]

**ಪೂತಿಗಂಧಿ** (ಗುಂ). ದುರ್ಗಂಧವುಳ್ಳ. [ಸಂ.]

**ಪೂತಿದ್ರವ** (ನಾ). ಹೊಲಸು ನಾರುವ ಕೀವು ಮೊದಲಾದ ದುರ್ಗಂಧ ದ್ರವ: ನವವಿವರಾವೃತಪೂತಿ[ಪಾಠಾಂ. ತ]ದ್ರವ ತ್ವಗಾವೃತವಿಮಿಶ್ರ ಮಾಂಸೋಪಚಿತಮಧ್ರುವಮಸುಚಿತ್ರಭೃಮಿತಕ್ರಿಮಿಹಂ ಮೆಯ್ ಬಗೆ ಪೊಡಿಂತು ಕಿಸುಗುಳಮಾದಂ (ಶಬರ. ೩-೦೯೬). [ಸಂ.]

**ಪೂತಿನಾಶಕ** (ಗುಂ). ೧. ಹುಣ್ಣು, ಗಾಯ ಮುಂತಾದುವು ಕೊಳೆತು, ಕೀವಾಗುವುದನ್ನು ತಡೆಯುವ: ರೋಗಿಯು ಕೊಠಡಿಯಿಂದ ಹೊರಬಂದ ನಂತರ ಕೂಡಲೆ ಪೂತಿನಾಶಕದ್ರಾವಕದಲ್ಲಿ (Anti.-Septic Lotion) ಕೈತೊಳೆಯಬೇಕು (ಕೀಲರೋ. ೩). (ನಾ). ೨. ಹುಣ್ಣು, ಗಾಯ ಮುಂತಾದುವು ಕೊಳೆಯುವುದನ್ನು ತಡೆಗಟ್ಟುವಂಥ ವಸ್ತು: ಪೂತಿನಾಶಕ(ಆ್ಯಂಟಿಸೆಪ್ಟಿಕ್)ದ ಮಹದುಪಕಾರದಿಂದ ಪಿರೋಗೋಪ್‌ನಿಗೆ ಅಶಕ್ಯವಾದಂತಹ ಶಸ್ತ್ರಕ್ರಿಯೆಗಳನ್ನು ಕೂಡಾ ಈಗ ಸರ್ಜನರು ಮಾಡುತ್ತಿರುವರು (ಹುತ್ತಪು. ೩೯). [ಸಂ.]

**ಪೂತಿಫಲಿ** (ನಾ). ಒಂದು ಬಗೆಯ ಔಷಧೀಸಸ್ಯ; ಬಾಹುಜಿಗೆ; ಸೋಮವಲ್ಲಿ: "ಅವಲ್ಗುಜಃ ... ಕೃಷ್ಣಫಲಾ, ವಾಗುಜೀ, ಪೂತಿಫಲೀ — ೮ ಬಾಹುಜಿಗೆಯು ಹೆಸರುಗಳು" (ಸಿದ್ಧಾಂತಿ. ೦೩೩). [ಸಂ. ಪೂತಿಫಲೀ]

**ಪೂತಿಬೆಕ್ಕು** 'ಪೂತಿವೆಕ್ಕು' ನೋ.

**ಪೂತಿಮಾಂಸ** (ನಾ). ೧. ಕೊಳೆತ ಮಾಂಸ; ಹೊಲಸು ನಾರುವ ಮಾಂಸ. ೨. ಒಂದು ನರಕದ ಹೆಸರು: ಕ್ರುತು ಪೂತಿಮಾಂಸ . . . ಉಚ್ಛ್ವಾಸವೆಂಬ್ಯೆದು ಮಂತ್ರಿನರಕಂಗಳಿಂ ಕೂಡಿ ಕಾಲರಾತ್ರಮೆಂಬರಸುನರಕ ವಿಹುದು (ಬಿಪೀಠ. ೦೮೦). [ಸಂ.]

**ಪೂತಿರಸ** (ನಾ). = ಪೂತಿದ್ರವ: ಸಪ್ತಧಾತುಮಯಮುಂ ಅವಸ್ಕರದ ಪೋಲ್ ಮೂತ್ರ ಪುರೀಷಾದಿ ಮಲಭಾಜನಮುಂ ಅಲ್ಲಿ ಪೂತಿರಸನಿಷ್ಯಂದಿ ಶ್ರವಣಾದಿ ನವರಂಧ್ರಪರೀತಮುಂ . . . ಅಪ್ಪ ಶರೀರಮುಂ (ಕಲ್ಯಾಶ್ರೆ. ೩೨೯). [ಸಂ.]

**ಪೂತಿವಕ್ತ್ರ** (ನಾ). ಒಂದು ನರಕದ ಹೆಸರು: ಪೂತಿವಕ್ತ್ರ ರಕ್ತಪೂತಿ ವೃಶ್ಚಿಕ ಕಣ ಧೂಮವೆಂಬೈದುಮಂತ್ರಿನರಕಂಗಳಿಂ ಸುತ್ತಿ ಭೀಮವೆಂಬರಸು ನರಕವಿಹುದು (ಬಿಪೀಠ. ೦೮೦). [ಸಂ.]

**ಪೂತಿವೆಕ್ಕು, ಪೂತಿಬೆಕ್ಕು** (ನಾ). ಪುಣುಗಿನ ಬೆಕ್ಕು; ಕಸ್ತೂರಿಬೆಕ್ಕು: ಪೊಂಬುಲಿಸಮ್ಮುಖಾನೆದಲೆಮುತ್ತು ಮೊಲಂಗಳ ಬಿಕ್ಕು ಪೂತಿವೆಕ್ಕು . . . ಪೀಲಿಯೆಂಬಿವಂ ತುಂಬಿದ ಕಂಬಿಯುಂ ತಳೆದದೇಂ ತಳರ್ದತ್ತೊ ಪುಳಿಂದಸಂ ಕುಳಂ (ರಾಜಶೇ. ೫-೦೦೪); ಮರೆ ನರಿ ಪೂತಿವೆಕ್ಕು ನಕುಲಂ ಮರವಾವುಗಳೆಂಬಿ ವಾಗಳುಂ ಕರಮೆಸೆದಿರ್ಪಿನಂ ಮೆಱೆದುದಾ ವಿಪಿನಂ (ಶಬರ. ೩-೩೪). **ಪೂತಿಬೆಕ್ಕು**: ಸಿಂಗದುಗುರಿಂ ವ್ಯಾಘ್ರಚರ್ಮವಂ ಕ್ರೋಡಶಾಬಂಗಳಂ ಪೂತಿಬೆಕ್ಕಂ ಹರಿಶ್ಚಂದ್ರರಾಯಂಗೆ ಕಾಣಿಕೆಯನಿತ್ತಡಿಗೆಱಗುತಿರ್ದರಗ್ಗದ ಬೇಡವಡೆಯೊಡೆಯರು (ಹಕಾ. ೫-೩). [ಪೂತಿ + ಬೆಕ್ಕು (< ಬೆಕ್ಕ್)]

**ಪೂತು**₁ 'ಪೂ₁' ಪರಾ.

**ಪೂತು**₂ (ನಾ). ಭಲೆ, ಭಾಪು ಎಂಬಂತೆ ಬಳಸುವ ಒಂದು ಕೊಂಡಾಟದ ಮಾತು,—ಉದ್ಗಾರ: ಆ ಮಾಳವಚಕ್ರವರ್ತ್ತಿ ಜಗದೇವನೆ ತಂನ ಮದಾಂಧಸಿಂಧುರಂ ಕೀಳಿಡೆ ಪೂತು ರಾವುತನೆ ರಾವುತನಲ್ಲೆನಿದಿರ್ಚ್ಚಿ ವೀರಬಲ್ಲಾಳನೆನೆಂದು ಮೆಟ್ಟಿ ತಿವಿದಾಳ್ತನವಚ್ಚರಿಯಾಯ್ತು ಧಾತ್ರಿಯೊಳ್ (ಎಕ. VI. ಕಂಶೀ. ೯೫-೨೯; 1196); ನಿರ್ಘರ್ಜನಾರ್ಭಟಿಸುತ್ತುಂ ಪೂತು ಮಜ ಬಾಪೆನುತ್ತುಂ ಶಾತಾಸಿಯನಾಂತು ಸವಟತೊಡಗಿದನಾಗಳ್ (ಉದ್ಭಟ. ೯-೮೦); ಪೂತು ಸಾರಥಿ ಭಾಪು ಮಝರೇ ಸೂತ ಧಿರುಧಿರು ಎನುತ ರಥಿಕವ್ರಾತ ಮಿಗೆ ಬೋಳೈಸಿ ಕೊಂಡರು ಹಯದ ವಾಘೆಗಳ (ಕುಮಾವ್ಯಾ. ೯-೯೩).

**ಪೂತುರೆ** (ನಾ). = ಪೂತು₂: "ಅರರೇ ಭಾಪುರೆ ಮಝು ಪೂತುರೆ ಭಲರೇ ಲೇಸು ಜಾಗುಮಾ ಧಣು ಧಿರುರೇ ಪುರೆಯೆನೆ ಕೊಂಡಾಟಂ" (ಶಶಾಂ. ೩೩); ಭಾಪುರೇ ಕಣ್ಣಂದ ಪೂತುರೇ ಕಣ್ಣಂದ ಭಾಪು ಮಝು ಭಾಪು ಮಝು ಭಾಪುರೇ ಕಣ್ಣಂದ (ಕಣ್ಣರ. ದೇ. ೦೪೯-೦೭); ನೆರೆದ ನುಸಿಗಳು ಗಿರಿಯು ಕಾದುವ ಪರಿಯ ನೋಡೈ ಪೂತುರೆ (ಕುಮಾವ್ಯಾ. ೨-೭೫). [<ಪೂತು₂]

**ಪೂತೆ** (ನಾ). ೧. ಪರಿಶುದ್ಧಳಾದವಳು; ಪವಿತ್ರವ್ಯಕ್ತಿ: ಮುನ್ನಂ ಲಂಕೆಯೊಳ್ ನೀನೆ ಪೇಟ್ದಿಯಲ್ತೆ ಸೀತೆ ಪೂತೆ, ಅವಳು ಕೈಕೊಳ್ವುದೆಂದು (ರಾಮಾಶ್ವ. ೨೫-೫); ಮಲ್ಲಮ್ಮ ನಾರೀಲೋಕದ ದಾರಿದೀಪ, ನಾರೀಕುಲಕ್ಕೆಲ್ಲ ಗೌರವ ತಂದ ಮಹಾಮಾತೆ, ಪೂತೆ, ಖ್ಯಾತೆ (ಕರಶ. ೬೬೬). ೨. ದುರ್ಗೆ. [ಸಂ. ಪೂತಾ]

**ಪೂತ್ಕರಿಸು** (ಕ್ರಿ). ಬಾಯಿಂದ ಊದಿ ಶಬ್ದಮಾಡು; ಬುಸಂಗುಡು: ಎಸೆದುದಾ ಮಣಿಖಚಿತಕಿರಣಪ್ರಸರಮುದ್ರಿಕೆ ಪೂತ್ಕರಿಸಿ ಲಳಿಮಸಗಿದಚ್ಛಿಪನ ಪೆಡೆವಣೆಯವೊಲು ಕರದಲನಿಲಜನ (ಕೊರಂಶ. ೯-೪-೦೭); ಈ ಸುರಭಿತ ಸುಮಮಂಜರಿಯ ಹಿಂಜಿ ಪೂತ್ಕರಿಸುವ ಕಾಳಸರ್ಪ! (ಕಲ್ಯೋಬ. ೨೫-೦೩). 'ಪೂತ್ಕರಿಸಂ' ಪರಾ. [ಪೂತ್ಕರಣ₂ + —ಇಸು₁]

**ಪೂತ್ಕೃತಿ** (ನಾ). ಪೂತ್ಕರಿಸುವಿಕೆ; ಊದಿ ಶಬ್ದ ಮಾಡುವಿಕೆ; ಪೂತ್ಕಾರ: 'ಪೂತ್ಕೃತಿಗೈ' ಪರಾ. [ಸಂ.]

**ಪೂತ್ಕೃತಿಗೈ** (ಕ್ರಿ). = ಪೂತ್ಕರಿಸು: ಪೂತ್ಕೃತಿಗೈದು ಸುಭಟನ ಸಿಂಹನಾದಕೆ ಮುಯ್ಯೆಗೆದು ಕರಿ ಕಾದುತಿರ್ದುದು ಭೀಮಸೇನನಲಿ (ಕುಮಾವ್ಯಾ. ೩-೩೬). [ಪೂತ್ಕೃತಿ+ಕೈ₁ (<ಕೆಯ್₁)]

**ಪೂದಂಡೆ** (ನಾ). ಹೂಮಾಲೆ; ಹೂವಿನ ಸರ; ಪುಷ್ಪಮಾಲೆ: ಮುತ್ತೈದೆಮೆಂಗಳು ಸಿರಿಮುಡಿಯು ಪೂದಂಡೆಗಳೊಡನೆ ಹಿಡಿಯಕ್ಕಿದಳಿದು ಬಂದರು ಮುಕ್ತಿನಾರತಿವಿಡಿದಾ ರತಿದೇವಿಯೊಡನೆ (ಮೋಹತ. ೧೭ ೪೪). [ಪೂ₂ + ದಂಡೆ₁]

**ಪೂದಂದಲ್** (ನಾ). ಹೂವಿನ ಮಳೆ; ಪುಷ್ಪವೃಷ್ಟಿ: ಎಸಗಿತ್ತಂದಸು ಕೊಲಮುಂದಪವನಂ ಪೆಣ್ದುಂಬಿಗಳ್ ಮುತ್ತುತುಂ ಮುಸುಜುತ್ತುಂ ಬರೆ ಬಂದುದಿಂದ್ರವನದಿಂ ಪೂದಂದಲ್ (ಶಂಪಶಾ. ೯-೯೬). [ಪೂ₂ + ತಂದಲ್]

**ಪೂದಳೆ** (ಕ್ರಿ). ಹೂವನ್ನು ತಾಳು, — ಧರಿಸು: ಪೂದಳೆದುವನಿಪ ಪುರ್ಬಿನ ಕುಡಿವೆರಸು ತೂಕಡನೊಳಕೊಂಡ ಜಾಡ್ಯಮುಂ . . . ಎಂತು ದೊರೆಕೊಳ್ಗುಮೆಂದು ಭಾವಿಸಿ (ಕಾದಂಪೂ. ೭೩೯). [ಪೂ₂ + ತಳೆ₁]

**ಪೂದಿಂಗಳ್**, ಹೂದಿಂಗಳ್ (ನಾ). ಹೂವು ಬಿಡುವ ಕಾಲ; ವಸಂತ ಮಾಸ: ಕೋದು ಪೂಮಿಡಿ ತಳಿರ ಕಾಡು ನರುಪೊಗರಿನಿಂ ಪೂದಿಂಗಳರಸನಂ ಕರೆಯುಗುಂ ತುಳಿಲ್ಗೆ (ಕಾಲೂರ. ೦೦೯-೨೪೬). **ಹೂದಿಂಗಳ್**: ಹೂದಿಂಗಳ್ಪೈತರಲ್ಕೊಸಗೆಯುಂ ಬನದೇವಿ ದೀಪೋತ್ಸವಂಗೈವಳೆಂಬಂತೆ ಮೊಗ್ಗುಗೊಳ್ಳಿಗಳಿಂದೆ ಪೊಂಜಿನುರಿವೂವಿಂದೆ ರಂಜಿಸುವ ಮುತ್ತುಗದ ಮರಗಳಂ: ನೆನೆ, ಮನವೆ (ಶ್ರೀರಾಮಾ. ೦೪೦-೪೦೪). [ಪೂ₂ + ತಿಂಗಳ್]

**ಪೂದಿಸು** (ಕ್ರಿ). ಪೂಜೆ ಮಾಡು; ಪೂಜಿಸು; ಅರ್ಚಿಸು: ಉಚ್ಚಿಯು ಬಚ್ಚಲ ಕೊಟ್ಟಿಯು ತಾವ ಪೂದಿಸುವ[ಪಾಠಾಂ. ಪೂಜಿಸುವ, ಪೂಸುವ] ನಿಶ್ಚಯರಿಗೆ ಮಱೆಮಾಡುವ ಮೆಚ್ಚುನುಂಗಿಗೇಕೆ ನಿಶ್ಚಯದ ಅಱುವು (ಸಗಪೊ. ೪. ೬೨೪-೦೭೬೨); ಇ[ವರ] ದೇವಸ್ವಾನಮಂ ಬ್ರಾ(೦)ಹ್ಮಣರು ಪೂದಿಸುವರು (ಸೌಇಇ. IX—1. ೨೭೨-೨೩; ಸಂ. 1173); ಈ ದಿವ್ಯಲಿಂಗಮಂ ಭಕ್ತಿಯಿಂದಂ ಕೂರ್ತು ಪೂದಿಸಿರೆ ನೀವಖಿಳರು (ಶೀಶ್ಕಪು. ೭-೩-೫೦). [<ಪೂಜಿಸು]

**ಪೂದಿಱು**, ಹೂದಿಱು (ಕ್ರಿ). ಹೂವುಗಳನ್ನು ಕೊಯ್ಯು,—ಬಿಡಿಸು: ತರಳಿಕೆ ದೇವತಾರ್ಚನಕೆ ಪೂದಿಱುಯುತ್ತಿರಲಾಗಳೀಕೆಯಂ ಕರೆದು (ಕಾದಂಸಂ. ೫೩೭); ನಿನ್ನ ಬಲಾಳಿ ಪೂದಿಱುವುದಂ ನೋಡಿಂ ವನಕ್ರೀಡೆಯೊಳ್ (ಜಗಂ. ೦೪-೯೬); ವರಭಕ್ತಂ ಪೂದಿಱುಯಲ್ ಕರಂಡಮಂ ಕೊಂಡು

ಪುಷ್ಪವನಕೇಳ್ಗಿಂದಂ (ವೃಕಪ. ೬. ೧೩). **ಹೂದಿಱ :** ತಾನೆ ಬಿತ್ತಿದ ಪುಷ್ಪವಾಟಗಾದರದೊಳುದಕವನೆತ್ತಿ ಹೊರೆದು ಹೂದಿಱುವ ಜಾಣ್ಕೆ ಯನದೇವಣ್ಣೆಸುವೆಸು (ಸಿದ್ಧರಾ. ೯-೩೩). [ಪೂ$_2$ + ತಿಱು]

**ಪೂದುಡುಗೆ** 'ಪೂದೊಡಿಗೆ' ನೋ.

**ಪೂದುಱುಂಬು,** ಹೂದುಱುಂಬು (ನಾ). ಹೂವುಗಳನ್ನು ಮುಡಿಸಿದ ತುರುಬು; ಪುಷ್ಪಗಳಿಂದ ಅಲಂಕೃತವಾದ ಹೆರಳು : ಪೂದುಱುಂಬಿನ ಪುಣ್ಯವತಿಯರುಂದುಗೆಯ ಭಂಗಿಯರುಂ ನಗೆಗಣ್ಗಳ ನೀಱೆಯರುಂ ಗಿರಿಜೆಯ ಚರಣತವುಲಕ್ಕೆ ಭರದಿಂದೆಱಗುತ್ತುಂ (ಗಿರಿಕ. ೯-೨೦ ವ). **ಹೂದುಱುಂಬು :** ಸನೆಯ ಕಂಚುಳಿಕೆಗಳ ಹೂದುಱುಂಬಿನ ಹಿಣಿಲ್ಗಳ ದಂಡೆಗಳ . . . ಕನಕರತ್ನಾಭರಣಕಾಂತಿಯ ವನಿತೆಯರು ಬಳಸಿದರು (ತೊರರಾ. ೦-೦೬ ೩೨). [ಪೂ$_2$ + ತುಱುಂಬು$_1$]

**ಪೂದುಱುಗಲ್,** ಹೂದುಱುಂಗಲು (ನಾ). ಹೂವುಗಳ ರಾಶಿ,–ಒಟ್ಟಿಲು : ಮೇದಿನಿ ಬೆಂಗೆ ಬಿಟ್ಟು ಮುಡಿಯಂತೆಸೆದಿರ್ಪುದು ಪುಷ್ಪಿತಂ ತಟೀಪಾದಪವೀಥಿ ಪಂತಿಗುರುಳಂತಿರೆ ಸಂಚಳವಿಸಾನಸಂಚಯಂ ಪೂದುಱುಗಲ್ ತಡಂ ತೊಡರ್ದು ತೋರ್ಪವೊಲೊಪ್ಪಿರೆ ಕೊಂಕುವೆತ್ತ ಸೀತೋದೆ ಸಡಿಲ್ದು ನೀಳ್ದ ಶರದಿಂ ನಿಜಗೊಂಡು ಬಟಲ್ದ ಭಂಗಿಯಿಂ (ಶರ್ಧನೇ. ೦–೬೦). **ಹೂದುಱುಗಲು :** ಮೆಱೆದುದಸುರನ ಹಸ್ತದಲಿ ಹೂದುಱುಗಲಿನ ಗಂಧಾಕ್ಷತೆಯ . . . ಶೂಲ ಮಹೋಗ್ರತೇಜದಲಿ (ತೊರರಾ. ೬-೪೯-೩೩). [ಪೂ$_2$ + ತುಱುಗಲ್ (< ತುಱುಂಗಲ್)]

**ಪೂದುಱುಬು** (ಕ್ರಿ). ಹೂವುಗಳನ್ನು ಮುಡಿದುಕೊಳ್ಳು : ಕಸ್ತೂರಿ ಪುಣುಗು ಜವಾದಿ ಮುಂತಾದ ಸುವಸ್ತುವ ತೊಡೆದು ಪೂದುಱುಬಿ ವಿಸ್ತಾರದಿಂದ ಪಾಡಿಸಿಕೊಂಡಳಾಗ ಸಮಸ್ತಭೃಂಗಗಳಿಂದ ತನ್ನ (ಶರಕ. ೦೦-೭೬). [ಪೂ$_2$ + ತುಱುಂಬು$_1$ (<ತುಱುಂಬು$_1$)]

**ಪೂದೂಳಿ,** ಪೂಧೂಳು (ನಾ). ಹೂವಿನ ಹುಡಿ ; ಪುಷ್ಪಪರಾಗ : ಪವನಂ ಪೂದೂಳಿಯಿಂ ರಂಗವಂ ಕ್ರಮದಿಂ ಮಾಳ್ಪುದು ಕೇಕಿ ಬರ್ಹದೆಲರಿಂ ಹೋವಾಗ್ನಿಯಂ ವರ್ಧಿಕುಂ (ಕಬಕಂ. ೨-೬೨). **ಪೂಧೂಳು :** "ಪರಾಗಃ, ಕೌಸುಮೋರೇಣುಃ—ಪೂಧೂಳು" (ಸಿದ್ಧಾಂತಿ. ೩೭೭). [ಪೂ$_2$ + ದೂಳಿ]

**ಪೂದೇರ್,** ಹೂದೇರ್ (ನಾ). ೧. ಹೂವುಗಳಿಂದ ಅಲಂಕರಿಸಿದ ರಥ ; ಪುಷ್ಪರಥ : ಮಾಲೆಗಾಱ ಪೂದೇರುಳ್ಳನ್ನೆಗಂ ಸಲ್ಗೆ (ಕೃಅಂ. ೦೯೩೬, ೨೬-೩೩; 876 ; ತೋಡೆದುಱಿಯ ತರುಣೀರತ್ನದ ಸುಣ್ಮಿಂಡೆ ಮನೋಭವನೇಱುವ ಪೂದೇರಂದದಿನೊಪ್ಪಿದುದು (ಜಥುಕಾ. ೫-೬); ಮಿಸುಪ ಕೇದಗಿಯೆಸಳ ಕಿಗ್ಗಟ್ಟ ಕಟ್ಟಿ ರಂಜಿಸುವ ಪೂದೇರನಾ ರತಿಯು ಕೈವಿಡಿದವರಿ ಬಿಸಜಾತ ಪತ್ರಂಗಳಿಂದೆ ಪೊಂಬಾಳೆಗಳ ಚಮರದಿಂ ರಂಜಿಸಿದನು (ತಂಕಿ. ೫೩-೬). ೨. ಪುಷ್ಪಕವಿಮಾನ : ರಾಮಂ . . . ಪೂದೇರೊಳ್ ಸರ್ವರಿಂ ಕೂಡಿ, ನಿಜನಗರಿಯಂ ಪದಿನಾಲ್ಗಾಲಂ ಸಮೆಯೆ ಪುಗುತೆ (ಅದ್ಭುಕ. ೬೭–೨೪). **ಹೂದೇರ್ :** ೧. ಸುದರ್ಶಿಮಣಿ . . . ಅರಸಂಚಿಯ ಕಿಱುದುಪ್ಪುಳುವಾಸಂ ಪರಿಸದಿನೇಱಿದಳೇಗೋದ್ಭವಸದರ್ದರಗಿಳಿ ಹೂಡಿದ ಹೂದೇರೇಱುವ ರತಿಯೆಂಬಂದದೊಳು (ಜಥುಕಾ. ೨-೫೨). [ಪೂ$_2$ + ತೇರ್$_2$]

**ಪೂದೊಂಗಲ್,** ಪೂದೊಂಗಲು (ನಾ). ಹೂವಿನ ಗೊಂಚಲು; ಪುಷ್ಪ ಮಂಜರಿ : ಪುಷ್ಪಪರಾಗಮಲ್ಲುಗುವಿನಂ ಪೂದೊಂಗಲಲ್ಲಾಡಿ ತೋಱುವಿನಂ . . . ಲೀಲೆಯಿನಾ ಪ್ರದೇಶದೊಳದಾರ್ ತನ್ವಂಗಿಯರ್ ಕ್ರೀಡಿಪರ್ (ಜಗಪ. ೧೦ ೬೬). **ಪೂದೊಂಗಲು :** ಕಂಗೊಳಿಸುವ ಕಾಮಂಗೆ ಬೃಹಸ್ಪತಿ ಪೂದೊಂಗಲನಿತ್ತು ಸಂಧಿಸಿದ (ಪೋಹಕ. ೫-೯೩) ; ಸುರಿವ ಪೂದೊಂಗಲ ತುಷಾರದಿಂ . . . ತಿಱದಿಂಪೆಲ್ಲಿಯುಂ ನಂದನದೊಳು (ಕೃಪಿಶಾ. ೩-೨೮). [ಪೂ$_2$ + ತೊಂಗಲ್]

**ಪೂದೊಂಗಲು** 'ಪೂದೊಂಗಲ್' ನೋ.

**ಪೂದೊಂಬೆ** (ನಾ). = ಪೂದೊಂಗಲ್ : ಪೂದೇರ ಬಲಬಂದ ಪೊಣರ್ವಕ್ಕಿ ಗಾಲಿಯ ಪೂದೊಂಬೆಯಿಂದ ಪೂಜಿಸಿದ ಪಾದಕೆ ನಮಿಸುತ ಗಿಳಿಗುದುರೆಯ ಮಾರನಾದರದೊಳಗೇಱಿ ನಡೆದ (ಪರ್ಣಕ. ೦೦-೧೦೩) ; ನಗೆ ಮಲ್ಲಿಗೆ ಮೊಗದಾವರೆ ಕಣ್ಗಾಡಿ ಸೊಗಸುವ ಕನ್ನೈದಿಲಾಗೆ ಮುಗುಳಂಬನ ಮುಡಿಗಮರಿದ ಪರಿಮಳವೊಗುವ ಪೂದೊಂಬೆಯಂತಿಹರು (ಕೆಸವ. ೬-೯೯). [ಪೂ$_2$ + ತೊಂಬೆ$_1$]

**ಪೂದೊಡಂಬೆ$_1$** (ನಾ). ಹೂವಿನ ದೇಟು,–ತೊಟ್ಟು : "ಪ್ರಸವಬಂಧು ವೃಂತಮೆನೆ ಪೂದೊಡಂಬೆಗಳ ಪೆಸರಕ್ಕು" (ಮಂಗರಾ. ೩೬-೫); ಕೆಂದಳಿರ್ ಮಿಸುಪ ಕೆಂಗಱುಯಾದುದು, ಪೂದೊಡಂಬೆ ಪಿಳ್ಕಾದುದು (ಕಮರ. ೨೯೨ ಕ್ರಯೋ). [ಪೂ$_2$ + ತೊಡಂಬೆ$_1$]

**ಪೂದೊಡಂಬೆ$_2$,** ಹೂದೊಡಬೆ (ನಾ). = ಪೂದೊಂಗಲ್ : ಬಂದಲೆದುದು ಪಶ್ಚಿಮಾನಿಳನವರ್ಚಿತು ಕೇತಕಿ ಪೂದೊಡಂಬೆಯಂ (ಗಿರಿಕ. ೯-೩೬); ಮುಗುಳ್ದುದು ಜಾದಿ ಕದಂಬಕೋರಕಂ ಬಲಿದುದು ಪೂದೊಡಂಬೆಗಳ ನಾಂತುದು ಕೇತಕಿ (ವಿಷ್ಣುಪು. ೫-೨-೪೦); ಸುತ್ತಿಡಿದ ಕೆಂದಳಿರ ಕೆಂಗಾವಿಗಾಸೆ ತಾನಿತ್ತಂಡವಾಗಿ ನೇಲುವ ಪೂದೊಡಂಬೆಗಳ್ ಮತ್ತೆ ಝಲ್ಲಿಗಳ್ (ಮಹಾಪು. ೨೬-೪೯). **ಹೂದೊಡಬೆ :** ತಲ್ಲಣದ ತೋಪಿನ ವಿಷಾದದ ಪಲ್ಲಡಿಯ ಹೂದೊಡಬೆಗಳ ಹೊಯ್ವಳ್ಳಿಗಳ ಮುನಿಜನವ ಕಂಡರು ಪಾಂಡುನಂದನರು (ಕುವ್ಯಾಭಾ. ೨೨-೨೨). [ಪೂ$_2$ + ತೊಡಂಬೆ$_2$]

**ಪೂದೊಡವು** (ನಾ). ಹೂವಿನ ಆಭರಣ,–ಒಡವೆ : ಉಟ್ಟ ನವಾಂಬರಕ್ಕೆ ಮಾರೆ ಪೂದೊಡವಂ ತುಡುವೊಂದು ಕೌತುಕಂ ಪುಟ್ಟೆ ಮುರಾರಿಗೀಯಲರ ಕಂಪನೆ ಕಾಣಿಕೆಯಾಗಿ ಪೋಗಿ ನೀಂ ಕೊಟ್ಟೊಡಗೊಂಡು ಬರ್ಪುದು (ಜಗಪ. ೬-೦೨); ಒಳ್ಪಿಂ ಸಮೆದಚ್ಚಪೂದೊಡವನೋರಂತಿಟ್ಟು ನಾನಾ ವಿಳಾಸಂದೋಱುತ್ತಿನಿಯರ್ಗೆ ರಂಜಿಪುದಜಸ್ರಂ ಖೇಚರೀಸಂಚಯಂ (ಕಬಕಂ. ೨-೩೯). [ಪೂ$_2$ + ತೊಡವು]

**ಪೂದೊಡಿಗೆ,** ಪೂದುಡುಗೆ, ಹೂದುಡಿಗೆ, ಹೂದೊಡಿಗೆ (ನಾ). = ಪೂದೊಡವು : ಮಧುಕರಿಕೆಯಿಂ ಪೂದೊಡಿಗೆಯಂ ಮಾಡಲುಂ ಮಯೂರಿಯಂ ಕಿನ್ನರಮಿಥುನಂಗಳಂ ಸಂಗೀತಶಾಲೆಗೆ ಕಳುಪಲುಂ . . ಪೆಸರ್ವೆಸರೊಳೆ ಕರೆದು ಪೇಳ್ವ ಮನೋಹರಾಲಾಪಂಗಳಂ ಕೇಳುತ್ತಂ ಪೋಗೆವೋಗೆ (ಕಾದಂಪೂ. ೦೦೦೬). **ಪೂದುಡುಗೆ :** ಬಗೆಗೆ ವಂದ ಪೂಗಳೊಳ್ ಪೂದುಡುಗೆಯಂ ಮಾಡಿ ವಸಂತಕಾಂತೆಯರಂತೆ ನೆಱೆಯೆ ಕೆಯ್ಗೊಯ್ದಾಗಳ್ (ಆದಿಪು. ೦೦–೦೨೪ ವ); ಪೂದುಡುಗೆಯಿಂ ಚೆಲ್ವಾದರಾ . . . ಬಾಲೆಯರ್ (ಶಾಂತಿಪು. ೮-೦೩). **ಹೂದುಡಿಗೆ :** ವಾಸಂತಋತುಕಾಲಸಮಯ ಕುಸುಮವನಾ ವಿಳಾಸಿನೀಜನ ತೊಡಿಗೆಯಂ ಮಾಡಿ ತಂದೊಲ್ದು . . . ಶಿವಾರ್ಪಿತಂ ಮಾಡಿ ಹೂದು [ಪಾಠಾಂ. ದೊ]ಡಿಗೆದೊಟ್ಟು (ಹಕಕಾ. ೩-೪೪). **ಹೂದೊಡಿಗೆ :** ಎಲೆ ಮುಗ್ಧೆ . . . ನಿನ್ನ ಸೌಕುಮಾರ್ಯಕ್ಕೆ ಹೂದೊಡಿಗೆ ಹೊಱೆ (ಸಂಬಿರ. ೦೪-೦೩). [ಪೂ$_2$ + ತೊಡಿಗೆ(< ತೊಡುಗೆ)]

**ಪೂದೊಣೆ$_1$** (ನಾ). ಹೂವುಗಳಿಂದ ತುಂಬಿದ ಕೊಳ; ಹೂಗೊಳ : ನೈದಿಲಿಂ ಮೆಱೆವ ಪೂದೊಣೆಗಳಿಂದೆಸೆದತ್ತು . . . ರಜತಶೈಲಂ (ರಾಮಚಂ. ೦-೨೬). [ಪೂ$_2$ + ದೊಣೆ$_1$]

**ಪೂದೊಣೆ$_2$** (ನಾ). ಹೂಬಾಣಗಳ ಬತ್ತಳಿಕೆ : ಮನೋಜನಸ್ಮೃತಿ ಗೊಪ್ಪುವ ಪೂದೊಣೆಯಕ್ಕುಮಿವಕ್ಷಿಸಲ್ ಮಂಜುಳದಾಡಿಮಿವಾಕುಸುಮ ಮೆಂದೞಿದೊರ್ವ ಸುಧಾಂಶುವಕ್ತ್ರೆ . . . ಕರಂ ತಿಱದಳ್ಪೆಡಂಗಿನಿಂ (ಅದ್ಭುಟ. ೯–೭೦). [ಪೂ$_2$ + ದೊಣೆ$_2$ (<ತೊಣೆ$_2$)]

**ಪೂದೋಂಟ,** ಪೂದೋಟ, ಹೂದೋಂಟ, ಹೂದೋಟ (ನಾ). ಹೂವುಗಳನ್ನು ಬೆಳೆಯುವ ತೋಟ ; ಪುಷ್ಪೋದ್ಯಾನ : **ದೇಗುಲದ**

ಬಡಗಣ ಪೂದೋಂಟ (ಪ್ರಾಅ. ೦೯೨೯, ೬೩–೯; 1024) ; ಮತ್ತೊರ್ವ ಚೆನ್ನೆ ಪೊನ್ನ ಕರುಮಾಡಮಂ ಬಳಸಿ ಬೆಳೆದ ಪೂದೋಂಟಮಂ ಪೊಕ್ಕು ಮೆಯ್ಗರೆದ ನಲ್ಲನಂ ನೆವದಿನಿಂತೆವಳ್ (ಶಬ್ದಾ. ೬೪) ; ಅಲ್ಲಲ್ಲಿ ಪೂದೋಂಟವಲ್ಲಲ್ಲಿ ಕೊಳಗಳಂತಲ್ಲಲ್ಲಿ ಕರ್ವಿನ ಪೊನಲು (ಪರ್ವ. ೦–೫೩). **ಪೂದೋಟ :** "ಪುಷ್ಪವಾಟಿ ತಾಂ ಪೂದೋಟಂ" (ಪಸ್ತುಕೋ. ೩೨–೦೨) ; ಪೂದೋಟವಮಂ ವಾಜಿಯಂ . . . ತಿಳಿಯಲ್ ಸ್ವಪ್ನದಿ ಲೇಸಲ್ತೆ (ಸೋಮಃಶ. ೩೯) ; ಸೌರಭ್ಯವ ತಾಳಿದನೇಕ ಪೂದೋಟ ಕೇಳಿಯ ವನಗಳಿದ್ದುವು ಪುರಲಕ್ಷ್ಮಿಯ ತಾಳಿಯ ಮರಕತದಂತೆ (ಜೋಹಶ. ೨–೫೩) ; ಎತ್ತಣ ತುರಂಗವಿದು ಪೊಕ್ಕು ಪೂದೋಟವಮಂ ತೊತ್ತಳದುಳಿವುದು (ಕೃಃಚಾ. ೨೦–೬). **ಹೂದೋಂಟ :** ಪಡುವಲು ಹೂದೋಂಟ (ಸೌತ್ಇ. XI–ii, ೦೨೨–೮೩ ; ಸಂ. 1072) ; ಹೂದೋಂಟಗಳನುಚಿ ಹೊಕ್ಕು ಚೆಲುವನಾಗಿ ಪರೀಕ್ಷಿಸುತ್ತಂ (ಚಕಪು. ೨೨–೭). **ಹೂದೋಟ :** ಹಲವು ಹೂದೋಟಗಳಪರ್ಜಿಸಿ . . . ಹೂಗಳನೆಯ್ದಿ ಕಯಿ ತಂದು (ಬಸವು. ೨೨–೨೫) ; ಪರಿಪರಿಯ ಹೂದೋಟಗಳ ಹೊಯ್ದೊರಸಿದನು . . . ಲಾಂಗೂಲದಲಿ ಕಲಿ ಹನುಮ (ತೊರರಾ. ೫–೪ ೦೩) ; ಇಂತಹ ದಾಂಪತ್ಯ ಪ್ರಣಯಲೀಲೆ ಗಾಳಿ ಬೀಸದ ಹೂದೋಟ (ಶನ್ನಶಾ. ೦೦೯).

[ ಪೂ₂ + ತೋಂಟ ]

**ಪೂದೋಟ** 'ಪೂದೋಂಟ' ನೋ.

**ಪೂದೋಱಿಸು** (ಕ್ರಿ). ಹೂವು ಬಿಡುವಂತೆ ಮಾಡು ; ಪುಷ್ಪಿಸುವಂತೆ ಮಾಡು : ಮಿಂಡೆದ್ದ ಹೆಣ್ಗಳುಪವನಕ್ಕೆ ನಡೆತಂದು . . . ಕಂಡಕಂಡವನಿಜಾತಂಗಳು ಚಿಗುರಿಸಿದರೊಡನೆ ಪೂದೋಱಿಸಿದುವು (ಕೃಃಚಾ. ೩೦–೫).

[ಪೂ₂ + ತೋಱಿಸು]

**ಪೂಧೂಳು** 'ಪೂದೂಳಿ' ನೋ.

**ಪೂನಾಡು** 'ಪುನ್ನಾಡು' ನೋ.

**ಪೂನಿಱು** (ಕ್ರಿ). ಹೂವುಗಳನ್ನು ಹೆಣೆ,—ಮಾಲೆಕಟ್ಟು : ಲಂಜಿಗೇಸರಂ ದೇವರ್ಕೆ ಪೂನಿಱುವ ಮಾಲ (ಲಾ) ಕಾರಗ್ಗೆ ಅರ್ದ್ದ ವಿಸದಿ (ಇಆ. X, ೬೬–೨; 578). [ಇದು 'ಪೂ ನಿಱು' ಎಂಬುದರ ಅಪಲಿಖಿತವಿರಬಹುದು]

**ಪೂನೀರ್**, ಹೂನೀರು (ನಾ). ಹೂವಿನ ರಸ ; ಮಕರಂದ ; ಪುಷ್ಪರಸ : ತಳಿರಂ ತೂಗಿ ಪರಾಗಮಂ ಪಿರಿದು ಪೂನೀರಂ ತಡಂಗೂಡಿ ಗುಗ್ಗುಳ ನಿಯರ್ಗೆ ಸಮನಾಂತು . . . ಏ ಗಂದಿಗರಂತೆ ಬಂದೊಲೆದುದೋ ಮತ್ತೊಂದು ಮಂದಾನಿಳಂ (ಅರ್ಜನೀ. ೫–೯೭). **ಹೂನೀರು :** ನೀರಿನೊಂದು ನೀರಜಾತ ಬೆಳಕಿಗಾಗಿ ಕೆರಳಿತು ಈ ಕಿರಣಕರಳಿತು ಹೂವ ಹೊಕ್ಕ ಕಿರಣವಾಗ ಹೂನೀರ ನೆಕ್ಕಿತು (ಗಂಗಾತ. ೦೫–೦೫). [ಪೂ₂ + ನೀರ್]

**ಪೂಪ** (ನಾ). ಹಿಟ್ಟಿನಿಂದ ಮಾಡುವ ದೋಸೆ, ಇಡ್ಲಿ, ಹೋಳಿಗೆ ಮುಂತಾದ ಮೃದುವಾದ ಭಕ್ಷ್ಯ : "ಪೂಪಃ, ಅಪೂಪಃ, ಪೂಪಳಿಕಾ —ಈ ೩ ಪಕ್ವಾನ್ನಂ" (ಹಲಾಯು. ೫೩–೦೬೪) ; ವ್ಯಕ್ತ ಕ್ಷೀರಾನ್ನವಂ ಘೃತದುಗ್ಧಶರ್ಕರೆಯ ವ್ಯಕ್ತಿಯಿಂಗೈದ ಕಜ್ಜಾಯವಂ ಪೂಪವಂ ಮುಕ್ತ ಭವಜಾಲನಾ ಶಿವಲಿಂಗನಾರೋಗಿಸಿದನು (ದುರಕ್ರಿ. ೬ ೫೨) ; ಲಡ್ಡು ಚಕ್ಕುಲಿ ತರಗು ಪೂಪವ [ಪಾಠಾಂ. ತುಪ್ಪವ] ಬಡ್ಡಿಸಿದ ಪೊಂದಟ್ಟೆಯನು ಮುಂದೊಡ್ಡಿ (ಶರಾಮಾ. ೧೬೬–೨೯). 'ಅಪೂಪ' ಪರಾ. [ಸಂ.]

**ಪೂಪಲಿಕೆ** (ನಾ). = ಪೂಪ : "ಪೂಪಲಿಕಾ ಪೂಪನಾಮಂ" (ಪಸ್ತುಕೋ. ೯೪–೦೨). [ ಸಂ. ಪೂಪಲಿಕಾ ]

**ಪೂಪುಟ್ಟಿಗೆ** (ನಾ). ಹೂವಿನ ಬುಟ್ಟಿ ; ಪುಷ್ಪಕರಂಡ : ಪೂಪುಟ್ಟಿಗೆ ಪನ್ನೀರ್ಗುಪ್ಪಿಗೆ . . . ಕರ್ಪೂರ ಕರಡಿಗೆಯಿರ್ದುವು (ಶಬಸೋ. ೨೩–೩೨).

[ ಪೂ₂ + ಪುಟ್ಟಿಗೆ₁ (< ಪುಡಿಕೆ) ]

**ಪೂಪುಣುಂಬ** (ನಾ). ಹೂವುಗಳನ್ನು ಬಾಣಗಳಾಗಿ ಉಳ್ಳವನು ; ಮನ್ಮಥ : "ಇಂಗೋಲ್ವಿಲ್ಲಂ . . . ಪೂಪುಣುಂಬು . . . ಗಿಳಿದೇರು — ಇವು ೧೩ ಕಾಮದೇವಂಗೆ ಪೆಸರ್" (ಶಚಾ. ೯೭–೦೩) ; "ಕಡುವಿಲ್ಲ ಸಿಂಗರ ಪೂಪುಣುಂಬ ವಿಮಾಟಲವಿಗೆಯ ಪೆಣ್ಬಡೆಯನೈಸರಲ ಕಾವ ಜತಿಗಳವಗೆಯ ನೆನೆ ಮನ್ಮಥನ ನಾಮಮಕ್ಕುಂ" (ಶಬ್ದಶೃ. ೯). [ಪೂಪುಣುಂಬು + —ಅ₇]

**ಪೂಪುಣುಂಬು** (ನಾ). ಮನ್ಮಥನ ಹೂವಿನ ಬಾಣ, — ಪುಷ್ಪಾಸ್ತ್ರ : ಕಯ್ಪುಱಿಗುಟ್ಟಿಯಾಡಿದರ್ ; ಪೂಪುಣುಂಬು ; ಪಲ್ಪುಱಿಗುಟ್ಟಿದಂ (ಜಮದ. ೬೭ ಶ್ರಯೋ) ; ಭಾವಜಕಾರ್ಮುಕಂ ಪೂಪುಣುಂಬಂ[ಪಾಠಾಂ. ಪೂವಿನಂಬಂ] ಪೂಡಿದಂ (ದಶಾವ. ೬–೬೦ ಶ). [ಪೂ₂ + ಪುಣುಂಬು (< ಪುಳುಂಬು)]

**ಪೂಪುರುಳ್** (ನಾ). ಹೂವಿನ ಸತ್ತ್ವ ; ಮಕರಂದ : ಪೊಂಬೆಳ್ಳಿ ಪೂಪುರುಳ್ ಬೆಳ್ದಿಂಗಳಿನ ಚಿತ್ತ ತುಂಬಿದಿರ್ಪಿನ ಬಗೆಯ ಬರೆಹದೊಳ್ಪಲ್ತೆ ? (ಶಾಂತರ. ೬೫–೦೦೨). [ಪೂ₂ + ಪುರುಳ್]

**ಪೂಪೊಡೆಯ**, ಹೂಪೊಡೆಯ (ನಾ). ಹೊಕ್ಕುಳಲ್ಲಿ ತಾವರೆಯ ಹೂವುಳ್ಳವನು; ಪದ್ಮನಾಭ; ವಿಷ್ಣು : "ವಿಷ್ಣು ಪೂಪೊಡೆಯನೆಂದೆನಲ್" (ಶಕಾಶಿ. ೯೫). **ಹೂಪೊಡೆಯ :** ಹರನ ಹಟ್ಟುಗೆ ಹೂಪೊಡೆಯನೋಪಳ ನಜನರಸಿಯನಂಗಶೇಖರನ ತರುಣಿಯರನು ಗೆಲ್ದಳು ಗಾಡಿ ಸಿರಿಜಾಣ್ಕೆ ಪಿರಿದಪ್ಪ ರೂಪಿನಿಂದವಳು (ಶ್ರೀಶಾಂ. ೩–೭೦). [ಪೂ₂ + ಪೊಡೆ₃ + —ಅ₇]

**ಪೂಬನ** (ನಾ). = ಪೂದೋಂಟ : ಬಾಲೆಯರೆಮ್ಮಯ ಪೂಬನದಿ ಆಡಲು ಬಂದು ನುಡಿವರು (ಗೀತಾಂ. ೦೪–೫೨). [ಪೂ₂ + ಬನ₁]

**ಪೂಬಾಣ**, ಹೂಬಾಣ (ನಾ). ೧. ಹೂವಿನ ಬಾಣ ; ಮನ್ಮಥನ ಬಾಣ. ೨. ಮನ್ಮಥ ; ಕಾಮ : ಬಾಣಪುತ್ರಿಯ ಕೆಳದಿಯರ ನೋಡಿದರು ಪೂಬಾಣಗೆಣೆಯ ಸದ್ಭಟರು (ಜೋಹಶ. ೨೪–೨೦). **ಹೂಬಾಣ :** ೩. ಸ್ಫೋಟವಾದಾಗ ಮೇಲಕ್ಕೆ ಸಿಡಿದು ಹೂವಿನಾಕಾರದ ಕಿಡಿಗಳನ್ನು ಸೂಸುವ ಒಂದು ಬಗೆಯ ಸುಡುಮದ್ದು : ಈ ಜಾನಸಾಲೆಯಲ್ಲಿ ಹಗಲುಬತ್ತಿ, ಹೂಬಾಣ, ಆಕಾಶಕೊಳವಿ . . . ಉತ್ಸವಗಳ ಕಾಲದಲ್ಲಿ ಹತ್ತಿಸುವಂತೆ ಕಟ್ಟಲೆ ಮಾಡಿದರು (ಮಹಾವಂ. I, ೦೨೮) ; ಎಡವೂರ ತಳದಲ್ಲಿ ಏನೇನ ಶಡಗರ . . . ಹಾರೂವ ಹೂಬಾಣ ಹೂಬತ್ತಿ ಕಂಡಿರಿ (ಶನ್ನಶಾ. ೯). [ಪೂ₂ + ಬಾಣ₂]

**ಪೂಬಿಡು**, ಹೂಬಿಡು (ಕ್ರಿ). ಹೂವುಗಳನ್ನು ಹೊಂದು ; ಪುಷ್ಪಿತವಾಗು : ಪೂಬಿಡುವ ವಸಂತದಾ, ಪಣ್ ಬಿಡುವ ಗ್ರೀಷ್ಮದಾ, ಮುನ್ನಱಿವು ಇರ್ದುದಿಲ್ಲಂ (ಬದ್ಧಶ್ರ. ೨೪–೫೦೬). **ಹೂಬಿಡು :** ಒಂದೂವರೆ ತಿಂಗಳಿಗೆ ಸಸಿಗಳು ದೊಡ್ಡವಾಗಿ ಹೂಬಿಡುತ್ತವೆ (ಮುಂಶಿಯ. ೪–೨೬) ; ಗಿಡ ಹಬ್ಬುವುದು ; ಚಿಗುರುವುದು ; ಹೂಬಿಡುವುದು ; ಹಣ್ಣು ಬಿಡುವುದು (ಸಾಹಿಶೀ. ೮೦). [ಪೂ₂ + ಬಿಡು₁]

**ಪೂಮುಡಿ** (ನಾ). ಹೂವಿನ ಮುಡಿಕೆ ; ಹೂದಂಡೆ : ತಲೆವಿಕ್ಕ ಕಟ್ಟಲೆಗಮಿಂದು ಮರೀಚಿಗವಾಯ್ತು ನಾಡೆ ಕಣ್ಗಳವಡೆ ಮಲ್ಲಯುದ್ಧವೆನೆ ದೇಸೆಯ ಪೂಮುಡಿಯಂ ತೊಡರ್ಚಿದರ್ (ಚಂದ್ರಕೌ. ೬–೬೪). [ ಪೂ₂ + ಮುಡಿ₂ ]

**ಪೂಮರ** (ನಾ). ಹೂವು ಬಿಡುವ ವೃಕ್ಷ ; ಹೂವಿನ ಮರ : ತಳ್ತಿರಟ್ಟಡಿಯ ಪೂಮರದಿಂ ಕಱಿವೂಗಳೆತ್ತಮಿತ್ತಂ ಕವಿದಲ್ಲಿ ಮೆಲ್ಲನುಗೆ ತೇಂಕುವ ಪೂವಿನ ಸೇಕರಂಗಳಂ (ಆದಿಪು. ೦–೬೦) ; ಪೂಮರನಂ ಕೋಡಗ ವೇಱಿದಂತೆ ಕಬ್ಬಿನ ತೋಂಟವಮಂ ನರಿ ಪೊಕ್ಕಂತೆ (ರಹರ್ಶಾ. ೨–೭೦). [ಪೂ₂ + ಮರ₁]

**ಪೂಮಲಗು** (ನಾ). ಹೂವಿನ ದಿಂಬು ; ಹೂವುಗಳಿಂದ ರಚಿಸಿದ ಮೆತ್ತೆ : ಪೂಗೋಲ ತೂಗುತೆ ತಳಿರ ಪಾದಾಸನ ಮೇಗೆ ಕಾಲಿಟ್ಟು ಪೂಮಲಗ ರಾಗದೊಳೊಱಗಿ ತಾವರೆಗದ್ದುಗೆಯೊಳಿರ್ದ ಪೂಗೋಲನು (ಪರ್ವ. ೦೦–೭೭).

[ಪೂ₂ + ಮಲಗು₂ (< ಮಲಂಗು₂)]

**ಪೂಮಳೆ** 'ಪೂವಟ್ಟಿ' ನೋ.

**ಪೂಮಳೆಗಟ್ಟು** 'ಪೂವಟ್ಟಿಗಟ್ಟು' ನೋ.

**ಪೂಮಟಿ** 'ಪೂವಟಿ' ನೋ.

**ಪೂಮಾಲೆ,** ಹೂಮಾಲೆ (ನಾ). ಹೂವಿನ ಹಾರ, — ದಂಡೆ; ಪುಷ್ಪಮಾಲೆ : ನಿನ್ನಾಜ್ಞೆ ಪೂಮಾಲೆಯಂದದೆ ನಿಂದಿರ್ಪುದು ಮತ್ಕಿರೀಟದೊಳ್ (ಆದಿಪು. ೧೩-೧೭); ಕಪಿಯ ಕೊರಲೊಳ್ ಪೂಮಾಲೆಯಿಕ್ಕಿದಂ ತಾನುಮಕ್ಕುಂ (ರಮಾಂಸ್ವ. ೦-೦೦೬); ಕಂಠದೊಳೊಂದಿಸಿದ ಕೊರಲಗುಮು ಪೂಮಾಲೆಯಂ ಮಾಡಿ ಅಕ್ಷಯಂ ನಿಟಿಲಾಕ್ಷನಭವಂ . . . ಅಕ್ಷಣದೊಳುರು ಮೋಕ್ಷವಂ ಕೊಡಲು (ಏಕಪು. ೨೭-೩೦). **ಹೂಮಾಲೆ :** ಹೂಮಾಲೆಗಳ ಸಿಂಪಿಸಿದ ಗಂಧದ ಬಂಧದಕ್ಷತೆಯ ಕೀಲಣೆಯ ಮಣಿವೆಳಗುಗಳ ಹರಿದಾಳಿಯಲಿ . . . ಎಸೆದುದಂಕುಶ ಭಟನ ಮುಷ್ಟಿಯಲಿ (ಶುಭ್ಯಾದ್ರೋ. ೩-೩೭); ಎತ್ತಿದ ಹೂ[ಹ.ಶಾ. ಪೂ]ಮಾಲೆ ಬಿಲ್ಲಿನಂತಿರಲಾಗ ಮುತ್ತುಮಾಡಿಡಿ ಹೆದೆಯಾಗೆ ಚಿತ್ರಭವಗೆ ಪುಷ್ಪಚಾಪವನೀವೊಲು ಬಿತ್ತರದೊಳ್ಗೊರ್ವಳೆಸೆಗು (ವರ್ಧಕ. ೦-೦೦೫); ಕೋತಿಯ ಕೈಯಲ್ಲಿ ಹೂಮಾಲೆ ಕೊಟ್ಟ ಹಾಗೆ (ಗಾದೆ). [ಪೂ$_1$+ಮಾಲೆ]

**ಪೂಮಾಲೆಗಾರ್ತಿ** (ನಾ). ಹೂವು ಮಾರುವವಳು; ಹೂವಾಡಿಗಿತ್ತಿ : ಮಲ್ಲಿಗೆಯಲರ್ದಂಡೆವಿಡಿಯೆ ಬಂದೆಱಗುವ ಜಲ್ಲಿದುಂಬಿಗೆ ಬೆರ್ಚಿ ನಿಂದು ಸೊಲ್ಲಿಪ ಪೂಮಾಲೆಗಾರ್ತಿ ಕಾಪನ ಕಬ್ಬುವಿಲ್ಲಿನಂತಿರ್ದಳು (ನೋಚಕ. ೩-೦೭). [ಪೂಮಾಲೆ + — ಕಾಱ + — ತಿ$_1$ (< — ಇತ್ತಿ)]

**ಪೂಮಾಱು,** ಹೂಮಾರು (ಕ್ರಿ). ಹೂವುಗಳನ್ನು ವಿಕ್ರಯಿಸು, — ಮಾರು : ಇದು ಮನೆಯಾಣ್ಮನಂ ಮಾಱುವಂದಮಲ್ಲದೆ ಪೂಮಾಱುವಂದಮಲ್ತು (ಶಂಕಭಾ. ೪-೬೧ ವ). **ಹೂಮಾರು :** ಹೂಮಾರುವ ಅಂಗಡಿಯಲ್ಲಿ ಹುಲ್ಲು ಮಾರುವುದುಂಟೆ ? (ನಾಡಗೀ. ೦೨೨). -ಹೂಮಾರಿದ ಕೈಲಿ ಹುಲ್ಲು ಮಾರಿಸಬಾರದು (ರವರಾಣಿ ೭೭). [ಪೂ$_1$+ಮಾಱು$_2$]

**ಪೂಮಿಡಿ,** ಹೂಮಿಡಿ (ನಾ). ತೀರ ಎಳೆಯ ಕಾಯಿ; ಚಿಕ್ಕ ಮಿಡಿ : ಮರ್ಮರಪತ್ರಮಂಬುತಳವಂ ನಡುವಂತಿರೆ ನಟ್ಟೊಡೆತ್ತ ಬೀಟ್ಟುರ್ಮ ಗುಟ್ಟಿದ್ದ ಪೂಮಿಡಿಯು ಪೂವಿನ ಕಾಯ್ಗಳ ಕಯ್ದುವುಳ್ಕುಗುಂ (ಶಾಂತಿಪು. ೭-೯೯); ಸುತ್ತಿಟ್ಟು ಪರ್ಬಿದುದು ಮದವೇರಿ ಪೂಮಿಡಿಗಳೆತ್ತಲುಂ (ಮಲ್ಲಿಕ. ೦೯-೫); ಕೋದು ಪೂಮಿಡಿ ತಳಿರ ಕಾಡು ನರುಪೊಗರಿನಿಂ ಪೂದಿಂಗಳರಸನಂ ಕರೆಯುಗುಂ ತಳಿಲ್ಗೆ (ಕಾಲೂಕೆ. ೦೦೯-೨೯೬). **ಹೂಮಿಡಿ :** ಹೂಮಿಡಿಯ ಹಱಿದು ಒತ್ತಿ ಹಣ್ಣ ಮಾಡಿದೆನೆಂದರೆ ಹಣ್ಣಾಗಬಲ್ಲುದೆ (ಅವತಂ.೨೨೬-೦೦೩೯); ಎಳೆಯ ಹೂಮಿಡಿಗಳಂ ಹಱಿದು ಹಣ್ಣಂ ಮಾಡಲಳವೆ (ಕಬಪು. ೭-೯); ಗೋದಿ ಹೊಡೆಗಟ್ಟಿರಲು ಕಡಲೆಯ ಮಡಿಲು ಹೂಮಿಡಿ ತುಂಬಿತು (ನಂಮಸು. ೦೨-೦೨). [ಪೂ$_1$+ಮಿಡಿ$_1$]

**ಪೂಮುಡಿ$_1$,** ಹೂಮುಡಿ$_1$, ಹೂವುಮುಡಿ (ಕ್ರಿ). ಹೂವುಗಳನ್ನು ಧರಿಸಂ, — ಮುಡಿದುಕೊಳ್ಳು : ಸ್ಮರಸಂಜೀವನೆ ಕೃಷ್ಣೆ ಪೂಮುಡಿದಳ್ (ಗದಾಯು. ೬-೫೦). **ಹೂಮುಡಿ$_1$ :** ಹಸುರೆಲ್ಲವು ಕುಸುರಾಯಿತು ಹೂಮುಡಿಯಿತು ಬೇಲಿ (ನಂಮಸು. ೭-೨೨); ಸೀಳ್ಕೊಂಬಿನಿಂ ಮಾವು ಹೂಮುಡಿಯಿತಿಹುದು (ಕಾಲೂಕೆ. ೦೦೩-೨೩೯). **ಹೂವುಮುಡಿ :** ಹೂವುಮುಡಿಯುವ ಹಕ್ಕು ಹೆಂಗಸರಿಗೆ ಜನ್ಮಸಿದ್ಧವಾದುದು (ದೂಕಿಟ್ಟಿ. ೭೦). [ಪೂ$_1$ + ಮುಡಿ$_1$]

**ಪೂಮುಡಿ$_2$,** ಹೂಮುಡಿ$_2$ (ನಾ). ೧. ಹೂವುಗಳನ್ನು ಮುಡಿದುಕೊಂಡ ಹೆರಳು, — ಜಡೆ : ಬಟಲ್ಮುಡಿಯ ಸೋರ್ಮುಡಿಯ ಪೂಮುಡಿಯ ನಿಱುದಲೆಯ ಸುಱಿಗುರುಳ . . . ವಿದ್ಯಾಧರವಾರನಾರೀಕದಂಬಂ (ರಮಾಂಸ್ವ. ೬ ೦೯೬); ತರುಣಿಯರ ಪೂಮುಡಿಯ ಕಂಪಿಂದೆ ಸೌರಭ್ಯಧರನಾಗಿ . . . ಮಾರುತಂ ಸುಳಿದನು (ಕಬಪು. ೦೦-೭). **ಹೂಮುಡಿ$_2$ :** ೧. ಅವನ ಹೆಂಡತಿ ಐವತ್ತೆರಡು ಕಣ್ಣುಳ್ಳವಳು ಅವಳು ತನ್ನ ಹೂಮುಡಿಯ ಬಿಟ್ಟು ಅತ್ತಾಳು (ಬಸವ. ೯೩೨). ೨. ಹೂವನ್ನು ಹೆಣೆದ ಜಡೆ; ಮೊಗ್ಗಿನ ಜಡೆ : ಪೂರವಾರ್ಗಳಂ ಮಿಡಿವ ಹೂಮುಡಿಯ ಪಿಡಿಯಲೆನೆ ಸೆರಗು ದಡದಡಿಸುತಿರೆ ಚಿಕ್ಕೆಯರ್ ಮೆರೆದು ತರಿಮಿಂಡಿಯರ್ ನಡೆದರ್ (ಕಾಂಚಿ. ೦೨೯-೨೬೦). [ಪೂ$_1$+ಮುಡಿ$_2$]

**ಪೂಯ** (ನಾ). ೧. ಗಾಯಂಗಳಿಂದ ಹೊರಡುವ ಬಿಳಿಯ ದ್ರವ; ಕೀವು. ೨. ಊತ; ಬಾವು : "ಪೂಯಂ, ಪೂಯಿಃ, ಪೂಯುಃ, ಪೂಯನಂ, ಪೂಯನೀಯಂ ಈ ೫ ಬಾವು" (ಶಾಕಕ್ಕ. ೦೦೦). [ಸಂ.]

**ಪೂರ$_1$** (ನಾ). ೧. ತುಂಬುವುದು; ತುಂಬಿಸುವುದು; ಪೂರ್ಣಗೊಳಿಸುವುದು. ೨. ತೃಪ್ತಿಗೊಳಿಸುವುದು; ಸಂತೋಷಗೊಳಿಸುವುದು. ೩. ಸಂದಿಯುವುದು. ೪. ನದಿ, ಸಮುದ್ರ ಮೊದಲಾದುವು ಉಕ್ಕಿ ಹರಿಯುವುದು; ನೆರೆ : "ಪೂರಯೆಂಬುದು ತೊಱೆಯ ಭೂ(ಬೂ)ರಂ" (ಶಬ್ದಮ. ೦೦೦-೯೬); ಮಳೆಗಾಲದಲ್ಲಿ ಗಂಗಾನದಿಗೆ ಪೂರ ಬಂದ ಸಮಯದಲ್ಲಿ ಹುಮಾಯೂನನು ದಿಲ್ಲಿಯ ಕಡೆಗೆ ತಿರುಗಿದನು (ಹಿಂದುಸ್ತಾ. ೯೯). ೫. ಹರಿವು; ಪ್ರವಾಹ: ಬಿಡದಲ್ಲ ಬಂಧುಜನದೊಟ್ಟುಡಿಯುದ ಕಣ್ಣೀರ ಪೂರವಾ ಪ್ರೇತವನೋಗಡಿಸದೆ ಸುಡುವುದು ಗತ (ರಂಕಶಾ. ೨-೨೬); ಕಣ್ಣೀರ ಪೂರದಗುರ್ವಿಂ ದೆಸೆಗಾಣದಂದೆಡವುತಂ . . . ಪೋದಂ (ಕಾದಂಪೂ. ೯೦೪); ಪಾವರೀಮುಖಿಶಿಶಿಗೊಸರ್ವಿಂದುಗ್ರಾಪನಿರ್ಮಳಜಲದ ಪೂರದಿಂ ಬೆಳೆವುತಿಹ ಶಾಳಿಗಳ್ ಕಣ್ಗೆಸೆದುವು (ಕಂಪು. ೦೦-೬). ೬. ನೀರಿನ ಸಮೂಹ; ಜಲಾಶಯ : 'ಪೂರಾಂಬು' ಪರಾ. ೭. ಹುಣ್ಣು, ಗಾಯ ಮೊದಲಾದುವನ್ನು ತೊಳೆದು ಶುದ್ಧಗೊಳಿಸುವುದು. ೮. ಹಿಟ್ಟಿನಿಂದ ಮಾಡಿದ ರೊಟ್ಟಿ, ದೋಸೆ ಮೊದಲಾದ ಖಾದ್ಯ. ೯. ಮಾದಳದ ಗಿಡ; ಮಾತುಲುಂಗವೃಕ್ಷ. ೧೦. [ಯೋಗ] ಪ್ರಾಣಾಯಾಮದ ಒಂದು ಅಂಗ; ಮೂಗಿನಿಂದ ಉಸಿರನ್ನು ನಿಧಾನವಾಗಿ ಒಳಗೆ ಎಳೆದುಕೊಳ್ಳುವುದು : 'ಪೂರಕ' ಪರಾ. [ಸಂ.]

**ಪೂರ$_2$,** ಪೂರಾ(ಅ). ತುಂಬ; ತೀರ; ಪೂರ್ತಿಯಾಗಿ; ಬಹಳವಾಗಿ : ಕಾಲುಗಳು ಪೂರ ಸೋತುವು (ಮೀಅಮ. ೩೦); ರಾಮೂಗೆ ಪೂರ ಕೋಪ ಬಂತು (ಶಿರಾಕ. ೦೨೯). **ಪೂರಾ :** ನಾನು ಹೇಳುವ ಮಾತನ್ನು ಪೂರಾ ಕೇಳಬಾರದೆ ? (ದೇಜಗಾ. ೦೯); ನಿನ್ನ ತಿಳಿವಳಿಕೆ ಪೂರಾ ತಪ್ಪಲ್ಲ (ಅಶ್ವಮ. ೨೦).

**ಪುಟ್ಟಪೂರಾ, ಪುಟ್ಟಾಪೂರಾ** (ದ್ವಿರುಕ್ತಿ): ಮಿಂಚುಬಳಗ ತೆರೆತೆರೆಗಳಾಗಿ ಅಲೆಯುವುದು ಪುಟ್ಟಪೂರಾ (ಹೃದಕ. ೦-೨); ಭಲಬಲ ಇದ್ದು ಧೀರಾ ಎಂಥ ಶೂರಾ ಆಸಕ್ತಿ ಇಲ್ಲದಾ ವೀರಾ ಪುಟ್ಟಪೂರಾ (ಸ.ಜಾ.ಗಾ. ೨೦-೦೭); ಕೃಷ್ಣದೇವರಾಯನು . . . ಮುಸಲ್ಮಾನರನ್ನು ಈ ಯುದ್ಧದಲ್ಲಿ ಪುಟ್ಟಾಪೂರಾ ಸೋಲಿಸಿದ ಕಾರಣ ಮುಸಲ್ಮಾನರು ವಿಜಯನಗರದ ರಾಜ್ಯದ ಕಡೆಗೆ ಆತನ ಕಾಲದಲ್ಲಿ ಇಣಿಕಿ ನೋಡಲಿಲ್ಲ (ಕಕಕ್ಕ. ೦೨೨). [<ಪೂರ$_1$]

**ಪೂರಂಗವಿ** (ಕ್ರಿ). ಹೆಚ್ಚಾದ ನೆರೆ ಬಂದು ಆವರಿಸಂ; ಮಹಾ ಪೂರವು ಬಂದು ಮುಂಸುಕು : ಸಭೆಯೆಲ್ಲಂ ಹೊನ್ನ ನೀರಿಂದರೆ ಬಳೆದಪೂಲಿ ದರ್ಪ್ಪದೇಕೀ ಜಗದ್ವಲ್ಲಭನಂಗುಷ್ಠಾಯೆ ಪೂರಂಗವಿದ ಪಸರದಿಂದೆ (ಅಸಂಪು. ೦೦-೩೯). [ಪೂರ$_1$+ಕವಿ$_1$]

**ಪೂರಂಗೊಳ್** (ಕ್ರಿ). ಪ್ರವಾಹವಾಗಿ ಹರಿ; ಧಾರೆಗಟ್ಟಿ ಸುರಿ: ಮದಶತ್ರುಗಳ್ ನಯನದಿಂ ಪೂರಂಗೊಳಲ್ . . . ರಥಾಂಗರಾಜಿ ನೆರೆದತ್ತು (ಕುಸುಮಾ. ೦-೫೩); ಹೃದಯೋದ್ಭೂತನವಪ್ರಸನ್ನಸುಧೆ ಪೂರಂಗೊಂಡುದು (ಕುಸುಮಾ. ೪-೦೦೫). [ಪೂರ$_1$+ಕೊಳ್$_1$]

**ಪೂರಂಬರಿಸು** (ಕ್ರಿ). ತುಂಬಿ ಹರಿಯುವಂತೆ ಮಾಡು; ಉಕ್ಕೇರಿಸು : ನೀರ್ಗಾಯ್ಗಳಿಂ ಭೋರ್ಗರೆದುಗುವೆಳನೀರಂ . . . ಅತುಳಾವಾಳ ಖಾತಂಗಳಿಂ ಶೀವಿ ನಿತಾಂತಂ ಸುತ್ತಿ ಪೂರಂಬರಿಪುವದಱೊಳೇ ನಾರಿಕೇಳಂಘ್ರಿಪಂಗಳ್ (ಕುಸುಮಾ. ೦-೭೭). [ಪೂರ$_1$+ಪರಿಸು (<ಪರಿಯಿಸು)]

**ಪೂರಕ** (ಗು). ೧. (ಅರೆಯನ್ನು) ತುಂಬುವ; (ಕೊರೆಯನ್ನು)

ಪೂರ್ತಿಮಾಡುವ. ೨. ಸಹಾಯಕವಾದ ; ಸಹಕಾರಿಯಾದ : 'ಪೂರಕಪರೀಕ್ಷೆ' ಪರಾ. ೩. ತೃಪ್ತಿಗೊಳಿಸುವ. (ನಾ). ೪. ಪೂರ್ಣಗೊಳಿಸುವಂತಹುದು ; ಪೂರ್ತಿಗೊಳಿಸುವ ಭಾಗ : ಮೊದಲನೆಯ ಕ್ರಮಕ್ಕೆ ಎರಡನೆಯ ಕ್ರಮ ಪೂರಕದಂತಿದೆ (ಶಿಕ್ಷಣ. ೨೩೬) : ಈ ಜ್ಞಾನಮೂಲಗಳು ಪರಸ್ಪರ ಪೂರಕಗಳಾಗಿವೆ (ತತ್ವಶಾ. ೩೬೦) ; ಅನೇಕ ಸಂದರ್ಭಗಳಲ್ಲಿ ಒಂದು ದರ್ಶನವು ಮತ್ತೊಂದು ದರ್ಶನಕ್ಕೆ . . . ಪೂರಕವಾಗಿಯೂ ಇರುತ್ತದೆ (ಜೀವಾತ್ಮ. II ಮುನ್ನುಡಿ). ೫. ಮಾದಲದ ಗಿಡ ; ಮಾತುಲುಂಗವೃಕ್ಷ. ೬. ಶ್ರಾದ್ಧದಲ್ಲಿ ಪಿತೃಗಳಿಗೆ ಅರ್ಪಿಸುವ ಪಿಂಡ. ೭. ರೊಟ್ಟಿ, ದೋಸೆ ಮೊದಲಾದ ಹಿಟ್ಟಿನಿಂದ ಮಾಡಿದ ಖಾದ್ಯ. ೮. [ಯೋಗ] ಪ್ರಾಣಾಯಾಮದ ಒಂದು ಅಂಗ ; ಮೂಗಿನಿಂದ ವಾಯುವನ್ನು ಒಳಗೆ ಎಳೆದು ಕೊಳ್ಳುವುದು : "ನಾಸಿಕದಿ ನಿಂದಾನಿಲಂ ಕುಂಭಕಮೆನಿಕ್ಕು ನಾಸಿಕದಿ ಬಿಡುವಾನಿಲಂ ರೇಚಕಮೆನಿಕ್ಕು ನಾಸಿಕದಿ ಸೇದುವನಿಲಂ ಪೂರಕಮೆನಿಕ್ಕು" (ಶುಂಗಾರ.೦೬-೦೪) ; ಕುಂಭಕ ಸಂರೇಚಕ ಪೂರಕಂ ಪರಿಮಳೋನ್ಮಿಶ್ರಂ. . . ನಂಜಿನ ಸುಯ್ಯ ಗಾಳಿ ನೃಪನಂ ಕೊಂದಿಕ್ಕಿತು (ಶಾಂತಿಪು. ೬-೯೩) ; ಅಣು ವಿನಲಿ ಲಘುವಿನಲಿ . . . ವಶಿತ್ವದಲಿ ಮೆಂಟಣಿಸಿ ರೇಚಕ ಪೂರಕವ ದಿಂಗಣ ವನಿಟುವುದು ಯೋಗಸಿದ್ಧಿಗೆ ಲಕ್ಷಣವನು (ಕುಮಾ.ಉ. ೬-೯). ೯. = ಪಾದ ಪೂರಕ : ಮತ್ತೆಂಬ ಪೂರಕದ ಬಟ್ (ಎಂಬ) ಅವ್ಯಯಂ ಬಟಂ (ಶಮದ. ೪. ಸೂ ೩೬). ೧೦. [ಗಣಿತ] ಗುಣಿಸುವ ಸಂಖ್ಯೆ ; ಗುಣಕ. [ಸಂ.]

**ಪೂರಕಪರೀಕ್ಷೆ** (ನಾ). ೧. ಮುಖ್ಯಪರೀಕ್ಷೆಯಲ್ಲಿ ತೇರ್ಗಡೆಯಾಗದ ವಿಷಯಗಳಿಗಾಗಿ ಪುನಃ ನಡೆಯಿಸುವ ಪರೀಕ್ಷೆ : ಸೆಪ್ಟೆಂಬರಿನಲ್ಲಿ ಪೂರಕಪರೀಕ್ಷೆ ನಡೆಯಿತು (ರೂಢಿ). ೨. ವಾಕ್ಯಗಳಲ್ಲಿ ಬಿಟ್ಟು ಹೋಗಿರುವ ಭಾಗವನ್ನು ಸರಿಯಾಗಿ ಊಹಿಸಿ ತುಂಬುವ ಪ್ರಶ್ನೆಗಳನ್ನೊಳಗೊಂಡ ಪರೀಕ್ಷೆ : ಪೂರಕಪರೀಕ್ಷೆ—ಉದಾಹರಣೆ ೧. ಹಿಂದೂಸ್ಥಾನ . . . ಖಂಡದಲ್ಲಿದೆ. ಮೇಲಿನ ಪ್ರಶ್ನೆಗಳಲ್ಲಿ ಒಂದೊಂದು ಪದ ಬಿಟ್ಟುಹೋಗಿದೆ. ವಿದ್ಯಾರ್ಥಿಗಳು ಅದನ್ನು ಸ್ಮರಣೆಗೆ ತಂದುಕೊಂಡು ಅದನ್ನು ಬಿಟ್ಟಿರುವ ಸ್ಥಳದಲ್ಲಿ ಬರೆದು ಪೂರೈಸಬೇಕು (ಶಿಕ್ಷದ. ೩೫೪). [ಪೂರಕ + ಪರೀಕ್ಷೆ]

**ಪೂರಣ** (ನಾ). ೧. (ಅರಕೆಯನ್ನು) ತುಂಬುವುದು,—ಭರ್ತಿ ಮಾಡುವುದು : ಸಾಹಿತ್ಯದಲ್ಲಿ ಅಪ್ರತ್ಯಕ್ಷತೆಯ ಅಭಾವವನ್ನು ಪೂರಣ ಮಾಡಬೇಕು (ಸಿಬೀಧ. II, ೨೬೬). ೨. ಸಹಾಯಕವಾದುದು; ಪೂರಕ ವಾದುದು : ಆರೋಗ್ಯ ಆಯುಸ್ಸು ಐಶ್ವರ್ಯವೆಂಬ ಈ ಮೂರುವಿಧ ವಸ್ತುಗಳು ನಾರಾಯಣನ ಭಜಕರಾದವರ ಸಾಧನಕೆ ಪೂರಣವಾಗಿಪ್ಪವೊ (ಜಗನ್ನಾ. ೦೩೨). ೩. ಪೂರ್ಣತೆ ; ತುಂಬಿರುವಿಕೆ : ಸೋರುವಾನಂದಾಶ್ರು ಪುಳಕದ ಪೂರಣದಲೆತ್ತಿದನು ಪವನಕುಮಾರಕನ ಮಸ್ತಕವ ನಲಿದೊಲಿದ ಬುಜಭವಸೂನು (ತೊರವೆ. ೫-೯-೬) ; ಕೆಡೆದೊಡಲ ಸೀಳಿಂದೆ ಕಡಿವಡೆದ ತೋಳಿಂದೆ . . . ಇಡಿದಿರ್ದುದಾ ರಣದಲೋರಣದ ಮಾರಣದ ಕಾರಣದ ಪೂರಣದೊಳು (ಕೃಮಿಭಾ. ೦೨-೪೪). ೪. (ನದಿ, ಸಮುದ್ರಗಳ ನೀರು) ಉಕ್ಕುವುದು ; ಹೆಚ್ಚುವುದು. ೫. ನೆರವೇರಿಸುವುದು ; ಮುಗಿಸುವುದು ; ಮುಕ್ತಾಯ : ನಮ್ಮ ಬಾಳ್ ಬರಿ ಸಮಸ್ಯೆಯೆ ? ಅದರ ಪೂರಣವದೆಲ್ಲಿ ? (ಮಂಕುತಿ. ೩೩). ೬. ಹಿಟ್ಟಿನಿಂದ ಮಾಡಿದ ಒಂದು ಬಗೆಯ ಖಾದ್ಯ. ೭. ಕಡುಬು ಮೊದಲಾದುವುಗಳಲ್ಲಿ ತುಂಬುವ ಹುದುಗಲು : 'ಪೂರಣಗಡುಬು', 'ಹೂರಣ' ಪರಾ. ೮. (ಸುಷಿರವಾದ್ಯಗಳನ್ನು) ಊದುವುದು,—ಬಾಜಿಸುವುದು : 'ಪೂರಿಸು' ಪರಾ. ೯. ಬೂರುಗದ ಮರ ; ಶಾಲ್ಮಲಿ. ೧೦. ಪೂರ್ಣ ಗೊಳಿಸುವ ಸಂಖ್ಯೆ. ೧೧. ಬಿಲ್ಲನ್ನು ಬಾಗಿಸುವಿಕೆ. ೧೨. [ಗಣಿತ] ಗುಣಾಕಾರ. [ಸಂ.]

**ಪೂರಣಂಗೆಯ್** (ಕ್ರಿ). ತುಂಬು ; ಭರ್ತಿಗೊಳಿಸು : ಕಿಕ್ಕೆಂದದಿಂ ಪೂರಣಂಗೆಯ್ವಲ್ಲಿ ಸಗಣ ಪ್ರಚ್ಛನ್ನ ನೆಮ್ಮುಗೆಗಳೊಳಗಡೆ ಶಬ್ದವು (ಶಬ್ದಮಂ. ೯೨). [ಪೂರಣ+ಕೆಯ್$_1$]

**ಪೂರಣಗಡುಬು** (ನಾ). ಹೂರಣವನ್ನು ತುಂಬಿಸಿ ಮಾಡಿದ ಕಡುಬು : ದೇವಿ ಮುಳಿಸನುಳಿದು . . . ತನ್ನ ಕಯ್ಯಿಂದಮ ಪೂರಣಗಡುಬನಿತ್ತಳ್ (ಶಿತ್ರಗೋ. ೫೦-೦೬) ; ನಿನಗಾವ ಭಕ್ಷ್ಯದೊಳಿಷ್ಟಂ ? ಪೂರಣಗಡುಬ ನೀವೆನೊ ಚಕ್ಕುಲಿಯಂ ? (ರಾಮಾಶ್ವ. ೯೦-೦). 'ಹೂರಣಗಡುಬು' ಪರಾ. [ಪೂರಣ+ಕಡುಬು (<ಕಡುಂಬು)]

**ಪೂರಣಿ** (ನಾ). ಬೂರುಗದ ಮರ ; ಶಾಲ್ಮಲೀವೃಕ್ಷ : "ಪಿಚ್ಛಿಲಾ ಪೂರಣೀ, ಮೋಚಾ, ಚಿರಾಯುಃ, ಶಾಲ್ಮಲೀ — ೫ ಬೂರುಗದ ಗಿಡ" (ಸಿದ್ಧೌಷ. ೦೨೨). [ಸಂ. ಪೂರಣೀ]

**ಪೂರಣೆ** (ನಾ). ೧. ಪರಿಸಮಾಪ್ತಿ ; ಮುಕ್ತಾಯ : ಕ್ಷೀರಂ ದಧಿ[ಘೃ]ತಸಿತ ಮಧುಧಾರಾಳಿಯಿಂ ಲಕ್ಕಗಡುಗೆಗೊಟ್ಟ [ಸೊಂ]ಟಿಗೆ ಕರ್ಪೂರದಿ ಪೂರಣೆ ಮಾಡಿ ಮನೋರಾಗದೆ ಚಿತ್ರವಿಧದ ಪೂಜಾವಿಧಿಯಂ ಅನ್ತು ಮಹಾಪೂಜೆಯಂ ಮಾಡಿ (ಸೌಇಇ. XX, ೪೯-೫೨ ; ಸು. 1076 ?). ೨. ಅರ್ಚನೆ ; ಪೂಜೆ (?) : ಅರಲಿಂ ಕುಂಕುಮದಿಂ ಕರ್ಪೂರದಿಂ ತೀರ್ಥಕರದಿವ್ಯಚೈತ್ಯಾವಳಿಯಂ ಸರಸಿಜನೇತ್ರೆಯ ಮುಂದಾದರದಿಂ ಲೇಸಾಗಿ ಮಾಡುವಂ ಪೂರಣೆಯಂ (ಧರ್ಮಾಮೃ. ೦೦-೨೩). [ಸಂ. ಪೂರಣ]

**ಪೂರತಿ** (ನಾ). ಪರಿಸಮಾಪ್ತಿ ; ಕೊನೆ : ಕುಜನರ ಪಾಪ ಪೂರತಿ ಯಾಗುವ ತನಕ ಅಜನಯ್ಯ ಎನಗೆ ಈ ಮಾತು ದೊರಕುವದೇನೊ (ಮೋಕ್ಷದೀ. ೬ ೩). [<ಸಂ. ಪೂರ್ತಿ]

**ಪೂರತೆ** 'ಪೂರ್ತೆ' ನೋ.

**ಪೂರಯಿಕೆ** 'ಪೂರೈಕೆ' ನೋ.

**ಪೂರಯಿಸು** 'ಪೂರಿಸು' ನೋ.

**ಪೂರವಟ** (ನಾ). ಒಂದು ಊರಿನ ಹೆಸರು (?) : ಇತ್ತೊಡು ಪೂರವಟ ಗೋಸಾಸಿಗರಾ ಮಣಿಧರ್ಮ್ಮ ತುಸವಿನ್ ಪಡೆವು (ಇಇ. VIII, ೨೯೩-೩ ; 706). [ ? ]

**ಪೂರವಾರ** (ನಾ). ದಡವನ್ನು ಸೂಸಿ ನೀರು ಹರಿಯುವಿಕೆ ; ಮಹಾಪೂರ : ಧರೆಯೊಳ್ ಶಾಲೂರಸಂಘಂ ಪವನಪಥದೊಳಂ ಭೂಧರಾನೀಕಂ . . . ತಟನೀವ್ಯೂಹದೊಳ್ ಪೂರವಾರಂ . . . ರುತಂ ಪರ್ವಿಸುತ್ತಿರ್ದುವೆತ್ತಂ (ಕಾದಂಉ. ೫೩೨). [ಸಂ.]

**ಪೂರವಿಸು** 'ಪೂರಿಸಂ' ನೋ.

**ಪೂರಾ** 'ಪೂರ್$_2$' ನೋ.

**ಪೂರಾಂಬು** (ನಾ). ಜಲಾಶಯದ ನೀರು : ನೊರೆವೆಲ್ಲಂ ಮೇದೆರಟ್ಟಿಣ್ ತುಮುಟಿ ಕುಡಿದು ಪೂರಾಂಬುವಂ . . . ಮಾಹಿಷೀಸಂತತಿ ವಿಪಿನಭವಂ ಕಣ್ಗಗುವರ್ಷಯುತ್ತು ಕಾರೊಳ್ (ಚಂದ್ರಪ್ರ. ೬-೪೬). [ಪೂರ್$_1$+ಅಂಬು$_2$]

**ಪೂರಾಯ** (ನಾ). ೧. ಸಂಪೂರ್ಣತೆ ; ಸಮಗ್ರತೆ : ಪೂರಾಯದಲಿ ನುಂಗಿದುದು ಕತ್ತಲೆ ನಿಮಿಷದಲಿ ಜಗವ (ಕುಮಾ.ಪ. ೪-೩೯) ; ಕೆಲ ಕೆಲರು ಪೂರಾಯದಿಂ ಪೊಯ್ದು ಘಾಯಂಗಳಿಂ ನೋವಿನೊಳ್ ಪೊರಳಿದರುರ್ವಿ ತಳಕೆ (ಕುಕಂಗ. ೫೦-೩೬). ೨. ನೆರವೇರುವಿಕೆ ; ಪೂರ್ಣ ಗೊಳ್ಳುವುದು : ಬಲ್ಲಿದರೊಡನೆ ಬವರವಾದಡೆ ಗೆಲಲುಂಟು ಸೋಲಲುಂಟು ಕಳ್ಳನೊಡನೆ ಭಾಷೆ ಪೂರಾಯವೆ ಅಯ್ಯಾ (ಬಸವ. ೦೫೦). ೩. ಅತ್ಯಧಿಕವಾದುದು ; ಅತಿಶಯವಾದುದು : ರಾಯನೊಡ ಹುಟ್ಟಿದರಲಾ ಪೂರಾಯವಿಪದರ ಕೈ ಮಹಾದೇವಾಯುಧದ ಮೊಳಗಣಿದರ್ಕೆ (ಕುಮಾ.ದ್ರೋ. ೦೩-೨೯) ; ಕೋಪಾಗ್ನಿ ಪರ್ಬಿ ಪೂರಾಯಮಾಗಲ್ಕೆ (ಕಬಕು.

೨೩–೨೩). (ಗು). ೪. ಪೂರ್ಣವಾದ ; ಸಮಗ್ರವಾದ ; ಸಂಪೂರ್ಣವಾದ : ನೀರುನೀರಾಗಿ ಬೆರಸಿ ಪಾದೋದಕಧಾರೆಯು ಕಡಲೋಕುಳಿಯಲ್ಲಿ ಪೂರಾಯ ಸನ್ಮತವಾಗಿ ಮುಳುಗಿ ಕೂಡಲಸಂಗನ ಕೃಪೆಯಿಂದುಳಿದೆ (ಶಿಶಗೀ. ೦೦೬–೩೬೦). ೫. ಅಧಿಕವಾದ ; ಅತಿಶಯವಾದ : ಸರಸಸೌಗಂಧಿಕದ ಪುಷ್ಪೋತ್ಕರಕೆ ಪವನಜ ಹೋದ ನೆಂಬುದನರಸಿಯಿಂದಱಿದವನಿಪತಿ ಪೂರಾಯ ದುಗುಡದಲಿ . . . ಚಿಂತಾಭರಿತನಿದ್ದನು ಭೀಮಸೇನನ ಕಾಂಬ ತವಕದಲಿ (ಕುಮ್ಮಾ. ೦೦–೨) ; ಆ ಯುವತಿ ಕಣ್ಣೀರಿನಲಿ ಪೂರಾಯಶೋಕದೊಳೆಂದಳಾ ತರಳಾಯತಾಕ್ಷಿಗೆ ತನ್ನ ವೃತ್ತಾಂತವನು ಬಿಸುಸುಯ್ದು (ಜಳಚ. ೩ ೫೫). [ಪೂರ್₁+_ಆಯ್₂]

**ಪೂರಾಯಗಾಯ**, ಪೂರಾಯಘಾಯಂ (ನಾ). ಆಳವಾದ ಪೆಟ್ಟು,–ಏಟು ; ತೀವ್ರವಾದ ಕ್ಷತ : ಘಾರಮೇಘವೆದ್ದು ಧಾರಾವರ್ತ ಸುರಿವಾಗ ಧಾರಿಣಿಯೆಲ್ಲವು ಮುಳುಗಿತ್ತು, ನೋಡಾ . . . ಪೂರಾಯ ಗಾಯದಲ್ಲಿ ಸಾಯ ಕೊಂದಲ್ಲದೆ ಸೂರ್ಯರನೇಕರು ಮಡಿಯರು ಗುಹೇಶ್ವರ (ಅಶಹಂ. ೬೩–೩೯೦) ; ನಾರಾಯಣ ಮಹಾರೋಕ್ಷದಿಂದೆಸುತಿರ್ಪ ತೋರಾಯದೆಸುಗೆಯಿಂ ತರಹರಿಸದಾಕ್ಷಣಂ ಪೂರಾಯಗಾಯದಿಂ ಬಲಮಳಿಯೆ (ಕಂಕೃ. ೩೨–೬) ; ಪೂರಾಯಗಾಯದಿಂದಿರದೆ ಶತ್ರುಘ್ನಂ ಮಹೀತಳಕೆ ರಥದಿಂದೆ ಬೀಳ್ವನಿತಱೊಳ್ (ಕೈಬಿಖಾ. ೨೦–೩೦). **ಪೂರಾಯಘಾಯ** : ಎನ್ನವರೆನಗೊಲಿದು ಹೊನ್ನ ಶೂಲದಲಿಕ್ಕಿದರಯ್ಯಾ ಅಹಂಕಾರ ಪೂರಾಯಘಾಯದಲಿ ಅನೆಂತು ಬದುಕುವೆನೆಂತು ಜೆ ವಿಸುವೆ (ಬಸವ. ೩೬೭) ; ಬಿಜ್ಜಳನ ಕಾಯದಲಿ ಒಂದೆರಡುಮೂರ್ಪೂರಾಯ ಘಾಯದೊಳಿಱಿದು ಕೆಡಹಿ (ಬಸಪು. ೬೦–೩೦) ; ಐದಾಱು ಶರದಲಿ ಕರ್ಣ ನೆದೆಯನು ಡೋಱುಗಳೆಯಲು ಬಳಲಿದನು ಪೂರಾಯಘಾಯದಲಿ (ಕುಮ್ಮಾದ್ರೋ. ೩–೨೬). [ಪೂರಾಯ+ಗಾಯ]

**ಪೂರಾಯಗೆಯ್** (ಕ್ರಿ). ಮುಗಿಸು ; ಪೂರೈಸು : ಪೂರ್ಣಗೊಳಿಸು : ಕುಮಾರತಿಯರು ಶಿವಾರ್ಚನೆಯ ಪೂರಾಯಗೆಯ್ದು ಸದ್ಭಕುತಿಯನಾಂತು ಕೈವಾರಿಸುತಿರ್ದರು (ಸೋಹಶ. ೨೬–೨೩). [ಪೂರಾಯ + ಕೆಯ್₁]

**ಪೂರಾಯಘಾಯ** 'ಪೂರಾಯಗಾಯ' ನೋ.

**ಪೂರಾಯತ** (ಗು). ಸಂಪೂರ್ಣವಾದ ವಿಸ್ತಾರವುಳ್ಳ ; ಸಮಗ್ರತೆಯುಳ್ಳ : ಸ್ಥಾಯಿಸಂಚಾರಿಗಳ ಸರಿಗಮಪಧನಿಯ ಸರದಾಯತದ ಶುದ್ಧ ಸಂಕೀರ್ಣ ಸಾಳಗದ ಪೂರಾಯತ ಸುತಾನಂಗಳಂ . . . ಗೇಯರಸಮೊಸರೆ ಪಾಡಿದರವರ್ (ಕೈಬಿಖಾ. ೨೦–೩೬). [ಸಂ.]

**ಪೂರಿ**, ಪುರ್‍ರಿ, ಪುರ್‍ರೆ (ನಾ). ಕಣಕವನ್ನು ಲಟ್ಟಿಸಿ ಎಣ್ಣೆ ಅಥವಾ ತುಪ್ಪದಲ್ಲಿ ಕರಿದು ಮಾಡುವ ಒಂದು ಬಗೆಯ ಖಾದ್ಯ : ಮಸಾಲ್‌ದೋಸೆ, ಚಪಾತಿ, ಪೂರಿ, ರವೆಇಡ್ಲಿ ಏನು ಕೊಡಲಿ ಸಾರ್? (ಸುಹಾಂ. ೪೬). **ಪುರ್‍ರಿ** : ಹೀರು – ಪುರಿ ಅಂದಿನ ಮುಖ್ಯಭೋಜನವಾಯಿತು (ಸ್ವಸ್ವದ. ೦೩೩) ; ಶ್ರೀಖಂಡ ಪುರಿಯನ್ನು ಬಕ್ಕರಿಸುವೆಯಂತೆ ಏಳು ! (ಬಾರಕೃ. ೫೫). **ಪುರ್‍ರೆ** : ಅಂದು ಮನೆಯಲ್ಲಿ ಪುರೆ–ಸುಧಾರಸವಾಗಿತ್ತು (ನಹುಚೀ. ೦೦೦) ; ಪುರೆ, ಶ್ರೀಖಂಡ, ಸಿರ, ಅವಲಕ್ಕಿ . . . ಇತ್ಯಾದಿಯಿಂದ ದೊಡ್ಡ ಬಾಳೆಯೆಲೆ ಭರಗಚ್ಚಾಗಿ ತುಂಬಿದ್ದವು (ಅಸ್ವ. ೨೪೫). 'ಪೂರಿಗೆ' ಪರಾ. [←ಹಿಂ. ಪೂರೀ ; ಮರಾ. ಪುರೀ]

**ಪೂರಿಗ** (ನಾ). ಕಠೋರನಾದವನು ; ಕಠಿಣಸ್ವಭಾವದವನು : "ಪೂರಿಗೆ[ಗ]ನೆ ಕಠೋರಂ" (ಶಾರಸಂ. ೩೯). [?]

**ಪೂರಿಗೆ**, ಹೂರಿಗೆ (ನಾ). ತುಪ್ಪವನ್ನು ಸವರಿ ಹಂಚಿನ ಮೇಲೆ ಬೇಯಿಸಿ ಮಾಡುವ ಒಂದು ಬಗೆಯ (ಸಿಹಿಯಾದ) ಭಕ್ಷ್ಯ : ಪೂರಿಗೆಯಿಡ್ಡಲಿಗೆ . . . ಮಂಡಿಗೆ ಮೊದಲಾಗೊಡೆಯಹದಿನೆಂಟುಂ ತೆಱದ ಭಕ್ಷ್ಯರೂಪಗಳುಮಂ...ಬಡ್ಡಿಸಿದೊಡೆ(ಶಶ್ಮಾರಾ. ೬೬–೦೬) ; ಕಲ್ಲುರಿಗನೊಯ್ಯನೆ ಪೂರಿಗೆಗೊಟ್ಟೈದಾಱನೆ ಕೊಂಡವನಟ್ಟಿಯಿಂದೊರಸಿ ನೋಟ್ಪುದುಂ (ಅಂಕೃ. ೩–೦೮) ; ಮಿದಿದಿಂಬಾಗಿರೆ ಖರ್ಜೂರದ ಪಣ್ಣಂ ನಾರಿಕೇಳಮಂ ಶರ್ಕರೆಯಂ ಪುದಿದಡುಗೆ ಕಣಕದೊಳ್ ತುಪ್ಪದೊಳದು ರಸಭರಿತಮಪ್ಪ ಪೂರಿಗೆಯಕ್ಕುಂ (ಸೂಶಾಸೂ. ೬–೬) ; ರುಚಿಮೆರಸಿದ ಲಡ್ಡುಗೆ ಚಕ್ಕುಲಿ ಗಾರಿಗೆ ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮನಾಗಳ್ ಆಜ್ಯಯುತಮಪ್ಪಮಂ ಮೆಲ್ಲು (ಧರ್ಮಾಮ್ನ. ೦–೦೯೬). **ಹೂರಿಗೆ** : ಗಾರಿಗೆಯ ಅಳಸುಗಳ ಕುತ್ತುಱಿಗಳಲ್ಲಿ ಹೂರಿಗೆಯ ಲಡ್ಡುಗೆಯ ಬಟ್ಟಂಗಳಲ್ಲಿ (ಬಸವ. ೬–೦೦) ; ಶೋಧಿಸಿದ ತನಿಬೆಲ್ಲವಿಕ್ಕಿದ ಹೂರಿಗೆಯ ಮೆದೆಯಲ್ಲಿ . . . ನವಘೃತಸೂಪದಂಶಕದಲ್ಲಿ ನೋಡಲಿ ನಮ್ಮನೆಂದುದು ಧೂರ್ತಪಟುನಿಕರ (ಕುಮ್ಮಾ೬. ೦೩–೬) ; ಅರೆದ ತೆಂಗಾಯ ಹಿಡದೊಳು ಚಿಲುಮಾಲಿನೊಳು . . . ಹೆಱೆದುಪ್ಪ ಸಕ್ಕರೆಯ ಬೆರಸಿದಾ ಹೂರಣವನಿರದಿಕ್ಕಿ ಹೂರಿಗೆಯ ಮಾಡಿಕೊಂಡವಱವಱ ಹೆಸರ ಹೂರಿಗೆಯೆಂಬುದು (ಸೂಪಶಾ. ೦–೨೬).

[< ಸಂ. ಪೂರಿಕಾ]

**ಪೂರಿತ** (ಗು). ೧. ತುಂಬಿದ ; ಭರ್ತಿಮಾಡಿದ ಪೂರ್ಣಗೊಳಿಸಿದ. ೨. (ಸುಷಿರವಾದ್ಯವನ್ನು) ಊದಿದ ; ಬಾಜಿಸಿದ : ಪೂರಿತ ರಣ ಶಂಖಗಂಭೀರಾರಾವಂ ದೆಸೆಯ ಕೋಣ ಕೋಸುಕುಱ ಗಜಘಟಾರವ ಮುನ್ನಱದೆ ಪೆಱಗಿಡೆ ಭೈರವಮೆಸೆದತ್ತು ಚಿರದ ಬಲಜಲನಿಧಿಯೊಳ್ (ಜಾಂತಿಕೃ. ೩–೯೬). (ನಾ). ೩. ಪೂರ್ಣತೆ : "ಪೂರಿತನಲದು ಪೂರ್ಣಂ" (ಶಶು. ೪. I. ೯೦). [ಸಂ.]

**ಪೂರಿತಗೆಯ್** (ಕ್ರಿ). ಪೂರ್ಣಗೊಳಿಸು ; ಪೂರ್ಣವಾಗಿ ಸಿದ್ಧಪಡಿಸು : ಗಾಡಿಕಾಱನ ತಾವರೆಗೋಲ್ಗೆ ಚಾಪವ ಮಾಡಿ ಪೂರಿತಗೆಯ್ದು ತೆಱದಿ ಜೋಡಿಯಿಲ್ಲದ ರತಿದೇವಿಯ ಕಣ್ಣಿಗೆ ಕಾಡಿಗೆವಿಡಿದೆಚ್ಚದರು (ಸೋಹಶ. ೦೬–೯೩). [ಪೂರಿತ + ಕೆಯ್₁]

**ಪೂರಿಸು**, ಪೂರಯಿಸು, ಪೂರವಿಸು, ಪೂರೈಸು (ಕ್ರಿ). ೧. ತುಂಬು ; ಭರ್ತಿಮಾಡು : ಪಲಕಾಲದೊಳಱಿರ್ದಾಮಲಕದ ಪಣೆಯಂ ಕಱಾರದಿಂ ಸೀಳ್ದದಱೊಳ್ ತಿಲ ಮಧು ಘೃತಮಂ ಪೂರಿಸೆ ಫಲಮಾ ಮರದೆಲೆ ಗಳೆಂದಮವು ಪಿರಿದಕ್ಕುಂ (ಸೂಶಾಸೂ. ೬–೩೯) ; ಆರ ಮೃದೂಕ್ತಿಯಂ ಬಯಸಿ ಕೇಳ್ದು ತನೂಜ ಮದೀಯಕರ್ಣದೊಳ್ ಪೂರಿಪೆನಿಂ ರಸಾಯನಮಂ (ಹಂಪ್ರಕೃ. ೩–೦೬) ; ಮಿಸುಪ ಕಾಂಚನಪಾತ್ರೆಯಲಿ ಪೂರಿಸಿದ ಪರಮಾನ್ನವನು ಬೊಮ್ಮದ ರಸದ ಪರಿಪೂರ್ಣವನು . . . ಒಲಿದಿತ್ತುದು ನಿಜ ಮೂರ್ತಿ ದಶರಥಗೆ (ತೊರೆರಾ. ೦೬–೫೩). ೨. ಮುಸುಕು ; ಕವಿ ; ವ್ಯಾಪಿಸು : ಮುಸುಕಿದುದು ದುಂದುಭಿಧ್ವನಿ ದೆಸೆಯಂ . . . ಶಂಖಧ್ವನಿ ಪೂರಿಸಿದುದು ತಳ್ವೊಯ್ದು ರೋದಸೀಮಂಡಳಮಂ (ಹಂಪ್ರಕೃ. ೬–೭೨) ; ಧಾರುಣಿ ನಭ ದೆಸೆಗಳನು ಪೂರಿಸಿದೆಂತಂಧಕಾರ ದಟ್ಟೈಸಿರೆ (ಕೈರಜಾ. ೩–೦೬). ೩. ತಂರುಕು : ಗಿಡಿ ; ಒತ್ತಿ ತಳ್ಳು ; ಒಳಸೇರಿಸು : ಮಟ್ಟುರಿಮೀವನವಹ್ನಿವಕ್ತ್ರದೊಳ್ ಪೂರಿಪೆನೋ ಕಱುತ್ತುಗಿದು ಕತ್ತಿಗೆಯಿಂದೆರಡಾಗಿ ಪೋಟಿಸೆನೋ . . . ಈತನಂ (ಹಂಪ್ರಕೃ ೩–೩೬). ೪. ತಂಬಿಡು ; ಕೊಡಿಡು ; ಸಂಗ್ರಹಿಸು : ಜವೆಯಂ ನೆಲ್ಲಂ ಕುಂದದೆ ಪೂರಿಸೆ ಕಾರ್ತಿಕ ಯಿಂದಿಗೆ(ನ)ಮಾಱಿಗೆ ಮಾಱಿ(ಱು)ಮುಮ್ಮಡಿ ಲಾಭಂ (ಅಗ್ನಿಸು. ೬–೩೯). ೫. ತುಳುಕು ; ಹೊರಸೂಸು ; ಅಧಿಕವಾಗು ; ಹೆಚ್ಚಾಗು : ಆನಂದಾಶ್ರುಸಲಿಲಂ ಕಂಗಳಲಿ ಪೂರಿಸಲು (ಚಾಪ್ರ. ೩೬–೬೨) ; ಚಾರಿವರಿದು ಚಂದ್ರಸುಧೆಯನು ಕೂರ್ತು ಚಕೋರವತ್ಸಗೆ ಮೊಲೆಗೂಡಲುಪೂರಿಸಿ ಕಡೆವಾಯೊಳಿವ ತಣ್ಪಾಲೆನೆ ಸೋರಿತು ಬೆಳ್ದಿಂಗಳಿಳಿಗೆ (ಸೋಹಶ. ೦೬–೫೫). ೬. ಪೂರ್ತಿಮಾಡು ; ಪೂರ್ಣಗೊಳಿಸು : ಸಮಸ್ತಮಂ ಕೊಡಲೊಡನೆ ಪೂರಿಸುವ . . . ನವರಸರಸಿಕರ್ (ಕಂಕೃ. ೬–೦೦). ೭. ಪುಷ್ಟವಾಗು ; ವರ್ಧಿಸು : ಪೂರಿಸುವುದೊರ್ಮೆ ವಿಗತಾಹಾರದೆ ಗಟಿಯಿಸುವುದೊರ್ಮೆ ತಾನೀ

ಮೆಯ್ಯೊಳ್ (ಜಾಪಾಂ· ೩೦೯–೨೦)· ೮. (ಬಾಯಿಂದ) ಊದು ; ಊದಿ ಬಾಜಿಸಂ : ಪರಸೈನ್ಯಭೈರವಂ . . . ದೇವದತ್ತಶಂಖಮುಮಂ ಪೂರಿಸಿ (ಶಾಂತಿಪು· ೦೦–೬೯ ವ) ; ಶಾರ್ಙ್ಗವನಂದೇಱಿಸಿದಪನಪಿಶಯ್ಯೊಯನೇಱಿದ ನಯ್ಯಾಯ ಶಂಖಮಂ ಪೂರಿಸಿದಂ (ಕಾವ್ಯಾ.ಶ. ೨೬೯) ; ಬಿಸಜಾಕ್ಷಂ ಶಂಖಮಂ ಪೂರಿಸೆ (ಜಗಂ. ೭–೨೯)· ೯. ನಾಟು ; ನಡು : ಮಾರನ ಸರಳು ಸವಿಾರ ಕುಮಾರನ ಚಾರುತನುವಿನೊಳಗೆಯ್ದೆ ಪೂರಿಸಲವ ಬೆದಱುತ ರವಿಪುರವಿಪ್ಪ ದಾರಿಯನುನುದು ನೋಡಿದನು (ಶಂಕರ· ೭–೦೬೦) ; ಓರೋರ್ವರ ಮೆಯ್ಯೋಂಕಿಂವ ಪುಳಕಗಳೋರೋರ್ವರ ಮೆಯ್ಯೊಳಗೆ ಪೂರಿಸಲು (ಕಂದಾಕಾಂ· ೬–೦೯)· ೧೧. ಆಗೆಂ ; ಒದಗು ; ಬರು : ಕೂರ ಪ್ರಾಕಾರಂಗಳ ಮೇಲೆಯ ರೇಫಕ್ಕೆ ಕರದೆ ಱ ಟ ಲತ್ವಂಗಳ್ ಪೂರಿಪುವಸ್ವರ ವಿಧಿಯಿಂ (ಶಬ್ದ. ೨೬೦(೩) ). **ಪೂರಯಿಸು** : ೫. ಆ ಮಾತಿಂಗೆ ನಸುನಾಣ್ಚಿ ಹೃದಯಾರವಿಂದದುಲ್ಲಾಸ ಪೂರಯಿಸಿ ಚಂದನಸೌರಭ್ಯವಡೆದ ವಿಗ್ರಹಜಾತ ಸಂದೋಹ ಗುಡಿಗಟ್ಟಿತವಳ (ಬೋಹಪ. ೨೭–೬೬). ೬. ಆ ಕೆಱೆಯನೂ ಪೂರಯಿಸಿ ಆ ಕೆಱೆಯ ಕೆಳಗೆ (ಶಾಸ. ೧೯೬೧, ಶೃಂಗಪೂರು. ೦೫೭–೬ ; 1419) ; ಈ ಕಾರ್ಯದ ಜವಾಬ್ದಾರಿಯನ್ನು ಕೈಕೊಂಡಿರುವ ಮಹನೀಯರು ಅದನ್ನು ಆದಷ್ಟು ಬೇಗ ಪೂರಯಿಸಿಕೊಡಬೇಕೆಂದು ಬೇಡುತ್ತೇನೆ (ಶಾಸಿಶ. ೬೬). ೮. ಭು ಭೂ ಭೂ ಎಂದು ಪೂರಯಿಸಿದುದು ಶಂಖಂ (ಶಬ್ದ· ೦೦ ಶ್ರೀಯೋ) ; ಭು ಭೂ ಭೂ ಎಂದು ಪೂರಯಿಪ ಶಂಖದ ಧಟಂ ಧಟಂ ಧಟಮೆಂದು ಮೊಱಗುವ ಭೇರಿಯ . . . ಬಲ್ಲುಲಿಯೊಳ್ ಮಾಪೂಜೆ ಸಮಸಂದುದು (ರಾಜಶೇ. ೭೭–೩). ೧೧. ಮುಗಿ ; ಮಂಕ್ತಾಯ ವಾಗಂ ; ಸಮಾಪ್ತಿ ಹೊಂದುಂ : ಸ್ತೋತ್ರವು ಪೂರಯಿಸಿದ ಬಳಿಕ ವಂಶ ಲೋಚನರೆಂದರು (ವರಸಿ. ೨೬)· ೧೨. ಬಳಿ ; ಹಚ್ಚು ; ಲೇಪಿಸಂ : ಹಣೆಗೆ ರಾಜಾಜಿವ ತಿಲಕವನಿಟ್ಟು ಗಂಧವ ಪೂರಯಿಸಿದನು ನುಣ್ಮೆಯ್ಗೆ (ಬೋಹಪ. ೦೨–೯೬). ೧೩. ನೀಡು ; ಕೊಡು ; ಒದಗಿಸು : ಹಿಂದೂ ಸ್ಥಾನದಲ್ಲಿ ಬಂದು ನಿಂತುಕೊಳ್ಳುವ ಪೋರ್ತುಗೀಜ ಮತ್ತು ಇಂಗ್ಲೀಷರ ಬಗ್ಗೆ ಇವನು ಸಾಕಷ್ಟು ಲಕ್ಷ್ಯ ಪೂರಯಿಸಲಿಲ್ಲ (ಹಿಂಮುಸ. ೦೨೦). **ಪೂರವಿಸು** : ೨. ಉಗಿದರೋ ಕಸ್ತೂರಿಯ ತವಲಾಯಿಗಳ ಮುಚ್ಚಳವನೆ ಕವಾಟವ ತೆಗೆಯೆ ಕವಿದರು ದಿವ್ಯಪರಿಮಳಸಾರ ಪೂರವಿಸೆ . . . ಅಂಕಕಾಶಿಯರಿಂದ್ರನೋಲಗದ (ಕುಮ್ಮಾ.ಭ. ೭–೮೯). ೫. ಚೀರದಲಿ ನೆಱೆ ತುಂಬಿದಂತಿರೆ ಪೂರವಿಸಿ ಬುದಿಲೆನಿಸಿ ಭಸಿತದ ಧಾರೆ ಪೊಱಮಡೆ ಜಿ.ರ್ಕೊಳವೆಯಲಿ ಚಿಮ್ಮಿದಂತಾಯ್ತು (ಬಸವ. ೯೯–೦೩)· ೮. ಜಂಗಮ ಸ್ತೋಮ . . . ಭೋರೆನಲಿಂದುಭಯಶಂಖವ ಪೂರವಿಸಿಕೊಳುತಿದ್ದು ಹೋದರು (ಶ್ರಶೂಲೀ. ೨೩–೦೦)· ೧೨. ಪೂರವಿಸಿದನು ಗಂಧವನು ಸರಳೋರೆವೋರೆಯ ಮೆಯ್ಯಿಯ ಛಾಯದ ಹೇರುಗಳ ಹೂಳಿದನು ·ವರ ಕಸ್ತೂರಿಯ ಸಾರದಲಿ (ಕುಮ್ಮಾಗ. ೫–೪೦). ೧೪. ತೃಪ್ತಿಗೊಳಿಸು ; ತಣಿಸು : ಸದಿರುಲು ರತಿ ಪೂರವಿಸದೋ ಬಂದು ಕಾಮನು ಕೈವಿಡಿ ದಡೋ ಬದಿತೆಂದೋ . . . ಇದಱ ಚಂದವೆಲ್ಲಂ ಹೇಳದಡೆ ಗುಣವ್ಯಂ ನಿಮ್ಮಡಿಯಾಣೆಯೆನಲ್ (ಬಸವ. ೯೩–೦೯). ೧೫. ನೆರವೇರಿಸು ; ಈಡೇರಿಸು : ಸಾರವಿಮಲಪ್ರಾಣಪದದಲಿ ಸೇರಿದೋಗರವಂ ಸಮರ್ಪಿಸಿ ಪೂರವಿಸುವುಪಚಾರವುಪಚಾರಂ ಶಿವಂಗೆ (ಬಸವ· ೬೩–೦೩). **ಪೂರೈಸು** : ೧. ಹರಭಕ್ತಿ ಪೂರೈಸೆ ಪರಮಸುಖ ಕೋರೈಸೆ ಎಸೆದಿರ್ದ ನಮ್ಮಮ್ಮ ಬಾಹೂರ ಬೊಮ್ಮಯ್ಯ (ಬಾಹೂರ· ಹ. ೩೦೭–೦೨) ; ಆ ಬುದ್ಧ ಸಂಘನಂ ವರವೈಶ್ಯಸಮಿತಿಯಂಗದೊಳಸುವಂ ಪೂರೈಸಿ . . . ಪೂಜಿಸಿದ ರಳ್ಳಿಯಿಂ (ಸಮ್ಯಕ್. ೯–೯೯)· ೨. ನಾನಾರವದ ವಾದ್ಯನಿರ್ಘೋಷಮಾ ದಿಕ್ತಟವ ಪೂರೈಸಿ (ಬಸವ. ೩೭–೯೬); ರಥಘೋಷದ ಚೀತ್ಕಾರರವಂ ದಿಶಾ ವಿವರಮಂ ಪೂರೈಸೆ (ಧ್ವಕವಿ. ೩–೨೨). ೫. ಸೋರಿದುವಮೃತಪಾಷಾಣ ಪಾಲ್ಗಡಲಂತೆ ಪೂರೈಸಿತು ಚಂದ್ರಕಿರಣ (ಸೋಮಕಥ. ೨೭–೨೩)· ೬. ಇವಂ ತಿರ್ಯಕ್ತ್ವದೊಳ್ನಿಲ್ವನ್ನೆಗ[ಮಾಯುಷ್ಯರಮಾದ ಯಜ್ಞಮನಿದಂ ಪೂರೈಸದಾನಿರ್ದೆಂ] (ಜಾರದಂಜಾ· ೬೬೯); ಆ ಗರುವಮುನಿಮಂತ್ರದಿಂದ . . . ಯಾಗವನು ಪೂರೈಸಿದನು(ಜಕಕ. ೦–೬೦); ತನ್ನ ಕೆಲಸ ಪೂರೈಸಿ ಹಾಕಿಕುಲಿಶನು ಹಿಂದಿರುಗಿದನು (ಪುಕಪ· ೯೩). ೮. ಪಲತೆಱದ ಪಱೆಗಳಂ ಪೊಯ್ಸಿಯುಂ ಶಂಖಂಗಳಂ ಪೂರೈಸಿಯುಂ . . . ಎಂತುಂ ಪೊಱಮಡಿಸ ಲಾಱದೆ (ಗದಾಯು. ೭–೦ ವ); ಬಿರುದೆತ್ತಿ ದೆಸೆದೆಸೆಗೆ ಕರೆವ ಕಹಳೆಗಳೊಳಗೆ ನೆರೆದು ನೆಱೆ ಪೂರೈಪ ಶಂಖಧ್ವನಿಗಳೊಳಗೆ . . . ಬರುತಿರ್ದನಪ್ರತಿಮ ಸುಕುಮಾರಶೇಖರಂ (ಸುಕುಚ. ೩–೩೯); ಫಲುಗುಣಂ ಪೂರೈಸಿದಂ ದೇವ ದತ್ತಮಂ (ಕೃಪಿಜಾ· ೨೩–೬೪). ೧೨. ಬಣ್ಣ ಬಂಗಾರವನುಡತೊಡ ಕೊಟ್ಟು ಹೊಂಬಣ್ಣಚಂದನವ ಪೂರೈಸಿ (ಬೋಹಪ. ೦೦–೬೩). ೧೩. ನಿಮ್ಮ ಕುಟುಂಬಕ್ಕೆಬೇಕಾದ್ದನ್ನೆಲ್ಲನಾನು . . . ಪೂರೈಸಿ ಕೊಡುವೆನು (ಮುಂಚಿಝ. ೪–೭೬); ಕಾಗದ ಪೂರೈಸುವವರ ಕಡೆಯಿಂದ ವಕೀಲನ ಮುಖಾಂತರ ಪತ್ರ ಬರಲು ಭೂಪತಿಯು ಬೆರಗಾಗಿ ಬಿಟ್ಟನು (ಇಕ್ಕಳ. ೨೬೦). ೧೫. ಜನದ ಮನದಾಸೆಯಂ ತಾನಿನಿಸುಂ ಪೂರೈಸದಾತನರ್ಥಂ ವ್ಯರ್ಥಂ (ಮಿರಕ್ಕೆ. ೩–೨೭); ಭಾಷೆಯಂ ಪೂರೈಸದಿಹನೇ ಕಾಶಿನಾಥನು (ಬಸವ. ೩೯–೩); ಈತನಿಂದು ನಳಿನನಾಭನ ಮುಂದೆ ಭಾಷೆಯಂ ಪೂರೈಸಿ ಕೊಳುಗುಳದೊಳಿದನು (ಕೃಪಿಜಾ. ೦೩–೬೦). ೧೬. ಸರಿದೂಗಂ ; ಸಾಕಷ್ಟಾಗಂ: ಮೇಲೆ ಬರೆದಂತೆ ಅಡತಿ ಮತ್ತು ಮಜೂರಿ ತೆಗೆದುಕೊಂಡರೆ ಸಹ ನಮಗೆ ಪೂರೈಸುವದಿಲ್ಲ (ಮುಂಚಿಪ್ಪ್ರಾ· ೦೫೯). ೧೭. ನೀಗಿಸು; ಸಾಗಿಸು: ಹೋರುವ ಸತಿಯಿಂದ ಸೋರುವ ಮನೆಯಿಂದ ಪೂರೈಸ ದವನ ಬದುಕಿಂದ ಕೊಂಡೊಯ್ದು ಮಾರಿ ಲೇಸು (ಸರ್ವಜ್ಞ· ೦೩೨೯) ; ಬೆಕ್ಕಿಗೆ ಶಿಕ್ಷಾಕಲಿಸಿ ಯಾರು ಪೂರೈಸಾರು (ರಾಸಕಸು. ೪೦). ೧೮. ಸಂಪೂರ್ಣ ವಾಗು ; ಸಮಗ್ರವಾಗುಂ : ಪೂರೈಸಿ ವೇದವೋದಿದನನೂಚಾನನಕ್ಕು (ಮುಂಗರಾ. ೬೯–೩) ; ಪೂರೈಸಿ ತುರುಕರು ಕಂಠೀರವೇಂದ್ರನ ಕೂರಸಿಯಲಿ ನುಗ್ಗಾಯ್ತು (ಕಂಪಾ. ೦೩–೩೯). [ ಪೂರಣ+—ಇಸು ]

**ಪೂರುವ** ‘ಪುಬ್ಬೆ’ ನೋ.

**ಪೂರುಷ** (ನಾ). ಪುರುಷ ; ಮನುಷ್ಯ : "ಮನುಷ್ಯಃ, ಮಾನುಷಃ. . . ಪುರುಷಃ, ಪೂರುಷಃ, ವಿಟ್—ಈ ೧೨ ಮಾನಸರ್" (ಶಬ್ದಾಯು· ೩೩–೦೬೬); "ಮಾನವಂ ಮರ್ತ್ಯಂ ಮನುಷ್ಯಂ ನರಂ ಪುಮಾನ್ ಮಾನುಷಂ ಪೂರುಷಂ . . .ಗಂಡುಗೂಸಕ್ಕು" (ಮುಂಗರಾ. ೬೬–೦). [ಸಂ.]

**ಪೂರುಷತನ** (ನಾ)· ಪರಾಕ್ರಮ; ಪೌರುಷ : ಕಲಬಲದಿಂದುಮುಖಿಯರ ನೋಡಿದನು ನಲಘಿಂದ ನುಡಿದನು ತನ್ನ ಪೂ[ಪಾಠಾಂ.ಪೌ]ರುಷತನದ ಪರಿಣತೆಯ (ಕುಮ್ಮಾಭಿ. ೫–೦೩). [ಪೂರುಷ+—ತನ]

**ಪೂರೈಕೆ, ಪೂರಯಿಕೆ** (ನಾ)· ೧. ಈಡೇರಿಕೆ ; ನೆರವೇರಿಕೆ : ಕಾವೇರಿ ತನ್ನ ಬಯಕೆಯ ಪೂರೈಕೆಗಾಗಿ ಬೇರೆ ಗಂಡನನ್ನು ಹಿಂಬಾಲಿಸಲು ಸಾಧ್ಯವೇ (ಕಾವೇಂ. ೯೩). ೨. ಒದಗಿಸುವಿಕೆ; ಸರಬರಾಜು : ಹಾಲು, ಮಧ್ಯಾಹ್ನದ ತಿಂಡಿ, ವೈದ್ಯಪರೀಕ್ಷೆ, ಚಿಕಿತ್ಸೆ ಮತ್ತು ಇತರ ಪೂರೈಕೆಗಳು—ಇವಕ್ಕೆ ಪಾಶ್ಚಾತ್ಯದೇಶಗಳಲ್ಲಿ...ವೆಚ್ಚ ಆಗುತ್ತಿದೆ (ಶಿಕ್ಷಣ. ೦೫೬). ೩. ಸಾಮಗ್ರಿಯ ಸಮೃದ್ಧಿ : ತನ್ನದೂ ಒಂದು ಸಂಸಾರ, ಹೆಂಡತಿ, ಹೊಲ, ಇತರ ಪೂರೈಕೆ ಸಾಕಷ್ಟು ಇದೆ ಎಂದು ನಂಬಿ ಅಭಿಮಾನದಿಂದ ಸುಬ್ಬು ಸುಧಾರಿಸಿದ್ದ (ಹೊಸಕ್ಕೆ. ೬೯). **ಪೂರಯಿಕೆ** : ೨. ಸಿದ್ಧವಾದ ಉಡುಪುಗಳು ವಿತರಣೆ ಗೋಸುಗ ಪೂರಯಿಕೆಯ ಮಂದಿರಗಳಿಗೆ ಹೋಗುತ್ತಿದ್ದುವು (ಕಾಂಯ. ೯೯)· [ಪೂರೈಸು (< ಪೂರಿಸು) +—ಕೆ]

**ಪೂರೈಸು** ‘ಪೂರಿಸಂ’ ನೋ.

**ಪೂರೋಟಿ** ‘ಪುರಂವಠೆ’ ನೋ.

**ಪೂರ್ಣ** (ಗು). ೧. ತುಂಬಿದ ; ಭರ್ತಿಯಾದ ; ಪೂರ್ತಿಯಾದ : ಪುನ್ನಾಗಂಬುಪೂರ್ಣಕುಂಭಾಗ್ರಮುಚಿತಕಂಕೇಲಿಪಲ್ಲವೋಲ್ಲಾಸರಚಿತಂ (ಆದಿಪು. ೯-೩೦ ಗಳ). ೨. ಸಮಗ್ರವಾದ ; ಎಲ್ಲ ; ಇಡಿಯಾದ. ೩. ನೆರವೇರಿದ ; ಈಡೇರಿದ. ೪. ತುಂಬುದನಿಯುಳ್ಳ ; ನಾದಮಯವಾದ. ೫. ಸಮರ್ಥ ; ದಕ್ಷ ; ಬಲವುಳ್ಳ. ೬. (ಬಿಲ್ಲಿನಂತೆ) ಎಳೆದು ಬಾಗಿಸಿದ. ೭. ಮುಗಿದ ; ಮುಕ್ತಾಯವಾದ. (ನಾ). ೮. ಕಡುಂಬು, ಹೋಳಿಗೆ ಮೊದಲಾದುವುಗಳ ಹೂರಣ; ಹೂರಣ: (೬). ೯. ಸಂಕೀರ್ಣವಾದುದು ; ಸಂದಣಿ : "ಆಚಿತಂ, ನಿಚಿತಂ . . . ಪೂರ್ಣಂ—ಈ ೯ ಸಂದಣಿ" (ಅಭಿಧಾ. ೦೦೬-೦೭). ೧೦. ಸಮಗ್ರತೆ; ಸಂಪೂರ್ಣತೆ : ಕೊಂಚಕೊಂಚಗಳರಿವು ಪೂರ್ಣದರಿವಾದೀತೆ ? (ಮಂಕುತ. ೩೦). ೧೧. [ನಾಟ್ಯ] ಕಪೋಲದ ಆರು ಭೇದಗಳಲ್ಲಿ ಒಂದು: "ಕೆನ್ನೆಗಳನ್ನು ಸ್ವಲ್ಪ ಉಬ್ಬಿಸುವುದು, ರೋಷ, ಹರ್ಷ ಇವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಭಾಸ್ಕರಂ. ೨೭೫ ಗದ್ಯಾನುವಾದ) : ಕುಂಚಿತ, ಕಂಪಿತ, ಪೂರ್ಣ, ಕ್ಷಾಮ, ಫುಲ್ಲ, ಸಮ—ಈ ಆಱುಂ ಗಲ್ಲದ ಭೇದಂಗಳ್ (ಭಾಸ್ಕರಂ. ೩-೬೯ ವ).

**ಪೂರ್ಣವಾಗು** = ಪೂರೈಸು ; ಪೂರ್ತಿಯಾಗು : ಅದರ ಬೆಳವಣಿಗೆ ಪೂರ್ಣವಾಗಲಿಕ್ಕೆ ಐದು ವರ್ಷ ಹತ್ತುವವು (ಮುಂಬಯಿ. ೪-೪೮). [ಸಂ.]

**ಪೂರ್ಣಕಂಠ** (ನಾ). ತುಂಬುಶಾರೀರ ; ತುಂಬು ಧ್ವನಿ : ಪೂರ್ಣಕಂಠದಿಂದ (ಧಾತು ಮತ್ತು ಮಾಟು) ಮಹಾವೈದ್ಯನಾಥಅಯ್ಯರ್ ಅವರು ಹಾಡುತ್ತಿದ್ದರು (ಸಂಗೀತ. ೯). [ಸಂ.]

**ಪೂರ್ಣಕಾಮ** (ನಾ). ೧. ಇಷ್ಟವನ್ನು ಈಡೇರಿಸಿಕೊಂಡವನು. ೨. ಭಗವಂತ; ಪರಮಾತ್ಮ: ಕರ್ಣ ಕರ್ಣಕಠೋರಸಾಹಸ ನಿರ್ಣಯಿಸು . . . ಪೂರ್ಣಕಾಮನು ನೀನು ಕುರುಕುಲಾರ್ಣವಧಾರನು ನೀನು (ಕುಮಾವ್ಯಾ. ೦-೦೭). [ಸಂ.]

**ಪೂರ್ಣಕುಂಭ** (ನಾ). ೧. (ನೀರು ಮೊದಲಾದ ದ್ರವದಿಂದ) ತುಂಬಿದ ಕೊಡ ; ಕಲಶ : ಕಳಸಂ ಕನ್ನಡಿ ತೋರಣಂ . . . ರತ್ನಂ ದಧಿ ಪೂರ್ಣಕುಂಭಮಿನಿತುಂ ಪೊ ಪಂಗೆ ಬರ್ಪಂಗಾಸುಕುಳದಿಂ ಕಟ್ಟಿದಿರ್ವಂದೊಡಿಷ್ಟಫಲಮಂ ಶ್ರೀಶಿಷ್ಟಕಲ್ಪದ್ರುಮಾ (ಶೋಕೋ:ಕ. ೦೨-೯). ೨. ಮಂಗಳಸೂಚಕವಾಗಿ ಬಾಗಿಲಲ್ಲಿ ಇಡುವ ನೀರು ತುಂಬಿದ ಕೊಡ : "ಭದ್ರಕುಂಭಃ, ಪೂರ್ಣಕುಂಭಃ—೨ ಅರಮನೆಯ ಬಾಗಿಲು ಮುಂತಾದವುಗಳಲ್ಲಿ ಮಂಗಳಕರವಾಗಿ ಇರಿಸತಕ್ಕ ಪೂರ್ಣಕಲಶಗಳ ಹೆಸರು" (ಸಿದ್ಧಾಂತ. ೨೪೫); ಬಿಗಿದೊಗೆದಾತ್ತತುಂಗಕುಚಕುಂಭಮನೊಡ್ಡಿಪ ಪೂರ್ಣಕುಂಭಮಂ . . . ಅಂಬುಜವದನೆ ಕಂಡಳ್ (ಪುಷ್ಪ. ೯-೦೦೦); ಊರ ಬಾಗಿಲಲ್ಲಿಯೂ, ಊರ ಒಳಗೂ ಅಲ್ಲಲ್ಲಿ ಮಂಗಳಾರ್ಥವಾಗಿ ಪೂರ್ಣಕುಂಭಗಳನ್ನು ಇಟ್ಟಿದ್ದರು (ವಿಕ್ರಮಾ. ೩೩೦).

**ಪೂರ್ಣಕುಂಭಮರ್ಯಾದೆ** = ದೊಡ್ಡವ್ಯಕ್ತಿಗಳನ್ನು ಎದುರುಗೊಳ್ಳುವಾಗ ಮಠ, ದೇವಸ್ಥಾನಗಳಲ್ಲಿ ಪೂರ್ಣಕುಂಭಸಹಿತವಾಗಿ ಮಾಡುವ ಸ್ವಾಗತ: ರಾಷ್ಟ್ರಪತಿಗಳನ್ನು ರಾಮೇಶ್ವರದೇವಸ್ಥಾನದಲ್ಲಿ ಪೂರ್ಣಕುಂಭ ಮರ್ಯಾದೆಯೊಂದಿಗೆ ಎದುರುಗೊಳ್ಳಲಾಯಿತು (ರೂಢಿ). [ಸಂ.]

**ಪೂರ್ಣಕ್ರಿಯಾಪದ** (ನಾ). [ವ್ಯಾಕ] ವಾಕ್ಯದ ಅರ್ಥವನ್ನು ಪೂರ್ಣಗೊಳಿಸುವ ಕ್ರಿಯಾಪದ : ಧಾತುಗಳಿಗೆ ಕೆಲವು ಆಖ್ಯಾತಪ್ರತ್ಯಯಗಳು ಸೇರಿ ಪೂರ್ಣಕ್ರಿಯಾಪದಗಳಾಗುತ್ತವೆ (ಕೃದಿಂ. ೯೯); 'ಒಂದು' ಕಾಲವನ್ನಾಗಲಿ, 'ಅರ್ಥ' ವನ್ನಾಗಲಿ ಸೂಚಿಸುವ ಕ್ರಿಯಾಪದವನ್ನು ಉಪಯೋಗಿಸಿದರೆ ವಾಕ್ಯದ ಅರ್ಥವು ಪೂರ್ಣವಾಗುತ್ತದೆ. ಉದಾಹರಣೆಗೆ, ಅವನು ಮನೆಯಿಂದ ಹೊರಡುತ್ತಾನೆ . . . ಈ ಬಗೆಯ ಕ್ರಿಯಾಪದಗಳಿಗೆ ಪೂರ್ಣಕ್ರಿಯಾಪದಗಳೆಂದು ಹೆಸರು (ಕನ್ನಡಕು. ೬೪). [ಸಂ.]

**ಪೂರ್ಣಗರ್ಭಿಣಿ** (ನಾ). ತುಂಬಿದ ಬಸಿರಿ ; ಗರ್ಭವು ಸಂಪೂರ್ಣವಾಗಿ ಬೆಳೆದು, ಹೆರಿಗೆ ಸನ್ನಿಹಿತವಾಗಿರುವ ಹೆಣ್ಣು : ಎಮ್ಮಣ್ಣನಾಣತಿಗಿವಳಂ ವನದೊಳಿರಿಸಿ ಪೋಪಂ ಪೂರ್ಣಗರ್ಭಿಣಿ ಕಾಯಿರಿ ನೀಮೆಲ್ಲರ್ ಕಾವಲಿರ್ದು (ರಾಮಾಶ್ವ. ೬೯-೫); ಪೂರ್ಣಗರ್ಭಿಣಿಯಾದೀ ಹುಲ್ಲೆಗೆ ಯಾವಾಗ ಸುಖಪ್ರಸವವಾಗುವುದೋ ಆಗ ನನಗೆ ಕುಶಲಪತ್ರಿಕೆಯನ್ನು ಕಳುಹಿಸಬೇಕು (ಶಾಕುಂತ. ೩೩-೩). [ಸಂ. ಪೂರ್ಣಗರ್ಭಿಣೀ]

**ಪೂರ್ಣಗೊಳಿಸು** (ಕ್ರಿ). ಪೂರ್ತಿ ಮಾಡು ; ಮುಗಿಸು ; ಪರಿಸಮಾಪ್ತಿ ಮಾಡು : ಅಂಗವಿಜ್ಞಾನಿ ಹಾರ್ವೆಯು ರಕ್ತಪರಿಚಲನಾಸಂಶೋಧನೆಯನ್ನು ಪೂರ್ಣಗೊಳಿಸಿದನು (ವಿಜ್ಞಾನ. ೦೯); 'ಪರಿಶಿಷ್ಟ' ವು (Supplement) ಹೊರಬಿದ್ದು ಅದನ್ನು ಪೂರ್ಣಗೊಳಿಸಿತು (ಕವಿಮಾರ್ಗ. ೨೬೫).

[ ಪೂರ್ಣ + ಕೊಳ್$_1$ + – ಇಸು$_3$ ]

**ಪೂರ್ಣಗೊಳ್ಳು** (ಕ್ರಿ). ಮುಗಿ ; ಸಮಾಪ್ತವಾಗು : ಈ ಕೊನೆಯವರಿಬ್ಬರ ಆಡಳಿತದಲ್ಲೇ ನಿಘಂಟು ಪೂರ್ಣಗೊಂಡದ್ದು (ಕವಿಮಾರ್ಗ. ೨೬೨).

[ಪೂರ್ಣ + ಕೊಳ್ಳು$_1$ (< ಕೊಳ್$_1$)]

**ಪೂರ್ಣಗ್ರಹಣ** (ನಾ). ಸೂರ್ಯ ಅಥವಾ ಚಂದ್ರನು ಪೂರ್ತಿಯಾಗಿ ಮರೆಯಾಗುವ ಗ್ರಹಣ ; ಖಗ್ರಾಸಗ್ರಹಣ : ಚಂದ್ರಗ್ರಹಣ ಪೂರ್ಣಗ್ರಹಣವಾದರೂ ಆಗಬಹುದು, ಅರ್ಧಗ್ರಹಣವಾದರೂ ಆಗಬಹುದು (ಆಕಾಶ. ೯೨). [ಸಂ.]

**ಪೂರ್ಣಚಂದ್ರ** (ನಾ.) ೧. ಹದಿನಾರುಕಳೆಗಳಿಂದ ಕೂಡಿದ ಚಂದ್ರ ; ಹುಣ್ಣಿಮೆಯ ಚಂದ್ರ : ಉದಯಂಗೆಯ್ದಲಿರ್ದ ಪೂರ್ಣಚಂದ್ರನನೊಳಕೊಂಡು ಬೆಳ್ಪಿಸೆವ ವಾಸವದಿಗ್ವನಿತಾನನಂಬೊಲಾನನರುಚಿ ಚೆಲ್ವನೇಂ ನೆಱೆಯೆ ತಾಳ್ದಿದುದೋ ಬಸಱಾಂಡವಾಂಡುರಂ (ಆದಿಪು. ೬-೪೭). ೨. [ಕಾಮಶಾ] ಸ್ತ್ರೀಯರ ಯೋನಿಯಲ್ಲಿರುವ ಒಂದು ನಾಡಿ : ಮದನಾಂದೋಳನ ಮದನಚ್ಛತ್ರ ಪೂರ್ಣಚಂದ್ರಾದಿ ನಾಡೀಮರ್ದನದಿಂ (ವಿವೇಕ. ೨೪೦) ; ಭಗಕ್ಕೆ ಕೊಂಚ ದೂರದಿಂ ಕಾಮಜಲ ತುಂಬಿರ್ಪುದು ಪೂರ್ಣಚಂದ್ರವೆಂಬ ನಾಡಿಯುಂಟು (ಕಾಮಶಾ. ೨೪೦). [ಸಂ.]

**ಪೂರ್ಣಚಂದ್ರನಾಡಿ** (ನಾ). = ಪೂರ್ಣಚಂದ್ರ ೨ : ತುಟಿತುದಿಯಿಂ ಪೂರ್ಣಚಂದ್ರನಾಡಿಯಂ ಮರ್ದಿಸಿ ಪಲ್ಗಳಿಂ ಕಾಮಾತಪತ್ರದ ನಾಡಿಯ ಈಷನ್ಮರ್ದನ. ನಾಲಿಗೆಯ ತುದಿಯಿಂ ಮದನಾಂದೋಳಿಕನಾಡಿಯಂ ಹಲವು ಬಾರಿ ಅಲ್ಲಾಡಿಸುವದು (ಕಾಮಶಾ. ೨೪೯). [ಸಂ.]

**ಪೂರ್ಣಚಂದ್ರಿಕೆ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ಣಚಂದ್ರಿಕೆ—೨೯ನೇ ಮೇಳಕರ್ತ ಧೀರಶಂಕರಾಭರಣದಲ್ಲಿ ಜನ್ಯ (ಸಂಗೀತಂ. ೦೯೮) ; ಪಟ್ಣಂ ಸುಬ್ರಮಣ್ಯಅಯ್ಯರ್ ಅವರು ಪೂರ್ಣಚಂದ್ರಿಕಾರಾಗವನ್ನು ಹಾಡಿದ ರೀತಿಯಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ತೋರುತ್ತಿದ್ದರು (ಸಂಗೀತ. ೨೭). [ಸಂ. ಪೂರ್ಣಚಂದ್ರಿಕಾ]

**ಪೂರ್ಣಜಠರ** (ನಾ). ೧. ತುಂಬಿದ ಹೊಟ್ಟೆ. ೨. [ನಾಟ್ಯ] ನರ್ತನದಲ್ಲಿ ತೋರುವ ಕ್ಷಾಮ, ಖಲ್ಲ, ಪೂರ್ಣ, ರಿಕ್ತಪೂರ್ಣ ಎಂಬ (ಉದರಭಾಗದ) ನಾಲ್ಕು ಪ್ರಕಾರಗಳಲ್ಲಿ ಒಂದು ; ಹೊಟ್ಟೆಯನ್ನು ಮುಂದಕ್ಕೆ ಚಾಚುವುದು : ಪೂರ್ಣಜಠರಮೆಸೆಗುಂ ಪೊಡೆಯುಬ್ಬರ ರೋಗದನೊಳ್ ತೋಱುತ್ತುರುಜಠರನೊಳೆಯ್ದೆ ತೋರ್ಪ ನೆಗಳ್ದುಟದನೊಳ್ (ಭಾಸ್ಕರಂ. ೨-೦೬೫). [ಸಂ.]

**ಪೂರ್ಣಜ್ವರ** (ನಾ). ಅತ್ಯಧಿಕವಾದ ಜ್ವರ : ಶುಂಠಿಯುಂ ಸೈಂಧವ ದುಪ್ಪಿನಲ್ಲಿ ಬಿಸಿನೀರಂ ಕೂಡಿಸಿ ತುಪ್ಪವಂ . . . ನೆಲಗುಳ್ಳ ಇವುಗಳ ಕಷಾಯದಿಂದ ಸಿದ್ಧಮಪ್ಪುದಂ ಕುಡಿಯಲು ಪೂರ್ಣಜ್ವರ, ಹಲವು ಕಾಲದ ಜ್ವರ, ಕೆಮ್ಮು, ಶೂಲೆ, ಊರ್ಧ್ವತೃಷೆ, ಮಂದಾಗ್ನಿ, ಗ್ರಹಣಿ, ಸಂಗ್ರಹಿಣಿ, ಈ ವ್ಯಾಧಿಗಳೊಳು ಹಿತಮಪ್ಪುದು (ವೈದ್ಯಾ. ೦೦). [ಸಂ.]

**ಪೂರ್ಣತಟಾಕ** (ನಾ). ತುಂಬಿದ ಕೆರೆ : ಕೊಳನಂ ತಾವರೆಯುಂ . . . ಪೂರ್ಣತಟಾಕಮುಂ ಶಾಮುದವುಂ ದೇವರ್ಕಳುಂ ತುಂಬಿಯುಂ ತಿಳಿಯಲ್ ಸ್ವಪ್ನದಿ ಲೇಸೆಲ್ಕೆ (ಸೋಬಾಳ. ೬೯); ಕೊಳರ್ವಕ್ಕಿಯಿಂದೊಪ್ಪುವ ಪೂರ್ಣ ತಟಾಕಂಗಳಿಂ (ಚಂಪಿಕ. ೦೨–೨೬). [ಸಂ.]

**ಪೂರ್ಣತೆ** (ನಾ). ೧. ಸಮಗ್ರತೆ; ಪೂರ್ತಿಯಾಗಿರುವಿಕೆ. ೨. ಸಮೃದ್ಧಿ. [ಸಂ. ಪೂರ್ಣತಾ]

**ಪೂರ್ಣತ್ವ** (ನಾ). ಎಲ್ಲ ಬಗೆಯ ಶಕ್ತಿಗಳಿಂದ ಕೂಡಿರುವಿಕೆ ; ಸರ್ವ ಸಮರ್ಥತೆ : ಶಿವನ ಸರ್ವಕರ್ತೃತ್ವ, ಸರ್ವಜ್ಞತ್ವ, ಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವ ಎಂಬ ಶಕ್ತಿಗಳು . . . ಕ್ರಮೇಣ ಪಂಚಕಂಚುಕಗಳಾಗುತ್ತವೆ (ಶಾರದ. ೨೦೯). [ಸಂ.]

**ಪೂರ್ಣದೃಷ್ಟಿ** (ನಾ). ಎಲ್ಲವನ್ನೂ ಚೆನ್ನಾಗಿ ಹೊಂದಿಸಿ ನೋಡುವ ಮನೋಧರ್ಮ ; ಸಮಗ್ರದೃಷ್ಟಿ : ಸಾಕಲ್ಯದೃಷ್ಟಿ : ವಿಜ್ಞಾನಿಗಳಲ್ಲಿ . . . ಗಭೀರವಾದ ವಿಶ್ವದ ಮೂಲಸಮಸ್ಯಾಪರಿಹಾರಕ್ಕೆ ಆವಶ್ಯಕವಾದ ಪೂರ್ಣದೃಷ್ಟಿ ಇರಲಿಲ್ಲ (ಜುಕ್ಸಾರೆ. ೨೭ ಏಪ್ರಿಲ್). [ಸಂ.]

**ಪೂರ್ಣಪಾತ್ರ** (ನಾ). ೧. ಮಂಗಳವಸ್ತುಗಳಿಂದ ತುಂಬಿದ ಪಾತ್ರೆ ಅಥವಾ ಪೆಟ್ಟಿಗೆ. ೨. ಒಂದು ಬಟ್ಟಲಿನಷ್ಟು ಪ್ರಮಾಣ. ೩. ಇನ್ನೂರಐವತ್ತಾರು ಮುಷ್ಟಿಗಳಷ್ಟು (ಕಾಳಿನ) ಅಳತೆ ; ಎಂಟು ಮುಷ್ಟಿ = ೧ ಕಿಂಚಿತ್ (ಅಥವಾ ಕುಂಚಿ), ೮ ಕಿಂಚಿತ್ = ೧ ಪುಷ್ಕಲ, ೪ ಪುಷ್ಕಲ=೧ ಪೂರ್ಣಪಾತ್ರ. ೪. ಯಜ್ಞಸಮಾಪ್ತಿಯಾದಾಗ ಬ್ರಾಹ್ಮಣರಿಗೆ ಕೊಡುವ ದಕ್ಷಿಣಾ ರೂಪವಾದ ಇನ್ನೂರೈವತ್ತಾರು ಮುಷ್ಟಿ ಅಕ್ಕಿ. ೫. ಹೋಮ ಕಾರ್ಯದಲ್ಲಿ ಬಳಸುವ ತಂಪ್ಪದ ಪಾತ್ರೆ : ಚಮಸ ದರ್ವೀ ಆಜ್ಯಸ್ಥಾಲೀ ಪ್ರೋಕ್ಷಣಪಾತ್ರ ಪೂರ್ಣಪಾತ್ರ ಪ್ರಮುಖಪಾತ್ರವಿಶೇಷಂಗಳಿಂ (ಶಿವೇಳ. ೦೩೩). ೬. ಪುತ್ರ ಜನನ ಮೊದಲಾದ ಸಂತೋಷಸಮಾರಂಭಗಳಲ್ಲಿ ಅಥವಾ ಒಳ್ಳೆಯ ವರ್ತಮಾನವನ್ನು ಕೇಳಿದ ಸಮಯದಲ್ಲಿ ಪರಿಜನರಿಗೆ ಪಾರಿತೋಷಕವಾಗಿ ಕೊಡುವ ವಸ್ತ್ರ, ಆಭರಣ ಮೊದಲಾದುವನ್ನು ತುಂಬಿದ ಪಾತ್ರೆ ಅಥವಾ ಪೆಟ್ಟಿಗೆ; ಪರಿಜನರೂ ಬಂಧುಮಿತ್ರರೂ ಯಜಮಾನನಿಂದ ಈ ವಸ್ತ್ರಾಭರಣಗಳನ್ನು ತಾವಾಗಿ ಎಳೆದು ತೆಗೆದುಕೊಳ್ಳುತ್ತಾರೆ : ಮಹಾತ್ಮಜಾತಜನನೋತ್ಸವದೊಳ್ . . . ಪೂರ್ಣಪಾತ್ರಹರಣವಿಲುಠ್ಯಮಾನವಸನಭೂಷಣಮುಂ (ಕಾದಂಪೂ. ೯೦೦); ಒಸೆದೀ ವಾರ್ತೆಗೆ ಪೂರ್ಣಪಾತ್ರಮಿದು ದೇವರ್ ಮನ್ನಿಸಲ್ವೇಟ್ಟು ಮೆಂದು ಸಮಂತೀಟ್ಟುಕೆಗೊಂಡಳಾಕೆ ನೃಪಕಂಠೋದ್ದೇಶದಿಂ . . . ಹಾರಮುಂ (ಕೃಷ್ಣಕೃ. ೯-೨೬). [ಸಂ.]

**ಪೂರ್ಣಪ್ರಜ್ಞ** (ನಾ). ೧. ಸಮಗ್ರವಾದ ಜ್ಞಾನವುಳ್ಳವನು; ಸರ್ವಜ್ಞ : ಅರ್ಜುನನು ಪಾರ್ಥಿವಪ್ರಜ್ಞೆಯ ಪಾರ್ಥ; ಶ್ರೀಕೃಷ್ಣನು ಪೂರ್ಣಪ್ರಜ್ಞನಾದ ಅಧ್ಯಾತ್ಮಶಕ್ತಿಯ ಪ್ರಭು (ಶಾರದ. ೦೦೦). ೨. ದ್ವೈತಮತಪ್ರವರ್ತಕರಾದ ಮಧ್ವಾಚಾರ್ಯರ ಹೆಸರುಗಳಲ್ಲಿ ಒಂದು : ಯತ್ಯಾಶ್ರಮವನ್ನು ಸ್ವೀಕರಿಸಿದ ಕೆಲವು ದಿನಗಳಲ್ಲಿಯೇ ಪೂರ್ಣಪ್ರಜ್ಞರ ಯಶಸ್ಸು ಎಲ್ಲ ದಿಕ್ಕುಗಳಿಗೂ ವ್ಯಾಪಿಸಿತು (ಶಾರದ. ೨೭೦); ಮಧ್ವಾಚಾರ್ಯರು ಈ ಕಾಲದಲ್ಲಿ ಜನ್ಮತಾಳಿದರು; ಆನಂದತೀರ್ಥರೆಂತಲೂ ಪೂರ್ಣಪ್ರಜ್ಞರೆಂತಲೂ ಅವರನ್ನು ಕರೆಯುತ್ತಾರೆ (ಕರ್ನಾಕ. ೩೭). [ಸಂ.]

**ಪೂರ್ಣಫಲ** (ನಾ). ೧. ಸಂಪೂರ್ಣವಾದ ಸಿದ್ಧಿ; ಪೂರ್ಣತ್ವ : ವಾರಣಾಸಿಯ ವಿಶ್ವೇಶ್ವರನ ದರುಶನದಿಂದ ಮಾತ್ರ ಪೂರ್ಣಫಲ ಪ್ರಾಪ್ತವಾಗದು (ನವದಿ. ೦೬). ೨. ಒಡೆಯದೆ ಇರುವ ತೆಂಗಿನಕಾಯಿ : ಪಂಡಿತರು ಮಗಳ ಕೈಗೆ ಪೂರ್ಣಫಲವಿಟ್ಟು . . . ಧಾರೆಯೆರೆದುಕೊಟ್ಟರು (ಶಾಂತಲಾ. ೦೦೨). [ಸಂ.]

**ಪೂರ್ಣಮಾಸ** (ನಾ). ೧. ಚಂದ್ರ. ೨. ಹುಣ್ಣಿಮೆ : ಅದು ಪೂರ್ಣಮಾಸ. ಹೀಗಾಗಿ ದೇವಸ್ಥಾನದಲ್ಲಿ ವಿಶೇಷಕಟ್ಟೆ (ಹೂಚ್ಚ. ೦೩). ೩. ಹುಣ್ಣಿಮೆಯ ದಿನ ಮಾಡುವ ಯಾಗ (ಆಗ್ನೇಯ, ಅಗ್ನಿಷೋಮೀಯ ಮತ್ತು ಉಪಾಂಶುಯಾಜ — ಎಂಬ ಯಾಗಗಳನ್ನೊಳಕೊಂಡುದು) : "ಕೃಷ್ಣಪಕ್ಷ ಮುಗಿಯುವಾಗ ಮಾಡತಕ್ಕ ಯಾಗಕ್ಕೆ ದರ್ಶವೆಂತಲೂ, ಶುಕ್ಲಪಕ್ಷ ಮುಗಿಯುವಾಗ ಮಾಡತಕ್ಕ ಯಾಗಕ್ಕೆ ಪೂರ್ಣಮಾಸವೆಂತಲೂ ಹೆಸರು" (ಸಿದ್ಧಾಂತ. ೨೩೦). [ಸಂ.]

**ಪೂರ್ಣಮಾಸಿ** (ನಾ). ಹುಣ್ಣಿಮೆ; ಪೂರ್ಣಿಮೆ. [ಸಂ. ಪೂರ್ಣಮಾಸೀ]

**ಪೂರ್ಣಮಿ** 'ಪುಣ್ಣಮೆ' ನೋ.

**ಪೂರ್ಣಿಮೆ** (ನಾ). = ಪೂರ್ಣಮಾಸಿ : ಕಾರ್ತಿಕಮಾಸದ ಪೂರ್ಣಿಮೆ ತಲೆದಿವಸಮಾಗೆ . . . ಬಿಟ್ಟ ಧರ್ಮಸ್ಥಿತಿಕ್ರಮಂ (ಶಾಸಂ. ೦೯೯೬; ೨೯-೯; 1032). [ಸಂ. ಪೂರ್ಣಿಮಾ]

**ಪೂರ್ಣವರ್ತಮಾನಕಾಲ** (ನಾ). [ವ್ಯಾಕ] ಕ್ರಿಯೆಯು ಸಂಪೂರ್ಣವಾಗಿದೆ ಎಂಬುದನ್ನು ತಿಳಿಸುವ ಕಾಲ : ಒಂದು ಧಾತುವಿನ ಭೂತನ್ಯೂನ ರೂಪಕ್ಕೆ 'ಇರು' ಧಾತುವಿನ ವರ್ತಮಾನಕಾಲದ ವಿಶೇಷರೂಪಗಳನ್ನು ಹತ್ತಿಸಿದರೆ ಪೂರ್ಣವರ್ತಮಾನಕಾಲದ ರೂಪಗಳಾಗುತ್ತವೆ (ಮಧ್ಯಮ. ೦೦೦). [ಸಂ.]

**ಪೂರ್ಣವಿರಾಮ** (ನಾ). ೧. ವಾಕ್ಯವು ಮುಗಿದುದನ್ನು ಸೂಚಿಸುವ ಚುಕ್ಕೆಯ ಗುರುತು (.) : ಅಲ್ಪವಿರಾಮ, ಅರ್ಧವಿರಾಮ, ಪೂರ್ಣವಿರಾಮಗಳನ್ನು ಅರಿತುಕೊಳ್ಳಬೇಕು (ಮುದ್ರಣ. ೨-೯). 'ಅರ್ಧವಿರಾಮ', 'ಅಲ್ಪವಿರಾಮ' ಪರಾ. ೨. (ಆಲಂ) ಮುಕ್ತಾಯ; ನಿಲುಗಡೆ; ಕೊನೆ : ಗಂಡ ಲಕ್ನೋದಿಂದ ಮರಳಿ ಬರುವ ತನಕ ಯಶೋದೆಯ ಕಾಲೇಜುವ್ಯಾಸಂಗದ ಕುರಿತಾದ ಚಿಂತೆಗೆ ಪೂರ್ಣವಿರಾಮ (ವಾತ್ಸಲ್ಯ. ೬೯); ಮುದುಕಿ ಮಾತ್ರ ತನ್ನ ಕಥನಕ್ಕೆ ಪೂರ್ಣವಿರಾಮ ವಿತ್ತಿರಲಿಲ್ಲ (ಹಳ್ಳಿಜಾ. ೦೦೩). [ಸಂ.]

**ಪೂರ್ಣಷಡ್ಜ** (ನಾ). [ಸಂಗೀತ] ಒಂದು ರಾಗದ ಹೆಸರು : ಪಲ್ಲವಿ ಶೇಷಯ್ಯರ್ ಅವರು ನಾದನಾಮಕ್ರಿಯಾ, ಭೈರವಿ, ಕೀರವಾಣಿ, ಪೂರ್ಣಷಡ್ಜಂ, ಗೌರೀಮನೋಹರಿ . . . ಷಣ್ಮುಖಪ್ರಿಯರಾಗಗಳಲ್ಲಿ ರಚಿಸಿರುವ ಕೃತಿಗಳು ಮನಮೋಹಕವಾಗಿವೆ (ಸಂಗೀತ. ೯೬). [ಸಂ].

**ಪೂರ್ಣಸಮಾಧಿ** (ನಾ). [ಯೋಗ] ವ್ಯಷ್ಟಿ, ನಿಶ್ಚಿತ, ವಿಲಕ್ಷಣ, ನಿರ್ವಿಷಯ, ಸಮಷ್ಟಿ ಮತ್ತು ಪೂರ್ಣ ಎಂಬ ಆರು ಬಗೆಯ ಸಮಾಧಿಗಳಲ್ಲಿ ಒಂದು : ಪೂರ್ಣಸಮಾಧಿಯೆಂಬುದು ವಿಕಸನಂಗೈದರಿವನುನ್ಮನಿ ಸುಖಸಮಗ್ರವನೆಸಗಿ ತನುಮೋಹವನು ಮರಸುವುದು (ಗಗಕಾ. ೦೩–೩೦). [ಸಂ.]

**ಪೂರ್ಣಾಂಕ** (ನಾ). [ಗಣಿತ] ಪೂರ್ಣವಾದ ಸಂಖ್ಯೆ ; ದುಂಡಂಕೆ ; ವಿಭಾಗವಾಗದ ಮೊತ್ತ : ಅಳತೆಯಲ್ಲಿ ಸರಪಣಿ ಸಂಪೂರ್ಣವಾಗಿ ಅದರಲ್ಲಿ ಒಂದು ಪೂರ್ಣಾಂಕವೆಂತಲೂ . . . ಲೆಕ್ಕವಿಡಬೇಕು (ಭೂಮಿ. ೯). [ಸಂ.]

**ಪೂರ್ಣಾಯುಸ್ಸು** (ನಾ). ಜೀವಿತದ ಸಮಗ್ರ ಅವಧಿ; ದೀರ್ಘಾಯುಷ್ಯ; ನೂರುವರ್ಷಗಳ ಜೀವನಕಾಲ : ನಿನಗೆ ದೇವರಂಥಾ ಪೂರ್ಣಾಯುಸ್ಸಿನ ಗಂಡ ಸಿಕ್ಕಲಿ (ಹಿರಿಯೋ. ೦೦೩). [ಸಂ. ಪೂರ್ಣಾಯುಸ್]

**ಪೂರ್ಣಾವತಾರ** (ನಾ). ದೈವತ್ವವು ಪೂರ್ಣವಾಗಿ ಪ್ರಕಟವಾಗುವ ಭಗವಂತನ ಅವತಾರ ; ನರಸಿಂಹಾವತಾರ, ರಾಮಾವತಾರ ಹಾಗೂ ಕೃಷ್ಣಾವತಾರಗಳು ಪೂರ್ಣಾವತಾರಗಳೆಂದು ಗಣಿಸಲ್ಪಟ್ಟಿವೆ; ಅದರಲ್ಲಿಯೂ ಕೃಷ್ಣಾವತಾರವು ಪರಿಪೂರ್ಣವೆನಿಸಿದೆ : ಯಾರಲ್ಲಿ ದೈವತ್ವವು ಅತ್ಯಂತಪ್ರಕಾಶಮಾನವಾಗಿ ಮೆರೆಯುತ್ತದೊ ಅಂಥವರದು

ಪೂರ್ಣಾವತಾರ; ಯಾರಲ್ಲಿ ಅದು ಯಾವುದೇ ಒಂದು ವಿಶಿಷ್ಟಮುಖದಲ್ಲಿ ಪ್ರಕಟವಾಗುತ್ತದೋ ಅಂಥವರದು ಅಂಶಾವತಾರ; ಇನ್ನೂ ಕಡಿಮೆ ಯಾಗಿದ್ದರೆ ಅಂಥವರದು ಕಲಾವತಾರ (ತತ್ತ್ವಶ್ರಾ. ೮೯). 'ಅಂಶಾವತಾರ' ಪರಾ. [ಸಂ.]

**ಪೂರ್ಣಾಹುತಿ** (ನಾ). ೧. ಯಜ್ಞಾದಿಗಳಲ್ಲಿ ದರ್ವಿ ಅಥವಾ ಸವುಟನ್ನು ಪೂರ್ತಿಯಾಗಿ ತುಂಬಿಕೊಂಡು ಕೊಡುವ ಆಹುತಿ. ೨. ಯಜ್ಞದಲ್ಲಿ ಅಗ್ನಿಗೆ ಕೊನೆಯಲ್ಲಿ ಒಪ್ಪಿಸುವ ಬಹುಮುಖ್ಯವಾದ ಬಲಿ; ಯಜ್ಞವನ್ನು ಪೂರ್ಣಗೊಳಿಸುವ ಆಹುತಿ : ಭೂಪತಿಯ ರಣಯಜ್ಞ ಮುಖಕೆ ನಿಜಾಪಘನಪೂರ್ಣಾಹುತಿಯಲೀ (ಕುಮ್ಮಾಗ. ೦-೨೬); ಚಂದ್ರ ಹಾಸಂ . . . ಪೂರ್ಣಾಹುತಿಗೆ ಶಿವವನರಿದಪೆನೆಂದು ಖಡ್ಗಮಂ ಗೋಣೆಗ್ ಪೂಡಿ . . . ಅರಿಯಲನುವಾದನು (ಜೈಮಿಭಾ. ೩೦-೬೬); ಪೂರ್ಣಾಹುತಿ ಗೊಂಡು ವಿಜೃಂಭಿಸಿ ಶಾಂತನಾಗುವ ಯಜ್ಞೇಶ್ವರನಂತೆ ಸುತ್ತಮುತ್ತಲೆಲ್ಲ ಏನೋ ಶಾಂತಿ ತಲೆದೋರಿತು (ಮಹಾಣ. ೦೬೧). ೩. (ಆಲಂ) "ಒಟ್ಟಿಗೆ ಕೊಟ್ಟ ಬಲಿ; ಸರ್ವನಾಶ" (Holocaust. ೩೦೩೩). [ಸಂ.]

**ಪೂರ್ಣಿಮಾಂತ** (ಗು). ೧. ಹುಣ್ಣಿಮೆಗೆ ಕೊನೆಗೊಳ್ಳುವ. (ನಾ). ೨. ಹುಣ್ಣಿಮೆಯ ಕೊನೆ, _ಮುಕ್ತಾಯ. [ಸಂ.]

**ಪೂರ್ಣಿಮಾಂತಮಾಸ** (ನಾ). ಹುಣ್ಣಿಮೆಗೆ ಮುಗಿಯುವ ತಿಂಗಳು ; ಹುಣ್ಣಿಮೆಯಿಂದ ಹುಣ್ಣಿಮೆಯವರೆಗೆ ಎಂದು ಎಣಿಸುವ ತಿಂಗಳು; ಚಾಂದ್ರಮಾನಮಾಸ : ಕೃಷ್ಣಪ್ರತಿಪದೆಯಿಂದ ಪೂರ್ಣಿಮೆಯ ತನಕ ; ಇದಕ್ಕೆ ಪೂರ್ಣಿಮಾಂತಮಾಸವೆಂಬ ಹೆಸರು (ಮುಂಬಯಿ. ೬-೬೮). 'ಅಮಾಂತಮಾಸ' ಪರಾ. [ಸಂ.]

**ಪೂರ್ಣಿಮೆ** (ನಾ). ಚಂದ್ರನು ಹದಿನಾರುಕಳೆಗಳನ್ನೂ ಹೊಂದಿ ಪೂರ್ಣವಾಗಿರುವ ತಿಥಿ ; ಹುಣ್ಣಿಮೆ : ಅನುಮತಿಯೆನಿಕುಂ ಪೂರ್ಣಿಮೆ ಯನಿಸಾನುಂ ಕುಂದಿ ತೋಱುತಿರೆ ಚಂದ್ರಂ (ವಸ್ತುಕೋ. ೦೬-೯); ಮಾರ್ಗಶಿರ ಪೂರ್ಣಿಮೆಯು ಸಾಮಾನ್ಯವಾಗಿ ಡಿಸೆಂಬರ್ ಮಧ್ಯಭಾಗದಲ್ಲಿ ಬರುತ್ತದೆ (ಪಕ್ಷಿಶ್ರ. ೭). [ಸಂ. ಪೂರ್ಣಿಮಾ]

**ಪೂರ್ಣೆ** (ನಾ). ೧. ಪೂರ್ಣತಿಥಿ; ಪ ಪಂಚಮಿ, ದಶಮಿ ಮತ್ತು ಹುಣ್ಣಿಮೆ_ಇವು ಪೂರ್ಣತಿಥಿಗಳು. ೨. ಚಂದ್ರನ ಹದಿನಾರು ಕಳೆಗಳಲ್ಲಿ ಒಂದು: ಅಮೃತ ಪೂಷ ... ಪೂರ್ಣೆ . . . ಕಾಮದಾಯಿನಿ ಯೆಂಬ ಷೋಡಶಕಲೆಗಳಂ (ಶಿವೇಶ. ೨೬೭). ೩. [ಸಂಗೀತ] ಮಧ್ಯಮ ಸ್ವರದಿಂದ ಹುಟ್ಟುವ ನಾಲ್ಕುಶ್ರುತಿಗಳಲ್ಲಿ ಒಂದು : ರಂಜಕಿ ಪೂರ್ಣೆ ಅಲಂಕಾರಿಣಿ ವಾಂಶೆಯೆಂಬ ನಾಲ್ಕುಶ್ರುತಿಗಳೆ ಮಧ್ಯಮಸ್ವರದಿಂ ಪುಟ್ಟಿದವು (ಶಿವೇಶ. ೨೬೩). [ಸಂ. ಪೂರ್ಣಾ]

**ಪೂರ್ಣೇಂದು** (ನಾ). =ಪೂರ್ಣಚಂದ್ರ ೧ : ಸೌಂದರಪೆರುಮಾಳೆ . . . ರಾತ್ರಿಯುಂ ಬೆಳಗಲಿರ್ದ ಪೂರ್ಣೇಂದುವಿನಂತೆ ದಿವಮಂ ಧವಳಿಸಲಿರ್ದ ಸಹಸ್ರಕರನಂತೆ ಇರ್ದಪಂ (ಸಂಬಿಕ. ೬-೦೪); ಕಂದ ಬಾರೋ ಎನ್ನ ಮನಕಾನಂದ ಬಾರೋ' ಬಾಲಕರ ಪೂರ್ಣೇಂದು ಬಾರೋ (ಕುಮ್ಮಾದ್ರೋ. ೬ ೨೦). [ಸಂ.]

**ಪೂರ್ಣೋಪಮೆ** (ನಾ). [ಕಾವ್ಯಮೀ] ಉಪಮೇಯ, ಉಪಮಾನ, ಸಾದೃಶ್ಯವಾಚಕ ಮತ್ತು ಸಾಧಾರಣಧರ್ಮ ಎಂಬ ನಾಲ್ಕೂ ಅಂಗಗಳನ್ನೂ ಸ್ಪಷ್ಟವಾಗಿ ಹೇಳಿರುವ ಉಪಮೆ : ತಾಯಂತೆ ಪೊರೆದು ತಂದೆವೊಲಾಯತಿಯೊಳ್ ಹಿತಮನೆಣಿಸಿ ಚಿಕದೇವಮಹಾ ರಾಯಂ ಪ್ರಜೆಯನಿತಂ ನಾರಾಯಣನಂತೆಟ್ಟಿಗ್ಗಿವಡಿಸಿಯಾಳ್ಗುಂ ಸೊಗ ದೊಳ್ ಇದಱೊಳ್ 'ಚಿಕದೇವಮಹಾರಾಯಂ' ಎಂದು ಉಪ ಮೇಯಮುಂ, 'ತಾಯ್ತಂದೆ ನಾರಾಯಣರ್' ಎಂದು ಉಪಮಾನಂಗಳಂ, 'ಪೊರೆದು' 'ಹಿತಮನೆಣಿಸಿ' 'ಏಟ್ಟಿಗ್ಗಿವಡಿಸಿ' ಎಂದು ಸಮಾನಧರ್ಮ ಗಳಂ 'ಅಂತೆ', 'ವೊಲ್' ಎಂದು ಉಪಮಾವಾಚಕಪದಂಗಳುಮಂ ಪೇಟ್ಟು ದಱಿಂದಿದು ಪೂರ್ಣೋಪಮಾಲಂಕಾರವೆನಿಪುದು (ಅಪ್ರತಿ. ೩೬-೦೪); ಬಳಸಿ ಸುೞಿದಾಡಿ ಕಾಲ್ವಿಡಿದೆಳಸಿ ಕಲಾಲಾಪವೊದವೆ ಜನನಿಯ ವೊಲೆ ವಾಲ್ಗಳನುಣ್ಬ ಶಿಶುಗಳಂತಿರೆ ಕಳವೆಯ ಪಾಲ್ದೆನೆಯ ಪಾಲನುಂಡುವು ಗಿಳಿಗಳ್ — ಈ ಪದ್ಯದಲ್ಲಿ ಗಿಳಿಗಳೆಂಬ ಉಪಮೇಯವೂ ಶಿಶುಗಳೆಂಬ ಉಪ ಮಾನವೂ 'ಅಂತಿರೆ' ಯೆಂಬ ಉಪಮಾವಾಚಕವೂ ಸಹ . . . ಸ್ಪಷ್ಟವಾಗಿ ಉಕ್ತವಾಗಿರುವುದರಿಂದ ಈ ಹೋಲಿಕೆ ಪೂರ್ಣೋಪಮೆ (ಕೃಶಿಶಿ. ೨೫೩). [ಸಂ. ಪೂರ್ಣೋಪಮಾ]

**ಪೂರ್ತ**$_1$ (ಗು). ೧. ಎಲ್ಲ; ಸಂಪೂರ್ಣವಾದ; ಸಮಗ್ರವಾದ. ೨. ತುಂಬಿದ ; ಭರ್ತಿಯಾದ. (ನಾ). ೩. ಪೂರ್ಣಗೊಳಿಸುವಿಕೆ ; ಪೂರೈಕೆ ; ನೆರವೇರಿಕೆ. ೪. ಬಾವಿ, ಕೆರೆಗಳ ನಿರ್ಮಾಣ, ಯಾತ್ರಾರ್ಥಿ ಗಳ ಸೌಕರ್ಯಕ್ಕಾಗಿ ಉದ್ಯಾನವನ, ಅನ್ನಸತ್ರ, ಅರವಟ್ಟಿಗೆ, ದೇವಾಲಯ, ಧರ್ಮಶಾಲೆ ಮೊದಲಾದುವುಗಳನ್ನು ಏರ್ಪಾಟು ಮಾಡುವುದು ಮುಂತಾದ ಧರ್ಮಕಾರ್ಯ : ಇಷ್ಟಂ ಯಾಗಾರ್ಥ ದೊಳುತ್ಕೃಷ್ಟಂ ಪೂರ್ತಂ ವದ[ದಾ]ನ್ಯಹೇತುವಿಕೀರ್ಣಂ ಇಷ್ಟಾಪೂರ್ತಂ ಗಳವುತ್ಕೃಷ್ಟಶ್ರೇಯೋನಿಮಿತ್ತಮಕ್ಕುಮವೆರಡುಂ (ವಸ್ತುಕೋ. ೫೯-೯೩); ಮಾಡಿ ಷೋಡಶದಾನವನು ಮನ ಬೇಡಿದಂದದಲನ್ನಪಾನವ ನೀಡಿ ವಿಪ್ರರಿಗೊಲಿದಿಷ್ಟಾಪೂರ್ತಗಳ ಮುಗಿಸಿ ಪೋಡಿಯಲ್ಲದ ಪುಣ್ಯಫಲ ಕೈಗೂಡೆ (ಅಷ್ಟಮಿಕ. ೨-೦೦೦). [ಸಂ.]

**ಪೂರ್ತ**$_2$ (ಅ). ಪೂರ್ಣವಾಗಿ ; ಪೂರ್ತಿಯಾಗಿ ; ಸಂಪೂರ್ಣವಾಗಿ : ಪೂರ್ತ ಕೂಲಿ ಅವರಿಗೆ ಕೊಟ್ಟರು (ಕೊಡಶಿಶೀ. ೨೨೧); ಸಾಮಾನುಗಳನ್ನು ಪೂರ್ತ ಹಿಂದಿರುಗಿ ಕೊಟ್ಟರಲಿಲ್ಲ (ಕ್ರಶಾಇ. II. ೨೨೦). [<ಪೂರ್ತ$_1$]

**ಪೂರ್ತಗೊಳಿಸು** (ಕ್ರಿ). ಪೂರೈಸು ; ಪೂರ್ಣ ಮಾಡು ; ಮುಗಿಸು : ಈ ಕೆಲಸವನ್ನು ಇಂದೇ ಪೂರ್ತಗೊಳಿಸಬೇಕು (ರೂಢಿ). [ಪೂರ್ತ$_1$+ಕೊಳ್$_1$+_ಇಸು$_3$]

**ಪೂರ್ತತೆ** (ನಾ). ಪೂರ್ಣತೆ ; ಪರಿಪೂರ್ಣತೆ : ಜೀವನದಲ್ಲಿ ಗೌರೀಶ, ನಿನಗೆ ಆತ್ಮಸಿದ್ಧಿ ದೊರೆಯಲಿ, ಪೂರ್ತತೆ ನಿನ್ನ ಪಾಲಿಗೆ ಬರಲಿ (ಮುಕ್ತಿ. ೨೫೩); ದೈವದೊಳಗೆ ಪೌರುಷದ ಪೂರ್ತತೆಯಿರುವುದು (ಕ್ರಬಂಧ. ೩೨). [ಸಂ. ಪೂರ್ತತಾ]

**ಪೂರ್ತಾನುಪಾಲನ** (ನಾ). 'ಪೂರ್ತ' ವೆಂಬ ಹೆಸರಿನ ದಾನದತ್ತಿಗಳನ್ನು ನಿರಂತರವಾಗಿ ನಡೆಸಿಕೊಂಡು ಬರುವುದು,_ರಕ್ಷಣೆ ಮಾಡುವುದು : ಪೂರ್ವದಿಂದ ನಡೆದು ಬರುತ್ತಿರುವ ದೇವದಾಯ ಬ್ರಹ್ಮದಾಯ ಧರ್ಮದಾಯ ಪೂರ್ತಾನುಪಾಲನ ಸರ್ವಮಾನ್ಯ ಭಟ್ಟಮಾನ್ಯ . . . ಮುಂತಾದುವೇನೂ ಹೆಚ್ಚುಕಡಿಮೆಯಾಗದಂತೆಯೂ ಅವೊಂದೂ ಈ ಪೌಜುಗಂದಾಯಕ್ಕೆ ಒಳಸೇರದಂತೆಯೂ ನಮ್ಮ ಕರಣಿಕರು ಎಚ್ಚತ್ತಿರ ಬೇಕು (ಐನುಗಂ. ೩೬-೨೦). [ಸಂ.]

**ಪೂರ್ತಿ**$_1$ (ನಾ). ೧. ತುಂಬುವುದು ; ಭರ್ತಿಮಾಡುವುದು. ೨. ಮುಗಿಸು ವುದು ; ಮುಕ್ತಾಯಗೊಳಿಸುವುದು. ೩. ಪೂರ್ಣಗೊಳಿಸುವುದು ; ಪೂರೈಸುವುದು : ವಸುಧೆಯೊಳಿಷ್ಟಾರ್ಥಪೂರ್ತಿಯ [ಐಶಾಂ. ಮಂ ತವೆ] ನೆಗಳ್ಚುವನ ಬಹುವಿಧದ ಧರ್ಮಂಗಳಂ ರಚಿಸುವನ ಮನೆಯೂ ಳಿಂದಿರೆ ಬಿಡದೆ ನೆಲಸಿರ್ಪಳು (ಜೈಮಿಭಾ. ೩-೬೬). ೪. ಪೂರ್ಣಗೊಳ್ಳು ವುದು ; ಪೂರ್ಣತೆ. ೫. ತಣಿವು ; ತೃಪ್ತಿ. [ಸಂ.]

**ಪೂರ್ತಿ**$_2$ (ಅ). ಸಂಪೂರ್ಣವಾಗಿ ; ಪೂರಾ : ಇಲ್ಲಿಯ ಪರಿಸ್ಥಿತಿ ಪೂರ್ತಿ ಹದಗೆಟ್ಟುಹೋಗಿದೆ (ರೂಢಿ). [<ಪೂರ್ತಿ$_1$]

**ಪೂರ್ತಿಗೊಳಿಸು** (ಕ್ರಿ). ೧. ಮುಗಿಸು ; ಮುಕ್ತಾಯಗೊಳಿಸು : ಈ ಕೆಲಸವನ್ನು ಪೂರ್ತಿಗೊಳಿಸದೆ ಇಂದು ಮನೆಗೆ ಹೋಗುವಂತಿಲ್ಲ (ರೂಢಿ).

೨. ಈಡೇರಿಸು ; ನೆರವೇರಿಸು ; ಕೈಗೂಡಿಸು : ಈಗ ನನ್ನ ಮನೋಭಿಲಾಷೆಯನ್ನು ಪೂರ್ತಿಗೊಳಿಸು (ಕುಹಿಸ. ೬೩).
[ಪೂರ್ತಿ$_1$+ಕೊಳ್$_1$+—ಇಸು$_1$]

**ಪೂರ್ತಿಸು** (ಕ್ರಿ). ೧. ಮುಗಿಸು ; ಮುಕ್ತಾಯಗೊಳಿಸು : ಕುಂದದನುದಿನ ವಶನನಿದ್ರಾವುಂದತೆಯನುಳಿದಧಿಕಜಾಗ್ರತೆಯಿಂದ ವನವಾಸವನು ಪೂರ್ತಿಸಿ ಬಹುದು ನೀನು (ಅಸಂಗಾ. ೨-೦-೬೭) ; ಸಂಜೆಗಿಂತ ಮೊದಲೆ ಆಹಾರವನ್ನು ಪೂರ್ತಿಸಬೇಕೆಂಬುದು...ಸ್ವತಃ ಬಂಕೆಯನಿಗೇ ನೆನಪಾಗಲಿಲ್ಲ (ಶಿಂಶಾಂ.೦೦). ೨. ಈಡೇರಿಸು ; ಕೈಗೂಡಿಸು : ಚೆಲುವನ್ನೇ ಮೂರ್ತಿಸಿ ಬಯಕೆ ಗಳನು ಪೂರ್ತಿಸಿ ಬರಲಿ ದೇವ—ದ್ವೀಪಿನೀ ಬಾರೆ ಬಾ ಮನೋನ್ಮನೀ (ಕೃದಸ. ೨೦-೯). [ಪೂರ್ತಿ$_1$+—ಇಸು$_1$]

**ಪೂರ್ಬ** (ಗು). ೧. ಹಿಂದಿನ ; ಪ್ರಾಚೀನ : 'ಪೂರ್ಬಮರ್ಯಾದೆ' ಪರಾ. (ನಾ). ೨. ಮೂಡಣದಿಕ್ಕು ; ಪೂರ್ವದಿಕ್ಕು : 'ಪೂರ್ಬಾಭಿಮುಖ' ಪರಾ. [<ಸಂ. ಪೂರ್ವ]

**ಪೂರ್ಬಮರ್ಯಾದೆ** (ನಾ). ಹಿಂದಿನಿಂದ ನಡೆದು ಬಂದ ಕ್ರಮ ; ಪರಂಪರಾನುಗತವಾದ ನಿಯಮ : ಹಾರಮರವೂರ ಕೋಟೆಯ ಪೂರ್ಬ್ಬ ಮರ್ಯಾದೆಯ ಚತುಸ್ಸೀಮೆ ಗದ್ದೆ ಬೆದ್ದಲು ಸೀಮೆ . . . ಕೊಟ್ಟೆವು (ಎಕ. IX. ಬೆಂಗಳೂ. ೩೦-೦೨ ; 1340). [ಪೂರ್ಬ+ಮರ್ಯಾದೆ]

**ಪೂರ್ಬಾಭಿಮುಖ** (ನಾ). ಮೂಡಣದಿಕ್ಕಿಗೆ ಎದುರಾಗಿರುವುದು; ಪೂರ್ವಕ್ಕೆ ಅಭಿಮುಖವಾಗಿರುವುದು: ಸರೋವರದ ಪಶ್ಚಿಮತಟದಲ್ಪೂರ್ಬ್ಬಾಭಿಮುಖವಾಗಿಟ್ಟು ಶಿವಾಲಯಮಂ ಪ್ರದಕ್ಷಿಣಂ ಬಂದು ಶ್ರೀಸೋಮೇಶ್ವರದೇವರಂ ಕಂಡು (ಸಇಇ. XX. ೯೯-೯೯ ; ಸು. 1076).
[<ಪೂರ್ವಾಭಿಮುಖ]

**ಪೂರ್ಬಾಯ** (ನಾ). ಒಂದು ಬಗೆಯ ತೆರಿಗೆಯಿಂದ ಬರುವ ಆದಾಯ : ನಾಡುಮರಿಯಾದೆಯಲ್ಲಿ ಪೂರ್ಬ್ಬಾಯವೇನು ಬಂದಡೆ ಆ ಸ್ಥಾನದವರು ತೆಱುವರು (ಎಕ. III. ತಿರುಮ. ೦೦೦-೩೫ ; 1281) ; ಪಂಚಕಾರುಕ ಆಲೆದೆೞ್ ಮುಂಡಿದೆೞ್ ಚಿಟ್ಟದೆೞ್ ಕೊನೆದೆೞ್ ಪ್ರಾಣಸಂಬಳವೊಳಗಾದ ಪೂರ್ಬ್ಬಾಯ ಅಪೂರ್ಬ್ಬಾಯ . . . ಎಲ್ಲವನೂ ಕಾರುಣ್ಯಂಮಾಡಿ ಧಾರಾಪೂರ್ಬ್ಬಕಂ ಮಾಡಿ ಕೊಟ್ಟರು (ಎಕ. VI. ಕಡೂರು. ೯೯-೯೨ ; 1291). [<ಪೂರ್ವಾಯ]

**ಪೂರ್ಬಿಗ, ಪೂರ್ವಿಗ, ಪೂರ್ವಿಕ** (ನಾ). (ವಂಶದ) ಹಿರಿಯ ; ಪೂರ್ವಿಕ : ಅಡಗಿನ ಬಸನಿಗರ್ಗ್ಗಂ ಕಳ್ಗುಡಿವವರ್ಗ್ಗಂ ವೃತ್ತಿಲೋಪಮೆಂಬಿ ನುಡಿಯುಂ ಕಡೆಗಣ್ಗಣಿಸದೆ ಮೊದಲಿಂದೆ ಕಿಡಿವುದದಂ ಸ್ಥಾನಗುರುಗಳುಂ ಪೂರ್ಬ್ಬಿಗರುಂ (ಸಇಇ. IX-i. ೦೦೭-೩೯ ; ಸು. 1055). ಪೂರ್ವಿಗ : ಬಿಂಬಿರನೂರ ಪೂರ್ವ್ವಿಗರ ಗೊಲುಕಿಗಾವುಣ್ಡನ ಮಗ ಪೆಲಿಯಮ್ಮಗಾವುಣ್ಡನು (ಎಕ. IX (ಪ). ಹೊಸಕೋ. ೨೦೭-೯ ; ಸು. 900) ; ಜಗವೆಱಿಯೆ ಪಮ್ಮಿನ್ನಯದ ಪೂರ್ವಿಗನೆನಾ ನಹುಷಂಗೆ ಬಂದುಬೆಸ್ಗೆಗದ ಹದನಿದು (ಉತ್ತಾ. ೯.೦೩-೭೦). ಪೂರ್ವಿಕ: ಅವರ ಪೂರ್ವಿಕರೆಲ್ಲ ಒಳ್ಳೆಯ ವಿದ್ವಾಂಸರಾಗಿದ್ದರು (ರೂಹಿ). [< ಸಂ. ಪೂರ್ವಿಕ]

**ಪೂರ್ಯ** (ಗು). ೧. ತುಂಬಬೇಕಾದ. ೨. ತೃಪ್ತಿಗೊಳಿಸಬೇಕಾದ. ೩. ಅಧಿಕವಾದ ; ಅತಿಶಯವಾದ : ಗದ್ಗದಕಂಠವೆಸೆಯಲು ಪೂರ್ಯಹರುಷಮಯದ್ಗ ತಾಹಿತ್ಯಳೆಕ್ಕಿಗಳೆಳಿಲುಗಲು (ಬಸವಪು. ೭-೬) ; ಸ್ಥೈರ್ಯಶೌರ್ಯಂ ವರಕ್ಷೀರನಿಧಿ ಪೂರ್ಯಧೈರ್ಯಂ . . . ಭೂಜನವೆರುಸ್ಮಾರ್ಯನೆನಲೆಸೆದ (ಬಸವಪು. ೨೨-೨೪). [ಸಂ.]

**ಪೂರ್ವ** (ಗು). ೧. ಹಿಂದಣ ; ಪ್ರಾಚೀನ : ನಿಮ್ಮಯ ಪೂರ್ವಪೃಥ್ವೀಪಾಲರಿದ್ದರು ಗುಪ್ತದಿಂದ ವಿರಾಟನಗರಿಯಲಿ (ಕುವ್ಯಾ.ವಿ. ೨-೦). 'ಪೂರ್ವಕಾಲ' 'ಪೂರ್ವಾಚಾರ್ಯ' ಪರಾ. ೨. ಮೊದಲಿನ ; ಎಳೆಯ : 'ಪೂರ್ವವಯಸ್ಸು' ಪರಾ. ೩. ಇಂದಿಗೆ ಹಿಂದಿನ ಕಾಲಕ್ಕೆ ಸೇರಿದ ; ಇಂದಿಗೆ ಮುಂಚಿನ ಸಮಯದ. ೪. (ಅನುಕ್ರಮದಲ್ಲಿ) ಮೊದಲನೆಯ ; ಅಗ್ರೇಸರ ; ಪ್ರಥಮ. ೫. ಮೂಡಣ ; ಮೂಡಣದಿಕ್ಕಿನಲ್ಲಿರುವ ; ಪೂರ್ವದಿಕ್ಕಿಗೆ ಸಂಬಂಧಿಸಿದ. (ನಾ). ೬. ಹಿಂದಣಕಾಲ ; ಪ್ರಾಚೀನಕಾಲ : ಖ್ಯಾತನಲ್ಲಾ ರಾಯರಲಿ ನಳನಾತಗಾದಾಪತ್ತ ಬಲ್ಲೆ ಕೇಳಿ ಪೂರ್ವದಲಿ (ಕೂರಣ. ೩-೨-೦೩) ; ತ್ರಿಮೂರ್ತಿಗಳು . . . ಅತ್ರಿಯ ಸತಿಗನುಸೂಯದೇವಿಗೆ ಪುತ್ರರಾದರು ಪೂರ್ವದೊಳು (ಹರಿ. ೨-೯೬). ೭. ಹಿಂದೆ ನಡೆದು ಹೋದ ಸಂಗತಿ ; ಪೂರ್ವಕಾಲದ ಘಟನೆ : ನಂಬಿಯಣ್ಣಂ ಪೂರ್ವಮಂ ನೆನೆದು ಪರಿತಂದು ಚರಣದೊಳು ಬಿಳುತುಂ (ಸಂಬಸ. ೬-೨೨೭). ೮. ಮೊದಲು ಇರುವಂತಹುದು ; ಮೊದಲಿನದು : "ಆದಿಃ, ಪೂರ್ವಃ, ಪೌರಸ್ತ್ಯಃ, ಪ್ರಥಮಃ, ಆದ್ಯಃ—ಇ ಮೊದಲನೆ ದರ ಹೆಸರುಗಳು" (ಸಿದ್ಧಾಂತಿ. ೩೯೯) ; ವಿದಿತ ಸಮಾಸಂಗಳ ಪೂರ್ವದಕ್ಕರಂ ಹ್ರಸ್ವಮದಱ ಪರದಕ್ಕರಮಂತದು ದೀರ್ಘಂ (ಕಮಿನ. ೯). ೯. ಹಿಂದಿನ ಭಾಗ ; ಹಿಂಭಾಗ : ಆದೇಶವಾಗಿ ಮುಂಗಳ್ಗಾದರುವದು ನಿಲ್ಕುಮಿರ್ಗಮೆವುಗಂ ಪೂರ್ವಕ್ಕೆ (ಕಮಿದ. ೨೨೦). ೧೦. ಮೂಡಣದಿಕ್ಕು : "ಪ್ರಾಚಿಯೆನೆ ಪೂರ್ವನ್ಮೈಂದ್ರಿಯೆನೆ ಮೂಡಲೆನಿಕ್ಕು" (ಕುಂಗರಾ. ೦೭-೧೯). ೧೧. ಹಿಂದಿನವನು, ಹಿರಿಯಂ : "ಪೂರ್ವಃ-೧ ಮೂಡಲಲ್ಲಿರುವಂಥಾದ್ದು, ಪೂರ್ವಕಾಲ, ಮೂಡಲಲ್ಲಿ ಹುಟ್ಟಿದವರು, ಪೂರ್ವಕಾಲದಲ್ಲಿ ಹುಟ್ಟಿದವರು" (ಸಿದ್ಧಾಂತಿ. ೯೦೩) ; ಅರಸ ದೂರಾಗತರ ಪೂರ್ವರ ಚಿರಸಮಾಶ್ರಿತರೆನಿಪ ಧರಣೀಸುರರ ಸಲಹಲು ಸಮನೆನಿಸುವೀ ಮೂಱು ತೆಱದವರ . . . ರಕ್ಷಿಸುತಲಿರಬೇಕು (ತಿಪ್ಪಾಕ. ೩-೩೬). ೧೨. [ಜೈನ] ಹನ್ನೆರಡನೆಯ ದೃಷ್ಟಿವಾದದ ಅಂಗಗಳಲ್ಲಿ ಬರುವ, ಶ್ರುತಾಂಗಗಳ ವಿವರಣೆಯನ್ನು ನೀಡತಕ್ಕ ಉತ್ಪಾದಪೂರ್ವ, ಅಗ್ರಾಯಣೀಯಪೂರ್ವ, ವೀರ್ಯಾನುವಾದಪೂರ್ವ, ಅಸ್ತಿನಾಸ್ತಿಪ್ರವಾದಪೂರ್ವ, ಜ್ಞಾನಪ್ರವಾದಪೂರ್ವ, ಸತ್ಯಪ್ರವಾದಪೂರ್ವ, ಆತ್ಮಪ್ರವಾದಪೂರ್ವ, ಕರ್ಮಪ್ರವಾದಪೂರ್ವ, ಪ್ರತ್ಯಾಖ್ಯಾನಪೂರ್ವ, ವಿದ್ಯಾನುವಾದಪೂರ್ವ, ಕಲ್ಯಾಣವಾದಪೂರ್ವ, ಪ್ರಾಣಾವಾಯಪೂರ್ವ, ಕ್ರಿಯಾವಿಶಾಲಪೂರ್ವ ಮತ್ತು ಲೋಕಬಿಂದುಸಾರಪೂರ್ವ ಎಂಬ ಹದಿನಾಲ್ಕು ಆಗಮಗ್ರಂಥಗಳು : ಪ್ರಥಮಾನುಯೋಗಮುಮಂ ಪದಿನಾಲ್ಕುಪೂರ್ವಂಗಳುಮನಯ್ದುಚೂಳಿಕೆಯುಮಂ . . . ಪೆಸರ್ಗೊಂಡು (ಅಂತ್ರಿ. ೩-೯೦೩) ; ಅಂಗಗಳಿಗಿಂತ ಮುಂಚೆ ಶಾಸ್ತ್ರಜ್ಞಾನವು ಶ್ರುತರೂಪದಿಂದ ಪ್ರಚಾರದಲ್ಲಿತ್ತು. ಆಗ ಅದು ಹದಿನಾಲ್ಕು ಪೂರ್ವಗಳ ರೂಪದಲ್ಲಿ ಪ್ರಚಲಿತವಾಗುತ್ತಿತ್ತು (ಕೈಕಪ. ೦೩೯). 'ಚತುರ್ದಶಪೂರ್ವ' ಪರಾ. ೧೩. ದೀರ್ಘವಾದ ಒಂದು ಕಾಲಮಾನ : ಎಪ್ಪತ್ತುಲಕ್ಷದ ಐವತ್ತಾರಂಸಾವಿರ ಕೋಟಿ ವರ್ಷ : ಲಕ್ಕೆಯ ಲೆಕ್ಕದೊಳೊಂದಿ ಪೂರ್ವಮಿರ್ಪತ್ತು ನಿರಂತರಂ ನಡೆದುದಾ ವೃಷಭಂಗೆ ಕುಮಾರಕಾಲದೊಳ್ (ಆದಿಪು. ೬-೩೬) ; ಎರಡುಲಕ್ಷಪೂರ್ವಂ ಪರಮಾಯುಷ್ಯಮಂ . . . ಧವಳವರ್ಣನುಮಾಗಿ ಬಳೆದಯ್ವತ್ತುಸಾಸಿರಪೂರ್ವಂ ಕುಮಾರಕಾಲಂ ಪೋಗೆ ರಾಜ್ಯಾಭಿಷೇಕಮಾಗಿ (ಜಾತ್ರಂಕ. ೦೨೯). ೧೪. ಹದಿನಾಲ್ಕು ಎಂಬ ಸಂಖ್ಯೆಯ ಸಂಕೇತ. ೧೫. [ಯೋಗ] ಉಚ್ಛ್ವಾಸ ನಿಶ್ವಾಸಗಳ ಒಂದು ಬಗೆ : "ನಾಸಿಕದಿನಿಂದಾನಿಲಂ ಕುಂಭಕಮೆನಿಕ್ಕು . . . ಅನವರತ ಸಂಚರಿಸೆ ಪೂರ್ವಮಕ್ಕುಂ" (ಕುಂಗರಾ. ೦೩-೦೯).

**ಪೂರ್ವಪೂರ್ವ** = ೧. ಹಿಂದು ಹಿಂದಿನ ; ಹಿಂದಿನದಕ್ಕಿಂತ ಹಿಂದಿರುವ : ಹೀಗೆ ಉತ್ತರೋತ್ತರಾವಸ್ಥೆಗಳಿಂದ ಉತ್ಪತ್ತಿವ್ಯವಹಾರಗಳು, ಪೂರ್ವಪೂರ್ವಾವಸ್ಥಾವಿನಾಶದಿಂದ ವಿನಾಶವ್ಯವಹಾರ (ಹಿಂದಶಾ. ೯೩). ೨. ಹಿರಿಯರಿಗೆ ಹಿರಿಯ; ಪುರಾತನರಿಗೆ ಪುರಾತನನಾದವನು;

ಆದಿಪುರಾಣ ; ಪರಮೇಶ್ವರ : ನಿಜನಿರ್ಮಲಿತರೂಪನಂ ಪೂರ್ವಪೂರ್ವನಂ . . . ದೇವದೇವನಂ ಭಜಿಸಿದಳಗಜೆ ಬನದೊಳು (ಕೃಪಿಶಾ. ೧೫-೨೬). **ಪೂರ್ವದ ಹಳಗನ್ನಡ** = ಹಳಗನ್ನಡಕ್ಕೂ ಹಿಂದಿನ ಅತಿ ಪ್ರಾಚೀನವಾದ ಕನ್ನಡಭಾಷೆಯ ರೂಪ : ಹಳಗನ್ನಡಕ್ಕೂ ಹಿಂದೆ ಕನ್ನಡಕ್ಕೆ ಒಂದು ರೂಪವಿತ್ತು. ಅದನ್ನು "ಪೂರ್ವದ ಹಳಗನ್ನಡ" ವೆನ್ನುತ್ತಾರೆ (ಕೃಶಿಶ. ೧). **ಪೂರ್ವಾಪರ** = ೧. ಮೊದಲಿನ ಮತ್ತು ಅನಂತರದ. ೨. ಹಿನ್ನೆಲೆಯಿಂದ ಪರಿಣಾಮದ ವರೆಗಿನ ಸಮಸ್ತ ವೃತ್ತಾಂತ; ಹಿಂದುಮುಂದಿನ ಸಮಗ್ರವಿಷಯ : ಎಲೆ ಮುನೀಶ್ವರ ಪೇಳು ಪೇಳೆನೆ ತಿಳುಹಿ ಪೂರ್ವಾಪರವ ರಾಮಂಗೆ ಬಳಿಕಹಲ್ಯಾದೇವಿಯರ್ತಿಯ ಸಲಿಸಿ ಬೀಳ್ಕೊಂಡ (ಕೌಶಿಕಾ. ೧-೯೬). ಪೂರ್ವಾಪರಗಳನ್ನು ಅರಿಯದ ಮಾನವರ ಕಣ್ಣಿಗೆ ನಾವು ಹುಚ್ಚರು (ಶುಜಾಶಿ. ೧೫೬). ೩. ಹಿಂದೆ ಇರುವುದು ಮತ್ತು ಮುಂದಿರುವುದು : ಪರಿಗೀತಾರ್ಥಂ ಪೂರ್ವಾಪರದೊಳ್ ಬಗೆವಾಗಳೆಂದುಮೊಂದಱೊಳೊಂದುಂ ದೊರೆಕೊಂಡೊಂದದೊಡದು ದುಷ್ಕರಮೆ ವಿರುದ್ಧಾರ್ಥಮೆಂಬುದಾದು ದೋಷಂ (ಕಶಿಶಿ. ೧-೯೦). ೪. ಸಂಬಂಧ. **ಪೂರ್ವಾಪೂರ್ವ** = ಬಹಳ ಹಿಂದಿನ : ಪ್ರತಿಕ್ಷಣಂ ವಿಶರಾರುಗಳ್ ಚಿತ್ತಕ್ಷಣಂಗಳ್ ಪೂರ್ವಾಪೂರ್ವಚಿತ್ತವಿಶೇಷಪ್ರಭವಂಗಳ್ ಪ್ರಬಂಧದಿಂದಂ ಪ್ರವರ್ತಿಸುವುವು (ಶಾಂತಿಪು. ೯-೧೯೨ ವ). **ಪೂರ್ವೋತ್ತರ** = ಮೊದಲಿನ ಮತ್ತು ಅನಂತರದ; ಮುಂಚಿನ ಹಾಗೂ ಕೊನೆಯ : ಪೂರ್ವೋತ್ತರಕಾಲವ್ಯಾಪ್ತಿ ಜೀವತತ್ತ್ವಮೊಂದುಂಟೆಂಬರದೊಂದುಮಿಲ್ಲ (ಶಾಂತಿಪು. ೯-೧೯೨ವ) : ವಿದಿತಪೂರ್ವೋತ್ತರದ ಯದು ವಂಶದ ಕಥಾವಿಸ್ತಾರವನು ಹೇಳಿದನು ದುಷ್ಯಂತನರಿ ಶಾಕುಂತಲೆಯ ಕಥೆಸಹಿತ (ಕುಮಾ.ಭಾ. ೨-೧೯). [ಸಂ.]

**ಪೂರ್ವಂ** (ಅ). ಮುಂಚೆ; ಮುನ್ನ; ಮುಂಚಿತವಾಗಿ : "ಆದಿಃ, ಅಗ್ರಂ, ಪು(ರಾ)ರಂ, ಪೂರ್ವಂ, ಪ್ರಥಮಂ, ಪ್ರಾಕ್, ಪುರಃ — ಈ ೭ ಮುನ್ನಂ" (ಹಲಾಯು. ೧೦೬ ೨೨); ಪೂರ್ವಂ ದೇವೇಶನಿಂ ನಿರ್ಮಿತ ತುರಗಚಯಂ ಲಾಯದೊಳ್ ಕಟ್ಟಿರುತ್ತುಂ . . . ಪರ್ವಿಶ್ವಾ ಪಟ್ಟಣಾದ್ಯಂತ್ರದೊಳ್ (ಜೈಭಾಸ. ೪-೧೨-೨). [ಸಂ.]

**ಪೂರ್ವಕ** (ಗು). ೧. ಮುಂಚಿನ ; ಮೊದಲಿನ ; ಹಿಂದಣ. ೨. ಸಹಿತವಾದ ; ಕೂಡಿಕೊಂಡ : ಆದರಪೂರ್ವಕ ವಿಜ್ಞಾಪನೆಗಳು (ಊ೦). (ನಾ). ೩. ಪೂರ್ವಜ ; ಪೂರ್ವಿಕ. ೪. ಸಹಿತವಾದುದು; ಕೂಡಿಕೊಂಡಿರುವುದು : ದೃಷ್ಟಿಗಳಿಗೆಯ್ದಿಸದವಂ ನಿಜದೃಷ್ಟಿಪೂರ್ವಕವಾಗಿ ನೋಡಲು ದೃಷ್ಟವಾ ತವನಜುಹೋವಪೆನೆಂದ ವರನಖಿಸುವವ (ಐಕಥೆ. ೩೧-೯೯). [ಸಂ.]

**ಪೂರ್ವಕಂಕಣ** (ನಾ). [ಸಂಗೀತ] ನೂರೆಂಟು ತಾಳಗಳಲ್ಲಿ ಒಂದು : ಚಂಚತ್ಪುಟ . . . ಪೂರ್ವಕಂಕಣ ಕಾಮ್ಯಕಂಕಣ . . . ಜಯಾಳಮೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ಶಿತೀಳ. ೨೩೮). [ಸಂ.]

**ಪೂರ್ವಕಕ್ಷೆ** (ನಾ). ವಾದದಲ್ಲಿ ಮಂಡಿಸುವ ಮೊದಲನೆಯ ಆಕ್ಷೇಪಣೆ : ಇಂತೀ ಸ್ಥಲಂಗಳಲ್ಲಿ ಸ್ಥಿರೀಕರಿಸಿ ಆರೋಪಿಸಿ ಪೂರ್ವಕಕ್ಷೆಯಂ ಕಂಡು . . . ಉತ್ತರಕಕ್ಷೆಯ ಕೂಡಿದಲ್ಲಿ ಆಜುಸ್ಥಲದ ಸೋಂಕಿಲ್ಲ (ಶೂನ್ಯಸಂ. ೦೩೯-೩೩೬); ಜಾತಿಭೇದಂಗಳಂ ಸಪ್ತಶೈವಂಗಳಂ ಪ್ರೀತಿಬಿಂದಾ ತ್ರಿಶೈವಂಗಳಂ ವೀರಶೈವಾತಿಶಯಾಕಂ ಪೂರ್ವಕಕ್ಷೆಯೊಳಗೆಂದವಂ ಬಿತ್ತರಿಸಿದಂ ದೇಶಿಕಂ (ಶೀಕೃಪು. ೬-೨ ಸೂಕನ). [ಸಂ. ಪೂರ್ವಕಕ್ಷಾ]

**ಪೂರ್ವಕರ್ಮ** (ನಾ). ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮ ಮತ್ತು ಅದರ ಫಲ : ಪೂರ್ವಕರ್ಮವ ಕೆಡಿಸಿದನೆನ್ನ ಗುರು ಉಭಯಕರ್ಮವ ಬಿಡಿಸಿ ತೋಱಿದ ಶರಣರವರಿಂದ ಬದುಕಿದೆನು (ಸಳವ. III. ೦೩೫-೨೩೯); ಅಂಗವೆಂಬುದು ಪೂರ್ವಕರ್ಮಸಂಗಶೇಷವು ಪುಣ್ಯಪಾಪೋತ್ಪುಂಗನಿಳಯಂ ಸುಕೃತದುಃಕೃತಗತಿಗಳಾಶ್ರಯವು (ಐಕಥೆ. ೩೧-೨೬). [ಸಂ. ಪೂರ್ವಕರ್ಮನ್]

**ಪೂರ್ವಕಲ್ಪನೆ** (ನಾ). ೧. ಮೊದಲು ಮಾಡಿದ ಕಲ್ಪನೆ; ಮುಂಚೆ ಮಾಡಿದ ಊಹೆ : ಅವರು ಬಹಳ ಅಹಂಕಾರಿಗಳೆಂಬುದು ನನ್ನ ಪೂರ್ವಕಲ್ಪನೆಯಾಗಿತ್ತು (ಊ೦). ೨. ಪುರಾಕೃತಕರ್ಮ : ಪೂರ್ವಕಲ್ಪನೆಯ ಮಾಜುವರಾರ್ (ಕಜೀಳ. ೦೦). [ಸಂ. ಪೂರ್ವಕಲ್ಪನಾ]

**ಪೂರ್ವಕಲ್ಯಾಣಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ವಕಲ್ಯಾಣಿ-೫೩ನೇ ಮೇಳಕರ್ತ ಗಮನಶ್ರಮದ ಜನ್ಯ. ಪ್ರಾಚೀನ ರಕ್ತಿರಾಗ. ಕರುಣಾರಸಪ್ರಧಾನರಾಗ (ಸಂಗೀಕೋ. ೦೩೩). [ಸಂ. ಪೂರ್ವಕಲ್ಯಾಣೀ]

**ಪೂರ್ವಕಾಲ** (ನಾ). ೧. ಮುಂಚಿನ ಕಾಲ; ಹಿಂದಿನ ಕಾಲ; ಪ್ರಾಚೀನ ಕಾಲ : ಪೂರ್ವಕಾಲದಲ್ಲಿ ಈ ಪ್ರಾಣಿಗಳು . . . ಕಮಲಗಳನ್ನು ಮುತ್ತಿ ಸುತ್ತುತ್ತಿದ್ದವು (ಗಾಳಕ. ೨೦೬). ೨. [ವ್ಯಾಕ] ಭೂತಕಾಲ : ಇಕಾರಮುಮುಕಾರಮುಂ ಪೂರ್ವಕಾಲಕ್ರಿಯೆಯೊಳಕ್ಕುಂ (ಶಮದ. ಶ. ೨೯೬ ವೃತ್ತಿ). [ಸಂ.]

**ಪೂರ್ವಕೋಟಿ** (ನಾ). ೧. ಪೂರ್ವಪಕ್ಷ; ವಾದದ ಪ್ರಾರಂಭದಲ್ಲಿ ಮಂಡಿಸುವ ಪ್ರಶ್ನೆ. ೨. [ಜೈನ] ಅತಿದೀರ್ಘವಾದ ಒಂದು ಕಾಲಪ್ರಮಾಣ; ಒಂದು ಕೋಟಿ ಪೂರ್ವವರ್ಷ : ಪೂರ್ವಕೋಟ್ಯಾಯುರ್ಮಿತಿಪ್ರವೃತ್ತಂ ಷಡ್ವಿಧೇತಿಪ್ರತತಿನಿಯಾತಪ್ಯನೂಱುಬಿಲ್ ಮರ್ತ್ಯಮೂರ್ತ್ಯುನ್ನತಿಯೆಂದುಂ ತನ್ನೊಳೆಂಬೀ ಸ್ತುತಿವಡೆದುದು ಸೌಖ್ಯಾವಗಾಹಂ ವಿದೇಹಂ (ಸಂಧೃಕು. ೦-೬೩) ; ಪೂರ್ವಗಳು ಒಂದು ಕೋಟಿಯಾವರ್ಷಿಯಾದರೆ . . . ಪೂರ್ವಕೋಟಿ (ಪ್ರರುತ. ೦೬). [ಸಂ.]

**ಪೂರ್ವಕ್ರೀ** (ನಾ). ಹಿಂದೆ ನಡೆದು ಹೋದ ಸಂಗತಿ; ಪೂರ್ವಚರಿತ್ರೆ : ಶಾಸ್ತ್ರ ಬಲ್ಲಿತ್ತೆಂಬೆನೆ ಶಬ್ದಕ್ರೀ ಪುರಾಣ ಬಲ್ಲಿತ್ತೆಂಬೆನೆ ಪೂರ್ವಕ್ರೀ [ಶಾಕಾಂ. ಕ್ರಿ] (ಬಸವ. ೩೩೨) ; ಮುತ್ತು ರತ್ನಸಿತಕೆ ಘೃತಕೆ ಮತ್ತೆ ಪೂರ್ವಕ್ರೀ [ಶಾಕಾಂ. ಕ್ರಿಯೆ]ಗಳಂತೆ ನಿತ್ಯಮುಕ್ತಶರಣಗಂಟೆ ಮತ್ತೆ ಪೂರ್ವಚರಿತವು (ಶಿಹಾ. ೦೨-೯೯೯). [<ಸಂ. ಪೂರ್ವಕ್ರಿಯಾ]

**ಪೂರ್ವಗಿರಿ** (ನಾ). ಮೂಡಣ ದಿಕ್ಕಿನ ಬೆಟ್ಟ : ಸೂರ್ಯನು ಹುಟ್ಟಿ ಬರುವ ಸ್ಥಾನವೆಂದು ನಂಬಲಾದ ಪರ್ವತ ; ಉದಯಾಚಲ : ಪೂರ್ವಗಿರಿಯ ಶಿಖರಾಂತರದ ಪದ್ಮರಾಗದ ಕಳಸಮೆನೆ ಸೂರ್ಯಮಂಡಲಂ ರಂಜಿಸಿದುದು (ಶಿಶಿಪು. ೯೬-೯೬). [ಸಂ.]

**ಪೂರ್ವಗುಣ** (ನಾ). ಹಿಂದಿದ್ದ ಸ್ವಭಾವ. —ಪ್ರಕೃತಿ : ಆರಾಧ್ಯ ಪ್ರಾಣಲಿಂಗವೆಂದಱಿದು ಪೂರ್ವಗುಣವಳಿದು ಪುನರ್ಜಾತನಾದ ಬಳಿಕ ಸಂಸಾರಬಂಧುಗಳೆನ್ನವರೆಂದೊಡೆ ನಂಟಭಕ್ತಿ ನಾಯಕನರಕ (ಬಸವ. ೯೯). [ಸಂ.]

**ಪೂರ್ವಗ್ರಹ** (ನಾ). ಯಾವುದಾದರೊಂದು ವಸ್ತು, ವಿಷಯ ಅಥವಾ ವ್ಯಕ್ತಿಯ ವಿಷಯಕವಾಗಿ, ಪರಿಶೀಲನೆಗೆ ಮುಂಚಿತವಾಗಿಯೇ ಮಾಡಿಕೊಂಡ (ಅನುಕೂಲವಾದ ಅಥವಾ ಪ್ರತಿಕೂಲವಾದ) ಅಭಿಪ್ರಾಯ ; ಅವಿಚಾರಕಲ್ಪಿತಅಭಿಪ್ರಾಯಂ ; ಅಭಿನಿವೇಶ : ಅದು ಅನಾರ್ಯಪದ್ಧತಿ ಎಂಬ ಪೂರ್ವಗ್ರಹವನ್ನು ನಾವೇಕೆ ಒಪ್ಪಬೇಕು ? (ಸಂತಪ್ಪ. ೮೨) ; ವಿಮರ್ಶಕನ ಮನಸ್ಸಿನ ಸ್ವಾಸ್ಥ್ಯವನ್ನು ಎಲ್ಲಕ್ಕಿಂತಲೂ ಮಿಗಿಲಾಗಿ ಕೆಡಿಸತಕ್ಕದ್ದು ಪೂರ್ವಗ್ರಹ (ಎಹುರ್ಶಿ. ೦೬).

**ಪೂರ್ವಗ್ರಹಪೀಡಿತ** = ಯಾವುದಾದರೊಂದು ವಸ್ತು, ವಿಷಯ ಅಥವಾ ವ್ಯಕ್ತಿಯ ವಿಷಯವಾಗಿ, ಪರಿಶೀಲನೆಗೆ ಮುಂಚಿತವಾಗಿಯೇ (ಅನುಕೂಲವಾದ ಅಥವಾ ಪ್ರತಿಕೂಲವಾದ) ಅಭಿಪ್ರಾಯವನ್ನು ಹೊಂದಿದ ವ್ಯಕ್ತಿ; ಅವಿಚಾರಕಲ್ಪಿತಅಭಿಪ್ರಾಯವನ್ನುಳ್ಳವನು : ಪೂರ್ವಗ್ರಹಪೀಡಿತರಾದವರಿಂದ ಯಾವ ವಿಚಾರದಲ್ಲಿಯೂ ನಿರ್ದುಷ್ಟವಾದ ಪರಿಶೀಲನೆ ಸಾಧ್ಯವಿಲ್ಲ (ಊ೦). [ಸಂ.]

**ಪೂರ್ವಗ್ರಹಿಕೆ** (ನಾ). = ಪೂರ್ವಗ್ರಹ: ಆದರ್ಶವಾದಿ ಎಷ್ಟೋ ಸಲ ತನ್ನ ವಿಶ್ವದ ಪರಿಚಯವನ್ನ ಸಂಪೂರ್ಣವಾಗಿ ಮಾಡಿಕೊಂಡಿರುವುದಿಲ್ಲ. ಪೂರ್ವಗ್ರಹಿಕೆಯ ಬಣ್ಣದ ಕನ್ನಡಕದಲ್ಲಿಯೆ ಎಲ್ಲವನ್ನೂ ನೋಡುತ್ತಾನೆ (ದೀಕನ್ನ. ೭). [ಸಂ. ಪೂರ್ವಗ್ರಹಿಕಾ]

**ಪೂರ್ವಚಿಂತನೆ** (ನಾ). ಮೊದಲಿನ ಆಲೋಚನೆ: ಪೂರ್ವಚಿಂತನೆಯಿಂದ ಕಂಡು ಉತ್ತರಚಿಂತನೆಯಿಂದ ಖಂಡಿಸಿ . . . ಪುರಾಣಾಗಮಂಗಳೆಲ್ಲವೂ ನಾನಾರೆಂಬುದ ತಿಳಿವುದಕ್ಕಿಕ್ಕಿದ ಭಿತ್ತಿ (ಸಕವ III. ೨೬೩.–೨೦೩). [ಸಂ. ಪೂರ್ವಚಿಂತನಾ]

**ಪೂರ್ವಜ** (ಗು). ೧. ಮೊದಲು ಹುಟ್ಟಿದ; ವಯಸ್ಸಿನಲ್ಲಿ ಹಿರಿಯ. ೨. ಬಹು ಹಿಂದಿನ ಕಾಲಕ್ಕೆ ಸೇರಿದ; ಪುರಾತನ; ಪ್ರಾಚೀನ: ಬಹುಶಃ ಅವುಗಳ ಪೂರ್ವಜ ಕೀಟಗಳಿಗೆ ರೆಕ್ಕೆಗಳು ಇಲ್ಲದೆ ಇದ್ದಿರಬಹುದು (ಕೀಟಜೆ. ೧೩). (ನಾ). ೩. ಹಿರಿಯ ಸೋದರ; ಅಣ್ಣ: "ಅಗ್ರಜಃ, ಪೂರ್ವಜಃ, ಶ್ರೇಷ್ಠಃ—ಈ ೩ ಅಣ್ಣಂ" (ಹಲಾಯು. ೬೩–೩೩). ೪. ವಂಶದಲ್ಲಿ ಹಿಂದೆ ಆಗಿಹೋದವನು; ಮೂಲಪುರುಷ; ಪೂರ್ವಿಕ: ಅವರ ಪೂರ್ವಜರಪ್ಪರಸುಗಳೊಳಗಯೋಧ್ಯಾಪುರಪರಮೇಶ್ವರನುಂ ಸತ್ಯಾದಿಗುಣಾಶ್ರಯವಲ್ಲಭನುಮತಿಪ್ರೌಢದಿಶಾದಂತಿಪ್ರಕಟಪ್ರಭಾವನಪ್ಪ ಸತ್ಯಾಶ್ರಯದೇವನಿಂ (ಗದಾಯು. ೨-೭ ವ); ನಮ್ಮ ಪೂರ್ವಜರ ಪುಣ್ಯದಿಂದ ಕೆಲವು ಸಂಪ್ರದಾಯ ಇನ್ನೂ ಬದುಕಿದ್ದು ನಮ್ಮ ವಿನೋದಪ್ರವೃತ್ತಿಗೆ ಆಗಾಗ ಅನುವು ಮಾಡಿಕೊಡುತ್ತವೆ (ಗಾಳಿ. ೪೩). ೫. (ಚಂದ್ರಲೋಕದಲ್ಲಿ ವಾಸಿಸುವ) ಪಿತೃ. [ಸಂ.]

**ಪೂರ್ವಜನ್ಮ** (ನಾ). ಹಿಂದಿನ ಜನ್ಮಗಳಲ್ಲಿ ಯಾವುದಾದರೊಂದು: ಪೂರ್ವಜನ್ಮನಿವೃತ್ತಿಯಾಗಿ ಗುರುಕರುಣವಿಡಿದಂಗೆ ಬಂಧನವೆಲ್ಲಿಯದೊ (ಶಿಸಪ. ೬೭೦); ಆರೇನು ಮಾಡುವರು ಆರಿಂದಲೇನಹುದು ಪೂರ್ವಜನ್ಮದ ಕರ್ಮವಿಧಿ ಬೆನ್ನ ಬಿಡದು (ಪುರಂದ. ೨-೬೦ ಪಲ್ಲವಿ). [ಸಂ. ಪೂರ್ವಜನ್ಮನ್]

**ಪೂರ್ವತತ್ತು** (ನಾ). ಮೊದಲಿನ ಸಂಬಂಧ; ಪೂರ್ವಾಶ್ರಯ: ಪೂರ್ವತತ್ತ ಬಿಟ್ಟುದು ಭಕ್ತಿಸ್ಥಲ ಮಧ್ಯದ ಭಾವವ ಬಿಟ್ಟುದು ಮಾಹೇಶ್ವರಸ್ಥಲ ತ್ರಿವಿಧದ ಕೂಟವ ಬಿಟ್ಟುದು ಪ್ರಸಾದಿಸ್ಥಲ (ಸೋಶವಚ. ೦೩೯–೩೩೬). [ಪೂರ್ವ + ತತ್ತು]

**ಪೂರ್ವದಿಕ್ಕು** (ನಾ). ಮೂಡಣ ದೆಸೆ: ಈ ಕೋಲರು ಕೇವಲ ಭಾರತದ ಪೂರ್ವದಿಕ್ಕಿನಲ್ಲಿ ಮಾತ್ರ ನೆಲಸಿದಂತೆ ತೋರುತ್ತದೆ (ದ್ರಾಎಂ. ೩೦); ನಾವು ಪೂರ್ವದಿಕ್ಕಿನ ಕಡೆ ನಮ್ಮ ಮುಖ ತಿರುಗಿಸೋಣ . . . ಚಂದ್ರನು ನಮ್ಮ ಗಮನವನ್ನು ಕೂಡಲೆ ಸೆಳೆಯುತ್ತಾನೆ (ನಕ್ಷತ್ರ. ೪). [ಪೂರ್ವ + ದಿಕ್ಕು]

**ಪೂರ್ವದಿಕ್ಪತಿ** (ನಾ). ಮೂಡಣ ದಿಕ್ಕಿನ ಒಡೆಯ; ಇಂದ್ರ: "ಇಂದ್ರಃ . . . ಪೂರ್ವದಿಕ್ಪತಿಃ . . . ಮೇಘವಾಹನಃ—ಈ ೩೯ ದೇವೇಂದ್ರನ ಪೆಸರ್" (ಹಲಾಯು. ೦೦-೩೩). [ಸಂ.]

**ಪೂರ್ವದೀರ್ಘ** (ನಾ). [ವ್ಯಾಕ] ಹಿಂದಿನ ಸ್ವರ ದೀರ್ಘವಾಗಿರುವ ಶಬ್ದ: ಪೂರ್ವದೀರ್ಘಮಾದೊಡಂ ಅವ್ಯಯಮಾದೊಡಂ ಅನೇಕಾಕ್ಷರಮಾದೊಡಂ ದ್ವಿತ್ವಮಿಲ್ಲ (ಶಮದ. ೬೯ ವೃತ್ತಿ). [ಸಂ.]

**ಪೂರ್ವದೇವ** (ನಾ). ೧. ಹಿಂದೆ ದೇವತೆಗಳಾಗಿದ್ದು, ಅನ್ಯಾಯ, ಅಕೃತ್ಯಗಳಿಂದ ಹಾಗು ದ್ವೇಷದಿಂದ ದೇವತ್ವವನ್ನು ಕಳೆದುಕೊಂಡ ವರ್ಗ. ೨. ದೇವತೆಗಳ ಶತ್ರು; ರಾಕ್ಷಸ: "ಅಸುರಃ, ದಾನವಃ . . . ಪೂರ್ವದೇವಃ, ಶುಕ್ರಶಿಷ್ಯಃ, ಪಾತಾಲನಿಲಯಃ (ಸ್ಮೃತಾಃ)—ಈ ೮ ಅಸುರರ ಪೆಸರ್" (ಹಲಾಯು. ೨-೩); ಅಮೇಯಂ ಸಕಲನೃಪಕುಲಜ್ಯಾಯನಾಂ ಪೂಜನೀಯಂ ಸಮನಾಮಂ ಪೂರ್ವದೇವಂಗೆನಗೆ (ಜಗಪ. ೦೩-೬೦). ೩. ಅನಾದಿದೇವ; ಪುರಾತನಪುರುಷ; ವಿಷ್ಣು. ೧, ೩: ಈ ಮಹಾಪುರುಷಂ . . . ಸಪ್ತಾರ್ಚಿಯಾಗಿಯುಂ ಹುತವಹನಲ್ತು ಸಮವರ್ತಿಯಾಗಿಯುಂ ದಕ್ಷಿಣದಿಕ್ಪಾಲಕನಲ್ತು ಪೂರ್ವದೇವನಾಗಿಯುಂ ನೈಋತನಲ್ತು (ಜಗಪ. ೬-೦೦ ವ). [ಸಂ.]

**ಪೂರ್ವದ್ರಾವಿಡ** (ನಾ). ದ್ರಾವಿಡಭಾಷೆಗಳಿಗೆ ಮೂಲವಾಗಿ ಇದ್ದಿರಬಹುದಾದ ಪ್ರಾಚೀನ ಭಾಷಾರೂಪ; ಮೂಲದ್ರಾವಿಡ: ಕ್ರಿ.ಪೂ. ೮೦೦–೬೦೦ ವರುಷಗಳಿಂದಲೂ ಈ ದ್ರಾವಿಡಭಾಷೆ ಬೆಳೆದುಬಂದಿರಬೇಕೆಂದು ಹೇಳಲು ಸಾಧ್ಯವಿದೆ. ಆಗಿನ ದ್ರಾವಿಡಭಾಷೆಯನ್ನು ಮೂಲದ್ರಾವಿಡ ಅಥವಾ ಪೂರ್ವದ್ರಾವಿಡ ಅಥವಾ ಪ್ರಾಕ್‌ದ್ರಾವಿಡವೆಂದು ಕರೆಯಲಾಗಿದೆ (ದ್ರಾಎಂ. ೩೨). [ಸಂ.]

**ಪೂರ್ವಧರ** (ನಾ). [ಜೈನ] ಪೂರ್ವಗಳೆಂಬ ಆಗಮಗಳನ್ನು ಚೆನ್ನಾಗಿ ತಿಳಿದವನು; ಚತುರ್ದಶಪೂರ್ವಗಳಲ್ಲಿ ಪಾರಂಗತನಾದವನು: ಎಣ್ಬತ್ತುನಾಲ್ವರ್ ಗಣಧರದೇವರುಂ ನಾಲ್ಸಾಸಿರದೇಟ್ನೂಱಯ್ವದಿಂಬರ್ ಸಕಲಪೂರ್ವಧರರುಂ ನಾಲ್ಸಾಸಿರದೈನೂಱಯ್ವದಿಂಬರ್ ಶಿಕ್ಷಕರುಂ (ಆದಿಪು. ೦೩-೯೦ ವ); ಇರ್ಪತೆಣ್ಬರ್ ಗಣಧರರುಂ ಅಯ್ನೂಱಯ್ವದಿಂಬರ್ ಪೂರ್ವಧರರುಂ (ಪಾಲ್ಚಪು. ೦೪–೦೬೯). [ಸಂ.]

**ಪೂರ್ವನಾಡಿ** (ನಾ). ದೇಹದೊಳಗಿನ ನಾಡಿಗಳಲ್ಲಿ ಒಂದು: ಮಯೂರನಾಡಿ . . . ಉತ್ತರನಾಡಿ ಪೂರ್ವನಾಡಿ ಪಶ್ಚಿಮನಾಡಿ ಗಜಗಮನನಾಡಿ, ಅಚ್ಯುತ್ತನಾಡಿ . . . ಸಂತೋಷನಾಡಿ ಇಂತೀ ನಾಡಿಗಳೊಳಗಾದ ಶರೀರದಲ್ಲಿ ತೋಱುವ ನಾಡಿ ಜೀರ್ಣವರ್ಣದಂತೆ (ಶರಶ. ೪೯೦). [ಸಂ.]

**ಪೂರ್ವನಿರ್ದಿಷ್ಟ** (ಗು). ಮುಂಚೆ ನಿಶ್ಚಯಿಸಿದ: ಮೊದಲು ನಿರ್ಧಾರ ಮಾಡಿದ; ಪೂರ್ವನಿಶ್ಚಿತ: ಈ ಷಡ್ದರ್ಶನಗಳೂ ಅಲ್ಲಲ್ಲಿ ತಮ್ಮ ಪೂರ್ವನಿರ್ದಿಷ್ಟಉದ್ದೇಶದಿಂದ ಭಿನ್ನವಾದ ಅಡ್ಡದಾರಿ ಹಿಡಿದಂತೆ ಕಾಣುತ್ತದೆ (ಭಾರಪ. ೧೨೦). [ಸಂ.]

**ಪೂರ್ವನಿರ್ದೇಶಿತ** (ಗು). ಮುಂಚೆ ತೋರಿಸಿದ,—ತಿಳಿಸಿದ: ಇವೆಲ್ಲವನ್ನೂ ಪೂರ್ವನಿರ್ದೇಶಿತ ರೂಪದಲ್ಲಿ ನಡೆಸಬೇಕು (ಶಿಕ್ಷದ. ೬೩೭). [ಸಂ.]

**ಪೂರ್ವನಿಶ್ಚಯ** (ನಾ). ಮೊದಲೇ ಮಾಡಿದ ನಿರ್ಣಯ; ಮುಂಚಿತವಾಗಿ ಮಾಡಿಕೊಂಡ ತೀರ್ಮಾನ: ಅವರು ಪೂರ್ವನಿಶ್ಚಯವಿಲ್ಲದೆ ಯಾವ ಕಾರ್ಯದಲ್ಲೂ ತೊಡಗುವುದಿಲ್ಲ (ಕೂಬಿ). [ಸಂ.]

**ಪೂರ್ವನಿಶ್ಚಿತ** (ಗು). ೧. ಮೊದಲೇ ನಿರ್ಧಾರವಾದ,—ನಿಗದಿಯಾದ. (ನಾ). ೨. ಮೊದಲೇ ನಿರ್ಣಯಿಸಿದುದು: ಅನುಭವಾನ್ನ ಹುಡುಕಿಕೊಂಡು ಹೋದರೆ, ಸಿಗೋದು ಪೂರ್ವನಿಶ್ಚಿತವಾದದ್ದು (ಹೊಸಕ್ತ. ೨೪೬). [ಸಂ.]

**ಪೂರ್ವನೇತ್ರ** (ನಾ). ಕಣ್ಣಿನ ಕುಣಿಕೆ: "ಅಕ್ಷಿಮೂಲಂ ಪೂರ್ವನೇತ್ರಮೆಂಸೆ ಮೊದಲಗಣ್" (ಚುಂಗಾ. ೪೪-೩). [ಸಂ.]

**ಪೂರ್ವಪಕ್ಷ** (ನಾ). ೧. ತಿಂಗಳಿನ ಮೊದಲನೆಯ ಹದಿನೈದು ದಿನಗಳ ಅವಧಿ; ಶುಕ್ಲಪಕ್ಷ. ೨. ವಾದವನ್ನು ಮಂಡಿಸುವ ಮೊದಲ ಭಾಗ. ೩. ಶಾಸ್ತ್ರಸಿದ್ಧಾಂತವನ್ನೋ, ಪ್ರಮೇಯವನ್ನೋ ವಿರೋಧಿಸುವುದಕ್ಕಾಗಲಿ ಅಥವಾ ಸಂಶಯಗಳ ಪರಿಹಾರಕ್ಕಾಗಲಿ ಹೂಡುವ ಪ್ರಶ್ನಸಹಿತವಾದ ಯುಕ್ತಿ: ಇಲ್ಲಿಗೇವಿಧೇಯಂ ಮಾಟ್ಟುದೆಂದು ಪೂರ್ವಪಕ್ಷದ ಪಕ್ಷಸಿದ್ಧಿಯ ವಿಸ್ತಾರಕ್ಕವಕಾಶಮಪ್ಪಂತು ನುಡಿದು (ಶಾಂತಿಪು. ೨-೩೩ ವ); ಪೂರ್ಣವಾಗಿ ವಿಚಾರ ಮಾಡದೆ ಇರುವಾಗ ತೋರುವ ಪಕ್ಷವೇ ಪೂರ್ವಪಕ್ಷವು (ಬ್ರಹ್ಮಸೂ. ೩೭-೨); ಅವಳು ಹೀಗೆ ತನ್ನ ಇಡೀ ಪೂರ್ವಪಕ್ಷವನ್ನೇ . . . ವಿರೋಧಿಸುತ್ತಾಳೆಂದು ಅವನು ಬಗೆದಿರಲಿಲ್ಲ (ದೂರಕ. ೨೬೯). ೪. ಹೇಳಿಕೆ; ಪ್ರತಿಪಾದನೆ. ೫. ವಿರುದ್ಧವಾದ ಹೇಳಿಕೆ: ನಿಮ್ಮಯ ಪೂರ್ವಪಕ್ಷಮೆಮಗಾದುದೇ ಮಲಂ ಸಿದ್ಧಾಂತಂ (ಗದಾಯು. ೪-೮). [ಸಂ.]

**ಪೂರ್ವಪಕ್ಷಿ** (ನಾ). ಪೂರ್ವಪಕ್ಷವನ್ನು ಮಂಡಿಸುವವನು: ಸಿದ್ಧಾಂತವನ್ನು ವಿರೋಧಿಸಿ ಪ್ರಶ್ನಿಸುವವನು : ಸಿದ್ಧವಸ್ತುವು ಪ್ರತ್ಯಕ್ಷಾದಿಗಳಿಗೆ ವಿಷಯವಾಗುವುದರಿಂದ ಶಾಸ್ತ್ರಕ್ಕೆ ಅನುವಾದ ತತ್ತ್ವವು ಬರುವುದೆಂಬ ದೋಷವನ್ನು ಇಲ್ಲಿ ಪೂರ್ವಪಕ್ಷಿಯು ತೆಗೆದಿರುತ್ತಾನೆ (ಶ್ರೀಕೃಶಾ. ೨೨ ೮೮೪). [ಸಂ. ಪೂರ್ವಪಕ್ಷಿನ್]

**ಪೂರ್ವಪದ** (ನಾ). [ವ್ಯಾಕ] (ಸಮಾಸದಲ್ಲಿ) ಮೊದಲು ಇರುವ ಪದ : ಪರಪದಪೂರ್ವಂ ದ್ವ್ಯಕ್ಷರವಾಗಿರೆ ಪೂರ್ವಪದದ ಚರಮಂ ಹ್ರಸ್ವಾಕ್ಷರವಾಗೆ ಸಂಧಿದೋಷಂ (ಶಮದ. ೫೯) ; ಉತ್ತರಪದವೆಂದರೆ ಮುಂದೆ ನಿಲ್ಲುವ ಪದ; ಹಿಂದೆ ನಿಲ್ಲುವ ಪದಕ್ಕೆ 'ಪೂರ್ವಪದ' ಎಂದು ಹೆಸರು. 'ಮಳೆಗಾಲ' ಎಂಬುವದರಲ್ಲಿ 'ಮಳೆ' ಪೂರ್ವಪದ; 'ಕಾಲ' ಉತ್ತರಪದ (ಶುದ್ಧಮ. ೨೦ ೮೩೪). [ಸಂ.]

**ಪೂರ್ವಪರಾಮರ್ಶೆ** (ನಾ). ಹಿಂದಿನ ಸಂಗತಿಯ ಸ್ಮರಣೆ; ಪೂರ್ವಸ್ಮರಣೆ : ಆಯೆಂಬುದು ಪೂರ್ವಪರಾಮರ್ಶೆಗವೊದವುಗುಂ (ಶಮದ. ೦೬೯). [ಸಂ. ಪೂರ್ವಪರಾಮರ್ಶ]

**ಪೂರ್ವಪರಿಷ್ಕಾರ** (ನಾ). ಮುಂಚೆ ಮಾಡಿಕೊಳ್ಳಬೇಕಾದ ಅವಶ್ಯಕ ಬದಲಾವಣೆ, ಹೊಂದಾಣಿಕೆ, ಸಿದ್ಧತೆ ಮೊದಲಾದ ಕಾರ್ಯ : ಭಿನ್ನಶ್ರುತಿಪ್ರಮಾಣವಿರುವ ವಾದ್ಯಸಮೂಹವು ಪ್ರಬಲವಾಗಿ ರಚನೆಗಳಲ್ಲಿಯೂ, ಪ್ರಯೋಗದಲ್ಲಿಯೂ ಪೂರ್ವಪರಿಷ್ಕಾರದ ಅವಶ್ಯಕತೆಯು ಹೆಚ್ಚಿ . . . ಸಂಗೀತವು ಒಂದು ಮೂರುಕಾಲಿನ ಓಟದಂತೆ (Three legged race) ಆಗಿದೆ (ಶಾಠದ. ೩೩೬). [ಸಂ.]

**ಪೂರ್ವಪರ್ವತ** (ನಾ). ಮೂಡಣದಿಕ್ಕಿನ ಬೆಟ್ಟ; ಸೂರ್ಯನು ಹುಟ್ಟುವ ಪರ್ವತ ; ಉದಯಾಚಲ : "ಉದಯಃ, ಪೂರ್ವಪರ್ವತಃ– ೨ ಉದಯಪರ್ವತದ ಹೆಸರುಗಳು. ಮೂಡಲಲ್ಲಿ ಸೂರ್ಯನು ಮೂಡುವುದಕ್ಕೆ ಸಂಧ್ಯಾಸ್ಥಾನವಾದ ಪೂರ್ವಾದ್ರಿ" (ಸಿದ್ಧಾಂತಿ. ೦೦೬). [ಸಂ.]

**ಪೂರ್ವಪುಣ್ಯ** (ನಾ). ಮುಂಚಿನ ಜನ್ಮಗಳಲ್ಲಿ ಗಳಿಸಿದ ಪುಣ್ಯ : ಕನ್ನಡದೊಳಗೆನಗಭಿರುಚಿ ಬೆಳೆಯಿತು ಪೂರ್ವಪುಣ್ಯದ ಫಲದ ತೆರದೆ (೩೦ಜಾಕ. ೨೩೪). [ಸಂ.]

**ಪೂರ್ವಪ್ರಕೃತಿ** (ನಾ). ಮೊದಲಿನ ಸ್ಥಿತಿ; ಮುಂಚಿನಿಂದಲೂ ಬಂದ ಸಹಜಸ್ಥಿತಿ ; ಅರಳಿದ ಮಧುಮಾಸ ಮಾಣಲಿ ಮರುಷುಟುವೇ ಸಾಕು ಜಾತಿಗೆ ಜಡರಿಮಾಗಿನ್ನೇನು ಪೂರ್ವಪ್ರಕೃತಿ ವನವಾಸ (ಕುದ್ವಾಕ. ೦೬ ೩೨). [ಸಂ.]

**ಪೂರ್ವಪ್ರಜ್ಞೆ** (ನಾ). ಮುನ್ನರಿವು ; ಮುಂಗಾಣ್ಕೆ; ಪೂರ್ವಸೂಚನೆ: ಸ್ನಾನ ಮಾಡುವಾಗ, ದೇವರಪೂಜೆಗೆ ಕುಳಿತಾಗ ಕೇಳಲಿರುವ ಯಾವುದೋ ಕೆಡಕಿನ ಪೂರ್ವಪ್ರಜ್ಞೆಯಿಂದ ಎಂಬಂತೆ ಜೀವ ನಡುಗಿತು (ಶುರುಡಾ. ೦೯). [ಸಂ. ಪೂರ್ವಪ್ರಜ್ಞಾ]

**ಪೂರ್ವಪ್ರತ್ಯಯ** (ನಾ). [ವ್ಯಾಕ]ಶಬ್ದಗಳ ಆದಿಯಲ್ಲಿ ಸೇರಿ ಪದವನ್ನು ಸಿದ್ಧಗೊಳಿಸುವ ಪ್ರತ್ಯಯ; ಉಪಸರ್ಗ: ಪೂರ್ವಪ್ರತ್ಯಯ (ಪ್ರಿಫಿಕ್ಸ್), ಪರಪ್ರತ್ಯಯ(ಸಫಿಕ್ಸ್), ಅಂತಃಪ್ರತ್ಯಯ(ಇನ್‌ಫಿಕ್ಸ್) (ಕಂಕೋ. I. ೬೬೩). [ಸಂ.]

**ಪೂರ್ವಫಲ್ಗುನಿ** (ನಾ). ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹನ್ನೊಂದನೆಯದು. [ಸಂ. ಪೂರ್ವಫಲ್ಗುನೀ]

**ಪೂರ್ವಭವ** (ನಾ). =ಪೂರ್ವಜನ್ಮ ; ಶಾರ್ದೂಲನ ಪೂರ್ವಭವವೃತ್ತಾಂತಮುಮಂ . . . ಆಲಿಸಿ (ಆದಿಪು. ೫ ೧೦ ವ); ನಿನ್ನ ತಪಕ್ಕೆ ಮೆಚ್ಚಿ ಪರಮಿತ್ರಂ ಶ್ರೀಪರಂ ತಾನೆ ನಂದನನಪ್ಪಂ ನಿನಗೆಂದು ಪೂರ್ವಭವದೊಳ್ (ಶಾಂ. ೨-೬೯). [ಸಂ.]

**ಪೂರ್ವಭಾಗ** (ನಾ). ೧. ಮೊದಲನೆಯ ವಿಭಾಗ—ಖಂಡ : ವೇದದಲ್ಲಿ ಪೂರ್ವಭಾಗ, ಉತ್ತರಭಾಗವೆಂದು ಎರಡು ವಿಭಾಗ (೬೦ಠಶಾ. ೨೯೩). ೨. ಮೂಡಣದಿಕ್ಕಿಗಿರುವ ಪ್ರದೇಶ; ಪೂರ್ವಪಾರ್ಶ್ವ : ಬೆಟ್ಟದ ಪೂರ್ವಭಾಗದಲ್ಲಿ ಒಂದು ಆಳವಾದ ಕಮ್ಮರಿಯಿದೆ (೬೨೦). ೩. ಮುಂಭಾಗ: ಮುಂದಿನ ಪ್ರದೇಶ. [ಸಂ.]

**ಪೂರ್ವಭಾವಿ** (ಗು). ೧. ಮುಂಚೆ ಇರುವ ; ಮೊದಲೇ ಇರುವ. ೨. ಮುಂಚೆ ಆಗಬೇಕಾದ ; ಮೊದಲೇ ಮಾಡಬೇಕಾದ: ಈ ಕೆಲಸಕ್ಕೆ ಕೆಲವು ಪೂರ್ವಭಾವಿ ಸಿದ್ಧತೆಗಳನ್ನು ಮಾಡುವುದು ಅಗತ್ಯ (ಹುದ್ರಿ. ೩೮). (ನಾ). ೩. ಮೊದಲನೆಯದು ; ಮುಂಚಿತವಾದುದು : ಪ್ರತಿಷ್ಠಾಪನೆಗೆ ಪೂರ್ವಭಾವಿಯಾದ ವಿಧಿಗಳೆಲ್ಲ ಸಾಂಗವಾಗಿ ನಡೆದುವು (೩ಾಂಕಲಾ. ೦೨೯) ; ಓದು ಬರಹ, ಲೆಕ್ಕಗಳನ್ನು ಹೇಳಿಕೊಡದಿದ್ದರೂ ಅವುಗಳನ್ನು ಕಲಿಯಲು ಆವಶ್ಯಕವಾದ ಪೂರ್ವಭಾವಿಯಾದ ಶಿಕ್ಷಣವೀಯಬಹುದು (ಶಿಕ್ಷದ. ೦೨೮). [ಸಂ. ಪೂರ್ವಭಾವಿನ್]

**ಪೂರ್ವಭಾಷಿ** (ನಾ). (ಗೌರವಸೂಚಕವಾಗಿ) ಬೇಡುವವರನ್ನು ತಾನೇ ಮೊದಲು ಮಾತನಾಡಿಸುವ ವ್ಯಕ್ತಿ. [ಸಂ. ಪೂರ್ವಭಾಷಿನ್]

**ಪೂರ್ವಮರ್ಯಾದೆ** (ನಾ). ಹಿಂದಿನಿಂದ ನಡೆದು ಬಂದ ಕ್ರಮ ; ಸಂಪ್ರದಾಯ : ನಾಲ್ಕು ನಾಡ ಸುಂಕಮಂ ಪೂರ್ವ್ವಮರ್ಯ್ಯಾದೆಯಂ ಪ್ರತಿಪಾಳಿಸಿ ಕೊಟ್ಟ ಸಾಸನಂ (ಕಇ೩. ೦೦೩-೦೯-೨೫; 1057). [ಸಂ. ಪೂರ್ವಮರ್ಯಾದಾ]

**ಪೂರ್ವಮೀಮಾಂಸೆ** (ನಾ). [ತತ್ತ್ವಶಾ] ಸಾಂಖ್ಯ, ವೈಶೇಷಿಕ ಮೊದಲಾದ ಆರು ದರ್ಶನಗಳಲ್ಲಿ ಒಂದು ; ಕರ್ಮಮೀಮಾಂಸೆ ; ವೇದಗಳಲ್ಲಿ ಉಕ್ತವಾದ ಕರ್ಮಾಚರಣೆ ಹಾಗೂ ವೇದಪಾಠಗಳನ್ನು ಕುರಿತ ನಿರ್ಣಯಗಳನ್ನೊಳಗೊಂಡು ಜೈಮಿನಿಋಷಿಗಳಿಂದ ರಚಿತವಾದ ದರ್ಶನ : ಪೂರ್ವಮೀಮಾಂಸೆಯು ತಾತ್ಪರ್ಯನಿರ್ಣಾಯಕವಾದ ಉಪಕ್ರಮಾದಿ ಷಡ್ವಿಧಲಿಂಗಂಗಳಂ ವೇದವಾಕ್ಯವಿಚಾರಪೂರ್ವಕಮಾಗಿ ಜ್ಯೋತಿಷ್ಟೋಮಾದಿ ಯಾಗಪ್ರಮುಖವಿಧಾನಕ್ರಮಮಂ ನಿರ್ವಹಿಸುವುದರಿಂದ ಕರ್ಮಕಾಂಡಮೆನಿಪುದು (ಚಪೇಳ. ೯) ; ಜೈಮಿನಿಸೂತ್ರಕ್ಕೆ ಪೂರ್ವಮೀಮಾಂಸೆ, ಧರ್ಮಮೀಮಾಂಸೆಯೆಂದೂ, ಬಾದರಾಯಣಸೂತ್ರಕ್ಕೆ ಉತ್ತರಮೀಮಾಂಸೆ, ಬ್ರಹ್ಮಮೀಮಾಂಸೆಯೆಂದೂ ವ್ಯವಹಾರ (ಹಿಂದಸಾ. ೦೯೯). [ಸಂ. ಪೂರ್ವಮೀಮಾಂಸಾ]

**ಪೂರ್ವರಂಗ** (ನಾ). ೧. ಪೂರ್ವಸಿದ್ಧತೆ ; ಪೂರ್ವಭಾವಿವ್ಯವಸ್ಥೆ : ಜಿನಜನ್ಮಾಭಿಷವಂ ನರ್ತನದಿಂ ಸೊಗಯಿಸುವುದಂತದಂ ಸುರರಾಜಂ ಪುನರುಕ್ತಂ ಮಾಡೆ ಜಿನೇಂದ್ರನ ವಿಹರಣಪೂರ್ವರಂಗಮೇನೊಪ್ಪಿದುದೋ (ಶಾಂತಿಪು. ೦೨-೦೬). ೨. [ನಾಟ್ಯ] ನೃತ್ಯ ಅಥವಾ ನಾಟಕವು ಆರಂಭವಾಗುವುದಕ್ಕೆ ಪೂರ್ವಭಾವಿಯಾಗಿ ರಂಗಸ್ಥಳದಲ್ಲಿ ನಡೆಸತಕ್ಕ ರಂಗಪೂಜೆ, ನಾಂದಿ ಮೊದಲಾದ ಕಾರ್ಯಕ್ರಮ : ಶುದ್ಧಚಿತ್ರ[ಅಥವಾ. ಪವಿತ್ರ, ವಿಚಿತ್ರ]ಮೆಂಬ ಪೂರ್ವರಂಗಪ್ರಸಂಗದೊಳ್ ಜರ್ಜರಪೂಜಾಮಂಗಲಪಠೋಚ್ಚಾರಣಪುಷ್ಪಾಂಜಲಿವಿಕ್ಷೇಪಣಾದಿ ನಾಂದೀವಿಧಿಯಂ ನಿರ್ವರ್ತಿಸಿ (ಆದಿಪು. ೬-೦೦೩ ವ) ; ಪೂರ್ವರಂಗಪ್ರಸಂಗದೊಳುರ್ವಿಂದಂ ಕೂಡೆ ಚೆಲ್ಲಿ ಪುಷ್ಪಾಂಜಳಿಯಂ ಸರ್ವಜ್ಞಂಗೆಜಿಗಿ ಮುಂದಂ ಪರ್ವಿನ್ನಂ ನಡೆದು ಬಂದು ರಂಗಮನೊಕ್ಕಂ (ಚಾಠಶು. ೯.೦೦) ; ಪೂರ್ವರಂಗವೆಂದರೆ ನಾಟಕದ ಕಥೆ ಕ್ರಮವಾಗಿ ಆರಂಭವಾಗುವುದಕ್ಕೆ ಮುಂಚೆ ರಂಗಸ್ಥಾನದಲ್ಲಿ ನಟರು ನಡಸ ತಕ್ಕ ಕಾರ್ಯಗಳು (ಕೈಶಿಶಿ. ೨೦೨). ೩. ಮೊದಲನೆಯ ನೃತ್ಯ : " ಮೊದಲ ನಾಟ್ಯಮಂ ಪೂರ್ವರಂಗಮೆಂಬುದು " (ಹರಾಯು. ೦೬-೯೩). [ ಸಂ. ]

**ಪೂರ್ವರಾಗ** (ನಾ). [ಕಾವ್ಯಮೀ] ನಾಯಕನಾಯಿಕೆಯರ ಸಮಾಗಮಕ್ಕೆ ಪೂರ್ವದಲ್ಲಿಯೇ ಅವರಿಬ್ಬರಲ್ಲಿ ಉಂಟಾಗುವ ಪರಸ್ಪರ

ಪ್ರೇಮಭಾವ,-ಅನುರಾಗ ; ಕಣ್ಣೋಟ, ಕಿವಿಮಾತುಗಳಿಂದ ಉದ್ಭವಿಸುವ ಅನುರಾಗ: ಸೀತೆಯ ಮನಸ್ಸಿನಲ್ಲಿ 'ಪೂರ್ವ-ರಾಗ'ವನ್ನು ಉದ್ದೀಪನಗೊಳಿಸುವುದು ಕವಿಯ ಅಭೀಪ್ಸೆಯಾಗಿದೆ (ಕ್ರೀ.ಕೃ. ೨). [ಸಂ.]

**ಪೂರ್ವರಾತ್ರಿ** (ನಾ). ಸಾಯಂಕಾಲದಿಂದ ಮಧ್ಯರಾತ್ರಿಯ ವರೆಗಿನ ಸಮಯ; ಇರುಳಿನ ಪೂರ್ವಾರ್ಧ: ಪೂರ್ವರಾತ್ರಿಯಲ್ಲಿ ಬೇಗನೆ ಮಲಗಿಕೊಂಡು, ಬೆಳಗ್ಗೆ ಬೇಗ ಏಳುವುದು ಬಹಳ ಒಳ್ಳೆಯದು (ಮ.ಆರ. ೪-೨೩). [ಸಂ.]

**ಪೂರ್ವರಾತ್ರೆ** (ನಾ). = ಪೂರ್ವರಾತ್ರಿ : ತುರಗಂ ವಾಯುನ್ಯಾದಿಶಾಂತರದೊಳ್ ಪುನರವದೆ ಪಲವು ಸೂಬುಂ ಕಳಿದುತ್ತಿರೆ ಪೂರ್ವರಾತ್ರೆಯೊಳ್ ತನ್ನರಸನ ಪೆರ್ಗಡೆಗೆ ಮರಣಮಂ ಪ್ರಕಟಿಸುಗುಂ (ಅಶ್ವಶಾ. ೪ ೩೬). [ಸಂ. ಪೂರ್ವರಾತ್ರ]

**ಪೂರ್ವರೂಪ** (ನಾ). ೧. ಮೊದಲು ಇದ್ದ ರೂಪ,-ಆಕಾರ; ಹಿಂದಿನ ರೂಪ. ೨. ಹಿಂದಿರುವ ಅಕ್ಷರದ ರೂಪ: ನಿರುತಂ ಟಚಟತಪಂಗಳಪರದ ದಕಾರಕ್ಕೆ ಪೂರ್ವರೂಪಮದಕ್ಕುಂ (ಶಮದ. ೨೪೦). ೩. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು: ಒಂದು ವಸ್ತುವು ತನ್ನ ಗುಣವನ್ನು ಬಿಟ್ಟು ಬೇರೆ ಗುಣವನ್ನು ಹೊಂದಿದ್ದರೂ ಕಾರಣಾಂತರದಿಂದ ಪುನಃ ತನ್ನ ಮೂಲಗುಣವನ್ನೇ ಪಡೆಯುವುದು: ಒಂದು ವಸ್ತುವಿನ ಗುಣಂ ಪೆರತೊಂದು ತೆಱನಾಗಿ ತೋರ್ಪ ಮಗುಳ್ದಿಂದಿನಂತಾದುದೆಂಬುದು ಪೂರ್ವರೂಪಂ ಎಂತೆನೆ ಏಗೂರರಸನ ಪೆಂಡಿರ ಮೂಗುತಿ ಕಣ್ಣಾನಿಯೊಳೆಟ್ಟ ಕಾಡಿಗೆಯಿಂ ಕರ್ಪಾಗಿ ಬಟ್ಟಿಕೆಗುವ ತಸನೀರ್ ತಗುಮಿನಂ ತೊಳಗಿತ್ತೆಂದಿನಂತಪ್ರಶಿಸಂ (ಅಕ್ರ.ಚಿ. ೧೧-೯೯). [ಸಂ.]

**ಪೂರ್ವರೂಪಾಲಂಕಾರ** (ನಾ). = ಪೂರ್ವರೂಪ ೩ : ತನ್ನ ಗುಣವನು ಬಿಟ್ಟು ಅಂತಹ ಅನ್ಯಗುಣವನು ಹೊಂದಿ ಮತ್ತೆ ತನ್ನ ಪೂರ್ವಗುಣವನು ಹೊಂದಿದಡೆ ಪೂರ್ವರೂಪಾಲಂಕಾರ (ಕು.ಶಂ. ೧೯೦). [ಸಂ.]

**ಪೂರ್ವಲಿಖಿತ** (ನಾ). (ಅಲಂ) ಹುಟ್ಟುವುದಕ್ಕೆ ಮುಂಚೆಯೇ ನಿರ್ಧಾರವಾದುದು: ಹಣೆಬರಹ; ವಿಧಿಲಿಖಿತ: ಮಾಣದೆ ಅರಳಿಯ ತಿಟ್ಟನೆ ತಿರುಗುವ ಗಣದೆತ್ತಿನಂತೆ ಪೂರ್ವಲಿಖಿತ ಮುಂದುಗಾಣಲೀಯದು (ಚಕಶ. ೩೯೦) ; ಪೂರ್ವಲಿಖಿತವಿದಾಯಿತು (ಚಕೃ. ೪೮-೦೨). [ಸಂ.]

**ಪೂರ್ವವಯಸ್ಸು** (ನಾ). ಎಳೆಯ ವಯಸ್ಸು; ತಾರುಣ್ಯ; ಯೌವನ: ಪೂರ್ವವಯಸ್ಸಿನ ಪರಿಶುದ್ಧ ಪರಿಸ್ಥಿತಿಯನ್ನವಳು ಪಡೆಯಬೇಕೆಂಬುದೂ ಅವನ ಇಚ್ಛೆಯಾಗಿತ್ತು (ಪುಸರು. ೧೯೬). [ಸಂ. ಪೂರ್ವವಯಸ್]

**ಪೂರ್ವವರ್ಣ** (ನಾ). ಹಿಂದಿರುವ ಅಕ್ಷರ: ಲಘ್ವಾದಿಯೂ ದ್ವಿಲಘುಸ್ವರಯುಕ್ತವೂ ಆದ ಧಾತುವಿನ ಅಂತ್ಯಾಕ್ಷರವು ಗು, ಸು, ಡು, ಱು ಆಗಿದ್ದರೆ ಆ ಅಕ್ಷರಗಳಿಗೆ ಕ್ರಮವಾಗಿ ಕ್, ಚ್, ಟ್, ತ್‌ಗಳೂ ಪ್ರತ್ಯಯಕ್ಕೆ ಪೂರ್ವವರ್ಣವೂ (ಕ್, ಚ್, ಟ್, ತ್) ಆದೇಶವಾಗುತ್ತವೆ (ಕೈಪಿ. ೪೭). [ಸಂ.]

**ಪೂರ್ವವಾಸನೆ** (ನಾ). ೧. ಹಿಂದಿನ ಜನ್ಮದ ನೆನಪು; ಪೂರ್ವಜನ್ಮದ ಸ್ಮರಣೆ: ಮೆಲ್ಲಮೆಲ್ಲನೆ ಪೂರ್ವವಾಸನೆ ಮನಕೆ ತೋರ್ಪುದು ಇಲ್ಲಿ ಪುಟ್ಟಿದುದಲ್ಲ ಎನಸಿನಂದದೆ ತೋರ್ಪ (ಕಂಚರಿ. ೬-೦೦೯). ೨. ಪೂರ್ವಜನ್ಮದ ಸಂಸ್ಕಾರ: ಈ ಬುದ್ಧಿ ಅವನವನ ಪೂರ್ವವಾಸನೆಗಳಿಂದ . . . ಅಲ್ಲಿ ಪ್ರಧಾನವಾದ ತಾಮಸ ಅಥವಾ ರಾಜಸಗುಣಗಳ ಪ್ರಬಲತೆಗೆ ಅವಕಾಶ ಮಾಡುತ್ತದೆ (ಕೌಂತಶ. ೦೦೦). [ಸಂ. ಪೂರ್ವವಾಸನಾ]

**ಪೂರ್ವವಿದೇಹ** (ನಾ). [ಜೈನ] ಸುಮೇರುಪರ್ವತದ ಪೂರ್ವದಿಕ್ಕಿನಲ್ಲಿ ಇದ್ದ ಕಚ್ಛ ಮೊದಲಾದ ಹದಿನಾರು ಕ್ಷೇತ್ರಗಳ ಪ್ರದೇಶ; ೨ ಜಂಬೂದ್ವೀಪದ ಸಪ್ತಕ್ಷೇತ್ರಗಳಲ್ಲಿ ಒಂದು; ಮಂದರದ ಪರ್ವತದ ಪೂರ್ವಕ್ಕೆ ಇದೆ (ಕೈಶಕೋ. ೦೭೨): ಅಪೂರ್ವಸಂಪತ್ಸಾರಸರ್ವಸ್ವಗೇಹಮಾದ ಪೂರ್ವವಿದೇಹಮಹೀಮಧ್ಯದೊಳ್ (ಚಂದ್ರಪು. ೧-೮೦ ಪ); ಷೋಡಶಮಹಾವಿಷಯಂಗಳಿನೊಪ್ಪಿ ಮಾಟ್ಟುದುರ್ವಿಗೆ ಮುದಮಂ ಸುಪೈಕನಿಧಿ ಪೂರ್ವವಿದೇಹಮಖರ್ವಸಂಪದಂ (ಪುಶಪು. ೨-೬). [ಸಂ.]

**ಪೂರ್ವವಿರೋಧ** (ನಾ). ಮೊದಲಿನಿಂದಲೂ ಇರುವ ಹಗೆತನ: ಪೂರ್ವವಿರೋಧದಿಂ ನಿಜಪರಾಕ್ರಮದಿ ಪರರಾಜ್ಯಕಾಂಕ್ಷೆಯಿಂ . . . ಮಾಳವಭೂಮಿಪಾಲಕಂ ಸರ್ವಬಲಾನ್ವಿತಂ ನಡೆದು ಮಾಗಧನೊಳ್ ಮುಳಿದೊಡ್ಡನೊಡ್ಡಿದಂ (ಧಕಅ. ೨-೦೯). [ಸಂ.]

**ಪೂರ್ವವೃತ್ತಿ** (ನಾ). ಮೊದಲಿನ ಉದ್ಯೋಗ; ಪರಂಪರೆಯಿಂದ ಬಂದ ಉದ್ಯೋಗ: ತಾಂಬೂಲಾದಿ ದಾನಸನ್ಮಾನಪುರಸ್ಸರಮವರ ಪೂರ್ವವೃತ್ತಿಯುಮಂ ಕಮ್ಮವಟ್ಟಯುಮನಿತ್ತು (ಸುಕುಮಾ. ೨-೯೩ ಪ). [ಸಂ.]

**ಪೂರ್ವವೇದಿ** (ನಾ). ಯಜ್ಞಕುಂಡದ ಮುಂದಿರುವ ಜಗಲಿ: ಯಮನಂದನನು ವೈಶಾಖದ ಚತುರ್ದಶಿದಿನದಲುತ್ತರಪೂರ್ವವೇದಿವರಾಭ್ಯುದೈಕ್ಯದಲಿ . . . ಮಱುದಿನ ಯಜ್ಞದೀಕ್ಷಿತನಾದನೊಲವಿನಲಿ (ಕುವ್ಯಾಕ. ೭-೨೭). [ಸಂ. ಪೂರ್ವವೇದೀ]

**ಪೂರ್ವವೈಭವ** (ನಾ). ಹಿಂದಿನ ಕಾಲದ ಸಂಪತ್ತು, ಯಶಸ್ಸು ಮುಂತಾದುವುಗಳ ಸಮೃದ್ಧಿ: ಶೈಲಪನು . . . ತನ್ನ ಮನೆತನದ ಪೂರ್ವವೈಭವವನ್ನು ಸಂಪಾದಿಸಿದನು (ಶತಾಂ. ೩೦). [ಸಂ.]

**ಪೂರ್ವವೈರ** (ನಾ). = ಪೂರ್ವವಿರೋಧ: ಪೂರ್ವವೈರಮಂ ಮನಸ್ಸಿನೊಳ್ ವಿಚಾರಿಸುತ್ತೆ ಬಂದೊರ್ವನಿಲ್ಲಿ ಸಿಲ್ಕಿದಂ (ಧರ್ಮಾಶ. ೦ ೯೬). [ಸಂ.]

**ಪೂರ್ವಶಾಸ್ತ್ರ** (ನಾ). ಪ್ರಾಚೀನಕಾಲದಿಂದ ನಡೆದು ಬಂದ ಶಾಸ್ತ್ರ: ಪರಂಪರಾಗತಶಾಸ್ತ್ರ: ಅಱಿದು ಪೀನು ಮಾರ್ಗಗತಿಯಂ ತಱಿಸಲಾಗದಾರ್ಗಂ ಬಹುವಿಕಲ್ಪದೊಳ್ ಕುಱಿತು ಪೂರ್ವಶಾಸ್ತ್ರಪದವಿಧಿಯಂ ತೆಱಿದಿರ ಪೇಟ್ವಿನಿನಿಸಂ ಕನ್ನಡದೊಳ್ (ಕವಿಮಾ. ೨-೯೬). [ಸಂ.]

**ಪೂರ್ವಶೈವ** (ನಾ). ಶೈವದ ಪ್ರಭೇದಗಳಲ್ಲಿ ಒಂದು: ಶುದ್ಧಶೈವನವ ಹೊದ್ದದೆ ಪೂರ್ವಶೈವವನಾಚರಿಸದೆ ಮಾರ್ಗಶೈವವ ಮನ್ನಣೆಯ ಮಾಡದೆ ವೀರಶೈವವನಾಧರಿಸದೆ ಆದಿಶೈವವನನುಕರಿಸದೆ ಭೇದಿಸಬಾರದ ಲಿಂಗ ಕರದಲ್ಲಿದ್ದು ಕಂಗಳನಲ್ಲಿ ನಿಂದು ಮನದಲ್ಲಿ ಸಿಂಹಾಸನಂಗೈದು ಸಕಲೇಂದ್ರಿಯದ ಮಱಿದು ಕಾಯದ ಜೀವದ ಹೊಲಿಗೆಯ ಬಿನ್ನಾಣದಿಂ ಬಿಚ್ಚಿ ದೇಹದೊಂದ ಅಱಿಸಲಿಲ್ಲವಾಗಿ ಬಯಕೆ ಅಱಿತು ಭವ ಹಿಂಗಿ ತಾನೆನ್ನದೆ ಇದಿರೆನ್ನದೆ ಏನುವೆನ್ನದ ಲಿಂಗೈಕ್ಯಂಗೆ ಸ್ವಾನುಭಾವದಿಂದ ನಮೋ ನಮೋ ಎಂಬೆ (ಮೋಳಿವಚ. ೦೨೬-೯೮೦); ಶುದ್ಧ ಮಿಶ್ರ ಸಂಕೀರ್ಣ ಪೂರ್ವಮಾರ್ಗಶೈವಂಗಳಲ್ಲಿ ಕರ್ಮಭಕ್ತಿಯಲ್ಲದೆ ನಿರ್ಮಳಸದ್ಭಕ್ತಿ ಎಲ್ಲಿಯದೋ (ಅವಚ. ಮು. ೪೩-೭೭). [ಸಂ.]

**ಪೂರ್ವಶಾಸನ** (ನಾ). ಹಿಂದಿನ ಕಾಲದ ರಾಜಾಜ್ಞೆ; ಪೂರ್ವಕಾಲೀನ ಶಾಸನ: [ಪೆ]ಗ್ಗಡೆ ವಾಸುದೇವಯ್ಯನುಂ ಮಲ್ಲಯ್ಯನುಂ ಪೂರ್ವ್ವಶಾಸನಮರ್ಯ್ಯಾದೆ ಕೊಟ್ಟಿದ್ದರ್ದೆಂದು ಬಿನ್ನಪಂಗೆಯ್ಯಲು (ಕರ್ನಾಇ. XX. ೬೦-೨೦; 1088). [<ಸಂ. ಪೂರ್ವಶಾಸನ]

**ಪೂರ್ವಸಿದ್ಧತೆ** (ನಾ). ಮುಂಚಿತವಾಗಿ ಮಾಡಿಕೊಳ್ಳಬೇಕಾದ ಏರ್ಪಾಡು,-ತಯಾರಿ: ಈ ಪೂರ್ವಸಿದ್ಧತೆ ಪ್ರದರ್ಶಕರ ಕಡೆಯಿಂದ, ಅದಕ್ಕಿಂತ ಹೆಚ್ಚಾಗಿ ಪ್ರೇಕ್ಷಕರ ಕಡೆಯಿಂದ ಆದಾಗ ಮಾತ್ರ ಆ ಪ್ರದರ್ಶನ ಸಂಪೂರ್ಣ ಫಲದಾಯಿ (ರಾಮಹಾ. ೬೦). [ಸಂ. ಪೂರ್ವಸಿದ್ಧತಾ]

**ಪೂರ್ವಸಿದ್ಧಾಯ** (ನಾ). ಒಂದು ಬಗೆಯ ತೆರಿಗೆ: ರುದ್ರದೇವಂ ಪತಿಬೆಸಸಿದ ಧರ್ಮ್ಮಕ್ರಿಯಿಂ ಪೂರ್ವಸಿದ್ಧಾಯದೊಳೊಲ್ದಯ್ಯತ್ತು ಪೊಂನಂ ನಿಯ್ಯ[ಮ]ದ ಪುರಾಣಕ್ಕೆ ಭೋಗಕ್ಕೆಂದು ... ಪೂಣ್ಬ್ಬ ...ಧಾರಾ

[ಪೂ]ರ್ವ್ವಶಿಂ ಮಾಡಿ ಕೊಟ್ಟರ್ (ಕಇ. V, ೨೪-೪೦; 1138). [ಸಂ.]

**ಪೂರ್ವಸುರ** (ನಾ). = ಪೂರ್ವದೇವ ೨ : "ಸುರವೈರಿಗಳು . . . ಅಸುರರು ಪೂರ್ವಸುರರೆನಲು ದೈತ್ಯರು" (ಕುಂಗರಾ. ೩-೯). [ಸಂ.]

**ಪೂರ್ವಸೂಚನೆ** (ನಾ). ೧. ಮುಂಚಿತವಾಗಿ ಸೂಚಿಸುವುದು,— ತಿಳಿಸುವುದು; ಮುನ್ಸೂಚನೆ : 'ಪೂರ್ವಸೂಚನೆಗೆಯ್' ಪರಾ. ೨. ಮುಂದೆ ಒದಗಲಿರುವ ಘಟನೆಗಳ ವಿಚಾರವಾಗಿ ಮುಂಚೆಯೇ ತಿಳಿದು ಬರುವ ಕುರುಹು : ಅಪಘಾತದ ಪೂರ್ವಸೂಚನೆ ಸಿಕ್ಕಿದ ತಕ್ಷಣ ವಿಮಾನಚಾಲಕ ಪ್ರಯಾಣಿಕರಿಗೆಲ್ಲ ಎಚ್ಚರಿಕೆಯನ್ನು ನೀಡಿದನು (ಕೂಡಿ). [ ಸಂ. ಪೂರ್ವಸೂಚನ ]

**ಪೂರ್ವಸೂಚನೆಗೆಯ್** (ಕ್ರಿ). ಮುಂಚಿತವಾಗಿ ತಿಳಿಸು ; ಮುನ್ಸೂಚನೆ ಕೊಡು : ಇದೆಲ್ಲಮಂ ದೇವರ್ಗೆ ಪೂರ್ವಸೂಚನೆಗೆಯ್ದು ಬೞಿಕ್ಕೊಡ ಗೊಂಡು ಬರ್ಪೆಂ (ಕಂಕಕಂ. ೩೩-೦೪). [ಪೂರ್ವಸೂಚನೆ + ಕೆಯ್$_1$]

**ಪೂರ್ವಸ್ಥಿತಿ** (ನಾ). ಮೊದಲು ಇದ್ದ ರೀತಿ ; ಮೊದಲಿನ ಕ್ರಮ : ಆವಾಸಿತವಿಜಯಕಟಕನಾಗಿ ಪೂರ್ವಸ್ಥಿತಿಯೊಳ್ ಪೋಗಿ (ಅಂಪು. ೦೩-೩ ವ). [ಸಂ.]

**ಪೂರ್ವಸ್ಮರಣ** (ನಾ). ಹಿಂದಿನದನ್ನು ನೆನೆಸಿಕೊಳ್ಳುವುದು ; ಹಿಂದಾದುದನ್ನು ನೆನೆಯುವುದು : ಆ ಎಂಬುದು ಪೂರ್ವಸ್ಮರಣದೊಳಂ ಪ್ರಸಿದ್ಧಿಯೊಳಮುಂಟು (ಶಬ್ದ. ೦೬೯ ವೃತ್ತಿ). [ಸಂ.]

**ಪೂರ್ವಸ್ಮರಣೆ** (ನಾ). ಹಿಂದಿನ ಕಾಲದ ನೆನಪು : ಸ್ವಾಮಿಯಡಿಗೆ ಶಿರ ಬಾಗಿ ಬಂದೆವಿದೊ ಎಲ್ಲ ಸೀಮೆಯಿಂದ, ಅರಿವು_ಮರೆವು ಕಣ್ದೆರೆದು ಕರೆದ ಆ ಪೂರ್ವಸ್ಮರಣೆಯಿಂದ (ಪಂಪು. ೩೯-೨). [ಸಂ. ಪೂರ್ವಸ್ಮರಣ]

**ಪೂರ್ವಸ್ವರ** (ನಾ). [ವ್ಯಾಕ] ಸಂಧಿ ಮಾಡಬೇಕಾದಾಗ ಸಂಧಿಸ್ಥಾನದಲ್ಲಿರುವ ಎರಡುಸ್ವರಗಳಲ್ಲಿ ಮೊದಲು ಇರುವ ಸ್ವರ : ಸ್ವರಮಿರೆ ಪರದೊಳ್ ಪೂರ್ವಸ್ವರಲೋಪಂ ಕೃತವಿಭಕ್ತಿಗಕ್ಕುಂ ಪ್ರಕೃತಿಸ್ವರದೊಳುದೇ ದಂತಕ್ಕಾಚರಿಸುವರವಿನಷ್ಟನಾಮಭಾಗಸ್ಥಿತಿಯೊಳ್ (ಶಾವ್ಯಾಪ ೩೨); ವಿಧು ಇದು, ಕವಿ ಅರ್ ಎಂಬಿವನ್ನು ವಿಧಿದು, ಕವಾರ್ ಎಂದು ಪೂರ್ವಸ್ವರಕ್ಕೆ ಲೋಪಮಾಡಿ ಕೂಡಿಸಿದರೆ ಅರ್ಥಕ್ಕೆ ಹಾನಿ ಬರುತ್ತದೆ (ಕ ಬಿ. ೭). [ಸಂ.]

**ಪೂರ್ವಹಗೆ** (ನಾ). ಮೊದಲಿನ ದ್ವೇಷ; ಮುಂಚಿನ ವೈರ : ಅಂತರಿಸದೆ ಕೊಲ್ಲಿಯೆಂದು ಕಳುಹಿದ ಎಂತವನಿಗೆ ಪೂರ್ವಹಗೆಯೊ (ಚಿತ್ರಾ. ೬-೯). [ಪೂರ್ವ + ಹಗೆ$_2$ (<ಪಗೆ$_2$)]

**ಪೂರ್ವಾಂಗ** (ನಾ). ೧. ಮೊದಲನೆಯ ಭಾಗ; ಪೂರ್ವಾರ್ಧ : ನಾಟ್ಯಶಾಸ್ತ್ರದ ಪ್ರಕಾರ ತಾಂಡವವು . . . ನಾಟಕದ ಪೂರ್ವಾಂಗವಾಗಿ ಅಭಿನಯಿಸಲ್ಪಡುತ್ತಿತ್ತು (ಭಾರತ. ೩೩೨). ೨. ಅಂಗೈ ಮತ್ತು ಮಣಿಕಟ್ಟಿನ ಮಧ್ಯಭಾಗ : ಸೆಳೆಯುತ್ತಿರ್ಪಂತರಿಂ ಮೌರ್ವಿಯು ಕಠಿನತೆವೆತ್ತಿರ್ಪ ಪೂರ್ವಾಂಗದಿಂ ಕಂಗೊಳಿಸುತ್ತುಂ (ಶಾಕುಂತ. ೨೨-೩೬). ೩. [ಜೈನ] ಎಂಬತ್ತುನಾಲ್ಕುಲಕ್ಷ ವರ್ಷಗಳ ಅವಧಿ : ರಾಜ್ಯದೊಳ್ಇರ್ದುಮಯ್ದು ಲಕ್ಕೆಯುಮಱುನೂಱುಪೂರ್ವಮಿಪ್ಪತ್ತುನಾಲ್ಕುಪೂರ್ವಾಂಗಮುಂ ರಾಜ್ಯಕಾಲಂ ಸಲೆ (ಶಾಪುಂಪು. ೦೨೨); ಎಂಬತ್ತುನಾಲ್ಕುಲಕ್ಷವರುಷಗಳಾದರೆ ಪೊಂದು ಪೂರ್ವಾಂಗವೆಂದು ಪೇಳುವರು (ಪುರುಷ. ೦೬). [ಸಂ.]

**ಪೂರ್ವಾಚಲ, ಪೂರ್ವಾಚಳ** (ನಾ). = ಪೂರ್ವಗಿರಿ : "ಮೂಡಪೆಟ್ಟೆಂದು ಪೂರ್ವಾಚಲಂ" (ಕಶಶಾ. ೪೯-೩೦); ಬೀಡುಗೊಂಡಿರ್ದ ಕತ್ತಲೆಯ ಪಾಳೆಯ ಮೆತ್ತಲೋಡಿದುದೋ ನೋಡಿದಪೆನೆಂದು ಪೂರ್ವಾಚಲದ ಕೋಡುಗಲ್ಲಂ ಪತ್ತುವಂತೆ ಮೆರೆದಂ ಪ್ರಭೆಯೊಳೌನ್ನತ್ಯನಾದಿತ್ಯನು (ಕೃಮಿಭಾ. ೨-೬೩). **ಪೂರ್ವಾಚಳ** : "ಪೂರ್ವಾಚಳಮೆ ಮೂಡಬೆಟ್ಟೆಂದಕ್ಕುಂ" (ಕಬಿಸಂ. ೯೯); ಎಣಿಸಿಚಿತಾಸನದೊಳ್ ಮುನಿಗಣಪತಿಯುಂ ನೃಪತಿ ತಂದು ಕುಳ್ಳಿರಿಸೆ ನಭೋಮಣಿ ಪೂರ್ವಾಚಳಚೂಡಾಮಣಿಯೆನಿಸಿದನೆನೆ ಪೊದಟ್ದುದಪಘನ ಕಿರಣಂ (ಸುಕುಕು. ೦೪-೩); ಸುರುಚಿರ ಪೂರ್ವಾಚಳದೊಳ್ ಗುರುತರ ಪೂರ್ಣೇಂದುವುದಯಿಪಂತಿರೆ ರಾತ್ರೀಶ್ವರವದನೆ ಗಿರಿಜೆ ಭರದಿಂ ಗಿರಿರಾಜನ ತೊಡೆಯ ಮೇಲೆ ಬಿಜಯಂಗೆಯ್ದಳ್ (ಗಿರಿಕ. ೪-೪೪). [ಸಂ.]

**ಪೂರ್ವಾಚಳ** 'ಪೂರ್ವಾಚಲ' ನೋ.

**ಪೂರ್ವಾಚಾರ** (ನಾ). ಹಿಂದಿನ ಕಾಲದಿಂದ ಬಂದ ನಡವಳಿಕೆ ; ಸಂಪ್ರದಾಯ : ಶ್ರೀಪೃಥುವಮಾಣಿ ಪರಮಸುಭಗನ್ . . . ಪೂರ್ವ್ವಾಚಾರದಾ ತೆಱಯಪ್ಪೈ ಈಯಿಮೆಸ್ಸೊಡೆ ಪೊನ್ನೆಱನುಂ ಚೋಲಮಹಾರಾಜನುಂ ಮೂವದಿಪ್ಪುರ್ಪ್ಪರ್ವರಾನ್ಸೊನ್ನಾ × ಶ್ರೀಧನಪತಿಆಚಾರಿಮಾ (ಎಕ. XVI, ಮದ್ದಗಿ. ೦೦೬-೩ : ೩೫೦ನು ಕಶ) ; ವಿಷ್ಣುಕುಂಡಿನ ಜನರು ಪೂರ್ವಾಚಾರಗಳಲ್ಲಿ ಬಹುಪ್ರೀತಿಯುಳ್ಳವರಾಗಿದ್ದಾರೆ (ಭೂಗೋಳ. ೨೦). [ಸಂ.]

**ಪೂರ್ವಾಚಾರ್ಯ** (ನಾ). ಹಿಂದಿನ ಕಾಲದ ವಿದ್ವಾಂಸ,–ಪಂಡಿತ : ಪೂರ್ವಾಚಾರ್ಯರ್ ದೇಸಿಯನೆ ನಿಱಿಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ (ಕಬಿರಾ. ೦-೬೩); ಹದಿಮೂರುವಿಧವಾದ ಸನ್ನಿಪಾತಗಳಿಗೂ ಆಯುಃಪ್ರಮಾಣಂಗಳ ಅವಧಿಯು . . . ಪೂರ್ವಾಚಾರ್ಯರಿಂದ ಪೇಳಲ್ಪಟ್ಟಿರುವುದು (ಸಕವ್ಯ. ೦೬೯). [ಸಂ.]

**ಪೂರ್ವಾದತ್ತ** (ಗುಂ). ಹಿಂದೆ ಗಳಿಸಿಕೊಂಡ,—ಸಂಗ್ರಹಿಸಿದ : ಪೂರ್ವಸಂಚಿತವಾದ : ಜಲಧಿಯಲಿ ಫಣಿವದನದಲಿ ರಿಪುಬಲದ ಮುಖದಲಿ ಸಿಡಿಲ ಹೊಯ್ಲಲಿ . . . ಸಿಲುಕಿದಡೆ ಬಿಡಿಸುವವಲೇ ಪ್ರತಿಫಲಿತ ಪೂರ್ವಾದತ್ತಪುಣ್ಯಾವಳಿಗಳು (ಕುವ್ಯಾಗ. ೯-೨೩). [ಸಂ.]

**ಪೂರ್ವಾದ್ರಿ** (ನಾ). = ಪೂರ್ವಗಿರಿ : ಪೂರ್ವಾದ್ರಿಯೊಳಪರಾದ್ರಿಯ ನಿರ್ವಂದದದೆ ತಾಗುವಂತೆ ತಾಗಿದುವು ಗಜಂ (ಪಾರ್ಶ್ವಪು. ೩-೦೨೬). [ಸಂ.]

**ಪೂರ್ವಾನುಭವ** (ನಾ). ಹಿಂದೆ ಅನುಭವಿಸಿದುದು ; ಇಂದ್ರಿಯಮೂಲಕವಾಗಿ ಅಥವಾ ಮಾನಸಿಕವಾಗಿ ಈ ಮುಂಚೆ ಪಡೆದ ಅನುಭವ : ಮತ್ತೊರ್ವಂ ಪೂರ್ವಾನುಭವಮಂ ನೆನೆದು . . . ಕೆಳದಿಯೊಳ್ ನುಡಿದಂ (ಪಂಪ್ರಪು. ೬-೭೯ ವ). [ಸಂ.]

**ಪೂರ್ವಾನುರಾಗ** (ನಾ). [ಕಾವ್ಯಮೀ] ಪೂರ್ವಾನುರಾಗ, ಮಾನ, ಪ್ರವಾಸ ಮತ್ತು ಕರುಣಾತ್ಮಕ ಎಂಬ ನಾಲ್ಕು ವಿಪ್ರಲಂಭಶೃಂಗಾರ ಪ್ರಭೇದಗಳಲ್ಲಿ ಒಂದು ; ಪ್ರಿಯೆ, ಪ್ರಿಯಕರರು ಒಂದುಗೂಡುವ ಉತ್ಸುಕತೆಯುಳ್ಳಿದ್ದರೂ ಅದು ಸಾಧ್ಯವಾಗದೆ ಉಂಟಾಗುವ ಮರುಕ: ಸಮಸಂದು ನೋಡಿ ಮೋಣ್ಪುಡಿದು ಮೋಣ್ಪನಂಗೊಂಡು ಕೂರ್ತರ್ ಕೂಟಂ ತನ್ನೊಳ್ ಸಮನಿಸದೆ ಮುಱುಗುವಾ ಮುಱುಕಮುಮದು ಪೂರ್ವಾನುರಾಗಮೆನೆ ಪೆಸರ್ವಡೆಗುಂ (ಶೃಂಗಾರ. ೪-೪೦) ; ಪೂರ್ವಾನುರಾಗಮೆಂಬುದಭಿಲಾಷೆ ಅದು ದೈವ ಪಾರವಶ್ಯಮೆಂದಿರ್ತೆಱು (ರಶಿರ. ೦-೩೪ ಟಿ). [ಸಂ.]

**ಪೂರ್ವಾಭಾದ್ರ** (ನಾ). ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಇಪ್ಪತ್ತೈದನೆಯದು : ಪೂರ್ವಾಭಾದ್ರಾ ಅಜಪಾದ ಪೂರ್ವ ಪ್ರೋಷ್ಠಪದ ಯಿಾ ೪ ಪೂರ್ವಾಭಾದ್ರನಕ್ಷತ್ರಕ್ಕೆ ಪೆಸರು (ಶಾಸ್ತ್ರ. ೬೩-೭). [ಸಂ.]

**ಪೂರ್ವಾಭಾದ್ರಪದೆ** (ನಾ). = ಪೂರ್ವಾಭಾದ್ರ : ಪುಬ್ಬೆಯುತ್ತರೆ ಶತವಿಶಾಖೆ ಸಂದ ಪೂರ್ವಾಭಾದ್ರಪದೆ ಮೂಜಹವು (ಮುಂಗರಾ. ೦೯-೨). [ಸಂ. ಪೂರ್ವಾಭಾದ್ರಪದಾ]

**ಪೂರ್ವಾಭಾದ್ರೆ** (ನಾ). = ಪೂರ್ವಾಭಾದ್ರ : ಅಶ್ವಿನಿ ಭರಣಿ . . . ಪೂರ್ವಾಭಾದ್ರೆ . . . ರೇವತಿಗಳೆಂಬಿಪ್ಪತ್ತೇಳು ತಾರೆಗಳು (ಏವೇಕ. ೨೩೬). [ಸಂ. ಪೂರ್ವಾಭಾದ್ರ]

**ಪೂರ್ವಾಭಿಮುಖ** (ನಾ). ೧. ಮೂಡಣದಿಕ್ಕಿಗೆ ಎದುರಾಗಿ ಇರುವವನು ; ಪೂರ್ವದಿಕ್ಕಿಗೆ ಮುಖ ಮಾಡಿದವನು : ಯೋಗಪರ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ

(ಅಂಶ. ೧೬-೪೦ ವ); ಪೂರ್ವಾಭಿಮುಖಂ ಜಿನಶಿಶು . . . ಕನಕೋರ್ವೀಧರ ಶಿಖರದಂತೆ ಮಿಗೆ ಸೊಗಯಿಸಿದಂ (ಪರ್ಶ. ೦೪-೧೩) ೨. ಪೂರ್ವ ದಿಕ್ಕಿಗೆ ಎದುರಾಗಿರುವುದು : ವಿಂಧ್ಯಪರ್ವತಗಳು . . . ನರ್ಮದಾ ನದಿಯ ಉತ್ತರದಲ್ಲಿ ಪೂರ್ವಾಭಿಮುಖವಾಗಿ ಹಾಯುತ್ತವೆ (ಭೂಗೋಳ. ೩೦). [ಸಂ.]

**ಪೂರ್ವಾಮರ** (ನಾ). = ಪೂರ್ವದೇವ ೨ : ಪೂರ್ವಾಮರರೊಳಾದುದು ಧುರ ಮಹಾದ್ಭುತಮಾಗಿ (ಕೌಶಿಂ. ೦-೨೬); ಮಥಿಯಿಸಿದೊಡಂ ತತ್ಸಿಂಧು ಪೂರ್ವಾಮರಾಮರರ ಬಲ್ಪಾವ ಪಿಡಿಸುತುಚ್ಚೈಃಶ್ರವಮೆನಿಪ್ಪ ಹಯವ ಸರ್ವಬಾಧೆಯೊಳಿತ್ತಂ (ಶಾವಣಿ. ೭-೧೨). [ಸಂ.]

**ಪೂರ್ವಾಯ** (ನಾ). = ಪೂರ್ಬಾಯಂ : ರಾಮನಾಥದೇವರಿಗೆ ಆಗುವ ಚಿಕ್ಕ ಕೊಡಲಿಯ ಹನಸವಾಡಿಯ ಪೂರ್ವ್ವಾಯ ಅಪೂರ್ವ್ವಾಯ ಅಳುಯನ್ನಾಯ ಯೇನುಯಿಲ್ಲೆಂದು ಧಾರಾಪೂರ್ವ್ವಕ ಮಾಡಿದ ಧರ್ಮ್ಮ (ಎಕ. VII. ಶಿವಮೊ. ೬೮-೩ ; 1318); ರಾಮದೇವರಂಗಭೋಗಕ್ಕೆ ಕೊಟ್ಟ ಧರ್ಮವಿದಕೆ ಪೂರ್ವ್ವಾಯುವಪೂರ್ವ್ವಾಯವೊಂದಿಲ್ಲ (ಎಕ. VII. ಶಿವಮೊ. ೬೯-೨೬ ; 1320). [ಸಂ.]

**ಪೂರ್ವಾರ್ಜಿತ** (ಗು). ೧. ಹಿಂದೆ ಗಳಿಸಿದ ; ಪೂರ್ವಜನ್ಮದಲ್ಲಿ ಸಂಪಾದಿಸಿದ : ಯಥಾಕಾಲಾನುಭವನ ತಪೋನಿಮಿತ್ತಮಾಗಿ ಸವಿಪಾಕಾವಿಪಾಕರೂಪದಿಂ ಪೂರ್ವಾರ್ಜಿತಕರ್ಮನಿರ್ಜರಣಂ ನಿರ್ಜರೆಯೆಂಬುದು (ಅಂಶ. ೧೦-೬೬ ವ) ; ಗಣಪತಿಯಷ್ಟು ನಿಷ್ಠೆಯಿಂದ ಅಷ್ಟೊಂದು ದೀರ್ಘಕಾಲ ಸಾಧನೆಮಾಡಿದ ಒಬ್ಬನನ್ನೂ ಅವರು ಕಂಡಿರಲಿಲ್ಲ. ಅದಕ್ಕೆ ಪೂರ್ವಾರ್ಜಿತ ಪುಣ್ಯವಿಶೇಷ ಬೇಡವೆ? (ಹೊಸಕ್ಷ. ೩೪). ೨. ಹಿರಿಯರು ಗಳಿಸಿ ಕೊಟ್ಟ; ಪೂರ್ವಜರಿಂದ ಸಾಗಿ ಬಂದ : ಅವರಿಗೆ ಪೂರ್ವಾರ್ಜಿತ ಆಸ್ತಿ ಏನೂ ಇರಲಿಲ್ಲ, ಸ್ವಂತ ಪರಿಶ್ರಮದಿಂದಲೇ ಅವರು ಮುಂದೆ ಬಂದರು (ರೂಢಿ). (ನಾ). ೩. ಹಿಂದೆ ಗಳಿಸಿದುದು ; ಪೂರ್ವಸಂಚಿತವಾದದು : ಸಮ್ಯಗ್ದರ್ಶನ ಜ್ಞಾನಚಾರಿತ್ರವಿಷಯಮಪ್ಪಱಿವು . . . ಅದೆಂತೋ ಪೂರ್ವಾರ್ಜಿತಮಪ್ಪ ಮಹಾಸುಕೃತವಿಶೇಷದಿಂ ಪ್ರಾಪ್ತಮಾದುದು (ಜೀವಸಂ. ೦೬೬-೨೩). ೪. (ಆಲು) ಹಣೆಬರಹ : ಪಣೆಯೊಳಂ ಪೂರ್ವಾರ್ಜಿತಂ ಹಾಗಿರಲ್ ಕೊಲನೇ ಕ್ಷುದ್ರ ಸಮರ್ಥನಂ (ಸೋಮೇಶ. ೩೦). [ಸಂ.]

**ಪೂರ್ವಾರ್ಣವ** (ನಾ). ಮೂಡಣ ಕಡಲು ; ಪೂರ್ವಸಮುದ್ರ : ಪೂರ್ವಾರ್ಣವಮಂ . . . ನೋಡಿದಂ ಚಕ್ರನಾಥಂ (ಅಂಶ. ೦೨-೭೦). [ಸಂ.]

**ಪೂರ್ವಾರ್ಧ** (ನಾ). ಮೊದಲನೆಯ ಅರ್ಧಭಾಗ : ಕಂದದ ಪೂರ್ವಾರ್ಧದೊಳನು ಸಂದಿಸಲಾರ್ಯಾಪರಾರ್ಧಮದನುಕ್ರಮದಿಂದೊರ್ದಿರ್ದೊಡೆ ಸಂಕೀರ್ಣಕಂ (ಛಂದೋಂಬು. ೪-೨೬೪) ; ಈ ಶತಮಾನದ ಪೂರ್ವಾರ್ಧಕ್ಕಿಂತಲೂ ಉತ್ತರಾರ್ಧದಲ್ಲಿ ಭಾಷಾವಿಜ್ಞಾನದ ದೃಷ್ಟಿಯಿಂದ. . .ಒಳ್ಳೆಯ ಕೆಲಸ ನಡೆಯುತ್ತಿದೆ (ಧ್ರಾವಿಶಿ. ೦೩೨). [ಸಂ.]

**ಪೂರ್ವಾರ್ಧಗೋಳ** (ನಾ). ಭೂಮಂಡಲದ ಪೂರ್ವಭಾಗ : ಪಶ್ಚಿಮಾರ್ಧಗೋಳದಲ್ಲಿರುವ ಭೂಮಿಯ ಎರಡರಷ್ಟಕ್ಕಿಂತಲೂ ಪೂರ್ವಾರ್ಧಗೋಳದಲ್ಲಿರುವ ಭೂಮಿಯು ಹೆಚ್ಚಾಗಿದೆ (ಭೂಗೋಳ. ೦೩). [ಸಂ. ಪೂರ್ವಾರ್ಧಗೋಲ]

**ಪೂರ್ವಾಶ್ರಮ** (ನಾ). (ಸಂನ್ಯಾಸಕ್ಕೆ) ಮುಂಚಿನ ಆಶ್ರಮ ; ಬ್ರಹ್ಮಚರ್ಯ ಅಥವಾ ಗೃಹಸ್ಥಾಶ್ರಮ : ಶೈವಪಂಥೀಯಸಂನ್ಯಾಸಿಗಳು ತಮ್ಮ ಪೂರ್ವಾಶ್ರಮದ ಮನೆಯನ್ನು ಅಪರಿಚಿತಸ್ಥಳವೆಂದು ತಿಳಿಯುತ್ತಾರೆ (ಆಶ್ರಮ. ೨೪). [ಸಂ.]

**ಪೂರ್ವಾಶ್ರಯ** (ನಾ). ಹಿಂದಿನ ಇರವು ; ಮೊದಲಿನ ಅಸ್ತಿತ್ವ : ಗುರುಕಾರುಣ್ಯವ ಹಡೆದ ಭಕ್ತನು ಹಿಂದಣ ಪೂರ್ವಾಶ್ರಯವ ಬೆರಸಿದರೆ ಗುರುದ್ರೋಹ ಲಿಂಗದ್ರೋಹ ಜಂಗಮದ್ರೋಹ ಆಚಾರದ್ರೋಹ ಪ್ರಸಾದದ್ರೋಹ (ಬಸವ. ೬೬೬); ಇಂತಪ್ಪ ಪದಾರ್ಥದ ಪೂರ್ವಾಶ್ರಯವನು ಶಿವಮಂತ್ರ ಶ್ರೀವಿಭೂತಿಯಿಂದೆ ಕಳೆದು ಶುದ್ಧಸಂಸ್ಕಾರವೆನಿಸಿ . . . ಶಿವಲಿಂಗಕ್ಕೆ ಅರ್ಪಿಸಿದಲ್ಲಿ ಶಿವಪ್ರಸಾದವೆನಿಸಿತ್ತು (ಅಂಲೀ. ೦೩೨-೨೪). [ಸಂ.]

**ಪೂರ್ವಾಷಾಢ** (ನಾ). ಇಪ್ಪತ್ತೇಳುನಕ್ಷತ್ರಗಳಲ್ಲಿ ಇಪ್ಪತ್ತನೆಯದಂ ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ಆರ್ದ್ರೆ ಪೂರ್ವಾಷಾಢ . . . ಮಖೆಯೆಂಬುವೇ ಕ್ರಮದಿಂದ ಷಡ್ಜಾದಿ ಸ್ವರಂಗಳ ಜನ್ಮನಕ್ಷತ್ರಂಗಳು (ಶಿವತ. ೨೫೦). [ಸಂ. ಪೂರ್ವಾಷಾಢಾ]

**ಪೂರ್ವಾಸನ** (ನಾ). ಮುಂದಿನ ಆಸನ; ಪೂರ್ವಪೀಠ : ಪೂರ್ವಾಸನದೊಳ್ ಪದೆಪಿಂ ಪಾರ್ವತಿಯುಂ ಪರ್ವಪೇಟೆ ಬಿಜಯಂಗೆಯ್ಯುತ್ತೆ . . . ಪರ್ವತರಾಜಂ ಪುರಕ್ಕೆ ತಿರುಗಿದನಾಗಳ್ (ಗಿರಿಕ. ೩-೦೦೨); ಮಹಾದೇವಿ ಶರ್ವಾಣಿ ಸಮಸ್ತಾಧಿಕ್ಕೆ ಪೂರ್ವಾಸನದೊಳೆರೆ ಬರುತ್ತೊಪ್ಪಿದಂ ಶ್ರೀಳಮ (ಗಿರಿಕ. ೩.೦೦೩). [ಸಂ.]

**ಪೂರ್ವಾಹ್ಣ** (ನಾ). ಸೂರ್ಯೋದಯದಿಂದ ಮಧ್ಯಾಹ್ನದ ವರೆಗಿನ ಕಾಲ; ಹಗಲಿನ ಪೂರ್ವಾರ್ಧ : ಪೂರ್ವಾಹ್ಣದೊಳಾಂ ಕಂಡ ಬಲಾಕೆಯ ಮುತ್ತೊಂದಿದಲ್ತು (ಶಕ್ತ್ಯಶ್ರ. ೫೬); ಅಯೋಷೆಯ ಸೌಂದರ್ಯ ಪೂರ್ವಾಹ್ಣದ ಸೂರ್ಯರಶ್ಮಿಯಂತೆ (ಬಂಕಿಮ. ೦೫೩). [ಸಂ.]

**ಪೂರ್ವಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ವಿರಾಗವು ರಕ್ತದ ಒತ್ತಡವನ್ನೂ . . . ಗುಣಪಡಿಸುವುದೆಂಬ ಭಾವನೆ ಉತ್ತರ ಭಾರತದಲ್ಲಿದೆ (ಭಾರದ. ೫೪೪); ಆನಂದಭೈರವಿ ಮುಗಿಯುವುದೇ ತಡ ನೇರವಾಗಿ ಪೂರ್ವಿರಾಗವನ್ನೆತ್ತಿಕೊಂಡ (ಸಂಧ್ಯಾರಾ. ೦೫೬). [ಸಂ. ಪೂರ್ವೀ]

**ಪೂರ್ವಿಕ** (ಗು). ೧. ಹಿಂದಿನ; ಪೂರ್ವಕಾಲದ ; ಪೂರ್ವಕಾಲದಿಂದ ಬಂದ. (ನಾ). ೨. ಹಿರಿಯ; ಪೂರ್ವಜ; ವಂಶದ ಹಿಂದಿನ ವ್ಯಕ್ತಿ : ನನ್ನ ಪೂರ್ವಿಕರನು ಕುರಿತೀಗ ಹೇಳುವೆ ತಿಳಿದಷ್ಟು ಸಂಗತಿಗಳನು (ಇಂಕಾಕ. ೪-೦೦); ಮೊದಲು ಮಗುವಿನ ಪೂರ್ವಿಕರ ಇತಿಹಾಸವನ್ನು ಸಂಗ್ರಹಿಸಬೇಕು (ಶಿಕ್ಷದ. ೯೬). [ಸಂ.]

**ಪೂರ್ವಿಗ** 'ಪೂರ್ಬಿಗ' ನೋ.

**ಪೂರ್ವೀಕ** 'ಪೂರ್ಬಿಗ' ನೋ.

**ಪೂರ್ವೆ** (ನಾ). ೧. ಮೂಡಣ ದಿಕ್ಕು : "ಐಂದ್ರೀ, ಪೂರ್ವಾ, ಪ್ರಾಚೀ— ಈ ೩ ಮೂಡಣ ದೆಸೆ" (ಶಬ್ದಮ. ೦೭-೦೦೦). ೨. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು; ಪುಬ್ಬೆ ನಕ್ಷತ್ರ ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ ; ಭರಣಿ ಮಘೆ ಪೂರ್ವೆ ಕೃತ್ತಿಗೆ . . . ಎಂಬೀಟುಂ ವೈಶ್ವಾನರ ಮಂಡಳಮೆಂಬ ನಾಮಮಂ ತಳೆದಿರ್ಕುಂ (ಲೋಕೋಪ. ೪-೬೦); ಮಘಾ ಪೂರ್ವಾ ಉತ್ತರಾನಕ್ಷತ್ರಗಳ ಮಳೆಗೆ ಹತ್ತಿಯ ಬಿತ್ತಿಗೆಯಾಗುತ್ತದೆ (ಮುಂಬಯಿ. ೪-೨೬). [ಸಂ. ಪೂರ್ವಾ]

**ಪೂರ್ವೇತರ** (ಗು). ಪಶ್ಚಿಮದ; ಪಡುವಣ ದಿಕ್ಕಿನ : ಘನಸಂಧ್ಯಾರಾಗಶೀಮಪ್ರಾನಲನೊಳೊಲವಿನಿಂ ಕಾಸಿ ತಿಗ್ಮಾಂಶುಮೆಂದೆಂಬ ನವೀನ ಸ್ವರ್ಣಸತ್ಪಿಂಡಮಂ . . . ಪೂರ್ವೇತರಶರನಿಧಿಯೊಳ್ ಬಿಟ್ಟೆಂಬೋಜನಳ್ದಲ್ಲಿನಿಸುರ್ಬೇಳ್ದುದೋ ಕಾರ್ಬೊಗೆಯೆನೆ ದೆಸೆದೀವಿತ್ತು ಘೋರಾಂಧಕಾರಂ (ರಾಜಶೇ. ೦೦-೦೪). [ಸಂ.]

**ಪೂರ್ವೇತಿಹಾಸ** (ನಾ). ಹಿಂದಿನ ಕಥೆ ; ಪೂರ್ವಚರಿತ್ರೆ : ತುಸು ನೀಳವಾಗಿಯೆ ಮನದೊಳು ಮೂಡಿತು ಪೂರ್ವೇತಿಹಾಸದ ನೆಳಲು (ಇಂಕಾಕ. ೬೦-೬೬). [ಸಂ.]

**ಪೂರ್ವೋಕ್ತ** (ಗು). ೧. ಹಿಂದೆ ಹೇಳಿದ ; ಮೊದಲೆ ತಿಳಿಸಿದ,— ನಿರೂಪಿಸಿದ : ಆ ವಾಕ್ಯಮುಂ ವಿಜ್ಞಾನಮೆಂಬೆಯಪ್ಪೊಡೆ ಪೂರ್ವೋಕ್ತ

ದೋಷಪಾಷಾಣಸಂಚೂರ್ಣಿತಪಂಕ್ತಿಯ್ಯ ಏನನೇತಬಿ್ಶೊಳ್ ನಿಶ್ಚಯಿಸುವೈ (ಅಧಿಪು. ೨-೦೦ ವ); ಪೂರ್ವೋಕ್ತಸ್ಥಿತಿಯೊಳ್ ವಜ್ರಕವಾಟೋದ್ಘಾಟನಂಗೆಯ್ದು (ಶಾಂತಿಪು. ೦೦-೬೬ ವ). (ನಾ). ೨. ಮುಂಚೆ ಹೇಳಿದುದು; **ಮೊದಲು ನಿರೂಪಿತವಾದುದು** : ವಿಶ್ವಸಾರೋತ್ತರಾಗ್ರನಿರ್ವಾಣಸೂತ್ರದಿಂದ ಪೂರ್ವೋಕ್ತಪಹ ಕಾರ್ಯಂಗಳೊಳು ಶಬ್ದವೃತ್ತಿ ಕೋಟಾತ್ರವಿರ್ದುದಲ್ಲಿ (ಶೀಕ್ಕಿಶ. ೬-೨-೩೮); ಎದುರುಗೋಡೆಯಲ್ಲಿ ಪೂರ್ವೋಕ್ತವಾದ ಕಿಟಕಿಗಳ ಮಧ್ಯೆ . . . ಗಡಿಯಾರವಿದೆ (ಶೀರಯೋ. ೧). [ಸಂ.]

**ಪೂರ್ವೋದಿತ** (ಗು). = ಪೂರ್ವೋಕ್ತ ೧ : ಪುನರುಕ್ತವೆಂಬುದಕ್ಕಂ ನೆನೆಯದೆ ಪೂರ್ವೋದಿತಾರ್ಥಪದಪದ್ಧತಿಗೊಂದಿನಿಸುಂ ವಿಶೇಷವಿಲ್ಲದೆ ಜನಿಯಿಸಿದ ಪದಾರ್ಥಂ (ಶಬ್ದಾ. ೦-೯೯). [ಸಂ.]

**ಪೂರ್ವೋಪಾರ್ಜಿತ** (ಗು). = ಪೂರ್ವಾರ್ಜಿತ ೧ : ಅಂತವರ್ ಕರ್ಕಟಕೇಶ ಚಿರ್ವರಾಗಿ ಪುಟ್ಟಿ ಪೂರ್ವೋಪಾರ್ಜಿತಸುಕೃತಮಹೀರುಹನಿಶಾಕರ ನಿಜಾಂಗುಳಿನಿಸ್ರವದ್ದುಗ್ಧಾಜ್ಯಧಾರೆಯು ಸವಿಯುಂ ಸೇವಿಸಲೇಟ್ಟಿಟು ದವಸಂಗಳುಂ ಪೋಗೆವೋಗೆ (ಶಾಂತಿಪು. ೬-೦೦೬ ವ): ನೀಳನೆಂಬ ಮಾದೆಗಂಗಂ ಕೌಶಂಬಿಯೆಂಬ ಮಾದಂಗಿಗಂ ಮಗಳಾಗಿ ಪೂರ್ವೋಪಾರ್ಜಿತ ಶುಭಾನುಪೂರ್ವಿನಾಮಕರ್ಮೋರ್ವೀರುಹಪರಿಪಾಕಫಳಮನನುಭವಿಸುತ್ತುಂ (ಸುಕುಮಾ. ೫-೨೦ ವ). [ಸಂ.]

**ಪೂಲತೆ** (ನಾ). ಹೂವು ಬಿಟ್ಟಿರುವ ಬಳ್ಳಿ : ಪೂಲತೆ ಪೂಗಿಡು ಪೂಮರ ಸಾಲಿಂದಲ್ಲಲ್ಲಿ ಕೇರಿಕೇರಿಗಳೊಳ್ ಚೈತ್ಯಾಲಯದ ಮುಂದೆ ತುಂಬಿಯ ಜಾಳಂ ಮದಮೇಟಿ ಮೆಟಿವವಾ ಪುಮುಳದೊಳ್ (ಎಕ. VIII, ಸೊರಬ. ೨೬೦-೨೨ ; 1408). [ಪೂ₂+ಲತೆ]

**ಪೂಲಿ₁**, ಹೂಲಿ₁ (ನಾ). ಒಂದು ಬಗೆಯ ಸಸ್ಯ : ಪೂಲಿಯ ಪಣ್ಣಂತೆ ಪೊಟಿವಾಯ್ತು ಕೀವುಂ (ರವಾಶಿಸ್ಯ. ೯-೬೫); ಅದಟ ಬಟಂವಿಡಿದು ಬೆಳೆದ ಬಳ್ಳಿಯ ಪಸಿಯ ಪುಲ್ಲ ಪೂಲಿಯ ಸಾನಲನಿಲದು ನಡೆವಾಗಳ್ (ಅಂಚಾವ. ೬-೯೨ ವ). **ಹೂಲಿ₁** : "ಶಂಬಾ ಸುಖನಿ ಹೂಲಿಯುಕ್ಕುಂ" (ಮುಂಗರಾ. ೬೭-೨೦); ಪರಿಪತಿಸಾರಂ ಪಿರಿದಾಗಿರೆ ಹೂಲಿಯ ಬೇರ ತಿಗುಡನೆವ್ಮೈಯ ಮೊಸರೊಳ್ ಬೆರಸಿಟ್ಟು ಸೈಂಧವಂ ಕೂಡಿರೆ ಮೆಲುವುದು ದಿವ್ಯಯೋಗ ಮಿದು ಪರಿಹರಿಕುಂ (ಕಲ್ಯಾಕಾ. ೯-೦೩) ; ಹೂಲಿ ಮಾಲಿನಿ ಬನ್ನಿ ಹೊನ್ನೆ . . . ನಾನಾಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಸೋಮಶೇ. ೩-೨).

[ದೇ.॥ ತಮಿ. ಪೂಳ ; ತೆಲು. ಪೂಲಿ./ಹಿಂ. ಪೂಲೀ, ಪೂಲಾ]

**ಪೂಲಿ₂**, ಹೂಲಿ₂ (ನಾ). ೧. ಒಬ್ಬಾತನ ಹೆಸರು: ಪೂಲಿಯುಂ ಕೊಂಗಿಯುಂ ಕಾಲಿಯುಮ್ಮನೂ ಇಟ್ಟು ಕೊಟ್ಟರ್ (ಎಕ. VIII, ಸೊರಬ. ೨೨-೦೦; ಸು. 800). ೨. ಒಂದು ಊರಿನ ಹೆಸರು : ಅರವಡ್ಡಗಿಯರವದಪೂಲಿಯರ್ವಾಡಿದ ಸಿಲಾಕಮ್ಮಂ (ಎಕ. VIII, ಸೊರಬ. ೨೨-೦೦ ; ಸು. 800); ಸ್ವಯಂಬುದೇವರ ದೇಗುಲದ ಪೂಲಿಯ ಪಣ್ಡಿತರ ವಿದ್ಯಾಶಿಷ್ಯಕ್ಕೊರ್ಪಿನ ವಕ್ಖಾಣಿಜೀಯರ ಶಿಷ್ಯರಪ್ಪ ಕಾಳಗ್ನಾನಿ ವಕ್ಖಾಣಿಜೀಯರ್ಗ್ಗೆ ಧಾರಾ ಪೂರ್ವ್ವಕಂ ವಿದ್ಯಾದಾನವಾಗೆ (ಕ್ಕಾಇ. XI-1, ೯೬-೯; 1002); ಪಡುವಲು ಪೂಲಿಯ ದಶಕಂ ಒಡ[ಗಲು] ಪೆರ್ವ್ವಟ್ಟಿ (ಕ್ಕಾಇ. XV, ೩೦-೯೯; 1142). **ಹೂಲ್ಲಿ₂** : ೨. ಅಬ್ಜಗರ್ಭಸಹಿತಂ ಶ್ರೀಹೂಲಿಗೆಯ್ಯಿಂದು ನಿನ್ದಾರಾಧ್ಯಂ ಕರುಣಾರಸಾರ್ದ್ರಹೃದಯಂ ರಕ್ಷಿಕ್ಕೆ ಸಾಸಿರ್ವ್ವರಂ (ಕ್ಕಾ. I, ೬೬-೩ ; 1162) ; ಆ ಸಿದ್ಧೇಶ್ವರಾಚಾರ್ಯ ಚಂದ್ರಭೂಷಣದೇವರು ಹೂಲಿಯ ಯಿಶ್ವರಭಟ್ಟರ ಕೈಯಿಂ ××× ಗೆ ಕೊಟ್ಟ . . . ವೊಂದು (ಕಳಂ. ೫-೬೭ ; ?).

**ಪೂಲಿ₃** (ನಾ). ಒಂದು ಬಗೆಯ ಚಿನ್ನದ ನಾಣ್ಯ : (?). 'ಕಾಲ್ಪೋಲಿ ರೂಪಾಯಿ' ಹೋ. [ದೇ.॥ ತೆಲು. ಪೂಲಿ]

**ಪೂಲಿಕುಂಟೆ**, ಹೂಲಿಕುಂಟೆ (ನಾ). ಒಂದು ಊರಿನ ಹೆಸರು : ಆಗ್ನೇಯದ ಎಲಂಟಿಕುಣ್ಟೆಯಿನ್ದ ಪೂಲಿಕುಣ್ಟೆಯಿನ್ದ ಪೆರ್ಬಳದೊಳಗಣ ಚಾದುಪೊಲದಿನ್ದ ಪಿರಿಯೊಟ್ಟಿಯ ಕೈವರದೊಳ್ ಒನ್ದು ಮಾನ್ಯಂ (ಎಕ. X (s), ಶಿಡ್ಲ. ೦೦೬-೬೦ ; 850). **ಹೂಲಿಕುಂಟೆ** : ಹೂಲಿಕುಂಟೆ ಚಂದ ನಾಯಕನ ಮಗ ತಳವಾಟ ದೊಡ್ಡಗೆ ರಾಚಪ್ಪೊಡೆಯ ಆಗಳಿ ತಳವಾಟಿಕೆನೂ ಆಚಂದ್ರಾ(೦)ರ್ಕಸ್ಥಾಇಯಾಗಿ ಕೊಟ ಶಾಸನ (ಕ್ಕಾಇ. IX-II, ೬೦೯-೧; ?). [ಪೂಲಿ₂ + ಕುಂಟೆ₃]

**ಪೂಲಿಕೆಱೆ** (ನಾ). ಒಂದು ಊರಿನ ಹೆಸರು : ಪೂಲಿಕೆಱೆ ಕಾದವಾ ಕಣ್ಮೊರ್ಬ್ಬೆಡಿ (ವ್ಯಾಆರಿ. ೦೯೨೯, ೯೦-೦೮೦; 799). [ಪೂಲಿ₂ + ಕೆಱೆ]

**ಪೂಲು** (ನಾ). ಸಂಕ; ಸೇತುವೆ : ಕಟ್ಟೆ : ಹರಿಹರದ ಹತ್ತಿರ ಈ ಹೊಳೆಗೆ ದೊಡ್ಡ ಪೂಲು ಕಟ್ಟಿದ್ದಾರೆ (ಕಣಗಿ. ೧೨) ; ಅಪ್ಪಣ್ಣನು ಲೋಕಾಪುರದ ಹಳ್ಳದ ಪೂಲಿನ ಮೇಲೆ ಬರುತ್ತಿದ್ದನು (ಕಂಕು.೦೩೬).

[←ಪಾರ. ಹಿಂ. ಪುಲ್ ; ಮರಾ. ಪೂಲ]

**ಪೂವ** (ನಾ). ಒಂದು ಬಗೆಯ ಔಷಧೀಸಸ್ಯ : ರಜನಿ ಕೃತಾಂಜಲಿ ಕಳವಿಗೆ ಬಜೆ ಗಂಧಕ ಪೂವಮೆಂಬಿವಂ ತವೆ ತಿಲತೈಲಜಳಾನ್ವಿತಘೃತದಿಂ ದಂಬುಜಾಕ್ಷಿಯರ್ಗೆಱೆಯೆ ನಸ್ಯಮುಂ ಮೊಲೆ ಬರ್ಕುಂ (ಲೋಕೋಪ. ೯-೦೬೦). "ಸುಗಂಧಿ" (ಲೋಕೋಪ. ಟೀಕು).

[ದೇ.॥ ತಮಿ. ಮಲ. ಪೂವ=ಅರಗಿನ ಮರ]

**ಪೂವಂಡು** (ನಾ). ಹೂವಿನ ರಸ ; ಮಕರಂದ ; ಪುಷ್ಪರಸ : ಅಂಚೆ ಕೊಂಚೆ ಪೂವಂಡು ಗಿಳಿವಿಂಡು ರಂಜಿಸುವ ಕಾದಲರೆಲರ್ ಸವಿಮಾವು ಪೂವು . . . ಸೊಂಪು ಪೆಂಪಿಂದೀ ಪುರೋಪವನಮೆಸೆದಿರ್ಪುದು (ಕಬಪು. ೧೦-೨೦) ; ಬರೆ ಪೀರಿ ಪೂವಂಡನುರೆ ಸೊಕ್ಕಿ ಝೇಂಕರಿಪ ಮರಿದುಂಬಿಗಡಣದಿಂ . . . ಒಪ್ಪುವೊಂದುದ್ಯಾನಮಲ್ಲಿರ್ದುದು (ಶೀಶರಾ. ೯-೩೬). [ಪೂ₂+ಉಂಡು₂]

**ಪೂವಕ್ಕಿ**, ಹೂವಕ್ಕಿ (ನಾ). ೧. ದುಂಬಿ ; ಭ್ರಮರ : ಸುರುಳೊ ಪೂವಕ್ಕಿಗಳ ಬಳಗವೊ ಅರೆವೆಟಿಯೊ ಪಡೆಯೋ . . . ಪೇಳಲೇನೆಂದ (ಸಸತ್ಕು. ೦೩-೯೬); ತೀಡೆ ತಂಗಾಳಿ ಪರಿದಾಡೆ ಪೂವಕ್ಕಿ ದನಿಮಾಡೆ ಪರಪುಟ್ಟ . . . ಅರ್ಯಮನುದಿಸಿದಂ (ಗುರುಚಾ. ೩-೦೯). **ಹೂವಕ್ಕಿ** : ೨. ಒಂದು ಬಗೆಯ ಹಕ್ಕಿ : ಹೂವಕ್ಕಿಯ ಇಂಚರ ಟುವ್ವಿಟ್ಟುವೊ (ಅಶೀ. ೩೦-೯). 'ಅಲರ್ವಕ್ಕಿ' ಪರಾ. [ಪೂ₂+ಪಕ್ಕಿ]

**ಪೂವಟ್ಟಿ** (ನಾ). ಹೂವುಗಳನ್ನು ಪಟ್ಟಿಗಳಂತೆ ಜೋಡಿಸಿ ರಚಿಸಿದ ಚಿತ್ರ,—ಹಸೆ : ಕತ್ತುರಿಯ ಸಾರವಣೆ ಬಿಡುಮುತ್ತಿನ ಕಡೆ ಕಂಪು ವಿಡುವ ಕಪ್ಪುರವುಡಿಯಿಂದೊತ್ತಿದ ಲತೆ ಪೂವಟ್ಟಿಯಿನೊತ್ತರಿಸಿದ ಬಂಧ ಮೆಸೆಯ ದೇವಿಯ ಗೃಹದೊಳ್ (ಅಂಚಾವ. ೦೦-೯). [ಪೂ₂+ಪಟ್ಟಿ₃]

**ಪೂವಡಿ** (ನಾ). ಹೂವಿನಂತೆ ಕೋಮಲವಾದ ಪಾದಗಳುಳ್ಳ ವ್ಯಕ್ತಿ : ಶಾಂಭವಲೋಕದ ಗಂಭೀರ ಪೂವಡಿ ಜಂಬೂದ್ವೀಪಕೆ ಕೆ ಪೋಪೆ (ಕೋಪತ. ೦-೯೯). [ಪೂ₂+ಅಡಿ₁]

**ಪೂವಡಿಗ**, ಹುವ್ವಾಡಿಗ, ಹೂವಡಿಗ, ಹೂವಾಡಿಗ (ನಾ). ಹೂವುಗಳನ್ನು ಕಟ್ಟಿ ಮಾರುವವನು ; ಹೂವಿನ ವ್ಯಾಪಾರಿ : "ಪೂವಡಿಗಂ ತಾಂ ಪುಲ್ಲವಡಿಗನೆಂದು ತಿಳಿವುದು" (ಕಪುಚ.. ೦೦೦) ; ಅಡಿಗ ಪ್ರತ್ಯಯಕ್ಕೆ—ದೇವಡಿಗಂ, ಪಾವಡಿಗಂ, ಪೂವಡಿಗಂ (ಕಪುಚ. ೨೦೩ ಪ್ರಯೋ) ; ಪೊಸ ಪೂವಡಿಗರ ಗರವಟಿಗರ ಕೊಲ್ಲಾಯ್ತರ ನುಡಿಗಾಟರ ಮಾಸ್ತಾರರ ಸಂದಣಿ ಸಲೆ ಸೊಗಯಿಸಿತಾಗ (ಜಯುಶಾ. ೦೨-೦೯) ; ಈ ಧರ್ಮವತೀ ಪಟ್ಟಣವು ಸೋಮಸೂರ್ಯವೀಥಿಗಳಿಂದಲೂ . . . ಪೂವಡಿಗರ ಸಾಲಿನಿಂದಲೂ ಒಪ್ಪುತ್ತಿರುವುದು (ಕೃಶಸು. ೬). **ಹುವ್ವಾಡಿಗ** : "ಮಾಲಾಕಾರಃ, ಮಾಲಿಕಃ—೨ ಹುವ್ವಾಡಿಗನ ಹೆಸರುಗಳು" (ಸಿದ್ಧಾಂತಿ. ೩೦೯) ; ಹುವ್ವಾಡಿಗರು ಬಚ್ಚಣಿಯ ಕೆಲಸದವರು ಚಿಪ್ಪಿಗರು . . . ಮುಚ್ಚಿಗರು ಮೊದಲಾದ ನಾನಾಜಾತಿಯವರಿಗೆ ಬೇರೆಬೇರೆ ಬೀದಿಗಳು ಹಂಚಿ (ಕೌಗಂಧಿ.

೦೪೩-೭). **ಹೂವಡಿಗ :** ಪಡಪಿಗರು ಬಾಮರಿಗರೆಡೆಯಾಡುವವರು ಹೂವಡಿಗರು ಸುವಾರರರಸಾಳುಗಳು . . . ಇಡಿಕಿಜಾದು ಸೊಗಯಿಸಿದರು (ಶೌಂಡಪು. ೬ ೩೯); ಹೂವು ಯಾವ ತೋಟದಲ್ಲಿ ಬೆಳೆಯಿತು ಎಂಬ ಚಿಂತೆಯನ್ನು ಹುಟ್ಟಿಕೊಳ್ಳದೆ ರಸಿಕರು . . . ಮುಡಿದು ನಲಿಯಲಿ ಎಂಬ ಹೂವಡಿಗನ ನಿಲವು ನನ್ನದು (ಬಂಕಾಶ. VI. ಅಂ೯). **ಹೂವಾಡಿಗ :** "ಹೂವಾಡಿಗನೆನಲ್ಕೆ ಹೂ ಮಾರುವವನು" (೪೪೮. ೧೦೩); ಹೂವಾಡಿಗನ ಪುತ್ರಿಯರಬ್ಬರು ಜಿನದೇವನ ಹೊಸ್ತಿಲ ಮೇಲೆ ಹೂವನರ್ಚಿಸಿದ ಫಲದಿ ಸ್ವರ್ಗದಿಂದ್ರಂಗೆ ದೇವಿಯರಾಗಿ ಪುಟ್ಟಿದರು (ದ್ವಾದಶಾ. ೧೦-೬೬೯).

[ಪೂ$_2$ + — ಅಡಿಗ$_2$]

**ಪೂವಡಿಗವೆಣ್** (ನಾ). ಹೂವನ್ನು ಕಟ್ಟಿ ಮಾರುವ ಹೆಣ್ಣು; ಹೂವಾಡಿಗಿತ್ತಿ : ಕುಸುಮದ ಪಸರದೊಳೊಪ್ಪಿದರಲ್ಲಿ ಪೂವಡಿಗವೆಣ್ಗಳದ ನೇವೇಳ್ವೆನು (ಶೃಂಖಾ. ೬-೧೬).      [ಪೂವಡಿಗ + ಪೆಣ್]

**ಪೂವಡಿಗಿತಿ**, ಪೂವಾಡಗಿತ್ತಿ, ಹೂವಾಡಗಿತ್ತಿ (ನಾ). = ಪೂವಡಿಗವೆಣ್ : ಪೂವಡಿಗಿತಿ, ಪೂಪಡಿಗಿತಿ, ಮಾಲೆವಡಿಗಿತಿ (ಶಬ್ದಾಮ. ೧೯೬ ಕ್ರಯೋ). **ಪೂವಾಡಗಿತ್ತಿ:** ವಾಸವರಾಯನ ಹಿರಿ ಹೂವು ಎಂದು ದೇಶವ ತಿರುಗಿದರು ಪೂವಾಡಗಿತ್ತೇರು (ಜಾನಿಗ. ೨೦-೧೧). **ಹೂವಾಡಗಿತ್ತಿ :** ಬಾಗಿಲಲ್ಲಿ ಹೂವಾಡಗಿತ್ತಿಯೊಬ್ಬಳು ಸೊಗಸಾದ ಮಲ್ಲಿಗೆಮಾಲೆಗಳನ್ನು ಹೆಣೆದುಕೊಂಡು ಬಂದಳು (ಕಮಶಿ. ೦೩೦).

[ಪೂವಡಿಗ + — ಇತಿ$_1$ (< — ಇತ್ತಿ)]

**ಪೂವಡೆ** (ನಾ). ಒಂದು ಬಗೆಯ ವಸ್ತ್ರ (?) : ಕುಡುಗುಂ ಚಿತ್ರಾವಟಿ ಪಟಾಯಿಡವಟ್ಟೆ ಸುವರ್ಣಚೇಲಮುಂ ತಿವಟಂ ಪೂವಡೆ ಕರ್ಮಂ ನೆರೆಮ ಮಣಲೆಡೆಯಂ ರತ್ನಂಗವಸನಮಂ ಪಸನಾಂಗಂ (ಶಾಂತಿಪು. ೬-೦೦೦). [?]

**ಪೂವಣಿಗ** (ನಾ). = ಪೂವಡಿಗ : ಪೂವಣಿಗಂ ಪಟಿಗಂ (ಶಬ್ದಾಮ. ೯೦೬ ಕ್ರಯೋ).      [ಪೂ$_2$ + — ವಣಿಗ$_2$ (< — ವಳಿಗ$_2$)]

**ಪೂವರಸೆ** (ನಾ). ಒಂದು ಬಗೆಯ ಕಣ್ಣಿನ ರೋಗ : ಅರಿವಾಳಿ ಪಟೋಲಂ . . . ತಮಸ್ಸಿಮಿರಂ ಪೂವರ[ಪಾಠಾಂ. ಮರಿ]ಸೆ ನರೆಯೆಂಬ ಪಲವಕ್ಷಿರೋಗಮಂ ಕಳೆಗುಮಂಜನಂ (ಅಕ್ಷಶಾ. ೦೩-೦೩). [?]

**ಪೂವಲಿ**, ಪೂವಳಿ, ಹೂವಲಿ (ನಾ). ೧. ರಂಗವಲ್ಲಿಯಂತೆ ರಚಿಸಿದ ಹೂವುಗಳ ಅಲಂಕಾರ : ಗಂಧಾಂಬುವಿಂದಾದ ಪೂವಲಿಯಿಂ ಚೆಲ್ವೆಸೆದಿರ್ದ ಬೀದಿಗಳ್ . . . ಚೆಲ್ವನಗ್ಗಳಿಸುತ್ತಿರ್ಪುವು ತತ್ಪುರಕ್ಕೆ ಸುರರಾಜವಾಸ ಸಾಮ್ರಾಜ್ಯಮಂ (ಆದಿಪು. ೭-೦೦೩); ಇದಟಿ ತಪನೀಯಸೋಪಾನಂಗಳ್ ಜಿನಸವನ ಗಂಧೋದಕಂಗಳಿಂ ಪೂವಲಿಯಿಂ ಮುದದೆ ತಲೆಯೊಳ್ ಪೊತ್ತಂತಿರ್ಪುವು (ಶಾಂತಿಪು. ೦೦-೬೭); ಸೊಗಯಿಪ ಸುಧಾಬ್ಧಿ ಮೋಹದೊಳಿಂದು ಬಂದೆನ್ನ ಮಗನು ದಟ್ಟಡಿಯಿಡುವ ರಾಜಾಂಗಣಮಿಂದು . . . ಸಮ್ಮಾರ್ಜನೆಯ ಮಾಡಿ ಮಲ್ಲಿಗೆಯ ಪೂವಲಿಯ ಕೆದಱಿ ಗಗನವನಲಂಕರಿಸಿದಳೊಯೆನಿಪ್ಪಂತೆ . . . ಮೃಗಧರಂ ಕಣ್ಗೆಸೆದುದು (ಜಶಕಾ. ೩-೯೦). ೨. ರಂಗವಲ್ಲಿ : "ಕಡೆಯುದೆಂದುಂ, ಪೂವಲಿಯೆಂದುಂ ರಂಗವಲಿ" (೪೩೩. ೬೩-೯೦೯). ೩. ಹೂವುಗಳ ಮಳೆ ; ಪುಷ್ಪವೃಷ್ಟಿ : ಸುರವೈರಿಯ ವಧದಿನದೊಳ್ ಧರೆಗುದಿರ್ದುವು ತಾರಕಂಗಳೆನೆ ಪೂವಲಿ ಭಾಸುರಮಾಯ್ತು ಮಲ್ಲರಂಗದೊಳ್ (ಜಗಪ. ೬-೯೦); ಮಲಯಾದ್ರಿಗಂಧವಹನರ್ತಕನು ತಳಿರೆಂಬ ಕರಗಳಿಂ ಪೂವಲಿಯ ಸಲೆ ಸೂಸಿ (ಚನ್ದ್ರಪಕಾ. ೦-೬೦); ಸೂಸಿ ಪೂವಲಿಯನಾಹ್ವಾನಗೈವಳಿದೊ ಈ ವಿಪಿನರಾಜೇಶ್ವರಿ (ಕ್ರೀರಾಮಾ. ೦೯೩-೨೬). **ಪೂವಳಿ :** ೧. ಸಾರಣೆಯ ಕಾರಣೆಯ ಗಂಧೋದಕದ ಚಳೆಯಗಳ ಸೌರಭದ ಪೂವಳಿಗಳಲಿ ಶೃಂಗಾರಿಸಿದ ಬೀದಿಗಳ ಸೊಬಗಿನ ಸಾರದಲಿ ಸಮನಿಸಿದುದತಿ ಸೌರಂಭ ಬನವಸೆಯ (ಸುಖಂ. ೩-೯). ೩. ಇಳೆಯುಂ ಪಾದಾಬ್ಜರಾಗಂ ಮಱುಚ ಘುಸೃಣಾಂಭಶ್ಛಟಾಸಕ್ತಿಯಿಂ ಪೂವಳಿಯಿಂ ದಿಕ್ಚಕ್ರಮಂ . . . ಪೂರಿಸೆ ನೆರೆದುದಜಸ್ರಂ ಪುರಸ್ತ್ರೀಸಹಸ್ರಂ (ಜಗಪ. ೦೬-೭೯). **ಹೂವಲಿ :** ೧. ಪೂವಲಿಯ ವೀಥಿಗಳ ನವರತ್ನಾವಳಿಯ ಸೂಸಕದ ಭವ್ಯದ ಲೋವೆಗಳ ಲಂಬಳದಲೆಸೆದವು ಕೇರಿಕೇರಿಗಳು (ಕುಮ್ಮಾರಿ. ೧೧-೯೭); ಹೂವಲಿಯ ಪುರರಚನೆಗಳ ಸಂಭಾವನೆಯನೆಸಗುವುದು (ತಿರ್ಪಾ. ೧-೬-೯).

[ಪೂ$_2$ + ಬಲಿ$_3$]

**ಪೂವಲಿಗೆದಱ್**, ಪೂವಲಿಗೆದಱು (ಕ್ರಿ). ಹೂವುಗಳನ್ನು ಚೆಲ್ಲು; ಪುಷ್ಪಗಳನ್ನು ಹರಡು : ಪೂವಲಿಗೆದರ್ದ ಸಂಪಗೆಯೊಸಟ ಪ್ರಸರದಿಂ ಸುವರ್ಣದ್ವೀಪದಂತೆಯುಂ . . . ಅಪ್ಪ ಮಾರ್ಗಮಂ ನೋಡುತೆ (ಕಾದಂಪೂ. ೦೦೨೦); ನಲಿದು ನರ್ತಿಸುವ ಪೂವಲಿಗೆದರ್ವ . . . ಪೂಗಳ ಬೊಂಬೆಗಳ ಸಾಲ್ಗಳಿಂದೆ ಚೆಲ್ವಾದುದಾ ಬನಂ (ಕಬಿಪು. ೯೩-೨೭). **ಪೂವಲಿಗೆದಱು :** ಪೂವಲಿಗೆದಱಿದ ಪೊಂಗೇದಗೆಯ ಗಱಿಯ ಕಿಱುಮುಳ್ಗಿ ಬಱಿದೆ ಬೆಗ್ಗುಗಳಂ ಮಾಡಿಯುಂ . . . ಎಂತಾನುಂ ತತ್ಕಾಂತೆ ಒಂದೆರಡಡಿಯನಿಡುವಲ್ಲಿ (ಕಾದಂಸಂ. ೬೭); ಅವೞಿದೆಯೆಡೆಯೊಳ್ ಪೂವಲಿಗೆದಱಿದಂದದಿಂ ಪ್ರಕೀರ್ಣಕಂಗಳಿರ್ಪುವು (ವರ್ಧಪು. ೦೦-೩ ವ); ಕಸ್ತೂರಿಯ ಕೆಸಱಿನಲಿ ಸಾರಿಸಿ . . . ಸುರಕುಜಕುಸುಮದಲಿ ಪೂವಲಿಗೆದಱಿ . . . ಸೇವೆಯ ಮಾಳ್ಪರಮರಿಯರು(ಸಾಳ್ವಭಾ. ೩೨-೩೩). [ಪೂವಲಿ + ಕೆದಱ್$_1$]

**ಪೂವಲಿಗೆದಱು** 'ಪೂವಲಿಗೆದಱ್' ನೋ.

**ಪೂವಲಿಗೆಯ್** (ಕ್ರಿ). = ಪೂವಲಿಗೆದಱ್ : ಪೂವಲಿಗೆಯ್ದು ಪೂವಿನ ತೊಡಂಬೆಯ ನಿಬ್ಬರಮಪ್ಪ ಸೋಂಕಿನೊಳ್ ನೋವುವೆನಿಪ್ಪ ಮೆಲ್ಲಡಿಯ ನೇಱಿಡುವಂ ಮಹಿಪಂ ತಪೋವನಪ್ರಾವಕೀರ್ಣಮಪ್ಪೆಡೆಯೊಳ್ (ಪುಷ್ಪಚ. ೧೦-೩೫); ಸ್ತನಕಲಶಂ ಕದಕ್ಕದಿಸೆ ಸೋಮರ್ದುಡಿ ಪೂವಲಿಗೆಯ್ಯೆ . . . ತಾಂ ತಳರ್ದತ್ತು ವಿಲಾಸಿನೀಜನಂ (ಕುಸುಮಾ. ೩-೯೯).

[ಪೂವಲಿ + ಕೆಯ್$_1$]

**ಪೂವಲಿಗೊಡು** (ಕ್ರಿ). = ಪೂವಲಿಗೆದಱ್ : ಮಣಿಮಯಕಳಶವೆತ್ತಿದ ವಿಪಣಿ ನಿರ್ಜನದೆಡೆ ಕುರೂಪಾದ ಲಲನೆ ಪೂವಲಿಗೊಡದ ಮಾರ್ಗಸ್ಥಳದ ಕೋವಿದಮನುಜರಿಲ್ಲೆನೆ ಹೊಳಲ ಮಹದೈಶ್ವರ್ಯವನು ವರ್ಣಿಸುವರಾರು (ಜೀವಂಕ. ೨-೨೩).      [ಪೂವಲಿ + ಕೊಡು$_1$]

**ಪೂವಲ್ಲಿ** (ನಾ). ಹೂವು ಬಿಡುವ ಬಳ್ಳಿ; ಪುಷ್ಪಲತೆ : ಪೂವಲ್ಲಿ ಹಾಳಾಗಿ ಮಾವುಫಲಗಳು ಪೋಗಿ ಗೋವುಗಳೆಲ್ಲವು ಪಾಲು ಕೊಡದಾಗ ಜಗದೊಳಗೆ ಸಾವು ಹೆಚ್ಚುವುದು (ಕಾಲಸಂ. ೬೬-೨೦೦); ಪಿರಿದೆನಿಸುವ ಕಲ್ಪವೃಕ್ಷ ನಾನಾಬಗೆ ಪರಿಮಳಪೂವಲ್ಲಿಗಳು ಮರದಿವ್ಯಸರಸಿಯ ಬಳಸಿದುದ್ಯಾನದೆ ಮೆಱೆದುವು (ಕಂಪಪು. ೨೩-೩೩).      [ಪೂ$_2$ + ವಲ್ಲಿ$_2$]

**ಪೂವಸರ** (ನಾ). ಹೂವು ಮಾರುವ ಅಂಗಡಿ : ಪ್ರೀತಿ ಮಿಗೆ ಮಾಲೆಗಾರ್ತಿಯರುಸಿರುತಿರ್ಪ ಸವಿಮಾತನಲ್ ಮಧುಪರವಮೊಡಗೂಡಿ ಕಂಪುಗಳ ಜಾತಿಯಂ ಬೇಱೆಬೇಱೆದಿಸುತೆ ಸುಳಿಗಾಳಿ ಪೂವಸರದೊಳ್ ಮೆಱೆದುದು (ಕಬಿಪು. ೦೦-೩); ಮದಹಸ್ತಿಗಮನೆ ಮತ್ತೋರ್ವಳಾ ಪೂವಸರಸವನಕ್ಕೆ ಮುಂಗಡೆ(ಯೊಳಿಟ್ಟು) ಸಾಣೆಯನು ಮೃಗಮದಕುಂಕುಮಂಗಳಂ ಧರಿಸಿ ಪೋಪಹೆಗೆಯ್ಕೆ (ವೆಂಕಾರಾ. ೦-೯-೨೭).      [ಪೂ$_2$ + ಪಸರ]

**ಪೂವಸೆ** (ನಾ). ಹೂವಿನ ಹಾಸುಗೆ; ಪುಷ್ಪಶಯ್ಯೆ : ಕೋಮಲವೀಣಾರುತಿಗೇಳ್ವ ಪೂವಸೆಗಳೊಳ್ ಪಟ್ಟಿರ್ಪ ಸೌಖ್ಯಾಳಿ ದೋಹಲಕೇಳೀಮುದಮುಂ ಸಮಂತು ತಳೆದಳ್ ತತ್ಕಾಂತೆಯಿಂತಾಮಗು (ಕುಸುಮಾ. ೦೨-೨೯); ಪೊಸಸುಸಿಲೊಳ್ ನೃಪಾತ್ಮಜೆಯೊಳೀತು ವರಂ ಪಡೆಯಲ್ಕೆ ಕೂರ್ತು ಪೂವಸೆಗೆಸೆವಾಕೆಯುಂ ಬರಿಪುದುಂ (ಚಸರ. ೦-೩೯); ಕೂರ್ಪಳ ಕೈವಿಡಿದೆಯ್ದಿ ಪಲ್ಲವಪ್ರಸರಸಮೇತಮಾದ ಪೊಸಯೊಳ್ ಪೊಸ ಪೂವಸೆಯಲ್ಲಿ ಕೂಡಿದಂ (ರಾಜಶೇ. ೩-೦೦೩).      [ಪೂ$_2$ + ಪಸೆ$_2$]

**ಪೂವಳ**, ಹೂವಳ (ನಾ). = ಪೂವಾಡಿಗ : "ಅಲರ್ವಡಿಗನೆನಲ್

ಪುಲ್ಲವಡಕಾಱ ಪೂವಳನೆಂದು ಪೂವಡಿಗನೆಂದೆನಿಸ್ಕುಂ " (ಕಬ್ಬಿ. ೩೪); ಒಂದುದಿವಸಂ ಪೂವಳಂ ಶೈಲಜಾತೆಗಾ ಮಾಲೆಯಂ ಕೊಡುತಿರಲ್ಕೆ (ಶಬಕ್ಷ. ೪೫-೩). **ಹೂವಳ :** ಮಡದಿ ಮುಡಿದಿರುವ ಹೂ ಯುವಕಂಗೆ ಚೆಂದ ಗುಡಿಯೊಳಗೆ ಕೊಡುವ ಹೂ ದೈವಭಕ್ತಗೆ ಚೆಂದ ಬಿಡಿಗಾಸು ಹೂವಳಗೆ (ಜಾಂಕಾಂ. ೩೦೦). [ಪೂ₂ + — ವಳ]

**ಪೂವಳಿ** 'ಪೂವಲಿ' ನೋ.

**ಪೂವಳೆ** 'ಪೂವಟೆ' ನೋ.

**ಪೂವಟೆ, ಪೂಮಳೆ, ಪೂಮಟೆ, ಪೂವಳೆ, ಹೂಮಳೆ** (ನಾ). ಮಳೆಯಂತೆ ಹೂವು ಸುರಿಯುವಿಕೆ; ಹೂವಿನ ಮಳೆ; ಪುಷ್ಪವೃಷ್ಟಿ : 'ಪೂವಟೆಗಱೆ' ಪರಾ. **ಪೂಮಳೆ :** ದುಂದುಭಿಗಳೆಸೆಯೆ ಪೂಮಳೆ ಸುರಿಯೆ (ಸಿದ್ಧರಾ. ೧-೩೩); ಅಬುಜಾಸನ ಸುರೇಂದ್ರಾದಿಗಳು ಜಯಜಯ ನಿನದದಲಿ ಸೂಸಿದರು ಸುಮ್ಮಾನದಲಿ ಪೂಮಳೆಯ (ಕೊರಾ. ೧-೧೧-೨೩); ಚಿಣ್ಣರಂಗದ ಮೇಲೆ ಮೆಚ್ಚಿ ಪೂಮಳೆಗಳಂ ಕಱೆದರಮರರ್ (ಕೃಬಿಕಾ. ೨೦-೧೨). **ಪೂಮಟೆ :** ಪೂಮಟೆಯ ಕಂಪನಿತಿಂಪು ಪೊದಟ್ಟು ಬಂದು ಬಂಧುರಹಿಮಮಂದಗಂಧವಹಮೆಚ್ಚಱಸಿತ್ತು ಮೃತಾಂಶುವಕ್ರ್ಯೆಯಂ (ಅದಿಪು. ೩-೨೨); ನಭದೊಳ್ ಪೂಮಟೆ ಭೂಮಿಯೊಳ್ ಮರುತಕಂ ದಿಗ್ಭಿತ್ತಿಯೊಳ್ ದೇವದುಂದುಭಿನಾದಂ . . . ಒಪ್ಪಿತಿರೆ ಬಂದಂ ಲೋಕನಾಥಂ (ಶಾಂತಿಪು. ೮-೩೦); ಪೂಮಟೆಯಿಂತಲ್ಲೊಕ್ಕುವು ಪೂಮರಗಳ ಪೂಗಳ್ (ಸಂಜಾಮೂ. ೧೧-೦೩). **ಪೂವಳೆ :** ಸರಿದುದು ಪುಸಿವೇಷದ ತೆರೆ ಸುರಿದುದು ಕಯ್ದಾರ ತೆಱದೆ ಪೂವಳೆ (ಗಿರಿಕ. ೯-೩೨೧); ಸುರಿದುದು ಪೂವಳೆ ಕಾಮಗೆ ನೇತ್ರದೆ ಸುರಿದುದಾನಂದಾಶ್ರು ರತಿಗೆ (ಸೋಹಕ. ೧೨-೬೪); ದೇವಗಂಧರ್ವಸಂದೋಹ ಚದುರಿಂದ ಪೂವಳೆಯ ಕರೆದು ಪಾಡಿದರಾ ಮರುತ್ಸುತನ ಕೀರ್ತಿಗಳನು (ವೆಂಕಾರಾ. ೩-೦-೨೯). **ಹೂಮಳೆ :** ಹೂಮಳೆಗಳೆಱಿಗಿ ಸುರಿದವಾತನ ಮೇಲೆ (ಶಹರ. ದೇ. ೪೩-೦); ಎಕ್ಕತುಳದಲಿ ಬಂದನಮರರ ಹೆಕ್ಕಳದ ಹೂ ಮಳೆಯ ಹೊಯ್ಲಿನ ಪೂರದಲಿ ಹನುಮ (ಕೊರಾ. ೩-೯-೬); ದೇವತೆಗಳು ಹೂಮಳೆ ಕರೆದರು (ವ್ಯಾಸಕಿ. ೧೩). [ಪೂ₂ + ಮಟೆ]

**ಪೂವಟೆಗಱೆ, ಪೂಮಳೆಗಱೆ, ಹೂಮಳೆಗಱೆ** (ಕ್ರಿ). ಮಳೆಯಂತೆ ಹೂವುಗಳನ್ನು ಸುರಿಸು ; ಪುಷ್ಪವೃಷ್ಟಿ ಮಾಡು : ಅಱಪುದುಮ ಘಾತಿಗಳ್ ಪೂವಟೆಗಱೆದುದು ನಭದಿಂ (ಶಾಂತಿಪು. ೦೨-೩೩); ಸುರರ್ ಪೂವಟೆಗಱೆವರ್ (ಕಬ್ಬಸು. ೦೦೩ ಕ್ರಿಯೋ). **ಪೂಮಳೆಗಱೆ :** ಸುರರು ಪೂಮಳೆಗಱೆವರು (ಕೊಕರಾ. ೪-೦೨-೩೩); ದೇವದುಂದುಭಿ ಮೊಳಗೆ . . . ಪೂಮಳೆಗಱೆಯೆ (ಶ್ರೀಕಾಹ. ೩-೧೦). **ಹೂಮಳೆಗಱೆ :** ದೇವದುಂದುಭಿ ವೃಂದವುಲಿಯಲು ತೀವಿ ಹೂಮಳೆಗಱೆಯೆ . . . ಪ್ರಮಥರುತ್ಸವಿಸೆ (ಬಿಸಪು. ೦೬ ೭೬); ವಾಕಜನಿವಹ ಹೂಮಳೆಗಱೆದು ಹರುಷಿಸಿ ಪವನಜನ ತಾಯ್ವರ್ ಭೀಮಸೇನನುಯೆಂದು ಹೆಸರಿಡಲು (ಸಂಭಕ. ೦೫-೩೬); ಅವರಿರ್ವರಿಗೆ ಹೆಱೆನೊಸಲಮರಾಂಗನೆಯರು ಹೂಮಳೆಗಱೆದರು ರಣ ರಂಗದೊಳಗೆ (ಮೋಹಕ. ೩೯-೨೯). [ಪೂವಟೆ + ಕಱೆ₁]

**ಪೂಪಾಡಗಿತ್ತಿ** 'ಪೂವಡಿಗಿತಿ' ನೋ.

**ಪೂವಾಸು₁** (ಕ್ರಿ). ಹೂವಿನ ಹಾಸಂಗೆಯನ್ನು ರಚಿಸು : ಚಂದನದೆಳ ದಳಿಗರ್ಗಳಂ ಪಾಸಿ ಮಲ್ಲಿಗೆಯಲರ್ಗಳಂ ಪೂವಾಸಿ (ಜಂಕಶಾ. ೩-೬ ವ).

[ಪೂ₂ + ಪಾಸು₁]

**ಪೂವಾಸು₂** (ನಾ). = ಪೂವಸೆ : ಪೂವಾಸಿಗೆ ಶಿಱಿಪರೆಂಬ ಭಯದಿಂ ಮುಟುಂಗಿದ ಚೆನ್ನೆಯ್ದಿಲ್ಗಳಂತಿರೆ ನಿರಂತರಾಶ್ರುಪಾತದಿಂ ಕೆಂಪುದಳೆದ ಕಣ್ಮಲರನೊಳಕೆಯ್ದುಪವನದ ಕಿಳಿಗೊಳಂಗಳೊಳು ಪುಗುವಳ್ (ಶಾದಂಅ. ೩೪೯); ತರಳೆ ನಿನ್ನಯ ವಿರಹದಿಂದ ಪೂವಾಸಿನೊಳು ಪೊರಳಿ ಮತ್ತಲ್ಲಿ ಸೈರಿಸಲಾಱದೆರ್ದು ಕುಳ್ಳಿರಲ್ (ಅಣ್ಣಕ. ೨-೨೯); ಪಾಸಿದ ಪೂವಾಸಿನೊಳು ಸ್ಮರಾಸಿಯಂದದಿ ಮಲಗಿಹಳೀ ಮಡದಿ (ಶಾಕುಂತ. ೩೩ ೫೩೪).

[ಪೂ₂+ಪಾಸು₂]

**ಪೂವಿನಪಿಪ್ಪರಗೆ** (ನಾ). ಒಂದು ಊರಿನ ಹೆಸರು ; ಈಗಿನ ವಿಜಾಪುರಜಿಲ್ಲೆಯ ಬಾಗೆವಾಡಿ ತಾಲ್ಲೂಕಿನ ಹೂವಿನ ಹಿಪ್ಪರಗೆ ಎಂಬ ಊರು : ಪೂವಿನ ಪಿಪ್ಪರಗೆ[ಯ] ನಾಲ್ಕು ದೆಸೆಯ ಪೊಲ ಮೇರೆಯಂ [ನ]ಡುಸರಿಯಾಗಿ ನಡದು[೦] ಕೊಟ್ಟರ್ (ಶಾಇ. XI-1, ೯-೨೩; 862). [<ಪೂ₂+ಪಿಪ್ಪರಗೆ]

**ಪೂವಿನಪುಲ್ಲಿಮಂಗಲ** (ನಾ). ಒಂದು ಊರಿನ ಹೆಸರು : ಬೆಂಪೂರು ತೊಮಗೂರು ಪೂವಿನಪುಲ್ಲಿಮಙ್ಗಲ . . . ಪರಪೂರು ಕೂಡಲೆ ಇನಿತು ಮಮ್ ಪೊಲಮೇರೆ ಸಹಿತಂ ಇತ್ತನ್ ಎಱಿಯಪಂ ಕೇವೃಜರನ್ ನಾಗ [ತ್ತ]ರಙ್ಗ (ಎಕ. IX. ಬೆಂಗಳೂ. ೮೩-೬ ; ಕು. 890).

[<ಪೂ₂+<ಪುಲ್ಲಮಂಗಲ]

**ಪೂವಿಲ್, ಪೂವಿಲು, ಪೂವಿಲ್ಲು** (ನಾ). ಹೂವಿನ ಧನುಸ್ಸು ; ಮನ್ಮಥನ ಬಿಲ್ಲು : 'ಪೂವಿಲ್ಲ' ಪರಾ. **ಪೂವಿಲು :** 'ಪೂವಿಲುಗಾಱ' ಪರಾ. **ಪೂವಿಲ್ಲು :** ಸ್ಮರನಿಗೆ ಪೂವಿಲ್ಲನು ಕೊಡುವಂದದಿ ವರಗುಣ ಮಾಲೆಯು ತನ್ನ ಹರಣದೊಡೆಯವ ಕೈಯಲಿ ಪೂಮಾಲೆಯಾದರದಿಂದಿತ್ತಳು (ಜೀಚಂಸಾಂ. ೦೬-೨೯); ಕಾವನ ಪೂವಿಲ್ಲ ಗೊಂಡೆಯಗಳನೊರ್ವ ಭಾವಕಿ ವಂಚಿಸಿ ತಂದು ಪೂವಿನಂಗಡಿಯೊಳಿರಿಸಿ ಮಾಱುವೊಲು ಪೊಸ ಸೇವಂತಿಯರಲ ಮಾಱುವಳು (ಅಂಜಕ. ೩-೬೪); ಪೂವಿಲ್ಲನೇರಿಸಿ ಕಾವನು ಕಣೆಗೊಂಡೆಱ ಟಂಕಾರ ಮಾಡಿದನಲ್ಲ (ಅಂಜಕ. ೦೪೪-೯). [ಪೂ₂+ಬಿಲ್₂]

**ಪೂವಿಲು** 'ಪೂವಿಲ್' ನೋ.

**ಪೂವಿಲುಗಾಱ** (ನಾ). ಹೂವಿನ ಬಿಲ್ಲಿನಲ್ಲಿ ಹೂಬಾಣಗಳನ್ನು ಹೂಡುವ ಬಿಲ್ಲುಗಾರ ; ಮನ್ಮಥ ; ಪುಷ್ಪಬಾಣ : ನಾಡಿಮೂಲವ ತಿಳಿದು ಗೆಲವಿತ್ತು ಸುಸಿಲಿಂಪುಗಲಿಸಿ ಕಾಣಿಪರು ಪೂವಿಲುಗಾಱನಾಗೆ ಮಾರ್ಥವನು (ಕೃಕವೇ. ೨-೦೦೩). [ಪೂವಿಲು (<ಪೂವಿಲ್) + —ಕಾಱ]

**ಪೂವಿಲ್ಲ** (ನಾ). ಕಾಮ ; ಮನ್ಮಥ : " ಅಲರಂಬು ನನೆವಿಲ್ಲ ಬಲ್ಲಹ ನೆಸಲ್ ಪೂವಿಲ್ಲ ಕಾವಂ " (ಕರ್ಣಾಶಿ. ೮); ಪುಣ್ಣಿಲ್ಲದೆಯುಂ ಪೂವಿಲ್ಲನ ಶರಹತಿಯಿಂ ನೋವನೆ ತಳೆದಪುದಿದೆನ್ನ ಹೃದಯಂ (ಶಾಕ್ಕುಕ. ೦೦-೬೦); ಪೂವಿಲ್ಲನ ಚಾಪಸಂಜನಿತಮೋಹನನಾದಮೊ ಸೋಮರಾಜಭೂವಲ್ಲಭ ನಿಂಪುವೆತ್ತ ವಚನಾಮೃತಮೋ ವಿಬುಧಾನುರಾಗಮೋ (ಉದ್ಭಟ. ೦-೩೩); ಹೊಲ್ಲಹದೊಂದು ಪೆಣ್ಣೀನು ಕಂಡೆಱಿಗಿ ಪೂವಿಲ್ಲನ ನೆಱಿ ನುಂಗಿತಾಗ (ಸೋಹಕ. ೧೨-೬). [ಪೂವಿಲ್+—ಅ₂]

**ಪೂವಿಲ್ಲು** 'ಪೂವಿಲ್' ನೋ.

**ಪೂವು** 'ಪೂ₂' ನೋ.

**ಪೂವುಟ್ಟಿ, ಹೂಬುಟ್ಟಿ** (ನಾ). ಹೂವಿನ ಕರಂಡ,—ಬುಟ್ಟಿ : ರಾಣಿ ಕೋರಿದ್ದ ಹಾರವನ್ನು ... ಅದೇ ಪೂವುಟ್ಟಿಯಲ್ಲಿರಿಸಿದಳು (ಶಚ. ೨೯೨). **ಹೂಬುಟ್ಟಿ :** ದೇವರ ಪೂಜೆಗೆಂದು ಅವರು ಹೂಬುಟ್ಟಿಯ ತುಂಬ ಸಂಪಿಗೆಹೂವುಗಳನ್ನು ತಂದಿದ್ದಾರೆ (ಜಾ). [ಪೂ₂+ಪುಟ್ಟಿ₁]

**ಪೂವುಡಿ** (ನಾ). ಹೂವಿನ ಧೂಳು,—ಪರಾಗ : ಅಲರ್ಗುಡಿ ಚಾಮರಂ ನೆಗೆವ ಪೂವುಡಿ ಸೀಗುರಿ ತುಂಬಿಯಿಂಚರಂ ಸುಲಲಿತಗಾನಂ . . . ಆಗೆ ಬನಮೋಲಗಶಾಲೆವೊಲಾಯ್ತು ಕಾವನಾ (ವೃಷಪು. ೯-೩೫); ತನಿಯುಸಿರ ಪೂವುಡಿಯ ಪೊಸಸೋನೆಯೆನಿತು ? (ಕಾಂಅರ. ೦೨೦-೨೫೦); "ಉದಿರ್ದ ಪೂವುಡಿ ಬನರಾಣಿಯ ಮೊಗವಾಡದ ಪಳಿಕಿನ ಪೊಸಂತಿಲೊಳ್ ಬರೆದ ರಂಗವಲ್ಲಿ"ಯಂತಿದ್ದಿತು (ಹಜುಹೂ. ೨೩೪). [ಪೂ₂ + ಪುಡಿ]

**ಪೂವೃಷ್ಟಿ** (ನಾ). = ಪೂವಟೆ : ನಿಟ್ಟಿಸಿ ಬಾವಿಮ ಗಜವದನನಿಗೆ ಪೂವೃಷ್ಟಿಯ ಸುರರು ಚೆಲ್ಲಿದರು (ಮೋಹಕ. ೩೯-೬೪). [ಪೂ₂ + ವೃಷ್ಟಿ]

**ಪೂವೆಂಚೆ** (ನಾ). ತಾವರೆಯಿಂದ ತುಂಬಿದ ಸರೋವರ; ಹೂಗೊಳ : ಪೂವೆಂಚೆಯಿಂ ಪೊಱವಟ್ಟಂಚರವನುಡುಗದೆ ಪರಿದು ಮುತ್ತುವ ಮತ್ತಮರಾಳಂಗಳುಮಂ (ಆದಿಪು. ೫-೭೨ ವ). [ಪೂ₂ + ಬೆಂಚೆ]

**ಪೂವೆತ್ತು**, ಹೂವೆತ್ತು (ಕ್ರಿ). ೧. ಹೂವಿನ ಮಾಲೆಯನ್ನು ಮೇಲೆತ್ತು,–ಎತ್ತಿ ಹಿಡಿ : ಚೆಲ್ಲವಾಡಿ ಪೂವೆತ್ತುವ ಮಾಲೆಗಾರ್ತಿಯರ ನಂದರಿಕೇಸರಿ ನಿಂದು ನೋಡಿದಂ (ಶಂಶಪಾ. ೯-೬೦). **ಹೂವೆತ್ತು** : ೨. ಹೂವನ್ನು ಕೀಳು,– ತಿರಿ : ಬೆಳಗ್ಗೆ ಪೂಜೆಗೆ ಹೂವೆತ್ತುವುದು ಅವರ ಪ್ರತಿದಿನದ ಕಾರ್ಯಕ್ರಮ (ಱಾ). [ಪೂ₂ + ಎತ್ತು₁]

**ಪೂವೊರ್ಕುಟಿ** (ನಾ). ಹೊಕ್ಕುಳಲ್ಲಿ ತಾವರೆಯುಳ್ಳವನು ; ಪದ್ಮನಾಭ ; ವಿಷ್ಣು : ಬೊಮ್ಮಂ ಪೂವೊರ್ಕುಟಿನ ಗಂಗಾವರ್ತಸನಾಭಿಯೊಳ್ ನಾಭಿಯೊಳ್ ಪುಟ್ಟಿಯುಂ ಸತ್ಯಲೋಕಕ್ಕೊಡೆಯನಾದಂ (ರಾಮಾಕ. ೦೯೦-೨). [ಪೂ₂ + ಪೊರ್ಕುಟ್ಟು (< ಪೊಕ್ಕುಟು) + – ಅ₇]

**ಪೂಷ** (ನಾ). ೧. ಸೂರ್ಯ : "ರವಿ ಮಾರ್ತಂಡಂ ಪತಂಗಂ ತಪಿ ತಪನನಿನಂ ಭಾನು ಪೂಷಂ . . . ಆದಿತ್ಯನಕ್ಕುಂ" (ವಸ್ತುಕೋ. ೦೦-೬೪); ಅಪುಕಿವಿರಪೂಷನತಿವಿಗತದೋಷ . . . ಪಂಪಾವಿರೂಪಾಕ್ಷನೆಮಗೀಗೆ ಭಕ್ತಿಜ್ಞಾನಸಂಪದವನು (ಹರಿಶ. ೦-೯); ಹರಿಯ ಶಿರವರಿದು ಸಿರಿ ಮುಂದಲೆಯ ತಱಿದುಯಾ ವರುಣನಂ ಮೆಟ್ಟಿ ಪೂಷನ ಪಲ್ಗಳಂ ಕುಟ್ಟಿ . . . ವೀರನಿಂ ಭಂಗಂಬಟ್ಟರೆನೆ ಜಿನವಾದಿ ಬಂದು ನುಡಿದಂ (ಶಶಿ. ೩-೦೦೯). ೨. ವಿಶ್ವರಕ್ಷಕ; ಜಗತ್ಪಾಲಕ : ಎಲ್ಯ ಸವಿತೃವೇ . . . ನಿನ್ನ ಸಂಚಾರಕಾರ್ಯಗಳಿಂದ ನೀನೇ ಪೂಷನೆನ್ನಿಸಿಕೊಳ್ಳುತ್ತೀಯೆ (ಋಕ್ಸಾರ. ೦೬೩). ೩. ಒಬ್ಬ ವೈದಿಕದೇವತೆ : ಜಗನ್ನಿರ್ಮಾತ್ರಿಯಾದ ರಾತ್ರಿಗೆ ಪತಿಯಾದ ಪೂಷನನ್ನು ನಾನು ಸ್ತುತಿಸುತ್ತೇನೆ. ಸಹೋದರಿಯಾದ ಉಷಸ್ಸಿಗೆ ಉಪಪತಿಯಾದ ಪೂಷನು ನಮ್ಮ ಸ್ತುತಿಗಳನ್ನು ಕೇಳಲಿ (ಋಕ್ಸಾರ. ೦೬೬). ೪. ಹನ್ನೆರಡು ಜನ ಆದಿತ್ಯರಲ್ಲಿ ಒಬ್ಬ : ಧಾತಾ ಅರ್ಯಮಾ ಮಿತ್ರ ವರುಣ ಇಂದ್ರ ವಿವಸ್ವಾನ್ ಪರ್ಜನ್ಯ ಪೂಷ ಅಂಶುಮಾನ್ ಗಭಸ್ತಿಮಾನ್ ತ್ವಷ್ಟೃ ವಿಷ್ಣುಗಳೆಂಬವರೀ ಕ್ರಮದಿಂ ದ್ವಾದಶಾದಿತ್ಯರು (ಶಿವೇಕ. ೩೬೬). ೫. ಭೂಮಿ. [ಸಂ. ಪೂಷನ್]

**ಪೂಷಕ** (ನಾ). ಸೂರ್ಯ : ಪೂಷಕ ನಿಶೇಶಾಕ್ಷಿಯಾಶಾಂತ ಭಾಸುಯಶ ಶೇಷ . . . ನಂಜೇಶ ಜಯತು (ಗುರುಚಾ. ೦೩-೦). [ಸಂ.]

**ಪೂಷಣ** (ನಾ). ಸೂರ್ಯ : "ಸೂರಃ, ಸೂರ್ಯಃ . . . ಅರುಣಃ, ಪೂಷಣಃ, ದ್ಯುಮಣಿಃ . . . ರವಿಃ–೩೭ ಸೂರ್ಯನ ಹೆಸರುಗಳು" (ಸಿದ್ಧಾಂತಿ. ೩೨). [ಸಂ.]

**ಪೂಷೆ** (ನಾ). ೧. ಮನುಷ್ಯಶರೀರದಲ್ಲಿರುವ ಒಂದು ನಾಡಿ : ತರಳತಿಳ ನಾಡಿಗಳ ಚಾದಶಗಳಿಗೆ ನಾಮಂಗಳಾಯುಂ ಸುಷುಮ್ನೆಯು ಪಿಂಗಳೆಯು ಇಡಾ ಸರಸ್ವತಿ ಪೂಷೆ ವಾರುಣಿ ಮೆರೆವ ಹಸ್ತಿನಿ ಜಿಹ್ವೆಯಾ ಅಶ್ವಿನಿ ಅಲಂಬುಸೆಯು . . . ಗಂಧಾವಾರಿಯು ವರಸೆದಪ್ಪದೆಯಿರುವವು (ಗಗಶಾ. ೯-೦೦). ೨. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು : ಅಮೃತಾ ಮಾನದಾ ಪೂಷಾ ತುಷ್ಟಿ ಪುಷ್ಟಿ ರತಿ ಧೃತಿ ಶಶಿನಿ ಚಂದ್ರಿಕಾ ಕಾಂತಿ ಜ್ಯೋತ್ಸ್ನಾ ಶ್ರೀ ಅಂಗದಾ ಪೂರ್ಣಾ ಪೂರ್ಣಾಮೃತಾ ಕಾಮದಾಯಿನಿಯೆಂಬ ಷೋಡಶಕಲಾಭರಿತನಾಗಿ (ಶಿವೇಕ. ೨೦೪). [ಸಂ. ಪೂಷಾ]

**ಪೂಷ್ಣ** (ನಾ). =ಪೂಷಣ : "ನಿಶಿವೈರಿ ಮಿಹಿರಂ ವಿರೋಚನಂ ಭಾಸ್ಕರಂ . . . ಸಹಸ್ರಾಂಶು ಪೂಷ್ಣನೆನೆ ಸೂರ್ಯನಕ್ಕುಂ" (ಕಬ್ಬಿಗ. ೦೦-೨); ಕೃಷ್ಣನಿಗೀ ಯಾತ್ರಾಟನೆ ಪೂಷ್ಣನಿಗಂ ಕೃಷ್ಣವರ್ತ್ಮಕೃಷ್ಣಗರ್ಗಂ ವೇಣುಜ್ಞಾರ್ಜನೆಯೊಳ್ಕೃಷ್ಣಂ ವಿಷ್ಣುಜ್ಞಾರ್ಜನೆಯ ಯತ್ನಮೆಂಗುಂ ವಿಬುಧರ್ (ಕೃಷ್ಣಕಥ. ೩-೦೩೭). [< ಸಂ. ಪೂಷನ್]

**ಪೂಸ**, ಹೂಸ (ನಾ). (ಅಲಂ) ಒಳಗೊಂದು, ಹೊರಗೊಂದು ನಡವಳಿಕೆ ಇರುವ ವ್ಯಕ್ತಿ; ಡಂಭಾಚಾರಿ : ಭಕ್ತಿಧಾಳಕರ ದರ್ಶನ ಚೋರಕರ ವಾಚಾರಚನೆಗರ ಬಱಿಮಾತಿನ ಪೂಸರ ಈಶ್ವರಭಕ್ತರ ಪರಮೇಶ್ವರನೆ ರೂಪು ಎನಲಾಱಿ (ಚಾಸೊವಮ್ಮ. ವ. ೩೬೦-೨೭); ಹಂದೆಯ ಶೃಂಗಾರ ಪೂಸನ ಕಠಿನದಂದ ಅಱಿವಿಲ್ಲದವನ ಸಂಗ (ಮನುಗುಂ. ವ. ೨೩೬-೩೮); ವಿರುತಿಗಳ ನಿಜವನಱಿದು ಪೂಸರ ಆಸೆಯನಱಿದು ವೇಷಗಳ್ಳರ ನಿಹಿತವ ನೋಡಿ (ಸರ್ವವ. ೧೨೨-೬೨೪). **ಹೂಸ** : 'ಹೂಸತನ' ವರಾ.

**ಹೂಸಹುಂಡ**=ತೋರಿಕೆಯವನು; ಡಂಭಾಚಾರಿ : ಹೂಸಿ[ಸ] ಹುಂಡನೆಂದಾಡಿದ ಮಾತೆ ನಿರ್ವಾಣಿನನಪ್ಪ ಜಿನೇಂದ್ರನೊರ್ವ ಕೊರ್ತು ಕೊಂಡಾಡಿದೊಡಣ್ಣ ಮುಕ್ತಿ ಮನೆದೊಟ್ಟೆನೆ ಮಚ್ಚಿ ಮರಲ್ದು ಬಾರಳೇ (ಧರ್ಮಾನಾ. ೧-೩೩); ಮರ್ತ್ಯರ ಹೂಸಿ[ಸ]ಹುಂಡರ ನಡೆವಳಿಯ ನೀನೊಪ್ಪವಿಟ್ಟೆಯಲಾ (ಶ್ರಶುಬೀ. ೦೩-೦೨); ಮಾಡಬಾರದು ಮಾಡಬಾರದು ಹುಸಿಡಂಭಕ ಹೂಸ ಹುಂಡರ ಸಂಗವ (ಅಬಂಜೇ. ೦೨೯-೯೩). [ಪೂಸು₁ + – ಅ₇]

**ಪೂಸಂತೆ** (ನಾ). ಹೂವನ್ನು ಮಾರುವ ಅಂಗಡಿಗಳ ಸಾಲು : ಇನಿತು ಸೊಬಗಂ ಪಡೆದ ಪೂಸಂತೆಯಿಂ ಮುಂದೆ ನೆನೆವವರ ಚಿತ್ತಮೆಲ್ಲಂ ಪರಿಪುಳಂ (ಕಂಪು. ೦೦-೩). [ಪೂ₂ + ಸಂತೆ₁]

**ಪೂಸಣಂಬ**, ಪೂಸಣಬ, ಹೂಸಣಂಬ (ನಾ). ಒಂದು ಬಗೆಯ ಸಿಹಿಯಾದ ಭಕ್ಷ್ಯ (?) : ಸರವಳಿಗೆ ಸಣ್ಣಸರವಳಿಗೆ ಮಣಿಸರವಳಿಗೆ ವರಮಧುರ ಪೂಸಣಂಬಂ ಸಮೆದವರತೊಳಗೆ (ಏಸರ. ೭-೦೪). **ಪೂಸಣಬ** : ಅಂಗಾರಕಂ ಕ್ಷೀರಪೂರಿಗೆಯುಂ ಪೂಸಣಬಾದಿ ಭಕ್ಷ್ಯಚಯಮಂ ತಂದಿಕ್ಕಿ ದರ್ಕಾಂತೆಯರ್ (ಧರ್ಮಶ. ೨-೩೪). **ಹೂಸಣಂಬ** : ಹಾಲಲವುಗು ಹಾಲುಂಡೆ ಹಾಲ ಮಂಡಿಗೆಗಳನಟ್ಟು ಮೇಲೆನಿಪ್ಪ ತಟಗ ಹೂಸಣಂಬ[ಪಾಠಾಂ. ಪೂಷಣಂಬು]ಮಂ ತೆರಳ್ಚಿ ಇಟ್ಟು (ಪ್ರಬಿಸ. ಹ. ೨೬೬-೨); ತಟಗು ಚಕ್ಕುಲಿ ಹೂಸಣಂಬ ಹೂರಿಗೆಗಳಂ . . . ಕಱಿಕಂಠನಾರೋಗಿಸಿದೊಡೆ ಇನ್ನಿದಾಪರಿಸಿ ಗರಳ ಸುಧೆಯಂತಿರ್ದುದು (ಸಿದ್ಧರಾ. ೬-೬೫). [?]

**ಪೂಸಣಬ** 'ಪೂಸಣಂಬ' ನೋ.

**ಪೂಸತನ**, ಹೂಸತನ (ನಾ). ದಂಭ; ದಂಭಾಚಾರ : ಆಸೆಯೆಂಬ ಕತ್ತೆಯ ಮೇಲೆ ಪೂಸತನವೆಂಬ ಸೆಟ್ಟಿವೇಷ ವೇಷಲಾಂಛನದ ತನ್ನಾತ್ಮವಾಸದ ಪಾಶವನೆತ್ತಿ ಈಶನಱಿಯದ ಸೆಟ್ಟಿ ವಿಷಕ್ಕಾಗಿ ಕೈಯಾಂತು ತನ್ನ ಬೆವಹಾರಕ್ಕೆ ನಷ್ಟ ಬಂದಿತ್ತು ಬಂಕೇಶ್ವರಲಿಂಗಕ್ಕೆ ಲಾಭವಾಯಿತ್ತು (ಸಂಕಅಂ. ವ. ೬೩೪-೨೫); ಪೂ[ಪಾಠಾಂ. ಹೂ]ಸತನದಂದವ ಹೇಳಿ ಎಡಗಾಲ ಸಂಧಿಯ ಮಚ್ಚಿ ಅನಂಗನ ಬಲೆಯೊಳಗಾದವರಿಗೆ ಘನಲಿಂಗನ ಶುದ್ಧಿಯೇಕೆ (ವಗಮಾ. ವ. ೪೨೦-೩೪). **ಹೂಸತನ** : ಮೇಲಿನ 'ನಗೆಮಾ' ಪ್ರಯೋಗದ ಪಾಠಾಂತರವನ್ನು ನೋಡಿ. [ಪೂಸ + – ತನ]

**ಪೂಸತ್ವ** (ನಾ). = ಪೂಸತನ : ಕೂಪರ ಕೈಯಿಂದ ಘಾತಕತನದಿಂದ ವ್ಯಾಪರಿಸುತ್ತ ಸುಡು ಆದೇತಱ ವಿರಕ್ತಿ ಮಾತಿನ ಮಾಲೆಯ ಪೂಸತ್ವ ಇದ ನಿಹಿತ ಲಿಂಗಾಂಗಿಗಳೊಪ್ಪರು (ಚಾಸೊಆಸಂ. ವ. ೩೯೦-೩೦). [ಪೂಸ+–ತ್ವ]

**ಪೂಸರ** (ನಾ). ೧. ಹೂವಿನ ಹಾರ ; ಹೂಮಾಲೆ : ಬಲಗೈಯ ಪೂಸರ ದೊರ್ವ ವನಿತೆ ನಿಂದಿರ್ದಳುತ್ಸವದಿ (ಮೋಹತ. ೫-೩೭); ಅವನ ಕರಾಬ್ಜದೆ ಪರಿಮಳವನು ನಿನ್ನ ಜವಳಿಮೊಲೆಗಳ ಮಧ್ಯದಲಿ ತವೆ ತಿಗುರಿಸಿಕೊಂಡು ಮುಡಿಗೆ ಪೂಸರವ ಬಲ್ಮಪಕದೆ ಬಿಗಿದು ಸುತ್ತುವುದು (ಕಂಠಶ. ೬-೦೩೮); ತುರು ನಡೆವ ದೆಸೆಗೊಲ್ದು . . . ಸರಳಿಸುತುಮಾಡುತುಂ ಕರು ಪಿಂತನೆಯೆ ಪೋಪ ಪಾಂಗಿನಿಂ ಪೂಸರದ ಪಥಕೆ ಪೊರಮಟ್ಟೆ ನಾಂ (ಕಂಸಕ. ೨೮-೭). ೨. ಹೂವಿನ ಬಾಣ; ಪುಷ್ಪಬಾಣ; ಮದನಾಸ್ತ್ರ : ಅಚ್ಚರಿವಡೆದ ಭ್ರೂಲತೆ ಸಿಂಗಾಡಿಗಳೊಚ್ಚೇರಿಗಣ್ಣ ಪೂಸರದಿ ಎಚ್ಚಱುವರ ಜಿತೇಂದ್ರಿಯರೆರ್ದೆಯನು ತಟ್ಟುರ್ಚಲು ವನವಧೂಟಿಯರು (ಮೋಹತ. ೦೯-೬೨); ಕಬ್ಬಿನ

ಬಿಲ್ಲಲರ್ವಕ್ಕಿಯ ತಿಬ್ಬಂ ಒಲಿದತನು ಪೂಸರಂಗಳನಿಸಲಾ ಉಬ್ಬೆಗೆ ಕೊಬ್ಬಿದ ಪೆಣ್ಣಂ ತಬ್ಬಿದೊಡದಱುಬ್ಬು ನಿಲ್ಕುಮಿಂತಿದು ಸುಖಮೇ (ಶಬ್ದಾ.ಸು. ೫೦ ಕ್ರಿಯೋ); ಮದನಶಬರಸಂಯಮಿಮೃಗಗಳಿಗಾಗ ಕದುಬಿ ಪೂಡಿದ ಪೂಸರಕೆ ಪುದುಗಿದ ಮಿಂಟೆಗಳೆನೆ ಪರಡುಗಳತಿಮುದದನಿತ್ತುವು ನೋಳ್ಪರಿಗೆ (ಕಂಪಪಿ. ೯–೭೯). ೩. ಕಾಮಂ; ಪುಷ್ಪಾಸ್ತ್ರ; ಮನ್ಮಥ: ಎಳದೆ ರ ನನೋಡಿವೆನೆಂದು ಪೂಸರಂ . . . ಪಡೆಯೆಲ್ಲಮಂ ಪಲವುಂ ಸನ್ನಣದಿಂ ಬರಲಿವೆಂದು ಪೇೞ್ (ಶಬ್ದಾ. ೧೦೩); ವಾಸರವಾಹವಪನ ಪೂಸರನಂಗ ದಹನಕರ . . . ಲೋಕಾಧ್ಯಕ್ಷ ಸಲಹೆನ್ನನು (ತಿಪಿತು. ೨೦–೧); ಚೆನ್ನಿಗನೆ ಸೂಸಿ ನಿನ್ನಯ ರತಿಸುಖದ ವಿಲಾಸದ ಪೂಸರನುಱುಬ ನೀ ಬಿಡಿಸೊ (ಕಂಪಪಿ. ೧೧–೩೨). [ಪೂ₂ + ಸರ₃]

**ಪೂಸರಂಬಡೆ** (ಕ್ರಿ). ಹೂವಿನ ಗುಚ್ಛಗಳನ್ನು ಹೊಂದು; ಹೂಮಾಲೆಯನ್ನು ಧರಿಸು: ನಿನ್ನಡಿಯಂ ನೆರವಿಲ್ಲದೆ ನಂಬಿದೆವೆಂಬರಸರ ಚೆನ್ನ ಪೂನ್ನ ನೆಲೆವಾಡದಂತೆ ಪೂಸರಂಬಡೆದ ಕೊಸಗಿನ ಮರಂಗಳೊಳಂ (ಶಬ್ದಾ. ೯೯). [ಪೂಸರ + ಪಡೆ₁]

**ಪೂಸರಗರ್ಭಿಣಿ** (ನಾ). ಮನ್ಮಥನನ್ನು ಗರ್ಭದಲ್ಲಿ ಧರಿಸಿದವಳು; ರುಕ್ಮಿಣಿ: ಮಾಣಿಕ್ಯಸಿಂಹಾಸನದೊಳು ಕೃಷ್ಣ ಕುಳಿತು ಪೂಸರಗರ್ಭಿಣಿ ಮೊದಲಾದ ರಾಣೀವಾಸಕ್ಕೆ ವನವನೊಪ್ಪಿಸಿದ (ಮೋಹತ. ೪–೫೬). [ಪೂಸರ + ಗರ್ಭಿಣಿ]

**ಪೂಸರದಹನ** (ನಾ). ಕಾಮದಹನ: ಪೂಸರದಹನ ಕಾಮೋತ್ಪತ್ತಿ ವರಶಂಬರಾಸುರವಧೆ ಕಂತುಸುತನ ಭಾಸುರಲೀಲೆ ಬಾಣನ ಗೆದ್ದ ಜಯಲಕ್ಷ್ಮೀಶನ ಕೃತಿಯ ವರ್ಣಿಪೆನು (ಮೋಹತ. ೧ ೩೩). [ಪೂಸರ + ದಹನ]

**ಪೂಸರಲ್**, ಪೂಸರಲು, ಪೂಸರಳು (ನಾ). ಹೂವಿನ ಬಾಣ; ಕಾಮನ ಬಾಣ: ಇಂದು ನೀನೆನಗೋಸುಗ ಧೂರ್ಜಟಿಯ ಮೇಲೊಂದು ಪೂಸರಲಿಂದಲೆಸೆಯೊ ನೊಂದು ಲಲಾಟನೇತ್ರವ ತೆಱೆದರೆ ನೀನು ಬೆಂದು ಹೋದವೆ ಬೇಡ ಮಗನೆ (ಮೋಹತ. ೭–೨೬); ಕಬ್ಬುವಿಲ್ಲುಂಬಿವೆದೆ ಪೂಸರಲ್ಪೂಣ್ದಸಲ್ ನಿಬ್ಬರಮಿದು (ಕೈಬಿಷಾ. ೭–೦೭). **ಪೂಸರಲು**: ಕಾಣಬಾರದು ಪುಂಡ್ರೇಕ್ಷುಕೋದಂಡನೊ ಬಾಣ ಪೂಸರಲುಗಳಿಲ್ಲ . . . ಜಾಣನಾರೆಂದು ನೋಡಿದರು (ಮೋಹತ. ೧೯–೬೦). **ಪೂಸರಳು**: ಪೂಸರಳಿಂದೆ ಶಿವನ ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯ ಕೊಟ್ಟ ಮನ್ಮಥ ಜೀವನಿಗೆ (ಮೋಹತ. ೫–೬೦). [ಪೂ₂ + ಸರಲ್₁]

**ಪೂಸರಲ**, ಪೂಸರಳ (ನಾ). ಹೂವುಗಳ ಬಾಣವುಳ್ಳವನು; ಮನ್ಮಥ: ತೊಳಪ ತೋರಮೊಲೆಗಳೆಂಬ ಪೂಗೊಂಚಲ್ ಪೂಸರಲನೆಂಬ ತುಂಬಿಗಿಂಬಾಗೆಯುಂ (ಶಬ್ದಾ. ೦೨೩); ಪೂಸರಲನ ಜಸಮಂ ದೂಸರಮಂ ಗೆಯ್ದನ . . . ದಿವಿಜಾಸುರನತಪದನಂ . . . ನುತಿಸಿದ ವನಭವನ (ಉದ್ಭದೇ. ೭–೦೯); ಸೂಸುಮೋಹನದ ಸಿಂಗರದೊಟ್ಟು ತನ್ನ ವಿಲಾಸಿನಿಯರ ಬಳಸಿನೊಳು ಪೂಸರಲನ ಪುಣ್ಯದೇವತೆಯಂತಿರ್ದ ಭಾಸುರಾಂಗಿಯ ಕಂಡರಾಗ (ಶರತ. ೪೦–೪೪). **ಪೂಸರಳ**: ಮೈಸೂರಧಿಕಾರಿಯಿವನೀಗ ಚಿತ್ತ್ರಸು ಪೂಸರಳನ ಪಟ್ಟದಾನೆ (ಕಂಪಪಿ. ೨೫ ೬೦). [ಪೂಸರಲ್ + –ಅ₁]

**ಪೂಸರಲು** 'ಪೂಸರಲ್' ನೋ.

**ಪೂಸರಳ** 'ಪೂಸರಲ' ನೋ.

**ಪೂಸರಳು** 'ಪೂಸರಲ್' ನೋ.

**ಪೂಸರಿ** (ನಾ). ಹೂವಿನ ಮಳೆ; ಪುಷ್ಪವೃಷ್ಟಿ: ಪೆಂನೆಧರಗೇಶ ಪ್ರತ್ಯಕ್ಷವಾಗಿ ಸುರದುಂದುಭಿಯೊಳು ಪೂಸರಿಯೊಳು ಕೈಲಾಸಗಿರಿಗೆ ಕೊಂಡೊಯ್ದ ಸೋಮೇಶ (ಕೈರಪೀ. ೧–೨೪೯). [ಪೂ₂ + ಸರಿ₆]

**ಪೂಸಿ** 'ಪೂಸು₁' ನೋ.

**ಪೂಸಿಕೆ** (ನಾ). ಬಳಿಯುವಿಕೆ; ಹಚ್ಚುವಿಕೆ; ಲೇಪನ: ಭರದ ತೊಲೆ ಸಿಡುಗಂಭ ಜಂತೆಯುಪ್ಪರಿಗೆಗಳುಮಾ ನರಗಳೇ ಕಟ್ಟುವಿಂಡಿಗೆ ಮಾಂಸ ಪಂಕದಾ ಸಱಿಯ ಪೂಸಿಕೆ (ಲಿಶಿಂ. ೩೯–೮೨). [ಪೂಸು₁ + –ಇಕೆ]

**ಪೂಸಿಮಾತು** (ನಾ). ಪುಸಲಾವಣೆಯ ಮಾತು; ರಮಿಸುವ ಮಾತು: ಅವಳು ಅಳುವ ಹುಡುಗನನ್ನು ಪೂಸಿಮಾತುಗಳಿಂದ ಸಮಾಧಾನಗೊಳಿಸಿದಳು (ರೂಢಿ). [ಪೂಸಿ (<ಪೂಸು₁) + ಮಾತು₁]

**ಪೂಸು₁**, ಹೂಸು₁ (ಕ್ರಿ). ೧. ಬಳಿ; ಸವರು; ತೊಡೆ; ಲೇಪಿಸು: "ಪೂಸು–ವಿಲೇಪನೇ, ಅಪಾನವಾಯಾವಚ" (ಶಮದ); ಏವಿರಿದಿದೆನ್ನ ಭುಜಾಸಿಗೆ ತೇದು ಪೂಸಲುಂ ನೆಱೆಯದು ನೀನಿರಾನೆ ರಿಪುಸೇನೆಗೆ ಸಾಲ್ವೆಂ (ಕಾವ್ಯಸಾ. ೪೦೦ ಕೂದ್ಭಳ); ಏಮ್ಮ ಮಾವಂ . . . ಕೆಱೆಗೆವೋಗಿ ಮಿಮಾಗಳ್ ತಲೆಯಂ ಪೂಸಲೆಣ್ಣೆಯನಪ್ಪೊಡಮೆಱೆಯಿಸಿಯುಮುಱಿಯಂ (ವಡ್ಡಾರಾ. ೪–೦೭); ಪೂಸಿದರು ಸೇವಕರು ಪರಿಮಳ ವಾಸಿಸುವ ಸಿರಿಗಂಧವನು (ತೊರಣ. ೬–೨೬–೬೦). ೨. ತೊಳೆ; ಪ್ರಕ್ಷಾಲನ ಮಾಡು: 'ಬಾಯಿಪ್ಪೂಸು' ಪರಾ. ೩. ಪರಿಮಳವನ್ನು ಕೊಡು; ಸುವಾಸನೆಯನ್ನು ಕೊಡು: ಅರೆದ ತೆಂಗಾಯ ಸವಿಹಾಲು ಸಕ್ಕರೆ ಬೆಣ್ಣೆವೆರಸಿ ಪಾಕಂ ಮಾಡಿ ಪೂಸಿದ[ಪಾಠಾಂ. ಪೂವಿನೊ, ಹುವ್ವಿನೊ]ಗ್ಗರಣೆಯಂ ಕೊಟ್ಟು ಪರಿಮಳವಿಡುವುದು (ಸೂಶಾ. ೪–೬೨). ೪. (ಅಲಂ) ಸಲ್ಲಿಸು; ಕೊಡು: ಘಾಸಿಯು ನೀ ಮಾಡುತೆನ್ನನು ಪೂಸಿಂದರೆ ಧನವನೆಲ್ಲಿ ನಾ ತರಲೀಗಂ (ಹಮುತ. ೬೫). ೫. (?): ಇದಾನಱೆತ್ತೋನ್ಪಳ್ಳಿ ಮಹಾಪಾತಕನಾಗಿ . . . ಆಟ್ಟುವೆಣ್ಣೆತ್ತಲ ಪೂಸುವೋನಕ್ಕು (ಎಕ. III, ನಂಜಪ. ೨೬–೭; ಸು. 810). **ಹೂಸು₁**: ೧. ಹಂದಿ ಶ್ರೀಗಂಧವ ಹೂಸಿದಡೇನು ಗಂಧರಾಜನಾಗಬಲ್ಲುದೇ (ದೇದಾವ. ೨೨–೩೯); ದೂಪಿಸಿದ ಬಿಳಿದುಗುಳ ಸುಟ್ಟನು ಲೇಪನಂಗಳ ಹೂಸಿ ಮಧುರಾಳಾಪದಲೆ ಬೋಳೈಸಿ ಸಾರಥಿ ಗಜಹಮಾಪಳಿಯ (ಕುವ್ಯಾಗ. ೦–೨೬); ಎಣ್ಣೆಮಜ್ಜನವಿಲ್ಲದವಳ ತಲೆ ವಾಸಿಹುದೊ ಹೂಸಿ ಎರೆವನು ತನ್ನ ಕೂಸು ಬರಲಿ (ಬಿಶಾಸಿ. ೩೫–೦೪). ೪. ಬೊಪ್ಪಣಾಗೆ ಹಿಟ್ಟಂ ಹೂಸಿ ಗೆಜ್ಜೆಯ ಹುಯ್ಯಿಯೆಂದು (ಜಾ. ೦೯೫೦, ಜಾನಪದ್. ೬೦–೩೭; 1026). ೬. ಲೇಪಿಸಿಕೊಳ್ಳು; ಬಳಿದುಕೊಳ್ಳು: ಒಲೆಯ ಬೂದಿಯ ಬಿಲಿಯಲು ಬೇಡ ಒಲಿದಂತೆ ಹೂಸಿಕೊಂಡಿಪ್ಪುದು ಹೂಸಿ ಏನು ಫಲ ಮನದಲ್ಲಿ ಲೇಸಿಲ್ಲದನ್ನಕ್ಕ (ಬಸವ. ೦೦೪).

**ಪೂಸಿಕೊಳ್**, **ಪೂಸಿಕೊಳ್ಳು** = ೧. ತೊಡೆದುಕೊಳ್ಳು; ಬಳಿದುಕೊಳ್ಳು: ಇದು ಪೇಲಿಮ ಮೆಯ್ಯಾರೆಂಬುದನಱಿಯದೆ ಮೆಯ್ಗೆ ಪೂಸಿಕೊಳ್ಳುವು ಮಕ್ಕಳ್ (ರವರ್ಗಾವ್ನು. ೫–೭೭೬); ಪೂಸಿಕೊಂಬ ಅನುಲೇಪನ ಮೊದಲಾಗಿ (ಗಜಾಶ. ೨೫೨–೩). ೨. ಕ್ರೀಡಿಕೊಳ್ಳು; ನೀವಿಕೊಳ್ಳು: ಪಕ್ಷಿಗಳು . . . ತಮ್ಮ ಗರಿಗಳನ್ನು ಪೂಸಿಕೊಳ್ಳುತ್ತಿದ್ದವು (ಐದುತ. ೫). **ಹೂಸಿಹುಂಡನ ಮಾತು**, **ಹೂಸಿಹುಂಡನೆ ಮಾತು** = ತೋರಿಕೆಯನ್ನು ಮಾಡು; ಡಂಭಾಚಾರವನ್ನು ಮಾಡು: ಹೂಸಿಹುಂಡನ ಮಾಡಿ ಸಂಗೆಟ್ಟೋಸರಿಸದಸಾಲ್ತಂತಲಕ್ಷ್ಮವನಾಸುರತೆಯಂ ತೊಡರಿ ಬಿಡದಂತ ಡಗದನ್ಯೋನ್ಯವಾಸಿಯಾಗಿರುತಿರಲು (ಸದ್ಗುರು. ೨ ೬); ನಾನೀಸುದಿನ ಪರಿಯಂತರಂ ಬಹಿಃಕ್ರಿಯೆಗಳಿಂ ಹೂಸಿಹುಂಡನ ಮಾಡಿ ಹೊಱಗೆ ನಾಂ ಪೂಜಿಸೆ ವೃಥಾ ದಿನಂಗಳು ಸವೆದುವು (ತಿಶಿತು. ೬–೦೦); ಹೂಸಿಹುಂಡನೆ ಮಾಡಿ ಬಾಯ ಸವಿಯ ನುಡಿವರೆಲ್ಲಾ ಭಕ್ತರಪ್ಪರೆ (ಕೃಪಶಂ. ೨೨೩–೦೦೦೦). [ದೇ. ‖ ತಮಿ. ಮಲ. ಪೂಚು; ತುಳು. ಪೂಜು; ತೆಲು. ಪೂಯು]

**ಪೂಸು₃**, ಹೂಸು₃ (ಕ್ರಿ). ಅಪಾನವಾಯುವನ್ನು ಬಿಡು: "ಪೂಸು ವಿಲೇಪನೇ, ಅಪಾನವಾಯಾ ಚ" (ಶಮದ). **ಹೂಸು₃**: "ಹೂಸು— ಅಧೋವಾಯಾ" (ಶಮದ); ಹೂಸಿದವರ್ಯಾರು ಅಂದ್ರೆ ಹಳೇಸೀರೆ ಯಾವರು (ಹುಬ್ಬಿಹ. ೦೫೦).

ಮೆಚಿ³ಯಿತ್ತು (ಹಕಳ. ೩-೧೪). ಹೂಳು₁ : ೧. ಬೀದಿಯಲ್ಲಿ ಬಿದ್ದ ಮಾಣಿಕ್ಯವ ಹೂಳಿರ್ದ ನಿಧಾನವಾರಿಗೂ ಕಾಣಬಾರದು ನೊಡ (ಅಪಹಂ. ೨೨೮-೧೧೩೨); ಒರೆಸಿ ಹಿಡಿಯಲಿ ಹೂಳಿದನು ಕಿವ್ಯಾರದಾನವನ (ಕುವ್ಯಾಅ. ೧-೩೪) ; ಭ್ರಷ್ಟಭರಣ ಧಾನ್ಯ ಬೇಳ್ವುದೆ ಪಾಣ್ಣ ಸತ್ತವರನು ಹೂಳಿ ಸುಡುವುದೆ ಪಾಣ್ಣ (ಪುರಂವ. ೨-೬೦-೩). ೨. ಸಲೆ ಸುರಂಗಗಳ ಘಾತವ ಹೂಳಿದರಾಗ ತಳುವದೆ ಹೊಚಿಕಾಹಿನವರಾ(ಕಂವಪ. ೧೪-೯೩). ೩. ವಾರಣೌಘವ ಸೀಳಿದನು ಹೂಳಿದನು ರಕುತದಲಿ (ಕುವ್ಯಾಕ. ೨೦-೨೨). ೪. ಹಗಲ ಹೂಳಿದರಮಮ ಬಾಣಾಳಿಗಳಲಸಮಮಹಾರಥರು (ಕುವ್ಯಾಶೀ. ೪-೯೬) ; ಹೊಗರು ಗಣೆ ಹೂಳಿದುವು ಗುರುಸುತನಂಬಿನಂಬುಧಿಯ (ಕುವ್ಯಾಶ. ೩-೫). ೫. ಉಗಿವ ಹುಂಗಳ ಬಾಯಿದೊಚಿ³ದಾಗುವ ನೆತ್ತರಿಂ ಹೂತೊಚಿಗಿ ಬಂದಾಗೆ ವೊಲೊಚಿಗಿದಂ ಕಲಿ ಸಂಕನು (ಶಾಇ. XX. ೦೨೬-೧೧ ; 1186) : ಆಲಿ ಹೂಳಿದವಶ್ರುಜಲದಲಿ (ಕುವ್ಯಾದ್ರೋ. ೦೫-೧) : ಹೊಲೆದಾಸ್ಯಪಂಕದಲಿ ಹೂತಿರುವೆವು (ಚಸೀಗೀ. ೦೨೦-೨೦). ೬. ಮಹಾರಥರೆಸುಗೆಯಲಿ ಹೂಳಿದುವು ನಭ ನುಗ್ಗಾಯ್ತು ನೆಲ ಚತುರಂಗಪದಹತಿಗೆ (ಕುವ್ಯಾಕ. ೧೧-೧೨) ; ಅಲ್ಲವು ಹೂಳಿ ಹೋದನು ಕವಣೆಗಲ್ಲಲಿ (ಕೃಕುಂ. ೦೩-೧೮) : ಹೂಳಿತಂಬರ ರತ್ನಮಯ ಕಲಶಾಳಿ ಸತ್ತಿಗೆಗಳಲಿ (ತೊರಂ. ೬-೨೦-೩೪). ೯. ತುಂಬು ; ಗಿಡಿ ; ಭರ್ತಿ ಮಾಡು : ಹೊಟ್ಟೆಯ ಹೂಳಲಿಕೆ ಹಿಂಸೆಯನು ಮಾಡುವ ಹೊಲಬು ತಾನಲ್ಲ (ಕೃಕುಂ. ೦-೦೨) ; ಜೋಗಿ ಕಡುದರವೇಸಿ ಜಂಗಮರು ಹೆಡಗೆಯೊಳಗೆ ಹೂತು ಕೊಡುವನ್ನಪಾನದೆ ಬಿಡದೆ ಸಂತುಷ್ಟಿವಡೆದರು (ಕಂಪಅ. ೨೦-೧೧). ೧೦. ಇಂಗಿಸು ; ಪರಿಹರಿಸು ; ನಾಶಪಡಿಸು : ರಾಮಾಯಣವನಾ ಮುನಿ ಹೇಳಿದನು ಹೂಳಿದನು ಭೂಪನ ಮಾನಸ ವ್ಯಥೆಯ (ಕುವ್ಯಾಅ. ೨೩-೧) ; ವಿಷಯವ ಹೂಳುವದು ನಿಜಮುಕ್ತಿಕಾಂತೆಯ ನಾಳುವದು (ಹಂಸಾ. ೧೧೨) ; ಕರಣಂಗಳನು ಆಳು ಕಾಮಂಗಳನು ಹೂಳು (ಇಂಸಾಕ. ೦೫೩-೫೨). ೧೧. ಅಡಗು ; ಹುದುಗಂ ; ಮರೆಯಾಗು ; ಕಾಣದಾಗು : ಹೂಳಿಹೋಯಿತನ್ನಪಾನವ ಮೇಲಣೆಚ್ಚು (ಕೃಕುಂ. ೬-೦೯); ಮುಚ್ಚಿದರಡುತುಟಿಗಳಲ್ಲಿ ಅರ್ಥವೆಲ್ಲ ಹೂಳಿದೆ (ಅರಳು. ೨೩-೮). ೧೨. (ಕಣ್ಣು, ಕಿವಿ, ಬಾಯಿ ಮುಂತಾದುವನ್ನು) ಮುಚ್ಚು ; ಮುಚ್ಚಿಕೊಳ್ಳು : ಕಾಳಿ ನಿರ್ವಾಣದಾಕೃತಿಯ ತಾಳಿ ಬಂದಿದಿರಾಗಿ ನಿಲಲಚ್ಯುತ ನೋಡಿ ಹೂಳಿದ ದೃಗ್ಯುಗಳವನು (ಮೋಹತ. ೩೮-೨೪). ೧೩. ಹೊಗು ; ಪ್ರವೇಶಿಸು : ಹೂಗಣೆ ಹೃದಯವನು ಹೂಳಿದವು [ಪಾಠಾಂ. ತಾಗಿದುದು] (ಕುವ್ಯಾಪ. ೨-೬).

ಹೂಳಿಡು, ಹೂತಿಡು = (ನೆಲದಲ್ಲಿ) ಮುಚ್ಚಿಡು ; ಬಚ್ಚಿಡು : ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ . . . ಹತ್ತುಸಾವಿರಹೊನ್ನ ತಿಪ್ಪೇಲಿ ಹೂಳಿಟ್ಟು ಮತ್ತೆ ಉಪ್ಪಿಲ್ಲದೆ ಉಂಡ್ಯಲ್ಲೋ ಪ್ರಾಣಿ (ಪುರಂದ. ೧-೬೭ ೦) : ಹೆಂಗಸರೆಂದರೆ ' ಗೃಹಸ್ವಾಮಿನಿಯರು ', ಎಂಬ ಚಂದವಾದ ಹೆಸರಿನಿಂದ ಅವರನ್ನು ಅಡುಗೆಯ ಮನೆಯಲ್ಲಿ ಹೂಳಿಡುವ ಕಾಲವು ಮುಗಿದು ಹೋಯ್ತು (ಯುಕ್ತಿಕ. ೧೪೦) ; ಹಣವನ್ನು ಹೂಳಿಟ್ಟು,ಅದರ ಮೇಲೆ ಗೋಣಿತಟ್ಟನ್ನು ಹಾಸಿಕೊಂಡು ಯಾವಾಗಲೂ ಅಲ್ಲಿಯೇ ಕೂತಿರುತ್ತಿದ್ದನು (ಪೀತಾಂ. X. ೩); ಗೆದ್ದವರು ಬಳಿಗಾಡನ್ನು ಹೂತಿಡುವ ಕೆಲಸವನ್ನು ವಹಿಸಬೇಕಾಗುತ್ತದೆ (ಕವಿಕೋ. I, ೬೦೩) ; ನೆಲದಲ್ಲಿ ರೂಪಾಯಿ ಹೂತಿಟ್ಟರೇನು ಫಲ ? (ವಚರಾ. I, ೩೭೦).

[ದೇ.॥ ಮಲ. ಪೂಟು, ಪೂಣು ; ಕೊಡ. ಪುಳ್ ; ತೆಲು. ಪೂಡುಚು, ಪೂಡ್ಚು ; ಪಾಯ್ನ್ಯ, ಪುಪರ್; ಕೋತ. ಪುಗ್ ]

**ಪೂಟ್ಕೆ** (ನಾ). ಶವವನ್ನು ಹೂಳುವುದು,_ಸಮಾಧಿ ಮಾಡುವುದು : ಇನ್, ಅವಳ ಮೇಲೆಯುಮ್ ಪೊಚಿ³ಸಿದವೆನ್. ಈ ಪೂಟ್ಕೆಯಾ ಸಂಚಿನೊಳಗೆ ಸರಿಪಾಲ ಕಪ್ಪನ್. ಕರೆತನ್ನಿಮವಳನ್ (ಅಂಚಿಗೂ. ೨೩-೪೬೮).

[ಪೂಟ್ + — ಕೆ]

ಪೂಟ್ಡಿ ' ಪೂಟಿ್' ' ಪರಾ.

ಪೂಟ್ಡು ' ಪೂಟಿ್' ' ಪರಾ.

**ಪೃಕ್ತಿ** (ನಾ). ಸ್ಪರ್ಶ ; ಸಂಪರ್ಕ : " ಸ್ಪೃಷ್ಟಿಃ, ಪೃಕ್ತಿಃ — ೨ ಮುಟ್ಟುವಿಕೆ, ಸೋಂಕುವಿಕೆ " (ಸಿದ್ಧಾಂಅ. ೩೫೭). [ಸಂ.]

**ಪೃಚ್ಛಕ** (ನಾ). (ಪ್ರಶ್ನೆಯನ್ನು) ಕೇಳುವವನು : ' ಪೃಚ್ಛಕಲಗ್ನ' ಪರಾ. [ಸಂ.]

**ಪೃಚ್ಛಕಲಗ್ನ** (ನಾ.) [ಜ್ಯೋತಿ] ಪ್ರಶ್ನಿಸುವ ಕಾಲ : ದಿವಾಕರನುಂ ಪೃಚ್ಛಕಲಗ್ನದೊಳ್ ನೆಲಸೆ ಮತ್ತಂ ಗ್ರೀಷ್ಮಮಾ ಕಾಲಮುಂ (ಜಾತಅ. ೨೪-೬); ಪೃಚ್ಛಕಲಗ್ನದಿಂ ಸರುತದಿಂದಾರೂಢದಿಂ ನೋಡಿದಾ ಬೋಧಂ . . . ಭೋಂಕನೆ ಪೇಟ್ವ ಜೋಯಿಸಮಾರ್ಗಂ ಮರ್ತ್ಯರೊಳ್ ದುರ್ಲಭಂ (ಸುಕುಮಾ. ೩-೨೦). [ಸಂ.]

**ಪೃಚ್ಛನೆ** (ನಾ). ೧. ಕೇಳುವುದು ; ಪ್ರಶ್ನಿಸುವುದು. ೨. ವಿಚಾರಣೆ. ೩. [ಜೈನ]ವಾಚನ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶ—ಎಂಬ ಪಂಚವಿಧಸ್ವಾಧ್ಯಾಯಗಳಲ್ಲಿ ಒಂದು: "ಶಬ್ದಾರ್ಥಗಳೆರಡರಲ್ಲಿಯೂ ಪ್ರಶ್ನೆಗಳನ್ನು ಮಾಡಿ ನಿರ್ಣಯ ಮಾಡಿಕೊಳ್ಳುವುದು" (ಜೈನಕೋ. ೧೬೨) : ವಾಚನೆಯುಂ ಪೃಚ್ಛನೆಯುಮನುಪ್ರೇಕ್ಷೆಯುಮಾಮ್ನಾಯಮುಂ ಧರ್ಮೋಪದೇಶಮುಮೆಂಬ ಪಂಚವಿಧಸ್ವಾಧ್ಯಾಯದೊಳಂ ನೆಚಿ³ದು (ಆತಪು. ೧೨-೪ ವ) ; ವಾಚನಾ – ವಕ್ಖಾಣಿಸುವುದುಂ, ಪೃಚ್ಛನಾ—ಬೆಸಗೊಳ್ವುದುಂ . . . ಧರ್ಮೋಪದೇಶಾಃ—ಧರ್ಮಮನುಪದೇಶಂಗೆಯ್ವುದುಂ ಎಂಬಯ್ದುಸ್ವಾಧ್ಯಾಯವಿಕಲ್ಪಂಗಳಪ್ಪುವು (ತತ್ತ್ವಸೂ. ೩೪೪); ಸ್ವಾಧ್ಯಾಯವು ವಾಚನೆ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶ ಎಂದು ಐದು ಬಗೆಯಾಗಿದೆ (ಜೈನಧ. ೬೮).

[ಸಂ. ಪೃಚ್ಛನ]

**ಪೃಚ್ಛಿಸು** (ಕ್ರಿ). ಪ್ರಶ್ನೆಮಾಡು ; ಪ್ರಶ್ನಿಸು : "ಗಾಂಧಾರೀನೂ ರಾಜರ ತಾಯಿಾನ ಅಲ್ಲ ಏನರೀ ?" ವಿಶ್ವಾಸ ಪೃಚ್ಛಿಸಿದ (ದೀಶಹ. I, ೪೬).

[<ಪೃಚ್ಛನೆ + — ಇಸು₃]

**ಪೃಚ್ಛೆ** (ನಾ). ೧. ಕೇಳುವುದು; ಪ್ರಶ್ನೆಮಾಡುವುದು; ಪ್ರಶ್ನಿಸುವುದು : "ಪ್ರಶ್ನಃ, ಅನುಯೋಗಃ, ಪೃಚ್ಛಾ—೩ ಕೇಳುವುದಕ್ಕೆ ಹೆಸರುಗಳು" (ಸಿದ್ಧಾಂಅ. ೫೨). ೨. ಪ್ರಶ್ನೆ : ಪರಮಹಂಸಂ ಬಂದು ಕುಳ್ಳಿರ್ದೊಡಿತ್ತು ಬಚಿ³ಕ್ಯಘ್ಯಮನೆಯ್ದೆ ನೀಮೆಂಮಗೆ ಪೇಚಿ³ಂ ಸ್ವೇಚ್ಛೆಯಿಂ ಪೃಚ್ಛೆಯಂ (ಸುಕುಮಾ. ೩-೬). ೩. ವಿಚಾರಣೆ ಮಾಡುವುದು; ವಿಚಾರಿಸುವುದು.

**ಪೃಚ್ಛಾಪೃಚ್ಛೆ** (ದ್ವಿರುಕ್ತಿ) : ನೀವಿಷ್ಟು ಪೃಚ್ಛಾಪೃಚ್ಛೆ ಮಾಡಿದ ಕಾರಣವೇನೆಂದು ನಮಗಿನ್ನೂ ಹೇಳಲಿಲ್ಲವಲ್ಲ ? (ಅಂಬರುಾ. ೧೯); ಭಾರತೀಯರು, ಇಲ್ಲದ ಪೃಚ್ಛಾಪೃಚ್ಛೆ ಮಾಡದೆ, ಎಷ್ಟೋಸಲ ವಿಚಾರ ಸಹ ಮಾಡದೆ, ಪರಾತ್ಪರಸತ್ಯವನ್ನು ಒಪ್ಪಿ ಸ್ವೀಕರಿಸಿ ಬಿಡುತ್ತಾರೆ (ಮಹಾಯೋ. ೦೫೯).

**ಪೃಚ್ಛೆ ಮಾಡು**=ಪೃಚ್ಛಿಸು : ಸಾಮ್ಯವಾದದ ಪ್ರವೃತ್ತಿಗಳ ರಸವೇನು ಎಂದು ಪೃಚ್ಛೆಮಾಡಿ ಆತ್ಮನಲ್ಲಿ ಅವುಗಳ ಉಗಮವನ್ನು ತೋರಿಸಲು ಯತ್ನಿಸುವವನು (ಸಾಹಿಅ. ೬೪). [ಸಂ. ಪೃಚ್ಛಾ]

**ಪೃಚ್ಛ್ಯ** (ಗು). ೧. ಕೇಳಬೇಕಾದ ; ಪ್ರಶ್ನಿಸಬೇಕಾದ. ೨. ವಿಚಾರಣೆ ಮಾಡಬೇಕಾದ; ವಿಚಾರಿಸಬೇಕಾದ. [ಸಂ.]

**ಪೃತನಾಜಾಳ** (ನಾ). ಸೇನೆಯ ಸಮೂಹ,_ಗುಂಪು : ಗಿರಿರಾಜೋದಗ್ರಸಿಂದೂರಿತಕರಟಘಟಾಟೋಪಮಂ . . . ಚಿತ್ರನೇತ್ರಾಂಬರನಾನಾಹೇತಿಹಸ್ತೋದ್ಭಟಭಟಪೃತನಾಜಾಳಮಂ ಚಿತ್ತದೊಳ್ ವೀರರಸಂ ಕೈಗಣ್ಮೆ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ (ಆದಿಪು. ೧೪-೯೭).

[ಸಂ. ಪೃತನಾಜಾಲ]

**ಪೃತನೆ** (ನಾ). ೧. ಸೈನ್ಯ; ಪಡೆ : "ಪೃತನಾ, ಸೇನಾ . . . ಅನೀಕಂ

–ಈ ೧೦ ಪಡೆ" (ಹರಿಶಾಯು. ೭೩-೩೦೩); ಪತ್ತಿಯೆಂದುಂ ಸೇನೆಯೆಂದುಂ ಸೇನಾಮುಖಮೆಂದುಂ ಗುಲ್ಮಮೆಂದುಂ ವಾಹಿನಿಯೆಂದುಂ ಪೃತನೆಯೆಂದುಂ ಚಮುವೆಂದುಮಕ್ಷೋಹಿಣಿಯೆಂದುಮಿಂತೆಂಟುತೆಱದಿಂ ಪಡೆಗೆ ಪೆಸರಕ್ಕುಂ (ಶಂಶಾಪು. ೧೩-೪ ವ); ಫಣಿಪತಿ ಪೃತನಾಭರದಿಂ ಪ್ರಭಗ್ನಫಣನಾದುದು ಸೂನ್ರುತಮೆಂದು ಸೂಚಿಪಂತದ್ಭುತವಾದುದು ಬಾಣಗವಮನದೊಳ್ ಭೂಕಂಪಂ (ಜಗಪು. ೧೮-೪೩); ಅತ್ತಲಾ ತೆರೆತೆರೆ ಕೆರಳ್ದುದದ್ಭುತಪೃತನೆ (ಶ್ರೀರಾಪು. ೬೩೨-೯೭). ೨. ೨೪೩ ಆನೆಗಳು, ೨೪೩ ರಥಗಳು, ೭೨೯ ಕುದುರೆಗಳು ಮತ್ತು ೧೨೧೫ ಕಾಲಾಳುಗಳಿಂದ ಕೂಡಿದ ಒಂದು ಸೇನಾವಿಭಾಗ : ಆನೆ ೨೪೩ ರಥ ೨೪೩ ಕುದುರೆ ೭೨೯ ಕಾಲಾಳು ೧೨೧೫ಯಿಂದು ೧ ಪೃತನೆಯೆಂಬ ಬಲ (ಸ್ವವಹಾ. ಅನುಬಂಧ. ೦-೧೦). ೩. ಕದನ; ಯುದ್ಧ. [ಸಂ. ಪೃತನಾ]

**ಪೃಥಕ್ಕರಣ** (ನಾ). ಬೇರೆಬೇರೆ ಮಾಡುವಿಕೆ; ವಿಂಗಡಿಸುವಿಕೆ; ವಿಂಗಡಣೆ : ಕಲೆಯು ವೈಜ್ಞಾನಿಕಪೃಥಕ್ಕರಣಕ್ಕೆ (Scientific analysis) ತಲೆಬಾಗುವ ಶಾಸ್ತ್ರವಲ್ಲ (ಶಾಶಕೃ. ೦೨). [ಸಂ.]

**ಪೃಥಕ್ಕರಣೆ** (ನಾ). = ಪೃಥಕ್ಕರಣ : ಈ ವಿಷಯದಲ್ಲಿ ಶ್ರೀಗೋವಿಂದ ಪೈಗಳು ಮಾಡಿದ ಪೃಥಕ್ಕರಣೆ ಯೋಗ್ಯವೇ ಆಗಿದೆ (ಕಶಾಪ. ೬೭); ಈ ಕವಿಯು ಕಾಲಕ್ಕಾಗಲೇ ಭಾಷಾಕ್ಷೇತ್ರದ ಪೃಥಕ್ಕರಣೆ ನಡೆದಿತ್ತೆಂಬುದು ಸಂತೋಷದಾಯಕವಾದ ಮಾತು (ದ್ರಾಬಿ. ೦೨ ಹಿನ್ನೆಲೆ). [ಸಂ. ಪೃಥಕ್ಕರಣ]

**ಪೃಥಕ್ಕರಿಸು** (ಕ್ರಿ). ವಿಂಗಡಿಸು; ವಿಭಾಗಿಸು : ಕಥೆ ಮತ್ತು ರೇಖಾಚಿತ್ರಗಳ . . . ಸಾಮ್ಯ ವೈಷಮ್ಯಗಳನ್ನು ಬರಹಗಾರರೇ ನೇರವಾಗಿ ಪೃಥಕ್ಕರಿಸದೆ, ಬೇರೊಬ್ಬರ ಬಾಯಿಂದ ಹೇಳಿಸಿರುವ ರೀತಿ ಮನೋಜ್ಞವಾಗಿದೆ (ಶ್ರೀಪಕೃ. iv ಮುನ್ನುಡಿ); ಕಾದಂಬರಿಗಳಲ್ಲಿ ಪಾತ್ರ ಮೇಲ್ಮಟ್ಟದ ಹುಡುಗ–ಹುಡುಗಿಯರ ಗುತ್ತಿಯಲ್ಲ. ಕೇವಲ ಅವರ ಮುಳ್ಳು ಪರಚಿದ ಸಂಕಷ್ಟಗಳನ್ನು ಹೇಳುತ್ತ, ವರ್ಣಿಸುತ್ತ, ಪೃಥಕ್ಕರಿಸುವುದೊಂದೇ ಕಾದಂಬರಿಯ ವಸ್ತುವಲ್ಲ (ರಕ್ತರೂ. ಪ್ರಸ್ತಾಪ). [ಪೃಥಕ್ಕರಣ + –ಇಸು]

**ಪೃಥಕ್ತ್ವ** (ನಾ). ೧. ಬೇರೆಯಾಗುವಿಕೆ; ಹೊರತಾಗಿರುವಿಕೆ; ಪ್ರತ್ಯೇಕತೆ. ೨. = ಪೃಥಕ್ತ್ವವಿತರ್ಕವೀಚಾರ : ಇರ್ವರುಪಶಮಕರ್ಗಂ ನಾನಾಜೀವಾಪೇಕ್ಷೆಯಿಂ ಸಾಮಾನ್ಯದವೊಲ್ ಏಕಜೀವಾಪೇಕ್ಷೆಯಿಂ ಜಘನ್ಯದಿಂ ಅಂತರ್ಮುಹೂರ್ತಂ ಉತ್ಕೃಷ್ಟದಿಂ ಪಲ್ಯೋಪಮಶತಪೃಥಕ್ತ್ವಂ (ತತ್ತ್ವಸೂ. ೪೦). [ಸಂ.]

**ಪೃಥಕ್ತ್ವವಿತರ್ಕವೀಚಾರ** (ನಾ). [ಜೈನ] ಎಂಟನೆಯ ಗುಣಸ್ಥಾನದಿಂದ ಹನ್ನೆರಡನೆಯ ಗುಣಸ್ಥಾನದ ಕೆಲವು ಭಾಗಗಳವರೆಗೆ ನಡೆಯುವಂತಹ ಶುಕ್ಲಧ್ಯಾನ; ಪ್ರಥಮಶುಕ್ಲಧ್ಯಾನ: ► "'ವಿತರ್ಕ' ಎಂದರೆ ಶಾಸ್ತ್ರ, 'ವೀಚಾರ' ಎಂದರೆ ವಿಪರೀತವರ್ತನ" (ಜೈಪಶಕೋ. ೧೭೨); "ಮೊದಲ ಶುಕ್ಲಧ್ಯಾನದಲ್ಲಿ ೮ನೆಯ ಗುಣಸ್ಥಾನದಿಂದ ೧೨ನೆಯ ಗುಣಸ್ಥಾನದ ಕೆಲವು ಭಾಗದವರೆಗೆ ನಡೆಯುವಂಥದು" (ವಡ್ಡಾರಾ. ಜೈನಪಾರಿಭಾಷಿಕಶಬ್ದಕೋಶ); "ಗುಪ್ತಿ ಮುಂತಾದವುಗಳ ಅಭ್ಯಾಸ ಮಾಡಿದವನು ಮತ್ತು ದ್ರವ್ಯಪರ್ಯಾಯಗಳ ಚಿಂತನೆಯಲ್ಲಿ ನಿಪುಣರಾದ ಮುನಿಗಳು ಅರ್ಥ, ವ್ಯಂಜನ, ಕಾಯಯೋಗ, ವಚನಯೋಗ ಇವುಗಳ ಪೃಥಕ್ ಪೃಥಕ್‌ರೂಪದಿಂದ ಸಂಕ್ರಮಣ ಮಾಡುವ ಮನಸ್ಸಿನ ಮುಖಾಂತರವಾಗಿ ಮೋಹನೀಯ ಕರ್ಮಪ್ರಕೃತಿಗಳ ಉಪಶಮ ಅಥವಾ ಕ್ಷಯ ಮಾಡುವುದಕ್ಕೋಸ್ಕರ ಉದ್ಯುಕ್ತರಾಗುತ್ತಾರೆ. ಅಂಥವರಲ್ಲಿ ಈ ಶುಕ್ಲಧ್ಯಾನವು ಉದಯವಾಗುತ್ತದೆ" (ಅರಿಪು. ಜೈನಪಾರಿಭಾಷಿಕಶಬ್ದಕೋಶ): ಪೃಥಕ್ತ್ವವಿತರ್ಕವೀಚಾರಮೆಂಬ ಪ್ರಥಮಶುಕ್ಲಧ್ಯಾನದೊಳ್ ಕೂಡಿಯುಪಶಾಂತಗುಣಸ್ಥಾನದೊಳಿರ್ದು ರತ್ನತ್ರಯಮಂ ಸಾಧಿಸಿ ಸಯಸತ್ಯದೇವನಾಗಿ ಪುಟ್ಟಿದೊಂ (ವಡ್ಡಾರಾ. ೨೯-೧೩); ಪೃಥಕ್ತ್ವವಿತರ್ಕವಿ[ವೀ]ಚಾರಮೆಂಬ ಮೊದಲ ಶುಕ್ಲಧ್ಯಾನದೊಳ್ ಸಮಾಹಿತನುಪಶಾಂತಗುಣಸ್ಥಾನದೊಳ್ ಪ್ರಾಣಪರಿತ್ಯಾಗಂಗೆಯ್ದು ಸರ್ವಾರ್ಥಸಿದ್ಧಿಯೊಳಹಮಿಂದ್ರನಾದಂ (ಅರಿಪು. ೬-೭೪ ವ); ಪೃಥಕ್ತ್ವವಿತರ್ಕವೀಚಾರಮೆಂಬ ಪ್ರಥಮಶುಕ್ಲಧ್ಯಾನಪರಿಣತಿಯಿಂ ಕ್ಷೀಣಕಷಾಯವೀತರಾಗಛದ್ಮಸ್ಥಗುಣಸ್ಥಾನವ್ಯವಸ್ಥಿತನಾಗಿ (ಸುಕುಮಾ. ೮-೭೨ ವ). [ಪೃಥಕ್ತ್ವ + ವಿತರ್ಕ + ವೀಚಾರ ?]

**ಪೃಥಕ್ಪರ್ಣಿ** (ನಾ). ಒಂದು ಬಗೆಯ ಸಸ್ಯ; ನರಿಹೊನ್ನೆಗಿಡ : "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ–ಳ ಕೋಲಿಪೊನ್ನೆಯೆಂಬುವದು, ನರಿಹೊನ್ನೇಗಿಡ, ನಕ್ಕಚಿಕ್ಕನಾಕು" (ಸಿದ್ಧಾಂಶಿ. ೦೪೩).
[ಸಂ. ಪೃಥಕ್ಪರ್ಣೀ]

**ಪೃಥಗರ್ಥ** (ನಾ). ಬೇರೆಯ ಅರ್ಥ : ಪೆಸರೊಳಸಂಭವಮೆನಿಸುಗುಮ ಸಂಭವಮಂ ತದ್ವಿಶೇಷಣಂ ಪೃಥಗರ್ಥಂ ಪೊಸಯಿಸೆ ಭಿನ್ನರಸಂ ಸುಪ್ರಸಿದ್ಧವಾಚ್ಯದೊಳದಲ್ತೆ ವಕ್ರೋಕ್ತಿ ಕರಂ (ಕಾವ್ಯಾಶ. ೬೬೩); ಏಗಂ ವಲಂ ವೆಟ್ಟಿಂ ದಲ್ ತಾಗುಗುಮಂತಿನಿಶ್ಚಯಾರ್ಥಮಂ . . . ಬೇಱೆಬೇಱೆಯೆನೆ ಪೃಥಗರ್ಥಂ (ಶಮದ. ೩೦೬). [ಸಂ.]

**ಪೃಥಗ್ಜನ** (ನಾ). ೧. ತಿಳಿವಳಿಕೆ ಇಲ್ಲದವನು; ದಡ್ಡ; ಪಾಮರ : "ಪ್ರಾಕೃತನಪಶದಂ ಪೃಥಗ್ಜನನಿತರಂ ಪಾಮರನೆನಿಪ್ಪನಕ್ಕುಂ ಜಾಲ್ಮಂ" (ವಸ್ತುಕೋ. ೬೪-೭೨); ಪೃಥಗ್ಜನಮಂತುದಾತ್ತಚಿತ್ತಂ ಜನಪತಿ ಧೈರ್ಯನಾಂಬು ರಾಶಿ ಚಳಿಯಿಸಿದವನೆ (ಅಜಿಪು. ೦೦-೪೮). ೨. ನೀಚ; ದುಷ್ಟ : "ವಿವರ್ಣಃ, ಪಾಮರಃ, ನೀಚಃ, ಪ್ರಾಕೃತಃ, ಪೃಥಗ್ಜನಃ . . . ಇತರಃ—೧೦ ನೀಚನ ಪೆಸರು" (ಸಿದ್ಧಾಂಶಿ. ೩೦೨). [ಸಂ.]

**ಪೃಥಗ್ಭಾವ** (ನಾ). ಬೇರೆಯೆಂಬ ಭಾವನೆ, —ಆಲೋಚನೆ; ಬೇರೆ ಎಂಬ ಕಲ್ಪನೆ : ಅನೇಕ ಪ್ರಕಾರಕಪಟೋಪಾಯಂಗಳಿಂದ್ಧತಿಸ್ನೇಹಿತರೊಳ್ ಪೃಥಗ್ಭಾವಮಂ ಮಾಟ್ಪುದೇ ಭೇದಮೆಂಬುದು (ಶಂಕಶಂ. ೨೦-೨೨); ನೀವು ನಾವೆಂಬೀ ಪೃಥಗ್ಭಾವಾವಲಂಬನವೇಕೆ ನಿಮ್ಮಲಿ ನಾವು ನಮ್ಮಲಿ ನೀವೆ ಯೆಂದನು ನಗುತ ಕುರುರಾಯ (ಕುವ್ಯಾಸ. ೮೩-೩೬); ಭಾವಿಸಲು ಯಾದವರೊಳು ಪೃಥಗ್ಭಾವದಲಿ ಸಂಕರುಷಣಾಖ್ಯೆಯನೀ ವಿಬುಧನುತನೆಯ್ದುವನು (ಹಿಶಾಗ. ೦೦-೭-೪೦). [ಸಂ.]

**ಪೃಥಗ್ವಿಧ** (ನಾ). ಬೇರೆ ಬೇರೆಯ ರೀತಿ, —ವಿಧ : "ವಿವಿಧಃ, ಬಹುವಿಧಃ, ನಾನಾರೂಪಃ, ಪೃಥಗ್ವಿಧಃ —೪ ಬೇರೆ ಬೇರೆ ರೂಪವುಳ್ಳದ್ದು, ನಾನಾರೂಪವಾಗಿರುವಂಥಾದ್ದು" (ಸಿದ್ಧಾಂಶಿ. ೪೪೬). [ಸಂ.]

**ಪೃಥವಿ** (ನಾ). ಭೂಮಿ; ಧರೆ: ಪೃಥವಿಗೊಱಗಿದುವೆಂಟುಸಾವಿರಪೃಥುಳಹಯ ನುಗ್ಗಾಯ್ತು ಗಣನೆಯ ರಥ ಪದಾತಿಯೊಳಿತ್ತಲೆನೆ ಸವಱಿದನು ಪರಬಲವ (ಕುವ್ಯಾಗ. ೧-೦೨). [ಸಂ. ಪೃಥವೀ]

**ಪೃಥಾಕು** (ನಾ). ಹಾವು; ಸರ್ಪ : "ವಿಷಧರಃ, ದಂದಶೂಕಃ. . . ಪೃಥಾಕುಃ, ಕಾಕೋದರಃ . . . ಭುಜಂಗಮಃ—ಈ ೨೫ ಹಾವಿನ ಪೆಸರ್" (ಹರಿಶಾಯು. ೦೦೩ ೦೮); ಪೃಥಾಕು ಸನ್ನುಂಡನನೈಕ್ಯಮಂ ವಿಧಿಸುವೀ ಕೃತಿಯಂ ಕಿಱಿದೆನ್ನಬಪ್ಪುದೇ (ಷಶಿಂ. ೦ ೦೮). [ಸಂ.]

**ಪೃಥಾಸುತ** (ನಾ). ಕುಂತಿಯ ಮಕ್ಕಳಲ್ಲಿ ಒಬ್ಬ; ಭೀಮ : ರಥವಾಜಿಗಳೊಂದೆಸೆಯೊಳ್ ರಥಾಂಗಗಳೊಂದೆಸೆಯೊಳುರುಳ್ದು ಕೆಡೆದುವು ನೋಡಾ . . . ಪೃಥಾಸುತಪೃಥಿತ ಪೃಥುಗದಾಪ್ರಹರಣೆಯಿಂ (ಗದಾಯು. ೩-೬). ► ಧರ್ಮರಾಯ, ಭೀಮ, ಅರ್ಜುನ ಈ ಮೂವರೂ ಕುಂತಿಯ ಮಕ್ಕಳಾದರೂ ಅರ್ಜುನನೊಬ್ಬನಿಗೇ ವಿಶೇಷವಾಗಿ ಈ ಹೆಸರನ್ನು ಅನ್ವಯಿಸುವುದುಂಟು ಮತ್ತು ಪಾಂಡವರಲ್ಲಿ ನಕುಲ ಸಹದೇವರು ಮಾದ್ರಿಯ ಮಕ್ಕಳಾದರೂ ಒಟ್ಟು ಪಾಂಡವರೈವರಿಗೂ ಅನ್ವಯಿಸಿ ಹೇಳುವುದು ಬಳಕೆಯಾಗಿದೆ.

**ಪೃಥಾಸುತರ್** =ಕುಂತಿಯ ಮಕ್ಕಳು ; ಪಾಂಡವರು: ನಿರ್ದೋಷಿ ಗಳೊಳ್ ಪೃಥಾಸುತರೊಳಂ ಮಗುಳ್ದುಂ ಪುದುವಾಟ್ನೆಂಬೆನೇ (ಪಂಪಭಾ. ೧೩-೦೯) ; ಆಗಡು ಮಾಡಿದ ನಿಮ್ಮ ಮಕ್ಕಳ ವಿಗಡತನಕಳುದರೊ ದುರಿತದ ಸೊಗಡಿಗಂಜುವರೋ ಪೃಥಾಸುತರೆಂದಳಿಂಮುಮುಖಿ (ಕುಮ್ಮಾ.ಭ. ೦೩-೪೭). [ಸಂ.]

**ಪೃಥಿವಿ** (ನಾ). ೧. ಪಂಚಭೂತಗಳಲ್ಲಿ ಒಂದು ; ನೆಲ : ಧರೆ ; ಭೂಮಿ : "ಭೂಃ, ಭೂಮಿಃ, ಪೃಥಿವೀ . . . ಧರಾ, ಆಧಾರಾ—ಈ ೩೭ ಭೂಮಿಯ ಪೆಸರ್" (ಹಲಾಯು. ೨೬-೧) ; ಸೊಗಯಿಸಪೆಂದು ಪೃಥಿವ್ಯಾದಿಗಳೆನಿಸುವ ಪಂಚಭೂತಮೆಲ್ಲವನುಟಾಡಾವಗಮುಜ್ಜ್ವಳಾಂಗಿಯಂ ಧವಳಗುಣದೆ ನಿರ್ಮಿಸಿದನಾಗವೇಟ್ಟುಂ ಧಾತ್ರಂ (ಶಾಂತೀ. ೬೭೦) ; ಪೃಥಿವಿ ನೆಗ್ಗಿತು ಹೊತ್ತ ಕಮಠನ ವ್ಯಥೆಯುನಾರುಸುರುವರು ಸುಮಹಾರಥರ ಹೊದಬಿಲಿ ಹೊಕ್ಕನುರಿ ಬಲುಮಳೆಯ ಹೊಕ್ಕಂತೆ (ಕುಮ್ಮಾ.ದ್ರೋ. ೨-೩೦) ; ಮತ್ತಂ ಪೃಥ್ವಂಶಮರ್ಧಮುಂ ಮಿಕ್ಕ ಭೂತಂಗಳಷ್ಟಮಾಂಶಂಗಳ್ ನಾಲ್ಕುಂ ಕೂಡಿ ಪೃಥಿವಿಯೆನಿಕ್ಕುಂ (ಚಳಪ. ೨೮ ಪ). ೨. ಮಣ್ಣು.

**ಪೃಥಿವಿಯಾತ್ಮಜೆ**=ಭೂಮಿಯಲ್ಲಿ ಜನಿಸಿದವಳು ; ಸೀತೆ : ಪೃಥಿವಿಯಾತ್ಮಜೆ ಬಳಿಕ ಚೇತರಿಸಿ ತನಗಿನ್ನು ಪಥಮಾವುದೆಂದು ದೆಸೆದೆಸೆಗಳಂ ನೋಡಿ . . . ಹಲುಬಿದಳಲ್ಲರಂ ಕರಗುವಂತೆ (ಕೈಮಿನಾ. ೦೧-೩೬). [ಸಂ.]

**ಪೃಥಿವಿಜೆ** (ನಾ). ಭೂಮಿಯಲ್ಲಿ ಹುಟ್ಟಿದವಳು ; ಸೀತೆ : ಪೃಥಿವಿಜೆಯುನಚಲ್ಕೆ ವೀರಹನುಮಂತನಂ ಕಳುಹಿದಂ ಕಾಕುತ್ಸ್ಥನು (ಕೈಮಿನಾ. ೦೮-೫). [ಸಂ. ಪೃಥಿವಿಜಾ]

**ಪೃಥಿವಿಪ** (ನಾ). ಭೂಮಿಯ ಒಡೆಯ; ಪೃಥ್ವೀಪತಿ : ಬಂದುದೇ ಪೃಥಿವಿಪನ ಮುಖಿಕೆಡರಕಟಯೆನುತ ಮನದೊಳಗೆ ಕೃಷ್ಣನಂ ಧ್ಯಾನಿಸಿದನು (ಕೈಮಿನಾ. ೦೬-೨೦). [ಸಂ.]

**ಪೃಥಿವಿಪಂಚಕ** (ನಾ). [ವೇದಾಂತ] ಭೂಮಿಯ ಅಂಶದಿಂದ ಉತ್ಪನ್ನವಾದ ವಾಕ್ಕು, ಪಾಣಿ, ಪಾದ, ಪಾಯು ಮತ್ತು ಉಪಸ್ಥಗಳೆಂಬ ಐದರ ಗುಂಪು : ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥಗಳೈದನ್ನು ಇವು ಪೃಥಿವಿಯ ಅಯಿದುಭಾಗಗಳಿಂದ ಉತ್ಪನ್ನವಾದವುಗಳು, ಇವು ಪೃಥಿವಿ ಅಂಶವಾದ್ದರಿಂದ ಇವುಗಳನ್ನು ಪೃಥಿವಿಪಂಚಕವೆಂದು ಹೇಳುವರು (ವೇದಾಂತ. ಸಾಂಖ್ಯಸೂತ್ರ). [ಸಂ.]

**ಪೃಥಿವಿಪತಿ** (ನಾ). ಭೂಮಿಯ ಒಡೆಯ ; ರಾಜ : ಪೃಥಿವಿಪತಿ ಕೇಳೆದೆಯ ಮೇಲೆ ಕೋಲ್ಮಿಂಚಿಸಲ್ ವ್ಯಥಿಸಿ ಮೈಮರೆದನು (ಕೈಮಿನಾ. ೬-೩೯). [ಸಂ.]

**ಪೃಥಿವಿಪಾಲ** (ನಾ). =ಪೃಥಿವೀಪಾಲ. [ಸಂ.]

**ಪೃಥಿವೀಚಕ್ರ** (ನಾ). ಭೂಮಂಡಲ; ಭೂಭಾಗ : ಪೃಥಿವೀಚಕ್ರಂ ಪ್ರಕಂಪಾಕುಳಿತಮುದಧಿಸಿಃಮಾತಿಮಾತ್ರಂ ಘನಾಧ್ವಂ ಪಥಿತಾಂಭೋವಾಹಮಪ್ಪಂತೊದವೆ ಬಹುಳಪಕ್ಷಾನಿಳಂ ಕೂಡೆ ಬಂದಂ . . . ಆ ವೈನತೇಯಂ (ಜಗಂ. ೧೧-೯೦). [ಸಂ.]

**ಪೃಥಿವೀಧಾತು** (ನಾ). [ತತ್ತ್ವಶಾ] ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ ಮತ್ತು ಋತುಗಳೆಂಬ ಆರು ಧಾತುಗಳಲ್ಲಿ ಒಂದು : ಪೃಥಿವೀಧಾತು . . . ಋತುಧಾತು ಇವುಗಳೇ ಆರು ಧಾತುಗಳು. ಇವುಗಳಲ್ಲಿ ಪೃಥಿವೀಧಾತುವು ಅಂಗರದಲ್ಲಿ ಕಾಠಿಣ್ಯವನ್ನು ಮತ್ತು ಗಂಧವನ್ನು ಹುಟ್ಟಿಸುವುದು (ಶಾತತ್ತ್ವ. ೨೦೪). [ಸಂ.]

**ಪೃಥಿವೀಪತಿ** (ನಾ). ಭೂಮಿಯ ಒಡೆಯ ; ರಾಜ : ಪೃಥುಲಯಶನಮಿತತೇಜಂ ಪೃಥಿವೀಪತಿನತಕಿರೀಟಮಣಿಗಣಕಿರಣಗ್ರಥಿತಪದಪೀಠ ನಾಗಲ್ ರಥನೂಪುರಚಕ್ರವಾಳಪುರಮಂ ಪೊಕ್ಕಂ (ಶಾಂತೀಶ್ವ. ೬-೦೩೩). [ಸಂ.]

**ಪೃಥಿವೀಪಾಲ, ಪೃಥಿವೀಪಾಳ** (ನಾ). ಭೂಮಿಯನ್ನು ಪಾಲಿಸುವವನು ; ಭೂಮಿಯ ರಕ್ಷಕ ; ರಾಜ. ಪೃಥಿವೀಪಾಳ : ಪೃಥಿವೀಪಾಳಸಹಸ್ರಂ ಪ್ರಥಿತಮಹೀನಾಥನಂತೆ ದೀಕ್ಷೆಯನಾಂತೀಂ ಕಥಿಯಿಪ್ಪೊಡೆ ಯಥಾರಾಜಾ ತಥಾಪ್ರಜಾಯೆಂಬ ನೀತಿಯಂ ಪ್ರಕಟಿಸಿತೋ (ಶಾಂತೀಶ್ವ. ೬೨-೩೭). [ಸಂ.]

**ಪೃಥಿವೀಪಾಳ** 'ಪೃಥಿವೀಪಾಲ' ನೋ.

**ಪೃಥಿವೀರಾಜ್ಯಂಗೆಯ್** (ಕ್ರಿ). ಭೂಮಿಯನ್ನು ಆಳು ; ರಾಜ್ಯಭಾರ ಮಾಡು : ಗಂಡತ್ರಿಣೇತ್ರ ಶ್ರೀಬೆಯ್ದುಂಬಮಹಾರಾಜರ್ ಪೃಥಿವೀರಾಜ್ಯಂಗೆಯೆ (ಎಇ. XXIV. ೨೬-೪ ; ಸು. ೫೫೬). [ಸಂ. ಪೃಥಿವೀ + ರಾಜ್ಯಂಗೆಯ್]

**ಪೃಥಿವೀಶ್ವರ** (ನಾ). ಭೂಮಿಯ ಒಡೆಯ ; ರಾಜ : ಆ ಪೃಥಿವೀಶ್ವರಂ ಪಗಲು ತಿಂಗಳನಚ್ಚರಿವಟ್ಟು ನೋಡಿದಂ (ಶಂಪ್ರಶ್ನೆ. ೯-೬). [ಸಂ.]

**ಪೃಥು** (ಗು). ೧. ವಿಸ್ತಾರವಾದ ; ವಿಶಾಲವಾದ. ೨. ದೊಡ್ಡದಾದ ; ಗಾತ್ರವಾದ : ಪೃಥುಕಮಲಪರಿಮಲಪರಾಗಭರದೆಲೆಲಿದಂ . . . ಪರಮಜಿನರಾಜನಂ ದುರಿತಾಬ್ಧಿರಾಜನಂ ಪೂಜಿಸಿ (ಶಂಪ್ರಪು. ೬-೧೦೦ ರಗಳೆ) ; ಪಾಂಡುಸುತರ್ಮೈವರು ನಡೆಯಲು . . . ಆ ಪೃಥುಕುಕ್ಕುರನು ಸಪ್ತಮವಾಗಿ ಕಾನನುಸರಿಸಿದುದು (ತಿಮ್ಮ. ೧-೦೯). ೩. ಅಸಂಖ್ಯವಾದ ; ಲೆಕ್ಕವಿಲ್ಲದ ; ಹೇರಳವಾದ. ೪. ವಿವರವಾದ. ೫. ಮಂಖ್ಯವಾದ. ೬. ವಿವಿಧವಾದ; ಬೇರೆಬೇರೆಯ. ೭. ಚುರುಕಾದ; ಕುಶಲತೆಯುಳ್ಳ. (ನಾ). ೮. ವಿಶಾಲವಾಗಿರುವಿಕೆ ; ವಿಸ್ತಾರವಾಗಿರುವಿಕೆ : "ಬಹು ಭೂಯಿಷ್ಠಮದಭ್ರಂ ಬಹುಳಂ . . . ಪೃಥು ಗುರು ಮಹದ್ವಿಶಾಳಂ ವಿಶಂಕಟಂ ವಿಸ್ತೀರ್ಣಂ" (ಚಸ್ತೃಕೋ. ೦೦೭-೫೫) ; "ಬೃಹದುರು ಪುರು ಪೃಥುಳ ಪೃಥು . . . ವ್ಯೂಢಮೆನೆ ವಿಸ್ತೀರ್ಣಮೆಂದೆನಿಕು" (ಮಂಗರಾ. ೦೨೯-೬). ೯. ದೊಡ್ಡದಾಗಿರುವುದು ; ಹಿರಿದಾಗುದು : "ಬೃಹತ್ . . . ಪೃಥು, ಪೃಥುಳು . . . ಭದ್ರಂ, ವರಿಷ್ಠಂ—ಈ ೧೨ ಹಿರಿದು" (ಹಲಾಯು. ೦೦೬-೦೯). ೧೦. ಒಂದು ಬಗೆಯ ಜೀರಿಗೆ ; ಕರಿಜೀರಿಗೆ : "ಸುಷವೀ, ಕಾರವೀ, ಪೃಥ್ವೀ, ಪೃಥುಃ, ಕಾಲಾ, ಉಪಕುಂಚಿಕಾ—೬ ಕರೀಜೀರಿಗೆ" (ನಿಘಂಟು. ೫೪೪). ೧೧. ಹಿಂಗಿನ ಮರ : "ಕಾರವೀ, ಪೃಥ್ವೀ, ಬಾಷ್ಪಿಕಾ, ಕಬರೀ, ಪೃಥುಃ—೫ ತತ್ಪತ್ರೀ—ಆ ಹಿಂಗಿನ ಮರದ ಹೆಸರುಗಳು" (ನಿಘಂಟು. ೨೮೫). ೧೨. ಅಗ್ನಿ. ೧೩. ವಿಷ್ಣು. ೧೪. ಮಹಾದೇವ ; ಶಿವ. ೧೫. ಅಷ್ಟವಸುಗಳಲ್ಲಿ ಒಬ್ಬ. ೧೬. ಅಫೀಮು. ೧೭. ಪ್ರಸಿದ್ಧರಾದ ಹದಿನಾರು ಜನ ಚಕ್ರವರ್ತಿಗಳಲ್ಲಿ ಒಬ್ಬ ; ☞ ಭೂಮಿಯನ್ನು ಆಳಿದ ಮೊದಲನೆಯ ರಾಜ ಇವನೇ ಎಂದೂ ಇವನಿಂದಲೇ ಭೂಮಿಗೆ 'ಪೃಥ್ವೀ' ಎಂಬ ಹೆಸರಾಯಿತೆಂದೂ ನಂಬಿಕೆಯಿದೆ : ಮಹಿಯೊಳಗಿದರೇ ಪೃಥುಪುರೂರವ ಹರಿಶ್ಚಂದ್ರಾದಿ ನರಪತಿಗಳು (ಕೈಮಿನಾ. ೦೮-೩೪). [ಸಂ.]

**ಪೃಥುಕ** (ನಾ). ೧. ಅವಲಕ್ಕಿ : "ಪೃಥುಕಮೆನಲವಲಕ್ಕುಂ" (ಚಸ್ತೃಕೋ. ೯೯-೦೪); "ಅವಲಕ್ಕಿ ಪೃಥುಕಮಕ್ಕು" (ಮಂಗರಾ. ೦೦೦-೬). ೨. ಯಾವುದೇ ಪ್ರಾಣಿಯ ಮರಿ ; ಶಾಬ. ೩. ಮಗು ; ಶಿಶು: "ಬಾಲಃ, . . .ಪೋತಃ, ಪೃಥುಕಃ, ಶಿಶುಃ, ಶಾಬಃ, ಡಿಂಬಃ— ಈ ೯ ಮಗುವು" (ಹಲಾಯು. ೦೩-೩೪೪). ೪. ಒಂದು ಬಗೆಯ ರತ್ನ ; ಪಚ್ಚೆ : ಪಿತ್ತಕವೆಂಬುವದು ಗಿಣಿಯ ರೆಕ್ಕೆಯಂತೆ ಇರುವುದು . . . ಪೃಥುಕವೆಂಬುವದು ತಾವರೆಯ ಎಲೆಯ ವರ್ಣವಾಗಿಯಿರುವುದು (ಶ್ರೀಗಂಧಿ. ೩೬೭-೦೬). [ಸಂ.]

**ಪೃಥುಕತ್ವ** (ನಾ). ಎಳೆತನ ; ಬಾಲ್ಯ ; ಶೈಶವ : ದೊರೆವೆತ್ತುದು ಪೃಥುಕತ್ವಂ ಪರಮನೊಳಾತ್ಮೀಯಜನನಿಯುದರದೊಳಿರ್ದುಂ ಪರಿಕಿಪೊಡಾಕ್ರಾಂತಚರಾಚರಗೋಚರಸಕಳಭುವನನಾದುದಜಿಂದಂ (ಶಂಪ್ರಪು. ೦೨-೦೬೩). [ಸಂ.]

**ಪೃಥುಕುಂಭ** (ನಾ). ವಿಶಾಲವಾದ ಕುಂಭಸ್ಥಳಪ್ರದೇಶ : ಪೃಥುಕುಂಭಂ ದೀರ್ಘಹಸ್ತಂ ವಿಪುಳತರರದಂ ಪೀನಬದ್ಧೋದರಂ . . . ಮೇಚಕ ಕೋಚ್ಚೇಡಚಂಚತ್ಪೃಥುವಿಭೃತ್ಸಾಮ್ಯಕಾಯಂ ಘನನಿನದಮದೇಂ ಬಂದುದೋ ದಂತಿಜಾಳಂ (ರಾಶಕೀ. ೦೩–೬೬). [ಸಂ.]

**ಪೃಥುತ್ವ** (ನಾ). ವಿಶಾಲವಾಗಿರುವಿಕೆ : ವಿಸ್ತೀರ್ಣತೆ : "ಪೃಥುತ್ವ ಮೆಂಬುದಕ್ಕಂ ಪ್ರಥಿಮಂ" (ವಸ್ತುಕೋ. ೦೦೩–೨೮). [ಸಂ.]

**ಪೃಥುನಿತಂಬಿನಿ** (ನಾ). ವಿಶಾಲವಾದ ನಿತಂಬವನ್ನು ಉಳ್ಳವಳು : ಲಳಿತವಿಲಾಸಿನಿಯಂ ಕೋಮಳಾಂಗಿಯುಂ ಪೃಥುನಿತಂಬಿನಿ[ಶಾಶಾಂ. ಪೃಥುನಿತಂಬಬಿಂಬೆ]ಯನುಟೀದಂ (ಕಬಿರಾ. ೩–೦೦). [ಸಂ. ಪೃಥುನಿತಂಬಿನೀ]

**ಪೃಥುನಿತಂಬೆ** (ನಾ). = ಪೃಥುನಿತಂಬಿನಿ : ಆ ಪೃಥುನಿತಂಬೆ ನಿತಂಬ ಭರಪರಿಸ್ಖಲಿತಪದವಿನ್ಯಾಸದಿಂದಂಚೆಯಂ ಪಳಂಚಲೆವ ತಣ್ಬುಟಿಲ ತಾಣ ಮುಮಂ . . . ಅವಲೋಕಿಸುತ್ತುಂ (ಶಂರಾಮಾ. ೯–೦೨೦ ವ); ಪೆಟತೊಂದೆಡೆ ಯೊಳೊರ್ವ ಪೃಥುನಿತಂಬೆ . . . ಆ ತಳಿರಂ ತನ್ನ ಸೋರ್ಮುಡಿ ಯೊಳ್ಮುಡಿದು (ರಾಶಕೀ. ೦೦–೯೯ ವ).

[ಸಂ. ಪೃಥುನಿತಂಬಾ (ಪೃಥು+ನಿತಂಬ+–)]

**ಪೃಥುಯಶ** (ನಾ). ೧. ಅತಿಶಯವಾದ ಕೀರ್ತಿ. ೨. ಅತಿಶಯವಾದ ಕೀರ್ತಿಯನ್ನು ಹೊಂದಿದವನು : ಸಾಹಿತ್ಯನಟೇಶ್ವೈಲೂಪಸತ್ಕ್ರೂರ್ಜಿತ ಶುಭಚರಿತಂ ಸಜ್ಜನಾಧಾರನಿರ್ದಂ ದ್ಯುನದೀಫೇನಪ್ರಕಾಶಪ್ರಥಿತಪೃಥುಯಶಂ ಭಾರತೀಕರ್ಣಪೂರಂ (ಶಂರಾಮಾ. ೬–೦೭೦). [ಸಂ. ಪೃಥುಯಶಸ್]

**ಪೃಥುರೋಮ** (ನಾ). ಮೀನು. ತಿಮಿಂಗಿಲ ಮೊದಲಾದ ಜಲಚರ ಪ್ರಾಣಿ : "ಮೀನಂ ಶಫರಂ ತಿಮಿ ಪಾಠೀನಂ ಝಷಮನಿಮಿಷಂ ವಿಶಾರಂ ಮಾತ್ಸ್ಯಂ ಮೀನವೆಸರ್ ತದ್ಭೇದಮನೂನತಿಮಿತಿಮಿಂಗಿಳಾದಿ ಪೃಥುರೋಮಂಗಳ್" (ವಸ್ತುಕೋ. ೨೨–೩); ಪೃಥುರೋಮೇಶ ತಿಮಿಂಗಿಲಂ ತಿಮಿಯ ನೂರ್ಂಲ್ ಸಿಂಧು ತಾನುಕ್ಕದೇ (ಸೋಮೇಶ. ೮೮); ಪ್ರಸಾದವ . . . ಪೃಥುರೋಮ ಭುಂಜಿಸಲು ಜಾಲವನಿಕ್ಕಿಯದನೊಯ್ದು ಧೀವರಂ ಭಕ್ಷಿಸಿವನೀರ್ವರ್ಗೆ ಪದಪಿಂದೆ ಶಿವಲೋಕವಾಯದು (ರಾಶಿಶ. ೦೨–೨೦).

[ಸಂ. ಪೃಥುರೋಮನ್]

**ಪೃಥುಲ, ಪೃಥುಳ** (ಗು). ೧. ವಿಶಾಲವಾದ ; ವಿಸ್ತಾರವಾದ : ಶ್ರೀವಧೂಚಂಚತ್ಕಾಂಚನಲೀಲಾಮಂದಿರ ಶ್ರೀನಿಲಯ ಪೃಥುಲವಕ್ಷಸ್ಥಲಂ ತೀರ್ಥನಾಥಂ (೬೬ಪು. ೩–೯೯). ೨. ದೊಡ್ಡದಾದ; ಗಾತ್ರವಾದ : ನೂತನಸುವರ್ಣದ ಚಿತ್ರವುಂಟಪದ ಮಧ್ಯದೊಳು ಪೃಥುಲನವರತ್ನಮಣಿ ಖಚಿತಸಿಂಹಾಸನದಿ . . . ಸಿದ್ಧನಾಜೇಶಗುರುಮೂರ್ತಿಯೊಪ್ಪಿರ್ದನು (ಗುರುಪಾ. ೦–೯೦) ; ಪೃಥಿವಿಗಿಳಿದತ್ಕಮಲವಾ ಪೃಥುಲಪುಷ್ಪ೧೦(ಶ್ರೀರಾಮಾ. ೨೦೮–೦೯೯). ೩. ಅಸಂಖ್ಯಾವಾದ ; ಲೆಕ್ಕವಿಲ್ಲದ. ೪. ಅಧಿಕವಾದ ; ಅತಿಶಯವಾದ : 'ಪೃಥುಲಯಶ' ಪರಾ. (ನಾ). ೫. ದೊಡ್ಡವನು; ಹಿರಿಯ : ಸೃಷ್ಟಿಮೂಲಪ್ರಥಮನಾಂ, ಸ್ಫೂರ್ತಿಯಾಂ, ಪೃಥುಲಸವ್ ಸುಖದುಃಖಪಾಶದಿಂ ಜೀವರನು ಬಂಧಿಸುವೆನಾಂ ಭಾವಜಾ! (ಚಿತ್ರಾಂಗ. ೨೬–೬೨೬). **ಪೃಥುಳ** : ೧. ಪೃಥುಳಭುಜದಿಂ ಪೃಥ್ವೀಶು ತಾಳ್ದಿದಂ ನೆಲನೆಲ್ಲಮಂ (ಕಾದಂಪೂ. ೦೭). ೨. ಅಂಗರುಚಿ ಶರಭಬಲಮಂ ಬಲದ ವಾಜಿ ಕರಣಂಗಳಂ ಲೋಹಿತಾಕ್ಷಿಗಳತುಳಭೂಧರಶೃಂಗಮಂ ಪೃಥುಳಕಂಧರ ಮೃಗಲುಲಾಯರಿತುಮಹಿಷೆಗಳ ನಡುವಿರ್ದುದು (ಹರಿಶ. ೩–೩೮); ಪೃಥುಳಕರ್ಕಶಕುಚಂಗಳ ನಿಮ್ನನಾಭಿಯ ಕೃಶಸುಮಧ್ಯದ ತನುಲತೆಯ ಗಜಗಮನೆಯಂ ನೋಡಿ (ಚಿಕು. ೦೨–೩); ಪೃಥವಿಗೊಜಿಗಿದವೆಂಟುಸಾವಿರ ಪೃಥುಳಹಯ ನಂಗ್ಗಾಯ್ತು ಗಣನೆಯ ರಥ ಪದಾತಿಯೊಳಿತ್ತಲೆನೆ ಸವಜಿದನು ಪರಬಲವ (ಕುಮ್ಯಾಗ. ೦–೦೨). ೪. ಪೃಥುಳಬಲವಾಜಿಗಳ್ ಮಣಿರಥಂಗಳಾಪರಿಸುತಿರದೆ ಪರಿದುವು ರಣದೊಳ್ (ಪ್ರಿತಿಂ. ೨೪–೩೦೬). 'ಪೃಥುಳಬಲ' ಪರಾ. ೬. ವಿಶಾಲವಾಗಿರುವಿಕೆ : ವಿಸ್ತಾರವಾಗಿರುವಿಕೆ : "ಬೃಹದುರುವುರು ಪೃಥುಳ ಪೃಥು . . . ವ್ಯೂಢಮೆನೆ ವಿಸ್ತೀರ್ಣಮೆಂದೆನಿಕುಂ" (ಶಬ್ದಗಾ. ೦೨೬–೬). ೭. ದೊಡ್ಡದು; ಗಾತ್ರವಾದುದು : "ಬೃಹತ್, ಉರು, ಗುರು, ವಿಸ್ತೀರ್ಣಂ, ಪುರು, ಪೃಥು, ಪೃಥುಳಂ . . . ವರಿಷ್ಠಂ—ಈ ೧೨ ಹಿರಿದು" (ಕರ್ಣಾಟ. ೦೦೩–೦೪). [ಸಂ.]

**ಪೃಥುಲಯಶ** (ನಾ). ಅತಿಶಯವಾದ ಯಶಸ್ಸನ್ನು ಹೊಂದಿದವನು ; ಅಧಿಕವಾದ ಕೀರ್ತಿಯನ್ನು ಪಡೆದವನು : ಪೃಥುಲಯಶನಮಿತತೇಜಂ . . . ರಥನೂಪುರಚಕ್ರವಾಳಪುರಮಂ ಪೊಕ್ಕಂ (ಶಾಂತೀಶ್ವ. ೬–೦೩೩).

[ಸಂ. ಪೃಥುಲಯಶಸ್]

**ಪೃಥುಲೆ** (ನಾ). ಪಾರ್ವತಿ ; ಶಿವೆ : ಶರ್ವಾಣಿ ಮೃಡೆ ರುದ್ರಾಣಿ ಪೃಥುಲೆ ನಿಗಮಾಲಯೆ ಸಹಸ್ರಭುಜಸಂಯುಕ್ತೆ (ಕಕೃಕ. II. ೬–೯).

[ಸಂ. ಪೃಥುಲಾ]

**ಪೃಥುವಿ, ಪಿಟ್ಟುವಿ, ಪಿಟ್ದುವಿ, ಪುಡವಿ, ಪೊಡವಿ, ಪ್ರಿತುವಿ, ಪ್ರಿಥುವಿ** (ನಾ). = ಪೃಥಿವಿ ೧ : ಶ್ರೀಪೃಥುವಿಸಾಗರ ಶ್ರೀಮದುಪಳುವೇನ್ದ್ರ ಸೋಮವಂಶೋದ್ಭವಕುಲತಿಲಕನ್ (ಎಇ. IX, ೨೧–೦ ; ಕ್ರಿ. ೮೦೦); ಪೃಥುವಿ ನೆಗ್ಗಲು ಸುಭಟಸಾಗರಮಥನ ಕರ್ಣನು ಭೀಮಸೇನನ ರಥವನಟಿಸುತ ಬಂದು ಪುನರಪಿ ಕಾಳಿಗವ ಹಿಡಿದ (ಕುಮ್ಯಾದ್ರೋ. ೦೩–೯೨) ; ರಥಿಕರಿಬ್ಬರು ಮಲತು ನಿಲಲು ಬೊಬ್ಬಿರಿದು ಸಾರಥಿಗಳಿಬ್ಬರು ತೇರ ತೇಜಿಯಂ ಚಪ್ಪರಿಸಿ ಪೃಥುವಿ ನೆಗ್ಗಲ್ಸುಭಟರುದ್ದಂಡಕಾರ್ಮುಕವನೊದರಿಸುತ ಹೂಂಕರಿಸುತ (ಕುರಂಗ. ೩೩–೩೦). Δ **ಪಿಟ್ಟುವಿ** : 'ಪಿಟ್ಟುವಿರಾಜ್ಯಂಗೆಯ್' ಪರಾ. Δ **ಪಿಟ್ದುವಿ** : 'ಪಿಟ್ದುವಿಪತಿ' ಪರಾ. **ಪುಡವಿ** : ಪುಡವಿಯೊಳಗ್ಗಳನ್ ನೆಗಟ್ದ ದಾನಿಗಳನ್ನಿವರನ್ನರ್ ಆರೊ ಪೇಟ್ (ಎಕ. IV.ನಾಗಮಂ. ೦೯–೯೫ ; 1118 ?) ; ಚರಿಸಿದೆವು ಸತ್ಯಕಂ ಪು[ಶಾಶಾಂ. ಪೊ]ಡವಿಯೊಳ್ನಾವು (ಕುರಂಗ. ೯೩–೩೮). **ಪೊಡವಿ** : ಪೊಡವಿ ಪಟ್ಟಂಡಕ್ಕಡಿಯಿಡು ಪಡಿಗಳುಂ ತೊಳಗಿ ಬೆಳಗುವ ಪೆಟಿನೊಸಲಂ ಪಡೆದ . . . ಬಾಲಕನಂ . . . ಎತ್ತಿಕೊಂಡಿಂದ್ರನ ದೇವಿ ಬಂದಳ್ (ಶಾಂತಿಪು. ೦೦–೯); ಹಗೆ ಕೆಡಲಿ ಕೌರವರಾಯನಾಳಲಿ ಪೊಡವಿಯನು ಪರಿತೋಷವಾಗಲಿ ನೃಪನ ಮಿತ್ರರಿಗೆ (ಕುಮ್ಯಾಕ್ರಾ. ೩–೩೭); ಸುಡುವರೆ ಪಂಜಿಹುದು ಬಡಿಯೆ ಭೇರಿಯು ಇಹುದು ಪೊಡವಿಯಾಳುವರ ಮದುವೆಯ ವೆಚ್ಚಕೊಂವಡಿಕೆಲೆಯು ಬೇಡ (ಸರ್ವಜ್ಞ. ೭೯೭); ಪೊಡವಿಯಲ್ಲಿದ್ದವಗೆ ಅಡವಿ ಗೊಡವೆ ಯಾಕೆ? (ಗಾದೆ). **ಪ್ರಿತುವಿ** : ಹೊಯಿಸಳ ಶ್ರೀ ವೀರಬಲಾಳದೇವರು ಪ್ರಿತುವಿ ರಾಜ್ಯಂಗೆ ಉತಿರಲು (ಎಕ. X (೪), ಕೋಲಾರ. ೩೨–೯ ; 1342). **ಪ್ರಿಥುವಿ** : ದೋರು ಪ್ರಿಥುವಿರಾಜ್ಯಂಕೆಯೆ (ಎಇ. VI. ೦೩೩–೦೩ 780). ☞ 'ಪೃಥುವಿ' ಎಂಬುದರ ಜೊತೆಗೆ ಪರ್ಯಾಯರೂಪವಾಗಿ ಬಂದಿರುವ ಈ ಎಲ್ಲಾ ಶಬ್ದರೂಪಗಳಲ್ಲಿ 'ಪುಡವಿ', 'ಪೊಡವಿ' ಎಂಬ ಎರಡು ರೂಪಗಳನ್ನು ಬಿಟ್ಟು ಮಿಕ್ಕುವೆಲ್ಲ ಅಪಲಿಖಿತಗಳು.

[< ಸಂ. ಪೃಥ್ವೀ./ಪ್ರಾ. ಪುಢವಿ, ಪುಢವೀ]

**ಪೃಥುವೀರಾಜ್ಯ** (ನಾ). ವಿಸ್ತಾರವಾದ ಸಾಮ್ರಾಜ್ಯ : ಸ್ವಸ್ತಿಶ್ರೀಸಾನ್ತರಸ ಪೃಥುವೀರಾಜ್ಯದುಳ್ . . . ಬೆಸಗೆಯ್ವಲ್ಲಿ ಮಾರಲಿ ಬಟಾರಿಂಗೆ ಕೊಟಾರ್ (ಎಕ. VI, ಕೊಪ್ಪ. ೩೯–೨; ಸು. 700); ಸ್ವಸ್ತಿಶ್ರೀಕೊಂಗುಣಿಮಹಾರಾಜ ಶ್ರೀಪುರುಷ ಪೃಥುವೀರಾಜ್ಯ ವಿಜಯವತ್ಸರ ಇರ್ಪ್ಪದಾ ಎಣ್ಟನೆಯೊಳು (ಎಕ. X. ಕೋಲಾರ. ೬–೦; 753). [<ಸಂ. ಪೃಥ್ವೀರಾಜ್ಯ]

**ಪೃಥುಶ್ರೋಣಿ** (ನಾ). ವಿಶಾಲವಾದ ಜಘನವನ್ನುಳ್ಳವಳು : ಆತನರ್ಧಾಂಗಿ . . . ಪರಮಕಲ್ಯಾಣ ಭವಪಾತಕಾತೀತ ತತ್ವಾನುಭವೆ ಮಮರಹಿತೆ ಆತತಪೃಥುಶ್ರೋಣಿಯರುಣಪಲ್ಲವಪಾಣಿಯಾ ವಿಮಲ ರುದ್ರಾಣಿಯು (ರಾಶಿಶ. ೦–೯೩). [ಸಂ. ಪೃಥುಶ್ರೋಣೀ]

**ಪೃಥುಸತ್ತ್ವ** (ನಾ). ೧. ಹೆಚ್ಚಾದ ಬಲ,–ಸಾಮರ್ಥ್ಯ ; ಪರಾಕ್ರಮ. ೨. ಹೆಚ್ಚಾದ ಸಾಮರ್ಥ್ಯವನ್ನುಳ್ಳ ವ್ಯಕ್ತಿ ; ಪರಾಕ್ರಮಿ : ಪೃಥುಸತ್ತ್ವಂ . . . ಜಗತ್ಪ್ರಥಿತಕ್ಷಾತ್ರಗುಣಂ ಭವತ್ಪದಪಯೋಜಾತಾಂತಿಕದಿಂ ಕೃಟ್ಟದಂ ಪೃಥಿವೀಪಾಲನ್ನಪಾಲನುಜ್ಜ್ವಲಯಶಂ ಮತ್ಸ್ವಾಮಿ ಸತ್ಯೇಮದಿಂ (ಚಂದ್ರಪ್ರ. ೮–೯೬); ಪೃಥುಸತ್ತ್ವರ್ ದೇವದೈತ್ಯರ್ ತವಂಗಭಿಮತ ಮಾಗಲ್ಕೆ ಸಂರಂಭದಿಂದಂ ಮಥಿಸಲ್ ಮಾಂಗಲ್ಯವಸ್ತುಪ್ರಕರಮನಮೃತಾ ಹಾರವಂ ಕೊಟ್ಟು . . . ಪ್ರಖ್ಯಾತಿವೆತ್ತಂ ಸಲೆ ಜಲಚರಸಂಘಾತರೌದ್ರಂ ಸಮುದ್ರಂ (ದಶಕು. ೭–೭). [ಸಂ.]

**ಪೃಥುಸ್ಕಂಧ** (ನಾ). ೧. ದೊಡ್ಡ ಭುಜಗಳನ್ನುಳ್ಳದ್ದು; ಅಗಲವಾದ ಹೆಗಲನ್ನುಳ್ಳದ್ದು : ದೀರ್ಘವಾಲಂ ಪೃಥುಸ್ಕಂಧಂ . . . ಸುನಾಸಾಪುಟಮುಮರ್ದ ತುರಂಗಂಗಳಂ ಕಾಣಿಕೆಗಿಯ್ದಂ (ರಾಜಶೇ. ೦೨–೧೦೦). ೨. ದೊಡ್ಡ ಕೊಂಬೆಗಳನ್ನುಳ್ಳದ್ದು : ಕಾಂತಾರಾಂತರದೊಳ್ . . . ಅತಿದೀರ್ಘಪೃಥುಸ್ಕಂಧಮುಮಪ್ಪುದೊಂದು ಮಹಾವಟವಿಟಪಿಯೊಳನೇಕವಿಹಗಕುಳಂ ಗಳಿರ್ಪುವು (ಶಂಕಶಂ. ೨೬೮–೨೨). ೩. ಹಂದಿ ; ವರಾಹ. [ಸಂ.]

**ಪೃಥುಳ** 'ಪೃಥುಲ' ನೋ.

**ಪೃಥುಳಗತಿ** (ನಾ). ಸರ್ವಾಂತರ್ಯಾಮಿ; ಪರಮಾತ್ಮ : ಶಿತಿಕಂಠ ಪೃಥುಳಗತಿ ವರದಹತಮಲವಿರತವಿತತಿ ಹೃನ್ನಳಿನಭೃಂಗ . . . ಮಾಯಾದೂರ ಸತತ ರಕ್ಷಿಸುಗೆಮ್ಮುಮಂ (ಚಿಕೋಟಿ. ೦–೭). [ಸಂ. ಪೃಥುಲಗತಿ]

**ಪೃಥುಳಬಲ, ಪೃಥುಳಬಳ** (ನಾ). ೧. ಹೆಚ್ಚಾದ ಬಲ; ಅತಿಶಯವಾದ ಶಕ್ತಿ; ಪರಾಕ್ರಮ. ೨. ಹೆಚ್ಚು ಶಕ್ತಿಯುಳ್ಳವನು; ಪರಾಕ್ರಮಿ: ಬಳರಥಿಕರೀತನ ಬಿಟ್ಟು ಹಾಯ್ದರು ಪೃಥುಳಬಲನ್ನೆ ಭೀಮನೆಚ್ಚನು ಗುರುತನೂಭವನ(ಕುಮಾ.ಭ. ೩–೨೩). **ಪೃಥುಳಬಳ**: ೨. ಪೃಥುಳಬಳಮಾದಿಕೂರ್ಮಂ . . . ಮಿಥಿಲಾಪುರದರಸನೆಂಬ ಮಹಿಮಾವರ್ಮಂ(ದಶಕು. ೦೦–೬). [ಸಂ. ಪೃಥುಲಬಲ]

**ಪೃಥುಳಬಳ** 'ಪೃಥುಳಬಲ' ನೋ.

**ಪೃಥ್ವಿ** (ನಾ). ೧. ಪಂಚಮಹಾಭೂತಗಳಲ್ಲಿ ಒಂದು; ಧರೆ; ಭೂಮಿ: "ಭೂಃ, ಭೂಮಿಃ . . . ಪೃಥ್ವೀ, ಪೃಥಿವೀ . . . ಧರಾ, ಆಧಾರಾ—ಈ ೩೭ ಭೂಮಿಯ ಪೆಸರ್" (ಹಲಾಯು ೨೬–೦); ಪೃಥ್ವಿಯೊಳಗಿಲ್ಲ ಆಕಾಶದೊಳಗಿಲ್ಲ ಚತುರ್ದಶಭುವನಾದಿ ಭುವನಂಗಳೊಳಗೆಯೂ ಇಲ್ಲ ಹೊರಗೆಯೂ ಇಲ್ಲ ಏನಾಯಿತ್ತೆಂದರಿಯೆನಯ್ಯ (ಅವಕಿಂ. ೩೬–೬೨೦);ನವದ್ವಾರಗಳ ಮುಚ್ಚಿ ಶಿವಧ್ಯಾನದೊಳಗಿರಲು ನವಖಂಡ ಪೃಥ್ವಿಯೊಳಗಣ ಮಾತೆಲ್ಲ ಕಿವಿಯೊಳಗೆ ಇಹುದು(ಸರ್ವಜ್ಞ.೩೧೯); ಗಗನಮಂ ಪೃಥ್ವಿಯಂ ವಾರ್ಧಿಯಂ ಪರ್ವತಾರಣ್ಯ ವಿಸ್ತಾರಧೀರೋದಾತ್ತಗಾಂಭೀರ್ಯಮಂ . . . ಧ್ಯಾನಿಸುತೆ ಭಾವಿಸುತೆ ರೂಪಿಸುತೆ ಕಾಮಿಸಿದನಾ ಭೂಮಿಪಂ (ಶ್ರೀರಾಮಾ. ೦೨–೩೦೭). ೨. ಕರಿಜೀರಿಗೆ : "ಸುಷವೀ, ಕಾರವೀ, ಪೃಥ್ವೀ, ಪೃಥುಃ, ಕಾಲಾ, ಉಪಕುಂಚಿಕಾ — ೬ ಕರೀಜೀರಿಗೆ" (ಸಿದ್ಧಾಂತಿ.೨೮೯). ೩. ದೊಡ್ಡ ಏಲಕ್ಕಿ. ೪. ಹಿಂಗಿನ ಮರ : "ಕಾರವೀ, ಪೃಥ್ವೀ, ಬಾಷ್ಪಿಕಾ, ಕಬರೀ, ಪೃಥುಃ — ೫ ತತ್ಪತ್ರೀ—ಆ ಹಿಂಗಿನ ಮರದ ಹೆಸರುಗಳು" (ಸಿದ್ಧಾಂತಿ.೨೯೩) .೫. [ಛಂದ] ಪಾದದಲ್ಲಿ ಹದಿನೇಳು ಅಕ್ಷರಗಳಿರುವ, ಅತ್ಯಷ್ಟಿಛಂದಸ್ಸಿನ ಒಂದು ವೃತ್ತದ ಹೆಸರು : ಇನಾನಿಲ ದಿನೇಶ ಮಾತುತಪಯೋಲಗಂಗಳ್ಪಿಡಂಗನಾಳ್ದು ನಿಲೆ ವಿಶ್ರಮಂ ವಸುಗಳಲ್ಲಿ ಚಿತ್ತಾಗೆ ನೀಲನೀರಜವಿಲೋಚನೇ ಬಗೆದು ಕೇಳಿದಂ ಪೃಥ್ವಿಯೆಂಬ ಪಾಮದಿನಿದಲ್ತೆ ಸಂದುದು ನಿರಂತರಂ ಪೃಥ್ವಿಯೊಳ್ (ಛಂದೋಂಬು. ೨–೦೬೪) ; ಜಸಂಜಸಯಲಂಗಮೊಂದಿದೊಡೆ ಪೃಥ್ವಿಯೆಂಬರ್ ಬುಧರ್ (ಕೃಶಿಶಿ. ೮೩). ೬. [ಜೈನ] ಷಡ್ದ್ರವ್ಯಗಳಲ್ಲಿ ಒಂದು : ದ್ರವ್ಯಗಳು ಆರು ವಿಧಗಳಿಂದು ವಿಭಾಗ ಮಾಡಿರುವುದರಿಂದ ಪೃಥ್ವಿ ಜಲ ತೇಜಸ್ಸು ವಾಯು ಮನಸ್ಸು ಎಂಬ ಐದು ದ್ರವ್ಯಗಳು ಪುದ್ಗಲದಲ್ಲಿ ಸೇರಿದುವು (ಹಿಂದಿಶಾ. ೬೦). 'ಷಡ್ದ್ರವ್ಯ' ಪರಾ. [ಸಂ. ಪೃಥ್ವೀ]

**ಪೃಥ್ವಿಕೆ** (ನಾ). ೧. ದೊಡ್ಡ ಜಾತಿಯ ಏಲಕ್ಕಿ : "ಪೃಥ್ವಿಕಾ, ಚಂದ್ರಬಾಲಾ, ಏಲಾ, ನಿಷ್ಕುಟೀ, ಬಹುಲಾ—೫ ದೊಡ್ಡಯಾಲಕ್ಕೀ ಹೆಸರುಗಳು" (ಸಿದ್ಧಾಂತಿ. ೦೯೧). ೨. ಜೀರಿಗೆ : "ಜೀರಿಗೆಯುಜಾಜಿ ಪೃಥ್ವಿಕೆಯುಕ್ಕು" (ಚಂಗರಾ. ೯೦ ೩೩). [ಸಂ. ಪೃಥ್ವಿಕಾ]

**ಪೃಥ್ವಿತತ್ತ್ವ** (ನಾ). ವಣ್ಣನ ಸ್ವಭಾವ ; ಭೂಮಿಯ ಗುಣ : ಘಟತತ್ತ್ವ ಪೃಥ್ವಿಭೇದವಾಗಿ ಆತ್ಮತತ್ತ್ವ ಅಪ್ಪುಭೇದವಾಗಿ ತೇಜತತ್ತ್ವ ಅಜಾವು ಭೇದವಾಗಿ . . . ಪೃಥ್ವಿತತ್ತ್ವವ ಕೂಡಲಾಗಿ ಉತ್ಪತ್ತಿ ಎಲ್ಲಿ ಅಡಗಿತ್ತು (ವೀಣೀಅಮಾ. ೭–೨೫). [<ಸಂ. ಪೃಥ್ವೀತತ್ತ್ವ]

**ಪೃಥ್ವಿಮಂಡಲ** (ನಾ). ಭೂಮಂಡಲ ; ಭೂಗೋಳ : ವಜ್ರದಿಂದಂಕಿತ ಮಪ್ಪ ನಾಲ್ಕು ರೇಖೆಗಳನ್ನುಳ್ಳುದು ಹೊಂಬಣ್ಣಮಾಗಿರ್ಪುದು ಪೃಥ್ವಿಮಂಡಲಂ (ಶ್ರೀತತ್ತ್ವಾ. ೦೦–೩೨). [<ಸಂ. ಪೃಥ್ವೀಮಂಡಲ]

**ಪೃಥ್ವಿವಲ್ಲಭ** (ನಾ). ದೊರೆ ; ರಾಜ : ಶ್ರೀಪೃಥ್ವಿವಲ್ಲಭ ಮಹಾರಾಜಾಧಿರಾಜಪರಮೇಶ್ವರ ಪರಮಭಟಾರಕಂ ಸತ್ಯಾಶ್ರಯಕುಳತಿಳಕಂ . . . ಆಚನ್ದ್ರಾರ್ಕ್ಕತಾರಂಬರಂ ಸಲುತ್ತಮಿರೆ (ಸೌಇಇ. XX. ೪೭–೩ ; 1072). [<ಸಂ. ಪೃಥ್ವೀವಲ್ಲಭ]

**ಪೃಥ್ವೀಗೋಳ** (ನಾ). = ಪೃಥ್ವಿಮಂಡಲ : ಪಾಠಶಾಲೆಗಳಲ್ಲಿರುವ ಒಂದು ಅಡಿ ವ್ಯಾಸದ ಪೃಥ್ವೀಗೋಳದಲ್ಲಿ ಅತ್ಯಂತ ಎತ್ತರವಾದ ಪರ್ವತವೆಂದು ತೋರಿಸಲು ಒಂದು ಸಣ್ಣ ಮರಳುಕಣವನ್ನು ಉಪಯೋಗಿಸಿರುವರು (ಭೂವಿವ. ೯). [ಸಂ. ಪೃಥ್ವೀಗೋಲ]

**ಪೃಥ್ವೀತತ್ತ್ವ** (ನಾ). = ಪೃಥ್ವಿತತ್ತ್ವ : ಅವಳ ಮಾಂಸಲದೇಹವು ಪೃಥ್ವೀತತ್ತ್ವಕ್ಕೆ ಜೋತುಬಿದ್ದು ಕುಡಚಿಯನ್ನು ಒಮ್ಮೆ ಪ್ರಭು ಎಂದು ಒಪ್ಪಿಕೊಂಡಿತ್ತು (ಸರುಜೀ. ೯೩೦). [ಸಂ.]

**ಪೃಥ್ವೀಧವ** (ನಾ). ಭೂಮಿಯನ್ನು ಆಳುವವನು ; ಭೂಮಿಯ ಒಡೆಯ ; ದೊರೆ ; ರಾಜ : ಶಿವೆಶಿವಾ ಪವಡಿಸಿತೆ ಚತುರರ್ಣವವಿಪರಿಪರಿಧಾನ ಪೃಥ್ವೀಧವನ ಬಾಳಿಕೆ ನೀರೊಳೆಂದಳಲಿದನು ಗುರುಸೂನು (ಕುಮಾ.ಗ. ೯–೬) ; ಪ್ರಣತಪ್ರತ್ಯರ್ಥಿಪೃಥ್ವೀಧವನಿವಹಕಿರೀಟಾಗ್ರಮಾಣಿಕ್ಯಮಾಲಾಘೃಣಿಚಂಚಚ್ಚಂಚಲಾಂಚತ್ಸ್ಫುರಪಮಣಿಮಹಾಪೀಠಮೇಘಸ್ಥಪಾದಂ . . . ಲಸದ್ಯಕ್ತನಾ ರಾಜ ಚೂಡಾಮಣಿ ಪೆಂಪಂ ತಾಳ್ದು ಕಣ್ಗೊಪ್ಪಿದಂ (ರಾಜಶೇ. ೩–೦೬). [ಸಂ.]

**ಪೃಥ್ವೀಪಾಲ** (ನಾ). ಭೂಮಿಯ ರಕ್ಷಕ ; ದೊರೆ ; ರಾಜ : ಖೂಳ ಗೋವರಹಳ್ಳಿಯಲಿ ಕಟ್ಟಾಳಲಾ ಬಳಿಕೇನು ಪೃಥ್ವೀಪಾಲರೀತಗೆ ಸರಿಯೆ ದಿಟದಿಟವೆಂದನಾ ಚೈದ್ಯ (ಕುಮಾಸ. ೦೦–೦೫) ; ನೆರೆದ ಪೃಥ್ವೀಪಾಲರಿಗೆ ವಿಪ್ರರಿಗೆ ಮಣಿಮಯದಾಲಯಂಗಳು ಸವದವೈಗಾವುದದಚಳತೆಯಲಿ (ಕೊರಾ. ೦–೦೫–೦). [ಸಂ.]

**ಪೃಥ್ವೀರಾಮ** (ನಾ). ಒಬ್ಬಾತನ ಹೆಸರು : ಶ್ರೀಮದಮರೇಂದ್ರವಿಭವೋದ್ದಾಮಂ ಸಂಗ್ರಾಮರಾಮನೂರ್ಜಿತತೇಜಂ ಭೀಮಪರಾಕ್ರಮನೆನಿಸಿದನೀ ಮಹಿಯೊಳ್ ಪೃಥ್ವೀರಾಮನನುಪಮರೂಪಂ (ಸೌಇಇ. XX. ೦೮–೦೦; 980). [ಸಂ.]

**ಪೃಥ್ವೀವಲ್ಲಭ** (ನಾ). = ಪೃಥ್ವೀಧವ : ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಂ ದ್ವಾರಾವತೀಪುರವರಾಧೀಶ್ವರಂ ವಿಷ್ಣುವಂಶೋದ್ಭವಂ (ಕರ್ನಾಶಾ. ೦೭–೩೩: 1189); ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ (ಸೌಇಇ. XX. ೫೦–೨; ?). [ಸಂ.]

**ಪೃಥ್ವೀಶ** (ನಾ). = ಪೃಥ್ವೀಧವ : ಪೃಥ್ವೀಶಕೋಟೀರವಾಕ್ಯಕ್ಕಿಗೆ ಸಂದ ಚಕ್ರರವಿ ದೈತ್ಯಧ್ವಾಂತವಮಂ ಗೆಲ್ದ ಭೂಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹವಂ (ಜಗು. ೧-೧). [ಸಂ.]

**ಪೃಥ್ವೀಶ್ವರ** (ನಾ). =ಪೃಥ್ವೀಧವ : ಅಖಿಳಪೃಥ್ವೀಶ್ವರರ ಬಹಳಾಸ್ಥಾನದಲಿ ಮೋಹರಿಸಿದರು ಮೋಹನದ ಮೋಡಾಮೋಡಿಯಬಲೆಯರು (ಕುಮ್ಮಾಅ. ೦೪-೪೪). [ಸಂ.]

**ಪೃಥ್ವೀಸ್ವರ** (ನಾ). (ಭೂಮಿಂ, ಜಲ, ಅಗ್ನಿ, ವಾಯು ಮತ್ತು ಆಕಾಶಗಳೆಂಬ ಪಂಚಭೂತಗಳಿಗೆ ಸಂಬಂಧಿಸಿದ ನಾಳಗಳಿಂದ ಹೊರಡುವ) ಪಂಚಸ್ವರಗಳಲ್ಲಿ ಒಂದು (?) : ಇಡೆ ಪಿಂಗಳೆಂಬೆರಡು ನಾಡಿಗಳಿಂದೊಡಗೂಡಿದೆರಡು ನಾಳಗೇಳಹವು ಅವುಗಳೊಳಗೊಂದೊಂದು ನಾಳದಲ್ಲಿ ಪೃಥ್ವೀಸ್ವರ ಅಪ್ಪುಸ್ವರ ತೇಜಸ್ಸಿನ ಸ್ವರ ವಾಯುವಿನ ಸ್ವರ ಆಕಾಶಸ್ವರ ಇಂತೀ ಪಂಚಸ್ವರಸಂಜ್ಞೆಯಿಂ ತಾಳಿ ಕಾಲಕ್ಕಲ್ಲಿಯಿಂ ಉಚ್ಛ್ವಾಸ ನಿಶ್ವಾಸವಾಯುವೇ ಸಂಚರಿಸುತ್ತಿಹುದು (ಶಿವೇಶ. ೧೮೭). 'ಆಕಾಶಸ್ವರ' ಪರಾ. [ಸಂ.]

**ಪೃದಾಕು** (ನಾ). ೧. ಹಾವು ; ಸರ್ಪ : "ಉರಗಂ . . . ಪೃದಾಕು ಭುಜಗಂ ಕುಂಭೀನಸಂ ಪನ್ನಗಂ ಮರುದಾಶಂ ಶನಿಗೂಢಪಾದ್ವಿಷಧರಂ ಸರ್ಪಂ ದ್ವಿಜಿಹ್ವಾಹ್ವಯಂ" (ವಸ್ತುಕೋ. ೦೯-೭). ೨. ಚೇಳು ; ವೃಶ್ಚಿಕ. ೩. ಹುಲಿ; ವ್ಯಾಘ್ರ. ೪. ಆನೆ; ಗಜ. ೫. ಚಿರತೆ. ೬. ಒಂದು ಬಗೆಯ ಮರ. [ಸಂ.]

**ಪೃಶ್ನಿ** (ಗುಂ). ೧. ಚಿಕ್ಕ ; ಕುಳ್ಳಾದ ; ಕುಬ್ಜ. ೨. ದುರ್ಬಲವಾದ ; ಕ್ಷೀಣವಾದ. ೩. ಚುಕ್ಕೆಗಳಿಂದ ಕೂಡಿದ. ೪. ಬೇರೆಬೇರೆಯ ; ವಿಭಿನ್ನವಾದ. (ನಾ). ೫. ಕುಳ್ಳಾಗಿರುವವನು ; ಕುಬ್ಜ : "ಗಡುಳಂ ತಾಂ ಕುಬ್ಜನಲ್ಪಸತ್ವನುಪರಿಗತಂ ಪೃಶ್ನಿ[ಯಾತಂ] ಕಿರಾತಂ" (ವಸ್ತುಕೋ. ೭೪-೪೦). ೬. ಕದಿರು ; ಕಿರಣ. ೭. ಭೂಮಿ. ೮. ನಕ್ಷತ್ರಗಳಿಂದ ತುಂಬಿದ ಆಕಾಶ. ೯. ಮೋಡ ; ಮೇಘ. ೧೦. ಕೃಷ್ಣನ ತಾಯಿ; ದೇವಕಿ. ೧೧. ಹಾಲು; ಕ್ಷೀರ. ೧೨. ಮೈಮೇಲೆ ಮಚ್ಚೆಗಳಿರುವ ಹಸು. [ಸಂ.]

**ಪೃಶ್ನಿಪರ್ಣಿ** (ನಾ). ಒಂದು ಬಗೆಯ ಸಸ್ಯ ; ನರಿಹೊನ್ನೆಗಿಡ : "ಪೃಶ್ನಿಪರ್ಣಿ ಫಣಿರ್ಜಕಂ" (ವಸ್ತುಕೋ. ೩೭-೨೩). 'ಪೃಥಕ್ಪರ್ಣಿ' ಪರಾ. [ಸಂ. ಪೃಶ್ನಿಪರ್ಣೀ]

**ಪೃಷತ** (ನಾ). ೧. ಮೈಮೇಲೆ ಚುಕ್ಕೆಗಳಿರುವ ಜಿಗರೆ ; ಎರಳೆ; ಸಾರಂಗ : "ಸಾರಂಗಃ, ರು(ಋ)ಷ್ಯಃ, ಪೃಷತಃ, ರುರುಃ — ಈ ೪ ಸಾರಂಗಂ" (ಹಲಾಯು. ೩೯-೭೭). ೨. ತುಂತುರು ; ಹನಿ : "ಪೃಷತ ವಿಪ್ರುಟ್ಸೀಜ್ಞಂ" (ವಸ್ತುಕೋ. ೨೪-೧೪). [ಸಂ.]

**ಪೃಷತ್ಕ** (ನಾ). ಬಾಣ; ಶರ : "ಕಂಕಪತ್ರಃ . . . ಪೃಷತ್ಕಃ, ಪತ್ರೀ, ಖಗಃ, ಶಿಲೀಮುಖಃ, ರೋಪಃ — ಈ ೧೬ ಅಂಬು" (ಹಲಾಯು. ೭೭-೩೦೨); ಉತ್ಕೋಪದಹನದೊಡನೆ ಪೃಷತ್ಕಂಗಳ್ ಕೋಟಿಗಣಿತದಿಂದುಱಿವಿನಂ... ಎಚ್ಚಂ (ಶಂಶಕಾ. ೧೨-೯) ; ಇರದೆ ವಿಯಚ್ಚರಾಧಿಪತಿಯೆಚ್ಚ ಕೃಶಾನುಪೃಷತ್ಕಮಂ ಪಯೋಧರಶರದಿಂ ಅಜಿತಸೇನನಡರ್ತಿರದೆಚ್ಚು ತೂಳ್ದಿದಂ (ಶಂಪ್ರಪು. ೬-೩೪). [ಸಂ.]

**ಪೃಷದಶ್ವ** (ನಾ). ದೇಹದಲ್ಲಿ ಬೇರೆ ಬೇರೆ ಬಣ್ಣಗಳನ್ನುಳ್ಳ ಕುದುರೆಗಳನ್ನು ಹೊಂದಿರುವಂತಹುದು ; ಗಾಳಿ ; ವಾಯು : "ಪವನಃ, ಶ್ವಸನಃ . . . ಪೃಷದಶ್ವಃ, ಪವಮಾನಃ . . . ಮಹಾಬಲಃ — ಈ ೨೦ ಗಾಳಿಯ ಪೆಸರ್" (ಹಲಾಯು. ೦೯-೬೩) ; ವಿಶ್ವಮೂರುತಿ ಗಗನ ಶಿಖಿ ಪೃಷದಶ್ವ ಜಲತತ್ವಾತ್ಮನಾಗಿರೆ ಕಂಡನಸುರೇಂದ್ರು (ಕೊರಲಾ. ೬-೩೦-೪೪). [ಸಂ.]

**ಪೃಷದಶ್ವಸಖ** (ನಾ). ವಾಯುಸಖ ; ಅಗ್ನಿ : ಅಶ್ವತಾಭರಣ ಪ್ರಭಾಸ್ವರ ಶಶಾಂಕಪೃಷದಶ್ವಸಖ ಚಂಡಸಪ್ತಾಶ್ವಲೋಚನ . . . ಜಯ ಶಶ್ವದಗಣಿತ ಚಿತ್ಸುಖ (ಅರ್ಧ್ಯದೇ. ೬-೫೦). [ಪೃಶದಶ್ವ+ಸಖ]

**ಪೃಷದಾಜ್ಯ** (ನಾ). (ಹೋಮಕ್ಕೆ ಉಪಯೋಗಿಸಲೆಂದು ಸಿದ್ಧಪಡಿಸುವ) ಮೊಸರಿನೊಂದಿಗೆ ಬೆರಸಿದ ತುಪ್ಪ : "ಪೃಷದಾಜ್ಯಂ . . . ಮೊಸರಿನಿಂದೊಡಗೂಡಿದ ತುಪ್ಪ, ಮೊಸರು ಬೆರೆತ ತುಪ್ಪ" (ಸಿದ್ಧಾಂತಿ. ೨೨೦) ; ಗುರುಸೂನು . . . ಸೆರೆನರಂಗಳ ದರ್ಭೆ . . . ವಿಶಾಳದನು ಮಜ್ಜೆಗಳ ಪೃಷದಾಜ್ಯ ಅರುಣಜಲದಾಜ್ಯಾಹುತಿಯ ವಿಸ್ತರವ ವಿರಚಿಸಿ ನಿಗಮಮಂತ್ರೋಚ್ಚರಣೆಯಲಿ ಪೂರ್ಣಾಹುತಿಗೆ ತನ್ನೊಡಲನೊಪ್ಪಿಸಿದ (ಕುಮ್ಮಾಗ. ೯-೨೨). [ಸಂ.]

**ಪೃಷಿತ** (ನಾ). ಸುರಿಯುತ್ತಿರುವ ಹನಿ ; ತುಂತುರು ಮಳೆ : "ಪೃಷಿತಂ, ಪೃಷತಮೆನೆ ಕೆದರ್ದ ಕಿಱುವನಿಗಳಕ್ಕು" (ಖಂಗರಾ. ೨೨೯-೦೩). [ಸಂ.]

**ಪೃಷ್ಠ** (ನಾ). ೧. ಹಿಂಬದಿ ; ಹಿಂಭಾಗ : 'ಪೃಷ್ಠಭಾಗ' ಪರಾ. ೨. ಶರೀರದ ಹಿಂಭಾಗ; ಬೆನ್ನು: "ಪೃಷ್ಠಂ, ಪಶ್ಚಿಮಭಾಗಃ — ಈ ೨ ಬೆನ್" (ಹಲಾಯು. ೮೭-೩೭೪); "ಬೆನ್ನದು ಪಶ್ಚಿಮಂ ಪೃಷ್ಠಮಕ್ಕು" (ಖಂಗರಾ. ೯೭-೦೩). ೩. ಓರೆ ; ಕುಂಡೆ : ಆಸನದ ಪೊಱಗೆ ಪೃಷ್ಠಮದೀಸೆನಿಪಾ ಪೆಸರದಕ್ಕುಂ (ಅಕ್ಷಶಾ. ೯-೪೪). ೪. ಪುಟ ; ಹಾಳೆ : ಹಾಳೆ ಅಥವಾ ಪತ್ರಸಂಖ್ಯೆಯನ್ನು ದಕ್ಷಿಣದಲ್ಲಿ ಪೃಷ್ಠ ಅಥವಾ ಪ್ರಥಮಪುಟದ ಮೇಲೂ ಇತರ ಕಡೆ ಎರಡನೆಯ ಪುಟದ ಮೇಲೂ ಗುರುತಿಸಿರುತ್ತದೆ (ಹಾರಕ. ೨೦).

ಪೃಷ್ಠಮಾಂಸಾದನ = ಒಬ್ಬ ವ್ಯಕ್ತಿಯ ಬೆನ್ನ ಹಿಂದೆ ಆಡಿಕೊಳ್ಳುವಿಕೆ : (+). [ಸಂ.]

**ಪೃಷ್ಠಕ** (ನಾ). ೧. ಹಿಂಭಾಗ ; ಬೆನ್ನು. ೨. [ಜೈನ] ಅರುವತ್ತು ಮೂರು ದೇವವಿಮಾನ ಅಥವಾ ಇಂದ್ರಕಗಳಲ್ಲಿ ಒಂದು ; P "೧. ಋತು, ೨. ವಿಮಳಂ, ೩. ಚಂದ್ರಂ, ೪. ವಲ್ಗು, ೫. ವೀರಂ, ೬. ಅರುಣಂ, ೭. ನಂದನಂ, ೮. ನಳಿನಂ, ೯. ಕಾಂಚನಂ, ೧೦. ಲೋಹಿತಂ, ೧೧. ಚಂಚನ್ನಾಮಂ, ೧೨. ಮರುತಂ, ೧೩. ಋದ್ಧಿಷಂ, ೧೪. ವೈಡೂರ್ಯಂ, ೧೫. ರುಚಕಂ, ೧೬. ರುಚಿರಂ, ೧೭. ಅಂಕಂ, ೧೮. ಸ್ಫಟಿಕಂ, ೧೯. ತಪನೀಯಂ, ೨೦. ಮೇಘಂ, ೨೧. ಅಭ್ರಂ, ೨೨. ಹಾರಿದ್ರಂ, ೨೩. ಪದ್ಮಂ, ೨೪. ಲೋಹಿತಂ, ೨೫. ವಜ್ರಂ, ೨೬. ನಂದ್ಯಾವರ್ತಂ, ೨೭. ಪ್ರಭಾಕರಂ, ೨೮. ಪೃಷ್ಠಕಂ, ೨೯. ಗಜಂ, ೩೦. ಮಿತ್ರಂ, ೩೧. ಪ್ರಭಾ, ೩೨. ಅಂಜನಂ, ೩೩. ವನಮಾಲಕಂ, ೩೪. ನಾಗಂ, ೩೫. ಗರುಡಂ, ೩೬. ಲಾಂಗಲಂ, ೩೭. ಬಲಭದ್ರಂ, ೩೮. ಚಕ್ರಂ, ೩೯. ಅರಿಷ್ಟಂ, ೪೦. ಸುರಸಮಿತಂ, ೪೧. ಬ್ರಹ್ಮಂ, ೪೨. ಬ್ರಹ್ಮೋತ್ತರಂ, ೪೩. ಬ್ರಹ್ಮಹೃದಯಂ, ೪೪. ಲಾಂತವಂ, ೪೫. ಶುಕ್ರಂ, ೪೬. ಶತಾರಂ, ೪೭. ಆನತಂ, ೪೮. ಪ್ರಾಣತಂ, ೪೯. ಪುಷ್ಪಕಂ, ೫೦. ಶತಾಕಂ, ೫೧. ಆರಣಂ, ೫೨. ಅಚ್ಯುತಂ, ೫೩. ಸುದರ್ಶನಂ ೫೪. ಅಮೋಘಂ, ೫೫. ಸುಪ್ರಬುದ್ಧಂ, ೫೬. ಯಶೋಧರಂ ೫೭. ಸುಭದ್ರಂ, ೫೮. ಸುವಿಶಾಲಂ, ೫೯. ಸುಮನಸಂ, ೬೦. ಸೌಮನಸ್ಯಕಂ, ೬೧. ಪ್ರೀತಿಂಕರಂ, ೬೨. ಆದಿತ್ಯಂ, ೬೩. ಸರ್ವಾರ್ಥಸಿದ್ಧಿ — ಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್" (ಕಕ್ರ. ೨೦೩). [ಸಂ.]

**ಪೃಷ್ಠಗ್ರಂಥಿ** (ನಾ). ಬೆನ್ನಿನ ಮೇಲೆ ಏಳುವ ಗಂಟು, — ಕುರು: "ಪೃಷ್ಠಗ್ರಂಥಿಃ, ಗಡುಃ — ಈ ೨ ಬೆನ್ನ ಕುಱು" (ಹಲಾಯು. ೯೯-೪೩೦). [ಸಂ.]

**ಪೃಷ್ಠಚಕ್ಷು** (ನಾ). ಏಡಿ; ನಳ್ಳಿ. [ಸಂ. ಪೃಷ್ಠಚಕ್ಷುಸ್]

**ಪೃಷ್ಠದ್ವಾರ** (ನಾ). ಗುದದ್ವಾರ : ನಿರ್ಗಮವಪ್ಪುದೇ ಕಾರಣಮಾಗಿ

ಕಡುವಿಸಿಲಿಂಗೆ ತಟ್ಟಾಱದ ಚರ್ವಾದಿಂ ಪೃಷ್ಠದ್ವಾರಂ ಮುಚ್ಚಲಾ ಜಂಬುಕಂ ತನಗೆಲ್ಲಿಯುಂ ಪೋಗಲಿಂಬಿಲ್ಲದೆ ಚಿಂತಾಕ್ರಾಂತನಾಗಿರಲ್ (ಪಂತಕಂ. ೦೯-೨೦). [ಸಂ.]

**ಪೃಷ್ಠನಾಳ** (ನಾ). ಗುದನಾಳ : ಅಡವಿಯಲ್ಲಿ ಒಂದು ಸರಿಯಾಹಾರಂಬಡೆಯದೆ ಬರಬರುತ್ತ ಒಂದು ಸತ್ತ ಎತ್ತಂ ಕಂಡು ಸಡಗರಿಸಿ ಅದರ ಪೃಷ್ಠನಾಳದಿನೊಡಲೊಳಪೊಕ್ಕು ತಿನುತಿರ್ಪನ್ನೆವರಂ (ಪಂತಕಂ. ೦೯-೮).
[ ಸಂ. ಪೃಷ್ಠನಾಲ ]

**ಪೃಷ್ಠಭಾಗ** (ನಾ). ೧. ಹಿಂಭಾಗ ; ಬೆನ್ನಿನ ಭಾಗ : ನೀವೀ ಪಶುವಿನ ಪೃಷ್ಠಕುಪ್ಪೋದಕವಂ ತಂದೆಱೆದು ದೂರಂ ಪೋಗಿಮೆನಲಾ ಶ್ವಪಚರ್ ಬೆದಱಿಯಾ ಗೋವಿನ ಪೃಷ್ಠಭಾಗಕ್ಕೆ ಕಾಯ್ದು ನೀರಂ ತಂದೆಱೆದು (ಪಂತಕಂ. ೦೯-೦೪); ತಳವಮನಹೀಂದ್ರರುಂದ್ರಫಣಮೊಂದು ಧನುರ್ಗುಣವೇಗತಾಡನಾಕಲಿತವಿಕೀರ್ಣಕೋಷ್ಠಮೆನೆ ಕೂರ್ಮವಿನಿಷ್ಠುರಪೃಷ್ಠಭಾಗಮೊಂದು. . .ಧರಿತ್ರಿ ಬಾದು ನಿಶ್ಚಳತೆಯನಿರ್ವಳಲ್ತೆ ಭುಜಮಂಡಳದೊಳ್ ವಸುಧಾಧಿನಾಥನಾ (ಚಂದ್ರಪ್ರ. ೬-೨೦). ೨. ಮೇಲ್ಭಾಗ ; ಮೇಲ್ಮೈ : ಸಮುದ್ರದ ಪೃಷ್ಠಭಾಗದ ಮೇಲೆ ಬೀಸಾದಂಥ ಅಲ್ಲೋಲಕಲ್ಲೋಲವಾದರೂ ಗುಡ್ಡದಂಥ ತೆರೆಗಳಿದ್ದರೂ ಸಮುದ್ರವು ತತ್ತ್ವತಃ ಸಮುದ್ರವೆ ಇರುವದು (ವಚನ. ೯). [ಸಂ.]

**ಪೃಷ್ಠವಾಹ್ಯ** (ನಾ). ಹೊರೆಯನ್ನು ಹೊರುವ ಎತ್ತು : "ಪೃಷ್ಠವಾಹ್ಯಂ ಸ್ಥೌರಿಯೆನಿಸ್ಕುಂ" (ಚನ್ನುಕೋ. ೯೯-೨); "ಸ್ಥೌರೀ, ಪೃಷ್ಠವಾಹ್ಯಃ—ಈ ೨ ಹೇಱುವೆತ್ತು" (ಕರಾಯು. ೪೯-೦೦೦). [ಸಂ.]

**ಪೃಷ್ಠಸ್ವಸ್ತಿಕ** (ನಾ). [ನಾಟ್ಯ] ನೃತ್ಯದ ಒಂದು ಭಂಗಿ ; ನೂರೆಂಟು ಕರಣಗಳಲ್ಲಿ ಒಂದು : P "ಕೈಗಳನ್ನು ಉದ್ವೇಷ್ಟ ಮಾಡಿ ಮೇಲಕ್ಕೆತ್ತಿ ಅಪಕ್ರಾಂತಚಾರಿಯನ್ನು ಮಾಡಿ, ಕೈಗಳನ್ನು ಆವೇಷ್ಟನ ಮಾಡಿ ಎದೆಯ ಹತ್ತಿರಕ್ಕೆ ತರುವಾಗ ಸೂಚೀಚರಣಗಳನ್ನು ಸ್ವಸ್ತಿಕದಂತಿರಿಸಿ ಕೈಗಳನ್ನೂ ಸೂಚೀಮುಖಹಸ್ತದಲ್ಲಿ ಸ್ವಸ್ತಿಕದಂತೆ ಹಿಡಿಯುವುದು" (ಲಾಸ್ಯರಂ. ಗದ್ಯಾನುವಾದ ೨೪೯) : ಉರು ಪೃಷ್ಠಸ್ವಸ್ತಿಕಮುಂ ತರುಣೀ ಕೇಳ್ ಸ್ವಸ್ತಿಕಂ ಸಮುಂತಂಚಿತಮುಂ ಪಿರಿದಪವಿದ್ಧಂ ಸಮನುಖರಣಂ ಕೇಳ್ ಮತ್ತಮೆಂಬ ಕರಣಂಗಳಿವುಂ (ಲಾಸ್ಯರಂ. ೪-೨೩); ತಲಪುಷ್ಪಪುಟ . . . ದಿಕ್ಸ್ವಸ್ತಿಕ, ಪೃಷ್ಠಸ್ವಸ್ತಿಕ... ಗಂಗಾವತರಣ—ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೯೨ ವ) ; ಈ ನಟರಾಜ 'ಪೃಷ್ಠಸ್ವಸ್ತಿಕ' ಭಂಗಿಯಲ್ಲಿ ನೃತ್ಯ ಮಾಡುವಂತೆ ಶಿಲ್ಪಿತವಾಗಿದೆ (ಸೋಲಂಲ. ೧೩). [ಸಂ.]

**ಪೃಷ್ಠಾನುಸಾರಿ** (ನಾ). [ನಾಟ್ಯ] ತೋಳಿನ ಚಲನೆಯ ಒಂದು ಭಂಗಿ ; P "ಬೆನ್ನಿನ ಮೇಲೆ ತೋಳನ್ನಿರಿಸುವುದು" (ಲಾಸ್ಯರಂ. ಗದ್ಯಾನುವಾದ ೨೬೦) : ಊರ್ಧ್ವ, ಅಧೋಮುಖ . . . ಉದ್ವೇಷ್ಟಿತ, ಪೃಷ್ಠಾನುಸಾರಿ . . . ಉತ್ಸಾರಿತ—ಈ ಹದಿನಾಱು ತೋಳ ಭೇದಂಗಳ್ (ಲಾಸ್ಯರಂ. ೨-೦೨೨ ವ). [ ಸಂ. ಪೃಷ್ಠಾನುಸಾರಿನ್ ]

**ಪೃಷ್ಠಾಸ್ಥಿ** (ನಾ). ಬೆನ್ನಿನ ಮೂಳೆ ; ಕಶೇರುಕ : "ಪೃಷ್ಠಾಸ್ಥಿಯ ಕಶೇರುಕಂ ನಿಟ್ಟೆಲುವು" (ಮಂಗರಾ. ೦೦೬-೬). [ಸಂ.]

**ಪೃಷ್ಠೋತ್ಕ್ಷೇಪ** (ನಾ). [ನಾಟ್ಯ] ನೃತ್ಯದ ಒಂದು ಭಂಗಿ; ಆಕಾಶಚಾರಿಗಳಲ್ಲಿ ಒಂದು ; P "ಉತ್ಕ್ಷೇಪಚಾರಿಯನ್ನು ಹಿಂಭಾಗದಲ್ಲಿ ಮಾತ್ರ ಮಾಡುವುದು" (ಲಾಸ್ಯರಂ. ಗದ್ಯಾನುವಾದ ೬೨೯) : ಮಿಗೆ ವೇಷ್ಟನ ಮುದ್ವೇಷ್ಟಂ ನೆಗಳ್ದಿಸುವತ್ಕ್ಷೇಪವಮೊಸೆವ ಪೃಷ್ಠೋತ್ಕ್ಷೇಪಂ . . . ಇವುಂ ಮಿಸುಗುವ ಪತ್ತೊಂಬತ್ತುಂ ಪಸುರಿಸುವಾಕಾಶಚಾರಿವೆಸರಿಂದೆಸಗುಂ (ಲಾಸ್ಯರಂ. ೬-೦೬). [ಸಂ.]

**ಪೃಷ್ಠೋತ್ತಾನತಲ** (ನಾ). [ ನಾಟ್ಯ ] ನೃತ್ಯದ ಒಂದು ಭಂಗಿ ; ಇಪ್ಪತ್ತುಮೂಱು ಬಗೆಯ ದೇಶೀಯಸ್ಥಾನಕಗಳಲ್ಲಿ ಒಂದು ; P "ಒಂದು ಕಾಲಿನ ಬೆರಳುಗಳನ್ನು ಮಡಿಸಿ ಹಿಂದುಗಡೆ ನೆಲದ ಮೇಲೂರಿ ಇನ್ನೊಂದು ಪಾದವನ್ನು ಮುಂದೆ ಸಮವಾಗಿರಿಸುವುದು" (ಲಾಸ್ಯರಂ. ಗದ್ಯಾನುವಾದ ೬೬೦) : ಸ್ವಸ್ತಿಕ, ವರ್ಧಮಾನ, ನಂದ್ಯಾವರ್ತ, ಸಂಹತ, ಸಮಪಾದ, ಏಕಪಾದ, ಪೃಷ್ಠೋತ್ತಾನ [ತಲ], ಚತುರಸ್ರ, ಪಾರ್ಷ್ಣಿವಿದ್ಧ, ಪಾರ್ಷ್ಣಿಪಾರ್ಶ್ವಗತ, [ ಏಕಪಾರ್ಶ್ವಗತ ], ಏಕಜಾನುಗತ, ಪರಾವೃತ್ತ, ಸಮಸೂಚೀ, ವಿಷಮಸೂಚೀ, ಖಂಡಸೂಚೀ, ಬ್ರಾಹ್ಮ, ವೈಷ್ಣವ, ಶೈವ, ಗರುಡ, ಕೂರ್ಮ, ನಾಗಬಂಧ, ವೃಷಭಾಸನ—ಈ ಇಪ್ಪತ್ತಮೂಱು ದೇಶೀಯಸ್ಥಾನಕಂಗಳ್ (ಲಾಸ್ಯರಂ. ೬-೦೨ ವ). [ಸಂ.]

**ಪೃಷ್ಠ್ಯ** (ನಾ). ಹೊರೆಯನ್ನು ಹೊರುವ ಕುದುರೆ: "ಸ್ಥೌರಿ ಪ್ರಥಿತಾಖ್ಯಂ ಕಾಂ ಪೃಷ್ಠ್ಯಂ" (ಚನ್ನುಕೋ. ೮೬-೨೬). [ ಸಂ. ]

—**ಪೆ** (ಪ್ರ). ಒಂದು ಕೃದಂತಭಾವನಾಮಪ್ರತ್ಯಯ : 'ಕೇಳ್ಪೆ' ಪರಾ. ಹೆಂ, ಹೆ (ಸಪೂರೂ). ಸಮಾಸದಲ್ಲಿ 'ಪೆಣ್' ಎಂಬ ನಾಮವಾಚಕಕ್ಕೆ ಬರುವ ಆದೇಶರೂಪ: 'ಪೆಂಗೂಸು', 'ಪೆಂಗೊಳೆ' ಪರಾ. ಹೆಂ : 'ಹೆಂಗೂಸು' ಪರಾ. [ < ಪೆಣ್ ]

**ಪೆಂಕುಳಿ, ಪಿಂಕುಳಿ, ಪೇಂಕುಳಿ, ಪೇಕುಳಿ, ಹೇಕುಳಿ** (ನಾ). ೧. ಹೆಣ್ಣಿಗ ; ಹೇಡಿ : ಎಲವೊ ಪೆಂಕುಳಿಯ ಪಡಿಯರನಪ್ಪೋಲೀಲ್ಲಿ ನಿಂದಿರ್ಪ (ಪಿಚಚಾ. ೦೦-೦೬). ೨. ಹುಚ್ಚುನಾಯಿ : "ಅಲರ್ಕಾಖ್ಯೆ ವಿಸ್ಕ ಪೆಂಕುಳಿಯಕ್ಕುಂ" (ಚನ್ನುಕೋ. ೯೦-೦೦). ೩. ಹುಚ್ಚು ; ಮರುಳುತನ : "ಪೆಂಕುಳಿಯೆಂದು ಮರುಳ್ತನಂ" (ಕಕಾಣಾ. ೬೦-೬೨೬) ; ದಿಂಡುಕಂ, ಪೆಂಕುಳಿ, ಬಾಳಕಂ (ಕರ್ಣಾಟಕ. ೪೯೦ ಪ್ರಯೋ). ೪. ಹುಚ್ಚ ; ಮರುಳ : "ಹುಚ್ಚನಥವಾ ಪೆಂಕುಳಿ" (ಕಕಾ. ೬೯) ; ಪೇರೊಡಲ ಪೆಂಕುಳಿಗಳುಂ . . . ಮಸಕಂಗೊಂಡು (ಕೃಷ. ೩೩-೩೩ ವ). ಪಿಂಕುಳಿ : ೩. "ಪಿಂಕುಳಿ ಮನೋಭ್ರಮೆಯಕ್ಕುಂ" (ಕಕಾ. ೬೬). ಪೇಂಕುಳಿ: ೩. "ಪೇಂಕುಳಿಯೆನೆ ಮರುಳ್ತನಂ" (ಕರ್ನಾಕು. ೩೦) : "ಮರುಳ್ತನಕಂ ಬಾಧಿರನಕ್ಕು ಪೇಂಕುಳಿಯೆಂದುಂ" (ಕವಿಕಂ. ೨೪೦). ೪. "ಪೇಂಕುಳಿಯೆನಲ್ ಮರುಳನುಂ" (ಕವ್ಯ. ೬೯). ೫. ಪಿಶಾಚಿ; ಭೂತ: ಅಜಪಟಗಗೊಂಟನೊಳ್ ಪೇಂಕುಳಿ ಪೊಯ್ದಂತೆ ಕಾಳ್ಪಿರ್ದ ಭಕ್ತನಂ ನೋಡಿ (ಪಾಲಾಸ್ಯ. ೬-೦೦-೨೦ ವ). ೬. ಆವೇಶ; ಕೋಪೋದ್ರೇಕ : ಕಳಿ ಪ್ರತ್ಯಯಕ್ಕೆ—ಮಂಱುಕುಳಿ, ಪೇಂಕುಳಿ (ಶಬ್ದ. ೬೦೬ ಪ್ರಯೋ). ಪೇಕುಳಿ : ೩. ಎಕ್ಕೆಯ ಕೋರಕಮಂ ತಂದಿಕ್ಕುಗೆ . . . ದುರ್ಮಾಸ್ಗಂ ಪೇಕುಳಿ [ ಪಾಠಾಂ. ಪೆಕ್ಕುಳ, ಪೇಕುಳ ]ಯುಕ್ಕಿದ ಶುನಕನ ವಿಷಂ (ಶಬ್ದ. ೦೬-೨೬). ಹೇಕುಳಿ : ೪. ಶ್ರೀಕಂಠನಂ ಬಿಟ್ಟು ಹೇಕುಳಿಗಳೊಳಶ್ರುತಿ ವೈಕುಂಠನಂ ಪೇಳ್ವೆಮೆಂದುಳ್ಳರು (ಸಾಶುಚ. ೨-೦೯೬).

ಪೆಂಕುಳಿಯ ನಾಯ್ — ಹುಚ್ಚು ಹಿಡಿದ ನಾಯಿ : "ಪೆಂಕುಳಿಯ ನಾಯುಂ ಅಲರ್ಕಮೆಂಬುದು" (ಕರಾಯು. ೪೬-೦೨೬). ಪೆಂಕುಳಿರಾಯ — ಹೆಣ್ಣಿಗರಾಯ : ಹೇಡಿ : ದಿನಪತಿಯ ಪೆಂಕುಳಿರಾಯನೇಂ ಕಟ್ಟುಗುಂ ! (ರಾಜಶೇಖ. ೬೬-೬).

[ದೇ.; ತಮಿ. ಪೆಕುಳಿ; ತೆಲು. ವೆಂಗಲಿ, ವೆಂಗಳಿ, ವೆಕಲಿ]

**ಪೆಂಕುಳಿಗ** (ನಾ). ಹುಚ್ಚು ಹಿಡಿದ ನಾಯಿ; ಹುಚ್ಚುನಾಯಿ : ಕನಕದ ಬೇರುಂ ಶರ್ಕರೆಯನುಮಮೊನಿಸಿರ್ದ ತುಪ್ಪಮಿಂತಿವನೊಸೆದಿಂತಿನ ಪಾಲೊಳ್ ಕುಡುಗುಡೊಡಂ ಶುನಕನ ಪೆಂಕುಳಿಗನಧಿಕ[ಪಾಠಾಂ. ಪೆಕ್ಕುಳಿಗನನಿದ, ಪೇಕುಳಿಕಗಳಧಿಕ]ವಿಷಮುಮಡೆಗುಂ (ಶಬ್ದ. ೦೬-೨೪). [ಪೆಂಕುಳಿ + —ಗ]

**ಪೆಂಕುಳಿಗಲಿ** (ನಾ). ಆವೇಶಗೊಂಡ ಶೂರ, ವೀರ : ಬಿಟ್ಟ ಕಣ್ಣುಂ ಬಿಗಿದ ಮೊಗಮುಂ ಕರ್ಚಿದವುಡುಂ ಕಡಿತಲೆಯುಂಬೆರಸು ಮೊಣ್ ಯುತ್ತುಂ ಪರಿವ ಪೆಂಕುಳಿಗಲಿಗಳುಮಂ (ಅಜಿತಪು. ೩-೦೦೯-೩).
[ಪೆಂಕುಳಿ + ಕಲಿ]

**ಪೆಂಕುಳಿಗೊಳ್, ಪೇಕುಳಿಗೊಳ್, ಹೇಕುಳಿಗೊಳ್** (ಕ್ರಿ). ೧. ಆವೇಶಗೊಳ್ಳು; ಉದ್ರೇಕಗೊಳ್ಳು : ಧರ್ಮಪುತ್ರಂ ಶಿಖಂಡಿಯುಂ ಮುಂದಿಟ್ಟು ಕೊಂಡು ಬಂದು ಪೆಂ[ಪಾಠಾಂ. ಪೇಂ]ಕುಳಿಗೊಂಡ ಸಿಂಹಮುಂ ಮುತ್ತು ವಂತೆ ಸುತ್ತಿ ಮುತ್ತಿದಾಗಳ್ (ಪಂಪಭಾ. ೧೧–೯೦ ವ); ಪೆಂಕುಳಿಗೊಂಡ ಮದೇಭವೈರಿವೋಲ್ ಕೆರ್ದು(ಪಂಪಭಾ. ೧೧–೧೦೩); ಕೇಸರಿ ಪೆಂಕುಳಿಗೊಂಡಂ ತಾಸುರನತ್ಯುಗ್ರದಿವ್ಯಬಾಣಾಳಿಗಳಿಂ ಪೇಸೇಱ ಕೊಂದಂ (ಪೇಶಿ:ಕೃ.೦೨–೧೦೦). ೨. ಹುಚ್ಚು ಹಿಡಿ; ಹುಚ್ಚಾಗು : ಪೆಂಕುಳಿಗೊಂಡರೋ ತಿಳಿಯದೈ ಶ್ರೀಪಾರ್ವತೀವಲ್ಲಭಾ (ಪಾಪಶ. ೩೮). **ಪೇಕುಳಿಗೊಳ್** : ೨. ಆ ನಾಯ್ . . . ಬಾಯ್ವಿಟ್ಟು ಘೋಳಿಟ್ಟು ಪೇಕುಳಿಗೊಂಡಾದ ವಿಷಾದದಿಂ ಪುಟಿತು ಸತ್ತಿತು (ಸುಕುಮಾ. ೩–೨೦) ; ಕನಕದ ರಸಮುಂ ಗುಡಮುಂ ವಿನುತಕ್ಷೀರದೊಳವಿರ್ಪಲಮನೀಂಟಲ್ಕಂ ಶುನಕಂ ಪೇಕು[ಪಾಠಾಂ. ಪೇರ್ಕು(ಕ್ಕು)]ಳಿಗೊಂಡುದು ತಿನೆ ಶದ್ವಿಷಮುೞಿಗುಂ (ಜಮುದ. ೦೩–೨೮). **ಹೇಕುಳಿಗೊಳ್** : ೨. ಅಲರ್ಕ, ಯೋಗಿತ—ಮದ್ದಿಂದ ಮರುಳಾಗಿ ಹೇಕುಳಿಗೊಂಡಿದ್ದ ನಾಯಿ (ಪಾಪಶಾ. ೬). [ಪೆಂಕುಳಿ + ಕೊಳ್$_1$]

**ಪೆಂಕುಳಿನಾಯ್, ಪೇಕುಳಿನಾಯ್** (ನಾ). = ಪೆಂಕುಳಿಗ : ಬಡಿಗೊಂಡು . . . ಪೆಂಕುಳಿನಾಯಂ ಬಡಿಪಂತಿರೆ ಪಾೞುತುಮಂ ಬಡಿವಂತಿರೆ ಬಡಿದನನಿಬರಂ ಕೌರವರಂ (ಗದಾಯು. ೩–೦೦); ಶಿರೀಷಮೊಂದನೆ ಜಲದಿಂದೆ ಪೂಸುಗದು ಪೆಂಕುಳಿನಾಯ ವಿಷಾಪಹಾರಕಂ (ಲೋಕೋಪ. ೦೦–೩೫); ಪೇಕುಳಿನಾಯ ವಿಷಕ್ಕೆ—ಕನಕದ ಬೇರುಂ ಶರ್ಕರೆಯುಮುಪಮಾನಿಸಿರ್ದ ತುಪ್ಪವಿಂ ಶಿವನೊಸೆದಿಂಪಿನ ಪಾಲೊಳ್ ಕುಡಿಸಿದೊಡಂ ಶುನಕನ ಪೆಂಕುಳಿಗನಧಿಕವಿಷಮನದೞಿಗುಂ (ಜಮುದ. ೦೩–೨೪). **ಪೇಕುಳಿನಾಯ್** : ಪಳಿಯಂ ದೊಡಂಜುಗುಂ ಪೇಕುಳಿನಾಯೊಳಗಾಗಿ ಖಳಸದೇಂ ಕಷ್ಟನೊ (ಧರ್ಮಪಾ. ೦–೬೩). [ಪೆಂಕುಳಿ + ನಾಯ್]

**ಪೆಂಗ್‌ನಾಮ** 'ಪಂಗನಾಮ' ನೋ.

**ಪೆಂಗ, ಪೆಗ್ಗ, ಹೆಗ್ಗ$_1$, ಹೇಗ** (ನಾ). ಪೆದ್ದ; ದಡ್ಡ ; ಶಿಳಿಗೇಡಿ ; ಮರುಳ : ರಾಘು ಪೆಂಗನಂತೆ . . . ಕಣ್ಣು ಹೊರಳಿಸುತ್ತ ಹೊರಬಂದನು (ಮೂಲಾವ. ೨೦೦) ; ಬುದ್ಧಿ ಕೆಟ್ಟುಹೋಗ್ತದೆ; ಪೆಂಗ ಆಗ್ತೀಯೆ (ಪೆಂಗೂಂ. ೧೫); ಲಿಂಗವೇ ಗತಿಯೆಂದು, ಪೆಂಗ ಕುರುಬರಿಗೆಂದ (ಕಸ್ವಪಾ. ೦೯೨). **ಪೆಗ್ಗ** : ಪೆಗ್ಗನಾದರೂ ಅಗ್ಗದಲ್ಲಿ ತಂದ (ಗಾದೆ). **ಹೆಗ್ಗ$_1$** : ಹೆಗ್ಗ ಬುದ್ಧಿಯ ಬಲ್ಲನೇ ಅಯ್ಯ (ಸಿದ್ಧೇವ. ೨೦೭–೬೯೫); ಲವಲೇಶ ಮೌಲ್ಯವಿಲ್ಲದೆಯರ್ಥಮಂ ಪಡೆವೆನೆಂದೆಂಬ ಕಷ್ಟಹೆಗ್ಗ [ಪಾಠಾಂ. ಹೆಡ್ಡ, ಹೆಬಗ]ನುಂ (ಸಮ್ಯಕ್ತ್ವ. ೦೨–೭); ಕುನ್ನಿ ಮರುಳ ಜೋಗಿ ಹೆಗ್ಗ . . . ಎನ್ನಿಸಿ ನಾಮವೆತ್ತಿಹ ಪರವಳಿವರ್ಗೆ ನಿನ್ನೊಲವುಂಟೆ (ಶಶಾಂ. ೦೨–೬೫). **ಹೇಗ** : ಹೇಗರಿರ . . . ಬಸದಿಗಳನೆಲ್ಲವ ಬೇಗದಿಂ ಹಿರಿಹಿರಿದು ಕೆಡೆಹಾಯ್ಕಿಸುವೆನು (ಬಿಸಕೃ. ೫೦–೩೨); ಹೇಗರೆನಿಸುವ ಸವಣರುಗಳು ಶಾಸ್ತ್ರದೆ ವಾದವಾಗಿ ಸೋಲ್ವೊಡೆ (ಸಿದ್ಧೇಕೃ. ೭ ೨೩); ತಾಗಿ ಬಾಗುವರಿಂದ ತಾಗದಿರುವುದು ಲೇಸು ತಾಗಿ ಮೂಗೊಡೆನು ಬುಗುಟೆದ್ದು ಬಾಗುವದು ಹೇಗದ[ನ] ಗುಣವು (ಸರ್ವಜ್ಞ. ೦೫೫೩). 'ಎಗ್ಗ', 'ಹೆಬಗ' ಪರಾ. [ದೇ. ‖ ತುಳು. ಪಂಗೆ; ತೆಲು. ಪೆಂಕೆ]

**ಪೆಂಗಣಿಸು, ಪಿಂಕಣಿಸು, ಪಿಂಗಳಿಸು** (ಕ್ರಿ). ಅಗಲವಾಗಿ ತೆರೆ; ಅಗಲಿಸು : ಕುರುಪುಗಣ್ಣಿನಿತು ಪೆಂಗಣಿಸೆ ಕಾಣದ ತೆಱದೆ ಕರುಮವೆನಿತೆಸಗಿದರು ಪಸ್ತು ತೋಱುವುದೆ (ಕೃಕವ. ೫–೩–೬). **ಪಿಂಕಣಿಸು** : ಕಣ್ಪಿಂಕಣಿಸುತೊಲೆವ ಶಿರ ಸವಿವ ಜಾಯಧರಧರಮು ಕಡಿವುತ (ಜಪಮು. ೦೦–೦೪). **ಪಿಂಗಳಿಸು** : ಮತ್ತೆ ಅವನು ಕಣ್ಣನ್ನು ಪಿಂಗಳಿಸಿ ನೋಡಿದನು (ಮುರಿವಾ. ೯೯). [? + —ಇಸು$_3$]

**ಪೆಂಗಿನಾಮ** 'ಪಂಗನಾಮ' ನೋ.

**ಪೆಂಗು$_1$, ಪೆಗ್ಗು** (ನಾ). ೧. ದಡ್ಡತನ; ಮಂಕುತನ : ಯಾಕೆ ಹೀಗೆ ನಿನ್ನ ಪೆಂಗು ತೋರಿಸಿಕೊಳ್ಳುತ್ತಿದ್ದೀಯಾ ? (ಕೂಶಿ). ೨. ಪೆದ್ದ ; ದಡ್ಡ : ಇಷ್ಟು ಹೊತ್ತಾದರೂ ನಿನಗೆ ಜ್ಞಾಪಕ ಬರಲಿಲ್ಲವೆ ? ಅಯ್ಯೋ ಪೆಂಗೆ ! (ಅಪ್ನಾವ. ೭೨) ; ಪೆಂಗಿನ ಹಾಗಾಡಬೇಡ (ಮೂಮುವ. ೨) ; ಹೋಗೊ, ಹೋಗೊ, ಪೆಂಗೆ ! (ಸಕಪಾ. II. ೯೨೫). **ಪೆಗ್ಗು** : ೧. 'ಪೆಗ್ಗ' ಪರಾ. [ಪೆಂಗ + —ಉ$_4$]

**ಪೆಂಗು$_2$** (ನಾ). ದ್ರಾವಿಡಭಾಷಾವರ್ಗಕ್ಕೆ ಸೇರಿದ ಒಂದು ಭಾಷೆ : ಪೆಂಗು ಎಂಬುದೂ ದ್ರಾವಿಡಗುಂಪಿಗೆ ಸೇರಿದ ಭಾಷೆಯಾಗಿದ್ದು . . . ಒರಿಸ್ಸಾಸಂಸ್ಥಾನದ ಕೊರಾಪುತ್‌ಜಿಲ್ಲೆಯ ಉತ್ತರಭಾಗಕ್ಕೆ ಇರುವ ಜನರು ಆಡುತ್ತಾರೆ (ದ್ರಾಖಿ. ೦೭೨).

**ಪೆಂಗುರು** 'ಪೊಂಗುರು' ನೋ.

**ಪೆಂಗುಸು** 'ಪೆಣ್ಗೂಸು' ನೋ.

**ಪೆಂಗೂಸು** 'ಪೆಣ್ಗೂಸು' ನೋ.

**ಪೆಂಗೊಲೆ** 'ಪೆಣ್ಗೊಲೆ' ನೋ.

**ಪೆಂಗೊಲೆಯ** (ನಾ). ಹೆಣ್ಣನ್ನು ಕೊಲೆ ಮಾಡುವವನು ; ಸ್ತ್ರೀಹತ್ಯೆ ಮಾಡುವವನು : ವಿರಹದಿಂದಾಗನೆ ಬಳಲ್ದು . . . ಪೆಂಗೊಲೆಯರಿವರೆಂದು ಶಪಿಸಿಯುಂ ತಣಿಯದೆ ವಿಹಂಗಪತಿಯಬ್ಬಿ ಪರಶಿವ ಬ್ರಹ್ಮರಂ ಬೈದಳೇನೆಂಬೆನಚ್ಚರಿಯನು (ಚಶಿಕೃ. ೧೦–೬೫). [ಪೆಂಗೊಲೆ (<ಪೆಣ್ಗೊಲೆ) + —ಅ$_7$]

**ಪೆಂಗ್ವಿನ್** (ನಾ). "(ನೀರೊಳಗೆ ಈಜಾಡಲು ಉಪಯೋಗವಾಗುವ ಹುಟ್ಟುಗಳಂಥ ರೆಕ್ಕೆಗಳುಳ್ಳ, ದಕ್ಷಿಣಾರ್ಧಗೋಳವಾಸಿಯಾದ) ಒಂದು ಜಾತಿಯ ಕಡಲ ಕೋಳಿ" (Penguin. ಇಂಕೋ) : ದಕ್ಷಿಣ ಶೀತವಲಯದಲ್ಲಿ 'ಪೆಂಗ್ವಿನ್' ಗಳ ಸಮೂಹವೂ ಅಟ್ಲಾಂಟಿಕ್ ಕಡಲಿನಲ್ಲಿ 'ಪಫ್ಫಿನ್' ಗಳ ಸಮೂಹವೂ ಕೋಟಿಸಂಖ್ಯೆಯನ್ನು ಮೀರುತ್ತದೆ (ಪಕ್ಷಿ. ೩೬). [← ಇಂ. Penguin]

**ಪೆಂಚರಿ** (ನಾ). "ಒಂದು ಬಗೆಯ ಹಾವು" (ಆಪಂಪಾ). [ದೇ. ‖ ತೆಲು. ಪೆಂಜೆರ]

**△ಪೆಂಚು** 'ಹೆಂಚು$_2$' ನೋ.

**ಪೆಂಚೆ** 'ಪಿಂಚೆಯ' ನೋ.

**ಪೆಂಚೆಯ** 'ಪಿಂಚೆಯ' ನೋ.

**ಪೆಂಜಱ** 'ಪೆಂಜಱುವು' ನೋ.

**ಪೆಂಜಱುವು, ಪೆಂಜಱ, ಪೆಂಜಱೆವು, ಪೆಂಜೆಱು, ಹೆಂಜಱ, ಹೆಂಜೆಱು** (ನಾ). ೧. ಒಂದು ಸ್ಥಳದ ಹೆಸರು ; ಈ ಮಡಕಶಿರಾ ತಾಲ್ಲೂಕಿನ ಈಗಿನ ಹೆಂಜೇರು : ಪೆಞ್ಜಱುವಿನ ಪೆಞ್ಜಮಟಸ್ಥಾನಮುಂ ಮಹಾನಖರಮು ಸಕಿಯಾಗಿ ಬರಗೂರ ಮಹೇನ್ದ್ರೇಶ್ವರದೊಳಗೆನ್ದು ಕೊಟ್ಟುದು (ಎಕ. XII, ಶಿರಾ. ೩೯–೯೪ ; 920) ; ಪೆಞ್ಜಱುವಿನ ನೊಟಪ್ಪಗಾವುಣ್ಡನು (ಎಕ. XII, ಶಿರಾ. ೨೮–೯೭ ; 943). **ಪೆಂಜಱ** : ೧. ಸ್ವಸ್ತಿಶ್ರೀ ಶಿವಮಾರ ಮಹಾರಾಜ ಪೃಥುವೀರಾಜ್ಯಂಗೆಯೆ ಕಾಡುಪಟ್ಟಿ ಪೆಞ್ಜಱಕೆ ಕನ್ದಳ್ಳಿಯ ರಾಜಿಗದೊಳ್ × × ಚ್ಚನ್ ಕವಿತ್ತೂರನ್ ಪಸುವೞಿಧನುವೆಟ್ಟಿ ಕೊನ್ದು ಬಿಟ್ಟಾರ್ (ಎಕ. IX (೩). ಹೊಸಕೋ. ೦೬೯–೨; ಸು. 800). **ಪೆಂಜಱೆವು** : ೧. ಪೆಂಜಱೆವಂ ಕಾವ ತಳಱ ಬಟ್ಟರೇಚಯ್ಯನೆಂಬ ತೈಲಕಟೀಲಿ ದೇವಕೆಱಯ ಕಟ್ಟಿ . . . ಬಿಟ್ಟ ಭೂಮಿ (ಎಕ. XII, ಶಿರಾ; ೩೩–೭ ; ಸು. 1100 ?). **ಪೆಂಜೆಱು** : ೧. ಪೊಗಱವೆಱಗನ ಜಾವಲ್ಲು ಕೇಳ ಪೆಂಜ್ಜೆಱಲ್ಲಿಂ ಪೊಗಟಲ್ಕೆ ವೀಱನ ಸಾವು ಕತೆಯಾಗಿ ಪರೆದುದು (ಸೌಇಇ. IX-I. ೩೦–೦೪; 966). **ಹೆಂಜಱ** : ೧. ಹೆಞ್ಜಱಸಮುರದೊಳ್ಮುರಾರಿ ಮಾರನಾಗಿ ಗುದುಗೆಯ ಪಾಯಿಸಿ (ಎಕ. III, ನಂಜನ. ೦೨೨–೧೪ ; 266 ? ಕೈಶಾ);

ದಿಗ್ವಿಜಯಯಾತ್ರಾಂ ಬಿಜಯು ಕರಿಮಿ ಹೆಃಜಜಗ್ರಾಮಾತು ಕಟಕ ಮಾಕುಲೀತಮ್ (ಇಅ. VIII, ೯೪ ೦: 444 ಕ್ರಿಶ). ೨. ಒಬ್ಬಾತನ ಹೆಸರು: ಮಧಿಗಮಿಷನ ಶುಪುತ್ರ ರಾಮಧೇವನು ಹೆಞ್ಜಱಿಬಿಜಿದು (ಎಕ. VII, ಶಿಕಾ೦. ೩೨-೦೩; 357 ? ಕ್ರಿಶ). **ಪೆಂಜೆಱು :** ೧. ಕೊಯತೂರ ತುಳಿವ ಪೆಂಜೆಱು ದಿಸಾಪಟ್ಟಸಂಗ್ರಾಮ ಪತ್ತಲಟ್ಟ ಪಾಂಡ್ಯನು ಬೆಂಕೊಂಡ (ಎಕ. II, ೦೯೩-೩೬; 1131). [?]

**ಪೆಂಜಱಿವು** 'ಪೆಂಜಱುವು' ನೋ.

**ಪೆಂಜೆಱು** 'ಪೆಂಜಱುವು' ನೋ.

**ಪೆಂಟಿ$_1$** 'ಪೆಂಟೆ$_1$' ನೋ.

**ಪೆಂಟಿ$_2$, ಪೆಂಟೆ$_3$, ಪೆಂಡಿ$_2$, ಪೆಂಡೆ$_3$(ನಾ).** ೧. ಮೂಟೆ; ಗಂಟು: ಪುನರ್ದ್ದೃಷ್ಟಿಯಾಗಿ ನಾಲ್ಕುಂ ಸುಂಕದೊಳವೆರಡೊಲ್ದೆಟ್ ಕೊಡವೀಸವ ಸಹಿತ ಮಾಗಿ ಬಿಟ್ಟ ಉಪ್ಪಿನ ಪೆ[ಂಟಿ] ಅಱುವತ್ತು (ಸೌ‌ಇ. XX, ೬೦-೩೩; 1088)· **ಪೆಂಟೆ$_3$ :** ೨. ಹೊರೆ; ಸಿವುಡು; ಪಿಂಡಿ: ವಿರಹಭರೋತ್ಕಂಠ ಮನೋಹರಿಯು ಕಪೋಳಂಗಳಂತೆ ನಿಬ್ಬರಿಸಿದ ಬೆಳ್ಕರಿಸಿದೆಲೆಗಳಿಪ್ಪದೆಲೆಗಳ ಬರಿಸುವುದನುನಯುದೆ ಪೆಂಟೆ ಗೆಂಟೆಱ ವಿಟರಂ (ಪುಷ್ಪ‌ವೃ. ೨-೮೨). **ಪೆಂಡಿ$_2$ :** ೨. ಕದಿರು ಸೂತ್ರ ದಾರ ಬಲುಗಣಿಕೆಯ ಪೆಂಡಿ ಹೂಡುಗೋಲುಗಳನು ಒಲಿದು ಕಟ್ಟಿದನು ಆ ಶರಣ (ಅಮುಸಾಂ. ೩-೩); ಒಣಗಿ ತಾರವಾದ ಸಿಬರಿನ ಪೆಂಡಿಯನ್ನು ತೆಗೆದು, ಮೊದಲು ಸೂಜಿಯಂತಹ ಸಿಬರು ಪೆಚ್ಚಿಟ್ಟುಕೊಳ್ಳುತ್ತಾನೆ (ದೀಕಥ. II, ೩); ಎಲ್ಲಾರು ಕಟ್ಟಾಕ್ಕರ ಮಲ್ಲಿಗ್ಗೂವಿನ ದಂಡಿ ಬೀಗುತಿ ಕಟ್ಟಾಕ್ಕಳ ಹುಲ್ಲ ಪೆಂಡಿ (ಕೊ:ಕಗೀ. ೨೩). **ಪೆಂಡೆ$_3$ :** ೨. ಚಂಡಿತನವೆಂಬ ಹಿಂಡಿ ಇಡಬೇಕು ದಿಂಡತನವೆಂಬ ಪೆಂಡೆಮೇವು ಪುಂಡತನವೆಂಬೊ ಪಿಂಡಿ ರುಬ್ಬಿಡಬೇಕು (ಪುರಂದ. ೨-೩೩-೨); ಹೊಲ ಕೊಯ್ಯುವವರಿಗೆ ಅವರು ಕೊಯ್ದ ಪೆಂಡೆಗಳನ್ನೇ ಕೂಲಿಯಾಗಿ ಕೊಡುತ್ತಾರೆ (ಮುಂಬಯಿ. ೩-೦೯೬); ಬಲಗಡೆ ನಾರಿನ ಪೆಂಡೆಯಿತ್ತು (ಶ್ರೀಮುಕ. ೮೬). [<ಸಂ. ಪಿಂಡಿ]

**ಪೆಂಟೆ$_1$, ಪಿಟ್ಟೆ$_1$, ಪೆಂಟಿ$_1$, ಪೆಂಡಿ$_1$, ಪೆಟ್ಟ, ಪೆಟ್ಟೆ$_1$, ಪೆಟ್ಟೆ, ಹೆಂಟೆ$_1$, ಹೆಂಡೆ$_1$, ಹೆಟ್ಟ$_1$, ಹೆಟ್ಟೆ (ನಾ).** ೧. (ಮಣ್ಣು, ಬೆಲ್ಲ ಮೊದಲಾದುವುಗಳ) ಮುದ್ದೆ; ಉಂಡೆ: "ಪೆಟ್ಟೆಯೆ ತಾಂ ಪೆಂಟಿಯಕ್ಕುಂ" (ಕಬಿಕಂ. ೨೨೮); ಪೆಂಟಿಯು ಅಂಟುವಲೆಯು . . . ಬಿಲ್ಲುಬುಗಳ ಬಲ್ಪೊಱೆವೊತ್ತು (ರಾಮಾಶ್ವ. ೯೩-೨೪); ಈ ಕಿಟ್ಟವು ಆರಿ ಕಲ್ಲಿನಂತೆ ಭಾರವುಳ್ಳ ಪೆಂಟಿಯಾಗುತ್ತದೆ (ಮುಂಬಯಿ. ೪-೦೯೯). **ಪಿಟ್ಟೆ$_1$ :** ೧. ಕಲ್ಲು ಜಳ್ಳು ಪಿಟ್ಟೆಗಳನ್ನು ನಾವೇಳುವರಿಂದ ಹೆಕ್ಕುತ್ತೇವೆ (ನಾತೋಜ. ೮೩). ೨. (ಮಣ್ಣಿನ) ರಾಶಿ; ಗುಪ್ಪೆ; ದಿಬ್ಬ: ನಾಲ್ಬಟ್ಟೆಯ ಪಿಟ್ಟೆಪೊಲ್ ಕುಲಸಗಾಘಂ ನುರ್ಗಿದತ್ತು (ಜಗ೨. ೧-೬೦). ೩. (ಶರೀರದಲ್ಲಿ ರೋಗದ ಪರಿಣಾಮವಾಗಿ ಬೆಳೆಯುವ) ಗಡ್ಡೆ; ಗಂಟು: ಕಾವೇರಿಯ ಹೊಟ್ಟೆಯಲ್ಲಿ ಅನ್ನದ ರಸ ಹೋಗಿ ಪಿಟ್ಟೆ ಬಂದಿತ್ತು (ಕಾವೇಂ. ೨೦೨). **ಪೆಂಟಿ$_1$ :** ೧. ಬೆಲ್ಲದ ಪೆಂಟಿಯ ಅವಲ್ಲಿ ಕಚ್ಚಿ ನೋಡಿದಡೆಯೂ ರುಚಿಕರವಾಗಿ ತೋರುವದಲ್ಲದೆ ವಿಷವಾಗಿ ತೋರದು (ವಚಣ. II, ೦೯೩-೬೨ ಅರ್ಥ). **ಪೆಂಡಿ$_1$:** ೨. "ಪೆಂಡಿ—ಪಿಂಡಿ=ಕಣಿಗಾಲು, ಗುಂಪು" (ಶಬ್ದಕೋ. ೨೬). **ಪೆಟ್ಟ:** ೧. "ಪೆಟ್ಟವೆನೆ ಲೋಷ್ಟ" (ಕರ. ೬೯); ನೇಗಿಲೊಳುಕ್ಕಿಯನುಳುವ ಕುಡಿಯಸಂ ಕಂಡುಮಿಾ ಹಲಕ್ಕೆನಿತು . ಪೆಟ್ಟಯಿಂ[ಪಾಠಾಂ. ಹೊಲಕ್ಕೆ ಪೆಟ್ಟೆಯೆನಿತೆಂ, ಹಳ್ಳಕ್ಕೆನಿತು ಪೆಂಟಿಯಿಂ]ದು ಬೆಸಗೊಳುತ್ತಲ್ಲಿಂ ಪೋಗಿ (ಪುಣ್ಯಾಸ್ರ. ೩-೦೨ ವ). ೪. ವ್ಯವಸಾಯದ ಒಂದು ಉಪಕರಣ; ಮಣ್ಣಿನ ಗಟ್ಟಿಯನ್ನು ಒಡೆಯಲು ಬಳಸುವ ಸಾಧನ: 'ಪೆಟ್ಟಪೆಟಿ' ಪರಾ. **ಪೆಟ್ಟೆ$_1$ :** ೧. "ಪೆಟ್ಟೆಯೆಂದು ಹೆಂಟೆ" (ಕಶಾ. ೬೦-೬೦೬). **ಪೆಟ್ಟೆ$_1$ :** ೧. "ಪೆಟ್ಟೆಯೆ ತಾಂ ಪೆಂಟಿಯಕ್ಕುಂ" (ಕಬಿಕಂ. ೨೨೮); ದಿವ್ಯಮಪ್ಪ ಶಯ್ಯಾತಳದೊಳ್ ನಿದ್ರೆಗೆಯ್ವಾನಿಯು ತಗಳ್ ಪೆ[ಪಾಠಾಂ. ಬೆ, ಪೆ]ಟ್ಟೆಗಳುಂ ಕಿಱುಗಲ್ಗಳುಮೊತ್ತೆ ನಿದ್ರೆಗೆಯ್ವೆಯಾದಯ್ (ವಡ್ಡಾರಾ. ೦೪೦-೩); ಕಡುಕುಂ ಪೆಟ್ಟೆ[ಪಾಠಾಂ. ಪಿಟ್ಟೆ]ಯುಮೊತ್ತೆ ಮಲ್ಲಡಿಗಳಂ (ಶಂಶಬಾ. ೩-೯); ಆಕೆ ಕಕ್ಕಳಗೆಳರ್ದಿಟ್ಟಗ್ರಾಱಿದೆ ಪೆಟ್ಟೆಯುಂ [ಪಾಠಾಂ. ಹೆಟಿಯುಂ, ಪೆಂಟಿಯುಂ] ಕಚ್ಚುವಂತೆ . . . ಆ ಕಪ್ಪಡವಮನೆರಟ್ಕುಡಿಯಾಗೆ ಸಱನೆ ಸೀಳ್ದೀಡಾಡುವುದುಂ (ಅರ್ಜನೀ. ೬-೯ ವ); ತನ್ನ ನೆಳಲಂ ಪ್ರತಿಗಜಮೆಂದುಱದೆ ಕಱುತ್ತೆಱಗಿ ಬೆಟ್ಟದ ಪೆಟ್ಟೆ[ಪಾಠಾಂ. ಪೆಂಟೆ] ಗಳನೆತ್ತಿಯೆತ್ತಿ ಕೋಪವಮಾಱಿದೆ (೧೦೪. ೦-೦೨೮ ವ). **ಹೆಂಟೆ$_1$ :** ೧. "ಮಣ್ಣಿನ ಹೆಂಟೆ—ಲೋಷ್ಟ" (ಪಾಪಶಾ. ೪); ಕಲ್ಲು ಹೆಂಟೆ ಹೋರಿಯಾಡಿ ಕಲ್ಲು ಕರಗಿ ಹೆಂಟೆ ಉಳಿಯಿತು (ಮನುಗುಂ. ೩. ೨೪೯-೦೩); ತಾನಿರ್ಪ ನೆಲದ ದೊಗಱೊಳಗೆ ಪೊಕ್ಕಗೆಯುತ್ತುಮಿರೆ ಜಱಿದು ಬಲು ಹೆಂಟೆಯಾಗಿ ಮೇಲಿಪ್ಪೆರೆಯ ಮಣ್ಣಿಸ್ಸ ಬೆನ್ನನೋವದೆ ಮುಱಿದುದು (ಸಮ್ಯಕ್. ೨-೯೩); ಬೇಸಾಯಗಾರನು . . . ಕುಂಟೆಯಿಂದ ಹೆಂಟೆ ಒಡೆದು ಪುಡಿ ಮಾಡಿ (ಪಿಬಿಂಥ. II, ೨೬೨). ೪. 'ಹೆಂಟೆಗೊಡತಿ' ಪರಾ. ೫. ಹಸಿಯ ಇಟ್ಟಿಗೆ; ಸುಡದೆ ಇರುವ ಇಟ್ಟಿಗೆ: ಕೆಮ್ಮಣ್ಣಿನ ಹೆಂಟೆಯನ್ನು ಕೆಂಪಾಗಿ ಸುಟ್ಟು, ನೀರಲ್ಲಿ ಹಾಕಿ, ಆರಿದ ನೀರಂ ಕುಡಿಯಲು ಪಿತ್ತ ಛರ್ದಿ ಮಾಣ್ಗುಂ (ಸಕವೈ. ೨೬೩); ಒಂದು ಹೆಂಟೆಯದಾದರೂ ಸುಂದರವಾದ ಮನೆಯೂ ಇತ್ತು (ಶ್ರೀಮಾಕ್ರ. ೪೪). **ಹೆಂಡೆ$_1$ :** ೧. "ಹೆಂಡೆ[ಪಾಠಾಂ. ಹೇಂಟಿ] ಲೋಷ್ಟಂ" (ಮಂಗರಾ. ೦೦೯-೨); ಖಂಡ ಸಕ್ಕರೆ ಹಣ್ಣ ಕೊಟ್ಟರೊಲ್ಲದೆ ಮಣ್ಣ ಹೆಂಡೆಯನು ಬೇಡಿ (ಪುರಂದ. ಬಾ. ೩-೦೦೬-೨); ಹೆಂಡೆ ಕಲ್ಲಿನೊಳಿಟ್ಟು ಕೊಲಲಿ (ಅಮಸಾಂ. ೩-೦೩೦). **ಹೆಟ್ಟ$_1$:** ೪. 'ಹೆಟ್ಟಹೊಡೆ' ಪರಾ. ೬. ಉಳುಮೆ; ಹೂಟಿ. ೭. ಹರಳಿನಿಂದ ಎಣ್ಣೆಯನ್ನು ತೆಗೆದ ಮೇಲೆ ಉಳಿಯುವ ಹಿಂಡಿ,—ಗಪ್ಪು: "ಲೋಷ್ಟದೊಳು ಹೂಟದೊಳುಯೇರಂಡಕಿಟ್ಟದೊಳು ಪೆಟ್ಟಂ" (ಶಬ್ದಮಂ. ೯೦). **ಹೆಟ್ಟೆ :** ೧. "ಲೋಷ್ಟಕಃ, ಲೋಷ್ಟಂ—ಈ ೨ ಹೆಟ್ಟೆ" (ಹಲಾಯು. ೪೪-೪೨೨); ತೊಟ್ಟನೆ ಪಲ್ಲಲಾಂಬು ತವೆ ಬತ್ತಿದುದಾಕ್ಷಣವೆದ್ದ ಹೆಟ್ಟೆ[ಪಾಠಾಂ. ಟ್ಟೆ]ಕಾಯ್ದಿಟ್ಟಿಗೆಯಂದವಾಯ್ತು (ಕುಸುಮಾ. ೬-೦೨೪); ಮಣ್ಣಿನ ಹೆಟ್ಟೆಯೊಂದನ್ನೆತ್ತಿ ನೀರಿಗೆ ಒಗೆದ (ಮೂರುದಾ. ೨೯೩).

[ದೇ.॥ ತುಳು. ಹೆಂಟೆ, ಎಂಟೆ; ತೆಲು. ಪೆಂಟ, ಪೆಡ್ಡ, ಬೆಡ್ಡ./ಪ್ರಾ. ಪೇಂಡ./ಸಂ. ಪಿಂಡ]

**ಪೆಂಟೆ$_2$, ಹೆಂಟೆ$_2$, ಹೇಂಟೆ, ಹೇಟೆ, ಹೇಟೆ (ನಾ).** ೧. (ಕುದುರೆ, ಕತ್ತೆ ಮುಂತಾದ) ಪ್ರಾಣಿಗಳಲ್ಲಿ ಹೆಣ್ಣು: ಅಂತು ಪೆಂಟಿಗಳಂ ದಾಂಟಿ ಕೆಡವುತ್ತುಂ ಕಡವಂಗಳಂ ಕಚ್ಚಿ ಕೆಡಪುತ್ತುಂ . . . ಕೇಳ್ದರ್ದೆ ತೆಱಿವಿನ ಮೊಳಟ್ ಪೆಂಟೆ[ಪಾಠಾಂ. ಪೆಟ್ಟ, ಪೆಟ್ಟ]ಯ ಪೊಟ್ಟೆಯುಂ ಕರ್ಚಿ ಸೆಳೆಯೆ (ಅರ್ಜನೀ. ೬-೯೦ ವ). **ಹೆಂಟೆ$_2$ :** ೨. "ಹೆಣ್ಣುಕೋಳಿ" (ಸಾಪಾಶ. ೨೨೬). **ಹೇಂಟೆ :** ೨. ಚಂದ್ರಮನಂತೆ ಸುಪಕ್ಷದಿಂದೆ ರಂಜಿಸಿದುದು ಪುಂಜನಗ್ಗದ ಸುಮಸ್ತುವಿನಂತಿರೆ ತಟ್ಟು ಹೇಂಟೆಯೊಳ್ (ಯಶೋಧ. ೩-೭೮); ತನ್ನ ಹೂಮರಿಗಳೊಡನೆ ನೆಲವನ್ನು ಕೆದರಿ ಗಲೀಜು ಮಾಡುತ್ತಿರುವ ಹೇಂಟಿ (ಕಾನೂರು. ೩೬). **ಹೇಟಿ :** ೨. ಪೇಳಲಿನ್ನೇಸಿ ಸಿದ್ಧರಾಮ ಹೇಟಿಯ ಮರುಳ ಕೋಳಿಗಳ ಮೇಲೆ ತನ್ನಯ ಹೇಟಿಯುಂ ಬಿಟ್ಟು ಕಾಳಗದಿನೆಲ್ಲವಂ ಗೆದ್ದುಕೊಂಡು (ಶಿಬಪು. ೬೩-೨೬). **ಹೇಟೆ :** ೨. ಹೇಟೆಯ ಮಗ್ಗುಲಲ್ಲಿನ ಕೋಳಿಮರಿಗಳಂತೆಯೂ . . . ಹೋದರು (ಕೋಟಿಚೆ. ೯೬).

[ದೇ.॥ ತಮಿ. ಪೆಟ್ಟೈ, ಪೆಟ್ಟೈ$_ು$, ಪೇಟು, ಪೇಟ್ಟೈ; ಮಲ. ಪೆಟ್ಟ, ಪೆಡ, ಪೇಡ, ಪಿಡ; ತುಳು. ಪೆರಡೆ; ತೆಲು. ಕೋಲಾ. ಪೆಟ್ಟ]

**ಪೆಂಟೆ$_3$** 'ಪೆಂಟಿ$_2$' ನೋ.

**ಪೆಂಟೆ$_4$** 'ಪೆಟ್ಟೆ$_3$' ನೋ.

**ಪೆಂಟೆಗಟ್ಟು** (ಕ್ರಿ). ಮುದ್ದೆಯಾಗು; ಉಂಡೆಯಾಗು: (?). [ಪೆಂಟೆ$_1$ + ಕಟ್ಟು$_1$]

**ಪೆಂಟಿಬೆಲ್ಲ** (ನಾ). ಮುದ್ದೆಯಾಗಿರುವ ಬೆಲ್ಲ; ಉಂಡೆಬೆಲ್ಲ: ಒಂದು ದೊಡ್ಡ ಕೊಪ್ಪರಿಗೆಯಲ್ಲಿ ಕಬ್ಬಿನ ಹಾಲನ್ನು . . . ಚೆನ್ನಾಗಿ ಕುದಿಸಿ ಪೆಂಟಿಬೆಲ್ಲವನ್ನು ಮಾಡುತ್ತಿದ್ದರು (ಕಶಕೃ. ೩-೬೨). [ಪೆಂಟಿ₁ + ಬೆಲ್ಲ]

**ಪೆಂಡ, ಹೆಂಡ** (ನಾ). ಈಚಲು, ತೆಂಗು, ಬಗನಿ, ತಾಳೆ ಮೊದಲಾದ ಮರಗಳಿಂದ ಇಳಿಸಿ ತೆಗೆದ ರಸ; ಮದ್ಯ: "ಮದ್ಯಂ=ಪೆಂಡು" (ಶಾಚಿಕ್ಯ. ೦೯೦); ಕಂಡವರೆಲ್ಲರು ಉಗುಳಿ ಓಕರಿಪಂತೆ ಪೆಂಡದ ಗಡಿಗೆ ಮುಂದಿಟ್ಟು (ಬಿಕ್ಕಾರಾ. ೮-೬೩). **ಪೆಂಡ**: ಬೆಳದಿಂಗಳಲ್ಲಿ ನಿಂದು ಹೆಂಡವ ಕೊಂಬವಂಗೆ ಲಿಂಗದ ಸಂದನೇನ ಬಲ್ಲ (ವೋೀರವಚಾ. ೬೬-೨೬೪); ಲಡ್ಡುಗೆಯಂ ಬೆಸಕಂಗೆ ಪೆಂಡಮಂ ಮಾರಿಗೆ ಬೊಮ್ಮಯಂಗೆ ಚರುವಂ ಪದೆದೆತ್ತುವೆಂ (ಸೂಕ್ತಿಸು. ೮-೯೯); ಹೇರೂರ ನಾಗಣ್ಣ ಹೆಂಡದಾ ಮಾರಯ್ಯನು (ಗ.ರುಚಾ. ೯-೬೩).

ಹೆಂಡದ ಬುರುಡೆ=ಹೆಂಡವನ್ನು ತುಂಬಿಡುವ ಒಣ ಸೋರೆಕಾಯಿಯಿಂದ ಮಾಡಿರುವ ಉರುಟುಪಾತ್ರೆ: (*).

[ದೇ.॥ ತುಳು. ಹೆಂಡ; ಗದಬ. ಪೆಂಡೂವ್./ಪ್ರಾ. ಪೇಂಥಾ]

**ಪೆಂಡತಿ** 'ಪೆಂಡಿತಿ' ನೋ.

**ಪೆಂಡತಿವಂತ** (ನಾ). ಪೆಂಡತಿಯುಳ್ಳವನು; ಮದುವೆಯಾಗಿರುವವನು: ಪೆಂಡತಿವಂತನೀತಂ (ಶಬ್ದಾನು. ೮೦೨ ಕ್ರಿಯೋ).

[ಪೆಂಡತಿ (<ಪೆಂಡಿತಿ) + – ವಂತ]

**ಪೆಂಡಯ** 'ಪೆಂಡೆಯ' ನೋ.

**ಪೆಂಡವಾಸ** (ನಾ). ೧. ಅಂತಃಪುರ; ರಾಣಿವಾಸ: "ರಾಣಿವಾಸಕ್ಕೆ ಪೆಂಡವಾಸವದೆನಿಸುಗುಂ" (ಶಬ್ದಮಂ. ೩೬); ಧಾರಿಣಿಮಹಾದೇವಿಯ ಯ್ಯೂರ್ವರರಸಿಯರ್ಕಳುಂ ಪೆಂಡವಾಸದಗ್ಗಳದ ಸೂಳೆಯರ್ಕಳುಂ ಬೆರಸು . . . ಪೊಕ್ಕು (ವಡ್ಡಾರಾ. ೮೦-೯); ಪೆಂಡವಾಸದೊಳ್ ಪೆಂಡಿರೊಯ್ಯನೊಯ್ಯನೆ ನಡೆದರ್ (ಆಪು. ೧೦-೯೦); ಪಲುಂಬಿ ಪಂಬಲಿಸುವ ಪೆಂಡವಾಸದ ತಂಡಮಂ ಕಂಡು (ಅಸಂಪು. ೩-೧೦೨ ವ). ೨. ಅಂತಃಪುರದಲ್ಲಿ ವಾಸಮಾಡುವ ಸ್ತ್ರೀಯರು: "ಪೆಂಡವಾಸಮೆಂದು ಅಂತಃಪುರಸ್ತ್ರೀಯರ್" (ಕಕಶಾ. ೬೭-೩೨೦); ಅಂತು ಪೆಂಡವಾಸಮುಂ ಪುರಪುರಂಧ್ರಿಯರುಂ . . . ಕುಮಾರರುಂ ಬೆರಸು ಧಾರಿಣೀಮಹಾದೇವಿಯುಂ ತಾನುಂ ಗಂಧಸಿಂಧುರಾರೂಢರಾಗಿ (ಧರ್ಮಾಮೃ. ೮೩-೦೬); ಪಣ್ಯವೀಧಿಯೊಳ್ ನಡೆಮುದು ಪೆಂಡವಾಸಮುತನಾಧ್ವಜಿನೀರಥಯೂಥಮಂಬಿನಿಂ (ಶರ್ಮಪು. ೫-೩೯). ೩. ಸೂಳೆ; ವೇಶ್ಯೆ: 'ಪೆಂಡವಾಸಗೇರಿ' ಪರಾ. [<ಪೆಣ್ + ವಾಸ]

**ಪೆಂಡವಾಸಗೇರಿ** (ನಾ). ವೇಶ್ಯೆಯರು ವಾಸಿಸುವ ಬೀದಿ; ಸೂಳೆಗೇರಿ; ವೇಶ್ಯಾವಾಟ: ಆ ಪೆಂಡವಾಸಗೇರಿಯೊಳಗೆ ಸೌಭಾಗ್ಯದ ಭೋಗದ ಬಾಗದ ರೂವುಗಳ್ ಮಾನಸರೂಪಾದಂತೆ (ಶಂಕಶಾ. ೯-೬೩ ವ); ಪೆಂಡವಾಸಗೇರಿಯೊಳಗನೆ ಬರೆವರೆ (ಶಾಂತಿಪು. ೮-೬೫ ವ). [ಪೆಂಡವಾಸ + ಕೇರಿ]

**ಪೆಂಡಾರ** (ನಾ). ೧. ಕಾಲಿಗೆ ಧರಿಸುವ ಒಂದು ಬಗೆಯ ಆಭರಣ; ಅಂದುಗೆ: ಉರಗೆಜ್ಜೆ ದಂಡೆ ಪೆಂಡಾರ ಬಾಸಿಗವನಾವರದಿ ರುದ್ರಾಕ್ಷಿಯೊಳಲಂಕರಿಸಿ ಭಸಿತದಿಂ ಹೊರೆದ ಹೊಸ ಹೋರಿಯೆತ್ತುಗಳನೊತ್ತಂಬದಿಂ ದೂಡಿದಂ ಗಾಡಿವಡೆದು (ಸಿದ್ಧರಾ. ೬-೨೯). ೨. ಶ್ರೇಷ್ಠನಾದ ವೀರನಿಗೆ ಶೌರ್ಯಸೂಚಕವಾಗಿ ಒಡೆಯನು ಕೊಡುವ ಬಿರುದು ಮತ್ತು ಅದನ್ನು ಸೂಚಿಸುವ ಆಭರಣ: ಎಡಗಾಲೊಳ್ ಪೊಸತಪ್ಪ ಪೊಂಬೆಸದ ಪೆಂಡಾರಂ ಭುಜದ್ವಂದ್ವದೊಳ್ ಕುಡುಮಿಂಚಂ ಕೊನರಿಪ್ಪ ವಜ್ರವಳಯಂ (ಪುಷ್ಪದಂ. ೬-೪೦). 'ಗಂಡಪೆಂಡಾರ' ಪರಾ. ೩. (ಆಲಂ) ಶ್ರೇಷ್ಠನಾದವನು; ಹಿರಿಮೆಯುಳ್ಳವನು: ಗಂಭೀರಾಭೀರವ್ರಚಂಡಪೆಂಡಾರ ವೀರಲಕ್ಷ್ಮೀದೇವ . . . ಪ್ರತಿಜ್ಞಾಪರಶುರಾಮ ಇತ್ಯಾದಿ ನಾಮಾವಳೀವಿರಾಜಮಾನ ಶ್ರೀಮತು ಪ್ರೌಢಪ್ರತಾಪ ಚಕ್ರವರ್ತಿ (ಕಾ. ೪, ೩೨-೦೨; 1230); ಗಂಭೀರಾಭೀರಪ್ರಚಂಡಪೆಂಡಾರ ನಿಖಿಲಕುಲಕಾಂತಾರವಂಸಾವಳಿದಹನ (ಕ್ಕಅಂ. ೦೯೬೯, ೬೯-೦೪; 1276).

[ದೇ.॥ ತೆಲು. ಪೆಂಡಾರ, ಪೆಂಡರ, ಪೆಂಡೆರ, ಪೆಂಡೇರ]

**ಪೆಂಡಾರಿ** 'ಪಿಂಡಾರಿ' ನೋ.

**ಪೆಂಡಾರೆ** (ನಾ). (ಕಣ್ಣಿನ ಬೇನೆಗೆ ಮದ್ದಿನಂತೆ ಉಪಯೋಗಿಸುವ) ಒಂದು ಬಗೆಯ ಓಷಧೀಸಸ್ಯ: (*). [< ಸಂ. ಪುಂಡರ್ಯ]

**ಪೆಂಡಾರೆಗಡ್ಡೆ** (ನಾ). ಪೆಂಡಾರೆಗಿಡದ ಗಡ್ಡೆ; ಬಿಳಿನೈದಿಲೆಗಡ್ಡೆ: "ಪ್ರಪೌಂಡರೀಕಂ, ಪೌಂಡರ್ಯಂ—೨ ಪುಂಡರೀಕವೆಂಬುವ ಗ್ರಂಥದ್ರವ್ಯದ ಹೆಸರುಗಳು. ಪೆಂಡಾರೆಗಡ್ಡೆ, ಪಾಂಡವರ ಮದ್ದು, ಇದು ಬಿಳೀನೈದಿಲೆಗಡ್ಡೆ" (ಸಿದ್ಧಾಂತಿ. ೦೯೦). [ಪೆಂಡಾರೆ + ಗಡ್ಡೆ]

**ಪೆಂಡಾವಾಸ** (ನಾ). = ಪೆಂಡವಾಸ ೨: "ಪೆಂಡಾವಾಸಮುಮೆನಲ್ಕೆಯಂತಃಪುರದೊಳ್ ಗುಂಡುಗೊಂಡಿರ್ಪ ಸತಿಯರ್" (ಕಶಕಂ. ೦೯೩).

[P ಇಲ್ಲಿ 'ಪೆಂಡವಾಸ' ಎಂಬ ಶಬ್ದವನ್ನು ಛಂದಸ್ಸಿಗಾಗಿ 'ಪೆಂಡಾವಾಸ' ಎಂದು ಮಾಡಿಕೊಂಡಿದೆ]

**ಪೆಂಡಾಳ** (ನಾ). ದರೋಡೆ ಮಾಡುವವನು; ಕಳ್ಳ: ಜಾರಚೋರಶಿಖಾಮಣಿಯಾದ ಕೃಷ್ಣನುಂ ಪೆಂಡಾಳರುತೆ ಕುದುರೆಯನ್ನೇರಿ (ಅಕಾರ. ೨೬-೨೬ ವ). 'ಪೇಡಾರಿ' ಪರಾ. [< ಪಿಂಡಾರಿ]

**ಪೆಂಡಿ₁** 'ಪೆಂಟಿ₁' ನೋ.

**ಪೆಂಡಿ₂** 'ಪೆಂಟಿ₂' ನೋ.

**ಪೆಂಡಿ₃** (ನಾ). ಕುಲ; ಮನೆತನ: 'ಅರಸುಪೆಂಡಿ', 'ರಾಜಪೆಂಡಿ' ಪರಾ. 'ಪೀಡಿ' ಹೋ. [← ಹಿಂ. ಪೀಢೀ]

**ಪೆಂಡಿಕ್ಕಿಯು** (ನಾ). ಒಂದು ಸ್ಥಳದ ಹೆಸರು (?): ಅಂಗಾರಸಿಂಗ ಪೆಣ್ಡಿಕ್ಕಿಯುಮಂ ಕಾಳಾ ಉದುಗುಟಿಯನುಟ್ಟಿಕೊಳ್ವ (ಎಕ. VIII, ಸೊರಬ. ೨೨-೩; ಸು. 800). [?]

**ಪೆಂಡಿತಿ, ಪೆಂಡತಿ, ಹೆಂಡತಿ, ಹೆಂಡತ್ತಿ, ಹೆಂಡಿತಿ** (ನಾ). ೧. ಮಡದಿ; ಪತ್ನಿ: ಆತನ ಪೆಂಡಿತಿ ಪೃಥುಶ್ರೀಯೆಂಬಳ್ (ಶಾಂತಿಪು. ೯-೬೬ ವ); ಪೆಂಡಿತಿಯ ಮಂಗಳಸೂತ್ರವದು ಮೊದಲು ಇಂದು ನಾಳೆನ್ನದೆ ದಿನಂಪ್ರತಿಯಿಂದೆ ಧನವಂ ಸಲಿಸಲು (ಬಸಪು. ೨೭-೯); ಕನಕಂ ನೀರೆಕ್ಕರಂ ಪೆಂಡಿತಿ ಕನಸು (ರತ್ನಾಕ. ೩೦). **ಪೆಂಡತಿ**: ೧. ಬಾಪ್ಪಕೂಟಂ ತನ್ನ ಪೆಂಡತಿ ಜಯಘಂಟೆಯೆಂಬೊಳನಿಂತೆಂದು ಕಲ್ಪಿಸಿದಂ (ವಡ್ಡಾರಾ. ೬೬-೫); ಕಟ್ಟಿಲ್ಲದಡುಗೆಯುಂ ನಚ್ಚಿಲ್ಲದ ಪೆಂಡತಿಯುಂ . . . ಒಪ್ಪಲಾರ್ಕುಮೆ (ಧರ್ಮಾಮೃ. ೦-೬೩). ೨. ಹೆಣ್ಣು; ಸ್ತ್ರೀ: ಆರಾತಿಗಳ್ಗಳ್ಕಿಂ ತನ್ನ ಕುಲಮುಂ ಛಲಮುಂ ದೊರೆಯುಂ ಕಿಡೆ ಬಾಳ್ವಂ ಗಂಡರೂಪಿನೊಳ್ ಗಂಡನಲ್ತು ಪೆಂಡತಿಯೆ ವಲಂ (ಆದಿಪು. ೦೨-೯೬). **ಹೆಂಡತಿ**: ೧. ರಾಮಧೇವನು ಹೆಜ್ಜಜನಿಲಿಗು ರಾಜಮಲ್ಲನ ಹೆಂಡತಿ ಭಣ್ಣರವನು ಬಲ್ಲಾಳತಿನ್ದೊಳ್ಪಿಸಿದಲ್ಲಿಗೆ ಮೆಚ್ಚುಗೊಟ್ಟ ಭೂಮಿ (ಎಕ. VII, ಶಿಕಾ. ೩೨-೦೨; 857? ಕೃಶಾ); ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ . . . ಇದ್ದರೇನೊ ಶಿವಶಿವಾ ಹೋದರೇನೊ (ಬಸವ. ೦೦೯); ಹೆಂಡತಿ ಪ್ರಾಣ ಹಿಂಡುತಿ ದೊಡ್ಡ ಕೊಂಡಕೋತಿಯಂತೆ ಕುಣಿಕುಣಿಸುತ್ತ (ಪುರಂದ. ೯-೦೫ ಪಲ್ಲವಿ); ನನ್ನ ಹೆಂಡತಿ ಪ್ರಶ್ನೆ ಕೇಳುವುದರಲ್ಲಿ ನಿಸ್ಸೀಮಳು (ಮಹಾತ್ಮಾ. ೦೦). **ಹೆಂಡತ್ತಿ**: ೧. ಆತನ ಹೆಂಡತ್ತಿ ಸೋಮವೆ (ಎಕ. VII, ಹನ್ನಗ. ೩೨-೨೩೭; ಸು. 1050?). **ಹೆಂಡಿತಿ**: ೧. "ದಾರಾಃ, ಕ್ಷೇತ್ರಂ . . . ಗೃಹಿಣೀ, ಗೃಹಾಃ—ಈ ೧೩ ಹೆಂಡಿತಿ" (ಹಲಾಯು. ೮೦-೬೦೦); ಮಾಟಕುಟಿಲಗಳಿಂದ ನನ್ನನ್ನು ನೀನು ಹೆಂಡಿತಿಯನ್ನಾಗಿ ಮಾಡಿಕೊಂಡೆ (ಅರ್ಯಕ. ೬೯). [< ಪೆಣ್ + – ಇತಿ₁ (< – ಇತ್ತಿ)]

**ಪೆಂಡಿಲ್ಲಿಂತೆ** (ನಾ). ಒಂದು ಸ್ಥಳದ ಹೆಸರು: ಮುಡಣದೆಸೆ ಪೆಣ್ಡಿಲ್ಲಿನ್ತೆ

ಪುಲ್ಲೇಡು ಉದಿಚೇಡು ಚೀರಳಚಿನ್ನೆ (ಎಕ. XII, ತಿಪ. ೩೯-೩೩; 878).

[ ? ]

**ಪೆಂಡೆ$_1$** 'ಪೆಂಡೆಯ' ನೋ.

**ಪೆಂಡೆ$_2$** (ನಾ). ಹೆಣ್ಣು : ಸಮಶೀಲರೊಳು ಪೆಂಡೆ ದೊರಕಲು ನಾಡೆ ಸಮನಿಲ್ಲದ ಸುಖವಹುದು ಸಮನಾನಿಲ್ಲದರೊಳು ನಂಟು ದುಃಖಿಗಳ ನವುಗಿರಿ ಸುವುದು ಚಿತ್ತದೊಳು (ತರಳಾ. ೦೯-೩೦). [ < ಪೆಣ್ ]

**ಪೆಂಡೆ$_3$** 'ಪೆಂಟೈ' ನೋ.

**ಪೆಂಡೆಯ**, ಪೆಂಡಯ್ಯ, ಪೆಂಡೆ$_1$, ಪೆಂಟೆಯ್ಯ$_1$ (ನಾ). ೧. ಕಾಲಿಗೆ ತೊಡುವ ಒಂದು ಬಗೆಯ ಆಭರಣ ; ಗೆಜ್ಜೆಗಳಿಂದ ಕೂಡಿರುವ ಕಾಲುಬಳೆ,—ಅಂದುಗೆ : "ಪೆಂಡೆಯಂ ಪಾಯುವಟ್ಟಂ" (ಪಂಗರಾ. ೦೦೦-೩೦) ; ಬಾಲೆ ಮಾಣಿಕವನುಡು ಸಾದ ಕಿವಿಯಲಿ ಕೂಡು ಕಾಲ ಪೆಂಡೆ ಯವ ಮುಡಿ (ಶಕಾ. ೯-೯೯) ; ಪೆಂಡೆಯಮುರಳಿಲೆಯೆಬಲ್ಲ ಕಿಱುವುಲಿ ಯಂಗುರ್ಗಳ್ . . . ಆತ್ಮಜಂಗೆ ರಂಜಿಸುತಿರ್ಕುಂ (ದಶಕು. ೨-೩೩). ೨.=ಪೆಂಡಾರ ೨: ಮುತ್ತಿನ ಪೆಂಡೆಯಂ ಮುರಹರಂ ಕನಕಾದ್ರಿಯೊಳಂದು ಶೇಷನಂ ಸುತ್ತಿದ ಭಂಗಿಯಿಂದಮೆಸೆದಿರ್ಪುದು (ಎಕ. V, ಬೇಲೂರು. ೦೦೨-೩೩; ಸು. 1220 ?) ; ಕಾಲ ಕಡೆಹದ ಪೆಂಡೆಯಂಗಳ . . . ಸರಪಳಿ ಜಾಳ ದಾಭರಣಂಗಳ ಧರಿಸಿ (ಬಸವ. ೬೦-೨೭) ; ಪೆಂಡೆಯದ ವಾಮಾಂಘ್ರಿ ಮೆಟ್ಟಿ ದಿರೆ (ಕೌಶಿಕ. ೪೦-೩). ೩. ಒಂದು ಬಗೆಯ ಆಯುಧ ಮತ್ತು ಅದನ್ನು ಹಿಡಿದು ಮಾಡುವ ಸಾಧನೆ ( ? ) : ಜಟ್ಟಿಸಾಧಕ ಬಲ್ಲು ವಿದ್ದೆ ಕತ್ತಿ ಕಠಾರಿ ಪೆಂಡೆಯ ನೆಟ್ಟಿ ತಿರುಗುಚಕ್ರ ಗಂಡುಕೊಡಲಿ ಮೊದಲಾದ ಸಾಧಕಗಳನು ಕಲಿತು (ಚಕಾ. ೬). ' ಪಟ್ಟೆಯ್ಯ$_1$ ' ಹೋ. **ಪೆಂಡಯ** : ೧. ಮುತ್ತಿನ ದಂಡೆ ಮುತ್ತಿನ ಲಸತ್ತಿಲಕಂ ಸುರಿಮುತ್ತಿನೋಲೆಯೊಳ್ ಮುತ್ತಿನ ಪೆಂಡ[ಪಾಠಾಂ. ಡೆ]ಯಂ . . . ಒಲ್ಲಿಯೆಂಬ ಸದಲಂಕರಣಂ ಗಳನೆಯ್ದೆ ತೊಟ್ಟು (ಪಾರ್ಶ್ವ. ೬-೦೦೭). **ಪೆಂಡೆ$_1$** : ೧. ವಿರೂಪ ಮುತ್ತಿನ ಪೆಂಡೆ ಚರಣದಿ . . . ಧರಿಸಿ (ಜಿನಪ. ೦೯-೯೯) . . ೨. ಬರಿದೀನ ಕಾಲ ಪೆಂಡೆಯು (ಸೌಂದರ. ೫-೬೪). **ಪೆಂಟೆಯ್ಯ$_1$** : ೧. ನೇವಳದ ಪೆಂಟೆಯುವ (ಕೇವಹ. ೬೫-೨೨) ; ಹರಳೋಲಿ ಟಟ್ಟಾಣಿ ಮುತ್ತಿನ ಪೆಂಟೆಯ ಮಿಱುಗುವ ಚಿನ್ನಸರಗಳು ತುಱುಗಿದ ದಿವ್ಯಕಾಂತಿಯ ಮೂಕುತಿಯಿಂದ ಸರಸಿಜಗಂಧಿ ಯೊಪ್ಪಿದಳು (ಕಂಕಪ. ೯-೬೫).

[ದೇ. ॥ ತವಿ. ಪೆಣ್ಡ್ಯ್ಯಯ, ಪೆಣ್ಡ್ಯಯ ; ತೆಲು. ಪೆಂಡಿಯ, ಪೆಂಡೆ]

**ಪೆಂಪಾನ್** (ಕ್ರಿ). ಚೆಲುವನ್ನು ಹೊಂದು ; ಶೋಭಿಸು : ವಕ್ತ್ರದ ಪೆಂಪಾಂತ ಕೋಱದಾಡೆಗಳು ನುಂಪಿನ ಬೆಳ್ಪಾಂತ ಮೈಸಿರಿ ರೌದ್ರದ ಜೊಂಪಿನ ಸಿಂಗವೆಸೆದುದು (ಶರಕ. ೬-೯೭). [ಪೆಂಪು+ಆನ್$_1$]

**ಪೆಂಪಿಡಿ** (ಕ್ರಿ). ಹಿರಿಮೆಯಿಂದ ಕೂಡಿರು; ಘನತೆಯನ್ನು ಹೊಂದಿರು : ಪೆಂಪಿಡಿದೊಪ್ಪಿಪ್ಪಿನಮೂರ್ಜಿತೋಜ್ವಳಯಶಶ್ರೀಸಂಪನ್ನನಾಗಿಪ್ಪ (ಎಕ. XVI, ಶಕ್ಯಿ. ೯೮-೯೮ ; 1160); ನೆಱೆಯ ನವಿರ್ ಪೆಂಪಿಡಿದೆಡದೆಱಪಿಲ್ಲದೆ ನೆರದ ಪ್ರೇಮದಿಂ ಸೂರ್ಕುತುಂ (ಶಶಿ. ೬-೨೨೪). [ಪೆಂಪು+ಇಡು]

**ಪೆಂಪು**, ಪೆಣ್ಪು, ಹೆಂಪು (ನಾ). ೧. ಹಿರಿಮೆ ; ಘನತೆ ; ಶ್ರೇಷ್ಠತೆ : "ಪೆಂಪೆಂದೆಸಲ್ಗಾರವಂ" (ಕರ್ಣಾಟ. ೬೨) ; ಸುನ್ದರಪೆಮ್ಪುದುಗ್ರತಪ (ಎಕ. II, ೬೯-೦ ; ಸು. 750) ; ಈಗೆ ಮನದ ಪೆಂಪುಮಂ ಕೈವಿಗೆ ವಿಭವದ ಪೆಂಪುಮಂ ವಿಶೇಷಿಸಿ ಪೇೞಲ್ ಒಗೆವುದುದಾತ್ತಾಲಂಕಾರಗುಣೋದಯಂ (ಕವಿರಾ. ೩-೦೭೩) ; ಕುಡಮೆಟ್ಟನ ಕುಡುವನ ಕುಡೆ ಪಡೆವನ ಪೆಂಪೇಂ ನೆಗಟ್ಟೆವಡೆಗುಮೊ (ಪಂಪಭಾ. ೬-೯೯). ೨. ಕೀರ್ತಿ ; ಯಶಸ್ಸು ; ಖ್ಯಾತಿ : ಪಡೆದಂ ಬ್ರಹ್ಮಂ ಜಗಮಂ ಪಡೆಯಲ್ ತಾನಾರ್ತನಿಲ್ಲ ಪೆಂಪಂ ನಿಮ್ಮಂ ಪಡೆದಲ್ತೆ ಪಡೆವನೆನಿಸಿದ ಕಡುಪೆಂಪಿನ ಪೊಱೆಗೆ ನೀವು ಮೊದಲಿಗರಾದಿರ್ (ಪಂಪಭಾ. ೬-೦೨); ಪೆಂಪಿನುಚ್ಚಂಗಿಯ ಕೋಟೆಯಂ . . . ಕೊಣ್ಡು ನೆಗಟ್ದಿ (ಎಕ. II, ೫೯-೯೨; 974); ತನಗೆ ವಲ್ಲಭೆ ಲಕ್ಷ್ಮಿಯೆನಿಪ್ಪ ಪೆಂಪು (ದಶಕು. ೦-೦೯). ೩. ಅಧಿಕ್ಯ ; ಹೆಚ್ಚಳ; ಅತಿಶಯ : " ಉಬ್ಬರಂ . . . ಪೆಂಪು . . . ಪೆರ್ಚುಗೆ —ಈ ೧೯ ಅತಿಶಯಂ " (ಶಕಾ. ೩೬-೨೩೪); ಕಂಪಿನ ಪೆಂಪು ಪೊಂಪುೞಿಯೆನಲ್ ಅತಿಶಯಂ (ಶಾಂತಿಪು. ೫-೩೩); ಆ ಕುಮಾರರ್ಗೆ ಪೆಂಪಿಂದ ಮದುವೆಯಂ ಮಾಡಿದಂ (ಧರ್ಮಾಮೃ. ೫-೩೦); ಧನದ ಪೆಂಪನು ಪೊಗಳಲೇಂ (ಶಾಬ್ದಶಾ. ೦೭-೭). ೪. ಶೋಭೆ; ಸೊಗಸು; ಚೆಲುವು; ಮೃಡಗಣಾವಳಿಸಹಿತ ಪೆಂಪಂ ಪಡೆದು (ಬಸವ. ೩೨-೬೪); ಪೆಂಪೊಗುವ ತಾವರೆಗೊಳಂಗಳ . . . ಸೊಂಪು ಸೆಳೆವುದು ಮನವನು (ಲಂಕಾ. ೪-೩೬): ಪೆಂಪಿಂದೆ ಪುರವನಿತೆ ಗಹಗಹಿಸಿ ನಗುವಂತೆಸೆವ ಸೌಧಂಗಳ ಮರೀಚಿ ನೋಡೆಂದನು (ಕೈವಲ್ಯ. ೩ ೦೫); ತಂಗದಿರ ಬೆಂಗದಿರನುದಯಾಸ್ತಂಗಳ ಪೆಂಪು (ಶತ್ರುಂಗ. ೨೯-೮೦೭). ೫. ಎತ್ತರ ; ಔನ್ನತ್ಯ : ತೊಂಭತ್ತೊಂಬೈಸಾಸಿರ ಯೋಜನವಂ ನೆಗೆದೀ ಸುರಗಿರಿ ಪೆಂಪನೇಂ ಪುದುಂಗೊಳಿಸಿದುದೋ (ಅಜಿತ. ೬-೬೪); ತುತ್ತತುದಿ ರುತು ವಿಮಾನಮನೊತ್ತಿರ್ದುದು ನಗದ ಪೆಂಪನದನೇವೊಗಟ್ದಿಂ (ಅಜಿತ. ೦೦-೬); ಗೋಪಾಮುಖವಿಲಸನದಿಂ ತಾನೆ ಮೇಲಾದ ಪೆಂಪಿಂ ಮುಗಿಲಂ ಮುಟ್ಟಿರ್ದುದೆಂಬಂತಿರೆ ಕರವೆಸೆಗುಂ ವಿಶ್ರುತೋತ್ತುಂಗವಪ್ರಂ (ಸುಕುಮಾ. ೦೦-೫೨). ೬. ಏಳಿಗೆ ; ಅಭಿವೃದ್ಧಿ : ' ಪೆಂಪೇಱಿಸು ' ಪರಾ. ೭. ಹೆಮ್ಮೆ ; ಜಂಭ : ಅವರ ಪೆಂಪುಗಳನುರ್ಕೆಪದೆ ತನ್ನ ಒರ್ವಗಲ ಪುಟುಗಳ್ಗೆ ಬಯಲ್ ಗೈದವನ್ (ಅಧ್ಯಕ್ಷ. ೫೦-೦೦೯೬). **ಪೆಣ್ಪು** : ೧. ಅವುರಶ್ಮಳದ ಪೆಣ್ಪಂ ತಳೆದಯ್ದಿಂಬರೇಂ ಕೇವಳವೋ (ಶಾಸನ. XI—ii, ೦೪೪-೦೨; 1098) ; ಪೆಣ್ಪಿನ ಕಣಿಯೆಂದು . . . ಪೊಗಳುತಿರ್ಪುದು (ಶಾಸನ. IX—i, ೨೬೩-೨೨; 1183). **ಹೆಂಪು** : ೧. ವೇದದಲಿ ಹಿರಿದು ಹೆಸರಾದ ಹೆಂಪುಳ್ಳ ಶಿವನಾದಿನಾಮವು ನೋಡು ಪಂಚಾಕ್ಷರಿ (ಶಿಪಂ. ೦೪-೫೦); ಹೆಂಪಿನ ಹೆಚ್ಚಿನ ನಿಧಿಯೊಪ್ಪಿರ್ದಂ (ತಿರುವ. ಹ. ೦೨೬-೬); ದೇವ ನಾವ ಭಯವನು ಬೇಡಲು ನೀವೊಲಿದು ಕೊಡದಿಹುದು ಹೆಂಪೇ (ಬಸವ. ೪೬-೪೭). ೩. ವೀರಭಕ್ತಿಯ ಹೆಂಪು ಧೀರೋದಾತ್ತತೆಯ ಸೊಂಪು (ಬಸವ. ೩೬-೨೯); ಆ ದೇವಮುನಿ ಪೊಗಳುತ್ತಲಿರ್ದನು ಹೊಱವ ಹರುಷದ ಹೆಂಪಿನುಬ್ಬಿನಲಿ (ಕೂರಡ. ೬-೫೦-೦೦). ೪. ಎನ್ನ ಭಕ್ತಿ ಎಲವದ ಕಾಯ ಫಲದಂತೆ ನೋಡಯ್ಯ ಹೊಱಗೆ ಹೆಂಪು ಒಳಗೆ ಬೂರವಯ್ಯ (ಬಸವ. ೨೯೬); ಕುಸುಮದ ಕಳಿಕೆಗಳ ಹೆಂ[ಪಾಠಾಂ. ಹಿಂ]ಪಿನಲಿ . . . ತಂಬೆಲರ ತಂಪಿನಲಿ ಸಲಿಸಿತಾ ಸಹಕಾರ ಸೊಗಸಿನ ಸುಲಭತೆಯನರಸಂಗೆ (ಕೂರಡ. ೩-೬ ೬೨); ಮನಸ್ಸನ್ನು ಮರುಳುಗೊಳಿಸುವ ಬೆಳದಿಂಗಳ ಹೆಂಪೂ . . . ಅನುರಾಗದ ಮೊಳಕೆಯನ್ನು ನಾಟಿದುವು (ಶಾರದೀ. ೦೩). ೫. ಪರಮಾಣು ಮೇರುವಿನ ಹೆಂಪಿಗೆ ಮುಳಿವಂತೆ (ಪಾರದ. ಹ. ೪೪೪-೨೦); ಸುರಗಿರಿಯ ಸೌಭಾಗ್ಯವನು ಹರಗಿರಿಯ ಹೆಂಪನು ಮಂದರಗಿರಿಯ ಸೊಂಪನು (ಶಿತಾಗ. ೬-೨-೦೦). ೬. ಕಿಱುಪಳ್ಳಿಯಾಗಿಯು ಕಣ್ಗೆ ಮೆಱೆದು ಹೆಂಪಿನೊಳಿರ್ಪುದು (ಸಿದ್ಧರಾ. ೦-೫೦) ; ತಳೆದನಿಳೆಯೊಳು ಭಕ್ತಿಬೀಜವುನಳಿದನಾ ಕಬ್ಬಿಲರ ಹೆಂಪಂ (ಬಸವ. ೫೯-೫೪). ೮. ಸಂತೋಷ ; ಹಿಗ್ಗು : ಕಂಪುಳ್ಳ ಸಂಪಗೆಯ ಪೂಗಳಂ ತಿಱಿತಂದು ಹೆಂಪಿನಿಂ ಶಶಿಧರನ ಸಿರಿಮುಡಿಗೆ ಬೇಕೆಂದು . . . ಕೊಡಲು (ಬಸರ. ೦-೨೯); ಶಿವಕವಿಗಳ ಮನದಿಂಪು ಭುವನಜನರ ಹೆಂಪು ಲಿಂಗನ ಕೃತಿ (ಶಬ್ದ. II, ೨೦೫ ಕೋಳಲಾ ಪಾಠಾಂಗತ್ಯ). ೯. ವಿಲಾಸ ; ಬೆಡಗು : ಕಳದ ಹೂವಿನಲ್ಲಿ ಕಂಪನುಳಿದ ಸೂಳೆಯಲ್ಲಿ ಹೆಂಪ ಕೊಳಚೆಯ ನೀರಿನಲ್ಲಿ ಗಂಪನಱಸುವಿರಿ (ಬಸವ. ೫೬೪) ; ಮತ್ತವಳಿವಕ್ರುತೆಯನೀವ ವಹಣೆ ತರಂಗಿಸುವ ತಿರುವು ಸುಳಿಗೊಳ್ಳೆ ಹೆಂಪು (೧೧೪. ೨-೦೦೫ ಪ).

[ < ಪಿರಿದು$_1$ + -ಪು$_2$. / ತೆಲು. ಪೆಂಪು, ಪೆನುಪು ]

**ಪೆಂಪುಂಗಾಟ** ' ಪೆಂಪುಗಾಟ ' ನೋ.

**ಪೆಂಪುಗಾಱ, ಪೆಂಪುಂಗಾಱ** (ನಾ). ಹಿರಿಮೆಯುಳ್ಳವನು ; ಘನತೆಯುಳ್ಳವನು : ಪೆಂಪುಗಾಱಂ, ಪೆಂಪುಂಗಾಱಂ . . . ಬೇಹುಗಾಱಂ (ಶಾಶಾಪು. ೧೮೩ ಕ್ರ.ಯೋ). **ಪೆಂಪುಂಗಾಱ :** ಮೇಲಿನ ಪ್ರಯೋಗವನ್ನು ನೋಡಿ. [ಪೆಂಪು+—ಗಾಱ]

**ಪೆಂಪುಗಿಡು** 'ಪೆಂಪುಗೆಡು' ನೋ.

**ಪೆಂಪುಗೆಡು, ಪೆಂಪುಗಿಡು** (ಕ್ರಿ). ೧. ಹಿರಿಮೆಯು ಹಾಳಾಗು,—ನಾಶವಾಗು: ದಿವಾಕರನಂ ಪೋಲ್ವವರ ಪೆಂಪುಗೆಟ್ಟಿಣ್ಣಲೆಗಳ್ (ಎಪಿ. XX. ...; 1076?); ಬಡತನದೊಡೆಯುದನ್ನಂ ಬಡೆಯದೆ ಮಾಱಿಗೆ ಕರನ್ನೀಮಿಂ ಪೆಂಪುಗೆಟ್ಟು ನಮೆಯುತ್ತಿರ್ದರ್ (ಧರ್ಮಾಮೃ. ...). **ಪೆಂಪುಗಿಡು :** ೨. ಘನತೆಯನ್ನು ಕಳೆದುಕೊಳ್ಳು : ಕಿರಿಟವಿಂದು ಪೆಂಪುಗಿಡ ಪೆಳಂಗೆಱಗುವುದೇ (ಅಂತ. ೧೩-೧೦೦). [ಪೆಂಪು+ಕೆಡು1]

**ಪೆಂಪುಗೊಳ್, ಪೆಂಪುಗೊಳು** (ಕ್ರಿ). ೧. ಅಧಿಕಗೊಳ್ಳು; ಹೆಚ್ಚಾಗು: ಕಡಂಗಿ ಬಾಯ್ದೆರೆಯನೊಲ್ದು ಕರ್ದುಂಕಿ ಕರ್ದುಂಕಿ ಪೀರ್ದು ಪೀರ್ದೊಡ ನಡಸಿರ್ಪ ಬಾಯಱಿಕೆಯುಂ ತವಿಪೆಂ ಸವಿಪೆಂಪುಗೊಂಬಿನಂ (ಶಶಿ. ೬-೨೦೫). **ಪೆಂಪುಗೊಳ್:** ೨. ಘನತೆಯನ್ನು ಪಡೆ; ಹಿರಿಮೆಯನ್ನು ಹೊಂದು: ಬದುವಂ ಈ ಬಾಳ್ ಅದೇಕೆಂಬ ಚರ್ಚೆಯು ; ನಾವು ದುಡಿವಂ ಅದು ಪೆಂಪುಗೊಳೆ (ಮಂಕುತಿ. ೮೦೯). [ಪೆಂಪು + ಕೊಳ್1]

**ಪೆಂಪುಗೊಳು** 'ಪೆಂಪುಗೊಳ್' ನೋ.

**ಪೆಂಪುವಡೆ** (ಕ್ರಿ). ೧. ಹಿರಿಮೆಯನ್ನು ಹೊಂದು; ಘನತೆಯನ್ನು ಪಡೆ: ಚಿತ್ರರಥನೆಂಬನೊರ್ವಂ ಪುತ್ರಂ . . . ಪೆಂಪುವಡೆದು ಜಗತ್ರಯವಿಖ್ಯಾತಕೀರ್ತಿ ಮುನಿಗುದಯಿಸಿದಂ (ಕಾದಂಪೂ. ೭೦೯); ಜಿನದತ್ತಂ ಗುಣವಾರ್ಧಿ ತಪ್ಪಲೞಿಯಂ ಜೀವಾದಿಗಳ್ಗೆಂಬ ಭಾವನೆಯಿಂದಾನಿನಿತೊಂದು ಪೆಂಪುವಡೆದೆಂ (ಧರ್ಮಾಮೃ. ೨-೨೩೩); ಭೂತಳದಲ್ಲಿ ಪೆಂಪುವಡೆದಂ ಭವ್ಯಾದಿ ಭಾಳೇಕ್ಷಣಂ (ಶರಶ. ೦೩-೦೦೩). ೨. ಖ್ಯಾತಿಯನ್ನು ಪಡೆ; ಯಶಸ್ಸಿನಿಂದ ಕೂಡಿರು : ಪೆಂಪುವಡೆದ ಗೋತ್ರನವಿಭುಗನೆನಿಕೊಳಮಂತ್ರಿ ನರಸಿಂಗನಾಯಕಂ ಶಿವ್ವಶಾಸ್ತ್ರಿದಾಯಕನೆಸೆದಂ (ಕಾವೆ. ...; 1170); ಈ ರೀತಿಯ ಪೆಂಪುವಡೆದ . . . ತಾತಾಚಾರಿಯ ಲಡಿಗೆಱಗುವೆನು (ಸೋಕಶ. ೦-೯); ಪರಮಪುಣ್ಯನಾಮನೆನಿಸುವ ಸಿದ್ಧವೀರೇಶನೆಸೆದನಂದವನಿಯೊಳು ಪೆಂಪುವಡೆದು (...). ೩. ವೈಭವದಿಂದ ಕೂಡಿರು : ಜಗಕ್ಕೆ ಶಿಕಿಖೋದ್ಭವಹವಮಾಗೆ ಪೆಂಪುವಡೆದತ್ತಂತಾತ್ಮಜನ್ಮೋತ್ಸವಂ (...); ಭೂಹರಗೆ ಕರಸರಸಿಜವನಾ ಪರವೆ ಮುಗಿದು ನಿಲಲುದು ಮೇಳಂ ಪೆಂಪುವಡೆದಿರ್ದುದು (...). ೪. ಚೆಲುವಾಗಿರು; ಶೋಭಿಸು: ಸೂಳೆಗೇರಿಯುಂಗಡಿಯು ವಗುಂತಿ ಪೆಂಪುವಡೆದಾ ಪೊಬಲೊಳ್ ನೆಱೆದೊಪ್ಪಿ ತೋಱುಗುಂ (...). [ಪೆಂಪು+ಪಡೆ1]

**ಪೆಂಪುವೆಱು** (ಕ್ರಿ). ೧. ಹಿರಿಮೆಯನ್ನು ಹೊಂದು ; ಶ್ರೇಷ್ಠತೆಯನ್ನು ಪಡೆ : ಇದು ಮಳಯಾಚಳಂ ಮಳಯಜಂ ಮಳಯಾನಿಳನೆಂದು ಪೆಂಪುವೆತ್ತುದು (...); ಪೆಂಪುವೆತ್ತ ಮಹಿಮೋನ್ನತಿ ಮೇರುಗೆ ಮಂಡಪಂ ದಲಾಗೆಸೆವುದು (ಎಪಿ. VII, ...; 1122); ವರಸೌಂದರ್ಯಗಭೀರವಾರಿನಿಧಿಯೋ . . . ತಾನೆನೆ ಪೆಂಪುವೆತ್ತುದವನೀಶೋದ್ಯತ್ಸಭಾಮಂಡಲಂ (...). ೨. ಕೀರ್ತಿಯನ್ನು ಹೊಂದು; ಪ್ರಸಿದ್ಧವಾಗು : ಸಕಳವರ್ಣಶ್ರೇಷ್ಠಮಿಾ ವರ್ಣಮೆಂದೆನೆಸುಂ ಕೈಕೊಳೆ ಪೆಂಪುವೆತ್ತು ನೆನೆಟ್ಟತ್ರಂಭೋಜಜನ್ಮಾನ್ವಯಂ (...; 1058); ತೊಡವಾರ್ಹತಕ್ಕನೆ ಜನಂ ಭೂಭಾಗದೊಳ್ಪೆಂಪುವೆತ್ತುದು ಸೂರಸ್ಥಗಣಂ (ಎಪಿ. XI-I, ...; 1071). ೩. ಅತಿಶಯವಾಗು; ಅಸಾಧಾರಣತೆಯಿಂದ ಕೂಡಿರು : ಪೆಂಪುವೆತ್ತ ತಪಃಪೋತದಿನಣ್ಣ ನೀಂ ತಡಿಯುನೆಯ್ದು (ಅಂತ. ೩-೩೬); ಕಟ್ಟಾಯದ ಪೆಂಪು ಶಕ್ರನೊಡನೇಱಿದ ಪೆಂಪವೆ ಪೆಂಪುವೆತ್ತು ನಿಟ್ಟಾಯುಗಳಾಗಿ ನಿನ್ನೊಳಮರ್ದಿರ್ದುವು (...); ತನ್ನಪ್ಪವರನ ಯಶು ಪೆಂಪುವೆತ್ತೊಪ್ಪಿ ತೋರ್ಕುಂ (...). ೪. ಅಂದವನ್ನು ಪಡೆ; ಶೋಭೆಯನ್ನು ಹೊಂದು : ಪೆಂಪುವೆತ್ತಗಟ್ ಬಿಸರುಹಮುಳ್ಳರಲ್ಲು ಸಿರಿ ಕಣ್ದೆಱೆವಂತಿರೆ (...); ಪೆಂಪುವೆತ್ತಸಕದನಿರ್ದ ಸಂಪಗೆಯು ಪೂವಿನೊಳಾದ ಬೆಡಂಗು ನಾಡೆ ರಂಜಿಸೆ (...). [ಪೆಂಪು + ಪೆಱು1]

**ಪೆಂಪುವೇಟ್** (ಕ್ರಿ). ಹಿರಿಮೆಯನ್ನು ಹೇಳು,—ಸಾರು : ಎರೆದನ ಪೆಂಪುವೇಟ್ಕೊಡನಲಾ ಪೊಣರ್ಮಾತನ ಪೆಂಪುವೇಟ್ಕೊಡಾ ಸುರಪತಿ (...). [ಪೆಂಪು + ಪೇಟ್]

**ಪೆಂಪೇಱಿಸು** (ಕ್ರಿ). ೧. ಏಳಿಗೆಯನ್ನುಂಟುಮಾಡು ; ಅಭಿವೃದ್ಧಿಗೊಳಿಸು : ಕತ್ತತ್ತ್ವಲಧರ್ಮದೊಳ್ ಸ್ವಜನಮಂ ಪೆಂಪೇಱಿಸು (...). ೨. ಹೆಚ್ಚು ಮಾಡು; ವೃದ್ಧಿಪಡಿಸು : ಎನ್ನ ಮುತ್ತಿನ ಮಣಿಯೋ ಬಿನ್ನಣಮಂ ಪೆಂಪೇಱಿಸಿ ತನ್ನೊಱೆಗವಿತ್ತು ಮನ್ನಿಪಂ ನಿನ್ನನಿಯುಂ (...). [ಪೆಂಪೇಱು + — ಇಸು1]

**ಪೆಂಪೇಱು** (ಕ್ರಿ). ೧. ಹೆಚ್ಚು ; ಅಭಿವೃದ್ಧಿಗೊಳ್ಳು: 'ಪೆಂಪೇಱಿಸು' ನೋಡಿ. ೨. ಕಾಂತಿಯನ್ನು ಪಡೆ ; ಸೌಂದರ್ಯವನ್ನು ಹೊಂದು ; ಚೆಲುವಾಗು : ಸಕಳಜಗು ಮೆ[ ಪಾಠಾಂ. ಪೆಂ ]ಪೇಱಿತು ಪದ್ಮಮಿತ್ರನುದಯಿಸುವಾಗಳ್ (...); ಪೆಱತೊಂದು ಪೆಂಪೇಱುವರ್ದಯ ಮಿಱುಪ ಮೆಯ್ಯ . . . ಉಱುತು ನೋಡುವ ನೋಟದ ಕೊಮರಿಯ ಬಗೆಯುಱಿತೆಱದೊಳೆಱಗಿಪುದು (...). [ಪೆಂಪು + ಏಱು1 (< ಏಱ್1)]

**ಪೆಂಬಿದಿರ್** (ನಾ). ಒಂದು ಸ್ಥಳದ ಹೆಸರು: ಗಾವುಣ್ಣಗಳೆ ಸೀಮೆದೋಱಾದ ಕ್ರಮ ತೋಳಂಚೆಯಾದ ಪೆರ್ಗ್ಗಯ್ಯಾಡಿಯು ಸೂಱಳ್ಗದ ಪೆಂಬಿದಿರ ಮೆಪ್ಪ ತೊ× (ಎಪಿ. XII. ...; 904). [?]

**ಪೆಂಬುಯ್ಯಲ್** 'ಪೆಣ್ಬುಯ್ಯಲ್' ನೋ.

**ಪೆಕರ** 'ಪೆಕ್ರ' ನೋ.

**ಪೆಕ್ಕ** (ನಾ). ಆಧಿಕ್ಯ; ಹೆಚ್ಚಳ : ಸುಡುವಡಗಿಂ ಕರಂ ಪೊಗೆವ ಪರ್ಬುವ ಕರ್ಬೊಗೆಗೆ ಪೆಕ್ಕಮಪ್ಪ ಪೆರ್ಬಡಿಕೆಯು ನಾತಂ (...). 'ಪೆಕ್ಕಳ1' ಪರಾ. [ದೇ. ತೆಲು. ಪೆಕ್ಕು, ಪೆಕ್ಕುವ]

**ಪೆಕ್ಕಣ1, ಪೆಕ್ಖಣ, ಪೆರ್ಕಣ** (ನಾ). ೧. (ನಾಟಕದಂಥ) ನೋಟ; ಕಾಣ್ಕೆ; ದೃಶ್ಯ: "ಪೆಕ್ಕಣಮೊಂದು ಪ್ರೇಕ್ಷಣಾ" (...); ಕೂಗುವ ಬೇಡರ ತಂಡಮಾರ್ವ ಜಾಯಿಲಗಳಗಳುರ್ವಿನಿಂದೆಸೆಯೆ ಪೆಕ್ಕಣದಿಂದೆಸೆದತ್ತು ಪಕ್ಕಣಂ (...). ೨. ನೃತ್ಯ ; ಕುಣಿತ : ಕಳ್ಳರೊಡಲ್ಗಳೊಟ್ಟು ರಜನೀಚರಿಯರ್ಕಳ ಮಿಕ್ಕ ಪೆಕ್ಕಣಂ (...); ಹೃದ್ಯ ವಾದ್ಯ ಲಯದೊಡೆಯಿನೊಂದೆ ಲಯಕ್ಕೆ ಲಕ್ಕೆಯುಂ ಮೆಟ್ಟುವ ಪೆಕ್ಕಣಂ . . . ಲೀಲೆಯುಂ ಪುಟ್ಟಿಸೆ (...); ಗಂಧರ್ವಾಮರರ್ ಪಾಡೆ ಪೆಕ್ಕಣವಮಂ ದೇವಿಯರಾಡೆ . . . ಕಣ್ಗೆಂ ಬೆಡಂಗಾದುದೋ (...); ಬಿರುದರ ಕೂರಲಗಿನೆಸೆವ ನಾದಮೆ ತಾಳ ನರರಟ್ಟೆಯ ಪೆಕ್ಕಣದಿಂ ಕರಮೆಸೆದುದು (ಎಪಿ. VI, ...; 1205). ೩. ಒಂದು ಬಗೆಯ ನೃತ್ಯ; ತಾಂಡವ, ನಾಟ್ಯ, ನೃತ್ತ, ಲಾಸ್ಯ, ಗುಂಡಿಲ, ಪೆಕ್ಕಣ, ಲಚ್ಚಣ, ಅಪರಿಪಾತ್ರ, ಸುಪಾತ್ರ ಮತ್ತು ಸರ್ವತೋಭದ್ರವೆಂಬ ಹತ್ತು ಬಗೆಯ ನೃತ್ಯಪ್ರಭೇದಗಳಲ್ಲಿ ಒಂದು : ತಾಂಡವ ನಾಟ್ಯ ನೃತ್ತ ಲಾಸ್ಯ ಗುಂಡಿಲ ಪೆಕ್ಕಣ ಲಚ್ಚಣ ಅಪರಿಪಾತ್ರ ಸುಪಾತ್ರಸರ್ವತೋಭದ್ರವೆಂಬ ದಶವಿಧ ಪಾತ್ರಂಗಳೇ ತೋಱೆ ರಂಜಿಸುವ ನರ್ತಕಿಯರಿಂ (...); ಪೇರಣಂ ಪೆಕ್ಕಣಂ ಗುಂಡಲಿಂ ಸದಮಲದ ದಂಡಲಂ ಲಾಸ್ಯಮೆಂದೆಂಬಪುಂ ತೋಱುತಿರ್ದಂ ಮಹೇಶಂ (...); ಪೇರಣ ಪೆಕ್ಕಣ ಗುಂಡಲಂಗಳಂ ಬಲ್ಲ

ಸಾತ್ವಿಕ ಆರಭಟಿ ಕೌಶಿಕಿಯೆಂಬ ಪಾತ್ರಂಗಳಿಂ (ದಶಾವ. ೨-೧೦ ವ). ಪೆಕ್ಕಣ: ೪. ಮದ್ದಲೆಯನ್ನು ಬಾರಿಸುವ ಒಂದು ಕ್ರಮ : ಆ ಸಮಯದೊಳ್ ಮದ್ದಳಿಗಂ ಮದ್ದಳೆಯು . . . ಪಣಜಿದು ಪೆಕ್ಕಣ ಪಣ್ಯಿಯೊಳ್ತಕ್ಕ ನೆನಿಸಿ ಲಾಗು ಮೋಡಿ . . . ಪಹರಣೆಗಳೆಂಬ ನಾನಾಶಬ್ದಂಗಳಂ ಬಾರಿಸಿ (ಧರ್ಮೇಶ. ೨-೨೩ ವ). ಪೆರ್ಕಣ : ೧. ಬೆತ್ತಗಣ್ಣಿವಲೆಯಂ ಸಮಕಟ್ಟುವ ಬೆಟ್ಟುಗೊಂಟವುಂ ಬಸಿವ ಪುಳಿಂದಸಂಕುಳದ ಪೆರ್ಕಣದಿಂದೆಸೆದತ್ತು ಪಕ್ಕಣಂ (ಚಂದ್ರಪ್ರ. ೫-೫೪).

[< ಸಂ. ಪ್ರೇಕ್ಷಣ. / ಪ್ರಾ. ಪೇಕ್ಖಣ. / ತುಳು. ಪೆಕ್ಕಣ, ಪ್ರೆಕ್ಕಣ]

**ಪೆಕ್ಕಣ₂, ಪೆಕ್ಕಳ₂** (ನಾ). ಬೇಡರು ವಾಸಿಸುವ ಹಳ್ಳಿ : ಬೇಡರ ಬಿಂದ ಮೊಪ್ಪಿತಾ ಪೆಕ್ಕಣದೊಳು (ಸಮ್ಯಕ್ತ್ವ. ೧೦-೨೬); ಗುಂಜಾಭರಣವಾಂತಾ ಲೀಲೆಯಿಂ ಶಬರಿಯರೆಸೆದರಾ ಪೆಕ್ಕಣದೊಳಂದು (ಶಾಶ್ವತ. ೫-೬); ತನುಜೆಯಹ ಪೊಲತಿಸತಿಯಳ ಕೊಂಡು ಬೇಗ ಪೋಗುತ್ತ ಕೈರಾತದೇಶದೊಳ್ ಒಂದು ಪೆಕ್ಕಣವ ಸಾರಲು (ಕಥಾಸು. ೩-೫-೩೦). ಪೆಕ್ಕಳ₂ : ವ್ಯಾಧರೆಕ್ಕತುಳದಿಂದಿರ್ಪ ಪೆಕ್ಕಳ ವರ್ಣಿಸಲ್ ಮುರ್ಕ್ಕಣ್ಣಗಳವಲ್ಲ (ಚನ್ನಾಂಗ. ೧೦-೨೦). [<ಸಂ. ಪಕ್ಕಣ]

**ಪೆಕ್ಕಣಂಗೆಯ್** (ಕ್ರಿ). ನೃತ್ಯ ಮಾಡು ; ಕುಣಿ : ಪೆಕ್ಕಣಂಗೆಯ್ವ ಸೋಗೆಗಳಿಂದೆ . . . ತಂಬೆಲರಿಂದೆ ಶಾಮ್ಯನೋಹರದ ವನಮಧ್ಯದೊಳ್ ಸರಸಿ ಮೆಱೆದುದು ಕೂಡೆ ಸೊಗಸುವೆರಸಿ (ಕೀರಶು. ೬-೦೮).

[ಪೆಕ್ಕಣ₁ + ಕೆಯ್₁]

**ಪೆಕ್ಕವಿ** (ನಾ). ಒಂದು ಸ್ಥಳದ ಹೆಸರು : ಅರಿಉಷ್ಮಾನ್ನಿರ್ಪ್ಪರು ತೊಱೆ ಕ್ಯಾರಾಟ್ಟಲು ಪೆಕ್ಕವಿಯು ಮುಪಲ್ಪೋಗೆಯು ಕೊಡಲೂರು ಇನಿತ್ತು ಪಾರೂರ್ ನೆರ ಸಾಸನವಾಗ ಉದಿಯ್ಯ ಕೊXX ಲುX (ಎಕ. IV, ಗುಂಡ್ಲುಪೇ. ೯೯-೫ ; ಸು. 750). [?]

**ಪೆಕ್ಕಳ₁, ಪೆರ್ಕಳ, ಹೆಕ್ಕಳ, ಹೆಗ್ಗಳ** (ನಾ). ೧. ಹೆಚ್ಚಳ ; ಅತಿಶಯ : ಚಿಕ್ಕದೇವೇಂದ್ರನಿಗೆ ಸಿರಿಯನೇಱಿಗೆಗೊಳಿಪ ಪೆಕ್ಕಳದೊಳೆಸೆವ ಪೊಸಬಿನ್ನಣಕೆ ಪಂಗಳಂ (ಗೀತಗೋ. ೩೫-೬); ಸೊಕ್ಕುಜವ್ವನದ ಲಲಿತಾಂಗಿಯರುರದ ಮೇಲೆ ಪೆಕ್ಕಳದೊಳಿಟ್ಟ ಚಂದನದ (ಚನ್ನಾಂಗ. ೩-೦೨). ∆ಪೆರ್ಕಳ : ೧. ತರ್ಗಂಗಲಿಸುವರುಂ ಮಿಗೆ ಪೆರ್ಕಳದಿಂ ರಾಯನೆಡೆಗೆ ಪೇಟ್ದರ್ (ಜಗನ್ನಾ. ೪-೯೯); ಕುಳಿಕನಂ ಗುಳಿಗೆಗಟ್ಟುವ ಪೆರ್ಕಳದ ಕಾಲ್‌ವೆಳ್ಗಾಳ ಪಡೆಯ (ರಾಮಾಶ್ವ. ೯೪ ೦೭). ೨. ಹಿಗ್ಗು ; ಸಂತೋಷ : ಇದೆ ಬಂದನೆಂದು ಕೇಳ್ದಿದಿರ್ಗೊಂಡು ಪೆರ್ಕಳದೆ ಪದಕೆಱಗಿ (ಜಗನ್ನಾ. ೬-೦೭೩). ಹೆಕ್ಕಳ : ೧. ಛಿದ್ರನಿಂದುಬ್ಬಸವ ಮಾಡಿದೊಡೆವ್ವ ಕೈಯಲಿ ಹರಿವ ಹೆಕ್ಕಳವೆ (ಕುಮಾರವ್ಯಾಸ. ೧೦-೦೫); ಜನಪತಿಯು ಮಗಳೆಂಬ ಹೆಕ್ಕಳ ಹೆಮ್ಮೆ (ಶ್ರೀಕೃಷ್ಣ. ೫ ೨೫); ಹುಲುನೃಪಾಲನ ಹಗೆತನದ ಹೆಕ್ಕಳವ ಹೇಳುವ ಹಂದೆಗಳ ಬಾಯ್ಗಳನು ಹೊಯ್ (ತೊರವೆ. ೬-೦ ೨೪); ತಾಯಿಗೆ ಮಕ್ಕಳ ಸುಖವೇ ಹೆಕ್ಕಳ (ತಿರುಪಾ. ೩೪). ೨. ವರತನೂಭವೆ ಬಂದಳೆಂಬ ಹೆಕ್ಕಳದಿ ಮಣಿಮಯನಿಳಯದೊಳಗಣಿಂದ ಪರಿದು ಬಂದು (ರಾಜಶೇ. ೧೭-೦); ಆ ವೈಭವವನಾಲಿಸುತಲಾ ಹೆಚ್ಚಿ ಹೆಕ್ಕಳದೊಳಿರೆ (ಕಥಾಸು. ೩-೩-೪). ೩. ಗರ್ವ ; ಜಂಭ : ಅಳಿಬಲರ ಹೆಪಱಿಸಿದ ಹೆಕ್ಕಳವೇಕೆ ಸಾರೆನುತ ತುಳುಕಿದನು ಕೇಗೋಲ ಜಲಧಿಯ (ಕುಮಾರವ್ಯಾಸ. ೬-೧೪); ಅಳಿಗಬ್ಬಿಗನ ಹೆಕ್ಕಳದ ಕೃತಿಯವೊಲು (ತೊರವೆ. ೩-೧೦-೮). ೪. ಠೀವಿ; ಗಾಂಭೀರ್ಯ: ಘುಳುಘುಳಿಸಿ ಪರಿತಂದು ಉಂಗುಟದಿಂ ಭಾಳಾಗ್ರಂಬರಂ ಪೋಳ್ದಿತ್ತಿ ತನಗಿದಿರಂ ಕಾಣದೆ ಹೆಕ್ಕಳದಿಂ ಕೆಕ್ಕಳಿಸಿ ನೋಡುವೆಕ್ಕಲಂಗಳುಮಂ (ಸಂಜೀರ ೦೮-೦೪); ಹೆಕ್ಕಳದೊಳಾತನಂ ಬೀಳ್ಕೊಂಡು ಭೀಷಣಾ ಮುಳಿದೆದ್ದು ನಡೆಯುತಿರಲು (ಕೈಮಿನಿ ಭಾ. ೦೭-೩೦). ೫. ಉಬ್ಬರ ; ಉಕ್ಕುವಿಕೆ : ಉಕ್ಕಿದುದು ಪೆಱಗಂಡ ಕಡಲಿನ ಹೆಕ್ಕಳದವೊಲು ಹರುಷರಸ (ತೊರವೆ. ೧-೦೫-೪೩). ಹೆಗ್ಗಳ : ೧. ಅಂಬನು . . . ಬಿಡಲಾಗಿ . . . ಬಸವನೆಂದಱಿದು ಮಱುಗಿ ಹೆಗ್ಗಳದೋಷವಾದುದೆಂದು (ಶೀಕೃಷ್ಣ. ೪-೭-೩೪); ಹೆಗ್ಗಳವಾದ ಹೃದಯತಾಪದಿಂದ . . . ಅಳುತ್ತಿರುವ ಮಾದ್ರಿಯನ್ನು ನೋಡಿ (ಕೃವಾಕ. ೨೨೯). 'ವೆಗ್ಗಳ' ಪಠಾ.

ಪೆರ್ಕಳವಾಗು = ಅಧಿಕವಾಗು; ಮೀರು : ಇಂತಳವಿಗಱಿದ ಸೊಬಗಿನ ಸೊಂಪು ಪೆರ್ಕಳವಾಗಿರ್ಪುದುಂ (ಕಬ್ಬಿಗ. ೦೨೩). [<ಪೆಕ್ಕ ?]

**ಪೆಕ್ಕಳ₂** 'ಪೆಕ್ಕಣ₂' ನೋ.

**ಪೆಕ್ಕಳಿಗ** 'ಪಿಕ್ಕುಳಿಕ' ನೋ.

**ಪೆಕ್ಕಳಿಸು, ಪೆರ್ಕಳಿಸು, ಹೆಕ್ಕಳಿಸು** (ಕ್ರಿ). ೧. ಅಧಿಕವಾಗು ; ಉಲ್ಬಣಿಸು : ಆ ರಣಾಗ್ರದೊಳ್ಪೆಕ್ಕಳಿಸಿದುಕ್ಕಂದದದಟಿಂದೆ ಸುರಥನಱಿಸಿದನಚ್ಯುತಾರ್ಜುನರನು (ಜೈಮಿನಿಭಾ. ೦೪-೬). ∆ಪೆರ್ಕಳಿಸು : ೧. ಅಂದಿಂಗೆ ಪುಯಿಲ್ ಪೆರ್ಕಳಿಸಿ ಪರಿಯದಿರೆ (ಜಗನ್ನಾ. ೨-೯೦). ೨. ಹಿಗ್ಗು; ಉಬ್ಬು; ಸಂತೋಷಗೊಳ್ಳು : ರಾಯನ ಕುವರಿ ಬಳಿಸಲ್ವ ದಾದಿಯ ಬನ್ನಣೆನುಡಿಗೆ ಪೆರ್ಕಳಿಸುತ್ತಿದಿದಳಾ ಸಭೆಗೆ (ಕರ್ಣನ್ನ. ೫-೦೨) ; ದೇವರಿಲ್ಲಿಗೆಯ್ತಂದುದರ್ಕೆ ಪೆರ್ಕಳಿಸಿ ದೇವರ ಕುಶಲಮಂ ತಿಳಿಯಲ್ಪಾವುದಮಂ ಕೊಟ್ಟೆನ್ನಂ ಬೆಳುಪಿದರ್ (ಜಗನ್ನಾ. ೦೬-೪). ೩. ಗರ್ವಿಸು ; ಅಹಂಕಾರಪಡು ; ಹೆಮ್ಮೆಪಡು : ಸಕಲಲೋಕಸ್ತುತಿಯಿಂ ಗೌರಿಯಿನಾಯ್ತುದನೀಗಳ್ ಬಾರಿಸಲಿತಿಜಡರಿದೇಕೆ ಪೆರ್ಕಳಿ[ಪಾಠಾಂ. ಗರ್ಗಲಿ]ಸುವರೋ (ಲೀಲಾವ. ೦೪-೦೦೬); ಈ ಮೆಯ್ಯಂ ನಿಚ್ಚಮೆಂದೆ ನಂಬಿ ಸೊಮ್ಮಿಂ ಪೆರ್ಕಳಿಸುವಂ ಗಾಂಪನಲೇ! (ರಾಮಾಶ್ವ. ೬೫-೬) 'ಪೆರ್ಗಲಸು' ಪಠಾ. ೪. ಎರಗು ; ಆತುರದಿಂದ ಬರು ; ಮುನ್ನುಗ್ಗು : ಪೆರ್ಕಳಿಸುವ ರಕ್ಕಸವಡೆಯುರ್ಕಂ ಮುಱಿದಿಕ್ಕೆ ತಕ್ಕನೆ ಚ್ಯುತನೊರ್ವಂ (ಅಕ್ರೂ. ೩೦-೬); ಕಿವಿವೇಟದ ಬಗೆ . . . ಅನಿತುಂ ಬೂಟಿಕ ಮಾಯಾಟವುಂ ಏಟಂ ಕೇಳ್ದು ಪೆರ್ಕಳಿಸಿ ಬರ್ಕೆಂದು ಬನ್ನಂಬಡುವ ಬಗೆಯೆಂಬುದುಂ (ಜಗನ್ನಾ. ೬-೦೫೬ ವ). ಹೆಕ್ಕಳಿಸು : ೧. ಲೋಲಲೋಚನೆಯಳಲು ಮಿಗೆ ಹೆಕ್ಕಳಿಸಿತಡಿಗಡಿಗೆ (ಕುಮಾರವ್ಯಾಸ. ೨-೦೬); ನಕ್ಕಳಗಜೆ ಮಹೇಶ್ವರನ ಹಗೆ ಹೆಕ್ಕಳಿಸಲು (ಶಿವಾಗ. ೧೦-೨೮-೦೫); ಅಂಗನೆಯುತ್ಸಂಗದೊಳು ಅಂಗವನೀಡಾಡಿಯುವಳ ಸಂಗತಿಯೊಳೆ ಹಿಂಗದೆ ಹೆಕ್ಕಳಿಸುವುದು (ಜಗನ್ನಾ. ೬-೦೫೬ ಪಾಠಾಂ). ೨. ನಿನ್ನ ಕಂದಾ ಪಡೆದು ನಾಂ ಸುಖಿಯಾದೆನೆಂದುಡಲಿತ್ತ ಹೆಕ್ಕಳಿಸಿ (ಶಾಕುಂತಲಾ. ೨೦-೨) ; ಕಂಗಳು ಹೊಳೆಯೆ ಮಱಿ ಮಿನೆಂದು ಹೆಕ್ಕಳಿಸಿದರು ಹಿಡಿಹಿನಲಿ (ಕುಮಾರವ್ಯಾಸ. ೧೦-೨೮) ; ಹೊಳಲು ಹೊಸರೀತಿಯಲಿ ಮಿಗೆ ಕಂಗೊಳಿಸುತಿರ್ಪುದು . . . ಹೆಕ್ಕಳಿಪ ಕೋಗಿಲೆಗಳಲಿ ಮೊರೆವಳಿಕುಳದ ಮೇಳದಲಿ (ತೊರವೆ. ೧-೯-೧೧). ೩. ಜಗ ತನ್ನದೆಂಬ ಹೆಮ್ಮೆಗೆ ಹೆಚ್ಚಿ ಹೆಕ್ಕಳಿಸಿ ಮುಗಿಲುದ್ದವಾಗಿ (ಸುಕೋಶ. ೦-೦೬) ; ಹೆಕ್ಕಳಿಸಿ ಜಱಿದನು ಕರ್ಣ ಶಲ್ಯನನೆಲವೊ ಘಡ ನೋಡೆನುತ ತೆಗೆದೆಚ್ಚನು ಧನಂಜಯನ (ಕುಮಾರವ್ಯಾಸ. ೨೪-೨೮) ; ಹೆಮ್ಮೆಮಾತಾಡದೆ ಹೆಕ್ಕಳಿಸದೆ ಚಿತ್ತಸಮ್ಮತಿಯಱಿತ್ರಿಸಗುವುದು (ಹರಿಭ. ೪-೦೫). ೪. ಪರಬಲಕೆ ಜಾಱುವ ಜಯಸಿರಿಯ ಮುಂದಲೆಯ ಹಿಡಿಹಿಡಿಯೆನುತ ಹೆಕ್ಕಳಿಸಿದನು ಕುರುರಾಯ (ಕುಮಾರವ್ಯಾಸ. ೨-೫೦) ; ಹೆಕ್ಕಳಿಸಿ ಹರಿ ತಿವಿವ ಘಾತಕೆ ಉಕ್ಕುರಿಸಿ ಕೆಡೆದು (ಅಕ್ರೂರ. ೭-೩೦). ೫. (ಆಲಂ) ಹೆದರು; ಹಿಂಜರಿ: ಲಕ್ಕಕುದುರೆಯ ಧಾಳಿಯ ಕಂಡು ಮನದೊಳು ಹೆಕ್ಕಳಿಸಿದನೆ ಚಾಮರನು (ಕುಮಾರರಾಮ. ೦೬-೦೩೫) ; ಮುಕ್ಕುಳಿಸಿ ಮೋಲುಗುಳ್ದಪನೇನನಾದೊಡು ಮಾಡುವಂ ನೀನದಕ್ಕೆ ಹೆಕ್ಕಳಿಸಿ ಹಿಮ್ಮೆಟ್ಟದಿದಿರ್ಗೊಡೆ (ಜೈಮಿನಿಭಾ. ೫-೨೯). ೬. ಅಧಿಕವಾಗಿ ತೋರು ; ಮೇಲಾಗು : ಸಿಡಿಲ ಬೊಬ್ಬೆಯ ಧಾರೆಯಲಿ ನಡನಡಿಸಿ ತಾಗಿ ನಿದಾಘಭಾಪನ ಹಿಡಿದು ಹೆಕ್ಕಳಿಸಿವನು ಮೇಘಾಗಮಮಹೀಪಾಲ (ತೊರವೆ. ೪-೬-೪). ೭. ಹುರಿದುಂಬಿಸು ;

ಪ್ರೋತ್ಸಾಹಿಸು : ಅವಂ ಕಂಡು ಕಂಸಂ ಪಂದಿಗೆಱಗಿದ ನಾಯುಂ ಹೆಕ್ಕ[ಪಾಠಾಂ. ಪೆಕ್ಕ]ಳಿಸುವಂತೆ ತೊಡೆಯನಪ್ಪಳಿಸಿ (ಅರ್ಜನೀ. ೯–೧೦೬ ವ); ಕವಿವ ಕಣೆ ಕಿಱುಗಣೆಯ ಮುಕ್ಕುಳಿಸಿದವು ಹೆಕ್ಕಳಿಸಿದವು ಹಂದೆಗರ (ಕುಮಾ.ಭಿೀ. ೪–೧೪). ೮. ಅಗಲವಾಗಿ ತೆರೆ : ಬಿಂಗದಸುರರ ಬಲವ ಪಾಱಿಸುತ್ತೇಱಿಸುತ ಕಂಗಳಂ ಕೆಕ್ಕಳಿಸಿ ಕಿವಿಗಳಂ ಹೆಕ್ಕಳಿಸಿ (ಶತುಕೃ. ೩–೬–೭೯). ೯. ಸಿಡಿ ; ಚಿಮ್ಮು ; ಹಾರು : ಸಿಳಿಸಿಳಿಧ್ವನಿ ಮಸಗೆ ಶಿಲ ಹೆಕ್ಕಳಿಸಿದವು ರುಝುಮ್ಮೆಂದು ಸವಿಂಧಾವಂಗಳಬ್ಬರಿಸಿದವು ಛಟಛಟಛಟನಿನಾದದಲಿ (ಕೊರರಾ. ೦–೭–೪೯). [ಪೆಕ್ಕಳ್$_1$ + — ಇಸು$_3$]

**ಪೆಕ್ಕಣ** 'ಪೆಕ್ಕಣ$_1$' ನೋ.

**ಪೆಕ್ರ,** ಪೆಕರ (ನಾ). ದಡ್ಡ ; ತಿಳಿಗೇಡಿ : ನಿಮಗೆ ಮದುವೆಯಾಗಿರಬೇಕಲ್ಲವೆ? . . . ನಾನೊಬ್ಬ ಪೆಕ್ರನ ಹಾಗೆ ಕೇಳುತ್ತಿದ್ದೇನೆ? (ಸಂಸ್ಕಾರ. ೦೦೪). **ಪೆಕರ** : ಅವನೊಬ್ಬ ಪೆಕರ (ರೂಢಿ). [?]

**ಪೆಗಲ್,** ಪೆಗಲು, ಹೆಗಲ್, ಹೆಗಲು (ನಾ). ೧. ಸ್ಕಂಧ ; ಭುಜ : "ತೆಗಳ್ = ಪೆಗಲ್" (ಶಬ್ದ. ೫೦ ೨); ಬಲದೇವಂ ದುರ್ಯೋಧನಗಾಯು ಬರ್ಪಂತೆ ಪೆಗಲೊಳ್ ಹಲಾಯುಧಮನಿಕ್ಕಿಕೊಂಡು ಜಂಗಮ ಪರ್ವತಮೆ ಬರ್ಪಂತೆ ಬಂದು (ಶಂಕರಾ. ೦೩–೯೮ ವ); ನೇಹದಿಂದಾ ಮಾತಂ ಪೇಳ್ದ ತುಂಬುರನ ಪೆಗಲೊಳ್ ಕಯ್ಯಿಕ್ಕಿ (ಸಂಜಿರ. ೪–೯೮) ; ಕಾಮಮಂಜರಿ ಮುನಿಪನ ಪೆಗಲೊಳ್ ಕೆಯ್ಯನಿಟ್ಟಿರ್ದಳ್ (ದಶಕು. ೮ ೬೦ ವ); ಜನ್ನವಿತಮಂ ಪೆಗಲೊಳ್ ತೆಗೆದಿಕ್ಕಿ (ಕಾವ್ಯಸಾ. ೫೩೫). **ಪೆಗಲು** : ೧. ಮುಂಚೆರಗ ನಿರಿವಿಡಿದು ಪೆಗಲೆರಡ ಸುತ್ತಿ (ಕಾಲೂರ. ೧೪೮–೩೨೪). **ಹೆಗಲ್** : ೧. ಸೊಡ್ಡಳ ಬಾಚರಸರ ಹೆಗಲ ಮೇಲೆ ಹಸ್ತವಂ ಮಡಗಿ (ಕಅಷ್ಟಸಂ. ೨೦೦–೨); ಹೆಗಲ ಕಂಬಳಿ ಕೈಯ ಕಲ್ಲಿಯೋಗರದಿಂದೆ ... ಎಸೆವುತಿರೆ (ಬಸರ. ೯–೯೫) ; ಹೆಗಲಡ್ಡವರಿಗೆಯ ನೀಡಿ ವ್ಯಮಣಿವಾಕಿ ತಿವಿದಾಡಿದರು ಸಬಳಿಗರು (ಕುಮಾ.ಭೀ. ೯–೦೬). ೨. ಎತ್ತು, ಆನೆ ಮುಂತಾದವುಗಳ ಹೆಗ್ಗತ್ತು—ಬೆನ್ನಿನ ಮೇಲೆ ಇರುವ ಏಣು : "ಸ್ಕಂಧದೇಶಃ. ವಹಃ— ಈ ೨ ಹೆಗಲ್" (ಹಲಾಯು. ೪೪·೦೦೨). **ಹೆಗಲು** : ೧. ಅರೆಮರಳು ವಾಲಿಗಳ ಹೆಗಲಲಿ ಮೆರೆದ ಗೋಣಿನ . . . ಅರಸನನು ಕಂಡಳಲಿದರು (ಕುಮಾ.ಆ ೦೦–೫೫) ; ಅಕ್ಷಯಮೂಡಿಗೆಯ ದಕ್ಷಿಣದ ಹೆಗಲಿಗೇಱಿಸಿ (ಕೊರರಾ ೩–೬–೫); ಹೆಗಲ ಹಸಿಬೆಯೊಳಗಿಟ್ಟು ಮಡಿಯನುಟ್ಟು (ಪುರಂದ. ೨–೩೮–೧) ; ಹೆಗಲ ಮೇಲೆ ಹೊದೆದಿದ್ದ ಒಂದು ಉತ್ತರೀಯ (ಕಳಹು. ೦). ೨. "ಹೆಗಲು = ಸ್ಕಂಧಪ್ರದೇಶ, ವಹ" (ನಾಚರಾ. ೬) ; ದಂತಿಗಳ ಹೆಗಲಲಿ ನಿಡುನೊಗನ ಕಟ್ಟಿದರು (ಕುಮಾ.ದ್ರೋ. ೯–೪೫) ; ಅಗಣಿತಲೋಕಾದಿ ಲೋಕಂಗಳುದರದಿ ಸೊಗಯಿಪ ನಾರಾಯಣನ ಹೆಗಲೊಳು ಹೊತ್ತು ಖೇಚರದೆ ಸಂಚರಿಸುವ ಖಗರಾಜ ಕರುಣಿಪುದು (ಮೋಹತ. ೦–೦೩); ಸಿಂಹದ . . . ಗೋಣು ಹೆಗಲುಗಳ ಮೇಲೆ ಬಿರುಸುಗೂದಲು ಉದ್ದವಾಗಿ ಬೆಳೆಯುವವು (ಮುಂಬಯಿ. ೪–೨೦೬).

**ಪೆಗಲೆಣೆ, ಹೆಗಲೆಣೆ** = ಸರಿಸಮಾನ ; ಸಾಟಿ : ಅವನ ಪೆಗಲೆಣೆಯ ಕೆಳೆಯರನ್ ಬಾಟರಸ್ ಗವಿಗಟ್ಟಲೆಯಿರುಳ್ ಮುಚ್ಚಿ ಮುಸುಕಿರ್ದಪುದು (ಬಿದ್ಯಕ್ರ. ೦೩–೨೬೩) ; ಜಸದೊಳು ಪರಮರೋಹಿಣಿಗೆ ಹೆಗಲೆಣೆ . . . ಚಂದ್ರಮತಿ (ಹಕಾ. ೦–೬೪). **ಹೆಗಲ ಕೆಲಸ** = ಭುಜದ ಸಹಾಯದಿಂದ ಮಾಡುವ ಕೆಲಸ ; ಹೊರುವ ಕೆಲಸ : ಬುದ್ಧಿಯ ಕೆಲಸ ಶ್ರೇಷ್ಠ ... ಕಾಲ್ಕೆಲಸ ಹೆಗಲ ಕೆಲಸಗಳು ಅಧಮ (ವಶಕಾ. ೩೩೭). **ಹೆಗಲ ಮೇಲೆ ಬೀಳು** = ಹೊಣೆ ಹೊರುವಂತಾಗು ; ಭಾರ ಬೀಳು : ಆತನ ಹೆಗಲ ಮೇಲೆ ಬಿದ್ದಿದ್ದ ಜವಾಬ್ದಾರಿ ಎಷ್ಟು ಗುರುತರವಾಗಿತ್ತು (ಕೃದಃವ. ೦೨). **ಹೆಗಲ ಸಾಳುವ** = ಬೇಟೆಗಾರರು ಬೇಟೆಗೆ ಹೊರಡುವಾಗ ಭುಜದ ಮೇಲೆ ಕೂಡಿಸಿಕೊಂಡು ಹೋಗುವ ಸಾಕಿದ ಗಿಡುಗ : ಹಿಡಿನಾಯಿಗಳು ಹೆಗಲ ಸಾಳು[ಪಾಠಾಂ. ಳ]ವಂ ... ಪರಿಪರಿಯ ಹಕ್ಕಿವೆರಸಡವಿಗಂತಕರಂತೆ ನಡೆವ ಶಬರರ ಕಂಡನು (ಸೋಮಶೇ. ೩–೪). **ಹೆಗಲಿಗೆ ಹೆಗಲು ಕೊಡು** = ಜೊತೆಯಾಗಿರು ; ಸಮಸಮವಾಗಿರು : ಶಿಷ್ಯರ ಹೆಗಲಿಗೆ ಹೆಗಲು ಕೊಟ್ಟು ನಾನು ದುಡಿಯುತ್ತೇನೆ (ಶಿಷ್ಯಕೊ. ೫೦) ; ನನ್ನ ಹೆಗಲಿಗೆ ಹೆಗಲು ಕೊಟ್ಟಿರಿ, ಹಿಂದೆ ಬೆಂಬಲವಾದಿರಿ (ಶಿಲಶಾ. ೫೨–೦೩). **ಹೆಗಲು ಕೊಡು** = ಸಹಾಯ ಮಾಡು ; ನೆರವು ನೀಡು : ನೆರೆಹೊರೆಯವರು ಸಹಾಯ ಬೇಡಿದರೆ ಎಷ್ಟು ಶ್ರಮವಾದರೂ ಹಿಂಜರಿಯದೆ ಹೆಗಲು ಕೊಡುವನು (ಹೋಧಕೃ. ೭೪) ; ಬಾ ಬಂಧು, ಹೆಗಲು ಕೊಡು, ನಡುದಾರಿಯಲಿ ನಿಂತ ಈ ರಥವ ಸಾಗಿಸೋಣ (ಸಂಶು. ೧೮–೨೨). **ಹೆಗಲು ತೊಳೆ** = ಜವಾಬ್ದಾರಿ ಇಲ್ಲದಂತೆ ಮಾಡು : ನನಗಂತೂ ಸಾಧಿಸುವದಿಲ್ಲ, ನನ್ನ ಹೆಗಲು ತೊಳೆದು ಬಿಡಿರಿ (ಚಲ್ಯಕೊ. ೦೫). **ಹೆಗಲೆಣೆಯಾಗು** = ಸರಿಸಮಾನವಾಗು ; ಸಾಟಿಯಾಗು : ಅವಳಿಗೆ ಹೆಗಲೆಣೆಯಾಗಿ ನಿಲ್ಲಬಲ್ಲ ಮತ್ತೊಬ್ಬ ವ್ಯಕ್ತಿಯೆಂದರೆ ಮುಕ್ತಾಯಕ್ಕ (ಶೂನ್ಯಕು. ೦೦೫) ; ಮಾನವನಿಗೆ ಸೌಂದರ್ಯದರ್ಶನವೃಷ್ಟಿ ಲಭಿಸಿದಾಗ ಆವನು ದೇವತೆಗಳ ಹೆಗಲೆಣೆಯಾಗಿ ನಿಂತು ಅಮರನಾಗುತ್ತಾನೆ (ಸೌಂದಹ. ೫೪).

[ದೇ.॥ ತಮಿ. ಪಿಚಲ್ ; ತುಳು. ಪುಗೆಲ್, ಪುಗ್ಗೆಲ್ ; ಕೋತ. ಪೆಯ್ಲ್, ಪೆಯ್ಳ್]

**ಪೆಗಲಿಕ್ಕು** (ಕ್ರಿ). ಹೆಗಲಿನ ಮೇಲೆ ಇಡು,—ಇರಿಸು : ಬಲಗೈಯ ಪೆಗಲಿಕ್ಕಿ ಬಪ್ಪ ಯೋಗೀಂದ್ರರ ಸುಳುಹುಗಾಣದೆ ಚಿಂತೆ ಮಾಳ್ಪ (ಛಂಶ. ೩–೩೫). [ಪೆಗಲ್ + ಇಕ್ಕು]

**ಪೆಗಲೀ** (ಕ್ರಿ). ಹೆಗಲನ್ನು ಕೊಡು : ಪೆಗಲಿತ್ತು ಪೊತ್ತು ಜವದಿಂ ಮಿಗೆ ಪರಿಯೆ ವಿರಾಜಿಸಿರ್ದ ಗೋರಥಮಂ ಪೆಂಪಗಲದೊಡನೇಱ್ (ವ್ಯಶಾ. ೩೯·೭೦). [ಪೆಗಲ್ + ಈ$_2$]

**ಪೆಗಲು** 'ಪೆಗಲ್' ನೋ.

**ಪೆಗಲೇರು** 'ಪೆಗಲೇಱು' ನೋ.

**ಪೆಗಲೇಱು,** ಪೆಗಲೇರು, ಹೆಗಲೇರು, ಹೆಗಲೇಱು (ಕ್ರಿ). ೧. ಭುಜವನ್ನು ಹತ್ತು ; ಭುಜದ ಮೇಲೇರು : ಸಮನಾಗೆ ಮೇಘದೊಳ್ ಕಾಳಮಹಾಕಾಳರ್ಕಳವರ ಪೆಗಲೇಱಿದ ವಿಭ್ರಮದಿಂ ನೋಡು ವರ್ಗನ್ವರ್ಥಮಾದುದಾ ಮೇಘರಥನ ಪೆಸರಂಬರದೊಳ್ (ಶಾಂತಿಪು. ೯–೭೪). ೨. ಹೆಗ್ಗತ್ತಿನ ಮೇಲೆ ಏರು,—ಹತ್ತು : ಸಿಂಗನ ಪೆಗಲೇಱಿ ಸಾಗೆ ಕರಿ (ಪುರಂದ. ೨–೭೪–೩). **ಪೆಗಲೇರು** : ೧. ಬಡಬಡಿಪ ಪರೆಗಳುಂ ಪೆಗಲೇರೆ (ಕಾಲೂರ. ೦೫೦–೩೩೦). **ಹೆಗಲೇರು** : ೧. ಮಂಗ ಡೊಂಬರವನ ಹೆಗಲೇರಿ ಕುಳಿತುಕೊಂಡಿತು (ರೂಢಿ). **ಹೆಗಲೇಱು** : ೧. ಪಾಪ ಪುಣ್ಯಗಳೆರಡು ವ್ಯಾಪಿಸುತ ಬೆಂಬಿಡಿದು ಪಾಪ ಮಾಡಿದನ ಹೆಗಲೇಱಿ ರಾಜಕುಲದೀಪ ಬರುತಿಹನು (ಸರ್ವಜ್ಞ. ೬೫೩).

**ಪೆಗಲೇಱಿಸಿಕೊಳ್** = ಹೆಗಲಿನ ಮೇಲೆ ಕೂಡಿಸಿಕೊಳ್ಳು : ಸುಖದೋಱು ಲೋಕವಱಿಯಲ್ ಪೆಗಲೇಱಿಸಿಕೊಂಡು ಪೋದಂ (ಶುಶಾಶ. ೭೪); ಪೆಗಲೇಱಿಸಿಕೊಂಡೆನ್ನಂ ಮಿಗೆ ನಿಮ್ಮೋಲಗಕೆ ಬರ್ಪನತಿಸಂಭ್ರಮದಿಂದಗಲದನು ದಿನಮುಂ (ವ್ಯಶಾ. ೩೨–೪೦). [ಪೆಗಲ್ + ಏಱು$_1$ (< ಏಱ್$_1$)]

**ಪೆಗಲ್ಗೂಟ್** (ನಾ). ಹೆಗಲ ಮೇಲಿಟ್ಟುಕೊಂಡು ಹೋಗುವ ಬುತ್ತಿ : ಹರಿ ಗೋಪಾಲರೊಳಾಡಿದೊಡೆ ಪೆಗಲ್ಗೂ [ಪಾಠಾಂ. ಪಸಲ್ಗೂ]ಟುಂಡ ತಾಣಂ . . . ತನ್ನದೀತೀರದೊಳ್ ತರದಿಂ ರಂಜಿಪುವು (ದಶಕು. ೦೪–೬). [ಪೆಗಲ್ + ಕೂಟ್$_1$]

**ಪೆಗಲ್ವೊಱೆ** (ನಾ). ಹೆಗಲಿನ ಮೇಲೆ ಹೊತ್ತುಕೊಂಡಿರುವ ಹೊರೆ : ಪಟು ಕೊಟ್ಟಿಗೆ ಪೆಗಲ್ವೊಱೆ . . . ಆಪ್ತವರ್ಗಂ ಸಹಿತಮನಿಪನಂ ಸೇನೆಯುಂ ಕೊಟ್ಟು (ದಶಕು. ೩–೬). [ಪೆಗಲ್ + ಪೊಱೆ]

**ಪೆಗೆವೆಗೆ** (ನಾ). ಒಂದು ಸ್ಥಳದ ಹೆಸರು : ಗೆಜ್ಜೆವಡಿಗೆ ಪೆಗೆವೆಗೆಯು ಎಟ್ಟಿದಿವ್ಯಗ್ರ್ಗ ಎಳಚಾಗಪಳ್ಳಿಯ ವಾರಯ್ಯ . . . ಕವ್ಪುಳದಳೆವೆಟ್ಟಿ ಕೊಟ್ಟ (ಎಇ. III, ಸಂಜನ. ೯೬-೨; 898 ?). [?]

**ಪೆಗೋಡ** 'ಪಗೋಡ' ನೋ.

**ಪೆಗ್ಗ** 'ಪೆಂಗ' ನೋ.

**ಪೆಗ್ಗಡೆ** 'ಪೆರ್ಗಡೆ₁' ನೋ.

**ಪೆಗ್ಗಣ** 'ಪೆರ್ಗಣ' ನೋ.

**ಪೆಗ್ಗಟಯ್ಯ** (ನಾ). ಒಬ್ಬಾತನ ಹೆಸರು : ಪಜ್ಜಪಯ್ಯನ ಮಗ ಶ್ರೀ [ಕೊ]ನ್ಡದ ಪೆಗ್ಗಟಯ್ಯಂ (ಶಾಇ. XI—1. ೪೩-೦೯; 970). [? + ಅಯ್ಯ₆₁]

**ಪೆಗ್ಗಟ್ಟಿ, ಹೆಗ್ಗದ್ದೆ** (ನಾ). ದೊಡ್ಡ ಗದ್ದೆ; ವಿಸ್ತಾರವಾದ ಗದ್ದೆ: ದೇಗುಲಕೆ ಸಲ್ವುದು ದೇವರ ಕೆಱೆಯ ಮೂಡಣ ಕಡೆಗೋಡಿನಲಿ ಪೆಗ್ಗಟ್ಟಿ (ಎಇ. IX, ಮಾಗಡಿ. ೬೫-೨೦; 966). **ಹೆಗ್ಗದ್ದೆ** : ವಿಷ್ಣುಭಟ್ಟೋಪಾಧ್ಯಾಯರಿಂಗೆ . . . ಮೂಡಣ ಹೆಗ್ಗದ್ದೆ ಅದಱ ಮೇಗಣ ಕೊಡಂಗೆ ಎರಡಱಲ್ಲಿಯೂ ಮೂಡೆ ೨ (ಎಇ. XXVII. ೨೮-೪೮; 1256). [<ಪಿರಿದು₁+ಗಟ್ಟಿ]

**ಪೆಗ್ಗು** 'ಪೆಂಗು₁' ನೋ.

**ಪೆಗ್ಗೊರಿಡು** 'ಪೆರ್ಗೊರಿಡು' ನೋ.

**ಪೆಗ್ಗೊರು** 'ಪೆರ್ಗೊರು' ನೋ.

**ಪೆಗ್ಗೊಲ್ಲಿ** 'ಪೆರ್ಗೊಲ್ಲಿ' ನೋ.

**ಪೆಗ್ಗೋಳಿ** 'ಪೆರ್ಗೋಣಿ' ನೋ.

**ಪೆಚ್ಚ** (ನಾ). ದಡ್ಡ; ತಿಳಿಗೇಡಿ: "ಎಗ್ಗ, ಹುಂಬ . . . ಪೆಚ್ಚ" (ಕುಮುಹು. ೬೯); ಶುದ್ಧ ಪೆಚ್ಚ ನಾನು (ಕ್ರಕ್ಕ. ೬೯). 'ಪಿಚ್ಚ₁' ಪರಾ. [ಪೆಚ್ಚು₃ + —ಅ₇]

Δ**ಪೆಚ್ಚಳ₁** 'ಹೆಚ್ಚಳ' ನೋ.

**ಪೆಚ್ಚಳ₂** 'ಪಚ್ಚಳ₂' ನೋ.

Δ**ಪೆಚ್ಚಳಿಸು** 'ಹೆಚ್ಚಳಿಸು' ನೋ.

**ಪೆಚ್ಚಾಟ** (ನಾ). ತಿಳಿಗೇಡಿತನ; ಹುಚ್ಚಾಟ; ಅವಿವೇಕ: ಈಚೀಚೆಗಂತೂ ಅವನ ಪೆಚ್ಚಾಟ ಹೇಳತೀರದು (ರೂಢಿ). [ಪೆಚ್ಚು₃+ಆಟ]

**ಪೆಚ್ಚಿ** (ನಾ). ದಡ್ಡ ಹೆಂಗಸು; ಪೆದ್ದಿ : ಅವಳೊಬ್ಬಳು ಪೆಚ್ಚಿ. ಬಾಯಿಗೆ ಬಂದ ಹಾಗೆ ಹರಟುತ್ತಿದ್ದಾಳೆ (ರೂಢಿ). [ಪೆಚ್ಚ + —ಇ₂]

**ಪೆಚ್ಚಿಸು** 'ಪೆರ್ಚಿಸು' ನೋ.

**ಪೆಚ್ಚು₁** 'ಪೆರ್ಚು₁' ನೋ.

**ಪೆಚ್ಚು₂** 'ಪೆರ್ಚು₂' ನೋ.

**ಪೆಚ್ಚು₃** (ಗು). ೧. ಏನೂ ತಿಳಿಯದ; ಮೂಢತನದಿಂದ ಕೂಡಿದ : ಏನೋ ಪೆಚ್ಚುಹುಡುಗಿ. ಕನಿಕರದಿಂದ ಹಾಗೆ ಆಡುತ್ತಾಳೆ (ಶಿರಾಶ. ೬೫). (ನಾ). ೨. ದಡ್ಡತನ; ತಿಳಿಗೇಡಿತನ : 'ಪೆಚ್ಚ', 'ಪೆಚ್ಚಿ' ಪರಾ. ೩. ಹುಚ್ಚು; ಮರುಳು : "ಪೆಚ್ಚು (ಪುಚ್ಚು) — ಚಿತ್ತ = ಧಾತುವಿಕಾರ" (ಶಬ್ದಕೋ. ೨೭). ೪. ಕಾಂತಿಹೀನವಾದುದು; ಮಂಕು : ನವಶಾಸ್ತ್ರ ದೊರೆಸಾವಿರ ಇವಗಚ್ಚುಮೆಚ್ಚು ವೇದವೇದಾಂತಗಳೆ ಅವನಿದಿರು ಪೆಚ್ಚು ! (ಗಹೇಕ. ೬೦-೦೨). ೫. ದಡ್ಡವ್ಯಕ್ತಿ; ತಿಳಿಗೇಡಿಯಾದ ವ್ಯಕ್ತಿ : ಅಯ್ಯೋ ಪೆಚ್ಚೆ . . . ನಿನಗೆ ಗೊತ್ತೇ ಆಗಿಲ್ಲ (ಪರಿಣಾ. II, ೯೪೩); ಪೆಚ್ಚುಗಳು ಲಲಿತ, ನರಸಮ್ಮ (ಪರಿಣಾ. II, ೦೦೫೯).

**ಪೆಚ್ಚಾಗು = ತಬ್ಬಿಬ್ಬಾಗು**; ಕಂಗಾಲಾಗು; ಮಂಕು ಕವಿ : ಅವಳು ಮಾತನಾಡದ ಧಾಟಿಗೆ ಆನಂದ ಪೆಚ್ಚಾಗಿ ಕುಳಿತ (ದೂರಕನ. ೬೭); ರಂಗನಾಥನು ಬಹಳ ಪೆಚ್ಚಾಗಿದ್ದನು (ಹಂಕಕಂ. ೮೬೩); ಪೆಚ್ಚಾಗಿ ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾರೆ (ಕಂಕಕೂ. ೩೯). **ಪೆಚ್ಚುಪೆಚ್ಚಾಗು = ಪೆಚ್ಚಾಗು** : ಏನೇ ಪೆಚ್ಚುಪೆಚ್ಚಾಗಿ ನಿಂತಿದ್ದೀಯಾ ? (ಕೊಗ್ಸು. ೦೬). **ಪೆಚ್ಚುಬೀಳು = ಪೆಚ್ಚಾಗು** : ಹಿಂದೆ ಕೆಲವು ಸಲ ಇವರ ಮಾತಿನಂತೆ ನಡೆದು ಪೆಚ್ಚು ಬಿದ್ದಿದ್ದ ತಂಗವೇಲು ಅಂಗಡಿಯವನನ್ನು ಕೇಳುವುದಕ್ಕೆ ಹಿಂಜರಿದ (ಹಮಹೂ. ೦೯೬). **ಪೆಚ್ಚು ಮಾಡು = ಮಂಕು ಕವಿಸು**; ತಬ್ಬಿಬ್ಬು ಗೊಳಿಸು : ಭೋಳೆಮನುಷ್ಯರೆಂದು ನಮ್ಮ ನಂದಬಾಬುಗಳನ್ನು ಪೆಚ್ಚು ಮಾಡಿದ (ಕುಂಹಿಂ. ೪೬). **ಪೆಚ್ಚೆನ್ನಿಸು = ತಬ್ಬಿಬ್ಬಾಗು**; ಮಂಕಾಗು : ಈ ನಾಮಕರಣದ ಪರಿಯನ್ನು ಕಾಣದವರ ಮಾತು ಹಾಗಿರಲಿ, ಕಂಡವರಿಗೂ ಸ್ವಲ್ಪ ಪೆಚ್ಚೆನ್ನಿಸಬೇಕು (ಪಮ್ಮಸು. ೨೩೨).

**ಪೆಚ್ಚುಗೆ** 'ಪೆರ್ಚುಗೆ' ನೋ.

**ಪೆಚ್ಚುತನ** (ನಾ). ೧. ದಡ್ಡತನ; ಅವಿವೇಕ : ನಿನ್ನ ಪೆಚ್ಚುತನದಿಂದ ಕೆಲಸ ಹಾಳಾಯಿತು (ರೂಢಿ). ೨. ಹುಚ್ಚುತನ : "ಉನ್ಮಾದ, ಚಿತ್ತವಿಭ್ರಮ . . . ಪೆಚ್ಚುತನವು" (ಸಿದ್ಧಾಂತಿ. ೬೬). [ಪೆಚ್ಚು₃ + —ತನ]

**ಪೆಜ್ಜುಂಕ** 'ಪೆರ್ಜುಂಕ' ನೋ.

**ಪೆಜ್ಜೆ** 'ಪಜ್ಜೆ' ನೋ.

**ಪೆಜ್ಜೆಗೆಡು** 'ಪಜ್ಜೆಗೆಡು' ನೋ.

**ಪೆಜ್ಜೆವಿಡು** (ಕ್ರಿ). ದಾರಿ ಬಿಡು ; ಕ್ರಮವನ್ನು ಮೀರು : ನಾಡಿಗರ್ ದಿನದಿನಂ ಬೇಳ್ವೊಂದು ಹವ್ಯಮನುಂಡುಂಡು ಸವಿಗೊಂಡ ಬೋಟಿಯ ರೆತ್ತಾನುಮೊರ್ವನೀ ನಿಚ್ಚವಲಿಯೆಡೆಯಿಂ ಪುರುಳ್ಗಾಣದೆ ಪೆಜ್ಜೆವಿಟ್ಟು . . . ತಡೆವರ್ಪರ್ (ರಾಮಾಶ್ಚ. ೫೫ ೩೦). [ಪೆಜ್ಜೆ (<ಪಜ್ಜೆ) + ಬಿಡು₁]

**ಪೆಟಲ್**, ಪೆಟಲ, ಪೆಟಲು, ಪೆಟ್ಟಲು, ಪೆಟ್ಲು (ನಾ). ೧. ಯುದ್ಧದಲ್ಲಿ ಮದ್ದನ್ನು ಸಿಡಿಸಲು ಉಪಯೋಗಿಸುತ್ತಿದ್ದ ಒಂದು ಬಗೆಯ ಸಾಧನ; ತುಪಾಕಿಯಂತಹ ಸಾಧನ : ಹೊಡಿದುವು ಪೆಟಲ್ಗಳಿಕ್ಕುವ ದಸಿಗಳಾಗಳೋರಾಡಿದುವು (ಕಲಕು. ೯೨-೬೨). **ಪೆಟಲ** : ೧. ಹಾರೆ ಬಿರಿ ಕೊಱಚು ಪೆಟಲ ತಿರುಗಣಿ ಬೀಸುವಲೆ ತಳಿಯ ಮರದ ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಪ್ಪಿತು (ಪಮ್ಮಳ. ೬-೨೮); ಗುಂಡು ಪೆಟಲ ತಿರುಗುಣಿ ಜಾಲದ ತಱಿಗೆಂಡ . . . ದಾಣೆಯ ತಂಡತಂಡದಿಂದೆಸೆದುದಾ ಕೋಟೆ (ಕಂಕ್ರಶಾಂ. ೮-೦೦). **ಪೆಟಲು** : ೧. ಸುಡುವ ಪೆಟಲು ಕೂಡೆ ನೆಗೆವ ಗುಂಡಿ ಕೇತು ತೋರಣದಿಂದ ಪಾಯ್ದಳವೆಲ್ಲ ಸಡಗರಗೊಂಡುದು (ಭರತ. ೯೬-೨೨); ಪೆಟಲು ಡವ್ವೆನೆ ಗುಂಡು ಸಿಡಿದು ಪೋಪಂತೆ (ಕ್ರಶುಕ. ೬-೦೬೬); ಸುಭಟರ ಹರಣಗೊಳುವ ಪೆಟಲುಗಳ ಕಱಿವ ಗುಂಡಿನ ಮಳೆಯುರೊಳಗೆಸೆದುದು (ಕಂಪಶಿ. ೦೬ ೩೬); ಛಿಟಿ ಛಿಟಲುಛಿಟಲೆಂದು ನಾದಿಸೆ ಪೆಟಲಿನಿಂ ಸಿಡಿವ . . . ಗುಂಡುಗಳು (ಅಪಂರಾ. ೯-೨-೮). **ಪೆಟ್ಟಲು** : ೧. ಇಡುವ ಪೆಟ್ಟಲು ಕೂಡಬ್ಬರಿಸುವ ಬಾಣ . . . ಹರಿಗೆಗಳ ಕಡುಗಲಿಭಟರು ಭೋಯಿ-ದಾರ್ದು ರಿಪುಗಳ ತುಡುಕಿದರು (ಕಂಪಶಿ. ೩-೬೫). ೨. ಮಕ್ಕಳು ಆಟಿಕೆಯಾಗಿ ಬಳಸುವ ತುಪಾಕಿಯಂಥ ಒಂದು ಸಾಧನ: (೪). **ಪೆಟ್ಲು** : ೨. ಪೆಟ್ಲಗೆ ಗಜ ಒದಗಿಸುತ್ತಿದ್ದವರು ರಾಗಜ್ಜ (ಕ್ರಕ್ಕ. ೮೬); ಉಡುಪಿಯಲ್ಲಿ ಕೃಷ್ಣಜಯಂತಿಯಂದು ಯಾವ ಹುಡುಗರ ಕೈಯಲ್ಲಿ ನೋಡಿದರೂ ಪೆಟ್ಲು ಇರುತ್ತದೆ (ರೂಢಿ) ೩. ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ; ಮಕ್ಕಳು ಈ ಕಾಯಿಯನ್ನು ತುಪಾಕಿಯಂತಿರುವ ಸಾಧನದಲ್ಲಿ ಹಾಕಿ 'ಟಪ್' ಎಂದು ಸದ್ದಾಗುವಂತೆ ಹೊಡೆಯುತ್ತಾರೆ: ಉಸುಮುನಿ, ಹೂವು, ಗುಳಿ, ಪೆಟ್ಲು, ಗೋರಿ (ಪಮ್ಮಸು. ೨೬೯).

**ಪೆಟಲ ಕಂಡಿ** = ಯುದ್ಧಕಾಲದಲ್ಲಿ ಕೋಟೆಯಲ್ಲಿ ಮರೆಯಾಗಿ ನಿಂತು ತುಪಾಕಿಯನ್ನು ಹೊಡೆಯುವುದಕ್ಕಾಗಿ ಮಾಡಿಕೊಂಡಿರುವ ಕಂಡಿ : ಎಸುವಂಬುಗಂಡಿ ಪೆಟಲ ಕಂಡಿ . . . ಲಾಳವಿಂಡಿಗೆ ಕಣ್ಗೆಸೆದವು

ಕುಮ್ಮಟದೊಳಗೆ (ಕುಮಾರಾ. ೩೭-೫೨). **ಪೆಟಲ ಗುಂಡು** = ಪೆಟಲಿಗೆ ಹಾಕುವ ಗುಂಡು,-ಗೋಲಿ : ಒಂಗದಿಡುವ ಚೆಂಡು ಪೆಟಲ ಗುಂಡಿನ ಸಮಭಂಗಿಯಂತೆದಗೆಡಿಸಿದುದು (ಕುಮಾರಾ. ೩೧-೧೧೦); ತೂಳಿಸು ಪೆಟಲ ಗುಂಡುಗಳನೆಂಬಸುರರ ಕೋಳಾಹಳವೊಪ್ಪಿತು (ಕಂಪ. ೧೯-೫). **ಪೆಟಲವರ್, ಪೆಟಲವರು** = ತುಪಾಕಿಯನ್ನು ಹಿಡಿದಿರುವವರು : ಪೆಟಲವರ್ ಥರೆ ಮಾಲೆಯೊಳ್ ಪರಿದರು (ಲಕ್ಷ್ಮೀಶಾ. ೧-೨೧); ಸುತ್ತ ಬಳಸಿ ಪೆಟಲವರು ಕೋವಿಗಳನು ತೆತ್ತಿಸಲು (ಕುಮಾರಾ. ೦೦-೩೫).

[ ದೇ. ॥ ತಮಿ. ಪೊಟ್ಟಲ್ ; ತುಳು. ಪೆಟ್ಲ, ಪೇಟ, ಪೇಟ್ಲ, ಪೇಟ್ಲೆ; ತೆಲು. ಪೆಟಲು, ಪೆಟಿಲು, ಪೆಟುಲು, ಪೆಟ್ಲು ]

ಪೆಟಲ 'ಪೆಟಲ್' ನೋ.

ಪೆಟಲಂಬು (ನಾ). = ಪೆಟಲ್ ೧ : ಪೆಟಲ ಕೋವಿಯ ಬಂಡಿ ಪೆಟಲಂಬಿನ ಬಂಡಿ . . . ಕಟಕದೊಳೆಯ್ದಿದವು (ಕುಮಾರಾ. ೪೦-೯೯); ಪೆಟಲಂಬು ಗುಂಡುಗಳಾಂತು ರಕ್ಕಸರು . . . ಕೋಂಟೆಗಾಳಗವನುಜ್ಜು ಮಾಡುತಿರೆ (ಪೀಕೃಶ. ೨-೦೧-೨೦). [ಪೆಟಲ್ + ಅಂಬು$_2$]

ಪೆಟಲು 'ಪೆಟಲ್' ನೋ.

**ಪೆಟಲುಪ್ಪು**, ಪೆಟ್ಲುಪ್ಪು (ನಾ). ೧. ಒಂದು ಬಗೆಯ ಉಪ್ಪು; ಬಂದೂಕಿಗೆ ಹಾಕುವ ಮದ್ದು : ಪೆಟಲುಪ್ಪು ಗುಂಡು ದಸಿ ಬಿತ್ತರಿಸಲೀಂ (ಪದ್ಮರಾ. ೩-೨೦): ಪೆಟಲ ಬೆಣೆಯ ಬಂಡಿ ಪೆಟಲುಪ್ಪಿನ ಬಂಡಿ ಕಟಕದೊಳೆಯ್ದಿದವು (ಕುಮಾರಾ. ೪೦-೯೯). ೨. ಒಂದು ಬಗೆಯ ಉಪ್ಪು; ಕಡ್ಡುಪ್ಪು: ಪಿ[ಪೆ]ಟಲುಪ್ಪನ್ನು ಸಣ್ಣನಾಗಿ ಪುಡಿ ಮಾಡಿ . . . ನಿಂಬೇಹುಳಿಯನ್ನು ಬಿಟ್ಟು ಕಲಸಿಕೊಂಡು ನುಂಗುವುದು (ಪಿಪ್ಪಿ. ೯೯). **ಪೆಟ್ಲುಪ್ಪು**: ೧. ಉಣ್ಣೆ, ಪೆಟ್ಲುಪ್ಪು, ಎಣ್ಣೆಕಾಳುಗಳು, ಪರಿಮಳದ್ರವ್ಯಗಳು ಪರನಾಡುಗಳಿಗೆ ಪೋಗುವುವು (ಮುಂಬಯಿ. ೯-೦೫೭); ಈ ದಹನಕಾಲದಲ್ಲಿ ಅಂಗಾರ, ಗಂಧಕ, ಪೆಟ್ಲುಪ್ಪು ಮೊದಲಾದುವು ಆಮ್ಲಅನಿಲದೊಡನೆ ಸೇರಿ ಕೆಲವೊಂದು ಅನಿಲಗಳು ಉಂಟಾಗುವುವು (ಶಾರಿಕ್ರಿ. II, ೧೧೦೮). ೨. "ಪಾಂಡುಜಃ —ಪೆಟ್ಲುಪ್ಪು" (ಓಪಂ. ೯೯); ಪೆಟ್ಲುಪ್ಪುಗ ೧ ತೂಕವಂ ನರಮೂತ್ರದೊಳರೆದು ಕೊಡಲು ಆ ಕ್ಷಣವೇ ಮೂತ್ರ ಬಿಡುವುದು (ಸಕಪ್ಪ. ೩೭೯).

[ ಪೆಟಲ್ + ಉಪ್ಪು$_1$./ತಮಿ. ಪೊಟ್ಟಲುಪ್ಪು; ತುಳು. ಪೆಟ್ಲುಪ್ಪು, ಪಟ್ಲುಪ್ಪು; ತೆಲು. ಪೆಟ್ಲುಪ್ಪು ]

ಪೆಟಲುಯಂತ್ರ (ನಾ). ಪೆಟಲನ್ನು ಅಳವಡಿಸುವ ಯಂತ್ರವಿಶೇಷ: ದಡಿ ದಸಿ ಕವಣೆ ಕೈಕಲ್ಲೆತ್ತುಗುಂಡಾರ್ದಿಡುವ ಪೆಟಲುಯಂತ್ರ . . . ಎಸೆದವು (ಕುಮಾರಾ. ೩೭-೫೯). [ ಪೆಟಲು ( < ಪೆಟಲ್) + ಯಂತ್ರ ]

ಪೆಟಲ್ಗೋವಿ (ನಾ). =ಪೆಟಲ್ ೧ : ನಾಸಿಕದಿರವು ಹೊಂಚಂಪಕವೊ ಹೇಮದಿ ವಿರಚಿತದ ಪೆಟಲ್ಗೋವಿ ಕೇಳಲರಂಬನಾಡುತಿಹ ಪರಿಯೊಳೆ ಸದಿಹುದು (ಜನಭಾ. ೮೮-೩೯). [ ಪೆಟಲ್ + ಕೋವಿ$_1$ ]

**ಪೆಟಾರಿ** 'ಪಿಟಾರಿ' ನೋ.

**ಪೆಟಾರಿಗೆ** 'ಪಿಟಾರಿ' ನೋ.

ಪೆಟ್ಟ 'ಪೆಂಟೆ$_1$' ನೋ.

**ಪೆಟ್ಟಣಿಗೆ** (ನಾ). ನೆಲವನ್ನು ಧಮ್ಮಸ್ಸು ಮಾಡಲು ಉಪಯೋಗಿಸುವ ಒಂದು ಬಗೆಯ ಮರದ ಸಾಧನ ; ಬಡಿಮಣೆ : "ಪೆಟ್ಟಣಿಗೆ [ಪಾಠಾಂ. ತೇಜಣಿಗೆ] ಕರಪೀಠವಕ್ಕು" (ಮಂಗರಾ. ೯೭-೩). [ ? ]

**ಪೆಟ್ಟವೆಟಿಸು**, ಹೆಟ್ಟವೆಳಸು (ಕ್ರಿ). ಹೆಂಟೆಯೊಡೆಯುವ ದಿಮ್ಮಿಗೆ ಕಟ್ಟಿ ಎಳೆಯಿಸು : ಬೆಟ್ಟೇಜು ಬೀಟ್ವರಂ ಪೆಟ್ಟವೆಟಿಸಿಕೊಳ್ವರಂ . . . ನೆರೆದು ನೋಡುವರಂತೆ (ರಾಜಶೇಖ. ೯-೨೩). **ಹೆಟ್ಟವೆಳಸು** : ಕೆಡಹಿ ಮೂಗನರಿದೆಳೆಹೂಟೆಯಂ ಕಟ್ಟಿ ಹೆಟ್ಟವೆಳಸುವೆ ಬಟ್ಟಬಯಲೊಳು (ಹರಿಶ. ೯-೦೩). [ ಪೆಟ್ಟ (< ಪೆಂಟೆ$_1$) + < ಎಟಿಸು ]

**ಪೆಟ್ಟವೆಟ್**, ಪೆಟ್ಟವೆಟ್ (ಕ್ರಿ). ೧. ಹೆಂಟೆ ಒಡೆಯುವ ದಿಮ್ಮಿಗೆ ಕಟ್ಟಿ ಎಳೆ ; ಇದನ್ನು ಅಪರಾಧಕ್ಕೆ ಶಿಕ್ಷೆಯಾಗಿ ಪ್ರಯೋಗಿಸುತ್ತಿದ್ದರು : ಪಿಡಿ ಪಿಡಿ ಕಟ್ಟು ಪೆಟ್ಟವೆಟ್ ಕೋಲಾಗಿ (ಪರ್ವಶು. ೫-೨೮); ಈ ಪುಸಿವನಂ ಕುಸಿಯೊತ್ತಿ ಬಟ್ಟೆಯೊಳ್ ಪೆಟ್ಟಮೆಟಿದು ಬಳಸಿದ ದಸಿಯೊಳ್ಳಿಗೆಯಿಂ (ಸುಕುಮಾ. ೭-೫೮). **ಪೆಟ್ಟವೆಟ್** : ೨. (ಅಲಂ) ನೆಲಸವಂ ಮಾಡು ; ನಾಶಮಾಡು. ೧, ೨ : ಮೂವತ್ತಾಱುಂ ಗುಣದಿಂ ಭಾವಜನಂ ಕಟ್ಟಿ ಪೆಟ್ಟವೆಟ್ [ ಪಾಠಾಂ. ಪಟ್ಟವೆಟ್, ಪೆಟ್ಟವೇಳ ] ದರ್ ವೃಷದಿಂ (ಕುಂದಮಾ. ೮-೦೯). [ ಪೆಟ್ಟ (< ಪೆಂಟೆ$_1$) + ಎಟ್$_1$ ]

**ಪೆಟ್ಟಯ**, ಪೆಟ್ಟಯ (ನಾ). ಪೆಟ್ಟಿಗೆ ; ಸಂದೂಕ : "ಪೇಟಾ, ಮಂಜೂಷಾ—ಈ ೨ ಪೆಟ್ಟಯಂ" (ಹಲಾಯು. ೫೨-೮೫೭). **ಪೆಟ್ಟಯ** : "ಪೆಟ್ಟಿಗೆ(ಯ)—ಪೇಟಿಕ (ಪಿಟಕ)" (ಶಬ್ದಕೋ. ೨೭). [ < ಪ್ರಾ. ಪೇಡಿಅ./ ತಮಿ. ಮಲ. ಪೆಟ್ಟಕಮ್; ತೆಲು. ಪೆಟ್ಟಯ; ಪರ್ಜಿ. ಪೆಟೆಯ]

**ಪೆಟ್ಟಲು** 'ಪೆಟಲ್' ನೋ.

**ಪೆಟ್ಟವೆಟ್** 'ಪೆಟ್ಟವೆಟ್' ನೋ.

**ಪೆಟ್ಟಾರಿ** 'ಪಿಟಾರಿ' ನೋ.

**ಪೆಟ್ಟಿ$_1$** 'ಪೆಂಟೆ$_1$' ನೋ.

**ಪೆಟ್ಟಿ$_2$** (ನಾ). ಒಂದು ಬಗೆಯ ಪಕ್ಷಿ : ಪರಡೆ ಪಸುಂಬಂ ವ್ಯೈನಂ ಎರಳೆ ನವಿಲ್ಕಾಗೆ ಪೆಟ್ಟಿ ಪೋದಗೆ ಕರಭಂ ಶರಕಮಿವು ಪೋಗೆ ಶಾರುಂ ಬರೆಯೆಡಕೆಯಂದೂರೊಳೊಳ್ಪಂ (ಲೋಕೋಪ. ೦೨-೦೭).

[ ದೇ. ॥ ತೆಲು. ಕೋಲಾ. ಪಿಟ್ಟ; ಗೊಂಡಿ. ಪಿಟೆ, ಪಿಟ್ಟೆ, ಪಿಟ್ಟೇ ]

**ಪೆಟ್ಟಿ$_3$**, ಪೆಂಟೆ$_4$, ಪೆಟ್ಟೆ$_2$ (ನಾ). ೧. = ಪೆಟ್ಟಯ : ಮುಜಾತಂದ ಪೆಟ್ಟಿ[ಪಾಠಾಂ. ಪಚ್ಚೆ]ಯಂ . . . ಎನುತ ಸಖಿಯರು ನೆರೆದು ಪೆಟ್ಟಿಗೆಗಳು ಮನೊಡೆದು (ಪಂಬರ. ೦೫-೩೫); ಚಂದ್ರಾನನೆ ತೊಡವಿನ ಪೆಟ್ಟಿಯ ನಾನಂದದಿನೀಯಲ್ (ದಶಕು. ೮-೦೦೯); ಅವರ ಕನಸಿನೊಳು ಶಂಕರ ನಿರಿಸಲಾ ಪುಸ್ತುಕವನೆದ್ದು ಪೆಟ್ಟಿಯೊಳ್ಕಂಡು (ಪೀಕೃಶ. ೭-೦೭-೮). ೨. (ಹಾವುಗಳನ್ನಿಡುವ, ಬಿದಿರಿನಿಂದ ಮಾಡಿದ) ಬುಟ್ಟಿ : ಹೇಳಿಗೆ : ಹಾವುಗಳಿಗಾದೊಡಂ ಸುಖವುಂಟೆ . . . ಜೋಗಿಗಳು ಮಂತ್ರದಿಂ ಪಿಡಿದು ಪೆಟ್ಟಿಯೊಳು ಮುದುಡಿ ತುಂಬಿ (ಪೀಕೃಶ. ೯-೨೫-೩೦). ೩. ಭರಣಿ ; **ಕರಂಡ** : ಅಲ್ಲಿರ್ದ ಪೆಟ್ಟಿಯೊಳಗಣ ಸಲ್ಲಲಿತಕ್ರಮುಕಪತ್ರಕರ್ಪೂರಮನಾಂ ಬಲ್ಲನಿತಂ ಕೊಂಡು (ದಶಕು. ೮-೩೦೫). **ಪೆಂಟೆ$_4$** : ೪. ಧಾನ್ಯಗಳನ್ನು ತುಂಬುವ ಗಳಗೆ ; ತೊಂಬೆ ; ಮೂಡೆ : ಧಾನ್ಯವನ್ನು ಪೆಂಟೆಯಲ್ಲಿಟ್ಟರೆ ಹುಳು ಬೀಳುವುದಿಲ್ಲ (ರೂಢಿ). **ಪೆಟ್ಟೆ$_2$** : ೧. ಪರಿಪರಿಯ ವಸ್ತುಗಳಂ ತುಂಬಿರುವ ಪೆಟ್ಟಿಗಳ ಪೆಸರ ದುಕೂಲಗಳ ಪಿಂಡಿಗಳ್ (ಶಕ್ತಿಸ. ೯-೩೭-೩). ೪. ಹಗ ಪೆಟ್ಟೆ ಕಣಜದೊಳಿಹ ಬಹುಧಾನ್ಯವ ಬಗೆಯದೆ ಸೂಜಿಯ ಕೊಟ್ಟು . . . ಜನವಂಜಿ ಜಗುಳಿದರು (ಕುಪವ. ೦೦-೯೮).

[ < ಸಂ. ಪೇಟೀ./ತಮಿ. ಪೆಟ್ಟಿ, ಪೊಟ್ಟಿ ; ಮಲ. ಪೆಟ್ಟಿ ; ಕೊಡ. ಪೊಟ್ಟಿ; ತೆಲು. ಪೆಟ್ಟೆ ]

**ಪೆಟ್ಟಿಕಾಳಿ** (ನಾ). ಪೆಟ್ಟಿಗೆಗಳ ಸಾಲು,—ಪಂಕ್ತಿ : ಮುಂದೆ ಸುವರ್ಣದ ಪೆಟ್ಟಿಕಾಳಿಯಗ್ಗಳಿಸಿ ಬರುತ್ತಮಿರೆ (ಪಂಬರ. ೦೫ ಸೂಕ್ತಿ).

[ < ಸಂ. ಪೇಟಿಕಾಲಿ ]

**ಪೆಟ್ಟಿಕ್ಕು** (ಕ್ರಿ). ಏಟು ಕೊಡು ; ಹೊಡೆ ; ಬಡಿ : ನೆತ್ತಿಯನು ನೀರ್ವಿಂದಿಗೆಯೊಳು ಟೊಂಗುಟೊಂಗೆನಲ್ಪೆಟ್ಟಿಕ್ಕಿ (ಪಾದೇಶು. ೨೫-೩೦).

[ ಪೆಟ್ಟು$_2$ + ಇಕ್ಕು ]

**ಪೆಟ್ಟಿಗೆ**, ಪೆಡಗೆ, ಪೆಡಿಗೆ, ಪೇಳಿಗೆ, ಪೇಳ್ಗೆ, ಹೆಡಗೆ, ಹೆಡಿಗೆ, ಹೇಳಿಗೆ (ನಾ). ೧. (ವಸ್ತುಗಳನ್ನು ತುಂಬಿಡಲು ಮಾಡಿದ, ಲೋಹ ಅಥವಾ ಮರದ) ಸಂದೂಕ : ಪೇಟಿಕಾ—ಪೆಟ್ಟಿಗೆ (ಕಮುದ. ೨೫೫ ಕ್ರಿಯೋ) ;

ಪೆಟ್ಟಿಗೆಯೊಳಗಿನ ಆಪ್ಪಾಭರಣ ನೀನೆ (ಪುರಂದ. ೦-೧೯೬-೦) : ನನ್ನ ಬಳಿಯಲ್ಲಿ ಒಂದು ಇಂಥಾ ದೊಡ್ಡ ಪೆಟ್ಟಿಗೆಯುಂಟು (ಮುಂಬಯಿ. ೯-೧೭೬). ೨. ಭರಣಿ; ಕರಂಡಕ : ಸಾದಿನ ಪೆಟ್ಟಿಗೆಗಳ ಮೃಗಮದದ ಕೊಂಬುಗಳ (ಗಿರಿಕ. ೧೦-೭೯ ವ) ; ಸಾರಪರಿಮಳವಸ್ತುಗಳ ಬಲುಭಾರಣೆಯ ಪೆಟ್ಟಿಗೆಗಳೊಟ್ಟಿತು (ಕುಮಾ.ಅ. ೦೭-೨೮) ; ಬಾರಿಸಿದ ಬಲು ಹೊಜೆಯ ಬಂಡಿಗಳೋರಣಿಸಿದವು ಪಯಣದಲಿ ಕರ್ಪೂರ ಕಸ್ತುರಿ ಕುಂಕುಮದ ಪೆಟ್ಟಿಗೆಯ ಸಾಲಿನಲಿ (ಕೊರಂ. ೦-೬-೩). **ಪೆಡಗೆ :** ೩. (ದೊಡ್ಡ) ಕುಕ್ಕೆ ; ಗೂಡೆ : ಪೊಱಗೊಂದು ಪೆ[ಹಾ.ಕಾಂ. ಹೆ]ಡಗೆ ಮಣ್ಣಂ ನೆಱೆ ಶೌಚಂಗೆಯ್ವರೊಳಗೆ ಪಲತೆಱದಡಗಂ ತುಱುಕುವರಿಂತುಟು ಶೌಚದ ತೆಱಂ (ಸಮಯ. ೧೯-೧೫೦) ; ಪರದರ ಪುತ್ರಿಗೆತ್ತಣದೊ ವೀಣೆಯ ಜಾಣಱವಂತು ಬಳ್ಳಮೊ ಪರಿಕಿಸೆ ಮಾನವೋ ಪೆಡಗೆಯೋ (ಮಹಾಸೀ. ೯-೧೦೨) ; ಮತ್ತೊಂದುದಿವಸಂ ಪೆಡಗೆಯೊಳಿಳ್ಳಂ ತುಂಬಿ ಆವ ಮಾನದೊಳಳದುಕೊಂಡಪರಾ ಮಾನದೊಳಿಣ್ಣಿ ಯನಳದು ಮಗುಟ್ದುವುದೆನಲ್ (ಪುಣ್ಯಾಸ್ರ. ೩-೩೦ ವ). **ಪೆಡಿಗೆ :** ೩. ಸಕಲಪುಷ್ಪಂಗಳಂ ಪೆಡಿಗೆಯೊಳುಮುಲ್ಲಾಸದಿಂ ತುಂಬಿ . . . ಕಳುಪಿದಳು (ಕೃಶುಪು. ೩-೯೩). **ಪೇಳಿಗೆ :** ೧. ಭೂಷಣಾದಿಗಳಂ ಪೇಳಿಗೆವೆರಸಿ ತೋರ್ಪ ಭಂಡಾರಿಗನೆನಿಸಿದನಮರನಜರನಾಸ್ಥಾಯಿಕೆಯೊಳ್ (ಶಾಂತಿಪು. ೧೧-೮೬೨) ; ದೇವಶರ್ಮಂ ತನಗೆ ತಕ್ಕನಿತು ದ್ರವ್ಯಮಂ ದಾನಂಗೆಯ್ಯಲ್ವೇಟ್ಕುಮೆಂದು ದೇವರ ಪೇಳಿಗೆಯೊಳಿಕ್ಕಿ (ಕಂಠಕಂ. ೬೦-೦೬) ; ಪಳಿಕಂ, ಪೇಳಿಗೆ . . . ಪುಳಂ— ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟ್ಟಿಯುಂ ಕುಳಂಗಳಾದುವು (ಶಮದ. ೨೨ ವೃತ್ತಿ). ೨. ಮಗಮಗಿಪ ಬಹುವಿಧಪರಿಮಳದ್ರವ್ಯಂಗಳ ಪೇಳಿಗೆಗಳಿಂದೆಯುಂ . . . ಸೊಗಯಿಸುತಿರ್ಪುದು (ಮಹಾಕ. ೭-೬ ವ). ೪. (ಹೂಳುವುದಕ್ಕೆ ಮುಂಚೆ) ಹೆಣವನ್ನಿಡುವ ಪೆಟ್ಟಿಗೆ : ಒಡಲ ಪೇಳಿಗೆಯಲಿ ಒಪ್ಪ ಮಾಡಲು ಇಲ್ಲ (ಶಂಗೀತ. ೦೯-೪). ೫. (ಹಾವುಗಳನ್ನಿಡುವ) ಬಿದಿರಿನಿಂದ ಮಾಡಿದ ಬುಟ್ಟಿ : "ಪೇಟಿಕೆ ಪೇಳಿಗೆ" (ಶಕುಂ. ೦೩) ; ಪಾವಿನ ಪೇಳಿಗೆಯಂ ಬಿಟ್ಟು ನೋಡಿದ ಮರ್ಕಟನಂತೆ (ಕಂಠಕಂ. ೬೫-೬) ; ಫಣಿವಲ್ಲಿಯ ಪೇಳಿಗೆಯುಮೆನಿಸಿದ ದೇವರಮಣೋದ್ಯಾನಮಂ . . . ಪುಗುತರ್ಪಾಗಳ್ (ಶಾಂತೀಶ್ವ. ೦೦-೭೮ ವ) ; ಪೇಳಿಗೆಯ ಪಾವಿನೊಂದು ಮಾಟಕ್ಕೆಯಿಂ ತಡೆಗಟ್ಟುವಟ್ಟರಾಗಿ ಮರಳ್ದು (ರಾಮಕಥಾ. ೯೭-೪). **ಪೇಳ್ಗಿ :** ೫. ವಿಟರೆರ್ದೆವಾವುಗಳ್ಗಿಟ್ಟ ಪೇಳ್ಗಿ (ಶಬ್ದಮ. ೫-೨೦). **ಹೆಡಗೆ :** ೩. ಒಂದು ಬೀಜವ ಬಿತ್ತಿದಡೆ ಮೂಱು ಫಲವಾಯಿತ್ತು . . . ಹೆಡಗೆಗೆ ಅಳವಡಿಸುವಾಗ ಐವತ್ತೊಂದು ಕೊಳಗವಾಯಿತ್ತು (ಬೋಕಪಟಾ. ೨೦೭-೬೬೦) ; ಮಾಱುವ ಹೆಡಗೆಯ ಹಣ್ಣು ಹಂಪಲ್ ಬಾಡುಕಾಯ್ಗೆ . . . ಕೊಟ್ಟರ್ (ಎಕ. V. ೨೦-೬೯ ; 1161) ; ಒಂದು ಹೆಡಗೆಯ ಬತ್ತವಂ ಭರದಿಂದ ಕಳುಹಲು (ಬಸವ. ೨೩-೭). **ಹೆಡಿಗೆ :** ೩. ಹಿಕ್ಕೆಯ ಹೆಡಿಗೆಯ ಬಿಟ್ಟು . . . ಮುಂದಕೆ ನಡೆತರಲು (ಅಕಕಂ. ೩೦೦-೪) ; ಮಾಱ ಬಂದ ಹಣ್ಣು ಹೆಡಿಗೆ ಸೂಱಗೊಂಬ (ಪುರಂದ. ೦-೧೧೯-೪) ; ಹಿಂಡಿಯ ಹೆಡಿಗೆಗೆ ಕೋಣನೆ ತಂದು (ಸರ್ವಜ್ಞ. ೦೯೬೩). **ಹೇಳಿಗೆ :** ೫. "ಸರ್ಪಪರ್ಯಂಕವೆನೆ ಹೇಳಿಗೆ" (ಶುಂಗರಾ. ೦೦೫-೮) ; ಮನವೇ ಸರ್ಪ ತನುವೇ ಹೇಳಿಗೆ (ಬಸವ. ೦೯೦) ; ರವಿಕುಲದ ವೈರಿಗಳ ಶುಭಕೀರ್ತಿಶಶಿಯಂ ಪಿಡಿವ ರಾಹುವಿಪ್ಪ ಹೇಳಿಗೆಯೊ (ಹಕಾ. ೦-೩೬) ; ಹೇಳಿಗೆಯ ಮುಚ್ಚುಳ ಜಾಱಿಸಿದ ಫಣಿಯಂತೆ ಭುಲ್ಲವಿಸಿತ್ತು ಕುರುಸೇನೆ (ಕುಮಾ.ಕ. ೨೩-೩೮). [< ಸಂ. ಪೇಟಿಕಾ. / ತುಳು. ಪೆಟ್ಟಿಗೆ]

**ಪೆಟ್ಟಿಗೆಗಾಡಿ** (ನಾ). ಮುಚ್ಚುವ ಮರದ ಬಾಗಿಲುಗಳುಳ್ಳ ಗಾಡಿ,— ಬಂಡಿ : ಸಾರೆಟ್, ಬಗ್ಗಿ, ಪೆಟ್ಟಿಗೆಗಾಡಿ ಮುಂತಾದ್ದು ಕಲಶಕುಚ್ಚಿನ ಗೆಜ್ಜೆ ತೇರಿಗೂ ಹೆಸರು (ಸಿದ್ಧಾಂತಿ. ೨೫೨); ಘೋಷಾಪದ್ಧತಿಯಿರುವ ಕೆಲವರು ಹಿಂದೆ ಪೆಟ್ಟಿಗೆಗಾಡಿಗಳಲ್ಲಿ ಹೋಗುತ್ತಿದ್ದರು (ಕೂಂ). [ಪೆಟ್ಟಿಗೆ + ಗಾಡಿ₁]

**ಪೆಟ್ಟಿಗೆಬಂಡಿ** (ನಾ). = ಪೆಟ್ಟಿಗೆಗಾಡಿ : ಪೆಟ್ಟಿಗೆಬಂಡಿಗಳು ೪, ಚಕ್ಕಡಾ ಬಂಡಿಗಳು ೫೦ ((ಗುರುದ. ೦೦). [ಪೆಟ್ಟಿಗೆ + ಬಂಡಿ₁]

**ಪೆಟ್ಟಿಯ** 'ಪೆಟ್ಟಿಯಂ' ನೋ.

**ಪೆಟ್ಟಿಲು** (ನಾ). (?) : ಯೆರಡು ಮುಡಿ ಕಾಡೆ ಪೆಟ್ಟಿಲ ಭೂಮಿಯಿಂದ (ಸೌಇಂ. ೦೯೩೦, ಕುಂಗಕೂರು. ೫೨೬-೨೨ ; 1376). [?]

**ಪೆಟ್ಟಿಸು, ಹೆಟ್ಟಿಸು** (ಕ್ರಿ). ೧. (ನಾಣ್ಯವನ್ನು) ಮುದ್ರಿಸು,— ತಟ್ಟಿಸು : ಸೇದಿರಾಜನು ಸೂಕರನಂಗ ಸುವರ್ಣವಾಗಲು ಕಂಡು ಹೊನ್ನ ಪೆಟ್ಟಿಸಿ [ಹಾ.ಕಾಂ. ಘಟ್ಟಿಸಿ, ಪುಟ್ಟಿಸಿ] ವರಹನೆಂದು ಪೆಸರಿಟ್ಟು (ಭೈರಸೂ. I, ೫೩೬) ; ಈ ನಾಣ್ಯಗಳಲ್ಲಿ ಪರದೇಶದಿಂದ ಇಲ್ಲಿಗೆ ಬಂದ ಮತ್ತು ನಮ್ಮ ದೇಶದಲ್ಲಿಯೇ ಪೆಟ್ಟಿಸಿದ ನಾಣ್ಯಗಳೆರಡೂ ಸೇರಿವೆ (ಕೃಶಾಇ. I, XI ಕೃಸ್ತಾವನೆ). **ಹೆಟ್ಟಿಸು :** ೨. ತಿವಿಸು ; ಚುಚ್ಚಿಸಂ : ಕಂಡವರ ಕೈಯಲ್ಲಿ ಎದೆಯ ಹೆಟ್ಟಿಸಿಕೊಂಬಂತೆ (ಕೋಲಿಕಾಂ. ಕ. ೦೯-೬೨). [ಪೆಟ್ಟು₁ + —ಇಸು₃]

**ಪೆಟ್ಟು₁, ಹೆಟ್ಟು** (ಕ್ರಿ). ೧. (ಕೈ, ದೊಣ್ಣೆ, ಸುತ್ತಿಗೆ ಮುಂತಾದುವುಗಳಿಂದ) ಹೊಡೆ,—ಬಡಿ : ಗುಡಿಯನೆತ್ತುವರಂತೆ ಗೂಂಟಮಂ ಪೆಟ್ಟುವರ್ (ರಪರ್ಣಮ್ಮ. ೩-೭೩); ತೊಲೆಯಂ ಹೇಱ ಕಬ್ಬುನವ ಪೆಟ್ಟಿ ಸಂಕಲೆಗೆಯ್ದು (ಸಿದ್ಧೇಪು. ೦೯-೬೭) ; ಕುದುರೆಯ ಗೂಟವನ್ನು ನೆಲದ ಮೇಲೆ ಇರಿಸಿ ಗಟ್ಟಿಯಾಗಿ ಪೆಟ್ಟಿದನು (ಚಕ್ರಶಾ. ೦೦). ೨. ಚುಚ್ಚು ; ಇರಿ ; ನಾಟುವಂತೆ ಮಾಡು : ಸಂದುಸಂದುಗಳೊಳ್ ಸೂಜಿಯಂ ಪೆಟ್ಟಿಯುಂ (ರಪರ್ಣಮ್ಮ. ೩-೭೩) ; ಒಣಗಿದ ಮರದ ಮೊನೆಯ ಕೊಂಬಂ ತಂದು ಮುನೀಶ್ವರನ ಜಂಘೆಯೊಳ್ ಪೆಟ್ಟುವುದುಂ (ಪುಣ್ಯಾಸ್ರ. ೩-೯೫ ವ). ೩. (ನಾಣ್ಯವನ್ನು) ಮುದ್ರಿಸು : ಪೆಟ್ಟೆಂಬ ನುಡಿ ಟಂಕದೊಳಗೆ . . . ಅಲ್ಲದೆ ಬೇಱ ದಿಟ್ಟಸಲಾ ನಾಡೊಳಿಲ್ಲ (ಕಂಶಶ. ೨-೦೫). 'ಪೆಟ್ಟಿಸು' ಪರಾ. ೪. ಸಂಭೋಗಿಸು : (ಕ). **ಹೆಟ್ಟು :** ೨. ಹೆಟ್ಟಮರ್ಮದಲ್ಲಿ ಲೋಹಜಾದಿರಸವನೆಱದು ಸುಡುವರೆಯ್ದೆ (ಶಾಸಂಕ. ೬-೧೯೪) ; ಅಟ್ಟಿ ಬಹ ಪಾಸವನ ಕೊಂತದಿ ಹೆಟ್ಟಿದನು (ಅಂಬಿಕಾ. ೨೨-೦೨) ; ಬೇಗ ಬೇಗ ಹೆಜ್ಜೆ ಇಡುವ ಅಂದರೆ ಮುಳ್ಳು ಹೆಟ್ಟಿದ ನೋವು (ಶದ್ವಿಸ. ೬೪). ೪. (ಕ). ೫. ಬಲವಂತದಿಂದ ಒಳಸೇರಿಸಂ ; ತುರುಕು : ಕಿಡಹಲರಿದೀ ಖಳನನೆನೆ ಕೇಳ್ದೊಡನೆ ರಾಘವ ಕಡಿದು ಬಸುಱೊಳು ತಲೆಯ ಹೆಟ್ಟಿದನು (ಕೌಶಿರಾ. ೫-೩೦) ; ಅಗುಳು ನುಂಗಲಿಕ್ಕೆ ತೀರದವನ ಬಾಯಲ್ಲಿ ಕಡುಬು ಹೆಟ್ಟಿದ (ಗಾದೆ). ೬. ಮಂಕ್ಯಿಯಿಂದ ಕುಟ್ಟು ; ಗುದ್ದು : ಮಕ್ಕಳ ಮಂಡೆ ಬೋರೆಹೋಹಂದದಿ ಹೆಟ್ಟಿ (ಕೇಮಂ. ೦೫-೦೦೬) ; ನೊಸಲೊಡೆವಂತೆ ಹೆಟ್ಟಿದ ವಜ್ರಮುಷ್ಟಿಯಲಿ (ಸೋಹಕ. ೦೨-೮೮) ; ನೆತ್ತಿಯ ಮೇಲೆ ಹೆಟ್ಟಿ ನೀನುದಕವಂ ತಂದೀವುದೆನೆ (ಗುರುಶಾ. ೫-೬೫).

[ದೇ.II ತೆಲು. ಪೆಟ್ಟು ; ಕೋತ. ಪೆಟ್]

**ಪೆಟ್ಟು₂** (ನಾ). ೧. ಏಟು ; ಹೊಡೆತ ; ಪ್ರಹಾರ : ಪೆಟ್ಟನಿಕ್ಕನೆ ಪುಲಂಬಾಸುರನ ಬಾಳಹರಣಗಳೊಂಕಿ ಎಗೆ ಕೂಸಾಟದಿ (ಮದೇಪು. ೦೯-೦೨); ಸಾಯದರಿಲ್ಲ ಖಂಡೆಯದ ಪೆಟ್ಟಲಿ (ಕಂಶಶ. ೦೫-೪೮) ; ನಿಪುಣೆಕೆಯ ಕಠೋರಧಿಕ್ಕಾರವಾಕ್ಯಗಳ ಪೆಟ್ಟನ್ನು ಕ್ಷಣಕಾಲವೂ ಮರೆಯಲಾಗಲಿಲ್ಲ (ಶಾಕಿ. ೩೦೨). ೨. (ಆಲಂ) ನೋವು ; ಅಳಲು ; ವ್ಯಥೆ : ನೀನು ಪೆಟ್ಟನ್ನು ಅನುಭವಿಸಿದ್ದು ನನಗೆ ತುಂಬಾ ದುಃಖದ ಸಂಗತಿಯಾಗಿದೆ (ರಂಗರೋ. ೦೦).

[< ಪೆಟ್ಟು₁. / ತುಳು. ಕೊಡ. ಕೋಲಾ. ಪೆಟ್ ; ತೆಲು. ಪೆಟ್ಟು]

**ಪೆಟ್ಟು₃** (ನಾ). ೧. ಸಾಹಸ ; ಪರಾಕ್ರಮ : "ದಪ್ಪ ಪೆಟ್ಟುದಟಾರ್ಪು ಸಾಸ ಪೆರ್ಚುರ್ಬ್ಬಟೆಯದಪ್ಪುದು" (ಅಭಿ.ಕುಂ. ೩೫) ; "ಪನ್ನತಿಕೆ ಪೆಟ್ಟು . . . ಅಣ್ಮೆಂದೆನ್ನಲ್ ಪರಾಕ್ರಮಾಖ್ಯಂ" (ಕಲಕಂ. ೦೨೫). ೨. ಸೊಕ್ಕು ; ಗರ್ವ : "ಅದಟು ದಪ್ಪಂ ಪೆಟ್ಟು[ಹಾ.ಕಾಂ. ಪೆಂಪು] ಪೆರ್ಚೆಂದು ಗರ್ವಮಪ್ಪುದು" (ಕಬ್ಬಿಕೈ. ೬೫). 'ಪೆಟ್ಟುವೆರ್ಚು₁' ಪರಾ.

**ಪೆಟ್ಟುಗೆ,** ಹೆಟ್ಟಗೆ, ಹೆಟ್ಟಿಗ್ಗೆ$_1$, ಹೆಟ್ಟುಗೆ (ನಾ). ೧. ಹೆಂಡತಿ ; ಪತ್ನಿ : ಪೆಟ್ಟಗ ಶಾಳಿಮಯಂಗಂ ಪೆ[ಟ್ಟು]ಗೆ ಶುಚಿ ಮಾರಕಬ್ಬೆಗಂ . . . ಪುಟ್ಟಿದ ನೊಳ್ಗ್ಗಣ್ಣನೆನಿಸಿ ತಿಪ್ಪಗವುಂಣ್ಣ (ಕಇ. I, ೨೪–೨೬ ; 1148). **ಹೆಟ್ಟಗೆ : ೨.** ಹೆಂಗಸು ; ಸ್ತ್ರೀ : ಜಗದೊಳಿನ್ನಾವ ಹೆಟ್ಟಗೆ ಪಡೆದಳೊ (ಪಂಕಾರಾ. ೩-೯-೯). **ಹೆಟ್ಟಿಗ್ಗೆ$_1$ :** ೧. ಭೂಪಾಲರೆಲ್ಲರು . . . ಹೆಟ್ಟಿಗೆಯರ ಹಂಗು ಬಿಟ್ಟೋಡಿ ಭೀಕರಡವಿಯ . . . ಹೊಕ್ಕು (ಕೈರವೀ. ೦–೨೯೦). ೨. ಹೆಟ್ಟಿಗೆ ಯವಮಳ ಶಶಿಮೊಗದ ಬೆಳಗಿಂದೆ ಪೂರಮಟ್ಟು ಬರುತಿರ್ದರು (ಪಪಪೋ. ೦೦–೨೬). **ಹೆಟ್ಟುಗೆ :** ೧. ಹೆಟ್ಟುಗೆಗೆ ಗುಜ್ಜುಗರೆದುದು ಪೆಟ್ಟುವ ಪೆಲ್ಲಡೆ (ಅಸಂಕೃ. ೦೨-೬೫) ; ಹೆಟ್ಟುಗೆಗೆ ಪೇಟ್ಟ ಮಾತ್ರಂ ಪೊಟ್ಟೆಯು ಶಿಶು ಕೇಳ್ದಂದೆಂಬುದಿದು ವಿಪರೀತಂ(ರರ್ಜಕ. ೭-೯). ೨. "ಹೆಟ್ಟುಗೆಯೆಂದು ವನಿತೆ" (ಕಶಾ.೬೨–೩೮೪); ಹೆಟ್ಟುಗೆಯರೆಲ್ಲ ಮೊದಲಿಸಿ ಮುವತ್ತುಳಿಗೊಂಡು (ಹಕಶಾ. ೩-೫೦) ; ಅಜಂ ಕಪ್ಪಿನ ನಲ್ಪೊಟ್ಟಟ್ಟಂತೆವೊಲಂತಾ ಹೆಟ್ಟುಗೆಯು ಕನೀನಿಕಂ ಗಳ್ (ಉಪ್ಪಟಿ. ೬–೦೦೬). ೩. ಗೆಳತಿ ; ಸಖಿ : " ಗೆಳತಿ ಹೆಟ್ಟುಗೆ ಸಖಿಗೆ ತೋರ್ಪ ನಾಮಂ " (ಕಬ್ಬಿಕೈ. ೨೮) ; " ಗೆಳತಿ ಹೆಟ್ಟುಗೆಯೆನಲ್ ಸಖಿ " (ಕಬ್ಬಿಕುಂ. ೭೫). ೪. ಕನ್ಯೆ : ಹೆಟ್ಟುಗೆಗೆ ಶಿವಯೋಗರಾಜ್ಯದ ಪಟ್ಟಗಟ್ಟುವ ರಂತೆ ನೊಸಲಿನೊಳಿಟ್ಟರವುಲವಿಭೂತಿಯನು . . . ಸುಮತಿ ನಿರ್ಮಳರು (ಶ್ರಕುಂ. ೯-೩). ೫. ಹೆಣ್ಣುಮಗು,–ಕೂಸು : ಪುತ್ರನನು ಬೇಡಿದೊಡೆ ದೇವತೆಯಿತ್ತಳೇ ಹೆಟ್ಟುಗೆಯನು (ಶಾಕ್ಕಶಾ. ೨೦–೨೦).

**ಪೆಟ್ಟುಮಣೆ,** **ಪೆಟ್ಟೆಮಣೆ** (ನಾ). ೧. = ಪೆಟ್ಟಣಿಗೆ : (*). **ಪೆಟ್ಟೆಮಣೆ :** ೨. (ರಥದ) ಚಕ್ರಗಳ ವೇಗವನ್ನು ತಡೆಯುವ ಒಂದು ಬಗೆಯ ಸಾಧನ ; ಗೊದಮ : ಅವನ ಆತುರತೆಯ ತೇರಿನ ಗಾಲಿಗೆ ಬಲವಾದ ಪೆಟ್ಟೆಮಣೆ ಹಾಕಿದಂತಾಗಿತ್ತು ಹೆಂಡತಿಯ ಹೇಳಿಕೆ (ಮರಿಸು. ೨೪೪). [ಪೆಟ್ಟು$_1$ + ಮಣೆ]

**ಪೆಟ್ಟುವೆರ್ಚು$_1$** (ಕ್ರಿ). ೧. ಅಹಂಕಾರಪಡು ; ಗರ್ವಿಸು ; ಸೊಕ್ಕು : "ಪೆಟ್ಟುವೆರ್ಚು (ಪೆಟ್ಟುಪೆರ್ಚು) — ದರ್ಪೇ (ಗರ್ವಪಡು), (ಬೆಟ್ಟು ವೆರ್ಚು) " (ಕಮುದಾ) ; ಮರಗಳೆ ಮುನ್ನಿತ್ತಿನಿಸಂ ಮರವಟ್ಟವು ಪೆಟ್ಟುವೆರ್ಚಿ ಕುದಿದಿತ್ತೊಡವಿಮಾ ಧರಣಿತಲಕ್ಕವಿವೇಕಿಯಮರವಾನಸನೀವ ಚಾಗಮೇಂ ನಿಮಿರ್ದಪುದೇ (ಆದಿಪು. ೬-೫೦) ; ಪೆಟ್ಟುವೆರ್ಚಿ ಕಡುವೆಸನಂ ಮಾಟ್ಟಿ ಸೊಸೆ ಮಾವನ ಮಂಡೆಯಂ ಬೋಳಿಸಿದಳೆಂಬಂತೆ (ರಶಾರಾಪ್ಪು. ೬–೫೪). ೨. ದೊಡ್ಡದಾಗು ; ಉಬ್ಬು : ಬೆಂದ ಮುತ್ತುಗಳಂತೆ ಪೆಟ್ಟುವೆರ್ಚದೆ (ರಶಾರಾಪ್ಪು. ೦೦–೬೭). [ಪೆಟ್ಟು$_3$ + ಪೆರ್ಚು$_1$]

**ಪೆಟ್ಟುವೆರ್ಚು$_2$** (ನಾ). ಅತ್ಯಧಿಕವಾದ ಸಾಹಸ,—ಕೆಚ್ಚು : " ಪನ್ನತಿಕೆ, ಪೆಟ್ಟುವೆರ್ಚು, ತಕ್ಕು . . . ಅಣ್ಮು— ಈ ೮ ಪರಾಕ್ರಮಂ " (ಕಶಸಾ. ೫೯–೭೬೩). [ಪೆಟ್ಟು$_3$ + ಪೆರ್ಚು$_2$]

**ಪೆಟ್ಟೆ$_1$** ' ಪೆಂಟೆ$_1$ ' ನೋ.

**ಪೆಟ್ಟೆ$_2$** ' ಪೆಟ್ಟೆ$_3$ ' ನೋ.

**ಪೆಟ್ಟೆಮಣೆ** ' ಪೆಟ್ಟುಮಣೆ ' ನೋ.

**ಪೆಟ್ರೋಮ್ಯಾಕ್ಸ್** (ನಾ). ಸೀಮೆಎಣ್ಣೆಯ ಸಹಾಯದಿಂದ (ಉಜ್ವಲ ವಾಗಿ) ಉರಿಯುವ ದೀಪ : ಪೆಟ್ರೋಮ್ಯಾಕ್ಸ ಹಚ್ಚಿಸಿ ತರಿಸಲಾಯಿತು (ಶುಂಬಿಕೊ. ೯೩). [← ಇಂ. Petro + ?]

**ಪೆಟ್ರೋಲ್** 'ಪೆಟ್ರೋಲು' ನೋ.

**ಪೆಟ್ರೋಲಿಯಂ** (ನಾ). ಒಂದು ಬಗೆಯ ಖನಿಜತೈಲ : ಕರೆಯು ಹೋಗ ದಿದ್ದರೆ . . . ಬಿಳಿ ಪೆಟ್ರೋಲಿಯಂ ಅಥವಾ ಬೆನ್‌ಝಿನ್ ಉಪಯೋಗಿಸಿ ಎಣ್ಣೆ ಜಿಡ್ಡನ್ನು ತೆಗೆಯಬಹುದು (ಗೃಕಾ. ೯೦). [← ಇಂ. Petroleum]

**ಪೆಟ್ರೋಲು, ಪೆಟ್ರೋಲ್** (ನಾ). (ಮೋಟಾರಂ ಮುಂತಾದ ಸ್ವಯಂ ಚಾಲಿತ ವಾಹನಗಳಿಗೆ ಉಪಯೋಗಿಸುವ) ಶುದ್ಧೀಕರಿಸಿದ ಪೆಟ್ರೋಲಿಯಂ ಎಣ್ಣೆ ; ಕಲ್ಲೆಣ್ಣೆ : ಪೆಟ್ರೋಲು ತುಂಬಿಸಿಕೊಳ್ಳುವುದಕ್ಕಾಗಿ ಧಾರವಾಡದಲ್ಲಿ ಮೋಟಾರು ನಿಂತುಕೊಂಡಿದ್ದಾಗ ಆಕೆಯ ಚಿತ್ತ ಹೊಯ್ದಾಡತೊಡಗಿದ್ದಿತು (ಬೋಹಾ. ೪೨೬) ; ಹುರಿದ ಬತ್ತವನೆತ್ತಿ ಚೆಲ್ಲಿ . . . ಪೆಟ್ರೋಲ ಸುರಿದೆರೆಲೆ ಗಿಡವಾಗಿ ನಳನಳಿಸಿ ಬೆಳೆ ಮರವಾಗಿ ಎನುವ ಗೆಳೆಯನೆ ! (ಪಕಾಂ. ೮೪–೫). **ಪೆಟ್ರೋಲ್ :** ಇವನಪ್ಪ ಕೆಂಪೇಗೌಡನ ರಸ್ತೆ ಪೆಟ್ರೋಲ್ ಪಂಪಿನಾಗೆ ಕಸ ಗುಡಿಸುತ್ತಿದ್ದುದು ನಾನರಿಯೆನಾ ? (ಬಂಗಾ. ೨೬). [← ಇಂ. Petrol]

**ಪೆಟ್ಲು** 'ಪೆಟಲ್' ನೋ.

**ಪೆಟ್ಲುತುರುವೆ** (ನಾ). (ಪೆಟಲಿಗೆ ಹಾಕಲು ಬಳಸುವ ಕಾಯಿಗಳನ್ನು ಬಿಡುವ) ಒಂದು ಬಗೆಯ ಸಸ್ಯ : (*). [ಪೆಟ್ಲು (<ಪೆಟಲ್) + ತುರುವೆ$_2$ (<ತುಂಬುವೆ)]

**ಪೆಟ್ಲುಪ್ಪು** 'ಪೆಟಲುಪ್ಪು' ನೋ.

**ಪೆಠಾರಿ** 'ಪಿಟಾರಿ' ನೋ.

**ಪೆಡ, ಹೆಡ$_1$** (ಸಪೂರೂ). 'ಪೆಱಗು' ಎಂಬ ನಾಮಪದಕ್ಕೆ ಸಮಾಸದಲ್ಲಿ ಬರುವ ಆದೇಶರೂಪ : ಪೆಡವೆಂಬಾದೇಶಂ ಬಂದೆಡೆಗೊಳ್ಗುಂ ಪೆಱಗೆನಿಪ್ಪ ಶಬ್ದದೊಳ್ (ಶಮದ. ೦೭೩). 'ಪೆಡಂಗೆಯ್', 'ಪೆಡಂಮುಗುಟಿ' ಪರಾ. P ' ಡ ', ' ಱ 'ಕಾರಗಳಿಗಿರುವಂತೆ ವ್ಯಾಕರಣಬದ್ಧವಾದ ಹತ್ತಿರದ ಸಂಬಂಧವು, ' ಡ ' , ' ಱ 'ಕಾರಗಳಿಗಿಲ್ಲದಿರುವುದರಿಂದ, ' ಪೆಱಗು ' ಶಬ್ದದ ' ಸಪೂರೂ 'ಗಳಾದ ' ಪೆಡ ', ' ಪೆಱ ' ರೂಪ ಗಳನ್ನು ಪ್ರತ್ಯೇಕವಾಗಿ ಕೊಟ್ಟಿದೆ. **ಹೆಡ$_1$ :** 'ಹೆಡಕತ್ತು' ಪರಾ. **ಪೆಡಪೆಡಸಾರ್** = ಹಿಂದೆ ಹಿಂದೆ ಹೋಗು ; ಹಿಂಬಾಲಿಸು : ಪೆಡಪೆಡಸಾರ್ದು ಸಾರ್ದವನ ನೇಹಿಗರೊಳ್ ನೆಱೆ ನೇಹವಾಂತು (ಇಳ. ೩–೦೬೦). [<ಪೆಱಗು. / ತೆಲು. ಪೆಡ; ಪರ್ಜಿ. ಪಿಟ್ರಿಲ್]

**ಪೆಡಂಗಯ್** 'ಪೆಡಂಗೆಯ್' ನೋ.

**ಪೆಡಂಗಲಸು** (ಕ್ರಿ). ಮುಗ್ಗರಿಸು ; ನಡೆಯು ಕುಂಠಿತವಾಗು : ಕಿಱು ವೇಂಟೆಯ ನಾಯ್ಗಳಿಂದ [ಮು]ಟ್ಟುಪಟ್ಟ ಪೆಣ್ಣೊಲನಂತೆ ಭಯಮನೆಡ ಗಲಿಸಿ ಬೆಳ್ಳೋಟವೋಡಿ ಜವಂಗೆಟ್ಟು ಕಾಲ್ ಪೆಡಂಗಲಸೆ ಬೀಱುತ್ತು ಮೇಱುತ್ತುಮೆಂತಾನುಮೆಯ್ದಿ (ಶಾಂತಿಪು. ೭–೯೦ ವ). 'ಎಡಗಲಿಸು' ಪರಾ. [ಪೆಡ (<ಪೆಱಗು) + ಕಲಸ್$_1$]

**ಪೆಡಂಗಾಲ್, ಪೆಡಗಾಲ್** (ನಾ). ೧. ಪಾದದ ಹಿಂಭಾಗ ; ಹಿಂಗಾಲು. ೨. ಚತುಷ್ಪಾದಿಗಳಿಗೆ ಇರುವ ಹಿಂಭಾಗದ ಕಾಲು : ಪೆಡಂ ಗಾಲೊಳಡಗಿದ ಬಾಲಮುಂ ಬಟ್ಟಿತ್ತಾದ ಬರಿಯುಂ . . . ತೋಱುತ್ತುಂ ಸರಳಿಸಿ ಪಾಯ್ದು ಪೋಪ ಪುಳ್ಳೆಮಂದಿಯುಂ ಕಂಡು (ಲೀಲಾವ. ೬–೦೭ ವ). **ಪೆಡಗಾಲ್:** ೧. ಪೆಡಗಾಲ್, ಪೆಡಗಯ್ (ಶಬ್ದಾನು. ೩೬೮ ಪ್ರಯೋ). [ಪೆಡ (<ಪೆಱಗು) + ಕಾಲ್$_1$]

**ಪೆಡಂಗೆಯ್,** ಪೆಡಂಗಯ್, ಪೆಡಗಯ್, ಪೆಡಗೆಯ್, ಪೆಡಗ್ಗೆ, ಹೆಡ ಗಯ್, ಹೆಡಗ್ಗೆ (ನಾ). ಕೈಯ ಹಿಂಭಾಗ; ಹಿಂಗೈ: ಆತನುಂ ಪೋಗಿಯು ಪರಾಜಿತನೊಡನೆ ಮಹಾಯುದ್ಧಂಗೆಯ್ದು ಗೆಲ್ದು ಪೆಡಂಗೆಯ್ಯುಡಿಯಿಂ ಕಟ್ಟಿ (ವಡ್ಡಾರಾ. ೫೦-೨೫) ; ಅಂತೊರ್ವನಂ ಪೆಡಂಗೆಯ್ಯುಡಿಯಲ್ಕಟ್ಟಿ ಪೊಱಲ ಜನಂಗಳೆಲ್ಲಂ ನೆರೆದು ನುಡಿಯುತ್ತುಂ (ಸುಕುಮಾ. ೬–೩೩ ವ). **ಪೆಡಂಗಯ್ :** ಗಂಡನುಮಂ ಪೆಂಡತಿಯುಮನೊಡಗೂಡಿ ಇರ್ವರುಮಂ ಪೆಡಂ ಗಯ್ಯುಡಿಯೆ ಕಟ್ಟಿಕೊಂಡು ಪೋಪರಂ ಕಂಡು (ವಡ್ಡಾರಾ. ೨೦–೨೫) ; ಪೆಡಮಾದೇಶಕ್ಕೆ—ಪೆಡಂಗಯ್, ಪೆಡಂದಲೆ (ಶಮದ. ೦೭೩ ಪ್ರಯೋ). **ಪೆಡಗಯ್ :** ತಳಾಱರ್ ಪಱಿತಂದು ಪರದನಂ ಪಿಡಿದು ಪೆಡಗಯ್ಯಂ ಕಟ್ಟಿ ಧರ್ಮಾಧಿಕರಣರಲ್ಲಿಗುಯ್ಯೆ (ಪಂಕಶಂ. ೦೯೨–೩) ; ಅಬಿಂದುವಿಗೆ_ಪೆಡಗಯ್, ಪೆಡದಲೆ (ಶಮದ. ೦೭೩ ಪ್ರಯೋ) ; ಪೆಡಗಯ್ಯ ಕಟ್ಟಿಸಿ . . . ನಡೆಯಿಸಿದನು

(ಕುರಾಶಾಂ. ೩೬–೬೩). **ಪೆಡಗೆಯ್** : ಪೆಡಗೆಯ್ಯಂ ಪಿಡಿದೀಟ್ಟು ಕಟ್ಟಿ . . . ಕರಸಿಮೆಂದಂ (ದಕಚ. ೦೨–೯೮). **ಪೆಡಗೈ** : ಆ ಪಾರ್ವನು ಪಿಡಿದು ಪೆಡಗೈಯಂ ಕಟ್ಟಿ ತಂದೊಪ್ಪಿಸುವುದುಂ (ಶಂಕಕಂ. ೦೦೨–೦೬) ; ಮೋಹಾಸುರನ ಪೆಡಗೈಯನು ಕಟ್ಟಿ . . . ಕೆಡಹಿದರು (ಶ್ರೀಪುಸಾಂ. ೨೩–೨೫೬) : ವ್ಯಾಡನೆಲ್ಲರಂ ಕರೆಸಿ ಪೆಡೆ[ಡ]ಗೈಗಳಂ ಬಿಡಿಸೆ ಸ್ತುತಿಸಿದರ್ ಭಕ್ತಿಯಿಂದೆ (ಕಂಕು. ೩೨–೬೯). **ಪೆಡಗಯ್** : ಮತ್ತೊಂದು ಬಾಣವ ಬಿಡಲಾಗಿ ಪದ್ಮನಾಭನ ಪೆಡೆ[ಡ]ಗಯ್ಯ ಕಟ್ಟಿತ್ತು (ಕವಾವ. ೩೭–೦೮೯) ; ಕಟ್ಟು ಹೆಡಗಯ್ಯನಂಬುಜದ ಹೊಸನೂಲಿಂದೆ (ನಂಬಿಕ. ೦೫–೬೩) ; ಹೆಡಗಯ್ಯ ಬಿಗಿದ ನೇಣಂ ಕೊಯ್ದು ಬಿಸುಟು (ಹತಕಾ. ೦೩–೦೨). **ಹೆಡಗೈ** : ನಳಿನಮುಖಿ ಹೆಡಗೈಯ ಬಿಡು (ಕುವ್ಯಾಕ. ೨೦–೪) ; ಹೆಡಗೈಯ ಬಿಗಿದು ಕಟ್ಟಿದ ಕಳ್ಳಗಾ ಟಿಟ್ಟು ಸಡಲಿದಪ್ಪಕೆ ಸುಖವಹುದು (ಭರತ. ೧೮–೪೩) : ಒರ್ವ ಕಳ್ಳನ ಪಿಡಿದು ಹೆಡಗೈಯ ಕಟ್ಟಿ ಕೊಂಡೊಯ್ಯುತಿರಲು (ಗುರುಚಾ. ೭–೯೦) .

[ಪೆಡ(<ಪೆಱಗು)+ಕೆಯ್$_2$]

**ಪೆಡಂಗೈಸು** (ಕ್ರಿ). ಹಿಮ್ಮುಖವಾಗಿ ಮಾಡು : ಮುಳಿಸಿಂದಂ ಭೂತ ವೃಂದಂ ಕೊಳುಗುಳದೆಡೆಯೊಳ್ ಸಿಲ್ಕಿದಸ್ವಪ್ನರಂ . . . ತತ್ಕೇಶದಿಂದಂ ಬಿಗಿದಿಗಿದುರದಾರ್ದುಂ ಪೆಡಂಗೈಸಿ ನಿಂತಾಗಳೆ ಕಟ್ಟುತ್ತುಂ (ಶೀರಶ. ೦೨–೬೯).

[ಪೆಡ (< ಪೆಱಗು) + ಕೈಸು (< ಕೆಯ್ಸು)]

**ಪೆಡಂದಲೆ, ಪೆಡತಲೆ, ಪೆಡದಲೆ, ಹೆಡತಲೆ, ಹೆಡದಲೆ** (ನಾ). ೧. ತಲೆಯ ಹಿಂಭಾಗ; ಹಿಂದಲೆ : ಪೆಡವಾದೇಶಕ್ಕೆ—ಪೆಡಂಗಯ್, ಪೆಡಂದಲೆ (ಶಮಜ. ೦೭೩ ಪ್ರಯೋ). **ಪೆಡತಲೆ** : ೧. ಪಡಿಯಱನಿಂದವೆಟಯಿಸಿ ಪೆಡತಲೆಯುಂ ಪಿಡಿದು ನೂಂಕುತ್ತಮರಮನೆಯಿಂದಂ ಪೊಱಮಡಿಸಿ (ವಡ್ಡಾರಾ. ೦೬೬–೨); ನುಡಿಯೆ ನುಡಿಯೆ ನಾಲಗೆಯಂ ಪಿಡಿದು ಪೆಡತಲೆ ಯಿಂದುರ್ಚುವರಂ (ಅಧಿಕೃ. ೫–೬೫ ವ); ನೀವಿತ್ತಂ ಬರಲಾಗದೆಂದು ಪೆಡತಲೆಯಂ ಪಿಡಿದು ನೂಂಕಿ (ಪುಣ್ಯಾಸ್ರ. ೯–೫ ವ); ಽಡುಗೋಪದಿಂದ ತನ್ನಯ ಪೆಡತಲೆಯಂ ಪೊಡೆದು ಕಡಿವೆನೆಂದೆನುತಿರ್ದಾ ಕೊಡಲಿಯ ಕೈಯಂ ಪಿಡಿದಂ ವ್ಯಾಡಂ (ಶ್ರೀಪು. ೨೨–೨೪). ೨. ಕತ್ತಿನ ಹಿಂಭಾಗ; ಹೆಡಕು; ಹೆಗ್ಗತ್ತು : ಸತಿಗೆ ಭಂಗವಂ ಮಾಡಿದನಂ . . . ಪೆಡತಲೆಯಂ ಮೆಟ್ಟಿ ಕಿಬ್ಬುಕೊಳ್ವಿಂ ತಲೆಯಂ (ಶಂದಾಕಚಾ. ೯–೪೯). **ಪೆಡದಲೆ** : ೧. ಪೆಡದಲೆಯ ಪಾವು ಸೋಂಕಿಲ ಕಿಡಿ ನಣ್ಪಿನ ಮೃತ್ಯು (ಜಗಂ. ೫–೬೦); ಅಬಿಂದುವಿಗೆ ಪೆಡಗಯ್, ಪೆಡದಲೆ (ಶಮಜ. ೦೭೩ ಪ್ರಯೋ). ೨. ಚರನಂ ಪೆಡದಲೆಯಂ ಪಿಡಿದು ನೂಂಕಿಸಿದನವನೀಶಂ (ಧರಕು. ೬–೬೦೯). ೩. ಹಿಂಭಾಗಕ್ಕೆ ತಿರುಗಿಕೊಂಡಿರುವ ತಲೆ; ಹಿಮ್ಮುಖವಾಗಿರುವ ತಲೆ : ಎಮ್ಮಂತಲ್ಲ ಪರ ರೂಪು . . . ಕೆಲರ್ಗೆ ಪೆಡದಲೆ ; ಕೆಲರ್ಗೆ ಬಿಡುದಲೆ (ಅದ್ಭುತ. ೪೪–೪). **ಹೆಡತಲೆ** : ೧. ಹೆಡತಲೆಯ ಮಾತ ಬಲ್ಲರೆ ಪ್ರಸಾದಿ (ಸರ್ವವ. ೦೬೦–೪೦೫); ಹೆಡತಲೆಗೆ ಪೋಹಿ ಕಯ್ಯಿಕ್ಕಿ ಕಂಧರ ಹಱಿಯೆ ಹೊಡೆಯಲನುವಾದಂ (ಹಕಾಕಾ. ೦೩–೦೨); ಸರಸಿಜಾಸನನಂದು ನೊಸಲಲಿ ಬರೆದ ಲಿಪಿ ಹೆಡತಲೆಗೆ ಹೋಹುದೆ (ಖಿಕಪು. ೪೬–೦೩); ಹೆಡತಲೆಯ ತುಱಿಸುವರೆ ಹಾವಿನ ಹೆಡೆಯನಕಟಾ (ಕುವ್ಯಾಸ. ೦೪–೩೭); ಮುನಿಪನುತ್ತರದಲಗು ಬೆನ್ನಲಿ ಮೂಡಿದುದು ಹೆಡತಲೆಗೆ ಸಾರ್ದುದು (ಕೊರಣ. ೦–೯–೨೬). ೪. ಹಿಂಭಾಗ; ಹಿಂದುಗಡೆ; ಹಿಂಬದಿ : ಅರ್ತಿಯಾಗಿದೆ ಬದುಕು ಸಾಯಲಾಱೆನು ಎನಲು ಮೃತ್ಯು ಹೆಡತಲೆಯಲ್ಲಿ ನಗುತಿರ್ಪಳಯ್ಯ (ಪುರಂದ. ೨–೬೦–೪); ಮೊಗಲರು ಹೆಡತಲೆಯ ಗಂಡವನ್ನು ಮರೆತು ಮನೆಗಳನ್ನು ಸೂರೆಗೊಳ್ಳುವುದಕ್ಕೆ ಹೊರಟರು (ರಕ್ತಾಕ್ಷಿ. ೬೮). **ಹೆಡದಲೆ** : ೧. ಶಬರ ಸಂಕುಲವ ಸೀಳಿ ಹೆಡದಲೆಯಿಂದಲುಗಿಪೆನು ನಾಲಗೆಯನು (ಜೀವಂಧ. ೬–೭).

[ಪೆಡ (< ಪೆಱಗು) + ತಲೆ$_1$]

**ಪೆಡಂಬಾಯ್** (ಕ್ರಿ). ಹಿಂದಕ್ಕೆ ನೆಗೆ.—ಹಾರು.—ಜಿಗಿ : ಮತ್ತಮವಱೊಳಗೊಂದು ಜಾತಿಜಾಯಿಲು ಪೋಗನೆ ನಿಂದು ಮುಳಿದಟ್ಟಿ ತಿರುಗಿ ನೋಡುತ್ತೆ . . . ಪೆಡಂಬಾಯ್ದುಳಲಿಂ ಬಳಸುತ್ತಿರೆ (ಗಿರಿಶ. ೦–೦೦೪).

[ಪೆಡ(<ಪೆಱಗು)+ಪಾಯ್$_1$]

**ಪೆಡಂಭೂತ** (ನಾ). ೧. ಭಯಂಕರವಾದ ದೊಡ್ಡ ಭೂತ : ಪೆಡಂಭೂತಗಳು ಕುಣಿಯುವುವು,—ತೆರೆಗಳ ಹೆಡೆಗಳ ಮೇಲೆ (ಹಂಸಕ. ೨–೦೩); ಸ್ಕೂಲ್‌ನಲ್ಲಿ ಪ್ರತಿಯೊಬ್ಬರನ್ನೂ ಪರೀಕ್ಷೆಯ ಪೆಡಂಭೂತ ಹಿಡಿದುಕೊಂಡು ಬಿಟ್ಟಿತ್ತು (ಸ್ವಾಮಿನ್ಸ್. ೩೪). ೨. ತುಂಬ ದೊಡ್ಡದು: ಅತ್ಯಲ್ಪವನು ಪೆಡಂಭೂತವನೆ ಮಾಡಿದಿರಿ (ಮೂರುರಾ. ೦೦೯–೬೪೪). ೩. ಪ್ರಾಚೀನ ಕಾಲದಲ್ಲಿ ಇತ್ತೆಂದು ನಂಬಲಾದ ಬೃಹದಾಕಾರದ ಒಂದು ಪ್ರಾಣಿ. [←ತೆಲು. ಪೆನ್ಭೂತ. ❀ ಪೆಡ<ಪೆಱಗು ಅಥವಾ ಪೆಡ<ಪಿರಿದು—ಹೀಗೆಯೂ ವ್ಯುತ್ಪತ್ತಿಗೊಂಡಿರುವುದು ಸಾಧ್ಯ]

**ಪೆಡಂಮುಗುಳ್** 'ಪೆಡಂಮುಗುಂಟು' ನೋ.

**ಪೆಡಂಮುಗುಳಿಸು** (ಕ್ರಿ). ಹಿಂದಕ್ಕೆ ಬರುವಂತೆ ಮಾಡು: ಹಿಂದಿರುಗಿಸು: ತೀರ್ದಯ್ಯನುಸಿರನೆಂತುಂ ಪೆಡಂಮುಗುಳಿಸುವುದಸದಳಂ(ಶ್ರೀರಾಚಾ. ೦೦೦–೨೬೦).

[ಪೆಡಂಮುಗುಳ್ (<ಪೆಡಂಮುಗುಂಟು)+—ಇಸು]

**ಪೆಡಂಮುಗುಂಟು, ಪೆಡಂಮುಗುಳ್, ಪೆಡಮುಗುಂಟು** (ಕ್ರಿ). ೧. ಹಿಂದಕ್ಕೆ ಚಲಿಸು,—ಹೋಗು : ನೆರೆದರಸುಮಕ್ಕಳೆಲ್ಲರಾ ಬಿಲ್ಲಂ ಕಂಡು ಬಲ್ಗಲಂ ಪೊಡೆದಂತೆ ಪೆಡಂಮುಗುಟೆ (ಶಂದಾಕಚಾ. ೫–೬೨ ವ); ಪಟಯಿಗೆ ಬಾಂಗೆ ಪೆಡಂಮುಗುಟೆ ಸೂತರ್ಗೆ ಗತ್ತಿರೆ ವಾಹಂಗಳತಿಜವದೆ ಪರಿಯೆ ರಥಂಗಳ್ ಪರಿದುವು (ಜಗಂ. ೭–೬೨); ರಣರಭಸೋತ್ಕಟಂ ಧರೆ ಪೆಡಂಮುಗುಳ್ದಂತೆ (ಶಬಂಪು. ೦೦–೬೪). ೨. ಹಿಂದಕ್ಕೆ ತಿರುಗಿ ಆಕ್ರಮಿಸು,—ಎದುರಿಸು : ಅಗಳಾ ಕಳಕಳಕ್ಕೆ ಮುನ್ನೀರೆ ಮೇರೆದಪ್ಪಿದಂತೆ ಬೆಂದಗುಳ್ದು ಬರ್ಪ ಮಾರ್ಪಡೆಗೆ ಕಡೆಗಾಲದ ಕೃತಾಂತನಂತೆ ಪೆಡಂಮುಗುಳ್ದು (ಶಂದಾಕಚಾ. ೭–೫೪ ವ). ೩. ಅಡಿಮೇಲಾಗು; ಬೋರಲಾಗು: ನೆಲಂ ಪೆಡಂಮುಗುಟ್ದು ಕವಿದಿಕ್ಕಿದಂತೆ ತೊಟ್ಟನೆ ಪುಟ್ಟಿದತಿಭಯದಿಂ ವಿಭಂಗಮನರಾಗಿ . . . ಮೂದಲಿಸುತ್ತುಂ (ಶುಕುಚಾ. ೦೦–೯೨ ವ). ೪. (ಅಲಂ) ಕುಸಿ; ಕುಗ್ಗು : ಉರಗೇಂದ್ರಂ ಪೆಡೆಗಳ್ ಪೆಡಂಮುಗುಟ್ಟಿನಂ ಪೊತ್ತಿರ್ದ ವಿಶ್ವಂಭರಾಧರವಂ ತನ್ನ ಭುಜಾಗ್ರದೊಳ್ ಕೆಯದು (ಬಿಪ್ಪಶೃ. ೬–೦೫). **ಪೆಡಂಮುಗುಳ್** : ೧. ಪೋದಿದ ತಾಳವಟ್ಟದೊಳ್ ಪಿಂದ ಪೆಣ ಪೆಡಂಮುಗುಳೆ ಕಣ್ಗೆಸಗುಂ ಜವನೇಱದೊಂದು ಚಕ್ಕಂದೊಳದಂತೆ ಸೇವುಣಪುರಿಟ್ಟನ ವೀರವಿಲಾಸಸಿಂಧುರಂ (ಎಕ. VI. ಕಡೀಕ. ೪೫–೪೬; 1190). **ಪೆಡಮುಗುಂಟು**: ೧. "ಪೆಡಮುಗುಂಟು (ಪೆಡಂಮುಗುಂಟು)—ಪರಾಙ್ಮುಖೇ (ಹಿಂದಿರುಗು) " (ಕಮುರಾ).

[ಪೆಡ (<ಪೆಱಗು) +ಮುಗುಂಟು]

**ಪೆಡಂಮೆಟ್ಟು$_1$, ಪೆಡಮೆಟ್ಟು$_1$** (ಕ್ರಿ). ಹಿಂದಕ್ಕೆ ಸರಿ; ಹಿಮ್ಮೆಟ್ಟು : "ಅಕ್ಕುಳಿಸಿತೆಂದುಂ . . . ಪೆಡಂಮೆಟ್ಟಿತೆಂದುಂ . . . ಪಾರಗೆಯ್ದೆಂದುಂ— ಈ ೧೩ ಅಪಸರಣಕ್ಕೆ ಪೆಸರ್" (ಕಕಾ. ೬೨–೬೪೪); ಮುಳಿಸಿಂ ಮುಟ್ಟುವ ನಾಯ್ಗಳನೆ ತುಂಡಿಸಲ್ಕೆಂದುಱೆ ಕಿರ್ಗುಟ್ಟುತೆ ಮುಂದಟ್ಟಿ ಪೆಡಂಮೆ [ಶಾಕಂ.ಮು]ಟ್ಟುತೆ ಸೂಕರನಡರ್ದು ಸಾರ್ದುದು ಮೆಳೆಯಂ (ಗಿರಿಶ. ೦–೦೦೨); ಚಂದ್ರಮಣಿಕುಟ್ಟಿಮಂಗಳಂ ತಿಳಿಗೊಳಂಗಳೆಂದಡಿಯಿಡಲಂಜಿ ಪೆಡಂಮೆಟ್ಟುವ ಕಿಱುವೆಂಡಿರಂ (ರಾಜಶೇ. ೨–೦೩೬ ವ). **ಪೆಡಮೆಟ್ಟು$_1$** : ಪೆಡಮೆಟ್ಟಿದನಾಂಧ್ರೊ ಮಾಗಧಂ ಮಱೆಗಡೆಗೆ ಜಗುಳ್ದಂ (ಹರಿಚಾ. ೭–೪); ಉರಿಯನುಗುಳುವ ಫಣೆಯ ಗರಳವನು ಕಾಣಲ್ಕೆ ಗರುಡ ಶಾಸಾದಡಂ ಪೆಡಮೆಟ್ಟುವಂ (ಶ್ಯಾ. ಪಶ. ೪–೦೦೦); ಪೆಡಮೆಟ್ಟದೊಂದಡಿಯನಾದೊಡಂ ರಣದಲ್ಲಿ ಹೊಡೆದಾಡುವುದು (ಕೀಶಾಣ. ೨–೬೪).

[ಪೆಡ (<ಪೆಱಗು)+ಮೆಟ್ಟು$_1$]

**ಪೆಡಂಮೆಟ್ಟು$_2$, ಪೆಡಮೆಟ್ಟು$_2$, ಹೆಡಮೆಟ್ಟು** (ನಾ). **ಹಿಂದುಗಡೆ** : ಹಿಂಭಾಗ; ಹಿಂಬದಿ : "ಪೆಱತು ಪಿಂಗಡೆ ಪೆಡಂಮೆಟ್ಟುಱೆ ಪೆಱಗುಂ

ಪಿಂತೆ ಪಿಂತಿಲೆನೆ ಹಿಂದೆನಿಕುಂ" (ಶಬ್ದಮ. ೦೯೬). **ಪೆಡಮೆಟ್ಟು₂**: "ಪೆಡಮೆಟ್ಟು, ಪೆಱಗು, ಪೆಱತು, ಪಿಂತಿಲ್—ಈ ೪ ಪಿಂಗಡೆಗೆ ಪೆಸರ್" (ಕಕಸಾ. ೬೩-೪೩೩): ಆ ಪದಾತಿಬಲದ ಪೆಡಮೆಟ್ಟನೊಳ್ ಪೂಡಿದ ಕುದುರೆಯು ನೀಡಿ ನೆಗೆದ ಪಳವಿಗೆಯು (ಗಂಕ. ೬-೫೩ ವ). **ಪೆಡಮೆಟ್ಟು**: ತುರಗದ ಪೆಡೆ[ಡ]ಮೆಟ್ಟಿನ ಗಜಘಟೆಯು ಸಂದಣಿಸಿದ ರಥತತಿ ಮೆಱೆಯಲ್ (ಪಾರ್ಶ್ವ. ೨-೩೩): ಹೆಡಮೆಟ್ಟನೊಳಗಂ ಕೊಂಡೆಯ್ದೆಂದೊಡನೆ ಬೆರಸಿ ಕಲಕಿಲಬರ್ಬರರ ಕಡಿಖಂಡವ ಮಾಡಿದಂ (ಕುಮಾರಾ. ೬-೫೦). [<ಪೆಡಂಮೆಟ್ಟು₁]

**ಪೆಡಕಟ್ಟು** 'ಪೆಡಗಟ್ಟು' ನೋ.

**ಪೆಡಕು. ಹೆಡಕು** (ನಾ). ೧. ಕತ್ತಿನ ಹಿಂಭಾಗ ; ಹೆಗ್ಗತ್ತು : ಕಡಲುದಾಟಿದ ಬಲುಧೀರನೆ . . . ಪೆಡಕಿಲಾಸನವಿತ್ತೆ ದಾತಗೆ (ಕೃಸಚ. ೫-೩). **ಹೆಡಕು** : ೧. "ಘಾಟಾ, ಅವಟುಃ, ಕೃಕಾಟಿಕಾ — ಈ ೩ ಹೆಡಕು" (ಹಲಾಯು. ೬೭-೩೭೦) ; ಫಣಿರಾಜನೇಬನ ಹೆಡಕು ಮಣಿವುದು (ಸಂಕಶ. ೨೦-೭೯) : ಹಾಲಿನ ಸವಿಯ ನೋಡುವ ಬಡಿಗೆಗಾಣದೆ ಹೆಡಕ ಮೋಹಿಪ ರಾಮಬಾಣವಿರೆ (ಕೌಶಿಕಾ. ೦೯-೯೯) ; ತುಡುಗುಗುಣಗಳು...ಹವಿಗೊಂಬವರ ನಿಕರದ ಹೆಡಕ ಬಾರಿಸಿ ಬಾಚುತಿರ್ದರು ಬಾಯ ತುತ್ತುಗಳ (ಕೊರವಾ. ೦-೧೧-೮). ೨. (ಕೋಟೆ ಮುಂತಾದುವುಗಳ ತುದಿಯ) ಹಿಂಭಾಗ,–ಹಿಂಬದಿ ; ಕೇಳು ಬಳಿಕಕ್ಷಣಬಲಂ . . . ಘುಡುಘುಡಿಪ ಕೋಪದಲಿ ದುರ್ಗದ ಹೆಡಕು ಪರಿಯಂತೇಱಿ ಪುರ ಗಡಬಡಿಸಿ ಬೆಚ್ಚಿತು (ಕೊರವಾ. ೪-೬-೨೦). [ದೇ.॥ ತಮಿ. ಪಿಟಱು ; ತುಳು. ಪೆದಂಗ್]

**ಪೆಡಕೆಡಪು** (ಕ್ರಿ). ಹಿಂದಕ್ಕೆ ತಳ್ಳು ; ಹಿಮ್ಮುಖವಾಗಿ ಬೀಳಿಸು : ನಡೆಸಾರಂ ನೆಲವೇಳ್ಗೆ ಪೆಡಕೆಡಪುವ ಡೆಗ್ಗ (ಕ್ರಿಶೃ. ೫-೦೦).
[ಪೆಡ (< ಪೆಱಗು) + ಕೆಡಪು]

**ಪೆಡಗಟ್ಟು, ಪೆಡಕಟ್ಟು, ಹೆಡಕಟ್ಟು₂, ಹೆಡಗಟ್ಟು** (ನಾ). (ಶಿಕ್ಷೆಗಾಗಿ) ಕೈಗಳನ್ನು ಬೆನ್ನಿನ ಹಿಂದೆ ಸೇರಿಸಿ ಕಟ್ಟುವ ಕಟ್ಟು; ಹೆಡಮುರಿಗೆ ; ಹಿಂಗಟ್ಟು : ಶೇಷಂ . . . ಅಲಘುಬಲೇಶಯಪಾಶದಿನೋವದೆ ಬಲಯುತ ರವಿಕೀರ್ತಿಯ ತೋಳಂ ಪೆಡಗಟ್ಟಿಂ ಕಟ್ಟಿದನು (ಜಡು೯. ೬-೯೬) ; ಕಟ್ಟು ನುಡಿದ ಪೊಳಲಧಿಕಾರಿಯ ಪೆಡಗಟ್ಟನಿಂತಂದೊಪ್ಪಿಸಿದರು (ಸುರಾಕಾಂ. ೦೦-೫೨). **ಪೆಡಕಟ್ಟು** : ಪೆಡಕಟ್ಟ ಕಟ್ಟಿ ಮಂಡೆಯ ಕೆದಱಿಕೊಂಡು ಕಡಿವೆವು ತಲೆಯನೆಂದೆನುತ (ಕೃಶಂ೫. ೨-೦೯೭). **ಹೆಡಕಟ್ಟು₂** : ಸಂಕೋಲೆ ಹೆಡಕಟ್ಟು ಹಾಕಿದ್ದಾಗ ಕಂಡರೆ ಆರೋಗ್ಯ . . . ಬಲಿತ ವೈರುವುಳ್ಳ ಭೂಮಿಯುಂ ಕಂಡರೆ ಐಶ್ವರ್ಯವು (ಸ್ವಗಂಬ. ೩೯೦-೦೯); ಗಂಗಾತೀರದಲ್ಲಿ ನಿದ್ರೆಹೋಗುವ ಭೀಮನನ್ನು ಹೆಡಕಟ್ಟಾಕಿ ಗಂಗೆಯ ಮಧ್ಯದಲ್ಲೆತ್ತಿ ಹಾಕಲು (ಕೃಪಾಕ. ೯೬). **ಹೆಡಗಟ್ಟು** : ಪುಷ್ಪೋದ್ಭವ ಹೆಡಗಟ್ಟಿಗೀಡಾದ (ಪೋಲೀಸು. ೦೯೬-೬೨೯) ; ಕರವೆ ಹೆಡ[ಪಾಠಾಂ. ಪೆಡ] ಗಟ್ಟಿನಿಂ ಕೈಸಂಕಲೆಗಳು ಮಿಗೆ . . . ನಡೆಗುಱಿಗಳಂ ಮಾಡಿ (ಶಾಪಂಚ. ೪-೦೮೦); ರಾಯ ಕೋಪಾಟೋಪನಾಗಿ ತನ್ನ ಶಕ್ತಿಯಿಂದ ಅವನ ಮಾಯೆಯ ಗೆದ್ದು . . . ಹೆಡಗಟ್ಟ ಕಟ್ಟಿ (ಚಿತ್ರಿ.ಪ. ೬೪).
[ಪೆಡ (< ಪೆಱಗು) + ಕಟ್ಟು₂]

**ಪೆಡಗಡೆ** (ನಾ). ಹಿಂಬದಿ ; ಹಿಂಭಾಗ : ಪೆಡಗಡೆ ಸಾರ್ಚಿದೋದು ಕರದಿಂದೆಳೆದೋರಿದುಱುಂಬಂ (ಚಕಾಬ. ೬-೨೦೨). [ಪೆಡ < ಪೆಱಗು) + ಕಡೆ₃]

**ಪೆಡಗಯ್** 'ಪೆಡಂಗೆಯ್' ನೋ.

**ಪೆಡಗಾಲ್** 'ಪೆಡಂಗಾಲ್' ನೋ.

**ಪೆಡಗುಡಿ, ಹೆಡಗುಡಿ** (ನಾ). ೧. =ಪೆಡಗಟ್ಟು : ಒಟ್ಟೆಯೊಳೊರ್ವ ಪ್ರಾಯದವನಂ ಪೆಡಗುಡಿಯುಂ ಕಟ್ಟಿ ಕೊಲಲ್ಕೊಯ್ಗುತ್ತಿರೆ (ಪುಣ್ಯಾಸ್ರ. ೩-೬ ವ) ; ಕಮಲಜಮುಖ್ಯರಂ ವೀರಭದ್ರನತಿಕೋಪದಿಂ ಪೆಡಗುಡಿಯ ಕಟ್ಟಿ ಭೂತಾಳಿಗಳ ವಶಕಿತ್ತನು (ಶಬಪು. ೩೦ ಸೂಕಪ). **ಹೆಡಗುಡಿ** : ೧. ದೃಢವಿರಬೇಕು ಲಿಂಗಾರ್ಚನೆಯಲ್ಲಿ ದೃಢವಿಲ್ಲದವನ ಹೆಡಗುಡಿಯ ಕಟ್ಟಿ ಎಡಹಿ ಬಿಡುವ ಭವದಡಿಗೆ (ಸಿದ್ಧ.ವ.ಶ. ೦೯೫-೬೦೫) ; ಹೊಡೆಯಲೆಂದತಿ ವೀರ್ಯನನುಗೆಯ್ಮಲು ತಡೆಯದಾಗಳೆ . . . ಹೊಡೆದು ಹೆಡಗುಡಿಯ ಕಟ್ಟಿದನಾತನಂ (ಉಪಮು. ೬-೫೩) ; ದೈತ್ಯನ ಜಡಿದು ವಾರುಣಪಾಶದಲಿ ಹೆಡಗುಡಿಯ ಬಿಗಿದನು (ಶಿಶಾಗ. ೮-೦೮-೨೮). ೨. ಹಿಂಭಾಗ ; ಹಿಂಬದಿ : ನುಡಿಯದಮು ವಶಾನಗ್ರುಹದ ಹೆಡಗುಡಿಯುಲಿದ್ದುದು ರಾಯಕುಲವು (ಉಭ್ಯಾಸ. ೮-೯೩). [ಪೆಡ (<ಪೆಱಗು) + ಕುಡ್ಡ ?]

**ಪೆಡಗುಡಿಗಟ್ಟು, ಹೆಡಗುಡಿಗಟ್ಟು** (ಕ್ರಿ). ಕೈಗಳನ್ನು ಹಿಮ್ಮುಖವಾಗಿ ಕಟ್ಟು ; ಹೆಡಮುರಿಗೆ ಹಾಕು : ಪಿಡಿದೆಟತಂದು ಮುಂದಲೆಯನಾಗ್ರಹದಿಂ ಪಿಡಿದೊತ್ತಿ ಹಗ್ಗದಿಂ ಪೆಡಗುಡಿಗಟ್ಟಿ (ಪುಣ್ಯಾಸ್ರ. ೫-೩೦) : ಅಂತ್ಯಜನ ನನುನಯದೆ ಪಿಡಿದು ಪೆಡಗುಡಿಗಟ್ಟಿ ತನ್ನಿ (ಅರಾಶ. ೧೧ ೬-೨೩) ; ರಥಾಶ್ವಮಂ ಕೊಚ್ಚಿ ಪೆಡೆ[ಡ]ಗುಡಿಗಟ್ಟಿ ವಿಧಿಯನಂಬಿ ಮತ್ತೆ ವೀರಭದ್ರಂ ಕರಳುತ್ತಂದನು (ಕಬಪು. ೩೦-೫೨). **ಹೆಡಗುಡಿಗಟ್ಟು** : ನಾನಿನ್ನ ಹೆಡಗುಡಿಗಟ್ಟಿ ನಿನ್ನಸುಗಳೆಯುತಿರಲು (ಜೀವಂಶ. ೦೫-೯೬); ದಿಂಡುಗೆಡೆವಂತೆ ಒಳಗುದ್ದು ಹೊಱಗುದ್ದಿಕ್ಕಿ ದಂಡಿಸಿ ಬಳಿಕ್ಕ ಬಲುಹೂಸಿ ಹೆಡಗುಡಿಗಟ್ಟಿ[ಪಾಠಾಂ. ಪೆಡಗ್ಗೈಗಟ್ಟಿ, ಹೆಡೆಗ್ಗೈಕಟ್ಟಿ]ಕೊಂಡು ಬರ್ಪಾಗಳು (ಸಮ್ಯಕ್. ೪-೦೯). [ಪೆಡಗುಡಿ + ಕಟ್ಟು₁]

**ಪೆಡಗೆ** 'ಪೆಟ್ಟಿಗೆ' ನೋ.

**ಪೆಡಗೆಪಾಗು** (ನಾ). ಬುಟ್ಟಿಯಾಕಾರದಲ್ಲಿರುವ ರುಮಾಲು.– ಮುಂಡಾಸು : ಪೆಡಗೆಪಾಗು ದಡಿದೋತ್ರದ . . . ಹಂಡಹುಂಡ ಮಟ್ಟಗರಸೆದರ್ (ಜಶ್ವಿರ. ೬-೦೯). [ಪೆಡಗೆ (< ಪೆಟ್ಟಿಗೆ) + ಪಾಗು₁]

**ಪೆಡಗೆಯ್** 'ಪೆಡಂಗೆಯ್' ನೋ.

**ಪೆಡಗೆಯ್ಗಟ್ಟು** (ನಾ). = ಪೆಡಗಟ್ಟು : ನಿನ್ನ ಪೆಡಗೆಯ್ಗ[ಟ್ಟ]ಂ ಶರದಿಂ ಬಿಡಿಸಿದನಲ್ಲನೆ ಸರಿತ್ಸುತಂ (ಶಂಶಾ. ೬-೫೩).
[ಪೆಡಗೆಯ್ (< ಪೆಡಂಗೆಯ್) + ಕಟ್ಟು₂]

**ಪೆಡಗ್ಗೆ** 'ಪೆಡಂಗೆಯ್' ನೋ.

**ಪೆಡಗ್ಗೈಗಟ್ಟು** (ಕ್ರಿ). = ಪೆಡಗುಡಿಗಟ್ಟು : ಪೆಂಡಿರೆಲ್ಲಂ ಪರಿಚಾರಕಿಯರಂ ಕೂಡಿಕೊಂಡೆಜ್ಜಗಾಪಿನಜ್ಜರಂ ಪಿಡಿದುರುಳ್ಚಿ ಚೆನ್ನಸಂಕಲೆಯಿಂ ಪೆಡಗ್ಗೈಗಟ್ಟಿ (ಅರ್ಹಶೀ. ೫-೨ ವ) ; ಪಿಡಿದು ಪನ್ನಗಪಾಶದಿಂ ಪೆಡಗ್ಗೈಗಟ್ಟಿ (ಶೀಬಶಂ. ೦೯-೦೭೭). [ಪೆಡಗ್ಗೆ (< ಪೆಡಂಗೆಯ್) + ಕಟ್ಟು₁]

**ಪೆಡಗೊಳ್** (ಕ್ರಿ). ಕುಗ್ಗು ; ಕುಸಿ : ನೆ[ಪಾಠಾಂ. ಪೊ]ರ್ಕ್ಕ ಕದಂಪು ಪತ್ತಿ ಪೆ[ಪಾಠಾಂ.ದೆ]ಡೆ[ಡ]ಗೊಂಡ ಕೊರಲ್ . . . ಅಕ್ಕುಟಿಸಿರ್ದ ಪೆರ್ಬಸಿಱ ಗುರ್ವಿಸೆ ಬಂದನದೊರ್ವ ಪಾರ್ವಂ (ಆದಿಪು. ೬-೫೬).
[ಪೆಡ (< ಪೆಱಗು) + ಕೊಳ್₁]

**ಪೆಡತಲೆ** 'ಪೆಡಂದಲೆ' ನೋ.

**ಪೆಡದಲೆ** 'ಪೆಡಂದಲೆ' ನೋ.

**ಪೆಡಪೌಜು** (ನಾ). ಯುದ್ಧದಲ್ಲಿ ಹಿಂಭಾಗದಲ್ಲಿ ನಿಲ್ಲುವ ಸೈನ್ಯ ; ಹಿಂಚೂಣಿ : ಪೆಡಪೌಜಿನೊಳೊಟ್ಟೈಸಿದ ಮದಮಾತಂಗದ ಬಲ್ಗಿಣಲೆಱಿದ ಕದನೋದ್ಧತಮಾನುಷರನಿಪಗ್ಗದ ಮಾಪತಿಗಳ್ . . . ಹಾಣಾಹಣಿಯಿಂದ ನಿಮಿರ್ಚಿದರು (ಜಡು೯. ೬-೩೭).
[ಪೆಡ (< ಪೆಱಗು)+ಪೌಜು (< ಫೌಜು)]

**ಪೆಡಮುಗುಟು** 'ಪೆಡಂಮುಗುಟು' ನೋ.

**ಪೆಡಮೆಟ್ಟಿಸು** (ಕ್ರಿ). ಹಿಮ್ಮೆಟ್ಟಿಸು ; ಹಿಂಜರಿಯುವಂತೆ ಮಾಡು : ಅಡಕಕೆ ನಿಲ್ಲದಾಸೆ ಮನಮಂ ಪೆಡಮೆಟ್ಟಿಪ ಲಜ್ಜೆ (ಚಕಾಬ. ೪-೦೨೫).
[ಪೆಡಮೆಟ್ಟು₁ (< ಪೆಡಂಮೆಟ್ಟು₁) + – ಇಸು₃]

**ಪೆಡಮೆಟ್ಟು₁** 'ಪೆಡಂಮೆಟ್ಟು₁' ನೋ.

**ಪೆಡಮೆಟ್ಟು** 'ಪೆಡಂಮೆಟ್ಟು' ನೋ.

**ಪೆಡಲು** (ನಾ). ಬೈಸಿಕಲ್ಲನ್ನು ನಡೆಸುವವನು ಕಾಲು ಇಡುವುದಕ್ಕೂ ತುಳಿದು ಅದನ್ನು ಮುನ್ನಡೆಸುವುದಕ್ಕೂ ಅಳವಡಿಸಿರುವ ಸಾಧನ : ತನ್ನ ಕಾಲೊಂದನು ಪೆಡಲಿನ ಮೇಲಿಟ್ಟು...ಸೈಕಲ್ಲಿನಿಂದಿಳಿದಿಳಿಯದಂತಿರ್ಪನು ನಿಟ್ಟಿಸುತಾತೆ ಬರ್ಪುದನು (ಶಂಸ್ಕೃ.೬. ೦೬೪-೩೬). [← ಇಂ. pedal]

**ಪೆಡಸರ** (ನಾ). ಸೊಕ್ಕು ; ಗರ್ವ : ಅಪ್ಪಾಜಿಯವರ ಗೆಳೆಯ ಅಂತ ಅವರದು ಆಸು ಪೆಡಸರ (ಶಳಶಾ. ೦೯೯). [← ತೆಲು. ಪೆಡಸರ]

**ಪೆಡಸಾರ್** (ಕ್ರಿ). ಹಿಂದಕ್ಕೆ ಹೋಗು ; ಹಿಂಜರಿ : ನರವುಮಂ ಬರಿಯುಮುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ (ಶಂಶಥಾ. ೦೩-೩೬ ಪ); ಪೆಡಸಾರ್ದಂ ನೆಲೆವಿಡಿದಂ ಪಡಿಬರಿಸಿದುದಟಿಯದೋಡಿದಂ ನಿಡುವಯಣಂ (ಅಕ್ರೂ.೬. ೬೦-೩). [ಪೆಡ (<ಪೆಱಗು) + ಸಾರ್[1]]

**ಪೆಡಸು**, ಪೆಟಸು, ಹೆಡಸು (ನಾ). ೧. (ಲೋಹಪದಂತೆ) ಗಡುಸಾಗಿರುವುದು ; ಬಿರುಸಾಗಿರುವುದು : ಪೆಡಸಾದ ಲೋಹವಾದರೂ ಕರಗಿ ಗಟ್ಟಿಯಾಗುವಾಗ. ವಿಕಾಸಗೊಳ್ಳುವ ಗುಣವನ್ನು ಪಡೆದಿದೆ (ಕಶಕೋ. I. ೦೯೬). ೨. ಭಂಗುರತೆ : ನೀರೆಲ್ಲ ವ್ಯೆಯುಂಡು ಸೂಜಿಗಳ ಪೆಡಸು ಕಡಿಮೆಯಾಗುತ್ತದೆ (ಋಂಬಯು. ೬. ೪-೦೩೬). ೩. ಕಾಠಿಣ್ಯ ; ನಿಷ್ಠುರತೆ ; ಒರಟುತನ : ಮಮತೆಯನ್ನುಳಿದು ಪೆಡಸಿಂದಿರಲು ಒರ್ವೆಯಿಂತೆಂದಳು (ಶಂಕಾಶಾ. ೩-೦೦-೦೦) : ನಿನ್ನದೂ ಬಲು ಪೆಡಸು ! (ಎಳಕ. ೩೮). ೪. ಕಷ್ಟ ; ಎಡರು ; ಬಿಕ್ಕಟ್ಟು : ಪೆಡಸಿನ ಹಾದಿಗೆ ಪೆಟರಲ್ ಚಲದಂಕರೊಲ್ದು ಬೂಡಿಗೆ ಸಲೆ ನಡೆವರ್ (ಪ್ರಸಾಕು. ೬-೦೮); ದಾರಿ ಬಹಳ ಪೆಡಸು (ಶೀಣಾಶಾ. ೬). **ಪೆಟಸು** : ೩. ಇನ್ನೆಬರಂ ಕೊನೆವರಿದು ನೀಟ್ಟರಿಸಿದ ಬಟ್ಟೆಯ ಬಟ್ಟೆಯಾಗಳ್ ತನ್ನೊಳ್ ತಡೆದುದೊಂದು ಬಾಗುಳ ಪೆಟಸಿನಗವಟ್ಟಾಗಳುಮಿಾ ಕತದೊಳೆ ಬಗೆಗೆಟ್ಟರ್ಪ ರಾಯನೋಲಗಕೊರ್ಮೆ ಜಾಬಾಲಿಮುನಿಪಂ ಬಿಜಯಂಗೈದಂ (ಶಾಕೂಕ್ಕ. ೦೦೪-೨೦). ೫. ಕದನ ; ಹೋರಾಟ (?) : "ಪೆಟಸೆಂದು ತೋಟಯೊಳ್" (ಕಶಾಶು. ೬೯). 'ಪೆಣಸು'[1] ಪರಾ. **ಹೆಡಸು**: ೬. ಬಿಂಕ ; ಗರ್ವ : ತಾವೇ ಅಪ್ಸರೆಯರೆಂದುಕೊಂಡು ಕೆಲವು ಹೆಣ್ಣುಮಕ್ಕಳು ಹೆಡಸಿನಿಂದ ತಿರುಗಾಡುತ್ತಾರೆ (ಅಂಶೂ. ೯). ೭. ಸಾಂದ್ರತೆ ; ಸ್ನಿಗ್ಧತೆ : ಇಬ್ಬನಿಗಳಾ ಹೆಪ್ಪು ಹೆಡಸಿನಲ್ಲಿ ಉಗಿಯೊಲು ತೋರುವ ಉಸಿರಿನ ಸರಣಿ (ಪ್ರಾಣಾಕ್ಕ. ೩-೨) : ಮೊಸರು-ಅವಲಕ್ಕಿಯ ಹೆಡಸು ಇನ್ನೂ ಕೈಗೆ ಅಂಟಿಕೊಂಡೈತೆ (ಪಟಾ. ೦೯); ಉಕ್ಕಿದ ಹಾಲಿಗೆ ಹೆಡಸು (ಅಕ್ಕೊ.೬. ೦೨೬). ೮. ತಲೆಗೂದಲಿನ ಬುಡದಲ್ಲಿ ಉಂಟಾಗುವ ಒಣಗಿದ ಚರ್ಮದ ಹೊಟ್ಟು ; ಹಗರು : (೬).

**ಪೆಡಸಾಗು** = ೧. ಗಟ್ಟಿಯಾಗಂ ; ಬಿರುಸಾಗು : ಸೂಜಿಗಳು ಸಿದ್ಧವಾದವೆಂದರೆ . . . ತಣ್ಣೀರೊಳಗೆ ಚಲ್ಲುವನು. ಅದರಿಂದ ಅವು ಪೆಡಸಾಗುವವು (ಋಂಬಯು. ೪-೦೩೪). ೨. ಕಠಿಣವಾಗು; ನಿಷ್ಠುರವಾಗು: ಎಲ್ಲಿಯೂ ಅವರ ಭಾಷೆ ಪೆಡಸಾಗಿಲ್ಲ (ಕಂಶೀ. ೦೦೦). ೩. ಗರುಗಾಗು : ತುಂಡುಗಳು ಚೆನ್ನಾಗಿ ಕಾದು ಪೆಡಸಾದಾಗ . . . ಎಣ್ಣೆ ಬಸಿದು ಹೋಗುವಂತೆ ತೂತುಗಳಿರುವ ಪಾತ್ರೆಯೊಂದರಲ್ಲಿ ಹಾಕಬೇಕು (ಅಡುಶಾ. ೯೦).

[ದೇ.॥ ತೆಲು. ಪೆಟುಕು, ಪೆಳುಸು ; ತುಳು. ಪೆಡ]

**ಪೆಡಸುಗಟ್ಟು** (ಕ್ರಿ). ಗಟ್ಟಿಯಾಗು ; ಗಡ್ಡೆಕಟ್ಟು : ವಯಸ್ಸಾದವರಲ್ಲಿ ಮಿದುಳಿನ ತಳದ ನರಗಂಟುಗಳಿಗೆ ರಕ್ತ ಒದಗಿಸುವ ರಕ್ತನಾಳಗಳು ಪೆಡಸುಗಟ್ಟುವುದು(ಕಶಕೋ. I. ೨೩೬). [ಪೆಡಸು+ಕಟ್ಟು[1]]

**ಪೆಡಸುಗೊಳ್ಳು** (ಕ್ರಿ). ಒರಟಾಗು ; ಬಲಿ : ಪೆಡಸುಗೊಳ್ಳದಿದ್ದ ಎಳೆಯ ಮನಸ್ಸಿನ ಮೇಲೆ . . . ಸ್ಥಿರವಾಗಿ ನೆಲಸುವುದು (ಕಶಕ. ೩೩).

[ಪೆಡಸು+ಕೊಳ್ಳು[1] (<ಕೊಳ್[1])]

**ಪೆಡಸುದಾರಿ** (ನಾ). ಅಡ್ಡಿ, ಆತಂಕಗಳಿಂದ ಕೂಡಿರುವ ದಾರಿ ; ಬಿಕ್ಕಟ್ಟಾದ ಮಾರ್ಗ : ಕಷ್ಟನಷ್ಟದ ಪೆಡಸುದಾರಿಯ ಯಾವುದೊಂದನು ಗಣಿಸನು (ಶಿಜಡ. ೦೪-೦೪). [ಪೆಡಸು+ದಾರಿ]

∆**ಪೆಡಱು** 'ಪೆಳಱು[1]' ನೋ.

**ಪೆಡಿಗೆ** 'ಪೆಟ್ಟಿಗೆ' ನೋ.

**ಪೆಡೆ**, ಹೆಡೆ[1] (ನಾ). ೧. ಹಾವಿನ ಬಿಚ್ಚಿದ ತಲೆ,—ಫಣೆ : "ಫಣಾಪ್ತ್ಯಯುಂ ಪೆಡೆಯಕ್ಕುಂ" (ಶಬ್ದಕೋ. ೦೪-೩) : ಪೆಡೆ ಪಲವಪ್ಪ ವಾಸುಕಿಮಹೋರಗನಂ ಕಡೆಗಣ್ಣ ಮಾಡಿ ಪಾಲ್ಗಡಲನುಪಾಯದಿಂ ಕಡೆಯೆ (ಕಾವ್ಯಸಾ. ೯೩೪ ಕಅದ್ಯ) ; ಎರಟಿಮ್ಮಾಳಿಂಗನಾಗಂಗಳ್ ಪೆಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತಂ ಬಂದೊಡೆ (ಕಣ್ಣಾಶಾ. ೦೦೦-೬೦) : ಪಡೆಯ ಪೊಡೆಗಿಗಿದು ಶೇಷಂ ಪೆಡೆಗಳನುಡುಗುವುದುಮೆಳೆ ಬೊದಿಲ್ಲನೆ ಬಿಟ್ಟಿತ್ತು (ಶಂಶಥಾ. ೧೦-೬೦). **ಹೆಡೆ**[1] : ೧. "ಫಣಃ, ಫಣಾ, ಫಟಾ—ಈ ೩ ಹಾವಿನ ಹೆಡೆ" (ಶಶಾಡು. ೦೦೩-೯೦) : ಹಾವಿನ ಹೆಡೆಗಳ ಕೊಂಡು ಕನ್ನೆಯ ತುಱುಸುವಂತೆ (ಬಸವ. ೬೬೦ ೪) ; ಹೆಡೆಯ ಮಣಿಗಳ ಕಂಡು ಸೂಸಿದ ಕಿಡಿಗಳಹಹಾಯೆನುತ ಶಿರಗಳ ಕೊಡಹಿ ಮಱುಗಿದರುರಗಿಯರು ಮಱುಗಳಿಗೆ ಮೈಚಾಚಿ (ಕುಮ್ಮಾ. ೦೨-೬೦) : ಜಡೆಯುಳ್ಳ ಹಿರಿಯನಿಗೆ ಹೆಡೆಯುಳ್ಳ ಸರ್ಪನಿಗೆ ನಡುಗುತ್ತನಮಿಸಿ (ಸರ್ವಜ್ಞ. ೩೨೬) : ಹಳದಿಯ ಹೆಡೆಯನು ಬಿಚ್ಚೋ ಬೇಗಾ (ಕಶ್ಪಶಾ. ೦೨೨). ೨. ಅಗಲವಾದ ತುದಿ : ಬೆಂಕಿಯೊಳಗೆ ಸೌಟು ಚಲ್ಲಿದರೆ ಮೊದಲು ಅದರ ಹೆಡೆಯು ಕಾಯುತ್ತದೆ (ಮುಂಬಯು. ೦೩-೦೪೯). ೩. ತೆಂಗು, ತಾಳೆ ಮೊದಲಾದುವುಗಳ ಗರಿ; ಸೋಗೆ : ಬೊಬ್ಬರ್ಯಗಳ ಹಾಗೆ ನಿಂತ ಹನಮರಗಳಿಗೆ ನಿಮ್ಮ 'ಹೆಡೆ' ತೂಗಿಸಬಾರದು ಎನಲು ಅವರಿಗೆ ಪಕ್ಕಿದೆಯೇ ? (ಮರಶಃ. ೦).

**ಹೆಡೆಯಾಡಿಸು** = ೧. ಹೆಡೆಯನ್ನು ತೂಗು,—ಅಲ್ಲಾಡಿಸಂ ; ಎಳೆಬಿಸಿಲಿನಲ್ಲಿ ಹಾವು ಹೆಡೆಯಾಡಿಸುತ್ತಾ ಇತ್ತು (ಶಂ). ೨. ಪ್ರಧಾನವಾಗಿ ಕಂಡು ಬರು ; ಎದ್ದುಕಾಣು : ಕ್ಷುಲ್ಲಕವಿಷಯ ಹೆಡೆಯಾಡಿಸುತ್ತದೆ. (ಹೊಸಕ್ಕೆ. ೯೩). **ಹೆಡೆಯಾಡು** = ೧. ಹೆಡೆಯನ್ನು ಆಡಿಸು,—ತೂಗು : ಭರವಸ ತಲೆಯ ಬಳಿಯಲ್ಲಿ ನಾಗಸರ್ಪ ಹೆಡೆಯಾಡುವುದನ್ನು ಕಂಡು ಇವನ ಬಳಿಗೆ ಬಂದರು (ಕಕ್ರಶಾ. ೩೮). ೨. ಮೋಲೇಳು ; ಅಸ್ಫೋಟಿಸು : ಸಾಮಾಜಿಕದಾಸ್ಯದ ವಿಷಯದಲ್ಲಿ ಅಸಂತೋಷದ ಭಾವನೆ ದೇಶಾದ್ಯಂತ ಹೆಡೆಯಾಡತೊಡಗಿತು (ಕ್ರೀಕ್ಕಶ್ರ. ೦೩೬).

[< ಸಂ. ಸ್ಫಟ]

**ಪೆಡೆಗಟ್ಟು** (ಕ್ರಿ). ಹೆಡೆಯ ಆಕಾರದಲ್ಲಿ ಕಟ್ಟು,—ರಚಿಸು : ಮುಂಕೊಂಡು ಮುಡಿ ಮಾಡಿ ಪೆಡೆಗಟ್ಟುವಾ ಕೇಳ್ ನಿನ್ನ ಗಂಡಂಗೆ ಲೇಸೆ ಪೇಳೆಂಬಳಕದಿಂ ಮಿಂದು ರಾಜಿಸಿದಳಾ ಮಾನಿನಿ (ಶಾಶಕಂ. ೩-೩೬).

[ಪೆಡೆ + ಕಟ್ಟು[1]]

**ಪೆಡೆಗಲ್** (ನಾ). ಹಾವಿನ ಹೆಡೆಯಲ್ಲಿರುವ ಮಣಿ,—ರತ್ನ ; ಫಣಾರತ್ನ : ಪಾವೆಱೆಯನ ಪೆಡೆವಣಿಗಳೆನಿಪ ಪೆಡೆಗಲ್ಲೊಳ್ಳಂ . . . ಕುಳ್ಳಿರ್ಪ ಕೋಟಲೆಯಂ ಮಱೆತು ನಿನ್ನ ದುಂಡುದೋಳೊಳ್ ನೆಲೆ ನೆಲಸಿ ಸೊಗಂಬಡೆದುದು (ಕಕಶಂ. ೦೩೬-೦೩).

[ಪೆಡೆ + ಕಲ್[1]]

**ಪೆಡೆದಲೆಯ** (ನಾ). ಹೆಡೆಯನ್ನೇ ತಲೆಯಾಗುಳ್ಳವನು ; ಆದಿಶೇಷ : ಪೆಡ[ದೆ]ದಲೆಯನ ಪೆಂಡತಿ ಮೈಗಣ್ಣನ ಮಡದಿ . . . ಮುಪ್ಪೊಡವಿಯ ಪೆಣ್ಣಕ್ಕಳ ನಿಕುರುಂಬಂ (ಜಯಶಾ. ೦೬-೪೦). [ಪೆಡೆ + ತಲೆ[1] + — ಅ[1]]

**ಪೆಡೆಮಣಿ** 'ಪೆಡೆವಣಿ' ನೋ.

**ಪೆಡೆಯಕ್ಕಿ** (ನಾ). ಒಂದು ಬಗೆಯ ಸಸ್ಯ ; ಹಾಲುತೊಟ್ಟಿನ ಗಿಡ : ಪೆಡೆಯಕ್ಕಿಯ ಬೇರಂ ಕಟ್ಟಿಡುತಿದು ಕರ್ಣದೊಳೆ ಪಿಂಗುಗುಂ ಸೂಬುಜ್ವರಮುಂ (ಕೋಕೋಶ. ೯-೨೩). 'ಅಕ್ಕಿಹೆತ್ತೆ' ಪರಾ. [ಪೆಡೆ + ಅಕ್ಕಿ[1]]

**ಪೆಡೆಯಿಕ್ಕು** (ಕ್ರಿ). (ಆಲಂ) ತಲೆಯೆತ್ತು : ಪೆಡೆವಣಿದಳೆದ ನಾಗರ ಮಾಣಿಯೆಂಬಂತೆ ಹೊಡೆಮರಳುವ ತನ್ನ ತಾನೇ ಪೆಡೆಯಿಕ್ಕುವ ಮುಕ್ತಿನರ ಳೆಲೆದಾಳ್ದು ಕೆಂಜೆಡೆ ಮುದ್ದುಮೊಗದಲ್ಲಿ ನಲಿಯೆ (ಕೋಶಕ. ೦೭-೬೦). [ಪೆಡೆ + ಇಕ್ಕು]

**ಪೆಡೆಯೆತ್ತು, ಹೆಡೆಯೆತ್ತು** (ಕ್ರಿ). ೧. ಹೆಡೆಯನ್ನು ತೆಗೆ, ಬಿಚ್ಚು : ನಾಗವರಾಳಿಯನೊರ್ವನಾಲಾಪಿಸಲಾಗಳೆ ನೆರೆದು ಸರ್ಪಗಳು ರಾಗಿಸಿ ಪೆಡೆಯೆತ್ತಿ ಕೇಳುತಿರ್ದುವು (ಶಶಕ. ೬೪-೦೦). **ಹೆಡೆಯೆತ್ತು** : ೧. ತನು ಹೇಳಿಗೆಮನ ಸರ್ಪನಾಗಿ ತನ್ನಯ ವಿಲಾಸಿತದಿಂದ ಹೆಡೆಯೆತ್ತಿ ಆಡುತ್ತಿರಲಾಗಿ (ಸಗಪು. ೪. ೬೩೬-೦೮೦೮); ಹೆಡೆಯೆತ್ತಿ ಬುಸುಗುಡುತಪರಿವರನು ಕಚ್ಚಿ ಹುತ್ತವ ಹಾವು ಹೊಗುವೋಲು (ಇಂಕಾಕ. ೯೯-೭೭). ೨. (ಆಲಂ) (ದ್ವೇಷ, ರೋಷ ಮೊದಲಾದುವು) ಕಾರ್ಯೋನ್ಮುಖವಾಗು : ಆವರ ಬಗೆಗಿದ್ದ ದ್ವೇಷ ಆವನಲ್ಲಿ ಹೆಡೆಯೆತ್ತಿತು (ರೂಢಿ). [ಪೆಡೆ + ಎತ್ತು]

**ಪೆಡೆವಣಿ, ಪೆಡೆಮಣಿ, ಹೆಡೆಮಣಿ, ಹೆಡೆವಣಿ** (ನಾ). ಹಾವಿನ ಹೆಡೆಯಲ್ಲಿರುವ ರತ್ನ ; ನಾಗಮಣಿ : ಸೊಡರ್ವಾವನಿಪ್ಪ ಪೆಡೆವಣಿಯು ಸರ್ವಾಂಗಳಿಂದಾರಾಧ್ಯಮಾನೆಯುವೊಲಂತೆಸೆದು ತೋರ್ಪ೯೦ (ಆದಿಪು. ೨೬೦) : ಪಡೆವಂ ರಜೋಧಿಕಂ ಏಧಿ ಪೆಡೆವಣಿಯಂ ಫಣಿಯಂ . . . ಮಾಣಿಯಂ ಸಿಡಿಲಂ ಪಡೆದಂತೆ ಸುಜನರಂ ದುರ್ಜನರಂ (ಶಂರಾಚ. ೦-೪೨) ; ಪೆಡೆಯ ಸರವಣಿ ತೋಳಬಂದಿಗೆ ಪೆಡೆವಣಿಯ ಮಣಿವಾವುಗಳನಳವಡಿಸಿದನು (ಕುಮಾ. ೭-೧೨). **ಪೆಡೆಮಣಿ** : [ಉರಗಂ] ಪೆಡೆವಣಿಯಂ ವಿಷಮಂ . . . ಧರಯಿಸಿದಂತಿರೆ ಸಜ್ಜನರಂ ದುರ್ಜನರಂ ಪಡೆದಂ ಕಮಳಭವಂ (ಶಬ್ದಮ. ೦-೪೩). **ಹೆಡೆಮಣಿ** : ಮೆರೆದಳು ಕೈಕೆ ಮಂಥರೆಯ ತೊಡೆಯಲ್ಲಿ ಕಾಳಾಹಿಭೋಗದಲಿ ಹೊಳೆವ ಹೆಡೆಮಣಿಯಂತೆ (ತ್ರೀರಾಚ. ೨೪-೬೦೭). **ಹೆಡೆವಣಿ** : ಫಣಿಪನ ಹೆಡೆವಣಿಯನುದ್ಧರಿಸುವಂತಿರೆ ತೆಗೆವ ಭಿಸುಟನು ರತುನಮುದ್ರಿಕೆಯ (ಕುಮಾ. ೬-೪೮) ; ಒತ್ತಿ ತಿವಿದು ಛಿದ್ರವ ಮಾಡಿ ಭೂಮಿಯ ಹೊತ್ತ ಹಾವಿನ ಹೆಡೆವಣಿಯು ಕಿತ್ತು ತನ್ನ (ಕೀಶಿ. ೦೬-೬೬) ; ಎಡೆಯ ಪಂಜುಗಳಿರ್ದುವು ನಾಗನಾಥನ ಹೆಡೆವಣಿಗಳ ದೀಪ್ತಿಯಂತೆ (ಕೋಶಕ. ೦೩-೨೩). [ಪೆಡೆ + ಮಣಿ]

**ಪೆಡೆವರಲ್** (ನಾ). = ಪೆಡೆವಣಿ : ಪೆಡೆವರಲಾವುದೊ ರನ್ನದ ಸೊಡರಾವುದೊ ಪೇಟ್ಟುಮೆಂಬಿನಂ ಸುದೆಗದಟ್ಟಿಡಿದಿರೆ ನಾಗಾಂಗನೆಯರ್ . . . ಸಾರ್ತಂದರ್ (ಶಂರಾಚ. ೦೬-೬೨); ಪೆಡೆವರಲ ಬೆಳಗುಮುರಗನ ವಿಷಮುಂ ನಿಮಿರ್ದುದೆನೆ ರಾಗ ಭೇದಮನೆಸಗಿತ್ತುದು ನಿನ್ನ ನುಡಿಯ ಮೊದಲುಂ ತುದಿಯುಂ (ಕಿಕ್ಕೃ. ೬-೨) ; ನೇವಳದ ಫಣಿಯ ಪೆಡೆವರಲ್ಗಳೊಳು ಮಾರ್ಪೊಳೆವ (ಭಾರತ. ೨-೦). [ಪೆಡೆ + ಪರಲ್]

**ಪೆಡ್ಡಗೆಯ್** (ಕ್ರಿ). ಲಟ್ಟಿಸಂ (?) : ದೊಡ್ಡ ಉಳಿಕು ಬೆಲ್ಲ ಮಡ್ಡಿ ಬದ ಸಣ್ಣಗೆ ಸುರದ್ದ ಕಂಪಿನ ಮಿಶ್ರದಡ್ಡಿಮುದುದುರಪಯದಿ ನಿಷ್ಟಗಲ್ಲಿಂದಲೀರ್ಗುಲದ ಚೌಕದಿಂ ಪೆಡ್ಡಗೆಯ್ದು ಸ್ಥಾಲ್ಯದಿ (ಅಂಡಪು. ೬-೦೩). [? + ಕೆಯ್]

**ಪೆಣ್, ಪೆಣ್ಣು, ಹೆಣ್, ಹೆಣ್ಣು** (ನಾ). ೧. ಹೆಂಗಸು ; ಸ್ತ್ರೀ : "ಪೆಣ್ಗಳ್ ಜೋಸೆಯರಪ್ಪರ್" (ಕರ್ಣಾಭಿ. ೯); ಶೀತಕ್ಕಾಬದಲ್ಕೆ ಕೊಟ್ಟಿರ್ದ ಧರಾತಳವೆಂಬ ಪೆಣ್ಣ ಪೊಸ ಕಂಚುಳಿಕೆಯ ಸೀಮರ್ಪುತ್ತಿನಂದವಾದುವು ಪನಿಗಳ್ (ಕಾವ್ಯಸಾ. ೬೯೯ ಹೊದ್ರ೪); ಪರವುಜನೇಂದ್ರವಾಣಿಯ ಸರಸ್ವತಿ ಬೇಡಿದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು (ಅಂತ. ೦-೯) ; ಅವನ ಚೆಲ್ವಿಕೆ ಗಂಡು ಪೆಣ್ಗಳ ಕಂಗಳ ಸೆರೆವಿಡಿದಿಹುದು (ಶರಶ. ೦-೫೦). ೨. ಮಗಳು ; ಪುತ್ರಿ : "ಪೆಣ್ ದುಹಿತೃ ನಂದನೆ ಪುತ್ರಿ ತನೂಜೆ" (ಪಶ್ಚಕೋ. ೫೯-೦೭); ಬುಧನೆ ಮತ್ತಂ ನೋಡೆ ಕಾಂತಾದ್ವಿದೇಹನವಾಂಶೋಪಗತ ಗ್ರಹೋದಯಮುಮುಂ ಪೆಣ್ಣೊಂದೆರಟ್ಟಂಡುಗಳ್ (ಜಾತಕ. ೩-೦೪); ಬೆಲೆವೆಣ್ ಪೆಣ್ಣಂ ಪೆತ್ತಂತಿರೆ (ಧರ್ಮಾಮೃ. ೦-೦೨೭). **ಪೆಣ್ಣು** : ೧. ಪೆಣ್ಣಂಗಂ ಪೊನ್ನಿಂಗಂ ಮಣ್ಣಿಂಗಂ ಕಾಂಕ್ಷೆಯಿಂದಮೊಣಗದೆ (ಧರ್ಮಾಮೃ. ೭-೯೯); ಕಂಡುದಿಲ್ಲವು ಪೆಣ್ಣಿಗೆ ಪೆಣ್ಣುಮನ ಮರುಳ್ಗೊಂಡಿದೆ ಕೇಳಾಯತಾಕ್ಷಿ (ಕೋಶಕ. ೨೬-೨೭) ; ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ . . . ಪೆಣ್ಣು ಪೆಣ್ಣಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು (ಹರಿಭ. ೫-೭).
**ಹೆಣ್** : ೧. ಹೆಣ್ಗಳ ಕಣ್ಣನೀಡಿಗೆ ಗುಜಿಯಾದೊಡೆ (ಕಂಸಂ. ೯-೦೩೫).
**ಹೆಣ್ಣು** : ೧. ಮೊಲೆ ಮುಡಿ ಬಂದರೆ ಹೆಣ್ಣೆಂಬರು ಗಡ್ಡ ಮೀಸೆ ಬಂದರೆ ಗಂಡೆಂಬರು ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ (ದೇವಾಜ. ೬೩-೦೩೬); ಹೆಣ್ಣಿನಿಂದಲೆ ಇಹವು ಹೆಣ್ಣಿನಿಂದಲೆ ಪರವು (ಸರ್ವಜ್ಞ. ೦೬೯೩); ಹೆಣ್ಣಿನಿಂದ ಏನಾಗುವುದೋ ಯಾರು ಬಲ್ಲರು ? (ಆರ್ಚಿಕ. ೪೪). ೨. ಹೆಣ್ಣ ಕುಡುವರಲ್ಲದೆ ಕೂಟಗಾದವರುಂಟೆ (ಕೂನ್ನಸಂ. ೨೨೬-೨೬). ೩. ಹೆಂಡತಿ ; ಪತ್ನಿ : ಹೆಣ್ಣ ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು (ಮಹಾದೇ. ೩. ೪೯-೦೦೭). ೪. ಮದುಮಗಳು ; ವಧು : ಗಂಡಿನ ಕಡೆಯ ಮೆರವಣಿಗೆ ಇದ್ದಂತೆಯೇ ಇರುತ್ತದೆ ಹೆಣ್ಣಿನ ಕಡೆಯ ಎದುರುಗೊಳ್ಳಲು ಬಂದವರ ಮೆರವಣಿಗೆ (ನನ್ನೂರು. ೬೫); ಹೆಣ್ಣಿನ ಕಡೆಯವರೂ ಕನ್ಯೆಯರೂ ಹಿಂದಿನ ರಾತ್ರಿಯೇ ಬಂದು ಅರಮನೆಯ ಒಂದು ಭಾಗದಲ್ಲಿ ಬಿಡಾರ ಮಾಡಿದ್ದರು (ಶಾಂತಲಾ. ೦೦೪).

**ಪೆಂಗಳ್, ಹೆಂಗಳ್, ಹೆಂಗಳು** (ಬಹುವ) : ಆ ಪಟ್ಟಿಯಂ ಕಾದ ಪೆಂಗಳಿಗೆ ಪಾತಿವ್ರತ್ಯಪಳಿದುದು (ಶಿಕ್ಕೃ. ೩-೨೦-೨೪); ಪೆಂಗಳ ಸೂಟಿ ವಿಶೇಷಮಾಯ್ತು (ಹಮ್ಮಾರ. ೩-೮); ಕೊಳೆಯ ಹತ್ತಿ ಹೆಂಗಳಿಕ್ಕೂಗಡೆ ಹೇಚುಳವ ಮಾಡುತ್ತವಿರಲು (ಪ್ರೈಶಾಂ. ೦೯೨೯, ೦೫-೯ : 12ನೆಯ ಶತ) ; ಲೋಕೇಶ್ವರನೆಂಬ ಪಾಪಿಷ್ಠ ಹೆಂಗಳನೇಕೆ ನಿರ್ಮಿತವ ಮಾಡಿದನೋ ಸಾಕೀ ಜನ್ಮವಿದೇಕೆಂದಾಕಯೊಳಾಕೆ ಪೇಳಿದಳು ದುಃಖವನು (ಕೋಶಕ. ೦೦-೬೦) ; ಚೆಲುವಿನ ಹೆಂಗಳೊ ಒಲವಿನ ಕಂಗಳೊ (ಅರಳೀ. ೬೦-೦೪). **ಪೆಂಡಲ್**, **ಪೆಂಡರು**, **ಪೆಂಡಿರ್**, **ಪೆಂಡಿರ್ಕಳ್**, **ಹೆಂಡರು**, **ಹೆಂಡಿರ್**, **ಹೆಂಡಿರು** (ಬಹುವ) : ವನ್ನಿಬ್ಬರ್ರ್ ಚ್[ದೇ]ರರುಮಂ ಪೆ[ಣ್ಡಿ][ರಂ] ಕವಿಲೆಯುಮಂನಲಿದ ಮಹಾಪಾತಕಂ (ಶಾಇತ. XI-i, ೪೦-೦೭ ; 965); ಲೋಕದೊಳ್ನೋಡದ ಪೆಂಡರಿಲ್ಲ ಆಡು ಮುಟ್ಟದ ಗಿಡುವಿಲ್ಲ (ಧರ್ಮಾಮೃ. ೩-೪೨); ತೆಲಿಗೆ ನೆಲೆವೊರಿಲ್ಲದೀಗಳ್ಪೆಣ್ಡಿರು ಮಕ್ಕಳುಂ (ಎಶ. III, ನಂಜ. ೦೬೯-೫ ; 915 ?); ಕಲಿಗಳ್ನೆಂಬೋ × × × [ದಾ]ಯ ಬಾಚಿನೆನ್ದು ಪರಿಚ್ಛೇದಿಸಿ ಪೆಣ್ಡಿರನುಯ್ದೊಡೆ ಪುಟ್ಟಿದೊ × × × ರದೆ (ಶಾಇತ. XI-i, ೨೦-೮; 893); ಪೆಂಡಿರ್ ಪೆಂಡಿರೊಳದೆಂತು ಬೆರಸುವರಬುಲೇ (ಶಂಶಭಾ. ೦-೭೬) ; ಸಮಸ್ತಶಾಸ್ತ್ರಂಗಳೊಳಂ ಪರಿಣತನೆನಿಸಿದನಂ ಪೆಂಡಿರ ಚಿತ್ರಮನಿಂತಱಿಂದು ನಿಟ್ಟಿಸಲಾಱಿಂ (ಸಮಚ. ೯-೦೦೦); ಪತಿಹಿತಕಾರ್ಯೋಯಂ . . . ಕಳತ್ರಮೆಂದತಿಶಯದಿಂದೆ ಪಾಲಿಸುವುದಲ್ಲದ ಪೆಂಡಿರನಿಕ್ಕು ಕಿಚ್ಚಿನೊಳ್ (ದಶಕು. ೧೨-೦೦೭) ; ಪೆಂಡವಾಸದೊಳ್ಪೆಂಡಿರ್ಕಳುಂ ವಿಮಾನಂಗಳ ಮುಂದಾಡುತ್ತುಂ (ಪಶ್ಚಾರಾ. ೮೪-೦) ; ಪಿಂಡ ಬಲಿದವು ಬಳಿಕ ಮೂವರು ಹೆಂಡರಿಗೆ (ಕೊರಶಾ. ೦-೯-೦) ; ಹೆಂಡರ ಕೌತುಕವ ಗಂಡರು ಬಲ್ಲರೇ (ಸರ್ವಜ್ಞ. ೦೭೬೮); ಮಕ್ಕಳೆಲ್ಲ ಮನೆವಾರ್ತೆ ಮಾಡಿದರೆ ಅಪ್ಪಗೆ ಯಾಕೆ ಇಬ್ಬರು ಹೆಂಡರು ? (ಗಾದೆ); ಗಂಡ ಹೆಂಡಿರನತ್ಯುಗ್ರದಿ ಶಿಕ್ಷಿಸಲ್ . . . ಹರ ಕೊಲ್ಲಲ್ ಪರ ಕಾಯ್ವನೇ (ಕೀಚಕೀ. ೨೪) ; ರಿಣ ತಪ್ಪಿದ ಹೆಂಡಿರಲ್ಲಿ . . . ಜೀವವಿಲ್ಲದ ದೇಹದಲ್ಲಿ ಫಲವೇನೊ (ಶಕರ. ೫೬೪); ಸೂರೆಗೊಯಿತು ಸುರಪತಿಯ ಭಂಡಾರ ಹೆಂಡಿರುಸಹಿತ ನಿರ್ಜರಾರಿಯರು ತೊತ್ತಾದರು (ಕುಮಾ. ೬-೦೦); ಕಂಡರೆಡೆಯಲಿ ಖರನ ನಗರದ ಹೆಂಡಿರುಗಳಕ್ಕಿಗಳ . . . ಬಸುಱ ಹೊಯ್ಲುಗಳ (ಕೊರಶಾ. ೩-೫-೨); ಹೆಂಡಿರುಗಳ ಬಿಟ್ಟೋಡಿದಪರ . . . ಅಂಡಲೆಗಳನೇವೇಳ್ವೆ (ಕಂಶಶ. ೦೦-೫೨). **ಪೆಂಡಿರಾಳಿಗ** = (ಆಲಂ) ಬರಿಯ ಮಾತಿನ ಜಗಳ :

ಕಾಳಿಗಪುನುಟುದು ಪೆಂಡಿರ್ಗಳಿಗವುಂ ಮಾಟ್ಪೆ (ಹಂಡಾಕೂ. ೦೪-೦೪೯). ಪೆಣ್ದಲೆರನ್ನೆ = ಹೆಂಗಸರಲ್ಲಿ ತಲೆಮಣಿಯಂತಿರುವವಳು ; ಅತ್ಯಂತ ಶ್ರೇಷ್ಠಳಾದವಳು : ಚಿತ್ತಸ್ಥಾರುಚಿಜ್ಞಂ ಗರ್ಭದೋಳಿರ್ಪನಾಗಿ ಪೆಣ್ದಲೆರನ್ನೆಗೆ ಅರರೆ ವಸ್ತುಗಳ ರುಚಿಯರುಚಿಯಾದುವು (ಶರ್ಮ. ೨-೯೦); ೯ಪ್ಪುರವ ಚೆನ್ನಾಗಿ ಹದ ಮಾಡಿ ಲೇಪಿಸಿ ಪೆಣ್ದಲೆರನ್ನೆಗೆ ತಳವನಿಕ್ಕಿದರು (ಮೋಹತ. ೩೦-೫). ಪೆಣ್ಮಂಡೆಮಾಣಿಕ = ಪೆಣ್ದಲೆರನ್ನೆ : ಪೆಣ್ಮಂಡೆ ಮಾಣಿಕ ಹರಿಪಥೂಟಿಯಲಿ ಮುಗುಳಂಬನೊಡಲ ಬೇಡಿದಳು (ಮೋಹತ. ೦೦-೯); ಪೆಣ್ಮಂಡೆಮಾಣಿಕವಹ ಪಟ್ಟದರಸಿ . . . ಪೂಗೋಲನ ಕಾಣಿಸಿದಳು ಕಾಂತನೆಡೆಗೆ (ಮೋಹತ. ೨೨-೦೪). ಪೆಣ್ಮಾಡು, ಹೆಣ್ಮಾಡು = ೧. ಹೆಣ್ಣು ರೂಪಾಗಿ ಮಾಡು; ಸ್ತ್ರೀಯನ್ನು ಸೃಷ್ಟಿಸು : ವಿಶುದ್ಧಮಪ್ಪ ಪಳಿಕಿಂ ಪೆಣ್ಮಾಡಿದಂತೊಪ್ಪಿದಳ್ (ಆಂಶ. ೬-೨೩); ಕಾಮದೇವನಯ್ತುಲರಂಬಿನ ಶಕ್ತಿಗಳುಮನೊಂದುಮಾಡಿ ಲೋಕಮೆಲ್ಲಮಂ ಮರುಳ್ಮಾಡಲೆಂದು ಪೆಣ್ಮಾಡಿದನಕ್ಕುಂ (ಶಂಶಭಾ. ೯-೬೩ ಪ). ೨. ಹೇಡಿಯನ್ನಾಗಿ ಮಾಡು ; ಹಿಂಜರಿಯುವಂತೆ ಮಾಡು : ನಿಜಾರಿಬಳವುಂ ಪೆಣ್ಮಾಡಿ ಪೆರ್ಮ್ಮಾಡಿ ತತ್ಸುತಪುತ್ರಂ ನೆಗಳ್ದಂ (ಕಇಅ. ೬೯ ೦೨-೮ ; 1170) ; ಉದ್ಧತಾರಿಬಳವುಂ ಪೆಣ್ಮಾಡಿ ಪೆರ್ಮ್ಮಾಡಿ ತಾಂ ನೆಗರ್ದ್ದಂ (ಎಇ. XV. ೩೦೯-೦೨ ; 1172). ಹೆಂಗಳೆ = ಹೆಂಗಸು; ಸ್ತ್ರೀ : ಹೆಂಗಳೆಯೊಬ್ಬಳು ಅಳುತ್ತ ನಿಂತಿದ್ದಳು (ಶ್ರೀರಾಶ. ೬); ಹೆಂಗಳೆಯಾದ ನನಗೆ ಹೇಗೆ ತಿಳಿಯಬೇಕು ? (ಇಂದಿರು. ೪೫). ಹೆಂಡಹೆಂಡಿರು (ದ್ವಿರುಕ್ತಿ) : ಗಂಡಗಂಡರನೆಲ್ಲ ಹೆಂಡಹೆಂಡಿರಾಗಿ ಆಳುವ ಗರುವನ ಕಂಡೆ ನಾನು (ಬಸಹಾರೀ. ಬ. ೩೨-೬೮). ಹೆಣ್ಣಾಗು = ೧. ಸ್ತ್ರೀಯಾಗು ; ಹೆಂಗಸಾಗು : ಮತ್ತೊಮ್ಮೆಯಾನು ಹೆಣ್ಣಪ್ಪೆ ನಯ್ಯಾ . . . ನಿಮ್ಮ ಶರಣರಿಗೆ ವಧುವಪ್ಪೆ (ಬಸವ. ೬೦೩); ಹೆಣ್ಣಾದೊಡಂ ಗಂಡಾದೊಡಂ . . . ಸರ್ವನಿಂಬವಾದಿಯಾದುವರ್ಕೆ ಪುಲ್ಲಿಂಗದಂತೆ ರೂಪು ಪತ್ತುಗುಂ (ಶಮದ. ೬೨೦ (ಅ) ಶ್ರಯೋ) ; ಹೆಣ್ಣಾಗಿ ಜಾಣಸದ ಪವಣಜೆ ದುದಿಲ್ಲಲಾ (ಕೈಲಾಭಾ. ೨-೬೦). ೨. ಮೈನೆರೆ : ಋತುಮತಿಯಾಗು : ಅವಳು ಹೆಣ್ಣಾದ ಮೇಲೆ ಅವಳ ಸುಂದರತೆ ಮನ್ಮಥನೊಡನೆ ಪ್ರತಿಸ್ಪರ್ಧಿಸುವಂತಿತ್ತು (ಶಿಲಾಕು. ೦೦೩); ಮಣ್ಣಯ್ಯನರಲಿಸುತ ಹೆಣ್ಣಾದಳವಳು (ಕಾಂಚರ. ೩೩-೩೦). ಹೆಣ್ಣಾಪುಸಕಲಿ = ಹೇಡಿ ; ಅಂಜುಬುರುಕ : ನೀನು ಯಾವಾಗಲೂ ಹೆಣ್ಣಾಪುಸಕಲಿ ಕಳ್ಳಿಕಾಯಿ ಹಾಗೆ ... ಅಳ್ತೀಯ ! (ಸ್ಮಾರಿಸ್ಮೀ. ೧೬೨). ಹೆಣ್ಣಾಪುಸಕಿ = ಹೆಣ್ಣಾಪುಸಕಲಿ : ಹೆಣ್ಣಾಪುಸಕೀ ಕೈಲಾಗದವನೇ! (ನಡದಾ. I. ೩೨೫). ಹೆಣ್ಣುದಿಕ್ಕು = ಹೆಂಗಸಿನ ನೆರವು,_ ಸಹಾಯ : ಅವನ ತಾಯಿ ಸತ್ತುಹೋದಳು. ಆಗ ಅವನಿಗೆ ಮನೆಯಲ್ಲಿ ಹೆಣ್ಣುದಿಕ್ಕಿನ ಅವಶ್ಯಕತೆ ಗೊತ್ತಾಯಿತು (ಬಂಕಿಮು. ೦೯೦). ಹೆಣ್ಣುಹುಡುಗಿ = ಬಾಲಕಿ : ಗರಡಿಮನೆಗೆ ಬೆಂಕಿ ಹಾಕಿದ್ದು ಯಾರೋ ಹೆಣ್ಣುಹುಡುಗೀರ ಕೆಲಸ (ರಾಜೇಂದ್ರ. ೨೬೬). ಹೆಣ್ಣುಹೆಂಗಸು, ಹೆಣ್ಣುಹೆಂಗುಸು = ಅಬಲೆ ; ಆಶ್ರಯರಹಿತಳು : ನಾನು ಒಬ್ಬಳೇ ಹೆಣ್ಣುಹೆಂಗಸು, ಸಣ್ಣಮಕ್ಕಳನ್ನು ಕಟ್ಟಿಕೊಂಡಿರುವುದು ಹ್ಯಾಗೆ ? (ಶಂಗಾಳ್ಮ. ೬); ಹೆಣ್ಣುಹೆಂಗುಸು ನಾನು, ಈ ಕಾರ್ಯದಲ್ಲಿ ಪ್ರವರ್ತಿಸುವುದೆಂದರೇನು ? (ಅರ್ಜುಕ. ೪೪).

[ದೇ. ‖ ತಮಿ. ಮಲ. ಕೋತ. ಪೆಣ್ ; ತುಳು. ಪೊಣ್ಣು ; ಕೊಡ. ಪೊಂಗು, ಪೊಣ್ಣ್]

ಪೆಣ, ಹೆಣ (ನಾ). ಜೀವ ಹೋದ ಶರೀರ; ಶವ: "ಪ್ರೇತಃ, ಪರೇತಃ, ಕುಣಪಃ, ಶವಃ_ಈ ೪ ಪೆ(ಹೆ)ಣಂ" (ಕಬಾದು. ೦೦೯-೬); ಬೆದೆಕಾಡಿರ್ದೆಯಂತೆ ಬೇಯುತಿರ್ದ ಪೆಣಂಗಳಿಂ . . . ರಣದೇವತೆಯಿಂದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೯ ಶೂದ್ರಕ) ; ತುಜು ಪರಿವಾಗಳೆಮ್ಮ ಪೆಣನಂ ತುಟಾದುಂ ಪರಿಗುಂ ದಲ್ (ಶಂಶಭಾ. ೮-೯೩) ; ಪೆಣದ ಕೈಗಳೆ ಪುಟ್ಟುಗಳಾಗೆ . . . ನೆತ್ತರ ತೊಜೆಯುಂ ಮರುಳ್ಸೋಟಸಿ ಪಾಯಿಸುತಿರ್ದುವು ಯುದ್ಧಭೂಮಿಯೊಳ್ (ಹಂಡಾಕೂ. ೦೪-೬೬). ಹೆಣ : ಅಡವಿಯೊಳಟುಹವುಂ ಹೆಣಕ್ಕೆ ಲೇಪನಂಗೆಯ್ವುದುಂ . . . ಇವಜೋಪಾದಿ ಎಂಬ ನೀತಿಕಾಜಿನ ಮಾತದೇಕೆ ತಪ್ಪುಗುಂ (ಶಂಶಶಂ. ೦೪೬-೮); ನೆಲನಾಳ್ದನ ಹೆಣನೆಂದರೆ ಒಂದಡಕೆಗೆ ಕೊಂಬವರಿಲ್ಲ ನೋಡಯ್ಯಾ (ಬಸವ. ೦೫೯) ; ಅರ್ಜುನನಂಬಿನಂಬುಬೆಗೆ ಹೆಣನ ದಾವಣಿ ಹಾಸಿದವು (ಕುಮ್ಮಾರ್ತ್ಯಾ. ೦೦-೫) ; ಊರು ಉಪಕಾರ ಅರಿಯದು, ಹೆಣ ಶೃಂಗಾರವರಿಯದು (ಗಾದೆ).

ಹೆಣ ಎತ್ತಿಸಿ ಬಿಡು = ಕೊಲ್ಲು ; ಸಾಯಿಸು : ಮೊದಲು ಹಣ ಇಲ್ಲಿ ಬಡೀರಿ, ಇಲ್ಲದಿದ್ರೆ ನಿಮ್ಮ ಹೆಣ ಎತ್ತಿಸಿ ಬಿಡ್ತೀನಿ ಈಗ್ಲೇ ! (ಹೆಬುಕೂ. ೩೯). ಹೆಣ ಎತ್ತು = ಸಾಯು ; ಸತ್ತುಹೋಗು : ಬರೆದವನು ಎಂತಹ ಹೊಲಸು ಮಾತುಗಳನ್ನು ಬರೆದಿದ್ದಾನೆ ನೋಡು. ಇವನ ಹೆಣಾ ಎತ್ಲಿ (ರಂಗಸೋ. ೦೬೬). ಹೆಣಚಾಕರಿ = ಹೆಣವಾಗುವಂಥ ಕೆಲಸ ; ಅವಿರತವಾದ ದುಡಿಮೆ : ಕಂಪನಿ ಕೆಲಸ ಇದ್ದೇ ಇರುತ್ತೆ ಹೆಣಚಾಕರಿ(ರಂಗ ೩೯). ಹೆಣದತ್ತ = ಹೆಣಕ್ಕಿಂತಲೂ ಕಡೆಯಾಗಿರುವವನು ; ನಿಷ್ಪ್ರಯೋಜಕ : ಹೆಣದತ್ತನ ಹಾಗೆ ಈ ರೀತಿ ಕೂತಿದ್ದರೆ ಯಾವ ಕೆಲಸ ತಾನೇ ಆದೀತು ? (ಕೂಶಿ). ಹೆಣನುಂಡು ಹೋಗು = "ಹಾಳಾಗು" (ಅಪಶಂ. ಕೋಶ) : ಹರಿದು ಹತ್ತಿ ಮುತ್ತಿ ಹಿಡಿದಹೆನೆಂದು ಜಾಜಿ ಉರುಳಿ ಬಿದ್ದರು ಅನಂತರು ಹಿಡಿದವರೆಲ್ಲ ಹೆಣನುಂಡು ಹೋದರು (ಅಪಶಂ. ೦೦೩-೪೬೬). ಹೆಣ ಬಿದ್ದು ಹೋಗು = ಅತ್ಯಂತ ಕಷ್ಟಕ್ಕೆ ಒಳಗಾಗು: ವಿಪರೀತವಾದ ತೊಂದರೆಗೆ ಈಡಾಗು : ಸರಳಬಡ್ಡಿ, ಚಕ್ರಬಡ್ಡಿಗಳನ್ನು ತೆರುವುದರಲ್ಲೇ ಅವರ ಹೆಣ ಬಿದ್ದು ಹೋಗಿತ್ತು (ಹೆಬುಕೂ. ೩೯). ಹೆಣ ಬೀಳು = ೧. ಸಾಯು ; ಸತ್ತುಹೋಗಂ. ೨. ಹಾಳಾಗು; ನಾಶವಾಗು : ಕೇಳಿದಿಯಾ, ಸ್ವಾಮಿಜಿ ! ನಮ್ಮ ಹೆಣ ಬಿದ್ದ ಸಮಾಜದ ಈ ವಿಷೋದ್ಧಾರಗಳನ್ನು ! (ಹೊಸಂಗಾ. ೦೦). ೩. ಅಡಗು, ಇಲ್ಲವಾಗು : ನಿದ್ದೆ ಕಟ್ಟಿ ಹಾಕಿದೆ ; ಸದ್ದು ಹೆಣ ಬಿದ್ದಿದೆ ! (ಅಂಕೇ. ೨-೬). ಹೆಣಭಾರ = ಹೆಣದಷ್ಟು ಭಾರ ; ಬಹಳವಾದ ಹೊರೆ : ಬೆನ್ನಿನಲಿ ಹೆಣಭಾರವಿಟ್ಟು ಈಗ ನಮ್ಮ ಹೆಗಲಿಗೇ ಕೈಹಾಕಿ ನಡೆದಿರುವೆಯಲ್ಲ (ಶಂಕಮು. ೨೬-೦೦). ಹೆಣವಾಗು = ಬಹಳವಾಗಿ ದಣಿ,_ ಬಳಲು : ಬೆಳಗ್ಗೆಯಿಂದ ಒಂದೇ ಸಮನೆ ಕೆಲಸ ಮಾಡಿ ಹೆಣವಾಗಿದ್ದೀನಿ (ಕೂಶಿ). [ದೇ. ‖ ತಮಿ. ಮಲ. ಪಿಣ ; ತುಳು. ಪುಣ ; ತೆಲು. ಪೀನಿಗ, ಪೀನುಗ, ಪೀನುಗು, ಪೀನ್ಗು ; ಗದಬ. ಪೀನಿಗೆ ; ಕುವಿ. ಪೀನುಗು]

ಪೆಣಕಿ 'ಪೆಳಕೆ' ನೋ.

ಪೆಣಕೆ₁, ಹೆಣಕೆ (ನಾ). ೧. ಹೆಣಿಗೆ; ಜೋಡಣೆ : ಎರಡುಗಯ್ಯ ನಾಳ್ಕೆರಲ ನಡನಡುವೆ ಪೆಣಕೆಯೊಳಿಟ್ಟು ಹಿಡಕತ್ತಿಲಿರದಿಟ್ಟು ತೂನೆ ಬಾರದೊಡೆ ಶುಭವವು ಹರಿದು ಬರಲು ತಿಂಗಳಿಗೆ ಮರಣಂ (ಜೀಕೃಶ. ೯-೨೯-೨೯). ಹೆಣಿಕೆ : ೨. ಉಲ್ಲನ್ನು, ಬಣ್ಣದ ದಾರ ಮುಂತಾದುವುಗಳಿಂದ ಹೆಣೆಯುವುದು: ತಾಯಿಯವರು ಹೆಣಿಕೆಯ ಕೆಲಸವನ್ನು ಮಾಡುತ್ತಿದ್ದರು (ಮೇಲಾಮ. ೨೦೦) ; ನಿನಗೆ ಮೊದಲಿನಿಂದಲೂ ಹೊಲಿಗೆ ಹೆಣಿಕೆ ಅಂದರೆ ಪ್ರೀತಿ ತಾನೆ ? (ಕಂಕುಮ. ೦೨). ೩. ಹೆಣೆದುದು ; ಅದನ್ನು ಹೆಣೆದ ಹೆಣಿಕೆ, ಅದರಲ್ಲಿ ತೆಗೆದ ಚಿತ್ರ ಅವಸವಾಗಿವೆ (ಕಪಾ. ೦೦) ; ಹೂಬಿಸಿಲ ಕರವಸ್ತ್ರದಲಿ ತರತರದ ಹೆಣಿಕೆಯ ನಕ್ಷೆಯು (ಕಂಮಮ. ೦೦೩)

[ಪೆಣ್₁ + –ಕೆ./ತಮಿ. ಪಿಣಕ್ಕ, ಪಿಣಕ್ಕು]

ಪೆಣಕ್ಕೆ 'ಪೆಳಕೆ' ನೋ.

ಪೆಣಗಾಟ, ಹೆಣಗಾಟ (ನಾ). ೧. ಕಷ್ಟ ; ತೊಂದರೆ ; ತಾಪತ್ರಯ : ಈ ಪೆಣಗಾಟದಿನ್ ಎನಾನುಮನ್ ಬಿಡುಗಡೆಯನಜಸು (ಐಕ್ಯಶ್ರ. ೦೩-೩೦೬). ಹೆಣಗಾಟ : ೧. ಜೀವನ ಅಂದ ಮೇಲೆ ಹೆಣಗಾಟ ಇದ್ದದ್ದೆ (ಕೂಶಿ). ೨. ಪ್ರಯತ್ನ ; ಹೋರಾಟ : ಅವರ ಬರವಣಿಗೆ ನಿರ್ದುಷ್ಟವಾಗಿ

ಅಚ್ಚಿಸಲು ಅವರ ಹೆಣಗಾಟ (ಹಳ್ಳಿಹೋ. ೪೬). ೩. ಜಗಳ ; ಕಲಹ : ಶುದ್ಧಾತ್ಮ ಪರಮಾತ್ಮರಿಬ್ಬರೂ ಒಂದು ರತ್ನಕ್ಕೆ ಹೆಣಗಾಟವನಾಡಿಹರು ಅವರ ಹೆಣಗಾಟವ ನೋಡಿ ಆ ರತ್ನವ ಸೆಳೆದುಕೊಂಡರೆ ಕೂಡಲ ಸಂಗಂಗಾರೋಗಣೆಯಾಯಿತ್ತು (ಬಸವ. ೯೦೩); ಯಾವದೊಂದು ಸಮಾಜದಲ್ಲಿ ಕೆಲವು ಜನರ ಜೀವನದ ಹೆಣಗಾಟವು ಬೇರೆ ಕೆಲವರ ಹೆಣಗಾಟದೊಡನೆ ತೊಡಕಾಗುತ್ತದೆ (ಬಾಳಾದ. ೯೦). [ಪೆಣಗು + ಆಟ]

**ಪೆಣಗಿಸು,** ಹೆಣಗಿಸು (ಕ್ರಿ). ಹೋರಾಡುವಂತೆ ಮಾಡು ; ಕಾಳಗವನ್ನು ಏರ್ಪಡಿಸು : 'ತಗರ್ವೆಣಗಿಸು' ಪರಾ. **ಹೆಣಗಿಸು :** ಯಾರು ತಗರುಗಳನ್ನು ಹೆಣಗಿಸುತ್ತಿದ್ದರು (ಬದುಕಿ. ೨೩). [ಪೆಣಗು + – ಇಸು]

**ಪೆಣಗು,** ಹೆಣಕು, ಹೆಣಗು (ಕ್ರಿ). ೧. ಹೋರಾಡು ; ಕಾದು : ಮದನಕಲಹದೋಳೊಲ್ದು ಕೊಸರಿ ಪೆಣಗುವ ಸತಿಯವೋಲ್ ಪೆಣಗಿದುವು ಶಿವನೊಳು (ಅರಾಜ. ೦-೦೦-೩೮); ಗಿರಿತಟದೊಳೊಂದೊಂದಱೊಳ್ಪೆಣಗಿ ಸೋಲ್ತು ಮದಕರಿ ಧರೆಗುರುಳ್ವಂತೆ (ಕೃಬಿಳಾ. ೨೦-೩೦) ; ಪೆಣಗೆ ಕಡುಗವಡಿನಿಂದಂ ಕುಣಿಗಲ ನರಸಿಂಗಪುರದ ನಾಯಕರಿರ್ವರ್ (ಶಾಸ. ೫-೯೪). ೨. ಸ್ಪರ್ಧಿಸು ; ಪೈಪೋಟಿ ಮಾಡು : ಮಣಿಭೂಷಣದ ಶೋಭೆ ಮುಂಕೊಂಡು ಬೇಗ ದಿನಮಣಿಯನರುಣಾಕ್ಷಿಗನ್ನತ್ತನೆಯ ಪೆರ್ಚಿಸಲು ಪೆಣಗು[ಪಾಠಾಂ. ಮಿಣುಗು]ತಾಭಯಾಕಟಾಕ್ಷ ಮುಂಬರಿದು ಶುಭ್ರಾಂಶುವಂ ಕರೆಯೆ (ಕೊಂಗಾಡ. ೦-೨೨-೪೨). ೩. ಹಠ ಮಾಡು ; ಮೊಂಡುಹಿಡಿ : ಪಾದವಂ ಬಲ್ಪಿಡಿದು ಬಿಡೆನೆಂದು ಪೆಣಗುತಿರೆ (ಹಸ್ತಿ. ೯೩-೦೭). **ಹೆಣಕು:** ೧. ತೆಗೆ ತೆಗೆ ಸಾರು ಘಷಫಡಯೆನುತ ಮುಂಡೆಗೆ ಹಾಯ್ದು ಹೆಣಕಿದನು (ಕೌಶಿಕ. ೦೯-೨೮). **ಹೆಣಗು :** ೧. ಬಲ್ಲಿದಾನೆಯುವೊಂದು ಸಲದಿಯುಮಿಲ್ಲಿ ಹೆಣಗಿದವು (ಬಸವ. ೦೬-೩೭) ; ಬಿಡದೆ ಹೆಣಗಿದನಣುವ ರಕ್ಕಸನೊಡನೆ (ಕೌಶಿಕ. ೨೬-೭೪); ಅಲ್ಲಲ್ಲಿ ಪಾತ್ರವ ಕಾಣಿಸಿ ಹೆಣಗುವ ಮಲ್ಲರ ತೋಱುತ (ಕರಸ. ೪೭-೭೦). ೨. ಅಡಸಿ ಪದಹತಧೂಳಿ ಮದವನು ಕಾಡಿದುದಾ ಮದಧಾರೆ ರೇಣುವನಡಗಿಸಲು ಮದಧೂಳಿಗಳು ಹೆಣಗಿದುವು ತಮ್ಮೊಳಗೆ (ಕುಮಾಭಿ.೪-೭೩) ; ಕುಚಗಳನುವಿನಿಂದೊಂದನೊಂದಾ ಲಿಂಗಿಸುತ್ತಮಿರೆ ವನಜವನಜಗಳೊಡನೆ ಹೆಣಗುವಂದದಿ ತೋಳ್ಗಳೊಡನೊಡನೆ ತೋರುತಮಿರೆ (ಕೊಂಗಾಡ. ೫-೪-೦೬) ; ಓದು ಬರಹ ಬರೋ ಮುಂದಿ ಕಾವು ನಾವು ಹೆಣಗಾಕೆ ಆಗೋಲ್ಲಾ (ರಾಯುಳ. ೯೫). ೪. (ಅಲಂ) ಕಷ್ಟಪಡು: ಪೇಚಾಡು : ಹಣವುಳ್ಳವರು ಹೆಣಗಿದರು (ಕೌಶಿಕ. ೪-೭) ; ಈ ಕಾಲನೆಂಬುವ ಪ್ರಾಣಿ ... ಗಡಿಯಾರವಲ್ಲವನ ಹಿಡಿದು ಗಾಣವಾಡಿಸಲು ಹೆಣಗಿದ್ದೇವೆ (ಕಂಪುಹು. ೩೦-೦೦) ; ಅವರು . . . ಭಾರತೀಯ ಸಂಸ್ಕೃತಿಯ ವಿಕಾಸಕ್ಕೆ ಹೆಣಗಿದರು (ರಾಕೋಶ. III ಕೃಷ್ಣಾಪಟಿ). ೫. (ಹಿಡಿತದಿಂದ ತಪ್ಪಿಸಿಕೊಳ್ಳಲು) ಒದ್ದಾಡು ; ಪ್ರಯಾಸಪಡು : ಆ ರಾಣಿ ಹಲುಬಿದಳೊತೆಮುರುಚಿ ಹೆಣಗಿದಳು ಖಳನೊಡನೆ (ಕುಮಾಸ. ೦೫-೨೩) ; ಸರ್ಪನಂದದಿ ಹೆಣಗಿ ತಪ್ಪಿ ಸುಳಿಯುತ್ತ (ಕಂಕ. ೭೪-೩). ೬. ಏಗು ; ನಿಭಾಯಿಸು : ಅವಳ ಸಂಗಡ ಹೆಣಗುವದು ಬಲುಕಷ್ಟ (ಕೆಂಕಥ. ೨೭). ೭. ಮಾಡು ; ಆಚರಿಸು : "ಮಾಡು, ಎಸಗು, ನೆಗಳು, ಸಮೆ, ಗೈ, ಹೆಣಗು" (ಕಂಪುಹು. ೭೪-೩)). ೮. ಸಂಭೋಗಿಸು : ಹೆಣಗುವಲ್ಲಿ ಮೈಯೆಲ್ಲಾ ಕೈಯಾಗಿ ಹೆಣಗಬೇಕವ್ವ (ಸರ್ವಜ್ಞ. ೭೮-೩೭೫).

[ದೇ. ॥ ತಮಿ. ಪಿಣಕ್ಕು ; ಮಲ. ಪಿಣಕ್ಕು, ಪಿಣಣ್ಣು ; ತೆಲು. ಪೆನಂಗು, ಪೆನಗು]

**ಪೆಣಗೆಡಹು,** ಹೆಣಗೆಡಹು (ಕ್ರಿ). ಹೆಣವನ್ನು ಬೀಳಿಸು ; ಸಾಯಿಸು : ಬೇಂಟೆಯನಣಿಯರದಿಂ ಬೇಡುರಾಡುತಿರೆ ಘನ ವನಜಾಗ್ರಣಿ ಘೃಷ್ಟಿ ಕೊಂಡ ಚಂದದೆ ಹಣಿದುಱೆ ಪೆಣಗೆಡಹಿತಾಗಳತಿಶೌರ್ಯದೊಳಂ (ಹರಿಶ್ಚ. ೪-೯೭). **ಹೆಣಗೆಡಹು :** ದೊಪ್ಪನೆ ಕೊಯ್ದು ಸೀಳುವ ಹೆಣಗೆಡಹುವಬ್ಬರಕೆ ಮಿಗಿಲೊದಗಿದರು ಬಿಲ್ಲವರು (ಕುಮಾಭೀ. ೪-೦೪).

[ಪೆಣ + ಕೆಡಹು (<ಕೆಡಪು)]

**ಪೆಣದಿನಿ,** ಹೆಣದಿನಿ (ನಾ). ಹೆಣವನ್ನು ತಿನ್ನುವ ಭೂತ, ಪಿಶಾಚಿ ಮುಂತಾಗುವು : ಪೆಣದಿನಿಗಳ ತಂಡು ಬಲ್ಪೆಣಗಳನಱಸುತ್ತುದುಲ್ಲಿ ಬರೆವರೆ (ಗದಾಯು. ೪-೦೫) ; ಪೆಣದಿನಿಗಳವೋಲು ಬಾಂಧವರುಗಳ ಹರಣವ ಕೊಂಡವು (ಕರ್ಣಪ. ೬-೦೦) ; ಈ ಪೆಣದಿನಿಗಳ ಬಸಮೆನೆ ಬಾಟ್ಪೆಣಂಗ ಳಿವುಗಳ್ಲಿ ರಸಿಕರೆಲ್ಲಿಯ ನೇಹಂ (ಶಾಸ. ೬-೦೩೭). **ಹೆಣದಿನಿ :** ಸಾತ್ವಿಕ ಗುಣಯುತ ಕಾಮಕಂದರ್ಪ ಹೆಣದಿನಿ ದಡಿಗದೈತ್ಯರ ಕೂಡೆ ಕಾದಿ ಮಾರ್ಗಣದಿಂದೆ ಕಡಿದೊಟ್ಟಿದರು (ಸೋಹಕ. ೪೦-೭೫) ; ಹೆಣದಿನಿಗಳಹ ಗೃಧ್ರರೂಪವು ಪರಿದು ದ್ವಿಜರಾಗೆ (ಹಾದಪ. ೯-೩೦). [ಪೆಣ + – ತಿನ್ನಿ]

**ಪೆಣಬಣಂಬೆ,** ಪೆಣಬಣಬೆ (ನಾ). ಹೆಣಗಳ ರಾಶಿ, – ಒಟ್ಟಿಲು : ಎಱಗಿದರಂ ತಳ್ತು ಬಾಳ ಕೀಟ್ಕೊನೆಯಿಂ . . . ಅರಿದಿಱದರ್ ಪೆಣ ಬಣಂಬೆಗಳ್ ನೆಗೆವಿನೆಗಂ (ಕಂಶಕಾ. ೦೦-೪೨). **ಪೆಣಬಣಬೆ :** ಧೂಪ್ಪೆನುತೆ ಕೆಡೆದನ್ ಆ ಕೆಡೆದ ಪೆಣಬಣಬೆಯೊಳ್ (ಅಶ್ವಶಾ. ೦೩-೨೭೪).

[ಪೆಣ + ಬಣಂಬೆ]

**ಪೆಣಬಣಬೆ** 'ಪೆಣಬಣಂಬೆ' ನೋ.

**ಪೆಣಮಯ,** ಹೆಣಮಯಂ (ನಾ). ಶವಗಳಿಂದ ತುಂಬಿರುವುದು ; ಶವಮಯವಾಗಿರುವುದು : ಆ ತೋರ್ಪ ನದಿಯ ತೀರದೊಳ್ ಚತುರ್ಬಲಯುತರಿರ್ವರರಸುಗಳ್ ಕಾದಿದಲ್ಲಿ ಪೆಣಮಯಮಾಗಿರ್ದ ರಣ ಭೂಮಿಯುಂ ಕಂಡೆಂ (ಕಂಶಕಂ. ೪೦-೨) ; ಪೆಣಮಯಂ ಮಿಱ ಮೆದೆಗೆಡೆದಿರ್ದ ವಾಜಿವಾರಣಮಯಂ ... ಸಲೆ ಭಯಂಕರಮಾದುದಂದು ರಣರಂಗಮಾ ಪ್ರದ್ಯುಮ್ನನ (ಕೃಬಿಳಾ. ೨೨-೨೩). **ಹೆಣಮಯ :** ಹೆಣ ಮಯ ಮಾಡುತುಂ ಪೊಱಮಟ್ಟಿದದು ನೋಡೆ . . . ಮಹಾವಿಷಂ (ಕಂಬರ. ೦-೧೦) ; ಆಳನಾಳ ಮೇಲಿಕ್ಕಿ ಹೆಣಮಯವಾಗಿ (ಬ್ಯಾಕಂ. ೦೯೩೭, ೩೦-೫, 1310); ಶಿರದ ಹರಹಿನ ಕುಣಿವ ಮುಂಡದ ಕರಿ ತುರಗ ಪಯದಳದ ಹೆಣಮಯವಾಯ್ತು ರಣಭೂಮಿ (ಕುಮಾಗ. ೦-೪೦). [ಪೆಣ+ – ಮಯ್ಯ]

**ಪೆಣಲ್,** ಪೆಣಲು, ಹೆಣಲು~1~, ಹೆರಳು~1~, ಹೆಳಲು (ನಾ). ಕೂದಲನ್ನು ಒಟ್ಟಾಗಿ ಸೇರಿಸಿ ಹೆಣೆದಂದಂ: ಜಡೆ : ನಿನ್ನ ಬಂಧುರದೀರ್ಘಲೋಚನಕೆ ಕುಚಯುಗಕೆ ಪೆಣಲಿಂಗೆ ... ಎರಲೆಯೆಂದುಂ ಮತ್ತಗಜದ ಮಸ್ತಕಮೆಂದು ಪಿರಿಯುರಗನೆಂದು . . . ವ್ಯಾಘ್ರ ಹರಿ ಕೇಕಿ ಶರಭ ಶುಕಂಗಳೆಱಗಿ ಕೊಲ್ವುವು (ರಾಶಸ. ೦೭-೭೩). **ಪೆಣಲು :** ವನಜಾಕ್ಷಿಯಳ ವದನ ಚಂದ್ರಮನ ರಾಹು ತಾಂ ಕಿನಿಸಿಂದೆ ಪಿಡಿದು ನಿಂದಿರ್ಪಂತೆ ನಿಡಿದಾದ ಪೆಣಲು ಪೀಱಡಿವುತಿರೆ (ಪವರೋ. ೦೫-೩೭). **ಹೆಣಲು~1~ :** ಹೆಣಲು ಬಿಚ್ಚಿಕೊಂಡಿರೆ ಜನರು ಹಳಿಯುತಿರೆ . . . ಇನಿತುಳ್ಳ ನಾರಿಯ ಗುಣಗಳ ತಿಳಿದು ಒಬ್ಬನೆ ಇರಲಾಗದು (ಬಿಸಾಸು. ೫೫-೫). **ಹೆರಳು~1~ :** ಹೊಂಗ್ಯಾದಿಗೆ ಮುಡಿದ ಬಂಗಾರದ ಹೆರಳಿನ . . . ಮಂಗಳಮೂರ್ತಿಯ ತೋಱ ಶುಭಾಂಗಿ (ಪುರಂದ. ೦-೦೯೦-೫) ; ಕರಿವೋಡಗಳ ಬಾಟಿ ಚಿಕ್ಕಹೂಗಳನಿಟ್ಟು ಹೆಣೆದಾತೆ ಇವಳ ಹೆರಳು (ಕರುಣಾ. ೬-೬) ; ಸೋಮಾರ್ಪಡಿಯ ಹೆರಳು ಮುಂಗುರುಳು (ಜನ್ನಾಂಗ. ೪೦-೦೦೨೭). **ಹೆಳಲು :** ಆರೇನ ಮಾಡುವರು ಅವನಿಯೊಳಗೆ . . . ಹೆಳಲು ಹಾವಾದರೆ ಗೆಳೆಯ ರಿಪುವಾದರೆ (ಪುರಂದ. ೩-೨೦೩-೨) ; ಮುಡಿವುದಿಲ್ಲವೆ ಚೆಲುವ ಹೂಮಾಲೆಯನು ನೀನು ಕಂದು ಗೂದಲ ಹೆಳಲ ಸಿಂಗಾರಕೆ? (ಕಂಪು. ೯೪-೦೩); ಹೆಳಲು ಹೆಣೆದುಕೊಳ್ಳುವ ಕರ್ಮ ಬೇಡವೆಂದು ಸೋಮಾರಿಯಾದ ಗಂಡು ಹಜಾಮನಿಗೆ ಶರಣು ಹೋಗಿರಬೇಕು (ದೀಕಪ. ೭೪).

**ಹೆರಳು ಹಾಕು, ಹೆಳಲು ಹಾಕು** = ಜಡೆಯನ್ನು ಹಾಕು, – ಹೆಣೆ :

ಹೆರಳು ಹಾಕದ ನಿಬಿಡವಾದವಳ ಕೇಶರಾಶಿಯು ಹಿಂದಿನ ಭಾಗವನ್ನೆಲ್ಲ ಕತ್ತಲೆಯಾಗಿ ಮಾಡಿದ್ದಿತು (ಕರ್ಣಾಕಂ. ೪೯) : ಅತ್ತೆಯು . . . ದಿನಾಲು ಅವಳಿಗೊಂದೊಂದು ಬಗೆಯ ಹೆಳಲು ಹಾಕಿ . . . ಪತ್ರುಲಗಳನ್ನು ಉಡಿಸುವಳು (ಘೂಬಸಿ. ೯) ; ಮುಂದಾ ತನ್ನ ಕೋಣೆಯಲ್ಲಿ ಕುಳಿತು ಹೆಳಲು ಹಾಕಿಕೊಂಡು ಕೂದಲಿಗೆ ಕುಂದಿ ಹಾಕಿ ಹೆಣೆದುಕೊಳ್ಳುತ್ತಿದ್ದಳು (ಇಶ್ವ.ಕ. ೨೯೬). 'ಪಿಣಿಲ್$_2$' ಪರಾ.

[ಪೆಣ್$_1$ + — ಅಲ್$_2$. / ತಮಿ. ಪಿಣ್ಯಿಯಲ್]

**ಪೆಣಲಿಕ್ಕು** (ಕ್ರಿ). ಜಡೆಯನ್ನು ಹೆಣೆ ; ಹೆರಳು ಹಾಕು : ಕುರುಳ ನಾರಿಸುತೆ . . . ತ್ವರಿತ ತ್ರಿಭಾಗವಮಂ ಗೈದುವುನ್ನತಕೇಶದಿರದೆ ಪೆಣಲಿಕ್ಕಿ (ಶವಮೋ. ೨೬-೬೮). [ಪೆಣಲ್ + — ಇಕ್ಕು]

**ಪೆಣಲು** 'ಪೆಣಲ್' ನೋ.

**ಪೆಣವೊಗೆ** (ನಾ). ಹೆಣವನ್ನು ಸುಡುವುದರಿಂದ ಉಂಟಾಗುವ ಹೊಗೆ.— ಧೂಮ : ಪೆಣವೊಗೆ ಸುತ್ತಿ ನರಲೋಕವೆಲ್ಲಮಂತಕ ಡಾಮರದೊಳ್ ಬೆಂದು ಧೂಮಮಯಮಾದ ದಿಶಾಧೂಮಮಂ ಕವಿದಂತಾಭೀಳಮಾಗೆ (ಶಾಂತಿಪು. ೭-೯೮ ಕ) ; ಮೂಗುವಟ್ಟುವು ಪರಮ ಪಕ್ಕಿಗಳ್, ಪೆಣವೊಗೆಗೆ ಪೇಸಿದೋಲಂತೆ (ಶ್ರೀರಾಮಪ. ೬೯೯-೨೩). [ಪೆಣ + ಪೊಗೆ]

**ಪೆಣಸು$_1$** (ಕ್ರಿ). ಹೋರಾಡು ; ಕಾದು ; ಪೆಣಗು : (ಕ).

[<ಪೆಣಗು ?]

**ಪೆಣಸು$_2$** (ನಾ). ಪ್ರಯತ್ನ (?) : 'ಬಲ್ಪೆಣಸು' ಪರಾ.

[<ಪೆಣಸು$_1$]

**ಪೆಣಱಿಸು** 'ಪೆಳಱಿಸು' ನೋ.

**ಪೆಣಱು** 'ಪೆಳಱು$_1$' ನೋ.

**ಪೆಣೆ$_1$, ಹೆಣೆ$_1$** (ಕ್ರಿ). ೧. (ರೇಷ್ಮೆ, ಉಣ್ಣೆ ಮುಂತಾದ ದಾರಗಳಿಂದ) ಹೆಣಿಗೆಯನ್ನು ಹಾಕು : "ಪೆಣೆ–ಮಿಶ್ರಬಂಧನೇ(ಹೆಣೆ), ಸಂಯೋಗೇ ಚ" (ಶಮರು) ; ಪಂಚಾಯುಧದ ಪುಲ್ಲಿಗೆಯ ತೊಂಗಲ ಸೆಱಂಗು ನಾಂದು ಪಿಣಿಲೇಱಿದೆಟಲ್ಕಿದ ವೇಣಿಯೊಳ್ಪೆಣೆದು ಮಿಂಚಿನಂಚಿವೆರಸು ಕಾರ್ಮುಗಿಲ ಬಿಱಲು ಕೀಲಗೞಿದಂತೆ (ಆಸಂಪು. ೨-೨೯ ವ). ೨. ತಳಕು ಹಾಕಿಕೊಳ್ಳು : ನೆಱೆದಿರೆ ಸಂಕಲೆವಂದದ ತೆಱದಿಂ ಪೆಣೆದಿರ್ದ ನಾಗರಜ್ಜುಗಳೆಲ್ಲಂ (ಶಾಂತಿಪು. ೮-೩೦) ; ಪೆಣೆದು ಮೇಣದ ಬೊಂಬೆಯೆರಡು ಮೈಸೋಂಕಿ ಸಾದನೆಗೈದವಚ್ಚರಿಯೆಂಬ (ಶರಶ. ೧೦-೯೭) ; ಅಣಿಯರಮೆಣೆಗೊಂಡಿಭಂಗಳಂ ಭರಿಕೈಗಳ್ಪೆಣೆದಿರೆ ಕಾದಿಸಿ ತಾಮುಂ ಪೊಣರ್ದರಿಭಾರೋಹಕರ್ (ರಾಜಶೇ. ೦೩-೬೩). ೩. ಒಂದಕ್ಕೊಂದು ಸೇರಿ ತಡಿಕೆಯಾಗು : ಕಣೆಯಿಂ ಪೆಣೆದುದೊ ಗಗನಾಂಗಣಮೆನೆ ಕಣೆಗಳನಿರ್ದಲವ ಬಿಲ್ಲ ವೀರರ್ ಕಱಿದರ್ (ಜಗಪು. ೭-೩೪). ೪. ಆವೃತವಾಗು ; ಆವರಿಸಲ್ಪಡು : ಕಣೆ ಕಣೆಯು ತಾಗೆ ಪೊಣ್ಮಿದ ಕಿಡಿಯು ಗಡಣದಿಂ ಪೆಣೆದುದು ಸಮಸ್ತ ಜಗಮೆನಲ್ (ಕಿಬಪು. ೪೦-೩). ೫. ಸೇರು ; ಹೊಂದಿಕೊಳ್ಳು ; ಒಂದಾಗು : "ಪೆಣೆ–ಮಿಶ್ರಬಂಧನೇ(ಹೆಣೆ), ಸಂಯೋಗೇ ಚ" (ಶಮರು) ; ಗಭೀರಧೀರಮುರಜಧ್ವನಿ ಯೌವನಮತ್ತಕಾಮಿನೀಮೃದುಪದನೂಪುರಕ್ವಣಿತದೊಳ್ ಪೆಣೆದೊಂದಿರೆ (ಶಂಶಚಾ. ೯-೨೭) ; ಅಗ್ನಿಕುಂಡದೊಳ್ ಲಾಜೆಯುಮಂ ಕ್ರಮದಿಂದಮಿಕ್ಕಿದಳ್ ಪೆಣೆದ ಮನಃಪ್ರಣಯಕ್ಕ ಮುಡಿಗೆಯಿಕ್ಕುವ ತೆಱದಿಂ (ಶಾಂತಿಪು. ೬-೦೭) ; ಮಾತುತಮಪೌದುಂಬರಮಂ ಪೆಣೆದಿರೆ ಬಡಗಲ್ ದೊರೆಕೊಳ್ಗುಂ . . . ಜಳಂ (ರೋಕೋಪ. ೩-೦೯). ೬. ಸೇರಿಸು ; ಕೂಡಿಸು : ತಾನ್ ಪೂರ್ವಾಹ್ನ ಧರ್ಮಮುಮನ್ ತನ್ನಯ ಬಾಱಿನೊಳ್ ಪೆಣೆದು (ಕಾಂತಿಗೂ. ೭೮-೩೩೬). ೭. ತುಂಬು ; ಆವರಿಸು : ಮಣಿಯ ವಿರಹಾಂಧಕಾರಂ ಕವಿದೀ ಜಗತ್ಪತಿಯ ನೇತ್ರಪುತ್ರಿಕೆ ಮೆಯ್ಯೊಳ್ ಪೆಣೆಯೆ ಪುಲಕಾಳಿ ಚೂಡಾಮಣಿಯಂ ಕೊಟ್ಟಂ ನೃಪಂಗೆ ಪವಮಾನಸುತಂ (ಶಂರಾಮಾ. ೧೧-೦೬೪). ೮. ನಿಕಟಗೊಂಡು ಕಾದು,—ತಾಗು,—ಪೆಣಗು : ಕನಲ್ದೊನಲ್ದು ಮಾಣದೆ ಪೆಣೆದಂ ಹರಂ ದಿಗಿಭದೊಳ್ ದಿಗಿಭಂ ಪೆಣೆವಂತೆ ಪಾರ್ಥನೊಳ್ (ಶಂಚಿಚಾ. ೯-೨೦) ; ಪೆಣೆದು ಬಿಲ್ವಿಲ್ಲಂ ತೇರ್ ತೇರನಾನೆಯುಮಾನೆಯುಂ . . . ನಿಂದಣ್ಮ ಮಣ್ಮಾಟಯಪ್ಪುದುಂ (ಶಾಂತಿಪು. ೩-೩೩) ; ಮಹಾರಾಜನ ಬೆಸದಲ್ ಕನ್ನಮ್ಮನ ಕುದುರೆಯುಂ ಪೆಣದಿಱಿದು ಪಡೆವಳ ಜೋಗಯ್ಯ ಸಗ್ಗಕೆ ಸನ್ದ (ಎಕ. V. ಮಂಜರಾ. ೪೩-೦೪ ; 1022). **ಹೆಣೆ$_1$** : ೧. ದಾರಗಳನ್ನು ಹೆಣೆದು (Knit) ಬಟ್ಟೆಗಳನ್ನು ತಯಾರಿಸಲಾಗುತ್ತದೆ (ಗೃಹಪ. ೬೨) ; ಅವಳು ಕಾಲುಚೀಲ ಹೆಣೆಯುತ್ತ . . . ನಿಂತಿದ್ದಳು (ಕ್ರಿಸರು. ೦೪೨). ೭. ನಾಡಿನ ಚರಿತ್ರೆಯನ್ನು ಪೌರಾಣಿಕ ಕಥಾನಕಗಳಲ್ಲಿಯೇ ಹೆಣೆದು ಹೇಳುವ ಹೊಸಪ್ರಕಾರವೊಂದು ಈ ಶತಮಾನದಲ್ಲಿ ಮೊದಲಾಯಿತು (ಸಾಹಿಸ. ೦೫) ; ಭೂ ವ್ಯೋಮ ಪಾತಾಳ ಒಂದಾಗಿ ಹೆಣೆದಿರುವೆ (ಆರಳು. ೪೨೦-೯). ೯. ಹೂವು, ಮಣಿ ಮುಂತಾದುವುಗಳನ್ನು ಪೋಣಿಸು : ಬಾಸಿಂಗ, ದಂಡೆ ಹೆಣೆಯಲು 'ವಾಲಿಯವ'ನೂ ಹೂಗಾರನೂ ಬೇಕು (ಕನ್ನಜಾ. ೬೮) ; ಕನ್ನಡಿಯ ಪೂವೀಡು ಹೆಣೆದು ಕೊಡಲೇಂ ಕಾಣ್ಕೆ (ಕಾಱೂರ. ೨೨-೫). ೧೦. ಜಡೆಯನ್ನು ಹಾಕು ; ಹೆರಳು ಹಾಕು : ಎರಡು ಕೈಯಲು ಬಾಚಿ ಜಡೆಯಂ ಹೆಣೆದು(ಬಸವು.೯೬-೫೦). ೧೧. (ಆಲಂ) (ಅಸ್ವಾಭಾವಿಕವಾಗಿ) ರಚನೆ ಮಾಡು ; ಹೊಸೆ : ಕಂಡ ಕಂಡುದರ ಬಗ್ಗೆ ಸಿಕ್ಕ ವಿಷಯದ ಮೇಲೆ ಪದ ಹೆಣೆದು ಚೆಲ್ಲಿದ್ದಾನೆ (ಸಾಹಿಜೀ. ೧೧೦). ೧೨. ಹೂಡು ; ಏರ್ಪಾಡು ಮಾಡು : ಮೈಸೂರಿನ ಅರಮನೆಯಲ್ಲಿ ಒಡೆಯರಿರುವಾಗಲೇ ಅವರನ್ನು ವಧೆ ಮಾಡಿಸುವ ತಂತ್ರವನ್ನು ಹೆಣೆದರು (ಚಿಕ. ೨೩).

**ಹೆಣೆದುಕೊಳ್ಳು**=ಸೇರಿಕೊಳ್ಳು; ಒಂದಾಗು; ಬೆರೆ : ಸಂಗೀತವು... ಎಲ್ಲಾ ಜನತೆಯ ಜೀವನವಲ್ಲಿಯೂ ಹೆಣೆದುಕೊಂಡಿದೆ (ಭಾರತ. ೩೩೩) ; ರಸಪೋಷಣೆಯನ್ನು ಚೆನ್ನಾಗಿ ಮಾಡಬಲ್ಲ ಅಕ್ಷರಯುತ ಶಬ್ದಗಳು ಹಾಡುಗಳಲ್ಲಿ ರಮ್ಯವಾಗಿ ಹೆಣೆದುಕೊಂಡಿವೆ (ಜಗದ್. ೬೦). [ದೇ. ‖ ತಮಿ. ಪಿಣ್ಣೆ; ಮಲ. ಪಿಣೆ, ಪಿಣಯು ; ತೆಲು. ಪೆನಯು, ಪೇನು]

**ಪೆಣೆ$_2$, ಹೆಣೆ$_2$** (ನಾ). ೧. ಕೂಡಿಕೊಂಡಿರುವುದು ; ಹೆಣೆದುಕೊಂಡಿರುವ ಸ್ಥಿತಿ : (ಕ). **ಹೆಣೆ$_2$** : ೧. ಕುಬಾಂತದ ಕೂಟ — ಮರದ ಹೆಣೆ (ಸುನಾರ. ೬. ೦೪೪). ೨. ಕಣದಲ್ಲಿ ಧಾನ್ಯವನ್ನು ಒಕ್ಕುವುದಕ್ಕಾಗಿ ಕೆಲವು ಎತ್ತುಗಳನ್ನು ಸಾಲಾಗಿ ನಿಲ್ಲಿಸಿ ಸರಪಣಿಯಿಂದ ಕಟ್ಟಿದುದು: ಆರೆಂಟು ಎತ್ತುಗಳನ್ನು ಉದ್ದಕ್ಕೆ ನಿಲ್ಲಿಸಿ ಸರಪಣಿಯಿಂದ ಬಿಗಿಯುತ್ತಾರೆ. ಇವಕ್ಕೆ "ಹೆಣೆ" ಎಂದು ಹೆಸರು . . . ಒಬ್ಬ ಆಳು ಇಡೀ ದಿನ ಹೆಣೆಯ ಹಿಂದೆ ಸುತ್ತುತ್ತಲೇಯಿರುತ್ತಾನೆ (ರುಂಅರಾನ. ೫೮).

[<ಪೆಣೆ$_1$ . / ಮಲ. ಪಿಣ ; ತೆಲು. ಪೆನ]

**ಪೆಣೆಗೊಳ್** (ಕ್ರಿ). ಸೇರು ; ಒಂದಾಗು ; ಬೆರೆ : ಸಿರಿ ನೆಲೆಗೊಂಡುದಲ್ಲಿ ಮದನಂ ಮನೆಗಟ್ಟಿದನಲ್ಲಿ . . . ಗುಣಂ ಪೆಣೆಗೊಂಡುವಲ್ಲಿ (ಸೂಕ್ತಿಸು. ೪-೨೬) ; ತಪಗದಱಿನೊಳ್ ಪೆಣೆಗೊಂಡಿರೆ ಸಂಬಂಧಮುಮೆಣಿಸುವ ಕಾರವಜಿನಪ್ಪ ಸುತಸದೊಳ್ಪಂ (ಚಕಪು. ೪-೦೩೦). [ಪೆಣೆ$_1$ + ಕೊಳ್$_1$]

**ಪೆಣೆಗೊಳಿಸು** (ಕ್ರಿ). ಕೂಡುವಂತೆ ಮಾಡು ; ಜೊತೆಗೂಡಿಸು : ಒಣವೆಣದೊಳ್ ಪೆಣೆಗೊಳಿಸಿಯುಮ್ಮಂ ಮಸಗೊಂಬೀ ಪೆಣದಿನಿಗಳ ಬಸಮನೆ ಬಾಟ್ವಿಂಗಳಿಮುಗಲ್ಲಿ ರಸಿಕರೆಲ್ಲಿಯು ನೇಹು (ಚಕಪು. ೬-೦೩೭).

[ಪೆಣೆಗೊಳ್ + — ಇಸು$_1$]

**ಪೆಣೆದಾವಣಿ** (ನಾ). ಹುರಿಗಳನ್ನು ಸೇರಿಸಿ ಹೊಸೆದು ಮಾಡಿದ ಹಗ್ಗ.— ಪಾಶ : ಅಂಬುಜಸೂತ್ರಮೆಂಬ ಪೆಣೆದಾವಣಿ[ಣಿ] [ಶಾಕಾಂ. ಪೆಣದಾಣ,ಣಿ] ಯಂ ಪಱಿದಾವಲೆಂಬ ಬಾಣ್ಣಂಬಮನೊತ್ತಿ ಕಿಬ್ಬಿ (ಕಾವ್ಯಾವ. ೬೮೯ ; ರಶರ. ೪-೨೯೭ ನೋ). [ಪೆಣೆ$_1$ + ದಾವಣಿ$_1$]

**ಪೆಣೆಲೆ** (ನಾ). (?) : ಮತ್ತಂ ಕೇಳ್ದು ತಿವಾತದೊಳ್ಕು ಪೆತ್ತ ಜಾವದ ಪೆಣೆಲೆಯಂತಾಜಿ ತೆತ್ತಿಸಿದ ಸೂತ್ರಾನುರೂಪಿನ ಬೊಂಬೆಯಂದದಲಿ ಯುಕ್ತಿಯಿಂ ಪ್ರಾಣಾದಿಗಳು ನಿಜಕರ್ತೃವಂ ಲಕ್ಷಿಸುವ ದೆಸೆಯಿಂ ವ್ಯರ್ಥ ಕೇಳ್ (ಸದ್ಗುರು. ೩-೨೦). [ ? ]

**ಪೆಣೆವಾವು** (ನಾ). ಒಂದನ್ನೊಂದು ತೆಕ್ಕೆಹಾಕಿಕೊಂಡಿರುವ ಹಾವು : ತಳಕು ಹಾಕಿಕೊಂಡಿರುವ ಹಾವು : ಜ[ಪೆ]ಣೆವಾವಿನಂತೆ ಪೆಣೆದ ಕಯ್ಯ ಕಾಲ ಕೊಂಬಿನ ಕುಂಭಸ್ಥಳದೆಡೆಗಳೊಳ್ ಪೆಣ್ಣೊದೆದ ಬಟ್ಟನಂತೆ ಸುಟ್ಟ ನುಸುಳ್ದು (ಅರ್ಜನ. ೮-೮೪ ವ) : ತಲೆಯನತಿಘರದಿಂ ಬಾಗಿದ ಪೆಣೆವಾವುಗಳನಿಪಿರಿದುಂ ಸೊಗಸಿದುವು (ಇಮು೦ಕಾ. ೧೦-೩೦).
[ಪೆಣ್$_1$ + ಪಾವು$_1$]

**ಪೆಣ್ಕೊರಂಗು** (ನಾ). ಹೆಣ್ಣಿನ ವ್ಯಥೆ,–ಅಳಲು : ರಾವಣ ಪತಿವ್ರತೆಯು ತಪದ ತೀವ್ರಾತಪದ ರೌದ್ರವುಂ, ಪೆಣ್ಕೊರಂಗದೇವುದೆಂದೇವಯ್ಯುವುದು ತರವೆ . . . ನಮ್ಮ ದಾನವಕುಲದ ಬಲದ ಪೌರುಷಕೆ ? (ಶ್ರೀರಾಮಾ. ೫೭೩-೫೭೩). [ಪೆಣ್ + < ಕೊರಂಗು]

**ಪೆಣ್ಗಜ** (ನಾ). ಹೆಣ್ಣು ಆನೆ ; ಪಿಡಿ : "ಪಿಡಿ ಸವಡಿಯೆನಲ್ ಪೆಣ್ಗಜ" (ಬಾಲಪ್ರ. ೬೩). [ಪೆಣ್ + ಗಜ]

**ಪೆಣ್ಗಡಣ** (ನಾ). ಹೆಂಗಸರ ಗುಂಪು ; ಸ್ತ್ರೀಸಮೂಹ : ಸಡಗರದಿಂ ಕೃಷ್ಣ ಸೋಳಸಾಸಿರ ಪೆಣ್ಗಡಣದಿಂ ಪೊಕ್ಕನಾಲಯವ (ಪೊ.ಕೃಷ್ಣ. ೪-೬೯). [ಪೆಣ್ + ಗಡಣ]

**ಪೆಣ್ಗತ್ತೆ, ಹೆಂಗತ್ತೆ, ಹೆಣ್ಣುಗತ್ತೆ** (ನಾ). ಕತ್ತೆಯ ಜಾತಿಯಲ್ಲಿ ಹೆಣ್ಣು : ವಿಳಿಯ ಬದಿರ ಮೇಗೇಱಿಯಾಕಾಶದೊಳಿಪಡುವ. ವಿದ್ಯಾಧರ ಲಂಗಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪುಟ್ಟಿ (ವಡ್ಡಾರಾ. ೪-೦). **ಹೆಂಗತ್ತೆ** : "ರಾಸಭಾ – ಹೆಂಗತ್ತೆ" (ಟಿಕಾ. ೦೩೬). **ಹೆಣ್ಣುಗತ್ತೆ** : "ದೂರಂಗಮಾ– ಹೆಣ್ಣುಗತ್ತೆ" (ಟಿಕಾ. ೬೮). [ಪೆಣ್ + ಕತ್ತೆ$_1$ (<ಕಟ್ಟೆ)]

**ಪೆಣ್ಗಳ್ಳ, ಹೆಂಗಳ್ಳ** (ನಾ). ಹೆಂಗಸನ್ನು ಕದ್ದು ಒಯ್ಯುವವನು : ಆ ದಿನದ ಪೆಣ್ಗಳ್ಳನೇನಾದನೆಂದೀ ದಿನದ ಹಸುಗಳ್ಳಂ ನೀಂ ಬಗೆಯಲ್ವೇಡಾ (ರಾಮಾಶ್ವ. ೧೧೨-೨೨). **ಹೆಂಗಳ್ಳ** : ಈ ಹೆಂಗಳ್ಳನನು . . . ರಕ್ಕಸನ ಎಳ್ಳನಿತು ಕಡಿಖಂಡಮಾಡಿಯೆ ಹೊಳ್ಳುವಾಡಿಸಲೂದುವೆನು (ತೊರವೆ. ೫-೬-೩೬) ; ಎಲ್ಲಿಯು ಪ್ರತಿ ಪಾರ್ಥನೆಂಬವನೆಲ್ಲಿಯುವ ನಿನಗುಂಟು ಛಲವಿದ ಬಲ್ಲೆನೀಕ್ಷಿಸಿ ಬಹೆನು ಹೆಂಗಳ್ಳನನು ಸಾರು (ಶಿಭಾಗ. ೦೦-೬೨-೩೪).
[ಪೆಣ್ + ಕಳ್ಳ$_1$]

**ಪೆಣ್ಗಾಡಿ** (ನಾ). ಹೆಣ್ಣಿನ ಸೌಂದರ್ಯ, –ಸೊಬಗು : ಪರಂಬಡೆವನೋ ಪೆಣ್ಗಾಡಿಯುಂ ಚಂದ್ರಮಂ ನನೆಯಂಬಂ ತಪೆ ನೋಂತು ಪೆಣ್ಬಿರಿಜನೆಂಬಂತಾಕೆ ಕಣ್ಗೊಪ್ಪಿದಳ್ (ಅಜಿತಪು. ೩-೪೬). [ಪೆಣ್ + ಗಾಡಿ$_1$]

**ಪೆಣ್ಗಾಡು** (ನಾ). ಹೆಂಗಸರ ಸಂದಣಿ ಇರುವ ಪ್ರದೇಶ : ಮುನಿವೃಗಾವಳಿಯ ಬೇಂಟೆಯುಂ ತಾನಾಡಲೆಂದು ಸಿಂಗರದ ಪೆಣ್ಗಾಡಿ[ಪಾಠಾಂ. ಣ್ಗಾಡಿ]ನೊಳ್ ವಿಷಾನಾಂಕ ನೃಪತಿ ಕಟ್ಟಿಸಿದ ಬೆಳ್ಪುರಂಗಳಾಗಬೇಕೆಂಬುದಿರೆ (ಕೃಬಿಭಾ. ೬-೨೦). [ಪೆಣ್ + ಕಾಡು$_2$]

**ಪೆಣ್ಗಾಸೆ** (ನಾ). ಹೆಂಗಸರು ಹಾಕುವಂತೆ ಹಾಕುವ ಕಚ್ಚೆ : ಕಟ್ಟಿದ ಪೆಣ್ಗಾಸೆ ಮುಂದಲೆಚುಂಗಿಂದ ನಟ್ಟುವರಾಯುತವಾಂತು ಬೆಟ್ಟದೊಳಮರೇಂದ್ರ ಕುಣಿದಾಡುತಿರೆ (ಭರತ. ೬೪-೯೪). [ಪೆಣ್ + ಕಾಸೆ$_1$]

**ಪೆಣ್ಗಣಿ** ‘ ಪೆಣ್ಗಿಳಿ ’ ನೋ.

**ಪೆಣ್ಗಿಳಿ, ಪೆಣ್ಗಣಿ, ಹೆಣ್ಗಿಳಿ, ಹೆಣ್ಣುಗಿಳಿ** (ನಾ). ಗಿಳಿಯ ಜಾತಿಯಲ್ಲಿ ಹೆಣ್ಣು ; ಸಾರಿಕೆ : "ಪುರುಳಿಯೆಂದುಂ ಸಾರಿಕೆಯೆಂದುಂ ಪೆಣ್ಗಿಳಿ" (ಶಬ್ದಮ. ೫೫-೨೦೩) ; ಪೆಣ್ಗಿಳಿ ಕಾಯಜನುಪಹತಿಯಿಂದಸುವಂ ನೀಗುವುದದಱಿಂ ನಾನು ಸಾಯದೆ ಸುಮ್ಮನಿರೆನು (ಇಮುಂಕಾ. ೨-೩೪) ; ಮರದ ತುದಿಯ ಕೊಂಬಿನೊಳೆ ಮೃದುವಾಗಿಯೆಂದೆನಿಪ ಪೆಣ್ಗಿಳಿ . . . ಶೋಕಿಸುತಿರ್ದುದು (ನೇಮಿ. ೪೬-೪). **ಪೆಣ್ಗಣಿ** : ಕಳವಳಿಸಿ ವಿರಹದಲಿ ಪೆಣ್ಗಣಿ ಸುಳಿಸುಳಿದು ಸಿಂದಿಸುತ (ಅನಂತಾ. ೦-೭-೪). **ಹೆಣ್ಗಿಳಿ** : ಅವನ ಒಡಲು ಚಿಲ್ಪಿನ ಕದಿರು ತುಂಬಿದ ಹೊಲದಂತಿದ್ದು ಹೆಣ್ಗಿಳಿಗಳನ್ನು ಕರೆಯುವಂತಿತ್ತು (ಕಾದಂಬರಿ. ೨ ಕಥಾಸಾರ). **ಹೆಣ್ಣುಗಿಳಿ** : "ಪ್ರಿಯವಾದಿನೀ– ಹೆಣ್ಣುಗಿಳಿ" (ಟಿಕಾ. ೯೯). [ಪೆಣ್ + ಗಿಳಿ]

**ಪೆಣ್ಗುದುರೆ, ಹೆಂಗುದುರೆ, ಹೆಣ್ಣುಕುದುರೆ, ಹೆಣ್ಣುಗುದುರೆ** (ನಾ). ಕುದುರೆ ಜಾತಿಯಲ್ಲಿ ಹೆಣ್ಣು : ಪಾರ್ಥನ ತುರಂಗವದು ಪೆಣ್ಗುದುರೆ ಯಾಗಿ . . . ಸ್ತ್ರೀರಾಜ್ಯವಂ ಪೊಕ್ಕುದು (ತ್ರಿ.ಬಾ. ೦೫ ಸಂಧಿ) : ಪೆಣ್ಗುದುರೆಯಾಗಿ ಪುಲಿಯಾಗಿ ವಿಸ್ಮಯದಿಂದೆ ಪಾರ್ಥನಂ ಬೆದಱಿಸಿ . . . ಮುನ್ನಿನಂತೆ ನಿಯಮಿತಮಖಾಶ್ವಮಾದತ್ತು (ಕೃಬಿಭಾ. ೦೫-೬). **ಹೆಂಗುದುರೆ** : ಸಜ್ಜೆಯ ಮೇಲೆ ಹೆಜ್ಜೆಯಿಡುತ್ತ ಸಣಕಲ ಕಾಲಿನ ಹೆಂಗುದುರೆಗಳು ನಿಂತುವು (ಪುಸರು. ೩೩೮). **ಹೆಣ್ಣುಕುದುರೆ** : "ವಾಮಿಸಾ, ಅಶ್ವಾ, ಬಡಬಾ–ಕಿ ಹೆಣ್ಣುಕುದುರೆ" (ಸಿದ್ಧಾಂತ. ೨೫೦) ; ಗಂಡುಕುದುರೆ ಆ ಬಂದ ಹೆಣ್ಣುಕುದುರೆಯನ್ನೂ . . . ಓಗ್ಗಿನಿಂದ ಬಳಿಸಾರಿತು (ಕುಲಕು. ೪೨೪). **ಹೆಣ್ಣುಗುದುರೆ** : "ಬಡಬಾ–ಹೆಣ್ಣುಗುದುರೆ" (ಟಿಕಾ. ೦೦೫). [ ಪೆಣ್ + ಕುದುರೆ ]

**ಪೆಣ್ಗೂಸು, ಪೆಂಗುಸು, ಪೆಂಗೂಸು, ಹೆಂಗಸು, ಹೆಂಗುಸು, ಹೆಂಗೂಸು, ಹೆಣ್ಣುಕೂಸು, ಹೆಣ್ಣುಗೂಸು** (ನಾ). ೧. ಹೆಣ್ಣು ಮಗು: ಮುನೀಂದ್ರನಿಂದ್ರಿಯದೊಳೊಗೆದ ಪೆಣ್ಗೂಸುಮಂ ಗಂಡುಗೂಸುಮನವಱ ಕೆಲದೊಳಿರ್ದ ದಿವ್ಯಶರಾಸನಶರಂಗಳುಮಂ ಕಂಡು ಕೊಂಡುಪೋಗಿ (ಪಂಪಭಾ. ೨-೩೩ ವ) : ಗರ್ಭದ ಪೆಣ್ಗೂಸಿಂಗಂ ಗರ್ಭಿಣಿಗಂ ಬಾಧೆ ಒಂಗೆ ಪೆತ್ತಾಗಡೆ ಗರ್ಭಾರ್ಭಕನನುಪೆನ್ನೆಂಬೀ ದುರ್ಭಾವನೆಯಿಂ ವಿದೇಹಿಯಂ ಕಾದಿರ್ದಂ (ಕಂರಾವತಿ. ೪-೦೫) ; ಮಾಡಿದುದು ಚಿಂತಾಕ್ರಾಂತತೆಯನೆಮಗೀ ಮಗಳ ಬಳವಿ ತುದಿಯೊಳೀ ತೆಱನೆ ಪೆತ್ತವರ್ಗೆ ಪೆಣ್ಗೂಸಂ (ಧರ್ಮಾಮೃ. ೯-೩೯). ೨. ಸ್ತ್ರೀ : ವನಿತೆ : ಇಂತಪ್ಪುವರ್ ಪೆಣ್ಗೂಸುಗಳಂತವರ್ಗಳಿಷ್ಟ ವಿಷಯಕಾಮಭೋಗಂಗಳನನುಭವಿಸುತ್ತಂ ಕಾಲಂ ಸಲೆ (ವಡ್ಡಾರಾ. ೦೦೫-೦೫); ಈ ಪೊತ್ತಿನೊಳೀ ಪೆಣ್ಗೂಸೀ ಪಸವನಮೊಸೆಯೆ ಪೋಪುದೆಲ್ಲ ವಿದಘಟವ್ಯಾಪಾರಂ (ಸುಕುಮಾ. ೬-೨೦), ಪಸುಗೂಸು ಮೊಲೆಯುಂ ಪೆಣ್ಗೂಸು ತವರ್ಮನೆಯುಂ . . . ನೆನೆವಂತು (ಧರ್ಮಾಮೃ. ೩-೧೯೦). **ಪೆಂಗುಸು** : ೨. ಪೆಂಗುಸೆನುತನುಮಾನದಿಂದ ಯಾಚಿಸಲವಳು ಓಂಗದೆನ್ನಂ ಪೊಡೆಯೆ (ಪಂಪಾಶ. ೫-೦೯-೨೫). **ಪೆಂಗೂಸು** : ೨. ‘ ಒಳು ಪೆಂಗೂಸು’ ಪರಾ. **ಹೆಂಗಸು** : ೨. ಜೊತೆಗೆ ಬಂದ ಹೆಂಗಸೂ ಹಾಗೆಯೇ . . . ಶೋಭಿಸುವ ಪ್ಕೈಕಟ್ಟಿನವಳು (ಅಜೋ... ೦೩೦) : ಅಳುವ ಹೆಂಗಸನ್ನೂ ನಗುವ ಗಂಡಸನ್ನೂ ನಂಬಬೇಡ (ಗಾದೆ). **ಹೆಂಗುಸು** : ೨. ಹೆಂಗುಸಿವಳಿಂತೆಂದು ಬಗೆವು (ಬಸವ. ೨೪-೬೪) ; ಕಾವುದೆನ್ನನು ಹೆಂಗುಸಲ್ಲಾ (ಕುಮಾ.ಪ. ೦೫-೨೮) : ಹೆಂಗುಸಿವಳಿವಳಸುವನುಟ್ಟವುದಂಗವೇ ಕ್ಷತ್ರಿಯರಿಗೆ (ತೊರವೆ. ೧-೦೦-೪); ಹೆಂಗುಸರೆಂದರೆ . . . ಅಡುಗೆಮನೆಯಲ್ಲಿ ಹೂಳಿಡುವ ಕಾಲವು ಮುಗಿದುಹೋಯಿತು (ದುಕ್ಷಸ್ರ. ೦೪೦). **ಹೆಂಗೂಸು** : ೨. "ಭಾಮಿನಿ . . . ರಾಮೆ ವರವರ್ಣನಿಯೆನಲ್ಕೆ ಹೆಂಗೂಸೆನಿಕ್ಕು" (ಶಂಗರಾ. ೯೯೦); ನಾವುದಲ್ಲಿ ಹೆಂಗೂಸೆಂಬ ಹೆಸರಾದಡೇನು ಭಾವಿಸಲು ಗಂಡುರೂಪು ಬಸವ ನಿಮ್ಮ ದಯದಿಂದ (ವಚನ. ೮. ೬೦. ೦೬೪) ; ನಾವು ಹೆಂಗೂಸಿಲ್ಲದೆ ಇರ್ದುದಿಲ್ಲೆಂಬ ಮಾತಂ ಕೇಳ್ದು (ಬಸವ. ೦೨-೦೦೫) ; ಕಿಚ್ಚಿನೊಳಗುಲ್ಲಾಸದಿಂ ಬೀಳುತ ಸೆಱಗನಂತೋಸರಿಸುವಾ ವ್ರೈತಿದ ಹೆಂಗೂಸಿನಂದದಲಿ ಹರಣಮಂ ತ್ಯಜಿಸುವೆನೆನುತ (ಬಸವ. ೨೦-೨೦). **ಹೆಣ್ಣುಕೂಸು** : (೪). **ಹೆಣ್ಣುಗೂಸು** : ೧. "ಪಿಲ್ಲಾ = ಹೆಣ್ಣುಗೂಸು" (ಕಾಶಕೃ. ೨೩)

**ಪೆಣ್ಗೂಸುವೆಯ್ಯುಮಂ**__ಅರ್ಧನಾರೀಶ್ವರ : ಶಿವ : ಪೆಣ್ಗೂಸು ಮೆಯ್ಯುಮಂ ಮುಳಿದು ತಾನೆಮ್ಮುಮಂ ಕೊಲಬಪ್ಪುದು ಹಸನಾಯ್ತು (ಶಂಖ. ೪೭-೦೪). **ಹೆಂಗುಸುಗಳು** (ಬಹುವ) : ಹೆಂಗುಸುಗಳಾವ್ ಬಿಳ್ವೆಮೇ (ಕೊಡಗು. ೪-೧೧-೨೭). [ಪೆಣ್+ಕೂಸು]

**ಪೆಣ್ಗೂಳಿ** (ನಾ). ಯಾವಾಗಲೂ ಹೆಂಗಸರೊಡನೆಯೇ ವ್ಯವಹರಿಸುವವನು ; ಹೆಣ್ಣಿಗ : ಪೇಡಿಯುಂ ಬಿತ್ತೀ ದ್ರುಪದನ ನೋಡಿರೆ ಪೆಣ್ಗೂಳಿ ಮತ್ಸ್ಯನುಂ ಪಾಂಡವರೊಳ್ ಕೂಡಿ ಬರೆ ನಚ್ಚಿದಂ ಹರಿ ನಾಡಾಡಿಗಳಲ್ಲ ವಗ್ಗದೊಳ್ಳಿಯು ಪಿಂಡು (ನೇಮಿಪು. ೧೦-೧೧೧). 'ಪೆಂಕುಳಿ' ನೋ. [ಪೆಣ್ + –ಗೂಳಿ$_0$ (< –ಕುಳಿ$_3$)]

**ಪೆಣ್ಗೊಲೆ**, ಪೆಂಗೊಲೆ, ಹೆಂಗೊಲೆ (ನಾ). ಹೆಂಗಸಿನ ವಧೆ: ಸ್ತ್ರೀ ಹತ್ಯೆ : ಅಕಟೆಮ್ಮುಮಂ ಶರಣ್ಬೊಕ್ಕುದಂ ಕಂಡು ನಾಚಿಕೆಯುಂಟಾ ಪೆಣ್ಗೊಲೆ ಭಟರ್ಗೆಂದು ತಿಳಿದು ಹೇಸಿಕೆಯಿಲ್ಲದಿನಿತುಮಂ ಕೈಗೈದೆ (ಶಂಖ. ೨೦-೩೭) ; ಪೆಣ್ಗೊಲೆಗಳುಕುವೆನೆಂದು ಪಾರ್ಥನು (ಕೈಮಿಶಾ. ೧೭-೦೫). **ಪೆಂಗೊಲೆ :** ಕೋಪಮುರುಹೆಯಿಂ ಪೆಂಗೊಲೆಯುಂ ನಾಗಮಿಸಿ (ಪಂಪಾರಾ. ೫-೭೦೭). 'ಪೆಂಗೊಲೆಯು' ಪರಾ. **ಹೆಂಗೊಲೆ :** ಹೆಂಗೊಲೆಯುನು ಕಂಡು ಸುಮ್ಮನಿರುವುದಾವಂಗವು (ಚೀಪಂಶಾಂ. ೦೪-೫೩) ; ಹೆಂಗೊಲೆ ವೀರರಿಗೆ ಮೈಸಿರಿಯೆ (ಶಿಭಾಗ. ೧೧-೨-೧೧) ; ಎಲೆ ಪಾರ್ಥ ಹೆಂಗೊಲೆಗೆ ಹೇಸದೆ ಸಂಹಾಸ್ವದುಂ ತುಡುವೆ ನೀಂ (ಕೈಮಿಶಾ. ೧೭-೦೫). [ಪೆಣ್ + ಕೊಲೆ$_2$]

**ಪೆಣ್ಗೊಳ್** (ಕ್ರಿ). ಹೆಣ್ಣನ್ನು ಪಡೆ, – ಹೊಂದು : ಸಾಣೆ ಕೂರ್ದೇಜಯುಂ ಸ್ವತೇಜಾಪಂತೆಪ್ಪೊಲ್ ವಾಣದೊಳ್ಪಾರ್ಥ ಘನದೊಲ್ಪು ಪೆಣ್ಗೊಂಬ ಜಾಣಗಂಡರ್ಗೆ ಜಯಮಕ್ಕೆ (ಶಕಾ. ೬-೦೫೪ ೩ಪದ). [ಪೆಣ್ + ಕೊಳ್$_1$]

**ಪೆಣ್ಜನ** (ನಾ). ಹೆಂಗಸರ ಸಮೂಹ, – ಗುಂಪು : ಬಾಲನಂತೆಸೆದನು ಸುಜನರ ಕಣ್ಗೆ ಪೂಗೋಲನಂದದಿ ಪೆಣ್ಜನಕೆ (ವೋಚಕ. ೦೨-೫೦). [ಪೆಣ್ + ಜನ]

**ಪೆಣ್ಜನ್ಮ**, ಪೆಣ್ಣುಜನ್ಮ, ಹೆಣ್ಣುಜನ್ಮ (ನಾ). ಹೆಣ್ಣಾಗಿ ಹುಟ್ಟಿರುವುದು : ಹೆಣ್ಣಾಗಿ ಇರುವಿಕೆ : ಈತನೊಳೊಡಗೂಡದಿದ್ದರೆ ಪೆಣ್ಜನ್ಮ ವೇತಜನು (ವೋಚಕ. ೦೪-೬೪). **ಪೆಣ್ಣುಜನ್ಮ :** ಕಷ್ಟವೀ ಸ್ತ್ರೀವೇಷ ಮುಕ್ತಿಯಿಲ್ಲವರೇನು ಶಿಷ್ಟಾತ್ಮಯೋಗದೋಜದರೆ ನಷ್ಟ ಪಾಳ್ಪೆವು ಪೆಣ್ಣುಜನ್ಮವನೆಂದು ಸದ್ವೃಷ್ಟಿಯು ಸತಿಯರಾಡಿದರು (ಶರತ. ೦೭-೫೪). **ಹೆಣ್ಣುಜನ್ಮ :** ಸೂಳೆಯಾದರೂ ನಾಚಿಕೆ, ಹೆಣ್ಣುಜನ್ಮದ ಹುಟ್ಟುಗುಣ (ಪಟಶಾ. ೯೪). [ಪೆಣ್ + ಜನ್ಮ]

**ಪೆಣ್ಣಊರ್** (ನಾ). ಒಂದು ಸ್ಥಳದ ಹೆಸರು : ಕೊಚ್ಚಿಕುನ್ನವಿಷಯೀ ಪೆಣ್ಣಊರ್ನಾಗ್ರಾಮಃ (ಪ್ಕಿಆಂ. ೦೯೪೨, ೩೦-೪೫ ; 610). [ ? + ಊರ್]

**ಪೆಣ್ಣಂಚೆ**, ಹೆಣ್ಣಂಚೆ (ನಾ). ಹೆಣ್ಣುಹಂಸ; ಹಂಸೆ : ಅಗಲೆವೋಪ ಹಂಸನನೆಚಿಸಲ್ ಪಡೆದೆಳಸುವ ಪೆಣ್ಣಂಚೆಯ ಪದ ಕೊರಲಿಂಚರದ ಸರಮೆ ಸವಿ ಕಿವಿಗಿದಚ್ಚೊಳ್ (ಕಂಶಶಾ. ೫-೫೭) ; ತಾವರೆವಂಡಿನ ತನಿಸೊಕ್ಕಿಂ ಸೊಕ್ಕಿದ ಪೆಣ್ಣಂಚೆಗಳಿಂಚರಂಗಳ್ (ಕಾದಂಭ. ೦೦೭); ಅಗಲ್ದ ಪೆಣ್ಣಂಚೆಯುಂ . . . ಅಜಿಸಿ ಪೋಗಿ (ಗಂಕ. ೩-೦೦೩ ವ). **ಹೆಣ್ಣಂಚೆ :** " ಮರಾಳ, ಮರಾಳಾ, ವರಟಾ__ಈ ೩ ಹೆಣ್ಣಂಚೆ" (ಕಣಾಯು. ೪೨-೯೯). [ ಪೆಣ್ + ಅಂಚೆ$_2$ ]

**ಪೆಣ್ಣಂಡೂರ್** (ನಾ). ಒಂದು ಸ್ಥಳದ ಹೆಸರು : ಪೆಣ್ಣನ್ದೂರ್ × × ಕೀರ್ತ್ತಣ್ಣನ್ . . . ಎಜುದು ವಿಟ್ಟೋರ್ (ಎಕ. IX, ದೇವನ. ೬೪-೩ ; ಕಿ. 780). [? + ಊರ್]

**ಪೆಣ್ಣಗಲ್ಕೆ** (ನಾ). ಹೆಣ್ಣಿನ ಅಗಲಿಕೆ, – ವಿಯೋಗ ; ಪ್ರಿಯೆಯಿಂದ ಆದ ಅಗಲಿಕೆ : ಇದಿರೊಳೆಳಿದ ಸತಿಯುಂ ಕಂಡು ಹಾ ತರುಣಿ ಹಾಯೆಂದು ಹಲುಬಿದಂ ಭೃಗು ಪೆಣ್ಣಗಲ್ಕೆಯೆಂತಪ್ಪರುಂ ಭ್ರಮೆಗೊಳಿಸದೇಂ ಬಿಡುವುದೆ (ಶಂಖ. ೨೦-೭೪). [ಪೆಣ್ + ಅಗಲ್ಕೆ]

**ಪೆಣ್ಣಗೆ**, ಹೆಣ್ಣಗೆ (ನಾ). ಹೆಣ್ಣಿನ ನಗು; ಮೆಲುನಗೆ : ಪೊಳ್ತರೆಯ ಪೆಣ್ಣಗೆಯು ಚಿಮ್ಮಿದಳ್ ಬಾನ್ಗೆ (ಕಾಂಚೀರ. ೬೬-೦೦೫). **ಹೆಣ್ಣಗೆ :** ಹೆಣ್ಣಗೆಯು ನಯನದಿ ಭವಿಷ್ಯವಂ ತಿಳಿವ ಪುರುಷನ,ದೃಷ್ಟಿ, ಹೆಣ್ಣದೆಯ ಪಾರ್ದವದಿ ಗಂಡಿನ ಮನೋದಾರ್ಢ್ಯ (ಗೂರ್ಕ್ಶಾ. ೪೦-೬೪). [ಪೆಣ್ + ನಗೆ]

**ಪೆಣ್ಣರಿ** (ನಾ). ನರಿಯ ಜಾತಿಯಲ್ಲಿ ಹೆಣ್ಣು : ಮುನ್ನಿನ ಜನ್ಮಾಂತರದತ್ತಿಗೆಯುಪ್ಪ ಪೆಣ್ಣರಿಯುಂದು . . . ಇರುಳುಂ ಪಗಲುಂ ತಿನೆವಡು ತಿರ್ದನಾಗಿಯುಂ (ವಡ್ಡಾರಾ. ೨-೧). [ಪೆಣ್ + ನರಿ]

**ಪೆಣ್ಣಾನೆ**, ಹೆಣ್ಣಾನೆ (ನಾ). ಆನೆಯ ಜಾತಿಯಲ್ಲಿ ಹೆಣ್ಣು; ಪಿಡಿ : "ವಶಾ ಕರಿಣಿ ರೇಣು ಕರೇಣು ಪಿಡಿಯೆನಲು ಪೆಣ್ಣಾನೆ" (ಮಂಗರಾ. ೪೭-೧); ಮಂಜುಳಕಿಂಕಿಣಿಗಳ ಕಾಂಚೀದಾಮದಿಂದೆಸೆವ ಪೆಣ್ಣಾನೆಗಳ ಮೇಲೆ ಬರುತಿರ್ದರವರು[ಪಾಠಾಂ. ಪೆಣ್ಗಳಾನೆಗಳ ಮೇಲ್ಯೆತಂದರು] (ಕೈಮಿಶಾ. ೦೬-೫). **ಹೆಣ್ಣಾನೆ :** "ಕರಿಣಿ__ಹೆಣ್ಣಾನೆ" (ಅಕಾಪಿ. ೫-೦೭); ಬಸೆ–ನೆಣ, ಹೆಣ್ಣಾನೆ, ಗೊಡ್ಡಾಕಳು (ಕಮಡ. ೨೫೯ ಅಡಿಟಿ); ಇಂದ್ರನೈರಾವತವು ಹೆಣ್ಣಾನೆಗಳ ಹಿಂಡುಗಳಿಗೆಲ್ಲ ಅರಸನು ಆಗಿ (ಶೌಗಂಧ. ೮೦-೯). [ಪೆಣ್ + ಆನೆ$_1$]

**ಪೆಣ್ಣಾಯ್**, ಹೆಣ್ಣಾಯಿ, ಹೆಣ್ಣುನಾಯಿ (ನಾ). ನಾಯಿಯ ಜಾತಿಯಲ್ಲಿ ಹೆಣ್ಣು; ಶುನಕಿ : "ಶುನಕೀ, ಸರಮಾ__ಈ ೨ ಪೆಣ್ಣಾಯ್ (ಹೆಣ್ಣುನಾಯಿ)" (ಕಣಾಯು. ೪೭-೦೨೭); ಪೆಣ್ಣಾಯಾಗಿ ಪುಟ್ಟಿ ಸತ್ತು (ವಡ್ಡಾರಾ. ೦೩-೫); ಸತ್ತಲ್ಲಿ ನಿಷಾದನ ಮನೆಯೊಳ್ಪೆಣ್ಣಾಯಾಯ್ತು (ನಾಗಪಂ. ೫-೦೯). **ಹೆಣ್ಣಾಯಿ :** "ಸಾಯಿಸಾ = ಹೆಣ್ಣಾಯಿ" (ಕಾಶಕ. ೧೨೦). **ಹೆಣ್ಣುನಾಯಿ :** "ಹೆಣ್ಣುನಾಯಿ__ಶುನಿ, ಸರಮೆ" (ಶಾಶರಾ. ೪). [ಪೆಣ್ + ನಾಯ್]

**ಪೆಣ್ಣಾಳ್**, ಹೆಣ್ಣಾಳ್, ಹೆಣ್ಣಾಳು (ನಾ). ೧. ಹೆಂಗಸು; ಹೆಣ್ಣು : ಆ ಅಟ್ಟದಲ್ಲಿ ಪೇಡಿಗಳ್ಗೆ, ಪೆಣ್ಣಾಳ್ಗೆ ! (ಅಶ್ವಾತ್ತಾ. ೦೩-೨೬೦). **ಹೆಣ್ಣಾಳ್ :** ೧. ಹೆಣ್ಣಾಳ್ಗಳಿನ್ನದೆ ತಜುದಿಕ್ಕಿ ತೆಗೆತಂದು ಚಿಣ್ಣನನೆಮು ಗೊಪ್ಪಿಸುವ (ವೋಚಕ. ೩೩-೩೦). **ಹೆಣ್ಣಾಳು :** ೨. ಕೂಲಿ ಕೆಲಸ ಮಾಡುವ ಹೆಂಗಸು : ಹೆಣ್ಣಾಳು ಗಂಡಾಳು ಕುಟುಂಬಗ[ಳು] ಸಹ (ಕೌಇಇ. IX–ii. ೪೭೭ ೧೧; 1377); ಮುಂಗವಚಿದ ಗುಂಗುರುಹಣೆ ಗೂಡಲುಳ್ಳ ಹೆಣ್ಣಾಳುಗಳು . . . ಕಾಣುತ್ತಿದ್ದರು (ಕುವರು. ೩೦೯). [ಪೆಣ್ + ಆಳ್$_3$]

**ಪೆಣ್ಣಿಲಿ**, ಹೆಣ್ಣಿಲಿ (ನಾ). ಇಲಿಯ ಜಾತಿಯಲ್ಲಿ ಹೆಣ್ಣು; ಮೂಷಿಕೆ : ಅಂಬರದೊಳಾಡುವ ಪರ್ದಿನ ಬಾಯಿಂದಂ ಬಿರ್ದು ಬರ್ದುಂಕಿದೊಂದು ಪೆಣ್ಣಿಲಿಯುಂ ಕಂಡು (ಪಂಚತಂ. ೨೫೭-೭). **ಹೆಣ್ಣಿಲಿ :** ಗಂಡಿಲಿ, ಹೆಣ್ಣಿಲಿ, ಮುದುಕಿಲಿ, ಹುಡುಗಿಲಿ, ಎಲ್ಲಾ ಬಂದುವು ಓಡೋಡಿ ಜೋಗಿಯು ಬಾರಿಸೆ ಕಿಂದರಿಯ ! (ಪಿಂಕಿಜೋಗಿ. ೧೧-೨೫೦). [ಪೆಣ್ + ಇಲಿ$_1$]

**ಪೆಣ್ಣು** 'ಪೆಣ್' ನೋ.

**ಪೆಣ್ಣುಗ**, ಹೆಣ್ಣುಗ (ನಾ). ೧. ಹೆಂಗಸಿನೊಂದಿಗೆ ವ್ಯವಹರಿಸುವವನು. ೨. ಹೆಣ್ಣಿನಲ್ಲಿ ಆಸಕ್ತಿಯಿರುವವನು : ಪೆಣ್ಗೊಳ್ ಪ್ರವಣಂ ವ್ಯಾಪೃತಂ ಪೆಣ್ಣುಗಂ (ಶಬ್ದಾಮ. ೪೨೪ ಪ್ರಯೋ); "ಸ್ತ್ರೀಭೋಗದಲ್ಲಿ ಚತುರನಾದವನು" (ಶ್ರಶಾ). ೩. "ನಪುಂಸಕ" (ಶ್ರಶಾ). **ಹೆಣ್ಣುಗ :** ೧. ಉಗ ಪ್ರತ್ಯಯಕ್ಕೆ–ನಾರುಗಂ . . . ಹೆಣ್ಣುಗಂ,

ಮಣ್ಣುಗಂ (ಶಮದ. ೨೦೪ ಪ್ರಯೋ). ೩. "ನಪುಂಸಂ, ನಪುಂಸಕಂ, ಈ ೨ ಪೆಣ್ಣುಗಂ" (ಶಾಶಕ್ಕ. ೫೬೩). ೪. ತಲೆಹಿಡುಕ; ಕುಂಟಣಿ : (*). [ಪೆಣ್ + — ಉಗ]

**ಪೆಣ್ಣುಜನ್ನ** 'ಪೆಣ್ಜನ್ನ' ನೋ.

**ಪೆಣ್ಣುಡೆ, ಪೆಣ್ಣುಡೆ** (ನಾ). ಹೆಣ್ಣಿನ ವೇಷ,-ವಸ್ತ್ರ,-ಉಡುಗೆ : ನೀರನೋಡಿ ಪುಗೆ ಪೆಣ್ಣುಡೆಯುಟ್ಟಿರೆ ಪುತ್ರನೇಱಿ ಕೊಲ್ಲದ ತುಱುಲಾಳ್ತ ನಕ್ಕೆ ಸಮನಾವನೊ ಸಾಹಸಭೀಮಭೂಪನೊಳ್ (ಗದಾಯು. ೧-೨೨); ಪೆಣ್ಣುಡೆಯುನಾಟಿಸಿ ಬಾಳ್ವ ಶಿಖಂಡಿ ಮುಂ ನೆಟ್ಟನೆರ್ಜುನನ ಸಾರಥಿ (ಕಾವ್ಯಾವ. ೩೬೨); ಪೆಣ್ಣುಡೆಯುಟ್ಟು ಬೈತಲೆಯನೊಳ್ಪಿನಲೊತ್ತಿ . . . ತಳೆದಂ ಸತಿರೂಪನುರ್ವಿಪಾ (ಧಕಚ. ೧೧-೭೦). **ಹೆಣ್ಣುಡೆ** : ಬಳೆಗಳನ್ನು ನೆಗ್ಗಿ, ಹೆಣ್ಣುಡೆಯನ್ನು ತೊರೆದು, ವೀರವೇಷವನ್ನು ಧರಿಸಿದನು (ಕಸಾಕ. ೯೦). [ಪೆಣ್+ಉಡ್ಕೆ]

**ಪೆಣ್ಣುವಿಂಡು** 'ಪೆಣ್ವಿಂಡು' ನೋ.

**ಪೆಣ್ಣೆ**, ಪೆನ್ನ, ಪೆನ್ನೆ₁ (ನಾ). ಒಂದು ನದಿಯ ಹೆಸರು; P ಆಂಧ್ರ ಪ್ರದೇಶದ ನೆಲ್ಲೂರಿನ ಬಳಿ ಸಮುದ್ರವನ್ನು ಸೇರುವ ಪೆನ್ನಾರ್ ನದಿ: ಪಿನಾಕಿನಿ : ಷಟ್ಪಣ್ಣೆ ಪೆಣ್ಣನದೀ ಪೂರ್ವದಿಶಾಂ ಕ್ಷೇತ್ರಂ (ಎಕ. IX, ದೊಡ್ಡಬ. ೬೮-೯೪; 517); ಪೆಣ್ಣನದೀ ಪೂರ್ವತಟೇ (ಎಕ. VI, ಮೂಡಗೆ. ೩೬-೯೨; 749). **ಪೆನ್ನ** : ಪೆನ್ನನದೀ ಪೂರ್ವದಿಶಾಂ ಕ್ಷೇತ್ರಂ (ಇಕ. V, ೧೩೪-೧೯; 513). **ಹೆನ್ನೆ₁** : ಮೂಡಲು ಕೊಟ್ಲನೂಱ ಪೊಲವೇರೆ ಹೆ(೦)ನ್ನೆಯ ತೊಱಿ (ಸೌಇಇ. IX-1, ೩೩೭-೨೦; 1328); ಜೀವಂಗಳಿಗೆಲ್ಲಾ ಉದಕವೇ ಪ್ರಾಣವಾಗಿ ಪೆನುಗೊಣ್ಡೆಗೆ ಹೆನ್ನೆಯ ನದಿಯನೂ ತರಬೇಕೆನ್ದು (ಎಕ. X, ಗೋಂಬಿ. ೬-೦೨; 1388). [ದೇ. ‖ ತಮಿ. ಪೆಣ್ಣೈ; ತೆಲು. ಪೆನ್ನ]

**ಪೆಣ್ಣೆಗಡಂಗ** (ನಾ). ಒಂದು ಸ್ಥಳದ ಹೆಸರು : ಸರ್ಬ್ಬನನ್ದಿದೇವಗ್ಗೆ ಪೆಣ್ಣೆಗಡಙ್ಗದ ಸತ್ಯವಾಕ್ಯಜಿನಾಲಯಕ್ಕೆ . . . ಕೊಟ್ಟರ್ (ಇಕ. VI, ೧೮೩-೩; 887). [ಪೆಣ್ಣೆ+ಕಡಂಗ₁ (<ಕಡಂಗು₃)]

**ಪೆಣ್ಣೆರ್ದೆ, ಹೆಣ್ಣೆದೆ** (ನಾ). (ಅಲಂ) ಹೆದರುವ ಮನಸ್ಸು; ಅಳ್ಳೆದೆ. **ಹೆಣ್ಣೆದೆ** : ಅಳ್ಳೆದೆಯ ಹೆಣ್ಣು ಹೆದರಿ, ಹೆಣ್ಣೆದೆಯ ಗಂಡನನ್ನೊರಗಿ ದಂತಿತ್ತು ಪಾರ್ವತಿ, ಕಟ್ಟಯ್ಯನನ್ನೊರಗಿದ್ದ ಆ ದೃಶ್ಯ ! (ಶಿಕೇಂ. ೧೪೩). **ಪೆಣ್ಣೆರ್ದೆಯಂ** = ಅಳ್ಳೆದೆಯವನು : ಅಂಜುಬುರುಕ : ನಿನ್ ಸ್ಮಯನಾ ತಱಿಸಲವಿನಳ್ಕಿಂದೆ, ಪೆಣ್ಣೆರ್ದೆಯನಾದಪೆನ್ ಎಂದು . . . ಕನಸು ಕಣ್ಬುದುಂ ಬೇಡ ನೀನ್ (ಬರ್ಧ್ವಶ್ರ. ೫೩-೦೨೫೮). [ಪೆಣ್+ಎರ್ದೆ]

**ಪೆಣ್ಣೊಡಲ್, ಹೆಣ್ಣೊಡಲ್** (ನಾ). ೧. ಹೆಣ್ಣಿನ ದೇಹ,-ಶರೀರ. ೨. (ಅಲಂ) ಹೆಣ್ಣಿನ ಮನಸ್ಸು ; ಹೆಂಗರುಳು: ಪೆಣ್ಣೊಡಲಲ್ತೆ ಎಂತು ಸೈರಿಪೆಂ (ರಾಚೂಶ. ೪೨-೨೨). **ಹೆಣ್ಣೊಡಲ್** : ೧. 'ಹೆಣ್ಣೊಡಲ' ಪರಾ. [ಪೆಣ್+ಒಡಲ್]

**ಪೆಣ್ತನ, ಹೆಣ್ಣುತನ** (ನಾ). ೧. ಹೆಣ್ಣಾಗಿರುವಿಕೆ : 'ಪೆಣ್ತನಂ ಗೊಳಿಸು' ಪರಾ. ೨. ಹೆಣ್ಣಿನ ಸ್ವಭಾವ,—ರೀತಿ : ತನಕ್ಕೆ-ಕಲಿತನಂ . . . ಪೆಣ್ತನಂ (ಶಮದ. ೨೦೦ ಪ್ರಯೋ); ಕವಿತಾವನಿತೆಯ ಸಂಗಕೆ ಪೆಣ್ತನ ಸವಿಯಲ್ಲವೆಂದಾ ವಾಣಿ ತವಕದಿಂ ಗಂಡುರೂಪಾಂತಳ್ (ಕುರಾಸಾಂ. ೦-೩೯); ಪೆಣ್ತನಕೆ ತಗುವಂತ ಮೇಣ್ ಚೆಲ್ವರಳುವಂತೆನ್ನ ಪಸದನಂಗೆಯ್ (ಕಶ್ರಾಂಗ. ೦೮-೯೫೫). **ಹೆಣ್ಣುತನ** : ಈ ಹೆಣ್ಣುಮಗುವಿನಲಿ . . . ಉಳಿದಿಹುದು, ಚೆಲುವಾದ, ನಿರ್ಮಲದ ಹೆಣ್ಣುತನವೊಂದು ! (ಇಂಗೀತ. ೬೨-೬); ಹರೆಯದ ಹೆಣ್ಣು ಚಾಮಲೆ ಹೆಣ್ಣುತನದ ಆ ಬನಿಯನ್ನು, ಚೆಲುವನ್ನು ತಳೆಯುತ್ತಿದ್ದಳು (ಸಪತಿ. ೫೬); ಹೆಣ್ಣುತನ ಶಿವನೆ ಜಗದಾಗ ಕೈಮುಗಿವೆ ಕಂದಯ್ಯ ಕೊಟ್ಟು ಕಡಿಮಾಡು (ಜನಗೀ. ೫೯). [ಪೆಣ್+—ತನ]

**ಪೆಣ್ತನಂಗೊಳಿಸು** (ಕ್ರಿ). ಹೆಣ್ಣಾಗಿರುವಂತೆ ಮಾಡು : ಧರಣಿಯೊಳಾನೆ ದಿವ್ಯಪುರುಷೋತ್ತಮನೆಂಬ ಸಗರ್ವಶೌರಿಯಂ ಭರದೊಳೆ ಪೆಣ್ತನಂಗೊಳಿಸಿದಂ ಕೃತುವಕ್ಷಂ (ವೃಶಂ. ೩೭-೧೦೦). [ಪೆಣ್ತನ + ಕೊಳ್₁ + — ಇಸು₃]

**ಪೆಣ್ದಂಡ** (ನಾ). ಹೆಂಗಸರ ಗುಂಪು ; ಸ್ತ್ರೀಯರ ಸಮೂಹ : ತ್ರಿದಶೇಂದ್ರಂ . . . ಅಟ್ಟಿತರ್ಜು ನಿರಂತರಂ ಸಮಱಿದಂ ಪೆಣ್ದಂಡವಿಂದ್ರಾಣಿ ಯೆಂದುದನೆಂದೆಂದೆಡೆಯಾಡುತಿರ್ಪುದೆನೆ ಮತ್ತೇನೆಂದದಂ ಬಣ್ಣಿಪೆಂ (ಅಂಪು. ೮-೨೨). [ಪೆಣ್ + ತಂಡ]

**ಪೆಣ್ದಂತಿ** (ನಾ). ಹೆಣ್ಣು ಆನೆ ; ಪಿಡಿ : "ಪೆಣ್ದಂತಿ . . . ಭೂಜವಿಶೇಷ ಕರೇಣುವಾಚಕಂ" (ನಾನಾರ. ೦೨೦). [ಪೆಣ್ + ದಂತಿ]

**ಪೆಣ್ದಳ** (ನಾ). ಹೆಂಗಸರ ಪಡೆ ; ಸ್ತ್ರೀಸೈನ್ಯ : ಲೀಲೆ ಮಿಗೆ ಪೆಣ್ದಳಂ ಬಂದು ವಿಜಯನ ಪಡೆಯ ಮೇಲೆ ಬಿದ್ದುದು (ಕೃಮಿಭಾ. ೧೬-೯). [ಪೆಣ್+ದಳ₂(=ದಲ)]

**ಪೆಣ್ದುಂಬಿ** (ನಾ). ತುಂಬಿಯ ಜಾತಿಯಲ್ಲಿ ಹೆಣ್ಣು ; ಭ್ರಮರಿ : ಆ ಪೆಣ್ದುಂಬಿಗಳ ಸರಮನೆತ್ತಿ ತಱುಂಬುತ್ತುಂ ಬಂದುದಾ ಪ್ರಭಾತಸಮೀರಂ (ಸಂಶಚಾ. ೧೨-೧೦೫); ಬಂಡುಂಬ ಪೆಣ್ದುಂಬಿ ಸುಸ್ವರದಿಂದೋದುವ ಕೀರಮಾರ ಬಗೆಗಂ ಸಮ್ಮೋದಮಂ ಮಾಡವೇ (ಸುಕುಮಾ. ೧-೬೩); ಆಗಳೆ ಬಂದ ಮುನಿವೃಂದಾರಕನ ಬರವಿನೊಸಗೆಯೊಳ್ ಮಂಗಳಂಬಾಡು ವಂತಿನಿಯ ದನಿಯಂ ನೆರೆದು ನೊರೆವ ಪೆಣ್ದುಂಬಿಗಳುಂ (ಕಂತ್ರಪು. ೨-೦೦೫). [ಪೆಣ್ + ತುಂಬಿ₁]

**ಪೆಣ್ದೊಡವು** (ನಾ). ಹೆಂಗಸು ಧರಿಸುವ ಒಡವೆ ; ಹೆಣ್ಣಿನ ಆಭರಣ : ಪರ್ಬದಾ ಪಡೆ ಬಡವೆ ? ಅದರೊಡವೆ ಪೆಣ್ದೊಡವೆ ? (ಪಾರಸಿ. ೬-೧೫೦). [ಪೆಣ್ + ತೊಡವು]

**ಪೆಣ್ದೊಡೆಯ** (ನಾ). ಅರ್ಧದೇಹ ಹೆಣ್ಣಾಗಿರುವವನು ; ಅರ್ಧ ನಾರೀಶ್ವರ ; ಶಿವ : "ಎಣ್ಮಯ್ಯಂ . . . ಪೆಣ್ದೊಡೆಯಂ, ಈಸು . . . ಅಯ್ಯೊಗಂ — ಈ ೩೩ ಈಶ್ವರಂಗೆ ಪೆಸರ್" (ಕಕಸಾ. ೯೭-೦); "ಎಳಿದೇರ . . . ಪೆಣ್ದೊಡೆಯ ಮಿಡ ಈಸರಂ ದೇಸಿಗಂ" (ಕನ್ನಮಂ. ೩). [ಪೆಣ್ + ತೊಡ್ಕೆ + — ಅ₇]

**ಪೆಣ್ದೊರೆ** (ನಾ). ಹೆಣ್ಣುನದಿ,-ಹೊಳೆ : (*). 'ಗಂಡುದೊಱೆ' ಪರಾ. [ಪೆಣ್ + ತೊರ್ಕೆ (<ತೊಱೆ₂)]

**ಪೆಣ್ಪಾಳ್ಯ** (ನಾ). ಹೆಂಗಸರ ಪಡೆ,-ಸಮೂಹ : ಸತ್ಯಸತ್ಪುರುಷರಡಿ ದರ್ಶನಂಗೊಂಡು ಪೋಪಂತೆ ಪೆಣ್ಪಾಳ್ಯದೊಡನೆ ನಡೆಗೊಳಲು (ನಚಪೋ. ೨೪-೬). [ಪೆಣ್ + ಪಾಳ್ಯ (<ಪಾಳೆಯ)]

**ಪೆಣ್ಪು** 'ಪೆಂಪು' ನೋ.

**ಪೆಣ್ಪಕ್ಕಿ** 'ಪೆಣ್ವಕ್ಕಿ' ನೋ.

**ಪೆಣ್ಬಚ್ಚ** (ನಾ). ಹೆಂಗಸು ತೊಡುವ ಆಭರಣ : ಹೆಣ್ಣಿನ ಒಡವೆ ಮುಚ್ಚಿರದಾಯುಷಮಂ ಮುಱಿದು ಕೈದುಗಳಂ ತೊಱಿದುಟ್ಟು ತೊಟ್ಟ ಪೆಣ್ಬಚ್ಚಂ (ಅನಂಪು. ೦೩-೯೬). [ಪೆಣ್ + ಪಚ್ಚ₂]

**ಪೆಣ್ಬಡಣ** (ನಾ). ಹೆಣ್ಣಿನ ದೌರ್ಭಾಗ್ಯ,—ದುರದೃಷ್ಟ : ನಾಣೊಡೆಯ ನನಪ್ಪಿಯುಂ ಮಗುಟ್ದು ನಿರ್ಲಜ್ಜ ಗಂಡಸನವ್ಪುತಿರ್ಪ ಪೆಣ್ಬಡಣದ ಮುನ್ನ ಮುಳ್ಳನಿತು ಭಾಗ್ಯಮುಮೇನರೆಯಾಗಿ ಪೋಗದೆ (?)(ಸೂಕ್ತಿಸು. ೬-೪೩೫). [ಪೆಣ್ + ಪಡಣ]

**ಪೆಣ್ಬಡೆ** (ನಾ). = ಪೆಣ್ಪಾಳ್ಯ : ನುಡಿವ ನಡೆನೋಡುವ . . . ಚಿತ್ರದ ಪೆಣ್ಬಡೆಯುಂ ಸ್ತ್ರೀರಾಜ್ಯದಂದಮದಱಿದೆಯೆಡೆಯೊಳ್ (ಅಂಪು. ೯-೬೨); ಒದವಿದ ನಿಜಲಾವಣ್ಯದಿನುದಕಂ ಸ್ಪರ್ಶಾನುಮಿತಮೆನಲ್ ಪೆಣ್ಬಡೆ ನಿಂದುದು ಪೊಕ್ಕು (ಜಗಪು. ೦೪-೯೫); ಪೆಣ್ಬಡೆ ಸೂಸಿತು . . . ಪಟವಾಸದ ರಜಮಂ (ರಾಕಕೆ. ೯-೯೦ ರಗಳೆ). [ಪೆಣ್ + ಪಡ್ಕೆ]

**ಪೆಣ್ಬಡೆಯ** (ನಾ). ಹೆಂಗಸರನ್ನೇ ಸೈನ್ಯವನ್ನಾಗಿ ಉಳ್ಳವನು; ಮನ್ಮಥ: "ಇಂಗೋಲ್ವಿಲ್ಲಂ . . . ಪೆಣ್ಬಡೆಯುಂ . . . ಗಿಳಿದೇರಂ —ಇವು ೧೩ ಲಾವಂದೇವಂಗೆ ಪೆಸರ್" (ಕಶಾ. ೦-೦೩) ; "ಬಂಡುಣಿವೆದೆಯುಸು . . . ಪೆಣ್ಬಡೆಯುನೈಸರಲ ಕಾವ ಜಲಿಗಳವಗೆಯುನೆನೆ ಮನ್ಮಥನ ನಾಮಂ" (ಕಬ್ಬಿ. ೮). [ಪೆಣ್ಬಡೆ + — ಅ₇]

**ಪೆಣ್ಬರಿಜು** (ನಾ). ಹೆಣ್ಣಿನ ಆಕಾರ, —ಆಕೃತಿ : ಮದನನ ಪೂವಿನಂಬುಗಳ ಪೆಣ್ಬರಿಜಂಬ ಬೆಡಂಗನುಂಟುಮಾಡಿದ . . . ರಾಜಕನ್ಯಕೆಯುರು ಪಲರಂ ತನಯುಂಗೆ ಮಾಡಿದಂ ಮದುವೆಯುನಾ ನೃಪಂ (ಮಲ್ಲಿಪು. ೪-೧೪೦): ಸಾತ್ವಿಕೋದಯುಂ ಪೆಣ್ಬರಿಜಾಗಿ ಮನಂಗೊಳಿಪಂತೆ ರಂಜಿಪ ತತ್ಕಂಜದಳಾಕ್ಷಿಯ ಭಾವಮುನಱಿದು (ಉದ್ಭಟ. ೮-೧೦೦ ಪ); ಚೆಲ್ವಂಬೊತ್ತಾ ಚಿತ್ರದ ಪೆಣ್ಬರಿಜಂ ನೋಡಿದನಾ ಕುವರಂ (ಜಯುಕಾ. ೩-೮). [ಪೆಣ್ + ಪರಿಜು]

**ಪೆಣ್ಬಸ** (ನಾ). ಒಂದು ಸ್ಥಳದ ಹೆಸರು : ಪೆಣ್ಬಸ ಅರು ಕಿಸುಮಂಗಲಂ (ಎಕ. IX, ೨೦೪-೬೦; 760). [ ? ]

**ಪೆಣ್ಬಾವ** (ನಾ). ಹೆಣ್ಣಿನ ಅಂಗವಿನ್ಯಾಸ : ಹಾವಕ್ಕನುರೂಪಮಾದ ಪೆಣ್ಬಾವಕ್ಕಂ . . . ಲಕ್ಕತೆಱದಿಂ ಪೊಗಟ್ಟು (ಶಾಂತಿಪು. ೩-೫೩ ವ); ಕೊಳದಿಂದಂ ಬಂದ ಲಕ್ಷ್ಮೀಪಥುಪೆನಿಸುವ ಪೆಣ್ಬಾವಮಿಂತಾಗವೇಡ (ಗದಾಯು. ೮-೬೦). [ಪೆಣ್ + ಬಾವ₂]

**ಪೆಣ್ಬಾಟ್ಟಿ** (ನಾ). ಹೆಣ್ಣಿನ ಬದುಕು : ನುಣ್ಬಾಣೆ ಮೆಲ್ಲಗದಪು ಮಾರಲ್ಗಪ್ಪಯ್ದಱೆ ತುಂಬುಗುಂದದಿಂಬಿಡಿದೆರ್ದೆಗಳ್ ಪೊಣ್ಬಡುವಿನೆಗಂ ಬಿಗಿದೀ ಪೆಣ್ಬಾಟ್ಟಿಯು × × × (ಶಕಂ. ೬-೩೦೫). [ಪೆಣ್ + ಬಾಟ್ಟಿ]

**ಪೆಣ್ಬುಯ್ಯಲ್, ಪೆಂಬುಯ್ಯಲ್, ಹೆಣ್ಬುಯ್ಯಲು** (ನಾ). (ಅಪಹರಣ ಕಾಲದಲ್ಲುಂಟಾಗುವ) ಹೆಣ್ಣಿನ ಆರ್ತಧ್ವನಿ, —ಗೋಳಾಟ : ಪೆಣ್ಬುಯ್ಯಲೊಳಱುವಸದೊಳ್ ನಂಟನೆಡಱೊಳ್ . . . ತಱಿಸಂದು ಗಂಡುತನವುನೆ ನೆಱಪದವಂ ಗಂಡನಲ್ಲನೆಂತುಂ ಪಂಡಂ (ಗದಾಯು. ೨-೨೪) ; ಕೇಳ್ದು ಪೆಣ್ಬುಯ್ಯಲಂ ವಿಚಾರಿಸದೆ ಪುರುಷಂ ಪೋಗಲಾಗದೆಂದು ತತ್ಸಮಿಪಮುನೆಯ್ದಿ (ಶಬರಪು. ೦೩-೫೮ ವ); ಎನ್ನಿನೆಯಂಗೆಯ್ದಿಸಿಪುರದ ನಾಡ ಜನಮಿಪ ಪೆಣ್ಬುಯ್ಯಲಂ . . . ಹಾ ನೃಪ ನೀಱನೆಂದಬಲೆ ಬಾಯ್ವಿಟ್ಟಟ್ಟು ಹುಯ್ಯಲ್ಯಿದಳ್ (ಅನಂಪು. ೦೨-೪೫). **ಪೆಂಬುಯ್ಯಲ್ :** ಅಗಸದೊಳು ಬರುತಂ ಪೆಂಬುಯ್ಯಲನಾಗಳೆ ಕೇಳ್ದಾ ಖಚರಂ ಸಿಡಿಮಿಡಿಯಾಗಿ ವಿಚಾರಿಸಿ (ಕುಮುದಾ. ೦೦-೬೦). **ಹೆಣ್ಬುಯ್ಯಲು :** ಹೆಣ್ಬುಯ್ಯಲನು ತಾ ಕೇಳಿ ಸಾಕ್ಷಾದ್ವಿಷ್ಣು ಬಂದವತರಿಸಿದನು ಧರೆಗೆ (ಭಾಗ. ೦೦-೨೪-೨೦).
[ಪೆಣ್ + ಪುಯ್ಯಲ್ (<ಪೊಯಲ್)]

**ಪೆಣ್ಬುರುಳಿ** (ನಾ). ಹೆಣ್ಣುಗಿಳಿ : ಪೆಣ್ಬುರುಳಿಯುನೊರ್ವ ಮೆಲ್ನುಡಿಯಿನಾಱಿಸಿ ಕಱಂತೆ ವಿನೋದದಿಂ . . . ಪೊಟ್ಟುಗಳಿವಳ್ (ಕೃಷ್ಣಪು. ೪-೧೮). 'ತೊಂಡುವೆಣ್ಬುರುಳಿ' ಪರಾ. [ಪೆಣ್ + ಪುರುಳಿ₂]

**ಪೆಣ್ಬುಲಿ, ಹೆಣ್ಣುಹುಲಿ** (ನಾ). ಹುಲಿಯ ಜಾತಿಯಲ್ಲಿ ಹೆಣ್ಣು : ಅನ್ನೆಗಂ ತಾಯುಪ್ಪ ಪೆಣ್ಬುಲಿ . . . ರಿಸಿಯುರಂ ಕಂಡು ಮುಳಿದು ಮುಸಗಿ ಮೇಲ್ವಾಯಲ್ (ಪದ್ಮಾರಾ. ೪೮-೪); ಪೆಣ್ಬುಲಿಯ ಮುಂದೆ ನಲಿದುದು ಕಣ್ಬರಿವೆತ್ತಿರಲೆ (ಚಂದ್ರಪು. ೦೪-೨೯); ಗಂಡುಮಱಿ ಸಹಿತ ಪೆಣ್ಬುಲಿಯು ತರೆ ನೃಪನವಂ ಕಂಡಿವಂ ಕಪಿಲೆ ಬಸವಂಗಳಂ ಮಾಡೆನಲು (ಲೀಕೃಪು. ೮-೪-೦೬). **ಹೆಣ್ಣುಹುಲಿ :** ವ್ಯಾಘ್ರಿಣಿ(ಹೆಣ್ಣುಹುಲಿ)ಯು . . . ತನ್ನ ಗಂಡನು ಆಹಾರ ತರುವುದನ್ನು ಎದುರು ಕಾಯುತ್ತಿತು (ಪಂಚತ. ೫೬); ಅವಳು ಹೆಣ್ಣುಹುಲಿಯಂತೆ ಗರ್ಜಿಸುತ್ತ (ದುಂದಾಶಿ. ೦೬೬). [ಪೆಣ್ + ಪುಲಿ]

**ಪೆಣ್ಮಗಳು, ಹೆಣ್ಣುಮಗಳು, ಹೆಮ್ಮಗಳು** (ನಾ). ೧. ಹೆಂಗಸು; ಸ್ತ್ರೀ : ಜಗದೊಳು ಹೊಕ್ಕು ವಿಶ್ವವನೆಲ್ಲ ತೃಣವೆಂದು ಬಗೆದು . . . ಅತಿಬೇಗದಿ ಬಂದೆ ನಿನ್ನ ಪೆಣ್ಮಗಳೆನ್ನಬಹುದೆ (ಮೋಹತ. ೬೦-೩೮). ೨. ಹುಡುಗಿ; ಬಾಲಕಿ : ಪೆತ್ತ ಪೆಣ್ಮಗಳ ಪೆರ್ಚಿಸಿ ಮ್ಯೈಮಱೆದುನ್ಮತ್ತೆಯುಪ್ಪಂತೆ ಮನ್ನಿಸದೆ (ಹರಿವ. ೫-೩೪). **ಹೆಣ್ಣುಮಗಳು :** ೧. ವಿದ್ಯಾಪತಿಯಂತೆ ತೋರುವ ಹೆಣ್ಣುಮಗಳನ್ನು ಕಂಡು ನರ್ಮದೆ ನಮಸ್ಕಾರ ಮಾಡಿದಳು (ಮುತ್ತಿದ. ೦೫೩). **ಹೆಮ್ಮಗಳು :** ೧. ಪಾಂಡವರ ಬಿರುದಿನ ಕುದುರೆಯನ್ನು ಒಬ್ಬ ಹೆಮ್ಮಗಳೂ ಕಟ್ಟುತ್ತಾಳೆ (ಬಿದುರ. ೬). ೨. ಒಮ್ಮೆ ದ್ರುಪದನು ಶಿವನ ಧ್ಯಾನಿಸಿ ಹೆಮ್ಮಗಳಯನ್ನಾರಿಗೀವೆನೆನಲ್ಕೆ (ಸಂಭಶ. ೨೪-೦೪); ಹೆಮ್ಮಗಳು ನಾ ನಿಮ್ಮ ನೆಮ್ಮಿಕೊಂಡಿರುವೆನ್ನೆ (ಸುಜಾರ. ೨-೨).
[ಪೆಣ್ + ಮಗಳು (<ಮಗಳ್)]

**ಪೆಣ್ಮಗು, ಹೆಣ್ಣುಮಗು, ಹೆಮ್ಮಗು** (ನಾ). ೧. ಹೆಣ್ಣುಕೂಸು. ೨. ಹೆಂಗಸು; ಸ್ತ್ರೀ : (*). **ಹೆಣ್ಣುಮಗು :** ೧. ಅವರ ಹೆಣ್ಣುಮಗು ತುಂಬಾ ಮುದ್ದಾಗಿದೆ (ರೂ). ೨. ಜಪರಾಯ ನುಂಗಿದೀ ಹೆಣ್ಣುಮಗುವಿನಲಿ ಹೊರೆದ ಕಲ್ಮಷ ತೊಳೆದು, ಈಗ ತಾನುಳಿದಿಹುದು . . . ಹೆಣ್ಣುತನವೊಂದು ! (ಇಂಗೀತ. ೬೨-೨). **ಹೆಮ್ಮಗು.**

**ಪೆಣ್ಮಕ್ಕಳ್, ಪೆಣ್ಮಕ್ಕಳು, ಹೆಣ್ಣುಮಕ್ಕಳು, ಹೆಣ್ಮಕ್ಕಳು, ಹೆಮ್ಮಕ್ಕಳು** (ಬಹುವ) : ಪೆಣ್ಮಕ್ಕಳ್ಗಂ ಕ್ರಮಂ ಸಲ್ವುದು (ಎಕ. VI, ಕಡೂರು. ೯-೦೦; ಸು. ೧೧೦ ?); ಬೆಸೆಯುದಿರ್ ಕುಸುಮಾಯುಧ ನಿನ್ನ ಬಲ್ಪು ಪೆಣ್ಮಕ್ಕಳೊಳಲ್ಲದಿಲ್ಲ (ಕಮುತ. ೦೨೩ ಕ್ರಯೋ); ಪೆಣ್ಮಕ್ಕಳು ಭೀತಿಸದಂತೆ ಚೊಕ್ಕಟವಾಗಿ ನೀ ತಳರು (ಮೋಹತ. ೪೨-೬); ಇಂತಪ್ಪ ಕಾಯ ಮಾಯುಮನಱಿತು ಪೆಣ್ಮಕ್ಕಳುಂ ತಕ್ಕಿನಿಂದೊಳ್ಪಗರೊಳ್ ಮುನಿಪರ್ (ಜಕಂ. ೬-೯೬ ವ); ಹೆಣ್ಣುಮಕ್ಕಳಿಗೆ ಹಾಡ ಕಲಿಸಿವವರಿಲ್ಲ, ನಾಯಿಗೆ ಬೊಗಳ ಕಲಿಸಿದವರಿಲ್ಲ (ಗಾದೆ); ಗಂಡ ಕುಳ್ಳಿರಲು ಮೂವರು ಹೆಣ್ಮಕ್ಕಳು ಸೇವೆಯ ಮಾಡುವರು (ಕೂಷ್ಯಸಂ. ೬೦೮-೫); ನೆರೆಮನೆಯ ಮುಮ್ಮನೆಯ ಹೆಮ್ಮಕ್ಕಳಂ ಬೇಗ ಕರೆ (ಸಿದ್ಧರಾ. ೨-೨) ; ಇಬ್ಬರು ಹೆಮ್ಮಕ್ಕಳು ರಾಜಮರ್ಯಾದೆಯ ಹರಿವಾಣಗಳನ್ನು ತಂದರು (ಸವಿ. ೪೬). [ಪೆಣ್ + ಮಗು]

**ಪೆಣ್ಮಣಿ, ಹೆಣ್ಣುಮಣಿ** (ನಾ). ಹೆಂಗಸರಲ್ಲಿ ರತ್ನಪ್ರಾಯಳಾದವಳು ; ಅತ್ಯಂತ ಶ್ರೇಷ್ಠಳಾದವಳು ; ಸ್ತ್ರೀರತ್ನ : ಉರ್ವಿಯೆನಿಪ್ಪ ಪೆಣ್ಮಣಿಯ ಮೇಲನುರಾಗದೆ ಸೂಸಿದಂತೆಪೊಲ್ಪವಿರ್ದುದಂಬುಜಾತ್ರಸುಜಾತಘನಾನತ ನೂತನಾತಪಂ (ಉದ್ಭಟ. ೦೨-೦೦); ಚೆಲ್ವ ಪೆಣ್ಮಣಿಯ ಸುಸಿಲ ಮುಸಕದೊಳಿಂಪ ನುಗುತೊಗೆವ ನುಣ್ಬಾತುಗಳ ರೀತಿಯಂತೆ (ಕವ್ಯರಾ. ೦-೪೦) ; ಪೆಣ್ಮಣಿಯುಂ ನೃಪಕುಳಚೂಡಾಮಣಿ ಯುವರಾಜಂಗೆ ಮದುವೆಯುಂ ಮಾಡಿದಪಂ (ರಾಜಶೇ. ೬-೪೪). **ಹೆಣ್ಣುಮಣಿ :** ಊರಿಗೆ ಬಾರೆಲೆ, ಹೆಣ್ಣುಮಣಿ ! (ಇಂಗೀತ. ೪೨-೨೨). [ಪೆಣ್ + ಮಣಿ₂]

**ಪೆಣ್ಮಾಣಿಕ** (ನಾ). = ಪೆಣ್ಮಣಿ : ಕಣ್ಮಲರ್ಗಳ್ ಕಡುನಿಡಿದಾದುವು . . . ಪೆಣ್ಮಾಣಿಕಕೆ (ಜಯುಕಾ. ೩-೨೫). [ಪೆಣ್ + ಮಾಣಿಕ]

**ಪೆಣ್ಮಿಗ** (ನಾ). ಹೆಣ್ಣು ಜಿಂಕೆ : ಹರಿಣಶೃಂಗದ ತನ್ನಯ ವಾಮನೇತ್ರಮಂ ತುರಿಸುತುಮಿರ್ಪ ಪೆಣ್ಮಿಗಮುಮಂ ಬರೆಯಲ್ಕಿದರಲ್ಲಿ ವಾಂಛಿಪಂ (ಶಾಕುಂತ. ೪೦-೨). [ಪೆಣ್ + ಮಿಗ]

**ಪೆಣ್ಮೀನ್, ಪೆಣ್ಮೀನು, ಹೆಣ್ಣುಮೀನ್, ಹೆಣ್ಣುಮೀನು, ಹೆಣ್ಮೀನ್** (ನಾ). ಮೀನಿನಲ್ಲಿ ಹೆಣ್ಣು : "ಪ್ರೋಷ್ಠಾ, ಶಫರೀ—ಈ ೨ ಪೆ(ಹೆ)ಣ್ಮೀನ್" (ಹಲಾಯು. ೦೦೮-೩೬) ; "ಶಫರೀ—ಪೆಣ್ಮೀನ್" (ಬಿಕಥ. ೦೬೦). **ಪೆಣ್ಮೀನು :** ಅನುವರಿಲ್ಲದೆ ಬಿದ್ದ ಶಿಶುವನು ಪೆಣ್ಮೀನು ನುಂಗಿತು ತತ್ಕ್ಷಣದೆ (ಮೋಹತ. ೦೦-೩೦). **ಹೆಣ್ಣುಮೀನ್ :** "ಪ್ರೋಷ್ಠಿಯೆನೆ ಶಫರಿಯೆಂದೆನೆ ಹೆಣ್ಣುಮೀನಕ್ಕು" (ಮಂಗರಾ. ೦೨೦-೬). **ಹೆಣ್ಣುಮೀನು :** ಮದ್ಗುರವೆಂಬ ಆಱು ದಾಡೆಯ ಹೆಣ್ಣುಮೀನು (ಶಾಜರಾ. ೪). **ಹೆಣ್ಮೀನ್ :** 'ಪೆಣ್ಮೀನ್' ಉಲ್ಲೇಖದ 'ಹಲಾಯು' ಪ್ರಯೋಗವನ್ನು ನೋಡಿ.
[ಪೆಣ್ + ಮೀನ್₂]

**ಪೆಣ್ಮೀನು** 'ಪೆಣ್ಮೀನ್' ನೋ.

**ಪೆಣ್ಮುದ್ರೆ** (ನಾ). ಹೆಣ್ಣಿನ ಚಿಹ್ನೆ,—ಲಕ್ಷಣ : 'ಪೆಣ್ಮುದ್ರೆವೆಱು' ಪರಾ. [ಪೆಣ್ + ಮುದ್ರೆ]

**ಪೆಣ್ಮುದ್ರೆವೆಱು** (ಕ್ರಿ). ಹೆಣ್ಣಿನ ಲಾಂಛನವನ್ನು ಪಡೆ,—ಹೊಂದು : ತವ ಪಂಚಬಾಣಕ್ಕೆ ಮೃಡ ವಿಧಿ ವಿಷ್ಣು ದೇವೇಂದ್ರ ಒಡಲೊಳ್ ಪೆಣ್ಮುದ್ರೆ ವೆತ್ತರು (ಪೋಹಶ. ೫-೯೬). [ಪೆಣ್ಮುದ್ರೆ + ಪೆಱು$_{1}$]

**ಪೆಣ್ಮೆಯ್ಯ** (ನಾ). ತನ್ನ ಅರ್ಧ ಶರೀರದಲ್ಲಿ ಹೆಣ್ಣನ್ನು ಹೊಂದಿರುವವನು ; ಅರ್ಧ ನಾರೀಶ್ವರ ; ಶಿವ : ಗಯ್ಯಾಳಿವೆಂಗಳು ನಿಖಿಲಪುಷ್ಪಗಳ ಪೆಣ್ಮೆಯ್ಯ [ಯ್ಯ] ಗೋಸುಗ ಕಳಚಿದರು (ಪೋಹಶ. ೨೯-೬೭). [ಪೆಣ್ + ಮೆಯ್$_{2}$ + —ಅ$_{7}$]

**ಪೆಣ್ಮೊತ್ತ** (ನಾ). ಹೆಂಗಸರ ಗುಂಪು ; ಸ್ತ್ರೀಸಮೂಹ : ಪುತ್ಥಳಿಗಳಿಗೆ ಚೇತನವ ಇತ್ತರೀ ಬನದೊಳು ಬಂದರೆಂಬಂತೆ ಪೆಣ್ಮೊತ್ತವೊಪ್ಪಿರ್ದುದವಲ್ಲಲ್ಲಿ (ಪೋಹಶ. ೧೯-೬೦). [ಪೆಣ್ + ಮೊತ್ತ]

**ಪೆಣ್ಮೊಲ, ಹೆಣ್ಣುಮೊಲ** (ನಾ). ಮೊಲದ ಜಾತಿಯಲ್ಲಿ ಹೆಣ್ಣು : ಕಿಱುವೇಂಟೆಯ ನಾಯ್ಗಳಿಂದ [ಮು]ಟ್ಟುಪಟ್ಟ ಪೆಣ್ಮೊಲನಂತೆ ಭಯಮಾನಿಡಗಲಿಸಿ ಬೆಳ್ಗೋಟಮೋಡಿ (ಶಾಂತಿಪು. ೬-೯೦ ವ). **ಹೆಣ್ಣುಮೊಲ :** ಅವಳು ಎರಡು ಹೆಣ್ಣುಮೊಲಗಳನ್ನು ಸಾಕುತ್ತಿದ್ದಾಳೆ (ರೂಢಿ). [ಪೆಣ್ + ಮೊಲ]

**ಪೆಣ್ವಕ್ಕಿ, ಪೆಣ್ಬಕ್ಕಿ, ಹೆಣ್ಣುಹಕ್ಕಿ** (ನಾ). ಹಕ್ಕಿಯ ಜಾತಿಯಲ್ಲಿ ಹೆಣ್ಣು: ಆಗಸದಲಿ ಮೊಱೆದಳು ಪೆಣ್ವಕ್ಕಿಯಂತೆ (ಪೋಹಶ. ೩೦-೧೨). **ಪೆಣ್ಬಕ್ಕಿ :** ಒಂದುದಿವಸಂ ಗಂಡುವಕ್ಕಿ ಪೆಣ್ಬಕ್ಕಿಯನೆಂದುದಾನೊಂದೆಡೆಗೆ ಪೋಗಿ ಬಂದಪ್ಪೆ ನೀನಿಲ್ಲಿರ್ಪುದೆನೆ (ಪಾಪುಂಪು. ೨೫೭) ; ಚೆನ್ನೆಯ್ದಿಲುರಿಯೆಂದು ಪುಗಲನುಗೆಯ್ದುದು ಪೆಣ್ಬಕ್ಕಿ ವಿಪುಳವಿರಹವ್ಯಥೆಯಿಂ (ಸೂಕ್ತಿಸು. ೬-೨೯). **ಹೆಣ್ಣುಹಕ್ಕಿ :** ಹೆಣ್ಣುಹಕ್ಕಿಯು ಅದರ ವಯ್ಯಾರವನ್ನು ಸುಲಭವಲ್ಲಿ ಮೋಹಿಸಿ ಬರುವುದಿಲ್ಲ (ಬಾಲಕ್ರ. II, ೬೩೦). [ಪೆಣ್ + ಪಕ್ಕಿ]

**ಪೆಣ್ವಿಂಡು, ಪೆಣ್ಣುವಿಂಡು** (ನಾ). = ಪೆಣ್ಮೊತ್ತ : ಬಿಡೆಯವಿಲ್ಲದೆ ಮಧ್ಯ ಮಧ್ಯದೆ ಪೆಣ್ವಿಂಡು ನಡೆಗೊಂಡುದೇನ ಬಣ್ಣಿಪೆನು (ಪೋಹಶ. ೧೫-೨೫). **ಪೆಣ್ಣುವಿಂಡು:** ಆ ಪೆಣ್ಣುವಿಂಡಂಗಜನ ಬಾಣದೇಱಿಂ ನೋವುತಡಿಯುಟ್ಟ ತಾಕ್ಷಣದೊಳು (ಶಬಪು. ೧೯-೨೬). [ಪೆಣ್+ಪಿಂಡು$_{2}$]

**ಪೆಣ್ವೃಂದ** (ನಾ). = ಪೆಣ್ಮೊತ್ತ : ಮುಂದೆಸೆಯಲಿ ಬಾಣಸುತೆ ಚಿತ್ರಲೇಖೆ ಪೆಣ್ವೃಂದದೊಳನಿರುದ್ಧ ಬರಲು (ಪೋಹಶ. ೯೨-೯೬). [ಪೆಣ್+ವೃಂದ]

**ಪೆಣ್ಸೆಱೆ, ಹೆಣ್ಣುಸೆಱೆ** (ನಾ). ಹೆಣ್ಣಿನ ಬಂಧನ,—ಸೆರೆ : ಅಗಣಿತಮಾದ ಪೆಣ್ಸೆಱೆಗಳಂ ಬಿಡಿಸುತ್ತುರುವಿಕ್ರಮಾರ್ಕನ ಅಭಿಮತವಿತ್ತು (ರಾಜಶೇ. ೦-೫೪). **ಹೆಣ್ಣುಸೆಱೆ :** ಹೆಣ್ಣುಸೆಱೆ ತುಱುಸೆಱೆಯಂ ಬಿಡು (ಪ್ಯಾಆರ. ೦೯೬೬, ೦೯-೦೦ ; 1152). [ಪೆಣ್+ಸೆಱೆ$_{2}$]

**ಪೆತ್ತ$_{1}$** 'ಪೆಱು$_{1}$' ಪರಾ.

**ಪೆತ್ತ$_{2}$** 'ಪೆಱು$_{2}$' ಪರಾ.

**ಪೆತ್ತಣಿಸತ್ಯಾಂಕ** (ನಾ). ಒಂದು ಬಿರುದು (?) : ಪೇರಾಳ್ಕವರೆ ಪೆತ್ತಣಿ ಸತ್ಯಾಂಕನ್ ಅಟ್ಟುಳ್ಳಭಟನ್ ಬೆದರೆ ಮಹೇಂದ್ರನ್ (ಪ್ಯಾಆರ. ೧೯೨೩, ೬೨-೨ ; 7ನೆಯ ಶತ). [ ? ]

**ಪೆತ್ತಿಳ, ಹಿತ್ತಳ, ಹೆತ್ತಿಳ** (ನಾ). ಒಂದು ಸ್ಥಳದ ಹೆಸರು : ಪೆತ್ತಿಳದಾ ಮಹಾಜನಕ್ಕೆ ಸಾಲೆ ಆಚನ್ದ್ರತಾರಕಂ (ಎಕ. VII, ಶಿಕಾ. ೯೫ (b)-೦೮ ; ಸು. ೩೦೦ ?). **ಹಿತ್ತಳ :** ಮೂಡಲು ಹಿತ್ತಳದ ಸೀಮೆಯ ಒಳಗುಳ . . . ಅಷ್ಟಭೋಗತೇಜಸಾಮ್ಯಗಳನು (ಎಕ. VII, ಶಿಕಾ. ೨೫-೨೦ ; 1515). **ಹೆತ್ತಿಳ :** ಹೆತ್ತಿಳದ × × × ಮಾದಯ್ಯನ ಅಳಿಯ (ಪ್ಯಾಆರ. ೦೯೨೬, ೦೩೧-೨ ; 11ನೆಯ ಶತ). [ ? ]

**ಪೆತ್ತು$_{1}$** 'ಪೆಱು$_{1}$' ಪರಾ.

**ಪೆತ್ತು$_{2}$** 'ಪೆಱು$_{2}$' ಪರಾ.

∆**ಪೆದರು** 'ಹೆದಱು$_{1}$' ನೋ.

**ಪೆದೆ, ಹೆದೆ** (ನಾ). ಬಿಲ್ಲಿಗೆ ಹೂಡುವ ಬಾಣಕ್ಕೆ ಆಧಾರವಾದ ದಾರ: ನಾರೀನರನಾಂತ ಪೆದೆವಾಸಕೆ ಸಿಕ್ಕಿ ತೋರಿಯು ಬಿಲ್ಬಾಸದಂತೆ ; . . . ನಿನಗಾನೊಳಗಾಗಿ ಸಾರಸತ್ಕೃತಿಯು ವಿಸ್ತರಿಪೆ (ಪೋಹಶ. ೩೯-೨) ; ಕುಡಿವುರ್ವ ಚಾಪಕ್ಕೆ ನಿಡುಗುರುಳ ಪೆದೆಯಿಕ್ಕಿ . . . ಬೇಂಟೆಯಾಡುವಂ ಮನ್ಮಥ ಮಹಾಶಬರನು (ಶ್ರಶುಪು. ೯-೧೨೬) ; ನಾರಿ ಶರಂ ತದಂಗಜನೆ ಸಾರಥಿ . . . ತದಹಿತಂ ಪೆದೆ (ರಾಜಶೇ. ೩-೯೪). **ಹೆದೆ :** "ಬಿಲ್ಲ ಹೆದೆ . . . ಗುಣಮೆನಿಕು" (ಪಂಗರಾ. ೮೬-೩೩) ; ಇಂದಿಂಗೀ ಬಿಲ್ಲ ಹೆದೆಯೆ ಸಾಲ್ಗುಮೆಂದುಮಾದಂ ಕಡಿವುದುಂ . . . ಆ ನರಿ ಬಿಱುವರಿದು ಸತ್ತುದು (ಪಂಚತಂ. ೩೦೨-೦೬) ; ದಶರಥರ್ವನಿಪ ಧನುವಿನೊಳು ಸ್ಮೃತಿಯೆಂಬ ಮಿಸುಪ ಹೆದೆಯನಳವಡಿಸಿ . . . ತೀವಿದನು (ಕ್ರಿಶುಕಾ. ೦೦-೦೦೦) ; ಬಿಲುಗಳ ಸರಳ ಹೆದೆಗಳ . . . ಪರಿಪರಿಯ ಕೈದುಗಳ ಪಿಡಿಪಿಡಿದು (ದಸಪು. ೬೧-೨೫).

**ಪೆದ್ದ$_{1}$** (ನಾ). ೧. ದೊಡ್ಡದಂ ; ಹಿರಿದು : 'ಪೆದ್ದಿ$_{1}$' ಪರಾ. ೨. ಮುಖ್ಯವಾದುದು ; ಪ್ರಧಾನವಾದುದು : 'ಪೆದ್ದಕಾಪು' ಪರಾ. [ದೇ. ‖ ತುಳು. ಹೆದ್ದ ; ತೆಲು. ಪೆದ, ಪೆದ್ದ]

**ಪೆದ್ದ$_{2}$** (ನಾ). ೧. ಮೂರ್ಖ ; ದಡ್ಡ ; ಹೆಡ್ಡ : ಓಣಿಯ ಜನರೆಲ್ಲ ಶಿವೂನಿಗೆ . . . ಪೆದ್ದ, ಕೈಲಾಗದವ ಎಂದು ಸಿಕ್ಕ ಸಿಕ್ಕ ಹಾಗೆ ಕರೆಯುತ್ತಿದ್ದರು (ಕುಂಹಿಂ. ೬೨) ; ನೀನೊಬ್ಬ ಪೆದ್ದ (ತುಂಗಭ. ೦೫) : ಅವನೊಬ್ಬ ಶುದ್ಧ ಪೆದ್ದ (ರವ್ವಸಾ. ೯೮). (ಗು). ೨. ತಿಳಿಗೇಡಿಯಾದ ; ದಡ್ಡತನದಿಂದ ಕೂಡಿದ : ದೇವ ಈ ಪೆದ್ದ ಹಾರುವನ ಸುದ್ದೀನು (ಸೌಗುಂ. ೬೨-೨) ; ಅವಳ ಆ ಪೆದ್ದ ತಾಯಿಯನ್ನು ಮಾತನಾಡಿಸಲು ಹೋದದ್ದೇ ತಪ್ಪಾಯಿತು (ಕುರುಡಾ. ೦೬೬). 'ಹೆಡ್ಡ$_{1}$' ಪರಾ. [ಪೆದು$_{2}$ + —ಅ$_{7}$]

**ಪೆದ್ದಂಭಟ್ಟ, ಪೆದ್ದಭಟ್ಟ** (ನಾ). ತಿಳಿಗೇಡಿ; ದಡ್ಡ : ನೀನೊಬ್ಬ ಪೆದ್ದಂಭಟ್ಟನ ಹಾಗೆ ಆಡಬೇಡ (ರೂಢಿ). **ಪೆದ್ದಭಟ್ಟ :** ಏ ಪೆದ್ದಭಟ್ಟ . . . ಮಾತಾಡದೆ ಸುಮ್ಮನಿರು (ಕಾಲಿಮ. ೦೯೭). [ಪೆದ್ದ$_{2}$+ಭಟ್ಟ]

**ಪೆದ್ದಕಾಪು** (ನಾ). ಗ್ರಾಮದ ಮುಖ್ಯಾಧಿಕಾರಿ.—ಮುಖಂಡ; ಪಟೇಲ: ಪಟೇಲನಿಗೆ ಪಟೇಲ . . . ಪೆದ್ದಕಾಪು ನಾಯಿಡು ವಗೈರೆ ಹೆಸರುಗಳುಂಟು (ಗ್ರಾಮಾಕ. ೧). [ ← ತೆಲು. ಪೆದ್ದಕಾಪು, ಪೆದ್ದಂಕಾಪು ]

**ಪೆದ್ದಕ್ಕ** (ನಾ). ತೂಕ ಮಾಡಲು ಬಳಸುವ ದೊಡ್ಡ ಕಲ್ಲು,—ಬಟ್ಟು : ಹಸುಬೆಯೊಳ್ ಪೆದ್ದಕ್ಕ ನಾ ಸೇರುಕಲ್ಲುಗಳನೂ ಸಂತಸದೊಳಿಟ್ಟು (ಅಶ್ವಶಾಸ. ೩೦-೩೬). [ ಪೆದ್ದ$_{1}$ + ? ]

**ಪೆದ್ದಣ್ಣ** (ನಾ). ದಡ್ಡ ; ಪೆದ್ದಂಭಟ್ಟ: ನೋಡುತ್ತೀರೇನು ಪೆದ್ದಣ್ಣಗಳಂತೆ! (ದೇವಶಾ. ೫). [ ಪೆದ್ದ$_{2}$ + ಅಣ್ಣ$_{1}$ ]

**ಪೆದ್ದಭಟ್ಟ** 'ಪೆದ್ದಂಭಟ್ಟ' ನೋ.

**ಪೆದ್ದಾಣೆ** (ನಾ). ಒಂದು ಸ್ಥಳದ ಹೆಸರಂ : ಪ್ರತೀಚೀದೆಸೆ ಪೆದ್ದಾಣೆಯ (ಎಕ. IX (S). ಮುಳಬಾ. ೩೨೮-೫೦; ಸು. 850 ; ಪ್ಯಾಆರ. ೦೯೦೭, ೯-೫೦ ನೋ). [ ? ]

**ಪೆದ್ದಿ$_{1}$** (ನಾ). ೧. ವಯಸ್ಸಾದ ವ್ಯಕ್ತಿ ; ಹಿರಿಯ ವ್ಯಕ್ತಿ : (*). ೨. ಗೌರವಕ್ಕೆ ಪಾತ್ರವಾದ ವ್ಯಕ್ತಿ ; ದೊಡ್ಡವ್ಯಕ್ತಿ : (*). ೩. ಕೆಲವರ ಹೆಸರಿನ ಕೊನೆಯಲ್ಲಿ ಗೌರವಾರ್ಥವಾಗಿ ಸೇರುವ ಪದ : ಗುಂಡದೇವ ಪೆದ್ದಿ ಬನ್ನಿಯ ಬೆನಕನಲ್ಲಿ ಶ್ರೀಧರದೇವರ ಕೆಯ್ಯಿಂ ಬಡಗ ನಾಕಱ ಹಸುಗೆಯಲು ಕೊಟ್ಟ ಮತ್ತರು ನಾಲ್ಕು (ಸೌಇಇ. IX — i. ೩೩೩-೯೯; 1315). [ ಪೆದ್ದ$_{1}$ + — ಇ$_{3}$ ./ತೆಲು. ಪೆದ್ದಿ ]

**ಪೆದ್ದಿ$_{2}$** (ನಾ). ಮೂರ್ಖಳಾದ ಹೆಂಗಸು ; ದಡ್ಡಿ : ಶುದ್ಧ ಪೆದ್ದಿ. ಇನ್ನು

ಯಾರು ನಿನಗೆ ಪುರಾಣ ಹೇಳುತ್ತಾರೆ (ಚಾರವ. ೦೬); ಯಾಕೆ ಸುನಂದಾ, ಪೆದ್ದಿಯ ಹಾಗಾಡ್ತೀಯ ? (ದೂಬಿಟ್ಟ. ೫೦). [ ಪೆದ್ದ₂ + — ಇ₃ ]

**ಪೆದ್ದಿಗ** (ನಾ). ದೊಡ್ಡವನು ; ಶಕ್ತಿವಂತ : ಎನ್ನಿದಿರಿನಲಿ ನಿಂದು ಕಾದುವರೆ ನಿನ್ನಿಂದಲಪ್ಪುದೆ ಕರಸು ನಿಮ್ಮ ಪೆದ್ದಿಗನ (ನವಶೋ. ೩೨-೬). [ ಪೆದ್ದ₁ + — ಇಗ ]

**ಪೆದ್ದು** (ನಾ). ೧. ದಡ್ಡತನ ; ಮೌಢ್ಯ : ಪೆದ್ದು ಪೆದ್ದಾಗಿ ಆಡಬೇಡ (ರೂ೩). ೨. ಮೂಢವ್ಯಕ್ತಿ ; ತಿಳಿಗೇಡಿಯಾದ ವ್ಯಕ್ತಿ : ನನ್ನ ವಕೀಲ ಶುದ್ಧ ಪೆದ್ದು (ಕೃನರು. ೨೦೧); ನಟಾಪ . . . ಸುಮ್ಮನೆ ನಿಂತಿದ್ದಳು. ಶುದ್ಧ ಪೆದ್ದು, ಅಲ್ಲವೆ ? (ಹೋರಶ್ಯ. ೧೫). [ ದೇ. ॥ ಕೊಡ. ಪೆದ್ದ್ ]

**ಪೆದ್ದುತನ** (ನಾ). = ಪೆದ್ದು ೧ : ಈಗ ಓಡಿಸಿದರೆ ಅವರ ಕೆಟ್ಟತನವಲ್ಲ; ನನ್ನ ಪೆದ್ದುತನ ಕಾರಣ ಆಷ್ಟೆ (ಹೊಸಕ್ಷಿ. ೦೨೬). [ ಪೆದ್ದು + —ತನ ]

**ಪೆದ್ದೊರೆ** 'ಪೆದೊರ್ಜಿಟಿ' ನೋ.

**ಪೆದ್ದೊಟಿ** 'ಪೆದೊರ್ಜಿಟಿ' ನೋ.

**ಪೆದ್ದೊಟಿಗರೆ** (ನಾ). ಒಂದು ಸ್ಥಳದ ಹೆಸರು : ಪೆದ್ದೊಜಿಗರೆಯೆಬ್ಬ ದಿಂಬರುಂ ಎಣ್ಕೊಕ್ಕಲುಂ ಇವಂ ಕಾವರ್ (ಎಕ XIV. ೬೬-೧೩; 899). [ ? ]

**ಪೆನ್** 'ಪೆನ್ನು' ನೋ.

**ಪೆನಸಲು** 'ಪೆನ್ಸಿಲ್ಲು' ನೋ.

**ಪೆನ್ನ** 'ಪೆಣ್ಣೆ' ನೋ.

**ಪೆನ್ನಜುಟ್ಟುವೆಗಿಡ** (ನಾ). ಒಂದು ಬಗೆಯ ಸಸ್ಯ : (ವ್ಯಕಿ. ೫೯-೦೦೬೯). [ ? + ಗಿಡ ( < ಗಿಡು ) ]

**ಪೆನ್ನಸ** 'ಪನ್ನಸು' ನೋ.

**ಪೆನ್ನು, ಪೆನ್, ಪೇನ್ನ, ಪೇನಾ, ಪೇನು₂** (ನಾ). ಬರೆಯಲು ಬಳಸುವ ಒಂದು ಬಗೆಯ ಸಾಧನ : ಟಿಪ್ಪಣಿಯನ್ನು ತೆಗೆದುಕೊಳ್ಳಲು ಪೆನ್ನು . . . ಬೈನಾಕ್ಯುಲರ್—ಇವಿಷ್ಟು ಅವರ ಪ್ರಯಾಣದ ಸಲಕರಣೆಗಳಾಗಿದ್ದುವು (ವಾಕಸ್ಕ. ೩೦) ; ಈ ಪೆನ್ನು ನನ್ನ ಬಳಿ ಇರಲಿ (ಕಕಶ್ಯ. ೮-೨೫). **ಪೆನ್** : ಸೀತಾ ರಾಮು ವರನಿಗೆ ಒಂದು ಪಾರ್ಕರ್‌ಪೆನ್ . . . ಓದಿಸಿದ (ನಟಿಕಾ. ೩೮೦). **ಪೇನ್ನ** : ಪೇನ; ಬರೆಯುವ ಕಡ್ಡಿ (Pen. ಇಕನ). **ಪೇನಾ** : ಗೂಸರು "ಎಲ್ಲಿ ಆ ಪೇನಾ" ಎಂದು ಕೂಗಿದರು (ಕೊನಕ್ಕ. ೦೯೬). **ಪೇನು₂** : ಪೇನು ಎತ್ತಿದಾಗ ಆ ಪ್ರವಾಹವು ಕಡಿಯುವುದು (ಬಾಂಕ್ರ. III. ೧೩೨೫) ; ಕೈಯ ಲ್ಲೊಂದು ಪುಸ್ತಕ, ಪೇನು (ಕೃಕೃಹೊ. ೨೬೫). [←ಇಂ. Pen]

**ಪೆನ್ನೇರು** (ನಾ). ಒಂದು ಬಗೆಯ ಸಸ್ಯ : ಹಿರೇಮದ್ದಿನ ಗಿಡ, ಪೆನ್ನೇರು. ಅಶ್ವಗಂಧಿ (ವ್ಯಕಿ. ೬೮-೦೬೦). [ ? ]

**ಪೆನ್ಶನ್** 'ಪೆನ್ಷನ್ನು' ನೋ.

**ಪೆನ್ಶನ್‌ದಾರ** 'ಪೆನ್ಷನ್‌ದಾರ' ನೋ.

**ಪೆನ್ಷನ್** 'ಪೆನ್ಷನ್ನು' ನೋ.

**ಪೆನ್ಷನ್‌ದಾರ, ಪಿಂಚಣಿದಾರ, ಪೆನ್ಶನ್‌ದಾರ** (ನಾ). ನಿವೃತ್ತಿವೇತನ ವನ್ನು ಪಡೆಯುತ್ತಿರುವವನು : ಗವರ್ನಮೆಂಟಿನ ಪೆನ್‌ಷನ್‌ದಾರರಿಗೆ ಕೊಡುವ . . . ಸಂಬಳಗಳು (ಗ್ರಾಶಾಕ. ೩೫). **ಪಿಂಚಣಿದಾರ** : ಈಗ ಪಿಂಚಣಿದಾರರಿಗೂ ಸಹ ಪಿಂಚಣಿ ಹೆಚ್ಚಾಗಿದೆ (ರೂ೩). **ಪೆನ್ಶನ್‌ದಾರ** : ನಾನೊಬ್ಬ ಪೆನ್‌ಶನ್‌ದಾರನು (ವೊಶಾಸಾ. ೪೦); ಪೆನ್‌ಶನ್‌ದಾರ ಪಂತೋಜಿ —ಪಿಂಚಣಿಯನ್ನು ಪಡೆದು ಮನೆಯಲ್ಲಿ ಸುಖವಾಗಿ ಇರಲಾರದೆ . . . ಒಂದು ಜಾಗಕ್ಕೆ ಅರ್ಜಿ ಹಾಕಿದ್ದ (ರೀಶಹ. II. ೨೫). [ ಪೆನ್ಷನ್ ( < ಪೆನ್ಷನ್ನು ) + —ದಾರ₄ ]

**ಪೆನ್ಷನು** 'ಪೆನ್ಷನ್ನು' ನೋ.

**ಪೆನ್ಷನ್ನು, ಪಿಂಚಣಿ, ಪಿಂಚನ್, ಪಿಂಚನಿ, ಪಿಂಚನ್ನು, ಪಿಂಛನು, ಪೆನ್ಶನ್, ಪೆನ್ಷನ್, ಪೆನ್ಷನು** (ನಾ). ೧. ಸೇವೆಯಿಂದ ವಿಶ್ರಾಂತಿ ಪಡೆದ ಮೇಲೆ ಪಡೆಯುವ ವೇತನ ; ನಿವೃತ್ತಿವೇತನ : ನೌಕರಿಯಿಂದ ತೆಗೆದ ಆಯಾ ನೌಕರರಿಗೆ ಪೆನ್‌ಷನ್ನನ್ನೂ ಕೂಡಲೆ...ಪಾವತಿ ಮಾಡಿಸಬೇಕು (ಮುಕಾವಂ. II. ೦೨). **ಪಿಂಚಣಿ** : ೧. ಸಂಬಳ, ಬಡತಿ, ಭತ್ಯೆ, ಪಿಂಚಣಿ, ಪದವಿ ಇವೇ ಈ ವರ್ಗದ ಪಂಚಪ್ರಾಣಗಳಾದವು (ಶಾಶಾದ. ೯೫). ೨. ನಿವೃತ್ತಿ : ಇಲ್ಲಿಯೇ ಅವರ ಪಿಂಚಣಿ ಆಗಬಹುದು (ರಂಗರೋ. ೬೨). **ಪಿಂಚನ್** : ೧. ಪಿಂಚನ್ ಪಡೆದು ಬಂದವನೇ . . . ಕಾಲ ಮೇಲೆ ನಿಂತುಕೊಂಡಿದ್ದೇನೆ (ಅಕಸ. ೩೦). **ಪಿಂಚನಿ** : ೧. ನನಗೆ ಬರೋ ಮೂವತ್ತು ರೂಪಾಯಿ ಪಿಂಚನಿಯಲ್ಲಿ... ಹೇಗೆ ಎಂಬುದೇ ಚಿಂತೆಯಾಗಿದೆ (ಗೃಹಂ. ೬೪); ಕೇವಲ ಮೂವತ್ತೈದೇ ವರ್ಷ ಪಿಂಚನಿಯನ್ನು ಅನುಭವಿಸಿ...ಕಣ್ಮರೆಯಾದ ಮಹನೀಯರ ಆತ್ಮಕ್ಕೆ ಶಾಂತಿ ಕೋರುತ್ತೇವೆ (ಹುಕ್ಕುಹು. ೯೨). **ಪಿಂಚನ್ನು** : ೧. ಅವರು ಈಗ...ಅಲ್ಪ ಪಿಂಚನ್ನಿನಿಂದ ತಮ್ಮ ಜೀವನ ತಳ್ಳುತ್ತಿದ್ದರು (ಶಾಖಕ. ೮೦). **ಪಿಂಛನು** : ೧. "ನೌಕರನು ಒಂದೆ ಸಲ್ಲಿಸಿದ ಸೇವೆಗಾಗಿ...ಕೊಡುವ ನಿಯತಕಾಲಿಕ ವಿಶ್ರಾಂತಿ ವೇತನ ; ಪಿಂಛನು" (Pension. ಇಂಕನ). **ಪೆನ್ಶನ್** : ೧. ನಿರಾಯಾಸವಾಗಿ ಸಿಗುವ ಈ ಪೆನ್ಶನನ್ನು ಕಳೆದುಕೊಳ್ಳು ವುದು ಯುಕ್ತವಲ್ಲ (ಬಧಿವ್ಯ. ೮೫). **ಪೆನ್ಷನ್** : ೧. ಯಾವುದಾದರೂ ಸರ್ವಿಸ್ ಫ್ಯಾಮಿಲಿ ಪೆನ್‌ಷನ್ ಫಂಡಿನಿಂದ ಸಲ್ಲುವ ಸಂಬಳಗಳು ಮತ್ತು ಗ್ರಾಚುಯಿಟಿಗಳು (ಗ್ರಾಶಾಕ. ೩೫). **ಪೆನ್ಷನು** : ೧. ಪೊಲಿಟಿಕಲ್ ಯಾ ರಾಜಕೀಯ ಪೆನ್‌ಷನುಗಳು (ಗ್ರಾಶಾಕ. ೩೫).

ಪಿಂಚನ್ನಾಗು=ನಿವೃತ್ತಿ ಹೊಂದು : ಈಗ ಪಿಂಚನ್ನಾಗಿ ಸ್ವಂತ ಊರಲ್ಲಿದ್ದೇನೆ (ಅಕಸ. ೩೦). [ ←ಇಂ. Pension ]

**ಪೆನ್ಸಿಲ್** 'ಪೆನ್ಸಿಲ್ಲು' ನೋ.

**ಪೆನ್ಸಿಲಿನ್** 'ಪೆನ್ಸಿಲಿಯನ್' ನೋ.

**ಪೆನ್ಸಿಲಿಯನ್, ಪೆನ್ಸಿಲಿನ್** (ನಾ). ಏಕಾಣುಜೀವಿಗಳಿಂದ ಹರಡುವ ಅಂಟುರೋಗಗಳ ಚಿಕಿತ್ಸೆಯಲ್ಲಿ ಬಳಸುವ, ಶಕ್ತಿಯುತವಾದ ಒಂದು ಬಗೆಯ ಔಷಧ : ಒಂದು ಕೋರ್ಸ್ ಪೆನ್ಸಿಲಿಯನ್ ಕೊಡೋಣವೆಂದು ನುಡಿದರು (ಹುಕ್ಕುಹು. ೫೦). **ಪೆನ್ಸಿಲಿನ್** : ವಿಷಘ್ನಗಳಿಲ್ಲದೆ ಬರಿಯ ಪೆನ್ಸಿಲಿನ್ ಕೊಟ್ಟರೆ ರೋಗಿಯು ಬಹುಬೇಗ ಸಾವನ್ನಪ್ಪುತ್ತಾನೆ (ಕಂರೂ. ೨೫). [←ಇಂ. Penicillin]

**ಪೆನ್ಸಿಲು** 'ಪೆನ್ಸಿಲ್ಲು' ನೋ.

**ಪೆನ್ಸಿಲ್ಲು, ಪೆನಸಲು, ಪೆನ್ಸಿಲ್, ಪೆನ್ಸಿಲು** (ನಾ). ಬರೆಯಲು ಉಪಯೋಗಿಸುವ ಒಂದು ಬಗೆಯ ಸಾಧನ ; ಸೀಸದ ಕಡ್ಡಿ : ಮನಸಿನ ಹಲಗೆಯೊಳಿರಿಯುನ ಬರೆವರು ನೆನಹಿನ ಪೆನ್ಸಿಲ್ಲಿನಿಂದೆ (ಕಂಪ್ರಣೀ. ೫೪-೦೫). **ಪೆನಸಲು** : ಅವುಗಳ ಮೇಲೆ ಅದೇ ಜಾತಿಯ ಪೆನಸಲಿನಿಂದ ಬರೆಯುತ್ತಾರೆ (ಮುಂಬಖಾ. ೫೬). **ಪೆನ್ಸಿಲ್** : ಸದಾಶಿವನಿಗೆ ಕಾಗದ ಪೆನ್ಸಿಲಿಗೂ ಕಷ್ಟವಾಗುತ್ತಿತ್ತು (ತ್ಯಾಗಮ. ೦೪೫). **ಪೆನ್ಸಿಲು** : ಅದೇ ಪ್ರಮಾಣದಿಂದ ಅಲ್ಲಿರುವ ಪೆನ್ಸಿಲು ಕೆಳಗಿನ ಕಾಗದವನ್ನು ಒತ್ತಿಕೊಂಡು ಚಲಿಸುವುದು (ಬಾಂಕ್ರ. III. ೦೩೨೫); ಕೈಯಲ್ಲಿ ಹಿಡಿದಿದ್ದ ಪೆನ್ಸಿಲನ್ನು ಮೇಜಿನ ಮೇಲಿಟ್ಟು . . . ಕುರ್ಚಿಗೆ ಒರಗಿ ಕುಳಿತುಕೊಂಡ (ಶಾಖಮ. ೨೬). [ ← ಇಂ. Pencil ]

**ಪೆನ್ನಿದಿಬೋಯ** (ನಾ). ಒಬ್ಬಾತನ ಹೆಸರು: ಪೆನ್‌ಹಿದಿಬೋಯಸ್ಯ ಕೌಣ್ಡಿಲ್ಯಗೋತ್ರ ಜಕ್ಕಿಶರ್ಮ್ಮಣ ಏಕ್ಕಂಶಃ (ಎಕ. VII. ೧೯೬-೩೨ ; 668). [ ? + ಬೋಯ ]

**ಪೆಪ್ಪರಮೆಂಟ್** 'ಪೆಪ್ಪರ್ಮೆಂಟು' ನೋ.

**ಪೆಪ್ಪರಮೆಂಟು** 'ಪೆಪ್ಪರ್ಮೆಂಟು' ನೋ.

**ಪೆಪ್ಪರ್ಮಿಂಟು** 'ಪೆಪ್ಪರ್ಮೆಂಟು' ನೋ.

**ಪೆಪ್ಪರ್ಮೆಂಟ್** 'ಪೆಪ್ಪರ್ಮೆಂಟು' ನೋ.

**ಪೆಪ್ಪರ್ಮೆಂಟು, ಪೆಪ್ಪರಮೆಂಟ್, ಪೆಪ್ಪರಮೆಂಟು, ಪೆಪ್ಪರ್ಮಿಂಟು, ಪೆಪ್ಪರ್ಮೆಂಟ್** (ನಾ). (ಯಾವುದಾದರೂ ಕೆಲವುಬಗೆಯ ಸಸ್ಯದ ಪರಿಮಳವನ್ನು ಸೇರಿಸಿ) ಸಕ್ಕರೆಯಿಂದ ಮಾಡಿದ ಸಣ್ಣ ಆಕಾರದ ಒಂದು ವಿಧವಾದ ತಿನಿಸು ; P 'ಮಿಂಟ್' ಎನ್ನುವುದು ಇಂಗ್ಲಿಷ್‌ಭಾಷೆಯಲ್ಲಿ ಕೆಲವು ಸಸ್ಯಗಳ ವರ್ಗವನ್ನು ಸೂಚಿಸುತ್ತದೆ : ಗುಂಡಣ್ಣನು ಪೆಪ್ಪರ್ಮೆಂಟುಗಳನ್ನು ತಂದಾಗ ತನ್ನ ಗೆಳೆಯರಿಗೆ ಮಾತ್ರ ಕೊಡುತ್ತಿದ್ದನು (ರಂಗರೋ. ೨೮). **ಪೆಪ್ಪರಮೆಂಟ್** : ಅವರಿಗೆಲ್ಲ ರಾಯರು ಈವರೆಗೆ ಅದೆಷ್ಟು ಚಾಕ್ಲೇಟ್, ಪೆಪ್ಪರಮೆಂಟ್ . . . ಕೊಟ್ಟಿದ್ದಾರೋ (ಕಂಬಹು. ೧೨೦). **ಪೆಪ್ಪರಮೆಂಟು** : ಮಕ್ಕಳು ಪೆಪ್ಪರಮೆಂಟಿಗೆ ಅತ್ತು ತಿಂದಂತೆ ಮಕ್ಕಳ ತಂದೆ ತಾಯಿಗಳು ಆಸ್ಪಿರಿನ್ ತಿಂದರು (ಹುಚ್ಚುಹು. ೩೨). **ಪೆಪ್ಪರ್ಮಿಂಟು** : ಹರಿಕಥೆಗಳಲ್ಲಿ ಮಕ್ಕಳಿಗೆ ದೊರೆಯುವುದು ಅರ್ಧಕಥೆ'ಯ ಸವಿಯಾದ ಪೆಪ್ಪರ್ಮಿಂಟು (ಕಥೆ. ೨). **ಪೆಪ್ಪರ್ಮೆಂಟ್** : ಗೋವಿಂದ ಜೇಬಿನಿಂದ ಎರಡು ಪ್ಯಾರಿ ಪೆಪ್ಪರ್ಮೆಂಟ್‌ಗಳನ್ನು ತೆಗೆದು . . . ಬಾಯಿಗೆ ಹಾಕಿಕೊಂಡನು (ಚಿಕಾ. ೯). [ ← ಇಂ. Peppermint ]

**ಪೆಪ್ಪಳಿಸು** 'ಪೆಪ್ಪಳಿಸು' ನೋ.

**ಪೆಪ್ಪಿಡು, ಹೆಪ್ಪಿಡು** (ಕ್ರಿ). ೧. ಹೆಪ್ಪಾಗಲು ಹಾಲಿಗೆ ಮೊಸರನ್ನು ಬೆರಸು ; ಹೆಪ್ಪು ಹಾಕು : ಪೆಪ್ಪಿಟ್ಟ ಕಡದು ಪಾಲೊಳು ತುಪ್ಪಂಬಡೆವಂತೆ (ಶರಪಾ. ೫೯-೬೩). **ಹೆಪ್ಪಿಡು** : ೧. ಹೆಪ್ಪಿಟ್ಟೊಡೆ ಪಾಲ್ ಮೊಸರಾಗಿಪ್ಪಂತಿರೆ ನೀರ್ಗಳಾಗಲರಿಗುಮೆ (ಶಬರಶು. ೧೧-೦೬೭); ಹೆಪ್ಪಿಟ್ಟ ಹಾಲು ಗಟ್ಟಿಗೊಂಡು ಸಿಹಿಯಾದುದುಂಟು (ಮಹಾದೇ. ಬ. ೧೦೦-೨೯೯); ಅಪ್ಪುದವರಿಂದ ಕಾರ್ಯವ ತಪ್ಪದೆ ಮಾಡುವುದು ಪಿರಿಯರಿ:ವುದು ಹಾಲಂ ಹೆಪ್ಪಿಡುವರೆ ಮಳಿಯುಲ್ಲದೆ ತುಪ್ಪವನೆರದವುದೆ (ಕೀತಿಶಾ. ೨೮೨). ೨. ಗಡ್ಡೆಕಟ್ಟು ; ಘನೀಭವಿಸು : ಬಾಣಂತಿಯರಲ್ಲಿ ಒಮ್ಮೊಮ್ಮೆ ಹೆಪ್ಪಿಟ್ಟ ರಕ್ತದ ತುಣುಕೊಂದು . . . ಶ್ವಾಸಕೋಶದ ರಕ್ತನಾಳಕ್ಕೆ ಅಡ್ಡಬೀಳಬಹುದು (ಮಸೋನಂ. ೦೫). [ಪೆಪ್ಪು + ಇಡು₁]

**ಪೆಪ್ಪು, ಹೆಪ್ಪು₂** (ನಾ). ೧. ಮೊಸರು ಮಾಡುವುದಕ್ಕಾಗಿ ಹದವಾಗಿ ಕಾಯಿಸಿದ ಹಾಲಿಗೆ ಹಾಕುವ ಮೊಸರು ಅಥವಾ ಮಜ್ಜಿಗೆ: ಕ್ಷೀರದೊಳಿಸವಂತಿರೆ ಕಾಶ್ಮೀರವುನೊಡಗೂಡಿ ಪೆಪ್ಪನಿಟ್ಟು ಮೊಸರಂ ಸೀರೆಯೊಳಗಿಕ್ಕಿ ಪಿಱಿದಂದು (ಲೋಕೋಪ. ೬-೫೨); ಆ ಕಾಮ್ಯಾದಿಱದ ಪಾಲೊಳೆ ತುಪ್ಪಮಾಗದೆಂದು ಪೆಪ್ಪನೆಱೆದು ಬಯ್ಯುಟ್ಟು (ಜೀವಸಂ. ೨೦೯-೧೧). **ಹೆಪ್ಪು₂** : ೧. "ಆ(ಮಿ)ಮಿಕ್ಷಾಯೆಂಬುದು ಹೆಪ್ಪು" (ಹರಾಯು. ೬೯-೨೬೨); ಕ್ರಮದಿಂ ಪಾಲಂ ಕಾಸಿ ಹೆಪ್ಪನಿಟ್ಟು (ರರ್ಮಕ್ಕು. ೯-೦೨೦); ದ್ವಿತ್ವಕಿಲ್ಲದು ದರ್ಕ್_ತಪ್ಪು, ಸೊಪ್ಪು, ಹೆಪ್ಪು . . . ಕಪ್ಪುರಂ ಎಂಬಂತೆ (ಕಮಧ. ೦೫೯ ಪ್ರಯೋ) ; ಒಗತನ ಬಿಟ್ಟು ಪೋಹಾಗ ಹಾಲಿಗೆ ಹೆಪ್ಪ ಮೊಗೆದಿಕ್ಕಿ ದವರಾರುಂಟು (ಪೋಚಕ. ೯-೦೯). ೨. ಗಟ್ಟಿಯಾದ ಭಾಗ ; ಮುದ್ದೆ : ವಸ್ತುವೊಂದರ ಉಪಾದಾನಕಾರಣವು ಅದರ ನಿಮಿತ್ತಕಾರಣಕ್ಕಿಂತ ಭಿನ್ನವಾಗಿರುತ್ತದೆ ; ಮಣ್ಣಿನ ಹೆಪ್ಪು, ಕುಂಬಾರನಿಗಿಂತ ಭಿನ್ನವಾಗಿರುವಂತೆ (ಕಕ್ಕಾ. ೩೬೦). ೩. ಗಾಢತೆ ; ತೀವ್ರತೆ : ತನ್ಮಯತೆಯ ಹೆಪ್ಪನ್ನು ಒಡೆದದ್ದು ಒಂದು ವಿಚಿತ್ರವಾದ ನಗೆ ! (ಹೀಮುಕೂ. ೧). ೪. ಹುಲ್ಲುಗರಿಕೆ ಬೆಳೆದ ನೆಲದಿಂದ ಅಗೆದು ತೆಗೆದ ದಪ್ಪ ಹೆಂಟೆ ; ತೆಂಡೆ : ಆನೆಯನ್ನು ಹಿಡಿಯುವ ಕೆಲಸದಲ್ಲಿ . . . ಕಪ್ಪಗಳು ತೋಡಿದ ಹಾಗೆ ಅವೆ. ಅವುಗಳ್ಮೇಲೆ ಗಳಗಳ ಹಾಕಿ ಅವುಗಳ್ಮೇಲೆ ಹೆಪ್ಪುಗಳ್ನ ಇಟ್ಟು ಮಣ್ಣು ಸುರಿದು ಭತ್ತದ ಪೈರು ನೆಟ್ಟರೆ . . . ಅದರ ಮೇಲೆ ಕಾಲಿಡ್ತದೆ (ಕೆಂಗಾಕ್ಕ. ೨೬೭). 'ಹೆಪ್ಪುಗಟ್ಟು₂' ಪರಾ.

**ಹೆಪ್ಪಾಗು** = ೧. ಗಡ್ಡೆಯಾಗು ; ಗಟ್ಟಿಯಾಗು : ಇವನ ಸಂಶೋಧನವಿಷಯ ರಕ್ತನಾಳಗಳಲ್ಲಿ ರಕ್ತ ಹೆಪ್ಪಾಗುವಿಕೆ (ವಿಕಾಸ. X ವಿಜ್ಞಾನದರ್ಶನ) ; ಕುಳಿರಿಂದೆ ಹೆಪ್ಪಾದ ಹಾಲ್ಗಡಲಿನ್ಸೆಕಿಲೊಳ್ಗಡ್ಡೆಯಂ ಕಡಿಕಡಿಯುತ್ತ (ತತ್ತ್ವಾಂಗ. ೯೦-೨೯೮೯). ೨. ಹಾಲು ಮೊಸರಾಗಿ ಪರಿವರ್ತನೆ ಹೊಂದು : ಹಾಲ ಹರವಿಯ ಮೇಲೆ ಮಜ್ಜಿಗೆಯ ತುಂಬಿರಿಸಿವಡೇನು ಹೆಪ್ಪಾಗಬಲ್ಲುದೆ ಅಯ್ಯಾ ಸಮ್ಮಿಶ್ರದಿಂದಲ್ಲದೆ (ಆಶಂದೇ. ೧೩೨-೦೦೩). ೩. ಗಾಢವಾಗು ; ತೀವ್ರವಾಗು ; ಹೆಚ್ಚಾಗು : ಶಿವಲೀಲೆ ಹೆಪ್ಪಾಗಿ ಶಿವಶರಣ ಚೌಡಾಗಿ ಭುವದೊಳಗೆ ಹುಟ್ಟಿ ಶಿವನುಡಿಯ ಸಾರಿದನು (ಕನ್ನಜಾ. ೨೯೦). ೪. ಅತಿಶಯವನ್ನು ಹೊಂದು ; ಹಿರಿಮೆಯನ್ನು ಪಡೆ : ಒಬ್ಬ ಬಸವನಿಂದ ಭೂಮಿಗೆ ಹೆಪ್ಪಾಯ್ತೆಂದು ಉಬ್ಬಿ ಹೇಳುವರಿ ಲೋಕದೊಳು (ಬಜ್ಞಾ. ೯-೯೮). **ಹೆಪ್ಪು ಹಾಕು** = ಹೆಪ್ಪಾಗಲು ಹಾಲಿಗೆ ಮೊಸರನ್ನು ಬೆರಸು ; ಹೆಪ್ಪಿಡು : ಒಳ್ಳೆಯ ಹೆಪ್ಪು ಹಾಕಿದ ಥ್ಯಂಡಿ ಮೊಸರು (ರಂಗಕ. ೦೨೬) ; ಉಳಿದ ಹಾಲನ್ನು ಅಲೆಗಾವು ಕಾಸಿ ಹೆಪ್ಪು ಹಾಕಿ . . . ಮಾರುತ್ತಿದ್ದಳು (ಸೀತಿಂ. IX, ೨೮) ; ಓಡಿ ಹೋಗುವ ಬಿಡ್ಡಿ ಹಾಲಿಗೆ ಹೆಪ್ಪು ಹಾಕ್ತಾಳೇ ? (ಗಾದೆ). [<ಪೆಱು₃ + — ಪ್ಪು₂]

**ಪೆಬ್ಬಾವು** 'ಪೆರ್ಬಾವು' ನೋ.

**ಪೆಬ್ಬೀಳ್** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀಪಲ್ಲವ ಪ್ರಥುವೀರಾಜ್ಯಂಕೆಯ್ಯೆ ಸಿಯಗೆಲ್ಲ ಕೆಸುವಾಣ್ನುನಾಡಾಳೆ ಗುಣ್ಡಗೆವಾಚಕ್ಕ ಕೊಟ್ಟಲ್ಲಲುತ್ತುವುಟ್ ಕಾಡುವಟ್ಟ ಬೋಳದುಳ್ಳೆ ಪೆಬ್ಬೀಳ ನಲ್ಲಕ್ಕಳ್ ಎಱಿದುವಿಟ್ಟಾರ್ (ಎಕ. XVI, ತುಮುಕೂ. ೯೬-೨ ; ಸು. 780). [?]

**ಪೆಬ್ಬೆಟ್ಟು** 'ಪೆರ್ಬೊಟ್ಟು' ನೋ.

**ಪೆಬ್ಬೊಟಲ್** 'ಪೆರ್ಬೊಟಿಲ್' ನೋ.

**ಪೆಮೊಗೆ** (ನಾ). ಒಂದು ಸ್ಥಳದ ಹೆಸರು ; P ಈಗಿನ ತಿರುಮಕೂಡಲುನರಸೀಪುರ ತಾಲ್ಲೂಕಿನ ಹೆಮ್ಮಿಗೆ : ಪೆರ್ಮಾನಡಿಗಳ್ ಅರಸಿಯ ಬೆಸತಿ ಪೆಮೊಗೆಯುನ್ ಅಳಿದೊಪದುವಿನ ಈಱ್ಚಲೆ ಪತೊನ್ನಿವಿಟ್ಟರ್ (ಎಕ. XIV, ತಿರುಮ. ೨೪೯-೬ ; 8ನೆಯ ಶತ). [?]

**ಪೆಮ್ಮ₁** 'ಪೆರ್ಮ₁' ನೋ.

**ಪೆಮ್ಮ₂** (ನಾ). (?) : ಗಣಿಗರು ಪೆಮ್ಮದವರು ಆಸನ್ನದು ಏನೆತ್ತರು ಸಾಕ್ಷಿ (ಎಕ. XIV, ೨೬೬-೦ ; ಸು. ೯ನೆಯ ಶತ). [?]

**ಪೆಮ್ಮಟ್ಟಿ** 'ಪೆರ್ಮಟ್ಟಿ' ನೋ.

**ಪೆಮ್ಮಡಿ** 'ಪೆರ್ಮಾನಡಿ' ನೋ.

**ಪೆಮ್ಮನಡಿ** 'ಪೆರ್ಮಾನಡಿ' ನೋ.

**ಪೆಮ್ಮರ** 'ಪೆರ್ಮರ' ನೋ.

**ಪೆಮ್ಮರುಳ್** 'ಪೆರ್ಮರುಳ್' ನೋ.

**ಪೆಮ್ಮಳಿಸು** (ಕ್ರಿ). (?) : ಪಾಣ್ಡ್ಯನ್ರಿಪಮುಂಗಿದಾನುತ್ತು ತೂಳ್ದು ಬನ್ದೆಮ್ಮೆಗನೂರಲೊಡ್ಡಿದಡೆ ವಿಷ್ಣುನ್ರಿಪಾಳಕ ನೋಡೆ ವೈರಿಯಂ ಪೆಮ್ಮಳಿಸಿರ್ದ್ದ ವಾಜಿಗಜಯೂಥಮನಾಳ್ದಱಿಯಟ್ಟಿ (ಎಕ. XII, ಚಿಕ್ಕನಾ. ೩೫-೬೬ ; ಸು. 1200). [? + — ಇಸು₁]

**ಪೆಮ್ಮಾಡಿ** 'ಪೆರ್ಮಾನಡಿ' ನೋ.

**ಪೆಮ್ಮಾಡಿಗೊಂಡ** 'ಪೆರ್ಮಾನಡಿಗಾಮುಂಡ' ನೋ.

**ಪೆಮ್ಮಾನಡಿ** 'ಪೆರ್ಮಾನಡಿ' ನೋ.

**ಪೆಮ್ಮಾಳ್** (ನಾ). (?) : ಕೊಪಳಾಟಿಮಹೇಶ್ವರ ದಿವಿಜಗ್ಗಟವಲ್ಲಹ ಪೆಂಪಮಾಳ್ವಱಿಸೆ ಪೊಗೊಳ್ದ ಸಾದಾರಣ (ಎಕ. XVI, ತುಮುಕೂ. ೯೦-೦೯ ; ಸು. 775) ; ಮೂನೂರ್ವರುಂ ಸೂಳೆಯರುಂ ಪೆಮ್ಮಾಳರಾನುಳ್ಳಿಟ್ಟ ಮೂನೂರ್ವರುಂ ಪಡುದಿದಕ್ಕೆ ಸಾಕ್ಷಿ (ಎಕ. X, ಶ್ರೀನಿವಾ. ೦೬-೬ ; ?). [?]

**ಪೆಮ್ಮೆ** 'ಪೆರ್ಮೆ' ನೋ.

**ಪೆಯಿನಕೆಱೆ** (ನಾ). ಒಂದು ಊರಿನ ಹೆಸರು : ಅಲ್ಲಿನ್ದ ತೆಙ್ಕಲು

ಬೆದಿರೂರ(ರ) ತೋಟವೊನ್ದು ಕೂಡಿದ ಪೆಯಿನಕೆಱೆಯು ಜಲಾಶಯಂ (ಪ್ಯಶಿಂ. ೧೯೨೫, ೦೦೫-೯೦; 634). [? + ಕೆಱೆ]

**ಪೆಯ್ಕು** 'ಪಯ್ಕು' ನೋ.

**ಪೆರ್** 'ಪಿರಿ' ನೋ.

**ಪೆರ್₁** 'ಪೆಱು₁' ನೋ.

**ಪೆರ್₂** 'ಪೆಱು₂' ನೋ.

**ಪೆರಂಬ** 'ಪರಂಬೆ' ನೋ.

**ಪೆರಂಬೆ** 'ಪರಂಬೆ' ನೋ.

**ಪೆರಗಿಕ್ಕು** 'ಪೆಱಗಿಕ್ಕು' ನೋ.

**ಪೆರಗು** 'ಪೆಱಗು' ನೋ.

**ಪೆರಗೆ** 'ಪೆಱಗೆ' ನೋ.

**ಪೆರಟ** (ನಾ). ಒಂದು ಸ್ಥಳದ ಹೆಸರು: ಮಾತ್ರಿಶರ್ಮ್ಮಣೇ ಪರುವಿಷಯೇ ಪೆರಟಭೋಗೇ ಕುರೂರನಾಮ ಗ್ರಾಮೋದತ್ತ (ಪ್ಯಶಿಂ.೦೯೧೫, ೦೯-೦೬; ?) [ ? ]

**ಪೆರತಿ** (ನಾ). ಅನ್ಯಳು; ಪರಕೀಯಳು : ನಿನ್ನೊಳನುರಾಗ ಪೆಗ್ಗಳಿಸಿ ಮೋಸಕ್ಕೆ ಸಿಕ್ಕಿ ಮನ್ನಿಸದೆ ಕೌಸಲ್ಯೆಯುನು ಪೆರತಿಯೆಂದೆಣಿಸಿ (ಶಂಕಾ. ೨-೬-೪೦). [ ಪೆರ್₁ (< ಪೆಱತು) + — ತಿ₁ (< — ಇತ್ತಿ) ]

**ಪೆರದೆಗೆ** 'ಪೆಱದೆಗೆ' ನೋ.

**ಪೆರದೇಗು** (ನಾ). ದೊಡ್ಡ ತೇಗದ ಮರ : ಸೋಮೆಯದೇವರಿಗೂ ರಾಮಚಂದ್ರದೇವರಿಗೂ ಪೆರದೇಗಿನ ತೇರಾಗಿ ಪೊಂದು ಮನವವಾಗಿ ರತ್ತೋತ್ಸವ ನಡೆಯಬೇಕೆಂದು ಮಾಡಿಸಿದನು (ಎಕ. X (s), ಕುಳಬಾ. ೦೯೭-೦೪; 1498). 'ಹೆದ್ದೇಗು' ಪರಾ.

[ p ಇದು 'ಪೆರ್ದೇಗು' ಎಂಬುದರ ಅಪಲಿಖಿತ ]

**ಪೆರಮಟ್** (ನಾ). ಒಂದು ಸ್ಥಳದ ಹೆಸರು : ಪಡಗಣ್ಣಾಸೀಮೆ ಪೆರಮಟ್ ಪಡುವಣ್ಣಾ ಸೀಮೆ ತಣ್ಣಾಳ್ಳಿಗಾರ ಪಾಟ್ (ಎಕ. XXI, ೧೭೬-೧೨; ಸು. ೪ನೆಯ ಶ). [?]

**ಪೆರಮುಟಿಬೇರು** (ನಾ). ಒಂದು ಬಗೆಯ ಮೂಲಿಕೆ: "ಬಲರಕ್ಕಸಿ, ಪೆರಮುಟಿಬೇರು, ಕರೇಬಾಳದ ಬೇರು, ಬಾಲರಾಕ್ಷಸಿ" (ಸಸ್ಯ. ೦೦೨); ಬಲರಕ್ಕಸಿ, ಪೆರಮುಟಿಬೇರು (ವೃಕ್ಷ. ೬೦-೦೨೦೪).

[ ? + ಬೇರು (< ಬೇರ್) ]

**ಪೆರಮೊಂದ** (ನಾ). ಒಬ್ಬಾತನ ಹೆಸರು : ಪೆರಮೊಣ್ಡ ಮಗಂ ಮೊದಯಸ್ಸ್ನ ನೆಮಲದ ತೊರೆಗಳುಳ್ಳಿಱಿದು (ಎಕ. X, ಕಂಕಾ. ೦೦೯-೨; ಸು. 1000). [ ? ]

**ಪೆರಸಾರು** 'ಪೆಱಸಾರ್' ನೋ.

**ಪೆರಿಯಾಳ** (ನಾ). ಒಂದು ಊರಿನ ಹೆಸರು : ಸ್ವಭಾಷಯಾ ಪೆರಿಯಾಳ ನಾಮ ಗ್ರಾಮಮನ್ವತ್ರಮ್ (ಎಕ. X, ಗೂಂಬ. ೪೬-೦೪; ಸು. 640). [?]

**ಪೆರಿಯೂರು** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀ ಮಾದಿಯ ಗಾಮುಣ್ಡರೀ ಪೆರಿಯೂರು × × × (ಎಕ. IX, ಬಂಗಳೂ. ೩೯-೨; ಸು. 1000). 'ಪೇರೂರ್' ಪರಾ. [< ಪಿರಿದು₁ + ಊರು₃ (< ಊರ್)]

**ಪೆರಿಸಂದು** (ನಾ). ಒಂದು ಸ್ಥಳದ ಹೆಸರು : ಅನ್ತೆ ಬನ್ದು ಬುಳಿಗೆಱೆಯ ಮೂಡಣ ಕಟೆಯ ಪೆರಿಸನ್ದರಿಂ (ಎಕ. III, ಸಂಜನ. ೦೩೯-೦೩; 915?). [?]

**ಪೆರು₁** 'ಪೆಱು₁' ನೋ.

**ಪೆರು₂** 'ಪಿರಿ' ನೋ.

**ಪೆರುಂತಚ್ಚ** (ನಾ). ಪ್ರಸಿದ್ಧನಾದ ಬಡಗಿ : ನಾರಾಯಣ ಪೆರುನ್ತಚ್ಚನ್ (ಪ್ಯಶಿಂ. ೦೯೩೨, ೫೮-೬; ಸು. 825). [←ತಮಿ. ಪೆರುನ್ತಚ್ಚನ್]

**ಪೆರುಂದಾಳಿಸೆಟ್ಟಿ** (ನಾ). ಒಬ್ಬಾತನ ಹೆಸರು : ಗಾಣಿಗರ ಪೆರುನ್ದಾಳಿಸೆಟ್ಟಿಯರ ಮಗಂ ಗಜಿಸೆಟ್ಟಿ (ಎಕ. X, ಕೋಲಾರ. ೨೪೫-೨; 966). [? + ಸೆಟ್ಟಿ]

**ಪೆರುಂಬೆ** 'ಪರಂಬೆ' ನೋ.

**ಪೆರುದಟ್ಟಾರ** (ನಾ). ಹಿರಿಯ ಅಕ್ಕಸಾಲಿಗ : ಕೊಜಕ್ಕೊಣಿ ಪೆರುದಟ್ಟಾರೇಣೇದಂ ತಾಮ್ರಶಾಸನಲಿಖಿತ (ಎಕ. X (s), ಕುಳಬಾ. ೬೨೮-೬೨; ಸು. 650). [ಪೆರು₂ (<ಪಿರಿದು₁) + ತಟ್ಟಾರ]

**ಪೆರುಮಾಳ್, ಪೆರುಮಾಳು** (ನಾ). ೧. ಪರಮಾತ್ಮ; ದೇವರು : ಕಡುಘನ ಪೆರುಮಾಳೇಯುಬಿಳಿಮೊಡೆಯೇ (ತಿರುನಾ. ರೇ. ೨೨೫-೪). ೨. ಶ್ರೇಷ್ಠನಾದವನು; ಹಿರಿಮೆಯುಳ್ಳವನು : ಎಡೆಗಣೆಯ ಪೆರುಮಾಳಿ ಜಂಗಮಂಕೆ ನೀಡಿ (ಶಬವೃ. ೫೫-೪೨). **ಪೆರುಮಾಳು** : ೧. ಆಳಾಗಿ ಹೊರಟು ಆಳುವದು ಜಗವ ಪೆರುಮಾಳೆ ಜನಿಸುವಂತೆ (ಅರಳು. ೬೨-೪). ೩. ಒಬ್ಬಾತನ ಹೆಸರು : ಶ್ರೀಪೆರುಮಾಳು ಗುರವಡಿಗಳಾ ಶಿಷ್ಯ (ಎಕ. II, ೭-೦; ಸು. 700).

[ದೇ. ‖ ತಮಿ. ಮಲ. ಪೆರುಮಾಳ್; ತೆಲು. ಪೆರುಮಾಳ್ಳು]

**ಪೆರುಮಾಳು** 'ಪೆರುಮಾಳ್' ನೋ.

**ಪೆರುಮಾಳ್ತನ** (ನಾ). ಹಿರಿಯತನ; ಶ್ರೇಷ್ಠತೆ; ಅತಿಶಯತೆ : ಸಾಯುವುದರೊಳಗೆ ಒಂದು ದಿನಕ್ಕಾದರೂ ತನ್ನ ಗಂಗಕುಲದ ಪುರಾತನ ಪೆರುಮಾಳ್ತನದ ಗದ್ದುಗೆಯನ್ನೇರುವುದೆಂತು? (ಬೀರಬಂ. ೬೨).

[ಪೆರುಮಾಳ್ + — ತನ]

**ಪೆರೆ₁** 'ಪೆಱೆ' ನೋ.

**ಪೆರೆ₂** 'ಪೊರೆ' ನೋ.

**ಪೆರೆಗಳೆ, ಪರೆಗಳೆ, ಹರೆಗಳೆ, ಹೆರೆಗಳೆ, ಹೊರೆಗಳೆ** (ಕ್ರಿ). ೧. (ಹಾವು) ಚರ್ಮದ ಆವರಣವನ್ನು ಕಳಚು : ನಿರ್ಮೋಕವನ್ನು ಬಿಡು; ಪೊರೆಯನ್ನು ಕಳಚು : ಪೆ[ಪಾಠಾಂ. ಹ]ರೆಗಳೆದ ಮನೋಜವಿಷೋರಗಮೊಂದು ಬಗೆದನಕ್ಕುಂ ಮನದೊಳ್ (ಪರ್ವಪು. ೫-೦೬); ಪೆರೆಗಳೆ[ಪಾಠಾಂ. ಳಿ]ದ ಫಣಿಕುಲದಂತೆ ನಲಿದುದು ಚತುರ್ಬಲಂ (ಕೃಬಾಭಾ. ೨೦-೫೦). **ಪರೆಗಳೆ** : ೧. ನಿರ್ಮುಕ್ತ–ಪರೆಗಳೆದ ಹಾವು (ಗಂಗಾಮ. ೮೫). **ಹರೆಗಳೆ** : ೧. ಹ[ಪಾಠಾಂ. ಹೊ]ರೆಗಳೆದ ಕಾಳೋರಗಂಗೆಣೆಯಾದನಮಾರಾರಿ (ಶಿಶಾಗ. ೧೧-೨-೪೦). **ಹೆರೆಗಳೆ** : ೧. ಹಸಿದ ಹುಲಿಂರೋ . . . ಹೆರೆಗಳೆದ ನಿಟ್ಟುಸಿರಿನುರಗನೋ ಪೇಳೆನಲು ಸಾವಿತ್ರಿ ಹಲುಮೊರೆವ (ಕೊಠಂ. ೨-೩-೭); ಮನೋಜ್ಞಾಂಗಂ ಪೊದಳ್ದುರ್ಬಿದೊಡದು ಜಾಱಿತ್ತು ಬಾಹುಹಿತದ್ದೇಹ ಮಹಾಶ್ರಿಖಂಡಶಾಖಾಗ್ರದೆ ಹೆರೆಗಳೆವೃತ್ತಿಪ್ಪುದೆಂಬಂದದಿಂದಂ (ರಾಜಶೇ. ೧೧-೦೪೦); ಹೆರೆಗಳೆದ ಉರಗನ ಗರಳ ತಾ ತಪ್ಪುವದೆ (ಸರ್ವಜ್ಞ. ೦೦೦೬). **ಹೊರೆಗಳೆ** : ೧. ಹೊರೆಗಳೆದ ಫಣಿಯಂತೆ ಮುನ್ನಿನ ಶರೀರವಳಿದುದು ದಿವ್ಯತನು ಸಡಗರಿಸಿತಾಕ್ಷಣ ದೆಸೆಯು ಬೆಳಗಿಡೆ ಕಾಂತಿಯುಕ್ಕದಲಿ (ಅಂಬಿಕಾ. ೬೯-೬೪). ೨. (ಹೊರ) ಪದರವು ಸುಲಿ : ದೊರೆವೆಣ್ಣ ಹೊಂಬಾಳೆದೊಡೆ ಸೊಂಪು ನುಣ್ಪುವೆತ್ತಿರೆ ಕಂಡು ಕದಳಿ ಕಂಗಟುಬಿ ಒರೆಗೆ ತಾ ಸಲ ಬಂದುದಿಲ್ಲವೆಂಬೋದೊಂದು ಹೊರೆಗಳೆದುವು ಬಾಳೆ ಬನದಿ (ಪೋಚಕ. ೨೪-೪೦). [ ಪೆರೆ₂ (< ಪೊರೆ₂) + ಕಳೆ₁ ]

**ಪೆರೆಗೊಡೆಯ** 'ಪೆಱೆಗೊಡೆಯ' ನೋ.

**ಪೆರೆದಲೆ** 'ಪೆಱೆದಲೆ' ನೋ.

**ಪೆರೆದಲೆಯ** 'ಪೆಱೆದಲೆಯ' ನೋ.

**ಪೆರೆನೊಸಲು** 'ಪೆಱೆನೊಸಲ್' ನೋ.

**ಪೆರೆಯಿಕ್ಕು** (ಕ್ರಿ). ಪೊರೆಯನ್ನು ಬಿಡು,–ಕಳಚು : ಭೀಚರಪತಿ ಭೀಕರ ರೂಪಂ ನಿಜದಿಂದಂ ಪೆರೆಯಿಕ್ಕಿದ ಕೃಷ್ಣಸರ್ಪನಿರ್ಪಂತಿರ್ದಂ (ಶಂಪುರಾ. ೧೧-೩೦). [ ಪೆರೆ₂ (< ಪೊರೆ₂) + ಇಕ್ಕು ]

**ಪೆರೆಯುಚ್ಚು** 'ಪೊರೆಯುಚ್ಚು$_1$' ನೋ.
**ಪೆರೆಯುರ್ಚು** 'ಪೊರೆಯುರ್ಚು$_1$' ನೋ.
**ಪೆರೆಸುಲಿ** (ಕ್ರಿ). = ಪೆರೆಯಿಕ್ಕು : ಪೆರೆಸುಲಿದ ಪಾವಿನಂತೆ (ಜಾಂಕಿಥ. ೪-೩೯); ಪೆ[ಜಾಗಾ. ಹೆ]ರೆಸುಲಿವ ಹಿಮಪದವನೀಧರವೆಂಬುರಗಾಧಿಪತಿಯ ನಿರ್ಮೋಕದೊಳೇಂ ದೊರೆಯಾದುವೊ ವಿದ್ರುತಜರ್ಝರಭೂರ್ಜದ್ರುಮವನಂಗಳಿಂದಚಳಂಗಳ್ (ಜಾಕ್ಕಾ.ಕ. ೪೪೪).
[ಪೆರ್$_2$ (< ಪೊರ್$_6$) + ಸುಲಿ$_1$]
**ಪೆರೇಡ್** 'ಪರೇಡು' ನೋ.
**ಪೆರೇಡು** 'ಪರೇಡು' ನೋ.
**ಪೆರೋಲು** (ನಾ). ಸೆರೆಯಾಳನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಲು ಒಪ್ಪಿ, ಅವನಿಂದ ಪಡೆದುಕೊಳ್ಳುವ ನಂಬಿಕೆಯ ವಾಗ್ದಾನ: ಹೆಗಡೆಯವರು ಪೆರೋಲಿನ ಮೇಲೆ ಬಿಡುಗಡೆ ಮಾಡಲ್ಪಟ್ಟರು (ಕಠಿಣ. ೦೩೦). [← ಇಂ. Parole]
**ಪೆರ್ಕಣ** 'ಪೆರ್ಕ್ಕಣ$_1$' ನೋ.
Δ**ಪೆರ್ಕಳ** 'ಪೆರ್ಕ್ಕಳ$_1$' ನೋ.
**ಪೆರ್ಕಳಂಗೊಳ್**, ಹೆಕ್ಕಳಂಗೊಳ್, ಹೆಕ್ಕಳಂಗೊಳು, ಹೆಕ್ಕಳಗೊಳ್, ಹೆಕ್ಕಳಗೊಳು (ಕ್ರಿ). ೧. ಸಂತೋಷಪಡು ; ಹಿಗ್ಗು : ಬಿಜ್ಜಳರ್ ಪೆರ್ಕಳಂಗೊಳ್ವರ್ (ಶಿಶರಂ. ೦೬೦-೦೨). **ಹೆಕ್ಕಳಂಗೊಳ್** : ೨. ಅಧಿಕವಾಗು ; ವ್ಯಾಪಿಸು : ಅಧರದೊಳ್ಪೆಂದಿರಿಸಿದಂ ಕೊಳಲನೊಪ್ಪದಿಂ ಮಧುರಾಕ್ಷರಂಗಳಂ ಸವಿವ ಸಮರಾಗದಿಂ ಹಲ್ಲಪಣೆ ಹೆಕ್ಕಳಂಗೊಂಡು ವನದೊಳು ತೀವೆ (ಜಾಕ. ಕೀ. ೦೬೦-೦೯). **ಹೆಕ್ಕಳಂಗೊಳು** : ೩. ಬೀಗು ; ಹೆಮ್ಮೆಪಡು ; ಗರ್ವಿಸು : ಅರಿಯ ಗೆಲಿದನೆನುತ್ತೆ ಹೆಕ್ಕಳಂಗೊಳದಿರು (ಕುರಂಗ. ೬೮-೪೦). **ಹೆಕ್ಕಳಗೊಳ್** : ೩. ಉರಿಯ ಕಂಡ ಪತಂಗ ಹೆಕ್ಕಳಗೊಂಡ ಪರಿಯಹುದು (ಕೌಶಿಕ. ೩೮-೦೦). **ಹೆಕ್ಕಳಗೊಳು** : ೧. ಇಂತು ರೇವಣಸಿದ್ಧಶಿವಯೋಗಿ ಬಹ ಜನದನಂತವಾರಾಶಿಯಂ ನೋಡಿ ಹೆಕ್ಕಳಗೊಳುತ್ತೆ (ಶಕುಕು. ೨-೪-೩೦). ೩. ಕೊಪ್ಪರಿಗೆಯೊಳಗೆಣ್ಣೆಯಂ ತುಂಬಿ ಹೆಕ್ಕಳಗೊಳುತ್ತಾ ಪುರದ ನೊಳಗಳೆಲ್ಲವನೆಯ್ದೆ ಬಳಿಗೆ ಸೋಹುತ್ತೆ (ಜಾತೋಕು. ೦೦-೫೯). [ಪೆರ್ಕಳ (< ಪೆರ್ಕ್ಕಳ$_1$) + ಕೊಳ್$_1$]
**ಪೆರ್ಕಳಿಕೆ**, ಹೆಕ್ಕಳಿಕೆ$_1$, ಹೆಗ್ಗಳಿಕೆ (ನಾ). ೧. ಹೆಚ್ಚುಗಾರಿಕೆ ; ಹೆಚ್ಚಳ ; ಮೇಲ್ಮೆ : ಲೋಗರೊಳ್ ಬಲ್ಲರ್ ತಮ್ಮಾಳ್ದನದ ಪೆರ್ಕಳಿಕೆಯಂ ಗಳಪುವರೆ ? (ಜಾಸೂಕ್ತ. ೫೫-೨೬). ೨. ಗರ್ವ ; ಸೊಕ್ಕು : ಓರ್ವಂ ನಾರದಂ ಗಾಣಸಾಸ್ತ್ರದ ಬೇರಂ ಪಿಡಿದೆತ್ತಿರ್ದನೆಂಬ ಪೆರ್ಕಳಿಕೆಯಿಂದೋರೊರ್ಮೆ ಪಾಡುತಿರಲ್ (ಅದ್ಯು.ಕ. ೨೬-೬); ನಿನ್ನ ಪೆರ್ಕಳಿಕೆಯುಂ ರೂಢಿಯುಂ ಜಾಣಿಯುಂ ಸಯ್ದನಂ ತನಗುಮಿದಿರಾಂಪಧಟರೆತ್ತಣವರೆಂಬ ಪಂತಮುಮಕಟ ! (ಶಂಸಕ. ೨೩-೩); ಕೆಟನುರ್ಗುವಾ ಪಜ್ರಾಯುಧಂ, ಅವನ ಮೇಲ್ ಕಟ್ಟಿಜಗಿ ಉರ್ಬುಟೆಯ ಪೆರ್ಕಳಿಕೆಯಿನ್ ಎತ್ತಿ ಬಡಿಯಿತ್ತು ಅವನನ್ (ಅಧೃಕ್ರ. ೨೦-೪೦೬). **ಹೆಕ್ಕಳಿಕೆ$_1$** : ೧. ಅನಂತಕಾಲಂ ಸುಖದ ಹೆಕ್ಕಳಿಕೆಯಿಂದಲತಿರಮಿಸುತಿರಲು (ಕುರಂಗ. ೩೦-೩೦) ; ಆ ಹೆಕ್ಕಳಿಕೆಯ ಸಾಧನೆಯಿಂದ . . . ಹೀವಿಯನ್ನು ಪೋಷಣೆಗೆಯ್ದು ಜೀವಿಸಿಕೊಳ್ಳುವುದೇನು ? (ಕಟ್ಟಿಅ. ೬೩-೪). ೨. ಅವಳು ಹೆಕ್ಕಳಿಕೆಯಿಂದ ಕೊಟಡಿಯೊಳಗೆ ಹೆಜ್ಜೆಯಿಟ್ಟಳು (ಕೃಸಕು. ೨೦೬). ೩. ಸಂತೋಷ ; ಹಿಗ್ಗು : ಆಃ ಎಂಬುದು ಸ್ವಯಂತೃಪ್ತ ಹೆಕ್ಕಳಿಕೆಯಲ್ಲಿ ಬರುತ್ತಿದ್ದರೆ . . . ಆಹಾ ಎಂಬುದು ತೊಂದರೆ ದಾಟಿದ ಆನಂದದಲ್ಲಿಯೂ ಬರುತ್ತದೆ (ಜಾಕಾಶಾ. ೬).
**ಹೆಗ್ಗಳಿಕೆ** : ೧. ಆದರ ವಾತ್ಸಲ್ಯ . . . ಮೋಹಕಶೈಲಿಗಳು ಕನ್ನಡ ನುಡಿಯ ಹೆಗ್ಗಳಿಕೆಯನ್ನು ಸಾರಬಲ್ಲುವು (ಕಪಾ. ೦೬೬) ; ಸಾಮಾನ್ಯ ವ್ಯಕ್ತಿಯೊಬ್ಬನಾದರೆ ಆಗ ತನ್ನ ಹೆಗ್ಗಳಿಕೆಯನ್ನು ಕೊಚ್ಚಿಕೊಳ್ಳುವ ಸಂಭವವಿತ್ತು (ಆಜಕ. ೬೬) : ಅದೇ ನಿನ್ನ ಹೆಗ್ಗಳಿಕೆ (ಶಂಕರು. ೪೬-೧೦). ೨. ವಿಜಯೋನ್ಮಾದದ ಹೆಗ್ಗಳಿಕೆಯಿಂದನ್ನುತ್ತಾ ಸಂಜೀವರಾಯರು . . . ನೋಡಿದರು (ಳುರುಕಾ. ೪೮). ೪. ದೊಡ್ಡಸ್ತಿಕೆ ; ಡೌಲು : ಗಂಡನ ಹುಚ್ಚು ಹೆಗ್ಗಳಿಕೆಗೆ ಬಲಿಯಾಗಿ . . . ನಿರಾಶೆಯ ಸಂಕೇತವಾಗಿ ಕಂಡಳು (ಕರಾಚಿ. ೬೮). [ಪೆರ್ಕಳ (< ಪೆರ್ಕ್ಕಳ$_1$) + -ಇಕೆ]
Δ**ಪೆರ್ಕಳಿಸು** 'ಪೆರ್ಕ್ಕಳಿಸು' ನೋ.
**ಪೆರ್ಕುಡಿ** (ನಾ). ೧. ಹಿರಿಯ ಮನೆತನ ; ದೊಡ್ಡವಂಶ : ಪೆರ್ಕುಡಿಯ ಮಕ್ಕಳಿರ್ ನೀಮೆ ಇಂತಾಡುವೊಡೆ, ಕೀಟ್ಗಳೇನಪ್ಪರ್ (ಅಕ್ಕಶಾ. ೪೨-೬೩೦) ; ಇನ್ ತೋಟಿಪ್ಪಿ ನಿನ್ನ ಪೆರ್ಮೆಯ ಪುಟ್ಟನ್ ; ಇಲ್ಲ ಪೆರ್ಕುಡಿಗೊಗೆದ ನಿನ್ನ ಕೀಟಿಟ್ತನಮನ್ (ಅಂಕಿಗೂ. ೨-೨೯) ; ಪೆರ್ಕುಡಿಯ ಪೆರ್ಮೆಯವರೊಡನೆ, ಪಂಬಲಿಸಲೇವುದಯ್ ದಾಂಪತ್ಯಯೋಗವಮನ್ ? (ಅಧೃಕ್ರ. ೪೬-೦೦೨೩). ೨. ಉತ್ತಮರ ಸಹವಾಸ ; ಶ್ರೇಷ್ಠರಾದವರ ಸಂಗ : ಅಕ್ಕರರ ಗೋಷ್ಠಿ ಸುಜನರ ಪೇ[ಪೆ]ರ್ಕುಡಿ ಸಜ್ಜನರ ಕೇಳಿ ವಿದಗ್ಧೆಯ ಸಂಗು ತಕ್ಕರೊಡನಾಟವಾಗಲು ಮಿಕ್ಕ ಸುಖಂ ಬಳಿಕದೇಕೆ (ಶಿಕಾ. ೩೦೮).
[ಪೆರ್ (< ಪಿರಿದು$_1$) + ಕುಡಿ$_2$]
**ಪೆರ್ಕಿಂಗಿಡಿ** (ನಾ). ದೊಡ್ಡದಾದ ಕೆಂಪುಕಿಡಿ : ಮಹಾಸ್ತಂಭಮಂ ಮುನ್ನೊಡೆದಾರ್ಪಿಂ ಸಿಂಹವಕ್ತ್ರಂ ಪೊಗೆ ನೆಗೆದೊಡನೆತ್ತಿತ್ತಲುಂ ತೀವೆ ಪೆರ್ಕಿಂಗಿಡಿಗಳ್ ನೇತ್ರಂಗಳಿಂ ಸೂಸುತುಮಿರೆ ಪೂಜಿಮುಟ್ಟಿಂ ಮಹಾಘೋರ ರೂಪಂ (ಚಿಕ್ಕುಕೃ. ೦. ೩-೨೪೩). [ಪೆರ್ (< ಪಿರಿದು$_1$) + ಕೆಂಗಿಡಿ]
**ಪೆರ್ಕೆಳೆ** (ನಾ). ಗಾಢವಾದ ಸ್ನೇಹ ; ಉತ್ಕಟವಾದ ಮೈತ್ರಿ : ರಾಮನೊಳ್ ನನಗೆ ಪೆರ್ಕೆಳೆ ನುಡಿಸಿತಲ್ಲದೆಯೆ ಭಾವಿಸದಿರ್ದ್ದುಮಂ (ಶ್ರೀರಾಮ. ೫೨೨-೫೪೬). [ಪೆರ್ (< ಪಿರಿದು$_1$) + ಕೆಳೆ$_3$]
**ಪೆರ್ಕೊರಗು** (ನಾ). ಹಿರಿದಾದ ಅಳಲು ; ಅತೀವವಾದ ವ್ಯಥೆ : ಇಂತೆಮಗೆ ಪೆರ್ಕೊರಗು__ಆ ಪುರ್ಬು ಪಟಿದೊಡು (ಅಕ್ಕಶಾ. ೦೦-೨೩೪).
[ಪೆರ್ (< ಪಿರಿದು$_1$) + ಕೊರಗು$_2$]
**ಪೆರ್ಗಜ** (ನಾ). ದೊಡ್ಡಗಾತ್ರದ ಆನೆ : ಮಾಣದೆ ಮದಜಲ ಸುರಿವ ಪೆರ್ಗಜ . . . ನಂದಿವಾಹನಸಹಿತ ಗೀರ್ವಾಣರೊಪ್ಪಿರ್ದರೋಲಗದಿ (ವೀರಶಕ. ೦೮-೦೬). [ಪೆರ್ (< ಪಿರಿದು$_1$) + ಗಜ]
**ಪೆರ್ಗಟ್ಟ** (ನಾ). ಬಹು ಇಳಿಜಾರಾದ ಪ್ರದೇಶ ; ಘಟ್ಟ : ಪೆರ್ಗಟ್ಟದ ಕೆಳಗೆ ಪಡುವಣದೆಸೆಯೊಳ್ (ಎಕ. VII, ಶಿಕಾ. ೦೫೦-೬೪ ; 1047).
[ಪೆರ್ (< ಪಿರಿದು$_1$) + ಗಟ್ಟ$_1$]
**ಪೆರ್ಗಡಣ** (ನಾ). ದೊಡ್ಡ ಸಮೂಹ.__ಗುಂಪು : ಮೋದದಿಂ ಪೆರ್ಗಡಣಂ ಬೆರಸೊಲ್ದು ಪೊಕ್ಕನಬ್ಜಾಕರಂ (ಉದ್ಭಟ. ೪-೪೩).
[ಪೆರ್ (< ಪಿರಿದು$_1$) + ಗಡಣ]
**ಪೆರ್ಗಡಲ್**, ಹೆಗ್ಗಡಲು, ಹೆರ್ಗಡಲ್ (ನಾ). ದೊಡ್ಡ ಸಮುದ್ರ ; ವಿಸ್ತಾರವಾದ ಕಡಲು : ಕಡಲಂ ಕ್ಷೀರದನಗಸ್ತ್ಯನೆಂಬ ಪುರುಡಿಂ ಪುತ್ತೊಂದನಬ್ಧೋದ್ಭವಂ ಪಡೆದಂ ಪೆರ್ಗಡಲಂ . . . ಎಸಲ್ಕೆ ಪೇಪುವಡೆಗುಂ ಗುಣ್ಪಿಂದೆ ಪಂಪಾಸರಂ (ಜಾರಂಪ. ೦೦೬); ಪೆರ್ಗಡಲಲ್ಲಿ ಗಂಟಲಂ ಮುಟಿದು ತಳರ್ಚದಿಕ್ಕುವುದು ಲೇಸು (ಧರ್ಮಾಮೃ. ೦೦-೪೪); ಬಿಜುಪರಿಯ ಬೇಗದಿಂದಂ ಕುಜುಪಿನ ಪಟುಗಳೊಳೆಯೆ ಪೆರ್ಗಡಲೆಡೆಯೊಳ್ ನೆಟಿ ನಾವೆ ತಾಗುವಂದದೆ ತೆಜಪಿಲ್ಲದೆ ತೇರ್ಗಳೊಡ್ಡು ತಾಗಿದುದು (ಕಕ್ಕಾಕಾ. ೨೩೬).
**ಹೆಗ್ಗಡಲು** : ಕುರುಬಲದ ಹೆಗ್ಗಡಲು ಬಟಿತುದು (ಕುಜಾ.ಕ. ೩-೪); ಪೊಡವಿಯನು ಕೆಳಗಿಕ್ಕಿ ಮಿಗೆ ಹೆಗ್ಗಡಲು ಕವಿತಹವೋಲು ಬಂದುದು ಪಡುವಲಭಿಮುಖವಾಗಿ ಮಧುರೆಗೆ ಬಹಳನೃಪಕಟಕ (ಪಿಕಾಗ. ೦೦-೪೮-೬); ಹಿರಿಗಾಳಿ ಹೆಗ್ಗಡಲು ಬಯಲು ನೆಲ ಬೆಂಕಿಗಳೊಳಗ ನೀಡುವ ದಿವ್ಯ ದೇವರಲದಿ (ಪುರಂದ. ೫೩-೪). **ಹೆರ್ಗಡಲ್** : ಪಾಣ್ಡ್ಯ ಮಹ

ರೋದ್ಧತ ಕಾಡವಸೈನ್ಯವಪ್ಪ ಹೆರ್ಗ್ಗಡಲನಳುರ್ಕೆಯಿನ್ದೆ ಭುಜ ವನ್ನರದಿಂ ಕಡಿದು (ಎಕ. XI. ಶಾಕಶಾ· ೨೫-೯೨; 1224).

[ಪೆರ್ (< ಪಿರಿದು₁) + ಕಡಲ್₂]

**ಪೆರ್ಗಡಹು** (ನಾ). ವಿಸ್ತಾರವಾದ ದಾಟುವ ಸ್ಥಳ ; ಹಾಯ್ಗ್ಗಡ: ಎರಡು ಬೆಟ್ಟದ ನಡುವಣ ಪೆರ್ಗ್ಗಡಹು ಅಂತೆ ಬರೆ ಬೆಟ್ಟದ ಮೇಗಣ ಕೊಳವಾವಿ (ಪ್ರಿಆ· ೦೯೨೦, ೦೦-೦೫೯; 967).

[ಪೆರ್ ( < ಪಿರಿದು₁) + ಕಡಹು₂ ]

**ಪೆರ್ಗಡಿತ** (ನಾ). ಬರೆಯುವುದಕ್ಕಾಗಿ ಬಳಸುವ, ಕಪ್ಪುಲೇಪನವುಳ್ಳ ಬಟ್ಟೆಯ ದೊಡ್ಡ ಪುಸ್ತಕ,–ಕಡಿತ: ಧೀರರ್ ಶಂಕರಶಾಬ್ದಿಕ್ಗಳ್ ಪೊಣರೆ ತತ್ಸಂಘಟ್ಟದಿಂ ಭೂತಳಂ ನೀರೊಳ್ ಪಾಸಿದದೊಂದು ಪೆರ್ಗಡಿತ ದಂತಳ್ಪಾಡಲ್ (ಜಗ. ೦೯-೨೬). [ಪೆರ್ (< ಪಿರಿದು₁ )+ಕಡಿತ₂]

**ಪೆರ್ಗಡಿತಿ**, ಹೆಗ್ಗಡತಿ, ಹೆಗ್ಗಡಿತಿ, ಹೆರ್ಗಡಿತಿ (ನಾ). ೧. ಅರಮನೆ ಮುಂತಾದ ಕಡೆಗಳಲ್ಲಿ ಒಳಾಡಳಿತವನ್ನು ನೋಡಿಕೊಳ್ಳುವವಳು : ಭಂಡಾರವತಿಯೆಂಬ ಪೆರ್ಗಡ[ಡಿ]ತಿಗೆ ಪೆಣ್ಣ ತಂಡ ನಂಬುಗೆವಂತರೆ ಸೆಯೆ . . . ಭೂಷಣದ ಕರಂಡಗೆಗೊಟ್ಟು ಕಳುಹಿದ (ಶಶಕ· ೩೬-೦೨೬). ಹೆಗ್ಗಡತಿ: ೧. ಹೆಗ್ಗಡತಿಯನೊರ್ವಳಂ ಶೀಘ್ರವೇಗದಿಂದ ಕರೆದು (ಕಂಡಾಕಾಂ. ೩೫-೬೦); ಗಂಧವ ಸಂಗೊಳಿಸಿ ನೀವೆಂದು ಹೆಗ್ಗಡ[ಶಾಕಾಂ.ಡಿ]ತಿಯರೊರೆವರಲ್ಲಿ (ಪುದೀಪು. ೨-೦೯); ವಿನಾನ ತಂದವಗೆ ಬೇಡಿದ ವಸ್ತುಗಳ ಕೊಟ್ಟು ಭೂನಾಥ ತಾ ತ್ವರಿಯದಲಿ ತಾನೊರ್ವ ಹೆಗ್ಗಡತಿಯ ಕೈಯ ಕಳುಹಿದ ಬೋನದ ಮನೆಗೀವುದೆನುತ (ಕೋಪಕ. ೦೦-೬೬). ೨. ಗ್ರಾಮದ ಮುಖ್ಯಾಧಿಕಾರಿಣಿ, – ನಾಯಕಿ : (ಎಕಪ್ಪು. I, ೦). ೩. ಗ್ರಾಮದ ಮುಖ್ಯಾಧಿಕಾರಿಯ ಹೆಂಡತಿ : ಆತನ ಹೆಗ್ಗಡತಿ ಮಾಚವೆ (ಎಕ. VI. ಕಳ್ಸು. ೬೦-೩; 1172); ಹೆಗ್ಗಡತಿಗೆ ಪ್ರಸಾದ ಕೊಡಿ (ದೇವಹಂ· ೦೯೦). ೪. ದಿಟ್ಟೆ ; ಗಂಡುಬೀರಿ ; ಉದ್ಧಟೆ : ಲೋಕದಲ್ಲಿ ಗಂಡ ಬಡವನಾದರೆ ಹೆಂಡತಿ ಹೆಗ್ಗಡತಿಯಾಗುವಳು (ಅರಜಾ. ೦-೨೦೦). **ಹೆಗ್ಗಡಿತಿ** : ೧. ಕೆಲಬರ ಕಳುಹಿ ತಿರಿವೆನೆನುತ್ತ ಹೆಗ್ಗಡಿತಿಯರನಟ್ಟಿದರೆ (ಪ್ರಭುಲೀ. ೦೦-೬). ೨. ಚಿಕ್ಕ × × ಹೆಗ್ಗಡಿತಿ (ಎಕ. II, ೨೫೨-೯೦; ಸು. 1185); ಕಾನೂರಿಗೆ ಹೆಗ್ಗಡಿತಿಯಾಗಿ ಹೋಗುವ ವಿಚಾರವನ್ನು ಯಾರಾದರೂ ಎತ್ತಿದರೆಂದರೆ ಮಾತ್ರ ಆಕೆ ಹುಚ್ಚಿಯಂತೆ ವಿಚಿತ್ರರೀತಿಯಿಂದ ವರ್ತಿಸುತ್ತಿದ್ದಳಂತೆ (ಕಾಸೂಹೆ. ೬೨೦). ೩. ಗಂಡು ಹೆತ್ತರೆ ಗೌಡನ ಹೆಸರು, ಹೆಣ್ಣು ಹೆತ್ತರೆ ಹೆಗ್ಗಡಿತಿಯ ಹೆಸರು (ಗಾದೆ). **ಹೆರ್ಗಡಿತಿ** : ೨. ಶ್ರೀಮತು ಹಿರಿಯ ಹೆರ್ಗ್ಗಡಿತಿಯಾಚಲ ದೇವಿಯುನ್ನಯಮ್ವೆಂತೆಂದೊಡೆ (ಎಕ. II. ೩೨೬-೯೩ : 1181) ; ಮಲಯಾಳಿ ತಿಯುಂ, ಹೆರ್ಗಡಿತಿಯುಂ, (ಕಾಕಳ್ಳ· ೦೩೪).

[ ಪೆರ್ಗಡೆ₁ + — ಇತಿ₁ ( < — ಇತ್ತಿ) ]

**ಪೆರ್ಗಡೆ₁**, ಪೆಗ್ಗಡೆ, ಪೆರ್ಗ್ಗಡೆ, ವೆಗ್ಗಡೆ, ವೆರ್ಗಡೆ, ಹೆಗಡಿ, ಹೆಗಡೆ, ಹೆಗೆಡೆ, ಹೆಗ್ಗಡಿ, ಹೆಗ್ಗಡೆ, ಹೆಗ್ಗ್ಗಡೆ, ಹೆಗ್ಡೆ, ಹೆರ್ಗಡೆ (ನಾ). ೧. ಗ್ರಾಮದ ಮುಖ್ಯಾಧಿಕಾರಿ,– ಒಡೆಯ : ದಾಮುಡಿಗಟಂ ಪೆರ್ಗ್ಗಡೆ (ಎಕ. IV, ಹೆಗ್ಗ.ದ. ೯೩-೯ ; ಸು. 780) ; ದುಷ್ಟಮನ್ನೆಯಪ್ರಳಯಕಾಳಂ ಶ್ರೀಮತ್ಪೆರ್ಗ್ಗಡೆ ಮಾದಿ[ಮ]ಯ್ಯಂ (ಶಾಇ. XX, ೨೯-೬ ; 1034) ; ಬಲ್ಲಾಳ ಪೆರ್ಗಡೆ ಮಾಸಾಮಂತ ಮನ್ನೆಯ ರಾಯರ್ ಮುಂತಪ್ಪ ನಾಡೊಡೆಯರ್ . . . ಕೈಮುಗಿದು (ರಾಜಶೇಖ· ೩೦-೦೩). ೨. ಅರಮನೆ ಮುಂತಾದ ಕಡೆಗಳಲ್ಲಿ ಒಳಾಡಳಿತವನ್ನು ನೋಡಿಕೊಳ್ಳುವವನು ; ಮನೆವಾರ್ತೆಯ ಮೇಲ್ವಿಚಾರಕ : ಮಂತ್ರಿಯುಂ ಪೆರ್ಗಡೆಯುಂ ಮೊದಲಾಗಿ ಪೊಲಿಲೊಳಗುಳ್ಳ ಜನವೆಲ್ಲಮರ್ಚನೆಗಳಂ ಕೊಂಡು ಬಂದು (ಚಕ್ರಾ. ೯೩-೨೩) ; ಶಂತನು . . . ದಾಶರಾಜನಲ್ಲಿಗೆ ಕೂಸಂ ಬೇಡೆ ಪೆರ್ಗಡೆಗಳನಟ್ಟಿದೊಡೆ (ಕಂಪಭಾ. ೦-೬೦ ಪ) ; ರಾಣೀವಾಸದ ಪೆರ್ಗಡೆ ತನ್ನಿಜನಿಯೋಗವಂ ಬಿನ್ನವಿಕಂ (ಜಾಂತಿಪು· ೩-೬೦) ; ರಾಣಿವಾಸದ ಪೆರ್ಗಡೆಯಂತೆ (ಕರ್ಣಾಕ್ಕು. ೫-೦೩೦). ೩. ಮಂತ್ರಿ ; ಪ್ರಧಾನಿ : ಅರಸಂ ಸ್ತಬ್ಧಂ ಪೆರ್ಗಡೆ ಮರುಳಂ (ಪುದಕ· ೦೦-೫೦) ; ಪಡಿಯಿಲ್ಲದ ಮನೆಯುಂ ಪೆರ್ಗಡೆಯಿಲ್ಲದ ರಾಜ್ಯಮುಂ . . . ಒಪ್ಪಲಾರವು ಜಗದೊಳ್ (ಕರ್ಣಾಕ್ಕು· ೬-೦೫೦); ಇಂತು ಷಡಂಗಬಲಮುಂ ಅರಸು ಪೆರ್ಗಡೆ ಜನಪದ ದುರ್ಗ ಭಂಡಾರ ಮಿತ್ರರುಮೆಂಬಿವರುಂ ಷಡಂಗಬಲ ಸಹ ಚಕ್ರಿಗೆ ಸಪ್ತಾಂಗ ದುನಿಕ್ಕುಂ (ಆದಿಪ· ೬-೦೦). ೪. ಮುಖ್ಯಸ್ಥನಾದವನು ; ಉನ್ನತಾಧಿಕಾರಿ ; ಹಿರಿಯ : "ಪೆರ್ಗಡೆಯೆನಲ್ ಮುಖ್ಯನಕ್ಕು" (ಶಬ್ದಕೆ· ೩೬) ; ಬಸಂತನಿವರ್ಕೆ ತಾನೆ ಪೆರ್ಗಡೆ ಗಡ (ಶಬ್ದಾಸಾ· ೦೯೩) ; ಅತನು ಪುರಾಧಿಪಂ ತಳವಜಂ ಶಶಿ ಪೆರ್ಗಡೆ ಮಂದಮಾರುತಂ (ಕಶಕ. ೯-೮೦). ೫. "ರಾಯಭಾರಿ" (ಕಂಪಶಾ· ೩೩೫) : ಅಟ್ಟಿದ ನಿಮ್ಮ ಪೆರ್ಗಡೆ ಬರ್ದುಂಕಿದನೆಂಬುದನಿಂದ್ರಜಾಲಮಂ ತೊಟ್ಟನೆ ತೋರ್ಚಿ ಬಂದು ಬರ್ದುಕಾಡಿದಂ (ಕಂಪಶಾ. ೯-೮೯); ತನ್ನ ದೂತರ ಕೈಯೊಳ್ ಪಾಗುಡಮಂ ಕೊಟ್ಟು ಬೇಡಿಯಟ್ಟಿದೊಡೆ ಬಂದ ಪೆರ್ಗಡೆಗಳಂ ಜಡಿದು ನುಡಿದು ಕಳೆಯೆ (ಶಾಂತಿಪು· ೧೯೭). **ಪೆಗ್ಗಡೆ** : ೧. ಪೆಗ್ಗಡೆ ನಾಯಕ ಕಲ್ಲುಣ್ಣಪುರದೂರಟಿವಿನೊಳು (ಪ್ರಿಆ. ೦೯೩೬, ೨೦-೬ ; ಸು. 896) ; ಕರಹಡನಾಡ ಪೆಗ್ಗಡೆ (ಕೆಇ. II, ೦೩-೨೨ ; 1115) ; ಪರಮೇಷ್ಠಿಯೆಂಬ ಪೆಗ್ಗಡೆಯುಂ ವಿಲಾಸದಿಂ ಮಿಱುಪ ಧ್ರುವನೆಂಬ ಕೊಲ್ಲಟಿಗನೆಲ್ಲಾ ಜಗಂ ಬೆರಸಿಟ್ಟು ನೋಡಲೆರ್ದಾಡಲೆಂದಿರಿಸಿರ್ದ ನಿಡುವಿಸುನಿಗಳೆಯೊ ತಿಳಿಯ (ಪಂಪರಾ. ೨-೦೨). **ಪೆರ್ಗಡೆ** : ೧. ಪೆರ್ಗ್ಗಡೆ ಮಾಚಯ್ಯಂ ಮಂಗಲದ ಗಾವುಣ್ಣಗಳುಂ ಮೆಟ್ಟಿಬ್ಬಡೆ ಬಾಳಿಸಿದ ಸ್ಥಿತಿಕ್ರಮಮಾವುದೆನ್ದೊಡೆ (ಎಕ. IV, ಜಾಜುರಾ. ೯೮ ೬; 965). ೩. ನೊಳಂಬನ ಪೆರ್ಗ್ಗಡೆ ತ್ರಿಭುವನಯ್ಯಂ ಪೆಮ್ಮಾಡಿಯನೋಲಗಿಸಿ (ಎಕ. IV, ಜಾಜುರಾ. ೦೯೦-೦; ೯೯೦ ?) ; ಶ್ರೀಮತ್ಕಲದಂಕಾಚದೇವನ ಪೆರ್ಗ್ಗಡೆ ಬಸವಯ್ಯನಂಕನ ಭಟ್ಟನು ಮಾಡಿಸಿದ ಮಾನಸ್ತಮ್ಭವು (ಎಕ. X, ಮುಳಬಾ. ೫೯-೮; ಸು. 900 ?). **ವೆರ್ಗಡೆ** : ೧. ಮೂವತ್ತೊಬ್ಬಾಸಿರದ ನೂರ್ಱಿರಡು ಬಾಡಮಂ ಲೋಕಬೆಯರಾಳೆಯಾತನಾಳ್ವ ನಾಟ್ಕಿಲ್ಲಂ ವೆರ್ಗಡೆ ಬಿಟ್ಟಯ್ಯನ್ . . . ಪ್ರತಾಪಿಯುಂ (ಎಕ. VII (S), ಶಿಕಾ ೩೬೮-೫; 902). **ಹೆಗಡಿ** : ೧. ಅಡಿಯರ ಬಳಿ ಹೆಗಡಿ ಬಳಿ ತಪ್ಪಿಸಿ . . . ಯಿಸರಂಣನಾಯಕನು ವುಭಯದಳ ಮೆಚ್ಚಿ ಹೊಯಿದು (ಕಇ. I. ೯೬-೦೩; 1423). **ಹೆಗಡೆ** : ೧. ಹೆಗಡೆ ಮಾರತಂಮನ × × ಮಾದ ಮಾರಗವುಡರ ಮಕ್ಕಳು ಮಾದಿಗವುಡ ಮಾದಿಗವುಡನವರು ಕೊಟ್ಟ ಕೊಡಗೆಯ ಮಣ್ಣು ೫೦೦ (ಎಕ. III (R), ಹೆಗ್ಗದ. ೨೯-೦ ; ಸು. 1೬ಶತ ಈ) ; ಎ × × × ಳೀಯೂರ ಹೆಗಡೆ ಕೂವಲೂರ ಕೊಲಗಟ ಮಾರಚ ಹರದೆ . . . ಪೊಳಗಾವ ಸಮಸ್ತ ಗ × × ನಂಜುಂಡೇಸ್ವರದೇವರ ಅಮ್ರುತಪಡಿಗೆ (ಎಕ. III (R), ನಂಜಗ. ೦೬೨-೯, 17ಶತ ಈ); ಹೆಗಡೆಯುವರನ್ನು ಕಂಡಾಗಲೇ ಅನಂತ ಕಾಸಿದು ಬಿದ್ದ (ಕೀಶಕಂ. ೦೩೯). ೬. ಗೌಡಸಾರಸ್ವತಬ್ರಾಹ್ಮಣರಲ್ಲಿ ಒಂದು ಒಳ ಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು : ಪರ್ಬು, ಹೆಗಡೆ, ಬಾಳಿಗ . . . ಭಕ್ತ—ಎಂಬುದಾಗಿ ಕೊಂಕಣರಲ್ಲಿ ಹದಿನಾಲ್ಕು ಭೇದಗಳುಂಟು (ಕುಳಜಾ. ೦೬೦) ; ಇವರಲ್ಲಿ ಭಟ್ಟರೂ (ವೈದಿಕರೂ) ಹೆಗಡೆಗಳೂ (ಗೃಹಸ್ಥರೂ) ಎಂಬ ಎರಡು ಭೇದಗಳಿವೆ (ಕಾರಕ· ೯೩). ೭. (ಅಧಿಕಾರಸೂಚಕವಾಗಿ, ಹೆಸರಿನ ಕೊನೆಯಲ್ಲಿ ಸೇರಿಸುವ) ಒಂದು ಮನೆತನದ ಹೆಸರು : ಶಂಕರಕೊಪ್ಪದ ಹೆಗಡೆ ಮನೆತನದವನು ನಾನು (ಕೀಶಕಂ· ೦೩೩). **ಹೆಗೆಡೆ** : ೧. ದಂಡನಾಯಕ ಗಂಗಪ್ಪಯ್ಯಂಗಳನ್ನು ಹೆಗೆಡೆ ಬಮ್ಮಣಯ್ಯನ ಮ(ೂ)ಗ ಹಿರಿಯೇಚಿಮಂಯ ಮಾಡಿಸಿದ ಶಾನ್ತಿನಾಥದೇವರುಮಂ ಬಸದಿಯುಮುಮಂ ಮಾ[ಡಿ]ಸಿದ (ಎಕ. II (R), ೦೬೯-೦; 12ಶತ ಈ). **ಹೆಗ್ಗಡಿ**: ೧. ಈ ಹೆಗ್ಗಡಿಗಳ ವಂಶವು ಮುಂದೆ ಸಾಗುತಾ

ಹೋಯಿತು (ಶಾಳಗಾ. ೫). ೪. ಪಂಥದಿಂ ತಿಳಿದೆಲ್ಲರೊಳಗೆ ಪೆಗ್ಗಡಿಯಾದನು [ಪಾಠಾಂ. ಹೆಗ್ಗಡಿಗನಾಗಿ] (ಶ್ರೀಶಂ. ೩-೫). **ಹೆಗ್ಗಡೆ :** ೧. ಶ್ರೀಕರಣದ ಹೆಗ್ಗಡೆ ಎಚಿಯಣ್ಣನ ಕಯ್ಯಲು ಕ್ರಯದಾನಂ ಕೊಂಡು . . . ಧಾರಾಪೂರ್ವಕಂ ಮಾಡಿ ಬಿಟ್ಟ ದತ್ತಿ (ಎಕ. XIV, ಶ್ರೀರಂಗ. ೨೨೪-೫; 1175); ತೆರಣೆಯ ಬಾಣ್ಡಯ ಹೆಗ್ಗಡೆ ಬಸವಣ್ಣ (ಎಕ. II, ೨೩೬-೧೯; ಸು. 1185); ನಾಡ ಹೆಗ್ಗಡೆ ಗುಮ್ಮಣ್ಣ (ಎಕ. XI, ಹಿರಿಯೂ. ೬-೨೦; 1338); ಪಟೇಲನಿಗೆ . . . ಬೊಂಬೈಜಿಲ್ಲಾದಲ್ಲಿ ನಾಡುಪಟೇಲ, ಹೆಗ್ಗಡೆ ಎಂತಲೂ ಹೆಸರುಂಟು (ಗ್ರಾಚಾಳ. ೦). ೩. ಆತನ ಹೆಗ್ಗಡೆ ತೊಮ್ಮನೆಪ್ಪೊ × × × [ಆಜಿ] ಯೊಳ್ಕಾದಿ ಸತ್ತೊಡೆ (ಕರ್ಇಶಾ. IX-i, ೫೬-೭; 908) : ಸಾಮಂತ ಬೊಪ್ಪ ಗೌಡನ ಹೆಗ್ಗಡೆ ಸೋಮಯ್ಯನು (ಇಆ. XII, ೦೦೦-೬ ; 1246). ೪. "ಸಿರಿವೆತ್ತ ಹೆಗ್ಗಡೆಗಳಧ್ಯಕ್ಷರಧಿಕೃತರಕ್ಕಂ" (ಮಂಗರಾ. ೬೯-೭); ಮತ್ತಂ ಪಟ್ಟಣದ ಹೆಗ್ಗಡೆ ಗೊಮ್ಮಲಯನಾಯಕನ ಬಿಂನಪದಿಂ ಕುಮಾರಂ . . . ಹತ್ತು ದ್ರ[ವ್ಯಮಂ] ಬಿಟ್ಟಂ (ಎಇ. XXVIII, ೩೫-೫೫; ಸು. 1082); ಹೆಗ್ಗಡೆಯ ರೆಂದೆನಿಸುವ ಮಿಸುಪ ಭಂಡಾರಿ ಲಕ್ಕಣ್ಣಂ (ಚಿತ್ರಾಂ. ೩೬-೯೫) : ಈಗ ನಮ್ಮಲ್ಲಿ ಉಳಿದಿರುವ ನಮ್ಮ ಯಜಮಾನಿಕೆಯ ಪದಗಳೆಂದರೆ ಗೌಡ ಹೆಗ್ಗಡೆ (ಪಮ್ಮಸು. ೨೯೮); ನನ್ನನ್ನು ನೀವು ಈ ದಿನದ ಆಟಕ್ಕೆ ಹೆಗ್ಗಡೆಯನ್ನಾಗಿ ಚುನಾಯಿಸದಿದ್ದರೆ ನಿಮ್ಮ ಪಾಲಿಗೆ ಇದೊ, ಸೊನ್ನೆ (ರಾಮಾಪಿ. ೨೬). ೬. ಗೌಡಸಾರಸ್ವತರು–ಕಾಮತ, ನಾಯಕ, ಕಿಣಿ, ಪ್ರಭು, ಹೆಗ್ಗಡೆ (ತುಳುನಾ. ೦೬೪) : ಗೌಡಸಾರಸ್ವತದಲ್ಲಿರುವ ಬೇರೆ ಬೇರೆ ಕುಲಗಳು (ಕೌಟುಂಬಿಕ ಹೆಸರುಗಳು) ಉದ್ಯೋಗಪರವಾಗಿ ಈ ಕೆಳಗಿನಂತೆ ಬಂದಿರಬಹುದೆಂದು ನನಗನಿಸುತ್ತದೆ . . . ಹೆಗ್ಗಡೆ–ಹಿರಿಯ ಮನುಷ್ಯ (ಮುಖ್ಯಸ್ಥ) (ತುಳುನಾ. ೨೩೯). **ಹೆಗ್ಗಿಡೆ :** ೭. ಕೇಡಚ್ಚನಾಯಕನ ಮದವಳಿಗೆ ರಾಚವೆನಾಯಕಿತಿಯ ಮಗ ಕುಂದಾಡಹೆಗ್ಗಿಡೆ ನಯಚಕ್ರದೇವರ ಬೆಸದಿಂ ಮಾಡಿಸಿದ ಬಸದಿ (ಎಕ. II (R), ೫೬೨-೨೯; ಸು. ೧೨ನೆಯ ಶತ). **ಹೆಗ್ಡೆ :** ೭. ಹೆಗ್ಡೆಯವರ ಕೈ ಥರಥರನೆ ನಡುಗತೊಡಗಿತು (ಕೃಷಾಪ. ೦೦೬). **ಹೆಗ್ಗಡೆ :** ೧. ಜನಕಂ ಹೆಗ್ಗ್ಡೆ ಚಾಚಿರಾಜಮಹಿಮಂ (ಕರ್ಇಶಾ. IX-i, ೨೫೭-೨೬; 1150) : ಶ್ರೀನಾರಸಿಂಹದೇವರು ಹೆಗ್ಗ್ಡೆಯುಂ ಹಡವಳಯ್ಯನುಂ ಅರೆವಿನತೊಳಲ ಕಾರುಣ್ಯಂಗೆಯ್ದು (ಎಕ. VI, ಕಡೂರು. ೨೩-೦೭; 1156); ಹೆಗ್ಗ್ಡೆ ಚವು[ಂ]ಡಮಯ್ಯನಾಯಕರ ಮಗ ಹೆಗ್ಗ್ಡೆ ಮಲ್ಲಯ್ಯನ ಕಯಿ (ಇಆ. XII, ೯೭-೪೦; 1187). ೨. ಬ್ರಹ್ಮದೇವರ ದಂಡನಾಯಕರುಂ ಅವರ ಹೆಗ್ಗ್ಡೆ ಮಟ್ಟರಸುರಂ . . . ಬಿಟ್ಟ ಧರ್ಮವೆಂತೆಂದಡೆ (ಎಇ. V, ೨೭-೨೭; 1178). ೪. ದಂಡಾಯದ ಹೆಗ್ಗ್ಡೆ ದಂಡನಾಯಕ ಮಹಾದೇವಯ್ಯಂಗಳುಂ (ಕರ್ಇಶಾ. XI-i, ೫೦-೨೪; 1138).

**ಪೆರ್ಗಡೆವಾಳಸೂಳೆ** = ಗ್ರಾಮದ ಮುಖ್ಯಾಧಿಕಾರಿಯ ಆಶ್ರಯದಲ್ಲಿದ್ದ ಸೂಳೆ (?) : ಪೆಗ್ಗ್ಡೆವಾಳಸೂಳೆಗೆ ಮತ್ತರ್ ಪದಿನಯ್ದು (ಎಇ. XV, ೮೯-೪೪; 1060).

[ಪೆರ್ (< ಪಿರಿದು$_1$) + ಕಡೆ$_3$. / ತುಳು. ಪೆರ್ಗಡೆ, ಹೆಗ್ಗಡೆ ; ತೆಲು. ಪೆಗ್ಗಡ, ಪೆಗಡ, ಪ್ರೆಗಡ, ಪ್ರೆಗ್ಗಡ, ಹೆಗ್ಗಡಿ, ಹೆಗ್ಗಡು]

**ಪೆರ್ಗಡೆ$_2$** 'ಪೆರ್ಗಳೆ' ನೋ.

**ಪೆರ್ಗಡೆಗದ್ಯಾಣ**, ಹೆಗ್ಗಡೆಗದ್ಯಾನ (ನಾ). ಒಂದು ಬಗೆಯ ನಾಣ್ಯ : ಪೊಜ್ಜ[ದ್ಯಾಣ]ಮಯ್ದು [ಪೆಗ್ಗ್ಡೆ]ಗದ್ಯಾಣಮ್ × × × (ಕರ್ಇಶಾ. XI-i, ೪೦-೦೨ ; 965). **ಹೆಗ್ಗಡೆಗದ್ಯಾನ :** ಪರಿಹಾರ ಹೆಗ್ಗಡೆಗದ್ಯಾನಗನ ಹೂರಲು (ಎಕ. IX, ಕೊಡಗು. ೩೩-೯; 1116 ?) : ಸುಂಕದ ಬೆಡುಂಗೊಳು ನಲ್ಲೆತ್ತು ಪರಿಹಾರ ಹೆಗ್ಗಡೆಗದ್ಯಾನ ಗನಹೂರಲು ಒಂದು ಹಳ್ಳಿಗೆ ಹಣವೈದು (ಎಕ. I (R), ೮೭-೯ ; 1175). [ಪೆರ್ಗಡೆ$_1$ + ಗದ್ಯಾಣ]

**ಪೆರ್ಗಡೆಗೋಲ್** (ನಾ). ದೊಡ್ಡದಾದ ಕಡೆಯುವ ಕೋಲು,– ಮಂತು : ಪೆರ್ಗಡೆಗೋಲಾದುದುಮಿಲ್ಲ ಮ್ಯಡನ ಕಾಮರ್ುಕವಾದುದಿಲ್ಲೆಂದು ಗುರುತ್ವಪಡೆದಿದರ್ುದಾ ಕಲಿವೆರ್ಟು (ಕೋಹಶ. ೬-೪೬).

[ಪೆರ್ (< ಪಿರಿದು$_1$) + ಕಡೆಗೋಲ್]

**ಪೆರ್ಗಡೆತನ**, ಪೆರ್ಗಡೆತನ, ಹೆಗ್ಗಡೆತನ (ನಾ). ೧. ಗ್ರಾಮದ ಮುಖ್ಯಾಧಿಕಾರಿಯ ಅಧಿಕಾರ,–ಸ್ಥಾನ : ನೀಮಾರ್ಗದೇಶ ಕಿಡೆನುಡಿದಪಿರಿಟ್ಟೆಡೆಪೆರ್ಗಡೆತನದೊಳಿದೇಪಡೆವಿರ್ (ಆದಿಪು. ೯-೦೦೭) : ಇನಿವಿರಿದು ಸತ್ಕಾರಮುಂ ಪೆರ್ಗಡೆತನಂ ಬಂದನಾಮನುಂ ದೇವರ ದೊರೆಯ ರಾಜಾಧಿರಾಜನೊಳ್ ಪಡೆಯಂ (ಶಾಂತಿಪು. ೨-೭೪ ವ); ಪೆಗ್ಗ್ಡೆತನಮಂ ಬಲ್ಲರ್ (ಎಕ. VII, ಶಿವಮೊ. ೧೦-೪೨ ; 1085?). **ಪೆರ್ಗೆಡೆತನ :** ೧. 'ಪೆರ್ಗಡೆತನಂಗೆಯ್' ಪರ್ಯಾ. **ಹೆಗ್ಗಡೆತನ :** ೨. ಮುಂದಾಳುತನ ; ನಾಯಕತ್ವ : ಬಾಚು ಎನ್ನದೆ, ಅವನನ್ನು ನಾವು ಹೆಗ್ಗಡೆತನಕ್ಕೆ ಚುನಾಯಿಸುತ್ತಿದ್ದೆವು (ರಾಪೂಪಿ. ೨೬). [ಪೆರ್ಗಡೆ$_1$ + –ತನ]

**ಪೆರ್ಗಡೆತನಂಗೆಯ್**, ಪೆರ್ಗಡೆತನಕೆಯ್, ಪೆರ್ಗೆಡೆತನಂಗೆಯ್ (ಕ್ರಿ). ೧. (ಅರಮನೆಯಲ್ಲಿ) ಒಳಾಡಳಿತವನ್ನು ನೋಡಿಕೊಳ್ಳು : × × × ಗಾವುಣ್ಡಗೆಯ ಕಲಿಗನಾತಜ್ಜಿ ಪೆಗ್ಗ್ಡೆತನಂಗೆಯೆ (ಎಕ. VII (8), ಶಿಕಾಂ ೩೭೮-೦೨ ; 902). **ಪೆರ್ಗಡೆತನಕೆಯ್ :** ೨. ನಾಯಕನಾಗಿರು ; ಮುಂದಾಳಾಗಿರು : ಅರಿಉರದ ಅಗ್ಗರವರ್ ಪೆಗ್ಗ್ಡೆತನಕೆಯೆ (ಎಕ. IV, ಗುಂಡ್ಲುಪೇ. ೮೮-೩ ; ಸು. 750). **ಪೆರ್ಗೆಡೆತನಂಗೆಯ್ :** ೧. ನಣ್ಡುವರ ಕಲಿಗಂ ಪೆಗ್ಗ್ಡೆತನಂಗೆಯ್ಯೆ (ಎಕ. VII, ಶಿಕಾಂ. ೨೦೯-೦೨ ; 918). ೨. ದುಷ್ಟನಿಗ್ರಹ ವಿಶಿಷ್ಟಪ್ರತಿಪಾಳನದಿಂ ಪೆಗ್ಗ್ಡೆತನಂಗೆಯ್ಯೆ (ಕರ್ಇಶಾ. XX, ೨೪-೮ ; 1034) ; ಶ್ರೀಮತ್ಪೆಗ್ಗ್ಡೆ ನಾರಣಯ್ಯ ಪ್ರಮುಖಕರಣಂ ಬನವಾಸಿಪನ್ನಿಚ್ಛಾಸಿರಕ್ಕಂ ಪೆಗ್ಗ್ಡೆತನಂಗೆಯ್ಯೆ (ಕರ್ಇಶಾ. XX, ೩೫-೬; 1055).

[ಪೆರ್ಗಡೆತನ + ಕೆಯ್$_1$]

**ಪೆರ್ಗಡೆತನಕೆಯ್** 'ಪೆರ್ಗಡೆತನಂಗೆಯ್' ನೋ.

**ಪೆರ್ಗಣ**, ಪೆಗ್ಗಣ, ಹೆಗ್ಗಣ$_1$ (ನಾ). ಇಲಿಯ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ : ಓವೊ ಪೆರ್ಗಣಮನಿಕ್ಕಿ ಮನೆ ಮಾಡುವಂದಮಕ್ಕುಂ ಕಡೆಯೊಳ್ (ಧರ್ಮಾಮೃ. ೩-೦೨೨) : ಒಡವತ್ತಿಯ ತೊಕ್ಕಿನೊಳಂದೊಡಗೂಡಾಡುಳಿಚ ಶುಂಠಿ ನೆಲಗುಳ್ಳಮಿಮಂ ಕಿಡುಗುಂ ನೀರಿಂ ಪಾನಂಗುಡೆ ಪೆರ್ಗಣದುಗ್ರಮಪ್ಪ ವಿಷಮಾ ಕ್ಷಣದೊಳ್ (ಖಪುಡ. ೦೨-೫೨). **ಪೆಗ್ಗಣ :** "ಖನಕಮುಂದುರುವೆನಲು ಪೆಗ್ಗಣಂ" (ಮಂಗರಾ. ೪೯-೦೨) ; ಬೆಳಗಿನೊಳಂ ಕಾಣದು ನಿಶಿಯೊಳ್ ಕಾಣ್ಬುದು ಪೆಗ್ಗಣಕ್ಕೆ (ಧರ್ಮಾಮೃ. ೦-೦೦೬) : ಪಿರಿಒರಲುಣಲಟಿಯದವಂ ಧರೆಯೊಳು ಬೈಚಿಟ್ಟು ಸತ್ತು ಪೆಗ್ಗಣರೂಪು ಧರಿಯಿಸಿ ತೋಡುತ್ತುಮಿರ್ಪಂ ಧರೆಯೊಳು (ಪಾರ್ಶ್ವಪು. ೫೨-೨). **ಹೆಗ್ಗಣ$_1$ :** "ಉಂದುರಃ, ಖನಕಃ–ಈ ೨ ಹೆಗ್ಗಣಂ" (ಹಲಾಯು. ೩೯-೮೨); ಹೆಗ್ಗಣವಸಿಕ್ಕೆ ನೆಲಗಟ್ಟು ಕಟ್ಟಿದಂತೆ ಆಯಿತ್ತನ್ನ ಕಾಯಗುಣ (ಕಸ್ಮಕ. ೯. ೦೬-೩೩) ; ಬಡಿಗಲ್ಲಿನಲಿ ಹೆಗ್ಗಣ ಮಿಡುಕುವಂದದಿ ಮದನಶರಮಯಾಪ್ರಬಂಧದಲಿ ಕೊಡರಿ (ಅಮ್ಯಕ. ೨-೬೨) ; ಹಾಳು ಹೆಗ್ಗಣಗಳ ಉಪದ್ರವಂತು ಹೇಳವುದಕ್ಕೇ ತೀರದು (ಪುಬ್ರಾಕುಂ. ೦೦೬) ; ಹೆತ್ತವಳಿಗೆ ಹೆಗ್ಗಣ ಮುದ್ದು, ಕೂಡಿದವಳಿಗೆ ಕೋಡಗ ಮುದ್ದು (ಗಾದೆ).

[ದೇ. ॥ ತುಳು. ಪೆರ್ಗುಡೆ ; ಕೋತ. ಪೆಗಣ್ ; ಕೊದ. ಎಗಣ್, ಎಗನ್]

**ಪೆರ್ಗಣೆ** (ನಾ). ದೊಡ್ಡ ಗಣೆ : ಲತೆಗಳ ಜನ್ಮಭೂಮಿ ಪುಳಿನಂಗಳ ಪೆರ್ಗಣೆ . . . ತಣ್ಣೆಲರ ತಾಯ್ಮನೆ ತಾಪಸಾಸುದರ್ುದಾ ವನಂ (ಕುಸುಪಾ. ೦೦-೦೬೯).

[ಪೆರ್ (< ಪಿರಿದು$_1$) + ಕಣೆ$_2$]

**ಪೆರ್ಗಣಗಿಲ್** (ನಾ). ಕಣಗಿಲೆಯಲ್ಲಿ ಒಂದು ಬಗೆ : "ದ್ವಿಪ ಉನ್ಮಧುಕ ಪೆರ್ಗಣಗಿಲ್" (ಮಂಗರಾ. ೪೨-೩೬).

[ಪೆರ್ (< ಪಿರಿದು$_1$) + ಕಣಗಿಲ್ (< ಕಣಗಿಲೆ$_1$)]

**ಪೆರ್ಗಣೆ** (ನಾ). ದೊಡ್ಡ ಬಾಣ, —ಸರಳಂ ;' ಪೆರ್ಗಣೆದೊಡು ' ಪರಾ.
[ಪೆರ್ (< ಪಿರಿದು$_1$) + ಕಣೆ$_1$]

**ಪೆರ್ಗಣೆದೊಡು** (ಕ್ರಿ). ದೊಡ್ಡ ಬಾಣವನ್ನು ಹೂಡು : ಉತ್ತುಂಗಗಜ ವನೊಂದೆಡೆಯಲ್ಲಿ ಬೇಡ ಕಾಣುತ್ತೆ ಪೆರ್ಗಣೆದೊ[ಶಾಶಾಂ. ದು]ಟ್ಟು ಕಿವಿವರಂ ತೆಗೆದು ನಡುನೆತ್ತಿಯೊಡೆಯೆಚ್ಚನು (ಶಾಶಿತ. ೧೭-೬೯).
[ಪೆರ್ಗಣೆ + ತೊಡು$_1$]

**ಪೆರ್ಗದ** ' ಪೆರ್ಗದಹು ' ನೋ.

**ಪೆರ್ಗದಹು, ಪೆರ್ಗದ, ಹೆಗ್ಗದ** (ನಾ). ಬಾಗಿಲಿಗೆ ಜೋಡಿಸಿರುವ ದೊಡ್ಡದಾದ ಮರದ ಹಲಗೆ, —ಬಾಗಿಲಿನ ಪಡಿ : ಮಗಿಲನೇಱೆ ಧುಮಿಕ್ಕಿ ಪೆರ್ಗದಹುಗಳನೊಡೆಬಿಡಿ (ಧಸಪು. ೫೭-೩೭). **ಪೆರ್ಗದ** : ಮದಹಸ್ತಿಗಳ ಕೈಯ ನೂಕಿ ಬಂಧಿಸುವ ಪೆರ್ಗದ ವಜ್ರಲಾಳವಿಂಡಿಗೆಯು ಅದಟನ ದ್ವಾರಾಷ್ಟಕವ ವರ್ಣಿಸುವೊಡೆ ಪದಕವಿಗಳಗಗೋಚರವು (ಕೋಹಕ. ೨೦-೦೩). **ಹೆಗ್ಗದ** : ಶ್ರೀದ್ವಾರದ ಹೆಗ್ಗದಗಳನ್ನೆಳೆದು ಮುಚ್ಚಿ ಒಳಗೆ ಸರಪಳಿ ತಾಳುಗಳನು ಸಡಬ್ಬವಾಗಿ ಹಾಯ್ಕಿ ಬೆಟ್ಟುವರು (ಶಶಿಸಂ. ೦೨-೨೦).
[ಪೆರ್ (< ಪಿರಿದು$_1$) + ಕದಹು$_3$ (< ಕದವು$_1$) ]

**ಪೆರ್ಗದೂರು** (ನಾ). ಒಂದು ಸ್ಥಳದ ಹೆಸರು : ಪೆರ್ಗ್ಗದೂರುಂ ಪೊಸವಾಡಗಮುನನಭ್ಯಂತರಸಿದ್ಧಿಯಾಗೆ ಪಡೆದರ್ (ಇಅ. VI. ೦೦೨-೦೦ ; 777 ?) : ಶ್ರೀಮತ್ ಅನನ್ತವೀರ್ಯ್ಯಯ್ಯಂಗಳ್ ಪೆರ್ಗ್ಗದೂರು ಪೊಸವಾದಗಮುಮನಭ್ಯನ್ತರಸಿದ್ಧಿಯಾಗೆ ಪಡೆದರ್ (ಇಅ. XIV. ೩೩-೦೦ ; 977).
[ ? + ಊರು$_3$ (< ಊರ್) ]

**ಪೆರ್ಗದೆ** (ನಾ) ದೊಡ್ಡ ಗದೆ ; ಭಾರಿಯಾದ ಗದೆ : ಮತ್ತಗಜಾನನ ಹರವಸದಿಳಿದೆಚ್ಚತ್ತು ಪೆರ್ಗದೆಯು ತೆಕ್ಕೊಂಡು . . . ಅಪ್ಪಳಿಸುತಿಕ್ಕಿದನು (ಕೋಹಕ. ೩೯-೬೦). [ಪೆರ್ (<ಪಿರಿದು$_1$) + ಗದೆ]

**ಪೆರ್ಗರಡಿ, ಹೆಗ್ಗರಡಿ** (ನಾ). ದೊಡ್ಡಗಾತ್ರದ ಭಲ್ಲೂಕ : ಪೆರ್ಗರಡಿಯ ಬೇಂಟೆ . . . ಸಿಂಹ ಶರಭಂಗಳ ಬೇಂಟೆಗಳಾದಿಯಾದ ಭೀಕರಮೃಗಸಂಘ ಸಂಹನನವುಮುಣ್ಮೆತು (ಗಿಂಳ. ೦-೬೦) ; ಪುತ್ತನಗುಟ್ಟುದ ಪೆರ್ಗರಡಿಗಳ್ ಮೊಗವಿಟ್ಟೆಸೆಗುಂ ವನಾಂತದೊಳ್ (ದಳು. ೨-೦೧೯) : ಕುಂತಳಮುಯಮಾಗಿರ್ದ ಪೆರ್ಗರಡಿಯು ಕೊಂತದಿ ಕಡಿದ ಪೆರ್ದಲೆಯು ಸಂತಸ ಬಿಡದೆ ಹೊತ್ತಿರ್ದರು (ಕೋಹಕ. ೦೯-೨೮). **ಹೆಗ್ಗರಡಿ** : ಹೆಗ್ಗರಡಿಯು ಹಿಂಡಿದೆ . . . ಪಂದಿಯ ಗೊಂದಣವಿದೆಯೆಂದು ಮುಗ್ಗಿ ಕವಿದರು ಶಬರರು (ಶಾಶಾಸಂ. ೨೭-೬೦).
[ಪೆರ್ (<ಪಿರಿದು$_1$) + ಕರಡಿ$_1$]

**ಪೆರ್ಗರಡೆ** (ನಾ). ದೊಡ್ಡದಾದ ಕರಡೆ ಎಂಬ ವಾದ್ಯ : ಉಣ್ಮಿದವು ಪೆರ್ಗರಡೆ ಬೊಂಬುಳಿ ಮರ್ದಳೆ (ಸಿಂಗಿರಾ. ೬-೪೨).
[ಪೆರ್ (<ಪಿರಿದು$_1$) + ಕರಡೆ$_1$]

**ಪೆರ್ಗರುಳ್, ಹೆಗ್ಗರುಳು** (ನಾ). ೧. ಗಾತ್ರವಾದ ಕರುಳು ; ಕಿಲಕಿಲವು ನಾಯ್ಗಳೊರ್ಮೆಯೆ ಮಲೆದಿಟ್ಟನೆ ಪೊಯ್ದು ಚಿಚ್ಚಿ ತಿನೆ ಪೆರ್ಗರುಳು (ರಪೂಶ್ಕು. ೬-೬೩)/; ಏಳ್ತರುತಿರ್ದಪುದಿತ್ತ ನಿನ್ನ ಪೆರ್ಬಲಮೊುಡಿದಸ್ಥಿಯಿಂ . . . ಪಱಿದ ಪೆರ್ಗರುಳಿಂ (ಶಾಹಕೀ. ೫-೦೦೯). **ಹೆಗ್ಗರುಳು** : ೧. "ಸ್ಥೂಲಾಂತ್ರವೆಂದರೆ ಹೆಗ್ಗರುಳು" (ಶಾಹಟೀ. ೨-೩-೯೮ ಕ). ೨. ಮನುಷ್ಯ ದೇಹದ ಎರಡು ಕರುಳುಗಳಲ್ಲಿ ಒಂದು ; ದೊಡ್ಡ ಕರುಳು : ಕರುಳುಗಳಲ್ಲಿ ಸೋಂಕು ಹತ್ತದೆ ಹೇಗೆಯೇ ಆಮಶ, ರಕ್ತ ಬೀಳುವುದಾದರೂ ಹೆಗ್ಗರುಳಿನ (ಕೋಲನ್) ಸೋಂಕಿನಿಂದ ಆದುದಕ್ಕೇ ಈ ಹೆಸರು ರೂಢಿಯಲ್ಲಿದೆ (ಶಶಿಕೋ. I. ೮೨೬). [ಪೆರ್ (< ಪಿರಿದು$_1$) + ಕರುಳ್]

**ಪೆರ್ಗಲ್, ಹೆಗ್ಗಲ್ಲು** (ನಾ). ದೊಡ್ಡ ಕಲ್ಲು ; ಹೆಬ್ಬಂಡೆ : ಪೆರ್ಗಲ್ಲಿಂದ ದಪುತ್ತುಂ . . . ನೆಲದೊಳೊರಸಿ ಮೇಲ್ಮುಳ್ತುತ್ತುಂ (ರಪೂಶ್ಕು. ೬-೦೯೦) ; ಪೆರ್ಗಲ್ಲನೆತ್ತಿದ ಬಲ್ಪಿಂಗೆ ಕಡಂಗಿ ಪೊಂಗಿ ಗೋವಿಂದನೊಳ್ ಬಂದು ತಾಗಿದಂ (ಶರಪು. ೬. ೫೭). **ಹೆಗ್ಗಲ್ಲು** : ಕೆಲರು ಹೆಗ್ಗಲ್ಲುಗಳ ಕಟಿದರು (ಕೌಶಿಕಾ. ೨೦-೦೫).
[ಪೆರ್ (< ಪಿರಿದು$_1$) + ಕಲ್$_3$]

**ಪೆರ್ಗಲಿಸು** (ಕ್ರಿ). "ಗರ್ವಿಸು, ಹೆಮ್ಮೆಪಡು" (ಕ್ರಿಶು. ೬೦೬) : ಪೆರ್ಗಲಿಸಿ ಸಿರಿಯುಳ್ಳ ಪೆರ್ಮೆಯ ಬಲುಮನಿದಂ ಮೆಱೆವೆಯೆನ್ನೊಳೆಂದಂ ಮುನಿಪಂ (ಕ್ರಿಶು.೯-೬೩). [p ಇದು 'ಪೆಕ್ಕಳಿಸು' ಎಂಬುದರ ಅಪಲಿಖಿತವಿರಬಹುದು]

**ಪೆರ್ಗಲಿ** (ನಾ). ಮಹಾಪರಾಕ್ರಮಿ ; ಹಿರಿಯ ಯೋಧ : ಕಿಱುಮಪೂರ ಪೆರ್ಗ್ಗಲಿಯರ ಬಿಜಯಿತಗಾವುಣ್ಣನ ಮಗಂ ಅಮ್ಮಡಿಗಾವುಣ್ಣಂ . . . ಭಾಗಂಗೊಣ್ಡು (ಕೃಅಂ. ೦೯೩೦. ೯೩-೫; ೯೯೩). [ಪೆರ್ (<ಪಿರಿದು$_1$) + ಕಲಿ$_2$]

**ಪೆರ್ಗವತೆ** (ನಾ). (ಬೆರಳುಗಳನ್ನು ವಿರಳವಾಗಿಟ್ಟ) ದೊಡ್ಡ ಅಂಗೈ : ಪೆರ್ಗವತೆ ಸೇರೆ ಪಿಡಿ ಶರಭಂಗಳಿನಿಪಱಿಳಭನಯಿಸಿ ತೋಱಿಸಲ್ ವ್ಯುದುಪಾಣಿಪನಜಪಮಂ ಸೃಷ್ಟಿಸಿದನೆಂಬ ಚೆಲ್ವಿನ ಕೋಮಲೆಯರಲ್ಲಿ ಕಣ್ಗೆಸೆದರು (ಕೈಬಿಳ್ಳಾ. ೬-೨೦). [ಪೆರ್ (< ಪಿರಿದು$_1$) + ಕವತ್ತೆ]

**ಪೆರ್ಗಳ$_1$** (ನಾ). ಧಾನ್ಯಗಳನ್ನು ಒಕ್ಕುವುದಕ್ಕಾಗಿ ಸಿದ್ಧಪಡಿಸಿದ ವಿಶಾಲವಾದ ಕಣ : ನುರ್ಗಿದುದೆನೆ . . . ಪೆರ್ಗಳವೆನೆ ಕುರ್ಗಿದುದೆನೆ ಮೂರ್ಗದೊಳ್ ಸರೆಫುಪದಂಗಳ್ (ಕಹುದ. ೩೪).
[ಪೆರ್ (< ಪಿರಿದು$_1$) + ಕಳ$_3$]

**ಪೆರ್ಗಳ$_2$** (ನಾ). ದಪ್ಪವಾದ ಕುತ್ತಿಗೆ ; ಕೊಬ್ಬಿದ ಕತ್ತು : ಹೊಳೆವ ಕುರ್ಗಣೆಯಿಂದೆ ಹೊಡೆದೆಕ್ಕಲನ ಪೆರ್ಗಳದೊಳು ಸುರಿವ ರೊಹಿತದ ನೆಳಲೊಳು ಕಣ್ಗೆ ಕಾಣಿಸ ಬಂತು ಗಗನಸ್ಥಳದಲಿ ಹೊಳೆವಂತೆ ವಿಪಿನ (ಕೋಹಕ. ೦೯-೩೫). [ ಪೆರ್ (< ಪಿರಿದು$_1$) + ಗಳ$_2$ (= ಗಲ) ]

**ಪೆರ್ಗಳೆ, ಪೆರ್ಗಡೆ$_2$** (ನಾ). ೧. ಬಲಿತಿರುವ ದಂಟು; ದಪ್ಪವಾದ ಕಾಂಡ : ಕುವಳಯಕುಟ್ಮಳಾವಳಿಯ ಪೆರ್ಗಳೆಯಂ ನೆಗದೇಱೆ ಲಾಗಿಸುತ್ತೆ ...ಅಡಿದುದು ಕೂಪೆ ರ್ಷುಷು ಪೊಸಡೊಂಬನೆಂಬಿನಂ (ರಾಜಶೇ. ೨-೬೨). **ಪೆರ್ಗಡೆ$_2$** : ೨. ಉದ್ದವಾದ ಕೋಲು, —ದಂಡ : ಗಡಿಮ ಭಟರು ಗಗನವ ತಿವಿವಂತೆ ಪೆರ್ಗಡೆಯುತ್ತಿ ಪೆರ್ಗಡೆಗೂಡಿ...ಕುಣಿವುತೆಯ್ದುವರು (ಧಕಜ. ೨೩-೨೪). [ ಪೆರ್ (<ಪಿರಿದು$_1$) + ಗಳೆ (<ಗಟ್) ]

**ಪೆರ್ಗಳ್ತಲೆ, ಹೆಗ್ಗತ್ತಲೆ** (ನಾ). ದಟ್ಟವಾದ ಕತ್ತಲೆ ; ಗಾಢಾಂಧಕಾರ : ಮುಸುಂಕುಗಳ್ತಲೆ ಪೊದಳ್ದ ಪೆರ್ಗಳ್ತಲೆ . . . ರಸೆಗಳ್ತಲೆಯೆನಿಸಿ ಕೂಡೆ ಕೀವಿತು ತಿವಿದರಂ (ಗಿಂಳ. ೯-೬೩) ; ನೆಲೆಗೊಂಡ ಪೆರ್ಗಳ್ತಲೆಯೊಳ್... ಪಲವುಂ ದೀವಿಗೆಗಳ್ ಕಳ್ತಲೆ ಪೂತಂತೊಪ್ಪುತಿರ್ದುವಾ ಮನೆಮನೆಯೊಳ್ (ಗಿಂಳ. ೯ ೬೯). **ಹೆಗ್ಗತ್ತಲೆ** : "ಸಂತಮಸಂ, ವಿಷ್ವಕ್‌ಧ್ವಾಂತೇ—ಎಲ್ಲ ಕಡೆಗಳಲ್ಲಿಯೂ ವ್ಯಾಪಿಸಿ ಇರುವ ಕತ್ತಲೆ ಅಂದರೆ ಹೆಗ್ಗತ್ತಲೆ " (ಸಿದ್ಧಾಂತ. ೬೦). [ ಪೆರ್ (< ಪಿರಿದು$_1$) + ಕಳ್ತಲೆ (< ಕಟ್ತಲೆ) ]

**ಪೆರ್ಗಱಿ, ಹೆಗ್ಗಱಿ** (ನಾ). ೧. (ಹಕ್ಕಿಯ) ದೊಡ್ಡದಾದ ರೆಕ್ಕೆ,—ಉದ್ದವಾದ ಪುಕ್ಕ : ಕಾಡೆಮ್ಮೆಯ ಕೋಡು ವರಾಹದಂತಿಯ ದಾಡೆ... ಭೇರುಂಡನ ರೂಢಪೆರ್ಗಱಿಯಿತ್ತರೊಲಿದು (ಕೋಹಕ. ೦೯-೬೪). **ಹೆಗ್ಗಱಿ** : ೨. (ಉದ್ದವಾದ ಈಜುರೆಕ್ಕೆಗಳಿರುವ) ಒಂದು ಬಗೆಯ ಮೀನು : ಉಂಕಿಲು ಹೆಗ್ಗಱಿ . . . ಹುಡೆಗಾನೆಮೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದುರು (ಹಕಾ. ೫-೯೩). [ಪೆರ್ (< ಪಿರಿದು$_1$) + ಗಱಿ]

**ಪೆರ್ಗಟನಿ** (ನಾ). ಒಂದು ಸ್ಥಳದ ಹೆಸರು : ಪ್ರಥಮಂ ದುಗ್ಗನೈಱ ಮಂಡ್ಯೆ ಏಡೆಗೋಡೆವ ಸಂಗಪೊಯರಾ ಕೆಱೆಯಿನ್ತೆಂಕ್ಕೆ ನಟ್ಟ ಕಲ್ಲೆ ಪೆರ್ಗ್ಗಟನಿಯಿನ್ ಬಡಗ್ಗೆ ನಟ್ಟ ಕಲ್ಲೆ (ಎಕ. X (ಶ). ಕಳ್ಳಬ. ೬೬-೦೭ ; ಸು. 850). [ಪೆರ್ (<ಪಿರಿದು$_1$) + ಕಟನಿ]

**ಪೆರ್ಗಟ್ಟಿಪ್ಪು** (ನಾ). ಒಂದು ಸ್ಥಳದ ಹೆಸರು ; p ಈಗಿನ ಶ್ರವಣ ಬೆಳುಗೊಳ : ಪೆರ್ಗ್ಗಟ್ಟಿಪ್ಪಿನಾ ಪೊಲದಿನ್ನಡದು ಕೊಟ್ಟದು (ಎಕ II. ೩೫-೯ ; ಸು. 800). [ಪೆರ್ (<ಪಿರಿದು$_1$) + ಕಟ್ಟಿಪ್ಪು ]

**ಪೆರ್ಗಾಗಾವುಮಾಸಿ** (ನಾ). ಒಂದು ಊರಿನ ಹೆಸರು : ಪೆಗ್ಗಾಗಾವುಮಾಸಿ ಗ್ರಾಮ ಪಶ್ಚಿಮಭಾಗ ಕೃತಾಕೃತಕ್ಷೇತ್ರಂ (ಎಕ. XI, ದಾವಣ. ೬೬-೨೪ ; 694). [ ? ]

**ಪೆರ್ಗಾಡು**, ಹೆಗ್ಗಾಡು (ನಾ). ದಟ್ಟವಾದ ಅಡವಿ ; ಗೊಂಡಾರಣ್ಯ : ಬಾಗೆ ತೇಗು ಪನೆ ಕಮ್ಮರಮೆಸಳೆಯೆನಿಪ್ಪವಿರ್ಪುವಾ ಪೆರ್ಗಾಡೊಳ್ (ರಾಜಶೇ. ೩-೩೪) ; ಇದು ದನಶಿಖಿಯಿದು ಕಿಂಶುಕಂ...ಇದು ಮದಗಜ ವಿಂತಿದು ಗಂಡಶೈಲವೆಂದೆಂಬುದು ತಿಳಿವೊಡಶಕ್ಯಮೆನಿಪುದಾ ಪೆರ್ಗಾಡೊಳ್ (ಶಬರಂ. ೩-೭೦). **ಹೆಗ್ಗಾಡು** : "ಮಹಾರಣ್ಯಂ, ಅರಣ್ಯಾನೀ—೨ ದೊಡ್ಡ ಅಡವಿ, ಹೆಗ್ಗಾಡು, ಗೊಂಡಾರಣ್ಯ" (ಸಿದ್ಧಾಂತಿ. ೦೧೯) ; ಈ ಹೆಗ್ಗಾಡಿನಲ್ಲಿ ಯಾವ ಮದ್ದನ್ನರಿಯಬಹುದು? (ಶೀರಾಂ. ೯೯) ; ಸುತ್ತಲೂ ಹೆಗ್ಗಾಡೂ ಅಡಕೆತೋಟಗಳೂ ಬೆಳೆದು ಸ್ಥಳ ಏಕಾಂತವಾಗಿತ್ತು (ಕಾನೂರು. ೫೯೬). [ ಪೆರ್ (<ಪಿರಿದು₁) + ಕಾಡು₂ ]

**ಪೆರ್ಗಾಲ್** (ನಾ). (ನೀರು ಹಾಯಿಸಲು ಮಾಡಿರುವ) ದೊಡ್ಡದಾದ ನಾಲೆ,—ಕಾಲುವೆ : ಲೀಲೆಗಾರ್ತಿಯರಚ್ಯುತನಾಜ್ಞೆಯಿಂದೆ ಪೆರ್ಗಾಲ ಹೊಂದೂಂಬನು ನೆಗಹೆ . . . ಸುರಿದುದು ಸಲಿಲ (ಕೋಟಶ. ೦೪-೩೩). [ ಪೆರ್ (<ಪಿರಿದು₁) + ಕಾಲ್₂ ]

**ಪೆರ್ಗಾವಲಿ**, ಹೆಗ್ಗಾವಲಿ (ನಾ). ದೊಡ್ಡದಾದ ಹುರಿಯುವ ಹೆಂಚು; ಅಗಲವಾದ ತವೆ : ಕಾಯ್ದ ಕರ್ಬೊನ್ನ ಪೆರ್ಗಾವಲಿಪೂಲಾಯ್ತಾ ನೆಲಂ (ಜಗಚ. ೦೬.೬೦). **ಹೆಗ್ಗಾವಲಿ** : ಕಾದ ಹೆಗ್ಗಾವಲಿಯ ಮೇಲಿರಿದರಿದು ದೇಹವನುರುಹಲುಹಿಸುವ (ಬಸವು. ೪೩-೨೪). [ ಪೆರ್ (<ಪಿರಿದು₁) + ಕಾವಲಿ₂ ]

**ಪೆರ್ಗಾವಿಲ** (ನಾ). ಸ್ವಲ್ಪವೂ ತಿಳಿವಳಿಕೆಯಿಲ್ಲದವನು ; ಮಹಾಮೂರ್ಖ : ಒಂದೆ ಗಾಲಿಯೊಳ್ ರಥಮಂ ನಡೆಯಿಸುವೆನೆಂಬ...ನಾರಿಲ್ಲದೆ ಪೂಗಟ್ಟುವೆನೆಂಬ ಪೆರ್ಗಾವಿಲನಂ ಪೋಲ್ವುಂ (ಧರ್ಮಾಮೃ. ೩-೦೦೬). [ ಪೆರ್ (<ಪಿರಿದು₁) + ಗಾವಿಲ ]

**ಪೆರ್ಗಾವುಂಡ** (ನಾ). ಹಿರಿಯ ಗೌಡ ; ಮುಖ್ಯ ಗ್ರಾಮಣಿ : ಮುಳ್ಗುನ್ದ(ನ್ದ) ಪನ್ನೆರಡುಮಂ ಪಾಲಿಯುಮ್ಮನಾಳೆ ಸಿರಿವುರಕೆ ಬಗೆಗ ಪೆರ್ಗ್ಗಾವುಣ್ಡುಮಾಗುತ್ತಿರೆ (ಎಇ. XXVI, ೬೩-೦೨ ; 906). [ಪೆರ್ (<ಪಿರಿದು₁) + ಗಾವುಂಡ (<ಗಾಮುಂಡ)]

**ಪೆರ್ಗಾಳಿ** (ನಾ). ರಭಸವಾಗಿ ಬೀಸುವ ಗಾಳಿ ; ಬಿರುಗಾಳಿ : ಪೆರ್ಗಾಳಿಯ ಕೋಳೊಳ್ (ಪೊಯ್ಲೊಳ್) ಕೆಡದಿರ್ದ ವಟವೃಕ್ಷಮಂ ಕಂಡು (ಕಾಪುಂಶು. ೨೬೩);ಸದ್ವಸ್ತುಸಂದೋಹಮಂ ನಿರುತಂ ತೀವಿ ಬರುತ್ತೆ ಭೈತ್ರಮಡೆಯೊಳ್ ಪೆರ್ಗಾಳಿಯಿಂ ಪುಟ್ಟಿದಾ ತೆರೆಯಿಂ ದುರ್ಧರಮಪ್ಪದೊಂದು ಸುಟಾಳಿಯೊಳ್ಪೊಟ್ಟು (ರಪರ್ಾಶ. ೦೦-೮೨); ಕಾಳಿಂಗಮರ್ದನ ಖಳರಾಯನ ಮೇಲೆ ವಾಳಿಯು ಬಂದ ನಿಷ್ಠುರದಿ ಕೇಳಿ ಮಾಡುವುದೇನು ಗರುಡನ ಗಜುಯು ಪೆರ್ಗಾಳಿಯಂ ದೀಶ್ವರ ನುಡಿದ (ಕೋಟಶ. ೩೬-೬೦). [ಪೆರ್ (< ಪಿರಿದು₁) + ಗಾಳಿ₁]

**ಪೆರ್ಗಿಚ್ಚು** (ನಾ). ದೊಡ್ಡ ಉರಿ ; ದಳ್ಳುರಿ : ಮದನನ ಪೆರ್ಗಿಚ್ಚಂ ಮುಗ್ಗಿದ ಪೊಣರ್ವಕ್ಕಿಗಳ ಹೃದಯಸಂಕುಳದಿಂದುಣ್ಮಿದ ಕರ್ಬೊಗೆ ಯೆಂಬನೆಗಂ ಪುದಿದೆತ್ತಂ ಮರ್ಬಿನುರ್ಬು ಪರ್ಬಿತ್ತು (ಶಾಂತೀಶ್ವ. ೦೪೦); ಮುಕುರಂ ಮಾಂಸಮು ಮದ್ಯ ತುಂಬಿದ ಕೊಡ ಪೆರ್ಗಿಚ್ಚ[ಶಾಕಾಂ. ಚ್ಚ] ನಾರ್ ಕಂಡೊಡಂ ಶಕುನಂ ಶೋಭನಕಾಸ್ಪದಂ (ಸೋಕುಮಾ. ೬೭) ; ಸಲೆ ಮುಕ್ಕುಳಿಸಿ ಮೊಗೆವ ಪೆರ್ಗಿಚ್ಚುಗಳ ವೆಂಕೆ ಮೇಲಿಕ್ಕಿದುದು (ಕೃಪಾಚಾ. ೦೬-೦೨); [ಪೆರ್ (<ಪಿರಿದು₁) + ಕಿಚ್ಚು]

**ಪೆರ್ಗಿಡಿ**, ಹೆಗ್ಗಿಡಿ (ನಾ). ಬೆಂಕಿಯ ದೊಡ್ಡ ಕಣ : ವಡಬಾಗ್ನಿಯಿಂ ಸಿಡಿದ ಪೆರ್ಗಿಡಿಯಿದೋ . . . ಎನಲಖಿಳಗಿರಿಮಸ್ತಕದೋಳಿನಬಿಂಬಮೆಸೆದಿರ್ದುದು (ಶಬಶು. ೪-೨). **ಹೆಗ್ಗಿಡಿ** : ಕುಪಿತ ಯಮನುಬ್ಬರದ ಕೋಪವೊ ಕಾಲರುದ್ರನ ಹಣೆಯ ಹೆಗ್ಗಿಡಿಯೋ (ಕುಮಾವ್ಯಾ. ೨-೬೦). [ಪೆರ್ (<ಪಿರಿದು₁) + ಕಿಡಿ]

**ಪೆರ್ಗಿಡುಗ**, ಹೆಗ್ಗಿಡುಗ (ನಾ). ದೊಡ್ಡ ಜಾತಿಯ ಡೇಗೆ : ಕಾರಂಡಂ ಕೆಂಗಣ್ಣಂ . . . ಹರಡೆ ಸುರಗಿಗಿಡಿ ಪೆರ್ಗಿಡುಗಂ (ಅಭಿನ. ೦೦೪೩). **ಹೆಗ್ಗಿಡುಗ** : ದೊಡ್ಡಡೇಗೆ, ಹೆಗ್ಗಿಡುಗ (Gerfalcon. ಇಂಕೆ). [ಪೆರ್ (<ಪಿರಿದು₁) + ಗಿಡುಗ (< ಗಿಡಿಗ)]

**ಪೆರ್ಗುಂಜಿ**, ಹೆಗುಂಜಿ (ನಾ). ಒಂದು ಸ್ಥಳದ ಹೆಸರು ; ⓟ ಸೊರಬ ತಾಲ್ಲೂಕಿನ ಈಗಿನ ಮಾವಳಿ : ಆ ಕಾಳರಾಸರುಮುಖ್ಯ ಪೆರ್ಗುಂಜ್ಜಿಯ ಕೋಟಿಯಾನ್ ರೋಹಿಸಿ (ಎಕ. VIII, ಸೊರಬ. ೦೦-೪ ; ಶು. 800). **ಹೆಗುಂಜಿ** : ಬಾಳೆ ಚತುಸೀಮೆಯ ವಿವರ . . . ಹೆಗುಂಜ್ಜಿಯ ಗಡಿಯಿಂದಲು ಬಡಗಲು ಪಡುವಲು ಕಿಂಣಿಕಗಾವೆಂ[ಡನ] ಬಾಳಿಂದಲು ಮೂಡಲು (ಕ್ಷೇತ್ರ. IX-ii, ೪೦೬-೪ ; 1377) ; ಹಿರಿಯ ದೇವ[ಕ]ನಾಯಿಕತಿಯ ಮೊಮಗ ಹೆಗುಂಜಿಯಲಿ ಹುಟಕೊಂಡ ಹೊಲೆಯ ಬಳಿಯ (ಕಇ. I. ೬೬-೦೦ ; 1494). [?]

**ಪೆರ್ಗುಂಡು**, ಹೆಗ್ಗುಂಡು (ನಾ). = ಪೆರ್ಗಲ್ : ಎರಡು ಪೆರ್ಗುಂಡುಗಳು ತಮ್ಮೊಳಗಿರದೆ ತಾಗುವವೆಡೆವಿಡದೆ ವಂತರರ ದೆಸೆಯಿಂದೆ (ಪಾರ್ಶ್ವಚ. ೨೬-೨೬) ; ಒಂದು ಪೆರ್ಗುಂಡನು ಕಟ್ಟಿ ಕೊರಳಲಿ . . . ನಿಂದಿರಲ್ (ಶಬಶು. ೬-೬೬). **ಹೆಗ್ಗುಂಡು** : ಒದಚಿದರೆ ಪರ್ವತದ ಶಿಖರದ ಉರುಂಡುವ ಹೆಗ್ಗುಂಡುಗಳು (ಕುಮಾವ್ಯಾ. ೦೦-೮). [ಪೆರ್ (<ಪಿರಿದು₁) + ಗುಂಡು]

**ಪೆರ್ಗುಡಿ** (ನಾ). ಅತಿಯಾಗಿ ಮದ್ಯಪಾನ ಮಾಡುವವನು : ಜೂಜಾಟಿಕೆ ಸೂಳೆಬಂಟಿಕೆ ರುಣದ ಸಂವಾದ ಪೆರ್ಗುಡಿಗಳ ಚರ್ಚೆ ರಾಜವೀಧಿಯೊಳೀಚಾಡುವ ಸಂದಣಿ ಮಾಜದು ನಿತ್ಯಕೃತ್ಯದಲಿ (ಕೋಟಶ. ೨೮-೨೬). [ⓟ ಇದು 'ಪೆರ್ಗುಡಿಹಿ' ಎಂಬುದರ ಸಂಕ್ಷಿಪ್ತರೂಪವಿರಬಹುದು]

**ಪೆರ್ಗುಡುಗು** (ನಾ). ಭಾರಿಯಾದ ಮೇಘಧ್ವನಿ : ಕಾಮುರ್ಗಗಿಲ್ ಗಡಣಮೆನಿಪ್ಪ ದಂತಿತತಿಯುಗ್ರದ ಡಿಂಡಿಮನಾದದಂತೆ ಪೆರ್ಗುಡುಗು ನಿದಾಘನಂ ತಗುಳಲ್ಕೆದಿದ ನೀರದಕಾಲರಾಜನಾ (ರಾಜಶೇ. ೪-೦೦೨). [ಪೆರ್ (<ಪಿರಿದು₁) + ಗುಡುಗು₂]

**ಪೆರ್ಗುಡುಗೋಲು** (ನಾ). ದೊಡ್ಡ ಕುಡುಗೋಲು : ಮಿಂಡಿಮೆಂಗಳ ನಗಲಿದ ಚದುರರು ತಮ್ಮ ದಂಡಿಪ ಸ್ಮರಚಾಪವೆಂದು ಭಂಡಿ ಪೆರ್ಗುಡುಗೋಲುಗಳಿಂದಲಡೆಗಿಕ್ಕಿ ಖಂಡಿಸುವರು ಕಬ್ಬುಗಳನು (ಕೋಟಶ. ೨-೪೪). [ಪೆರ್ (< ಪಿರಿದು₁) + ಕುಡುಗೋಲು (< ಕುಡುಗೋಲ್)]

**ಪೆರ್ಗುತ್ತ** (ನಾ). ೧. ದೊಡ್ಡ ಕಾಯಿಲೆ ; ಮಹಾರೋಗ : ಈ ಮಹಾಪುರುಷಂ ನಿಷ್ಠುರಮಪ್ಪೀ ಪೆರ್ಗುತ್ತದ ನಿರೋಧಮಂ ತಾಳ್ದಿ ಮಟಾಗದೆಂತಿರ್ದಪನೋ (ಧರ್ಮಾಮೃ. ೪-೬೬). ೨. ದೊಡ್ಡ ಅಪಾಯ ; ದೊಡ್ಡ ಕೇಡು,—ವಿಪತ್ತು : ಸಣ್ಣಕುತ್ತಂ ಚಿಕ್ಕುದಾದ ಯತ್ನದಿಂ ಮಾಣಲಪ್ಪುದು ಪೆರ್ಗುತ್ತಂ ಪಿರಿದುಂ ಯತ್ನಂಗೆಯ್ಯೆ ಪೋಕುಮೊ ಪೋಗದೊ (ಸೌಶಂರ. ೦೦-೦೦); ಅಡಸಿದ ಪೊಸವಗೆ ಪೆರ್ಗುತ್ತಗಳನ್ ನುಡಿಯುಲ್ಲಾಳಿಂ (ಅದ್ಭ್ರ. ೬-೦೩೬). [ ಪೆರ್ ( < ಪಿರಿದು₁) + ಕುತ್ತ ]

**ಪೆರ್ಗುರುಂಟಿಗೆ**, ಹೆಗ್ಗುರಂಟಿಕೆ, ಹೆಗ್ಗುರಟಿಗೆ, ಹೆಗ್ಗುರುಟಗೆ, ಹೆಗ್ಗುರಟಿಕೆ, ಹೆಗ್ಗುರುಟಿಗೆ (ನಾ). ಒಂದು ಬಗೆಯ ಔಷಧೀಸಸ್ಯ ; ಅಜಶೃಂಗಿ: ಕಕ್ಕೆ ಮಾದಲ(ಲೆ) ಪೆರ್ಗುರುಂಟಿಗೆ . . . ನುಗ್ಗಿಯಿವೆಲ್ಲಮಂ ಟೀಯಿಂ ಕೊಳುತ್ತಿರೆ ಪೂಸಲಿಂ ನಿಕ್ಕುವಂ ಕಿಡುಗಂ ಫಣೀಂದ್ರಮುಖ ಪ್ರಚಂಡವಿಷಂಗಳುಂ (ಕಮದ. ೩-೬೪). **ಹೆಗ್ಗುರಂಟಿಕೆ** : ಪುಂಜನ ನಾರು, ಗೊಡ್ಡುಮಂಜಿ, ಹೆಗ್ಗುರಂಟಿಕೆ (ವ್ಯಾಕಿನಿ. ೬೬-೦೬೬೦). **ಹೆಗ್ಗುರಟಿಗೆ** : ಗಂಟುಭಾರಂಗಿ, ದ್ರಾಕ್ಷಿ, ನೆಲಬೇವು, ಹೆಗ್ಗುರಟಿಗೆ . . . ತೈಲಪಾಕ

ದಲ್ಲಿಕುಡಿಕೊಂಡು ಸೇವಿಸಲು ಶೀತಜ್ವರಂ ಶಮನಮಕ್ಕುಂ (ಸಕವ್ಯ. ೬೨). **ಹೆಗ್ಗುರುಟಗೆ**: "ತ್ರಿಪರ್ಣೀ—ಸರಿವಾಲ, ಹೊನ್ನೆ, ಹೆಗ್ಗುರುಟಗೆ, ಮುತ್ತಗ, ಮುಪರಲೆಹೊನ್ನೆ" (ಓಷಂ. ೬೯). **ಹೆಗ್ಗುರುಟಿಕೆ** : "ಮೂರ್ವಾ, ದೇವೀ... ಗೋಕರ್ಣೀ, ಪೀಲುಪರ್ಣೀ—೧೦ ಹೆಗ್ಗುರುಟಿಕೆಯ ಹೆಸರುಗಳು" (ಸಿದ್ಧಾಂತ. ೧೩೦). **ಹೆಗ್ಗುರುಟಿಗೆ** : "ಮೂರ್ವೆ . . . ಗೋಕರ್ಣಿ, ಪೀಲುಪರ್ಣಿ- ಹೆಗ್ಗುರುಟಗೆ" (ನಾತರಾ. ೩); ಹೆಗ್ಗುರುಟಿಗೆ, ಇದನ್ನು ಕೆಲವರು ಸವಣೀ ಗಡ್ಡೆ ಎಂಬರು (ವೈದ್ಯ. ೩೬); ಅಂಬಟಿಬೇರು,ಕಟುಕರೋಹಿಣಿ,ಹೆಗ್ಗುರುಟಿಗೆ, ಹುರುಗಲುಬೇರು, ಕಹಿಪಡವಲ ಸಹ ಕಷಾಯವಂ ಮಾಡಿ ತೆಗೆದುಕೊಳ್ಳಲು ಶ್ಲೇಷ್ಮಜ್ವರ ನಾಶವಾಗುವುದು (ಸಕವ್ಯ. ೬೯).

[ಪೆರ್ (< ಪಿರಿದು₁) + ಕುರುಂಟಿಗೆ₀ (< ಕುರಂಟಗೆ) ]

**ಪೆರ್ಗುಳಿ** 'ಪೆರ್ಗುಟ್' ನೋ.

**ಪೆರ್ಗುಱು³**, ಹೆಗ್ಗುಱು (ನಾ). ೧. ಕೊಬ್ಬಿದ ಕುರಿ : ಆತನ ಬಲಿಗಟ್ಟಿ ಮನ್ಮಥಬಳಾರಿಗೆ ಪೆರ್ಗುಱು ಮಾಡಿ ಪೊಯ್ದುಪೆಂ (ರಾಜಶೇ. ೧೧-೧೭೩). **ಹೆಗ್ಗುಱು³** : ೨. (ಆಲಂ) ಅತ್ಯಂತ ತಿಳಿಗೇಡಿ : ಮಹಾಮೂರ್ಖ : ಹೆಚ್ಚಾಗಿಕ್ಕಿ ಹೆಗ್ಗುಱುಯಾಗಬೇಡಾ (ಬಸವ. ೩೦೦).

[ಪೆರ್ (<ಪಿರಿದು₁) + ಕುಱು³]

**ಪೆರ್ಗುಱುಪು**, ಪೆರ್ಗುಱುವು, ಹೆಗ್ಗುಱುಹು (ನಾ). ೧. ಮುಖ್ಯವಾದ ಲಕ್ಷಣ ; ಪ್ರಧಾನವಾದ ಗುರುತು,–ಚಿಹ್ನೆ : ಜನಪತಿಯಪ್ಪ ಪೆರ್ಗುಱುಪಿನಿಂದಿವು ಬಿಡಿವು ನಾಡಮುಂಗಿಲೆಂದನುಮಿಪರೆಲ್ಲರುಂತಱುಯಬಾರದು (ಅನಂತ. ೧೧-೧೦). **ಪೆರ್ಗುಱುಪು** : ೨. ಅಧಿಕವಾದ ಕೀರ್ತಿ,–ಪ್ರಸಿದ್ಧಿ : ಪೆರ್ಗುಱುಪಿ[ಪಾಠಾಂ. ಹೆಗ್ಗುಱುಹಿ]ನ ಬೇಡರಂ ತಱದು ಸೀಳ್ದಿಱದಿಕ್ಕಿತು ಸೊಕ್ಕಿದೆಕ್ಕಲುಂ (ತ್ರಿಷಷ್ಟಿ. ೨೬-೬೨; ಶಬ್ದಸಾ. II, ೮೫೬ ನೋ). **ಹೆಗ್ಗುಱುಹು** : ೨. ಆಸ್ಥಾನದೊಳು ಸತಿಯರ ನಾಮ ಸಲ್ಲದಂತಸ್ಥದೊಳ್ ಪತಿ ಕೇಳಲೇಕೆ ಈ ಸ್ಥಿತಿಗಸರ ಹೆಗ್ಗುಱುಹಿನವರನಟ್ಟಿ ಸ್ವಸ್ಥವೆಂದೆಣಿಸಿದರವರು (ಭರತೇ. ೨೬-೬೩). [ಪೆರ್ (<ಪಿರಿದು₁) + ಕುಱುಪು ]

**ಪೆರ್ಗುಱುವು** 'ಪೆರ್ಗುಱುಪು' ನೋ.

**ಪೆರ್ಗುಟ್³**, ಪೆರ್ಗುಳಿ, ಹೆಕ್ಕುಳಿ, ಹೆರ್ಕುಳಿ (ನಾ). ದೊಡ್ಡದಾದ ಹಳ್ಳ,– ಗುಣಿ,–ತೆರಪು : ಎಯ್ದೆ ಮುನ್ನೀರನದುರ್ತು ಪೀರ್ದುಗುಟ್ಟಿ ಪೆರ್ಗುಟ್ಗಳ್ ದಿನಕೃದ್ದಿಷ್ಮಾನಮಾಕಾರಮಡಂಗೆ ಪುತ್ರ್ಯಡರ್ದು ಮುಚ್ಚಿದುದೆಂಬಿನೆಗಂ ವಿಕೀರ್ಣಸೇನಾರಜಮುರ್ವಿ ಪರ್ವಿದುದು (ಶಬರಶ. ೮-೧೪). **ಪೆರ್ಗುಳಿ** : ಸಮೆದ ಪೆರ್ಗುಳಿಯೊಳ್ ಕರಿಪೋತಕಂಗಳು ಕೆಡೆವು (೧೧೦೪. ೦-೯೩). **ಹೆಕ್ಕುಳಿ** : ಎತ್ತಾನುಮಿಪತ ಮಱಿದೊಡೆ ಮೆಯ್ಯಕ್ಕರಂ ಹುಳಿತು ಸತ್ತು ನರಕದ ಹೆಕ್ಕುಳಿ[ಪಾಠಾಂ. ಹೇಱುಳಿ]ಯೊಳಾಳುತಿಪರಿದಕ್ಕೆ ಸಂದೇಹ ಬೇಡ (ಸಮ್ಯಕ್. ೩-೩೦). **ಹೆರ್ಕುಳಿ** : ಇಳಿದು ನರಕಭೂಮಿಯ ಹೆರ್ಕುಳಿಯೊಳ್ ಮುಳುಗಿ ನೆಗೆದು ಜೀವಿಸುತಿಹರ್ (ಜಯುಶಾ. ೧೧-೦೩).

[ಪೆರ್ (<ಪಿರಿದು₁) + ಕುಟ್ಟಿ]

**ಪೆರ್ಗೂಪ** (ನಾ). ಆಳವಾದ ಭಾವಿ ; ದೊಡ್ಡದಾದ ಕೂಪ : ಲಿಂಗದಿಂ ನೃಪಗೆ ಸಾಕ್ಷಿಯ ಕೊಟ್ಟ ತನ್ನಿಷ್ಟಲಿಂಗದಿಂ ಪೆರ್ಗೂಪವಗುಳಿಸಿದ (ಕೈಶವ. ೦-೪-೨). [ಪೆರ್ (<ಪಿರಿದು₁) + ಕೂಪ₂]

**ಪೆರ್ಗೂರಿಕ್ಕು** (ಕ್ರಿ). = ಪೆರ್ಗೂರಿಡು : ಪೆ[ಪಾಠಾಂ. ಹೆ]ಗೂರಿಕ್ಕಿ ನುಡಿವ ನಾಲಿಗೆ ಜೀಳೆ (ಶಿಂಕೋಶ. ಹ. ೫೦೬-೦೫). [ಪೆರ್ಗೂರು+ಇಕ್ಕು]

**ಪೆರ್ಗೂರಿಡು**, ಪೆಗ್ಗೂರಿಡು, ಹೆಗ್ಗೂರಿಡು (ಕ್ರಿ). ಅತಿಯಾದ ಉಬ್ಬಸದಿಂದ ಕೂಡಿರು ; ದಮ್ಮು ಹೆಚ್ಚಾಗು : ಪೆರ್ಗೂರಿಡುತ್ತೆಯು ಬಂದಿರ್ದವರಂಜಲ್ ಶ್ವಾಸಮೋಱುತ್ತಿಳಿಯುತುಮಿರೆ (ರಸ್ಸಾಸ. ೪೦). **ಹೆಗ್ಗೂರಿಡು** : ಕಾಲನವರನುವಾಗೆ ಬಾಯೊಳ್ಸುರಿಯೆ ಲೋಳೆ ಮೊಗವೊಳ್ಗಿಡಿಸಿ ಗೂರು ಪೆ[ಪಾಠಾಂ. ಹೆ]ಗ್ಗೂರಿಡುತ್ತಮಿರೆ (ಶಿಂಕೋಶ. ಹ. ೫೦೬-೨೬).

**ಹೆಗ್ಗೂರಿಡು** : ಕೆಮ್ಮಿ ಹೆಗ್ಗೂರಿಟ್ಟು ಸುಯಿವುತೆ (ಶುಕೇಶ. ೬-೩೫).

[ಪೆರ್ಗೂರು+ಇಡು₁]

**ಪೆರ್ಗೂರು**, ಪೆಗ್ಗೂರು, ಹೆಗ್ಗೂರು (ನಾ). ಹೆಚ್ಚಾದ ದಮ್ಮು,– ಉಬ್ಬಸ : 'ಪೆರ್ಗೂರಿಡು' ಪರಾ. **ಪೆಗ್ಗೂರು** : 'ಪೆಗ್ಗೂರಿಡು' ಪರಾ. **ಹೆಗ್ಗೂರು** : 'ಹೆಗ್ಗೂರಿಡು' ಪರಾ.

[ಪೆರ್ (<ಪಿರಿದು₁)+ ಗೂರು₃]

**ಪೆರ್ಗೂಳಿ** (ನಾ). ಮಾನಂ ಹಿಡಿಯುವ ದೊಡ್ಡ ಬುಟ್ಟಿ : ಕಿಱುಗೂಳಿ ಪೆರ್ಗೂಳಿ . . . ಸೂಸುಗೂಳ್ಗಳೆಂಬಿವಂ ಕೊಂಡು . . . ಬಿನ್ನಣಂಬಡೆದ ಬೇಡರೊಡವರೆ (ರಾಜಶೇ. ೩-೦೦೪೮).

[ಪೆರ್ (<ಪಿರಿದು₁)+ ಕೂಳಿ (<ಕೂಳಿ₁)]

**ಪೆರ್ಗೆಂಡ** (ನಾ). ದಪ್ಪವಾದ ಕೆಂಡ,–ಇಂಗಳ : ಪೆರ್ಗೆಂಡಂಗಳು ಸೂಸುತುಂ ಗಱಿಂದೋವದೆ ತೇಗಿಯುಂ (ರಾಮಾಶ್ವ. ೬-೦೫೪).

[ಪೆರ್(<ಪಿರಿದು₁) + ಕೆಂಡ]

**ಪೆರ್ಗೆಚ್ಚಲ್**, ಹೆಗ್ಗೆಚ್ಚಲು (ನಾ). ದೊಡ್ಡ ಕೆಚ್ಚಲು ; ತುಂಬಿದ ಕೆಚ್ಚಲು : ಜರಲಾಱದೆ ಪೆರ್ಗೆಚ್ಚಲ ಭರದಿಂದು ಪೆಱಗು ಕುಸಿಯೆ . . . ಬಂದುವಂದು ಪಯಗಳ್ ಪಲವುಂ (೦೦ಲಾವ. ೩-೯೪) ; ಪೊರಲಾರದೊಲೆದಾಡುತಿರ್ಪ ಪೆರ್ಗೆಚ್ಚಲಿಂ ಚುಸುತಿಹ ಹೋಮಧೇನುಗಳಿಂದೆ . . . ಆಶ್ರಮವದೇನೊಪ್ಪಿತೊ (ಕೀಶರಾ. ೬೦-೬). **ಹೆಗ್ಗೆಚ್ಚಲು** : ಪೀನೋಧ್ನೀ, ಪೀವರಸ್ತನೀ–ಈ ೨ ಹೆಗ್ಗೆಚ್ಚಲಾವು (ಹಲಾಯು. ೪೫-೦೦೬) : ಪೀವರಸ್ತನಿ ಪೀವರೋಧ್ನಿಯೆನೆ ಹೆಗ್ಗೆಚ್ಚಲಾಪದು (ಶಬ್ದಮಣಿ. ೩೪-೩).

[ಪೆರ್ (<ಪಿರಿದು₁) +ಕೆಚ್ಚಲ್]

**ಪೆರ್ಗೆಡೆ** 'ಪೆರ್ಗಡೆ₁' ನೋ.

**ಪೆರ್ಗೆಡೆತನ** 'ಪೆರ್ಗಡೆತನ' ನೋ.

**ಪೆರ್ಗೆಡೆತನಂಗೆಯ್** 'ಪೆರ್ಗಡೆತನಂಗೆಯ್' ನೋ.

**ಪೆರ್ಗೆಯ್ವಾಡಿ** (ನಾ). ಒಂದು ಊರಿನ ಹೆಸರು : ಗಾವುಣ್ಣುಗಳ ಸೀಮೆಯಂದೋಱುದ ಕ್ರಮ ತೊಳಂಚೆಯುವ ಪೆರ್ಗ್ಗೆಯ್ವಾಡಿಯು . . . ತೊಳಂಚೆಯದ ಸೀಮೆಯೊಳ್ ತಾಗಿ (ಎಕ. XII, ತುಂಕಶ. ೨೬೯-೯೦ ; ೯೦೨).

[ಪೆರ್ (<ಪಿರಿದು₁) +ಕೆಯ್₄+ಪಾಡಿ₃]

**ಪೆರ್ಗೆಲಸ** (ನಾ). ದೊಡ್ಡ ಕೆಲಸ ; ಮಹತ್ಕಾರ್ಯ : ಕಳಕಳಸಂಭ್ರಮಂ ನೆಲಸಿ . . . ಸಮಂತು ವಿವಾಹಗೇಹಮಂಗಳ[ಕರ]ವಾದ ಪೆರ್ಗೆಲಸಮುಜ್ಜುಗವಂ ತಳೆದಿರ್ದುದಾವಗಂ (ಶಕಷಂ. ೪೨೬). [ಪೆರ್ (<ಪಿರಿದು₁) +ಕೆಲಸ]

**ಪೆರ್ಗೆಸಱು**, ಹೆಗ್ಗೆಸಱು (ನಾ). ಅತಿಶಯವಾದ ರಾಡಿ ; ಅಧಿಕವಾದ ಕೆಸರು : ಪೆರ್ಗೆಸಱಾಗಿರ್ಪುದು ಬಟ್ಟೆ ಪೋದವಿದಱೊಳ್ ಪೆರ್ಬಂದಿಗಳ್ (ಶಾಂತೀಶ. ೦೫೪) ; ಅಂಭೋಧಿಯುಂ ಪಿರಿದಂ ಪೆರ್ಗೆಸಱಾಗಿ ಶತ್ರುಶಿರಮಂ ಸೆಣ್ಣಾಡಿ ವೈರಿಶ್ರೀಯುಂ ಪರಿತಂದೀವುದು (ಎಕ. XI, ದಾವಣ. ೩೯-೧೫; 1280). **ಹೆಗ್ಗೆಸಱು** : ದೇವಮಯಿರಿಯ ಸೇನಿ ಸಮರದಿ ದಾಪಸಿಱಿವರಿಪರಿದು ರಿಪುಗಳ ಹೇಪಗೆಡಿಸಿವ ರಣಾಂಕಣವ ಹೆಗ್ಗೆಸಱು ಮಾಯುವೆನಿಸಿ (ಕುಂಶಾ. ೪-೬೨). [ಪೆರ್ (<ಪಿರಿದು₁) + ಕೆಸಱು]

**ಪೆರ್ಗೆಱೆ³**, ಹೆಗ್ಗೆರೆ₁, ಹೆಗ್ಗೆಱೆ³, ಹೆರ್ಗೆಱೆ³ (ನಾ). ದೊಡ್ಡ ಕೆರೆ,– ತಟಾಕ : ಪೆರ್ಗೆಱೆಯಾ ಕೆಱಗೆ ಅಱುಗಣ್ಣುಗಂ (ಎಕ. IV, ಹಾಗಮಂ. ೬೩-೬೮; 776); ಪೆರ್ಗೆಱೆಗಳ ಚೆಲ್ವಿಂ . . . ಒಪ್ಪುವುದು ರೌರವಪುರಂ (ರಘಾಶ್ವ. ೪-೬); ಪೆರ್ಗೆಱೆಗಳೆಂಬ ವಿನಿಶ್ಚಲಲೋಚನಂಗಳಿಂ ಭೂರಮೆ ದೇಶಸಂಪದಮನೀಕ್ಷಿಸಿ (ಜಾರಕ. ೪-೦೬). **ಹೆಗ್ಗೆರೆ₁** : ಒಂದು ಅಡವಿಯಲ್ಲಿ ತಿಳಿನೀರನೆಂಬ ಹೆಗ್ಗೆರೆಯಿತ್ತು (ಕನಿಷ್ಠ. ೩೯). **ಹೆಗ್ಗೆಱೆ³** : ಆ ಊರ ತೆಂಕಣ ಹೆಗ್ಗೆಱೆದು ಕೀಳೇರಿಯಲು ಗದ್ದೆ ಖಣ್ಡುಗ ಐದಕ್ಕೆ ಗುಳಿ ೫೦೦ (ಎಕ IV (B), ಹಾಮರಾ. ೨-೨೯; ಸು. 1116); ಮತ್ತಿಹಳ್ಳಿಯ

ಹೆಗ್ಗೞಿಯ ಬಡಗಣ ಕೋಡಿಯ ಸಂಕಿನ ಯೇರಿಯ ಕೆಳಗೆ (ಶಾಇ. XX. ೨೨೮-೩೭; 1207). **ಹೆರ್ಗೞಿ**$^3$ : ಕಣಂಬುರಿಗೆಯಾಳೂರಿಂ ಪಡುವಣ ಹೆರ್ಗ್ಗೞಿಯಿಂ ಪಡುವಲ್ ಕೆಯ್ಯುತ್ತರ್ ಹನ್ನೆರಡು (ಎಕ. XIII. ೨೦-೪೫; 1204). [ಪೆರ್ ( < ಪಿರಿದು$_1$) + ಕೞಿ$^3$]

**ಪೆರ್ಗೇಡು** (ನಾ). ಭಾರಿಯಾದ ಕೆಡುಕು,—ಅಪಾಯ; ಮಹಾ ವಿಪತ್ತು : ಈ ನಿನ್ನ ಪೆರ್ಗೇಡ ನೋಡುತ್ತುಮಾನುಂ ಮುನ್ನಮಿದೆ ಅರಯ್ಕೆ ಅರಯ್ದಂ (ಐಧ್ಯಕ್ಷ. ೨೪-೬೨೦). [ಪೆರ್ (< ಪಿರಿದು$_1$) + ಕೇಡು]

**ಪೆರ್ಗೊಂಬು**, ಹೆಗ್ಗೊಂಬು (ನಾ). ೧. ದೊಡ್ಡದಾದ ಶಾಖೆ,–ಟೊಂಗೆ : ೞಿಯ ಭೂಮಿಯೊಡಗೂಡಿ ಮೊದಲಿಂದಂ ಪಣೆಯಿಂದಂ ಪೆರ್ಗೊಂಬುಗಳಿಂದಂ [ಕಿಱುಗೊಂಬುಗಳಿಂದಂ] ಆಲದ ಮರನೆಂತೊಪ್ಪುಗುಂ (ಧರ್ಮಾಮೃ. ೦೩-೫); ೞಿ ಮುಱಿದ ಪೆರ್ಗೊಂಬಿನಿಱುಂಬಿನೊಳೊಱೆತ್ತುಗುವ ಪಾಲ ಪೂನದೊಳ್ ಮಿಗೆ ನೆಗೆವ ಗಗನಚರಿಯು ನಿಡುಜಡೆ ತೊಡಂಕಿ (ಶಬರ. ೩-೩೫ ವ) : ಪೊಯ್ಲ್ಲ ಬಲ್ಪಿಂ ಮುರಿದ ಮರದ ಪೆರ್ಗೊಂಬಿನೊಳ್ ಕೊಂಬದೊಂದಂಟಿರೆ (ಶಾಕುಂತ. ೦೭-೩೩). ೨. ಕಹಳೆಯಾಕಾರದ ಒಂದು ಬಗೆಯ ದೊಡ್ಡ ವಾದ್ಯ : ಬುರುಗಿನ ಪೆರ್ಗೊಂಬಿನ ಕಾಳೆ ಜಾಗಟೆ ... ದಮಾಸಗಳಬ್ಬರಪೆಸೆದುದು (ಕಂಪಿಪ. ೯-೬೦). **ಹೆಗ್ಗೊಂಬು** : ೧. "ಸ್ಕಂಧಶಾಖಾ, ಶಾಲಾ: – ಈ ೨ ಮರದ ಹೆಗ್ಗೊಂಬು" (ಹಲಾಯು. ೩೦-೨೮); ಮರದ ಹೆಗ್ಗೊಂಬುಗಳಲಿಟ್ಟನು (ಕುಮಾ. ೬-೨೨): ದಧಿಮುಖನೊಂದು ಹೆಗ್ಗೊಂಬುಳ್ಳ ಹೆಮ್ಮರನ ಹಿಡಿದು ಕೆಡಹುತ ಹರಿದು ಬಂದನು (ತೊರಾ. ೩೨-೩೭): ಖಳನಿಕುರುಂಬವನು ಬಲುಹೆಮ್ಮರನ ಹೆಗ್ಗೊಂಬುಗಳಲೇ ಹೊಯ್ದು ಹೊಱವಂಡಿಸಿದನುಸುರುಗಳ (ತೊರಾ. ೫-೯-೨೨). [ಪೆರ್ (< ಪಿರಿದು$_1$) + ಕೊಂಬು$_1$]

**ಪೆರ್ಗೊಡಲಿ** (ನಾ). ದೊಡ್ಡದಾದ ಪರಶು : ಸಂಜಯಂತಮುನೀಶ್ವರಂ ಕ್ಷಮೆಯೆಂಬ ಪೆರ್ಗೊಡಲಿಯಿಂ ದುರಿತಾಟವಿಯಂ ತಱಿದು (ಧರ್ಮಾಮೃ. ೬-೦೨೮) : ಮೊಳೆಯೊಳೆ ತೋಡಿ [ಸೀಂಟಿ] ಕಳೆಯಲ್ ಬಗೆದಪ್ಪುದು ಮಾಡದಾಗಳುಮ್ಮಳಿಸಿ ಬಱಿಕ್ಕ ಪೆರ್ಗೊಡಲಿಗೊಳ್ವವೊಲಕ್ಕುಮದೊಳ್ಳಿತಕ್ಕುಮೇ (ಸೂಕ್ತಿಸು. ೦೭-೦೮). [ಪೆರ್ (< ಪಿರಿದು$_1$) + ಕೊಡಲಿ]

**ಪೆರ್ಗೊಣ್ಣಂದ** (ನಾ). ಒಂದು ಸ್ಥಳದ ಹೆಸರು (?) : ಪೆರ್ಗೊಣ್ಣನ್ದ ತಟಾಕ ಪೂರ್ವ್ವಭಾಗ (ಎಕ. VII (R), ಶಿಕಾರ್. ೩೫-೩೯ ; 713). [ಪೆರ್ (< ಪಿರಿದು$_1$) + ಕೊಣ್ಣಂದ]

**ಪೆರ್ಗೊತ್ತಳ** (ನಾ). ದೊಡ್ಡ ಬುರುಜು : ಪರಿಖಾದಿಗಳಂ ಸಾಂಗಮೆನೆ ರಚಿಸಿಯುಂ ಪೆರ್ಗೊತ್ತಳ ಪಿರಿಯ ಪಿರಂಗಿಗಳನಮರ್ಚಿಯುಂ (ಕೃಷ. ೦೨-೦೦ ವ). [ಪೆರ್ (< ಪಿರಿದು$_1$) + ಕೊತ್ತಳ$_1$]

**ಪೆರ್ಗೊತ್ತು** (ಕ್ರಿ). ಹೆಚ್ಚಾಗಿ ತಳ್ಳು ; ಅಧಿಕವಾಗಿ ನೂಕು (?) : ಮೊಲೆಯಿಂದಂಬಿರಿವಿಟ್ಟು ಪಾಲುಗುತುಂದೋರಂತಿರ್ದೊಡಂ ತಮ್ಮ ಕೆಚ್ಚಲ ನಂದೊಯ್ಯನೆ ಕುಂದದುರ್ವ್ವಿ ಕೆಲನಂ ಪೆರ್ಗೊತ್ತೆಯುಂ . . . ವಿಭ್ರಾಜಿಸುತಿರ್ಪ್ಪವು ವಿಷಯದೊಳ್ ಸಾನಂದದಿಂ ಧೇನುಗಳ್ (ಶಾಂತೀಶ. ೦-೬೫); ಮನದೊಳ್ ಪುಟ್ಟಿದ ಸಮ್ಮದಂ ಪುದಿದು ಪೆರ್ಗೊತ್ತಲ್ಕೆ ತಾನುರ್ದಿದತ್ತನೆ ಮೆಯ್ಪೆರ್ಚೆ . . . ಸುತನಂ ನೋಡುತ್ತುಮಿರ್ದಂ ನೃಪಂ (ಕುಸುಮಾ. ೦೫-೦೨೮). [?]

**ಪೆರ್ಗೊನೆ** (ನಾ). (ಹಣ್ಣು, ಹೂವು ಮುಂತಾದುವುಗಳ) ದೊಡ್ಡ ಗೊಂಚಲು ; ತುಂಬಿದ ಗೊಲೆ : ಸುಲಭದಾನಿಯು ಪೋಲ್ವು ಪೆರ್ಗೊನೆಯೊಳು ಕಾತ ಹಲಸಿನ ಮರಗಳೊಪ್ಪಿದುವು (ಸೂಕಶ. ೨೩-೪೭) ; ಕಿಕ್ಕಿಱಿದ ಪೆರ್ಗೊನೆಗಳಿಂದೆ ಎಸೆವ ಚೆಂದೆಂಗಾಯ್ಗಳೊಂದೊಂದನೊಡೆಯೊತ್ತಲೊಸರಿ ಸೋರ್ವೆಳನೀರ್ಗಳರ್ಘ್ಯಂಗಳಾಗೆ (ಕೃಮಿಶಾ. ೩-೨೭). [ಪೆರ್ ( < ಪಿರಿದು$_1$ ) + ಗೊನೆ$_2$ ( < ಗೊಲೆ$_2$ ) ]

**ಪೆರ್ಗೊರವ**, ಹೆಗ್ಗೊರವ (ನಾ). ೧. ಉತ್ತಮ ಸಂನ್ಯಾಸಿ ; ಹಿರಿಯ ತಪಸ್ವಿ : ಕೇಳೋಯ್ಪ್ಪನ್ಕಟವಪ್ರಶೈಲಮಡಱ್ದೀನಮ್ಮಾ ಕಳನ್ತೂರನಂ ಬಾಲೇ ಪೆರ್ಗ್ಗೊರವಂ ಸಮಾಧಿ ನೆಱೆದೊನ್ ನೋನ್ತೆಯ್ದಿದೋಸ್ಸಿರ್ದ್ಧಿಯಾನ್ (ಎಕ. II. ೨೨-೪; ಸು. 700). **ಹೆಗ್ಗೊರವ** : ೨. ಈಶ್ವರ ; ಶಿವ : ಧಿಟ್ಟನೈ ಹೆಗ್ಗೊರವ . . . ಅಬಲಾಜನಾಣ್ಮ ಮ[ಸ]ನಂಗನನು ಬಳಿಕ ಸುಟ್ಟನು (ಅಂಬಿಕಾ. ೨೮-೪೦). [ಪೆರ್ (< ಪಿರಿದು$_1$) + ಗೊರವ]

**ಪೆರ್ಗೊಲ್ಲಿ**, ಪೆಗ್ಗೊಲ್ಲಿ (ನಾ). ದೊಡ್ಡ ಪ್ರವಾಹ,–ಹಳ್ಳ : ತೆಂಕಯ್ಕ ಗ್ಗೊರ್ತ್ತಿಗೂಡಲ ಪಳ್ಳಮೇ ಪಡುವಾಯ್ ಪೆಗ್ಗೊರ್ಲ್ಲಿಯೆ . . . ಸೀಮೆ (ಎಕ. IV, ಹಗ್ಗಡ. ೪-೨೭ ; ಸು. 750); ಪೆಗ್ಗೊರ್ಲ್ಲಿಯುಳ್ಕೂಡಿತ್ತು ಪೆಱ್ಕೋಗೆಯು ಮೊದಲುಳ್ ಬಡಗಾಯ್ಪ್ಪೆಗ್ಗೊರ್ಲ್ಲಿಯೆ ಸನ್ದು ಕಾವೇರಿಯುಳ್ ಕೂಡಿತ್ತು ಸೀಮೆ (ಎಕ. IV, ಎಡತೊ. ೬೮-೭೭ ; ಸು. 890). **ಪೆಗ್ಗೊಲ್ಲಿ** :ಪೆಗ್ಗೊಲ್ಲಿಯ ನೀರ್ವ್ವಗಿಲು ಬಡಗಣದೆಸೆಯೊಳ್ (ಮ್ಯಆರ್. ೦೯೨೦, ೦೦-೧೮೪ ; 967). [ಪೆರ್ (< ಪಿರಿದು$_1$) + ಕೊಲ್ಲಿ]

**ಪೆರ್ಗೊಸರ್ಕೆ** (ನಾ). ಅತ್ಯಧಿಕವಾದ ಮೋಹ : ಘನಕುಚಮಧ್ಯತಾಡನೆಗೆ ಮುಂದಲೆಯೊಳ್ ಸಮನಾಗೆ ಒಲ್ದಿಯಿಂದಿನಿಯನ ಪೆರ್ಗೊಸರ್ಕೆ ಸರಿಯಾಗೆ ಪತಿಕ್ಷಮನಾಳ್ದ ಚಾಟುನಿಸ್ವನಮರ್ದಗೊಳ್ವ ಚುಂಬನಕೆ ಬೆಂಬಱಿಯಿಂದಿರ್ದಪ್ಪ ತನ್ನ ಚುಂಬನ[ಮೆ]ಣೆಯಾಗೆ ಕಾಂತೆ ಪುರುಷಾಯಿತದೊಳ್ ಕರಮೊಪ್ಪಿ ತೋಱಿದಳ್ (ಸೂಕ್ತಿಸು. ೦೪-೪೭).
[ ಪೆರ್ (< ಪಿರಿದು$_1$) + ಕೊಸಱು$_0$ (< ಕೊಸಱು$_2$) + – ಕೆ ]

**ಪೆರ್ಗೊಱಡು** (ನಾ.) ದೊಡ್ಡ ಮರದ ತುಂಡು,–ಕಟ್ಟಿಗೆ : ಆತನ ಕೈಗಳಂ ಕಟ್ಟಿಸಿ ತಳಪಳನೆ ಕುದಿವೆಣ್ಣೆಗೊಪ್ಪರಿಗೆ ಕಾಯ್ಸಲ್ಲಿಗಳತರಿಸಿ ಮತ್ತೆ ಪೊತ್ತುವೊಲುರಿವ ಪೆರ್ಗೊಱಡುಗಳನಿಡಿಸಿ (ಕೃಮಿಶಾ. ೦೦-೩೧).
[ ಪೆರ್ (< ಪಿರಿದು$_1$) + ಕೊಱಡು (< ಕೊಱಂಡು) ]

**ಪೆರ್ಗೋಣೆ**, ಪೆಗ್ಗೋಳಿ (ನಾ). ಗೋಣಿಯ ಮರದಲ್ಲಿ ಒಂದು ಬಗೆ; ದೊಡ್ಡ ಗೋಣಿ : ಗೋಣಿಗೆ–ಕಿಱುಗೋಣೆ, ಗೋಣಿಕಾಪುತ್ರ, ಪೆರ್ಗೋಣೆ (ಕಮದ. ೨೯೮ ಕ್ರಯೋ). **ಪೆಗ್ಗೋಳಿ** : ಹಾಲೆಯರನೇಱಲು ಕಡವ ಪೆಗ್ಗೋಳಿ ... ಹಾದರಿಯ ಮರ ಮೊದಲಾದವುರ್ವಿಹವು (ಶಾಳ್ವಭಾ. ೫-೩). [ ಪೆರ್ (< ಪಿರಿದು$_1$) + ಗೋಣಿ$_1$ (< ಗೋಳಿ$_1$) ]

**ಪೆರ್ಚಾಳ್**, ಹೆಚ್ಚಾಳು (ನಾ). ಹಿರಿಮೆಯುಳ್ಳವನು ; ಶ್ರೇಷ್ಠನಾದವನು : ಕೋಪಪ್ರಸಾದಮುಳ್ಳವರೆ ದೈವಮೆಂಬೊಡೆ ಮನ್ನೆಯರು ಮರಸರುಂ ತಳಾಱರುಂ ದಂಡಾಧಿಪರುಂ ಪೆರ್ಚಾಳ್ಗಳುಂ ದೈವಮಪ್ಪರ್ (ಧರ್ಮಾಮೃ. ೯-೦೦೪). **ಹೆಚ್ಚಾಳು** : "ಮಹೋತ್ಸಾಹ:, ಮಹೋದ್ಯೋಗ:, ಮಹೇಚ್ಛ:, ಮಹಾಮನಾ:—ಈ ೪ ಹೆಚ್ಚಾಳು" (ಹಲಾಯು. ೫೮-೨೦೦) : ನಿನಗೆ ಮಣಿವವನಲ್ಲ ರಾಧಾತನಯನವ ಹೆಚ್ಚಾಳು ಕಡ್ಡಿಯ ಮೊನೆಗೆ ಕೊಂಬನೆ ನಿನ್ನನು (ಕುಮಾ. ೦೭-೦೭). [ ಪೆರ್ಚು$_2$ + ಆಳ್$_3$]

**ಪೆರ್ಚಿಸು**, ಪೆರ್ಚ್ಚಿಸು, ಪೆಚ್ಚಿಸು, ಹೆಚ್ಚಿಸು (ಕ್ರಿ). ೧. ವೃದ್ಧಿಪಡಿಸು ; ಅಧಿಕಗೊಳಿಸು: "ಪೆರ್ಚಿಸು-ವರ್ಧನೇ" (ಶಮ:ಧಾ) : ಬಂಧುಜನಕ್ಕೆ ಮುಗ್ಧಮುಖಚಂದ್ರಾಲೋಕಮಾಲೋಕನೋತ್ಸವಮಂ ಪೆರ್ಚಿ[ಪಾಠಾಂ. ಚ್ಚಿ]ಸೆ ಬಾಲನಿಂತೊದವಿದಂ ಸಂಸಾರಸಾರೋದಯಂ (ಆದಿಪು. ೬-೦೨೪); ತದೀಯ ಸರ್ಬ್ಬಸ್ವಮಂ ನಿಜೇಶಂಗೆ ತಂದುಕೊಟ್ಟು ಪತಿಪ್ರಸಾದಮಂ ತನ್ನೊಳನುದಿನಂ ಪೆರ್ಚಿಸುತ್ತುಂ(ಶಾಂದೀಶ್. ೩-೨೨ ವ; 1047); ಚೇತ:ಪ್ರೀತಿಯಂ ಪೆರ್ಚಿಸುವುದು ಪವನಸ್ವೈರಚಾರಂ ಸಮೀರಂ (ಶುಕ್ಲಪ. ೨-೪೦). ೨. ಹಬ್ಬಿಸು; ಹಬ್ಬುವಂತೆ ಮಾಡು : ವಿಷಯವಿಷವಲ್ಲಿಯಂ ಪೆರ್ಚಿಸುವ ಜಳಧಾರೆ (ಭಾದಂಪು. ೫೫೩). ೩. ಉಕ್ಕುವಂತೆ ಮಾಡು ; ಹೊರಹೊಮ್ಮಿಸು : ಶೋಳಪ ದಯಾಂಭೋನಿಧಿಯಂ ಪೆರ್ಚಿಸಿಯುಱಿವಿಗಳಿದ ಸತ್ಪಥದೊಳ್ಪರಿಯಿಸುವಲಘುಗುಣಪ್ರಾಭೇಂದುಪದಂ ನಮ್ಮಂ ಪರಿರಕ್ಷಿಸುಗೆ (ಜಯುಉ. ೮-೯); ಬಾಣನ ಮಹ

ದಾಸ್ಥಾನದುಗ್ಧಾಬ್ಧಿಯು ಕ್ಷೀಣವಿಲ್ಲದೆ ಪೆರ್ಚಿಸುವ ಏಕಾಂಕ ತಾನೆಂಬಂತೆ . . . ಮಂತ್ರೀಶನೊಪ್ಪಿದನು (ಚೋಚಕ. ೨೦-೬೨). ೪. ವಿಸ್ತಾರಗೊಳಿಸು : ಮನೆಯಂ ಪೆರ್ಚಿಸುವೊಡೆ ಮುನ್ನಿನ ಮಾಟಿಕ್ಕೆಯೊಳಯ್ದೆ ಮಾಡಲುಂ ಬಡಗಲ್ ವೊತ್ತು ನಿಮಿರ್ಚುಗುಟೆದ ದೆಸೆಗಳೋಳನಿತಂ ಪೆರ್ಚಿಸಲೇಡ (ಲೋಕೋಪ. ೩-೦೩). ೫. (ಅಲಂ) ಕತ್ತರಿಸು ; ಕಡಿ ; ಕೊಯ್ಯು : ಅಗಳಾ ಮದಗಜಾಂಕುಶದಿಂದೆ ಪೆರ್ಚಿಸಿ ನಾಭಿಯಂ (ಶಂಶಚ. ೦-೯೩) ; ಕ್ಷೀರಾಬ್ಧಾಮೃತಮನ್ನಾಭಿಯೊಳ್ತಳೆದು ಘಾತಿಕ್ಷಯಮುಮಕ್ಕೆಂದು ಪರಸೆ ನಾಭಿನಾಳಮಂ ಪೆರ್ಚಿಸುವುದು (ಜಾತ್ರಂಕ. ೨೩೩); ಪೊಕ್ಕುಜ ಕುಡಿಯುಂ ಪೆರ್ಚಿಸಲಿಕ್ಕಿದ ಮಣಿಕನಕಪುಂಜಮೆಸದಿರೆ (ಅಶಂಪು. ೦೨-೬೨). 'ಪಚ್ಛಿಸ$_1$' ಪರ್ಯಾ. ೬. ಬೀಗುವಂತೆ ಮಾಡು; ಉಬ್ಬಿಸಂ : ಅವರನೆ ಪೊರೆವರ್ ಪೆರ್ಚಿಪರವರನೆ . . . ನೋಡುವರ್ಗಳೆ ನಂಟರ್ (ಕಾವಂಪೂ. ೫೬೨); ಸಂತಸದೆ ಪೆರ್ಚಿವುದೆಂದವರ್ದಪ್ಪಿನೊಳ್ ಕರಂ ಕರಗಿವುದೆನ್ನನೆಂದೊಸೆದು ನೀಂ ಕೃಪೆಯಿಂದೆಲೆ ಹಂಪೆಯಾಳ್ದನೇ (ಶಂಕಾಶ. ೫); ನೀನೆಣಿಕೆಗೋಡನ್ನ ಪೆರ್ಚಿಸಿ ಬಯಲಿಗೀಗ ಮುನಿದಣಕದಿಂ ದಿಟ್ಟ ತಪ್ಪಿಸಿದೊಡೆ (ಶಾಂದಳು. ೦೯-೨೯). ೭. [ಗಣಿತ] ಗುಣಾಕಾರ ಮಾಡು; ಗುಣಿಸು : "ಪೆರ್ಚಿಸು ನೂಂಕು . . . ಗುಣಿಸು . . ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು" (ವ್ಯಕಚ. ೦೦-೮); ಕ್ರಮದಿಂದು ಗೃಹರಾಶಿಭಾಗಕಲೆಯಂ ನೂಱೆಂಟಱಿಂ ಪೆರ್ಚಿಸು (ಜಾಕತ. ೮-೦). ಪೆಚ್ಚಿಸು : ೧. ಚತುರೋಪಾಯಮನೊದವಿಸಿ ನಿಜಾಧಿಪತಿ ಯಾದವನಾರಾಯಣನ ರಾಮರಾಜ್ಯಶ್ರೀಯಂ ಪೆಚ್ಚಿಸುವಜ[ಂ]ಗೆ ನಲ್ಲಂ ಮಲ್ಲಂ (ಕ್ಕಶಾ. XX. ೨೦೨-೦೬: 1244). ಪೆಟ್ಚಿಸು : ೧. ಮಾಱು ತೋಣ್ಣದ ನೆಲನುಮಾದಿತ್ಯಭಟರರ ಸ್ಥಾನವುಮ ರಕ್ಷಿಸಲ್ಪೆಟ್ಚಿಸಲಿವರ ಸಮರ್ತ್ಥರೆನ್ದು ಗೋಕರ್ಣ್ನಪಣ್ದಿತ ಭಟರಗ್ಗ . . . ಕೊಟ್ಟರು (ಕಶಾ. I, ೦೩-೦೫; 865); ತನ್ದೆ ನಡಯಿಸಿದ ಬಳಿಕನ್ತಿಂದುವರ ಬಡ್ಡಿಗೊಟ್ಟು ಪೆಟ್ಚಿಸಿ ಪೊನ್ನಂ ಮನ್ದರಗಿರಿಧ್ವಯ್ಯರ್ಗಂ ಸಾನನ್ದದೆ ಶ್ರೀಸಾನ್ತಿಸೆಟ್ಟಿ ಪರಿರಕ್ಷಿಸಿದಂ (ಕ್ಕಶಾ. XX. ೫೫-೬೨; 1082). ಹೆಚ್ಚಿಸು : ೧. ಆಸನ-ಶತ್ರುವನಾಕ್ರಮಿಸಲು ಸಮರ್ಥನಲ್ಲ ಎಂದು ದೇಶ ಕಾಲಾದಿಗಳಂ ಹಾರುತ ದುರ್ಗಾದಿಗಳಂ ಹೆಚ್ಚಿಸುವ ವಿಜಿಗೀಷುವಿನ ಸ್ಥಿತಿಯು (ಶಾಕಶಾ. ೬); ಕೊಳುಗುಳದ ಹೆಚ್ಚೆಳಸು ಹೆಚ್ಚಿಸಿತಂತಕನ ಪುರವ (ಕುಮ್ಮಾರ್ಕ್ರೋ. ೨-೨೬). ೬. ಮಕ್ಕಳನ್ನು ಪ್ರೀತಿಯಿಂದ ಸಾಬೇಕೇ ಹೊರತು, ಅವರನ್ನು ಹೆಚ್ಚಿಸಿ ಹಾಳು ಮಾಡಬಾರದು (ಲೂ). ೭. "ಗುಣಿತಂ, ಆಹತಂ — ೨ ಗುಣಿಸಲ್ಪಟ್ಟದ್ದು, ಹೆಚ್ಚಿಸಲ್ಪಟ್ಟದ್ದು, ಹೊಡೆಯಲ್ಪಟ್ಟದ್ದು" (ಶಿಪ್ಪಾಂಕ. ೪೯೬). ೮. (ಅಲಂ) (ಶುಭವೆಂದು ಗಣಿಸುವ ದೀಪವನ್ನು ಕುರಿತು ಹೇಳುವಾಗ) ಆರಿಸು,— ನಂದಿಸು : ಕಡೆ ಹಗಲ ಕೂಳುಂಡ ಮೇಗೆ, ಹಣತೆ ಹೆಚ್ಚಿಸೆ ಕಣ್ಣು ತೂಗೆ ಮುಚ್ಚುವುದೆ ಮಾನಚ್ಚಿಯಾ (ಗೀಶಂ. ೬೦-೨೬).

ಪೆರ್ಚಿಸಿಕೊಳ್ಳು = ವೃದ್ಧಿಯನ್ನುಂಟು ಮಾಡಿಕೊಳ್ಳು : ವಿಧಿಪೂರ್ವಸಾಧಿತ ಮಹಾಮಂತ್ರವ್ರಜಂ ತನ್ನ ತೋಳ್ವಲದಿಂ ಪೆರ್ಚಿಸಿಕೊಂಡಿಳಾ ಲಲನೆಯೊಳ್ ಮೇಗಿಂಗಮೆಕ್ಕೆಗಂ ಚಲಕಂಗೆಯ್ವವೊಲ್ (ಜಾಂತಪು. ೫-೦೩).

[ಪೆರ್ಚು$_2$ + — ಇಸು$_1$]

ಪೆರ್ಚು$_1$, ಪೆಚ್ಚು$_1$, ಪೆಟ್ಚು, ಹೆಚ್ಚು$_1$ (ಕ್ರಿ). ೧. ಅಧಿಕವಾಗು ; ವೃದ್ಧಿಯನ್ನು ಹೊಂದು : ಅತಿಶಯಂವಾಗು : ಸಂಸಾರವೈರಾಗ್ಯ ಮಾದಮಾನುಂ ಪೆರ್ಚಿ (ಪಪ್ಪಾರಾ. ೬೩-೨೪); ಆ ಶಂಕೆ ಪೊಣ್ಮುತ್ತಿರೆ ಪೆರ್ಚಿತ್ತುಗ್ರಘೋಷಂ (ಅಪು. ೦೩-೩೬); ಪಗೆ ನೀಗೆಯುಂ ಮುಳಿಸು ಪೋಗೆಯುಂಪಾಯುತಿ ಪೆರ್ಚಿಯುಂ ಜಗಂ ಪೊಗಟೆಯುಂಪಾಂತ ರಾತಿನೃಪರಂ ಕವೆ ಕೊಲ್ವುದು (ಕಂಕಪಾ. ೮-೬೬). ೨. (ಮರ, ಗಿಡ ಮೊದಲಾದುವುಗಳಂತೆ) ಬೆಳೆ : ಸರಿದಧಿಪತಿ ಮೊಟಕಾಲ್ವರಂ . . . ತಲೆಯ ನೆರೆಗೆ ಲೋಕಾಂತರಮೆಡೆಯಿಲ್ಲೆನಿಸೆ ಪೆರ್ಚಿದಂ ದನುತನಯಂ (ಕಂಕಪಾ. ೦೨-೦೦) ; ೯ಸದೊಡನೆ ಕೂಡಿ ಪೆರ್ಚಿದ ಸಸಿಯುಂ . . . ಪಲವಂ ಭಾವಿಸುತಿರ್ಪನ ತಪಮುಮೊಪ್ಪಲಾರ್ಕುಮೆ ಕಡೆಯೊಳ್ (ಧರ್ಮಾಮೃ. ೨-೬೨). ೩. ದೊಡ್ಡದಾಗು ; ಹಿರಿದಾಗಂ : ಅಲ್ಲಿಯು ಖಚರರ್ . . . ದೇಹಪ್ರಮಾಣದೊಳ್ ಕುಂದುಮವರುಂ ಪೆರ್ಚುವರುಮಲ್ಲರ್ (ಆದಿಪು. ೯-೦೨೦ ವ) ; ಪವನಂ ಪೆರ್ಚಿದ ಮಹಾವೃಕ್ಷಂಗಳಂ ಕೀಳ್ವುದಲ್ಲದೆ ಮೃದುಪಪ್ಪ ತೃಣಂಗಳಂ ಕೀಳದು (ಶಂಶತಂ. ೯೬-೯) ; ತೆಳುಮಸಿಬಿಟ್ ಪೆರ್ಚಿತು (ಸಿದ್ಧರಾ. ೦. ೯೯). ೪. ಉಕ್ಕು ; ಪ್ರವಹಿಸು : ಸುಯ್ಯೆಲರುಬ್ಬುಲಾಶಿ ವಾರಿಮಯಮೆನಲ್ಕೆ ಪೆರ್ಚುವುದು (ಕಾದಂಉ. ೩೩೫) ; ಶ್ರುತದುಗ್ಧಾಂಭೋಧಿ ಪೆರ್ಚಲ್ವಿನನಿಗದಿತ ತತ್ವಾಂಶು ಪರ್ವಲ್ (ಧರ್ಮಾಮೃ. ೦-೯); ಜಿನಧರ್ಮ್ಮಾಂಬೋಧಿ ಪೆರ್ಚುತ್ತಿರೆ (ಎಕ. VIII (S). ಸೊರಬ. ೫೦೭-೯೭ ; 1207). ೫. ವಿಸ್ತಾರವಾಗಂ; ಹಬ್ಬು; ವ್ಯಾಪಿಸು ; ಹರಡು : "ಪೆರ್ಚು — ವಿಸ್ತಾರೇ" (ಶಮದ) : ಪೊಗೆ ಪೆರ್ಚಿ [ಪಾಠಾಂ. ಪೊಣ್ಮಿ] ನೆಗೆದ ಕಾಟ್ಕಿರ್ಚುಮಂ ಸಿಂಹಾಸನದ ಮೇಗೇಱದ ಕೋಡಗಮುಮಂ . . . ಇಂತೀ ಪದಿನಾಱುಂ ಕನಸುಗಳಂ . . . ಕಂಡೆನೆಂದಂಜಿ (ಪಪ್ಪಾರಾ. ೬೫-೨೭) ; ದಿಗ್ಭಿತ್ತಿವಿಭೇದಿ ಪೆರ್ಚೆ ಕದನಾನಕರಾವಂ (ಶಂಶಚ. ೯-೯೨) ; ಹಿಡಿಂಬೇಶ್ವರಮೆಂಬುದು ಆ ಲಿಂಗಂ ಪೆರ್ಚ್ಚಿ ಪೆರ್ಚುವ ಕಾರಣದಿಂ ಕಳೇಶ್ವರಮೆಂದಮೃತಲಿಂಗದೇ[ವರ್] ಪ್ರಸನ್ನತೆಯಿಂ ಕಣ್ಣಶ್ರೀಮದ್ದಣ್ಣಾಯಕ ದೇವಪಯ್ಯ . . . ದೇಗುಲದ ಅಧಿಷ್ಠಾನಮಂ ಕಟ್ಟಿಸಿ (ಕ್ಕಶಾ. IX-1, ೦೨೬-೨೯ ; 1064). ೬. ಬೀಗು ; ಹೆಮ್ಮೆಪಡು ; ಗರ್ವಿಸಂ : ಎನ್ನನೆ ನಚ್ಚಿ ಪೆರ್ಚಿ ಮುಂ ಪೊರೆದು (ಕಂಕಪಾ. ೯-೬೦) : ಗಂಗಾನ್ವಯಂ ಪೆರ್ಚ್ಚಿ ವರ್ತಿಸುತ್ತಿರೆ (ಎಕ. VII. ಶಿಕಾ. ೯ ೩೯ ; 1122) ; ಅದಟಿಂ ಮುಂ ಗೆಲ್ದುದಂ ನೀಂ ನೆನೆನೆನೆದು ಭುಜಾಗರ್ವದಿಂ ಪೆರ್ಚದಿರ್ ಪೆರ್ಚದಿರ್ (ಜಗಪು. ೯-೬೯). ೭. ಸಂತೋಷಿಸಂ ; ಹಿಗ್ಗು : ಸವಣರೆಂದೊಡೆ ಪೆರ್ಚುವಳ್ ಜಿನಪೂಜೆಯೆಂದೊಡೆ ನೋಡುವಳ್ (ಧರ್ಮಾಮೃ. ೯-೦೯); ನುಡಿಯು ಬಳಲ್ದ ಪಾಂಥನಿರ್ದ ತಣ್ಪಿನ ಸೋನೆಯನಾಂತ ಮಾಳ್ಕೆಯಿಂ ಪೊಡಕರಿಸುತ್ತೆ ಪೆರ್ಚಿ (೧೦೪. ೨-೦೯): ಅವಗುಣಕೋಟಿಯುಂ ಮಱೆದು . . . ತಲೆದೂಗಿ ಮೆಚ್ಚಿ ಪೆರ್ಚುವ ವಿನಸೂಯರಂ . . . ಅರ್ಚಿಪೆಂ (ಧಳು. ೦-೦೦). ೮. ನೀಳವಾಗು ; ಚಾಚು ; ನಿಡಿದಾಗು : ದೆಸೆಗಳ್ ಪೆರ್ಚದೆ ಮೊಟ್ಟನಾದುವಗಲಕ್ಕೆಂಬನ್ನೆಗಂ . . . ಅದ್ರೀಂದ್ರಂಗಳಂ ತಂದು ಕೀಲಿಸಿದಂ (ಆದಿಪು. ೬೫-೫೦). ೯. ವಿಜೃಂಭಿಸು ; ಅಟ್ಟಹಾಸ ಮಾಡು : ದಡಿಗನ ಮಿಬ್ಬುಮಂ ಮಿದಿದೊಡಲ್ಲದೆ ಪಾಣಿನಮೋಕ್ಷಮೆಂದು . . . ರಥಂಗಳನುಚ್ಚುಡಿಯೆಚ್ಚು ಭೀಮನಂ ತಡೆಯದೆ ಮುಟ್ಟೆ ಪೆರ್ಚಿ ನುಡಿದಂ ಕಪಿಕೇತನನಂ ಮುರಾಂತಕಂ (ಶಂಶಚ. ೦೨-೦೬೨). ೧೦. ಅಭಿವೃದ್ಧಿ ಹೊಂದು; ಏಳಿಗೆಯಾಗು, ವರ್ಧಿಸಂ : ಒಳಗಿರ್ದ ವೈರಿಗಳ್ ಮೊಕ್ಕಳವಿಮಾಯರ್ ಪೆರ್ಚಲಧಿಕವಿಭವರ್ಕಳುಮಂ ತಳರದೊಡನಿರ್ದು ಬಡಬಾನಳನೆಂದುಂ ಪೆರ್ಚಲೀಯು[ದಂ]ತಂಬುಧಿಯುಂ (ಕಾಶಾ. ೩-೦೯೯); ಪೆಣ್ಣ ಪೆತ್ತವರ ಬಳಗ ಬಳೆವುದು ಬೇಗ ಪೆಣ್ಣ ಪೆತ್ತವರು ಪೆರ್ಚುವರು (ಜಾಂ. ೫-೯). ೧೧. ಉಬ್ಬು : ಒಳಗಿರ್ದ ವೈರಿಗಳ್ ಮೊಕ್ಕಳವಿಮಾಯರ್ ಪೆರ್ಚಲಧಿಕವಿಭವರ್ಕಳುಮಂ ತಳರದೊಡನಿರ್ದು ಬಡಬಾನಳನೆಂದುಂ ಪೆರ್ಚಲೀಯು[ದಂ]ತಂಬುಧಿಯುಂ (ಕಾಶಾ. ೩-೦೯೯); ಉರಿಗಣ್ ಕೆತ್ತುವ ಮೀಸೆ ಪೆರ್ಚಿದ ಕೊರಲ್ ಪೆರ್ಮಾಲ . . . ಚಿಲ್ಲಾಗೆ ತತ್ತ್ವಾನನಾಂತರದೊಳ್ ಪೆರ್ಬುಲಿಯಿದ್ದುದು (ಕಳಕಂ. ೭೬). ಪೆಚ್ಚು$_1$ : ೧. ಎನಿತೆನಿತಂ ಪೆಚ್ಚುಗುಮಂತನಿತನಿತೊಡನೊಡನೆ ಪೆರ್ಚುತಿಕ್ಕುಂ ಮೋಹಂ ಧನದಿಂ ಪರಿಜನದಿಂದೆಂದಿನಿತಱಿನಗ್ಗಳವನೊಲ್ಲೆನೆಂಬಂ ಜೈನಂ (ಕಮುಕ. ೫-೬೩) ; ಒಂದಕ್ಕೆ ನೂಱುಮಡಿಯಾಗಿ ಪೆಚ್ಚಲ್ಕಿ(ಚಿನ್ನಳು. ೬-೦೯) ; ಉಚ್ಚವದೊಳಗಿತ್ತ ನವರತ್ನಭೂಷಣ ಪೆಚ್ಚಿ ಬಂದಿವೆ ನೋಡೇಳ್ಬ (ಕಂಕಚ. ೨೨-೯೬). ೪. ಒಸೆದು ಏಣ್ಣಾಳಿಂದ ಸುಖದ ರಸದ ಹೊನಲು ನಚ್ಚಿ ಪೆ[ಚ್ಚಾಂ. ಮು]ಚ್ಚಿ (ಕಮುಕ. ೩೬.

೦೯೩-೧) : ಪೆಟ್ಟಿದಿಂಗಡಲೂರ್ಮಿಮಾಲೆ ಮಾಲೆಗಳೆದೆಯೊಳುಚ್ಚಳಿಸಿ ಪೊಳೆ ಪೊಳೆವ ಮಣಿಮಿಗ್ಗಳ್ (ಕೈಬಿಡಾ. ೬-೦೦). ೭. ಭೂತೇಶನಾಂಗಗೇಯಾರಾಧಿಸುತ್ತಮಿರೆ . . . ಧನವಿಲ್ಲ ತೀರುತಿರೆ ಮನವಲ್ಲಿ ಪೆರ್ಚುತಿರೆ (ಕೊಂಗುರ. ದೇ. ೧೫೩-೧೬) ; ಸಚ್ಚರಿತ್ರಂ ಕಲ್ಲದೇವಂ ಪೆಚ್ಚಿ . . . ಜಾಯಿಲಪನಾಗಳ ಚಟುಕಿದುತ ಕರೆದು (ಬಸವು. ೫೫-೪೬) ; ಪೆರ್ಚುತ್ತಂ ಸೀಕರಣೆ ರಸಪಾನಗಳ ಸವಿಗೆ (ಕಬಕು. ೫-೬೦). ೧೨. ಅಧಿಕಗೊಳಿಸು ; ವೃದ್ಧಿಪಡಿಸು : ಒಲಿದು ಕೌರವ ಪಾಂಡವರಿಗಗ್ಗಳಿಪ ಮಿತ್ರತ್ವವನು ಪೆರ್ಚಿಯುಲಘುಸೌಖ್ಯದ ರಚಿಸಿ ಬಂದೈ (ತಿಕ್ಕುಅ. ೩-೨೩). ೧೩. ಮೀರು ; ಮಿಗಿಲಾಗು : ಪೆಚ್ಚಿದವರುಂಟಾದಡೀಕೆಯು ಮೆಚ್ಚುವುದು ವೀಣೆಯನೆನಲು ತಾನುಚ್ಚ ಸರದಲಿ ಸಾರಿಸಿದನಾ ಚಾರುದತ್ತಕನು (ಶಾಕ್ಷರಾ. ೦೮.೬). ೧೪. ಶೋಭಿಸು : ಕಾಂತಿಯನ್ನು ಹೊಂದು : ಅಚ್ಚಮುತ್ತಿನ ಗುಡಿಗಳಿಂ ರತ್ನಕ್ಲಿಪ್ತಪಟ್ಟಿಗಳ ಕುಚ್ಚುಗಳ ಸಂದಣಿಗಳಿಂ ಕೇರಿಕೇರಿಯೊಳ್ ಪೆಚ್ಚಿದುವು ಗೃಹಗೃಹದ್ವಾರಂಗಳೊಳ್ ಘುಹಾಮೇರುವೆಗಳೇನೆಂಬೆನು (ಕಬಕು. ೫-೩). ಪೆಚ್ಚು : ೧. ಬಲ್ವಿಲ್ಲಳ್ಳುದುರೆ ಕುದುರೆಯೊಳ್ಕಟ್ಟಿ ಅತಿತುಮುಲ ಕಾಳಗ ಪೆರ್ಚೆ (ಎಶ. VIII. ಸೊರಬ. ೦೦-೬ ; ಸು. 800). ೧೦. ಈಸತ್ತ ಧರ್ಮ್ಮಪಾಲಾನ್ವದೋರಾ ಕುಲಂ ಪೆಚ್ಚುಗೆ (ಎಶ. VI. ಕಡೂ. ೩೭.೮ ; ಸು. 675 ?) ; ಕಜಿಯ ಅರಸಂಗೆ ಒಳ್ಳಿಲ್ ಪೆರ್ಚುಗೆ (ಕ್ಕಿಆ. ೦೯೦೮, ೦೫-೦೫ ; 700) ; ಕೊಟ್ಟೊಬ್ಬನ ಕುಲಂ ಪೆರ್ಚುಗೆ (ಎಶ. VI. ಮೂಡಗೆ. ೨೬-೦೦ ; ಸು. 050 ?). **ಹೆಚ್ಚು₁** : ೧. ಹೆಚ್ಚದು ಕುಂದದು . . . ಕರಗದು ಕೊರಗದು ಎನ್ನ ನಿರ್ಭಾವಾರ್ಚನೆ (ಅವಡ. ೫೦-೦೫೦) ; ಮಾತುದೋಷದು ಹೆಚ್ಚಿದಾನಂದಾತಿರೇಕಕೆ ಚಿತ್ತ ನೆಲೆಯಾದು (ಕುಮಾರವ್ಯಾ. ೦೫-೨) ; ದಿವಸ ದಿವಸಕೆ ಬಾಲಶಶಿ ಹೆಚ್ಚುವವೊಲನುಜರುಸಹಿತ ಲಕ್ಷ್ಮೀಧವನು ಹೆಚ್ಚಿದನು (ತೊರಂ. ೦-೮-೬೦). ೫. ಕದಳಿಯೊಳು ಮದದಾನೆ ಸೊಕ್ಕಿಂದದಲಿ ಹೆಚ್ಚಿದ ಚಾತುರಂಗದ ಮೆದೆಯನೊಟ್ಟಿದು ಹೂಣೆ ಹೊಕ್ಕನು (ಕುಮಾರವ್ಯಾ. ೫-೪). ೬. ಇದ ನನ್ನದೆಂದು ನಚ್ಚಿ ಮಚ್ಚಿ ಹೆಚ್ಚಿ ಕೆಚ್ಚುಗೊಂಡು ಬಚ್ಚತಹೋದ ಎನ್ನ ಮನಕ್ಕೆ ಇನ್ನಾವುದು ಗತಿಯೊ (ಅವಚ. ೦೫-೩೪); ಹೆಚ್ಚಿದ ಹಿರಿಯ ಡೊಳ್ಳಿನ ರಾವುತರ ಕೆಡಹಿದನು ನಿಮಿಷದಲಿ (ಕುಮಾರವ್ಯಾ. ೦೦ ೦೮); ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕ್ಕೆ ಮೆಚ್ಚು (ಪುರಂತ. ೨-೯೫ ಅನುಬಂಧ). ೭. ದೇವದೇವ ಕರುಣಿಸುವೆನುತ ಬಗೆ ಹೆಚ್ಚಿ ತನು ಹೆಚ್ಚಿ ನಟ್ಟಂತೆ ನಿಂದಿರುತೆ (ಬಸವ. ೫-೨೪); ಮೆಚ್ಚಿ ಬಂದವಳಲ್ಲ ಕಂಪಿಲರಾಯಗೆ ಹೆಚ್ಚಿ ಬಂದವಳಾನಲ್ಲ (ಕುಮಾರಾಮ. ೨೬-೦೨೦). ೮. ಬೊಮ್ಮಿದೇವಂ ಹೆಚ್ಚಿ ಹೋಹೋ ನಿಲ್ಲು ನಿಲ್ಲೆಂದೆನುತ ರಭಂಕಿಸಲು . . . ಬೆಚ್ಚಿ ಮದಕರಿ ಕೆಡೆದು ಮಡಿಯಿತು (ಬಸವ. ೨೨-೩೩); ಪೌರುಷಾಂಗದ ನಿರತಿಶಯಮವನು ನೋಡು ನೀನೆಂದುರುಪರಾಕ್ರಮಿ ಹೆಚ್ಚಿದನು ಹೇರಾಳರೋಷದಲಿ (ತೊರಂ. ೪-೦೦-೨೬). ೧೦. ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ ಚಂದ್ರ ಕುಂದೆ ಕುಂದುವುದಯ್ಯಾ (ಬಸವ. ೨೫). ೧೨. ಜಡಿವ ಹಿರಿಯುಬ್ಬಣದ ಹೆಚ್ಚಿದ ಮುಡುಹುಗಳ . . . ಹೊಳೆವ ದಾಡೆಯ ದಡಿಗ ದಾನವನವನಿ ಹೆಚ್ಚಿಗೆ ಸೆಗ್ಗಲೈತಂದ (ಕುಮಾರವ್ಯಾ. ೦೫-೪೪). ೧೫. ಉತ್ಸಾಹಿಸು : ತಿರುನೀಲಕಂಠಕುಶವರು ಹಿಗ್ಗಿ ಹೆಚ್ಚುತ್ತಿ[ಪಾಠಾಂ. ಹೆಚ್ಚಿ ಹಿಗ್ಗುತ್ತ] (ತಿರುಕ. ದೇ. ೦೦-೦); ಉರಿಯ ಬಂದಿಯ ಹಿಡಿದು ಹೆಚ್ಚುವ ದೊರೆಯಲೇ ದಿಟ ಪಾನರಸವೆಲೆಯರಸ ನಿನ್ನ ಕುಮಾರನೀಸರ ಪಾಡು ಪಾರ್ಥಂಗೆ (ಕುಮಾರವ್ಯಾ. ೯-೪೦). ೧೬. (ಆಲಂ) (ಬಳೆ, ಮಂಗಳಸೂತ್ರ ಮುಂತಾದ ಮಂಗಳವಸ್ತುಗಳನ್ನು ಕುರಿತು ಹೇಳುವಾಗ) ಒಡೆ; ತುಂಡಾಗು ; ಸೀಳು : ಈ ಕಾಲದ ಬಳೆಗಳು ಕೊಟ್ಟುಕೊಂಡು ಒಳಗೆ ಹೋಗುತ್ತಿದ್ದಂತೆಯೇ ಹೆಚ್ಚುವುವು (ದಾಸಕಾಂ. ೬೦); ಕರಿಮಣಿಸರ ಹೆಚ್ಚಿದೆ. ಬೇರೆ ಮಾಡಿಸಬೇಕು (ರೂಢಿ). ೧೭. ಮುಗಿ: ಇಲ್ಲವಾಗು; ತೀರು : ಮನೆಯಲ್ಲಿ ಅರಿಸಿನ, ಕುಂಕುಮ ಹೆಚ್ಚಿದೆ. ಅಂಗಡಿಯಿಂದ ತರಬೇಕು (ರೂಢಿ). ೧೮. ತುಂಡು ಮಾಡು; ಕತ್ತರಿಸು: "ಕೊಚ್ಚು, ಹೆಚ್ಚು, ಹೆರೆ, ತುರಿ, ತುಂಡರಿಸು" (ಕಂನುಕು. ೮೨); ಈ ಮೂಲೆಯಲ್ಲಿ ಪಲ್ಲೆ ಹೆಚ್ಚುವ ಈಳಿಗೆ ಇಟ್ಟಿದೆ (ಮುಂಬಸಾ. ೪-೦೭೩); ತರಕಾರಿಗಳನ್ನು ಹೆಚ್ಚುವುದಕ್ಕೆ ಮುಂಚಿತವಾಗಿ ತೊಳೆದು ಶುಚಿಮಾಡಬೇಕು (ಗೃಹವಿ. ೫೦). 'ಪೆಸ್ಸು₁' ಪರಾ.

**ಹೆಚ್ಚಿಕೊಳ್ಳು** = ೧. ಕತ್ತರಿಸಿಕೊಳ್ಳು : ಕೈಹೆಚ್ಚಿಕೊಳ್ಳದೆ ಜೋಪಾನವಾಗಿ ತರಕಾರಿಯನ್ನು ಹೆಚ್ಚು (ರೂಢಿ). ೨. ಗರ್ವಿಸು ; ಅಹಂಕಾರಪಡು : ಈ ಹುಡುಗ ತುಂಬ ಹೆಚ್ಚಿಕೊಂಡಿದ್ದಾನೆ. ಇವನು ಕ್ಷಮೆಗೆ ಅರ್ಹನಲ್ಲ (ವಚಪಾ. ೮೫).

[ದೇ॥. ತಮಿ. ಪೆರು, ಪೆರುಗು ; ಮಲ. ಪೆರುಕು; ತುಳು. ಪೆರ್ಚು, ಪೆರ್ಜು, ಪೇರ್ಚು, ಪೆಚ್ಚು ; ತೆಲು. ಪೇರುಚು, ಪೇರ್ಚು, ಹೆಚ್ಚು, ಎಚ್ಚು ; ಕೋಲಾ. ನಾಯ್ಕಿ. ಪೆರ್ಗ್ ; ಗೊಂಡಿ. ಪರ್ಸಾನಾ]

**ಪೆರ್ಚು₂, ಪೆಚ್ಚು₂, ಹೆಚ್ಚು₂** (ನಾ). ೧. ಆಧಿಕ್ಯ ; ಹೆಚ್ಚಳ ; ವೃದ್ಧಿ : ಕಾಲಚ್ಚೆರ್ಚಂ ಕಂಡುದಜಂ ಧೂರ್ತರಪ್ಪ ಪೊಲ್ಲ ಲಿಂಗಿಗಳ ಪೆರ್ಚಕ್ಕುಂ (ಐಡ್ಮಾರಾ. ೯೬-೨೮) : ಕೋಪದ ಪೆರ್ಚಿನೊಳ್ ನಡುಗುವೂರುಯುಗಂ ಬಿಡುಪಿಂದರಲ್ದ ನಾಸಾಪುಟಂ (ಕಂಕಲಾ. ೭-೬) ; ಇನನಸ್ತಮಿತ್ರಿಯನಾತನೊಳ್ ತವದ ಪೆರ್ಚಂ ನಿಚ್ಚಲುಂಗೈವ ಕೋಕಕುಳಕಾಯಕ್ಕಿನಿತಾಯ್ತು ಶೋಕಂ (ಶಂತ್ರಕು. ೮-೦೦). ೨. ಹಿರಿದು ; ದೊಡ್ಡದು : ನೀನ್ ಪೇಚ್ಚುದಾಪುದುಂ ಪೆರ್ಚಲ್ತು (ಅಕ್ಕಶಾ. ೦೫-೨೯೬). ೩. ಹಿರಿಮೆ ; ಮೇಲ್ಮೆ ; ಹೆಗ್ಗಳಿಕೆ : ಕರ್ನಾಟಕದಿಂದೆ ಮತ್ತೆ ರಚಿಸಿ ಶ್ರೀಧರ್ಮನಾಥಪ್ರಬಂಧದ ಪೆರ್ಚಂ ತಳೆದಂ (ಬಾರಕು. ೦.೪೮). ೪. ಅಭ್ಯುದಯ ; ಏಳಿಗೆ : ದೈವಬಲವಿಲ್ಲದ ಸೇವಕನಂತೆ ಮುಟ್ಟುಗೆಟ್ಟು ಗ್ರಹಬಲವಿಲ್ಲದ ಜನ್ಮಿಗನಂತೆ ಪೆರ್ಚಿಲ್ಲದೆ (ಬಾಂಕಿಪು. ೪-೬೦ ಪ); ಗಂಗಾಧರ ಪುರಹರ ಸರ್ವೇಶನೆಂದುರ್ಬುವಾ ಸೌಖ್ಯದ ಪೆರ್ಚಂ ಕೊಟ್ಟು . . . ರಕ್ಷಿಪ್ಪುದೆನ್ನಂ (ರಕ್ಷಾಶ. ೬೦). ೫. ಉಕ್ಕುವಿಕೆ; ಪ್ರವಾಹ : ಉದರದೊಳಿರ್ದ ತನೂಜನ ವದನೇಂದುನ್ನುತಿಯ ಮಾಡೆ ಲಾವಣ್ಯಸಮುದ್ರದ ಪೆರ್ಚನರುಹಿ ಲಾವಣ್ಯದ ಪುಣ್ಯದ ಪರಮಾವಧಮನೇನೆ ಬಿದ್ದದಳಿ (ಅಜಕು. ೩-೨೦) : ವರ್ಜಸ್ಸುಧಾಂಬುಧಿಗೆ ಪೆರ್ಚಂ ಮಾಟ್ಟ ಚಂದ್ರೋದಯಂ (ಕಾವ್ಯಶಾ. ೩೬೪) ; ಜಗತೀಪಲಯಮವಮಲಸೌಭಾಗ್ಯ ರತ್ನಾಕರಂ ಪೆರ್ಚನಿಂ ಮೇರೆವರಿಯೆ (ಕೈಬಿಡಾ. ೦.೦). ೬. ಸಂತೋಷ; ಹಿಗ್ಗು ; ಆನಂದ : ಮತ್ತಕೋಕಿಲೋಚ್ಚೈರ್ಧ್ವಾನಂ ಮಾಹುರಾರ್ಣಿಸೆ ಪಡೆದತ್ತುಹರ್ಷಿತಂ ಪೆರ್ಚನಂತರಂಗಕ್ಕನ್ನಾ (ಕಲಿರಾ. ೦-೫೩); ತ್ರೈಲೋಕ್ಯ ಮಾಂಗಲ್ಯನಂ ಕಣ್ಣಾರೆ ನೋಡಿ ಮನದ ಪೆರ್ಚಿಂದಂ ಕರಕಮಲಂಗಳಂ ಮುಗಿದು ನಿಂದಿರ್ದು (ಧರಣೀಕ್ಕು. ೫-೬೦) : ಪೆರ್ಚೊದವಿದ ಮೇಣ್ ತತ್ಪತಿಗಳುತ್ಸವವಾರಿಧಿ ಮಿಗೆ ಗೌರಿ ತಾನುದಯಿಸಿದಳ್ (೧೦೪. ೩-೪೬). ೭. (ಅಲಂ) ಕತ್ತರಿಸುವಿಕೆ ; ಛೇದನ : ಒಸಗೆಯ ಮೇಲೆ ಮತ್ತೊಸಗೆ ಪೊಕ್ಕುಟ ಪೆರ್ಚಿನ ಮೇಲೆ ಪೆರ್ಚು (ಅಜಕು. ೦೨-೬೦). ೮. ಗರ್ವ ; ಅಹಂಕಾರ : ಪೆರ್ಚ[ರ್ಚ]ನೊಸೆದೀವತ್ತಿಬೆಳ್ಳುಗದಿಂದವಿನಾವ ಮುಮ್ಮುಲ ಮಜುಗುತ್ತುವಿನಾವ ಕಡುಲೋಭಕರದಾನಗುಣಂಗಳಂ ಏಳ್ಚೆಲೆವುದಾರ್ತು ಕೊರ್ತು ಪಿಂದಿನ ಗುಣಾ ಗುಣದಂಕಕಾರ್ತಿಯಾ (ಅಜಕು. ೦೨-೦೭). **ಪೆಚ್ಚು₂** : ೧. ಎಲ್ಲಿ ನೋಡಲು ರೋದನದ ಪೆಚ್ಚು (ತಿಪ್ಪುಸ್ತಿ. ೦-೦೮) ; ಪೆಚ್ಚಿನಿಂ ಪೊಡೆವ ಸಿಡಿಲ್ಮಿಂಚುಗಳ ಹೊಮ್ಮುಗಳಿಂ ಬಿಮ್ಮುಗಳಿಂ ತತ್ಪಥಮುಗುರ್ವಿಸಿದುದು (ಕಂಕು. ೫೬ ೨೨). **ಹೆಚ್ಚು₂** : ೧. ಮುಚ್ಚಿರಿವ ವಿಟಕೋಟಿಯುಂ ಕಟವುಚ್ಚಿ ನೋಡುವ ನೋಟದಂಬಿನ ಹೆಚ್ಚನೀಕ್ಷಿಸಿ (ಬಸವು. ೪೦.೪) ; ಕೂಡೆ ಮೋಘೇಶ್ವರ ವಿಜಯ ಜಯಂತರ್ಗೆ ನಾಡೂರುಗಳ ಹೆಚ್ಚನಿತ್ತು (ಶರಶ. ೨೩-೦೦೮) ; ಅದರ ಸಿಟ್ಟು ನನಗೇ ಹೆಚ್ಚು (ಹಾಹಃಕ. ೪). ೨. ನನ್ನ

ಸಹೋದರರ ಹಸಿವೆಯು ಸಂಕಟದ ಮುಂದೆ ನನ್ನದೇನೂ ಅಷ್ಟು ಹೆಚ್ಚಿನದಲ್ಲ (ಶುಂಅಯ. ೯ ೭೭). ೩. ಮುಂದಿ ಮೆಚ್ಚಲದುವೆ ಹೆಚ್ಚೆ? ಸುಳ್ಳು. ಹೊಳ್ಳು ಆ ಸ್ತುತಿ! (ಅಃಕೀ. ೦೭-೧). ೯. "ಹೆಚ್ಚು ಎಂದರೆ ಧಾನ್ಯ ಸಾಗಿಸುವುದಕ್ಕೆ ಮೊದಲು ಮಾಡುವ ಒಂದು ಕ್ರಿಯೆ" (ಶುೂಅಾನ. ೩೯) ಇನ್ನು ಉಳಿದಿರುವುದು ಧಾನ್ಯವನ್ನು ಮನೆಗೆ ಸಾಗಿಸುವುದೊಂದೇ. ಇದಕ್ಕೆ ಮೊದಲು "ಹೆಚ್ಚು" ಮಾಡುತ್ತಾರೆ (ಶುೂಅಾನ. ೩೯).

**ಹೆಚ್ಚು ಹೆಚ್ಚು, ಹೆಚ್ಚೆಚ್ಚು** (ದ್ವಿರುಕ್ತಿ) : ಇತ್ತೀಚೆಗೆ ಅವನು ಹೆಚ್ಚು ಹೆಚ್ಚು ಮೌನಿಯಾಗತೊಡಗಿದ್ದನು (ಕಾನೂರು. ೩೨೯); ದೊಂಬಲಾಗಿನ ಹಾಕಿ ದೊಂಡೊರಡೆ ಹೊರಳಿದರಿಲ್ಲ ಹೆಚ್ಚೆಚ್ಚು ಬಯಸಿದರಿಲ್ಲ (ಭುರಂದ. ೩. ೦೩೮ ೧); ನಾವು ಮೇಲಕ್ಕೆ ಹತ್ತಿದಷ್ಟೂ ನಮಗೆ ಭೂಮಿಯು ಹೆಚ್ಚೆಚ್ಚಾಗಿ ಕಾಣುವದು (ಭೂಗೋಳ. ೨). **ಪೆರ್ಚುಕಡಮೆ, ಹೆಚ್ಚುಕಡಮೆ, ಹೆಚ್ಚುಕಡಿಮೆ** = ೧. ವ್ಯತ್ಯಾಸ; ಭೇದ; ಲೋಕವೂವುದಾದೊಡಮೇನ್? ಪೆರ್ಚುಕಡಮೆ ಗಳೊಳಗೆ ಸಚ್ಚಿದಾನಂದದೀ ಲೀಲಾವಿನೋದದೊಳ್ (ಕ್ರಿಯಾಶಾ. ೭೨೫. ೧೩೭); ಕೆಲಸದಲ್ಲಿ ಹೆಚ್ಚುಕಡಮೆ ಆಗದಂತೆ ಮಾಡು (ರೂಢಿ); ಸನಸ್ಯ, ವಿಧಿವರ್ತಿ... ೨ ಯಜ್ಞದಲ್ಲಿ ಹೆಚ್ಚುಕಡಿಮೆ ಬಾರದಂತೆ ಸರಿನೋಡುತ್ತಿರುವ ಋತ್ವಿಕ್ಕಿನ ಹೆಸರು (ಸಿದ್ಧಾಂತ. ೨೦೭); ಚಿನ್ನಕ್ಕೂ ಕಬ್ಬಿಣಕ್ಕೂ ಹೆಚ್ಚುಕಡಿಮೆ ಇಲ್ಲವೇ? (ಗಾದೆ). ೨. ಸುಮಾರು; ಅಜಮಾಸು; ಹೆಚ್ಚುಕಡಮೆ ನಾನು ಅಲ್ಲಿ ಆರು ಗಂಟೆಗೆ ಬರುತ್ತೇನೆ (ರೂಢಿ); ಹೆಚ್ಚುಕಡಮೆ ನಾಳೆಯೊಳಗೆ ಈ ಕೆಲಸವನ್ನು ಮಾಡಿ ಮುಗಿಸುತ್ತೇನೆ (ರೂಢಿ); ಕೆಲವರು ಈ ವಿವರಣೆಯನ್ನು ಹೆಚ್ಚುಕಡಿಮೆ ಒಪ್ಪಿಕೊಂಡು ತಮ್ಮ ದೃಷ್ಟಿಯನ್ನು ಅಂತರ್ಯಾಮಿಯಾದ ನಿರಪೇಕ್ಷ ಸತ್ಯದ ಕಡೆಗೆ ತಿರುಗಿಸಿದರು (ತತ್ವಶಾ. ೭೦೧). **ಪೆರ್ಚುಕುಂದು, ಹೆಚ್ಚುಕುಂದು** = ೧. ಆಧಿಕ್ಯ ಹಾಗೂ ಕೊರತೆ; ನ್ಯೂನಾಧಿಕ್ಯ: ಪೆರ್ಚುಕುಂದಿಲ್ಲದಂತೆಚ್ಚ ಜಿಗೂಡಿ . . . ಸೊಲ್ಲಿಸುವೆನು (ಹರಿ. ೧. ೯೯); ಮಾತಿನ ಮಾಲೆಯು ಹೆಚ್ಚುಕುಂದಿನ ಹೋರಾಟವುಳ್ಳನ್ನಕ್ಕರ ಅನ್ವೇಶಿಯಲ್ಲ (ಅಂದ. ೩೩-೯೭); ಶರಣರ ಹೆಚ್ಚುಕುಂದುಗಳು ನುಡಿಯುದಿಹ ಸಜ್ಜನರ್ರದ ಭಾಷೆ (ಬಸವ. ೬-೧). ೨. ವ್ಯತ್ಯಾಸ; ಹೆಚ್ಚುಕಡಮೆ; ಅಂತರ: ಪರಿಕಲ್ಪಂಗೆಯ್ಯದನ್ನಂ ಕುಡದ ಮರಕುಜಂ ಪೆರ್ಚುಕುಂದುಳ್ಳುದು (ಕುಸುಮಾ. ೨-೦೩೦). ೩. ಏರಿಳಿತ: ಉಬ್ಬರವಿಳಿತ: ಒಂದು ಭಂಗವನಾಂತೆನೆಉತಬ್ಧಿ ತಗ್ಗಿ ತಾಂ ಹೆಚ್ಚು ಕುಂದಿನೊಳಿಸೆದುದು (ಕಲಶ. ೨-೩). **ಹೆಚ್ಚಲಿ** = 'ವೃದ್ಧಿಯಾಗಲಿ' ಎಂಬರ್ಥದಲ್ಲಿ ಹೇಳುವ ಮಾತು: ರಾಗಿಯನ್ನು . . . ಅಳೆಯಲು ಪ್ರಾರಂಭಿಸುತ್ತಾರೆ. ಪ್ರಾರಂಭದಲ್ಲಿ ಒಂದು ಎಂದು ಹೇಳುವುದಿಲ್ಲ. "ಹೆಚ್ಚಲಿ" ಎನ್ನುತ್ತಾರೆ (ಶುೂಅಾನ. ೩೯). [< ಪೆರ್ಚು₁./ತೆಲು. ಪೆಚ್ಚು]

**ಪೆರ್ಚುಂಬುರುಳ್** (ನಾ). ಅಧಿಕವಾಗುತ್ತಿರುವ ಹೊನ್ನು; ಹೆಚ್ಚುತ್ತಿರುವ ಸಂಪತ್ತು: ಆತುಂಬೊಲು.ಮಿಂಚುಂಬುಬುಂ, ಪೆರ್ಚುಂಬುರುಳ್ (ಕವಿರಾ. ೦೭೦ ಕೃ.ಶೋ). [ಪೆರ್ಚು₁ + ಪುರುಳ್]

**ಪೆರ್ಚುಗೆ, ಪೆಚ್ಚುಗೆ, ಹೆಚ್ಚಿಗೆ₁, ಹೆಚ್ಚುಗೆ** (ನಾ). ೧. ಆಧಿಕ್ಯ; ವೃದ್ಧಿ; ಬಾಹುಳ್ಯ; "ಉಬ್ಬರಂ . . . ಒಟ್ಟಜೆ, ಪೆರ್ಚುಗೆ–ಈ ೧೯ ಅತಿಶಯಂ" (ಕಶಶಾ. ೩೭–೨೩೪); ಉತ್ತಮವೈರಾಗ್ಯದ ಪೆರ್ಚುಗೆಯಂ ತಡೆಯದೆ ಸೆಟ್ಟಿಯನೆಯ್ದಿವಂದು (ರಶಶಾಮ್ಮ. ೨-೦೪೩); ಪರರ್ಗೆ ತಮ್ಮಯ ಸುವಿದ್ಯೆಯನಿತ್ತೊಡೆ ಮತ್ತನುತ್ತಿಯುಂ ಸೌಂದರವಾಗಿ ಪೆರ್ಚುಗೆಯನೆಯ್ದುವುದು (ಶಾಶು. ೯-೨೯). ೨. ದೊಡ್ಡದು; ಹಿರಿದು: "ಪೆರ್ಚುಗೆಯೆನೆ ಪಿರಿದಪ್ಪುದು" (ಶಜಾ. ೩೭). ೩. ನೀಳವಾದುದು; ನಿಡಿದಾದುದು: ನಿನ್ನ ವಿಕ್ರಮಸಿಂಹದಾ ಕೇಸರವನ್ನೆಲ್ಲ ಕತ್ತರಿಸದಿರೆ, ಪೆರ್ಚುಗೆಯ ದಂಷ್ಟ್ರ ನಖಿಗಳಂ ಕಸಿವಾಡದಿರೆ . . . ಹೆತ್ತಬ್ಬೆ ಮೇಣಾಯ್ಕನಾಣೆ (ಅಕ್ಷಾಂಗ. ೭೯-೨೦೭೨). ೪. ಹೆಚ್ಚಿನದಂ; ಅತಿಶಯವಾದುದು; ಉತ್ತಮವಾದುದಂ: ತರುಣಿಯರಿರ್ವರು ತಂತಮ್ಮ ಸಖಿಯರ ಲರದೊಳಗಿತ್ತಾದ ಪುಡಿಯ ಪರಿಮಳ ಪೆರ್ಚುಗೆಯೆಂದು ವಿದಗ್ಧರಿಂದಬೀದು ಬರುವುದೆಂದು ಕಳುಹೆ (ಶಬ್ದಸಾ. ೦೨-೦೭). ೫. ಉಬ್ಬರ; ಉಕ್ಕುವಿಕೆ: ತೆರೆನೊರೆ ಬುದ್ಬುದಂ ಸುಟಿ ಜಲಂ ತೆನೆ ಪೆರ್ಚುಗೆ ಗುಣ್ಪು ಘೋಷಣಂ . . . ಬಗೆಗಾದೊಡೆ ಸ್ಮೃತಿ ಸಮುದ್ರವರ್ಣನಂ (ಸೂಕ್ತಿಸು. ೨. ೦); ಪೆರ್ಚುಗೆಯೊಳುಬ್ಬಿದ್ದ ಪಾಲ್ಗಡಲ ವೀಚಿಗಳೊ . . . ಎನಲ್ಕಸರಿಸಿತ್ತು ಚಂದ್ರಿಕರೆಂಗಳಿಲ್ಲಾ ದೆಸೆಯೊಳು (ಕೃ.ಐರಾ. ೨೬-೦೫); ವಾರ್ಧಿ ಪೆರ್ಚುಗೆಯುಮಂ ತಾಳ್ದನುಮಿ ತೋಳ್ದಯುಮಂ ಹಿಮಾಂಶುಚಂದ್ರಮಂ (ರಾಜಶೇ. ೯. ೪). ೬. ಏಳಿಗೆ; ಅಭ್ಯುದಯ: ಪ್ರಜೆಗಳ ಪೆರ್ಚುಗೆಗೆಂದುಪಿಳಜನಾರ್ಥಿತ ಫಲದ ನಮುಸಾರದ್ರುಮಮಂ ವಿಶ್ವಜಗನ್ನುತನ ಸುಳಿನಬುದ್ಧಿ ಜಳದೆ ಬಳೆಯಿಸನನೇಸುದಾರಸೊ ಭೂಪಂ (ವರ್ಧಪು. ೦ ೬೪). ೭. ವೈಶಾಲ್ಯ; ವ್ಯಾಪ್ತಿ: ಒಂದು ಅಜ್ಞದ ಪೆರ್ಚುಗೆಗೆ ಕಾರಣಮಲ್ಲದುದಂ ಕಾರಣಂಗೆಯ್ದು ನುಡಿಲದು ಪ್ರೌಢೋಕ್ತಿಯೆನಿಪುದು (ನರಪ. ೬೮-೨೩೩). ೮. ಪರಾಕ್ರಮ; ಶೌರ್ಯ: "ಪೆರ್ಚುಗೆಯೊಳ್ ಬಲಂ" (ಶಜಾ. ೭೭). **ಪೆಚ್ಚುಗೆ** : ೧. "ಪೆಚ್ಚಾಣ ಪೆರ್ಮೆ ಪೆಚ್ಚು [ಶಾಶಾಂ. ಹೆಚ್ಚು]ಗೆ" (ವಾರಿ. ೨೫). ೫. ಭಂಗವೆಂಬ ಗೊಂದಂ ಸೆಸೆನೆನೆನು ನಿಟ್ಟುಸಿರ್ವಿಚ್ಚು ಸುಯ್ಯುಂತುವಧಿ ತೆರೆ ಪೆಚ್ಚು [ಶಾಶಾಂ. ಚುರ್]ಗೆಯೊಳಿರ್ದುದು (ಕೃ.ಐರಾ. ೬-೨); ಕಣ್ಗೆಸೆದುದು ಮಹಾರ್ಣವವಬ್ಬರಿಯು ಪೆಚ್ಚುಗೆಯನೆಚ್ಚಱಿಸುತ (ನಂದಿನಿ. ೨-೬). ೯. ಹಿರಿಮೆ; ಹೆಗ್ಗಳಿಕೆ: ಕೆಚ್ಚು ಮಚ್ಚರಿಸಿ ಜಲದ ಮೇಲೆ ನಡೆಸಿದ ಪೆಚ್ಚುಗೆ ತನಗೊಬಂತೆ ಮಚ್ಚರಿಸಿಯೆ ಮಾಜೊಸೆಂತೊಡೆ ನಿನ್ನನು ಹೆಚ್ಚು ಮಾಡುವೆ ರಣಧರೆಗೆ (ಅಜಿತ. ೬-೨೦೭). **ಹೆಚ್ಚಿಗೆ₁** : ೧. ನಲಿಕೆ ಕೈಗಳ ಬಿಚ್ಚಿ ಬಿದ್ದನು ಪುರವಿರಹದ ಹೆಚ್ಚಿಗೆಯ ಆಪದನು ಹಸರಿಸಬೀಯೆ ನರ್ಜುನನ (ಕುಮಾರವ್ಯಾ. ೮-೩೦). ೧೦. [ಗಣಿತ]ಗುಣಾಕಾರ (?) : ಆಚಂದ್ರಾರ್ಕಾನನು ತಂನ ಪಾಲಿಗೆ ಬಂದ ಭೂಮಿಯು ಪಳಗೆ ಕೊಟದು ಗ ೪॥ ಉಭಯಂ ಗ ೮॥ ತಾಶಾಪದ ನಿಂದ ಗ ೧'೩ = ಒಟ್ಟಿನಲು ಕೂಡಿದ ಹೆಚ್ಚಿಗೆ ಯಿಂದ ಗ ೨'೩॥ ಅಂತು ಗ ೯॥ (ಎಕ. VII. ಶಿವಮೊ. ೨೯-೨೩; 1712).

**ಹೆಚ್ಚುಗೆ** : ೧. ಹಣೆಯ ಹೆಚ್ಚುಗೆ ಹಸನ ಕೊಡುವುದ (ಕುಮಾರವ್ಯಾ. ೮. ೯೮); ಕಂಚುಕಿಯೊರ್ವಳ್ ತನ್ನಪರದಟನ ಪೆಂಪಂ . . . ವಿದಿಶಾನ್ವಯ ಶುದ್ಧದ ಹೆಚ್ಚುಗೆಯಂ . . . ಪೇಳುತ್ತುಂ ನುಲ್ಲನೆ ನಡೆಸಿದಳು (ಶಬರಶಾ. ೩-೯೭); ಶ್ಲೇಷ್ಮ ಹೆಚ್ಚುಗೆಯುಂಟಾದ ಛರ್ದಿಯು ಶ್ಲೇಷ್ಮದಿಂದಾದುದಾಯಿತೆಂದರಿವುದು (ಕಶವೈ. ೨೬೪). ೫. ತನ್ನನೇ ಹೀರಿ ಬಿಡ ಮಾಳ್ಪ ಪಡುಬಣ್ಣಿಯುಂ ತನ್ನನೇ ಹೆಚ್ಚುಗೆ [ಶಾಶಾಂ. ಪೆರ್ಚುಗೆ]ಯ ಮಾಳ್ಪದ್ಯುತಿಕರುಣಂ ಮುನ್ನೀರು ತನ್ನ ಗಂಭೀರತನವನೇ ಮೆಚ್ಚಿದು ಗರ್ಭೀಕರಿಸಿತಲ್ಲವೇ (ಸಮ್ಮಕೆ. ೬-೩೧). ೬. ಈ ಸಿರಿಯ ಸುಗ್ಗಿಯಲಿ ನಿನ್ನವರೇಸು ಹೆಚ್ಚುಗೆವಾಗಿ ಬದುಕಿದರೈಸುವನು ನೀ ನೋಡಿ ಹಿಗ್ಗದೆ . . . ಮಂಜುಗುಂತ ಸೂಸಿದೈ ಸಾಹಿತ್ಯಭಾಷೆಯನೆಂದನಾ ಕರ್ಣ (ಕುಮಾರವ್ಯಾ. ೦೭. ೦೭); ಗತಿಯದಾವುದು ತನಗೆ ವಂಶೋನ್ನತಿಯ ಹೆಚ್ಚುಗೆಗೇನು ಹದನೆಂದವಶಿಶಯದ ಶೋ ದಿ ಬಿಬಿನಿಂಬಿದನು ಭೂಪ (ಕೆಹರಿ. ೦-೪-೬). [ಪೆರ್ಚು₂ + —ಗೆ]

**ಪೆರ್ಚುಗೊಳ್** (ಕ್ರಿ). (ಅಲಂ) ಹಿಗ್ಗು; ಸಂತೋಷಿಸು: ತನ್ನ ಪೆರ್ಚುಗೆಯೊಳು ಪೆರ್ಚುಗೊಂಡುಜೇ ತನ್ನ ಕುಂದಿನೊಳು ಕುಂದುವಳ . . . ಮನ್ನಿಪುದೊಲಿದು (ಹರಿ. ೬. ೪೪). [ಪೆರ್ಚುಗೆ + ಕೊಳ್₁]

**ಪೆರ್ಚುಗೆಗೊಳಿಸು** (ಕ್ರಿ). ಪೇಲ್ಮೆಯನ್ನುಂಟು ಮಾಡು; ತನಗಾದ ರೀತಿಯಿಂದಮೂದೊಡಂ ಬ್ರಹ್ಮಾಸ್ತ್ರಮಂತ್ರಮಂ ಕಲಿಸಿ ಪೆರ್ಚುಗೆಗೊಳಿಸು ಎಂದು ನಾನಾ ಪ್ರಕಾರದವಾಗಿ ಬಿನ್ನಪಂಗೆಯ್ಯಲು (ಶಾರಶಾಂ. ೯-೨). [ಪೆರ್ಚುಗೆಗೊಳ್ + — ಇಸು₃]

**ಪೆರ್ಚುಗೆಡು** (ಕ್ರಿ). ಕುಂದು; ಕಡಮೆಯಾಗು: ಚಂದ್ರನ ಪೆರ್ಚಿ ಪೆರ್ಚುಗೆಡಲಾಗಿ . . . ಪಯೋಸಿಂಧುವ ಲೀಲೆಯುಂ ಬಳಸಿ ನಿಂದುವು

ನೀಲಘಟಂಗಳೋಳಿಯುಂ (ಶಾಂತಪು. ೬-೭೯). [ ಪೆರ್ಚು$_2$ + ಕೆಡು$_1$ ]

**ಪೆರ್ಚುಗೆವಡೆ** (ಕ್ರಿ). ವಿಸ್ತಾರಗೊಳ್ಳು ; ವಿಶಾಲವಾಗಂ : " ಅಗ್ಗಲಿಕಂ- ಪೆರ್ಚುಗೆವಡೆದವುದು " (ಶಬ್ದ. ೦೫೭ ೮೪೬). [ ಪೆರ್ಚುಗೆ + ಪಡೆ$_1$ ]

**ಪೆರ್ಚುವಡೆ** (ಕ್ರಿ). ಹೆಚ್ಚಾಗು ; ಅಧಿಕವಾಗು : ತನುಭೋಗಾಯುಷ್ಯಂಗಳ್ ಮನುಷ್ಯರೊಳ್ ಪೆರ್ಚುವಡೆಗುಮುತ್ಸರ್ಪಣದೊಳ್ (ಶಂಕಾಶಾ. ೦-೩೮); ಎರಡುಂ ಪಕ್ಕದ ವಜ್ರವೇದಿಕೆಗಳಂ ಮೆಯ್ವೆರ್ಚಿಯುಂ ಕ್ಷೀರಸಾಗರಮುಲ್ಲಂಘಿಸದಂತೆ ಪೆರ್ಚುವಡೆದುಂ ಧರ್ಮಾರ್ಥಮುಂ ಕಾಮರಾಗರಸಂ ವಿಡಿದೆ ಚಿತ್ತವೃತ್ತಿಗದು ಲೀಲಾಮಾತ್ರಮಾದುತನಲ್ . . . ಭೂಚಕ್ರಮಂ ತಾಳ್ದಿದಂ (ಜಲ್ಲಿಪು. ೩-೩೦). [ ಪೆರ್ಚು$_2$ + ಪಡೆ$_1$ ]

**ಪೆರ್ಚುವೆಱು** (ಕ್ರಿ). ಅತಿಶಯವಾಗು : ಪೆರ್ಚುವೆತ್ತಪರಂಜಿಗಳಶವನಷ್ಟ ವಿಧಾರ್ಚನೆಯಿಂದ ಸತ್ಕರಿಸಿ (ಶರಶ. ೦೭-೬೫). [ ಪೆರ್ಚು$_2$ + ಪೆಱು$_1$ ]

**ಪೆರ್ಜಡಿ** ' ಪೆರ್ಜಡಿ ' ನೋ.

**ಪೆರ್ಜಸ** (ನಾ). ಹಿರಿದಾದ ಕೀರ್ತಿ,—ಹೆಸರಂ : ಪೆರ್ಜಸಮನೆ ಪಿಡಿದೆನ್ನನೆ ರಣದೊಳಟ್ಟುವಂ (ಶಂಶಶಾ. ೯-೯೭); ಚಿಕದೇವನೃಪನಂದು ಪೆರ್ಜಸಮೊಂದಿ ಸೊಗಮಾಳ್ದಂ (ಅಶ್ರೀ. ೦-೨೦). [ ಪೆರ್ (< ಪಿರಿದು$_1$) + ಜಸ$_1$ ]

**ಪೆರ್ಜಾರಂಗಿ** (ನಾ). ಒಂದು ಊರಿನ ಹೆಸರಂ : ಎಡೆದಿಕ್ಕೇ ಸಪ್ತತಿ ಪ್ರತಿಬದ್ಧಃ ಪೆಜ್ಜಾರಜಿಗ್ಗಿ ನಾಮಗ್ರಾಮಸ್ಸರ್ವ್ವಬಾಧಾಪರಿಹಾರಸಮೇತೋ (ಮೈಅಂ. ೦೯೯೨, ೭೫-೦೦೦; 819). [ ? ]

**ಪೆರ್ಜುಂಕ**, ಪೆಜ್ಜುಂಕ, ಹೆಜುಂಕ, ಹೆಜ್ಜುಂಕ, ಹೆರ್ಜುಂಕ (ನಾ). ಬೆಲೆಬಾಳುವ ಸರಕು, ಪ್ರಾಣಿ, ಧಾನ್ಯ, ಅಂಗಡಿ ಮೊದಲಾದುವುಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಟಾಣೋಘಸಹಿತಂ ಪೆಜ್ಜುಂಕಂ ಬಿಲ್ಕೊಡೆ (ಕೊಂಶಾ. ೦೯೩೭, ಹಾನಗಲ್. ೭೩-೦೯; 976); ಆಯೂರ ಪೆಜ್ಜುಂಕಮುಮಂ ಬಿಟ್ಟು (ಮೈಅಂ. ೦೯೩೦, ೭೭-೯೭; 1080); ಅತ್ತಿಮರಸಂ ಮೂರುಲಕ್ಷದಡಕೆಯ ಪೆಜ್ಜುಂಕಮಂ ಬಿಟ್ಟ (ಸೌಇಇ. IX—1, ೦೦೬-೭೭. 1107). **ಪೆಜ್ಜುಂಕ** : ಪೆಜ್ಜುಂಕಕ್ಕೆ ದ್ರಮ್ಮ ೧ (ಪಾಂಡೇಶ್. ೩-೨೨ ಶ; 1047); ಕೆಱೆಗೆ ಪೆಜ್ಜುಂಕದಲುಯೆರಡುಲಕ್ಕವ(ಂ)ಡಕೆಯುಂ ಬಿಟ್ಟರ್ (ಕಇ. II, ೬-೨೯; 1072). **ಹೆಜುಂಕ** : ಹೆಜುಂಕ ಪಡರಾವು[ಳ]ದ ದಂಡನಾಯಕಂ ಕರಿಯ ಮಹೇಸ್ವರದೇವ ಗೋಯಿದರಸರ ಬೆಸದಿಂ (ಕಇ. IV. ೦೯-೦೦; ಸು. 1172); ಉಭಯಮಾರ್ಗದ ಹೆಜುಂಕ × × ಸುಂಕ (ಎಕ. XII, ತಿಪ. ೭೭-೦೭; 1379). **ಹೆಜ್ಜುಂಕ** : ಶ್ರೀಮನ್ಮಹಾಪ್ರಧಾನಂ ಬೆಳ್ವಲನಾಡ ಹೆಜ್ಜುಂಕ ದಂಡನಾಯಕ ಮಲ್ಲಪಂ (ಶಾಸಶ. ೨೩-೨೯; 991); ಗವಜೇಶ್ವರ ದೇವರ್ಗ್ಗೆ ಮೂಱುಲಕ್ಕ ಅಡಕೆಯ ಸುಂಕ ವಡ್ಡರಾಉಳ ಹೆಜ್ಜುಂಕಮಂ ಬಿಟ್ಟರು (ಸೌಇಇ. IX—1, ೨೩೬-೯; 1142); ಹೆಜ್ಜುಂಕದ ಅಧಿಕಾರಿ ಮಲ್ಲರಸರು (ಎಕ. IX, ಶಂಗಳೂ. ೬-೯; 1440). **ಹೆರ್ಜುಂಕ** : ವಿನಾಯಕ ದೇವರ ನಿವೇದ್ಯಕ್ಕೆ ಹೆಜ್ಜುಂಕದಲು ತಿಂಗಳಿಂಗೆ ಪಣವೆರಡಂ ಬಿಟ್ಟರು (ಸೌಇಇ. IX—1, ೨೨೩-೩೭, 1127) ; ವಡ್ಡರಾವುಳದಲೂ ಹೆರ್ಜುಂಕದಲೂ . . . ಕೊಟ್ಟರು (ಕಂಂಶಾ. ೯೦-೦೫ ; 1186) ; ಭತ್ತ ಭಗ ಕ್ಕಂ ಹೆರ್ಜುಂಕಂ (ಸೌಇಇ. IX-II, ೯೦೦-೦೭ ; 1366) ; ಹನ್ನಿಚ್ಛಾಸಿರದ ಹೆಜ್ಜುಂಕ ಬಿಲ್ಕೊಡೆ (ಸೌಇಂ. ೦೯೯೭, ಹಾನಗಲ್. ೨೦೯-೨೯ ; ?).

**ಹೆರ್ಜುಂಕದ ಹೆರ್ಗಡೆ, ಪೆಜ್ಜುಂಕದ ಪೆರ್ಗಡೆ** = ಬೆಲೆ ಬಾಳುವ ಸರಕು, ಪ್ರಾಣಿ, ಧಾನ್ಯ ಅಂಗಡಿ ಮೊದಲಾದುವುಗಳ ಮೇಲೆ ಹಾಕುವ ತೆರಿಗೆಯನ್ನು ವಸೂಲು ಮಾಡುವ ಅಧಿಕಾರಿ : ಶ್ರೀಮತ್ ಪೆಜ್ಜುಂಕದ ಪೆರ್ಗ್ಗಡೆ ಮಾವಣಯ್ಯಂಗಳ ಬೆಸದೆ (ಸೌಇಇ. XX. ೩೯-೦೦ ; 1053) ; ಪೆಜ್ಜುಂದ ಪೆರ್ಗ್ಗಡೆ ಕರಣಂಗಳುಂ ಗ್ರಾಮೇಶ್ವರದೇವರ್ಗ್ಗೆ . . . ಬಿಟ್ಟರ್ (ಸೌಇಇ. XI—II, ೦೯೫-೩ ; 1093).

[ಪೆರ್ (< ಪಿರಿದು$_1$) + ಸುಂಕ$_1$]

**ಪೆರ್ಜಡಿ**, ಪೆರ್ಜಡಿ (ನಾ). ಒಂದು ಊರಿನ ಹೆಸರು : ಶ್ರೀ ಕಾಲಾವಿಗ್ರ್ಗರವಡಿಗಳ ಶಿಷ್ಯರ್ ತಱೆಕಾಡ ಪೆಱ್ಜಡಿಯ ಮೊದೆಯ ಕಲಾಪಕದ ಗುರವಡಿಗಳ್ ((ಎಕ. II, ೩೩-೨ ; ಸು. 700). **ಪೆರ್ಜಡಿ** : ಪೆಜ್ಜಡಿಯ ಕೆಱೆಯ ಕಟಿಗೆ ಮೂಗಣ್ಣಾಗಂ ಕಟನಿ(ಎಕ. IX, ಮಾಗಡಿ. ೬೦-೦೨೩; 797). [?]

**ಪೆರ್ಜಡೆ** (ನಾ). ನೀಳವಾದ ಜಡೆ ; ಉದ್ದವಾದ ಹೆರಳು : ಪೊಳೆವ ಪೆರ್ಜಡೆಯುಲವರ್ಮಾಲೆ ಹೊಗಜ್ಜೆ ಬಿಡಯವಿಲ್ಲದ ಹೊನ್ನಂಡೊಗಾತಿಯರು ಬೆಂಗಡೆಯ ಸಾರಿದರು ರುಕ್ಮಿಣಿಯ (ಶಿಶುಹಶ. ೦೯-೬೦).

[ಪೆರ್ (< ಪಿರಿದು$_1$) + ಜೆಡೆ (< ಜಡೆ$_1$)]

**ಪೆರ್ಜೆಱಪು** (ನಾ). ದೊಡ್ಡ ಆತಿಥ್ಯ : ಮೂಮೆ ಪೆರ್ಜೆಱಪು ಪಟ್ಟಮು ತ್ರಿಭುವನಾಚಾರಿಯೆನ್ನುದ ಪೆಸರಿಟ್ಟು (ಇಇ. X, ೦೭೯-೫ ; ಸು. 7ನೆಯ ಶಶ)

[ಪೆರ್ (< ಪಿರಿದು$_1$) + < ಸೆಱಪು]

**ಪೆರ್ಜೊಡರ್**, ಹೆಜ್ಜೊಡರ್, ಹೆಜ್ಜೊಡರು (ನಾ). ೧. ದೊಡ್ಡ ದೀವಿಗೆ,—ದೀಪ : ಇರುಳ ಪೆರ್ಜೊಡರ ಕಜ್ಜಕ ಬೇಱೇನುಮಿಲ್ಲದಿರಲಾಗ ದೀಪದ ಕಲಿಯನಾರು ತಲೆನವಿರ ಪೆರ್ಜೊಡರ ಪತ್ತಿಸಿ (ರಾಜಶ. ೬-೨೨). ೨. ದೊಡ್ಡ ಪಂಜು,—ದೀವಟಿಗೆ : ದುರ್ಜಯರ್ ಬಡಿವ ಹಱೆಗಳ ಕೈಗಳೊಳಗಾಂತ ಪೆರ್ಜೊಡರ ಗಡಣದಿಂ . . . ಕೋಂಟೆಯಂ ಕಾದಿರ್ದರು (ಜಿಪು. ೯೨-೯). ೩. [ತತ್ತ್ವಶಾ]ಚಿದಾಕಾಶದ ದೀಪದ ಕುಡಿ : ಚಿಜ್ಜ್ಯೋತಿ : ಅಹಿಗಳ್ ಪತ್ತಿ ಪರಿದಾಡುತ್ತಿರೆ ನಡುನೆತ್ತಿಯ ಪೆರ್ಜೊಡರನೊರ್ವನೀಕ್ಷಿಸುತಿರ್ದಂ (ರಾಜಶೇ. ೦-೦೩೯). **ಹೆಜ್ಜೊಡರ್** : ೧. ಮೊಳೆವ ಸಂಧ್ಯಾಂಗನೆಗಬುಧಿ ನಿವಾಳಿಸಲೆಂದು ತಳೆದ ಮಾಣಿಕದ ಹೆಜ್ಜೊಡರೊ . . . ಎನಿಸಿ ಕಡೆವಗಲ ರವಿ ಕಣ್ಗೆ ಸೊಗಸಿರ್ದನು (ಹಕಶಾ ೩-೭೩) ; ಹಿಡಿದ ಹೆಜ್ಜೊಡರನಿಂದುಬಿಂಬಂ ಪೋಲ್ತುದು (ಸಿದ್ಧರಾ. ೦-೫೯). **ಹೆಜ್ಜೊಡರು** : ೧. ನಡೆಮುಂಡಿ ಕಱೆಬೋನ ಕಳಸ ಕನ್ನಡಿ ಹೆಜ್ಜೊಡರು ವೆರಸಿ ನಿನ್ನ ಬಳಿಗೆ ನಡೆವೆಂ (ರಾಜುಶಿ. ೬-೦೨೫) ; ಅಂಚಿನೊಳುರಿವ ತುಪ್ಪಗಳ ಹೆಜ್ಜೊಡರಿಂದ ಸಂಚಿಸಿದ್ದುದು ಶಸ್ತ್ರಪೂಜೆ (ಶರಶ. ೨೦-೦೨೭) ; ಬೆಳಗಲಿ ಹೆಜ್ಜೊಡರು (ಇಂಶಾಶ. ೦೫೦-೩೭). [ಪೆರ್ (< ಪಿರಿದು$_1$) + ಸೊಡರ್]

**ಪೆರ್ಜೋಡೆ** (ನಾ). ಅನುಭವಸ್ಥೆಯಾದ ಸೂಳೆ : ಪೆರ್ಜೋಡೆಯಂತೆ ನುಣ್ಣಿತಂ ದೇಟ್ದು (ಶಂಶಶಾ. ೬-೭೨ ಶ). [ಪೆರ್ (< ಪಿರಿದು$_1$) + ಜೋಡೆ]

**ಪೆರ್ಜ್ವಾಲೆ** (ನಾ). ಉರಿಯನ್ನು ಚಾಚುವ ಜ್ವಾಲೆ,—ಅಗ್ನಿಶಿಖೆ : " ಉರಿಯ ಪೆರ್ಜ್ವಾಲೆ ಕೀಲಕಮೆನಲ್ " (ಶಂಗರಾ. ೦೯-೬).

[ಪೆರ್ (< ಪಿರಿದು$_1$) + ಜ್ವಾಲೆ]

**ಪೆರ್ತಾಯ್** (ನಾ). ಶ್ರೇಷ್ಠಳಾದ ಜನನಿ ; ಹಿರಿಮೆಯುಳ್ಳ ತಾಯಿ : ಓ ತಾಯೆ, ಕನ್ನಡದ ಪೆರ್ತಾಯೆ, ನಮ್ಮಮ್ಮ, ದೇವಿ, ಸಾಮ್ರಾಜ್ಞೆ (ಹೊಂಗಳು. ೦೫-೧೮). [ಪೆರ್ (< ಪಿರಿದು$_1$) + ತಾಯ್]

**ಪೆರ್ದಂಡೆ** (ನಾ). ವಿಶಾಲವಾದ ದಡ : ವಿಸ್ತಾರವಾದ ತೀರ : ಉಪಾಂತದೊಳ್ ಪರ್ವಿದ ಪೊಂಗೇದಗೆಯ ರಜದಿಂ ಪುಟ್ಟಲ್ಗಟ್ಟಿದ ಪೆರ್ದಂಡೆಗಳೊಳಂ (ಕಾದಂಪೂ. ೦೦೭). [ಪೆರ್ (< ಪಿರಿದು$_1$) + ದಂಡೆ$_2$]

**ಪೆರ್ದಡಿ** (ನಾ). ಉದ್ದವಾದ ಬಡಿಗೆ ; ದೊಡ್ಡದಾದ ದೊಣ್ಣೆ : ಪಾಣಿಯೊಳಾಂತ ಪೆರ್ದಡಿಗಳ ಲುಬ್ಧಕಶ್ರೇಣಿ ಬೊಬ್ಬಿಡುತಲ್ಪೆದಿದುದು (ಮೋಹಶ. ೦೯-೯). [ಪೆರ್ (< ಪಿರಿದು$_1$) + ದಡಿ$_1$]

**ಪೆರ್ದರಿ** (ನಾ). ದೊಡ್ಡದಾದ ಕಾಂ,..ಡೊಗರು : ಮಿಱುಗುವ ದಾಡೆಯಿಂದಗೆದು ಪೆರ್ದರಿಯಂ ಕರದಿಂದಮೊತ್ತುತುಂ . . . ಬರುತಿರ್ದುದು ಘೋಕರನೊಂದು ಸೂಕರಂ(ಕಾಶ್ಯಸಾ. ೦೦೧೨). [ಪೆರ್(< ಪಿರಿದು$_1$) + ದರಿ]

**ಪೆರ್ದರಿಯುಂಗಿ** (ನಾ). (?) : ಕರಡಿ ರುರುಪ್ರತಾನವುಡು ಬೆಳ್ಳಿಲಿ ಪೆರ್ದರಿಯುಂಗಿ ಪೇರಣಿಲ್ ಮರದಣಿಲೆಂಬಿವಂ ಕಿಡಪಿಯೇಂ ತಿರುಗಿತ್ತೊ ಕಿರಾತಸುಕಾಳಂ (ದಶಕು. ೨-೦೨೦). [?]

**ಪೆರ್ದಲ** (ನಾ). ಒಂದು ಸ್ಥಳದ ಹೆಸರು : ಪೆರ್ದ್ದಲಯಾ ಸೀಮ್ನಃ ಪೂರ್ವ್ವತಃ (ಎಕ. VIII, ಸೊರಬ. ೩೩-೬ ; ಸು. 420 ಕ್ರಿಶ). [?]

**ಪೆರ್ದಲೆ, ಹೆದ್ದಲೆ** (ನಾ). ೧. ದೊಡ್ಡ ತಲೆ : ಪೆರ್ದಲೆಯ ಕಟ್ಟಿಟುಂಬೆಗಳುಮಾಗಿ ಮೆಯ್ಯೆಲ್ಲಮನಸ್ಥಿರ್ಕೆ[ಯುಂ] (ಚಂದ್ರ. ೮೬೮-೫) ; ಪೆರ್ಗರಡಿಯ ಕೊಂತದಿ ಕಡಿದ ಪೆರ್ದಲೆಯ ಸಂತಸ ಬಿಡದೆ ಹೊತ್ತಿರ್ದರು (ಶೀಐಶ. ೦೯-೨೮). **ಹೆದ್ದಲೆ :** ೨. ಮುಖ್ಯನಾದವನು : ಪ್ರಮುಖ : ಬ್ರಹ್ಮಾಚ್ಯುತಾದಿಗಳ ಒಳಗೆ ಹೆ[ಪಾಠಾಂ. ಹೊ] ದ್ದಲೆಯಾಗಿ ಬಾಳ್ವನ ತಲೆಯು ನಿನ್ನಯ ತಲೆಯು ಸರಿಯು (ಬಸವ. ೩೭-೩೯). [ ಪೆರ್ (< ಪಿರಿದು$_1$ ) + ತಲೆ$_1$ ]

**ಪೆರ್ದಸಿ** (ನಾ). ದೊಡ್ಡ ಬೆಣೆ,—ಗೂಟ : ಪೆರ್ದಸಿಯ ಮೇಲೆ ಮಹಾ ದ್ಯುತದಿಂದಮಿದ್ದು . . . ವೇದನೆಗೆ ಸ್ಮರಣೆಗೆಟ್ಟಿರುತಿರ್ದ ಭೀತರಂ ನೋಡುತ್ತುಂ (ಧರ್ಮಾಮೃ. ೦೨-೨೦). [ಪೆರ್ (< ಪಿರಿದು$_1$ ) + ದಸಿ]

**ಪೆರ್ದಳಿ** (ನಾ). ದೊಡ್ಡ ದಿಮ್ಮಿಗಳ ಬೇಲಿ : ಸಾಲ್ಗೊಂಡು ತರತರದ ಪೆರ್ದಳಿಯ ದಡ್ಡಿಗಳನುರ್ಚಿ ಮುರಿದು . . . ಪುರವನೊಳಪುಗುತಿರ್ದರು (ಶಂಕ. ೯೨-೨೯). [ ಪೆರ್ ( < ಪಿರಿದು$_1$ ) + ತಳಿ$_4$ (< ತಟಿ ) ]

**ಪೆರ್ದಾತು?** (ನಾ). ಒಂದು ಸ್ಥಳದ ಹೆಸರು (?) : ತತ ಆಗತ್ಯ ಕರ್ದೇಸುರಿ ಗೋದು ತತ ಪೆರ್ದಾ(?)ತು ತತ ಆಲೆಚಿ (ಎಕ. VI, ೯೩-೩೨; 695). [?]

**ಪೆರ್ದಾರಿ, ಹೆದಾರಿ, ಹೆದ್ದಾರಿ** (ನಾ). ದೊಡ್ಡ ಹಾದಿ ; ಪ್ರಧಾನವಾದ ಬೀದಿ ; ರಾಜಮಾರ್ಗ : "ಪೆರ್ದಾರಿ—ಬಟ್ಟೆಸಳ್ಸು" (ಕಕಾಉ. ೬ I. ೩೭) : ನರಕಕ್ಕೆ ಪೋಪ ಪೆರ್ದಾರಿ ಮಹಾವ್ಯಸನಕ್ಕೆ ಮೂಲಮಪ್ಪೊಡೆ ಪುಸಿಯಿಂದಂ ಬಿಟ್ಟು ಪಾತಕಂ ಪೆಐತೊಳವೇ (ಧರ್ಮಾಮೃ. ೦೦-೦೯೦). **ಹೆದಾರಿ :** ಪಡುವಲು ಸುಗ್ಗಿಯ ಗದೆಯು ಕೆಳಗಡಿ ಬಡಗಲು ಹೆದಾರಿಯ ಸುಗ್ಗಿಯ ಗದ್ದೆಯ ಹಾಳಿ ಗಡಿ . . . ಬಿಟ್ಟರು (ಕಇ. I. ೪೦-೪೦ ; 1417 ?). **ಹೆದ್ದಾರಿ :** ಪಡುವ ಮೂಲಿಗವ ನೆಯ ಹೆ[ದ್ದಾ]ರಿ ಮೂಡ ಬಡಗ ಮುಖ ಬಂದ ಕ್ಕೆ ಳಿಲ (ಸೌಇಇ. XI-I. ೬೯ ೪೫; 1033) ; ಕೂಗುವ ಕಲ್ಲ ಸಮೀಪದ ಹೆದ್ದಾರಿ (ಎಕ. VII, ಶಿಕಪು. ೨೬-೨೩೬ ; 1524) ; ವಿವಿಧ ರಾಷ್ಟ್ರಗಳ ನಡುವೆ ಕ್ರಮವಾಗಿ ಹೆದ್ದಾರಿಗಳನ್ನು ಕೂಡಿಸುವುದರ ಮೂಲಕ ಉತ್ತಮವಾದ ಅಂತರರಾಷ್ಟ್ರೀಯ ಹೆದ್ದಾರಿ ಗಳನ್ನು ನಿರ್ಮಿಸುವುದು ಇಕಾಫೆಯ ಮುಖ್ಯ ಉದ್ದೇಶ (ಅಂಕಸಂ. ೯೮) ; ಉದ್ದು ಉರುಳಿದರೆ ಹೆದ್ದಾರಿ ದಾಟೀತೇ ? (ಗಾದೆ).

[ ಪೆರ್ ( < ಪಿರಿದು$_1$ ) + ದಾರಿ ]

**ಪೆರ್ದಿದಿ** (ನಾ). ದೊಡ್ಡ ಚೀಲ : ಪೆಟಲುಪ್ಪಿನ ಪೆರ್ದಿದಿ ಮಾರ್ದಿದೆಂಬಿವಂ ಸುರಿದು . . . ಘಟರಿಂತು ಕಾಪಾತಿರೆ (ರಾಜಶೇ. ೬-೦೦೩).

[ ಪೆರ್ (< ಪಿರಿದು$_1$ ) + ತಿದಿ]

**ಪೆರ್ದಿನಿ, ಹೆದ್ದೀನಿ** (ನಾ). ಎಲ್ಲವನ್ನೂ ತಿನ್ನುವವನು ; ಸರ್ವಭಕ್ಷಕ : "ಸರ್ವಾನ್ನೀನಃ, ಸರ್ವಭಕ್ಷಃ—ಈ ೨ ಪೆರ್ದಿನಿ [ಪಾಠಾಂ. ಹೆದ್ದೀನಿ]" (ಹಲಾಯು. ೩೮-೦೯೩). **ಹೆದ್ದೀನಿ :** ಮೇಲಿನ ಪ್ರಯೋಗದ ಪಾಠಾಂತರ ವನ್ನು ನೋಡಿ. [ ಪೆರ್ ( < ಪಿರಿದು$_1$ ) + — ತಿನ್ನಿ$_2$ ]

**ಪೆರ್ದುಡುಗೆ** (ನಾ). ಬಹಳ ಬೆಲೆಬಾಳುವ ಆಭರಣ ; ಅಮೂಲ್ಯ ವಾದ ಒಡವೆ : ಪಸರಿಸಿದ ತೋರಹಾರದ ಪೊಸವೆಳ್ದಿಂಗಳುಮನವರ್ದ ಪೆರ್ದುಡುಗೆಗಳೊಳ್ ಮಿಸುಗುವ ಪೊಸಮಾಣಿಕದೆಳಬಿಸಿಲುಮನೊಡಗೂಣ ಲಾದುದಾಸ್ಥಾಯಿಕೆಯೊಳ್ (ಅಜಿತ. ೯-೫).

[ ಪೆರ್ ( < ಪಿರಿದು$_1$ ) + ತುಡುಗೆ ( < ತೊಡುಗೆ) ]

**ಪೆರ್ದುರ್ಗ** (ನಾ). ದೊಡ್ಡ ಕೋಟೆ,— ಕಿಲ್ಲೆ : ಬಸಾತಿರಲು ಮುಂದೊಂದು ಪೆರ್ದುರ್ಗಮಿರಲದರ ಬಾಹ್ಯದೊಳೆಸೆದುದುದ್ಯಾನವನಂ (ಶಬಮೋ. ೬-೦೮). [ ಪೆರ್ ( < ಪಿರಿದು$_1$ ) + ದುರ್ಗ]

**ಪೆರ್ದುಱುಬು** (ನಾ). ದೊಡ್ಡ ಮುಡಿ,—ಗಂಟು : ಪೂಸಿದ ಗಂಧ ನಡುವಿನ ಬಂಕು ಪೆರ್ದು[ಪಾಠಾಂ. ಪೂದು]ಱುಬು ಉಡಿಜಲ್ಲಿಯುಟ್ಟ ಕಾಶೆಯ ಸಬಳಿಗರಂದು ನಡೆದು ಬಂದರು (ಕುಮಾರಾ. ೦೦-೩೬); ಮೌಕ್ತಿಕದ ಹಾರ ಕಿರೀಟ ಪೆರ್ದುಱುಬಿನೊಳೊಪ್ಪುವ ತೋರಮುತ್ತುಗಳ ಪಾಲಿಸಿದ (ಶೀಐಶ. ೦೫-೦೬).

[ ಪೆರ್ (< ಪಿರಿದು$_1$ ) + ತುಱುಬು$_2$ (< ತುಱುಂಬು$_3$ ) ]

**ಪೆರ್ದೂಲ** (ನಾ). ದೊಡ್ಡ ದಿಮ್ಮಿ ; ಭಾರಿಯಾದ ತೊಲೆ : ಸಾಲ ಡೆಂಕಣೆ . . . ಪೆರ್ದೂಲ ಕಕ್ಕಡಪಂದಿ . . . ಜೊತ್ತುಗುಂಡುಗಳ ಜಾಲ ಪೊಪ್ಪಿಹವು (ಗುಶಕ. ೦-೩೦). [ಪೆರ್ (< ಪಿರಿದು$_1$)+ದೂಲ]

**ಪೆರ್ದೆಪ್ಪ** (ನಾ). ದೊಡ್ಡದಾದ ಹರಿಗೋಲು,—ನಾವೆ : ಕಾಡೊಡೆಯಂ . . . ಬೇಡರೊಡವರೆ ನೀಡುಂ ಪರಿವ ಪೆರ್ದೊರೆಗೆಯ್ದಿ ಸಾರ್ದು ಪೆರ್ದೆಪ್ಪಮನೇರ್ದು ನಿಂದು (ರಾಜಶೇ. ೫-೦೦೯ ಪ).

[ಪೆರ್ (< ಪಿರಿದು$_1$)+ ತೆಪ್ಪ]

**ಪೆರ್ದೆರೆ, ಹೆದ್ದೆರೆ** (ನಾ). ೧. ದೊಡ್ಡ ಅಲೆ,—ತರಂಗ : "ಊರ್ಮಿಃ, ಉತ್ಕಳಿಕಾ, ಉಲ್ಲೋಲಃ, ಕಲ್ಲೋಲಃ, ಲಹರೀ—ಈ ೫ ಪೆರ್ದೆರೆ" (ಹಲಾಯು. ೦೦೯-೩೦); ಭಯಂಕರತರಮಾದ ಪೆರ್ದೆರೆಗಳಂ ಹಮುಸಂತತಿ . . . ನಿರಂತರಂ ತಿರಸ್ಕರಿಸಿರೆ (ಶಂಕಪು. ೦೦-೨೮); ಕಣ್ಗೊಳಿಸಿದಳಾಕೆ ಪಾಲ್ಗಡಲ ಪೆರ್ದೆರೆಯೊಳ್ ಸಿರಿ ನಿಂದಳೆಂಬಿನಂ (ಕಬ್ಬಿಗಾ. ೬೯); ಮಾರ್ದಲ ತಾಳಾನುಗತಿಯೊಳು ನಡೆದಳು ಪೆರ್ದೆರೆಯಂತೆ ಮುಂದೊತ್ತಿ (ಛಂದ. ೦೨-೬೯). **ಹೆದ್ದೆರೆ :** ೧. "ಹೆದ್ದೆರೆ—ಉಲ್ಲೋಲ, ಕಲ್ಲೋಲ" (ನಾಕಾಂ. ೬); ಅದ್ದೆ ನದ್ದೆನು ನರಕದುಃಖದ ಹೆದ್ದೆರೆಯ ಹೊನಲಿನಲಿ (ಶಿವಾಗ. ೬-೨-೩೩) ; ಪೆರ್ಗಡಲ ಹೆದ್ದೆರೆಗಳೆದ್ದು ತನ್ನಂ ಕೊಂಡು ಕಾರ್ಗತ್ತಲೋಳದ್ದುವಂತೆ (ಛಂಶ. ೯-೬೩). ೨. ಅಗಲವಾದ ಪರದೆ,—ಜವನಿಕೆ : ಅಸಹನೀಯ ಮೌನದ ಹೆದ್ದೆರೆಯೊಂದು ನಮ್ಮ ನಡುವೆ ಇಳಿಬಿದ್ದಿತು (ಶಂಕೆ. ೦೫೯).

[ಪೆರ್ (<ಪಿರಿದು$_1$)+ತೆರೆ$_4$]

**ಪೆರ್ದೆವರ್, ಹೆದ್ದೆವರು** (ನಾ). ಎತ್ತರವಾದ ದಿಣ್ಣೆ,—ತಿಟ್ಟು : ಪೆರ್ದೆವ ರುದ್ದ ಬಿಟ್ಟು ಮೆಳೆಯುಣಮಿಲ್ಲದೆಯ್ದೆ ಧರೆ ತರ್ಗಿ ಬಟ್ಟೆಕ್ಕದು ಕೊಳ್ಳ ವಾಮದಾ ಪಡೆ ನಡೆಯಲ್ (ನೇಮಿಪು. ೦೨-೩೬). **ಹೆದ್ದೆವರು :** ವಿಗಡ ಭೀಮನ . . . ಮುಡುಹು ಸೋಂಕಿದೊಡಾ ಮಹಾದ್ರಿಗಳೊಡನೆ ತೋರ ಹಕರು ಕೆಡೆಮಪಡಿಯಿಡಲು ಹಜ್ಜೆಗೆ ತಗ್ಗಿದುದು ನೆಲಸಹಿತ ಹೆದ್ದೆವರು (ಕುಮ್ಮಾಭಾ. ೦೨-೯). [ಪೆರ್ (<ಪಿರಿದು$_1$)+ತೆವರ್ (<ತೆಮರ್$_2$)]

**ಪೆರ್ದೆಸೆ** (ನಾ). ಏಳಿಗೆಯ ಕಾಲ; ಅಭ್ಯುದಯಾವಸ್ಥೆ; ಸುಸ್ಥಿತಿ : ಕಳವಿಂ ಧನಲಾಭಮಾದೊಡಾ ವನಿತೆಯುಮಿಷ್ಟರುಂ ಸುತರುಮುಣ್ಬೆಡೆ ಯೊಳ್ ಪುದುಗಳ್ವನೆಂದು ಭೋಂಕನೆ ಕಡಿದಿಕ್ಕೆ ಪೆರ್ದೆಸೆಯೊಳಲ್ಲದವರ್ಪುದು ವಾಗಳಾರ್ಪರೇ (ಧರ್ಮಾಮೃ. ೬-೦೩೮). [ಪೆರ್ (<ಪಿರಿದು$_1$) + ದೆಸೆ$_2$]

**ಪೆರ್ದೊಡವು** (ನಾ). ಬಹಳ ಬೆಲೆ ಬಾಳುವ ಆಭರಣ,—ಒಡವೆ : ಮಾಣಿಕದ ಪೆರ್ದೊಡವಿಂ ಪೊಱಪೊಣ್ಮು ವಂಶುಗಳ್ ದಾರುಣಕೋಪಪಾವಕನೆ ತನ್ನೊಡಲಂ ಸುಡುವಂದ ಮಾಗೆ (ಶಂಶಾಕು. ೦೯-೦೨೬).

[ಪೆರ್ (< ಪಿರಿದು$_1$)+ತೊಡವು]

**ಪೆರ್ದೊಡೆ, ಹೆದ್ದೊಡೆ, ಹೆದೊಡೆ** (ನಾ). ಸೊಂಟದಿಂದ ಮಂಡಿಯ ವರೆಗಿನ ದೇಹಭಾಗ; ಊರು : "ಊರುಗಳು ಪಿಚಂಡಿಗಳೆನಲು ಪೆರ್ದೊಡೆಗೆ ನಾಮಮಕ್ಕುಂ" (ಶಂಗಂ. ೯೮-೦೭); ಪೆರ್ದೊಡೆ ಕಟಿ ಮುಮ್ಮೃಡಂ ಪರಡು ಸಂದಿ ನೊಸಲ್ ಪಣೆ ಕೆಣ್ ಕದಂಪಿವೆಂಬೆಡೆಯುನೆ ನಟ್ಟುಮರ್ಚಿದುವು ನೇರ್ದುವು ಸೀಳ್ದುವು ಪಾರ್ಥನಂಬುಗಳ್ (ಶಂಶಭಾ. ೦೦-೦೩೬); ನೆನೆಯಿಸಿ ಕಾಡುಗುಂ ಸತತವಾತನುದಗ್ರ ಲಲಾಟಪಟ್ಟವು . . ಆತನ ಬಗೆಗೊಳ್ವ ಪೆರ್ದೊಡೆಗಳ್ (ಚಗಂ. ೦೨-೦೫); ಬಟ್ಟಮುತ್ತುಗಳು

ಕೇವಣಿಸಿರ್ದ ಪಾರಿಯ ಪಟ್ಟಾವಳಿ ಚಲ್ಲಣವ ತೊಟ್ಟು ಪೆರ್ದೊಡೆಗೆ ಕೇಸರಿ ಮಧ್ಯಕೆ ಬಿಗಿದುಟ್ಟ ಕಾಸೆಯ ರಣೋತ್ಸವದಿ (ಮೋಹತ. ೧೨-೪೫). **ಹೆದ್ದೊಡೆ:** ಊರುದಘ್ನ, ಊರುಮಾತ್ರಂ, ಊರುದ್ವಯಂ ಇವು ಹೆದ್ದೊಡೆಯ ಉದ್ದವ ಹೇಳುವುದು (ನಾತಿರಾ. ೧೨೨); ಹಾಯ್ದು ಗದೆ ಹೆದ್ದೊಡೆಗಳನು ಮುರಿದಯ್ದಿತಘನಿಯುಸಿರುಣಜಲದಲಿ ತೊಯ್ದು ಧೊಪ್ಪನೆ ಕೆಡೆದನಿಳೆಯಲಿ ಕೌರವರ ರಾಯ (ಕುಮ್ಯಾಗ. ೭-೫೮). **ಹೆದೊಡೆ:** ೧. "ಊರುಃ. ಸಕ್ಥಿ, ಓಚೆಂಡಂ ?—ಈ ೩ ಹೆದೊಡ" (ಹಲಾಯು. ೮೫-೩೬೦). 'ಕಿಱುದೊಡೆ' ಪರಾ. [ಪೆರ್ (<ಪಿರಿದು$_1$) + ತೊಡೆ$_2$]

**ಪೆರ್ದೊಱೆ** 'ಪೆರ್ದೊೞೆ³' ನೋ.

**ಪೆರ್ದೊಱಲೆ** (ನಾ). ದೊಡ್ಡ ದಿಮ್ಮಿ: ಬಲ್ಗೊಂಡು ಪೆರ್ದೊಱಲೆ ಕೊೞಸು ಕಾಯ್ದ ಪಣಿಲ ರಾಶಿ (ಶಬ್ದರಾ. ೩-೨೦); ಉರಿಪರಿವೆಣ್ಣೆ ಪಂದಿಪಲೆ ಪೆರ್ದೊಱಲೆ . . . ಪೆರ್ದಿಡಿಮರ್ದಿವೆಂಬಿವು ಸುರಿದು (ರಾಜಶೇ. ೬-೦೦೬).

[ಪೆರ್ (< ಪಿರಿದು$_1$) + ತೊಱಲ್$_3$]

**ಪೆರ್ದೊೞೆ³, ಪೆದ್ದೊಱೆ, ಪೆದ್ದೊೞೆ³, ಪೆರ್ದೊಱೆ, ಪೆೞ್ದೊೞೆ³, ಹೆದ್ದೊಱೆ$_1$, ಹೆದ್ದೊೞೆ** (ನಾ). ೧. ದೊಡ್ಡ ಹೊಳೆ; ಮಹಾನದಿ: ಎರಡು ಬೆಟ್ಟದ ನಡುವೆ ಪರಿವ ಪೆರ್ದೊೞೆಯಂತೆ (ಧರ್ಮಾಮೃ. ೨-೬೩); ಗೋಮತಿಯೆಂಬ ಪೆರ್ದೊೞೆಯ ರಾಮಣೀಯಕ ಶೀತಜಲವೀಂಟಿ (ಶೋಹಕ. ೩೬-೬೪). ೨. ಕೃಷ್ಣಾನದಿ: [ಪೆದ್ದೊ]ೞೆ[ಪ]ರ್ಯ[ಂತ]ಮುಮ ನಾಳುತ್ತುಮಿಟ್ಟು (ಎಇ. IV, ೩೫೨-೦೫; 975); ಅೞಿಕೆಯ ಗಟ್ಟಗೆಯುಂ ಪೆರ್ದೊೞೆಯುಂ ಪರಿದಲ್ಲಿ ತದ್ದಪಾಡಿಗೆ ತೆಂಕಲ್ (ಅಶಕೃ. ೦೨-೪೬); ಪೆದ್ದೊೞೆಯ ತಡಿಯ ಕೊಪ್ಪದಲು (ಕ್ಯಅಂ. ೧೯೩೯, ೩೦-೨; 1056). **ಪೆದ್ದೊಱೆ:** ೨. ಅವನು ಪೆದ್ದೊಱೆಯ ದಂಡೆಯಲ್ಲಿದ್ದಾಗ ಅನುಕೂಲಸ್ಥನಾಗಿದ್ದ (ಹಾಹುತ್ಯ. ೫೪). **ಪೆದ್ದೊೞೆ:** ೧. ಇದ್ದೊೞೆಯೆಂಬ ಪೆದ್ದೊೞೆ ತುಂಬಿ ಬರೆ (ಶಶಕೃ.೩೨-೩೨); ಒಂದುದಿನ ಪೆದ್ದೊೞೆಯು ತುಂಬಿ ಪರಿವುತ್ತಿರಲು (ಗುರುಚಾ. ೦೫-೮). **ಪೆರ್ದೊಱೆ:** ೧. ಪೆರ್ದೊಱೆಗಳಂ ಪೇರಡವಿ ಪೆರ್ಬೆಟ್ಟುಗಳನಂತು ನೂರಾರು ಪೇರೂರ್ಗಳಂ ದಾಂಟಿ (ಶೀಹರಾ. ೬-೫೦); ಮುಂಗಾರ ಸಮಯಮಿದು ಪೆದೊಱೆಯ ನಂಬಲಾಗದು (ಶಣಾ೪. ೩೯). △ **ಪೆೞ್ದೊೞೆ³:** ೨. ಗಂಗಾನ್ವಯ ಕುಳತಿಳಕಂ ಬೂತಯ್ಯ ಪೆರ್ಮಾಡಿ ಪೆೞ್ದೊೞೆ ಪರ್ಯ್ಯಾದೆ ಗಂಗಾವಾಡಿ ತೊಂಬತ್ತಱುಸಾಸಿರಮುಮಂ ಪ್ರತಿಪಾಳಿಸೆ (ಎಇಇ. XI-1, ೩೮-೪; 950); ಪೆೞ್ದೊೞೆ ಮರ್ಯಾದೆಯಾಗೆ ನಿರಾಕುಳಪಾಳುತ್ತಿರೆ(ಎಇ. VI, ೨೫೯-೫;975). **ಹೆದ್ದೊಱೆ$_1$:** ೧. ಅಲ್ಪಾಲ್ಪಕಾವ್ಯಗಳ ಭಾವನೆಯ ಹೊನಲಾದರೂ ಆ ತೊರೆ—ಹೆದ್ದೊಱೆಗಳತ್ತಲೇ ಹರಿದುಹೋಗುವುದೆಂಬುದನ್ನೂ ಬಗೆವಡೆದವು (ಪಾಠೋಚ. ೩೫೩); ಸಾಹಿತ್ಯವಾಹಿನಿ ಬತ್ತದ ತೊರೆ. ಅದು . . . ಹೊಳೆ ಹಳ್ಳಗಳ ಜೀವಂತವಾಹಿನಿಯನ್ನು ತುಂಬಿಕೊಂಡು ಹೆದ್ದೊಱೆಯಾಗಿ ಹರಿಯುತ್ತದೆ (ಸುಪಹ್ಣ. ೨೨೪). ೨. ವಿಷ್ಣುವರ್ಧನಪ್ರಭು ಹೆದ್ದೊಱೆಯನ್ನು ಸೇರಿ, ಆ ನದಿಯಲ್ಲಿ ತಮ್ಮ ಕಾಂಭೋಜರನ್ನೂ ಕತ್ತಿಯನ್ನೂ ತೊಳೆದರು (ಹಾಂಕಲಾ. ೨೩೩). **ಹೆದ್ದೊೞೆ³:** ೧. ಹರನೀವ ಕಾಲಕ್ಕೆ ಸಿರಿಯು ಬೆನ್ನಲ್ಲಿ ಬರ್ಕು ಹರಿದು ಹೆದ್ದೊೞೆಯ ಕೆೞೆ ತುಂಬಿದಂತಯ್ಯಾ (ಬಸವ. ೦೬೪); ಹೆದ್ದೊೞೆಯನುೞೆ ತಡಿಗೆ ದಾಂಟಿಸುವ ತೋರವಹ ಬಲುದೆಪ್ಪವಿರೆ ಮನಹಾರಿ ಸೊರೆಯೋಡಂ ಪಿಡಿದು ತಾಂ ಪಾರವೆಯ್ದುವೆನು (ಬಸವು.೬೦-೪೬); ಕರಗಿ ಹರಿದವು ಹೇಮರಸ ಹೆದ್ದೊೞೆಯವೊಲು (ಕೊರರಾ. ೫-೮-೬೦). ೨. ಹುಲಿಗೆೞೆ ಮುಸೂಱುವುಂ ಹೆದ್ದೊೞೆ ಪರಿಯನ್ತವಾಗೆ ಯನ್ತಿನಿತುವುಂ . . . ಸುಖರಾಜ್ಯಂಗೆಯ್ಯುತ್ತಿರೆ (ಎಇ. XII, ೫೪ನಾ. ೩೦-೦೨; 1149 ?); ಬಾದುರನೊಕ್ಕಲ ಕೊಂಡು ಹೆದ್ದೊೞೆಯ ದಾಂಟಿದನು (ಶುರಾಹಾಂ, ೦೮-೦೫೦). [ಪೆರ್ (< ಪಿರಿದು$_1$) + ತೊೞೆ$_2$]

**ಪೆರ್ಧಮ್ಮಿಲ್ಲ** (ನಾ). = ಪೆರ್ದಱುಬು: ನಿಮಾಲ ಬಹಿರ್ಭಾಗದೊಳೆಸೆವಂತೆ ಪೆರ್ಧಮ್ಮಿಲ್ಲ ಜಡೆಗಳೊಪ್ಪಿದವು (ಮೋಹತ. ೦೪-೪೩).

[ಪೆರ್ (<ಪಿರಿದು$_1$) + ಧಮ್ಮಿಲ್ಲ]

**ಪೆರ್ನಂದಿ** (ನಾ). ಒಂದು ಬಗೆಯ ನಾಣ್ಯ (?): ಅವರಾ ಪಡೆಯಂ ಪೆರ್ಬ್ಬಟ್ಟಿಯೂರುನ್ದು ತೆೞೆ ಪೆರ್ನ್ನನ್ದಿ ಎರಡು ತೆಱುವುದು (ಎಇ. IV, ಹಗ್ಗಡ. ೪-೨೨; ಸು. 750). [?]

**ಪೆರ್ನಗರ** (ನಾ). ಒಂದು ಸ್ಥಳದ ಹೆಸರು: ಅನ್ದರಿಯ ಆಲನೂರ ಪೌರುಳಜೆಅ ಪೆರ್ನ್ನಗರಾದ್ಯನೇಕ ಸಮರಮುಖಾಂತಾಹುತ ಪ್ರತಾಪ ಶೂರಪುರುಷ (ಇಅ. V, ೦೩೪-೯; ಸು. 788); (ಮೈಅ. ೦೪೩೪, ೬೪-೦೫; ಸು. 788 ನೋ). [ಪೆರ್ (<ಪಿರಿದು$_1$) + ನಗರ]

**ಪೆರ್ನಗೆ** (ನಾ). ಅಧಿಕವಾದ ನಗೆಪಾಟಲು: ಘನನಾಮಂ ಲೋಕದೊಳ್ ಪೆರ್ನ್ನಗೆಗೆಡೆಯೆನಿಸಿತ್ತಕ್ಕಟಾ (ರಾಜಶೇ. ೬-೪). [ಪೆರ್(<ಪಿರಿದು$_1$) + ನಗೆ]

**ಪೆರ್ನರ, ಹೆನ್ನರ** (ನಾ). (ದೇಹದೊಳಗಿನ) ಮುಖ್ಯವಾದ ರಕ್ತನಾಳ,– ಸೆರೆ: ಗೋಣರೆಗಡಿದು ಪೆರ್ನರವಾಂತು ಮಿಡುಕುವ ಪ್ರಾಣದ ಶವಗಳೊಪ್ಪಿದುವು (ಮೋಹತ. ೪೦-೬೦). **ಹೆನ್ನರ:** "ಕಕುಂದರದೆಂಬುದು ಕೊರಳ ಹೆನ್ನರ" (ಹಲಾಯು. ೦೦೪-೧೨); ತಲೆ ಕಿವಿಸಂದುಯೆಲ್ಲವ ಪುಷ್ಕ ನೋವಡೆ ದಾಹಮಾಗೆ ಮೈ ಬಲಿವಡೆ ಹೆನ್ನರಂ ಪೆಗೆಯೆ ಮೂರ್ಛೆಗೆ ಕಣ್ಣಾತಿ ರಕ್ತವಾಗೆ (ಕಲ್ಯಾಕಾ. ೩-೦೩); ಶಿರದೊಳು ಖಡ್ಗವನಿರಿಸಿ ಬಲ್ಪಿನಲೊತ್ತಿ ಘರಿಘರಿ ನರಿದು ಹೆನ್ನರವ ಭರದಿಂದ ಬಿಡಿಸಿ ಗೋನಾಳಿ ಇಬ್ಬಗಿಯಾಗೆ ಉರವಣಿಸಿತು ಬಲುರುಧಿರ (ನಿಜಾಾಂ. ೪-೧೦೭). [ಪೆರ್ (<ಪಿರಿದು$_1$) + ನರ$_1$ (<ನರವು)]

**ಪೆರ್ನಾವೆ** (ನಾ). ದೊಡ್ಡ ತೆಪ್ಪ,– ದೋಣಿ: ಕಟ್ಟಿದೆ ೬ಲಿ ಕಾಲಾಳ್ಗಂ, ಮೆಚ್ಚಿನ ಪೆರ್ನಾವೆಗಳುಂ, ರಾಜರಾಜನಾಣೆಯಾಯ್ತು! (ಶಾರಸಿ. ೩-೧). 'ಪೆರ್ದೆಪ್ಪ' ಪರಾ. [ಪೆರ್ (<ಪಿರಿದು$_1$) + ನಾವೆ]

**ಪೆರ್ಣೆಣ** (ನಾ). ಅಧಿಕವಾದ ಕೊಬ್ಬು,– ಮೇದಸ್ಸು: ಪೆರ್ಣೆಣದ ಖಂಡದ ಮಾಂಸದ ತಾಣವಲ್ಲವೇ ಎಂದು ಶರೀರದೊಳಾದ ಅಶುಚಿತ್ವಮಂ ಭಾವಿಸಿ (ಧರ್ಮಾಮೃ. ೫-೨೮). [ಪೆರ್ (<ಪಿರಿದು$_1$) + ನೆಣ]

**ಪೆರ್ನೊಣ** (ನಾ). ದೊಡ್ಡ ಜಾತಿಯ ನೊಣ: ಪೆರ್ನೊಣಂಗಳಿಂ ತಗುಳ್ದೊೞಸಿಯುಂ . . . ಸೈರಿಸಲಾಱದೆ (ಧರ್ಮಾಮೃ. ೩-೬೩).

[ಪೆರ್ (<ಪಿರಿದು$_1$) + ನೊಣ (<ನೊಳವು)]

**ಪೆರ್ನೊರೆ** (ನಾ). ಅಧಿಕವಾದ ಫೇನ; ಅತಿಶಯವಾದ ಬುರುಗು: ಪೆರ್ನೊರೆ[ಶಾಕಿಃಂ. ಪೊನ್ನೊರೆ]ಯಂ ತಗುಳ್ದ ವಿಹಿತಾಂಬುವ ಬಲ್ಪೊನಲಿಂದಿ ಪರ್ಬಿದ ಬಟ್ಟೆಯೊಳೊಕ್ಕ ಪಲ್ಲವನಿಕಾಯದಿನಂದಱುದು ಕಾಡಾನೆಗಳಾಗಡೆ ಪೋದುವಂ (ಕಾವ್ಯಾಶ. ೬೨೬); ಪೆರ್ನೊರೆ ಸೂಸುತ್ತಿರೆ ಘೀಕರಂ ಸೊಗಯಿಸಿತ್ತುತ್ಕ್ಯೇಕರಂ ಸೂಕರಂ (ಚಂದ್ರಕೃ. ೫-೬೦).

[ಪೆರ್.(<ಪಿರಿದು$_1$) + ನೊರೆ$_2$]

**ಪೆರ್ನೊಸಲ್** (ನಾ). ವಿಶಾಲವಾದ ಹಣೆ; ದೊಡ್ಡ ಹಣೆ: ಪೆಱನೊಸಲ್ ಪೆರ್ನೊಸಲಾಗೆ . . . ಸೀತೆ ಕರಾಳಮುಖಿಯಾದಳ್ (ಅದ್ಭುಕ. ೫೦-೨೦).

[ಪೆರ್ (<ಪಿರಿದು$_1$) + ನೊಸಲ್]

**ಪೆರ್ಪಟ್ಟುಪೊಲ** (ನಾ). ಒಂದು ಸ್ಥಳದ ಹೆಸರು: ಸ್ವಸ್ತಿಶ್ರೀ ಕೊಙ್ಗಣಿ ಮುತ್ತರಸರ್ ಕೊಟ್ಟತು ಪೆರ್ಪ್ಪಟ್ಟುಪೊಲವು (ಎಇ. X (B), ಶ್ರೀಚಿಬಾ. ೦೦೭-೩; 750). [? + ಪೊಲ]

**ಪೆರ್ಬಂಟು** (ನಾ). ದೊಡ್ಡ ಸೈನ್ಯ,– ಪರಿವಾರ: ತಲೆಕೆಟುಗಾಗಿ ಕಟ್ಟಿದಲ ಗೊೞೆ ಘುನಂರ್ಚೆ ಬೀಟೆ ಪಿಮ್ಮಡಿಯುಂ ಪೞೆಯ ಪೆಱಗಂ ನೋಡುತ್ತುಂ ಪರಿವ ಪೆರ್ಬಂಟುಮಂ (ಶಿಲಾಶ. ೫-೦೦೪ ಶ).

[ಪೆರ್ (<ಪಿರಿದು$_1$) + ಬಂಟು]

**ಪೆರ್ಬಂಡಿ** (ನಾ). ದೊಡ್ಡ ಗಾಡಿ,– ಶಕಟ: ಎತ್ತಲಾ ಪೆರ್ಬಂಡಿ ಬೀಳವೆ

ದೆತ್ತಲೀತನ ಮೇಲೆ ಬರ್ದುಂಬುವುದೆತ್ತಲೀ ಶಿಶು ಪರಮಪುರುಷನ ಕೃಪೆಯು ದಲ್ಲದಡೆ (ಶಿಶಾಗ. ೧೦-೧೦-೩). [ಪೆರ್ (<ಪಿರಿದು$_1$) + ಬಂಡಿ$_1$]

**ಪೆರ್ಬಂದಿ** 'ಪೆರ್ವಂದಿ' ನೋ.

**ಪೆರ್ಬಕ್ಕವಾಣ** (ನಾ). ಒಬ್ಬಾತನ ಹೆಸರು : ತಸ್ಯ ಸಾಕ್ಷಿಣ ಗಜ್ಜರಾಜಕುಲ ಸಕಲ ಸ್ಥಾಯಿಕ ಪುರುಷ ಪೆರ್ಬಕ್ಕವಾಣಮಜುಗರೆಯು ಸೇನ್ದ್ರಕ ಗಂಜಿ ನಾಡ ನಿರ್ಗುನ್ದ ಪಾಣೆಯುಂಗುರೆಯು ನನ್ದ್ಯಾಲ ಸೀಂಬಾಲಾದಪಭೃತ್ಯಾಯಾಂ (ಎಇ. I (R), ೦-೩೨ ; 466). [ ? ]

**ಪೆರ್ಬಕ್ಕಿ** 'ಪೆರ್ವಕ್ಕಿ' ನೋ.

**ಪೆರ್ಬಟ್ಟ**, ಹೆರ್ಬಟ (ನಾ). ಒಂದು ಸ್ಥಳದ ಹೆಸರು ; p ಈಗಿನ ಕೋಲಾರಜಿಲ್ಲೆ : ಪೆರ್ಬ್ಬಟ್ಟಕ್ಕಂ ಬಿದಿರೂರ ಅಗ್ಗಳಮಿಳಿಪಲ್ಲಿ ಅಂಕಕಿ ಕಾದಿದ ಬದೆಯಿತ್ತ ಸತ್ತನ್ (ಎಇ. X, ಶ್ರೀನಿವಾ. ೨೭-೨೨ ; ಸು. 870).
**ಹೆರ್ಬಟ** : ಮಹಿಷವಿಷಯ ಹೆರ್ಬಟಗ್ರಾಮ (ಪ್ಯಕಂ. ೦೯೨೫, ೦೦೬-೦೦;?). [ ? ]

**ಪೆರ್ಬಟ್ಟೆ** 'ಪೆರ್ವಟ್ಟೆ' ನೋ.

**ಪೆರ್ಬಡಗು** 'ಪೆರ್ವಡಗು' ನೋ.

**ಪೆರ್ಬಡಿಕೆ** 'ಪೆರ್ವಡುಕೆ' ನೋ.

**ಪೆರ್ಬಡಿಗೆ** (ನಾ). ದಪ್ಪವಾದ ಕೋಲು,–ದೊಣ್ಣೆ : ಪಲಗೆ ಪೆರ್ಬಡಿಗೆ ಎಕ್ಕಟಿಗರ ಮೇಲೆ ಚಿಮ್ಮುವ ಚವುರವ ಲೆಕ್ಕವ ಮಾಡುವರಾರು (ಸೋಹಕ. ೪೦-೦೩). [ಪೆರ್ (<ಪಿರಿದು$_1$) + ಬಡಿಗೆ$_1$]

**ಪೆರ್ಬಡಿಸು** (ಕ್ರಿ). ಅಧಿಕವಾಗಿ ಶಬ್ದ ಮಾಡು ; ಜೋರಾಗಿ ಧ್ವನಿ ಮಾಡು : ಗುಡಿಗುಡಿಗಳ ನರ್ತನಗಾತಿಯರೊಳು ಪೆರ್ಬಡಿಸುವ ಗೀತ ಶಬ್ದಗಳ ಪಡಿ ತಪ್ಪದೆ ಕೋಲ ಚಾರಿಗಳಿಂದ ಜಕ್ಕಡಿ ಮೆಟ್ಟಿದುವು ದೇವಾಲಯದಿ (ಸೋಹಕ. ೦೬-೭). [ಪೆರ್ (<ಪಿರಿದು$_1$) + ಬಡಿಸು$_1$]

**ಪೆರ್ಬಡೆ** 'ಪೆರ್ವಡೆ' ನೋ.

**ಪೆರ್ಬತ್ತಿ** (ನಾ). ದಪ್ಪವಾಗಿರುವ ಬತ್ತಿ : ಅಗಲ್ ಪರಿತಂದೊಂದಾಖು ಮೇಗಣ್ಗೆಳೆಯಲುರಿವ ಪೆರ್ಬ[ಶಾಶಾಂ. ರ್ವ]ತ್ತಿಯುಂ ಕರ್ಚ ಬೇಯುತ್ತಿರೆ ಬಾಯ್ದಿಟ್ಟೋಡೆ ಬಿದ್ದತ್ತದು ನಯನದೊಳ್ (ಧರ್ಮಾಕ. ೪-೦೬). [ಪೆರ್(<ಪಿರಿದು$_1$) + ಬತ್ತಿ]

**ಪೆರ್ಬಯಕೆ**, ಹೆಬ್ಬಯಕೆ (ನಾ). ೧. ಹಿರಿಯ ಆಸೆ ; ಮಹತ್ವಾಕಾಂಕ್ಷೆ. ೨. ಗರ್ಭಿಣಿಯ ಹಿರಿಯ ಆಸೆ,–ಬಯಕೆ : ಸ್ವರ್ಭಾನುಭಯವಿರಹಿತ ಚಂದ್ರವದನೆ ಕೇಳರ್ಭಕಸತಿಯರುಗವದಿ ಪೆರ್ಬಯಕೆಯ ಭುಕ್ತ ನವ್ಯಾಂಬರಗಳ ಗರ್ಭಾಂಗನೆಗುಡಿಸಿದರು (ಸೋಹಕ. ೦೭-೦೦). **ಹೆಬ್ಬಯಕೆ**: ೧. ತಮ್ಮ ತಮ್ಮ ವಿಶಿಷ್ಟಕಾಣಿಕೆಯನ್ನು ಸಲ್ಲಿಸಬೇಕೆಂಬ ಹೆಬ್ಬಯಕೆ ಅಂಕುರಿಸುತ್ತದೆ (ಶಿಕ್ಷರ. ೦೦೩) ; ದುಷ್ಯಂತನನ್ನು ಆವಳು ಪರಿಸಿದ್ದಕ್ಕೆ ತಾನು ರಾಜಮಾತೆಯಾಗಬೇಕೆಂಬ ಹೆಬ್ಬಯಕೆಯೊಂದೇ ಮುಖ್ಯ ಕಾರಣ (ಕಾವ್ಯಸ. ೨೪). [ಪೆರ್ (<ಪಿರಿದು$_1$) + ಬಯಕೆ$_2$]

**ಪೆರ್ಬಯಲ್** 'ಪೆರ್ವಯಲ್' ನೋ.

**ಪೆರ್ಬರಿ** (ನಾ). ಪಕ್ಕೆಯ ಮೇಲ್ಭಾಗ : ಮಿಡಿಯಿಂ ಬೆಂಬರಮೆಯ್ದೆ ಸೀಟ್ದ ಶಬಸಂಘಾತಂಗಳಂಗುಷ್ಟದಿಂ ತೊಡೆಯಂ ತಾಪಿನಮೆಯ್ದೆ ಪೋಟ್ದ ಪೆಣಗಳ್ ಬೆರ್ವಟ್ಟೆಯಂ ಮುಟ್ಟೆ ಮೆಯ್ವಿಡೆ ಭಾಳಾಗ್ರಮನೆಯ್ದೆ ಬಿಟ್ಟ ಕುಣಪವ್ರಾತಂಗಳು ಬಟ್ಟೆಯೊಳ್ ಮಡದಿಂ ಪೆರ್ಬರಿಗೆಯ್ದೆ ನೇರ್ದ ತ್ಯುತಕವ್ಯೂಹಂ ಕರಂ ಭೀಕರಂ (ರಾಜಾಶ. ೬-೭). [ಪೆರ್ (<ಪಿರಿದು$_1$) + ಬರಿ]

**ಪೆರ್ಬಲ** 'ಪೆರ್ವಲ' ನೋ.

**ಪೆರ್ಬಲೆ** 'ಪೆರ್ವಲೆ' ನೋ.

**ಪೆರ್ಬಸ** 'ಪೆರ್ವಸ' ನೋ.

**ಪೆರ್ಬಸವು** 'ಪೆರ್ವಸ' ನೋ.

**ಪೆರ್ಬಸಿಱ್** (ನಾ). ದೊಡ್ಡ ಹೊಟ್ಟೆ : ಪೆರ್ಬಸಿಱುಂ ಕ್ರೂರೇಕ್ಷಣಮುಂ ದನುಜಾಕಾರಮನೊಡರಿಸೆ ನಿಶಾಚರರ್ವಿಸಿ ಕೋರ್ವರ್ (ಕಾವ್ಯಾಕ. ೨೨೦) ; ಉರ್ಬರಿಸಿದ ಪೆರ್ಬಸಿಱ್ ನಸು ಕುಸುಂಗಿದ ಬೆನ್ (ವೃಕಾಶ. ೦೧-೬೦). [ಪೆರ್ (<ಪಿರಿದು$_1$) + ಬಸಿಱ್ (<ಬಸಿಱು)]

**ಪೆರ್ಬಳ** (ನಾ). ಒಂದು ಊರಿನ ಹೆಸರು (?) : ಆಗ್ನೇಯದ ಎಲಂಚಿಕೊಣ್ಣೆಯಿನ್ದೆ ಪೂಲಿಕುಣ್ಣೆಯಿನ್ದೆ ಪೆರ್ಬಳದೊಳಗಣ ಚಾದು ಪೊಲದಿನ್ದೆ (ಎಇ. X (8), ಕಳ್ಳವಿ. ೦೦೬–೬೨ ; 850). [p ಇದು ' ಪೆರ್ಬಳ್ಳ'ದ ಅಪಲಿಖಿತವಿರಬಹುದು]

**ಪೆರ್ಬಳ್ಳ** ' ಪೆರ್ವಳ್ಳ ' ನೋ.

**ಪೆರ್ಬಳ್ಳಿ$_1$** (ನಾ). ವಿಸ್ತಾರವಾಗಿ ಹರಡಿದ ಬಳ್ಳಿ ; ಚೆನ್ನಾಗಿ ಹಬ್ಬಿದ ಲತೆ : ಒರ್ವ ಲುಬ್ಧಕಂ . . . ಮರನನೇಱಲ್ ಸಾಲದೆ ಕಾಲಪಾಶ ದಂತೆ ಮುಂದಿದು ಪರಿದು ಪರ್ವಿದ ಪೆರ್ಬಳ್ಳಿಯನಡರ್ದೇಱಿ (೧೦೪. ೦-೦೨೬ ಪ) ; ಪೆರ್ಬಳ್ಳಿಯ ಬಳಿಯನಡರ್ದು ಪಿಡಿಯಲೆಳಸಿ ಘಳಿಲನೆ ಸಾರೆವರ್ಪ ಘೋರಲುಬ್ಧಕನಂ ಕಂಡಗಿದು (ರಾಜಶೇ. ೩-೩೩ ಪ) ; ಪದಕೆ ತೊಡರ್ದ ಪೆರ್ಬಳ್ಳಿಗಳ್ ಪಾಶದಂತೊಪ್ಪಿರೆ (ಶಾಕುಂತ. ೦೭-೩೩). [ಪೆರ್ (<ಪಿರಿದು$_1$) + ಬಳ್ಳಿ]

**ಪೆರ್ಬಳ್ಳಿ$_2$** ' ಪೆರ್ವಳ್ಳಿ ' ನೋ.

**ಪೆರ್ಬಱಿ** ' ಪೆರ್ವಱಿ ' ನೋ.

**ಪೆರ್ಬಟ** (ನಾ). ಅಮೂಲ್ಯವಾದ ಬಟ್ಟೆ,–ವಸ್ತ್ರ : ಎಳಸದ್ವಿ ಮಲಾಪುರೀ ಪರಿಶ್ರೀನಟಿ ನರ್ತಿಸುತ್ತುಮಿರೆ ತತ್ಕರವಿಭ್ರಮದಂದಮಾಯ್ತು ಮಂದಾನಿಳಸಂಚಳಲ್ಲುಳಿತ ಚೀನದ ಪೆರ್ಬಳಿ[ಪೆರ್ಬಟ] ವೀಧಿವೀಧಿ ಯೊಳ್ (ಕುಸುಮಪು. ೬-೦೦೬). [ಪೆರ್ (<ಪಿರಿದು$_1$) + ಪಟ್ಟ]

**ಪೆಬ್ಬಾಗಿಲ್** ' ಪೆರ್ವಾಗಿಲ್ ' ನೋ.

**ಪೆರ್ಬಾಣ** (ನಾ). ಒಂದು ಊರಿನ ಹೆಸರು : ಪಾಣಿಗ್ರಹಣಾಂಕೆಯ್ದು ಕೊಟ್ಟಾಪ್ಪೆರ್ಬ್ಬಾಣ ಮೂತ್ತರಸರು (ಪ್ಯಕಂ. ೦೯೪೦, ೧-೩೩ ; 788) ; ಪೆರ್ಬಾಣನ ಪಳ್ಳಿಯ ಕೊಣ್ಣ ಶ್ರೀಕೇಸಿಗ × × × ತಲೆನೆಱಿಯಲ ಕಟ್ಟಂ ಕಟ್ಟುವುದರ್ಕೆ ಕೊಟ್ಟ ಸ್ಥಿತಿಕ್ರಮವೆನ್ನುವೆನ್ದೊಡೆ (ಎಇ. VI (R), ಶ್ರೀರಂಗ. ೬೩-೦೨ ; ಸು. 904). ' ಪೆಬ್ಬಾಟ್ ' ಪಠಾ. [?]

**ಪೆಬ್ಬಾರವ** ' ಪೆರ್ವಾರ್ವ ' ನೋ.

**ಪೆಬ್ಬಾರ್ವ** ' ಪೆರ್ವಾರ್ವ ' ನೋ.

**ಪೆಬ್ಬಾಲ** (ನಾ). ಉದ್ದವಾದ ಬಾಲ ; ನಿಡಿದಾದ ಬಾಲ : ಪೆರ್ಚಿದ ಕೊರರ್ ಪೆರ್ಬಾಲವುದ್ದಂಡವಕ್ರರದಂ ಮಿಂಚುವ ಮೆಯ್ . . . ಚೆಲ್ವಾಗೆ ತತ್ಕಾನನಾಂತರದೊಳ್ ಪೆರ್ಬಾಲಿಯಿರ್ದುದು (ನೇಶಿತಂ. ೭೬). [ ಪೆರ್ (<ಪಿರಿದು$_1$) + ಬಾಲ$_1$ ]

**ಪೆಬ್ಬಾವು** ' ಪೆರ್ವಾವು ' ನೋ.

**ಪೆಬ್ಬಾವುಗ** (ನಾ). ದೊಡ್ಡ ಗಂಡುಬೆಕ್ಕು : ಎಲೆ ಮಾರ್ಜಾಲ ನಿನ್ನ ಮಕ್ಕಳಿಗ ಬೇಂಟೆಗಾಗಿ ನಮ್ಮನೆಯೊಳಗ ಪೊಂದಿ ಪೆರ್ಬಾವುಗನು ಪುದುಗಿ ಕುಳಿತಿದೆ (ನವಪಟೀ. ೦೭-೨೩). [ ಪೆರ್ ( < ಪಿರಿದು$_1$ ) + ಬಾವುಗ ]

**ಪೆಬ್ಬಾಳ್** ' ಪೆಬ್ಬಾಟ್ ' ನೋ.

**ಪೆಬ್ಬಾಳು$_1$** ' ಪೆರ್ವಾಳ್ ' ನೋ.

**ಪೆಬ್ಬಾಳು$_2$** ' ಪೆಬ್ಬಾಟ್ ' ನೋ.

**ಪೆಬ್ಬಾಟ್**, ಪೆಬ್ಬಾಳ್, ಪೆಬ್ಬಾಳು$_2$, ಹೆಬ್ಬಾಳು$_2$ (ನಾ). ಒಂದು ಸ್ಥಳದ ಹೆಸರು : ಪೆಬ್ಬಾಟ ಉತ್ತಮಗಾಮುಣ್ಡರು ಕುನ್ದ ಗಾಮುಣ್ಡರು (ಎಇ. IV, ಶ್ರೀರಂಗ. ೦೩೦-೨೦; ಸು. 900) ; ಪೆಬ್ಬಾಟ ನಾಳುತ್ತಮಿಬ್ದು (ಎಇ. IV, ೩೩೩-೨೦ ; 975). **ಪೆಬ್ಬಾಳ್** : ಪೆಬ್ಬಾಳ

ಶ್ರೀಸ್ವಯಂಭು ದಕ್ಷಿಣ ಸೋಮನಾಥದೇವರ ಮಠದಾಚಾರ್ಯ್ಯರ್ (ಶಾಇಸ. XI-ii. ೧೪೯-೩೦ ; 1095). **ಪೆಬ್ಬಾಳು$_2$ :** ಶ್ರೀಮತ್ಕನ್ನಯ್ಯ ಚರಿತ್ರ ವಳ್ಳಿಯುಮಂ ಪೆಬ್ಬಾಳುಮಂ ಬಿದಿರುವಳ್ಳಿಯು ಧುರದೊಳ್ ಕೊಣ್ಡು (ಎಕ. XI. ಶಿಕ್ರಮ. ೯೯-೬೦ ; 947). **ಹೆಬ್ಬಾಳು$_2$ :** ಶಿವಲಿಂಗದೇವರ್ಗ್ಗೆ ಆ ನಾಡ ಬಳಿಯ ಕಂಪಣಂ ಹೆಬ್ಬಾಳು ಹಂನೆರಡಱೊಳಗಣ ನಾಗವಾಡವುಂ ಸರ್ಬ್ಬನಮಸ್ಯಂ ಮಾಡಿ (ಕೊಶಾ. ೯-೩೭ ; 1147).

[ ಪೆರ್ (< ಪಿರಿದು$_1$ ) + ಪಾೞ್]

**ಪೆರ್ಬಿಟ್ಟಿ** (ನಾ). ಪ್ರತಿಫಲವಿಲ್ಲದೆ ಮಾಡುವ ಅಧಿಕವಾದ ಕಾಯಕ : ಪಿರಂತೀ ದೇಹಮುಂ ರಕ್ಷಿಸುವಶಿಭರದಿಂದುಳ್ಳು ತೆತ್ತುಂ ಸತೇಜಕಾರ್ಯ್ಯರೇನು ಪೇಳ್ವೊಡಂ ಕೈಮಾಗಿದು ಸಾಗಿದು ಪೆರ್ಬಿಟ್ಟಿಯುಂ ಪೊತ್ತು (ರಕ್ತಾಶ. ೧೮).

[ ಪೆರ್ (< ಪಿರಿದು$_1$)+ಬಿಟ್ಟಿ ]

**ಪೆರ್ಬಿಡಿ** ' ಪೆರ್ವಿಡಿ ' ನೋ.

**ಪೆರ್ಬಿದಿರ್** ' ಪೆರ್ವಿದಿರ್ ' ನೋ.

**ಪೆರ್ಬಿಲ** (ನಾ). ದೊಡ್ಡ ಕಂಡಿ,—ರಂಧ್ರ : "ಪೆರ್ಬಿಲಂ ಬಿಲಸಗ್ಗಮುಂ ಬಿಲದ್ವಾರಮೆಂದು" (ಶಬ್ಸಾ. ೯೭) ; ಬಿಲದ್ವಾರ . . . ಪೆರ್ಬಿಲ (ಶಮದ. ೨೯೮ ಪ್ರಯೋ).

[ಪೆರ್ (<ಪಿರಿದು$_1$) + ಬಿಲ]

**ಪೆರ್ಬಿಸಿಲ್** ' ಪೆರ್ವಿಸಿಲ್ ' ನೋ.

**ಪೆರ್ಬಿಳ್ಗಿ** ? (ನಾ). (?) : ಲೋಕದಲ್ಲಿ ಪಾರ್ವರಾದವರೊಮ್ಮೆಯುಂ ಮಣ್ಣೀರು ಪೆರ್ಬಿಳ್ಗಿ ಬಿಸಮಾದಿಯಾದ ನಿಷಿದ್ಧವಸ್ತುಗಳನೊಂದಿನಿಸುಂ ಕಾಮಿಸಿ ಭಕ್ಷಣೆಗೆಯ್ಯಲಾಗದು (ಶಾರಶಾ. ೨೭೪).

[ ? ]

**ಪೆರ್ಬುಡಿಕೆ** (ನಾ). ದೊಡ್ಡ ಕುಕ್ಕೆ : ಪೆರ್ಬು[ಪಾಠಾಂ. ಬ]ಡಿಕೆಯೊಳಿರ್ಪ ಗುಂದಿ ನಸುಗೆತ್ತುವ ಮಿನ್ಗಳ್ (ಸೂಕ್ತಿಸು. ೩-೧೭೭).

[ ಪೆರ್ (<ಪಿರಿದು$_1$) + ಪುಡಿಕೆ ]

**ಪೆರ್ಬುಣ್** (ನಾ). ದೊಡ್ಡ ಗಾಯ : ತಱಿದುಕೊಳೆ ದೋಣನೋರ್ದ ಪೆರ್ಬುಣ್ಗಳಿಂ (ಕಾದಂಬ. ೨೭೦) ; ಪಡಿಕೆಯಂತೆ ನಾಱುತಿರ್ಪ ಪೆರ್ಬುಣ್ಗಳಿಂ . . . ಅದ್ಭುತಮಾಗೆ (ರಮಾಶ್ವ. ೪-೭೫). [ಪೆರ್ (< ಪಿರಿದು$_1$) + ಪುಣ್]

**ಪೆರ್ಬುತ್ತು** ' ಪೆರ್ವುತ್ತು ' ನೋ.

**ಪೆರ್ಬುಲಿ** ' ಪೆರ್ವುಲಿ ' ನೋ.

**ಪೆರ್ಬುಸಿ, ಹೆಬ್ಬುಸಿ** (ನಾ). ದೊಡ್ಡ ಸುಳ್ಳು : ಎನಗಿದಯುಕ್ತಮೆಂದಿರದೆ ಪೆರ್ಬುಸಿಯೊಳ್ಪುದಿದಿರ್ದ ಧರ್ಮನಂದನನನೆ ಧರ್ಮನಂದನನೆನಲ್ (ಗದಾಯು. ೩-೩೨) ; ಮಾತಾಡದಿರೊಂದುಮಂ ಮಱೆದು ಪೆರ್ಬುಸಿಯುಂ (ರಮಾಶ್ವ. ೫-೭೫) ; ಪುಸಿಕನಿವಂ . . . ಪೆರ್ಬುಸಿಯನೆ ಪೇಳ್ದಪಂ (ವೃಕಟ. ೩೮-೧೨೨). **ಹೆಬ್ಬುಸಿ :** ಹೆಬ್ಬುಸಿಯು ಕೇಳಲ್ಬಾರದು (ಚೀಕೃತು. ೪-೭-೫೪) ; ಅಸಮ ಸಸಿರಾಯರೊಳು ಹೆಬ್ಬುಸಿಯು ಬಿರದಂಗಳೇಕೆ (ಕೊಶಾ. ೧೪೪).

[ಪೆರ್ (< ಪಿರಿದು$_1$) + ಪುಸಿ$_2$ ]

**ಪೆರ್ಬೆಟ್ಟು, ಪೆರ್ಬೆಟ್ಟು, ಪೆರ್ವೆಟ್ಟು, ಹೆಬ್ಬೆಟ್ಟು, ಹೆಬ್ಬೆಟ್ಟು$_1$** (ನಾ). ೧. ದೊಡ್ಡ ಬೆಟ್ಟ ; ಮಹಾಪರ್ವತ : ಲುಬ್ಧಕರು ಕೊಟ್ಟರೊಂದೊಂದು ಕೂರ್ಗಣೆಗಳು ಬಿದ್ದು ಪೆರ್ಬೆಟ್ಟಕೆ ಮಿಗಿಲಾದುದಾಸಿ (ಶೂಕಶ. ೧೯-೩೮) ; ಭರತಂ ಮಹೀತಳಕೆ ಬಿದ್ದು ಮೂರ್ಛೆಯೊಳಿರಲ್ಕೆ ಘಿಗಡಹನುಮಂ ಕಂಡು ಕಿತ್ತು ಪೆರ್ಬೆಟ್ಟಮಂ ನೆಗಪಿ ತಂದರ್ಭಕನ ಮೇಲಿಡಲ್ಕೆ (ಕೃಬಿಭಾ. ೨೦-೩೦). ೨. (ಅಲಂ) ಅತ್ಯಂತ ಭಾರವಾದುದು : ಮುಪ್ಪಡಸಿದಾತಗೆ ಪೆಣ್ಣು ಬೆಟ್ಟು ರಣಮೇ ಪೆರ್ಬೆಟ್ಟು ಮೂಲೋಕದೊಳ್ (ಸೋಮೇಶ. ೯೫). **ಪೆರ್ಬೆಟ್ಟು :** ೧. ಸುವೇಗನ ಬಲೌಘಕಂದಿಂಟ್ಟು ನಿಂದಂ ಭೀಮನುತ್ಸಾಹದಿಂದೆ ಪೆರ್ಬೆಟ್ಟೊತ್ತಿ ನೂಕುವ ಮಹಾವಾತಘಾತಮಂ ತಡೆದೊಲೆಯದಿಪ್ಪಂತಿರೆ (ಕೃಬಿಭಾ. ೯-೨೯) ; ಪೇರಡವಿ ಪೆರ್ಬೆಟ್ಟುಗಳನಂತು ನೂರಾರು ಪೇರೂರ್ಗಳಂ ದಾಂಟಿ ಪೂರ್ವದಿಙ್ಮುಖನಾಗಿ ನಡೆದನಾ ಶತ್ರುಘ್ನನು (ಜೈಪಾ. ೬-೫೦). **ಪೆರ್ವೆಟ್ಟು :** ೧. ಕಲ್ಲಾಗೆಗೊಣ್ಡು ಪೆರ್ವೆಟ್ಟು ಧರಾತಳಕೆ ಸರಿಯಾದವು (ಎಕ. II. ೧೯೩-೦೦ ; 1131). **ಹೆಬ್ಬೆಟ್ಟು :** ೧. ಕಣ್ಣೆಂಬ ಕೂರ್ಗಣೆಯನು ಉಬ್ಬರದ ಸಾಹಸದೊಳೆಳೆವಡಿಸಿಕೊಂಡು ಬಿಡದಬ್ಬರಿಸಿ ಸೂವಿ ತಂದವರ ಬಲ್ಮೊಲೆಯೆಂಬ ಹೆಬ್ಬೆಟ್ಟದೆಡೆಯಬಿನೊಳ್ಕಡಮೊಹನಲ್ಲಿ ವಿಟರಕ್ಷಿಮೃಗ ಕುಲವನು (ಕೃಬಿಭಾ. ೬-೧೭) ; ಗಗನದೊಳ್ತನ್ನ ರಥಮಂ ಬಿಟ್ಟು ಹೆಬ್ಬೆಟ್ಟ ದಂತಿವನ ಮಸ್ತಕದ ಮೇಲೆ ಬೀಳಲ್ಕೆ (ಕೃಬಿಭಾ. ೨೩-೨೦). **ಹೆಬ್ಬೆಟ್ಟು$_1$ :** ೧. ಅಶ್ವಹೇಷಾರ್ಭಟಮುಮಿಭಘಟಾಘೀಂಕೃತಿಯುಮೇಕಮಾಗಿ ಉಬ್ಬೆದ್ದು ಹಬ್ಬುತ್ತೆ ಘೋರಸೆಣ್ದೆಸೆಯೊಳಂ ಹೆಬ್ಬೆಟ್ಟುಗಳ ಗುಹೆಗಳೊಳಗೆ ಮೊಳಗಿದುವು (ಜೈಕಥಾ. ೧೪-೪೩).

[ ಪೆರ್ (< ಪಿರಿದು$_1$) + ಬೆಟ್ಟು ]

**ಪೆರ್ಬೆಟ್ಟು** ' ಪೆರ್ಬೆಟ್ಟು ' ನೋ.

**ಪೆರ್ಬೆಡೆ** ' ಪೆರ್ವೆಡೆ ' ನೋ.

**ಪೆರ್ಬೆಣ** ' ಪೆರ್ವೆಣ ' ನೋ.

**ಪೆರ್ಬೆಣ್ಣಯ** (ನಾ). ಒಬ್ಬಾತನ ಹೆಸರು : ಶ್ರೀಮತ್ಪಡೆಯಂಕಕಾಱ ನೊಳಂಬಾಧಿರಾಜಂ ಪೆಬ್ಬೆಣ್ಣಯಂ (ಎಕ. X. ಮುಳಬಾ. ೨೦೯-೦೦ ; 1000).

[? + ಅಯ$_1$ ( < ಆರ್ಯ$_1$) ]

**ಪೆರ್ಬೆಲೆ** ' ಪೆರ್ವೆಲೆ ' ನೋ.

**ಪೆರ್ಬೆಳಸು** 'ಪೆರ್ವೆಳಸು' ನೋ.

**ಪೆರ್ಬೊಗೆ, ಹೆಬ್ಬೊಗೆ** (ನಾ). ದಟ್ಟವಾದ ಹೊಗೆ,—ಧೂಮ : ಎಳು ನೂಱು ಭೂತಂಗಳುದುಭಟನ ಸುಡುವ ಪೆರ್ಬೊಗೆ ತಾಗಲೊಡನಾ ಮೃಡನ ಕೈಲಾಸಕ್ಕೆ ಪೋದವು (ಬಸವು. ೫೭-೦೪). **ಹೆಬ್ಬೊಗೆ :** ಹೆಬ್ಬೊಗೆಯುನಡಗಿ ಸುತ ಪಿರಿಯುರಿ ಹಬ್ಬುತ . . . ಇರಲು (ಬಸಪು. ೪೪-೨೦).

[ಪೆರ್ ( < ಪಿರಿದು$_1$ ) + ಪೊಗೆ$_2$]

**ಪೆರ್ಬೊಟ್ಟು, ಪೆಬ್ಬೆಟ್ಟು, ಹೆಬ್ಬೆಟ್ಟು$_2$, ಹೆಬ್ಬೊಟ್ಟು** (ನಾ). ಕೈ ಮತ್ತು ಕಾಲುಗಳಲ್ಲಿರುವ ದಪ್ಪನಾದ ಮೊದಲನೆಯ ಬೆಟ್ಟು ; ಅಂಗುಷ್ಠ ; ಹೆಬ್ಬೆರಳು : ನೆಟ್ಟನೆ ಪೆರ್ಬೊಟ್ಟಂ ಮಣಿಕಟ್ಟಂಗಳಿತಂದ ಸಂದಿಯಲ್ಲಿಯ ಸೆರೆಯಿಂ ಮುಟ್ಟಿದೊಡೆ ಮಿಡಿಯದಿರ್ದೊಡೆ ನಿಟ್ಟೆಯ್ದಾಗೆ ಅಯ್ದು ತಿಂಗಳಾಯುಃಕ್ರಮಮಂ (ಕಗಾರ. ೩೫೭): ಸುಟ್ಟುಂಬೆಯುಂ ಕನಿಷ್ಠಾಂಗುಲಕೆ ನಾಲ್ಕು ಪೆರ್ಬೊಟ್ಟಗೈದು (ಮುಂಗಾ. ೦೦೩-೭). **ಪೆಬ್ಬೆಟ್ಟು :** ಸಣ್ಣ ಬೆರಳ ಶಕ್ತಿಯಂತು ಪೆಬ್ಬೆಟ್ಟನ ಬಣ್ಣಿತಂತುಟೊ ಮುಷ್ಟಿಯಂತೊ (ಶರಸ. ೪೯-೧೩೭). **ಹೆಬ್ಬೆಟ್ಟು$_2$ :** ತರ್ಜನಿ, ಪ್ರದೇಶಿನಿ—ಈ ೨ ಹೆಬ್ಬೆಟ್ಟನ ಒತ್ತಿನ ಬೆರಲ ಪೆಸರು (ಪಾಶಾ. ೦೨೦); ಈ ಭಾಷೆ ಹುಸಿಯಾಗೆ ಹೆಬ್ಬೆಟ್ಟು ಮಿಣ್ಯ ಬೇವುದು (ಸಿದ್ಧರಾ. ೭-೦೫); ಹೆಬ್ಬೆಟ್ಟುಗಳು, ಪವತಳಗಳು . . . ಶಿರಸ್ಸು ಮುಂತಾದ ಸ್ಥಾನಗಳೇ ಸ್ತ್ರೀಯರುಗಳಿಗೆ ಕಳಾಸ್ಥಾನಗಳೆನಿಸಿಕೊಂಬವು (ಸಕವ್ಯ. ೬೦) : ಕರದ ಹೆಬ್ಬೆಟ್ಟ ಬಾಯೊಳಗಿಟ್ಟು ವಟಪತ್ರಶಯನನಂತೊಪ್ಪಿದರ್ ಸುಕುಮಾರಕರ್ (ಕರಶ. ೨-೩೦); ಹಿಡಿ ಹಿಡಿದರೆ ಹೆಬ್ಬೆಟ್ಟು ಹೊರಗೆ (ಗಾದೆ). **ಹೆಬ್ಬೊಟ್ಟು :** ಇಂಡಿಯನರು ನಡೆಯುವಾಗ ಹೆಬ್ಬೊಟ್ಟು ಮೇಲಕ್ಕೆ ಎತ್ತುವುದಿಲ್ಲ (ಮುಂಬಯು. ೩-೪೪).

ಹೆಬ್ಬೆಟ್ಟಯ್ಯ=ಸಹಿಗೆ ಬದಲು ಎಡಗೈ ಹೆಬ್ಬೆಟ್ಟನ್ನು ಒತ್ತುವವನು : ತನ್ನಂತೆ ಮಗ ಹೆಬ್ಬೆಟ್ಟಯ್ಯನಾಗದಿರಲಿ ಎಂದೆ ಮಗನನ್ನು ಚೆನ್ನಾಗಿ ಓದಿಸಿದನು (ರೂಢಿ). ಹೆಬ್ಬೆಟ್ಟಿನವರು = ಸಹಿಗೆ ಬದಲು ಎಡಗೈ ಹೆಬ್ಬೆಟ್ಟನ್ನು ಒತ್ತುವವರು : ಆ ಹಳ್ಳಿಯಲ್ಲಿದ್ದ ಮುಕ್ಕಾಲು ಭಾಗ ಜನರೆಲ್ಲ ಹೆಬ್ಬೆಟ್ಟಿನವರೇ (ರೂಢಿ).

[ಪೆರ್ ( < ಪಿರಿದು$_1$) + ಬೊಟ್ಟು$_1$]

**ಪೆರ್ಬೊಡೆಯ** 'ಪೆರ್ವೊಡೆಯ' ನೋ.

**ಪೆರ್ಬೊಣಲ್** 'ಪೆರ್ವೊಣಲ್' ನೋ.

**ಪೆರ್ಬೊಣನಲು** 'ಪೆರ್ವೊಣಲ್' ನೋ.

**ಪೆರ್ಬೊಲ** (ನಾ). ವಿಶಾಲವಾದ ಜಮೀನು ; ವಿಸ್ತಾರವಾದ ಭೂಮಿ : ಕಣ್ಗೆ ಸೊಗಸಾದುದೀದಮರರಟ್ಟಿಯ ಬೆಳಸು ತ್ರಿಪುರದ ಮಹಾಬಯಲ ಪೆರ್ಬೊಲದೊಳು (ಶಂಖ. ೧೨-೩೬). [ಪೆರ್ (< ಪಿರಿದು$_1$) + ಪೊಲ]

**ಪೆರ್ಬೊಲಸು** (ನಾ). ಅಧಿಕವಾದ ಹೇಸಿಗೆ,—ಹೊಲಸು : ಕುಮುದ ಶೇಖರ ಜಲಕೇಳಿಲೀಲೆಯಲಿ ತರುಣಿಸಹಿತಲಿರೆ ವರಮುನಿ ಶಪಿಸಲು ಶರೀರ ಪೆರ್ಬೊಲಸಾದಂತೆ (ಕೃಕಚ. ೨-೨೧). [ಪೆರ್ (<ಪಿರಿದು$_1$) + ಪೊಲಸು]

**ಪೆರ್ಬೊಳಲು** 'ಪೆರ್ವೊಳಲ್' ನೋ.

**ಪೆರ್ಬೊಳೆ** 'ಪೆರ್ವೊಳೆ' ನೋ.

**ಪೆರ್ಭಯ** (ನಾ). ಅಧಿಕವಾದ ಹೆದರಿಕೆ, – ಅಂಜಿಕೆ : ನನ್ನೆಚ್ಚರಿಸಿತು ಒಂದರೆಜಾವ ಬೆದೆಗಾಲದ ಹಮ್ಮೈಸಿಕೆಯೊಳಗೆ ಪೆರ್ಭಯದಂಬಾಸಂರಾತಿಯೊಳಗೆ (ಗಕೀತ. ೬೬-೯). [ಪೆರ್ (< ಪಿರಿದು$_1$) + ಭಯ]

**ಪೆರ್ಭಾಗ್ಯ** (ನಾ). ಅತಿಶಯವಾದ ನಿಧಿ,–ಸಂಪತ್ತು : ಗರ್ಭದೊಳಿದ್ದುದು ಮೊದಲಾಗಿ ಪಾಪಮುಗರ್ಭಿಣಿಯಾಗುವನೆಂದು ಪೆರ್ಭಾಗ್ಯದಂತೆ ಪಾರ್ಶ್ವಪವು ನೀವೆಮ್ಮ ನಿರ್ಭಾಗ್ಯ ಮಾಡಿಹೋಗುವಿರಿ (ಜಕ. ೧೫-೦೦೭). [ಪೆರ್ (< ಪಿರಿದು$_1$) + ಭಾಗ್ಯ]

**ಪೆರ್ಭುಜ** (ನಾ). ವಿಶಾಲವಾದ ಭುಜ, —ಹೆಗಲು : ಮಂಡೆಯನೊತ್ತಿ ಪೆರ್ಭುಜಗಳನೊರಸಿ (ಮೋಕಕ. ೦೨-೯೦). [ಪೆರ್ (< ಪಿರಿದು$_1$) + ಭುಜ]

**ಪೆರ್ಭೂತ** (ನಾ). ದೊಡ್ಡ ದೆವ್ವ ; ಪೆಡಂಭೂತ : ಹಸುರ್ಬಯಲು, ಪೆರ್ಭೂತ... ಎಂಬಂತಹ ಪ್ರಯೋಗಗಳನ್ನು ಕುರಿತು ಶುದ್ಧ ವೈಯಾಕರಣಿಗಳು, ಭಾಷೆಯ ಮಡಿವಂತರು ಏನೆಂದುಕೊಳ್ಳುವರೋ! (ಚಾಕಚು. ೦೮೨); ತನ್ನ ಮನಸ್ಸು ಕಲ್ಪಿಸಿದ್ದ ಭೀತಿಯೊಂದು ಪೆರ್ಭೂತದಂತೆ ಅವಳ ಮನಸ್ಸನ್ನೆಲ್ಲ ಕಕ್ಕಲೆ ಮಾಡಿದ್ದಿತು (ಚಾಂಕಶಾ. ೬೨). [ಪೆರ್ (< ಪಿರಿದು$_1$) + ಭೂತ]

**ಪೆರ್ಮ$_1$, ಪೆಮ್ಮ$_1$, ಹೆಮ್ಮ** (ನಾ). ೧. ಮಹಿಮೆಯುಳ್ಳವನು; ಹಿರಿಯ: ಪೆರ್ಮ್ಮ ನಿನ್ನ ದರ್ಶನವಾಯ್ತು; ಜಯವಾಯ್ತು ಇನ್ನೆನಗೆ (ಅಕ್ಕಾ. ೨-೨೦). ೨. ಒಬ್ಬಾತನ ಹೆಸರು : ಸ್ವಸ್ತಿಶ್ರೀ ಕಲ್ಯಾಣಿ ಪೆರ್ಮ್ಮನ್ ಸಾಮ್ರಾಜ್ಯಂಗೆಯೆ (ಎಕ. X(ಅ), ಚಂಚಾಶು. ೦೭೦-೦ ; ಕ್ರಿ. 750). **ಪೆಮ್ಮ$_1$** : ೩. ಹೆಚ್ಚು ; ಅಧಿಕ್ಯ : "ಅಧಿಕದೊಳ್ ಪೆರ್ಮ್ಮವೆನಿಕುಂ" (ಅಕರ. ೦೨೬). **ಹೆಮ್ಮ** : ೨. ಅವಂ ಪಾಲಿತಧರ್ಮ್ಮಂ ಪ್ರಭುಪ್ರಧಾನಂ ಹೆಮ್ಮಂ (ಕೊಣ್ಣಾ. ೨೩-೩೯ ; ೯); ಕಾಣಾಜ್ಞಗ್ಗಣ ಬಿನವಾಸೋ ನಿವ್ಮಿರ್ತಂ ಹೆಮ್ಮ ಭೂಭೃತಃ (ಎಕ. VII, ಶಿಕಪೂ. ೬೯-೨೨ ; 1112). ೪. ದೊಡ್ಡದು (?): 'ಹೆಮ್ಮಧೇನು' ಪರಾ. [ಪೆರ್ಮ + –ಅ$_1$]

**ಪೆರ್ಮ$_2$** (ನಾ). ಧನ ; ಸಂಪತ್ತು : ಪೆರ್ಮ್ಮಂಬಡೆದು ಮಡಗಿದೊಡೊರ್ಮ್ಮೆಯು ತಾಂ ಕಿಡುಗುಮೆಂದು ರೇವಗವುಂಡಂ ಧರ್ಮ್ಮಕ್ಕೆ ತವಿಸಿ ಧನಮಂ ನಿರ್ಮ್ಮಿಸಿದು ಶಿವಗ್ಗ್ರಹಂಗಳು ಮುದದಿಂದಂ (ಶಾಇ. IX—i, ೨೯೯-೬೦ ; 1147). [?]

**ಪೆರ್ಮಂದೆ** (ನಾ). ದೊಡ್ಡ ಹಿಂಡು,—ಗುಂಪು : ಹೊರಸುಗಳ ಸಮುದಯಂ ; ಪುರುಲೆಗಳ ಪೆರ್ಮಂದೆ (ಕನ್ನಾಂಗ. ೩೩-೦೯೯೬). [ಪೆರ್ (< ಪಿರಿದು$_1$) + ಮಂದೆ]

**ಪೆರ್ಮಕ್ಕೆ** (ನಾ). ಒಂದು ಊರಿನ ಹೆಸರು (?) : ಆ ಯುದ್ಧದುಳ್ ಉಬಿ ಶೀಲಿಚ್ಚಿದವಂಬುವಾಳ್ಪಲಗೆಯುಳ್ಳಟ್ಟುಬ್ಬಿವಲ್ಲನ್ನಿ ಪಿನ್ ಮಜುಮೋಗೀಶ್ವರನುಳ್ಳ ಕದಿ ಪ್ರಣಿದ ನಾಗವ್ಮನೀ ಶೂದ್ರಕನ್ ಪೆರ್ಮ್ಮಕ್ಕೆ ಮೇಗಿರೆ ಪತ್ತೊನ್ದಿದೊಡ ಕಾದು (ಶಾಇ. IX—i, ೬೯೨-ಅ ; ೭ಶತಮ ೬೬). [?]

**ಪೆರ್ಮಗ, ಹೆಮ್ಮಗ, ಹೆರ್ಮಗ** (ನಾ). ಹಿರಿಯ ಮಗ; ದೊಡ್ಡ ಮಗ : ಗಂಗೆಯ ಪೆರ್ಮಗಂಗೆ ಘಟಸಂಭೂತಂಗೆ ಕರ್ಣಂಗಸಾಧ್ಯನೊಳಾಗಾಂಡೀವಿಯೊಳ್ ಕಜುತ್ತಿಜುವರಾರ್ (ಕಂಪಿಶಾ. ೧೩-೯); ಪೆರ್ಮಗನಂ ನೋಡುವೆನೆಂದು ಪೋಗಿ ತಲೆ ಬೆಜಾಗಟ್ಟೆ ಬೇಜಾಗೆ ಧಾತ್ರಿಗೆ ಬಿಟ್ಟಿರ್ದೊಡೆ ಕಂಡು (ಕಂಪಿಶಾ. ೯-೯೩); ಅಗ್ನಿಭೂತಿಗಂ ಗೌತಮಿಗಂ ಅಗ್ನಿಸಖನೆಂಬ ಪೆರ್ಮಗನಾಗಿ (ವರ್ಧಕ. ೦೦-೫೦ ಅ). **ಹೆಮ್ಮಗ** : ತ್ರಿಶಂಕುವಸುಧಾಧಿನಾಯಕನ ಹೆಮ್ಮಗ ಹರಿಶ್ಚಂದ್ರನು ಮಾಜಾಗೊಂಡೋಲೈಸಿಕೊಂಬರಿಲ್ಲಾ ಎನುತ್ತ ಬಗೆಬಗೆದು (ಹಕಾ. ೦೦-೦೯) ; ಬೊಮ್ಮರಕ್ಕಸಗೀವರೇ ಈ ಹೆಮ್ಮಗನ ನೀ ಕೊಟ್ಟೆಯಾದರೆ ನಮ್ಮ ಕಾವ ಮುಕುಂದ ಬಲ್ಲನು ನಿಮ್ಮ ಮಾತುಗಳ (ಸಂಕಕ. ೨೩-೯೬); ಬೃಹಸ್ಪತಿ ದೇವಸ್ಯ ಮಾನಿಸ್ಯ ಹೊಕ್ಕಿಹರೆ ಹೆಮ್ಮಗನು ಸಾವ (ಸರ್ವಜ್ಞ. ೦೦೦೬). **ಹೆರ್ಮಗ** : ಪೆರ್ಮ್ಮಡಿರಾಯನಣುಗಿನ ಹೆರ್ಮಗನೆನಿಪಂ ಯುಗೀನ ನೃಪಸರ್ವಜ್ಞಂ (ಕೊಣ್ಣಾ. ೯-೦೨ ; 1147). [ಪೆರ್ (< ಪಿರಿದು$_1$) + ಮಗ]

**ಪೆರ್ಮಗಳ್** (ನಾ). ಹೆಣ್ಣು ಮಗಳು : ಒರ್ವಳ್ ಪೆರ್ಮಗಳ್ ಬಗೆಪೊಡಿನ್ನವಮಗೀಕೆಯಿ ಗಂಡುಗೂಸು (ಅಭ್ಯಾ. ೦೩೬). [P ಇದು 'ಪೆಣ್ಮಗಳ್' ಎಂಬುದರ ಅಪಲಿಖಿತವಿರಬಹುದು]

**ಪೆರ್ಮಗು** (ನಾ). ಮೊದಲನೆಯ ಮಗು; ಹಿರಿಯ ಮಗು : ಧರ್ಮಜನೆಂಬ ಪೆಸರನು ಪೆರ್ಮಗುವಿಗೆ ಕೊಟ್ಟು ಪಾಂಡುನೃಪತಿಯತಿನಿರ್ಮಲಚಿತ್ತನಾಗಿರಲು (ಪೀಠಿಸಂ. ೬-೩೬).

**ಪೆರ್ಮಕ್ಕಳ್, ಪೆರ್ಮಕ್ಕಳು** = ೧. ಊರಿನ ಪಂಚರು; ಮಹಾಜನ : ಪೆರ್ಮ್ಮಕ್ಕಳ ಸನ್ನಾನ ಪಾರ್ವ್ವನ್ನಿನಿಯೂರಾ ಮಹಾಜನಕ್ಕೆ ಕೊಟ್ಟದು ಸಾಲೆ ಆಚನ್ದ್ರತಾರಕಂ (ಎಕ. VII, ಶಿಕಾಂ. ೧೫-೨೬ ; ಕ್ರಿ. ೭೦೯). ೨. ಹಿರಿಯ ಮಕ್ಕಳು : ಸಾವಿರಸಂತಾನವಡೆದಲ್ಲೆ ಮಮಕಾರ ತೀವಿಹುದಬಲನ ಮೇಲೆ ಕೋವಿದೆ ಪೆರ್ಮಕ್ಕಳ ಬಿಟ್ಟು ಸಲೆ ವಾಗ್ದೇವಿಯೆ ನ್ನೊಳಗಿರು ತಾಯೆ (ಮೋಚಕ. ೦-೦೦). [ಪೆರ್ (< ಪಿರಿದು$_1$) + ಮಗು]

**ಪೆರ್ಮಚ್ಚರ** (ನಾ). ೧. ಅಧಿಕವಾದ ಅಸೂಯೆ; ಹೆಚ್ಚಾದ ದ್ವೇಷ. ೨. ಅತ್ಯಂತ ದ್ವೇಷವುಳ್ಳವನು; ಅಸೂಯಾಪರ: ಪೆರ್ಮಚ್ಚರನಿಕ್ಕಲೆನ್ನ ಭುಜದಂಡಮ ಸಾಲದೆ (ಅಭ್ಯಾಕ. ೯೯೯). [ಪೆರ್ (< ಪಿರಿದು$_1$) + ಮಚ್ಚರ]

**ಪೆರ್ಮಟ್ಟ, ಪೆಮ್ಮಟ್ಟ** (ನಾ). ಒಂದು ಬಗೆಯ ವಾದ್ಯ.

**ಪೆರ್ಮಟ್ಟತೂರ್ಯನಿರ್ಘೋಷಣ**= (ಕದಂಬ ವಂಶದ ಅರಸರಿಗೆ ಸಲ್ಲುತ್ತಿದ್ದ) ಒಂದು ಬಿರುದು : ಕಾದವ್ಮುಚಕ್ರಿ ಮಯೂರವರ್ಮ್ಮ ಮಹಾಮಹೀಪಾಳಕುಳಭೂಷಣಂ ಪೆರ್ಮ್ಮಟ್ಟತೂರ್ಯ್ಯನಿರ್ಘೋಷಣಂ (ಎಇ. XVI, ೬೬-೬ ; 1053) ; ಪೆಮ್ಮಟ್ಟತೂರ್ಯ್ಯನಿರ್ಘೋಷಣಂ ಚತುರಾಶೀತಿನಗರಾಧಿಷ್ಠಿತಲಲಾಟ ಲೋಚನಚತುರ್ಭುಜ (ಎಕ. XI, ದಾಕ. ೩೨-೨೬ ; 1 1). ಪೆಮ್ಮಟ್ಟತೂರ್ಯನಿರ್ಘೋಷಣ = ಪೆರ್ಮಟ್ಟತೂರ್ಯನಿರ್ಘೋಷಣ : ಪೆಮ್ಮಟ್ಟತೂರ್ಯ್ಯನಿರ್ಘೋಷಣಂ ಶಾಖಾಚರೇಂದ್ರಧ್ವಜವಿರಾಜಮಾನವಾನೋತ್ತುಂಗ ಸಿಂಹಲಾಂಛನ ದತ್ತಾರ್ತ್ರಿಕಾಂಚನ ಮಾಕ್ರೋಳ್ಸರ ಗಣ್ಡಂ (ಕಇ. I, ೨೬-೦೩ ; 1055). **ಪೆರ್ಮಟ್ಟಪಟಹ ಘೋಷಣ** = ಒಂದು ಬಿರುದು : ಪೆಮ್ಮಟ್ಟಪಟಹ ಘೋಷಣ (ಶಾಇ. ೦೯೯೬, ಚಾಪಟ್. ೨೦೯-೦೫ ; 943) ; ಸಿಂಹಲಾಂಛನಂ ಪೆರ್ಮಟ್ಟಪಟಹಘೋಷಣಂ ಚತುರಾಸೀತಿನಗರಾಧಿಷ್ಠಿತಂ (ಶಾಇ. XX, ೯೦-೬ ; 1068). [?]

**ಪೆರ್ಮಡಿ** 'ಪೆರ್ಮಾನಡಿ' ನೋ.

**ಪೆರ್ಮಡಿಗವುಂಡ** 'ಪೆರ್ಮಾನಡಿಗಾವುಂಡ' ನೋ.

**ಪೆರ್ಮಡಿಗಾವುಂಡ** 'ಪೆರ್ಮಾನಡಿಗಾವುಂಡ' ನೋ.

**ಪೆರ್ಮಡಿಯ** 'ಪೆರ್ಮಾನಡಿ' ನೋ.

**ಪೆರ್ಮಡಿವಟ್ಟ** (ನಾ). ಪೆರ್ಮಾನಡಿಯ ಪಟ್ಟ,– ಪದವಿ : ಶ್ರೀಮತ್ ಪೆರ್ಮ್ಮಾನಡಿಗಳ್ ಜಡಲ ಎಱೆಯಂಗಾವುಣ್ಡನ ಮಗಂಗೆ ಪೆರ್ಮ್ಮಡಿ ಪಟ್ಟಂಗಟ್ಟ (ಎಕ. I(ಅ), ೯೬-ಅ ; 890). [ಪೆರ್ಮಡಿ (< ಪೆರ್ಮಾನಡಿ) + ಪಟ್ಟ$_3$]

**ಪೆರ್ಮಡು, ಹೆಮ್ಮಡು** (ನಾ). ಬಹಳ ಆಳವುಳ್ಳ ಮಡ ,—ಆಳವಾದ ನೀರಿನ ಭಾಗ : ತನ್ನ ತಂದೆಗೆ ನೀರ್ಗುಡಲುವೆಂದು ಮಾಡಿದ ಶಮಂತ ಪಂಚಕಂಗಳೆಂಬಯ್ದು ಪೆರ್ಮಡುಗಳ ಕೆಲದೊಳೆದೆಯುಱದು ಬೀಡಂ ಬಿಡಿಸಿ (ಪಂಪಭಾ. ೯ ೦೦೯ ಪ); ಬಾಯ್ಬಿಟ್ಟೊಡಂ ಪೆರ್ಮಡು. ಬಱದೆನಿಸಲ್ ಸೊರ್ಕಿ . . . ವೆಱಿದುದು ಕಡುಪಿ ಸ್ಥೂಳಕಾಯಂ ಲುಲಾಯಂ (ಶ್ರೀಪು. ೨೬–೬೯); ಕ್ರೂರನಕ್ರಾಕುಲದೊಳಡಿದಿರ್ದ ಪೆರ್ಮಡು ಗಭೀರ ನಿರ್ಮಲಜಲದೊಳೆಸೆವಂತೆ ಮನದೊಳ್ಕಠೋರತರಭಾವಮಂ ತಳೆದು ಬಹಿರಂಗದೊಳ್ ವಿನಯಮಾಳ್ಪುತನಾಗಿ (ಕೈಪಿಟಾ. ೨೮–೨೯). **ಹೆಮ್ಮಡು :** ಸುಲೋಚನೆಯಾವುದ್ದಾವ ನದಿಯ ಹೆಮ್ಮಡುವಂ ಪೊಕ್ಕಳ್ (ಜಯಕಾ. ೯–೨೯); ಹೆಮ್ಮಡುವೊಂದು ಮನೆ ತವದೇಳಿಗೆಯ ತುದಿಯೊಂದು ಮನೆ . . . ಕಾಣಿಸುವಡರಿದೆಂದ (ಸಿಪಾಗ. ೬–೨–೬). [ಪೆರ್ (<ಪಿರಿದು₁) + ಮಡು₁]

**ಪೆರ್ಮನಡಿ** 'ಪೆರ್ಮಾನಡಿ' ನೋ.

**ಪೆರ್ಮನೆ, ಹೆಮ್ಮನೆ** (ನಾ). ೧. ದೊಡ್ಡ ಮನೆ : ವಿಶಾಲವಾದ ಭವನ : ಭಟಾರರುಂ ಕಿಱುಮನೆ ಪೆರ್ಮನೆಯೆನ್ನದುಣಲ್ಮಕ್ಕ ಮನೆಗಳಂ ಚಂಗೆ ವುಗುತ್ತಂ (ಕರ್ಣಾಕಾ. ೬೮–೩); ತೊವಲಿನೆಲ್ಲಿನಿಮಗ್ಗದ ನೆತ್ತಱಿಂ ಮನಂಬಿಡೆ ಸಮೆದಿರ್ದ ಪೆರ್ಮನೆ ಶರೀರವಿಂದಂ ಪಿಡಿವಂದವಾವುದೋ (ರಚಾಕಾ. ೬–೬೬); ಮುಗಿಲ್ಮನೆಯ ಪೆರ್ಮನೆ . . . ಪೊಸವಣ್ಣ ಗೊತ್ತಿದೆನೆ ಕಣ್ಗೆಸದಿರ್ದುದನೊಂದು ಮಾಡಮಂ (ಕಪ್ಪಿಕಾ. ೦೦೦). ೨. (ಅಲಂ) ದೊಡ್ಡ ವಂಶ ; ಹಿರಿಯ ಮನೆತನ : ಇನ್ ತೋಱಿ ನಿನ್ನ ಪೆರ್ಮನೆಯ ಪುಟ್ಟನ್ (ಅಂತಿಗೊ. ೨–೨೯). **ಹೆಮ್ಮನೆ :** ೧. ಹಮ್ಮಿಲಿ ಪಿರಿಗಿದ ಒಪ್ಪೆಟ್ಟದ ಹೆಮ್ಮನೆ ... ಹೊನ್ನು ಹಮ್ಮಿಣವುಳ್ಳ ಸಂಭ್ರಮದಲ್ಲಿ (ಶೀರ್ಷಮ. ೦೧೮–೦) ; ವಾರಿಗೆಯ ಸಖಿರನೊಡಗೂಡಿ ಹೆಮ್ಮನೆಯ ಪೊರವಟ್ಟ ಸವಿಲಾಸದಿಂದ (ಪಪಪೊ. ೦೬–೦೯). [ಪೆರ್ (<ಪಿರಿದು₁) + ಮನೆ]

**ಪೆರ್ಮರ** 'ಪೆರ್ಮರ' ನೋ.

**ಪೆರ್ಮರುಳ್, ಪೆಮ್ಮರುಳ್** (ನಾ). ೧. ದೊಡ್ಡ ಭೂತ ; ಭಯಂಕರವಾದ ಪಿಶಾಚಿ : ತೊಡಿನೊಳ್ಕೆಱ ಕಟ್ಟಿ ದಶಕಂಠನನಕ್ಕಟ ಕೊಂಡ ಪೆರ್ಮರುಳ್ ಕೊಂಡುದೆ ತನ್ನುಮಂ (ಪಂಪಭಾ. ೬–೩೬) ; ತಂಡತಂಡದ ಭೂತವಿತತಿಗಳ್ಪಲೆಗೆದಱಕೊಂಡು ಪೆರ್ಮರುಳಂತೆ ಬಹ ದುಷ್ಟಬುದ್ಧಿಯಂ ಕಂಡು (ಕೈಪಿಟಾ. ೩೦–೫೬). **ಹೆಮ್ಮರುಳ್ :** ೨. ಅಧಿಕವಾದ ಹುಚ್ಚು ,— ಮರುಳುತನ (?) : ಪೆಮ್ಮರುಳ ಮೇಗೆ ಸೊರ್ಕನೆ ತಾವುಮ್ಮನ್ನಮೆ ಮುಗ್ಗೆಯದಱ ಮೇಗುಡಯಿಸೆ ಕೋಪಮ್ಮಿಗೆ ತನ್ನ ನೆಟಲ್ಗಂ ಸಮ್ಮನಿಸಳೆ ಕೊರ್ತರ್ ಕಣ್ಣ ಕಾಣ್ಬವರೊಳರೇ (ಅಜಾಪು. ೦೯–೩೦). [ಪೆರ್ (<ಪಿರಿದು₁) + ಮರುಳ್₁]

**ಪೆರ್ಮರೆ, ಹೆಮ್ಮರೆ** (ನಾ). ದೊಡ್ಡ ಜಿಂಕೆ : ಪೆರ್ಮ[ಪಾಠಾಂ. ಹೆಮ್ಮ]ರೆಯ ಬೇಂಟೆ ವಿಹಂಗದ ಮೊತ್ತವೇಂಟೆ . . . ಉಣ್ಮೆತು ಪರ್ವಿದರಣ್ಯಮಧ್ಯದೊಳ್ (ಗಿಂಗ. ೦–೩೦) ; ಪೆರ್ಮರೆಯನಟ್ಟಿ ಕರುಳ್ಗಳ ಪೀಬ ಬಂದ ಮುಂಗುಡಿಗಳ ನಾಯ್ಗಳಂ ಪಿಡಿದು ಬೇಂಟೆಯವರ್ ಕರೆದರ್ ನೃಪಾಲನಂ (ಪಪಶಂ. ೬೮) ; ಪೆರ್ಮರೆಗಳವಿತ್ತ ದಂತಿಚಯಮಿತ್ತ . . . ಭೀಕರ ಶರಭಾಳಿಯಿತ್ತಲೆನಿಪಬ್ಬರಮುಬ್ಬರಮಾಯ್ತರಣ್ಯದೊಳ್ (ಶ್ರೀಪು. ೨೬–೩೦). **ಹೆಮ್ಮರೆ :** ಮುಱಗೆಡೆದು ಕಾಡ್ಕೋಣ ಹೆಮ್ಮರೆ ಕಿಱುಬ ಚಿತ್ರಕ ಶಿಖರಿ ಹಾಯ್ದು ಪುಲಿ ವಱಗಳನು ಮುಂದಿಕ್ಕಿ ವನಚರ ಕಂಡ ಬೀದಿಯುಲಿ (ಕೃಪರಾ. ೩–೦೨–೦೩) ; ಹೆಮ್ಮರೆಯ ಕ್ಷೀರ ಬದಿರಕ್ಕಿಯೋಗರವುಂಟು ತಣ್ಣನಲ್ಲಿರಬಂದು (ಪಾಕೋಪು. ೯–೬೯). [ಪೆರ್ (<ಪಿರಿದು₁) + ಮರೆ₁]

**ಪೆರ್ಮಲ** (ನಾ). ಅತಿಯಾಗಿ ಭೇದಿಯಾಗುವ ಒಂದು ಬಗೆಯ ರೋಗ; ಅತಿಸಾರ : "ಪೆರ್ಮಲಂ ಗ್ರಹಣಿ" (ಮಂಗರಾ. ೦೨೯–೯). [ಪೆರ್ (<ಪಿರಿದು₁) + ಮಲ₃]

**ಪೆರ್ಮಲೆ, ಹೆಮ್ಮಲೆ** (ನಾ). ದೊಡ್ಡ ಬೆಟ್ಟ ; ಎತ್ತರವಾದ ಬೆಟ್ಟ : ಪೊಲೆಗಳ ಮೇಲಿರ್ದಂ ಪೆರ್ಮಲೆಗಳ ಮೇಲಿರ್ದರಧಿಕಗುಣಗಣಯುಕ್ತರ್ (ರಚಾಕಾ. ೬–೬೨). **ಹೆಮ್ಮಲೆ :** ತಾಯೊಂದೆಸೆ ಮಕ್ಕಳೊಂದೆಸೆ . . . ಆಗಿ ಬಾಯ ಬಿಡುತ ಬಲು ಭೀತಿಯೊಳಗೆ ಹೊಕ್ಕರಾಯಾಸಗೊಂಡು ಹೆಮ್ಮಲೆಯ (ಕಂಸಪ. ೦೪–೯೬). [ಪೆರ್ (<ಪಿರಿದು₁) + ಮಲೆ₁]

**ಪೆರ್ಮಳೆ** 'ಪೆರ್ಮಟಿ' ನೋ.

**ಪೆರ್ಮಳೆಗಱ್** (ಕ್ರಿ). ದೊಡ್ಡ ಮಳೆಯನ್ನು ಸುರಿಸು,—ವರ್ಷಿಸು: ಪಟಲ ಗುಂಡುಗಳ ಎಸೆವ ಪೆರ್ಮಳೆಗಱಿಯುತ ಬೊಬ್ಬಿಱದಾಗಳಸಮಸಾಹಸಿಗಳೇ ಜಱದರು (ಕಂಸಪ. ೦೯–೯೮). [ಪೆರ್ಮಳೆ (<ಪೆರ್ಮಟಿ) + ಕಱ್₁]

**ಪೆರ್ಮಱವೆ** (ನಾ). ೧. ಸಂಪೂರ್ಣವಾದ ಮರೆವು : 'ಪೆರ್ಮಱವೆ ಗೊಳ್' ಪರಾ. ೨. ಸಾವು : (?). ೩. (ಅಲಂ) ಅತಿಶಯವಾದ ಔದಾಸೀನ್ಯ : ಪೆರ್ಮಱವೆಯ ಪೊಯ್ಸರಿ ಪಾತಕದೆಱದಿಟ್ಟಪಯಸದ ಬೆಟ್ಟು ಕಾಪಾನ ಕೆಯ್ಗಂ (ಪಾಂತೀಶ್ವ. ೬–೬೨). [ಪೆರ್ (<ಪಿರಿದು₁) + ಮಱವೆ]

**ಪೆರ್ಮಱವೆಗೊಳ್** (ಕ್ರಿ). ಮೂರ್ಛೆ ಹೊಂದು : ಊರ್ವೀಳಾಕಾಂತಂ . . . ಸ್ವರ್ಣಾಣಿ ಧರಾತಳಕೆ ನಭದಿಂದುರುಳ್ವಂತೆ ಪೆರ್ಮಱವೆಗೊಂಡು ಬೀಳ್ವ ನಿತಱೊಳ್ (ಕೈಪಿಟಾ. ೨೦–೬೦). [ಪೆರ್ಮಱವೆ + ಕೊಳ್₁]

**ಪೆರ್ಮಱ್** (ನಾ). ದೊಡ್ಡ ಹಾವು; ಹೆಬ್ಬಾವು : ಅಡಗೆಡಹಿ ಪೆ[ಪಾಠಾಂ. ಪೇ]ರ್ಮಱ ಮರಾಹನ ಮಂಡದಲುಱ ಘಟ್ಟಿಸಿ ವಿನೋದದಿ ನಡೆಯೆ ಧರೆ ಕಂಪಿಸಿತು ಭೀಮನ ಪದದ ಘಲ್ಲಣೆಗೆ (ಕುಮಾರ. ೩–೦೦). [ಪೆರ್ (<ಪಿರಿದು₁) + ಮಱ./ತುಳು. ಪೆರ್ಮರಿ, ಪೆರುಮರಿ]

**ಪೆರ್ಮಟಿ, ಪೆರ್ಮಳೆ, ಪೆರ್ವಳೆ, ಹೆಮ್ಮಳೆ** (ನಾ). ದೊಡ್ಡ ಮಳೆ : ಭಾರಿ ಮಳೆ : ನೆಗದ ಮುಗಿಲ್ಗಳುಂ ಸುರಿವ ಪೆರ್ಮಟಿಯುಂ . . . ಅಂಜಿಸುವಂತಿರೆ (ಕಲಾ. ೦–೦೨೯); ಕರೀಂದ್ರಸಂಕುಳಮಂದವಾರಿಧಾರೆಗಳ ಪೆರ್ಮಟಿಯೊಳ್ ಕಣಮೆಂಬ ರಾತ್ರಿಯೊಳ್ ಸಲೆ ಬರುತಿರ್ಪಳೆಂದುಪುಭಿಸಾರಿಕೆಯಂದದೆ ರಾಜ್ಯಲಕ್ಷ್ಮಿ ತನ್ನೊಲವಿನೊಳ್ (ಗಾದಾಪು. ೦೩) ; ನೆತ್ತರ ಪೆರ್ಮಟಿ ಕಱವತ್ತು (ಪಂಪಭಾ. ೯–೬೬). **ಪೆರ್ಮಳೆ :** ಸುರಿವ ಪೆರ್ಮಳೆಯೊಳಗೆ ತಾಂ ಕಂಪಿಸದೆ ನಿಂದಿರ್ದ (ಚಿಕ್ಕಪು. ೨–೦೨), ಬೀಸದು ಬಿಱುಸುಗಾಳಿ . . . ಮುಗಿಲ್ಗಳತಿಭರದಿಂ ಸಿಡಿಲ್ಮಿಂಚುಗಳ ಕೂಡೆ ಪೆರ್ಮಳೆಯುಮನು ಸೂಸದು (ಕೈಪಿಟಾ. ೦೫–೦೬). **ಪೆರ್ವಳೆ :** ಕರಿಮುಗಿಲ ಪೆರ್ವಳೆಯೊಳಂಜನಗಿರಿ ಕರಗಿ ಪರಿವಿವೊ (ಶಾಕ್ವಶಾ. ೨೨–೦೬) ; ಚಾಪಱ ಸೋವುರ್ಮಡಿ ಸುರಿತರ್ಪ ಕಮ್ಮಲರ ಪೆರ್ವ[ಪಾಠಾಂ. ಮ್ರ್]ಳೆಯಾಗಿರೆ (ಕಪಶಂ. ೦ ೯೩). **ಹೆಮ್ಮಳೆ :** ಸುರಿದರು ಹಾವುಗಳ ಹೆಮ್ಮಳೆಯ (ಕುಮಾರ. ೦೨–೯೯) ; ಕುಱುಮನೇಜಲು ಗುರುವು ಧರೆಗೆ ಹೆಮ್ಮಳೆಯಂತ್ಯ (ಸರ್ವಜ್ಞ. ೦೫೯೦). [ಪೆರ್ (< ಪಿರಿದು₁) + ಮಟಿ]

**ಪೆರ್ಮಾಡಿ** 'ಪೆರ್ಮಾನಡಿ' ನೋ.

**ಪೆರ್ಮಾಡಿಗಾವುಂಡ** 'ಪೆರ್ಮಾನಡಿಗಾವುಂಡ' ನೋ.

**ಪೆರ್ಮಾಣೂರ್** (ನಾ). ಒಂದು ಸ್ಥಳದ ಹೆಸರು : ಚಾಟ್ಟೂರುಂ ಪೆರ್ಮಾಣೂರುಂ ಸಮಿಪಪತ್ (ಕ್ಯಾಕಂ. ೦೯೯೦. ೦–೩೫; 788). [? + ಊರ್]

**ಪೆರ್ಮಾತು** 'ಪೆರ್ಮಾತು' ನೋ.

**ಪೆರ್ಮಾನಡಿ, ಪೆಮ್ಮಡಿ, ಪೆಮ್ಮನಡಿ, ಪೆಮ್ಮಾಡಿ, ಪೆಮ್ಮಾನಡಿ, ಪೆರ್ಮಡಿ, ಪೆರ್ಮಡಿಯಂ, ಪೆರ್ಮನಡಿ, ಪೆರ್ಮಾಡಿ, ಪೆರ್ವಡಿ, ಹೆಮ್ಮಾಡಿ, ಹೆರ್ಮಾಡಿ** (ನಾ). ೧. ಒಬ್ಬಾತನ ಹೆಸರು : ಶ್ರೀಮತ್ ಪೆರ್ಮಾನಡಿಗಳು ಎಱೆಯಪ್ಪರಸರುಮಿಬ್ಬ . . . ಕೊಮಾರಸೇನಭಟಾರರ್ ಪಡೆದಸ್ಥಿತಿ (ಎಕ. III, ಶ್ರೀರಂಗ. ೦೯೬–೦೦ ; ಸು. ೯೦೦ ?), ಶ್ರೀಮತ್ಪೆಮ್ಮಾನಡಿಗಳ್ಗಂಗವಾಡಿ ತೊಂಭತ್ತಱುಸಾಸಿರ[ಮು]ಮಂ . . . ಆಳುತ್ತಿರೆ (ಶಾಕ್ವ. XI-1, ೯೦–೮ ; ೯೦೦). ೨. ಒಂದು ಬಿರುದು (?) : ರಾಚಮಲ್ಲಪೆಮ್ಮಾನಡಿ

. . . ಕಾವು (ಎಕ. X(೩), ಚಾಗೇಶ. ೬೬-೯ ; ಸು. 820); ಶ್ರೀಮಚ್ಚಾಳುಕ್ಯ ಗಂಗಪೆರ್ಮ್ಮಾನಡಿ ವಿಕ್ರಮಾದಿತ್ಯದೇವರ್ ಗಂಗವಾಡಿತೊಂಭತ್ತಾಱು ಸಾಸಿರಮುಂ[೦] . . . ರಾಜ್ಯಂಗೆಯ್ಯೆ (ಕಇ. I. ೦೭-೯; 1055). **ಪೆಮ್ಮಡಿ :** ೧. ಸ್ವಸ್ತಿಶ್ರೀ ಪೆಮ್ಮಡಿಯ ಬೆಸದೊಳ್ (ಎಕ. XVI, ಪುತ್ತೂರು. ೦೩೩-೦; ೧೫ನೆಯ ಶತ); ಪೆಮಡಿ . . . ನರಸಿಂಹ (ಎಕ. VII, ಶಿವಮೊ. ೩೦-೨೭ ; 1413). **ಪೆಮ್ಮನಡಿ :** ೧. ಪೆಮ್ಮನಡಿಗಳ್ ಪ್ರಿಥುವೀರಾಜ್ಯಂಗೆಯ್ಯುತ್ತ ಮಿರೆ (ಎಕ. VI, ಶಕ್ಕಮ. ೩-೭; 899 ?); ಶ್ರೀಮತ್ ಪೆಮ್ಮನಡಿಗಳ್ ಸ್ವರ್ಗ್ಗ ಮೇಱಿದ (ಎಕ. III, ತಿರುಮ. ೯೦-೩; 921 ?). **ಪೆಮ್ಮಾಡಿ:** ೧. ಶಿವಚಿತ್ತಂ ವೀರಪೆಮ್ಮಾಡಿ ತಾಂ ಭೂವಂದ್ಯಂ (ಕಕಂ೦. ೩-೬; ?). **ಪೆಮ್ಮಾನಡಿ :** ೨. ಶ್ರೀಮದ್ಗಂಗಪೆಮ್ಮಾನಡಿ ಭುವನಯ್ಯ(ನ್ನೈಕ) ವೀರನ್ನುದೆ(ದ)ಯಾದಿತ್ಯ ದೇವಂ (ಇಆ.IV, ೨೦೯-೨೦; 1075). **ಪೆರ್ಮಡಿ :** ೧. 'ಚೋಳಿಪೆರ್ಮಡಿ' ಪರಾ. **ಪೆರ್ಮಡಿಯ :** ೨. ಮದನ್ನೆಯೊಳಿಱಿದು ಪರದೇವನು ಪೆರ್ಮ್ಮಡಿಯ ನೊಟವಪ್ಪುನುಮಟ್ಟೀಭದಯೆಗೇದ (ಎಕ. X (೩), ಶಂಕಾಶಮ. ೦೬೩-೭; 937). **ಪೆರ್ಮನಡಿ :** ೧. ಸ್ವಸ್ತಿ ಸತ್ಯವಾಕ್ಯಪೆರ್ಮ್ಮನಡಿಗಳ ಪಟ್ಟಂಗಟ್ಟಿದ ಪದಿನಯ್ದು ಪರಿಶದನ್ದು (ಎಕ. II, ೩೯೯-೩ ; 384 ?); ಶ್ರೀಮತ್ ಪೆರ್ಮ್ಮನಡಿಗಳ್ ಜೆಡಲ ಎಱೆಯಜ್ಞಿಜ್ಞಾವುಣ್ಣನ ಮಗಜಕ್ಕಿ (ಇಆ. VI, ೦೨೩-೯ ; ?). ೨. ಶ್ರೀಮತ್ ರಾಚಮಲ್ಲಪೆರ್ಮ್ಮನಡಿಗಳ್ (ಇಆ.VI, ೦೦೨-೫ ; 777 ?); ಸ್ವಸ್ತಿ ಶ್ರೀಪೆರ್ಮ್ಮನಡಿ ಮಾರಾಶಿಜ್ಞದೇವನ ಪಟ್ಟಜ್ಞಟ್ಟಿದ ಪ್ರಥಮವರಿಷದನ್ದು (ಎಕ. XIV, ಪಾಗಮಂ. ೦೦೦-೦ ; ಸು. 961). **ಪೆರ್ಮಾಡಿ :** ೧. ಪೆರ್ಮ್ಮಡಿಯ ಸುಳಿ ಜೋಗಬ್ಬೆಯ ಮಗಳ್ (ಪ್ರಕಂ. ೦೯೨೦, ೦೯-೩; ಸು. 881); ಧರ್ಮಾನುರಾಗಮಂ ಒಡೆ ಜಗತ್ತ್ರಯ ದೊಳ್ಮಾಡಿದ ಪೆರ್ಮಾಡಿಯುಮಣ್ಣನುಮಜ್ಜಿತಸೇನದೇವರ ಗುಡ್ಡರ್ (ಚಾಫುಃಫು. ೯). ೨. ಶ್ರೀ ಸತ್ಯವಾಕ್ಯಪೆರ್ಮ್ಮಾಡಿ (ಪ್ರಕಂ. ೦೯೩೭, ೨೦-೦ ; 896); ಕನ್ನರದೇವನ ಭಾವಂ ಮಹಾಮಣ್ಡಳಿಕ ಪೆರ್ಮ್ಮಾಡಿ ಬೂತಾಯ್ಯಂ . . . ಅಳುತ್ತಿರೆ (ಶಾಇ. XI-i, ೩೬-೩ ; 942). ೩. ಹಿರಿಯ ; ಗೌರವಕ್ಕೆ ಪಾತ್ರನಾದವನು : ದೇವರ ಸಾಲೆಯುಂ ಭೋಗಾದಿತ್ಯ ನಿಕೇತನಮುಂ ಪೆರ್ಮ್ಮಾಡಿಯ ಬಸದಿಯ ಪುರದ ಕೇರಿಯುಂ . . . ಮಾಡಿಸಿ (ಶಾಇ. XI-i, ೦೦೩-೦೫ ; ?). **ಪೆರ್ವಡಿ :** ೪. ದೊರೆ ; ರಾಜ : ಅರವರಿಸದೆ ಪಲರುಂ ಪಾದರಿಗನಿವಂ ಕಷ್ಟನೆಂದು ಕುಱಿಯುಂ ಕೊಲ್ವಂತಿರೆ ಕೊಂದು ಪೊಲೆಯರಿಂ ಚಿಚ್ಚರಮಟ್ಟಿಸುವರಟ್ಟ ದೂಱುವರ್ ಪೆರ್ವಡಿಯೊಳ್ (ರವರ್ತಾಮ್ಮ. ೬-೦೯೨). **ಹೆಮ್ಮಾಡಿ :** ೧. ಪಡವಳ ಹೆಂಮಾಡಿ ತಂಮುವ್ವೆ ಕಾಳವ್ವೆ ಕಡವಳತಿಯ ಹೆಸರಿಂ (ಎಕ. VII, ಶಿವಮೊ. ೫೫-೭೨ ; 1167 ); ಧರೆಯೊಳ್ ರೂಢಿಯ ಮಾಸವಾಡಿಯರಸಂ ಹೆಮ್ಮಾಡಿ ದೇವಂ ಗುಣಾಕರನ್ (ಎಕ. II, ೩೨೭-೯೯ ; 1181). ೩. ಆ ಪುರದ ಸೀಮೆ ಎನ್ತೆಂದಡೆ ಮೂಡಲು ಹೆಮ್ಮಾಡಿಯ ಬಸದಿಯ ಕೆಯ್ಯ ಹಡುವಣ ನಿಲ್ಲಲ್ಲು ಮೇರೆ (ಎಕ. VII, ಶಿಕಾರಿ. ೧೩೩-೭೭; 1159). ೫. ಒಂದು ಸ್ಥಳದ ಹೆಸರು : ಬೆಲತೂರ ಚತುಸ್ಸೀಮೆ ವಿವರ ಅವಳಾಡಿಯ ಗಡಿಯಿಂ ಪಡುವಲು ಯೆತಿದ ಆಗಳಿಂದ ಬಡಗಲು ಹೆಂಮಾಡಿಯ ಗಡಿಂ ಪಡುವಲು ಹೊಳೆಯಿಂ ತೆಂಕಲು ಕುದುರು ಸಹವಾಗಿ (ಶಾಇ. IX-ii, ೯೭೯-೦೦; 1510). **ಹೆರ್ಮಾಡಿ :** ೧. ಪದ್ಮಾವತೀದೇವಿಗೆ ಹರುಸಿ ಹೆರ್ಮ್ಮಾಡಿ ದೇವನಂ ಹಡೆದು ಕಾಣಿಕೆಯಂ . . . ಕೊಟ್ಟರ್ (ಎಕ. VII, ಶಿವಮೊ. ೯-೬೨; 1122) ; ಕೈಪಿಡಿಕಾರರ ಪ್ರಕಾರ 'ಹಲ್ಲಂಡೆ', 'ಹೆರ್ಮಾಡಿ' ಮೊದಲಾದ ಶಬ್ದಗಳು ತಮಿಳಿನಿಂದ ಬಂದುವು (ಭಾಷಾಚಾ. ೦೬೩).

**ಪೆರ್ಮಾಡಿಯಂಕಕಾಱ**=ಒಂದು ಬಿರುದು : ಚೋಳಕಟಕಸೂಱೆಕಾಱ ಪೆರ್ಮ್ಮಾಡಿಯಂಕಕಾಱ (ಕಇತಿ. ೨೨-೭-೨೦; 1083).

[ದೇ. ೫ ತಮಿ. ಪೆರುಮಾನಟಿ, ಪೆರುಮಾನ್]

**ಪೆರ್ಮಾನಡಿಗಾಮುಂಡ, ಪೆಮ್ಮಾಡಿಗೊಂಡ, ಪೆರ್ಮಡಿಗವುಂಡ, ಪೆರ್ಮಡಿ ಗಾವುಂಡ, ಪೆರ್ಮಾಡಿಗಾವುಂಡ** (ನಾ). ಒಬ್ಬಾತನ ಹೆಸರು : ಸಾಕ್ಷಿ ಸಂಗಮದ ಪೆರ್ಮ್ಮಾನಡಿಗಾಮುಣ್ಡರುಂ ರಣವಿಕ್ರಮಗಾಮುಣ್ಡರುಂ (ಎಕ. IV, ಎಡತೊ. ೬೦-೬೯; ಸು. 890); ಪೆರ್ಮ್ಮಾನಡಿಗಾಮುಣ್ಡನ ಮಗಂ ರಾಮಂನಲ್ಲಿ ಸತ್ತೊಡೆ ಪೆರ್ಮ್ಮಾನಡಿಯುಮೆಱೆಯಪ್ಪೊನುಮೊಡನಿಟ್ಟು (ಎಕ. IV, ಹೆಗ್ಗಡ. ೦೦೩-೯; ಸು. 910). **ಪೆಮ್ಮಾಡಿಗೊಂಡ :** ಪೆಮ್ಮಾಡಿಗೊಣ್ಡಂಗೆ ಕೊಟ್ಟ ನೀಱ್ಬಣ್ಣ ಇನ್ನೂಱು (ಎಕ. VI, ಶಕ್ಕಮ. ೩-೬; 899 ?). **ಪೆರ್ಮಡಿ ಗವುಂಡ :** ಪೆರ್ಮ್ಮಡಿಗವುಣ್ಡಂ ಏಚಗವುಣ್ಡನ್ಯೊಂಗುಣ ಗಾವುಣ್ಡನ್ (ಎಕ. IV, ಹೆಗ್ಗಡ. ೦೦೯-೦೩; 1037). **ಪೆರ್ಮಡಿಗಾವುಂಡ :** ಅಪಚವಾಡಿಯ ಪೆರ್ಮ್ಮಡಿಗಾವುಣ್ಡನ ಲಕೊಳಾದಿತ್ಯನಮೊಳೆಯ ಪುಣಸುಗ ಸತ್ತಂ (ಎಕ. IV, ಚಾಮರಾ. ೦೩೯-೦೦; 893); ಪೆರ್ಮ್ಮಡಿಗಾವುಣ್ಡನು ಪೇಳ್ವೆಡೆಯು . . . ಅಜ್ಞಯ ಕೊಟ್ಟರ್ (ಎಕ. IV, ಗುಂಡ್ಲು. ಶೇ. ೫೬-೭; ಸು. 900 ?). **ಪೆರ್ಮಾಡಿ ಗಾವುಂಡ :** ಪೆರ್ಮ್ಮಾಡಿಗಾವುಣ್ಡನ ಪೆಣ್ಡತಿ ಚಾವುಣ್ಡಬ್ಬೆ (ಪ್ರಕಂ. ೦೯೩೦, ೦೯-೭; ಸು. 882); ಪೆರ್ಮ್ಮಾಡಿಗಾವುಣ್ಡನೆಂಬ ಪೆಸರಂ ಪಡೆದಂ (ಎಕ. VII, ಶಿವಮೊ. ೦೦-೩೨; 1085 ?). [ಪೆರ್ಮಾನಡಿ+ಗಾಮುಂಡ]

**ಪೆರ್ಮಾರಿ, ಹೆಮ್ಮಾರಿ** (ನಾ). ದೊಡ್ಡ ಮಾರಿ : ಮಸಗಿತ್ತು ವಾಜಿ ಪೆರ್ಮಾರಿಪೋಲ್ (ಶಂಕಾಶಮ. ೯-೦೦೬); ನೊಂದ ಪೆರ್ಬುಲಿಯೊ ಕಿನಿಸಿ ದೆಕ್ಕಲನೊ ಪಸಿದ್ದೆತಂದ ಪೆರ್ಮಾರಿಯೋ (ಕಂಪ್ರ. ೩೯-೩೫). **ಹೆಮ್ಮಾರಿ :** ಶಿವಶಿವಾ ಕಾಮಾರಿಯೋ ಪಾಂಡವಬಲದ ಹೆಮ್ಮಾರಿಯೋ ನಿನ್ನಾನೆ (ಕುಮ್ಮಾಕ. ೦೦-೦೩); ಊರ ಹೊಗಿಸಿದರಱಿದಱಿದು ಹೆಮ್ಮಾರಿಯನು (ಕೊರಚಾ. ೫-೭-೦೬); ಗಂಡಗುಂಜದ ನಾರಿ ಅವಳೆ ಹೆಮ್ಮಾರಿ (ಕನಕ. ೫೦-೯).

[ಪೆರ್ ($<$ಪಿರಿದು$_1$) + ಮಾರಿ$_1$]

**ಪೆರ್ಮಾವಿ** (ನಾ). ಒಂದು ಊರಿನ ಹೆಸರು : ಕಾಡುಂಪಟ್ಟಿಯ ಮೃಡು ವಾನುಂ ಬನ್ದು ಪೆರ್ಮಾವಿಯಾನೆನಱಿಮ ಸುಟ್ಟಾ ಮಾತ ಕೇಳ್ದು (ಶಾಇ. IX-i, ೨೦-೭; ಸು. ೨ನೆಯ ಶತ). [?]

**ಪೆರ್ಮಾವುಲಿಗ** (ನಾ). ನಿಷ್ಣಾತನಾದ ಬೇಟೆಗಾರ : ಅಪಳುಮನೊಲಿಸಿ ಕಂಟಿಸಿ ಗೋವರ ಗುಗ್ಗುರಿಗೆ ಮಱಿಯುಂ ತಣೆಯುಯ್ ಪೆರ್ಮಾವುಲಿ ಗನೆಯೋ ಪೇಱ್ಮಂ ಸ್ತ್ರೀವಧೆ ನಿನಗಶ್ವಮೇಧಮೋ ಸಂಬಳಮೋ (ಕಾವ್ಯಾ.ಶ. ೦೬೩).

[ಪೆರ್ ($<$ಪಿರಿದು$_1$) + ಮಾವುಲಿಗ]

**ಪೆರ್ಮಾಳಿಗೆ** (ನಾ). ಭವ್ಯವಾದ ಉಪ್ಪರಿಗೆ,–ಸೌಧ : ಉಂಗುರವನ್ನು ಲೇಸಾಗಿ ಮಾರಿ ಪೊಂಗಿ ಪೆರ್ಮಾಳಿಗೆ ಕಟ್ಟುತ್ತೇರಿ ಅಂಗನೆಗೂಡಿ ಭೋಗಿಪೆನು (ಶಾಕುಂತ. ೬೫ ೩೩೪). [ಪೆರ್ ($<$ಪಿರಿದು$_1$) + ಮಾಳಿಗೆ$_1$]

**ಪೆರ್ಮಿದ್ದಿಲ್** (ನಾ). ಒಂದು ಊರಿನ ಹೆಸರು : ತೆಱಕ್ಕ್ಯ ಪೆರ್ಮ್ಮಿದ್ದಿಲ್ ಪೆಟ್ಟನನ್ದಿಯ ಕೀಱುನನ್ದಿಯ ಸೊಡಲಿಯದಾ ಮೂಱುಂ ಕುಡಿದಾ ಒಟಪ್ಪಿ (ಎಕ. X(೩), ಶಕ್ಕಾ. ೬೬-೦೬; ಸು. 850). [?]

**ಪೆರ್ಮಿಳಿ, ಹೆಮ್ಮಿಣಿ** (ನಾ). ದಪ್ಪ ಹಗ್ಗ ; ಚೆನ್ನಾಗಿ ಹುರಿಗೊಳಿಸಿದ ಹಗ್ಗ : 'ಪೆರ್ಮಿಳಿಗಟ್ಟು' ಪರಾ. **ಹೆಮ್ಮಿಣಿ :** ಬಹು ಸಲಗೆತ್ತುಗಳ ಸೊಗಕ್ಕಂ ಹೂಡೆ ಹೆಮ್ಮಿಣಿಯೊಳುಂ ತೊಡರ್ಚಿ . . . ಇರ್ವರುಮ ನೆಳಸೆಂದು ಪೇಳಿ (ಶ್ರಕುಫು. ೯-೦೯೨). [ಪೆರ್ ($<$ಪಿರಿದು$_1$) + ಮಿಳಿ]

**ಪೆರ್ಮಿಳಿಗಟ್ಟು** (ಕ್ರಿ). ಬಲವಾದ ಹಗ್ಗವನ್ನು ಬಿಗಿ,– ಕಟ್ಟು : ನಡುತೆ ಕಂಭಮನಲ್ಲಿ ಪೆರ್ಮಿಳಿಗಟ್ಟುತುಂ . . . ಅವನಿಪ್ರಿನಂ (ಪ್ರಶಾ. ೩೯-೯೭).

[ಪೆರ್ಮಿಳಿ + ಕಟ್ಟು$_1$]

**ಪೆರ್ಮಾನ್, ಪೆರ್ಮಾನು, ಹೆಮ್ಮಾನ್, ಹೆಮ್ಮಾನು** (ನಾ). ದೊಡ್ಡ ಆಕಾರದ ವಿಮಾನ : "ಶೃಂಗೀ, ಮಂದ್ಗು, ಅವಾಗು, ನಂದ್ಯಾವರ್ತ— ಈ ೪ ಮೊದಲಾಗುಳ್ಳುವು ಪೆರ್ಮಾನ್" (ಶಬ್ದಮ. ೦೦೯-೩೭); ಕರಡಿ ಮಹಿಷ ಪೆರ್ಮಾನಜಂ . . . ಕಾಟಿಕ್ಕೋಟಯೆಂಬೀ ತಿರಿಕವ್ರಾತಂ

ಗಳೊಳ್ ಸಂಭವಿಸಿ ದುರಿತದಿಂ ದುಃಖಮಂ ಪೇಱಲಾಱೆಂ (ಧರ್ಮಾಮೃ. ೧೫-೦೫೭); ತಿಮಿತಿಮಿಂಗಿಲಂಗಳಂ ಕೆಳೆಗೊಳ್ವ ಪೆವಿರ್ಮಾನ್ಗಳ ಬಾಳಬಳನದಿಂ ಕರೆಗಣ್ಮುವ ಕರ್ಮದುಮಿನೆಡೆಯೊಳ್ (ಶಬರಂ. ೯-೭). ಪೆವಿರ್ಮಾನು: ತಾನಿ ಧಿರ್ವಂದು ಮನ್ಮಥನ ಟೆಕ್ಕೆಯದ ಪೆವಿರ್ಮಾನಿಂಗೆ ಹಾಯ್ದುದ್ದಾರ್ಭಟಿಸಿ (ಸೋಹತ. ೩೬-೩೭). ಹೆವಿಮ್ಮಾನ್: "ಹೆವಿಮ್ಮಾನ್—ಝಷ" (ಶಾಶರಾ. ೬); "ಅವಾಗು ಮದ್ದುಗ್ಗ ಶೃಂಗಿಯೆನಲು ಹೆವಿಮ್ಮಾನಕ್ಕು" (ಶುಂಗಶಾ. ೧೨೦-೬). ಹೆವಿಮ್ಮಾನು: "ಶೃಂಗಿ ಮದ್ಗುರ ವಾಗುಸ ನಂದ್ಯಾವರ್ತ ಈ ೪ ಮೊದಲಾಗುಳ್ಳುವು ಹೆವಿಮ್ಮಾನು" (ಶಾಶರಾ. ೬); ಬಲೆಗೆ ಬಿದ್ದ ಹೆವಿಮ್ಮಾನು ಕಿರುಮೀನುಗಳೆಲ್ಲವನ್ನು ದಡಕ್ಕೆ ತಂದೊದರಿ, ಹೆವಿಮ್ಮಾನುಗಳನ್ನು ಆಯ್ದು ಕೊಂಡು . . . ಹೋಗುವುದುಂಟು (ಭುಶರು. ೪೯೯).

[ಪೆರ್ (< ಪಿರಿದು$_1$) + ಮೀನ್$_1$]

ಪೆವಿರ್ಮಾನು 'ಪೆವಿರ್ಮಾನ್' ನೋ.

ಪೆಮ್ರ್ಮುಗಗೆಱೆ (ನಾ). ಒಂದು ಸ್ಥಳದ ಹೆಸರು: ತೆಸನ್ನಾಡ ಕಕೆಱೆವಿ ಪೆಮ್ರ್ಮುಗಗೆಱೆಏ ಪಡಗಾಯ್ ಸನ್ನು (ಎಕ. IV, ಎಡತೊ. ೬೦-೬೪; ಸು. 890). [ ? + ಕೆಱೆ ]

ಪೆಮ್ರ್ಮುಗಿಲ್, ಹೆಮ್ಮುಗಿಲ್ (ನಾ). ಒತ್ತೊತ್ತಾಗಿರುವ ಮೋಡ; ಸಾಂದ್ರವಾದ ಮೋಡ: ಗಗನಾಂತರದೊಳ್ ಸಲೆ ಪೆಮ್ರ್ಮುಗಿಲೊಂದು ವಿಚಿತ್ರಕೂಟಕೋಟಿಕ್ರಮದಿಂ ನೆಗೆದುದು ಬಳೆದುದು . . . ಕರಗಿದುದು ನರರ ಸಿರಿಗನುರೂಪು (ಪರ್ವಶು. ೦೨-೬೨); ಗಗನದೆ ಗರುಡನೈತಂದುದು ಪೆಮ್ರ್ಮುಗಿಲಗಳಲಿದೆ ಗಱೆಯ ನಾಟಿಸುತೆ (ಸೋಹತ. ೩೬-೩೦). ಹೆಮ್ಮುಗಿಲ್: ಕೊಡಿಸು ನೇಸುವ ಹಿಡಿದು ಬಲುಮಿಂ ಕಡಲ ಕುಡಿಸುವೆ ಬಾಡಬಾಗ್ನಿಯನು ಒಡ ಪಡಬ ತಾ ಕುಡಿಯಲಾಜನು ಹಿಡಿದು ಹೆಮ್ಮುಗಿಲಿಂದ ಕುಡಿಸುವೆ ಪಡೆಯ ನಡೆಸುವೆ ತಾಯಿಮಳಲೊಳಗೆಂದು ನಳ ನುಡಿದ (ರಾಶಿಶಾ. ೧೫-೪೨).

[ ಪೆರ್ (< ಪಿರಿದು$_1$) + ಮುಗಿಲ್ ]

ಪೆಮ್ರ್ಮುಡಿ (ನಾ). = ಪೆರ್ದುಱುಬು: ತನ್ನ ತನಯಳ ಪೆಮ್ರ್ಮುಡಿಯು ಸರಿದೆನ್ನ ಜೆಡೆಯಂ ಕಟ್ಟಿಸಿದನಂದುನ್ನತಿಯೊಳಾ ಮಾನಕಂಜರನು (ಜಕಪು. ೨೫-೯). [ ಪೆರ್ (< ಪಿರಿದು$_1$) + ಮುಡಿ$_2$ ]

ಪೆಮ್ರ್ಮುತ್ತು (ನಾ). ದೊಡ್ಡ ಮುತ್ತು,— ಮೌಕ್ತಿಕ: ಕಸ್ತೂರಿಯಿಂದೆ ಸಮ್ಮಾರ್ಜನೆಗೆಯ್ದು ಪೆಮ್ರ್ಮುತ್ತುಗಳೊಡನೆ ಮಾಣಿಕವ ಪತ್ತುಗೆಗೊಳಿಸಿ (ಸೋಹತ. ೨೨-೩). [ ಪೆರ್ (< ಪಿರಿದು$_1$) + ಮುತ್ತು$_3$ ]

ಪೆಮ್ರ್ಮುಸುಂಡೆ (ನಾ). ಒಂದು ಬಗೆಯ ಸಸ್ಯ: ಪರಿಕಿಸಿ ಪೆಮ್ರ್ಮುಸುಂಡೆ ಪೊಸಜೇರಗೆ ಸಾಸುವೆ ಲೊಕ್ಕಿಯಲ್ಲಮಂ ಬೆರಸಿರೆ ತೆಳ್ಳನಪ್ಪ ಕಳಿಯು ಕುಡಿಸು (ಗೋವೈದ್ಯ. ೨೦೩-೭೭).

[ ಪೆರ್ (< ಪಿರಿದು$_1$) + ಮುಸುಂಡ (< ಮುಸುಂಡಿ$_2$ )]

Δಪೆಮ್ರ್ಮುಱಿಕ್ಕು (ನಾ). ದೊಡ್ಡ ಬಾಗಂ; ವಿಶಾಲವಾದ ತಿರುವು (?): ಸಾಮಗೆಱೆಯಾ ಪಳ್ಳದಾ ಪೆಮ್ಮುಱಿಕ್ಕು (ಎಕ. IV, ಶಾಗಹಂ. ೬೫-೬೯; 776). [ ಪೆರ್ (< ಪಿರಿದು$_1$) + ಮುಱಿಕ್ಕು (< ಮುಱಿಗ$_1$) ]

ಪೆಮೂಗು (ನಾ). ದೊಡ್ಡ ಮೂಗಂ; ಹಿರಿದಾದ ನಾಸಿಕ: ನೊರೆವಾಯ್ ಜೋಲ್ವುಟಿ ಪೆಮೂರ್ಗರಲ್ದ ಕಿವಿಮ್ಮಾಸಿ . . . ಕಾರೊಡಲಿರೆ ಮೆಱೆದು ಕರಾಗ್ರದಲ್ಲಿ ಮುಳ್ಗತ್ತಿಗೆಯಂ (ಭೃಶಿಂ. ೦೦-೬೦); ಪೆಮೂರ್ಗಲರೆ ತೆಱೆದ ಬಾಯ್ ಭೀತಿಯಂ ಬೀಱೆ . . . ಪಾಯ್ದುಂದುದುದ್ವೃತ್ತದ ನಖವಿದಳಿತಕ್ಕುಂಜರೇಂದ್ರಂ ಮೃಗೇಂದ್ರಂ (ಚಂದ್ರಂ. ೩-೬೨).

[ ಪೆರ್ (< ಪಿರಿದು$_1$) + ಮೂಗು$_1$ ]

ಪೆರ್ಮೆ, ಪೆಮ್ಮೆ, ಹಿರಿಮೆ, ಹೆಮ್ಮೆ (ನಾ). ೧. ಅಗ್ಗಳಿಕೆ; ಶ್ರೇಷ್ಠತೆ: ಜಿನಧರ್ಮದ ಪೆರ್ಮೆಗೆ ರಾಗಿಸರೆ ಭವ್ಯರ್ (ಶಾಂತಿಪು. ೧೨-೩೭); ಅಂತು ಜನಕೇ ಬೀಯದ ಬಾಗದ ಪೆರ್ಮೆಯಂ ಮೆಱೆವುದುಂ (ಚಂದ್ರಪ್ರ. ೩-೦೯೦ ವ); ವರಕಾಶ್ಯಪಾನ್ವಯಂ ತಳೆದುದು ಪೆರ್ಮೆಯಂ ಪೆಸರನುಂನತಿಯಂ ಯಶಮಂ (ಸೌಇಇ. IX–1, ೨೬೭-೫೫; 1160); ಪೆರ್ಮೆಯುನ್ ಶಾವನೆಂದಿರ್ದಪೆನ್ (ಅಂತಿಗೂ. ೯–೦೭೬). ೨. ಅಹಂಕಾರ; ಗರ್ವ: ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ ಪೆರ್ಮೆಯಿಂ ದೇಹವ ನಂಬಬೇಡಿ ಕಾಣಿರೊ (ಕೌರುಡ. ೨–೯೯ ಅನುಕಲ್ಪ). ಪೆಮ್ಮೆ: ೧. ಪೆರ್ಗ್ಗಡೆ ಮಾಕಿಮಯ್ಯನ × × ವ ಪೆಮ್ಮೆಯನು ಕರಣದಲಣ್ಣೆ (ಸೌಇಇ. IX–1, ೦೦೨-೦೯; 1063); ಅನುಪಮವಾದ ಪೆಮ್ಮೆಯೊಳು ರಞ್ಜಿಸುತಿರ್ಪ್ಪ ನೊಳಂಬವಾಡಿಯೊಳ್ (ಎಕ. XI. ದಾವಣ. ೮೭–೮೩; 1143); ತೋಳ್ವಲದ ಪೆಮ್ಮೆಯೆನ್ತೆನ್ದೊಡೆ (ಎಕ. VI. ಕಡೂರು. ೩೬–೦೩; 1203). ಹಿರಿಮೆ: ೧. ಅಂತೂ ನಮ್ಮನ್ನು ಹೊಗಳುವ ವ್ಯಾಜವಲ್ಲೇ ನಿಮ್ಮ ಹಿರಿಮೆಯನ್ನು ತೋರಿಸಿಕೊಂಡಿರಿ (ನೆಕಂಜಾ. ೩): ರಾಮನ ಹಿರಿಮೆ ಗರಿಮೆಗಳು ವ್ಯಕ್ತವಾಗಬೇಕಿದ್ದರೆ . . . ರಾವಣಸಂಹ ಪ್ರಬಲವಿರೋಧಿಯೂ ಬೇಕು (ದಾಂಕ್ಯ. ೦). ಹೆಮ್ಮೆ: ೧. "ಪ್ರಭವಂಶೀ ಎಂಬುವು ಹಿರಿದಪ್ಪ ಹೆಮ್ಮೆ [ಪೆರ್ಮೆ]" (ಪಿರಾಪು. ೦೫೦-೦೦೦): ಊರ್ಜಿತ ಶಕ್ತಿಯೊಳ್ ಮಹೇಶ್ವರಪದಭಕ್ತಿಯೊಳ್ ತನಗೆ ಪಾಸಟಿಯಾರ್ಪ್ಪರಿಂಬ ಹೆಮ್ಮೆಯೊಳ್ ನೆರೆದು . . . ನೆಗಳ್ದಂ ಬಸವಂ (ಎಇ. V, ೮೬-೨೯; 1143): ಹಳಿವಿನಲಿ ಹೆಮ್ಮೆಯನು ಕುಂದಿನ ಕುಲದೊಳಗ್ಗಳಿಕೆಯನು ತಮದಲಿ ಬೆಳಗ ಬಣ್ಣಿಸುತಿಹೆ (ಕುಮ್ಯಾಕ. ೧೦-೧೧): ನಿಮ್ಮಯ ಪಿತ ಕೃಷ್ಣರಾಯನ ಮಹಿಮೆಯ ಹೆಮ್ಮೆಯುಱಿದು ಕೀರ್ತಿಪೊಡೆ ನಮ್ಮಳವಲ್ಲ (ಕೋಹಕ. ೧-೯). ೨. ಬೊಮ್ಮಬೋಧೆಯ ಹೇಳಿ ಕೇಳಿಯ ಸುಮ್ಮನಿಹ ನೃಪತನವು ಬಂದಿರೆ ಹೆಮ್ಮೆಯಲಿ ಹಿರಿದಾಗಿ ಕೆಡುವರು (ಸಂಕಶ. ೩-೦೨): ಹೆಮ್ಮೆಯಿಂದಲಿ ನೀವು ಕೆಡಬೇಡಿರಯ್ಯ (ಪುರಂದ. ೦-೦೯೦ ಕಲ್ಪ): ಎಮ್ಮನೆಲ್ಲರನಾದರಿಸಿ ನಿಗರ್ವಿಕೆಯಿಂ ಸಹಸ್ರವದನಂ ಕಳುಹಲು ಹೆಮ್ಮೆಗಳನುಳಿದು ವಿಸ್ಮಿತರಾದರ್ (ಕೃಪಿಶಾ. ೬೨-೯೭). ೩. ಸಂತೋಷ; ಹಿಗ್ಗು: 'ಹೆಮ್ಮೆಗೊಳಿಸಂ' ಪರಾ. ೪. ಅಭಿಮಾನ: 'ಹೆಮ್ಮೆಪಡು' ಪರಾ.

[ಪೆರ್ (< ಪಿರಿದು$_1$) + — ಮ್ಮೆ$_3$./ ತಮಿ. ಪೆರುಮೈ: ತುಳು. ಪೆರ್ಮೆ, ತೆಲು. ಪೆರಿಮೆ, ಪೆಮ್ಮೆ]

ಪೆರ್ಮೆಗಿಡು 'ಪೆರ್ಮೆಗೆಡು' ನೋ.

ಪೆರ್ಮೆಗೆಡು, ಪೆರ್ಮೆಗಿಡು (ಕ್ರಿ). ಹೆಮ್ಮೆಯನ್ನು ಕಳೆದುಕೊಳ್ಳು; ಅಭಿಮಾನವಿಲ್ಲದಾಗಂ: ಒರ್ಮೆ ಪೋಗಿ ಮೃಗಯಾನಿಮಿತ್ತದಿಂ ಧರ್ಮಮಂ ಮಱೆದು ನೋಡ ಬೇಡಿದೊಂ ಪೆರ್ಮೆಗೆಟ್ಟು ಜಮದಗ್ನಿಯಂ ನೃಪಂ ದುರ್ಮದಂ ಸುರಭಿಯಂ ವಿಮೋಹದಿಂ (ಕಾವ್ಯಾಕ. ೩೬೬). ಪೆರ್ಮೆಗಿಡು: ಕರ್ಮಯೊಳನುಭವಿಸುತ್ತುಮುದೊರ್ಮೆಯುಮುಪಚಱಿದೆ ಕಾಮಸುಖದಿಂ ಜನಪಂ ಪೆರ್ಮೆಗಿಡದಿರ್ದಂ (ಕುಶ್ರಪು. ೯-೪೮).

[ಪೆರ್ಮೆ + ಕೆಡು$_1$]

ಪೆರ್ಮೆಗೊಳ್ (ಕ್ರಿ). ಹಿರಿಮೆಯನ್ನು ಹೊಂದು; ಅಗ್ಗಳಿಕೆಯನ್ನು ಪಡೆ: ಪೆಣ್ಣಿಂದ ಪೆರ್ಮೆಗೊಂಡನು ಹಿಮವಂತನು ಪೆಣ್ಣಿಂದ ಭೃಗು ಪೆರ್ಚಿದನು . . . ಪೆಣ್ಣ ನಿಂದಿಸಲೇಕೆ ಪೆಱರು (ಕವಿಶಿ. ೩-೩).

[ಪೆರ್ಮೆ + ಕೊಳ್$_1$]

ಪೆರ್ಮೆಯೊಡೆಯ (ನಾ). ಶ್ರೇಷ್ಠನಾದವನಂ; ಹಿರಿಮೆಯನ್ನು ಹೊಂದಿರುವವನು: ಒಡೆಯ ಪ್ರತ್ಯಯುಕ್ಕೆ ಪೆರ್ಮೆಯೊಡೆಯಂ . . . ಜಾಣೊಡೆಯಂ (ಶಬ್ದ. ೨೦೭ ಪ್ರಯೋ). [ಪೆರ್ಮೆ + ಒಡೆಯ$_1$]

ಪೆರ್ಮೆವಡೆ (ಕ್ರಿ). ಮೇಲ್ಮೆಯನ್ನು ಪಡೆ; ಹಿರಿಮೆಯನ್ನು ಹೊಂದು: ಪೆರ್ಮೆವಡೆದುದನಾದ್ಯನಂತಮದೊರ್ಮೆಯಿಂ ಧಾರ್ಮಿಕರನಾ ಜಿನಧರ್ಮಮದೆ ತಾಂ ದಾಂಟಿಸುಗೆ ಕುಂಬದೆ ಭವಸಮುದ್ರಮನು (ಶಾಕ್ಯಶಾ. ೦-೬); ಪೊರೆದಯ್ಮನ ಕೂರ್ಮೆ ಪೆರ್ಮೆವಡೆವಂತುಂ . . . ಎಕ್ಕಿವಂದ ಪಗೆಯಂ ಬಾರಿಸುವೆಂ (ರಾಮಾಶ್ವ. ೬೬-೯). [ಪೆರ್ಮೆ + ಪಡೆ$_1$]

**ಪೆರ್ಮೆವೆಱು** (ಕ್ರಿ). = ಪೆರ್ಮೆವಡೆ : ಮೇದಿನಿಯುಂ ಓಪ್ಪೂದ್ರಿಯುಮು ಕಾನನಗಂ ಲವಣಾಂಬುರಾಶಿ ಕಾಳೋದಕವಾರ್ಧಿಸಿಮೆಯೆನೆ ಸಾಧಿಸಿ . . . ಪೆರ್ಮೆವೆತ್ತಂ (ಶಂಶ್ರಪು. ೬-೨೮). [ಪೆರ್ಮೆ + ಪೆಱು$_1$]

**ಪೆರ್ಮೆಳೆ, ಹೆಮ್ಮೆಳೆ** (ನಾ). ೧. ದೊಡ್ಡ ಪೊದರು ; ದಟ್ಟವಾಗಿ ಬೆಳೆದ ಗಿಡಗಳ ದೊಡ್ಡ ಗುಂಪು : ಪೆರ್ಮೆಳೆಗಳಿಂ ಕಱಿಯಿಂ ತೊಱಿಯಿಂ . . . ಅರಣ್ಯದಿನಲ್ಲಿಯ ತಳ್ಪಲೊಪ್ಪುಗುಂ (ಗಿಂಕ. ೧-೬೦) ; ಪೆರ್ಮೆಳೆಯೊಳೊತ್ತುಗೊಂಡು ಇದಿರಾಲಿಸಿ ದಾಡೆ[ಯವುಂಕಿ] ಕೋಪದಿಂ ಘೂರ್ಮಿಸುತಟ್ಟಿ ಮುಟ್ಟಿ ಬಹ ಜಾಯಿಲನಂ ಕಡಿಯಿಂದ ಮಾಡುತಂ (ನನ್ನಚ. ೫-೦೦೫). ೨. ಒಂದು ಪ್ರದೇಶದ ಹೆಸರು (?) : ಪೆರ್ಮೆಳೆ ಅಂತೆ ಬರೆ ತೆಜ್ಜ ಮೈಸುಂಸಿ ಕಱುಗೊಲ್ಲೆಯುಂ ಪೊಕ್ಕು (ಮೈಆ. ೧೯೨೦. ೭೭-೦೮೫ ; ೫೦೭). **ಹೆಮ್ಮೆಳೆ :** ೧. ಹಱಮೆಟ್ಟ ಸಡೆನಡೆಮ ಹೆಮ್ಮೆಳೆಯುನಂಡುಗೊಂಡು ಗರ್ಜಿಸುತ್ತುಂ ಬಂದ ಜಾತಿ ಜಾಯಿಲಂಗಳನಿತ್ತುಂಡುಮಾಡುತ್ತ . . . ಕೆಕ್ಕಳಿಸಿ ನೋಡುವೆಕ್ಕಲುಂ ಗಳುಮಂ (ಸಂಶರ. ೦೩-೦೫), ಹೆಮ್ಮೆಳೆಯು ಪರಪುಗಳುಬ್ಬರದ ಶಾರ್ದೂಲ ಸೈರಿಭ ಶರಭಸೂಕರದ ಉಬ್ಬಟೆಯು . . . ಅಬ್ಬರದ ಕಾಂತಾರದೊಳಗಿವರಬ್ಬರಿಸುತ್ತೈದಿದರು (ಕೊರರಾ. ೩-೧-೬).

[ಪೆರ್ (<ಪಿರಿದು$_1$) + ಮೆಳೆ$_1$]

**ಪೆರ್ಮೊರಹು** (ನಾ). ಗಟ್ಟಿಯಾದ ಮೊರೆತ,—ಘೋಷ : ಒಂದು ನಿಗಳದ ಗೆಜ್ಜೆಗಳ ಪೆರ್ಮೊರಹಿಗಂಜಿ ಭವಾನಿಯರ್ಧಶರೀರಮಂ ಬಿರಸ (ಬಸಪು. ೦೬-೮೫). [ಪೆರ್ (<ಪಿರಿದು$_1$) + ಮೊರಹು (<ಮೊರೆವು)]

**ಪೆರ್ಮೊಲ** (ನಾ). ದೊಡ್ಡ ಗಾತ್ರದ ಮೊಲ ; ದಷ್ಟಪುಷ್ಟವಾದ ಮೊಲ : ಉಡುಪತಿಬಿಂಬದಿಂದೆ ಸರಿದೋಡಿ ಮುಗಿಲ್ಗಳೊಳೆಯ್ದು ಪೊಕ್ಕು ಗಿಡುಡಾಗಿ ಸುರುಳ್ದ ತಚ್ಛಶಕನಂ ನೆಱೆ ಪೋಲ್ವುದು ಕಾಡ ಪೆರ್ಮೊಲಂ (ಗಿಂಕ. ೦-೯೯); ಬಡಿಯುಡುವಂ ತೊಡಂಕದಿಡು ಪೆರ್ಮೊಲನಂ (ಕಬರಾ. ೩-೫೦). [ಪೆರ್ (<ಪಿರಿದು$_1$) + ಮೊಲ]

**ಪೆರ್ಮೊಲೆ, ಹೆಮ್ಮೊಲೆ** (ನಾ). ೧. ದೊಡ್ಡ ಮೊಲೆ : ಕಾದಲಳಲುತುಂ ತೆಱಂದಿರಿದು ನೋಡಿದ ನೋಟದೊಳೆಯ್ದೆ ತಳ್ತ ಪೆರ್ಮೊಲೆ . . . ಬೆನ್ನಿನಿ ತುಮೊರ್ಮೆಯೆ ನಾ[ಂಬಿ]ನಂ (ಶಂಶಇ. ೪-೦೦೫); ಪೆರ್ಮೊಲೆ ಹಾರದಿಂದೆಸೆಯೆ ಬಂಬಲಬಾಡಿದ ರೂಪು ಗಾಡಿಯುಂ ಸೂರ್ಪಣಿಮಾಡೆ (ಶಂಶಾಚಾ. ೩-೦೦೯); ಸೊಕ್ಕುಜವ್ವನದ ನೀರಜಗಂಧಿಯರ ಕೊಬ್ಬಿದ ಪೆರ್ಮೊಲೆಗಳೆಡೆಯು ಚಂದನ ದಣ್ಣು . . . ತಂದೆಲರ್ಮೆಲ್ಲಮೆಲ್ಲನೆ ಪರಪುತಿರ್ದುದು (ಕೈಬಿಚ. ೬-೧೨). ೨. (ಹಾಲಿನಿಂದ ತುಂಬಿದ) ಕೆಚ್ಚಲು : ಕಾಡೆಮ್ಮೆಯ ಪೆರ್ಮೊಲೆ ಯೊಳೆಚ್ಚು ಪಾಯ್ವ ಪಾಲ ಓರಿಯ ಬಲ್ಸರಿಯೊಳೋಲಾಡಿಯುಂ . . . ಅಪರಸಾಂಧ್ಯಗಂಧವಹನೆಳಸ (ಶುಚ್ಛಿ. ೬-೪). **ಹೆಮ್ಮೊಲೆ :** ೧. ಗಂಧವ ಪೂಸಿದಂದದ ರವಿಕೆಯೊಳುರೆ ಬಂದಿಸಿ ಬಿಗುಳ್ದ ಹೆಮ್ಮೊಲೆಯ (ಶಕೀಶ. ೪-೬೬). [ಪೆರ್ (<ಪಿರಿದು$_1$) + ಮೊಲೆ$_1$]

**ಪೆರ್ಮೊಳೆ** (ನಾ). ದೊಡ್ಡ ಮೊಳಕೆ : ಬಿನಯದ ಬಿತ್ತು ಬಿನ್ನಣದ ಪೆರ್ಮೊಳೆ ಬಿಜ್ಜೆಯ ಬೇರ್ … ಅನುವಾತುವಣ್ಣ ಬಿಣ್ಗೊನೆಯೆನೆ ಚಿಕ್ಕದೇವನೆಸೆದಂ(ಅಕ್ಕಿ ೩. ೦೩-೪೦). [ಪೆರ್ (<ಪಿರಿದು$_1$) + ಮೊಳೆ$_2$]

**ಪೆರ್ಮೊಱ** (ನಾ). ಅಗಲವಾದ ಮೊರ,—ಗೆರಸೆ : ಪಾಡುಪರ್ ಕೆಲರು ಪೆರ್ಮೊಱದೊಳ್ಕೆಯನಿಕ್ಕಿ ಮಾಡುಪರ್ ಕೆಲರು (ಕೋಹಚ. ೦೯-೬೦).

[ಪೆರ್ (< ಪಿರಿದು$_1$) + ಮೊಱ$_1$]

**ಪೆರ್ಮೊಱಗೊಳ್** (ಕ್ರಿ). ದೊಡ್ಡ ಮೊರದಿಂದ ಗಾಳಿಯನ್ನು ಹಾಕು,—ಬೀಸು (?): ಆಳಿಯರ್ ಬೀಸುವ ಚಮರಾಲವಟ್ಟ ತಣ್ಗಾಳಿಯಿಂದವಳೊಡಲ್ಗಿಚ್ಚು ತಾಳಿಯು ಹಾಕಿ ಪೆರ್ಮೊಱಗೊಂಡ ತೆಱದಿ ಭಡಾಳಿಸಿತುಚ್ಚ ಸಂಘಟಿಸಿ (ಕೋಹಚ. ೫೬-೬೨). [ಪೆರ್ಮೊಱ + ಕೊಳ್$_1$]

**ಪೆರ್ಮೊಱಹು** (ನಾ). ಅತಿಶಯವಾದ ಅಬ್ಬರ ; ಅಧಿಕವಾದ ಆರ್ಭಟ : ಪಾಲ ಜಳಧಿಯ ಕಡೆವ ಪೆರ್ಮೊಱಹೊ ವಿಲಯದಾಗ್ನಿಯಾಡಂಬರವೊಯೆಂದೆನಲಲ್ಲಿ ಮೊಳಗಿದವಂದು ವಾದ್ಯಗಳು (ಶುಣಾಶಾಂ. ೩೯-೬೩), ಮಿನುಗು ವಾಯುಧದ ನೂರಿಗೆಳ ವಾದ್ಯದಾರ್ಭಟೆಯು ಪೆರ್ಮೊಱಹಿನ ಚಲಿಪ ಕೇತನತತಿಯ ಸುಳಿಯ . . . ಸೇನಾಸಮುದ್ರವನಾಗ ಪುರಜನಂ ನಿಟ್ಟಿಸಿದುದು (ಶಂಕ್ರ. ೪೨-೦೮). [ಪೆರ್ (< ಪಿರಿದು$_1$) + ಮೊಱಹು$_1$]

**ಪೆರ್ಮೊಟಗು** (ನಾ). ಅತಿಶಯವಾದ ಗುಡುಗು: ಪೆರ್ಮೊಟಗಲ್ಲಿದು ಗಜ್ಜ ವೃಷ್ಟಿಯಲ್ಲಿದು ಸುರಿವಸ್ತ್ರಜಾಲವೆನಲ್ . . . ಬಿಲ್ಲೊದವಿದ ಗರ್ಜಿತಂ ಸುರಿವ ಸಾಯಕವದ್ಭುತವಾಯ್ತು ಸಾಲ್ವನಾ (ಜಗಂ. ೦೫-೯೦).

[ಪೆರ್ (< ಪಿರಿದು$_1$) + ಮೊಟಗು$_2$]

**ಪೆರ್ಮೊಡ** (ನಾ). = ಪೆರ್ಮುಗಿಲ್ : ಕಾಲ್ಪೊನಲ ಕಡುಪಿಂಗಂ ಪೆರ್ಮೊಡದ ಕಳ್ತಲೆಗಂ . . . ಅರಣ್ಯದಾಫೀಳತೆಗಂ ಕೋಡದೆ ಕೊಂಕದೆ . . . ವಿಪುಳತಪದಿಂದಪರ್ಣೆಯೊಪ್ಪುತ್ತುಮಿರೆಯಿರೆ (ಗಿಂಕ. ೯-೫೫ ಪ).

[ಪೆರ್ (< ಪಿರಿದು$_1$) + ಮೋಡ]

**ಪೆರ್ವಂದಿ, ಪೆರ್ಬಂದಿ, ಹೆಬ್ಬಂದಿ** (ನಾ). ದೊಡ್ಡ ಹಂದಿ ; ಮಹಾವರಾಹ : ಪುಳಿಂದನಾಥನಾಳಿದಾರುತೆ ಕೂರಲಗಂ ಕಱುತ್ತು ಪೆರ್ವಂದಿ [ಪಾಶಾಂ. ಪೆರ್ಬಂದಿ, ಪೇರ್ವಂದಿ]ಯನೆಯ್ದಿ ಶಳ್ಪಿಱಿದೊಡೆ (ಗಿಂಕ. ೦-೦೦೯). **ಪೆರ್ಬಂದಿ:** ಧರಣಿಯುಂ ಪೆರ್ಬಂದಿ ಕೀಟಿಸ್ತಿದ್ದೊಂದೆಡೆ ನೀರ್ ತೀವಿತೆನಲ್ಕೆ ಪೆಂಪುಪಡೆಗುಂ ಗುಣ್ಪೆಂದೆ ಪಂಪಾಸರಂ (ಕಾವಂಪೂ. ೦೦೬). **ಹೆಬ್ಬಂದಿ :** ಬ್ರಹ್ಮ ವಿಷ್ಣ್ವಾದಿಗಳು . . . ಹದ್ದು ಹೆಬ್ಬಂದಿಗಳಾದುದನಱಿಯರೇ (ತನ್ನಚ. ೯. ೦೯೯-೪೪೪); ಈತನುಜುಬೆಗೆ ಬೆದಱಿತುರುಸಂಘಾತವಲಿ ಹೆಬ್ಬಂದಿಯೊಂದು (ಶುಪ್ಪಾ೫. ೦೩-೬೦) ; ನಿಂದನ್ನೆ ಬಳಿಕೀತನಾ ಹೆಬ್ಬಂದಿ ಯಿದಿರಲಿ (ಕೊರರಾ. ೩-೩-೨೦). [ಪೆರ್ (<ಪಿರಿದು$_1$) + ಪಂದಿ]

**ಪೆರ್ವಕ್ಕಿ, ಪೆರ್ಬಕ್ಕಿ, ಹೆಬ್ಬಕ್ಕಿ** (ನಾ). ದೊಡ್ಡ ಹಕ್ಕಿ ; ಗರುಡ : ಸಿರಿಯೊಡೆಯ ಕೋಲ್ಗಱಿಯ ಪೆರ್ವಕ್ಕಿಗೆಲರುಣಿಯನಱಿಸುತಿರೆ ಬಂಗೆಟ್ಟು ಸರಿಗೆನ್ನದಾ ಪಾವಿಗಿರದವಂದುರ್ಗಯ್ಕೆ ನೇಸರ್ಗಾಲಿಗಳು ನಡುಗಿ ಬೀಳೆ (ಶಾಪಶಂ. ೩-೦೦). **ಪೆರ್ಬಕ್ಕಿ :** ಪೆರ್ಬಕ್ಕಿ ಹೊಗುರು ಕಾಕಂ ಬೆಲ್ಲಂಗೂಲಿ ರತ್ನಖಗಮಿಕರ್ಗಂ ತದ್ವನಗಿಗೌಘದೊಳ್ (ಶಾಚಕೇ. ೫-೫೯). **ಹೆಬ್ಬಕ್ಕಿ :** ಬಬ್ಬ ಹೆಬ್ಬಕ್ಕಿಯಾದ ಬಬ್ಬ ಸೂಕರನಾದ (ಶರಕಪ. ೦೬೩-೬೬೩) ; ಹೆ[ಪಾಶಾಂ. ಕ]ಬ್ಬಕ್ಕಿ ಗಿಡುಗ . . . ಹದ್ದೆಂಬಿವಂ ಸಾಳುವಂಗಳು ನೆಗೆದು ತಾಗಿ ಹೊಡೆಹೊಡೆದು (ಸೊಚುಂತ. ೩-೯); ಪಟಪಟನೆ ಪಾರ್ವ ಹೆಬ್ಬಕ್ಕಿಗಳ ವೃಂದದ ಸ್ಫುಟತರ ಬಹುಧ್ವಾನದಿಂ (ಶುಶಾಪಿ. ೦೬-೫೬). [ಪೆರ್ (<ಪಿರಿದು$_1$) + ಪಕ್ಕಿ]

**ಪೆರ್ವಟ್ಟೆಯೂರ್** (ನಾ). ಒಂದು ಸ್ಥಳದ ಹೆಸರು : ಕೆಸುಗೊಳವೊಡೆಯ ಮಹಾಜನಕ್ಕೆ ಪೆರ್ವಟ್ಟೆಯೂರುಂ ಮದ್ದೂರ್ಗರುಮಂ ಬ್ರಹ್ಮಾದೇಯಂ ಪೊಯ್ದಮರ್ (ಎಕ. IV. ಹೆಗ್ಗಡ. ೪-೨೦; ಕಾ. 750). [ ? + ಊರ್ ]

**ಪೆರ್ವಟ್ಟೆ, ಪೆರ್ಬಟ್ಟೆ, ಹೆಬ್ಬಟೆ, ಹೆಬ್ಬಟ್ಟೆ** (ನಾ). ಹೆದ್ದಾರಿ ; ದೊಡ್ಡ ರಸ್ತೆ ; ರಾಜಮಾರ್ಗ : ಆಣೆಲಾವುರದ ಪೆರ್ವಟ್ಟೆ ತೆಂಕಣಸೀಮೆ ಮೇಣ್ಪೆಯ ಪೆರ್ವಟ್ಟೆ (ಸೌಇಇ. XI—I, ೬೮-೫೦; 1045) ; ಅನ್ಯಸ್ತ್ರೀರತಿ ಲೋಲತೆ ನರಕಗತಿಯ ಪೆರ್ವಟ್ಟೆ ಪಲಂ (ಶರಶಪು. ೦೦-೦೧); ಒಟ್ಟಿದ ಬಣಾಂಬೆಯುಂ ಪೆರ್ವಟ್ಟೆಯ ವಾರಿಧಿಯನೆಸೆವ ನಂದನವನಮುಂ ಕಟ್ಟಿದ ಮಂದಿರಯುಂ ಗುಡಿಕಟ್ಟಿದುದಂ ಕಾಣೆ ಗುಡಿಯ ನಧಿಕಂ ಬೆಳೆಗುಂ (ಅಟ್ಟಿಪು. ೯-೪೦). **ಪೆರ್ಬಟ್ಟೆ :** ಪೆರ್ಬಟ್ಟೆ ಕರಂ ಗೊಂಟು ದೇವತಾಲಯದ ನೆಬಲ್ಮುಟ್ಟುವೆಡೆ ನೀರ ತಡಿ ಮನೆಗಟ್ಟುವೊಡ ಶುಭಂ (ರೊಕಕೋಶ. ೩-೦೩); ಪೆರ್ಬಟ್ಟೆಯೊಂದಿರಲ್ಕಂದೊರ್ಬಳಿ ಪೋಗುತ್ತಿರಲ್ಕೆ (ಸಕಶಂ. ೫೬೪); ಏಱಿಸಿ ಮಹಾಧನುಪನಿಶಸಿಬಾಣವನೆಚ್ಚು ಡೋಱು ಗಳೆದವನಿಯಂ ಸಪ್ತಪರಿಶಾಳಕ್ಕೆ ತೋಱಿಸಿದನೊಂದು ಪೆರ್ಬಟ್ಟೆಯಂ

(ಕೃ.ಜ.ಶಾ. ೨೯-೩೦). **ಹೆಬ್ಬಟಿ** : ಮುಂದೆ ನಡೆದು ಎಳತುದೆಬ್ಬಿನ ಹೆಬ್ಬಟಿ (ಎಕ. XIV. ಎಳಂದೂ. ೧೭೦-೧೧ ; ಸು. 12ನೆಯ ಶತ) . **ಹೆಬ್ಬಟ್ಟೆ** : ಅರ್ಹನ ಹಳ್ಳಿಯಿಂದಾ ×× ವಡಿವುರಕ್ಕಂ ಹಿರಿಯದೇವರ ಬೆಟ್ಟಕ್ಕಂ ಹೋದ ಹೆಬ್ಬಟ್ಟೆಯೆ ಗಡಿ (ಎಕ. II. ೩೯೭-೯೪; 1179 ?); ಮೂಡಲು ತಗ್ಗಿಗೆ ಹೋದ ಹೆಬ್ಬಟ್ಟೆ (ಕಇ. I. ೩೦-೯೩ ; 1222).

**ಹೆಬ್ಬಟ್ಟೆಯಾಗು**＝೧. ಹೆದ್ದಾರಿಯಾಗು ; ದೊಡ್ಡ ದಾರಿಯಾಗು : ಪಾರ್ಥನ ತನುವಿನಲಿ ಹೆಬ್ಬಟ್ಟೆಯಾದುದು ಬಾಣಪಥಿಕರಿಗೆ (ಕುವ್ಯಾ.ಉ. ೯-೩೯). ೨. ರಾಜಮಾರ್ಗದಲ್ಲಿ ಪ್ರಯಾಣಮಾಡುವವನಾಗು : ಅಟ್ಟಿಯಾಡಿವರಾಹವದಲಡಗಟ್ಟಿ ಹೊಯ್ದರು ಸುರವರರು ಹೆಬ್ಬಟ್ಟೆಯಾದರು ಬಳಿಕ ಕಾಲನ ಪುರಕೆ ದೈತ್ಯರಿಗೆ (ಕಭಾಗ. ೭-೬-೩೩).

[ ಪೆರ್ (< ಪಿರಿದು$_1$) + ಬಟ್ಟೆ$_1$]

**ಪೆರ್ವಡಗು**, **ಪೆರ್ಬಡಗು** (ನಾ). ದೊಡ್ಡ ಜಹಜು : ಅಡಿಗಡಿಗೆ ನಡೆವ ಪೆರ್ವಡಗುಗಳ ಬೆಡಗುಗಳ . . . ಮುತ್ತುಗಳ ಪಡೆಪಿನಿಂ ಕಡಲೆಸೆದುದು (ಪಜಪು. ೨-೯). **ಪೆರ್ಬಡಗು** : ರಣವಾರ್ಧಿಯೊಳರಿಯ ಶಿರೋಪಣಿಯಂ ತವೆ ಮಾಱುಗೊಳ್ವ ಪೆರ್ಬಡಗೆಂಬಂತಣಿಯೊಡ್ಡಿದ್ದಾಳ್ಗಳೆಲ್ಲಂ ಪೆಣ ನೊಡ್ಡಾಗಳ್ಕೆ ಪರಿದುವಗ್ಗದ ತೇರ್ಗಳ್ (ವಲಉ. ೬-೭೦).

[ ಪೆರ್ (<ಪಿರಿದು$_1$)+ಪಡಗು (<ಪಡಂಗು) ]

**ಪೆರ್ವಡಹ** (ನಾ). ಸತತವಾಗಿ ಸುರಿಯುವ ಮಳೆ ; ಜಡಿಮಳೆ : ಪಕ್ಷಿಗಳ್ದರ್ಪಜಿಂಕೆಯುಗ್ರದಿಂ ಜಲಲವಬಿಂದುಗಳ್ಸುರಿಯೆ ಪೆರ್ವಡಹಂ ಬಿಡೆ ಸೋರ್ವಗುರ್ವಿನೊಳ್ (ಶಾಂತೀಶ್ವ. ೦೨-೫೭).

[ ಪೆರ್ (<ಪಿರಿದು$_1$) +ಬಡಹ (<ಬಡವ) ]

**ಪೆರ್ವಡಿ** 'ಪೆರ್ವೊನಡಿ' ನೋ.

**ಪೆರ್ವಡಿಕೆ** 'ಪೆರ್ವಡುಕೆ' ನೋ.

**ಪೆರ್ವಡಿಯಱ** (ನಾ). ಮುಖ್ಯ ದ್ವಾರಪಾಲಕ; ಬಾಗಿಲು ಕಾಯುವವರ ಮುಖಂಡ : ರಾಜರಾಜನನುಮತಮನಱದು ಪೆರ್ವಡಿಯಱನಾವರದಿಂ ಕಾಣಿಸಿದಂ ವ್ಯಂತರೇಶನಂ (ಶಾಂತಿಪು. ೧೦-೧೭೦).

[ ಪೆರ್ (<ಪಿರಿದು$_1$)+ಪಡಿಯಱ ]

**ಪೆರ್ವಡುಕೆ**, **ಪೆರ್ಬಡಿಕೆ**, **ಪೆರ್ವಡಿಕೆ**, **ಹೆಬ್ಬಡಿಕೆ** (ನಾ). ೧. ಅತ್ಯಧಿಕವಾದ ದುರ್ವಾಸನೆ; ಹೆಚ್ಚಾದ ಹೊಲಸು ವಾಸನೆ: ಕೀವಿನ ಕೊಂಡಮೊಳ್ವಿನಾಗರವಟಂದೋಲ ಪೆರ್ವ[ಶಾಶಾ. ರ್ಬ]ಡುಕೆ ಜಾತು ಗಳಾಗಳುಮಿಪ್ಪ ತಾಣ (ಸಮುಕ. ೬-೩೯). **ಪೆರ್ಬಡಿಕೆ** : ೨. ಅತ್ಯಂತ ಹೊಲಸಾದುದು ; ಬಹಳ ಹೇಸಿಗೆಯಿಂದ ಕೂಡಿದುದು : ಸುಡುವ ದಗಿಂ ಕರಂ ಪೊಗೆವ ಪರ್ಬುವ ಕರ್ಬೊಗೆ ಪೆರ್ಕುಮಪ್ಪ ಪೆರ್ಬಡಿಕೆಯ ನಾತಂ (ಲೀಲಾವ. ೬-೩೫); ಕಡುಪೆರ್ಬಡಿಕೆಯ ನಾತಂ ತೊಡರ್ದಿರೆ ಘೀಳಿರದೊನಿಪ್ಪ ಪೆಣನಂ ಕಾಣುತ್ತೆ (ಕೃಕಪು. ೩೦-೫೬). **ಪೆರ್ವಡಿಕೆ** : ೧. ಸುಡುಸುಡು ನಿಮ್ಮ ದೇವತನಮೇವುದು ಕೀವೊಸರುತ್ತಮಿರ್ಪ ಪೆರ್ವಡಿಕೆಯ ತೊನ್ನನಂ ಬಯಸಿ ಬಂದಿರಿ (ಕುಮ್ಯಾಸೃ. ೯-೨೯). **ಹೆಬ್ಬಡಿಕೆ** : ೧. ನಿಮ್ಮ ತನುವಿನ ಹೆಬ್ಬಡಿಕೆಯ ಮುಂದೆ ಒಬ್ಬರಾದರು ನಿಲಬಹುದೆ (ಶವಗೋ. ೨೫೯-೦೬); ನಡೆವೆಣನೆ ನಿನ್ನ ತನು ಹೆಬ್ಬಡಿಕೆ ನಾಱುವುದು (ಶಾಮುಕ. ಹ. ೨೯೩-೦೯); ಹೇಸಿಕೆಯು ಹೆಬ್ಬಡಿಕೆ ಕೀವು ರಕ್ತದ ಕುಂಡ (ಪಂಚಾಂಗ. ೨-೩೫-೦೦).

[ ಪೆರ್ (<ಪಿರಿದು$_1$)+ಪಡುಕೆ ]

**ಪೆರ್ವಡುಕೆನಾತ** (ನಾ). ಅತ್ಯಂತ ಹೊಲಸು ವಾಸನೆ : ಅತ್ಯಧಿಕವಾದ ದುರ್ಗಂಧ : ಮೆಯ್ಯೋಗಡಿಪಂತು ಪೆರ್ವಡುಕೆನಾತದ ಯೋನಿಸುಖಂ ಗಳಿಂದೆ ಬೆಟ್ಟಾಗಳ್ (ಅಪಂಪು. ೯-೨೯). [ ಪೆರ್ವಡುಕೆ + ನಾತ ]

**ಪೆರ್ವಡೆ**, **ಪೆರ್ಬಡೆ** (ನಾ). ದೊಡ್ಡ ಸೈನ್ಯ : ತನ್ನಧ್ಯದೊಳ್ ಸೊಡರಿರ್ಪಂತಿರೆ ಚಕ್ರರತ್ನಮುದಜ಼್ರೊಳ್ ನಿರ್ಬಾಧಮಿರ್ದತ್ತು ಪೆರ್ವಡೆ ವಾರಾಶಿಯೊಳಿರ್ದ ಬೈತ್ರದೊಳಗಂದೆತ್ತಂ ತೆರಳ್ದಿರ್ದವೊಲ್ (ಆದಿಪು. ೧೩-೬೦) ; ನಿಷ್ಠುರತನದಿಂದಿ ಪೆರ್ವಡೆವೆರಸು ಮಹಾನೆರವಿವೆರಸು ಕಟ್ಟಾಳ್ಗಳಿಂದಂ ಪರಿತಂದು (ಧರ್ಮಾಮೃ. ೬-೦೦೬). **ಪೆರ್ಬಡೆ** : ಆ ಪೆರ್ಬಡೆಯಂ ಪ್ರಾಚೀಕೂಪಾರಕ್ಕೊಯ್ದು ನೃಪತಿ ಸೇನಾಪತಿ . . . ಅಂದಂಬಡೆದಂ (ಶಾಂತಿಪು. ೦೦-೦೫೭) ; ಪೆರ್ಚಿದ ಕಡಲೆಂಬಿನಂ ಮಸಗಿ ಬಂದುದು ಪೆರ್ಬಡೆ ಕರ್ಬುವಿಲ್ಲನಾ (ಕಬ್ಬಿಗ. ೨೦೭); ಪೆರ್ಬಡೆ ನಡೆದುದೇನೆಂದೆನು (ಭಾಕಶಂ. ೯-೬).

[ಪೆರ್ (<ಪಿರಿದು$_1$)+ಪಡೆ$_2$]

**ಪೆರ್ವಡೆಗಿತ್ತಿ** (ನಾ). ದೊಡ್ಡ ಸೈನ್ಯದ ಒಡತಿ : ಆ ಸಮಯದ ಬಂದ ಳೊರ್ವ ಪೆರ್ವಡೆಗಿತ್ತಿ ದೇಶಾಧಿಪತಿಯತ್ಮಣಂದ (ಅಂಜಕ. ೩-೯೫).

[ಪೆರ್ವಡೆ+ —ಗಿತ್ತಿ]

**ಪೆರ್ವಣ್** (ನಾ). ತೋರವಾದ ಹಣ್ಣು ; ದೊಡ್ಡಗಾತ್ರದ ಹಣ್ಣು : ಪೆರ್ವಣ್ಗೊತ್ತಿದೆ ಪುತ್ತಿಂಗಿಳಿಗಿದ ನೆಲದಿಂದುಣ್ಣೆ ತಣ್ಗಂಪಿನುರ್ವಿಂ ನೀರ್ವ ಟ್ಟೊಳ್ಪಕ್ಕೆ ಪುತ್ತೆರ್ದೊಗೆದು ಮುಸುಱಿ ಮೆಯ್ಮುಂಟು ಕಾಯ್ಮಾಯ್ದು ದೆಂದೆಂದೊರ್ವನ್ನಂ ಪಾಂಥರೆತ್ತಂ ಬಳಸಿದ ರಸಪನ್ನಾತುಳಂಗಂ ಅಲ್ಲಿ ಚೆಲ್ವಾದುವಾದಂ (?) (ಪಂಪ್ರಪು. ೧೦-೯೯).

[ ಪೆರ್ (< ಪಿರಿದು$_1$) + ಪಣ್$_3$ ]

**ಪೆರ್ವಯಲ್**, **ಪೆರ್ಬಯಲ್**, **ಹೆಬ್ಬಯಲು** (ನಾ). ೧. ಒಂದು ಸ್ಥಳದ ಹೆಸರು : ಪೆರ್ವ್ವಯಲ ಕೆಱುಂ ಶಿನನ್ನಾಕರುಂ ಕೊಳನೆಲ್ಲೂರ ಸಾಲತ್ತರುಂ . . . ಸಾಕ್ಷಿ (ಎಕ. III. ಎಡಕೊ. ೬೦-೭೦; ಸು. 890) ; ನಗುಲರಸಂಗೆ ಪೆರ್ವ್ವಯಲ್ವನ್ನೆರಡಱ ಕೆಱುದೆಱ (ಪ್ರುಕಂ. ೦೯೩೦. ೭೯-೯೫ ; 1053 ?). **ಪೆರ್ಬಯಲ್** : ೨. ವಿಸ್ತಾರವಾದ ಮೈದಾನ ; ವಿಶಾಲವಾದ ಜಾಗ : ಪಟುಗಳ್ ಪೆರ್ಬಯಲಾಗೆ (ಕಾವ್ಯಸಾ. ೯೩೫). **ಹೆಬ್ಬಯಲು** : ೧. ತಟ್ಟೀಕೆರೇ ಹೆಬ್ಬಯಲು ನಾವಮಾಥ್ಯಾಂ ಸಹ ಪಂಚಭಿಃ ಉಪಗ್ರಾಮ್ಯೈಃ . . . ಸಂಯುತಂ (ಎಕ. VII. ಶಿಕಪೂ. ೨-೯೭; 1641).

[ ಪೆರ್ (< ಪಿರಿದು$_1$) + ಬಯಲ್(< ವಯಲ್) ]

**ಪೆರ್ವಯ್ಯುಂಗೊಳ್** (ಕ್ರಿ). ಹುಚ್ಚು ಹಿಡಿ : ಮುನ್ನಮಿ ತಪ್ಪ ನಿರ್ಬುದ್ಧಿತನಮಿಲ್ಲ ನಿನ್ನಂತಪ್ಪ ಬುದ್ಧಿವಂತರುಂ ಪೆರ್ವಯ್ಯುಂಗೊಂಡರಂತೆ ಒಡ ಸಾದುವಂ ಕಳ್ಳನೆಂದು ಬೆನ್ನಟ್ಟಿ ಬಂದುದಕ್ಕೆಮಗೆ ಪಿರಿದುಂ ವಿಸ್ಮಯವಾದಪುದು (ಧರ್ಮಾಮೃ. ೬-೦೦೯). 'ಪೆರ್ವೈತ್ತಿಕೆ' ಪಠಾ. [ ? + ಕೊಳ್$_1$ ]

**ಪೆರ್ವರ**, **ಪೆಮ್ಮರ**, **ಪೆರ್ಮರ**, **ಹೆಮ್ಮರ** (ನಾ). ೧. ದೊಡ್ಡ ಮರ ; ಉನ್ನತವೃಕ್ಷ : ಒಗೆವ ದಿನೇಶನು ಪರಿವ ಸಿಂಧುವುಂ . . . ಸೊಗಯಿಸಿ ನಿಂದ ಪೆರ್ವರನಂ . . . ದೈವಮೆಂದೆಱಗುವಾತನೆ ದೇವ ವಿಮೂಢನಾಗನೆ (ಪೂರ. ೯೩೩). **ಹೆಮ್ಮರ** : ೧. ಪಡೆಯ ಕಾಲ್ದುಳಿಗಾಗ ಗಿಡು ಬಳ್ಳಿ ಪೆಮ್ಮರ ಪುಡಿಯಾಗೆ (ಸಂಶಿ. ೦೨-೬). **ಪೆರ್ಮರ** : ೧. ಅಱಕೆಯ ಗೋವರೆಣ್ಣೆ ಬರೆ ಪಾಯಿಸಿ ಘೋಷಱಯುಲರ್ ತಗುಳ್ದು ತತ್ತಱ ತಱದಿಕ್ಕಿ ದೇಗುಲಕೆ ಪೆರ್ಮರವಂ ಕಡಿವಂತೆ ಮಾಡಿದರ್ (ಶಂಕಶಾ. ೯-೯೫); ನೀರಸವಾಗೆ ಬಳ್ಳಿ ಗಿಡು ಪೆರ್ಮರಗಳ್ . . . ಬಂದುದು ಬೇಸಗೆಗಾಲಂ (ಶಂಶಾಕು. ೬-೯೫). **ಹೆಮ್ಮರ** : ೧. ಹೆಮ್ಮರನಿರ್ದೆಸೆಡೆಱುಂದಲೆತ್ತ ಬಹುದೇ ಬಲ್ಗಾರವುಂ (ಸೋಮೇಶ. ೭೬); ಹೆಮ್ಮರ ನಿವಾತದಲುಡಿದು ಬಿದ್ದವು ಕೌರವೇಂದ್ರನ ಪತನಕಾಲದಲಿ (ಕುವ್ಯಾಗ. ೯-೩); ಕಿತ್ತು ಬೀಳುವ ಹೆಮ್ಮರಂಗಳಿವೆತ್ತಲವಱವಡಿಗಿದ್ದು ಬದುಕುವುದೆತ್ತಲೀ ಶಿಶುಪಶುಗಳು (ಕಭಾಗ. ೧೦-೧೦-೫). ೨. ಒಂದು ಬಗೆಯ ಮರ ; ಶಿಗಡುಮರ : "ಶ್ಯೋನಾಕಃ . . . ಶೋಣಕಃ, ಅರಲುಃ—ಇವು ಹೆಮ್ಮರ" (ಶಾಕರ. ೦೦೬) ; ಅಯ್ಯ ಹೆಮ್ಮರದಲ್ಲಿ ಸುಗಂಧವನರಸುವರೆ (ಅವಚ. ೦೩-೨೯) ; ಹಾಲೆ ಹೊಂಗೇತಕಿ ವನಸಂಪಿಗೆ ಹಿಂತಾಲ ಹೆಮ್ಮರ ಕಮ್ಮರಗಳು (ಶಂಕಶಿ. ೮೯-೩೬).

[ ಪೆರ್ (< ಪಿರಿದು$_1$) + ಮರ$_1$ ]

**ಪೆರ್ವರುಪ** (ನಾ). ಭಾರಿ ಮಳೆ : ಪೆರ್ವರುಪಗರೆದಾಪರಿಸಲೊಡನೆ ದಳ್ಳುರಿಯುತಿಶಾಂತಿಯಾದುದು (ನವಪೂ. ೬ ೭).

[ಪೆರ್ (< ಪಿರಿದು$_1$) + ಪರುಪ (< ಬರಿಸ)]

**ಪೆರ್ವರ್ದು, ಹೆಬ್ಬದ್ದು** (ನಾ). ದೊಡ್ಡ ಜಾತಿಯ ಹದ್ದು : ಪರಿಯ ಪರ್ದುಱಿ ಪರ್ದು ಚಿಂಬರ್ದುರುತರದ ಹಡೆಹರ್ದು ಪೆರ್ವರ್ದ[ಪಾಠಾಂ. ಪೆರುವರ್ದ]ಪಱೊಳೊಟ್ಟಿದವು (ಸಾಳ್ವಭಾ. ೩ ೨೩). **ಹೆಬ್ಬದ್ದು** : ಕಿಱು ಹಕ್ಕಿಯು ಕೊಂಡು ಕುಕ್ಕಿಯೆಸಳಗಟ್ಟು ಹೆಬ್ಬದ್ದ ಒಡಿದು ಕಬ್ಬದ್ದ ಬಾಣಾಸವ ಮಾಡಿ (ಕೃಕೊಂಗ. ೮. ೩೦೮ ೦೦೦). [ ಪೆರ್ (< ಪಿರಿದು$_1$) + ಪರ್ದು ]

**ಪೆರ್ವಲ, ಪೆರ್ಬಲ, ಹೆಬ್ಬಲ** (ನಾ). ಭಾರಿಸೈನ್ಯ; ದೊಡ್ಡ ದಂಡು: ಇದು ಪೆರ್ವಲಮಾನೊರ್ವನೆ ಕದನಂ ಪಿರಿದಕ್ಕುಂ (ರಸರತ್ನಾ. ೦೩-೦೨೩); ಬಲಕ್ಕೆ ಆಳ್ವಲ ... ನೆಲವಲ, ಪೆರ್ವಲ(ಕಮಲ. ೨೯೬ ಕೃಷ್ಣ.). **ಪೆರ್ಬಲ** : ಪೆರ್ಬಲ ದಿಂದಂ ಇಱಿಪಪರ್ವಜರೇಶಾಂಗದಿನಿಱಿವಪರಾರ್ನಿನ್ನ ತೆಱದಿನಿಱಿವ ಬೆಡಂಗಾ (ಗದಾಯು. ೦೦-೯) ; ಕವಿತಪ್ಪ ವಿರೋಧಿಬಲಕ್ಕೆ ಭೀತಿಯಿಂ ನೆಲವಲನೆನ್ನದಲ್ಲ ದಿದು ಪೆರ್ಬಲವೆನ್ನದೆ ದೋಃಪ್ರತಾಪದಿಂ ಗಿಲಿಗಿಲಿಗಂಬವಾಡಿಸುವ (ಎಕ. XII, ತಿಪ್ಟೂ. ೯೩-೦೭; 1171) ; ಕಱುತ್ತೆಱಗೆ ತಾಗಿದರಾತಿವೊಲಂತೆ ಪೊಱಿದ್ದು ಪೆರ್ಬಲಮೊಡವಾಯೆ (ಕಾವ್ಯಸಾ. ೯೬೩). **ಹೆಬ್ಬಲ** : ತಳಿತುದೆಡಬಲವಂಕ ದಲಿ ಹೆಬ್ಬಲ (ಕುಮಾರರಾ. ೩-೪೦) ; ಬೊಬ್ಬಿಱಿದು ಮೂಱಿಂಬುಗಳಲಿಱಿ ಯಬ್ಬಿಸಿದನಾ ಖಳತನೂಜನ ಹೆಬ್ಬಲದ ರಥ ಹಯ ಮದೇಭ ಪದಾತಿ ಸಂತತಿಯ (ಕೊರವ. ೬-೪೦-೨೯); ಹೆಬ್ಬಲದೊಡನಿಂತು ಕಿಱುಬಲ ಬವರ ಕಾನುವುದೆ (೪೦ಪಶಿ. ೦೭-೨೬). [ಪೆರ್ (< ಪಿರಿದು$_1$) + ಬಲ$_3$]

**ಪೆರ್ವಲಗೆ** (ನಾ). ಅಗಲವಾದ ಗುರಾಣಿ,-ಹಲಗೆ : ಪಿಡಿವಸಿಗಳಿಂದ ಮುಂಗೈಯ ಪೆರ್ವಲಗೆ . . . ದುಃಶ್ಯಾಸ ಸಂಕಲಿತ ಸಂಗಡಿಗರೆಪುನಾಳ್ಗ ಳುತಮಮು ಪ್ಪೆದೋರಿತು (ಶಂಕರಾ. ೦-೦೭-೪೬).

[ ಪೆರ್ (< ಪಿರಿದು$_1$)+ಪಲಗೆ ]

**ಪೆರ್ವಲೆ, ಪೆರ್ಬಲೆ, ಹೆಬ್ಬಲೆ** (ನಾ). ದೊಡ್ಡಬಲೆ ; ಮಾರಿಬಲೆ : ಪೆರ್ವಲೆ ಬಡಿಕೋಲ್ ಕಿಱುನಾಯ್ (ಕಮಲ. ೫. ೦೯೨ ಕೃಷ್ಣ.) ; ಚಕ್ರವಲೆ ಖಿಂಗೆ ಮುಕ್ಕಣ್ಣವಲೆ ಪೆರ್ವಲೆಯ ಪೊಱಗಳು ವಿಂಧ್ಯಕನ ಗೂಡೆ (ಸಾಳ್ವಭಾ. ೩-೦೮) : ಪೆರ್ವ[ಪಾಠಾಂ. ರ್ಬ]ಲೆ ತೊಡಂಕುವಲೆ ಕೊಲ್ವಲೆ . . . ಬಿಡುವಲೆಗಳೆನಿಪ್ಪುವೆಸೆದುವಾ ಬೇಂಟೆಗರೊಳ್ (ಲಶಂ. ೬-೨೯). **ಪೆರ್ಬಲೆ** : ಪೆರ್ಬಲೆ . . . ಕವಲಂಬುಸಹಿತಂ ಭೋರನೆ ನೆರೆದತ್ತು ಬೇಂಟೆಕಾಱರ ತಂಡಂ (ಪಲಶಂ. ೬೯); ಸ್ವೈತಿನಿಕರವೆಂಬ ಪೆರ್ಬಲೆಗಳಂ ಬೀಸಿ . . . ಶಮೆ ದಮೆ ಶಾಂತಿ ಸತ್ಯಸಂಗತಿ ಬೇಂಟೆ ಗುಚಿತಸಾಧನವಾಗೆ ಮೃಗಕೇಳಿಯಿಂದಿರ್ದನಹಿಟಕನು (ಸೌಂದರ್ಯ. ೦೮-೪೬). **ಹೆಬ್ಬಲೆ** : ಹೆಬ್ಬಲೆಯ ಬೆಳ್ಳಾಲವಲೆಗಳ ಮಯಣದಂಟಿನ ಪೋಲುಕೋಬಿನ ಬೇಟೆಗಾಱರು ಬಳಸಿದರು ಶಿವನ (ಕುಮಾ. ೩-೩೩); ಭ್ರಾಂತಿಯೆಂದೆಂಬ ಹೆಬ್ಬಲೆಗೆ ಸಿಕ್ಕಿ ಅಂತ್ಯ ಮೊದಲನು ಕಾಣೆ (ಪುರಂದ. ೨-೦೩೩-೩); ದೈವ ವಂಚಿಸಲು, ಬುದ್ಧಿಬಲದಿಂದಾರು ಬದುಕಬಹುದು ? ಒಡ್ಡಿದಾ ಹೆಬ್ಬಲೆಯ ಹಾರಬಹುದು ? (ಕಾರಸಿ. ೬-೨೦). [ ಪೆರ್ (< ಪಿರಿದು$_1$) + ಬಲೆ$_1$ ]

**ಪೆರ್ವಸ, ಪೆರ್ಬಸ, ಪೆರ್ಬಸವು** (ನಾ). ದೊಡ್ಡ ಬರ ; ಭೀಕರಕ್ಷಾಮ : ಪಾಪಿಲಿ ಬೆಸ್ಕೆ ಮತ್ಸ್ಯವಿನಿತುಂ ಪೊಲಗಾಗಿರೆ ಮತ್ರಮನ್ಯಜಾಪಾಪಿ ತಮ್ಮ ಜಾತಿಯಡಗಂ ತಿನೆ ಪೆರ್ವಸವಕ್ಕುಂ (ಲೋಕೋಪ. ೯-೬೮); ಮಿಂಚಿನ ಬಣ್ಣಮೆಯ್ದೆ ಕರಿದಾದೊಡೆ ಪೆರ್ವಸವಕ್ಕು (ಅಭಿನವ. ೬-೦೨). **ಪೆರ್ಬಸ** : ಸುರಧನು ಪಾಟಳರುಚಿಯಾಗಿರೆ ಸಪುರಂ . . . ಅದು ಕರಿದಾಗಿರೆಯುಂ ಧಾರಿಣಿಗೆ ಕೂಡೆ ಪೆರ್ಬಸಮಕ್ಕುಂ (ಲೋಕೋಪ. ೯-೨೩). **ಪೆರ್ಬಸವು** : ಅರ್ಕನ ಸೂನು ಕುಂಭದೊಳ್ ಪೆಟ್ಟಗನಪ್ಪ ದೇವಗುರು ಸಿಂಹದೊಳಿರ್ದೊಡೆ ಲಂಕೆಯಿಂದಮೆಬ್ಬಟ್ಟ ತಗುಳ್ದು ಪೆರ್ಬಸವಿನೊಳ್ ಪ್ರಜೆ ಮೂಱಿ ಱೊಳೊಂದು ಭಾಗೆಯುಬ್ಬಟ್ಟೆಯೊಳೆಂಬಿಸಂ ಬರ್ದುಗುಗು ಸಲೆ ನಾಗಕುಂಪಾರನೋಜೆಯಿಂ (ಅಭಿನವ. ೬ ೫೭). [ಪೆರ್ (< ಪಿರಿದು$_1$) + ಪಸ$_1$]

**ಪೆರ್ವಸಲೆ** (ನಾ). ದೊಡ್ಡ ಹುಲ್ಲುಗಾವಲು : ಅಸದೃಶವಿಂದುಮಂಡಳವ ದಿಂದಮೃತೋಜ್ವಳಕೀರ್ತಿಕಾಂತಿಗೀಕ್ಷಿಸೆ ಱೆವುಳ್ಳುದೊಂದು ಕಱಿಯಿಲ್ಲದು ದೊಂದಱಿಂದಪಂದು ಹೋಲಿಸಿದಪೆನೆಂದು ನಾಳೆ ರಿಪುಹರ್ಮ್ಯತಳಂಗಳ ಮೇಲೆ ತಳ್ತ ಪೆರ್ವಸಲೆಗೆ ಪಾಯ್ವುಮೆಂದುಪಮೃತಂ ಬಳೆಕಂಡೆಣೆ ಚಂದ್ರ ಮಂಡಳಂ (ಸೌಇಇ. IX-i, ೩೯೩-೩೦; 1226). [ಪೆರ್ (< ಪಿರಿದು$_1$) + ಪಸಲೆ]

**ಪೆರ್ವಸಿವು** (ನಾ). ಹೆಚ್ಚಾದ ಹಸಿವು : ವಸುಧೆಗಧೀಶನಪ್ಪ ನಳನಧ್ವರ ಸತ್ವಲದಿಂ ಸುರರ್ಗೆ ಪೆರ್ವಸಿವಡಗಿತ್ತು (ನಳಚಂ. ೩೩).

[ ಪೆರ್ (< ಪಿರಿದು$_1$) + ಪಸಿವು (< ಪಸಿ$_2$) ]

**ಪೆರ್ವಸುಗೆ** (ನಾ). ಒಂದು ಸ್ಥಳದ ಹೆಸರು (?) : ಲೊಕ್ಕಿಗುಣ್ಡಿಯ ಊರೊಡೆವೊಲದ ಪೆರ್ವ್ವಸುಗೆಯ ಸ(ರ)ಂಕರಯ್ಯಂ(ಯ್ಯ)ನಾಯಕರ ಪಾಗಂ (ಎಇ. XIX, ೨೦೯-೩ ; 1037). [ ? ]

**ಪೆರ್ವಳವಿಗೆ** (ನಾ). ಅತಿಶಯವಾದ ಬೆಳವಣಿಗೆ : ದಳದಳಿಸಿ ಪೊಸ ಕೆಂದಳಿರ್ಗಳ ಕಾಪಣವೊ ಕಮಳಿನಿಯ ರಾಗ ಪೆರ್ವಳವಿಗೆಯೊ ಪೇಱುಮೆನೆ ಱೆಸ್ಗೊಳಿಸಿದುದರುಣೋದಯಂ ಸುರೇಂದ್ರನ ದೆಸೆಯೊಳ್ (ರಮಾಕ. ೨-೩೦).

[ ಪೆರ್ (< ಪಿರಿದು$_1$) + ಬಳವಿಗೆ ]

**ಪೆರ್ವಳಿ, ಹೆಬ್ಬಳಿ** (ನಾ). ೧. ದೊಡ್ಡ ಮನೆತನ ; ಹಿರಿಯ ವಂಶ : ಶಸ್ತ್ರಮುಂ ಶಾಸ್ತ್ರಮುಂ ಕಲ್ತುಂ ಮೇಣ್ ಪೆರ್ವಳಿಯೊಳಾದವಂ ಅವನಂ ಕಂಡವಂ ವ್ಯರ್ಥಕಾರ್ಯನಾದುದು ಕಾಣದು (ಸೌನಂದ. ೨-೬). **ಹೆಬ್ಬಳಿ** : ೨. ಒಂದು ವಂಶದ ಹೆಸರು (?) : ಹೆಬ್ಬಳಿ ಮೊದಲಾದ ಬಳಿಯವರ ಕಯ್ಯಲು × (ಸೌಇಇ. IX-ii, ೪೦೮-೦೭ ; 1064).

[ಪೆರ್ (< ಪಿರಿದು$_1$) + ಬಳಿ$_2$ (< ಬಱಿ$_3$)]

**ಪೆರ್ವಳು** 'ಪೆರ್ವಱು' ನೋ.

**ಪೆರ್ವಳೆ** 'ಪೆರ್ಮಱಿ' ನೋ.

**ಪೆರ್ವಳ್ಳ, ಪೆರ್ಬಳ್ಳ** (ನಾ). ೧. ನೀರಿನ ದೊಡ್ಡ ಹಳ್ಳ. ೨. ಒಂದು ಹಳ್ಳದ ಹೆಸರು : ತಸ್ಯ ಸೀಮೆ ಮೂಡಾಯ್ಪೆರ್ವ್ವಳ್ಳಮೆ ಪೊಟವಾಡಿಯ ಸೀಮೆಯುಳ್ ಕೂಡಿತ್ತು . . . ಮೂಡಮೂಡಿಲ ಪೆರ್ವ್ವಳ್ಳಮೇ ತೆಂಕಯ್ಯಗ್ಗೊರ್ಗ್ಗಸ್ತಿಗೂಡಲ ಪಳ್ಳಮೇ . . . ಸೀಮೆ (ಎಕ. IV, ಹನ್ಸ. ೯-೭; ಸು. 750). **ಪೆರ್ಬಳ್ಳ** : ೧. ಅತಿಪ್ರಬಲಜಲಪ್ರವಾಹಂ ಬೆಳ್ಳಂ ಗೆಡೆದು ಪರಿತರ್ಪ ಪೆರ್ಬಳ್ಳದೊಳ್ ಪಿರಿದಪ್ಪ ತೆಪ್ಪದ ಮೇಲೆ ತೇಂಕುತ್ತುಂ (ಶಂಕಶಂ. ೨೯೬-೦೭) ; ಅಸಿದುಮರಿವ ಪೆರ್ಬಳ್ಳದಿರ್ದಕ್ಕದೊಳ್ ನಿಲ್ದೊಸೆ ದೊಂದಂ ಜಾನಿಸುತ್ತಿರ್ದುದು ಚಳಶಫರೀಕಾಲಕೂಟಂ ಬಕೋಟಂ (ಜಗಂ. ೦೭-೬೨). [ಪೆರ್ (< ಪಿರಿದು$_1$) + ಪಳ್ಳ]

**ಪೆರ್ವಳ್ಳಿ, ಪೆರ್ಬಳ್ಳಿ$_2$** (ನಾ). ಒಂದು ಸ್ಥಳದ ಹೆಸರು : ಚೋಲರ ಪಿಟ್ಟುಮೆಪ್ಪು ಪೆರ್ವ್ವಳ್ಳಿಯ ತುಱುಗೊಳೊಳ್ ಸ್ವರ್ಗ್ಗಸ್ಥನಾದಂದು (ಎಕ. XI, ಜೂಳಕ್ಕ. ೬೫-೬; 977). **ಪೆರ್ಬಳ್ಳಿ$_2$** : ಪೆರ್ಬ್ಬಳ್ಳಿ ನಾಮ ಗ್ರಾಮಾಣಾಂ ಮಧ್ಯೇ (ಎಇ. IX, ೨೦೯-೬೦; 750).

[ಪೆರ್ (< ಪಿರಿದು$_1$) + ಪಳ್ಳಿ$_1$]

**ಪೆರ್ವಱಿ, ಪೆರ್ಬಱಿ, ಹೆಬ್ಬಱಿ** (ನಾ). ದೊಡ್ಡ ಹರೆ,– ತಮಟೆ : ಎಡೆಮೊಳ್ ದೂಂಟಿಂದೆ ದೂಂಟಿಂಗೆ ಪೆರ್ವಱಿಯುಂ ಪೊಯ್ಸಿ ಕೆಲಕ್ಕೆ ನಾಣ್ಚಿ ತಲೆಗುತ್ತಿರ್ಪಾಕವೋಲ್ ಜೋಡೆಮೋ (ಸಂಕಶಾ. ೯-೬೨). **ಪೆರ್ಬಱಿ** : ಅಱಿಕೆಯ ತೇರ್ ಪಟಿಯಿಂಗೆ ಪೆರ್ಬಱಿ ಚಕ್ರಂ ರಾಜ್ಯಚಿಹ್ನಮೆಂಬಿವಱಿಂ ಗೊಟಱಿಳೆ ಬರಮ ವಿರೋಧಿಗಳಱಿಯೆ ಜಯೋದ್ಯೋಗ ಪೇಚರೇಂದ್ರಂ ಬೀದಂ (ಶಾಂತಿಪು. ೯_೪೦) ; ಪೆರ್ಬಱಿಯುಂ ಪೊಯ್ಯುತ್ತಿರ್ಪ್ಪಂ . . . ಅತಿ ಗರ್ಬದಿ ಮಾಱಾಂಕನೆನಿಪ ಭಟನೇಳ್ತಂದಂ (ಶ್ರೀಶುಶಿ. ೨೩_೦೯). **ಹೆಬ್ಬಱಿ** :

ಹೆಬ್ಬುಲಿಗಳು ಬಾಳಿಸುವ ಗತಿಗುಬ್ಬುತುಬ್ಬುತ . . . ಚಾಂಗು ಭಲ ಎನುತಿರಲು (ಬಸವ. ೫೬-೧೪); ಉಲಿವ ಹೆಬ್ಬುಲಿಗಳನು ಕಿವಿಗಳ ಬಳಿಯ ಬೊಬ್ಬಿಡಿಸುವುದು (ಕೊರಣ ೬-೨೬-೨೪); ಹೊಡೆವ ಹೆಬ್ಬುಲಿ ಜಾವಗಹಳೆ . . . ಜಡಿವ ದನಿಗಳಿಂದ ತಳವಾಳಿರುಗಳ ಪಡೆ ತಿರುಗುವುದು (ಕಂಸಹಿ. ೧೧-೦೯೦). [ಪೆರ್ (< ಪಿರಿದು$_1$) + ಪುಲಿ$_1$]

**ಪೆರ್ವಟು, ಪೆರ್ವಳು, ಹೆಬ್ಬಳುವ** (ನಾ). ದಟ್ಟವಾದ ಕಾಡು; ಮಹಾರಣ್ಯ: ಅಂತೆಂತುನುಮೆಯ್ದೆ ಪಂದುಜ್ಜಯಿನಿಯ ಪಡುವಣ ಪೆರ್ವಟುವಂ ಕಟಿದು . . . ಸೀತೆ ಸೇದೆವಟ್ಟಿರ್ಪುದುಂ (ಶಂಪಾಶು. ೬-೦೦೪ ವ). **ಪೆರ್ವಳು**: [ನಾಡು ಬೀಡುಗಳನಂದು] ಕಳೆದು . . . ಶಬರಸಂದಣೆಯಿಂದಗುರ್ವಿಸುವ ಪೆರ್ವಳುವನು ಪುಗುತಿರಲು (ಕುಸುಮಾ. ೬-೦೦೦). **ಹೆಬ್ಬಳುವ**: ಬೆಳೆದ ಹೆಬ್ಬಳುವಕ್ಕೆ ಕಾಲಾನಳನು ಕವಿದಂದದಲಿ ಮುಂಢಹರನಲಘುಬಾಣವ್ರಾತ ಕವಿದುದು ಸಾಲ್ವನೆಡಬಲದ (ಜಭಾಗ. ೧೨-೮೨-೨೨). [ಪೆರ್ (< ಪಿರಿದು$_1$) + ಪಟು$_1$ (< ಪಟುವ)]

**ಪೆರ್ವಟ್ಟಿ** (ನಾ). ಒಂದು ಊರಿನ ಹೆಸರು (?) : ಪೆರ್ವಟ್ಟಿಯ ತೆಂಕಣ ಯೊಟ್ಟಿ ಎ ಪಡುವಾಯ್ವಾಟ್ಟೀಲಿಯ ಸನ್ದು ಕಾವೇರಿಯುಳ್ ಕೂಡಿತ್ತು ಸೀಮೆ (ಎಕ. IV, ಎಡತೊ. ೬೦-೬೫; ಸು. 890). [?]

**ಪೆರ್ವಾಗಿಲ್, ಪೆರ್ಬಾಗಿಲ್, ಹೆಬ್ಬಾಗಿಲ್, ಹೆಬ್ಬಾಗಿಲು** (ನಾ). ದೊಡ್ಡ ಬಾಗಿಲು; ಮಹಾದ್ವಾರ: ಪೆರ್ವಾಗಿಲ ನೆಲೆವಾಡದಗುರ್ವನದೇನೆಂಬೆಂ (ದರ್ಶನಾ. ೨-೧೨೦); ಜಪಹುರದ ಪೆರ್ವಾಗಿಲಂ ಪುಗುತರ್ಪಂತಿರೆ ಬರ್ಪಟಿ ಬೀರ ನೀನಾರವಂ (ರಾಜಶೇ. ೯೫-೨೦). **ಪೆರ್ಬಾಗಿಲ್**: "ಪರಿಕೂಟವಾ ಹಸ್ತಿನಖಮೆನಲು ಪೆರ್ಬಾಗಿಲಕ್ಕು" (ಶುಂಗರಾ. ೫೬-೯); ನರಪ ಬಲ್ಲಾಳ ನರಮನೆಯ ಪೆರ್ಬಾಗಿಲೊಳಗಂದಳಪನಿಳಿದು ನಿಂದು (ಚಿಕ್ಕರಾ. ೯-೦೦); ಆ ಪಟ್ಟಣಕ್ಕನುಪಮಿತನವರತ್ನಮಯದ ಮುನ್ನೂಱುಪತ್ರಸೆವ ಪೆರ್ಬಾಗಿಲ್ಗಳು (ಚಬಿ. ೦೦-೬೯); ಪೊೞಲ ಪೆರ್ಬಾಗಿಲ್ಗಳಿಕ್ಕಿದವು (ಕ್ರಿಪಿಭಾ. ೯-೦೬). **ಹೆಬ್ಬಾಗಿಲ್**: ಮುಖಂ, ನಿಃಸರಣಂ— ಈ ೨ ಹೆಬ್ಬಾಗಿಲ ಮುಂತು (ಹಲಾಯು. ೪೮-೭೩೯). **ಹೆಬ್ಬಾಗಿಲು**: ಪುರದ ಹೆಬ್ಬಾಗಿಲ ಮುಚ್ಚುಳ ನಗರದೇವತೆಯರ್ಕೆಲಿಸಲ್ (ಭುಕ್ಕ್ಯಸ್ರ. ೬-೩೯ ವ); ಪುರದ ಹೆಬ್ಬಾಗಿಲು ಗಳಿಕ್ಕಿತು (ಕೌಶಿಕಾ. ೨೨-೩೨): ಊರು ಸೂರೆ ಹೋದ ಮೇಲೆ ಹೆಬ್ಬಾಗಿಲು ಹಾಕಿದರು (ಗಾದೆ). [ಪೆರ್ (< ಪಿರಿದು$_1$) + ಬಾಗಿಲ್]

**ಪೆರ್ವಾಣದಿ** (ನಾ). ಒಬ್ಬಾತನ ಹೆಸರು : ಕಲಿಪಲ್ಲವ(ಭ)ರ್ ಪೆರ್ವ್ವಾಣದಿಯರಸರ್ (ಇಆ. XIV, ೨೩೨-೫೬; ೯ನೆಯ ಶತ).

[? ಇದು 'ಪೆರ್ವಾಣಡಿ' ಎಂಬುದರ ಅಪಲಿಖಿತವಿರಬಹುದು]

**ಪೆರ್ವಾತು, ಪೆರ್ಮಾತು, ಹೆಮ್ಮಾತು** (ನಾ). ೧. ಅಹಂಕಾರದ ಮಾತು: ಕೊರ್ವಿದಾ ಪೆರ್ವಾತುಗಳ್ಗಾಂ ಬೆದರ್ವೆಂತುಟಣುಗಿಯೇಂ ? (ಶ್ರೀರಾಮ. ೯೯-೩೦೨). **ಪೆರ್ಮಾತು**: ೧. ಭಯಮೋಹಕ್ಕುಮದೆಂತು ಟೆಂದದಟುಮಂ ಪೆರ್ಮಾತುಮಂ ಭೂತಧಾತ್ರಿಯೊಳೋರಂತೆ ನೆಗಟ್ಟ (ಶಂಕರ. ೧೨-೦೭೫); ಈ ಪರಾಕ್ರಮಮುಮಿಮಾ ಪೆರ್ಮಾತುಮಿಮಾ ಗಂಡುಮಿಮಾ ಸುಭಟಾಲಾಪಮುಮೆಲ್ಲಮಾ ನೃಪಸುತರ್ಗಂದೆಲ್ಲಿ ಪೊಕ್ಕಿರ್ದುದೋ (ಗದಾಯು. ೪-೩೬). ೨. ಗಂಭೀರವಾದ ನುಡಿ; ತೂಕದ ಮಾತು: ಭೂತಳದೊಳರ್ಥವಿಹೀನನ ಶೌಚಮುಣ್ಮ ಪೆರ್ಮಾತುಕುಲಂ ನೆಗಟ್ಟೆಯಿನಿತುಂ ವಿಫಲಂ (ಕಾವ್ಯಾವ. ೫೪). ೩. ಕೀರ್ತಿ; ಪ್ರಸಿದ್ಧಿ: ಆತನ ಸಿರಿಯುಂ ಪೇಟ್ವೊಡೆ ಭೂತಳದೊಳ್ ರೂಢಿವೆತ್ತ ಧನದಂಗಂ ಪೆರ್ಮಾತಿನ ದೇವೇಂದ್ರಂಗಂ ಮಾತೇಂ ಬಗೆಪಂದು ನಾಲ್ವರಲ್ ತಾಂ ಪಿರಿಯಂ (ಧರ್ಮಾಮೃ. ೬-೦೧). **ಹೆಮ್ಮಾತು**: ೪. ಒಳ್ಳೆಯ ಅಭಿಪ್ರಾಯದ ಮಾತು: ಅಪರ ಬಾಯಿಗೆ ಲೋಕೋಪಕಾರದ ಹೆಮ್ಮಾತುಗಳು ಬರಲಾಗದು (ಚಾರುದಾ. ೨೫೦). [ಪೆರ್ (< ಪಿರಿದು$_1$) + ಮಾತು$_1$]

**ಪೆರ್ವಾರುವ** 'ಪೆರ್ವಾರ್ವ' ನೋ.

**ಪೆರ್ವಾರ್ವ, ಪೆರ್ಬಾರವ, ಪೆರ್ಬಾರ್ವ, ಪೆರ್ವಾರುವ, ಹೆಬಾರ, ಹೆಬಾರು, ಹೆಬಾರುವ, ಹೆಬ್ಬಾರ, ಹೆಬ್ಬಾರು, ಹೆಬ್ಬಾರುವ, ಹೆರ್ವಾರುವ** (ನಾ). ೧. ಬ್ರಾಹ್ಮಣರಲ್ಲಿ ಶ್ರೇಷ್ಠನಾದವನು; ಬ್ರಾಹ್ಮಣರ ಮುಖಂಡ: ಅಲ್ಲಿಯ ಪೆರ್ವ್ವಾರ್ವ್ವರ್ವಾಸುದೇವಭಟ್ಟರ್ . . . ಧಾರಾಪೂರ್ವಕಂ ಮಾಡಿ ಕೊಟ್ಟರು (ಪ್ರಆಂ. ೧೯೨೫, ೬೮-೦೬; 1060); ಜಾತಿಶಪಥಂಗೊಣ್ಡರ ಪೆರ್ವ್ವಾರ್ವ್ವರಂ ಸೊಡರುಂ ಜೀವಿತವರ್ಗ್ಗಮುಂ ಗಡುಗೆಯುಂ ನೈವೇದ್ಯಮುಂ × × × ಬಡಪಟ್ಟರ್ಗ್ಗೆ ತಪಸ್ವಿಗಳ್ಗೆ ತಿರಿವರ್ಗ್ಗಾಹಾರದಾನಂಗಳಂ ನಡವಂತಾಗಿರೆ (ಎಕ. VI, ಕಡೂರು. ೫೦-೬೦; 1169). **ಪೆರ್ಬಾರವ**: ೧. ಓರೋರ್ವರೋರ್ವರು ಮೇಲೆ ಬಿದ್ದಲ್ಲಿ ಪೆರ್ಬಾರವನ ಮಗನೋರ್ವ ತೀರಲನುಸಂಧಾನಕಾರಣದಿ ಬಾಯಾಱೆ ಬಸವನೇ ಕೊಂದನವಿಧಾಯೆಂದು ಮೊಱೆಯಿಡಲ್ಕೆ (ಸಿಂಗಿರಾ. ೫-೯೨). **ಪೆರ್ಬಾರ್ವ**: ೧. ತಾಗರಟೆಯವೂರೊಡೆಯ ಅರಸಿಮಯ್ಯನ ಮಗಂ ಪೆರ್ಬ್ಬಾರ್ವ್ವ ಮಾಧವಯ್ಯನ ದೇಗುಲದ ನಾರಾಯಣದೇವರ್ಗ್ಗೆ ದೇವ ಭೋಗಕ್ಕೆ ಧಾರಾಪೂರ್ಬ್ಬಕದಿ . . . ಕೊಟ್ಟಂ (ಎಕ. VII, ಶಿಕಾ. ೫೪-೨೪; 1027). **ಪೆರ್ವಾರುವ**: ೧. ಸಾಲಿಯೂರ × × × [ಪೆ]ರ್ವ್ವಾರುವ ಶ್ರೀ × × × ದೇವಾರಿಂಗೆ ಕಗೆಱೆಯ ಬಾಯಲೊಳಗೆ ನಿವೇದ್ಯಕೆ ಬಿಟ್ಟ ಗದೆ (ಪ್ರಆಂ. ೦೯೬೦, ೮೨-೦೯; 1122). **ಹೆಬಾರ**: ೧. ನಾರಣ ಹೆಬಾರ (ಸೌಇಇ. IX-ii, ೬೨೦-೩೮; 1546). **ಹೆಬಾರು**: ೧. ಶಿಲಾ ಶಾಸನದ ಕ್ರಮವೆಂತೆಂದರೆ × × × ದಲ್ಲಿಯ ಸರಸ ಹೆಬಾರು × × × ದ ಮಯ್ಯಾರ್ದೆಯಲು (ಎಕ. VI, ಶೃಂಗೇರಿ. ೩೩-೦೯; 1418). **ಹೆಬಾರುವ**: ೧. ಮಳಲೂರ ಅಪಣ್ಣಹೆಬಾರುವ ಮಳಲೂರ ಜನರುಗಳಿಗೆ ಕೊಟ್ಟ ಶಿಲಾಶಾಸನಕ್ರಮವೆಂತೆಂದರೆ (ಎಕ. IX, ಚನ್ನಪ. ೯೩-೬; 1572). **ಹೆಬ್ಬಾರ**: ೧. ಮುಡಲು [ಹ]ರಿದ ಹೊಳೆ ತೆಂಕಲು ಕುಂಞಣ ಹೆಬ್ಬಾರನ ಮಕ್ಕಳ ಉತ್ರಿ (ಕಇ. I, ೫೫-೦೬; 1438); ಆನೆಕೆರೆ ಭಾರದ್ವಾಜಗೋತ್ರದ ... ಅಪ್ಪಾಜಿ ಹೆಬ್ಬಾರ ಪುತ್ರನಿಲಯಪ್ಪ ಹೆಬ್ಬಾರ ಮಗ ವೆಂಕೈಯನು ಪಟ್ಟಿಸ್ತ ಪುದಿಮೆಟ್ಟು (ಎಕ. V, ಬೇಲೂರು. ೨೬-೯; 1707). ೨. ವೈಷ್ಣವ ಮತ್ತು ಶ್ರೀವೈಷ್ಣವರಲ್ಲಿ ಒಂದೊಂದು ಒಳಪಂಗಡ ಮತ್ತು ಆ ಪಂಗಡಗಳಿಗೆ ಸೇರಿದವರು: ಅಹಿಚ್ಛತ್ರದ ಬ್ರಾಹ್ಮಣರು . . . ಹೆಬ್ಬಾರ, ಮೈಯ, ಕಾರಂತ (ಕುಳಾಚಾ. ೦೬೦). **ಹೆಬ್ಬಾರು**: ೧. ಹೆಬ್ಬಾರು ಚಂನಪ್ಪನವರು (ಎಕ. XVI, ಶಿಕ್ಕಾ. ೯೦-೩೩; 1802). **ಹೆಬ್ಬಾರುವ**: ೧. ಪಿರಿಯಣ್ಣ ಹೆಬ್ಬಾರುವ ಪ್ರಮುಖವಾದಶೇಷಮಹಾ ಜನಂಗಳು (ಎಕ. VII, ಹೊನ್ನಾ. ೯೦-೩೫; 1185 ?); ಬಿಟ್ಟಿಯ ಹೆಬ್ಬಾರುವ ನಾಳು (ಪ್ರಆಂ. ೦೯೨೯, ೬೩-೬; 1216). ೨. ನಡುವ ಹೆಬ್ಬಾರುವರ ಮಹಾ ಜನಂಗಳ ಗುಡಿವಾಡ (ಕೋಲಾರ. ೩೦-೦೬); ಕೂಡಲೂರ ಅಶೇಷಹೆಬ್ಬಾರುವ ಮಹಾಜನಂಗಳು (ಎಕ. IX, ಚನ್ನಪ. ೦೫೫-೦೯; 1534); ತನ್ನ ಕಡೆಯ ದೊಡ್ಡ ಹೆಬ್ಬಾರುವನಿಗೆ ಸ್ವಾಧೀನ ಮಾಡಿ (ಚಟ್ಟಿಂ. ೨೨೦-೦೬). **ಹೆರ್ವಾರುವ**: ೧. ಹೆರ್ವ್ವಾರುವ ಚವುಂಡಮಯ್ಯನುಂ ದೇವಪಯ್ಯನುಂ ಹರಳುಗುಣಿಗನ ಮತ್ತ ೨ (ಸೌಇಇ. IX-i, ೦೬೫-೫೦; 1099); ಹೆರ್ವ್ವಾರುವ ಬಿಣಿಯ ಹರಿಮಯ್ಯ (ಪ್ರಆಂ. ೦೯೩೦, ೮೪-೦೦; 1128).

[ಪೆರ್ (< ಪಿರಿದು$_1$) + ಪಾರ್ವ]

**ಪೆರ್ವಾವು, ಪೆಬ್ಬಾವು, ಪೆರ್ಬಾವು, ಹೆಬ್ಬಾವು** (ನಾ). ೧. ದೊಡ್ಡ ಗಾತ್ರದ ಹಾಗೂ ಬಹಳ ಉದ್ದವಿರುವ ಒಂದು ಬಗೆಯ ಹಾವು; ಅಜಗರ: "ತ್ರಿಲಿಂಗಃ . . . ಅಜಗರಃ, ಶಯುಃ— ಈ ೫ ಪೆರ್ವಾವು (ಹೆಬ್ಬಾವು)" (ಹಲಾಯು. ೦೦೬-೨೦); ಅರ್ಕಧ್ಯಾನದಿಂ ಸತ್ತು ಪೆರ್ವಾವಾಗಿ ಪುಟ್ಟಿರ್ದೊಡೆ (ಚಿಣ್ಣಾ. ೦೯೮-೨೩); ಉರ್ವೀನಾಥರನೇಕರುಂ ಮಡಗಿ

ಭಂಡಾರಂಗಳಂ ಲೋಭದಿಂ ಪೆರ್ವಾವಾಗಿ ಪಿಶಾಚರಾಗಿ ಪಲಕಾಲಂ ಕಾದು ಕೊಂಡಿರ್ದರ್ (ಹಂಗಾಪು. ೬-೦೩೩). ೨. ಆದಿಶೇಷ : ಇಂಗಡಲೆಡೆಯ ಪೆರ್ವಾವಿನ ಹೆಡೆಯ ರತ್ನಂಗಳ ಬೆಳ್ಪುಳಿಗಿನಲಿ ಕಂಗೊಳಿಸುವ ವಾಸು ದೇವನ ಶ್ರೀಚರಣಂಗಳ ಸನ್ನುತಿಸಿದನು (ಕೋಷಚ. ೩-೯). ಪೆಬ್ಬಾವು : ೨. ಸವ್ಯಬಸನಂಬೊಡೆದ ಕತ್ತಲೆವೆಸರ್ವಡೆದನಂ ಕೊಂದ ಬಗೆಯೊ ಳೊಗೆದನನೆನೆಲರೆಯೋರ್ವನೊಡನಾಡಿಗಿತ್ತುರು ತೂಣನಂ ತುಳಿದ ಪೆಬ್ಬಾವಿ ನೆಂಜಲುಂಡ (ಶಂಬಕಾ. ೨೦-೩೪). ಪೆರ್ಬಾವು : ೧. ಅಂತಿರುಳ್ ನಾಲ್ಕುಂ ಜಾವಮುಂ ಮಹಾಹೂರ್ತಕನಂತೆ ಪೊತ್ತಿನಳವಿಯುಂ ನೋಡುತ್ತುಂ ಪೆರ್ಬಾವಿನಂತೆ ಮಂಡಲಂಗೊಳ್ಳುತ್ತುಂ ... ಕಣ್ಣೊಳೆ ಬೆಳಗಾಗೆ (ರಘುನ್ನು. ೦-೦೬೦); ಈರ್ವರು ಒಲಿದು ಭಂಡಿಯನೇಱು ಪೋಪಾ ಬಳಿಯಲಿರೆ ಪೆರ್ಬಾವು ಕಾಣುತ (ಹನ್ಮಭಾ.೨೦-೯೩). ಹೆಬ್ಬಾವು : ೧. "ಅಜಗರಃ ಶಯುಃ, ವಾಹಸಃ —ಈ ೩ ಹೆಬ್ಬಾವಿನ ಹೆಸರು" (ಚಾಕರಾ. ೯೩); ಹಸಿವೆಂಬ ಹೆಬ್ಬಾವು ಬಸಿಱ ಬಂದು ಹಿಡಿದಡೆ ವಿಷವೇಱುತ್ತಯ್ಕ (ದೇವಾರ. ೦೫-೨೩); ಹೊಸ್ಕ ಹೆಬ್ಬಾವಿನ ಬಸುಱ ಸಿಲುಕಿದನೆ (ಕುಮ್ಯಾಕ. ೦೦-೦೯); ಓಲೆಯ ಮರ ಕಿಡೆದಂತೆ ಹೆಬ್ಬಾವುಗಳೆಳೆಲುತುರುಳುತಿದ್ದುವಾಗ (ಶಬಕ. ೨೦-೯೦).

[ಪೆರ್ (< ಪಿರಿದು$_1$) + ಪಾವು$_1$]

**ಪೆರ್ವಾಳ್**, ಪೆರ್ಬಾಳು$_1$ (ನಾ). ನಿಡಿದಾದ ಕತ್ತಿ; ಉದ್ದವಾದ ಖಡ್ಗ : ಪೆರ್ವರಂ, ಪೆರ್ವಾಳ್ (ಛಾಚಾಶೂ. ೦೩೬ ಶ್ರಯೋ). ಪೆರ್ಬಾಳು$_1$ : ಚಕ್ರ ಪರಶು ಪಿಂಡಿವಳು ಪೆರ್ಬಾಳು (ಚಿರಚಿಚ. ೨-೩೦).

[ಪೆರ್ (< ಪಿರಿದು$_1$) + ಬಾಳ್$_1$]

**ಪೆರ್ವಿಡಿ**, ಪೆರ್ಬಿಡಿ (ನಾ). ದೊಡ್ಡ ಹೆಜ್ಜಾನೆ : ವಿಚಿತ್ರಾತಪತ್ರವೃಜಂ ಪೆರ್ವ್ವಿಡಿ ಸೌಧಂ ಚಿತ್ರದಣ್ಡಂ (ಎಕ XIII, ೩೩೦-೦೩; ೯೨೦); ಏಱುದ ಪೊನ್ನ ಪಣ್ಣುಗೆಯ ಪೆರ್ವಿಡಿ ಕಟ್ಟಿದಿರಾಗೆ (ಶಂಕಚಾ. ೯-೦೦೦); ವಾಜಿ ಪೆರ್ವಿಡಿ ಪೇರಾನೆ ಸುಖಾಸನಂ ತಂಬುಗೆ (ಬುದ್ಧಿಪು. ೩-೬೬). ಪೆರ್ಬಿಡಿ : ಪೊಸಮದದಾನೆಯುಂ ನಸೆಯ ಪೆರ್ಬಿಡಿ . . . ಪೊರ್ದಿ ಶೋಭಿಸುಪವೊಲ್ (ಚಾಂತಿಪು. ೬-೨೯).

[ಪೆರ್ (< ಪಿರಿದು$_1$) + ಪಿಡಿ$_2$]

**ಪೆರ್ವಿದಿರ್, ಪೆರ್ಬಿದಿರ್, ಪೆರ್ವಿದಿರಂ, ಹೆಬ್ಬಿದರಂ, ಹೆಬ್ಬಿದಱು, ಹೆಬ್ಬಿದಿರ್, ಹೆಬ್ಬಿದಿರು** (ನಾ). ಎತ್ತರವಾಗಿ ಹಾಗು ದಟ್ಟವಾಗಿ ಬೆಳೆಯುವ ಒಂದು ಬಗೆಯ ದೊಡ್ಡ ಜಾತಿಯ ಬಿದಿರು : ನಟ್ಟ ಕೂರ್ಗಣೆಯ ದಿಙ್ಮೊನೆಯಿಂದೆ ಬಟ್ಟಲ್ದನುವಿರ್ಪ ಪೆರ್ವಿದಿ [ಪಾಠಾಂ. ದ]ರ ಸಿಡಿಂಬಿನೊಳ್ ಪುದಿದದೊಂದು ಕುಳಾಚಳದಂತೆ ಸಿಂಧುಜಂ (ಶಂಕಚಾ. ೦೦-೯೩); ತನಿಗಂಪಿನ ಬಲ್ವಲ್ಲಿಯಿಂ ಜನಾರ್ದನಂ ಭೃಂಗದಂತೆ ಸುಮನೋರಾಗಂ ಜನಿಯಿಸೆ ತಮಾಲಪಲ್ಲವತನುರುಚಿ ಪೆರ್ವಿದಿರ ಪೊದಱನಂದ್ಯತಂದಂ (ಶಂಬಾಶೂ. ೯-೦೯). ಪೆರ್ಬಿದಿರ್ : ಕರ್ಬಿರಲು ಪೆರ್ಬಿದಿರ ಕಡಿವುತಿರ್ದಂ ದೇವ (ಚಾಗಿಚ. ೪೬. ೨೬೦-೦೩); ಬರುತ ದಾರಿಯೊಳಿಡಿಱುವ ಪೆರ್ಬಿದಿರ ಮೆಳೆಯಲಿ ರೂಢಿ ಗುರುವಿನ ಸುತರನಱಿಯದೆ (ಸಂಕಶ. ೨೫-೯): ಏಸೆದುದಾ ಗಿರಿ . . . ಬೆಸಲಾದ ಪೆರ್ಬಿದಿ[ಪಾಠಾಂ. ದ]ರ ಕಾಡುಗಳ ಬೀಡುಗಳ ಶಬರಿಯರ ಸಂಕುಲದೊಳು (ಕೃಬಚಾ. ೦೦-೩). ಪೆರ್ವಿದಿರು : ಬಿಡದೆ ಜಟ್ಟಿಗಳೆಲ್ಲರುಂ ಸುಗಿಡದೆ ತೋಳ್ಗಳನೊದಱುಸಲು ಕಿಚ್ಚಿಡಸಿತೊ ಪೆರ್ವಿದಿರ ಮೆಳೆಗೆನೆ ಪರ್ವಿತಾ ರವವು (ಹನ್ಮಚಾ. ೨೨-೬೯). ಹೆಬ್ಬಿದರು : ಹೆಬ್ಬಿದರು ಕಿರುಬಿದರು . . . ಹುಣಸೆಯ . . . ಎಡೆಯಡೆಗೆ ಹಾ ಭಾವಿ ಎರಡಿಯಹವಲ್ಲಿ (ಗುಂಡುಸು. ೦-೬೮). $\Delta$ ಹೆಬ್ಬಿದಱು : ಮೂಡ ಹೆಬ್ಬಿದಱು ಅಲ್ಲಿ ಮೂ × × × ಮೂಡಣಕಿನರಲು ಅಲ್ಲಿ × × × ಡ್ಡೆಯ ಕಲ್ಲಱದು (ಎಕ. VII, ಶಿಕಾ. ೬೯-೦೦೦ ; 1112). ಹೆಬ್ಬಿದಿರ್ : ಎಚ್ಚೊಡುಚ್ಚಳಿಸಿದ ಬಾಳ ಹೆಬ್ಬಿದಿರ್ಗಳ ಕೊಚ್ಚಲು ವನಾಳಿ ಭರ್ಗ ಮೆಚ್ಚಿಕೊಟ್ಟಂತೆ ಮುತ್ತುಗಳು ದುರಿತು (ಕೋಷಚ. ೦೯-೩೩). ಹೆಬ್ಬಿದಿರು : " ವಾತ್ಮನೀಯಃ —ಹೆಬ್ಬಿದಿರು" (೬೩೦. ೦೩೦) ; ಹಿಳಿದುರಿವ ಹೆಬ್ಬಿದಿರ ಗಂಟಿನ ಠಳಠಳತ್ಕಾರದಿ ದಿಶಾಮಂಡಳದ ಮೂಲೆಗಳೊಡೆದುವದ್ಭುತವಾಯ್ತು ವನದಹನ (ಕುಮ್ಯಾಕ. ೨೦-೩೬); ಬಿದಿರ ಮೆಳೆ ಧಗಧಗಿಸೆ ಘನ ಹೆಬ್ಬಿದಿರು ಛಟಛಟರೆನಲು . . . ಪಕ್ಷಿಸಂಕುಲ ವುದುರಿದುವು ಗಱಸಹಿತ ಬೆಂದುವು ವನದ ಮಧ್ಯದಲಿ (ಶಳಕ. ೬-೬); ನೇಱಲು ಹೆಬ್ಬಿದಿರುಗಳು ಕಾಲಾಚ ಕಗ್ಗಲಿ ಕಂಟಿವಾಳದ ಮರ ಸೂರ ವರ್ಗವ ತಡೆದಿಹವು (ಕುಂಶಪ. ೦೯-೩೬). [ಪೆರ್ (< ಪಿರಿದು$_1$) + ಬಿದಿರ್$_1$]

**ಪೆರ್ವಿದಿರು** 'ಪೆರ್ವಿದಿರ್' ನೋ.

**ಪೆರ್ವಿಲ್** (ನಾ). ದೊಡ್ಡ ಬಿಲ್ಲು,—ಧನುಸ್ಸು : ಸಗ್ಗಿಗಪೆಟ್ಟೋ ಪೆರ್ವಿಲ್ಬಾ ಸುಗಿಯಗ್ಗಳದೊಳ್ಳಿರು (ಉದ್ಭರೀ. ೯-೯೬). [ಪೆರ್ (< ಪಿರಿದು$_1$) + ಬಿಲ್$_2$]

**ಪೆರ್ವಿಸಿಲ್, ಪೆರ್ಬಿಸಿಲ್, ಹೆಬ್ಬಿಸಿಲು** (ನಾ). ಹೆಚ್ಚಾದ ಬಿಸಿಲು; ಅತ್ಯಧಿಕವಾದ ಬಿಸಿಲು : ಪರ್ವಿದ ಬೆಟ್ಟ ಬೇಸಗೆಯು ಪೆರ್ವಿಸಲರ್ವಿಸೆ ಮೆಯ್ಯನೊಡ್ಡಿ ತಾಂ ನಿರ್ವಹಿಸಲ್ಕಮಾಱದೆ ಹಿಮಾಂಶುಳಳಾಳಿಯನೆತ್ತಿ ಪೊತ್ತನಾ ಶರ್ವಂ (ಚಾರಪು. ೯-೬೦). ಪೆರ್ಬಿಸಿಲ್ : ಕೆಂಡವುಂ ಕಿಡಿಯನೊಡ ರ್ಚುತಿರ್ದನೆನಲುರ್ಬುವ ಪೆರ್ಬಿಸಿಲಿಂದೆ ತಾಪವುಂ ಪಡೆದು (ಚಾರವಾ. ೨-೨೨೦). ಹೆಬ್ಬಿಸಿಲು : ಹೆಬ್ಬಿಸಿಲ ಉಗುಳುವಂತಿಹುದು ಹೊತ್ತಾರೆ (ಕಂಪು. ೯೯-೫). [ಪೆರ್ (< ಪಿರಿದು$_1$) + ಬಿಸಿಲ್]

**ಪೆರ್ವೀಡೆ** (ನಾ). ದೊಡ್ಡ ಬಿರುಕು,—ಸೀಳು : ಕೆಱೆಗಳ ತೊಱೆಗಳ ಸರಸಿಗಳಱುನೀರಂ ಪೀರ್ದು ಪೀರ್ದು ನೆಱೆಯದೆ ಧರೆ ಮತ್ತಜಸಿ ಬಾಯ್ವಿಟ್ಟ ತೆಱದಿಂ ನೆಱೆ ಪರ್ವಿದವಂದು ಬಿರಿದ ಪೆರ್ವೀಡೆಗಳುಂ (ಚಾರಪು. ೯-೬೦). [ಪೆರ್ (< ಪಿರಿದು$_1$) + ಬೀಡೆ$_1$ (< ಬೀಟ್$_2$)]

**ಪೆರ್ವೀದಿ** (ನಾ). ದೊಡ್ಡ ರಸ್ತೆ ; ರಾಜಮಾರ್ಗ : ಪೆರ್ವೀದಿಗಳಿಂ ನೇಸಱುದಿಪರ್ವಡಗಲುದೆಸೆಯೊ . . . ಸೊಗಯಿಪುದು ಸಮವಸರಣ ವಿಲಾಸಂ (ಆಚಪು. ೬-೦೨). [ಪೆರ್ (< ಪಿರಿದು$_1$) + ಬೀದಿ]

**ಪೆರ್ವುತ್ತು**, ಪೆರ್ಬುತ್ತು (ನಾ). ದೊಡ್ಡ ಹುತ್ತ : ಬಡಗ್ಗೆ ಪೆರ್ವ್ವುತ್ತು ಅತ್ತಿಯಿನ್ ತೆಙ್ಕ ದಿಕ್ಕಿಯಿನ್ ಪಡುವಯ್ ನೋಡಿ ಪೋದ ಒಟ್ಟಿಯೊಳಲೆ ಪೆಟ್ಟನಂದಿ ಕೆಱೆಯ ಮೂಡ್ಡೆ ಕಡೆಗೋಡಕ್ಕಿ ಬಡಗ್ಗೆ ನಡದು (ಸ್ಮಇಂ. ೦೯೦೯. ೧೨-೦೯; 810). ಪೆರ್ಬುತ್ತು : ಕವ್ವೆಸುರಿಗೊಳಂ ತತಃ ಪೆರ್ಬ್ಬುತ್ತು ತತ ಆಲ್ದೊರೆ ತತೋ ಆಲ್ಗೊಳ (ಎಕ. XI, ದಾವಚ. ೩೩-೩೨ ; ೬೦೩) ; ಪೆರ್ಬುತ್ತು ಧಾರುಣೀಧರವಾದುದ್ದೆ (ಚೀಕ್ಕೆಪು. ೬-೩-೨).

[ಪೆರ್ (< ಪಿರಿದು$_1$) + ಪುತ್ತು$_1$]

**ಪೆರ್ವುರ್ಬು** (ನಾ). ಅತಿಶಯವಾದ ದಾನ,—ಕೊಡುಗೆ : ಪೆರ್ವುರ್ಬುಗೆಯ್ ಪರಾ.

[ಪೆರ್ (< ಪಿರಿದು$_1$) + ಪುರ್ಬು$_4$ (ಪ ← ತವಿ. ಪುರವು)]

**ಪೆರ್ವುರ್ಬುಗೆಯ್** (ಕ್ರಿ). ಅತಿಶಯವಾದ ದಾನವನ್ನು ಮಾಡು : ಸೂರ್ಯ್ಯಗ್ರಹಣದನ್ದು ದತ್ತೆಯ್ಯನುಂ ಶಿಂಕಯ್ಯನುಂ ಪೆರ್ವ್ವುರ್ಬ್ಬುಗೆಯ್ದು ತಾಗರತ್ತಿಯ ಮಹಾಜನಕ್ಕೆ ಪೊನ್ನಬ್ಬೆ ಪೊನ್ನ ಕೊಟ್ಟು ಸಾಲೆ ನೀಡೆನ್ದು ಮತ್ತಲಂ ಕೊಣ್ಡು ಕೊಟ್ಟ× (ಎಕ. VII, ಶಿಕಾ. ೬೦-೫ ; 978).

[ಪೆರ್ವುರ್ಬು + ಗೆಯ್$_1$]

**ಪೆರ್ವುಲಿ**, ಪೆರ್ಬುಲಿ, ಹೆಬ್ಬುಲಿ$_1$ (ನಾ). ದೊಡ್ಡ ಗಾತ್ರದ ಹುಲಿ ; ಮಹಾವ್ಯಾಘ್ರ : ಮುಱದುಱದಿಂದ ಪೆರ್ವ್ವುಲಿಯ ವಿಸಾಸೆ ಯೊಳುಯ್ಯಲಾಡುವೊಂದು (ಕೊಃಕಚಾ. ೦೯೩೬, ಹಾಸಗರ್. ೬೯-೩೯ ; ೧). ಪೆರ್ಬುಲಿ : ಆ ಪರ್ವತದ ಗುಹೆಯೊಳೊಂದು ಪೆರ್ಬುಲಿಯಿರ್ದುದು (ವಚ್ಯಾರಾ. ೦೯೬-೬೦) ; ಕುರಂಗಯೂಥದೊಳ್ ಬೆರಸಿದುದೊಂದು ಪೆರ್ಬುಲಿ ಗಳುಂದ್ರತನೂಜತಪಃಪ್ರಭಾವದಿಂ (ಶಂಕಚಾ. ೬-೬೦) ; ಕಲಿತನದಿಂದಂ ಲೋಗರ್ ಪುಲಿಯಂ ಪಿಡಿದೊಡಮಾದೇಂ ಬಿಡೆಂಬರ್ತಾವೊಂದಿಲಿಯುಂ ಪಿಡಿದೊಡಮದು ಪೆರ್ಬುಲಿಯೆಂಬರ್ದುರ್ಜನರ್ಗೆ ತಾನಿದು ಸಹಜು

(ಧರ್ಮಾಮೃ. ೧-೧೭೩). **ಹೆಬ್ಬುಲಿ :** ನಿಲಿಸಬಹುದಯ್ಯ ಒಂದೇ ಮಂತ್ರದಿಂದ ಹೆಬ್ಬುಲಿಯ (ಶತರ. ೪೦-೧೫೮) ; ಮುನಿ ಹೊಯ್ಕೆಂದಡೆ ಹೊಯ್ದು ಹೆಬ್ಬುಲಿಯುಸಾವಂ ತತ್ಸಳಂ ಪೊಬ್ಬಸ್ಸಳಂ (ಎಕ. VI, ಕಡೂರು. ೧೪೩-೩ ; 1275) ; ಹಸಿದ ಹೆಬ್ಬುಲಿ ಮಸಗಿದರೆ ಮೃಗವಿಸರವೇನಹುದರಸ (ಕುಮಾ.ದ್ರೋ. ೧೭-೨೭) ; ಬೆಳೆದ ಹೆಬ್ಬುಲಿಯೊಂದು ಮೇವ ದನಕರುಗಳಂ ಕೊಲ್ಲುತಿರ್ಪುದು (ಕಾ.ಖರ. ೭೯-೧೪೭). [ಪೆರ್ (<ಪಿರಿದು$_1$) + ಪುಲಿ]

**ಪೆರ್ವೆಟ್ಟು** 'ಪೆರ್ಬೆಟ್ಟು' ನೋ.

**ಪೆರ್ವೆಡೆ, ಪೆರ್ಬೆಡೆ, ಹೆಬ್ಬೆಡೆ** (ನಾ). ಹಾವಿನ ಅಗಲವಾದ ಹೆಡೆ.-ದೊಡ್ಡ ಹೆಡೆ : ಬಲಭರದಿಂ ನೆಲಂ ಕುಸಿಯೆ ಶೇಷನ ಪೆರ್ವೆಡೆ ತಗ್ಗೆ ಕಂಠ ಕಂಧರದೊಳಗಿಟ್ಟಡಂಗಿದುದು (ಕೃಷ್ಣಕೃ. ೫-೭೬). **ಪೆರ್ಬೆಡೆ :** ಕಣ್ ತುಮುಬ್ ಪೆರ್ಬೆಡೆಯುಂ ಮಣಿ ಸೂಸೆ ಬೇಸಱಿಂ ತಿಣುಕಿದ ನಾಸಲುಮ್ಮಳಿಸಿ ಶೇಷನಶೇಷ ಮಹೀವಿಭಾಗಮಂ (ಶಂಕರ. ೪-೯೯). **ಹೆಬ್ಬೆಡೆ :** ಅದೆ ಕಾಣ್ ಅದೊ . . . ಪಿರಿನಾಗನ ಹೆಬ್ಬೆಡೆ ಹರಹು (ದ್ರೌಪದಿ. ೨-೨೩).

[ಪೆರ್ (<ಪಿರಿದು$_1$) + ಪೆಡೆ]

**ಪೆರ್ವೆಣ, ಪೆರ್ಬೆಣ** (ನಾ). ದೊಡ್ಡಗಾತ್ರದ ಹೆಣ ; ದಡಿಗವೆಣ : ರಕ್ತವಾರಿ ಬೆದೆಗೂಡಿಸೆ ಸುಲಿದೆ ಪೆರ್ವೆಣಂ ರಣಾವನಿತಲವಿಂದುರ್ದಂಕುರಿತ ಮಾದವೊಲೊಕ್ಕ ಕರುಳ್ವಿಣಲ್ಗಳಿಂ (ಶಂಖವಾ. ೦೩-೪೯); ಮುಂ ತಳರ್ದ ಭಟರನಜಿಯುಟ್ಟುತುಂ ಕುಟ್ಟುತುಂ ಮೆಟ್ಟುತುಂ ಪೆರ್ವೆಣನನು . . . ಭ್ರಾಂತಿಬಡಿಸಿದರು (ಕಂಪು. ೨೪-೦೦) ; ಪಾಸಿ ಪಸರಿಸಿದಂತೆ ಬಿದ್ದ ಪೆರ್ವೆಣಂಗಳಿಂದತಿಭಯಾವಹಮಾದ ಬಟ್ಟೆಯುಂ ನಿಟ್ಟಿಸುತ್ತಿರೆ (ರಾಜಶೇ. ೫-೧೨೦ ವ). **ಪೆರ್ಬೆಣ :** ಜವಸುಣ್ಣುಮ್ಯನೆ ಕಾಱಿದನ್ತೆ ಪೆರ್ಬೆಣದ ಬಳಂಬೆ ಪೆಗ್ಗರುಳ ತಿನ್ತಿಣ ನೆತ್ತರ ಪೆರ್ಬೊಣಲು (ಎಕ. VIII, ಸೊರಬ. ೦೨-೭ ; 1155 ?).

[ಪೆರ್ (<ಪಿರಿದು$_1$) + ಪೆಣ]

**ಪೆರ್ವೆರಲ್, ಹೆಬ್ಬೆರಳು** (ನಾ). ಕೈ ಮತ್ತು ಕಾಲುಗಳಲ್ಲಿರುವ ದಪ್ಪಗಿರುವ ಮೊದಲನೆಯ ಬೆರಳು ; ಹೆಬ್ಬೆಟ್ಟು : ಅತಿವೃದ್ಧನಿಮ್ನಸ್ನಿಗ್ಧಾಯತರೇಖಾಶ್ರಿತಯುಮಾಗೆ ಕರತಳದೊಳ್ ಸನ್ನುತದಿನರೆಗಂಜಿ ಬೆಳ್ವಿಡಿದು ತೋಱಿ ಪೆರ್ವೆರಲೊಳಾತನುತ್ತಮಪುರುಷ: (ರೂಪಗುಣ. ೦೦-೦೩); ಬಲದ ನಾಸಾಪುಟವನೊತ್ತಿ ಪೆರ್ವೆರಲಿಂದೊಡಲ ಮರುತನಂ ರಚಿಸಿದೊಡೆ ರೇಚಕವುದಕ್ಕುಂ (ರಾಜಶ. ೧೨-೭೮). **ಹೆಬ್ಬೆರಳು :** "ಅಂಗುಷ್ಠ:-ಹೆಬ್ಬೆರಳು" (ಸಿದ್ಧಾಂತ. ೧೯೩); ಹಿಂದುಶಿಷ್ಯರೊಳಧಿಕ ನೀನೇ ಗಂಡುಗಲಿ ನಮಗೀಗ ಕೊಡು ಕೊಡು ನಿನ್ನ ಹೆಬ್ಬೆರಳ (ಸಂಕರ. ೧೭-೦೨೪) ; ಏನೆಂಬೆ ನಿನ್ನ ಬಲಗೈಯ ಹೆಬ್ಬೆರಳನೀ ಎನೆ ಕಂದ ? (ಹಸ್ತ್ರ. ೩೧ ೦೨೬).

[ಪೆರ್ (<ಪಿರಿದು$_1$) + ಬೆರಲ್]

**ಪೆರ್ವೆಲೆ, ಪೆರ್ಬೆಲೆ** (ನಾ). ಅಧಿಕ ಬೆಲೆ; ದೊಡ್ಡ ಮೌಲ್ಯ : ಪಾರ್ವರ್ ಪಟಿಸುಡಿವುರುಳಂ ಪೆರ್ವೆಲೆಯಂ ಪರದರ್ . . . ಸಾರ್ವರ್ (ಅಕ್ರೂ. ೫೯-೩). **ಹೆರ್ಬೆಲೆ :** ಹುತ್ತಿನಿಂ ತೆಗೆದು ಚೆಲ್ವುತ್ತಾಭರಣಾಸ ಮಾಡಿತ್ತು ಪೆರ್ಬೆಲೆಗೊಂಡು ಹರನ ಭಕ್ತರ್ಗೆ ಕೊಟ್ಟು (ಶೃಂಗಾ. ೪-೦೦೪).

[ಪೆರ್ (<ಪಿರಿದು$_1$) + ಬೆಲೆ$_1$]

**ಪೆರ್ವೆಸರ್** (ನಾ). ಬಹಳ ಒಳ್ಳೆಯ ಹೆಸರು ; ಅತಿಶಯವಾದ ಖ್ಯಾತಿ : ತಾನಮ್ಮುತಮುಕಿಯೆಂಬ ಪೆರ್ವೆಸರವುದಿರ್ದರೆ ತನ್ನಕಿಪನುಹಿಳೆ ಟರದು ಸೆದಿರ್ದರ್ (ರಾಜಶೇ. ೩-೦೨). [ಪೆರ್ (<ಪಿರಿದು$_1$) + ಪೆಸರ್]

**ಪೆರ್ವೆಳಗು, ಹೆಬ್ಬೆಳಕು** (ನಾ). ದೊಡ್ಡ ಬೆಳಕು: ತನುವನರ್ಪಿವ ಸಮಯವಾಯಿತು . . . ಪೆರ್ವೆಳಗನಿಕ್ಕುವೆನು ಎನುತ ಬಿಟ್ಟದ ಕೂದಲು ದಿಕ್ಕನೆ ಕೃಶಾನುವಿಗೊಡ್ಡಿ (ಬಸವ. ೨೭-೮). **ಹೆಬ್ಬೆಳಕು :** ನಾಡು ಸಿಂಗರವಾಯ್ತು. ಬೀಡು ಹೆಬ್ಬೆಳಕಾಯ್ತು, ಅದೊ ಹಬ್ಬ ಮೆರೆತ ! (ಹೊಂಗಳು. ೦೪-೦೭).

[ಪೆರ್ (<ಪಿರಿದು$_1$) + ಬೆಳಗು$_2$]

**ಪೆರ್ವೆಳಸು, ಪೆರ್ಬೆಳಸು, ಹೆಬ್ಬೆಳಸು, ಹೆಬ್ಬೆಳಸು** (ನಾ). ೧. ಬಹಳ ಹುಲುಸಾದ ಬೆಳೆ; ಸರ್ವೋತ್ಕೃಷ್ಟವಾದ ಫಸಲು: ಮೇದಿನಿ ಪೆರ್ವೆಳಸಿಂ ಟಗ್ಗದಮೆ ಬರೆ ತಾಮು ತಮ್ಮ ಪರಿಣತಕಣಿಶಾವೋದದೊಳೆ ಸೊರ್ಕೆ ತಲೆಕಟಿಗಾದಂತಿರ್ಪುವು ಸುಗಂಧಶಾಲಿವನಂಗಳ್ (ಅಜಿತ. ೨-೦೦) ; ಕೊಲೆಯ ತಪಮರ್ಣೆ ದುರಿತದ ಪೆರ್ವೆಳಸು ಕಳವು ಬಗೆವೊಡೆ ಜಗದೊಳ್ (ಧರ್ಮಾಮೃ. ೦೨-೨೩೩ ಅ೨೮). **ಪೆರ್ಬೆಳಸು :** ೧. ಕಳವೆಯುಪೆಲೆಯುಡಕೆ ತೆಂಗು ಮಾಉಫಲು . . . ಇವು ಪೆಬ್ಬೆಳಸಡವಿಯ ಬೆಳಸು (ಎಕ. VIII, ಸಾಗರ. ೦೦೪-೧೮ ; 1042) ; ಸಿತೇಕ್ಷುರಸಪ್ರವಾಹಮಾತ್ರ್ಯೆಮೆನೆ ಸಂತತಂ ಬೆಳೆಯೆ ಪೆರ್ಬೆಳಸಿಂ ಪುಸಿಯಾಯ್ತು ದೇವಮಾತೃಕೆಸರೆನ್ನದಾ ನೆಲದ ಕಯ್ವೊಲನಂ ಪೆಜಿತೇನನೆಂಬುದೋ (ಪುಣ್ಯಶ್ರ. ೨-೦೭). **ಹೆಬ್ಬೆಳಸು :** ೧. ತಲೆಪೊಲದೊಳೇ ಐದೆ ಬೀಜದೆ ನೆಲೆ ಸೊಸಲ ಕಣ್ ಚೆಲುವ ಮುಖವ್ಯೆದಲೆವ ಜೆಡೆ ದಶಭುಜವೆನಿಪ ಹೆಬ್ಬೆಳಸಱಿಯುರಟ (ಗಿರಿಜಾ. ೮-೩೩) ; ಒಬ್ಬೊಬ್ಬರಿದಿರಾಗಿ ಮೊನೆಮೊನೆಗಾಣಿಪರುಬ್ಬಿ ಹಾಱುವರು ದಾಱುವರು ಒಬ್ಬುಳಿಗಡೆಯುತ್ತಿ ನಡೆವರು ಜೋಳದ ಹೆಬ್ಬೆಳಸೆದ್ದುದೆಂಬಂತೆ (ಭರತ. ೨೩-೨೭) ; ಬಿತ್ತದೆ ಬೆಳೆಯದೆ ಎತ್ತಣ ಹೆಬ್ಬೆಳಸಿನ ಇತ್ತ ರಾಶಿಯ ನೋಡಯ್ಯ (ಸಿದ್ಧಕೃ. ೨೭-೧೫). ೨. ಆಧಿಕ್ಯ ; ಹೆಚ್ಚಳ : ಉಬ್ಬಟೆಯ ಲಿದಿರಾಂತು ಕಾಲನ ಹೆಬ್ಬೆಳಸು ಹುಲುಸಾಯ್ತು ಬರಹೇಳೆಂಬವ್ರೋಲೊವಱಿ (ಕುಮಾ.ಆದಿ. ೪-೦೨) ; ಹಱಿದ ಕರುಳಿನ ಕಳಚಿದೆಲುವಿನ ಕಣಿಪ ಮುಂಡದ ಕೊಳುಗುಳದ ಹೆಬ್ಬೆಳಸು ಹೆಚ್ಚಿಸಿತಂತಕನ ಪುರವ (ಕುಮಾ.ದ್ರೋ. ೨-೩೭). **ಹೆಬ್ಬೆಳೆಸು :** ೧. ಕಾಲನ ಹರವರಿಯೊ ಹೆಬ್ಬೆಳಸ ಮುತ್ತುವ ವಿಹಗಸಂತತಿಯೊ (ಕುಮಾ.ಆದಿ. ೪-೦೫). [ಪೆರ್ (<ಪಿರಿದು$_1$) + ಬೆಳಸು$_2$]

**ಪೆರ್ವೇಂಟೆ** (ನಾ). ಬೇಟೆಯಲ್ಲಿ ಒಂದು ಬಗೆ ; ದೊಡ್ಡ ಪ್ರಾಣಿಗಳ ಬೇಟೆ (?) : ಬಲ್ಮೆಗು ಬಸನಕ್ಕಂ ಸವಿಯುಪ್ಪ ಕಿಱುವೇಂಟೆಯುಂ ಪೆರ್ವೇಂಟೆಯುಮಲ್ಲದುಱಿದ ಬೇಂಟೆಯುಂ ಬೇಂಟೆಯೆನ್ನಂ (ಶಂಕರ. ೫-೪೭ ವ) ; ಬೇಂಟೆಗಳೊಳ್ ನಾನಾವಿಧ ಬೇಂಟೆಗಳೆನಿತೊಳವವುಳ್ಳೊಡಂ ನೃಪತಿಗೆ ಪೆರ್ವೇಂಟೆ ಕಿಱುವೇಂಟೆಯಾ ಪರವೇಂಟೆಯೆನಲ್ ಮೂಱುವೇಂಟೆ ಪೆಸರ್ವಡೆದಿರ್ಕುಂ (ಸೂಕ್ತಿಸು. ೩-೪೫). 'ಕಿಱುವೇಂಟೆ' ಪರಾ.

[ಪೆರ್ (<ಪಿರಿದು$_1$) + ಬೇಂಟೆ]

**ಪೆರ್ವೇಲ್** (ನಾ). ಅಧಿಕವಾದ ಮಲ,-ಅಮೇಧ್ಯ : ಒಡಲುಪ್ಪೊಡಶುಚಿ ನಿಲ್ಲದು ಪಡಿಕೆ ಕರಂ ಜಂತಿನಾಗರಂ ಪೆರ್ವೇಲಿರ್ಪೆಡೆ ಕ್ರಿಮಿಯ ರಾಶಿ (ಧರ್ಮಾಮೃ. ೬-೦೩೯). [ಪೆರ್ (<ಪಿರಿದು$_1$) + ಪೇಲ್$_2$]

**ಪೆರ್ವೈತ್ರಿಕ** (ನಾ). ಅಧಿಕವಾದ ಮನೋವೈಕಲ್ಯ : ನಿನ್ನೀ ಮರುಳ್ಗೆಯ್ದುದರ್ಪಿನಮುಕ್ಕಂ ಬಗೆದಾ ವಿಮೋಹವಶದಿಂ ಪೆರ್ವೈತ್ರಿ [ಪಾಠಾಂ. ಪೆರ್ಬಯ್ತ್ರಿ] ಕಂಗೊಂಡೆಯಿಂ ಜಿನವಾಕ್ಯಾಮೃತಸೇವೆಯಿಂ ಕಿಡಿಸದಂ ದೆಯ್ವಟ್ಟಿರಲ್ ದೇವನೇ (ಜಗನ್ನಾ. ೭೭೨-೦೭).

[ಪೆರ್ (< ಪಿರಿದು$_1$) + ಪೈತ್ರಿಕ]

**ಪೆರ್ವೊಗರ್** (ನಾ). ಅಧಿಕವಾದ ಕಾಂತಿ ; ಉಜ್ಜ್ವಲವಾದ ಪ್ರಕಾಶ : ಬೆಳ್ಳಿ ಸಾರಿದಳ್ ಪೆರ್ವೊಗರ ಕಡಲೊಡಲ ಪೊರ್ದ (ಕಾಂಚನ. ೦೭೪-೪೩).

[ಪೆರ್ (< ಪಿರಿದು$_1$) + ಪೊಗರ್]

**ಪೆರ್ವೊಡೆಯ, ಪೆರ್ಬೊಡೆಯ** (ನಾ). ದೊಡ್ಡ ಹೊಟ್ಟೆಯುಳ್ಳವನು; ಲಂಬೋದರ ; ಗಣಪತಿ : "ಪೆರ್ವೊಡೆಯ-ದೊಡ್ಡಹೊಟ್ಟೆಯುವ, ಗಣೇಶ" (ಗಂಗಾಧ. ೨೦೫). **ಪೆರ್ಬೊಡೆಯ :** "ಎಲರುಣಿಮಸಿಱಿನೆಡಗೆರ್ೇಡಿ ಪೆರ್ಬೊಡೆಯ ಸುಂಡಿಲಿಮೊಗಂ . . . ಬಿಸುಗಣ್ಣಣಾಗನು" (ಕಾ.ಕು. ೫).

[ಪೆರ್ (< ಪಿರಿದು$_1$) + ಪೊಡ್ಡು + -- ಅ$_7$]

**ಪೆರ್ವೊಣಸೆಟ್ಟಿ** (ನಾ). ಒಬ್ಬಾತನ ಹೆಸರು : ಶ್ರೀಮತ್ ನಾಗತರನ ಮನೆವಗತಿ ಪೆರ್ವ್ವಣಸೆಟ್ಟಿ ಬೆಙ್ಗಳೂರ ಕಾಳೆಗದೊಳ್ ನಾಗತರನ

ಮಗಮ್ ಬುಟ್ಟಣಪತಿ ಸತ್ತರ್ವತ್ (ಎಕ. IX (s), ಬೆಂಗಳೂ. ೧೪೩-೩ ; ಸು. ೫೫೦). [ಪೆರ್ವೊಣ೨ + ಸೆಟ್ಟಿ]

**ಪೆರ್ವೊದರು** ‘ಪೆರ್ವೊದಱ್’ ನೋ.

**ಪೆರ್ವೊದಱ್,** ಪೆರ್ವೊದರು (ನಾ). ಒತ್ತಾಗಿ ಬೆಳೆದ ಪೊದೆ ; ದಟ್ಟವಾದ ಹೊದರು : ಒಣಗಿದುದೊಂದು ಪೆರ್ವಿದಿರ ಪೆರ್ವೊದಱಂ ಪೊಕ್ಕುಮುರ್ವಿಪಾಶುಶುಕ್ಷಣಿಯವೊಲ್ . . . ಅಭಿಮನ್ಯುವ ಕೂರ್ಗಣೆ ಪಾಱುದು ಮಂಗಲುಂ ನೊಣೆಯಲುಮುರ್ಚಿ ಪುಕ್ಕಲುಮಿದೇಂ ನೆಟ್ ಕಲ್ತುವೊ ಯುದ್ಧರಂಗದೊಳ್ (ಪಂಪಭಾ. ೧೦-೯೭) ; ತಾ ಪಿಂಥವ ಪೆರ್ವೊದಱ ಕರಿ ಶಂಕೆಯಿಂ ಪಾಯ್ದುದಱೊಳ್ ಹರಿವಿತತಿ ಬಂಜೆವಡಿವುದು ಮುಳಿಸಂ (ಶಂಪ್ರಶು. ೫-೫೦). **ಪೆರ್ವೊದರು :** ಓಟೆ ಮುಳ್ಳಿಡಿಗಳಂ ಪೆರ್ವೊದರುಗಳನುಳಿದ ಬೇಟೆಯಾಟದಿ ಹುಲಿಯು ನೆಲೆಗೆಟ್ಟುದಿಲ್ಲಂ (ಕಾಬೂರ. ೫೦-೭೫೦). [ಪೆರ್ (< ಪಿರಿದು೧) + ಪೊದಱ್]

**ಪೆರ್ವೊನಲ್,** ಪೆರ್ಬೊನಲ್, ಪೆರ್ಬೊನಲು (ನಾ). ತುಂಬಿದ ನೀರು ಇರುವ ನದಿ ; ದೊಡ್ಡ ನದಿ ; ಮಹಾನದಿ : ಭುವನಾಂತರವಂ ಸಿಂಚಿಸುವವೊಲಾಶಾವನಿತೆಯರುಮನೋಲಾಡಿಸುವಂತೆವೊಲೆಸೆದರಂಗನೆಯ ರಣ್ಮುವ ನಿಜರಾವಣ್ಯರಸದ ಪೆರ್ವೊನಲಿಂದು (ಕಾವಂಪು. ೯೯೯); ಸಂನ್ಯಸನ ಮಂ ಕೈಕೊಂಡ ಮಹಾಪುರುಷನ ಕರ್ಮಂ . . . ಪೆರ್ವೊನಲಿಂಗಿದಿರಾದ ಮಳಲೇರಿಯಂತೆ ಜರಿಗುಂ (ಧರ್ಮಾಮೃ. ೧೪-೧೦೩); ಮಂದಾಕಿನಿಯ ಪೆರ್ವೊನಲ್ ಗಿರಿಗೆ ಮೇಖಲೆಯಾಗಿ ಕಂದರದ ಸೀಮೆಯಂ ಸಿಂಗರಿಸಿದತ್ತು (ಶ್ರೀಕಾಪು. ೦೯೦-೯೩). **ಪೆರ್ಬೊನಲ್ :** ಕಾಂತಾಜನೋತ್ತರರತ್ನಾ ಭರಣಪ್ರಭಾಪ್ರಸರವಾದಂ ಕಳ್ತು ತದ್ವೀಧಿಕಾಂತರದೊಳ್ ಪೆರ್ಬೊನಲಂದದಿಂ ಪರಿಯೆ (ಕಾವಂಪು. ೦೦೦೦) ; ಕಪಾಲದೋಳಿ ಬಾಟ್ನಿಣಬೆಡ ಖಂಡದಿಂಡೆ ಬಿಸುನೆತ್ತರ ಪೆರ್ಬೊನಲರ್ಬಿಸಲ್ಕೆ ಮಾರ್ಗಣಗಣಘಾತದಿಂ ತವಿಸಿದಂ ದಿವಿಜಾರಿ ವಿರೋಧಿಸೈನ್ಯಮಂ (ಜಗ. ೬-೯೪). **ಪೆರ್ಬೊನಲು :** ಪೆರ್ಗ್ಗರುಳ ತಿನ್ನಿಣಿ ನೆತ್ತರ ಪೆರ್ಬೊನಲು × × × ಳಿಪಿದನ್ (ಎಕ. VIII, ಸೊರಬ. ೦೩-೬ ; 1155 ?). [ಪೆರ್ (<ಪಿರಿದು೧) + ಪೊನಲ್]

**ಪೆರ್ವೊಳೆ,** ಪೆರ್ಬೊಳೆ (ನಾ). = ಪೆರ್ಬೊನಲ್ : ಘುಳುಘುಳಿಸಿ ನೊರೆವಿಂಡು ಪಸರಿಸೆಯುಮಾ ಪೆರ್ವೊಳೆ ಪರಿಯುಡುಗದ ಸಿರಿಯನೊಳಕೊಂಡು ಭೂಮಂಡಳಕ್ಕೆ ಮಂಡನಮೆನಿಸಿ ರಂಜಿಸಿರ್ಪುದು (ಕಾಹಕಿ. ೬-೨೪ ಪ). **ಪೆರ್ಬೊಳೆ :** ಕಳಿತ ರಸಾಲ ನೇಱಲವಣ್ಣಳ ಪಿಕ ಗಿಳಿ ಚಂಚುಪುಟದಿ ಕರ್ದುಕಿ ತುಳುಕಿದ ಮಧುರಸ ದಡಸೂಸೆ ಪರಿವ ಪೆರ್ಬೊಳೆಯೆಸೆದುದನೀಕ್ಷಿಸಿದ (ಬೋಹಕ. ೫-೩೩) ; ಕ್ರೋಢಿಯ ಬಿತ್ತರು ಬಡೆದು ಬತ್ತಿತ್ತೆಂಬವೋಲಿರ್ದ ಪೆರ್ಬೊಳೆ (ಕಾಕುಂಕ. ೧೦೦-೦೭೦).

[ಪೆರ್ (<ಪಿರಿದು೧) + ಪೊಳೆ೩ (<ಪೊಲ್)]

**ಪೆರ್ವೊಱೆ** (ನಾ). ಅಧಿಕವಾದ ಭಾರ, —ಹೊರೆ, —ಹೇರು : ಇನಿವಿರಿದನ್ವಯಕ್ಷಯಾದಪವಾದದ ಪೆರ್ವೊಱೆಯಂ ಅನೋರ್ವಳೆನಗಂ ಪೊತ್ತು ನಿತ್ತರಿಸಲಾರ್ಪುದೆ (ಶಾಂತಿಪು. ೯-೭೯ ಪ) ; ಅರ್ಥಮಂ ಸಾಗಿಸಿದನಿಭಪುಂಗೆ ಪೆರ್ವೊಱೆಗಳಟ್ಟಣಿಸಲು (ಕೈಪಿಚಾ. ೫-೭೩).

[ಪೆರ್ (<ಪಿರಿದು೧) + ಪೊಱೆ]

**ಪೆರ್ವೊಟಲ್,** ಪೆರ್ಬ್ಬೊಟಲ್, ಪೆರ್ಬೊಳಲು, ಹೆರ್ಬ್ಬೊಳಲ್ (ನಾ). ೧. ಒಂದು ಊರಿನ ಹೆಸರು : ಪೆರ್ವೊಟಲ ಉಮ್ಮಾದಗಾಮುಣ್ಡರುಂ ಪಿಟ್ಟುವಿಗಾಮುಣ್ಡರುಂ . . . ಸಾಕ್ಷಿ (ಎಕ. IV, ಎಡತೊ. ೬೦-೬೧ ; ಸು. 890). **ಪೆರ್ಬ್ಬೊಟಲ್:** ೧. ಮುದುಕೊಟ್ಟೂರ ವಿಷಯೋ ಪೆರ್ಬ್ಬೊಟಲ್ ಗ್ರಾಮೋ (ಎಕ. X, ಕೋಲಾರ. ೭೩-೦೮ ; ಸು. 870 ಕೃತ). **ಪೆರ್ಬೊಳಲು :** ೨. ದೊಡ್ಡ ನಗರ, —ಊರು : ಪುಲಿಯೂರೆನಿಪ್ಪ ಪೆರ್ಬೊಳಲಿನಲ್ಲಿ ಊರನ ಮೆಚ್ಚಿಸಿ ಹೊನ್ನ ಮಳೆಯನೇಳುಂ ದಿವಸ ಕರೆಸಿದಳು . . . ನಿಂಬಿ (ಶಾಂಪುಪು. ೦೦-೨೪). **ಹೆರ್ಬ್ಬೊಳಲ್ :** ೧. ಶ್ರೀಮತು ಹೆರ್ಬ್ಬೊಳಲ ಕೊಂಗಣೇಶ್ವರದೇವರಿಗೆ (ಎಕ. IV, ಕೃಷ್ಣರಾ. ೪೦-೦ ; 950 ?).

[ಪೆರ್ (<ಪಿರಿದು೧) + ಪೊಲಲ್]

**ಪೆರ್ಸಂಪಗೆ** (ನಾ). ದೊಡ್ಡ ಜಾತಿಯ ಸಂಪಿಗೆಹೂವುಗಳನ್ನು ಬಿಡುವ ಒಂದು ಬಗೆಯ ಮರ : ಗಂಪ ಪಟ್ಟದ ಜಾಱರಿಗೆ ಇಂಪಾದ ಸೌಗಂಧ ರುಚಿದೋಱಿದಾತೆ ಪೆರ್ಸಂಪಗೆ ಮರಗಳೊಪ್ಪಿದುವು (ಬೋಹಕ. ೨೪-೯೯).

[ಪೆರ್ (<ಪಿರಿದು೧) + ಸಂಪಗೆ]

**ಪೆಲ್ಲಣೆ,** ಪೆಲ್ಲವಣೆ, ಹೆಲ್ಲಣೆ೧, ಹೆಲ್ಲಣೆ೨, ಹೆಲ್ಲವಣೆ (ನಾ). ೧. ಕತ್ತಿ ಕಾಳಗದಲ್ಲಿ ಒಂದು ವರಸೆ ; ಖಡ್ಗಯುದ್ಧದಲ್ಲಿ ಒಂದು ಪಟ್ಟು : ರಕ್ಕಸಿ[ಸಿ]ಂದುವ × × × ಗಡ್ಡದೊಳೊಡ್ಡಿ ಗಡಂ[ಗಿ ಚಂಮಟ]ಹೊಕ್ಕತಿ ವೇಗದಿಂ ಕಡಂಗ[ದಿಂ]ಗಿ ಪೊರಗ ಕಾಳೆವಟ್ಟದಿಂದಿಕ್ಕಿದ ಭೂರಣಂ ನೆಗಳ್ದ ಪೆಲ್ಲಣೆ ಸುರ×[ಣ]ಚಾರಣಗಳಿಂ ಮಿಕ್ಕಿರೆಸಪ ವೀರವಳಕಾಬ × × ಕಲಿಗೊಗ್ಗಭೂಭುಜಂ (ಕಾಇಶಿ. XV. ೫೪-೫೨ ; 1184). ೨. [ಸಂಗೀತ] ಕೊಳಲನ್ನು ನುಡಿಸುವುದರಲ್ಲಿ ಒಂದು ಕ್ರಮ : ಭಣಿತೆ ಬೆಡಂಗು ಕಾಕು . . . ಬಹುಲಾಯಿ ದೇಸೆ ಪೆಲ್ಲಣೆ ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮಂ (ಜಗ. ೫-೩). **ಪೆಲ್ಲವಣೆ :** ೨. ವಾಸಮಂ ಪಿಡಿದು ಕಳೆಯ ಮಯಣಮುನಸುಪಿಂ ಪವಣಾಗಿರೆ ಪತ್ತಿಸಿ ಪೊ[ಪೆ]ಲ್ಲವಣೆ ಕರಂ ಶುದ್ಧಮಾಗೆ ಪೂಱಿಸಿ (ಧರ್ಮಾಮೃ. ೨ ೦೯). **ಹೆಲ್ಲಣೆ೧ :** ೨. ಕಿನ್ನರಂ ತನ್ನಯ ಸೊಳಹೆಯೆಂಬ ವಾಸಮಂ ಕೊಂಡು ಹೆಲ್ಲಣೆಯಂ ಸುದ್ಧಮಾಗಿ ಪೂಂಕಿಸಿ . . . ಮಧ್ಯಮಾದಿಯೆಂಬಾದಿರಾಗಮಂ ರೂಹುಗೋಳಿಪುದುಂ (ಶಾಂತೀಶ. ೦೬-೬೭). **ಹೆಲ್ಲಣೆ೨ :** ೧. ಖಡ್ಗಂಗಳಂ ಜಡಿದು ಮೆಱೆವಾರ್ಪ ಸ್ವಪಕ್ಷ ಪೆರಪಕ್ಷ ಹೆಲ್ಲಣೆ ನಿರ್ವಾದ ಮಂದಗತಿ ಚಾರಣ . . . ತಾಳದಟ್ಟವೆಂಬ ನಾನಾವಿಧಖಡ್ಗಬಿನ್ನಾಣಮಂ ತೋಱಿ (ಕೃಷ್ಣ. ೨೩-೦೬ ಪ). ೨. ರಾಗಸಾಗರನೆಂಬ ವಾಸುಕೀರಂ ಭಾಸುರತೆವಡೆದ ಬಾರಹೆಯೆಂಬ ವಾಸಮುಂ ಕಳೆದುಕೊಂಡು ಪೊಳೆವದಱ ರಸಂಗಳಿಂ ಪುಟ್ಟುವ ನಾದಲಕ್ಷ್ಮಿಯ ಮಾರ್ಗವೇದಿಕೆಯೆನಿಸಿ ಕಣ್ಗೊಳಿಸಿ ಕಳೆಯ ಮಯಣವಮಂ ನುಣ್ಣಾಗಿ ತಿರ್ದಿ ಪೂಂಕಿಸಿ ಹೊ[ಹೆ]ಲ್ಲಣೆಯ ಶುದ್ಧಮಾಗಿ ಮುಹಚಾಳೆಯವಮವಾಡಿ (ಶಾಂತೀಶ. ೬-೯೩ ಪ) ; ಹದಿನೆಂಟುತೆಱದ ವಾಸಂಗಳ ಲಕ್ಷಣವನಱದಾ . . . ಹೇಳಿಕೆ ಹೆಲ್ಲಣೆ ವ್ಯಾಪ್ತಿ ಮೊದಲಾದ ಇಪ್ಪತ್ತನಾಲ್ಕು ತೆಱದಲ್ಲಿ . . . ಆಲಾಪಿಸಿ ಕೇಳಿಸುವ ಭಾಸುರತರವಾರವಿಲಾಸಿನಿಯರಿಂದ (ಎಪೀಕ. ೮೧೦). **ಹೆಲ್ಲವಣೆ :** ೨. ಅಧರದೊಳ್ತಂದಿರಿಸಿದಂ ಕೊಳಲನೊಪ್ಪದಿಂ ಮಧುರಾಕ್ಷರಂಗಳಂ ಸವಿವ ಸಮಾನಗದಿ ಹೆಲ್ಲವಣೆ ಹಕ್ಕಳಂಗೊಂಡು ವನದೊಳು ತೀವೆ ಎಲ್ಲಾ ಮೃಗಂ ಮೋಹನಂಳಿದು ಕಿವಿಗಳನೋವೆ (ಅಪಾಕ. ೭೮. ೦೫೦-೦೯).

[ ? ]

**ಪೆಲ್ಲಯಿಸು,** ಪೆಲ್ಲಿಸು (ಕ್ರಿ). ೧. ಒಟ್ಟುಗೂಡು ; ತುಂಬು ; ಮಡುಗಟ್ಟು : ನವಸುಧಾಜಳಪ್ರವಾಹಂ ಪ್ರಸರಿಸಿ ಪರಿದು ಮಂದರೋದಾರ ಕಂದರದರಿಪ್ರದೇಶಂಗಳೊಳೆಲ್ಲಮಲ್ಲಿಗಲ್ಲಿಗೆಲ್ಲಿಯಾನುಂ ಪೆಲ್ಲಯಿಸಿ ನಿಂದುಂ . . . ಎಲ್ಲಿಯಾನುಂ ಕಾಟ್ಟುರಮಾಗುಬ್ಬರಿಸಿಯುಂ ಪೋಗಿ ಮೆಲ್ಲಮೆಲ್ಲನೆ ಭದ್ರಶಾಲವನವನೆಯ್ದಿದಾಗಳ್ (ಪರ್ಶಪು. ೦೩_೨೪ ಪ). **ಪೆಲ್ಲಿಸು :** ೨. ಒಟ್ಟುಗೂಡಿಸು ; ಸೇರಿಸು : ಪೊದೆಯಿಸಿದಡ್ಡಣಂಬೊಲಿರೆ ಸುತ್ತಿದ ಸತ್ತಿಗೆ ಡಿಂಡಿಮಸ್ವನಂ ಕಿದಱ . . . ಕರ್ಪೂರ ಕುಂದದ ಕಡೆಗಣ್ಣ ಗೇಣ್ ಪೊಳೆಯ ಪೆಲ್ಲಿಸಿ[ಪಾಠಾಂ. ಪಿಲ್ಲಿಸಿ, ಪೆಲ್ಲಿಸಿ]ಕಟ್ಟಿ ಕಳಕ್ಕೆ ಪರ್ವ ದರ್ಪದ ಕುಸುಮಾಸ್ತ್ರನಂಕಮೆನೆ ಖೇಚರಿ ಬಂದಳದೆಂದು ದೇಸೆಯಿಂ (ಅಪಾಸೀ. ೩-೦೯); ಅಲ್ಲಿಗೆ ಮುನ್ನೆ ಬಂದಡಪಸಿ ನಿಂದ ಗುಹಾಮುಖನೆಂಬ ರಕ್ಕಸಂ ಪೆ[ಪಾಠಾಂ. ಪಿ]ಲ್ಲಿಸಿ ಕಂಡಕಂಡರನೆ ನುಂಗುತುಮಿರ್ದೊಡೆ ಬಾರಿ ಗಟ್ಟಿಮೆಂದೆಲ್ಲರುಮಿರ್ದು ಮಾಡಿದೊಡೆ ಮಾಡಿದ ಬಾರಿಯ ಸೂಟ್

ನಿಯೋಗದಿಂದಲ್ಲಿಯುವಂತೆ ಬಂದು ಬಟೀಶಾ ಮನೆಯಲ್ಲಿಗೆ ಬಂದುದೆಂಬುದಂ (ಶೀವಸಂ. ೩೮-೨೩). [ಪೆಲ್ಲ₀ (ಪ<ಪ್ರಾ. ಪೇಲ್ಲ./ಸಂ. ಪೂರಯ)+—ಇಸ್ಸು₁]

**ಪೆಲ್ಲವಣೆ** 'ಪೆಲ್ಲಣೆ' ನೋ.

**Δಪೆಲ್ಲಾಪೆಲ್ಲಿ** 'ಹೆಲ್ಲಾಹೆಲ್ಲಿ' ನೋ.

**ಪೆಲ್ಲಿಸು** 'ಪೆಲ್ಲಯಿಸು' ನೋ.

**ಪೆವಡಿ** 'ಪೀವಡಿ' ನೋ.

**ಪೆವ್ವಳಿಸು** 'ಪೆಳ್ವಳಿಸು' ನೋ.

**ಪೆಸದೊರ** ? (ನಾ). ಒಬ್ಬಾತನ ಹೆಸರು (?) : ಪ್ರಿ(ಪೃ)ಥಿವೀರಾಜ್ಯಂಗೆಯೆ ಪೆಸದೊರಾ ಮಗನ್ ರೇವಡಿಬದ್ದರ್ (ಇಅ. VIII. ೨೬೬-೨ : 732).

[ ? ]

**ಪೆಸರ್**, ಪೆಸರ್ು₁, ಪೇರ್₂, ಪೇರ್ು₃, ಹೆಸರ್ು₁ (ನಾ). ೧. ನಾಮಧೇಯ ; ನಾಮಾಂಕಿತ ; ಅಭಿಧಾನ : ವನರುಹದಂತೆ ಮುಖಂ ಲೋಚನಮೆಸೆವುತ್ಪಳದವೋಲ್ ತಳಂ ತಳಿರಂತೆಂದನುರೂಪವಾಗಿ ಪೇಟ್ವೊಡದೆನಸುಂ ಪಸ್ತೂಪವಾನಮೆಂಬುದು ಪೆಸರಿಂ (ಕಲಾ. ೩-೬೦); ಆ ಕೂಸಿಂಗೆ ಭದ್ರಬಾಹುವೆಂಬ ಪೆಸರನೆಲ್ಲರುಂ ನೆರೆದಿಟ್ಟೊಡೆ (ವಡ್ಡಾರಾ. ೬೩-೦೧); ಪೆಸರಿಲ್ಲದಾರ್ಯರೆಂಬೀ ಪೆಸರೊಳೆ ಮುನ್ನಡೆಯೆ ನಡೆಯದೀ ವ್ಯವಹಾರಂ ಪೆಸರಿಲ್ಲದೊಡೆಂದಾ ಮನು ಪೆಸರಿಟ್ಟು ಯಶಸ್ವಿಯೆಂಬ ಪೆಸರಂ ಪಡೆದು (ಆಂಕ್ರಿ. ೬-೬೦): ಕರ್ಣಾಟಕವ್ಯಾಕರಣಮಂ ಶಬ್ದಮಣಿದರ್ಪಣಮೆಂಬ ಪೆಸರನಿಟ್ಟು ಲಕ್ಷಣಾಚಾರ್ಯರ್ ಪೇಟಿಂದು ಬೆಸಸೆ ಮನಂಬುಗುವಂತೆ ಪೇಟ್ದಂ (ಶಮದ. ಶೀಂಕ ೩ ವೃತ್ತಿ). ೨. ಪ್ರಸಿದ್ಧಿ ; ಖ್ಯಾತಿ ; ಹೆಸರುವಾಸಿ : ಗುಣಧರ್ಮ್ಮವೆಯಿಂ ವರ ಕಾಶ್ಯಪಾನ್ವಯಂ ತಳೆದುದು ಪೆರ್ಮ್ಮೆಯಿಂ ಪೆಸರನುನತಿಯಿಂ ಯಶಮುಂ ಪ್ರಭುತ್ವಮಂ (ಕಇ. IX — i. ೨೬೬-೫೫ ; 1160) ; ಪೆಸರ ನರೇಂದ್ರನಂದನರ ಚಾಮರವಾಯು ಕಟಲ್ಗೆ . . . ನಿಶ್ವಸಿತದ ಗಾಳಿ ಚಾಳಿಸೆ ತೆರಳ್ಗಡಿಗಳ್ಗೆತು ಧೂಳಿಜಾಳಮುಂ (ಕ್ರಕೃತಿ. ೪-೩೬). 'ಪೆಸರ್ವಡೆ' ಪರಾ. ೩. ಬಿರುದು ; ಪ್ರಶಸ್ತಿ : ವಿಕ್ರಮಾರ್ಜುನನುಮರಾತಿಕಾಳಾನಳನುಂ . . . ಪಡೆವೆಚ್ಚೆಗಂಡನುಂ ಪರಸೈನ್ಯಭೈರವನುಮೆಂಬ ಪೆಸರ್ಗಳನನ್ವರ್ಥಂ ಮಾಡಿ (ಕಂಶಾ. ೦೦-೦೨೪ ವ); ಪಡೆಯೆಡೆಯು ಕಡೆಯ ಬಡವರ್ ಕುಡೆ ಪಡೆವನೊ ಚಕ್ರವರ್ತಿಯೊಳ್ ತೈಲವನೊಳ್ ಪಡೆದಂ ಮಹಿಮೋನ್ನತಿಯಿಂ ಪಡೆದಾ ಕವಿಚಕ್ರವರ್ತಿಪೆಸರಂ ರನ್ನಂ (ಗದಾಯು. ೦-೩೬); ಸಂಗರದೊಳ್ ಭೀಕರಮೆನಿಪ್ಪ ಮದ್ದುಜಬಲದಿಂದರಿಮರ್ದನನಂ ತವೆ ಕೊಂದರಿಮರ್ದನನೆಂಬ ಪೆಸರನಾಂ ತಳೆದಪ್ಪೆಂ (ಶಂಶಕಂ. ೨೦೩-೦೫). ೪. (ಅಲಂ) ದೂಷಣೆ ; ಅಪವಾದ ; ನಿಂದೆ : 'ಪೆಸರ್ವು' ಪರಾ. **ಪೆಸರ್ು₁** : ೧. ನಂಬಿ ನಂಬೀ ಕಂದ ಮೊಸಳೆ ನುಂಗಿತೆ ಮಗನೆ ನಂಬಿಯಣ್ಣನ ಪೆಸರು ಫಲಿಸದಿಂತೆಲೆ ಮಗನೆ (ಶಂಶರ. ೦೭-೦೫೬) ; ಧರಣಿಯೊಳು ಮೇಣ್ ತಮ್ಮ ತಮ್ಮ ಪೆಸರುಗಳೊಳು ಹರನಾಮವಂ ಸಲೆ ಧರಿಸಿ ಭಜಿಸುವವಖಿಳ ಗಿರಿತರುಖಗಮೃಗಾದಿಗಳು (ಶಸಕ್ರಿ. ೦೯-೬೨) ; ಮಡಿಪೆಸರು ಮರುಗಂಗದೊಳು ಪಳಿಪೆಸರೊಂದು ವಸನದೊಳು . . . ಅಲ್ಲದೆ ನೋಳ್ಪೊಡಿಲ್ಲಾ ಮೆಚ್ಚಿಪ ನಾಡೊಳಗೆ (ಸಾಶ್ಳಶಾ. ೦-೬೦). ೨. ನೆಲಪಡಿದು ಕಲಿಕೆತೊಡನೆ ನಾಡೆ ಬಂದಿತು! ನೋಡೆ ಚೆಲುವಲ್ತೆ ಪೆಸರ ಪುಲಿ ನನ್ನಿಯುಳಿವರಿದು (ಶಾಂಅರ ೦೨೨-೨೦೬). 'ಪೆಸರುಪೆಜು' ಪರಾ. **ಪೇರ್₂** : 'ಪೇರ್ಗೊಳ್' ಪರಾ. **ಪೇರ್ು₃** : ೧. ಮಾರನ ತೇರುಪೆಸರನಿಟ್ಟು ಜಾಣರದಾರೆ ಧರೆಯೋಳ್ ತರುವಿಗೆ ದೂರದಿಂ ನೋಡೆ ತೇರಂತೆ ಸೂಚಿಸುತಿದೆ ಪೇರು ಸಲುವುದು ಕಿಂಶುಕಗೆ (ಕೃಕಗೋ. ೪-೦೪). **ಹೆಸರ್ು₁** : ೧. ಅಯ್ಯ ಅಚಿವನಜಾತ್ರ ಅಜಾವ ತಿಳಿವು ಮಣಿಹ ಮಣಿದು ಮಣಿಹನಳಿದು ಕುರುಹಿಡು ಹೋಳ ಹೆಸರಿಲ್ಲದೆ ಗುರುಲಿಂಗಜಂಗಮ ತ್ರಿವಿಧ ಒಂದಾದ ಎಡೆಯ ತೋಜೆಸಾ ಬದ.ಕಿಸಾ (ಅರಡ. ೧೪-೦೩೬) ; ನೀನೆತ್ತಲನಿವಿಷ್ಟವಿಯೆಡೆಗೆ ಬರವೆತ್ತ ನೀನಾರು ಮನೆಯೆಲ್ಲಿ ಹೆಸರಾವುದು (ಸಿದ್ಧರಾ. ೨-೨೬); ಹರಿಹರಬ್ರಹ್ಮಾಮರೇಂದ್ರಾದ್ಯರ ಹೆಸರ ದಿವ್ಯಾಸ್ತ್ರಮಂತ್ರವನೊರೆದನಾಚಮನೀಯ ಸಾಂಗೋಪಾಂಗವುದ್ರೆಯಲಿ (ಕೂರಅ. ೦-೯-೯೩) ; ಹೆಸರು ಕ್ಷೀರಸಾಗರ ಭಟ್ಟ ಮಜ್ಜಿಗೆನೀರಿಗೇ ತತ್ವಾರ (ಗಾದೆ). ೨. ನುಡಿವ ಬೆಡಂಗು ನೋಡುವ ಪರಾಕ್ರಮ ಮಾಡುವ ಸಾಹಸೋಕ್ತಿ ನಡವ ಚರಿತ್ರಮುಂ ಹೆಸರು ರೂಪು ಗುಣಾರ್ನ್ನವನೆಂತು ನೋರ್ಪ್ಪಡಂ ಕಡುಗಲಿಯಪ್ಪ ವಿಕ್ರಮನ ಗಂಡಿನ ದೊಂದು ಪೊಡರ್ಪನೇನ ಬಣ್ಣಿಸಲಳವಲ್ತೆ (ಕಇ. IX-i. ೨೬೬-೨೫ ; 1183); ಹೆಸರ ನಾಯ್ಗಳ ಹಾಸ ಹರಿದುಬ್ಬಸದಲುಳಿಗದವದಿರ ಓಡಿಮೃಗ ಮಸಗಿದವು ಹದವಿಲುಗಳೊಡೆದವು ಹೆದೆಯ ಹರವಿನಲಿ (ಕುಮ್ಯಾಳ. ೦೩-೨೦); ಆ ಪ್ರಯತ್ನಗಳು ತರುವ ಫಲಕ್ಕಿಂತ ರಾಯರಿಗೆ ಬೇಕಾದುದು ಒಳ್ಳೆಯ ಹೆಸರು (ರಾಮುಕ. ೪).

**ಪೆಸರ್ವೆಸರ್** (ದ್ವಿರುಕ್ತಿ) : ಭತಂಗೆಯ್ವಾಗಳ್ ನೀಂ ಪೆಸರ್ವೆಸರೊಳಾ ನಾಲ್ವರುಮನಾದರಂ[ಗೊಂಡಾ] ನಾಲ್ಕುಂ ದೆಸೆಗೆ [ಬೆಸಸಿಂ] ಬೆಳ್ಕಱುವಿನಂ (ಶಂಶಾ. ೬-೨೬) ; ಹರಿಣಿಕೆಯುಂ ಶುಕ ಸಾರಿಕೆಗಳನೋದಿಸಲುಂ ಪೆಸರ್ವೆಸರೊಳೆ ಕರೆದು ಪೇಟ್ವ ಮನೋಹರಾಲಾಪಂಗಳಂ ಕೇಳುತ್ತಂ ಪೋಗೆಪೋಗೆ (ಕಾದಂಪೂ. ೦೦೦೬) ; ತಂದ ಕಪ್ಪಂಗಳಂ ಪೆಸರ್ವೆಸರೊಳೆ ಪೇಟ್ದು ಕುಡೆ (ಶಂದ್ರಪ್ರ. ೯-೪ ವ). **ಪೆಸರಾಗು**, **ಹೆಸರಾಗು**=೧. ಹೆಸರು ಬರು ; ಹೆಸರುಂಟಾಗು : ಅಗುಟ್ದಿರಲಾ ಕುಟೀಯೊಳ್ ತೊಟ್ಟಗೆ ನಿಧಿಗಂಡಂತೆ ವಸುಧೆಗಸದಳವಾಯ್ತು ಮಗ[ನಂ]ದಮೆಂದು [ಲೋಗರ್] ಬಗೆದಿರೆ ವಸುಷೇಣನೆಂಬ ಪೆಸರಾಯ್ತಾಗಳ್ (ಶಂಶಕಾ. ೦೯೬); ಚಂದ್ರಹಾಸನೆಂದಿಳೆಯೋಳ್ ತಂಗೆ ಪೆಸರಾಗಲೆಂದುಚ್ಚರಿಸಿ ನಾಮಕರಣಂಗೈದರು (ಕ್ರೈಬಾಶಾ. ೨೬-೬೦) ; ಚರಿಸುವುದು ರಥವೊಂದು ವಾಗೀಶ್ವರನ ಪುರಿಗೆ . . . ಉರಗರಾಜನ ನಗರಿಗದಿಂ ಧರೆಯೊಳಗೆ ಹೆಸರಾದುದಾ ಭೂವರಶಿರೋರತ್ನಂಗೆ ದಶರಥನೆಂಬ ಗುಣನಾಮ (ಕೂರಅ. ೦-೩-೨೦). ೨. ಪ್ರಸಿದ್ಧವಾಗು ; ಪ್ರಖ್ಯಾತವಾಗು ; ಹೆಸರುವಾಸಿಯಾಗು : ಹೊಸ ಹರೆಯದಲಿ ದ್ರವ್ಯವ ನೆಚಿ ಕೂಡಿಸು ಹೆಸರಾಗು ವಸ್ತ್ರಭೂಷಣಾದಿ ವ್ಯಸನಕ್ಕೆ ಪ್ರೌಢನೊಳಿಜಗದಿರೆಂದು ರಕ್ಕಸಿಮುಂಡೆ ಮಗಳ ಹಿಂಡಿದಳು (ಮೋಹಕ. ೦೮-೬೩) ; ಡಾಕಾ ಎಂಬ ಪಟ್ಟಣದಲ್ಲಿ ಹುಟ್ಟುವ ಜಿನುಗಾದ, ಮಲಮಲಿಯು ದಿಗ್ದೇಶಕ್ಕೆ ಹೆಸರಾಗಿದೆ (ಮುಂಬಯಿ. ೪-೨೬); ಸೀಕೆಯ ಗೌಡರು ಧಾಂಡ್ಯದ ಗೌಡರು ಊರಿಗೆ ಹೆಸರಾದ ಜನರು (ಶಂಶಾಕ. ೬-೨೦). **ಪೆಸರುಬರ್**, **ಹೆಸರುಬರು**= ೧. ಹೆಸರು ಉಂಟಾಗು ; ಹೆಸರು ರೂಢಿಗೆ ಬರು : ಬಸವನಾಲವಿದೆಂಬುದೇತಕೆ ಪೆ[ಶಾಶಾಂ. ಹೆ]ಸರು ಬಂದಿತ್ತುಸುರಿ ನೀವೆನೆ (ಶಶಕ್ರಿ. ೩೨-೦೯). ೨. ಪ್ರಸಿದ್ಧಿ ಬರು ; ಖ್ಯಾತಿಯುಂಟಾಗು : ಆ ವ್ಯಕ್ತಿಯ ಮಹತ್ಕಾರ್ಯದಿಂದ ಅವರ ವಂಶಕ್ಕೆ ಹೆಸರು ಬಂದಿದೆ (ರೂಢಿ). ೩. ಅಪಖ್ಯಾತಿಯುಂಟಾಗು ; ಅಪವಾದ ಬರು ; ದೂಷಣೆ ಬರು : ಅವರು ನಾಲ್ಕು ಜನರ ಬಾಯಲ್ಲಿ ಹೆಸರು ಬರದಂತೆ ನಡೆದುಕೊಂಡರು (ರೂಢಿ). **ಪೆಸರುಳಿಸು**, **ಹೆಸರುಳಿಸು**=ಹೆಸರನ್ನುಳಿಸು ; ಕೀರ್ತಿಗೆ ಕಳಂಕ ತರದಿರು ; ಹೆಸರು ತರು : ಈರೇಳು ಜಗದೊಳಗೆ ಮೆಚ್ಚೆ ಪೆಸರುಳಿಸಿತಣ್ಣ ಉಳಿಸಿತು (ಪುರಂತ. ೦-೦೬೦-೦); ಹೆಸರುಳಿಸುವ ಮಕ್ಕಳಾಗಬೇಕೆಂದು ಎಲ್ಲರೂ ಬಯಸುತ್ತಾರೆ(ರೂಢಿ). **ಪೆಸರೆತ್ತು**, **ಹೆಸರೆತ್ತು**=ಹೆಸರನ್ನು ಹೇಳು; ಹೆಸರನ್ನು ನೆನಪಿಗೆ ತಂದುಕೊಳ್ಳು : ಹನ್ನೊಂದರೊಳ್ ನೆರವಿಯಂ ಬಳಗ ನೆರೆದು ಚೆನ್ನಿಯಂ ಪೆಸರೆತ್ತಿ ತಣಿಯುಂಡು ಮರೆಯಾಯ್ತು (ಶಾಂಅರ. ೦೬೩-೨೨೦); ಅವರ ಹೆಸರೆತ್ತಿದರೆ ಮೈಯೆಲ್ಲ ಉರಿಯುತ್ತದೆ (ಪುಜಯ. ೩೩೦): ಹನ್ನೊಂದನೆಯ ದಿನ ಬಳಗದವರೆಲ್ಲ ಚೆನ್ನಿಯ ಹೆಸರೆತ್ತಿ, ಉಂಡು ತಣಿದು ಮರೆಯಾಯ್ತು (ಶಾಂಅರ. ೦೯ ಕಸಾಸಾರ). **ಪೆಸರ್ಮಾಡು**, **ಹೆಸರುಮಾಡು**= ೧. ಪ್ರಸಿದ್ಧಿಯನ್ನುಂಟು ಮಾಡು ; ಖ್ಯಾತಿಯನ್ನುಂಟು ಮಾಡು :

ತನಗೆ ಭರತೇಶ್ವರಂ ವಂದನಾರ್ಥದಿಂ ಸಮೆದ ಮಾಲೆ ಭರತನದೋಳದು ವಂದನಮಾಲೆಯೆಂಬ ಪೆಸರಂ ತನಗೆ ಪೆಸರ್ವಾಡೆ ಕೂಡಿ ಸಂದಪುದಿನ್ನುಂ (ಆದಿಪು. ೧೬-೩೯). ೨. ಹೆಸರನ್ನು ಗಳಿಸು; ಖ್ಯಾತಿಯನ್ನು ಪಡೆ: ಊರಿನಲ್ಲಿ ಅವರು ದೊಡ್ಡ ಕೆಲಸಗಳನ್ನು ಮಾಡಿ ಹೆಸರು ಮಾಡಿದ್ದಾರೆ (ರೂಢಿ). **ಹೆಸರಾಗಿ ಕಟ್ಟಿಸು** = ನೆನಪಿಗಾಗಿ ಕಟ್ಟಿಸು; ಸ್ಮರಣಾರ್ಥವಾಗಿ ನಿರ್ಮಿಸು: ನಾಗಸಮುದ್ರವೆಂಬ ಗ್ರಾಮವಂನು ಹೆಸರಾಗಿ ಕಟ್ಟಿಸಿ (ಎಕ. VII. ಶಿಮೊ. ೦೬೮೪೪; ೧೧೧೮). **ಹೆಸರಿಗೆ ಮಾತ್ರ** = ಕೇವಲ ಹೆಸರಿಗೆ; ನಾಮಕಾವಸ್ತೆಗೆ: ನಯವಿಲ್ಲದ ಕಾಗದ, ಅಂದವಿಲ್ಲದ ಮುದ್ರಣ. ಹೆಸರಿಗೆ ಮಾತ್ರ ಇರುವ ರಕ್ಷಾಪತ್ರ (ಸಪಾಕೋಶ. ೪). **ಹೆಸರಿಲ್ಲದಾಗು** = ಹೆಸರು ಕೂಡ ಉಳಿಯದಾಗು: ನಾಶವಾಗು; ಹಾಳಾಗು: ಹಿರಿಯರಲಿ ಗೌರವವು ದೈವದಲಿ ನಂಬಿಕೆಯು ಹೆಸರಿಲ್ಲದಾಗುತಿಹವು (ಕವಿಕೋ. ೩೮-೨). **ಹೆಸರು ಕೊಡು** = ಹೆಸರನ್ನು ದಾಖಲುಮಾಡು: ಮಂದ್ಯಾಟದಲ್ಲಿ ಯಾರೂ ಹೆಸರು ಕೊಡಬಹುದು ನಿಂತವರಿಗೂ ಉಂಟು ನೋಡಿ ಸಂತಸಪಡುವ ಭಾಗ್ಯ (ಸಿಂಪು. ೪೪. ೨೨). **ಹೆಸರು ತರು** = ಪ್ರಸಿದ್ಧಿಯನ್ನುಂಟುಮಾಡು; ಕೀರ್ತಿ ತರು: ಕೊಟ್ಟ ಮನೆಯಲ್ಲಿ ಹೆಣ್ಣುಮಕ್ಕಳು ಚೆನ್ನಾಗಿ ನಡೆದುಕೊಂಡು ಹೆಸರು ತಂದರೆ ಹೆತ್ತ ತಾಯಿಗೆ ನೆಮ್ಮದಿ (ರೂಢಿ). **ಹೆಸರುಬಲ** = ಹೆಸರುಗಳ ಆಧಾರದ ಮೇಲೆ ತಿಳಿಯುವ ಗ್ರಹಬಲ; ನಾಮನಕ್ಷತ್ರ: ಮದುವೆ ಮಾಡಬೇಕೆಂದು ಯೋಚಿಸಿದರೆ . . . ಜೋಯಿಸರಲ್ಲಿ ಹೆಸರುಬಲ ಕೇಳುವರು (ಹುಬ್ಬಹ. ೯). **ಹೆಸರು ಬೀಳು** = ಹೆಸರು ಬರು: ಹೆಸರುಂಟಾಗು: ನೀರಿನ ನಾರಪ್ಪ ಅಂತ ನನಗೆ ಹೆಂಗೂ ಹೆಸರು ಬಿದ್ದದ. ನನ್ನೋಗ ಎಷ್ಟು ನೀರದ ನೋಡೇ ಬಿಡತೀನಿ ! (ಕಪಕ. ೨೪). **ಹೆಸರು ಹಚ್ಚು** = ಹೆಸರನ್ನು ಪಟ್ಟಿಯಲ್ಲಿ ಸೇರಿಸು, — ದಾಖಲುಮಾಡು: ಇಲ್ಲಿಯ ಶಾಲೆಯಲ್ಲೇ ಅವನ ಹೆಸರು ಹಚ್ಚಿದಂತಾಯಿತು (ಸಂನಾರ. ೧೬೨). **ಹೆಸರು ಹೇಳು** = ೧. ಹೆಸರನ್ನು ಹೇಳು, — ಉಚ್ಚರಿಸು: ಕಪಲೇಳು ಸಮುದ್ರವ ಕುಡಿದು ನೀರಡಸಿದಾತ ಅಜಬುಗೊಂಡು ಬೆಚಿಗಾದ ಶಿಶು ತಾಯ ಹೆಸರ ಹೊತ್ತುಕೊಂಡು ಹೆಸರು ಹೇಳುತ್ತೈದಾನೆ (ಶಿವಶ. ೬-೦೯); ಗುರುಭಕ್ತಿಯೆಂಬರೆ ಅವನ ಹೆಸರು ಹೇಳಬೇಕು (ವಚಾ. ೨೦). ೨. ಕೀರ್ತಿಯನ್ನು ತರು: ಹೆಸರು ಹೇಳುವ ಮಗನಾಗಲಿಲ್ಲ ಅವನು (ರೂಢಿ). **ಹೆಸರು ಹೊಡೆದು ಹಾಕು** = ಪಟ್ಟಿಯಿಂದ ಹೆಸರನ್ನು ತೆಗೆದು ಹಾಕು: ಸರಿಯಾದ ವೇಳೆಗೆ ಪರೀಕ್ಷೆಯ ಹಣ ಕಟ್ಟಲಿಲ್ಲವಾದ್ದರಿಂದ ಆ ಹುಡುಗನ ಹೆಸರು ಹೊಡೆದುಹಾಕಿದರು (ರೂಢಿ). **ಹೆಸರು ಹೋಗು** = ೧. ಹೆಸರು ಇಲ್ಲದಂತಾಗು, — ಅಳಿಸಿಹೋಗು: ಬಸವನೊಳಗಡಗುವುದು ಭಕ್ತಿಯ ಹೆಸರು ಹೋಹುದು (ಬಸಪು. ೩೬-೩೪). ೨. ಹೆಸರು ಹರಡು; ಪ್ರಸಿದ್ಧವಾಗು; ಖ್ಯಾತವಾಗು: ಅವನ ತಂದೆ, ಅಜ್ಜ ಕಳ್ಳು ಕುಡಿಯುವುದರಲ್ಲಿ ಭಾರೀ ಹೆಸರು ಹೋದವರು (ಕೆರು. ೯೩).

[ದೇ॥. ತಮಿ. ಮಲ. ಪೆಯರ್, ಪೇರ್, ಪಿಯರ್; ತುಳು. ಪುದರು; ತೆಲು. ಪೇರು; ನಾಯ್ಕಿ. ಪೇರ್; ಪರ್ಜಿ. ಗದಬ. ಪಿದಿರ್]

**ಪೆಸರಕ್ಕರ** (ನಾ). ಹೆಸರಿನ ಅಕ್ಷರ; ನಾಮಾಕ್ಷರ: ಮನ್ಮಯಾನದೊಳ್ ನಶುನಂ ಕರದೊಳ್ ಕರಾಬ್ಜಮಂಗದೊಳೆಸೆವಂಗಯಷ್ಟಿ ಪೆಸರಕ್ಕರದೊಳ್ ನಿಜವಾಣಿ ಕರ್ಮೆಯೊಳ್ ಹೃದಯಂಪದೊರ್ಮೆಯುಂ ನೆಲಸಲಂಗನೆಗೆಂತಿರೆ ಪೋದುದಾ ದಿನಂ (ಕಾದಂಬ. ೨೮೩); ಬಿರುದಿನ ಬೀರದ ಪೆಸರಕ್ಕರಮಂ ಪರನೃಪರ ಮೆಯ್ಯ ಪುಣ್ಣಲಿಗಳ್ ಪೋಲ್ತಿರೆ ತೋಳ್ವಲಕ್ಕೆ ಪಡೆವಂ ನರಶಾಸನಮುಂ ನರೇಂದ್ರಚೂಡಾರತ್ನಂ (ಮಲ್ಲಿಪು. ೩-೦೪). [ಪೆಸರ್ + ಅಕ್ಕರ₂]

**ಪೆಸರಾನ್**, ಹೆಸರಾನು (ಕ್ರಿ). ೧. ಹೆಸರನ್ನು ಹೊಂದು; ಅಭಿಧಾನವನ್ನು ಪಡೆ: ನಗರ ಪಟ್ಟಣ ಖೇಡ ಖರ್ವಡ ಪುರ ಗ್ರಾಮಂಗಳೆಂಬ ನಾನಾ ಪೆಸರಾಂತು ಸೊಗಯಿಸುತಿಪ್ಪುವಾ ದೇಶದ ಬೆಳುವಳ್ಳಿಗಳಲ್ಲ (ಪೋಚರಿ. ೨ ೦೬). ೨. ಹೆಸರನ್ನು ಗಳಿಸು; ಪ್ರಸಿದ್ಧಿಯನ್ನು ಹೊಂದು; ಖ್ಯಾತಿಯನ್ನು ಪಡೆ: ಪೆಬ್ಬುಲಿಯನಿಂದೊರಗಿ ಪೆಸರಾಂತ ಒಬ್ಬಾಳದೊಬ್ಬನೇ ದೊಡ್ಡಂ (ಕಾಂಚರ. ೦೦೬-೨೦೬). **ಹೆಸರಾನು**: ೨. ಅವರು ನಾಡಿನಲ್ಲೆಲ್ಲ ಹೆಸರಾಂತ ವಿದ್ವಾಂಸರೆನ್ನಿಸಿಕೊಂಡಿದ್ದಾರೆ (ರೂಢಿ). [ಪೆಸರ್ + ಆನ್₁]

**ಪೆಸರಾಳ್** (ನಾ). ಪ್ರಸಿದ್ಧನಾದ ಸೈನಿಕ; ಖ್ಯಾತಿಯನ್ನು ಪಡೆದ ಭಟ: ಬಿಸುಪುರ್ವ ನೊಸಲ ಕಣ್ಣಿಂ ತಿಸುಳಂಗಳನಾಂತ ಕೈಗಳುಂ ನೋಟ್ಪರನಂಜಿಸೆ ನಡೆತಂದರ್ ಕೆಲಬರ್ ಪೆಸರಾಳ್ಗಳ್ ಬೆಟ್ಟನಣ್ಣೆ ಕಲ್ಲಾಮುತ್ತಂ (ಶಬ್ದಮಾ. ೨೫೫). [ಪೆಸರ್ + ಆಳ್₃]

**ಪೆಸರಿಡು**, ಹೆಸರಿಡು (ಕ್ರಿ). ೧. ಹೆಸರನ್ನು ಇಡು; ನಾಮಕರಣ ಮಾಡು: ಪೆಸರಿಲ್ಲದಾರ್ಯರೆಂಬೀ ಪೆಸರೊಳೆ ಮುಂ ನಡೆಯೆ ನಡೆಯದೀ ವ್ಯವಹಾರಂ ಪೆಸರಿಲ್ಲದೊಡೆಂದಾ ಮನು ಪೆಸರಿಟ್ಟು ಯಶಸ್ವಿಯೆಂಬ ಪೆಸರಂ ಪಡೆದಂ (ಆದಿಪು. ೬. ೬೦); ಬೆಳೆಯದೆ ಜಗಮಂ ತೋಱುವನೆಂಬ ಪುಟ್ಟಿದ ಕೂಸಿಂಗೆ ಪೆಸರಿಡುವೆನೆಂಬ . . . ಮರುಳನಂತೆ (ಧರ್ಮಾಮೃ. ೮೨-೨೪); ಪರಮಾಪಾನಸನೂಜಂಗೆ ವಿಮಲಾಂಗಂಗೆ ಪರಿಸದಿಂ ಪವ್ಮರಸರೆಂದು ಪೆಸರಿಟ್ಟು (ಪದ್ಮರಾ. ೨-೬೫). ೨. (ಗುಣವನ್ನು) ಮೆಚ್ಚಿ ಹೊಗಳು; ಮೆಚ್ಚುಗೆಯನ್ನು ಸೂಚಿಸು: ತಮ್ಮ ತಮ್ಮಣಾಗಿಂದಂ ಪೆಸರಿಟ್ಟು ಬುಧಸಮೂಹಮಿಂದಂ ಪೇಟೆಂದೊಡೆ ಪೇೞಲ್ಕಾಂ ಬಗೆದಂದೆನಿದೆನ್ನಳವೆ ಗುಣಧರೋದಿತಚರಿತಂ (ಆದಿಪು. ೧-೩೪); ವಿಸ್ಮಯಾತ್ಮಮನೋಹರಿದೇವಿ ಸರ್ವೆತಂ ಬಾಹುವೀರ್ಯನಾ ನಟಿಯರ ವಾದ್ಯಸಮಗ್ರನೃತ್ಯಮಂ ವೀಕ್ಷಿಸಿ ನೆಱೆ ಪೆಸರಿಟ್ಟು ನಾಡೆ ಮೆಚ್ಚುತ್ತಿರ್ದಂ (ಕುಸುಮಾ. ೦೪. ೮೦). ೩. ದೂಷಿಸು; ನಿಂದಿಸು: ಅಸಮಾನಮಚಳಮದ್ಭುತಮಿಸರಮನೂನ ಪ್ರಭಂ ಶುಭಂ ಘನವಿಭವಂ ಪೆಸರಿಡಬಾರದು ಮಿಗೆ ನಿಟ್ಟಿಸಬಾರದು ನೋಡಬಾರದೆಂಬಿಕೆಯ ತಪಂ (ಗಿರಿ. ೯. ೦೬). **ಹೆಸರಿಡು**: ೧. ಎಳಸೆಯ ಭವಾಂತರದಲ್ಲಿ ಬಸವನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆವು (ಬಸಪು. ೪); ಮದನಹರನರಸಿ ಬಿಜಯಂಗೈದು ಹರಸಿ ಮೋಹದೊಳೀತನಂ ತಮ್ಮ ದೇವನೆಂದೋವಿ ಪ್ರೇಮದಿ ಸಿದ್ಧರಾಮಯ್ಯನೆಂದು ಹೆಸರಿಟ್ಟಾಡಿ ಹಾಡಿ ಹರಸಿದಳು (ಸಿದ್ಧರಾ. ೨-೩); ಒಸೆದು ಮುಂದಣ ತಾಗುಬಾಗಿನ ಸಸಿನವನು ಹೇಳಿದನು ಹಸೆದಡೆ ಹೆಸರಿಡಲು ಬೇಕಿವನ . . . ಎನುತ್ತ ಕೆಲಬಲಕಸ ಪಳಿವ ಬಿಜಯಗೆಯ ನೂಕಿದನಾ ದಶಗ್ರೀವ (ತೊರರಾ. ೩-೬-೫೬). ೩. ಅವಳ ಅಡಿಗೆಗೆ ಯಾರಾದರೂ ಹೆಸರಿಟ್ಟರೆ ಅವಳಿಗೆ ಸಹನವಾಗುತ್ತಿದ್ದಿಲ್ಲ (ಸ್ವ. ೩೬. ೦೨೩); ತಂದೆ ತೀರಿದ ಮೇಲೆ ತಾಯಿಯ ಸಂರಕ್ಷಣೆ ಮಾಡದ ಮಗನಿಗೆ ಮಂದಿ ಹೆಸರಿಡತಾರ (ಹೊಸಸಾ. ೮೩). ೪. ಸ್ಪಷ್ಟಪಡಿಸು; ವ್ಯಕ್ತವಾಗಿ ತಿಳಿಸು: ಮುಚ್ಚಿದನು ಕಂಗಳನು . . . ಎಚ್ಚಱದಗಿತು ನೆಱೆ ಕೈಗಳ ಬಿಟ್ಟ ಬಿದ್ದನು ಪುತ್ರವಿರಹದ ಹೆಚ್ಚುಗೆಯ ತಾಪವನು ಹೆಸರಿಡಲೞಿಯೆನಮರ್ಜನನ (ಕುಮಾರರಾ. ೮-೩೧); ಪ್ರಳಯದ ಘನನೊಡೆದ ರವಿಮಂಡಲಸಹಸ್ರದ ರಶ್ಮಿಯೋ . . . ಮುಳಿದ ನರಕೇಸರಿಯ ದಾಡೆಯ ಥಳಥಳತ್ಕಾರವೊ ಮಹಾಸ್ತ್ರದ ಬೆಳಗೊ ಹೆಸರಿಡಲಾರು ಬಲ್ಲರು (ಕುಮಾರರಾ. ೦೯-೧೫).

**ಹೆಸರಿಟ್ಟು ಬೈ** = ಹೆಸರೆತ್ತಿ ಬಯ್ಯು, — ದೂಷಿಸು, — ನಿಂದಿಸು: ಹೆಸರಿಟ್ಟು ಬೈದನೊ ಅತ್ತೆ ಮಾವಂದಿರ (ಜಾಪದ. ೨-೦೪). [ಪೆಸರ್ + ಇಡು₁]

**ಪೆಸರಿಲಿ** (ನಾ). ೧. ಹೆಸರಿಲ್ಲದುದು. ೨. ಕೈಯ ಕಿರುಬೆರಳಿನ ಪಕ್ಕದ ಬೆರಳು; ಅನಾಮಿಕ: "ಅಂಗುಷ್ಠಂ ತರ್ಜನಿ ಮಧ್ಯಾಂಗುಳಿ ಪೆಸರಿಲಿ ಕನಿಷ್ಠೆಯೆಂದಕ್ಕುಂ ನಾಮಂಗಳ್ ಬೆರಳ್ಗೆ ತರದೆ" (ಶಬ್ದಮಣಿ. ೬೯೦೦);

ಪೆಸರಿಲಿಯ ಬೊಟ್ಟಿನಿಂದಂ ದೆಸೆದೆಸೆಗಂ ಮಿಡಿದು ಮಿಡಿದು ಕೈಮಾಗಿ ವೃತ್ತ್ಯಂ (ಶಾರಶ. ೧೧-೦೨೪). [ಪೆಸರ್ + — ಇಲ್ಕಿ]

**ಪೆಸರಿಸು, ಹೆಸರಿಸು** (ಕ್ರಿ). ೧. ಹೆಸರನ್ನು ಹೇಳು, — ಸೂಚಿಸು : ಸುನಿಮೇಷಪಿನಾನಚಾಪಲನೇತ್ರ . . . ಮನಸಿಜಶಶಾಂಕಕರ್ಕಟಕ ಚೇಳಂ ಗುಡುವ ತನಿಸೊಬಗುವಡೆದ ಸನ್ಮೋಹನದ ಕಣಿಯೆ ಬಾಯೆನುತೊರ್ವ ನೀಜ್ ಸಖಿಯುಂ ಕರೆದಳೀರಾಜಿ ರಾಶಿಯುಂ ಪೆಸರಿಪವೊಲು (ಕೃರಾಜ. ೬-೨೫). ೨. ಎತ್ತಿ ಹೇಳು : ಹೊಗಳು ; ಪ್ರಶಂಸಿಸು : ಎಸೆವಂಜುವರ್ ಪೊಮ್ಮುರುಬ್ಬುವರ್ ಕೊಬ್ಬುವರ್ ಮುಸಕದಿ ಸಮರಂಗಕುಜುಬುವರ್ ತಜುಬುವರ್ ಪೊಸ ಪರಿಯ ಬಿರುದನುಜ್ ಪೆಸರಿಪರ್ ಪಸರಿಪರ್ ತಂತಮ್ಮ ಬೀರಂಗಳ . . . ಉಭಯಭಟರು (ಕಬಿಶ. ೩೮-೩೬) : ನಾಗರಿಪುಪಂಥ್ಯ ಮುವರ್ಣಿಸಿಯು ನಡುವಿಂಗೆ ಸರಿಯಾಗಬಲ್ಲುದೆ . . . ಪೂಗಣೆ ವಿಲಾಸದಾ ರಂಭೆಯು ವಿರಾಜಿಸುವ ಸೋಗೆಗಣ್ಗೆಣೆಯಹುದೆ ನೋಡೆಂದು ಪೊಗಳ್ದನನು ರಾಗದಿಂದೊರ್ವಳಂ ವಿಟನಪ್ಸರಸ್ತ್ರೀಯರಂ ಪೆಸರಿಸುವ ನೆಪದೊಳು (ಕೃರಾಜ. ೬-೨೪). **ಹೆಸರಿಸು** : ೧. ಅವರು ನಾಡಿನಲ್ಲೆಲ್ಲ ಹೆಸರಿಸು ವಂತಹ ಕಲಾವಿದರು (ಲೂಕ). ೩. ನಿಗದಿಪಡಿಸು ; ನಿರ್ದಿಷ್ಟ ಪಡಿಸು : ಹೆ.ಮಭಾರದ ವಿಮಲರತುನಸ್ತೋಮವಿದೆ ಪಣವೆನಲು ಕೌರವ ಭೂಮಿಪತಿಯೊಡ್ಡಿದನು ಧರ್ಮಜ ಹೆಸರಿಸಿದ ಧನವ (ಕುವ್ಯಾಸ. ೦೩-೪೪). ೪. ಹೆಸರಿಡು ; ನಾಮಕರಣಮಾಡು : ಚರಿತ್ರಕಾರನು ಅಂದಂದಿನ ದೃಷ್ಟಿಯಿಂದ ನಡೆದ ಘಟನೆಗಳನ್ನೂ ಹುಟ್ಟಿದ ಕೃತಿಗಳನ್ನೂ ಪರಿ ಕ್ಷಿಸಿ ಹೆಸರಿಸಬೇಕಾಗುತ್ತದೆ (ಕಜು. ೨೦). ೫. ಹೆಸರನ್ನು ಗಳಿಸು ; ಪ್ರಸಿದ್ಧಿ ಯನ್ನು ಪಡೆ; ಖ್ಯಾತಿಯನ್ನು ಹೊಂದು : ಹೆಸರಿಸಿದ ಗಂಧರ್ವ ಕಿನ್ನರವಿಸರಮಾಗಧವಂದಿಗಳು ವೇಷ್ಟಿಸಿತು ನಾರದನಭ್ರಮಂಡಲದೊಳಗೆ ಸಲಿದಾಡೆ (ಕಭಾಗ. ೪-೧೧-೩೦); ಎಸೆದನದಱೊಳು ಭೂಪನೊಬ್ಬನು . . . ಸುಬಲಾಶ್ವನೆಂಬುವನು ಹೆಸರಿಸಿದ ವ್ಯಾಥಿಲನೃಪಾಲರ ನೊಸಲ ತಿಲಕದವೋಲು ಮಿಗೆ ರಂಜಿಸುತ (ಕಭಾಗ. ೧೧-೪೦-೨).

[ಪೆಸರ್ + — ಇಸು₂]

**ಪೆಸರೀ** (ಕ್ರಿ). ಹೆಸರನ್ನು ಕೊಡು ; ಹೆಸರಿಡು : ಈ ಸುತನ ಸೌಂದರ್ಯಕ್ಕೆ ತಕ್ಕಂದದಿಂ ಪೆಸರಿತ್ತಪ್ಪೆನೆಸುತ್ತುಮಿತ್ತನರಸಂ ಕಂದರ್ಪದೇವಾಖ್ಯಮಂ (ಕುಸುಮಚ. ೬-೧೦೫). [ಪೆಸರ್ + ಈ₂]

**ಪೆಸರು₁** 'ಪೆಸರ್' ನೋ.

**ಪೆಸರು₂** 'ಪೆಸಱ್' ನೋ.

**ಪೆಸರುಗೊಳ್** 'ಪೆಸರ್ಗೊಳ್' ನೋ.

**ಪೆಸರುವಡೆ** 'ಪೆಸರ್ವಡೆ' ನೋ.

**ಪೆಸರುವೆಱು** 'ಪೆಸರ್ವೆಱು' ನೋ.

**ಪೆಸರ್ಗಿಡು, ಹೆಸರುಕೆಡು** (ಕ್ರಿ). ಅಪಕೀರ್ತಿಯುಂಟಾಗು; ಕೆಟ್ಟ ಹೆಸರು ಬರು ; ದೂಷಣೆಯುಂಟಾಗು : ಪರವೆಣ್ಣಂ ತುದನೋ ತಂದನೊ ಪೆಸರ್ಗಿಡೆ ಪೆಮ್ಮಾರಿಯುಂ ನಮ್ಮ ದುರ್ಗಕ್ಕರಸಂ (ಅಪಂಚ. ೧೧.೬೦). **ಹೆಸರುಕೆಡು** : ಸಮಾಜದಲ್ಲಿ ಹೆಸರುಕೆಡದಂತೆ ಜೀವನ ನಡೆಸಬೇಕು (ಲೂಕ). [ಪೆಸರ್ + ಕಿಡು (< ಕೆಡು₁)]

**ಪೆಸರ್ಗೇಳ್** (ಕ್ರಿ). ಹೆಸರನ್ನು ಕೇಳು : ಅಂಗಳ್ ಪೆಸರ್ಗೇಳ್ದೆರ್ದೆವೊಡೆವ ರೆಂಬ ಶೂದ್ರಕನ ವಿಕ್ರಮಾಡಂಬರಮಂದರೆವಾನಿಸಿಕೆಯೊಳೊಂದಿದ ನರಸಿಂಹಾ ಡಂಬರಕ್ಕೆ ನುಸುನಗುತಿರ್ಕುಂ (ಕಾದಂಪೂ. ೧೧); ಮನುಜಮನೋಜ ನಿನ್ನ ಪೆಸರ್ಗೇಳಲೊಡಂ ಬೆಮರಿಂದೆ ಕಣ್ಣ ಲಾಗೆನೆ ನೆಱ ನಾಂದು ಪತ್ತಿದ ನಿಜಾಂಶುಕಮಂ ಪುಳಕಂಗಳೆತ್ತೆ (ಕಾದಂಸಾ. ೩೦೪). [ಪೆಸರ್ + ಕೇಳ್]

**ಪೆಸರ್ಗೊಳ್, ಪೆಸರುಗೊಳ್, ಪೇರ್ಗೊಳ್, ಹೆಸರುಗೊಳ್, ಹೆಸರಂಗೊಳ್ಳು, ಹೆಸರ್ಗೊಳ್** (ಕ್ರಿ). ೧. ಹೆಸರನ್ನು ಹೊಂದು : ಜಂಬೂ ದ್ವೀಪದ ಭರತಕ್ಷೇತ್ರದೊಳಖಿಳಸುಖಮುಖದ್ವಾರಂ ದ್ವಾರಾವತೀಪುರಂ ಪುರಂದರಪುರೀವಿಳಾಸಮಂ ಪೆಸರ್ಗೊಂಡಂತೆ ಮೆಱೆದಿರ್ಪುದು (ನೇಮಿ. ೦೨-೪೩ ಕ). ೨. ಹೆಸರನ್ನು ಹೇಳು, — ಉಚ್ಚರಿಸು; ಹೆಸರೆತ್ತು : ವಿನಯ ಮುಮೆಂಬಕಮುಮಪ್ಪುದು ಸನಾಭಿಗಳ್ ಸಂಗತಂಗಳಪ್ಪೊಡೆ ಪೆಸರ್ಗೊಂಡನಿತ ಱೊಳೆನ್ನಂ ಸೈರಿಸನೆನೆ ಭರತಂಗೆಱಗಿ ಲೋಕದಿಂ ನಗಿಸುವನೇ (ಆದಿಪು. ೦೪-೩೬); ಆತನನಾರಾಧಿಸಿ ನೃಪನೀತಿವಿದರ್ ಖೇಚರಾವನೀಚರರಾಜ್ಯಖ್ಯಾತಿಶ್ರೀಯು ಕಾದಭಿಜಾತನೃಪಾನ್ವಯರನೆನಿಬರಂ ಪೆಸರ್ಗೊಳ್ವಂ (ಶಾಂತಿಪು. ೩-೮೬); ಪೆಸರ್ಗೊಳೆ ವಿಷಹರಮಂ ಮಾಟ್ಪಿಸಕದ ಮಣಿಮಂತ್ರತಂತ್ರತತಿಯಿಂ ತಾನೆಟ್ಟಿಸಲಾಱದೆ ಭೂರಮಣಂ ಬಸವಟ್ಟಿದಾ ಸತಿಯ ಮೇಲೆ ಮೂರ್ಛಿಸಿ ಬಿಟ್ಟಂ (ಶಾಂತೀಶ್ವ. ೫-೦೬೪); ಉದಯಕಾಲದೊಳೆದ್ದೊಲಿದಿಷ್ಟದೈವದ ಪದ ಗಳ ಪಾಡುಪಂದದೊಳು ಹದಿಬದೆಯರ ಪೆಸರ್ಗೊಂಡು ಪೊಗಳ್ವುದು ವಿದಿತ ವೈಸಲೆ ವೈದಿಕರಿಗೆ (ಹರಿಶ. ೨-೦೫). ೩. ಹೆಸರಿಂ ಹಿಡಿದು ಕರೆ, — ಕೂಗು ; ಸಂಬೋಧಿಸು : ಪೆಸರ್ಗೊಂಡಿಂದ್ರನರೇಂದ್ರವಂದ್ಯನನೊಱಲ್ದಿತ್ತಾನು ಮೋರೂರ್ಮೆ ಚಿಂತಿಸಿದೊಂಗು ಪಮಣೆಲ್ಲ ಪುಣ್ಯಮೆನೆ (ಆದಿಪು. ೧-೩೬) ; ಆಗಳಾ ಕೊಳನು ಬಳಸಿ ಬಂದು . . . ಪಂಚಮಹಾವಾದ್ಯಗಳಂ ಬಾಜಿಸಿಯುಂ ಎಂತುಂ ಪೊಱಮಡಿಸಲಾಱದೆ ಸುಯೋಧನನಂ ಪೆಸರ್ಗೊಂಡು ಸಕುಲನಾಸ್ಫೋಟಿಸಿ (ಗದಾಯು. ೭-೧ ಕ); ಸಮಾಧಿಯನಾಗ ತೆಗೆಸುತ್ತ . . . ಪೆಸರ್ಗೊಂಡಾ ಸುಪುತ್ರಕನಂ ಕರೆಯಲು (ಬಸಪು. ೪೮-೨೪) ; ಎನ್ನಂ ಪೆಸರ್ಗೊಂಡನೇ ನುಡಿಸಿವನೆ ಉಳ್ಕರೆಂದನೆ (ಕಬಿಶ. ೩೦-೦೮). ೪. ವರ್ಣಿಸು; ಬಣ್ಣಿಸು ; ವಿವರಿಸು: ಕಳಹಂಸೀಲೀಲೆ . . . ಶ್ರೀಚಕ್ರವಾಕದ್ವಯ ವಿಳಸನಮಂತಃಪುರಸ್ತ್ರೀಸಹಸ್ರಂಗಳ ಮೆಯ್ಯೊಳ್ ತಾನೆ ತಳ್ತೊಯ್ಯೆಸೆದುದು ಪೆಸರ್ಗೊಳ್ವಗ್ಗದಾರೆಂಬಿನಂ (ಆಪು. ೧೧-೦೩೬); ಗಂಡನನೊರ್ವಳೂರ್ವಶಿಗೆ ಗಂಗೆಗೆ ಗೋಪಿಗೆ ಕೊಟ್ಟರೆಂದೊಡಾ ಪೆಂಡಿರ ರೂಪುಮಂ ಸೊಬಗುಮಂ ಭವಮಂ ಪೆಸರ್ಗೊಳ್ವುದೇ (ಕುಲ್ಲಪು. ೨-೫೫); ಅವರ ವಿಲಾಸಿನಿ ಜನದ ರಾಣಿಯ ವಾಸದ ಪುತ್ರಮಿತ್ರಬಾಂಧವರ ವಿಯೋಗಸಂಕಟಮನೇ ಪೆಸರ್ಗೊಂಡಪೆಂ (ಅಪಂಚ. ೪-೪). ೫. ಪ್ರಸಿದ್ಧಿಯನ್ನು ಪಡೆ : ಖ್ಯಾತಿ ಯನ್ನು ಹೊಂದು: ಪೆಸರ್ಗೊಂಡರ್ತಿಯೊಳೆತ್ತಿಮಬ್ಬೆಯ ಗುಣವ್ರಾತಂಗಳಂ ಕೇಳ್ದ ಭವ್ಯಸಮೂಹಂ ಪೊಗಟ್ಟಂತು . . . ಬಣ್ಣಿಸುವೆಂ ಪುಣ್ಯಪುರಾಣಮಂ ಜಿತಮನೋಜಾತಾಜಿತಸ್ವಾಮಿಯಾ (ಅಜಿತ. ೧-೪೬). ೬. (ಉತ್ತಮ ವಾದುದೆಂದು) ಆಯ್ದುಕೊಳ್ಳು ; ಆರಿಸಿಕೊಳ್ಳು : ಕುಸುಮಾಸವಕ್ಕೆ ಪೆಱಪಂ ಪೆಸರ್ಗೊಳ್ವವು ತುಂಬಿ ಬಾಣರಚನೆಗೆ ಪೆಱನಂ ಪೆಸರ್ಗೊಳ್ವ ಮನಸಿಜನೆನೆ ಪೊಸಸುಗ್ಗಿಯ ತೊಡವು ಪೆಱತೆ ಮಲ್ಲಿಗೆಯೆವೊಲಂ (ಕುಲ್ಲಪು. ೫-೦೫). ೭. ಹೊಗಳು ; ಸ್ತುತಿಸು ; ಧ್ಯಾನಿಸು ; ನೆನೆ : ಭಕ್ತಿಯಿಂ ಪಾಡದ ಬಾಯದೇಕೆ ಪೆಸರ್ಗೊಳ್ಳದ ಜಿಹ್ವೆಯದೇಕೆ . . . ಕೂಡಿಯಾಳ್ವಾಡದ ಚಿತ್ತವೇಕೆನಗೆ ಹಂಪೆಯ ಲಿಂಗವೆ ನಿಮ್ಮೊಳಳ್ಕಱಿಂ (ಸಂಪಾಶ. ೪); ಭಕ್ತರ್ಗೆ ಬಂದೆಡರನಾವಗಂ ಪರಿಹರಿಪೆ ಗಡ ದೇವ ನಿನ್ನಂ ಪೆಸರ್ಗೊಂಡೊಡೆ (ಕೃರಾಜ. ೧೧-೩೫). **ಪೆಸರುಗೊಳ್** : ೨. ನಿನ್ನೂರ ಪೆ[ಶಾಶಾಂ. ಹೆ]ಸರುಗೊಂಡಡೆ ನಿನ್ನ ವಾರ್ತೆಯನುಸುರಿದಡೆ ಕೇಳಿದಡೆಯು ತಪ್ಪಸಮವಿಕ್ರಮನಾದಡವನು ಪಿಡಿದು ಕೊಲಿಸುವನು (ಬಸಪು. ೨೬-೬೦). ೩. ಬಸವರಸನಿಂತೊಂದನೊಂದು ಪೆಸರುಗೊಳುತಿಪ್ಪ ಮೊದಲೆನಿಪ ಗಣ ವಿಸರಮು ಕ್ಷಣದೊಳು ತರಿಸಿ ಪಾತ್ರ ನಿರೂಪಿಸಿದ (ಬಸಪು. ೫೪-೩೫). **ಪೇರ್ಗೊಳ್** : ೫. ಅದರಿಂದೀ ಕೃತಿ ಕೃಷ್ಣರಾಜಮಹಿಮಾಖ್ಯಾತಂ ಪುನೀತಾಂಕಿತಂ ಬುಧರಿಂ ಮೈಸೂರನಾಡ ಮೈಸಿರಿಯೆನಲ್ ಪೇರ್ಗೊಂಡುದೈ ಲೋಕದೊಳ್ (ಮೈಸೂಮ. ೧ ೨೦). **ಹೆಸರುಗೊಳ್** : ೨. ಹುಸಿಯಿಂದೆ ಜನಿಸಿದೆನಯ್ಯಾ . . . ಹುಸಿಯಿಂದಲಿ ಲಿಂಗವ ಹೆಸರುಗೊಂಡು ಕರೆದೆನಯ್ಯಾ (ಬಸವ. ೪೪೩) ; ಹೆಸರುಗೊಂಡವನಂ ಕೊಲುವೆನೆಂಬಸಮಭಾಷೆಯೊಳಿರು

ತಿರಲು (ಏಕಶ. ೫೩-೩೪); ಹೆಸರುಗೊಂಡರೆ ಕವಿಗಳಿಗೆ ಕರ್ಕಶರು ರಕ್ಕಸರೆಂಬ ಹೆಸರಿದು ನುಸಿಗಳೊಳಗಾಶ್ರಯಿಸಿ ಕೆಟ್ಟುದು (ಕುವ್ಯಾದ್ರೌ. ೦೩-೬೦). **ಹೆಸರುಗೊಳ್ಳು :** ೫. ಹೆಸರುಗೊಂಡ ಬಹುಮಂದಿ ವೀರರು ಮಡಿದರು (ಕದಿವಾ. II, ೯೯೩); ದಂತಿದುರ್ಗನು ಹರ್ಷವರ್ಧನ . . . ಕೇರಳ ರಾಜರನ್ನು ಸೋಲಿಸಿ ಹೆಸರುಗೊಂಡ ಕರ್ನಾಟಬಲವನ್ನು ಅನಾಯಾಸವಾಗಿ ಜಯಿಸಿದನೆಂದು ಹೇಳಿದೆ (ಕರಾಕೆ. ೯೬). **ಹೆಸರ್ಗೊಳ್ :** ೫. ಮಕರಧ್ವಜರೂಪನಾವ ರಾಯನ ಕುಮಾರಕನೆಂದು ಹೆಸರ್ಗೊಂಡುದಿಲ್ಲ ಮುಖಪರೀಕ್ಷೆಯ ಬಲ್ಲಿನಾತನ ತಂದೆನ್ನ ಸುಖಬಡಿಸುವುದೆಂದಳೊಲಿದು (ಶೋಹಕ. ೨೮-೨೩). [ಪೆಸರ್ + ಕೊಳ್$_1$]

**ಪೆಸರ್ಚು** (ಕ್ರಿ). (?) : (ಕ)ರಿ ವ ರ ಗ ಜ ರ್ಜಿ ತ ತೂ ರ್ಯ ರ್ ಸ್ವ ರ ಮಂ ೦ ಸಂರಂಭವಾಂ ? ಪೆಸರ್ಚಲ್ ಕಾತರವೆನೆ ಪಡೆಗುಂ (ವಸ್ತುಕೋ. ೦೩೦-೬೪). [?]

**ಪೆಸರ್ಪು** (ಕ್ರಿ). ದೂಷಿಸು ; ಆಕ್ಷೇಪಿಸು ; ದೂರು : ನೆಟ್ಟನೆ ಚಂದ್ರನೊಳ್ ಬಿಸುಪು ಪುಟ್ಟಿದವೊಲ್ ನೃಪರೂಪಚಂದ್ರನೊಳ್ ಪುಟ್ಟಿದುವಂತಿದಂ ತಿಳಿವುಗೆಟ್ಟ ಕೃತಜ್ಞತೆಗೆಟ್ಟ ಪೌರುಷಂಗೆಟ್ಟ ದುರಾತ್ಮನಂ ಕುಱಿತು ಭಾವಿಸದೇನುಮನೀ ಮಹಾತ್ಮನಂ ತೊಟ್ಟನೆರಿಂತು ದೇವ ಯುವರಾಜನನೀ ತೆಱದಿಂ ಪೆಸರ್ಪುದೇ (ಕಾವಂಜಾ.೯೬೯). ☞ ಇಲ್ಲಿ ನಾಮಪದವ ಮೇಲೆ 'ಪು' ಪ್ರತ್ಯಯವು ಪ್ರೇರಣಾರ್ಥದಲ್ಲಿ ಹತ್ತಿದೆ. [ಪೆಸರ್ + —ಪು$_1$]

**ಪೆಸರ್ವಡೆ,** ಪೆಸರುವಡೆ, ಹೆಸರುವಡೆ (ಕ್ರಿ). ೧. ಹೆಸರನ್ನು ಹೊಂದು; ನಾಮಧೇಯವನ್ನು ಪಡೆ : ಪೆಱಪೞ ಧರ್ಮಂಗಳನೇತೆಱದಿಂದಂ ತಂದು ಪೆಱಪೞೊಳ್ ಪತ್ತಿಸಿ ಕಣ್ಣೆಱೆಯೆ ಚತುರೋಕ್ತಿ ಕೃತಿಯೊಳ್ ನೆಱೆದಿರೆ ಪೇಟ್ವುದು ಸಮಾಧಿಯೆನೆ ಪೆಸರ್ವಡೆಗುಂ (ಕವಿರ. ೯೬ ಪ್ರಯೋ); ಹೊಱಟ ಬೆನ್ನಿಂತೆಂಬ ನುಡಿಯುದು ಧರೆಗೆ ಕೂನನೆನಿಪ್ಪುದು ಪರಿಹರಿಸಿ ಸೌಂದರಪಾಂಡ್ಯರಾಯನೆನಲು ಪೆಸರ್ವಡೆದ (ಏಕಶ. ೫೦-೬೦). ೨. ಪ್ರಸಿದ್ಧಿಯನ್ನು ಪಡೆ ; ಖ್ಯಾತಿಯನ್ನು ಹೊಂದಂ : ಮತ್ತಂ ಸ್ವಯಂಭುವಾಭಿಧಾನಪದವಿದ್ಯಾಚ್ಛಂದೋವಿಚಿತ್ರಲಂಕಾರಂಗಳೆಂಬ ಮೂಱಜಱಿಂ ಪೆಸರ್ವಡೆವ ವಾಙ್ಮಯಮುಮಂ . . . ಮತ್ತಿನ ತನೂಜರ್ಗೆಲ್ಲಮುಮುಪದೇಶಂಗೆಯ್ದಂ (ಆದಿಪು. ೮-೬೦ ಪ); ಧರೆಯೊಳು ವಿಶಾಲತೆಯೊಳತಿ ಪೆಸರ್ವಡೆದಿರ್ಪ ಪುರಪಟ್ಟಣಗ್ರಾಮಸಂಕುಳದ ನಡುವೆ ಕಿಱುವಳ್ಳಿಯಾಗಿಯು ಕಣ್ಗೆ ಪೆಱಿದು ಹೆಂಪಿನೊಳಿರ್ಪುದು (ಸಿದ್ಧರಾ. ೦-೩೦) ; ಧರ್ಮಾನುಜಂ ಭೂಪಾಲರೊಳ್ಪೆಸರ್ವಡೆದವಂ (ಕೈಬಿಶಾ. ೨೪-೦೫). **ಪೆಸರುವಡೆ :** ೨. ಪೆಸರುವಡೆವ ಮಧುರಸವಾಹಿನಿಯ ದಾಂಟಿಸಲು ಚಂದನಡೋಣಿಗಡರ್ದು . . . ನಿಟ್ಟಿಸಿದ (ಶೋಹಕ. ೫-೨೬). **ಹೆಸರುವಡೆ :** ೧. ದಶಗುಣೋತ್ಕರವೆನಿಪ ತತ್ವಪ್ರಸರವೇಳೋರಂತೆ ಪರಿವೇಷ್ಟಿಸಿದ ಜಾಂಡಕಟಾಹಕೋಟಿಗಳಾವನುದರದಲಿ ನುಸಿಗಳಂತಿಹವದು ನಿಮಿತ್ತವೆ ಪೆಸರುವಡದುದನಂತನೆಂಬೀ "ಹೆಸರು ನಿಮ್ಮಡಿಯಲ್ಲದಾರಿಂಗಳವಡುವುದೆಂದ (ಕೆಶಾಗ. ೬-೦೩-೦೩). ೨. ಹೆಸರುವಡೆದತಿ ಖಳರನಡೆಗೆಡಹಿದನು ರಣದೊಳಗೆ (ಕುವ್ಯಾದ್ರೌ. ಕಂ. ೨೮೨). [ಪೆಸರ್+ಪಡೆ$_1$]

**ಪೆಸರ್ವಾಸಿ,** ಹೆಸರುವಾಸಿ (ನಾ). ಕೀರ್ತಿ ; ಖ್ಯಾತಿ ; ಪ್ರಸಿದ್ಧಿ : ಮಹಿಷಾಸುರಪುರಾಧೀಶ ಚಾಮರಾಜೇಂದ್ರನಿಂ ಮೆಚ್ಚಂ ಪಡೆಯುದಿರ್ದೊಡೆವಗೆ ಪೆಸರ್ವಾಸಿಯಿಲ್ಲಂ (ಮರಾಕ. ೦೯೨-೦೯). **ಹೆಸರುವಾಸಿ :** "ಯಶಃ, ಕೀರ್ತಿಃ, ಸಮಜ್ಞಾ—೩ ಕೀರ್ತಿಯ ಹೆಸರುಗಳು ಅಂದರೆ ಹೆಸರುವಾಸಿ" (ಸಿದ್ಧಾಂತಿ. ೫೨). ☞ ಇದು ಒಂದೇ ಅರ್ಥದ ಎರಡು ಶಬ್ದಗಳು ಸೇರಿ ಆಗಿರುವ ರೂಪು]

ಹೆಸರುವಾಸಿಯಾಗು = ಪ್ರಸಿದ್ಧವಾಗು ; ಕೀರ್ತಿಯನ್ನು ಹೊಂದು : ಅವನ ಮನೆತನದವರೆಲ್ಲರೂ ಮಿಲಿಟರಿಸಾಹಸಗಳಿಗೆ ಹೆಸರುವಾಸಿಯಾಗಿದ್ದರು (ಸಸ್ಮಿ. ೦೦೪) ; ಠಾಕೂರವಮನೆತನ ಕೀರ್ತಿ, ಪ್ರತಿಷ್ಠೆಗಳಿಗೆ ಹೆಸರುವಾಸಿಯಾದುದು (ಧರ್ಮಸಾ. ೫೬). [ಪೆಸರ್+ವಾಸಿ$_1$]

**ಪೆಸರ್ವಿಡಿ,** ಹೆಸರುಹಿಡಿ (ಕ್ರಿ). ಹೆಸರನ್ನು ಹೇಳು : ಶಿವಂ ಪಿಂತಿರುಗಿ ಪೆಸರ್ವಿಡಿದು ನಿಲ್ಲೆಂಬ ದನಿಯಯುಣ್ಮಲೊರ್ವರೊರ್ವರ್ ಮಱೆಯೊಳಡಗುವರ್ (ಶಿರಪು. ೪೫-೬೦) ; ಪೆಸರ್ವಿಡಿದು ಕರೆವುತೇಳ್ಪೆಸವಾಕ್ಷಿಯೆನುತ್ತೆ ಕರೆಯಲೊಡನಾಕ್ಷಣದೊಳ್ಪೊಸನುಲಿಗಳ್ಪಿಟಛಿಟರವಮೆಸೆಯೆ ಕರಂ ಸಿಡಿಯೆ ಸಿಬಿಕೆಯಿಂದವಳೆಳ್ದಳ್ (ಕೃಷಂ. ೨೦-೪೦). **ಹೆಸರುಹಿಡಿ :** ಅವಳು ಮಗನನ್ನು ಹೆಸರುಹಿಡಿದು ಕೂಗಿದರು (ಕೂಂ). [ಪೆಸರ್ + ಪಿಡಿ$_1$]

**ಪೆಸರ್ವೆಱು,** ಪೆಸರುವೆಱು (ಕ್ರಿ). ಪ್ರಸಿದ್ಧಿಯನ್ನು ಹೊಂದು : ಮ×ಯೆಱಿದ ಮಾರಸಿಂಗನಾ ಕುರುಳ ರಾಜಿಗಂ ಪೆಸರ್ವೆತ್ತಾ ಮರುಳಂ ತಂನ್ರಪತಿಳಕಂ ಪಿರಿಯ ಮಗಂ ಸತ್ಯವಾಕ್ಯಂ (ಎಕ. VII, ಶಿವಮೊ. ೫೬-೦೦ ; 1115) ; ಗರುವಿಕೆಗೀಬು . . . ಪೆಸರ್ವೆತ್ತ ನೆಗೞ್ತಿಗೆ ತಾಣಮಾಗಿ ಬಲ್ಲರ ಬಗೆಯಲ್ಲಿ ಕೂಡಿ ನೆಲಸಿರ್ದ ಪೊಗೞ್ತೆಯನಾಂತಳಾಪಳಾ ಸರಸತಿ ಕೂರ್ಮೆಯಿಂದೊಸೆದು ಮಾಡುಗೆ ಕಬ್ಬದ ಬರ್ದಿನೇೞ್ಗೆಯಂ (ಕಬ್ಬಿಕಾ. ೩) ; ಪೆಸರ್ವೆತ್ತ ಗಣಧರಪ್ರಮುಖಸಮಸ್ತಸಭಾಜನಾಂಗತತಿಯೊಳ್ಪುಳಕಪ್ರಸರಮನಂದೊರ್ಮೆದಲೊಳ್ [ಪಸರಿಸೆ] ಪೊಣ್ಮಿದುದನೂನ ದಿವ್ಯಧ್ವಾನಂ (ಶಾಂತೀಶ್ವ. ೦೬-೦೦೦). **ಪೆಸರುವೆಱು :** ಬಸವ ಪೋಳಿಗೆ ಮಾರನಂತಹ ಪೆಸರುವೆತ್ತ ಶಿವೈಕ್ಯನಾವನು ವಸುಧೆಯೊಳು (ಏಕಶ. ೩೦-೬). [ಪೆಸರ್ + ಪೆಱು$_1$]

**ಪೆಸಱ್,** ಪೆಸರ್ು, ಪೆಸಱು, ಹೆಸರ್ು, ಹೆಸಱ್, ಹೆಸಱು (ನಾ). ಒಂದು ಬಗೆಯ ದ್ವಿದಳಧಾನ್ಯ ; ಮುದ್ಗ : ರಾಜಾನ್ನದ ಕೂಳುಂ ಪೆಸಱ ತೊವೆಯುಂ . . . ನಾನಾ ಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ ಬಡ್ಡಿಸಿದಂತೆ ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ (ವಡ್ಡಾರಾ. ೭೮-೦೪) ; ಪೊಸಪೆಸಱಗೆಯ ಬಣ್ಣದಂತೆ ಸೊಗಯಿಸುವ ಸಾಮಂತಚೂಡಾಮಣಿಯ ಮೆಯ್ಯ ಬಣ್ಣಂ ವಿಧಾತ್ರನೆಂಬ ಚಿತ್ರಾರಿಯ ವರ್ಣಕ್ರಮಂಗೆಯ್ದ ಕದಳೀಗರ್ಭಶ್ಯಾಮಮೆಂಬ ಬಣ್ಣದಂತಾದುದು (ಕುಶಲಾ. ೨-೩೯ ಪ) ; ಜವೆ ಪೆಸಱುರ್ದೆಂಬಿಪನಾಡುವ ಪಾಲೊಳಗಟ್ಟು ಕುಜವ ಮೂಲಂಗಳೊಳಿಕ್ಕುವುದಾ ಮರನೊಪ್ಪುವ ಪಲ್ಲವದಿಂ ಪುಷ್ಪಂಗಳಿಂ ಫಲಂಗಳಿನೆಸೆಗುಂ (ಲೋಕೋಪ. ೬-೦೩). **ಪೆಸರ್ು :** ದೇವರ ನಿವೇದ್ಯಕ್ಕೆ ರಾಜಾನ್ನದಕ್ಕಿ ಕೊಳಗ ಒಂದು ಪೆಸರು ಮಾನ ಒಂದು... ನುದಾದೀವಿಗೆ ಒಂದು ಇನ್ತಿನಿತುಂ ನಿತ್ಯಪ್ರಯಮಾಗಿ ನಡೆವುದು (ಕಇಳ. ೭೪-೦೩-೪೦ ; ಸು. 1088). **ಪೆಸಱು :** ಘೃತದೊಳ್ ಪುರಿದುದ್ದು ಪೆಸಱು ಗೋದುಮೆವರಸಿನೆ (ಕಲ್ಯಾಕಾ. ೨೬). **ಹೆಸರ್ು :** "ಮುದ್ಗಃ—ಹೆಸರು" (ಓಶಧಿ. ೦೨೬) ; ಅಕ್ಕಿ ತುಪ್ಪ ಹೆಸರು ಮೆಲೊಗರವ ಕಾಯಿ (ಬೊಂಕಶಾ. ೦೯೪೦, ಕುಪುಟ. ೦೦೨-೯೬ ; 1332) ; ಧ್ವಜಾರೋಹಣದ ಧ್ವಜಸ್ತಂಭದ ನಯಿವೆದ್ಯಕೆ ಪೂಜೆ ಗ ೧ಸಂ ಅಕ್ಕಿ ಹೆಸರು ಚ ಗ ೩ ಮೇಲೊಗರ ... ತೆಂಗಿನಕಾಯಿ ಚ ಗ ೧ (ತಾಶಾ. IX–11, ೬೩೩-೬ ; 1554) ; ಹೆಸರೂ ಬೇಡ, ಉದ್ದೂ ಬೇಡ, ಸದ್ಯ ಮನೆಗೆ ಹೋದರೆ ಸಾಕು ಎನ್ನಿಸಿತು (ರಾಯುಕ.೨೦). **ಹೆಸಱ್ :** "ಹೆಸಱ್—ಮುದ್ಗ" (ನಾಶಂರಾ. ೪). **ಹೆಸಱು :** "ಮುದ್ಗಮೆನಲ್ಕೆ ಹೆಸಱು" (ಕಂಗರಾ. ೦೦೦-೫) ; ಪುೞ್ಗಿ-ಉರ್ದು, ತೊವರಿ, ಹೆಸಱು ಮೊದಲಾದುವನಿಕ್ಕಿ ಅಟ್ಟು ಕೊಟ್ (ಕಪುರ. ಕಂ. ೦) ; ಭಕ್ಷಕ್ಕೆ ಗೋಧಿ ಪ ೩ ಉದ್ದು ಪ ಳ ಬೆಲ್ಲ ೧೧ . . . ಹೆಸಱು ಪ ೨೧ ತೆಂಗಿನ ಕಾಯಿ ಬಾಳೆಯ ಹಣ್ಣು ಅತಕೆಲೆ ಸಹ (ಎಕ. XV, ಬೇಲೂರು. ೬೦-೪೪; 1486) ; ಹೆಸಱು ತವಗುಣಿ ಕಡಲೆ ತೊಗರಿಗಳ ಬೇಳೆಯ ಹೊಸ ಬೆಲ್ಲವಿಕ್ಕಿ ಬೇಯಿಸಿ (ಸೂಶಶಾ. ೧-೬೦).

[ದೇ. ॥ ತಮಿ. ಪಯಱು; ಮಲ. ಪಯಱ್, ಪಯಱು; ತುಳು. ಪದೆಂಜಿ ; ತೆಲು. ಪೆಸರ, ಪೆಸಲು; ಕೋಲಾ. ಪೆಸಲ್, ಪೆಸಾಲ್; ನಾಯ್ಕಿ. ಪೆಸಳ್ ; ಪರ್ಜಿ. ಪಯರಿ ; ಗೊಂಡಿ. ಪೆಸಲ್]

**ಪೆಸಱು** 'ಪೆಸಱಿಸ್' ನೋ.

**ಪೆಹೆಲ್‌ವಾನ್** 'ಪೈಲವಾನ' ನೋ.

**ಪೆಳಕು** (ನಾ). ನಿಗದಿ ಮಾಡಿಕೊಂಡ ಸ್ಥಳ; ಸಂಕೇತಸ್ಥಾನ: "ಸಂಕೇತ ಯುಕ್ತಸ್ಥಳಂ ಪೆಳಕೆಂದು" (ಕರ್ಣಾಶ. ೪೩). [?]

**ಪೆಳಕೆ, ಪೆಣಕಿ, ಪೆಣಕ್ಕೆ, ಹೆಳಕೆ** (ನಾ). ತೆಳುವಾದ ಹಲ್ಲೆ,—ಬಿಲ್ಲೆ; ಹೆಕ್ಕಳೆ: ಮಾತಿಲ್ಲದೆ ಉಗುರುಗಳಿಂದ ಪೆಳಕೆಗಳನ್ನು ಕಿತ್ತೆಸೆಯುತ್ತಿದ್ದಾಗ (ಹಸುಹೊ. ೩೭೮). **ಪೆಣಕಿ:** ಗೋಡೆಯ ಮೇಲೆ ಸುಣ್ಣದ ಪೆಣಕಿಯು ಹಾರಿ ನಾಲ್ಕು ಕಲೆಗಳು ನಿಂತಿದ್ದರೆ ಚಿಂತಾಮಣಿಯು ತನ್ನ ನಿಸ್ತೇಜಮುಖದ ಪಡಿನೆಳಲನ್ನೇ ಅಲ್ಲಿ ಕಾಣುವನು (ಕಸಕ. ೬೩). **ಪೆಣಕ್ಕೆ:** ಕಲ್ಲಿನ ಪೆಣಕೆ ಹಾರಿ ಶಾಸನದ ಕಡೆಕಡೆಯ ಭಾಗವು ನಷ್ಟವಾಗಿದೆ (ಶಾಸಕ. ೭೮). **ಹೆಳಕೆ:** ಬಿರುಕಿನ ಸಂದಿಯಲ್ಲಿ ಬೆರಳು ತೂರಿಸಿ ಹೆಳಕೆಯನ್ನೆಬ್ಬಿಸಿದರೆ . . . ಕಾಣಬಹುದು (ಹಸುಹೊ. ೬೮). 'ಹೊಳಕ್ಕೆ' ಪರಾ. [←ತಮಿ. ಪಿಳಪ್ಪೈ]

**ಪೆಳರ್** 'ಪೆಳಱು₁' ನೋ.

**ಪೆಳರು₁** 'ಪೆಳಱು₁' ನೋ.

**ಪೆಳರ್ಚು₂** 'ಪೆಳಱು₂' ನೋ.

**ಪೆಳರ್ಚಿಸು** (ಕ್ರಿ). ಹೆದರಿಸು; ಅಂಜಿಸು; ಭಯಪಡಿಸು: ಪುರದ ಪೃಥಿವೀಪಾಲಪೂರ್ವಾನ್ವಯದರಸುಗಳಂದಿನ ಚಕ್ರೇಶ್ವರರಂ ಪಿರಿದಪ್ಪವ ಗಡದಿಂದ ಪೆಳರ್ಚಿಸಿ ಬಲ್ಲಿಪ್ಪಂಗೊಂಡು ಇರಿಸಿದ ನವನಿಧಿಯೋ ಎನಲ್ (ಜಯಚಾ. ೦-೫೭). [ಪೆಳರ್ಚು + —ಇಸು₃]

**ಪೆಳರ್ಚು** (ಕ್ರಿ). ಹೆದರಿಸು; ಅಂಜಿಸು; ಭಯಪಡಿಸು: 'ಪೆಳರ್ಚಿಸು' ಪರಾ. [<ಪೆಳಱು₁ + —ಚು₁]

**ಪೆಳರ್ವಡು** (ಕ್ರಿ). ಭಯಪಡು: ಹೆದರು; ಅಂಜು: ವನಗಜವೊಕ್ಕ ಮಳ್ಳದವ ಕೋಟಿಗ್ನಿಸಲ್ಕೊಳ್ ಕೆಸಱಾಟವಾಡಿ ಸೊಕ್ಕಿನ ಸೊವಡಿಂಗೆ ಮುತ್ತಿ ಮುಱುಂಬಿಗಳಂಜಿಸೆ ರೋಮಮಿಕ್ಕಿ ಬಿಕ್ಕನೆ ಬರಿವಂತೆ ಬಂದ ಬಲದೊಳ್ಪೆಳರ್ವಟ್ಟು[ಪಾಠಾಂ. ಬೆಳರ್ವಟ್ಟು, ಬೆಳರ್ವಟ್ಟು] ಮದಕ್ಕೆ ಪಂದ ಕಂಪಿನ ಕಳಭಂಬೊಲಿರ್ದುದತಿದರ್ಪರಸಾಕರನೊಂದುಸೂಕರಂ (ಅರ್ಜನೀ. ೩-೩೫). [ಪೆಳಱ್ (<ಪೆಳಱು₂) + ಪಡು₁]

**ಪೆಳವ** 'ಪೆಟಿವ' ನೋ.

**ಪೆಳವಳಿಸು** 'ಪೆಳ್ವಳಿಸು' ನೋ.

**ಪೆಳವಿ** 'ಪೆಟಿವಿ' ನೋ.

**ಪೆಳಱ್** 'ಪೆಳಱು₂' ನೋ.

**ಪೆಳಱಿಸು, ಪೆಣಱಿಸು** (ಕ್ರಿ). ೧. ಹೆದರಿಸು; ಭಯಪಡಿಸು; ಅಂಜಿಸು: ಜುಂಜೆಯ ದನಿ ದಿಕ್ಪಾಲರನಂಜಿಸೆ ತಳ್ತೊಗೆವ ಕೋಡ ಕಾಳೆಯ ದನಿ ದಿಕ್ಕುಂಜರಮಂ ಪೆಳಱಿಸೆ [ಪಾಠಾಂ. ಬೆದಱಿಸೆ] ನಭಮಂ ಜೇವೊಡೆಯುಲಿವು ಸುತ್ತಿ ಮುತ್ತಿತ್ತಾಗಳ್ (ಶಂಖಪ. ೪-೫೭): ಪೊಡವಿ ಯೊಳಗಿರ್ದುರಗರಾಜನ ಹೆಡೆಹೆಡೆಯುನಪ್ಪಳಿಸಿ ದಿಗಿಭವನೊಡನೆ ಪೆಳಱಿಸೆ . . . ಶಿವಿಸ್ತರಿಸಿದತ್ತಂ ಬಿಡದೆ ದಶರಥನೃಪನ ಧನುರ್ಗುಣಘೋರಟಂಕಾರ (ಶಬಮುರಾ. ೨-೫೦); ನೀನು ಪ್ರೀತಿಯಿಂ ಸಕಲದೇವಾನ್ನಮಂ ಸಲಿಸೆ ನಿನ್ನಯ ನೆನಹಿನಿಂ ಜನಿಸಿದ ಭೂತಜೀವರ್ಗೆ ಸಂತೃಪ್ತಿಯಹುದೆಲೆ ಮಹಾ ಪೂತ . . . ಪೆಳಱಿಸಬೇಡ ಸಲಿಸೆನಲು (ಶ್ರೀಕೃ. ೪-೫೫). ೨. (ಅಲಂ) ಓಡಿಸು; ನಿವಾರಿಸು; ತೊಲಗಿಸು; ನಾಶಮಾಡು: ಬೆಳಗಿ ದಿಗಂಬರ ಪ್ರತತಿಯಂ ಕುಮತೋಗ್ರತಮಃಪ್ರಕಾರಮಂ ಪೆಳಱಿಸಿ . . . ನಿರ್ಮಳನ ಕಳಂಕ ಚಂದ್ರನೆಸೆದಂ ಧರೆಗಚ್ಚರಿ ಪೆರ್ಚೆ ತೇಜದಿಂ (ನೇಮಿಪು. ೦-೨೦); ಮಳರಹಿತದರ್ಶನಮನಸ್ಖಲಿತಸ್ವರ್ಗಾಪವರ್ಗಸುಖಕರಮನದಂ ಪೆಳಱಿಸು ವುದಾತ್ಮನೊಳ್ಸಂಗಳಿಸಿದನಂತಾನುಬಂಧಿನಾಮಕಷಾಯಂ (ಶಾಂತೀಶ್ವ. ೦೩-೬೨). ೩. ಕಳೆಗುಂದಿಸು; ತೇಜೋಹೀನವನ್ನಾಗಿ ಮಾಡು: ಬಳಸಿ ಚಿಲಿಪಿಲಿಪ ವಿಹಗಂಗಳ ಕಳಕಳದೊಡನೆ ತೊಡರ್ದು ಸರಸಿಜವನಳಮಂ ಪಟಂಗೊಳಿಸಿ ಕುಮುದಮುಖಮಂ ಪೆಳಱಿಸಿ ಶೀಡಿತ್ತು ಸುಪ್ರಭಾತಸಮೀರಂ (ಕುಸುಮಾ. ೪-೭೦). **ಪೆಣಱಿಸು:** ೧. ರಥಪರಿವೃಢಮೇಬ ಗಿರಿಯೇಱಿ ಪೆಣಱಿಸಿ ರಥರಾಕ್ಷಸನೊಸೆದೀಯೆ ಪೃಥುವೀರ್ಯನು ಮಕರಧ್ವಜಯುತ ಪುಷ್ಪರಥಮನಿರದೆ ಕೈಕೊಂಡು (ಸೇಮಸಂ. ೦೪-೦೪೪). [ಪೆಳಱು₁ + —ಇಸು₃]

**ಪೆಳಱು₁, ಪೆಡಱು, ಪೆಣಱು, ಪೆಳರ್, ಪೆಳರು₁** (ಕ್ರಿ). ೧. ಹೆದರು; ಭಯಪಡು; ಅಂಜು: "ಪೆಳಱು—ಭಯೇ" (ಶಮದ); ಮದಕೋಕಿಲ ಕಲನಿನದೆಯ ವದನಸುಧಾಸೂತಿ ಬೆಳಗೆ ಪೆಳಱಿದ ತಮಮಿಷಾ ಪುದಿದು ಪೆಱಗಿರ್ದುದೆನಿಪುದು ಮದಗಜಗಮನೆಯ ವಿನೀಲಕೇಶಕಲಾಪಂ (ಅದಿಪು. ೬-೬೨); ಪೆಳಱಿದ ವಾಜಿರಾಜಪವನಂಜಯನಾ ತುರುವುಲದೇಶದಿಂ ತಳರ್ದು . . . ಮಣಿಶೃಂಖಲೆಯುಂ ಪಿಡಿಯಲ್ (ಕುಸುಮಾ. ೦೪-೯೩); ಬಿಡು ಬಿಡು ಪಿಡಿಯದಿರೆಲೆಯೆಲೆ ಜಡಮತಿ ಸಾವಿಂಗೆ ಪೆಳರ್ದು ಪೊಕ್ಕುದು ಬಂದೀ ಗುಡಿಯಂ ಕುಱಿಯಿದು (ವೃಷಪ. ೦೭-೯). △ **ಪೆಡಱು:** ೧. ಧರೆ ಕಂಪುಗೊಳ್ಳುಮಾಸಾಕಲಿ ಪೆಡಱುಗುಂ (ಎಕ. VII, ಶಿಕಾ. ೦೦೪-೨೫; 1096). **ಪೆಣಱು:** ೨. (ಅಲಂ) ಸೀಳಿಹಾಕು; ಕೊಲ್ಲು (?): ಇರುಳೆಂಬ ಕಿಭದಿಂ ಹಿಮಕರನಾದ ಕರಿಯ ತೆಱದಿ ತಳ್ತೊಗೆಯೆ ಸುಧಾ ಕಿರಣಮದಮ್ಭಗೆ ಪರಿದುದು ವಿರಹಾಕುಳರೆಬ ಬೀರರಂ ಪೆಣಱುತ್ತುಂ (ಅಜಪು. ೬-೯೩). **ಪೆಳರ್:** ೧. ಲಲನೆಯರು ಮಾನಕಗಿದಾವದುಂ ಶಿಕ್ಷಾದಿಗಳಿಗೆ ಪೆಳರ್ದಾಗದುಂ ಪರಪುರುಷಸಂಪರ್ಕಮಿಳಿವುದೆ ಕನಿಷ್ಠತರಮಾದ ಪಾತಿವ್ರತ್ಯವು (ಮಲ್ಲಿಕ. ೦೪-೨೯). **ಪೆಳರು₁:** ೧. ಪಾಮರಿಯ ಬಿರುದನಿಗೆ ಕೈಪರೆಗೆ ಬಾಯ್ಬರೆಗೆ ಕಲ್ಲವಣೆಗೊಂದಿನಿತು ಪೆಳರಿ ಗಾಬರಿಗುತುಂ, ಭರ್ರೆಂದು ಪೆರತೊಂದೆಡೆಗೆ ಪಾರಿ ಮಂಡಿಸುತೆ ತೊಡಗಿದಮವಿನ್ನೊರ್ಮೆ ನೆಲ್ಮೇವಿಗೆ (ಶಕ್ತ್ರಾಂಗ. ೫೩-೦೪೫೨).

[ದೇ. ॥ ತಮಿ. ಪಿಱಟು; ತೆಲು. ಪೆಲುಕುಱು, ಪೆಲ್ಯುಱು]

**ಪೆಳಱು₂, ಪೆಳರ್ಚು₂, ಪೆಳಱ್** (ನಾ). ಭಯ; ಅಂಜಿಕೆ; ಭೀತಿ; ಹೆದರಿಕೆ: "ಅಗುರ್ವು, ಬಿಗುರ್ . . . ಪೆಳಱು, ಮಲ್ಲಟಿ, ತಲ್ಲಣಂ, ಅದಿರ್ವು — ಈ ೧೦ ಭಯಂ" (ಕನಿಘ. ೫೬-೨೨೩); ಇರದಳಿಯನೀಳದಂ ಸೂಕ್ತುಳಿಯೋಕುಳಿ ಕಳಱು ಪೆಳಱು ಮಱುಕುಳಿಯಳಿಯಂ. . . ಇಱುಕುಳಿ ಯಿಮ್ಮಡಿಯಾಗಱು ಕುಳನು (ಕವಿರ. ೨೬); ಕೋಗಿಲೆವಱು ಮಾಮರದೊಳ್ ಕೂಗೆಯ ಕೊತ್ತಟಿಯೊಳೆಟ್ಟು ಪೋಗಲುಮಿರಲುಂ ಕೂಗಲುಮೆಮೆದೆಱ ದಿಕ್ಕಲುಮೆಂಗೆಯ್ಯಲುಮಮರ್ತುದಿಲ್ಲ ಬನದೊಳ್ ಪೆಳಱಿಂ (ಕಣ್ಣಾಕು. ೫೬ ವ್ಯಾ). **ಪೆಳರ್ಚು₂:** ಇಲ್ಲ ಕರು ದನವೆಂಬ ಹೋಹೋಯ್ತು ಯೆತ್ತೆಂಬ ಸೊಲ್ಲಿನಿಂ ಮನೆಮನೆಯ ಪೆಳರು ಪಿರಿದಾಯ್ತು (ಕಾಲಆರ. ೬೭-೦೪೭); ಸುಯ್ಯೊಡಲಿನಿಂ ಪೆಳರ ಮೆಟ್ಟಿ ಬಾದಂ ಕೊರಗ ಹುಯ್ಯಲಿಂ ಹಂದರಂ ಕಳವಳಿಸುತಿರಲು (ಕಾಲಆರ. ೦೭೦-೩೬೨). **ಪೆಳಱ್:** "ಪೆಳಱಬಲೆಂದೆಲ್ಲಿಯು ಕವಿವರರುಸಿರಲ್ ನಿಲ್ಲದೆ ಭಯನಾಮ" (ಕಬೀ. ೦೦೮); ಮನದೊಳಗೆ ಧೃತಿಗೆಡದೆ ಅವನಿಪಂ ಕೇಳ್ದೊಡಂ ತನುವ ತತ್ತ್ಱದಱ ಸುವಂ ಬಳಿಕಮೆಂಬ ಪೆಳಱುವಮೆಯ್ದೆ ತಲೆದೋಱದೆ ನೆನಸುಮೆನಗಂ ಸಾವು ತಪ್ಪದು (ಅರಾಕ. ೦-೭-೨೨). [<ಪೆಳಱು₁]

**ಪೆಳಱುಗೊಳ್** (ಕ್ರಿ). ಹೆದರು; ಅಂಜು; ಭಯಪಡು: 'ಪೆಳಱು ಗೊಳಿಸು' ಪರಾ. [ಪೆಳಱು₂ + ಕೊಳ್₁]

**ಪೆಳಱುಗೊಳಿಸು** (ಕ್ರಿ). ಭಯಗೊಳಿಸು; ಅಂಜಿಸು; ಹೆದರಿಸು: ಅತ್ತ ಮತ್ತೊರ್ಮೆ ಹಳಿಗೂಳಿಯಂ ಪೆಳಱುಗೊಳಿಸಿದಡೆ ಕಿಸಟಂಕಕಾಟರ ನಿಕ್ಕಿದೊಡೆ ಕಂಸನಾ ಜಾಳಾನೆಯಂ ಕೆಡಹಿದೊಡೆ ಮಹಾದ್ಭುತವಾಯ್ತು (ಸಾಳ್ವಭಾ. ೨೫-೪೦). [ಪೆಳಱುಗೊಳ್ + —ಇಸು₃]

**ಪೆಳಿ** (ನಾ). (?): ಮತ್ತಂ ಪ್ರಭಯ ನಾನಾದೇಸಿಗಳು ದೇ ××× ಕ್ಕೆ

ಯೂರೊಳಗೆ ಹೊಕ್ಕ ಪೆಳಿಯಲ್ಲಿ ಬಿಟ್ಟು ಪಣ ೨ ಪೆಱವರ ಪೆಳಿಯಲ್ಲಿ ಬಿಟ್ಟು ಪಣ ೨ ಮತ್ತಂ ಕುದುರೆಗೆ ಪೀಸಪೊಂದಂ ಬಿಟ್ಟರ್ (ಶಾಇಸ. XV. ೦೩೫-೫೬ ; 1179). [ ? ]

**ಪೆಳ್ಳಿ$_1$** (ನಾ). ಪೊದೆ ; ಪೊದರು : ಪೆಳಿ : ಒಂದು ಕೈಯಲ್ಲಿ ಸೀರೆಯ ನಿರಿಗೆಗಳನ್ನು ಒಡಿದುಕೊಂಡು ಕಂಟಿ ಪೆಳಿಗಳ ಮಧ್ಯದಲ್ಲಿ ಓಡಲನುವಾನೆ (ಕಂಬುಱ. ೩೦); ಇಂದು ಅಲ್ಲಿ ಕೆಂಪು ಬಟ್ಟೆ ಬಿದ್ದುಕೊಂಡಿದ್ದುದರ ಬದಲು ಸೂರ್ಯಪ್ರಭೆಯಂತೆ ಲಕಲಕಿಸುವ ನಿಲುವಂಗಿಯ ತುದಿಯೊಂದು ಪೆಳಿಯಲ್ಲಿ ಮರೆಯಾದಂತೆ ಕಂಡಿತು (ಹೇಮಂತ. ೦೬). 'ಪೆಳ್ಳಿ$_1$' ಪರಾ. [ ? ]

**ಪೆಳ್ಳಿ$_2$** (ನಾ). ಗುಳ್ಳಿ ; ಬೊಕ್ಕೆ ( ? ) : ಕಣ್ಣನೊಳಗಣ ಕಸ ಕೈಯೊಳಗಣ ಪೆಳಿ[ಪಾಠಾಂ. ಪೇಳಿ ] ಬಾಯೊಳಗಣ ಬಗದಳ ಮನದ ಶಂಕೆ ಹಱದಲ್ಲದೆ ಪ್ರಾಣಲಿಂಗಿಯಾಗಬಾರದು (ಪುರಾಗಂ. ೪. ೨೫೪-೫೫).

[ ?. / ತಮಿ. ಬಿಳನ್ಮೈ]

**ಪೆಳ್ಳಿಯೂರ್** (ನಾ). ಒಂದು ಊರಿನ ಹೆಸರು : ಕುಡುಕೂರ ಭಟಟ ದೋರಯ್ಯನ ಮಗಂ ಮಾರಯ್ಯಂ ಬಿನವಾರನೊ × × × ಳ್ಳಿಯ ಪೆಳ್ಳಿಯೂರಬಿನೊಳ್ಳತ್ತಂ ದೋರಯ್ಯಂ ಕುಡುಕೂರಲ್ಕಲ್ಲನ್ನಿಱಿಸಿದಂ (ಎಕ. VI. ಮೂಡಗೆ. ೫೦ ೫; 997). [ ? +ಊರ್ ]

**ಪೆಳ್ಪಳ** (ನಾ). ಭಯ ; ಹೆದರಿಕೆ ; ಗಾಬರಿ : 'ಪೆಳ್ಪಳಿಸು', 'ಬೆಳ್ಪಳ' ಪರಾ.

**ಪೆಳ್ಪಳಿಸು, ಪೆಪ್ಪಳಿಸು, ಪೆವ್ವಳಿಸು, ಪೆಳವಳಿಸು, ಪೆಳ್ವಳಿಸು, ಹೆಪ್ಪಳಿಸು** (ಕ್ರಿ). ೧. ಹೆದರು ; ಬೆದರು ; ಭಯಪಡು ; ಗಾಬರಿಗೊಳ್ಳು : ಪೊಸತಲದೊಂದು ತಾವರೆಯ ಗೆತ್ತು ಮುಖಾಬ್ಜಮನೊಂದು ತುಂಬಿ ಚುಂಬಿಸೆ ಸತಿ ಬೆರ್ಚಿ ಪೆಳ್ಪಳಿಸಿ ನೋಟ್ಪುದುಂ (ಶಂಪರಾ. ೫-೬೩); ಕುಲಶೈಲಂಗಳ ಪದ್ಮಿನೀಕುಲದ ದೇದೀಸಂಕುಲಂ ಬೆರ್ಚಿ ಪೆಳ್ಪಳಿಸುತ್ತುಂ ದೆಸೆಯಾನೆ ಬೆರ್ಚಿ . . . ಘೂರ್ಣಿಸಿತ್ತು ರಘುಜಪ್ರಸ್ಥಾನಭೇರೀರವಂ (ಶಂಬಾಪಾ. ೧೨-೦೬); ಕೇಸರಿಗೆ ಪೆಳ್ಪಳಿಪ ತುರಗಮುಖಿಯರ್ಕಳಿಂ ತುರಗಮುಖಿಯರನಣಮುಜಿಕೆಂಡಿಸುವ ಕಪಿಗಳಿಂ (ಜಂಸಾ. ೧೧-೨೭ ರಗಳೆ) : ಸುತ್ತೆತ್ತಲುಂ ನೋಡಿ ಪೆಳ್ಪಳಿಸುತಿರೆ ಸೀತೆ, ಕಣ್ದೆರೆದನಾ ರಕ್ಕಸರಾಕ್ಷಸಂ (ಶ್ರೀರಾಮಾ. ೨೯೩-೪೨೬). ೨. (ಭಯದಿಂದ) ತಿಗುಗು ; ಚಲಿಸು : ಪರಿಮೂತ್ರಂ ಭಿನ್ನಲಿಂಡಂ ಸುರಿಯೆ ಮದಜಳಂ ಮೊಯ್ಯೊಳಟಿಯ್ದಾಡೆ ಭೀತಾತುರಚಿತ್ತಂ ಸುತ್ತಲುಂ ಪೆಳ್ಪ[ಪಾಠಾಂ. ಪ್ಪ, ಳ್ವ]ಳಿಸೆ ನಯನಮುತ್ಕಂಪಿತಂ ಕುಂಚಿತಾಂಗಂ ಪದೇಳಾಕುಂಜಮಂ ಪೊಕ್ಕದೆಮಿಡುಕದೆ ನಿಂದಿತ್ತು ಮತ್ತೇಭಂ ಸಾರ್ತರೆ ಕರ್ಣಾರ್ಘ್ಯರ್ಣಮುಂ ವನ್ಯಮೃಗವಿಳಯನಿಷ್ಪಾದಕಂ ಸಿಂಹನಾದಂ (ಪಂಪರಾ. ೦೦-೯೭ ; ಸೂಕ್ತಿಸು. ೩-೬೯ ನೋ). **ಪೆಪ್ಪಳಿಸು :** ೧. ನಡುಗುತ್ತಕ್ಕಂ ಕಂಡಪ್ಪಳಿಂದು ಮೃಗಾಕ್ಷಿ ಪೆಪ್ಪಳಿಸಿ ದೆಸೆಯುಂ ನೋಡುತ್ತುಂ ಪೊರ್ದಿದಳ್ ನೃಪಚಂದ್ರನಂ (ಕಾದಂಬ. ೬೯೫) ; ಅಲ್ಲಿಗೆ ಚಿತ್ರಾಂಗನೆಂಬ ಸಾರಂಗಂ ಭೋರೆನೆ ಬಂದು ನೀರಂ ಕುಡಿಯಲಣ್ಮದೆ ಪೆಪ್ಪಳಿಸಿ ಪೆಱಗಂ ನೋಡಿ ನಡುಗುತ್ತುಂ ನಿಂದುದಂ ಕಚ್ಛಪಾದಿಗಳ್ ಕಂಡು (ಪಂತಂ. ೩೦೭-೬) ; ಇಂತಹ ಸುಲಭೋದ್ವೇಗಗಳ ಕ್ಷುದ್ರ ಭಾವಗಳ ಕಿರುದೆರೆಗಳಿಂದಲೇ ಪೀಳನಾಗಿ ಪೆಪ್ಪಳಿಸಿ ಮನ್ನನಾಗಿ ದಿಙ್ಮೂಢನಾಗಿರುವ ನೀನು : . . ತೊಂತುಪೋಗಿರುವ ಈ ರಾಜ್ಯವೆಂಬ ಹಳೆಯ ನಾಕೆಗೆ ಹೊಸ ಕರಣಧಾರನಾಗಿರುವೆ! (ಬಿಭೀ. ೨೦೫-೨೦). ೨. ತಳಮುಳಗಾಗದ ತನು ಪೆಪ್ಪಳಿಸದ ನೆಲೆ ತೊಲಗದಱವು ಪೆಳಱದ ಬೇಷ್ಟಾಪಳಿ ಪಂಚನಮುಸ್ಕಾರದ ಕಳ್ಗುತಿ ತಮಗಮರೆ ಮಡಿಪಿದರ್ ಮಣಿಚೂಳರ್ (ಶಾಂತಿಪು. ೬-೬೦). **ಪೆವ್ವಳಿಸು :** ೧. ಮತ್ತವೊರ್ವ ಚಿಂತಾವಿಹಾರಭರದೊಳಟಲ್ಟು ನಸು ಮುಚ್ಚಿದ ವಿಳೋಚನದಿನಿಱದು ಪೆರ್ವೊಲೆಯ ಕೆಲದೊಳ್ ಪನಿವ ಕಣ್ಣನಿಯ ಸಪ್ಪುಳ್ಗೆ ಪೆವ್ವ[ಪಾಠಾಂ. ರ್ವ]ಳಿಸಿ ಬಱದೆ ಕಂಪಿಸುವಳ್ (ಪರಶು. ೪-೫೬ ವ). **ಪೆಳವಳಿಸು :** ೧. ಭಯಂಗೊಳ್ಳೆ ಬೆಳ್ಪರುಮಂ ಉಬ್ಬರಿಸುವ ಕುರುಡರುಮಂ ಪೆಳವಳಿಸುವ ಕಿವುಡರುಮಂ ಕಂಡು (ಲೀಲಾವ. ೫-೧೦೪ ವ). **ಪೆಳ್ವಳಿಸು :** ೧. ಕನಸಿನೊಳ್ ರಥಾಂಗಧರ ಯಕ್ಷರೂಪಮಂ ಕಂಡು ನೆನೆಸೆಂದು ತಂತಪ್ಪು ನೆಲೆಗಳೊಳ್ ಪುರಸ್ಥರುಱಕೋಟ ಪೆಳ್ವಳಿಸೆಯುಂ (ಶಾಂತಿಪು. ೧೦-೦೨೨ ವ). **ಹೆಪ್ಪಳಿಸು :** ೧. ಕಳವಳಿಪ ಹೆಪ್ಪಳಿಪ ತೋಳಿಪ . . . ಬಳಲ್ವ ಹಾಹಾಕ್ರಂದ ನಂಗೆಯ್ವುಳಲ್ವ ಜೀವಿಗಳೆಲ್ಲ ದುಃಖಂ ಕಳಲ್ವವೊಲೀಕ್ಷಿಸಲಿಕೆಯ್ಯಂದಾ ಮಹಾಕರುಣಿ (ಶಾಸಂಶ. ೯-೦೬) ; ಹರನಿಂತು ಮೂಗುವಟ್ಟಿರೆ ಕೆದೆದು ದಡದಡಿಸಿ ಕೆರಳಿ ಕೂರಂಬು ಮಱುದೊಸೆದೆರ್ಪ ಮಱವುಲ್ಲೆಯಿರವಿನಂತಿರಲು ಹವ್ವನೆ ಹಾಱ ಹೆಪ್ಪಳಿಸಿ (ಸೌಂದರ. ೦೪-೩೦). ೩. ಹೆದರಿಕೆಯನ್ನುಂಟು ಮಾಡು ; ಹೆದರಿಸು : ತಪ್ಪದಹುದು ಕೌಶಿಕನ ಕೋಟಲೆ ಈಗ ಮುಪ್ಪುರಿಗೂಡಿ ರಾಯನಿಗೆ ಹೆಪ್ಪಳಿಸಿತು ಶಿವಶಿವ ಎಂದು ಬೆಱಗಾಗಿ ಒಪ್ಪಗುಂದಿದ ಮಾನದೊಳಗೆ (ಹರಿಶ್ಚಂ. ೧-೯೩). ೪. ಹಿಂದುಮುಂದು ನೋಡು ; ಸಂಕೋಚಪಡು : ಅರ್ಪಿತಪ್ರಸಾದವಲ್ಲದಿಹನ್ನುವ ಹೆಪ್ಪಳಿಸದೆ ಬಲು ಮನದಿಂದುಂಬುವ ಸತ್ತ್ವ ಹೊನ ಮಲಮಂ ಕಲ್ಪಿಪಮಂ ನಿತ್ಯಂ ಸಲೆ ಸವಿನವ ಪಾತಕಮಂ (ಬಸವಪುರಾ. ೯೩-೩೨೬); ಅರ್ಪಿಸಿದ ಪದಾರ್ಥಮುಮಾನೊಪ್ಪು ಗೊಂಬ ಪ್ರಸಾದಿ ಅರ್ಪಿಸದ ದ್ರವ್ಯಕ್ಕೆ ಹೆಪ್ಪಳಿಸುವ ಪ್ರಸಾದಿ ತನು ಸೋಂಕಿತಂ ಲಿಂಗಕೇನ ಬಲ್ಲ ಪ್ರಸಾದಿ ಮನಮುಟ್ಟಿತಂ ಲಿಂಗಕೇನ ಬಲ್ಲ ಪ್ರಸಾದಿ (ಬಸವಪುರಾ. ೦೦೫-೦೯೬). 'ಬೆಳ್ಪಳಿಸು' ಪರಾ.

[ಪೆಳ್ಪಳ + — ಇಸು$_3$]

**ಪೆಳ್ವಳಿಸು** 'ಪೆಳ್ಪಳಿಸು' ನೋ.

**ಪೆಳ್ಳಗಿಸು** (ಕ್ರಿ). ಹೊರಕ್ಕೆ ಎಳೆ : ಈ ಬೆಟ್ಟವನ್ನು ಬೇರು ಮಟ್ಟ ಕಿತ್ತು ಪೆಳ್ಳಗಿಸಿ ಎತ್ತಿ ನನ್ನ ತಲೆಯ ಮೇಲಿಟ್ಟರೆ ನಾನು ಹೊರುವುದಕ್ಕೆ ಸಿದ್ಧ (ಕಥಾಮಂ. IV. ೩). [? + — ಇಸು$_3$./ತೆಲು. ಪೆಳ್ಳಗಿಂಚು]

**ಪೆಳ್ಳನೆ** (ಅ). ಒಂದು ಅನುಕರಣಾವ್ಯಯ : ಈ ರೂಪೊಂಬುದು ಭುವನಜನಾರಾಧ್ಯಂ ಚಕ್ರಿಜನನಿಷೇವಿತಮಿದಱೊಳ್ ಸಾರದಳಿಪೆಂದು ಪೆಳ್ಳನೆ ಬಾರಿಸಿದುವು ಬಿಡದೆ ಜಿನಿದು ವನದೇವತೆಗಳ್ (ಶಾಂತಿಪು. ೯-೯೩).

[ ? + — ಅನೆ$_1$ ]

**ಪೆಱ$_1$, ಪೆರ$_1$** (ಸಪೂರೂ). 'ಪೆಱತು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪೆಱವರಿಱು', 'ಪೆಱವುಟಿ$_2$' ಪರಾ. ಪೆರ$_1$ : 'ಪೆರತಿ' ಪರಾ. [< ಪೆಱತು]

**ಪೆಱ$_2$, ಪೆರ$_2$, ಹೆರ$_1$, ಹೆಱ** (ಸಪೂರೂ). 'ಪೆಱಗು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪೆಱ', 'ಪೆಱಪಿಂಗು', 'ಪೆಱಸಾರ್' ಪರಾ. ಪೆರ$_2$ : 'ಪೆರಗೆಗೆ' ಪರಾ. ಹೆರ$_1$ : 'ಹೆರದೆಗೆ', 'ಹೆರಹಿಂಗು' ಪರಾ. ಹೆಱ: 'ಹೆಱಹಿಂಗು', 'ಹೆಱಸಾರ್' ಪರಾ. [< ಪೆಱಗು]

**ಪೆಱ$_3$** (ನಾ). (?): ಬಾಡದ ಸ್ವಯಂಭುದೇವರ್ಗೆ ಊರ ತೋಟದ × × × ಕೂಯ್ವಲಿ ವರ್ಷಂಪ್ರತಿ ಅಯ್ದು ಪೆಱ ನನ್ದಾದೀವಿಗೆಗೆ ಬಿಟ್ಟರು (ಎಕ. XI. ದಾವಣ. ೦೨೦-೩೫ ; 1065). [ ? ]

**ಪೆಱಉಟಿ** 'ಪೆಱವುಟಿ$_2$' ನೋ.

**ಪೆಱಂಟಿ** (ನಾ). (ನೇಗಿಲ) ಗುಳ : ನಾಲಗೆವಂಡಿ ಕಾಲ ಮಱಿ ಕೈಗೊಡೆ ತೀವಿದ ಪಳ್ಳ ಪೆರ್ಗಣಂ ಶಾಲಿ ಪೆಱಂಟಿ[ಪಾಠಾಂ. ಟ] ತಳ್ತಿಱನು ನೊಂಬವಱೊಂದು ಕಥಾವಿನೋದದಿಂ ಲೀಲೆಯನಾಂತು ರಾಜಸುತನುಂ ಜಠರಾಳಿನೀಂದ್ರದತ್ತನುಂ ಪೇಳಿಸೆ ವ್ಯರ್ಥಬೋದನಸಮನ್ವಿತರೆಯ್ದರಾ ಶಿರ್ದಣಾಪಗಂ (ಧರ್ಮಾಮೃ. ೩-೦೩):

**ಪೆಱಕಣ್ಣೆಱವು** (ನಾ). ಹಿಂದಿನ ಜನ್ಮದ ಅಱಿವು: ವಿದಳಿತ ಪುಷ್ಪಸೌರಭದಿನಬ್ಯುತಕಲ್ಪದ ಶುಕ್ಲಲೇಶ್ಯೆ ಲೆಪ್ಪದ ಐರಿ: ವಿಪ್ರನಂದನ ಬಲಂ

ಪೊಳೆವುನ್ನತ ತಿಗ್ಮರೋಚಿ ಬಣ್ಣದ ರುಚಿ ಮಿಂಚು ಮಿಂಚು ಪೆಜಕಣ್ಣಿಜ ವಾಗಿರೆ . . . ಮೆಚ್ಚಿಪಂ ಕುಮಾರಕಂ (ಅನಂಪು. ೬-೦೯).

[ಪೆಜ್ಜ (< ಪೆಜಗು) + ಕಣ್ಣಿಜವು]

**ಪೆಜಕಾಲ್** 'ಪೆಜಗಾಲ್' ನೋ.

**ಪೆಜಕಾಲ್ಗೊಳಿಸು** (ಕ್ರಿ). ಹಿಂಗಾಲಿನ ಮೇಲೆ ನಿಲ್ಲಿಸು : ಸುಸಸುಂದರಶ್ವ ಮಾನೇಜುತೆ ಪೊಳೆಯಿಸಿ ಮಿಗೆ ದಂಡೆಗುಡುತ್ತಿರ್ದುತೆ ಪೆಜಕಾಲ್ಗೊಳಿಸಿ ಪೆಡಂಮೆಟ್ಟುತ್ತುವ್ವಸುತ್ತೆ ಪಳಂಚಿದರ್ತುರಂಗಿಗಳದಜಿಗೊಳ್ (ರಾಜಶೇ. ೦೪-೮೩). [ಪೆಜಕಾಲ್ (< ಪೆಜಗಾಲ್) + ಕೊಳ್$_1$ + — ಇಸು$_1$]

**ಪೆಜಗಣ್** 'ಪೆಜಗು' ಪರಾ.

**ಪೆಜಗಣ** 'ಪೆಜಗು' ಪರಾ.

**ಪೆಜಗನೆ** (ಅ). ಹಿಂದೆಯೇ; ಹಿಂಬದಿಯಲ್ಲೇ : ಎನ್ನಯ ಸಖಿನನತ್ರ ಪೊಯ್ದುಪೆ ಮಾಣೆಂದೆನುತಂ ಕೋಪದಿನಾ ಪುರುಷನ ಪೆಜಗನೆ ತಾನುಮಂತ ರಿಕ್ಷೆಕ್ಕೊಗೆದಂ (ಅನಂಪು. ೯೯೩) : ಪೊಜಮಟ್ಟು ಮಿಲಟಂ ಪೆರ್ದುಜುವಿನ ಪೆಜಗನೆ ಚತುರ್ಬಲಳ್ನೋಪೇತಂ ತಾಂ ತಜಸಂದು ಪೋಪ ಪದದೊಳ್ (ನೇಮಿಪು. ೦೦-೦೩೬).

**ಪೆಜಪೆಜಗನೆ** (ದ್ವಿರುಕ್ತಿ) : ಬಟ್ಟೆಯಾನೆ ಮಕ್ಕಳ್ ಭೋರ್ಗರೆದಟುತುಂ ಪೆಜಪೆಜಗನುತೆ ಪರಿಧರೆ (ಕಂಕಥಾ. ೨-೨೯). [ಪೆಜಗು + — ಅನೆ$_1$]

**ಪೆಜಗಾಲ್**, ಪೆಜಕಾಲ್ (ನಾ). ಹಿಂದಿನ ಕಾಲು ; ಹಿಂಗಾಲು : ಪೆಜಗಾಲದೆಯಿಂ ನುಸುಳ್ದೋಡಿ ಕಾಡಿ ಸಂಗಳಿಸಿತದೊಂದು ಪಲ್ಲಮಜು ತಾಯ್ವಿಡಿಗುತುಮಾನಂತಸೌಖ್ಯಮಂ (ಚಂದ್ರಪು. ೩-೬೩). **ಪೆಜಕಾಲ್** : ಕಡವೆ ತುಟುದು ಕದಡಿದೆಡೆಯೊಳೆಲೆ ಕಬಲ್ದು ಕೆಡೆದ ತೋರಗೊಂಬುಗಳಂ ಪೆರ್ವಾಪೆಂದು ಪೊರ್ದಲಂಜಿ ಗೆಂಟಜಿಗೊಳ್ ತೂಗಿ ನೋಡಿ ಪೆಜಕಾಲೊ ಳೋಡುವ ಕಿಜುನರಿಗಳುಮಂ (ಕಬ್ಬಿಕಾ. ೨೩೪).

[ ಪೆಜ್ಜ (< ಪೆಜಗು) + ಕಾಲ್$_1$ ]

**ಪೆಜಗಿಕ್ಕು**, ಪೆರಗಿಕ್ಕು (ಕ್ರಿ). ೧. ಹಿಂದೆ ಉಳಿಯುವಂತೆ ಮಾಡು ; ಹಿಂದೆ ಇರಿಸು ; ಹಿಂದಕ್ಕೆ ಹಾಕು : ತಮಿಸ್ರಗುಹೆಯೊಳಗನೆ ಕಾಕಿಣೀ ರತ್ನದೊಳ್ ಬರೆದ ಚಂದ್ರಾದಿತ್ಯರ ಬೆಳಗುಗಳೊಳ್ ನಿಜವಿಜಯಕಟಕಂ ನಡೆಯೆ ವಿಜಯಾರ್ಧಾಚಲಮಂ ಪೆಜಗಿಕ್ಕಿ ಶಬರಖಂಡಂಗಳಂ ಸೇನಾನಾಯಕನೆ ಬಾಯ್ಕೊಳಿಸಿ ಬರೆ (ಆದಿಪು. ೦೯-೫೭ ವ) ; ನಿಜಜೇಟೆಯರಂ ಪೆಜಗಿಕ್ಕಿ ಬೇಗದಿಂ ನಡೆವು ಪೆಜಳ್ ಜನಾರ್ದನನ ರೂಪವಿಲಾಸಮನೊಲ್ದು ನೋಡಿದಳ್ (ಜಗನ್ನಾ. ೦೪-೯೩). ೨. ಹಿಮ್ಮೆಟ್ಟುವಂತೆ ಮಾಡು ; ಹಿಮ್ಮೆಟ್ಟಿಸು : ಮುನಿದ ಜವನುತಿಟ್ರೆಂದಾ ಭೀಷ್ಮನಂ ಪೆಜಗಿಕ್ಕಿದಂ (ಪಂಪಭಾ. ೦೨-೦೪). ೩. ಹಿಂದಿಟ್ಟುಕೊಳ್ಳು , ಕಾಪಾಡು ; ರಕ್ಷಿಸು : ವಿಜಯಾದಿತ್ಯಂಗೆ ಗೋವಿಂದರಾಜಂ ಮುಳಿಯೆ ತಳರದೆ ಪೆಜಗಿಕ್ಕಿ ಕಾವ ಶರಣಾಗತಜಲ ನಿಧಿಯ ಪೆಂಪುಮಂ (ಪಂಪಭಾ. ೯-೫೨ ವ) ; ಮುಡಿವೊಜಿಯ ವಿಷಯದೆ ಮಜಿಗೆವಂದಂಧಕಮನಮಂ ಪೆಜಗಿಕ್ಕಿ ತನ್ನೋಳ್ ಮಲೆವ ಲಲನೆಯರ ವದನವಿಧುಬಿಂಬದೊಳ್ ಕಪೋಳಸಂಭೃತಪ್ರತಿಕೃತಿಚ್ಛದ್ಮದಿಂ ಪೊಕ್ಕು ಪೊರ್ಕುಳಿಯಿಕ್ಕಿಯುಂ (ಪರ್ಮಪು. ೬-೪೩ ವ). ೪. ಬಿಡು ; ತ್ಯಜಿಸು : ಬಾಲಿಕೆ ಮುಗ್ಧೆ ತಕ್ಕುದಜಿಯಳ್ ಪಲರಂ ಪೆಜಗಿಕ್ಕಿ ಸೂಡಿದಳ್ ಮಾಲೆಯಂ (ಶಂಖಾಪು. ೬-೪೭) ; ಪ್ರಿಯೆ ತನಗೇಬಿದಂ ಬಗೆಯದೆನ್ನನಪಂ ಪೆಜಗಿಕ್ಕಿ ಪೋಗಿ ಸಂಜೆಯೊಳನುರಕ್ತನಾಗಿ ನೆರೆದಿರ್ದಪಂ (ಮಲ್ಲಿಪು. ೬-೦೯). ೫. ಮೀರು ; ಅತಿಕ್ರಮಿಸು ; ಉಲ್ಲಂಘನೆ ಮಾಡು : ಅಜಿಸ ಮಗಂ ಪ್ರಾರ್ಥಿಸೆ ಬಾಂದೊಜಿಯ ಮಗಂ ಮಾಡೆ ಸಂಧಿಯಾವುದೆನುತುಂ ಮಜುಗದಿ[ರ್ಣ್ಣನ] ಮಾತಂ ಪೆಜಗಿಕ್ಕುಮೆಂ (ಗದಾಯು. ೦-೬೨). ೬. ಉದಾ ಸೀನ ಮಾಡು ; ಉಪೇಕ್ಷಿಸು : ಈ ನುಡಿಯನೀ ಪದದೊಳ್ ಪೆಜಗಿಕ್ಕಿ ನಾರದಂ ಮನದೊಳೆ ಪೆಸುಗುಂ ಸುರಪನುಂ ನಗುಗುಂ . . . ಎಂತು ಪೇಳ್ಸುವುದೀ ಮುಖಮಂ [ಸರಸೀರುಹೋದರಾ (ಕಂಕಥಾ. ೬-೭೫). **ಪೆರಗಿಕ್ಕು** : ೨. ವಿಕ್ರಮನು . . . ಪರಾಕ್ರಮದಿಂದ ಪರಸೈನ್ಯವನ್ನು ಪೆರಗಿಕ್ಕಿ ಎಡೆಗೊಡದಟ್ಟಿ ಕೊಂದನು (ಕಲಿ. ೬೦). [ಪೆಜಗೆ + ಇಕ್ಕು$_1$]

**ಪೆಜಗಿಡು** (ಕ್ರಿ). ೧. ಹಿಂದಕ್ಕೆ ಇಡು : ಚಲಕೆ ಬಿಡದಿಜಿಮ ನೆಲಂ ಬಿಡದಣ್ಣಿ ತಮ್ಮ ಮುಂದಿರ್ದಡಿಯಂ ಪೆಜಗಿಡದೆ ಸತ್ತರಲ್ಲಿ ಭಟರ್ಕಳ್ (ಗದಾಯು. ೮-೨೯). ೨. ಹಿಮ್ಮೆಟ್ಟು ; ಹಿಂದೆ ಸರಿ : ಕಿದಜ್ ಚತುರ್ಬಲಂ ಬೆದಜ್ ತಳ್ವದಿಂ ಕೆಡೆದಟ್ಟಿ ತಟ್ಟಿ ಮಾಣದೆ ಪೆಜಗಿಟ್ಟು ಬಾಯ್ವಿಡೆ ಘಟಾಳಿ . . . ಕನಲ್ದೊನಲ್ದು ಮಾಣದೆ ಪೆಣೆದಂ ಹರಂ ದಿಗಿಭದೊಳ್ ದಿಗಿಭಂ ಪಣೆವಂತೆ ಪಾರ್ಥನೊಳ್ (ಪಂಪಭಾ. ೯-೨೦). ೩. ಮೀರು ; ಅತಿಕ್ರಮಿಸು ; ಸೋಲಿಸು : ಪೂರಿತರಣಕಂಬಿಗಭೀರಾರಾವಂ ದೆಸೆಯ ಕೋಣ ಕುಸುಕುಜಿ ಗಜಘಂಟಾರವಮನುಜಿದೆ ಪೆಜಗಿಡೆ ಭೈರವಮೆಸೆದತ್ತು ಚರವ ಬಲಜಲನಿಧಿಯೊಳ್ (ಶಾಂತಿಪು. ೬-೯೭). [ಪೆಜಗೆ + ಇಡು$_1$]

**ಪೆಜಗು**, ಪೆರಗಂ, ಹೆಜಗಂ (ನಾ). ೧. ಹಿಂಬದಿ ; ಹಿಂಭಾಗ ; ಹಿಂದಂಗಡೆ : "ಪೆಡಮೆಟ್ಟು, ಪೆಜಗು, ಪೆಜತು, ಪಿಂತಿಲ್_ಈ ೪ ಪಿಂಗಡೆಗೆ ಪೆಸರ್" (ಕಶಶಾ. ೬೫-೪೫೩) ; ಪೆಜಗುಸಿದಾಗಿ ಮುಂತ್ರಗಲಿತವೃದಜಿಂದೆ . . . ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೬೪೭ ಕೂತ್ರ) ; ಬುದ್ಧಿವಂತರ್ಗೆ ಕೇಡಿಲ್ಲೆಂದು ನಿಶ್ಚೈಸಿಕೊಂಡು ದಿನಾಂತಂಬರೆಗಂ ತಡೆದು ಬಟ್ಟೆಕ್ಕಿಲ್ಲಿಯುಂ ನಿಲ್ಲದೆ ಪೆಜಗಂ ನೋಡುತ್ತುಂ ಭಯಾತುರನಂತೆ ಬಂದುಂ (ಶುಕಶಂ. ೮೩-೦೯) ; ಭಯದಿಂದೋಡುತ್ತಿರೆ ಕಾಡೊಸೊಂದುಮಾರದ ಕೊಂಕುಗೊಂಬಾತನ ತುಜುಂಬುಂ ಪಿಡಿದು ತಡೆಯೆ ಪೆಜಗಂ ನೋಡ ಲಣ್ಣದೆ (ಧರ್ಮಾಮೃ. ೨-೩೭). ೨. ಹಿಂದೆ ನಡೆದುದು,–ಆದುದು ; ಪೂರ್ವ ಸಂಗತಿ : ಪೋದುದಿ ಪೋಗಲಿ ಪೆಜಗನೆಣಿಸಲಾಗದು (ಧರ್ಮಾಮೃ. ೨-೯೯) ; ಎತ್ತಣನಿತ್ತಲೆಟ್ಟರವೆನಲ್ಕದು ಮಾರ್ದನನಾ ವಣಕ್ಷಮೂಹೋತ್ಕನುಂ . . . ಪೆಜಗಂ ನೆಜ್ ಬಿನ್ನವಿಸಲ್ಕೆ ವಿಷ್ಣು ವೆಚ್ಚಿತ್ತನನರ್ಘ್ಯವಸ್ತುಗಳನಾ ಪರದಂಗೆ ಪ ಸಾ ಯ ದಾ ನ ಮಂ (ಪುಣ್ಯಾಸ್ರ. ೦೨-೪೪). **ಪೆ ರ ಗು** : ೧. "ಪೆಡಮೆನಲ್ ಪೆರಗೆ ನಲ್ಕಭಿಧಾನಮಕ್ಕು ಬೆಂಗಡೆಗೆ" (ಕಶಶಾ. ೬೯). **ಹೆಜಗು**.

**ಪೆಜಗಂ ತಗುಳ್**=ಬೆನ್ನಟ್ಟು : ಬಲದೇವನನುಮತದೊಳ್ ಪೆಜಗಂ ತಗುಳ್ವ ಯಾದವಬಲಮುಂಟಪ್ಪುದದನಂಬುಗುಣೆಸಲ್ ನೀನೆ ಸಾಲ್ವೆಯ್ (ಕಂಕಥಾ. ೫-೨೦ ವ). **ಪೆಜಗಣ್**=೧. ಹಿಂಬದಿ ; ಹಿಂದಂಗಡೆ ; ಹಿಂಭಾಗ : ಅವರ್ಗಳನಿಬರುಂ ಪೆಜಗಣ್ಣರುಳ್ದು ಬಟ್ಟೊಡಿದು ಮಹಾ ಚೋದ್ಯಂ ಸಾರೆ ಪೋಗಿ ನೋಟ್ಪೆವೆಂದು ಪೋಪರ್ (ಶಬ್ದಾರಾ. ೯೬-೭) ; ಕನ್ನಡಿಯಂ ನೋಡುವವಂ ತನ್ನಯ ಪೆಜಗಣ್ಣ ಕಾಣಲಾರ್ಪನೆ ರೂಪಂ (ಧರ್ಮಾಮೃ. ೦-೦೫೨). ೨. ಹೊರಗಡೆ ; ಹೊರಭಾಗ : ಒಳಗಣ ಕಿವುಡಿಯರ್ ಪಿಡಿದುಕೊಂಡಪಳ್ಳಿ ಪೆಜಗಣ್ಣಿ ನೂಂಕಿದರ್ (?) (ಧರ್ಮಾಮೃ. ೨-೫೨) **ಪೆಜಗಣ**=೧. ಹಿಂದುಗಡೆಯ ; ಹಿಂದಿನ : ಅತಿಶೋಕಾಕ್ರಾಂತ ಮತಿಯುಂ ಶ್ರೀಮತಿಯುನೊರ್ವಳನೆ ಕನ್ನೆಮಾಡದ ಪೆಜಗಣ ನಂದವವನ ಕ್ಕೆಯ್ದು (ಆದಿಪು. ೬-೨೯ ವ) ; ಪುರೋಚನನುಂ ಪೆಜಗಣ ಕಾಪಂ ಕಪ್ಪಾಪಿನಲೆ ಕಾದಿರ್ಪನ್ನೆಗಂ (ಪಂಪಭಾ. ೬-೪ ವ) ; ಪೆಜಗಣ ಮುಂತಣಮಿತ್ತಗಳ ತೆಜೆಯಂ ನಿಶ್ಚಯಿಸಿ ಮಧುಕರಂ ಮಧುಕರಮಂ ತೆಜಲಾಜದೆ ಮಲ್ಲಿಗೆಯೊಳ್ ಸೆಜೆಗೆಯ್ದಂತಿರ್ದುದೊಂದು ಪರಿಮಳಫಲಮಂ (ಅಜಿತಪು. ೬-೦೯). ೨. ಹಿಂದೆ ನಡೆದ ; ಘಟಿಸಿದ : ನಿಮ್ಮಡಿಯ ಪ್ರಸಾದದಿಂದೆನಗೆ ಮಹಾಪಾತಕಂ ಪಿಂಗಿ ಪೋದುದೆಂದು ಪೆಜಗಣ ವಾರ್ತೆಯೆಲ್ಲಮಂ ಪೇಟ್ದು ದೀಕ್ಷೆಯಂ ಪ್ರಸಾದಂಗೆಯ್ಯಮೆಂದೊಡೆ (ಧರ್ಮಾಮೃ. ೩-೨೦೦). ೩. ಬಹಿರಂಗದ ; ಹೊರಗಿನ ; ಬಾಹ್ಯ : ಉಪವಾಸಕ್ಕಲಸಿ ಕರಂ ತಪಮಂ ಬಿಸುಡಲ್ಕೆ ಬಾರದವನೀತಳದೊಳ್ ವಿಪರೀತಮಾಗಿ ಪೆಜಗಣ ತಪದಿಂದಲ್ಲದೆ ಪೊಗಟ್ಟೆ

ಯಾಗದು ಬೇಗಂ (ರನ್ನ ಗದಾ. ೬-೪೦). **ಪೆಱಗನೇಱಿಸು** = ಹಿಂಭಾಗಕ್ಕೆ ಹತ್ತಿಸು : ತನ್ನ ಮುಂದೆ ಸಾರ್ದಿರ್ದ ವಾರುವಂಗಳ್ಗೆ ಬೆಗಡುಗೊಂಡ ಬಿಡಿಯನೆ ಶೀಯೂರರೆನುದುಂ ಪತ್ರಲೇಖೆಯುಮಂ ಪೆಱಗನೇಱಿಸಿ ನಿಜಭವನಕ್ಕೆ ಬಂದು (ಕಾದಂಬ. ೬೬೦). **ಪೆಱಗಾಗಿಸು** = ಹಿಂದೆ ಬೀಳಿಸು ; ದೂರವಾಗುವಂತೆ ಮಾಡು : ಅದು ಸನ್ಮಾರ್ಗವಿಶುದ್ಧಿಯಂ ಕಡಿಸಿತಾ ಶಾಂತಸ್ಫುಟಸ್ವಚ್ಛಭಾವದ ಪೆಂಪಂ ಪೆಱಗಾಗಿಸಿತ್ತು . . . ಜಡಧಿಗಳ್ಗಂತಸ್ಥಮಾಗಿರ್ದುದೆಂಬುದು ಯುಕ್ತ್ಯೋಕ್ತಿ ಕುಮಾರ್ಗನಿರ್ಗತರಜೋಜಾಳಕ್ಕೆ ದಾರ್ಷ್ಟ್ಯರ್ಯಮೇಂ (ಕುಶ. ೬ ೩೫). **ಪೆಱಗಾಗು** = ೧. ಹಿಂದೆ ಬೀಳು.— ಉಳಿ : ಪೆಱೆಯು ವಿಲಾಸಮುದಿಗಳ್ ಪೆಱಗಾಯ್ತೆನೆ ರೂಪವತಿಯ ಪೆಱನೊಸಲೆಸೆಗುಂ (ಮಲ್ಲಿ. ೩.೮೨). ೨. ಹೊರತಾಗು : ಇಲ್ಲಿಗೆನ್ನೊಳ್ಲದೆಯ ೨೨ ಜನಕಂಗಮುಱೆಪುವೊಡೆ ಮದೀಯಹೃದಯದ್ವಿತೀಯ ನಪ್ಪ ವೈಶಂಪಾಯನಂ ಪೆಱಗಾಗಿ ಪೆಱನಾವನಱಿದಪ್ಪಂ (ಕಾದಂಬ. ೩೮೩). ೩. ಬಿಡುಗಡೆಯನ್ನು ಹೊಂದು.—ಪಡೆ : ಆಗಳ್ ನಿದ್ರೆಯಿನೆಚ್ಚಱಾದಂತು ಕಣ್ಗಟ್ಟಿಂ ಪೆಱಗಪ್ಪುದುಂ (ರಾಮಾಶ್ವ. ೧೧೧-೩). **ಪೆಱಗು ಮಾಡು** = ಹಿಂದೆ ಉಳಿಯುವಂತೆ ಮಾಡು ; ಹಿಂದಕ್ಕೆ ಬೀಳಿಸು : ನೆಸಱಂ ಪೆಱಗುಮಾಡಿ ಜಯಾವಹದುಂಬಿನಂ ಬೀಸೆ ಬೆಂಬಱಿಯನೊಯ್ಯನೆ ಗಾಳಿ . . . ನೂಱನೂರ್ಛಗಿರಂಗಳ್ವೊಲಾಯ್ತು ರಥಂ ಕಡುವೇಗದಿಂ (ಕಾವ್ಯಾವ. ೨೭).

[ದೇ.॥ ತಮಿ. ಪಿಱಕು, ಪಿಱಕ್ಕು, ಪಿಱ್ಕು; ಮಲ. ಪಿಱಕು]

**ಪೆಱಗುಗುಡು** (ಕ್ರಿ). ಬೆನ್ನನ್ನು ತೋರಿಸು; ವಿಮುಖವಾಗು : ಅಱಿದು ಶುಕಪ್ರಿಯಕಾಮಿನಿ ಗಱಿ ಗದಗದ ನಡುಗೆ ಪಿಡಿದು ಪೊಣ್ಮಿದ ಮುನಿಸಿಂ ಪೆಱಗುಗು[ಡಾಶಾ. ಗೆ]ಡೆ ಕೀರಕಾಮುಕನೆಱಗಿದನಿನಿಯಳ ಪದಕ್ಕೆ ಸಂಭ್ರಮದಿಂದಂ (ಲೀಲಾವ. ೬-೯೮). [ಪೆಱಗು + ಕುಡು₁ (< ಕೊಡು₁)]

**ಪೆಱಗುಗೆಯ್** (ಕ್ರಿ). ೧. ಬೆನ್ನು ತಿರುಗಿಸು ; ಬೆನ್ನನ್ನು ತೋರಿಸು ; ವಿಮುಖವಾಗು : ಮುಳಿದು ಮನಃಪ್ರಿಯಂ ಪೆಱಗುಗೆಯ್ದಿರೆ ಬೆಂಬಿಡದಪ್ಪಿಕೊಂಡ ನಲ್ಲಳ ಮೊಲೆಯೊತ್ತಿನೊಳ್ ತೊಡರ್ದುದಾಕೆಯ ದೂಱಿಸಿಸುಯ್ದು ಸುಯ್ಯೊಳುಚ್ಚಳಿಸಿದುದಾ . . . ಕೋಪಮೋಪನಾ (ಆದಿಪು. ೫-೧೨-೦೯) ; ತನ್ನ ಬೆನ್ನೊಳ್ ಪರೆದೊಪ್ಪಲ್ ಕೇಶಪಾಶಂ ಕರಿಯ ಚಮರಿಯಂ ಕಟ್ಟವಂತತ್ಕಪೂರ್ವಸ್ಮರಚಾಪಶ್ರೀಯ ಚೆಲ್ವಂ ತಳೆದು ಪೆಱಗುಗೆಯ್ದಿರ್ದೊಡಾಂ ಸೋಂಕೆ ನಾರಂತಿರೆನುತ್ತುಂ ನೂಂಕೆ ಸುಯ್ದ್ವಿನಿಯಳ ತೆಱನಿನ್ನುಂ ಮನಂಗೊಳ್ವುದೆನ್ನಂ (ಜಗನ್ನಾ. ೧೬-೧೩೩). ೨. ಮರೆಯಾಗು ; ಅಡಗು : ಕೆಲರ್ ಕಾಣ್ಗುಮೆಂದು ಪೆಱಗಣಿಂ ಪೆಱಗುಗೆಯ್ದು ಜಗುಳ್ದುಂ ಕೆಲರ್ ಕಂಡೊಡೆ ಕರೆಗುಮೆಂದು ಕೆಲದ ಮರಂಗಳನೊತ್ತುಗೊಂಡುಂ (ಆದಿಪು. ೯-೯೨ ವ). ೩. (ಅಲಂ) ಕಡೆಗಣಿಸು ; ಕೀಳು ಮಾಡು ; ತಿರಸ್ಕರಿಸು : ನೆರೆದರಸುಗಳ ನಡುವೆ ತಮ್ಮ ಪೆರ್ಮೆಯುಂ ಪೆಱಗುಗೆಯ್ದು ಪೆಱಗೆ ಪೂಮಾಲೆ ಸೂಡುವುದಂ ವಿಳ್ಕೆಳನೆ ನೋಡಿ . . . ಬಂದ ಬರವಿಂಗೆ ಮಾನದೊಳನುಶಯಂಬಡುವ ಮಾನಧನಧರಾಧಿಪತಿಪಟಳದೊಳಂ (ಪರ್ವಪು. ೯-೧೩ ವ). [ಪೆಱಗು + ಕೆಯ್₁]

**ಪೆಱಗೆ**, ಪೆರಗೆ, ಪೆಱಗೆ (ಅ). ೧. ಹಿಂದಕ್ಕೆ; ಹಿಂಬದಿಗೆ; ಹಿಂದುಗಡೆಗೆ: ಬೀಡಂ ಪೆಱಗೆ ಬಪ್ಪಂತು ನಿರುಪಿಸಿ ಪಯಣದಿಂ ಬಂದು (ಚಾವುಂಡ. ೨೯) ; ಭರತಜರೊಳ್ಮುನ್ನಿಲ್ಲದ ಪರಿಭಾಷೆಯನುಂಟುಮಾಡಿ ಪೆಱಗಡಿಯಿಟ್ಟುಂ ಕುರುರಾಜನೆಂದು ಲಜ್ಜಾಭರದಿಂದಂ ತಲೆಯನೆಱಗಿದಂ ಧರ್ಮಸುತಂ (ಗದಾಯು. ೬-೩೯) ; ನೀನಾವ ಪ್ರಾಣಗಾದೊಡಂ ಮುನಿವಲ್ಲಿ ಪೆಱಗೇಱಿದಿಯುಂ ಪಿಂಗಿ ಉಱಿಕ್ಕಂ ನಿನ್ನ ಮೆಚ್ಚಿದಂತೆ ಮಾಡು (ಧರ್ಮಾಮೃ. ೨-೨೦೩). ೨. ಹೊರಗೆ; ಹೊರಭಾಗದಲ್ಲಿ: ಶಕಟವ್ಯೂಹದ ಪೆಱಗೆ ನಾಲ್ಕುಯೋಜನದೊಳರ್ಧಚಂದ್ರವ್ಯೂಹದೊಳಧಿಕಬಲರಪ್ಪ ಸೌಬಲ ದುಶ್ಯಾಸನಾದಿ ಪ್ರಧಾನ ವೀರಭಟಕೋಟಿಯ ನಡುವೆ ಸಿಂಧುರಾಜನನಿರಿಸಿ (ಪಂಪಭಾ. ೧೧-೧೩೨ ವ); ಎಱಗಿದ ನರಪತಿಸಹಸ್ರಮುಂ ನಿಮ್ಮ ನಿಮ್ಮ ವಾಹನಂಗಳನೇಱಿಮೆಂದು ಬೆಸಸಿ ಬಿಜಯಂಗೆಯ್ವಲ್ಲಿ ಪೆಱಗೆ ಢಕ್ಕಾರವದಿಂ ಬಧಿರಿತದಿಗಂತರಾಳಮೆನಿಸಿ ಬರುತ್ತುಂ (ಚಾವುಂಡ. ೫೯೬). ೩. ಅನಂತರದಲ್ಲಿ ; ತರುವಾಯದಲ್ಲಿ ; ಅನಂತರ : ಈತನೆ ನಮ್ಮ ಕುಲಕ್ಕಂ ಕೇತು ದಲಾನಱಿವೆಂ . . . ಬಿಸುಡುವುದೀತನ ಪೆಱಗುಱಿದ ಸುತರೆ ಸಂತತಿಗಪ್ಪರ್ (ಪಂಪಭಾ. ೦-೦೩೩) ; ಆಂ ಸತ್ತೊಡೆ ಪೆಱಗೀ ವೃಂದಮನಪ್ಪೊಡೆ ಪೊರೆವರಿಲ್ಲವಾಂ ದೇಸಿಗನೆಂ (ಧರ್ಮಾಮೃ. ೨-೫೮). ೪. ಹೊರತಾಗಿ : ಪುಂಡರೀಕದೇವನ ಪೆಱಗಿಂತು ಜೀವಿಸುತ್ತಮಿರ್ದಪಳೆಂ (ಕಾದಂಬ. ೬೦೭); ಅದು ಕಾರಣದಿಂ ರಣದಿಂ ತದುದ್ಧತನ ದುಷ್ಟಚೇಷ್ಟೆಯಂ ಮಟ್ಟಿಸಿ ಬರ್ಪುದೆ ಕಾರ್ಯಮೆನಗೆ ಕಾದಿರ್ಪುದೆ ಕಾರ್ಯಂ ಪೆಱಗೆ ನಿನಗವಿಾ ಪುರವರಮಂ (ಪರ್ವಪು. ೨-೨೬) : ಎಲೆ ತಣ್ಗಾಳಿಯೆ ನೀನೇಕಲೆದಪೆ . . . ಕಾವಲನಿಲ್ಲದ ಪೆಱಗೆ ನೋಯಿಪರೆ ನೀವೆನ್ನಂ (ಕವ್ಯಸಾ. ೬೫). ೫. ಬೆನ್ನಿನ ಹಿಂದೆ ; ಪರೋಕ್ಷವಾಗಿ : ಪೆಱಗೆ ಪಳಿವರ ಐಣ್ದತಿಗಣ್ಡ × × ದನ್ವ × × ಕಾಱರಣರಂಗನೀಱ ಪುಸಿವರ ಬಾಯಂ ಸುಡುವ ಬಿಸುಣಾರರನೇಲ್ದ × ಳುವ ಜಯಲಕ್ಷ್ಮೀತೋರಣಂ ನಾಕಿಯ ಗನ್ಧವಾರಣನಾಪಾದಿ ಸಮಸ್ತಪ್ರಸಸ್ತಿ ಸಹಿತಂ (ಎಕ. VII, ಶಿಕಾ. ೫-೨೨ ; 1061). **ಪೆರಗೆ** : ೧. ರಾಯದಳ ಪಾಯದಳ, ದಳದಳದ ಪೆರಗೆ, ಬಂದು ಬಂದೆತ್ತಲುಂ, ನೆಲ ನೆರೆಯದಲ್ಲಿ (ಕಾರಸಿ. ೫-೮೦೯). **ಹೆಱಗೆ** : ೫. ಕೂಡಿ ಕೂಟಕೆ ತಪ್ಪುವರ ಗಣ್ಡ ಹೆಱಗೆ ಹಳಿವರ ಗಣ್ಡ (ಎಕ. VI, ತರೀಕೆ. ೬೫-೮೮ ; 1141 ?).

**ಪೆಱಪೆಱಗೆ** (ದ್ವಿರುಕ್ತಿ) : ಕಿಶೋರಕೇಸರಿಯ ಸಮ್ಮುಖಕ್ಕೆ ಬಾರದೆ ಪೆಱಪೆಱಗೆ ಬರ್ಪ ಮೃಗಂಗಳಂ ಕಂಡುಮಱಿಂ (ಚಾವುಂಡ. ೫೩). [< ಪೆಱಗು]

**ಪೆಱಗೆಡೆ** (ಕ್ರಿ). ಹಿಂದೆ ಬೀಳು : ಹಿಮ್ಮೆಟ್ಟು : ಧನುರ್ಧರರೆಚ್ಚಶರನಿಕರಂಗಳಿಂ ನೆಯ್ ಪೇಱುವಂತಂಬನೆ ಪೇಱಿ ಪೆಱಗೆಡೆವ ತುರುಷ್ಕತುರಂಗಂಗಳುಮಂ (ಪಂಪಭಾ. ೦೨-೬೦ ವ) : ತನ್ನ ಭೀಕರಗದಾಘಾತದೊಳ್ ಜಾಱಿ ಪಱಿವಱಿದು ಪೆಱಗೆಡೆದು ತಾಱವಱಾದ ಕಾಂಭೋಜಾವಳಿಗಳ ತುರುಷ್ಕತುರಂಗಮಂಗಳಡಿಯೋಳಡಂಗಿದನೆ ಗೆತ್ತು ಕೈಗುತ್ತಿ ನೋಡಿಯುಂ (ಗದಾಯು. ೬-೨೮ ವ). [ಪೆಱ₂ (< ಪೆಱಗು) + ಕೆಡೆ₁]

**ಪೆಱಗೇಱಿಸು** (ಕ್ರಿ). ಹಿಂಬದಿಗೆ ಹತ್ತಿಸು ; ಹಿಂದೆ ಕುಳ್ಳಿರಿಸು: ಪವನುಜಯಾಶ್ವಮನದಂ ತೆಗೆದೇಱಿಯುಮೊಲ್ಲೆನೊಲ್ಲೆನೆಂದೆನೆ ತನತಾಜ್ಞೆಯಿಟ್ಟು ಸಖಿನಂ ಪೆಱಗೇಱಿಸಿಕೊಂಡು ಛೊಲುಕನೆ ಪೊಱಮಟ್ಟಂ (ಕುಸುಮಾ. ೦೦-೦೩೩).

[ ಪೆಱಗೆ + ಏಱಿಸು ]

**ಪೆಱಗೇಱು** (ಕ್ರಿ). ಹಿಂದೆ ಹತ್ತು ; ಹಿಂಬದಿಗೆ ಹತ್ತಿ ಕುಳಿತುಕೊಳ್ಳು : ಸಡಹುಡನಪ್ಪ ಕೊಟ್ಟಿ ಕೊಡೆ ಸಂತಸದಿಂ ಪೆಱಗೇಱಿ ಬರ್ಪ ಕನ್ನಡಿಯಿಡಿದಾಕೆ (ಪಂಪಭಾ. ೯-೦೦೩) ; ಕೊಟ್ಟಿ ಚಮ್ಮಟಿಗೆ ಮುಟ್ಟಿದವೊಲ್ ನಸುಬೆರ್ಚಿ ತಾನದರ್ಕೆ ಮರ್ಡಿ ಬೆರ್ಚಿ ಪೆರ್ಚಿ ನಡುಕಂ ಪೆಱಗೇಱಿದಳೊರ್ವಳೋಪನಂ ಪೆರ್ಮೊಲೆ ಬೆನ್ನನುರ್ಚಿದಪ್ಪಪೆಂಬಿನಮುಟ್ಟಿದಳಾಗಳಾರ್ತದಿಂ (ಕಾವ್ಯಾವ. ೮೨೩). [ ಪೆಱಗೆ + ಏಱು₁ ( < ಏಱ್₁ ) ]

**ಪೆಱತು**, ಪೆಱದು, ಹೆರತು (ಸ). ೧. ಬೇರೆಯದು : ಮತ್ತೊಂದು : ಅವಲರುಂ ಪಣ್ಣಂ ಬೀತೋಪವು ಗಡ[ಬೀ]ಯುವಲ್ಲಿ ಪಕ್ಷಿಗಳುಮಿಮ್ಮಾವುಗಳುಮೆಂದೊಡಿನ್ ಪೆಱತಾವುದು ಸಂಸಾರಸಾರಸರ್ವಸ್ವಫಲಂ (ಪಂಪಭಾ. ೧-೫೫) ; ಅನಿನಿತು ಭೋಪ್ಯದಿಂ ಪೆಱತೇನುಮನುಣಪೊಲ್ಲೆನೆಂದುಣ್ಣಿಡೆಯೊಳ್ ತಾನಱಿದು . . . ಸಂಯುಮಿ ನೆಗಟ್ಟಂ (ಸುಕುಮಾ. ೪-೬); ಅದುವಿದುವುದು ವಾವುದುವೆಲ್ಲದು ಪೆಱತೇನ್ನೆಱದೆನಿಪ್ಪ ಶಬ್ದಂಗಳ್ ತಪ್ಪದೆ ಸರ್ವನಾಮಮಕ್ಕುಂ (ಶಮದ. ೬೮) ; ಅವಾವ ದಿಕ್ಕುದಿಕ್ಕುಗಳೊಳಂ . . . ಹರಿಯ ಸುಭಟಾವಳಿ ಹರಿಯ ಪರೂಥಂಗಳಲ್ಲದೆ ಪೆಱತನಾಂ ಕಾಣೆನಾಹವದೊಳು (ಜಿನಪು. ೦೬-೮). ೨. ಅನ್ಯ : ಬೇರೆ ; ಪೆಱತು ವಿನೋದವಾಂಛೆ ಪೆಱಪಿಂಗಿ

ಮನೋಧೃತಿಯಂ ಪೊದಟ್ಟು ಪಾಂಗುಱೆ ಪರಿಪಟ್ಟು ಲಜ್ಜೆ ಲವಮಿಲ್ಲದೆ ಬಿಟ್ಟು . . . ಕುಸುಮಾವಳಿ ತಾನಿರೆ ನಿಮ್ಮ ದೂಸಱಿಂ (ಕುಸುಮಾ. ೦೪-೨೩). **ಪೆಱದು :** ೧. ನೆಲನಂ ಪರ್ವುವ ಬಳ್ಳಿಗಂ ಚದುರನೊಳ್ ಮೈಮ್ಮೈಯೊಡಂಬಟ್ಟು ತಳ್ತ ಲತಾಕೋಮಳೆಗಂ ತಗುಳ್ಪು ಪೆಱದೊಂದಂತಕ್ಕುಂ (ಆದಿಪು. ೦೨-೦೮); ಪೆಱದೇನನಿಂ ಪೊಗಟುತಿಟ್ಟಪುದೀವ ನೆಗಟ್ತೆ ಕಳ್ಳಭೂಮಿ ರುಹದಿನಗ್ಗಳಂ (ಎಕ. II. ೦೩೩-೨೫ ; 982) ; ನಾಗಸ್ಥಾನದ ಶಂಬರ ನಾಗಕುಮಾರಂಗೆ ಪರಸಿ ಪಡೆದಂ ಪೆಱದೇಂ ಪೋಗೆಂದು ನಾಗಶರ್ಮಂ ನಾಗಶ್ರೀಯೆಂದು ನಾಮಕರಣಂಗೆಯ್ದಂ (ಸುಕುಮಾ. ೫-೩೦) ; ಅದುವಿದಾವುದುವಾವುದುವೆಲ್ಲದು ಪೆಱತೇನ್ನೆಱದೆನಿಪ್ಪ ಶಬ್ದಂಗಳ್ ತಪ್ಪದೆ ಸರ್ವನಾಮಮಕ್ಕುಂ (ಕಮಾಂ. ೬೮). **ಹೆಱತು :** ೧. ಪುಂಸ್ತ್ರೀಲಿಂಗಗಳಲ್ಲಿ ಹೆಱತು ಶಬ್ದದ ಮುಂದೆ ಲೋಪ ಬರುತ್ತದೆ (ಹೊಸಗ. ೪೬) ; ಅವನು 'ಹರಿ' ಎಂಬ ಎರಡು ವರ್ಣಗಳನ್ನಲ್ಲದೆ ಹೆಱತನ್ನು ಅಕ್ಷಿಯಿಂದ ನೋಡಲಿಲ್ಲ (ಲಬು. ೦೪೦).

**ಪೆಱಪೆಱತು** (ದ್ವಿರುಕ್ತಿ) : ನಿನ್ನ ಮಡಗೂಟಕ್ಕಿಲಂ . . . ನೀನೀಯೆ ಬಂದುದೆನಗಿದನೆನತೆಂದೆನ್ನಿನಗೆ ಬಗೆಯಿಲ್ಲದೆ ನಿನ್ನನೆ ನೀಂ ಬಗೆಯ ಬಗೆಯುದಿರ್ ಪೆಱಪೆಱತಂ (ಆದಿಪು. ೦೪-೦೪೪) ; ಗಂಡರ ಬೂತೆ ನುಡಿವುದೆ ಪೆಱಪೆಱತಂ (ರಘುಶಾಸ್ತ್ರ. ೨-೦೨೦). **ಪೆಱಪೆಱರ್** (ದ್ವಿರುಕ್ತಿ) : ರಾಮಾಣಂದಿ ೩ದ್ವಾಂತಿಗಳೆರ್ದಂತೆ ಪೆಱಪೆಱರಂತಿಂತುಂತೆಂದೇನೆಂದು ಬಣ್ಣಿಪರ್ಜಡಮತಿಗಳ್ (ರಘುಶಾಸ್ತ್ರ. ೦-೨೩). **ಪೆಱಪೆಱವು** (ದ್ವಿರುಕ್ತಿ) : ಜಯಾವತಿ ಕಣ್ಣೆತ್ತಿ ಬಾರಿಸಿದೊಡೆ ಕಮ್ಮಗಿರ್ದು ಪೆಱಪೆಱವನೆ ನುಡಿಯಲ್ ತಗುಳ್ದೊಡೆ ಸುಕೌಶಳಸ್ವಾಮಿಯುಮವರ್ವರ ನುಡಿಗಳ್ ಸಗರ್ಭವಚನಂಗಳೆಂದು ತನ್ನ ಮನದೊಳೆ ಬಗೆಯುತ್ತಿರ್ದನಂ (ವಡ್ಡಾರಾ. ೪೬-೦೪) ; ಪಲುಂಬುದಿರ್ ಪೆಱಪೆಱವಂ (ಶಂಕರ. ೨-೨೬).

**ಪೆಱರೊಡವೆ, ಹೆಱರೊಡವೆ** = ತನ್ನದಲ್ಲದ ಆಭರಣ; ಪರರ ವಸ್ತು: ತನ್ನಳವಿನಂ ನಡೆವ ಕಸ್ನುಡಿಯು ನುಡಿವೆಣ್ಗೆ ಪೊನ್ನಿರ್ಕೆ ಪೆಱರೊಡವೆ ಚೆನ್ನಲ್ತು ಕಳೆಗೆ (ಕಾಲೂರ. ೨೨-೫) ; ಹೆಣ್ಣು ಹೆಱರೊಡವೆ (ಕಾವ್ಯಸ. ೪೬). **ಪೆಱವಿಜಯಕಾಳಾಯುಧ** = ಒಂದು ಬಿರುದು : ಸ × × × ನಮನಸ್ಸ ಲೋಜನೀರಾಜಹಂಸ ವಿದಗ್ಧವಿದ್ವಜ್ಜನಕರ್ಣ × × × ವಿಪಿನದಾವಾನಳ ಪೆಱವಿಜಯಕಾಳಾಯುಧ (ಶಾಶಾ. VI, ೩೬೬-೦೦ ; 1064). **ಪೆಱತೊಂದು** = ಬೇರೊಂದು; ಮತ್ತೊಂದು: ಪೆಱತೊಂದೆಡೆಯೊಳಿಲ್ಲೆನಿಸಿದ ತಾರ್ಕ್ಷ್ಯಪಕ್ಷದನ್ನೈಕ್ಯಪಕ್ಷಪಾಳನೆಯುಮಂ (ಎಕ. XIII, ೩೩೨-೪೫ ; 729) ; ಸುದತಿ ಪೆಱತೊಂದು ನೆವದಿಂ ಕಿಡಱಿವಳೊಂದಿನಿಸು ಮಂದಹಾಸದ್ಯುತಿಯಂ (ಕಾದಂಬ. ೨೪೬) ; ಇನ್ನುಮುಸಿರದಿರ್ದೊಡೆ ಪೆಱತೊಂದು ಬಿಲನನಱಸಿಕೊಳ್ವೆಂ (ಶಂತಕಂ. ೩೨-೦೪). **ಪೆಱತೊರ್ವ** = ಬೇರೊಬ್ಬ ; ಮತ್ತೊಬ್ಬ : ಆವರ್ವರ ಪ್ಪೊಮೆಯುಮಂತವರ್ವರ . . . ಬೆಟ್ಟುಮುಮಂತವರ್ವರೊಳ್ಳದಿಲ್ಲ ಪೆಱತೊರ್ವರೊಳು (ಕನ್ನಿಕಾ. ೦೨೪). **ಪೆಱನ್, ಪೆಱನ್, ಪೆಱನು, ಹೆಱನು** = ೧. ಬೇರೆಯವನು ; ಅನ್ಯ ; ಪರಕೀಯ : ಸಾಧುಗೆ ಸಾಧು ಮಾಧು(ಧು)ರ್ಯ್ಯಂಗೆ(ಬಗ್ಗಿ) ಮಾಧೂ(ಧು)ರ್ಯ್ಯಂ ಬಾಧಿಪ್ಪ ಕಲಿಗೆ ಕಲಿ ಯುಗವಿಪರೀತನ್ ಮಾಧವನೀತನ್ ಪೆಱನಲ್ಲ (ಎಕ. X, ೬೦-೬ ; ೯೦. 700) ; ನಂದನರಾಜ್ಯಸ್ಥಾನದೊಳ್ ಪೆಱನೊರ್ವನಂ ಚಂದ್ರಗುಪ್ತನೆಂಬೊನಂ ನಿಱಿಸಿದೊಡೆ (ವಡ್ಡಾರಾ. ೬೩-೬) ; ಬಂದನೀತಂ ಪೆಱನಲ್ಲಂ ಮಾರ್ಜಿಯಂ ಕೌರವಕುಳನಳಿನೀಕುಂಜರಂ ಭೀಮಸೇನಂ (ಶಂಕರಾ. ೦೪-೬೬) ; ವಿರಚಿಸಿದನೀ ಶೇಷರಾಮಾಯಣಮನಿಂತು ಪರತರಪುರಾವೃತ್ತರೂಪದಿಂ ಜಗದೊಳಗೆ ಪೆಱನೊರ್ವನಂ ಕಾಣದಿಂತಪ್ಪ ಗುಣಶಾಲಿ ಸತ್ಕಥಾನಾಯಕನನು (ಶೇಷರಾ. ೦-೦೭) ; ಪೆಱನಾರೊ ಬಂದಿರಲ್ ಕಣ್ಮರಿದು ಗೆಳತಿಯಂ ನೆರೆದ ಪೆಣ್ 'ನಿನಗೆಂ'ದು ಚುಟ್ಟಿ ನುಡಿಯುಮಳು (ಕಾಲೂರ. ೬೦-೦೦೨) ; ಹೆಮ್ಮೆಯಲಿ ಹೆಱನ ಹೊಡೆಮಲ್ಲ ಹಿಡಿದವನು ಗುಮ್ಮಿಕೊಂಡಂತೆ (ಸರ್ವಜ್ಞ. ೪೩೫).

೨. ಕೀಳುಜಾತಿಯವನು ; ಹೊಲೆಯ : " ಪೆಱ ಎಡೆಯಂ (ಸಡೆಯಂ, ಸಡೆಯಂ, ಪಱೆಯಂ) " (ಕಮಾರ. ೫೦. ೨) ; ಪಿಂಗದೆ ಸೇನಜಿತನಣಂಗಿ ಪೆಱನಂ ಮಿಂಗುಲಿಯ ಕುಮುದ್ವತಿ ಕೈವಿಡಿದಳ್ ಸಿಂಗಮನಂತೆ ಬೃಹದ್ರಥ ಸೇರ್ದಳ್ ಪೆಂಗೆಲ್ಲಂ ಸೇರಲ್ ತಗವರ್ (ಶಾಶಂಪ. ೬-೪೪). **ಪೆಱರ್, ಪೆಱರು, ಪೆಱರು, ಪೆಱವರ್, ಹೆಱರು, ಹೆಱವರು, ಹೆಱರು, ಹೆಱವರು** (ಬಹುವ) : ನೆನೆನೆನೆದು ಪೆಱರ ಮಾತುಗಳನೆ ನೆಗಳ್ದಿರೆ ಕೃತಿಗೋಳಿಡುವವಂ ನಗದ ಗುಹಾಧ್ವನಿಯುಪೊಲನರ್ಥವಚನಂ (ಕಾವ್ಯಾ. ೦-೦೪) ; ಪೆಱರೀವುದೇಂ ಪೆಱರ ಮಾಡುವುದೇಂ ಪೆಱರಿಂದ ಮಪ್ಪುದೇಂ (ಆದಿಪು. ೦-೩೫): ಪೆಱರ ಕಿವಿ ನಾಲಗೆಯು ಕಣ್ ಬರಹಗಳ ನೋಡಿ ಮೆರೆವ ನಲ್ಲರ ಕಣ್ಗೆ ಮಾನರ್ಮಡಿಯುತಿರ್ಕುಂ (ಕಾಲೂರ. ೪೨-೩೩) : ಪೆಣ್ಣಿಂದ ಪೆರ್ಚಿಗೊಂಡನು ಹಿಮವಂತನು...ಪೆಣ್ಣಿಂದ ಜನಕರಾಯನು ಜನವಡೆದನು ಪೆಣ್ಣ ನಿಂದಿಸಲೇಕೆ ಪೆಱರು (ವಂಬಾ. ೫ ೫) ; ಪೆಱವರೊಳಾವ ಬೈಗಮಂ ಮಾಜಿಯಿಸುವುದು ನಿದ್ರೆ (ವರ್ಧಕು. ೬-೬೫) : ಹೂವೊಡಟೆ ಪೆಱರ ಕೈಯಿಂದೂಟ ಸುತ್ತಾಟ ಹಾವಿಟ್ಟು ಬಗೆಯಾಟ ಪೋಲಲು ಪೆಣ್ಗೆಲ್ಲಿ? (ಕಾಲೂರ. ೨೬-೦೫); ಪೆಱವರ ಬರಹದೊಳಿರುವ ಸಂಗತಿಗಳು ಮನ್ನಣೆಯನು ಬೆಳಗುವುವು (ಕಂಕಾಕ. ೩೩-೫) ; ಹೆಱವರ ಮಾತು ನಿಕ ಅದ್ವ ? ಈಗ ರಾಜಮಾತೆಯವರನ್ನೇ ಕೇಳಿದುಕೊಳ್ಳಿ (ಸಮಾ. ೩೩) ; ಹೆಱರ ಗೋಣ ಕೊಯ್ದನೆಂದು ಮಂತ್ರವನೋದುವ ನೇಣುಗಾಱರ ಮೆಚ್ಚ (ಬಸವ. ೫೫೦); ಸಂಚಯಿಸಿದ ಧನವು ಕುಚು ಕಬ್ಬುನವಕ್ಕು ಪಂಚಕ್ಕು ಹೆಱರಿಗುಣಲಕ್ಕು (ಸರ್ವಜ್ಞ. ೬೬೩) ; ಮುಂಜ ಗುಣಭೇದದಲಿ ತೋರ್ಪವು ಮೂಜಾತನು ಗಳು ದೇವನೊಬ್ಬನಿಗಾರು ಹೆಱವರು ವಿಶ್ವಮಾಯಾಧೀಶ್ವರೇಶ್ವರಗೆ (ಏಕಾಗ. ೦೦-೬೨-೨೪). **ಪೆಱವು** (ಬಹುವ) : ಕುಱಿತಂತೆ ಪೇಟ್ದ ನಾಲ್ಕುಂ ಕುಱಿಪು ಗಳಿಂದಱಿದು ಪರರ ದೋಷಂಗಳುಮಂ ಪೆಱವುವುಮನೀ ಮಾಟ್ಕೆಯೊಳು ತೋಱಿವುದು ತೋಱಿವಂತಸಾಧುಜನಸಂಗತಿಯಂ (ಶಬ್ದಾ. ೦-೬೬) ; ಕ್ಷೀರಾಬ್ಧಿಯ ನೀರಲ್ಲದೆ ಧೀರನ ಮಜ್ಜನಕೆ ಪೆಱವು ನೀರ್ ತಗವೆಂದಾ ವಾರಾಶಿವರಂ ಸುರಜನದಾರಿ ಮನೋಹಾರಿ ನೀಳ್ದುಪೆರಮಂ ಕೆಲದೊಳ್ (ಆದಿಪು. ೬-೬೨) ; ಪೆಱವೇಱುದಿವಸದೊಳ್ಳಣಿಮಯುಮಹೀತಳದೊಳು ತಳರ್ನಡೆ ನಡೆದುಂ ಪೆಱವೆಱುದಿವಸದೊಳು ಪಮಳಂ ನಡೆದುಂ (ಶಾಪುಂಪು. ೨೬). **ಪೆಱಳ್**=ಬೇರೆಯವಳು : ''ಲಿಂಗತ್ರಯದೊಳ್ ಪೆಱತು ಪೆಱಂ ಪೆಱಳೆನಿಪ್ಪುದನ್ಯಾರ್ಥಂ" (ಕಶಬ. ೮೪) ; ಲತೆಯಂ ಲಲಿತಾಂಗಿಗೆತ್ತು ನೀನೆ ಜಗಿದೆಯೆನ್ನ ಪಕ್ಕದೆ ಪೆಱಳ್ಗೆನೆ ಬೆರ್ಚಿ ಲತಾಂಗಿಗಾಗಳಾನೆಱಗಿದಂ (ಆದಿಪು. ೪-೦೩) ; ಬೇಗದಿಂ ನಡೆದು ಪೆಱಳ್ ಜನಾರ್ದನನ ರೂಪವಿಲಾಸ ಮನೊಲ್ದು ನೋಡಿದಳ್ (ಜಗಮ. ೦೬-೯೫). [ದೇ. II ತಮಿ. ಪಿಱಿತು]

**ಪೆಱತೆಗೆ** ' ಪೆಱದೆಗೆ ' ನೋ.

**ಪೆಱದು** ' ಪೆಱತು ' ನೋ.

**ಪೆಱದೆಗೆ, ಪೆರದೆಗೆ, ಪೆಱತೆಗೆ, ಹೆರದೆಗೆ, ಹೆಱತೆಗೆ, ಹೆಱದೆಗೆ** (ಕ್ರಿ). ೧. ಹಿಂಜರಿ; ಹಿಂದೆ ಸರಿ; ಹಿಮ್ಮೆಟ್ಟು: ಚರಣಾಕ್ರಾಂತಂ ಮಹೀಮಂಡಲಮದಿರೆ ಭುಜಾಕ್ರಾಂತಮಾಶಾಗಜೇಂದ್ರೋತ್ಕರಮಾಶಾಭಿತ್ತಿಯುಂದು ಪೆಱದೆಗೆಯೆ (ಗದಾಯು. ೬-೨೦) ; ವೀರಭಟಾ ನೀಂ ಸೇನೆ ಬೆಂಗೊಟ್ಟೊಡೆ ಪೆಱದೆಗೆಯಲ್ ನಿನ್ನ ಶೌರ್ಯಪ್ರಭಾವಕ್ಕಭಿಭಾವಂ ಪೊರ್ದುಗುಂ (ಜಗಮ. ೦೩-೬೮); ಬಿರುದಿನ ಬಲ್ಲಾಳ್ಗಡೆ ಪೆಱದೆಗೆದುದು (ಜಯನೃ. ೭-೩) ; ಮಜುಮಕ್ಕದ ಬೀರಂ ಪೆಱದೆಗೆದೆಡೆಕಂ ಬಲಕಂ ತಿರಿಗಿ ತನ್ನೊಂದು ಪೊಸಮಸೆಯ ಬಾಣದಿಂ ಕಡಿದು (ರಾಮಾಶ್ವ. ೦೨೯-೪). **ಪೆರದೆಗೆ :** ೨. ಹೊರಕ್ಕೆ ತೆಗೆ ; ಹೊರಸೆಳೆ : ಒರೆಯಿಂದ ಪೆರದೆಗೆದ ಸ್ಮರಶರಂಗಳ ತೆರದಿ . . . ಸ್ಮರಪಾರವಶ್ಯತೆಯನಾಂತು ನಿದ್ರೆಯೊಳಿರ್ಪ ತರುಣಿಯರ ಕಂಡು (ಪಂಪಾರಾ. ೫-೪೫).

**ಪೆಱತೆಗೆ** : ೧. "ಆಕ್ಕ್ಲಿಸಿತೆಂದು ಪೆಱತೆಗೆದುದಕ್ಕು" (ಶಬ್ದಮ. ೬೧) ; ಲಲಿತೆಯು ಮುಖೇಂದುಬಿಂಬದ ಬೆಳಗಿನೊಳಿರದಗಿದು ಪೆಱತೆಗೆದು ತಮೋಬಳಮಿರ್ದುದೆಂಬಿನಂ ಕಗ್ಗೊಳಿಸುಗುಮಾಕೆಯ ವಿನೀಳಕಬರೀಭಾರಂ (ಸುಕುಮಾ. ೯.೮೮) ; ಪೆಱತೆಗೆವ ತಮಂ ತಟ್ಟೆದುಬಾಗಲೆನಲ್ ಪೂರ್ವದಿಗ್ವಧೂವದನಂ ಕಣ್ದೆಱೆದವೊಲದೇಂ ಬೆಳತ್ತುದೊ . . . ಶುಹಿನಾಂಶುಬಿಂಬಂ (ಪಂಚತಂ. ೧೧.೧೮೪) : ತಿಮಿರಬಳಂ ತೆರಳ್ದು ಪೆಱತೆಗೆವ ರಣೋತ್ಸವಮಂ ನೋಡಲ್ಕೆಯ್ತಂದವೊಲೇಱಿದನುದಯ ಶಿಖರಮಂ ಪ್ರ್ಯಗಲಕ್ಷ್ಮಂ (ವರ್ಧಮಾ. ೬-೩೦). ೨. ಪೆಱತೆಗೆವ ಬಾಣಮುಪ್ಪುದು ನೆಱನಡುವಂತವನ ಮನದುನ್ನಾಕೆಯ ಬಾಣಂ (ಜಾತ್ಯರ್ಥ. ೩-೯೮). **ಹೆರದೆಗೆ** : ೧. ಹೆರದೆಗೆದ ನಿಜವಾಹಿನಿಯು ಮುಂಬರಿಸಿ (ಅನಂತಪು. ೧.೧೧.೪).

**ಹೆಱತೆಗೆ** : ೧. ಕಟಕದ ಚಂದ್ರದಂಡನಾಯಕನ ಕುದುರೆಯ ಮೇಲೆ ವರಿದಡೆ ಹೆಱತೆಗೆಯದೆ ಎರಡ್ಕುದುರೆಯ ನೆಟ್ಟಿ . . . ಸ್ವರ್ಗಸ್ಥನಾದಂ (ಕೌಣ್ಣ. IX-i, ೨೮೪.೧೧ ; ಕ್ರಿ. 1190) ; ತೆಱಹುಗೊಡು ಫಡ ಫಡ ಜಯದ್ರಥ ಹೆಱತೆಗೆದು ಸಾರೆನುತ ಹೂಣೆಗನುಬ್ಬಿದರೆ ಪಾಱನಾಂತು ಫೇಮನ ಕಡುಹ ನಿಲಿಸಿದನು (ಕುಮಾರವ್ಯಾ. ೫-೬೪). **ಹೆಱದೆಗೆ** : ೧. ರಣದಿಂದೆ ಹೆಱದೆಗೆದು ಕಂಡ ಕಡೆಗೋಡಿದರ್ . . . ಸುಭಟರು (ಕೃಷ್ಣರಾ. ೨೨.೪೦) ; ಬಿರುದಿನ ಸಬಳದ ಭಟರು ಹಿನ್ನೆಲಗಾಗ ಹೆಱದೆಗೆಯದೆ ಹೆಜ್ಜೆಗಳ ಧುರದುಂಡಲದೊಳಿಱಿದಾಡಿ ಪೌರುಷದನು ಪರಬಿದರೇನ ಬಣ್ಣಿಸುವೆ (ಕಂಪ. ೦೯-೬೪). ೩. ಹೊರಕ್ಕೆ ಬರು ; ಹೊರಬರು : ಹೊಗಲು ಬಿಲ್ಲನು ಮೊಕ್ಕವೊಲು ಹೆಱದೆಗೆಯಲಱಿಯನು ವೀರಪಾರ್ಥನ ಮಗನು (ಕುಮಾರವ್ಯಾ. ೪.೩೪). [ಪೆಱ$_2$ (<ಪೆಱಗು) + ತೆಗೆ$_1$]

**ಪೆಱದೆಗೆಯಿಸು** (ಕ್ರಿ). ಹಿಂದಕ್ಕೆ ಹೋಗುವಂತೆ ಮಾಡು : ಪಸಿದ ಯೋಱಿಲೆ ಕಂದ ಪಗಲಿಱುತ್ತಮುದೆಂದಾಸಿರ್ದ ಮಾತೆಯೊಳುರವಣಿಸಿ ಬಸುಬಿಸುನುಡಿಗಳಿಂ ಪೆಱದೆಗೆಯಿಸಿ ಮುನ್ನ ಪಸವಾತನೊಸೆದಾಲಿಪುದು (ಚೆನ್ನ. ೩.೦೫೭ ಸಾಂಗತ್ಯ). [ಪೆಱದೆಗೆ + — ಇಸು$_3$]

**ಪೆಱನಡಿ** (ನಾ). ಒಂದು ಊರಿನ ಹೆಸರು : ಇಗ್ಗಲಿಯ ಅರಿಪುರ ಮಾಱಜೂರ ಸನ್ನಿದಲ್ಲಿ ತಣ್ಣಾಲಿಗಾಲ ಮೂಡಣ ಪೇರೊಟ್ಟಿಯಿಂ . . . ಅಸ್ತೆ ಬನ್ದು ಪೆಱನಡಿಯ ಪಡುವಣ ಪೇರೊಟ್ಟಿಯಿಂ ಅಸ್ತೆ ಬನ್ದು ಕಿತ್ತೈಟುಲ ಪಡುವಣ ಪೇರೊಟ್ಟಿಯಿಂ (ಎಕ. III (R), ಟಂಜನ. ೨೦೪-೨೬ ; 915 ?). [?]

**ಪೆಱನಡು** (ಕ್ರಿ). ಹಿಂದಕ್ಕೆ ಹೋಗು : ಪೊಟ್ಟೆ ಬಟ್ಟಾಗಿರ್ದ ಪೆಱನಟ್ಟ ನಡುವಂ ನೋಡಿ ಪೊಕ್ಕು ಪಿಟ್ಟೆಂದು ಮಿಡುಕಲ್ಕಾದೆ × × × ಗೆಯ ಕಾಪಿನಾಳ್ಗಳುಮಂ (ಗದಾಯು. ೯-೩೪ ವ).
[ಪೆಱ$_2$ (<ಪೆಱಗು) + ನಡು$_1$]

**ಪೆಱನಾಡು** (ನಾ). ೧. ಬೇರೆಯ ನಾಡು ; ಅನ್ಯದೇಶ ; ಪರಸ್ಥಳ : ಪೆಱನಾಡಱಿಯಂ ನಿನ್ನ ಕೈಯೊಳ್ ಬನ್ದುಬಡೆದು ಕಿನ್ನರಿಗೆಯುಮನ ಮೆಯ್ಗಿದಿದ ಚೀನ್ನಪಾಂಗಿನಂತೆ ಪೊಡರ್ದುಗಿದ ಜಡಿಯುಂ (ಶಬ್ದಮ. ೮೯). ೨. (ಆಲಂ) ಬೇರೆಯ ಲೋಕ ; ಪರಲೋಕ : ಅಭಿಮನ್ಯು . . . ಪೆಱನಾಡ ನೆಲದಲ್ಲಿ ನಾಂಟಿರ್ದ್ದಂ (ಆದಿಪು. ೩೩.೬).
[ಪೆಱ$_1$ (<ಪೆಱತು) + ನಾಡು]

**ಪೆಱನೂಂಕು** (ಕ್ರಿ). ಹಿಂದೆ ಬೀಳುವಂತೆ ಮಾಡು ; ಹಿಂದಟ್ಟು : ಪಾವಸೆಯುಂ ಪೆಱನೂಂಕುವ ಪೊಸಕೆಂದಾವರೆಯೆನೆ ಕಿಱುಗೆಯ್ಯುಂ ಮೇಲುದ ನೋವದೆ ನೂಂಕಿ (ಜಯಕಾ. ೨-೩೬). [ಪೆಱ$_2$ (<ಪೆಱಗು) + ನೂಂಕು$_1$]

**ಪೆಱಪಿಂಗಿಸು** (ಕ್ರಿ). ೧. ಹಿಂದಕ್ಕೆ ಸರಿಸು : ಕರದಿಂದೆ ಮುಂದೆ ಪರ್ವಿದ ರಜನೀಶಿರಸ್ಸರಿಣಿಯುಂ ಪೆಱಪಿಂಗಿಸಿ ಪದ್ಮಿನೀವಧೂವದನ ಸರೋಜಮುಂ ಪದಪಿನಿಂದಮೆ ನೋಡುವೆನೆಂಬ ಮಾಱ್ಕೆಯಿಂದುದಯ ಗಿರೀಂದ್ರವೇದಿಕೆಯನೇಱಿದನೊಯ್ಯನೆ ಪದ್ಮಿನೀಪ್ರಿಯಂ (ಕಾದಂಬ. ೪೩೦). ೨. ಕಳೆ : ನಿವಾರಿಸು ; ಪರಿಹರಿಸು : ಮೃದುಮಧುಪದೇಶಪೇಶಲಂಗಳಪ್ಪ ವಚನನಿಚಯಂಗಳಿನಾ ನಿರೋಧನನಬಾಧಕನಪ್ಪಂತು ಬೋಧಿಸಿ ದೀನಾರಮನೇನಾನುಮನಿತ್ತು ತತ್ಪರುಣಿಯ ಸೆಱೆಯಂ ಪೆಱಪಿಂಗಿಸಿ (ವರ್ಧಪು. ೦೫-೫೨ ವ). [ಪೆಱಪಿಂಗು + — ಇಸು$_3$]

**ಪೆಱಪಿಂಗು, ಹೆರಹಿಂಗು, ಹೆಱಹಿಂಗು** (ಕ್ರಿ). ೧. ಹಿಂದೆ ಸರಿ ; ಹಿಂದಕ್ಕೆ ಹೋಗು ; ಹಿಂಜರಿ : ಪುರಿ ಪುರಿ ಪರಿಪರಿ ಪೊಪೋಗೆಲೆ ಯೆಲೆ ಪೆಱಪಿಂಗು ಪಿಂಗು . . . ತೊಲತೊಲಗೀ ಮೊಳಿಗೆ ಪುಲಿಯು ದೆಂಬುದು ಮಾರ್ಗಂ (ಕವಿರಾ. ೨-೨೬); ಬಾಳೊಳೆ ಬಾಳ್ ಪಳಂಚಿ ಮಾರ್ಕೊಡಿವಿಡೆ ನೋಡಲಂಜಿ ದೆಸೆದೇವತೆಗಳ್ ಪೆಱಪಿಂಗೆ (ಪಂಪಭಾ. ೧೧-೪೨); ಮತ್ತಂ ದುರ್ಗಂಧಕ್ಕಿರಲಾಱದೆ ಲೆಂಕರ್ ದಂಡಂಗೊಂಡರಂತೆ ಶಂಕಿಸುತ್ತುಂ ಪೆಱಪಿಂಗೆ (ರಸರತ್ನಾ. ೪.೦೬೪). ೨. ಹೊರಬರು ; ಮರಳು : ಅವಳ ನಗೆಮೊಗದೊಳೊಯ್ಯನೊಯ್ಯನೆಱಗಿದ ಕಣ್ ಎಸೆವ ಪೊಸದಾವರೆಗೆಱಕದಿಂದೆಱಗಿದ ಪಱೆದುಂಬಿಯಂತೆ ಪೆಱಪಿಂಗಲಾರ್ತುದಿಲ್ಲ (ಶಬ್ದಮ. ೭೮). ೩. ಕುಗ್ಗು ; ಕಡಮೆಯಾಗು : ತಗು : ಮಂಗಲಾಕಾರನಂ ಮಿಗೆ ನೋಡಿ ನೋಡಿ ಪೆಱಪಿಂಗದಾನಂದದಿಂ ಬೆಚ್ಚಂತಿರೊಚ್ಚತಂಬಾಗಿ ನಲಿನಲಿದಾಡುತೆ (ಶಬ್ದರಾ. ೭-೩೭). ೪. ದೂರವಿರು; ಅಗಲಿರು: ಗಂಗಾಧರನ ಭಕ್ತೆ ತಿರುಕೊಳವಿನಾಚಿಯೆಂಬಂಗನೆ ಪವಿತ್ರಜಲಘಟಮನುಱೆ ಪೊತ್ತು ಪೆಱಪಿಂಗದಾ ಪಂಚವರ್ಷದ ಕುಮಾರಂಬೆರಸು ಮುನ್ನ ತಾಂ ನೀರಡಱುವ ಲಿಂಗವಂತರ ಮನೆಯ ಪೊಕ್ಕು (ಬಸವಪು. ೮.೦೬). ೫. ಇಲ್ಲವಾಗು : ನಾಶವಾಗು : ನೆಱೆ ಘೋಷಂ ಪೆಱಪಿಂಗಿದಿಂಗಡಲ ಮಧ್ಯಾದಭ್ರ ಶುಭ್ರಾಬ್ಜದೊಳ್ ವರಕಂದರ್ಪನ ಗರ್ಭದಿಂದೆಸೆವ ಲಕ್ಷ್ಮೀಕಾಂತೆಯೆಂಬಂತೆ . . . ಕ್ಷೌಮಾಂಬರಾಚ್ಛಾದಮಧುರಪರ್ಯಂಕದೊಳಿರ್ದ ಗರ್ಭವತಿಯಂ ಕಂಡಂ (ಸುಕುಮಾ. ೫-೫೫); ಧೂವಳಯಾಧಿಪಂ ಬೆಱಗುಮೆತ್ತು ಮುದಂ ಪೆಱಪಿಂಗಿ ಪಂದೆಯಂ ಪಾಱಡರ್ದಂತೆ ತೊಟ್ಟನೆ ಕಟಲ್ದು (ಧರ್ಮಾ ೧೧.೧೧೧). ೬. ಕಳೆ; ನೀಗು : ನಾನು ನೀನುಗಳಳಿದು ತಾನು ಲಿಂಗದಿ ಉಳಿದು ನಾನಾಭ್ರಮೆಗಳ ಪೆಱಪಿಂಗಿ ನಿಂದವನು ತಾನೈಕ್ಯ ನೋಡ (ಸರ್ವಜ್ಞ. ೦೫೩). ೭. ಪರಿಹಾರವಾಗು : ಉಪಶಮನವಾಗು : ಸ್ಮರತಾಪಂ ಪೆಱಪಿಂಗೆ ಸೂಳೆಯರೊಳಂಗಂಪೊಂದಿ ಕೂಡಿರ್ದ ಗಂಡರನಾಟಂದಲೆ ದಟ್ಟ ಪೊಯ್ದು ಕಳೆದು . . . ಸೂಳೆಯರೊಳಂಗಾತ್ರಮೋಹದಿಂ ಬಲ್ಮೆಯಿಂ ನೆರೆವಂ ಭೂಭುಜನಂದನಂ (ರಸರತ್ನಾ. ೨.೩೮). **ಹೆರಹಿಂಗು** : ೩. ಹೆರಹಿಂಗದ ಪರಮಸುಖ ದೊರೆಕೊಂಡಿತ್ತು (ವಚನ. ೦೦೦). ೮. ಬೇರೆಯಾಗು ; ಬೇರ್ಪಡು : ಅಂಗಲಿಂಗಕ್ಕೆ ಕಿಂಚಿತ್‌ಮಾತ್ರ ಸೂತ್ರ ಹೆರಹಿಂಗದಂತೆನವರತ ಧರಿಸಿಕೊಂಡಿರುತಿರ್ದ (ಪ್ರಭುಲಿಂ. ೨.೨). **ಹೆಱಹಿಂಗು**: ೧. ಚೋಳನಂಜಿ ಹೆಱಹಿಂಗದೆ ಮಾಳವನೋಡಿ ದುರ್ಗ್ಗಮಂ ಹುಗದೆ ಕಳಿಂಗನೋಸರಿಸಿ ಹೋಗದೆ ಗುರ್ಜ್ಜರನಾಂತು ಯುದ್ಧದೊಳ್ಳಿಗಂಪರೆ ಬಿಟ್ಟದೇವ ಗರುಡಂಗಿದಿರಾಗಿ ಧರಿತ್ರಿಮಂಡಲದೊಳು (ಎಕ. V. ಹಾಸನ. ೬೯-೨೪; 1155): ನಡೆನಡೆದು ತಿರುಗಿ ಹಂಬಲಿಸಿ ನಡೆನಡೆದು ದಡದಡಿಸಿ ಹೆಱಹಿಂಗಲಾಱದೆ ಮನಂಬಿಡಿದು (ಕನ್ನಡ. ದೇ. ೦೩೩.೧೧); ಹೊಗರುಗು ಮಂಗೋಪಾಂಗವಕ್ಷದೊಳು ಪೊಂಬೊಗರಿಯುಂತಿರ್ದ ನುಣ್ಗೊಲೆಯ ದೃಗು ಯುಗಳದಿ ನೋಡಿ ಹೆಱಹಿಂಗಲಾಱದೆ ಮುಗುಳುನಸುನಗೆ . . . (ಮೋಹತ. ೦೪.೫೨). ೪. ನೆಱೆ ರೂಪುವಡೆದ ಮನ್ಮಥನೆಂಬ ರ . . . ಹೊನ್ನೊರೆಯಿಂದಲುಗಿದ ಕೂರಸಿಯು ಪಱೆಯುಬಾರದು ಮಹಾದೇವ ಸತ್ಯುವರನ ಹೆಱಹಿಂಗಬಹುದೆ ಬಲ್ಲವರು (ಮೋಹತ. ೨೯-೫೫). ೫. ಲಿಂಗವ ನಲಿನಲಿದು ಪೂಜಿಸುತಂಗಚೇಷ್ಟೆಗಳೊಡನೊಡನೆ ಹೆಱಹಿಂಗುತಿರೆ ಸಲೆ ನೋಡಿ ನೋಡಿ ಮಯಾಬ್ಧಿವಲರಿಸುತ (ಬಸವ. ೩೩.೮): ಎರಬು

ಸುಳಿವುದು ದೀಪಶಿಖಿ ಪರಿಹರಿಸಿವತಿಬಲದಬ್ಬಿಗರ ನಿಮ್ಮುರತೆಗಂಜದೆ ವಾಣದೆನೆ ಪೆಱಹಿಂಗಿತಾ ರಜನಿ (ಕುಮ್ವಾ.ಕ. ೬-೦೪). ೭. ಕೆಲದೂರ ಬಂದಾದಾರಿಯ ನಡೆವಲಸಿಕೆ ಪೆಱಹಿಂಗಲೆನುತ (ಪ್ರಶಂಜ. ೫.೩೦).

[ಪೆಱ್ಱ (<ಪೆಱಗು) + ಹಿಂಗು$_1$]

**ಪೆಱಭಾಗ** (ನಾ). ಹಿಂಬದಿ ; ಹಿಂದುಗಡೆ ; ಹಿಂಭಾಗ : ತನ್ನ ಬಲಂ ಪೆಱಭಾಗದಲ್ಲಿ ಬಂದಡಿಗೆಡದಂದೆ ಪಜಿಯೊಳೆ ಪಾಯಿಸಿ ಮೂಲವಲ್ಲವುಂ ಪಡಲ್ವಡಿಸಿ (ಎಕ. II. ೦೫೬. ೯; ಸು. ೪೪೦). [ಪೆಱ್ಱ (<ಪೆಱಗು) + ಭಾಗ]

**ಪೆಱಮೆಟ್ಟು**, ಹೆಱಮೆಟ್ಟು (ಕ್ರಿ). ಹಿಂದಕ್ಕೆ ಅಡಿಯಿಡು; ಹಿಂದೆ ಸರಿ; ಹಿಂಜರಿ : ಮೂಗುರ್ಚಿದೆವ್ಮೊರಿಯುಂ ಪೆಱಮೆಟ್ಟಿದ ತಗರುಂ (ಶಾಂತಿಪು. ೬.೩೩ ವ); ಪೆಱಮೆಟ್ಟಿ ತುಱುಗಿ ವಿಂಗೆ ತಳ್ವಿಱಿದಪ್ಪ ವೊಡನೊಡನೆ ತಮ್ಮೊಳೀ ಕಾಂತೆಯ ನುಣ್ಣುದುಱುಗವೆಗ[ಣ್ಗ]ಳ್ (ಪುಷ್ಪ.ಪು. ೬-೩೦). **ಹೆಱಮೆಟ್ಟು** : ಬಾಡುತಂ ಬಳಲುತಾತಂ ಹೆಱಮೆಟ್ಟಿ ಭೀತಿಯಿಂ ಕೆಲಸಾರ್ದು ಮಂಟಪದ ಗೋಂಟಿನೊಳು ಕುಳ್ಳಿರ್ದು (ತಿರುಪ. ೯೬. ೦೩-೨೦).

[ಪೆಱ್ಱ (<ಪೆಱಗು) + ಮೆಟ್ಟು$_1$]

**ಪೆಱಮೆಯ್** (ನಾ). ಮೈಯ ಹಿಂಭಾಗ ; ಬೆನ್ನು : ನೆಱೆಯೆ ನವಿರ್ ಪೆಂಪಿಡಿದೆದೆಱಲ್ಲದೆ ನೆರೆವ ಪಕ್ಕದಿಂ ಸೊರ್ಕುತುಮಾ . ಪೆಱಮೆಯ್ಯುಕ್ಕ ಮನೆರಡುಮುನಱೆತರ್ ಭೂಭಾರವೆಂದೆ ತಱಿಸಂಗಾಗಳ್ (ಚಕಿವ. ೬-೨೦೯).

[ಪೆಱ್ಱ (<ಪೆಱಗು) + ಮೆಯ್$_2$]

**ಪೆಱವಕ್ಕ** (ನಾ). ಹಿಂದುಗಡೆ; ಹಿಂಭಾಗ : ನರ್ಮದಾತಿಲಕದ್ವಿಪೇಂದ್ರಮುಂ ಪಣ್ಣಿಲ್ಲೇಟ್ಟು ತಾನುಂ ಕೈಗೆಯ್ದು ಪದ್ಮಾವತಿಯುಂ ಬರಿಸಿ ಪೂರ್ವಾಸನ ದೊಳಾಕೆಯುಂ ಕುಳ್ಳಿರಿಸಿ ಪೆಱವಕ್ಕಮುಂ ತಾನಳವಡಿಸಿವೊಡನೆ ಗಡಣಿಸಿ ಬಪ್ಪ ರಾಜಪುತ್ರರಿಗೆತ್ತಿದ ಸತ್ತಿಗೆಗಳಿಂದಂಬರತಳಂ ಪುಂಡರೀಕಷಂಡದಂತೆ ಕಣ್ಗೊಪ್ಪವಿಮಾಯ್ಚ (ಧರ್ಮಾ.ಸ್ತ. ೨-೩೮ ವ). [ಪೆಱ್ಱ (<ಪೆಱಗು) + ಪಕ್ಕ]

**ಪೆಱವರಿಜು** (ನಾ). ಬೇರೆಯ ರೂಪು, —ಆಕಾರ : ಅಂತಃಕರಣದ ಪೆಱವರಿಜಾಗುದು ದಲ್ ತಿರುಮಲಾರ್ಯನೆಂಬೊಳ್ವೆಸರಿಂದಿಂತೀ ತಿಳಿದಪ್ರತಿಮನುಮೆಂತಪ್ಪ ರಹಸ್ಯಮಾದೊಡಂ ತೊಡರ್ದಿರ್ಕುಂ (ಚಕಿವ. ೫-೦೦೦).

[ಪೆಱ್ಱ (<ಪೆಱತು) + ಪರಿಜು]

**ಪೆಱವುಟ್ಟು**$_1$ (ಕ್ರಿ). ಬೇರೆಯಾಗಿ ಉಳಿ; ಮಿಗು : ಪೆಱವುಟ್ಟಿದ ಮೂಱು ಮಿಱುಮಿಱುಪುಱುಪ ಶಿತಾಸ್ತ್ರಂಗಳಿಂ ದ್ವಿಜನ್ಮನ ನೊಸಲಂ ನೆಱಿಗೊಳ್ವನ ಮೆಚ್ಚೊಡೆ (ಪಂಪಭಾ. ೦೨-೬೪). [ಪೆಱ್ಱ (<ಪೆಱತು) + ಉಟ್$_1$]

**ಪೆಱವುಟ್ಟು**$_2$, ಪೆಱಉಟ್ (ನಾ). ೧. (ಗೃಹಸ್ಥನಿರುವ ಕಡೆಯಿಂದ) ಬೇರೆಯಾದ ಸ್ಥಳ : ಭಟ್ಟಾರಾ ನೀಮಿಲ್ಲಿಗೇಕೆ ಬಂದಿರಿಲ್ಲಿಂದಂ ಪೊಱ ವೊಟಲೊಳ್ ಪೆಱವುಟ್ ಬಸದಿಯಿಲ್ಲಾ ಎಂದೊಡೆ (ವಡ್ಡಾರಾ. ೨೭-೨೭). ೨. ಬೇರೆಯ ಕಡೆ, –ಎಡೆ : ತದುಪಗತಮಧ್ಯಮೈಕತ್ವದೊಳಕ್ಕುಂ ಪ್ರಾಯದಿಂದಿಕಾರಪಮಕಾರಂ ವಿದಿತಸ್ವರೂಪಲೋಪಮುಮದಂತೆ ಪೆಱವುಟ್ಟೊಳು ಪ್ರಕೃತಂತ್ರದೊಳಂ (ಶಾಜ್ಞ್ಞವ. ೪೦೫); ವರುಣನೆಂಬ ನೈಮಿತ್ತಿಕನಂ ಕರೆದು ಬೆಸಗೊಳ್ವುದುಮಾತಂ . . . ದೇವಕಿಯ ಮಗ ನೊರ್ವಂ ಪೆಱವುಟ್ ಬಳೆದಪನೆಂದು ಬಗೆಯೊಳ್ ಪಗೆಯನಿಕ್ಕಿ ಪೋಗೆ (ಅರ್ಧನೇ. ೬-೬೬ ವ). **ಪೆಱಉಟ್** : ೩. (?) : ತಿರ್ದಲಿಕೆ ಬಂದ ಶಕುನ ಪಲ್ಲಿರ್ದಂತಿರೆ ಪಲವು ತಿರ್ದೆ ಪೆಱಉಟ್ ಲಾಭಂ ತಿರ್ದಿದದುನಯಂಗೆ ಪೊರ್ದದು ಫಲಮಂತದಕ್ಕೆ ಕಡೆವೊಗಶುಭಂ (ಲೋಕೋಪ. ೦೨-೬); ಆರಂಬದ ಫಲಮುಂಟೆಂಬುದಂ ಪಡೆದ ಧಾನ್ಯರಾಶಿ ಪೆಟ್ಟಂತೆ ಧರ್ಮದ ಫಲಮನಿಪ್ಪುದೀ ಸಂಪತ್ತೆ ಪೆಡ್ಡಪ್ಪುದದಟೊಳ್ ನೀಂ ಬಗೆದು ನೋಡಿ ನೆಗಲ್ವುದೆಂಬೀಯೋಜೆಯನೀ ನೆಗಟ್ತಿಯುಂ ಪೆಱಉಟಿಯ(ಮ)ಕ್ಕು ಮೆಂದು ಭ್ರಾಂತಿಸದಿರು (ಚಿವಸಂ. ೨೨೦-೦೭ ಪ). 'ಅರೆಉಟ್' ಹೋ.

[ಪೆಱ್ಱ (<ಪೆಱತು) + ಉಟ್$_2$]

**ಪೆಱವುಟ್**$_3$ (ಅ). ಮತ್ತೊಂದೆಡೆಯಲ್ಲಿ; ಬೇರೆಯ ಕಡೆಯಲ್ಲಿ : ಮಗಳೆ ಎಮ್ಮ ಕೊಟ್ಟ ಬ್ರತಂಗಳಂ ನಿಮ್ಮಮ್ಮಂ ಬಸುವಲ್ವೇಟ್ಟಿಸಪ್ಪೊಡೆ ಪೆಱವುಟ್ [ಶಾಕಂ. ವೆಡೆ]ವಿಸುಡದಿರೆಮ್ಮಲ್ಲಿಗೆ ನಂದೆಮ್ಮ ಕೊಟ್ಟ ಬ್ರತಂಗಳನೆಮಗೊಪ್ಪಿಸುವುದು (ವಡ್ಡಾರಾ. ೦೩-೦೫); ಪೆಱವೊಸವುಳ್ಳುವಲ್ಲಿಯೊಳವಾಗಮಭಾಷೆಗಳಲ್ಲಿಯುಳ್ಳುವಂ ಪೆಱವುಟ್ ಕಱಾಲಾಗದೆನೆ . . . ನೆಗಲ್ದುದಂ ಇವಿಚತುರ್ಮುಖನಾಗಮುವೇದಿಯಪ್ಪುದಂ (ಅದಪು. ೦೨-೩೩); ಪಿತರರನೂಡಿ ದಪ್ಪಿವೆ.ಬರಂತಪ್ಪುವೆ ಪೆಱವುಟ್ ಪುಟ್ಟಿ ಬಳೆಯುತ್ತಿರ್ದ ಪಿತರರನೂಡುವ ಪಾರ್ವರ್ತವ್ಮ ಕೆಯ್ಯಲಿರ್ದ ಪಾರ್ವಂಗೆ ಕೂಱಿನೊಯ್ವರು (ಧರಾರ. ೯೭೩-೪) [<ಪೆಱವುಟ್$_2$]

**ಪೆಱವೆಣ್** (ನಾ). ಬೇರೆಯ ಹೆಣ್ಣು ; ಪರಸ್ತ್ರೀ : ಪೆಱವೆಣ್ಗೊಲ್ದಂಗ ವೇನಾಗದು (ಶಂಭು. ೯-೬೦) ; ಚಾಳುಕ್ಯವಂಶದೊಳಿಲ್ಲಿಯುಮಿನ್ನವರೆಗಂ . . . ಬೇಡಿದರ್ಗಿಲ್ಲೆಂಬುದುಂ ಕಾದಿ ಸೋಲ್ವುದುಂ ಪೆಱವೆಣ್ಣಂ ಪಿಡಿಸುವುದುಂ[ಶಾಕಂ. ಪೆಱರ ವಿಘಟಿಸುವುದುಂ]ಕನಸಿನೊಳಪ್ಪೊಡಮಿಲ್ಲಂ (ಗದಾಯು. ೨-೭ ವ); ಬಿಗೆಯ್ದುಂ ಪೆಱವೆಣ್ಗಾಟಿಸುವನಂ ಶುಚಿಯೆಂಬರ್ ಶುಚಿಯುಂ ಅಶುಚಿಯೆಂಬರ್ (ಪುಶಕಂ. ೫೦-೦೩).

[ಪೆಱ್ಱ (<ಪೆಱತು) + ಪೆಣ್]

**ಪೆಱವೋಗು**, ಪೆಱಸೋಗು (ಕ್ರಿ). ಹಿಂದಕ್ಕೆ ಹೋಗು ; ಮರಳು : ಅಱೆವೋ ನಿಸ್ನೇಹನನ್ನಂ ಹಿಮಂಗ್ರಹಕದೊಳ್ತಿರ್ದರ್ಳಂ ಕಂಡು ಪುತ್ರಂ ಪೆಱವೋದಂ (ಶಾಂತಂಠ. ೫೯೦). **ಪೆಱಹೋಗು** : "ಅಕ್ಕುಳಸಿತೆಂದುಂ . . . ಪೆಱಹೋದುದೆಂದುಂ, ನುಣ್ಚಿತೆಂದುಂ, ಪಾಂಗೆಯ್ದೆಂದುಂ — ಈ ೧೩. ಅಪಸರಣಕ್ಕೆ ಪೆಸರ್" (ಶಕಸಾ. ೭೨-೬೯೯).

[ಪೆಱ್ಱ (<ಪೆಱಗು) + ಪೋಗು$_1$ (<ಪೋ$_1$)]

**ಪೆಱಸಾರ್**, ಪೆರಸಾರು, ಪೆಱಸಾರು, ಹೆಱಸಾರ್, ಹೆಱಸಾರು (ಕ್ರಿ). ಹಿಂದಕ್ಕೆ ಹೋಗು; ಹಿಂದೆ ಸರಿ; ಹಿಂದೆ ಸಾರು: ತಂಬುಲಿಗರ್ ನಂಬುಗೆ ಗೆಟ್ಟವರಂತೆ ಪೆಱಸಾರೆ (ಧರ್ಮಾಮೃ. ೨-೬೯); ಅಂದು ನನ್ನನು ಕನಸಲಿ ಕೂಡಿ ಪೆಱಸಾರ್ದು ಕೊಂಡು ಹೋದನ ರೂಪನಱಿಯೆ(ಪೋಪಚ. ೩೦-೨೯); ಪೆಳಟ್ ಪೆಱಸಾರ್ದಪೆಯೋ? ಸ್ಫೂಸ್ಗೆ ಪಗೆವರೊಳ್ ಮಱುಗಿದಪೆಯೋ (ಬಿನ್ನಶ್ರು. ೫-೬೦). **ಪೆರಸಾರು** : ರಾಮಚರಿತಾಮೃತಂ ರಮಣೀಯತರ ಭವತ್ಕೋಮಲಸುವಾಣಿಯಿಂ ಕಲಿತಮಾದಡೆ ಶ್ರವಣದಾ ಮಹಾ ಸಾಮ್ರಾಜ್ಯಮುಂ ಸವಿದು ಪೆರಸಾರದೆನ್ನ ಮಾನಸ ಮಹೀಶ (ಶಂಕಾಣ. ೫-೦-೩); ಮೃತ್ಯು. ಓ. ನನ್ನ ಮೃತ್ಯು! ಬಾ. ನಿನ್ನ ಶಂಖನಾದದ ನಿರಾತಂಕ ನಿರುಪಾಧಿಯಲಿ ನಿದ್ದೆ ಪೆರಸಾರಿರುವ ರಾತ್ರಿಯಲ್ಲಿ (ಶಂಮು. ೯೯-೦೬). **ಪೆಱಸಾರು** : ಪರಿಮಱು ಪಾಡಱಿದು ತಳವೇಲ್ಗಳೊಳಗೆ ಪೊಯ್ದು ರಮಣಿಸಿ ಪೆಱಸಾರಿ ಮುಂಬರಿದು ಗದೆಗಳಂ ತಿರುಪಿ ಭುಜಸತ್ತ್ವದಿಂ ತೋಱಿದರ್ ಘನಗದಾಯುದ್ಧಮಂ ಸಂಗರದೊಳು (ಕಲಪು. ೦೬-೨೩). **ಹೆಱಸಾರ್** : ಇರವಂತಿಯ ಮಾಲೆಗಳಂ ವಿಲಾಸಿನಿಯಗ ಕಯ್ಯೊಳ್ ನೀಡೆ ಹೆಱಸಾರ್ದು (ಶಂಬರ. ೦೬-೦೦೦); ಹೆಱಸಾರ್ದು[ಶಾಕಂ. ಕೆಲಸಾರಿ] ನಿಂದು ಬೆಸನಾವುದೆನಲು (ಹಕಕಾ. ೬-೨). **ಹೆಱಸಾರು** : ನಿಮ್ಮ ತೇಜವ ನೋಡಲೆಂದು ಹೆಱಸಾರಿ ನೋಡುತಿರಲು ಶತಕೋಟಿಸೂರ್ಯರು ಮೂಡಿದಂತೆ ಇರ್ದುದಯ್ಯ (ಅಪಮ. ೦೬೩-೭೬೭); ಛಟ್ಟುಗೆಡಹಿದ ಕರ್ಣನನು ಕೈಮುಟ್ಟದಿರು ಹೆಱಸಾರು ಪಾರ್ಥನು ಕೊಟ್ಟ ಭಾಷೆಯ ಮಱೆದೆಲಾ ಕೃತಪ್ಪ ಮಾಡದಿರು (ಕುಮ್ವಾಕ. ೦೨-೨೪); ನೆಟ್ ಲಕ್ಷ ಪರಿ ಪಾಯಿದಳದ ಮನ್ನೆಯ ಸೋತು ಹೆಱಸಾರಿದನಲ್ಲಬಲಕೆ (ಕಂಶಮ. ೦೭-೭೭).

[ಪೆಱ್ಱ (<ಪೆಱಗು) + ಸಾರ್$_1$]

**ಪೆಱಸಾರಿಸು** (ಕ್ರಿ). ಹಿಂದಕ್ಕೆ ಸರಿಸು ; ಹಿಂದೆ ಹೋಗುವಂತೆ ಮಾಡು : ನೀರೆಂಬ ಸೀರೆಯಂ ಪೆಱಸಾರಿಸುತಂ ಪುಳಿನಮೆಂಬ ಜಘನ

ಸ್ಥಳದಿಂ ನಾರಿಯವೊಲ್ ನದಿ ಮೆಱೆಗುಂ (ಶಾರಪು. ೪–೬೯).

[ಪೆಱಸಾರ್ + — ಇಸು₃]

**ಪೆಱಸಾರು** 'ಪೆಱಸಾರ್' ನೋ.

**ಪೆಱಸಾರ್ಚು** (ಕ್ರಿ). ೧. = ಪೆಱಸಾರಿಸು : ಅದಱಮನತ್ತಲೊಯ್ದ್ ದವಕೆಯಂ ಕಳೆ ಸೀಗುರಿ ಬೇಡ ಬೀಸದಿರ್ ಕೊಡೆಯಂ ವಿಡಂಬವೇಕೆ ಸಿರಿಗನ್ನಡಿಯಂ ಪೆಱಸಾರ್ಚು (ಪುಷ್ಪ. ೦೩–೬೬). ೨. ಕದೆಗೆಗಣಿಸು : ಬಂದಿವರ್ ಮಱುವಲಂ ಕಿಱಿಪಿರಿದೆಂಬೆಣಿಕೆಯುಂ ಪೆಱಸಾರ್ಚಿ ಪೆರ್ಚಿದ ರಕ್ಕಸವಡೆಗಿದಿರ್ಚುವಿಂದ್ರಾಚ್ಯುತರಂತೆಯುಂ . . . ತೆಲುಂಗಪಾಳೆಯಮಂ ದಟದುಱಿವಾಯ್ತು (ಕಕಪ. ೨–೯೯). [ಪೆಱು₂ (<ಪೆಱಗು) + ಸಾರ್ಚು₁]

**ಪೆಱಹೋಗು** 'ಪೆಱವೋಗು' ನೋ.

**ಪೆಱಿಸು**, ಪೆರಿಸು, ಹೆಱಿಸು (ಕ್ರಿ). ಪ್ರಸವವಾಗುವಂತೆ ಮಾಡು ; ಪೆರಿಗೆ ಮಾಡಿಸು : ದೇವಕಿಯಮಗಳುಂ ಪೆತ್ತಳ್ ಜೀವಂಬಸೆ ಪೆಱಿಸೆ ಹರಿಯ ಬೆಸದಿಂದಂ ಮಾಯಾವಿ ಪರಿತಂದು ನೈಗಮದೇವಂ ತಂದಿಕ್ಕಿ ಮುಂದೆ ಮಾಯಾಶಿಶುವಂ (ಅರ್ನೇಸ. ೬–೨೯). **ಹೆರಿಸು** : ಸೂತಿಕಾಪರಿಪಾಲಿತಾ–ಅನೇಕಮಂದಿಯಂ ಹೆರಿಸಿದಂಥಾ ಸೂಲಗಿತ್ತಿಯರಿಂ ರಕ್ಷಿಸಲ್ಪಟ್ಟ ವಳಾಗಿರುವಂಥಾ ಆ ಗರ್ಭಿಣಿಯು (ಶಾಕಟಿ. ೨–೦–೬೬ ವ). **ಹೆಱಿಸು** : ಬಱೆಯ ಮಾತೋ ಚಾಪವಿದ್ಯದೊಳೆಱತವುಂಟೋ ಹೊತ್ತುಗಳೆಯದೆ ಹೆಱಿಸಿರೇ ನಾರಿಯನು ನಿಮ್ಮಯ ಬಾಣಗರ್ಭಿಣಿಯ (ಕುವ್ಯಾಭೀ. ೯–೩೪) ; ಪುಲ್ಲೆ ಗರ್ಭದಿ ಬೇನೆವಡೆದು ಹೆಱುತಲಿರೆ ನಿಲ್ಲದೆ ಪೆಣ್ಬುಲಿ ಕಂಡು ಸಲ್ಲೀಲೆಯಿಂ ಪ್ಯೆದಡಹಿ ಹೆಱಿಸುತಿರ್ದುದೆಲ್ಲವನೇಸುಸುರುವೆನು (ಅನಂತ. ೩–೬೪).

[ಪೆಱು₁+—ಇಸು₃]

**ಪೆಱು₁**, ಪೆರು₁, ಹೆರು₁, ಹೆಱು₁ (ಕ್ರಿ). ಪೆತ್ತ₁, ಹೆತ್ತ₁ (ಭೂತಕೃ). ಪೆತ್ತು₁, ಹೆತ್ತು₁ (ಭೂತನ್ಯೂ). ೧. ಪಡೆ ; ಹೊಂದು: ವಿತತಶ್ರೀ ಸಂಪತ್ತಂ ಶತಮಖಿನವ್ಯಗಾನುಭಾವನೊಲವಿಂ ಪೆತ್ತಂ (ಕಜಾ. ೨–೪೪) ; ಊರ್ಗಳುಮಂ ನಾಬ್ಗಳುಮಂ ತೊಱಲ್ದು ಬೈಕಂದಿರಿದೆಲ್ಲಿಯಾನುಂ ಪೆತ್ತುಂ ಪೆಱದೆಯುಮಿಂತು ಬಾಱುತ್ತಂ ಪದಿನೈದು ಪದಿನಾಱು ವರುಷದ ಪ್ರಾಯದಾತನಾಗಿ ವೈದಿಶಮೆಂಬ ಪೊೞಲ್ಗೆ ವರ್ಪೊಂ (ವಡ್ಡಾರಾ. ೬೬–೨೦) ; ಅದೇಂ ಗಗನಮಂಡಲಂ ನೆಱೆಯೆ ಶೋಭೆಯಂ ಪೆತ್ತುದೋ (ಆದಿಪು. ೬–೩೯). ೨. ಗಳಿಸು ; ಸಂಪಾದಿಸು : ದೇವರ ಪರಿಯೆಂದಿನಂದ ವಲ್ಲಿಂದೊಂದು . . . ಪರಪುಲಾಭವ ಪೆತ್ತ ಠೀವಿಯೊಳದೆ (ಭರತ. ೪–೯) ; ಲಾಭಪೂಪವೆಡೆಯೊಳ್ ಪೆಱವೆಟ್ಟುಮೆಂಬುದನ್ ಕಂಡಱೆತು. ಇನ್ ಮುಂದೆ ನೀಮ್ ಕಳ್ವರಂತೆ (ಅಂತಿಗೂ. ೦೫–೨೮೮). ೩. ಹೊಣೆಯನ್ನು ಒಪ್ಪಿಕೊಳ್ಳು ; ಹೊರು : ಅಗ್ಗಳಾಳರಸರಾ ಬೆಸಸಿದೊಡೆ ಬೆಸನ ಪೆತ್ತುರ್ಬಿ ಬಲವಾನ್ನೆಳ್ದಿ ಎಱದು ಬಿಟ್ಟರ್ (ಎಕ. X (S). ಬೌಂಗ್. ೯೬. ೭; ಕು. 820) ; ವಿಕ್ಕ ಬೆಸನಂ ತ್ರೈಲೋಕ್ಯಮಲ್ಲಂ ಜಯಶ್ರೀಗೇಹಂ ಕುಡೆ ಪೆತ್ತು ಶೌಚಗುಣ ದಕ್ಷಂ ಸ್ವಾಮಿಭಕ್ತಂ ಯಶಶ್ರೀನಿವಾಸ ಮೆನಲ್ಕೆ ಸಂದ ನರಲಾತ್ (ಸಾಂಡೀಇ. ೩–೦೨ ; 1047). ೪. ಹಡೆ ; ಪ್ರಸವಿಸು : "ಪೆಱು__ಉಪಲಬ್ಧೌ (ಸಂಪಾದಿಸು), ಪ್ರಸೂತೌ ಚ" (ಶಮಣಿ) ; ಮತ್ತಾತನಿಂ ಬಱೆಯುಂ ಪೆಣ್ಗೂಸುಮಂ ಪೆತ್ತೊಡೆ ಆಕೆಗೆ ವೀರಶ್ರೀಯೆಂದೇ ಪೆಸರನಿಟ್ಟು (ವಡ್ಡಾರಾ. ೦೦೬–೦೫) ; ಭಾಸ್ವನ್ನಾಭಿರಾಜಾಂಗನೆ . . . ತಿಗ್ಮಕರಸುದಯದೊಳ್ ಪುತ್ರನಂ ಪೆತ್ತಳಾಗಳ್ (ಆದಿಪು. ೭–೩೬) ; ತರುದೇ ಪಣ್ಗಳ ಮೆಲ್ಲೆ ಪಾತೆ ವಿಷಮುಂ ಪೆತ್ತರ್ಭಕಂ ಗೂಡಿಸಲ್ ಹರ ಕೊಲ್ಲಲ್ ಪರ ಕಾಯ್ವನೇ (ಸೋಮೇಶ. ೨೯). ೫. ಸೃಷ್ಟಿಸು ; ಉತ್ಪತ್ತಿಮಾಡು : ದ್ಯುನದೀಕಂಜಾಳಿಗೆಟ್ಟಿರ್ಪಳಿ ಸಮುದಯಮೋ. . .ತಿಗ್ಮನಿಖಾಘೋರ್ವೀಜಮುಂ ತುಳ್ದಿ ಸಲನಿಲಪಥಶ್ರೀ ಪೆಱುತ್ತಿರ್ಪ ಭಾನೀಕಿನಿಯೋ ಪೇೞೆಂಬಿನಂ ಪೊಣ್ಮೆದುದೆಸೆವಸಿತೋತ್ತಾನ

ಮೇಘಪ್ರತಾನಂ (ಕುಸುಮಾ. ೬–೯) ; ನಡುಗಣ್ಣಿನಿಂದ ಬೀರನ ಪೆತ್ತು ಕಳುಪೆ (ಶಾವತಂ. ೩–೦೩) ; ಮಗನಂ ಪೆಱವಂಗೆ ಸಗ್ಗಿಗರ್ ಬಾಗಿಲಂ ತೆಱೆಯರೆಂಬರಲ್ತೆ ! (ರಾಮಾಶ್ವ. ೦೦೪–೨೭). ೬. ಹೊರಸೂಸು ; ಹೊರಚೆಲ್ಲು ; ಬೀರು : ಕಡುವೊಗರು ಪೆಱುವ ಬೊಗಂ ಸುರ್ಬಿದರ್ದವಾಳಾಗ್ರಂ ಮುಂದುಱುವಾಯ್ತು ತವಕವೊಪ್ಪುವ ಕುಱುಪಿನ ಕುಮಾರೆಗಳ ಸಾರ್ಮೆ ಬಿಟ್ಟರ್ ಸುಭಟರ್ (ದಕಕು. ೨–೦೮). ೭. (ಪ್ರಾಣಿ, ಪಕ್ಷಿ, ಮುಂತಾದುವು ಮರಿ, ಮೊಟ್ಟೆಗಳನ್ನು) ಇಡು ; ಹಾಕು : ತತ್ತಿಗಳಂ ನೀಂ ಪೆತ್ತಂದು ಚಿಂತಿಸಿಕೊಳ್ವಂ (ಶಂತಕಂ. ೦೫೬–೦೨). ೮. ದೊರಕು ; ದೊರೆ ; ಲಭ್ಯವಾಗು : ಜನನಪ್ರಸ್ತುತಕಾಲದೊಳ್ ಸ್ವಭವನದ್ರೇಕ್ಕಾಣವರ್ಗೋತ್ತಮಾಂಶ ನವಾಂಶೋಪಗತಂ ಸಕ್ಕದ್ದ್ವಿಗುಣಮಂ ವಕ್ರಸ್ಥನಾಗಿರ್ದೊಡಕ್ಕೆ ನಿಜೋಚ್ಚಸ್ಥಿತನಾದೊಡಂ ತ್ರಿಗುಣಮಂ ತಾನೀಗುಂ (ಜಾತಕ. ೮–೩). **ಪೆರು₁**: ೪. ಲಕ್ಷ್ಮಣಂ ಶತ್ರುಘ್ನರೆಂಬವಳಿಮಕ್ಕಳ್ಗಳು ಪೆತ್ತಳ್ ಸುಮಿತ್ರೆ (ಕ್ರೀರಾಮಾ. ೦೬–೪೨೨). **ಹೆರು₁**: ೪. ಈ ರೀತಿಯಾಗಿ ಕೊಲೆಗೀಡುಮಾಡಬೇಕಾದ ಮಕ್ಕಳನ್ನು ಹೆರುವ ಬಸಿರು ಬೇಡ (ವಾಲಾಶ್ವ. ೩೯) ; ಹನ್ನೆರಡು ಹೆತ್ತು ಎರಡು ಉಳಿಸಿಕೊಂಡಿದ್ದ ತಾಯಿ ಅವಳು. ಸತ್ತರೆ ಇನ್ನೊಂದು ಪೆತ್ತೇನು ಎನ್ನುವ ಎದೆಗಾರಿಕೆ ಅವಳಲ್ಲಿತ್ತು ! (ಮುಂಗಾಮು. ೨೩). **ಹೆಱು₁**: ೪. ಭರತಸಂತಾನಕ್ಕೆ ಕುಮಾರರ ಹೆಱುವೆ ನಾ ಮುನ್ನೆಂದು ಗರ್ಭವ ಧರಿಸಿದೆನು (ಕುವ್ಯಾಆ. ೪–೪೪): ಅರಗಿಳಿಯೆಂಬಂತೆ ನುಡಿವಳು ಕೋಕಿಲಸ್ವರದಿಂದೆ ಕೂಗುವಳೊಡನೆ ಪೊಱರೆವಳು ಪೆಣ್ದುಂಬಿಯೆನೆ ಹೆಱಲಾಱದೆ ನರಳುವಳಬುಜಾಯತಾಕ್ಷಿ (ಪೋಪತ. ೦೬–೦೪). ೫. ಹೆತ್ತನಿನ್ನೊಡಲಿಂಗೆ ತಂಪಿನ ತೆತ್ತಿಗನೊ ಮೇಣ್ ಬಹಳತಾಪದ ಮುತ್ತಯನೊ ಕುರುರಾಯನೆಲೆ ಧೃತರಾಷ್ಟ್ರ ಕೇಳೆಂದ (ಕುವ್ಯಾದ್ರೋ. ೪–೨): ಸಾಮಾನ್ಯವೇ ಮನದ ಉತ್ತಮಿಕೆ ಲೇಸಾಪ್ತನಹ ಹಗೆ ಸತ್ತನೀತನ ಕಯ್ಯ ಮಕ್ಕಳ ಹೆತ್ತರೀತನ ಹೆಸರಿಡಬಬೇಕೆಂದನಾ ರವಿಜ (ತೊರೆರಾ. ೪–೩–೨೦). ೬. ಅಂಗಜ ಪಂಚಫಣೋರಗನಾ ದಿವ್ಯಾಂಗದೊಳುವ್ವಿಸಿದ ಕಿಱುಮುತ್ತಿನ ಜಂಗುಳಿಯಂ ತದ್ವದನಂಗಳನೋವದೆ ಹೆಱುವಂದದೊಳು (ಜಯಕಾ. ೮–೩೭).

**ಪೆತ್ತ** ಜಯನ್=ಜಯವನ್ನು ಹೊಂದಿದವನು ; ವಿಜಯಿ : ಸೇನ್ದ್ರಕ ಬಣೋಭಯದೇಶದಾ ವೀರಾಪುರುಷಸಮಕ್ಷದೆ ಕೇಕಯ ಪಲ್ಲವರಂ ಕಾದೆಱಿದು ಪೆತ್ತ ಜಯನಾ ವಿಜ ಅರಸನ್ಗೆ ಬಾಳ್ಗಟ್ಟು ಪಲ್ಮಡಿಉಂ ಮುಱವಳ್ಳಿಉಂ ಕೊಟ್ಟಾನ್ (ಪ್ಯಲಂ. ೦೯೩೬. ೦೬–೦೦; ಕು. 450).

**ಪೆತ್ತ ತಂದೆ, ಹೆತ್ತ ತಂದೆ**=ಜನ್ಮ ನೀಡಿದವನು ; ಹಡೆದ ತಂದೆ ; ಜನಕ : ಸತ್ಯದೇವನ ಪೆತ್ತ ತಂದೆ ಸತ್ಯಕಂ ತನ್ನ ಮಗನನಱಸುತ್ತುಂ ಬಂದಲ್ಲಿ ಕಂಡು (ಶಾಪುಂಪು. ೬೩): ಗಂಧೇಭಗಮನೆ ಚಿತ್ತವಿಸು ನಿನ್ನಯ ಪೆತ್ತ ತಂದೆ ಬೀಳ್ಕೊಟ್ಟ ಧೂರ್ಜಟಿಗೆ ಸಂದೇಹವಿಲ್ಲದೆ ಶರಣೆಂದು ಬರ್ಪವೇಳೆ ದಿನಲವಳು ಹಿಗ್ಗಿದಳು (ಪೋಪತ.೨೩–೮). **ಪೆತ್ತ ತಾಯ್, ಹೆತ್ತ ತಾಯ್, ಹೆತ್ತ ತಾಯಿ, ಹೆತ್ತಾಯಿ**=ಹಡೆದವಳು; ಹಡೆದ ತಾಯಿ: ವನಿತೆಯುಮಂ ನಂಟರುಮಂ ಜನಕನುಮಂ ಪೆತ್ತ ತಾಯುಮಂ ವೃತ್ತಿಯುಮಂ ಮನಮಂ ಬಿಡು ತೊಱೆದು ತಪಕಂ ತನುಮಂ ತಂದೊಡ್ಡಿ (ದರ್ಶನಪ್ಪ. ೬–೬೯); ಹೆತ್ತ ತಾಯುಮಂ ಮಾಱೆ ತೊತ್ತ ಕೊಂಬರೆ (ಹತಕಾ. ೮ ೬೬); ಹೆತ್ತ ತಾಯಿಗೆ ವಂದಿಸುತ ನಾಂ ಪೊತ್ತ ಹಿಂದಣ ಕೆಲಸವಿಂದಾಯಿತ್ತ ಎಂದುತ್ತಮೆಯ ಕೃಪೆಯುಂ ಪಡೆದು (ಐಕಪು. ೬೦–೩೪); ಸಂತೋಷದಿಂದ ನಾರದ ಕಂತುವಿನ ಹೆತ್ತಾಯಿಗೆ ಅಂತರಂಗದ ಮಾತುಗಳನಾಡುತಿದ್ದನು (ಕ್ರೀಕೃಶಾ. ೫). **ಪೆತ್ತ ಮಗ, ಹೆತ್ತ ಮಗ**=ತಾನು ಜನ್ಮಕೊಟ್ಟ ಮಗ ; ಸ್ವಂತ ಮಗ; ಕೃತಾಂತನುಮ್ಮ ಸುತರಂ ಪಡೆದೀಯೆಮಗೆಂದು ಕಾಂತೆಯರ್ ನುಡಿದಪರೆನ್ನ ಪೆತ್ತ ಮಗನಂ ಪಡೆದೀಯೆನಗೆಂದು ಪಾರ್ವನುಂ ನುಡಿದಪಂ (ಆಕಪು. ೦೦–೩೨); ಹೆತ್ತ ಮಗನಂತೆಯೇ ಆವನನ್ನು ಸಾಕಿದರು (ಜಾ). **ಪೆತ್ತಯ್ಯ, ಹೆತ್ತಯ್ಯ**=೧.

ಹೆತ್ತ ತಂದೆ : ಆರ್ವೊಗನಂ ಪೆತ್ತಯ್ಯಂ ಕೂರ್ಪೆಯಿನುಸುರಲ್ಕೆ ಸಂತಸದಿಂ (ಶ್ರೀಮುಹಾ. ೯-೨); ಆ ಕಣ್ದಿಟವಾದ ನಿಕ್ಷೇಪವ ದೃಷ್ಟಿ ಮುಟ್ಟದಡೆ ಅಲ್ಲಿ ನಮ್ಮ ಹೆತ್ತಯ್ಯನ ಹೊಳವ ಕಂಡು ತಳವೆಳಗಾದನು ಕಾಣಾ (ದೀಣಾವ. ೦೩-೨೦). ೨. ತಂದೆಯ ತಂದೆ ; ಅಜ್ಜ ; ತಾತ : ಬಸವನಾಲವಿದೆಂಬುದೇತಕೆ ಹೆಸರು ಬಂದಿತ್ತುಸುರಿ ನೀವೆನೆ . . . ಒಸೆದು ಪೆತ್ತಯ್ಯಂಗ ಳಿಂದಾಲಿಸಿದೆನೆಂದೆಮ್ಮಯ್ಯನೊಲವಿಂ ಶಿಶುಗಳಪ್ಪೆಮ್ಮೆಲ್ಲರಿಗೆ ಹೇಳಿದನು (ಬಸಪು. ೩೨-೦೯); ನಮ್ಮ ಹೆತ್ತಯ್ಯನು . . . ನಮ್ಮನ್ನು ಕೂರಿಸಿಕೊಂಡು ಪ್ರಸ್ತಾಪ ಬಂದಾಗ ಹಳೇ ಕಥೆಯನ್ನೆಲ್ಲಾ ಹೇಳುತ್ತಿದ್ದರು (ಪಹಮುಣಾ. ೦೦೭). ಪೆತ್ತವರ್, ಪೆತ್ತರ್, ಪೆತ್ತವರು, ಹೆತ್ತವರು, ಹೆತ್ತೋರು (ಬಹುವ)=೧. ಪಡೆದವರು ; ಹೊಂದಿದವರು : ಇತ್ತಗ್ರಿತ್ತ ಧನ ಮೇಣದು ನಿಲ್ವುದೆ ಮುನ್ನಮಿತ್ತರೆಲ್ಲಿದರಿಪರೀಯೆ ಪೆತ್ತವರುಮೆಲ್ಲಿದರಾ ಧನಮೆಲ್ಲಿತಿಂದ್ರಜಾಲದ ಸಿರಿಗೇಕೆ ಮೆಟ್ಟಿಪಡುವಿರೆಂದೊರೆದಂ ಕವಿಕುಂಜರಾಂಕುಶಂ (ಗಿರಾಮು. ೦-೩೫). ೨. ಹಡೆದವರು ; ಜನ್ಮ ನೀಡಿದವರು; ತಾಯಿ ತಂದೆಗಳು : ಜನಪೂಜೆಗಳಂ ಮಾಡದೆ ಮುನಿಗಳ್ಗಾಹಾರ ದಾನಮಂ ಮಾಡದೆ ಭೋಂಕನೆ ಪೋಗಲಾಗ ಮಗಳೇ ಮನಕತಮಂ ಮಾಡಿ ಪೆತ್ತವರ್ಮೞಗುವಿನಂ (ರವರ್ಣಾಮ್ಮ. ೩-೨೨೪); ಬೇವಸಂಗಳ್ಗೆಲ್ಲಮುಜಿಕೆ ಸದಾ ಪಯಸ್ಸಿನಿಂದಲೆಸವ ಕೋವಿದಂಗೆ ಪೆತ್ತರಿತ್ತರೆನ್ನ (ಮಹಾದೇ. ಬಿ. ೦೫೦-೨); ತಂದಪಂ ಕುಲದ ಕೀರ್ತಿಗೆ ದಿವಾದೀಪ್ತಿಯಂ, ಮೇಣೆನ್ನನೊಲ್ದು ಪೆತ್ತರ್ಗೆ ಸಂತೃಪ್ತಿಯಂ! (ಜಕ್ಕಾಂಗ. ೬೦-೦೬೫೦); ತನ್ನ ಪೆತ್ತವರು ಮಿಗಿಲು ತನ್ನವರೊಳ್ ತನ್ನ ಪೆತ್ತವರಿಗೆ ಮಿಗಿಲು ತನ್ನನಿಯನ ಪೆತ್ತವರು (ಹರಿಬಿ. ೯-೪); ಹಳವು ಹೊದ್ದದೆ ಹೆತ್ತವರು ಮಕ್ಕಳುಗಳೆಂಬೀ ಬದುಕು ಮಾಣದೆಯೆಳಸಿ ಕೊಂಬಂತಾಯಿತೆಂದಳು ಪಾಂಡವರ ರಾಣಿ (ಕುಮ್ಯಾಭಿ. ೨-೩೫); ಹೆತ್ತವರಿಗೆ ಹೆಗ್ಗಣ ಮುದ್ದು, ಕೂಡಿದವರಿಗೆ ಕೋಡಗ ಮುದ್ದು (ಗಾದೆ) ; ನಿತ್ಯಾನಂದ ರಜತಾಚಲವಾಸನೆ ಭಕ್ತವತ್ಸಲ ಭಾಳನೇತ್ರ ಹೆತ್ತೋರ ಮನೆದೈವ ಶ್ರೀವೈಲಾರಗೆ ಹಸ್ತವ ಮುಗಿದು ವಂದಿಸುವೆ (ಕುಂದ್ರಹಾ. ೦-೫). ಹೆತ್ತ ಕರುಳು = ೧. (ಆಲಂ) ತಾಯಿಯ ಕರುಳು ; ಮಮತೆಯ ಹೃದಯ : ಹೆತ್ತ ಕರುಳಾದ್ದರಿಂದ ಮಕ್ಕಳ ಸಂಕಟ ನೋಡಲಾರದೆ ಅವಳು ಕೂಲಿಕೆಲಸ ಮಾಡಿ ನಾಲ್ಕು ಕಾಸು ಸಂಪಾದಿಸಿ ಸಾಕುತ್ತಾ ಇದ್ದಾಳೆ (ರೂಢಿ). ೨. ತನ್ನಿಂದಾದ ಸಂತಾನ : ಮಕ್ಕಳಿರ, ಅಕ್ಕರೆಯ ಮಕ್ಕಳ, ಹೆತ್ತ ಕರುಳನು ಮರೆವೆನೆ? (ಹೊಂಗಳು. ೨-೯). ಹೆತ್ತಪ್ಪ= ೧. ಹಡೆದ ತಂದೆ. ೨. ಅಜ್ಜ ; ತಾತ : ಶತಬಲನೆಂಬ ನಿಮ್ಮ ಹೆತ್ತಪ್ಪನು ಬಹುಕಾಲ ರಾಜ್ಯವನ್ನಾಳಿ ಅಂತ್ಯದೊಳ್ ರಾಜ್ಯ ಭೋಗದೊಳ್ ನಿಸ್ಪೃಹನಾಗಿ ನಿಮ್ಮ ತಂದೆಯಪರಿಗೆ ರಾಜ್ಯವಂ ಕೊಟ್ಟು ಅನಶನಾದಿ ಯೋಗದಿಂ ತನುವಂ ತ್ಯಜಿಸಿ (ಪುರುಚ. ೨೨). ಹೆತ್ತ ಮನೆ= ಬಾಣಂತಿಯ ಮನೆ ; ಹೆರಿಗೆ ಮನೆ ; ಸೂತಿಕಾಗೃಹ : "ಅರಿಷ್ಟಗೃಹಂ, ಸೂತಿಕಾಭವನಂ—ಈ ೨ ಪೆತ್ತ ಮನೆ" (ಹಲಾಯು. ೬೨-೩೯೫). ಹೆತ್ತ ಮುತ್ತ=ಹೆತ್ತಪ್ಪ ೨ : ಛತ್ರ ಚಾಮರ ಪೆತ್ತ ಮುತ್ತರ ಬಿರುದ ಬಿಟ್ಟಳುತಳುತಲೋಡಿದನು (ಪರಂ. ೫೬೨-೪೦). ಹೆತ್ತಮ್ಮ=೧. ತಾಯಿ ; ಅಮ್ಮ : ಪೆತ್ತಮ್ಮನಿಗೆ ಹೆಗ್ಗಣವೂ ಮುದ್ದು (ಈಶಪ. ೦೩೫). ೨. ತಾಯಿಯ ತಾಯಿ ; ಅಜ್ಜಿ: (?). ಹೆತ್ತ ಸೂತಕ= ಹೆರಿಗೆಯ ಮೈಲಿಗೆ; ಪುರಂಡು : ಪೆತ್ತ ಸೂತಕ ಹತ್ತು ದಿನಗಳಿಗೆ ಪರಿಹಾರ ಮೃತ್ಯುಸೂತಕವು ಹನ್ನೊಂದು ದಿನಕೆ ಮತ್ತೆ ಋಣಸೂತಕವು ಜನ್ಮಜನ್ಮಾಂತರಕೆ ಎತ್ತೆತ್ತಲೂ ಬೆನ್ನು ಹತ್ತಿಕೊಂಡಿಹುದು (ಕುಪೂ. ೨೩-೪). ಹೆತ್ತೊಡಲು=(ಆಲಂ) ಹಡೆದ ಹೊಟ್ಟೆ ; ತಾಯಿಯ ಹೃದಯ : ಕೊಟ್ಟ ಹೆಣ್ಣು ಕುಲಕ್ಕೆ ಹೊರಗಾದರೂ ಹೆತ್ತೊಡಲಿಗೆ ಅವಳ ಚಿಂತನೆ ತಪ್ಪಿದ್ದೆಂದು ? (ಹೊಸಕ್ಷಿ. ೦೭).

[ದೇ.॥ ತಮಿ. ಮಲ. ಪೆಜು; ತುಳು. ಪೆದ್ದು; ಕೊಡ. ಪೆರ್; ತೆಲು. ಪೆಟ್ಟು ; ಕೋಲಾ. ಪೆಟ್, ಪೆಟ್ಪ್ ; ನಾಯ್ಕಿ. ಪೆಟ್ಪ್ ; ಪರ್ಜಿ. ಪೆಡ್]

ಪೆಜು$_2$, ಹೆರ್ು$_2$, ಹೆರ್$_1$, ಹೆಜು$_2$, ಹೆಜ್$_1$ (ಕ್ರಿ). ಪೆತ್ತ$_2$, ಹೆತ್ತ$_2$, ಹೆರ್ತ(ಭೂತಕೃ). ಪೆತ್ತು$_2$, ಹೆತ್ತು$_2$, ಹೆರ್ತು (ಭೂತಸಂಕೃ). ಗಟ್ಟಿಯಾಗು ; ಹೆಪ್ಪುಗಟ್ಟು ; ಹೆಪ್ಪಾಗು : "ಪ್ರಸೂತಾಜ್ಯಗಟ್ಟಿಗಳೊಳು ಪೆಜು" (ಶಬ್ದಮಂ. ೦೦೬); ಪೆತ್ತ ತುಪ್ಪದಿನೆತ್ತಂ ತೀವಿದ ಕೊಡಗಂತಿರ್ದುವು (ಆಕಪು. ೦೦-೩೬) ; ವಿದಳಿಸೆ ಘನವಂತಿ ಬಿಸಿಲ್ಗುದುರೆಗಳಂ ಪನಿತು ಪೆತ್ತನೆತ್ತರ ಪನಿಯಂದದಿನಲ್ಲಲ್ಲಿಗೆ ಕಣ್ಗೊಳಿಸಿದತ್ತು ಕಾವರ್ಗಂದೊಳಿಂದ್ರಗೋಪಕಳಾಪಂ (ಜಗಬಿ. ೪-೦೩). ಹೆರ್ು: ನೀರು ಹೆರ್ತು ಬರ್ಫವಾಯಿತೆಂದರೆ ಅದರ ಆಕಾರವು ಬೆಳೆಯುತ್ತದೆ. ಹೆರ್ತ ತುಪ್ಪವನ್ನು ಕಾಸಿದರೆ ಅದು ಪ್ರವಾಹಿಯಾಗುತ್ತದೆ (ಮುಂಬಯಿ. ೫-೦೦೬); ಕೊಬ್ಬರಿಯೆಣ್ಣೆ ತಂಪಾಯಿತೆಂದರೆ ಹೆರುತ್ತದೆ (ಮುಂಬಯಿ. ೫-೦೨೦). ಹೆರ್$_1$ : ಉಷ್ಣಮಾಪಕಯಂತ್ರ-ಇದರೊಳಗಿನ ಪಾರಜವು ಶೂನ್ಯಸ್ಥಾನದಲ್ಲಿ ಇದ್ದಾಗ ನೀರು ಹೆರೆಯುತ್ತದೆ (ಮುಂಬಯಿ. ೫-೦೦೭) ; ಉಷ್ಣಮಾಪಕಯಂತ್ರದಲ್ಲಿ ನೀರು ಹೆರೆಯುವಾಗ ಅದರ ಉಷ್ಣತೆಯನ್ನು ತೋರಿಸಲಿಕ್ಕೆ ಶೂನ್ಯವು ಬರೆದಿರುತ್ತದೆ (ಮುಂಬಯಿ. ೫-೦೩೫). ಹೆಜು$_2$ : ಅರೆದಲೆಬೇನೆಗೀಶ್ವರಿಯ ಮೂಲದ ನಸ್ಯಮನುಗ್ರಪನ್ನಗೋತ್ಕರದ ವಿಷಕ್ಕೆ ಮತ್ತವಟ ಬೇರೊಡನೊಂದಿರೆ ಹೆತ್ತ ತುಪ್ಪವಂ . . . ಪ್ರಯೋಗಿಸುತ್ತಿರೆ ಪೆಜತೇನಿದೊಂದೆ ಕಳೆದಿಕ್ಕುಗುಮಾವಗಮಂತವೆಲ್ಲಮಂ (ಲೋಕೋಪ. ೯-೬೩) ; ಹೆತ್ತ ಹಾಲಿನ ಕೆನೆಯ ತೆಗೆದು (ಶ್ರೀಕೃಶಾ. ೨-೦೦). ಹೆಜ್$_1$ : ಕರಗಿದ ತುಪ್ಪ ಹೆಜ್ವಂತೆ ಜವ್ವನವು ತಿರುಗಿ ಬಂದಿಹುದೆ (ಸರ್ವಜ್ಞ. ೦೬೦೫).

ಹೆತ್ತುಪ್ಪ=ಗಟ್ಟಿಯಾದ ತುಪ್ಪ : ಹೆಪ್ಪುಗಟ್ಟಿದ ತುಪ್ಪ : ಬತ್ತಿ ಹೆತ್ತುಪ್ಪವನು ಹೊತ್ತಿಸಿದ ಫಲವೇನು ಮತ್ತೊಂದು ದೈವಕೆಜಗುವನ ಶಿವಪೂಜೆ ಹತ್ತಿಗೇಡೆಂದ (ಸರ್ವಜ್ಞ. ೦೬೨).

[ದೇ. ॥ ತಮಿ. ಪೆರು; ಮಲ. ಪಿರಸ್ಸು; ತೆಲು. ಪೇರು, ಪೇಜು]

ಪೆಜುಕು, ಹೆಕ್ಕು$_2$, ಹೆರಕು (ಕ್ರಿ). ೧. ಆರಿಸು ; ಆಯು ; ಹಿಕ್ಕು : ಈತನಂಗಡಿಯುಲಿಪಡಂ ಪೆಜುಕಿ ತಿಂದು ಬಾಟಿಸ್ವಂ (ವಡ್ಡಾರಾ. ೪೬-೭). ಹೆಕ್ಕು$_2$ : ೧. ಕೆಳಗೆ ಬಿದ್ದ ಹೂಗಳನ್ನು ಹೆಕ್ಕಲು ಆರಂಭಿಸಿದಳು (ವ್ಯಜಿ. ೦೦೫) ; ಅವಳು . . . ಉತ್ತಮವಾದ ಪಟ್ಟೆವಸ್ತ್ರಗಳನ್ನು ಹೆಕ್ಕಿ ತೆಗೆದಳು (ಹಾಹುತ್ರ. ೪೦). ೨. ಕೆದಕು ; ಬೆದಕು : ಸತ್ತವರ ತಪ್ಪನ್ನು ಹೆಕ್ಕಿ ಏನು ಪ್ರಯೋಜನ? (ಸಂಸ್ಕಾರ. ೦೦) ; ಅವಳು ತನ್ನ ನೆನಹುಗಳನ್ನು ಹೆಕ್ಕಿ ಶೋಧಿಸತೊಡಗಿದಳು (ಪಥಿರಾ. II, ೦೨೪೯). 'ಪಿಕ್ಕು$_1$' ಪರಾ. ಹೆರಕು : ೧. ಬಡನಡುವಿನಬಲೆಯರ್ . . . ಕರಿಯ ಕುಂಭಸ್ಥಳದ ಮುಕ್ತಾಫಲಂಗಳಂ ಹುಡುಕುತ್ತ ಹೆರಕುತ್ತ ಇನ್ನೆಲ್ಲಿಹರೊ ಕಾಣೆ (ಸಂದ್ರಸ. ೨೯-೦೨) ; ಗುತ್ತಿ ಅದನ್ನು ಹೆರಕಿಕೊಂಡು . . . ಕೆಲಸಕ್ಕೆ ತೊಡಗಿದನು (ಮಲೆಮ. ೭೪). ೨. ಇದು ನಿಜವಾಗಿ ತನ್ನ ಲೇಖನವೆ ? ಅವರಿವರ ಎಂಜಲನ್ನು ಬೋಜಣ್ಣ ಜನಪ್ರಿಯವಾಗಲೆಂದು ಹೆರಕಿ ಬರೆದಿದ್ದಲ್ಲವೆ (ಪ್ರಶ್ನೆ. ೦೦). ೩. (ಹಲ್ಲಿನಿಂದ) ಗೋರು,—ಕವರು : "ಈಷತಿ = ಪಲ್ಲಿಂ ಹೆರಕಿದಪಂ" (ಕಾಶಕ್ಕ. ೫೭). 'ಹೆರಕುಗ' ಪರಾ.

ಹೆಕ್ಕುಹೆಕ್ಕು (ದ್ವಿರುಕ್ತಿ) : ಮರದ ಬುಡದಲ್ಲಿ ಮಾವಿನ ಕಾಯಿಗಳಂತೆ ಹಸುರಾಗಿ ಪವಡಿಸಿದ್ದ ನೂರಾರು ಗಿಳಿಗಳನ್ನು ಹೆಕ್ಕಿಹೆಕ್ಕಿ ತನ್ನ ಜೋಳಿಗೆಯಲ್ಲಿ ತುಂಬಿಕೊಂಡನು (ನಾಗಸಾ. ೫); ಅಶೋಕನಿಗೆ . . . ಹೆಕ್ಕಿಹೆಕ್ಕಿ ಕೇಳುವ ಪ್ರಶ್ನೆಗಳು ಸರಿದೋರಲಿಲ್ಲ (ವ್ಯಜಿ. ೩೮). ಹೆಕ್ಕಿಕೊಳ್ಳು= ಆರಿಸಿಕೊಳ್ಳು ; ಆಯ್ದುಕೊಳ್ಳು : ಎಲ್ಲಿಂದಲೋ ಹೇಗೋ ನಾಲ್ಕು ಅಕ್ಷರಗಳನ್ನು ಹೆಕ್ಕಿಕೊಂಡು ಪ್ರಸಂಗಗಳನ್ನು ಓದುವುದಕ್ಕೆ ಕಲಿತ (ದೇಪಮ. ೪೦) ; ಆಗ ಆ ರಕ್ಕಸನೇ ಆ ಎಂಟೂ ನೋಟುಗಳನ್ನು ಹೆಕ್ಕಿ

ಕೊಂಡನು (ಹಳ್ಳ. ೬೩).

[ ದೇ. ॥ ತಮಿ. ಪಿಱೈ, ಪೊಱೈ; ಮಲ. ಪಿಱ; ತುಳು. ಪೆಜ್ಜು; ಕೊಡ. ಪೊರೀಕ್; ತೊದ. ಪೆಱ್ಯ್; ಕೋಲಾ. ಪೆತ್ಕ್; ನಾಯ್ಕಿ. ಪೆತ್; ಪರ್ಜಿ. ಪೆಡ್, ಪೆತ್, ಪೆತ್ಕ್; ಕೊಂಡ. ಪೆಱ್]

**ಪೆಱೆ, ಪೆರೆ₁, ಹೆರೆ₁, ಹೆಱೆ₁** (ನಾ). ೧. ಚಂದ್ರ; ಶಶಿ: "ಚಳಿಗದಿರ ಸವಿಗಳಲಣುಗ . . . ಚಂದಿರಂ ಪೆಱೆಯು . . . ಬಿದುವೆಂಬಲ್ ಚಂದ್ರ ನಾಮ" (ಕರ್ನಾ.ಕುಂ. ೦೬); ಪೆಱೆಗಿವೆ ಪೂರ್ಣಿಮೆದತ್ತಮೃತಬಿಂದುಗಳೆಂಬಿನೆಗಂ ಲಲಾಟದೊಳ್ . . . ಘನಘರ್ಮಬಿಂದುಗಳ್ ಪೊಱಮಡೆ (ಕಾದಂಪೂ. ೬೪); ಪೊಲ್ಲಳ್ ಕಳೆದುದುಗಣಮುಂ ಕೆಮ್ಮಗಿರೆಳಸಿದ ಪೆಱೆ ಪೊಳೆವ ಪೂರ್ವ ದಿಗ್ದೇವತೆಯುಂ (ಪುಷ್ಪ. ೩-೦೦೬); ಲಲಾಟದೊಳ್ ಮೃಗಮದಬಿಂದುವಂ ಪೆಱೆಗೆ ಸುಣ್ಣಟೆಯಂ ಪಡೆವಂತೆ ತಿರ್ದಿದಳ್ (ಕಾವ್ಯಸಾ. ೬೩೪). ೨. ಅರ್ಧಚಂದ್ರ: "ಪೆಱೆ ಸೋಮಮರ್ಧಾಂಶದೊಳ್" (ಕರ್ಣಾಟ. ೪೦); ಕಣ್ಬಲ್ ಕಱೆ ಪೆಱೆ ನೊಸಲೊಳ್ ಚಂಡದೋರ್ದಂಡದೊಳ್ ಕಂಧರದೊಳ್ ತನ್ನುತ್ತಮಾಂಗಾಂತರದೊಳೆಸೆಯೆ ನಿಂದಾಂತನಾಚಾರ್ಯಪುತ್ರಂ (ಪಂಪಭಾ. ೦೨-೬೩); ಕೊರಲ ಕಱೆ ಶಿರದ ಪೆಱೆ ನೊಸಲುರಿಗಣ್ ಧೃತಚಾಪಹಸ್ತ ಶಾಕ್ವರಚಿಹ್ನಂ ವಿರಚಿಸೆ . . . ಮುಳಿದು ಬಂದನಶ್ವತ್ಥಾಮಂ (ಗದಾಯು. ೪-೨); ಪೆಱೆಯಂತೆ ರಾರಾಜಿಪ ನೊಸಲಲ್ಲಿ (ಪೋಹಕ. ೮-೮). **ಪೆರೆ₁**: ೧. "ಉಡುರಾಜನಕ್ಕು ಪೆರೆಯನಲು" (ಕಹಿ. ೬೮); ಪೆರೆಯ ಬೆಳ್ದಿಂಗಳಿಂ ಪುದಿದ ಕರುಮಾಡಗಳ ಶಿರವಮಂಡಲವನಂಟುತೆ ಸುಧಾಲೇಪ ಪಾಂಡುರಮೆನಿಸಿದುತ್ತುಂಗಶಿಖರಭಾಗಂ ಪೊಳೆಯೆ (ಶೀತರಾ. ೩-೦೨); ಕಲ್ಪನೆ ಹಾರಿತು ಪೆರೆಯನ್ನೇರಿ, ಹಿಗ್ಗು ಊದುತಿರೆ ತುತ್ತೂರಿ (ಅರಳು. ೩೩೯-೦೩). ೨. ಸುಡುವಿಲ್ಲಂ ವಿರಹಿಗಳಂ ಸುಡೆ ತೆಗೆದಾಗ್ನೇಯಬಾಣಮೆನೆ ಪೆರೆ ಕರೆ ಸಂಗಡಿಸಿದ ಧೂಮಾಂಕುರಮೆನೆ (ದಮಸ್ಕ. ೩-೪೦); ಗಗನ ತಲೆನವಿರಾಗೆ ಪೆರೆ ತಾರೆ ಹೂವಾಗೆ . . . ನಗುನಗುವ ಬೊಬ್ಬಿಡುವ ಜೀವತಾಂಡವ ರಸಿಕ ಭಗವಂತ ಶಿವರುದ್ರ (ಸುಂಕುಳ. ೬೬). **ಹೆರೆ₁**: ೧. "ಗ್ಲೌಃ—ಹೆರೆ" (ಕಾಕೃ. ೬೩). ೨. 'ಹೆರೆನೊಸಲು' ಪರಾ. **ಹೆಱೆ₁**: ೧. ಭಾನುವಂ ಹೆಱೆಯುಂ ಗೋಕುಲವುಂ . . . ದೇವರ್ಕಳೆಂದಿಂತು ಕೂರ್ತೆಱಗುತ್ತಿರ್ಪವರೇಕೆ ಮುಕ್ತಿ ಸದೆವತ್ರೈಲೋಕ್ಯಚೂಡಾಮಣೀ (ಜಸಾರ. ೪೬೯); ಹೆಱೆಯ ರಾಹು ಪಯೋಜವನು ಮಧುಕರವು . . . ಮುಸುಕಿರ್ದುದೆನೆ (ಜೀವಂಕ. ೦೬-೩೩). ೨. ಮುಡಿಯೊಳು ಹೆಱೆಯುಂಟು ತೊಱೆಯುಂಟು ಜಡೆಯುಂಟು . . . ನೊಸಲ ಕಣ್ಣುಂಟಾತನಂ ತೋಱೆ ಕೂಡಿ (ಸಿದ್ಧರಾ. ೨-೩೬); ಜಡೆಯಾಡಿನೊಳಿದ್ದ ಹೆಱೆಯ ಬಿಡಿಸುವಂದದಿ ದಿವ್ಯಾಮೋದಪುಷ್ಪಂಗಳ ಮುಡಿಸಿದ ಶಿವನ ಮಸ್ತಕದಿ (ಪೋಹಕ. ೨೦-೨೯). ೩. (ಮುಂದಲೆಯಲ್ಲಿ ಧರಿಸುವ) ಅರ್ಧಚಂದ್ರಾಕೃತಿಯ ಒಂದು ಬಗೆಯ ಆಭರಣ; ಚಂದ್ರಮುರು: ಪಡುವಣ ದಿಶಾಂಗನೆಯ ಮುಂದಲೆಯ ಮುತ್ತಿನ ಹೆಱೆಯೊ ಎನಲರ್ಧಚಂದ್ರನಂ ಬಣ್ಣಿಸು ಪೊಡರಿಮ ಕಾವ್ಯಂಗಳೊಳಗೆ (ಜಕಶಾ. ೩-೬೨); ಹೆಱೆ ನೇಸಱು ಮುಂಗುರುಳ ಮೇಲೆ ತೆತ್ತಿಸಿ . . . ಅಂಜನವನೆಚ್ಚಿದರು ಪರವೆಗಾ ಸತಿಯರು (ಸೌಂದಪು. ೬-೨೪).

**ಪೆಱೆತಲೆದಿವಸ, ಪೆಱತಲೆದಿವಸ** = ಚಂದ್ರನು ಸಂಪೂರ್ಣವಾಗಿ ವೃದ್ಧಿಹೊಂದಿರುವ ದಿನ; ಹುಣ್ಣಿಮೆ: ಶ್ರೀರಾಜ್ಯವಿಜಯ ಸಂವತ್ಸರ ಸತ್ಯವಾಕ್ಯಪೆರ್ಮಾನಡಿಗಳಾಳುತ್ತ ನಾಲ್ಕನೆಯ ವರ್ಷದ ಮಾರ್ಗ್ಗಸಿರಮಾಸದ ಪೆಱೆತಲೆದಿವಸಮಾಗೆ (ಎಕ. III, ಶ್ರೀರಂಗ. ೧೪೮-೪; 904 ?); ಶಕನೃಪಕಾಲಾತೀತಸಂವತ್ಸರಶತಂಗಳೆಣ್ಣುನೂಱಪ್ಪತ್ತೊಮ್ಬತ್ತನೆಯ ಶ್ರಾವಣದ ಪೆಱತಲೆದಿವಸಮಾಗೆ (ಎಕ. III, ಮಂಡ್ಯ. ೦೪-೩; 907). **ಪೆಱೆತಲೆದೆವಸ** = ಪೆಱೆತಲೆದಿವಸ: ಮಾಘಮಾಸದ ಪೆಱೆತಲೆ ದೆವಸಮುಮ್ಮಂಙ್ಗಳವಾರದನ್ದು . . . ಧಾರೆಯನೆಱೆದು ಕೊಟ್ಟನು (ಎಕ. XV, ಹೊಳೆ. ೦೦೪-೬; 871); ಭದ್ರಪದಮಾಸದ ಪೆಱೆತಲೆದೆವಸಮಾಗೆ . . . ತೆರಗಾಲಂ ದೇವಟ್ಕ ಬಿಟ್ಟಳ್ (ಪ್ಲಾಎಂ. ೦೪೬೦, ೦೪-೩; ಶ. 882).

**ಪೆಱೆಯ ಮುಱಿಗಂ** = "ಅರ್ಧಚಂದ್ರನ ಚೂರಿನಂತಿರುವ ಬಾಣ?" (ಕಂಕಂ. ೩೨೪): ಪೆಱೆಯ ಮುಱಿಗಂ ಕಣಕೆನೆಪೋಪಂ[ಬು] ಕೆಪಲ [ಬುಮ]ಬಂಕದಂಬೆತ್ತ[ಲುಂ] ತುಱುಗಿ ನಡುವಿನಂ ಸಾರ್ದು ಸಾರ್ದೆಚ್ಚೆಚ್ಚು ಕಾದಿದರತಿರಥರೊಂದು ಜಾವಮ (ಪಂಪಭಾ. ೦೩-೩೯). 'ಪೆಱೆಯಂಬು' ಪರಾ. **ಪೆಱೆಯಾದಿ** = ಶುಕ್ಲಪಕ್ಷದ ಮೊದಲ ತಿಥಿ; ಶುಕ್ಲ ಪಾಡ್ಯಮಿ (?): ಇಪ್ಪತ್ತೊಂಬತನೆಯ ಚಯಿತ್ರಮಾಸದ ಪೆಱೆಯಾದಿಯಾಗೆ ಎಱೆಯಪ್ಪರಸರ ಮಗ . . . ಅಟ್ಟಿ ಸತ್ತಂ (ಎಕ. IX, ಕಾನಕಾ. ೧೯-೪; 899 ?). **ಪೆಱೆ ಸೂಡಿದಂ, ಹೆಱೆ ಸೂಡಿದಂ** = ಚಂದ್ರನನ್ನು ತಲೆಯಲ್ಲಿ ಧರಿಸಿದವನು; ಚಂದ್ರಚೂಡ; ಶಿವ: ಪಿಚ್ಚನೇ ಪೆಱೆ ಸೂಡಿದನೆ ಪರಮ ಪಶುಪತಿಯೆ (ಪಂಬಿರ. ೭-೦೯೬); ಹೆಱೆ[ಸಾಕಾಂ. ಪೆಱೆ] ಸೂಡಿದನ ಮನವನೀ ತೆಱದಿಂದಂ ಸುತ್ತುಳಳ್ ಭವಾನಿಯೆನಿಪ್ಪಾ ತೆಱನಂ ತೋಱುವ ತೆಱದಿಂ ಮೆಱೆವುಡಿಗೆಯ ಮೇಲೆ ಸುತ್ತಿದುಡೆವಣ ತೋರ್ಕುಂ (ಗಿರಿಕ. ೩-೮೮). **ಹೆಱೆಚಂದ್ರಮ** = ಪೆಱೆ ೩: ಮಿಱುಗುವ ಕಾರ್ಮುಗಿಲೆಡೆಯೊಳು ರಾಜಿಪ ವರ ಬಿದಿಗೆಯ ಶಶಿಯಂತೆ ತರುಣಿಯರನ್ನೆಯರುತ್ತಮಾಂಗದ ಚಿಕುರದೆ ಹೆಱೆಚಂದ್ರಮನೊಪ್ಪಿದುವು (ಕಂಪಬಿ. ೨೪-೪೦).

[ ದೇ. ॥ ತಮಿ. ಪಿಱೈ; ಮಲ. ಪಿಱ ]

**ಪೆಱೆಗೊಂಕು** (ನಾ). ಬಾಲಚಂದ್ರನಂತೆ ಕೊಂಕಿರುವುದು; ಅರ್ಧ ಚಂದ್ರಾಕೃತಿ: ಪೊಳೆವುವೆತ್ತ ನೊಸಲ್ ಪೆಱೆಗೊಂಕುನಾಮುವೊಳ್ಕು ಸುನಿಯ ಮಿಂಚಿನೋಲೆ . . . ಸೊಗಂಬಡೆಯೆ (ಜಗಪಿ. ೬-೩೩).

[ ಪೆಱೆ + ಕೊಂಕು₂ ]

**ಪೆಱೆಗೊಡೆಯ, ಪೆರೆಗೊಡೆಯ** (ನಾ). ಚಂದ್ರನನ್ನು ಕೊಡೆಯಾಗಿ ಉಳ್ಳವನು; ಮನ್ಮಥ; ಕಾಮ: "ಇಂಗೋಲ್ವಿಲ್ಲಂ . . . ಪೆಱೆಗೊಡೆಯಂ . . . ಗಿಳಿದೇರಂ—ಇವು ೧೩ ಕಾಮದೇವಂಗೆ ಪೆಸರ್" (ಕರಶಾ. ೪೭-೦೩); "ಪೆಱೆಗೊಡೆಯಂ ಪೆಣ್ಬಡೆಯಂ . . . ಅಲರ್ವಿಲ್ಲನೆಂದು ಕಾಮಂ" (ಕಂಪಕಂ. ೨೭). **ಪೆರೆಗೊಡೆಯ**: "ಪೆಣ್ಬಡೆಯನನೆ ಪೆರೆಗೊಡೆಯನನೆ ಶಂಬರಾರಿ ಪೆಸರ್" (ಕಕರ. ೬೮).

[ ಪೆಱೆ + ಕೊಡೆ₂ + —ಅ₇ ]

**ಪೆಱೆದಲೆ, ಪೆರೆದಲೆ, ಹೆಱೆದಲೆ** (ನಾ). ೧. ಬಾಲಚಂದ್ರನನ್ನು ಧರಿಸಿದ ತಲೆ,—ಶಿರಸ್ಸು: 'ಪೆಱೆದಲೆಯ' ಪರಾ. ೨. ಹುಣ್ಣಿಮೆ: ಪೆಱೆದಲೆಯ ×× ವಾರದೊಳು ಗಂಗವಾಡಿಯ ವಿಕ್ರಮ ಚೋಳವಮ್ಮಲದಿ (ಎಕ. IX (s), ಹೊಸಕೋ. ೦೫೦-೬; 1028). **ಪೆರೆದಲೆ**: ೧. ಪೆರೆದಲೆಯ ಬಾಂದೊರೆಯ . . . ಕೆಂಜೆಡೆ ಕಿರುನಗೆಯ ಪದಿನೈದುಕಂಗಳ ಪನಪುಶಿಪ ನಿರುತಿರ್ದನನುಪಮರತ್ನಪೀಠದಲಿ (ಅನಂರಾ. ೧-೨-೦೩). **ಹೆಱೆದಲೆ**: ೧. 'ಹೆಱೆದಲೆಯ' ಪರಾ.

**ಹೆಱೆದಲೆಯವನು** = ಚಂದ್ರನನ್ನು ತಲೆಯಲ್ಲಿ ಧರಿಸಿದವನು; ಶಿವ: ಬಿಱುಸಿನಡ್ಡಾಯುಧನಿಹತಿಯಿಂ ಹೆಱೆದಲೆಯವನ ದೇಗುಲದ ಹೊಱ ಹೊಱಗೆ ಬಿದ್ದುದು ಖಳನ ತಲೆ (ದಸಪು. ೨೮-೨೭). [ ಪೆಱೆ + ತಲೆ₁ ]

**ಪೆಱೆದಲೆಯ, ಪೆರೆದಲೆಯ, ಹೆಱೆದಲೆಯ** (ನಾ). ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನು; ಚಂದ್ರಚೂಡ; ಶಿವ: "ಪೆಱೆದಲೆಯಂ ಮಾದೇವಂ ಕಱೆಗೊರಲಂ . . . ಉಮೆಯಾಣ್ಮಂ" (ಕಪುಂ. ೬); ಪಾರ್ವತೀಪತಿಯನಭವನಂ ಪೆಱೆದಲೆಯನಂ ಶಂಕರನನಿನೆಯಾರಂ ಮನದೊಳೆಱಕದಿಂ ತಾಳ್ದು (ಅರಾಕ. ೦-೨-೩೭); ಪೆಱೆದಲೆಯನ ಮೆಯ್ಯಂ ಗೌರಿ . . . ಒಲಿದಂದದಿಂ (ಜಯುಕಾ. ೦೩-೩). **ಪೆರೆದಲೆಯ**: "ಪೆಣ್ಣೊಡೆಯನನೆ

ಪೆರದಲೆಯನೆನಲಂತಕಾಂತಕಂ" (೪೫೮. ೬೪) : ಪೆರದಲೆಯನಿಂತು ಪರಿಭವಣೆಗಳನುಣಲೇಕೆ (ಪಂಪಾಭಾ. ೩-೨೯). ಹೆಱೆದಲೆಯ : ಹೆಱೆದಲೆಯ ನಾತ್ಮಜನನೆಚ್ಚು ಮರುಳೆಚ್ಚು ಬೊಬ್ಬಿಱಿದು (ಜಗನ್ನಾ. ೧೦-೮೨).

[ಪೆಱೆದಲೆ + — ಅ$_7$]

**ಪೆಱೆನೊಸಲ್**, ಪೆರೆನೊಸಲಂ, ಪೆಱೆನೊಸಲು, ಹೆರೆನೊಸಲು, ಹೆಱೆನೊಸಲು (ನಾ). ಅರ್ಧಚಂದ್ರಾಕಾರದ ಹಣೆ : ಮೃಗಮದ ತಿಲಕಾಂಕದಿನೆಸೆದುದು ಮಿಱುಪ ಪೆಱೆನೊಸಲಿಕ್ಕಿಮಲೆಯಾ (ಕಾದಂಬ. ೦೮); ಪೆಱೆಯ ವಿಲಾಸಮದೀಗಳ್ ಪೆಱಾಯ್ತನೆ ರೂಪವತಿಯ ಪೆಱೆನೊಸಲೆಸೆಗುಂ (ಮಲ್ಲಿ. ೬-೮೨). **ಪೆರೆನೊಸಲು :** ಪೆರೆನೊಸಲೊಳಗೆ ಕತ್ತುರಿಯ ತಿಲಕವನ್ನಿಟ್ಟು . . . ಜಾರೆ ಮೆಲ್ಲನೈತರೆ (ಸಂಗಾಂ. ೩-೨-೩೯); ಪೆರೆನೊಸಲು ಬೆಳ್ದಿಂಗಳ್ವಿಟ್ಟನಿಂದಿಳಿದುದೆನೆ ಕರಿಸುರುಳಿಗುರುಳು ತೆರೆತೆರೆಯಾಗಿ ನೆರೆ ಜೋಲ್ದು ಬಿಡುಮುಡಿಯ ನಿಡುಪೊನಲ್ ರಾರಾಜಿಸಿತು ಕಣ್ಗೆ ಕದ್ದಿಂಗಳಂ ಮೆತ್ತಿ (ಕಣ್ವಾಂಗ. ೩೩-೧೦೩). **ಪೆಱೆನೊಸಲು :** ಕೋಮಲದ ಕದಪಿನ ಪೆ[ಪಾಠಾಂ. ಹೆ]ಱೆನೊಸಲ ಪ್ರಜ್ವಲಿಪ ದಂತಾವಳಿಯ . . . ಮಾನವ ವಿಲಸಿತಾಂಗದ ರೂಪ ಕೈಕೊಂಡೆಸೆದಳಿದಿರಿನಲಿ (ಕೊರಂ. ೩-೯-೩); ಪೆಱೆನೊಸಲೊಳು ನೊಸಲಿಟ್ಟು ಮುಂಡಾಡಿ ಕಣ್ದೆಱೆಯದೆ ಮಱೆದೊಱಗಿಹರು (ಮೋಹತ. ೦೮-೯೩); ಪೆಱೆನೊಸಲಹುದಾದರಾ ಪೆಱೆಯೊಳಗಣ ಕಱೆಯಸ್ತವ್ಯಸ್ತವೆಂದದನು ಜಱೆವಂತೆ ಕಸ್ತೂರಿತಿಲಕವೊಪ್ಪುದೊಳೆಸೆವೆಱೆಯನ ಪಣೆ ಗೆಲ್ದುದೆನ್ನ (ಭರತ. ೬-೯೯). **ಹೆರೆನೊಸಲು :** ಹರೆನೊಸಲು ಅಂಚೆಯ ನಡೆ ನುಡಿಯ ಜಾಣೆಯರು (ಸೌಂದರ. ೩-೬೬). **ಹೆಱೆನೊಸಲು:** ಹೆಱೆನೊಸಲ ನಿಡುಹುಬ್ಬುಗಳ ಥಾಳಿಸುವ ಕದಪುಗಳ. . .ನಳಿತೋಳುಗಳ ನೀಱೆಯರ್ಯೆದಿತೊಗ್ಗಿನಲಿ (ಕುಮಾ. ೦೩-೩೦); ಸೆಜಗು ಸಂಭಾಳಿಕೆ ಬಹು ಭೂಷಣಗಳೆಚ್ಚೞ ಮೇಲಪ್ಪಾವಧಾನ ಹೆಱೆನೊಸಲಬಲೆಯರ್ದಿಟ್ಟ ಪರಾಕು ವಿಾಂಗುಱುಹಿನ ಜೇಯ ಚಿತ್ತ್ಯಸು (ಮೋಹತ. ೦೬-೯).

ಪೆಱೆನೊಸಲಳ್ = ಅರ್ಧಚಂದ್ರಾಕಾರದ ಹಣೆಯುಳ್ಳವಳು ; ಸುಂದರಿ : ವಜ್ರಮುಷ್ಟಿ ಸಮಂತಾ ಪೆಱೆನೊಸಲಳನಗಲದಿರಲ್ ನೆಱೆದತ್ತಂ ಬಂದುದಂದು ಕಾಂತವಸಂತಂ (ಜಿಂಜಿಪು. ೬-೨೯).

[ಪೆಱೆ +ನೊಸಲ್]

**ಪೆಱೆನೊಸಲ** (ನಾ). ಅರ್ಧಚಂದ್ರಾಕಾರದ ಹಣೆಯುಳ್ಳವನು; ಸುಂದರ : ಅಲರ್ಗಣ್ಣಂ, ಪೆಱೆನೊಸಲಂ, ಉಸುವಿಲ್ಲಂ (ಶಬ್ದಾ. ಮ. ೩೨೬ ಪ್ರಯೋ). [ಪೆಱೆನೊಸಲ್ + — ಅ$_7$]

**ಪೆಱೆನೊಸಲು** 'ಪೆಱೆನೊಸಲ್' ನೋ.

**ಪೆಱೆಮಿಾನ್** (ನಾ). (ಅರ್ಧಚಂದ್ರಾಕಾರದಲ್ಲಿರಬಹುದಾದ) ಒಂದು ಬಗೆಯ ಮಿಾನು : ಪಂದಿಮಿಾನ್ಪೆಱೆಮಿಾನ್ಪಗ್ಗಡೆ ಬಣ್ಣಮಿಾನೆನಿಪಿವೆಲ್ಲಂ ಬೀಳ್ದುವಾ ತಾಣದೊಳ್ (ರಾಜಶೇ. ೩ ೦೦೩). [ಪೆಱೆ + ಮಿಾನ್$_1$]

**ಪೆಱೆಮುಖಿ** (ನಾ). ಚಂದ್ರನಂತಿರುವ ಮುಖವುಳ್ಳವಳಂ ; ಇಂದುಮುಖಿ; ಸುಂದರಿ : ಪೆಱೆಮುಖಿ ಸಮಸ್ತದುಃಖಂ ಪಱಿವೊಡೆ ನೆಱೆಯಜ್ಞದತ್ತೆ ನವಮಾಸಂಗಳ್ ನೆಱೆಯೆ ಸುರರಾಜನಿಭನಂ ನೆಱೆ ಪೆತ್ತಳ್ ಸಕಲಜೀವನ್ನುತನಂ ಸುತನಂ (ಧರ್ಮಾಮೃ. ೬-೩೨).

[ಪೆಱೆ + ಮುಖ + — ಇ$_3$]

**ಪೆಱೆಮೊಗ** (ನಾ). ಚಂದ್ರನಂತಿರುವ ಮುಖ : ಪೆಱೆಮೊಗದಂಗನೆಯೊಳಳವಟ್ಟಂಗಜಕೇಳಿಯಿಂ ನೆಗಟ್ಬಿ ತೃಪ್ತಿಪಟ್ಟು (ಉದ್ಭಟ. ೩-೩೦ ವ); ಕಡೆಗಣ್ಬೊಗರ ಕುಡುನೋಟದಿಂ ನೋಡಿ ಪೆಱೆಮೊಗದ ನಗೆಜೊನ್ನಮಂ ಕೂಡಿ (ರಾಮಾಶ್ವ. ೯-೦೩). [ಪೆಱೆ + ಮೊಗ]

**ಪೆಱೆಯಂಬು**, ಹೆರೆಯಂಬು, ಹೆಱೆಯಂಬು (ನಾ). ಅರ್ಧಚಂದ್ರಾಕೃತಿಯ ಅಲಗುಳ್ಳ ಬಾಣ ; ಕವಲಂಬು : ಪೆಱೆಯಂಬಂ ತೀವಿತೊಟ್ಟು ಹಸ್ತನ ತಲೆಯಂ ಪಱಿಯೆಚ್ಚಂ (ಕಂಠಾಪೂ. ೦೩-೮೬) ; ಪೆಱೆಯಂಬು ಕವಲಂಬನೆಯ್ದೆ ಸರಲಂ ತೀವ್ರಾಸಿಯಂ ಚಕ್ರಮಂ ನೆಱೆ ಘಾಳಂದಿಗು ದಂತಪಂಕ್ತಿ ನಳಿತೋಳುದ್ಯತ್ಕುಚಂ ಪೋಲೆ (ಧರ್ಮಾಮೃ. ೭-೨೦೩). **ಹೆರೆಯಂಬು :** ತನ್ನ ಬತ್ತಳಿಕೆಯಿಂದ ಒಂದು ಹೆರೆಯಂಬನ್ನು ಕಿತ್ತು... ಅದರ ಹೆರೆಯಿಂದ ತನ್ನ ಬಲಗೆಯ್ಯ ಹೆಬ್ಬೆರಳನ್ನು ಕಟಕ್ಕನೆ ಕಡಿದು ದ್ರೋಣನ ಕಾಲ ಬುಡದಲ್ಲಿ ನೀಡುವನು (ಹಳ್ಳಿ. ೩೦-೭). **ಹೆಱೆಯಂಬು :** "ಅರ್ಧಚಂದ್ರಮೆಂಬುದು ಹೆಱೆಯಂಬು" (ಹಲಾಯು. ೬೬-೩೦೩) ; ಹೆಱೆಯಂಬಿಂದ ಕಡಿದಿಳುಹಿದನು ಪಾಂಚಾಲಾಧಿಪನ ಶಿರವ (ಕುಮಾರವ್ಯಾ. ೦೭-೩೮) . [ಪೆಱೆ+ಅಂಬು$_1$]

**ಪೆಱೆವಣೆ** (ನಾ). =ಪೆಱೆನೊಸಲ್ : ಆ ಸತಿಗಡ್ಡಂಬಡೆದವು ನಗೆಮೊಗ ವಾಸುರವಡಗಿದ ಚಂಬಾಯ್ . . . ತುಱುಗಿವೆ ಪೆಱೆವಣೆ ನಿಱಿದಲೆಯು (ಉದ್ಭಟದೇ. ೨-೩೬).

ಪೆಱೆವಣೆಯಳ್ = ಅರ್ಧಚಂದ್ರಾಕಾರದ ನೊಸಲುಳ್ಳವಳು ; ಸುಂದರಿ : ಮೆಲ್ಲೆರ್ದೆಯಳ್, ನುಣ್ದೊಡೆಯಳ್, ಪೆಱೆವಣೆಯಳ್ (ಶಬ್ದಾ. ಮ. ೦೮೨ ಪ್ರಯೋ). [ಪೆಱೆ + ಪಣೆ$_1$]

**ಪೆಱೆವಣೆಯ** (ನಾ). =ಪೆಱೆನೊಸಲ : ಮೆಲ್ಲೆರ್ದೆಯಂ, ಪೆಱೆವಣೆಯಂ (ಶಬ್ದಾ. ಮ. ೦೪ ಪ್ರಯೋ). [ಪೆಱೆವಣೆ+—ಅ$_7$]

**ಪೆಟಕ** (ನಾ). (?) : ಬಟಲದೆ ಪೊತ್ತು ಕಲ್ಲಮಲುವಂಗಳೆಯಾದ ಮಹಾಪ್ರತಾಪಿ ನೀಂ ಪೆರ್ಚನಡುರ್ತು ಕೊಂದ ಕಡುವಲ್ಲಕ ಮಾಣ್ದುರದಣ್ಣೆ ಬಂದು ನಾಯ್ಗೊಟಲೆಯ ಮೇಲೆ ಪಟ್ಟ ಕಡುವೀರ ಕುಟುಂಬದಿಸಗ್ಗ ಳಿಕ್ಕೆ ಕೈಗಟಿದಿರೆ ಶಂಖವೋ [ಗಡ] ಮಹಾತ್ಮ್ಯರಕಾಗ್ರದೊಳೇಡಗುಳ್ಳಿಯೋ (ಜಂಶಂ. ೭-೬೭). [?]

**ಪೆಟಕು** (ನಾ). ೧. ಜಗಳ ; ವ್ಯಾಜ್ಯ ; ಕಾದಾಟ : "ಪೆಟಕು__ಜಗಳಂ" (ಕಬ್ಬಿಗ. ಕಂ. ೦) ; ಪೊಟಗು, ಪೆಟಕು, ಪೊಟಕು (ಶಬ್ದಾ. ಮ. ೦೪೯ ವ್ಯಾ. ವ್ಯಾ). ೨. ನಾಶ (?) : ನೋಟಕ್ಕೊಡೆಂದಿನ ಮುಂದಿನ ಖಲನ ಪೊಟಕು ಪೆಟಕಪ್ಪ ನೆಗಂ, ತುರಿಪದೆ ಕಾದಿ ಗೆಲ್ದು ಹಯಮಂ ತಾರದುಟಿದೆನಾದೊಡೆ, ಶ್ರೀರಾಮರಂ ಮೊಕ್ಕಳಂ ತನ್ನೊಂದು ಹಂಪದಟಿವಗ್ಗಿನ ಬೆಸಗೆಯ್ಯಿಯಂ ತೆಗಟ್ಟ ಕೀಟನ ದುರ್ಗತಿಗಿಟಿವೆಂ (ರಾಮಾಶ್ವ. ೦೦೦-೦೩). [?]

**ಪೆಟಗಾಲ್** (ನಾ). ಕುಂಟುಗಾಲು ; ಹೆಳವುಕಾಲು : ಕೆಲರ್ಗೆ ಪೆಟಗಾಲ್, ಕೆಲರ್ಗೆ ಕುಡುಗೆಯ್ (ಅದ್ಭುತ. ೨೩-೨೩). [<ಪೆಟವು + ಕಾಲ್$_1$]

**ಪೆಟವ**, ಪೆಳವ, ಹೆಳವ$_1$, ಹೆಟವ (ನಾ). ೧. ಊನವಾದ ಕಾಲುಳ್ಳವನು; ಕಾಲಿಲ್ಲದವನು ; ಕುಂಟ : "ಖಂಜಃ, ಪಂಗುಃ, ಶ್ರೋಣಃ__ಈ ೩ ಪೆಟವಂ" (ಹಲಾಯು. ೦೦೦-೯೫೬) ; ಬರೆ ವಿಮಾನಗೇಹದುದಯಂ ನೋಟ್ಟಂದದಂ ಮುಂದ ವಕ್ರ ಶಶಾಂಕರ್ ಪೆಟವಂ (ಜಾತಕ. ೯-೦೦); ಪೊಡುವ ಕುದುರೆ ಬೆಸಗೊಂಡೋಡುವ ತೇರ್ಗೊಂದೆ ಗಾಲಿ ಪೊಡೆವಂ ಪೆಟವಂ ಕೆಡಿಂಗಲಸಿದೊಡಕ್ಕುಮೆ ನೋಡಿರೆ ಗವಿ ಕೆಡವನಸ್ತಗಿರಿಮಸ್ತಕದೊಳ್ (ಅರ್ಕಪೇ. ೩-೦೯). ೨. ಸೂರ್ಯನ ಸಾರಥಿ ; ಅರುಣ : ಮಱಿಯಿಗೆಯ ನುಡುಗಿ ರಥಮಂ ಪೆಟವನನೆಸಗಲ್ಕೆವೇಟ್ದು ಸುತಶೋಕದ ಪೊಂಪುಟಯೊಳ್ ಮೆಯ್ಮಱಿಯದೆ ನೀರಿಟಿವಂತೆವೊಲಿಟಿದನಪರಜಲಧಿಗೆ ದಿನಪಂ (ಶಂಕರ. ೦೨-೨೨೦). **ಪೆಳವ :** ೧. ಪೆಳವಂಗೆ ಕಾಲನಿತ್ತುದಱಿಂ (ಎ. XVI, ೬೯. ೦೭; 1067); ಪೆಳವನ ಕಣ್ಗಳಂಧಕನ ಕಾಲ್ಗಳಿವಿಂತೊಡಗೂಡಿ ಗಾವುದಂ ತಳರ್ದೊಡೆ ಬಲ್ಲಿದಂ ನಡೆದ ಮಾಳ್ಕೆಯೆನಿಪ್ಪುದೆ (೧೦೯. ೦-೨೯); ಇನನ ವರೂಥದ ಗಾಲಿಗಳ್ವಾಯ್ದುವು ತನೆತೆನೆಯಂಬುಗಂಡಿಯೊಳು ತನೆಗಳು ಪೊಯ್ದುಮೆಂದಳ್ಕಿ ಕಾಲ್ನೀಡದೆ ಇನನ ಸಾರಥಿ ಪೆಳವಾವ (ನಾಗಕು. ೨-೯೨); ಪೆಳವಂ ಮರದುದಿಯ ಮಹಾಫಳವಂ ಮಿಗೆ ಬಯಸುಮಂತೆ (ಕಬಿಂ. ೨-೬೭). **ಹೆಳವ$_1$ :** ೧. ಅತ್ತಲಿತ್ತಲು ಹೋಗದಂತೆ ಹೆಳವನ ಮಾಡಯ್ಯಾ ತಂದೆ

(ಚಂಪ. ೩೯) ; ಓಡಿಸ ಕಲಿಸ ಹೆಳವನನೊಕ್ಕುಡಿತೆನೀರಲಿ ಮುಳುಗಲೇಳಲ್ಕೆ ಮಳಲಿಂ ಸರವಿಯಂ ಹೊಸೆಯೆ . . . ಇಂತಿಳೆಯೊಳಾಗಲು ಸತ್ತು ಹುಟ್ಟಲು ಬಲ್ಲ ನೆಟಿ ಜಾಣೆ (ಜಕಥಾ. ೧೨-೨); ಗುರುಬುಧಮಂಗಳೋನ್ನತಿಗೆ ಕುಂದನಿತ್ತುದಱಿಂದೆ ಸಾರಥಿ ಹೆಳವನಾದನು (ಕೈಬಶಾ. ೧೭-೧೩). **ಹೆಳವ :** ೧. "ಕೋಣಃ, ಪಂಗುಃ—ಈ ೨ ಹೆಟವನು" (ಶಾಬರಾ. ೧೧೯) ; "ಖಂಜು ಪಂಗುವೆಂದೆನಲು ಹೆಟವನಕ್ಕುಂ" (ಮಂಗರಾ. ೧೦೯-೫).

**ಪೆಟವಿ, ಪೆಳವಿ,** ಹೆಳವಿ (ನಾ). ಕಾಲಿಲ್ಲದವಳು ; ಕಾಲು ಊನವಾದವಳು ; ಕುಂಟಿ : ಪೆಟವಿ ದುರ್ಗಂಧೆ ದುರ್ವರ್ಣೆ . . . ಸಂಸಾರ ಕೂಪಾರದೊಳನವರತಂ ನೀಡುಮೋಲಾಡುತಿರ್ದಳ್ (ಸುಕುಮಾ. ೫-೨೦). **ಪೆಳವಿ :** ದಿವಿಜರಂ ಪೊರೆವವಂ ಚಮ್ಮಟಿಗವಿಡಿಯಲೇತಕೆ ನರನ ಕಾಱುಹುಗಾಣೆಸದವಂ ಪೆಳವಿಗೊಲ್ದು ಸುಮ್ಮನೇತಕೆ ಸಿಕ್ಕಿದಂ (ಕೈಬಶಾ. ೬-೪೯). **ಹೆಳವಿ :** ಆ ಮಗನಿಗೆ ಒಂದು ಹೆಳವಿ ಹೆಣ್ಣನ್ನು ತಂದು ಪಾಣಿಗ್ರಹಣ ಮಾಡಿಸೋ ಸಂಕಲ್ಪ (ಉಮಾ. ೩). [ಪೆಟವ+—ಇ₂]

**ಪೆಟವು, ಹೆಳವ್ಪ, ಹೆಟವು** (ನಾ). ಕಾಲು ಊನವಾಗಿ ನಡೆಯಲಾಗದಿರುವ ಸ್ಥಿತಿ; ಪಂಗುತನ; ಕುಂಟು: ಪಾಂಗುಳಕ್ಕೆ . . . ಉಟವು, ಪೆಳವು (ಪೆಟವು), ಕೆಳವು (ಕುಮ. ೨೦೦ ಪ್ರಯೋ); ಪೆಟವು ಪೊರ್ಕುಟುಂ . . . ಮಹಾಪ್ರಾಣಾಕ್ಷರಂಗಳೊಳ್ ಸಂಬಂಧನಕರಣೆಯೆಲ್ಲವುಂ ನಿತ್ಯಂಬು (ಶಂಶಶ. ೯). 'ಪೆಟವೆ' ಪರಾ. **ಹೆಳವು₂ :** "ಖಜಿ—ಗತಿವೈಕಲ್ಯೇ, ಹೆಳವಿನೊಳ್" (ಶಾಕ್ಕ. ೦೯). **ಹೆಟವು :** ೧. 'ಹೆಟವುಗೊಳಿಸು' ಪರಾ. [ಪೆಟವ + — ಉ₄]

**ಪೆಟವುಗೊಳ್** (ಕ್ರಿ). ಕಾಲು ಊನವಾಗು : ಪಿರಿದುಮಧರ್ಮದೆ ಗತಿ ಗೆಟ್ಟರಸುಗಳಿಲೆ ಪೆಟವುಗೊಂಡರೆಂಬಂತೆ ವಲಂ ಕರವಿಡಿದು ಸಾರ್ಚುವೆತ್ತುವ ತುರಿಪದೆ ಕಯ್ಯುಗುವುದಕ್ಕೆ ಲಜ್ಜಿಸರರೆಬರ್ (ಶಾಂತಿಪು. ೩೩೦). [ಪೆಟವು + ಕೊಳ್¹]

**ಪೆಟವೆ** (ನಾ). = ಪೆಟವಿ : ಕೊಂಟಿಯುಂ ಪೆಟವೆಯುಂ ಕುಷ್ಟಿನಿಯುಂ ಕುಬ್ಜೆಯುಮಪ್ಪ ಮಗಳ್ದಿರಱುವರನಿಬರಿಂ ಪಿರಿಯ್ಯ ನೀಂ (ಶಾಂತಿಪು. ೪-೬೬ ಪ). [ಪೆಟವ + — ಎ₂]

**ಪೆಟಸು** 'ಪೆತಸು' ನೋ.

**ಪೆಟ್ಚಿಸು** 'ಪೆರ್ಚಿಸು' ನೋ.

**ಪೆಟ್ಚು** 'ಪೆರ್ಚು₁' ನೋ.

**ಪೆಟ್ಚುವಸಿ** (ನಾ). ಒಂದು ಬಗೆಯ ತೆರಿಗೆ : ಕೊಳಗುಪ್ಪೆ ಪೆಟ್ಚುವಸಿ ಅರ್ಥಂ ಕಾಣಸೊಟ್ಟನರ್ದ್ಧಂ ವಾರಲರ್ದ್ಧಂ... ಇದು ಗೋಪಾಲದೇವರಾದತ್ತಿ (ಎಕ. XXI. ೦೭೯-೦೯; ೬೬ಯು ೫೫). [?]

**ಪೆಟ್ಚೋಗೆ** (ನಾ). ಒಂದು ಪ್ರದೇಶದ ಹೆಸರು (?) : ಪೆಟ್ಚೋಗೆಯು ಮೊದಲುಳ್ ಬಡಗಾಯ್ಬೆಗೊರ್ಳ್ಳಿಯೆ ಸನ್ನು ಕಾವೇರಿಯುಳ್ ಕೂಡಿತ್ತು ಸೀಮೆ (ಎಕ. IV. ಎಡತೊ. ೬೦-೬೬; ಸು. 890). [?]

**ಪೆಟ್ದಿಂಟಲ್** (ನಾ). ಒಂದು ಪ್ರದೇಶದ ಹೆಸರು (?) : ನೈರಿತ್ತ ದೆಸೆ ನೆಲಪುಟ್ಟುಗೊರ್ ಪ್ರತಿಟಿದೆಸೆ ಪೆದ್ದಾಣ ಎ ವಾಯುವ್ವಾದೆಸೆ ಪೆಟ್ದಿಣ್ಣಲಿನ್ಪಡಕಾಯುಕ್ಕುಕು ಉದಿಟಿ ದೆಸೆ ಕಟಿಯನ್ನೀರ್ಗೊರೆ ಮುಟ್ಟ (ಎಕ. X (೩). ಮುಳಬಾ. ೩೨೬-೩೨ ; ಸು. 650). [?]

**ಪೆಟ್ದೆಸೆ, ಹೆರ್ದೆಸೆ** (ನಾ). ಒಂದು ಪ್ರದೇಶದ ಹೆಸರು : ಪಣ್ಚಿಗಂ ಬನವಾಸಿಪನ್ನಿಚ್ಛಾಸಿರಕ್ಕಧಿಪತಿಯಾಗಿ ಪೆಟ್ದೆಸೆಯೊಳಿಟ್ಟು ರಾಜ್ಯಂಗೆಯ್ಯೆ (ಎಕ. VIII. ಸೊರಬ. ೬೭-೯; 940). **ಹೆರ್ದೆಸೆ :** ಶ್ರೀಸಾನ್ನಿವರ್ಮ್ಮ ಹೆಟದೆಸೆಯೊಳ್ಸುಖಸಂಗತವಿನೋದಂಗಳಿಂದರಸುಗೆಯ್ಯೆ (ಎಕ. VIII. ಸೊರಬ. ೪೬೯-೫; ಸು. 991). [?]

**ಪೆಟ್ದೊಟಿ** 'ಪೆರ್ದೊಟಿ' ನೋ.

**ಪೆಟ್ನಂದಿ** (ನಾ). ಒಂದು ಪ್ರದೇಶದ ಹೆಸರು (?) : ಪೆರಗ್ಗಟಿಯನ್ ಬಡಗ್ಗೆ ನಟ್ಟ ಕಲ್ಲೆ ತೆಂಕ್ಕಪೆರವ್ಮಿದ್ದಿಲ್ ಪೆಟ್ನನಂದಿಯ ಕಿಱುನಂದಿಯ ಸೊಡಲಿಯದಾ ಮಾಱುವುವಟ್ ಕುಡಿದ ಒಟ್ಟಿ ಪಡುವ್ವೆ ನಡದು (ಮೈಕಿ. ೦೯೦೯. ೦೨-೦೭; 810). 'ಕಿಱುನಂದಿ' ಪರಾ.

[₽ ಇದು 'ಪೆರ್ನಂದಿ' ಎಂಬುದರ ಅಪಲಿಖಿತವಿರಬಹುದು]

**ಪೇಂಕುಳಿ** 'ಪೆಂಕುಳಿ' ನೋ.

**ಪೇಂಟೆ** 'ಪೇಟೆ' ನೋ.

**ಪೇಕುಳಿ** 'ಪೆಂಕುಳಿ' ನೋ.

**ಪೇಕುಳಿಗೊಳ್** 'ಪೆಂಕುಳಿಗೊಳ್' ನೋ.

**ಪೇಕುಳಿನಾಯ್** 'ಪೆಂಕುಳಿನಾಯ್' ನೋ.

**ಪೇಗುರ, ಪೇಗೂರ** (ನಾ). ಒಬ್ಬಾತನ ಹೆಸರು : × × × ತಾಂ ಕುಮಾರರಿನಚ್ಚರಿಕೆಯ್ಯೆ ತಾಂ ಸ್ಥಿರದರಳಿನ್ನು ಪೇಗುರವಂ ಸುರಲೋಕ ವಿಭೂತಿ ಎಯ್ದಿದಾರ್ (ಎಕ. II. ೨೬-೩; ಸು. 700). **ಪೇಗೂರ :** × × × ಪೇಗೂರ ಸ್ವರ್ಗ ಪರಲೋಕಕೆ ಸನ್ದ (ಎಕ. IX. ಬೆಂಗಳೂ. ೮೬-೩; ಸು. 900). [?]

**ಪೇಗೂರ** 'ಪೇಗುರ' ನೋ.

**ಪೇಚಕ** (ನಾ). ೧. ಗೂಬೆ ; ಗೂಗೆ : "ಉಲೂಕಃ, ವಾಯಸಾರಾತಿಃ, ಪೇಚಕಃ — ೩ ಗೂಗೆ, ಗೂಬೆ" (ಸಿದ್ಧಾಂತ. ೦೫೬). ೨. ಆನೆಯ ಬಾಲದ ಬುಡ,—ಮೂಲ : "ಪೇಚಕಃ, ಪುಚ್ಛಮೂಲು—ಈ ೨ ಮೊದಲ ಬಾ(ವಾ)ಲಂ" (ಹಲಾಯು. ೩೭-೬೬) ; ವನಕರಿ ಮೆಲ್ಲದೆ ಲಲಿತಸಲ್ಲಕೀಪಲ್ಲವಮಂ ಸ್ಮರವಶದಿಂದಿರ್ದುದು ನಿಜಕರೇಣುಪೇಚಕನಿರೂಪಿತಾಯತಹಸ್ತಂ (ಕಬಾ. ೩-೮); ಬೇಟ್ಟುದಂ ಪಡೆದುಪೆತ್ತಾನುಂ ದಿಶಾದಂತಿ ದಿಕ್ಕರಿಣೀಪೇಚಕಚುಂಬನೈಕಸುಖಮಂ ಶೇಷೋರಗಂ ಭೋಗಿನೀಪರಿರಂಭೋತ್ಸವಮಂ (ಶಂರಾಪಾ. ೬-೬೪). ೩. ಹೇನು. [ಸಂ.]

**ಪೇಚಕಿ** (ನಾ). ಆನೆ ; ಗಜ. [ಸಂ. ಪೇಚಕಿನ್]

**ಪೇಚಾಟ** (ನಾ). ೧. ತೊಂದರೆ ; ಕಷ್ಟ ; ತೊಡಕು; ಕ್ಲೇಶ : ಭೂಚಕ್ರದೊಡೆಯನ ಮುಂದೆ ಪೇಚಾಟದೆಮಗೊಂದು ರಾಜಮೋಡಿಯೆ ಸುತು (ಭರತ. ೨೫-೭೦) ; ಮನೆಯೊಳಗೆ ಪೇಚಾಟ ಹೀನ (ಸರ್ವಜ್ಞ. ೦೬೩೭). ೨. ಚಿಂತೆ ; ದುಃಖ ; ಗೋಳಾಟ : ನೋಡಿಕೊಳ್ಳೋಣ ಅದಕ್ಕೆ ಈಗಲೇ ಯಾತಕ್ಕೆ ಪೇಚಾಟ (ಪ್ರಶಿಸಂ. VIII. ೦೩) ; ದುಡುಕಿ ಪೇಚಾಟದಲ್ಲಿ ಬೀಳುವೆನು (ಹೇಮುಂಕ. ೨೫೦). [ಪೇಚು₃+ಆಟ]

**ಪೇಚಾಡು** (ಕ್ರಿ). ೧. ಹೆಣಗಾಡು ; ತೊಂದರೆಗೆ ಈಡಾಗು ; ಒದ್ದಾಡು : ಆಚಾರವೆಂಬುದು ಅತಿಕಷ್ಟಪದದೊಳು ಪೇಚಾಡಲಾರದೆ (ಬಸ್ವರಾ. ೩-೦೦೨). ೨. ಚಿಂತಿಸು ; ದುಃಖಿಸು ; ಗೋಳಾಡು : ನಾವು ಮನೆ ಸೇರದೆ ಅಡವಿಯಲ್ಲಿ ಸಿಕ್ಕಿ ಪೇಚಾಡುವ ಕಾಲ ಬಂತು (ಕರ್ಣಾಮಂ. IV. ೦೭) ; ಎಲ್ಲ ಮನೆಯಿಲ್ಲದೆ ಪೇಚಾಡುತ್ತಿರುವಾಗ ಅಂಥ ಮನೆ ಹೇಗೆ ಸಿಕ್ಕಿತು ? (ಬಾಕ್ಸ. ೨೬೭). [ಪೇಚು₃+ಆಡು₁]

**ಪೇಚು₁** 'ಪೇಸು₁' ನೋ.

**ಪೇಚು₂** (ಕ್ರಿ). ಗೋಳಾಡು ; ಸಂಕಟಪಡು ; ವ್ಯಥೆಪಡು : ಪಿಶಾಚಿಗಳಿರಾ . . . ನೀವು ವಿವಿಧಪ್ರಕಾರದೊಳಮಂಗಲದ ನುಡಿಯೊಳಂ ಯುವಗಾರು ಗತಿಗೆಟ್ಟೆವೆನುತ ಪೇಚುವಿರೆಂದು ಸವಿಶೇಷದಂಡದಿಂದಟ್ಟಿ ಬಡಿವುತ್ತಿರ್ದಂ (ಶೀಕೃಪು. ೨-೯-೨೬) ; ಸದ್ಬ್ರಾಹ್ಮಣರ ನೆರಪಿ ಭೋಜನವನಧಿಕತರದಿಂದೆಸಗಿ ಮಾಡಿದಲ್ಲದೆ ಶುದ್ಧವಲ್ಲವೆಂದುಱಿ ಪೇಚುತೆ (ಸಿದ್ದೇಪು. ೪-೩೬). [←ಮರಾ. ಪೇಚ್, ಪೇಂಚ್]

**ಪೇಚು₃** (ನಾ). ೧. ತೊಡಕು ; ಇಕ್ಕಟ್ಟು ; ತೊಂದರೆ : ಅವನನ್ನು ಪೇಚಿಗೆ ಕೆಡವಲು ಪ್ರಯತ್ನಿಸುತ್ತೇನೆ (ದೀಕನ್ನ. ೩೭) ; ಶಿವಣ್ಣಯ್ಯನವರು

. . . ಅವರಿಗೂ ಮಾತನ್ನು ಕೊಟ್ಟು ಪೇಚಿನಲ್ಲಿ ಸಿಕ್ಕಿದರು (ಅಳಿಸಿ. ೦೩೮). ೨. ಹಿಡಿತ; ಪಟ್ಟು: ಎಷ್ಟೋ ಪೇಚುಗಳನ್ನು ಹಾಕಿದೆ (ಜಾಳಕಿ. ೯); ಭಾರತದ ಮೇಲೆ ಸಾಮ್ರಾಜ್ಯ ಹಿಡಿತವಿಟ್ಟುಕೊಳ್ಳುವುದು ಬ್ರಿಟಿಷ್ ರಾಜಕಾರಣಗಳ ಒಂದು ಕುಶಲ ಪೇಚು (ಎಕ್ಸಾ. ೬೯); ಜಟ್ಟಿಯೇ, ನಾನು ಮಾಡುವ ಕೈಸನ್ನೆಗಳು ಯಾವ ಪೇಚನ್ನು ಸೂಚಿಸುತ್ತವೆ (ಪಿನೋದ. ೧೦). ೩. ತಿರುಪುಮೊಳೆ ಮೊದಲಾದುವುಗಳಲ್ಲಿಯ ಸುತ್ತು; ಮರಸುತ್ತು: ಅದರ ತುದಿಗೆ ಹೊರಮೈಯಲ್ಲಿ ಗಂಡುಮಲಸೂತ್ರದ ಪೇಚುಗಳಿರುತ್ತವೆ (ಮುಂಬಯಿ. ೩-೭೨).

[< ಪೇಚು₁./ಪಾರ. ಹಿಂ. ಮರಾ. ಪೇಚ್]

**ಪೇಜವಿತಿ** (ನಾ). ಒಂದು ಬಗೆಯ ಚಲನೆಯ ಗತಿ, –ಸಂಚಾರಕ್ರಮ: ಗೋಮೂತ್ರ ಮಂಡಲಮುಮಪಾಕಾಶಂ ಪೇಜವಿತಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲಂ (ಕಾಂತಿಪು. ೩-೨೩ ವ). [?]

**ಪೇಜು** (ನಾ). (ಪುಸ್ತಕಗಳ) ಪುಟ: ಆ ನೀತಿಪ್ರಶ್ನೆಗೆ ಒಂದು ಪೇಜು ಬರೆದಿದ್ದಾರಂತೆ (ಸ್ವಾಮಿಸ್ಮ. ೭೩); ನಾವು ದಪ್ಪ ಪೇಜುಗಳು ಇರುವ ಒಂದು ಪುಸ್ತಕವನ್ನು ತೆಗೆದುಕೊಂಡು . . . ಬರೆದೆವು (ಕಾರಮ. ೨೦೩).

[← ಇಂ. page]

**ಪೇಟ₁** (ನಾ). ೧. ಸಾಮಾನುಗಳನ್ನಿಡುವ ಪೆಟ್ಟಿಗೆ,– ಪೆಟಾರಿ. ೨. ಗುಂಪು; ಸಮುದಾಯ. ೩. ಸೇವಕಜನ; ಪರಿವಾರ. ೪. ಬೆರಳುಗಳನ್ನು ಚಾಚಿದ ಕೈ; ತೆರೆದ ಹಸ್ತ. [ಸಂ.]

**ಪೇಟ₂** (ನಾ). ತಲೆಯುಡುಗೆ; ರುಮಾಲು; ಮುಂಡಾಸು: ತಲೆಗೆ ಪೇಟ. ಪೋಷಾಕೆಲ್ಲ ಶುದ್ಧ ಬಿಳುಪಿನದು (ಭಾರದ. ೩೬೯); ಟೋಪಿ ಪೇಟವ ತೊರೆದು ಪಿಳ್ಳನೆ ಜುಟ್ಟು ತೋರುವೆ ಊರೊಳು (ಗಹೀಶ. ೭೨-೬).

[← ಹಿಂ. ಮರಾ. ಫೇಟಾ]

**ಪೇಟಕ** (ನಾ). ೧. ಪೆಟ್ಟಿಗೆ; ಪೆಟಾರಿ: "ಪಿಟಕಃ, ಪೇಟಕಃ—೨ ಪೆಟಾರಿಗೆ ಹೆಸರುಗಳು" (ಸಿದ್ಧಾಂತ. ೩೦೩). ೨. ಬುಟ್ಟಿ: ದಟ್ಟಿಯುಟ್ಟು ಮುಂದದೆ ಸಲಿಕೆ ಪೆಗಲೊಳೆಸೆಯೆ ಪೇಟಕಮದೆ ಸಿರದೊಳಮರೆ (ಹಾಲಾಸ್ಯ. ೯-೦೩-೦ ರಗಳೆ). ೩. ಗುಂಪು: ಸಮೂಹ: ಅಧಿಕಭಕ್ತಿಯೆ ತರೆ ಬಂದುದು ದೇವದಿವಿಜಪೇಟಕವನಿತುಂ (ಅಂಪು. ೯-೧೧). [ಸಂ.]

**ಪೇಟನ** (ನಾ). ಸವರುವುದು; ನೀವುವುದು: ದಶಮಿಯೊಳ್ ನಾಭಿಯು ನಾಭಿಯೀ ಪೇಟನಂ ಮಾಡುವುದು (ಕಾಮಶಾ. ೨೨೭). [< ಸಂ. ಪೇಟ ?]

**ಪೇಟಪಾವುಡ** (ನಾ). ಒಂದು ಬಿರುದುಸೂಚಕವಾದ ವಸ್ತುವಿಶೇಷ; ಪೇಟಕ್ಕೆ ಸುತ್ತುವ ಬಟ್ಟೆ (?): ಚಂದ್ರಗಾವಿ ಪುಡಾಸ್, ಪೇಟಪಾವುಡ, ಸಾಗ (ಗುರುಚ. ೧೧). [ಪೇಟ₂ + ಪಾವುಡ₁]

**ಪೇಟಿ** (ನಾ). ೧. ಪೆಟ್ಟಿಗೆ; ಪೆಟಾರಿ: ಅಂಬುಜಮುಖಿಯೊರ್ವಳ ನಿಡುಗಣ್ಬೆಳಗಿನೊಳೊಂದು ಸಿಲ್ಕಿದರಗಿಳಿಯೆಸೆಗುಂ ತಣ್ಬೆಳಗುವಣೆಯ ಪೇಟಿಯೊಳಿಂಬಾಗಿ ಮಂಗೊಳಿಪ್ಪ ಮರಕತಮಣಿವೋಲ್ (ಅದ್ಭುಕಿ. ೩-೨೫); ಧರಣಿಯುಂ ಸಂಶೋಧಿಪಾಗಳ್ ಕರಸ್ಥಿತ ಕುದ್ದಾಲಕೆ [ಸಿಲ್ಕಿ ಪೇಟಿ ವರ] ಭಾಸ್ವತ್ಕನ್ಯಕಾರೂಪರಂಜಿತಮೊಂದುಂ ಶಿಶು ಸಿಲ್ಕೆ (ಅಪ್ಪಕ. ೬-೪). ೨. ಪೆಟ್ಟಿಗೆಯಾಕಾರದ ಒಂದು ವಾದ್ಯ; ಹಾರ್ಮೋನಿಯಂ: ವಸಂತ ನಾಟಕದಲ್ಲಿ ರಾಜಾಪಾರ್ಟು ಮಾಡಲು ಹವ್ಯಾಸಬಿಟ್ಟದ್ದು, ಪತದೆ ಪೇಟಿಗಳ ಬಗ್ಗೆ ವಿಚಾರಿಸಿದ್ದು (ಗಂಪಾಯಿ. ೨೯೦).

**ಪೇಟಿ ಬಾರಿಸು**=ಹಾರ್ಮೋನಿಯಂ ನುಡಿಸು: ಜ್ಞಾನಶಂಕರ . . . ಈಗ ಪೇಟಿ ಬಾರಿಸುವುದರಲ್ಲಿ ಮಗ್ನನಾಗಿರುತ್ತಿದ್ದ (ಶ್ರೀಮಹಾಕ್ರ. ೬).

[ಸಂ. ಪೇಟೀ]

**ಪೇಟಿಕೆ** (ನಾ).=ಪೇಟಿ ೧: "ಪೇಟಿಕೆಗೆ ಪೇಳಿಗೆಯೆನಿಕ್ಕುಂ" (ಸಂಜೀಶ. ೨೯); ಆಭರಣಪೇಟಿಕೆಯನತ್ಕುರುತರಾಲೇಪನದ, ಭರಣಿಗಳ ಕುಸುಮಸಾಂದರ ಭಾಜನಂಗಳಾಂತಬಲೆಯರು ಸುತ್ತಲೋಲೈಸಿ ಬರೆ (ವೀಕ್ಷಪು. ೩-೨-೨೬); ಕ್ರೀಡಾವಸ್ತುವಿನೋದಪೇಟಿಕೆಯೆನಿಪ್ಪೀ ವಿಶ್ವಮಂ ಕೊಂಡು ನೀವಾಡುತ್ತ ಗ್ಗದ ಜಾಣ್ಮೆಯಿಂದಮೊಲಿಸಲ್ ನಾಂ ಪಾರಿತೋಷಂಗಳಂ ನೀಡುತ್ತಿರ್ಪೆಂ (ಪಿವೇದ. ೨೩-೦). [ಸಂ. ಪೇಟಿಕಾ]

**ಪೇಟೆ**, ಪೇಂಠೆ, ಪೇಠಾ, ಪೇಠೆ₂ (ನಾ). ೧. ಅಂಗಡಿಗಳಿರುವ ಬೀದಿ; ಕ್ರಯ ವಿಕ್ರಯ ಮಾಡುವ ಸ್ಥಳ; ಮಾರುಕಟ್ಟೆ: "ಮಾಟುಹ ಟಾವು ಪೇಟೆಯಕ್ಕುಂ" (ಶುಂಗರಾ. ೦೦೨-೩); ಉರಿಯು ಪೇಟೆಗಳಲ್ಲಿ ಪತಂಗದ ಸರಕು ಮಾಬಿದೆ ಮರಳುವುದೆ (ಕುವ್ಯಾಕ. ೦೦-೨೮); ನನೆಯುಂ ದಾವಣೆಗಟ್ಟಿಂ ಕಟ್ಟುತ್ತಿನಿಯರ್ಗೊಪ್ಪಿಸಿ ಕೊಡುವವೊಲಿತ್ತರ್ವನಿತೆಯರಾ ಪೂವಿನ ಪೇಟೆಯೊಳ್ಪಾಸಿಗವುಂ ವಿಟರ್ಗೆ (ಶಯುಕಾ. ೦-೫೮); ಆಗಮುಜ್ಜರು ಹಂಚಿ ಕೊಟ್ಟಂತೆ ಪೇಟೆಯು ಭಾಗದಂಗಡಿಗಳೊಪ್ಪಿದುವು (ಕಶೀಚಕ. ೩-೦೨); ಇಲ್ಲಿಯ ಪೇಟೆಯಲ್ಲಿ ಬೂಸದ ವ್ಯಾಪಾರವಾದರೂ ತಕ್ಕ ಮಟ್ಟಿಗೆ ನಡೆಯುತ್ತದೆ (ಮುಂಬಯಿ. ೯-೦೯೩). ೨. ನೆಲೆ; ಆಗರ: ಹದಿರು ಚದುರಿನಾಗರ ಠಾಳಿಯ ಪೇಟೆ (ಕಂಪಶ. ೨-೯೭). ೩. ಜನರು ವಾಸವಾಗಿದ್ದು ವ್ಯಾಪಾರ, ವ್ಯವಹಾರಗಳನ್ನು ನಡೆಸುವ ಸ್ಥಳ: ಅವರ ಮನೆ ಪೇಟೆಯೊಳಗೆ ಇದೆ (ರೂಢಿ). ೪. ಶಹರು; ಪಟ್ಟಣ: ಇದೇಯೇನು ನಿಮ್ಮ ಪೇಟೆಯವರ ಧೈರ್ಯ (ಚಿಕ್ಕಿಜೀ. ೦೬೯). **ಪೇಂಠೆ**: ೫. ತಾಲ್ಲೂಕಿಗಿಂತ ಸಣ್ಣದಾದ ಆಡಳಿತವಿಭಾಗ; ಹೋಬಳಿ: ನಡೆದು ಬನ್ದ ನಾಡ ಗಾಡಿಕ ದೇಶ ಪೇಂಠೆ ಪಟ್ಟಣದ ಹಟ್ಟಿಗೆ ಮರಿಯಾದೆ (ಎಕ. VIII, ಸೊರಬ. ೨೬೬-೨೯; 1620 ?). **ಪೇಠಾ**: ೫. ರಾಜಕೀಯದ ಮಟ್ಟಿಗೆ, ಅದು ಪೇಠಾ ಅಂದರೆ ಉಪತಾಲೂಕಿನ ರಾಜಧಾನಿ (ಹಾರುಂದಾ. ೨೪); ಪೇಠಾದ ಸ್ಥಳವಾದುದರಿಂದ ೪–೮ ಕಚೇರಿಯ ಜನರು ಕಣ್ಣಿಗೆ ಬೀಳುತ್ತಿದ್ದರು (ಎಂ.ಎ. ೭). **ಪೇಠೆ₂**: ೧. ಕೃಷ್ಣಾಪುರದ ಪೇಠೆಯ . . . ಸ್ಥಳಸುಂಕ (ಸೌಇಇ. IV. ೨೩೩-೨೩; 1513); ಯಿಾ ಗ್ರಾಮದಲು ಹಳೆ ಪೇಠೆಯಲು (ಎಕ. VIII. ಸೊರಬ. ೩೫೯-೨೯; 1743 ?). ೨. ಸ್ಮರನಿಕ್ಕ ರತಿಯರಮನೆ ಮಧುವಿನ ಪೇಠೆ[ಶಾಕಾಂ. ಟಿ] (ಸೊಬಗೋ. ೨೫-೩೬). ೫. ತಾಲೂಕು ದೊಡ್ಡದಿದ್ದಲ್ಲಿ ಪೇಠೆಯೆಂಬ ಸಣ್ಣ ಭಾಗ ಮಾಡಿ . . . ಅಧಿಕಾರಿಯನ್ನು ನೇಮಿಸುತ್ತಾರೆ (ಮುಂಬಯಿ. ೯೫); ಈ ಜಿಲ್ಲೆಯಲ್ಲಿ ೮ ತಾಲೂಕುಗಳೂ ೩ ಪೇಠೆಗಳೂ ಇರುವುವು (ಕಾರವಾ. ೭೦).

**ಪೇಟೆಧಾರಣೆ** = ಮಾರುಕಟ್ಟೆಯಲ್ಲಿ ಆಯಾ ದಿನದಲ್ಲಿ ಇರುವ ಸರಕುಗಳ ಬೆಲೆ: ತರಬೇಕು ತಕ್ಕ ಬೆಲೆ, ಪೇಟೆಧಾರಣೆ ಬೇರೆ (ಪಂಮು. ೬೬-೩). [← ಮರಾ. ಪೇಟಾ, ಪೇಠ. / ತಮಿ. ಪೇಟ್ಟೈ; ತುಳು. ಪೇಂಟೆ, ಪೇಟೆ; ತೆಲು. ಪೇಟ]

**ಪೇಠಣೆ** 'ಪೈಠಣಿ' ನೋ.

**ಪೇಠಾ** 'ಪೇಟೆ' ನೋ.

**ಪೇಠೆ₁** (ನಾ). ಗುಂಪು; ಸಮೂಹ: ಬೆಜವಾಡದೊಳ್ ನ್ಯಾಯಮಂ ಪೇಳ್ದ ಮಧ್ಯಸ್ಥರಂದದ ಜನದ ಪೇಠಗಳಿನೊಪ್ಪಿರ್ದುದು (ಶೀರವು. ೨-೧೦).

[< ಸಂ. ಪೇಟ]

**ಪೇಠೆ₂** 'ಪೇಟೆ' ನೋ.

**ಪೇಡ**, ಪೇಡೆ, ಪೇಢೆ, ಫೇಡೆ (ನಾ). (ಉಕ) ಹಾಲುಖೋವ ಹಾಗು ಸಕ್ಕರೆಯಿಂದ ಮಾಡುವ ಒಂದು ಬಗೆಯ ಮಿಠಾಯಿ; ದೂದಪೇಡ: ಧಾರವಾಡದ ಪೇಡ ಬಾಯಿಗೆ ಸಾಕುತ್ತಿದ್ದ ಹಾಗೇ ಕರಗಿ ಬಿಟ್ಟಿತು (ರೂಢಿ). **ಪೇಡೆ**: ನಿನ್ನೆ ಎಲ್ಲರಿಗೂ ಪೇಡೆ ಕಳಿಸಿದ್ದಿ (ಕುಂಕುಮ. ೨); ಅದಕ್ಕಾಗಿ ಪೇಡೆ ಹಂಚುವ ವ್ಯವಸ್ಥೆಯನ್ನು ಗುಪ್ತವಾಗಿ ತಿಳುಹಿಸಿರಿ (ಅಮಗಾಂ. ೫೦). **ಪೇಢೆ**: ಅವಳು ಗಾಡಿಯಲ್ಲಿ ಕುಳಿತ ಮೇಲೆ ಟಿಳಕರು ಖಜ್ಜೂರ ಮತ್ತು ಪೇಢೆ ತಂದು ಅವಳ ಕೈಗಿತ್ತರು (ಸ್ವಾತಿಶ. ೦೯೯).

**ಫೇಡೆ :** ಖಾದರನು ಕೈಚೀಲದಲ್ಲಿ ಫೇಡೇದ ಪುಡಿಕೆಗಳನ್ನು ತಂದಿಟ್ಟನು (ಮುಕ್ತ್ಯ. ೧೬೬) ; ಊರೆಲ್ಲೆಲ್ಲಾ ಆ ಸಂಭ್ರಮದ ಪ್ರತೀಕವಾಗಿ ಫೇಡೆ ಹಂಚಿದರು (ಅಶಯ. ೨೨). [← ಹಿಂ. ಪೇಡಾ ; ಮರಾ. ಪೇಡಾ, ಪೇಢಾ]

**ಪೇಡಿ₁**, ಪೇಟಿ₁, ಹೇಡಿ (ನಾ). ೧. ಅಂಜುಕುಳಿ ; ಕೈಲಾಗದವನು ; ಹೆದರಂಪುಕ್ಕ : ಆನೆ ರಿಪುಸೇನೆಗೆ ಸಾಲ್ವೆನವುಂ ಕಿ ಪೇಡಿ ಪಾಡಿಗಟ್ಟಿ ಬೇವೆಡ್ಡೆಯ ಕೈಯುಂಗುರೆ ಸಾಲದೆ ನಟ್ಟನ ಕೈದುವೇಟ್ಟುದೇ (ಆಕ್ಷ್ಮ. ೧೦೦ ಓಕ್ರಾ) ; ಮುಂ ಬಳೆದೊಟ್ಟ ಪೇಡಿಯ ನಿಮ್ಮ ನೀಂತಿಳಿಸಿ ಮದ್ದಲಮೆಲ್ಲವಂ ಕೊಲೆ ನೋಡುತಿರ್ಪುದು ಪಾಟಿಯೇ (ಕಂಕಬಾ. ೧೧-೦೯) ; ಪೇಡಿಯಪ್ಪುರಸಿನ ವಾತಿನಂತೆ ಬೇಸಗೆಯು ಮುಗಿಲಂತೆ (ಚರ್ಮಾಕ್ಯ. ೯-೨೬). ೨. ನಪುಂಸಕ ; ಷಂಡ : "ನಪುಂಸಕಂ ಪೇಡಿ ಷಂಡಕಂ ತಾಂ ಷಂಡಂ" (ಅಭಿ.ಕೋ. ೩೬-೨೬). **ಪೇಟ್₁** : ೧. ಧರ್ಮಾನುಜಂಗೇಕೆ ಕಿಂಕರನಾದಂ ಕರವೇಟಿಯಾದನದರ್ಜುನಂ ಸೂತಂ ಭಟಂ ಪೇಟಿಯೆಂಬರ ಮಾತೊಪ್ಪುಗುಂ (ಗದಾಯು. ೩-೯೩). **ಹೇಡಿ :** ೧. ಹೇಡಿ ಬಿರುದ ಕಟ್ಟಿದಂತಾಯಿತೆನ್ನ ವೇಷ ಕಾದ ಬೇಕು ಕಾದುವರೆ ಮನವಿಲ್ಲಾ (ಜಿತ. ೩೦೦) ; ರಾಯನಿದಿರಲಿ ಹೇಡಿ ಕಲಿಯಹ (ಕುಭಾ.ಶ. ೯-೨೬): ನನ್ನನ್ನು ಹೇಡಿಯೆಂದು ಎಲ್ಲರೂ ತಿಳಿದುಕೊಂಡಿದ್ದಾರೆ (ಕಮಲ.ಶ. ೦೦೨) ; ಹೇಡಿ ಯುದ್ಧಕ್ಕೆ ಹೋಗ, ಪೋಡಿ ಕೆಲಸಕ್ಕೆ ಹೋಗ (ಗಾದೆ). ೨. "ಉಭಯವ್ಯಂಜನಾ, ಪೋಟಾ—ಈ ೨ ಹೆ(ಪೆ)ೇಡಿ" (ಜಲಾಯು. ೬೦-೩೬೬). ೩. ಗಟ್ಟಿಯಲ್ಲದುದು ; ಪೊಳ್ಳಾದುದು : ಅರಳೆ . . . ಕಟ್ಟಿಗೆ ಹೇಡಿ, ಕೆಲಸಕ್ಕೆ ಬರುವುದಿಲ್ಲ (ಕಅಾಗ. ೩೩) · 'ಹೇಡಿಮಣ್ಣು' ಪಟಾ.

[ದೇ.ಶ ತಮಿ. ಪೇಟಿ; ಮಲ.ಪೇಡಿ; ತುಳು. ಹೇಡಿ,ಹೇಡೆ; ತೆಲು. ಪೇಡಿ]

**ಪೇಡಿ₂**. ಪೇಢಿ (ನಾ). (ಉಕ) ಚಿನ್ನ, ಬೆಳ್ಳಿಯ ವ್ಯಾಪಾರಕೇಂದ್ರ ; ಸರಾಫ್ ಕಟ್ಟೆ : ಈ ಅಜ್ಞಾನ ಮತ್ತು ಭಯದ ಮೂಲಕ ಪೇಟೆಯ ವ್ಯವಹಾರವು ಅಡತಿ ಅಂಗಡಿ ಇಲ್ಲವೆ 'ಪೇಡಿ'ಗಳ ಮುಖಾಂತರವಾಗಿ ಇದುವರೆಗೆ ನಡೆದಿರುವುದು . . . 'ಪೇಡಿ'ಗಳ ವ್ಯವಹಾರಕ್ಕೆ ಕಾಯಿದೇ ಕಾನೂನಿನ ನಿರ್ಬಂಧವಿರುವುದಿಲ್ಲ (ಪ್ರಾಂಕೆಕ್ಕ. ೦): ಈ ಮುಂಬಯಿಯೊಳಗಿನ ದುಕಾನಿನ ಹೊರ್ತು ನಮ್ಮ ಮುಖ್ಯ ಪೇಡಿಯೂ ನಮ್ಮ ವಾಸಸ್ಥಾನವೂ ಸೋಲಾಪುರದಲ್ಲುಂಟು (ಮುಂಬಾ. ೨೦)· **ಪೇಢಿ :** ಆಗಿಂದ ನಡೆದು ಬಂದ ಕೆಲವು ಪೇಢಿಗಳು, ಅಂಗಡಿಗಳು, ಸಂಸ್ಥೆಗಳು (ಕಳ್ಕ. ೩೨); ನಮ್ಮೂರಲ್ಲಿ ಪೇಢೀ ನಡೆಸುತ್ತಿದ್ದ ಗಂಗಾಪ್ರಸಾದತಿವಾರಿ . . . ರಂಗಣ್ಣಾ, ಇವರೇ ಈ ವಾಸಂತಿಕಾಛತ್ರಕ್ಕೆ ಮಹಾಪಾಲರಾಗಿದ್ದರು (ಬೀಚಚ. II. ೦೯೯).

[ ← ಮರಾ. ಪೇಢೀ ]

**ಪೇಡಿತನ**, ಹೇಡಿತನ (ನಾ). ಅಂಜುಬುರುಕುತನ ; ಪುಕ್ಕಲುತನ : ಏನಮ್ಮ ಪೇಡಿತನಂ, ಅಂಜದಿರ್ (ಅಕ್ಕಿ. ೯-೬೨): ಕೊಲೆಯ ಅಪರಾಧ ದಿಂದಮಾ ಪೇಡಿತನಪದಮಾನಮೇ ಮೇಲು (ಅದ್ಬಕ್ರ. ೯೬-೯೯೩). **ಹೇಡಿತನ :** ನೋಡಿದಳು ದಮಯಂತಿ ಭೀತಿಯಲೋಡುತಿಹ ಬೇಡಿಕೆಯ ವೈಶ್ಯರ ಪೇಡಿ[ಪಾಠಾಂ. ಕೇಡ]ತನವನು (ನಳಚ. ೩-೯೦); ಅವರಲ್ಲಿ ಬೇಗನೆ ಪುಕ್ಕು, ಹೇಡಿತನಗಳು ಮೆಲ್ಲನೆ ಸೇರಿಕೊಳ್ಳುವುವು (ಯಜ್ಞಕ್ರ. ೩೦).

[ ಪೇಡಿ₁ + — ತನ ]

**ಪೇಡೆ** 'ಪೇಡ' ನೋ.

**ಪೇಢಿ** 'ಪೇಡಿ₂' ನೋ.

**ಪೇಢೆ** 'ಪೇಡ' ನೋ.

**ಪೇಣೆ** (ನಾ). ಒಂದು ಬಗೆಯ ಸಿಹಿಭಕ್ಷ್ಯ : ಬೆಳತಿಗಕ್ಕಿಯ ಹಿಟ್ಟ ಹೊಸ ಬೆಣ್ಣೆಯಿಂ ಕಲಸಿ . . . ಸರಿಬೆಣ್ಣೆ ಸರಿದುಪ್ಪದೊಳಗೆ ಪಾಕವ ಮಾಡಿ ಪದರಿನೊಳು ಸಕ್ಕರೆಯನಿಡಲದುವೆ ಪೇಣೆಯಹುದು (ಸೂಪಶಾ. ೦-೯೬) ; ಚಿಲುಪಾಲುವೃತಮೆಂದೆಳೊರ್ವಳು ಪೇಣೆಯ ಮೆಲಲೊಲ್ಲೆನೆಂದ ಳೊರ್ವಬಲೆ (ಶಶಿ. ೨೦-೨೯).

[ < ಸಂ. ಫೇಣೀ ]

**ಪೇತ**, ಪೇತು, ಹೇದೆ (ನಾ). ೧. ಭೂತ ; ಪಿಶಾಚಿ ; ಪ್ರೇತ : ಕೆಲಕ ಕಾದಿಹ ಬೂತಪೇತವು (ಕಾಶಿಖ. ೩೬-೨೩) ; ಕೊಳುಗಾಣದ ಪೇತರು ಗಳಂತೆ ಕಾಡುವರು ಕಂಡವರ (ಕಂಕಬಾ. ೬-೨೨). ೨. ಹೆಣ; ಶವ : 'ನರಪೇತ' ಪಠಾ. **ಪೇತು :** ೧. "ಪೇತು(ತ)—ಪ್ರೇತ = ಪಿಶಾಚಿ" (ಕರ್ಣಕೋ. ೨೬); ಪೇತೆ ನೀನೇನು ದೊಡ್ಡಿತು (ಮೋಹತ. ೦೨-೦೫೯) ; ಪೇತುಗಳಲ್ತೆ ಖೇಚರರು ಭೂಚರರಲ್ಲ ಭೂತಗಳಲ್ತೆ (ಶಶಿ. ೯೬-೩೩). ೩. ಅಂಜುಬುರುಕ ; ಹೇಡಿ : 'ಪೇತುಗ' ಪಠಾ. **ಹೇದೆ:** ೧. "ಹೇದೆ_ಭೂತಂ" (ಕಮುರ. ಕಂ. ೨) ; ತೊನೆವ ನೆಲ ಮಾಟವಿದು ಮನೆಯ ಕಾಟದ ಹೇದೆ ಬಿನುಗೊಂದು ನೆಲಮುಕ್ಕು ಕಾಡುತಿಹುದು (ಕಾಅರ. ೦೩೯-೩೩೯).

[< ಸಂ. ಪ್ರೇತ]

**ಪೇತು** 'ಪೇತ' ನೋ.

**ಪೇತುಕಣೆ** (ನಾ). (ಅಲಂ) ಹಿಂಸೆಗೊಳಗಾಗಿಸುವ ಅನಂಗನ ಬಾಣ ; ಪುಷ್ಪಬಾಣ : ಚೂತ ಕುಮುದ ಕಮಲ ಮಲ್ಲಿಗೆಯಶೋಕೆಗಳ ಪೇತುಕಣೆ ಗಳ ತೊಟ್ಟು ಕಾತರಿಪ ಸ್ತ್ರೀಪುಂಸರಸೆಯ ಬೀಳುವರು (ಶ್ರಕುಕ. ೩-೦೨೯).

[ಪೇತು (< ಪೇತ) + ಕಣೆ₁]

**ಪೇತುಗ** (ನಾ). ೧. ಪಿಶಾಚಿಯಂತಹವನು ; ದುಷ್ಟ : ದುರಾತ್ಮನು ಪಾಂಡವರ ಕಪಟದ್ಯೂತದಲಿ ವನವಾಸಕಟ್ಟಿದ ಪೇತುಗನು ಕಡುಲದ್ದ ಭಂಡನು (ಕುಮುಂದ. ೦೯). ೨. ಅಂಜುಬುರುಕ; ಹೇಡಿ : ತಿರುಗಿ ಸೀತೆಯ ಬಿಟ್ಟನಾದರೆ ಕರೆಯ ಪೇ[ಪಾಠಾಂ. ಕೇ]ತುಗನೆಂದು (ತೊರಾ. ೬-೦೨-೦೬) ; ಕಂಡ ದೆಸೆಗೋಡುತಿರಲು ಕೇಳಿ ಚೈದ್ಯಂ ಪೇತುಗರ ಬಯ್ದು (ಜೂರಭಾ. ೩೬).

[ಪೇತು (< ಪೇತ) + —.ಗ₂]

**ಪೇದೆ** 'ಪ್ಯಾದೆ' ನೋ.

**ಪೇದೆಮಾತು** 'ಪ್ಯಾದೆಮಾತು' ನೋ.

**ಪೇನ್**, ಪೇನು, ಹೇನ್, ಹೇನು (ನಾ). ೧. (ಸಾಮಾನ್ಯವಾಗಿ ಕೊಳ ಕಾದ ಬಟ್ಟೆ ಹಾಗೂ ತಲೆಯ ಕೂದಲಿನಲ್ಲಿ ಸೇರಿಕೊಳ್ಳುವ) ಒಂದು ಬಗೆಯ ಸಣ್ಣ ಹುಳು ; ಯೂಕ : ಅಂತೊಪ್ಪುವ . . . ಶಯ್ಯಾತಳ ದೊಳ್ ಮಂದವಿಸರ್ಜಣೆಯೆಂಬುದೊಂದು ಪೇನಿರ್ಪುದು[ಪಾಠಾಂ. ಯೂಕವಿಪ್ಪುದು]. (ಕಂಕಕಂ. ೦೨೩-೧೧) ; ರಸಮಂ ಫಣಿವಲ್ಲೀದಳರಸ ದೊಳ್ ಮರ್ದಿಸಿ ಬಟ್ಟಿಕ್ಕೆ ಕಪ್ಪಡದೊಳ್ ಭಾವಿಸಿ ತಲೆಯೊಳ್ ಕಟ್ಟಿದೊಡುಳ್ಳ ಸೀರುವುಳ್ಳನಿತು ಪೇನುವಾಗಳೆ ಕಿಡುಗುಂ (ಕೋಕೋಶ. ೯-೩೬) ; ತಲೆ ಯೊಳ್ತೀವಿದ ಪೇನ ಸೀರ್ಮಾಲಮನೆಂತುಂ ಬಾರ್ಚಿ (ಜಾವಸಂ. ಕಂ. ೦-೯) ; ಕಣ್ಣೆಂಜಲೆಂದು ತೂಪಿಚಿದು ಬಣ್ಣದಾವರೆಮೊಗ್ಗೆವೊಲೆಯ ಬಾಯೊಳ ಗೂಡಿಯುಣ್ಣಲ್ಕೆ ಪೇನ್ವಡೆಕುವಳು (ವಜಾಚ. ೦೬-೬೩). **ಪೇನು :** ೧. ಸ್ಪರ್ಶ ರಸ ಗಂಧಂಗಳೆಂಬೀ ಮೂಜನಜೀವ . . . ಪೇನು ಸೀರು ತೇಟು . . . ತುಂಬುಬು ಮೊದಲಾದವೆಲ್ಲೊಳಂ (ಚಾರಿ. ೯೯). **ಹೇನ್ :** ೧. "ಮಸ್ತಕವ್ಯಗಂ ಷಟ್ಪದಂ ಹೇನೆನಿಕ್ಕುಂ" (ಕುಂಗಾ. ೯೯-೦೯); "ಉಂದುಕಂ=ಹೇನ್" (ಕಾಶಕ್ಕೆ. ೨೬) ; ಕೇಶವಿಳಿದಿಹದೆಂಬಿ ಹೇನ್ನೀರ್ ಸೂಸುತಿಹವೆಲ್ಲಲ್ಲ ಮೃತವಹ ಘಾಸಿ ಬಪ್ಪುದು (ಶಬಿಖ. ೬-೦೩). **ಹೇನು :** ೧. "ಹೇ[ ಪಾಠಾಂ· ಪೇ ]ನಿಗುಂಜಿ ಸಂವರ್ಜಿಪರಂಟೆ ಕುಂತಳವಂ (ನಾರಪು.೦-೩೭) ; ಹೇನನೊರಸುವದೇಕೆ ಶರಸಂಧಾನ (ತೊರಾ. ೬-೪-೩೬) ; ಹೇನು ಬಲ್ಲುದೆ ಮುಡಿದ ಹೂವಿನ ಪರಿಮಳವ (ಪುರಂದ. ೦-೦೨೩.೨). ೨. ಗಿಡಮರಗಳಿಗೆ ಹತ್ತುವ ಕೀಟಗಳಲ್ಲಿ ಒಂದು ಬಗೆ : ಗಿಡಮರ ಗಳಿಗೆ ಅಂಟಿರುವ ಹೇನುಗಳಲ್ಲೂ ಇನ್ನು ಅನೇಕ ಕೀಟಗಳಲ್ಲೂ ಈ ರೀತಿ ಯಿಂದ ಸಂತತಿಯು ಬೆಳೆಯುವುದು (ಜಾಂಕ್ರ. II. ೬೦೦) ; ಗಿಡದ ಸೀರು ಅಥವಾ ಹೇನುಗಳು (aphids) ಲಕ್ಷಾವಧಿ ಸಂತಾನವನ್ನು ಉತ್ಪತ್ತಿ ಮಾಡುವವು (ಕೀಟಬ. ೬).

**ಹೇನ ಕೆರೆ**=ಕೂದಲು ಉದುರುವ ಒಂದು ಬಗೆಯ ರೋಗ : ಇಂದ್ರಲುಪ್ತ ಎಂಬುದೊಂದು ಮಂಡೆಯು ಕೂದಲು ಒಂದೂ ಇಲ್ಲದೆ ಉದುರಿ ಮಂಡೆಯ ಚರ್ಮ ಕಾಣಲ್ಪಡುವುದು ; ಅವನೇ ಹೇನ ಕೆರೆ ಎಂಬರು (ವೈದ್ಯಶಾ. II. ೦೩೦).
[ದೇ. ॥ ತಮಿ. ಮಲ. ಣಾಯ್ಕು. ಗಡಬ. ಪೇನ್ ; ತುಳು. ತೆಲು. ಕುಇ. ಮಲ್ತೊ. ಪೇನು ; ಕುವಿ. ಪೇನು, ಪೇನೂ]

**ಪೇನ₁** (ನಾ). ನೊರೆ ; ಬುರುಗು : "ಪೇನ—ಫೇನ=ನೊರೆ" (ಶಬ್ದಕೋ. ೨೭); ಫಣರಕ್ಕೆ ಪಕಾರಂ . . . ಫಾಲ್ಗುನ – ಪಾಲುಗುಣ ; ಫೇನ-ಪೇನ (ಶಮದ. ೨೫೫ ಪ್ರಯೋ). [ <ಸಂ. ಫೇನ ]

**ಪೇನ₂** 'ಪೆನ್ನು' ನೋ.

**ಪೇನಾ** 'ಪೆನ್ನು' ನೋ.

**ಪೇನಾರಿ** 'ಪೀನಾರಿ₁' ನೋ.

**ಪೇನಿ** (ನಾ). ೧. ಒಂದು ಬಗೆಯ ಪಿಶಾಚಿ : ಬಟ್ಟೆವೋಪರ್ ಪಸಿದೆಳೆಗೆಯ್ಯಂ ಪೊಕ್ಕಂತೆ ಪೊಟ್ಟೆಯನುರ್ಚಿ ತಿಂಬ ಪೇನಿಗಳುಂ (ಜಂಹಂ. ೨-೧೦ ವ). ೨. (ಅಲಂ) ಲೋಭಿ ; ಜಿಪುಣ : ಪೇನಿಗಳಂ ಪೊಗಳದಿರಭಿಮಾನಿಗಳಂ ಗುಣದ ಕಣಿಗಳಂ ವಸುಮತಿಯೊಳ್ ದಾನಿಗಳನೂನಮಿಲ್ಲದ ಮೋನಿಗಳಂ ಪೋಗಿ ಪೊಗಟು (ಎಕ. V. ಬೇಲೂರು. ೦೨೩-೦೭ ; ೫೬೭) ; ತಾನುಣ್ಣದ ಪೆರ್ಗಿಕ್ಕದ ಪೇನಿಯ ಪಶ್ಚಡಿಕೆಯೆನಿಪ ಲೋಭಿಯ ಪೊನ್ನು . . . ಕವರ್ದುಕೊಂಡು (ರಹಸಾಮ್ಮ. ೨-೩೪). [ದೇ. ॥ ಕುವಿ. ಪೇನು]

**ಪೇನು₁** 'ಪೇನ್' ನೋ.

**ಪೇನು₂** 'ಪೆನ್ನು' ನೋ.

**ಪೇಪಂದಿ** (ನಾ). ಹೆಣ್ಣುಹಂದಿ : ಆ ಪೊಬಿಲೊಳ್ . . . ಪೇಪಂದಿಯಾಗಿ ಪುಟ್ಟಿ (ವಡ್ಡಾರಾ. ೧೦-೬) ; ಆ ಪುರದೊಳ್ ಪೇಪಂದಿಯಾಗಿ ಬಂದು (ಸುಕುಮಾ. ೫-೨೭) ; ಅಮೇಧ್ಯದ ನಾಯ ಪೇಪಂದಿಯ ಕತ್ತೆಗಳ ನಡುವೊಂದೆರಡು ಜಾವಂಬರಮಿರ್ದು (ಜಂಹಂ. ೪-೪ ವ). [ <ಪೆಣ್ + ಪಂದಿ ]

**ಪೇಯ** (ನಾ). ೧. ಕುಡಿಯಲು ಯೋಗ್ಯವಾದುದು ; ಪಾನೀಯ ; ಮದ್ಯ, ಪಾನಕ, ಚಹಾ, ಕಾಫಿ ಮುಂತಾದುವು : ನೀರಿಲ್ಲಿದ್ದರೆ ಚಹಾ, ಕಾಫೀ, ಕೋಕೋ ಮೊದಲಾದ ಪೇಯಗಳನ್ನು ಕುಡಿದು ಬದುಕಬಹುದಲ್ಲವೆ (ವಿನೋದ. ೦೪) ; ಬಾರಿನಿಂದ ಯಾವ ಯಾವುವೋ ಪೇಯಗಳನ್ನು ತರಿಸಿ ಕುಡಿಯುತ್ತಿದ್ದಾರೆ (ಕ್ಷಿತಿಜ. ೬). ೨. ಭಕ್ಷ್ಯ, ಭೋಜ್ಯ, ಲೇಪ್ಯ ಮತ್ತು ಪೇಯ ಎಂಬ ನಾಲ್ಕು ವಿಧವಾದ ಆಹಾರಗಳಲ್ಲಿ ಒಂದು : ಬಾರದ ಭವದಲ್ಲಿ ಬಂದು, ಉಣ್ಣದ ಪೇಯವನು ಉಂಡು, ಕಾಣದ ದುಃಖವ ಕಂಡು (ಶರಶ. ೬೩೬) : ಮನುಷ್ಯರ ಜಠರದಲ್ಲಿರುವ ವೈಶ್ವಾನರಾಗ್ನಿಯಲ್ಲಿ . . . ಸಂಯುಕ್ತನಾಗಿ ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯ ಎಂಬ ನಾಲ್ಕು ವಿಧ ಅನ್ನವನ್ನು ಜೀರ್ಣ ಮಾಡುತ್ತೇನೆ (ಛಾಶತ. ೪. ೦೯೪). ॥ ಭೋಜ್ಯ, ಪೇಯ, ಚೋಷ್ಯ, ಲೇಹ್ಯ, ಖಾದ್ಯ, ಚರ್ವಣ, ನಿಷ್ಪೇಯ ಮತ್ತು ಭಕ್ಷ್ಯಗಳೆಂದು ಆಹಾರಗಳು ಎಂಟು ವಿಧ ಎಂಬ ವಿವರಣೆಯೂ ಇದೆ. ೩. ನೀರು. ೪. ಹಾಲು. [ಸಂ.]

**ಪೇಯತ್ತಿ** (ನಾ). ಒಂದು ಬಗೆಯ ಅತ್ತಿಮರ : "ಮಲಯೂಃ—ಕಲ್ಲತ್ತಿ, ಪೇಯತ್ತಿ" (ಓಷಧಿ. ೦೦೪). [ಪೇಯ ? + ಅತ್ತಿ₁]

**ಪೇರ್₁** 'ಪಿರಿ₄' ನೋ.

**ಪೇರ್₂** 'ಪೆಸರ್' ನೋ.

**ಪೇರ್ಹಂಡೆ** (ನಾ). ದೊಡ್ಡ ಪಾತ್ರೆ, —ಅಂಡೆ : ಶತಸಂಖ್ಯೆ ಕೊಪ್ಪರಿಗೆಯಿಂ ಬಹುವಿಧದ ತೈಲಂಗಳ ಮಿಂದೆದ್ದು ಪೇರಂಡೆಗಳಲಿ ಮೊಗದತಿ ಪಂಜು ತಂಡವಂ ಪತ್ತಿಸಿದರು (ಲಕ್ಷ್ಮಿಶಾ. ೬-೭-೩೩).
[ಪೇರ್₁ (<ಪಿರಿದು₁)+ಅಂಡೆ₂]

**ಪೇರಂದ** (ನಾ). ಅತಿಶಯವಾದ ಪ್ರದರ್ಶನ : ಆ ಪರ್ತಕನು ದೊರೆಯನ್ನು ತನ್ನ ಮನೆಗೆ ಔತಣಕ್ಕೆ ಕರೆದನು ; ತನ್ನ ಭಾಗ್ಯವನ್ನೆಲ್ಲಾ ಪೇರಂದ ಮಾಡಲು ಹೊರಟನು (ಐತಿಹಾ. IV. ೫).
[ಪೇರ್₁ (<ಪಿರಿದು₁)+ಅಂದ]

**ಪೇರಗಳು** 'ಪೇರಗಟ್' ನೋ.

**ಪೇರಗಟ್**, ಪೇರಗಳಂ (ನಾ). ದೊಡ್ಡದಾದ ಕಂದಕ : ಸೀರ್ಪಣಿಯಾಯ್ತುಬ್ಧಿಯೆಸುತ್ತುವರ್ದುಲಿವಪ್ಪೋಲೊಪ್ಪಿರ್ದುದಾ ಪೇರಗಟ್ (ಕುಸುಮಾ. ೨-೭೩). **ಪೇರಗಳು** : ಪೇರಗಳು ವಾರಿನಿಧಿ ಚಕ್ರವಾಳಾದ್ರಿ ವಿಸ್ತಾರತರ ಕೋಟೆ ತತ್ಪುರವೆ ಜಂಬೂದ್ವೀಪ (ಹಕ್ಕರಕ್ಷಿ. ೨-೯) ; ನೆಗಳಾನೆ ಮಿಗಗಳನೊಳಕೊಂಡು ಬಂದು ಪೇರಗಳಾಮದಬ್ಧಿ ದ್ವಾರಕೆಗೆ (ನೋಪಕ. ೩-೫) ; ಬಂದು ಬಿದ್ದರಮರಾವತಿಯ ಪೇರಗಳನಮರಭಟರು (ಕಬಕ್ಷಿ. ೨೯-೨೪). [ಪೇರ್₁ (<ಪಿರಿದು₁)+ಅಗಟ್₃(<ಅಗುಟ್₃) ]

**ಪೇರಗುಬ್** (ನಾ). ದೊಡ್ಡ ಅಗುಳಿ ; ಭಾರಿಯಾದ ಲಾಳವಿಂಡಿಗೆ : ಭರದೊಳ್ಕುಬ್ದರ್ ಬಡುಗಣ್ಣರೂರ ಪೇರಗುಬಿಗಳಂ (ಅಶ್ವತಿ. ೩೨-೨).
[ಪೇರ್₁ (<ಪಿರಿದು₁)+ಅಗುಬ್ (<ಅಗ್ಗಬ್₁) ]

**ಪೇರಟಿ** (ನಾ). (ಕರಾ) ವರನ ಮನೆಗೆ ಮದುಮಗಳ ಸಂಗಡ ಹೋಗುವ ಆಕೆಯ ಅಕ್ಕ ಅಥವಾ ತಂಗಿ : ಅಕ್ಕನ ಜೊತೆಗೆ ಪೇರಟಿಯಾಗಿ ಅವಳ ಊರಿಗೆ ಹೋಗಿದ್ದಳು (ರೂಢಿ). [ ? ]

**ಪೇರಟ್ಟಣೆ** 'ಪೇರಟ್ಟಳೆ' ನೋ.

**ಪೇರಟ್ಟಳೆ**, ಪೇರಟ್ಟಣೆ (ನಾ). ದೊಡ್ಡ ಬುರುಜು,—ಕೊತ್ತಳ : ಮಿಳಿರ್ವುತ್ತುಂಗಧ್ವಜು ಮಾರ್ಪೊಳೆವ ಜಲಧರವ್ರಾತಮೆಂಬಂತೆ ಪೇರಟ್ಟಳೆಗಳ್ ತಳ್ತಿತ್ತಲುಂ ಬಿಂಬಿಸೆ (ಧರ್ಮನಾ. ೨-೬೪). **ಪೇರಟ್ಟಣೆ** : ಮಕರಬಿಬ್ಬಿ ಪೇರಟ್ಟಣೆಗಳವರನಾಯಕರ ಕಾಯ್ಪಿಂ . . . ಮನೆಕೆ ಮಂಗಳವೆನಿಸುವಮರಾವತಿಯ ಪುರಕ್ಕೈತಂದನೆಮ್ಮ ರುದ್ರಂ (ಐಕ್ಯಕ್ಷಿ. ೨-೩-೦೯).
[ಪೇರ್₁ (<ಪಿರಿದು₁) + ಅಟ್ಟಳೆ]

**ಪೇರಟ್ಟೆ** (ನಾ). ದೊಡ್ಡ ಮುಂಡ ; ದಪ್ಪವಾದ ದೇಹ : ನೆಟ್ಟನೆ ನಡೆಯುತ್ತೆ ಪಡಲ್ವಟ್ಟರ ಪೇರಟ್ಟೆಗಳನೆ ಮೆಟ್ಟುಗೆಗೆಯ್ದು (ಶಕಪ. ೨-೦೦೯).
[ಪೇರ್₁ (<ಪಿರಿದು₁) + ಅಟ್ಟೆ₁]

**ಪೇರಡಗು** (ನಾ). ಅಧಿಕವಾದ ಮಾಂಸ : ದೆಸೆದೆಸೆಗೆ ನರಶಿರಂ ತಿತ್ತಿಸಿ ಮೆಚಿದುವು ಮಾಗಿಲೊಳಬ್ಬಿ ಪೇರಡಗಿನ ಪೆರ್ಬೆಸನದೆ ಪೊಣಗಣ ಜೀವ ಪ್ರಸರಮುಮಂ ಪಲವು ಮುಖದಿನವಲೋಕಿಪವೋಲ್ (ಯಶೋಧ. ೦-೫೬) ; ತೊಡೆ ಪೇರಡಗಿನ ಕಾಳಿಜದೆಡೆ ಚರಣಂ ದುರಿತಕಾರಣಂ ಕಾಣೆನಿಪ . . . ಗಣಿಕೆಯರೊಡಲೊಳ್ಳಿರಡುಂಟೆ (ವೃಷಭ. ೨೮-೬೦).
[ಪೇರ್₁ (<ಪಿರಿದು₁)+ಅಡಗು₃ ]

**ಪೇರಡಬಳ** (ನಾ). ಹೆಚ್ಚಾದ ಆತಂಕ ; ಅಧಿಕವಾದ ಕಾತರ : ಕಾರುಣ್ಯನಿಧಿಯು ಕಾರುಣ್ಯಮಿಂತಾಯ್ತೆನುತಪಾರಭೀತಿಗ್ರಸ್ತಮನನಾಗಿ ಬಾಯ್ಬಳಿದು ಪೇರಡಬಳಂ ಬಲಿದು ಬಸವಳಿವುತಿರ್ಪನ್ನಂ (ಕೊಟ್ಟೂರು. ೦೩-೦೪).
[ ಪೇರ್₁ (<ಪಿರಿದು₁) + ಅಡಬಳ₂ ]

**ಪೇರಡವಿ**, ಹೇರಡವಿ (ನಾ). ದೊಡ್ಡ ಕಾಡು ; ದಟ್ಟವಾದ ಅರಣ್ಯ : ಒರ್ವನೆ ಸಂಧಿಸಿ ಪೋದನಂ ಪೇರಡವಿಯೊಳಾ ತುರಂಗವದನರ್ಕಳ ಬೆಂಬಟಿಯಿಂ ಮಹೀಭುಜಂ (ಕಾದಂಪೂ. ೬೨೦) ; ಭೃತ್ಯರ್ಗೆ ಪೇರಡವಿಯೊಳ್ ಪಣ್ಬಲಂಗಳನಟಿಸಿ ಪ್ಪುವೆಂದು ಪೇಳ್ಪುದುಂ (ರಹಸಾಮ್ಮ. ೨-೦೩೬) ; ಪಾತಕಿಯನಟ್ಟುವಂತೆ ಪೇರಡವಿಗಟ್ಟುವೊಡೆ (ಶ್ರೀಣಾಮ. ೫-೨೨). **ಹೇರಡವಿ** : ಆಡಿನ ತತ್ತಿಯೊಳಗೊಂದು ಹೇರಡವಿ ಇದ್ದಿತ್ತು ಆ ಹೇರಡವಿಯೊಳಗೆ ಮೇರುವೆ ಇದ್ದಿತ್ತು (ಅರಶ. ೪೮-೦೦೭) ; ಕೌರವಪಡೆಯ ಹೇರಡವಿಯನು ಸವಜಲಿಂ ಕಡಿತಕಾಜರು ಮುಂದೆ ಹೊಕ್ಕುದು(ಕುಮಾವ್ಯಾಸ. ೫-೬);

ಹೇರಡವಿಗಳ ವೊತ್ತದಲಿ ವ್ಯೆವಜಾಯದಜಿಸಿದರಾ ನಿಶಾಚರನ (ಹೊರಟ. ೯-೦೦-೦೩). [ಪೇರ್$_1$ ( <ಪಿರಿದು$_1$)+ಅಡವಿ ]

**ಪೇರಡಿ** (ನಾ). ೧. ದೊಡ್ಡ ಪಾದ: ಪದದಾದಿಯ ಹ್ರಸ್ವಕ್ಕೆ ಬಹುಳತೆಯಿಂ ದೀರ್ಘಮಕ್ಕುಂ . . . ಪೇರಡಿ, ಪೇರೊಡಲ್ (ಶಮದ. ೦೫೦ ಪ್ರಯೋ). ೨. ಶ್ರೇಷ್ಠವಾದ ಪಾದವುಳ್ಳವನು ; ಪೂಜನೀಯ: ತಣ್ಣನ್ ತರ್ಪಾ ಪೇರಡಿ ಬಾರಯ್ ! ನೋವನ್ ನೀಗುವ ಪೇರಡಿ ಬಾರಯ್ ! (೦೦ತಿಗೂ. ೫೦-೦೦೬೩). ೩. ದಾಪುಗಾಲಂ ಹಾಕಲು ಅನುಕೂಲವಾಗುವಂತಹ ಕಾಲುಳ್ಳುದು ; ನಾಯಿ ; "ಪೇರಡಿ, ಸೊಣಗು, ಜಾಯಿಲು—ಈ ೩ ಕುಕ್ಕುರಂ" (ಕಕಾ. ೫೦-೦೦೯); ಪೇರಡಿ ತನ್ನನಟ್ಟಿಯಿಂ ನಲಿನಲಿದಾಡೆ ಪೋದ ಮನುಜಂ ಪಡೆಗುಂ ತನಗಿಷ್ಟಸಿದ್ಧಿಯಂ (ರೋಳೋಹ. ೦೨-೨೩); ಬೇಂಟೆಯ ಪೇರಡಿಗಳೆಂ ಮುಂ ಬಿಟ್ಟು (ಪುರಾಶ. ೦೦-೯೭). [ಪೇರ್$_1$ ( <ಪಿರಿದು$_1$) + ಅಡಿ$_1$]

**ಪೇರಡ್ಡ** (ನಾ). (ಅಲಂ) ಮುಖವನ್ನು ತಿರುಗಿಸುವಿಕೆ; ತಿರಸ್ಕಾರ : ಅಂತುದಾಸೀನವಮಾನಸಂ ಮಸಕಮಿಲ್ಲದ ಸಾರ್ವಭೌಮಂ ಪೇರಡ್ಡಮಾಗಿ ಕೆಲದ ಚಕ್ರಾಯುಧನೊಳ್ ತಮ್ಮಂಗಬಾಹ್ಯವಸ್ತುವಂ ಪರಿತಂ ಮಾಡುತ್ತಿರೆ (ಶಾಂತಿಪು. ೦೦-೦೦೬ ವ). [ಪೇರ್$_1$ (<ಪಿರಿದು$_1$) + ಅಡ್ಡ$_1$]

**ಪೇರಣ, ಪೇರಣೆ** (ನಾ). ನೃತ್ಯ ಮುಂತಾದ ಮನರಂಜನೆಯ ಪ್ರದರ್ಶನ : ಭೂವರನ ಮುಂದಾಡುತಿಹ ಪೇರಣ ದಲೆಂಬ ಸಂವರಣೆ ಗುಂಟಾದ ವಾಜಗಳೆಯ್ದೆ ಚಾರಿವರಿದಾಡಿದವು ಶತಕೋಟಿಯು (ಹಕಾ. ೩-೨೦); ರುದ್ರುಕನ್ನೆಯರುಗ್ಗಡದ ಪಾತ್ರ ಸೂಜಿಹೂದು ತಾಳಮೇಳದ ಲಕ್ಷಲಕ್ಷಣವ ತೋಜು[ತ್ತೆ] ಗುಂಡಾಲದೊಲುಂಡಲೆದು ಪೆಕ್ಕಣದ ಪೇರಣದ ಲಾಸ್ಯಗಳ (ಗುಹಕ. ೩-೯೯); ಪೇರಣ ಪೆಕ್ಕಣ ಗುಂಡಲಂಗಳಂ ಬಲ್ಲ ಸಾತ್ವಿಕ ಆರಭಟೆ ಕೌಶಕಿಯೆಂಬ ಪಾತ್ರಂಗಳಿಂ (ರಹಾಪ. ೨-೦೦ ವ). **ಪೇರಣೆ:** ಹಾಡುತಿಹ ಗುರುನಿರೂಪಿತದ ವಚನಂಗಳಿಂದಾಡುತಿಹ ಪೇರಣೆಯ ವೇಡಾಂಕ ಕೇಳಿಕೆಯ ನೋಡುತಿಹ ಪೃಥ್ವಿಯ ಮಹಾಭಕ್ತಜನದ ಸಮ್ಮರ್ದನವ ಕೆಲವಿಂಗಿಸಿ (ಸಿದ್ಧರಾ.೯-೬೯) ; ಲಾಲಿಪ ಪೇರಣೆಯೊಳ್ಗಿಗೆ ಮೇಲೆನಿಸುವ ಕುಶಲೆ . . . ಕಾಲೇ ನಾಲಗೆಯೆಂಬಂತೋಲಗದೊಳ್ ಕುಣಿದು ದೇವಿಯುಂ ಮೆಚ್ಚಿಸಿದಳ್ (ಚಾರಪು. ೬-೬೩) ; ನಾಟಕದ ಪಾತ್ರದ ಪೇರಣೆಯ ಜೋಳಿಗಳ ಜೋಕೆಗಳ ಪ್ರಕಟವೆಸೆಯಲು (ಬಸಪು.೯-೭) ; ಬಿತ್ತರದ ನೂಪುರಂಗಳನಿಟ್ಟು ಕಾಲೊಳಗೆಯತ್ಯಧಿಕ ಸಪ್ತತಾಳದ ಪೇರಣೆಯ ನಟಿಸೆ (ಚತುಪು. ೦-೯-೬೬). [< ಪ್ರಾ. ಪೇರಣ./ಸಂ. ಪೇರಣಿ]

**ಪೇರಣಿ$_1$** (ನಾ). ೧. ದೊಡ್ಡ ಪದಾತಿಸೇನೆ; ಭಾರಿ ಸೈನ್ಯ: ಅಂತು ಪೇರಣಿ ಪೊಮಯಮಾಗೆ (ಶಂರಾಪು. ೦೩-೫೬ ವ); ಇಸುವ ಧನುರ್ವಲಂ ಭರದಿನೆಯ್ದುವ ಪೇರಣಿ (ಜಗಾ. ೦೬-೯೯). ೨. ದೊಡ್ಡ ಸಾಲು, —ಶ್ರೇಣಿ : ಅಣಿಯರಮಿಸೆ ಬುವರನ ಕೂರ್ಗಣೆಯೇಜಿಂ ಪಜೆದು ಬಿರ್ದ ಖಚರರ ತಲೆ ಸಂದಣಿಸೆ ವಿಮಾನಂಗಳ ಪೇರಣಿ ಪೋಲ್ತುದು ತೆಜೆದ ಮೊಗವ ಪೇಳಿಗೆಳರವಂ (ಚಂದ್ರಪ್ರ. ೬-೩೯). [ಪೇರ್$_1$ (<ಪಿರಿದು$_1$)+ಅಣ್ಣಿ]

**ಪೇರಣಿ$_2$** (ನಾ).=ಪೇರಣ: ಗೀತದ ಮಾತ ಮಾನುಷಮಿದೇಂ ಪಂಚಾಂಗ ಮೊಪ್ಪಿತ್ತೊ ಪೇರಣಿ ಸಂಕ್ರಂದನನಲ್ಲದಿಲ್ಲೆನಿಸಿದತ್ತಾ ತಾಂಡವಾಡಂಬರಂ (ಅನಂಪು. ೫-೯೬). [ಸಂ.]

**ಪೇರಣಿಗ** (ನಾ). ನಾಟ್ಯ ಮಾಡುವವನು; ನರ್ತಕ : ಕವಿ ಗಮಕಿಗಳ ನವರಸಂಗಳಂ ಕೇಳುತುಂ ನವಪೇರಣಿಗರ ರಸದಾಟಮಂ ನೋಡುತುಂ (ಶಂಶಿರ. ೯-೦೯೦); ಸುಕವಿಗಳ ಶಾಸ್ತ್ರಾಗಮಿಕ ಭಾವಕ ಕಲಾವಿದ ಪೇರಣಿಗ ವಾದ್ಯಕರ ಶಿಲ್ಪಿಗ . . . ಸುಗಂಧಾಧಿಕರ ಕೇರಿಗಳೆರವ ಚಿತ್ರೈಸೆನುತರಸ ನಡೆದ (ಶಂಕರಾ. ೯-೨೬). [ಪೇರಣ+—ಇಗ]

**ಪೇರಣಿಲ್, ಹೇರಣಿಲ್, ಹೇರಣಿಲೆ** (ನಾ). ೧. ಒಂದು ಬಗೆಯ ಕೋಡಗ (?): "ಪೇರಣಿಲೆನೆ ಸೊಂದಿಗೋಡಗಂ" (ಕಕಾ. ೬೬). **ಹೇರಣಿಲ್:** ೨. ದೊಡ್ಡ ಜಾತಿಯ ಅಳಿಲು : ಹೇರಣಿಲ್ ಗಿಡುಗ ಮೊಲಂ . . . ಕೂರಗೆಯೆಂಬಿವನ್ನೆದೆ ಕಾನಿನೊಳ್ಗಡಣದೆ ಪೊತ್ತು ಬೇಡವಡೆ ಬಂದುದು (ಸೂಕ್ತಿಸು. ೩-೦೬೯). **ಹೇರಣಿಲೆ:** ೨. ಹೇರಣಿಲೆಯುವು ಮುಂಗುರಿಗಳಿವು ಗೌಜುಂಗಳಿವು ಗಜಗಮನೆ ನೋಡು (ಶೂರಶಾ. ೩-೦-೩೦). [ಪೇರ್$_1$ (<ಪಿರಿದು$_1$)+ಅಣಿಲ್]

**ಪೇರಣೆ** 'ಪೇರಣ' ನೋ.

**ಪೇರಣೆಮಣಿ** (ನಾ). (?) : ಪಕ್ಷಿದರುಣೌಘದಿನಾ ವೃಷಶೃಂಗಯುಗ್ಮ ಮೊಂದಣೆಯರವಮಾಯ್ತು ಸಾರವಿಪ ನೆತ್ತರೊಳೊಕ್ಕೆಜಿರ್ದರ್ಚಿಸಿರ್ದ ಪೇರಣೆ [ಪಾಠಾಂ. ಣಿ]ಮಣಿಯೆಂಬ ಭೈರವನ ಲಿಂಗದ ಸೀಯದರಂಬೊಲದ್ಭುತಂ (ಅರ್ಜಶೀ. ೯-೦೨೨). [ ? ]

**ಪೇರರ್ಬಿ** 'ಪೇರರ್ವಿ' ನೋ.

**ಪೇರರ್ವಿ, ಪೇರರ್ಬಿ** (ನಾ). ದೊಡ್ಡ ಜಲಪಾತ : ಪೇರರ್ವಿಗಳ್ಸೊರಸು ಜಾಜಿನ ಪರ್ವತಂಗಳಂತೆ ಕೆಡೆದು (ಶಂತಕಾ. ೦೦-೯೬ ವ); ಪೇರರ್ವಿಗಳಿ ನಸದಳಂ ಕಣ್ಗೆ ಚೆಲ್ವಾಗಿ . . . ಚಿತ್ರಕೂಟಂ ಸೊಗಯಿಸೆ (ಶಂರಾಮಾ. ೬-೩೦). **ಪೇರರ್ಬಿ:** ಪೆರ್ಗಜಿಗಳಿಂ ಪುಂಡ್ರೇಕ್ಷುವಾಟಕ್ಕೆ ಪೊಣ್ಮುವ ಪೇರರ್ಬಿಗಳೆತ್ತಲುಂ ಸೊಗಯಿಕುಂ (ಸುಕುಮಾಚ. ೯-೯೩). [ಪೇರ್$_1$ (<ಪಿರಿದು$_1$) +ಅರ್ವಿ]

**ಪೇರಲ, ಪೇರಲ್ಕೆ, ಪೇರಿಲ, ಪೇರಿಲು** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಸೀಬೆ : ಚಂದೂರಿನಲ್ಲಿಯೇ ಅವರ ಪೇರಲ ಬನ ದೊಡ್ಡದು (ಶಿಸರ್ಗ. ೯೩) ; ಪೇರಲದ ತೋಟಗಳ ಹಳದಿ ಬಣ್ಣದ ಹಣ್ಣು (ಹಾವಡೀ. ೨೨-೨೩) ; ಹುಬ್ಬಳ್ಳಿಯಿಂದ ಪೇರಲಹಣ್ಣಿನ ಬುಟ್ಟಿ . . . ಕಳಿಸಿ ಕೊಡುವಳು (ಗಂಪಾಯ. ೫೬). **ಪೇರಲ್ಕೆ:** ಹೊರಗಡೆ ಪೇರಲೆ ಮರದ ಮೇಲೆ ಮಂಗಗಳ ಕುಣಿತ (ಹೊಸಕ್ಷಿ. ೭೬). **ಪೇರಿಲ:** ನೇರಿಲ ಪೇರಿಲ ಬೋರೆಯ ಬೆಳವಲ ಫಲವಿಹುದು (ಕರುಣ್ಯಾ. ೫೯-೦೩). **ಪೇರಿಲು :** ಬೆಲ್ಲವತ್ತಂ ಬೇವು ಬಿಕ್ಕೆ ತಂಡಸಿ ತವಸಿ ನೆಲ್ಲಿ ಪೇರಿಲು ಮಾವು ಬದರಿ (ಸಿದ್ಧಕಾ. ೬-೦೭). [?./ಮರಾ. ಪೇರ, ಪೇರು]

**ಹೇರಲೆ$_1$** (ನಾ). ಭಾರಿಯಾದ ಅಲೆ ; ದೊಡ್ಡ ಅಲೆ : ಇದು—ದುಗುಡ ಸಂತಸದ ಪೇರಲೆಗಳೇರಿಳಿತದಿಂದೆ ಮೆರೆದಾಡುತಿಹ ಸಂಸಾರಸಾಗರದೊಳಲೆ ಯುತಿಹ ಜೀವಿಗಳ . . . ನೀರ್ಗುಡಿಸಿ ನಗುನಗುವ ಕಾಲನರಮನೆ ! (ಕಲಾ. ೨೯-೦೯). [ಪೇರ್$_1$ (< ಪಿರಿದು$_1$) + ಅಲೆ$_3$]

**ಪೇರಲೆ$_2$** ' ಪೇರಲ ' ನೋ.

**ಪೇರಳ್ಕು** (ನಾ). ಅತಿಯಾದ ಹೆದರಿಕೆ,—ಅಂಜಿಕೆ : ಪೇರಳ್ಕು ಪೇರಲುಲ ಕಲ್ಲೋಲದಂತೆವೋಲ್ ಪುರ್ಚಿಟ್ಟು ಬಡಿಗುಮೇ ಬಡಿಬಡಿಪ ಸುಡಿಗಳ್ (ಬಿದ್ದಕ್ರ. ೯೬-೦೦೦೫). [ಪೇರ್$_1$ (< ಪಿರಿದು$_1$) + ಅಳ್ಕು$_2$]

**ಪೇರಳ್ತಿ** (ನಾ). ಹೆಚ್ಚಿನ ಪ್ರೀತಿ ; ಅತ್ಯಾಸಕ್ತಿ : ಬುಧಪಟ್ಟವಪ್ರುಜಕೆ ಪೇರಳ್ತಿಯಂ ಜನಿಸುವೀ ಕಾವ್ಯಂ . . . ಫಲವನೀಯದಿರದು (ಲೀಶಾ. ೦-೦೨). [ಪೇರ್$_1$ (< ಪಿರಿದು$_1$) + ಅಳ್ತಿ (< ಅಟ್ಟಿ) ]

**ಪೇರಜಾಕೆ, ಹೇರಜಾಕೆ** (ನಾ). ಅಧಿಕವಾದ ಕೀರ್ತಿ ; ಅತಿಶಯವಾದ ಖ್ಯಾತಿ : ಪೆಬ್ಬೂಲಿಯ ವಿಾಸೆಯೊಳುಯ್ಯಲನಾಡುವೊಂದು ಪೇರಜಾಕೆಯ ಬೀರರ್ (ಎಕ. VII, ಶಿಂ. ೯೯-೦೭ ; 1100) ; ಇರ್ಪರಿರ್ವರ್ ನೆಜೆದೊಕ್ಕಲ್ತನದ ಪೆರ್ಮೆಯೊಕ್ಕಲಿಗರ್ ಪೇರಜಾಕೆಯ ಶಶಿ ಸೂರ್ಯರ್ಪೊಳ್ (ಚಂದ್ರಪ್ರ. ೫-೯೭) ; ತಕ್ಕಿನ ರಕ್ಕಸರನೊಕ್ಕಲಿಕ್ಕಿದ ಪೆಸರ ಪೇರಜಾಕೆ ಯೊಳಿಂತೆಂದಂ (ಕಣ್ಮಕಾ. ೨೯೫). **ಹೇರಜಾಕೆ:** ಅದಳೆರ ರಾಮಂ ಮಜುಗರೆ ನಾಡೊಳಗೇ ಹೇರಜಾಕೆಯ ಕಯ್ದಾಳದಲಿ ಧರ್ಮೋನ್ನತಿಯುಂ ಆ ಕಯ್ದಾಳದ ವಿಳಾಸಾಬ್ಬದವದೆಂತೆಂದೊಡೆ (ಎಕ. XII, ಕುಪುಕೂ. ೯-೫೬; 1151) ;

ಕುಂದದೆ ಲಕ್ಷ್ಮಿಯಿರ್ಪ್ಪ ಹೇರಱಿಕೆಯಶೇಷಸೌಖ್ಯನಿಳಯಂ (ಎಕ. IV. ಹುಣಸೂ. ೦೩೭-೯೩ ; 1162). [ಪೇರ್$_1$ (< ಪಿರಿದು$_1$) + ಅಱಿಕೆ]

**ಪೇರಱೆ** (ನಾ). ದೊಡ್ಡ ಬಂಡೆ: ಪೇರಱೆಯ ತೆಱದೆ ಜಲಪುಂಜದಿಂ ಮಿಂಚಿನಿಂ ಸಾರವೊಳಗಿಂದೆ . . . ಮುಂಗಾರ್ ಬಂದುದು (ಭಾವಕಾಂ. ೬-೨). [ಪೇರ್$_1$ (< ಪಿರಿದು$_1$)+ಅಱೆ$_4$]

**ಪೇರಾಣ್ಕೋವ** (ನಾ). ಒಬ್ಬಾತನ ಹೆಸರು : ಸತ್ಯಾನ್ ಪೇರಾಣ್ಕೋವನ್ (ವ್ಯಾಕಾಂ. ೧೯೦೭, ೦೦-೫ ; 7ನೆಯ ಶತ) ; ಮಂದುವೂರಾ ತೊಱು ಕೊಳ್ವಲ್ಲಿ ವಿಟ್ಟೋರ್ ಪೇರಾಣ್ಕೋವರ್ (ಎಕ. X, ಶ್ರೀನಿವಾ. ೨೦-೬ ; ಸು. 750). [ ? ]

**ಪೇರಾನಂದ, ಹೇರಾನಂದ** (ನಾ). ಅತಿಶಯವಾದ ಸಂತೋಷ,-ಹಿಗ್ಗು ; ಮಹದಾನಂದ : ಹೋ ! ಆನಂದಂ ! ಪೇರಾನಂದಂ ! ನೆಗೆವಾ ಕುಣಿವಾ ಮಿಗುವಾನಂದಂ ! (ಅಶ್ವತ್ಥಾ. ೨೮-೫೪೩). **ಹೇರಾನಂದ :** ಅವನಾಟವನು ಕಣ್ತುಂಬ ನೋಡುತಿಹೆವದುವೆ ಹೇರಾನಂದವಾನಂದ ! (ನಡೆದಾ. I, ೯೩೨). [ಪೇರ್$_1$ (< ಪಿರಿದು$_1$)+ಆನಂದ]

**ಪೇರಾನೆ, ಹೇರಾನೆ** (ನಾ). ದೊಡ್ಡ ಆನೆ : ಪಾಱಿ ತಾಱಿದ ಪೇರಾನೆಯೊಡಲ್ಗಳಭ್ರುತಳದೊಳ್ ಸಿಲ್ಕಿರ್ದುವು (ಶಾಂತಿಪು. ೦೦-೬೭); ಭೂತಗಣಂ ಪೇರಾನೆಯ ನೆಣನಂ ತಿಂದೆರ್ದ್ದಾನಂದದೆ ಕೂಡೆ ನಲಿದು ನರ್ತ್ತಿಸುತಿರ್ಕ್ಕುಂ (ಎಕ. VIII, ಸಾಗರ. ೧೦೯-೩೯ ; 1042) ; ಪೇ[ಪಾಠಾಂ. ಹೇ]ರಾನೆವೆಟ್ಟುಗಳ ನೆತ್ತಿಯ ಮುತ್ತುಗಣೆಯನಗುಚ್ಚಿ ವಜ್ರದ ಗುದ್ದಲಿಗಳೆನಿಸಿ . . . ಅಳುಂಬವಾದ ದಂಷ್ಟ್ರಾಂಕುರಂಗಳೊಳಂ . . . ಭಯಂಕರವಾದುದು (ವರ್ಧಪು. ೦೦-೩೭). **ಹೇರಾನೆ :** ಕಡಿದು ಬಿಸುಟನು ತುರಗದಳವನು ಕೆಡಹಿದನು ಹೇರಾನೆಗಳ (ಕುಮಾ್ರಭಾ. ೯-೦೮); ಹೇರಾನೆಯ ತಲೆಯಡಗ ಭಕ್ಷಿಸುವ ಕಂಠೀರವನೊಡಲ ನೆಗ್ಗೊತ್ತಿ . . . ಶರಭ ಹೂಂಕಾರದಿಂದಿದಿರ್ವಂದುದಾಗ (ಮೋಹತ. ೦೯-೩೯). [ ಪೇರ್$_1$ ( < ಪಿರಿದು$_1$ ) + ಆನೆ$_1$]

**ಪೇರಾಮೆ, ಪೇರಾವೆ** (ನಾ). ೧. ದೊಡ್ಡ ಆಮೆ. ೨. ವಿಷ್ಣುವಿನ ಹತ್ತು ಅವತಾರಗಳಲ್ಲಿ ಎರಡನೆಯದು ; ಆದಿಕೂರ್ಮ : ಶ್ರೀಯುಂ ಶೈಲಮಂ ಪೊತ್ತಾಯಸಮಂ ಮಱದು ನೀಡಿ ಕೊರಲಂ ಮಲೆತೊಂದೋಯುರದಿಂದಂ ನಿಟ್ಟೆಪ ಮಾಯೆಯ ಪೇರಾಮೆ ಕುಡುಗೆ ನರಪತಿಗೊಳ್ಪಂ (ಚಕಾಂ. ೩-೧). **ಪೇರಾವೆ :** ೧. ಪಾವಸೆಗೊಂಡ ಪೇರಾವೆಯಂ ತಾವರೆಯ ಕೊಡೆಯೆಲೆಗೆತ್ತಱಿಯದೆಱಿಗಿ (ಚಂದ್ರಪು. ೫-೪೦ ವ); ಏಡಿಯಿಂ ಮೊಸಳೆಯಿಂ ಪೇರಾವೆಯಿಂದಾನೆಯಿಂ ... ಒಪ್ಪಿದುದಿಳಾಶ್ರೀಗಾಗರಂ ಸಾಗರಂ (ಹಾಲಾಸ್ಯ. ೦-೦-೦೮). [ ಪೇರ್$_1$ ( < ಪಿರಿದು$_1$ ) + ಆಮೆ$_1$]

**ಪೇರಾಲ್** 'ಪೇರಾಲ' ನೋ.

**ಪೇರಾಲ, ಪೇರಾಲ್, ಹೇರಾಲ** (ನಾ). ದೊಡ್ಡ ಆಲದ ಮರ : ಚಳಿಗಾಱದೆ ಪೇರಾಲದ ಕೆಳಗಿರ್ಪನಿತಱೊಳೆ . . . ಸೂಸುವೆಲೆವನಿಗಳಿನೊರ್ವಂ ನೆನೆದು ನಡುಗಿ ಸಿಡಿಮಿಡಿಗೊಂಡಂ (ರಾಜಶೇ. ೯-೨೪); ಬಳಿಯ ಪೇರಾಲವು ಬೀರ್ವೆರಸುರುಳಿರುವೆಡೆಗೆಣೆಯೂರೆನಿಸುವುದು (ಗಾಥಾಸ. ೨೪-೯೪). **ಪೇರಾಲ್ :** ಮೊಱಡಿಯ ಮೇಗಿಟ್ಟ ಪೇರಾಲೆ ಈಶಾನಂಗೆ ಸೀಮೆ ನೆಡುಮೊಱಡಿಯಾ . . . ಪಳ್ಳಮೆ (ಎಕ. IX (S), ಬೆಂಗಳೂ. ೦೫೦-೪೮ ; 828). **ಹೇರಾಲ :** ಅದೊಂದು ವಟಭೂಜಾತವೊಪ್ಪಿತು ಪಿರಿದಾಗಿ ಕಾಲೆತ್ತಿ ನೆಱದ ಹಲ ಹಣನೆಲ್ವಲುವಾಲೆಗಟ್ಟಿದ ಬಳ್ಳಿಗರುಳು ಸಾಲೇಱಿದ ಪಂದಲೆಯಿಂದ ಹೇ[ಪಾಠಾಂ. ಪೇ]ರಾಲಯ[ವು] ಭಯಂಕರವಾಯ್ತು (ಶ್ರೀಶಾಂ. ೮-೩೩). [ಪೇರ್$_1$ ( < ಪಿರಿದು$_1$ ) + ಆಲ$_1$]

**ಪೇರಾವೆ** 'ಪೇರಾಮೆ' ನೋ.

**ಪೇರಾಸೆ, ಹೇರಾಸೆ** (ನಾ). ಹಿರಿಯಾಸೆ ; ಹೆಬ್ಬಯಕೆ ; ಮಹತ್ವಾಕಾಂಕ್ಷೆ : ನಾಡಿನಲ್ಲಿ ಹಿಂದಣ ಆದೇ ದಿನಗಳು ಮರುಕಳಿಸಬೇಕು ಎಂಬ ಪೇರಾಸೆಯಿಂದ ಅಂತಹ ಕಜ್ಜದಲ್ಲಿ ಮನವಾಡಿದೆನಹುದು (ಸವತಿ. ೦೬೦) ; ತನ್ನ ಕುವರಂ ತನಗೆ ಸರಿಯೆನ್ನಲೆಳಸಿದೊಂದುನ್ನತಿಯ ಪೇರಾಸೆ ಬಯಲಾದುದೇ (ಅರುಣ. ೨೦-೧೪). **ಹೇರಾಸೆ :** ಈ ಪಾಳೆಯಗಾರಿಕೆಗಳ ಹೇರಾಸೆಯ ದೊರೆಗಳು ಒಬ್ಬರೊಬ್ಬರ ಮೇಲೆ ಮತ್ತೆ ಮತ್ತೆ ಯುದ್ಧ ಮಾಡಿದುದು ಕಂಡುಬರುತ್ತದೆ (ತತ್ವಶಾಸ್ತ್ರ. ೫೨೯) ; ಹೇರಾಸೆಗಳನಟ್ಟಿ ಮಿತಿಯೊಳಗಿದ್ದರೆ ನೆಮ್ಮದಿಯಿರುವುದು ಮನಕೆ (ಇಂತಿಶಾಕ. ೨೨೬-೦೭). [ಪೇರ್$_1$ ( < ಪಿರಿದು$_1$) + ಆಸೆ$_1$]

**ಪೇರಾಳ್ ಹೇರಾಳು** (ನಾ). ಕಟ್ಟಾಳು ; ಮಹಾಶೂರ : ಈರಯ್ದುಸ್ತ್ರದಿಂದೆಚ್ಚು ಖಂಡಿಸಿ ಪೇರಾಳ್ ತಿಱದಿಕ್ಕಿದಂತೆ ತಲೆಯಂ ಪೋಗೆಚ್ಚನಾ ಶ್ವೇತನಾ (ಶಂಖಪು. ೦೦-೧೨೩); ದ್ವಿಷತ್ಸೇನೆಯೊಳ್ ಪೇರಾಳುಂ ತುರಗಂಗಳುಂ ರಥಮುಮುನ್ಮತ್ತೇಭಮುಂ ಬಿಟ್ಟುವು (ಶಂಖಾವಪು. ೧೩-೦೨೦). **ಹೇರಾಳು :** ಬಂದ ಬಲ ಹೇರಾಳ ತೆಗತೆಗೆ (ಕುಮಾ್ರಭಾ. ೦೮-೩೩). [ಪೇರ್$_1$ (< ಪಿರಿದು$_1$) + ಆಳ್$_3$]

Δ **ಪೇರಾಳ$_1$** 'ಹೇರಾಳ$_1$' ನೋ.

**ಪೇರಾಳ$_2$** (ನಾ). ಅತಿಯಾದ ಆಳ,-ಗಭೀರತೆ : ಇಹರು ಹೆಗ್ಗಡಲ ತಳಕೂ ಮುಳುಗಿ ಬಂದವರು . . . ಈ ಬರಿಹೆಣ್ಣ ಎದೆಗಡಲ ಪೇರಾಳ ಕಂಡ ಕಲಿಗಳು ಮಾತ್ರ ಕಂಡರಿಲ್ಲ (ನಡೆದಾ. ೩೯-೩). [ಪೇರ್$_1$ (< ಪಿರಿದು$_1$) + ಆಳ$_1$ (< ಆಱ)]

**ಪೇರಾಟ್ಟಿಪಳ್ಳ** (ನಾ). ಒಂದು ಹಳ್ಳದ ಹೆಸರು : ಬಡಗ ಪೋಗಿ ಬೆಳ್ಳೊಲೆಯ ಬಟ್ಟೆಯ ಪೇರಾಟ್ಟಿಪಳ್ಳಂಬಿಡಿದು ಪೋಗಿ ಪಿರಿಯ ಪಳ್ಳದಳ್ಕೂಡಿ (ಸೌಇಇ. IX-I, ೩೮-೨ : ? ). [ಪೇರಾಟ್ಟಿ$_0$ + ಪಳ್ಳ]

**ಪೇರಿ$_1$** 'ಫೇರಿ' ನೋ.

**ಪೇರಿ$_2$** (ನಾ). (?) : ಪೇರಿಯಾ ಒಸಗೆಯಂ ಅಲವಣವುಂ ಅಪುತ್ರಕ ಪೊರಳುಮಾನ್ ವಿಟ್ಟಾರ್ (ಇಆ. XIX, ೦೪೪-೫ ; 680); ತಪ್ಪದೆ ನಡಸುವುದಕ್ಕೆ ಕೊಟ್ಟು ಕೇಳ್ವಿಯ × ಪೇರಿಯ × × × ಉಭಯಂವೆರಸಿಯಿಾ ಗ್ರಾಮಕೆ ಅಱಿಮಾನ್ಯವು ಮಠಕ್ಕೆ ಅಱಿಮಾನ್ಯವಾ[ಗಿ] ಕೊಟದು (ಸೌಇಇ. IX—II, ೪೬೬-೮ ; ಸು. 1472). [?]

**ಪೇರಿಕೆ** (ನಾ). ಓರಣವಾಗಿ ಒಂದರ ಮೇಲೊಂದರಂತೆ ವಸ್ತುಗಳನ್ನು ಇಟ್ಟುದು : ಪಟ್ಟಿಗಳನ್ನು ಸೇರಿಸಿ ಪರಮಾಣು ಪೇರಿಕೆಗಳನ್ನು (Atomic piles) ಮಾಡುತ್ತಾರೆ (ಶಿಲ್ಪಾ. ೨೬೨) ; ಹೀಗೆ ಮಾದರಿಗಳನ್ನು ಒಳಗೊಂಡ ಹಿರಿದಾಳಿಗಳ ಪೇರಿಕೆ ಒಂದು ಒಂದೂವರೆ ಅಡಿ ಎತ್ತರವಾದರೂ ಚಿಂತೆಯಿಲ್ಲ (ಹಸುಹೂ. ೦೨೬). [ ಪೇರು$_1$ (<ಪೇಱು$_1$)+-ಇಕೆ/ತುಳು. ಪೆರಿಕೆ ]

**ಪೇರಿಟ್ಟಿ, ಹೇರಿಟ್ಟಿ, ಹೇರೀಟಿ** (ನಾ). ನೀಳವಾದ ಶಲ್ಯ ; ದೊಡ್ಡ ಈಟಿ : "ಪೇರಿಟ್ಟಿಯಿಂ ಬಿಟ್ಟೇಱು" (ಹಕುಶಿ. ೨೦೩) ; ಮುಸಲ ಪೇರಿಟ್ಟಿ ... ಶಕ್ತಿಯಾದಿಯನು ವಿಭುಗಳು ಧರಿಸಿ ಯುದ್ಧಕೆ ಸೇರಿದರಾಗ ಸುಭಟರಂದಾಳು ಪೇರಿಯನು (ಅನಂತ. ೦೮-೯೩). **ಹೇರಿಟ್ಟಿ :** ಸುಲಿ ತೊಗಲ ಹಿಡಿದು ಹೇರಿಟ್ಟಿಯಿಂದಿಱಿ ಕರುಳ (ಹರಿಕಾ. ೬-೩೪) ; ಹೇರಿಟ್ಟಿ ಪೊಱೆಯ ಪೆರ್ಬಲೆ . . . ಕವಲಂಬುಸಹಿತಂ ಭೋರನೆ ನೆಱದತ್ತು ಬೇಂಟೆಕಾಱರ ತಂಡಂ (ವಿಕಾಂ. ೬೯) ; ಸಾಲವನು...ಹಿಂದೆ ಕೊಡುವಾಗ ಹೇರಿಟ್ಟಿ[ಪಾಠಾಂ. ಟ್ಟೆ] ಬಂದು ಬಡಿದಂತೆ (ಸರ್ವಜ್ಞ. ೦೪೯೨). **ಹೇರೀಟಿ :** ಹೇರೀಟಿಯಿಂದಿಱುಬುವ . . . ಕರಗಸದಿ ಕೊಱೆವ ರೌರವದ ನರಕಂ ಭಯಂಕರವಾದುದು (ಸಿತ್ತರಾ. ೮-೨೮). [ ಪೇರ್$_1$ (<ಪಿರಿದು$_1$) + ಇಟ್ಟಿ$_2$ ]

**ಪೇರಿರ್ಪೆ** (ನಾ). ದೊಡ್ಡ ಹಿಪ್ಪೆಮರ : ತಸ್ಯ ಸೀಮಾನ್ತರಂ ಕೊಳ್ಳಿನಿ ತೊಱೆ ಪೇರಿರ್ಪ್ಪೆ (ಎಕ. XVI, ಗುಬ್ಬಿ. ೬೫-೫೦ ; 733). [ಪೇರ್$_1$ (<ಪಿರಿದು$_1$) + ಇರ್ಪೆ]

**ಪೇರಿಲ** 'ಪೇರಲ' ನೋ.

**ಪೇರಿಲು** 'ಪೇರಲ' ನೋ.

**ಪೇರಿಸು₁** 'ಪೇಱಿಸು₁' ನೋ.

**ಪೇರಿಸು₂, ಪೇರ್ಮೆಸು** (ಕ್ರಿ). ೧. ದೊಡ್ಡದಾಗು ; ಅಗಲವಾಗು : ಕೂಡಿದುವಪ್ಪ ಕಣ್ಮಲರ್ಗಳ್ಕೆರ್ದೆಯೊಳ್ ತಡವಾಡೆ ತಾಮೆ ಕಣ್ ಪೇರಿಸೆ ಪುರ್ವು ನಾಲಗೆವೊಲಾಗೆ ಮನಂಬುಗಿಸಲ್ಕೆ ಬಲ್ಲೊಡಾ ಜಾರೆಯೆ ಜಾರೆ (ಹಂಶಿಖ. ೯-೮೩). **ಪೇರ್ಮೆಸು :** ೨. ಅಧಿಕವಾಗು ; ಅತಿಶಯಿಸು(?) : ಅದಱ ಕರ್ಣಾಟವುರದ ರ್ಶ್ವಲ್ಲಿಯಂತೆ ಜಲ್ಲೆನೊಟ್ಟು ಧಾರೆಗೆದಱೆ ಪೇರ್ಮೆಸಿ ಸೂಸುವುಭಯಕಟದ ಸೊರ್ಕುಕದಡಿನ ತೆರ್ಕೆಗಡಲ್ಗಳೊಕ್ಕೈಸಿ (ಅನಂಪು. ೧೩-೨೦ ವ). [ಪೇರ್₁ (< ಪಿರಿದು₁) + — ಇಸು₃]

**ಪೇರೀಳೆ, ಹಿರಳೆ, ಹೆರಳೆ, ಹೇರಳೆ, ಹೇರಿಳೆ, ಹೇರೀಳೆ** (ನಾ). ಈಳೆಯ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಕಂಚೀಕಾಯಿ : ಪೇರೀಳೆಯು ನಾರಂಗವ ಕಂಚೀಳೆಯು ತನಿವಣ್ಣನಿಕ್ಕೆ ಮೆಲ್ಲು (ಧರ್ಮಾಮೃ. ೦-೦೫೦) ; ಬಾಳೆ ಪೇರೀಳೆ ತಾಳೀತರು ತೆಂಗುಂ . . . ಸಾಲ್ಗೊಂಡು ಕಣ್ಗೊಪ್ಪುತಿರ್ಕುಂ (ರಾಜಶೇ. ೨-೩೭); ಕಿತ್ತೀಳೆ ಪೇರೀಳೆ ದಾಳಿಂಬಂ . . . ಮನೋಹರವಾಗಿರ್ಕುಂ (ರಾಜಾಶ್ವ. ೬-೨೫). **ಹಿರಳೆ :** "ಹಿರಿಳೆ, ಹಿರುಳೆ, ಹಿರಳೆ = ಕಂಚೀಕಾಯಿ" (ಗಂಗಾವು. ೩೯೯) ; ಹಿರಳೆ ಕಾಯಿ ಗೊಜ್ಜು, ಉಪ್ಪಿನಕಾಯಿ ತಿನ್ನಲು ರುಚಿಯಾಗಿರುತ್ತವೆ (ರೂ). **ಹೆರಳೆ :** "ಐರಾವತಃ, ನಾಗರಂಗಃ—೨ ಹೆರಳೇಗಿಡ" (ಸಿದ್ಧಾಂತಿ. ೧೨೦) ; ನಾರಾಯಣನಿಗೆ ಕಣ್ಣು ಹೆರಳೆಕಾಯಿ ಗಾತ್ರವಾಯಿತು (ಗರುಡಾ. ೬೭). **ಹೇರಳೆ :** "ಕಾಗಿನೇರಳೇಗಿಡ . . . ನೆಲನೇರಳೇಗಿಡ—ಈ ೪ ಹೇರಳೇಗಿಡವೆಂದು ಕೆಲವರನ್ನುವರು" (ಸಿದ್ಧಾಂತಿ. ೦೨೦) ; ಹೇರಳೆ: ಈ ಚೆಕ್ಕೆಯನ್ನು ಎಮ್ಮೆಕಟ್ಟುಮೊಸರಿನಲ್ಲಿ ಅರೆದು ಕಟ್ಟುಮೊಸರಲ್ಲಿ ತೆಗೆದು ಕೊಳ್ಳೆ ಅತಿಸಾರ ಪರಿಹಾರ (ವಿಶ್ವವಿ. ೮) ; ಕಿತ್ತಲೆ, ಹೇರಳೆ . . . ಅಂಜೂರ ಇವೇ ಮುಂತಾದ ಹಲವು ಹಣ್ಣಿನ ಗಿಡಗಳನ್ನು ತೋಟಗಳಲ್ಲಿ ಬೆಳೆಯಬಹುದು (ವೃವಪು. ೫೮). **ಹೇರಿಳೆ :** "ಜಂಬೀರಃ—ನಿಂಬೆ, ಹೇರಿಳೆ, ಮರುಗ, ಕಕ್ಕೊರಲೆ" (೬ತಿಂ. ೬೦) ; ಹೇರಿಳೆ ಪರಿಮಳಸಾರವಂ ನಿನ್ನಲ್ಲಿ ಮಾರಾರಿಗೀಯೆಸುತ್ತಂ ಹೂಗೊಳುತ್ತಲ್ಲಿ (ಪುಷ್ಪರ. ೯-೦೮) ; ಪೂರ್ಮೆಸಿದ ಫಲ ಸಹ ಹೇರಿಳೆಯು ಮರವಾರಾವಮದೊಳೊಪ್ಪಿದುವು (ಕಂಪಿಪಿ. ೫-೬೨) ; ಹೇರಿಳೆ ಹಾಗಲಗಳಲ್ಲಿ, ಒಬ್ಬೊಬ್ಬರಿಗೆ ಒಂದೊಂದು ಇಷ್ಟವಾಗಿರುತ್ತದೆ (ಜೀವಸಾ. ೩೯). **ಹೇರೀಳೆ :** "ಹೇರೀಳೆಯೆನೆ ಕಂಚಿ" (ಮಂಗರಾ. ೩೯-೦೦) ; ಮಂಜುಳಫಲೋಚ್ಚಂಡವಮಾದ ಕಿತ್ತೀಳೆಯಿಂ ಕೆಂಜಿಗುರಲರ್ವಣ್ಗಳಮರ್ದ ಹೇರೀಳೆಯಿಂ . . . ವಿಮಲವಲ್ಲರಿಗಳಿಂ ಪೊಂಗಿ ಪೂಪುಟಿಯೋಗಿ (ಉದ್ಭಟ. ೩-೯೦) ; ಮಧುರರಸದ್ರುವದ ಕಿತ್ತೀಳೆ ಕಂಪಿತ ಫಲಭರದ ಹೇರೀಳೆ (ಕೊರರಾ. ೫-೯-೮).

[ಪೇರ್₁ (< ಪಿರಿದು₁) + ಈಳೆ]

**ಪೇರು₁** 'ಪೇಱು₁' ನೋ.

**ಪೇರು₂** 'ಪೇಱು₂' ನೋ.

**ಪೇರು₃** 'ಪೆಸರ್' ನೋ.

**ಪೇರುಕಟ್ಟು** (ಕ್ರಿ). ತಕ್ಕಡಿಯ ಪರಡೆಗಳ ಸಮತೋಲನವು ವ್ಯತ್ಯಾಸಗೊಂಡಾಗ ಭಾರವನ್ನು ಹೆಚ್ಚು ಕಡಮೆ ಮಾಡಿ ಸಮಗೊಳಿಸು : ಪದಾರ್ಥವನ್ನು ತೂಕ ಮಾಡುವುದಕ್ಕೆ ಮುಂಚೆ ಪೇರುಕಟ್ಟಿ ತೋರಿಸು (ರೂ). [ಪೇರು₂ (< ಪೇಱು₂) + ಕಟ್ಟು₁]

**ಪೇರುಡು, ಹೇರುಡು** (ನಾ). ದೊಡ್ಡ ಉಡು : ಪುಲ್ಗಾನೊಳಾ ಪೋಪ ಪೇರುಡುವಂ ಸೋವು (ಸೂಕ್ತಿಸು. ೩-೦೦೫) ; ಪೇರುಡುವಿಳಿದು ಬಂದುಂಡು ರಸವನು ಪೋಗುತದೆ (ಸಾಳ್ವಭಾ. ೦೬-೬೬). **ಹೇರುಡು :** ಭಲ್ಲಾತಕತರು ಮೂಲಂ ಸಲ್ಲಲಿತ ಗುಡಿಸಿ ಭದ್ರಮುಪ್ಪೆಯಿಮಂ ತಾಂ ನಿಲ್ಲದೆ ನೀರಿಂ ಕುಡಿಯಲ್ ನಿಲ್ಲದು ಪೇರುಡುಗಳಗಿದು ತುಡುಕಿದ ಗರಳಂ (ಖಖಂಡ. ೦೩-೯೪).

[ಪೇರ್₁ (< ಪಿರಿದು₁) + ಉಡು₂]

**ಪೇರುರ, ಹೇರುರ** (ನಾ). ೧. ವಿಸ್ತಾರವಾದ ಎದೆ ; ಹರವಾದ ವಕ್ಷಸ್ಥಳ : ಸಕಳಕಳಾಧಾರನ ಪೇರುರದೊಳ್ಮಣಿಹಾರಂ ಥಳಥಳಿಸಿ ಪೊಳೆವುತ್ತಿರ್ದತ್ತಾಗಳ್ (ಕಾದಂಪೂ. ೩೦) ; ಶ್ರೀರಮಣಿಗೆ ನೆಲೆ ತನ್ನಯ ಪೇರುರವಂ ಮಾಟಿಸ್ಸೆನಿಂಬ ಬಗೆ ಮಿಗೆ (ಗದಾಯು. ೬-೦) ; ಖಳನ ಪೇರುರದಲ್ಲಿ ತಾಗಲೆಚ್ಚನು ಕೆಡೆಯೆನುತೆ (ಪೋಹತ. ೩೯-೨೦). ೨. (ಸ್ತ್ರೀಯ) ಉನ್ನತವಾದ ಎದೆ ; ಪುಷ್ಟವಾದ ಸ್ತನ : ಜಾರ ಗೋಪಾಂಗನೆಯ ಪೇರುರದ ಸೋಂಕು ಚಿಂತಾರತ್ನವೆನೆ ತ್ರಿದಿವದೂರ ಸಂಪತ್ತಲಾ (ಭಾವಚಿಂ. ೫-೯). **ಹೇರುರ :** ೧. ಕಲಿಪಾರ್ಥನು . . . ಕೌರವನ ಹೇರುರದಲಂಬನು ಹೂಳಿದನು (ಕುಮ್ಮಾಭೀ. ೬-೦೦೮) ; ಹೀನಹೃದಯನ ಹೇರುರವನೆಚ್ಚೊಡನೆ ಕೆಡೆಕೆಡೆಯೆನುತ ನಡೆತಂದ (ಕೊರರಾ. ೯-೪-೨೯). ೨. ಮದನಾರಿಯರ್ಧದ ನಾರಿ ಹರಿ ತಾ ಹೇರುರದ ಹೆಂಗುಸುಱೆ ಬೊಮ್ಮನು ಮಗಳ ಮೊಱೆಗೇಡಿ (ಕುಮ್ಮಾಆ. ೦೩-೩೭).

[ಪೇರ್₁ (< ಪಿರಿದು₁) + ಉರ₂]

**ಪೇರುರಿ, ಹೆಬ್ಬುರಿ** (ನಾ). ದೊಡ್ಡ ಉರಿ ; ದಳ್ಳುರಿ : "ದಳ್ಳುರಿಯು ಪೇರುರಿಯು ಘನಜ್ವಲಿತದೊಳು ಸೊಗಯಿಪ್ಪುದು" (ಶಬ್ದಮಂ. ೦೨) ; ಪೇರುರಿಯಾರತಿಯನೋರಂತೆ ಪಿಡಿದು ಬೆಳಗೆಯುಂ (ವೃಷಪು. ೯-೨೦ ವ). **ಹೆಬ್ಬುರಿ :** ಎಬ್ಬಿಸುತೆ ಹೆಬ್ಬುರಿಯು ಕಾರ್ಬೊಗೆಯ ಕಣಿಗಳಂ (ಶರಶು. ೨೯-೩೩). [ಪೇರ್₁ (< ಪಿರಿದು₁) + ಉರಿ₁]

**ಪೇರುಸಿರು, ಪೇರುಸುರು** (ನಾ). ನಿಡಿದಾದ ಉಸಿರು ; ನಿಟ್ಟುಸಿರು : ಕೊಡೆವಿಡಿದು ಪೆಡೆಯುಸದರಡಿಯ ಮರಿಯನ್ನಿಟ್ಟು ನಿಡುತರದ ಪೇರುಸಿರ ಗಾಳಿಯಿಂ ತಣ್ಪೆನಿಸುತೊಡನಂದು ಮರುಗುತಿರಲು (ವೆಂಕಾರಾ. ೩-೬-೦೨). **ಪೇರುಸುರು :** ತಲ್ಲಣಿಸಿ ಹೋಗುತ ಬರುತ್ತೆದೆ ಡಿಳ್ಳವಾಗುತ್ತಿರನೆ ಲಕ್ಷ್ಮೀವಲ್ಲಭಂ ನಂದೀಶ್ವರನ ಪೇರುಸುರುಗಳು ತೊಡಕಿ (ಬಸವು. ೫೪-೯೦). [ಪೇರ್₁ (< ಪಿರಿದು₁) + ಉಸಿರು₂ (< ಉಸಿರ್₂)]

**ಪೇರುಸುರು** 'ಪೇರುಸಿರು' ನೋ.

**ಪೇರೂರ್, ಹೇರೂರ್** (ನಾ). ೧. ದೊಡ್ಡ ಊರು, ಗ್ರಾಮ : ನೂರಾರು ಪೇರೂರ್ಗಳಂ ದಾಂಟಿ (ಶೀಪರಾ. ೬-೫೦). ೨. ಒಂದು ಊರಿನ ಹೆಸರು : ಕೋರಿಕುನ್ದವಿಷಯೇ ವೆನ್ನೆಲ್ಕರನಿಗ್ರಾಮಃ ಪೇರೂರೇವಾನಿ ಅಡಿಗಳ್ (ಎಕ. X, ಮಾಲೂರು. ೭೨-೨೯; 425 ? ಕೃಶ); ನೈರಿತಿಯೊಳೆ ಅವದಕಲ್ ತೆಂಕ ಪೇರೂರ ಪಳ್ಳಂ (ಎಕ. XI, ಮೊಳಕಾ. ೨೭ ೬; 962). **ಹೇರೂರ್ :** ೨. ಹೇರೂರ . . . ಶ್ರೀಪಾದಪದ್ಮಾರಾಧಕ ರಾಚಯ್ಯ (ಎಕ. VII, ಚನ್ನಗಿ. ೩೨-೨೩೩; ಸು. 1050 ?); ಮುನ್ನ ತನ್ನರ್ತಿಗೆ ಹೇರೂರ ಹೆಣ್ಣಂ ಗಂಡುರೂಪಂ ಮಾಡಿದೋಪಾದಿಯಿಂದೆನ್ನಂ ಹೆಣ್ಣಂ ಮಾಡದೆಂತು ಪೋದಪಂ (ಬಸರ. ೦೨-೦೨೫).

[ಪೇರ್₁ (< ಪಿರಿದು₁) + ಊರ್]

**ಪೇರೆದೆ** (ನಾ). = ಪೇರುರ ೧ : ಉನ್ನತನ ಭುಜಯುಗಲ ಪೇರೆದೆ ಹೊನ್ನ ಸೆಳೆನಡು ಬಾಳೆದೊಡೆ ಮೆಱೆದನ್ನರಂ ಸೋಲಿಸುವ ಜವ್ವನ ವಾಂತನಾ ಕುವರ (ಸಾಳ್ವಭಾ. ೯-೬).

[ಪೇರ್₁ (< ಪಿರಿದು₁) + ಎದೆ (< ಎರ್ದೆ)]

**ಪೇರೆಲು** (ನಾ). ದೊಡ್ಡ ಎಲುಬು; ನಿಟ್ಟೆಲುವು : ರಕ್ತದೊಳ್ ನನೆದು ಪೇರೆಲುಗಳುಮನೊದೆದು ಕೈದುಗಳ ಸೋಂಕಿಂ ಗಾಯವಡೆದು (ಜಿಬಪು. ೯೯-೯೪). [ಪೇರ್₁ (< ಪಿರಿದು₁) + ಎಲು₁ (< ಎಲ್ವು)]

**ಪೇರೆಲೆ** (ನಾ). ಅಗಲವಾದ ಎಲೆ : ಬಲದ ಕೈಯಲಿ ಮಾಂಸವಿಹ ಪೇರೆಲೆಯ ಜೊನ್ನೆಯನಾ ಶಿವೈಕ್ಯಂ ಪಿಡಿದು ನಡೆತಂದು (ಬಸವು. ೦೮-೩೦).

[ಪೇರ್₁ (< ಪಿರಿದು₁) + ಎಲೆ₁]

**ಪೇರೆಳ್ತು** (ನಾ). ಭಾರಿಯಾದ ಎತ್ತು : ಭಾಳಮಧ್ಯಸ್ಥಳಬದ್ಧಸ್ವರ್ಣಪಟ್ಟಾಂಕನದಿನೆಸೆವ ಪೇರೆಳ್ತುಗಳ್ಪೆರ್ವೆಯಿಂದಂ . . . ಪರಿಯೆ (ಶೃಶಂ. ೩೮-೬೯). [ಪೇರ್$_1$ (< ಪಿರಿದು$_1$) + ಎಳ್ತು (< ಎತ್ತು$_1$)]

**ಪೇರೇರ** (ನಾ). ಒಬ್ಬಾತನ ಹೆಸರು : ಇಳಪ್ಪುಟುವಸ್ಯ ಪುತ್ರೇಣ ಪೇರೇರನ್ನಾಮಲಿಖಿತಮ್ ಪಟ್ಟಿಕಾ (ಪ್ಯಆಂ. ೦೯೩೯, ೦-೩೯; ಸು. 567). [?]

**ಪೇರೈಸಿರಿ** (ನಾ). ಹಿರಿದಾದ ಸಂಪತ್ತು,—ಐಶ್ವರ್ಯ : ಈ ರೇಖೆಯೆ ಧನರೇಖೆಯಿದಾರಯ್ಯಿಂ ನುಡಿಗುವಿವನ ಪೇರ್ಸೈಸಿರಿಯಂ (ವಸ್ತವಂ. ೫-೩೫). [ಪೇರ್$_1$ (< ಪಿರಿದು$_1$) + ಏಸಿರಿ]

**ಪೇರೈಸು** 'ಪೇರಿಸ್ಸು' ನೋ.

**ಪೇರೊಕ್ಕಲ್**, ಪೇರೊಕ್ಕಲು (ನಾ). ದೊಡ್ಡ ಮನೆತನ,—ಕುಟುಂಬ : ದೀರ್ಘಕ್ಕೆ—ಪಿರಿದು + ಆನೆ=ಪೇರಾನೆ; ಪೇರಡವಿ, ಪೇರೊಕ್ಕಲ್, ಪೇರಡಿ, ಪೇರೊಡಲ್ (ಶಮದ. ೧೮೦ ಸೂತ್ರಯೋ). **ಪೇರೊಕ್ಕಲು** : ಎಲ್ಲರೂ ನನ್ನಕ್ಕತಂಗಿಯರು . . . ಆ ಕಡೆಗೆ, ಈ ಕಡೆಗೆ ತೂಗುವರು ತೊನೆಯುವರು . . . ಪೇರೊಕ್ಕಲಾಗಿ ಪಾಡುವರು (ಹೊಂಗಳು. ೦೮-೯); ಪೇರೊಕ್ಕಲು ! ಈ ಮಕ್ಕಳು ಬಡವರ ಮೈಸಾಲ (ದೀಶಮ. ೧-೦೭). [ಪೇರ್$_1$ (< ಪಿರಿದು$_1$) + ಒಕ್ಕಲ್$_2$]

**ಪೇರೊಕ್ಕಲು** 'ಪೇರೊಕ್ಕಲ್' ನೋ.

**ಪೇರೊಡಲ್**, ಪೇರೊಡಲು, ಹೇರೊಡಲ್, ಹೇರೊಡಲು (ನಾ). ದೊಡ್ಡ ದೇಹ; ಭಾರಿಯಾದ ಶರೀರ : ಕಾರಿರುಳ ತಿರುಳ ಬಣ್ಣಂ... ಮಿಳಿರ್ಪುರಿಗೇಸಂ ಪೇರೊಡಲಸೆದಿರೆ ಪುಟ್ಟಿದನಾರುಮಗುರ್ವಿಸೆ ಮಗಂ ಘಟೋತ್ಕಚನೆಂಬಂ (ಶಂಶಭಾ. ೩-೨೦); ಕಾರೊಸಡಂ ಕರ್ಬುಯುಂ ಪೇರೊಡಲುಂ ... ದನುಜಾಕಾರಮನೊಡರಿಸೆ ನಿಶಾಚರರ್ವಿಸಿ ತೋರ್ಪರ್ (ಕಾವ್ಯಾವ. ೨೨೦); ಪಲರ್ಗೆ ಜಿರಿದಲೆ, ಸುರಿವಾಯ್ ಪಲರ್ಗೆ . . . ಅರೆಬರ್ಗೆ ಪೇರೊಡಲ್ (ಅದ್ಭುತ. ೨೬-೨೭). **ಪೇರೊಡಲು** : ಪೇರೊಡಲ ಧಿಙ್ಞನೆ ತಿರುಗಿಸುತೆ . . . ಅಪ್ಪಳಿಸುತಿಕ್ಕಿದನು (ಪೋಹಕ. ೩೮-೭೦). **ಹೇರೊಡಲ್** : ಮಿಂಚುದಲೆಗಳ ಖಂಡಿಪಲ್ಗಳ . . . ದೊಳ್ಳುಗಳ ಹೇರೊಡಲ ಮಂಚಕರ . . . ಹಿಂಡು ನೆರೆದು (ಬಸಪು. ೫೦-೫೯). **ಹೇರೊಡಲು** : ಕರೆ ನಿಮ್ಮಯ್ಯನನು ಹೇರೊಡಲ ತೋಱಿಸಿ ಬಲವ ಬೆದಱಿಸಲಗ್ಗಳಿಕೆಯಹುದೇ (ಕುವ್ಯಾದ್ರೋ. ೦೩-೩೫); ಮಹೋದರನ ಹೇರೊಡಲನೂಡೆದು . . . ಶಕ್ರಜಿತುವನು ಹುಡುಕುನೀರದ್ದಿದನು ನಡೆದು ಸಮುದ್ರಮಧ್ಯದಲಿ (ತೊರೆಂ. ೫ ೯-೫); ಪೊಡೆಗೆಡೆದ ಹೇರೊಡಲ ಸೀಳ್ಗಳಿಂ ಪೊಳ್ಗಳಿಂ . . . ಕಡುಭಯಂಕರವಾಗಲು (ಕೃಜಿಭಾ. ೯-೪೬). [ ಪೇರ್$_1$ (< ಪಿರಿದು$_1$)+ಒಡಲ್ ]

**ಪೇರೊಡಲು** ' ಪೇರೊಡಲ್ ' ನೋ.

**ಪೇರೊನಕೆ** (ನಾ). ದೊಡ್ಡ ಒನಕೆ : ಇಕ್ಕಡಿವಡೆದ ಕಾರ್ಮುಕವ ನಿವಾರಿಸಿ ತೆಕ್ಕೊಂಡು ಭಾರಿಯ ಹಲವ ಒಕ್ಕಯ್ಯೊಳಾಂತ ಪೇರೊನಕೆಯಿಂದಿಕ್ಕಿದ ಸೂಕ್ಷ್ಮಾನೆದಲೆಗನ ಮೇಲೆ (ಪೋಹಕ. ೩೮-೫೯). [ ಪೇರ್$_1$ (< ಪಿರಿದು$_1$) + ಒನಕೆ ]

**ಪೇರೊರ್ಬೆ** ' ಪೇರೊಟ್ಟಿ ' ನೋ.

**ಪೇರೊಸಗೆ** (ನಾ). ದೊಡ್ಡ ಹಬ್ಬ,—ಉತ್ಸವ : ' ಪೇರೊಸಗೆಗೆಯ್ ' ಪರಾ. [ ಪೇರ್$_1$ (< ಪಿರಿದು$_1$) + ಒಸಗೆ ]

**ಪೇರೊಸಗೆಗೆಯ್** (ಕ್ರಿ). ದೊಡ್ಡ ಹಬ್ಬವನ್ನು ಆಚರಿಸಂ ; ಭಾರಿ ಉತ್ಸವವೇರ್ಪಡಿಸು : ಕಲಸೋಗರಮಂ ನಲಿದಿಕ್ಕಿ ಭೂಷಣಪ್ರಚಯಮನಿಟ್ಟು ಪೇರೊಸಗೆಗೆಯ್ದು ಸಖೀಜನದೊಂದುಗೂಡಿ (ರಾಜಕೇ. ೯-೯೨). [ ಪೇರೊಸಗೆ + ಕೆಯ್$_1$ ]

**ಪೇರೊಟ್ಟಿ** ' ಪೇರೊಟ್ಟಿ ' ನೋ.

**ಪೇರೊಟ್ಟಿ**, ಪೇರೊರ್ಬೆ, ಪೇರೊಟ್ಟಿ, ಪೇಱೊರ್ಪೆ, ಪೇಱೊರ್ಬೆ, ಹೇರೊಬ್ಬೆ (ನಾ). ದೊಡ್ಡ ಮುಳ್ಳುಪೊದರು (?) : ಅಱಿಯನ್ಗೆಂಕ್ಕೆ ನೋಡಿ ನಡದು ಪೇರೊಟ್ಟಿ ದುಗ್ಗನ್ಕೆಱಿ (ಎಕ. X (೩), ತಕ್ಕಿ. ೬೬-೨೨ ; 850) ; ಸಾಲತ್ತ ಕಾಡೆಱಿನ ಪೇರೊಟ್ಟಿಎ ಪಗನ್ನೆವಳ್ಳಮೆ (ಎಕ. IV, ಎಡಕೊ. ೬೦-೭೫ ; ಸು. 890). **ಪೇರೊರ್ಬೆ** : ಪಡುವ ನೋಡಿ ಪರಿದ ಪೇರೊರ್ಬೆಯಿ (ಎಕ. IX (೩), ಬಂಗಳೂ. ೦೫೦ ೩೭ ; 828). **ಪೇರೊಟ್ಟಿ** : ಪುಲಿಪದಿಯ ತೆನ್ಕಣ ಪೇರೊಟ್ಟಿಯೆ (ಎಕ. XII, ೦೩-೯ (b) ; 813) ; ಇಗ್ಗಲಿಯ ಅರಿಪುರ ಮೂಜೂರ ಸನ್ದಿನಲ್ಲಿ ತಣ್ಣಾಲಿಗಾಲ ಮೂಡಣ ಪೇರೊಟ್ಟಿಯಿಂ (ಎಕ. III, ತಂಜನ. ೦೩೯-೦೯; 916 ?). **Δಪೇಱೊರ್ಪೆ** : ದಕ್ಷಿಣಸ್ಯಾನ್ದಿಶಿ ಪಡುವ ನೋಡಿ ಪೋದ ಪೇಱೊರ್ಪೆಯೆ (ಎಕ. XVI, ತಿಪಟೂ. ೧೯೦-೬೮ ; ಸು. 900). **Δಪೇಱೊರ್ಬೆ** : ಅನ್ತೆ ತುಟ್ಬಿಲ ಪೇಱೊಟ್ಟಿಯೆ (ಎಕ. XVI, ತಿಪಟೂ. ೧೯೦-೬೮ ; ಸು. 900). **ಹೇರೊಬ್ಬೆ** : ತೆಂಕಣ ಕಡೆಗೋಡಿ ಏರಿಯ ಮೇಲೆ ಬಂದು ಚಣ್ಡಿಹಿನಲೇದು ಹೇರೊಬ್ಬೆ ಪುಳಿಗಡಪಿನೊಳು ಕೂಡಿ (ಎಕ. XIV, ಎಂಆಂದೂ. ೦೭೦-೦೩ ; ಸು. 12ನೆಯ ಶಕ) ; ಚಕ್ರನ ಕೊಡಗೆಯ ಹೊಲದ ಹೇರೊಬ್ಬೆಯಿಂ ಮೂಡಲು (ಪ್ಯಆಂ. ೦೯೩೦, ೫೮-೬೫ ; 1413). [ಪೇರ್$_1$ (< ಪಿರಿದು$_1$) + ಒಟ್ಟಿ]

**ಪೇರೋಟ** (ನಾ). ವೇಗವಾದ ಓಟ : ಕುದುಕುವರಿಯುಲಿ ಪರಿದು ಪೇರೋಟದಲಿ ಪರಿದೋಡುತ್ತವಾಯಸದಿ ಬಳಲುತೊಯ್ಯನೆ ನಡೆದು (ಬಸಪು. ೨೬-೬೨). [ಪೇರ್$_1$ (< ಪಿರಿದು$_1$) + ಓಟ]

**ಪೇರೋಣಿ** (ನಾ). ದೊಡ್ಡ ಓಣಿ : ಸೀಮೆ ಮೂಡಾಯ್ತೊಱಿಎ ತೆಂಕಾಯ್ಬುಟಾರನ ಮಾಡಮೆ ಪೇರೋಣಿ ಎ ಸನ್ದು (ಎಕ. IV, ಎಡಕೊ. ೬೦-೭೩ ; ಸು. 890). [ಪೇರ್$_1$ (< ಪಿರಿದು$_1$) + ಓಣಿ]

**ಪೇರೋಲಗ** (ನಾ). ದೊಡ್ಡ ಸಭೆ ; ಮಹಾಸಭೆ : ಪೇರೋಲಗವಂ ಪರೆಯವೇಳ್ದೆಲ್ಲರಂ ಕಳುಪಿ (ಬಸಕ. ೬-೩೭) ; ಚಂದ್ರಾಪೀಡನಲ್ಲರುಮಂ ಕಳುಹಿ ಪೇರೋಲಗಂ ಪರೆದು (ಬಸಪು. ೦-೫೦). [ಪೇರ್$_1$ (< ಪಿರಿದು$_1$) + ಓಲಗ$_1$]

**ಪೇರ್ಗೊಳ್** ' ಪೆಸರ್ಗೊಳ್ ' ನೋ.

**ಪೇಲ್**, ಹೇಲು$_1$ (ಕ್ರಿ). ಹೇತು$_1$ (ಭೂತನ್ಯೂ). ಮಲವಿಸರ್ಜನೆ ಮಾಡು : ''ಪೇಲ್—ಮಲವಿಸರ್ಜನೇ, ಮಲೇ ಚ'' (ಶಮರಾ) ; ಗುದತಿ=ಪೇಲ್ವಮಂ (ಕಾಶಕ್ಕ. ೨೩೦). **ಹೇಲು$_1$** : ನೂಲೋ ಹೆಂಡತಿ ಬಿಟ್ಟು ಹೇಲೋ ಮೂಳಿ ತಂದ (ಗಾದೆ) ; ನಡುಮನೇಲಿ ಹೇತು, ನಾತ ಬರುತ್ತೆ ಎಂದ (ಗಾದೆ). [ದೇ. ೫ ತಮಿ. ಪೇಲ್, ಪೇಳ್; ಗೊಂಡಿ. ಪೇಲಾನಾ]

**ಪೇಲ್$_2$**, ಪೇಲು, ಹೇಲು$_2$ (ನಾ). ಅಮೇಧ್ಯ; ವಿಷ್ಟೆ ; ಮಲ : ಪೇಲಂ ಕಚ್ಚಲ್ ತಕ್ಕುದೆ (ಸಮಶ. ೯-೩೯) ; ಪಂದಿಗಳೊಡನಾಡಿದ ಕಱುವುಂ ಪಂದಿಯಂತೆ ಪೇಲಂ ತಿಂಗೆಂಬುದು ನಾಣ್ನುಡಿ (ಧರ್ಮಾಪ್ಪ. ೨-೬೬). **ಪೇಲು** : ಸಾಸನಮಯ್ಯಾದೆಯುಮಂ ಪೇಸದೆಯದನಳಿವೆನೆಂಬ ಮಹಪಾತಕನಿಂತೀಸನೆ ಪೇಲಿನ ಕುಳಿಯೊಳ್ಸಾಸಿರಸಂವರ್ಷ ಬಾಲವುಳುವಾಗಿಯುವಂ (ಕರ. I, ೨೯-೩೩; 1148). **ಹೇಲು$_2$** : ಹೇಲೊಳಗಣ ಹುಳುವ ಕೋಳಿ ಕೆದಱಿದಂತಾಯಿತ್ತವನ ಶಿವಪೂಜೆ (ಗಣಕಾ. ೦೯೦-೬) ; ಯಾ ಧರ್ಮಕೆ ತಪಿದವರು ಹೇಲೊಳಗಣ ಹುಳುವಾಗಿಯಿರಲುಳವರು (ಶಾಶಾ. IX-ii, ೫೭೦-೩೨ ; 1534) ; ದಂಡಿಗೆ ಮೇಲೆ ನಾಯಿಯ ಕುಂಡ್ರಿಸಿದರೆ ಹೇಲು ಕಂಡು ಹಾರಿತು (ಗಾದೆ). [< ಪೇಲ್$_1$]

**ಪೇಲವ** (ಗು). ೧. ಕೃಶವಾಗಿರುವ; ತೆಳುವಾದ. ೨. ಕೋಮಲವಾದ; ಸಂಕುಮಾರ. ೩. ಮಸುಕಾದ ; ನಿಸ್ತೇಜವಾದ ; ಬಿಳಿಚಿ

ಕೊಂಡ : ಅರೆಬಿರಿದ ಸಂಪಿಗೆಯು ಹೂವಿನ ಹಾಗೆ ಪೇಲವವರ್ಣದಾಕೆ ಈಕೆ (ಶಿಕ್ಷಕ. ೪೦೩). ೪. ಸಣ್ಣ ; ಎಳೆಯ. ೫. ವಿರಳವಾದ ; ಬಿಡಿಬಿಡಿಯಾದ. (ನಾ). ೬. ಕೃಶವಾದುದು : "ಕ್ಷಾಮಂ . . . ಪೇಲವಂ, ತಳಿನ(ಮ)ಂ, ತನು—ಈ ೭ ಅಸಿದು" (ಹಲಾಯು. ೧೧೯-೩೨). ೭. ವಿರಳವಾದುದು : "ಪೇಲವಂ, ವಿರಳಂ, ತನು—೩ ಎಡೆಬಿಟ್ಟುದ್ದು, ವಿರಳವಾದದ್ದು" (ಸಿದ್ಧಾಂತಿ. ೩೪೦). ೮. (ಆಲಂ) ಸತ್ತ್ವವಿಲ್ಲದುದು ; ನೀರಸವಾದುದು : 'ತಾಯಿ' ಯಂಥ ಕಥೆಗಳ ಜೊತೆಗೆ ಬಂದಿರುವುದರಿಂದ ಅವು ಪೇಲವವಾಗಿ ಕಾಣುತ್ತವೆ (ವಿಮರ್ಶ. XVI. ಮುನ್ನುಡಿ) ; ಪಂಪನ ಆದಿಪುರಾಣದಲ್ಲಿ ಬರುವ ಸನ್ನಿವೇಶದ ಎದುರು ಇದು ತೀರಾ ಪೇಲವವಾಗಿದೆ (ಹಂಪೀ. ೦೩೬). [ಸಂ.]

**ಪೇಲವತೆ** (ನಾ). ಬಿಳಿಚಿಕೊಂಡಿರುವಿಕೆ : ಗರ್ಭಿಣಿಯಾಗಿ ಬಂದಾಗ ಇದ್ದ ಆ ಪೇಲವತೆ ಈಗಿಲ್ಲ (ಅಪಾತ. ೨೩೫). [ಸಂ. ಪೇಲವತಾ]

**ಪೇಲು** 'ಪೇಲ್₂' ನೋ.

**ಪೇಲೆ, ಪ್ಯಾಲೆ** (ನಾ). ಕುಡಿಯಲು ಬಳಸುವ ಪಾತ್ರೆ ; ಬಟ್ಟಲು : ಬೆಳ್ಳಿಯಿಂದ ತಾಟು, ತಬಕ, ಪೇಲೆ ಮುಂತಾದ ಸಾಮಾನುಗಳನ್ನು . . . ಮಾಡುತ್ತಾರೆ (ಮುಂಬಯಿ. ೯-೦೨೦) ; ಚಿನ್ನಾ ಹಾಲಿನ ಪೇಲೆ ಹಿಡಿದು ಅಡಿಗೆ ಮನೆಯ ಹೊಸ್ತಿಲ ಮೇಲೆ ಕುಳಿತ (ಕ್ರಿಟಿಜ. ೫೫) ; ಪೇಲೆಗಳು ತುಂಬಿದವೆನ್ನುವಷ್ಟರಲ್ಲಿ ಬರಿದಾಗುತ್ತಿದ್ದವು (ಮೊಪಾಸ. ೦೨). **ಪ್ಯಾಲೆ** : ಆ ಮುಹೂರ್ತದಲ್ಲಿ ಕಾರ್ಕೋಟಕವಿಷ ತುಂಬಿದ ಪ್ಯಾಲೆ ಕೊಟ್ಟಿದ್ದರೂ ಗುಟುಕರಿಸಿಬಿಡುತ್ತಿದ್ದರು (ಕೃಷ್ಣಾ. ೯).
[←ಪಾರ. ಹಿಂ. ಪ್ಯಾಲಾ ; ಮರಾ. ಪೇಲಾ, ಪ್ಯಾಲಾ]

**ಪೇಲೆವರಿಗೆ** (ನಾ). ಒಂದು ಬಗೆಯ ತೆರಿಗೆ (?) : ಬಸವನಹಳ್ಳಿಯ ಪೇಲೆವರಿಗ ಹಟ್ಟಿಗೆ ಹುರಿಗೆ ಸಿನ್ದು ಪಟಿದು ದೇವಳಿಗೆನಾಡ ಎಳ್ಪದಿಪ್ಪರು ಪ್ರಭುಗಳ್ ಆಳ್ಪಿಯಲು (ಎಕ. VI, ಶಕ್ಕವು. ೦೫-೦೦; 1674 ?). [?]

Δ **ಪೇವಯ್ಸು** 'ಹೇವಯಿಸು' ನೋ.

**ಪೇಶಣ** 'ಪೇಸಣ' ನೋ.

**ಪೇಶಲ, ಪೇಶಳ** (ಗು). ೧. ಕೋಮಲವಾದ; ಮೃದುವಾದ : ಓಸರಿಸದಿಂದನ್ನ ಬಡಸೇವೆಯನು ತಾವು ಪೇಶಲ ಸುಭಾವದಿಂ ನೋಡಿ ಕೈಕೊಳಲು (ಕಾಂಟಿ. ೦೦-೫೦). ೨. ತೆಳುವಾದ ; ಕೃಶವಾದ. ೩. ಸುಂದರವಾದ ; ಮನೋಹರವಾದ : ದೇವ ದೋಷಹೃದ್ಗರಧರ ವಂದ್ಯ ಪೇಶಲ ಪಿನಾಕ ಸುಪಾಣಿ ಮಹೇಶ ಪಾಲಿಸಾ (ಹವ್ಯಾಕ. ೧-೨). ೪. ಸಮರ್ಥವಾದ; ದಕ್ಷ. ೫. ಮೋಸದ ; ವಂಚನೆಯ. ೬. ಅಲಂಕಾರ ಮಾಡಿದ ; ಸಿಂಗರಿಸಿದ. (ನಾ). ೭. ಮೃದುತ್ವ ; **ಕೋಮಲತೆ** : ಪ್ರಯೋಗವಾರ್ಗದೊಳಶಿಪೇಶಲಮಾಗೆ (ಪಾರಿಜಾ ೨-೨೪೨); ಮೃದು ಪೇಶಲಮನಾಂತ ನುಡಿಗಳಿಂ ಬಿನ್ನವಿಸಿದಂ (ಪಂಕಾರಾ. ೬-೬೩ ೨). ೮. ತೆಳುವು ; ಪಾರದರ್ಶಕವಾದುದು : ನಟಿಯಂತೆ ಪೇಶಲವಾದ ವಸ್ತ್ರಗಳನ್ನು ಧರಿಸಿ . . . ತನ್ನ ವಕ್ಷಸ್ಸನ್ನು ಲೋಕದೆದುರಿಗೆ ಆವಿಷ್ಕಾರ ಮಾಡುತ್ತಾ (ಭಾರತ. ೨೨). ೯. ಶುಭ; ಮಂಗಳ : "ಕಮನಂ ಶುಭಂ ಪೇಶಲಂ ಶೋಭನಂ" (ಮಂಗರಾ. ೦೨೬-೨). ೧೦. ಒಂದು ಬಗೆಯ ಬಣ್ಣ ; ತಿಳಿ ಹಳದಿ : ಪೇಶಲವೆಂಬುವದು ಭತ್ತದ ಗರಿಯ ವರ್ಣವಾಗಿಯಿರುವದು (ಸೌಗಂಧಿ. ೩೬೬-೦೪). ೧೧. ಅಂದ ; ಸೊಬಗು : ಮನೋವಿಕಾಸಮಂ ಕನ್ನಡಿಸಿತ್ತು ಸೀತೆಗೆ ಮುಖಾಂಬುರುಹಂ ದರಹಾಸಪೇಶಲಂ (ಶಂರಾಶಾ. ೦೦-೬೬). ೧೨. ದಕ್ಷತೆಯಿಂದ ಕೂಡಿದ ವ್ಯಕ್ತಿ ; **ಪರಿಣತ** : "ದಕ್ಷಃ, ಚತುರಃ, ಪೇಶಲಃ . . . ಉಷ್ಣಃ—ಆಲಸ್ಯವಿಲ್ಲದವನ ಹೆಸರುಗಳು" (ಸಿದ್ಧಾಂತಿ. ೩೦೨). ೧೩. ಮೋಸದಿಂದ ಕೂಡಿದುದು ; **ಕುಟಿಲತನ**. ೧೪. ವಿಷ್ಣುವಿನ ಹೆಸರುಗಳಲ್ಲಿ ಒಂದು. **ಪೇಶಳ** : ೩. ಪ್ರವಾಳಜಾಳಕಮನೆ ಕಣ್ಗೊಳಿಸಿದುದಾ ವಧೂವರರ ಸಲೀಳಪೇಶಳ ಶರಕ್ಕೆ ಪಾಣಿಗ್ರಹಣಂ (ವರ್ಧಮಾ. ೩-೯೫). [ಸಂ.]

**ಪೇಶವಾಯಿ** (ನಾ). ಮರಾಠರ ಆಳ್ವಿಕೆಯಲ್ಲಿದ್ದ ಮುಖ್ಯಮಂತ್ರಿಯ ಆಡಳಿತ,—ಅಧಿಕಾರ : ಇದು ಪೇಶವಾಯಿಯಲ್ಲಿ ಕಿತ್ತೂರ ದೇಸಾಯಿಯ ವಶಕ್ಕಿತ್ತು (ಬೆಳ. ೬೨).
[←ಪಾರ. ಹಿಂ. ಪೇಶವಾಈ; ಮರಾ. ಪೇಶವಾಯೀ]

**ಪೇಶವೆ, ಪೇಶ್ವೆ, ಪೇಷ್ವೆ** (ನಾ). ಮರಾಠರ ಆಳ್ವಿಕೆಯಲ್ಲಿದ್ದ ಮುಖ್ಯ ಮಂತ್ರಿ : ಅವನು . . . ಕೊಂಕಣಸ್ಥ ಬ್ರಾಹ್ಮಣನಿಗೆ ಪೇಶವೆ (ಮುಖ್ಯ ಪ್ರಧಾನಿ) ಎಂಬ ಅಧಿಕಾರ ಕೊಟ್ಟು, ಯಾವತ್ತು ಕಾರಭಾರವನ್ನು ಅವನ ಸ್ವಾಧೀನ ಮಾಡಿದನು (ಕರ್ಣಾಇ. ೬೬). **ಪೇಶ್ವೆ** : ಪೇಶ್ವೆಗಳ ಆಡಳಿತವು ಬಿಗಿತಪ್ಪಿ ಸುಬೇದಾರನು ಪರಾಕ್ರಮಪರನಾಗಿದ್ದನು (ಮುರಾರಿ. ೧). **ಪೇಷ್ವೆ** : ಎಂಟುಮೂಲೆಗಳಿಂದಲೂ ಮುತ್ತಿದ ಶತ್ರುಗಳನ್ನು ಎದುರಿಸಲು ಅವರು ಪುಣೆಯ ಪೇಷ್ವೆಯ ನಾಯಕತ್ವವನ್ನು ಅಂಗೀಕರಿಸಲಿಲ್ಲ (ಭಾರದ. ೪೨೫). [←ಪಾರ. ಹಿಂ. ಮರಾ. ಪೇಶವಾ, ಪೇಶ್ವಾ]

**ಪೇಶಳ** 'ಪೇಶಲ' ನೋ.

**ಪೇಶಿ** (ನಾ). ೧. ಮಾಂಸ ; ಅಡಗು ; ಬಾಡು : ಹೊಟ್ಟೆಯೊಳು ರಕ್ತ ಪೇಶಿಯು ಬಲಿದ ಗರ್ಭ (ಚೀಕೃಪು. ೨-೫-೦೩). ೨. ಮಾಂಸದ ಮುದ್ದೆ : ವಿವಿಧಭಕ್ಷ್ಯೋಪದಂಶಪ್ರಾಯಮಪ್ಪ ದಿವ್ಯಾಹಾರಮೆತ್ತಲೀ ೬[ನಿ]ತ ಪೂತಿಗಂಧಮಪ್ಪ ಮೃಗಪಿಶಿತಪೇಶಿಯೆತ್ತಲ್ (ವರ್ಧಮಾ. ೬-೪ ವ). ೩. ಮೊಟ್ಟೆ ; ತತ್ತಿ : "ಕೋಶಂ ಪೇಶಿಯಂಡಮೆನೆ ತತ್ತಿಯಕ್ಕುಂ" (ಮಂಗರಾ. ೫೦-೧). ೪. ಗರ್ಭಧಾರಣೆಯ ನಂತರದ ಕೆಲವೇ ದಿನಗಳ ಭ್ರೂಣ. ೫. ಅರಳುವುದರಲ್ಲಿರುವ ಮೊಗ್ಗು. ೬. ಇಂದ್ರನ ವಜ್ರಾಯುಧ. ೭. ಒಂದು ಬಗೆಯ ವಾದ್ಯ. ೮. ಹಣ್ಣಿನ ಓಟೆ. ೯. ಕತ್ತಿಯ ಒರೆ,—ಕೋಶ. ೧೦. ಚೆನ್ನಾಗಿ ಬೇಯಿಸಿದ ಅಕ್ಕಿ. ೧೧. ಸ್ನಾಯು ; ಸ್ನಾಯುರಜ್ಜು : ಶರೀರದ ನಷ್ಟವಾದ ಹಲವೊಂದು ಪೇಶಿ (Tissues)ಗಳು ರಕ್ತವನ್ನು ಸೇರಿ ಯಕೃತ್ತಿಗೆ ಬರುವುವು (ಬಾಂಕ್ರ. I, ೩೦೦). [ಸಂ.]

**ಪೇಶು** (ಕ್ರಿ). ಹೊಗಳು ; ಕೊಂಡಾಡು : ಪೇಶಾದ ದಿನವೆಲ್ಲ ಪೆಜವಾದ ದಿನವಯ್ಯ ಈಶನಂ ನೆನೆಯದ ದಿನಂ ಬಂಜೆದಿನವಯ್ಯ (ವಾಗೀಶ. ದೇ. ೨೬೫-೯); ಪೇಶಾದ ನಾಳಿಲ್ಲ ಪೆಜನಾ[ವಾ]ದ ದಿನ (ಚೀಕೃಪು. ೪-೯-೦೩).
[ದೇ. ‖ ತಮಿ. ಪೇಚು ; ಮಲ. ಪೇಚು = ಮಾತನಾಡು]

**ಪೇಶ್ವೆ** 'ಪೇಶವೆ' ನೋ.

**ಪೇಷ್‌ಕಷ್, ಪೇಷಕಶಿ** (ನಾ). ಹಿಂದೆ ಜಮೀನುದಾರ ಮುಂತಾದವರು ಸರ್ಕಾರಕ್ಕೆ ತೆರುತ್ತಿದ್ದ ನಿಗದಿಯಾದ ಹಣ ; ಪೊಗದಿ : ಪ್ರಭುಗಳೂ . . . ನಿಯಮಿತವಾದ ಪೇಷ್‌ಕಷ್‌ನ್ನು ಕ್ರಮವಾಗಿ ಸಲ್ಲಿಸುತ . . . ಅವರ ದೇಶಗಳನ್ನೆಲ್ಲಾ ಸರ್ಕಾರಕ್ಕೆ ಸೇರಿಸಿಕೊಂಡರು (ಮಹಾಮಂ. II, ೧೩) ; ಇಂಗ್ಲೀಷ್ ಸರ್ಕಾರದವರು . . . ಪೇಷ್‌ಕಷ್ ಎಂಬ ಪೊಗದಿಯನ್ನು ತೆಗದುಕೊಳ್ಳುತ್ತಿದ್ದಾರೆ (ಪಾಳೆಗಾ. ೩೦). **ಪೇಷಕಶಿ** : ಫವುಜಿನ ಖರ್ಚಿಗೆ ಮೊಗಲು ಮರಾಟೀರ ಪೇಷಕಶೀ ಸಹಾ ನವಾಬರೇ ತೀರಿಶಿಕೊಳಬೇಕು (ಹೈದರ. ೫೦). [←ಪಾರ. ಮರಾ. ಪೇಶ್‌ಕಶ್; ಹಿಂ. ಪೇಶಕಷ್]

**ಪೇಷಕಶಿ** 'ಪೇಷ್‌ಕಷ್' ನೋ.

**ಪೇಷಣ₁** 'ಪೇಸಣ' ನೋ.

**ಪೇಷಣ₂** (ನಾ). ೧. ಧಾನ್ಯವನ್ನು ಹಿಟ್ಟು ಮಾಡುವುದು,— ಬೀಸುವುದು. ೨. ಅರೆಯುವುದು : ಪೇಷಣದ ಶಿಲೆಯೊಳಂ ಪೊಸೆದಿರ್ಕುಕಂದು (ಶಬ್ದಮಂ. ೯೯). ೩. ಬೀಸುವ ಕಲ್ಲು. ೪. ಅರೆಯುವ ಕಲ್ಲು ; ಕಲಬತ್ತು. ೫. ನರಕದ ಶಿಕ್ಷೆಗಳಲ್ಲಿ ಒಂದು : ಪೇಷಣ . . .

ದುರ್ಭೋಗ್ಯ ನಾನಾವಿಧಾಸಂಖ್ಯಾತತೀವ್ರವೇದನಾರೂಪಂಗಳಾಗಿ ಶಿವ ದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷಾಲೇಶವೆಂದೆನಿಸಿ (ಏಕೋಶ. ೦೬೦).
[ಸಂ.]

**ಪೇಷಣೆ** (ನಾ). ಅರೆಯುವ ಕಲ್ಲು: ಚುಲ್ಲಿ ಪೇಷಣಿ ಕಂಡನಿ ಉಪಸ್ಕರ ಉದಕುಂಭ ಎಂಬೈದು ಗೃಹೋಪಕರಣಗಳೂ ಹತ್ಯಾಕಾರಕಗಳು . . . ಪೇಷಣಿ—ಅಂದರೆ ಅರೆಯುವ, ಬೀಸುವ ಕಲ್ಲುಗಳು (ಆರ್ಯಾಧ. ೦೮೭).
[ಸಂ. ಪೇಷಣೀ]

**ಪೇಷುಖಾನೆ** (ನಾ). ಹಿಂದೆ ರಾಜ ಮೊದಲಾದವರು ಪ್ರವಾಸ ಹೊರಡುತ್ತಿದ್ದಾಗ ಅವರ ಮುಂದಿನ ಮೊಕ್ಕಾಮಿಗಾಗಿ ಮೊದಲೇ ರವಾನಿಸುತ್ತಿದ್ದ ಡೇರೆ ಮೊದಲಾದ ಸರಂಜಾಮು: ಮೂರು ಮಂದಿ ಪಾದುಶಹರು ತಮ್ಮ ತಮ್ಮ ಪೇಷುಖಾನೆ ಸಂಗಡ ರ‍್ಷಾಂಡಾವನ್ನು ಹೊರಗೆ ಹಾಕಿಸಿದರು (ಐತ್ಯರು. ೩).
[←ಪಾರ. ಮರಾ. ಪೇಶ್‌ಖಾನಾ; ಹಿಂ. ಪೇಶ್‌ಖೇಮಾ]

**ಪೇಷ್ಕಾರ್, ಪೇಷ್ಕಾರ** (ನಾ.) ಕಂದಾಯವನ್ನು ವಸೂಲು ಮಾಡುವ ಒಬ್ಬ ಅಧಿಕಾರಿ: (ಮೈಗೆಜೆ. IV, ೭೮೨). **ಪೇಷ್ಕಾರ:** ಸಿದ್ದನಾಯಕ ಬೇಗ ನೀನೋಡು ಪೇಷ್ಕಾರರಿದ್ದಿದ್ದರುಸುರು (ಅರ್ಕಾಶ. ೩೦–೩೮); ಪ್ರತಿ ತಾಲ್ಲೂಕಿಗೂ ಒಬ್ಬ ಸುಬೇದಾರ, ಒಬ್ಬ ಪೇಷ್ಕಾರ . . . ಗೊತ್ತಾಗಿ (ಮುಹಾಶಂ. II, ೯೨).   [←ಪಾರ. ಹಿಂ. ಮರಾ. ಪೇಶ್‌ಕಾರ್]

**ಪೇಷ್ಕಾರ** 'ಪೇಷ್ಕಾರ್' ನೋ.

**ಪೇಷ್ವೆ** 'ಪೇಶವೆ' ನೋ.

**ಪೇಸಣ, ಪೇಶಣ, ಪೇಷಣ$_1$, ಪೇಸಣೆ, ಪೇಸಾಣೆ, ಪೇಸಾಳಿ** (ನಾ). ೧. ಕೆಲಸ; ಕಾರ್ಯ. ೨. ಸ್ವಾಮಿಕಾರ್ಯನಿರ್ವಹಣೆ; ಒಡೆಯನ ಕೆಲಸ ಮಾಡುವುದು. **ಪೇಶಣ. ಪೇಷಣ$_1$. ಪೇಸಣೆ. ಪೇಸಾಣೆ. ಪೇಸಾಳಿ.**

**ಪೇಸಣಗರುಡ, ಪೇಷಣಗರುಡ** = ಸ್ವಾಮಿಕಾರ್ಯನಿರ್ವಹಣೆಯಲ್ಲಿ ಗರುಡನಂತಿರುವವನು; ಒಂದು ಬಿರುದು: ಶ್ರೀಮತ್ರಿ × ವನಮಲ್ಲ ದೇವ ಪೇಸಣಗರುಡಂ ಜಯಲಕ್ಷ್ಮೀನಿಳಯಂ (ಸೌಇಇ. IX–i, ೦೯೨–೯; 1079); ಶ್ರೀಮತ್ರಿಭುವನಮಲ್ಲದೇವ ಪೇಷಣಗರುಡನಾಮಾದಿ ಸಮಸ್ತ ಪ್ರಸಸ್ತಿಸಹಿತಂ (ಸೌಇಇ. VIII, ೩೭೭–೯; 1085). **ಪೇಸಣಹಣುಮಂತ, ಪೇಶಣಹಾನ್ಮಂತ, ಪೇಸಣಹನುಮಂತ** = ಸ್ವಾಮಿಕಾರ್ಯನಿರ್ವಹಣೆಯಲ್ಲಿ ಹನುಮಂನಂತಿರುವವನಂ; ಒಂದು ಬಿರುದು: ಜಯಸಿಮ್ಹದೇವ ಪೇಸಣಹಣುಮನ್ತ (ಮೈಆ. ೦೯೨೯, ೬೩–೩೩; 1081); ಸ್ವಸ್ತಿಶ್ರೀಮಚ್ಚಾಳುಕ್ಯಪ್ರತಾಪಚಕ್ರವರ್ತ್ತಿ ಜಗದೇಕಮಲದೇವ ಪೇಶಣಹಾನ್ಮನ್ತರಪ್ಪ ಶ್ರೀಮಹಪ್ರಧಾನಂ ಕನ್ನಡಸಂನ್ಧಿವಿಗ್ರಹಿ (ಕಇ. IV, ೦೦–೯; ಸು. 12ನೆಯ ಶತ); ಪೇಸಣ ಹನುಮಂತನೆನಿಪ ನಾಮಿದದಾಸ (ಸೌಇಇ. XI–ii, ೦೩೩–೦೮; 1087). **ಪೇಸಣ ಹನುಮ, ಪೇಷಣ ಹಣುಮ, ಪೇಸಣೆ ಹನುಮ, ಪೇಸಾಣೆ ಹನುಮ, ಪೇಸಾಳಿ ಹನುಮ** = ಪೇಸಣಹಣುಮಂತ: ಪಶಿಹಿತರಾಯನ್ಪ ಸಿಂಹನ ನಚ್ಚಿನಚ್ಚು ಪೇಸಣಹನುಮಂ (ಸೌಇಇ. IX—i, ೩೯೩–೦೦; 1226); ಕಡುಗಲಿ ದಣ್ಣನಾಥಮಿತನಾತ್ಮಜ ಪೇಷಣಹಣ್(ಣು)ಮ ಬಲ್ಲಿಗನ್ (ಎಕ. V, ಚನ್ನರಾ. ೦೯೭–೭೭; 1223); ದಣ್ಣನಾಥ ಪೇಸಣಹನುಮ (ಎಕ. VI, ಕಡೂರು. ೯೯–೩೯; 1291); ಪೇಸಾಣೆಹನುಮ ಮೋಹರಮುರಾರಿ (ಎಕ. XI, ಹೊಳಲ್ಕೆ. ೯೦–೦; ಸು. 1225 ?); ಚಕ್ರೇಶ್ವರ ಜಾಮಾದಿ ಕೋಲಾಹಳ ಪೇಸಾಳಿಹನುಮ ಗಜಬೇಣ್ಟೆಕಾರ (ಎಕ. XIV, ಎಳಂದೂ. ೦೩–೩; ಸು. 1511).   [< ಪ್ರಾ. ಪೇಸಣ. / ಸಂ. ಪ್ರೇಷಣ]

**ಪೇಸಣೆ** 'ಪೇಸಣ' ನೋ.

Δ **ಪೇಸರಗತ್ತಿ** 'ಹೇಸರಗತ್ತಿ' ನೋ.

Δ **ಪೇಸರು** 'ಹೇಸರ' ನೋ.

**ಪೇಸಾಣೆ** 'ಪೇಸಣ' ನೋ.

**ಪೇಸಾಳಿ** 'ಪೇಸಣ' ನೋ.

**ಪೇಸಿಕೆ, ಹೇಸಿಕೆ** (ನಾ). ೧. ಹೊಲಸು; ಕೊಳಕು: ಬೇಡವಟ್ಟುವಂ ಕಂಡೆಂ . . . ನರಕದ ನೆಲೆ ಪೇಸಿಕೆಗಳ ಕರು ಮಸಣದ ಪುಟ್ಟು ಪಾಪದೆಡೆ ಪಾತಕದಾಗರಮದು (ಕಾದಂಸಂ. ೭೪೭); ಉದುರಿದುವು ಧರಣಿಯಲಿ ಬಉುಮಾಂಸದ ಸುರಕ್ತದ ಘಟ್ಟಗಳು ಖಂಡದ ಸುಢಾಳದ ಜಗಿಯ ಪೇ[ಪಾಠಾಂ. ಹೇ]ಸಿಕೆ ನಿಕರ ನೂಂಕೊಂದು (ಕುವ್ಯಾಕ. ೯–೯೨). ೨. ಅಸಹ್ಯ; ಜುಗುಪ್ಸೆ: ನೀನಲಬ್ಧಸಮ್ಯಗ್ದರ್ಶನೆಯಪ್ಪುದಱಿಂ ಪೇಸಿಕೆಯಂ ತಾಳ್ದದೆ (ಶಾಂತೀಶ್ವ. ೮–೦೩೨ ವ). **ಹೇಸಿಕೆ:** ೧. ಸಂತವೊಂಬತ್ತುಮಾಸಂ ಹೇಸಿಕೆಯ ನಡುವೆ ಕತ್ತಲೆಯ ಕರುಳೊಳಗೆ ಮರುಳಂದದಿಂ ಬೆಳೆದು (ಬಿಂದೂಶೇ. ಹ. ೩೦೦–೨); ರಕುತದ ಹೇಸಿಕೆಯನು . . . ನೆರಹಿದಂ ನಿಳಯದೊಳಗೆ (ಹತಕಾ. ೦೦–೫೦); ಮುಂದಿಳುಹಿದಳು ಹೇಸಿಕೆ ಹೊನಲಿಡುವ ಹಂದಲೆಯನು (ಕೊರಂಡ. ೩–೭–೨೦); ಹೇಸಿಕೆಯ ಕಿಸುಕುಳದ ಕೀವು ತುಂಬಿ ಒಸರುವ ಹಸಿಯ ತೊಗಲಿನ ಹಳೆಯ ಗಾಯದಲ್ಲಿ ವಿಷಯಾತುರದಿಂದ ಬಿದ್ದು (ಅಂಬ್ಯೋ. ೮–೭). ೨. ಮಾತಿನಲ್ಲಿ ಮಾನ್ಯತನ ಮನದಲ್ಲಿ ಆಶೆ . . . ಇದು ಎನಗೆ ಹೇಸಿಕೆಯಾಯಿತ್ತು (ಬೋಳಬಸ. ೩೮–೦೫೭); ಹಾಸಿಕಿಲ್ಲದೆ ಹಾವಿನ ಮೇಲೆ ಒಱಗಿದವ ಹೇಸಿಕಿಲ್ಲದೆ ಕರಡಿಯ ಕೂಡಿದ (ಭುರಂದ. ೨·೦೦·೦); ವಿನಾಯಕರಾಯನಿಗೆ ತನ್ನ ಪ್ರಿಯಪತ್ನಿ ಸರಳೆಯನ್ನು ಬಿಟ್ಟು ಪೇಶ್ಯೆಯ ಮನೆಗೆ ಹೋಗಲು ಹೇಸಿಕೆ (ಕಾಂಕಟು. ೬೦). ೩. (ಆಲಂ) ಅವಮಾನ; ಅಗೌರವ: ತಿರುಗಿ ರಮೆಯನು ಕೊಟ್ಟು ತಮ್ಮನ ಕರಸಿಕೊಂಬೀ ಹೇಸಿಕೆಯ ನಿಜಶಿರದೊಳಾನುವನಲ್ಲನುತ ನಡೆತಂದನಾಹವಕೆ (ಕೊರಂಡ. ೯–೯–೦೦).   [ಪೇಸು$_1$ + – ಇಕೆ. / ತುಳು. ಪೇಸಿಗೆ, ಪೇಶಿಗೆ]

**ಪೇಸು$_1$, ಪೇಚು$_1$, ಹೇಸು$_1$** (ಕ್ರಿ). ೧. ಅಸಹ್ಯಪಡು; ಜುಗುಪ್ಸೆಹೊಂದು: ದೋಸಮೇನಾನುಂ ಸ್ವಲ್ಪಮಾದೊಡಂ ಮಾಸಿಸಿರ್ಕುಮಣಂ ಕೃತಿವಧುವಂ ಪೇಸದೆ ದುರ್ಜನದೊಳಾದ ಪರಿಚಯಂ ಮಾಸಿಸಿ ಕಿಡಿಸುವವೊಲೊಪ್ಪುವ ಕುಲವಧುವಂ (ಕಾಂ. ೦–೦೦೦); ಭೀಭತ್ಸಮಂ ಕಂಡಾದಮಾನಂ ಪೇಸಿ ಶರೀರ ವೈರಾಗ್ಯಮನೊಡೆಯನಾಗಿ (ವಡ್ಡಾರಾ. ೬೩–೦೭); ನಾರದಂ ಮನದೊಳೆ ಪೇಸುಗುಂ (ಹಂಸವಿ. ೬–೨೫); ಬೇನೆ ಬದ್ದಿರೆ ಪೇಸದೆ ಬೇಸಱದೆ ಸನ್ಮಾನದೊಳುಪಚರಿಸುವುದು (ಹದಿಬ. ೯–೦೯); ತನ್ನ ಗಂಡುಸುತನಕೆ ಪೇಸಿದಳ್ ತಾನೆ ಚಿತ್ರಾಂಗನೆ (ಚಿತ್ರಾಂಗ. ೦೭–೯೩೬). **ಪೇಚು$_1$:** ೧. ಭಸ್ಮಧಾರಿಯ ಕಂಡು ಪೇಚುತಂ ನಿಂದಿಸುವವಂ ಶೂದ್ರಗೊಗೆದನೆಂದೇ ಚತುರ ರೂಹಿಪುದು (ರಾಶಿಶ. ೯–೦೯). **ಹೇಸು$_1$:** ೧. "ಹೇಸು—ಜುಗುಪ್ಸಾಯಾಂ" (ಶಮದ); ಕಾಳುದ್ದೆವಕ್ಕಿಬಗಿ ನಾನು ಶಿವಭಕ್ತನೆನಿಸಿಕೊಂಬ ಚಂಡನಾಯಿಗಳ ಕಂಡು ಎನ್ನ ಮನ ಹೇಸಿತ್ತು ಕಾಣಾ (ಬಸವವ. ೨೮–೪೦). ಶ್ರೀ ಹಿಂಜರಿ; ಹಿಂದೆಗೆ; ಅಳುಕು: ಹೇಸುವುದು ಮನ ಬೊಮ್ಮಹತಿಗಾಗಿ (ಕೌರಾ. ೦೭–೦೨); ಕೌರವ ಹೇಸದೆ ನಿನ್ನನು ಕಟ್ಟಿಸಲು ಸಾಸಿರನಾಮನೆ ವಿಶ್ವರೂಪವ ತೋಱೆ ಮೋಸಗೊಳಿಸಿದಾಟವೆಲ್ಲಿ ಕಲಿತೆಯ್ಯ (ಭುರಂದ. ೦–೯೬–೨೨); ಸೂಸುವ ಮನವನ್ನು ಹೇಸದಲೆ ಹಱಿದೊಗೆದು ಲೇಸಾಗಿ ಇಪ್ಪ ಶಿವಯೋಗಿ ಗುರುವಿನ ಕೂಸು ತಾನಿರುವ (ಸರ್ವಜ್ಞ. ೩೯೩); ಏನೂ ಇಲ್ಲದವ ಯಾವುದಕ್ಕೂ ಹೇಸ (ಗಾದೆ).

**ಪೇಸೆ ಪಡು**=ಇತರರ ಜುಗುಪ್ಸೆಗೆ ಒಳಗಾಗು,—ಅಸಹ್ಯಕ್ಕೆ ಗುರಿಯಾಗು: ವಿನಯಮತಿಯೆಂಬೊಳ್ ಗುಜ್ಜಿ ವಿರಳದಂತೆ ಆದಮಾನಾ ವಿರೂಪೆ ಪೇಸೆಪ[ಪಾಠಾಂ. ಪೇಸರ್ಪ]ಡುವಳ್ (ವಡ್ಡಾರಾ. ೦೦೬–೨೨).
[ದೇ. ೩ ತುಳು. ಪೇಸು]

**ಪೇಸು$_2$, ಹೇಸು$_2$** (ನಾ). ಅಸಹ್ಯ; ಜುಗುಪ್ಸೆ: **ಪೇಸೇಱ್ ಪಡು**

**ಹೇಸು₂ :** ಪರಿಚಯವಿದ್ದವರೊದ್ದರು ಕಡುಪೇಸು . . . ಪರಿಚಯವಿರದವರೊಲಿದರು ಕಡುಹೇಸು (ಬಂಜಾಶ. ೬೮-೭೭). [<ಪೇಸು$_1$]

**ಪೇಸುಗೆ** (ನಾ). ಅಸಹ್ಯ; ಜುಗುಪ್ಸೆ: ಮತ್ತಿನ ಪೆಂಡಿರ್ಗೆ ಪೇಸುಗೆಯಂ ಪುಟ್ಟಿಸುವ ನಾಯಕಸ್ತ್ರೀಯಂತಪ್ಪ (ಧರ್ಮಾಮೃ. ೦೨-೨೪); ಪೇಸುಗೆ ಪೆಸರಟಿಯೆ ಹೇಯಂ ಮಾಯವಾಗೆ (ಜಗಂ. ೨-೫೩ ವ); ಜುಗುಪ್ಸೆ ಪೇಸುಗೆಯಂ ಮಾಟ್ಪುದು (ಕಶಾರ. ೦೨). [ಪೇಸು$_1$ + – ಗೆ]

**ಪೇಸುಗೆಗೆಡು** (ಕ್ರಿ). ಅಸಹ್ಯಭಾವವನ್ನು ಕಳೆದುಕೊಳ್ಳು; ಜುಗುಪ್ಸೆಯಿಲ್ಲದಂತಾಗು: ಸಂಸಾರದೊಳ್ ಪೇಸುಗೆಗೆಟ್ಟೀ ನಾಣ ಪುತ್ತಪ್ಪಟಿಜಗಳದೊಳೇನಮ್ಮಾ ತಕ್ಕೂರ್ಮೆಯುಂಟೇ (ಶಾಂತಿಪು. ೬-೯೭). [ಪೇಸುಗೆ+ಕೆಡು$_1$]

**ಪೇಸುತಪ** (ನಾ). ಜುಗುಪ್ಸೆಯನ್ನುಂಟುಮಾಡುವ ತಪಸ್ಸು: ಭಾವಿಸು ವಂದಿಸು ಪೇಸುತಪಮಂ ಕಾಣೆಂ (ಧರ್ಮಾಮೃ. ೯-೦೦೬). [ಪೇಸು₂+ತಪ್ಪ]

**ಪೇಸುಪಥ** ' ಪೇಸುಪಥ ' ನೋ.

**ಪೇಸುಪಥ, ಪೇಸುಪತ** (ನಾ). ಅಸಹ್ಯ; ಜುಗುಪ್ಸೆ: ರಾಜ್ಯಾಭಿಲಾಷೆಯಿಂದಿರ್ದನಪ್ಪೊಡೆ . . . ಸೌಂತೆಯ ತೋಂಟದಂತೆ ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೬-೦೨೨); ಕಣ್ಗೆ ಕೊಕ್ಕರಿಕೆ ಮನಕ್ಕೆ ಪೇಸುಪಥಮಾಯ್ತೆನಸುಂ ನೆಗಟ್ದಾ ರಣಾಂಗಣಂ (ಶಾಂತೀಶ್ವ. ೬-೦೨). **ಪೇಸುಪತ :** ತಪ್ಪೆಯಂತೆ ಪೇಸುಪತಮಪ್ಪುದು . . . ಬಣಗಿನಂತೆ ನೇರಿತಲ್ಲದು ಬಗೆವಂದೀ ಶರೀರಂ (ಧರ್ಮಾಮೃ. ೯-೦೬೫); ಪೇಸುಪತಂ ಕರಂ ಕಿಸುಗುಳಂ ಕಾಯಂ ಶುಚಿಪ್ರಾಯಮೇ (ಪುಷ್ಪಪು. ೦೩-೯೯). [ಪೇಸು₂+ಪಥ ?]

**ಪೇಸುವೆ** (ನಾ). ಹೇಳಿದುದಂ; ವಿಷಯ; ಸಂಗತಿ: ವಾಣಿಗಬಸುಣ್ಣ ಪೇಸುವೆ ಚಲಭೂಷಣನೆಟ್ಟು × ಪರಾಕ್ರಮನ ವುದಿದ ಕಲ್ಲು ಕೊತ್ತಟಿ ಸುದ್ದೀವದೆಯರಂ ಮಾರ್ಗಿಳಂ (ಎಕ. X, ಕಿಫ್ಶ. ೦೨-೨; ಸು. 800 ?).

[←ತಮಿ. ಪೇಚ್ಚು]

**ಪೇಸೇಳ್** 'ಪೇಸೇಟ್' ನೋ.

**ಪೇಸೇಳು** 'ಪೇಸೇಟು' ನೋ.

**ಪೇಸೇಟು, ಪೇಸೇಳ್, ಪೇಸೇಳು, ಹೇಸೇಳ್** (ಕ್ರಿ). (ಅಜ್ಜಬಜ್ಜಯಾಗಿ) ಅಸಹ್ಯವುಂಟಾಗು; ಜುಗುಪ್ಸೆಯಾಗು: ಪದಿನೆಂಟುಕೋಟಿ ಪದಾತಿಯುಮನಲಸದೆ ಪೇಸೇಟ್ ಕೊಂದು (ಪಂಪಭಾ. ೦೦.೦೯ ವ); ಒಡಿದು ಪೇಸೇಟ್ ಸೀಳ್ದಿಕ್ಕಿದು (ಪರ್ವಭಾ. ೩-೨೨); ರಣದೊಳ್ ಪೇಸೇಟ್ ಹೊಯ್ದು (ಎಕ. VIII. ಸೊರಬ. ೨೫೦-೯ ; 1237). **ಪೇಸೇಳ್ :** ನಿಬನ್ಧಿಸಿ ಕಟ್ಟಾಳ್ಗಳಾರದ ನಾವೀ ಅಧಿರಾಜರು ಪಾಲಕರೆನಿಸಿರುವುದು ಪೇಸೆಳ್ದು, ಪಟ್ಟಣದ ರತ್ನ ಸಿಂಹಾಸನದಡಿಯಲ್ಲಿ ಭೂಕಂಪವಾಗುತ್ತಿರಬೇಕೆಂಬ ಶಂಕೆಯನ್ನುಂಟುಮಾಡಿ ಬಾಧಿಸುತ್ತಿದೆ (ಚಟ್ಟಿ. ೭೯-೦೭). **ಪೇಸೇಳು :** ಉಗ್ರಾಂತ್ಯಕನನ್ದದಿಂದೆ ಪಲರಂ ಪೇಸೇಳೆ ಕೊಂದಿಕ್ಕಿ (ಎಕ. VII, ಶಿಕಾರಿ. ೦೬೩-೦೦ ; 1198 ?). **ಹೇಸೇಳ್ :** ಜವನೊಕ್ಕಲಿಕ್ಕಿದಂತಿರದದ್ಭುತವಾಗಿ ಹೇಸೇಳೆ ಕೊಣ್ದು ಬೆನ್ನಟ್ಟದಲ್ಲಿ (ಎಕ. VII. ಹೊನ್ನಾಳಿ. ೫೫-೦೦ ; 1247). [ಪೇಸು₂ + ಏಟ್$_1$]

**ಪೇಳ್** ' ಪೇಟ್ ' ನೋ.

**ಪೇಳಾಪೇಳಿ** (ನಾ). [ಸಂಗೀತ] ಠಾಯದಲ್ಲಿ ಒಂದು ಪ್ರಕಾರ: ತಾಳಸಾರಿಪರೀತ ಪೇಳಾಪೇಳಿಯುಂ ಸಂಜಾತಜಾಯನುಜಾಯುಚಿತಮೊಯ್ಯಾರವೊಡಗೂಡಿ (ಬಸವು. ೦೮-೦೨).

[← ತೆಲು. ಪೆಳ್ಳಾಪೆಳ್ಳಿ. / ಸಂ. ವೇಲಾವಲಿ = ಒಂದು ನಿರ್ದಿಷ್ಟ ಸ್ವರಶ್ರೇಣಿ]

**ಪೇಳಿ** ' ಪೇಟ್ಟಿ ' ನೋ.

**ಪೇಳಿಕೆ, ಹೇಳಿಕ್ಕೆ** (ನಾ). ೧. [ಕಾವ್ಯಮೀ] ಶಬ್ದಾಲಂಕಾರದಿಂದ ಕೂಡಿದ ಕಾವ್ಯರಚನೆ; ಒಗಟು; ಒಡ್ಡಪು: ಸುಕವಿಪ್ರಕರಕ್ಕೆ ವಿನೋದಕೇಳಿಗುಪಯೋಗಹೇತುಗಳ್ ಪ್ರಚ್ಛನ್ನಪ್ರಕಟಾರ್ಥಂಗಳನೇಕಪ್ರಕಾರದಿಂದೊಂದಿ ವರ್ತಿಕುಂ ಪೇಳಿಕೆಗಳ್ (ಕಾವ್ಯಾವ. ೫೯೬); ನುಸುಳೊರ್ನುಡಿ ಭಾವಮೆ ಮನಕ್ಕೆಸೆವಸ್ಪಷ್ಟಾರ್ಥಮುಟಿವು ನಾಮಾಂತರಿತಂ ಕುಸುರಿಯ ನುಡಿಯೆಂಬಿವು ಭಾವಿಸೆ ಪೇಳಿಕೆಗಳೊಳ್ ಪೇಟ್ವ ಭೇದಮವಕ್ಕುಂ (ಕಾವ್ಯಾವ. ೫೯೯). **ಹೇಳಿಕ್ಕೆ:** ೧. ಅನುಗತಂ ಪೂರ್ವಕವಿಗಳ್ ನೆನೆದಿನ್ನುಂ ಪೇಟ್ದಿಂ ದುಷ್ಕರೋಕ್ತಿಯನ್ನನುಗತಕ್ರಮದೆ ಬಗೆದು ಹೇಳಿಕೆಯೊಳ್ ಜನಿತವಿಭೇದಮುಮಂ ಪೇಟ್ವೆಂ (ಕಶಬ್ದ. ೨-೦೯೦). ೨. [ಸಂಗೀತ] ಕೊಳಲನ್ನು ನುಡಿಸುವುದರಲ್ಲಿ ಒಂದು ಪ್ರಕಾರ: ಆಲಾಪ . . . ಹೇಳಿಕೆ . . . ವ್ಯಾಪ್ತಿ ಮುಂತಾದಿ ಪ್ರತ್ನಾಲ್ಕು ತೆಜವಲ್ಲಿ . . . ಭೇದವಟಿದಾಲಾಪಿಸಿ (ವಿವೇಕ. ೨೩೭).

[< ಸಂ. ಪ್ರಹೇಲಿಕಾ]

**ಪೇಳಿಗೆ** ' ಪೆಟ್ಟಿಗೆ ' ನೋ.

**ಪೇಳಿಸು** ' ಪೇಟಿಸು ' ನೋ.

**ಪೇಳು** ' ಪೇಟ್ ' ನೋ.

**ಪೇಳ್ಕೆ** ' ಪೇಟ್ಕೆ ' ನೋ.

**ಪೇಳ್ಗೆ** ' ಪೆಟ್ಟಿಗೆ ' ನೋ.

**ಪೇಱಿಸು, ಪೇರಿಸು₁, ಹೇರಿಸು, ಹೇಱಿಸು** (ಕ್ರಿ). ೧. (ಭಾರವನ್ನು) ಹೊರುವಂತೆ ಮಾಡು; ಹೊರಿಸು: ಶೀವಿರ್ದ ನಿಖಿಳಭಂಡಾರಮಂ ತೆಗೆಸಿ ನಾನಾವಸ್ತುನಿಚಯಮಂ ಪೇಱಿಸಿ ಸಮಸ್ತಸೇನಾವಿತತಿಸಹಿತ . . . ಪೊಱಮಟ್ಟನು (ಶ್ರೀಪಬಾ. ೯-೬೭). **ಪೇರಿಸು₁:** ೨. (ವಸ್ತುಗಳನ್ನು)ಒಂದರ ಮೇಲೊಂದರಂತೆ ಇಡು; ಅಡುಕು: ಮಡಿಕೆಗಳನ್ನು ಪೇರಿಸಿ ಟಟ್ಟಿಕೊಟ್ಟನು (ಕಶಾವಂ. IV, ೩೭); ಬಲಭಾಗದಲ್ಲಿ ಪೇರಿಸಿದ್ದ ಹಾಸಿಗೆಸುರುಳಿಯನ್ನೇರಿ ಕುಳಿತಳು (ವಾಷಿಟಿ. ೫); ಹೀಗೆ ಬೆಳವಣಿಗೆಯು ಪದರಗಳು ಒಂದರ ಮೇಲೊಂದನ್ನು ಪೇರಿಸಿಟ್ಟಂತೆ ಕಾಣುತ್ತವೆ(ಹಸುಹೂ. ೨೮೩). **ಹೇರಿಸು:** ೧. ವಿವಿಧರತ್ನಾಭರಣಕಾಂಚನನವಮಕೂಲಂಗಳನು ಅವರವರ ತೆರನರಿತು ಹೇರಿಸಿಪುಳು ವಿಚಿತ್ರದಲಿ (ಕೋಣಗದು. ೦೩-೯); ಹೊಗಳಿಕೆಯ ಹೊರೆಯನ್ನೇ ಹೇರಿಸುತ್ತಿದ್ದರು (ಕಂಕ. ೯೨). **ಹೇಱಿಸು :** ೧. ಕೇರಳರ ಸದೆದು ಮಹಾರ್ಘರತ್ನಾವಳಿಯ ಹೇಱಿಸಿದನು ಸುಚಿತ್ರಾಂಬರ ವಿಲೇಪನವ (ಕುವ್ಯಾಸ. ೫-೨೦); ಅತಿಸುಮ್ಮಾನದಲಿ ಶಿಶುಪಾಲ ಹೇಱಿಸಿದನು ಮಹಾಧನವ (ಕುವ್ಯಾಸ. ೯-೩).

[ಪೇಱು$_1$ + – ಇಸು$_2$]

**ಪೇಱು₁, ಪೇರು₁, ಹೇರು₁, ಹೇಱು₁** (ಕ್ರಿ). ೧. (ವಸ್ತುಗಳನ್ನು) ಒಂದರ ಮೇಲೊಂದರಂತೆ ಇಡು; ಅಡುಕು: ತಳಿರ್ಗಳಿಟಿಂಬಿನೊಳ್ಸರದೆ ಪೇಱಿದ ಕೃಷ್ಣಮೃಗಾಜಿನಂಗಳಿಂ . . . ತೋಱಿದಂಮಾಗಳಶೋಕಭೂರುಹಂ (ಕಾದಂಪೂ. ೨೨೭); ಆ ಜವನಿಕ್ಕುಂ ಕೋಣನಿನ್ದಂ ಪಗೆವರ ಪೆಣನಂ ಪೇಱಲೀ ವಿಷ್ಣುವಂ ಕಾದುವನಾವಂ (ಎಕ. V, ಹಾಸನ. ೬೫-೨೫ ; 1149). ೨. ಇಡು; ಇರಿಸು: ವಿಜಯಗಜಮನೇಱಿ ... ಬಲದ ಕೋಡ ಮೇಲೆ ಕೆಯ್ಯಂ ಪೇಱಿ (ಪಂಪಭಾ. ೯-೯೫ ವ); ಗಿರಿಜೆಗೆ ಶಿವಲಿಂಗವಂ . . . ತೋಱಿ ಲೊಡಂ ಕಣ್ದೆಱೆದಲ್ ಪೇಱುವಳೆರಡುಂ ಕರಂಗಳಂ ನೊಸಲೊಳ್ (ಗಿರಿಕ. ೩-೫೪). ೩. ತುಂಬಿಕೊಳ್ಳು; ತಾಳು; ಹೊಂದು: ನನೆಯನೆ ಪೇಱು ಕಿಂದಳಿರೊಳೆಯ್ದೆ ಬಜಲ್ದೆಳವಮಾವು (ಅಂಪು. ೦-೬೫); ಕಾಯ್ದುಱುಗಲಂ ಪೇಱಿರ್ದ ಚೆನ್ದಿಂಗು (ಎಕ. VIII, ಸೊರಬ. ೨೬೫-೬ ; 1231); ಬೇರಿಂದಂ ಕಾಯ್ಗಳಂ ಪೇಱಿದ ಪಲಸುಗಳೆಲ್ಲೆಲ್ಲಿಯುಂ(ಬಾಲಕೃ. ೦-೦೦೬); ಮಾಮರಗಳು ತಳಿರ್ಗಳಂ ಪೇಱಿ ವಿರಹಿಗಳ ಬಾಯಾಱಿ (ಕಂಪು. ೯೫-೯). ೪. ಹೆಚ್ಚಿಸು; ಅಧಿಕಗೊಳಿಸು: ಮುಂದಪವನಂ ಸಂತೋಷವಂ ಪೇಱಿ (ದಶಕು. ೩-೪). **ಪೇರು₁:** ೨. ಬೀಳ್ದ ಕಲ್ಲೊತ್ತಲೆಯಮನಾರ್ಯಂ ಪೇರಿರೆಂದೊರೆಯಲು ಕಲ್ಲುಗಳನೆಲ್ಲ ಪೇರಲು (ಮಹಾಂಕೇ. ೨೦-೩೩); ತನ್ನ ಕುಕ್ಕೆಯನ್ನು ನಿಧಾನವಾಗಿ ಮಂಡೆಯ ಮೇಲಿನ ಚೆಂಡಿನ ಮೇಲೆ ಪೇರಿಕೊಂಡಳು ಕಾವೇರಿ (ಹೊಸಕ್ಕ. ೩೩). **ಹೇರು₁:** ೧. ಅವುಗಳ ಮೇಲೆ ಕಟ್ಟಿಗೆಯ ತುಂಡುಗಳನ್ನು ಹೇರಿ

. . . ಓಪಾಯಿಯನ್ನು ತುಂಬುತ್ತಾರೆ (ಮುಂಬಯಿ. ೪-೩೫). ೫. ಭಾರವನ್ನು ತುಂಬು,–ಹೊರುವಂತೆ ಮಾಡು : ಹೇರುವ ಮಾನ್ಯದ ಎತ್ತು ನಡೆ ೫೦ (ಎಕ. VII, ಶಿಕಾಪು. ೨೮-೪೩ ; 1670); ಇಷ್ಟೊಂದು ಪಠ್ಯ ವಿಷಯಗಳನ್ನು ಮಕ್ಕಳ ಮೇಲೆ ಹೇರುವುದೆ ? (ಶಿಕ್ಷದ. ೦೨೭). ೬. (ಆಲಂ) ಹೊಡೆ; ಬಡಿ : ತನ್ನ ಎರಡೂ ಕೈಗಳಿಂದ ಬಲವಾಗಿ ಪಟಾ, ಪಟಾ ಎಂದು ಏಟು ಹೇರುತ್ತಿದ್ದಳು (ಹಳ್ಳಿಹಾ. ೦೦೯); ಆ ಪುಂಡನನ್ನು ಹಿಡಿದು ಚೆನ್ನಾಗಿ ಹೇರಿದರು (ರೂಢಿ). ಹೇಱು$_1$: ೧. ಹೇಱಿದರು ಹಿಳುಕು ಗಳ ಮೈಯಲ್ಲಿ (ಕುಮಾವ್ಯಾ. ೬-೦೯). ೨. ಕರಂಗಳ್ ಚಿಲ್ಲನಾಂತಿರ್ದೊಡಂ ಮುಱಿದಂತಿರ್ಪರ ಮೇಲೆ ಹೇಱಿ ನಡೆವರ್ (ಸೋಮೇಶ. ೩೩). ೩. ಲೌಕಿಕಧರ್ಮಮಂ ಮೀಱಿ ಕಡುನಿಷ್ಠೆಯಂ ಹೇಱಿ ಪರಮಸುಖದಿಂದಿರ್ಪುದು (ಬಸರ. ೪-೩೩); ತುದಿ ಮೊದಲ್ವನಕ ಹೇಱಿದ ಕಾವ್ಯರಸಫಲಂಗಳನು ಸವಿಸುವುದು (ಹಕಾ. ೦-೧೮) ; ನೂಱಿರೊಡನೈವರನು ಧರಿಸಿರಲಾಱದೀ ಪುರಿಯೆನುತ ದುಗುಡವ ಹೇಱಿ ಹೊದಕುಳಿಗೊಳುತಲಿರ್ದುದು ಹಸ್ತಿನಾ ನಗರ (ಕುಮಾವ್ಯಾಆ. ೬-೩). ೪. ಹೇ[ಪಾಠಾಂ. ತೋ]ಱಿದವು ಹರುಷವನು ತನು ನಗೆದೋಱಿದವು ಮುಖಕಮಲ (ತೊರರಾ. ೦-೮-೨) ; ಅತಿತ್ವರಿತ ಗಮನದಿಂದೆ ಹೇಱಿದುದು ಭಯಮನಹಿಸಂಕುಲಂ (ಚಬಸ. ೪೦-೮). ೫. ಹುಲ್ಲ ಹೇಱುವೊಡೆ ಬಂದಿರುವ ಕವಾಡದ ರ್‍ಞಲ್ಲಿಯ ಕೊಂಬಿನೆತ್ತುಗಳ ನಿಲ್ಲದೆ ತಿರುಹಿಕೊಂಡು (ಕುವರಿ. ೩-೬೨). ೬. ಹೇಱಿದನು ಶತಬಲಿಯ ಕರುಳನು ಕಾಱಿಸಿದನಂಗದನ (ತೊರರಾ. ೩೫-೦೭); ಖಳರಾಯ ತ್ರಿಶೂಲದಿ ಹೆದ್ದೈವವ ಹೇಱಿದನು (ಮೋಹತ. ೪೦-೬೫). ೭. ತುಂಬಿ ಸಾಗಿಸು : ಇಱಿದಡೆ ದಂಡವಿಲ್ಲ ಹೇಱಿವಡೆ ಸುಂಕವಿಲ್ಲ (ಎಕ. VI, ಕಡೂರು. ೦೫೭-೬೩ ; 1191). ೮. ಮುತ್ತು ; ಕವಿ ; ಆವರಿಸು : ಖಡ್ಗ ತೋಮರ ಸುರಗಿ ಹೊಳೆದವು ಕೈದು ಹೇಱಿದವಖಿಳದೆಸೆಗಳಲಿ (ಕುಮಾವ್ಯಾದ್ರೋ. ೫-೮): ಮೀಱಿದ ಕಮ್ಮಲರ್ಗಳ ದೇವಾರ್ಚನೆಗೇಱಿಸಗೊಡದೆಯೆಂಜಲಿಸಿ ಹೇಱಿದ ಪೞಮೊಖಿಂಡುಗಳ ಬಂಧಿಸಿವಂತೆ ನೇಱಿಲ ಪಣ್ಗಳೊಪ್ಪಿದುವು (ಮೋಹತ. ೨೪-೪೫). ೯. ಹೆಚ್ಚುಗಂ ; ಅಧಿಕಗೊಳ್ಳು: ವೈರಾನುಬಂಧದ ಬೇಗುದಿಯ ದುಮ್ಮಾನ ದಳವೇಱಿದುದು ಹೇಱಿತು ಭೀತಿ ಭೂಪತಿಗೆ (ಕುಮಾವ್ಯಾಗ. ೦-೬೨).

ಹೇಱುವೆತ್ತು, ಪೇರ್ವೆತ್ತು, ಹೇಱುವೆತ್ತು=ಭಾರವನ್ನು ಹೊರುವ ಎತ್ತು: ಸಾಸಿರ ಪೇಱುವೆತ್ತಿಂಗೆ ಪೆಜ್ಜುಂಕ . . . [ವ] ರಿಹಾರಂ ಮಾಡಿ ಬಿಟ್ಟಂ (ಎಇ. XXVIII, ೩೫-೫೦ ; ಸು. 1082); ಅಖಿಳಧಾನ್ಯಂಗಳಾ ಪೇರ್ವೆತ್ತುಗಳ ಮೇಲೆ ಬರೆ (ಚಬಸ. ೪೭-೪೦); "ಸ್ಥೌರೀ, ಪೃಷ್ಠವಾಹ್ಯಃ – ಈ ೨ ಹೇಱುವೆತ್ತು" (ಹಲಾಯು. ೪೪-೦೦೦) ; ನವನಿಧಿಯೊಳಗೊಲಿದು ದುಮಂ ಬ್ಯವಹರಿಸಲುಕೆನ್ದು ಪೇಱುವೆತ್ತುವೆತ್ತುಂ ಭುವನದೊಳೆತ್ತಲು ನಡೆದಡೆ (ಎಕ. XI, ದಾವಣ. ೫೯-೮೦ ; 1280).

[ದೇ. ‖ ತಮಿ. ಪೞಕ್ಕು ; ಮಲ. ಪೇಱು ; ತುಳು. ಪೇರು ; ತೆಲು. ಪೇರುಚು]

ಪೇಱು$_2$, ಪೇರು$_2$, ಹೇರ್$_2$, ಹೇರು$_2$, ಹೇಱ್, ಹೇಱು$_2$ (ನಾ). ೧. ಪೇರಿಸಿಟ್ಟುದು ; ಅಡಕಿಲು : ಬಳೆಯ ಪೇಱನಾನೆ ಮೆಟ್ಟಿದಂತೆ ನುರ್ಚುನೂಱಪ್ಪಿನಮುಮ್ಮಂಕಿ (ಶಂಶಭಾ. ೮-೭೭ ವ) ; ಬೆಲ್ಲದ ಪೇಱನಿಲಿ ಪೊಕ್ಕಂತೆ (ಧರ್ಮಾಮೃ. ೨-೭೦) ; ಪತ್ತಿಯ ಪೇಱುಗಳಂ ಕೊಯಿದೆತ್ತುಗಳು ಬಿಲ್ಲರಾಜರೊಯ್ದಡೆ (ಶೃಂಗಾಸ್ತ್ರ. ೪-೨೨). ೨. (ಒಂದು ಪ್ರಾಣಿ ಅಥವಾ ಒಬ್ಬ ಆಳು ಹೊರುವಷ್ಟು ತೂಕದ) ಹೊರೆ ; ಭಾರ : ಅಡಕೆಯ ಪೇಱಿಂಗೆ ಮೂನಱಿಱು (ಎಇ. IX, ೨೨-೮ ; 800); ಒಂದು ಪೇಱು ಪೊನ್ನಂ ಕುಡುವೆಂ (ಪಮ್ಪಾರಾ. ೦೬೭-೨೨) ; ದೇವರಿಗೆ ನನ್ದಾದೀವಿಗೆಗೆ ತಿಂಗಳ್ದಿಂಗಳಿಗೆ ಬಿಟ್ಟ ಎಲೆಯ ಪೇಱು ೧ (ಸೌಇಇ. IX-i, ೦೪೯-೫ ; 1081). ೩. ಚೀಲ : 'ತೂಗಲ್ವೇಱು' ಪರಾ. ಪೇರು$_2$: ೪. ತಕ್ಕಡಿಯನ್ನು ಸಮತೋಲನಗೊಳಿಸಲು ಪರಡೆಗಳಲ್ಲಿ ಹಾಕುವ ಬಟ್ಟು ಇತ್ಯಾದಿ ಭಾರವಾದ ವಸ್ತು: 'ಏರುಪೇರು', 'ಪೇರುಕಟ್ಟು' ಪರಾ. ಹೇರ್$_2$ : ೧. ಇದು ವರಹ ರೂಪಾಯಿ ಹೇರ್ಗಳಿವು ಕನಕಾಭಿಷೇಕದಕ್ಷಿಣೆಗಿದು (ಕೃಷ್ಣಾಭಿ. ೨-೨೫). ಹೇರು$_2$ : ೨. ಉಭಯಮಾರ್ಗದ ಬೇಹಾರಿಗಳ ಹೇರುಗಳಿಗೆ ಕೊಂಬು ಕಟ್ಟಣೆ (ಎಕ. XII, ಶಿರಾ. ೭೬-೭ ; 1379) ; ಹಸುಗಳ ಮೇಲೆ ಹೇರುಗಳನ್ನು ಏತ್ತದೆ . . . ರಕ್ಷಿಸುತ (ಕೃಪಾಅ. ೦೦೪) ; ಉಳುವೆ ನಾ ಭೂಮಿಯನು ; ಹೊರುವೆ ನಾ ಹೇರನ್ನು (ಶೀಗಟ್ಟ. ೦೭೩). ೫. (ಆಲಂ) ಹೊಣೆ ; ಜವಾಬ್ದಾರಿ : ನಾನಿನ್ನೂ ಕಾಲ ಮೇಲೆ ನಿಲ್ಲೋದೇ ಕಷ್ಟವಾಗಿದೆ. ಆಗಲೇ ಬೆನ್ನ ಮೇಲೆ ಹೇರು ಹೊರು ಅಂದರೆ ? (ಸಂದನ. ೦೪). ಹೇಱ್ : ೩. ಹೇರ್ಗಳು ಬಿಸುಟ ಹೋರಿಗಳ ಚಪ್ಪರಣೆಯಿಂ ನಿಲಿಸಿ ಮೂಗುನೇಣಿಡುತೆ ಹೇರ್ಗಳ ಹೊಲಿವುತೆ (ಚಬಸ. ೪೭-೪೭). ಹೇಱು$_2$ : ೨. ಉಪ್ಪಿನ ಹೇಱು ಅಯ್ವತ್ತು (ಬೊಂಕಶಾ. ೦೪೩೭, ಹಾವಗಲ್. ೭೩-೨೦ ; 975) ; ಕೋಣನ ಹೇಱಿಂಗೆ ಕುನ್ನಿ ಬಸುಗುತ್ತಬಡೆವಂತೆ ತಾವು ನಂಬರು ನಂಬುವವರ ನಂಬಲೀಯರು (ಬಸವ. ೭೭೩) ; ಹೇಱನೊಪ್ಪಿಸಿದವಂಗಲ್ಲಿಯದು ಸುಂಕ (ಹಕಾ. ೮-೫೪) ; ಎತ್ತು ಹೇಱುಗಳಿಂದ ಹೊತ್ತು ಮಾಱುವುದಲ್ಲ (ತುರಂವ. ೦-೦೨೭-೩).

[ <ಪೇಱು$_1$./ ತಮಿ. ಪೆಱು$_m$ ; ಮಲ. ಪೇಱು; ತೆಲು. ಪೆಱಿಕ ]

Δ ಪೇಱೊರ್ಪೆ 'ಪೇರೊಟ್ಟಿ' ನೋ.

Δ ಪೇಱೊರ್ಬೆ 'ಪೇರೊಟ್ಟಿ' ನೋ.

ಪೇೞ್, ಪೇಳ್, ಪೇಳು, ಹೇಳ್, ಹೇಳು, ಹೇೞ್, ಹೇೞು (ಕ್ರಿ). ಪೇಳ್ದ, ಪೇೞ್ದ (ಭೂತಕೃ). ಪೇರ್ದು, ಪೇಳ್ದು, ಪೇೞ್ದು, ಹೇಳ್ದು (ಭೂತನ್ಯೂ). ೧. ತಿಳಿಸಂ ; ನುಡಿ ; ಅರಿಯುವಂತೆ ಮಾಡು : ಏನೇನಭಿಮತಮಂ ಪೇೞ್ ನೀನಾಸ್ವಾದಿಸಿದೆ ದೇವಿಯರ ಮನೆಯೊಳ್ (ಕಾದಂಪೂ. ೮೫) ; ನೀವೆನಗೊಂದಪೂರ್ವಮಪ್ಪ ಕಥೆಯಂ ಪೇೞ್ವೇೞ್ಪುದು (ಶಂಕಶಂ. ೦೦-೦೦) ; ಇಂದು ನೃಪಂಗೆ ಸಂಭವಿಸಿದಂ ಭುಜಶಕ್ತಿ ಸಮಿರನಂದನಂ ನಂದನನೆಂದು ಪೇರ್ದು (ಕುಸುಮಾ. ೬-೦೦೪). ೨. ನಿರೂಪಿಸು ; ವಿವರಿಸು ; ವಿಶದಪಡಿಸಂ : "ಪೇೞ್ದಂ = ನಿರೂಪಿಸಿದಂ" (ಕಮುತ. ಶಂ. ೦) ; ಕಟ್ಟಿಪ್ಪಿನಾ ವೆಟ್ಟದುಳ್ಳಿ ಸಂಗಂಗಳ ಪೇೞ್ದ ಸಿದ್ಧಸಮಯನ್ತಪ್ಪಾದೆ ನೋನ್ತು (ಎಕ. II, ೨೭-೦ ; ಸು. 700) ; ನೀವಿರ್ಪರುಂ ಬಂದುದಮುಮಂ ಮನೆವಾೞ್ತಿಯುಂ ಪೇೞಿಂ (ಶಂಶಭಾ. ೯-೦೦ ವ) ; ಬಣ್ಣಸರಂಗೋದಂತೆ ಧರ್ಮಶಾಸ್ತ್ರಂಬೇೞ್ವರ್ (ಸಮುಶ. ೩-೭೭). ೩. ಕಾವ್ಯ ರಚನೆ ಮಾಡು : ಪ್ರಕಟತರವಸ್ತುವಿಸ್ತರವಿಕಲ್ಪವಿದನಲ್ಲದಾಗದಾಗದು ಪೇೞಲ್ (ಕವಿರಾ. ೦-೨೮) ; ಛಂದಛಂದದಿಂ ಪೇೞ್ದಾಡುವುದಂ ಕಂಡು (ಪಮ್ಪಾರಾ. ೬೪-೦೪) ; ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾರತಮನಪೂರ್ವಮಾಗೆ ಸಲೆ ಪೇೞ್ದ ಕವೀಶ್ವರರಿಲ್ಲ (ಪಂಭಾ. ೦-೦೦) ; ಕರ್ಣಾಟಕಲಕ್ಷಣಶಬ್ದಶಾಸ್ತ್ರಮಂ ಲಾಕ್ಷಣಿಕರ್ಪೇೞ್ದಿಂದು ಬೆಸಸೆ ಬಗೆವುಗೆ ಪೇೞ್ದಿಂ (ಶಮದ. ೩). ೪. (ಯುದ್ಧಕ್ಕೆ ಹೋಗುವಂತೆ) ವಿಧಿಸು ; ನಿಯಮಿಸು : ಅಂತು ಭೀಮಸೇನನನಿಂದ್ರನ ಮೇಲೆವೇೞ್ದು ಪೂರ್ವದಿಗ್ಭಾಗಕ್ಕೆವೇೞ್ದು (ಶಂಶಭಾ. ೬-೨೮ ವ). ೫. ನಿರ್ದೇಶಿಸು ; ಸೂಚಿಸು : ಆಕೆ ಪುರೋಹಿತನ ಪೇೞ್ದಾಜೆಯೊಳ್ ಲಾಜೆಯವಗ್ನಿಕುಂಡದೊಳ್ ಸುರಿದು (ಶಂಶಭಾ. ೩-೬೫ ವ). ಪೇಳ್: ೧. ಪನ್ನಿರ್ಮ್ಮತ್ತರ್ಕ್ಕೆಯ್ಯುಂ ಮಾನ್ಯಂಗುಡುಗೆನ್ದು ಪೇಳೆ (ಇಆ. XII. ೨೨೩-೫ ; 929) ; ತತ್ಪುರದ ಮಹಾಜನದ ಮಹಿಮೆಯುಂ ಪೇಳ್ವಡೆ (ಸೌಇಇ. XI-ii, ೦೨೭-೦ ; 1080) ; ಸರ್ವಾಭರಣನಲ್ಲಿಗೆ ಕಳಿಪುವುದೆಂದು ನಾರದಮುನಿ ಪೇಳ್ದು ಪೋಗೆ (ರಾಜಶೇ.೨ ತಾಗರ್ಕ) ೩. ರಸಪೂರಿತ ಸುಪ್ರಬಂಧ ವಿಲಕ್ಷಣವೆಸೆವಂತೆ ಪೇಳ್ದಪೆನು (ಜೋಹತ. ೦-೨೭). ೫. ಪಾವಿಸೆಟ್ಟಿ ಪೇಳೆ ಬರೆದಂ (ಪ್ರಕಾ. ೦೪೩೭, ೫೫-೩೨ ; 1064).

೬. ಹೆಸರಿಟ್ಟು ತಿಳಿಸು; ಗುರುತಿಸು: ಮಂತ್ರೀಶ ಪೇಳ್ದ ಪೇಳ್ದರಿಗುಡು ಗೊಜೆಯಿತ್ತು ಮನ್ನಿಸಲು (ಪೋಹಚ. ೧೦-೩೯). ಪೇಳು : ೧. ಪೊಗಳ್ವಲ್ಲಿಗಾತಳವೆ ಪೇಳು ಸಾಸಿರ್ವರ ಖ್ಯಾತಿಯುಂ (ಶಾಸ. V, ೬೪೯-೨೦ ; 1044); ಎಂತುಸುರದಿರ್ಪೆನಿನ್ನೆಂತು ಪೇಳುವೆನಿದಂ (ತಿರುಚ. ದೇ. ೨೦ ೬); ಮಂದಗಮನೆ ಇವನಾರೆ ಪೇಳಮ್ಮ (ಪುರಂದ. ೨-೬೦-೦); ಒಡೆಯನಿರಿಸಿ ದಂತಿರ್ಪುದಲ್ಲದೆ ಪೇಳೊಡವೆಗೆ ಬೇಜಾರವುಂಟೆ (ಹರಿಶ. ೦-೪೪). ೨. ಬಣ್ಣಿಸಿ ಪೇಳುತ್ತಿಪ್ಪುದು (ಪ್ರಶಂ. ೦೯೩೬, ೩೨-೦೩ ; 1140). ೩. ಸಕಲ ಸೂರಿಗಳ ಪಾದಾರವಿಂದವ ನೆನೆದೀ ಕೃತಿಯನು ಮೇದಿನಿ ನಲಿಯೆ ಪೇಳು ವೆನು (ಕಂಸವ. ೦-೦೨). **ಹೇಳ್** : ೫. ಎಲ್ಲರ ತಬುಬಿ ಹರ್ಮ್ಯವ ಹತ್ತಿ ಹೇಳ್ವಳು ಫುಲ್ಲಶರಾತ್ಮಸಂಭವಗೆ (ಪೋಹಚ. ೩೩-೩೯); ದೇವಾಲ್ಯಮಂ . . . ಮಾಡೆಂದೊಸೆದು ಹರಿಹರಂ ಹೇಳ್ದು ತಾಂ ಮಾಡಿಕೊಣ್ಡಾವ್ (ಎಕ. XI, ದಾವಣ. ೨೫-೬೦ ; 1224). ೭. ಶಾಸನದಲ್ಲಿ ಬರೆಸಿ ದಾನ ಮಾಡು : ಗವುಡುಗಳಿಯಲ್ಲಿ ತಮ್ಮ ಕೊಡಗಿಯುಲು ಖಣ್ಣಾಗಗದ್ದೆಯುಂ ಹೇಳ್ದು (ಎಕ. V, ಹಾಸನ. ೩೩-೬೨ ; 1170). **ಹೇಳು** : ೧. ಜೀವ ಪರಮನ ಮಧ್ಯದಲ್ಲಿ ನಿಂದು ಅರ‍್ಯಕೆಗೊಂಬರಾರು ಹೇಳರಣ್ಣಾ (ಕೋಂಶಾಂ. ೪-೯); ಕಡೆಗೆ ಧರ್ಮಜ ಹೇಳು ಕೊಂದವನಾರು ನಂದನನ (ಕುಪ್ರಾದ್ರೋ. ೬-೨೬); ಕಬ್ಬಿನಂತಿರಬೇಕು ಬದಿರಂತೆ ರಚಿಸಲೇ ಕಬ್ಬ ಹೇಳೆಲೆ ಸರಸ್ವತಿಯೆ (ಭರತ. ೦-೬). ೨. ರವಕುಳವ ನಾನೇನ ಹೇಳುವೆನವನಿಪತಿ (ಕುಪ್ರಾಕ. ೦-೬). ೩. ತಿಳಿಯ ಹೇಳುವೆ ಕೃಷ್ಣಕಥೆಯನು ಇಳೆಯ ಜಾಣರು ಮೆಚ್ಚುವಂತಿರೆ (ಕುಪ್ರಾಕ. ೦-೦೩). ೪. ಕಾಳಗವ ಮಾಡಲ್ಲದಿದ್ದರೆ ಹೇಳಿದಾ ಕರ್ಪ್ಪೂರನು ತೆತ್ತೀ ಕಲೆಯನುಳುಹಿಕೊಳು (ಸಾಳ್ವಭಾ. ೦೯-೦೦); ದೊರೆ ಹೇಳಿದನೆಂದರೆ ಮರದ ಕಾಯಿ ಬಿದ್ದೀತೆ? (ಗಾದೆ). ೮. ಕಥನ ಮಾಡು ; ಕಥಿಸು : ಆ ದೇವರಲ್ಲಿ ಶಾಸ್ತ್ರವ್ಯಾಖ್ಯಾನಮುಂ ಮಾಡಲುಂ ಪುರಾಣಮುಂ ಹೇಳಲುವೊಬ್ಬುಪಾಧ್ಯಾಯಂಗ್ಗೆ ವರ್ಷವರ್ಷಕ್ಕೆ ಬಂಗುಳಿ ಯೇಳು ಗದ್ಯಾಣ (ಶಾಸ. IX-i, ೨೬೬-೬೨ ; 1160); ಹೆ.[ಶಾಶಾಂ. ಪೇ]ಳಿದ ಹರಿಕಥೆಯ ಕೇಳದವ ಹೊಲೆಯ (ಪುರಂದ. ೦-೦೬೨-೦). ೯. ಗಮನಕ್ಕೆ ತರು : ತಾಂ ಹೇಳದೆ ಸೋಮಭೂಮಿಪತಿಯಲ್ಲಿಗೆ ಬಂದಡೆ ರಾಜ್ಯ ವಾಯ್ತು ಸಲ್ಲೀಲೆಯೊಳು (ಕೊಲ್ಲಾಶಾ. ೯-೪೦ ; 1147). ೧೦. ಕರೆ ; ಆಮಂತ್ರಿಸು ; ಬರಹೇಳು : ಹೇಳದೌತನಕೆ ಬರ ಹೊಲ್ಲ (ಸರ್ವಜ್ಞ. ೦೯೩೩). ೧೧. ದೂರು ; ಚಾಡಿ ಚುಚ್ಚು : ಮೇಲಧಿಕಾರಿಯೊಂದಿಗೆ ಉಳಿದವರ ಮೇಲೆ ಯಾವಾಗಲೂ ಹೇಳೋದೇ ಅವಳ ಸ್ವಭಾವ (ರೂಢಿ). ೧೨. ಒತ್ತಿ ನಂಡಿ,—ತಿಳಿಸು : ನೀನು ಹಾಗೆ ಹೇಳಬೇಡ (ರೂಢಿ). ೧೩. ಪ್ರಕಟಿಸು ; ತೋರ್ಪಡಿಸು : ಕಾಳಿಕೆಯ ಕೈಕೊಂಡು ಸಿರಿಮೊಗ ಹೇಳುತಿದೆ ಭೀತಿಯನು (ಕುಪ್ರಾದ್ರೋ. ೬-೩೭). **ಹೇಟ್** : ೧. ದಾಳಿಂಬ ದೊಳ್ವಣ್ಣನೊಡೆದು ಚಿಮ್ಮಾಗಿಟ್ಟು ಹೇಟಲಳವಡದ ಸಲ್ಲೀಲೆಯೊಳಗಳ ವಟ್ಟು ತೊಟಿದೆಚ್ಚು ಪಾಯ್ವ ತನಿರಸಮುನುಂಡು (ಉದ್ಯಬಿ. ೩-೯೫). **ಹೇಟು** : ೧. 'ಹೇಟುಹ' ಪರಾ.

**ಹೇಳುಹೇಳು** (ದ್ವಿರುಕ್ತಿ) : ಮುಂಗುಳುನಗೆ ನಿನಗೇಕೆ ಬಂದಿತ್ತು ಹೇಳುಹೇಳನಲು[ಶಾಶಾಂ. ಪೇಳೆನಲು] (ಐಸಪು. ೧೦-೫); ಹೇಳುಹೇಳಿ ನ್ನೊಮ್ಮೆ ನುಡಿನುಡಿ ಕೇಳುವೆನು ಕಿವಿಯಾರೆ (ಕುಪ್ರಾಕ. ೫-೨೦); ಹೇಳು ಹೇಳಭಿಮಾನಭಂಗಭಡಾಳಮಾರಿಂವಾಯಿತೆಂಬುದ (ತೊರೆರಾ. ೩-೫-೪). **ಪೇಟ್ ಪಡು, ಪೇಳಿಪಡು** = ಹೇಳಲ್ಪಡು : ಮಹಾಪುರಾಣದೊಳ್ ಪೇಟ್ ಪಟ್ಟುದು (ಚಾವುಂಪು. ೦೬೨); ಪರಮಾಗಮುಂ ಪುಸಿಯೆಂ ದೆಯಪ್ಪೊಡೀ ಸಿದ್ಧಾಂತದೊಳ್ ಪೇಟಿಪಟ್ಟ ಗಣಿತ ಜೋಯಿಸಂಗಳೇಕೆ ತಪ್ಪುವು (ಧರ್ಮಾಮೃ. ೫-೦೯೭); ಫಳನೆಯುದೇ ತೂರ್ಯಗಾಮಿನಿ ಹೇಳಿಪಡುಗುಂ (ಜಿನಚ ೦೬-೨೩). **ಹೇಳದೆ ಕೇಳದೆ** = ಅಪ್ಪಣೆಯಿಲ್ಲದೆ : ಹೇಳದೆ ಕೇಳದೆ ಅಲ್ಲಿಗೆ ಯಾರೂ ಹೋಗುವಂತಿಲ್ಲ (ರೂಢಿ). **ಹೇಳ ಹೆಸರಿಲ್ಲದಂತೆ** = ನಿಶ್ಶೇಷವಾಗುವಂತೆ ; ಸಂಪೂರ್ಣವಾಗಿ : ಅರ್ಜುನನ ಶಕ್ತಿಗೆ ಶತ್ರುಸೈನ್ಯ ಹೇಳ ಹೆಸರಿಲ್ಲದಂತೆ ಓಡಿತು (ರೂಢಿ). **ಹೇಳಿ ಕಳಿಸು** = ಸಂದೇಶ, ವರ್ತಮಾನ, ಅಪ್ಪಣೆ ಮುಂತಾದು ವನ್ನು ಬೇರೆಯವರ ಮುಖಾಂತರ ತಿಳಿಸು ; ಸುದ್ದಿ ಮುಟ್ಟಿಸು : ಈ ಸಂಜೆ ಅವರ ಮನೆಗೆ ಬರಬೇಕೆಂದು ಹೇಳಿಕಳಿಸಿದ್ದಾರೆ (ರೂಢಿ). **ಹೇಳಿ ಕೇಳಿ** = ಎಲ್ಲರಿಗೂ ಗೊತ್ತಿರುವಂತೆ ; ತಿಳಿದೂ ತಿಳಿದು : ನೀವೆ ಕರೆಯದಿರುತಿರೆ ಛಂದವೇನು ನೀವೆ ಹೇಳಿ ? ಕೂಸು ನಾನು ಹೇಳಿ ಕೇಳಿ (ಹೃದಸ. ೨೬-೦೬); ಹೇಳಿಕೇಳಿ ಮೊದಲೇ ಅವಳ ಕೆಲಸ ನಿಧಾನ. ಈಗಂತೂ ಕೇಳುವ ಹಾಗೇ ಇಲ್ಲ (ರೂಢಿ). **ಹೇಳಿಕೊಂಡು ಹೋಗು** = (ಸುಳ್ಳು) ಸುದ್ದಿ ಹಬ್ಬಿಸು ; ಪ್ರಚಾರ ಮಾಡು: ಅವಳು ಆ ಸಣ್ಣ ವಿಷಯವನ್ನು ಎಲ್ಲರೊಡನೆ ಹೇಳಿಕೊಂಡು ಹೋಗಿದ್ದರಿಂದ ಅದೇ ದೊಡ್ಡ ಹಗರಣವಾಗಿ ಹೋಯಿತು (ರೂಢಿ). **ಹೇಳಿಕೊಟ್ಟ ಮಾತು** = ಅರ್ಥ ಮಾಡಿಕೊಳ್ಳದೆ ಬೇರೆಯವರು ಆಡಿದುದನ್ನೇ ಆಡುವುದು; ಗಿಳಿಪಾಠ : ಕಟ್ಟಿ ಕೊಟ್ಟ ಬುತ್ತಿ, ಹೇಳಿಕೊಟ್ಟ ಮಾತು ಎಲ್ಲಿವರೆಗೆ ಬಂದೀತು ? (ಗಾದೆ). **ಹೇಳಿ ಕೊಡು** = ೧. ತಿಳಿಸು : ಇದಕ್ಕೆ ಪೇಚಾಡಬೇಡಿ ಎಂದು ಉಪಾಯ ವನ್ನು ಹೇಳಿಕೊಟ್ಟನು (ಶೀತಶಂ. IV, ೬). ೨. ಕಲಿಸು ; ಬೋಧಿಸು : ಹೀಗೆ ಹೇಳಿಕೊಟ್ಟರೆ ಸ್ವಲ್ಪವೂ ಪ್ರಯೋಜನವಿಲ್ಲ (ಕಳಹು. ೬೬). ೩. ಚಾಡಿ ಹೇಳು ; ಚುಚ್ಚಿಕೊಡು : ಅಕ್ಕಪಕ್ಕದವರು ಹೇಳಿಕೊಟ್ಟು ಅವಳ ಸಂಸಾರ ಹಾಳುಮಾಡಿದರು (ರೂಢಿ). **ಹೇಳಿಕೊಳು, ಹೇಳಿಕೊಳ್ಳು** = ೧. ಬಿನ್ನವಿಸಿ ಕೊಳ್ಳು; ಕೋರು: ಶಾಸನವ ಬರಸಿಕೊಡಬೇಕೆಂದು ನೀನು ಹೇಳಿಕೊಳುಥಾನೆಂದು ನಿರ್ವಾಣ್ಯಯಮಾವನವರು ಹೇಳಿದರಿಂದ ಬರಸಿ ಕೊಟ್ಟದು (ಪ್ರಶಂ. ೦೯೩೩, ೩೦-೨೦; 1730). ೨. ತಿಳಿಸಂ ; ನುಡಿ : ಜನ್ಮ ಇರುವವರೆಗೂ ತಮ್ಮ ಉಪಕಾರ ನೆನಸುವೆನು ಎಂದು ವಿನಯದಿಂದ ಹೇಳಿಕೊಂಡನು (ಮುಂಶಯು. ೪-೫೦). ೩. ದುಃಖ, ಕಷ್ಟ ಮುಂತಾದು ವನ್ನು ಬೇರೆಯವರಲ್ಲಿ ತೋಡಿಕೊಳ್ಳು : ನಾಲ್ಕು ಜನರ ಹತ್ತಿರ ದುಃಖವನ್ನು ಹೇಳಿಕೊಂಡರೆ ಮನಸ್ಸಿನ ಭಾರ ಎಷ್ಟೋ ಕಡಮೆಯಾಗುತ್ತದೆ (ರೂಢಿ). ೪. ಜಂಬ ಕೊಚ್ಚಿಕೊಳ್ಳು : ಸದಾಕಾಲವೂ ತನ್ನ ವಿಷಯ ಬೇರೆಯವರ ಮುಂದೆ ಹೇಳಿಕೊಳ್ಳೋದೆ ಅವಳ ಜಾಯಮಾನ (ರೂಢಿ). **ಹೇಳಿದ್ದು** = ಶಾಸ್ತ್ರಸಮ್ಮತವಾದುದು ; ವಿಧಿವತ್ತಾದುದು : ಸ್ವಯಂ ವರದಲ್ಲಿ ಬ್ರಾಹ್ಮಣರಿಗೇನು ಅಧಿಕಾರ ? ಅದು ಕ್ಷತ್ರಿಯರಿಗೆ ಹೇಳಿದ್ದು (ವಚಥಾ. ೩೩). **ಹೇಳಿ ಬರೆಯಿಸು** = ಯಾವುದಾದರೊಂದು ವಿಷಯ ವನ್ನು ಮತ್ತೊಬ್ಬರು ಬರೆದುಕೊಳ್ಳಲು ಆಜ್ಞಾಪಿಸು:ಆ ಅಧಿಕಾರಿಯು ಆ ಎರಡು ನಿಯಮಗಳನ್ನು ಹೇಳಿ ಬರೆಯಿಸಿದರು (ರೂಢಿ). **ಹೇಳಿ ಮಾಡಿಸಿದ್ದು** = ಸಂಪೂರ್ಣವಾಗಿ ಹೊಂದಿಕೊಳ್ಳುವಂತಹುದು ; ತಕ್ಕುದು : ಈ ಕೆಲಸ ಅವಳಿಗೆ ಹೇಳಿ ಮಾಡಿಸಿದ್ದು (ರೂಢಿ). **ಹೇಳುವವ** = ಗ್ರಾಮದ ನಿರ್ದಿಷ್ಟ ಮನೆಗಳ ಮುಂದೆ ನಿಂತು ಅವರ ಮನೆತನದ ಬಗೆಗೆ ಹೊಗಳಿ ಜೀವನ ನಡೆಸುವವನು ; ಹೆಳವ : ಹೆಳವ ಎಂಬ ಪದವು ಬಹುಶಃ 'ಹೇಳುವವ' ಎಂಬುದರಿಂದ ಬಂದಿರಬಹುದು (ರೂಢಿ). **ಹೇಳುವವರು ಕೇಳುವವರು** = ಅಧಿಕಾರಯುಕ್ತವಾಗಿ ಅಪ್ಪಣೆ ಮಾಡು ವವರು : ಹೇಳುವವರು ಕೇಳುವವರು ಇಲ್ಲದಿದ್ದರೂ ಅವರವರ ಕೆಲಸವನ್ನು ಒಪ್ಪವಾಗಿ ಮಾಡಬೇಕು (ರೂಢಿ).

[ದೇ. ‖ ತೆಲು. ಪೇಲು, ಪ್ರೇಲು ; ಮಲ್ಯೊ. ಪೇಳ್ಕ]

**ಪೇಟ್ಟು₁** 'ಪೇಡಿ₁' ನೋ.

**ಪೇಟ್ಟು₂**, ಪೇಳಿ (ನಾ). ಬುಟ್ಟಿ ; ಗೂಡೆ : ಪಜಿದು ಬಿರ್ದ ಖಚರರ ತಲೆ ಸಂದಣಿಸೆ ವಿಮಾನಂಗಳ ಪೇರಣ್ [ಣಿ] ಪೋಲ್ತುದು ತೆಟಿದ ಮೊಗದ

ವೇಟಿಗಳಿರವಂ (ಸಂಧ್ರಶು. ೬-೩೪). ಪೇಳಿ : ದೇವರ ಪೂಜೆಗಂ ಅಱವಂಟಗೆಗಂ ಬಿಟ್ಟ ಧರ್ಮ್ಮವೆಂತೆಂದಡೆ ಪೇಳಿಯಲುಂ ಪಣವಯ್ದು (ಶಾಇ. IX–1, ೨೨೩-೪೪ ; 1127). [←ತವಿ. ವೇಟ್ಟು. / ಸಂ. ಪೇಟೀ]

**ಪೇಟಿಸು, ಪೇಳಿಸು, ಹೇಳಿಸು, ಹೇಟಿಸು** (ಕ್ರಿ). ೧. ಅಭಿಪ್ರಾಯವನ್ನು ವ್ಯಕ್ತಪಡಿಸುವಂತೆ ಮಾಡು ; ಮಾತನಾಡುವಂತೆ ಮಾಡು; ಹೇಳುವಂತೆ ಮಾಡು : ಶುಕನಾಸನಂದನಂ ಬಂದಪನಾತನಿಂದಮಱಿ ವಂತಿರೆ ಪೇಟಿಸಿ ಮತ್ಪ್ರಪಂಚಮುಂ (ಕಾದಂಬ. ೩೮೨). ೨. ಕಾವ್ಯವನ್ನು ಬರೆಸು ; ಕಾವ್ಯರಚನೆ ಮಾಡಿಸು : ಇಂತು ಪೇಟಿಸಿದ ನರೇಂದ್ರರುಂ ನೆಱೆಯೆ ಪೇಟ್ದ ಕವೀಂದ್ರರುಮಾರ್ ಧರಿತ್ರಿಯೊಳ್ (ಶಂಕಥಾ. ೦೪-೫೩) ; ಮಲ್ಲಪಾರ್ಯನುಮುದಾತ್ತಯಶೋನಿಧಿ ಪುನ್ನಮಾರ್ಯನುಂ ಸವಿ ತವದಂತು ಪೇಟಿಸಿದರ್ (ಶಾಂತಿಪು. ೦ ೩೭). ೩. (ಕಾವ್ಯವನ್ನು) ಓದಿಸು ; ವ್ಯಾಖ್ಯಾನಿಸು : ಪಿತೃ ಪುತ್ರನಂ ಕಥೆಯಂ ಪೇಟಿಸಿದಂ (ಕಣ್ಣ.ಸು. ೨೦೬ ಪ್ರಯೋ). ಪೇಳಿಸು : ೨. ಪಂಪಾಕ್ಷೇತ್ರದೊಡೆಯಂ ವಿರೂಪಾಕ್ಷನೇ ಪೇಳಿಸಿದೊಡೆ ಸವಿನುಡಿಗಳಿಂದೀ ಚೆನ್ನಬಸವಪುರಾಣಮಂ ಪೇಳ್ದನಧಿಕೋತ್ಸವದೊಳು (ಚಬಪು. ೦-೩೦); ಪೊಡವಿಪ ದಳವಾಯಿ ನಂಜರಾಜೇಂದ್ರ ತನ್ನೊಡೆಯನ ಕಾರ್ಯದೇಳಿಗೆಯ ಗಡಣವೆ ಚಿಂತೆಯಾಗೊಲಿದು ಪೇಳಿಸಿದನು (ಕಂಪು. ೦-೨೮); ಸಂತಸದಿ . . . ಪುರಂದರವಿಠಲ ವ್ಯಾಸಮುನಿಗಳು ಪೇಳಿಸಿದರು (ಜಗರಾ. ೬೬). ೩. ಕವಿದು ಪರಿಯೆ ರಸದೊಳ್ಗಂಪು ಕಮ್ಮನೆ ಕವಿತೆಯೊಂದನು ಪೇಳಿಸು (ಹರಿಬ. ೦-೨೬). ಹೇಳಿಸು : ೧. ಗಾಳಿಯಂ ಗಂಟಿಕ್ಕಲುಂ ಕಣ್ಣಾಲಿಗಳೊಳಿಹ ಬಾಲಕರನೊಳು ಸೂಳುಮಾತಂ ಹೇಳಿಸಲು . . . ಬಲ್ಲ ನೆಱೆ ಜಾಣೆ (ಬಸಪು. ೪೨-೪); ಭೀಮಗೆಹೇಳಿಸಿದಳಾ ಫಲುಗುಣನ ಕೈಯಿಂದ (ಕುವ್ಯಾ. ೯ ೨೨); ಮಂದಬುದ್ಧಿಯ ಬಿಟ್ಟು ಬಾಗಿಲ ತೆಗೆಸ ಹೇಳೆಂದ ನಾಯಕಗೆ ಪೇಳಿಸಿದ (ಮೋಹತ. ೩೩-೬೩). ಹೇಟಿಸು : ೪. ವಿಧಿಸು; ಆಜ್ಞಾಪಿಸು : ಅನುಜ್ಞೆ–ಬೆಸನ ಹೇಟಿಸಿಕೊಳುಹ (ನಾಶಿರಾ. ೬).

**ಪೇಟಿಸಿಕೊಳ್**=ವಿವರಣೆಯನ್ನು ಪಡೆ; ವರ್ಣನೆಯ ವಸ್ತುವಾಗು: ಈ ಲಕ್ಷಣಂಗಳನುಳ್ಳ ಕುದಿರೆ ಸಂಪೂರ್ಣಮಪ್ಪಾಯುಷ್ಯಮನುಳ್ಳುದೆಂದು ಪೇಟಿಸಿಕೊಳ್ವುದು (ಲೋಕೋಪ. ೦೦-೭೫ ೬೪೪). [ಪೇಟು + –ಇಸು₁]

**ಪೇಟ್ಕೆ, ಪೇಳ್ಕೆ, ಹೇಳಿಕೆ₁** (ನಾ). ೧. ಹೇಳಿದಂದು; ಅಭಿಪ್ರಾಯ ಕಥನ : ಅನ್ಯರ ಪೇಟ್ಕೆಯದೆಂಬ ಬಟ್ಟೆಯೊಳ್ನಡೆಯದಿರ್ (ಕಾದಂಬ. ೪೦೭); ಕಿಮ್ಮನೆ ಮೂರ್ಖರ ಪೇಟ್ಕೆಗೆ ತಮ್ಮ ಮನಂ ಸೋಲ್ತು (ಧರ್ಮಾಮ್ಮ. ೦೦-೩೪); ತತ್ಪ್ರಪಂಚಮುಂ ನಿಜಪ್ರಿಯಸಖಿಯ ಪೇಟ್ಕೆಯಿಂ ಕೇಳ್ದು (ಜಗಪ.೦೩-೫ ಪ); ಏನ್ ಪೇಟ್ಕೆ ಪೇಟ್ದ ನೀನ್, ಮುತ್ತಬ್ಬೆ, ಘೋರಂ! (ಅಕ್ಕಾ. ೦೦-೦೪೭). ೨. ಆಜ್ಞೆ; ಅಪ್ಪಣೆ : ಸುರಸಿಂಧುವಾರಿನಿರ್ಭರನವರತ್ನಕುಂಭತತಿಗಳ್ . . . ಸುರರಾಜನದೊಂದು ಪೇಟ್ಕೆಯಿಂ ಸುರಪಥದಿಂದೆ ಬಂದುವಭಿಷೇಕಮಹೋತ್ಸವದೊಳ್ ಮುಕುಂದನಾ (ಜಗಪ. ೮-೦೦೩); ಪುರಜ ಸಮಸ್ತಚೈತ್ಯನಿಳಯಂಗಳೊಳಿರ್ಪ್ಪ ಜಿನೇಂದ್ರಪೂಜೆಯಂ ನಿರುಪಮಭಕ್ತಿಯಿಂ ಹಿತಪುರೋಹಿತನೊಪ್ಪಿರೆ ತನ್ನ ಪೇಟ್ಕೆಯಿಂ ನಿರವಿಸಿ (ಪಾರ್ಶ್ವಪು. ೩-೩೩). 'ಪೇಟ್ಕೆಗೇಳ್' ಪರಾ. ೩. ವಿವರಣೆ ; ನಿರೂಪಣೆ : ಚಾಮರಾದಿಗಳನಿಕ್ಕಿದ ಗದ್ದುಗೆಯೊಳ್ ಮಹಾಪ್ರತೀಹಾರರ ಪೇಟ್ಕೆಯಿಂದೆಳಸಿ ಮತ್ತವರಂ ಪೆಸರ್ಗೊಂಡು (ಸೂಕ್ತಿಸು. ೫-೨೪). ಪೇಳ್ಕೆ : ೪. ಕಾವ್ಯರಚನೆ : ಅಗ್ಗಳದ ಪಳಿಗಬ್ಬಿಗರ[ಪೇಳ್ಕೆಯ]ತೆಱದಿ ವಿರಚಿಸದೆ (ಶಾಳ್ವಭಾ. ೦-೪೫). ಹೇಳಿಕೆ₁: ೧. ನಿಮ್ಮ ಹೇಳಿದ ಹೇಳಿಕೆಯಿಂದ ಪಿಂಬೇರ ಮೈಲಿಗೆ ಮೇಳವಾಡುತ್ತಿದ್ದ ಕಾಣಾ ತ್ರೈಜಗದೊಳಗೆ (ಬಸವ.೫೬೭); ಈ ಹಳೆಯ ಹೇಳಿಕೆಗೆ ಹೊಸ ಉಸಿರು ತುಂಬಿದ್ದಾರೆ (ದ್ರಾಬಿಬಿ. ೪೨) ; ಈ ವಿಷಯದಲ್ಲಿ . . . ಒಬ್ಬರ ಹೇಳಿಕೆಯನ್ನಾಗಲೀ, ನಾವು ನಂಬುವುದಕ್ಕಿಲ್ಲ (ಕ್ರಕಾಪ. ೫೪). ೨. ಎಲ್ಲಾ ಸುಂಕಮಂ ಶ್ರೀಮತು ಭುಜಬಲಚಕ್ರವರ್ತ್ತಿ ಬಿಜ್ಜಲದೇವರಸರ ಹೇಳಿಕೆಯಿಂ ರಾಮೇಶ್ವರದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ (ಕಇ. II, ೨೪-೨೮; 1167); ನಮ್ಮ ಹೇಳಿಕೆ ಯಾವುದದನೀ ತಮ್ಮ ಮಿಱದು ನಡೆದನಾದಡೆ ನಮ್ಮ ವಾಘೆಯ ಬೀಳುಕೊಡುವೆವು (ಕುವ್ಯಾಕ. ೮-೫); ಮದನನ ಹೇಳಿಕೆಯೊಳಂ ಮ ವಿದಿತ ಮಂಗಳವಿವಾಹೋಚಿತಕ್ರಿಯೆಗಳಂ ವಿರಚಿಸಿದರು (ಕೈಬಿಣ. ೩೦-೫೪). ೩. ಎನ್ನ ಜನ್ಮಗಳೇಳನೊಲ್ಲದೆ ಬಂದೆವಾವ್ ಜನ್ಮತ್ರಯಂಗಳಲಿ ಹೇಳಿಕೆಯಲಿನ್ನೊಂದು ಜನ್ಮದ ಬಾಳುವೆಯು ನಮಗುಂಟು (ಕೊರಣಾ. ೬-೪೬-೨೧). ೫. ಕರೆ ; ಆಹ್ವಾನ ; ಆಮಂತ್ರಣ : ಪ್ರಾಣೇಶಾಚಾರ್ಯರು ಯಾಕೆ ಬರಲಿಲ್ಲ . . . ಏನು ಹೇಳಿಕೆ ತಲ್ಪಲಿಲ್ಲವೆ ಅವರಿಗೆ ? (ಸಂಸ್ಕಾರ. ೯೦) ; ಎರಡೂ ಕಡೆಯ ಹೇಳಿಕೆಗಳು ಶೀನಮಯ್ಯರಿಗೆ ಬಂದಿದ್ದುವು (ಮರಳು. ೨೬೪). ೬. ಕೋರಿಕೆ ; ಬಿನ್ನಹ : ಹೇಳಿಕೆಯಲಿ ಮಿತ್ರ ಬಳಿತಳು ಕಾಂತಿ ಥಡಾಳಿಪ ಮಣಿಮಂಚದೆಡೆಯ (ಮೋಹತ. ೨೭-೩೩).

**ಹೇಳಿಕೆ ಮಾಡು, ಹೇಳಿಕೆಯನ್ನು ಮಾಡು**=ಕರೆ; ಆಮಂತ್ರಿಸು: ಚನಿಯ ಪ್ರತಿಯೊಬ್ಬರನ್ನು ಕಂಡು ' ನಾಳೆಗೆ ಪೂಜೆ ನಿಶ್ಚಯ ಮಾಡಿದೆ' ಎಂದು ಹೇಳಿಕೆ ಮಾಡಿದ (ಕುಇಕೂ. ೦೪೬) ; ತಿಮ್ಮ ಎಲ್ಲರಿಗೂ ಹೇಳಿಕೆಯನ್ನು ಮಾಡಿದ. ಊಟಕ್ಕೆ ಜನರೂ ಬಂದಿದ್ದರು (ಕುಇಕೂ. ೨೨೮). **ಹೇಳಿಕೆ ಮಾತು**=ಚಾಡಿ ; ಪಿಸುಣು : ಹೇಳಿಕೆ ಮಾತು ಕೇಳಿ ಅನೇಕ ಸಂಸಾರಗಳು ಹಾಳಾಗಿವೆ (ಲೋಪ್ರ). **ಹೇಳಿಕೆಯಾಗು**= ೧. ವರದಿಯಾಗು ; ಅಭಿಪ್ರಾಯ ತಿಳಿ : ಕೊರಳ ತೆತ್ತುದು ಚೂಣಿ ದಳಮುಖ್ಯರಿಗೆ ಹೇಳಿಕೆಯಾಯ್ತು (ಕುವ್ಯಾಭೀ. ೮-೦೪). ೨. ಅಪ್ಪಣೆ ಮಾಡು ; ಆಜ್ಞಾಪಿಸು : ಹೇಳಿಕೆಯಾಯ್ತು ವರಪಾಂಚಾಲರಿಗೆ (ಕುವ್ಯಾಭೀ. ೫-೦೮) ; ಬರಸಿದವು ಬಳಿಕೋಲೆ ಮಣಿಹಾಜರಿಗೆ ಹೇಳಿಕೆಯಾಯ್ತು (ಕೊರಣಾ. ೦-೭-೯). [ಪೇಟು + –ಇಕೆ]

**ಪೇಟ್ಕೆಗೇಳ್** (ಕ್ರಿ). ಆಜ್ಞೆಯನ್ನು ಪಾಲಿಸು : ಗೋವಿಂದುಗಳಂ ಮೊಲೆತೊರೆದಾವುಗಳಂ ಪೇಟ್ಕೆಗೇಳ್ವ ತೊಟ್ಟಿರ್ಕಳ ಸದ್ಭಾವಮನೆಮ್ಮೆಯ ಪಿಂಡಂ ಭಾವಿಸಿ ನೋಡಂಬುಜಾಕ್ಷಿ ಚಿತ್ರೋತ್ಸವದಿಂ (ಧರ್ಮಾಮ್ಮ. ೩-೦೦೭ ಅಡಿ). [ಪೇಟ್ಕೆ + ಕೇಳ್]

**ಪೈ₁** (ಗು). ೧. ಮೇಲಿನ ; ಹೆಚ್ಚಿನ : ' ಪೈಪೋಟಿ ' ಪರಾ. ೨. ಹೊರಗಿನ ; ಬಾಹ್ಯ : (*). (ನಾ). ೩. ಮೇಲುಗಡೆ ; ಮೇಲು ಭಾಗ: (*). [←ತೆಲು. ಪೈ, ಪಯಿ]

**ಪೈ₂** ' ಪಾಯಿ₃ ' ನೋ.

**ಪೈಂಗಲ, ಪೈಂಗಳ** (ನಾ). ಚಾಂದ್ರಮಾನಗಣನೆಯ ಪ್ರಕಾರ ಅರುವತ್ತುಸಂವತ್ಸರಗಳಲ್ಲಿ ಐವತ್ತೊಂದನೆಯ ಸಂವತ್ಸರ; ಪಿಂಗಳ. ಪೈಂಗಳ : ಆ ವರ್ಷವೇ ಪ್ರಭವ ವಿಭವ . . . ನಳ ಪೈಂ[ಶಾಕಾಂ. ಪಿಂ]ಗಳ ಕಾಳಾಯುಕ್ತಿ . . . ಅಕ್ಷಯವೆಂದಱುವತ್ತುತೆಱನಾಹುದು (ಶಿವೇಕ. ೨೬೩). ' ಪಿಂಗಲ ' ಪರಾ. [ಸಂ.]

**ಪೈಂಗಳ** ' ಪೈಂಗಲ ' ನೋ.

**ಪೈಂಜಣ** ' ಪೈಜಣ ' ನೋ.

**ಪೈಂಟು** ' ಪಾಯಿಂಟು ' ನೋ.

**ಪೈಕ** ' ಪಯಿಕ ' ನೋ.

**ಪೈಕರಿ** (ನಾ). ತಾತ್ಕಾಲಿಕ ಬಾಡಿಗೆದಾರ ಅಥವಾ ಒಂದು ಊರಿನಲ್ಲಿ ವಾಸವಾಗಿದ್ದು ಇನ್ನೊಂದು ಊರಿನಲ್ಲಿರುವ ಜಮೀನಿನ ವ್ಯವಸಾಯ ಮಾಡುವವನು : (ಕೈಶಗ. II, ೫೫೮). [?]

**ಪೈಕಿ, ಪಯಿಕಿ** (ಅ). ಸಂಬಂಧಿಸಿದುದರಲ್ಲಿ ; ಸೇರಿದುದರಲ್ಲಿ : ನೆಲಮಂಗಲತಾಲೂಕು ಪೈಕಿ ಹೇಗುಂದ (ಕೊಂಕಶಾ. ೦೪೪೦, ಸಿಡಿ. ೨೬-೮; 1266);

ಬಳುಕಾರವ ಪೈಕಿ ಕೈಲಿಗೆರೆ ಗ್ರಾಮದ ಸಾಧನಪ್ರತಿ (ಪ್ರ.ಅಂ. ೦೯೩೯. ೨೫-೦ ; 1394) ; ರಾಯರ ಶಿಷ್ಯರ ಪೈಕಿ ಯಾರು ಯಾರು ಅನುಭವಸ್ಥರು (ರಾಘು. ೬೯). **ಪಯಿಕಿ :** ನಮ್ಮ ಮೊದಲನೇ ಆವೃತಿಯ ರಿವಾಜ ಪುಸ್ತಕ ದೊಳಗಿನ ಪಾನು ೭೭ರ ಪಯಿಕಿ ೭ನೇ ಕಲಮಿನಲ್ಲಿ ಸೂಚನಾ ಪ್ರಸಿದ್ಧ ಮಾಡಿದಾಗ್ಯೂ (ಮುಂಬಾ. ೨೦೭). [←ಮರಾ. ಪೈಕೀ]

**ಪೈಗಂಬರ್** 'ಪೈಗಂಬರ' ನೋ.

**ಪೈಗಂಬರ, ಪೈಗಂಬರ್** (ನಾ). ದೇವರ ಸಂದೇಶವನ್ನು ಸಾರು ವವನು ; ಪ್ರವಾದಿ : ಮಹಮ್ಮದನು ಪೈಗಂಬರನೆನಿಸಿ ಮಕ್ಕಳ್ಗೆ ಮರಳಿದನು (ಚಾಂಕ್ರ. II. ೯೩೩) ; ಪೈಗಂಬರನು ನೀನೆ, ಮರಿಯಾತ್ಮಜನು ನೀನೆ ಎಂಬ ಸತ್ಯವನೀ ಜಗತ್ತರಿವುದೆಂದು? (ಗೀಅಂ. ೦೯-೯). **ಪೈಗಂಬರ್ :** ಇಸ್ಲಾಂಸಂಸ್ಕೃತಿಗೆ ಆದ್ಯಪ್ರವರ್ತಕ ಪೈಗಂಬರ್ ಮಹಮ್ಮದ್ (ಇಸ್ಲಾಂಸಂ. ೦). [←ಪಾರ. ಪೈಗಂಬರ್, ಪೈಗಾಂಬರ್ ; ಹಿಂ. ಪೈಗಂಬರ್ ; ಮರಾ. ಪೈಗಂಬರ್, ಪೇಗಂಬರ್]

**ಪೈಗಸ್ತಿ, ಪೈಗಸ್ತು** (ನಾ). ೧. ಪಹರೆ ; ಗಸ್ತು : ಎರಡು ದಿನಗಳು ಒಂದೇ ಸಮನಾಗಿ ಸರಸ್ವತಿಯ ಮನೆಯ ಬಳಿ ಪೈಗಸ್ತಿ ತಿರುಗಿಸಿ ಗಣೇಶ ಹೊಸ ಸುದ್ದಿಗಳನ್ನು ತಂದು ದಣಿಗೆ ಒಪ್ಪಿಸಿದ (ಶಹಸಂ. ೨೦೦). **ಪೈಗಸ್ತು :** ೨. ಹೆಚ್ಚಿನ ಮೇಲ್ವಿಚಾರಣೆ ಮಾಡುವವನು; ಮೇಲ್ವಿಚಾರಕ : (*). ೩. ಕಾವಲುಂದಳದವನು; ಗಸ್ತುತಿರುಗುವವನು : (*). ೪. ಸೇವಕ : ರಾಮನಾಥಯ್ಯನವರ ಜತೆ ಬಂದಿದ್ದ ಅವರ ಪೈಗಸ್ತಿಗೆ ಹೊರಗೆ ಎಲೆ ಹಾಕ ಹೇಳಿ, ಅವರೊಂದಿಗೆ ಶಾಸ್ತ್ರಿಗಳು ಊಟಕ್ಕೆ ಕುಳಿತರು. (ಮುಯ್ಯಮು. ೯೩).
[←ಹಿಂ. ಪೈಗಶ್ತೀ; ಮರಾ. ಪೈಗಸ್ತ./ತೆಲು. ಪೈಗಸ್ತಿ]

**ಪೈಗಸ್ತು** 'ಪೈಗಸ್ತಿ' ನೋ.

**ಪೈಗು, ಪೈಗೋ** (ನಾ). ೧. ಬರ್ಮಾದ ಸಮೀಪದಲ್ಲಿರುವ, ಕುದುರೆ ಗಳಿಗೆ ಪ್ರಸಿದ್ಧವಾದ ಒಂದು ದೇಶದ ಹೆಸರು : (*). ೨. "ಒಂದು ಜಾತಿಯ ಕುದುರೆ, ತಟ್ಟು" (ರವಾಕಾಂ. ೩೯೭). **ಪೈಗೋ :** (*).

**ಪೈಗೋ ಟಾಂಕ್ಣ**=ಪೈಗೋದೇಶದ ಉತ್ತಮಜಾತಿಯ ಕುದುರೆ : ಜವನಃ, ಜವಾಧಿಕಃ—ವೇಗದಿಂದ ಅಧಿಕವಾದ ಕುದುರೆಯ ಹೆಸರು . . . ಅರಬ್ಬೀಟಾಂಕ್ಣ, ಪೈಗೋಟಾಂಕ್ಣ, ಮುಂತಾದವುಗಳು (ಸಿದ್ಧಾಂತಿ. ೨೯೯). [←ಮಲಯ. ಪೈಗು / ತಮಿ. ಪೈಕೋವ್ವೈ]

**ಪೈಗೋ** 'ಪೈಗು' ನೋ.

**ಪೈಚುಕಿ** (ನಾ). ಒಂದು ಬಗೆಯ ಸಸ್ಯ : "ಪೈಚುಕಾ_ಕುರುಟಿಗೆ, ನಾಯಹತ್ತಿ" (ಓಷಂ. ೦೦೩). [?]

**ಪೈಜಣ, ಪೈಂಜಣ, ಪೈಜಣೆ, ಪೈಜಣು** (ನಾ). ೧. ಕಿರುಗೆಜ್ಜೆಗಳಿಂದ ಕೂಡಿದ ಕಾಲಿನ ಆಭರಣ ; ಅಂದುಗೆ ; ನೂಪುರ : ಆಕೆಯ ಕಾಲಲ್ಲಿ ಇನ್ನೂ ಪೈಜಣಗಳಿದ್ದು ಆಕೆಯು ನಡೆಯುವಾಗ ಅವುಗಳ ಸಪ್ಪಳದಿಂದ ಅಲ್ಲಿ ನಿಂತವರ ಎದೆಯು ಖಿಲವಾಯಿತು (ಗಾಂಗಂ. ೦೬೩) ; ಕಾಲೊಳಗಿನ ಪೈಜಣದ ರತ್ನಪ್ರಭೆಯು ಅವಳ ಪ್ರಯಲ್ಲಿ ಹಬ್ಬಿರುವುದು (ಮುಂಬಯಿ. ೫-೩೦೦). ೨. ಗೆಜ್ಜೆಯ ನಾದ : ಬೇಸಗೆಯ ನಿಟ್ಟುಸಿರು ಮಳೆವನಿಯ ಪೈಜಣಕೆ ಕುಣಿದು ಕೊನರುವ ಹಸಿರು (ಸಂಪು. ೯೨-೩). **ಪೈಂಜಣ :** ೧. ಬಾಲೆಯರ ಕಾಲಲ್ಲಿ ರುಳಿ ಪೈಂಜಣ ಗಿಲಿಗಿಲಿ ಎಂದು ಸುಡದಾವ (ಸಿದ್ಧಕೃ. ೦೭-೬೦). **ಪೈಜಣೆ:** ೧. ಹುಡುಗಿಯ ರತ್ನಾಭರಣಗಳ ತೊಡಿಗೆಯ ಪೈಜಣ ಚಾದರದುಡಿಗೆಯ ತ್ರಿಭುವನ ಮೋಹಿಪ ಬರೆ ಬೆಡಗಿಯ ಕಂಡಾಗ . . . ಖಳರು ಸೋಲುತ (ಸಮುಮು. ೨೯). **ಪೈಜಣು :** ೧. ಅವುಗಳ ಕೋಡು ಗಳಲ್ಲಿ ಸೆಟ್ಟರ ಹೆಣ್ಣುಮಕ್ಕಳ ಕಾಲೊಳಗಿನ ಬೆಳ್ಳಿಯ ಸರಪಳಿ, ಪೈಜಣು ಗಳು ಒಪ್ಪುತ್ತಿದ್ದುವು (ಶಹೋಶ. ೨೦೨).
[←ಹಿಂ. ಪೈಜನೀ, ಪೈಂಜನಾ ; ಮರಾ. ಪೈಜಣ್, ಪೈಂಜಣ್]

**ಪೈಜಣೆ** 'ಪೈಜಣ' ನೋ.

**ಪೈಜಣು** 'ಪೈಜಣ' ನೋ.

**ಪೈಜಾಮ** 'ಪಾಯಜಾಮ' ನೋ.

**ಪೈಜಾಮಾ** 'ಪಾಯಜಾಮ' ನೋ.

**ಪೈಜಾರ** 'ಪೈಜಾರು' ನೋ.

**ಪೈಜಾರು, ಪೈಜಾರ** (ನಾ). ಜೋಡು ; ಮೆಟ್ಟು ; ಪಾದರಕ್ಷೆ : ಏಕಲವ್ಯನು ರತ್ನಖಚಿತವಾದ ಪೈಜಾರುಗಳನ್ನೂ . . . ಹಿಡಿದು (ಕೃಪಾಸ. ೦೨೦). **ಪೈಜಾರ :** ಪೈಜಾರದಿಂದ ಒಂದು ಪೆಟ್ಟು ತಪ್ಪಿಸಿದ್ದು ನಿಶ್ಚಯವು (ಕಸಾರ. ೫೦). [←ಅರ. ಪಾರ. ಹಿಂ. ಮರಾ. ಪೈಜಾರ್]

**ಪೈಜೆ** (ನಾ). ಶರತ್ತು ; ಕರಾರು ; ಪಣ : ಶಿಳಿವೆನಾತನ ನಿಜಪನಥವಾ ಸೆಳೆದನಾದೊಡೆ ಮುಟ್ಟೆ ಹಿಡಿಕೊಂಡೆಳೆವು ತಹೆ ನಾನೆನುತ ಪೈಜೆಯ ನುಡಿದಳಾ ಮಾಯೆ (ಪ್ರಭುಲೀ. ೨-೪೦) ; ಎಲೆಲೆ ಗರುವೆ ನಿನ್ನಯ ಪೈಜೆಯಂ ಸಲಿಪನಿನ್ನುಮಾತನು ಪೋಗೆ ಮರ್ತ್ಯಕೆ (ಪ್ರಭು:ಕೃ. ೪-೩೦); ಧೀರಮುನಿ, ಪೈಜೆಯಂ ಪಾಲಿಸುವ ನಿನ್ನ ಧೈರ್ಯವದೆತ್ತ ಜಾರಿದುದೊ? (ಚನ್ನಾಂಗ. ೩೯-೦೦೫೯). [<ಪ್ರಾ. ಪಇಜ್ಞಾ. / ಸಂ. ಪ್ರತಿಜ್ಞಾ./ಹಿಂ. ಮರಾ. ಪೈಜ್]

**ಪೈಜೆಗ** (ನಾ). ಪಣ ತೊಟ್ಟವನು ; ಶಪಥ ಮಾಡಿದವನು : ನಡೆವು ತಿರ್ದುದು ಸಮರವೀಚಿಯ ಕಡೆಯುಲ್ಯವರು ರಕ್ಕಸರ ಖಳರೊಡೆಯ ಕಳವಿನ ಕಾಳಗಕೆ ಕಳುಹಿದನು ಪೈಜೆಗರ (ತೊರಾ. ೬-೦೩-೫೦).
[ಪೈಜೆ + — ಗ$_{2}$]

**ಪೈಜೆಗಾಜಿ** (ನಾ).=ಪೈಜೆಗ : ಆಜಿರಂಗದಲಿಂದು ನಿನ್ನಯ ಭಟಶಿರೋ ಮಣಿಯ ಪೈಜೆಗಾಜಿನ ಗೆಲಿದಡಹುದು ಬಿಡೌಜಸುತನೆಂಬಗ್ಗಳಿಕೆ (ತೊರಾ. ೪-೪-೫). [ಪೈಜೆ+ — ಕಾಜಿ]

**ಪೈಟನ** 'ಪೈಠಣಿ' ನೋ.

**ಪೈಟನಿ** 'ಪೈಠಣಿ' ನೋ.

**ಪೈಟಾಣಿ** 'ಪೈಠಣಿ' ನೋ.

**ಪೈಟಿ** 'ಪಲ್ಟಿ' ನೋ.

**ಪೈಠಣಿ, ಪೇಠಣೆ, ಪೈಟನ, ಪೈಟನಿ, ಪೈಟಾಣಿ, ಪೈಠಣೆ** (ಗು). ೧. 'ಪೈಠಣ' ಎಂಬ ಸ್ಥಳದಲ್ಲಿ ತಯಾರಾದ : ಐದಂಬು ತಿಂಗಳಿಗೆ ಕೊಯ್ದು ಮಲ್ಲಿಗೆನಂಡೆ ಹಸರು ಪೈಠಣಿಸೀರಿ ಕುಬ್ಬಸ ಬಗೆಸುವಳ (ಲೋಕಗೀ. ೯೯). (ನಾ). ೨. ಪೈಠಣ ಎಂಬ ಸ್ಥಳದಲ್ಲಿ ತಯಾರಾದ ಒಂದು ಬಗೆಯ ಬಟ್ಟೆ ; ಜರಿಯ ನಕಾಸೆಯುಳ್ಳ ರೇಷ್ಮೆವಸ್ತ್ರ ; P 'ಪೈಠಣ' ಎಂಬುದು ಈಗಿನ ಔರಂಗಾಬಾದ್ ಜಿಲ್ಲೆಯ ಹಿಂದಿನ 'ಪ್ರತಿಷ್ಠಾನ ಪುರ' ವೆಂಬುದಕ್ಕೆ ಈಗ ಇರುವ ಹೆಸರು : ಕೆಂಜೆಡೆಗೊಪ್ಪುವ ಕಾಸಿ ಚಿನ್ನಾಂಬರವ ರಂಜಿಪ ಸಣ್ಣ ಪೈಠಣಿಯ (ದೇವಾಂಪು. ೬-೨೫೩) ; ಹಸಿರ ಪೈಠಣಿ ಮೇಲೆ ಕುಸಲದ ಹೂಗಳು ಕಸುತಿ ತಗೆದಾರ ಕುಬಸೀಗೆ ಕನ್ಯೆಯರು (ಸಿದ್ಧಕೃ. ೦೭-೬೩). ೩. ರೇಷ್ಮೆಯ ಅಂಗಿ : ತೊಟ್ಟ ಮುತ್ತಿನ ಪೈಠಣಿ ಯೀದ ಚೆಲುವಿನ ಕಟ್ಟೇಱದೆ ನಡೆತಂದ (ಕಂಸವ. ೯-೯೯). **ಪೇಠಣೆ :** ೧. ಪೊನ್ನ ಪೇಠಣೆಯ ಪೊರ್ ಥಳತ್ಥಳಿಸೆ (ರಾಜಶೇ. ೦೩-೭೨). **ಪೈಟನ :**೪. ಜರತಾರಿ ಬಟ್ಟೆ ; ಜರಿಬಟ್ಟೆ : ಉಟ್ಟ ಎಳಿಗಾವಿಯ ಸುಧೋತ್ರವ ತೊಟ್ಟಗೆಲಸದ ಪೈಟ[ಟ]ನಂಗಿಯ ಕಟ್ಟಿದನು ಮಣಿತಾತಿಯಂಗುಲಕಟ್ಟು ಮುದ್ರಿಕೆಯ (ಕರಂ. ೨೨೯-೨). **ಪೈಟನಿ :** ೧. ಹಸರು ಪೈಟನಿಸೀರೆ ನಿರಿವಿಡಿ ದುಟ್ಟು ಪೊಸ ವಜ್ರಗಾವಿಕುಪ್ಪಸವನ್ನು ತೊಟ್ಟು (ಶಂಪ್ರಾವ. ೬). **ಪೈಟಾಣಿ:** ೧. ಉಟ್ಟಾಳು ಪೈಟಾಣಿಶೀರೆಯ ತಾನೂ ತೊಟ್ಟಾಳು ಜರತಾರಿ ಕುಪ್ಪಸವನ್ನು (ಶಿವಪ. ೦೨). **ಪೈಠಣೆ :** ೨. ವರನೂತನವಸ್ತ್ರವನು ಸುರುಚಿರಮಪ್ಪ ಪೈಠಣೆ ಮುಂತಾದುವ ದೊರೆಗುಡಲಿತ್ತನಾ ದೇವ

(ಚಾ.ಪಚ. ೩-೪೪). ೩. ಪೊಳೆವ ಪಸುರುವಟ್ಟೆಯ ಪೈಠಣೆ ಪೊಸ ಸಣ್ಣ ರುದ್ರಾಕ್ಷಿಗಳ ಕಂಠಮಾಲೆ ರಾಜಿಸಲು ನಂಬ್ಯಣ್ಣನಂದಂಬಡೆದ (ಶಾಂಡಿಶ. ೩-೯). ೪. ಇಳಿಯೊಳಿಳಿಲುವ ಶೋಣ ಪೈಠಣೆಯು ಪೈರಣೆಯು ಕಳಕಳಿಸೆ ಮೈಯೊಳಂ ದಾಳಿಂಬಪೂವಿನಂತಳವಟ್ಟ ಚಿಂದಿ ಮಸ್ತಕತಟದೊಳುಂ ಚುಂಗ ಮೆಱೆವುತಿರೆ ಸೊಬಗಿನಿಂದಂ . . . ನಿಂದು (ಶ್ರಕುಪು. ೫-೨೬).

[←ಮರಾ. ಪೈಠಣೀ./ಸಂ. ಪ್ರತಿಷ್ಠಾನ]

**ಪೈಠಣೆ** 'ಪೈಠಣಿ' ನೋ.

**ಪೈಠರ** (ನಾ). ಮಡಕೆಯಲ್ಲಿ ಬೇಯಿಸಿದ ಹಿಟ್ಟು ಮುಂತಾದುವು: "ಉಖ್ಯಂ, ಪೈಠರಂ—೨ ಮಡಕೆಯಲ್ಲಿ ಅಟ್ಟ ಹಿಟ್ಟು" (ಸಿದ್ಧಾಂತಿ. ೨೮೭). [ಸಂ.]

**ಪೈಠವ** (ನಾ). ಒಂದು ಬಗೆಯ ಸಿಹಿ ಖಾದ್ಯ: ಕಣಕದ ಬಟುವ ತೆಗೆದ್ರು ವಣಕ ಸೂಸಲನಿಕ್ಕಿ ಮಣಿದು ಪೈಠವದ ವರ್ತುಳಭಾಷಣಂಗೈದು (ಲಿಂಗಪು. ೯-೧೧). [?]

**ಪೈಣ** 'ಪಯಣ' ನೋ.

**ಪೈಣಗತಿ** 'ಪಯಣಗತಿ' ನೋ.

**ಪೈಣಿಗ** 'ಪಯಣಿಗ' ನೋ.

**ಪೈತಿಕ, ಹೈತಕ, ಹೈತಿಗೆ₁** (ನಾ). ೧. ಪಿತ್ತಸಂಬಂಧವಾದುದು: ಲಲನಾಮುಖೇಂದುಲಾವಣ್ಯಲೀಲೆಯಂ ಪಡೆವ ಬಣ್ಣದಿಂ ಕಂಪಿಂದ್ರೇ ನಲಿದುದೊ ಪೈತಿಕ[ ಪಾಠಾಂ.ಪೈತಿಗ, ಬಯ್ತುಗ]ದಂತಿರೆ ತಲೆಗೇಱುವ ಕುಸುಮನಿಚಯಮಂ ಕಾಶ್ಮೀರಂ (ಅದಿಪು. ೧೧-೦೨೪). **ಹೈತಕ**: ೨. ಮೈಮೇಲೆ ಪಿತ್ತದಿಂದುಂಟಾಗುವ ಗಂದೆ,— ಗಾದರಿ: (ಕ). **ಹೈತಿಗೆ₁**: ೨. ಮಗುವಿನ ಮೈಮೇಲೆ ಹೈತಿಗೆ ಎದ್ದಿದೆ (ಬೂ).

[ <ಸಂ. ಪೈತ್ತಿಕ ]

**ಪೈತೃಕ** (ಗು). ೧. ತಂದೆಗೆ ಸಂಬಂಧಿಸಿದ. ೨. ಪಿತೃಸಂಬಂಧವಾದ; ಪಿತ್ರಾರ್ಜಿತವಾದ: ದುರ್ಯೋಧನಾದಿಗಳಿಗೆ ಭೀಷ್ಮದ್ರೋಣಾದಿಗಳು ಎಷ್ಟೋ ಬಗೆಯಲ್ಲಿ ಬುದ್ಧಿ ಹೇಳಿ ಪಾಂಡವರಿಗೆ ಅವರ ಪೈತೃಕ ರಾಜ್ಯವನ್ನು ಕೊಡಿರೆಂದು ಎಷ್ಟು ಬೇಡಿದರೂ ಅವರು ಕೇಳಲಿಲ್ಲ (ಭೀಷ್ಮಚ. ೦೩೯); ಕಗ್ಗತ್ತಲೆ, ಗುಹೆ, ಕಾಡು ಮತ್ತು ಭಯ ಇತ್ಯಾದಿಗಳ ಸಂಸ್ಕಾರಗಳು, ಗುಣಗಳು ಪೈತೃಕ ಆಸ್ತಿಯಂತೆ ನಮ್ಮನ್ನು ಸಂಬಂಧಿಸಿಕೊಂಡು ಬಂದಿರುವುವುಗಳಾಗಿರುತ್ತವೆ (ಜೀವಾತ್ಮ. ೨೦೭). (ನಾ). ೩. ಪಿತೃಗಳಿಗೆ ಮಾಡುವ ಶ್ರಾದ್ಧ; ತಿಥಿ: ನಾಳೆ ಪೈತೃಕವಮಂ ನಾಡಿದಲ್ಲದೆ ಮಾಡೆನು (ಕೃಪುಶಾ. ೦೦-೨೬); ಬೇಗದಿಂ ಪೈತೃಕಕೆ ಕ್ಷಣಸಲ್ಪಿರಿಯ ಭಕ್ತನಾಗಿ ಬಂದರ್ಚನೆಯ ಕೈಕೊಂಡು ನಿಜಮುಕ್ತನಾಗೆ ಚಿತ್ರೀಸಪುರವರನು ಕೈಲಾಸಕ್ಕೆ ಸಾಮವೇದಿಯನೊಯ್ದನು (ರಾಘಶ. ೯-೨೦). [ಸಂ.]

**ಪೈತೃಕಕರ್ಮ** (ನಾ). ಶಾಸ್ತ್ರೋಕ್ತವಾಗಿ ಮಾಡುವ ಶ್ರಾದ್ಧ; ಪಿತೃಕರ್ಮ: "ಶ್ರಾದ್ಧಂ . . . ಬ್ರಾಹ್ಮಣಭೋಜನ, ಪಿಂಡಪ್ರದಾನಾದಿ ರೂಪವಾದ ಪೈತೃಕಕರ್ಮಕ್ಕೆ ಹೆಸರು" (ಸಿದ್ಧಾಂತಿ. ೨೨೩). [ಸಂ.]

**ಪೈತೃಕಧನ** (ನಾ). ಪಿತ್ರಾರ್ಜಿತವಾಗಿ ಬಂದ ಸ್ವತ್ತು; ವಂಶಪಾರಂಪರ್ಯವಾಗಿ ಬಂದ ಐಶ್ವರ್ಯ. [ಸಂ.]

**ಪೈತೃಪತಿ** (ನಾ). ಪಿತೃಗಳ ಒಡೆಯ; ಯಮ: ಪೈತೃಪತಿವಿಧ್ವಂಸನ ಸುರನಿಕರಪೋಷಣ ಮಹಾಪೌರುಷಪ್ರಯುತ . . . ತ್ರಿಣೇತ್ರ ದಾನವ ಜೈತ್ರ ಸುಪವಿತ್ರಚಾರಿತ್ರನೆ (ಚಬಪು. ೦೫-೦). [ಸಂ.]

**ಪೈತ್ತ** (ಗು). ಪಿತ್ತದಿಂದ ಉಂಟಾದ. [ಸಂ.]

**ಪೈತ್ತಲ** (ಗು). ಹಿತ್ತಾಳೆಯಿಂದ ಮಾಡಿದ. [ಸಂ.]

**ಪೈತ್ತಲಜ** (ನಾ). ಹಿತ್ತಾಳೆಯಿಂದ ಹುಟ್ಟಿದುದು; ಕಂಚು ಮುಂತಾದ ಮಿಶ್ರಲೋಹ: ಪಾದವೆರಡಾ ಸಮಾಂಗುಲವದಂ ಚಿನ್ನದಿಂದಾದಡಾಗಲಿ ಬೆಳ್ಳಿ ತಾಮ್ರ ಪೈತ್ತಲಜ ಲೋಹಾದಿಯಾಗಲಿ ಪಿಷ್ಟರಚಿತವಾಗಲಿ ಪಾತ್ರೆಯುಂ ರಚಿಸಿ (ವೀಕೈಪು. ೭-೦೦-೩೪). [ಸಂ.]

**ಪೈತ್ತಿಕ** (ಗು). ೧. ಪಿತ್ತಸಂಬಂಧವಾದ; ಪಿತ್ತದಿಂದುಂಟಾದ: ೩೦ ಕಂಡಂ ಮುಟ್ಟಿಗೆಯಾಟರೂಷಕಂ ಕಕ್ಕೆ ಮುಸ್ತೆ ನಿಂಬಂ ಕೊತ್ತುಂಬರಿಯೆಂಬಿವ ನೆಂಟೊಂದಾಗಿರೆ ಮಱುಗಿಸಿ ಕುಡಿಯೆ ಪೈತ್ತಿಕಜ್ವರಹರಣಂ (ಕೋಕೋಶ. ೯-೦೭); ಇದು ನಿಮಗಿನಿತು ಪೈತ್ತಿಕಜ್ವರವಾದೊಡಮಿಂತೆನಲಕ್ಕುಮೆ (ಜಂಶಂ. ೯-೫೯ ವ). (ನಾ). ೨. ಪಿತ್ತದಿಂದ ಉಂಟಾಗುವ ವಿಕಾರ; ಉನ್ಮಾದ: ನೀತಿಯಿ ತಾಯಿ ಪೈತ್ತಿಕವಾದಾದೊಡವಾಡಲವೋಘ ಮೆನ್ನೊಳೀ ಮಾತಂ (ಜೀಬಿಪು. ೭-೦೯೩). ೩. ಪಿತ್ತಶರೀರಿಯಾದುದು: ವಾತಪ್ರಕೃತಿಯ ಗುಣಂಗಳ್ ಮಾತಾಪಿತೃಗಳ್ಗೆ ಮುನ್ನಮುಳ್ಳೊಡೆ ಮಱಿಯುಂ ವಾತಿಕನಕ್ಕುಂ ಪೈತ್ತಿಕಜಾತಿಕನುಂ ಶ್ಲೇಷ್ಮಕಾಂಗನುಂ ತಜ್ಜಾತಂ (ಅಶ್ವಶಾ. ೭-೬೬). [ಸಂ.]

**ಪೈತ್ಯ** (ಗು). ೧. ಪಿತ್ತದಿಂದುಂಟಾದ; ಪಿತ್ತಸಂಬಂಧವಾದ: ಅನಿಲ ಕಫ ಪೈತ್ಯದೋಷದಿನನಿಲನ ಕುಂದಿಂದೆ ಪಂಗುಳಾಂಧ ಕೃಶಂ ವಾಮನ ಕುಬ್ಜ ಬಧಿರ ಮೂಕರುಮನೇಕವಿಧದಂಗಹೀನರುಂ ಜನಿಯಿಸುವರ್ (ಕುಡಿ. ೦-೬೫). 'ಪೈತ್ಯಜ್ವರ' ಪರಾ. (ನಾ). ೨. ಪಿತ್ತಸಂಬಂಧವಾದ ದೋಷ; ಪಿತ್ತದೋಷ: ಬೇಗದಿ ಹರಿ ಶೀತಳಿಯಂ ಪೈತ್ಯದ ರೋಗವನುಜ್ಜಾಯಿಯು ವಜ್ರಾಸ್ತ್ರವ (ಕರ್ಣಾಟ. ೩೩); ಕಳ್ಳಿಂಕಡಲೆ ೫೦ ಹಲ . . . ಸಕ್ಕರೆ ೩೦ ಭಾಗ, ಇವಂ ಚೂರ್ಣವಂ ಮಾಡಿ ಸೇವಿಸೆ ಪೈತ್ಯ, ಶ್ವಾಸ, ಕಾಸ ಮಾಣ್ಗುಂ (ವೈಪಿ. ೭೪); ಬಲುಭೂತ ಸೋಂಕಿತೋ ಗ್ರಹದ ಚೇಷ್ಟೆಯೋ ಪೈತ್ಯ ತಲೆಗಡರ್ದುದೊ ಮಿತ್ರೆಯೇನಪ್ಪಳೋ (ಪಪಮೋ. ೨೫-೪೯). ೩. ಉನ್ಮಾದ; ಹುಚ್ಚು: ಪೈತ್ಯದೊಳುಲಿದ ಯತಿನುಡಿ ನಿಶ್ಚಯವೆ (ಜಗಾಪಾ. ೨೦೭-೪೩); ಪೈತ್ಯವಾದವಗೆ ಸೈತ್ಯವಾಗದೋ? (ಗಾದೆ). 'ಪೈತ್ಯಗಾರ' ಪರಾ. [ < ಸಂ. ಪೈತ್ತ ]

**ಪೈತ್ಯಗಾತಿ** (ನಾ). ಹುಚ್ಚಿ; ಉನ್ಮಾದಿನಿ: (ಕ). [ಪೈತ್ಯ + — ಗಾತಿ]

**ಪೈತ್ಯಗಾರ** (ನಾ). ಉನ್ಮತ್ತ; ಹುಚ್ಚ: ಪೆತ್ತ ಮಗಳಂ ಮಡದಿಯಾಗಿ ಮಾಡಿಕೊಂಡ ಬೊಮ್ಮನಂ ಪಾರ್ವರ್ ಪೈತ್ಯಗಾರರಾಗಿ ಪೊಗಳುತ್ತಿರ್ಪರ್ (ಅಕಾಲಿ. ೨೯-೨೮ ವ). [ಪೈತ್ಯ + — ಗಾರ ( < — ಕಾಱ) ]

**ಪೈತ್ಯಜ್ವರ** (ನಾ). ಪಿತ್ತದಿಂದ ಉಂಟಾದ ಜ್ವರ: ಘೋಡಾಚೋಳೀರಸ . . . ಪೈತ್ಯಜ್ವರಕ್ಕೆ ಜೀರಿಗೆಯಲ್ಲಿ ಕೊಡುವುದು (ವೈಪಿ. ೨೬); ಉನ್ಮಾದ ರೋಗದವರು, ಪೈತ್ಯಜ್ವರದವರು . . . ವಿಷದ ರೋಗದವರು, ಇವರಿಷ್ಟೂ ವಮನಯೋಗ್ಯರೆಂದರಿವುದು (ಸಕವೈ. ೨೫). [ಸಂ.]

**ಪೈತ್ಯಾಧಿಕೆ** (ನಾ). ಪಿತ್ತವು ಹೆಚ್ಚಾಗಿರುವವಳು: ಪೈತ್ಯಾಧಿಕೆಗತಿಕೋಪಂ (ಮದಿ. ೦೦-೭). [ಸಂ. ಪೈತ್ಯಾಧಿಕಾ ]

**ಪೈತ್ರ₁** 'ಪಯಿತ್ರ' ನೋ.

**ಪೈತ್ರ₂** (ಗು). ೧. ಪಿತೃಗಳಿಗೆ ಸಂಬಂಧಿಸಿದ,—ಸೇರಿದ; ಪಿತೃಸಂಬಂಧವಾದ. (ನಾ). ೨. ಪಿತೃಗಳನ್ನು ಉದ್ದೇಶಿಸಿ, ಅಂಗುಷ್ಠ ಮತ್ತು ತೋರುಬೆರಳುಗಳ ಮಧ್ಯದಿಂದ ಬಿಡುವ ತೀರ್ಥ: "ಪೈತ್ರಂ—ಪಿತೃಸಂಬಂಧವಾದ ತೀರ್ಥವು. ಅಂಗುಷ್ಠಾಂಗುಲ್ಯೋಃ—ಹೆಬ್ಬೆರಳಿಗೂ ಅದರ ತರ್ಜನೀ ಬೆರಳಿಗೂ ಮಧ್ಯದಲ್ಲಿರುತ್ತೆ" (ಸಿದ್ಧಾಂತಿ. ೨೩೦). ೩. ಹೆಬ್ಬೆರಳು ಮತ್ತು ತೋರುಬೆರಳುಗಳ ನಡುವಿನ ಭಾಗ. [ಸಂ.]

**ಪೈದಲ್** (ನಾ). ಕಾಲಾಳುಗಳ ಪಡೆ; ಪದಾತಿಸೈನ್ಯ: ಇವರ ಸಂಗಡ ಭಾರಿ ಫೌಜು, ಕುದುರೆ, ಪೈದಲ್ ಸಹಾ, ಕೊಡಗಿನ ಕಡೆಗೆ ರವಾನೆ ಮಾಡಿದ್ದರಿಂದ (ರಾಜೇಂದ್ರ. ೩೮). [← ಹಿಂ. ಪೈದಲ್ ]

**ಪೈನೆ** 'ಬಯಿನೆ' ನೋ.

**ಪೈಪಾಡು** 'ಪಯಂಪಾಡು' ನೋ.

**ಪೈಪು** (ನಾ). ೧. ನಳಿಕೆ ; ಕೊಳವೆ : ಮಂಡಿಯು ಈಗಿರುವ ಆಕಾರದ ಬದಲು ಮೂರು ಅಂಗುಲದ ಪೈಪಿನ ಹಾಗೆ ಇದ್ದರೆ ಎಷ್ಟೋ ಚೆನ್ನು (ವಾಡಿಗೀ. ೪೪). ೨. ಕೊಳಾಯಿ ; ನಲ್ಲಿ ; ನಳ : ಪೈಪುಗಳಿದ್ದ ಪಟ್ಟಣಗಳಲ್ಲಿ ಮೊದಲಿನಷ್ಟು ಗಿರಾಕಿ ದೊರೆಯದಿದ್ದರೂ ಒಟ್ಟಿನ ಮೇಲೆ ಅವನ ಪ್ರಾಪ್ತಿ ಚೆನ್ನಾಗಿಯೇ ಇತ್ತು (ದಾಸಹು. ೩೬). [ ← ಇಂ. Pipe ]

**ಪೈಪೋಟಿ** (ನಾ). ಹುರುಡು ; ಸ್ಪರ್ಧೆ ; ಮೇಲಾಟ : ಅವರ ಮನೆಯಲ್ಲಿ ನಡೆದ ಸತ್ಕಾರದಲ್ಲೆಲ್ಲಾ ಒಂದು ಪೈಪೋಟಿ ಮನೋಭಾವ ಕಾಣುತ್ತಿತ್ತು (ಹೊಸಕ್ಷಿ. ೦೦೬); ಅಲ್ಲಿ ಯಾವಾಗಲೂ ಜನರ ಪೈಪೋಟಿ ನಡೆಯುತ್ತಿರುತ್ತದೆ (ಕೂವಶೀ. ೩೬೮).

**ಪೈಪೋಟಿ ಹಾಕು** = ಸ್ಪರ್ಧಿಸು ; ಮೇಲಾಟವಾಡು ; ಹುರುಡಿಸು : ಗುರು ಅಜಿತಸೇನನ ಕೀರ್ತಿ ವಲ್ಲಿಗೆಯೊಂದಿಗೆ ಪೈಪೋಟಿ ಹಾಕಿತಂತೆ! (ಚಾಸಗಿ. ೬೯).

[ ಪೈ$_1$ + ಪೋಟಿ$_1$. / ತೆಲು. ಪಯಿಪಾಟು, ಪೈಪಾಟು = ವಿಜೃಂಭಣೆ ]

**ಪೈಮಾಯಿಷಿ, ಪೈಮೂಷಿ, ಪೈಮಾಷೆ, ಪೈಮಾಸಿ** (ನಾ). ಭೂಮಿಯನು ಅಳೆಯುವಿಕೆ ; ಮೋಜಣಿ ; ಸರ್ವೆ : ಜಮೀನು ಪೈಮಾಯಿಷಿಯಿಂದ ಬೀಜವರಿಯ ಮೇಲೆ ಕಂದಾಯವನ್ನು ಠರಾವ್ . . . ಮಾಡಿದರು (ಮುಚಾವಂ. II, ೩೦). **ಪೈಮೂಷಿ :** ಮೋಜಣಿ, ಪೈಮೂಷಿ (—ಮಾಡುವುದು) (Surveying. ಇಂಕಣ). **ಪೈಮಾಷೆ :** ಇದು ಈಗಿನ ಪೈಮಾಷೆಯ ಸಾಕಳಿ ಅಳತೆಯು (ಕೃಷಿಪ್ರ. ೦೫೯). **ಪೈಮಾಸಿ :** ೧೮೦೪ ರಲ್ಲಿ ಸೀಮೆ ಪೈಮಾಸಿಯುಂ ಮಾಡಲು ಮಕಂಜಿಸರದಾರಂ ಲಕ್ಷ್ಮಣರಾಯಂವೆರಸು ಕನಕಗಿರಿಗೆ ಬಂದು (ಕಚಿಷ. III, ೦೪೭); ಒಂದು ಸಾಕಳಿ ಅಗಲ ಹಾಗು ಹತ್ತು ಸಾಕಳಿ ಉದ್ದ ಅಳೆದರೆ ಈಗಿನ ಪೈಮಾಸಿ ಪ್ರಕಾರ ಒಂದು ಎಕರೆ ಆಗುವುದು (ಕೃಷಿಪ್ರ. ೦೫೯).

[ ← ಪಾರ. ಪೈಮಾಇಶ್, ಪೈಮಾಯಿಶ್; ಹಿಂ. ಪೈಮಾಇಶ್; ಮರಾ. ಪೈಮಾಯಷ್, ಪೈಮಾಶೀ, ಪೈಮಾಷೀ ]

**ಪೈಮಾಷಿ** 'ಪೈಮಾಯಿಷಿ' ನೋ.

**ಪೈಮಾಷೆ** 'ಪೈಮಾಯಿಷಿ' ನೋ.

**ಪೈಮಾಸಿ** 'ಪೈಮಾಯಿಷಿ' ನೋ.

**ಪೈಯಿವಸ್ತಿಕೆ** (ನಾ). ಪತ್ರವು ಬಂದ ತಾರೀಖಿನ ದಾಖಲೆ : ಶ್ರೀಕೃಷ್ಣ ಪೈಯಿವಸ್ತಿಕೆ ಚಿತ್ರಭಾನು ಸಂ॥ ರದ ಉಭಯಾತ್ಮಕ ಪುಷ್ಯ ಬ ೩ ಮಂಗ್ಗಳವಾರ (ವ್ಯಾಆಂ. ೦೯೩೦, ೪೨-೦೭; 1822).

[ ←ಪಾರ. ಪೈವಸ್ತ್ ; ಮರಾ. ಪೈವಸ್ತೀ, ಪೈವಸ್ತಾ ]

**ಪೈರಣ** 'ಪೈರಣೆ' ನೋ.

**ಪೈರಣಿ** 'ಪೈರಣೆ' ನೋ.

**ಪೈರಣು** 'ಪೈರಣೆ' ನೋ.

**ಪೈರಣೆ, ಪೈರಣ, ಪೈರಣಿ, ಪೈರಣು, ಪೈರನ, ಪೈರಾಣ, ಫೇರಣೆ** (ನಾ). ಸಡಿಲವಾದ ಅಂಗಿ : ಇಕ್ಕಿದ ಕುಂಡಲಯುಕತಾಯಿ ಪೈರಣೆ ಸುಕ್ಕುಗುಪ್ಪಸ ಕಿರುವೆರಲ ಚೊಕ್ಕಮುದ್ರಿಕೆ ಚೆಲ್ವುವೆತ್ತಿರಲಾಸ್ಥಾನ ವೊಕ್ಕನಾ ಮಂತ್ರಿತಿಲಕನು (ಕುಣಸಾಂ. ೯-೦೦೬); ಇಳೆಯೊಳೆಳಲುವ ಶೋಣ ಪೈಠಣೆಯ ಪೈರಣೆಯು ಕಳಕಳಿಸೆ (ಕೃಶುಪು. ೩-೩೭) ; ನರಸೇಂದ್ರನ ಪೈರಣೆಯ ಜೋಲ್ಸೆರಗಾಂತು ಗರುವಮುರಿರ್ವರೈದಿದರು (ಕಂಸವ. ೩೯-೭೫). **ಪೈರಣ :** ಮೈಮೇಲೆ ಬಿಳಿದಾದ ಒಂದು ಪೈರಣ; ಅಂಚು ಇಲ್ಲದ ಧೋತರವನ್ನು ತೀಡಿ ಉಟ್ಟುಕೊಂಡಿದ್ದಾನೆ (ಕಾದಪ್ಕ. ೯). **ಪೈರಣಿ :** ಲೋಕೇಶಜಿನನ ಕೊರಳೊಳಿಕ್ಕಿ ಮಾಲೆಯು ಬೇಕಾದ ಪೈರಣಿದೊಡಿಸಿ (ಜ್ಞಾನಕ. ೬-೮೪). **ಪೈರಣು :** ಬಿಂದುಮಾಧವನು . . . ಪೈರಣುನ್ನು ಕಳೆದು ಬರಿಮೈಯಿಂದ ಅಡಿಗೆಮನೆಗೆ ಹೊರಟನು (ಸರ್ವಾಸಿ. ೦೪೭); ಕೋಟು ಟೊಪ್ಪಿಗೆ ತೆಗೆದಿರಿ, ಪೈರಣು ಇರಲಿ (ಹಿಂಚಿ ೬೦). **ಪೈರನ :** ಮೈಯಲ್ಲಿ ಒಂದು ಉದ್ದನ್ನ ಪೈರನದ ಮೇಲೆ ಜಾಕೀಟು (ಮಂದಾಕಿ. ೦೯೧). **ಪೈರಾಣ :** ಧೋತ್ರ, ಪೈರಾಣ, ಟೊಪ್ಪಿ—ಎಲ್ಲ ಖಾದಿಬಟ್ಟೆಯದೇ (ಅಳಿ. ೭). **ಫೇರಣೆ :** ತೊಟ್ಟ ಫೇರಣೆ ಮೇಲುಟ್ಟ ದೇವಾಂಗವು ಇಟ್ಟ ಶ್ರೀಭಸಿತ ರುದ್ರಾಕ್ಷಿ (ಬಸಪ. ೦-೦೪೩).

[ ←ಪಾರ. ಪೆರಾಹನ್, ಪೀರಾಹನ್ ; ಹಿಂ. ಪೈರಾಹನ್ = ಹೊದಿಕೆ ; ಗುಜ. ಪಹೇರಣ್./ಪ್ರಾ. ಪರಿಹಾಣ./ ಸಂ. ಪರಿಧಾನ ]

**ಪೈರನ** 'ಪೈರಣೆ' ನೋ.

**ಪೈರಾಣ** 'ಪೈರಣೆ' ನೋ.

**ಪೈರು** 'ಪಯಿರ್' ನೋ.

**ಪೈರುದಾರ** (ನಾ). ಜಮೀನನ್ನು ಸಾಗುವಳಿ ಮಾಡುವವನು ; ರೈತ ; ಕೃಷಿಕ : ನಾಲ್ದೆಸೆಯೊಳಿರ್ಪ ವರ್ತಕ ಪೈರುದಾರ ಗಂದಿಗ ಕೊಂಕಣಿಗ ಮೂರ್ಣತಾದ ಮಹಾನಾಡವರಂ ಬರಿಸಿ (ಕಅಕ್ಕ. ೭-೩) ; ಇವನಿಗೆ ಶೇಕದಾರನು, ಸಾಗುವಳಿದಾರನು, ಪೈರುದಾರನು ಎಂಬ ಹೆಸರುಂಟು (ಕಥಾವಂ. IV, ೩೦). [ ಪೈರು (<ಪಯಿರ್) + — ದಾರ್ಗ ]

**ಪೈರೆ** (ನಾ). ೧. ದಿನಗೂಲಿಯ ಹಣ. ೨. ದಿನಗೂಲಿ ಕರಾರಿನ ಮೇಲೆ ಮಾಡುವ ಕೆಲಸ : ನಮ್ಮ ಕೂಡೆ ಪೈರೆ ಮಾಡ್ತೀನ ಅಂದರ ಕೊಡತೇನಿ (ಅಹೋಕ. ೯೦). [ ← ಮರಾ. ಪೈರೇ ]

**ಪೈರೆತ್ರ** (ನಾ). ಒಂದು ಬಗೆಯ ಸಸ್ಯ : ಪೈರೆತ್ರಂ, ಕ್ರಿಮಿನಾಶಹೂವು (ವ್ಯಾಶಿಗ. ೬೫-೦೩೯). [ ? ]

**ಪೈಲವಾನ, ಪಯಿಲ್ವಾನ್, ಪಹಿಲವಾನ, ಪಹಿಲ್ವಾನ್, ಪೆಹೆಲ್‌ವಾನ್, ಪೈಲ್ವಾನ್** (ನಾ). ಕುಸ್ತಿಯಾಳು ; ಜಟ್ಟಿ ; ಮಲ್ಲ : ಮತ್ತೊಂದು ಕಡೆಯಲ್ಲಿ ಟಗರು ಕೋಣ ಮೊದಲಾದವುಗಳ ಕಾಳಗವನ್ನೂ ದೊಂಬರು ಪೈಲವಾನರು ಮುಂತಾದವರ ಆಟಗಳನ್ನೂ ನೋಡಿ (ಮುಚಾವಂ. I, ೩೭) ; ಅವನು ಪೈಲವಾನನಂತೆ ಹುರಿಕಟ್ಟಾಗದಿದ್ದರೂ ಆರೋಗ್ಯಕ್ಕೆ ಹೊಂದಿಕೊಂಡು ದುಂಡಗೆ ಬಳೆದಿದ್ದನು (ಜಯಂತ. ೩೦). **ಪಯಿಲ್ವಾನ್ :** ಅವನು ಆ ಊರಿನ ಭಾರಿ ಪಯಿಲ್ವಾನ್ ಆಗಿದ್ದಾನೆ (ಕೂಂ). **ಪಹಿಲವಾನ :** ಗ್ರಂಥಕರ್ತನು . . . ೧೫೫ ವರ್ಷದ ಒಬ್ಬ ಬಲಿಷ್ಠನಾದ ಅರಬೀ ಪಹಿಲವಾನ (ಜಟ್ಟಿ)ನನ್ನು ಸ್ವತಃ ಕಣ್ಣುಟ್ಟ ನೋಡಿರುವನು (ಬ್ರಹ್ಮಚ. ೦೪೭); ದೊಡ್ಡ ದೊಡ್ಡ ಜಟ್ಟಿಗಳು (ಪಹಿಲವಾನರು) ಇಷ್ಟು ನಿರ್ವಿಕಾರಿಗಳೂ ಶಾಂತರೂ . . . ಬಲವಂತರೂ ಆಗುವ ನಿಜವಾದ ರಹಸ್ಯವು ವ್ಯಾಯಾಮವೇ ಸರಿ (ಬ್ರಹ್ಮಚ. ೦೪೭). **ಪಹಿಲ್ವಾನ್ :** ಕೆಲವು ಪಹಿಲ್ವಾನ್ ಚಿತ್ರಗಳಲ್ಲಿ ಎದೆಯ ಮೇಲೆ ದೊಡ್ಡ ಎರಡು ಕಾವಲಿಗಳಿರುತ್ತವೆ (ಕಸರ. ೯೫). **ಪೆಹೆಲ್‌ವಾನ್ :** ನಮ್ಮ ತಾಲೀಮಿನಲ್ಲಿಯ ಪೆಹೆಲ್‌ವಾನ್‌ರನ್ನೆಲ್ಲ ಕೂಡಿಕೊಂಡು, ಒಬ್ಬೊಬ್ಬ ಕಾಫರ್‌ನನ್ನೂ ಹಿಡಿದು, ಗುಟಲನ್ನೊತ್ತಿ ಪಡಚಾ ಮಾಡಿಬಿಡುತ್ತಿದ್ದೆ (ಅಣಂತ. ೦೮೦). **ಪೈಲ್ವಾನ್ :** ಪೈಲ್ವಾನ್ ಸುಬ್ಬುವೂ ತೊಡೆ ತಟ್ಟಿ ನಿಂತ (ಛಮಹಾ. ೩) ; ನಮ್ಮೆಲ್ಲರ ಪೈಲ್ವಾನ್ ಆಗಿದ್ದವನು ಹೀಗಾದೆಯಲ್ಲ (ಅತ್ಮಾರ್ಶ. ೯೮).

[ ←ಪಾರ. ಹಿಂ. ಪಹಲವಾನ್ ; ಮರಾ. ಪಹಿಲವಾನ್, ಪಹಿಲ್ವಾನ್, ಪೈಲವಾನ್ ]

**ಪೈಲಾ** 'ಪಯಿಲಾ' ನೋ.

**ಪೈಲಾನಂಬರು** 'ಪಯಿಲಾನಂಬರು' ನೋ.

**ಪೈಲಿಕೆ** (ನಾ). ಒಂದು ಬಗೆಯ ಮೂಲಿಕೆ : "ಪೈಲಿಕಾ—ಅಗುಳುಶುಂಠಿ" (ಓಷಧಿ. ೦೦೩). [ ? ]

**ಪೈಲು** (ನಾ). (ವಿಶೇಷವಾಗಿ ರತ್ನಗಳ) ಪಾರ್ಶ್ವ ; ಮಗ್ಗುಲು : ಒಂದು ನಕ್ಷತ್ರ ನೂರು ಕಡೆಗೆ ಬೆಳಕನ್ನು ಚೆಲ್ಲುತ್ತದೆ. ಹಾಗೆ ಭಗವಂತನ ಸೃಷ್ಟಿಯಲ್ಲಿ ಒಂದೊಂದು ಘಟನೆಗೂ ನೂರೊಂದು ಪೈಲುಗಳಿರುತ್ತವೆ

(ಸವುಜೀ. ೧೩೩); ಕರ್ಮಕುಶಲತೆಯು ಅವನ ವ್ಯಕ್ತಿತ್ವದ ಒಂದು ಪೈಲು (ಸವ್ಯಾ. ೨೩). [← ಪಾರ. ಹಿಂ. ಪಹ್ಲೂ; ಮರಾ. ಪೈಲೂ, ಪಹಿಲೂ]

**ಪೈಲ್ವಾನ್** 'ಪೈಲವಾನ' ನೋ.

**ಪೈವಸ್ತಿ** (ನಾ). ವಾಸ್ತವ್ಯ; ವಸತಿ: ಇದರ ಮುಂದೆ ವಿಜಾಪುರದಲ್ಲಿ ಮುಸಲ್ಮಾನರ ಪೈವಸ್ತಿಯು ಬಿದ್ದದ್ದರ ಪ್ರಮಾಣಗಳು ಇತಿಹಾಸದಲ್ಲಿ ಇರುತ್ತವೆ (ಕರಾಗ. ೩೩೯). [← ಪಾರ. ಪೈವಸ್ತ್; ಮರಾ. ಪೈವಸ್ತೀ]

**ಪೈವಸ್ತೆ** (ಗು). ಮೂರು ವರ್ಷಗಳ ಹಿಂದಿನ: (ಮೈಗೆಶಿ. IV, ೭೮೦). [←ಮರಾ. ಪೈವಸ್ತಾ]

**ಪೈಶಂಗಿತ** (ನಾ). ನಸುಹಳದಿಬಣ್ಣ: ಪಿರಿದುಂ ಮಾಡಿತ್ತುಮರ್ತ್ಯಪ್ರಕರದ ನಯನಕ್ಕಂ ಮನಕ್ಕಂ ಸುರಸ್ತ್ರೀಯರ . . . ಅಧರಮಯೂಖಾಳಿಯಿಂ ದತ್ತಲುಂ ಪಾಂಡುರಿತಂ ಪೈಶಂಗಿತಂ ಕರ್ಬುರಿತಮರುಣಿತಂ ವ್ಯೋಮರಂಗಂ ಬೆಡಂಗಂ (ಚಂದ್ರಪ್ರ-೦೨-೭೭). [ಸಂ.]

**ಪೈಶಾಚ** (ಗು). ೧. ಪಿಶಾಚಿಗೆ ಸಂಬಂಧಿಸಿದ. ೨. ಆಸುರೀಸ್ವಭಾವದ; ಅಮಾನುಷವಾದ. (ನಾ). ೩. ಪಿಶಾಚಿ: ಹಿಂದೆ ರಣದೊಳಭಿಲಾಷೆಯಿಂ ಪೈಶಾಚರಂತೆ ಹೇಸದೆ ರಕ್ತಪಾನಮಂ ಮಾಡಿಯೊಡಲ ಪೋಷಿಸಿದೆ (ಕೈಬಿಜಾ. ೨-೭೦). ೪. ಹಿಂದೂವಿವಾಹಪದ್ಧತಿಯ ಎಂಟು ಪ್ರಕಾರಗಳಲ್ಲಿ ಒಂದು: 'ವಿವಾಹ' ಪರಾ. [ಸಂ.]

**ಪೈಶಾಚಕ** (ನಾ). ೧. = ಪೈಶಾಚಿಕ ೩: ಹರಂ ಗಿರಿಸುತೆಗೆ ಪೇಟ್ದಾ ಕಥೆಗಳಂ ಪೈಶಾಚಕಭಾಷೆಯೊಳ್ ಬೃಹತ್ಕಥೆಗಳಂ ಮಾಡಿ ಪೇಟ್ದೊಡೆ (ಶಂಕಕಂ. ೦೦-೦೫). ೨. ಪಿಶಾಚಿ ಹಿಡಿದವನು; ದೆವ್ವ ಮೆಟ್ಟಿಕೊಂಡವನು: ದಿಗ್ಭ್ರಮೆ ಪದೇಗೆಟ್ಟಂಗೆ ಪೈಶಾಚಕಂಗೆ ದುರಾವೇಶಮಧಾವಿರ್ಕಂಗೆ ಕುಮತಂ ತತ್ವಪ್ರಮೂಢಂಗೆ ಬೀಸಿದ ಕಣ್ಮಾಯದ ಕುಂಚ ದಂತಿರೆನಗಾದತ್ತಾಗಳೇನೆಂಬುದೋ (ಕಾವ್ಯಂಪೂ. ೯೦೩). [ಸಂ.]

**ಪೈಶಾಚಿ** (ನಾ). ೧. ಪಿಶಾಚಿ: ಪುತ್ರಾಭ್ಯುದಯಮೋಹದ ತಮಸ್ಸು ತೀವ್ರವಿರ್ದ ಲೋಭಪೈಶಾಚಿಗೀ ಪಿರಿಯ ಬಲಿಯೆಹುದೆಂದು ಮುನ್ನಮಾನ ರಿಯಲಾರದೆ ಹೋದೆ (ಶ್ರೀರಾಕಥಾ. ೦೦೯-೨೨೦). ೨. = ಪೈಶಾಚಿಕ ೩: ಈ ದೃಶ್ಯಕಾವ್ಯದಲ್ಲಿ ರಾಜನು ಮುಂತಾದವರುಗಳಿಗೆ ಸಂಸ್ಕೃತಭಾಷೆಯೂ . . . ರಾಕ್ಷಸ ಪಿಶಾಚಾದಿಗಳಿಗೆ ಪೈಶಾಚೀ ಮತ್ತು ಚೂಳಿಕಾಪೈಶಾಚೀ ಭಾಷೆಯೂ ಚಂಡಾಲಾದಿಗಳಿಗೆ ಅಪಭ್ರಂಶಭಾಷೆಯೂ ವ್ಯವಹಾರಾರ್ಹವಾಗಿ ವಿಹಿತವಾಗಿರುವುದು (ಭಾರದ. ೪೩೩). [ಸಂ. ಪೈಶಾಚೀ]

**ಪೈಶಾಚಿಕ** (ಗು). ೧. ಪಿಶಾಚಿಗೆ ಸಂಬಂಧಿಸಿದ. ೨. ಆಸುರೀಸ್ವಭಾವದ. (ನಾ). ೩. ಪ್ರಾಕೃತ ಭಾಷೆಗಳಲ್ಲಿ ಒಂದು; ಗುಡ್ಡಗಾಡುಜನಾಂಗದ ಭಾಷೆ: ಸಂಸ್ಕೃತಂ ಪ್ರಾಕೃತಂ ಅಪಭ್ರಂಶಂ ಪೈಶಾಚಿಕಮೆಂಬ ಮೂಱು ವರೆಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವವಿಷಯಭಾಷಾಜಾತಿಗಳಕ್ಕುಂ (ಛಂದೋಂಬು. ೧-೪೬ ವ); ಸಂಸ್ಕೃತ ಪ್ರಾಕೃತ ಪೈಶಾಚಿಕ ಮಾಗಧ . . . ಮಿಶ್ರಾದಿ ಭಾಷಾಭೇದಗಳಂ ಪೇಳ್ವ ಲಾಕ್ಷಣಿಕರಪ್ಪ ಕವಿಗಳಂ (ವಿವೇಕ. ೨೨೭). [ಸಂ.]

**ಪೈಶುನ್ಯ** (ನಾ). ೧. ಚಾಡಿ ಹೇಳುವಿಕೆ; ಚಾಡಿಕೋರತನ. ೨. ಪಿಸುಣಾ ಚಾಡಿ; ದೂರು: ಆ ಬಳಿಕ ನೀವು ಮಾಡಿಟ್ಟಿರುವ ಪೈಶುನ್ಯದ ಕುಚೇಷ್ಟಿತವನ್ನು ತಿದ್ದುವುದಾಗಲಿ (ವಿಗಧ. ೭-೦೫). ೩. ದುಷ್ಟತನ; ದುರ್ಗುಣ. [ಸಂ.]

**ಪೈಶೂನ್ಯ** (ನಾ). ೧. ಚಾಡಿ; ದೂರು; ಪಿಸುಣಂ: ಪರಿವಾದಂ ಪೈಶೂನ್ಯಂ ಪರಮರಹಸ್ಯಪ್ರಕಾಶಕರಣಂ ಕೂಟಾಕ್ಷರನಿಧಿನಿಕ್ಷೇಪಾದ್ಯಪಹರಣಂ ಸತ್ಯವ್ರತಕ್ಕತಿಕ್ರಮಮಕ್ಕುಂ (ವರ್ಧಮಾ. ೭-೯). ೨. ದುಷ್ಟತನ: 'ಪೈಶೂನ್ಯದೂರ' ಪರಾ. ೩. ಚಾಡಿಕೋರ; ಪಿಸುಣ: ಒತ್ತಿ ಬುದ್ಧಿಯ ಪೇಳ್ದಡಲಗನು ಕಿತ್ತು ನಾ ಮರುಳಾದೆನೆಟವನೆತ್ತ ಪೋದನೊ ಕೊಲ್ಲುಗು ಹಗೆ ಪೈಶೂನ್ಯನೆಂದೆನುತ (ಕೌಶಿರಾ. ೦೫-೦). [<ಸಂ. ಪೈಶುನ್ಯ]

**ಪೈಶೂನ್ಯದೂರ** (ನಾ). ದುಷ್ಟತನವಿಲ್ಲದವನು; ದುರ್ಗುಣವಿಲ್ಲದವನು: ದೇವಾಗ್ರಗಣ್ಯಂ ಶಂಭುಸ್ವಾಮಿಷ್ಕಲಿಂಗಂ ಪ್ರಮಥಪರಿವೃಢಂ ಪಾತು ಪೈಶೂನ್ಯದೂರಂ (ಹರಿಶ್ಚಾರ. ೩-೬೬). [ಪೈಶೂನ್ಯ + ದೂರ]

**ಪೈಷ್ಟಿಕ** (ಗು). ೧. ಹಿಟ್ಟಿನಿಂದ ತಯಾರಿಸಿದ; ಪಿಷ್ಟಸಂಬಂಧವಾದ. (ನಾ). ೨. ಹಿಟ್ಟಿನಿಂದ ಮಾಡಿದ ಮಾದಕಪೇಯ: "ಪೈಷ್ಟಿಕಃ— ಮದ್ಯ" (ಓಕಂ. ೦೦೩). [ಸಂ.]

**ಪೈಸ, ಪೈಸಾ, ಪೈಸೆ** (ನಾ). ೧. ಒಂದು ನಿರ್ದಿಷ್ಟ ಬೆಲೆಯ ತಾಮ್ರದ ನಾಣ್ಯ; ಆಣೆಯ ಮೂರನೆಯ ಒಂದು ಅಂಶ; ಒಂದು ದುಡ್ಡು: ನಾಲ್ಕು ಕಾಸು: ಟಂಕೆ ವಿವರ: ಟಂಕೆಗೆ ಶೋಡಶ ದುಡ್ಡಂ ಬಿಂದಿ ಸಸಿಗಾಣಿ ನಾಲ್ಕು ಪೈಸಗಳೆಂಟಂ ಪಂಜವಿತ್ರನ ಗಣನೆಗೆ ಭೋಂಕನೆ ತಾಂ ಒರಗಾಣಿ ದುಗ್ಗಾಣಿರಡಂ (ಭಾಸ್ಕರ. ೭೭-೯). ೨. ಹಣ; ದುಡ್ಡು: (೬) ೩. ಒಂದು ರೂಪಾಯಿಯ ನೂರನೆಯ ಒಂದು ಭಾಗ: (೬). **ಪೈಸಾ**: ೨. ಭಟಾರಜ . . . ನಿಮಗ ಪೈಸಾ ಖೂಬ ಕೊಡ್ತಾವ (ಸ್ವಾರಂ. ೯). **ಪೈಸೆ**: ೧. ಚಕ್ರವ ಪರರಿಗೆ ವಿಕ್ರಯ ಮಾಡಲು ಹನ್ನೆರಡೇ ಪೈಸೆ (ಕೃಕಿಆ. ೪೯). ೩. ಈಗಿನ ದಿನಗಳಲ್ಲಿ ಐವತ್ತು ಪೈಸೆ ಕೊಟ್ಟರೂ ಒಂದು ಒಳ್ಳೆಯ ಬಾಳೆಹಣ್ಣು ಸಿಕ್ಕುವುದಿಲ್ಲ (ರೂಢಿ). 'ಪಾಯ್ಸಿ' ಪರಾ. [← ಪಾರ. ಪೈಸ; ಹಿಂ. ಮರಾ. ಪೈಸಾ]

**ಪೈಸರ, ಪಯ್ಸರ, ಪೈಸಾರ** (ನಾ). ೧. ಮಲ್ಲಯುದ್ಧದ ಒಂದು ಪಟ್ಟು; ಕುಸ್ತಿಯ ಒಂದು ವರಸೆ: ಗಳಹತ್ತ ಡೊಕ್ಕರ ತಳಮೇಲು ಪೈಸರ ಸುಳಿವು ವಂಚನೆ ಪತನದಲಿ . . . ಹೋರಿದರು (ಕಂಸವಿ. ೨೦-೯೨). ೨. ಯುದ್ಧದಲ್ಲಿ ಬಳಸುವ ಒಂದು ಪಟ್ಟು: ಓಸರದ ಪೈಸರದ . . . ಸಮರವಿಲಾಸಿಗಳು ಸರಕಟಿಸಿ ಕಾದಿದರು (ಕೊರಟಾ. ೭-೦೦-೨೦). ೩. ಕುಗ್ಗುವುದು; ಕುಸಿ ಬೀಳುವುದು; ಜೋಲುವುದು: ಮುರಿದ ಕಂಗಳ ಮಲಗಿನಲಿ ಪೈಸರದ ಗಾತ್ರದ ಗಾಢವೇದನೆಯುರವಣಿಸೆ ಸೊಂಪಡಗಿ ನಿಮಿಷ ಮಹೀಶ ಮೈಮರೆದ (ಕುವ್ಯಾಕ. ೩-೪೫). ೪. ಜಾರುವುದು; ಜಾರುವಿಕೆ: ವ್ಯೋಮದೊಳೆಯ್ದುವ ನಿಮಗೆ ಪೈಸರವುಂಟೆ (ಶರಶ. ೩-೭೯). ೫. ಹಿಂದಕ್ಕೆ ಸರಿಯುವುದು; ಹಿಂಜರಿತ; ಹಿಮ್ಮೆಟ್ಟುವಿಕೆ: ಆಸೆಯ ಪೈಸರಂ ಮೊಱೆವ ಚೆಲ್ವಂ ದೇವ ನೀವೇಱೆ ನೋಡಿರೆ (ಅನಂಪು. ೨-೩೦); ☞ ಇಲ್ಲಿ 'ಪೈಸರಂ' ಎಂಬುದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪವಿರಬಹುದು; ಮನಕೆ ಭೀತಿಯ ಬೆರಕೆಯುಳ್ಳಡೆ ಬಿಟ್ಟು ಕಳೆ ಪೈಸರಕೆ ಸಮಯವಿದು (ಕುವ್ಯಾಕ. ೦೩-೩೮). ೬. ಹಿಂದುಮುಂದು ನೋಡುವುದು; ಅನುಮಾನ: ಕನ್ನಗಳ್ಳರನಿವರ ಮೊಗದಿ ಪೈಸರವ ಮಾಡದೆ ವಿಚಾರಿಸುವುದು (ಸವ್ಯಕೌ. ೨-೬೩). ೭. ತಪ್ಪುವುದು; ನುಣುಚಿಕೊಳ್ಳುವುದು: ಭಾಷೆ ಪೈಸರವಿಲ್ಲ ಓಸರಿಸೆನನ್ಯಕ್ಕೆ ಆಸೆಮಾಡೆನು ಮತ್ತೆ ಭಿನ್ನಸುಖಕ್ಕೆ (ಮಹಾದೇ. ಬ. ೩೦-೭೭). ೮. ನಷ್ಟ; ಹಾನಿ: ಈಸು ಕಳವಳವೇನು . . . ನಿನ್ನ ಹರುಷಕೆ ಪೈಸರವದೇನು (ಕುವ್ಯಾಕ. ಓಂ೩. ೦೩-೩೯). 'ಪೈಸರಂಗೊಳ್' ಪರಾ. ೯. ಇಳಿಜಾರಾದ ಪ್ರದೇಶ; ಇಳುಕಲು: ಪಾಂಡು ನಂದನರು ಗಾಸಿಯಾದರು ಗಟ್ಟ ಬೆಟ್ಟದ ಪೈಸರದೊಳು (ಕುವ್ಯಾಅ. ೦೭-೦೭); ಪಾದವೆಚ್ಚಱಿಕೆ ಪೈಸರ ಪರಾಕವಧಾನವೆನಲು (ಶರಶ. ೩೯-೩೬); ಅವರು ಒಂದು ಬೆಟ್ಟದ ಶಿಖರದ ಅಂಚಿನ ಸಮೀಪದ ಪೈಸರದಲ್ಲಿ ನಿಂತಿದ್ದರು (ಗಂಜಾ. ೭೦). ೧೦. ಸೋಲು; ಭಂಗ: ನೆನಹಿನಭಿರುಚಿಯ ವಾಸಿಗಳ ಪೈಸರವನೆನ್ನಲಿ ಸೂಸಬಾರದೆ (ಕುವ್ಯಾಕ. ೦೨-೨೮). ೧೧. "ಸೋರಿಕೆ" (ಷಟ್ಪ್ರ): ಪರಿಕಾಲ್ಗಳೀಳ್ಗೆದಪ್ಪಿದೊರ್ಡವಱೊಳಿಯುಂಭೋವಾಟವಮಾ ಪೈಸರಮು ಮುಂದಕಸೂತ್ರಕ್ಕೆ ಹರಿಯಾದೊಡೆ . . . ನೀವೆಲ್ಲರಾರ್ದು ಪೊಗಳ್ವಂ ತೆಸಗದೊಡೆ ಮಹಾದೇವನೇ ದೇವನೆಂದೆನಲಕ್ಕುಮೇ (ಶಬ್ದಸಾ. ೬-೯೦).

೧೨. ವ್ಯಾಪನೆ; ವಿಸ್ತಾರ; ಹರಹು : ಪೈಸರಿಸು' ಪರಾ. ೧೩. (ಯಂದ್ರದ ಪಟ್ಟಿನಿಂದ ಒದಗುವ) ರಕ್ಷಣೆ (?) : ಅಚಲ ಮೂಱಱ ಪೈಸರದ ಬಲನಿಚಯ ನಮ್ಮದು ವೀರಸುಭಟಪ್ರಚಯುಮುಕ್ಕುರ ಮಾಡಿ (ಕುವ್ಯಾ.ಕ. ೦-೨೦). ಪಯ್ಸರ : ೩. 'ಪಯ್ಸರವೋಗು' ಪರಾ. ೪. 'ಪಯ್ಸರಿಸು' ಪರಾ. ೭. ನುಸುಳು ನೆಲೆ ಡಿಳ್ಳಾಯ್ತು ಪಯ್ಸ [ಪಾಠಾಂ. ಪೈಸ]ರ ಬೆಸುಗೆ ಬಿಗುಹುಳುಕೊತ್ತು ಕಲೆಗಳ ರಸದ ಪಸರವ ನಱಿಯಬಾರದು ವಿಗಡವಿಟರುಗಳ (ಕುವ್ಯಾ.ಅ. ೦೩-೨೩). ಪೈಸಾರ : ೧೨. ಬಯಲ ಬಿಡಾರ ಪೈಸಾರದಿಂದೆ ಬಿಟ್ಟಿತು ಬಹುಬಲವಾ (ಸಾಂದಕಾ. ೭-೬).

ಪೈಸರವಾಗು, ಪಯ್ಸರವಾಗು = ೧. ಸೋಲುಂಟಾಗು; ಪರಾಭವ ವುಂಟಾಗು : ಬೀದಿಗಲಹದೊಳೊಮ್ಮೆ ಪೈಸರವಾದಡದು ಪರಿಹರಿಸಿದವರೇ ಸೋದರರಲಾ (ಕುವ್ಯಾ.ಅ. ೨೦-೩೩). ೨. ಇಲ್ಲವಾಗು; ಮರೆಯಾಗು : ಶೌರ್ಯದ ವಾಸಿ ಪೈಸರವಾಯ್ತು ರಣದಾವೇಶವಿಳಿದುದು ಮಗಧಪತಿಗೆ (ಕುವ್ಯಾ.ಸ. ೨-೦೦೯); ಉಱೆ ಮನದ ವಾಸಿ ಪಯ್ಸರವಾಯ್ತು ಗೆಲ್ವಾಸೆ ಯಡಗಿತು (ಕುಅ. ೨೩-೩೩). [ದೇ. ॥ ತೆಲು. ಪೈಸರ, ಪಯಿಸರ]

**ಪೈಸರಂಗೊಳ್, ಪೈಸರಗೊಳ್** (ಕ್ರಿ). ೧. ಹಾಳಾಗು; ಕೆಡು : 'ಪೈಸರಂಗೊಳಿಸು' ಪರಾ. ಪೈಸರಗೊಳ್ : ೨. ಅನುಮಾನಿಸು; ಹಿಂದೇಟು ಹಾಕು; ಹಿಂದುಮುಂದು ನೋಡು : ಕೈಸೇರಿದೊಡವೆ ಯೆನುತ ಕೊಡಬೇಕೆಂದು ಪೈಸರಗೊಳಬೇಡ ಮನದಿ (ಮೋಹತ. ೨೬-೩೯). [ಪೈಸರ + ಕೊಳ್$_1$]

**ಪೈಸರಂಗೊಳಿಸು** (ಕ್ರಿ). ಹಾಳು ಮಾಡು; ಕೆಡಿಸು : ಹಣ್ಣನಿಟ್ಟೊಡೆ ಕಾಯಿ ಬಿದ್ದ ತೆಱದಿಂ ನಾನು ಹಣ್ಣಿದಾ ಕಾರ್ಯಮಂ ಪೈಸರಂಗೊಳಿಸಿ ಮಸಿವಣ್ಣಮಂ ಮಾಡಿದೆಯಲಾ ಪಾಪಿದ್ಯೆವವೇ ಎಂದು ಬಸಿಱಂ ಹೊಸೆಯುತ (ಸಮ್ಯಕ್ತ್ವ. ೩-೩೦). [ಪೈಸರಂಗೊಳ್ + — ಇಸು$_1$]

**ಪೈಸರಂಬೋಗು, ಪಯ್ಸರವೋಗು, ಪೈಸರವೋಗು** (ಕ್ರಿ). ೧. ಜಾರು; ಜಗುಳು : ಗತಿ ಸ್ತಂಭಿಸಿ ಪಾದಂ ಪೈಸರಂಬೋ[ಪಾಠಾಂ.ಪೋ]ಗಿ ... ಮೂರ್ಚಿಸುವ ಮಗಳಂ ಪದ್ಮಾವತಿ ಕಂಡು (ಪಾಂಉಪ. ಹ. ೦೬೯-೦೬). ೨. ಇಲ್ಲವಾಗು; ತೊಲಗು : ಪನ್ನತಿಕೆ ಪೈಸರಂಬೋಗಿ ಪ್ಯೆಗರೆದು ದೇವತ್ವಮುಡುಗಿ ಬಲಗೆಟ್ಟು ನಾಣ್ಗೆಟ್ಟು ನಿಂದು (ಅರಾಕ. ೩-೬-೩೩). ಪಯ್ಸರವೋಗು : ೩. ಜೋಲು; ಕುಸಿಬೀಳು : ಅಸಮಸಾಹಸಿ ತಿವಿದರಮಮಾ ದೆಸೆಗೆ ಚೆಲ್ಲಿತು ಕರುಳು ಪಯ್ಸರವೋಗಿ ಖಳ ಕೆಡೆದ (ಕಾಕಿಶಾ. ೨೨-೨೦). ಪೈಸರವೋಗು : ೧. ಮುಂದೆ ಹೆಜ್ಜೆಯನಿಡುತ ಪೈಸರವೋಗಿ (ಕುವ್ಯಾಗ. ೩-೦೩). ೨. ಅಕ ಪೈಸರವೋಯ್ತು (ಕುವ್ಯಾಅ. ೬-೩೬); ಬಿದಿರ್ದುದು ಬಿಂಕಂ ಬೀತುದು ಪರಿ ಪೈಸರವೋದುದು ಪೆಂಪು (ಜಮುಕಾ. ೩-೩೨). ೪. ತಪ್ಪಿಸಿಕೊಳ್ಳು; ನುಣುಚಿಕೊಳ್ಳು : ತಿರುಗಿ ಪೈಸರವೋಗಿ ಪವನಜ ಮರಳಿ ತಿವಿದನು ಕೀಚಕನ ಪೇರುರವನು (ಕುವ್ಯಾವಿ. ೩-೯೨). [ಪೈಸರ + ಪೋಗು$_1$ (< ಪೋ$_1$)]

**ಪೈಸರಗೊಡು** (ಕ್ರಿ). ವಿಸ್ತಾರವಾಗಿಡು; ಅಗಲವಾಗಿಡು: ಕಾಲ ಪೈಸರ ಗೊಟ್ಟು ಸರಪಣಿವಿಡಿದು ಹಿಮ್ಮಾಲಾಗಿ ಪಡೆ ತೆಗೆವಾಗ ತೋಳ ಸಿಕ್ಕಿಗೆ ರಾಯ ನೀಡಿದನುಱೆ ಹೊಟ್ಟೆಮೇಲಾಗಿ ಕೆಡೆದರುರ್ವಿಯೊಳು (ಭರತ. ೯೯-೦೦೯). [ಪೈಸರ+ಕೊಡು$_1$]

**ಪೈಸರಗೊಳ್** 'ಪೈಸರಂಗೊಳ್' ನೋ.

**ಪೈಸರಗೋಲು** (ನಾ). ದೊಣ್ಣೆವರಸೆಯಲ್ಲಿ ಬಳಸುವ ಕೋಲು : ಉರ ತಗ್ಗಿ ಬಗ್ಗಿ ಕುಪ್ಪಳಿಸಿ ಪ್ಯೆಸಿರಿಯುಬ್ಬಿ ಭರತಕೋವಿದರಂತೆ ಹೆಣಗಿ ಸರಿಬವರಿಯೊಳು ಪೈಸರಗೋಲ ತಿರುಗಿ ಶ್ರೀಕರದ ಸಾದಕವ ತೋರಿದರು (ಕವಿಕ. III, ೯೯ ಸೌಂದರಕಾವ್ಯ). [ಪೈಸರ+ಕೋಲು$_1$ (<ಕೋಲ್$_1$)]

**ಪೈಸರವೋಗು** 'ಪೈಸರಂಬೋಗು' ನೋ.

**ಪೈಸರಿಸು, ಪಯಿಸರಿಸು, ಪಯ್ಸರಿಸು** (ಕ್ರಿ). ೧. ಕೆಳಕ್ಕೆ ಬೀಳು; ಜಾರು; ಜಗುಳು: "ಪೈಸರಿಸಿತೆನಲ್ಕೆ ಜಾಱಿತೆಂದಱಿಗೆ ಬುಧರ್" (ಛಾಂಶಿ. ೩೩); ಸಂಜಯನು ಬರಬರಲು ಕಂಡನು . . . ಕರಿಗಳೊಟ್ಟಿಲನೇಱಿಳಿದು ಪೈಸರಿಸಿ ಮಿದುಳಿನ ಜೋಱು ಜೊಂಡಿನ ತೊರೆಳೆಯಲಿ ದಡದಡಿಸಿ ಜಾಱುತ ಬೀಳುತೇಳುವನ (ಕುವ್ಯಾಗ. ೩-೬); ಜೋಲುವ ದೋತ್ರ ಪೈಸರಿಸಿದಕ್ಷಮಾಲೆ (ಶ್ರೀಂದವು. ೩-೦೬); ಪಾದಪಶಾಖೆಯಿಂ ಪೈಸರಿಸಿ ಧೊಪ್ಪನೆ ಕೆಡದು ಪವನನ ಕಾಲು ನೊಂದಿರಲು (ತಿಮ್ಮಅ. ೭-೨೩). ೨. ಕುಸಿದುಬೀಳು,— ಕೆಡೆ: ಆಘಟ ನವನಿಗೆ ಪೈಸರಿಸಿ ಹರಿವದನವನು ನೋಡುತ್ತ ಬಿಟ್ಟನು ನಿಜಕಳೇವರವ (ಜಿಶಾಗ. ೩-೬-೩೯). ೩. ಕುಗ್ಗು; ಕುಂದು; ಕಡಮೆಯಾಗು : ಬರಸು ಭಾಷೆಯನಿಂದು ಕರ್ಣನ ಶಿರವುಳಿದು ತಾವರೆಯ ನಗೆ ಪೈಸರಿಸಿದರೆ . . . ಕಲಿಭೀಮನಯ್ಯನ ಹರಹು ನಿಂದರೆ ಬಳಿಕ ನಿಮ್ಮಯ ತಮ್ಮನಲ್ಲ (ಕುವ್ಯಾಕ. ೦೯-೬); ಪೀಸರಂಬೊಂದಿತ್ತು ಮನದೆಸಕವಮಾವಗಂ ಪೈಸರಿಸಿತಧೈರ್ಯಂ (ಅರಾಕ. ೨-೩-೭); ಧೃತಿ ಪೈಸರಿಸುತಾ ನೃಪನೊಡನೆ ತದ್ವಿಪ್ರನಿಂತೆಂದು (ತಿಮ್ಮಅ. ೩-೬೨). ೪. ಕ್ಷಯಿಸು; ನಾಶವಾಗು : ಇರುತಿರುತ ರವಿಸೂನು ಗಂಧರ್ವರಲಿ ತನ್ನಯ ಕೀರ್ತಿಲತೆ ಪೈಸರಿಸಿದಂದವನ್ನೆದೆ ಚಿಂತಿಸುತಿರಲು ರಜನಿಯಲಿ ತರಣಿ ಕಂದನ ಮೋಹದಿಂದವೆ ಧರೆಗೆ ಬಂದನು (ಕುವ್ಯಾಅ. ೦೦೩. ೨೩-೩); ಅತ್ಯಂತವಿಷಯಾತುರರಿಗೆ . . . ಕುಲ ಪೈಸರಿಸುವುದು (ಜೀವಂಚ ೯-೨); ತೇಜದೇಳಿ ಯದು ಪೈಸರಿಸಿತ್ತೆ (ಶಿರಾಂ. ೦೦-೭೩). ೫. ಹಿಂಜರಿ; ಹಿಮ್ಮೆಟ್ಟು : ಚತಿಗೆ ಸೆಡೆದಾ ನಕುಲ ಪೈಸರಿಸಿದನು (ಕುವ್ಯಾಗ. ೨-೩೩); ವೀರಹನುಮನ ಮಱಿಯ ಹೊಕ್ಕುದು ಭೂರಿವಾನರಸೇನೆ ಪೈಸರಿಸಿ (ತೊರಾ. ೬-೩೨-೯); ಆ ಸುರಾರಿಗಳೆಮ್ಮ ದೆಸೆಯಿಂ ಪೈಸರಿಸುವವರಲ್ಲ (ಉರಾ. ೩-೨೬). ೬. ತೊಲಗು; ದೂರ ಸರಿ: "ಪೈಸರಿಸಿತೆನಲ್ಕೆ ಪೋದುದು" (ಶಕುಅ. ೦೨೬-೦೬೯); ಬೀಸುವ ಗಾಳಿಗೊಯ್ಯನೆ ಪೈಸರಿಸುವ ದಾಸಿಮುಗಿಲ ತೆಱನಂತೆ (ಅಂಜಿಕ. ೦೩-೨೯೯); ಎರಡುಪುಳಿಗೆಯು ಮೇಲಾ ಕಾಂತೆ ನಿದ್ರೆ ಪೈಸರಿಸಿ ಪ್ಯೆಮುರಿದೆದ್ದಳು (ಭರತ. ೯೦-೦೬೬). ೭. ಹಿಂದಿರುಗು; ವಾಪಸ್ಸಾಗು : ಪೈಸರಿಸುವುದು ಬಂದ ಬಳಿವಿಡಿದು (ಕುವ್ಯಾಉ. ೩-೦೩); ಪುರವ ಹೊಱವಂಟುರಗಪತಿ ಪೈಸರಿಸಿದನು ಯವನೇಶನ್ನೆತರೆ (ಜಿಶಾಗ. ೯-೦೬-೨೬). ೮. ಮರೆಯಾಗು; ಕಾಣದಾಗು : ಅತುಳಮೋಹಮದೋ ಸರಿಸಲ್ ಥಳಥಳಿಪ್ಪ ವಿಮಲಾತ್ಮನವೋಲ್ ಪೈಸರಿಸಲಿಂದ್ರಜಾಲಕಮಾ ಸನ್ಮುನಿಯೊರ್ವನೊಪ್ಪಲು (ಅದ್ಭುಟಿ. ೩-೯೬). ೯. ಪಕ್ಕಕ್ಕೆ ಸರಿ; ಓರೆಯಾಗು : ಬಿಗಿದು ತೊಟ್ಟ ಕಂಚುಕಮಿನಿತು ಪೈಸರಿಸೆ ನಿಬಿಡಕುಚಮಿಟ್ಟಿ ಸಲ್ ನಸುದೋರೆ . . . ಗಟ್ಟಿವಾಳ್ತಿಯರೆಸೆದರು (ಶಕುಪು. ೦-೩-೩೦). ೧೦. ಸಡಿಲವಾಗು; ಅಳ್ಳಕವಾಗು : ನಿಱಿಯ ಬಿಗಿ ಪೈಸರಿಸೆ (ಕೃಮಿಶಾ. ೦೦-೦೯). ೧೧. ಬಿಡು; ವರ್ಜಿಸು; ತ್ಯಜಿಸು: ಆ ಸುರುತಾಳನ ಖಾನನ ಕರೆದುಕೊಂಬಾಸುರಕೃತ್ಯ ಬೇಡೆಮಗೆ ಪೈಸರಿಸುವುದದನು (ಕುಂಶಾಸಾಂ. ೦೩-೦೩೯); ಆದಿಶ್ಯೆವಾಚರಣೆಯಿಂ ಮುಕ್ತಿವನಿತೆಯೊಳಗಾದರದೆ ಸುಖಿ ವಿರ್ಪುದಂ ಪೈಸರಿಸಿಯರ್ಹತೋದಿತಾಚಾರದೊಳ್ವರ್ತಿಸುತವಿದ್ಯಾಂಗನಾ ಸಂಗದಿಂದಿರ್ಪುದು ಹಾದರಮದಲ್ಲವೇ (ಶಾಸೋಪು. ೯-೦೦೩). ೧೨. ಕೆಡು; ಹಾಳಾಗು : ಹೇಸದರಿಭೂಪಾಲರನು ನಿಶ್ಶೇಷವೆನಿಸುವುದಲ್ಲದಿರ್ದೊಡೆ ಪೈಸರಿಸುವುದು ರಾಜಕಾರ್ಯವಿದು (ಕುವ್ಯಾಅ. ೬-೯೭). ೧೩. ಸಿಡಿ; ಚಿಮ್ಮು : ಪೊಂಗೇವಗೆಯ ಕಿಱಿಯ ಗಱಿಗಳಿಂ ಪೈಸರಿಸಿದ ಅಲರ್ಪುಡಿಗಳಿಂ (ರೇವಣ. ೨೭-೨೭); ಪೈಸರಿಸಿ ಭೂತ್ಕರಿಪ ಕಿಡಿ ನಿಶ್ವಾಸದುರಿ ಭುಗಿಭುಗಿಲೆನುತ ಪಡೆಸಾಸಿರವ ಪಸರಿಸುತ ಪವನನ ಕರೆದನಾಹವಕೆ (ಅಪಂರಾ. ೦-೭-೨೩). ೧೪. ಹರಡು; ವಿಶಾಲವಾಗಿಸು; ಹರಹು : ಉಱುಗಿತು ಬ್ರಹ್ಮಾಂಡವೆನೆ ಖಗರಾಜ ಕಿಳ್ಕಱಿಯನೊಯ್ಯನೆ ಪೈಸರಿಸೆ (ಮೋಹತ.

೩೭-೭೨) ; ಸದಮಲಸರ್ವಜ್ಞ ನಿಂದು ನಿಟ್ಟಿಸೆ ವಿಶಾರದ ಗಣಿಯನು ಪೈಸರಿಸೆ ಮದವಕ್ಕಳಿಳಿದರು (ಮೋಹತ. ೪೨-೧೫). ೧೫. ಹರಡಿಕೊಳ್ಳು; ವಿಸ್ತಾರಗೊಳ್ಳು : ತರೆತರೆಗೊಂಡು ಜಾರುತ ಪೈಸರಿಸುತ ಸಿರ ಮುಖ ಕಂಠ ವಕ್ಷಕ್ಕೆ ಪರಿದು ಜಠರ ಕಟಿಯೂರುಗಳಿಗಿಳಿತಂದು ಚರಣದಿಂದಂಗಣ ತುಂಬಿ (ಗೂವ್ಯಾಕ. ೭-೨೨೨). ೧೬. ( ? ) : ಆ ಸಮೀಪದೆ ಸುಂಡಿಲ ಗಳಿಯಳು ಪೈಸರಿಸಿ ಸುಂಡಿಲುಗಳಿಟ್ಟು ವಿಲಾಸದಿಂ ವತ್ತರಿಸಿ ನೂಂಕುತೆ ಬ್ರಹ್ಮೇತಂಗೈದು ವಾಸದಿಂ ಪೂರ್ವಾನೆಗಳದಿಂ ದೋಸಪದೊಪ್ಪಿದುದು ಬರುತಿಹ ಭೂಸುರೋತ್ತಮರುಗಳಿಗಂ ಭಯಮಿಾವುತೇಳಿಯಲಿ (ಕಾವೇಮ. ೬೦-೧೯). **ಪಯಿಸರಿಸು :** ೧೭. ತಪ್ಪಿಸಿಕೊಳ್ಳು ; ನುಣುಚಿಕೊಳ್ಳು : ದೊರೆಗಳ ಹಿಂದೆ ದೊರೆ ಪಯಿ[ ಪಾಠಾಂ. ಪೈ] ಸರಿಸಿತಲ್ಲಿಯದಲ್ಲಿ ಭೀಮನ ಹೊಯ್ಲ ಹೋರಟೆಗೆ (ಕುವ್ಯಾಕ. ೦೫-೩೩). **ಪಯ್ಸರಿಸು :** ೧. ಕುಚ ಯುಗಂ ಪರನಿತಂಬಂ ಕದಕ್ಕದಿಸೆ ಮೇಲುದ ನಿಱಿಗಳಿರದೆ ಪಯ್ಸರಿಸೆ (ಕಬಪು. ೫-೦೩). ೧೭. ಬಾಹುಗಳಿಂದೆ ಕಂಠಮಂ ತೊಡರೆ ಕುನುಂಗಿ ಪಯ್ಸರಿಪ ಬಿನ್ನಣವೊಪ್ಪೆ ಕಡಂಗಿ ಕಾದಿದರ್ (ಶಬಶಂ. ೪-೬೩).

[ಪೈಸರ + — ಇಸು$_3$]

**ಪೈಸಾ** ‘ಪೈಸ’ ನೋ.

**ಪೈಸಾರ** ‘ಪೈಸರ’ ನೋ.

**ಪೈಸೆ** ‘ಪೈಸ’ ನೋ.

**ಪೊಂ** ‘ಪೊನ್’ ನೋ.

**ಪೊಂಕ** (ನಾ). ೧. ಗರ್ವ ; ಅಹಂಕಾರ : ಅಱದರೆಗಳಿಗೆಯೆ ಜಾದಿಯ ಮಲಿಪುಂ ಮಲ್ಲಿಗೆಯ ಪೊಂಕಮುಂ ಬಟಿಕವನಾರ್ ತಲೆಯೊಳ್ ತಾಳ್ದುವರ್ (ಅದಿಪು. ೦೧-೧೦೮) ; ಪಂಕಜನಂದನ ದಾನವಾರಿ ರುದ್ರರ್ ಪೊಂಕದ ಬೋಳಿ ಯರಾದಿಕಾರಣಾಂಗರ್ ಬಿಂಕದ ಮೂಪರಿಪರ್ಗೆ ಬೀಜಮಿಾಶಂ (ಹಾಲಾಸ್ಯ ೦-೦೭-೨೩) : ಪೊಂಕಮಿಱಿದು ಬಂದು ಎನ್ನ ಕೆಳೆಯ ನೆರೆದಪೆನ್ (ಬದ್ಧಶ್ರ. ೦೩-೨೩೪). ೨. ಉಬ್ಬು ; ಉತ್ಸಾಹ ; ಸಂಭ್ರಮ : ಪಂಕರುಹಸಖನುಮುದಯಿಸೆ ಪೊಂ[ ಪಾಠಾಂ. ಕೊಂ, ಬಿಂ ]ಕದೆ ಬಂದೊಡ್ಡಿ ನಿಂದುವೆರಡುಂ ಪಡೆಗಳ್ (ನೇಮಿಪು. ೦೨-೦೦೦) ; ಶಂಕೆಯಿಲ್ಲದೆ ಬದಿಯಲಿ ಬಂದು ನಿಂತು ಪೊಂಕದಲಿ ನಲಿದಾಡುವನಮ್ಮಾ (ಪುರಂದ. ೫-೦೩೦-೨) ; ಮುನೀಂದ್ರದೇವತಾಸಂಕುಳಮೊಲ್ದು ಭಕ್ತಿರಸಪೂರಣದಿಂದೆ ಪರಸುತ್ತೆ ಸೇಸೆಯುಂ ಪೊಂಕಮದಾಗೆ ಸೂಸಿದರ್ (ಹಾಲಾಸ್ಯ. ೦-೦೭-೬೦). ೩. ಸೊಗಸು ; ಶೋಭೆ : ಕಂಕಣಝಣತ್ಕಾರಕಿಂಕಿಣೀಕಲರವದ ಪೊಂಕ ಮೇರ್ವಡಲು ಮಿನಾಂಕನೋಜೆಯು ಬೆಡಗ ಸೋಂಕಿಸುತ ವಿಟತತಿಗೆ ಬಾಪನ್ನುವನ್ನರೆವ ನಲವು ಚೆಲುವಾಗಿರ್ದುದು (ವೆಂಕಾರಾ. ೦-೪-೨೮).

[<ಪೊಂಗು$_1$./ತಮಿ. ಪೊಙ್ಕು, ಪೊಕ್ಕು ; ಮಲ. ಪೊಕ್ಕ ; ತುಳು. ತೆಲು. ಪೊಂಕ]

**ಪೊಂಕಂಗಿಡಿಸು** (ಕ್ರಿ). ಗರ್ವಭಂಗಮಾಡು : ಶಿತಾಸ್ತ್ರಂಗಳ್ ಪೊಂ[ಕ]ಂಗಿ [ಪಾಠಾಂ. ಪೊಂಖಂಗಿ, ಪೋಗಂಕಿ]ಡಿಸೆ ಸುಗಿದಂ ಭಾರ್ಗವನಿದೇಂ ಪ್ರತಿಜ್ಞಾ ಗಾಂಗೇಯಂಗದಿರದಿದಿರ್ನಿಲ್ವನ್ನರೊಳರೇ (ಪಂಪಭಾ. ೦-೮೦) ; ಕಿಂಕುರ್ವಾಣ ಪ್ರವಣರರೆಬರ್ ಬರ್ಪನಂ ಕಾದು ತನ್ನಂ ಬಿಂಕಂ ಪೊಂಕಂಗಿಡಿಸೆ ನನೆವಿಲ್ಲಾತನಂ ತೊಟ್ಟ ದಿವ್ಯಾಲಂಕಾರಗಳ್ ನಯನಸುಖಮಂ ನೀಡೆ (ಶಂರಾಮಾ. ೭-೦೩೦). [ಪೊಂಕಂಗಿಡು (<ಪೊಂಕಂಗೆಡು) + — ಇಸು$_3$]

**ಪೊಂಕಂಗಿಡು** ‘ಪೊಂಕಂಗೆಡು’ ನೋ.

**ಪೊಂಕಂಗೆಡು, ಪೊಂಕಂಗಿಡು** (ಕ್ರಿ). ಗರ್ವಭಂಗವಾಗು ; ಸೊಕ್ಕಿಳಿ : ಪೊಂಕಮುಳ್ಳವರ್ ಪೊಂಕಂಗೆಟ್ಟೋಡೆ (ಧರ್ಮಾಮೃ. ೦೩-೫೩). **ಪೊಂಕಂಗಿಡು :** ಅಂಕದ ನರೇಂದ್ರತನಯರು ಪೊಂಕಂಗಿಡೆ ಜನದ ನೆರವಿ ಬಾಯಂ ಬಿಡೆ...ಕೊಂಡುದರ್ಜುನನ ಶರಂ (ಬಿಂಹಂ. ೦೦-೦೫). [ಪೊಂಕ + ಕೆಡು$_1$]

**ಪೊಂಕು$_1$** ‘ಪೊಂಗು$_1$’ ನೋ.

**ಪೊಂಕು$_2$** ‘ಪೊಂಗು$_2$’ ನೋ.

**ಪೊಂಕುಂದ, ಪೊಕ್ಕುಂದ, ಹೊಂಕುಂದ** (ನಾ). ಒಂದು ಊರಿನ ಹೆಸರು; ℗ ಈಗಿನ ಕೋಲಾರಜಿಲ್ಲೆಯ ಬಾರಿಂಗ್‌ಪೇಟೆ ತಾಲ್ಲೂಕಿನ ಹನಕುಂಡ : ಶ್ರೀಮಾಧವಮುತ್ತರಸರ್ ... ಆವನ್ಯನಾಡು ಮೂವತ್ತುಂ ಪೊಂಕುನ್ದ ಪನ್ನೆರಡುಮಾಟುತ್ತು[ಮಿ]ರೆ (ಎಕ. X, ಬಾಂಗ್. ೦೩ ೨ ; ಸು. 890) ; ℗ ಇದು ‘ಪೊಂಕುಂದ’ ಎಂಬುದರ ಅಪಲಿಖಿತ ; ಸ್ವಸ್ತಿಶ್ರೀ ದಿಲೀಪಯ್ಯಂ ಪ್ರಿಥುವೀರಾಜ್ಯಂಗೆಯ್ಯುತ್ತಿರೆ ಪೊಂಕುನ್ದದ ತುಱುಗೊಳೆ ... ಕಾದಿ ಸತ್ತು ಸಗ್ಗಿಯಾದನ್ (ಪ್ರಶಂ. ೦೯೩೦, ೮-೨ ; ? ). **ಪೊಕ್ಕುಂದ :** ಪೊಕ್ಕುನ್ದದ ತುಱುಗೊಳೆ ಕೊಂಗಮಂಗಲದ ಮೇದಯ್ಯ ಕಾದಿ ಸತ್ತು ಸಗ್ಗೆಯ್ದದ (ಎಕ. X, ಬಾಂಗ್. ೪೦-೨ ; ಸು. 950). **ಹೊಂಕುಂದ :** ಸ್ವಸ್ತಿಶ್ರೀಮತು ಪಲ್ಲವಾನ್ವಯಪ್ರದೀಪಕಮ್ ಕುಮಾರಮ್ ಮಾಚಿ ದೇವರಸರುಮ್ . . . ರಾಜಾಧ್ಯಕ್ಷ ವಾಮನಕ್ರಮಿತರುಮ್ ಹೊಳಲೆ ಕೆಱೆನಾಡುಮುಮ್ ಹೊಂಕುನ್ದಮೂವತ್ತುಮುಮ್ ದುಷ್ಟನಿಗ್ರಹ ಶಿಷ್ಟ ಪ್ರತಿಪಾಳನೆಯಿನಾಳುತ್ತಮಿರ್ದ್ದು (ಎಕ. XI, ಚಿತ್ರದು. ೨೩-೨೦ ; 1205).

[ಪೊಂ (< ಪೊನ್) + ಕುಂದ$_3$]

**ಪೊಂಗ$_1$** (ನಾ). ಧೈರ್ಯಶಾಲಿ ; ದಿಟ್ಟ : ‘ಚೆನ್ನಪೊಂಗ’ ಪರಾ.

[ಪೊಂಗು$_2$ + — ಅ$_7$]

**ಪೊಂಗ$_2$** ‘ಪೊಂಗಯಿ’ ನೋ.

**ಪೊಂಗಂಟೆ, ಹೊಂಗಂಟೆ** (ನಾ). ಚಿನ್ನದ ಗಂಟೆ : ವಿಳಸದ್ರುದ್ರಾಕ್ಷಮಾಲಾ ಭರಣದೆ ಕೊರಲೊಳ್ತಳ್ತ ಪೊಂ[ಪಾಠಾಂ. ಹೊಂ]ಗಂಟೆಯಿಂ . . . ಎಸೆವ ಪೇರೆಳ್ತುಗಳ್ (ವೃಷವಿ. ೩೮-೬೪) ; ಬಾಳದೊಳ್ ಬಂಧಿಸಿದ ಜಲ್ಲಿ ಪೊಂಗಟ್ಟೆ [ಂಟೆ]ಗಳ ಮೇಳದಿಂ ಸೊಗಸಾಂತ ಬೆಂಡುವೂವ್ಗಳನು ಮಿಗೆ ಧಾಳಿಸುವ ಪುಲಿವಾಲಗಳನಾಂತ ತುಳಿಲಾಳ್ಗಳು (ಭೋರಾಸು. ೭-೦೦). **ಹೊಂಗಂಟೆ :** ಹಯನಿಕರ . . . ಹೊತ್ತುವು ರಘಡಿವ ಹೊಂಗಂಟೆಯ ವಿಡಾಯಿವರೂಥ ವನು (ಕುವ್ಯಾಭೀ. ೪-೯೨) ; ಹೊಂಗಂಟೆ ಹೊಮ್ಮೇಳದ ಕಠಾರಿಗಳು . . . ಒದವಿತೊಗ್ಗಿನಲಿ (ಮೋಹತ. ೦೯-೦೦). [ಪೊಂ ( < ಪೊನ್) + ಗಂಟೆ$_2$]

**ಪೊಂಗಂಬ** (ನಾ). ಚಿನ್ನದಿಂದ ಮಾಡಿದ ಕಂಬ ; ಬಂಗಾರದ ಕಂಬ : ವರತನು ಪೊಂಗಂಬವಾಗೆ ವೊಲ್ದುಟ್ಟಂಬರದ ಸೆಱಗು ಪಟವಾಗೆ ಅರಲ್ಗಣ್ಣ ಮಿನಾಗೆ ಬಂದರು ಪೆಣ್ಗಳು ಸ್ಮರನ ಪತಾಕೆಯೆಂಬಂತೆ (ಶಂಪ್ರಸಾಂ. ೦೨-೦೫೪). [ಪೊಂ ( < ಪೊನ್) + ಕಂಬ$_1$ ( < ಕಂಭ) ]

**ಪೊಂಗಜೆ** (ನಾ). ಬಂಗಾರದ ಗದೆ : ಪಾಱುಂಬಳೆ ಸಂಕು ಪೊಂಗಜೆ ಬಿಗುರ್ಪಿನ ಬೀಯಮರಲ್ದ ಪೇರುರಂ (ಜಕಿ. ೩-೮೯).

[ಪೊಂ ( < ಪೊನ್) + ಗಜೆ]

**ಪೊಂಗಟ್ಟಿ, ಪೊಂಘಟ್ಟಿ** (ನಾ). ಬಂಗಾರದ ಗಟ್ಟಿ,-ತುಂಡು : ಸುರ ಶೈಲಂ ಪುಟ್ಟಿ ಪೊಂಗಟ್ಟಿ [ಪಾಠಾಂ. ಬುಟ್ಟಿ]ವೊಲಿರೆ . . . ಜಗದ್ವ್ಯಾಪಿಯಾ ದತ್ತುಯುದ್ಧೋದ್ಧರತತ್ಸೇನಾದ್ವಯಾಭ್ಯುಚ್ಚಲನದಳದಿಳೋತ್ಪಾತಪಾಂಸು ಪ್ರತಾನಂ (ಶಂಪ್ರಪು. ೦೦-೬೬ ; ಕಾವ್ಯಸಾ. ೪೬೦ ನೋ). **ಪೊಂಘಟ್ಟಿ :** ಕೆಸಱೊಳಗಬ್ಜಂ ಕಲ್ಲೊಳು ಮಿಸುಗುವ ಪೊಂಘಟ್ಟಿ ಪೋಲದಂತಾ ಯೆಡೆಯಂ ಪಸುಧಾಸೇವ್ಯಂ ಕ್ಷೀರಂ ಪಸುವಿನ ತನುವಿನೊಳೆ ಪುಟ್ಟಿ ಪೋಲದು ತನುವಂ (ಕಸಾರ. ೨೯೬). [ಪೊಂ ( < ಪೊನ್) + ಗಟ್ಟಿ]

**ಪೊಂಗಟ್ಟಿಗೆ, ಹೊಂಗಟ್ಟಿಗೆ** (ನಾ). ಚಿನ್ನದ ಕೋಲು : ಹಡಪ ಕಾಳಾಂಜಿ ಪೊಂಗಟ್ಟಿಗೆ ಕಂಚು ಕನ್ನಡಿ ಗಿಂಡಿ ಬಿಜ್ಜಣಿಗೆಗಳ ಪಿಡಿದೊಳಗ್ಗೈವ ಬಿಂಕ ಗಾತಿಯರಾ ಪೊಡಮಿಯಾಣ್ಮನ ಪೊದ್ದಿಹರು (ಹರಿಚ. ೦-೦೭). **ಹೊಂಗಟ್ಟಿಗೆ :** ಹರುಷದಲಿ ನೃಪ ಹೊಂಗಟ್ಟಿಗೆಯ ಚರರಿಂದಲಾ ಮನಮುಟ್ಟಿದಾಪ್ತರ ಕರೆಸಿ (ತೊರರಾ. ೨-೧-೦೦). [ಪೊಂ (< ಪೊನ್) + ಕಟ್ಟಿಗೆ$_1$]

**ಪೊಂಗಡಗ,** ಹೊಂಗಡಗ (ನಾ). ಬಂಗಾರದ ಕಡಗ : ಬೇಸರಿಂದೆಡಗ ಯ್ಯೊಳ್ ಪಿಡಿದಾಂತು ಪೊಂಗಡಗವೊಂದಂ...ರಂಜಿಪನಿವಂ ತೇಜೋನ್ವಿತಂ ಭೂಮಿಪಂ (ಶಾಕುಂತ. ೬೨-೦೭೬). **ಹೊಂಗಡಗ** : ಹೊಂಗಡಗದ ಲಿಂಗ ವಂತೆಗೆ ತೋಳಬಂದಿಯ ಬಾಲಕಿಗೆ . . . ರಕ್ಷಣಾರ್ಥಂ ತಂದೆ ನಿಯಾಮಿಸಿ ಕೊಟ್ಟ . . . ಷೋಡಶಸಹಸ್ರ ವಿಳಾಸಿಯರ್ವೆರಸು (ಗಿರಿಕ. ೩-೬೦ ಪ) ; ಹೊಂಗಡಗದ ಲಿಂಗವಂತಂ ಉಡಿವಣೆಯ ದಿಗಂಬರಂ ಗೆಜ್ಜೆಗಳ ಸಜ್ಜನನೆನಿಪ ಸಿದ್ಧರಸಂ . . . ಭೋಂಕನೆದ್ದು (ಬಸವ. ೦೨-೦೦೩).

[ ಪೊಂ (<ಪೊನ್) + ಕಡಗ$_1$ ]

**ಪೊಂಗಡಲು,** ಹೊಂಗಡಲು (ನಾ). ಚಿನ್ನದ ಬಣ್ಣದ ಸಮುದ್ರ ; ಹೊಂಬಣ್ಣದ ಕಡಲು : ಪೊಂಗಡಲ ನುಣ್ದೆರೆಗಳ ಬಿಣ್ಪಿನ ಮಲ್ದಿರಳ್ಕೆಯ ಗಾಂಭೀರ್ಯದಿಂದ ಚಳಚಳಿಸುತ್ತ (ಮಂತ್ರಕ. ೬೬-೦೭). **ಹೊಂಗಡಲು** : ಪಡುವಣ ಹೊಂಗಡಲಿನಲ್ಲಿ ಮಾಯಲಿದಿರುವ ಮುಳುಗುನೇಸರು (ಕಡುಪ್ಕೆ. ೦೨೯) ; ಬಾ ಗೆಳತಿ, ನನ್ನೊಡನೆ ಗಗನದಂಚಿಗೆ ರವಿ ಮೂಡುವ ಹೊಂಗಡಲಿನ ಮಿಂಚು ಹೊಂಚಿಗೆ ! (ಅಂಜೂ. ೯೩).

[ ಪೊಂ (<ಪೊನ್) + ಕಡಲು (<ಕಡಲ್$_2$) ]

**ಪೊಂಗಣೆ** (ನಾ). ಚಿನ್ನದ ಗಣೆ : ಬೆಳಗೆಯ್ಯುಂ ಪೊಂಗಣೆಯುಂ ಫಲತರುವಿಂ ದೊಪ್ಪಯಂಗಳಿಂ ಕುಸುಮುರಜಾನಿಳನಿಂ ಪಗರೆಯ ಪರಿಯಿಂ ತಳರದ ಸಿರಿ ಬಲ್ಲಹುಂದೆನಾಳ್ಕೆಸೆದಿರ್ಕ್ಕುಂ (ಶಾಸ. IX-i, ೨೯೯-೦೩ ; 1147).

[ ಪೊಂ (<ಪೊನ್) + ಗಣೆ$_2$ (<ಕಣೆ$_2$) ]

**ಪೊಂಗಣೆ,** ಹೊಂಗಣೆ (ನಾ). ಚಿನ್ನದ ಬಾಣ : ಮಕರಾಂಕಮಂಡಿತ ಪೊಂಗಣೆಗಳ್ಗೆ ಪರಾಕ್ರಮಿವಾಂಟೆಯ ಸಾರ್ಚಿದಂತೆ ನಖಚಕ್ರದರ್ಶದಿಂ ಬೆರಲ್ಗಳೊಪ್ಪಿರ್ದುವು (ಪೋಹಕ. ೨೩-೦೯). **ಹೊಂಗಣೆ** : ಹೊರಕಿಸಿದ ಹೊಂಗಣೆಯ ಶರಧಿಯ ತುಳುಕಿಸಿದ (ಅಂಬಿಕಾ. ೨೦-೩).

[ ಪೊಂ (<ಪೊನ್) + ಕಣೆ$_1$ ]

**ಪೊಂಗದ** (ನಾ). ಚಿನ್ನದ ಕದ : ಸೋಮೇಶ ನೀಂ ತೆಗಿಸೀ ಬಾಗಿಲ ಪೊಂಗದಂಗಳನೆನುತ್ತಂದೋಹಿಲಂ ಕೂಗಿದಂ (ಅಪ್ಪಟಿ. ೦೦-೬೦) ; ನವ ಪುಷ್ಯರಾಗಾಳಿಯಿಂ ಸಮೆದ ಬಾಗಿಲ್ ಪೊಂಗದಂಗಳಿಂ ಪೇಳಲಚ್ಚರಿಯಾದು ದರಮನೆ (ಹರಿಪ. ೩-೯೬). [ ಪೊಂ (<ಪೊನ್) + ಕದ (<ಕದವು$_1$) ]

**ಪೊಂಗದಳಿ,** ಹೊಂಗದಳಿ (ನಾ). ಒಂದು ಬಗೆಯ ಬಾಳೆ; ಹೊಂಬಾಳೆ: ತಾಮರಸಜನು ನಿರ್ಮಿಸಿದ ಪೊಂಗದಳಿಯೊ ವಾಮಲೋಚನೆಯ ತೊಡೆ ಗಳೊ (ಶಬರ. ೨-೨೨); ಪೊಂಗದಳಿಸ್ತಂಭಂಗಳಂ ನೆರೆ ಗೋಲಿಪಾ ಪೊಳೆವ ನುಣ್ದೊಡೆಯುಗಳಂ (ಶಶಿಪೋ. ೬-೦೩). **ಹೊಂಗದಳಿ** : "ಗೌರಿಕಃ — ನೀರಿಪ್ಪೆ, ಹೊಂಗದಳಿ" (ಚತುರ. ೩೨) ; ಹೊಂಗದಳಿಯ ಕೋಮಲಪತ್ರ ವೀಜನದಂಗನೆ ಮೆಚ್ಚಿವಳೊತ್ತಿನಲಿ (ಪೋಹಕ. ೩-೩೯).

[ ಪೊಂ (<ಪೊನ್) + ಕದಳಿ$_2$ (= ಕದಲಿ) ]

**ಪೊಂಗದಿರ್$_1$** (ನಾ). ಚಿನ್ನದ ಬಣ್ಣದ ತೆನೆ : ಪೊಂಗದಿರಿನೆನೆ ಪೊಂಗದಿರಿಂ ಒಳ್ಗೊಳಪ ಕಿಯ್ಯೊಲನತೃಣಂ ಪಕ್ಕಿ ಸೋವ ಕರ್ಕಶಜವ್ವನೆಯರ ಮೆಲ್ಲುಲಿ ಕೇಳಿಪರ್ಪುದು (ಶಾಪೂಕ್ಕ. ೯-೭). [ಪೊಂ (<ಪೊನ್) + ಕದಿರ್$_1$]

**ಪೊಂಗದಿರ್$_2$,** ಪೊಂಗದಿರು, ಹೊಂಗದಿರು (ನಾ). ಚಿನ್ನದ ಬಣ್ಣದ ಕಿರಣ ; ಹೊಂಬಣ್ಣದ ಕಿರಣ : ಪೊಂಗದಿರ್ ಚವರಿಯಂ ಬೀಸಿ ರವಿ ಮೂಡಣದ್ರಿಯನೇರಿ ಬರ್ಪನಿತರೊಳೆ (ಶ್ರೀರಾಮ. ೩೬-೦೨೩). **ಪೊಂಗದಿರು:** ಗಗನಾಂಗಣವನ್ನು ತನ್ನ ಪೊಂಗದಿರುಗಳಿಂದಲೇ ದೀಪ್ತಿಗೊಳಿಸುವ ಸೂರ್ಯ (ಕ್ಷೋಣಿ. ೦೯೨). **ಹೊಂಗದಿರು** : ಮೇರುಗಿರಿಯೊಂದುದಿನ ಗರ್ವದಿಂ ತಲೆಯೆತ್ತಿ ಕಿಂಗದಿರ ಹೊಂಗದಿರ ಜಿಹ್ವೆಯಲಿ ನುಡಿಯಿತ್ತು (ಕಂಸೋ. ೨೦-೨); ಹೊಂಗದಿರ ಜೀರ್ಕೊಳವಿಯಿಂ ಸಂಜೆ ಜಿರ್‍ರೆಂದು ರಂಗೆರಚೆ (ಚಿತ್ರಾಂಗ. ೨೦-೩೩೭). [ ಪೊಂ (<ಪೊನ್) + ಕದಿರ್$_2$ ]

**ಪೊಂಗದಿರು** 'ಪೊಂಗದಿರ್$_2$' ನೋ.

**ಪೊಂಗದುಗು** (ನಾ). ಚಿನ್ನದ ಗೆಜ್ಜುಗ : ಜೂಜಿನಲಿ ಭರವಸದೊಳಾಸಕ್ತಿಯುವಡೆದು ಪೊಂಗದುಗುಗಳ ಕರತಳದೊಳಾಂತು (ಶಾಂಡಪು-೦೭-೩).

[ ಪೊಂ (<ಪೊನ್) + ಗದುಗು$_1$ (<ಗದುರ್ಗು) ]

**ಪೊಂಗದ್ಯಾಣ** (ನಾ). ಚಿನ್ನದ ಗದ್ಯಾಣ : ಅರಸರ ದೆಸೆಗೆ ಸಿದ್ಧಾಯಂ ಪೊಂಗದ್ಯಾಣಮೆರಡು (ಎಪಿ. XIV. ೩೬೯-೦೭; 945); ಎಲಸೆಯು ಮಹಾಜನಕ್ಕೆ ಕೊಟ್ಟ ಪೊಂಗದ್ಯಾಣವಯ್ವತ್ತಯ್ದು (ಸ್ಮಾರಂ. ೦೯೨೯, ೭೬-೦೩ ; 964) ; ಅಂಕದೊಳಂ ಪೊಂಗದ್ಯಾಣಂ ೧೨೦ (ಎಪಿ. XIII. ೯೭-೬೩; 1112).

[ಪೊಂ(<ಪೊನ್) + ಗದ್ಯಾಣ]

**ಪೊಂಗನ್ನಡಿ** (ನಾ). ಚಿನ್ನದಿಂದ ಮಾಡಿದ ಕನ್ನಡಿ : ಕಣ್ಮಲರ್ಗಳ್ ಕಡು ನಿಡಿದಾದುವು ಪೊಚಿಪೂರ್ಣ್ಮತು ಪೊಂಗನ್ನಡಿವೊಗದೊಳ್ ಪೊಗರುಣ್ಮಿದು ದಂಗಲತಿಕೆಯೊಳು ಕಂಪು (ಜದುಕಾ. ೩-೨೩).

[ ಪೊಂ (<ಪೊನ್) + ಕನ್ನಡಿ$_1$ ]

**ಪೊಂಗಯ್** (ನಾ). ಹೊಂಬಣ್ಣದ ಕೈ : ತಲೆಯಲ್ಲಿ ಪೊನ್ನ ಮುಡಿ, ಪದಿದರಿಲ ಪೆಂಪು, ಬೆಳ್ದಾವರೆಯ ಪೊಂಗಯ್ ! (ಹೊಂಗಳು. ೦೭-೦).

[ ಪೊಂ (<ಪೊನ್) + ಕಯ್$_2$ (<ಕೆಯ್$_2$) ]

**ಪೊಂಗಯಿ,** ಪೊಂಗ್ಯ$_2$ (ನಾ). ದೋಣಿ ; ನಾವೆ : ದೋಣಿಯಲ್ಲಿ ಅಥವಾ ಪೊಂಗಯಿಯಲ್ಲಿ ಮಕ್ಕಳು ಹುಡುಗರ ಸಂಗಡವಿದ್ದಾಗ ಸಾಮಾನ್ಯವಾಗಿ ನಾನೇ ಅದನ್ನು ನಡೆಸುವ ಯಜಮಾನನಾಗುತ್ತಿದ್ದೆ (ಬಂಜಪ್. ೦೭). **ಪೊಂಗ್ಯ$_2$** : ಪಂಪನೆಂದರೆ ಎರಡು ಭಾರತಗಳ ದೋಣಿಗಳಲ್ಲಿ ಕಾಲಿಟ್ಟು ತಾನೇ ಮುಳುಗಿಹೋಗುವಂತಾದನೆಂದು ಭಾವಿಸುವುದಾಗಲಿ, ಆ ಕಾರಣ ದಿಂದಲೆ ಸುಭದ್ರೆಯನ್ನು ನಾಯಿಕೆಯನ್ನಾಗಿ ಮಾಡಿದ ಪೊಂಗ(ಕಿರು ದೋಣಿ)ವನ್ನೇರಬೇಕಾಗಿ ಬಂತೆಂದು ಬಗೆವುದಾಗಲಿ, ಈ ಎರಡರಿಂದಲೂ ಪರಿಣತಿಯೊಂದೇ (ಶಾಡೋಚ. ೦೯೩). [ ←ತುಳು. ಪೊಂಗಾಯಿ ]

**ಪೊಂಗರಗ,** ಹೊಂಗರಗ (ನಾ). ಚಿನ್ನದ ಕರಗ ; ಬಂಗಾರದ ಜಲಪಾತ್ರೆ : ಪೊಂಗರಗೆದೊಳ್ಪೇವಿದ ಘುಸೃಣರಸಂ (ಶಾಗಳು. ೩೦-೩೩ ಪ); ಪನ್ನೀರ ಗಿಂಡಿ ಕುಡಿನೀರ ಪೊಂಗರಗ . . . ಬಹುವಿಧಾಭರಣವಿತತಿಗಳ ನಾಂತ ಕನ್ನೆಯರು . . . ನೆರೆದಿರ್ದರು (ರಾಶಿಕ. ೭-೮೪). **ಹೊಂಗರಗ** : ನೀಡಿಹರು ಪನ್ನೀರ ಹೊಂಗರಗದಲಿ ನಲಿದಾ ನಾರಿಯರು (ಕೃಷ್ಣಕುಂ. ೯-೩೯). [ ಪೊಂ (<ಪೊನ್) + ಕರಗ ]

**ಪೊಂಗರಡಿಗೆ,** ಹೊಂಗರಡಿಗೆ (ನಾ). ೧. ಚಿನ್ನದ ಸಂಪುಟ,–ಭರಣಿ : ತಂದೆ ಪುಷ್ಪವನೊಂದನಿಂದುವಪೌಳಿಗೊಂದು ಮುಂದಿಡೆ ಪೊಂಗರಡಿಗೆಯ (ಕೋಡಕ. ೦-೭೪). **ಹೊಂಗರಡಿಗೆ** : ೧. ಹೊಜಿದಾಗದಂತೆ ನಾಲ್ಕೊಗ ಜಂತದಲಿ ಹೊಂಗರಡಿಗೆಗಡದು ಕರ್ಮಣಿಯು ಜರುಡೆಯ ಬಿಗಿದಿಟ್ಟನೆಂಬಂತೆ ಬಲ್ಸೊಲೆಯೆರಡಟ ಮೊಗವು ತೋಜುದುವು (ಪೋಹಕ. ೨೩-೨೩). ೨. ವೀರಶೈವರು ಧರಿಸುವ ಚಿನ್ನದ ಕರಡಿಗೆ : ಎದೆಯ ಮೇಲೆ ಲಿಂಗಹಾರ, ಹೊಂಗರಡಿಗೆ (ತುಂಗಳ. ೨).

[ ಪೊಂ (<ಪೊನ್) + ಕರಡಿಗೆ (<ಕರಂಡಿಗೆ) ]

**ಪೊಂಗರಿ** 'ಪೊಂಗಜಿ' ನೋ.

**ಪೊಂಗರು** (ನಾ). ಚಿನ್ನದ ಎರಕ : ಹೃದಯದೊಳೆಸೆವ ಶಾಂತತೆ ಬಹಿರಂಗದೊಳೊದವಿದ ರೌದ್ರತೆಯಿಂದ ಸದಮಲಗಿರಿದೊಪ್ಪಿತು ಪಾದರಸ ನೆಜಿ ಪುದಿದ ಪೊಂಗರುವಿನಂದದೊಳು (ಪೀಬಸಂ. ೨೯-೬೭) ; ಕರಮೆಸೆದಳು ಕರು ಮಾಡದ ಮೇಲೆ ಪೊಂಗರುವಿನ ಪುತ್ಥಳಿಯಂತೆ (ಶುರಾಸಾಂ. ೨೦-೭೩) ; ಅರಮನೆಯಕುಳಶಾಲಾಗ್ರದೆ ಮೆಜೆವ ಪೊಂಗರುವಿನ ತೆನೆಗಳೊಪ್ಪಿದುವು (ಕಂಪವಿ. ೭-೨೨). [ ಪೊಂ (<ಪೊನ್) + ಕರು$_2$ ]

**ಪೊಂಗರುವಾಡ** (ನಾ). ಚಿನ್ನದ ಉಪ್ಪರಿಗೆ : ಆ ಪುರವರದ ಪೊಂಗರು

ಮಾಡಗಳೊಳು ಕರಮೆಸೆದಿರ್ಪವು ಕಣ್ಗೆ ದುಕೂಲದ ವರವೈಜಯಂತಿ ಕೋಟಿಗಳು (ಆದಿಪು. ೩-೬೦). [ಪೊಂ (<ಪೊನ್) + ಕರುಮಾಡ]

**ಪೊಂಗರೆ, ಹೊಂಗರೆ** (ನಾ). ಜರತಾರಿ ಅಂಚು ; ಜರಿಯಂಚು : ಒಟ್ಟಿರ್ಪ ಕೆಂಬೊಗರಿ ನೆರೆಯುಡೆಯು ತಲೆಸುತ್ತಿ ನಿಟ್ಟಳದ ಪೊಂಗರೆಯೆ ಕಣ್ಸೋರೆಗಳಿಗೆ ಕಟ್ಟಿರ್ಪ ಕವಲಾಗಂ ನೋಡೆ ಕಣ್ಸೆಸರ್ ಮುಟ್ಟುವುದ (ಗಾಂಧಿ. ೦೪೭-೩೨೨). **ಹೊಂಗರೆ :** ಈ ಪುಂಗುರ ತೊಂಡಿಲು ಬಂದಿ ಹೊಂಗರೆಯಂಬರವೀ ಸಾಲ್ಕು ಹೆಚ್ಚು ಪುಣ್ಯಾಂಗನೆಗಿವು ಸಲಲಿ (ಕರಿ. ೩೬-೭೭). [ಪೊಂ (<ಪೊನ್) + ಕರೆ$_4$]

**ಪೊಂಗಲ್$_1$, ಹೊಂಗಲ್ಲು** (ನಾ). ಚಿನ್ನದ ಕಲ್ಲು : ಚಿಪ್ಪಿನ ಮಂದಿರದಲ್ಲಿ ಮುತ್ತು ಬೆಳೆದ ಭೇದದಂತೆ ಪ್ರುತ್ತಿಕೆಯ ಸಾರದಲ್ಲಿ ಹೊಪ್ಪಿದ ಪೊಂಗಲ [ಲ್ಲ] ಪರಿಯಂತೆ (ಮೋಕ್ಷ. ೯೩-೩೭೭); ಸ್ವರ್ಣೋಪಲೇ_ಪೊಂಗಲ್ಲೊಳ್ (ಅಭಿಧಾ. ೦೬೬-೨ ೮೪೯). **ಹೊಂಗಲ್ಲು :** ಮಂದರತಳದ ಹೊಂಗಲ್ಲಂತೆ ಬಹಿರಂಗಸಾಮಗ್ರಿಯನೆಂದುಂ ಪಡೆಯದೆ ನಿಗೋದಾವಾಸದೊಳು ನಮೆಯುತ್ತಿರ್ಪರನಭವ್ಯಸಮಾನದ ಭವ್ಯರೆಂದೆಣಿವುದು (ಕಾರ. ೯೩೨). [ಪೊಂ (< ಪೊನ್) + ಕಲ್$_3$]

**ಪೊಂಗಲ್$_2$, ಪೊಂಗಲು$_1$** (ನಾ). (ವಿಶೇಷವಾಗಿ ಸಂಕ್ರಾಂತಿಯಂದು) ಅಕ್ಕಿ, ಹೆಸರುಬೇಳೆ, ಬೆಲ್ಲ, ತುಪ್ಪ ಮುಂತಾದುವುಗಳಿಂದ ತಯಾರಿಸುವ ಖಾದ್ಯ ; ಹುಗ್ಗಿ : ಈ ದಿನ ನೈವೇದ್ಯಕ್ಕೆ ಪೊಂಗಲ್ ಮಾಡಿದ್ದರು (ಆಡು). **ಪೊಂಗಲು$_1$ :** ಜನಕ್ಕೆಲ್ಲ ಪೊಂಗಲು ಹಂಚಿದರು (ಗಾಯಿಗಾ. ೯೬) ; ಪೊಂಗಲು ಮತ್ತು ಪಕ್ವಾನ್ನಗಳನ್ನು ಮಕ್ಕಳಿಗೆ ಕೊಟ್ಟು ತಿನ್ನಿಸುತ್ತ ಉಪಚರಿಸುತ್ತಿದ್ದರು (ಇಂದು. ೩೮).

**ಪೊಂಗಲುಹಬ್ಬ** = ಸೂರ್ಯನು ಮಕರರಾಶಿಯನ್ನು ಪ್ರವೇಶಿಸುವ ದಿನದಂದು ಸೂರ್ಯನಿಗೆ ಪೊಂಗಲಿನ ನೈವೇದ್ಯವಿಟ್ಟು ಪೂಜಿಸುವ ಹಬ್ಬ ; ಮಕರಸಂಕ್ರಾಂತಿ : ನಮ್ಮಲ್ಲಿ ಪೊಂಗಲುಹಬ್ಬದಂದು ಎಳ್ಳು ಬೀರುವ ವಾಡಿಕೆಯಿದೆ (ಆಡು).

[ದೇ.॥ ತಮಿ. ಪೊಙ್ಕಲ್ ; ತೆಲು. ಪೊಂಗಲಿ, ಪೊಂಗಳಿ]

**ಪೊಂಗಲು$_1$** 'ಪೊಂಗಲ್$_2$' ನೋ.

**ಪೊಂಗಲು$_2$** (ನಾ). ಒಂದು ಬಗೆಯ ಆಭರಣ (?) : ಲಾಳಿದಾರ ಕಂಠಿಕೆ ಖಡೆಯ ಪೊಂಗಲು ಹೊನ್ನ ಬಳೆಯುತ್ತರಿಗೆ ಚೆನ್ನಸರವ ಕಳುಪು (ಕುಮಾರರಾ. ೯೨-೨೪). [?]

**ಪೊಂಗವಚ** (ನಾ). ಚಿನ್ನದ ಕವಚ ; ಹೊನ್ನಿನ ಮೈಜೋಡು : ಸಂಗರಲಾಭೋತ್ಸವಪುಷ್ಪಾಂಗತೆಯಿಂ ಕಿಱಿಯವಾದೊಡಟ್ಟಿ ಜನಕ್ಕಾ ಪೊಂಗವಚಂಗಳನಿತ್ತರ್ . . . ಮಹಾವೀರಭಟರ್ (ಚಂದ್ರಪ್ರ. ೦೦-೩೪). [ಪೊಂ (<ಪೊನ್) + ಕವಚ]

**ಪೊಂಗವಡಿಕೆ** (ನಾ). ತಲೆಯಲ್ಲಿ ಧರಿಸುವ ಕವಡೆಯಾಕಾರದ ಒಂದು ಬಗೆಯ ಚಿನ್ನದ ಆಭರಣ : ಎಡೆಗಿಱಿದಿರೆ ಪೊಂಗವಡಿಕೆ ಬಿಡೆ ಪುಲ್ಮೆನೆ ಗೆಜ್ಜ (ಜಗ. ೩-೪೪) ; ಮಾಂಗಾಯ್ ಕದಪಂ ಚುಂಬಿಸೆ ಪೊಂಗವಡಿಕೆ ನೊಸಲೊಳಲೆಯೆ (ಚಂದ್ರಪ್ರ. ೩-೪೪) ; ಪೊಳೆವ ಪೊಂಗವಡಿಕೆ[ಪಾಠಾಂ. ಗೆ] . . . ಉಲಿವ ಪೊಂಗೆಜ್ಜೆಗಳಿಂದ ಸಿಂಗರವಾಗಿ ನೆಲದೆಱೆಯನ ಸುತನಿಹನು (ಚಂದ್ರಸಾ. ೬-೭೭). [ಪೊಂ (<ಪೊನ್) + ಕವಡಿಕ್ಕೆ]

**ಪೊಂಗವಳಿಗೆ** (ನಾ). ಚಿನ್ನದ ಕರಂಡಕ ; ಹೊನ್ನಿನ ತಾಂಬೂಲದ ಪೆಟ್ಟಿಗೆ : ತಂಬುಲಂದೀವಿವ ಪೊಂಗವಳಿಗೆಯುಂ ಪಿಡಿದಂಬಿಕೆಗವಟ್ಟಯ್ಸಿ ದಳೊರ್ವಳಿಂದ್ರವಧು ತಂಬುಲವಂ (ಶಾಂತಿಪು. ೯-೦೮೦) ; ಮೆಲ್ಲನೆಯ್ದುಂದೊರ್ವಳ್ ಪೊಂಗವಳಿಗೆಯುಂ ಪಿಡಿದು ಮನಂಗೊಳೆ ನೃಪಸತಿಗೆ ನೀಡಿದಳ್ ತಂಬುಲವಂ (ಧರ್ಮಪ. ೬೮-೪೭). [ಪೊಂ ( < ಪೊನ್ ) + ಕವಳಿಗ್ಗೆ]

**ಪೊಂಗಸೆದೇವ** (ನಾ). ಒಬ್ಬಾತನ ಹೆಸರು : ಪೊಂಗಸೆದೇವನ ಮಗ ಪೊನ್ನಯ್ಯ (ಎಕ. XII, ಪಾವುಗ. ೬೦-೧ ; ಕ್ರಿ. 926). [ಪೊಂಗಸೆ ? + ದೇವ]

**ಪೊಂಗಹಳೆ, ಪೊಂಗಾಳೆ** (ನಾ). ಚಿನ್ನದ ಕಹಳೆ : ಕೊಂಬುಗಹಳೆ ಪೊಂಗಹ[ಪಾಠಾಂ. ಪೊಂಗಾ]ಳೆಯುತ್ಕಟತಾಳಮದ್ದಳೆಗಳೆಂಬ ಬಹುವಾದ್ಯದುಬ್ಬಟೆಯಖಿಳದೆಸೆಯೊಳಾವರಿಸಲು (ಕೆಳ್ಪು. ೩-೭) ; ಪಿಡಿನಡುವು ರತುನ ಕೈಪಿಡಿ ಗಂಡಮಂಡಲಗಳದಿದಾವರೆಯು ಸ್ಮರನ ಪೊಂಗಹಳೆ ಜಂಘೆಗಳೊ ಪೊಡವಿ ಜಘನಂ ತಳೋದರ ಶ್ರೀಫಲೋಪಮಿತ ಕುಚ ಕಂಬುಕಂಠಗಳೊ (ಚಂಗಾಂ. ೩-೬-೩೪). **ಪೊಂಗಾಳೆ :** ಮೇಲಿನ 'ಚೆಬವು' ಪ್ರಯೋಗದ ಪಾಠಾಂತರವನ್ನು ನೋಡಿ. [ಪೊಂ (<ಪೊನ್) + ಕಹಳೆ]

**ಪೊಂಗಳಂತಿಗೆ** (ನಾ). ಚಿನ್ನದ ಜಲಪಾತ್ರೆ : ತಣ್ಪಿನ ನೀರ್ ಸೆಱೆಯಾದ ಪೊಂಗಳಂತಿಗೆಯಿರೆ ಸಜ್ಜೆಯೋವರಿಯಿದೋವರಿ ಮಾಡಿತು ಕಂತುಗೆಮ್ಮುಮಂ (ಚಂದ್ರಪ್ರ. ೬-೬೦). [ಪೊಂ (<ಪೊನ್) + ಗಳಂತಿಗೆ$_1$]

**ಪೊಂಗಳಶ, ಹೊಂಗಲಶ, ಹೊಂಗಳಶ** (ನಾ). ೧. ಚಿನ್ನದ ಕಲಶ ; ಸ್ವರ್ಣಕುಂಭ : ಸುಲಲಿತಲಾವಣ್ಯಸುಧೆಯ ಪೊಂಗಳಶಗಳಲಿ ತುಂಬಿ (ಕಂಠಪ. ೯-೨೮). ೨. ಗುಡಿ ಗೋಪುರಗಳ ಮೇಲೆ ಇರಿಸುವ ಚಿನ್ನದ ಕಲಶ : ಅಭ್ಯುದಯಕರಮೆನಿಪ ಕರುಮಾಡದ ಶಿಖರದೊಳೊಪ್ಪಿ ತೋಱುಗುಂ ಪೊಂಗಳಶಂ[ಪಾಠಾಂ. ಸಂ](ಸುಕುಮಾ. ೦೦-೩೦). **ಹೊಂಗಲಶ:** ೧. ಹೊಂಗಲಶ[ಪಾಠಾಂ. ಸ]ಮೊಲೆ ಹೊಗರೊಗುವ ನೆರೆದಿಂಗಳೊಲು ಮೊಗ . . . ಕಣ್ಣನವ ಸೋಲಿಸಿದವು ಮನೋಭವನ (ಸಾಳ್ವಭಾ. ೨೮-೨೬). ೨. ಬಳಿಬಳಿಯ ಸೌಧಾಳಿಗಳ ಹೊಂಗಲಶ[ಪಾಠಾಂ. ಳಸ]ಗಳ ಹೊದಱಿನ ಪತಾಕಾವಳಿಯ ಪಸರದಿನೆಸೆದುದಾ ಪುರ ಮುನಿಯ ಕಣ್ಮನಕೆ (ಕೂರಂ. ೦-೯-೦೮). **ಹೊಂಗಳಶ :** ೧. ಇದು ಭೂದೇವತೆ ಹೊತ್ತ ಹೊಂಗಳಶಮೋ . . . ತಾನೆಂದು $\times \times \times$ ಲೋಕಂ ಮನೋಮುದದಿಂ ಬಣ್ಣಿಸೆ ಬಮ್ಮಿಸೆಟ್ಟಿ ಜಿನಚೈತ್ಯಾವಾಸಮಂ ಮಾಡಿದಂ (ಎಕ. VII, ಶಿಮೊ. ೩೭-೩೭; 1115); ತರಿಸಿದನು ಹೊಂಗಳಶ[ಪಾಠಾಂ. ಸ]ತತಿಯಲಿ ವರನದೀವಾರಿಗಳನು (ಕುಮಾರ. ೦-೨೮). [ಪೊಂ (<ಪೊನ್) + ಕಳಶ (=ಕಲಶ)]

**ಪೊಂಗಳಸ, ಹೊಂಗಲಸ, ಹೊಂಗಳಸ** (ನಾ). ೧. = ಪೊಂಗಳಶ ೧: ಪೊಂಗಳಸಂಗಳೊಳಿರ್ದ ಪುಣ್ಯತೋಯಂಗಳೊಳಟ್ಟಿಱಿಂ ಮಿಸಿಸಿ ಕಟ್ಟಿದನಾ ವಿಭು ವೀರಪಟ್ಟಮಂ (ಚಂಶಭಾ. ೦೦-೦೩); ರಸರಸಾಯನಂಗಳಂ ತೀವಿ ನೇಱಿದ ಪೊಂಗಳಸಂಗಳಂತಪ್ಪ ನವಫಲಂಗಳಿಂ ನೆಱೆದೊಪ್ಪುವ ಮಾತುಲುಂಗದ ಪೊದಱುಗಳುಮಂ (ಚಂಶಕಂ. ೦೦೭-೦೩); ನೀರ್ದುಂಬಿ ಮೆಱೆವ ಪೊಂಗಳ[ಪಾಠಾಂ. ಲ]ಸಂಗಳಂ ಕೊಂಡು ಬಂದರುತ್ಸವದಿಂದೆ (ಕೃಷ್ಣಭಾ. ೩೪-೪). ೨. = ಪೊಂಗಳಶ ೨: ಮಂಗಳಜಲಕುಂಭದಂತೆ ಕಂಗೊಳಿಸುವ ಕೋಟೆಯ ತೆನೆಗೊಂದೊಂದು ಪೊಂಗಳಸಂಗಳೊಪ್ಪಿದುವು (ಮೋಹತ. ೨೪-೩). **ಹೊಂಗಲಸ :** ೨. ಬೆಟ್ಟದ ಕಿತ್ತು ತಂದಿರಿಸಿದಂದದಿ ಮುಗಿಲಟ್ಟಣೆ ತೆನೆಗಳಗ್ರದಲಿ ಬಟ್ಟರನ್ನಗಳ ತೆತ್ತಿಸಿದ ಹೊಂಗಲಸಂಗಳಟ್ಟಿರ್ದುವೇನ ಬಣ್ಣಿಸುವೆ (ಮೋಹತ. ೨೦-೮). **ಹೊಂಗಳಸ :** ೧. ಕರವತಿಗೆ ಹೊಂಗಳ[ಪಾಠಾಂ. ಲ]ಸ ಹೊಂಗೊಪ್ಪರಿಗೆ . . . ವೈಡೂರಿಯದ ಪಡಿಗವ ಚರರು ತಂದೊಟ್ಟಿದರು ಬಂಡಿಗೆ ಭಾರಸಂಖ್ಯೆಯಲಿ (ಕುಮಾರ. ೯-೦೩); ಮಡಿವಸನವನುಟ್ಟು ಪೂರ್ವದಿಗ್ವನಿತೆಯು ಮುಡಿಯೊಳು ಹೊತ್ತ ಹೊಂಗಳಸ ನಿಡಿನಿಂದ ರಥದ ಮೇಲಡರ್ಚಿದ ರನ್ನಗನ್ನಡಿಯಂತೆ ಸೂರ್ಯ ಮೂಡಿದನು (ಮೋಹತ. ೦೮-೦೦೯). ೨. ತೋಱಿದನುತ್ತಮದ ಹೊಂಗಳಸ ಪೊಂದನು ನಿಮಿಷಮಾತ್ರದಲಿ (ಶ್ರೀಕುಂ. ೦೦-೦೮); ಕೋಂಟೆಯ ತೆನೆ ಹೊತ್ತ ಹೊಂಗಳಸಂಗಳಿಂದೆ . . . ರಂಜಿಸಿತು (ಮೋಹತ. ೨೯-೨೩) ; ಹೊಂಗಳಸ ಮಿರುಗುವಡೆ . . . ಸುಳಿವ ಮಾರುತದ ಪಾವಿತ್ರ್ಯದೊಸಗೆಯನು ತಳೆದು (ಕುರಿದೇ. ೩೪-೦). [ಪೊಂ (< ಪೊನ್) + ಕಳಸ$_1$ (<ಕಲಸ)]

**ಪೊಂಗಟೆ**, ಪೊಂಗರಿ, ಹೊಂಗರಿ₁, ಹೊಂಗಟೆ (ನಾ). (ಬಾಣದ ಹಿಂಭಾಗಕ್ಕೆ ಕಟ್ಟುವ) ಚಿನ್ನದ ಗರಿ : ರವಿಕಿರಣಂಗಳಸ್ತಮಿಸೆ ಕಟ್ಟಲೆ ಕೈಮಿಗೆ ಸುತ್ತಿ ಮುತ್ತಿ ದಿಗ್ಭಿವರಮನಾಗಸಂ ಪೊಳೆವ ಪೊಂಗಟೆಯಿಂ ಕವಿಲಾಗೆ ... ಬಾಣಸಂತಾಳಂ ಕವಿದುವು (ಶಂಪಾಶಾ. ೧೩-೯೩). **ಪೊಂಗರಿ :** ಪೊಳೆವ ಪೊಮ್ಮುಡಿಗೆಯ ಪೊಂಗರಿಯ ಬಾಣಗಳ . . . ಸೆಳೆದು (ನವಪೋ. ೧೨-೫೭). **ಹೊಂಗರಿ₁ :** "ಹೊಂಗರಿ=ಚಿನ್ನದ ಗರಿ" (ಸಿಂಕೋ. ೫೫೯). **ಹೊಂಗಟೆ :** ಹೊಂಗಟೆಯ ಬಿಲ್ಲುಕೋಲನೊಂದು ಕೈಯಲಿ ಪಿಡಿದು (ತನವಿ.೯. ೦೯೭-೩೩೨); ಹೊಗರೊಗುವ ಹೊಂಗಟೆಯ ಬಿಲುಸರಳುಗಳ ಪೊದೆಗಳ ನಡೆದುವಡವಿಯ ಬೆಗಡುಗೊಳಿಸುತ ಮುಂದೆಮುಂದೆ ಪುಳಿಂದ ಸಂದೋಹ (ಕುಮ್ಮಾ.ಅ. ೧೩ ೨೨); ಸರಳ ಹಿಳುಕಿನ ಹೊಂಗಟೆಯ ತುದಿ ವೆರಳಲೊಯ್ಯಾರಿಸುತ (ತೊರಶಾ. ೩-೯-೦೩). [ಪೊಂ (< ಪೊನ್) + ಗಟೆ]

**ಪೊಂಗಟೆಗೆ** (ನಾ). (?) : ಆ ಪ್ರಾಸಾದಂಗಳ ಚೌಪಳಿಗೆಗಳ ಪೊನ್ನ ಪೊಂಗಟೆಗೆ ನೀಳ್ಪುಂ ಬೆಳ್ಪುಮಂ ತಾಳ್ದಿ ಕರ್ಪಿನೊಳುಪಾಶ್ರಯಿಸಲ್ಪಡೆದು (ಶುಕಶಾ. ೩-೪೦ ವ). [?]

**ಪೊಂಗಾಜು**, ಹೊಂಗಾಜು (ನಾ). ಚಿನ್ನದ ಬಣ್ಣದ ಗಾಜು ; ಹೊಂಬಣ್ಣದ ಗಾಜು : ಮಧುಮಂ ವನಲಕ್ಷ್ಮಿ ಪೀರ್ವ ಪೊಂಗಾಜಿನ ಬಟ್ಟಲಂತೆ (ಮಲ್ಲಿಪು. ೫-೨೦). **ಹೊಂಗಾಜು :** "ಕಾಂಚನಭೂಷಣಂ—ಹೊಂಗಾಜು" (ಟಕಂ. ೩೨). [ಪೊಂ (< ಪೊನ್) + ಕಾಜು]

**ಪೊಂಗಾರುಕ** (ನಾ). ಚಿನ್ನದ ಕೆಲಸ ಮಾಡುವವನು ; ಅಕ್ಕಸಾಲಿಗ : ಚಾರುವೈದ್ಯರ ಜೋಯಿಸರ ಪೊಂಗಾರುಕರ ಪರಿಹಾಸಕರ . . . ತೇರುಗರ ವಾಹಕರ ಜೋದರ ಸೇರುವೆಯ ಸಂಭ್ರಮದೊಳೆಸೆದಿರ್ದಂ ಧರಾಕಾಂತ (ಶಂಶದಾ. ೦೦-೭). [ಪೊಂ (< ಪೊನ್) + ಕಾರುಕ₂]

**ಪೊಂಗಾಲಿ** (ನಾ). (ರಥದ) ಚಿನ್ನದ ಚಕ್ರ : ಅರದದ ಪೊಂಗಾಲಿಯ ಜೇರ್ಗರೆವಂದವುನಂತವೀರ್ಯನೇಱಿದ ನಿನಗಂ ಪರಿವೆನಗಮೊಡನೆ ಕೇಡಂ ತರೆ ನಿನ್ನುಮನೆನ್ನುಮಂ ಪೆಱ ಕಾವಪನೇ (ಶಾಂತಿಪು. ೩-೦೦೦); ಪೊಳೆವ ಪೊಂಗಾಲಿಗಳಿಂದೊಪ್ಪುವ ರಥಂಗಳಿಂ . . . ಎಸೆದು (ಧರ್ಮಾಮೃ. ೬-೦೯೭); ಪೊಂಗಾಲಿ ಮಿಱುಗೆ ಪೞಿಯಿಗೆ ಬಾಂಗೆ ಪೆಡಂಮಗುಟಿ . . . ರಥಂಗಳ್ ಪರಿದುವು (ಜಗಂ. ೭-೩೨). [ಪೊ (< ಪೊನ್) + ಗಾಲಿ]

**ಪೊಂಗಾಳೆ** 'ಪೊಂಗಹಳೆ' ನೋ.

**ಪೊಂಗಿಂಡಿ**, ಹೊಂಗಿಂಡಿ (ನಾ). ಕೊಂಬು ಅಥವಾ ಸೊಂಡಿಲಿರುವ ಚಿನ್ನದ ಪಾತ್ರೆ : ವರುಣಂ ಪೊಂಗಿಂಡಿಯ ವಾಸವನೆ ಡವಕೆಯುಂ ಪಾವಕಂ ದೀಪಮಂ . . . ಪಿಡಿದೋಲೈಸಿ ನಿಂದಿರ್ದರಾಗಳ್ (ರಾಜಶೇ. ೦೯-೦೫೭). **ಹೊಂಗಿಂಡಿ :** ಎಲಮುನಿಗಳೊದಿದರು ಕನ್ಯಾವರಣಗಳ ಹೊಂಗಿಂಡಿಯುದಕ ವನೆರೆವರರಸನ ರಾಣಿಯರು ನಿಜಭಾವ ಶುದ್ಧಿಯಲಿ (ಅನಂರಾ. ೦-೨೯-೨೯). [ಪೊ (< ಪೊನ್) + ಗಿಂಡಿ]

**ಪೊಂಗಿರುಗಟೆ** (ನಾ). ಚಿನ್ನದಿಂದ ಮಾಡಿದ ಒಂದು ಬಗೆಯ ವಾದ್ಯ : ಪೊಂಗಿರುಗಟೆಯ ಕೇಳಿಕೆಯ ಜೋಕೆಗಳ ಭೂರಿಯೆನಿಸಿದ ಸೊನ್ನಲಿಗೆಪುರ (ಬಸವಪು. ೫-೯೦). [ಪೊಂ (< ಪೊನ್) + ಗಿರುಗಟೆ]

**ಪೊಂಗಿಸು**, ಹೊಂಗಿಸು (ಕ್ರಿ). ೧. ಹೆಚ್ಚಿಸು ; ಅಧಿಕಗೊಳಿಸು ; ಉತ್ಕರ್ಷಗೊಳಿಸು : ಲಲನಾಸಂಭೋಗರೋಗಂ ಪಸಿವನುಡುಗಿಸುತ್ತಾರ್ತಿಯಂ ಪೊಂಗಿಸುತ್ತುಂ ಬಲಮಂ ಕೈಗುಂದಿಸುತ್ತುಂ . . . ಸಲೆ ಲಜ್ಜಾಭಾವಮಂ ಮಾಱಿಸುತುಮಿದೆ (ರಕ್ಷಾಶ. ೨೭). ೨. ಹಿಗ್ಗಿಸು ; ದೊಡ್ಡದು ಮಾಡು : ರೇಚಕ ಪೂರಕಗಳೆಂಬ ವಾಯು ಧಾರಣದಿಂ ಪೊಟ್ಟೆಗಳಂ ಪೊಂಗಿಸಿ ಕುಳ್ಳಿರ್ಪುದುಂ (ಭುಜಾನ್ತ್ರ.೩-೯೯ ವ); ಅಂಗವಂ ನಡುಗಿಸುತ ಬಸುಱಂ ಪೊಂಗಿಸುತ . . . ಬೆಚ್ಚುತ ಬೆದಱುತಂ (ಬಸಪು. ೦-೯೯). **ಹೊಂಗಿಸು :** ೧. ನಿನ್ನಂ ನುಡಿಯ ತೊಡಂಕಿನ ಬೆಡಂಗಿನಿಂ ಸೋಲಿಸಿ ಸಮಸ್ತರಾಜ್ಯವನು ಬಡಮುನಿ ಕೊಂಡು ಮೇಲೆ ಋಣವ ಹೊಂಗಿಸಿ ತಗುಳ್ವುದಿದು ದೈವಿಕಂ (ಹಕಶಾ. ೦೦-೦೩). ೩. ಚೆನ್ನಾಗಿ ಕುದಿಸಿ ಮೆದುವಾಗಿಸು ; ಹದವಾಗಿ ಬೇಯಿಸು : ಬೇವಾಗ ಗಂಜಿಯ ಬಸಿದುಕೊಂಡು ಮುಚ್ಚುಳನಿಕ್ಕಿ ಘಟ್ಟಿಪಾವಡೆಗಟ್ಟಿ ತಱಗೆಂತ ದೊಳಗೆ ಹೊಂಗಿಸಿಕೊಂಡು ಮೃದುವಾಗಿ ಮಾಡಿದುದು ತಾ ಶುದ್ಧ ಮಪ್ಪೋದನಂ (ಸೂಶಾ. ೩-೨). [ಪೊಂಗು₁ + — ಇಸು₃]

**ಪೊಂಗು₁**, ಪೊಂಕು₁, ಹೊಂಗು₁ (ಕ್ರಿ). ೧. ಹೆಚ್ಚಾಗು ; ವೃದ್ಧಿಗೊಳ್ಳು ; ಅಧಿಕಗೊಳ್ಳು : ತಿರಿಪುತ್ತುಂ ಜವದಿಂ ಮುಕುಂದನಿಡೆ . . . ತದುತ್ತ ಮಾಂಗದೊಡನುದ್ದಂಪಾಱ ವ್ಯಕ್ತಾಸ್ಯಘಟಂಬೆರಸುದ್ಯದ್ಭುಜದಂಡವರ್ತನ ದಿನುಗ್ರಾಡಂಬರಂ ಪೊಂಗೆ . . . ತಿರಿದುದಾ ಚಕ್ರಂ ಮಿಯಚ್ಚಕ್ರದೊಳ್ (ಶಾಂತಿಪು. ೯-೫೯); ಅವಿವೇಕಿಯಾದ ನೃಪನೊಪ್ಪುವ ಪುಣ್ಯಂ ತೀರ್ದು ದೋಷಮುಂ ಪೊಂಗುವವೋಲ್ (ಉದ್ಭಟ. ೯-೨೭); ಗಂಗಾನದೀತಟಕೆ ನಡೆತಪ್ಪ ಷಟ್ಪತ್ತಿಕಾಂಗನೆಯುರೀ ಮಹಾಜ್ವಾಲೆಯೆತ್ತಣದೆಂದು ಹಿಂಗದೀ ವೀರ್ಯದೆಡೆಗೈತಂದು ನೋಡುತಿರಲಾ ಸ್ತ್ರೀಯರಂ ಕಾಣುತ ಪೊಂಗು ತ್ತೊಡನೊಡನೆ ಘನಗಾಢದಿಂದವರ ಗರ್ಭಂಗಳಂ ಬಿಡದೆ ಭೇದಿಸಿ ಬಲಿಯ ಲಾಕ್ಷಣಂ (ಕಬಪು. ೩೬-೦೩). ೨. ಉಕ್ಕು ; ಸೂಸು ; ಹೊರಹೊಮ್ಮು : "ಪೊಂಗು-ಸ್ಫುಟನೇ (ಹೊಮ್ಮು, ಉಕ್ಕು)" (ಶಮಂರಾ); ಸುಧಾಂಗನಿಂ ಪೊಂಗುವೆಳದಿಂಗಳ ತೊಡರ್ದ ಕಂಗಳ ಬೆಳಗಿನ . . . ಲತಾಂಗಿಯರೆನಿಪ್ಪ ಪಣ್ಯಾಂಗನಾಜನವೆಸೆದುದು (ಹಕಶಾ. ೯-೯೦). ೩. ಕೆರಳು ; ಉದ್ರೇಕಗೊಳ್ಳು : ಪೊಂಗುವುದು ಗಡಿಕೋಪದೆ ಕೆಂಗೋಲ್ಲೊಳ್ಳದು ಗಡಿಂದ್ರಜಾಲದ ಸಿಂಗಂ ತಾಂ ಗಡ (ಶುಂಶಕಂ. ೨೫೨-೨೦). ೪. ವ್ಯಾಪಿಸು ; ಹರಡು : ಮಂಗಳಗೀತವಾದ್ಯನಿನದಂಗಳಶೇಷದಿಶಾತಟಂಗಳೊಳ್ ಪೊಂಗಿರೆ (ವರ್ಧಪು. ೦೯-೩೯). ೫. ಅರಳು ; ಬಿರಿ ; ವಿಕಸಿಸು : ಮಗಮಗಿಸುವುವು ಪೊಂಗಿ ಪೊಂಗೇದಗೆಗಳ್ (ಲೀಲಾವ. ೬-೦೨೪); ಶೃಂಗಾರವಾರಿ ತೀವಿದ ಮೊಗಗೊಳದೊಳು ಪೊಂಗಿದ ಪುಂಡರೀಕಗಳೊ...ತಿಂಗಳ ಮೊಗದಳಕ್ಷಿಗಳೊ (ವರ್ಧಕ. ೨-೩೯); ಪೊಂಗುವ ಸಂಪಗೆದೇಱೆಯೊಳಂಗೈಸುವರಖಿಳಜನರುಂ (ಜಕಾ. ೬-೯೩). ೬. ಉಬ್ಬು ; ದೊಡ್ಡದಾಗು ; ದಪ್ಪವಾಗು : ತನುಮಳಿರೇಖೆಗಳ್ ಕಿಡೆಯುಮೆಯ್ದೆ ಬೆಡಂಗಿನದೊಂದು ರೇಖೆಯುಂ ತನಗೆಡೆಮಾಡಿ ಪೊಂಗೆ ನಡು (ಅಂಪು. ೬-೯೩); ಸುದತಿಯ ಗರ್ಭಚಿಹ್ನಮುನ ದೇಪೊಂಗುಪ್ಪುದೊ ಬಾಸೆ ಕರ್ಪನಾಂತುದು ನಡು ಕೂಡೆ ಪೊಂಗಿದುದು (ಜಗಂ. ೨-೯೫); ಪೊಂಗಿದಧರಂ ಮುಗಿದ ಕಣ್ಮಲರ್ಪರೆದ ಸುಕ್ಕುಂಗುರುಳ್ (ಸೌಂದಪು. ೯-೨೦). ೭. ಉತ್ಸಾಹಿಸು; ಹಿಗ್ಗು : ಅಂಗಜನಂಕಮಿದೆನೆ ಮಿಗೆ ಪೊಂಗುವ ಮಧುವಿಂಗೆ ರಾಗದಿಂ ಕಟ್ಟಿದ ನಾರಂಗದ ಪಟ್ಟೆಯ ತೊಂಗಲ ಭಂಗಿಯನಿಳಿಸಿದುವು ಪೂತ ಮುತ್ತುಗದ ಗೊಂಚಲ್ (ವರ್ಧಮಾ. ೦೦-೩೭); ಇನಿವಣ್ಗೊಂಚಲಂ ಕಂಡರಗಿಳಿಯಂತೆ ಪೊಂಗಿ ಪೊರೆಯೇಱ (ಉದ್ಭಟ. ೦೦-೦೦೬ ವ); ಪೊಂಗಿ ನಾಟ್ಯವನಾಡುತಂಗಜಾರಿಗೆ ನಮಿಸಿದಂಗವಜಾದ ಗಿರಿಜೆ ತುಂಗಕೋಪದಲಿ ತನ್ನಂಗವಂ ತಾರೆನಲು (ಕಬಪು. ೦-೪); ಅಚ್ಚೆ ! ಪಿಡಿ ನಡೆದಪೆನೆನುತುಮೆರಟ್ಟೂಱಡಿಯಿಡುತೆ ಪೊಂಗಿ ತಾಯ ನಿಡುದೋಳಂ ತಾಂಗಿ (ರಾಮಾಶ್ವ. ೦೬-೨೯). ೮. ನಮಿರೇಳು ; ರೋಮಾಂಚವಾಗು : ಪೊಂಗಿ ಹಾಡುತ ಶಮತಮಂಗೆ ವಾದ್ಯಂಗಳುಲಿಯಲ್ಕೆ (ಬಸಪು. ೦೯-೦೯); ಜಡಿದು ನಾಣ್ಗೆಡೆ ನುಡಿಯಲುಬ್ಬುವಂ ಬಿಱಸಿನಿಂ ಪೊಡೆಯೆ ಪೊಂಗುವಂ (ಕಬಪು. ೦೦-೨೯). ೯. ಸೊಕ್ಕಿಗೇಳು ; ಗರ್ವಪಡು ; ಬೀಗು : ಪೊಂಗಿ ಸೊಡರ್ಗುಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಕಾವ್ಯಸಾ. ೦೦೦೯ ಟಿಪ್ಪಣಿ); ಅನಗಿದಱದಿರ್ದೊಡಂ ಚಲದಿನೆನ್ನೊಳೆ ಪೊಂಗಿ ಪೊಡರ್ಪುದೋರ್ಪಂ . . . ಕೊಂದಪನಕಾರಣದಿಂ ಮೊಱೆಯೋ ಮನೋಭವಾ (ಅಂಪು. ೨೨-೩೩); ಪೊಂಗುವ ರಿಪುಕುಳ

ಮದವಮಾತಂಗಮನಚಿಯಟ್ಟಿ (ಶಾಶ. XX, ೬೦-೧೬ ; 1088). ೧೦. ಹೊಳೆ ; ಪ್ರಕಾಶಿಸು : ಪೊಂಗುವ ನುಣ್ಮೊಗು ಪೊಳೆದು ಪೊಚುವ ಸಂಚಿನ ನೋಟದಟ್ಟಿಯಿಂದಂಗಜವೀರನಾರುಬಟೆಯು ಪಟುಗೆಯ್ವುತೆ ಬಾಜಿಪೋಜೆಯೊಳ್ (ಜಕಶ. ೬-೨). ೧೧. ಸೋಕು ; ಮುಟ್ಟು : ಪೊಲೆ ಪಿಂಗದೆ ಪೊಂಗುವುದಕ್ಕಲಸುವರಾಳಿಜನಂಗಳ್ (ಕುಸ್ಮಪು. ೩ ೯೬). ೧೨. ತಟ್ಟು ; ತಾಕು : ಮಹಿಯು ಪೊಂಗಿ ತಲೆಕೆಳಗು ಮಾಡಿದ ಹಿಮುವ ಮರ್ಝು ಭಾವು (ಭಾಶಕಂ. ೬-೦೯). ೧೩. ಕೂಗು ; ಅರಚು : ವಾತ ಪೂರಣಂಗಳಿಂ ನೊಂದಂತೆ ದೆಸೆದೆಸೆಗೆ ಪೊಂಗುವ ಗೂಗೆಗಳಿಂ . . . ಉಯ್ಯ ಲಾಡುವ ರಣದೇವತೆಯರಿಂದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೯ ಹೂದ್ರ೪). ೧೪. ಕಂಂದಣಿಸಿ ತುಂಬಿರು ; ಮೆಟ್ಟು : ಮುಂಗುರುಳನು ಪಿಡಿದೊಯ್ದಿನ್ನ ನವರತ್ನ ಪೊಂಗಿದ ಮಣಿಮಂಚದಲಿ ಅಂಗಜಕೇಳಿಯ ನಿತ್ತೆನ್ನನುಳುಹೊ (ಕಂನಶಿ. ೯-೦೬೭). **ಪೊಂಕು₁** : ೧೧. ಸೊಗಸನಗಲ್ಚ ದಾಗಿಸೆ ಲತಾಂಗಮನರ್ತಿಯೆ ಪೊಂಕುವಾಸೆಯಂ ತೆಗೆದಮರ್ದಪ್ಪವಾಸೆಯು ನಭೀಕ್ಷಿಸೆ (ಪಂಹಾಶೀ. ೮-೭೮); ತುಂಗಪಯೋಧರೆ ಮಿಂದು ಸಿಂಗರಗೈದಾಸನ ದೊಳು ನಲ್ಲನರ್ಧಾಂಗವ ಪೊಂಕಿ ಕುಳ್ಳಿರ್ದು (ವರ್ಧಶ. ೧೦-೭೭). **ಹೊಂಗು₁** : ೧. ಹೂತ ಹರುಷದ ಹೊಂಗಿಮುತ್ಸವದ . . . ಉಬ್ಬಿನಲಿ ಹೊಂಪುಳಿಯೋದನು (ಸಂಭಶ. ೩೩-೫೭). ೨. ಹೊಂಗಿ ಪೈತ್ಯಶ್ಲೇಷ್ಮ ತತಿ ರಂಧ್ರಂಗಳಲಿ ಮುಸುಕಿದಡೆ ತನುರೋಮಂಗಳನಿತುಂ ಕವುಚಿನಾತಡೆ . . . ದೃಷ್ಟಿಗಳು ವಿಚ್ಛಿನ್ನವಾದಡೆ ನಿಮ್ಮಯಾಣೆ ಪ್ರಮಥರುಗಳಾಣೆ (ಬಸಪು. ೯೯-೨೭). ೪. ಧೋಲ್ಗಳ ಢಳಂಕಾರ ಹೊಂಗುತಿದೆ (ಗಿರಿಶಿಂ. ೭೦-೯). ೫. ಹೊಂಗಿದ ಪುಷ್ಪದ ಪರಿಮಳವನುಂಡಳ್ಕು ಅವು ತಮ್ಮಂಗವ ಬಟ್ಟು ಹೋಹಾಗ ಕಮ್ಮೆಣ್ಣೆಯಾಗದಿಪ್ಪುವೆ (ಪಸ್ನವ. ೪. ೩೩೫-೭೦೦). ೬. ನವ ನೀಳಕಾಂತಿಯಿಂದಿದಿರೇಚುತಿರೆ ಬಾಸೆ ನಡು ಹೊಂಗಿ ಕಿಳ್ಪೊಡೆಯುದೊಪ್ಪದಿಂ ಹಿಗ್ಗುತಿರೆ (ಬಸರ. ೦-೦೦೯). ೭. ಜನಕಂ ಸಾಮಂತ್ರಭೀಮಮ್ . . . ಮಿಾಟಿ ಕಡಂಗಿ ಹೊಂಗಿ ಮದವೇಚಿ ಚಲಂ ತಲೆದೋರಿ ಬಿಲ್ಲನಾರ್ದ್ರೀ ಜಿಸಿ ನೀವಿ ಚೇಪೊಡೆದು (ಎಕ. XII, ಶಕ್ಯನಾ. ೨೦-೯೭ ; 1160) ; ಸಂಗಡ ಮಿರ್ದಂಗನೆಯರ್ ಶೃಂಗರಿಸೆ ಮಂಗಳಮುಖಿ ಹೊಂಗಿ ಹೊರೆಯೇಚಿ (ಗಿಂಕ. ೯-೬ ವ) ; ವನಜನಾಭಧ್ಯಾನಸುಧೆಯಲಿ ನನೆದು ಹೊಂಗಿದ ಕರಣ ಹೊರೆಯೇಚಿತ್ತು (ಕುವ್ಯಾದ್ರೋ. ೧-೨೨). ೧೦. ಹೊಂಗಿ ಮಿಡುಕುವ ಮಿಾನ ಗುಂದಿಗಳಂ . . . ಪೂತಿಬೆಕ್ಕಂ ಹರಿಶ್ಚಂದ್ರರಾಯಂಗೆ ಕಾಣಿಕೆ ಯನಿತ್ತು (ಹಶಕಾ. ೫-೩) ; ಮುಗುಳುನಗೆಗಳ ಹೊಂಗುವಂಗದ ನಗೆ ಮೊಗದೊಳಾನಂದಬಿಂದುಗಳೊಗುವ ಕಂಗಳ . . . ಪಾಂಡವರೆಟಿಗಿದರು (ಕುವ್ಯಾಕ. ೦೬-೩೦) ; ಅರಸರ ವಿಭವದುತ್ಸವದ ತೆರವ ಕಂಡು ಕುಶಲವ ಪಡೆದ ಕಂಗಳಿವು ಹೊಂಗುವುವು (ಜುಲಿದೀ. ೯೭-೫). ೧೨. ರಂಗ ನಿನ್ನಯ ವಕ್ಷದೊಳಗಿರ್ಪ ಕೌಸ್ತುಭಮಂಗಂಡ ಘನಮಹಿಮರನು ಹೊಂಗದು ಕಿಲ್ಬಿಷವು (ಕಕಸಂ. ೩-೦೩). ೧೫. ಬಾಗು ; ಬಳುಕು : ಅವನ ಭಾರ ತುಂಯ್ದು ಹೊಡೆತಕ್ಕೆ ಬಚ್ಚನ ಕೈ ಹೊಂಗಿ, ಬೈಸಿಕಲ್ ಅವನತ್ತ ಬಾಗಿ, ಬೀಳುವುದರಲ್ಲಿತ್ತು (ಮುಲಿಮು. ೧೮೩). ೧೬. ಹುಟ್ಟು ; ಉಂಟಾಗು ; ಪ್ರಕಟವಾಗು : ತಿಂಗಳಿಗೆ ತಲೆ ಮಾಸವೆರಡಟಲಂಗ . . . ಹೊಂಗುವವು ಧಾತುಗಳು ನಾಲಕುತಿಂಗಳಿಗೆ ಬರೆ ಹಸಿವು ತೃಷೆಗಳು ತಿಂಗಳೈದಟಲಿ (ನಿಭಾಗ. ೩-೦೯-೨೦).

[ದೇ. ‖ ತಮಿ. ಪೊಙ್ಕು; ಮಲ. ಪೊಙು; ತುಳು. ಪೊಂಗು, ಬೊಂಗು ; ತೆಲು. ಪೊಂಗು ; ಕೋತ. ಪೊಂಗ್, ಪೊಗ್ ; ಕೋಲಾ. ನಾಯ್ಕಿ. ಪೊಂಗ್]

**ಪೊಂಗು₂**, **ಪೊಂಕು₂**, **ಹೊಂಗು₂** (ನಾ). ೧. ಗರ್ವ ; ಸೊಕ್ಕು : ಪೊಂಗುಟಿದು ಭರತನೃಪಚರಣಂಗಳ್ಗೆ ಮಾಗಧಾಮರಂ . . . ಬಾಗಿದಂ (ಆದಿಪು. ೦೨-೦೦೦) ; ಮಲೆಪರ ಪೊಂಗಡಂಗಿದುದು ಮನ್ನೆಯರುಕ್ಕು ಕದಲ್ದುದು (ಎಕ. XV, ೩೦-೯ ; 1028) ; ಅಂತಾ ದೇವತೆಯರ್ ಪೊಂಗುಟಿದು ಪಿಂಗಿ ಪೋಗೆ (ನೇಮಿಪು. ೬-೯೭ ವ). ೨. ಸೊಗಸು ; ಅಂದ ; ಶೋಭೆ : ಪೊಸದೇಸೆ ಪೊಂಗು ಪಾಂಗೆಸೆವೆಸಕಂ ಕಡುಗಾಡಿ ಗರುಡಿಯೆಂಬಿವಟಿಂವಂ . . . ವಸುದೇವಂ ಧರೆಗೆ ಕಣ್ಣ ಮುಳಾಗಿರ್ದಂ (ಅರ್ಧನೇ. ೯-೦೩೧) ; ಅಂಗನೆಯ ಹಸ್ತನಖಮೆ[ಳ] ದಿಂಗಳ್ ಕೇದಗೆಯ ಸುಟಿಯ ಮಧುವೆಂಬುದನೆತ್ತಂ ಗೆಲ್ದಿರ್ದಪ್ಪು ತೊಳಗುವ ಪೊಂಗಿನೊಳಾಕೃತಿಯೊಳೆಸೆವ ವರ್ಣಕ್ರಮದೊಳ್ (ಬಂಹಂ. ೭-೩೭). ೩. ಶುಭ ; ಮಂಗಳ : ' ಪೊಂಗುನೂಲ್ ' ಪರಾ. ೪. ವ್ಯಾಪನೆ ; ವಿಕಾಸಹೊಂದುವಿಕೆ : (೬). (ಗು). ೫. ವ್ಯಾಪಕ ವಾದ ; ಹೆಚ್ಚಾದ : ಎಸಳುಗಂಗಳ ಪೊಂಗುಶೋಭೆಯಿಂ ರಂಜಿಸುವ ಮಿಸುಪ ತುರುಗೆವೆ (ಕುರಂಗ. ೯-೩೦). **ಪೊಂಕು₂** : ೨. ಕುಂಕುಮ ಪನ್ನೀರು ಕೂಡಾ ಗೋಡೆಗೆ ಪೂಶಿ ಪೊಂಕಾದ ಚಿತ್ರಪತ್ತಿಗೆಯನ್ನು ಬರದು (ಹುಸಳ. ೩೭). ೬. ಬೆಡಗು ; ಬಿನ್ನಾಣ ; ಬಿಂಕ : ಮಯ್ಗರೆ ಯಲು ಗಣ್ಣಿನ ತೊಣ್ಡಸಂಕದಧಟಲ್ ಪೊಂಕಾ(ಕ)ಳ್ತನಂ (ಹ್ಮಆಸಿ. ೦೩-೨೭-೭೩ ; 1090) ; ಸೊಗಯಿಪ ಪೊಂಕು ಲಾಲಿಸುವ ಲಲ್ಲೆ ಮರಲ್ದುವ ಮಾತು (ಕಂದ್ರಪು. ೯-೭೦). **ಹೊಂಗು₂** : ೭. ಉತ್ಸಾಹ ; ಹುರುಪು : ನಾರುಡೆಯಿದಾರದಯ್ ? ಹೋಹ ಹೊಂಗಿಂದಿದಂ ಮರೆದಿರೇಂ ? (ಶ್ರೀರಾಪಟಾ. ೨೨೯-೯೭). ೮. ಕೊಂಕು ; ಬಾಗು : ಕಂಗಳಲಿ ಕುಡಿಮೀಳ ಹುಬ್ಬಿನ ಹೊಂಗಿನಲಿ ಭಂಜವಣೆ ಭಾವದ ಭಂಗಿಯಲಿ ವಶಿಕರಣೆ (ಕುವ್ಯಾಕ. ೦೩-೨೫). ೯. ಉತ್ಕರ್ಷ ; ಏಳಿಗೆ : ಬ್ರಾಹ್ಮಣಮತದ ಹೊಂಗು ಹೆಚ್ಚಾಗಿತ್ತು (ಶೀನಾಶಾ. ೭೨). ೧೦. ತೀವ್ರತೆ ; ಹೆಚ್ಚಳ : ಹಿಂಗ ದಾಸಟಿ ಮನವ ಬಯಕೆಯ ಹೊಂಗು ಮುಟಿಯದು ಚಿತ್ತದೊಲವಿನ ಹಂಗು ಹಟಿಯದು (ನಿಭಾಗ. ೮-೨೩-೨). [< ಪೊಂಗು₁./ತಮಿ. ಪೊಙ್ಕು, ಪೊಙ್ಕ, ಪೊಕ್ಕ ; ಮಲ. ಪೊಕ್ಕ ; ತುಳು. ಬೊಂಗು ; ತೆಲು. ಪೊಂಗು]

**ಪೊಂಗುಡುಪು** (ನಾ). ಚರ್ಮವಾದ್ಯವನ್ನು ಬಾರಿಸುವ ಚಿನ್ನದ ಕೋಲು ; ಚಿನ್ನದ ವಾದನದಂಡ : ಸಮರಸನ್ನಾಹಭೇರಿಯಂ ಪೊಂಗುಡುಪಂ ಪಿಡಿದಡಸಿ ಪೊಡೆಯಲ್ (ರಾಜಶೇ. ೬-೩೦ ವ).

[ ಪೊಂ (< ಪೊನ್) + ಕುಡುಪು ]

**ಪೊಂಗುನೂಲ್**, ಪೊಂಗುನೂಲು, ಹಂಗನೂಲು (ನಾ). ೧. ಮಂಗಳ ಕಾರ್ಯಗಳಲ್ಲಿ ಮುಂಗೈಗೆ ಕಟ್ಟಿಕೊಳ್ಳುವ ಹಾಗೂ ದೇವರು, ಕಲಶ ಮೊದಲಾದುವುಗಳಿಗೆ ಏರಿಸುವ ಅರಿಸಿನದ ದಾರ : ನಾಂದುವ ಬೇವಿನ ಸರಳಿಗೆಗಳುಂ ಕೂಲೊಳ್ ಪೊ[ಪಾಠಾಂ. ಪಾಂ]ಗು ನೂಲಂ ಸುತ್ತುವ ಕುಡುಗೋಲ್ಗಳುಂ . . . ಪುಂಜಿಸುವ ಕಣಿಶಂಗಳು ಮೆಸೆಯೆ (ಶೀರಾವ. ೭-೬೮ ವ). ೨. ಎಳೆಯ ಮಕ್ಕಳಿಗೆ ಹಾಕುವ ಒಂದು ಬಗೆಯ ಆಭರಣ : ಅರಳೆಲೆ ಪೊಂಗುನೂಲ್ ಪುಲಿಯುಗುರ್ . . . ಭುವನೈಕಮಂಡನನೊಳೇನೆಸೆದಿರ್ದುದೊ ಬಾಲಮಂಡನಂ (ಅಜಿಪು. ೫-೭೨). **ಪೊಂಗುನೂಲು** : ೧. ನನೆಯ ದಂಡೆಗಳನು ಕಟ್ಟು ಅನುಮಾಡು ಪೊಂಗುನೂಲನು ಗಂಧವರೆ (ಕಂಶ್ರಸಾಂ. ೦೨-೩೭). **ಹಂಗನೂಲು** : ೧. ಗಂಧದ ಬೊಟ್ಟು ಗಮಕಿಲೆ ಇಟ್ಟು ಹಂಗನೂಲು ಹಾಕಿಯೆಮ್ಮು . . . ಆ ಕಲ್ಲೇನೂ ಉಣಲಿಲ್ಲಾ ಎಡೆಮಾಡಿ ನೀನೆ ಉಂಡೆಲ್ಲಾ (ಕಂಶಿಕ. ೩೭-೦೫) ; ಈ ದಿನ ಈ ನಾಗಗಳ ಪೂಜೆ ಮಾಡಿ ಹಂಗನೂಲು ಕುಬಸಗಳನ್ನು ಏರಿಸಿ . . . ಬರುತ್ತಿದ್ದರು (ಹಬ್ಬಬ. ೭೯). [ಪೊಂಗು₂ + ನೂಲ್₂]

**ಪೊಂಗುನೂಲು** ' ಪೊಂಗುನೂಲ್ ' ನೋ.

**ಪೊಂಗುಪ್ಪಸ** (ನಾ). ಜರತಾರಿ ಎಳೆಗಳಿರುವ ಕುಪ್ಪಸ : ಪೊಂಗುಪ್ಪಸಂ ದೊಟ್ಟೊಪ್ಪಡನಿಟ್ಟೋರಂತೆ ಮಾಣಿಕ್ಯದ ಕಿವಿದೊಡವಂ (ರಾಜಶೇ. ೦೩-೭೦).

[ಪೊಂ (< ಪೊನ್) + ಕುಪ್ಪಸ ]

**ಪೊಂಗುಪ್ಪೆ** (ನಾ). ಚಿನ್ನದ ಜಾಡಿ ; ಬಂಗಾರದ ಹೂಜಿ : ಪರಿಮಳಿಪ ಸೀತಳೋದಕವ ಪೊಂಗುಪ್ಪೆಯೊಳು ತುಂಬಿದುತ್ತ (ಸಬಪೋ. ೧೪-೧೭).
[ಪೊಂ (< ಪೊನ್) + ಕುಪ್ಪೆ (< ಕುಪ್ಪಿ₁)]

**ಪೊಂಗುಬ್ಬಿ** (ನಾ). ಚಿನ್ನದ ಗುಬುಟು,–ಗುಪ್ಪಟ : ಅಂಗದೊಳ ಗವರ್ದ ಬಣ್ಣಬಗೆಗಳ ಬೆಳ್ಪೊಂಗುಬ್ಬಿವರಿಗೆಯುಂ ತೊಡೆ ಚಾಟು ಗೊಳುತೆ (ಚಂಪು. ೪೮-೩೦). [ಪೊಂ (< ಪೊನ್) + ಗುಬ್ಬಿ₁]

**ಪೊಂಗುರು**, ಪಿಂಗುರು, ಪೆಂಗುರು, ಹೆಂಗುರು, ಹೊಂಗರ್ರಿ, ಹೊಂಗುರು (ನಾ). ಕೊಕ್ಕರೆಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ : ಕೋಗಿಲೆ ಚಾದಗೆ ಪೋದಗೆ . . . ಕಾಗೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಕುಂದಂ ಬಲಾಕೆ ಲಾವುಗೆ ಸೇನಂ (ಕಾಷ್ಯಸಾ. ೧೦೪೪ ಕೊಷ್ಟಕ). **ಪಿಂಗುರು :** ಪೊಣರ್ವಕ್ಕಿ ಪಿಂಗುರು[ಪಾಠಾಂ. ೦] ಗೂಗೆ ಮುಕುಂದ ಬಳಾಹಕ (ಸೂಕ್ತಿಸು. ೩-೧೪೪). **ಪೆಂಗುರು :** ಗಿಳಿ ಪುರುಳಿ ಪೆಂಗುರು[ಪಾಠಾಂ. ಪಿಂಗುರಿ] ಕೀರಂಡಪಾಂಡೆ ಮೊದಲಾಗೊಡೆಯ ಗಗನಚರಂ ಪಂಚೇಂದ್ರಿಯಂ ಗಳುಮಾಗಿ (ಪಪ್ಪಾರಾ. ೯೭-೯). **ಹೆಂಗುರು :** ಬಾನಾಡಿ ಪೆರ್ಬಕ್ಕಿ ಹೆಂ[ಪಾಠಾಂ. ಹಿಂ]ಗುರು ಕಾಕಂ . . . ಇರ್ಕುಂ ತದ್ವನಾಗೌಘದೊಳ್ (ರಾಜಶೇ. ೩-೫೯); ಕಾಕಂ ಬಕಂ ಕೊಂಚೆ ಹೆಂಗುರು . . . ಚಾತಕಮವಿರ್ಕುಂ ತತ್ತರು ವ್ರಾತದೊಳ್ (ಹರಿವಂ. ೯-೯೭); ಪಾರಾವತಂ ಹೆಂಗುರು ಟೀವಂ ಟಿಟ್ಟಿಭಂ . . . ತದ್ವನಾಂತಸ್ಥವಿರ್ಕುಂ (ಕಬಕ. ೩-೩೩). **ಹೊಂಗರ್ರಿ :** ಹೊಂಗರಿ ಚರಣಾಯುಧಂ ಗಿಡುಗ ಗೀಜಿಗನಾ ಗಿಳಿ ಕಾಡ ಗುಬ್ಬಿಗಳ್ ಬರುತಿರೆ (ಪಕ್ಷಿಶಾ. ೩-೨೦೩). **ಹೊಂಗುರು :** ಹೊಂ[ಪಾಠಾಂ. ಹೆಂ]ಗುರು ಚರಣಾಯುಧಂ ಶಕುನಿ . . . ತಿತ್ತಿರಿ ಗಿಡುಗಂಗಳೆಂಬ ಖಗವೃಂದದಿನಲ್ಲಿಯರಣ್ಯ ಮೊಪ್ಪುಗುಂ (ಗಿಂಶ. ೧-೭೪ ; ಬೃಲ್ಲಕಾ. ೩-೧೪೦ ನೋ); ಹರಡೆ ಹಸುಬ . . . ಹೊಂಗುರುವಕ್ಕಿಯೆಸೆದವಂದಲ್ಲಿ (ಶ್ರೀಪಾಲ. ೬-೦೫).
[<ಪ್ರಾ. ಪೋಕ್ಕರ./ಸಂ. ಪುಷ್ಕರ./ತೆಲು. ಪೆಗ್ಗುರು, ಬೆಗ್ಗುರು]

**ಪೊಂಗುರುಜು** (ನಾ). ಬಂಗಾರದ ಮಂಟಪ : ಕೇರಿಕೇರಿಯಲಿ ಪನ್ನೀರ ಚಳಯ ರನ್ನದೋರಣ ಪೊಂಗುರುಜುಗಳು ಮೇರೆಯಿಲ್ಲದೆ ಕಾಂತಿ ವಿಡಿದುವು (ಕಂಶಪ. ೨೩-೨೬). [ಪೊಂ (< ಪೊನ್) + ಕುರುಜು]

**ಪೊಂಗುಲ** (ನಾ). ೧. ಚಿನ್ನದ ಕೆಲಸ ಮಾಡುವವರ ಕುಲಕ್ಕೆ ಸೇರಿದವನು ; ಅಕ್ಕಸಾಲಿಗ : ಕಡೆಕೊಳಂದ ಮಣ್ಣೆಗಪ್ಪೊಂಗುಲಂ ಕೊಡಲಿಯುಂ ಬಲ್ಲಸಿಯ ಕಮ್ಮಟು ಮುಟ್ಟಗೆರಿಯೊಡೆಯೊಂ ಒದಲಪೋಲೆಯಂ ಮಜ್ಜಿಗಳಂ (ಮೈಎಂ. ೦೯೩೪, ೩೯-೨೨ ; ಸು. 11ನೆಯ ಶತ). ೨. ಒಬ್ಬಾತನ ಹೆಸರು : ಸಾಕ್ಷಿ ಕೂಡಲೂರ್ ಪೊಣ್ಣುಲರು ಎಳ್ಮಡಿಯರು ಬದಿರಿಯರುಮ್ (ಮೈಎಂ. ೦೯೦೭, ೦೩-೯ ; 726). [ಪೊಂ (< ಪೊನ್) + ಕುಲ]

**ಪೊಂಗುಲ್ವಟ್ರಿ** (ನಾ). ಒಂದು ಪ್ರದೇಶದ ಹೆಸರು (?) : ತೆನ್ನಣ ಕೊನೆದು ಪೊನ್ನುಲ್ವಟ್ರಿಯ ತೆನ್ನೊಳ್ಳೆ ತೆನ್ನಣಸೀಮೆ (ಮೈಎಂ. ೦೯೨೭, ೦೨೨-೭೦ ; 808 ?). [ ? ]

**ಪೊಂಗುಳ** (ನಾ). ಚಿನ್ನದ ಕುಳ,–ಗುಳ : ಪೊಂಗುಳಂಗಳಂ ಕಬ್ಬಿಣದ ಗುಳವೆಂದು ಕೈಯುಲೀಯೆ (ಶಕುಪು. ೬-೩-೨).
[ ಪೊಂ (< ಪೊನ್) + ಕುಳ್₁ (< ಕುಟು) ]

**ಪೊಂಗುಳಿಗೆ** (ನಾ). ಚಿನ್ನದ ಗುಳಿಗೆ : ಪೊಂಗುಳಿಗೆಗಳ ಪರಿಯೊಳಂಗು ಷ್ಠಂಗಳೊಪ್ಪುಗು ನಿಮಿರ್ದ ಕೋಮಳದಂಗುಳಂಗಳು ಮೆಚ್ಚವವುದುಗಣ ದೊಲು ಪದನಖಾಳಿ (ಬಸಪು. ೪-೦೭). [ಪೊಂ (< ಪೊನ್) + ಗುಳಿಗೆ₁]

**ಪೊಂಗುಱುವ** (ನಾ). ಚಿನ್ನದ ದ್ವೀಪ : ಪಾಲ್ಗಡಲೊಳಗಣ ಪೊಂಗುಱುವಂ ಗಡವೆನಿಸಿದುದವುರನಗವಿದೇನಚ್ಚರಿಯೋ (ವರ್ಧಮಾ. ೦೨-೩೩).
[ ಪೊಂ (< ಪೊನ್) + ಕುಱುವ₁ ]

**ಪೊಂಗೆಜ್ಜೆ**, ಹೊಂಗೆಜ್ಜೆ (ನಾ). ಚಿನ್ನದ ಗೆಜ್ಜೆ : ಮಧುಪಾನದಿಂ ಸೊಕ್ಕಿದ ಮುತ್ತಂಚೆಯ ಧ್ವನಿಗಳಂತೆ ಜರ್ಝರವಾದ ಪೊಂಗೆಜ್ಜೆಗಳ ಪೆಲ್ಲುಲಿಯೊಳಂ (ಕಾದಂಪೂ. ೬೬) ; ಪೊಂಗೆಜ್ಜೆಯುಲಿಪು ನೆಲಪುಗ್ಗಡಿಸುತ್ತಂದೆಸೆಯು . . . ನಡೆತರುತಿರ್ದಳ್ (ಗಿಂಶ. ೩-೧೦೬). ಬೆಡಂಗೆಯಲೊಡ್ಡಾಣದ ಪೊಂಗೆಜ್ಜೆಗಳ ದನಿ . . . ಪಾಡುತೆ ಪಿರಿದು ಸಂಭ್ರಮವ ಬೀಱದರು (ಕಂಶಪ. ೨೦-೧೦೦). **ಹೊಂಗೆಜ್ಜೆ :** ಹೊಂಗೆಜ್ಜೆಗಳ ಮುಕುರದ ಘಂಟೆಗಳ . . . ವಜ್ರಮಯಧಾರೆಗಳಲೆಸೆದುದು ಭದ್ರಮಂಟಪ (ಕುಮಾರ. ೦೨-೦೨); ಪುಟ್ಟಪಾದಗಳ ಹೊಂಗೆಜ್ಜೆಗಳ್ ಘಲಿರೆನೆ ದಟ್ಟಡಿಯಿಡುತೊಡಗಿದನು (ರೋಹತ. ೦೭-೬೨); ಸಂಗತಿಗುಲಿವ ಹೊಂಗೆಜ್ಜೆಗಳ ರಭಸದಿಂದೆಸೆವ ನಿರ್ಮಲ ವಾಜಿಯುಂ ಸುವೇಗಂ ತುದು ನಿಲಿಸಿದಂ (ಕೈಬಿಡಾ. ೩-೦೦).
[ ಪೊಂ (< ಪೊನ್) + ಗೆಜ್ಜೆ₁ ]

**ಪೊಂಗೆಲಸ**, ಹೊಂಗೆಲಸ (ನಾ). ಚಿನ್ನದ ರೇಕಿನ ಕೆಲಸ : ಪೊಸ ಪೊಂಗೆಲಸದ ಯೂಪಸ್ತಂಭಂಗಳ ಭಂಗಿಯನನುಕರಿಸಿದುವುಳ್ದೊಡೆಯಾ ಕಮಲ ದಳಾಂಬಕಿಗೆ (ಜಗನ್ನಾ. ೩-೩೦). **ಹೊಂಗೆಲಸ :** ತೀವಿದವು ಹೊಂಗೆಲಸ ಗತಿಯಲಿ ಲೋವೆಗಳು (ಕುಮಾರ. ೦೨-೯) ; ಹೊಂಗೆಲಸದ ಪೊಚ್ಚಪದುಮ ವಿಟ್ಟರದೊಳು ಮಂಗಲಮಜ್ಜನಗೆಯ್ದು (ಪೋಹತ. ೨೦-೩).
[ ಪೊಂ (< ಪೊನ್) + ಕೆಲಸ ]

**ಪೊಂಗೇದಗೆ**, ಹೊಂಗೇದಗೆ (ನಾ). ಒಂದು ಬಗೆಯ ಕೇದಗೆ ; ಹೊಂಬಣ್ಣದ ತಾಳೆಹೂವು : ಮುಗಮುಗಿವ ಜಾದಿ ಪೊಂಗೇದಗೆ ಮಲ್ಲಿಗೆ ಯೆಂಬ ಪಲವು ಪೂಮಾಲೆಗಳಂ ಬಗೆಯೞ್ದೋಲಗಿಪುದು ಮಾಲೆಗಾಜನಂ ಪೋಲ್ಬುದಗ್ರಮಾಲ್ಯಮಹೀಜಂ (ಆದಿಪು. ೩-೩೬). ಸೋಮರ್ಬುಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಟ್ (ಕಂಠೀರವ. ೨-೦೩ ವ); ವನಮ ನುಜ್ ಬಳಸಿ ಕಂಗೊಳಿಪ ಪೊಂಗೇದಗೆಗಳೊಪ್ಪಿದುವು (ಚಂಪು. ೪೩-೦೮). **ಹೊಂಗೇದಗೆ :** ಕುರವಕದ ವಕುಳದೆಳೆಗೌಂಗಿನ ಹೊಂಗೇದಗೆಯ ಬಳಸಿನೊಳಂ . . . ಲತಾಮಂಟಪಂಗಳ್ ಮನಂಗೊಳಿಪುವು (ಕಾದಂಪೂ. ೯೭) ; ಈಟಿ ಹೊಂಗೇದಗೆಯ ಕಂಚಿಯ . . . ಕಿತ್ತೊರಸಿ ಹುಡಿಹುಡಿ ಮಾಡಿದನು (ಕಾಶಿರಾ. ೦೦-೨೦) ; ಹೊಂಗೇದಗೆಯೆಸಳಂ ಮುಸಿಸಿ (ಜಗನ್ನಾ. ೨-೦೪).
[ಪೊಂ (< ಪೊನ್) + ಕೇದಗೆ]

**ಪೊಂಗೊಡ**, ಹೊಂಗೊಡ (ನಾ). ಚಿನ್ನದ ಕೊಡ ; ಸ್ವರ್ಣಕುಂಭ : ಪೊಂಗೊಡಂ ತವಮಾಳಪಲ್ಲವದೊಳೆ ಮುಚ್ಚಿದಂದದೊಳೆ ಚೂಚುಕ ಮಾಂತುದು ಕರ್ಪನಾಕೆಯಾ(ಶಂಶಭಾ. ೧-೦೨೩) ; ಬಿಳಿಯ ಸಾಸವೆ ಪೊಂಗೊಡ ನಪ್ಪಶೋಭೆ ಕನ್ನಡಿ . . . ಎಲ್ಲೆಡೆಗಳೊಳಲ್ಲಿಗಲ್ಲಿಗಧಿಕಂ ಪಡೆದತ್ತು ಜನಾನುರಾಗಮಂ (ಕಾವ್ಯಾವ. ೬೩೨) ; ಕೀಲಾಲಮನುಱ್ ಸಾಸಿರಸೂಳ್ಪೊಂಗೊಡನಿಂ ತಂದು . . . ಅಭಿಷೇಕಂಗೆಯ್ದಂ (ಅದ್ಭುರೇ. ೩-೯೩). **ಹೊಂಗೊಡ :** ತೊಳೆದ ಹೊಂಗೊಡದೊಳಗ್ಗಣಿಗಳಂ ತುಂಬಿ ತಂದಿಳುಹಿದರು ಕಾಮಿನಿಯರು (ಜಕಶಾ. ೩-೫೭) ; ಹೊಂಗೊಡದ ಹಿಡಿದೈತರಲಿ ನಾರಿಯರು (ಕುಮಾರದ್ರೋ. ೧-೩೭) ; ಮಜ್ಜನಕುಷ್ಣಜಲ ಹೊಂಗೊಡದಲಿಳುಹಿದವು (ಕೂರರಾ. ೩-೩-೩೪). [ಪೊಂ (<ಪೊನ್) + ಕೊಡ₁]

**ಪೊಂಗೊಡೆ** (ನಾ). ಚಿನ್ನದ ಛತ್ರಿ ; ಬಂಗಾರದ ಸತ್ತಿಗೆ : ಶಕ್ರಂಗೆತ್ತಿದ ಮಾಣಿಕಗೊಡೆ ಪೊಂಗೊಡೆ ಬೆಳ್ಗೊಡೆಯೆನಿಸಿದುದು ಶಶಿಬಿಂಬಂ (ಜಗಂ. ೦೭-೦೦೭) ; ಚೈತ್ರನೆತ್ತಿದ ಪಲವುಂ ಪೊಂಗೊಡೆಗಳೆನಿಸಿ ಪೂತು ಮನಂಗೊಳಿಸಿದುವೆಸೆವ ಕರ್ಣಿಕಾರಕುಜಂಗಳ್ (ಕುಸುಪಮಾ. ೩-೪೦).
[ಪೊಂ (<ಪೊನ್) + ಕೊಡೆ₂]

**ಪೊಂಗೊಳಗು** (ನಾ). ಪಶುಗಳ ಗೊರಸಿಗೆ ತೊಡಿಸುವ ಚಿನ್ನದ ಆಭರಣ : ಪೊಂಗೋಡು ಪೊಂಗೊಳಗು ಪೊಂಗೆಜ್ಜೆ ಘಂಟೆಗಳು ಪೊಂಗಲಶ ಪೊನ್ನ ಬಾಸಿಗ ತಂದು ವೃಷಭನಂ ಸಿಂಗರಿಸಿ (ಸಿಂಗಿರಾ. ೩-೦೩).
[ಪೊಂ (<ಪೊನ್) + ಕೊಳಗು]

**ಪೊಂಗೊಳಲು** (ನಾ). ಚಿನ್ನದ ಕೊಳಲು : ಪೊಂಗೊಳಲನೂದುತಿಹ ಯಾದವಕುಲೋತ್ತುಂಗ (ಕುಮಾರ. ೩-೫೮ ಪಲ್ಲವಿ) ; ಪೊಂಗೊಳಲಾಂತು ನಿಂದು . . . ಬಾಜಪೋಚೆಯೊಳ್ (ಶಿಶು. ೬-೨).

[ಪೊಂ (<ಪೊನ್) + ಕೊಳಲು (<ಕೊಟಲ್)]

**ಪೊಂಗೋಂಟೆ, ಹೊಂಗೋಂಟೆ, ಹೊಂಗೋಟೆ** (ನಾ). ಚಿನ್ನದ ಕೋಟೆ : ವರಯೋಜನವಂ ಪುರಂ ಪುರವನೊಳ್ಕೊಂಗೋಂಟೆ ಪೊಂಗೋಂಟೆಯುಂ ತರುಷಂಡಂ . . . ತಳ್ತೊಳಕೆಯ್ಕೆ ಬಲ್ಲನೊಳ ಕೊಂಡಿರ್ಕುಂ ತದುರ್ವೀತಳಂ (ಪಾರ್ಶ್ವ. ೦-೫೨) ; ಪ್ರಕಟಂಬೆತ್ತಿರ್ಪ ಪೊಂಗೋಂಟೆಯ ತನೆಯೆಸಟ್ಟಳ್ ಕೇಸರಂ . . . ತಾನೆಸಲ್ಕೊಪ್ಪುಗುಂ . . . ತತ್ಕುಸುಮಪುರಿ (ದಶಭ. ೦-೨೫) ; ಬಗೆಗೊಂಡುದಾ ಪೊಳಲ ಪೊಂಗೋಂಟೆ (ಕಾದಂಬರಿ. ೩-೬೨). **ಹೊಂಗೋಂಟೆ :** ಪುರದ ಮಧ್ಯದ ಮಣಿಮಯದ ಹೊಂಗೋಂಟೆ ರಂಜಿಸಲು (ಜೈಮಿನಿ. ೨-೩೯) ; ಹೊಂಗೋಂಟೆ ಗಗನಮಂಡಲವ ಮುಟ್ಟಿಹುದು (ಕುಮಾ. ೬-೯). **ಹೊಂಗೋಟೆ :** ಸುತ್ತಣ ಮಣಿಗಲ್ಲ ಹೊಂಗೋಟೆ ನೋಡಲು ತತ್ತಳಗೆಯ್ಮಾದಕ್ಷಿಗಳ (ಮೋಹನ. ೩ ೬); ದಿನಮಣಿಯ ಮಣಿರಥದ ಗಾಲಿಗಳ ನೇಮಿಗಳ ಪೊಯ್ಲಿಂದೆ ಪುಡಿವಡೆದಯೆದ್ದ ಸಾಲ ಹೊಂಗೋಟೆದನೆಗೊನೆಗಳಿಂದೇಳ್ವ ದೂಳಲ್ಲಿಗಲ್ಲಿಗೆ ನಭದೊಳು ಸ್ಥೂಲದಂಡಾಕೃತಿಯನಾಂತವೋಲ್ (ಕೃಷ್ಣ. ೩-೨೦). [ಪೊಂ (<ಪೊನ್) + ಕೋಂಟೆ]

**ಪೊಂಗೋಡು** (ನಾ). ಪ್ರಾಣಿಗಳ ಕೊಂಬುಗಳಿಗೆ ಹಾಕುವ ಒಂದು ಬಗೆಯ ಚಿನ್ನದ ಒಡವೆ : ಚಿನ್ನದ ಕೋಡಣಸು : ಪೊಂಗೋಡು ಪೊಂಗೊಳಗು . . . ಪೊನ್ನ ಬಾಸಿಗ ತಂದು ವೃಷಭನಂ ಸಿಂಗರಿಸಿ (ಸಿಂಗಿರಾ. ೫-೦೫). [ಪೊಂ (<ಪೊನ್) + ಕೋಡು₁]

**ಪೊಂಗೋಲ್** (ನಾ). ೧. ಚಿನ್ನದ ದಂಡ ; ಬಂಗಾರದ ಕೋಲು : ಮೇಲ್ಗಳೊ . . . ಪಾರ್ವತಿಯ ಚಿತ್ರಮಂ ಸೋಲಿಸುವಾ ಕೀಲ್ಗಳೋ ಸಲ್ಲೀಲೆಯ ಪೊಂಗೋಲ್ಗಳೊ ಕಣಕಾಲ್ಗಳೋ ಲಲಾಟೇಕ್ಷಣನಾ (ಗಿರಿಜಾ. ೦೦-೬೦). ೨. ಚಿನ್ನದ ಬಾಣ : ಪೊಂಗೋಲ ಪಿಡಿದವರೊಳಾರಾರ್ಗ ನಮ್ಮಳ್ಕೆ ? (ಶಾಂತಿ. ೦೩-೩೦೦). [ಪೊಂ (<ಪೊನ್) + ಕೋಲ್₁]

**ಪೊಂಘಟ್ಟ** 'ಪೊಂಗಟ್ಟ' ನೋ.

**ಪೊಂಚು₁**, ಹೊಂಚು₁ (ಕ್ರಿ). ೧. ತಕ್ಕ ಸಮಯವನ್ನು ಕಾಯು, — ಎದುರುನೋಡು : ಪೊಂಚುವ ಪಾಯ್ವ ಪೊಯ್ವ ಕೊಯ್ವ . . . ಸಾವ ಬೇವನಿಬರಂ ಪದ್ಮಾಸನಂ ಕಂಡನು (ಪಂಪ. ೯೯-೩೨). ೨. (ಬೇಟೆಯಾಡುವಾಗ) ಗುಟ್ಟಾಗಿ ಅಡಗಿದ್ದು ಬೇಟೆಯ ಮೇಲೆ ಬೀಳಲು ಸಿದ್ಧವಾಗಿರು : ಬೆಸ್ಕಂ ಇರದೆ ಪೊಂಚಿ ಪಿಡಿದು ಹಾವು . . . ನುಂಗಲಾಟದಿರುತಿರಲು (ಕಬ್ಬಿಗ. ೩೭-೩). ೩. ಇತರರ ಚಲನವಲನಗಳನ್ನು ರಹಸ್ಯವಾಗಿ ಗಮನಿಸು ; ಕದ್ದು ನೋಡು; ಬೇಹು ಮಾಡು : ಪೊಂಗುವ ನುಣ್ಗೊಗಂ ಪೊಗದು ಪೊಂಚುವ ಸಂಚಿನ ನೋಟದಟ್ಟಯಿಂದಂಗಜ ವೀರನಾರುಬಟೆಯಂ ಪಟುಗೆಯ್ಯುತೆ ಬಾಜಪೋಜೆಯೊಳ್ (ಶಿಶು. ೬-೨). ೪. ಯಾರಿಗೂ ಕಾಣದಂತೆ ಗುಪ್ತವಾಗಿರು ; ಅಡಗಿ ಕುಳಿತಿರು : ಕಾಂತರಾಲಿಂಗನದೊಳು ಪೊಂಚಿರ್ದ ಕಾಮಿನಿಯರದೆ ಧಿಗಿಲೆನಲ್ಕಾಗಲುಂಚದೊಳ್ಕೋಳಿಗಳ್ (ಕೃಷ್ಣ. ೨೬-೨೪). **ಹೊಂಚು₁ :** ೧. ಮಿಂಚಿದವು ದೆಸೆಗಳಲಿ ಗಮನಕೆ ಮುಂಚಿದವು ಹಂಸೆಗಳು ನಭದಲಿ ಹೊಂಚಿದುದು ಜೀವನಕೆ ಜೀವನವಿರಹಿನಿಕುರುಂಬ (ಕುಮಾರ. ೦೯-೨೦); ಕತ್ತಲೆಯೊಳು ಮಿಂಚುವ ವಿಭೂಷಣಕೆ ಮುಸುಕಿಟ್ಟು ಸುಳಿವರ್ಗ ಹೊಂಚುವ ಚಮತ್ಕೃತಿಯನಳವಡಿಸಿ ನೆನಹಿಂಗೆ ಮುಂಚುವ ಪದನ್ಯಾಸವಂ ಕಲಿತು ನಡೆವ ಜಾರೆಯರ ಚದುರೆಸೆದಿರ್ದುದು (ಕೃಷ್ಣ. ೨೬-೦೦) ; ತನಗಾದ ಅಪಮಾನಕ್ಕೆ ಪ್ರತೀಕಾರವನ್ನು ಮಾಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡು ಸಮಯವನ್ನು ಹೊಂಚಲು ಮೊದಲಿಟ್ಟನು (ಬಸವ. ೦೫). ೨. ಆ ಪೊಸತಾಗಿ ಸೊರ್ಕಿದಿಭಮಂ ಪದೆದೀಕ್ಷಿಸಿಯೊರ್ವ ಧೀವರಂ ಕೋಪದೊಳೊಯ್ಯನೊಯ್ಯ ನುಚಿ ಹೊಂಚಿ ನಿಕುಂಜಮನೊತ್ತಗೊಂಡು ಮೇಣ್ಣಾಪಮನಾದರ್ ನೋಡಿ ತೆಗೆದಂದಿಸೆ (ಉದ್ಭಟ. ೨-೫೫); ತೋಳ ದಾಡೆಯಲಿರಿಸಿ ಮೆಟ್ಟಿಸಿ ಕಾಲುಗೊಲೆಯಲಿ ಸುಂಡಲಲಿ ಸಮಸೀಳ ತೋಚಿಸಿ ಹಾಟಿ ಹೊಂಚುವ ವೀರವಾನರರು . . . ಜೋದರುಗಳಂತಕನಾಲಯವ ಹೊಗಿಸಿದರು (ತೊರವೆ. ೬-೨೦-೦೪) ; ತಲೆಯೆತ್ತುವ ಮಿಂಗಳನೋರಂತೆ ಮುರಿದಿಕ್ಕ ತಲಿಹ ಬಕದಂತೆ ಹೊಂಚುತೆ ಕುಳಿತಿರುವನು ಕಾದು ! (ಕಂಠ. ೯೨-೫). ೫. ಗುಪ್ತವಾಗಿ ಪ್ರಯತ್ನಿಸು ; ರಹಸ್ಯವಾಗಿ ಕಾರ್ಯ ನಡೆಸು : "ಹೊಂಚು-ಸಂಕೇತೋದ್ಯೋಗೇ" (ಶಮಂ). ೬. ಉಪಾಯ ಮಾಡು; ತಂತ್ರವನ್ನು ಹೂಡು : ನಿನ್ನೀ ನಿಲವು ನೀ ಹೊಂಚಿಹುದು ಸಮರಕೆ ಬಂದ ಸಿಂಗರವೊ (ಉತ್ತರಾ. ೩೨-೭೪). ೭. ಸೂಸು; ಹೊರಹೊಮ್ಮು : ಹರಿಗೆಗಳ್ ಮೇಘದೊಡ್ಡಣೆ ಕತ್ತಿಗಳ ತೊಳಪದಿರವೆ ಹೊಂಚುವ ಮಿಂಚು ಕವಿದೆಸೆವ ಸಾಯಕದ ಸರಿಯೆ ಸರಿವಳೆ (ಪಂಪ. ೩೮-೩೭); ನಳಿತೋಳ್ಗಳೀ ಜಡಿದು ಝಳಪಿಸುವ ಕೈದುಗಳ ದೀಧಿತಿಗಳು ಹೊಂಚಿದುವು ವಜ್ರಮಣಿಭೂಷಣದ ಕಾಂತಿಯಿಂ (ಕೃಷ್ಣ. ೦೬-೭); ನಿನ್ನ ನಡೆದಂತಿಹುದ ಮರೆವೆನೆಂತು ? . . . ಸಂಜೆಸೂರ್ಯನ ಸೌವರ್ಣರಾಗದ ಕಾಂತಿ ಹೊಂಚಿ ಎಮ್ಮಿಬ್ಬರನು ಹೊದಿಸಿ ಬೆಳಗಿದುದ (ಪಕ್ಷಿಗಿ. ೭೪-೦೬). ೮. (ಆಹಾರ, ಹಣ ಮೊದಲಾದುವನ್ನು) ಹೊಂದಿಸಿಕೊಳ್ಳು ; ಜೋಡಿಸಿಕೊಳ್ಳು : ಸಾಮಾನ್ಯವಾಗಿ ಎಂಥ ಬಡರಾಷ್ಟ್ರವಾದರೂ ಯುದ್ಧಕಾಲವಲ್ಲಿ ಹಿಮಾಲಯ ದೆತ್ತರಕ್ಕಾದರೂ ಹಣವನ್ನು ಹೊಂಚಲು ಶಕ್ಯವಾಗುತ್ತದೆ (ಶಿಕ್ಷಣ. ೭೩೬). ೯. ಅಳವಡಿಸು ; ಹೊಂದಿಸು ; ಜೋಡಿಸು : ಪಂಚರತ್ನದ ಕಾಸೆ ನವರತ್ನಭೂಷಣ ಮಿಂಚುಮುತ್ತಿನ ಮೊಲೆಗಟ್ಟು ಹೊಂಚಿ ರತ್ನದೊಳು ನಿರ್ಮಿಸಿದ ಪುತ್ತಳಿಗಳ ಸಂಚಯದಂತಿದ್ದರಾಗ (ಭರತ. ೦೩-೯೬).

[ದೇ.೫ ತುಳು. ಅಂಚು; ತೆಲು. ಪೊಂಚು]

**ಪೊಂಚು₂**, ಹೊಂಚು₂ (ನಾ). ೧. ಅಡಗಿಕೊಂಡು ಕಾಯುವಿಕೆ : ಗುಪ್ತವಾಗಿ ನಿರೀಕ್ಷಿಸುವಿಕೆ : ಪದವಮೆತ್ತಮಿಡುತುಸಿರ್ವಿಡದೆ ಪೊಂಚಿ[ಚಿ]ನೊಳ್ ಶಾರ್ದೂಲವೊಂದು ಮುಂಗಡೆಯ ಮೆಳೆಯ ಒತ್ತಿನೊಳು ಮೇವ ಮೃಗಕವ್ವಳಿಸುತಾರ್ದು . . . ಮತ್ತರುಣಜಲವ ಪೀರಿದುದು (ಪಂಚಾಂಗ. ೩-೬-೪೭). ೨. ಸೇರಿಕೆ ; ಜೋಡಣೆ ; ಹೊಂದಾಣಿಕೆ : "ಪೊಂಚಿನೆ ಪೊರ್ದಿದ ಬಗೆ" (ರತ್ನಕೋ. ೩-೫). **ಹೊಂಚು₂ :** ೨. ಈ ಕತೆಗಳಲ್ಲಿ ಸೋದ್ದಿಶ್ಯವಾದ ಆಕಾರರಚನೆಯ ಪ್ರಯತ್ನವಿದೆ. ಇಲ್ಲಿಯೂ ಪಾತ್ರಗಳಿರುತ್ತವೆ, ಸನ್ನಿವೇಶಗಳಿರುತ್ತವೆ ; ಆದರೆ ಅವುಗಳನ್ನು ಜೋಡಿಸಿರುವ ಕ್ರಮದಲ್ಲಿಯೇ ಹೊಸ ಅರ್ಥವೊಂದು ಪ್ರಕಟವಾಗುವಂತೆ ಅವುಗಳ ಹೊಂಚು ಕಾಣುತ್ತದೆ (ಹೊಸಕ. ೨೮೩). ೩. ಗೂಢಚರ್ಯೆ ; ಬೇಹು. ೪. ಉಪಾಯ ; ತಂತ್ರ ; ಹಂಚಿಕೆ : ಅಳಿಯ ತಿ ಆಕರ್ಷಣೆಗೆ ಸುಲಭವಾಗಿ ಬಲಿಯಾಗುತ್ತಾನೆಂದು ಏರ್ಪಡಿಸಿದ ಇಂದ್ರಾಣಿಯ ಹೊಂಚು ವಿಫಲವಾಗಲಿಲ್ಲ (ಹೊಸಕ. ೨೫) ; ಅವರ ರಾಜಕೀಯ ಹೊಂಚು-ಸಂಚುಗಳು ಜಗತ್ತಿನಲ್ಲಿ ಯಾವೆಡೆಗಳಲ್ಲಿ ಎಷ್ಟು ಯಶಸ್ವಿಯಾದವು ? (ಭೂಪಾದ. ೦೭೧). ೫. ಸಿದ್ಧತೆ ; ಹವಣಿಕೆ : ದಾಯಾದಿಗಳು ದತ್ತಕಪುತ್ರನನ್ನು ಕೊಡಲು ನಾ ಮುಂಗೆ ನೀ ಮುಂದೆ ಎಂದು ಹೊಂಚಿನಲ್ಲಿಯೇ ಒದ್ದಾಡುತ್ತಿದ್ದರು (ಚಿಗಾಶ. ೦೦೪).

**ಹೊಂಚು ಹಾಯು** = ಸರಿಯಾದ ಸಮಯಕ್ಕಾಗಿ ರಹಸ್ಯವಾಗಿ ಕಾಯು : ಒಬ್ಬ ಹುಡುಗನನ್ನು ಹಿಡಿದು ಅವನ ಸಂಗಡ ಹೊಂಚು ಕಾದು, ಅವಳು ಆನಂದನೊಡನೆ . . . ತಿರುಗಾಡಲು ಹೋಗುವುದನ್ನು ಕಂಡುಹಿಡಿದ (ದೂರಗ. ೨೦೮) ; ಬೆಕ್ಕು, ಎಡಿ ಮುಂತಾದುವು ತಮ್ಮ

ಆಹಾರಕ್ಕಾಗಿ ಹೊಂಚು ಕಾಯುತ್ತವೆ (ಜೀವಾತ್ಮ. ೧೯೯). **ಹೊಂಚು ಕೇಳು**= ರಹಸ್ಯವಾಗಿ ಕೇಳಿಸಿಕೊಳ್ಳು; ಕದ್ದು ಕೇಳು : ಎಲ್ಲರೂ ಅವರಿಗೆ ಕಾಣಿಸದಂತೆ ಹೊಂಚು ಕೇಳುತ್ತಿದ್ದರು (ಗೋಕೂರ. ೩). **ಹೊಂಚು ಜಾಗ**= (ಕಳ್ಳರು ಹಾಗೂ ಬೇಟೆಯಾಡುವ ಪ್ರಾಣಿಗಳು) ಅಡಗಿಕೊಂಡು ಕಾಯುವ ಸ್ಥಳ,– ರಹಸ್ಯವಾದ ಜಾಗ : (೬). **ಹೊಂಚು ನೋಡು**= ಗುಟ್ಟಾಗಿ ನೋಡು ; ಕದ್ದು ನೋಡು : ಗುಬ್ಬಿಗಳ ಮೇಲೆ ಎರಗಲು ಕಾಯುತ್ತಾ ಬೆಕ್ಕು ಹೊಂಚು ನೋಡುತ್ತಿದೆ (ರೂಪಿ). **ಹೊಂಚು ಹಾಕು**= ೧. ಅಡಗಿಕೊಂಡು ಕಾಯು ; ಗುಪ್ತವಾಗಿ ಸಮಯವನ್ನು ನಿರೀಕ್ಷಿಸು : ಅಲ್ಲಲ್ಲಿ ಕಂಡು ಕಾಣದಂತೆ ಹೊಂಚು ಹಾಕುತ್ತಿದ್ದ ಇತರರೂ ಬೆರಗಾಗಿ ನೋಡುತ್ತ ವಿಷಯವೇನೆಂದು ತಿಳಿಯದಿದ್ದರೂ ಏನೋ ಒಂದು ದೊಡ್ಡ ಕಾರ್ಯವನ್ನು ಸಾಧಿಸಿದವರಂತೆ ಸಮಾಧಾನಗೊಂಡರು (ಜಿದೇವ. ೬೬); ಹೀರೆಯು ಸ್ವಲ್ಪ ಮುಂಚೆ ಬಂದಿದ್ದು ಕಿಟಕಿಯ ಹತ್ತಿರ ಹೊಂಚು ಹಾಕಿ ಎಲ್ಲವನ್ನೂ ಕೇಳಿ ಹೋಗುತ್ತಿದ್ದಾಗ, ದೇವೇಂದ್ರನ ಕೈಗೆ ಸಿಕ್ಕಿದಳು (ಬಂಕಿಮ. ೩೧). ೨. ಬೇಟೆ ಮೊದಲಾದುವುಗಳಿಗಾಗಿ ಅಡಗಿಕೊಂಡು ಕಾಯು ; ಗುಟ್ಟಿನಿಂದ ಮೇಲೆ ಬೀಳಲು ಸಿದ್ಧವಾಗಿ ನಿರೀಕ್ಷಿಸು : ಒಂದು ದೊಡ್ಡ ಹುಲಿ ಬೆಕ್ಕಿನಂತೆ ಹೊಂಚು ಹಾಕುತ್ತ ಕುಳಿತಿದ್ದುದನ್ನು ಅವರು ನೋಡಿದರು (ಕಳಹು. ೫) ; ದೂರದಿಕ್ಕಿನ ಅಂಚಿಗಿದೆ ಹೊಸಹೊಂಚು ಹಾಕಿದ ಜೇಡವು (ನಂಮು. ೯೭-೦೯). ೩. ಉಪಾಯವನ್ನು ಮಾಡು ; ತಂತ್ರವನ್ನು ಹೂಡು : ಪೋಗದೊತ್ತಾಯದೀ ದನದ ಹಟ್ಟಿಯೊಳಹಳ್ಳಂಡಿ ಭೀತಿ ಲಜ್ಜೆಗಳಿಲ್ಲದೆ ಮತ್ತೇನು ಹೊಂಚು ಹಾಕಿಹಳೊ ಸಂಶಯವಿಹುದು (ಮಲ್ಲಿಕ. ೭-೩೯) ; ಮುಸಲ್ಮಾನರು . . . ಈ ಹಿಂದೂರಾಜ್ಯವನ್ನು ಸಮೂಲ ನಾಶಮಾಡಲು ಹೊಂಚು ಹಾಕಿದ್ದುದೂ ಸುಪ್ರಸಿದ್ಧವಿದೆ (ಯುಕ್ಷತ್ರ. ೨೦). ೪. ಜೊತೆ ಮಾಡು ; ಹೊಂದಿಸು : ನಿನ್ನೆ ದೊಡ್ಡಪ್ಪ ನನ್ನ ಮದುವೆಯ ಪ್ರಸ್ತಾಪ ಮಾಡಿದರು. ಅವರು ಯಾರನ್ನೋ ಹೊಂಚುಹಾಕಿಕೊಂಡಿರುವಂತಿದೆ (ವಾತ್ಸಲ್ಯ. ೨೬೯). [ <ಪೊಂಚು$_1$. / ತೆಲು. ಪೊಂಚು ]

**ಪೊಂಜಗಲಿ, ಪೊಂಜಗುಲಿ** (ನಾ). ಚಿನ್ನದ ಕಟ್ಟೆ; ಬಂಗಾರದ ವೇದಿಕೆ: ಪಸೆವಾಸಿನ ಪಟ್ಟವಳಿಯ ದುಗುಲದ ರುಚಿಗಳ್ ಪಸರಿಸೆ ಪೊಂಜಗಲಿ ವಿರಾಜಿಸುತಿರ್ದುದು (ಜಗಪಿ. ೧೧-೯೫) ; ಬೆಳ್ಮುಗಿಲ ಕೆಳಗಳವಡಿಸಿದ ಸುರಯಿಯರಲ ಪರಾಗದ ಪೊಂಜಗಲಿಯ ಮೇಲಣಾಸುಗೆದಳಿರಲರ್ವಾಸಿನೊಳರಸಿವೆರಸಿ ಕುಳ್ಳಿರ್ದು (ರಾಜಶೇ. ೧೧-೩೧ ವ). **ಪೊಂಜಗುಲಿ** : ಪೊಂಜಗುಲಿಯೊಳಗೆ ಮನವೊಸೆದು ಮಂಡಿಸಿರಲು (ಜಬಕ. ೯೭-೯).
[ ಪೊಂ (<ಪೊನ್) + ಜಗಲಿ]

**ಪೊಂಜಗುಲಿ** 'ಪೊಂಜಗಲಿ' ನೋ.

**ಪೊಂಜರಪಣಿ** (ನಾ). ಚಿನ್ನದ ಸರಪಣಿ : ವಾಮಕರದ ಪೊಂಜರಪಣಿಯ ಬೆರಲ ಮಣಿಮುದ್ರಿಕೆಗಳ . . . ಸಂಗರಧೀರರಾಜಸುಕುಮಾರರೊಪ್ಪಿರ್ದರು (ಜಂಕ. ೭-೫). [ ಪೊಂ (<ಪೊನ್) + ಸರಪಣಿ ]

**ಪೊಂಜರಿ** (ನಾ). ಚಿನ್ನದ ಮಳೆ; ಸುವರ್ಣವೃಷ್ಟಿ : ತನುವೆಲ್ಲ ಮಿಟಾದ ಕನಕವರ್ಣಮದಾಗೆ ಮನ ನೆನೆದನಿತು ಪೊಂಜರಿಯಾ ನೆನೆದಾಗಲುಗುಳ್ವಂ (ಶೃಂಗಾರ. ೨-೦೫೩). [ ಪೊಂ (< ಪೊನ್) + ಸರಿ$_6$ ]

**ಪೊಂಜರಿಗೆ** (ನಾ). ೧. ಚಿನ್ನದ ಎಳೆ ; ಬಂಗಾರದ ತಂತಿ : ಕಿವಿಗಳೊಳ್ ಪೊಂಜರಿಗೆಯ ಮಿಸುಪ ತುದಿಯೊಳ್ ರನ್ನಮಾಗಾಯ್ತಳೊಲೆದಾಡೆ (ಜಂಕ. ೫-೩೭) ; ಅನಿತುಂ ತಂತ್ರಿಗಳಿಂದಮೊಂದೆ ದನಿಯುಣ್ಮುತ್ತೆಂಬಿನಂ ಕೂಡೆ ನುಣ್ಣನೆ ಕಂಬಚ್ಚಿನೊಳೀಟ್ಟ ಪೊಂಜರಿಗೆಯಂ ಪೋಲ್ದಂ (ಜಕಪಿ. ೩-೦೦೪). ೨. ಬಂಗಾರದ ಕಲಾಬತ್ತು ; ಚಿನ್ನದ ಜರಿ : ಪೊಸದುಗುಲದುಡೆಯಿನಮರ್ದೊಪ್ಪುವ ಪೊಂಜ[ಪಾಠಾಂ. ಜು]ರಿಗೆಯುಮುಜ್ಜ್ವಲ ನಾನಾಭರಣಂಗಳುಮೇಂ ವಿಲಾಸಮಂ ಮಾಡಿದುವೋ (ಸುಕುಮಾ. ೧೧-೯೬); ಎಸೆವುವು . . . ಕೊಂಬವರ್ಗೆ ತೋರಿಪ ಬಲ್ವಲೆಯ ಪಟ್ಟಸೀರೆಗಳ ಪೊಂಜರಿಗೆಗಳ್ಪೊಸಿಗರ ಪಸರಪಸರದೊಳಗೆ (ಗೀತಾ. ೧೬-೬).
[ ಪೊಂ (<ಪೊನ್) + ಸರಿಗೆ ]

**ಪೊಂಜಲಗೆ** (ನಾ). ಚಿನ್ನದ ಸಲಾಕೆ : ಪೊಂಜಲಗೆಯಂತೆ ಕಿರ್ಚಿಂದಂ ಜಾನಕಿ ಶುದ್ಧೆಯಾಗೆ (ಶಂರಾಮಾ. ೦೬-೩೦). [ಪೊಂ ( <ಪೊನ್) + ಸಲಗೆ$_2$]

**ಪೊಂಜಳಂಬ** (ನಾ). ಚಿನ್ನದ ಎಳೆಯಿಂದ ಮಾಡಿದ ಮುಸುಕು,– ಹೊದಿಕೆ : ವಿಳಸದ್ ಭವ್ಯಹರ್ಮ್ಯಪ್ರಭಾವಿಸ್ಫುರಿತಾಭ್ರಂ ಪೊಂಜಳಂಬಂ ಮಿಸುಪವೊಲಿರೆ ಕಾಂಚೀಪುರಂ ಕಣ್ಗೆ ತೋರ್ಕುಂ (ಕೃಷಿ. ೧೧-೩).
[ ಪೊಂ (<ಪೊನ್) + ಜಳಂಬ ]

**ಪೊಂಜಾಜಿ** (ನಾ). ಒಂದು ಬಗೆಯ ಜಾಜಿಹೂವು ; ಹೊಂಬಣ್ಣದ ಜಾಜಿ : "ಚಾರುಮೈದ–ಪೊಂಜಾಜಿ" (ಅಕಾಪಿ. ೧೧-೨೫).
[ಪೊಂ (<ಪೊನ್) + ಜಾಜಿ$_1$ (<ಜಾದಿ) ]

**ಪೊಂಜಾಮರ** (ನಾ). ಚಿನ್ನದ ಹಿಡಿಕೆಯುಳ್ಳ ಚಾಮರ : ಪೊಂಜಾಮರ ಮುಟಿ ತೊಳಪಾರಂಜಿಯ ಬೀಸಣಿಗೆ ಗಿಂಡಿ ಹಡಪಂ ಮಣಿಕಾಳಾಂಜಿಯ ನಾಂತೆಸೆವರ್ . . . ಪಲಂಬರ್ ಸತಿಯರ್ (ಉದ್ಭಟ. ೨-೯).
[ ಪೊಂ (<ಪೊನ್) + ಚಾಮರ ]

**ಪೊಂಜಾಳಿಗೆ, ಹೊಂಜಾಳಿಗೆ** (ನಾ). ಚಿನ್ನದ ನಾಣ್ಯಗಳಿರುವ ಚೀಲ, –ಹಮ್ಮಿಣಿ : ಪೊಂಜಾಳಿಗೆಯೆರಡ ವಿನಯದಿಂದಿಬ್ಬರು ಜಂಗಮಕಿತ್ತು (ಮೋಳಿಪು. ೫-೮೯) ; ಪಣಾಂಗನೆ ಕನಲ್ದು ಪೊಂಜಾಳಿಗೆಯಂ ನೂಂಕಿ ಕಳೆದು (ವೃಷಭ. ೦೭-೧೫ ವ). **ಹೊಂಜಾಳಿಗೆ** : ಮಾರಯ್ಯನವರ ವಚನಗಳು, ಬಸವಣ್ಣ . . . ಪೊಂಜಾಳಿಗೆಯನಿರಿಸಿ ಹೋದ ಸಂಗತಿಯನ್ನು ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಹೇಳುತ್ತಿವೆ (ಮೋಳಿಮಾ. ೯೦ ಪ್ರಸ್ತಾವನೆ).
[ ಪೊಂ (<ಪೊನ್)+ಜಾಳಿಗೆ$_1$ ]

**ಪೊಂಜುರಿಗೆ, ಹೊಂಜುರಿಗೆ** (ನಾ). ಚಿನ್ನದ ಕಿರುಗತ್ತಿ ; ಬಂಗಾರದ ಕಠಾರಿ : ಕರೆವೆರಸಿದ ಹೊಸದುಗುಲದ ತೆರಳ್ಕೆವೆತ್ತುಡೆ ಹಟತ್ಕಟೀಸೂತ್ರ ಪರಿಸ್ಫುರಿತದೊಳಂ ಕಟ್ಟಿದ ಪೊಂಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೊ (ಆದಿಪು. ೯-೩೬) ; ತರತರದಿನೆಸೆವ ಕರೆಗಳ್ವೆರಸಿದ ಪೊಸದುಗುಲದುಡೆಯಿನಮರ್ದೊಪ್ಪುವ ಪೊಂಜುರಿಗೆಯುಂ . . . ಏಂ ವಿಲಾಸಮಂ ಮಾಡಿದುವೋ (ಸುಕುಮಾ. ೧೦-೯೭) ; ಬಿಗಿದುಡೆಯೊಳ್ಪೊಂಜುರಿಗೆಯಂ ಕಟ್ಟಿ (ರಾಜಶೇ. ೬-೧೧ ವ) ; ಪೊಂಜುರಿಗೆಯೆಂದೇ ಎರ್ದೆಗೊತ್ತಿದಂ (ರಾಮಾಶ್ವ. ೨೯-೨೬). **ಹೊಂಜುರಿಗೆ** : ನಡುವಿನೊಳು ಚೆಲ್ವಂಕೆಗೋಪೆಸೆವ ಹೊಂಜುರಿಗೆ (ಭರತ. ೨೯ ೦೩). [ಪೊಂ (< ಪೊನ್) + ಸುರಿಗೆ$_2$]

**ಪೊಂಜೂಜಿ** (ನಾ). ಚಿನ್ನದ ಸೂಜಿ : ಪೊಂಜೂಜಿ [ಪಾಠಾಂ. ಜೂಜೆ. ಪೂಜೆ]ಯೊಂದೊಂದು ಚೂರ್ಮೊನೆಗೊಂಡೊಂದಲರಾಯ್ದು ಕೋಪ ತೆಜಿದಿಂದಿರ್ಪಂತು ಫುಲ್ಲಾಂಬುಜಾನನೆ ಪುಷ್ಪಾಂಜಲಿಗೊಟ್ಟಳ್ (ಅರ್ಧನೇ. ೩-೯೯). [ಪೊಂ (< ಪೊನ್) + ಸೂಜಿ]

**ಪೊಂಜೂಡಗ** (ನಾ). ಚಿನ್ನದ ಕಡಗ ; ಬಂಗಾರದ ಬಳೆ : ಕರ್ಣದ ಕನನ್ಮಣಿಕುಂಡಲವೊಂದೆ ಕೆಯ್ಯ ಪೊಂಜೂಡಗವೊಂದೆ . . . ಒಪ್ಪಿರೆ (ಚಂದ್ರಪ್ರ. ೧೧-೭) ; ಪೊಂಜೂಡಗವ ಪಿಡಿದ ಕಯ್ಪಿಡಿಯ ನೋಳ್ಪುದೆಸೆ (ಕಾಲೂರ. ೦೯೮-೩೨೯). [ಪೊಂ (<ಪೊನ್) + ಸೂಡಗ]

**ಪೊಂಜೂಲು** (ನಾ). ಚಿನ್ನದ ಎಳೆಗಳಿಂದ ಮಾಡಿದ ಹೊದಿಕೆ ; ಜರತಾರಿ ಹೊದಿಕೆ : ಆಂತ ರತ್ನಂಗಳೇ ಮಣಿವೊರಜೆ ಕಳಧೌತಕಾಂತಿ ಪೊಂಜೂಲೆನೆ ವಿರೂಪಾಕ್ಷನಡರೆ ಬೊಮ್ಮಂ ತಿರ್ದಿ ತೋರ್ಪ ಪಟ್ಟದ ದಂತಿಯೆಂದೆನಲ್ ಕನಕಾಚಲಂ ಮೆಜಿದುದು (ಜಬಪು. ೨-೮). [ಪೊಂ (<ಪೊನ್) + ಜೂಲು$_2$]

**ಪೊಂಜೆಂಡು** (ನಾ). ಚಿನ್ನದ ಚೆಂಡು : ರನ್ನದ ಚೆಂಡು ಪೋಲೆ ಪೊಂಜೆಂಡು

ಮೌಕ್ತಿಕದ ಚೆಂಡಾದಂತನುಕ್ರಮದೊಳಿಂದುಬಿಂಬಂ ಸಾಲಾಗಿಯರುಣಂ ಪಿಶಂಗಮಾ ಸಿತರುಚಿಗಳೋಲೈಸಿ . . . ಚೆಲ್ವಾದುದು (ಚಿಬಪು. ೯–೧೬).
[ ಪೊಂ (< ಪೊನ್) + ಚೆಂಡು (< ಸೆಂಡು) ]

**ಪೊಂಜೆಳೆ, ಹೊಂಜೆಳೆ** (ನಾ). ಚಿನ್ನದ ಕೋಲು ; ಬಂಗಾರದ ಬೆತ್ತ : ಗಂಧಸಿಂಧುರದವೊಲ್ನಡೆಯನಾಂತ ನವಯೌವನೆ . . . ಪೊಂಜೆಳೆಯ ಮೆಯ್ಯ ಪದ್ಮಿನಿ (ಪಂಪಭಾ. ೭–೧೦). **ಹೊಂಜೆಳೆ** : ಕರತಳದೊಳು ಹೊಂ[ಪಾಠಾಂ. ಪೊ]ಜೆಳೆಯನು ಪಿಡಿದು ತನ್ನರಸಗಂಗಜಲಾಸ್ಯವನು ಭರದಿಂದುಪದೇಶಿಪ ಲಾಸ್ಯಕಿಯೆನೆ ತರುಣಿ ಕಣ್ಗೊಪ್ಪವಡೆದಳು (ಚಂಪ್ರಸಾಂ. ೯–೨೯) ; ಹೊಂಜೆಳೆಯಂದದಿ ಬಳಕುವ ಕಾಯದಿ (ಜ್ಞಾಪಕ. ೩–೧೮೦).

**ಪೊಂಜೆಳೆಮೆಯ್, ಹೊಂಜೆಳೆಮೆಯ್, ಹೊಂಜೆಳೆಮೈ** = ಚಿನ್ನದ ಬೆತ್ತದಂತೆ ಹೊಳೆಯುವ ಶರೀರ ; ಸುಂದರವಾದ ದೇಹ : ಪೊಂಜೆಳೆಮೆಯ್ಯ . . . ಗೌರೀದೇವಿಯೆಂಬ ತರುಣಿಯಂ ಮದುವೆಯಂ ಮಾಡಿ (ಹರಿಶ್ಚ.ರ. ೨–೩೨ ವ) ; ನೀರಾಟಮನಾಡಿ ಪೋದ ವಾರನಾರಿಯರ ಪೊಂಜೆಳೆಮೆಯ್ಯೊಳ್ ರಂಜಿಸಿರ್ದ ರಜನೀರಜಂಗಳಿಂ ಕದಡೇಳ್ದು (ರಾಜಶೇ. ೦೨–೩೯ ವ); ಅಂಜನದಲರುವಕ್ಕಿಯ ಬಣ್ಣಮೆನೆ ತೋರ್ಪ ಕಂಜಲೋಚನನ ಮೂರುತಿಯು ರಂಜಿಸುವಂತಲರ್ಗಂಗಳೊಳಿಡುವರು ಹೊಂಜೆಳೆಮೆಯ್ಯ ನೀಱೆಯರು (ಪರ್ವಶ. ೪–೨) ; ಮೊಳೆಯೆ ಹೊಂಜೆಳೆಮೈಯೊಳಾಗಳೆ ಪುಳಕಸಸಿ ತನಿಮೋಹರಸ ಮನದೊಳಗೆ ಕಾಳ್ಪುರವಾಗೆ ಸಾರ್ದಳು ರೋಹಿಣೀದೇವಿ (ಸಾಳ್ವಭಾ. ೧೮–೫೭). [ಪೊಂ (< ಪೊನ್) + ಸೆಳ್$_4$]

**ಪೊಂಜೆಳೆಮಂಚ** (ನಾ). ಚಿನ್ನದ ತೂಗುಮಂಚ : ಪೊಂಜೆಳೆಮಂಚದ ಮೇಲೆ ಪೊರೆಯೊಳೇಟುಂಜೌವನೆ ಲಜ್ಜಾತುರೆ ಕಾಂಚನಕಂಜವದನೆ ತಲೆವಾಗಿರೆ (ಜಿಮತಾ. ೬–೪೪). [ಪೊಂ (< ಪೊನ್) + ಸೆಳೆಮಂಚ]

**ಪೊಂಜೆಱಂಗು** (ನಾ). ಚಿನ್ನದ ಎಳೆಗಳಿಂದಾದ ಸೆರಗಂ ; ಜರತಾರಿಯಿರುವ ಸೆರಗು : ವಿಟಜಂಗಮಂ ಬಂದಪುಪೆ ಕರೆಸಿ ನಲ್ಲಳ ಸೀರೆಸೆಱಗು ವಿಡಿದೆಳೆವುತಿರಲು ಅಂಗಸ್ಥವಸನವಂತಿರ್ದುದದಱೊಳ್ಪೊಂಜೆಱಂಗು ರಂಗೆಸೆವ ಸೀರೆಗಳಪರಿಮಿತಮುದಿಸೆ ಜಂಗಮಾವಳಿ ವಣೆಯಲಿತ್ತು (ರಾಶೇಚ ೬–೪೦).
[ ಪೊಂ (< ಪೊನ್) + ಸೆಱಂಗು ]

**ಪೊಂಜೊನ್ನಲಿಗೆ** (ನಾ). ಚಿನ್ನದ ಕೊಡ,—ಕಲಶ : ಜಲಜನ್ಮಕೋರಕವ್ರಾಯ ಸೊಕ್ಕುಮಿಕ್ಕಾನೆದಲೆ ಗಾಲಿವಕ್ಕಿ ಪೊಂಜೊನ್ನಲಿಗೆಗಳ ಚೆಲ್ವನಲೆದು ಮಲೆದು . . . ನೆಲವೊಲೆಗಳ್ . . . ಎದ್ದಂಬಡೆದವು (ಉದ್ಭಟೇ. ೪–೨೦).
[ಪೊಂ (< ಪೊನ್) + ಸೊನ್ನಲಿಗೆ]

**ಪೊಂಡವಕೆ** (ನಾ). ಚಿನ್ನದ ಪೀಕದಾನಿ : ಶಕ್ತಿವ್ರಜಮಾನ್ಯೆ ಪೊಂಡವಕೆಯಾಂತಿರ್ದಾದಿದೇವೀಸಮುತ್ಕರವೊಲ್ದಾಂತಿರೆ ರನ್ನವಾವುಗೆಯನೊಪ್ಪಿರ್ದಂ ಭವಾನೀಧವಂ (ಕಬಕಂ. ೧–೭೬) ; ಪರಮಗಾಯತ್ರಿ ನಿಂದಿರೆ ಶಕ್ತಿಗಳ ವಿತತಿ ಪೊಂಡವಕೆಯೊಲ್ದಾಂತಿರಲ್ (ಕುಮಾಪು. ೦–೭೦).
[ಪೊಂ (< ಪೊನ್) + ಡವಕೆ$_1$]

Δ**ಪೊಂತಕಾರಿ** 'ಹೊಂತಕಾಱಿ$_1$' ನೋ.

Δ**ಪೊಂತಕಾಱಿ** 'ಹೊಂತಕಾಱಿ$_1$' ನೋ.

**ಪೊಂತಿವಣೆ** (ನಾ). (?) : ಬಟ್ಟ ಕಣ್ಣುಂ ಬಿಗಿದ ಮೊಗಮುಂ ಮನದ ಮುನಿಸುಂ ಮೆಯ್ಯ ಮುಱುಕಮುಂ ಪ್ರತಿಮಾನದ ಪೆಣನುಮಣಲೊಳಡಸಿದಾನೆಯಡಂಗುಂ ಕೋಡ ಕಯ್ಯ ಪೊ[ಪಾಠಾಂ. ಪೊಸಂ]ತಿವಣೆಯು ನೆತ್ತರ ನೊಂದುನಿವಿಷಮುಂ ಕುಂದಿಸದ ಕ್ರೋಧಿನಿಯೆಂಬಯ್ದಾನೆಯ ಮದದೊಳ್ (ಅರ್ಜುನ. ೬–೬೪ ವ). [ ? ]

**ಪೊಂದಂಡ** (ನಾ). = **ಪೊಂಗೋಲ್** ೧ : ಏಣಾಂಕವದನೆಯರು . . . ಪಾಣಿಯಲಿ ಪೊಂದಂಡವಿಡಿದವರು ಮುನ್ನಡೆಯೆ (ನವಮೋ. ೩೯–೨೭).
[ಪೊಂ (< ಪೊನ್) + ದಂಡ]

**ಪೊಂದಂಡಿಗೆ, ಹೊಂದಂಡಿಗೆ** (ನಾ). ಚಿನ್ನದ ಪಲ್ಲಕ್ಕಿ ; ಬಂಗಾರದ ಮೇನೆ : ಮಂಗಳಪಾಠಕರು ಸಂಗಡಿಸಿ ಬಿರಿದುಗಳಂ ಪೊಗಳುತಂ ನಡೆಯೆ ಪಿಳ್ಳೆಯನಾಯನಾರ್ ಪೊಂದಂಡಿಗೆಯನೇಱಿ (ಬಸಪು. ೩೦–೧೬). **ಹೊಂದಂಡಿಗೆ** : ನೆಗಹಿದವು ಕೈದೀವಿಗೆಯ ಸಾಲುಗಳು ಹೊಂದಂಡಿಗೆಯ ದೂವಾರಿಗಳು ಮೆಂಟಣಿಸಿದರು (ಕುವ್ಯಾದ್ರೋ. ೬–೩೩).
[ಪೊಂ (< ಪೊನ್) + ದಂಡಿಗೆ]

**ಪೊಂದಗಡು, ಹೊಂದಗಡು** (ನಾ). ಚಿನ್ನದ ತಗಡು ; ಬಂಗಾರದ ವರ್ತಿ : ಪೊಂದಗಡಿನ ಕಡಾರಮಂ ಕಾದಿರ್ಪಂತೆ ಕಂಪಂ ಪೀರ್ದು (ಲೀಲಾವ. ೬–೬೦ ವ) ; ಮುತ್ತಿನ ಪುಡಿಯಂ ಪೊರಳ್ಚಿ ಪೊಸಪೊಂದಗಡಂ ತಱಿದಿಕ್ಕಿದಂತೆ ತೋರ್ಪಿನಿಯನ ಬಾಯ ಕರ್ಪುರದ ತಂಬುಲಕೊಯ್ಯನೆ ಕೆಯ್ಯನೊಡ್ಡಿದಳ್ (ಅನಂಪು. ೦೨–೭೬) ; ಸ್ಮರನ ಪಸ್ಸದ ಯಂತ್ರವ ಪೊಂದಗಡಲಿ ಬರೆವಂತೆ ಕತ್ತುರಿಯಿಂದ ತರುಣಿಯ ಕದಪಿನಲಿ ಮಕರಿಕಾಪತ್ರವ ವಿರಚಿಸಿದರು (ಜೀವಂಸಾಂ. ೧೦–೦೪). **ಹೊಂದಗಡು** : ಹೊಂದಗಡಿನ ಹೊದಕೆಯ ಮನೆ ಬಹಳ ನೇರಂದವಡೆದ ಪಟ್ಟಶಾಲೆ (ಮೋಹತ. ೩–೭೪).
[ಪೊಂ (< ಪೊನ್) + ತಗಡು]

**ಪೊಂದಟ್ಟೆ, ಹೊಂದಟ್ಟೆ** (ನಾ). ಚಿನ್ನದ ತಟ್ಟೆ ; ಬಂಗಾರದ ಹರಿವಾಣ : ಕರಯುಗದೊಳಾಂತ ಪೊಂದಟ್ಟೆಯನದಱ ಮೇಲೆ ಪರಪಿರ್ದ ಸಂಪಗೆಯ ಪೂಗಳಂ . . . ಕೊಂಡು ಬಂದು (ಕೈಬಿಖಾ. ೦೦–೦೦) ; ಹೊಳೆವ ಪೊಂದಟ್ಟೆಯಾರತಿಗಳ ಪಿಡಿದಾಗ ಲಲಿತಾಂಗಿಯರು ಸಾಲ್ಗೊಂಡು (ಕಂಸವ. ೭–೧೦೬). **ಹೊಂದಟ್ಟೆ** : ಹೊಂದಟ್ಟೆಯೊಳು ಕುಂಕುಮರಸಪೂರಿತ ಗಂಧಾಕ್ಷತೆಗಳ ಕೊಟ್ಟು ಅಂದವಡೆದ ಕದಳಿಯ ಪರ್ಣದೊನ್ನೆಯ ತಂದಿರಿಸಿದರೆಲ್ಲರಿಗೆ (ಮೋಹತ. ೩–೩೦) ; ಮಕರಂದಾಜಿಯೆಂಬೊರ್ವ ನೀಱೆ . . . ಕೆಳದಿಯ ಕೈಯ ಹೊಂದಟ್ಟೆಯ ತಾನೊಯ್ದು . . . ಭಾವಗೆ ಕೊಟ್ಟಳು (ಶಶಕ. ೯–೨೦). [ಪೊಂ (< ಪೊನ್) + ತಟ್ಟೆ]

**ಪೊಂದಳಿಗೆ, ಹೊಂದಳಿಗೆ** (ನಾ). = **ಪೊಂದಟ್ಟೆ** : ಮಂಗಳಭೂಷಣಾವಳಿಯ ಬೆಳ್ಪು . . . ಪೊಂದಳಿಗೆ ಸೂಸಿದ ಸೇಸೆಯ ಬೆಳ್ಪು ತಳ್ತಿರಲ್ (ಜಗಪ. ೦೦–೪೦) ; ಪೊಂದಳಿಗೆವಿಡಿದಾರತಿಯನೆತ್ತಲ್ಕೆದೆಯರು . . . ಕಂಗೊಳಿಸಿತಾ ದಂಪತಿಗಳ ಮದುವೆ (ಕೈಬಿಖಾ. ೩೦–೦೮). **ಹೊಂದಳಿಗೆ** : ಸುಳಿದವಾರತಿಯಮರಿಯರ ಹೊಂದಳಿಗೆಗಳ ದೀಪಗಳ ಮುಕ್ತಾಫಲದ ಸೇಸಾಕ್ಷತೆಯ ಮಳೆ ಸಿರಿಮುಡಿಯ ಸರಿಸದಲಿ (ತೊರರಾ. ೩–೭–೩೯) ; ಹೊಂದಳಿಗೆಯಲಿ ಸಂಧ್ಯೆಯೋಕುಳಿಯನೆರಚುತ್ತ . . . ನಿನ್ನ ಪೂಜಿಸುವಳನುದಿನಂ ! (ಚಕ್ರಾಂಗ. ೦೭–೪೪೨). [ಪೊಂ (< ಪೊನ್) + ತಳಿಗೆ]

**ಪೊಂದಳಿರ್, ಪೊಂದಳಿರು** (ನಾ). ೧. ಹೊಂಬಣ್ಣದ ಚಿಗುರು : ಪೊಂದಳಿರ್ಗಳ್ ತೋರಣಮೆನೆ ಕರಮೆಸೆವುವು (ಸುಕುಮಾ. ೯–೭೦). ೨. ಚಿನ್ನದಿಂದ ಮಾಡಿದ ಚಿಗುರಿನಾಕಾರದ ಅಲಂಕಾರವಸ್ತು : ಬಳಸಿದ ಚೆಂಬೊನ್ನ ಮಾಂಗಾಯ ಗೊಂಚಲ್ಗಳ ಪೊಂದಳಿರ ತೊಂಗಲ್ಗಳ . . . ನಡುವೆ (ಅನಿಪು. ೬–೦೫ ವ). **ಪೊಂದಳಿರು** : ೧. ಕುರವಕದ ಕುತ್ತುಂಗಱಿಯುಮಂ ಮಾಂದಳಿರ ಪೊಂದಳಿರುಮಂ . . . ಮನೋಹರಮೆನೆ ಸಮೆದು (ಕಂದ್ರಪ್ರ. ೭–೧೦೪ ವ). [ಪೊಂ (< ಪೊನ್) + ತಳಿರ್$_2$]

**ಪೊಂದಳಿರು** 'ಪೊಂದಳಿರ್' ನೋ.

**ಪೊಂದಳೆ** (ನಾ). ಚಿನ್ನದ ಸತ್ತಿಗೆ : ತುಱುಗಿದ ಪೊಂದಳೆಗಳ ಬಳಿನೆಳಲೊಳ್ ನೆಱೆ ಬರ್ಪ ಗಣಂಗಳ್ (ವೃಷಭ. ೩–೨೨ ವ).
[ಪೊಂ (< ಪೊನ್) + ತಳೆ$_4$ (< ತಱೆ)]

**ಪೊಂದಾಮರೆ, ಪೊಂದಾವರೆ, ಹೊಂದಾವರೆ** (ನಾ). ಒಂದು ಬಗೆಯ ತಾವರೆ ; ಹೊಂಬಣ್ಣದ ಕಮಲ : ಭೂಮಿಯ ಮೇಗೆ ಸಿಂಹಾಸನಮಕ್ಕುಂ ಅದಱ ಮೇಗಲರ್ದ ಪೊಂದಾಮರೆಯಕ್ಕುಂ (ಚಕ್ರಾರಾ. ೧೩೩–೩) ;

ತಾಮರೆ ಪೊಂದಾಮರೆ ಕಲ್ಪಲತೆಯ ಲತೆಯಿಲ್ಲಂ (ಶಾಂತಿಪು. ೩-೬). **ಪೊಂದಾವರೆ :** ಮುದರಧರನೀ ಪೊರ್ಕುಟ ಪೊಂದಾವರೆಪೊಕ್ಕು ಮೇಣವಂ ಬರ್ದುಕುವನೇ (ಶಂಕರಶ. ೧೦-೦೨೦), ಸರೋವರವಂ ಪೊದಟ್ಟು ಪೊಂದಾವರೆ ಬಳ್ಳಿ (ಸುಕ್ಷಿಪು. ೨-೨೨). **ಹೊಂದಾವರೆ :** ತಾವರೆ ಹೊಂದಾವರೆಗಳ್ ಮಾವಿವಸ್ತ್ರಾವಳಿಮುದಾಳಿ ಗಿಳಿಯರಗಿಳಿಗಳ್ (೧೦೪. ೨ ೩೬); ಕೆಲರು ಹೊಂದಾವರೆಯ ಹಂತಿಯ ಕೊಳನ ಹೊಕ್ಕರು (ಕುಮಾ.ರಾ. ೦೬-೪), ಶರಧಿಯೊಳೊಗೆದ ಹೊಂದಾವರೆಯಂತಿರ್ಪ ಪುರಮಧ್ಯದಲಿ ಕೃಷ್ಣರಾಯ ಅರಮನೆ . . . ರಂಜಿಸಿತು (ವೋಚಕತ. ೩-೩೨). [ಪೊಂ (< ಪೊನ್) + ತಾಮರೆ]

**ಪೊಂದಾರ** (ನಾ). ಚಿನ್ನದ ದಾರ; ಜರತಾರಿ ಎಳೆ: ಪೊಂದಾರಗೆಯ್ಮೆ ಸೆಱಗಿನ ಚೆಂದದ ಚೆಂಗಾವಿಯುಡೆಯನುಟ್ಟುನ್ನರಿಪಳ್ (ಚಿಕದ. ೬-೦೯೦).

[ಪೊಂ (< ಪೊನ್) + ದಾರ$_1$]

**ಪೊಂದಾವರೆ** 'ಪೊಂದಾವರೆ' ನೋ.

**ಪೊಂದಾವು** (ನಾ). ಚಿನ್ನದ ಎಳೆಯಿಂದ ಮಾಡಿದ ಹಗ್ಗ: ಕೊರಲೊಳ್ ಕಟ್ಟಿರ್ದ ಪೊಂದಾವುಱಿ ಪಱಿದದನೀಳುತ್ತೆ ಬಾಗಿಲ್ಗದಂಗಳ್ ಚರಿವಂತೊತ್ತುತ್ತೆ (ಚಿತ್ರಗೂ. ೨೦-೩೯). [ಪೊಂ (< ಪೊನ್) + ದಾವು$_2$]

**ಪೊಂದಾಳ, ಹೊಂದಾಳ** (ನಾ). ಚಿನ್ನದ ತಾಳ: ಮಿಗೆಯೊತ್ತುವ ಪೊಂದಾಳದ ಬಗೆಯಂ ಪೊಲ್ದಲರ್ದ ಕರ್ಣಿಕಾರಮದೆಸೆಗುಂ (ಉದ್ಭಟ. ೯-೨೨); ಹರನಿತ್ತ ಪೊಂದಾಳವುಂ ನುಡಿಸುತ್ತ ಪಾಡಿದಂ (ಶ್ರೀಂದಪು. ೮-೩೦); ಶ್ರೀಧರದ ಪೊಂದಾಳವುಂ ತೆಗೆದು ತಿರುಪಾದನೇಕವುಂ ಪಾಡಲ್ಕೆ (ಚಿಕ್ಕಪು. ೪-೯-೦೨). **ಹೊಂದಾಳ :** ನುಡಿಗೇಳಿ ಹೊಂದಾಳವಂ ಪಿಡಿವುತಂ (೮೦ಗಪು. ೦೯-೩೬).

[ಪೊಂ (< ಪೊನ್) + ತಾಳ್$_2$ (= ತಾಲ)]

**ಪೊಂದಿಕೆ, ಹೊಂದಿಕೆ** (ನಾ). ಹೊಂದಾಣಿಕೆ; ಸಾಮರಸ್ಯ: ಒಂದಿಕೆ, ಒಂದಿಕೆಗಳ್ . . . ಪೊಂದಿಕೆ, ಪೊಂದಿಕೆಗಳ್ (ಶಬ್ದಾನು. ೫೬೬ ಪ್ರಯೋ). **ಹೊಂದಿಕೆ :** ಹೊಂದಿಕೆಯ ಹೋಲಬಲ್ಲವೀ ನುಡಿ (ತೊರಚ. ೫-೩-೬೩); ಅಪೂರ್ಣವಾದರೂ ಹೊಂದಿಕೆಯುಳ್ಳ ಅರ್ಥವನ್ನು ಕೊಡುವ ಪದಗಳ ಗುಂಪಿಗೆ ಪದಸಮುಚ್ಚಯ ಎಂದು ಹೆಸರು (ಮುರ್ನು. ೩). 'ಪೊರ್ದಿಗೆ' ಪರಾ. [ಪೊಂದು$_1$ (< ಪೊರ್ದು) + — ಇಕೆ]

**ಪೊಂದಿಗೆ** 'ಪೊರ್ದಿಗೆ' ನೋ.

**ಪೊಂದಿಸು** 'ಪೊರ್ದಿಸು' ನೋ.

**ಪೊಂದು$_1$** 'ಪೊರ್ದು' ನೋ.

**ಪೊಂದು$_2$, ಹೊಂದು$_2$** (ಕ್ರಿ). ಸಾಯು; ಮರಣ ಹೊಂದು: ನೀಲಚಿನ್ನ ಮನಸಿಜರಾನಿಜಱದು ಪಿಡಿದು ತಾನೊಪ್ಪಿದ್ದಿದಾನ್ (ಪ್ರಶಂ. ೦೯೪೦. ೨-೪; ಸು. 788); ಕೆಡೆದು ಪೊಂದಿದನಾಮಿಳೆಯಲ್ಲಚೇತನಂ (ಕಾದಂಬ. ೫೬೩); ನಿಜಕಾಲಪೂರ್ತಿಯೊಳ್ ಪೊಂದುವವರೊಯ್ಯಗೆ (ಚಿತ್ರಪು. ೦-೪-೦೨೪); ತಂತಮ್ಮ ದುಷ್ಕೃತಂಗಳ ಫಲಂಗಳತ್ತಣಿನಾ ರಕ್ಕಸರ್ ಪೊಂದಿದರ್ (ರಾಮಾಶ್ವ. ೦೨-೦೮). **ಹೊಂದು$_2$ :** "ಹೊಂದು — ಮರಣೇ" (ಶಮಧಾ); ಹುಟ್ಟುವಲ್ಲಿ ಭವಿ . . . ಹೊಂದುವಲ್ಲಿ ಭವಿಯಾಗಿ ಹೋಹರ ಮುಟ್ಟಲಾಗದು (ಬಸವ. ೬೬೪); ಹರಣವಿರೆ ಹೊಂದಿದನದಾವನು (ಕುಮಾ.ಕ. ೨೩-೪೪); ಮರಳಿ ಮರಳಿ ಹುಟ್ಟಿ ಹೊಂದಿ ತೊಳಲಿ ಬಳಲಿ ಬಂದೆ ನಾ (ಪುರಂದ. ೦-೦೬೬-೪).

[ದೇ.॥ ತಮಿ. ಪೊನ್ನು; ಮಲ. ತೆಲು. ಪೊಲಿ]

**ಪೊಂದು$_3$, ಹೊಂದು$_3$** (ನಾ). ೧. ಸೇರಿಕೆ; ಹೊಂದಿಕೆ: 'ಪೊಂದುಗುಂದು' ಪರಾ. ೨. ಸಮೂಹ; ಗುಂಪು: ಎಡೆಯಡೆಯೊಳಿಡಿಕಿಱಿದ ಡೊಣೆಗಳ ಶ್ರೇಣಿಗಳ ಸಿಡಿಸಿಡಿದುರುಳ್ವ ಜಲಬಿಂದುಗಳ ಪೊಂದುಗಳ . . . ಕಡಲಿಸದುದು (ಚಿಶಪು. ೨-೪). **ಹೊಂದು$_3$ :** ೩. ಪಕ್ಕ; ಬದಿ; ಸಾಮೀಪ್ಯ: ಗಂಜೀಯ ಸೀರುಟ್ಟು ಗಂಧದಾ ಬೊಟ್ಟಿಟ್ಟು ನಂದೀಶ ನಿಮ್ಮ ಹೊಂದೀಲಿ ಕೂತಿರುವ ನಾರಿ ಗಂಗವ್ವ ಎಳ ಹೋಗಿ ನೀ ಗಂಡರನೆಬ್ಬಿಸೇಳ (ಜೋಸೆಗ. ೦೩೩); ಬೆಳಗುಜಾವದ ಎಲರು ಎದಿರಿನ ಬದಿಗೆ ನಿರ್ಗರನಲಗುತ ಎಲೆಯ ಸಂದಿಗೆ ಅಲರಿನಂದಿಗೆ ಮರದ ಹೊಂದಿಗೆ ನಲಗುತ (ಹಾಡುಹ. ೩೩-೨೪). [< ಪೊಂದು$_1$ / ತಮಿ. ಪೊರುತ್ತು; ತೆಲು. ಪೊಂದು]

**ಪೊಂದು$_4$, ಹೊಂದು$_4$** (ನಾ). ಸಾವು; ಮರಣ: ಪುಟ್ಟು ಪೊಂದಿಗೆಡೆಯಲ್ಲದೆ ತೋರ್ಪರ್ (ದಶಕು. ೯-೬); ಈವುಳಿವು ಪೊಂದುಗಳ . . . ನೋಡಿ ನಗುತಲಿಹೆಯೊ (ಚಿಚೀ೧೫. ೬೯-೦೦). **ಹೊಂದು$_4$ :** ಹೆಸರಿಲ್ಲದ ಕುಲವಿಲ್ಲದ ಹುಟ್ಟಿಲ್ಲದ ಹೊಂದಿಲ್ಲದ ಅಯೋನಿಸಂಭವ ನೀನಾದ ಕಾರಣ ನಿನ್ನ ನಾನು ನಿಷ್ಕಲಲಿಂಗವೆಂದೆನಯ್ಯ (ಸಿದ್ಧೇಶ. ೬-೨೨); ಭಾವಲಿಂಗದಲ್ಲಿ ಬಯಲನೈದಿದ ಮಹಾಶರಣಂಗೆ ಹುಟ್ಟು ಹೊಂದುಗಳು ನಷ್ಟವಾದುವಯ್ಯ (ಅಜಂದೇ. ೦೦೬-೪೩). [< ಪೊಂದು$_2$]

**ಪೊಂದುಗುಂದು** (ಕ್ರಿ). (ಸಾಂಸಾರಿಕಜೀವನದೊಡನೆ) ಹೊಂದಿಕೆಯನ್ನು ಕಳೆದುಕೊಳ್ಳು,—ಸಂಬಂಧವು ಕಡಿದುಹೋಗು: ಈ ಪಂಬಲಿಂ ಬೆಂಡಾಗಿ ಕುಂದುಬುಗೆಯಿಂ ಸಂದಿ ಪೊಂದುಗುಂದಿರ್ಪ ಪುರದಧಿರಾಜಂ ಸುರಥರಾಜಂ ತಾನೊಲಗದೊಳಿರ್ಪನ್ನೆಗಂ (ರಾಮಾಶ್ವ. ೦೩೯-೪).

[ಪೊಂದು$_3$ + ಕುಂದು$_1$]

**ಪೊಂದುಗುಲ** (ನಾ). ಚಿನ್ನದ ಎಳೆಗಳಿರುವ ರೇಷ್ಮೆ ಬಟ್ಟೆ: ತೆರೆ ಮಸಗುವ ಪೊಂದುಗುಲದ ಪೊಗರು (ಗೀತಗೂ. ೦೩-೨೬).

[ಪೊಂ (< ಪೊನ್) + ದುಗುಲ$_1$]

**ಪೊಂದುಗೆ** 'ಪೊರ್ದುಗೆ' ನೋ.

**ಪೊಂದುಡಿಗೆ** 'ಪೊಂದೊಡಿಗೆ' ನೋ.

**ಪೊಂದೆನೆ, ಹೊಂದೆನೆ** (ನಾ). ೧. ಚಿನ್ನದ ಬಣ್ಣದ ಧಾನ್ಯದ ಹೊಡೆ; ಹಣ್ಣಾದ ತೆನೆ: ತುಂಬುವುದು ಕಾಡುಗಳನೆಲ್ಲ ಪೊಂದೆನೆಯು ಕವ್ಕಿತು ಗಾಳಿ (ಚಿತ್ರಾಂಗ. ೩೩-೦೪೪೦). ೨. ಕೋಟೆಯ ತುದಿಗಿರುವ ಚಿನ್ನದ ಕೊತ್ತಳ: ಕೋಂಟೆಯ ಪೊಂದೆನೆಗಳ್ ವಿರಾಜಿಕುಂ (ಜಗಂ. ೨-೦೯); ಪೊಂದೆನೆಗಳ್ ಖರಕರಕರದಿಂದಂ ಕರಗುಗುಂ (ರಾಜಶೇ. ೨-೬೬). **ಹೊಂದೆನೆ :** ೧. ಚೆಲ್ವ ಹಸುರ್ಗೊನೆಯಲ್ಲಿ ನೆಲ್ಲ ಹೊಂದೆನೆಯಲ್ಲಿ ಚೆಲ್ಲಿಹವು ಇಬ್ಬನಿಯ ಮುತ್ತುಗಳಿವಿಲ್ಲಿ (ಚಿಚೀ೧೫. ೨೬-೦೫). [ಪೊಂ (<ಪೊನ್) + ತೆನೆ$_1$]

**ಪೊಂದೆರೆ$_1$** (ನಾ). ಚಿನ್ನದ ರೂಪದಲ್ಲಿ ಕೊಡಬೇಕಾದ ತೆರಿಗೆ: ಏಪ್ಪದಾ ಸಾಮಂತರೆಲ್ಲ ಪೊಂದೆರೆಯ ತೆರಲೊಲ್ಲರಲ್ಲ! (ಪಾರಶಿ. ೨೨ ೪೯೩).

[ಪೊಂ (<ಪೊನ್) + ತೆರೆ$_3$ (< ತೆಱೆ$_3$)]

**ಪೊಂದೆರೆ$_2$, ಹೊಂದೆರೆ** (ನಾ). ೧. ಜರತಾರಿಯ ಪರದೆ: ಪೊಂದೆರೆಯ ಪೊರೆಯ ಮಱೆವಿಡಿದು . . . ನಿಂದಳು ವಿಲಾಸದಿಂದ (ಶ್ರೀಂದಪು. ೮-೨); ಮೃಗಾಕ್ಷಿಯೊರ್ವಳುಜ್ಜ್ವಳತರಮಾದ ಪೊಂದೆರೆಯನೋಸರಿಸುತ್ತಿರೆ ಕಂಡನಿಂದುಮಂಡಳಮುಖಿಯಂ (ರಾಜಶೇ. ೦೦-೬). **ಹೊಂದೆರೆ :** ೨. ಹೊಂಬಣ್ಣದ ಅಲೆ: ಅಲರ್ದ ತಾವರೆವಂಡನುಮರಿಸಿ ಕೊಳನ ಹೊಂದೆರೆಯೊತ್ತಿ ಮಿಂದು . . .ಸುಳಿದಾಡುವುದು ಬಾಲಕನವದೊಂದೆಲರು (ಸಾಳ್ವಭಾ. ೨-೫). [ಪೊಂ (<ಪೊನ್) + ತೆರೆ$_4$]

**ಪೊಂದೇರ್**, ಪೊಂದೇರು, ಹೊಂದೇರ್, ಹೊಂದೇರು (ನಾ). ಚಿನ್ನದ ತೇರು; ಸ್ವರ್ಣರಥ: ಪೊಂದೇರ ಮೇಲಿರ್ದ ವಸುದೇವನಂದನರ್ಗೆ ಮುಕುಳಿತಾಂಜಲಿಯಾಗಿ (ಜಗಂ. ೫-೦೦೨ ವ); ಧೀರರ ದೇವ ಮಾಱಿನೆಪು ಜಾವವೊಳು ಪೊಂದೇರೇಱಿ ನಡೆವನಬ್ಧಿಯೊಳು (ಭರತ. ೨೪-೨೩); ಪೊಂದೇರನಳವಡಿಸಿ ತುರಗಂಗಳಂ ಪೂಡಿ (ಕೃಷ್ಣಾ. ೦೨-೪). **ಪೊಂದೇರು :** ಕರಿತುರಗನಿಚಯದೆಡೆಯಾಟಗಳ ಘಾಟಗಳ ಪೊಂದೇರ ಸಂದಣಿಗಳ . . . ಪಾಳಿಯಂ ಕಣ್ಗೆಸೆದುದು (ಚಿಶಪು. ೪೨-೦೫). **ಹೊಂದೇರ್ :** ಅಭ್ರಮಾರ್ಗದೊಳ್ಸುಳಿವ ಮುಂಗಾರ ಮಿಂಚಂ ತನ್ನ ಹೊಂದೇರ ಚಲಕೆಱಗುವಶನಿಯುಂ ತನ್ನ ಘಾತಿ . . . ತಿರಸ್ಕರಿಸೆ ವೃಷಕೇತು ರಿಪುಸೈನ್ಯಮಂ ಪೊಕ್ಕನು

(ಕೃಪಿಕಾ. ೦೨-೦೩). ಹೊಂದೇರು : ಹೊಳೆಹೊಳೆದು ಹೊಂದೇರು ಹರಿದವು (ಸುಚ್ಯಾಶ. ೬-೨), ನೇಸರಾಗಳೆ ತನ್ನ ಹೊಂದೇರಹಸ್ತಗಿರಿವಂಸ್ತಕದೊಳಿಳಿಸುತಿರ್ಪನ್ (ಅಣ್ಣ. ೯೯-೬). [ಪೊಂ (<ಪೊನ್) + ತೇರ್₂]

ಪೊಂದೇರು 'ಪೊಂದೇರ್' ನೋ.

ಪೊಂದೊಟ್ಟಿಲ್, ಹೊಂದೊಟ್ಟಿಲು (ನಾ). ಚಿನ್ನದ ತೊಟ್ಟಿಲು: ಆ ವಣಿಜನ ಗೇಹದೊಳಿಪ್ಪರದಲಿ ಪೊಂದೊಟ್ಟಿಲೊಳಗೆ . . . ಜೀವಂಧರ ನೊಪ್ಪುವ ಲೀಲೆಯಲಿ . . . ಬೆಳೆದನು (ಜೀವಂ. ೬-೨); ಗಿರಿಜೆ ವಗನಂ . . . ಕೊಂಡಾಡಿ ಹರಸಿ ಪೊಂದೊಟ್ಟಿಲೊಳ್ ತೂಗಿದರ್ (ಕಲ್ಯಾ. ೩-೨೬). ಹೊಂದೊಟ್ಟಿಲು : ಕಟ್ಟಿ ಹಚ್ಚದ ವಿಳೀಗಳಲಿ ಹೊಂದೊಟ್ಟಿಲನು . . . ರಕ್ಷೆಯ ಕಟ್ಟರಿಸಿ ಪಾಡಿದಳು ಗೋಪಿ ಮುಕುಂದನನು (ಕಣಾಗ. ೦೦-೩-೦೩). [ಪೊಂ (< ಪೊನ್) + ತೊಟ್ಟಿಲ್₁]

ಪೊಂದೊಡರ್, ಹೊಂದೊಡರು (ನಾ). ೧. ಚಿನ್ನದ ಅಂದುಗೆ : ಪೀತಪಟಂ ಕಟಿಯೊಳ್ ಬೆಡಂಗು ಮೆಯ್ಯೊಳ್ ಶ್ರೀರ ಕಾಲ ಪೊಂದೊಡರ ದೈತ್ಯರ ಪಾಪೆಗಳೊಪ್ಪೆ . . . ಗೋವಳರಾಯನ ಲೀಲೆ ರಂಜಿಕುಂ (ಜಗ. ೩-೯೩); ಎಡಗಾಲೊಳ್ ಪೊಂದೊಡರ್ ತಳ್ತಿರೆ (ರಾಜಶೇ. ೦೪-೭೦). ಹೊಂದೊಡರು : ೧. ಹೊಂದೊಡರು ಕಿರುಗೆಜ್ಜೆ ಘಂಟೆಗಳುಂದವಡೆದರಳಲೆ . . ಕಂಕಣಂಗಳ ಗೊಂದಣದ ಭೂಷಣಗಳಲಿ ಗೋವಿಂದ ರಾಮರು ಮೆರೆದರು (ಕಣಾಗ. ೦೦-೬-೩). ೨. ಚಿನ್ನದ ಆಭರಣ ; ಬಂಗಾರದ ಒಡವೆ : ಹೊಂದೊಡರ ಹಾರಾದಿಗಳೊಪ್ಪಂಬಡೆದು ನಸುನಗೆಮೊಗದ ಸೊಂಪಿನಲೀಹವಕ್ಕನುವಾದನಭಿಮನ್ಯು (ಸುಚ್ಯಾಕ್ರೋ. ೪-೯೯); ಹೊಂದೊಡರು ತೊಡರಲ್ಲವೇ ? (ಕೆಸಶಾ. XXIV. ೬೮೯).

[ಪೊಂ (< ಪೊನ್) + ತೊಡರ್₂]

ಪೊಂದೊಡವು, ಹೊಂದೊಡವು (ನಾ). ಚಿನ್ನದ ಒಡವೆ ; ಬಂಗಾರದ ಆಭರಣ : ಪೊಂದೊಡವಿನೊಳಾದ ನಿಸ್ವನಮ ದುಂದುಭಿಯಾಗೆ (ರಣಶೀಮ್ಯು. ೪-೦೩೯); ಮನದಣಿವಂದದಿ ಪೊಂದೊಡವಂ ಮೆಚ್ಚಿತ್ತು (೩ಮುಗಾ. ೨-೨೨). ಹೊಂದೊಡವು : ಹೊಂದೊಡವುಗಳನಿತ್ತುಪಚರಿಸಿ ಹರಸಿವಳು (ಹೊರಾ. ೩-೦-೪); ಕಾಲ್ಗೆಜ್ಜೆ ನೇವುರ ಬಳೆಯು ಹೊಂದೊಡವುಗಳ ಕಿಂಕಿಣಿಗೆ . . . ಹಾರಿದವನಾಲಿಸಿ ಮರಳಿ ಮರಳಿ ದನಿಯನಾಕರ್ಣಿಸಲ್ಕಾಟಿಸುತ್ತ (ಶ್ರೀಣಿಬಾ. ೩೩-೪೩). [ಪೊಂ (<ಪೊನ್) + ತೊಡವು]

ಪೊಂದೊಡಹ (ನಾ). ಚಿನ್ನದ ಲೇಪನ ; ಬಂಗಾರದ ಗಿಲೀಟು : ಉಡಿರ್ಘಲ್ಲಿ ಕಟ್ಟಿದ ಸರಗಿ ಕೈಪೊಡೆ ಪೊಂದೊಡಹದಂಬಿನ ಬತ್ತಳಿಕೆ (ಕರಾಸಾಂ. ೨೬-೨೬). [ಪೊಂ (< ಪೊನ್) + ತೊಡಹ₁ (<ತೊಡೆಪ)]

ಪೊಂದೊಡಿಗೆ, ಪೊಂದುಡಿಗೆ, ಹೊಂದುಡಿಗೆ, ಹೊಂದೊಡಿಗೆ (ನಾ). = ಪೊಂದೊಡವು: ಪೊವಟ್ಟ ಪೊಂದೊಡಿಗೆ ಶಕ್ತಿ ವಿರಾಜಿಪ ಶಕ್ತಿ ಶೂಲವೊಪ್ಪಿಡಿದ ಕರಾಸಿ ಗೌರಿ ನಿಜವಲ್ಲಭೆ (ರಂದೇಶಂಖ. ೦-೨); ಪರಿಪರಿಯ ಪೊಂ[ಪಾಠಾಂ.ಹೊಂ]ದೊಡಿಗೆಗಳ ಪರಿಪರಿಗಳುಡುಗೆಯ ದೇಶಿ ವಿಂಗ (ಸುಚ್ಯಾಆ. ೬-೭); ಇಡೆ ತೊಟ್ಟಲಿಲ್ಲಾಡಿಸುವರಿಲ್ಲ ನಿನಗೆ ಪೊಂದೊಡಿಗೆಯಿಲ್ಲ (ಕೃಪಿಕಾ. ೨೮-೦೭). ಪೊಂದುಡಿಗೆ : ಎಲೆ ಶಬರರಾಜ ನೋಡಿದೆ ಪಲವುಂ ಪೊಂದುಡಿಗೆದೊಟ್ಟು ಬಂದೊರ್ವರ್ಗಂ ವ್ಯಾಕುಲನಾಗಿರ್ಪಂ (ಕಂಪಶಂ. ೦೦೩-೨೨) ; ಅಳವಡೆ ತೊಟ್ಟ ಪೊಂದುಡಿ[ಪಾಠಾಂ. ದುಡು, ದೊಡಿ]ಗೆಯಿಂ (ಅರ್ಧನೇ.೨-೦೦). ಹೊಂದುಡಿಗೆ: ಅರಿಸಿನಪನೆ ಮಿಂದು ಹೊಂದು [ಪಾಠಾಂ. ದೊ]ಡಿಗೆಯನೆ ತೊಟ್ಟು ... ಪುರುಷ ಬಾರಾ (ಕುಹಾರೇ. ೩. ೦೪೦-೩೨೦). ಹೊಂದೊಡಿಗೆ : ಅರಿಸಿನಪನೆ ಮಿಂದು ಹೊಂದೊಡಿಗೆಯನೆ ತೊಟ್ಟು ಪುರುಷನ ಒಲವಿಲ್ಲದ ಲಲನೆಯಂತಾಗಿರ್ದೆನಯ್ಯಾ (ಬಸವ. ೨೩೯); ರಾರಾಜಿಸುವ ಹೊಂದೊಡಿಗೆಯ ಕುವರ ನೀನಾರವನು (ಪೋಹಶ. ೦೦-೬೦).

[ಪೊಂ (<ಪೊನ್) + ತೊಡಿಗೆ (<ತೊಡುಗೆ)]

ಪೊಂಪಲ 'ಪೊಂಪುಲ' ನೋ.

ಪೊಂಪಲ್ಲ 'ಪೊಂಪುಲ' ನೋ.

ಪೊಂಪು, ಹೊಂಪು (ನಾ). ೧. ಸೊಗಸು ; ಅಂದ ; ಚಂದ : ಪುರಿಯೇಟ್ ದಶದಿಸೆಯ ಪೊಂಪು ಜೊನ್ನದ ಹೊಂಪು ಮೆರೆದುದಾ ಚಾರುಚಂದ್ರೋದಯದ ಸಮಯದೊಳ್ ಬಗೆದು ಬಣ್ಣಿಸುವರೊಳರೆ (ಕಂಪಿಚಾ. ೦೯-೦೦). ಹೊಂಪು : ೧. ಸೊಂಪಿನಿಂ ಕಂಪಿಡುವ ಸಂಪಗೆಗಳಂ ಕೊಂಡು ಹೊಂ[ಪಾಠಾಂ.ಹೆಂ]ಪೆಸೆವ ಹೊಂಗೇದಗೆಯ ಹೂಗಳಂ ಕೊಂಡು (ಶಶಿ. ೩-೨೪). ೨. ಹೆಚ್ಚಳ ; ಮೇಲ್ಮೆ ; ಅತಿಶಯ : ರಾಣೀವಾಸ ಬಿಡದೆ ವಸಂತವಾಡಿ ವಿಲಾಸದಲಿ ಶ್ರೀಕಾಂತೆಯೋಲಗ ಕೊಡಗಿತ್ತ ಮಜ್ಜನಗಳನು ರಚಿಸಿ ಶಿಂತಿಣಿಸಿಕೊಂಡಾಭರಣಗಳ ಕಂಠದವಿನ ಮದದಾನೆ ಸಾಲಿಟ್ಟಂತೆ ಪರಿವಾಳಿಕೆಗುವಳಿಗಳ ಹೊದಱ ಹೊಂಪಿನಲಿ (ಕೃಪ್ಯಾಕ. ೦೭-೨೯). ೩. ಹಿರಿಮೆ ; ದೊಡ್ಡಸ್ತಿಕೆ : ನಳನೃಪ ಮಂಗುಳುನಗೆಯಿಂದಲ್ಲಿಗಲ್ಲಿಗೆ ಜಗಳವಾಡುವ ಭಟರ ದಟ್ಟಿಸುತಧಿಕ ಹೊಂಪಿನಲಿ ಒಗುಮಿಗೆಯ ಹರುಷದಲಿ ರಥವಿಳಿದಗಡು ಪುಷ್ಕರನಿರ್ಪ ಸಭೆಗೊಮ್ಮೊಗದೊಳೈದಿದ (ಅಂರಶಾ. ೪೪-೬೩). ೪. [ಸಂಗೀತ] ಸ್ವರವಿಸ್ತಾರ (?) : ಗತಿ ಗಮಕ ಗಹಗಹಿಕೆ ತಿರುಪು ಚಾಳಿಯ ಕೊಂಕು ಜತಿ ಜೋಕೆ ಮಾರ್ಗವಣೆ ವಹಣಿ ತರಹರಿಕೆ ಕಂಪಿತ ಹೊಂಪು ಬಾಗು ದೊಕ್ಕರ ವಿವರ ಕಾಳಾಸ ಕಮ್ಮವಣೆ ಲೋಲಂಗಿತ ನುತಶುದ್ಧಸಾಳಂಗಸಂಕೀರ್ಣಮಂ ಯಥೋಚಿತ ತಾರ ಮಧುರ ಮಂದ್ರಂಗಳಿಂ ಪಾಡಿ (ಹಕಶಾ. ೭-೩). [<ಪೊಂಗು₃. / ತೆಲು. ಪೊಂಪು]

ಪೊಂಪುಲ, ಪೊಂಪಲ, ಪೊಂಪಲ್ಲ (ನಾ). ಒಬ್ಬಾತನ ಹೆಸರು : ಸ್ವಸ್ತಿ ಗುವಳಾಲಂ ಗೊಂಗುಂ ವಾಣರಸ ಆಳೆ ವೇಗೂರುಂ ಪೊಂಪುಲಂ ಆಳೆ (ಎಕ. X. ಮುಳಬಾ. ೨೬೩-೦ ; ಸು. ೫೦೧?). ಪೊಂಪಲ : ರಾಜಾಲ ಪೊಮ್ಪಲ ಚಲ್ಲನತ್ತಮ್ಮ ಮುದ್ದಯ್ಯನುಂ ಎಱೆಯಮ್ಮನೆಸುವರಾದಿತ್ತಂ ತುಱುವನಿಕ್ಕಿಸಿ ಸತ್ತೋಂಗೆ (ಎಕ. X. ಕಂಪಾಶು. ೦೯೩-೦೦ ; ೯೩೬ ?). ಪೊಂಪಲ್ಲ : ಸತ್ಯಶೌಚಶೀಲಾಚಾರಸಮ್ಪನ್ನ ಬೆಂಗದನಾಥ ಶ್ರೀಮ[ತ್] ಪೊಮ್ಪಲ್ಲವೊಡೆಯುಮ್ ಊಗ್ಗೆ ಪಾಡಿಯೊಳೊಡ್ಡಿ ಬಾಣರಸರುಳ್ಳಾದಿ ... ಬೀರಲೋಕಮೆಯ್ದಿದ (ಎಕ. X. ಕೋಲಾರ. ೭೯-೦೦ ; ಸು. ೫೦೦). [ ? ]

ಪೊಂಪುಳಿ 'ಪೊಂಪುಟಿ' ನೋ.

ಪೊಂಪುಳಿಗೊಳ್ 'ಪೊಂಪುಟಿಗೊಳ್' ನೋ.

ಪೊಂಪುಳಿಯೋಗು 'ಪೊಂಪುಟಿವೋಗು' ನೋ.

ಪೊಂಪುಳಿವಡೆ 'ಪೊಂಪುಟಿವಡೆ' ನೋ.

ಪೊಂಪುಳಿವೆಱು 'ಪೊಂಪುಟಿವೆಱು' ನೋ.

ಪೊಂಪುಳಿವೋಗು 'ಪೊಂಪುಟಿವೋಗು' ನೋ.

ಪೊಂಪುಟ್, ಪೊಂಪುಳಿ, ಹೊಂಪುಣ, ಹೊಂಪುಳಿ (ನಾ). ೧. ಹೆಚ್ಚಳ ; ಆಧಿಕ್ಯ ; ಅತಿಶಯ : "ಪೊಂಪುಟ್ = ಪೆರ್ಚುಗೆ" (ಕಪಟ. ಸೂ. ೦) ; ಸುತಶೋಕದ ಪೊಂಪುಟಿಯೊಳ್ ಮೆಯ್ಯಱಿಯದೆ ನೀರಿಟ್ಟಂತೆವೊಲಿದ್ದ ನಪರಜಲಧಿಗೆ ದಿನಪಂ (ಕಂಪಶಾ.೦೩-೨೨೦); ಕಂಪಿನ ಪೆಂಪು ಪೊಂಪುಟಿಯೆನಲ್ ದೊರೆವತ್ತ ನಮೇರುಮಾಲೆಯಿಂಪಂ ಪರಿಚುಂಬಿಸಲ್ ಬಯಸಿ ಬರ್ಪಳಿ ಮಾಳಿಕೆಯಂತೆ (ಶಾಂತಿಕೆ. ೩-೩೩) ; ಸಲೆವ ಮರಾಳಯಾನೆಯರವಾಂಗ ಮರೀಚಿಚಯಂ ಶ್ರಿವರ್ಣಮಂ ಗಟ್ಟಿಯಿಸೆ ಪೆರ್ಮೆ ಮಂ ನೆರೆಯೆ ಬೀತವೊಲಿರ್ದ ಲತಾಳಿ ಮತ್ತೆ ಬೆಂಬಿಟ್ಟಿಯೊಳೆ ಪಲ್ಲವಪ್ರಸವಭೃಂಗ ಕುಳಂಗಳನಾಂತು ಸೊಂಪು ಪೊಂಪುಟಿಯೆನಿಪಂತೆ ತೋಱಿದುದು (ಜಾಕ್ರತೆ. ೭-೦೦೭). ೨. ಹರವು ; ಪ್ರಸರ : ದಿವಿಜಸೌಂದರಿಯರ್ ಗೊಂದಣಂ ಮಾಡುವಲ್ಲಿ ಕಡೆಗಣ್ಣೊಳ್ ತುಳುಂಕಿಯುಂ ಕದಪಿನೊಳ್ ಪೊಂಪುಟ್ ಯೋಗಿಯುಂ ಭ್ರೂವಿಭ್ರಮದೊಳ್ ಪೊನಲ್ವರಿದುಂ . . . ಆಕೆಗಳಂಗೋ

ಪಾಂಗದೊಳಿಂತು ನಾಟ್ಯರಸಮ ತೀವಿ ತುಳುಂಕುಗುಟ್ಟಿ (ಅಂಪು. ೭-೧೨೬ ವ); ರಂಜಿತಗೀತವಾದ್ಯನಿನದಂ ಮಾಧುರ್ಯವೀಣಾಲಸನ್ನಿನದಂ ಪೊಂಪುಟಿಯಾದುದಚ್ಚರಿಯೆನಲ್ ವೇಶ್ಯಾಲಯಾನೀಕದೊಳ್ (ಕೃಕೃಕು. ೮-೦೦೯). ೩. ದೊಡ್ಡತನ ; ಘನತೆ ; ಹಿರಿಮೆ : ದಾನದ ಪೊಂಪುಟಿ ಲೋಭದಾಸೆಯೊಳ್ತೊಡರದು (ಸಮುಕ. ೬-೨). ೪. ಹಿಗ್ಗು ; ಸಂತೋಷ : "ಪೊಂಪುಟಿಯೆನಲ್ ಸಂತಸಂ" (ಸಂಕೀಪ. ೨) ; ಧಾರಿಣೀಶ್ವರಂ ತಣಿಯೆ ಮನಂ ವದನಾಬ್ಜಂ ಪೊಂಪುಟಿಯೊಳ್ ಪುದಿದಿರೆ ವರಸುರತಸುಖಮು ನೆಯ್ದಿದನಾಗಳ್ (ಕುಸುಮಾ. ೯-೬೩). ೫. ಮೈ ನವಿರೇಳುವಿಕೆ ; ಪುಳಕ ; ರೋಮಾಂಚನ : "ಪೊಂಪುಟಿಯೆಂದು ಪುಳಕಂ" (ಕಶಶಾ. ೬೯-೪೦೯) ; ಒದವುವ ಗದ್ಗದಂ ನೆಗೆವ ಪೊಂಪುಟಿಯುಣ್ಮುವ ಸೇದೆಯಿಂದೆಯುಂ ಪದವಟಿದೊಂದು ಪೊಚ್ಚಪೊಸದೆಸೆ ಪುದುಂಗೊಳೆ (ಕಕಶ. ೩-೯೪).

**ಪೊಂಪುಳಿ :** ೧. "ಪೊಂಪುಳಿಯೆನಲ್ ಪೆರ್ಚಿನೊಳ್" (ಕಶರ. ೬೯) ; ಅಭಿಮಾನದ ಜನ್ಮಭೂಮಿ ಮಾನ್ಯನ ಮೊದಲ್ವಿಳಾಸನಿಧಿ ರೂಪಿನ ಪೊಂಪುಳಿ (ಕಶಾಇ. XI-1, ೬೩-೩೯ ; 1028) ; ಮನಂಗೊಂಡು ರಮಾಭಾಜನಮೆನೆ ಹಿರಿಯಾರತಿ ರಾಜಿಸುವುದು ಸಕಲಸುಖದ ಪೊಂಪುಳಿಯಿಂದಂ (ಪೂರಣಾ. ೦-೩). ೪. ನಳಿನನಾಭನ ಕರುಣದಳತೆಯು ತಿಳಿದು ಪೊಂಪುಳಿಯಾಗಿ ಧೌಮ್ಯನ ಬಳಿಗೆ ಬಂದರು ಪರಮಸುಖದಲಿ ಕುಂತಿಯಾತ್ಮಜರು (ಸಂಕಶ. ೨೬-೦೩) ; ತಾಂ ಪೊಂಪುಳಿಯಿತ್ತು ನೋಳ್ಪ ನರರ್ಗೆ ನಲವಾಂತರೂ ಮಾಲೆಗ್ಗಾರ್ತಿಯರ್ (ಕಮಪಾ. ೨-೩೭). ೫. "ಪೊಂಪುಳಿಯೆನಲ್ ರೋಮಾಂಚಮಕ್ಕು" (ಕಶರ. ೭೦) ; ಕಾಯಜವೈರಿಯ ದಿವ್ಯಮೂರ್ತಿಯಂ ನೆಟ್ಟನೆ ಕಂಡು ಪೊಂಪುಳಿಯನಾಳ್ದು . . . ಸುಭಕ್ತಿಯಿಂದೆಱಗಿದಂ ಹರನಂಘ್ರಿಯೊಳಾ ಹಲಾಯುಧಂ (ಪ್ರಶರಿ. ೦೫-೪೩) ; ತವಶೀರ್ಷದೊಳ್ನೆಗಳಲೀ ರಾಜ್ಯಾಭಿಷೇಕೋತ್ಸವಂ ದೊರೆಗುಂ ಪೊಂಪುಳಿ ತಣ್ಪು ಮಾಡಿದುದು ತಾಂ ಸರ್ವಪ್ರಜಾಂಗಂಗಳೊಳ್ (ಪರಶ. ೬೩-೦೫೭).

**ಹೊಂಪುಣೆ :** ೧. ಹೊಂಬಟ್ಟೆಗಳ ಹೊಂಪುಣೆಯಿಂದ ಮೆಱೆದಿಹ ಪಂಚಘಂಟೆಗಳಿಂದ್ರನೈರಾವತಕೆ ಸರಿಮಿಗಿಲೆಂದುದಖಿಳಜನ (ಸಂಭಶ. ೨೦-೦೦).

**ಹೊಂಪುಳಿ :** ೧. ಹೊಂಗಿದರು ಹೊಂಪುಳಿಯ ಪುಳಕದ ಮುಂಗುಡಿಯ ರೋಮಾಂಚನದ ರಣರಂಗಧೀರರು ತಱುಬಿ ನಿಂದರು ಮತ್ತೆ ಕಾಳೆಗವ (ಕುಮಾದ್ರೋ. ೦೫-೪೦) ; ಹೊಂಪುಳಿಯ ಘನಸೌಖ್ಯ ಮಿಕ್ಕಳಿಗಂಪುಗಳಲಿಲ್ಲೆನುತ ತನ್ನೊಳು ಜೊಂಪಿಸುವ ಮನವೆಂಬ ತುಂಬಿಯ ಭಾವ ಮಿಗೆ ತುಂಬಿ ಸಂಪಿಗೆಯ ಸಾರ್ವಂತೆ ಬಂದಳಲಂಪಿನಲಿ ಮಹದೇವಿ . . . ಅಲ್ಲಮಪ್ರಭುರಾಯನಿದ್ದೆಡೆಗೆ (ಪ್ರಶುಲಿ. ೦೭-೩). ೪. ಇಂದ್ರನು ಪೃಥೆಯ ಮಾತಿಗೆ ನೆನೆದು ಹೂಂಪುಳಿಯಾಗಿ . . . ವನಿತೆಗೆಂದನು (ಸಂಭಶ. ೦೫-೦೯) ; ಶರಣಾಗತರ ಸೇವೆಯೊಳು ಹೊಂಪುಳಿಯಾಗಿ ಬಾಳುವರೇಸು ಧನ್ಯರೊ (ಹಂಸಾ. ೦೭). ೫. ಒಡನೊಡನೆ ಝೊಮ್ಮಿಡುತ ತನುಲತೆ ನಡುಗಿ ಹೊಂಪುಳಿಯಾಗಿ . . . ತಲೆವಾಗಿ ಮೆಲ್ಲಡಿಯಿಡುತ ನಸುಲಜ್ಜೆಯಲಿ ನಡೆತಂದಳು ಧರಾತನುಜೆ (ಅವಂರಾ. ೦-೨೩-೩೫).

[ದೇ. ॥ ತಮಿ. ಪೊಮ್ಮಲ್ ; ತೆಲು. ಪೊಂಪಿರಿ]

**ಪೊಂಪುಟಿಗೊಳ್, ಪೊಂಪುಳಿಗೊಳ್** (ಕ್ರಿ). ಸಂತಸಪಡು ; ಹಿಗ್ಗು : ಸುಟಿಗುರುಳೊಳ್ ತೊಡಂಕಿ ವದನಾಂಬುಜಸೌರಭದೊಳ್ ಮುಱುಂಗಿ ಪೊಂಪುಟಿಗೊಳುತಿರ್ಪ ಸೋರ್ಮುಡಿಯೊಳೊತ್ತಿದ ಕತ್ತುರಿಯಂ ಕಲಂಕಿ . . . ತೀಡಿದುದು ವಲ್ಲಭನಂತಿರೆ ಮಂದಮಾರುತಂ (ಸೂಕ್ತಿಸು. ೯-೦೯೦). **ಪೊಂಪುಳಿಗೊಳ್ :** ಮುಂ ಪೇಳ್ದ ಬಾಹ್ಯರತಮಂ ಪಿರಿದೆಸಗಿ ರಮಿಸೆ ಪೊಂಪುಳಿಗೊಳುತ್ತಮಳ್ ಪುರುಷನೊಡನೆ ತಂಪಿಂ ದ್ರವಿಸಿ (ಜನವ. ೬-೩೭).

[ಪೊಂಪುಟಿ+ಕೊಳ್$_1$]

**ಪೊಂಪುಟಿಯೇಱು** (ಕ್ರಿ). ಸಂತೋಷವು ಹೆಚ್ಚಾಗು ; ಹಿರಿಹಿಗ್ಗು : ರಾಜನ್ಯವನಂದನಂ ಧರೆ ಸೊಂಪೇಱೆ . . . ಮುಂ ಪೊರ್ದಿದರ್ ಪಿರಿದುಂ ಪೊಂಪುಟಿಯೇಱೆ ಪಟ್ಟವಣೆಯಂ ತಾನೇಱಿದಂ (ಜಕಶ. ೨-೯೫).

[ಪೊಂಪುಟಿ+ಏಱು$_1$ (< ಏಱ್$_1$)]

**ಪೊಂಪುಟಿಯೋಗು** 'ಪೊಂಪುಟಿವೋಗು' ನೋ.

**ಪೊಂಪುಟಿವಡೆ, ಪೊಂಪುಳಿವಡೆ** (ಕ್ರಿ). ೧. ಸಂತೋಷಪಡು ; ಹಿಗ್ಗು : ಕಂಕೆಲ್ಲಿಯು ಸೋಂಕಿನೊಳ್ ಚಂಪಕದಣ್ಪಿನೊಳಂ ಪೊಂಪುಟಿವಡೆದು ವನವಲ್ಲಭೆಯಧರಪಲ್ಲವಕ್ಕೆ ಕುಸುಮವಿಸರದಿಂ ಪಾಟಳರುಚಿಯಿಂ ಪಾಟಸಲ್ ನೆಱೆವ ಪಾಟಳಿಯಂ ಸಹಕಾರನೆಂಬ ನಾಗರಕಂ ನೋಡಿ (ಅಪಂಪು. ೭-೦೦ ವ). **ಪೊಂಪುಳಿವಡೆ :** ೨. ಆಧಿಕ್ಯವನ್ನು ಪಡೆ ; ಹೆಚ್ಚಾಗು : ಕಂಪಿಂ ಸೊಂಪಿಂ ಪೆಂಪಿಂ ಪೊಂಪುಳಿವಡೆದಿರ್ದ್ದಮಲ್ಲಿನೊದವಿದ ಗುಣದಿಂ ಗುಂಪಿಲ್ಲದೆ ಪಡೆದಳ್ ಪತಿಗಿಂಪಂ ಮಾಳವ್ವೆ ಮಾಲತೀಮಾಲೆಯವೊಲ್ (ಎಕ. V, ಅರಸೀ. ೦೨೭-೩೦ ; 1185 ; ಶಾಶಮಂ. ೦೦೦೫ ನೋ) ; ತೊಳಗಿ ಬೆಳಗುವ ವಿಮಳ ವಸತಿಯ ಬಳಿಗೆ ಭಕ್ತಿಯ ರಸಮ ಪೊಂಪುಳಿವಡೆಯೆ ನಡೆತಂದ (ಶಾಲ್ಯಶಾ. ೪-೩೭). ೩. ರೋಮಾಂಚನವನ್ನು ಹೊಂದು ; ಪುಳಕಗೊಳ್ಳು : ಒಂದೆಡೆಯೊಳ್ ನಿಲ್ಲದೆ ಗೋಮಿಂದಂ ಬಳಸಿರ್ಪ ಗೋಪಿಯರ ಕೈಮೈಸೋಂಕಿಂದಂ ಪೊಂಪುಳಿವಡೆದಾನಂದದಿನಕ್ಷಿಗಳನಲ್ಲಿ ತೇಲಿಸುತಿರ್ದಂ (ಏಮ್ಮಾಕು. ೩-೩-೦೬೭). [ಪೊಂಪುಟಿ + ಪಡೆ$_1$]

**ಪೊಂಪುಟಿವೆಱು, ಪೊಂಪುಳಿವೆಱು** (ಕ್ರಿ). ೧. ಸುಖವನ್ನು ಪಡೆ : ದೇವಕಾಂತೆಯರ್ . . . ತನ್ನಿಂಪರುಪಭೋಗದ ಪೊಂಪುಟಿವೆತ್ತರಂದು . . . ತಪಃಪ್ರಭಾವದಿಂ (ಶೇಖಪು. ೦-೧೨೭). ೨. ಅತಿಶಯವಾಗು : ರಾಗದಿನಾಡುವೀ ಹರನ ರಾಗಮೆ ಪೊಂಪುಟಿವೆತ್ತದೊಂದು ರೂಪಾಗಿಯೆ ನಿಂದುದೆಂಬರುಣವಸ್ತ್ರದಿನುಜ್ಜ್ವಲದೇಹಮಂದು ಚೆಲ್ವಾಗಿರೆ (ಜಗಶ. ೦೭-೦೦೦). **ಪೊಂಪುಳಿವೆಱು :** ೩. ಹಿಗ್ಗು ; ಸಂತೋಷಿಸು : ಆ ಪ್ರೋಜ್ವಳರಂಗಾಧೀಶವೃತ್ತಾಂತಮನತಿಮುದದಿಂ ಪೇಳೆಯಾ ಗೌತಮಮು ಪೊಂಪುಳಿವೆತ್ತು (ಕಕ್ಕಮ. ೩-೯). ೪. ರೋಮಾಂಚನಗೊಳ್ಳು : ಪೊಂಪುಳಿವೆತ್ತ ಮೆಯ್ಯ ಪೊರ್ದುಗೆಯಱಿದಪ್ಪಿ ಜಾಣಱಿದು ಮುದ್ದಿಸಿ (ಯಾದವ. ೩-೦೯೦). [ಪೊಂಪುಟಿ + ಪೆಱು$_1$]

**ಪೊಂಪುಟಿವೋಗು, ಪೊಂಪುಳಿಯೋಗಂ, ಪೊಂಪುಳಿವೋಗು, ಪೊಂಪುಟಿಯೋಗಂ, ಹೊಂಪುಳಿಯೋಗು, ಹೊಂಪುಳಿವೋಗು, ಹೊಂಪುಳಿಹೋಗು** (ಕ್ರಿ). ೧. ಹೆಚ್ಚಾಗು ; ಅಧಿಕವಾಗು ; ವೃದ್ಧಿಹೊಂದು: ಕೇಸರಿಣೇಸ್ತನ್ಯಮನನ್ಯವನ್ಯಗಜಪೋತಾನೀಕಮುಂಡಾಡೆ ಶಾಂತರಸಂ ಪೊಂಪುಟಿವೋದುದಾ ಮುನಿಪನಿಂ ತತ್ಕಾಂತಕಾಂತಾರದೊಳ್ (ಅಂಶು. ೯-೯೭) ; ಪೊಂಪುಟಿವೋಯ್ತು ದೀಪ್ತತಪಮೆಂಬಿನಮರ್ಕಕರಂಗಳತ್ತ ಮಿತ್ತಂ ಪುದಿದುಷ್ಣರಶ್ಮಿ ಪುರುಷಾಕೃತಿಯಂತಿರೆ (ಶಾಂತಿಪು. ೯-೦೦೮) ; ಕಂಪಿನ ಪೊಂಪುಟಿವೋಪ ನಿಳಿಂಪನ ಮೆಯ್ಸೊಳಗೇಂ ಕರಂ ಮನಂಗೊಳಿಸಿದುದೋ (ಶರ್ಪಪು. ೦೨-೯೯). ೨. ಸೊಗಸಾಗು ; ಚೆನ್ನಾಗು : ಪುಷ್ಪವಾಸನೆಯ ಮೆಲ್ಪಿನ ತಣ್ಪಿನ ಕಂಪಿನಲ್ ಪೊಂಪುಟಿವೋಗುತ್ತಿರ್ದ ತಂಡುಲಂಗಳಂ ಕಳದುಕೊಂಡು ಬಾಗಿದೋಗರಮನಾರೊಗಿಸುವಂ (ಸುಕುಮಾ. ೦೦-೩೫ ವ) ; ಗಾಂಪಿನೊಳನ್ಯಪುಷ್ಪದೊಳು ಮೇಳಿಸಿ ನೀಳ್ದುದಿದೇಕೆ ಕಂಪಿನೊಳ್ ಪೊಂಪುಟಿವೋಗುತಿರ್ದಮಳವಕ್ತ್ರಸರೋಜಮೆ ಸಾಲ್ಗುಮೆಂದು ತಣ್ಗಂಪಸುಣಾಲ್ಕೆ ಬಂದೆಱಗಿ (ಧರ್ಮಾಮೃ. ೭-೨೦೦). ೩. ವ್ಯಾಪಿಸು ; ಹರಡು ; ಹಬ್ಬು : ಈ ಬಂದಂ ಧರಾಧೀಶನೆಂಬ ರವಂ ಪೊಂಪುಟಿವೋಗೆ ವಾರಿಧಿತಟಂ ಚೆಲ್ವಾದುದಾ ಸೈನ್ಯದಿಂ (ಅಂಶು. ೦೨-೦೨೭) ; ಪೊಂಪುಟಿವೋಗೆ ರಾಗವೆರಡುಂ ಕೆಲದೊಳ್ ಮದನಾನುರಾಗಮಂ ಸಿಂಪಿಸುವಂತೆ ಬಾಜಿಸುವ ಬಂಚದ ನುಣ್ಚರದೊಳ್ ಪಳಂಚಿ ಗೀತಂ ಪೆಂಪುಪುಷ್ಪಮಾಗೆ (ಪುಷ್ಪಕು. ೦೦-೦೦೨). ೪. ಹಿಗ್ಗು ; ಸಂತೋಷಪಡು :

ವಿದ್ಯಾಧರೀರಮ್ಯನರ್ತನರಂಗೋತ್ಥಿತಪಾರಿಹಾರ್ಯರಶನಾಮಂಜೀರಿಕೋದ್ಘಾಮನಿಸ್ವನದೊಳ್ ಪೊಂಪುಳಿವೋಗುತಿರ್ಪುವೆರಡುಂ ವಿದ್ಯಾಧರಶ್ರೇಣಿಗಳ್ (ಆದಿಪು. ೧-೬೦) ; ತವೆ ಮುಂಚಸ್ಥಿತ ಭೂಮಿಭವನಂ ನಡೆನೋಡಿ ಕಾಂತೆ ಪೊಂಪುಳಿವೋದಳ್ (ಉದ್ಭಟ. ೮-೯೯) ; ತನಗೆ ದೊರೆವಡೆದೋದು ಜವ್ವನದ ಪೊಸ ಕುದುರೆಯಂ ನಿಟ್ಟಿಸಿಯಬ್ಬಿಜಂ ಪೊಂಪುಳಿವೋಗಿ (ರಾಮಾಶ್ವ. ೬೩-೨). **ಪೊಂಪುಳಿಯೋಗು :** ೪. ಮೆಯ್ಯಿಕ್ಕಿ ಪೊಂಪುಳಿಯೋದನಾ ಮುನಿಪನಂದು (ಲಶಿಶಂ. ೯೬-೦೩) ; ಸಂಪಗೆ ನಾಗಸಂಪಗೆ . . . ಪೊಂಪುಳಿಯೋಗುವೋಪರ ಮನ ತನುವಿಗೆ ತಂಪ ಪುಟ್ಟಿಸುವವೇನೆಂಬೆ (ಅನಂತ. ೦-೧೦೨). **೫.** ರೋಮಾಂಚನ ಹೊಂದು ; ಪುಳಕಗೊಳ್ಳು : ನಳಿನಗಂಧದ ಗಾತ್ರತರಸುಖದೊಳಗೆ ಪೊಂಪುಳಿಯೋಗಿ [ಪಾಠಾಂ. ಹೊಂಪುಳಿವೋಗಿ] ಭೂಪತಿತಿಲಕನಿದ್ದನು ಗಂಧಮಾದನಗಿರಿಯ ತಪ್ಪಲಲಿ (ಕುಮ್ವಾ.ಅ. ೧೦-೩) ; ಮಗುಳೆ ಸೊಂಪಿಡಿದು ಕುಣಿಕುಣಿವುತ್ತೆ ಪೊಂಪುಳಿಯೋಗುತಡಿಗಡಿಗೆ (ಶಾವೇಮ. ೩೩-೦೯). **ಪೊಂಪುಳಿವೋಗು :** ೧. ರಸವಿಸರಂ ಪಸರಿಸೆ ಸೊಂಪು ಪೊಂಪುಳಿವೋಗೆ ರೀತಿ ಕೌತುಕಮನೀಯೆ . . . ಪ್ರಮುಖಪ್ರಬಂಧಂಗಳಂ ಪೇಳ್ದು (ರಾಜಶೇ. ೩-೧೯ ವ). **೪.** ಹರಿಯ ದಮಳಾನಂದರಸದಲಿ ಹೊರೆದು ಪೊಂಪುಳಿವೋಗಿ[ಪಾಠಾಂ. ಹೊಂಪುಳಿಯೋಗಿ] ಲಕ್ಷ್ಮೀಧರನ ನೆನೆದನು (ಕುಮ್ವಾ.ಉ. ೯-೦೨೨); ಪೊಡವಿಯೊಳ್ ಮೆಯ್ಯಿಕ್ಕಿದಗರಾಜ ಮೇನೆಯರನೊಡನೆತ್ತಿ ತಾನೆಱಗಲುಮೆಯನವರೆತ್ತಿ ಬಿಗಿಯಪ್ಪಿ ಪೊಂಪುಳಿವೋದರು (ಶಬಪು. ೩೬-೦೭); ನೀ ಕೇಳಿದ ದನಿಯಿದಕಾಲದ ವೋಡದ ವೊಳಗೆಲೆ ಮುಗುದೆ ಗಂಡನ ಬಿಲ್ಲಿನ ಸಿಂಜಿನಿದನಿಯೆಂದದೇತಕೆ ಪೊಂಪುಳಿವೋದೆ (ಗಾಶಾಸ. ೦೩-೯). **೫.** ಲತಾಂಗಿಯ ಮೆಲ್ಪುವೆತ್ತ ಸಿರಿಮೆಯ್ಯ ಸೋಂಕಿಗೆ ಮೆಯ್ಮರೆದು ಪೊಂಪುಳಿವೋದ ಮಾರಾಯನ ಕಯ್ದಾವರೆಯಂ ಪಿಡಿದು (ಪುರಾಶ. ೯-೧೨ ವ); ಮಣಿದೆನದ್ವೈತದ ಪೀಠಕೆ ಕೊಂಡಾಡಿ ಕುಣಿದು ನಾ ಪೊಂಪುಳಿವೋದೆ (ಇಂಶಾಶ. ೦೭-೨೩). **ಪೊಂಪುಳಿಯೋಗು :** **೪.** ವಿಮಲವಲ್ಲರಿಗಳಿಂ ಪೊಂಗಿ ಪೊಂಪುಳಿಯೋಗಿ ಪೊದಟ್ಟು ನುಣ್ಣರವೆತ್ತಿ ರ್ಘೂಂಕರಿಸುವಳಿಗಳಿಂ (ಉದ್ಭಟ. ೩-೯೯). **೫.** ಮಹಾದೇವನ ಮೂರ್ತಿಯಂ ಕಂಡು . . . ಪೊಂಗಿ ಪೊರೆಯೇಱಿ ಪೊಂಪುಳಿಯೋಗಿ ಮಹಾನಂದಂಬಡೆದು (ಉದ್ಭಟ. ೦೨-೦೩೬ ವ). **ಹೊಂಪುಳಿಯೋಗು:** ೩. ಬಸವನ ಪುಣ್ಯಕೀರ್ತಿಲತೆ ಬೀರ್ವರಿಯಿತ್ತುರಗೇಂದ್ರಲೋಕದೊಳ್ . . . ಕುಸುಮಿತವಾಗಿ ಸೌರಭದಿ ಹೊಂಪುಳಿಯೋಯ್ತಮರೇಂದ್ರಲೋಕದೊಳ್ (ಬಸರ. ೦೨-೦ ಸೂಚನಾಪದ್ಯ). **೪.** ರೋಮಾಂಚನದಲಾನಂದಾಶ್ರು ಜಲದಲಿ ನೆನೆದು ಹೊಂಪುಳಿಯೋಗಿ ಕಣ್ಣೆವೆ ಮುಚ್ಚಿ (ಕುಮ್ವಾದ್ರೋ. ೦೮-೬೦); ಹೊರೆಯೇಱಿ ಹೊಂಪುಳಿಯೋದಳುಮ ಮಹಿಮೆಗೆ ಮಧುದ್ವಿಷನ (ತೊರರಾ. ೯-೯-೩೨). **೫.** ತೆಗೆದು ಬಿಗಿಯಪ್ಪಿದನು ಯಮಜಾದಿಗಳ ಮನ್ನಿಸಿ ವೀತಿಯವನಿತ್ತೊಗುಮಿಗೆಯ ಹರುಷದಲಿ ಹೊಂಪುಳಿಯೋದನಾ ಭೀಷ್ಮ (ಕುಮ್ವಾಭೀ. ೭-೦೭); ಉಬ್ಬರದ ಹರುಷದಲಬಲೆ ಹೊಂಪುಳಿಯೋದಳಡಿಗಡಿಗೆ (ತೊರರಾ. ೫-೩-೯೩); ವರ ಮುನೀಶ್ವರ ಮನದೊಳಗಜಾವರನ ಮೂರ್ತಿಯ ಕಂಡು ಹರ್ಷೋತ್ಕರದ ಸುಖಮಯನಾಗಿ ಹೊಂಪುಳಿಯೋದನಡಿಗಡಿಗೆ (ಅಂಬಿಕಾ. ೨ ಸೂಚನ). **ಹೊಂಪುಳಿವೋಗು :** ೪. ಸಗೆಮೊಗವರಳಿ ಹೊಂಪುಳಿವೋ[ಪಾಠಾಂ. ಯೋ]ಗಿ ಕೌರವರರಸ ನುಡಿದನು (ಕುಮ್ವಾದ್ರೋ. ೦-೭೯); ಜೋಗದ ಜಲಪಾತದಿ ಧುಮುಕುವ ಮನ, ಮಲೆನಾಡಿಗೆ ಹೊಂಪುಳಿವೋಗುವ ಮನ (ಕೋಗಿಲೆ. ೯೩-೦೮). **೫.** ವನಿತೆ ಗುಣಗಳೊಳೋದನೊಂದನು ಮನದೊಳಗೆ ಸವಿಮಾಡಿ ತರುಣಿಯ ನೆನನು ಹೊಂಪುಳಿವೋ [ಪಾಠಾಂ. ಯಾ]ಗಿ ವಿರಹದಿ ಮದನನಗೀಡಾಗಿ ... ಜನಪ ನಳನಿರೆ (ನಳಚ. ೨-೮). **ಹೊಂಪುಳಿಹೋಗು :** ೪. ಮನದ ಭಾವದ ರಾಗರಸದುಬ್ಬಿನಲಿ ಹೊಂಪುಳಿಹೋದನವರನು ಕಂಡು ಪಾಂಚಾಲ (ಕುಮ್ವಾ.ಆ. ೦೭-೬೨). [ಪೊಂಪುಳಿ+ಪೋಗು$_1$(<ಪೋ$_1$)]

**ಪೊಂಪುಳಿಸು** (ಕ್ರಿ). ೧. ಅಧಿಕವಾಗು; ಹೆಚ್ಚಾಗು; ಉಕ್ಕು : ಮನೋಹರಿಯರ್ ಬಂದೊಡಲಂಪು ಪೊಂಪುಳಿಸೆ (ಅಪಂಪು. ೩-೭೭); ತುಂಬಿಗಳ್ಕದ ನಱುಗಂಪು ಪೊಂಪುಳಿಸೆ ಪೆಂಪೆಸೆದಿರ್ದುದು ಚಂಪಕವೃಜಂ (ಬಕಳು. ೦-೩೨). ೨. ವ್ಯಾಪಿಸು; ಹರಡು; ಹಬ್ಬು : ಪೂಟಲನಿತುಂ ಪಳಚ್ಚನಮೃತಪ್ಲವದಿಂ ತೊಳೆದಂತೆ ಸೊಂಪು ಪೊಂಪುಳಿಸೆ (ಅಪಂಪು. ೭-೯೦).

[ಪೊಂಪುಳಿ + –ಇಸು$_1$]

**ಪೊಂಬಕ್ಕರಗೆ** 'ಪೊಂಬಕ್ಕರಿಕೆ' ನೋ.

**ಪೊಂಬಕ್ಕರಿಕೆ, ಪೊಂಬಕ್ಕರಗೆ, ಪೊಂಬಕ್ಕರಿಗೆ** (ನಾ). ಆನೆ, ಕುದುರೆಗಳಿಗೆ ಹಾಕುವ ಚಿನ್ನದ ರಕ್ಷಾಕವಚ, –ಮೈಜೋಡು : ಎರಡುಂ ಬಳಿಗಳ ಪೊಂಬಕ್ಕರಿಕೆಗಳೊಳ್ಪುಱುಗಿ ನಟ್ಟು ಗಱಿಗಳೆ ಗಱಿಯಂತಿರೆ . . . ತುರಂಗತತಿ ಗರುಡಬಳಮನೇನಿಳಿಸಿದುದೋ (ರಾಜಶೇ. ೬-೩೩). **ಪೊಂಬಕ್ಕರಗೆ:** ಪರಿದುವು . . . ಘೋಟಾಯ್ಸಲ್ಲರ್ ಪರಿಯಿಸೆ ತರದಿಂ ಪೊಂಬಕ್ಕರಗೆಯ ತುರಗಂಗಳಾಹವಾಂಭೋನಿಧಿಯೊಳ್ (ಚಂಪ್ರಪು. ೧೦-೬೮). **ಪೊಂಬಕ್ಕರಿಗೆ :** ಪೊಳೆವ ಪೊಂಬಕ್ಕರಿಗೆಯ ತೇಜಿಗಳು ರಣಜಲನಿಧಿಯಲ್ಲಿ ಪರಿವವು (ಚಂಪ್ರಸಾಂ. ೨೧-೦೯೮). [ಪೊಂ (<ಪೊನ್) + ಪಕ್ಕರಿಕೆ]

**ಪೊಂಬಕ್ಕರಿಗೆ** 'ಪೊಂಬಕ್ಕರಿಕೆ' ನೋ.

**ಪೊಂಬಕ್ಕರೆ** (ನಾ). =**ಪೊಂಬಕ್ಕರಿಕೆ :** ಹಾಯ್ಕಿದ ಪೊಂಬಕ್ಕರೆ ರುಲ್ಲಿಗಳೆಸೆವ ಮಿಕ್ಕ ಮನದ ಕುದುರೆಯನೇಱಿ ಬಂದನಂದಕ್ಕಸಾಲೆಯ ಚಿಕ್ಕಬೇಗ (ಕುರಾಸಾಂ. ೧೦-೫೩). [ಪೊಂ (<ಪೊನ್) + ಪಕ್ಕರೆ$_1$]

**ಪೊಂಬಕ್ಕಿ** (ನಾ). ಚಿನ್ನದ ಬಣ್ಣದ ರೆಕ್ಕೆಗಳುಳ್ಳ ಹಕ್ಕಿ; ಗರುಡ : ಇಕ್ಕಿದ ಪಕ್ಕರಕ್ಕೆ . . . ಮೊಗರಂಬಮೊಂದು ಪೊಂಬಕ್ಕಿಯ ತೋಱ್ಕೆ ಮೆಯ್ಗರೆಯೆ ಬಾಸಿಗದಿಂ ಮೆಱೆದತ್ತು ಸಪ್ತಿಗಳ್ (ಶಕಪಂ. ೨-೯೬).

[ ಪೊಂ (<ಪೊನ್) + ಪಕ್ಕಿ ]

**ಪೊಂಬಗರಿ** 'ಪೊಂಬೊಗರಿ' ನೋ.

**ಪೊಂಬಚ್ಚ** (ನಾ). ಚಿನ್ನದ ಒಡವೆ; ಸ್ವರ್ಣಾಭರಣ : ಕೊರಳ ಪೊಂಬಚ್ಚಗಳ ಬೆಳ್ಳಿಯ ಮುರುಹುಗಡಗದ . . . ಪರಮಗೋಪರ ಕಂಡು ನಸುನಗುತಿರ್ದನಕ್ರೂರ (ಅಕ್ರೂಚ. ೨-೯೯); ಪೊಂಬಚ್ಚಮಂ ಪಣ್ಣಿಬಣ್ಣಮಂ ಕೇಳ್ದಿಯ್? (ರಾಮಾಶ್ವ. ೦೨-೨೩).

[ ಪೊಂ( < ಪೊನ್ ) + ಪಚ್ಚ$_2$ ]

**ಪೊಂಬಚ್ಚಲ್** (ನಾ). ಚಿನ್ನದಿಂದ ನಿರ್ಮಿತವಾದ ಬಚ್ಚಲು,–ಸ್ನಾನದ ಮನೆ : ಲೇಸೆನುತ್ತೆತಂದು ಮಗ ಸೊಸೆಗೆಣ್ಣೆಯ ಪೂಸಿ ಪೊಂಬಚ್ಚಲೊಳ್ ನಿಲಿಸಿ ಮಿಾಸಿದ ಬಳಿಕ ಸಿಂಗರಗೆಯ್ದು ರನ್ನದ ಬಾಸಿಗವನು ಕಟ್ಟಿದರು (ಮೋಹಚ. ೦೩-೬೯). [ಪೊಂ(<ಪೊನ್)+ಬಚ್ಚಲ್]

**ಪೊಂಬಚ್ಚು** (ನಾ). ಒಂದು ಬಗೆಯ ಹುಳು,–ಕ್ರಿಮಿ : ನಮ್ಮಲ್ಲೂ, ಒಮ್ಮೊಮ್ಮೆ ಬತ್ತದ ಪೈರಿನ ಮೇಲೆ ತಲೆದೋರುವ "ಪೊಂಬಚ್ಚು" ಹುಳುವು ಬಯಲಿಗೆ ಬಯಲನ್ನೇ ಕೆಡಿಸಿಬಿಡುವುದು (ಪಾಂಶ್ರ. III, ೦೩೬೭). [ ? ]

**ಪೊಂಬಟ್ಟ, ಹೊಂಬಟ್ಟ** (ನಾ). ಚಿನ್ನದ ಹಣೆಪಟ್ಟಿ,–ಫಲಕ : ಪೆತ್ತನಗೆ ನೀಂ ಪೊಂಬಟ್ಟಮಂ ಕಟ್ಟಿದೈ (ಧರ್ಮಾಮೃ. ೨-೦೦೦) ; ಮೇದಿನಿಯೊಳಾರಾದೊಡಂ ಮಿಡುಕುಳ್ಳೊಡುನ್ನತಪರಾಕ್ರಮಿ ತಡೆಯಲಿ ವಾಜಿಯನೆಂದು ತನ್ನ ಬಿರುದಂ ಬರೆದು ಪೊಂಬಟ್ಟಮಂ ಕಟ್ಟಿ ಬಿಡುವುದಾ ಹಯದ ಪಣೆಗೆ (ಜೈಮಿಭಾ. ೨-೨೮). **ಹೊಂಬಟ್ಟ :** ಇದು ಇಂತಹ ರಾಯನ ಕುದುರೆ . . . ಎಂದು ಬರೆದಿರುವ ಹೊಂಬಟ್ಟವನ್ನು ಕಟ್ಟಿ ಬಿಡಬೇಕು (ಬಿಡುರಿ. ೪).

[ ಪೊಂ ( < ಪೊನ್ ) + ಪಟ್ಟ$_3$ ]

**ಪೊಂಬಟ್ಟಲ್, ಪೊಂಬಟ್ಟಲಂ, ಹೊಂಬಟ್ಟಲು** (ನಾ). ೧. ಚಿನ್ನದಿಂದ ಮಾಡಿದ ಬಟ್ಟಲು : ಪೊಂಬಟ್ಟಲೊಳ್ತೀವಿದಾಸವದ ರುಚಿ ಗಿರ್ವರುಂ ಬಿಡದೆ ಮೊಗಮಿಟ್ಟರಲ್ಕೆ (ಜೈಮಿಭಾ. ೦೩-೯೬) ; ಕಪಿಲಾಕ್ಷೀರಮಂ

ಕಮ್ಮಗಿನಿದಪ್ಪಂತೆ ಕಾಸಿ ಬಳ್ಳಿದಿನಳೆದು ಪೊಯ್ದು ಪೊಂಬಟ್ಟಲ್ದಿವಿ (ಕೃಶಾ. ೯-೬೦ ಪ). **ಪೊಂಬಟ್ಟಲು :** ೧. ಪೊಂಬಟ್ಟಲೊಳಗಿನ ಹಾಲು ಉಚ್ಛಿಷ್ಟ ಹಾಕಿಸೊ (ಪುರಂದ. ...). ೨. (?) : ತೊಟ್ಟ ವಜ್ರಾಂಗಿಯ ಜೋಡುಸವಗ ಪೊಂಬಟ್ಟಲ್ [ಪಾಠಾಂ. ಲು] ಚೀನಿಯ ತೌಳಿ ಕಟ್ಟಿದ ಬಿರಿದು ಮೆಚ್ಚಿಯ ರಾವುತರು ಬಿಟ್ಟೋಜಿದರು ಕುದುರೆಗಳ (ಕುಠಾಸಾಂ. ೧೨-೬೮). **ಹೊಂಬಟ್ಟಲು :** ೧. ಬಳಿಕನಿತು ಪಾಲ್ಗೆಜಿದು ಹೊಂಬಟ್ಟಲೊಳಿರಿಸಿ ತಾಂ ನಿಲಿಸಿ ಬಂದಾ ಮಲಹರನ ಬಳಿಗದೆ ಯುವತಿ ಹೋದಹಳು ನೋಡನಲು (ಜೈಭಾ. ೩೦-೧೨) ; ಹೊಳೆವ ಹೊಂಬಟ್ಟಲಲಿ ಸೂಸಿದ ನರ್ಮದಾಜಲವನು ಜನಕನಿದಿರಿನಲಿ (ಕುವ್ಯಾ. ೯-೦೬) ; ಹೊಂಬಟ್ಟಲಲಿ ವೀಳೆಯವ ನಂದನಂಗಿತ್ತು . . . ಬೆಸಸಿದನು ಬಳಿಯಲಿ ಬವರಕನಿಲಜನ (ಕೂಠಾ. ೩-೫-೦೦). [ಪೊಂ (<ಪೊನ್) + ಬಟ್ಟಲ್]

**ಪೊಂಬಟ್ಟಲು** 'ಪೊಂಬಟ್ಟಲ್' ನೋ.

**ಪೊಂಬಟ್ಟು** (ನಾ). ಚಿನ್ನದ ದುಂಡನೆಯ ವಸ್ತು : ಮುಗಿಲೊಡ್ಡೇಗೆರವಂದ ಕಾಯಭರದಿಂ ಪೊಂಬಟ್ಟನೊಟ್ಟೈವ ದಿಟ್ಟಗಳಿಂ . . . ಪೆಜಿಯ ಸೌಭಾಗ್ಯಕ್ಕೆ ತೋಡಾದ ಕೋಡುಗಳಿಂದೇಂ ಜನಕಂಗೆ ಹರ್ಷಜನಕಂ ತಾನಾಯ್ತೊ ವನ್ಯದ್ವಿಪಂ (ಹಂಪಾಮ. ೯-೦೧೯) ; ಭೂತಳಕ್ಕೆ ಪರಿವೇಷಂಗೊಂಡು ಬೀಟ್ಟುವ ಭಾಸ್ಕರನಂತಿರ್ದುದು ಸಿಂಹಪೂಡನ ಶಿರಂ ಪೊಂಬಟ್ಟ ನಾಳ್ದಟ್ಟನೊಳ್ [ಪಾಠಾಂ. ಳ್ಬಟ್ಟೆಯೊಳ್] (ಅಜಿತ. ೦೦-೬೫). [ಪೊಂ (<ಪೊನ್) + ಬಟ್ಟು]

**ಪೊಂಬಟ್ಟೆ**, ಹೊಂಬಟ್ಟೆ (ನಾ). ಜರತಾರಿಯ ಪೀತಾಂಬರ : ವಕ್ಷಶಾಳಿ ಕಣಶಾಳೀನಮ್ರುದೊಪ್ಪಿರ್ದದೇಂ ಗೆಲೆಪಂದತ್ತೊ ಸುವರ್ಣವರ್ಣದಿನಿಳಾ ಶ್ರೀಯುಟ್ಟ ಪೊಂಬಟ್ಟನೋಲ್ (ಜಗಂ. ೨-೫) ; ಜಾಣಮರೆ ಪೊಂಬಟ್ಟೆಯುಟ್ಟು ನೀಲಾಬ್ಜಮಂ ಪಾಣಿಯೊಳ್ ಪಿಡಿದು . . . ಒಪ್ಪಿದಳ್ (ಪದ್ಮಾ. ೯-೯೬) ; ತುಜುಗೆವೆಗ್ಗಣ್ಣ ನೀರಿಂಗೆ ಹಜಿಗೋಲ ಹಾಯ್ಕಿಸಬೇಡೆಂದು ಪೊಂಬಟ್ಟೆಸೆಜಗಿನಿಂ ತೊಡೆದ ಲೋಚನವ (ಪೋಹತ. ೯-೬೮). **ಹೊಂಬಟ್ಟೆ :** ತಂದು ಹೊಂಬಟ್ಟೆಗಳ ಹೊಂಪುಣೆಯಿಂದ ಮೆಜಿದಿಹ ಪಂಚಘಂಟೆಗಳಿಂದ್ರ ನೈರಾವತಕೆ ಸರಿಮಿಗಿಲೆಂದುದಖಿಳಜನ (ಸಂಕರ. ೨೦-೦೦); ಎಡಗೈಯೊಳಾಂತ ಹೊಂಬಟ್ಟೆ ಅಕ್ಷತೆ ಪುಷ್ಪ ನಿಡುಗಿಂಡಿ ಬಲದ ಹಸ್ತದೊಳು ತೊಡಿಗೆಯ ಪ್ರಭೆ ದಿಕ್ಕುದಿಕ್ಕಿಗೆ ಪಸರಿಸಿ ನಡೆಯೆ ನಡೆದನಾ ರಾಯ (ಶರಕ. ೩-೬). [ಪೊಂ (<ಪೊನ್) + ಬಟ್ಟೆ₂]

**ಪೊಂಬಡಲಗೆ**, ಪೊಂಬಡಲಿಗೆ (ನಾ). ಚಿನ್ನದಿಂದ ಮಾಡಿದ ಅಗಲವಾದ ತಟ್ಟೆ : ಎಡದ ಕರದೊಳ್ಗಂಧಂ ಪೂಮಾಲೆ ಸಿರ್ಜಿನ ಸೇಸೆ ಪೊಂಬಡಲ [ಪಾಠಾಂ. ಲಿ]ಗೆಯೊಳೊಂದಂದಂ ಬಲ್ದಾಗೆ ಗಂಧಜಲಂಗಳಂ ಪಿಡಿದ ಕಳಸಂಬೆಯ್ದೊಳ್ಪತ್ತೊಂದಜಿಳ್ಗಗೆ ಶೋಭೆಯುಂ ಪಡೆಯೆ ಪದಪಿಂದೊರ್ವಂ ಬಂದಂ ಪುಗಲ್ಪ ಪುರೋಹಿತಂ (ಅರ್ಹನ. ೨-೦೯). **ಪೊಂಬಡಲಿಗೆ :** ನಿಜಜನನಿಯ ಮಾನೋಹರಮಪ್ಪ ಮಣಿದೊಡವುಗಳಂ ಪೊಂಬಡಲಿಗೆಯೊಳ್ತೀವಿಯೋರ್ವ ಕೆಳದಿಯು ಕೈಯೊಳ್ಮಾತೆಯೆಡೆಗಟ್ಟಲ್ (ಜಾಗಸು. ೯-೦೦೯ ಪ). [ಪೊಂ (<ಪೊನ್) + ಪಡಲಗೆ]

**ಪೊಂಬಡಲಿಗೆ** 'ಪೊಂಬಡಲಗೆ' ನೋ.

**ಪೊಂಬಡಿಗ** (ನಾ). ೧. ಚಿನ್ನದ ಪೀಕದಾನಿ : ವಿಂಡಿಯರ್ ಪೊಂಬಡಿಗವ ಸಾರ್ಚಿ ಬಿಸಿನೀರ ಗಿಂಡಿಯೊಳ್ ತಂದು ಕಾಲ್ದೊಳೆಯೆ (ಪೋಹತ. ೦೮-೯೯). ೨. ಚಿನ್ನದ ಪಾತ್ರೆ : ಪಾವನಪಾದ್ಯಮಂ ತಳೆದ ಪೊಂಬಡಿಗಂಬೊಲ ದಾಯ್ತು ಮೇರು (ಜಗಂ. ೯-೨). [ಪೊಂ (<ಪೊನ್) + ಪಡಿಗ]

**ಪೊಂಬಡೆ** (ಕ್ರಿ). ಹಣವನ್ನು ಗಳಿಸು ; ಐಶ್ವರ್ಯವನ್ನು ಸಂಪಾದಿಸು : ಗಂಡುಗೂಸುವೆತ್ತ ಸಜ್ಜನದಂತೆ ಪೊಂಬಡೆದ ಸೂಳೆಯಂತೆ . . . ಚಿತ್ತದೊಳಾನಂದಂ ಬೆರಸಿರ್ಪುದು (ಧರ್ಮಾಮೃ. ೯-೩). [ಪೊಂ (<ಪೊನ್) + ಪಡೆ₁]

**ಪೊಂಬಣತಿ** (ನಾ). ಚಿನ್ನದ ದೀಪ : ಪಟ್ಟಸೂತ್ರದಿ ಪೊಸೆದು ಬತ್ತಿಯನಿಟ್ಟು ಪೊಂಬಣತಿಯೊಳು . . . ಮುದದಿಂದ ದೀಪ್ತಿಯ ಮುಟ್ಟಿಸೆ (ಶಂಕರಾ. ೫-೫೩). [ಪೊಂ (<ಪೊನ್) + ಪಣತಿ₂ (<ಪಣತೆ)]

**ಪೊಂಬಣ್ಣ**, ಹೊಂಬಣ್ಣ (ನಾ). ೧. ಬಂಗಾರದ ಬಣ್ಣ ; ಚಿನ್ನದ ಬಣ್ಣ : ಕಣ್ಣಾರೆ ಬಿರಯಿಯಂ ಮೂಪಣ್ಣಂ ಬರಿಸಿದುವರಲ್ಲಿ ಸುರ ಹೊನ್ನೆಯ ಪೊಂಬಣ್ಣದ ಬೆಳರ್ವಣ್ಣದ ಕೆಂಬಣ್ಣದ ಕೇಸರಮುಮೆಸಟ್ಗಳುಂ ಕರ್ಣಿಕೆಯುಂ (ಜುಪ್ಪ. ೫-೦೮); ಒಲೆದಾಡುವ ಪೊಂಬಣ್ಣಮೆಸೆವ ಕಳವ ಶ್ರೀಯ ಪಂಚರ್ಯೆಯಂ ಬಿಡದೆ ಮಾಳ್ಪ ಕೆಳದಿಯರೆನಲ್ಕೀರನಿಕುರುಂಬವುಂ ಸೋವರೆಂದರ್ಲ್ಲಿರ್ದ ಪಾಮರಿಯರಧ್ವಗರ ನಡೆಗೆಡಿಪರು (ಕ್ರಬಿಅ. ೩-೬). ೨. ಕೆಂಪು ಬೆರೆತ ಹಳದಿ ಬಣ್ಣ ; ಮಾಸಲುಕೆಂಪು ; ಕಪಿಲವರ್ಣ : "ಕಪಿಲವರ್ಣಮೆಂದು ಪೊಂಬಣ್ಣಂ" (ಶಶಸಾ. ೩೬-೨೨೦) ; ಪೊಂಬಣ್ಣದ ಕೆಂಪಿಡಿದಿರೆ ಸೊಗಯಿಪುವ್ವ ಗಂಧಶಾಲಿವನಂಗಳ್ (ಅಂಕ್ಷ. ೦-೬೦) ; ತೋರ ಮಾಯ್ಪುಗಳೊಳೆಸೆವ ಕುಂಕುಮಂಗಳ ಬಂಬಲ ಸೋಂಕಿನೊಳ್ ರಜಂ ನೆಗೆದು ದೆಸೆಗಳ್ ಪೊಂಬಣ್ಣಮಾಗೆಸೆಯೆಯುಂ (ಕಾದಂಪೂ. ೬೬). **ಹೊಂಬಣ್ಣ :** ೧. ಮೇರುವ ಸಾರಿದ ಕಾಗೆ ಹೊಂಬಣ್ಣವಪ್ಪುದು ತಪ್ಪದು (ಬಸವ. ೪೬೦); ಪೂರ್ವಮಂದರಂ . . . ಅಂಬುಜಜಂ ನಟ್ಟರಿಸಿದ ಹೊಂಬಣ್ಣದ ಕಂಭಮೆಂಬಿನಂ ರಂಜಿಸುಗುಂ (ಜಾರಕ್ಷ. ೯-೯); ಹೊಂಬಣ್ಣಮೈಯ್ಯಯಲೊರ್ವಳು . . . ನಿಂದಳು ಹೊನ್ನ ಬೊಂಬೆಯಂತರಸನೊತ್ತಿನೊಳು (ಅಚಕ. ೫-೨೯). ೨. ಅಣ್ಣಗಳೆ ! ಹೊಂಬಣ್ಣ ತಿರುಮಾಸೆಯಬ್ಬರಕೆ ಮಣ್ಣಿಕ್ಕಿ ! (ಕವಿಪ್ರ. ೬೨-೫). [ಪೊಂ (< ಪೊನ್) + ಬಣ್ಣ]

**ಪೊಂಬಣ್ಣಿಗೆ** (ನಾ). ಚಿನ್ನದ ಅಲಂಕಾರ, -ಶೃಂಗಾರ : ಬಂದತ್ತು ಪೊಂಬಣ್ಣಿಗೆಯ ಪಿಡಿಗಳೊಳ್ ತಂಡದಿಂ ಪೆಂಡವಾಸಂ (ಜಗಂ. ೦೫-೬೮). [ಪೊಂ (< ಪೊನ್) + ಪಣ್ಣಿಗೆ (< ಪಣ್ಣುಗೆ)]

**ಪೊಂಬರಣೆ** (ನಾ). ಬಂಗಾರದ ಕರಂಡಕ; ಚಿನ್ನದ ಡಬ್ಬಿ : ಪೊಂಬರಣೆಯ ಮೇಲೇನಿದು ತುಂಬಿಯ ಕತ್ತುರಿಯ ಬೊಟ್ಟೆ (ಜಗಂ. ೬-೫೦). [ಪೊಂ (<ಪೊನ್) + ಬರಣೆ]

**ಪೊಂಬರದ** (ನಾ). ಚಿನ್ನದ ವ್ಯಾಪಾರ ಮಾಡುವವನು ; ಸರಾಫ : "ಸೊನ್ನೆವರದನೆಂದುಂ ಪೊಂಬರದನೆಂದುಂ ಚಿನ್ನವರದಂ" (ಶಶಸಾ. ೬೦-೩೩೫) ; ಪೊಂಬರದರ ಪೂವಡಿಗರ ತಂಬುಲಿಗರ . . . ಕದುಂಬದಿನಾ ರಾಜವೀಧಿ ಕಣ್ಗೆಸೆದಿರ್ಕುಂ (ಕಾವ್ಯಟಿ. ೦-೫೦) ; ತಂಬೆಲರೆಂಬ ಪೊಂಬರದ ನಲರ್ಪೊನ್ನಂ ಪರ್ಣಕರ್ಪೋಪಲದೊಳೊರೆಯೆ (ಕಬಕಂ. ೨-೯೨ ಪ). [ಪೊಂ (< ಪೊನ್) + ಪರದ₁]

**ಪೊಂಬರಹ**, ಹೊಂಬರಹ (ನಾ). ೧. ಚಿನ್ನದ ಎರಕದಲ್ಲಿ ಬರೆದ ಲಿಪಿ,- ಬರವಣಿಗೆ : ಆತನ ಮೇಲೆ ಪೊಂಬರಹಶೋಭಿತಶರವ್ರಾತವನೆಚ್ಚು ಬೊಬ್ಬಿಜಿದ (ಪೋಹತ. ೩೬-೬). ೨. ಬಂಗಾರದ ಚಿತ್ರ,-ಅಲಂಕಾರ : ಕರುಮಾಡ ಕಂಡರಿಸಿದ ಗೋಪುರ ಪೊಂಬರಹದ ಲೋವೆ . . . ಮಣಿವಾಗಿಲೆಸೆಯೆ ಕಣ್ಗರಮನೆ ಗಾಡಿವೆತ್ತಿಹುದು (ಕುಠಾಸಾಂ. ೫-೯). ೩. ಚಿನ್ನದ ಎಳೆಯ ಕಸೂತಿ ; ಜರತಾರಿ ಹೆಣಿಗೆ : ಪರಚಂದ್ರಿಕೆಯ ಪಾವುಡಕೆ ಶೋಭಿಸುವ ಪೊಂಬರಹದ ಶುಭ್ರದೂಪಟವ ಸ್ಮರಬಾಣಗಜಿಯಂತೆ ನಿಜಿವಿಡಿದುಡಿಸಿದರ್ ದರಹಾಸಮುಖಿಗೆ (ಪೋಹತ. ೨೩-೦೩). **ಹೊಂಬರಹ :** ೧. ಹೊಂಬರಹದಂಬಿನ ಮಿಂಚುಗಳಲೆವೆಹಳಚಿದವು ಹರಿಹರ ಪುರಂದರರ (ಕುವ್ಯಾ. ೨೩-೦೦); ಹೊಳೆವ ಹೊಂಬರಹದ ಸುರೇಖೆಯ ತಳಪದಸ್ತ್ರದಲವಳ ಹಸ್ತವ ಕಳಚಲೆಚ್ಚನು ಭೂತಗಣ ಬಿಜಿತೋಡೆ ಭೀತಿಯಲಿ (ಕೂಠಾ. ೦-೦೦-೦೩). ೨. ಕೀಲಿಸಿದ ಪಟ್ಟೆಗಳ ದಿವ್ಯದುಕೂಲದಲಿ ಹೊಂಬರಹದೆಲೆಗಳ [ಪಾಠಾಂ. ಹೊಂಬಾಳೆತೆಜಿಗಳ] ಚೂಳಿಕೆಯ ಕನ್ನಡಿಯ ತೋರಣವೆರಡುಸಕ್ಕದಲಿ (ಕುವ್ಯಾ. ೦೨-೦೩); ತೆಗೆದು ವಜ್ರಾಂಗಿಯನು

ವ್ಯೆಯಾಲಿ ಬಿಗಿದು ಹೊಂಬರಹದ ಸುರತ್ರಾಣಿಗಳ ಬಲುಸೀಸಕವನಳವಡಿಸಿ ದನು ಸಿರಿಪುಡಿಗೆ (ಶುಕ್ರಾಗ. ೩-೪೦).

[ಪೊಂ (< ಪೊನ್) + ಬರಹ (< ಬರೆಪು) ]

**ಪೊಂಬರಿಗೆ** (ನಾ). ಬಂಗಾರದ ಥಾಲು ; ಚಿನ್ನದ ಗಂಗಾಳ : ಕಡಿತಲೆ ದೂಗುತ ಕಯ್ಯ ಪೊಂಬರಿಗೆಯನೆಡಬಲಗಳಿಗೆ ತೋಱುತ ಕಡಿದಾಡಿ ಮಾಡಿದರು (ಶಂಕಾಸಾಂ. ೦೨-೬೪) ; ಬಾಳುಬಟ್ಟಲ ಪಿಡಿದೊಮ್ಮೊಮ್ಮೆ ಪೊನ್ನ ಪೂಗೋಲು ಪೊಂಬರಿಗೆಯಾಂತೊಮ್ಮೆ ಕಾಲಿಟ್ಟು ಹೊಳೆವುತಿದ್ದರು ಮನಸಿಜನ ಮಾಸಾಳುಗಳಂತೆ ದಿಟ್ಟೆಯರು (ಕಿರ. ೦೨-೪೦).

[ಪೊಂ (< ಪೊನ್) + ಪರಿಗೆ]

**ಪೊಂಬರಿಜು** (ನಾ). ಚಿನ್ನದ ವಿಗ್ರಹ ; ಬಂಗಾರದ ಪ್ರತಿಮೆ : ಕಿಚ್ಚು ಹಾಱದ ಪೊಂಬರಿಜೊ ನಿಜಾತ್ಮನ ತಿಟ್ಟವೊಯನೆ ನೃಪವರನ ದಿಟ್ಟಗತ್ತಾ ನಂದಮನೊದವಿಸಿದುದು ದಿಟ್ಟಯೋಗಿಯ ದಿವ್ಯಮೂರ್ತಿ (ಸಂಕ್ರಸಾಂ. ೩-೯೩). [ಪೊಂ (< ಪೊನ್) + ಪರಿಜು]

**ಪೊಂಬರಿಯಣ** 'ಪೊಂಬರಿಯಾಣ' ನೋ.

**ಪೊಂಬರಿಯಾಣ, ಪೊಂಬರಿಯಣ, ಪೊಂಬರಿವಾಣ, ಹೊಂಬರಿಯಣ, ಹೊಂಬರಿವಾಣ** (ನಾ). ಚಿನ್ನದ ತಟ್ಟೆ; ಬಂಗಾರದ ಹರಿವಾಣ : ಬಳಿಕ ಪೊಂಬರಿಯಾಣದೊಳು ವೀರರಾಮನ ಕಳಕಳಿಸುವ ಮಂದಲೆಯನು ತಳುವದಿರಿಸಿಕೊಂಡು ತಂದು ತೋಱಸಲು (ಶಂಕಾಸಾಂ. ೩೬-೬೦) ; ಮಿಸುನಿ ಯದ್ದಣಿಗೆಯೊಳ್ಪೊಂಬರಿಯಾಣಮನಮರ್ಚಿ (ಪ್ರಕಾ. ೫-೬೨ ಪ). **ಪೊಂಬರಿಯಣ** : ನೀಂ ಬಯಸಿದಗ್ರಪೂಜೆಯ ಪೊಂಬರಿಯಣಮಿದೆ ನಿಶಾಟ ಕೊಳ್ಳೆಂದು ಸರೋಜಾಂಬಕನಿದೆ (ಜಗ. ೦೬-೩೦) ; ಪೊಂಬರಿಯಣದಿ ಪೊಳ್ಮಣಿಮಯವಡೆದಿರ್ದ ಸಂಬಳಿಗೆಯ ಪರ್ಣಚೂರ್ಣ ಕೊಂಬ ಕರ್ಪೂರ ಕರಂಡವ ಸ್ಮರನ ತಲೆಗಿಂಬಿನೊಳ್ ಪಂದಿರಿಸಿದರು (ಸೋಹಕ. ೦೬-೨೬). **ಪೊಂಬರಿವಾಣ** : ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು ಬೆಳ್ಳಿ ಪೊಂಬರಿ ವಾಣಗಳ ತುಂಬಿ ಸುಳಿಹತ್ತಿ ಚೆಲ್ಲಿಸಿದಳು ದೆಸೆದೆಸೆಗೆ (ಸೋಹಕ. ೩೦-೩೬); ಮಿನುಮಿನುಪ ಪೊಂಬರಿವಾಣಗಳೊಳೆಯ್ದೆ ನೀಡಿದರ್ ಪರಿಮಳಿಯ ಪರಿ ಕರವನು (ಸಂಕ್ರ. ೫-೫೪). **ಹೊಂಬರಿಯಣ** : ಹೊಂಬರಿಯಣ ದೊಳೊಸೆದು ಬಡಿಸಿದ ಸುಘೃತ ದಿವ್ಯಾನ್ನಮಂ ನಿವೇದ್ಯಂಗೊಟ್ಟು (ಹಕಶಾ. ಶಂ. ೩-೬೬); ಮಿಗೆ ರಮ್ಯವಡೆದ ಹೊಂಬರಿಯಣ ತಳಿಗೆ ತಂಬಿಗೆ . . . ದೀವಿಗೆಗಂಬಗಳನಿತ್ತನೊಲಿದು (ಸೋಹಕ. ೦೫-೦೪). **ಹೊಂಬರಿವಾಣ** : ಮುತ್ತಿನಾರತಿಯ ಹೊಂಬರಿವಾಣದಿಂ ಬೆಳಗಿಸಿ ಮಂತ್ರಿ ಪೀತಾಂಬರಧರನ ಕೀರ್ತಿಸಿದ (ಸೋಹಕ. ೪೦-೩೩); ಲಾವಣ್ಯ ಧಗಧಗಿಸುವ ನರಪತಿಯ ಮುಂದೋವಿಟ್ಟು ಹೊಂಬರಿವಾಣ ಭಾವಿಸಲೊಪ್ಪಿತು . . . ಚೆಲ್ವಿನೊಳು (ಭರತ. ೪-೬೨). [ಪೊಂ (< ಪೊನ್) + ಪರಿಯಾಣ$_1$]

**ಪೊಂಬರಿವಾಣ** 'ಪೊಂಬರಿಯಾಣ' ನೋ.

**ಪೊಂಬಲಗೆ** (ನಾ). ಚಿನ್ನದ ಹಲಗೆ ; ಬಂಗಾರದ ಫಲಕ : ಕಡಿತಕೆ ವಾರೆ ಪೊಂಬಲಗೆ ಬೀಳೆ ಶಿರಂ ಸಿಡಿದೇಳೆ ಭೂತಸಂಗಡಣದಿ ನೋಡಿ (ಎಕ. VI. ಕಡೂರು. ೦೫೬-೩೬ ; 1191) ; ಮನಸಿಜಮಂತ್ರಾಕ್ಷರಮಂ ಬಳಪದಿನನುರಾಗದಿ ಬರೆಯಲ್ಪೊಂಬಲಗೆಗೆ ಮಿನುಗುವ ಮಸಿಯಿಡು ವಂದದೆ ನೊಸಲೊಳ್ ಮೃಗಮದಮಿಕ್ಕಿದಳು (ಜಯಸಾ. ೨-೩೪).

[ಪೊಂ (< ಪೊನ್)+ ಪಲಗೆ]

**ಪೊಂಬಲೆ** (ನಾ). ಜಾಲರಿಯಂತಹ ಚಿನ್ನದ ಆಭರಣ : ದಿಟ್ಟಸರ ಪೊಂಬಲೆಗಳ್ ಮೊಗರಂಬವೋದು ಪೊಂಬಳ್ಳಿಯ ತೊಳ್ಳು ಮೆಯ್ಗರೆಯು ಬಾಸಿಗದಿಂ ಮೆಱದತ್ತು ಸಪ್ತಿಗಳ್ (ಕಾವ. ೨-೯೬).

[ಪೊಂ (< ಪೊನ್) + ಬಲ್ಲೆ$_1$]

**ಪೊಂಬಲ್ಲಕಿ** 'ಪೊಂಬಲ್ಲಕ್ಕಿ' ನೋ.

**ಪೊಂಬಲ್ಲಕ್ಕಿ, ಪೊಂಬಲ್ಲಕಿ** (ನಾ). ಚಿನ್ನದ ಅಂದಣ; ಬಂಗಾರದ ಪಲ್ಲಕ್ಕಿ : ನಿಲ್ಲದಾಳಿಯರಂದಣಗಳ ನಡುವೆ ಪೊಂಬಲ್ಲಕ್ಕಿಯೊಱ ಲೀಲೆ ಯೊಳು ಮೆಲ್ಲನೆಯ್ತಂದಳಾ ಸುರುತಾಳಸುತೆ (ಶಂಕಾಸಾ. ೦೬-೪೨); ಸಲ್ಲಲಿತಾಂಗಿಯ ವರಪಾಣಿವಿಡಿದು ಪೊಂಬಲ್ಲಕ್ಕಿಯೊ[illegible] ಗುಂಡಿಸಿದ (ಸೋಹಕ. ೪೦-೩೪). **ಪೊಂಬಲ್ಲಕಿ** : ಅಲ್ಲಿ ತಮ್ಮೊಡ[illegible] ಬಲವನಿರವೇಳ್ದು ಪೊಂಬಲ್ಲಕಿಯನಿಳಿದು . . . ಒಳಪುಗೆ (ಶಬ್ರಾ. [illegible]); ಪೊಂಬಲ್ಲಕಿಯ ಹರಿಸದಿಂದಿಳಿದು . . . ಅರಮನೆಯ ಪೊಕ್ಕು (ರಾಜ[illegible] ೨-೨೬).

[ಪೊಂ (< ಪೊನ್) + ಪಲ್ಲಕ್ಕಿ$_1$ (< ಪ[illegible]ಂಗ)]

**ಪೊಂಬಸದಿ** (ನಾ). ಬಂಗಾರದಿಂದ ನಿರ್ಮಿತವಾದ ಬಸದಿ : ಇವ ನೆಮ್ಮಾಳ್ದನನಿಕ್ಕಿ ಸಾಧುವಿನವೋಲ್ ತಾನಲ್ಲದಂತಿಲ್ಲಿ ಪೋ ಕವಿದಿರ್ಪಂ ಜಿನನೆಂದು ಪೊಂಬಸದಿಯಂ ಪುಷ್ಪಾಸ್ತ್ರಸೇನಾಳಿ ಮುತ್ತುವವೋಲ್ ಪಂಡಿರ ತಂಡವೊಪ್ಪೆ (ಅರ್ಕಕೀ. ೨-೪೭). [ಪೊಂ (< ಪೊನ್) + ಬಸದಿ]

**ಪೊಂಬಸಿರ** 'ಪೊಂಬಸಿಱ' ನೋ.

**ಪೊಂಬಸಿಱ, ಪೊಂಬಸಿರ, ಪೊಂಬಸುಱ** (ನಾ). ಬ್ರಹ್ಮ ; ಹಿರಣ್ಯ ಗರ್ಭ ; P ಚಿನ್ನದ ಮೊಟ್ಟೆಯಿಂದ ಜನಿಸಿದನೆಂಬ ಪ್ರತೀತಿಯಿಂದ ಬ್ರಹ್ಮನಿಗೆ ಈ ಹೆಸರು ಬಂದಿದೆ : "ಅಂಚೆದೇರಂ, ನುಡಿಮಣ್ಣನಿಯಂ, ಪೊಂಬಸಿಱ . . . ತಾವರೆವಸೆಯಂ—ಈ ೮ ಬ್ರಹ್ಮಂಗೆ ಪೆಸರ್" (ಕಕಾ. ೪೬-೦೩); ಪೊಂಬಸಿಱನ ಬಾಯ ಬೀಯಗ ಜಯಯೆಂದು ಶಂಬ ರಾರಿಯ ಹೊಗಳಿದರು (ಸೋಹಕ. ೦೬-೩) ; ಪೊಂಬಸಿಱನ ಗುಂಡಿಗೆಯಂ ಪೊಕ್ಕು ಪೊಱಮಟ್ಟುಂ ಧರೆಗಿೞದು ಬಂದು . . . ತ್ರಿಪಥಗೆ ಕಾಣಿಸಿ ಕೊಂಡಳ್ (ರಾಪಾಕ್ಕ. ೩೦-೦೨). **ಪೊಂಬಸಿರ** : ಪೊಂಬಸಿರನೀ ಪರಿ ಬರೆದನೇತಕೆ ಹಾ ಮಹಾದೇವ (ಚಾಕುಂತ. ೭ ವಿಧ್ಯಾಂತರ ಅಧ್ಯಾಯ). **ಪೊಂಬಸುಱ** : ಪೊಂಬಸುಱನ ಮೆಣ್ಣಗರಡಿಂದ ತಕ್ಕನೆ ತುಂಬಿತು ಕಱದ ಕುಟುಂಬ (ಭರ. ೬೨-೩೬). [ಪೊಂಬಸಿಱ + — ಅ$_7$]

**ಪೊಂಬಸಿಱು, ಹೊಂಬಸಿರು** (ನಾ). ೧. ಚಿನ್ನದ ಗರ್ಭ : 'ಪೊಂಬಸಿಱ' ಪರಾ. ೨. ಶ್ರೇಷ್ಠವಾದ ಗರ್ಭ : ಪಂದಲೆ, ಬೆಂದೊವಲ್, ಬೆಂಬಱ, ಪೊಂಬಸಿಱು (ಶಬ್ದಾ. ಸು. ೮೦ ವ್ಯಾಖ್ಯಾ). **ಹೊಂಬಸಿರು** : ೨. ಬೇಂದ್ರೆಯವರ ಕವಿತೆಯಲ್ಲಿ ಮೇಲೆ ಹೇಳಿದಂತೆ 'ಹೂ' ಎಂದರೆ ಸಮಾಧಿಯಲ್ಲಿದ್ದ ಹೊಂಬಸಿರಿನ ಉಸಿರು (ಕಪ್ಪಾ. ೬೨) ; ನಮ್ಮ ಕನ್ನಡತಾಯಿ, ತನ್ನ ಹೊಂಬಸಿರಿನಿಂದ ನಮ್ಮನ್ನು ತಂದು . . . ಹಾರೈಸುತಿಹಳು (ಹೊಂಗಳು. ೦೯-೨). [ಪೊಂ (< ಪೊನ್) + ಬಸಿಱು (< ಬಸಿಱ್) ]

**ಪೊಂಬಸುಱ** 'ಪೊಂಬಸಿಱ' ನೋ.

**ಪೊಂಬಳಯಿಗೆ, ಹೊಂಬಳಯಿಗೆ** (ನಾ). ಚಿನ್ನದ ಕಾಂತಿಯ ಬಾವುಟ; ಹೊಂಬಣ್ಣದ ಪತಾಕೆ : ಪೊಂಬಳಯಿಗೆ ಮಿಂಚು ಮಣಿತೋರಣ ಕಣ್ಗೊಂಬಿಂದ್ರಧನು ಕುಸುಮಮಾಳೆ ಇಂಬುಗೊಂಡಾಲಿಲ್ಲಾಗಲಾ ನಗರಿ ವಿಡಂಬಿಸಿದುದು ಕಾರ ಸಿರಿಯ (ಶಂಕಾಸಾಂ. ೬-೭೪). **ಹೊಂಬಳಯಿಗೆ** : ತಳಿತ ಪಲ್ಲವಸತ್ತಿಗೆಯ ಹೊಂಬಳಯಿಗೆಯ ಸೀಗುರಿಯ ಚಮರಾವಳಿಯ ಲಗ್ಗೆಯೊಳ್ಳಿಱವ ಘನವಾದ್ಯರಭಸಗಳ ಒಲವಿನಿಂದಾ ನೃಪತಿ ಚಾತುರ್ಬಲ ಸಹಿತ ಬಂದಾ ಕಿರಾತರನಳವಿಯಲಿ ತಾಗಿದನು (ಕೀಶಂಕ. ೬-೦೦).

[ಪೊಂ (<ಪೊನ್) + ಪಳಯಿಗೆ (<ಪಟಯಿಗೆ) ]

**ಪೊಂಬಳೆ** 'ಪೊಂಬಾಳೆ$_1$' ನೋ.

**ಪೊಂಬಳೆದೊಂಗಲ್** (ನಾ). ಅಡಕೆ, ತೆಂಗು ಮೊದಲಾದುವುಗಳ ಹೂವಿನ ಗೊಂಚಲು: ಎಲ್ವಲೆಪಿಂ ತೆಱಂಬೊಳೆದು ಪೊಂಬಳೆದೊಂಗಲ ನಾಂತ [ಪಾಠಾಂ. ಪೂಮುಡಿದೊಂಗಲನಾಂತು] ಕೌಂಗುಗಳ್ (ಜಗ. ೦೪-೩೦).

[ಪೊಂಬಳೆ (<ಪೊಂಬಾಳೆ$_1$) + ತೊಂಗಲ್]

**ಪೊಂಬಳ್ಳಿ, ಹೊಂಬಳ್ಳಿ** (ನಾ). ೧. ಚಿನ್ನದ ಬಳ್ಳಿ; ಸ್ವರ್ಣಲತೆ :

ಪೊಂಬಳ್ಳಿಯ ಪೊಗರಂ ಗೆಲ್ವಂಗಡ ಕಂಬುಲಲಿತಕಂಧರೆ ಮುನ್ನೆಟೆದ ನವಾಂಬು ಜಲಕ್ಕನೆ ತೀವಲ್ಕೆ (ಶಬ್ದಾ. ೦-೪೩); ವರನಾರಾಯಣನ ರಾಣಿಯರ ಪಾದದ ಹೊನ್ನ ಸರಪಳಿಯೆಳೆಯುತ್ತೆ ಬರಲು ವರನೀಲದ ನೆಲಗಟ್ಟಳ್ಳೆ ಪೊಂಬಳ್ಳಿ ಬರೆದಂತೆ ರೇಖೆದೋಱುದುವು (ಶೋಜಚ. ೦೪-೨೬). ೨. ಹಳದಿಬಣ್ಣದ ಒಂದು ಬಗೆಯ ಲತೆ : ಖರ್ಜೂರ ದ್ರಾಕ್ಷೆಗಳೊಮ್ಮೆ ಪೊಂಬಳ್ಳಿಗಳ ಫಲಪೊಮ್ಮೆ ಘನತರಾರ್ಘ್ಯಗಳಿಂದ ಶಾಂತಿಧಾರೆಗಳಿಂದ ಜನಪನಂಬಿಕೆಯನರ್ಚಿಸಿದ (ಶಚ. ೦೯-೦೨೦). **ಹೊಂಬಳ್ಳಿ:** ೧. ಹೊಂಪಿಡಿದ ಹೊಂಬಳ್ಳಿಯೊಳೆಸೆವ [ಪಾಠಾಂ. ಹೊಂಬಳಿವಾಯ್ಯೊಳೆಸೆವ ] ಕಡುಬಿಣ್ಪಿನ ಜಘನದ ಕಾಮಿನಿಗಿಂದು ಪಡಿಗಟ್ಟೆ ಪೇಳುವನೇನ (ಶಿವಕಾಂ. ೦೦-೨೫); ವಿಲಾಸಿನೀಚರಣದ ನಿಗಳವೇಳ್ತರಲು ವರನೀಲಮಣಿಗಟ್ಟಿನ ಮೇಲೆ ಹೊಂಬಳ್ಳಿ ಬರೆದಂತೆ ಕಣ್ಗೆ ರಂಜಿಸಿತು (ಶೋಜಚ. ೨೪-೪೯). [ಪೊಂ (<ಪೊನ್) + ಬಳ್ಳಿ]

**ಪೊಂಬಟುಗಲ್** (ನಾ). ಚಿನ್ನದ ದೋಣಿ ; ಬಂಗಾರದ ನಾವೆ: ಗಗನತಟಾಕದೊಳೊಗೆದು ಪೊಳೆವ ವಿಮಾಂಗಳೆಂಬ ವಿಮಾಂಗಳ್ಗೆ ಬಿಂಬಮೆಂಬ ಪೊಂಬಟುಗಲ ಕಳುಕಧೀವರನಡರೆ ಬೀಸಿದ ಜಾಲದಂತೆಯುಂ (ಆಪುಪು. ೬-೮೦ ವ). [ಪೊಂ (<ಪೊನ್) + ಪಟುಗಲ್ (<ಪಟ್ಟಗೋಲ್)]

**ಪೊಂಬಾಗಿಲ್,** ಪೊಂಬಾಗಿಲು (ನಾ). ಚಿನ್ನದ ಬಾಗಿಲು; ಬಂಗಾರದ ದ್ವಾರ : ಪೊಂಬಾಗಿಲ್ಗೆ ಬಂದನಾ ಕವಿರಾಜು (ಉದ್ಭಟ. ೦೨-೫೫). **ಪೊಂಬಾಗಿಲು :** ಮದಿಲೊಳು ಮಣಿಪಾಡದೊಳು ಪೊಂಬಾಗಿಲ ತುದಿಯೊಳು . . . ಪುರಸುದತಿಯರವನ ನೋಡಿದರು (ಶ್ರೀಪಾಂ. ೦೩-೪೪); ಅಂತರಾಂತರದ ಪೊಂಬಾಗಿಲೊಳಗೆ ನೀಲಕುಂತಳೆಯರು ನಸುನಗುತ ಸಂತೋಷದೆ ಮುತ್ತಿನಾರತಿಗಳ ಭೂಕಾಂತನಿಗೊಲೆದೊಪ್ಪಿದರು (ಕಂಪಾ. ೬-೫೦). [ಪೊಂ (<ಪೊನ್) + ಬಾಗಿಲ್]

**ಪೊಂಬಾಗಿಲು** 'ಪೊಂಬಾಗಿಲ್' ನೋ.

**ಪೊಂಬಾದರಿ** (ನಾ). ಹೊಂಬಣ್ಣದ ಪಾದರಿಹೂವು ; ಪಾಟಲಪುಷ್ಪ : ಸುರಯಿಯ ಚೊಲ್ಲೆಯಮುಂ . . . ಪೊಂಬಾದರಿಯ ಕಿಱುಮುಗುಳ ತೊಡರುಂ ಪರಿವಡೆದಿರೆ ಬಂದನಟ್ಟಿಯಿಂದೆ ಬಸಂತಂ (ಕಬ್ಬಿಗಾ. ೩೨೫). [ಪೊಂ (<ಪೊನ್) + ಪಾದರ್ಿ]

**ಪೊಂಬಾರಿಕ** (ನಾ). ಓಲಗದಲ್ಲಿ ಚಿನ್ನದ ದಂಡ ಹಿಡಿದು ಶಿಸ್ತು ಕಾಯುವವನು : ಕುಂಭಾಂಡಮಂತ್ರೀಶ್ವರನ ಚಿತ್ತೈಸೆಂದು ಪೊಂಬಾರಿಕರು ಪೊಗಳಿದರು (ಶೋಜಚ. ೨೦ ೫೬). [ಪೊಂ (<ಪೊನ್) + ಬಾರಿಕ]

**ಪೊಂಬಾವಡೆ** 'ಪೊಂಬಾವುಡೆ' ನೋ.

**ಪೊಂಬಾವುಗೆ,** ಹೊನ್ನುಹಾವಿಗೆ (ನಾ). ಬಂಗಾರದ ಪಾದುಕೆ : ಮಾಣಿಕವೆತ್ತ ಪೊಂಬಾವುಗೆವೆರಸಿ . . . ಹಿಂಸಕನಕ್ಕಂಚರಭೇದಿ ನಡೆದ (ಶೋಜಚ. ೦೪-೦೬). **ಹೊನ್ನುಹಾವಿಗೆ :** ಎನ್ನ ಮನ ಪ್ರಾಣಗಳು ಹೊನ್ನುಹಾವಿಗೆಯಾಗಿ ನಿನ್ನ ಚರಣಕೆ ಯೋಗ್ಯ ಮೆಟ್ಟಾಗಲಿ (ಸುಶಾರ. ೦೪-೫). [ಪೊಂ (<ಪೊನ್) + ಪಾವುಗೆ]

**ಪೊಂಬಾವುಟ** (ನಾ). ಹಳದಿಯ ಬಣ್ಣದ ಬಾವುಟ, ನಿಶಾನೆ : ನೋಡಲ್ಲಿ ಗುಡಿ ತೋರಣಂ ಅಲ್ಲಿ ಪೊಂಬಾವುಟಂ (ಶ್ರೀರಾಮಾ. ೫೯-೦೫೯). [ಪೊಂ (<ಪೊನ್) + ಬಾವುಟ]

**ಪೊಂಬಾವುಡೆ,** ಪೊಂಬಾವಡೆ (ನಾ). ಹೊಂಬಣ್ಣದ ವಸ್ತ್ರ; ಪೀತಾಂಬರ: ತಡಿ ಸುಖಾಸನ ಸುಗತಿ ಪೊಂಬಾವು[ಪಾಠಾಂ.ವ]ಡೆ ಜನಾಖಿ . . . ಮಣಿಲಂಬಳದ ಹಯ ಮಿಗೆ ಗುಡಿಯಿಱಿದು ಮೊಗವೆತ್ತಿ ನರ್ತಿಸಿತು (ಕೂರಾ. ೬-೨೯-೦೨). **ಪೊಂಬಾವಡೆ :** ಬರುದಿನ ಪೊಂಬಾವಡೆ ಸೆಡಕಿನ ವಲ್ಲಿ . . . ಮಿಱುಗುವ ರತ್ನಭೂಷಣಗಳಾಂತಿಹ ಹಯ ಖುರವೆತ್ತಿ ಕುಣಿಯುತ್ತಿದ್ದುವು (ಕಂಪಾ. ೦೫-೦೪). [ಪೊಂ (<ಪೊನ್) + ಪಾವುಡೆ$_1$ (<ಪಾವುಡ$_1$)]

**ಪೊಂಬಾಸಿಗ** (ನಾ). ಚಿನ್ನದ ಬಾಸಿಂಗ : ಲಲನೆಯರು ಪೊಂಬಾಸಿಗವ ನಿಕ್ಕಿದರು ಶಶಿಮುಖಿಗೆ (ಬಸಪು. ೯-೪೦). [ಪೊಂ (<ಪೊನ್) + ಬಾಸಿಗ]

**ಪೊಂಬಾಸು** (ನಾ). ಚಿನ್ನದ ಎಳೆಗಳ ಪಾಶ : ಮಾಣಿಕ್ಯರಚಿತ ಕಂಬಟ್ಟೆ ಪೊಂಬಾಸಿನ ನೇಣ ಚತುಷ್ಪಾದಿಗಳ ಪಾಣಿಯೊಳಾಂತ ಪೆರ್ಗಡಿಗಳ ಲುಬ್ಧಕಶ್ರೇಣಿ ಬೊಬ್ಬಿಡುತಲ್ಯೆದಿದುದು (ಶೋಜಚ. ೦೬-೯). [ ಪೊಂ (<ಪೊನ್) + ಪಾಸು$_3$ (<ಪಾಸ$_1$) ]

**ಪೊಂಬಾಳೆ$_1$,** ಪೊಂಬಳೆ, ಹೊಂಬಾಳೆ$_1$ (ನಾ). ೧. ಅಡಿಕೆ, ತೆಂಗು ಮುಂತಾದ ಮರಗಳಲ್ಲಿ ಹೊರಡುವ ಹೊಡೆಯಾಕಾರದ ಹೂವಿನ ಗೊಂಚಲು ; ಸಿಂಗಾರ ; ಕಂಗಳಿ : ಓರೋದೆಡೆಯೊಳ್ ವನವಿಲಾಸಿನಿಯ ವಿಲಾಸಭವನದಂತಿರ್ದ ಪೊಂಬಾಳೆಯ ಕುರುಂಬುಗಳೊಳ್ (ಮಲ್ಲಿಪು. ೨-೩೩); ಇಂಬಾಗಿರೆ ವರಹಿಮಕರಬಿಂಬದ ಬೆಂಬಳಿಯೊಳೆಳೆವ ತಣ್ಣಿರ್ಗಳೆನಲ್ ಪೊಂಬಾಳೆಯ ಚಮರಮದಾಲಂಬಿಸೆ ಪಿಡಿದೊರ್ವ ಚಂದ್ರಮುಖಿ ನಡೆತಂದಳ್ (೧೧೮. ೭-೯); ಪರಿವ ಕಾಲ್ವೆಗಳಿಂದ ಬಾಳೆಮಿನ್ನೆಗೆದು ಬಂಧುರಪೂಗಮುಂ ಮುಟ್ಟಲಲ್ಲಿರ್ದ ಪೊಂಬಾಳೆ ಬಿರಿದು ಮಕರಂದರಸಮಂ ಸೂಸಲ್ (ಸೌಂದಪು. ೫-೯೨). **ಪೊಂಬಳೆ :** ಅಗ್ಗಲಿಸಿ ಬಿರಿವ ಪೊಂಬಳೆಯ [ಪಾಠಾಂ. ಪೊಂಬಟೆಗಳ, ಪೊಂಬಾಟೆಯ ]ತಣ್ಣಲೆವ ಪೊಸಗಂಪಿನೊಳ್ ಪುದಿದಲೆವೆಲರಾಱೆಪುದು ಖಚರದಂಪತಿಶತಮುಂ (ಆದಿಪು. ೧-೬೮) ; ಕಂಪಿಡಿದ ಪೊಂಬಳೆಗಳಿಂದೆಸೆವ ಅಡಕೆ ಎಸೆದವು ಕಣ್ಣಳಿಗೆ (ಕುಂಸಾಂ. ೩-೫೫). **ಹೊಂಬಾಳೆ$_1$ :** ಮಘಮಘಿಪ ಹೊಂಬಾಳೆಗಳ ರಸವೊಗುವ ಮಧುರದ್ರಾಕ್ಷೆಗಳ . . . ಸೊಗಸು ಸೆಳೆದುದು ಮನವನು (ಕುಮಾ್ಯ. ೭-೨೬); ಗಾಳಿಯೊಲಹಿಗೆ ನಿಲುಕುವವು ಹೊಂಬಾಳೆ ಖಚರೀಜನದ ಕಬರಿಗೆ (ಕೂರಾ. ೫-೩-೦೩); ಆಗರಳಿದ ಕಸ್ತೂರಿ ಹೊಂಬಾಳೆಯ ಪೂಗವೃಕ್ಷಗಳೊಪ್ಪುತಿಹವು (ಕಂಪಾ. ೨-೪೦).

[ ದೇ. ‖ ತಮಿ. ಪೂಪ್ಪಾಳೈ; ತುಳು . ಪೂಂಬೆ; ತೆಲು. ಪೂಂಬಾಳ ]

**ಪೊಂಬಾಳೆ$_2$** 'ಪೊಂಬಾಟೆ' ನೋ.

**ಪೊಂಬಾಟೆ,** ಪೊಂಬಾಳೆ$_2$, ಹೊಂಬಾಳೆ$_2$, ಹೊಂಬಾಟೆ (ನಾ). ಒಂದು ಬಗೆಯ ಬಾಳೆಯ ಗಿಡ ಮತ್ತು ಅದರ ಹಣ್ಣು : ಶತಪತ್ರದ ಸಿತಾತಪತ್ರದೊಳಂ ಪೊಂಬಾಟೆಯ ಚಾಮರಂಗಳೊಳಮೆಸೆವ ಮಂಟಪಂಗಳ ನಡುವಣ ಪದ್ಮರಾಗದ ಪಟ್ಟವಣೆಯೊಳ್ ನಿಲಿಸಿದ ಕಾಮದೇವನನತಿಪ್ರೀತಿಯಿಂದರ್ಚಿಸಿ (ಕಾದಂಬ. ೭೮೦) ; ಅಂದಂಬೆತ್ತ ಬಂದುಗೆಯ ಸಟಿಂ ಕತ್ತರಿಸಿ ಪತ್ರಿಸಿದ ಚಿತ್ರಪತ್ರಂಗಳಳುಂಬಮಾದ ಪೊಂಬಾಟೆಯ ಕಂಬಂಗಳೊಳಂ (ಚಂದ್ರಪ್ರ. ೭-೯೫ ವ) ; ಪೊಂಬಾಟೆಯ ವಣ್ಣ ಬಿಣ್ಪೆನೆಗಳೊತ್ತಂಬಂ ಕರಂ ಬೀಱುತಿರ್ಪುದು . . . ಅಲಂಪಂ (ಕುಸುಮಾ. ೨-೪೪). **ಪೊಂಬಾಳೆ$_2$ :** ಪಳಿಕಿನ ಪಟ್ಟಕೆಯಲ್ಲಿ ಪೊಂಬಾಳೆಯ ಸುಳಿಯಲ್ಲಿ ರತಿಯ ಕುಳ್ಳಿರಿಸಿ ನಳಿನಾಕ್ಷಿಯರೊಡತಿಯ ಕಾಲೆರಡುಮಾಂದಳಿರನು ಜಲದೊಳದ್ದಿದರು (ಶೋಜಚ. ೯-೪೦) ; ತಮಾಲದೆಳೆದಳಿರಂ ಕೊಱೆದು ಚಿತ್ರಪತ್ರಮಪ್ಪಂತೆ ಪತ್ರಿಸಿ ನಟ್ಟ ಪೊಂಬಾಳೆಯ ಬಾಳ್ಗಂಬಂಗಳಿಂ (ರಾಜಶೇ. ೦೦-೩೦ ವ). **ಹೊಂಬಾಳೆ$_2$:** ಹೊಂಬಾಳೆಗಳ ಸುಳಿಯ ಸಪುರನೇತ್ರಂಗಳಂ ಇಂಬಱಿದು ಹಾಸಿ (ಪುಷ್ಪರ. ೯-೨೬) ; ಬಣ್ಣಬಣ್ಣದ ಪೂಗೊಯ್ದು ಹೊಂಬಾಳೆಯ ಪರ್ಣದೆ ಪೊಟ್ಟಣಗಟ್ಟಿ . . . ತೋಱಿದರು (ಶೋಜಚ. ೨೪-೬೮). **ಹೊಂಬಾಟೆ :** ಇಂತೆಸೆವ ನುಣ್ಪುಳಿನತಳದೊಳ್ ಹೊಂಬಾಟೆಯ ಕಂಬಂಗಳಿಂ ಪಚ್ಚೆಯ ಪಲಗೆಗಳಿಂ ಬಾಳದ ಬಿಜ್ಜಣಿಗೆಗಳಿಂ ಬಿತ್ತರಿಸಿ ಚೆಲ್ವಿನ ನೆಲೆಯುಂ ಕಂಪಿನ ಕಣಿಯುಂ ತಂಪಿನ ತಾಯ್ಪನೆಯುಮೆನಿಪ ಲತಾಮಂಟಪಮಂ ಕಂಡು (ಶಾಂತೀಶ್ವ. ೧೦-೧೦೭ ವ). [ಪೊಂ (<ಪೊನ್) + ಬಾಟೆ]

**ಪೊಂಬಿಸಿಲ್,** ಪೊಂಬಿಸಿಲು, ಹೊಂಬಿಸಿಲು (ನಾ). ಪ್ರಾತಃಕಾಲ ಮತ್ತು ಸಂಧ್ಯಾಕಾಲಗಳಲ್ಲಿ ಕಾಣುವ ಹೊನ್ನಿನ ಬಣ್ಣದ ಬಿಸಿಲು :

ಕುಸಿದುವು ಕಿರಣಂಗಳ್ . . . ಅನಂತರಂ ಪೊಂಬಿಸಿಲಾದುದು ಪೊರ್ದೆ ಪಟ್ಟಿಕೆವೆಟ್ಟಮನರ್ಕಂ (ಶಂರಾಪು. ೧೦-೦೭೭); ಪೊಸಸೊದೆ ಕೌಮುದಿಯಂ ಪಸರಿಸೆ ಕನಕದ ಕಳಶವಾಳಿ ಪೊಂಬಿಸಿಲಂ ಪೂರಿಸೆ ತರತರದಿಂದಂ ರಾಜಿಸು ತಿರ್ಪುವು ಸೋಮಸೂರ್ಯವೀಥಿಗಳ್ (ಗಿಂಕೆ. ೨-೬೨); ಪರೆದುದಾಕ್ಷಣ ಮನದ ಸಂದೇಹಮೆಂದೆಂಬ ಪರಮತಿಮಿರಂ ವಿವೇಕಮೆನಿಪ್ಪ ಪೊಂಬಿಸಿಲ್ ನಿರುತದಿಂ ಪಸರಿಸಿತು (ಕಬಕ್ಕೆ. ೬-೨೨). **ಪೊಂಬಿಸಿಲು :** ಹಗಲು ಸವೆದುದು ಪೊಂ[ಪಾಠಾಂ. ಹೊಂ]ಬಿಸಿಲು ನೆಱೆ ತೆಗೆದುದತಿವೇಗದಲಿ (ವಕಕ. ೫-೯೩). **ಹೊಂಬಿಸಿಲು :** ಮುತ್ತಿನ ಥಾಳ ಧವಳಿಸಲಾಯ್ತು ಚಂದ್ರಿಕೆ ತನುವ ಡೊಳ್ಕರಿಸಿ ಮೇಲೆ ಹೊಂಬಿಸಿಲಾಯ್ತು ಮಾಣಿಕದೇಳಿಗೆಯ ಲಹರಿಯಲಿ (ಶುಪ್ರಾಸ. ೫-೯೯); ಬಿಡದೆ ಚಂದ್ರಾತಪಪಸಪಹರಿಸುವುದು ಹೊಂಬಿಸಿಲು (ತೊರರಾ. ೫-೨-೬೯); ಗಿರಿಯುತ್ತಮಾಂಗದಲಿ ಮೈದೋರಿದನು ಅಹ ಹೊಂಬಿಸಿಲಿನೆಳನೇಸರು ! (ಚಕ್ರಾಂಗ. ೬-೦೫೯).

[ಪೊಂ (<ಪೊನ್) + ಬಿಸಿಲ್]

**ಪೊಂಬಿಸಿಲು** 'ಪೊಂಬಿಸಿಲ್' ನೋ.

**ಪೊಂಬಿಸುಗೆ** (ನಾ). ಚಿನ್ನದ ಅಂಬಾರಿ : ಪೊಂಬಿಸುಗೆಯ ಕರಿಗಳ ಚೆಂಬೋ[ಬ]ಕ್ಕರೆಯಶ್ವಚಯದ ಬಹುವಿಧಮಪ್ಪಾಡಂಬರದ ಪತಾಕೆಯ ಪಲವುಂ ಬಿರುದಿನ ಭಟರ ಬಹಳ ಬಲದರ ನೆಲೆಯೊಳ್ . . . ಅಪರಾಜಿತಕುಮಾರ ನಿರ್ಪುದುಂ (ಮಹಾಪೇ. ೫-೩೦). [ಪೊಂ (<ಪೊನ್) + ಬಿಸುಗ್ಗೆ]

**ಪೊಂಬೀವು** (ನಾ). ಚಿನ್ನದ ತಂತಿಗಳಿಂದ ಮಾಡಿದ ಹಗ್ಗ : ಪೊಂಬಡ ಲಿಗೆಯೊಳ್ ಪರಪಿದ ಪೊಂಬೀವಿಂ ಕಂಗೊಳಿಪ ಮೋಹನಂಬೆತ್ತ ಕಾಂತೆಯರ್ (ಕಂದಕೊ. ೨೮೫). [ಪೊಂ (<ಪೊನ್) + ಬೀವು]

**ಪೊಂಬುಗುಡಿ** (ನಾ). ಚಿನ್ನದ ಬುಗುಡಿ : ಕೊಪ್ಪು ಪೊಂಬುಗುಡಿ ಬಾವುಲಿ . . . ಪಿಲ್ಲಿ ಮಿಂಚು ಮೊದಲಾದ ಪೊಸಮಿಸುನಿದೊಡವುಗಳಿಂ ತೊಂಡಿಲ್ಗಳಿಂದಲಂಕೃತೆಯಾದ . . . ಕನ್ನಿಕೆಯಂ . . . ಬಿಜಯಂಗೆಯ್ಸು ತಮಿರ್ಪನಂ (ಹಾಲಾಸ್ಯ ೯-೯-೬೯ ಪ). [ಪೊಂ (<ಪೊನ್) + ಬುಗುಡಿ]

**ಪೊಂಬುಜ್ಜ** 'ಪೊಂಬುಟ್ಟಿ' ನೋ.

**ಪೊಂಬುಜ್ಜಣೆ** (ನಾ). ಚಿನ್ನದ ಬಣ್ಣದ ಬುದ್ದಲಿ : ಮುಟ್ಟಲಮ್ಮದೆ ಕುಂಕುಮರಸಪನೀರ ಬಟ್ಟಬಲ್ಮೊಲೆಗೆ ಸಿಂಪಿಸಲು ಇಟ್ಟ ಮುಡಿಗೆಯ ಪೊಂಬುಜ್ಜಣೆ ತೈಲಸಂಘಟ್ಟದಿಂ ಪೊಂಗಿದಂತಾಯ್ತು (ಮೋಹತ. ೨೬-೦೮).

[ಪೊಂ (<ಪೊನ್) + ಬುಜ್ಜಣೆ (<ಬುದ್ದಲಿ)]

**ಪೊಂಬುಡಿ** (ನಾ). ಚಿನ್ನದ ಪುಡಿ ; ಬಂಗಾರದ ಹುಡಿ : ತೊಟ್ಟ ಮೈದುಡಿಗೆಗಳ ಮಸೆದ ಪೊಂಬುಡಿಯಂತೆ ಕುಂಕುಮರಜಂಗಳು . . . ಸೂಸುತಿರೆ (ಕೈಶಿಭಾ. ೩೩-೨೨); ತಂಬೆಲರೆಂಬ ಪೊಂಬರದನಲರ್ಪೊನ್ನಂ ಪರ್ಣಕಪರ್ೋಪುಟದೊಳೊರೆಯೆ ಸುರಿದು ಪರಿದ ಪೊಂಬುಡಿಯೆಂಬಂ ತಿಂಬುವೆತ್ತ ರಜನೀರಜಃಪಿಂಜರರಜೋಗುಣದಿಂ ಸುರುಚಿರಮಾದ ಸುರಯಿಯುಂ (ಕಬಕಂ. ೨-೯೨ ಪ). [ಪೊಂ (<ಪೊನ್) + ಪುಡಿ]

**ಪೊಂಬುತ್ತಳಿ, ಹೊಂಬುತ್ತಳಿ** (ನಾ). ಚಿನ್ನದ ಬೊಂಬೆ ; ಬಂಗಾರದ ಪ್ರತಿಮೆ,– ವಿಗ್ರಹ : ಭಾವಿಸಲಧಿಕ ಪೊಂಬುತ್ತಳಿಯೆಂಬಂತೆ ಕೋಮಲ ಕೋಮಲಾಂಗಿಯರು ದೇವಕಿಯಾತ್ಮಸಂಭವನೆಡಬಲದಲಿ ಶೀವಿರ್ದರೇನ ಬಣ್ಣಿಪೆನು (ಮೋಹತ. ೯-೯); ಬಿಸಜಗಂಧಿನಿಯೆನಿಸಿ ರಾಮರುದ್ರರ ರಾಣಿ ಪೊಂಬುತ್ತಳಿಯೊಲೆಸೆದಳು (ಬಿಕೋಶ. ೬-೪೦). **ಹೊಂಬುತ್ತಳಿ :** ಅತ್ಯಂತ ರೂಪಯೌವನಗಾರ್ತಿಯರು ಹೊಂಬುತ್ತಳಿಯೆಡೆಯಾಡುವಂತೆ . . . ಸತ್ಯಭಾಮೆಯನು ಸಾರಿದರು (ಮೋಹತ. ೦೪-೬೨).

[ಪೊಂ (<ಪೊನ್) + ಪುತ್ತಳಿ (=ಪುತ್ತಲಿ)]

**ಪೊಂಬುದಿ** (ನಾ). ಬಂಗಾರದ ಬಾಗಿಲುವಾಡ : ಕಾಮುಜಟ್ಟಿಯ ಕಟ್ಟಿ ಸಂಬ ಕಾಮಗೃಹದ ಪೊಂಬುದಿ[ಪಾಠಾಂ. ಪೊಂದುಡೆ, ಪೊಂಬುಡೆ, ಪೊಂಪುಡೆ]ಯೆನಲೊಪ್ಪಿದುವಾ ಮುಗ್ಧೆಯಸವೊಳ್ತೊಡೆಗಳು (ಶ್ರೀಪಾಂ. ೩-೫೧). [ಪೊಂ (<ಪೊನ್) + ಪುದ್ಯ]

**ಪೊಂಬುರ್ಚ** 'ಪೊಂಬುಟ್ಟಿ' ನೋ.

**ಪೊಂಬುಲಿ** (ನಾ). ಹಳದಿಬಣ್ಣದ ಹುಲಿ : ಬಂದುವು ಪೊಂಬುಲಿದೋಲು ಪಲ್ಲಣಂಗಟ್ಟಿದ ಪಟ್ಟಸಾಹಣದ ವಾಜಿಗಳಂದು ಜಯೋತ್ಸವಾಜಿಗಳ್ (ಪಲ್ಲಕ್ಕೆ. ೯-೪); ಪೊಂಬು[ಪಾಠಾಂ. ಪೆರ್ಬು]ಲಿಯ ತೊವಲನಾನೆಯ ಕೊಂಬಂ ಕುತ್ತಬಿಸಿದಡಸಿ ಪಿಡಿದುಗಿದೆತ್ತಿದುವಂ ಪತಿಗೆ ಕಾಣ್ಕೆಗೊಟ್ಟಂತೆಂದಂ (ಅಸಂಪು. ೦೦-೩೬); ಪೊಂಬುಲಿಯ ಚರ್ಮದ ಕಕ್ಷಪಾಳಿಕೆಯೊಳಳವಟ್ಟ ನಿಗ್ಗವದ ಕರಂಡಕದೊಳಗೆ ಮುದ್ರಿಸಿರ್ದನರ್ಘ್ಯಮಣಿಯಂ . . . ತುಡುಂಕಿ ತೆಗೆದು (ರಾಜಶೇ. ೫-೨೫ ಪ). [ಪೊಂ (<ಪೊನ್) + ಪುಲಿ]

**ಪೊಂಬುಲಿಸಮ್ಮ** (ನಾ). ಹಳದಿಬಣ್ಣದ ಹುಲಿಯ ಚರ್ಮ : ಆನೆದೊವ ಲ್ಪೊಂಬುಲಿಸಮ್ಮಂ ತಾವರೆಗಣ್ಣಂ ಕಣ್ಣೀಱಸಿದಡಿದಾವರೆಯಿಂತೀ ಪರಿ ಸೊಗಯಿಪ ಶೋಭಾಪಹದಿವ್ಯಾಂಗಂ ಲಿಂಗದಿನೆಳ್ತಂದು (ಅನ್ನರೇ. ೩-೩೯); ಪೊಂಬುಲಿಸಮ್ಮಮಾನೆದಲೆಮುತ್ತು . . . ಪೀಲಿಯೆಂಬಿವಂ ತುಂಬಿದ ಕಂಬಿಯಂ ತಳೆದರೇಂ ತಳರ್ವತ್ತೊ ಪುಳಿಂದಸಂಕುಳಂ (ರಾಜಶೇ. ೫-೦೦೯).

[ಪೊಂಬುಲಿ + ಸಮ್ಮ (<ಚರ್ಮ)]

**ಪೊಂಬುಟ್ಟಿ, ಪುಂಬುಚ್ಚ, ಪೊಂಬುಚ್ಚ, ಪೊಂಬುರ್ಚ, ಪೊನ್ಬುಚ್ಚ, ಹೊಂಬುಚ, ಹೊಂಬುಚ್ಚ, ಹೊಂಬುರ್ಚ, ಹೊಂಬುಟ್ಟಿ** (ನಾ). ೧. ಒಂದು ಊರಿನ ಹೆಸರು; P ಈಗಿನ ಶಿವಮೊಗ್ಗ ಜಿಲ್ಲೆಯ ನಗರತಾಲ್ಲೂಕಿನ ಹುಂಚ. ಇದು ಜೈನರ ಪ್ರಸಿದ್ಧವಾದ ತೀರ್ಥ ಕ್ಷೇತ್ರ : ಉದಯಪುರದ ನಕ(ಗ)ರಸಹಿತಂ ಪೊಂಬುಟ್ಟದ ನಕ(ಗ)ರಕ್ಕೆ ಸುಂಕಕಾದುದು (ಎಇ. IX, ೨೨-೫; ಸು. ೮೦೦); [ಪೊ]ಮ್ಬುಟ್ಟದ ಮೇಲೆಟ್ಟು ಕೋಟೆಯ ಕೊಳ್ವನ್ನು (ಸೌಇಇ. XX, ೦೫-೬; 904). 'ಪಟ್ಟಿಪೊಂಬುಟ್ಟಿ' ಪರಾ. ೨. ಒಂದು ಊರಿನ ಹೆಸರು; P ಈಗಿನ ಗದಗು ತಾಲ್ಲೂಕಿನ ಹೊಂಬಳ : ಪೊಂಬುಟ್ಟದ ಮಹಾಜನಂ . . . ಧರ್ಮಾನುಷ್ಠಾನಪರಾಯಣರಾಗಿ ಸುಖದಿನಿರೆ (ಸೌಇಇ. XI-i, ೬೯-೦೦; 1049). **ಪುಂಬುಚ್ಚ :** ೧. ತುಂಗಾದ್ರಿಯ ದೊರೆಯ ××× ಭಕ್ತಿಮನದಿಂ ಪುಂಬುಚ್ಚಮಿಪುಂನೆಗಂ ಪ ××× ಹದಿಲೊಕ್ಕಿಯುಬೆಯಂ ಜಿನಗೇಹಮಂ ಮಾಡಿದಂ (ಎಕ. VII, ಶಿಮೊ. ೦೦೯-೦೦; 950?). **ಪೊಂಬುಚ್ಚ :** ೧. ಏಕಾಂಗವೀರ ಸಂಗ್ರಾಮಧೀರ ಪೊಂಬುಚ್ಚನಿರ್ಧಾಟಣ ಸಾವಿಮಲೆ ನಿರ್ಲೋಟಣ (ಎಕ. II, ೧೪೩-೩೭; 1131); ಪೊಂಬುಚ್ಚಪುರವರಾಧೀಶ್ವರ ಮಾರೆಹೊಕ್ಕರೆ ಕಾವ ಮಾರಾಂತರೆ ವೈರಿ (ಇಇ. V, ೪೦-೬; 1586). ೩. ಒಂದು ವಂಶದ ಹೆಸರು (?) : ಸ್ವಸ್ತಿಶ್ರೀಪೊಮ್ಬುಚ್ಚಕುಲ ತಿಲಕಂಬ್ಬಳರ ಹರಿತಿನ್ರಿಪಂ ಲೋಕೈಕ (ಎಕ. VIII, ನಗರ. ೨೨-೦; ಸು. ೯೦೦ ?). **ಪೊಂಬುರ್ಚ :** ೧. ಕೊಂಗಳಿಯುಬ್ಬಂಗಿ ತಲೆಯೂರ ಪೊಂಬುರ್ಚ . . . ಮೊದಲಾಗನೇಕದುರ್ಗ್ಗತ್ರಯಂಗಳನಶ್ರಮದಿಂ ಕೊಣ್ಡು (ಎಕ. II, ೦೫೨-೩೭; 1123). **ಪೊನ್ಬುಚ್ಚ :** ೧. ಸ್ವಸ್ತಿಶ್ರೀ ಮಚ್ಚಿತ್ರವಾಹನ ಪೊನ್ಬುಚ್ಚಾಳಿಕಿಳ್ಳಂ ನಾಗಣ್ಣನಧಿಕಾರಿಗಳಾಗೆ (ಎಕ. VI, ಕೊಪ್ಪ. ೩೭-೦; ಸು. 675 ?). **ಹೊಂಬುಚ :** ೧. ಇಂತಪ್ಪುದಕ್ಕೆ ಸಾಕ್ಷಿಗಳು ಹೊಂಬುಚನಾಡು ಮುದುವರ್ಂನಾಡು ಸಾಕ್ಷಿಗಳು ಪೊಪ್ಪ ಬಲ್ಲೇಶ್ವರ ದೇವರು (ಎಕ. VIII, ತೀರ್ಥ. ೦೦೬-೪೦; 1378); ಹೊಂಬುಚದ ಸೀಮೆಯಿಂದಲು ಪ್ರಾಕು ಸುಂಣದ ಬಸ್ತಿಯ ಸಿದ್ಧಾಪುರದ ಮಠಕೆ ಉತ್ತಾರವಾಗಿಯಿದ್ದ ಸ್ವಾಸ್ತಿಯು (ಎಕ. VIII, ತೀರ್ಥಹ. ೯೬-೦೩; 1664). **ಹೊಂಬುಚ್ಚ :** ೧. ಶ್ರೀಮತು ಹೊಂಬುಚ್ಚದ ಆದಿಬಲ್ಲೇಶ್ವರ ದೇವರ ದಿವ್ಯಶ್ರೀಪಾದಪದ್ಮಾರಾಧಕಂ (ಎಕ. VIII, ಸಾಗರ. ೦೨೫-೯; 1216); ಮಲ್ಲಪ್ಪಗಳ ಮಗ ಹೊಂಬುಚ್ಚದ ಯಿಂ ×× ವಾಯಣ್ಣ . . .

ಸ್ವರ್ಗಸ್ಥರಾದರು (ಎಕ. VIII. ಶಿಕಾ. ೩೧-೯ ; 1394). **ಹೊಂಬುರ್ಚ :** ೧. ಹದಿನೆಂಟುಕಂಪಣದೊಳಗಣ ಹೊಂಬುರ್ಚ್ಚನಾಡ × × × ನಾಗರ ಹಳ್ಳಿಯ (ಎಕ. VIII. ತೀಹ. ೬೯-೦೫ ; ?). **ಹೊಂಬುಬ್ಬ :** 'ಪಟ್ಟಿ ಹೊಂಬುಚ್ಚ' ಪರಾ.

**ಪೊಂಬೆಟ್ಟು, ಪೊಂಬೆಟ್ಟು, ಪೊನ್ನೆಟ್ಟು, ಹೊಂಬೆಟ್ಟು** (ನಾ). ಚಿನ್ನದ ಬೆಟ್ಟ; ಮೇರುಪರ್ವತ : "ಪೊಂಬೆಟ್ಟವೆಂದೆನಲಕ್ಕು ಹೇಮಾದ್ರಿಗೆ" (ಕಕ. ೬೦); ದಿಟ್ಟಿಗೆ ಪೊಲನಾದುದು ಪೊಂಬೆಟ್ಟಿಂ ಜನಜನ್ಮಸವನಮಣಿಮಯಪಟ್ಟಂ (ಹರಿವಂಶ. ೧-೪೪); ಅಂಬುಧಿಮಧ್ಯದ ಧರೆಯೊಳು ಚತುರಾಸ್ಯನೆಂಬ ವಿದ್ವಾಧಿಕನೊಲಿದು ಕಂಭಸೂತ್ರವ ಪ್ರತಿಷ್ಠೆಯ ಮಾಡಿದಂದದಿ ಪೊಂಬೆಟ್ಟು ಕಣ್ಗೆ ರಾಜಿಸಿತು (ಮೋಹಕ. ೨-೧೦). **ಪೊಂಬೆಟ್ಟು :** "ಸೊಗಯಿಕುಂ ಪೊಂಬೆಟ್ಟು ರನ್ನದಪ್ಪಲು ಸುರಗಿರಿಗೆ" (ಶಶಿಕುಂ. ೧೧) ; ಭೂವನಿತೆ ಭರ್ಗಂಗೆ ನೆತ್ತಿಯೊಳ್ ಪೊತ್ತ ಸೊಡರೋ ವಿಚಾರಿಪೊಡೆನಿಸಿ ಪೊಂಬೆಟ್ಟೆಸೆವುದು (ಶಬ್ದಾಲಾ. ೨-೬) ; ಗಿರಿಯಗ್ರದ ನಾಲ್ಕುಶಿಖರದೊಳು ನಾಲ್ಕುನಾಲ್ಕಿರೆಯಕೃತ್ರಿಮಜಿನವಾಸ ವರರತ್ನ ರಜತ ಸುವರ್ಣದಿ ಪದಿನಾಱು ಮೆಱೆಯಲಾ ಪೊಂಬೆಟ್ಟನಲಿ (ಜೀವಂಧರ. ೧-೨೩). **ಪೊನ್ನೆಟ್ಟು :** ಮಾದೇವನ ಪೊನ್ನೆಟ್ಟೆಱೆದರತ್ನಾದರದಿಂದೆ ಕರೆದೊಡೆಳೆಕೆ ಯರ್ವುರಸರ್ವಸರ್ಹಿತೆ (ಕಾವ್ಯಕೇ. ೬-೬೬). **ಹೊಂಬೆಟ್ಟು :** ವನ್ದನೆಯ್ದೆ ಪೊವ್ಲೆಟ್ಟಮನಾಗಭೀರತೆಯೊಳಮ್ಬುಧಿಯಂ ಗೆಲೆವನ್ದಂ (ಎಕ. VIII. ಸೊರಬ. ೬೨೩-೩೦ ; 1178 ?) ; ತುಟ್ಟ ಸಮ್ಮೋಹಸಮುದ್ರಕೆ ಹೊಂಬೆಟ್ಟದೊಟ್ಟ ಸೇತುವೆಗಟ್ಟಿದಂತೆ ಬಟ್ಟವೊರೆಗಳೊಡ್ಡು ಮೋಹಿಸಿದುವು ಮೊಲೆಕಟ್ಟಿನ ಮಱೆಯೊಳು (ಶಠಕ. ೦೬-೯೨).

**ಪೊಂಬೆಟ್ಟಬಿಲ್ಲಯ್ಯ** = ಮೇರುಪರ್ವತವನ್ನು ಧನುಸ್ಸಾಗಿ ಉಳ್ಳವನು; ಶಿವ : ಸುಕುಮಾರನಂ ಒಯ್ದು ಪೊಂಬೆಟ್ಟಬಿಲ್ಲಯ್ಯನೋಲಗದಲ್ಲಿ ನಿಲಿಸಲ್ಕೆ (ಶ್ರೀಕಣ. ೧೯-೨೬). **ಪೊಂಬೆಟ್ಟವಿಲ್ಲ, ಪೊಂಬೆಟ್ಟುವಿಲ್ಲ**= ಪೊಂಬೆಟ್ಟಬಿಲ್ಲಯ್ಯ : "ಎಣ್ಮಯ್ಯಂ . . . ಪೊಂಬೆಟ್ಟವಿಲ್ಲಂ, ಇಂಗಳಗಣ್ಣಂ . . . ಆಯ್ಯೊಗ್ಗು—ತಃ ೩೩ ಈಶ್ವರಂಗೆ ಪೆಸರ್" (ಕಕಾ. ೯೭-೦) ; ವಿರಹಾಗ್ನಿಯ ಕಿಡಿಸು ಪೊಂಬೆಟ್ಟುವಿಲ್ಲನ ಪಟ್ಟದರಸಿ (ಉದ್ಭಟಕಾಂ. ೨೩-೬೩).

[ಪೊಂ (<ಪೊನ್) + ಬೆಟ್ಟ]

**ಪೊಂಬೆಟ್ಟು** 'ಪೊಂಬೆಟ್ಟ' ನೋ.

**ಪೊಂಬೆತ್ತ** (ನಾ). ಚಿನ್ನದ ಬೆತ್ತ.—ಸೆಳೆ : ಕೆಯ್ಯ ಸೋಂಕಿಂದೆ ಕೆಂಪಂ ತಳೆದೊಪ್ಪಂಬೆತ್ತ ಪೊಂಬೆತ್ತದ ಸಳೆಗೆ ತಳಿಮರ್ಗಿಡಿದಂತಾಗೆ . . . ಬಂದಳ್ ಪ್ರತೀಹಾರಿಯರ್ಬಳ್ (ಆದಿಪು. ೯-೬೬); ನೆರೆದೊತ್ತರಿಪ ಸುರಸಿದ್ಧ ಸಾಧ್ಯಗಂಧರ್ವಾದಿಗಳ ವಿಸರದಳವಿಗಳೆದ ಕಳಕಳಮಂ ಪೊಂಬೆತ್ತಮನೆತ್ತಿ ಹೋ ಸಾರ್ ತೊಲಗೆಂದು ನಿವಾರಿಸಿ (ಕಥಾಸಂ. ೦-೭೯ ಪ).

[ಪೊಂ (<ಪೊನ್) + ಬೆತ್ತ]

**ಪೊಂಬೆಸ, ಹೊಂಬೆಸ, ಹೊಂಬೆಸೆ** (ನಾ). ಚಿನ್ನದ ಕೆತ್ತನೆಕೆಲಸ; ಹೊಂಗೆಲಸ : ಕಂಬುಲತಾಸುಲಲಿತಲವಣಾಂಬುಧಿಪರಿಧಾನಮಾಗೆ ಚೆಲ್ವಂ ಪಡೆದೀ ಜಂಬೂದ್ವೀಪಪ್ರಭುಗಿದು ಪೊಂಬೆಸದೊಳೆ ಸಮೆದ ಮಕುಟಮಿರ್ಪಂತಿರ್ಪಂ (ಆದಿಪು. ೭-೬೩) ; ಪೊಂಬೆಸದುಪ್ಪರಿಗೆಯ ಬಿಸವಂದವಾದ ಚುಂಚುಲೋವೆಗಳೊಳಗೆ ಬಳಸಿ ನಲಿದುಲಿವ ಪಾರಿವಂಗಳ ಕೊರಲುಲಿಯೊಳಂ (ಶಬ್ದಾಲಾ. ೪೪). **ಹೊಂಬೆಸ :** ಸಿಡಿಲ್ . . . ದಿಟಂ ಹೊಂಬೆಸಕ್ಕಂ ಬಡೆಯಲ್ ಯಕ್ಷೇಶನಂ ನಿರ್ಮಿಸಿ ನಿರುಪಮಸಾಮ್ರಾಜ್ಯಪಟ್ಟಾರ್ಹನಂ ಮಾಡಿಡೆ . . . ಅದರ್ಕಪ್ಪುದಾ ವಜ್ರಪಾತಂ (ಶಾಂತೀಶ್ವ. ೩-೬೬) ; ಚಂದ್ರಾತಪವನಪಹರಿಸುವುದು ಹೊಂಬಿಸಿಲು ಕಡೆದ ಕರುವಾಡದ ಕವಾಟದ ಕಡೆವಿಡಿದು ಹೊಂಬೆಸದಲುಱೆ ಹೊಗರಿಡುವ ನೀಲದ ಮಘೌಕ್ತಿಕದ ಮಾಣಿಕದ ಲಹರಿಯಲಿ (ಕೊರಟಾ. ೩-೨-೬೪). **ಹೊಂಬೆಸೆ :** ಅಂಬರವಿಂಬಿಲ್ಲ ಮುಂಬರಿ ತುಂಬಿದ ಹೊಂಬೆಸೆಯಾಲವಟ್ಟಲಿಗೆ ಜಂಭಾರಿಗಿಂಬಾದ ಕುಂಭಿಯುಂದದ ಮದಸ್ತಂಬೇರಮಗಳ್ಕೆದಿದುವು (ಸಂಕ. ೦೩-೨೬).

[ಪೊಂ (<ಪೊನ್) + ಬೆಸ₁]

**ಪೊಂಬೆಸಗೆಯ್** (ಕ್ರಿ). ಚಿನ್ನದ ಕೆತ್ತನೆಕೆಲಸವನ್ನು ಮಾಡು : ಇರೆ ಚಂದ್ರಂ ತೊಲೆಯೊಳ್ ಹಿಮಕಿರಣಸುತಾದಿ ಗ್ರಹತ್ರಯಂ ನೋಡೆ ಧರಾಮರಪತಿ ಪೊಂಬೆಸಗೆಯ್ದಂ (ಜಾತಕ. ೨೦-೭). [ಪೊಂಬೆಸ+ಕೆಯ್₁]

**ಪೊಂಬೆಸಱ್, ಹೊಂಬೆಸರು, ಹೊಂಬೆಸಱ್, ಹೊಂಬೆಸಱು** (ನಾ). ಹೊಂಬಣ್ಣದ ಹೆಸರುಕಾಳು : ತಿವುದುಗಳೆದ ಪೊಂಬೆಸಱ ಮಹೋದ್ವೃಳಮಪ್ಪ ಕಂಪಿನಿಂದಿನ ನಿಳಯಮುಮೆನಿಸಿರ್ದ ಸವಿಯಿನೊದವಿದ ತೊವೆಯಂ . . . ಉಂಡು (ಧರ್ಮಾಮೃ. ೦-೦೪೯) ; ಪೊಂಬೆಸಱ ಸೂಪದ ನೊಪ್ಪುವ ಮಾದುರಂಗಳಂ ಯುವತಿ ತೆರಳ್ಚಿ ಬಡ್ಡಿಸಿದಳ್ (ಧಕು. ೦೨-೦೬೦). **ಹೊಂಬೆಸರು :** "ಪೀತಮುದ್ಗಾ — ಹೊಂಬೆಸರು" (ಒತ್ನಿ. ೯೯). **ಹೊಂಬೆಸಱ್ :** ಹೊಂಬೆಸಱ ಸೂಪಮುದಱೊಳಗಿಂಬಾದುದು (ಜಾವಕ. ೦೦-೦೭೬). **ಹೊಂಬೆಸಱು :** ಸಿಹಿತೊಂಡೆ, ಹೊಂಬೆಸಱು, ಕಳ್ಳಂಗಡಲೆ ಇವಂ ಕಷಾಯವಂ ಕಾಸಿ . . . ಪ್ರತಿಪಾಕ ಹಾಕಿ ಕೊಡುವುದು (ಅಶ್ವಶಾ. ೦೩೩). [ಪೊಂ (<ಪೊನ್) + ಪೆಸಱ್]

**ಪೊಂಬೆಳಗು, ಹೊಂಬೆಳಕು, ಹೊಂಬೆಳಗು** (ನಾ). ೧. ಹಳದಿಬಣ್ಣದ ಕಾಂತಿ ; ಹೊಂಬಣ್ಣದ ಪ್ರಕಾಶ : ಪೊಂಬೆಳಗುಮಂ ಪರಪುತ್ತದು ... ಸುಟ್ಟಿತು ತಿಂದು ತೇಗಿದತ್ತಗಿಯದೆ ನಿಂದ ಪೂಗಣೆಯುಮಂ ಪಣೆಗಣ್ಣುರಿ ಹಂಪೆಯಾಳ್ದನಾ (ಗಿರಿಜಾ. ೬-೯೭). **ಹೊಂಬೆಳಕು :** ೨. (ಅಲಂ) ಜ್ಞಾನದ ತೇಜಸ್ಸು; ಅರಿವಿನ ಬೆಳಕು : ತಂಬೆಳಕಾಗಲಿ ನಂಬೆಳಕೆನುವೊಲು ಹೊಂಬೆಳಕೇ ಹೊರಸೂಸಲಿ (ಆಕಳು. ೩೦೦-೭); ಈಚೆಗೆ ಪಾಶ್ಚಾತ್ಯ ಶಿಕ್ಷಣರಂಗದಲ್ಲಿ ಸಂಶೋಧನೆಯ ಹೊಂಬೆಳಕು ಬಿದ್ದು, ಅಲ್ಲಿನ ಬೋಧನ ಕ್ರಮ ಬಹುವಾಗಿ ಉತ್ತಮಗೊಂಡಿದೆ (ಶಿಕ್ಷಣ. ೨೦೯). **ಹೊಂಬೆಳಗು :** ೧. ಅಸಿಯಳೆ ಕಂಡಪ್ಪಿ ಜ್ಯೋತಿ ಪ್ರಜ್ವಲಿಸಲು ಮಸುಳಿಸದೆ ಜ್ಯೋತಿ ಹೊಂಬೆಳಗಾಯಿತಪ್ಪ (ಅಶಸಂ. ೨೯೯-೦೬೦೪). [ಪೊಂ (<ಪೊನ್) + ಬೆಳಗು₁]

**ಪೊಂಬೊಂಬೆ, ಹೊಂಬೊಂಬೆ** (ನಾ). ಚಿನ್ನದ ಗೊಂಬೆ; ಸ್ವರ್ಣಪುತ್ಥಳಿ : ಕಂದರ್ಪನೆಂಬ ಡೊಂಬನ ಚಂದದ ಪೊಂಬೊಂಬೆವಿಂದು ನೆರೆದತ್ತಾಗಳ್ (ಹರಿಶ್ಚ. ೨-೬೦). **ಹೊಂಬೊಂಬೆ :** ನನ್ನ ಸರಿಹರೆಯದ ರಮಣಿಯರು ಹೊನ್ನ ಸಸಿ ಹೊಂಬೊಂಬೆ ರನ್ನದ ಚಿನ್ನ ಕನ್ನಡಿಯೆನಿಪ ಮಕ್ಕಳ ನೋಡಿ ಪಾಡುವರು (ಹಾಳ್ಕಾ. ೬-೦೦); ಇಟ್ಟ ಕಿರೀಟ ಮುಡುವ ಸೂರ್ಯನಂತೆ ಮೈಗಟ್ಟು ಹೊಂಬೊಂಬೆಯಂತೆಸೆಯೆ ಬಟ್ಟುವ ನಡೆಸುವಂತಾರಾಯ ಮುಂದಕೆ ಪಟ್ಟದಾನೆಯ ನಡೆಸಿದನು (ಕಠಕ. ೨೦-೬೨).

[ಪೊಂ (<ಪೊನ್) + ಬೊಂಬೆ]

**ಪೊಂಬೊಗರ್, ಹೊಂಬೊಗರು** (ನಾ). ೧. ಚಿನ್ನದ ಕಾಂತಿ.—ಹೊಳಪು. ೨. ಚಿನ್ನದ ಬಣ್ಣದ ಕಾಂತಿ; ಹೊಂಬಣ್ಣದ ಪ್ರಕಾಶ.—ಹೊಳಪು : ಕೆಂಬೊಗರಿನ ಸಿರಿಯಿಂದಂ ಮೊದಲೊಳ್ ಪೊಂಬೊಗರಿಂದಂ ಸಮನಂತರದೊಳ್ ಅಂಬರಕೇರುತ ಚಂದ್ರಂ ತುದಿಯೊಳ್ ಬೆಳ್ವೆಳಗಿಂ ಮೆರೆದಂ (ಶಾಕಶಾ. ೦೩೯); ಒಪ್ಪಿನಿಂ ಕುಣಿವ ಪರಿಜಂ ನೆರೆದು ಜೋಲ್ವವಿರ ಕಪ್ಪು ಬೆಳ್ಪುಗಳ ಪೊಂಬೊಗರ ನೇವರಿಸಿ . . . ಹಬ್ಬುಲಿಯು ಬರುತಿಹುದು (ಕಾಂಚನ. ೯೯-೦೩೬). ೩. ವಿಶೇಷವಾದ ಕಾಂತಿ,—ತೇಜಸ್ಸು : ನಗೆಮೊಗದ ಪೊಂಬೊಗರ ಮಿಂಚಿನ ಬೊಗಸೆಗಂಗಳ ಸೆಳೆನಡುವ ಸೆಳ್ಳಗುರ ಬೆಡಗಿನ ಕಾಂತೆ ರಂಜಿಸುತಿರ್ದಳಾ ಪುರದಿ (ಬಸವ. ೨-೨೪). **ಹೊಂಬೊಗರು :** ೧. ಕವಿಯೊಬ್ಬ ಚಂದ್ರೋದಯವನ್ನು ನೋಡುತ್ತಿದ್ದಾನೆ . . . ಪೂರ್ವದಿಶೆಯಲ್ಲಿ ತಣ್ಣನೆಯ ಹೊಂಬೊಗರು ಹಬ್ಬುವುದು ಕಣ್ಣಿಗೆ ಬೀಳುತ್ತದೆ (ಸಾಹಿತ್ಯ. ೦೦). [ಪೊಂ (<ಪೊನ್) + ಪೊಗರ್₁]

**ಪೊಂಬೊಗರಿ,** ಪೊಂಬಗರಿ, ಹೊಂಬುಗುರಿ, ಹೊಂಬೊಗರಿ (ನಾ). ಬಂಗಾರದ ಬುಗುರಿ ; ಚಿನ್ನದ ಬೊಗರಿ : ಅವಳ ನೆಲೆ ಮೊಲೆಗೆ ತಾವರೆಮೊಗ್ಗೆ ಪೊಂಬೊಗರಿಗಳೆಣೆಯೆಂದು ಭಾವಿಪನವನೆಗ್ಗನಲ್ತೆ (ಕುಠಾಸಾಂ. ೬-೨೬) ; ಪೊಂಬೊಗರಿಯಂತಿರ್ಪ ಸುಣ್ಕೊಲೆಯ ದ್ಮುಗುಯುಗಳದಿಂ ನೋಡಿ (ಮೋಹತ. ೦೪-೬೨). **ಪೊಂಬಗರಿ :** ಮೊಳೆತುವ ಮೊಲೆ . . . ಪೊಂಬಗರಿಯ ಬೆಳುಗಾಯ ಕರಂಡದದೆಣೆ ವಕ್ಕಿಯ ಕಳಸದ ದೊರೆಯೆನೆ ಪರಿವಿಡಿಯಿಂ ಸುಕುಮಾರಿ ಸುರೋಚನೆಗೆ (ಶಮುಜಾ. ೩-೨೪). **ಹೊಂಬುಗುರಿ :** ಪೊಳ್ತರೆ ಬಂದು ನಿಶಿಯ ಬೋಗುಣಿ ಯೊಳಕೆ ಹೊಂಬುಗುರಿಯೆಸೆದು ತಾರೆಯರಳುಗಳನಲ್ಲಿಂದೆ ಚೆಲ್ಲಾಡಿಹನು (ಉಷಾಮ. ೧-೧). **ಹೊಂಬೊಗರಿ :** ಹೊಳೆವ ಹೊಂಬೊಗರಿಗೆ ಬೆವಟಕ್ಕೆ ಕೈಯಾರ ಬೆಳಗಿದೊಡೊಪ್ಪುವೆತ್ತಂತೆ ಅಳಲುವ ರತಿಯುರಸ್ಥಳದೆ ಭಸ್ಮಾಂಕಿತ ಕಳಸಕುಚುಗಳೊಪ್ಪಿದುವು (ಮೋಹತ. ೬-೨೨).

[ಪೊಂ (< ಪೊನ್) + ಬೊಗರಿ (< ಬವರಿ)]

**ಪೊಂಬೊಡೆಯ** (ನಾ). =ಪೊಂಬಸಿಱಿ : "ಪೊಂಬೊಡೆಯನಂಚೆದೇರಂ . . . ಬ್ರಹ್ಮಗೆಸವ ನಾಮಂ" (ಅಭ್ಮಿಣಾ. ೪) ; ಸುರರಾಜನೈತಂದು ಪೊಂಬೊಡೆಯಗಿಂತೆಂದು ಬಿನ್ನವಿಸಿದಂ (ಕಂಣಾರಾ. ೧-೦೫-೯೩) ; ಮಹಾತಪದಿನೊಲಿಸಿ ಪೊಂಬೊಡೆಯನಂ ಪಡೆದನಾ ರಾವಣಂ ತ್ರೈಲೋಕ್ಯರಾಜ್ಯಾಧಿಕ್ಯತಿಪದವನು (ಕಂಪಾರಾ. ೫-೧೩). [ಪೊಂ (<ಪೊನ್) + ಪೊಡೆ + -ಅ]

**ಪೊಂಬೊರಜೆ** (ನಾ). ಚಿನ್ನದ ಹಗ್ಗ : ಬೆಳಗುವ ದಂತ ಪೊಂಬೊರಜೆ . . . ಪೊಕ್ಕುಳ ಘಂಟೆಯೆಳಸಲೆಯ್ದುಂದುದಾ ಹಸ್ತಿ (ಕುಠಾಸಾಂ. ೭-೮೯); ಕರದ ಪಟ್ಟೆಯ ಕೊಂಬಿನ ಸೂನಗಿ ಪೊಂಬೊರಜೆ[ಪಾಠಾಂ. ಜೆ]ಮೆಱೆಯೆ . . . ಕರಿ ಲರಿಗಳು ಶಾಗಿದವು (ಕುಠಾಸಾಂ. ೦೨-೦೦೨).

[ಪೊಂ (< ಪೊನ್)+ಪೊರಜೆ]

**ಪೊಂಭಾಂಡ** (ನಾ). ಚಿನ್ನದ ಪಾತ್ರೆ; ಸ್ವರ್ಣಭಾಜನ : ಆಡಲೊಡರ್ಚುವ ಪೊಂಭಾಂಡಗಳ ಕರ ಬೋನಗಡಣವ ಕೊಟ್ಟಸುತ್ಸವದಿ (ಮೋಹತ. ೦೫-೦೪). [ಪೊಂ (<ಪೊನ್) + ಭಾಂಡ]

**ಪೊಂಭಿತ್ತಿ** (ನಾ). ಚಿನ್ನದಿಂದ ನಿರ್ಮಿತವಾದ ಗೋಡೆ; ಬಂಗಾರದ ಗೋಡೆ : ಆ ಸಭಾಮಂಟಪದ ಪೊಂಭಿತ್ತಿಗೋಪುರದಿ ಲೇಸಿನ ವಿಚಿತ್ರ ಪತ್ರುಮನಿರದೆ ರಚಿಸಿ (ಪಪಮೋ. ೨೦-೦೭). [ಪೊಂ (< ಪೊನ್) + ಭಿತ್ತಿ]

**ಪೊಂಭುಣಶೆ** (ನಾ). ಒಂದು ಬಗೆಯ ಮರ : ಅನ್ನೆ ತುಟ್ಟಿಲ ಪೇಱಿಜೊಱ್ಪಿಯೆ ಕೆಮ್ಮುರೆಯ ಗುಮಿಪುಣಸೆಯ ಅಲೆ ಪೊಮ್ಮುಣಶೆ ಅನ್ನೆ ಬಳಿವುಣಶೆಯೆ (ಎಕ. XVI, ತಿಪಟೂ. ೦೪೦-೬೮ : ಸು. ೯೦೦).

[ಪೊಂ (< ಪೊನ್) + < ಪುಳಿಸೆ]

**ಪೊಕ್ಕ₁** 'ಪೊಗು' ಪರಾ.

**ಪೊಕ್ಕ₂** (ನಾ). 'ಲೆಕ್ಕ' ಶಬ್ದದ ಜೊತೆ ಬರುವ ಪ್ರತಿಧ್ವನಿಪದ : ಉಳ್ಳೋಮುಗಳೊಳಗೆನಿತಱಿವುಳ್ಳರ್ಗಂ ತಿಳಿಪಲರಿಯದೆನಿಪೆಡೆಗಳುಮಂ ತೆಳ್ಪಗಿರೆ ತಿಳಿಪುಗುಂ ಬೆಸಗೊಳ್ಳೆ ಗುಣಾರ್ಣವನ ಲೆಕ್ಕಮುಂ ಪೊಕ್ಕ[ಪಾಠಾಂ. ಬಿಂಕ]ಮುಮಂ (ಪಂಪಭಾ. ೨-೩೫) ; "ಪೊಕ್ಕಮುಮಂ = ಲೆಕ್ಕಪಕ್ಕಗಳನ್ನು" (ಪಂಪದೀ. ೬೪). [?]

**ಪೊಕ್ಕರಣೆ** 'ಪೊಕ್ಕರಣೆ' ನೋ.

**ಪೊಕ್ಕರಣೆ,** ಪೊಕ್ಕರಣಿ, ಹೊಕ್ಕರಣಿ, ಹೊಕ್ಕರಣೆ, ಹೊಕ್ಕರಣೆ, ಹೊಖರಣೆ (ನಾ). ೧. (ದೇವಸ್ಥಾನದ ಬಳಿಯಿರುವ ಪವಿತ್ರವಾದ) ಕೊಳ; ಕಲ್ಯಾಣಿ : ತೀವಿದ ಪೊಕ್ಕರಣೆಗಳ ನೆಱಿದ ಕೆಱೆಗಳ ಸರೋವರಂಗಳ ಬೆಡಂಗುಗುಂದಲೆ ಪುರದೊಳ್ (ಸುಕುಮಾ. ೯-೫೦); ಇಕ್ಕೆಲದೊಳಗೊಪ್ಪುವ ಕರಣಕಶಾಲೆ ಪೊಕ್ಕರಣೆಗಳೆರುತಿಹವು (ಕಂಜಿಕ. ೩-೩೫). **ಪೊಕ್ಕರಣೆ :** ೧. ಮಲ್ಲಿಕಾರ್ಜುನದೇವರ ಗಟ್ಟಿಡಿಯಿಂ ಪಡುವಲು ಪೊಕ್ಕರಣಯಿಂ ಬಡಗಲು ಬಿಟ್ಟ ಗಟ್ಟಿ (ಎಕ. VII, ಶಿಕಾ. ೦೪-೨೬; 1066). **ಹೊಕ್ಕರಣೆ :** ೧. ವಾಯಬ್ಬ ಬಿಂಡನಕಳ ಹೊಕ್ಕರಣಿಯ ಬಡಗಣ ದತ (ಎಕ. V, ಹಾಸನ. ೬೦-೯೩ ; 1218) ; ಕೆಱೆ ಬಾವಿ ಹೊಕ್ಕರಣೆ ದೀರ್ಘಿಕೆ ಕೊಳು ಪಳ್ಳಂಗಳು ತಸತೆನಗೆ ನೇಮಿಸಿರ್ಪುವು ಲೆಕ್ಕವಿಲ್ಲ (ಶಿವಶ. ೦೨-೨೪) ; ಬಲುವುದರವು ನರಕದ ಹೊಕ್ಕರಣಿ (ಜದಾಕೀ. ೩೬-೬). **ಹೊಕ್ಕರಣೆ :** ೧. "ಖಾತಾ, ಪುಷ್ಕರಿಣೀ—ಈ ೨ ಹೊಕ್ಕರಣೆ" (ಪದಾಭಿಯು. ೦೦೧-೫೩) ; ದೇವರ ಹೊಕ್ಕರಣೆಯಿಂದ ಮೂಡಣ ದೆಸೆಯೊಳು . . . ಮತ್ತರೊನ್ದಂ ಬಿಟ್ಟರು (ಸೌಇಇ. IX–I, ೦೫೩-೫೯ ; 1083) ; ಗುರುಲಿಂಗಜಂಗಮಕ್ಕೆ ಪಾದಾರ್ಚನೆಯ ಮಾಡುವ ಹೊಕ್ಕರಣೆ ನಾಲ್ಕು ಪುರುಷಪ್ರಮಾಣದ ಖಾತ (ಕನ್ನಶ. ೪. ೦೫೬-೩೫೭) ; ಒರೆದ ವಜ್ರದ ಗಾರೆಗಳ ಹೊಕ್ಕರಣೆಗಳ ಸಾಲುಗಳು ಯೋಜನವೆರಡಱಿ ಫ್ಘುತತೈಲದುಗ್ಧಾದಿಗಳಿಗೆಡೆಯಾಯ್ತು (ಕೂರಣಾ. ೧-೭-೬). ೨. ಕಮಲಗಳಿಂದ ತುಂಬಿರುವ ಕೊಳ ; ತಾವರೆಕೊಳ : (೩). **ಹೊಕ್ಕರಣೆ :** ೧. ಹಿರಿಯ ಹೊಕ್ಕರಣೆಯಿಂ ತೆಂಕಣ ಹೆಗ್ಗೆಱೆಯೊಳಗಣ ಮತ್ತರಾಱು ಕಮ್ಮಂ ನಾಲ್ಕೂಱಯ್ಸತ್ತು (ಹಾಸಕ. ೯೭-೫೫ ; 1107 ?). **ಹೊಖರಣೆ :** ೧. ಹೆಗ್ಗಡೆ ಶ್ರೀಪದ್ಮನಾರಾಯಣದೇವರ ಮುಂದಣ ಹೊಖರಣೆಯ × × × ಗೆಸ್ತ ದೇವರ ವುಪಹಾರಕ್ಕೆ (ಎಕ. XI, ಹೊಳಲ್ಕೆ. ೦೪-೮೭ ; 1210).

[< ಪ್ರಾ. ಪೋಕ್ಖರಿಣೀ, ಪುಕ್ಖರಿಣೀ./ಸಂ. ಪುಷ್ಕರಿಣೀ]

**ಪೊಕ್ಕಳು** 'ಪೊಕ್ಕುಱ್' ನೋ.

**ಪೊಕ್ಕಱು** 'ಪೊಕ್ಕುಱ್' ನೋ.

**ಪೊಕ್ಕಿ** (ನಾ). ಹಾದರಗಿತ್ತಿ ; ಜಾರೆ : 'ನಾನು ಆ ಮಾಸ್ತರನ ಸುದ್ದಿ ತೆಗೆದ ಕೂಡಲೆ . . . ಓಡಿದಳಲ್ಲ ಹೆಣ್ಣುನಾಯಿ—ಪೊಕ್ಕಿ (ಮೂಕಜಿರು. ೦೪೪).

[←ತುಳು. ಪೋಕೆ=ವ್ಯಭಿಚಾರಿ]

**ಪೊಕ್ಕು₁** 'ಪೊಗು' ಪರಾ.

**ಪೊಕ್ಕು₂,** ಹೊಕ್ಕು₂ (ನಾ). ಮಗ್ಗದ ನೆಯ್ಗೆಯಲ್ಲಿ ಅಡ್ಡವಾಗಿ ಹಾಕುವ ಎಳೆ : ಪಾಸಿನ ಪೊಕ್ಕಿನ ಮಾಣಿಕದ ಕಾಂತಿಯ . . . ಕೂಟದಂತೆ ಮಹಾಪುರುಷರ ಸಮ್ಯಕ್ತ್ವದೊಳಾದ ಕೂಟಮುಮತಿಶಯಂ (ಧರ್ಮಾಮೃ. ೫-೦೯೯). **ಹೊಕ್ಕು₂ :** ಒಂದೆ ಕಾಲೊಳ್ ಪರಿವೆನೆಂಬ ಹೊಕ್ಕಿಲ್ಲದೆ ಸೀರೆಯಂ ನೆಯ್ವೆನೆಂಬ . . . ಪೆರ್ಗಾವಿಲನಂ ಪೋಲ್ಕುಂ (ಧರ್ಮಾಮೃ. ೫೦-೦೬ ಅಂತರ್ಕ) ; ಅಡ್ಡಕ್ಕೆ ಬೀಳುವ ನೂಲುಗಳು 'ಹೊಕ್ಕು' ಎನಿಸುವುವು (ಪಾಲಕ್ರ. I, ೯೨೦). [< ಪೊಗು]

**ಪೊಕ್ಕುಂದ** 'ಪೊಂಕುಂದ' ನೋ.

**ಪೊಕ್ಕುಳ್** 'ಪೊಕ್ಕುಟ್' ನೋ.

**ಪೊಕ್ಕುಳವಕ್ಕಿ** 'ಪೋರ್ಕುಳಿವಕ್ಕಿ' ನೋ.

**ಪೊಕ್ಕುಳಿ** 'ಪೋರ್ಕುಳಿ' ನೋ.

**ಪೊಕ್ಕುಳಿವಕ್ಕಿ** 'ಪೋರ್ಕುಳಿವಕ್ಕಿ' ನೋ.

**ಪೊಕ್ಕುಳು** 'ಪೊಕ್ಕುಟ್' ನೋ.

**ಪೊಕ್ಕುಳುಘಂಟೆ** (ನಾ). ಮಕ್ಕಳಿಗೆ ಉಡಿದಾರದಂತೆ ಕಟ್ಟುವ, ಘಂಟೆಯಾಕಾರದ ಒಂದು ಬಗೆಯ ಆಭರಣ : ಅರಳೆಲೆಯುಂ ಮಾಗಾಯಿ... ಪೊಕ್ಕೊ[ಕ್ಕು]ಳುಘಂಟೆ ಪಾಲ್ಗಡಗ ಗೆಜ್ಜೆ ಸಹ ಬಾಲದೊಡವಾ ಪರಿವರಿಯ ರತ್ನಖಚಿತಾಭರಣಗಳನಿಟ್ಟು (ಪಪಮೋ. ೦೫-೫೦).

[ಪೊಕ್ಕುಳು (< ಪೊಕ್ಕುಟ್) + ಘಂಟೆ]

**ಪೊಕ್ಕುಳ್ಗೊಯ್** (ಕ್ರಿ). (ಮಗುವು ಹುಟ್ಟಿದ ತಕ್ಷಣ) ಹೊಕ್ಕುಳು ಬಳ್ಳಿಯನ್ನು ಕತ್ತರಿಸು : ಪುಟ್ಟಲೊಡನೆ ಪೊಕ್ಕುಳ್ಗೊಯ್ದು ಬೆನ್ನೀರಟ್ಟ . . . ಕೌರಿನ ಹೊಗೆಗೊಟ್ಟೊಪ್ಪವಿದರು ಬಾಲಕನನು (ಕ್ರೀಜಾಂ. ೨-೭೭).

[ಪೊಕ್ಕುಳ್ (<ಪೊಕ್ಕುಟ್) + ಕೊಯ್]

**ಪೊಕ್ಕುಳ್**, ಪೊಕ್ಕಳು, ಪೊಕ್ಕುಳು, ಪೊಕ್ಕುಳ್, ಪೊಕ್ಕುಳು, ಪೊಕ್ಕುಳು, ಪೊರ್ಕುಳ್, ಪೊರ್ಕುಳ್, ಪೊರ್ಕುಳ್, ಹೊಕ್ಕಳು, ಹೊಕ್ಕುಳ್, ಹೊಕ್ಕುಳ, ಹೊಕ್ಕುಳಂ, ಹೊಕ್ಕುಟಿ, ಹೊಕ್ಕುಳು (ನಾ). ೧. ಹೊಟ್ಟೆಯ ಮೇಲಿರುವ ಸಣ್ಣ ಕುಣಿ ; ನಾಭಿ : ಈತೆಯ ಪೊಕ್ಕುಳ ಚೆಲ್ವೀ ಲೋಕದೊಳತಿಸೇವ್ಯಂ (ಧರ್ಮಾಮೃ. ೩-೦೯೭) ; ಅರಿಸಿನ ದಂಚೆಯನಿಸಿಸೋಸರಿಸಲುವಿಾಯದೆ ಯಶೋದೆಯಿಾತಂ ಪೀತಾಂಬರನೆಂದು ಧರೆಗೆ ಪೇಳ್ವಂತಿರೆ ಪೊಕ್ಕುಳೊಳಿಕ್ಕಿದಳ್ ಪಯೋಜೋದರನಾ (ಅರನೇ. ೭-೫೩) ; ಒಸಗೆಯ ಮೇಲೆ ಮತ್ತೊಸಗೆ ಪೊಕ್ಕುಳ ಪೆರ್ಚಿನ ಮೇಲೆ ಪೆರ್ಚು . . . ಪಸರಿಸುವಂತಿರಗ್ರಜೆ ತನೂಭವನಂ ಪಡೆದು (ಆನಂಪು. ೦೨-೮೦). **ಪೊಕ್ಕಳು:** ೧. ನಿನ್ನ ನಡೆ ಜಗವ ಈರಡಿ ಮಾಡಿತು ನಿನ್ನ ಪೊಕ್ಕಳು ಸರಸಿಜ ನಾಭನ ಪಡೆಯಿತು (ಕುರಂದ. ೫-೦೬೦-೦೯೨). **ಪೊಕ್ಕುಟು :** ೧. "ಪೊಕ್ಕುಟು ನಾಭಿಯಕ್ಕು" (ಪಂಗರಾ. ೯೭-೦೩). **ಪೊಕ್ಕುಳ್ :** ೧. ಹರಿಯ ಪೊಕ್ಕುಳ ಕನಕಾಂಬುಜದೊಳುದಯಿಸಿದು . . . ಬ್ರಹ್ಮಂ (ನಾಂದೇಶ್. ೨೯-೬ ; 12ನೆಯ ಕಥ) ; ಅಡಿ ತಳಿರ್ಗಳ್ ಕುರುಳ್ ತುಂಬಿಗಳ್ . . . ಪೊಕ್ಕುಳೇ ಕೊಳಂಗಳ್ (ಕಬಪು. ೯೫-೩೪). ೨. ಮಧ್ಯಭಾಗ ; ಕೇಂದ್ರ : ಪರಿಗೋಲನೇರ್ದು ಪೊಳೆಯಂ ಪಾಯ್ದು ಪೋಪವಂ ಪೊನಲ ಪೊಕ್ಕುಳ್ಗೆ ಬರೆ ಕಾಣ್ಬನದೊ ; ರಂಧ್ರದಿಂ ನೀರೊಳ್ಕಿ ನುಗ್ಗುತಿರ್ಪುದು ಬುಗ್ಗೆಯೋಲ್ ! (ಶ್ರೀರಾಮಾ. ೭೭-೬೦೦). ೩. ಒಳಗು ; ಒಳಭಾಗ : ಪೊಳೆಗಳ ಮೂರರ ಪೊಕ್ಕುಳೊಳಿರ್ಪನ ಮೃತ್ಯುಂಜಯಾ ಎನ್ನಿರೊ (ಕಕೃಸ. I. ೨-೨). **ಪೊಕ್ಕುಳು :** ೧. ಚಪ್ಪರದೆ ಪೊಕ್ಕುಳಲಿ ಬೆಳೆದು ಬಾಸೆನಾಳದ ಸರಸಿಜವೆನೆ ಕೃಷ್ಣಗೆಸಗು (ಪರ್ವತ. ೬-೩೦) ; ಎಸೆವ ತಿಲಕದ ನೊಸಲ ನೆಲೆವೊಲೆಯ ನೀಳ್ದ ಬಾಸೆಯಗುಳಿದ ಪೊಕ್ಕುಳಿನ . . . ಸೊಬಗಿನ ನಾರಿ ಸಕಲಸೌಖ್ಯಾಧಾರಿ (ಕಬಪು. ೩೭-೦೦). ೪. ದ, ಪ, ಬ ಮುಂತಾದ ಕೆಲವು ಅಕ್ಷರಗಳಿಗೆ ನಡುವೆ ಬರುವ ಒಳಸುಳಿ : ಪೊಕ್ಕುಳು ತಲೆಕಟ್ಟುಮನನ್ಯಕ್ಕರದವಯವಮನಱಿದು ಋಣ್ದಿಸಲುಕೀ ಇನ್ಕುಡನೆ ಬಲ್ಲನ್ (ಎಕ. XI. ದಾವಣ. ೦೯೯-೨೫ ; 1113). **ಪೊಕ್ಕುಟು :** ೧. ನಗೆಗಣ್ ನೀಳಸಹಸ್ರಪತ್ರದೆಸಟಂ . . . ಪೊಕ್ಕುಟು ನಂದಿವಟ್ಟದರಲಂ ಚೆಲ್ವಿಂದುಗುರ್ಕೂಡೆ ಕೇದಗೆಯಂ . . . ಪುಷ್ಪಾಸ್ತ್ರನ ಪಂಚಬಾಣವಿಂಪಲಂಬಾಶಂಕೆಯಂ ಮಾಡಿದಳ್ (ಧರ್ಮಾಮೃ. ೬-೨೦೭). **ಪೊರ್ಕುಳ್:** ೧. ಮುಂಗಯ್ ಮೊಗು ಪೊರ್ಕುಳ ಕಿಟಳ್ಚೋಡೆ . . . ಪುರ್ವಳ್ಗೆ ಪಲ್ ಕೆಕ್ಕೆ ಕಾಲಡಿಯೆಂದಿಂತಿಪನುರ್ಚಿ ಪೋದುವಿಸೆ ತತ್ಸಾಜನ್ಯಕಂದಾಂಕುರಂ (ಕಾಂತಿಪು. ೯-೦೭). **ಪೊರ್ಕುಳ್ :** ೧. ನಿರುತಂ ಶ್ರೀಯುತಪುರಮೆಂಬಿಂದ್ರಾಪರಜನ ಮಧ್ಯದ ಪೊರ್ಕುಳ ಹೋದಾವರೆಯೆನೆ ರಂಜಿಪ ರಾಜಾಲಯಮೆಸೆಯುತ್ತಿರಲ್ (ಜಯಕಾ. ೦-೭೭) ; ಪೊರ್ಕುಳೊಳ್ ವೇದಾಗಮಸೃಷ್ಟಿಕರ್ತೃ ಮೂದೇವರೂಪ ಚಂದ್ರನ ಕಣ್ಗೊಳಗಾಂತ ಮಾಧವನಿರವ ನೋಡಿದಳು (ಪೋಷಕ. ೨೯-೪೪). ೫. ಚಕ್ರದ ಮಧ್ಯಭಾಗ ; ಗುಂಬ : ದರುಮದ ಚರಕಂ ನನ್ನಿಯ ಪೊರ್ಕುಳುಮರಿವು ಸಮಾಧಿ ಧೃತಿಯುಮಿರೆ ನೇಮಿ ಅರಮನೆ ನಯ ವಿನಯಮುಮಂ ಹಿತಕಾ ಪರಿಷದದೊಳವಂ ನಡೆಯಿಸಿದಂ (ಶಾಂಪಂದ. ೩-೦೦). **ಪೊರ್ಕುಟ್ :** ೧. "ನಾಭಿ ಪೊರ್ಕುಟೆಂದಱಿವುದು" (ವಸ್ತುಕೋ. ೭೮-೬) ; ಕೊಂದೆನ್ನ ಮಗನನಿಂ ಭಯದಿಂದಂ ರಸೆಪೊಕ್ಕುಮಜನ ಗುಂಡಿಗೆಪೊಕ್ಕುಂ ಮಂದರಧರನೀ ಪೊರ್ಕುಟ ಪೊಂದಾವರೆಪೊಕ್ಕು ಮೇಣವಂ ಬರ್ದುಕುವನೇ (ಕಂಕಥಾ. ೦೦-೦೨೦) ; ಆ ಮಹೀಪಾಲನ ಲೋಲಲೋಚನಂಗಳಾಕೆಯ ಲಾವಣ್ಯರಸಕೂಪದಂತೆ ನಿಮ್ನಮಾದ ಪೊರ್ಕುಟಂ ಪೊಕ್ಕಱಿದುಂ . . . ತನುಲತೆಯೊಳ್ಪುಳಕಾಂಕುರಮನೊದವಿಸುತ್ತುಮಿರೆ (ಮಲ್ಲಿಪು. ೩-೮೮) ; ಎಳೆವೆಣ್ಣ ಪೊರ್ಕುಟಲಗ್ಗೊಂಡೆಯಂತಿರೆ ಪೊಂಬೆಟ್ಟಂ . . . ಕಣ್ಗೊಳಿಕಂ (ರಾಘಾಕ. ೭-೩). ೪. ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಟ ಚೆಲ್ವು . . . ಪೋದಿರಲಕ್ಕರಕ್ಕೆ ಬರೆವಂ ಚತುರರ್ ಪರಿವರ್ಣಿಸಲ್ ನವಿಲ್ಗುಂದದ ಮಾದಿರಾಜವಿಬುಧಂ (ಪುಷ್ಪಪು. ೦೪-೫೮). **ಹೊಕ್ಕಳು :** ೧. "ನಾಭಿಃ . . . ಹೊಕ್ಕಳಿಗೆ ಹೆಸರು" (ಸಿದ್ಧಾಂತಿ. ೪೦೭) ; ಭೀಮನು ಹೊಕ್ಕಳ ಕೆಳಗೆ ಹೊಡೆದನಲ್ಲಾ . . . ಹೊಕ್ಕಳಿಂದ ಕೆಳಗೆ ಹೊಡೆಯುಕೂಡದೆಂಬುದು ನಿಯಮ (ಪತಶಾ. ೩೦೫). **ಹೊಕ್ಕುಳ್ :** ೧. ಹೊಕ್ಕುಳಿಂದ ಕೆಳಗೆಯು ಧರಿಸುಪರಿಗೆ ಅಕ್ಕು ನೋಡು ಮಹಪಾತಕವರಿಗೆ (ದೀಕ್ಷಾಬೋ. ೬೫ ೦೩೫). ೨. ಅರ್ಚನೆಯ ಮಂಟಪವಂ ನಿರ್ಮಿಸಿ ನಡುವೆ ಕಟ್ಟಿದ ಮೇಲ್ಕಟ್ಟಿನ ಹೊಕ್ಕುಳ ಪುಲ್ಲಿಯ ತೋಂಗಲ್ಗಳಂ (ಕೇಶಿರ. ಹ. ೩೦೯-೫). **ಹೊಕ್ಕುಳ :** ೪. ಹೊಕ್ಕುಳ ಎಂಬುದು ಕೆಲವು ಅಕ್ಷರಗಳಿಗೆ ನಡುವೆ ಬರುವ ಒಳಸುಳಿ. ದ, ಪ, ಬ – ಇಂತಹ ಅಕ್ಷರಗಳಲ್ಲಿ ಹೊಕ್ಕುಳವನ್ನು ಕಾಣಬಹುದು . . . ಕೆಲವು ಅಕ್ಷರಗಳಿಗೆ ಹೊಟ್ಟೆ ಹೊಕ್ಕುಳಗಳಿಲ್ಲ (ಸಂಕೋಶ. ೦೦). ೬. (ಅಲಂ) ಹೊಟ್ಟೆ ; ಬಸಿರು: ಎಲೆ ಆತ್ಮನೆ ಪಾತಕದ ಹೊಕ್ಕುಳದಲೇಕೆ ಹುಟ್ಟಿದೆ (ಪೋಲೀಪಶಾ. ೦೦-೩೪). **ಹೊಕ್ಕುಳು :** ೧. ತ್ರಿವಳಿ ಮೈಗರೆಯ ಹೊಕ್ಕುಳ ಗುಣ್ಪು ಹೊಱಸೂಸೆ (ಬಸರ. ೦-೦೦೭) ; ಪುಷ್ಪವ ತಂದು ನಿನಗರ್ಪಿಸುವೆನೆಂದರೆ ಪುಷ್ಪ ಪಲ್ಲವಿಸಿದೆ ಹೊಕ್ಕುಳಲಿ (ಕುರಂದ. ೨-೭೭-೨). ೪. ಅನೇಕರು . . . ಹೊಕ್ಕುಳು, ತಲೆಕಟ್ಟು ಮುಂತಾದ ಅಕ್ಷರಗಳ 'ಅವಯವ' ಗಳೆನ್ನರಿತು ಕೆತ್ತಬಲ್ಲೆವೆಂದೂ ಹೇಳಿಕೊಂಡಿದ್ದಾರೆ (ಕಶಾಶಿ. ೬೩). ೬. ಬಿಡದೆ ಪಾಂಡುಕುಮಾರರಡಗಲಿ ಹರಿಯ ಹೊಕ್ಕುಳಲಿ . . . ರಿಪುಗಳ ಕಡಿದು ತಿನಿಸುವೆನು (ಕುವ್ಯಾಕಿ. ೬೦೨. ೨೫-೦೩). **ಹೊಕ್ಕುಟ:** ೧. "ತುಂದಿಯೆನೆ ಬುಗುಡು ಹೊಕ್ಕುಟಮೆನಿಕು" (ಪಂಗರಾ. ೦೦೯-೫). **ಹೊಕ್ಕುಟು:** ೧. ಹೊಕ್ಕುಟು ಬುಗುಡುಳ್ಳವನು. ತುಂದಿಲ, ತುಂಡಿ (ಪಾಶರಾ. ೬).

**ಪೊಕ್ಕುಳ ಅರಸುಮಕ್ಕಳು** = ಪರಸ್ಪರ ಸಂಬಂಧವುಳ್ಳ ರಾಜವಂಶ : ಅತ್ತಲಿದ್ದರು ಸಟ್ಟೆಮುದ್ಯರು, ಗುತ್ತಿನಡ್ಕಂತಾಯರು, ಇತ್ತ ಪೊಕ್ಕುಳ ಅರಸುಮಕ್ಕಳ ಒತ್ತಿನಲಿ ಕಳದೆಡದಲಿ (ಕುಪು. ೩೮-೪). **ಪೊಕ್ಕುಳ ಘಂಟೆ, ಪೊರ್ಕುಳ ಗಂಟೆ, ಪೊರ್ಕುಳ ಘಂಟೆ, ಹೊಕ್ಕುಳ ಗಂಟೆ, ಹೊಕ್ಕುಳ ಘಂಟೆ** = ೧. ಆನೆ, ಕುದುರೆ ಮುಂತಾದ ಪ್ರಾಣಿಗಳ ಹೊಟ್ಟೆಗೆ (ಹೊಕ್ಕುಳಿನ ಭಾಗಕ್ಕೆ ಬರುವಂತೆ) ಕಟ್ಟುವ ಘಂಟೆ : ತಳೆದು ಕಾಲ್ವರಜೆಯ ಪೊಕ್ಕುಳ ಘಂಟೆಯನೆಳಲಿಕ್ಕಿ ಬಿಗಿದು ಗುಳವನು . . . ಕರಿಯನೇಱಿ ಕಲಿಜೋದರೆಳ್ತಂದರಂದು (ಕರಾಸಾಂ. ೦೦-೨೫) ; ಪೊಕ್ಕುಳ ಘಂಟೆ ಡಾಡೆ ಜಾಗಟೆರವಂ ತೀವಿತೆಣ್ದೆಸೆಯನಿರದೆ (ನವಮೋ. ೨೭-೭೦) ; ಪೊರ್ಕುಳ ಗಂಟೆಯ ಮೋಹಿಸುವ ದೊಗವಡದ . . . ಪರಿದು ಶರಧಿಯನೆಡಗಲಿಪ ಗಗನಮನಡರ್ವ ಜಾತ್ಯಶ್ವಂಗಳ ವಳಯಮಂ (ಗಿಂಕ. ೬-೫೫ ಪ) ; ಗರ್ಗರವ ತರಜಗತ್ತರಿಯ ಪೊರ್ಕುಳ ಘಂಟೆಯ . . . ತುರಗಸಂಘಾತದಿಂ (ರಾಜಶೇ. ೬-೦೦ ಪ) ; ಹೊಕ್ಕುಳ ಗಂಟೆ ಸೂಡಿದ ಸುವರ್ಣಗನ್ನಡಿ ಮೌಕ್ತಿಕಾವಳಿಯ ಜೋಡು (ಸಿಂಗಿರಾ. ೫೫-೬) ; ಕಟ್ಟಿದ ಹೊಕ್ಕುಳ ಗಂಟೆಯ ತೇಜಿಗಳಿಟ್ಟಣಿಸುತಲೈದಿದುವು (ಕಂಪಶಾ. ೨೩-೯೯) ; ನೊಸಲಗನ್ನಡಿ ಧಣರೆಂಬ ಹೊಕ್ಕುಳ ಘಂಟೆ ಮಿಸುನಿಬಿರಹದ ಹಾವರಣ ಬಸಿವ ಗಲ್ಲದ ಮದಧಾರೆಯಿಂದಾನೆಗಳ್ಪಸಗಿ ಬಂದುವು ರಾಯ ನೆಡೆಗೆ (ಭರತ. ೨೦-೬೨). ೨. ಮಕ್ಕಳಿಗೆ ಉಡಿದಾರದಂತೆ ಕಟ್ಟುವ, ಗಂಟೆಯಾಕಾರವುಳ್ಳ ಒಂದು ಬಗೆಯ ಆಭರಣ : ಪೊಕ್ಕುಳ ಘಂಟೆ ಪುಲಿನಖಂ . . . ಮಣಿಮಯಮುದ್ರೆಗಳ ಬೆರಳ್ಗಳಿಗಮರ್ಚಿ (ನವಮೋ. ೦೨-೦೮). **ಪೊಕ್ಕುಳ ಪುರಿ, ಹೊಕ್ಕಳ ಹುರಿ** = ಭ್ರೂಣ ಮತ್ತು ಗರ್ಭಾಶಯದಲ್ಲಿರುವ ಪೋಷಕಾಂಗವನ್ನು ಸಂಬಂಧಿಸುವ ನಾಳ ; ನಾಭಿನಾಳ : ನೆರೆದಿರ್ದ ವಾರಿಜಾಕ್ಷಿಯರು ಪೊಕ್ಕುಳ ಪುರಿಯ ಕೊಯ್ದು . . . ಉಪಚಾರಮಂ ಮಾಡುತಿರಲು (ನವಮೋ. ೦೦-೨೦); "ಹೊಕ್ಕಳ ಹುರಿ=

ಭ್ರೂಣವನ್ನೂ ಗರ್ಭಾಶಯದಲ್ಲಿರುವ ಪೋಷಕಾಂಗವನ್ನೂ ಸಂಬಂಧಿಸುವ ನಾಳ; ನಾಭಿನಾಳ" (ಅಶಂಪಾ). **ಪೊಕ್ಕುಳ ಬಳ್ಳಿ, ಹೊಕ್ಕುಳ ಬಳ್ಳಿ**=ಪೊಕ್ಕುಳ ಪುರಿ : ವಿಡವಿಡನೆ ವಿಡುಕಿ ಪೊ[ಪಾಠಾಂ. ಹೊ]ಕ್ಕುಳ ಬಳ್ಳಿಯಂ ಕೊಯ್ದು (ಬಿಂಶೋರ. ಪ. ೫೦೦-೨೪) ; ಬೆಳ್ಳಿಯ ಓಡಿಯ ಕತ್ತಿಯ ತಂದು ಹೊಕ್ಕುಳ ಬಳ್ಳಿಯು ಕೊಯ್ದಾರ್ಭಕನ (ಸೋಪಕ. ೧೭-೨೦) ; ಜೀವ ಜೀವವ ಬಂಧಿಸಿದ ಹೊಕ್ಕುಳ ಬಳ್ಳಿಯಯ್ಯಾ ಇದು (ಪುರುಚಾ. ೨೦೬). **ಪೊಕ್ಕುಟಂ ಕೊಯ್** = ನಾಭಿನಾಳವನ್ನು ಕತ್ತರಿಸು : ಮಕ್ಕಳು ಪುಟ್ಟಿದಾಗಳೆ ಪೊಕ್ಕುಟಂ ಕೊಯ್ವುದನೆಲ್ಲರ್ಗಱಿಪಿ ನಾಭಿರಾಜನೆಂಬ ಪೆಸರನ್ವರ್ಥಂ ಮಾಡಿ (ಪುಣ್ಯಾಸ್ರ. ೦೦-೧೪ ಪ). **ಪೊಕ್ಕುಟ ಕುಡಿ, ಹೊಕ್ಕುಳ ಕುಡಿ**=ಪೊಕ್ಕುಳ ಪುರಿ : ಪೊಕ್ಕುಟ ಕುಡಿಯಂ ಪೆರ್ಚಿಸಲಿಕ್ಕಿದ ಮಣಿಕನಕಪುಂಜಮೆಸೆದಿರೆ ಮೂಲೋಕಕ್ಕೋಜನೆನಿಸುವಜನಂ ಪೊಕ್ಕುಟ ಪೂವಿಂದೆ ಪಡೆದುದುಂಟೆನಿಸಿರ್ದಂ (ಅಸಂಕ. ೧೨-೮೨) ; "ಹೊಕ್ಕಳ ಕುಡಿ=ಭ್ರೂಣವನ್ನೂ ಗರ್ಭಾಶಯದಲ್ಲಿರುವ ಪೋಷಕಾಂಗವನ್ನೂ ಸಂಬಂಧಿಸುವ ನಾಳ ; ನಾಭಿನಾಳ" (ಅಶಂಪಾ). **ಪೊಕ್ಕುಟ ಪೂ, ಪೊರ್ಕುಟ ಪೂ** = (ವಿಷ್ಣುವಿನ) ನಾಭಿಯಲ್ಲಿ ಹುಟ್ಟಿದ ಹೂವು : ಲೋಕಂಗಳನಾ ಹರಿ ಬಸುಱೊಳ್ಪ್ಟನಂತಾತನ ಪೊಕ್ಕುಟ ಪೂವಿನಲ್ಲಿ ಲೋಕಂಗಳನೆಲ್ಲ ಮಾಡಿದಜನೆ ಪುಟ್ಟಿದನೆಂಬರ್ (ಸಮಪ. ೦೦-೯೪) ; ಮೂಲೋ ಕ್ಕೋಜನೆನಿಸುವಜನಂ ಪೊಕ್ಕುಟ ಪೂವಿಂದೆ ಪಡೆದು ದುಂಟೆನಿಸಿರ್ದಂ (ಅಸಂಕ. ೦೨-೮೨) ; ರಾಜೀವಸಖಂ ಸಜಲಜಳಧರಶ್ಯಾಮಾಭ್ರ ಶ್ರೀವತ್ಸಾಂಕನ ಪೊರ್ಕುಟ ಪೂವೆನೆ ಕೆದಱಿದಪನಮಳಕರಕೇಸರಮಂ (ಲೀಲಾವ. ೪-೦೯೬). **ಪೊಕ್ಕುಟ ಸುೞಿ, ಹೊಕ್ಕುಳ ಸುೞಿ** = ೧. ನಾಭಿಯ ವರ್ತುಲ : ಅಳಿಪಿಂ ಪೆಂಡಿರ ಪೊಕ್ಕು[ಪಾಠಾಂ. ಪೊರ್ಕು]ಟ ಸುೞಿಯೊಳ್ ಸುೞಿತರ್ಪ ನೃಪನ ಕಣ್ಬೂಣರ್ಗಳನೇನಿಟಿಸಿದವೊ ನದಿಯೊಳೊದವಿದ ಸುೞಿಗಳ ಬೞಿವಿಡಿದು ಸುೞಿದು ಪೊಳೆವೆಳೆಮೀಂಗಳ್ (ಪಾರ್ಶ್ವಪು. ೯-೨). ೨. ಪ, ಮ ಮುಂತಾದ ಅಕ್ಷರಗಳ ಅಡಿಯಲ್ಲಿರುವ ಒಳಸುಳಿ : ಪ, ಮ, ವ—ಇಂಥವಕ್ಕೆ ಅಡಿಯಲ್ಲಿ ಅಂದರೆ ಕೆಳಗಡೆ ಒಳಸುಳಿಯಿದೆ. ಈ ಕೆಳಗಡೆ ಇರುವ ಸುಳಿ "ಹೊಕ್ಕುಳ ಸುಳಿ" ಎನಿಸುತ್ತದೆ (ಸಂಶೋಧ. ೨೦೦). **ಹೊಕ್ಕುಳಲಿ ಹೂದುಱುಬಿದಾತ** = ನಾಭಿಯಲ್ಲಿ (ಕಮಲದ) ಹೂವುಳ್ಳವನು ; ಪದ್ಮನಾಭ ; ವಿಷ್ಣು : ಹೆಱಿಯ ಹೊತ್ತನ ಹೊಕ್ಕುಳಲಿ ಹೂದುಱುಬಿದಾತನ ಮಗಳಿಗಳುಪಿದ ಮೋಱಿಯವನ ಹೆಂಡಿರನು ಬಲ್ಲೆನು ಕಂಡು ತಾನು (ಕುಮಾರಾ. ೬-೯-೨೯). **ಹೊಕ್ಕುಳ ಸೀಳು** = ದ, ಪ ಮುಂತಾದ ಅಕ್ಷರಗಳನ್ನು ಮಹಾಪ್ರಾಣಗಳಾಗಿ ಬರೆಯುವಾಗ ಆ ಅಕ್ಷರಗಳ ಹೊಕ್ಕುಳ ಸುಳಿಯಿಂದ ಕೆಳಗೆ ಗೆರೆ ಎಳೆ : ಡ, ದ, ಪ—ಮುಂತಾದುವನ್ನು ಮಹಾಪ್ರಾಣಗಳಾಗಿ ಬರೆವಾಗ 'ಹೊಕ್ಕುಳ ಸುಳಿ'ಯಿಂದ ಕೆಳಗೆ (ಢ, ಧ, ಫ—ಎಂಬಂತೆ) ಗೆರೆ ಎಳೆಯುವರಷ್ಟೆ. ಇವನ್ನು 'ಹೊಕ್ಕುಳ ಸೀಳುವುದು' ಎನ್ನುತ್ತಾರೆ (ಸಂಶೋಧ. ೨೦೨). **ಹೊಕ್ಕುಳ ಹೂವ** = ನಾಭಿಯಲ್ಲಿ ಹೂವಿರುವವನು ; ವಿಷ್ಣು : ಹೊಕ್ಕುಳ ಹೂವನ ರೂಹ ತೋಱಿದಳು ಪೆಣ್ಣುಕ್ಕಳ ಮಂಡೆವಾಣಿಕಕೆ (ಸೋಪಕ. ೩೦-೨೩). **ಹೊಕ್ಕುಳಾರದ ಶಿಶು**=ಅದೇ ಹುಟ್ಟಿದ ಕೂಸು ; ಹಸುಗೂಸು : ಮಹೀಶೂರರತ್ನಸಿಂಹಾಸನದ ಸಮರಾಂಗಣಧರ್ಮಕ್ಕೆ ಇಂತಹ ವೀರವಿಶ್ವಾಸವನ್ನೊಪ್ಪಿಸಿ, ತವಕದ ಪ್ರತ್ಯಾಶೆಯಿಂದ ಕುದಿಯುತ್ತಿರುವ ಕಯ್ದುಗೊಳ್ಳದ ಮಾರಾಳಿ . . . ಸ್ತ್ರೀ !—ಹೊಕ್ಕುಳಾರದ ಶಿಶು ! (ಪಟ್ಟಿ ೮. ೭೩-೦೫). **ಹೊಕ್ಕುಟ ಬುಗಟು** = ಉಬ್ಬಿರುವ ನಾಭಿ : ವೃದ್ಧನಾಭಿಃ, ತುಂದಿಲಃ, ತುಂಡಿಭಃ—ಈ ೩ ಹೊಕ್ಕುಟ ಬುಗುಟುಳ್ಳವನು (ಪಾಠಕಾ. ೦೨೦). [ದೇ. ‖ ತಮಿ. ಪೊಕ್ಕುಳ್, ಪೊಕ್ಕಿಲ್; ಮಲ. ಪೊಕ್ಕುಳ್, ಪೊಕ್ಕಿಳ್ ; ತುಳು. ಪುವಳು, ಪುವೊಳು, ಪೂವೊಳು ; ಕೊಡ. ಪೊಕ್ಕಿ ; ತೆಲು. ಪೊಕ್ಕಿಲಿ ; ಕೋಲಾ. ನಾಯ್ಕಿ. ಬೊಗುರ್]

**ಪೊಕ್ಕುಟು** 'ಪೊಕ್ಕುಟ್' ನೋ.

**ಪೊಕ್ಕ** 'ಪುಗುಲ್ಕ್' ನೋ.

**ಪೊಗಟು** 'ಪಗಟು' ನೋ.

**ಪೊಗಡ,** ಪಗಡೆ$_1$, ಪೊಗಡೆ (ನಾ). ಒಂದು ಬಗೆಯ ಮರ ಮತ್ತು ಅದರ ಹೂವು ; ಬಕುಳ ; ಕೇಸರ : ಪೊಗಡದ ಪೊಸವೂವಿನ ತುಡುಗೆಗಳ್ಗಮಧರದ ಪೊದಟ್ಟ ತಣ್ಗಂಪಿಂಗಂ ಮೃಗನಯನೆಯರನೆ ಬಿಡದೋಲಗಿಸಿದುದಳಿನಿಕರಮವರನಾರೋಲಗಿಸರ್ (ಆದಿಪು. ೦೦-೧೦೨). **ಪಗಡೆ$_1$** : ಸುರಗಿ ಸುರಹೊನ್ನೆ ಸಂಪಿಗೆ ಪಗಡೆ ಪನ್ನೀರು ಪಾರಿಜಾತ ಮೊದಲಾದ ತರುಗಳಲ್ಲಿ (ಸೌಗಂಧಿ. ೪-೦) ; ನೇರಳೆ, ಪಗಡೆ, ಪಾದರಿ . . . ಮೊದಲಾದ ಪುಷ್ಪಫಲಭರಿತವಾದ ವೃಕ್ಷಗಳನ್ನು (ಕೃಪಾಅ. ೨೨೬). **ಪೊಗಡೆ** : ಸೌಗಂಧಿಕಾದೇವಿಗೆ . . . ಪೊಗಡೆಹುವ್ವುಗಳ ಪೋಣಿಸಿದ ಒಡ್ಯಾಣವಂ ನಡುವಿನೊಳ್ ಕಟ್ಟಿದರೆ ನಡೆಯುವದಕೆ ತಡವಾಗಿ ಬಳಲಿ ಅಲ್ಲಲ್ಲಿ ನಿಲ್ಲುವಳು (ಸೌಗಂಧಿ. ೨೦೦-೨೨). [ದೇ. ‖ ತೆಲು. ಪೊಗಡ, ಪೊವಡ]

**ಪೊಗಡೆ** 'ಪೊಗಡ' ನೋ.

**ಪೊಗದಸ್ತು** 'ಪಗದಸ್ತು' ನೋ.

**ಪೊಗದಿ** 'ಪಗುದಿ' ನೋ.

**ಪೊಗರ್,** ಪೊಗರು, ಹೊಗರ್, ಹೊಗರು$_2$ (ನಾ). ೧. ಕಾಂತಿ ; ಹೊಳಪು ; ಮೆರುಗು ; ಪ್ರಕಾಶ : "ತೊಳಗು, ಬೆಳಗು . . . ಪೊಗರ್, ತೊಳಪಂ, ಮಸೆ—ಈ ೧೪ ಕಾಂತಿ" (ಕಕಪಾ. ೫೫-೨೦೨) ; ಪೊಗರೆಳವಟ್ಟು ಪೊನ್ನನೊರೆದಂತೆವೊಲಿರ್ದೊಡೆ . . . ತಾನೆ ವೀರಲಕ್ಷ್ಮಿಗೆ ನೆಲೆಯಕ್ಕುಮಿಾ ತೆಱದ ಬಾಳ್ವಿಡಿದಂ (ಲೋಕೋಪ. ೦೦-೦೦೦) ; ಅಂಗಜನ ಬಾಳ ಪೊಗರ್ ನಿಜಬಾಹುಮೂಲದಿಂ ತುಳ್ಕೆ ತುಳುಂಕಿದಳ್ ಹರಿಯ ಮೇಲೆ ಪೆಱಳ್ ತರಳಾಕ್ಷಿ ತೋಯಮುಮಂ (ಜಗದ. ೦೪-೦೦೩) ; ಪೊಂಬಳ್ಳಿಯ ಪೊಗರಂ ಗೆಲ್ದಂಗದ ಕಂಬುಲಲಿತಕಂಧರೆ ಮುನ್ನೆಱದ ನವಾಂಬು ಜಲಕ್ಕನೆ ಶೀವಲ್ಕೆ (ಶಮಕಾ. ೦-೯೩). ೨. ಹರ್ಷ; ಉತ್ಸಾಹ; ಉಬ್ಬು : ಗಮಕಂ ಪ್ರಯೋಗಮಾಭೋಗಮಳಂಕಾರಂ ಪೊಗರ್ ನಯಂ ಮಿಱುಗು ಪೊದಟ್ಟಮರೆ ಕೊಳೆ ಪಾಡುವಮರಿ ದಲಮರ್ದಂ ಮುಕ್ಕುಳಿಸಿಯುಂಗುಟ್ವ ತೆಱನಂ ಪೋಲ್ತಳ್ (ಆದಿಪು. ೭-೦೬); ದನಿಯ ಪೊಗರ್ ಮನೋಭವನ ಬಾಳ್ವೊಗರಂತಿರೆ . . . ವನಚರಿ ಪಾಡಿದಳ್ ಮಧುರಗೀತಿಗಳು (ಲೀಲಾವ. ೬-೩೨) · ಪೊಗರಿಂಪು ನುಣ್ಪು ಪೆಂಪಿನ ಸೊಗಸಿನ . . . ಚೆಲ್ವ ಕಾವ್ಯದ ಬಗೆಯುೞಿಯದ ಪುಚ್ಚು ಗುನ್ನಿ ಕುಗಿದೊಡಳ್ಕೆಂ (ಹರ್ಷಾರ. ೦-೦೬).**ಪೊಗರು** : ೧. "ಪೊಗರನಲ್ಕೆ ಕಾಂತಿಯುಕ್ಕುಂ" (ಕಶಕ. ೭೧) ; ಧುರದೊಳರುಹದ್ದಾಸರಾಯನ ವರಕೃಪಾಣದ ಪೊಗರು ಪೊಗರಿಲ್ಲರಿನೃಪಾಲರ ಶಿರವನೊಡೆವೊಯಿದೆತ್ತ (ಸಾಳ್ವಭಾ. ೨-೨೩) ; ಮೊಗಮುಂ ಮೆಯ್ಯುಂ ಪೊಗರುಂ ಮಿಗೆ ಸೊಗಸಂ ಪಡೆಯೆ (ಜಕಚ. ೩-೦೦); ಮೂಡಲಿದೆ ಹೊಸಚಿಗುರು ಮೂಡಲಿದೆ ಹೊಸ ಪೊಗರು (ಅರಳು. ೪೪೬-೫). ೩. ಬಿಂಕ; ಗರ್ವ; ಸೊಕ್ಕು : ಹೈಹಯಾತ್ಮಜನ್ಯದೆ ನಗರವಂ ಪೊರಮಟ್ಟು ಚತುರಂಗಬಲವೆರಸಿ ಪೊಗರಿನಿಂದೈತರುತಲಿರೆ (ಪಶಕು. ೦೦-೧); ಮುಂದಕೆ ವಿಗಡಿಸುವ ದಾಯವನು ತಿಳಿಯದೆ ಪೊಗರಿನಿಂ ದುರ್ನೀತಿಗೆಳಸಿದ ಪಾರ್ಥನು (ಕೋಗದು. ೦೭-೬೦); ಮಿತ್ರುವಿನ ಕೋರೆದಾಡೆಯು ಪೊಗರಿಗಂಜದೆದೆಯು . . . ಕಂಗೆಟ್ಟು ಮಮ್ಮಲನೆ ಮರುಗುತಿಹುದು! (ಕಬಕಾ. ೨೨-೨). **ಹೊಗರ್** : ೧. ಉರವಣಿಸಿ ತಮ್ಮನಟಿಗುಂ ಧುರದೊಳಿದೆಂದಂಜಿ ಹೊಗರ ನೆವದಿಂ ರಿಪುಭೂಪರ ನೊಸಲಕ್ಕರಮಿರ್ಪುವು ನೆರೆದು ಶರಣ್ಪೊಕ್ಕಿಳಾಧಿಪನ ಕೂರಸಿಯೊಳ್ (ಪರ್ಶಪು. ೭-೩೦); ನಳಿತೋಳ ಮೊದಲು ಹೊಗರಂ ಕಱಿಯೆ ಕಡೆಗಣ್ಣ ತೊಳಪ ಮಿಂಚಂ ಕೆದಱಿ (ಹಕಶಾ. ೩-೩೦) ; ಹೂವೊಗ್ಗಗಳ ಹೊದಱಿನ ಹೊಗರ ಹೊಸದೇಸಿಯಲಿ ಯುದ್ಧೋನ್ಮತ್ತನನುವಾದ (ಕುಮಾರಾ. ೬-೨೯-೨೬). **ಹೊಗರು$_2$** : ೧. ಲಲಿತವಿದ್ರುಮಲತಾವಿಭ್ರಮೋಪಮ

ಜಟಾವಲಿ ಹೊಗರನುಗುಳ್ವ ರುದ್ರಾಕ್ಷಮಾಲಾಜಾಲ (ಶಬ್ದಮ. ೨-೫೦); ಪೊಗರನುಗುಳುವ ಹೊಸಮಸೆಯ ಕೋಲುಗಳ ಕವಿಸಿದನು (ಕುಮಾ.ಭಾ. ೪-೦೩); ಕಾಸಿದಂತೆ ಕಾಂಚನದ ಹೊಗರು ಅಧಿಕವಲ್ಲವೆ ? (ಕೀಚಕ. ೭). ೨. ಬಾಹುಸತ್ವದ ಹೊಗರು ಹೋಗದು ಮನದ ಖಾತಿಯು ತೆಗಹು ತಗ್ಗದು ಹೊಕ್ಕು ತಿವಿದಾಡಿದರು ಬೇಸಱದೆ (ಕುಮಾ.ಭಾ. ೨-೦೦೦). ೪. ಹೆಚ್ಚಳ; ಆಧಿಕ್ಯ: ಭುಜಪ್ರತಾಪದ ಹೊಗರು ಹೊಸ ಪರಿಯೆನುತ ರಿಪುಗಳ ಹೊಗಳುತಿರೆ (ಕುಮಾ.ದ್ರೋ. ೫-೩೬); ಜಗದುಸುರು ಪಸರಿಸಿತು ಹರುಷದ ಹೊಗರು ಮಾಸಿಗಿತು ರಿಪುನೃಪರ (ಕುಮಾ.ದ್ರೋ. ೧೯-೫೦). ೫. (ಆಲಂ) ಮಂಕು : ಮೇಲುಮುಸುಕಿನ ಹೊತ್ತ ದುಗುಡದ ಹೊಗರ ಹೊಗೆವೊಗದ ತಾಳಿಗೆಯ ನಿರ್ದ್ರವದ . . . ನೃಪಾಲ ಹೊಕ್ಕನು ನಡುವಿರುಳು ನಿಜರಾಜಮಂದಿರವ (ಕುಮಾ.ಭಾ. ೦೨-೧).

[ದೇ.; ತಮಿ. ಮಲ. ಪುಕರ್; ತೆಲು. ಪೊಗರು, ಪೊವರು]

**ಪೊಗರಂಬು**, ಹೊಗರಂಬು (ನಾ). (ಸಾಣೆ ಹಿಡಿದ) ಹೊಳೆಯುವ ಬಾಣ; ಹರಿತವಾದ ಸರಳು : ಹರಿಯೆರ್ದೆಯೊಳಾಮುನಿಯ ನುಡಿಯು ಮಂಗಜನ ಪೊಳಪರಲ ಹೊಸಮಸೆಯ ಪೊ[ಪಾಠಾಂ. ಹೊ]ಗರಂಬುಗಳು ಮೊಡನೊಡನೆ ಭರದಿ ನೆಲೆಗೊಂಡುವು (ಸಾಳ್ವಭಾ. ೨೪-೨೨). **ಹೊಗರಂಬು :** ತ್ರಿತ ಹೊಗರಿನ ಬಾಯಿಧಾರೆಯ . . . ಹಂಗನ ಗಱಿಯ ಬಿಗುಹಿನ ಹಿಳುಕುಗಳ ಹೊಗರಂಬು ಕವಿದವು (ಕುಮಾ.ದ್ರೋ. ೫-೦೩) ; ಹೊಡಕರಿಸಿ ಹೊಗರಂಬು ಹೊಕ್ಕುವು ಕೊಡಹಿದರು ಕೊಬ್ಬಿದ ವಿರೋಧಿಗಳೊಡಲ ಬಗೆದುವು ಚಿಗಿಯೆ ನೆತ್ತರ ಧಾರೆ ದೆಸೆದೆಸೆಗೆ (ಜಾತ್ರಭಾ. ೭-೫೪).

[ಪೊಗರ್ + ಅಂಬು$_2$]

**ಪೊಗರಲಗು**, ಹೊಗರಲಗು (ನಾ). (ಕತ್ತಿ, ಖಡ್ಗ ಮೊದಲಾದುವುಗಳ) ಹೊಳೆಯುವ ಅಲಗು, -ಬಾಯಿ : ಬಗೆಯೆ ನಿಜದೇಹದನ್ನರ್ ಖಗನಾಯಕರಟ್ಟಿದೊಡುರ್ಕುಗೆಟ್ಟನೆ ಮುನ್ನಿಂ ಮಿಗೆ ಕಡುಗೂರ್ಪಂ ತಳೆದಂ ಪೊ[ಪಾಠಾಂ. ಹೊ]ಗರಲಗಂ ಪಱಿಯೆ ಮಸೆದವೋಲ್ ಹಯಕಂಠಂ (ವರ್ಧಮಾ. ೬-೫೬). **ಹೊಗರಲಗು :** ಹಿಪ್ಪೆಗರ ಹರೆಗಡಿದು ಹೊಗರಲ ಗೊಬ್ಬಿದವು ಕರುಳುಗಳ ನಿಮಿಷದೊಳೊಪ್ಪಗೆಡಿಸಿದವರಿಕದಂಬವನೀತ ನಂಬುಗಳು (ಕುಮಾ.ದ್ರೋ. ೨-೩೩) ; ಮೈಯೊಳಗೆ ಹೊಚ್ಚಿದವು ಹೊಗರಲಗು ಮುಚ್ಚಿದವು ನೆಣಸಯನು (ಕೃಷ್ಣಭಾ. ೦೩-೦೮). [ಪೊಗರ್ + ಅಲಗು$_2$]

**ಪೊಗರಳಿ**, ಹೊಗರಳಿ (ಕ್ರಿ). ಕಾಂತಿಗುಂದು ; ಕಾಂತಿಹೀನವಾಗು : ಅವನಿಪರ ಮುಖಂ ಪೊಗೆ ಸುತ್ತಿದ ಪೊಂಗನ್ನಡಿಯಂದದಿ ಪೊಗರಳಿದುವು ಪೊಗಸಿನ ಚಂದ್ರಂಬೋಲ್ (ಶಬರಶಂ. ೬-೧). **ಹೊಗರಳಿ :** ಒಗೆದ ಚಿಂತೆಯ ಹೊಗರಳಿದ ಮೊಗದ ಮಯ್ಯೊಗೆದ ಮಾತಿನ ಬಲವೆರಸು ದುಗುಡದಿಂ ಬಂದು ಪೊಕ್ಕನು ಬೀಡ ಒಲ್ಲಾಳ ಬಿಗುವುಗುಂದಿದ ಬಿಂಕದೊಳು (ಕುಮಾ.ಶಾಂ. ೦೩-೦೨೩). [ಪೊಗರ್ + ಅಳಿ$_1$ (<ಅೞಿ$_1$)]

**ಪೊಗರಾನ್**, ಹೊಗರಾನ್ (ಕ್ರಿ). ಕಾಂತಿಯನ್ನು ಹೊಂದು ; ಥಳಥಳಿಸು : ಪುಂಖದ ಪೊಳೆಪುರ್ವೆ ಮುಮ್ಮೊನೆಯ ಕೆಂಗಿಡಿ ಸಾಲಿಡೆ ರೂಢಿ ಸುತ್ತೆ ಪಿಂಗದೆ ಪೊಗರಾಂತ ಕೂರ್ಗಣೆಗಳೇಂ ಪರಿತಂದುವೊ ಪಾಂಡುಪುತ್ರನಾ (ಶಬಶಂ. ೪-೪೨). **ಹೊಗರಾನ್ :** ಹೊಗರಾಂತ ಹೊಸ ಹೊನ್ನ ರಸ ಕಾಯ್ದಿರೆ ಕಂಡು ಸೆಗಣಿಯೊಳಿಱಿವಂತೆ ಮೊಱಿದಿ ಮೃಗಮದ ಗಂಧಿಯರ್ ಗೋಮಯದಿಂ ಮುದ್ದುಮಗನ ದೇಹವ ಸಾರ್ಚಿದರು (ಮೋಹತ. ೦೭-೨೦). [ಪೊಗರ್ + ಆನ್$_1$]

**ಪೊಗರಿ** (ನಾ). [ಜೈನ] ಮುನಿಗಳ ಒಂದು ಸಂಘದ ಹೆಸರು ; ಗಚ್ಛಗಳಲ್ಲಿ ಒಂದು: ಗಛ್ಛೇ(ಚ್ಛೇ)ಶು ತುಛ್ಛೇ(ಚ್ಛೇ)ಪಿ ಪೊಗರ್ಯ್ಯಾಭಿಖ್ಯೇ ಸಂಸ್ತೂಯಮಾನೋ ಮುನಿರಾರ್ಜ್ಯ(ರ್ಯ್ಯ) ಸೇನಃ (ಎಪಿ. XIX, ೫೬೨-೧೮ ; 1054) ; ಜಿನಧರ್ಮಕ್ಕೆ ಮೂಲವಾದ ಮೂಲಸಂಘದಲ್ಲಿ ಪ್ರಸಿದ್ಧವಾದುದು ಸೇನಗಣ; ಅದರಲ್ಲಿ ಪ್ರಸಿದ್ಧವಾದುದು ಪೊಗರಿಗಚ್ಛ (ಕಶಾಅ. ೮೭ ಅಡಿಟಿ). [?]

**ಪೊಗರಿಗೆಱೆ** (ನಾ). ಒಂದು ಊರಿನ ಹೆಸರು : ತಳವನಪುರದೊಳ್ ತಳವೃತ್ತಿಯ ಮಣ್ ಪೊಗರಿಗೆಱೆಯೊಳ್ ಪನ್ನಿರ್ಕ್ಕಣ್ಣಾಗಂ ಮನೋಹರಂ ದತ್ತಂ (ಎಕ. I. ೦-೨೦ ; ಸು. ೯ಶತು ಕತ).

[? ಇದು 'ಪೊಗರಿಗೆಱೆ' ಎಂಬುದರ ಅಪಲಿಖಿತವಿರಬಹುದು]

**ಪೊಗರಿಡಿ** (ಕ್ರಿ). ಕಾಂತಿಯಿಂದ ತುಂಬಿರು : ಪಡೆಯನುಱೆ ಕೊಂದುವು ಶರಧಿಭವನಭವನ ಪೊಗರಿಡಿದಂಬುಗಳ್ಪಳಯಶತಕೋಟಿ ಶತಕೋಟಿಯಂ ಪೋಲ್ತು ಸಂಗರದೊಳು (ಕೃಷ್ಣಭಾ. ೨೨-೨೦). [ಪೊಗರ್ + ಇಡಿ$_2$]

**ಪೊಗರಿಳಿಸು** 'ಪೊಗರಿೞಿಸು' ನೋ.

**ಪೊಗರಿೞಿಸು**, ಪೊಗರಿಳಿಸು (ಕ್ರಿ). ಗರ್ವವನ್ನು ಕುಗ್ಗಿಸು ; ಅಹಂಕಾರವನ್ನು ಹೋಗಲಾಡಿಸು : ಸೊಕ್ಕಿಳಿಸು : ಜಯಲಕ್ಷ್ಮಿಯು ನಯನೋತ್ಪಲಮಯೂಖಮನೆ ತಾನೆ ಬಂದು ಕರಕಿಸಲಯಕಾಂತಿಯಿನೇಂ ರಾಗಂಬೆತ್ತುದೊ ಜಯಮಾಸಿ ಪೊಗರಿೞಿಸೆ ಕಿಸುರ ಮುಸಿಯಕ್ಕರವಂ (ಶಂಖಪಾಪಾ. ೯-೨೦). **ಪೊಗರಿಳಿಸು :** ಯಾರಾದರೂ ಆ ಜಂಬುಗಾರನ ಪೊಗರಿಳಿಸಬೇಕು (ಊಂ). [ಪೊಗರ್ + ಇೞಿಸು]

**ಪೊಗರು** 'ಪೊಗರ್' ನೋ.

**ಪೊಗರುಗು**, ಹೊಗರುಗು (ಕ್ರಿ). ಚೆಲುವು ಹೊರಸೂಸು ; ಕಾಂತಿಯು ಹೊರಚೆಲ್ಲು : ನಾಡೆ ಕಡುಚೆಲ್ವು ಮಿಕ್ಕು ಪೊಗರುಗುವ ಹೊಂಬಣ್ಣ ಮೊಲೆಯಾಯತದ ಸೆಕ್ಕಂದುಱುಂಬಿನ ... ಪೆಣ್ಮಕ್ಕಳೆಯ್ತಂದರೊಸೆದು (ಶಬ್ದಮ. ೩-೬೭) ; ಪಲ್ಲವಾಧರ ದಂತ (ಕುಚ ಪೊಗರುಗುವ) ಧವ್ಯಿಲ್ಲದೆ ಮೆಱೆವ ಹೆಣ್ಣುಗಳು ಪುಲ್ಲದಳಾಕ್ಷಿಗೆ ಪೊಸವೇಟ ಪುಟ್ಟುವಂತೆಲ್ಲರಿಬ್ಬಗೆ ಯಾದರಾಗ (ಮೋಹತ. ೦೯-೬೩) ; ಪೊಗರುಗುವ ಕಣೆಗಳ್ ಸಾರ್ತರ್ಪುದಂ ಕಾಣುತೆ ರಾಘವಂ ಪಡಿಸರಳಂ ತುಡುತೆ ಬಿಡದೋರೊಂದು ಪಗೆಗೋಲಂ ನಡುದಾರಿಯೊಳೆ ಇರ್ಕಡಿಗೆಯ್ವಂ (ಅದ್ಭುತ. ೪೯-೨೦). **ಹೊಗರುಗು :** ಹೊಗರು[ಪಾಠಾಂ. ರೊ]ಗುವ ಹೊಸ ಕಣೆಯ ದಡ್ಡಿಯ ಬಿಗಿದನೆಡಬಲ ನಿದಿರಿನಲಿ ಸೆಗಳಿಗೆಯ ಸಸಿಯಂತಾಯ್ತು ಕೌರವಸೇನೆ ನಿಮಿಷದಲಿ (ಕುಮಾ.ಭಿ. ೭-೩೨) ; ಹೊಗರುಗುವಂಗೋಪಾಂಗ ವಕ್ಷದೊಳು ಪೊಂಬೊಗರಿಯಂತಿರ್ಪನುಣ್ಬೊಲೆಯ ದೃಗುಯುಗಳದಿ ನೋಡಿ ಹೆಱಹಿಂಗಲಾಱದೆ ಮುಗುಳಂಬನಮರ್ದಪ್ಪಿದನು (ಮೋಹತ. ೦೯-೬೨). [ಪೊಗರ್ + ಉಗು$_1$]

**ಪೊಗರುವೆಱು** (ಕ್ರಿ). ಗರ್ವಪಡು; ಬೀಗು ; ಹೆಮ್ಮೆಪಡು : ಗದ್ದೆಯ ಗೊರವನೊಳ್ ಕಡಿದಾಡಿ ಪೊಗರುವೆತ್ತಿದ್ದೆ ನೀ ರಣರಂಗದೊಳಗೆ ಬಿದ್ದೆಯ ನನ್ನ ಬಾಧೆಗೆ ಕೃಷ್ಣ ಕರೆ ನಿನ್ನ ದೊದ್ದೆಯ ನಿಲಲೊಬ್ಬಗರಿದು (ಮೋಹತ. ೪೦-೦೮). [ಪೊಗರು (<ಪೊಗರ್) + ಪೆಱು$_1$]

**ಪೊಗರೆ** (ನಾ). ಪೊಟರೆ; ಬಿರುಕು; ಹೋರು : ಕಲ್ಲ ಪೊಗರೆಯೊಳಿಟ್ಟ ಕಾಮರ್ಗಿಲ ಮೊಟ್ಟೆಗಳ್ ತಾಮೆನಿಸಿ ಪರ್ಬಿದುವು ಪೆರ್ಜೇನ ಪುಟ್ಟುಗಳ್ . . . ಪೊಕ್ಕು ಕುಕ್ಕಿಱಿಸಿ ಜೋಂಪಿಸಿ ಕಲ್ಲ ಪೊಗರೆಯಂ ನೆಮ್ಮಿ ಪುಲಿ ಸಮಱುದುವು ಕಟವಾಯ ಸವಿಗಳಂ (ಅನಂತ. ೯-೦೭ ಡಣೆ).

**ಪೊಗರೇರು** 'ಪೊಗರೇಱು' ನೋ.

**ಪೊಗರೇಱು**, ಪೊಗರೇರು, ಹೊಗರೇರು, ಹೊಗರೇಱ್, ಹೊಗರೇಱು (ಕ್ರಿ). ೧. ಕಾಂತಿಯುಕ್ಕು; ಸೊಬಗು ಹೆಚ್ಚಾಗು : ಪೊಂಗುವ ಪೊಱವಾಱಿನ ಪೊಗರೇಱುವ ಪೊಂಗೊಡವೊಲೆಯ ಸೋರ್ಮುಡಿಯ ಉಂಗುರವಿಡಿನಡುವಿನ ನಿಡುಗಣ್ಣ ಲತಾಂಗಿಯರೆಸೆದರಂದಲ್ಲಿ (ಕುಂಬಾಶಾ. ೨೮-೩೩); ಅಲಿಗಳರಳ್ದುವಸು ಪಸರಿಸಿತೊಡಲೊಳಗೆಸೆದುದಾ ಲಲಿತಮುಖ ಕಾಂತಿ ಪೊಗರೇಱಿತವಯವಂ (ಕೃಷ್ಣಭಾ. ೨೪-೬೬); ಪವಣೆಗೆಯೊಪ್ಪೆ ಪುರುಳು ಪೊಗರೇಱಿಯಂಗವಿಸೆಯಲಂಕಾರಗಳು (ಹರಿಬಿ. ೮-೨೬).

೨. ಹರ್ಷಗೊಳ್ಳು; ಉಬ್ಬು; ಉತ್ಸಾಹಪಡು : ಸುರರುಂ, ಕಿನ್ನರರುಂ, ನರರುಂ, ವಾನರರುಂ ಪೊಗರೇಱಿ ಕಳೆವೆರ್ಚಿದರ್ (ರಾಪಟ್ಟ. ೧೧೪–೯).

**ಪೊಗರೇರು :** ೩. ಗರ್ವವು ಹೆಚ್ಚಾಗು; ಸೊಕ್ಕು : ಈಚೀಚೆಗೆ ತುಂಬಾ ಪೊಗರೇರಿರುವುದರಿಂದಲೇ ಈತ ಹೀಗಾಡುವುದು (ರೂಢಿ).

**ಹೊಗರೇರು :** ೧. ಗಿಡಬಳ್ಳಿ ಚಿಗುರಿಡಲು ಹೊಗರೇರಿ ಹೂಬಿಡಲು ನಕ್ಕಿಡಲು ಮುತ್ತಿಡಲು ತುಂಬಿ ಬಹವು (ರಾಪಚೇ. ೨೦–೪೦೯); ಉಡಿಗೆ ತೊಡಿಗೆಗಳಿಂದ ಹೊಗರೇರಿದ ರಾವುತನು ಅಂಗಳಕ್ಕಿಳಿಯುತ್ತಿದ್ದನು (ಸಪದಾ. I. ೪೪೩). **ಹೊಗರೇಱು :** ೧. ಹೊಗರೇರ್ವ ಹೊಂಬಣ್ಣ ಮುಖದೊಳು ಮುಖವಿಟ್ಟ ಸುಗುಣೆ (ಶಿಪಗೀ. ೦೬೯–೮೨೩). **ಹೊಗರೇಱು :** ೧. ವಿರಾಜಿಬಾರದು ಪ್ರಾಪ್ತಿವಶನೆಂದವಳಿಗೆ ಮಾಱುತ್ತರಗೊಟ್ಟು ನಗುತ ನೂಱಿಲೆಗಣ್ಣ ರುಕ್ಮಿಣಿಗೊಡರ್ಚಿದ ಹೊಗರೇಱುವ ಗರ್ಭೋತ್ಸವವ (ಮೋಹತ. ೪–೬೬); ಹೊಮ್ಮಿದ ಮೊಲೆ ಹೊಗರೇಱಿದ ಜೌವನವೊಮ್ಮಾಱು ಜಡೆಯ ಸೊಬಗಿನ ಉಮ್ಮತ್ತೂರು ಗೌರಾಜಿ ಚಿತ್ತಿನಿ ಬಲುಸುಮ್ಮಾನದೊಳ್ಪಿದಿದಳು (ಕಂಪತಿ. ೨೦–೬೬). ೨. ಕೇಶವನಾತ್ಮಸಂಭವಸೂನು ವೀರಾವೇಶದಿ ಹೊಗರೇಱುತಿರಲು ಆ ಸಮಯದಿ ಚಿತ್ರಲೇಖೆ ನಿರ್ಮಿಸಿದಳು ಭಾಸುರರಣಯಂತ್ರಮಣಿಯು (ಮೋಹತ. ೬೬–೫೮). ೪. ಉದ್ದೀಪನಹೊಂದು ; ಅಧಿಕವಾಗು ; ಹೆಚ್ಚಾಗು : ಮನದ ಖತಿ ಹೊಗರೇಱೆ ದುಶ್ಶಾಸನನ ಮಗನಿದಿರಾಗಿ ಖಡ್ಗದ ಮೊನೆಯ ಚೂರಿಸಿ . . . ತನಗೆ ಮೃತ್ಯುವ ಕರೆವವೊಲರ್ಜುನಕುಮಾರನ ಕರೆದು ಹಳಚಿದನು (ಕುಮಾದ್ರೋ. ೬–೫೭).

[ಪೊಗರ್ + ಏಱು$_1$ (< ಏೞ್$_1$) ]

**ಪೊಗರೇಟಿಸ್, ಹೊಗರೇಳ್, ಹೊಗರೇಳು** (ಕ್ರಿ). ೧. ಕಾಂತಿಯನ್ನು ಸೂಸು ; ತೇಜಸ್ಸನ್ನು ಬೀರು : ಸಮಸಂದಾ ಮಲಯಜ ಕುಂಕುಮ ಕಸ್ತೂರೀಜಲಾದ್ರ್ರತನುತತಿಯಿಂ ತತ್ಸಮದಾಜನಮೆಸೆದುದು ರತಿರಮಣನ ಪೊಗರೆಟ್ದ ಕುಸುಮಶರಸಮಿತಿಯವೋಲ್ (ಕುಸುಚ. ೫–೦೬೦).

**ಹೊಗರೇಳ್ :** ೧. ಅಗುರು ಕುಂಕುಮ ಪಚ್ಚೆಗಪ್ಪುರ ಪನ್ನೀರು ಮೃಗನಾಭಿ ಮುಖ್ಯಲೇಪನದಿ ತಿಗುರನಿಕ್ಕಿದರಾಳಿಯರು ಸತ್ಕುವರಿಯ ಹೊಗರೇಳ್ವ ಹೊಂಬಣ್ಣಮೆಯ್ಗೆ (ಮೋಹತ. ೨೩–೦೨). **ಹೊಗರೇಳು :** ೧. ಮುಗಿಲ ಮುಟ್ಟುವ ಕೋಟೆಯ ತೆನೆಯೆಡೆಯೆಡೆ ಹೊಗರೆದ್ದ ದಸಿ ಮೊನೆ ಶೂಲ ಝಗಝಗಿಸುವ ಹೇರಿಟ್ಟಿ ಮುರುಳುಗ್ಗೈಗಳುಗುಳುತಿರ್ದುವು ಕೆಂಗಿಡಿಗಳ (ಕಂಪತಿ. ೦೦–೦೩೦). ೨. ಉಬ್ಬು ; ಸಂತೋಷಪಡು : ನೆಗಹಿ ಪುಳಕಾಂಬುಗಳ ಲೋಚನ ಬಿಗಿದು ಹೊಗರೆದ್ದಾಗ ಹಿಮ್ಮಡಿಗೊಗುವ ಕೇಶದ ಬಾಲೆ ಭಾವಿಸಿ ನೆನೆದಳಚ್ಯುತನ (ಕುಮಾಭೀ. ಓಂಜ. ೦೬–೨೩); ಬಲಸಂಘಾತಕಭಯವನಿತ್ತು ಬಾಣವ್ರಾತವನು ಹೊದೆಗೆದಱಿ ಹೊಸ ಹೊಗರೆದ್ದನಡಿಗಡಿಗೆ (ಕುಮಾಕ. ೦೩–೨೨). ೩. ಉದ್ದೀಪನಗೊಳ್ಳು ; ಹೆಚ್ಚಾಗು ; ಅಧಿಕವಾಗು : ಹೃದಯದಲಿ ಹೊಗರೆದ್ದುದುರಿ ಬಳಿಕಾ ದಶಾನನನ (ತೊರಾ. ೩–೭–೦೩) ; ಬೊಬ್ಬರಿಯೆ ವೀರಧ್ವನಿಯಿಂದ. ತರು ಗಿರಿ ಹಬ್ಬಿ ಮುಂಚೂಣಿ ಉರಿ ಹೊಗರೆದ್ದು ಸುತ್ತೆ (ವಿರಾಕ್ಕ. ೭೫–೫).

[ಪೊಗರ್ + ಏೞ್$_1$]

**ಪೊಗರೊಗು, ಹೊಗರೊಗು** (ಕ್ರಿ). ೧. ಕಾಂತಿಯನ್ನು ಹೊರಸೂಸು,—ಚೆಲ್ಲು : ಮುಗುದೆಯೊರ್ವಳು ನೀರನೆಱೆವುತ ಪರ್ಥಿನ ಪೊಗರೊಗುತಿರ್ದ ಪಲ್ಲುಗಳ ಸೊಗಸುವ ದಾಡಿಮಬಿತ್ತೆಂದು ಶುಕನಿಗೆ ವಿಂಗೆ ತೋಱೆ ನಗುವರಬಲೆಯು (ಪರ್ಥಿ. ೦–೬೦) ; ಗಗನವಡರ್ದ ಸೌಧಂಗಳ ಮರೀಚಿಯಿಂ ಪೊಗರೊ[ಶಾಕಾಂ. ರು]ಗುವ ಪೊಚ್ಚಪೊಸ ಪೊನ್ನ ಕೋಟೆಗಳ ಕಾಂತಿಗಳ್ಳಿದೆ ಮುಸುಕಿಕೊಂಡೆಸದಿರ್ದವರ್ಜುನನ ಕಣ್ಗೆ ಕೌತುಕಮಾಗಲು (ಕೃಋಕಾ. ೦೭–೭). ೨. ಹೆಚ್ಚಾಗು ; ಅಧಿಕವಾಗು : ಪೊಗರೊಗುವ ಕಟ್ಟಲೆಗೆ ಕಣ್ಗಳಂ ಮುಚ್ಚುತುಂ (ಉದ್ಭಟ. ೦೦–೦೨೭).

**ಹೊಗರೊಗು :** ೧. ಹೊಗರೊಗುವ ಸೂನಿಗೆಯ ಸುಪತಾಕೆಗಳ ಸಿಂಧದ ಹೊಳೆವ ಹೊಂಗಂಬುಗೆಯ . . . ಅಗಿವ ಚೀತ್ಕಾರದ ಛಡಾಳದ ವಿಗಡ ರಥಿಕರ ರಹಿಯ ರಥವಾಜಿಗಳ ನೋಡ್ದೆ ಪಾರ್ಥ (ಕುಮಾಶೀ. ೩–೦೯) ; ಹೊಗರೊಗುವ ದಾಡೆಗಳ ದಳ್ಳಿಸುವ ಗಡುಮೋಱೆಯ ಕೆಂಪಡರ್ದ ಮಿಸೆಗಳ ಕೆಂಗಣ್ಣುಗಳ ಮುಪ್ಪುರಿಗೊಂಡ ಹುಬ್ಬುಗಳ . . . ರಕ್ಕಸರನೀಕ್ಷಿಸಿ ನುಡಿದನಸುರೇಂದ್ರ (ತೊರಾ. ೬–೦೩–೬).

[ಪೊಗರ್ + ಒಗು$_1$]

**ಪೊಗರೊಗೆ** (ಕ್ರಿ). ಕಾಂತಿಯು ಸೂಸು ; ಪ್ರಕಾಶವು ಹೊಮ್ಮು : ಕಾಮಿನಿಯ ನಿಡುಜಡೆ ರಂಜಿಸಿದುದು ಪೊಗರೊಗೆಯೆ ವಿಜೃಂಭಿಸುವಂಗಜ ನೃಪನ ಮಸೆದ ಸುರಗಿಯ ಪಾಂಗಿಂ (ಉದ್ಭಟ. ೯–೦೦೩).

[ಪೊಗರ್ + ಒಗೆ$_1$]

**ಪೊಗರ್ಗಣ್**, ಹೊಗರುಗಣ್ಣು (ನಾ). ಹೊಳಪಿನಿಂದ ಕೂಡಿದ ಕಣ್ಣು : ಕಾಂತಿಯುಕ್ತವಾದ ಕಣ್ಣು : ಪೊಗರ್ಗಣ್ಗಳ ಪೊಳೆವಲರ್ಗಣ್ಗಳ ಬೆಳತಿಗೆಗಣ್ಗಳ ಬೆಳದಾವರೆಗಣ್ಗಳ ಸೊಗಯಿಪ ಸೊರ್ಕುಂಗಣ್ಗಳ ಸುದತಿಯ ರೀಕ್ಷಿಸಿದರ್ ನೃಪನ (ಜಯುಕಾ. ೦೦–೫೪). **ಹೊಗರುಗಣ್ಣು :** ಹೊಗರುಗಣ್ಣು, ನಿಗುರಿದ ಕಿವಿ ಹಗುರುಮೈಯ್ಯ ಚಿಗುರೆಯು ಎರಡೆ ದಿವಸ ಕೂಡಿ, ಬೇಡಿ ತಿಗುರಳಿದಿತು ಚಿಗುರೊಲು (ಪಾದಂ. ೨೭–೦). [ಪೊಗರ್ + ಕಣ್]

**ಪೊಗರ್ಗಣೆ, ಹೊಗರುಗಣೆ** (ನಾ). ಕಾಂತಿಯುಕ್ತವಾದ ಬಾಣ ; ಹೊಳಪಿನಿಂದ ಕೂಡಿದ ಸರಳು : ಉಬ್ಬಿದುದು ಮೈ ರೋಷದಿಂದೆ ಗಂಟಿಕ್ಕಿದುವು ಪುಬ್ಬುಗಳ್ಬಭ್ರುವಾಹಂಗೆ ತೆಗೆತೆಗೆದಿಸುತ ಬೊಬ್ಬಿಱಿದನನು ಸಾಲ್ವನಂ ಮುಸುಕಿದುವು ಕೋಟಿಸಂಖ್ಯೆಯ ಪೊಗರ್ಗಣೆಗಳು (ಕೃಋಕಾ. ೨೨–೧೧). **ಹೊಗರುಗಣೆ :** ಘೃತಲೇಪನದ ಬಂಧದ ಹೊಗರುಗಣೆ ಹೂಳಿದುವು ಗುರುಸುತನಂಬಿನಂಬುಧಿಯ (ಕುಮಾಕ. ೩–೫).

[ಪೊಗರ್ + ಕಣೆ$_1$]

**ಪೊಗರ್ತೆ** 'ಪೊಗಟ್ತೆ' ನೋ.

**ಪೊಗರ್ತೆವಡೆ** 'ಪೊಗಟ್ತೆವಡೆ' ನೋ.

**ಪೊಗರ್ತೆವೆಱು** 'ಪೊಗಟ್ತೆವೆಱು' ನೋ.

**ಪೊಗರ್ವಟ್ಟು** (ನಾ). ಕಾಂತಿಯ ವೃತ್ತ,–ಬಿಂಬ; ಶೋಭೆಯ ಮಂಡಲ: ಪೊಗರ್ವಟ್ಟನತನುಬಾಣದ ಪೊಗರಂ ನುಹ್ಕೊಗರೊಳಿಟ್ಟಿಸಿ ನೋಡಿದ ಕಣ್ಣುಣ್ಣುಗುಮೆನಿಪ ನುಣ್ಪಿನಿಂದೇಂ ಸೊಗಯಿಸುವುವೊ ಬಾಹುಮೂಲಮಾ ಕಾಮಿನಿಯಾ (ಪುಳ್ಳಕ. ೩–೭೮); ಸಿಡಿಲ್ದುಗುತುದುವು ಪುಷ್ಪಸಾಯಕಂಗಳ ಪೊಗರ್ವಟ್ಟು ಚಂದ್ರಿಕೆಯ ಬಿಟ್ತೆಳಮಿಂಚಿನ ತತ್ತಿ ತಾರಕಂಗಳ ಮಱಿಯೆಂಬ ವಾರಿಧರವಾರಣವೇಣುವರಾಹವಶಾಕ್ತಿಕಂ (ಜಗಿ. ೦೬–೨೯).

[ಪೊಗರ್ + ಬಟ್ಟು]

**ಪೊಗರ್ವಟ್ಟೆ** (ನಾ). ಹೊಳಪಿನಿಂದ ಕೂಡಿದ ಬಟ್ಟೆ,—ವಸ್ತ್ರ : ರಾಂತಕ್ಕೆ—ಕುಳಿಗಾರ್ಳಿ, ಬೆಳರ್ಗಂಪು . . . ಪೊಗರ್ವಟ್ಟೆ ಬೆಮರ್ವನಿ, ಅಲರ್ಜೊಂಪಂ, ಕದಿರ್ಜೊನ್ನಂ (ಕಪಾದ. ೪೩ ಪ್ರಯೋ); ತಳಿರ್ಗಂಪು, ಬೆಳರ್ಗಂಪು . . . ಪೊಗರ್ವಟ್ಟೆ (ಕಪ್ಕಾಸು. ೭೩ ಪ್ರಯೋ).

[ಪೊಗರ್ + ಪಟ್ಟೆ$_3$]

**ಪೊಗರ್ವಡು** (ಕ್ರಿ). ೧. ಪ್ರಕಾಶವನ್ನು ಹೊಂದು, – ಪಡೆ; ಕಾಂತಿಯುಕ್ತವಾಗು : ಸೊಗಯಿಸೆ ತೋಳ ಮೊತ್ತಮೊದಲೊಳ್ ಪೊಗರ್ವಟ್ಟೆಸೆವೊಂದು ನುಣ್ಪು ಸಾವಗಿಸುವ ಮೇಲುದಂ ಮೊಲೆಗಳ್ಕಿಱಿಯುತ್ತಿರೆ . . . ಘಟ್ಟಿಮಗುಳ್ಚುವ ಘಟ್ಟಿವಳ್ತಿಯಂ ಭೋಂಕನೆ ಕಂಡು (ಕಂಪಕಾ. ೯–೫೯); ಅಗಲದೆ ರೇಖಾತ್ರಯದಿಂದಗಲದ ಪೊಗರ್ವಟ್ಟ ಬಂಧುರಚ್ಛವಿಯಿಂ ಕಂಬುಗಳಂ ನಗುವಂತಿರೆ ಕಂಬುಗಳಂ ಕರಮೆಸೆಗುವಮಾ ವಣಿಕ್ಪತಿಸತಿಯಾ (ಸುಕುಮಾ. ೯–೯೯). ೨. ಚೆಲುವನ್ನು ಹೊಂದು : ಸೊಗಯಿಸಿ ತೋರ್ಪ

ಸೋಗೆಕೊರಲೊಳ್ ಪೊಗರ್ವಟ್ಟಿಸೆದಿರ್ಪ ಕರ್ಪು ... ಮನಂಗೊಳೆ ಚೆಲ್ವ ನಾಳ್ದು ದೀ ನಗವನರಾಜಿಯೊಳ್ ಸುಟಿಯುತಿರ್ಪ ವಿಚಿತ್ರಶಿಖಂಡಿಮಂಡಲಂ (ಕಾವ್ಯಾವ. ೬೦೯)· [ಪೊಗರ್+ಪಡು₁]

**ಪೊಗರ್ವಡೆ** (ಕ್ರಿ). ಕಾಂತಿಯುಕ್ತವಾಗು ; ಪ್ರಕಾಶಮಾನವಾಗು : ತೋರ್ಪ ಕಣಿಯೆಲ್ಲ ಪರುಷದ ಕಣಿಗಳಗ್ರುದಿ ಪೊಗರ್ವಡೆದ ರತ್ನಂಗಳೆಯ್ದೆ ಚಿಂತಾರತ್ನಮುರ್ವಿ ಬೆಳೆದಿರ್ಪ ತರುಗಳ್ ಕಲ್ಪತರುಗಳಲ್ಲಲ್ಲಿ ಗಿರಿಸಾನುವಿಂದೆ ...ಕೈಲಾಸಪರ್ವತಂ ಕಣ್ಗೆಸೆದುದು (ಶಂಖ. ೨-೧೧) ; ಉಡುರಾಜಮಂಡಲಂ ಶಂಖವರ್ಣಂ ಪೊಗರ್ವಡೆದ ಕೌಮುದಿಯಾಗೆ ರಾತ್ರಿಲಕ್ಷ್ಮಿಯ ಭಾವಮಡಸಿ ಕಣ್ಗೆಸೆದುದು (ಸಂಶಿಖಾ. ೨-೬)· [ಪೊಗರ್ + ಪಡೆ₁]

**ಪೊಗಸು** (ನಾ). ೧. ಬೆಳಗಿನ ಜಾವ ; ಮುಂಜಾವ ; ಪ್ರಾತಃಕಾಲ : ನಿನ್ನ ಮೊಲಗಟ್ಟಲೆಗಾಂ ಬೆಟಗಾದನಿಂದು ಬೇಟೆಗಳೊ ಬಯ್ಗೆಯೋ ಪೊಗಸೊ ನಾಳೆಯೊ ನಾಡಿದೊ ನಿನ್ನ ಜೀವಿತಂ (ಅಂಕು. ೩-೬೬) ; ವಿಮಲ ಪ್ರಗುಣನುಪಶಾಂತಕಾಮಂ ಪೊಗಸಿನ ಚಂದ್ರಂಬೊಲಿರ್ದನಾ ಶ್ರೀಚಂದ್ರಂ (ಅರ್ಧನೇ. ೪-೩೨) ; ನಸುನಗೆ ಮಿಸುಗುವ ಮೊಗಮೇಕೆ ಪೊಗಸಿನ ಶಶಿಯಂತೆ ಕಲೆಗುಂದಿದುದು (ಶಬಸಂ. ೮-೭೦). ೨. ಹಗಲು : ನಿನ್ನೊಳಿರುಳುಂ ಪೊಗಸುಮೆಟ್ಟು ಪೊಗೆ ಗುಡುಗುಂಗಳನ್ ಆ ಬೇವ ಬೆಂಕೆ ಒಳಗೆನಿತಿರ್ಕು ಮೆಂಬುದು! (ಅಕ್ಷತ್ಸ. ೩೫·೭೨೪).

**ಪೊಗಳ್** 'ಪೊಗಟ್₁' ನೋ.

**ಪೊಗಳಿಕೆ** ‘ ಪೊಗಟ್ಕೆ ’ ನೋ.

**ಪೊಗಳಿಸು** ‘ ಪೊಗಟಿಸು ’ ನೋ.

**ಪೊಗಳು** ‘ ಪೊಗಟ್₁ ’ ನೋ·

**ಪೊಗಳ್ಕೆ** ‘ ಪೊಗಟ್ಕೆ ’ ನೋ·

**ಪೊಗಳ್ತೆ** ‘ ಪೊಗಟ್ತೆ’ ನೋ.

**ಪೊಗಳ್ತೆವಡೆ** ‘ ಪೊಗಟ್ತೆವಡೆ ’ ನೋ.

**ಪೊಗಟ್₁**, ಪೊಗಳ್, ಪೊಗಳು, ಹೊಗಳ್, ಹೊಗಳು₁ (ಕ್ರಿ)· ೧. ಕೊಂಡಾಡು ; ಬಣ್ಣಿಸು ; ಸ್ತುತಿಸು : “ ಪೊಗಟ್–ಸಂಸ್ತವನೇ ” (ಶಮದಾ) ; ಮಾದಕ್ಷಿಣಾಪಥಬಹುಶತಹವನಾಹವದು[ಳ್] ಪಶುಪ್ರದಾನ ಶೌರ್ಯೋದ್ಯಮಭರಿತೋ[ನ್ದಾನ]ಪಶುಪತಿಯೆನ್ದು ಪೊಗಟೆಪ್ಪೊಟ್ಟಣ ಪಶುಪತಿ ನಾಮಧೇಯನಾಸರಕ್ಕೆಲ್ಲಭಟರಿಯಾ ಪ್ರೇಮಾಲಯಸುತನ್ಗೆ (ಮೈಶಾ. ೦೯೩೬, ೦೬-೮ ; ಸಂ· 450) ; ಪಟಿಗೆ ಮೇಣ್ಪೊಗಟ್ಗೆ ಮೇಣ್ ನೆವಮಿಲ್ಲದೊಡಿಂತು ಕೈಗಟಿಯೆ ಬಗ್ಗಿಸುಗೆ ಮೇಣ ಮರೆಲ್ಲರುಮಂತುಮಾನು ಟೀವನಲ್ಲಿಂ (ಕಿರಾ. ೦-೦೯೬) ; ನೀನ್ನಿನ್ನ ನೃಪನ ದಿಗ್ವಿಜಯೋನ್ನತಿಯಂ ಪೊಗಟ್ದು ಮೂರ್ಛೆವೋಪ್ಪೆ ಪೊಗಟ್ದಂ ನೀನ್ನಿನ್ನ ಮನದೋಳೆಶಿದು ಬನ್ನಮನೆತ್ತುಪವೊಲಾಯ್ತು ನಿನ್ನಮನಿಪನಾ (ಅಂಕು. ೦೯-೬೬)· **ಪೊಗಳ್:** ೧. ತಮ್ಮದೊಂದರ್ಕ(ಟ್ಕ)ಟಿಂದಂ ಪೊಗಳಲ್ (ಎ·ಕ·XIII. ೩೩೦-೮; 929); ರಾಜಕುಲದೀಪಕನ ರೂಪು ಸೌಂದರ್ಯಮನೇನೆಂದು ಬಣ್ಣಿಪೆಂ ಎಂತು ಪೊಗಳ್ದಪೆಂ (ಶಂಬರ· ೪-೨೦) ; ಹದಿಬದೆಯರ ಪೆಸರ್ಗೊಂಡು ಪೊಗಳ್ವುದು ವಿದಿತವ್ಯಸಲೆ ವೈದೀರಿಗೆ (ಜಂಬೂ· ೨-೧೫)· **ಪೊಗಳು** : ೧. ಆ ಸತಿಯ ರೊಲಿದು ಬಲಗೊಂಡೆಟಗಿ ಪೊಗಳುತಿರ್ಪಾ ಸಮಯದೊಳು . . . ಸಿರಿ ಸರಸ್ವತಿವೆರಸಿ ಗಿರಿಜೆ ಬಿಜಯಂಗೈದಳು (ಸಿದ್ಧರಾ. ೦-೬೬) ; ಸುಜ್ಞಾನ ದಿಂದಟಿದು ಪೊಗಳತೊಡಗಿದನು ಸೌಂದರಕುಮರನು (ಸೌಂದಕು. ೫-೦೬) ; ಪರಮಪತಿವ್ರತೆಯರ ನಡತೆಯನಿಲ್ಲಿ ಪುರುಳುಗೊಳಿಸಿ ಪೊಗಳುವೆನು (ಹರಿ. ೦-೯೭)· **ಹೊಗಳ್** : ೧. ಹೊಗಳ್ವ ವೇದಾಳಿಗತಿಗೂಢ ಕೂಡಲಸಂಗ ಸೊಗಯಿಸುವ ಘನವೃಷಾರೂಢ ಕೂಡಲಸಂಗ (ಬಸವ. ೩-೯೩). **ಹೊಗಳು₁** : ೧. ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರೆನ್ನ ಹೊಗಳಿ ಹೊಗಳಿ (ಬಸವ. ೩೯೬) ; ತೆಗಸು ದಳವನು ಸಾಕು ಬಟಿದೇ ಹೊಗಳುತಿಹೆ ನೀ ನಮ್ಮನು (ಕುಮ್ಮಾರ್ದ್ರೋ. ೦೫-೪); ಅಗಣಿತವಿದ್ಯಾಧಿಕರು ಬಂದಲಸದೆ ಹೊಗಳಿದರಬುಜಾಂಬಕನ (ಕೋಹಕ. ೪-೬೦) ; ಹೊಗಳಿ ಮಾರಬೇಕು, ತೆಗಳಿ ಕೊಳ್ಳಬೇಕು (ಗಾದೆ)· ೨. ನಿರ್ಧಾರವಾಗಿ ಹೇಳು ; ವಿವರವಾಗಿ ಹೇಳು : ಧರ್ಮಜ ಹೊಗಳು ಹೊಣೆಯುನು ವಚನಿಸೊಡ್ಡವನಿದು ವಿನೋದವಲೆ ಒಗೆವಡೊಂದೇ ಹಲಗೆ ಮೇಲಣ ದುಗುಣ ಸಲ್ಲದು (ಕುಮ್ಮಾಸ. ೦೬-೯೭); ಮನೆಯನ್ನು ಎರಡನೆಯ ಭೋಗ್ಯಕ್ಕೆ ಕೊಟ್ಟಾಗ ಭೋಗ್ಯಪತ್ರದಲ್ಲಿ ಮೊದಲ ಭೋಗ್ಯವನ್ನು ಹೊಗಳಿ ಬರೆಯಬೇಕು (ಲೂ).

**ಪೊಗಟೆ ಪಡು** = ಹೊಗಳಿಸಿಕೊಳ್ಳು : ಸುಬ್ರಾಹ್ಮಣನಾಗಿದುರ್ಗಂ ಸುಬ್ರಾಹ್ಮಣರಿಂದೆ ಪೊಗಟೆಪಟ್ಟುಂ ಮತ್ತಂ ಸುಬ್ರಾಹ್ಮಣತ್ವಮಾ ನೀಂ ನಿರ್ಬ್ರಹ್ಮಂ ಕೆಡಿಸಿ ಸವಣನಾದ್ದೆ ಮರುಳೇ (ಧರ್ಮಾಮೃ. ೮-೬೭).

[ದೇ.॥ ತಮಿ. ಪುಕಟ್ ; ಮಲ. ಪುಗಟು ; ತುಳು: ಪೊಗಳು, ಪುಗಳು ; ತೆಲು. ಪೊಗಡು, ಪೊವಡು ]

**ಪೊಗಟ್₂**, ಹೊಗಳ್ಮ₂ (ನಾ). ಸ್ತುತಿ ; ಕೊಂಡಾಟ ; ಪ್ರಶಂಸೆ : ಜಟಕ್ಕೆ —ಪೋಟ್, ಬೀಟ್ . . . ನೆಗಟ್, ಪೊಗಟ್, ತೆಗಟ್ (ಶಬ್ದಮ. ೪೬ ಕೃಯೋ)· 'ಪೊಗಟುಲಿ' ಪರಾ. **ಹೊಗಳ್ಮ₂** : ದೂರನ್ನು ಎದುರಿಗಾಡು, ಹೊಗಳನ್ನು ಹಿಂದಾಡು (ಗಾದೆ)·    [ < ಪೊಗಟ್₁ ]

**ಪೊಗಟಿಸು**, ಪೊಗಳಿಸು, ಹೊಗಳಿಸು (ಕ್ರಿ). ಸ್ತುತಿ ಮಾಡಿಸು ; ಪ್ರಶಂಸೆ ಮಾಡಿಸು : ಮಾನಧನಾ ಪೊಗಟಿಸಲೇಂ ದಾನಿಯೆ ನೀನುಂತೆ ನಿನ್ನ ಕಸವರಮೆಂದುಂ ದೀನಾನಾಥರ ಕೆಯ್ಯದು ದಾನಿಯದೆಂತೆಂಬುದಿಂತು ಹೇತ್ವಾಕ್ಷೇಪಂ (ಕಾವ್ಯಾ. ೩-೦೦೫) ; ಬಲಿಂದಮನಿಂ ಬಿಲ್ಲ ಬಲ್ಮೆಯಂ ಪೊಗಟಿಸಿದಂ (ಶಂಕಶಾ. ೫-೪೬); ತುಂಬಿಯಿಂದಂ ಗಿಳಿಯಿಂದಂ ಬೀರಮಂ ಪಾಡಿಸಿ ಪೊಗಟಿಸುವಂ ಚೈತ್ರದೊಳ್ ಚೈತ್ರಮಿತ್ರಂ (ಜಗಂ. ೦೪·೪೦)· **ಪೊಗಳಿಸು** : ಮನಮೊಲ್ದಾಗ್ಗಿರ್ಗೀಯನಾರಿಂ ಪೊಗಳಿಸನವನೀಮಂಡನಂ ವೀರಲಕ್ಷ್ಮೀಸ್ತನಹಾರಂ ವಾಜಿವಂಶಾಂಬರಹಿಮಕಿರಣಂ . . . ನಾಗವರ್ಮ್ಮ (ಶಾಂದೀಸ್. ೩-೦೭ ; 1047); ಶಿವನಾಜ್ಞೆಯಂ ಸಂಪಾದಿಸಲು ಪಾಲಿಸ ಲಖಿಳರಂ ಭೇದಿಸಲು ಲೋಕಂಗಳಂ ಪೊಗಳಿಸಲು ನೆಗಳಿಸಲು ಈ ಮಹಿಹ ವಾಗಿಳೆಗೆ ಬಂದ ಮಹಾಮಹಿಮ ಹರಮೂರ್ತಿ (ಬಸವು. ೩೬-೪೨). **ಹೊಗಳಿಸು** : ಅರಸ ಕರ್ಣಚ್ಛೇದವೇ ಜಯಸಿರಿಯ ನಾಸಾಚ್ಛೇದವಿನ್ನ ರವರಿಸದಿರು ಹೊಯ್ದಾಡಿ ಹೊಗಳಿಸು ಬಾಹುವಿಕ್ರಮವ (ಕುಮ್ಮಾಕ. ೦-೦೬).

[ಪೊಗಟ್₁ + — ಇಸು₁]

**ಪೊಗಟುಲಿ** (ನಾ). ಹೊಗಳಿಕೆಯ ಮಾತು ; ಕೊಂಡಾಟದ ನುಡಿ : ಮುಗಮುಗಿಸುತ್ತುಮಿರ್ಪ ನಟುಸುಯ್ಗಲರ್ಮಕ್ಕಿ ಜಿನುಂಗುತಿರ್ಪಿನಂ ಬಗೆಗೊಳೆ ಬಂದು ನಿಂದು ನೆಟೆದಗ್ಗದ ನೀಟಿಯರೊಲ್ದು ಪರ್ಪುವಾ ಪೊಗಟುಲಿ ಪೊಣ್ಮೆ ಬಿತ್ತರದೆ ಮುತ್ತಿನ ಸೇಸೆಯನಾಗಳಿಕ್ಕಿದರ್ (ಕಬ್ಬಿಗಾ. ೩೪೨).    [ಪೊಗಟ್₂ + ಉಲಿ₂]

**ಪೊಗಟ್ಕೆ**, ಪೊಗಳಿಕೆ, ಪೊಗಳ್ಕೆ, ಹೊಗಳಿಕೆ, ಹೊಗಳ್ಕೆ (ನಾ)· ಕೊಂಡಾಟ ; ಪ್ರಶಂಸೆ : 'ಪೊಗಟ್ಕೆವೆಟು' ಪರಾ. **ಪೊಗಳಿಕೆ** : ಎನ್ನ ಜಿಹ್ವೆಗೆ ಮೊಳಗುವಂದದಿ ನಿನ್ನ ನಾಮಾವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ (ಹಂಶಾ· ೨೦) ; ಪೊಗಳಿಕೆಗೆ ಹಿಗ್ಗಲೊಲ್ಲಡೆ, ತೆಗಳಿಕೆಗೆ ಕುಗ್ಗಲಾರಡೆ, ಲತೆ ಫಲಕೆ ಸಿಗ್ಗಲೇಕೆ ? (ಗೀಶಂ. ೦೦೪-೪೦)· **ಪೊಗಳ್ಕೆ** : ಮುನಿಗಳ ಪೊಗಳ್ಕೆಯಿಂದಲೆಗೆ ಕೆಲದವನಿನಂದನೆಯ ಮೊಗ ನೋಡಿ ನಸುನಗುತಾ ರಘೂದ್ವಹಂ . . . ಮುಂ· ನೆರೆದ ಸಭೆಗಿಂತೆಂದನು (ಶ್ರೀರಾಮ. ೫-೪೦). **ಹೊಗಳಿಕೆ** : ಹೊಗಳಿಕೆಗೆ ಹೊಟಗಾದರ್ವೆಮರು ವಿಗಡರ ದರೊಳಗಿಬ್ಬರಳಿದರು ಹಗೆಗಳುಳಿದಿರಿ ಮೂವರೆಂದನು ಭಾನುಸುತ ಮುಳಿದು (ಕುಮ್ಮಾಕ. ೯-೦೬) ; ನೋಟಕರು ಹೊಗಳಿಕೆಯ ಪರಿಪರಿಯ ಕೈವಾರಿಗಳು ನೆರೆದುದು ನಿಮ್ಮಯೋಧ್ಯಾನಗರದಧಿರಾಜೇಂದ್ರಚಂದ್ರಮನಶ್ವಮೇಧದಲಿ

(ಕೊರಂಾ. ೦–೭–೨೩). **ಹೊಗಳ್ಕೆ :** ಣೂ–ಸ್ತವನೇ, ಹೊಗಳ್ಕೆಯೊಳ್ (ಶಾಕಶ್ಕೃ. ೨೩೦). [ಪೊಗಟ್$_1$ + – ಕೆ]

**ಪೊಗಟ್ಕೆವೆಱು** (ಕ್ರಿ). ಪ್ರಶಂಸೆಯನ್ನು ಪಡೆ : ಅಂತು ಪೊಗಟ್ಕೆವೆತ್ತ ಒಡ್ಡಾಯನವಮಹಾರಾಜಂಗೆ ಪಟ್ಟದರಸಿ ಪ್ರಭಾವತಿಯೆಂಬಳ್ (ಧರ್ಮಾಮೃ. ೪–೦೩). [ಪೊಗಟ್ಕೆ + ವೆಱು$_1$]

**ಪೊಗಟ್ತೆ**, **ಪೊಗರ್ತೆ**, **ಪೊಗಳ್ತೆ**, **ಹೊಗರ್ತೆ**, **ಹೊಗಳತೆ**, **ಹೊಗಳ್ತೆ** (ನಾ). **ಹೊಗಳಿಕೆ ; ಕೊಂಡಾಟ ; ಪ್ರಶಂಸೆ :** "ಪೊಗಟ್ತೆಯೆನೆ ಕೀರ್ತನಾಖ್ಯಂ" (ಶಂಜೀವ. ೭) ; ಗುರುಗಳ ಪೊಗಟ್ತೆಗೆ ರಾಗಿಸಿ ಸಂತೋಸಂ ಬಟ್ಟಿರ್ದೊಡೆ (ವರ್ಧಮಾ. ೬೨–೨೪) ; ನೆಗಟ್ತೆವೆತ್ತ ಪತಿಭಕ್ತಿಯ ಮ್ಮೆಯ ಮಾನಸಿಕ್ಕೆಯಗ್ಗಲದ ಪೊಗಟ್ತೆ ತನ್ನದೆನೆ ಪೆಂಪು ಮನೋಹರಿಗಲ್ಲದಕ್ಕುಮೇ (ಆದಿಪು. ೦–೭೨) ; ಇನ್ನು ಜನಂ ಪೊಗಳೆ ಪೊಗಟ್ತೆಗಂ ನೆಗರ್ತ್ತೆಗಂ ತಾನೆ ನೆಲೆಯಾಗಿ (ಎಕ. XI, ಚಿತ್ರದು. ೩೪–೨೩ ; 1123) ; ಜನಮನೋಹರಮಾಗಿ ಪೊಗಟ್ತೆಗೊಪ್ಪುವುಪ್ಪರಿಗೆಗಳಿಂ ನೆಗಟ್ತೆವಡೆದಿರ್ದುದು ಸೌಂದರರಾಜ ಮಂದಿರು (ದಶಕು. ೮–೨೩೬). **ಪೊಗರ್ತೆ :** ಇನ್ನಾಪ್ರ್ಪೊಗರ್ತ್ತೆ(ಟ್ತೆ)ಗಡ ಪ್ಪಾದ ಮಹಾಮಹರ್ (ಎಚ. XIII, ೩೨–೬೨ ; 928) ; ಅಜ್ಞಾನ ಪೊಗರ್ತೆಯಿಂ ಶಾಸ್ತ್ರಜ್ಞ ನೃಪಾಳಿ[ಯು]ಪದೇಶಮೆಂಬುತೆ ಕರಂ ಪ್ರಾಜ್ಞಂಗೆ ಬಗೆದು ನೋಡೆ ಮನೋ[ಜ್ಞ]ಗೆ ಪ್ರಣಯಾನುರಾಗಮುಂ ಪುಟ್ಟಿಸುಗುಂ (ವರ್ಧಮಾ. ೦–೦೭) ; ರೂಪಿನ ಪೊಗರ್ತೆಯುಂ ಸಹಜದ ನೆಗರ್ತೆಯುಮಂ ಕೇಳ್ದು (ಬಂಹಂ. ೮–೩೨ ವ). **ಪೊಗಳ್ತೆ :** ಕಾಳಗಾವುಣ್ಡನ ಮಗ ಕಣ್ಣನ . . . ಪೊಗಳ್ತೆಗಂ ನೆಗರ್ತ್ತೆಗಂ ನೆಲೆಯಾಗಿ ಕಾದಿ (ಎಕ. VIII, ಸೊರಬ. ೪೪೫–೮ ; 975 ?) ; ಅನ್ತು ಪೊಗಳ್ತೆಗಂ ನೆಗಳ್ತೆಗಂ ಜನ್ಮಭೂಮಿಯಾಗಿ (ಎಕ. VI, ಕಡೂರು. ೬೬–೪ ; 1160) ; ತ್ರಿಲೋಕಶರಣಂ ಶರಣಾಭರಣಂ ಸಮಸ್ತಮುಕ್ತಾ ವರಣಂ ಎಂಬ ಪೊಗಳ್ತೆಗೆ ಮಿಗಿಲೆನಿಸಿ ನೆಱೆ ಮೆಱೆವ ಶಿವನ ಪುಣ್ಯಾಗಣ್ಯ ಲಾವಣ್ಯಮಯಸುಕುಮಾರಾವಯವಂಗಳಂ ಕಂಡು (ಗಿರಿಶ. ೦೦–೬೦ ವ). **ಹೊಗರ್ತೆ :** ಹೊಗರ್ತ್ತೆಯಂ ತಳೆದು (ಬೊಂಕಶಾ. ೦೪೩೦, ಶಾಗೇವಾಡಿ. ೦೦೪–೯೩ ; 1168). **ಹೊಗಳತೆ :** ಕೂಡಲಸಂಗಮದೇವಾ ನೀನೆನಗೊಳ್ಳಿದ ನಾದರೆ ಎನ್ನ ಹೊಗಳತೆಗಡ್ಡ ಬಾರಾ ಧರ್ಮಿ (ಬಸವ. ೩೬೬) ; ನಿಶ್ಶಬ್ದಂ ಬ್ರಹ್ಮ ಉಚ್ಚತೆ ಎಂಬ ಘನವು ಹೊಗಳತೆಗೆ ಸಿಕ್ಕುವುದೇ ಎಲೆ ಮರುಳುಗಳಿರಾ (ಅಪಕಂ. ೨೩೨–೦೦೪೬). **ಹೊಗಳ್ತೆ :** "ಸ್ತವನಂ, ಸ್ತವನೀಯಂ . . . ಸ್ತುತಂ, ಸ್ತೋತವ್ಯಂ, ಈ ೭ ಹೊಗಳ್ತೆ" (ಶಾಕಶ್ಕೃ. ೦೬೪) ; ಹೊಗಳ್ತೆಗವಗ್ಗಳ ವೆನಿಸಿದ (ಬೊಂಕಶಾ. ೦೪೩೫, ರಾಣಿಬೆನ್ನೂರ್. ೨೮–೦೦ ; ?). [ಪೊಗಟ್$_1$ + – ತ್ತೆ]

**ಪೊಗಟ್ತೆವಡೆ**, **ಪೊಗರ್ತೆವಡೆ**, **ಪೊಗಳ್ತೆವಡೆ** (ಕ್ರಿ). **ಹೊಗಳಿಕೆಯನ್ನು ಗಳಿಸು ; ಪ್ರಶಂಸೆಯನ್ನು ಹೊಂದು :** ಅಂತು ಪೊಗಟ್ತೆವಡೆದಾ ಮಹಾದೇವಿಯೊಳಾ ಮಹಾನುಭಾವನೇಕಭಾವದೊಳನಂಗಸಾಮ್ರಾಜ್ಯಸುಖ ಮನನುಭವಿಸಿ (ಆದಿಪು. ೨–೯೬ ವ) ; ಮತ್ತಮೆಲ್ಲರೊಳಂ ಬಲ್ಲರೆನಿಸಿ ಎಲ್ಲಾ ನಾಡೊಳಂ ಪೊಗಟ್ತೆವಡೆದು ಮೆಲ್ನುಡಿಗರ್ ಅಱಿವರ್ (ಚಿಕವಂ. ೦೪೪–೦). **ಪೊಗರ್ತೆವಡೆ :** ಅಂತು ಪೊಗರ್ತ್ತೆವಡೆದ ಪ್ರಕಾಮಿ ದೇವದಂಡನಾಥ (ಇಎ. ೦೪೪೬, ಮುಂಡರಗಿಶಾಸೆ. ೩೩೫–೫೭ ; ?). **ಪೊಗಳ್ತೆವಡೆ :** ಅಂತು ಪೊಗಳ್ತೆವಡೆದ್ದೈವತ್ರೊಕ್ಕಲ್ಗಳೀಸ್ಥರಾಗಿಲ್ದರಂಬರಾಪುರದೀಶಾನದಿಗ್ವಿಭಾಗ ದೊಳ್ ತೆಲ್ಲಿಗೇಶ್ವರದೇವರ ಪ್ರತಿಷ್ಠೆಯುಂ ತದ್ದೇವಾಯತನಮುಮಂ ಮಾಡಿಸಿದರ್ (ಎಚ. XX, ೦೦೬–೩೭ ; 1167) ; ಆ ಮಹೀಕಾಂತಸುತಂ ಪೊಗಳ್ತೆವಡೆದೊಪ್ಪುತ್ತಮಿರ್ದೋದುಶುಭದಿನದಲ್ಲಿ . . . ಪುಗುತಂದ ನಳ್ಕೞಿಂ (ರಾಜಶೇ. ೪–೦೦೦ ವ). [ಪೊಗಟ್ತೆ + ಪಡೆ$_1$]

**ಪೊಗಟ್ತೆವೆಱು**, **ಪೊಗರ್ತೆವೆಱು** (ಕ್ರಿ). = ಪೊಗಟ್ತೆವಡೆ : ನಯಮುಂ ತಾಳ್ದಿ ಪೊಗಟ್ತೆವೆತ್ತು ಭುವನಕ್ಕಾರಾಧ್ಯಯಪ್ಪಾದತ್ತಿಮಬ್ಬೆಯ . . . ಭಕ್ತಿ ಕ್ರಮಕತ್ತಿಮಬ್ಬೆಯ ಗುಣಕ್ಕಾರುಂ ಸಮಂ ಪೋಲ್ವರೇ (ಅಜಿತ. ೦೨–೦೩) ; ಪೊಗಟ್ತೆವೆತ್ತುವೊಪ್ಪಂಬಡೆದಯಿರುವಗದಂಡಾಧೀಶನ ಸತ್ಕೀರ್ತಿಯೆಂತೆಂದೊಡೆ (ಜಿನುದ. ೦–೨೪ ವ). **ಪೊಗರ್ತೆವೆಱು :** ಶಿಷ್ಟರಂ ಪೊರೆವ ಪೊಗರ್ತೆವೆತ್ತ ಬಲಿ ಭಾವಿಪೊಡೀತನೆ ತಾನೆನುತ್ತಮಿಾ ಧರೆ ಮನವೊಲ್ದು ಬಣ್ಣಿಸುವುದೆನ್ತು ಚಮೂಪತಿ [ಸೋ]ವಿದೇವನ (ಸೌಇಇ. XX, ೬೪–೦೫ ; 1112) ; ಇನ್ತು ಪೊಗರ್ತ್ತೆವೆತ್ತ ಸುಜನಂಗೆ ಮಹೋತ್ಸವನಾ ಬಸಂತಿಮಯ್ಯಂ ತನಯುಂ ಸಮಸ್ತವಿಬುಧಾಶ್ರಯನಾತನ ಧರ್ಮಪತ್ನಿ . . . ಮಾಡಿದ ಪುರಾಕೃತ ಪುಣ್ಯಮನೇವೊಗಳ್ವುದೋ (ಸೌಇಇ. IX–i, ೨೦೦–೦೪ ; 1121). [ಪೊಗಟ್ತೆ + ವೆಱು$_1$]

**ಪೊಗಿಲ್ಲಿ** (ನಾ). ಒಬ್ಬಾತನ ಹೆಸರು : ಶ್ರೀ ಪೊಗಿಲ್ಲಿ ಸೇನ್ದ್ರಕಮಹಾರಾಜರ್ ನಾಯರ್ಖಿಣ್ಣಾಮುಂ ಜೆಡುಗೂರಾಳ್ಗೆಯಾನಾಳುತ್ತು (ಇಕ. XIX, ೦೪೪–೩ ; ಸು. 680). [ ? ]

**ಪೊಗಿಸು**, ಪುಗಿಯಿಸು, ಪುಗಿಸು, ಹುಗಿಸು$_1$, ಹೊಗಿಸು (ಕ್ರಿ). ೧. **ಹೋಗುವಂತೆ ಮಾಡು ; ಪ್ರವೇಶಗೊಳಿಸು ; ಒಳಹೊಗಿಸು :** ಈ ಬ್ರಹ್ಮೇಶಿಕಾಜಿನನಾರ್ ಪೊಗಿಸಿದರಾರ್ ತಂದರ್ (ವಂಬರ. ೬–೩೩) ; ಹಗೆಯ ಹೆಂಗಳನರಮನೆಗಳೊಳು ಪೊಗಿಸಲಾಗದು (ಕುಮಾ್ರ. ೮–೩೩) ; ಉರಿಗಳೊಳ್ ಪೊಗಿಸುತುಂ ದರಿಗಳೊಳ್ ನೂಂಕುತುಂ (ಕಬಿತ. ೫೬–೨೭). **ಪುಗಿಯಿಸು :** ೨. ಒಳಗಿರಿಸು ; ಒಳಗಿಡು : ವಿಪಣಿವೀಥಿಯೊಳ್ ಮಾಲೆಗಾರ್ತಿಯರೆತ್ತಿದ ಬೆಳೆವೂವಿನ ಸರಂಗಳನಲರಂಬಂಗೆ ಪೊದೆಗೆದಱುವಂತೆ ಕದಱಿ ಪರಿಮಳ ಭಂಗಭಯಮನವಳ್ದಿರೊಳ್ ತಗುಳ್ಚಿ ಪಡಲಗೆಯುಂ ಮಗುಱೆ ಪುಗಿಯಿಸಿಯುಂ (ಕಂಪ್ರಕ. ೮–೪ ವ). **ಪುಗಿಸು :** ೧. ಸಮಾಧಿ ಇಲ್ಲಾದೆಱೆ ಪೊನ್ನೆತ್ತಿಕೊಳೆ ಕೊಟ್ಟ ಒಕ್ಕಲ್ಗೆ ಪೊನ್ನಿಟ್ಟು ಪುಗಿಸಿದಾರ್ (ಎಕ. XIV, ತಿರುಮ. ೨೫೩–೫ ; ಸು. 800) ; ವಿಷಧಿಗಳೊಳಗೊಯ್ದುರ್ದುವ ವಿಷಮರಣಾಂಗಣಮನಿರದೆ ಪುಗಿಸುವ . . . ವಿಷಯಸುಖಂಗಳೊಳೆ ತೊಡರ್ದು ಬಿರ್ಪುದು ಜಗಂ (ಆದಿಪು. ೦೪–೦೨೪) ; ಹುಟ್ಟಿದುದೆಲ್ಲಿ ನೀನುಱೆ ಬೆಳೆದುದು ಬೆಳ್ವೆಟ್ಟ ನೋಡಬಲೆ ಮತ್ತಮ್ಮ ಪಟ್ಟಣದೊಳು ಪುಗಿಸಿತು ಪುಣ್ಯ (ಧರಶ. ೫೬–೦೨೪). ೨. ಎಡದಡಿಯುಂ ಪುಗಿಸುವ ಬಲದಡಿಯುಂ ಪೊಱಗಿಡುವ ದುಂಡೆಯುಂ ನಿಟ್ಟುವ . . . ಬೆಡಂಗು ರಂಜಿಸಿತು ಭೀಮ ದುರ್ಯೋಧನರಾ (ಗದಾಯು. ೮–೮). ೩. **ಪ್ರವೇಶಕ್ಕೆ ಅನುಮತಿಯನ್ನು ಕೊಡು :** ಅರಸಾಡಿದಂತೆ ನೀನಾಗಿರೆ ನಿನ್ನಂ ತಂದೆಯೆಂತು ಮನೆಯಂ ಪುಗಿಪಂ (ಶಾಕುಂತ. ೬೨–೦೨೬). ೪. **ಮುಟ್ಟಿಸು ; ತಲಪಿಸು :** ನೀಂ ಪತ್ರಲೇಖೆಯನೊಡಗೊಂಡು ಪೋಗಿ ಕಟಕಮಂ ಪುಗಿಸು (ಕಾದಂಅ. ೩೨೪). ೫. **ಒಂದುಗೂಡಿಸು ; ಸೇರಿಸು :** ಕಥಕಶ್ರೇಣಿಯೊಡನೆಳಸಿ ಬಳಸುವ ನಾಣಿಲಿಗಳನೀ ಬುಧಾಳಿಯೊಳ್ ಪುಗಿಸುವುದೇ (ಸುಕುಮಾ. ೨–೨೪). ೬. **ಹೊಂದಿಸು ; ಅನ್ವಯಿಸು :** ವಿಪುಳಯಶೋವಿತಾನಗುಣವಿಲ್ಲದನಂ ಪ್ರಭು ಮಾಡಿ ಪೂರ್ವಭೂಮಿಪರ ಪದಂಗಳಂ ಪುಗಿಸಿ ಪೋಲಿಪೊಡ ತನು ದಾತ್ತ ಪೂರ್ವಭೂಮಿಪರನೊಳ್ಪನೊಳ್ ತಗುಳೆವಂದೊಡೆಯಾ ಕಥೆಯೊಳ್ ತಗುಳ್ಚಿ ಪೋಲಿಪೊಡೆನಗಟ್ಟೆಯಾದುದು ಗುಣಾರ್ಣವಭೂಭುಜನಂ ಕಿರೀಟಿಯೊಳ್ (ಪಂಪಭಾ. ೦–೦೪). **ಹುಗಿಸು$_1$ :** ೧. ಹುಗಿಸಿದೆನೆ ಮನೆಗಿತರ ಪಾಕವನುಗಿಸಿದೆನೆ ಲಿಂಗಪ್ರಸಾದವನಗಲಿಸಿದೆನೇ ಕಲಹವಂ ಮಾಡಿಪ್ಪಶಿಷ್ಯರನು (ಬಸವ. ೪೫–೦೯) ; ನಳಿನನಾಭನು ನಗುತ ಪರಮಂಡಲದ ಶಿಷ್ಯನು ಬರಲಿಯೆನೆ ಬಾಗಿಲಲಿ ಕೈದುವ ಕೊಂಡು ಹು[ಶಾಕಾಂ. ಹೊ]ಗಿಸಿದರಂದು ಸಂಜಯನ (ಕುಮಾ್ರಉ. ೨–೨೪) ; ಒಳವುಗಿಸೆನೆ ಹುಗಿಸಿದಳಾ ಸ್ತ್ರೀ ಸಭೆಯಂ ಭರದಿಂದ (ಜಯಮಾ. ೨–೨೦). **ಹೊಗಿಸು :** ೧. ಅಧ್ವಶ್ರಮದ ಘಗೆ ಪರಿಹರಿಸೆ ನೀರೊಳು ಹೊಗಿಸಿದನು ಹರಿ ಹಯಚತುಷ್ಟಯವ (ಕುಮಾ್ರದ್ರೋ. ೦೦–೩೪) ; ಬಲುರಥಗಳದ ರಥಾಡಿಯನಟ್ಟಿದನು ದೆಸೆದೆಸೆಗೆ ಧಾಮಿಸುವ

ನೆಲಲು ಹೊಗಿಸಿದನೆಲ್ಲರನು (ಶಿಭಾಗ. ೧೧ ೦೬-೨). ೩. ಸುರರ ಮೆಚ್ಚಿದ ರಾಮು ನೀತನ ಕರೆದು ಗರುಡಿಯ ಹೊಗಿಸಿದನು (ಕುಮ್ಮಾ.ಕ. ೯-೨); ಗತಸೂನು ವಿವನೆಂದೆನ್ನ ಹೊಗಿಸರು ಸ್ವರ್ಗವನು ಸುರರು (ಕೊರಣಾ. ೦-೪-೪). ೪. ತುರಗವರಸನ ಕೊಂಡು ಮಂದರಗಿರಿಯ ಹೊಗಿಸಿತು (ಸಂಶಕ. ೩-೦೬).

ಪುಗಿಸಿಕೊಳ್ = ಸೇರಿಸಿಕೊಳ್ಳು: ಶರೀರದೊಳ್ ಪುಗಿಸಿಕೊಂಡಪನೆಂಬಿನ ಪಾದಮಪ್ಪುದುಂ . . . ಕಾಲ್ಗಳಂ ನೆತ್ತಿಯಲಿಟ್ಟುಕೊಂಡುಬುತ್ರಮಿರ್ದಂ (ಕಾರಂಣು. ೬೦೬). [ಪೊಗು + — ಇಸ್ಸು]

**ಪೊಗು**, ಪುಗು, ಹುಗು, ಹೊಗು (ಕ್ರಿ). ಪೊಕ್ಕ$_1$, ಹೊಕ್ಕ (ಭೂತಕೃ). ಪೊಕ್ಕು$_1$, ಹೊಕ್ಕು$_1$ (ಭೂತನ್ಯೂ). ೧. ಒಳಸೇರು; ಪ್ರವೇಶಿಸು: ಶ್ವೇತವಾಹನನ್ ಉದಯಪುರಮಾನ್ ಪೊಗುವಲ್ಲಿ ಎಬಿದು ಶ್ವ(ಸ್ವ)ರ್ಗ್ಗ(ರ್ಗ್ಗ)ಲಯಕ್ಕೇಜಿ[ದೊನ್] (ಎ.ಕ. IX. ೦೯-೦೯; ಸು. 800); ಅಯೋಧ್ಯೆಯುನಿದು ಪೊ[ಕಾಣಾಂ. ಪು]ಗದೆ ತಟುಂಬಿ ನಿಂದ ಕಾರಣಮೇನೋ (ಅಂಕ್ಕ. ೦೯-೬); ತನುವೆರಸಿ ಎಂತು ಪೊಗುವೆಂ ದೇವ ನಿಮ್ಮೊಳಗೆ (ವಾಗೀಶ. ದೇ. ೨೭೬-೦೯); ತನ್ನಾಲಯಕೆ ತಿಂಗಳ ದಿನ ಸವೆಯೆ ಪೊಗಲು (ಸಂಶಕ. ೨೩-೨೬). **ಪುಗು**: ೧. "ಪುಗು–ಪ್ರವೇಶೇ" (ಶಮದಾ); ಶ್ರೀದಾಸಿ ಅಮ್ಮನ್ ಕಳ್ವಿಯೊಳ್ಪನ್ನೊರ್ಬ್ಬರನೆಜಿದು ಸ್ವರ್ಗ್ಗ ಆದನ್ ಭೂತಲ ದೊಳ್ಳಿಯು ಸ್ವೋನ್ನತೆ ಪುಗೆ (ಪ್ಕುಅಂ. ೦೯೩೯, ೨೩-೦೯; ಸು. 740); ಎನ್ನ ಜಾತ್ರ ಸಮೆವನ್ನಗಂ ನೀಮಿಾ ಪೊಟಲಂ ಪುಗದಿರಿಂ (ಪಣ್ಣಾರಾ. ೦೩೪-೦೯); ಮಿಗುವಪಥಿ ಬುಧರಜಿಯೆ ನಿನ್ನಿನ ಹಗಲು ನಿನ್ನದು ಪಾಂಡು ತನಯರು ಪು[ಕಾಣಾಂ. ಹೊ]ಗುವೊಡಿಂದಿನ ದಿವಸವಪರದು ಕಂದ (ಕುಮ್ಮಾ.ಶಿ. ೬-೨೨); ಸೀತೆ ಬೆಂಕಿಯ ಪುಗೆ ಶೀತಳಮಾದುದು (ಹಂಬ. ೨-೯೬). ೨. ಮುಟ್ಟು; ಸ್ಪರ್ಶಿಸು: ಅಳಿಯೊಜಗದನಿಲನಲುಗದ ರವಿಕರಂ ಪುಗದ . . . ಇರವಂತಿಯಿರೆ ಕಂಡು (ಪುಷ್ಪರ. ಹ. ೩೨೩-೨೩). **ಹುಗು**: ೧. ಇದಿರಾಗಿ ಕಾದದೋಡುವರನೆ ದೇವತಾಭವನವಂ ವನವಂ ಹುಗುವಂತು ಮಾಡುವಂ . . . ರಾಯಮುರಾರಿ ಭೂಭುಜಂ (ಕೊಅ್ಮ್ಮಾ. ೯-೩೫; 1147); ಎನ್ನ ಭಕ್ತಿದ್ವಾರವನು ಹುಗದನ್ಯಮಾರ್ಗದಲಿ . . . ನನ್ನನಱುವುದು ಹುಸಿ ಕಣಾ (ಪ್ರಭುಲೀ. ೦೬-೩). ೨. ಕಲಿ ಹುಗದ ಹೆಸರಿಂಗದೋಜಿ ಕೊರಗದ ದರ್ಪವುಗದ ಬಗೆ ಹುಸಿ ಹುಗದ ನುಡಿ (ಪಕಳಾ. ೦-೪೪). **ಹೊಗು**: ೧. ಪ್ರಾಚಮು[ನಾ] ಊರಟಿವಿನೊಳೆ ಹೊಗೆನೆನ್ದು . . . ಸಿಂಗಮದೇವ ಯೆಜಿಪ್ಪಾನ ಪಂಗ ಪಡಿಗನೊಂಬಾ ದಣ್ಣೆನೊಳ್ಕಾದಿ ಸತ್ತಾನ್ (ಕ್ಕಾ೨. IX–i. ೬೦–೦೩; 981); ಬಗಿದು ಹೊಗುವೆನು ನಾ ನಿಮ್ಮ ಮನವನು (ಬಸವ. ೪೯೬); ಅಕಟನ್ನೆಲ್ಲಿ ಹೊಗುವೈ ಕಂದ ಕುಂತಿಯ ಜಠರವಲ್ಲವಲೇ (ಕುಮ್ಮಾದ್ರೋ. ೨-೯೬); ಅಜವಿಂಡ ಹೊಕ್ಕ ಹೆಬ್ಬುಲಿಯಂತೆ ಸೊಕ್ಕಿದ ಗಜವಿಂಡ ಸಿಂಹ ಹೊಕ್ಕಂತೆ ... ಕುಜನರ ಕುಟ್ಟಿ ಹಾಯ್ಕಿದನು (ಸೋಹಪ. ೩೩-೨೦). ೨. ಅನು ಗುರುವಾಜ್ಞೆಯಂ ಮಿಾಜಿದುದಜಿಂದೆನಗೆ ಹಾನಿ ಹೊಗದಿರದು (ಪಕಳಾ. ೬-೪೬); ನಿಂದೆ ಹೊದ್ದದು ನಡೆವಳಿಗಳಲಿ ಕುಂದು ಹೊಗ[ಕಾಣಾಂ. ದ]ದು (ಕೊರಣಾ. ೦-೩-೨೬). ೩. ಮೇಲೆ ಬೀಳು; ಆಕ್ರಮಿಸು: ಉಜುಬಿ ಹೊಕ್ಕನು ದ್ರೋಣ ಪರಬಲವ (ಕುಮ್ಮಾದ್ರೋ. ೧-೩೩); ಮಂದಮತಿ ಸುತ ಹೊಲ್ಲ ಹಂದೆಯನು ನಂಬಿ ಹೊಗ ಹೊಲ್ಲ (ಸರ್ವಜ್ಞ. ೬೯೯). ೪. ಸೇರಂ; ಕೂಡಿಕೊಳ್ಳು: ಅತ್ತಡೇನಹುವೆಲೆಗೆ ತೊತ್ತಿರ ಹಿಂಡ ಹೊಗು (ಕುಮ್ಮಾ.ಸ. ೦೯-೬೯).

**ಪೊಗುಪೊಗು**, ಹುಗುಹುಗು, ಹೊಗುಹೊಗು (ದ್ವಿರುಕ್ತಿ): ಅಕ್ಕಟಿಂ ಬಾಲೇಂದುಧರನೊಳು ಪೊಕ್ಕುಪೊಕ್ಕಲರ್ದಲರ್ದು ಕೂಡುತ ಸೊಕ್ಕಿ ತಲ್ಲಿಂಗದೊಳಗಿಂತು ವಿಲೀನನಾಗಿರ್ದು (ಬಸಪು. ೩೩-೪); ರಕ್ಕಸಮೆನೊಲ ಷಣ್ಮೆಯನಿತು ಮನಕ್ಷತಂಗೊಳಲೇಕೆಯೆನ್ನಯ ಪಕ್ಷಮಂ ತೆಱೆದಪೆನು ಹುಗು ಹುಗು (ಬಸಪು. ೩೩-೪೪); ಹೊಗುಹೊಗುತ ಹೊರಬರುವ ಮಾನುಷ್ಯ ವಾಹಿನಿಯ ಕಲ್ಲೋಲಲೀಲೆಯೊಳು ದಿಟ್ಟಿ ಸಲಿಸಿ (ಜುಲೆರಿ. ೪೬-೩). **ಪೊಕ್ಕಿಲ್**, ಹೊಕ್ಕಿಲ್ = ಹೆಣ್ಣು ಮದುವೆಯಾಗಿ ಸೇರುವ ಮನೆ; ಅತ್ತೆಯ ಮನೆ; ತವರುಂ ಪೊಕ್ಕಿಲುಮಹಾಗಿ ಮದ್ಗೃಹಮಿವಳ್ಗೆ (ಅರ್ಧನೇ. ೬-೦೯); ಅವರ್ಗೆ ತಾಯ್ಮನೆಯವರ್ಗೆ ತವರ್ಮನೆಯವರ್ಗೆ ಹೊಕ್ಕಿಲ ಮನೆಯು ಮೇಳುಂ ಗವಿಯ ಬೆಳಗುವನೆಯ್ದೆ ರಕ್ಷಿಪ್ಪರಮನೆಯು ತಾನೆ (ಸಾಪಂಚ. ೯-೦೨). **ಪೊಕ್ಕಿಜು**, ಹೊಕ್ಕಿರಿ, ಹೊಕ್ಕಿಜು = ೧. ಆಕ್ರಮಿಸಿ ಯುದ್ಧ ಮಾಡಂ: ಅಣಿಚಿಲ್ಪನಣುಮಪರಾಕ್ರಮನ್ನೀರವಮಹಾಮೇರು ಪೊಕ್ಕಿಜು ಪೊರದೊಗರಾಜನ್ . . . ನಾಯಕರುಳ್ಳಿಜಿದೋಡಿಸಿ ಬಿಟ್ಟನ್ (ಎ.ಕ. X, ಶ್ರೀಣಾ. ೬-೩; ಸು. 780); ಪುರುಷಮಂ ಸಮಕಟ್ಟುವಮಪ್ಪೊಡೆ ಪೊಕ್ಕಿಜಿಯಲಣ್ಮುವರಿಲ್ಲ (ಶಂಪಶಾ. ೩-೬೬ ಪ); ನಿಶ್ಶಂಕೆಯಲಿ ಹೊಕ್ಕಿಜಿದು ಬಹ ಸತ್ತ್ವಾತಿಶಯ ಬೇಹುದು ರಣಾಗ್ರದಲಿ (ಕುಮ್ಮಾ.ಕ. ೦೬-೩೩). ೨. ಆಕ್ರಮಿಸಿ ಚುಚ್ಚು,–ತಿವಿ: ಎಕ್ಕಲನ ಹೊಕ್ಕಿರಿದು ಕರಡಿ ಬಾಯ್ದೆರೆಯೆ ಮುಸುಡಂ ಮುರಿಯಲಿಕ್ಕಿ (ಪಪಶೋ. ೦೬-೨೩); ಹೊಳೆವ ಈಟಿ ಹೊಕ್ಕಿಜಿದ ದಾರಿಯೊಳಿದ ಈಟಿ ದಾಂಟಿದವು (ಕುಮ್ಮಾ.ಕ. ೦೯-೦೯). **ಹೊಕ್ಕ ಅಮಾವಾಸ್ಯೆ**, ಹೊಕ್ಕಮಾಸೆ = "ಮಧ್ಯಾಹ್ನದ ಮೇಲೆ ಬಂದು ಮಾರನೆ ದಿನವಿರುವ ಅಮಾವಾಸ್ಯೆ ತಿಥಿಯ ಪೂರ್ವಭಾಗ" (ಅಪಂಣಾ). **ಹೊಕ್ಕು ತುಂಬುವ ಬಾವಿ** = ಇಳಿದು ನೀರು ತುಂಬಿಕೊಳ್ಳಬಹುದಾದಂತಹ ಬಾವಿ; ಮೆಟ್ಟಲುಗಳಿರುವ ಬಾವಿ; ನಡೆಬಾವಿ; ಕಲ್ಯಾಣಿ: ಲಕ್ಕುಂಡಿಯಲ್ಲಿ ಗುಡಿಗಳಂತೆ ಹಲವು ದೊಡ್ಡ ದೊಡ್ಡ ಹೊಕ್ಕು ತುಂಬುವ ಬಾವಿಗಳಿರುತ್ತವೆ (ಕಭಾಗ. ೪೭೮); ಅಕ್ಕತಂಗಿಯರ ಬಾವಿಯೆಂಬ ದೊಡ್ಡ ಹೊಕ್ಕು ತುಂಬುವ ಬಾವಿಯನ್ನು ಇಬ್ಬರು ಪಾತರದವರಾದ ಅಕ್ಕ ತಂಗಿಯರು ಕಟ್ಟಿಸಿದರು (ಕಭಾಗ. ೫೦೯).

[ದೇ. ॥ ತಮಿ. ಮಲ. ಪುಕು; ತುಳು. ಪೊಗ್ಗು]

**ಪೊಗುಂಡಿ** (ನಾ). ಒಂದು ಸ್ಥಳದ ಹೆಸರು: ಕುಕ್ಕನೆಱೆನಾಡ್ × × × ಜತ್ತ ತಳಪಾತ ಪೊಗುಂಡ್ಡ ಕಾಳೆಗದುಳ ಎಟಿದು ಸತ್ತ (ಎ.ಕ. IX, ಚೆಂಪಟ್ಟ. ೩೪-೪; ಸು. 750 ?). [ ? ]

**ಪೊಗುತರ್**, ಪುಗುತರ್, ಹೊಗುತರು (ಕ್ರಿ). ಒಳಹೊಗು; ಪ್ರವೇಶಿಸು: ಚಪ್ಪರದ ಬಾಗಿಲ್ಗೆ ಬಂದೊಡವರ್ ಪೊಗಲೀಯದಿರ್ದೊಡೆ ಅಪಂದಿರಱಿಯ ದಂತೆ ಪೊಗುತಪ್ಪಾಗಳು (ಸಂಜಿರ. ೬-೩೦). **ಪುಗುತರ್**: ಅಳುಪೇನ್ದ್ರ . . . [ಉ]ದ[ಯ್ಯಾ]ಪುರಮನ್ ಪುಗುತಪ್ಪಲ್ಲಿ . . . ಅಟಿದು ಸುರಲೋಕಕ್ಕೆ ಏಜಿದನ್ (ಎ.ಕ. IX. ೨೦-೩; ಸು. 800); ಸಂಗರರಾಜ್ಯನಂ ಸಿದ್ಧನಂತಾ ಸಿದ್ಧಕ್ಷೇತ್ರಮಂ ಪುಗುತಂದಂ(ಕಾರ್ಕಸಾ. ೫೨೯ ಪೂರ್ವ್ರಕ); ಸಂಚಿತ ಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ (ಶಂಪಶಾ. ೩-೩೬); ಆ ಗೃಹಮಂ ಪುಗುತಂದನಚ್ಯುತಂ (ಜಗಂ. ೦೦-೦೩೧). **ಹೊಗುತರು**: ಹೊಳಲ ಹೊಗುತರುತಮುಮ ಕಂಡನು . . . ನಿಜಧಾಮದಲಿ ಮುಕ್ಕುಳಿಸಿ ದಮುಳಪ್ರಭೆಯಿದೇನೆಂದು ಬೆಜಗಾದ (ಶಿಭಾಗ. ೯-೨೦-೨೬). [ಪೊಗು + ತರ್]

**ಪೊಗುತೆ**, ಪುಗುತೆ, ಹುಗುತೆ, ಹೊಗುತೆ (ನಾ). ಹೊಗುವಿಕೆ; ಪ್ರವೇಶ: ಬಗೆ ಭಾವ ಧಾತು ಮಾತುಗಳಿಂಪು ಸೊಂಪಿನ ಪೊಗ[ಗು]ತೆ ಯನೆಳ್ಳನಿತನಜಿಯೆ ಅಗಣಿತಮುತಿಗಳಾವವರೀ ಕೃತಿಯನು ಬಿಗೆ ತಿರ್ದಿ ಬಣ್ಣಿಪಿಡುವದು (ಅಂಜಿಪ. ೦-೦೦೬). **ಪುಗುತೆ**: ಪೊಗಟಿಕ್ಕೆ, ನೆಗಟಿಕ್ಕೆ, ಪುಗುತೆ (ಶಬುರ. ೨೦೦ ಪ್ರಯೋ); ಪುಗುತೆ, ಪುಗುತೆಗಳ್; ಮಿಗುತೆ, ಮಿಗುತೆಗಳ್ (ಶಬ್ದಾಸು. ೫೩೦ ಪ್ರಯೋ). **ಹುಗುತೆ**: ಕವಿಯ ಹುಗು[ಕಾಣಾಂ. ಗ]ತೆ ಗಮಕಿಯ ಸಂಚ ವಾದಿಯ ಚೊಕ್ಕಹ ವಾಗ್ಮಿಯ ಚೇತನ ಇಂತೀ ಚತುಷ್ಟಯ ದಲ್ಲಿ ಯುಕ್ತಿವಂತನಾದಡೇನು (ಶಬೊಪ್ಪು. ಕ. ೨೪೦-೪೯). **ಹೊಗುತೆ**: ಕಾರುಕನ ಹೃದಯದ ಕಪಟ ಕಣೆಲೆಂದು ಕೈಯ ಕಲ್ಲು ತನು ಕಟ್ಟಳಿಹೀನನ ಹೊಗುತೆ ಸ್ವೈರಕೆಯವಳೊಳುಪಿನ ಮಾತು ಇವು ಸಾರದ ಪ್ರಸ್ಥದಂತೆ

(ಸಿಗಬೊ. ೪. ೬೧೯-೭೯); ತೆಗೆದು ಗಳಹತ್ತದಲಿ ಕೊರಳನು ಬಿಗಿಯೆ ಬಿಡಿಸುವ ತೋರಹತ್ತದ ಹೊಗುತೆಯನು ವಂಚಿಸುವ . . . ಬಿನ್ನಾಣದಲಿ ಹೆಣಗಿದರು (ಕುವ್ಯಾ.ಕ. ೦೯-೯೩). [ಪೊಗು + — ತ್ತ]

**ಪೊಗುಲೂರ್** (ನಾ). ಒಂದು ಊರಿನ ಹೆಸರು : ಪೊಗುಲೂರ ವಾಸ್ತವ್ಯಸ್ಯ ಭಾರದ್ವಾಜಸಗೋತ್ರಸ್ಯ ಭಾರದ್ವಾಜಸೂತ್ರಸ್ಯ (ಇಆ. XIII. ೦೩೬-೦೯; ಸು. ೬೬೦). [ ? + ಊರ್]

**ಪೊಗೆ₁, ಹೊಗೆ₁** (ಕ್ರಿ). ೧. ಹೊಗೆಯನ್ನು ಕಾರು; ಧೂಮವನ್ನು ಉಗುಳು; ತ್ರಿಪುರಂಬೊತ್ತಿಸಿದಂತೆ ಪೊತ್ತಿ ಪೊಗೆದತ್ತೆತ್ತಂ ವಿಯನ್ಮಂಡಳಂ (ಪಂಪಭಾ. ೦೦-೦೭); ಆ ಪುಲ್ಲು ಪೊತ್ತಿ ಪೊಗೆದುರಿದು ಮಂದುರಮಂ ಪೊತ್ತಿದೊಡೆ (ಪಂಪಪಂ. ೭೬೯-೦೨); ಪೊಗೆದುದು ಪೊತ್ತಿದತ್ತು . . . ಸುಟ್ಟತು ಕಿಡದು ತೀಗಿದತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ (ಗಿರಿ. ೬-೯೭); ಧಗಧಗತ್ಕಾರದಿಂದಂ ಧರಣಿಮಂಡಲಂ ಪೊಗೆವುತಿರ್ದುದು ಸಮುದ್ರಂ ಕುದಿದು ತಳಮಳಲನುಗುಳುತಿರ್ದುದು (ಕಬಿಕ. ೪೦-೨೦). ೨. (ಪರಿಮಳವುಳ್ಳ) ಹೊಗೆ ಆಡಿಸು; ಹೊಗೆಕೊಡು: ಮುಡಿಯಂ ಗುಗ್ಗುಳದಿಂ ಪೊಗೆದಾಱಿಸಿ ಪೂವಂ ಸೂಡಿ . . . ಪೊದೊಡವುಗಳಂ ಪಸದನಂಗೊಂಡು ವಿಟಂಬಟಯಿಗೆಯುನ ಕುಲದೇವಿಯರೆನೆ ಕಣ್ಗೊಂಬಾದರ್ (ರಾಘವಾಕ್ಯ. ೦೨೯-೯). ೩. (ಆಲಂ) (ಬಿಸಿಲಿನಿಂದ) ಕಡಿಕಾಗು; ಸೀಯು : ಪೊಗೆದುದು ಸಸ್ಯಾನೀಕಂ ಮೃಗತೃಷ್ಣಾಂಬುವಿನ ವೀಚಿ ಪೊಂಗಿದುದಿರದಂದುಗುಬ್ಬುದು ಕೆಂಗಿಡಿಯಂ ಬೇಸಿಗೆ ಬಿಸಿವೊಯ್ಲು ನರ್ಕಮಣಿಗಣಮಾಗಳ್ (ಉದ್ಭಟಿ. ೯-೬೩). ೪. ಕಪ್ಪಾಗು: ಮನೆಮನೆ ದಪ್ಪದೆ ನೆಗೆದುದು ತನಗಿರ್ಚಿನೆ ದಹನವಿದ್ಯೆಯಿಂ ಸುಟ್ಟಂ ಪಾವನಿ ಲಂಕೆಯನಸುರಾಧೀಶನ ಮನಮುರಿವನ್ನಮಾನನಂ ಪೊಗೆವನ್ನಂ (ಕುಂರಾಮಾ. ೦೦-೦೯೯). ೫. ದುಃಖಿಸು; ಪರಿತಪಿಸು; ಮರುಗು: ಆನಿವಿರಿದು ದುಃಖದೊಳ್ ನಮೆದು ನಾರುಗಿದು ಪೊಗೆದು ಸತ್ತಲ್ಲಿ ನಿಷಾದನ ಮನೆಯೊಳ್ಪೆಣ್ಣಾಯಾಯ್ತು (ಸುಕುಮಾ. ೫-೦೯); ಸುಯ್ವು ಬಿಸಿಯುವಾದುವಿದೇಕೆ ಕದಂಪು ಕೆಂಪನಾಳ್ದುಗುಟ್ಟುವುದೇಕೆ ಗಗ್ಗರಿಕೆಯುಗ್ಗಳವಾದುದಿದೇಕೆ ನೀಂ ಕರಂ ಪೊಗೆದಪೆಯೇಕೆ ಪೇಟಿನಗೆ ಪಂಕಜಪತ್ರವಿಶಾಲಲೋಚನೇ (ಅರ್ಜನ. ೭-೦೯). **ಹೊಗೆ₁** : ೧. ಗುಂಡು ಬಿದ್ದೊಡೆ ಹೊತ್ತಿ ಹೊಗೆದು ದಳ್ಳುರಿ ಮಸಗೆ (ಸಿದ್ಧರಾ. ೭-೩೨); ತೋರಣದಲುರಿ ತಳಿತು ರಾಜದ್ವಾರ ಹೊಗೆದುದು (ಕುವ್ಯಾ.ಸ. ೦೫-೯೨); ಹೊಗೆದು ದಾನವಕ್ಷಿ ಕಿಡಿಗಳನುಗುಳಿದವು ಹೊಗೆ ಸುತ್ತಿ ಕುಡಿಮೀಸೆಗಳು ಕೌಚಿದವಂಗ ಕಾಹೇಱಿದುದು ಕಡುಹಿನಲಿ (ಕೊರಳಾ. ೨-೬-೮). ೬. ಸುಡು; ದಹಿಸು: ವಿಗಡರುದ್ರನು ಲೋಚನಾಗ್ನಿಯೊಳೊಗುವಿಗೆಯು ಕೋಪದಲಿ ಕಾಮನ ಮಿಗೆ ದಹಿಸಿದಂದದಲಿ ರಿಪು ಕುಂತೀಕುಮಾರಕರ ಹೊಗೆದು ೬೪ ಲಾಕ್ಷಾಭವನದಲಿ (ಕುವ್ಯಾ.ಆ. ೬-೬೦). ೭. ಪ್ರಚಂಡವಾಗು; ಪ್ರಜ್ವಲಿಸು: ವಿರಹಾಗ್ನಿಯೆತ್ತಿ ಮನಂ ಪೊತ್ತಿ ಬುದ್ಧಿ ಕವರ್ದು ಆಹಂಕಾರು ಹೊಗೆದು ಚಿತ್ತಂ ಬೆಂದು ಹರಣಮುರಿದು . . . ಭೋಗದ ವಿಯೋಗಿಯೆನಿಸಿರ್ದ ತರುಣಿಯರ ವಿರಹಾತಿಶಯಮಂ ಗಿರಿರಾಜಂ ಕರುಣಿಸಿ ನೋಡಿ (ಗಿರಿ. ೪-೦೦೬ ವ); ಉರಿಯ ಕರುವಿಟ್ಟಂತೆ ವಿಲಯದ ಹರನ ಖತಿ ಹೊಗೆವಂತೆ ಸಿಡಿಲಿನ ಹೊರಳಿ ಹೊದಱಿದ್ದಂತೆ ನಿಂದವನವ ಘಟೋತ್ಕಚನು (ಕುವ್ಯಾ.ಶೀ. ೨-೦೨). ೮. ಮಸುಕಾಗು; ಮಂಕಾಗು; ಕಾಂತಿಹೀನವಾಗು: ಚಿತ್ತವಿಸು ಧೃತರಾಷ್ಟ್ರ ಕೌರವನಿತ್ತನಿರುಳೋಲಗವ ಮಂಜಿನ ಮುತ್ತಿಗೆಯ ನಭದಂತೆ ಹೊಗೆದುದು ರಾಯನಾಸ್ಥಾನ (ಕುವ್ಯಾ.ದ್ರೋ. ೪-೪). ೯. ಸಿಟ್ಟಿಗೇಳು; ಧುಮುಗುಡು: ಅಪ್ರಸನ್ನಾ=ಹೊಗೆವುತ್ತಿರ್ದಳ್ (ಶೀತಿವಾ. ೩೦-೦೯); ಹೊತ್ತ ಕೋಪದ ಹೊಗೆವ ಮುಖದೌಡೊತ್ತುವಧರದ ವೈರಿಸೇನೆಯ ಕುತ್ತಿ ತೇಗುವ ಮನದ ಮಾರುತಿ ಮೊಳಗಿದನು ಮುಂದೆ (ಕುವ್ಯಾ.ಕ. ೦೨-೨೦). ೧೦. ದ್ವೇಷಿಸು: ಈ ಅಣ್ಣ ತಂಗಿ ಮೇಲೆ ಮೊದಲಿಂದ ಹೊಗೆದು ಹೊಗೆದು ಹೊಗೀತಾನೇ ಇದ್ದಿದಾನೆ. ಇವನು ಹೊಗೆದರೆ ನಮಗೇನಾಯ್ತು? (ಕಳಾ. ೨೩೪). ೧೧. [ವೈದ್ಯಶಾ] ಚಿಕಿತ್ಸೆಗಾಗಿ ಔಷಧೀಯಗುಣವುಳ್ಳ ಹೊಗೆಯನ್ನು ಹಾಕು,—ಹೊಗೆಯೇಳಿಸು: "ಹೊಗೆ—ಧೂಮನಿರೋಧ ಕ್ರಿಯಾಯಾಂ, ಧೂಮೇ ಚ" (ಕಮರ).

**ಹೊಗೆಹಾಲ ಮೊಸರು** — "ಸೂರ್ಯೋದಯಕ್ಕೆ ಸ್ವಲ್ಪ ಮುಂಚೆ ಹಾಲಿಗೆ ಹೆಪ್ಪುಹಾಕಿ ಮುಚ್ಚಿರಿಸಿ ಅದೇ ದಿವಸ ಮಧ್ಯಾಹ್ನ ತೆಗೆದು ಉಪಯೋಗಿಸುವುದು. ಇವಕ್ಕೆ ಹೊಗೆಹಾಲ ಮೊಸರೆಂದು ಹೆಸರು" (ಸೂಪಶಾ. ೨-೦೦ ಅಡಿ); ಬಿಸಿಲುವುದಿಸದ ಮುನ್ನ ಹೆಪ್ಪನೆಱದಾ ಹಾಲನೊಸೆದು ಹಿಂಬಗಲಿನೊಳು ತೆಗೆಯಲದು ಹೊಗೆಹಾಲ ಮೊಸರೆಂಬ ಹೆಸರಾಯ್ತು (ಸೂಪಶಾ. ೨-೦೦).

[ದೇ.॥ ತಮಿ. ಪುಕೈ; ಮಲ. ಪುಕ; ತುಳು. ಪುಗೆ, ಪೊಗೆ; ತೆಲು. ಪೊಗಯು, ಪೊಗಯು]

**ಪೊಗೆ₂, ಹೊಗೆ₂** (ನಾ). ೧. ಧೂಮ: "ಪೊಗೆಯೆನಲ್ ಧೂಮ" (ಕಶಿರ. ೭೦); ಪೊಗೆ ಪರ್ಚಿ ನೆಗೆದ ಕಾಟ್ಕಿರ್ಚುಮಂ . . . ಕಂಡಂ (ವಡ್ಡಾರಾ. ೬೩-೨೭); ಬಳಸೆ ಮುಗಿಲ್ಗಳ್ ಕನಕಾಚಳಮಂ ಬಳಸುವವೊಲಿಕ್ಕಿದಾಹುತಿಗಳ ಗೊಂದಳದಿನೊಡನೊಗೆದ ಪೊಗೆಗಳ್ ಬಳಸಿದುವೆಡೆವಿಡದೆ ಕನಕಯೂಪಮಂ ನಾಗಳ್ (ಪಂಪಭಾ. ೭-೩೩); ಪೊಗೆಯಿಂ ಕರ್ಚಂ ಮೊಟಗಿಂ ಮುಟಿಯಂ . . . ಜೋಯಿಸರಿಂ ಗ್ರಹಣಮನಱಿವಂತೆ . . . ಅಱಿವುದು (ರಮಾಣಸ್ಯ. ೯-೩೬); ಕೆಯ್ಯ ಶ್ರೀಗಂಧ ಧೂಪಾರ್ತಿ ಪಾಪಾರಣ್ಯದ ಬೇಗೆವೊಲ್ ಪೊಗೆ ಮುಸುಕಿದುದು (ವೀಣಹಕ. ೪೨-೩೦). ೨. ಆವಿ; ಹಬೆ: ಗೇರ ಪಣ್ಣನಿದು ಕೆಂಡಮೆನುತ್ತಂ ಸಾರಿ ಮೇಲೆ ತೃಣಮಿಟ್ಟದನೂದಲ್ ಸೇರಿ ಬಾಯ ಪೊಗೆ ತಳ್ತಿರೆ ಕಂಡಾ ದಾರಿಗಂ ಮುದದಿನೂದುತಮಿರ್ದಂ (ರಾಜಶೇ. ೯-೨೩). ೩. (ಆಲಂ) ಅಗ್ನಿ; ಬೆಂಕಿ; ಜ್ವಾಲೆ: 'ಪೊಗೆವೊಗ' ಪರಾ. ೪. ಅಗ್ನಿಯ ದಿಕ್ಕು; ಆಗ್ನೇಯದಿಕ್ಕು: ಹರನೊಳೊಗೆದು ನೈಋತಿಗೆ ಬರ್ಪೊಡಂ ಪೊಗೆಯಲೊಗೆದನಿಲಂಗೆ ಬರ್ಪೊಡಂ . . . ಇವ ನೋಡಿ ಪೇಟ್ ಮುಟಿಯಧಿಕ ತಾನೆಂಬುದಂ (ಜಟ್ಟಿಪು. ೨-೦). **ಹೊಗೆ₂** : ೧. "ಧೂಮಮೆನೆ ಹೊಗೆಯುಕ್ಕು" (ಹುಂಗರಾ. ೦೯-೮); ಒಲೆಯುಡಿಯನುರುಹಿದಡೆ ಹೊಗೆ ಗೋಳಕನಾಥನ ಕೊರಳ ಸುತ್ತಿತ್ತು ಮಹೀತಳನ ಜೆಡೆ ಸೀಯಿತ್ತು ಮರೀಚಕನ ಸಿರ ಬೆಂದಿತ್ತು (ಬಸವ. ೯೩೦); ಮೊಗದ ಹೊಗರವಗಡಿಸೆ ಸುಯಿಲಲಿ ಹೊಗೆಯು ಹೊದಱುಂಕುರಿಸೆ ಬಿಡುಗಣ್ಣುಗಳೊಳೊಕ್ಕುದು ಕೆಂಪು ಸೊಂಪಡಗಿತು ಮುಖಸ್ನೇಹ (ಕುವ್ಯಾ.ಶೀ. ೬-೨೦); ಹೊಗೆಯೊಳಗೆ ಹೋಗಬೇಕಾದರೆ ಬಾಗಿಕೊಂಡು ಹೋಗಬೇಕು (ಮುಂಜಿಯು. IV. ೬೦). ೨. ಒಂದೆಲಗಣ ಸೊಪ್ಪು, ಗಾಂಧಾರಿಸೊಪ್ಪು . . . ಇವುಗಳನ್ನೆಲ್ಲಾ ದಳಿಗೆಯಲ್ಲಿ ಹಾಕಿ ಹತ್ತು ಮೆಗೆ ಅಂಬಲವಂ ಹುಯ್ದು ಕುದಿ ಬರುವ ಹಾಗೆ ಕಾಯಿಸಿ ಆ ಹೊಗೆಯಿಂದುಬ್ಬೆಯ ಕಾಯಿಸಲು ವಾತಜ್ವರಂ ತೀರ್ಗುಂ (ಸಕವೈ. ೬೯). ೩. ಬಾಣದ ಹೊಗೆಯಲಿ ರಿಪುಗಳ ತೂಳಿಸಿಕೊಂಡೇಕಾಂಕವಂಶಸಂಭವನು ಕ್ಷೋಣೀಪ ಬೆಟ್ಟದ ಚಾಮೇಂದ್ರನೊಳಹೊಕ್ಕು ಮಾಣದಿಱಿದ ರಿಪುಬಲವ (ಕಂಪಹಿ. ೩-೭೪). ೫. ಮಂಕು; ಮ್ಲಾನತೆ: ನಗೆಗೆ ನಗೆ ಕುಂಟಣಿ ವಿವೇಕದ ಹೊಗೆಗೆ ಹೊಗೆ ಸಖಿಯಾದುದಲ್ಲಿಯ ಹಗರಣಿಗ ನಾನಾದೆನದು ನೋಟಕದ ಜನವಾಯ್ತು (ಕುವ್ಯಾ.ಸ. ೦೨-೪೨); ಇವರ ಹರುಷದ ನಗೆಯುನಾ ಬಲದವರ ಮೋಱೆಯ ಹೊಗೆಯುನು . . . ನೀ ಚಿತ್ತವಿಸಿದ್ದೆ ಧೃತರಾಷ್ಟ್ರ (ಕುವ್ಯಾ.ಕ. ೦೨-೨). ೬. ಹೊಗೆಸೊಪ್ಪು; ತಂಬಾಕು: ಆ ವರುಷ ಮೂರು ಕೊಳಗದಷ್ಟು ತಕ್ಕಲು ಕಿತ್ತು ಹೊಗೆ ಹಾಕಿದ್ದರಿಂದ ಸುಂಕಗಿಂಕ ಕಳೆದು ಅರುವತ್ತು ವರಹ ಬಂತು (ಕೆಂಗಾಕ್ಕ. ೩೦೩).

**ಹೊಗೆಯ ಬತ್ತಿ** = ಹೊಗೆಸೊಪ್ಪಿನಿಂದ ತಯಾರಿಸಿದ ಬೀಡಿ, ಸಿಗರೇಟು ಮುಂತಾದುವು : ಕಾರ್ಖಾನೆಯ ಹೊಗೆಯು ವಾತಾವರಣವನ್ನು ತುಂಬಿರುವುದು ಸಾಲದೆ ಪ್ರತಿಯೊಬ್ಬನೂ ಒಂದೊಂದು ಹೊಗೆಯ ಬತ್ತಿಯನ್ನು ಬಾಯಲ್ಲಿಟ್ಟುಕೊಂಡು ಹೊಟ್ಟೆ ತುಂಬಿಸಿ ಮತ್ತೆ ಹೊಗೆ ಕಾರುತ್ತಿರುವನು.! (ಕ್ರೈಠಾಕ. ೩). **ಹೊಗೆಯಾಗು** = ಹೊಗೆಯಿಂದ ಆವೃತವಾಗು ; ಧೂಮವುಂಟಾಗು : ಹಸಿಸೌದೆಯಾದ್ದರಿಂದ ಒಲೆ ಸರಿಯಾಗಿ ಉರಿಯದೆ ಮನೆಯೆಲ್ಲಾ ಹೊಗೆಯಾಯಿತು (ರೂಢಿ). **ಹೊಗೆ ಹಾಕು** = ೧. ಹೊಗೆಯನ್ನು ಉಂಟುಮಾಡು ; ಧೂಮವುಂಟುಮಾಡು : ಹೋಗು ಅನ್ನಲಾರದೆ ಹೊಗೆ ಹಾಕಿದರು (ಗಾದೆ); ಹೊಗೆ ಹಾಕುವುದರಿಂದ ಸೊಳ್ಳೆಗಳು ಕಡಮೆಯಾಗುತ್ತವೆ (ರೂಢಿ). ೨. (ಶಿಕ್ಷೆಗಾಗಿ) ಮೆಣಸಿನ ಕಾಯಿ ಮುಂತಾದ ಖಾರದ ಹೊಗೆಯನ್ನು ಉಂಟುಮಾಡು : ಹಿಂದೆ ಮಠದ ವಿದ್ಯಾರ್ಥಿಗಳಿಗೆ ವಿಧಿಸುತ್ತಿದ್ದ ಕಠಿಣಶಿಕ್ಷೆಗಳಲ್ಲಿ ಹೊಗೆ ಹಾಕುವುದೂ ಒಂದು (ರೂಢಿ). ೩. (ಚಿಕಿತ್ಸೆಗಾಗಿ) ಔಷಧೀಯ ಗುಣವುಳ್ಳ ಹೊಗೆಯನ್ನು ಉಂಟುಮಾಡು ; ಧೂಪಹಾಕು : ಹಿಂದಿನವರು ಶೀತ ಕಡಮೆಯಾಗಲು ರಾಗಿಹಿಟ್ಟು, ಅರಿಸಿನದ ಪುಡಿ ಮುಂತಾದುವುಗಳಿಂದ ಹೊಗೆ ಹಾಕುತ್ತಿದ್ದರು (ರೂಢಿ). ೪. ಒಲೆಹಚ್ಚು ; ಅಡುಗೆ ಮಾಡು : ಅವಳಿಗೆ ನಾನು ಶರಣಾಗತನಾದರೆ ನಾನು ಈ ಊರಲ್ಲಿ ಹೊಗೇ ಹಾಕ್ಕೊಂಡು ಇರೋಕಾಯ್ತದಾ ! (ಹುತ್ತಿಹ. ೦೩೭); ಹಣ ಸಾಗಿಸೋವರೆಗೂ ಊರಲ್ಲಿ ಹೊಗೆ ಹಾಕೋ ಹಾಗಿಲ್ಲ (ರೂಢಿ). ೫. (ಕಾಯಿಗಳನ್ನು ಕೃತ್ರಿಮವಾಗಿ ಹಣ್ಣುಮಾಡಲು) ಕಾವಿಗೆ ಹಾಕು ; ಅಡೆಹಾಕು : ಬಾಳೆಗೊನೆಯನ್ನು ಹೊಗೆ ಹಾಕಿ ತಂದಿದ್ದಾನೆ (ರೂಢಿ).

[ < ಪೊಗೆ$_1$./ತಮಿ. ಪುಕೈ; ಮಲ. ಪುಕ; ತುಳು. ಪುಗೆ, ಪೊಗೆ ; ಕೊಡ. ಪೊಗೆ; ತೆಲು. ಪೊಗ, ಪೊವ; ಕೋಲಾ. ನಾಯ್ಕಿ. ಪೊಗ್ ]

**ಪೊಗೆಗುಡಿ,** ಹೊಗೆಗುಡಿ (ನಾ). ಹೊಗೆಯುಗುಳುವ ಕುಡಿ; ಹೊಗೆ ಕಾರುವ ದೀಪದ ತುದಿ : ನೆಗೆವ ಪೊ[ಪಾಠಾಂ. ಹೊ]ಗೆಗುಡಿಗಳಿಂದೇಂ ಸೊಗಯಿಸುತಿರ್ದವೊ ಸುತ್ತಲುಂ ಟೆಟ್ಟಲೆಯಂ ಮಿಗೆ ಕುಡಿದಟ್ಟುಸಲಾಱದೆ ಮಗುಟ್ದುವೆ ಕಾಱುದವುವೆನಿಸಿ ಕೆಯ್ದಾವಿಗೆಗಳ್ (ವರ್ಧಪು. ೩-೬). **ಹೊಗೆಗುಡಿ :** ಮೇಲಿನ 'ವರ್ಧಪು' ಪ್ರಯೋಗದ ಪಾಠಾಂತರವನ್ನು ನೋಡಿ. [ ಪೊಗೆ$_2$ + ಕುಡಿ$_3$ ]

**ಪೊಗೆಗೆಱೆ** (ನಾ). ಧೂಮರೇಖೆ : ಪೊಗೆಗೆಱೆಯಂತೆ ಕಣ್ಗೆಸೆದುದಾ ರಾಯನ ಮೃಗನಯನೆಯ ರೋಮರಾಜಿ (ಕುಠಾಶಾಂ. ೬-೨೯). [ಪೊಗೆ$_2$ + ಗೆಱೆ]

**ಪೊಗೆಗೊಳ್** (ಕ್ರಿ). ಹೊಗೆ ಹಿಡಿ ; ಹೊಗೆಯಿಂದ ಮಸುಕಾಗು : ಪೊಗೆಗೊಂಡ ಚಿತ್ರಲತೆ ದೂಳಿಗೊಂಡ ಪುತ್ರಳಿಗೆ ಮಂಜುಗೊಂಡಬ್ಜಿನಿ ಕಾರ್ಮುಗಿಲೊಳಕೊಂಡೆಳವೆಱೆಯೆನೆ ಮೃಗಲೋಚನೆ ಸೀತೆ ನಾಡೆ ಪಾಡೞಿದಿರ್ದಳ್ (ಕಂರಾಪೂ. ೦೦-೯೩) ; ಮಿಗೆ ಕಾತರವ ಪುಟ್ಟಿಸುವ ಸುಗುಣನ ಸೋಂಕದವಳ ಜನ್ಮ ಸೊಗಸಲ್ಲ ಪೊಗೆಗೊಂ[ಪಾಠಾಂ. ಯುಂ]ಡ ಪುತ್ರಳಿಯಂತೆ (ಕುಠಾಶಾಂ. ೨೨-೨೫). [ ಪೊಗೆ$_2$ + ಕೊಳ್$_1$ ]

**ಪೊಗೆಗೊಳಿಸು,** ಹೊಗೆಗೊಳಿಸು (ಕ್ರಿ). (ಪರಿಮಳದ) ಹೊಗೆಯಾಡುವಂತೆ ಮಾಡು ; ಧೂಪಹಾಕು : ಕಳೆ ಕರ್ಪೂರದ ಕಸವಂ ತಳೆ ಕತ್ತುರಿನೀರನಿಕ್ಕು ಮುತ್ತಿನ ಕಡೆಯಂ ಬೆಳಗು ಮಣಿದೀಪಮಂ ಪೊಗೆಗೊಳಿಸಗರುವನೆಂಬರಲ್ಲಿ ಸೂಳೆವಳರ್ಕಳ್ (ಜಗಪು. ೯-೦೦೦) ; ಪೂಜಿಸಿ ನಿಳಿಂಪಸಂಕುಲಪೂಜಿತನಂ ಮಗುಟ್ದು ಪೊಗೆಗೊಳಿಸಲೆಂದಾದಂ ರಾಜಿತ ಧೂಪಮನೊಸೆದಾ ರಾಜೋತ್ತಮನೋಹಿಲಾಂಕನೆಂದನುವಾದಂ (ಅದ್ಭುಟಿ. ೦೦-೬೮). **ಹೊಗೆಗೊಳಿಸು:** ಲಲನೆ ಕಳೆ ಕಪ್ಪುರದ ಕಸವನು ತಳೆ ಸುಗಂಧೋದಕವನಗಿಲ ಹೊಗೆಗೊಳಿಸು (ಕೀಶಂಕ. ೩-೦೫).

[ಪೊಗೆಗೊಳ್ + —ಇಸು$_3$]

**ಪೊಗೆಧ್ವಜ** (ನಾ). ಹೊಗೆಯೇ ಧ್ವಜವಾದವನು; ಧೂಮಧ್ವಜ; ಅಗ್ನಿ : ಪೊಗೆಧ್ವಜನ ಟಾಮಿಂಗೆ ತೃಣದ ಪರ್ವತವು ಬರ್ಪಂದದಿಂ (ಸಸಮೋ. ೬-೩೨). [ಪೊಗೆ$_2$ + ಧ್ವಜ]

**ಪೊಗೆಮೊಗ,** ಹೊಗೆಮೊಗ (ನಾ). ಹೊಗೆ ಕಾರುವ ಮುಖ; ಉರಿಮೊಗ : ಒಗೆದ ಕುಚಂ ಮೊಗಂಗುಡದೆ ಚೆಲ್ವಿನೊಳೇಳಿಸೆ ತತ್ಸಮೀಪದೊಳ್ ಪೊಗೆಮೊಗವಾದವೋಲ್ ತಳೆದ ಧೂಮಘಟೀಗಳಿನುಣ್ಮಿ ಪೊಣ್ಮಿ ತಟ್ಟಗರುವ ಧೂಮಲೇಖೆ ಸುರಸುಂದರಿಯರ್ ನಡೆತಂದರೆಂದು (ಕಂರಾಪೂ. ೦೬-೯೩). **ಹೊಗೆಮೊಗ :** ಹೊಗೆಮೊಗದ ಕಿಡಿಗಣ್ಣ ಕೆಮ್ಮೀಸೆಗಳ ಗುಜುಱಿನ ಜುಂಜುಗೇಶದ ವಿಗಡನೆದ್ದನು (ಕುವ್ಯಾಸ. ೦೯-೦೦೦).

[ಪೊಗೆ$_2$ + ಮೊಗ]

**ಪೊಗೆಯಿಡು** (ಕ್ರಿ). ಹೊಗೆಯು ಹೊಮ್ಮು : ಪಡುವೆಡೆ ಕಿರ್ಚಿಲ್ಲದೆ ಪೊಗೆಯಿಡುವೊಡೆ ಮೇಣ್ ಪಟದ ಸೀರೆಯುರಿದೇಟ್ಟೊಡೆ ಮೇಣ್ ಕಿಡಿಗಳ್ ತಲೆಯಿಂದಂ ಪೊಱಮಡುವೊಡೆ ಯಮಗೃಹಮನೆಯ್ದುವಂ ತಡೆಯದವಂ (ರೀಕೋಕಾಳ. ೪-೯೭). [ಪೊಗೆ$_2$ + ಇಡು$_1$]

**ಪೊಗೆವಂಡಿ,** ಹೊಗೆಬಂಡಿ, ಹೊಗೆಭಂಡಿ (ನಾ). ಹಬೆಯಿಂದ ಚಲಿಸುವ ಗಾಡಿ ; ಉಗಿಬಂಡಿ ; ರೈಲುಗಾಡಿ : ಪೊಗೆವಂಡಿಯು ತಂಗಿನೆಡೆಯೊಳಿಳಿದು (ಪುರಾಕ. ೬-೩). **ಹೊಗೆಬಂಡಿ :** ಹೊಗೆಬಂಡಿ ಹೊರಟಿತು (ಕಕಪು. ೦-೨೯). **ಹೊಗೆಭಂಡಿ :** ಇವರು (ಇಂಗ್ಲೀಷರು) ಮಹಾಬುದ್ಧಿಯಿಂದಾ ಹೊಗೆಭಂಡಿಯನ್ನೂ ಹೊಗೆಹಡಗವನ್ನೂ . . . ದೂರದೃಷ್ಟಿಯಂತ್ರಗಳನ್ನೂ ಹೊಸಹೊಸದಾಗಿ ಮಾಡುತ್ತಾ ಇರುವರು (ಅವಂಕ. ೧೦ ಟೀಕು). [ಪೊಗೆ$_2$ + ಬಂಡಿ$_1$]

**ಪೊಗೆವಣ,** ಹೊಗೆಹಣ (ನಾ). ಹೊಗೆಸೊಪ್ಪಿನ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಪಡವಳದೇವರಸರು ಪೊಗೆವಣಮ ಬಿಟ್ಟರು (ಕೊಂಕಣಾ. ೦೯೯೫, ಬಂಕಾಪುರ. ೯೯-೩೦; ?). **ಹೊಗೆಹಣ :** ಗದ್ದೆ ಬೆದ್ದಲು ತೋಟ ತುಡಿಕೆ ಅಡುಮಗದೆಱೆ ಹೊಗೆಹಣ × × × ಬೇಡಿಗೆ ದವಸ ಮುಂತಾದ ಸರ್ವಸ್ವಾಮ್ಯ ಸರ್ವಆದಾಯವನು ಆಗುಮಾಡಿಕೊಂಡು (ಮೈಅಂ. ೦೯೩೦, ೩೩-೦೫; 1668); ಹೊಗೆಹಣ ಹೊಗೆಕಾಣಿಕೆ ಕುಱಿದೆಱಗೆ . . . ಆ ಸಕಲಸ್ವಾಮ್ಯವನೂ . . . ಅನುಭವಿಸಿ ಕೊಂಡು ಬಹರು (ಎಕ. XIV. ಮೈಸೂರು. ೦೦೫-೪೦೩; 1674). [ಪೊಗೆ$_2$ + ಪಣ$_3$]

**ಪೊಗೆವಱಿ** (ಕ್ರಿ). (ಅಲಂ) ರುಚಿಯನ್ನು ಕುಂದಿಸು,—ಕಡಮೆಮಾಡು; ಹೀಗಳೆ : ಮುಗುದೆಯರ ತಲೆರನ್ನೆ ಕೇಳು ಮದ್ವಚನರುಚಿ ಪೊಗೆವಱಿಯದೇ ಕಾಯ್ದ ಚಿನಿಪಾಲ (ಶಬಪೋ. ೨೬-೯). [ಪೊಗೆ$_2$ + ಪಱಿ$_2$]

**ಪೊಗೆವಳವಿಗೆಯ** 'ಪೊಗೆವಟಿಯಿಂಗೆಯ' ನೋ.

**ಪೊಗೆವಟಿಯಿಗೆಯ,** ಪೊಗೆವಳವಿಗೆಯ, ಪೊಗೆವಟವಿಗೆಯ (ನಾ). ಹೊಗೆಯೇ ಧ್ವಜವಾದವನು ; ಅಗ್ನಿ ; ಬೆಂಕಿ : "ಮರಗೂಟಂ, ಪೊಗೆವಟಿಯಿಗೆಯಂ, ಕರ್ಬಟ್ಟೆಗಂ . . . ಇಂಗಳಂ, ಎಲರ್ಗೆಳೆಯಂ—ಈ ೧೩ ಅಗ್ನಿ" (ಕಶಸಾ. ೪೯-೩೩). **ಪೊಗೆವಳವಿಗೆಯ :** "ಪೊಗೆವಳವಿಗೆಯನೆನೆ ಧನಂಜಯಂಗೆ ಪೆಸರು" (ಕಶ. ೭೦). **ಪೊಗೆವಟವಿಗೆಯ :** "ಇಂಗಳನೆಲಗೆಳೆಯ ಪೊಗೆವಟವಿಗೆಯನಗ್ಗಿ ಹಗ್ಗಿ . . . ಅಗಿನಿಯನೆ ಕಿಚ್ಚು" (ಕಬ್ಬಿಕ್ಕ. ೨೦). [ಪೊಗೆ$_2$ + ಪಟಯಿಗೆ + — ಅ$_7$]

**ಪೊಗೆವಟವಿಗೆಯ** 'ಪೊಗೆವಟಿಯಿಂಗೆಯ' ನೋ.

**ಪೊಗೆವೊಗೆ** (ನಾ). ಒಂದು ಬಗೆಯ ತೆರಿಗೆ, — ಸುಂಕ ( ? ) : ಮಂಠನೆಯ ಸಾಮ್ಯದೊಳ್ ಬಟ್ಟ ಮರ್ನ್ನಣೆಯೆನ್ನೆನ್ನೊಡೆ ಮನ್ನೆಯದೆಱೆ ಆಳಿವಸತಾಯ ಪೊ[ಗೆ]ವೊಗೆ ತಳಾಱಗೂಳಿ (ಸೌಇಇ. XI–1, ೭೫-೨೦ ; 1042) ; ಪೊಗೆವೊಗೆಯು ಮನೆಗೆ ಪಣವುಂ ಪಾಗದ ತೆಱೆಯುಮಂ . . . ಬಿಟ್ಟರ್ (ಎಇ. XVI, ೯೫-೩೪ ; 1067). [ ? ]

**ಪೊಗೆಸುತ್ತು** (ನಾ). (ಅಲಂ) ಮಂಕಾಗಿರುವಿಕೆ : ಮುಸುಕು ಪೊಗೆಸುತ್ತು ಹೊದಕೆಗಳಸದೃಶದೊಲವಿಕೆ ವಿಚಿತ್ರಪುಳಕವಿಲಾಸಪ್ರಸರಂ ಸನ್ನಾಹನವಿಂತಿಸವಾ ವೇಗಕ್ಕೆ ತರದಿನನುಭಾವಂಗಳ್ (ಲೀಲಾ. ೯-೧೦೨). [ಪೊಗೆ₁+ಸುತ್ತು₂]

**ಪೊಚ್ಚ₁, ಹೊಚ್ಚ** (ನಾ). ೧. ನವೀನವಾದುದು ; ಹೊಸದು : "ಪೊಚ್ಚವೆನಲ್ ಪೊಸತು" (ಕಶಾಅ. ೫೬) ; ಅಂಗರಾಜನೋಳ್ದಿರ್ಚಿದ ಭಾವನೆ ಪೊಚ್ಚವಾಗಿ ಹೇಮಾಂಬುರುಹಾಸ್ಯೆ ಸೋಲ್ಮುದೆನೆ ಕನ್ನಿಕೆ ಜನ್ಮಿಯನೊತ್ತೆ (ಶಾಂತಿಪು. ೫-೦೦೬). (ಗು). ೨. ಹೊಸದಾದ ; ನವೀನವಾದ : ಹೊಂಗೆಲಸದ ಪೊಚ್ಚ ಪದುಮಮಿಟ್ಟಿರದೊಳು ಮಂಗಲ ಮಜ್ಜನಗೆಯ್ದು (ಸೋಹಶ. ೨೦-೬); ಕೊರಲೊಳೊಪ್ಪುವಚ್ಚ ಪೊಚ್ಚಚ್ಚಸರಂ ಮುಕುತಿವೆಣ್ಣ ಸಿರಿಗೊರಲ ಕರ್ಮಣಿಸರಮುನಡಿಗೊತ್ತೆ (ರಾಪಚಾಕ್ಕ. ೦೬೯-೦೪). 'ಪೊಚ್ಚ ಮುತ್ತು', 'ಪೊಚ್ಚವಚ್ಚ' ಪರಾ. **ಹೊಚ್ಚ** : ೨. ಕಾಲರಾಯನ ಬೆರಳುಂಗುರದೊಳು ಗಾದ ವಿರುಗುವ ಹೊಸ ಹೊಚ್ಚಹರಳು (ಇಂಶಾಶ. ೨೩೦-೯೪). [<ಪೊಸ]

**ಪೊಚ್ಚ₂** (ನಾ). ೧. ತಪ್ಪು ; ದೋಷ : ತಾನೆಚ್ಚಂ ಪೊಚ್ಚಮಲ್ಲದರಿ ವಾಹಿನಿಯುಂ (ಕಮಡ. ೨೨೪ ಪ್ರಯೋ). 'ಪೊಚ್ಚಂಬೋಗು' ಪರಾ. ೨. ಕಳಂಕ ; ಮಾಲಿನ್ಯ : ಪಂಚೇಂದ್ರಿಯಪ್ರಾಣಿಗಳೊಳಂ ಪೊಲ್ಲರಪ್ಪ ತಿರ್ಯಾಙ್ಮನುಷ್ಯರ್ಕಳ ಅಸಾರಮಾಗಿ ಪೊಚ್ಚಮಪ್ಪ ಔದಾರಿಕಪೊಲ್ಲ ಶರೀರಂಗಳುಂ (ಕಸಾರ. ೯೪).

[ದೇ.॥ ತಮಿ. ಪೊಚ್ಚ, ಪೊಚ್ಚೈ, ಪೊಕ್ಕು ; ಮಲ. ಪೊಕ್ಕ ; ತೆಲು. ಪೊಚ್ಚು, ಪೊಚ್ಚೆ ]

**ಪೊಚ್ಚ₃** (ನಾ). ಹೊಳೆ ; ತೊರೆ ; ಪ್ರವಾಹ : "ಪೊಚ್ಚಂ=ಪೊಟಿ" (ಕಮಡ. ಶು. ೨) ; ಕಾಳುವೈಷ್ಣವ ರಹಸ್ಯದೊಳು ತಲ್ಲಿಂಗಮುಂ ಮೇಳೈಸಿ ಕೊಳುತೊಂದು ಪೊಚ್ಚದೊಳು ಹಾಯ್ಕಿಯಾಮೇಲೆ ನೆಟಿ ವೀರನಾರಾಯಣ ನೆನಿಪ್ಪ ಪ್ರತಿಮೆಯನಲ್ಲಿ ನೆಲೆಗೊಳಿಸಲು (ಶಾಸೋಪು. ೦೦-೩೯) ; ತಡಿಯೊಳ್ನೀರ್ಗೊಂಬ ಕಾಡಾನೆಗಳಂ . . . ಮತ್ಸ್ಯಂಗಳಂ ಪೆಂಪಿಡಿದೊಪ್ಪಿತ್ತಲ್ಲಿ ಫೇನಸ್ಮಿತೆಯೆನಿಸುವ ಪೊಚ್ಚಂ ಪೊದಲ್ದೊಪ್ಪದಿಂದಂ (ರಾಶಚೇ. ೬-೨೩) ; ಇಂತು ಮುಂಗಾರ್ ತಲೆದೋಱೆ ತಿರೆವೆಣ್ಗೆ ಮುಗಿಲ್ಪೊಂದಿಯೊಳ್ ಬಳ್ಳಿವರಿವ ನೇಹದಿಂ ಬೆಳ್ಳಂಗೆಡೆವ ಸೊಗದಾಲಿನೀರೆನೆ ಪೊಚ್ಚಂ ಪೆರ್ಚಿಪರಿದುದು (ರಾಪಚಾಕ್ಕ. ೬-೦೪). 'ಬಾಂಬೊಚ್ಚ' ಪರಾ.

**ಪೊಚ್ಚ₄ ?** (ನಾ). (?) : ಪೆಸರ್ಗಳ್ಕಿತ್ತು ಸಮಸ್ತಖೇಚರಬಲಂ ತೇಜಕ್ಕೆ ಬೆರ್ಚಿತ್ತು ಮುಂ ಪೊಸಪೊಚ್ಚಂ[ಪಾಠಾಂ. ಪೊತ್ತಂ, ಪೊಟ್ಟಂ, ಪೊರ್ತಂ] ಬೆರಸಿರ್ಪ ಭೂಚರಬಲಂ . . . ಎಂಬ ಗುಣಸಂಘಾತಂಗಳಂ ತಾಳ್ದಿ ಪೆಂಪೆಸಕಂಬೆತ್ತಿರೆ ಸಂತಮಿಂತತಿಬಳಂ ರಾಜ್ಯಂಗೆಯುತ್ತಿರ್ಪನಂ (ಅಂಪು. ೦-೭೬). [ ? ]

**ಪೊಚ್ಚಂಬೋಗು** (ಕ್ರಿ). ೧. ದೋಷಯುಕ್ತವಾಗು ; ಕಳಂಕ ಹೊಂದು : ಮಚ್ಚರದಿಂ ಜಿನಮತಮಂತುಚ್ಚಳನಪ್ಪನ್ಯಸಮಯಿ ಪೊಲ್ಲಂದೊಡದೇಂ ಪೊಚ್ಚಂಬೋಕುಮೆ ವಾಯಸ ಪೆಚ್ಚಮನಿಕ್ಕಿದೊಡೆ ವಾರ್ಧಿಗಕ್ಕುಮೆ ಭಂಗಂ (ಸಮುಕ. ೦೩-೫೦); ಮಚ್ಚಿಂ ರಾಗದ್ವೇಷಂ ಮೆಚ್ಚವೆಯಿಂದಾಗೆ ಕೆಟ್ಟರೀಯೆರಡಱೊಳಂ ನಚ್ಚುವುದಾಸೀನಂ ತಾಂ ಪೊಚ್ಚಂಬೋ[ಬೋ]ಗದೆ ತಗುಳ್ದೊಡಘಮುಱಿಯದುದೇ (ಜೀವಸಂ. ೦೭೦ ೦೩). ೨. (ಅಲಂ) ಹುಸಿಯಾಗಂ : ಪೊಚ್ಚಂ[ಚ್ಚಂ]ಬೋಗದ ಶೌರ್ಯಮದಚ್ಚರಿಯಾಗಿರೆ ವ್ಯಗಾರಿಯುಂ ಪೊಕ್ಕಚಲಿಂ ಮಚ್ಚರಿಸಿ ಕೊಂದು ನಚ್ಚಿಂ ಮೆಚ್ಚೆ ಜಗಂ ತಗುಳೆ ಪೊಗಟಿ ನೆಗಟ್ದಂ ಕೃಷ್ಣಂ (ನರ್ಪಚಾ. ೩-೨೩).

[ ಪೊಚ್ಚ₂ + ಪೋಗು₁ (<ಪೋ₁) ]

**ಪೊಚ್ಚಮುತ್ತು** (ನಾ). ಹೊಸದಾದ ಮುತ್ತು ; ಕಾಂತಿಯಿಂದ ಕೂಡಿದ ಮೌಕ್ತಿಕ : ಆಳದೊಳಗೆ ಏನೋ ಒಂದು ಪೊಚ್ಚಮುತ್ತಿನಂತಿದೆ (ಹೃದಶ. ೨೩-೦೦). 'ಪೊಸಮುತ್ತು' ಪರಾ. [ಪೊಚ್ಚ₁+ಮುತ್ತು₃]

**ಪೊಚ್ಚರ** 'ಪೊಚ್ಚಱು₂' ನೋ.

**ಪೊಚ್ಚವಚ್ಚ** (ನಾ). ಹೊಸ ಆಭರಣ; ನೂತನವಾದ ಅಲಂಕಾರ : ಪಚ್ಚವಮಾಭರಣಂ; ಪಾವುವಚ್ಚಂ, ಪೊಚ್ಚವಚ್ಚಮಿತ್ಯಾದಿ (ಶಬ್ದಾಮ. ೪೪೦ ವ್ಯಾಖ್ಯಾ). [ಪೊಚ್ಚ₁+ಪಚ್ಚ₂]

**ಪೊಚ್ಚಳ** 'ಪೊಯ್ಸಳ' ನೋ.

**ಪೊಚ್ಚಱ** 'ಪೊಚ್ಚಱು₂' ನೋ.

**ಪೊಚ್ಚಱತನ** (ನಾ). ಅಹಂಕಾರ ; ಹೆಮ್ಮೆ ; ಗರ್ವ : ಮಱೆದಪ್ಪಡಮೆಂದುಂ ನುಡಿದಱಿಯಂ ದಿಟಮಪ್ಪ ನುಡಿಗಳಂ ಮಾಣದೆ ಪೊಚ್ಚಱತನದಿ ನುಡಿವನೆನಿಸಿಲ್ಲಱಗುಲಿಗಂ ಮೊಗ್ಗೆ ಸೂನೃತವ್ರತಮೆಂತುಂ (ಸಮುಕ. ೫-೩೦).

[ ಪೊಚ್ಚಱ (< ಪೊಚ್ಚಱು₂) + –ತನ ]

**ಪೊಚ್ಚಱಿಸು** (ಕ್ರಿ). ೧. ಗೋಚರಿಸು ; ಪ್ರಕಟವಾಗು : " ಏಗೆ ಪೊಚ್ಚಱಿಸಿತೆಂದು ಕಣ್ಣಲೆದುದೆಂದಿರದೆ ಪೊಡಕರಿಸಿತಕೆ ನಾಮಮಕ್ಕುಂ" (ಕವ್ಯಾಕ್ಕೆ. ೭೪) ; ತಱಿದು ನಿಶಿತಾಸ್ತ್ರದಿಂದಂ ತೆಱಪಾಗಿರೆ ದಿವ್ಯಬಾಣದಿಂ ನಿಟ್ಟಿಸೆ ಪೊಚ್ಚಱಿಸೆ ಶಿಶುಪಾಳಶಿರಮಂ ಪಱಿಯೆಚ್ಚಂ ಕೃಷ್ಣನುಷ್ಣತೇಜೋನಿಳಯಂ (ನೇಮಿಪು. ೭-೫೬) ; ಕಿಱುವೆಳಗಿಂದ ಧರ್ಮಧ್ಯಾನರೂಪ ಪೊಚ್ಚಱಿಪ ಮಹಾಪ್ರಭೆಯಿಂದ ಮಿಱುಪ ಶುಕ್ಲಧ್ಯಾನರೂಪ ನನ್ನೆದೆಯೊಳಿರೆಱಿಯ ಚಿದಂಬರಪುರುಷಾ (ಶರಶ. ೫೪-೦೦೩). ೨. (ಗರ್ವವನ್ನು) ತೋರ್ಪಡಿಸು ; ಪ್ರದರ್ಶಿಸು : ಆಗಳಾನೇಱಿಪೆನೆಂದು ಪೊಚ್ಚಱಿಸಿ ಬಂದು ಸುಯೋಧನನನುಗ್ರಹಾಪಮಂ ಮೂಱುಸೂಟ್ ಬಲವೇದು ಪೊಡಮಟ್ಟು (ಶಂಕಭಾ. ೩-೫೬) ; ಕೆಲಬರೆಮ್ಮಿಂ ಮುನ್ನಿಱಿವರಾರೆಂದು ಪೊಚ್ಚಱಿಸಿ ಕೈದುವೆತ್ತೆಯುಂ (ವರ್ಧಮಾ. ೯-೩೪ ವ). ೩. ಗರ್ವಪಡುವಂತೆ ಮಾಡು; ಹೆಮ್ಮೆಪಡುವಂತೆ ಮಾಡು ; ಉಬ್ಬಿಸು : ಮಱೆಯದಹೋರಾತ್ರಂ ಕಯ್ಯಱಿದಿಲ್ಲದ ಗುಣಮನಂತೆ ಬಡದೇಱಿಸಿ ಪೊಚ್ಚಱಿಸುತ್ತಮಿರ್ಪ ಪಿಡ್ಗರ್ಗೆಱುವವರಱಿವಿಲ್ಲದವನಿಪಾಲರ್ ಜಗದೊಳ್ (ಕಾರಂಪು. ೫೭೦). ೪. ಎಚ್ಚರವಾಗು ; ಜಾಗೃತಗೊಳ್ಳು : ಕುರುಪತಿಯಂತಿರೆ ಕಂಡಾ ಗುರುತನಯಂ ಮುನಿದು ರೌದ್ರರುದ್ರನ ತೆಱದಿಂ ಪಿರಿದಿರುಳೊಳಿಱಿದು ಕೌಂತೇಯರ ಬೀಡಂ ಕೂಡೆ ಮಸಗಿ ಕೊಲ್ವುದುಮಾಗಳ್ ನೆಱೆದಿರದೆ ಗುರುಜನಂ ಪೊಚ್ಚಱಿಸೆ ಕಱುತ್ತುಱಿದೆ ತಾಗೆ . . . ತಱೆದಂ ಭೋಂಕಲ್ (ನೇಮಿಪು. ೦೨-೨೦೭). [ಪೊಚ್ಚಱು₁ + –ಇಸು₁]

**ಪೊಚ್ಚಱು₁** (ಕ್ರಿ). ೧. ಗೋಚರಿಸು ; ಪ್ರಕಟವಾಗು ; ಕಾಣು : " ಪೊಚ್ಚಱು—ಸ್ಫುರಣೇ (ತೋರ್ಪಡು) " (ಕಮಧಾ); ಉಱಿದೆನ್ನಂ ಮಾಯೆಯುಂ ಬಂಚಿಪ ಮಹಿಜೆಯನೆಂತೊಯ್ದುನೊಯ್ದುಂದದಿಂ ಪೊಚ್ಚಱಿನ್ನುಂ ತೋರ್ಕೆ ಸಂಗ್ರಾಮದೊಳೆಡೆಗಡಿದಾ ಕೋಳ್ಗಳಿರ್ಪತ್ತುಮಂ . . . ಪೆಟ್ಟೆ (ಶ್ರೃಂಗಾರ. ೦-೭೦) ; ಪೆಱತೊಂದು ಸತ್ಯಲೋಕದ ಪೊಱವಳೆಯದೊಳಂಡಭಿತ್ತಿಯೊಳಮಯಲೊಳ್ ಪೊಚ್ಚಱುವುದು ಪರಮ್ಯೆಕುಂಠದ ಮಱಿಯೆನೆ ಕಾನೊಂದುಕೋಟಿಯೋಜನಮಾನಂ (ಶಕಪ. ೫-೦೪೦). ೨. ಬರು ; ಒದಗು : ಪೊಚ್ಚಱುಗುಂ ತೃತೀಯೆ ಬಂದಂತಱಿನೆಂಬ ಪದಕ್ಕಮಾ ಏಕಾರಕ್ಕಿತರಂ (ಶಮಿತ. ೩೦೭).

**ಪೊಚ್ಚಱು₂, ಪೊಚ್ಚರ, ಪೊಚ್ಚಱ** (ನಾ). ೧. ಹೆಮ್ಮೆ ; ಗರ್ವ ; ಅಹಂಕಾರ: ಪಾಂಚಾಳಿಯನೆಱೆವದಟೇನಾದುದೋ ಗಂಡ ಪೇಟ್ ಪೊಚ್ಚಱಿನಂತಾ ಮಾತುಮಿಂತೀಯಿರ[ವೆನೆ] ನಗೆಯಂ ಮಾಡಿದ್ದೆ (ಶಂಕಭಾ. ೦೩-೭೭) ; ತಳ್ತಱಿಯಲ್ಕಮುಕರೊಳ್ ಮನೋಭವನೃಪಂ ಮೇಲೆತ್ತಿದಂ ನಾಡೆ ಪೊಚ್ಚಱು ಬೇಡೆಂಬಪೊಲೊರ್ವ ಕಾಮಿನಿ ಲಸಚ್ಛೃಂಗಾರದಿಂದೊಪ್ಪಿದಳ್ (ಧರ್ಮಾಮ್ಮ. ೭-೨೦೩) ; ಕಿಱಿಯನಿವಂ ಪ್ರಾಯದೊಳೆಂದುಱಿದೆನ್ನಂ ಸುಡುವುದಳವೆ

ಬಲ್ಪಿನೊಳೆನ್ನೀ ಕುಱುಕುಣಿಕೆಗೆ ನೆಱೆಯೆ ಪೊಚ್ಚಱನೊಳಿದೇಂ ಪೊಣರ್ದುರ್ ನೋಡಲಾಗದೆ ಕೆನ್ನಂ (ಬಂಹಂ. ೧೦-೩೯). ೨. ಎಚ್ಚರ: 'ಪೊಚ್ಚಱಿಸು', 'ಪೊಚ್ಚಱುಗೆಡು' ಪರಾ. ೩. ಪರಾಕ್ರಮ; ಶೌರ್ಯ: ಆತನಂ ತಾಗಿ ತಳ್ತಱಿಯಲ್ ಕೋಡಗಗಟ್ಟುಗಟ್ಟೆ ತರಲಿನ್ನಾರಾರ್ಪರಂತಪ್ಪ ಪೊಚ್ಚಱ ಸಾಮಂತರೆ ಪೋಗಿಂ (ಶಂಪಹಾ. ೩-೨೦); ಗುರುವಂ ಪ್ರೋಜ್ಝಿತ ಚಾಪನಂ ಪುಸಿದು ಕೊಂದಾ ಬೀರವಂ ಭೀಷ್ಮರಂ ಶರಶಯ್ಯಾಗತರಂ ಕಱುತ್ತು ಗುಱಿಯೆಚ್ಚಾ ಪೊಚ್ಚಱಂ . . . ಪಾಂಡುಪುತ್ರರೆ ಬಲ್ಲರ್ (ಗದಾಯು. ೩-೩೩). ೪. ತೇಜಸ್ಸು; ಕಾಂತಿ: ರತಿಯತಿರೂಪವಂ ಸಿರಿಯ ಪೊಚ್ಚಱನಾ ಮುನಿಪತ್ನಿಯಪ್ಪರುಂಧತಿಯ ಸುಶೀಲಮಂ . . . ಎಲ್ಲಮನೊಂದುಗೂಡಿ ಪಾರ್ವತಿ ಸಮೆದಂತೆ ಕಣ್ಗೆಸೆವುತಿರ್ದಳವಳ್ಗನಿಂಪ ನೀವುತುಂ (ಶೀರಾ. ೯-೩). ೫. (ಪ್ರಕಟವಾದ) ತೀವ್ರತೆ; ತೀಕ್ಷ್ಣತೆ: ಮತ್ತೊರ್ವಂ ಬಸನದ ಮೆಚ್ಚು ಪೊಚ್ಚಱಾದ ಇಚ್ಛೆಕಾಱನಿಂತೆಂದಂ (ಅಪಂಪು. ೬-೩೬ ಪ). **ಪೊಚ್ಚರ:** ೬. "ಸ್ಫುರಣ, ಆವೇಶ" (ಕಾಂಊರ. ಕೋಶ): ಕಡಿದು ಮೇಣ್ ಬೋಳನು ಬಡಿದು ಕಮ್ಮರಿಗಿಕ್ಕಿ ತೊಡಗಿರ್ಪ ಯೇಂ ಮದುವೆ? ಪೊಚ್ಚರೇನೊಪ್ಪಂ (ಕಾಊರ. ೦೬೦-೩೯೯). **ಪೊಚ್ಚಱ:** ೩. ಏತಱೊಂದು ಪೊಚ್ಚಱದ ಮಾತಿನೊಂದು ನಿಱಿಗೆಯೊ! ಲೋಗರೊಳ್ ಬಲ್ಲರ್ ತವಮ್ಮಾಳ್ತನದ ಪೆರ್ಚಳಿಕೆಯುಂ ಗಳಪುವರೆ? (ರಾಪಾಶ್ಚ. ೬೫-೨೫); ಕಬ್ಬಿಗರ್ಗೆ ನೀಂ ಕಲ್ಲಾಯ್ತನಕ್ಕಂ ಎಂದುಂ ಕಾಣದರೋದು ಪಾಂಗಿನಿಂ ಪೇಟ್ದು ಪೊಚ್ಚಱದ ನಿನ್ನೀ ಬಣ್ಣನೆಯ ನುಡಿಗೇನೆಂಬೆನೊ! (ರಾಪಾಶ್ಚ. ೬೭-೨೬). [< ಪೊಚ್ಚಱು₁]

**ಪೊಚ್ಚಱುಗಿಡಿಸು** (ಕ್ರಿ). ತೀವ್ರತೆಯನ್ನು ಕಡಮೆಮಾಡು: ಪೊಱಮಟ್ಟು ಕೋಪದಿಂ ಮೆಯ್ಯಱಿಯದೆ ತನ್ನುನಿಯ ತಪಮನೇಗೆಯ್ದುಂ ಪೊಚ್ಚಱುಗಿಡಿಸಿ ತರ್ಪೆಮೆಂಬೊಂದಱಿಕೆಯಿನವರೆಯ್ದುವಂದರಾ ಗಿರಿವರಮಂ (ಧರ್ಮಾಮೃ. ೬-೬೯). [ಪೊಚ್ಚಱುಗಿಡು (< ಪೊಚ್ಚಱುಗೆಡು) + -ಇಸು₃]

**ಪೊಚ್ಚಱುಗಿಡು** 'ಪೊಚ್ಚಱುಗೆಡು' ನೋ.

**ಪೊಚ್ಚಱುಗೆಡು,** ಪೊಚ್ಚಱುಗಿಡು (ಕ್ರಿ). ೧. ಶೌರ್ಯಗುಂದು; ಹೆದರು: ಪೊಱಮಟ್ಟಂ ಲಲಿತಾಂಗನೆಂದೊಡಮವರ್ಬಳ್ಕುತ್ತುಮಳ್ಕುತ್ತೆ ಪೊಚ್ಚಱ[ಱು]ಗೆಟ್ಟೋಡುವರ್ (ಧರ್ಮಾಮೃ. ೨-೬೬). ೨. ಎಚ್ಚರತಪ್ಪು: ನಚ್ಚುವುದೊಂದಂಬಂ ತೊಟ್ಟೆಚ್ಚೊಡೆ ನೆಱೆಗೊಂಡ ಸರದೊಳಾಗದೆ ಕರ್ಣಂ ಪೊಚ್ಚಱುಗೆಟ್ಟುಱದಾಡಂ ಕಚ್ಚಿ ಮಹಾರೌದ್ರಭಾವದಿಂದಂ ಕಿಡೆದಂ (ಬಂಹಂ. ೦೨-೯೩). ೩. ಶೋಭೆಗೆಡು; ಅಂದಗೆಡು; ಹಾಳಾಗು: ಪೆಱತೇನೊ ಪಲವುದಿವಸಂ ಪೊಱಗಿರ್ದೊಡೆ ಕಿಡದ ವಸ್ತುಗಳ್ನುವನಿದಂ ನೆಱೆ ಪೊರ್ದಿದನಿತಱೊಳೆ ಪೊಚ್ಚಱುಗೆಟ್ಟು ಮಲಂಗಳೆಂಬ ಪೆಸರಂ ಪಡೆಗುಂ (ಧರ್ಮಾಮೃ. ೭-೦೯೦). **ಪೊಚ್ಚಱುಗಿಡು:** ೨. ಮನುಷ್ಯಲೋಕ ಸುಖಮಸ್ಥಿರಮೆಂದಱೆಪಿಂದೆ ಸೋಲ್ತು ಪೊಚ್ಚಱುಗಿಡದಮ್ಮ ಜೀಯೆನಿಸಿ ಯಾವೊಡಲುಂ ಜಿನದೀಕ್ಷೆಗೊಡ್ಡಿ ಮತ್ತಱಿಕೆಯ ಮೂಱುಮೂಢ ಮುಮನೊರ್ಮೆಯೆ ಬಿಟ್ಟು (ಧರ್ಮಾಮೃ. ೯-೦೫೨). [ಪೊಚ್ಚಱು₂ + ಕೆಡು₁]

**ಪೊಚ್ಚಱುವಳಿ** (ನಾ). ಹೊಳೆಯುವ ಬಟ್ಟೆ; ಕಾಂತಿಯುಕ್ತವಾದ ವಸ್ತ್ರ: ಮಿಱುಪ ಕುಸುಮಾಯುಧಕೆ ಪೊನ್ನೊರೆಯಂ ಸೇರಿಸುವ ತೆಱದೆ ಪೊಂಬಣ್ಣದ ಪೊಚ್ಚಱುವಳಿಯನುಡಿಸಿರ್ದಱುಪೆಱನೊಸಲಂಗನೆಗೆ ಕೋವಿದೆಯರತಿಮುದದಿಂ (ಶೀರಾ. ೯-೯೩). [ಪೊಚ್ಚಱು₂+ಪಳಿ₄ (<ಪಟ್ಟೆ)]

**ಪೊಚ್ಚು** 'ಪೊದೆಯಿಸು' ನೋ.

**ಪೊಟ್** (ನಾ). ಒಂದು ಅನುಕರಣಶಬ್ದ: ದಪ್ಪರಿದಟ್ಟುಂ ಪೊಟ್ಟನೆ ದೊಪ್ಪಧೊಗಪ್ಪನೆ ಧಿಧಿಲ್ಪುಧಿಲ್ಲನೆ ಗದೆಗಳ್ ಸೊಪ್ಪುಸೊವಡಪ್ಪಿನಂ ಸೊಟ್ಟಪ್ಪದೆ ಕಡುಕೆಯ್ದು ಪೊಯ್ದರೊರ್ವರನೊರ್ವರ್ (ಗದಾಯು. ೮-೦೦).

**ಪೊಟರೆ** 'ಪೊಟ್ಟರೆ' ನೋ.

**ಪೊಟೆವಾಡಿ** (ನಾ). ಒಂದು ಊರಿನ ಹೆಸರು: ತಸ್ಯ ಸೀಮೆ ಮೂಡಾಯ್ಪೆವ್ವರ್ಳ್ಳಿಯ ಪೊಟೆವಾಡಿಯ ಸೀಮೆಯುಳ್ ಕೂಡಿತ್ತು (ಎಕ. IV, ಹೆಗ್ಗ. ೯-೭; ಸು. 750). [ಪೊಟೆ₀ + ಪಾಡಿ₁]

**ಪೊಟ್ಟಗೆ** (ಅ). ಒಂದು ಅನುಕರಣಾವ್ಯಯ; 'ಪೊಟ್' ಎಂಬ ಶಬ್ದದೊಡನೆ: ಘಟ್ಟಿಸಿದ ಕೀಟ ಘಟ್ಟನೆಯೊಳ್ ಪೊಟ್ಟಗೊಡೆದ ಕಾಳುಗೆಗಳ ರುಧಿರಜಲದೊಳ್ ಬೆರಸಿ (ಶಂಪಹಾ. ೦೧-೭೦ ಪ); ಬಡಿವ ಬಡಿಗೆಗಳ ಕೋಳೊಳ್ ತೊಡೆಯದು ಸಲೆ ಪೊಟ್ಟಗೊಡೆದು ಕಡಿವಡೆದೆತ್ತಂ ಪುಡುಪುಡನೆ ಪುರ್ಗಿ ಜೋಲ್ದೆಟಲ್ವಡಗಾಗಿ ಸುರುಳ್ದು ಸುರುಳ್ದು ಬಾಯ್ಬಿಟ್ಟಿರ್ಕುಂ (ಸುಕುಮಾ. ೩-೦೫). [ಪೊಟ್ + -ಅಗೆ₁]

**ಪೊಟ್ಟಣ** 'ಪೊಟ್ಟಳ' ನೋ.

**ಪೊಟ್ಟಣಂಗಟ್ಟು** 'ಪೊಟ್ಟಳಂಗಟ್ಟು' ನೋ.

**ಪೊಟ್ಟಣಗಟ್ಟು** 'ಪೊಟ್ಟಳಂಗಟ್ಟು' ನೋ.

**ಪೊಟ್ಟಣವಾರಿ** (ನಾ). ಪೊಟ್ಟಣಗಟ್ಟಿದ ನೀರು; ದೊನ್ನೆಯ ನೀರು: ಬನಮೆ ಬನಕ್ಕೆ ಬಾವರಿಗೆ ಬಂದಪೊಲಾದುದು ತಂಡತಂಡದಿಂ ಮುನಿಗಳ ಕೆಯ್ಯ ಗುಂಚಣಿಗೆ ಚಾಂದ್ರಮಸೀದಳಕುಂಡಿಕಾಳಿ ತಜ್ಜನಭವನಕ್ಕೆ ದುಗ್ಧನಿಧಿ ಕಟ್ಟಿದ ಪೊಟ್ಟಣವಾರಿಗಟ್ಟದತ್ತೆನಿಸಿದುದಿಂದು ಸಾಧುಜನಸಂಗ ಸಮಾಗಮನಪ್ರಪಂಚದೊಳ್ (ಅಪಂಪು. ೩-೩೦); ನೀರ ತಾರ್ಕೆ ಹೋಗು ನಕುಲ ಸರೋರುಹದ ಪತ್ರದಲಿ ಪೊಟ್ಟಣವಾರಿಯನು ಕಟ್ಟಿಂದು ಕುಂತೀ ಸೂನು ನೇಮಿಸಿದ (ಕುಪ್ರಾಆ. ೨೩-೦೨).

[ಪೊಟ್ಟಣ (< ಪೊಟ್ಟಳ) + ವಾರಿ₂]

**ಪೊಟ್ಟಣಿಸು** 'ಪೊಟ್ಟಳಿಸು' ನೋ.

**ಪೊಟ್ಟನೆ** (ಅ). ಒಂದು ಅನುಕರಣಾವ್ಯಯ; 'ಪೊಟ್' ಎಂಬ ಶಬ್ದದೊಡನೆ: ಪಾರ್ಥನ ದೇವದತ್ತನಿಸ್ವನದೊಳೆ ಸೀವಿ ಪೊಟ್ಟನೊ[ಡಾಡಾಂ. ಗೊ]ಡೆವಂತೆಪೊಱಾಮದಜಾಂಡಮಂಡಳಂ (ಶಂಪಹಾ. ೦೦-೦೯೩); ಬೀಸಿ ಕರಮೆತ್ತಿ ಪೊಯ್ದಡೆ ಸೂಸೆ ಮಿದುಳ್ ಪೊಟ್ಟನೊಡೆಯೆ ತಲೆ ಕರಮಿಂ ತೊಂದಾಸುರವಾಗಿರೆ ಕೊಂದು ವಿಭಾಸುರತೇಜದೊಳೆ ತಂದೆಯಲ್ಲಿಗೆ ಮಗುಟ್ದಂ (ಬಂಹಂ. ೬-೩೮). [ಪೊಟ್ + -ಅನೆ₁]

**ಪೊಟ್ಟಮುಡುಹ,** ಪಟ್ಟಮುಡುಹು (ನಾ). ಮಲ್ಲಯುದ್ಧದಲ್ಲಿ ಒಂದು ವರಸೆ: ಆಂ ಪಿಡಿದುದೆ ಕತ್ತರಂ . . . ಪೊಟ್ಟಮುಡುಹಂ ಮುಹಡಂ ದಣಮಟ್ಟೆ ಪಟ್ಟಿಸಂ (ಅಪಂಪು. ೨-೨೭). **ಪಟ್ಟಮುಡುಹು:** ಚಿಮ್ಮಿ ಝಡಿತೆಯ ಸೆಳೆದು ಮುಡುಹಿನಲೌಕಿ ಬಿಗಿದರು ಪಟ್ಟಮುಡುಹಿನಲಿ (ಕುಪ್ರಾಸ. ೨-೯೯). [ ? ]

**ಪೊಟ್ಟರೆ,** ಪೊಟರೆ, ಪೊರಟ್ಟೆ (ನಾ). (ಮರ, ಕಲ್ಲು ಮುಂತಾದುವುಗಳಲ್ಲಿರುವ) ಡೊಗರು; ಹೋರು; ರಂಧ್ರ: ಕಾಗೆಯು ಆ ಮರದ ಪೊಟ್ಟರೆಯಲ್ಲಿಯಿರುವ ಕೃಷ್ಣಸರ್ಪದಿಂದ ಭಕ್ಷಿಸಲ್ಪಟ್ಟ ತನ್ನ ನೂರಾರು ಮರಿಗಳಂ ತಿಳಿದು (ಸೌಗಂಧಿ. ೩೩೭-೦೯); ನಾರಾಯಣನು ಯಾರಿಗೂ ಕಾಣದಂತೆ ಊರ ಹೊರಗಣ ಒಂದು ದೊಡ್ಡಮರದ ಪೊಟ್ಟರೆಯನ್ನು ಸೇರಿ ಅನ್ನನೀರುಗಳಿಲ್ಲದೆ ಮೂರು ದಿನಗಳಿದ್ದನು (ಶಕ್ಕೋಟಿ. ೦೮೭). **ಪೊಟರೆ:** ಪಕ್ಷಿಗಳೆಲ್ಲ ಸಂಚಾರವಂ ಬಿಟ್ಟು ಕಲಕಲಧ್ವನಿಗಳಂ ಮಾಡುತ ಮರಗಳ ಪೊಟರೆಗಳಲ್ಲಿ . . . ಸೇರಿ (ಸೌಗಂಧಿ. ೦೮೯-೦೭): ಮನೆಯ ಹದಿಗೆ ಹಾಕಿರುವ ಕಲ್ಲುಗಳ ಪೊಟರೆಗಳಲ್ಲಿ ಕಿರಿಜೇನು, ದುಂಬಿಗಳು ಒಂದು ವಿಧವಾದ ಜೇನನ್ನು ಶೇಖರಿಸಿಡುತ್ತಿದ್ದವು (ಹುಟ್ಟಿಹ. ೦೩೩). **ಪೊರಟ್ಟೆ:** ಆ ಕೋಡಗಿ ಕಾಡಂ ಕೂಡಿ ಕುರವಿಯಾಗಿರ್ದುದಱ ಪೊರಟೆಯೊಳ್ಪೆತತ್ರಿಗಳ್ಸತ್ತು ಪೋತುಗಳಾಗೆ (ಭುಜಬಲಿ. ೯-೩೩ ಪ). [ದೇ. ॥ ತುಳು. ಪೊಟ್ರೆ]

**ಪೊಟ್ಟವಟ್ಟಳೆ** (ನಾ). (?) : ಬಳಸುಮೇಱುವ ಸುಱಿವಗಲ್ಪಿನ್ನಪ್ಪ ಬಾರಣ ದೋಷಮಲ್ಲದೆ ಪೊಟ್ಟವಟ್ಟಳೆಗೆ ಸಮನಾಗೆ ಗಿರಿಗೆಯ ಕೋಲ್ಪುಟ್ಟ

ವಿಗಲುಂ ನೆಲಲುಮಣಿಮಿಾಯದಿನ್ನೊನ್ದಳವಿಯೊಳ್ ಬರೆ (ಎಕ. II, ೦೩೩-೯೦ ; ೯೩೩). [ ? ]

**ಪೊಟ್ಟವಣೆ** (ನಾ). [ಸಂಗೀತ] (?) : ತಾನು ಮೊದಲವು ಮುನ್ನವವ ಱೀಳು ಗಾನವೊಪ್ಪುವ ದಂಡಿಗೆಯನವಧಾನಿಸುತ ವಿಗೆ ಮೇಘಜಾಳವ ನೊಡನೆಯೌಠಾಣಮಾನಿತಂ ನವಠಾಣವುಂ ಸಂಧಾನವುಮುರಂ ತಾಳ ಪತ್ರವುಮನೂನಪತ್ರಂ ಪೊಟ್ಟವಣೆ ಸಾರಣಮುಲರ್ದಿರಲು . . . ಬಾಜಿಸುತಾ ವಿಮಳರಾಗದೊಳಿ (ಏಕವೃ. ೦೯-೮). [ ? ]

**ಪೊಟ್ಟಳ, ಪೊಟ್ಟಣ, ಪೊಟ್ಟ** (ನಾ). ೧. ಕಾಗದ, ಎಲೆ ಮೊದಲಾದುವು ಗಳಿಂದ ಕಟ್ಟಿದ ಪುಡಿಕೆ, ದೊನ್ನೆ ಇತ್ಯಾದಿ : ಜೀವಿತವುರಣಂ ಗಳೆಂಬಿವಱುಟ್ಟಳಮುಂ ಪುಸಿಯ ಪೊಟ್ಟಳಮುಮುಕ್ಕುಂ (ಶಾಂತಿಪು. ೬-೦೩೩೮); ಕುಂಬುಮದ ಪೊಟ್ಟಳ ಜವಾದಿಯು ವಂಕಿ ಪೊಡರ್ವ ಗಂಧದ ಸಿಪ್ಪು ಕರ್ಪುರದ ನಾಳಿಗಳ ಪಿಡಿದೊಡನೆ ನಡೆದರೊಲಿದು (ಹದ್ಮಣ. ೬-೭) ; ಸರ ಕಾರದ ಸಾಲದ ಪತ್ರಗಳನ್ನು ಕರಿಯ ಮದ್ದಿನ ಪೊಟ್ಟಳಗಳನ್ನು ಕಟ್ಟುವ ದಕ್ಕಾಗುಪಯೋಗಿಸಿ . . . ಸುಟ್ಟು ಬಿಟ್ಟನು (ಗುಣಾಶಾ. ೯೬). **ಪೊಟ್ಟಣ** : ೧. "ಪೊಟ್ಟಣ(ಳ)—ಪುಟ = ಎಲೆ—ಕಾಗದಗಳ ಬಾಟ್ಟಿ" (ಶಬ್ದಕೋ. ೨೭) ; ಅರ್ಭ್ಯರ್ಣಪಾದಪಸ್ಫುಟಿತ ಪಲ್ಲವಂಗಳೊಳಂ ಕಟ್ಟಿದ ಕರ್ಪೂರರಜದ ಪೊಟ್ಟಣಂಗಳೊಳಂ ಸ್ವೇದಪ್ರತೀಕಾರವುನನವರತಂ ಮಾಡಿಯುಂ (ಕಾದಂಬ. ೬೩೩) ; ಬಾಳ್ಗೆನ್ನ ಭಾಳಾಕ್ಷನೆನುತ ಪಿನಾಕಿ ಕೊಟ್ಟ ಪೊಟ್ಟಣವುಂ ಬಿಟ್ಟು ಭಸ್ಮಗಿತ್ತು (ಪಂಚರ. ೬-೦೯); ಕಿಸೆಯಲ್ಲಿ ಅಡಿಕೆಯ ಪೊಟ್ಟಣವಿದೆ, ತಂದು ಕೊಡು (ಕೀರ್ತಿ. ೦೦೬). ೨. (ಹಣ ಮೊದಲಾದುವುಗಳ) ಕಟ್ಟು; ಗೆಂಟು; ಥೈಲಿ: ತನ್ನ ಕಯ್ಯೊಳಿರ್ದ ಸಾಸಿರಗದ್ಯಾಣದ ಪೊಟ್ಟಣವುಂ ಸುಮತಿಯ ಕಯ್ಯೊಳ್ ಕೊಟ್ಟು (ಸುಕುಮಾ. ೭-೨೯ ವ). **ಪೊಟ್ಟ** : ೧. ಅಂಗಡಿಯಿಂದ ತಂದ ಕಾಫಿಪುಡಿಪೊಟ್ಟ ಒಡೆದುಹೋಗಿದೆ (ರೂಢಿ).

[ದೇ.॥ ತಮಿ. ಪೊಟ್ಟಲ, ಪೊಟ್ಟಣ, ಪೊಟ್ಟಲ; ತುಳು. ತೆಲು. ಪೊಟ್ಲ, ಪೊಟ್ಟ]

**ಪೊಟ್ಟಳಂಗಟ್ಟು, ಪೊಟ್ಟಣಂಗಟ್ಟು, ಪೊಟ್ಟಣಗಟ್ಟು** (ಕ್ರಿ). ೧. (ಕಾಗದ, ಎಲೆ ಮೊದಲಾದುವುಗಳಿಂದ)ಪೊಟ್ಟಣವನ್ನು ಕಟ್ಟು; ಪುಡಿಕೆಮಾಡು; ದೊನ್ನೆಯಾಗಿಸು: ಪಿರಿದೊಂದು ತಾವರೆಯೆಲೆಯೊಳ್ ನೀರಂ ಮೊಗೆದು ಪೊಟ್ಟಳಂಗಟ್ಟಿ ಕೊಳದಿಂ ಪೊಱಮಟ್ಟು (ಬಂಜಾಂ. ೦೯-೩೩ ವ). **ಪೊಟ್ಟಣಂ ಗಟ್ಟು**: ೨. ಉಂಡೆಮಾಡು: ಉಟ್ಟ ಸೀರೆಯ ಪೊಟ್ಟಣಂಗಟ್ಟಿ ಶೂಲಿ ಯಕ್ಷಿಗೆ ಬಾಯ ಶೇಖವನೋಳಿಯಿಂ ನಸು ಹತ್ತಿಸುತ್ತಿರೆ (ಏಕವೃ. ೦೬-೬೦). **ಪೊಟ್ಟಣಗಟ್ಟು** : ೧. ಆದರಿಸಿ ಸಕಲಪುಷ್ಪವನು ಪೊಟ್ಟಣಗಟ್ಟಿ . . . ಶಿವಲಿಂಗಾರ್ಚನೆಯ ಮಾಡಿ ಪುಳಕಿಸುತೆ (ಶಾಮಾಶ. ೬೯-೦೬) ; ಸಿಡಿಲ ಪೊಟ್ಟಣಗಟ್ಟಿ ಸೇಕವ ಕೊಡುವರೇ (ಕುಮ್ಮಾ. ೦೯-೩೭); ಬಣ್ಣಬಣ್ಣದ ಪೂಗೊಯ್ದು ಹೊಂಬಾಳೆಯ ಪರ್ಣದೆ ಪೊಟ್ಟಣಗಟ್ಟಿ (ಮೋಹಕ. ೨೯-೬೮).

[ಪೊಟ್ಟಳ + ಕಟ್ಟು₁]

**ಪೊಟ್ಟಳಿಗೆ** (ನಾ). (ಹಣ ಮುಂತಾದುವನ್ನು ಕಟ್ಟಿದ) ಪೊಟ್ಟಣ ; ಗಂಟು : ಸಾಸಿಂದೀನಾರದ ಪೊಟ್ಟಳಿಗೆಗಳಂ ಪ್ರಾಸಾದದ ಮೇಗಿರ್ದು ಜನಸಂಕೀರ್ಣದ ನಡುವೆ ನಾಲ್ಕು ಪೊಟ್ಟಳಿಗೆಯನೀಡಾಡಿದೊಡಾ ಪೊಟ್ಟಳಿ ಗೆಯಂ ಕೊಂಡು ಕೊಳ್ಳೆನೆಂದು ಪುಸಿದೊಡೆ . . . ಸಾಸಿರದೀನಾರದ ಪೊಟ್ಟ ಳಿಗೆ ಕಟ್ಟುದು (ವಡ್ಡಾರಾ. ೦೩-೬); ಸಾಸಿರ ದೀನಾರದ ಸಮಕಟ್ಟಿನ ನಾಲ್ಕು ಪೊಟ್ಟಳಿಗೆಯನೊಂದೆ ಮಾಡಿ (ಸುಕುಮಾ. ೭-೬ ವ). [< ಪೊಟ್ಟಳ]

**ಪೊಟ್ಟಳಿಸು, ಪೊಟ್ಟಣಿಸು, ಹೊಟ್ಟಳಿಸು** (ಕ್ರಿ). ೧. (ಅಲಂ) (ಪೊಟ್ಟಣ ದಂತೆ) ಉಬ್ಬು; ಊದಿಕೊಳ್ಳು; ಬಾತುಕೊಳ್ಳು: ಕದಂಪು ಬೆಳರ್ತು ಬಾಡಿ ಪೊಟ್ಟಳಿಸಿ ಬೆಳರ್ತು ಮುದ್ರಿಸಿದ ಬಾಯ್ಗಳಲರ್ವಿರಿವಂತು ಕಂಪು ಕೈಕೊಳೆ ಬಿರಿವತ್ತು ತುಂಬಿ ನೆರೆವಲ್ಲಿಗೆ ಮಲ್ಲಿಗೆ ಸಂತೆಯಂತೆವೊಲ್ (ಅಸಂಪು. ೬-೯೪). ೨. ಕೊಬ್ಬು; ಅಹಂಕಾರಪಡು; ಗರ್ವವನ್ನು ಪ್ರದರ್ಶಿಸು: ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ . . . ಅರ್ಥದ ಕೇಡನೆ ಪೇಟ್ದು ಬೀಗಿ ಪೊಟ್ಟಳಿಸಿ ನೆಗಟ್ತೆಗಾಟಸುವ ದುಷ್ಕವಿಯುಂ ಕವಿ ಯೆಂಬ ಲೆಕ್ಕಮೋ (ಹಂಸಶಾ. ೦-೦೨); ಒರ್ವರಪ್ಪೊಡಮಿದಿರ್ಚುವ ಗಣ್ಡರ ಸಾವ್ಪೆವೆನ್ದು ಪೊಟ್ಟಳಿಸುವ ಬೀರರಂ ನೆಱೆಯೆ ಕಾಣೆವೆ (ಎಕ. IV. ಹುಂಕ್ಕ. ೯೦-೦೬; ೯೬೦); ರಾಜದರ್ಪದಿಂದ ಪೊಟ್ಟಳಿಸುತ್ತಿದ್ದ ಆ ದ್ರುಪದನಿಗೆ ಇದೇ ತಕ್ಕ ಪುರಸ್ಕಾರ (ಗುರುಶಿ. ೨೩). **ಪೊಟ್ಟಣಿಸು**: ೧. ಬಱವಱ ಬತ್ತಿ ತೋಱೆ ಕಿಱುನಾಲಗೆ ಮುಟ್ಟಲೊಡಂ ಶಿರೋರುಹಂ ಪಱಱಿಯೆ ಕುವರ್ಣ ಮಾಗೆ ನಖದಂತಚಯಂ ಕಡುದಣ್ಣಸಾಗಿ ಸುಯಕ್ ಪೊಱಮಡೆ ಪೊಟ್ಟೆ ಪೊಟ್ಟಣೆ(ಳ)ಸೆ . . . ದಷ್ಟನ ಸಾವು ನಿಶ್ಚಯಂ (ಲೋಕೋಪ. ೦೦-೯) ; ಪತ್ತಿರೆ ಪಲ್ಲು ವಿವರ್ಣತ್ವಪೆತ್ತಿರೆ ನಖನಿಕರಮುಸಿತಮಾಗಿರೆ ದಶನಂ ಕೆತ್ತಿರೆ ಗಂಟಲ್ ಬಸಿಱೊಳಪತ್ತಿರೆ ಪೊಟ್ಟಣಿಸೆ ದಷ್ಟತನುಗವುರಿಷ್ಟಂ (ಖಡುದ. ೩-೯೩). **ಹೊಟ್ಟಳಿಸು** : ೨. ನುಡಿವಂತು ನಡೆವನಲ್ಲಂ ಕಡುಖಳ ಸಂಯೋಗಿತನಕೆ ಹೊಟ್ಟಳ[ಳಿ]ಸಿಪ್ಪಂ . . . ತಿಂಬುದಡಗು ನುಡಿವುದು ತತ್ವಂ (ಚೀತಾ. ೬೩೯). [ಪೊಟ್ಟಳ + —ಇಸು₁]

**ಪೊಟ್ಟಿ** 'ಪೋಟ್ಟೆ' ನೋ.

**ಪೊಟ್ಟು, ಹೊಟ್ಟು₂** (ನಾ). ೧. ಧಾನ್ಯದ ಮೇಲಿನ (ನಿಸ್ಸಾರವಾದ) ಸಿಪ್ಪೆ.— ಕವಚ: ಪೊಟ್ಟಲುಂ ಪಾಱುವವೋಲ್ ಬೆಟ್ಟಂ ಪಾಱುಗುಮೆ (ಚಂದ್ರಪ್ರ. ೬-೩೬); ಇವರೆಲ್ಲರ ಮನದ ದುಃಖಮನಾಱಿಸುವುದು ಬಟ್ಟೆಯಂ ಕರ್ಮದ ಪೊಟ್ಟಂ ಪಾಱಿಸುವುದು (ಜೀವಂ. ೨೭-೫) ; ಪೊಟ್ಟುಗಳಂ ಕಳೆದು ಸಾರಂಗಳಂ ಸಂಗ್ರಹಿಸಿ (ಕಶಮ. ೦೩೬-೦೬). ೨. (ಅಲಂ) ಸತ್ವವಿಲ್ಲ ದುದು ; ನಿಸ್ಸಾರವಾದುದು : ಪೂರ್ವೋತ್ತರವೆರಡಱ ಪಕ್ಷಂಗಳೊಳ್ ಯುಕ್ತಿಜಾಲಂಗಳ ಸಾರಾಸಾರಮಂ ಸೋದಿಸಿ ಕಳೆದದಱೊಳ್ಪೊಟ್ಟನೊಳ್ಗ ಟ್ಟಿಯಂ ಕೂರ್ತೊಳಕೊಂಡಿರ್ಪೊಳ್ಪಿನಿಂ ತತ್ವದ ನೆಲೆಯಱಿತು . . . ತರ್ಕಕಂ ಚಿಕ್ಕದೇವಂ (ಕಆಂ. ೯-೦೦೦). ೩. ಸುಳ್ಳು; ಸಟೆ : "ಭಾವ ನನ್ನ ಮುಂದೆ ಪೊಟ್ಟೇಕೆ ಹೇಳುತ್ತಿ?" . . . "ನಾನೇನು ಪೊಟ್ಟು ಹೇಳಿದೆ?" (ಹುಂಚಾ. ೨೬). **ಹೊಟ್ಟು₂** : ೧. ಜರಿದುದೀ ಬಲರಾಸಿ ಗಾಳಿಯ ಹೊರಳಿ ಗೊಡ್ಡಿದ ಹೊಟ್ಟು ಹಾಱುವುದರಿಂದೆ (ಕುಮಾರದ್ರೋ. ೦೯-೨೭) ; ಗಟ್ಟಿಗೋದು ಮೆಯ ನಾಲ್ ಬಳ್ಳಮಂ ನೆನಹಿ ಕುಮ್ಮಿ ಹೊಟ್ಟು ಹಾಱುವ ತೆಱದಿ ಕೇಱ (ಸೂಕಶಾ. ೦-೯); ಅದಕ್ಕೆ ಹಾಕುವ ಹುಲ್ಲು, ಹೊಟ್ಟು, ಶಾಡು ಮೊದಲಾದ ಆಹಾರವನ್ನು ನೀನೇ ತಿಂದು ಬಿಡು (ಕಮಳ. ೦೨೩). ೪. (ಮರ ಮುಂತಾದುವುಗಳ) ಪುಡಿ ; ಸಣ್ಣ ಸಣ್ಣ ಚೂರು : ಒಲೆಗೆ ಹೊಟ್ಟು ತುಂಬಬೇಕು (ರೂಢಿ). ೫. ತಲೆಯಲ್ಲಿ ಉಂಟಾಗುವ ಹಗರು.— ಹುರುಪು : ಮೆಂತ್ಯವನ್ನು ತಿರುವಿ ತಲೆಗೆ ಹಚ್ಚಿ ಸ್ನಾನ ಮಾಡಿದರೆ ಹೊಟ್ಟು ಕಡಮೆಯಾಗುತ್ತದೆ (ರೂಢಿ). ೬. (ಅಲಂ) ನಿಸ್ಸತ್ವನಾದ ವನು : ಹೊಟ್ಟ ನೂಕಿ ವ್ಯಥಾಹವದ ಜಗಜಟ್ಟಿ ನೀ ಹೊಱಕಾಲುಗೊಂಡರೆ ಬಿಟ್ಟನೇ (ಕುಮ್ಮಾ. ೦೦-೩೯).

**ಪೊಟ್ಟಾಗು, ಹೊಟ್ಟಾಗು** = ೧. ಪುಡಿಯಾಗು ; ಸಣ್ಣ ಸಣ್ಣ ಚೂರಾಗು : ಸತ್ಸುರಭೂಜಂ ಪೊಟ್ಟಾದುದು (ಎಕ. VII. ಶಿಕಾಂ. ೨೯೯-೯ ; 1185). ೨. ನಿಷ್ಫಲವಾಗು ; ಹುಸಿಯಾಗು : ಅವರ ನುಡಿ ಸುಳ್ಳಾಗು ವುದಿಲ್ಲ ; ಹೇಳಿದ ಕಣಿ ಹೊಟ್ಟಾಗುವುದಿಲ್ಲ (ದೇವಮ. ೯). **ಪೊಟ್ಟುಮಾಡು** = ವ್ಯರ್ಥ ಮಾಡು : ಕಟ್ಟಿದರ್ಥ ಕಱೆವ ಎಮ್ಮೆ ಕೊಟ್ಟ ಕೊಂಡ ಸಾಲ ಕದನು ಪೊಟ್ಟು ಮಾಡಿ ಮಕ್ಕಳೊಡನೆ ಅಪ್ಪ ಹೇಳಿ ಸಾವ ತನಕ ದುಷ್ಟ ಜನರು ಸುಮ್ಮನಿರುವರೆ (ಕವಿಪ. ೦೬೬-೩).

[ದೇ.॥ ತಮಿ. ಮಲ. ತುಳು. ತೆಲು. ಪೊಟ್ಟು ; ಕೊಡ. ಪೊಟ್ಟ್; ಕೋತ. ಪೊಟ್ ; ಕೋಲಾ. ಪೊಟ್ಟು]

**ಪೊಟ್ಟುಕತೆ** (ನಾ). ನಿಸ್ಸಾರವಾದ ಕತೆ; ಜಳ್ಳುಕಥೆ; ಪೊಳ್ಳುಕಥೆ: ಅಲ್ಲಿಗೇ ಈ ಪೊಟ್ಟುಕತೆ ಮುಗಿದಂತಾಯಿತು (ಶಾಬಯ. ೩೫).
[ ಪೊಟ್ಟು + ಕತೆ ]

**ಪೊಟ್ಟುಕಳೆ** 'ಪೊಟ್ಟುಗಳೆ' ನೋ.

**ಪೊಟ್ಟುಗ, ಹೊಟ್ಟುಗ** (ನಾ). ನಿಷ್ಪ್ರಯೋಜಕನಾದವನು; ಬಲಹೀನ; ಹೇಡಿ: ನೆಟ್ಟನೆ ಪಿತೃಘಾತಿಯುಮಂ ನಿಟ್ಟಿಪುದುಂ ನಿಂದ್ಯಮೆಮ್ಮವಂದಿಗರಿಂದೀ ಪೊಟ್ಟುಗನಂ ಪೊಟಲಿಂದರೆಯಟ್ಟುವೆವೆಂದೊರೆದು ಥಟ್ಟನೊಡನಳವಟ್ಟಂ (ಕಕಾ. ೨-೩೫). **ಹೊಟ್ಟುಗ**: ಬಟ್ಟನಾಹವಕಹಿತ ಬಲಜಗಜಟ್ಟಿ ಕೌರವನೃಪತಿ ರಥವನು ಹೊಟ್ಟುಗರ ತೆಗೆ ಹೋಗಹೇಳೆಂದೆಚ್ಚನತಿರಥರ (ಕುಮ್ಯಾಭ್ಯಾ. ೨-೭೦); ಮರುಳೆ ಹೊಟ್ಟುಗರೊಡನೆ ಜಯಿಸಿದ ಪರಿಯ ಮೆರೆವುದೆ ನನ್ನೊಡನೆ (ಜೂಂಠಾ. ೩-೨೮). [ಪೊಟ್ಟು+–ಗ₂]

**ಪೊಟ್ಟುಗಳೆ, ಪೊಟ್ಟುಕಳೆ** (ಕ್ರಿ). ೧. ಸಿಪ್ಪೆಯನ್ನು ಹೋಗಲಾಡಿಸು; ನಿಸ್ಸಾರವಾದುದನ್ನು ತೆಗೆ; ಜಳ್ಳನ್ನು ತೂರು. ೨. (ಅಲಂ) ಹಗುರವಾಗಿ ಕಾಣು; ಅಲ್ಪವೆಂದೆಣಿಸು: ಏವೆನವ್ವ ಏವೆನವ್ವ . . . ಬಲುದೆಟ್ಟವ ಪೊಟ್ಟುಗಳೆವ ಬೀರನವ್ವ (ಗೀಕಗೋ. ೦೭–೦೮). **ಪೊಟ್ಟುಕಳೆ**: ೨. ಕಿಟ್ಟರೀದರೆಂಬ ಕೀರ್ತಿಗಂಜದ ಚೆಲಬಿಟ್ಟು ಕೆಳದಿವೆಣ್ಣಳೊಳು ನೆಟ್ಟನೆ ಬಳೆದಿರ್ದ ನೇಹವ ನೆನೆಯದೆ ಪೊಟ್ಟುಕಳೆದು ಪೊಬಿಡಿವುದು (ಹಂಬಿ. ೬-೯೫). [ ಪೊಟ್ಟು + ಕಳೆ₁ ]

**ಪೊಟ್ಟುಗೆಯ್** (ಕ್ರಿ). ಹುರುಳಿಲ್ಲದಂತೆ ಮಾಡು; ನಿಸ್ಸಾರಗೊಳಿಸು; ಶಕ್ತಿಗುಂದಿಸು: ಅಂತಿರ್ಪ ಕೂರ್ಪರ್ಣೀ ಪಟ್ಟಣದೊಳ್ ಪೊಟ್ಟುಗೆಯ್ದಂ (ಚಕಮ. ೩೬-೦೪). [ ಪೊಟ್ಟು + ಕೆಯ್₁ ]

**ಪೊಟ್ಟುಬಾವಿ, ಹೊಟ್ಟುಬಾವಿ** (ನಾ). (ನೀರಿಲ್ಲದೆ) ಹಾಳುಬಿದ್ದ ಬಾವಿ; ಪಾಳುಬಾವಿ: ಅದು ಯಾವುದೊ ಒಂದು ಪೊಟ್ಟುಬಾವಿ. ಅದೀಗ ಮುಚ್ಚುತ್ತಾ ಬರಾಬರಿ ಒಂದಾಳು ಆಳದಲ್ಲಿ ನಿಂತಿತ್ತು (ಮೊಶುಗು. ೩೫). **ಹೊಟ್ಟುಬಾವಿ**: ಅದರಲ್ಲಿ ನೀರು ಇರಲಿಲ್ಲ, ಅದು ಹೊಟ್ಟುಬಾವಿ (ಹೊಕಿ. ೯೯). [ ಪೊಟ್ಟು + ಬಾವಿ ]

**ಪೊಟ್ಟುವಡೆ** (ಕ್ರಿ). ಹೊಟ್ಟಾಗು; ವ್ಯರ್ಥವಾದ ವಸ್ತುವಾಗು; ನಿಸ್ಸಾರವಾಗು: ತರ್ಕದೊಳ್ ಬಾದುಂ ಬರ್ಕಡಿಗುಟ್ಟಿ ಪೊಟ್ಟುವಡೆದಂ ದುರ್ವಾದದಿಂದಿನ್ನಗಂ ಭೇದಂಬಟ್ಟಿರ್ದಗಟ್ಟು ಕಟ್ಟೆನಿನಿತುಂ ಕಾಲಂಗಳೇಂ ಕರ್ಮವೋ (ಸುಕುಚ. ೩-೯೩). [ ಪೊಟ್ಟು + ಪಡೆ₁ ]

**ಪೊಟ್ಟುವಾಯ್** (ಕ್ರಿ). ನಿಸ್ಸತ್ತ್ವಗೊಳ್ಳುವಂತೆ ಮೇಲೆ ಬೀಳು, ಎರಗು: ಮುಳಿದಿದಿರಾದುದಾದೊಡಿದಿರಂ ಮುಳಿಸಿಂದಮನನ್ಯಪಾಳನಾಗಳೆ . . . ಪೊಟ್ಟುವಾಯ್ದುಗ್ಗಮಾಗಳೆ ಪಡೆವೊಯ್ದುಗ್ಗಮಾಗಳೆ ಪೊರಳ್ದುಗುವಾಗಳೆ ಕೊಂದು ಕೂಗುಗು (ಕಶಾ. ೪, ೦೪-೭; 1099). [ಪೊಟ್ಟು + ಪಾಯ್₁]

**ಪೊಟ್ಟುಳಿ** (ನಾ). ಒಂದು ಬಗೆಯ ವಸ್ತ್ರ: ಅಳಿಲ ಬಣ್ಣವು ಆನೆವರ್ಣ ಶ್ರೀರಾಮನು ಕಳಸಗಂಟಿಯು ಪದ್ಮಮಿತ್ರ ಎಳೆಯ ಮಾಂದಳಿರು ಪೊಟ್ಟುಳಿ ಮುದ್ದುಕೇಸರಿ ಕಳಜೂಟನಣಗ ನೇಯುವವನು (ಅಪುಗಾಂ. ೯-೨೫).
[< ಪಟ್ಟವಳಿ]

**ಪೊಟ್ಟೆ₁, ಹೊಟ್ಟೆ** (ನಾ). ೧. ದೇಹದ ಒಂದು ಭಾಗ; ಜಠರ; ಉದರ: ಪೊಟ್ಟೆ ಬಟ್ಟಾಗಿರ್ದ ಪೆಜಿನಟ್ಟ ನಡುವಂ ನೋಡಿ ಪೊಕ್ಕುಮಿಟ್ಟೆಂದು ಮಿಡುಕಲಣ್ಣನೆ (ಗರಾಜು. ೯ ೩೯ ಏ); ನೆಕ್ಕ ಕದಂಪು ಕಂಪಿಪಧರಂ ಮಿಗೆ ಕೆಂಪಡರ್ದಕ್ಷಿ ಬಿಟ್ಟ ಬಾಯಕ್ಕುಳಿಸಿರ್ದ ಪೊಟ್ಟೆ ಪೊಜಮಾಯ್ದಿರ್ದ . . . ಮಸೆದ ಕತ್ತಿಗೆ ಕಣ್ಣೊಲನಾದುಮೆತ್ತಲುಂ (ಪರ್ಶ. ೦೫–೩೬); ನೀನೆನ್ನ ಪೊರೆ ಪೊಟ್ಟೆಗಶನವನಿಕ್ಕಿ (ಕೃಕವೇ. ೦–೦೬೦). ೨. ಕಣ್ಣಿನ ರೆಪ್ಪೆ; ನಿಮೇಷ: ಚಕ್ಷುರಿಂದ್ರಿಯಕ್ಕೆ ಕರಿಯಾಲಿಯು ಮಭ್ಯಂತರೋಪಕರಣಮೆರಡು ಪೊಟ್ಟೆಯುಮೆಮೆ ಇವು ಮೊದಲಾದುವೆ ಬಾಹ್ಯೋಪಕರಣಂ (ಕಸೂಕ್ತ. ೯೦); ಕಣ್ಣಂ ಮುಚ್ಚಿಹ ಪೊಟ್ಟೆಯೆ ಸನ್ನುತವರ್ಣಕಯದಜ ಮೇಲಣ ರೇಖಂ ಬಣ್ಣಿಪೊಡದು ಕ್ಷಣೆಯಕ್ಕುಂ (ಅಕ್ಷಾ. ೯-೦೫). **ಹೊಟ್ಟೆ**: ೧. ಒಡನೆ ನುಡಿದಡೆ ಸಿರ ಹೊಟ್ಟೆಯೊಡೆವುದೆ (ಜಕಬ. ೨೯೦); ಕೊರಳಿಗಡರುವ ಹೊಟ್ಟೆಗಳ ಋಷಿವರರು (ಕುಮ್ಯಾಶ. ೦೬–೯೦); ಎಲ್ಲರು ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ (ಕುಕಂಠ. ೯-೩೫ ಕಳ್ಳತ); ತನ್ನ ಹೊಟ್ಟೆಗೆ ಸಹ ಪೂರಾ ತಿನ್ನುತ್ತಿರಲಿಲ್ಲ (ಮುಂಬಯ. ೯-೫೨). ೨. ಚಕ್ಷುವಿಂಗೆ ಕರಿಯಾಲಿ ಬಿಳಿಯಾಲಿ ಇವೊಳಗಣುಪಕರಣಂ ಎವೆ ಹೊಟ್ಟೆಯೆಂಬಿವು ಬಾಹ್ಯೋಪಕರಣಂ (ಶಸಾರ. ೯೩). ೩. ಬಸಿರು; ಗರ್ಭ: ಹೊಟ್ಟೆಯೊಳಗಿನ ಕೂಸು ಹೊಟ್ಟೆಯೊಳಗಿರುವಾಗ ಪುಟ್ಟಪ್ಪ ಅಂತ ಹೆಸರಿಟ್ಟರು (ಗಾದೆ). ೪. ಡೊಳ್ಳು; ಬೊಜ್ಜು: ಈಚೆಗೆ ಅವನಿಗೆ ಸ್ವಲ್ಪ ಹೊಟ್ಟೆ ಬಂದಿದೆ (ರೂಢಿ). ೫. ಸಂತಾನ; ವಂಶದ ಕುಡಿ: ಕಳೆದೈ ಬಿಟ್ಟು ಮಗನೆ ನಮ್ಮನು ಬಟ್ಟಬಯಲೊಳಗಿರಿಸಿದ್ದೆ ಹೊಗಗುಟ್ಟಿದ್ದೆ ಕಾಳ್ಗಿಚ್ಚಿನಲಿ ಕಾಮೇಷ್ಟಿಯಲಿ ಪಡೆದ ಹೊಟ್ಟೆ ಬಿಜುದೊಟೀಯಾಯಿತೇ (ಕೊಕಠಾ. ೨-೩-೩೭). 'ಪೊಡ್ಡೆ' ಪರಾ.

**ಹೊಟ್ಟೆ ಕಿಚಿಚಿಕೊಳ್ಳು** = (ಅಲಂ) ಕರುಬು; ಅಸೂಯೆ ಪಡು: ನಿದ್ರೆ ಬರದಿರಬೇಕಾದರೆ . . . ಆಸ್ತಿಯನ್ನು ಕಳೆದುಕೊಂಡಿರಬೇಕು, ಕಾಮಾತುರನಾಗಿರಬೇಕು ಅಥವಾ ಕಳ್ಳನಾಗಿರಬೇಕು, ಅನ್ಯರ ಆಸ್ತಿಗೆ ಆಸೆಪಟ್ಟು ಹೊಟ್ಟೆ ಕಿಚಿಚಿಕೊಳ್ಳುತ್ತಿರಬೇಕು (ಚಕಾ. ೨೩೬). **ಹೊಟ್ಟೆಗೆ ಹಾಕಿಕೊಳ್ಳು** = ೧. ಆಹಾರವನ್ನು ತೆಗೆದುಕೊಳ್ಳು; ಊಟಮಾಡು: ಹಸಿವು ತಡೆಯಲಾಗುತ್ತಿಲ್ಲ. ಮೊದಲು ಏನಾದರೊಂದಿಷ್ಟು ಹೊಟ್ಟೆಗೆ ಹಾಕಿಕೊಂಡು ಬರುತ್ತೇನೆ (ರೂಢಿ). ೨. (ಅಲಂ) ಕ್ಷಮಿಸು; ಮನ್ನಿಸು: ತಮ್ಮ ಮಗಳು ತಿಳಿಯದೆಮಾಡಿದ ತಪ್ಪನ್ನು ಹೊಟ್ಟೆಗೆಹಾಕಿಕೊಳ್ಳಬೇಕೆಂದು ಆಕೆಯ ತಾಯಿ ಅವರನ್ನು ಕೇಳಿಕೊಂಡಳು (ರೂಢಿ). **ಹೊಟ್ಟೆಗೆ ಹಾಕು** = ೧. ತಿನ್ನಲು ಕೊಡು: ಮೊದಲು ಅವನಿಗೆ ಹೊಟ್ಟೆಗೆ ಹಾಕಿ ಕಳುಹಿಸು (ರೂಢಿ). ೨. ಸಾಯಿಸಲೆಂದು ಔಷಧವಿಡು, –ಮದ್ದಿಡು: ಅವರಿಗೆ ಯಾರೋ ಆಗದವರು ಹೊಟ್ಟೆಗೆ ಹಾಕಿ, ಬದುಕುವುದೇ ಕಷ್ಟವಾಯಿತು (ರೂಢಿ). **ಹೊಟ್ಟೆ ತಣ್ಣಗಾಗು** = (ಅಲಂ) ಸಮಾಧಾನವಾಗು; ತೃಪ್ತಿಯಾಗು: ನಿನ್ನ ಸೇಡು ತೀರಿತು. ಈಗಲಾದರೂ ಹೊಟ್ಟೆ ತಣ್ಣಗಾಯಿತಲ್ಲ (ರೂಢಿ). **ಹೊಟ್ಟೆ ತಣ್ಣಗಿಡು** = (ಅಲಂ) (ಸಂತಾನವನ್ನು) ಸುಖವಾಗಿರಿಸು: ದೇವರು ನಿಮ್ಮ ಹೊಟ್ಟೆ ತಣ್ಣಗಿಡಲಿ (ಮುಮ್ಮುಹ. ೦೬). **ಹೊಟ್ಟೆ ತಣ್ಣಗೆ ಮಾಡಿಕೊಳ್ಳು** = (ಅಲಂ) ಸಮಾಧಾನ ಮಾಡಿಕೊಳ್ಳು; ಸಂತೃಪ್ತಿಗೊಳ್ಳು: ಬಿಸಿಲು ಮಳೆ ಗಾಳಿಗಳಿಗೆ ಸಿಕ್ಕಿ ತಪಸ್ಸಿನಲ್ಲಿ ನವೆಯುತ್ತಿದ್ದ ನಮ್ಮನ್ನು ಸುಖವಾಗಿದ್ದ ಈ ದುಷ್ಟ ನೋಡಿ ಹೊಟ್ಟೆ ತಣ್ಣಗೆ ಮಾಡಿಕೊಳ್ಳಬೇಕೆಂದು ಬಂದನು (ಪಕಠಾ. ೦೬೦); ತನ್ನ ಗಂಡನನ್ನು ಕೊಲ್ಲಿಸಿದವನನ್ನು ತಾನು ಕೊಂದು ಮುಯ್ಯಿ ತೀರಿಸಿಕೊಂಡು ಹೊಟ್ಟೆ ತಣ್ಣಗೆ ಮಾಡಿಕೊಂಡದ್ದಷ್ಟೇ ಅವಳಿಗೆ ಸಮಾಧಾನ! (ಬಂಕಿಬು. ೦೫೫). **ಹೊಟ್ಟೆ ತಣ್ಣಗೆ ಮಾಡು** = (ಅಲಂ) ತಂಪಾಗಿಸು; ತಂಪು ಮಾಡು: ಹಾದಿಯ ಮರದಿಂದ ಕೋತಿಗಳ ಹಿಂಡು ಬಂದರೆ ಗೊನೆಗೊನೆ ಸೀಯಾಳ ಹಾಳಾಗುತ್ತದೆ. ಅದನ್ನೆಲ್ಲಾ ನೋಡಿದರೆ ನಿಮ್ಮ ಹೊಟ್ಟೆ ತಣ್ಣಗೆ ಮಾಡಿದರೆ ಪುಣ್ಯವಾದರೂ ಬರುತ್ತದೆ (ದೀಕಹೊ. ೦೬೦). **ಹೊಟ್ಟೆಯ ಮೇಲೆ ಹೊಡೆ** = (ಅಲಂ) ಜೀವನೋಪಾಯಕ್ಕೆ ಅಡ್ಡಬರು: ಭಂಗೀಜನರು ತತ್ತರಿಸಿದರು . . . ಹೊಟ್ಟೆಯ ಮೇಲೆ ಹೊಡೆಯಬೇಡಿರಿ ಎನ್ನತೊಡಗಿದರು (ಸ್ವಾತಿಕ. ೩೦೭). **ಹೊಟ್ಟೆ ಸಾಗಿಸು** = (ಅಲಂ) ಹೊಟ್ಟೆಯ ಪಾಡನ್ನು ನೀಗಿಸು; ಬದುಕನ್ನು ನಡೆಸು: ತನ್ನ ಹೊಟ್ಟೆ ಸಾಗಿಸುವ ಎಮ್ಮೆ ಸತ್ತಿದ್ದರಿಂದ ಆ ಗವಳಿಗನು ಎದೆ ಎದೆ ಬಡಕೊಂಡು, ಇನ್ನೇನು ಗತಿಯೆಂದು ಅಳಹತ್ತಿದನು (ಮುಂಬಯ. ೦–೦೯). **ಹೊಟ್ಟೆ ಹಿಡಿ** = (ಅಲಂ) (ದುಃಖವನ್ನು) ತಾಳಿಕೊಳ್ಳು; ಸಹಿಸಿ

ಕೊಳ್ಳು : "ಅಪ್ಸರೆ ಅಂತಹ ಹುಡುಗೀನ ಮನೇಲಿ ಕೂರಿಸಿ . . . ನಾನು ಹೇಗೆ ಹೊಟ್ಟೆ ಹಿಡಿದು ಬರಲಿ" ಎಂದು ಗೋಳಿಡುತ್ತಿದ್ದರು (ದೂಜಟ್ಟ. ೬೦).

[ದೇ.॥ ತುಳು. ಕೊಡ. ಪೊಟೆ ; ತೆಲು. ಕೋಲಾ. ನಾಯ್ಕ. ಪರ್ಜಿ. ಪೊಟ್ಟ./ಪ್ರಾ. ಪೋಟ್ಟ, ಪುಟ್ಟ./ಮರಾ. ಪೋಟ್]

**ಪೊಟ್ಟೆ₂** 'ಪೋಟೆ₁' ನೋ.

**ಪೊಟ್ಟೆಕಿರ್ಚು**, ಹೊಟ್ಟೆಕಿಚ್ಚು, ಹೊಟ್ಟೆಗಿಚ್ಚು (ನಾ). ೧. ಹೊಟ್ಟೆಯೊಳಗೆ ಆಹಾರ ಜೀರ್ಣವಾಗಲು ಅನುಕೂಲವಾಗುವ ತಾಪ ; ಜಠರಾಗ್ನಿ : ಪಿರಿದುಣ್ಬಂದೊತ್ತಪಟ್ಟ ಪೊಟ್ಟೆಕಿರ್ಚಲ್ತೆ ನಂದುಗುಂ ಪಿರಿದುಂ ಸಾರೆ ಕವಿವ ಕಿರಿದಾದುರಿಯಂತೆವೊಲ್ (ಸೌಸಂತ. ೦೯ ೭). 'ಪೊಡೆಗಿಚ್ಚು' ಪರಾ. **ಹೊಟ್ಟೆಕಿಚ್ಚು** : ೨. (ಅಲಂ) ಅಸೂಯೆ ; ಕರುಬು ; ಮಾತ್ಸರ್ಯ : ಅವರಾಡುವ . . . ಬಯಲಾಟಗಳು ಹೊಟ್ಟೆಕಿಚ್ಚು ಹುಟ್ಟಿಸುವುವು (ಪಟ್ಟಹೊ. ೩); ಜೀವಜೀವನದ ಹೊಟ್ಟೆಕಿಚ್ಚು ಕಾರಿತು ವಿಷಪ್ರಸಾದ (ಅರಳು ೯೩೯-೦೭). **ಹೊಟ್ಟೆಗಿಚ್ಚು** : ೨. ಈ ಹೊಟ್ಟೆಗಿಚ್ಚಿಗೇನು ಮದ್ದು ? (ರೂಪಿ).

**ಹೊಟ್ಟೆಕಿಚ್ಚಿನ ಮೊಟ್ಟೆಕೋಳಿ** = (ಅಲಂ) ಅತಿಯಾಗಿ ಅಸೂಯೆ ಪಡುವ ವ್ಯಕ್ತಿ; ಕರುಬುವ ವ್ಯಕ್ತಿ: ನೀನು ಹೊಟ್ಟೆಕಿಚ್ಚಿನ ಮೊಟ್ಟೆಕೋಳಿ (ಹಾಹುತ್. ೯). **ಹೊಟ್ಟೆಗಿಚ್ಚು ಪಡು, ಹೊಟ್ಟೆಕಿಚ್ಚು ಪಡು** = ಅಸೂಯೆ ಪಡು; ಕರುಬು ; ಮತ್ಸರಿಸು: ತನಗೆ ಸವತಿಯೆಂದು ಅವಳ ಮೇಲೆ ಹೊಟ್ಟೆಗಿಚ್ಚು ಪಡಲಿಲ್ಲ (ದೇಪೀಕಾ. ೧೦); ನೀವೆಲ್ಲ. . .ತಮಾಷೆಯಾಗಿ ಕಾಲ ಕಳೆಯುತ್ತಾ ಇರುವುದನ್ನು ನೆನೆದುಕೊಂಡು ಹೊಟ್ಟೆಕಿಚ್ಚು ಪಡುತ್ತಿದ್ದೆ (ಶಾಲಿಮು. ೧೯೦). [ಪೊಟ್ಟೆ₁ + ಕಿರ್ಚು(< ಕಿಚ್ಚು)]

**ಪೊಟ್ಟೆಗವಡಿಕೆ** (ನಾ). (ಉಜ್ಜುಗಲ್ಲಾಗಿ ಬಳಸುವ ನುಣುಪಾದ) ದಪ್ಪ ಕವಡೆ : ಪೂರ್ವಾಪರದಿಗ್ಭಾಗದ ಸಮಭೂತಳಪ್ರದೇಶದೊಳ ಪೂರ್ವಶಿಲ್ಪಿಕೃತಮಪ್ಪ ಲೆಕ್ಕವಲಗೆಯಂ ಕಾಡಿಗೆಯೊಳ್ ಪು[ಘು]ಟ್ಟಿಸಿ ಪೊಟ್ಟೆಗವಡಿಕೆಯೊಳೊರಸಿದಂತೆ ಮಿಂಚೆ (ಕಾಂತಿಕೃ. ೯-೧೯೩ ವ).

[ಪೊಟ್ಟೆ₁ + ಕವಡಿಕೆ₂]

**ಪೊಟ್ಟೆಗುಡುಮ** (ನಾ). ೧. ಹೊಟ್ಟೆ ದಪ್ಪನಾಗಿರುವವನು; ಬೊಜ್ಜು ಬೆಳೆದವನು. ೨. ಹೊಟ್ಟೆಬಾಕ; ತಿಂಡಿಪೋತ : ಪಟ್ಟೆನಾಮವ ಬಳಿದು ಪಾತ್ರೆ ಕೈಯಲಿ ಹಿಡಿದು ಗುಟ್ಟಿನಲಿ ರಹಸ್ಯವ ಗುಟುಕಬೆಯದೆ ಕಟ್ಟ ಕೂಗನು ಕೂಗಿ ಬಗುಳಿ ಬಾಯಾಬುವಂಥ ಪೊಟ್ಟೆಗುಡುಮ ಮೃಗಗಳೆಲ್ಲ ಶ್ರೀವೈಷ್ಣವರೆ (ಕವಳ. ೦೨೬-೨). [ಪೊಟ್ಟೆ₁ + ಗುಡುಮ + –ಅ₇]

**ಪೊಟ್ಟೆಬೇನೆ**, ಹೊಟ್ಟೆಬೇನೆ (ನಾ). ಹೊಟ್ಟೆನೋವು; ಜಠರರೋಗ : ಅಸಾತೋದಯಜನಿತಮಪ್ಪ ತಲೆಬೇನೆ ಪೊಟ್ಟೆಬೇನೆ ಶೂಲೆ . . . ಮೊದಲಾದಯ್ವತ್ತುಕೋಟಿಯುಂ . . . ರೋಗ (ಶ್ರಾವಕಾ. ೯೯-೬). **ಹೊಟ್ಟೆಬೇನೆ** : "ಹೊಟ್ಟೆಬೇನೆಯದು ಗುದಪಾಸಮೆನಿಸಿಕ್ಕು" (ಮಂಗರಾ. ೦೦೯-೩); ಹೊಟ್ಟೆಬೇನೆಗೆ :—ಅಪಿನಿ, ಅಳಲೇಕಾಯಿ, ಜಾಯಿಕಾಯಿ, ಗಜ್ಜುಗದ ತಿರುಳು, ಶುಂಠಿ . . . ಕೊಳುವುದು (ವಿಷ್ಣುಪಿ. ೬೮) ; ರಾಘಪ್ಪನು ಹೊಟ್ಟೆಬೇನೆ ಹತ್ತಿ ಹಾಸಿಗೆ ಹಿಡಿದನು (ಗಂಪಾಯಿ. ೨೦೦). [ಪೊಟ್ಟೆ₁+ಬೇನೆ]

**ಪೊಟ್ಟೆವಂತ** (ನಾ). ದಪ್ಪಹೊಟ್ಟೆಯನ್ನು ಹೊಂದಿರುವವನು ; ಲಂಬೋದರ ; ಗಣಪ : ಪೊಟ್ಟೆವಂತಂ ಬೆನಕಂ (ಶಬ್ದಾಮ. ೯೦೨ ಪ್ರಯೋ). [ಪೊಟ್ಟೆ₁ + – ವಂತ]

**ಪೊಟ್ಟೆವಾಯ್** (ಕ್ರಿ). ೧. ಹೊಟ್ಟೆಯು ಊದು_ಉಬ್ಬರಿಸು : ಅಂತು ಪೊಟ್ಟೆವಾಯಲ್ಕೆಂದು ಸೂಲೆ ಪುಟ್ಟಿ ಸತ್ತು ಅಗ್ನಿಭೂತಿ ವಾಯುಭೂತಿಗಳಾದಿರ್ (ಪುಣ್ಯಾಸ್ರ. ೬-೫೬ ವ). ೨. (ಕಣ್ಣಿನ) ರೆಪ್ಪೆಯು ಅದುರು ; ಎವೆ ಮಿಡುಕು ; ☞ ಇದು ಒಂದು ಶಕುನವೆಂಬ ನಂಬಿಕೆಯಿದೆ : ಅಗಿದಪುದೀಗಳಾಂ ಪಿಡಿದ ಕೆಂದಳಮಿಾಯೆಡದೋಳ್ಗೆ ಕೆತ್ತುಗಳ್ ತಗುಳ್ದಪುವೆತ್ತುಮೀ ಮಿಡುಕೆ ಮಾಣದೆ ಪಾಯ್ದುದೆ ಪೊಟ್ಟೆವಾಯ್ದು ಚಕ್ಷುಗೆ ಪಿರಿದಾದುದಕ್ಕುಮ ಪರಿಸ್ಫುರಿತಂ ಪೆಜತೇನೊ ದೇವಿಯಾಕೆಗೆ ವರನಂ ಮನೋಹರನನಿಂದು ಕುಡಲ್ ಕಡುಗೂರ್ತಳಾಗಳೇ (ಲೀಲಾವ. ೦೦-೫೫).

[ಪೊಟ್ಟೆ₁ + ಪಾಯ್₁]

**ಪೊಟ್ಟೆವೋಗು** 'ಪೋಟೆಹೋಗು' ನೋ.

**ಪೊಟ್ಣ** 'ಪೊಟ್ಟಳ' ನೋ.

**ಪೊಡಕರಿಸು**, ಹೊಡಕರಿಸು (ಕ್ರಿ). ೧. ಕಾಣಿಸಿಕೊಳ್ಳು; ತೋರು; ಸ್ಫುಟವಾಗು ; ಪ್ರಕಟವಾಗು : "ಮಿಗೆ ಪೊಣ್ಮಚಿಸಿತೆಂದು ಕಣ್ಣಲೆದುದೆದಿರದೆ ಪೊಡಕರಿಸಿತಕೆ ನಾಮಂ" (ಕಬ್ಬಿಗ. ೬೯) ; ನುಡಿಯೆ ಬಳಲ್ದಪಾಂಥನೆರ್ದೆ ತಣ್ಪಿನ ಸೋನೆಯನಾಂತ ಮಾಳ್ಕೆಯಿಂ ಪೊಡಕರಿಸುತ್ತೆ [ಪಾಠಾಂ. ಪೊಡರಿಸುವಂತೆ] ಪೆರ್ಚೆ (೧೦ಕ. ೨-೦೯); ಪೊಡಕರಿಪ ಗುಡಗುಣ ದುಗ್ಗಡಮೆಂತು[ಟೊ] (ಸೌಇ. IV, ೨೬೭-೨೯; 1380); ಗಗನಮಂಡಲವ ಬಗಿದು ಪೊಡಕರಿಸೆ ವೃಷಭಧ್ವಜಾನೀಕ (ಸೌಂದಪು. ೦೫-೦೯); ರೋಷಶಿಖಿ ಪೊಣ್ಮೆ ಪೊಡಕರಿಸಿ ಪರ್ಬಿದುದನೇನೆಂಬೆನು (ಶಬಪು. ೨೦-೩೯). ೨. ಹೊರ ಹೊಮ್ಮು ; ಹೊರ ಬರು : ಪೊಸಗಾರ ಸಿಡಿಲ ಮಸಕ ಮನಸಕಟಿದು ಕೃತಾಂತಜಿಹ್ವೆ ಪೊಡಕರಿಸುವವೋಲ್ ಬೆಸಸು ಬೆಸಸೆಂದು ಕರಮರ್ವಿಸಿ ಸನ್ನಿದಮಾಯ್ತು ವಿದ್ಯೆ ರಾವಣನಿದಿರೊಳ್ (ಕುಂರಾಮಾ. ೦೯-೦೦೫); ಶಿಶು ನಾಲಗೆಗಿತ್ತಳುವಂತೆ ರಂಗಮಂಟಪದೊಳ್ ಪೊರಳ್ದು ಪೊಡಕರಿಸಲಾಜದೆ ಕಿಂಕರ್ವಾಣ ಕೈ ಮಿಕ್ಕು . . . ಮಜುಗಿ (ಜಂಬರ. ೦೨-೯೨); ಮುನಿದೀ ಶಿಲೆಯನೆತ್ತಿದೊಡಾನುಂಗುಟದಿನೊತ್ತಿದೊಡೆ ಪೊಡಕರಿಸಲಾಜದೆವೊಳಜಿದಂ (ಶಾಂತೀಶ್ವ. ೦೩-೦೭ ವ); ಪೊಡಕರಿಪ ದಾರಿಯ ನಿತ್ತ ನಿರುಕಿಸಾ ದುಃಖದಿ ಪರಿಪಕ್ವಮಾದೆ (ಸಂಸಜ. ೨೫-೦೭). ೩. ನಡುಗು; ಕಂಪಿಸು : ಜಡೆಯಿಡುಕುಜಿಡೆಯೊಡೆಯೊಳಡಿಯಿಡುವ ಕಡಲ ತಡಿವಿಡಿದಾಡುಗಡಣದೊಡೆಯನೊಡಲೊಡಕು ನಡನಡುಗಿ ಪೊಡಕರಿಸಿ ಮಿಡುಮಿಡುಕಲು (ಹಕಕಾ.೧-೨). **ಹೊಡಕರಿಸು**: ೧. ಹಿಡಿ ಧನುವನೆಲೆ ಭೂಪ ಮಿಡುಕು ಧೃಷ್ಟದ್ಯುಮ್ನ ಸಾತ್ಯಕಿ ಹೊಡಕರಿಸು (ಕುಭಾಗ. ೫-೯೩); ಕಾಳಕೂಟದ ಕಡಲ ಕಟ್ಟೆ ವಿತಾಳಿಸಿತೊ ಶಿವಯೆನಲು ಸಲೆ ಹೊಗೆವಾಲಿಗಳ ಹೊಡಕರಿಸುವ ಶಿಶಯವಿಕೃತವಿಗ್ರಹದ ಕಾಳಿಕೆಯ ಕುಡಿವೆಳಗುಗಳ . . . ರಾಕ್ಷಸವರೂಥಿನಿ ಕಾಳಗಕೆ ಹೊಜವಂಟುದು (ತೊರರಾ. ೨-೦೩-೦೯); ಕೆಡೆಯೆನುತ ಕನಲಿ ಕುಶಾಗ್ರದಲಿಡಲು ಬಿದ್ದನು ಸೂತನವನಿಗೆ ಹೊಡಕರಿಸಿ ಹಾಯೆನುತ ವಿಪ್ರಸ್ತೋಮ ಗಜಬಜಿಸೆ (ಐಭಾಗ. ೦೦-೯೯-೨೭). ೨. ಸೂರ್ಯಾಂಶುವೆಂಬ ಕಿಚ್ಚಂ ಕಾದು ಕೆಂಗಲಿಸಿ ಚಾರು ಬೆಳಗಾಜಿ ಕಪ್ಪಾಯ್ತೊ ಹೇಳೆಂಬ ವಿಸ್ತಾರದಿಂ ಕಾಳಗತ್ತಲೆಯೆಂಬ ಲತೆ ಹಬ್ಬಿ ಹೊಡಕರಿಸಿ ಮಡಲಿಜಿದುದು (ಹಕಾ. ೩-೬೭) ; ಹೊಗೆಯೆದ್ದು ಹೊಡಕರಿಸದೆ ಮದನಾಗ್ನಿ ಮೆಯ್ದಿಗೆವುದೆ ಮೃಗಶಾಬನೇತ್ರೆ (ಕುರಾಸಾಂ. ೨೬-೦೫೯) ; ಹತ್ತಿರಿದ್ದರು ದೂರ ಹೃದಯಗಹ್ವರದಲ್ಲಿ ಮಿಣಿ ಮಿಣಿ ಎನುವ ಪಣತಿ ನಮ್ಮ ಜೀವದ ಗೆಣತಿ ಹೊಮ್ಮಿ ಹೊಡಕರಿಸಿದರೆ ಹೊಸ ಬೆಳಕಿನಾಕೃತಿ (ನಂಮು. ೬೨-೩). ೩. ಉಬ್ಬೇಜಿ ಹೊಕ್ಕುದು ಹೊಡಕರಿಸಲಿಳೆ ವೀರರುಭಯದಲಿ (ತೊರರಾ. ೬-೨೧-೦೦). ೪. ವ್ಯಾಪಿಸು ; ಆವರಿಸು : ಹಿಂದೆನ್ನ ಹೆಸರೆಂದಡೋಡುವ ಕತ್ತಲೆ ಹೊಡಕರಿಸುತಿರ್ದುದೆನ್ನಾಳಿಕೆಗೆ ಶಶಿಯ ಮುಂಗುಡಿ ಧಾಳಿ ಬರುತಿದೆಯಿದು ಕಂಡು ಜೀವಿಪೆನ್ನೊಡಲಾಸೆಯೇಕೆಂದು ಲಜ್ಜೆಯಿಂದೀವಂತೆ ಬಿದ್ದನಿನನಬುಧಿಯೊಳಗೆ (ಹಕಾ. ೩-೬೯) ; ಗಡಣದಂಬಿನ ಮಸೆಯ ಬೆಳಗಿನೊಳಡಸಿದಾಕ್ಷಣ ಮತ್ತೆ ನಿಮಿಷಕೆ ಹೊಡಕರಿಸಿ ಹಬ್ಬಿದುದು ಮಬ್ಬಿನ ಧಾಳಿ ದೆಸೆದೆಸೆಗೆ (ಕುಭಾದ್ರೋ. ೦೫-೨೭) ; ಮತ್ತೆ ಹೊಡಕರಿಸಿ ಕೋಪಾಗ್ನಿ ರಕ್ಕಸನ ಮೈ ಪೊತ್ತಿದುದು (ಶಬಪು. ೯೬-೦೩). ೫. ಹೊಳೆ ; ಸ್ಫುರಿಸು ; ಪ್ರಕಾಶಗೊಳ್ಳು : ಮಿಸುನಿ

ಯೋಲೆಗಳೆಸೆಯೆ ಫಳಿಫಳಿಲೆನಲಂದುಗೆ ಹೊಡಕರಿಸೆ ಹಾರವೆಡೆವಿಡದೆ ನರ್ತಿಸೆ ಕುರುಳು ಕಡುನೀಳ್ಪೆಯೋರ್ವಳುಯ್ಯಲನಾಡುತಿರ್ದಳು. (ನೇಮಿಚ. ೬-೨೩); ದುಸುಕಿದ ಸಿಂಗಾಡಿಯಂಬುಗಳೊಳಗೆ ಕಣ್ಗೆಸೆದನು ಚಿತ್ರದಡವಿಯ ಹಸರದೊಳಗೆ ಹೊಕ್ಕು ಹೊಡಕರಿಸುವ ಸಿಂಗಸಿಸುವಿನಂತಾ ವೀರರಾಮ (ಕುರಾಶಾಂ. ೯೩-೯೮); ಲೋಚನದ ನೋಟದ ಹೊಳಹು ಹೊಡಕರಿಸೆ (ಕೈಐಆ. ೨೯-೨೮); ಗುಡುಗುಡಿಸುತ್ತ ಉಡಿಮಿಂಚಿಂ ಹೊಡೆದು ಹೊಡಕರಿಸುತೆ ಆಗಸದಲಿ ನೆಗೆದು (ಶಕ್ಕ. ೬೨-೦೪). ೬. ಉರಿ; ಪ್ರಜ್ವಲಿಸು: ಕೆರಳಿ ರೋಷಾಗ್ನಿ ಹೊಡಕರಿಸೆ ಹೊಗೆ ಸುತ್ತಿ ಮೆಯ್ಯುರವು ಕಪ್ಪಾಗೆ (ಹಕಕಾ. ಹಂ. ೨೦೪). ೭. ಬೆರೆ; ಕೂಡು; ಒಂದಾಗು: "ಹೊಡಕರಿಸಿತೆನಲ್ಕೆ ಬೇಗ ಬೆರಸಿದುದಕ್ಕುಂ" (ಶಾಕಿಂ. ೨೨); ಹರಹಿನಲಿ ಹೊದಚಿದ್ದು ಹರುಷದ ಹೊರಳಿಯಲಿ ಹೊಡಕರಿಸಿ ಚಿತ್ತವ ತಿರುಹಿ ಹಿಡಿದನು (ಕುವ್ಯಾಶಿ. ೬-೬೪); ಹರಶರಾನಲ ಶೀವ್ರಧೂಮಜ್ವಾಲೆಗಳ ರಭಳದ ಹೊರಳಿಯಲಿ ಹೊಡಕರಿಸಿ ಹಾಯೆಂದೊಳಲಿದುದು ಬಲವೆರಡು (ಸಿಶಾಗ. ೦೦-೬೯-೨೬). ೮. ಅಲುಗಾಡು; ಅಲುಗು: ನುಡಿಸದೊಡನಿಸಲ್ವಿಯದೆ ನೋಡಿ ಮರವಟ್ಟು ಹೊಡಕರಿಸದೆ ಸುಮ್ಮನಿರಲು ನಡುಗಿ ಶೋಕಿಪ ಮಡದಿಯರ ಕಂಗಳ ಜಲ ತಡತಹನೊಡೆದ ಮಳೆಯಾಯಿತು (ಅಂಚಕ. ೭-೪೯). ೯. ಹೊರಬೀಳು; ತಪ್ಪಿಸಿಕೊಳ್ಳು: ಶಿದ್ದಿತಾತನ ತಪಸು ಮಾಯೆಯ ಮದ್ದಿನಲಿ ಮರುಳಾಗಿ ಮದನನ ಹೊದ್ದಿದನು ಹೊಡಕರಿಸಲಜ್ಜಿಯದೆ ಬಳಿಕಲಾ ಮುನಿಪ (ತೊರರಾ. ೧-೩-೩೬). ೧೦. ಅಟ್ಟು; ಓಡಿಸು: ಪೊಡೆದು ಕೆಲವ ಹೊಡಕರಿಸಿ ಕೆಲವ ಕರ್ಚಿ ಕೊಡಹಿ ಕೆಲವನಾಗಳೆಳೆಗೆ ಕೆಡಪಿತು ಭರದಿಂದ ಪಕ್ಕಿಗಳನು ಸಾಳ್ವ (ಕುರಾಶಾಂ. ೨೭-೯೬). ೧೧. (ಗಾಳಿಯು) ಬೀಸು; ಚಲಿಸು: ತೆಂಕಣ ದಿಶಾಭಾಗದೊಳು ಗಾಳಿ ಹೊಡಕರಿಸೆ ಮನ್ಮಥಭೂಪನು ತಿಳಿದು ಬಲು ಬತ್ತಳಿಕೆಗಳನಬಿಸೆ (ಹಕಕಾ. ೩-೦೪). ೧೨. ಒಡೆದುಹೋಗು; ಚೂರಾಗು: ರಕ್ತಮಳೆ ಸುರಿದು ದಬ್ಬದಿ ದೇವಪ್ರತಿಮೆಗಳ್ ಕುಕ್ಕರಿಸಿ ಬಿದ್ದು ಹೊಡಕರಿಸಿದುವು ಶಿಖರ ಪೊಂಗಳಸಗಳ್ ನೆಲಕುರುಳಿತು (ತುರಂಗ. ೨೨-೩೯).

[< ಪೊಡರ್$_1$ + — ಇಸು$_3$]

**ಪೊಡಣೆಗೆ** 'ಪೊಡ್ಡಣಗೆ' ನೋ.

**ಪೊಡಣೆಗೆಗೊಡು** 'ಪೊಡ್ಡಣಗೆಗೊಡು' ನೋ.

**ಪೊಡಪತ್ರ**, ಪೊಡಪತ್ರೆ (ನಾ). ಒಂದು ಬಗೆಯ ಔಷಧೀಯಗುಣವುಳ್ಳ ಮರ: ತಿಗಡೆ, ಹಿಪ್ಪಲಿ, ಬಜೆ . . . ಪೊಡಪತ್ರ, ನೀಲಿಬೇರು . . . ಇವನ್ನು ಸಮಭಾಗ ಕಷಾಯ ಮಾಡಿ ಕೊಡಲು ಭೇದಿಯಾಗುವುದು. ಜ್ವರ ಸಹ ಬಿಡುವುದು (ಸಕಶ್ಯ. ಹಂ. ೪೬೩). **ಪೊಡಪತ್ರೆ**: ಅಳಲೆಕಾಯಿ, ತಾರೆಕಾಯಿ. . .ಪೊಡಪತ್ರ, ಬ್ರಹ್ಮಿ—ಇವೆಲ್ಲವಂ ಚೂರ್ಣಿಸಿ ಸಕ್ಕರೆವೆರಸಿ ಸೇವಿಸಲು ಸ್ವರಭಂಗ ಪರಿಹರವಕ್ಕುಂ (ಸಕಶ್ಯ. ೨೬೬). [←ತೆಲು. ಪೊಡಪತ್ರಿ]

**ಪೊಡಪತ್ರೆ** 'ಪೊಡಪತ್ರ' ನೋ.

**ಪೊಡಪು** 'ಪೊಡರ್ಪು' ನೋ.

**ಪೊಡಮಡಿಸು** 'ಪೊಡೆಮಡಿಸು' ನೋ.

**ಪೊಡಮಡು** 'ಪೊಡೆಮಡ್ಡು' ನೋ.

**ಪೊಡಮಡುಹ** (ನಾ). ನಮಸ್ಕರಿಸುವಿಕೆ; ನಮನ: "ನತಂ ವಂದನಂ ಪೊಂಗಿ ಪೊಡಮಡುಹಂ" (ಮಂಗರಾ. ೦೩೬-೩೯).

[ಪೊಡಮಡು (<ಪೊಡೆಮಡ್ಡು$_2$) + —ಹ$_2$ ( < —ಪ$_2$)]

**ಪೊಡಮಡುಹು** (ಕ್ರಿ). ನೆಲಕ್ಕೆ ಹೊಟ್ಟೆ ತಗುಲುವಂತೆ ಬಾಗಂ,_ ಬಗ್ಗು: ಪೊಡಮಡುಹಿ ನೆಗೆಯಲ್ಕೆ ಕಪಿಗಳು ಪಡುವ ಮೂಡಣ ದಿಕ್ಕು ಮಂಟ್ಟುತ್ತಡವಿ ಗಿಡುಮರ ಕುಲನಗಂಗಳ ತೊಳಲಿಯಬಿಸುತಿರೆ (ಕೌತಿರಾ. ೯-೬೨). [< ಪೊಡೆಮಡ್ಡು$_2$]

**ಪೊಡರ್** (ಕ್ರಿ). ೧. ಅಲ್ಲಾಡು; ಅದುರು; ನಡುಗು; ಕಂಪಿಸು: "ಪೊಡರ್—ಸ್ಫುರಣೇ (ನಡುಗು)" (ಶಮಂಥಾ); ನಡು ನಡುಗಲ್ಕೆ ಪುರ್ವು ಪೊಡರಲ್ಕೆ ಕುರುಳ್ ವಿಳಿರಲ್ಕೆ . . . ತಗುಳ್ದುದು ಕೆಂದನೀಕ ಕನ್ನಡಿಪಳೊ ಪಾಡಿದೀ ನೆವದಿಂ (ಶಂಶಆ. ೭-೯೯); ಬಟ್ಟೆಯ ದೂಳಿದೂವೆ ಮೊದಲಾದುದು ಪೋದವೆನೆಂಬ ಮೆಯ್ಯುವಂಗೆಟ್ಟು ಪಿಪಾಸೆಯಿಂ ಪೊಡರಲಾರ್ತಪುದಿಲ್ಲ (ಕಾದಂಪೂ. ೦೪೯); ಉಲಿಯೆ ಕಲಕಾಂಚಿ ಮುಡಿಯಿಂದ ಲರ್ಗೆ ಬಡನಡು ಬಳುಂಕೆ ಪೊಡರೆ ನಿತಂಬಂ ನೆಲೆವೊಲೆಗಳಲುಗೆ ಬಿಡದೇಳ್ಸಿತಾಂಗಿಯು ಕೈಯನೊಯ್ಯನರಸಂ ಪಿಡಿದಂ (ರಾಜಕೇ. ೦೦-೬). ೨. ಕಾಣಿಸಿಕೊಳ್ಳು; ಪ್ರಕಟವಾಗು: ನಿರಂತರಂ ಪೊಳೆವ ಬಾಳುಡಿಸುಯ್ವ ನವವ್ರಣಂಗಳೊಳ್ ಪೊಡರೆ ಪೊದಟ್ದುದದ್ಭುತಭಯಾನಕಮಾಹವರಂಗಭೂಮಿಯೊಳ್ (ಶಂಶಆ. ೦೦-೩೬); ಪಂದಲೆಯೋಳಿದೋರಣದ ಸೀಯದರಂ ಪೊಸದೂವೆದೂಪ ತೂಗುಂದಲೆ ಬಾಟ್ವಿಣಂ ಪೊಡರೆ ಬಳ್ಳುವ ಸಮ್ಮನಸೂಲವಾಲದೊಳ್ ಸದಣೆಯಾಗಿ ನೇಲ್ವ ಪೆಣನೊಂದಿರೆ . . . ವೀಂಚಿದುದಾ ಶ್ಮಶಾನದೊಳ್ (ಕಾವ್ಯಾವ. ೩೬); ಮೃಡಭಕ್ತರಾನಂದವಂಕುರಿಸುವಂತೆ . . . ಬಿಡುಬಿಡಂತಿಂತೆಂದು ಪೊಡರ್ವ ನುಡಿಗಡಣಗಳನೆಡೆವಾತದೇಂ ಷಟ್‌ಸ್ಥಲಸ್ಥಾಪನಾರ್ಥಮಾ ಕಡುಮೆಯ್ಮೆವಡೆದ ಷಣ್ಮುಖನಖಿಳಶಕ್ತಿ ಬಂದೊಳಪೊಕ್ಕು ಶೋಭಿಸುತಿರೆ (ಶವ್ಯರಾ. ೯-೨೯). ೩. ಹೊಳೆ; ಪ್ರಕಾಶಿಸು; ಮಿರುಗು: ಇಡಿದಿರೆ ಗುಹಾಂಧಕಾರಂ ಪೊಡರ್ದೆಸೆದಿರೆ ಚಂದ್ರಕಾಂತರುಚಿ ನಗಮೊಂದೊಂದೆಡೆಯೊಳ್ ಪೋಲ್ತೊಪ್ಪುವುದೊಂದೆಡೆಯೊಳ್ ನೆಲಸಿರ್ದ ಕಾಳವುಂ ಜೊನ್ನಮುಮಂ (ಆಚಪು. ೯-೨೦); ವಿಷಯುರತಿಯೊಡನೆ ಮೆಯ್ಬಿಸುವಡಂಗೆಯುಂ ಪೊಡರರದುಡುಗುವ ಲೋಚನದೊಡನೆ ನಿಡುಸುಯ್ಗಳುಡುಗೆಯುಂ (ಪರ್ಶ್ವಪು. ೯-೭೬ ವ); ಪೊಡರ್ವ ಪುಣ್ಣಮೆಯ ಬಿಡುವೀಕ್ಷಣದೊಳಲರಂಬು ಮಡದಿಯಿಂದುಟಿಯೊಳೆಲ ಪವಳಲತೆ . . . ತೋಱುತ್ತಿಪ್ಪುದು (ಸಾಳ್ವಭಾ. ೨೯-೦೮). ೪. ಎದುರಿಸು; ಪ್ರತಿಭಟಿಸು: ಪೊಡರದೆ ಕಪ್ಪಮಿಾವ ಪರಮಂಡಳಿಕರ್ ಮನೆದೀವಿ ಮಕ್ಕಳಂ ಪಡೆದಬಳಾಜನಂ . . . ವೃದ್ಧರಾಜ್ಯಮುಮದೇನೆಸೆದತ್ತೊ ನಭಶ್ಚರೇಂದ್ರನಾ (ಆದಿಪು. ೨-೨೪); ಪೊಡರ್ವತ್ಯುದ್ಧತರಾಜವಂಶವನಮಂ ನಿರ್ಮೂಲಿಸಲ್ ಪೋಪೆನೆಂಬೊಡದಂ ಮುನ್ನಮೆ ನಿಮ್ಮ ವಿಕ್ರಮದವಾಗ್ನಿಜ್ವಾಲೆ ತಳ್ತಿರ್ದುದು (ಶಕ್ತಪು. ೩-೩). ೫. ಚಿಮ್ಮು; ಹೊಮ್ಮು: ತದ್ಬ್ರಹ್ಮನ್ನಿಶಾತಾಸ್ತ್ರದಿಂ ಪೊಡರ್ದಸ್ಫುಲಿಂಗಾವಲಾತಚಕ್ರಮೆನೆ ವೃತ್ತಾಕಾರದಿಂದುಣ್ಮುತುಂ (ಜಗಪು. ೬-೬೪). ೬. ಹುಟ್ಟು; ಆವಿರ್ಭವಿಸು; ಉಂಟಾಗು: ಆನುಂ ಮಿಡುಕಲಣಮುಱಿಯದಿರ್ದಂ ಪೊಡರದ ಗಱಿಯವನೆ ತನ್ನ ತಂದೆಯ ಕೆಲದೊಳ್ (ಕಾದಂಪೂ. ೦೩೨); ಕಾಂಚೀಕ್ಷುದ್ರಘಂಟಾರವಂ ಪೊಡರುತ್ತಿರ್ಪಿನಮಿಂತು ಕಾಂತೆ ನಡೆತಂದಾ ಚಕ್ರಿಯಂ ನೋಡಿದಳ್ (ಕಾಂತೀಶ್ಯ. ೧೩-೯೯).

**ಪೊಡರ್ಕೆ** (ನಾ). ಚಲನೆ; ಸ್ಫುರಣ: ಒದವಿದ ನಿದ್ರೆ ದೂತಜನಗರ್ಜನದಿಂ ಕಿಡೆ ಹೃದ್ಗುಹಾಂತರಾಳದಿನುರುಕೋಪಸಿಂಹಮಿರದೆಟ್ಟಿದುದು ಮಿಾಸೆಯ ಕೆತ್ತು ಕೇಸರಂ ಕೆದಱುವ ಭಂಗಿ ಪುರ್ವಿನ ಪೊಡರ್ಕೆಯೆ ಮೆಯ್ಮುರಿಪೋಜೆ ಕಣ್ಗಳಿಂದುದಯಿಪ ಕೆಂಪದಾಗುಱಿಪ ವಕ್ತ್ರದ ಕೆಂಪೆನೆ ರಾಜಮೋರುವಾ (ಶಂದ್ರಪು. ೬-೨೩). [ಪೊಡರ್ + —ಕೆ]

**ಪೊಡರ್ಪು**, ಪೊಡಪು (ನಾ). ೧. ಚಲಿಸುವಿಕೆ; ಅಲುಗಾಟ; ಕಂಪನ: ಪತಾಕೆಯೊಂದು ವಿಭ್ರಮಮನೆ ಪೋಲೆ ಪುರ್ವಿನ ಪೊಡರ್ಪುಗಳಕೊಂಡುದ ವಳ್ಗಿ ಗರ್ಭಚಿಹ್ನಮೆ ಗಳ ಗರ್ಭದರ್ಭಕನ ಸೂಚಿಪ ಮುಂದಣ ರಾಜ್ಯಚಿಹ್ನಮಂ (ಶಂಶಆ. ೧-೦೨೦); ಇನಿಸಪ್ಪೊಡಂ ಪೊಡರ್ವನಪ್ಪುಕೆಯ್ಯುದಿಟಿಯೆ ಪೂವಳಿದುದೆನಿಪ ಪುರ್ಬಿನ ಕುಡಿವೆರಸು ತೂಕಡನೊಳಕೊಂಡ

ಜಾಡ್ಯಮುಮಂ (ಕಾದಂಬ. ೬೩೯). ೨. ಆಧಿಕ್ಯ ; ಅತಿಶಯ : ತುಡುಗೆಯ ಮಣಿದೀಧಿತಿಗಳ ಪೊಡರ್ಪು ಮೇಗೊಗೆವ ಕೊಡೆವೊಲೆಸೆದಪುದೆಂಬೀ ನುಡಿ ನೆಗಟ್ ಪಂಚರತ್ನದ ಕೊಡೆಯಂ ಪಿಡಿದಮರಿಜನದ ಮನದಡವಿಡಿದರ್ (ಅಂಪು. ೭-೩) ; ಕಡುಗಲಿಯಪ್ಪ ವಿಕ್ರಮನ ಗಂಡಿನದೊಂದು ಪೊಡರ್ಪನೇನ ಬಣ್ಣಿಸಲಳವಲ್ತೆ (ಶಾಇಇ. IX-1, ೨೬೬-೨೬; 1183) ; ಎಡೆಗುಡದು ಸಿರ್ದೆಗವೆಡೆಯೊಳ್ ಪೊಡಕರಿಸುವುದುಸಿರನಿಕ್ಕುವೆಡೆಯೊಳ್ ಮುಸ್ಸೀರ್ಗಡಲಿಂದೊಡೆ ವಡಬಾಗ್ನಿಯ ಪೊಡರ್ಪಿನಿತ್ತೆಂಬ ರಸನೆಗೊಗೆಯವೆ ಪುಗುಳ್ಗಳ್ (ಸೂಕ್ತಿಸು. ೨-೨೦). ೩. ತಾಪ ; ಶಾಖ ; ಬಿಸುಪು : ಬಡಬಶಿಖಿಯಲ್ಲಿ ಪರ್ಬುವ ಪೊಡರ್ಪನೊಳಕೊಂಡು ಮೇಲೆಮೇಲ್ಮೈತರ್ಪನ್ನೊಡಲುರಿಯನವಧರಿಸು (ರಾಜಶೇ. ೦೩-೦೯೭). ೪. ಶಕ್ತಿ; ಪ್ರತಾಪ; ಸಾಮರ್ಥ್ಯ : ಮಿಕ್ಕ ತೋಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ (ಪಂಪಭಾ. ೧೦-೨೩); ಆ ಮಹಾರೌದ್ರಭದ್ರಾಕಾರನ ಪೊಡರ್ಪಿನಾರ್ಪಿನಳವಿಗಟಿದ ದರ್ಪಮಂ ಪೇಟಿಸ್ಸೊಡೆ (ಪಂಪಶಂ. ೪೩-೧೬) ; ಧರೆಗೆಸೆದತ್ತು ತಾರಕನ ದುರ್ಗತಿ ತಾರಕನೇಳ್ಗೆ ತಾರಕಾಸುರನ ಪೊಡರ್ಪು (ಗಿರಿಜಾ. ೬-೦೦); ಮಾತಂಗದ ಬಲಂ, ಸಿಡಿಲ ಪೊಡರ್ಪು, ಕಡಲ ಗುಣ್ಪು, ಪಡಿಗೊಳೆ ದಶರಥಕುಮಾರಂ ರಾಜ್ಯಮನಾಳ್ವ ಶಿರ್ದಂ (ರಾಮಾಶ್ವ. ೭-೦೬). ೫. ಆವೇಶ ; ಉತ್ಸಾಹ; ಸ್ಫುರಣೆ : ತನ್ನ ಮನದ ಪೊಡರ್ಪುಮಂ ಕೂರ್ಪುಮನುಂಟುಮಾಡಿ ನುಡಿದಂ (ಶಬ್ದಶಾ. ೦೦-೩೯ ವ) ; ಇದಿರ್ಗೆ ಬರೆ ಪುನ್ನಿಗಂ ಕಿಡಿಸದಿರಂ ಕವಿಗಮಕಿವಾದಿವಾಗ್ಮಿಗಳ ಕವಿತ್ವದ ಗಮಕಿತ್ವದ ವಾದಿತ್ವದ ಪೊಡರ್ಪುಮಂ ದರ್ಪಮುಮಂ (ಶಾಂತಿಪು. ೦೨-೬೯) ; ಆರ್ಪೊಗಳಬಹುದು ಹರಸೈನ್ಯಮಿಾ ಪರಿಯೊಳ್ ಪೊಡರ್ಪಿನಿಂದೈತರುತ್ತಿರ್ದುದು (ಶಿವಪು. ೨೬-೦೨). ಪೊಡರ್ಪು: ೪. ಸಿಡಿಲ ಪೊಡರ್ಪು ಘುಡುಘುಡಿಸುತ ಮಿಂಚಿನ ಕುಡುಪು ಮೋಡದಿ ಹೊಳೆಹೊಳೆದು ಬಿಡದೆ ಸುರಿವ ಮಳೆಯಲಿ ತರುಮೂಲದಿ ತಡೆದಿರ್ದನಾ ಮುನಿರಾಜ (ಅಪಾಂಶ. ೪-೩೦) ; ಸುಖ ದುಃಖವಾಯ್ತೇ, ಪೊಡರ್ಪು ಪುಡಿಯಾಯ್ತೇ, ಪಾಡೆಲ್ಲ ಗೋಳಾಟವಾಯ್ತೇ! (ಪಾರಸಿ. ೦೨-೨೮೬). [ಪೊಡರ್ + —ಪು$_2$]

**ಪೊಡರ್ಪುಗಿಡು** 'ಪೊಡರ್ಪುಗೆಡು' ನೋ.

**ಪೊಡರ್ಪುಗುಂದಿಸು** (ಕ್ರಿ). ಬಲವನ್ನು ಕುಂದಿಸು; ಶೌರ್ಯಹೀನನನ್ನಾಗಿ ಮಾಡು : ಮನುಜಸುತಂ ಪನ್ನಗಶರದಿನಿಸುವುದುಂ ಜನಕಸುತನನದು ಪೆಣೆದಹಿಬಂಧನದಿಂ ಪೊಡರ್ಪುಗುಂದಿಸೆ (ಶಂರಾಮಾ. ೦೩-೦೯೩).

[ಪೊಡರ್ಪು + ಕುಂದಿಸು]

**ಪೊಡರ್ಪುಗುಂದು** (ಕ್ರಿ). ಬಲಗುಂದು ; ಶಕ್ತಿಯನ್ನು ಕಳೆದುಕೊಳ್ಳು : ಕುತ್ತದೊಳ್ ಪೊರಳುತ್ತಿರ್ಪವರನ್ನಲಿಂಗಿಗಳ ರೂಪಂ ಕಂಡು ತದ್ಬಾಧೆಯುಬ್ಬರದಿಂ ಪಿಂಗಿ ಪೊಡರ್ಪುಗುಂದದೆ ಮಹಾಸಂತೋಷದಿಂದಿರ್ದರೇ (ರಘುಮ್ಮ. ೯-೯೭). [ಪೊಡರ್ಪು+ಕುಂದು$_1$]

**ಪೊಡರ್ಪುಗೆಡಿಸು** (ಕ್ರಿ). = ಪೊಡರ್ಪುಗುಂದಿಸು : ಈ ಶರವ ಇಂದೆಸೆದವನ ಪೊದ[ಡ]ರ್ಪುಗೆಡಿಸಿ ನಾವು ತಂದೊಪ್ಪಿಸುವೆವು ನಿನ್ನಡಿಗೆ (ಗೋಮಟೇ. ೦೦-೭೭). [ಪೊಡರ್ಪು + ಕೆಡಿಸು$_1$]

**ಪೊಡರ್ಪುಗೆಡು**, ಪೊಡರ್ಪುಗಿಡು (ಕ್ರಿ). = ಪೊಡರ್ಪುಗುಂದು : ವಿಷಾಜುವೆವೆಂಬ ಮಣ್ಡಳಿಕರಿಲ್ಲದಟಿಂದೆ ಬಯಲ್ಗವನ್ನು ಮೆಯ್ಯೋಜುವೆವೆಂಬ ವಿಕ್ರಮಿಗಳಿಲ್ಲ ಕುನುಂಗಿ ಕಳಲ್ದಳಲ್ದು ಕಾಯ್ಪಾಜಿ ಪೊಡರ್ಪ್ಪುಗೆಟ್ಟು ಬೆಸಕೆಯ್ವವರಲ್ಲದೆ ಮಿಕ್ಕ ತನ್ನ ಕಾಯ್ಪೇಜಿದ ತೇಜದಿಂ ವಿಜಯಪಾಣ್ಡ್ಯಮಹೀಪನಿದೇಂ ಪ್ರತಾಪಿಯೋ (ಎಕ. XI, ದಾವಣ. ೩೨-೦೦ ; 1171). ಪೊಡರ್ಪುಗಿಡು : ಈ ಸಕಲಧರೆಯಂನುಗ್ರಭುಜಾಸಿಯೊಳಳವಡಿಸಿ ನಹುಷನಗ್ರಸುತಂ ಸಂವಾಸಂ ರಿಪುದಾರಕರಂ ದಾಸೇರಕರೆನೆ ಪೊಡರ್ಪುಗಿಡೆ ನಡೆಯಿಸಿದಂ (ಶಂರಾಮಾ. ೨-೬೦); ಕೃಪ ಕೃತವರ್ಮರಿರ್ವರುಮನಂತಿಷುಜಾಳದಿನೆಯ್ದು ಪೂಟಿ ಸಗ್ಗಪಿತಮನರ್ ಪೊಡರ್ಪುಗಿಡೆ[ಪಾಠಾಂ. ಡುಗಿ]ನಿಲ್ವುದುಂ ( ಜೇಮಿಪು. ೦೨-೪೦ ) ; ಪೊಡರ್ಪುಗಿಡೆ ದೈನ್ಯದಿಂ ನಿಜಪದಾಬ್ಜದೊಳ್ಬಿಟ್ಟು ಬಾಯ್ವಿಡುತ್ತುಮಿರೆ ನೋಡಿ ಪೇಡಿಯನದೆಂತು ಕೊಂದಪ್ಪೆನೆಂದಡಂಗಿಸಿದನಾತ್ಮಕೋಪಮಂ (ವರ್ಧಕು. ೨-೩೩). [ಪೊಡರ್ಪು + ಕೆಡು$_1$]

**ಪೊಡರ್ಪುಗೆಯ್** (ಕ್ರಿ). ಬಲವನ್ನು ತೋರಿಸು; ಶಕ್ತಿಯನ್ನು ಪ್ರದರ್ಶಿಸು; ಪೌರುಷವನ್ನು ಪ್ರಕಟಿಸು : ಕೋಲೆ ಪುಸಿ ಪರವಧು ಸಂಗಂ ಕಳವೆಂಬಿವು ಬೇಡ ಬೇಡ ಬೇಡೆಂಬೀ ನಿರ್ಮಳವೀತರಾಗನಾಜ್ಞೆಯನುಟಿದಣ್ಣ ಪೊಡರ್ಪುಗೆಯ್ವ ಗಂಡರುಮೊಳರೇ (ರಘುಮ್ಮ. ೯-೯೩); ಮತ್ತನನ್ನನೊಳನನ್ನಪರಾಕ್ರಮನೊಳ್ ಪೊಡರ್ಪ್ಪುಗೆಯ್ವುದಿರಿದುಪೊಡ್ಡಿನಿತ್ತರಿಪ ಕಾದುವ ಮೆಯ್ಯಗ್ಗಲಿಯಾರ್ದ್ದರಿತ್ರಿಯೊಳ್ (ಶಾಇಇ. XX. ೬೯-೨೩; 1112); ಬಿಸಿಲೊಳೆ ಬಬ್ಬರಂಬಿರಿದ ಮಸ್ತಕಶಕ್ತಿಕೆಯಿಂದೆ ಮುತ್ತುಮುಂದೆಸೆ ಕವಿತಂದೊಡೆ . . . ಪೊಡರ್ಪುಗೆಯ್ದು ಪೂಸಿಸುವಳಿಪಿಂದೆ ಪುಷ್ಕರಮನೆತ್ತಿದುದಂದು ನಭಕ್ಕದೊಂದಿಭಂ (ಚಂದ್ರಪ್ರ. ೯-೭೩)

[ಪೊಡರ್ಪು + ಕೆಯ್$_1$]

**ಪೊಡರ್ಪುಡುಗು** (ಕ್ರಿ). ಶಕ್ತಿಯು ಕುಂದಿ ಹೋಗು; ಪರಾಕ್ರಮವು ಅಳಿ; ಬಲಹೀನವಾಗು : ಪೊಡರ್ಪುಡುಗದೆ ಬಿಟ್ಟುವಿರ್ದ ನೆಲೆಯಿಂ ಕಲವನ್ನದ ಗಂಧಸಿಂಧುರಂ (ಪಂಪಭಾ. ೦೦-೯೪); ಯಕ್ಷರ್ ಭಗ್ನದಂಷ್ಟ್ರಹರ್ಯಕ್ಷರೆನಿಸಿ ಪೊಡರ್ಪುಡುಗೆಯುಂ (ಜಗಿಪ. ೦೩-೭೭ ವ); ಪೆಜನಾಡೆಜಿಯಂ ಎನ್ನ ಕೈಯೊಳ್ ಬನ್ನಂಬಡೆವ ಕಿನ್ನನಾಗೆಯವನ ಮೆಯ್ಯಗಿದಿದ ಚೆನ್ನಪಾಂಗಿನಂತೆ ಪೊಡರ್ಪುಡುಗಿದ ಜಾದಿಯಂ ನಗುವಂದದಿನರಲ್ದ ಸುರಹೊನ್ನೆಗಳೊಳಂ (ಕಬ್ಬಿಗಕಾ. ೯೯). [ಪೊಡರ್ಪು + ಉಡುಗು$_1$]

**ಪೊಡರ್ಪುದೋಟ್** 'ಪೊಡರ್ಪುದೋಱು' ನೋ.

**ಪೊಡರ್ಪುದೋಱು**, ಪೊಡರ್ಪುದೋಟ್ (ಕ್ರಿ). ಶಕ್ತಿಯನ್ನು ತೋರಿಸು; ಪರಾಕ್ರಮವನ್ನು ಪ್ರದರ್ಶಿಸು; ಬಲವನ್ನು ತೋರು : ಭುಜಂಗಕಾಂಡಕ್ಕೆ ಖಗೇಶಕಾಂಡಮನಧೋಕ್ಷಜನೆಚ್ಚು ಪೊಡರ್ಪುದೋಱಿದಂ (ಜಗಿಪ. ೦೬-೨೯). ಪೊಡರ್ಪುದೋಟ್ : ಅನಗಿದಱಿದಿರ್ದೊಡಂ ಚಲದಿನೆನ್ನೊಳ್ ಪೊಂಗಿ ಪೊಡರ್ಪುದೋರ್ಪಂ (ಅಂಪು. ೦೨-೩೩); ಬಲ ನಾರಾಯಣರಂ ನಿರೀಕ್ಷಿಸಿ ದಶಗ್ರೀವಂ ರಣಕ್ಷೋಣಿಯೊಳ್ತಲೆಯಂ ತೂಗಿ ಪೊಡರ್ಪುದೋರ್ಪೆನುತಂ ಬಂದೊಡ್ಡಿ (ಪಂಪರಾಮಾ. ೦೩-೩೨).

[ಪೊಡರ್ಪು + ತೋಱು]

**ಪೊಡರ್ಪುವೆಱು** (ಕ್ರಿ). ಅತಿಶಯವನ್ನು ಪಡೆ; ಆಧಿಕ್ಯವನ್ನು ಹೊಂದು : ಪರಿವ ಪಡಂಗು ಬಲ್ದೆರೆಯ ಸಾಲ ಬೆಡಂಗು . . . ಪೊಡರ್ಪುವೆತ್ತು ಬಗೆಗೊಂಡುದು ಪೂರ್ಣಗುಣಂ ಮಹಾರ್ಣವಂ (ಕಬಕಂ. ೦-೩೯).

[ಪೊಡರ್ಪು + ಪೆಱು$_1$]

**ಪೊಡವಿರ್ಸಾಸೆ** (ನಾ). ನಡುಗುವ ವಿಸಾಸೆ; ಅದುರುವ ಮಿಸಾಸೆ : ಕೆಂಗಣ್ಣ ಕೆದರ್ದಲೆಯ ತೆರೆವಾಯ ಪೊಡರ್ವಿರ್ಸಾಸೆ ತುಂಗತರನಾಸಿಕಂ ಹೆದ್ದಂಷ್ಟ . . . ದುಃಶ್ವಾಸಸಂಕಲಿತಸಂಗಡಿಗರೆಮನಾಳ್ಗಳಂತಮುಮ ಮೈದೋರಿತವನಿಯುಂ ಗದ್ದದಿಪೊಲು (ಪಂಕಾರಾ. ೦-೦೭-೪೩).

[ಪೊಡರ್ + ವಿಸಾಸೆ]

**ಪೊಡವಡಿಕೆ** (ನಾ). ಅಡ್ಡಬೀಳುವುದು; ನಮಸ್ಕಾರ; ನಮನ : "ನಮಸ್ಕಾ, ವಂದನಾ—ಈ ೨ ಪೊಡವಡಿಕೆ" (ಶಬಾಯು. ೦೨೮-೪೦) ; ಕಾದಂಬರೀದೇವಿ ಪರಿಜನಂಬೆರಸು ನಿಮಗೆ ತನ್ನ ಪೊಡವಡಿಕೆಯಂ ಬಿನ್ನವಿಸಲ್ವೇಟ್ಟಪ್ಪುದೆಂಬುದುಂ (ಕಾದಂಬ. ೨೫೦); ದೇವಿ ನಿಮ್ಮ ಸವತಿ ಜಯಂಧರನರಸಿ ವಿಶಾಳನೇತ್ರೆಯೆಂಬುದುಮಂತಾದೊಡೆನ್ನ ಪೊಡವಡಿಕೆಯಂ ಪಾರುತ್ತಿರ್ದ ಲಾರ್ಪಳೆಂದಱುದು (ಕೃಷ್ಣಾಸ್ವ. ೭-೯೭ ವ).

[ಪೊಡವಡು (< ಪೊಡೆವಡು$_1$) + — ಇಕೆ]

**ಪೊಡವಡಿಸು** 'ಪೊಡೆವಡಿಸು' ನೋ.

**ಪೊಡವಡು** 'ಪೊಡೆವಡ್ಡು' ನೋ.

**ಪೊಡವಿ** 'ಪೃಥುವಿ' ನೋ.

**ಪೊಡವಿಕಂಟಕ** (ನಾ). ಭೂಮಿಗೆ ಮುಳ್ಳಿನಂತಿರುವವನು ; ಲೋಕಕ್ಕೆ ತೊಂದರೆಯನ್ನು ಕೊಡುವವನು : ಪೊಡವಿಕಂಟಕರೆನಿಪ ನೃಪಕುಲ ದಡವಿಯನು . . . ತಡೆಗಡಿದನು (ಶಿಶಾಗ. ೨-೩-೧೦).
[ಪೊಡವಿ (<ಪೃಥುವಿ)+ಕಂಟಕ]

**ಪೊಡವಿಜ** (ನಾ). ಭೂಮಿಯ ಮಗ ; ಮಂಗಳ : "ಮಂಗಳನ ಪೆಸರು ... ಪೊಡವಿಜನೆಂದು" (ಕನ್ನಮಂ. ೦೯). [ಪೊಡವಿ (<ಪೃಥುವಿ) + –ಇಜ]

**ಪೊಡವಿಜೆ** (ನಾ). ಭೂಮಿಯ ಮಗಳು ; ಸೀತೆ : ಪೊಡವಿಜೆಯ ಬಿಡನೆಂಬ ಚಿತ್ತದ ಕಡುಹು ಖರೆಯವೆ ಎನಗೆ ನೇಮವ ಕೊಡಿಸು (ತೊರಾ. ೦೯-೬). [<ಸಂ. ಪೃಥ್ವೀಜಾ]

**ಪೊಡವಿಪ,** ಪುಡವಿಪ (ನಾ). ಭೂಮಿಯ ಒಡೆಯ ; ಅರಸ ; ರಾಜ : ಪೊಡವಿಪಂಗೀ ಹದನನರುಪಲು ಫುಡುಫುಡಿಸುತಹುಡಹುದು ಭಕ್ತನು ಕಡುಹುಗೊಡ್ಡಾಟ್ಟಗಳಂ ಕುಪರಿಗಳನಾಡಿದನು (ಬಸಪು. ೨೬-೪೯) ; ಕಡುಮನದ ಕಟಬಲದ ಧಾಳಿಗೆ ನಡುಗಿ ಕಂಡುದು ಪೂರ್ವದಿಕ್ಕಿನ ಪೊಡವಿಪರ್ಕ್ಕಳು ಸಾವಂತ ಮನ್ನೆಯ ಮಂಡಲೇಶ್ವರರು (ಕೊರಾ. ೪-೯-೨೨) ; ಪೊಡವಿಪ ಕೇಳು ನಿಮ್ಮೊಡನೆ ಮಚ್ಚರಿಸುವ ಕಡುಗಲಿಗಳನೆಲ್ಲವರನು ಪಿಡಿಯಾಳಾಗಿ ಹಿಡಿದು ನಿಮ್ಮಡಿ[ಗೊಪ್ಪಿಪ] ಸಡಗರವೆನಗಿರುತಿರಲಿ (ತ್ರಿಶಾಂ. ೦೪-೦೫೫). **ಪುಡವಿಪ :** ಕಡಲು ಕದಡಿತು ಭೂರಿಭೇರಿ ವಾದ್ಯಂಗಳಿಂ ಪು[ಶಾಶಾಂ. ಪೊ]ಡವಿಪರ ಮಣಿಮಕುಟಮಣಿಯೊಳಗೆ ತರಣಿ ಶಶಿಯುಡಗಿದುವು (ತುರಂಗ. ೯೩-೨೫). [ಪೊಡವಿ (<ಪೃಥುವಿ)+–ಪ್ರ]

**ಪೊಡವಿಪತಿ,** ಪಿಟ್ಟುವಿಪತಿ (ನಾ). = ಪೊಡವಿಪ : ಪೊಡವಿಪತಿ ಗೊರವನೆನೆ ಪೇಟ್ಟುಡೆಯದುವದೆಕರಿಸಿ ಕಬ್ಬಿಗರ್ವೂಟಿನೆಯುಂ (ಕವಿರಾ. ೦-೪೯) ; ಪೊಡವಿಪತಿ ಕೂರ್ತು . . . ಅನಿರ್ದಿಡೆಗೇಟ್ಟುಂದಂ (ದಶಕು. ೦೨-೪೫) ; ಪೊಡವಿಪತಿ ಕೇಳ್ಪಳಕ ಕಣ್ಕೊಂಡದಂತಾಗೆ ಬುಡಿಹುಬ್ಬು ಧೂಮಲತೆಯೆಂಬೊಲಿರೆ (ಕೃಬಿಭಾ. ೦೩-೩೬). **ಪಿಟ್ಟುವಿಪತಿ :** ಶ್ರೀಮಂತ್ ಪಿಟ್ಟುವಿಪತಿಯ ಮಗ ನನ್ನಿಯ ಗಂಗನಣ್ಣಿಯೆಂಬ ಗಣ್ಣ ಬೀರನೊಟಮ್ಬಂ ತಾಗಿ ಶಾನ್ತರನೆಟಿಯರಟ್ಟಿದೊಡೆ (ಎಕ. X, ಗೋಂಬಿ. ೪-೯ ; ಸು. 920).
[ಪೊಡವಿ (<ಪೃಥುವಿ)+ಪತ್ತಿ]

**ಪೊಡವಿಯಾಣ್ಮ** (ನಾ). =ಪೊಡವಿಪ : ಬಿಜ್ಜಣಿಗಳ ಪಿಡಿದರೂಳಿಗಗ್ಗೈವ ಬಿಂಕಗಾತಿಯರಾ ಪೊಡವಿಯಾಣ್ಮನ ಪೊದ್ದಿಹರು (ಹರಿಬಿ. ೦-೦೬).
[ಪೊಡವಿ (<ಪೃಥುವಿ) + ಆಣ್ಮ (<ಆಳ್ಮ)]

**ಪೊಡವಿಯೆಟಿಯ** (ನಾ). = ಪೊಡವಿಪ : ಓವರೆ ಪೊಡವಿಯೆಟಿಯ ನಣುಗಿನ ಸುಕುಮಾರಂ ಸಡಗರದಿಂ ಸಲೆ ಸಂಪದದೊಳ್ ದಿನಮಂ ನೂಂಕುತ್ತಿಹನು (ಜಯುಕಾ. ೨-೬೬). [ಪೊಡವಿ (<ಪೃಥುವಿ)+ಎಟಿಯ]

**ಪೊಡವಿವನೆ** (ನಾ). ಭೂಮಿಯಲ್ಲಿನ ಮನೆ ; ಹುತ್ತ.
**ಪೊಡವಿವನೆಯರ್** = ಹುತ್ತದಲ್ಲಿ ವಾಸಿಸುವವರು ; ಹಾವುಗಳು; ನಾಗಗಳು : ಪೊಡವಿವನೆಯರ ದಂಡು ಖಗಪತಿಯ ಮುತ್ತಿದೊಲು (ನವಪೋ. ೦೨-೪೯). [ಪೊಡವಿ (<ಪೃಥುವಿ) + ಮನೆ]

**ಪೊಡವಿವೆಣ್** (ನಾ). ಭೂಮಿಯ ಮೇಲಿನ ಹೆಣ್ಣು ; ಮಾನವಸ್ತ್ರೀ : ಪೊಡವಿವೆಂಗಳ ಬಿಟ್ಟು ಸಗ್ಗವೆಂಗಳಿಗೊಲ್ದು ಜಡಬ್ರಹ್ಮಚಾರಿಯ ಅವನು (ಶರಶ. ೬-೦೦೭). [ಪೊಡವಿ (<ಪೃಥುವಿ)+ಪೆಣ್]

**ಪೊಡವಿಸು** 'ಪೊಡೆಯಿಸು' ನೋ.

**ಪೊಡವಿಸುತೆ** (ನಾ). =ಪೊಡವಿಜೆ : ಉಡುಗೊರೆಯನುಚಿತದಲಿ ರಾಘವ ಕೊಡಿಸುತಿರ್ದನುಪೊಬ್ಬರುಳಿಯದೆ ಪೊಡವಿಸುತೆಯೊಲಿದಂತೆ ತಾನೊಲಿದಂತೆ ಮನ್ನಿಸಿದ (ತೊರಾ. ೪೪-೩೯). [ಪೊಡವಿ (< ಪೃಥುವಿ) + ಸುತೆ]

**ಪೊಡವೀಶ** (ನಾ). = ಪೊಡವಿಪ : ಪೊಡವೀಶರ್ಪೂರ್ವನೈಕಮಲ್ಲನುತ ಪಾದಾಂಭೋಜರತ್ಯೂರ್ಜಿತರ್ ದೃಢಚಿತ್ತರ್ (ರವರ್ಮಾನು. ೦-೨೪); ಪೊಡವೀಶ ಬೊಟ್ಟುದೋಟಿವ ಪೊಡರ್ವದೇಕಜ್ಜಮಂತುಮಿದಿರಪ್ಪಡ ಮೆನ್ನೆಡಗೆಯ್ಯು ಕಿಟುಕುಣಿಕ್ಕೆಯ ಮಡಿಯೊತ್ತಿರೆ ನೋಟ್ಟಿಮೆಂದು ನೀಡಿದ ಬೆರಲಂ (ಬಂಹಂ. ೦೩-೨೦); ಬಡವನೊಳ್ಳೆಯ ಮಾತ ನುಡಿದರಲ್ಲೆಂಬುವರು ಪೊಡವೀಶ ಪೊಳ್ಳುಗೆಡೆದರೂ ಕೈವಾರಿ ಕಡುನಗುತಲಿಹರು (ಸರ್ವಜ್ಞ. ೦೨೬೬).
[ಪೊಡವಿ (< ಪೃಥುವಿ) + ಈಶ]

**ಪೊಡವು** (ನಾ). ಗುರುತು; ಚಿಹ್ನೆ; ಸುಳಿವು : ಶಿರಿಯೊಳಿಹ ಕಲ್ಯಾಣ ಪುರವನಾಳುವ ಬಸವ ಧೊರೆಯ ಮಂದಿರ ಪೊಕ್ಕು ಚರಮೂರ್ತಿಯಂತೆ ಪೊಡವು ಶಿಕ್ಕದ ತೆರದೊಳಡರಿಯವರೊಳು ನೀನು ಮೃಡನ ರೂಪಿಗಳೊಳಗೆ ಕಡುವಿನೋದದೊಳು (ಹುಕೋರ. ೬೬). [?./ತೆಲು. ಪೊಡ]

**ಪೊಡಸೆಂಡು** 'ಪೊಡೆಸೆಂಡು' ನೋ.

**ಪೊಡಿಪ್ಪಾಡಿ** (ನಾ). ಒಬ್ಬಾತನ ಹೆಸರು : ಶ್ರೀಪೊಡಿಪ್ಪಾಡಿಯರ್ಗ್ಗ ಯುಳ್ಳುಂಬು ಕಟನಿ ಕೊಟ್ಟರ್ (ಪ್ರಾಅಂ. ೦೯೨೬, ೦೦೦–೦೦ ; ೪ನೆಯ ಶತ).
[ ? ]

**ಪೊಡಿಮಡೆ ?** (?) : ಹಾರವನ್ ಸೋರಡೆಯ ಕದಂಬರ ತೈಲಹನ್ ಇಱಿದು ಪೊಡಿಮಡೆ ಉರ್ಬ್ಬಲ್ ಆ ತುಱು ಪರಿಯೆ ಬೊಪದಳಾಱ ಕಾದಿ ಸುರಲೋಕಪ್ರಾಪ್ತನ್ ಆದಡೆ (ಪ್ರಾಅಂ. ೦೯೨೩, ೬೨–೦೨ ; ೪). [ ? ]

**ಪೊಡೆ₁,** ಹೊಡೆ₁ (ಕ್ರಿ). ೧. ಏಟುಕೊಡು ; ಪೆಟ್ಟುಹಾಕು : "ಪೊಡೆ- ಪ್ರಹರಣೇ, ಕುಕ್ಷೌಚ (ಹೊಟ್ಟೆ)" (ಕವರ್ಥ); ಪೊಡೆವ ಬೀರರ ಜಂಕೆಗೆ ಗೊಂಟನಾನೆಗಳ್ ಕೋಡುವಿನಂ ಕಡಂಗಿ ಪರಿತಂದುವು ತೋರ್ಕೆಯ ತೇರ್ಗಳೋಳಿಯಿಂ (ಕಬ್ಬಿಕಾ. ೨೦೫) ; ವೇತ್ರದಿಂ ಪೊಡೆದೆಲೆಲೆ ಮಗನೆ ಯೇಳೇಳೆನಲ್ಕೆ (ಶಬ್ದರಾ. ೨-೩೨) ; ಪೊಡೆದರೇ ಕಾಮಧೇನುವ ಕಲ್ಪ ವೃಕ್ಷಮಂ ಕಡಿದರೇ ಸೌಂದರ್ಯರಸದ ಕೆಱೆಯಂ ಮಾಣದೊಡೆದರೇ (ಜಿಪು. ೩೫-೨೪). ೨. ಹರೆ, ನಗಾರಿ, ತಮಟೆ ಮೊದಲಾದ ಚರ್ಮ ವಾದ್ಯಗಳನ್ನು ಬಾರಿಸು,—ಬಾಜಿಸು : ಪೊಡೆ ಪಱೆಯನೆಂದು ಪಱೆಯಂ ಪೊಯ್ಸಿ (ವಡ್ಡಾರಾ. ೦೯೦-೦೩) ; ಪೊಡೆವ ಪಟಹ ಡಕ್ಕೆಗಳ ಬೊಬ್ಬಿಱುವ . . . ಪೇಚರಿಯರ ತುಮುಳರವದೊಳ್ ತೊಡರ್ದು (ಅರ್ಧನೇ. ೩-೦೭ ಪ); ಪೊಡೆವ ಡಕ್ಕೆಯ ಪಿಡಿದ ಬಿರುದಿನ ಕಾಳೆಯ ಬಲ್ಲುಲಿಯ ಸಡಗರಮೆಲ್ಲಾ ದೆಸೆಗಳು ಕಿವುಡುವಡಿಸೆ (ಕಬ್ಬಿಕಾ. ೨೩೦) ; ಪೊಡೆ ಭೇರಿಯನಡರಾನೆಯ ನಡೆಯಿಡು ಕದನಕ್ಕೆ ಬಲವ ನೊಡ್ಡೆಂಬ ರವಂ ಸಡಗರದಿಂದೆಡೆವಿಡಿದುಗ್ಗಡಮಾದುದು (ಹವ್ಯಾರ. ೩-೩೦). ೩. (ಸಿಡಿಲು ಮೊದಲಾದುವುಗಳು ಪೆಟ್ಟಾಗುವಂತೆ) ತಾಗು ; ಬಡಿ ; ಅಪ್ಪಳಿಸು : ನೆಗಟ್ತೆಯ ಗಾಂಡಿವಮಂ ತಗುಳ್ದು ಜೇವೊಡೆಯೆ ಸಿಡಿಲ್ ಸಿಡಿಲ್ದು ಪೊಡವಂತೆವೊಲಾಯ್ತು (ಪಂಪಭಾ. ೯-೦೦೦) ; ಪೊಡೆದತ್ತುರ್ವರೆಯಂ ಯುಗಾಂತರದ ಸಿಡಿಲ್ (ಕಾದಂಪೂ. ೫೮೫); ದುರಿತಂ ಮತ್ತದ್ವಿಪಂ ಮೂರ್ಖಿತೆ ಪೊಡೆವ ಸಿಡಿಲ್ ದುರ್ಜನಂ ದುರ್ಮದಂ ತಸ್ಕರರೆಂಬೀ ಕಂಟಕಸ್ತೋಮದ ನಡುವೊಡಲಿರ್ಪಂದಮೇಂ ಸೋಜಿಗಂ (ರಕ್ಷಾಶ. ೨೯). ೪. (ಗ್ರಹ ಮೊದಲಾದುವುಗಳು) ಮೈಮೇಲೆ ಬರು ; ಆವರಿಸು ; ಮೆಟ್ಟಿಕೊಳ್ಳು : ಪೊಡೆದುದು ಗರವಶಿಕೋಪದೆ ಪಿಡಿದುದು ಪುಲಿ ಗಾಳಿ ಸೋಂಕಿದತ್ತು (ಕಾದಂಪೂ. ೫೬೩); ಕವಿಗಳ್ ಕಾವ್ಯಂಗಳಂ ಮಾಡುವಾಗ್ರಹಮಂ ಮಾಡಿ ದೊಡಾ ಗ್ರಹಂ ಪೊಡೆದವೊಲ್ ಬೆಂಡಾಗಿ ಬೀಳಾಗರೇ (ಅನಂಪು. ೦-೩೯). ೫. (ಗಾಡಿ, ಪ್ರಾಣಿ, ಗಾಣ ಮೊದಲಾದುವುಗಳನ್ನು) ಮುಂದಕ್ಕೆ ಸಾಗಿಸು ; ಚಲಿಸುವಂತೆ ಮಾಡು; ಅಟ್ಟು; ನಡೆಸು : ಗಾಣಮಂ ಪೊಡೆ (ರೀಪದ. ೫-೫೨). ೬. ಮೂಡು; ಹುಟ್ಟು; ಕಾಣಿಸಿಕೊಳ್ಳು :

ಗಡಿಗೆ ಮಡಿಕೆಯು ಕೊಂಡು ಆಡಿಗೆಯ ವೇಳೆಯೊಳು ಬಿಡದೆ ಮಳೆಮೋಡ ಪೊಡೆಯಲ್ಕೆ ಈರ್ವರಿಗೆ ತಡಬಡಲಾಯ್ತು (ತಿರ್ಪ. ೬). ೭. ಸೋಲಿಸಂ; ಮಿಗಿಲಾಗು; ಮೀರು : "ಅಲಗಣಸಾದುದು ಮಿಕ್ಕುದು ಗೆಲೆವಂದುದು ಮಳ್ಕಿಸಿದುದುಮೋರಂಡಲಮುಂಡರೆದುದು ಪಳಂಚಿದುದು ತಾನಟ್ಟಿಸಿದುದಂ ಪೊಡೆದುದ್ಯೈದೆ ವಿಜಾಚಿದುದೆಂದುಂ" (ಕಬಿಸಂ. ೦೩೭). ೮. ಇಲ್ಲದಂತೆ ಮಾಡು; ನಿವಾರಿಸು; ಕಳೆ : "ಕೊರ್ಬು ತನೆ ತಾಡನ ಬಸಿಱು ನಿವಾರಿಪುದೆಂಬಿವಱೊಳು ಪೊಡೆ" (ಕಾ.ಸಂ. ೯೦). ೯. (ಆಲಂ) ತಿನ್ನು; ಭಕ್ಷಿಸು : ಕಡೆಗಣ್ಣೊಳೆ ರಕ್ಕಸನಂ ನಡೆ ನೋಡಿ ಕೊಲಲ್ಕೆ ಸತ್ತ್ವಮಪ್ಪಂತಿರೆ ಮುಂ ಪೊಡೆವಂ ಕೂಟಂ ಬಟಿಯಂ ಪೊಡೆವಂ ರಕ್ಕಸನನೆಂದು ಸಾಹಸ ಭೀಮಂ . . . ಸಮೆಯೆ ತಾತ್ತುವುದಂ ಕಂಡು (ಗಂಕಭಾ. ೬-೨೯). ೧೦. [ಗಣಿತ] ಗುಣಾಕಾರ ಮಾಡು ; ಗುಣಿಸು : ಪೊಡೆ ಪೊಡವಿಸು . . . ಗುಣಿಯಿಸೆಂಬುದು ನಿರತಂ (ವ್ಯಕಜಾ. ೦೦-೦೦). **ಹೊಡೆ$_1$** : ೧. ತಿರ್ರನೆ ತಿರುಹಿ ನೆಲದೊಳು ಹೊಡೆವ ಸಮಯಕೆ ಕಂಡು ಪಾರ್ವತಿ ಬಿಡುಬಿಡೆಲೆ ಪವಮಾನನಂದನ ಈತ ಶಿವನು ಕಣಾ (ಗಂಭಕ. ೦೭-೩೭) ; ಕಡೆದರೆ ತಡೆದೊದ್ದರೊದ್ದೆ ಚಿಕೆಯೊಳಿಟ್ಟು ಹೊಡೆದರೆ ಹೊಡೆದು ಡೊಕ್ಕರಿಸಿ ಕೆಡೆದರೆ ಕೆಡೆದುಗುರ್ಗಳೊಳೊತ್ತಿ ಭೀಕರವಡೆದು ಹೊಯ್ದಾಡಿದುವೆರಡು (ಮೋಹತ. ೩೯-೨೯) ; ತಱಯಿಱು ಹೊಡೆ ಕಾಹಿನವರನೆಂಬಬ್ಬರ ಮೆಱೆದುದು ಚೌದೆಸೆಯೊಳಗೆ (ಕಂಪತ. ೦೯-೬) ; ನಮ್ಮ ದೇಶದಲ್ಲಿ ಎಷ್ಟೋ ಜನ ಯಜಮಾನರು ತಮ್ಮ ಕೈಕೆಳಗಿನವರನ್ನು ಹೊಡೆಯುತ್ತಾರೆ (ಮುಂಬಯಿ.೯-೭೯). ೨. ಸಿಡಿಲ ಕುಡುಹುಗಳಿಂದ ಕಮಲಜ ಹೊಡೆಯಲ ಬುಜಭವಾಂಡ ಭೇರಿಯ ಕಡುದನಿಗಳೆನಲೊದಱಿದವು ನಿಸ್ಸಾಳಕೋಟಿಗಳು (ಕುಮ್ಯಾದ್ರೋ. ೦-೯೭); ಹೊಡೆದುದಮರರ ಭೇರಿ (ಕೊರಿಲ ೧-೦೦-೦೯); ಆನೆಯ ಮೇಲೆ ಹೊಡೆವ ಡಮಾಮಿಗಳಬ್ಬರ ಗಗನವ ತುಡುಕಿತು (ಕಂಪತ. ೦೦-೨೩). ೩. ಸಿಡಿಲು ಹೊಡೆವಡೆ ಹಿಡಿದ ಕೊಡೆ ಕಾವುದೇ (ಜಕಣಾ. ೨-೩೦); ಉರಿ ಹೊಡೆದ ಕೆಂದಾವರೆಯವೋಲ್ ಕರುಕು (ಕುಮ್ಯಾಆ. ೦೭-೦೫); ಧಗೆ ಹೊಡೆದಳ್ಕೆ ಹೊಯ್ಕುತ ಪಡೆದುದು ಮುಖ (ಕುಮ್ಯಾ.ಆ. ೦೭-೦೫); ಬಿಸಿಲಿಂಗೆ ನಾಲಗೆ ನೀರು ಕಟಗುಟ್ಟೆ ಸುರಿಯೆ . . . ನಾಯಿಗಳಡಸಿದು ಮೆಡಬಲದೆ(ಮೋಹತ. ೦೯-೦೯). ೪. ಕಳವಳಸುವ ಕಪಿಯ ಭೂತ ಹೊಡೆದು ಬೇಳಱು ಘಾಳಿಯೊಳು ನಿಂದು ಧೂಳಿಯ ಹೊಯ್ಕುತ್ತಿದೆ (ಅರವ. ೦೫-೩೨). ೫. ಹಾದರಿಯು ನೆಳಲ್ಗೆ ಹರಿಣಂಗಳಂ ಹೊಡೆಯೆಂಬ ಕಲಸದ ನೆವದಿಂ ರತಿಪುಂಗಳೆ ಬಂದ ಕೆಳದಿಯರೆಲ್ಲರುಂ ಮೆಲ್ಲಮೆಲ್ಲನೆ ಕಳುಪಿ (ಕಂಬರ. ೦೯-೩೯); ಹೊಡೆದನೊಬ್ಬನು ಸೂರ್ಯರಥವನು (ಕಂಭಕ. ೫-೯೦). ೬. ಎಡೆಯಲೇ ಭಕ್ಷ್ಯಾದಿಗಳ ಬಱ ಹಡಗೆಯುಳಿದವು ಕೂಳೊಳರ್ಧವ ಹೊಡೆದು ಸುಱದನು ಹಾಲುತುಪ್ಪದ ಹರವಿಯೋಜೆಯಲಿ (ಕುಮ್ಯಾಆ. ೦೦-೩೦); ತುಡುಗುಣಿಯು ಗಂಡನ ಬಡತನವ ಬಲ್ಲಳೆ ಕಡನ ತಂದಿಕ್ಕಿ ಕುಡಿಸಿ ತುಪ್ಪವ ಬೆರಸಿ ಹೊಡೆದು ಕುಳ್ಳಿಹಳು (ಸರ್ವಜ್ಞ. ೦೯೫೭). ೧೧. ಕಡಿ; ಕತ್ತರಿಸು : ತಲೆಯಂ ಹೊಡೆದ ಕೊಡಲಿಯಿಂ (ಇಱರ. ದೇ. ೦೦೯-೦೭); ಕಡುಹಿನಲಿ ಸೈಂಧವನ ತಲೆಯನು ಹೊಡೆದು ನಿನ್ನಯ ಕಾಲ ಬಳಿಯಲಿ ಕೆಡಹುವನು (ಕುಮ್ಯಾದ್ರೋ. ೯-೩೩); ಅಖಿಳದ್ವೀಪಪತಿಗಳ ತಲೆಗಳನು ಹೊಡೆದಲ್ಲಿ ತನ್ನಗ್ಗಳಿಯ ಭೃತ್ಯರನಿರಿಸಿ ಬಂದನು(ತೊರವೆ. ೦-೯-೩೭). ೧೨. (ಬಾಣ ಮೊದಲಾದುವನ್ನು) ಬಿಡು; ಪ್ರಯೋಗಿಸು; ಎಸೆ : ಕೂರ್ಗಣೆಯು ಗಾಯವ ತಿನ್ನು ಹೋಗೆಂದು ಹೊಡೆದನಂಬುಗಳ (ಮೋಹತ. ೩೮-೭). ೧೩. (ವೇಗದಿಂದ ಗಾಳಿ, ಮಳೆ ಮುಂತಾದುವು) ಬೀಸು; ಚಲಿಸು : ಹೊಡೆವ ಬಿರುಗಾಳಿಯಲಿ ಮುಗಿಲೊಡ್ಡೊಡೆದವೊಲು (ಕುಮ್ಯಾದ್ರೋ. ೦-೭೯). ೧೪. ತಟ್ಟು; ಆಸ್ಫಾಲನ ಮಾಡು : ಮದಮುಖನೆಡಬಲನ ನೋಡಿದರೆ ರಕ್ಕಸಕೋಟಿ ಜೀಯೆನುತ ಸಿಡಿಲ ಸೆಱೆ ಬಿಟ್ಟಂತೆ ಭುಜವನು ಹೊಡೆದು ಮುಂಚಿತು (ಕುಮ್ಯಾದ್ರೋ. ೦೫-೯೭). ೧೫. ಲಪಟಾಯಿಸು; ಕದಿ; ಅಪಹರಿಸು : ಅಂಗಡಿಯಿಂದ ಉತ್ಪನ್ನವಾಗುವ ಹಣದ ಬಹುಭಾಗವನ್ನು ಆದಂಸಾಹೇಬ ಹೊಡೆಯುತ್ತಿದ್ದ (ಬಸುಕ. ೨೯). ▶'ಹೊಡೆ' ಪದವು ಇತರ ಅನೇಕ ನಾಮಪದಗಳೊಂದಿಗೆ ಸೇರಿ ಬೇರೆ ಬೇರೆ ಅರ್ಥಗಳಲ್ಲಿ ಸಮಾಸವಾಗುತ್ತದೆ. ಉದಾ : ಊಟ ಹೊಡೆ, ದುಡ್ಡು ಹೊಡೆ, ಬಣ್ಣ ಹೊಡೆ, ಹರಟೆಹೊಡೆ— ಇತ್ಯಾದಿ.

**ಪೊಡೆಪೊಡೆ, ಹೊಡೆಹೊಡೆ** (ದ್ವಿರುಕ್ತಿ) : ಬಡಿಬಡಿ ತಿವಿತಿವಿ ಪೊಡೆ ಪೊಡೆ. . . ಎಂದು ನಾನಾಪ್ರಕಾರದಿಂ ನಾರಕರ್ದಂಡಿಸುವರ್ (ರರ್ಜಾನ್ಯ. ೬-೦೯೩) ; ಮುಟ್ಟಿ ಹೊಡೆಹೊಡೆ ನೀಳ್ದ ಪುಷ್ಪಮಾಲೆಗಳಿಂದೆ (ಕಂಬರ. ೦೫-೬-೦೯೩) **ಹೊಡೆದಾಟ**= ಕಾದಾಟ; ಜಗಳ : ಸ್ವದೇಶಗಳಲ್ಲಿ ವ್ಯಾಜ್ಯ, ಹೊಡೆದಾಟ ಆಗುತ್ತಿದ್ದರೂ, ಸಂಘದವರು ಅಪ್ಪಣೆ ಮಾಡಿರುವಂತೆ . . . ಕೆಲವು ಮಾತುಗಳನ್ನು ಹೇಳುತ್ತೇನೆ (ರಾಯಕ. ೯೭). **ಹೊಡೆದಾಡು**= ೧. ಕಾದಾಡು; ಹೋರಾಡು : ತರ್ಕಶಾಸ್ತ್ರದೊಳೊಡ್ಡಿ ತಗರು ತಗರಿನಂತೆ ಮಾರ್ಕೊಂಡು ಹೊಡೆದಾಡಬಹುದು (ಭರಕ. ೨-೯೦) ; ಜೊಂಡುಹುಲ್ಲು ಬೆಳೆದಿತ್ತು. ಅದನ್ನು ಕಿತ್ತುಕೊಂಡು ಹೊಡೆದಾಡಿದರು (ಸೀತಕಂ. II, ೬). ೨. ಶ್ರಮಪಡು : ಅದೆಲ್ಲ ಎನ್ನದೆಂದು ಹೊಡೆದಾಡಿ ಬೇಸತ್ತೆನಲ್ಲಾ ! (ಕಂಕರು. ೩). **ಹೊಡೆದು ಕಾಣು** = ಎದ್ದು ತೋರು; ಸ್ಪಷ್ಟವಾಗಿ ಕಾಣು : ಈ ವಿಚಾರದಲ್ಲೂ ಕೇರಳದ ವೇಷಗಳಿಗೂ ನಮ್ಮ ವೇಷಗಳಿಗೂ ಬೇಕಷ್ಟು ಅಂತರ ಹೊಡೆದು ಕಾಣುತ್ತದೆ (ಯಕ್ಷಬ. ೦೩೯). **ಹೊಡೆದುಕೊಳ್ಳು**= ಕದಿ; ಲಪಟಾಯಿಸು : ನನ್ನ ಪರಿಶ್ರಮದಿಂದ ಗಳಿಸಿದ್ದ ಹಿಂಡನ್ನು ನನ್ನ ಅಲಕ್ಷ್ಯದಿಂದ, ಮೋಸಮಾಡಿ ನೀನು ಹೊಡೆದುಕೊಂಡಿದ್ದೆ (ಬಂಗಾಹ. ೫೨).

[ದೇ. ॥ ತಮಿ. ಪುಟೈ ; ತುಳು. ಪೊಡೆ, ಪುಡೆ ; ಕೊಡ. ಪೊಡ ; ತೆಲು. ಪೊಡುಚು]

**ಪೊಡೆ$_2$, ಹೊಡೆ$_2$** (ನಾ). ಏಟು ; ಪೆಟ್ಟು ; ಹೊಡೆತ : 'ಪೊಡೆವಡು$_1$' ಪರಾ. **ಹೊಡೆ$_2$** : ಪಕ್ಕಿ ಬಿಱಸಿನಲಿ ಹೊಯ್ವ ಹೊಡೆಗಳು ಸತಿಯ ಮೇಲಣಾಮಾತ್ರದನಿತುಂ ತಾಗವು (ಬಸಪು. ೫೨-೯); ಬಿಸಿಲ ಹೊಡೆಯಿಂದ ಕಂದದೆ ದೋಸೆವದದಿ ಸೊಗಯಿಸುವ ಸಕ್ಕರೆಗಳಳನೀರ ಕುಯಿದಿಳುಪಿ (ಸೂಪಶಾ. ೨-೩೦); ಚಬುಕಿನ ಹೊಡೆಗಳಱಯದ ರಾವುತರುಗಳ ಮಡದ ಸನ್ನೆಗೆ ಸುಳಿವ ದಿವ್ಯಾಶ್ವಂಗಳೊಪ್ಪಿದುವು (ತಿಮ್ಮಆ. ೭-೯೨). [<ಪೊಡೆ$_1$]

**ಪೊಡೆ$_3$, ಹೊಡೆ$_3$** (ನಾ). ೧. ಹೊಟ್ಟೆ ; ಉದರ ; ಒಡಲು : "ಪೊಡೆ__ಪ್ರಹರಣೇ, ಕುಕ್ಷೌಚ (ಹೊಟ್ಟೆ)" (ಕಮುಧಾ) ; ಸತ್ತಿರ್ದನಡ್ವಾಹನಂ ಕಂಡದಟ ಪೊಡೆಯಂ ದಾಡೆಯಿಂ ಪೊಯ್ಯಲ್ಕೆ (ಕಂಕಕಂ. ೦೯-೦೩) ; ಪೊಡೆಯೊಳ್ ತುಂಬಿರೆ ಪಂಕ ಮೇಲೆ ತೊಳೆಯಲ್ ತಾಂ ಶುದ್ಧನೇಸಪ್ಪನೆ (ಸೋಮೇಶ. ೯೭) ; ಉದರದೇಶಮಂ ಪೊಡೆಯೆಂಬರ್ (ಕೈಬಿಖಾ. ೨-೯). ೨. ಬಸಿರು ; ಗರ್ಭ : ನಾಭಿ ಗುಣಪ್ಪಾಯ್ತು ಪೊಡೆ ಪೊಣ್ಮಿದುದು (ಕಪ್ಯಾರಾ. ೯-೨೯) ; ಪೊಡೆಯೊಳಗಿಹ ಬಾಲಕ ಮೂಱುಲೋಕಕ್ಕೆ ಸಡೆಯನೆಂಬುದ ಜಗಜನಕೆ ಬಿಡದೆ ಪೇಳುವವೊಲು ಮಡದಿಯ ತನುಕಾಂತಿ ಮಡುವಿಡುತಿಹುದು (ಅಂಕಕ. ೯-೦೦); ಬಳೆದುದು ಪೊಡೆಯುಂ ಜಘನಾಚಳಮುಂ ಕರ್ಪಿಡಿದುದಳಕಮುಂ ಚೂಚುಕಮುಂ (ರಾಜಕೇ. ೯-೩೬). ೩. ತನೆಯ ಮೊದಲಿನ ಸ್ಥಿತಿ ; ಗಬ್ಬ : "ಕೊರ್ಬು ತನೆ ತಾಡನ ಬಸಿಱು ನಿವಾರಿಪುದೆಂಬಿವಱೊಳು ಪೊಡೆಯುದು" (ಕಾ.ಮಂ. ೯೦) ; ಸಸಿಯಂತೆ ಪೊಡೆಯಂತೆ ಪಾಲ್ದೆನೆಯಂತೆ (ರರ್ಜಾನ್ಯ. ೦೨-೨೯) ; ಪೊಡೆಯೊಂಬುದು ಬೆಳೆಗೆಯ್ಯೊಳ್ (ಕಮ್ಯಾಕಾ. ೨೫). ೪. ಬಿಲ್ಲಿನ ಹಗ್ಗವು ಕೈಗೆ ತಗುಲದಂತೆ ತೊಡುವ ರಕ್ಷಾಕವಚ ; ಗೋಧೆ : ಹೊದಱ ಝಲ್ಲಿಗಳಡಾಯುಧ ಕಯ್ಯ ಪೊಡೆ ಸರಳ ಹೊಡೆಗಳಂ ತತ್ತತ್ಸ್ಥಳಂಗಳೊಳ್ ಕಟ್ಟಿ (ಕರಿಪು. ೯೯-೯೯).

'ಕೆಯ್ಪೊಡೆ', 'ಪೊಟ್ಟೆ₁' ಪರಾ. **ಹೊಡ್ಡೆ :** ೧. ವಿಷ್ಣು ವಿಧಿವಾಃಶದಿಂ ಬಗಿಯೆ ರುದ್ರನ ಹೊಡೆ ನಿಚ್ಚ ಹೊಯ್ಯುತಿದೆಯವಪ್ಪ (ಶಿಶಗೀ. ೦೫೯-೬೯೯ ಕ); ಈ ಜಗವನೆಲ್ಲವನೊಂದುಹೊಡೆಯುಲಿ ಹೊತ್ತ ಬಲರಾಮಂಗೆ ಕಡುಮಾಳಿದು (ಕಿಶಾಗ. ೦೦-೦೫-೫೦); ನವನೀತಮಂ ಸವಿದು ಹೊಡೆ ಸಿಡಿದು ಹೋಯ್ತು! (ಜಂದ್ರಸ. ೪೪-೨೦). ೩. ಹೊಡೆಯ ಹುಲ್ಲು ಕರವಾಳ ಹಿಡಿಯ ಕೊಯ್ಯಿತ್ತು (ಸಗಿಕು. ೪. ೪೨೬-೫೭); ಮೊಳೆವ ಬೀಜವನು ಕ್ರಿಮಿಕೀಟಕಂಗಳು ಸಸಿಯನೆಳ ಹುಲ್ಲಗಳು ಹೊಡೆಯನೆರಳೆಗಳು ಸವಿದು . . . ನಾಡೆಲ್ಲಮಂ ಗೋಳಿಡಿಸು ತಿರ್ದುವು (ಜಕಶ್ಯಾ. ೩-೬೩); ಮುಂಗುಳುಹೊಡೆಗಳರೆಹೊಡೆ ನೆಟೆ[3] ಮೇಲಕ್ಕೆ ನಿಗುರುವ ಹೊಡೆ ಪಸುರ್ಪೊಡೆಯ ಒಗುಮಿಗೆಯಲಿ ಹಾಲು ದುಃಬುದೆನೆಯ ಶಾಲಿ ಸೊಗಸನಿತ್ತುವು (ಕಂಶಕ. ೫-೬೨). ೪. "ಹೊಡೆ(ಡ)-ವುಟ, ಮುಚ್ಚಳ, ಪೊಡ" (ಕರ್ನಕೋ. ೫೦). 'ಕೈಹೊಡ್ಡೆ' ಪರಾ. ೫. (ಬಾಳೆ, ಕೇದಗೆ ಮುಂತಾದುವುಗಳ) ಮೋತೆ: ಮುಂಗುಳು ವಾಳೆಯ ಹೊಡೆಯ ನುಚ್ಚಾಗಿ ಕತ್ತರಿಸಿ (ಸೂಶಾ. ೪-೬೦). ೬. ತೆನೆಯ ಪೈರುಗಳ ಬೆಳೆ : ಕೋಟಿಚೆನ್ನಯರು . . . ಹಿತ್ತಿಲಿಗೆ ಇಳಿದು, ಅಡ್ಕ ವನ್ನು ಅಡರಿ, ಹೊಡೆಯಲ್ಲಿ ಹೋಗಿ, ಹೊಳೆಯನ್ನು ಹಾಯ್ದು . . . ಬೆಳ್ಳಿಯ ಕಲಶದ ಬಳಿಯ ಉಪ್ಪರಿಗೆಯನ್ನು ಏರಿದರು (ಕೋಚಿಕ. ೦೫).

**ಪೊಡೆಯಲರಾತ**= ಹೊಕ್ಕುಳಲ್ಲಿ ಹೂವನ್ನುಳ್ಳವನು ; ಪದ್ಮನಾಭ; ವಿಷ್ಣು : ಪೊಡೆಯಲರಾತಂ ರಾಗದೆ ತೊಡೆಯಂ ಪೊಯ್ದಾರ್ವ ನೆವದೆ ನೆಱನೀತಂಗೀಯಡೆಯೆಂದು ತೋಱ ಱವೆ ಪೊಲಗಿಡದಱಿಂದಂ ಪರವು ವುಡಿತಂ ಪವನಸುತಂ (ಗದಾಯು. ೮-೬೫); ಪೊಡೆಯಲರಾತನಕ್ಷಿಗವುಗೋ ಚರವಾಗಿರೆ . . . ಕೃಷ್ಣನ ತೇರ ಧೂಳಿಯಪ್ಪೊಡವಿರದಾಯ್ತುನುತ್ತಬಳೆ ಧೂಳಿವಿಡುತ್ತಿರೆ ಬಾಯ್ಪುಲುಂಬಿದಳ್ (ಜಗಪ. ೫-೦೪೦). **ಪೊಡೆವಕ್ಕಳ್** = ಹೊಟ್ಟೆಯ ಮಕ್ಕಳು ; ಸ್ವಂತಮಕ್ಕಳು: ಪೊಡೆವಕ್ಕಳಂ ಭಕ್ತಿಯಿಂದೆ ಪೆಸಂಟ್ಟುಯೆಡೆವಿಡದೆ ಗುಡಿಗಟ್ಟಿ ಜಗವೆಲ್ಲ ಬಂದಡಿಗೆಱಗೆ ಪೊಡವಿಯಲ್ಲುರಿವ ಕಿಚ್ಚಂ ಪರಿವ ಪಾವ ಸ್ವಾಜ್ಞಾಮಾತ್ರದಿಂದೆ ನಿಲಿಸಿ (ರಾಘಶ. ೦೯-೬೮).

**ಪೊಡೆಗಟ್ಟು** (ನಾ). "ಹೊಟ್ಟೆಯ ಮೇಲಣ ಕಟ್ಟು" (ಶ್ರಶ₂): ಒಳ ಗಿಡಿದ ಮೂಱುಂ ಜಗದ ಭಾರದಿಂ ಸರಿಯದಂತೆ ರನ್ನದ ಪೊಡೆ[ಕಾಶಾಂ. ಡ]ಗಟ್ಟುಗಟ್ಟಿರ್ಪುದು (ಶಕಪು. ೦೨೮-೦೫). [ಪೊಡ್ಡೆ₃ + ಕಟ್ಟು₂]

**ಪೊಡೆಗಲ್ಲು**, ಹೊಡೆಗಲ್ಲು (ನಾ). (ತಾಗುವಂತೆ) ಮೇಲೆದ್ದಿರುವ ಕಲ್ಲು ; ಗೂಟಕಲ್ಲು : ಕೆಡೆದ ಕರಿಗಳ ಬೆಟ್ಟವಳಿಯ ಗುಂಡುಗಳೊಳಗೆ ಮಡಿದ ಕುದುರೆಗಳ ಪೊಡೆಗಲ್ಲ ಪೊರಳೆಗಳೊಳಗೆ . . . ರುಧಿರಪ್ರವಾಹು ಪರಿಯೆ ಸವಱಿದಂ ಪಾರ್ಥಜಂ ಪರಬಲವನು(ಶೈಪಿಶಾ. ೨೨-೩೭). **ಹೊಡೆಗಲ್ಲು** : ಹೊಡೆಗಲ್ಲೊಳು ಮುಗ್ಗಿ ಎಡವುತ ಕಾಲನು ತೊಡರುವ ಬಳ್ಳಿಯ ಪಱಿದು ಅಡಗುವೆಡೆಯ ನೋಡಿ ತಳತ ಕಾನನದೊಳು ನಡೆ ತಂದನು ಚಿಕ್ಕನೊಲಿದು (ಚಿಕಾಂ. ೦-೬೭). [ಪೊಡೆ₁+ಕಲ್ಲು (< ಕಲ್₃)]

**ಪೊಡೆಗಿಚ್ಚು** (ನಾ). ಜಠರಾಗ್ನಿ : ಪೊಡೆಗಿಚ್ಚಿಂದವೆ ಜೀರ್ಣನಾದನಸುರಂ ವಾತಾಪಿ (ಕಾದಂಪೂ. ೦೨೩). [ಪೊಡ್ಡೆ₃ + ಕಿಚ್ಚು]

**ಪೊಡೆಗಿರ್ಚು**, ಹೊಡೆಗಿಚ್ಚು (ನಾ). ದಳ್ಳುರಿ ; ಆವರಿಸುವ ಬೆಂಕಿ : ಭವವೇಕಾನೇಕಸತ್ವಾದಿ ಗುಣದ ವುದಿವಾಳೇದಾನೇಕೆ ಕಾಮೋತ್ಸವ ವೇಕಾನೇಕೆ ತಾಪತ್ರಿತಯದ ಪೊಡೆಗಿರ್ಚೇಕದಾನೇಕೆ (ರಕ್ಷಾಕ. ೫೩). **ಹೊಡೆಗಿಚ್ಚು** : ಸಂಸಾರಕ್ಕೊಳಗಾದವರೆಲ್ಲ ಮಾಯೆಯ ಹೊಡೆಗಿಚ್ಚ ಗೆಲಬಲ್ಲರೇ (ಅಶಕಂ. ೨೬೭-೦೩೬೨); ಒಡಲ ಬಿಡದಾಪತ್ತು ಕಿಡಹಿ ಧರೆಯೊಳು ಕಾಡ ಹೊಡೆಗಿಚ್ಚಿನಂತೆನ್ನ ಸುಟ್ಟು ಸುರುಳಿಪುದು (ಕೈಶವ. ೦-೦೭-೨); ಸನ್ಮತ ಶರಣರ ಮನದಲ್ಲಿ ಕೋಪಾಗ್ನಿಯು ತಾನೆ ಎದ್ದರೆ ನಿಂದಕರ ಗುರಿ ದೇವನೆ ನಿನ್ನ ಹೊಡೆಗಿಚ್ಚಿಗೆ ನಾ ಗುರಿಯಲ್ಲ (ಸಿದ್ಧಪು. ೨೨-೮೮). [ಪೊಡೆ₁ + ಕಿರ್ಚು (< ಕಿಚ್ಚು)]

**ಪೊಡೆಗೆಡೆ**, ಹೊಡಗೆಡೆ, ಹೊಡೆಕೆಡೆ, ಹೊಡೆಗೆಡೆ (ಕ್ರಿ). ೧. ನೆಲಕ್ಕೆ ಹೊಟ್ಟೆ ತಗುಲುವಂತೆ ಬೋರಲಾಗಿ ಬೀಳು ; ಮಗುಚಿ ಬೀಳು : ಬಿಡೆ ಕುಣಿವ ಮುಂಡದಿಂ ಬೊಬ್ಬಿಡುವ ರುಂಡದಿಂ ಬಿಡುಮಿದುಳ ಜೊಂಡಿನಿಂ ನಡುತೊಡೆಯ ತುಂಡಿನಿಂ ಪೊಡೆಗೆ[ಶಾಶಾಂ. ಯೊ]ಡೆದು ಬೀಳ್ದರಿಂ ನೆತ್ತರಿನೊಳಾಳ್ದರಿಂ ರಣಧರಣಿ ಕಣ್ಗೆಸೆದುದು (ಕಂಕ್ತಿ. ೩೮-೩೯); ಭಾಸುರದ ಗಜವದನ ಪೊಡೆಗೆಡೆದು ಪೊಡೆಯಲುತಿರೆ (ಕಪಶೋ. ೭-೨). ೨. ನಮಸ್ಕರಿಸು; ಅಡ್ಡಬೀಳು : ಶಿಷ್ಯಸುಜ್ಞಾನಾಮೃತಸ್ವಾದಿಹಂಸ ಶರಣಾಗೆಂದು ಪೊಡೆಗೆಡೆದನು (ಏಕೋಶ್ರಿ. ೦೫-೨೨). **ಹೊಡೆಗೆಡೆ** : ೨. ಭೂತಳಂ ಬೆಱಗಾಗಿ ಜಯ ಎಂದು ಹೊಡೆಗೆಡೆದು ಪ್ರೀತಿಯಿಂ ವಂದಿಸುತ (ಗುರುಚಾ. ೩-೨೯); ಅವರು ಕಳುಹಿದಂತೆ ಮಾಡೆನಲು ಉರಗರಾಜ ಹೊಡ ಗೆಡೆದು ವಂದಿಸಿ (ಕೃಕಿಅ. ೨೭). **ಹೊಡೆಕೆಡೆ :** ೧. ಮುಡಿಕೆ ನಿವಿದಿರ್ದಾಡೆ ಜಡೆಗಳ್ ತುಡುಕೆ ಶರಾಘುಮುಮನಭವನತಿಕೋಪದೊಳಂ ಅಡಕೆ ಮರುಳ್ಗಳ್ ಪೆಣನಂ ಹೊಡೆಕೆಡೆದರ್ ದೈತ್ಯರಂದು ತ್ರಿಪುರಸ್ಥಳದೊಳ್ (ಕರ್ಣಕ. ೫೭). **ಹೊಡೆಗೆಡೆ :** ೧. ಮಹಾರ್ಣವವುರಿದು ಬೇವಲ್ಲಿ ಕರಗದ ಜಲಕ್ಕೆ ಹೊಡೆಗೆಡೆವುದೆ (ಸಶವ. I. ೨೦೫-೦೨೬); ಕುಸುಮಚಾಪಂ ಕಾಲ್ಗೆ ಱಗುವಂತೆ ಪಂಚಭಾಣಂ ಹೊಡಗೆಡೆವಂತೆ . . . ಪೊಡೆಮುಟ್ಟು ನಿಂದು (೧೦೪. ೫-೪೨ ಪ); ಹೊಡೆಗೆಡೆವ ದಂತಿಗಳು ರಕ್ತದ ಕಡಲೊಳೀಸಾಡಿದವು (ಕುಡ್ಯಾಕ್ರೋ. ೦೦-೦೦). ೨. ಗೊರವರ ಪಡೆ ಬೆದಱ ಹೊಡೆಗೆಡೆದರಾತನ ಪಾದಪಂಕಜಕೆ (ಕಂಳದಾ. ೦೩-೭೨); ಹೊಡೆಗೆಡೆದ ಮಣಿಮಕುಟಶಿರಗಳಂ . . . ನೋಡಿದನು ಕಲಿದ್ರೋಣನು (ಕುರುಂಗ. ೫೫-೩೮). [ಪೊಡ್ಡೆ₃ + ಕೆಡೆ₁]

**ಪೊಡೆಗೊಳ್**, ಹೊಡೆಗೊಳು (ಕ್ರಿ). ೧. ಒಡಲಲ್ಲಿ ಇಟ್ಟುಕೊಳ್ಳು; ಒಳ ಗೊಳ್ಳು. ೨. ಹೊಟ್ಟೆಯಲ್ಲಿರು ; ಗರ್ಭದಲ್ಲಿರು : ನಿನ್ನಿರವಿಂತು ಬೆಱ[3] ಪಿರಿಯುಕ್ಕೆವವಂ ಪೊಡೆಗೊಂಡ ದೇಸೆಯಿಂದುನ್ನತವಾದುದು (ಶಕಪು. ೩-೦೦೩); ಪೊಬಿಲಾಱಳ್ ತೊಡವುಗಳಂ ಪೊಱುವಳ್ ಪೊಡೆಗೊಂಡ ವಿಶ್ವಗರ್ಭನನೊಲ್ಪಿಂ (ಶಕಪು.೪-೬). **ಹೊಡೆಗೊಳು :** ೧.'ಹೊಡೆಗೊಳಿಸು' ಪರಾ. [ಪೊಡ್ಡೆ₃ + ಕೊಳ್₁]

**ಪೊಡೆಚಂಡು** 'ಪೊಡೆಸೆಂಡು' ನೋ.

**ಪೊಡೆಚೆಂಡಾಟ** 'ಪೊಡೆಸೆಂಡಾಟ' ನೋ.

**ಪೊಡೆಚೆಂಡು** 'ಪೊಡೆಸೆಂಡು' ನೋ.

**ಪೊಡೆಜ** (ನಾ). ಹೊಟ್ಟೆಯಲ್ಲಿ ಹುಟ್ಟಿದವನು ; ತನುಜ ; ಮಗ : ದೇವಿ ನಿಮ್ಮಯ ಪೊಡೆಜನು ತನ್ನ ವಲ್ಲಭೆಯಂ ಪೊಡವಿಯೊಳೆಱು ಕಾಣದೆ ತನ್ನಸುವನು ಬಿಡದೆ ಮಾಣನು ತಾನೆಂದಂ (ಅಂಜಕ. ೦೦-೦೪೦). [ಪೊಡ್ಡೆ₃ + — ಜ₀./p ಸಂಸ್ಕೃತದ 'ಜ' ಪ್ರತ್ಯಯವು ಕನ್ನಡಪದ ದೊಂದಿಗೆ ಸೇರಿದೆ]

**ಪೊಡೆತ**, ಹೊಡೆತ (ನಾ). ಏಟು ; ಪೆಟ್ಟು : ಬಾಸುಳಂ ತೋರದಂದದಿ ಬೆರಳ್ಪೊಡೆತಮಂ ಕೊಡು (ವಂಶಾರಾ. ೫-೨-೪೦); ಕೊಂಬಿನಂಡೆಗಳೊಳ್ ತುಂಬಿದೋಕುಳಿಯ ನೀರ ಪೊಡೆತಗಳಿಂ ಕುಣಿಕುಣಿದಾಡುವ ಬೊಜಗರಿಂ (ಚಿತ್ರಗೋ. ೮-೦೭). **ಹೊಡೆತ :** ಈ ದಿನವೇ ಮೇಷ್ಟರಿಂದ್ಲ ಹೆಚ್ಚಾಗಿ ಹೊಡೆತ ತಿಂದರೆ ಸಾಕಷ್ಟು ಕಾರಣವೂ ಆಯಿತೆಂದು ಬಗೆದು, ನಾನಿ ಶಾಲೆಯೊಳಕ್ಕೆ ಸಾಗಿದನು (ನಾಡಿಗೆ. ೦೦೯). [ಪೊಡ್ಡೆ₁+—ತ₂]

**ಪೊಡೆದುಂಬು** (ಕ್ರಿ). ತೆನೆಯ ತುಂಬಿಕೊಳ್ಳು,—ಪುಷ್ಪವಾಗು : ದೆಸೆಗೆ ಕವಿಲ್ತು ಗಂಟಿಡಿದು ನುಣ್ಬಸಿಱಿಂ ಪೊರೆಯೇಱ ಕೊರ್ಬಿಯುರ್ಬಿಸಿ ಪೊಡೆದುಂಬಿ ಪಾಲ್ದೆನೆಗಳರ್ಬೆ ಕರಂ ತಲೆವಾಗಿ ಬಿಣ್ಪಿನಿಂದೆಸೆವುವು (ದಕಚ. ೦-೨೭). [ಪೊಡ್ಡೆ₃+ತುಂಬು₁]

**ಪೊಡೆಮುಗುಚು**, ಹೊಡಮಗುಚು, ಹೊಡೆಮಗುಚು (ಕ್ರಿ). ೧. ಹೊರಳು ; ಹೊಟ್ಟೆ ಕೆಳಗಾಗಿ ಮಲಗು : ಪೊಳೆವುದೋಱುವ ಪೊಡೆ

ಮಗುಚುವ ಸುಳಿಗೊಂಡು ಸುಳಿವ ಕೇಲ್ಪಕ್ಕಿಗಳ್ನಡುಗೆ ಇಳಿವ ಮೇಲಿಕೆ ಪುಟನೆಗೆವ ಹಲವು ವಿನೋದಂಗಳನೊಪ್ಪಿಸಿತಾ ತಿಳಿಗೊಳನು (ಶ್ರೀಪಾಂ. ೦೨-೦೭). **ಪೊಡೆಮಗುಚು** : ೧. ಪೊಡವಿಯೊಡೆಯನ ಕೈಯ ಹದಡಂ ಕಡುವಿಷಂ ಮಿಗೆ ಕಚ್ಚೆ ಮೋಚ್ಚೆವುತ ಹೊಡಮಗುಚಿದನಿತಟೊಳಗಾ ಸತಿ ನಿದ್ರೆ ತಿಳಿದೆದ್ದು ನಡನಡುಗಿ ಹಾ ಎನುತೊಅಲುತಿಹ ನಿಡುದನಿಗಳಂ ಕೇಳಿ (ಜಿತ. ೯೬-೨೨). **ಪೊಡೆಮಗುಚು** : ೧. ಜಿನದತ್ತರಾಯನು ಹೊಡೆಮಗುಚುವುದನ್ನು ಜನನಿ ತಾ ನೋಡಿ ಪ್ರೀತಿಪಳು (ಜಿನಾ. ೨-೦೫೫); ಮಕ್ಕಳ ಮಾಣಿಕ . . . ಹೊಡೆಮಗುಚಲು ಭವಿಗಳ ಪಡೆ ನಡುಗಿತ್ತು (ಅಭ್ಯಾಲಿ. ೨-೩೪). ೨. ತಲೆ ಕೆಳಗಾಗಿಸು ; ಬುಡಮೇಲು ಮಾಡು : ಸಡಗರದಿ ಕೌರವನ ಸಿಂಹಾಸನ ವನು ಹೊಡೆಮಗುಚಿ ಕೆಡಹಿದ್ದೀ ಪಾದವೆ ಕೃಷ್ಣ (ಭುಕೊಂದ. ೧-೦೦೩-೨).

[ಪೊಡ್ಕೆ+ಮಗುಚು (< ಮಗುಚ್ಚು)]

**ಪೊಡೆಮಗುಳ್** 'ಪೊಡೆಮಂಗುಂಚ್' ನೋ.

**ಪೊಡೆಮಗುಟ್**, **ಪೊಡೆಮಗುಳ್** (ಕ್ರಿ). = ಪೊಡೆಮಗುಚು ೧ : ಪೊಡೆ ಮಗುಟ್ದೆಯೊಳ್ ಪೊಕ್ಕುಟ ಕುಡಿ ಸುಟುಯಿಂ ವಳಯನೆಸೆದು ತೆಳ್ಳೊಡೆ ಕಡುಚಿಲ್ಲಾಡೆದುದು (ಆಜಿತ. ೬-೩). **ಪೊಡೆಮಗುಳ್** : ಅರರೆ ದುಡಪ್ರಣಾಮವನವಿನಯುಸಿ ಬೋಧಿಪಂತೆ ಪೊಡೆಮಗುಳ್ದು ಬೀಳ್ವಂ (ಕದ್ಯಾ. ೨-೬೦); ಪೊಡೆಮಗುಳ್ವಂದು ಬಾಲನನೆತ್ತಿದಿರವ ಕನ್ನಡಿಸುವಂತಾ ಜಗನ್ಮಾತೆ . . . ಹರಸಿದಳು (ಜಿಕ. ೯೬-೯೬). [ಪೊಡ್ಕೆ + ಮಗುಟ್]

**ಪೊಡೆಮುಡಿಸು** ಪೊಡೆವಡಿಸು' ನೋ.

**ಪೊಡೆಮುಡು** 'ಪೊಡೆವಡ್ದು' ನೋ.

**ಪೊಡೆಮುರಳ್**, **ಹೊಡಮುರಳು**, **ಹೊಡೆಮರಳ್**, **ಹೊಡೆಮರಳು** (ಕ್ರಿ). ೧. ಹೊರಳು; ಮಗುಚಿಕೊಳ್ಳು : ತಾಪದಿಂ ಪೊಡೆಮರಳ್ದಂ ಕೂರ್ಮೆಯೊಳ್ ರವಿಯ ರೂಪಡಗಿಸುವ ಬಾಹಾಂಧಕಾರದೊಳು (ಕ್ರಿಬಿಸಾ. ೨೦-೦೩). **ಹೊಡಮರಳು**: ೧. ಹೊಡಮರಳ ಕಲಿತರೆ ವಿರಕ್ತರ ದೃಢತೆ ಹೊಡೆಗೆಡೆಯಿತ್ತು (ಕ್ರಿಕುಲೀ. ೩-೨೮). ೨. ಹಿಂತಿರುಗಿ ಬರು; ಮರಳಿ ಬರು : ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದಡೆ ಹಿಡಿದಿರ್ದ ಲಿಂಗ ಹೊಡಮರಳಿ ಕಚ್ಚುವ ಹೆಡೆನಾಗ (ಸವ. ೦೮೭). **ಹೊಡೆಮರಳ್** : ೩. (ಸಸ್ಯಗಳಲ್ಲಿ) ಸುಳಿಯು ಹೊರಡು, – ಹೊರಬರು : ಕೊಚ್ಚೆಗಣಗಿಲ್ ನಾಯ್ಮಟ ಪೆರ್ಗುರುಟಗೆ ಹೊಡೆಮರಳ್ದ(ದ್ದ) ಹಚ್ಚಿಯೆಲೆ (ಜಿನುಕ. ೦೬-೦೦೯). **ಹೊಡೆಮರಳು** : ೧. ಉಡಿದ ತೊಡೆಗಳ ಹಚಿದ ಹೊಟ್ಟೆಯ ಹೊಡೆಮರಳ್ದಾಲಿಗಳ ತೋಳಿನ ಕಡಿಕುಗಳ ರಣಮಹಿ ಭಯಾನಕರಸಕೆ ಗುಡಿಯಾಯ್ತು (ಕುಮ್ಯಾಲೀ. ೬-೦೬); ಪಡೆವಣಿದಳಿದ ನಾಗರ ಮಣಿಯೆಂಬಂತೆ ಹೊಡಮರು[ರ]ಳುವ ತನ್ನ ತಾನೆ ಪಡೆಯಿಕ್ಕುವ ಮುತ್ತಿನರಳಿಲೆದಾಳ್ದು ಕೆಂಜೆಡೆ ಮುದ್ದುಮೊಗದಲ್ಲಿ ನಲಿಯೆ (ಸೋಚಿತ. ೦೭-೬೦). ೨. ವಿಕ್ರಮನು ಹೊಡೆಮರಳಿ ಸೋಮೇಶ್ವರನ ಸೇನಾಕಾಪನವನ್ನು ನುಗ್ಗಿದನು (ಕವಿಚ. ೬೦); ಜೀವನದಲ್ಲಿ ಎಲ್ಲ ದುಃಖಗಳನ್ನೂ ನುಂಗಿದ ಭಾಗೀರಥಿಗೆ ಮಗಳ ಚಿಂತೆ ಹೊಡೆಮರಳಿ ಹೊಡೆಯ ಹತ್ತಿತು (ಭಾರಿ. ೨೦೩). ೩. ಹೊಡೆಮರಳಿದುದೆನೆ ಬೆಳೆದುದು (ಭಾರಿ. ೨೨). [ಪೊಡ್ಕೆ + ಮರಳ್$_1$ (< ಮಲರ್$_1$)]

**ಪೊಡೆಯರಲ** 'ಪೊಡೆಯಲರ' ನೋ.

**ಪೊಡೆಯಲರ**, **ಪೊಡೆಯಂರಲ** (ನಾ). ೧. ಹೊಕ್ಕುಳಲ್ಲಿ (ಕಮಲ) ಪುಷ್ಪವನ್ನು ಉಳ್ಳವನು ; ವಿಷ್ಣು : "ಸಿರಿಯೆಂಟೆಯಂ ಸೌರಿಯೆಂದು ತಾವರೆಗಣ್ಣಂ ಸಿರಿಯಾಣ್ಮಂ ಪೊಡೆಯಲರಂ" (ಕರ್ಣಾ. ೩); ಪೊಡೆಯಲರನ ಕೊರಲ ಪುಲಿಯುಗುರ್ ಕರಮೆಸೆಗುಂ (ಜಗಾ. ೩-೪೪); ಆತಂ ತಾವರೆಯಂತೆ ಸಿರಿಯೊಳೊಂದಿಯುಂ ಪೊಡೆಯಲರನೆನಿಸಂ (ಅಭ್ಯಾ. ೫೦); ಖಳಂ ನಸು ನಗುತೆ ತಾಂ ತಡೆಯದಾ ಗದೆಯನುಳಿದು ತೋಳ್ಪೊಯ್ಯುತಂ ಪೊಡೆಯಲರ ಗಿಂತೆಂದನು (ಕಿರಾ. ೨೫-೪೦). ೨. [ಛಂದ] ಅಂಶಗಣಗಳಲ್ಲಿ ಒಂದು ; ವಿಷ್ಣುಗಣ : ಪೊಡೆಯಲರವರಿರ್ವರ್ಮೊದಲೊಳಿರ್ಕೆ ಜಡೆಯ ಶಂಕರ ನೊರ್ವಂ ತುದಿಯೊಳಿರ್ಕೆ ಮಡದಿ ಕೀಲ್ಗೊಟ್ ಗಣಮೆಸದಿರ್ಕೆ ಗಡ ಕಿಟಿಯಕ್ಕರಕ್ಕಿದೆ ಲಕ್ಷಣಂ (ಛಂದೋಂಬು. ೫-೨೯೬). **ಪೊಡೆಯರಲ** : ೧. ಸೆಟಗುವಿಡಿದೆಯ್ದುವೆಂದಜರನು ಪೊಡೆಯರಲರನು . . . ಜಡಿದು ದಟ್ಟಿಸುತೊಪ್ಪಿದರು ಕೈಯ ದಡಿಯ ಬಿಂಕದ ನಂದಿಯುಂ ಮಹಾಕಾಳನುಂ ಮೃಡನ ಸಮ್ಮುಖದೊಳಿರ್ದು (ಶೌಂದಪು. ೦-೩೯); ಬಿಡದೆ ಕೇಸರಿಯೆಂಬ ದೇವತೆ ಕಡುವಿಗಡ ದುಷ್ಪಾಶ್ವರೂಪದಿ . . . ನೆಟ್ ಕೆರಳಿ ಬಂದು ಪೊಡೆಯರಲನೊಡವಾಯೆ ಹಣೆಗಣ್ಣೊಡೆಯ ತಿವಿದಡೆ ಕಾಟ್ ನೆತ್ತರ ಕೆಡೆದು ಬಿದ್ದೊಡಿದುದು ಹರಿಯದಟನೇನೆಂಬೆ (ಸಾಕ್ಯಾ. ೨೦-೯೬).

[ಪೊಡ್ಕೆ + ಅಲರ್$_2$ + –ಅ$_7$]

**ಪೊಡೆಯಿಸು**, **ಪೊಡವಿಸು**, **ಪೊಡೆಸು**, **ಹೊಡಯ್ಯು**, **ಹೊಡಿಸು**, **ಹೊಡೆಯಿಸು**, **ಹೊಡೆಸು** (ಕ್ರಿ). ೧. ಹೊಡೆಯುವಂತೆ ಮಾಡು ; ಪೆಟ್ಟು ಕೊಡಿಸು: (೬). ೨. ಭೇರಿ, ನಗಾರಿ, ತಮಟೆ ಮೊದಲಾದ ವಾದ್ಯಗಳನ್ನು ಬಾರಿಸುವಂತೆ ಮಾಡು, —ಮೊಳಗಿಸು : ಅಮರಪತಿ ಸಮರೋತ್ಸಾಹಭೇರಿಯಂ ಪೊಡೆಯಿಸೆ . . . ಕೋಲಾಹಳೋತ್ಕರನಿಸ್ಸಾಳ ಧ್ವಳಧ್ವಳಧ್ವಳರವಂ ಪರ್ಬಿತ್ತು ಮಾಲೋಕವಂ (ಗಂಳ. ೬-೫೩ ಕ); ಪೌದನ ಪುರಾಧಿಪತಿ . . . ಪೊಡೆಯಿಸೆ ಪೊಣ್ಮೆ ತತ್ಸಮಯ ಮಂಗಳವಾದ್ಯದ ಹೃದ್ಯ ನಾದಮಾ ಪೊಡವಿಯನುರ್ವಿ ಪರ್ವುತಿರೆ (ಜಾತೀಶ್ವ. ೨-೦೭೭); ಪೊಡೆಯುವ ಬಂಜೆಯೆಂಜೆಸೆ ದಿಶಾಗಜವುಂ ಮಾಱುವಕ್ಕದಂತೆ ಬೊಬ್ಬಿಡುವ ರವಕ್ಕೆ ಬೊಬ್ಬಿಡೆ ಗುಹಾಕುಹರಂ (ಸುಕುಸೀ. ೨-೦೯) ; ಇಂತೊಗೆತಂದ ಶರದೃತು ವಿನೋಳು ಕುಮಾರಂ ವಿಜಯಯಾತ್ರೆಗೆ ಪೋಗಲ್ . . . ಸಮರಪ್ರಸ್ಥಾನ ಭೇರಿಯಂ ಪೊಡೆಯಿಸೆಂಬುದುಂ (ರಾಜಕೀ. ೬–೦೦೮). **ಪೊಡವಿಸು**:೩.[ಗಣಿತ] ಗುಣಾಕಾರ ಮಾಡು; ಗುಣಿಸು : ಪೊಡೆ ಪೊಡವಿಸು . . . ಬಳಯಿಸು ಏಕೆಂದೊಡರಿಪ ವಾಕ್ಯಂಗಳ್ ತಾಂ ಪೊಡವಿಯ ನರಗಳ್ಗೆಲ್ಲ ಗುಣಿಯಿಸೆಂಬುದು ನಿರತಂ (ಕ್ರಿಕಜಾ. ೦೦-೦೦). **ಪೊಡೆಸು**: ೧. ಪದದುಂಗುಟದ ತುದಿಯಿಂದ ಬರೆವುತಿಳೆಯ ನಿರೀಕ್ಷಿಸುತ ನೆರೆಗುರುಳನಂಗಕೆ ಪೊಡೆಸಿಕೊಳುತುತ್ತರಕೆ ಬದಲುತ್ತರವನೀಯದೆ ನಿಂದಳರೆಘಳಿಗೆ (ಅಕಂಗಾ. ೨-೦-೩೬). ೨. ಪೊಡೆಸು ಭೇರಿಯನೆಂದೆ ನಡೆಸು ಮತ್ಸೈನ್ಯವಂ . . . ತಡೆಸದೆನ್ನಂ ದಾಳಿಯಿಡಿಸು ಬೇಗದೊಳು (ಕಿತ್ತು. ೯೭-೨೨). **ಹೊಡಯ್ಯು**: ೨. ಪೆಳಟ್ ದಿಗುದನ್ತಿಗಳು ದಿಗುವಿಭಾಗಾಂತರದೊಳು ಪಾತಾಳದೊಳು ಪರ್ವತಕುಹರದೊಳಾಕಾಶ ದೊಳು ಕೊರ್ವಿ ಪರ್ವಿತ್ತುರುತೇಜ ವೀರಬವಮ್ಮಂ ಹೊಡಯ್ಯು ನೆಗರ್ದ್ದ ಚಂಡನಿಸ್ಸಾಣಘೋಷ (ಶಾಸ. XV. ೫೯-೦೦; 1184). **ಹೊಡಿಸು**: ೧. 'ಡಿಕ್ಕಿಹೊಡಿಸು' ಪರಾ. **ಹೊಡೆಯಿಸು** : ೧. ಅವನು ಅಪ್ಪನಿಗೆ ಚಾಡಿ ಹೇಳಿ ನನಗೆ ಹೊಡೆಯಿಸುತ್ತಾನೆ (ಲೋಕ). ೪. (ದನಕರು, ಗಾಡಿ ಮೊದಲಾದುವನ್ನು) ಅಟ್ಟಿಕೊಂಡು ಹೋಗುವಂತೆ ಮಾಡು : ಕರುಗಳನ್ನು ಕಟ್ಟಿದ್ದ ಸ್ಥಳಕ್ಕೆ ಹೋಗಿ ಅವುಗಳನ್ನು ಜಾತ್ರೆಮಾಳಕ್ಕೆ ಹೊಡೆಯಿಸಿಕೊಂಡು ಬಂದು ಅಲ್ಲಿ ಕಟ್ಟಿಸಿದನು (ಹಂನಾಳ್ಯ. ೩೩೩). **ಹೊಡೆಸು** : ೧. ಅವನು ಉಪಾಧ್ಯಾಯರಿಗೆ ಚಾಡಿ ಹೇಳಿ ಆ ಹುಡುಗನನ್ನು ಹೊಡೆಸಿದನು (ಲೋಕ). ೪. ನಿನ್ನ ಕೈಯಲಿ ಬರಲಿ ಸತ್ತಿಗೆಯೆನ್ನ ಕೈಯಲಿ ಹೊಡೆಸು ಬಂಡಿಯ (ಕುಮ್ಯಾಕ. ೫-೨೬).

[ಪೊಡ್ಕೆ + – ಇಸ್ಸು$_1$]

**ಪೊಡೆಯೊತ್ತು** (ಕ್ರಿ). (ಸಸ್ಯವು) ತೆನೆ ಬಿಡು ; ಹೊಡೆಯಾಗು : ಪಸುರೇಱುತ್ತೆ ಕವಲಿಱದು ಪೊಡೆಯೊತ್ತುತ್ತುಂ ಪಾಲೇಱುತ್ತುಂ ಪೆಱ್ ದಿಂಪಿಂ ನಳನಳಿಸಿ ಶಾಲಿವನಮೆಸೆದಿರ್ಕುಂ (ಗಂಳ. ೨-೦೩).

[ಪೊಡ್ಕೆ + ಒತ್ತು$_1$]

**ಪೊಡೆವಡಿಸು**, ಪೊಡಮಡಿಸು, ಪೊಡವಡಿಸು, ಪೊಡ್ಡಮಡಿಸು, ಹೊಡವಂಡಿಸು, ಹೊಡವಡಿಸು (ಕ್ರಿ). ನಮಸ್ಕಾರ ಮಾಡಿಸು ; ವಂದಿಸುವಂತೆ ಮಾಡು : ಅಧಿಪಂ ಮೊಗಮೊಗದಿಂ ಬೆಸಸಿದೊಡಲ್ಲದೊಲ್ಲೆವೆನೆ ವಿಕ್ರಿಯೆಯಿಂದಂ ಬೆಸಸುವಂತೆ ಮಾಡಿ ಮನಂಬಿಡೆ **ಪೊಡೆವಡಿಸಿ** ನಮಿಯುಮಂ ವಿನಮಿಯುಮಂ (ಆದಿಪು. ೯-೧೦೨); ಗಂಗಾಜಳಪವಿತ್ರೀಕೃತಗಾತ್ರನುಂ ಕೌಶೇಯಪರಿಧಾನನುಮಾಗಿರ್ದ ಮಾನನಿಧಾನನಂ ತಂದು **ಪೊಡೆವಡಿಸಿ** (ಸಂಪಭಾ. ೦೪-೦೭ ವ). **ಪೊಡಮಡಿಸು :** ಕರ್ಣನಂ ಮುಂದಿಟ್ಟೊಡಗೊಂಡು ಪೋಗಿ ಧೃತರಾಷ್ಟ್ರಂಗಂ ಗಾಂಧಾರಿಗಂ ಪೊಡಮಡಿಸಿದಾಗಳ್ (ಕುಶಭಾ. ೨-೮೩ ವ); ಪಟ್ಟವರ್ಧನಕೆ ಜಗತ್ಪ್ರಭುವಂ ಪೊಡವಮಡಿಸುವುದು (ಅಕ್ಷ್ಯಶಾ. ೯-೨೩); ಮಂಗಲೆ ನಿಜಾತ್ಮಜೆಯಂ ತಂದು ಪೊಡಮಡಿಸಿದಳು ಭಕ್ತಿಯಿಂದ (ಸೌಂದಪು. ೦೩-೦೩). **ಪೊಡವಡಿಸು :** ಪ್ರತಿಪತ್ತಿಮೂರ್ಧೆಯೆನಿಸಿರ್ದ ತರುಣಿಯುಂ ಗುರುಜನಕ್ಕೆ ಪೊಡವಡಿಪುದುಂ (ಕಾದಂಅ. ೬೯೦); ನಿಜಪಾದಪೀಠಘಟಿತೋತ್ತಮಾಂಗನಾದ **ಚಿತ್ರಭಾನು**ವಂ ಪುತ್ರನಿರ್ವಿಶೇಷಮೋಹದಿಂದಮಾದರಿಸಿ ತತ್ಸಮಯದೊಳಮಾತ್ಯವೈಶ್ರವಣಂಗೆ ಪೊಡವಡಿಸೆ (ಭುಕ್ಷ್ಯತಿ. ೯-೭೨ ವ); ತನ್ನ ಮಗಳ . . . ಒಡಗೊಂಡು ಬಂದು ಸಮಸ್ತಭಕ್ತರಿಗೆ **ಪೊಡವ[ಪಾಠಾಂ. ಮ]ಡಿಸಿ** (ಬಸಪು. ೯-೯೬). **ಪೊಡೆಮಡಿಸು :** ಆತನ [ಮನೆಗೆ ವಂದು ಪೊಸಮದವಳಿಗೆಯ ಕೆಲದೊಳಿರ್ದ ಪುಷ್ಪದಾಡನಂ ಕಂಡು] ಕಯ್ಯಂ ಪಿಡಿದೊಡಗೊಂಡು ಬಂದು ತಮ್ಮ ಗುರುಗಳ್ಗೆ ಪೊಡೆಮಡಿಸಿ (ಧರ್ಮಾಮೃ. ೭-೦೨೭); ನಿನ್ನಾಳ್ದನ ಕೊಂದ ಮದೀಯವಲ್ಲಭನ ಸಂದರುಶನವ ಮಾಡೇಳೆಂದು ಚರಣಾರವಿಂದಕೆ ಪೊಡೆಮಡಿಸಿದಳು (ಸೋಹಚ. ೯-೨೭). **ಹೊಡವಂಡಿಸು :** ಕಮಲಾನನೆಯ ಹೊಡವಂಡಿಸಿದನವ್ವೆಗೆ (ಕುವ್ಯಾಕ. ೦೬-೭). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಹೊಡವಡಿಸು :** ಕಂದನಂ ತಾನೆತ್ತಿ ಕೊಂಡೈತಂದವರ ಚರಣಾಂಬುಜಕೆ ಹಣೆಯೊಂದೆ ಹೊಡವಡಿಸಲ್ಕೆ (ಬಸಪು. ೯೩-೩೦); ತನಗೆ ತಾನೇ ಹೋಗಲಚ್ಯುತನೆನಿಪನಂ ಕೊಂಡೊಯ್ದು ವಿಶ್ವೇಶನ ಪದಾಬ್ಜಕೆ ಹೊಡವ[ಪಾಠಾಂ. ಪೊಡವ]ಡಿಸಿದಪೆನಿನ್ನು (ಬಸಪು. ೩೪-೬೨).

[ಪೊಡೆವಡು₂ +— ಇಸು₃]

**ಪೊಡೆವಡು₁** (ಕ್ರಿ). ಹೊಡೆತವನ್ನು ಹೊಂದು ; ಹೊಡೆಯಲ್ಪಡು : ಆ ಮುನೀಂದ್ರನಂ ಬಲೋಪೇಂದ್ರರ್ ಪೊಡೆವಟ್ಟು ಕಟಿಪೆ ಪೊಡೆ [ಪಾಠಾಂ. ಡ]ವಟ್ಟ ಸೆಂಡಿನಂತೆ ಗಗನಕ್ಕೊಗೆದಂ (ಅಪಂಪು. ೦೩-೯೦ ವ).

[ಪೊಡ್ಡೆ₂ + ಪಡು₁]

**ಪೊಡೆವಡು₂**, ಪೊಡಮಡು, ಪೊಡವಡು, ಪೊಡೆಮಡು, ಹೊಡಮಡು, ಹೊಡವಂಡು, ಹೊಡವಡು, ಹೊಡೆವಡು (ಕ್ರಿ). (ಸಾಷ್ಟಾಂಗ) ನಮಸ್ಕಾರ ಮಾಡು ; ವಂದಿಸು ; ನಮಿಸು : ಶಚೀಮಹಾದೇವಿಯನೆ ಪೋಲ್ವ ಧಾರಿಣಿಮಹಾದೇವಿಯೆನ್ನ ಕಾಲ್ಗೆ ಬಗಿ ಪೊಡೆವಟ್ಟಿರ್ದಳ್ (ವಡ್ಡಾರಾ. ೩೦-೯); ಪೊಡೆವಡುವಪ್ಪಿಕೊಳ್ಳ ನೆನೆಯುತ್ತಿರಿಮೆಂಬ . . . ನಲ್ಲರಗಲ್ಕೆಗೆ ಕಣ್ಣ ನೀರ್ಗಳಂ ಮಿಡಿವ ಬಹುಪ್ರಕಾರಜನಸಂಕುಲಮೊಪ್ಪಿದುದಾ ಪ್ರಯಾಣದೊಳ್ (ಆದಿಪು. ೬-೩೭) ; ಕರ್ತಾರ ನಿನಗೆ ಕರವೆತ್ತಿ ಪೊಡೆವಡುವ ಭಕ್ತರ ಮನೆಯ ಹಿತ್ತಿಲ ಬೇಲಿಯಾಗಿಪ್ಪನೈ (ದೇದಾಪ. ೨೯-೪೯). **ಪೊಡಮಡು :** “ಪೊಡಮಡು (ಪೊಡ + ಮಡು)__ನಮಸ್ಕಾರೇ” (ಶಮದ); ಪೊಡಮಡುವರ್ ಜೀಯೆಂಬರ್ ಕುಡು ದಯೆಗೆಯ್ಯೆಂ ಪ್ರಸಾದಮೆಂಬಿವು ಪೆಱರೊಳ್ ನಡೆಗೆಮ್ಮ ನಿನ್ನಯಡಿಯೊಳ್ ನಡೆಯಲ್ವೇಡೆನಗೆ ಕೆಳೆಯನೈ ರಾಧೇಯಾ (ಪಂಪಭಾ. ೨-೮೫); ವಸುಧೆಯೊಳು ಪೊಡಮಡಲು ದೇಗುಲಂ ಬಿರ್ದ ನುಡಿ ಪಸರಿಸುವ ನಾಡ ಗಾದೆಯ ತೆಱದಿ ನಿಮ್ಮ ಸೇವಿಸಬಂದ ನಮಗಾಯ್ತು ಪ್ರಭುವೆ (ಸಿದ್ಧರಾ. ೦-೨೭) ; ಪೊಡಮಟ್ಟು ಶಿರವ [illegible] ಮಣ್ಣಿ[illegible]ನಡಿಗೆಱಗಿದನು ಭಕ್ತಿಯಲಿ (ಅಭ್ಯಲಿ. ೩-೬).

**ಪೊಡವಡು :** ಧರ್ಮಪುತ್ರನಾ ಮುನೀಂದ್ರಂಗೆ ಸಾಷ್ಟಾಂಗವೆಱಗಿ ಪೊಡವಡೆ ಪರಸಿ ಪಯೋಧರಪಥಕ್ಕೊಗೆದಂ (ಪಂಪಭಾ. ೭-೬೬ ವ) ; ತನ್ನ ತಂದೆಯುಂ ಕಂಡು ಲಜ್ಜಿಸಿ ತಲೆಯಂ ಬಾಗಿ ದೂರದೊಳ್ ಪೊಡವಟ್ಟು (ಕಾದಂಅ. ೪೭೪). **ಪೊಡೆಮಡು :** “ಮೊಟ್ಟು, ತುಟಿಲ್, ಕುಂಬು, ಎಱಗು, ಬಾಗು, ಪೊಡೆಮಡ್ಡು, ಕಾಲ್ವಿಡಿ, ಮಣಿ, ಮೆಯ್ಯಿಕ್ಕು—ಈ ೯ ನಮಸ್ಕಾರಂ” (ಕಚಶಾ. ೬೪-೪೯೦) ; ಕಿತ್ತಯ್ಯ ಇಂದೆಮ್ಮ ಮನೆಯೊಳ್ ಪಾರಿಸಲ್ವೇಟ್ಟು ಮೆಂದು ಕಾಲಂ ಪಿಡಿದು ಪೊಡೆಮಟ್ಟಿರ್ದೊನಂ ನೋಡಿ (ವಡ್ಡಾರಾ. ೫೦-೦೪) ; ಸೂಸೆಗೂಡಿ ಕಂಸಮರ್ದನನ ಸೊಸೆ ಮದವಕ್ಕಳು ಸಹಿತ ಕೃಷ್ಣಾಂಘ್ರಿಗೆ ಯೊಸಗೆಯೊಳ್ ಪೊಡೆಮಟ್ಟಿರೊಲಿದರು (ಸೋಹಚ. ೯೨-೬೩) ; ಮುನಿಯ ನಿದಿರ್ಗೊಂಡು ಪೊಡೆಮಟ್ಟು . . . ಕುಶಲಮಂ ಬೆಸಗೊಂಡುಪಚರಿಸುತಿರ್ದಂ (ರಾಮಾಶ್ವ. ೦೦-೯). **ಹೊಡಮಡು :** ವಾರಿಜಾಸ್ಯೆಯಪೂರ್ವಲಾಂಛನಧಾರಿಯಾಗಲು ತನ್ನ ಮನದೊಳು ಹಾರವಿಸಿ ಹೊಡಮಟ್ಟು ಮುಗ್ಧರ ದೇವನಿಂತೆಂದ (ಬಸಪು. ೦೨-೨೩). **ಹೊಡವಂಡು :** ನಿಮ್ಮ ನಿಮ್ಮ ಹೊಡವಂಡುವ ದೈವಗಳೆಲ್ಲಾ ಗಿಡ ಮರನಾಗಿ ಹೋದವಲ್ಲಾ (ಶಿಂಬಪ. ೯. ೯೦೭-೦೨೦); ಹರಿಗೆ ಹೊಡವಂಟಸ್ಮೃತಿಶಿಕ್ಷಾಗುರುವ ಮನದಲಿ ನೆನೆದು ಹೊಸಬಿಲುದಿರುವನೇಱಿಸಿ ಮಿಡಿದು . . . ನರನಾಥನಿದಿರಾದ (ಕುವ್ಯಾಕ. ೩-೩೦). **ಹೊಡವಡು:** ಇಂತು ವರ ಕೊಡಗೂಸು . . . ದೇಗುಲದೊಳಿಪ್ಪ ಭವನಂ ಕಂಡು ಹೊಡವಡುತ್ತಂ ಬಟ್ಟಲಂ ಮುಂಗಡೆಯೊಳಿಟ್ಟು (ಬಸಪು. ೦೯-೬). **ಹೊಡೆವಡು :** ಶಿವನೇ ನಿತ್ಯನೆಂದು ಹೊಡೆ[ಪಾಠಾಂ. ಡ] ವಡುತ್ತಿದೆ ವೇದ . . . ಬಸವಪ್ರಿಯ ಕೂಡಲಚೆನ್ನಸಂಗಯ್ಯನೇ ನಿತ್ಯನೆಂದು ಹೊಗಳುತ್ತಿದೆ ವೇದ (ವಚಶಾ. I. ೦೭-೪ ; ಶತಗೋ. ೬-೧೯೦ ನೋ.) ; ಮಂಗನರಸಿ ಮಂತ್ರಿಸಹಿತವನಿಪಂ ಹಿಂದೆ ದೇಸಿಗನಂತೆ ಕೌಶಿಕನ ಕಾಹಿನೊಳು ಬರೆ ಕಂಡು ಬಗೆ ಬೆದಱಿ ಹೊದ್ದಿ ಹೊಡೆವಟ್ಟು ಕಾಹಿಕೆಯ ಚಿತ್ರ್ಯಸು ಭೂಭುಜ ಎಂದರು (ಹಚಶಾ. ೯-೭೨). [ಪೊಡ್ಡೆ₃ + ಪಡು₁]

**ಪೊಡೆವಳಸು** (ಕ್ರಿ). ಹೊಟ್ಟೆಯನ್ನು ಸುತ್ತು, — ಬಳಸು : ಅವಳ ಮಟ್ಟತರ್ಗ ಕೊಲಲೆತ್ತಿದ ಕೋಲಂ ಕೆಲಕಟ್ಟು ಕಟ್ಟುಜದೊಳ್ಪೆಟ್ಟತ್ತನೆ ನಿಟ್ಟುರವಂ ನುಡಿದು ಕಟ್ಟಿ ನಿಲಿಸಲ್ಕೆಂದು ತೊಟ್ಟನೊಂದು ಕಡೆವಾವಂ ಪೊಡೆವಳಸಿ ಪಿಡಿವಿನಮೆರಟ್ಟಿರಲಳವು ಕಡಮೆಯಾಗೆ (ಜಕವಂ. ೬೯-೦).

[ಪೊಡ್ಡೆ₃ + ಬಳಸು₁]

**ಪೊಡೆವೆಱು** (ಕ್ರಿ). ಹೊಡೆತವನ್ನು ಅನುಭವಿಸು ; ಪೆಟ್ಟುತಿನ್ನು : ಪೊಡೆವೆತ್ತ ಪಾವಿನಂತೆ ನೊಂದ ಶರಭದಂತೆ ಸಿಕ್ಕಿದ ಪುಲಿಯಂತೆ ಕೋಪಾವಿಷ್ಟನಾಗಿ . . . ಮುತ್ತಿಕೊಳ್ವುದುಂ (ಧರ್ಮಾಮೃ. ೯-೦೨೪)

[ಪೊಡ್ಡೆ₂ + ಪೆಱು₁]

**ಪೊಡೆವೊಗು** (ಕ್ರಿ). ಹೊಟ್ಟೆಯನ್ನು ಹೊಗು ; ಉದರವನ್ನು ಪ್ರವೇಶಿಸು,— ಸೇರು : ದೆಸೆಗೆಟ್ಟು ತಮಮೋಡಿ ಭೀತಿಯಿಂ ಸಸಿವಸುಱ ಬಹನೆಂದು ಪೊಡೆವೊಕ್ಕುದೋ . . . ಎನಲ್ ಪೊಸತಾಯ್ತು ವಿಧುಬಿಂಬಮಧ್ಯದಂಕಂ ಪಳಿಕುವಸೆಯಿರ್ದ ಕಾಳಿಯಂತೆ (ಕವಿಪು. ೯-೨೩).

[ ಪೊಡ್ಡೆ₃ + ಪೊಗು ]

**ಪೊಡೆಶಂಡು** ‘ ಪೊಡೆಸೆಂಡು ’ ನೋ.

**ಪೊಡೆಸು** ‘ ಪೊಡೆಯಿಸು ’ ನೋ.

**ಪೊಡೆಸೆಂಡಾಟ**, ಪೊಡೆಚೆಂಡಾಟ (ನಾ). ಚೆಂಡನ್ನು ಪುಟಿಸಿ ಆಡುವ ಒಂದು ಬಗೆಯ ಆಟ : ಅವರ ಪಸುಳೆಗಳ್ ಪಕ್ಕಿಯ ಸಿಡಿದಲೆಯೊಳ್ ಶಿಱಿಕಲ್ಲಾಟಮಂ . . . ತುಪ್ಪುಟ್ಗೆಟಿ ಸಿಡಿವ ಪಾರಿವಂಗಳಂ ಪೊಯ್ದು ನೆಲಕ್ಕೆ ಕೆಡವುವಲ್ಲಿ ಪೊಡೆಸೆಂಡಾಟಮಂ . . . ಒಲ್ವರ್ (ಜಕವಂ. ೯-೦೭). **ಪೊಡೆಚೆಂಡಾಟ :** ಅಹಿತರಾಯರುಗಳ ಶಿರವನು ಪೊಡೆಚೆಂಡಾಟವಾಡುವೆನು (ರಾಜಕ. ೭-೨೨). [ ಪೊಡೆಸೆಂಡು + ಆಟ ]

**ಪೊಡೆಸೆಂಡಾಡು,** ಹೊಡೆಚೆಂಡಾಡು, ಹೊಡೆಸೆಂಡಾಡು (ಕ್ರಿ). ಚೆಂಡನ್ನು ಎಸೆಯುವ ಆಟವನ್ನು ಆಡು : ಕಡಲಂ ಪೀರಲಂ . . . ಮೇರುವಂ ಪೊಡೆಸೆಂಡಾಡಲುಮಾರ್ಪ ಕಾಲಯುವನಂಗೇನಾರ್ಪನೆ ಯುದ್ಧದೊಳ್ ತೊಡರಲ್ ಚಕ್ರಿ ದಿಶಾಗಜಕ್ಕೆ ಕಳಭಂ ಕೈಯಿಕ್ಕಲೇನಾರ್ಕುಮೇ (ಆಪು. ೯-೧೭); ಕುಲಾದ್ರಿಸ್ತೋಮಮಂ ಕಿಳ್ತಿಣಾಂ ಪೊಡೆಸೆಂಡಾಡುವ . . . ಗಣಗಳ್ ಬಂದರಾನಂದದಿಂ (ಗಿಂಕ. ೧೧-೭೯). **ಹೊಡೆಚೆಂಡಾಡು :** ಹೊಡೆದು ಹೊಡೆಚೆಂಡಾಡಿ ರಿಪುಗಳ ಗಡಣವನು ಯಮರಾಜಧಾನಿಗೆ ನಡೆಸುವೆನು (ಕುವ್ಯಾ. ೮-೯); ತೇರ್ಗಳ ನುಚ್ಚುನುರಿ ಮಾಡಿಯಾನೆಗಳನಿರದೆ ತಿವಿತಿವಿದು ಹೊಡೆಚೆಂಡಾಡುತಿರ್ದಂ ಗಜಾಸುರಂ ಸಂಗರದೊಳು (ಶಿಪು. ೨೬-೨೩). **ಹೊಡೆಸೆಂಡಾಡು:** ಚಂಡಪರಾಕ್ರಮದಿಂದಿದಿರಾದವುದ್ದಂಡ ಮಂಡಳಿಕರೆಲ್ಲರನು ಗಂಡುತನದಿ ಹೊಕ್ಕಾ ತಲೆಗಳ ಹೊಡೆಸೆಂಡಾಡಿದ ಸುಮ್ಮಸಿಹನೇ (ಪ್ರಬಸಂ. ೨೬-೨೨). [ ಪೊಡೆಸೆಂಡು + ಆಡು$_1$ ]

**ಪೊಡೆಸೆಂಡು,** ಪೊಡಸೆಂಡು, ಪೊಡೆಚೆಂಡು, ಪೊಡೆಚೆಂಡು, ಪೊಡೆಶಂಡು, ಹೊಡಸೆಂಡು, ಹೊಡೆಚೆಂಡು, ಹೊಡೆಚೆಂಡು, ಹೊಡೆಸೆಂಡು (ನಾ). ೧. ಹೊಡೆದ ಚೆಂಡು ; ಪುಟಿದ ಚೆಂಡು. ೨. ಚೆಂಡನ್ನು ಎಸೆದು ಹಿಡಿಯುವ ಒಂದು ಬಗೆಯ ಆಟ : "ಪೊಡೆಸೆಂಡೆಂದು ಅಮ್ಮಾಲೆ" (ಕಶಾ. ೬೯-೩೩೯); ಒಡನಾಡಿಯುಮೊಡನೋದಿಯುಮೊಡವಳೆದಿಂ ಗುಳ್ಳೆಗೊಟ್ಟ ಬಟ್ಟುಳಸೆಂಡುಂ ಪೊಡೆಸೇಡೆಂಬಿವ ನಾಡುತ್ತೊಡವಳೆದರ್ ತಮ್ಮೊಳೆಳಸೆ ತಂತಂ ಗೆಡೆಗಳ್ (ಶಂಕಚ. ೨-೩೦); ಅಭಿನವಜಲಧರತತಿಗಳ್ ಸಭಕ್ಕೆ ನೆಗೆವವು ಖಿಗಾದ್ರಿಯಣೆಯಿಂ ಸೂರ್ಯ ಪ್ರಥಿತನಯನತುಳಭುಜಬಲವಿಭವಂ ಪೊಡೆಸೆಂಡುವೊಯ್ದ ಬೆಟ್ಟಂಗಳವೋಲ್ (ಅರ್ಜನೀ. ೨-೯೦); ಪೊಡೆಸೆಂಡುವೊಯ್ದನಾ ದ್ರುಪದನ ಪುತ್ರನಂ ಘಟಜಸೂನು (ಪಂಚಾಸೀ. ೦೩-೩೦). ೩. ಚೆಂಡನ್ನು ಅಂಗೈಯಿಂದ ನೆಲಕ್ಕೆ ಮತ್ತೆ ಮತ್ತೆ ಹೊಡೆದು ಪುಟಿಸುವ ಆಟ ; ಪುಟಚೆಂಡಾಟ : ತನ್ನ ಮುಂ ನೆರಪಿದ ಪಾಪಮ ಕೋಪದಿಂ ಪೊಡೆಸೆಂಡುವೊಡೆಯುತ್ತಿರ್ದುದು (ಪಾರ್ಶ್ವಪು. ೩-೧೦೦ ವ). **ಪೊಡಸೆಂಡು :** ೨. ವೈರಿಭೂಪ್ರಭುಗಳ ಮಸ್ತಕಾವಳಿಗಳಂ ಮುಳ್ಸಂ(ಳಸಿಂ) ಪೊಡಸೆಂಡುವೊಯ್ದನೀ ತ್ರಿಭುವನಮಲ್ಲನೀ ಪೃಥ್ವಿ ಸೆಟ್ಟಿಯಿವಂ ಹರಿಪಂ ರಣೋರ್ವಿಯೊಳ್ (ಶಾ. IV, ೦-೬೪: 1204). **ಪೊಡೆಚಂಡು :** ೧. ಪೊಗಮತ್ತಿ ಫಲುಗುಣಾ ನೋಡುತಿರೆ ಕರ್ಣಜಂ ಗಗನದಿಂ ಬದ್ದಿಳಿಗೆ ಪೊಡೆಚಂಡಿನಂತೆ ಪುಟನೆಗೆದೆದ್ದು ರೋಷದಿಂ . . . ತೆಗೆದಿಸಲ್ (ಕೃಪುಕಾ. ೨೩-೦೯). **ಪೊಡೆಚೆಂಡು :** ೨. ಕುಲೋರ್ವೀಧರಂಗಳನೆತ್ತಿ ಪೊಡೆಚೆಂಡನಾಡಲೋ ದಿಗ್ಗಜಂಗಳ ನಿಗ್ಗವಂಗಿತ್ತು ತಂದಿರಿಸಲೋ ಕೊಡು ಬೆಸನನೀ ರಿಪುಗಳಂ ಗೆಲುವುದರಿದ (ಸಾಕ್ಯಾಶಾ. ೨೩-೩). 'ಪೊಡೆಚೆಂಡಾಟ' ಪರಾ. **ಪೊಡೆಶಂಡು :** ೧. ಕೆಳೆಯಂ ಕೊಂಡವೆನೆಂಬವಂಗಭಯಮಂ ಕಾರುಣ್ಯದಿಂ ಕೊಟ್ಟಪಂ ಕಲಿಬ × × × ಪೊಚ್ಚಳಿಸಿ ಬಲ್ಪಿಂದಾನ್ತೋವೋವೆನಲ್ ತಲೆಯುಂ ಚಕ್ಕನೆ ಕಿತ್ತುರ್ವ ಮೆಟ್ಟಿ ಪೊಡೆಶಂಡಂ ಪೊಯಿದಪಂ ಭೂರಿಭೂತಳವಾಕಂಪಿಸೆ (ಶಾಇಇ. IX — i, ೨೩೭-೦೯ ; ಸು. 1160). **ಹೊಡಸೆಂಡು :** ೧. ಸಿಡಿಲಂ ನುಗ್ಗೊರ್ಗುತ್ತುವಂ ಭೈರವನ ಮುಸಕಮಂ ಬಗ್ಗಿಪಂ . . . ಹೊಡಸೆಣ್ಡಾಂ ಹೊಯ್ವನಸ್ಯಾವನಿಪರ ತಲೆಯುಂ ವೀರಸಾಮಂತಸಿನ್ದನ್ (ಎಕ. XIV, ನಾಗಮಂ. ೦೯೦-೩೬; ಸು. 1224). **ಹೊಡೆಚಂಡು :** ೨. ಒಂದುದಿನ ಭೋಜನಾ ಸಮಿರ ಕೂಡಿಕೊಂಡು ಹೊಡೆಚಂಡನಾಡುತುವಾಗ ಸಿಡಿದು ಕಿಡಿಯು ತಾಯಿಯು ಮಂಚದ ಕೆಳಯಿಕೆ ಬೀಳಲು (ಕೃಕಸೂ. I, ೬೨); ಉರ್ವಿಯೊಳು ನಮ್ಮನು ನಿಷೇಧಮಾಡುತಲಿರ್ಪ ಗರ್ವರಾರವರೆಂದ್‌ಗೆ . . . ಕೆಡಹದಿರೆವೆಂದು ಹೊಡೆಚಂಡನಾಡುತಿರ್ದರು.ಗೆಲುವಿನಿಂ (ಪಪಕೋ. ೦೭-೩೮). **ಹೊಡೆಚೆಂಡು :** ೨. 'ಹೊಡೆಚೆಂಡಾಡು' ಪರಾ.

**ಹೊಡೆಸೆಂಡು :** ೧. ಕುಲಗಿರಿಗಳ ಕೈಗುಂಡುಗಳ ಬ್ರಹ್ಮಾಂಡಂಗಳ ಹೊಡೆಸೆಂಡುಗಳ . . . ಧರೆ ಗಗನಂಗಳ ಪಲ್ಲಟಿಸುವ ಬಲಯುತಬಲದಿ ಗಣಕುಲ ನಡೆದುದು ವೀರೇಶನ ಕಲಬಲದಲಿ ಜಗದಗಲದೊಳು (ವೀರೇಶ. ೨-೨೦); ಗಜದಳದ ಘಾಡಿಕೆಗೆ ವಾಜಿವ್ರಜದ ವೇಢೆಗೆ ಭೀಮನೇ ಗಜಬಜಿಸುವನೆ ಹೊಡೆಸೆಂಡನಾಡಿದನಹಿತಮೋಹರವ (ಕುವ್ಯಾ. ೩-೧೦).

[ಪೊಡೆ$_1$ + ಸೆಂಡು]

**ಪೊದ್ದಣ,** ಪೊದ್ದವಣೆ, ಪೋಡಣೆ (ನಾ). ಒಗ್ಗರಿಸುವಿಕೆ; ಒಗ್ಗರಣೆ : 'ಪೊದ್ದಣಗೆ' ಪರಾ. **ಪೊದ್ದವಣೆ :** 'ಪೊದ್ದವಣೆಗೊಡು' ಪರಾ. **ಪೋಡಣೆ :** ಶಾಕ ಶೀಕರಣೆಯ ಗಾಡ ಪೋಡಣೆಯ ಸುಪಾಕವೊಗ್ಗರಣೆ ಪಾಯಸವ ಈಕೆಗಾಕೆಗೆ ಸ್ವಾಮಿಗವಳಿಗವಳಿಗೆಂದು ಜೋಕೆವಿಡಿದು ಬಡಿಸಿದರು (ಚಕ. ೯-೭೯).

[< ಪ್ರಾ. ಪೋಡಣ. / ಸಂ. ಸ್ಫೋಟನ./ ಮರಾ. ಫೋಡಣೀ]

**ಪೊದ್ದಣಗೆ,** ಪೊಡಣಗೆ (ನಾ). ಒಗ್ಗರಿಸುವುದು; ಒಗ್ಗರಣೆ : ಮೊದಲು ತುಪ್ಪದೊಳುಕ್ಕರಿಸಿ ಸವಿಯುಮಂ ಹಡೆದ ಬದನೆಯೆಳೆಗಾಯ ಹೋಳಂ ಹಾಕಿಕೊಂಡು ತುಪ್ಪದೊಳು ಪರಿಮಳವಿಕ್ಕಿ ಪೊದ್ದಣಗೆಯಂ ಕೊಟ್ಟು ಸಿಪಿ ಹೋಗದಂತಿರಿಸಲು ಆದುವೆ ಪುಳಿಚಾರು ಬದನೆಯ ಕಾಯಿ (ಸೂಶಾ. ೯-೬); ಬಳಿಕ ಕೆಂಪಂ ಮಾಡಿ ಹುರಿದು ತಾಳಿಸಿಕೊಂಡು ಇಳುಹಿ ಪೊದ್ದಣಗೆಯಂ ಕೊಟ್ಟು (ಸೂಶಾ. ೯-೩೮). **ಪೊಡಣಗೆ :** ಸುಗಮಮಹ ಸಕಲಸಂಭಾರಂಗಳ ಅಮ್ಮಿಕಲ್ಲೊಳಗರೆದು ನುಣುಗುವಂದದಿ ಕಾಸಿ ಕಮ್ಮನೆಯ ತುಪ್ಪದೊಳು ಪೊಡ[ಪಾಠಾಂ. ಪೂವ, ಪೊದ್ದ]ಣಗೆಯು ಕೊಟ್ಟು . . . ನವಪರಿಮಳವನು ಭಾವನೆಗೊಡುವುದು (ಸೂಶಾ. ೨-೪೮).

[ಪೊದ್ದಣ + — ಇಗೆ ]

**ಪೊದ್ದಣಗೆಗೊಡು,** ಪೊಡಣಗೆಗೊಡು (ಕ್ರಿ). ಒಗ್ಗರಣೆ ಕೊಡು; ಒಗ್ಗರಿಸು : ಬಂದ ತೀಯಲ್ಲಿ ಸಂಭಾರಮಂ ಕದಡಿ ಸರಿಯಪ್ಪಂತೆ ಕಾಸಿಕೊಂಡು ನಿಂದುದಂ ಪಲಭಾಗ ಮಾಡಿ ಪೊದ್ದ[ಪಾಠಾಂ. ಡ]ಣಗೆಗೊಟ್ಟು (ಸೂಶಾ. ೨-೪೪); ಬಟ್ಟ ಬದನೆಯ ಕಾಯ . . . ತುಪ್ಪಮಂ ಬಿಟ್ಟು ಪೊದ್ದ[ಪಾಠಾಂ. ಡ]ಣಗೆಗೊಡೆ ತುಪ್ಪಗಾಯಪಾಯಿತು (ಸೂಶಾ. ೯-೦೩). **ಪೊಡಣಗೆಗೊಡು :** ಕೂಡಿ ಮಾಡಿದ ಸುಪದಾರ್ಥವಂದವನರಿದೊಂದಿನಿಸು ತುಪ್ಪವನೆಚಿದೊಪ್ಪಮಾಗಿ ಪೊಡಣಗೆ[ಪಾಠಾಂ. ಪೊಡವಣಗೆ]ಗೊಟ್ಟು ಮಹಾಸ್ವಾದುಗೊಳಿಸುವಂತೆ (ಶಠಕೂ. ೦). [ಪೊದ್ದಣಗೆ + ಕೊಡು$_1$]

**ಪೊದ್ದವಣೆ** 'ಪೊದ್ದಣ' ನೋ.

**ಪೊದ್ದವಣೆಗೊಡು** (ಕ್ರಿ). = ಪೊದ್ದಣಗೆಗೊಡು : ಇಂಗೆ ಪೊದ್ದವಣೆಗೊಟ್ಟ ಸಾರು ಮೊದಲಾದ ಬಲುಸೊಗಸುಳ್ಳ ಪಾಕಂಗಳವನಿಪ್ಪದಂತಿರಲು (ಕುಬ್ಜಕ. ೫-೬). [ಪೊದ್ದವಣೆ (< ಪೊದ್ದಣ) + ಕೊಡು$_1$]

**ಪೊದ್ದಿ,** ಪೋಟ್ಟಿ, ಬಡ್ಡಿ$_1$, ಬೊಡ್ಡಿ (ನಾ). ೧. ಸೂಳೆ; ವೇಶ್ಯೆ. ೨. ಕೆಲವು ವೇಶ್ಯೆಯರ ಹೆಸರಿನ ಮುಂದೆ ಸೇರುವ ಪದ : ದೇಗುಲದ ಸೂಳೆ ಗೋಯಿಂದಪೊದ್ದಿಯ ಮಗಳು ಬಾಡಿ (?೯) ಪೊದ್ದಿಯೆಂಬೊಳ್ (ಇಕ. XI, ೦೨೩-೯; 778). **ಪೋಟ್ಟಿ:** ೨. ಮಹಾರಾಜಾಧಿರಾಜ ಪರಮೇಶ್ವರಭಟ್ಟಾರರಾ ಪ್ರಾಣವಲ್ಲಭೆ ವಿನಾಪೋಟಿಗಲೆನ್ತೊರ್ ಸೂಳೆಯರ್ (ಇಕ. X, ೦೦೭-೩ ; ೯). **ಬಡ್ಡಿ$_1$ :** ೩. ನೀಚಳು, ದುಷ್ಟಳು ಎಂಬರ್ಥದ ಒಂದು ಬಯ್ಗುಳು : ಏನನೆಂಬಳು ಬಡ್ಡಿ ಖಡ್ಡಿನಿತೇನು ಕಾರಣಮೆಂದು ನಸುನಗುತಾ ನಿಶಾಚರಚಕ್ರವರ್ತಿಯು ಕೇಳ್ದಲೋಲವಿನಲಿ (ತಂಂಕಾ. ೩೮-೦೮); ಅಟ್ಟಕ್ಕೆ ಹಾರಲಾರದ ಬಡ್ಡಿ ಸ್ವರ್ಗಕ್ಕೆ ಹಾರಿದಳಂತೆ (ಹುಹ್ಬಕ. ೦೩೩); ಓಡಿಹೋಗುವ ಬಡ್ಡಿ ಹಾಲಿಗೆ ಹೆಪ್ಪು ಹಾಕ್ತಾಳೇ ? (ಗಾದೆ). **ಬೊಡ್ಡಿ :** ೨. ಶ್ರೀ ವಿಜಯಮಹಾದೇವೀಬೊಗ್ಗಿ(ಡ್ಡಿ) ಪೋಧೀ(ಧೀ) ಸರ್ವಾನಾಜ್ಞಾಪಯತಿ (ಇಕ. VIII, ೯೬-೦೬; ೪೦ನೆಯ ಶಕ). ೩. ಮುಂಡೆಯಾದ ಮುಕ್ಕೆ

ಸೊಕ್ಕಿದಿರದೇನಭಿಮಾನದ ಬೊಡ್ಡಿ[ಪಾಠಾಂ. ಜೋಡೆ] ಬಾಲವಮಂ ಬಡಿದವೆ (ಅಪಂಪು. ೮-೩೦ ; ಸೂಕ್ತಿಸು. ೮-೪೨೪ ನೋ); ಇಬ್ಬರಿಗೆ ಘಡ ಹುಬ್ಬನಿಕ್ಕುವ ಕೊಬ್ಬಲೇ ಜಯಲಕ್ಷ್ಮಿ ಬೊಡ್ಡಿಯು ಕೊಬ್ಬ ನಿಲಿಸುವೆನು (ಕುವ್ಯಾಭಾ. ೨೩-೨೬); ದುಡ್ಡಿಗೆ ಮಣ್ಣು ಹಾಕೋ ಆ ಬೊಡ್ಡಿಯಾದರೂ ಇದ್ದಾಳಲ್ಲ (ಬ್ರಾಕ. ೨೬).

ಬೊಡ್ಡಿಮಗ, ಬಡ್ಡಿಮಗ=ವೇಶ್ಯೆಯ ಮಗ ; ಒಂದು ಬಯ್ಗುಳು ; ಬೊಡ್ಡಿಮಗನಿಗೆ ಸರಿಯಾಗಿ ಬುದ್ಧಿ ಕಲಿಸಬೇಕಾಗಿದೆ (ಪುನರು. ೧೩೦); ಎಲಾ ಬೊಡ್ಡೀಮಗನೇ, ಸುಳ್ಳು ಹೇಳುತ್ತೀಯಾ? (ರಂಗರೂ. ೯೬); ನಿನಗೆ ಬರಬೇಕಾದ ದುಡ್ಡನ್ನು ಆ ಬಡ್ಡಿ ಮಗನ ಹತ್ತಿರದಿಂದ ಕೊಡಿಸುತ್ತೇನೆ (ರೂ೦).

[ದೇ.೩ ತಮಿ. ಪೊಟ್ಟು; ಮಲ. ಪಟ್ಟಿ; ತುಳು. ಪಡಪೆ, ಪಡಪ್ಪೆ]

**ಪೊಣಕೆ** 'ಪೊಣರ್ಕೆ' ನೋ.

**ಪೊಣರ್**₁, ಪೊಣರು₁, ಪೊಣಱ್, ಹೊಣರು (ಕ್ರಿ). ೧. ಸೇರು; ಕೂಡು; ಜೋಡಿಯಾಗು : ನಡೆಯೊಳ್ರಾಜಮರಾಳರಾಜಿ . . . ಪಿಕಶ್ರೇಣಿಯಂ ಪಿಡಿದಂಚನ್ಮೃದುನಾದದೊಳ್ಪೊಣರಲೆಂದೆಟ್ಟಂದುದೀ ವೇಳೆಯೊಳ್ಗಡಮಾದೀ [ವೀ] ಕ್ಷಿಸು ತಂಗಿಯೆಂದೆನುತಲೈತಂದತ್ತು ಕಾಂತಾಕುಳಂ (ಅದ್ಭುಟಿ. ೬-೩೦). 'ಮೆಯ್ಪೊಣರ್' ಪರಾ. ೨. ಸೇರಿಕೊಂಡಿರು; ಕೂಡಿಕೊಂಡಿರು : ಬಾಹುಬಲಿ ಭರತನಂ ದೃಷ್ಟಿಯುದ್ಧ ಜಳಯುದ್ಧದೊಳು ಗೆಲ್ದು ಮಲ್ಲಯುದ್ಧದೊಳು ಪೊಣರ್ದು ಪಲವಾಯಂಗಳೊಳು ಪೊಣರ್ದು ಶ್ರಾಂತವಾದಾಗಳು ಭರತನಂ ಪಿಡಿದೆತ್ತಿ ನೆಲಕ್ಕಿಕ್ಕುವುದು (ಪಾಪುಂಪು. ೪೯); ಪೊಣರ್ವ ಪುಂಭಗಳಿಂದಂ ಕೆದಱಿ ಮದದಿಂದೆ ದಣುವಿಲ್ಲದೊಲ್ದು ಕುಣಿವಚ್ಚಕೇಳಿಕೆಗಳಿಂ (ಅದ್ಭುಟಿ. ೩-೯೬). ೩. ಉಂಟಾಗು; ಒದಗು; ಸಂಭವಿಸು : ಅತ್ತ ದುರ್ಯೋಧನಂಗಂ ಭೀಮಂಗಮನುಪರಂ ಪೊಣರ್ದಿರ್ದುದು (ಹಂಪಹಾ. ೧೨-೦೦೬ ವ); ವರಾಹಕಲ್ಪಂ ತಾಂ ಪೊಣರ್ದುದು [ಪಾಠಾಂ. ಪೊಣ್ಮಿದುದು]ಎರಡನೆಯ ಪರಾರ್ಧಾಬ್ದದೊಳ್ (ಚಿಸ್ವಾಪು. ೦-೦-೦೯೩). ೪. ಶೋಭೆಗೊಳ್ಳು ; ಶೋಭಿಸು ; ವಿರಾಜಿಸು : ಪೊಣರ್ವಪಖಿಳಕ್ಷೇತ್ರಶಿಖಾಮಣಿಯಾದೀ ಪಂಪೆಯೊಳ್ವಿರೂಪಾಕ್ಷಂ . . . ಕಂಗೊಳಿಪ್ಪಂ (ಅದ್ಭುಟಿ. ೩-೬೪). ೫. ವೃದ್ಧಿಗೊಳ್ಳು ; ಅತಿಶಯವಾಗು ; ಹೆಚ್ಚಾಗು : ಎಣಿಕೆಗಳವಡದ ಮಹಿಮೆಗೆ ಗಣಭೂಷಣೆಗೊಲ್ದು ರತ್ನಕೀಲಿತನವಭೂಷಣಜಾಲಮನರ್ಪಿಸಿದಂ ಪೊಣರ್ವ ಮುದಂಬೆತ್ತು ಘೂರ್ಜರಕ್ಷಿತಿಪಾಲಂ (ಅದ್ಭುಟಿ. ೩-೦೬೩). ೬. ಕಾದು ; ಹೋರಾಡು ; ಯುದ್ಧಮಾಡು : ಆ ಕ್ಷಣದೊಳೆ ಮಾರ್ಕೊಣ್ಡು ಪೊಣರ್ದು ತಳ್ತಿಱಿದು ಮಡಿದನೀ ಗೊಗ್ಗಿ × × (ಎಪಿ. XI. ಕಳ್ಳೇ. ೬-೬ ; ಸು. ೨೫೫); ಇರ್ವರುಂ ನೀಲನಿಷಧಗಿರಿಗಳೊಂದೊಂದಱೊಳ್ ಬಂದು ಪೊಣರ್ವಂತೆ ನಿಂದೊರ್ವರೊರ್ವರೆಮೆಯಿಕ್ಕದೆ ನೋಡುವಲ್ಲಿ (ಆದಿಪು. ೦೪-೦೦೪ ವ); ಶರನಿಧಿಯೊಡನೊರ್ಮೆಗೆ ಮುಚ್ಚಿರಿಸಿ ಕೊಳಂ ಪೊಣರ್ವ ತೆಱದಿನಂಗಜಮದಸಂಹರನೊಳ್ ತನ್ನಳವಱಿಯದೆ ಗುರುಲಘುವೆಂಗಱಿಯದುಕ್ಕಿ ನೆಱೆ ಬಲಿ ನುಡಿದಂ (ರವಿಶಾಸ್ತ್ರ. ೯-೬೯); ಭರದಿಂದಿಭದೊಳಿಭಂ ಹರಿ ಹರಿಯೊಳ್ ತೇರ್ ತೇರೊಳಾಳೊಳಾಳ್ ಪೊಣರ್ದುದು (ಜಗನ್ನಾ. ೬-೯೬). ೭. ಸ್ಪರ್ಧಿಸು ; ಪೈಪೋಟಿ ನಡೆಸು : ಕೆಲರಂ ಬೀಸಿಯುಮೊತ್ತಿಯುಂ . . . ಭುಜಾದಂಡದಿಂ ಕೆಲರಂ ಕುತ್ತಿಯುಮುತ್ತಿಯುಂ ಪೊಣರಿಯುಂ ಪೊಯ್ದುಂ ಧನುರ್ದಂಡದಿಂ ಕಲಿ ಕಟ್ಟಾನೆ ಕಡಂಗಿ ಕೊಲ್ವ ತೆಱದಿಂ ಕೊಂದಂ ಮರುನ್ನಂದನಂ (ಗದಾಯು. ೩-೦೨); ನೀಮುತ್ತಮೆಯೊಳ್ ಕರಂ ಪೊಣರೆ ಸೋಲ್ವುದು ತಪ್ಪದೆನಲ್ಕೆ ಕೇಳ್ದು ಕಾದುತ್ತಿರದಾಡಿಮೆಂದೆನೆ ಮನೋಮುದದಿಂ ಪೊಣರ್ದಾಡುತಿರ್ಪುದಂ (ಕೆಂಪುಕು. ೯-೩೩). **ಪೊಣರು**₁ : ೬. ಬಾಣಾಂಬುಧಿಯ ತೆರೆಯೊಳದ್ದಿ ಪೊಣರುವವರೊಮ್ಮೆ ಮೂರ್ಛೆಯಿಂ ಮೈಮಱೆದು ಬಿದ್ದು ಬಿದ್ದೆದ್ದು ಕಾದುವರೊಮ್ಮೆ ಕೃಷ್ಣ ಪಾರ್ಥರ ತನಯರಾಹವದೊಳು (ಕೃಜಿಚ. ೨೨-೨೯); ಮುನಿಪತಿಯೊನೊಡನೀ ಮೇದಿನಿಯೊಳ್ ಪೊಣರಲ್ಸಮರ್ಥರಾರೊಳರುಸಿರ್ (ಚಿಪ್ರಾಕು. ೫-೬.೮). Δ **ಪೊಣಱ್** : ೬. ಎರೆದ ಮನುಜಂಗೆ ಸುರಭೂಮಿರುಹಂ ಶರಣೆಂದವಂಗೆ ಕುಳಿಶಾಗಾರಂ ಪರವನಿತೆಗನಿಲತನೆಯಂ ಧುರದೊಳು ಪೊಣಱ್ದಂಗೆ ಮೃತ್ಯು ವಿನೆಯಾದಿತ್ಯಂ (ಎಪಿ. II, ೦೯೩-೭; 1131). **ಹೊಣರು** : ೬. ಸಿಂಹಿಕೆ ಹನುಮರಿರ್ವರುಂ, ತಾವೊರ್ವರೊರ್ವರಂ ಸೆಳೆದು, ಹೊಣರಿದರೊರ್ವರೊರ್ವರಂ ಸೋಲಿಸುವ ಛಲದ ವೀರ್ಯದ ಗರ್ವದಿಂ (ಶ್ರೀರಾಮಪ. ೪೦೩-೨೯೨); ಆರೆಜಾವದಷ್ಟು ಸಮಯ ಅತನೊಡನೆ ಹೊಣರಿದರೂ ಈ ಅಪರಿಚಿತಮಲ್ಲನನ್ನು ಸೋಲಿಸಿ ಕೆಡಹಲಾಗಲಿಲ್ಲ (ಹುಂಶಾ. ೨೪೩); ಅವರು ಧೈರ್ಯದಿಂದ ಹೊಣರಿದರೂ ಹಗೆಗಳನ್ನು ಸೋಲಿಸಿ ಹಿಂದಟ್ಟಲು ಅಸಮರ್ಥರಾದರು (ಹಾಕುತ್ತ. ೩೩).

[ದೇ.೩ ತಮಿ. ಪುಣರ್; ಮಲ. ಪುಣರು; ತೆಲು. ಪೊನರು]

**ಪೊಣರ್**₂, ಪೊಣರು₂ (ನಾ). ೧. ಸೇರಿಸುವಿಕೆ; ಕೂಡಿಸುವಿಕೆ; ಜೊತೆಗೂಳಿಸುವಿಕೆ : (?). ೨. ಎರಡರ ಜೊತೆ : ಜೋಡಿ; ಯುಗ್ಮ : "ಯುಗಳಂ ಯುಗ್ಮಂ ದ್ವಂದ್ವಂ . . . ದ್ವಯಂ ದ್ವಿತಯಂ ಸಂಜ್ಞೆಗಳಿವೆ ಪೊಣರೊಳ್" (ಪಸ್ತುಕೋ. ೦೦೯-೩೩); ತಪನಕರಂ ತನುಗಳನುರ್ಚಿ ಪೋಗೆ ಸಾರ್ವತ್ತು ಜಕ್ಕವಕ್ಕಿಯ ಪೊಣರ್ಃಂ ಗ್ಲಪಿತಮನವಾಗಳುದ್ದಂಡಪುಂಡರೀಕೋಜ್ಜ್ವಲಾತಪತ್ರದ ನೆಟಲಂ (ಅರಪು. ೦೦-೩೦); ಗುಣವತಿ ರಾಘವನಂ ಲಕ್ಷ್ಮಣನಂ ನೆನೆನೆನೆದು ಶೋಕವಾವಕನರ್ದೆಯೊಳ್ ಮಣಿಯದೆ ದಳ್ಳಿಸೆ ಕಣ್ಗಳ ಪೊಣರಿಂ ಕಣ್ಬನಿಗಳುಣ್ಮೆ ದೆಸೆಗೆಟ್ಟಿರ್ದಳ್ (ಕುಂರಾಪಾ. ೦೩-೬೬); ಪೊಣರದೆ ಮದನನ ಡೊಣೆಗಳ ಪೊಣರದೆನಲ್ ನಂಬಿ ಕೇಳ್ವುದಾ ಯುವತಿಶಿಖಾಮಣಿಯ ಕಿಱುದೊಡೆಯನೀಕ್ಷಿಸಿ ಮಣಿಯದುರಾರ್ ಮದನನುಸುವ ಮೋಹನಶರದಿಂ (ಜಗ೦. ೦೦-೨೩). ೩. ಕಾಂತಿ; ಹೊಳಪು; ಶೋಭೆ: "ತೊಳಗು, ಬೆಳಗು . . . ಪೊಣರ್, ಮಿಂಚು, ಡಾಳಂ, ಪೊಂಗರ್, ತೊಳಪಂ, ಮಸೆ—ಈ ೧೪ ಕಾಂತಿ" (ಕಚಸಾ. ೩೩-೨೦೨). ೪. ಯುದ್ಧ; ಕಾಳಗ; ಕದನ: "ಮೊನೆ ಪೊಣರ್ ಕೊಳುಗುಳಂ ಬಂಡಣಂ ಜುದ್ದಮೆಂದೆನೆ ಕಾಳಗಕ್ಕೆ ನಾಮಂ" (ಕನ್ನಕೈ. ೪೦). **ಪೊಣರು**₂ : ೩. "ತೊಳಗನೆ ಮಿಂಚುಗೆನೆ . . . ಕಳೆ ಪೊಳೆವು ಪೊಣರು ಮಸೆಯೆನೆ ತಳವಮೆನಲ್ ಕವಿಗಳಿಂದೆ ಕಾಂತಿಯೆನಿಪ್ಪಂ" (ಕಂಕಂ. ೧೦೦). ೪. "ಕೊಳುಗುಳ ಬಂಡಣಂ ಜುದ್ದ ಮೊನೆ ಪೊಣರು ಕಾಳಗಕ್ಕಳವಟ್ಟ ನಾಮ" (ಕಬ್ಬಸಂ. ೪೦).

[<ಪೊಣರ್₁. / ತಮಿ. ಮಲ. ಪುಣರ್]

**ಪೊಣರಟು** (ಕ್ರಿ). ಜೊತೆಗೆಡು ; ಅಗಲು ; ಬೇರೆಬೇರೆಯಾಗು : ಇನರಥಹತಿಯಿಂ ನೆಗೆದ ಗಗನಧಾತುಸ್ಥಲೀರಜಂಗಳಿಂ ರೂಪಱಿದತ್ತೆನೆ ಸಂಜೆಗೆಂಪನುಱಿದಿರೆ ಕನಲ್ದು ಪೊಣರಟುದುವೊಡನೆ ಕೋಕಯುಗಂಗಳ್ (ಜಗ೦. ೦೩-೯೬); ಇನಿಯಳ್ ಪೊಣರಟಿದೊಡದಂ ನೆನೆನೆನೆದುಂ ಸುಯ್ದು ಸುಯ್ದು ಬಲ್ದಳ್ತಳ್ಬಿನಿಯಬ್ಬಿನಿದಪ್ಪದೆ ನೋಡಿ ನೋಡಿ ಜಾನಿಸಿದುದ ತುಲಶೋಕಂ ಕೋಕಂ (ಜಗ೦. ೦೩-೯೭). [ಪೊಣರ್₂ + ಅಟು₁]

**ಪೊಣರಿಚು** ' ಪೊಣರ್ಚು ' ನೋ.

**ಪೊಣರಿಸು** (ಕ್ರಿ). ಕಾದಿಸು ; ಯುದ್ಧಮಾಡಿಸು ; ಹೋರಾಡಲು ಪ್ರಚೋದಿಸು : ಗಣನೆಗೊಳಲ್ಕದೇಂ ನೆರಪಿದಂ ಮದನಂ ಕದನೋತ್ಸವಕ್ಕೆಮೇಣ್ ಪೊಣರಿಸಲೆಂದು ಪೋರಿಸುವನಲ್ಲದೊಡೇಂ ಪೆಱಸಾರದಂತೆವೋಲ್ ಬೆಣೆಯನಮರ್ಚಿ ಪೂಣ್ದಪನಿದೆಂಬಿನಮೀಂ ಬಗೆಪಂದುದಿಂದು ಸಂದಣಿಸುತೆ ಗುಂಬದಂಬಟೆವೆಯಲ್ಬಟಿಯಿಂ ಗಣಿಕಾಕದಂಬಕಂ (ಕಳಂ. ೬-೧೩೧).

[ಪೊಣರ್₁ + ಇಸು₃]

**ಪೊಣರು**₁ ' ಪೊಣರ್₁ ' ನೋ.

**ಪೊಣರು**₂ 'ಪೊಣರ್₂' ನೋ.

**ಪೊಣರ್ಕೆ, ಪೊಣಕೆ, ಹೊಣಕೆ, ಹೊಣಿಕೆ, ಹೊಳಕೆ$_1$** (ನಾ). ೧. ಜೊತೆ ; ಜೋಡಿ ; ಯುಗಳ : ಗುಣಾಗ್ರಣಿ ದಿನೇಶವಾಯುಯುಗಳಂ ಪೊಣರ್ಕೆಯೊಳ್ ಕೀಱಿ ಬಂದೊಡೆ . . . ಕೀಳ್ವರೋದ್ಧತರತಂ (ಛಂದೋಂಬು. ೨–೦೩೮). ೨. ಯುದ್ಧ ; ಕಾಳಗ ; ಹೋರಾಟ : ಇರೆ ಭದ್ರಿಸಿದೊಂ ಜವನನುವರಕ್ಕಮಿದಿರ್ಗಂ ಪೊಣರ್ಗಂ ಸುಗಿದವೊಲಾ ಹರಿಯಂ ಮೂದಲಿಸಿ ಚಲಂಬೆರಸಿ ನಿರಾಕರಿಸಿ ಹರಿಯನಿಱಿವುದು ಮೊಗ್ಗೇ (ಶಾಂತಿಪು. ೪–೦೮೭); ಬಲವಿರೋಧಿ ವಜ್ರಂಗೊಳೆ ದಾನವರಿಪು ಚಕ್ರಂಗೊಳೆ ಕೌರವಾರಿ ಗದೆಗೊಳೆ ಪೊಣರ್ಕೆಗಾವಂ ನಿಲ್ವಂ (ಕಚಂದ. ೦೩೭ ಪ್ರಯೋ); ಕ್ಷತ್ರಿಯರ್ಗೆ ದಿಮ್ಮಿದರೊಳ್ ಪೊಣರ್ಕೆ ಸಲ್ಲದೆಂದುಂ (ಅದ್ಭು.ಕ. ೩೨–೨೨). ೩. ಸ್ಪರ್ಧೆ ; ಪೈಪೋಟಿ ; ಮೇಲಾಟ : ನೆತ್ತವನಾಡಲೀ ಘನಸುವೃತ್ತಪಯೋಧರೆಯೊಳ್ ಪೊಣರ್ಕೆ ಕೀಳತ್ತಳಗಂ ದಿಟಂ (ವೀ:ಬಿಷ್ಣು. ೪–೫೩). **ಪೊಣಕೆ** : ೨. ತಂದಪೆ ನಾ ಸೇನೆಗಳಂ ಚಾದದ ಕಾಲ್ಗಂದಿ ಕುದುರೆ ತೇರಾನೆಗಳಂ ಪೊಣಕೆಯ ಬಂಟರಂ (ಹಾಲಾಸ್ಯ. ೨–೦೪–೨೩). **ಹೊಣಕೆ** : ೧. ಭಟರು . . . ರಣ ಭಯಂಕರವಾಗಲು ಹೊಣಕೆಗಳಿಂದಲಿ ಹೊಕ್ಕಱಿದಾಡ್ದರು (ತ್ರಿಪುರ. ೬–೪೩). ೨. ಸೆಣಸು ಗಡ ನಮ್ಮೊಡನೆ ಸಲೆ ಟೆಂಠಣಿಸುವರು ಗಡ ಬವರಕೋಸುಗ ಹೊಣಕೆ ಗಡ ನಮ್ಮೊಡನೆ (ಕುಮಾರವ್ಯಾ. ೦೫–೬೦) : ಬರಸಿಡಿಲುಗಳ ಸಮೂಹವಬ್ಬರಿಸುತ ಗಿರಿಶಿಖರಗಳ ಹೊಯ್ವಂತೆ ಬಿರುದಿನ ಹೊಣಕೆಯ ಹೊಂತಕಾಱಗಳಾಗ ತಱುಬಿದರರಿವಾಹಿನಿಯ (ಕಂಪಿಲ. ೦೫–೨೫). ೩. ಬಾಲಕರು . . . ಚೆಂಡಿನ ಹೊಣಕೆ ಚಿಣಿಕೋಲಾಳು ಗೊತ್ತಿನ ದಾಂಡೆಯಾನೆ ನಾನಾವಿನೋದದಲಿ . . . ಆಡಿದರು (ಕುಮಾ.ಕ. ೬–೦); ತವಂತವಾಗೆ ಹೊಣಕೆಯಲಿ ತೋರಿದರಮಿತಬಲಸನ್ನಾಹಗಳ ಸಂಭ್ರಮದೊಳೆಪ್ಪತ್ತೇಳು ಕೋಟಿ ಕಿರೀಟವರ್ಧನರು (ಅಹಂಸಾ. ೪–೨–೨೭). ೪. ಹೊಂದಿಕೆ ; ಸೇರಿಕೆ ; ಕೂಡಿಕೆ : ಈ ಸಿದ್ಧಾಂತಕ್ಕೆ ಎಣಿಕೆಯ ಕಣಿಕೆ ಮಾತ್ರವೇ ಕಾರಣವೋ ಆಧಾರದ ಹೊಣಕೆಯೂ ಇದೆಯೋ ಎಂದು ಕೇಳಬಹುದು (ಬಾಕೋಣ. ೭೫). ೫. ಕೂಟ; ಸಂಭೋಗ : ಹೊಣಕೆಗೆ ಹೋರಿದಲ್ಲಿ ವಾತೆಯರ ಮನೆಯಾಸೆ ಉಂಟೆ ಘನತರವಪ್ಪ ಪರಮದಾಸೋಹಿ ತಾನಾಗಿ ಅಲ್ಲಿ ಅನುಪರವನಱಿಸಲುಂಟೆ (ಸಕಸ. I, ೩೩೦–೦೨೦೭). ೬. ಎಣೆ ; ಸಾಟಿ; ಸರಿ : ವರರೂಪಿನೊಳು ರತಿಗೆ ಹೊಣಕೆ ಸೌಭಾಗ್ಯದೊಳು ಸಿರಿಗೆ ಹೊಯಿಕೈ (ಶಶಿಶಾ. ೦–೪೪). ೭. ಶೌರ್ಯ ; ಪರಾಕ್ರಮ : ಹೊಣಕೆಯುಳ್ಳಭಟರೊತ್ತರಿಸಿದರ್ಕಱಿಸಿದ ಕರ್ಣಿಕವಳಿಯ ಸಬಳದಿಂ ಸಿಕ್ಕಿದರ್ ಚಕ್ಕಿದರ್ಕಣಿಕೆ ಕುಂತದಿ ಕಡಿದರಸಿಗಳಿಂ ಮಸೆಗಳಿಂದರುಣಜಲ ಧಾರೆವರಿಯೆ (ಕಂಠೀಪ್ರ. ೦೩–೪೪). ೮. ಪ್ರತಿಜ್ಞೆ; ಶಪಥ : ಭಾಷೆಯತಿಬಳರು ಹೊಣಕೆಯಿಂದಲೇ ಹಿಂದ ಹಾರದಿರಣಕಿಸುವ ಮಾತಿಲ್ಲ ದಿವಿಜರ ಗಣಿಕೆಯರು ಬಯಸುವರು ನೂಕುವದೆಂದು ಸಾರಿದರು (ಕುಮಾ.ಭಿ. ೪–೩೪); ಅಣಕಿಸುವ ಬಾಧಕರ ಬಾಯನೆ ಟೊಣೆದು ಬಸವನ ಭಕ್ತಿ ಭಾರದ ಹೊಣಿಕೆಯನೆ ಹುಂಕೊಂಡು ಪೂರೈಸಲಿಕೆ ಬೇಕು (ಪ್ರಭುಲಿಂ. ೨೨–೩೦): ಹೊಣಕೆಗಳ ತಡಹುಗಳ ಕಲಿತನದ ಕಡುಹುಗಳ ರಣದವಕದಿಂ ಕುದಿಯುತಿಹುದು ಹಂಸಧ್ವಜನ ಪರಿವಾರವನುದಿನದೊಳು (ಜೈಮಿ. ೦೦–೪೨). **ಹೊಣಿಕೆ** : ೧. ಕನಕದ ಗುಂಡು ಪವಳ ಎರಡನೆ ತಂದು ಹೊಣಿಕೆಯಲ್ಲಿ ಇಟ್ಟು ಪೋಣಿಸಲು ಜನರಿಗೆ ಪೊಳೆವದು ಎಂದಿಗಾದರು ಮೋಹನವಾಲೆಯಲ್ಲದೆ ಪ್ರತಿಮೆಸರೆ (ಪಿಜಾಸು. ೨೮–೩). ೬. ತೆಂಗಿನಕಾಯಿನ್ಯಾಗಗಟ್ಟಿಯ ಬಿಂಗಡಿಸಿ ಹೊಣಿಕೆಯಲಿ ರಾವುತ ಲಂಘಿಸುತ ನೋಡಿದ್ದ ಯಿಪಟಿಯಲಿರಿದ ತೆರನಂತೆ (ಜಾಕಸಿಂ. ೦೮–೮೦). **ಹೊಳಕೆ$_1$** : ೨. ಹೊಳಕೆಗೆ ಹೊಸವೀಳೆಯವೀಯೆಂಬಗ್ಗಳಿಕೆಯ ಪಂತದ ಪಲವಾತುಗಳಂ ಗಳಪುವ . . . ಭುಜಬಲಶಾಲಿಗಳ್ (ಜಯಕಾ. ೬–೨೭): ಹೊಳಕೆಯ ಹೊಂತಕಾಱಗಳು ಹೋರಾಟದ ಕಲಿಗಳು ಬಿರುದಿನ ಭಟರು . . . ಎಳಸಿದರವನ ಪೌಜಿನೊಳು (ಕುಣಶಾಂ. ೦೨–೩೪) ; ಇಂತಪ್ಪ ಬಿರುದಿನ ಹೊಳಕೆಯ ಭಟಗಳು ಮುಂತಾರ್ಧಟಿಸುತ್ತೈತರಲು (ಕೋಣಜ. ೩೩–೩೫). ೩. ಬಾಣದ ಹೊಳಕೆಗಳ ಹೋರಾಟ ಬಿಡುವಿಲ್ಲಾಧುರುಚುಱುಭಟರ (ಶಿಶು.ಶಿ. ೬–೬೩); ತಂದೆ ಮಕ್ಕಳು ಬೆರಸಿ ಹೊಯ್ದಾಡಿದರು ಮೊದಲಿ ಸುತ್ತ ಹೊಳಕೆಯಲಿ (ಅಂಬಿಗ. ೨೦–೦೪); ಹೊಳಕೆಯಿಂ ವೀರವಾದಗಳೆಸೆವ ಚರರ ಪದಗತಿಗಳಾ ದುಂದುಭೀಭೀಂಕಾರಭರಕಳುಕಿ ನಮಿಸಲ್ಕೆ ಕಜರಾಜಮಗಳಿಗಳ ತೆರದೆ ಖಣಿಖಟಿಲೆಂಬ ನಾದ ಮಹಾಧರವದಿ ತುಂದಿ ತೆಕ್ಕಸೆ ರಭಸದಿ (ಬಂಟಾಲ. ೦–೬–೦೩). ೮. ಗುಂಪು ; ಸಮೂಹ : ತಿಳಿದ ಕಾರಿರುಳೆರಕವೋ ಮೋಹ ಖಳಜನದ ಹೃದಯಾಂಧಕಾರದ ಹೊಳಕೆಯೋ ತಾವೆನುತಿರಲು ನಡೆತಂದವಾ ದನುಜ (ಕುಮಾ.ಸ. ೫–೨೦): ಅತ್ತ ದಿಪ್ಪಲಭೂಪ . . . ಹೊಳಕೆಯ ರಾವುತರು ಎಳೆವ ಬಾವುಲಿ ಬೊಂಡೆ ಕುಳಕನ ಕುಲದಂಕೆಯೊಪ್ಪಿಹನು (ಕೋಣಜ. ೩–೭೪).

**ಹೊಣಿ ಮಾಡು** = ಸಂಗಡಿಸು ; ಅಣಿಗೊಳಿಸು : ಕಣೆಯ ಕಿದ್ದಾತಗಱಿಯ ಕಟ್ಟುತ . . . ಹದೆಯನಳವಡಿಪ ರಣಕೆ ಸುಭಟರ ಹೊಣಿ ಮಾಡುವ ತ್ರಿಣಯಪುರವನು ನೋಡಿ ಕಾಲವನೆಣಿಪ ತೆಱದಲಿ ನೋಡುತಿಹ ರಣಧೀರ ಸೌಮಿತ್ರಿ (ಲೌಕಿಕ. ೦೭–೨೦). [ಪೊಣರ್$_1$ + — ಕೆ]

**ಪೊಣರ್ಗಳಸ** (ನಾ). ಜೊತೆಯಾಗಿರುವ ಕಲಶ ; ಜೋಡುಕಲಶ : ಪೊಱವಾಱ ಮೆಟ್ಟುವಂತುಬ್ಬರಿಪ ಮುಗುಳ ಗೊಂಚಲ್ಗಳಂ ದೆಟ್ಟಿ ಪೂವಂ ತಿಱಿವುದ್ಯಚ್ಚಂದ್ರಬಿಂಬಾನನೆಯ ಘನಕುಚದ್ವಂದ್ವಮಂ ಪೊತ್ತು ಚೆಲ್ವಿಂದೆಱಗುತ್ತಿರ್ಪುಜ್ವಲನ್ಮಾಧವಿಮಧುನೃಪವೇಟ್ಟಂದೊಡಾನಂದದಿಂದಂ ಮಿಱುಗುತ್ತಿರ್ಪನ್ನೆಗಂ ಕನ್ನಡಿ ಪೊಣರ್ಗಳಸಂಬೊತ್ತವೋಲ್ ಪೆತ್ತುದಿಂಬು (ಲೀಲಾವ. ೦೩–೭೨). [ಪೊಣರ್$_1$ + ಕಳಸ$_1$ ( < ಕಲಸ)]

**ಪೊಣರ್ಚಿಸು** (ಕ್ರಿ). ಕಾದಾಡುವಂತೆ ಮಾಡು ; ಹೋರಾಡಿಸು : ಪೊಣರ್ಚಿಸಿದಪನಾನೆಯಂ ಮಾವಟಿಗನಿನರಸಂ (ಶಬ್ದಾನು. ೩೪೦ ಪ್ರಯೋ). [ಪೊಣರ್ಚು + — ಇಸು$_1$]

**ಪೊಣರ್ಚು, ಪೊಣರಿಚು** (ಕ್ರಿ). ೧. ಜೊತೆಮಾಡು ; ಸೇರಿಸು; ಹೊಂದಿಸು : "ಪೊಣರ್ಚು—ಸಂಯೋಗೇ (ಬೆರಸು)" (ಧಾತು); ಸುರಸುದತೀಕದಂಬಕದ ಗಾಂದರದಿಂ ದನಿಯೊಳ್ ದರಸ್ಮಿತಾಂಬುರುಹಮನೊತ್ತಿಚುಂಬಿಸುವ ತುಂಬಿಯ ಗಾವರಮಂ ಪೊಣರ್ಚೆ (ಅನಂತಪು. ೪–೦೨೭). ೨. ಉಂಟಾಗು ; ಒದಗು ; ಸಂಭವಿಸು : ನೀರದಮಿಟಂಗೆ ವಿದ್ಯುನ್ಮಾರಿಯ ವಿರಹಂ ಪೊಣರ್ಚೆ ಬಡವಾಗಿ ಕರಂ ದೂಱಿಸಿ ಬೆಳರ್ತೆ ತೆಱದಿಂ ಶಾರದಜಳಧರದ ತುಱುಗಲೊಗೆದುವು ನಭದೊಳ್ (ಲೀಲಾವ. ೫–೨೦). ೩. ಮಾಡು ; ಉಂಟುಮಾಡು ; ಒದಗಿಸು : ತೆತ್ತುತನಕ್ಕೆ ತೆತ್ತುತನಮಂ ಪುಸಿನಲ್ಮೆಗೆ ಮೋದಿ ನಲ್ಮೆಯಂ . . . ಉಕ್ಕಿವಕುಕ್ಕಿವಗೆಯ್ತವುಂ ಪೊಣರ್ಚುಗೆತ್ತು ಮುಂಬಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೮೩ ಶಬ್ದ್ರ); ಬೆಚ್ಚದೆ ಬೆದಱದೆ ವೊಲೆಯಂ ಸಾರ್ಚಿದ ಮಱವೆಸು ಸುಟಿಪ ಮಾನಿಸರುಲಿಪಂ ಮುಚ್ಚಿದ ಪುಲ್ಲೆಗಳಲ್ಲಿ ಪೊಣರ್ಚುತ್ತಿರ್ದಪುವು ಶಾಂತರಸಪರಿಣತೆಯಂ (ಸೂಕ್ತಿಸು. ೩–೦೪೦). ೪. ನೆರವೇರಿಸು ; ನಡೆಸು ; ಆಚರಿಸು: ಜನಪದಪದ್ಮದೊಳ್ ಮಣಿಕಿರೀಟತಟಂ . . . ಪರಿಶುದ್ಧಿಯೊಳ್ ತ್ರಿಕರಣಂ ಸಮಸಂದಿರೆ ಮುಖ್ಯಸೌಖ್ಯಭಾಜನನಮರಾ ತ್ರಿಲೋಕತಿಲಕಂಗೆ ಮಹಾಮಹಮಂ ಪೊಣರ್ಚಿದಂ (ಶಾಂತಿಪು. ೬–೩೦). ೫. ಕೈಕೊಳ್ಳು ; ಪ್ರಯೋಗಿಸು : ಇಂತೀ ಪೇಟ್ದ ಪದನಾಱುಂ ಸಂಧಿ ಮಾಚಸ್ತಿನೀತಿಯಲ್ಲಿಕರ್ಗಂ ಸೋಮದೇವನೀತಿಯಲ್ಲಿಕರ್ಗಂ ಇವಱಲ್ಲಿ ನಾವಾವ ಸಂಧಿಯಂ ಪೊಣರ್ಚುವೊಡಮರಿಮರ್ದನನೊಡಂಬಡುವನಲ್ಲ (ಪಂಪಭಾ. ೨೨೦–೫). ೬. (ಯುದ್ಧ, ಜಗಳ ಮೊದಲಾದುವುಗಳನ್ನು) ಹೂಡು; ಒಡ್ಡು ; ಏರ್ಪಡಿಸು : ಒರ್ವ ಗಂಧರ್ವನೊಳ್ ಚಿತ್ರಾಂಗದಂ ದ್ವಂದ್ವಯುದ್ಧಮಂ ಪೊಣರ್ಚಿ ಕುರುಕ್ಷೇತ್ರಮಂ ಕಳಂದೇಟ್ದು ಕಾದಿ ಸತ್ತೊಡೆ (ಪಂಪಭಾ. ೦–೬೩ ವ);

ಅಂತಚಿಂತ್ಯಯುದ್ಧಂಗೆಯ್ದು ಲಕ್ಷ್ಮಣನಂ ಗೆಲಲ್ ನೆಱೆಯದೆ ವಿದ್ಯಾಯುದ್ಧಮಂ ಪೊಣರ್ಚೆ ದಿವ್ಯಾಸ್ತ್ರಮನಭಿಮಂತ್ರಿಸಿಕೊಂಡಿಸುವುದುಮಂ (ಶಂರಾಪು. ೧೪-೧೩೯ ವ); ಅವನ ಸತಿ ಪುರುಡಿ ನೆವದಿಂ ಬವರಮನೆ ಪೊಣರ್ಚೆ ಮಾರಿದತ್ತಾಖ್ಯೆ ಮಹಾಹವಶೀಲೆ ತನ್ನ ಮನೆಯಿಂದವೆ ಪೊಱಮಡಿಸಿದ[ಳು ಕ]ನಲ್ದು ಪದ್ಮಾವತಿಯುಂ (ಪುಣ್ಯಾಸ್ರ. ೨-೪೩). ೭. ಯುದ್ಧಮಾಡು ; ಕಾದು ; ಸೆಣಸು : ತಲೆಗಾಯಿಪ ಭಟನಂ ಪೊಣರ್ಚೆ ಪೊಡೆದಿಕ್ಕೀ ದ್ರೋಹನಂ (ಅಪಂಪು. ೧೧-೫೬) ; ಹರಿಹರಪದ್ಮಜಾದಿಗಳ ನೋವದೆ ಕಂತು ಲತಾಂತಬಾಣಮೊಂದೆರಡಱನೆಚ್ಚು ಗೆಲ್ದ ಜಯದಗ್ಗದ ಸುಗ್ಗಿಯ ಮೊಟ್ಟಗಿದೆಂದು ಬಂದಿರದೆ ಪೊಣರ್ಚೆ ಸೋಲ್ತು (ಕುಶ್ಯಪು. ೦-೦೨); ಕಲಿ ರಾಜಹಂಸನಶ್ವವನೊಸೆದೇಱಿಯೆಕ್ಕತುಳದಿಂ ಪೊಱಮಟ್ಟರಿಯೊಳ್ ಪೊಣರ್ಚಿದಂ (ದಶಕು. ೦-೬೩). ೮. ಪೈಪೋಟಿ ನಡೆಸಂ ; ಸ್ಪರ್ಧಿಸು : ತನುವಿದುವೊಂದನುಳ್ಳ ನಭದೊಳ್ ಶಿಶುಕೇಸರಿಯೊಂದನುಳ್ಳ ಕಾನನದೊಳದೊಂದು ಕುಟ್ಮಲಮನುಳ್ಳ ಸರೋವರದೊಳ್ ಪೊಣರ್ಚೆ ನಟ್ಟನೆ ದೊರೆಯಾದುದೀ ಬಾಲವುುವಿದಾ ಶಿಶುಪೂರ್ವನಿನೆಂಬಿಸಂ ಜಗಜ್ಜನಮತಿಮುಗ್ಧಬಾಲನರಪಾಲಕಮಾದುದು ಚಕ್ರಭೃತ್ಕುಲಂ (ಆದಿಪು. ೪-೮೨); ಗಣದದೊಳೇಂ ಕರುಮಾಡಂ ಪೊಣರ್ಚುವೊಡೆ ನೆಗಟ್ಟ ದಿವಿಜರಾಜವಿಮಾನಕ್ಕಣೆ ಪೋಲ್ವೆ ಸಮಂ ಸದೃಶಂ ತೊಣೆ ತೋಡನುಸಾರಿ ಸಾಟಿ ಪಾಸಟಿಯೆನಿಕುಂ (ಸುಕುಮಾ. ೦೮-೫೦). **ಪೊಣರಿಚು** : ೭. ಪೊಣರಿಚುವನಾವ ದಕ್ಷಂ ನೋಳ್ಪೆ ವಿದುವೆ ಸನ್ನಾಹಭೇರಿಯ ಪೊಡೆಯಿನ್ನೆ (ಶಕುಪು. ೪-೯-೦೩).

**ಪೊಣರ್ಚುವ ಬಲೆ**=ಒಂದಕ್ಕೊಂದು ಕೂಡಿಸಬಹುದಾದ ಒಂದು ಬಗೆಯ ಬಲೆ (?) : ತಡಿಕೆವಲೆ ಕಣ್ಣವಲೆ ನಿಟ್ಟಡಕಿಲ್ವಲೆ ಗೂಂಟವಲೆ ಪೊಣರ್ಚುವ ಬಲೆ ಪುಂ ಬಿಡುವಲೆ ನಡುವಲೆ ತಡೆವಲೆ ಸಿಡಿವಲೆ ನಿಡುವಲೆಗಳೊಪ್ಪಿದವು ಲುಬ್ಧಕರೊಳ್ (ಗಂಶ. ೦-೮೦). [ಪೊಣರ್$_1$ + ‑ ಚು$_1$]

**ಪೊಣರ್ಪೊಳಿ** (ನಾ). ಒಂದು ಸ್ಥಳದ ಹೆಸರು : ತಸ್ಯ ಸೀಮಾನ್ತರಾಣಿ ಬಡಗಣದರೆ ಪೊಣರ್ಪೊಳಿ ಬಡಗಣ ಪಡುವಣ ಕೊನೆದು ಪಾಣತ್ತಿಗಲ್ಲು (ಮೈಆ. ೧೯೨೭. ೦೨೨-೫೯; 808). [?]

**ಪೊಣರ್ವಕ್ಕಿ** (ನಾ). (ಹಗಲಿನಲ್ಲಿ) ಜೊತೆಯಾಗಿರುವ ಹಕ್ಕಿ; ಚಕ್ರವಾಕಪಕ್ಷಿ; ಜಕ್ಕವಕ್ಕಿ : "ಕೋಕಂ ರಥಾಂಗಂ ಪೊಣರ್ವಕ್ಕಿ ಚಕ್ರಂ" (ಬಸ್ತುಕೋ. ೪೨-೦೭); ಕಾನೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಂಕುಂದಂ ಬಲಾಕೆ ಲಾವುಗೆ ಸೇನಂ (ಕಾವ್ಯಸಾ. ೦೦೪೪ ಶೂದ್ರಕ) ; ಮದನನ ಪೆರ್ಗಿಚ್ಚಂ ಮುಗ್ಗಿದ ಪೊಣರ್ವಕ್ಕಿಗಳ ಹೃದಯಸಂಕುಳದಿಂದುಣ್ಮಿದ ಕರ್ಬೊಗೆಯೆಂಬಿನೆಗಂ ಪುದಿದೆತ್ತಂ ಮರ್ಬಿನುರ್ಬು ಪರ್ಬಿತ್ತಾಗಳ್ (ಕಾದಂಬ. ೦೪೦); ನಲ್ಮೆಯ ಪೊಣರ್ವಕ್ಕಿಯ ನುಡಿವಕ್ಕಿಯ ಬೆಳುದಿಂಗಳ ಹಕ್ಕಿಯ ನಿಡುಗಣ್ಣಜವಕ್ಕಿಯ ಬಳಗಂ ಬಳಸಿದುದಾ ನೃಪಸತಿಯಾ (ಜಯುಕಾ. ೨-೦೮). [ಪೊಣರ್$_1$ + ಪಕ್ಕಿ]

**ಪೊಣರ್ವೆಟ್ಟು** (ನಾ). ಜೊತೆಯಾಗಿರುವ ಬೆಟ್ಟ : ಜೋಡಿಬೆಟ್ಟ : ಮೊಲೆ ಪೊಣರ್ವೆಟ್ಟು... ಕೋಮಳತನುಯಷ್ಟಿ ಕಲ್ಪಲತಿಕಾಂಕುರಮೊಳ್ಪುಡಿಸೋಗೆ ಮನ್ಮಥಾನಳಶಿಖಿ ಬೇಗೆಯಾಗೆ ಮದನಾಟವಿಯಂತೆವೊಲೊಪ್ಪಿ ತೋಱಿದಳ್ (ಕಾವ್ಯಸಾ. ೬೦೨ ಶೂದ್ರಕ).

[ಪೊಣರ್$_2$ + ಬೆಟ್ಟು$_2$ (< ಬೆಟ್ಟ)]

△**ಪೊಣಱ್** 'ಪೊಣರ್$_1$' ನೋ.

**ಪೊಣೆ$_1$** (ಕ್ರಿ). ಹೊಡೆ; ಪೆಟ್ಟುಕೊಡು ; ಏಟುಕೊಡು : ಪೊಣೆದೋರೋರ್ವರನೆಚ್ಚಂಬುಗಳು ಮಧ್ಯರಣರಂಗದೊಳು ಕತ್ತರಿಸುತ ಬಣಬೆಯ ನೊಡ್ಡಿದಂತಾಗಲು ಆಟಿಕೇತುವಣುಗನ ಕೈಯಂಬು ತೀರೆ (ವೀಖಂಸಂ. ೨೮-೮೭); ಬಾಯಿಂ ಪೊಣೆದು ವಿರಿಂಚಿಯ ಕಾಯಜಪಿತನೆರ್ದೆಯನೊದೆದು ಸುರಪತಿಯಂಗಕ್ಕಾಯತಭಗದಂಕಿತಮಂ ಮಾಯುದೊಳಾಗಿಸಿ ಮಹೇಶನಂಗದೊಳೆಸೆದಂ (ಹಮ್ಮಿರ. ೬-೨೮); ಮಾರ್ಗಣೆಗಳಂ ಪಣೆಯೊಳಣೆವುತಂ ಪೊಣೆವುತಂ . . . . ತೇಕರ್ದುರೆಗಳ ಭಟರನಟ್ಟುತುಂ ಮೆಟ್ಟುತುಂ ವೃಷಭಂ ಪ್ರಹಾರಿಸಿದನು (ಚಿಪು. ೪೪-೦೮). 'ಪೊಣೆಗುಂಡು' ಪರಾ.

**ಪೊಣೆ$_2$**, **ಹೊಣೆ** (ನಾ). ೧. ಜವಾಬ್ದಾರಿ; ಉತ್ತರದಾಯಿತ್ವ : 'ಪೊಣೆಕಾಱ' ಪರಾ. ೨. ಹೊಣೆಗಾರಿಕೆಯನ್ನು ವಹಿಸಿಕೊಂಡ ವ್ಯಕ್ತಿ; ಜವಾಬ್ದಾರ ; ಹೊಣೆಗಾರ : ನರನ ಜೀವನಕ್ಕೆ ಪೊಣೆ ದೇವಪುರಲಕ್ಷ್ಮೀಶನು (ಜೈಮಿಭಾ. ೨೩-೬೪). ೩. ಕರಾರುಪತ್ರ ; "ಜಾಮೀನು" (ಗಂಗಾಪು. ೨೦೭). ೪. ಕರಾರುಪತ್ರವನ್ನು ಬರೆದುಕೊಟ್ಟವನು; ಜಾಮೀನುದಾರ : (೬). **ಹೊಣೆ** : ೧. ಹಣೆಯ ಹೊಣೆಯ ತೋಱಿ ಉದರವ ಹೊರೆವ ನಿಮ್ಮ ಮಱೆಯಲಡಗಿಪ್ಪ ಹಡಪಿಗ ನಾನಯ್ಯ (ಬೂವ್ಯಸಂ. ೯೩-೧೧); ಧರ್ಮಜ ಹೊಗಳು ಹೊಣೆಯನು ವಚನಿಸೊಡ್ಡವನಿದು ವಿನೋದವಲೆ (ಕುವ್ಯಾಸ. ೧೭-೪೭); ಅವನ ಹೊಣೆ ನಿಮ್ಮ ಹೊಣೆಯೇ ಆಗಿದೆ (ರಂಗರೋ. ೧೦); ದೊಣೆಗೆ ಹೋದರೂ ಹೊಣೆ ತಪ್ಪದು (ಗಾದೆ). ೨. ಶಿವನೇ ಶಂಕರಾ ಸ್ಥಾಣುವೇ ಜಲಂಧರಾಸುರವಿಜಯ ರಕ್ಷಿಸು ರಕ್ಷಿಸು ನಮಃ ಶಿವಾಯ ನೀನೆ ತೊಣೆ ನೀನೆ ಹೊಣೆ (ಪಾಗೀರ. ರೇ. ೨೬೭-೯); ಬಾಳಿಸುವದಕೆ ಹೊಣೆ ನಾನು ಭಕ್ತನಾಗು ಸಮಸ್ತವಸ್ತುವ ಯುಕ್ತರಾಜ್ಯವನೀವೆನು (ಬಸಪು. ೨೭-೫೪); ನಿಮ್ಮಾಯುಷಕೆ ಹೊಣೆ ತಾನು ಹೇಳಿತ ಮಾಡಿ ಬೇಗದಲಿ (ಕುವ್ಯಾದಶ್ರೀ. ೦೯-೩೭). ೩. ರಮಾದೇವಿಯವರನ್ನು ಹೊಣೆಯ ಮೇಲೆ ಬಿಡುಗಡೆ ಮಾಡಿಕೊಂಡು, ಗೋವರ್ಧನರಾಯನು ಅವರನ್ನು ತಮ್ಮ ಮನೆಗೆ ಕರೆದೊಯ್ದನು (ಸ್ವೋಂಅ. ೨೨೦). ೪. ಸರ್ವವೂ ಸಾಧ್ಯವಾದಡೆ ತಾನಿಲ್ಲ ಬಯಲಪ್ಪುದಕ್ಕೆ ಇದೇ ಚಿಹ್ನ ಹೀಗೆಂದು ನಂಬುವುದು ನಂಬದಿದ್ದರೆ ಚೆನ್ನಬಸವಣ್ಣನ ಹೊಣೆಯ ಕೊಡುವೆ ಕಾಣಾ (ಅವಪಂ. ೦೭೮-೭೯೯); ಮಾಱಿ ಹೋಗರು ನಾವು ಹೊಣೆಯುವರ್ಗೆಂದಾದಿರಾಜ ಪೊಕ್ಕಣೆಸಿ ಕೈಮುಗಿದ (ಶರತ. ೯೫-೮೮).

**ಪೊಣೆಯಾಗು**, **ಹೊಣೆಯಾಗು** = ಜವಾಬ್ದಾರಿಯನ್ನು ಹೊರು ; ಭಾರವನ್ನು ವಹಿಸಿಕೊಳ್ಳು : ಇಱಿಯಲ್ಬಲ್ಲೊಡೆ ವೀರನಾಗು . . . ತೆಱಬಲ್ಲಪೊಣೆಯಪ್ಪುದೈ (ಸೋಮೇಶ. ೭೭); ತಾಯೆ ಕೊಟ್ಟುದು ತಮಗೆ ತಾನದ ಕಾಯುವಗತಿಗನುಸಾರಿ ಯಾದವರಾಯ ಹೊಣೆಯಾಗಿರಲು ಲಕ್ಷ್ಯವೇ ದೈತ್ಯಕೋಟಿಗಳು (ಸಂಭಶ. ೨೩-೯೯); ಮಾಯೆಯು ನಿನ್ನ ಬಹುವಿಧದಿ ಕಾಡುತಲಿಹುದು . . . ಕ್ಷಿತಿಯ ಪೂಜ್ಯತೆ ಕೆಡಿಸುವುದು ಮುಂದೆ ಶತಜನ್ಮಂಗಳಿಗೆ ಹೊಣೆಯಾಗಿ ನಿಲ್ಲುವುದು (ಕುರಂದ. ೦-೫೨-೨); ಗಣಕನ ನೆರೆ ಹೊಲ್ಲ ಗಣಿಕೆ ಮುದಿಯಳು ಹೊಲ್ಲ ಕಣುಕಟ್ಟು ಹೊಲ್ಲ ಅಱದರಲಿ ಅರಮನೆಗೆ ಹೊಣೆಯಾಗ ಹೊಲ್ಲ (ಸರ್ವಜ್ಞ. ೭೪೭). **ಹೊಣೆಗೊಡು** =ಜಾಮೀನಾಗಿಸು ಹೊಣೆಯಾಗಿಸು ; ಜಾಮೀನು ಮಾಡು : ಹೊಣೆಗೊಡ್ಡಿ ದೊಡ್ಡಣ್ಣ ಚಿಕ್ಕಣ್ಣನವರ ಪೊಕ್ಕಣಸಿರಿ (ಭರತ. ೯೫-೮೭). **ಹೊಣೆ ಮಾಡು** = ೧. ಜಾಮೀನು ಕೊಡು; ಹೊಣೆಯಾಗು : ಆ ಪೊಂಗಳಿತ್ತವರೊಂದುದಿನ ನಿಲಿಸಿ ಗಾಜುಮಾಡುತ್ತಿರಲ್ಕಂಡು ಬರಲೀತನಂ ತೋಱವಪೆನೆಂದು ಶಿವಭಕ್ತನಂದದಿ ಬಂದು ಹೊಣೆ ಮಾಡಿ ಬಿಡಿಸಿ ತಂದು (ಗುರುಶಾ. ೧೩-೬೭). ೨. ಜವಾಬ್ದಾರನನ್ನಾಗಿ ಮಾಡು; ಹೊಣೆಗಾರನನ್ನಾಗಿ ಮಾಡು : ಅವನು ತನ್ನ ತಪ್ಪಿಗೆ ಬೇರೆಯವರನ್ನು ಹೊಣೆ ಮಾಡಿದನು (ರೂಢಿ). ೩. ಕಾದಿರಿಸು ; ಮೀಸಲಾಗಿಡು : ಅವನು ತನ್ನ ಪ್ರಾಣವನ್ನು ಒಡೆಯನ ಶತ್ರುಸಂಹಾರಾರ್ಥವಾಗಿ ಹೊಣೆ ಮಾಡಿದ್ದನಲ್ಲದೆ ಸ್ವರಕ್ಷಣಾರ್ಥವಾಗಿ ಎಂದೂ ಆಶಿಸಿದವನಲ್ಲ (ಕಂಠೀ. ೨೫).

[ದೇ. ‖ ತಮಿ. ಪಿಣೈ, ಪುಣೈ; ಮಲ. ಪಿಣ ; ತುಳು. ಪೊಣೆ, ಹೊಣೆ]

**ಪೊಣೆಕಾಱ**, ಪೊಣೆಗಾರ, ಹೊಣೆಕಾರ, ಹೊಣೆಕಾಱ, ಹೊಣೆಗಾರ, ಹೊಣೆಗಾಱ (ನಾ). ೧. ಜವಾಬ್ದಾರಿಯನ್ನು ಹೊತ್ತವನು ; ಭಾರವನ್ನು ವಹಿಸಿಕೊಂಡವನು ; ಜವಾಬ್ದಾರ : ಇನ್ನೇಕೆ ಬಹು

ಪ್ರಚಿಂತೆಯೆನಗಂ ಸಂಸಾರವಂ ಖಂಡಿಸಲ್ಪೊಣೆಕಾಱು ಪತಿ (ನೀ)ನಿರಲ್ಕೆವ ಗಣಾನಂದಾಬ್ಧಿಚಂದ್ರೋದಯಾ (ಶಂಕಶ. XVIII, ೬೬೪). **ಪೊಣೆಗಾರ :** ೨. "ಜಾಮೀನುದಾರ" (ಗಂಗಾಪು. ೨೦೭). **ಹೊಣೆಕಾರ :** ೧. ಎಲೆ ಭೈರವಾ ಕಾಶಿಯಲ್ಲಿದ್ದವರ ಮುಕ್ತಿಗೆ ನೀನು ಹೊಣೆಕಾರನು (ಕಾಶೀಖ. ೨೮-೪). **ಹೊಣೆಕಾಱ :** ೧. ಹೊಣೆಕಾಱನೊಪ್ಪ ಶ್ರೀಮಹಾದೇವಶರಣ (ಶಾಸಂ. ೦೯೩೦, ಉಡುಪಿ. ೩೦೦-೨೪ ; 1339) ; ತಲೆ ಪೋಪ ಬಳಿಗೆ ಕಾಲೆ ಹೊಣೆಕಾಱನೆಂದೇಬ ಗಾದೆಗೆ ಸಂದು ಮೇಲನಱಿಯದೆ ಬಂದು ಕಂಡನಾ ವೀರ ಶರಜಾಲದಿಂ ಪುದಿದ ರಣರಂಗವಂ (ಕಬ್ಬಿ. ೩೨-೨). **ಹೊಣೆಗಾರ :** ೧. ಆ ಸೆರೆಮನೆಯಲ್ಲಿ ನಡೆಯುತ್ತಿದ್ದ ಕ್ರೂರಕೃತ್ಯಗಳಿಗೆಲ್ಲ ಯಾರು ಹೊಣೆಗಾರರೊ ಅಂಥ ಇನ್‌ಸ್ಪೆಕ್ಟರ್ ಮತ್ತು ಮುಖ್ಯ ಕಾವಲುಗಾರರಿಗೆ ವಿನಯವಿನಮ್ರನಾಗಿ ವಂದನೆಯನ್ನರ್ಪಿಸಬೇಕಾಗಿತ್ತು (ಕ್ಷಿಪರು. ೦೯೯). 'ಹೊಣೆಗಾರಿಕೆ' ಪರಾ. ೨. "ಲಗ್ನಕಃ, ಪ್ರತಿಭೂಃ — ೨ ಹೊಣೆಗಾರ, ಜಮಿಾನ್‌ದಾರ" (ಸಿದ್ಧಾಂತಿ. ೩೦೯). **ಹೊಣೆಗಾಱ :** ೧. ತಾಯೆ ಬಾರೌ ತಂಗಿ ಗಂಧದ ವಾಯುವಿದೆ ಹೊಣೆಗಾಱನಾಗಿ ನವಾಯುಭೋಜನವಿಂದು ದೊರಕಿತು ಮನುಜಮಾಂಸದಲಿ (ಕುಮಾ.ಶ. ೯-೦೦) ; ಹುಟ್ಟಿಸಿದ ದೇವ ತಾ ಹೊಣೆಗಾಱನಾಗಿರಲು ಗಟ್ಯಾಗಿ ರಕ್ಷಿಪನು ಇದಕೆ ಸಂಶಯವಿಲ್ಲ (ಕಪಶ. ೩೦-೦). ೨. "ಪ್ರತಿಭೂಃ, ಲಗ್ನಕಃ — ಈ ೨ ಹೊಣೆ(ಗಾಱಂ)" (ಹಲಾಯು. ೭೨-೨೨೫). [ ಪೊಣೆ₂ + — ಕಾಱ ]

**ಪೊಣೆಗಾರ** 'ಪೊಣೆಕಾಱ' ನೋ.

**ಪೊಣೆಗುಂಡು, ಹೊಣೆಗುಂಡು** (ನಾ). ಒಂದು ಬಗೆಯ ಆಟ (?) : ℙ ಇದು 'ಪೊಡೆಸೆಂಡು' ಎಂಬ ಆಟವಿರಬಹುದು: ಪರಿವರಿ ಪಾಱುಂ ಬಳಿ ಮರದೆರಸಿ ಕುಳಿಲ್ಸೇಡು ಬಟ್ಟು ತಿಱಿಕಲ್ಲಟ್ಟುಂಗರೆ ಪೊ[ಕಾಕಾಂ. ಹೊ]ಣೆಗುಂಡೆಂಬಿವನಾ ಮುರಹರನಲ್ಲಲ್ಲಿಗಾಡುತುಂ ಬರಲ್ (ಜಗಪು. ೪-೪೪ ; ಕಾವ್ಯಸಾ. ೭೭೭ ನೋ). **ಹೊಣೆಗುಂಡು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಪೊಣೆ₁ + ಗುಂಡು ]

**ಪೊಣ್ಣನೆ** (ಅ). ಕೂಡಲೆ ; ತಕ್ಷಣ ; ತಟ್ಟನೆ : ಅಣ್ಣಾಜಿ ಬಹಾಗ ಕುಳಿತಿರಲಾಗದೇಳಣ್ಣಾಯೆಂದನು ಚಿಕ್ಕಮಗನ ಪೊಣ್ಣನಾ ಮಗನೆದ್ದನೊಡನೆ (ಶರಶ. ೧೭-೩೯).

§ **ಪೊಣ್ಣಪೊಣ್ಣನೆ** (ದ್ವಿರುಕ್ತಿ) : ಪೊಣ್ಣಪೊಣ್ಣನೆ ಕುಣಿಯೊ ಚಿಣ್ಣಯೌವನರಜಿಂದು ಕಣ್ಣ ಬಱಿವು ಹರಿಯಿತೆಂದು ಹೆಣ್ಣುಗಳೆಲ್ಲರು . . . ಲಿಂಗಣ್ಣಗಾರತಿಯನೆತ್ತಿದರು (ಕೋಟಶ. ೩-೦೦೭). [ಪೊಣ್₀ + — ಅನೆ₁]

**ಪೊಣ್ಮಂಚಿ** (ನಾ). (?) : ಅಂಚೆಮುಪ್ಪಳುಮಾಸು ಕೌಳುಡೆಮಲಗು ಪೊಣ್ಮಂಚಿಯು ಮೇಲ್ಗಟ್ಟು ಗಿಂಡಿ ಮಿಂಚುಮಡಿಗ ವೀಣೆ ಸಂಗಲಿಸಿದುವು ಲಾಪಂಚದ ಬೀಸಣಿಗೆಗಳು (ಶರಶ. ೦೫-೨೭). [ ℙ ಇದು 'ಪೊನ್ನಂಚೆ (= ಚಿನ್ನದ ಹಂಸ)' ಎಂದಿರಬಹುದು ]

**ಪೊಣ್ಮಿಸು, ಹೊಮ್ಮಿಸು** (ಕ್ರಿ). ೧. (ನಾದ ಮೊದಲಾದುವನ್ನು) ಹೊರಡಿಸು ; ಉಂಟುಮಾಡು : ನವಕುಮುದಾಮೋದಮಾಧುರ್ಯದಿಂ ಪಟ್ಪದಗಾನಂಬೊಣ್ಮಿಸುತ್ತುಂ ಶಶಿಯುದಯದೊಳೊಪ್ಪಿತ್ತು ರಾಜೋಪಚಾರಂ (ಗಂಕ. ೪-೪೭) ; ಕಂಠನಿನಾದಂಬೊಣ್ಮಿಸುತ್ತುಂ ಶುಕಪಿಕಶಕುನಿನಾದವೊಟ್ಟೈಸೆ ಚಿತ್ರಾಸನೆ ತಚ್ಚಿತ್ತಪ್ರಿಯಂಗೇಂ ಮೆಱೆದಳೊ ಸುರತಕ್ರೀಡೆಯಂ ಪ್ರೌಢಿಯಿಂದಂ (ಕಾವ್ಯಸಾ. ೭೭೪). ೨. (ದ್ರವ ಮೊದಲಾದುವು) ಹೊರಸೂಸುವಂತೆ ಮಾಡು ; ಹೊರಹೊಮ್ಮುವಂತೆ ಮಾಡು : ಮದನೋಗ್ರಾಗ್ನಿ ಮನಕ್ಕೆ ಮಾಟ್ಪುದು ಮಹಾಸಂತಾಪಮಂ ಜ್ವಾಲೆಯಿಲ್ಲದೆಯುಂ ಕಣ್ಮಲರ್ಗಳ್ಗೆ ಪೊಣ್ಮಿಸುವುದಂಭೋಧಾರೆಯುಂ ಧೂಮವಿಲ್ಲದೆಯುಂ (ಕಾದಂಉ. ೩೦೯). **ಹೊಮ್ಮಿಸು :** ೩. ಹರಡು ; ವ್ಯಾಪಿಸುವಂತೆ ಮಾಡು ; ಪಸರಿಸುವಂತೆ ಮಾಡು : ಮುಕ್ಕುಳಿಸುವ ಕಂಗಿಡಿರಾಶಿರಾಶಿಯ ದಿಕ್ಕೆಂಟಱೊಳಗೆ ಹೊಮ್ಮಿಸುತೆ ಹೊಕ್ಕುದು ವಿಧಿಬಾಣ ಕೃಷ್ಣನ ನಾಭಿಯ ಕುಕ್ಕರಿಸುತೆ ಶಿಕುಮೆನಲು (ಕೋಟಶ. ೪೦-೪೫) ; ಬರುವುದು . . . ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ, ಅಬ್ಬರದಲಿ ಭೋರ್ ಭೋರೆನೆ ಗುಮ್ಮಿಸಿ (ಕುಕ್ಕಿ. ೨೭-೨). ೪. ತೋರ್ಪಡಿಸು ; ಪ್ರದರ್ಶಿಸು : ಜನರು ಕುಸ್ತಿ ಕಸರತ್ತು ಮೊದಲಾದುವುಗಳಲ್ಲಿ ತಮ್ಮ ಹೊಸತನವನ್ನು ಹೊಮ್ಮಿಸುವರು (ಕನ್ನಜಾ. ೦೭೭). [ಪೊಣ್ಮು + — ಇಸು₃]

**ಪೊಣ್ಮು, ಹೊಣ್ಮು, ಹೊಮ್ಮು₁** (ಕ್ರಿ). ೧. ಹೊರಚಿಮ್ಮು ; ಹೊರಸೂಸು : "ಪೊಣ್ಮು—ಉದ್ಗಮನೇ (ಏಳು, ಕಾಣು)" (ಕಪುರಾ) ; ಸಾಧ್ವಸದಿಂ ಬೆಮರ್ ಬೆಮರ್ಪಡೆಗಳಿನುಣ್ಮಿ ಪೊಣ್ಮಿದುದು (ಶಂಖಶಾ. ೫-೦೫) ; ಅಪರಿಮಿತಂ ಪೊಣ್ಮುವ ಬಾಷ್ಪಪಯೋಧಾರಾಳಿ ಪರಿವ ಪರಿನಾಳಿಕೆಯೊಂದು ಪಮೆಗೆ ಬಂದಿರ್ದುದು ಕರ್ಣಪೂರನವಕೇತಕೀದಳಂ ಕಾಮಿನಿಯಾ (ಕಾದಂಉ. ೨೨೪). ೨. ಹರಿ ; ಪ್ರವಹಿಸು : ಪೆರ್ಗೆಱೆಗಳಿಂ ಪುಂಡ್ರೇಕ್ಷುವಾಟಕ್ಕೆ ಪೊಣ್ಮುವ ಪೇರರ್ಬಿಗಳೆತ್ತಲುಂ ಸೊಗಯಿಕುಂ ಚಂಪಾಪುರೋಪಾಂತದೊಳ್ (ಸುಕುಮಾ. ೪-೪೩) ; ಸಿರಿ ಸುರಚಾಪದಂತೆ ಪೊಸಜವ್ವನಮಿದ್ದಿಲ ಬೂದಿಯಂತೆ ಪೆಂಡಿರ ಸುಖಮುಣ್ಮೆ ಪೊಣ್ಮುವ ಬಯಲ್ದೊಱೆಯಂತೆ . . . ಕಿಡಲಲ್ಲದೆ ತಾಂ ಸ್ಥಿರಮಾಗಲಾರ್ಕುಮೇ (ಧರ್ಮಾಮೃ. ೫-೦೯) ; ಅಟ್ಟೆಯಿಂ ಸ್ಫುರಿಸಿ ರಕ್ತದ ಧಾರೆ ಪೊಣ್ಮೆ (ಶಾಪಶಂ. ೯-೨೭). ೩. ಹೊರಕ್ಕೆ ಬರು ; ಹೊರಬೀಳು : "ಎಚ್ಚು ಪಾಯ್ವುದೆನಲ್ಕೆ ಪೊಣ್ಮುತ್ತುಂಬರ್ಥಮಕ್ಕುಂ" (ಕಬ್ಬಿಕ. ೭೨). ೪. ಹರಡು ; ಹಬ್ಬು ; ವ್ಯಾಪಿಸು : ನೀರಿಲ್ಲದ ಕೆಱೆಯ ನಡುವುಮಂ ಪೊಗೆ ಪೊಣ್ಮೆ ನೆಗೆದ ಕಾಟ್ಕಿಚ್ಚುಮಂ . . . ಇಂತೀ ಪದಿನಾಱುಂ ಕನಸುಗಳಂ . . . ಕಂಡೆಂ (ಪದ್ಮಾರಾ. ೯೫-೨೭) ; ದೇವಾನೀಕನೀದುಂದುಭಿರವಮುಮರೀವೃಂದ ಮಾಂಗಲ್ಯಗೇಯಸ್ವರದೊಳ್ ಕೈಗೂಡಿ ಪೊಣ್ಮುತ್ತಿರೆ (ಆದಿಪು. ೦೪-೦೦೯) ; ಪೊಣ್ಮುತಿರ್ಪ ಪೂವಿನ ಪೊಸಗಂಪು ಕತ್ತುರಿಯ ಕಂಪೆನೆ ಪಾಡುವ ತುಂಬಿ ಗಾಣರೆಂದೆನೆ ನನೆಯಂಬ ನೋಲಗದ ಸಾಲೆವೊಲಿರ್ಪವು ಬಂದ ಮಾವುಗಳ್ (ಕಬ್ಬಿಗಕಾ. ೬೦) ; ನೂಪುರ ಕಂಕಣಸ್ವನು ದೆಸೆಗಳೊಳ್ ಪೊಣ್ಮೆ . . . ಬರುತಿರ್ದರಖಿಳಸ್ತ್ರೀಯರು (ಕಬ್ಬಿ. ೫-೮೨). ೫. ಉಂಟಾಗಂ ; ಕಾಣಿಸಿಕೊಳ್ಳು ; ತಲೆದೋರು : ಬಗೆಯೊಳ್ ಪೊಣ್ಮೆ ದಯಾರಸು ಚರಿತದೊಳ್ ಕೈಗಣ್ಮೆ ಚಾರಿತ್ರಂ (ಆದಿಪು. ೧-೫) ; ರೋಮೋದ್ಗಮಂ ಕೂಡೆ ಪೊಣ್ಮುತ್ತಿರೆ ಬಾಹುದ್ವಂದ್ವದಿಂದಂ ಬರೆತೆಗೆದುಱೆ ತಟ್ಕೈಸೆಯುಂ (ಕಾದಂಪೂ. ೪೯೦) ; ಪೊಗೆಯಿಲ್ಲದೆ ಪೊಣ್ಮುತ್ತಗ್ನಿ (ಶಂಖಪಾಪು. ೩-೦೦೦) ; ಸಂಪನ್ನಮತಿ ಪವನಜಂ ತಳರ್ದನಲ್ಲಿಗೆ ವಿಪುಲಪುಲಕೋತ್ಸವಂ ಪೊಣ್ಮಲು (ಕೃಮಿಬಿ. ೩-೪೦). ೬. ಹೆಚ್ಚಾಗು ; ವೃದ್ಧಿಯಾಗು ; ಅತಿಶಯವಾಗು : ತ್ರಿದಶನರಾಸುರೋರಗಗಣಪ್ರಭು ನಿಶ್ಚಿತತತ್ತ್ವಯೋಗಿ ಯೋಗದ ಬಲಮುಣ್ಮೆ ಪೊಣ್ಮೆ ನಿಲೆ (ಶಂಕಶಾ. ೦-೯೫) ; ಸ್ಮರರಾಗಾಂಧತ್ವದಿಂದಂ ಪಗಲೊಳಮಸತೀಕೇಳಿ ಪೊಣ್ಮಲ್ . . . ಬಂದುದು ಶಿಶಿರನೃಪೋದ್ಯತ್ಕೃತಾಂತಂ ವಸಂತಂ (ಕಾದಂಪೂ. ೭೨೦) ; ಇನಿತೊಂದುದ್ವೇಗಂ . . . ಆವನಿನಾದತ್ತೆಂತು ಪೊಣ್ಮುತ್ತನೆ . . . ವಸುಮತೀಕಾಂತೆಯಿಂತೆಂದಳ್ (ಜಗಪು. ೦-೨೯). ೭. ಉತ್ಸಾಹಿಸು ; ಹರ್ಷಗೊಳ್ಳು ; ಸಂಭ್ರಮಪಡು : ತನಗಾಗಳ್ ಪೊಡಮಟ್ಟಳಂ ಪದಪಿನಿಂ ಪೊಣ್ಮುತ್ತ ಬಾಯಿತ್ತು ಬಾಯೆನುತಂ ತನ್ನ ಕೆಲಕ್ಕೆ ಕಾಂತೆ ಕರೆದು . . . ಅಲಂಪಿನೊಳಾ ಕಾಂತೆಯು ಮೆಯ್ಯನೊಯ್ಯನೆಳಮೃತ್ತಿರ್ದಳ್ ಕರಾಂಭೋಜದಿಂ (ಕಾದಂಉ. ೨೪೦) ; ಬೆಚ್ಚರಮಮನೀತಳಂ ತನಗೆ ಸಾರ್ದ ಪೊಲೊವರ್ದಲುಣ್ಮಿ ಪೊಣ್ಮಿದಂ (ಧರ್ಮಾಮೃ. ೬-೮೦) ; ಪುಳಕಿಸುತ್ತುಂ ಪುಟವೇಱುತ್ತುಂ ಪೊಣ್ಮುತ್ತುಂ ನಲಿಯುತ್ತೆ ಗಜಾರೂಢನಾಗುತಂ ಗಿರಿರಾಜಂ . . . ಪುರಕ್ಕೆ ತಿರುಗಿದನಾಗಳ್ (ಗಂಕ. ೩-೦೦೦) ; ಸುತ್ತುವ ಪತ್ತುವ ನಿಲ್ವ ಗೆಲ್ವ ಪೊಣ್ಮುವ ಪುಟವೇಳ್ವ ಪಾಯ್ವ . . .

ನೆಟ್ ನೂಂಕುವೇಳ್ಗೆಯು ಬಲಂ ಬಗೆಗೊಂಡುದು ತಕ್ಕುಮಾರರಾ (ರಾಜಶೇ. ೦೪-೫೪). ೮. ಉಬ್ಬು; ದಪ್ಪವಾಗು; ಸ್ಥೂಲವಾಗು: ನಡು ಪೆರ್ಚಿದುದು ನಾಭಿ ಗುಹ್ಯಾಯ್ತು ಪೊಡೆ ಪೊಣ್ಮಿದುದು . . . ಗರ್ಭಚಿಹ್ನಮೆಸೆದುದು ಲತಾತನ್ವಿಗೆಂದು (ಹರಿಶ್ಚ. ೪-೫೪); ಏಜುಂಜೌವನದ . . . ಪೊಣ್ಮುವ ಪೊಜುವಾಟ . . . ಮನೋಹರರೂಪದ ನೀಟಿಯ ನವಲಾವಣ್ಯದ ಸಿರಿಯನದೇನಂ ಬಣ್ಣಿಪೆನು (ಶಯುಕಾ. ೩-೬೩); ಪೊಂಗಳಸಮೊಲೆಯ ಪೊಣ್ಮುವ ಮೊಲೆಯ . . . ಜಿಹ್ಮೊಲೆಯ ಭಾವೆಯರ್ ಬರುತಿರ್ದರು (ಶಾಕು. ೬೬-೯೩). ೯. ಚಿಮ್ಮು; ಸಿಡಿ; ಪುಟಿ: ಮಲ್ಲಿಂದವಳ್ ಪೊಯ್ವುದ್ದು ಪೊಣ್ಮಿದ ಸೆಂಡಂ ನಖದೀಪ್ತಿ ರಂಜಿಸುವಿನಂ ಮೇಗೆಯ್ದಾಳಾಂತು . . . ತಾಳದ ಸೂಟು ತಿರಿದಾಡಿದಳ್ ಸುದತಿ ಪೆಂಪಿಂ ಕಂತುಕಕ್ರೀಡೆಯಂ (ಜಗನ್ನಾ. ೦೨-೨೪). ಹೊಣ್ಮು: ಶಿ. ಜೈಮಿನಿಮುನಿ, ಕೂರ್ತು ಕೇಳುವರಿಗೆ ರೋಮಾಂಚನ ಹೊಣ್ಮುವಂತೆ, ಹರುಷ ಉಣ್ಮುವಂತೆ, ಆ ಕಥಾಮೃತವನ್ನು ಅದರ ಕಾರಣಸಹಿತ ತುದಿಮೊದಲಾಗಿ ವಿರಚಿಸಿದ (ಜಪುರಿ. ೦೯೩). ಹೊಮ್ಮು₁: ೧. ಸಡಿಲಿದ ಎಣೆಗಂಟಿನ ದೆಸೆಯಿಂದ ಹಾರಿದ ಕುಸುಮಗಳುಳ್ಳ ಮುಡಿಯಿಂದಲೂ, ಹೊಮ್ಮಿದ ಬೆವರಿನ ಹನಿಗಳುಳ್ಳ ಮುಖದಿಂದಲೂ . . . ಸ್ವಲ್ಪ ಬಳಲಿದವಳಂತೆ ಬರೆಯಲ್ಪಟ್ಟಿರುವ ಈ ಪೂಜ್ಯಳಾದ ಶಕುಂತಳೆ (ಶಾಕುಂತ. ೬೯-೩೨); ವಿಶ್ವ ಕಾಣಿಸುವ ಆ ಸಂಜೀವಿನೀರಸ ಹರಿಯುತಿದೆ ಎಲ್ಲೆಲ್ಲೂ, ಝುರಿಝುರಿಯಾಗಿ, ಸಮುದ್ರದೊಡಲಿಂದ ಹೊಮ್ಮಿ! (ಜಶ್ರೀ. ೯-೨೦). ೪. ಬಳಕ ಮಹಾರಾಜಂಗವನ ಮಾನಸಿಗೆ ತೀವ ತಿಣ್ಣನೆ ತಿಬ್ಬಿ ಬಿಟ್ಟಿತು ಹೊಳೆಹು ಹೊಮ್ಮಿತು (ಕ್ರಕುಂ. ೬-೮); ನವ್ಯಂತಿರದುಮೆಸರನು ತಾಳಿ ರಾಜಿಪ ಸುಮಸ್ಮಾನದರಲೆಲ್ಲವೆನುತ ಹೊಮ್ಮಿದ ಸಂದಸದಲಿ ಸುರ ಹೊನ್ನೆಯು ಕಮ್ಮಲರುಗಳೊಪ್ಪುದುವು (ಕಂಷಣ. ೩-೯೩); ಕ್ರುತಿಗೂಡಿದಾಗ ಹೊಮ್ಮುವದು ಹಾಡಿನ ಲಹರಿ ಗಾಳಿಯ ಬೆನ್ನ ಮೇಲೆ ಮೋಡದ ಸವಾರಿ (ಕಣಮು. ೬೨-೫೪). ೫. ಹೊಮ್ಮಿದುತ ಚೋಲುತ್ತಲೊಂದವೊಂದಂ ಪಮ್ಮಿ ಸುಮಸ್ಮಾನವೇಳ್ ಬೆಮ್ಮುಮಿರಿಯ ಸುಖಂ ಹೊಮ್ಮಿ . . . ಗೋಕುಲದವೆಲ್ಲ ಮಚ್ಚಿದು ಕೇಳುತ್ತಿರೆ (ಅಹಾಕ. ದೇ. ೦೯೨-೨೨); ಅನು ತಾಪವೇಳ್ ವಿರಹು ಹೊಮ್ಮಿ ಚಿಕ್ಕಿಟ್ಟಿಗಟಲಾಣದೆ ಕಂಗಮುಂಟಿಹದ ಕಂಥಮಂ ಘಳಿಲನೆ ಜಾಯ್ವುದ್ದು (ಶಶಕ. ೯-೩). ೭. ಪೂಗಳಂ ಪಡೆ ನೋಡುತಾಹಾ ವಿರೂಪಾಕ್ಷ ಎನುತ ಹಿಗ್ಗುತ್ತ ಹೊಂಗುತ್ತ ಹೊಮ್ಮುತ್ತಂದು [ಜಜಾಂ. ಎದೆದುತ ಹಿಗ್ಗಿ ಹೊಗಳುತ್ತಾಲೆದು ನಲಿವುತ್ತ] (ಪೂಶ್ಚ. ಹ. ೩೩೩-೦೯). ೧೦. ಉಂಟುಮಾಡು; ಒದಗಿಸು: ಕೊಡುವದದು ವರವಲ್ಲದಿದ್ದರೆ ನುಡಿಗೆ ಬೋಳೆ ಹೊಮ್ಮುವರೆ ನಿಮ್ಮಯ ಕೊಡಹ ನೊಲುವವನಲ್ಲ (ಸುಜ್ಯಾರ್ಜ್ಯೋ. ೦-೯೦). [ದೇ.೫ ತಮಿ. ಪೊಮ್ಮು, ಪೊಟ; ಮಲ. ಪೊಡಿ; ತುಲು. ಪೊಡವು, ಪೊಡ್ಡು]

ಪೊತ್ತ₁ 'ಪೊಟು' ಪರಾ.

ಪೊತ್ತ₂, ಪೊತ್ಥ (ನಾ). ೧. ಹಣದ ಚೀಲ; ಥೈಲಿ; ಹಮ್ಮಿಣಿ: ಪೊತ್ತಗಳನ್ನು ಬಾಯ್ಬಿಚ್ಚಿ ಹೊಸ ಪುತ್ತಳಿ ನಾಣ್ಯಗಳನ್ನು ಸುರಿತೆಯತ್ತಿ ಕೇರಿ ತೂರಿ ಧಾರೆಯರೆದು ಸುರಿದಾಡಿದನು! (ಸುಂತ್ರಕ. ೦೩೦-೯). ೨. ಹಣ; ದ್ರವ್ಯ; ಧನ: ರಸ್ತಿನ ಮೊತ್ತದ ಚೀಲವನು ಕೆಂಪಾವಿಯವರ ಮನೆಯನು ಕಳರು ಬಳಿದಿದ್ದು ಅರಮನೆ ರಸ್ತು ಹಾಕಿ ಗಣ್ಣು ಕಟ್ಟಿದಿಕ್ಕಿದನ್ತ ಪೊತ್ತದ ಚೀಲವನು ಕಳರು ಕದ್ದುಕೊಂಡು ಹೋಗಲಾಗಿ (ಎಕ. XI. ಹೊಳಲ್ಕೆ. ೨೩-೯೩; 1668). ಪೊತ್ಥ: ೨. ಸುಂಕವ ಹಮಚಿ[ಯ] ಮುದ್ರೆಯ ಪೊತ್ಥದೊಳ್ × × × ಕೆ ತಿಂಗಳಿಗೊಂದು ಗದ್ಯಾಣ ಪೊನ್ನುಮಂ . . . ಲೆಕ್ಕಂ ಮಾಡಿ ಕುಡುವರ್ (ಕಾಶಾ. XI-ii, ೦೩೦-೩೩: 1102).

[← ಪಾರ. ಪೋತಾ; ಮರಾ. ಪೋತ್, ಪೋತಿ:, ಪೋತೇ]

ಪೊತ್ತಗೆ, ಪೊಸ್ತಕ, ಹೊತ್ತಗೆ (ನಾ). ಗ್ರಂಥ; ಪುಸ್ತಕ; ಹೊತ್ತಿಗೆ: ತಿಂತಿಣಿಯಾಗೆ ನಟ್ಟ ಕಣಿಯೊಳ್ ನೆಲಮುಂಟ್ಟದೆ ಮೆಯ್ಯೊಳತ್ತಮಿತ್ತಂ ತೆಟಿದಿರ್ದ ಪುಣ್ಗಳೆಸೆವಕ್ಕರದಂತಿರೆ ನೋಡಿ ಕಲ್ಲಿಪೆಂಬಂತೆಪೊಲಿರ್ದನಟ್ಟ ವಣಿಕೋಲ್ಗಳ ಮೇಲೆಸೆದಿರ್ದ ವೀರಸಿದ್ಧಾಂತದ ಶಾಸನು ಬರೆದ ಪೊತ್ತಗೆ ಯಂತಮುರಾಮಗಾತ್ಮಜು (ಶಂಕಚಾ. ೦೦-೯೬); ಪೊತ್ತಗೆಯಂ ಪೊತ್ತಿರ್ದಂ ಪೊತ್ತಗೆಯೊಳಗಿರ್ದ ಮಾತನಟಿವನೆ (ಸಚುಕ. I, ಅಭಿನಂ. ೩೯೦); ಮಿಸುನಿ ವಾವುಗೆಸಿವ ಪೊತ್ತಗೆಯಾಲವಟ್ಟ . . . ಕರ್ಪುರದ ನಾಗಳ ಪಿಡಿದೊಡನೆ ನಡೆದರೊಲಿದು (ಶದ್ಮರಾ. ೮-೭). ಪೊಸ್ತಕ: ವೀರಸಿದ್ಧಾಂತದ ಪೊಸ್ತಕಂ ತವಣಿಕೋಲೊಳುವ್ರ್ಪಿಸಿದಂತೆ ವೀರವಿಕ್ರಾಂತವನಾಸೆವಟ್ಟು ಕಲೆ ಬೆಳಯು ನೆಯ್ದಿದ ದೇವಲೋಕವಂ (ಪ್ರಅಂ. ೦೯೩೦, ೬೬-೦೯; 1194); ಯಮಿಗಳ್ಗೆ ಪರಿಗ್ಗೆದು ಪರಮಾಗಮದ ಪಾವನಪೊಸ್ತಕಂಗಳ ನಮಿಸಿ ಕೊಡುವುದು (ಶತಕ. ೩-೩೦); ದಾಹುದಂಡದ ಪೊಸ್ತಕದಿ ಪೊಯ್ದುರಾತನೊಡ್ಡು ಮಸದಜುಳು (ಅಂಗಕ್ರ. ೨೬-೩೪). ಹೊತ್ತಗೆ: ಅನ್ನು ಕಾದಿ ತುಜುಮ ಮಗುಜ್ವರ್ ದೇಕರಸನು ಹೊತ್ತಗೆಯ ಟವಣಿಕೋಲ್ಗಳಲೆತ್ತಿದ ತೆಜಿದನ್ನೆ ಸರದ ತನ್ದಲು ತನುವಂ ತೆತ್ತಿಸಲ್ಮರಕಾಂತಾಜತ್ರಕಿಯರುಯ್ಯ ದೇಕ ನಾಕಕ್ಕೋದ (ಎಕ. XII, ಚಿಕ್ಕನಾ. ೦೬-೩೦; 1149); ಚಿಕ್ಕದೊಂದು ಹೊತ್ತಗೆ ಬೆನಕನ ಕರಡಗೆಯಾಯ್ತು (ಶಿಸಮ. ೬೩೦); ದಿಟದ ನಾಮಂಗಳ ಅಕ್ಷರವೃತ್ತಿಗೆ ಘಾ, ಮರಂ, ಹೊತ್ತಗೆ, ಕವಳಿಗೆ, ಟಟ್ಟವತ್ತಿಗೆ (ಶಬ್ದಮ. ೬೬ ಕ್ರಯೋ); ದಾಳ ಹೊತ್ತಗೆಯಲ್ಲಿ ಬರಿಯ ಗೆಲವಿನ ಗುಟಗೆ ಬರೆಯಬೇಕೆಂದಾರು ಕಟ್ಟುಹಾಕಿಲ್ಲ (ಅಶಾಕ್ಯಾ. ೩-೨೦).

ಪೊತ್ತಗೆಗೇಜ್‌ಸು=ಬರೆದಂ ಪುಸ್ತಕವನ್ನಾಗಿ ಮಾಡು: ಪರ ಮೋತ್ಸವದಿಂ ಗುಣರತ್ನಭೂಷಣಂ ಕವಿಜನಶೇಖರಂ ಬರೆದು ಪೊತ್ತಗೆ ಗೇಜ್ಸಿದಂ ಪುರಾಣಮಂ (ಶಾಭೃಂಕ್ರ. ೯೩೨).

[< ಸಂ. ಪುಸ್ತಕ./ಪ್ರಾ. ಪುತ್ಥಯ, ಪೋತ್ಥಯ]

ಪೊತ್ತಡಿ (ನಾ). ಹಣದ ಚೀಲ; ಥೈಲಿ: ಆ ಳ್ಯನಲ್ಲಿಂ ಪೊಜಮಡುತ್ತಂ ಬಸುದತ್ತ ಸುಡಿಯೊಳಿರ್ದ ಪೊತ್ತಡಿಯು ಕೊಯ್ದುಕೊಂಡು ಪೋದಂ (ಪ್ರಜ್ಯಾಸ್ತ. ೩-೬೬ ಕ); ತನ್ನ ಪೊತ್ತಡಿಯೊಳ್ ಪೊನ್ನುಗಳಂ ತೆಗೆದು ಅಶೃತಪುಣ್ಯನ ಕೈಯಲಿಕ್ಕಲ್ (ಪ್ರಜ್ಯಾಸ್ತ. ೦೨-೨೦ ವ). [< ಪೊತ್ತ₂]

ಪೊತ್ತಡೆ 'ಪೊಟ್ಟಜು' ನೋ.

ಪೊತ್ತರ (ನಾ). ಒಂದು ಬಗೆಯ ಸುಂಕ,—ತೆರಿಗೆ: ಜೋಲಕಾರುಣ್ಯ ಬಟ್ಟೆಯ ಭಂಡಿ ೧ ಕಂ ಗ ೨ ಎತ್ತಿನು ಪೊತ್ತರ ಪ ರ ಖಾಣದು ಪೊತ್ತರ ಪ× ಅಂತು ಗ ೬೬ ಪ ೩ (ಎಕ. V. ಚಾಸಪ. ೯೯-೬೪; ಸು. 1230); ಜೋಳ ಕಾರುಣ್ಯ ಬಟ್ಟೆಯ ಭಂಡಿ ಗದ್ಯಾಣ ೧ ಪಣ ೯ ಪತ್ತಿನು ಪೊತ್ತರ ಪಣ ೪ ಹಾ||| (ಎಕ. V. ಬೇಲೂರು. ೬೪-೦೯೯; 1261); ಜೋಲಕಾರುಣ್ಯ ಚೆಡೆದರ್ ೯ ಪ ೩||—ಬಟ್ಟೆಯ ಭಂ ೧ ಕ್ಕಂ ಗ ೨ ಎತ್ತಿಲು ಪೊತ್ತರ ಪ ೫ ಖಾಣದು ಪೊತ್ತರ||| (ಎಕ. XVI, ಚಿಕ್ಕನಾ. ೭೦-೨೦; ಸು. 1330). [?]

ಪೊತ್ತಳ (ನಾ). ಬತ್ತಳಿಕೆ; ಬತ್ತಳೆ (?): ಪೊತ್ತಳದಂಬನೆ ತೆಗೆದು ಪೊಸಗಾಯದಿ ಬಸವಳಿದು ಮತ್ತವನಂಗವನಿಟಿದಳು ಮಜುಮೊನೆಗಾಬುತಲಿ (ಶಿವಗೀ. ೦೬೯-೯೦೯); "ಆಗ ತಾನೆ ತಯಾರಿಸಿದ" (ಶಿವಗೀ. ೯೦೬೪). [?]

ಪೊತ್ತಬಿಜ್ 'ಪೊಟ್ಟಜು' ನೋ.

ಪೊತ್ತಬಿಕೆ 'ಪೊಟ್ಟಜು' ನೋ.

ಪೊತ್ತಾರ 'ಪತ್ತಾರ' ನೋ.

ಪೊತ್ತಾಟಿಕೆ 'ಪೊಟ್ಟಜು' ನೋ.

ಪೊತ್ತಿ (ನಾ). ಬಟ್ಟೆ; ವಸ್ತ್ರ: ಧಗಧಗಿಪ ಕೆಂಡಂಗಳಂ ಬಗಿಬಗಿದು ದಸರಿಯ ಪೊತ್ತಿಯಲಿ ಬಿಗಿಬಿಗಿದು ಕರಯುಗಳಂಗಳಿಂ ತೆಗೆದೊಪ್ಪಿ ಧಲಪ್ಪೊಪ್ಪಿ ನೆಗಳನೇ ಶಿವಪಂಡಿತಂ (ಬಸವ. ೩೩-೨೩). [< ಪ್ರಾ. ಪೊತ್ತೀ./ಸಂ. ಪೋತ]

**ಪೊತ್ತಿಗೆ, ಹೊತ್ತಿಗೆ** (ನಾ). ೧. ಪುಸ್ತಕ ; ಗ್ರಂಥ; ಹೊತ್ತಗೆ : "ಪೊತ್ತಗೆ (ಪೊತ್ತಿಗೆ)—ಪುಸ್ತಕ " (ಶಬ್ದಕೋ. ೨೭). ೨. ಜೋಯಿಸರು ಶಾಸ್ತ್ರ ಹೇಳಲು ಬಳಸುವ ಪುಸ್ತಕ,—ಭವಿಷ್ಯವನ್ನು ಹೇಳುವ ಗ್ರಂಥ : ಸಂತತಿಯುದೆಂದಪ್ಪುದೆಮಗಿನ್ನೆಂತೆನುತ ಸತಿಪತಿಗಳುಂ ಮತಿವಂತರಿಂದಂ ಪೊತ್ತಿ[ಪಾಠಾಂ. ಪ್ತ]ಗೆಗಳಂ ತೆಗಿಸಿ ನೋಡಿಸುತ (ಚಿಕೃ. ೨-೪೮). **ಹೊತ್ತಿಗೆ:** ೧. " ಹೊತ್ತಗೆ(ಹೊತ್ತಿಗೆ)—ಪುಸ್ತಕ = ಪೊತ್ತಗೆ " (ಶಬ್ದಕೋ. ೫೦) : ಅನುಭವವೆಂಬುವದು ಅನುಭಾವಿಕಗಲ್ಲದೆ ಹೊತ್ತಿಗೆಯಲ್ಲಿಲ್ಲ ನೋಡಾ (ಸಿದ್ಧ.ಶ. ೪. ೬೨-೨೭೩); ನುಡಿದಹನು ದುರ್ಭಾಷೆಗಳನಡಿಗಡಿಗೆ ಶಿವನಿಂದೆಯ ನುಸುರ್ವ ಬಗ್ಗಡೆಯನಂ ಕೊಲಲಹುದು ಸುಡಲಹುದವನ ಹೊತ್ತಿಗೆಯ [ಪಾಠಾಂ. ಪುಸ್ತಕವಂ, ಹೊತ್ತಗೆಯ] (ಚಿಕೃ. ೫೭-೨೪); ಮೊದಲಿನವರು ಕೈಬರಹವ ಹೊತ್ತಿಗೆಗಳನ್ನು ಓದುತ್ತಿದ್ದರು (ಮುಂಬಯು. ೪-೦೬೪). ೨. "ಹೊತ್ತಿಗೆ"ಯನ್ನು ತೆಗೆಯಿಸಿ ಪ್ರಶ್ನೆ ಮಾಡಿದಾಗ ಜೋಯಿಸರು ಏನು ಹೇಳಿದರು? (ಸವಾಲೋ. ೮೯).

**ಹೊತ್ತಿಗೆ ಕೇಳು=ಹೊತ್ತಿಗೆ ತೆಗೆಸು** : ಒಂದು ರೂಪಾಯಿ ಇಟ್ಟು ಹೊತ್ತಿಗೆ ಕೇಳಿ ಬಾ (ರೂಢಿ). **ಹೊತ್ತಿಗೆ ತೆಗೆಸು=**ಜೋಯಿಸರ ಬಳಿ ಇರುವ ಶಾಸ್ತ್ರ ಹೇಳುವ ಪುಸ್ತಕವನ್ನು ತೆಗೆಸಿ, ಭವಿಷ್ಯವನ್ನು ಕೇಳು, —ಪ್ರಶ್ನೆ ಕೇಳು : ಗೌಡರು ಹೊತ್ತಿಗೆ ತೆಗೆಸಿ ಕೇಳಿದರೆ—"ಹಿರಿಸೊಸೆ ಮಲ್ಲವ್ವನ ಕೆರೆಗೆ ಹಾರ ಕೊಡಬೇಕು" ಎಂದು ಹೊರಟಿತು. ಗೌಡನು ವಿಚಾರದಲ್ಲಿ ಮುಳುಗಿದನು (ಕಕಕೃ. ೭-೨೩).

[<ಸಂ. ಪುಸ್ತಿಕಾ. / ಪ್ರಾ. ಪೋತ್ಥಿಯಾ]

**ಪೊತ್ತಿನ್ಮಕ್ಕಳ್** 'ಪೋಂತು' ಪರಾ.

**ಪೊತ್ತಿಮಕ್ಕಳ್** 'ಪೋಂತು' ಪರಾ.

**ಪೊತ್ತಿಯ** (ನಾ).=ಪೊತ್ತಿ : "ಪತ್ರಂ, ಚೀರ್ಣಂ, (ಧೌತ)ಕೌಶೇಯಂ — ಈ ೩ ಪೊತ್ತಿಯಂ" (ಕರಾಭು. ೯೦-೩೯೫) 'ಪೊತ್ತಿ' ಪರಾ.

[<ಪ್ರಾ. ಪೋತ್ತಿಅ, ಪೋತ್ತಿಅ]

**ಪೊತ್ತಿರ್ಮಕ್ಕಳ್** 'ಪೋಂತು' ಪರಾ.

**ಪೊತ್ತಿರ್ಮಕ್ಕಳು** 'ಪೋಂತು' ಪರಾ.

**ಪೊತ್ತಿಸು, ಹೊತ್ತಿಸು** (ಕ್ರಿ). ೧. (ದೀಪ, ಬೆಂಕಿ ಮೊದಲಾದುವನ್ನು) ಉರಿಯುವಂತೆ ಮಾಡು; ಹತ್ತಿಸು; ಪುಟಗೊಳಿಸು : ಶರಮನಿದು ಕಡಿದುಡಿದರಡೆರಡಪ್ಪಂತು ತಱಿದು ರಿಪುಬಲಗಹನಾಂತರಮಂ ಸುಡಲೊಗೆವುದು ದುರ್ಧರಕೋಪಾಗ್ನಿಯನೆ ಮುನ್ನಮಾಂ ಪೊತ್ತಿಸನೇ (ಅಜಪು. ೧೨-೧೧೨); ಸೊಡರಂ ಪೊತ್ತಿಸುವರ್ಸತ್ತಿಡೆಯೊಳ್ (ಸಮುಕ. I. ಅಮರಂಡ. ೩೭೪) ; ಬನಮೆಂಬ ಮದನನೃಪನರಮನೆಯೊಳ್ ಪೊತ್ತಿಸಿದ ದೀಪಮಾಲೆಯ ಮಾಡಕ್ಕನುರೂಪಮಾಗಿ ಮಣಿಯಿಂ ಕೊನೆವರೆಗಂ ಪೂತುವರರೆ ಚಂಪಕನಿಕರಂ (ಚಂದ್ರಪು. ೬-೫೩) ; ಮಿಗೆ ಮುದ್ರಿಸಿದ ಚಿತ್ತುಖದಿನಾತನಿರ್ದನಾ ಸೊಗಸನೀಕ್ಷಿಸಿ ಪೊಳೆವ ದೀವಿಗೆಯೊಳೊಂದು ದೀವಿಗೆಯ ಪೊತ್ತಿಸಿದಂತೆ ಸಮಕಲೆ ಘಟಿಸಿತು (ಶಬ್ದಕಾ. ೧೨-೫೪). ೨. ಉಂಟುಮಾಡು ; ಆಗುವಂತೆ ಮಾಡು : ಹುಬಲದಿಂ ಪಾಂಡವರನುವರಮಂ ಪೊತ್ತಿಸಿದರೆನ್ನೊಳ್ (ಕಂಬಭಾ. ೧೧-೬). **ಹೊತ್ತಿಸು** : ೧. ಎಣ್ಣೆ ಬತ್ತಿಯು ಕೂಡಿ ಜ್ಯೋತಿಯು ಹೊ[ಪಾಠಾಂ. ಪ]ತ್ತಿಸಲು ಬಣ್ಣ ಬೆಳಗೇಕಾಗದೆ ದಿಟ ವಿಚಾರಿಸಲು (ದೀಕ್ಷಾಬೋ. ೦೩೦-೨೦); ಹೊತ್ತಿಸಿದ ಜಿಡ ಬೆಂದು ದಳ್ಳುರಿ ಹತ್ತಿ ಭಗಭಗ ಎನುತಲುತ್ತಮನುತ್ತಮಾಂಗಂ ಬೇವುತಿರಲು (ಚಿಕೃ. ೦೬-೨೩); ಅಂಜನಾಸುತ . . . ದನುಜಪುರಕೆ ಧನಂಜಯನ ಹೊತ್ತಿಸಿದ ಖಳರನು ಭಂಜಿಸಿದ ಸಾಗರವ ದಾಂಟಿದ ರೂಪು ತೋಱು (ಕುಬ್ಬೀ. ೦೦-೩೦); ಕತ್ತಲೆಯುಹುದೊಮ್ಮೆ ಬೆಳಗಹುದದು ಮಾಸಿ ಮತ್ತೊಂದು ತಂಪಿನ ಸೊಡರ ಹೊತ್ತಿಸಿದಃಶಿಹುದಾ ಭರತೇಶನ ಚಿತ್ತದೊಳಾತ್ಮಯೋಗವದು (ಭರತ. ೯-೦೦೫) ; ಕಸಕಡ್ಡಿಗಳನ್ನು ಪ್ರತಿದಿನ ಕೂಡಿಸಿ ಹೊತ್ತಿಸಬೇಕು (ಆರೋಗ್ಯ. ೫೦). ೨. ಚಿತ್ತಜನು ಪಾತಕನು ವಿರಹವ ಹೊತ್ತಿಸಿದನಿಟ್ಟುರಿಗೆ (ಗೀಳ. ೨-೪೯). ೩. (ಪದಾರ್ಥಗಳು ಸೀದು ಅಥವಾ ಹೆಚ್ಚಾಗಿ ಬೆಂದು ಪಾತ್ರೆಯ ತಳದಲ್ಲಿ) ಅಂಟಿಕೊಳ್ಳುವಂತೆ ಮಾಡು; ಹತ್ತಿಕೊಳ್ಳುವಂತೆ ಮಾಡು: (ಮುಂಬಯು. ೬. ೫-೦೯೭). [ಪೊತ್ತು₁ + — ಇಸು]

**ಪೊತ್ತು₁, ಹೊತ್ತು₁** (ಕ್ರಿ). ೧. (ಬೆಂಕಿ, ದೀಪ ಮೊದಲಾದುವು) ಹತ್ತಿಕೊಳ್ಳು; ಉರಿ ; ಪುಟಗೊಳ್ಳು : " ಪೊತ್ತು—ಅಗ್ನಿಪಟೂಕರಣೇ, ಅತಿ ಪಕ್ವಾನ್ನೇ ಚ (ಸೀದ ಅನ್ನ)" (ಕಧಾ); ಕಾಯ್ಪಿನಿಂ ದಿಶಾವಳಿಪರಂಬರಂ ಪೊಗೆದು ಪೊತ್ತಿದುದು (ಕಂಶಭಾ. ೦೦-೬೦) ; ತನುತಾಪದಿಂದೆ ಪೊರ್ದಿದ ಬನಮುರಿವುದು ಪೊತ್ತ ಪೊಗೊಳು ಬತ್ತುವುದಿರ್ದ ನೆಲಂ ಪೊತ್ತುವುದು (ಚರ್ಚ. ೪-೬೦) : ಪೊತ್ತಿದತ್ತು ಕಿಡಿಯುಟ್ಟುದು . . . ಮುಟ್ಟಿತು ಸುಟ್ಟಿತು ತಿಂದು ತೇಗಿದತ್ತಗಿಯುದೆ ನಿಂದ ಪೊಗೆಯನಂ ಪಣೆಗಣ್ಣಿ ಹಂಪೆಯಾಳ್ದನಾ (ಗಿರಿಜ. ೯-೪೭); ಮತ್ತೆ ತಳಿವ ಪೊಸಗಪ್ಪುರದೊಳ್ಳುಡಿ ಪೊತ್ತಿಮುದಾ ವಿರಹಾನಲನೊಳಗೆ (ಜಯುಕಾ. ೪-೪೦). ೨. ಬೆಂದು ಹೋಗು; ಸುಟ್ಟುಹೋಗು ; ಕರಿಕಾಗು : ಪನ್ನಗಲೋಕದ ಜೀವರಾಶಿಗಳ್ ಪೊತ್ತುವ ಮಾಟ್ಕೆಯಿಂ ತಿದಿಗಳಿಂ ಪೊಗೆದಪ್ಪರೊ ಭಿಲ್ಲರೆಂಬಿನಾ ಪುತ್ತನ ಗುಟ್ಟು ಪರ್ಗರಡಿಗಳ್ ಪೊಗಮಿಟ್ಟಿಸಗುಂ ವನಾಂತದೊಳ್ (ಚಕಳು. ೨-೦೦೪). ೩. ಸುಟ್ಟುಹೋಗುವಂತೆ ಮಾಡು ; ಸುಡು ; ದಹಿಸು : ಆ ಶಗರ್ ಪಂದು . . . ಪುಲ್ಲೊಳ್ ಪೊರಳಲೊಡಮಾ ಪುಲ್ಲು ಪೊತ್ತಿ ಪೊಗೆದುರಿದು ಮುಂದುರಮಂ ಪೊತ್ತಿದೊಡೆ (ಕಂಶಕಂ. ೦೭೪-೦೨) ; ಉಗ್ರದಾವಾಗ್ನಿ ತರುನಿಚಯಮಂ ಕೊಂಡುರಿಯುವಂತೆ ಪೊತ್ತಿದುದು ಚಿತ್ರಾಂಗಿಯಂ ಪ್ರಣಯ ಪ್ರಳಯಶಿಖಿ (ಚಿತ್ರಾಂಗ. ೪೦-೦೦೦೨). ೪. (ಪದಾರ್ಥಗಳು ಹೆಚ್ಚು ಬೆಂದು ಅಥವಾ ಸೀದು ಪಾತ್ರೆಯ ತಳದಲ್ಲಿ) ಹತ್ತಿಕೊಳ್ಳು ; ತಳಹಿಡಿ ; ಬುಡಹತ್ತು : ಪೊತ್ತದೆ ಪೊಗೆ ಸುತ್ತದೆ ನುಱುಬತ್ತದೆ ಕೆಂಪಡರ್ದು ಬೆಂದ ಪಾಗಲಕಾಯಂ ಪತ್ತಂಟು ತುತ್ತಿದಲ್ಲದೆ ಚಿತ್ತಂ ತಣಿಗುಮೆ (ಸೂಪಸು. ೦೦-೯೨) ; ಪಸಿವೇನಾದುದೊ ದೇವ ಕೆಳ್ನನಗೆ ಪಾಲೇಂ ಕಾಯದೋ ಪೊತ್ತಿತೋ (ಶ್ರೀಶಬ. ೯-೭೪). ೫. ಒಣಗು ; ತಾರು : ಪಲವು ದಿವಸ ಮಾಯಾಸಂಬಟ್ಟು ಬತ್ತಿದ ಬಾಯ್ಗಂ ಪೊತ್ತಿದ ನೆತ್ತಿಗಮುಂತೇನುಮಂ ಪಡೆಯದೆ ಬಡತನವುಡುಸಿ ಬಳಮುಱಿದು ಪುಟ್ಟಿತು ಸಮೆದು ಸತ್ತುಂ (ಸುಕುಸೂ. ೫-೦೨ ಪ) : ಪೊತ್ತಿದ ನೆತ್ತಿಗೆ ಕಾಣದೆ ತುತ್ತಿಲ್ಲದೆ ಬಡಿಯ ಜಡಿಯ ಕಂಡವರೆಲ್ಲಂ ಚಿತ್ತೋತ್ಸಾಹಂಗಿಡುವರ್ಮತ್ತನಿಷದೆ ಜೈನಪೂಜೆಯಂ ಕಿಡಿಸಿದವರ್ (ಧರ್ಮಾಮೃ. ೬-೦೭೬). **ಹೊತ್ತು₁** : ೧. ನಿಮ್ಮ ಗಣಂಗಳು ಬತ್ತಿದ ಕೆಱ ಬಾಯ ಬಿಟ್ಟಂತೆ ಮೊಱಯಿಟ್ಟು ಬರಲು ಹೊತ್ತಿದ ಅಂಗಾಲ ಕಿಚ್ಚು ನೆತ್ತಿಯ ಮುಟ್ಟಿದಡೆ ಚಕ್ಕನೆ ಕಪಿಲಸಿದ್ಧಮಲ್ಲಿನಾಥ ನೊಸಲ ಕಣ್ಣ ತೆಗೆದನು (ಸಿದ್ಧಶ. ೪. ೦೯-೫೨) ; ಉತ್ತಮತೆ ಲೋಹಾದಿಗಳಿಗೀ ಹೊತ್ತಿದಗ್ನಿಯ ಸ್ಪರುಶದಲಿ ಪಾವನತೆಯಹುದು (ಶಿಭಾಗ. ೦೦-೨೯-೯) ; ಹೊತ್ತಿದೇಕಾರತಿ ಪಂಚಾರುತಿ ಕಡ್ಡಿಬತ್ತಿ ನೀಲಾಂಜನವಲಗೆ ಮತ್ತೆ ನಾನಾವಾದ್ಯರಭಸದಿಂ ಮೊಳಗಲುಯೆತ್ತಿದ ಮಹಮಾರತಿಯ (ಸೋಚಕ. ೨೨-೪೩). ೨. ಹತ್ತುಸಾವಿರ ಯೋಜನದ ಸಂತಪ್ತತೈಲದ ತಾಂಬ್ರತಳದಲಿ ಹೊತ್ತುವನಲಾ ದಿವ್ಯರಶ್ಮಿಯ ಕಾಲಸೂತ್ರದಲಿ ಎತ್ತಿ ಬಿಸುಡುವರದಱೊಳಗೆ ತನು ಹೊತ್ತಿ ಹೊರಳಲು ಪಾಪಿಗಳನುದ್ವೃತ್ತತನದಲಿ ದೇವ ವಿಪ್ರದ್ರೋಹಿಗಳನೆಂದ (ಶಿಭಾಗ. ೫-೦೦-೨೨). ೪. ಇನಿಸು ಹೊತ್ತದ ಕೆಡದ ತಱಿಗೆಂಡದೊಳು ಪಾಕವನೆ ಮಾಡಿ (ಸೂಪಶಾ. ೦-೦೩) ; ಅವಳು ಆ ಹೊತ್ತಿದ ರೊಟ್ಟಿಗಳನ್ನು ನೋಡಿ (ಮುಂಬಯು. ೬. ೫-೦೯೭); ಪಾತ್ರೆಯಲ್ಲಿ ಆಹಾರ ಹೊತ್ತಿ ಅಂಟಿಕೊಂಡಿದ್ದರೆ ಅದನ್ನು ತೆಗೆಯಲು ಪಾತ್ರೆಯಲ್ಲಿ ನೀರು ಹಾಕಿ . . . ಇರಿಸಬೇಕು (ಆರೋಗ್ಯ. ೪೭). ೫. ತಪನಪ್ರದ್ಯೋತಹತಿಯಿಂ ಬೆನ್ನೊಡೆದು ಬಾಯಾಱ

ತಾಳಿಗೆ ಬತ್ತಿ ನೆತ್ತಿ ಪೊತ್ತಿ ಕಣ್ಣೊಳ್ ನೆತ್ತರೆಚ್ಚು ಪಾಯೆ (ಗಂಕ. ೯-೨೭ ವ). ೭. ಉಂಟಾಗು ; ಒದಗು ; ಪ್ರಾಪ್ತವಾಗು : ಅತ್ತಲಾ ದಮಯಂತಿ ನಳನೊಳು ಚಿತ್ತವಿಟ್ಟಳು ನೃಪಗೆ ವಿರಹವು ಪೊತ್ತಿತಾಕೆಯ ಮೇಲೆ ಯಿರ್ವರಿಗಾಯ್ತು ಸಂತಾಪ (ನಳಕ. ೨-೯೯); ಹೃದಯಗುಹೆಯಲ್ಲಿ ಹಿಗ್ಗು ಹೊತ್ತಿಹುದು ಅಗ್ನಿಸತ್ವದಂತೆ (ಅರಳು. ೦೧೫-೨); ಧ್ಯಾನಸುಪ್ತಿಯಿಂ ಜ್ಞಾನ ವೆದ್ದಿತೋ ಬಾಳಿಗಾನಂದ ಹೊತ್ತಿತೋ (ಗೋಕುಶಿ. ೩೫-೨೨). ೭. ಆರಂಭ ವಾಗು ; ಮೊದಲಾಗು : ವುತ್ತ ಕರ್ಣನ ಭೀಮನಾಹವ ಪೊತ್ತಿದುದು (ಕುಮ್ವಾ. ೦೩-೨೯). ೮. ಉಗ್ರವಾಗು ; ಪ್ರಚಂಡವಾಗು : ಒಳಗೆ ಹೊ[ಕಾಲಾಂ. ಯೊ]ತ್ತುವ ಧಗೆಯು ಹೊಱಗಣ ತಳಿತ ಬಿಮ್ಮಿನ ನಗೆಯು ನೃಪವಮಂಡಲದ ವಹೊಳೆಯನೇನನೆಂಬೆನು (ಕುವ್ಯಾ. ೦೩-೯೭). ೯. (ಅಲಂ) ಉದ್ವೇಗಗೊಳ್ಳು ; ಉದ್ವಿಗ್ನವಾಗು : ದುಗುಡವ ಹಿಡಿದ ರಾಯನ ಕೆತ್ತ ಮುಖವನು ಕಂಡು ಭಟರೆದೆ ಪೊತ್ತಿದವು ಹೊಗೆದೋಱದವು ಮೋಱೆಗಳು ಪಟುಭಟರ (ಕುವ್ಯಾದ್ರೋ. ೦೫-೫). ೧೦. ಸಂಕಟಪಡು; ನೋಯು : ಮಾಡಿದ ಭೃತ್ಯರಪರಾಧಕ್ಕೆ ಚಿಂತಿಸಿ ಸುಯ್ದು ತನ್ನೊಳಗೆ ಹೊತ್ತುವೆದೆಯಲಿ ರವಿತನಯನಳಲುತ್ತ ನುಡಿದನು ದೂತರಿಗೆ (ಕಿಭಾಗ. ೬-೪-೨೦). ೧೧. ಸಂಕಟಪಡಿಸು; ನೋಯಿಸು : ಭಾಷೆ ಸಲ್ಲದೆ ಹೋಯಿ ತೆನ್ನಯ ವಾಸಿ ವರ್ಧಿಸಿ ಹೊತ್ತುತಿದೆ ಕೈಲಾಸದವರಿದ ಕೇಳಿ ನಗುವಂತಾ ಯಿತೇ ಎನಗೆ (ಶ್ರಬುಂ. ೭-೬೭). [ದೇ.॥ ತಮಿ. ತುಳು. ಪೊತ್ತು]

**ಪೊತ್ತು₃** 'ಪೊಱು' ಪರಾ.

**ಪೊತ್ತು₄, ಹೊತ್ತು₄** (ನಾ). ೧. ಹತ್ತಿಕೊಂಡಿರುವಿಕೆ ; ಉರಿಯುವಿಕೆ ; ಜ್ವಲನ: (೫). ೨. ಸೀದು ಹೋದುದು ; ಕರಿಕಾದುದು ; ಸೀದು ತಳಹಿಡಿದ ಅನ್ನ ಮುಂತಾದುದು : "ಪೊತ್ತು—ಅಗ್ನಿ ಪಟೂಕರಣೇ, ಅತಿಪಕ್ವಾನ್ನೇ ಚ (ಸೀದ ಅನ್ನ)" (ಕವುರಾ); "ಇಂಗಳವ ಪಟುಪಾಟ್ಟಲ್ಲಿಯತಿಪಕ್ವದೊಳು ಪೊತ್ತು" (ಕಿವಮಂ. ೯೯). **ಹೊತ್ತು₄** : ೨. ದಗ್ಧಿಕೆ=ಸುಟ್ಟ ಅನ್ನ, ಹೊತ್ತು (ಗಂಗಾಪು. ೦೬೨). [<ಪೊತ್ತು₁]

**ಪೊತ್ತು₄** 'ಪೊಟ್ಟು' ನೋ.

**ಪೊತ್ತುಂಗೊಱಡು** (ನಾ). ಉರಿಯುತ್ತಿರುವ ಮರದ ತುಂಡು ; ಉರಿಗೊರಡು ; ಕೊಳ್ಳಿ : ಉಕಾರಾಂತದೊಳ್ ಗಕಾರಂ ಪರವಾದುದರ್ಕೆ —ಎತ್ತುಂಗೋಲ್, ಕುತ್ತುಂಗಱ್, ಪೊತ್ತುಂಗೊಱಡು (ಕವುರ. ೦೭೦ ಕೃಯೋ). [ಪೊತ್ತು₁ + ಕೊಱಡು (<ಕೊಱಂಡು)]

**ಪೊತ್ತುಗಳೆ** 'ಪೊಟ್ಟುಗಳೆ' ನೋ.

**ಪೊತ್ತುಗೆ** (ನಾ). ೧. ಹತ್ತಿಕೊಳ್ಳುವಿಕೆ; ಉರಿಯುವಿಕೆ; ಪುಟಗೊಳ್ಳುವಿಕೆ. ೨. ಬೆಂಕಿ; ಜ್ವಾಲೆ ; ಉರಿ : ಮಿಕ್ಕು ಸೂಸುವ ತೂಱುಗಿಡಿಗಳ ಕಣಾಳಿಗಳ ಕೌರಿಡುವ ಪೊತ್ತುಗೆಗಳ . . . ಮೊಗೆವ ಪೆರ್ಗಿಚ್ಚುಗಳ ವೆಂಕೆ ಮೋಲಿಕ್ಕಿದುದು ಹೇಸಧ್ವಜನ ಸೇನೆ ಬೆಂದು ಬೇಗುದಿಗೊಂಡುದಾಕ್ಷಣ ದೊಳು (ಕೈಬಿಭಾ. ೦೩-೦೨). [ಪೊತ್ತು₁ + -ಗೆ]

**ಪೊತ್ತುಪೋಕ, ಹೊತ್ತುಹೋಕ** (ನಾ). (ವ್ಯರ್ಥವಾಗಿ) ಕಾಲ ಕಳೆಯುವವನು; ಕಾಲಹರಣ ಮಾಡುವವನು : ದ್ಯೂತದುರ್ವ್ಯಸನಿ ಗಳೆನಿಪ್ಪ ಪೊತ್ತುಪೋಕರುಗಳೊಡನಾಡಿ ತನ್ನಯ ಲಿಂಗಪೂಜೆ ಲಿಂಗ ಧ್ಯಾನದಾ ಗೊತ್ತನಱಿಯದೆ . . . ಭಂಗಿಯು ತಿಂದವೋಲಿರ್ಪಗೆತ್ತಣದು ಲಿಂಗನಿಷ್ಠೆ (ಸಿದ್ಧೇಶ. ೨೨-೬೬). **ಹೊತ್ತುಹೋಕ** : ವೇದವ ಪಠಿಸುವಲ್ಲಿ ಶಾಸ್ತ್ರವನೋದುವಲ್ಲಿ . . . ಪಗುಡಿ ಪರಿಹಾಸಕರ ಅರ್ತಿಕಾಱರ ಹೊತ್ತು ಹೋಕನಿಗಾಗಿ ಘಟ್ಟುವರ ಕೂಡಲುಂಟೆ (ಕಂಬವ.ಕ. ೩೮೯-೯೨); ಅಸತ್ಯದಲ್ಲಿ ನಡದು ವಿಪ್ರರು ನಾವು ಘನವೆಂದು ಹೋರುವ ಹೊತ್ತುಹೋಕರ ಮಾತೇ ತಕ್ಕೆ (ಸರ್ವವ. ೦೦೩-೫೫೯); ಬಱದೆ ಹೊತ್ತುಹೋಕರೊಳಾಡದಿರು (ಸದ್ಗುರು. ೨-೦೩). [ಪೊತ್ತು₄ (< ಪೊಟ್ಟು) + ಪೋಕ]

**ಪೊತ್ತುವೆಳಗು** (ನಾ). ಪ್ರಾತಃಕಾಲದ ಬೆಳಕು ; ಬೆಳಗಿನ ಹೊಳಪು : ಕೆತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ ಪೊತ್ತುವೆಳಗಂ ಬೇಱೆ ತೋರ್ಪ ರಾರ್ (ಕೈಬಿಭಾ. ೨-೦೬). [ಪೊತ್ತು₄ (< ಪೊಟ್ಟು) + ಬೆಳಗು₁]

**ಪೊತ್ತೆ** (ನಾ). ಕುಚ್ಚು; ಗೊಂಚಲು; ಗುಚ್ಛ: ಮರದಲ್ಲಿ ಪೊತ್ತೆ ಪೊತ್ತೆಯಾಗಿ ಹಿಡಿದ ಕಾಯಿಗಳೊಳಗಿಂದ ಒಂದು ಕಾಯನ್ನು ತೆಗೆದು ತಿನ್ನುತ್ತಿದ್ದಂತೆ ಅದರ ಹುಳಿರಸಕ್ಕೆ ಮೈಮೇಲೆ ಮುಳ್ಳು ನಿಂತವು (ಮೂರುದಾ. ೨೨೫); ಅಂಗಡಿಯ ಹುಡುಗ ಬಸ್ಯಾ ಒವ ಇವರಿಂದ ಕೀಲಿಕೈ ಪೊತ್ತೆಯನ್ನು ತೆಗೆದುಕೊಂಡು ಬಾಗಿಲು ತೆರೆಯುತ್ತ (ಮೂರುದಾ. ೨೫೬).

[ದೇ. ॥ ತಮಿ. ಪೊತ್ತೈ = ದೊಡ್ಡದು ]

**ಪೊತ್ತೆಮಿಸೆ** (ನಾ): ಕುಚ್ಚು ಕುಚ್ಚಾಗಿರುವ ಮಿಸೆ ; ಹೊದೆಮೀಸೆ : ಮೋರೆಗೆ ಇಪ್ಪುದ್ದ ಕಪ್ಪು ಪೊತ್ತೆ—ಮಿಸೆಗಳು ; ಕಪ್ಪು ಎದೆಯ ಮೇಲೆ ಕಪ್ಪು ರೋಮ (ಹೊಸಕ. ೦೭೦). [ ಪೊತ್ತೆ + ಮಿಸೆ ]

**ಪೊತ್ಥು** ' ಪೊತ್ತು₂ ' ನೋ.

**ಪೊದಕುಳಿ**, ಹೊದಕುಳ, ಹೊದಕುಳಿ (ನಾ). ಅಳಲು ; ದುಃಖ ; ನೋವು : ' ಪೊದಕುಳಿಗೊಳ್ ' ಪರಾ. **ಹೊದಕುಳ** : ಇದಕ್ಕೆ ಪರಿ ಹಾರವನು ನೀ ಮಾಡದರೆ ನಾನಿಹೆನಲ್ಲದಿರ್ದೊಡೆ ಹೊದಕುಳದಿ ನಲುಗುತ್ತ ಲಿರಬೇಕನಿತು ನೀವಿದ್ದು (ಕಿಪ್ಸಿಸ್ತಿ. ೦-೬೩). **ಹೊದಕುಳಿ** : " ಹೊದ ಕುಳಿಯೆನೆ ಸಂತಾಪಂ" (ಭಾರತಿ. ೨೯); ಆ ಚದುರರ್ಗೆ . . . ಮುಕ್ತಿ ಯಲ್ಲದೆ ಭವದ ಸಂಕಟದ ಹೊದಕುಳಿಯುಮಿಲ್ಲೆಂಬುದಕ್ಕಿದೇ ಸಾಕ್ಷಿ ಯಾಯ್ತು (ಸದ್ಯುಕಾ. ೦೦-೫೫).

**ಪೊದಕುಳಿಗೊಳ್**, ಹೊದಕುಳಿಗೊಳ್, ಹೊದಕುಳಿಗೊಳು (ಕ್ರಿ). ದುಃಖಪಡು ; ಶೋಕಗೊಳ್ಳು ; ನೋವನ್ನು ಹೊಂದು : ಪಿರಿ ದಾಗೆ ಪುಣ್ಯದ ಪೊಱೆಯುದನೆತ್ತುವೊಡರಿದಾಗಿ ಪೊದಕುಳಿಗೊಳ್ವ ಪರಿ ಯೊಳು ಸಾಷ್ಟಾಂಗವೆಱಗಿ (ಜಾಗಕು. ೦೩-೬೫); ಈ ವನದೊಳಿನ್ನು ಪುಣ್ಯಾ ಶ್ರಮಂ ಗೋಚರಿಪುದೇ . . . ಹೇಳೆಂದು ಸೀತೆ ಪೊದಕುಳಿಗೊಂಡಳು (ಕೈಬಿಭಾ. ೦೯-೦೨). **ಹೊದಕುಳಿಗೊಳ್** : ಆಶಾಪಾಶದಿಂದ ತೊಳಲಿ ತ್ತಯ್ಯ ಎನ್ನ ಕಾಯವು ಆಶೆಯಿಂದ ಹೊದಕುಳಿಗೊಂಡಿತ್ತಯ್ಯ ಎನ್ನ ಮನವು (ವಚನ. I. ೨೬೩-೦೭); ತೊಲತೊಲಗು ತರುವಲಿಗೆ ರಣವಿದು ಸುಲಭವೇ ಲೋಕೈಕವೀರರು ಹಲಬರಿದಱೊಳು ಹೊಕ್ಕು ಹೊದಕುಳಿ ಗೊಂಡು ಹೋದರಲೆ (ಕುವ್ಯಾಕ. ೯-೦೨) ; ಪಾಂಡವನ ಸೇನೆ ಅಟ್ಟಿ ಸುಡು ವನಲಧೂಮಜ್ವಾಲೆಗೊಡನೆ ಗೋಳಿಟ್ಟು ಹೊದಕುಳಿಗೊಂಡು ಹೊರಳು ತಿರಲು (ಕೈಬಿಭಾ. ೮-೯೦) ; ಸರ್ವಜೀವರುಗಳಂತೆ ಉತ್ಪತ್ತಿ ಸ್ಥಿತಿ ಪ್ರಳಯಂಗಳೆಂಬ ಕಷ್ಟಬಂಧನಂಗಳಲ್ಲಿ ಸಿಲ್ಕಿ ಹೊದಕುಳಿಗೊಂಬನೆ ಶಿವನು (ಅಬಂಡೇ. ೦೦೬-೬೨). **ಹೊದಕುಳಿಗೊಳು** : ಇಳೆಯ ಮೇಲಾವ ವಾದಿ ಗಳು ಹದುಳವೇಲೆಂದೆತ್ತಲಾಱದೆ ಹೊದಕುಳಿಗೊಳುತ ನೋಡುತಿರ್ದಹರು (ಶಿಕಕ. ೩೩-೬೭) ; ದುಗುಡವ ಹೇಱು ಹೊದಕುಳಿಗೊಳುತಲಿರ್ದುದು ಹಸ್ತಿನಾನಗರ (ಕುವ್ಯಾಕ. ೮-೩) ; ಶುನನಂತೆ ಮನೆಮನೆಗೆ ತಿರುಗಿ ದೈನ್ಯಂಬಟ್ಟು . . . ಹೊದಕುಳಿಗೊಳುತ್ತ (ತತ್ವಕ. ೨೮-೯).

[ ಪೊದಕುಳಿ + ಕೊಳ್₁ ]

**ಪೊದಕೆ₁, ಪೊದಟ್ಕೆ₂, ಪೊದಿಕೆ, ಹೊದಕೆ₁, ಹೊದಿಕೆ₁, ಹೊದ್ದಿಕೆ₁** (ನಾ). ೧. ಮುಚ್ಚಲು ಬಳಸುವ ವಸ್ತು ; ಮುಸುಕು ; ಆಚ್ಛಾದನೆ : ಪಲವು ಪೊದಕೆಗಳ್ ಬಿಗಿದಿರ್ಪುದವಸನ್ ಮುಡಿಯಿಂದುಮುಡಿವರಂ (ಬಿದ್ಯಶ್ಯ. ೬-೯೯). ೨. ಹೊದೆಯುವ ವಸ್ತ್ರ,—ಬಟ್ಟೆ ; ಅಂಗವಸ್ತ್ರ, ಸೆರಗು ಮುಂತಾದ ಮೇಲುಹೊದಿಕೆ : ಚಿಂದಿತ ಪಾರಿಯ ಚಿಮ್ಮುರಿ ಮುಂಗಯ್ಯ ಮುಂದಣ ಪೊದಕೆಯ ಸೆಱಗು ಅಂದವಾಗಿರೆ ಕರ್ನಾಟದರಸುಗಳು ಬಂದು ಕಂಡರು ಮಾತಂಗಿಯನು (ಕುಂಠಸಾಂ. ೯೦-೯೩); ತರದ ಕೊಂಬಿನ ಲಾಳಿಯಂ ಮುಟ್ಟ

ಸದೆ ರುಚಿರತರಮಾದ ಪೊದಕೆಯಂ ನೆಬ್ಬಿಸಿಕೊಳ್ವುದೆ ನಿರಂತರದೊಳಿರ್ಪ ತ್ರೊಂದನೆಯ ಶೀಲ (ಶಾಸೋಕ. ೨-೬೦). ೩. (ಮನೆ, ಗುಡಿಸಲು ಮುಂತಾದುವುಗಳ) ಛಾವಣಿ; ಮೇಲ್ಛಾವಣಿ: ಮಾಳಿಯ ಕಂಭ ವಿಲ್ಲಿ . . . ತಗುಳ್ದೇಳಿದಮಪ್ಪ ತೋಲ್ ಪೊದಕೆ ಮಾಂಸಮೆ ಕೇರ್ಗಳಮೇಧ್ಯ ಪೂರ್ಣ ದೇಹಾಳಯಂ (ಜೀವಸಂ. ೧೩೦-೨೨); ಬಾಲಸತ್ಪಲ್ಲವದ ಪೊದಕೆಯಿಂದಿಕ್ಷುದಂಡುಗಳಿಂ ಕಟ್ಟೊಗ್ಗಿಕಂ ನಾನಾಲತಾಂತಪ್ರಸರಸತಯುತಂಗಳ್ ಪ್ರಪಾಮಂಟಪಂಗಳ್ (ರಾಜಶೇ. ೨-೨೦); ಪಸುರೆಲೆಯ ನಟ್ಟವನೆ, ಸಳಿಗೊಂಬಿನ ಕೇರ್, ಪಣ್ಣೆಲೆಯ ಪೊದಕೆ . . . ಅಲಜೊರ್ಂಪದ ಮೇಲ್ಕಟ್ಟು ಚೆಲ್ವಾಗೆ ಕಣ್ಗಂ ಮನಕಮಿಂಬಾದ ಪರ್ಣಕುಟಿಯಂನೇರ್ಪಡಿಸಿ (ರಾಮಾಶ್ವ. ೮೯-೦೦). ೪. (ವಸ್ತ್ರ ಮುಂತಾದುವುಗಳ) ಗಂಟು,–ಮೂಟೆ,–ಹೊರೆ: ಅಡಕೆ ೨೫ ಕತ್ತೆಯ ಬರಕಕ್ಕೆ ಪೊಂಗೆ ಅಡಕೆ ೨೦ ಸೀರೆಯ ಸುಂಕ ಪೊದಕೆಗೆ ಪಾಗ ೨ ಸೀರೆಗೆ ಪಾಗ ೧ ಮೊಟ್ಟೆಯ ಸೀರೆಗೆ ಪೊಂಗೆ ಪಣ ೧ (ಶಾಂತೇಶ. ೩-೨೨ ವ; 1047). **ಪೊದಟ್ಕೆ₂**: ೨. ಭೋಂಕನೆ ಪಜ್ಜಳಿಪ ತನ್ನ ಸನ್ನುತವದನಸುಧಾಕರಬಿಂಬದಿನೊಸೆವ ಚಂದ್ರಿಕಾವಿಸ್ತಾರದಂತೆ ತೋರ್ಪಧಿಕಸಿತಧವಳಲೋಳಲೋಚನಂಗಳ ಬೆಳಗಿನ ಬಳಗದಿಂ ನಿಳಯಲಕ್ಷ್ಮಿಗೆ ಬೆಳ್ಪಸದನದ ಪೊದಟ್ಕೆಯನಿತ್ತು (ವರ್ಧ. ೦೩-೬೩ ವ). **ಪೊಧಿಕೆ**: ೧. ಕಂಡಪ್ಪಾಂಗಪ್ರಣಾಮಂಬೆರಸು ಹಂಸದಿಂ ನಾರದಂ . . . ಹಿಂಡೇಳ್ವಾನಂದರೋಮಾಂಚದ ಪೊದಿ[ಶಾಕಾಂ. ದ]ಕೆಗಳಂ ತಾಳ್ದು ನಿಂದಿರ್ದು . . . ಸ್ತೋತ್ರಮಂ ಮಾಡುತಿರ್ದಂ (ಗಂಕ. ೪-೯೫). ೨. ಗದಗದಿಪ ಕರಕಮಲಮಂ ಕಂಡು ದಾತಿಚರ್ಮದ ಪೊಧಿಕೆಯಿಂದದಂ ಮುಚ್ಚಿ (ಶಬ. ೫೨-೦). ೩. ಕುಳಿರ್ವ ಕುಳಿರ್ವೆರ ಕೇರ್ಗಟ್ಟಿನಿಂ ಅಸುಕೆಯ ಕಿಸುದಳಿರ ಪೊದಿ[ಶಾಕಾಂ. ದ]ಕೆಯಿಂ ಪಜ್ಜಳಿಸುವ ಪನ್ನೀರ ಚಳಿಯದಿಂ . . . ಲೀಲೆವಡೆದ ಲತಾಗೃಹಂ ಲತಾಂತಶರಜನ್ಮಭವನದಂತಿರ್ದುದು (ದಶಕು. ೦೦-೬೨ ವ). **ಹೊದಕೆ₁**: ೧. 'ಮೇಲುಹೊದಕೆ' ಪರಾ. ೨. ಧವಳದ ಕಾಂತಿಯ ನಿಲವೋ ರುದ್ರಾಕ್ಷಿಯ ಹಂಗು ಬೇಡವೆಂದು ಹೊದ್ದ ಚರ್ಮದ ಹೊದಕೆಯಂ ತೆಗೆದ ಗಟಗಿಟಜುತ್ರದ ನಿಲವೊ (ಶೂನ್ಯಸಂ. ೦೦೭-೪); ಹಿರಿಯ ಮೆಳೆಯಡಿಯಲ್ಲಿ ಹೊದಕೆಯಂ ಹಾಸಿ ಕುಳ್ಳಿರಿಸಿ (ಸಿದ್ಧರಾ. ೨-೬೨); ಕಳಿದರೀ ಚಂಡಾಂಶುವಂಶೋಜ್ವಲರು ಬಳಿಕಾ ಹಿಮಸಮಯವನು ಪುಲಿದೊಗಲ ಹರಿಣಾಜಿನದ ಹಾಸಿಕೆಯ ಹೊದಕೆಯಲಿ (ತೊರರಾ. ೩-೨-೫). ೩. "ಆಚ್ಛಾದನಂ, ವಲಭಿಃ – ಈ ೨ ಮನೆಯ ಹೊ(ದಿ)ದಕೆ" (ಹಲಾಯು. ೫೦-೦೯೬); ಕರಮೆಸೆದವು ಲತೆಗಳನೆಟ್ಟಿರದಿಂ ಪಟ್ಟೆಲೆಯ ಹೊದಕೆ ಬೆಳ್ವಾಳದ ಬೇರ್ ಸಿರಿಖಂಡದ ವಳಯಂ ಕಪ್ಪುರವಳುಕಿನ ಜಗಲಿ ಕೇತಕೀರಜದ ಮಟಲ್ (ಸೂಕ್ತಿಸು. ೦೦-೬೦); ಹೊಂದಗಡಿನ ಹೊದಕೆಯ ಮನೆ ಬಹಳ ನೇರಂದವಡೆವ ಪಟ್ಟಶಾಲೆ ಮುಂದೆಸೆಯಲಿ ತುಳಸಿಯ ಮಂಟಪದಿ ಗೋವಿಂದನ ಕೀರ್ತಿಸುತಿಹರು (ಮೋಹತ. ೩-೩೪). ೪. ಒಂದುದಿನ ಮಡಿವಾಳ ಹೊದಕೆಯ ತಂದ ಕತ್ತೆಗೆ ಲಿಂಗವಿರದಿರೆ ಕೊಂದು ಇರಿಸಾಕ್ಷಣದಿ ಅವ ಸಹವಾಗಿ ಕತ್ತೆಯನು (ಬಸ್ವಪು. ೫೦-೨). **ಹೊದಿಕೆ₁**: ೧. ಏಳು ನೆಲೆಯ ಕರುವಾಡದುಪ್ಪರಿಗೆಯೊಳಗೆ ಒಂದೆ ಮುತ್ತಿನ ನೆಲಗಟ್ಟಿನ ಮೇಲೆ ಭಿತ್ತಿ ಇಲ್ಲದ ರತ್ನದ ಹೊದಿಕೆಯ ಮೇಲಿಪ್ಪ ಕಳಸವ ಕಂಡವರನಾರನು ಕಾಣೆ (ಅಪ್ರವ. ಮು. ೨೩೦-೬೯೨); ಕಾಮದ ಒಡಲು ಕ್ರೋಧದ ಗೊತ್ತು . . . ಮತ್ಸರದ ಹೊದಿಕೆ ಆ ಭಾವವಟತಲ್ಲದೆ ಚೆನ್ನಮಲ್ಲಿಕಾರ್ಜುನನ ಅರಿವು ದಕ್ಕೆ ಇಂಬಿಲ್ಲ ಕಾಣಿರಣ್ಣ (ಮಹಾದೇ. ಬ. ೪೪-೧೦೪); ಎಲುಬು ಗಳವ ಮಾಡಿ ನರದ ಬಳ್ಳಿಯಲ್ಲಿ ಬಿಗಿಯುತ . . . ಮಲಿನಚರ್ಮವನ್ನು ಹೊದಿಕೆಯೆಳೆದು ನಿತ್ಯ ಬೆಳೆವ ಈ ಹೊಲೆಯ ಗೂಡಿನೊಳಗೆ ಜನಿಸಲಾಜ್ ಲಕ್ಷ್ಮಿಯ ರಸನೆ (ಪುರಂದ. ೦-೦೬೬-೨). ೨. ನೀರ ಬೊಂಬೆಯ ಚೋಹವ ತೊಟ್ಟು ಅಗ್ನಿಯ ಬಣ್ಣದ ಹೊದಿ[ಶಾಕಾಂ. ದ]ಕೆಯ ಹೊದ್ದು ಗಾಳಿಯ ಗತಿಯಲ್ಲಿ ಸುಳಿದಾಡುವ ಪ್ರಾಣಿಗಳು ದೇವರನೆತ್ತ ಬಲ್ಲರು (ಅಪ್ರವ. ೨೦೬-೯೩೦; ಶೂನ್ಯಸಂ. ೬-೦೦ ನೋ); ತಮತಮಗೆ ನೆರೆದು ಬೆಚ್ಚಂಬಿಲವ ಕಡುಗೋಲ ಕಪ್ಪಡವನರಳಿಯಂ ತೈಲವಂ ತಾ ಬೇಗಲೆನುತಲಾತನ ಹೊದಿಕೆಯಂ ತೆಗೆದರು (ಸಿದ್ಧರಾ. ೨-೨); ಗಡ್ಡದ ಮುದುಕರು . . . ಕಂಗೆಟ್ಟು ಹಾಯ್ದರು ಹೊದಿ[ಶಾಕಾಂ. ದ]ಕೆ ದಂಡು ಕಮಂಡಲವ ಬಿಸುಟಳಿಳದೆಸೆದೆಸೆಗೆ (ತೊರರಾ. ೦-೦೦-೦೨); ಹೊದಿಕೆಯನ್ನು ಕೆಗೆದು ದೂರಕ್ಕೆ ಎಸೆದೆನು (ಪಂಟರು. ೯೯). ೩. "ಪಟಲಂ, ಛದಿಃ–೨ ಮನೆಯ ಮೇಲುಹೊದಿಕೆಯ ಪೆಸರು, ಮನೆಯ ಮೇಲುಮುಚ್ಚಳ" (ಸಿದ್ಧಾಂತಿ. ೦೦೩); ಹೊಡಿದೆಲು ಮಾರಮುಟ್ಟು ಮಾಂಸದ ಗೋಡೆ ಚರ್ಮದ ಹೊದಿಕೆ ನರವಿನ ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು (ಹಂಸಾ. ೬೫); ಒಲೆಗಳನ್ನು. . .ಹುಲ್ಲಿನ ಹೊದಿಕೆಯ ಮನೆಗಳಲ್ಲಿ ಸುರಕ್ಷಿತವಾಗಿ ಉಪಯೋಗಿಸಬಹುದೆ? (ಅಡುಗೆ. ೨೯). ೫. (ಪುಸ್ತಕ ಮೊದಲಾದುವುಗಳ) ರಕ್ಷಾಕವಚ; ರಟ್ಟು: "(ಅಂಚೆಯ ಮೂಲಕ ಕಳಿಸುವ ವೃತ್ತಪತ್ರಿಕೆ, ಕಟ್ಟು, ಮೊ.ಗಳ ಮೇಲಿನ) ಆವರಣ, ಸುತ್ತುಹಾಳೆ; (ಪುಸ್ತಕಗಳಿಗೆ ಹಾಕಿರುವ, ಕಳಚಲಾಗುವ) ಕವಚ, ಹೊದಿಕೆ" (Wrapper. ಇಂಕಶ); ಆ ಹೊಸಪುಸ್ತಕದ ಹೊದಿಕೆ ಹರಿದು ಹೋಗಿದೆ (ರೂಢಿ). **ಹೊದ್ದಿಕೆ₁**: ೧. ಮಾಸವೆರಡರಲಿ ತಿರ ಮಾಸ ಮೂರಲಿಚೊಳಂಗ ಮಾಸ ನಾಲ್ಕರಲಿ ಚರ್ಮದ ಹೊದ್ದಿಕೆ (ಪುರಂದ. ೦-೦೫೨-೩).

[ಪೊದ್₁ + –ಕೆ]

**ಪೊದಕೆ₂**, **ಪದಿಕೆ**, **ಹದಿಕೆ₁**, **ಹದಿಗೆ₁**, **ಹದ್ದಿಕೆ**, **ಹೊದಕೆ₃**, **ಹೊದಿಕೆ₂** (ನಾ). ಒಂದು ಬಗೆಯ ತೆರಿಗೆ: ಬಂಮರಸದೇವನು ಶ್ರೀರಾಯ ಕೇಶವಪುರವಾದ ಮೊರಲೆಯ ಸಿದ್ಧಾಯ ಪೊದಕೆ ಶ್ರೀಕೇಶವದೇವರ ಶ್ರೀ ಸಿದ್ದೇಶ್ವರದೇವರ ನಂದಾದೀವಿಗೆಯ ಸೊಡರೆಣ್ಣೆಯ ನಡಸುವಂತಾಗಿ ಕೊಟ್ಟ ಗ ೫ (ಪ್ರಎಂ. ೦೯೩೨, ೩೬-೨; 1245). **ಪದಿಕೆ**: ಗೌಡಿಕೆ ಮಾನ್ಯ ಪೇಠೆ ಪದಿಕೆ ಸಿದ್ಧಾಯ ದಾಯ ಕಾರಕ ಕಣ್ಣಾವಣ ಮೊದಲ ವಿಧ್ಯ× ×ಸುಂಟಾದನುವು ಮಾಡ್ಸಿ ಕೊಣ್ಡ (ಎಕ VIII. ಸೊರಬ. ೨೬೬-೩೪; 1629 ?). **ಹದಿಕೆ₁**: ಉಪಾಧ್ಯಾಯರ್ಗೆ ಮುಂಚಿದ ಹದಿಕೆಯಲ್ಲೀವಿತಮುಂ ಕೊಟ್ಟು (ಸೌಇಇ. XI-ii, ೦೬೩-೫೬; 1124); ಮೂಜಿಡಿ ಮಣ್ಣಿಗೆ ಅಬು ಹೊನ್ನ ತೆತ್ತು ವಿಾಚಿ ಹದಿಕೆಯ ಬೇಡೆ(ಕೊಳ್ಳಿ) ನಂದೀಗ್ರಾಮದವರ ಮುಂದಿಟ್ಟು ವಿಾಚಲಿಲ್ಲ (ಸರ್ಪವ. ೦೦೪-೫೬೪); ಸಲಿವ್ಮೆಯ ಹದಿಕೆಯ ನೆತ್ತುವ ಹೆಗ್ಗಡೆಗಳಾರು ಬಂದಡಂ ತಂಮ ಧರ್ಮ್ಮವಾಗಿ ಪ್ರತಿಪಾಳಿಸುವರು (ಸೌಇಇ. IX-i, ೩೪೯-೯; 1282); ಮೊಚಿದೆದ್ದು ಸಕಲ ರಾಣಿಮವೆಯೊಂದು ಹುರಿಯಾಗಿ ಪುರವರದೊಳಿತ್ತಿ ಹದಿಕೆಯನು (ಸಮ್ಯಕ್. ೨-೫೯). **ಹದಿಗೆ₁**: ಹದಿಗೆಯಾಗಿ ಗ ೭೨× ×ದಲೂ ಯುಪ್ಪತ್ತೆರಡನೂ ತೆತ್ತು (ಎಕ. IX (S), ಕುಣಿಗ. ೨೭-೦೮; 1563). **ಹದ್ದಿಕೆ**: ಗ್ರಾಮ ವಂದಕ್ಕಂ ಕುಳಗ ೨॥ ೦॥ ೭ ಗಂಪತಿಕುಳ ೧ ಹದ್ದಿಕೆ ೯ (ಪ್ರಎಂ. ೦೯೩೪, ೨೭-೦೪; 1430). **ಹೊದಕೆ₃**: ಆ ಹತ್ತು ವೃತ್ತಿಯ ಸಿದ್ಧಾಯ ಸೇಸೆ ಅಳಿವು ಅನ್ಯಾಯ ಹೊಪಕೆ ಮುಖ್ಯವಾಗಿ ಏನು ತೆಲುಗಡೆ ಬನ್ದಡೆವೂ. . .ನಡಸುವನ್ತಾಗಿ. . .ಧಾರಾಪೂರ್ವ್ವಕಂ ಮಾಡಿಕೊಟ್ಟರು (ಎಕ. XII. ಶಿಕ್ಕನಾ. ೨-೨೩; 1261); ಆವುಗೆ ಅನಾಯ ಹೊವಕೆ ಸಹಿತವಾಗಿ ಏನು ಬಂದದೂ ಸರ್ವ್ವಮಾಂನ್ಯವಾಗಿ ಅರಸುಗಳು ಯೇನುಬಂದದನೂ ಯಿಳಿಹಿಕೊಟ್ಟ ದರ್ಮ (ಕಇ. III-i, ೬-೪೪; 1348); ಆ ಪುರದ ಚತುಸ್ಸೀಮೆಯೊಳಗಣ ಅಕ್ಷೀಣಿ ಆಗಾಮಿ ನಿಧಿ ನಿಕ್ಷೇಪ ಜಲ ಪಾಶಾಣ ಸಿದ್ಧ ಸಾಧ್ಯ ಸಿದ್ಧಾಯ ಹೊವಕೆ ಹದಿಕೆ ಕಾಣಿಕೆ ಕಡ್ದಾಯ . . . ಅಷ್ಟಭೋಗತೇಜಸ್ವಾಮ್ಯವನು (ಎಕ. XI, ಚಿತ್ರದು. ೨-೨೨;1355). **ಹೊದಿಕೆ₂**: ಶಾಂತಿಗ್ರಾಮದ ಅಧಿಕಾರಿಗಳು ಪ್ರತಿವರ್ಷ ಸಲ್ವಂತಾಗಿ ವರದನರಸಿಂಹದೇವರ್ಗೆ ತಂಮ ಹೊದಕೆಯ ಹೊಂನಿನೊಳಗೆ ಹತ್ತು ಗದ್ಯಾಣ ಹೊನ್ನನು ದೇವರ ಹೊದಿಕೆಯಿಂ ಧಾರಾಪೂರ್ವ್ವಕಂ

ವಮಾಡಿ ಕೊಟ್ಟರು (ಕ್ಕ.ಅಂ. ೦೬೯೦, ೩-೨೯ ; 1216); ಆ ಸೋಮನಾಥಪುರಕ್ಕೆ ಉರುತ್ತವಾಗಿ ಬನ್ದ ಹದಿಕೆ ಹೊರಣೆ ಹೊದಿಕೆ ಮುಳ್ಳುಯುವೊಳಗಾಯಿತ್ತು (ಎಕ. III, ತಿರುಮ. ೯೬-೯೨ ; 1300) ; ಅರಮನೆಯಿಂದ ಬಂದ ಹದಿಕೆ ಹೊದಿಕೆ ಮಗಮೆ ××× ಸಿದ್ದಾಯ ಮನೆವಾರ್ತೆ ಹಣಕಾಹುಕಾಣಿಕೆ (ಕ್ಕ.ಅಂ. ೦೬೬೯, ೩೯-೨೩; 1435).

**ಪೊದವು, ಹೊದವ್ಪು₁, ಹೊದೆವು** (ನಾ). ಹೊದೆಯುವ ವಸ್ತ್ರ ; ಹೊದಿಕೆ ; ಮೇಲುವಸ್ತ್ರ : ಚರವೇಷದಿಂ ಶಂಭು ಬಂದು ಪೊದವಂ ಬೇಡೆ ತರಳಾಕ್ಷಿಯುಟ್ಟುಟುವೆಯಂ ಕೊಡಲು (ಶಾಶಕ. ೯-೨೩); ಅಂಬುಜನಾಭನಾ ಸಭಾಮಂಟಪವನುಳಿದು ಮಣಿವ್ರಜದ ದೀಪ್ತಿಯ ಬೆಳಗಿನಿಂದ ಸ್ವಮಂದಿರಕೆ ಪೋಗಿ ಪೊದವಂ ತೆಗೆಯಲು (ಪಶುಪೋ. ೦೬-೦೬). **ಹೊದಪ್ಪು₁** : ಚಿನ್ಮಯ ಚಿದ್ರೂಪ ಚಿತ್ಪ್ರಕಾಶವೇ ತನ್ನ ಹೊದವು (ಭಕಣ. II, ೦೩೯-೦) ; ಮಱೆಯೊಳು ರಮಿಸಿದರೆನೆ ಸಾಕು ಹೊದಕಿನ ಮಱೆ ಹೋಯ್ತು ಪುಳಕವಾಯ್ತೆಂದು ತುಱುಬಳೆದುದು ದೇಹ ಕಂಪಿಸಿತೆಂದದ ಹೊಱಹೊವ್ಮು ಸುವುದಾವ ಪ್ರೌಢಿ (ಶಠಕ. ೦೦-೦೦೬); ಹಜಾಮುರಿಗೆ ಕೆವ್ಪಿನ ಗಣಗಳಹುವು ಕೆವ್ಪಿನ ಹೊದವು ಸಾಣೆ ಕಟಕಡೆ ಬಾಗಲುಯಿದು ಹಜಾಮನಿಗೆ ಸಲುವದುಯೆನ್ದು . . . ದೇಶನಾಡಿನವರು ಗ್ರಾಮಾಧಿಪತಿಗಳು ಕರಣಿಕರು ಸಹ ಹೇಳಿದರು (ಎಕ. IX, ಕಾನಕಾ. ೯೦-೩೬; 1700). **ಹೊದೆಪ್ಪು** : ವಿಶ್ವಭೂತಿಯೆಂಬಾ ಪಾರ್ವಂ ... ಒಂದುದಿನ ಪೊಡಲು ಹಿಡಿವಂತೆ ಬಾಯ್ಸುವಿಯಾಗು ವಂದದಿಂ ಕನಸುಮನಸಿನೊಳುಂಬುದಂ ಕಾಣನೊಂದುದಿನಮಾಗಿಯುಂ ಮೆಯ್ಯುಂಬ ಹೊದೆ[ಪಾಠಾಂ. ದ]ವುವಂ ಹೊದೆವುದಂ ಕಂಡಱಿಯನು (ಸುಕುಮಾ. ೬-೩೦). [ಪೊದೆ₁ + -ವು₂]

**ಪೊದಯಿಸು** 'ಪೊದೆಯಿಸು' ನೋ.

**ಪೊದರ್** 'ಪೊದಱ್' ನೋ.

**ಪೊದರು₁** 'ಪೊದಱ್' ನೋ.

**ಪೊದರು₂, ಹೊದರು₂** (ನಾ). ೧. (ಮರದ) ಪೊಟರೆ ; ಡೊಗರು : ಪೊಳ್ಳು, ಪೊಟ್ಟೆ (ಹೊಟ್ಟೆ), ಪೊದರು (ಹೊದರು), ಪದರು, ಡೊಗರು (ಕಂಮುಸು. ೬೮). ೨. (ನೆಲದಲ್ಲಿರುವ) ರಂಧ್ರ ; ಕುಳಿ ; ಬಿಲ ; "ತೂತು" (ಗಂಗಾಮ. ೨೦೬). **ಹೊದರು₂** : ೧. ಮರದ ಹೊದರಿನಲ್ಲಿ ಗಂಭೀರವಾದ ಘಟಸರ್ಪವಿರುವುದನ್ನು ಬೋಧರಾಯ ಅರಿತಿರಲಿಲ್ಲ ! (ರಕ್ತಕೃ. ೯೯); ಕಪ್ಪೆಯು ನಿದ್ದೆಯಿಂದ ಇದೇ ಎಚ್ಚತ್ತು ಸಾವಕಾಶವಾಗಿ ಕಾಲಿಡುತ್ತ ಚೆಲುಪತ್ರಿಯ ಗಿಡದ ಹೊದರಿನೊಳಗಿಂದ ಹೊರಕ್ಕೆ ಬಂದಿತು (ಕುಂಹಿಂ. ೬೬). ೨. ಹಾವ್ಯಗವು ನೆಲದ ಹೊದರಿನಲ್ಲಿ ಮನೆಮಾಡುತ್ತದೆ (ಕುಂಹಿಂಬಹು. ೯-೦೮೮); ಆಗ ಶಾಕ್ಯಸಂಭುಲಕನು ಅವನ ಶಕ್ತಿಯನ್ನು ಕಂಡು ಅವನೊಬ್ಬನ ಜೊತೆಗೆ ಬಂದು ನೆಲದ ಹೊದರನ್ನು ಹೊಕ್ಕನು (ಕವಜ. ೩೦). ೩. (ಅಲಂ) ಬಿರುಕು ; ಭಿನ್ನಾಭಿಪ್ರಾಯ : ಅಂತಃಪುರದಲ್ಲಿಯೂ ಎಲ್ಲಿಯಾದರೂ ಡೊಗರು ಬಿದ್ದಿದೆಯೋ, ಹೊದರು ಕೊರಕಲು ಆಗಿವೆಯೋ ಎಂಬ ಬಗ್ಗೆ ಒಮ್ಮೆಯಾದರೂ ಪರೀಕ್ಷಿಸಿ ನೋಡಬೇಕೆಂದು ಭೂಪತಿಯ ಮನಸ್ಸಿಗೆ ಹೊಳೆದಿರಲೇ ಇಲ್ಲ (ಇಶ್ವಕ. ೨೬೬).
[ದೇ. ‖ ತಮಿ. ಪೊನ್ದುರ್, ಪೊನ್ದು ; ಮಲ. ಪೊತ್ತು ; ತೆಲು. ಬೊಂದ, ಬೊತ್ತ]

**ಪೊದರೊಡೆ** 'ಪೊದಱೊಡೆ' ನೋ.

**ಪೊದರ್ಕೊದಳ್** (ನಾ). ಅತಿಶಯವಾಗಿ ಸೇರಿರುವ ಮಧುರವಾದ ಮಾತು: ಪದ ಕೊರಲಿಂಪನಪ್ಪುಕೆಯಿ [ಕೊಂಕು ನ]ಯಿಂ ಗಮಕಂಗಳಿಂ ಪೊದರ್ಕೊ[ಪಾಠಾಂ. ರ್ತೊ]ದಳೆಟೆದಿಕ್ಕಿದಂತೆ ಸುತಿಯೊಳ್ ಸಮವಾಗಿರೆ ಜಾಣನಾಂತು ಮೆಚ್ಚಿದ ತೆಱದಾಸೆವಟ್ಟಲಸದೆತ್ತಿದಪೋಲ್ ದೊರೆವೆತ್ತು ದೂಱದಾಱದ ದನಿಮುಟ್ಟೆ ಮೇಣಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್ (ಕಂಸಕಾ. ೬-೮೮). [ಪೊದಱ್ + ಕೊದಳ್₂ (< ಕೊದಲ್ಲು)]

**ಪೊದರ್ದಲೆ, ಹೊದಱುದಲೆ** (ನಾ). ೧. ಕೂದಲು ಜಡೆಗಟ್ಟಿ ಪೊದೆಯಂತೆ ಆಗಿರುವ ತಲೆ ; ಪೊದೆಗಟ್ಟಿದ ಕೂದಲುಳ್ಳ ತಲೆ : ಕಿಮ್ಮಿಸೆಯ ಜೋಲ್ವಾಯ ಪೊದರ್ದಲೆಯ ಕರ್ಮೊಗದ . . . ಜವನ ದೂಱಗಾಱರ ಜಂಗುಳಿ . . . ಸಡಗರದ ದೞವುೞದಿಂ ಬಂದು ಮುತ್ತಿ ಮುತ್ತಿ ಅಱುಗುಲಿಜೀವಾತ್ಮನಂ ಸೆಱೆವಿಡಿದತ್ತು (ರಾಮಾಶ್ವ. ೬೯-೦೯). **ಹೊದಱುದಲೆ** : ೨. ಅನೇಕ ತಲೆಗಳ ಗುಂಪು : ಹೊದಱುದಲೆ ಹೊಕ್ಕಾಳೆ ಬೆರಳ ತುದಿಯ ತುಟಿಯುಲಿ ಬೊಬ್ಬಿಱಿದಡಿನದಿರೆ ದಳವುಳಿಸಿದುದು ಕೌರವ ಪಾಂಡವರ ಸೇನೆ (ಕುಮ್ಮಾಭಾ. ೯-೯); ಬೆದಱಿದರು ಕಂಡವನ ರೂಪನು ಹೊದಱುದಲೆಗಳ ಹೊತ್ತ ಚೋಹದ ಮದದ ಗರ್ವದ ಗಾಢಗಮನದ ಭೂತವಲೆಯೆನುತ ಸುದತಿಯರು ಗಡಗಡನೆ ನಡುಗಿದರು (ಕೊರಂ. ೦-೦೩-೦೨).
[ಪೊದಱ್ + ತಲೆ₁]

**ಪೊದರ್ವಡೆ** (ಕ್ರಿ). ದಟ್ಟವಾಗು ; ಒತ್ತಾಗು ; ನಿಬಿಡವಾಗು : ಪೊದರ್ವಡೆದಡವಿಯ ಪಥದೊಳ್ಪಡಿದುದೊಂದು ಕೇಸರಿ ತನ್ನ ನಂದನನನು (ಕೃಪಾಭಾ. ೨೬-೩೩). [ಪೊದಱ್ + ಪಡೆ₁]

**ಪೊದರ್ವನೆ, ಹೊದಱುವನೆ** (ನಾ). ಬಳ್ಳಿಮನೆ ; ಲತೆಮನೆ ; ಪರ್ಣಶಾಲೆ : ಕೊಳದೆಡೆಗೆಯ್ದಿ ತವಕದಿಂದವಲೋಕನಂಗೆಯ್ದು ಒಡನೊಡನೆ ಮರಳಿದಳ್ ಮಾಕಂದಕಂದರ್ಪಶರಾತಲವ ಪೊದರ್ವನೆಗೆ (ಚಿತ್ರಾಂಗ. ೩೨-೦೯೦). **ಹೊದಱುವನೆ** : ಕೆಲಬಲದಲ್ಲಿ ಅವನನು ಅಱಸುತ್ತ ಕಾಣದೆ ಗಿಡಮರಗಳ ಬಳಿಯಲ್ಲಿ ಹೊದಱುವನೆಗಳಲ್ಲಿ ಕೊಳದ ತಡಿಗಳಲ್ಲಿ ನೋಡುತ್ತ ಬಹು ಹೊತ್ತಿನ ಮೇಲೆ ಒಂದು ಹೊದಱುವನೆಯ ಮುಂದುಗಡೆಯಲ್ಲಿ ಕಲ್ಲಱೆಯ ಮೇಲೆ ಕುಳಿತು . . . ಮನ್ಮಥಪರವಶನಾಗಿರುವ ಬಗೆಯನು ಕಂಡು (ಪಕಣ. ೨೬). [ಪೊದರ್ (< ಪೊದಱ್) + ಮನೆ]

**ಪೊದಲು** (ನಾ). (?) : [ಮಾಮುಕಾ]ಲ ಪೊದಲು ಎರಡುಂ (ಇಅ. ೦೯೯೬, ಹಾಸುಗ. ೨೯೬-೩೪ ; ?). [ ? ]

**ಪೊದಲ್ನಾಡು, ಹೊದನಾಡು, ಹೊದೆನಾಡು** (ನಾ). ಒಂದು ನಾಡಿನ ಹೆಸರು ; ☞ ಈಗಿನ ಕೋಲಾರ ಜಿಲ್ಲೆಯ ಒಂದು ಭಾಗ : ವಲ್ಲವಕುಲತಿಲಕ ಶ್ರೀಮತ್ × × × ರಾಜ ಪ್ರಿಥಿವೀರಾಜ್ಯಂಗೆಯೆ × × × ಭೀಮ × × × ನೆ ನಾಡು ಮೂನೂಱು ಪೊದಲ್ನಾಡಱುವತ್ತುಮನಾಳೆ (ಎಕ. X, ಶ್ರೀನಿವಾ. ೩೦-೬, ಸು. 880 ?) ; × × × ಪೊದಲ್ನಾಡು ದ × × ಬೆಳಙ್ಗುಱ್ಗಾರ × ಕೊನ್ದನ್ ತುಱುಗೊಳೆಯುದ್ದ ಸತ್ತರ್ (ಎಕ. X, ಶ್ರೀನಿವಾ. ೦೯೨-೦ ; ?). **ಹೊದನಾಡು** : ಹೊದನಾಡಿನೊಳಗಾದ ಗುಳ್ಳಹಳ್ಳಿಯ ಮುತ್ತರಸನ ಮಗ ದೇವಣ್ಣನ ಮಗ ಮರಿಯಪ್ಪನು ಮಾಡಿಸಿದ ದೀಪಮಾಲೆಕಂಬ್ಬ (ಎಕ. X, ಶಿಡ್ಲಘಟ್ಟ. ೦೯೬-೩ ; 1657 ?). **ಹೊದೆನಾಡು** : ಹೊದೆನಾಡ ಒಳಗೆ ನಮ್ಮ ಮುಳುವಾಯ ನಾಚೀದೇವಿಯರಿಗೆ ಸಲುವ ಕತರಿಯ ಹಳಿಹಳಿಯ ಸೀಮೆ ಒಳಗೆ (ಎಕ. X, ಮುಳಬಾ. ೬-೯ ; 1416) ; ಶ್ರೀಮತು ಹೊದೆನಾಡ ಉತ್ತನೂರ ಮಡವಾಳದ ಕಾವಬ್ಬ ದೇವಿಯರ ಸ್ಥಾನಿಕನಾಯಕ . . . ಬರಸಿ ಕೊಟ ಶಾಸನ (ಎಕ. X, ಮುಳಬಾ. ೦೦೩-೩ ; 1636?). [ಪೊದಲ್₁ + ನಾಡು]

**ಪೊದಳ್** 'ಪೊದಱ್' ನೋ.

**ಪೊದಳು** 'ಪೊದಟು' ನೋ.

**ಪೊದಳ್ಕೆ** 'ಪೊದಟ್ಕೆ₁' ನೋ.

**ಪೊದಳ್ಕೆವಡೆ** 'ಪೊದಟ್ಕೆವಡೆ' ನೋ.

**ಪೊದಱ್, ಪೊದರ್, ಪೊದರು₁, ಪೊದಱು, ಹೊದರ್, ಹೊದರು₁, ಹೊದಱ್, ಹೊದಱು₂** (ನಾ). ೧. ದಟ್ಟವಾಗಿರುವ ಗಿಡಮರಗಳ ಸಮೂಹ ; ಪೊದೆ ; ಹಿಂಡಲು : "ಕುತ್ತುಱೆಂದು ಪೊದಱ್" (ಶಶಸಾ. ೩೦-೮೦) ; ಆಗಳ್ ದುರ್ಯೋಧನನಾತ್ಮೀಯಸೇನಾನಾಯಕನಪ್ಪ

ಗಾಂಗೇಯಂ ಬಿದಿರ ಸಿಡಿಂಬಿನ ಪೊದಱೊಳಗೆ ಮಱೆದೊಱಗಿದ ಮೃಗ ರಾಜನಂತೆ ಶರಶಯನದೊಳೊಱಗಿದಂ (ಶಂಕಶಾ. ೧೧-೫೦ ವ); ಭಟ್ಟನೀ ಚೋದ್ಯಮಂ ನೋೞ್ಪೆನೆಂದು ಅದಱ ಕೆಲದೊಳ್ ಪರ್ವಿ ಕೊರ್ವಿ ಸುರ್ವು ಗೊಂಡ ಮಾಧವಿಯ ಪೊದಱೊಳಡಂಗಿರ್ದು ನೋೞ್ಪುದುಂ (ಶಂಕಶಂ. ೨೪೦-೭); ಬಿಡದೆ ಕುತ್ತುಱುಗಳಂ ಸೋವಿದರ್ತಿೞಿವಿದರ್ಗಿಡಗಳ ಪೊದರ್ಗಳಿಂದೆಬ್ಬಿಸಿದರುಬ್ಬಿಸಿದರೊಡನೊಡನೆ ಖಗಮೃಗವ್ರಾತಮಂ ಪಾತಮಂ ಮಾಡಿದರ್ಕರ್ಗಡೆ (ಕೃಖಿಶಾ. ೨೬-೯೭). ೨. ಗುಂಪು ; ಸಮೂಹ ; ಸಂದಣಿ : ಭೋರ್ಗರೆದುವನಿತಱೊಳ್ ಸಾಳ್ನಿಃಸಾಳಮಾ ತೇರ್ಗಳ ಪೊದಱ್ ಪೊದಳ್ದುದಿದುವು ಮೈಬೆಮರ್ನೀರ್ಗಳೊಗೆಯಲ್ ವಾಜಿ ರಾಜಿ ನಡೆವುದು (ಜಿಬಪು. ೪೧-೪೦). **ಪೊದರ್**: ೧. ಹರಿಣೇಂದ್ರನಂ ಕ್ರೂರಕಣಂಗಳಿಂದನಿಬರುಂ ಭರದಿಂದ ಪೊದರ ಬಿಟ್ಟೇಳ್ವನಿತರಲ್ಲಿ ತಟ್ಟಿರದ ಲಕ್ಷ್ಯಂ ಬಿಡದಿಸುತ್ತೆ ಬೊಬ್ಬಿಡಲ್ (ಮಹಾಭಿ. ೭-೪೦); ಗರುವ ತರುವರ ಕುಲಂ ಮೂಲಮಂ ತಿರಿಪಿ ಪಿಂಟಿದ ಪೋಲ್ ನೆಲಕ್ಕುರುಳಿದುವು, ಪೊದರ್ ಗಿಡುಗಳಂ ಪುಡಿಗೈದು (ಶಬ್ದಾಂಗ. ೯೬-೦೪೦೯). **ಪೊದರು₁** : ೧. "ಪೊದರು ಕುಂಜ" (ಕಶರ. ೬೯) ; ಸುತ್ತ ಬಲೆಯನ್ನು ಬೀಸಿ ಮತ್ತೆ ಪೊದರುಗಳನರಸಿ ಕುತ್ತಿ ಕೆಡಹಿ ಮಿಗಗಳನ್ನು ಮತ್ತೆ ದೊರೆಗೆ ತೋರಿಸಲು (ಸಳವಾ. ೧೬-೫); ಅವಳ ಹೊಂಬಣ್ಣದ ಮುಖಮಂಡಲ ಗೈರಿಕವಸನಗಳಿಂದ ಪರ್ವತದ ಸನಿಹಪ್ರದೇಶದಲ್ಲಿ ಕಕ್ಕೇಗಿಡದ ಪೊದರು ಹೂ ಬಿಟ್ಟದೆಯೋ ಎಂಬಂತೆ ಕುಂಡಲಿತವಾಗಿದ್ದಿತು (ಶಾಪಅ. ೯೫); ವಾಯು ಪುತ್ರನಾದ ಭೀಮಸೇನನು . . . ಆನೆಯು ಹಾಗೆ ಕಾಡಿನಲ್ಲಿ ಗಿಡಗಳನ್ನೂ ಪೊದರುಗಳನ್ನೂ ದೂರಮಾಡಿ ದಾರಿ ಮಾಡಿಕೊಂಡು ನಡೆದನು (ವ್ಯಾಸಪಿ. ೬೫). **ಪೊದಱು** : ೧. "ಕುತ್ತುಱಿನೆ ಪೊ[ಪಾಠಾಂ. ಹೊ]ದಱು" (ಶಕುಖ. ೯೨); ಇನಿತು ದಿವಸಮೀ ಮರಗಳ ಗಿಡುಗಳ ಪೊದಱುಗಳ ಮಱೆಗಳೊಳೇ ಪೊಱಲು ಕಂಡೆಮಿಲ್ಲೆಂದು ಮನದೊಳ್ ಬಗೆದು (ಶಬ್ದ್ರಶಾ. ೬೯-೨೨); ಪೊದಱು ಮರಂ ಗಿಡು ಪುಲ್ಲೆಂಬುದು ತಿರ್ಯಗ್ಜಾತಿಯೆಂಬುದಲ್ಲದೆ ನರನೆಂಬುದೆ (ಸಮಶ. ೯-೧೪೦); ಬಗಿದು ಪುಗಲ್ಕರಿದಲ್ಲಿಯುಮೊಗೆದ ಮರಂ ಪೊದಱು ಬಳ್ಳಿ ಗಿಡುವೆಂಬಿವಱಿಂ ಮಿಗಿಲೆನಿಪ ಬಲ್ಲೆ ನಗಸಾನುಗಳೊಳದಂತಾವ ಮೆಯ್ಯೊಳಂ ಪುದಿದಿರ್ಕುಂ (ಕಾವ್ಯಾವ. ೯೭); ಅರಳಾದ ಮಲ್ಲಿಗೆಯ ಪೊದಱೊಳಗೆ ತಿರುಗಿದೊಡೆ ತೆರಳಬಲ್ಲದೆ ಸಂಪಗೆಯ ಬನಕೆ ಮಱಿದುಂಬಿ (ಕೃಖಿಶಾ. ೨-೫೭). ೨. ಮದಕರಿಗಳ ಪೊತ್ತ ಕದಳಿಯ ವನಗಳ ಪೊಪಱ ಕಿತ್ತೀಡಾಡುವಂತೆ ಕವನಗಲಿಗಳಿಂದ ಮುತ್ತಿವ ತುರುಕರ ಸದೆದೆಬ್ಬಿಸು ನೀನು (ಕಂಪಬಿ. ೦೯-೫೨). **ಹೊದರ್** : ೧. "ಕುಂಜಃ, ಕುಂಜುಃ, ಕುಂಜನಂ, ಈ ೩ ಹೊದರ್" (ಕಾಶಕ್ಯ. ೬೫) ; ರಾಜಕುಮಾರಿ ಬನದೊಳಲ್ಲಲ್ಲಲೆದು . . . ಮೋಣೊರ್ವರ್ ಬಳ್ಳಿಹೊದರನೆ ಕುಟೀರಂಗೆತ್ತು ತಲ್ಲಣಿಸಿ ಮುಂ ನಡೆದು, ತಪ್ಪನರಿಯುತೆ ನಾಚಿ, ಸಮ್ಮನಾಚಿಸುನರಸುತಿರೆ (ಶಬ್ದಾಂಗ. ೨೦-೫೯೯). **ಹೊಧರು₁** : ೧. ಉದಕಮಂ ಕೊಳಬಂದ ಮೃಗಗಳ ಬೆದರದಂತೆಸೆಯಲ್ಕೆ ತೋಹಿನ ಹೊದರಿನೊಳು ಕಾದಿರ್ದ ಚಾಪಾಸ್ತ್ರಗಳ ಕೈಕೊಂಡು (ಅವಂಗಾ. ೨-೪-೭) ; ಬಿದಿರುಕೊಳ್ಳಿಕೆ ಹೋಗಿ ಹೊದರೊಳಗೆ ಕೈಹಾಕಿ ಬಿದಿರೆಳೆಯ ಕೊಯ್ದು ನಿತ್ಯದಲಿ ಕಾಯಕವ ಬದಿಕಿಸುತಲಿದ್ದ ಸತಿಯೊಡನೆ (ಕನ್ನಕಾ. ೨೬೫) ; ಹೊದರೂ ಮುಳ್ಳೂ ತುಂಬಿದ್ದ ಆ ವನ ಹಿಂದೆ ಒಂದು ಕಾಲದಲ್ಲಿ ದೊಡ್ಡ ನಗರವಾಗಿ ಇತ್ತಂತೆ (ವ್ಯಾಸಪಿ. ೯೦). ೩. (ಆಲಂ) ತೊಡಕು ; ಸಿಕ್ಕು ; ತೊಂದರೆ : ಹೇಗೂ ನಾಲ್ಕು ದಿನ ಸಮಾಧಾನವಾಗಿ ನಡಕೊಂಡು ಅವರಿಗೆ ತಿಳಿವಳಿಕೆ ಕೊಟ್ಟು ಅವರನ್ನು ಈಗಿನ ಹೊದರಿಂದ ಬಿಡಿಸಿಕೊಳ್ಳೋದೇ ಸರಿ (ಶಕರಾ. ೦೦೮). ೪. ಪೊದೆಯಾಗಿ ಸಸ್ಯಗಳು ಬೆಳೆದಿರುವ ಭೂಮಿ (?): ಚಂದನಕ್ಕೆಯಿಂದಲೂ ಬೀಜ ಖ ೨ಕೆ ಖ ೮ ಉಂಬಳಿ ಹೊದರಿಂದ ಬೀಜ ಖ ೫ಕೆ ಗಡಿ ಖ ೨೦ (ಪ್ರಅಂ. ೧೯೨೯, ೯೯-೨೬ ; 1632). **ಹೊದಱ್** : ೧. ತುದಿಕೋಡೊಳ್ ವೇಣುಜಾಲಂಗಳ ಹೊದಱನಡರ್ದೆತ್ತುತುಂ . . . ಕಂಠದ ಬಿಣ್ಪಂ ಜೊಂಪಿಸುತ್ತುಂ ನಡೆದುದಡವಿಯೊಳ್ ದೀರ್ಘದೇಹಂ ವರಾಹಂ (ಸೂಕ್ತಿಸು. ೪-೪೯); ಹೊದಱಿಂ ಪುಗಿಸೆರ್ಬು ನಟ್ಟು ನಿಲ್ಸರಳಿಸಲಿತ್ತು ಕುತ್ತು . . . ಸಾರೆನುತಿರ್ಪ ಬೇಡ[ರ]ಬ್ಬರಕಿರದೊಂದನೊಂದೆಡ ಪುತಾಕುಳಮಾಯ್ತು ಮೃಗೀಮೃಗವ್ರಜಂ (ಮಹಾಪೇ. ೩-೧೫); ಅದಱೊಳ್ ತಾವರೆವಳ್ಳಿಯ ಹೊದಱೊಳ್ ಬಿಸನಾಳಸಾರವಂ ಸವಿದು ಸುಖಾಸ್ಪದ ದಿಂದಿರ್ದುದು ಜಾಂಬೂನದಹಂಸಂ ಮಱೆದು ತನ್ನ ಮಾನಸಸರವಂ (ವಳಕಂ. ೦೨೬). **ಹೊದಱು₂**: ೧. "ಉಲಪಃ, ಸ್ತಂಭಃ, ಗುಲ್ಮಃ, ವೀರುತ್, ವಿಟಪಃ—ಈ ೫ ಹೊದಱು" (ಹಲಾಯು. ೪೦-೪೬); ಇಡಿದಿರ್ದ ಹೊದಱಿನೊಳು ಸರಿವಿನೊಳು ವರಿವಿನೊಳು . . . ಬರುತಿರೆ (ಕಣ್ವರ. ದೇ. ೦೨೯-೬); ಅರಣಿಯನು ಮೃಗವೆಳೆದುಕೊಂಡೀ ಹೊದಱ ಹೊಕ್ಕುದು ಬಹಳಕಾನನದ (ಕುವ್ಯಾಅ. ೨೪-೭) : ಹೊಕ್ಕು ಲೀಲಾಸರಸಿಗಳನಿರದೆ ಕಯ್ಯಿಕ್ಕಿ ಹೊದಱು ಗಳೆಡೆಯನು ಹಿಕ್ಕಿ ಹೆಮ್ಮೆಳೆಗಳನಱಸಿ ನೋಡಿದೆವದು ಸಿಕ್ಕಿದುದಿಲ್ಲೆಮ್ಮ ಕಣ್ಗೆ (ಕುರಾಸಾಂ. ೪೨-೩೪). ೨. ಬೆಳೆಗೆಯ್ಯ ಹೊದಱಿನೊಳು ಮುನ್ನಾಡಿ ದೆಡೆಗಳೊಳು . . . ಮೇವ ತುಱುವಿಂಡಿನೊಳು ದಾರಿಯೊಳು ಸುತ್ತಿ ಸುಳಿದಱ ಸಿದಂ ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿಕಾರ್ಜುನನನು (ಸಿದ್ಧರಾ. ೨-೪೬); ಸುಮಹಾರಥರ ಹೊದಱಲಿ ಹೊಕ್ಕನುರಿ ಬಲುಮೆಳೆಯ ಹೊಕ್ಕಂತೆ (ಕುವ್ಯಾದ್ರೋ. ೨-೪೦) ; ಹೊದಱ ರ್ಝಲ್ಲಿಗಳಡಾಯುಧ ಕಯ್ಯ ಪೊಡೆ ಸರಳ ಹೊದೆಗಳಂ ತತ್ತಸ್ಥಳಂಗಳೊಳ್ ಕಟ್ಟಿ ಬಿಲ್ ಹೆದೆಯನಾರ್ದ್ದು . . . ಎಚ್ಚಾಡಿದರ್ ಬಿಲ್ಲ ಬಿನ್ನಣಿಗರಂದು (ಕಂಭ. ೯೬-೮೯).

[ದೇ.॥ ತಮಿ. ಪುತರ್, ಪುತಲ್; ತುಳು. ಪುದೆಲ್; ತೆಲು. ಪೊದರು ]

**ಪೊದಱು** ' ಪೊದಱ್ ' ನೋ.

**ಪೊದಱುಗಟ್ಟು, ಹೊದಱುಗಟ್ಟು** (ಕ್ರಿ). ಗುಂಪುಗೂಡಂ ; ದಟ್ಟೈಸು; ಒಟ್ಟುಗೂಡು : ಕೆದಱಿ ನಾಂದಿ ಪೊದಱುಗಟ್ಟುವ ಕದಲಿಗದಿರನುರದಿನು ರವಣಿಸಿ ನೆತ್ತಿಯಿಂ ಪೊತ್ತು ನೆಗೆದು (ಅವಂಪು. ೭-೮೦ ವ). **ಹೊದಱುಗಟ್ಟು** : ಉದಯವಾಗದ ಮುನ್ನ ಕಳನೊಳು ಹೊದಱುಗಟ್ಟಿದ ವೈರಿಸೇನೆಯು ಹದನಿವರ ಪಾಳಯಕ್ಕೆ ಬಂದುದು (ಕುವ್ಯಾಶೀ. ೬-೭).

[ ಪೊದಱು (<ಪೊದಱ್) + ಕಟ್ಟು₁ ]

**ಪೊದಱುಗೊಳ್, ಹೊದಱುಗೊಳ್** (ಕ್ರಿ). ದಟ್ಟವಾಗು ; ಒತ್ತಾಗು :. ಪುತ್ತಡರ್ದಿರ್ದ ಮೆಯ್ ಪೊದಱುಗೊಂಡ ಜಟಾವಳಿ...ಕಷ್ಟಮೌನಮೊಪ್ಪುತ್ತಿರೆ ಜೀರ್ಣತಾಪಸಕುಲಂ ಮೆಱೆದಿರ್ಪುದು ತನ್ಮಹಾದ್ರಿಯೊಳ್ (ದಕಳು. ೯-೪೦). **ಹೊದಱುಗೊಳ್** : ಚಲಿಪ ಬಲುಶಾಖಾಸಮೂಹವ ಬಲು ಹೊದಱುಗೊಂಡಿಹ ಪಲಾಶಾವಳಿಗಳನು ಕಾಯ್ಗಳನು ಗೊಂಚಲುಗಳನೆಲ್ಲವನು ಇಳುಹಿ ಬೊದಲೇ ತಱಿವ ಮರದಂತಳವಡಿಸಿಕೊಂಡಿರಲು (ತಿಮ್ಮಕಾಂ. ೫-೦೦೯). [ ಪೊದಱು (<ಪೊದಱ್) + ಕೊಳ್₁ ]

**ಪೊದಱುವೆಳಗು, ಹೊದಱುವೆಳಗು** (ನಾ). ದಟ್ಟವಾದ ಪ್ರಕಾಶ ; ಗಾಢವಾದ ಕಾಂತಿ : ತ್ರಿದಶಪತಿ ಗಿರಿಗಳಂ ಕಡಿವಂದು ತೆಗೆದಿಡುವೆನೆಂದು ತಿರಿಪಿದ ಕುಲಿಶದ ಪೊದಱುವೆಳಗಿಳಿಗಿಳಿದು ವಜ್ರಮಯವಾಗಿ ನಿಂದುದೊ . . . ಪೇಳೆನಲ್ಕೋಟೆ ಕಣ್ಗೆಸೆದುದು (ಕೃಖಿಶಾ. ೦೦-೪೬). **ಹೊದಱುವೆಳಗು** : ಮುದದಿನವನೀ ರಾಘವೇಂದ್ರನ ಪದಕನುತ ನಾನಾಸುರತ್ನದ ಹೊದಱುವೆಳಗಿನ ಹೊಂದೊಡವುಗಳ ಹೊಱಿಸಿ ಬೀಳ್ಕೊಟ್ಟ (ಕೂರಶಾ. ೯-೯-೨೦). [ ಪೊದಱು (< ಪೊದಱ್) + ಬೆಳಗು₂ ]

**ಪೊದಱೇಳ್, ಹೊದಱೇಳ್, ಹೊದಱೇಳು** (ಕ್ರಿ). ಗುಂಪುಗೂಡು ; ದಟ್ಟವಾಗು ; ಹೇರಳವಾಗು : ಇದಿರೆದ್ದು ಖಚರೇಶನೆಱಗೆ ನಾರದನಿಗೆ ಪೊದಱಿರ್ದ್ದ ಮಕುಟರತ್ನಾಂಶು ಕೆದಱಲು ಸುರಧನುವನು ಮುನಿ

ಕಱ್ಪಿರೆ ಮೃದುವಚನದೊಳಿಂತೆಂದ (ವರ್ಧಮಾ. ೬-೧೧). **ಹೊದಟಿೞೆಳ್ :** ಘನವಿಕ್ರಮದ ಸಿರಿ ಹೊದಟಿೞೆಳೆ ಜಯವಿಕ್ರಮದೊಳಬ್ಬರಿಸಿದನು ನಿಷ್ಠುರಸಿಂಹನಾದಗಲಿ (ಕುಮಾ.ದ್ರೌ. ೧೩-೪೮); ಹೊರಳಿಗಿಡಿಗಳು ಹೊಡ ಕರಿಸಿ ಹೊದಟಿೞ್ದು ರಥಿಳಪಲಿ ರಥುಡಿವುದಾಶಾಭಿತ್ತಿ (ತೊರವೆ. ೬-೨೮-೨೮); ಹೊಂದಾವರೆಗೊಳ ಹೊದಟಿೞ್ದ ತುಲಸಿಯು ನಂದನ ನಾಟ್ಯಕೀರ್ತನದಿ ಸಂದರ್ಶನದೊಳುಬ್ಬುವ ಸ್ವಾಮಿಯು ಕೂರ್ತು ಮುಂದಣ ಕೃತಿವೇಳು ಮುದದಿ (ನೋಹಕ. ೨೦-೦). [ ಪೊದಟ್ + ಎಳ್$_1$ (< ಎೞ್$_1$) ]

**ಪೊದಟಿೞೊಡೆ, ಪೊದರೊಡೆ, ಹೊದಟಿೞೊಡೆ** (ಕ್ರಿ). ೧. ಗುಂಪು ಚೆದರು; ದಿಕ್ಕಾಪಾಲಾಗು : ಪೊ[ಪಾಠಾಂ. ಹೊ]ದಟಿೞೊಡೆದು ಕುರುಸೇನೆ ತೆಗೆದೋಡಿದುದು ಭಯಜಲಧಿಯಲಿ ತೇಕಾಡಿದರು ಕೌರವಜನಪರೀ ಭೀಷ್ಮಾವಸಾನದಲಿ (ಕುಮಾ.ಭೀ. ೧೧-೦೩). **ಪೊದರೊಡೆ :** ೨. ಗಂಪುಗುಂಪಾಗಿ ಹರಡು ; ದಟ್ಟವಾಗಿ ವ್ಯಾಪಿಸು : ಕದಳೀಕ್ಷು ನಾರಿಕೇಳು ಚೂತ ದ್ರಾಕ್ಷೆಯಿಂ ಬದರಿ ದಾಡಿಮವು ಖರ್ಜೂರ ಹೇರುಳೆ ನಿಂಬೆ ಪೊದರೊಡೆದ ಹುಳಿಸೆ ನೇರಿಲು ನೆಲ್ಲಿ ಹಲಸು ಫಲಭಾರದಿಂದೊಪ್ಪಿರ್ದುದು (ಪಪಮೋ. ೨-೬೨). **ಹೊದಟಿೞೊಡೆ :** ೧. ಮೇಲಿನ 'ಕುಮಾ.ಭೀ' ಪ್ರಯೋಗದ ಪಾಠಾಂತರವನ್ನು ನೋಡಿ. [ ಪೊದಟ್ + ಒಡೆ$_1$ ]

**ಪೊದಟ್, ಪೊದಳ್, ಪೊದಳು, ಹೊದಳು$_1$** (ಕ್ರಿ). ೧. ಹೊರ ಹೊಮ್ಮು ; ಹೊರಸೂಸು : "ಪೊದಟ್ದುದೆನೆ ಪೊಣ್ಮಿದುದಕ್ಕು" (ಶಶಮ. ೭೮); ಮನ್ಮಥಶಿಖಿಜ್ವಾಲಾಳಿ ತಳ್ತೀಟ್ ಬೇಯದೆ ಕಾಯ್ದೋಡಿನ ಜೋಳದಂತಲರ್ದೊಡಾ ಕಂಪುಂ ಮನಸ್ತಾಪಮುಂ ಪುದಿದೆತ್ತಂ ಬರೆ ಸುಯ್ ಪೊದಟ್ದು ಬಿಸಿದುಂ ಕಮ್ಮಿತ್ತುಮಾಯ್ತೀಪಳಾ (ಕಾವ್ಯಸಾ. ೫೮೮ ಶೂದ್ರಕ); ಪ್ರತಿದಿನಂ ನೃಪಚಂದ್ರನ ದಿವ್ಯದೇಹದಿಂ ಕಾಂತಿ ಪೊದಟ್ದು ಪರ್ವಿ ಗಗನಾಂತರಮಂ ಪುದಿದಿರ್ಪುದು (ಕಾದಂಬ. ೬೬೮); ವಿವಿಧಾತೋದ್ಯರವಂ ಪೊದಟ್ದುಖಿಳದಿಕ್ಚಕ್ರಂಬರಂ ಕೂಡೆ ಪೊಣ್ಮುವಿನಂ (ಗದಾಯು. ೮-೬೭). ೨. ಉಂಟಾಗು; ಒದಗು; ಪ್ರಾಪ್ತವಾಗು : ಮುನೀಂದ್ರನ ದಿವ್ಯದೃಷ್ಟಿಮಂತ್ರದೊಳೆ ಪೊದಟ್ದುದಾ ಸತಿಯರಿರ್ವರೊಳು ನವಗರ್ಭವಿಭ್ರಮಂ (ಶಂಕಪಾ. ೦-೮೫); ಮನಕ್ಕುಮ್ಮಳಂ ಪೊದಟ್ದುದೆನಗಂ ಸರೋಜದಳನೇತ್ರೆ ನಿನ್ನಂದದಿ (ಪುಷ್ಪಪು. ೪-೨೫); ಮಟೆ ಕಂಬನಿಯಂ ದನಿಯಿಂ ಮೊಟಗೆಜಿಗಿದ ಮಕುಟದಿಂದೆ ಮಿಂಚೊಗೆಯೆ ಪೊದಟ್ದಟಲಿಂದಂ ಮುನ್ನಡಿಯೊಳ್ ಮಟೆ ಗಾಲಮನಿದು ಸೂನು ತಂದೆಗೆ ತಂದಂ (ಅವಂತಿ. ೩-೪೪). ೩. ಎದ್ದು ತೋರು; ಪ್ರಕಟವಾಗು ; ನಿಚ್ಚಳವಾಗಿ ಕಾಣು : ಕಂಜದಳೋಪ ಶೋಭಿತವಿಲೋಚನದೊಳ್ ನಿಟಿಲಾಗ್ರದೊಳ್ ಪೊದಟ್ದಂಜನರೇಖೆ ಟೆಣ್ಗೆಸೆಯೆ (ಸುಕುಮಾ. ೧೦-೩೮); ಅಡಸಿ ಪೊದಟ್ದ ಪೆರ್ಮೊಲೆಗೆ ಕುಟ್ಮಲ ಹಾರಮನಾಂತಳಟ್ತಿಯಿಂ (ಲೀಲಾವ. ೧೩-೧೧೧); ಪೊದಟಿದ ಲಜ್ಜೆ ಪಲ್ಲಟಿಸ ದಾಸನಂ . . . ಪಲ್ಲ ಕೊನೆದಾಗದ ಚುಂಬನವೆಂಬಿವಿಚ್ಚೆಯೊಳ್ ಪುದಿದಿರೆ ಮೆಚ್ಚಿದಳ್ ನೆರೆದು ಪೊ ಪವಳೋಪನ ಜಾಣಕೇಣಮಂ (ಸೂಕ್ತಿಸು. ೮-೦೩೪). ೪. ಹರಡು; ವ್ಯಾಪಿಸು; ಆವರಿಸು: ಮುಂ ತನ್ನರ್ಚಿಗಳ್ ಬಂದು ಮೊಕ್ಕಳಮೆತ್ತಂ ಸುರಿಯುತ್ತುಮಿರ್ಪ ರಸಮಂ ಮುಂ ಪೀರ್ದುಕೊಂಡಂ ಮನಂಗೊಳೆ ಸಪ್ತಾರ್ಚಿ ಪೊದಟ್ದು ನೀಳ್ದೊಸಗೆಯಿಂದಾಪೋಶನಂಗೊಳ್ವವೋಲ್ (ಶಂಕಪಾ. ೫-೮೭); ಪೊಸಜವ್ವನದೇಟ್ಗೆಯೊಳ್ ತಪಶ್ಚರಣಮಿದೇಂ ಪೊದಟ್ದಿಡಿದ ಕಾನನದೊಳ್ ಬಡದೊರ್ಬುಳಿರ್ಪುದೇಂ (ಕಾದಂಬ. ೬೪೮); ಸಿಂಗರವೇಟ್ಗೆಯಂ ಪಡೆಯೆ ದೇಸೆ ಪೊದಟ್ದಿರೆ ಕೊಂಕು ತೀವೆ . . . ನನೆವಿಲ್ಲನ ಚೀರಮನೊಲ್ದು ಪೇಟ್ವೆನಾಂ (ಕಬ್ಬಿಗಾ. ೦೭). ೫. ಅಧಿಕವಾಗು ; ಹೆಚ್ಚಾಗು ; ವೃದ್ಧಿಯಾಗು : ಕಲಿಯುನೆ ಪಂದೆ ಮಾಟ್ಪ ಕಡುವಂದೆಯನೊಳ್ಗಲಿ ಮಾಟ್ಪ . . . ತಮ್ಮೊಳಗ್ಗಲಿಸಿ ಪೊದಟ್ದು ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿ ಸಂಚಲಮದಟಿಂದಮೋಲಗಿಸಿ ಬಾಟ್ವುದೆ ಕಷ್ಟಮಿಳಾಧಿನಾಥರಂ (ಶಂಕಪಾ. ೦೨-೪೨); ಪುಟ್ಟಿದ ನೂರ್ವರು ಮೆನ್ನೊಡವುಟ್ಟಿದ ನೂರ್ವರುಮಿದಿರ್ಚಿ ಸತ್ತೊಡೆ ಕೋಪಂ ಪುಟ್ಟಿ ಪೊದಟ್ದುದು ಸತ್ತರ್ ಪುಟ್ಟರೆ ಪಾಂಡವರೊಳಿಟಿದು ಛಲಮನೆ ಮೆಟಿವೆಂ (ಗದಾಯು. ೫-೩೪); ಪಾದನನ ಬಲ್ಲ ಬಲ್ಮೆ ಬಲಿದಿತ್ತು ವಸಂತದ ಮೋಹನಂ ಪೊದಟ್ದುದು ಕಡುಗಾಡಿವೆತ್ತಲೆವ ತೆಂಕಣಗಾಳಿಯ ಸೋಂಕು ಸೊರ್ಕುವೆತ್ತುದು (ರಮಾಣಾ. ೦-೭೨). ೬. ದೊಡ್ಡದಾಗು ; ತೋರವಾಗು; ಸ್ಥೂಲವಾಗು : ಜಗದ ಬಡತನಮನೊರ್ಮೆಯೆ ಬಗೆದಂತಿರೆ ಕಿಡಿಪ ಚಕ್ರಿ ತನ್ನಿರ್ದೆಡೆಯೊಳ್ ನೆಗಟ್ದ ಬಡತನಮನದನೇಕೆ ಗಡಂ ಸೈರಿಸುವನೆನೆ ಪೊದಟ್ದುದು ಮಧ್ಯಂ (ಆದಿಪು. ೮-೩೦): ಬಿಸರುಹನೇತ್ರೆಯೊಳ್ನಡು ಪೊದಟ್ದುದು ದಾಂಗುಡಿಯಿಟ್ಟು ಬಾಸೆ ನೀಳ್ದೆಸೆದುದು . . . ಗರ್ಭದೇಟ್ಗೆಯೊಳ್ (ಶಂಕಶಂ. ೧೮೪-೧೧). ೭. ಶೋಭಿಸು ; ಕಾಂತಿಯುಕ್ತವಾಗು; ವಿರಾಜಿಸು: ಇದು ನಿನ್ನೀಯುಗಲ್ದುರದೊಳ್ ಪೊದಟ್ದ ತನತೊಂದು ಜನ್ಮಮಂ ಸಫಲಂ ಮಾಟ್ಪುದಿದೆಂದು ಕುಂದದಲಶಾರದ ನೀರದನಿರ್ಮಲಂ ಭವತ್ಕೀರ್ತಿಯವೋಲ್ (ಆದಿಪು. ೦೨-೦೦೯); ಪುಸಿ ಮುಳಿಸಿಂದಂ ಪಿರಿದುಂ ಪ್ರಯತ್ನದಿಂದಮೆ ವಿರಚಿಸೆ ಕಣ್ಗೆಸೆವ ಭೀಷಣ ಭ್ರುಕುಟಿ ಪೊದಟ್ದಿರೆ (ಕಾದಂಬ. ೭೮೦); ಭುವನಮನಾವಗಂ ಪುದಿದು ಶೀವಿದ ತಣ್ಗದಿರ್ಗಳ್ ಪೊದಟ್ದ ಕೈರವವನಮಾದುವೆಯ್ದೆ ಪೊಸಮಲ್ಲಿಗೆಯಾದುವು . . . ಹಿಮಮಾದುವಲ್ಲದೊಡೆ ಚಂದ್ರನ ಚಂದ್ರಿಕೆ ಮಾಯವಾದುದೇ (ಲೀಲಾವ. ೩-೭). ೮. ಪ್ರಸಿದ್ಧವಾಗು; ಕೀರ್ತಿಯನ್ನು ಪಡೆ; ಹೆಸರನ್ನು ಗಳಿಸು: ಜಗತ್ತ್ರಿತಯಂಗಳೊಳ್ ಜಸಕ್ಕಾಗರಮಾದ ಬದ್ದೆಗನಿನಾ ನರಸಿಂಹನಿನತ್ತ ನಾಲ್ವರಲ್ ಮೇಗು ಪೊದಟ್ದ ಚಾಗದೊಳವೊಂದಿದ ಬೀರದೊಳಂ ಗುಣಾರ್ಣವಂ (ಶಂಕಪಾ. ೦-೩೦); ಪೊದಟ್ದಧಿರಾಜಲಕ್ಷ್ಮಿಯೊಳ್ ನಿಸದಮೆ ವಿಶ್ವಭೂತಿ ವಸುಧಾಪತಿ ತಾನೊಲವಿಂದಮಿರ್ದು ಭೋಗಿಸಿದನಶೇಷ ಭೋಗಮಂ (ವರ್ಧಪು. ೦-೪೧); ಕ್ರಮದಿಂದೆ ಸಂಧಿ ನಾಮಂ ಸಮಾಸಮಾ ತದ್ಧಿತಂ ಪೊದಟ್ದಾಖ್ಯಾತಂ ಪ್ರಮುದಿತಧಾತುವಪಭ್ರಂಶಮವ್ಯಯಂ ಸಂಧಿ ಶಬ್ದಮಣಿದರ್ಪಣದೊಳ್ (ಶಮದ. ೧). ೯. ಒಂದಾಗು; ಸೇರು; ಕೂಡು : ಎಸೆವ ವಿಮಾನಘಂಟೆಗಳ ಮೆಲ್ಲುಲಿ ಕಿನ್ನರಗೇಯದೊಳ್ ಪೊದಟ್ದೆಸೆಯೆ (ಆದಿಪು. ೨-೪೦); ನುಡಿ ಪುಸಿಯೊಳ್ ಪೊದಟ್ದಿರಪು ದಾನದ ಪೊಂಪುಟಿ ಲೋಭದಾಸೆಯೊಳೊತ್ತಡರದು (ಸಮಶ. ೬-೨). ೧೦. ಹೊಂದು; ಪಡೆ; ತಾಳಂ: ಧರಣೀಧ್ರನೋಲಗಕ್ಕಂ ಸುರಪತಿಯೊಡ್ಡೋಲಗಕ್ಕಮಿದು ಮಿಗಿಲೆಂಬೋಲ್ ಕರಮೊಪ್ಪಿರ್ದುದು ಸಭೆಯಾ ತರಳಾಕ್ಷಿಯರಿಂ ಪೊದಟ್ದು ನೂರ್ಮಡಿ ಚೆಲ್ವಂ (ಧರ್ಮಾಮೃ. ೪-೦೪೬); ಮೊದಲೆರಡು ವಿಭಕ್ತಿಯೊಂ ಪೊದಟ್ಗುಮಲ್ ಕಾಲವಾಚಿಯುದಿಂದುಂದೆಂಬುದುಮೇಕರೂಪಮಾಗಿರ್ಪುದು ಮೊದಲೆರಡುಂ ವಿಭಕ್ತಿಗಂ ಸಪ್ತಮಿಗಂ (ಶಮದ. ೦೨೦); ಶ್ರೀ ಚಾಮರಾಜೇಂದ್ರನೀ ಬಿರುದೆಲ್ಲಾ ಬಿರುದಂಗಳೊಳ್ಪನಿಟಿಕೆಯ್ದಾರ್ಪಿಂ ಪೊದಟಿೞ್ದಪ್ಪುಗುಂ (ಚಕವಿ. ೨-೬). ೧೧. ಅಂಟಿಕೊಳ್ಳು; ಹತ್ತಿಕೊಳ್ಳು: ತರುಣಿಯರಂದು ಕಂಸನ ವಿಯೋಗದ ಶೋಕದೆ ಬಿಟ್ದು ಧಾತ್ರಿಯೊಳ್ ಪೊರಳೆ ಪೊದಟ್ದ ಮೆಯ್ಯ ರಜವಶ್ರುಜಲೌಘದೆ ನಾಂದು ಕರ್ದಮಂ ಬೊರೆದವೊಲಾಗಲ್ (ಜಗಂ. ೭-೪೭). ೧೨. ವಿಶಾಲವಾಗು; ವಿಸ್ತಾರವಾಗು : ನಗೆಮೊಗಮಂ ಪೊದಟ್ದಲರ್ದ ತಾವರೆಯೆಂಬ ವಿಮೋಹದಿಂ ಮೊಗಂಬುಗಲೊಡಮಾ ತಳೋದರಿಯ ಸುಯ್ಗಳ ಬೆಂಕೆಯೊಳಿಚ್ಚೆಗೆಟ್ಟು . . . ಪಾಟಿದುವುನ್ಮದಾಳಿಗಳ್ (ಶಂಕಪಾ. ೫-೧೦). ೧೩. ಚೆದರು; ಚೆಲ್ಲಾಪಿಲ್ಲಿಯಾಗು ; ದಿಕ್ಕಾಪಾಲಾಗು : ಆ ಸತಿಯುಕ್ಕಿದ ಕಣ್ಣ ನೀರ ಧಾರೆಗಳೊಳೆ ನಾಂದೆಲರ್ಚಿ ಪೊದಟಿೞ್ದಿರ್ಪೆಯೆ ಪಾಟಿದುವುನ್ಮದಾಳಿಗಳ್ (ಶಂಕಪಾ. ೫-೦೦). ೧೪. ಉಬ್ಬು ; ಉತ್ಸಾಹಿಸು ; ಹರ್ಷಿಸು : ವಿತತಕಳಾಪ್ರವೀಣತೆಯಿನೆಯ್ದೆ ಸರಸ್ವತಿ . . . ಪತಿಭಕ್ತಿಯಿಂ ನೆಗಟ್ದರುಂಧತಿಯೆಂದು

ಪೊದಟ್ದು ಬಣ್ಣಕಂ ನುತ್ತವಿಜಯಾವನೀಶಸತಿಯಂ ಸಲೆ ಪೊನ್ನಲದೇವಿಯಂ ಜಗಂ (ನೇಮಿಪು. ೦-೨೭); ಚಂದಿರನುಂ ರೋಹಿಣಿಯೊಡನೊಂದಿ ಪೊದಟ್ದುದಿಸಿ ಬಂದನಿರುಳರೆಗಳೆದತ್ತಂದಿನವೋಲಟ್ಟಿಯಿನಾನಂದಂ ಪೊಗರೇಟೆ ಭವದೊಳಾವಿರ್ಭವಿಸಾ (ಶಕಪ. ೭-೨೩೦). **ಪೊದಲ್:** ೧. ಪುದಿದ ಹಿಮಮೊಡಲೊಳಿಳಿತಂದುದರಾಗ್ನಿಯನೆಯ್ದೆ ನುಡಪೊಯ್ದುದು ನಿಜವಲ್ಲದೊಡೆಂತು ತೋರ್ಪುದೋ ಪೇಳ್ಮೊದಲಿಲ್ಲದ ಪೊಗೆ ಪೊದಳ್ದು ಜನದಾನನದೊಳ್ (ರಾಜಶೇ. ೯-೦೬). ೨. ವಿಳಸನವಮಂ ಪುದುಂಗೊಳಿಪ ನನ್ದನದೋಳಿ ಪೊದಳ್ದಳುಂಬದಿಂ ಬೆಳೆದೆಚಗಿರ್ಪ್ಪ ಶಾಳಿನವಸೌರಭವಮಂ ನಯದಿಂ ದೆಸೆ × × × ನ್ವಿಳಸುವ ಗಾಳಿ (ಕಲ. V. ೩೦-೨೯ ; 1126) ; ಸ್ತ್ರೀಪುನ್ನಾಗವೆರಡು . . . ಪೊದಳ್ದು ತುರದಿಂ ಸಮಸಂಭೋಗಕ್ರೀಡೆಯೊಳಾಲಿಂಗಿಸಿದುವು ಹೂಗಣೆಯಿಂ ಹುರಿಗೂಡಿದ ಸಂಮೋಹನಪಾಶದ ತೆಱದಿ (ಜಯಕಾ. ೦೦-೨೮). ೩. ಮೇಲುಂದಿನೊಳ್ಪೊದಳ್ದ ಕುಚಭಾರದಿಂ ನಸುವಾಗಿದಂಗಲತೆಲಹರಿಗಳ . . . ವಿನುತಾಷ್ಟ ಮಹಿಷಿಯರ್ಚಾರುಚಾಮರತಾಲವೃಂತಮಂ ಪಿಡಿದಿರ್ದರಚ್ಯುತನ ಕೆಲಬಲದೊಳು (ಕೃಮಿಕಾ. ೭-೯೭). ೪. ಒಪ್ಪುವ ಪಂಚಮಹಾನಕಂಗಳಿಂ ಬಳಸಿ ಪೊದಳ್ದ ವಾಜಿದಳದಿಂದಮಗುರ್ವ್ವಿಪ ವೀರಕೋಟಿಯಿಂ (ಸೌಇಇ. XI-1, ೫೨-೬೯; 1007) ; ತೇಜದುರ್ಬ್ಬೇಳುಸಮುಂ(ಮು)ದ್ರಮುಂಗಳಿಯೆ ಪರ್ಬ್ಬಿ ಪೊದಳ್ದುದು (ಇಇ. V, ೦೭-೦೬ ; 1019) ; ಚತುರಂಭೋನಿಧಿವರೆಗಂ ಚತುರಂಗಬಲಂ ಪೊದಳ್ದು ಬಿಡೆ ಪದ್ಮಜನೇಂ ಚತುರನೊ ತದ್ಭಾರಮನಹಿಪತಿ ಪೊಱಲೆಂದಂದೊಡರ್ಚಿದಂ ಬಹುಶಿರಮಂ (ರಾಜಶೇ. ೭-೨೫). ೫. ಪದತಳದೊಳ್ ತೊಡಂಕಿ ಪರಿದಾಡಿ ಪೊದಳ್ದಿಸೆವಂಗದೇಶದೊಳ್ ಪದೆದು . . . ಸರಿತ್ಸುಧಾಂಶುಗಳ್ ಪುದಿದ ತದೀಯ ಮಸೊಳಿಯೊಳಿ ವಿಶ್ರಮಿಸಿರ್ದುದು ದೃಷ್ಟಿ ಪಾರ್ಥನಾ (ಕಬಕಂ. ೫-೦೫). ೬. ನಡು ಪೊದಳ್ದವು ವರವಳಿತ್ರಯುವಡಗಿದವು . . . ಬೆಳ್ಪಡಸಿದವು ಮುಖಮಂಡಲಗಳಾ ಮಾನಿನೀತ್ರಯದ (ತೊರರಾ. ೦-೮-೩). ೭. ಪೊಱವೊಳಲೊಳ್ ಪೊದಳ್ದ ನವನನ್ದನಬೃಂದದಿಂ (ಎಇ. XIII, ೩೩೦-೨೭ ; 929) ; ಅಡಿದಳದ ಬಲ್ಪೊಂಪು ಕೆಂದಳಿರ ಪೆಂಪನವಗಡಿಸಿ ಮರನೇಱಿಸೆ ಪೊದಳ್ದುಗುರ್ ಶುಕ್ತಿಜದ ಬೆಡಗಿಂಗೆ ಭಂಗಮಂ ಸಂಗೊಳಿಸೆ . . . ಸೊಗಸನೀವಣ್ಣಿಪೆಂ (ಶದ್ಮರಾ. ೩-೨೭) ; ಸಣ್ಣನಡು ಸ್ಟನಿಮಿರೆ ತೋಳ ಮೊದಲೊಳ್ಪೆಸೆಯೆ ಕಿಣ್ಣ ಮೊಲೆಗಳ್ಪೊದಳೆ ... ಪೆಣ್ಣುವಿಂಡಾ ಬನದೊಳೆಲರ್ಗಳಂ ತಮ್ಮ ತನುವಿನ ಕಂಪಿನಿಂ ಪೊರೆದರು (ಕೃಮಿಕಾ. ೮-೦೬). ೮. ಸಂಗಡಿಸಿದ ಬಡತನದೆ ಕುಸುಂಗಿ ಕರಂ ಪೆಸರಿನೊಂದರಿಂದುಱಿದಿರ್ದಾ ಸಂಗೀತಂ ದಿನದಿನಕಂ ಪೊಂಗಿ ಪೊದಳ್ದೀಳ್ಗೆವಡೆದುದೀ ಧಾರಿಣಿಯೊಳ್ (ಮರಾಜ. ೯-೦೦). ೯. ಮದಗನ್ಧಶಾಳಿವನದಿಂ ಬಿಡದೊಪ್ಪುವ ಕರ್ವ್ವಿದೋಣ್ಪದಿನ್ದೊಳಗೆ ಪೊದಳ್ದ ದೇವಕುಲಸಂಕುಲದಿಂ ದ್ವಿಜಸೌಧಗೇಹದಿನ್ದೆಳಿಗೆಸೆದತ್ತು ಪಲ್ಲವಪುರಂ (ಎಕ. V, ಅರಸೀ. ೦೨೭-೬೦ ; 1185) ; ದಟ್ಟಡಿಯನಿಡೆ ರನ್ನದಂಮಗೆಯಾ ಮೆಱೆವ ದನಿ ತಾವರೆಯ ರಜದಲಿ ನೆಱೆ ಪೊದಳ್ದಿದುಂಬಿಮಾಲೆಯ ಕಿಱುದನಿಯವೊಲು ಜಿನನ ಚರಣಾಂಬುಜದಲೊಪ್ಪಿದವು (ಶಾಕ್ರಶಾ. ೩೩-೦೬೩) ; ಮಹೀರಮಣನ ತೇಜಮನೇನೆಂಬೆಂ ಪೊದಳ್ದ ರವಿಶತರುಚಿಯಿಂದಮಿರ್ದು ಪೊಱವಳಯಮಂ ಹೇಮಮಯಮಿದೆನಿಸಿತ್ತಜಾಂಡಮಂಡಳಮನಿತಂ (ರಾಜಶೇ. ೫-೬). ೧೦. ನಿಮಗೊಪ್ಪುವುದಾವುದದಂ ಪೊದಳ್ದುಕೊಂಬುದು ವಿಪ್ರಾ (ಶಿಷ್ಯಾತು. ೨-೩-೦೩೦). ೧೧. ಕ್ಷಿತಿವಲ್ಲಭನೇಕಾಂತಸ್ಥಿತಸೌಭರಿಮುನಿಸಮೀಪಮಂ ಸಾರ್ದವನಿಂದತಿ ಸನ್ಮಾನಿತನಾಗಿಯೆ ಕೃತಾಸನಪರಿಗ್ರಹಂ ಪೊದಳ್ದಿಂತೆಂದಂ (ಶಿಷ್ಯಾತು. ೯-೦-೦೮೨). ೧೨. ಬಳಕೆಯಲ್ಲಿರು ; ಉಪಯೋಗದಲ್ಲಿರು : (೬). ೧೬. ಚಾಚು ; ನೀಡು : ಪಸರಂಬೆತ್ತೆಡೆಯಾದ ನೀಡಡಿ ಪೊದಳ್ದಾಕರ್ಣವಾಕುಂಚಿತಾಸ್ತ್ರಸಮೇತೋಚ್ಚಕರಾಗ್ರಂ...ತಾನಿಸಲೊಂದೊಂದುಕುರಂಗಮಂ ಶಬರನಿಂತಿರ್ದಂ ಮಹಾರಣ್ಯದೊಳ್ (೧೦ಕ. ೦-೮೯). ೧೭. ರಭಸವನ್ನು ಹೊಂದು ; ವೇಗವನ್ನು ಪಡೆ ; ತ್ವರೆಗೊಳ್ಳು : ಕೂರ್ರೋನ್ನತಸ್ಕಂಧನಾ ತ್ರಿದಶಾರಾತಿ ಪೊದಳ್ದು ಪೊಕ್ಕನಿರುಳೊಳ್ ತದ್ಗೋವ್ರಜಸ್ಥಾನಮಂ (ಶಿಷ್ಯಾತು. ೫-೩-೦೮೨). ೧೮. (?): ವಿತತಮತಿ ಬಾಷ್ಯಕಂ ಸಂಹಿತೆಗಳ್ ಮಱುಱು ಪೊದಳ್ದು ಬೇಱೆಸಗಿ ನಿಜಾಶ್ರಿತಶಿಷ್ಯವರ್ಗಕಾ ಸಂಹಿತೆಗಳನೋದಿ ಸುವಪೇಕ್ಷೆಯಿಂದಿರ್ದಾರ್ಗಳ್ (ಶಿಷ್ಯಾತು. ೩-೦-೦೯೫). **ಪೊದಳು:** ೧. ಹದಿಬದೆಯು ತೋಡಿರುವ ಎದೆಯುದ್ದ ಶಿವಗುಣಿಯು ಪೊದಳಿದಾ ಒರತೆ ಕಲ್ಯಾಣಪುರದೊಳಗೆ ಕದಳಿಬನವೆಂದು ಹೆಸರಾಯ್ತು (ಕವ್ನಜಾ. ೨೬೭). **ಹೊದಳ್ಳು₁** : ೧೬. ವದನಮಿರ್ದುದು ಹತ್ತುಯೋಜನ . . . ಹೊದಳು ತಿರ್ದುದು ನಡುವೆ ನಾಲಿಗೆಮುದಿಯು ತಾ ಹನ್ನೆರಡುಯೋಜನ ರುಧಿರಬೀಜನ ಘೋರತರ ಚೀರಿಸಿತು ಹರಿಹರರ (೮೦ಬಿಕಾ. ೯೨-೦೦೭).

[ದೇ.॥ ತಮಿ. ಮಲ. ಪೊತಿರ್ ; ತುಳು. ಪೊದಲು ; ತೆಲು. ಪೊದಲು, ಪೊದುರು]

**ಪೊದಟ್ಕೆ₁, ಪೊದಳ್ಕೆ (ನಾ).** ೧. ಹುಟ್ಟು ; ಉದಯ; ಆರಂಭ : ನುಡಿಯ ಪೊದಟ್ಕೆಯೊಳೊಳ್ನುಡಿ ನುಡಿದಂ ನಿಜಸಕಲಚಕ್ರವರ್ತಿತ್ವಕ್ಕಂದಡಿಯಿಡುವಂತೆ ನಿರಂತರಮಡಿಯಿಟ್ಟಂ ಪದ್ಮರಾಗಮಣಿಕುಟ್ಟಿಮದೊಳ್ (ಆದಿಪು. ೮-೯೦). ೨. ಹೆಚ್ಚಳ; ಆಧಿಕ್ಯ ; ಅತಿಶಯ : ಸಿರಿಯ ಶರೀರದ ರೂಪಿನ ನರರೈಶ್ವರ್ಯದ ಪೊದಟ್ಕೆಗಳ್ ಕರಗುವವೋಲ್ ಶರದಂಬುಧರಂ ಭೋಂಕನೆ ಕರಗಿದೊಡೆರ್ದೆ ಕರಗಿ ಕೊರಗಿದಂ ಧರಣೀಶಂ (ಆದಿಪು. ೯-೬೯); ಪುರುಡಿಸುವಳ್ ವಿಳಾಸದ ಪೊದಟ್ಕೆಗೆ ವಿಭ್ರಮದೇಟ್ಗೆಗಂಬರಚರಿಯರೊಳಿಂದ್ರಲೋಕಲಲಿತಾಂಗಿಯರೊಳ್ . . . ಆವಗಂ ಸೆಣಸುವಳ್ ಸಲೆ ಗಾಡಿಗಮುನ್ನತಿಕ್ಕೆಗಂ (ಧರ್ಮಾಮೃ. ೮-೦೭೭); ಹೃದಯದಲಂಪು ಪೋಗೆ ಪದೆದೀಂಟದೆ ಮುನ್ನಮೆ ತನ್ನ ಕಂಪಿನಿಂ ಮದದ ಪೊದಟ್ಕೆಯಂ ಮನಕೆ ಮಾಟ್ಟ ವಿನೂತನವೃಕ್ಷಧಾನ್ಯಸಾರದೆ ಮಧುಪಾಳಿಗಳ್ ಸುಱಿಗೊಳುತ್ತಿರಲ್ (ಶಾಂತೀಶ್ವ. ೩-೮೦). ೩. ಕಾಂತಿ; ಶೋಭೆ: ಕ್ಷಾಯಿಕದೃಷ್ಟಿ ತುಷ್ಟಿಯೊಳೊಡಂಬಡೆ ಜೈನವಚೋಮೃತಂ ಮುಖಶ್ರೀಯಾ ಪೊದಟ್ಕೆಯಂ ಬೆಳಗೆ (ಶಾಂತಿಪು. ೦-೯); ಕೊರಳ ಜನ್ನಿವರಂ ಪೊದಟ್ಕೆಯನೆಯ್ದೆ ಮಿಂಚುವ ಬೆಳ್ಪಿಯುತ್ತರಿಗೆ ಭಾಸುರಮಪ್ಪ ತೇಜಮಗುರ್ವ್ವ ಪರ್ವಿರೆ (ಧರ್ಮಾಮೃ. ೯-೩೦೭). ೪. ರಾಶಿ ; ಸಮೂಹ ; ಗುಂಪು : ಚದುರಪೊದಟ್ಕೆ ಸಂಪದದ ಬೊಂಬುಳಿ ಸತ್ಕದ ಬಿತ್ತರಂ . . . ಕೂಡೆ ಭೋಗದ ಕಣಿಯಾಯ್ತು ತಾಂ ತನಗೆ ಪೌರಜನಂ (ಜಗಪು. ೯-೦೦೭); ನಿಮಿರ್ಕೆವೆತ್ತ ತಣ್ಣದಿರ ಪೊದಟ್ಕೆಯಂ ಕಱೆವ ನವ್ಯಕಲಾವಿಸರಂ ಮಸುಳ್ದು ಮಾಸಿದ ಮುಕುರಂಬೊಲಂತೆ ವಿಗತಪ್ರಭನಾಯ್ತಮೃತಾಂಶುಮಂಡಲಂ (ಕುಸುಮಜ. ೯-೭೭). ೫. ಹರ್ಷ ; ಉತ್ಸಾಹ : 'ಪೊದಟ್ಕೆವಡೆ' ನೋಡಿ. **ಪೊದಳ್ಕೆ :** ೨. ರಾಜ್ಯಸಂಪದದ ಪೊದಳ್ಕೆ ತೇಜದ ತೆರಳ್ಕೆ ವಿರೋಧಿಯ ಬಾಳ್ಕೆ ತನ್ನದೆಂಬುದನೆ ಪೆರ್ಮ್ಮೆಯಿಂ ತಳೆದನೋ ನೃಪರೊಳು ನೃಪತ್ತೈಲಶಾಂತರಂ (ಎಕ. VIII, ಸಾಗರ. ೦೫೯-೦೩ ; 1159) ; ತಂನೆಸೆವ ರಾಯಮುರಾರಿವೆಸರು ಪೊದಳ್ಕೆಯಿಂ ನೆಲೆಗೊಳೆ ಸೋವಿದೇವಪೃಥ್ವೀಪತಿ ವಿಕ್ರಮಮಂ ನಿಮಿರ್ಚ್ಚಿದಂ (ಬಾಸಕ. ೫೦-೦೦ ; 1170) ; ಪರಿವ ಪಡಂಗು ಬಲ್ದೆರೆಯ ಸಾಲ ಬೆಡಂಗು ನವೀನವಿದ್ರುಮೋತ್ಕರದ ಪೊದಳ್ಕೆ ಶುಕ್ತಿಜದಳುರ್ಕೆ . . . ಚೆಲ್ವ ಬಿತ್ತರಿಸೆ ಪೊಡವರ್ಪುವೆತ್ತು ಬಗೆಗೊಂಡುದು ಪೂರ್ಣಗುಣಂ ಮಹಾರ್ಣವಂ (ಕಬಕಂ. ೦-೬೯). ೬. ಎದ್ದು ಕಾಣುವಿಕೆ; ನಿಚ್ಚಳವಾಗಿ ತೋರುವಿಕೆ ; ಪ್ರಕಟವಾಗುವಿಕೆ : (೬). ೭. ರಭಸ; ವೇಗ; ತ್ವರೆ: ಪ್ರಲಂಬಕಂಧರಂ ದುರಾಸದಂ ಪೊದಳ್ಕೆಯಿಂದೆ ಗೋಕುಳಕ್ಕೆ . . . ಬರ್ಪಿನಂ ಭಯಂಗೊಳುತ್ತೆ ಗೋಪಗೋಪಿಯರ್ಕಳಾಕ್ಷಣಂ ಕೊರಲ್ಚಿದರ್ (ಶಿಷ್ಯಾತು. ೫-೩-೦೮೩). [ಪೊದಟ್ + -ಕೆ]

Δ**ಪೊದಟ್ಕೆ₂** 'ಪೊದಕೆ₁' ನೋ.

**ಪೊದಟ್ಕೆಗುಂದು** (ಕ್ರಿ). ಹೆಚ್ಚಳವು ಕಡಮೆಯಾಗು ; ಆಧಿಕ್ಯವು ಕುಗ್ಗು : ಘನಾಘನಸ್ತನಂ ಪೊದಟಿ ಪೊದಟ್ಕೆಗುಂದಿದುದು ವಾಃಕಣ ಸಂತತಿ ಸೋರೆ ಸೋರ್ದಡಂಗಿದುದೆಳಗಾರೊಳಾ ಸಕಳಚಾತಕಪೋತತೃಷಾ ವಿಷಾದನಂ (ಕಂಪ್ರಶು. ೯-೯೬). [ಪೊದಟ್ಕೆ$_1$+ಉಂದು$_1$]

**ಪೊದಟ್ಕೆವಡೆ, ಪೊದಳ್ಕೆವಡೆ** (ಕ್ರಿ). ೧. ಹೆಚ್ಚಳವನ್ನು ಪಡೆ ; ಆಧಿಕ್ಯವನ್ನು ಹೊಂದು ; ಸಮೃದ್ಧವಾಗಂ : ಆ ರಾಜಕುಮಾರನನೇಕ ಕಲಾಕಲಾಪಪ್ರವೀಣನಾಗಿ ಯುವರಾಜಲಕ್ಷ್ಮಿಯೊಡನೆ ವಿಸ್ತಾರಮುಂ ಕೈಕೊಂಡ ವಕ್ಷಸ್ಥಲಮುಂ ಬಂಧುಜನಮನೋರಥಂಗಳೊಡನೆ ಪೊದಟ್ಕೆವಡೆದ[ಪಾಠಾಂ. ವೆತ್ತ] ವೃತ್ತೋರುಸ್ತಂಭಂಗಳುಂ...ಆತ್ಮೀಯಯೌವನಪ್ರಾದುರ್ಭಾವಮಂ ಪ್ರಕಟಂ ಮಾಡೆ (ಆಂಪು. ೩-೯ ವ) ; ಪೊದಟ್ಕೆವಡೆದ ಸದ್ಧರ್ಮಪೀಯೂಷ ಮಹಾಪ್ರವಾಹಂ ವಂಗಮಂಡಲದೊಳ್ ತರಂಗಂಗೊಂಡು ಕಳಿಂಗಮಂಡಲ ದೊಳ್ ಮಡುಗಟ್ಟಿ ನಿಂದು . . . ಪೆರ್ಮೆಗಾಶೀರ್ವಮಾದುದು (ಅಸಂಪು. ೦೯-೯೬ ವ). **ಪೊದಳ್ಕೆವಡೆ** : ೨. ಉತ್ಸಾಹವನ್ನು ಹೊಂದು ; ಉಬ್ಬು ; ಹರ್ಷಗೊಳ್ಳು : ಜೈನಸಮಯಾಂಬುಧಿಕೀರ್ತಿಸುಧಾಂಶುವಿಂ ಪೊದಳ್ಕೆವಡೆಯೆ ರೇಚಿರಾಜನೆಸೆದಂ ಜಸದಿಂ ವಸುಧೈಕಬಾಂಧವಂ (ಎಕ. VII, ಶಿಕಾರಿ. ೦೯೭-೩೨ ; 1182 ?). [ಪೊದಟ್ಕೆ$_1$+ಪಡೆ$_1$]

**ಪೊದಟ್ಕೆವೆಱು** (ಕ್ರಿ). ೧. = ಪೊದಟ್ಕೆವಡೆ ೧ : ಆ ರಾಜಕುಮಾರ ನನೇಕಕಲಾಕಲಾಪಪ್ರವೀಣನಾಗಿ ಯುವರಾಜಲಕ್ಷ್ಮಿಯೊಡನೆ ವಿಸ್ತಾರಮುಂ ಕೈಕೊಂಡ ವಕ್ಷಸ್ಥಲಮುಂ ಬಂಧುಜನಮನೋರಥಂಗಳೊಡನೆ ಪೊದಟ್ಕೆವೆತ್ತ[ಪಾಠಾಂ. ವಡೆದ] ವೃತ್ತೋರುಸ್ತಂಭಗಳುಂ . . . ಆತ್ಮೀಯಯೌವನ ಪ್ರಾದುರ್ಭಾವಮಂ ಪ್ರಕಟಂ ಮಾಡೆ (ಆಂಪು. ೩-೯ ವ). ೨. ಶೋಭೆ ಯನ್ನು ಹೊಂದು ; ಮನೋಹರತೆಯನ್ನು ಪಡೆ : ಪೊಳೆವಲರ್ಗಣ್ಣ ನೀಳ್ದ ನಿಡುಪುರ್ವಿನ ಸುಕ್ಕಿದಮರ್ಕೆವೆತ್ತ ಕುಂತಳದ ಪೊದಟ್ಕೆವೆತ್ತಸಿಯು ಬಾಸೆಯು . . . ಅಂಗನಾವಳಿ ನೆರೆದಂದು ಬಂದುದು ಮನೋಜನ ತಂತ್ರದವೋಲ್ ವಿಲಾಸದಿಂ (ಧರ್ಮಾಮೃ. ೦೩-೦೬). [ಪೊದಟ್ಕೆ$_1$ + ಪೆಱು$_1$]

**ಪೊದಟ್ಚು** (ಕ್ರಿ). ಉಂಟುಮಾಡು ; ಒದಗಿಸು : ತಾಂ ಮೊಗಂಗುಡೆ ಪದವೆತ್ತು ಚುಂಬಿಸಿ ಭಯಂಗೆಯೆ ಬಲ್ಪಿಣಸಂ ಪೊದಟ್ಚೆ ನಾಣ್ಗಡೆ ನೆರೆ ದೂಢೆಯಂ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ (ಕಂಪ್ರಶು. ೬-೬೨). [ಪೊದಟ್ + — ಚು$_1$]

**ಪೊದಟ್ತರ್** (ಕ್ರಿ). ಪೂರ್ಣವಾಗು ; ತುಂಬು : ಬೀಗಿ ಬೆನ್ನಿಂ ಬಿರಿವನ್ನಂ ಕೊರ್ವಿ ಮುಂಗಾಲ್ ಗಡಿಯೆನೆ ಕಡುಗೆಚ್ಚಲ್ ಪೊದಟ್ತಂದು ವತ್ಸೋತ್ಕರ ಮೆಲ್ಲಂ ಬಾಲವಂಬು ಕಱೆಯೆ(?) ಬಹಳರೋಮಂಥಫೇನಾವಳೀ ಪಾಂಡುರವಕ್ತ್ರಂ ಮಾಹಿಷೀಸಂತತಿ ವಿಪಿನಭವಂ ಕಣ್ಣಗುರ್ವಾಯ್ತು ಕಾರೊಳ್ (ಕಂಪ್ರಶು. ೯-೯೬). [ ಪೊದಟ್ + ತರ್ ]

**ಪೊದಿಕೆ** ' ಪೊದಕೆ$_1$ ' ನೋ.

**ಪೊದಿಸು** ' ಪೊದೆಯಿಸು ' ನೋ.

**ಪೊದೆ$_1$, ಹೊದಿ$_1$, ಹೊದೆ$_1$** (ಕ್ರಿ). ಪೊದ್ದ, ಹೊದ್ದ (ಭೂತಕೃ). ಪೊದ್ದು, ಹೊದ್ದು(ಭೂತನ್ಯೂ). ೧. (ವಸ್ತ್ರ ಮೊದಲಾದುವನ್ನು) ಧರಿಸಿಕೊಳ್ಳು : ಆತನ ರತ್ನಕಂಬಳಮುಂ ಪೊದೆದು ತನ್ನ ಮನೆಗೆ ಬರ್ಪನಂ ಕಂಡು (ವಡ್ಡಾರಾ. ೩೯-೨); ಒಂದಂಚಿಯಂ ಪೊದೆಯೊಂ[ ದೊಂ ] ದಂಚಿಯನುಟ್ಟು ನಿನ್ನಿರವಿದೇನಂಭೋಜಪತ್ರೇಕ್ಷಣೇ (ಕಂಕಥಾ. ೮-೬೬); ಚಂದ್ರಾಪೀಡದೇವಂ . . . ಪಾವಿನೆರೆಯು ದೊರೆಯ ದುಕೂಲಮಂ ಪೊದೆದು (ಕಾದಂಸಾ. ೩೪೦); ಕರ್ಮುಗಿಲಾಗಸಮಂ ಮುಸುಂಕೆ ಕಾಲನೆಂಬ ಕಾಳರಕ್ಕಸಂ ಪೊದೆದ ನೀಲಪಟದೊಂದು ಪಾಂಗಿನೊಳೊಪ್ಪಿದುದು (ಲಸಚಂತ್ಯ. ೩-೪). ೨. ಕವಿ; ಆವರಿಸು ; ಮುತ್ತು : ಶ್ರೀದುರಿತಾ ಘೂರ್ದ್ಯೈಷಮಾನ್ಮಿಲ್ಲಲಟ ಪೊದೆದಜ್ಞಾನಶೈಲೇಂದ್ರಮಾನ್ ಪೋಟ್ದುರ ವಿಥ್ಯಾತ್ವಪ್ರಮಾಢಸ್ಥಿರತರನೃಪನಾನ್ ವೆಟ್ಟೆ (ಎಕ. II, ೦೨-೦; ಸು. ೭೦೦). **ಹೊದಿ$_1$** : ೧. ಒಡಲಿಗ್ಗಾಕುವ ನೀನೆ ಉಡಲು ಹೊದಿಯಲು ವಸ್ತ್ರ ಕೊಡುವವ ನೀನೆ (ಪುರಂದ. ೦-೦೯೬-೨); ನಿವೀತಂ, ಪ್ರಾವೃತಂ_೨ ಹೊದಿಯುವ ಬಟ್ಟೆ (ಸಿದ್ಧಾಂಕಿ. ೨೦೩). **ಹೊದೆ$_1$** : ೧."ಹೊದೆ_ಆಚ್ಛಾದನೇ, ಶರಕೋಶೇ ಚ (ಬತ್ತಳಿಕೆ)" (ಶಮುಧಾ); ಆವನಾದರೇನು ಶ್ರೀಮಹಾ ದೇವನ ನೆನೆವವನ ಬಾಯ ತುಂಬುಲವ ಮೆಲುವೆ ಬೀಳುಡಿಗೆಯ ಹೊದೆವೆ (ಬಸವ. ೩೬೩) ; ಮುನೀಂದ್ರುನಿವೇದಕಂಗೆ ತಾಂ ಹೊದೆದುದನಿತ್ತು (ಅಸಂಪು. ೯೮-೪); ಒದೆದನಳಲನು ರೋಮಹರುಷವ ಹೊದೆದು ಹೊರೆ ಹೆಚ್ಚಿದನು (ಕುಮಾರವ್ಯಾ. ೦೯-೦೦); ಮಂಡೆ ಬೋಳಿಸಿಕೊಂಡು ಕೌಂಡುಗಂಬಳಿ ಹೊದೆದು ಹಿಂಡನಗಲಿದ ಗಜದಂತೆ ಇಪ್ಪವರ ಕಂಡು ನಂಬುವದು (ಸರ್ವಜ್ಞ. ೩೦೩).

**ಪೊದ್ದುಕೊಳ್, ಹೊದ್ದುಕೊಳ್**=(ವಸ್ತ್ರ ಮೊದಲಾದುವನ್ನು) ಧರಿಸಿಕೊಳ್ಳು : ಪೊದ್ದು[ಪಾಠಾಂ. ತಾಳ್ದು, ಪೊರ್ದಿ, ಪೊರ್ದುರ್]ಕೊಳ್ವೊಡೆ ಧವಳೋತ್ತರೀಯಂ . . . ಒಲ್ದು ನೋಳ್ಪೊಡೆ ರಜತಾದ್ರಿಯೆಂದೆನಿಸಿ ತೋಱುತು ಮಾಱಿದ ಚಂದ್ರಿಕೋಜ್ವಳಂ (ಗಿರಿಕ. ೯-೦೦೮) ; ಪ್ರಾವಾರಃ —ಹೊದ್ದುಕೊಂಬ ಸೀರೆ (ವಾಃಕರಾ. ೬).

[ದೇ. ॥ ತಮಿ. ಪೊತಿ ; ಮಲ. ಪೊತಿ, ಪೊತ್ತು, ಪುತೆ ; ತುಳು. ಪೊದೆ, ಪೊದಿ, ಪೊದ್ದಿ, ಪೊದ್ದು ; ಕೊಡ. ಪೊದ, ಪೊದಿ, ಪೊದೆ; ತೆಲು. ಪೊದುಗು, ಪೊದುವು]

**ಪೊದ್ಕೆ, ಹೊದ್ಕೆ** (ನಾ). ೧. ಬಾಣಗಳನ್ನಿಡುವ ಕೋಶ ; ಮೂಡಿಗೆ ; ಬತ್ತಳಿಕೆ : ಪದವಿಲ್ಲಂ ನನೆಯಂಬಿನ ಪೊದೆಯಂ ಪಿಡಿದಿರದ ಪದದೊಳಾ ನೆರ್ೞಡಿದೊಡಂ ಮದನಂಗಂ ಮಾನಿನಿ ದಶವದನಂಗಂ ರೂಪಭೇದ ಮೇನಾದಪುದೇ (ಶಂಸಾಪು. ೯-೧೬೩) ; ಪೊದೆಯೊಳಗಿಂದಮುರ್ಚುವೆಡೆಯಲ್ಲಿ ಸರಲ್ ದಿಟಮೊಂದು . . . ಇದಿರ್ಚಿದರಂ ನಡುವಲ್ಲಿ ಲಕ್ಕಮೆಂಬುದನೆನೆ ಬಿಲ್ಲಬಿನ್ನಣಮನಾ ರಣದೊಳ್ ಮೆಱೆದಂ ಯುವಾಧಿಪಂ (ಕಂಪ್ರಶು. ೬-೩೬); ಬಿರಯಿಗಳನಿಸಲನಂಗಂಗರಲಂಬಿನ ಪೊದೆಯನಖಿಳಪವನದೇವತೆಯರ್ ವಿರಚಿಸಿ ನೀಡಲ್ ಬಂದುತಿರಲೆಸೆವರ್ ಪುಷ್ಪಮಾಲಿಕಾಧಾರಿಣಿಯರ್ (ಕುಕ್ಕಶು. ೨-೬೯); ಕೆಲದೊಳಿಪಿದುಂಬಿನ ಪೊದೆಯು ಸಾರ್ಚಿ ನಿಲಿಸಿದ ಶರಾಸನದ (ರಾಜಶೇ. ೬-೦೦ ವ). ೨. ಗಿಡಮರಗಳು ಒತ್ತಾಗಿರುವ ಸ್ಥಳ ; ಹೊದರು; ಮೆಳೆ : ಮೆಯ್ಮುಱಿದು ಲಜ್ಜೆಯಂ ತೊಱೆದು ಪೊದೆಯೊಳ್ದಿರ್ದ ಪೆಣ್ಗಾರಡಿ ಯಂ ಕಂಡು ಕಾತರತನದಿಂ ಪಿಡಿದದಂ ನೆರೆಯಲ್ (ಧರ್ಮಪ ೩-೯೩ ವ); ಕೇಬೂತಂ ಪಾರಿತು ಪೊದೆಯಿಂದಿತ್ತ (ಆದಿಪು. ೯೯-೮); ಕುಬ್ಜಕ, ಮಲ್ಲಿಗೆ, ಕುರಂಟಕ, ನವಮಾಲಿಕೆ ಮೊದಲಾದವುಗಳ ಪೊದೆಗಳಿದ್ದವು (ಬಾಣಕ.೩೬). ೩. ರಾಶಿ ; ಹೊರೆ ; ಗುಂಪು : ಕರವಾಳ ಕೂರ್ಪಂ ನೋಡಲೆಂದು ಬಾಯ್ದಾರೆ ನಿಲೆ ಕುಮಾರಂ ಪೊಯ್ದೊಡೆ ಕೈಯುಳವಿದಾರಕೈಯುಳವಿಯೆನಲ್ ನೆಯ್ದಿಲ ಕಾವಿನ ಪೊದೆಯಂ ಪೊಯ್ದಂತೊರ್ಮೊದಲೆ ಪಱಿದುದಾ ವಂಶ ವನಂ (ಶಂಸಾಪು. ೯-೨೩); ಸುಮ್ಮಾನದಲಿ ತಱಗೆಲೆಯ ಪೊದೆಯೊಳು ಮೌನ ದಲಿ ಉರಗೇಂದ್ರನಿದ್ದನು ಬಲಿದ ನಿದ್ರೆಯಲಿ (ಪಳಕ. ೫-೨೬). ೪. (ಮನೆ ಮುಂತಾದುವುಗಳ) ಹೊದಿಕೆ ; ಛಾವಣಿ : (೬). ೫. ಕಟ್ಟು ; ಕಂತೆ ; ಹೊರೆ : (೬). ೬. (ಅಲಂ) ಗೋಜು ; ಸಿಕ್ಕು : ಈ ಪೊದೆಯನ್ನು ಬಿಡಿಸಿದರೆ ಹಿಂದೂಧರ್ಮದ ಮೂಲತತ್ವಗಳು ದೊರೆಯು ತ್ತವೆ (ಬಿಂಕಿಸು. ೯೩೯). **ಹೊದ್ಕೆ** : ೧. "ಹೊದೆ_ಆಚ್ಛಾದನೇ, ಶರ ಕೋಶೇ ಚ (ಬತ್ತಳಿಕೆ) " (ಶಮುಧಾ); "ದೊಣೆ ಬತ್ತಳಿಕೆ ಮೂಡಿಗೆಯು ಮೆನಲ್ ಹೊದೆಯು " (ಶಬ್ದಮಂ. ೯೯) ; ಕಯ್ಯ[ ೦ ]ಬು ತಮಬು ದೇವಂಗಾಗೆ ಬಿನ್ನಪಂಗೆಯ್ಕಲು ಅವ್ವನ ಹೊದೆಯಂ ಕಾರುಣ್ಯಗೆಯ್ಕಲು ಮಹಾಪ್ರಸಾದ ಎಂನುತ್ತೆ ಕಾಳಗಕ್ಕೆ ಹಱಿದು (ಪ್ಪಕಂ. ೦೯೩೨, ೩೨-೩ ; ಸು. 1125) ; ಭೀಷ್ಮನಿತ್ತಲು . . . ಬಿಗಿದ ಹೊದೆಗಳ ಹಱಿದು

ಬಿಲ್ಲಿಂದುಗುಳಿಸಿದನಂಬುಗಳನು (ಕುಮಾ.ಭೀ. ೯-೭) ; ಎಸುವ ಹೊದೆಯಿಂದೆ ತೆಗೆದೆಸುವ ಬೊಬ್ಬಿಱಿದು ತೊಟ್ಟೆಸುವ . . . ಚಾಪಕಲಾಪ್ರವೀಣರೆಚ್ಚಾಡಿದರ್ (ಕಬಿಕು. ೪೦-೭). ೩. ದುಷ್ಕೃತಂಗಳ ಹೊದೆಯಂ ನೆಱೆ ಮುಂದು ಮಾಡಿ ಕೈವಿಡದೆಯುಂ . . . ಕಿರ್ದುವ ಚದುರಂ ಬಲ್ಲವರೆ ಬಲ್ಲರ್ (ಶಸ್ತ್ರಸಂ. ೯-೬೩). ೪. ಹೊಱಗೆ ಹಾಸಿದ ಹಸಿಯ ತೊಗಲ ಹೊದೆಯ ಮಾಣದೊಳಲಿ ಕೂಗಿಡುವ ನಾನಾಪ್ರಾಣಿವರ್ಗಮು ಕೊಱೆವ ಕೊಚ್ಚುವ ತಱಿವ (ಹಕಶಾ. ೦೦-೩೦). [ < ಪೊದ$_1$./ತಮಿ. ಪುತ್ತೈ, ಪೊತಿ, ಪೊತ್ತೈ; ಮಲ. ಪುತ, ಪೊತಿ ; ತೆಲು. ಪೊದ, ಪೊದಿ ]

**ಪೊದೆಗಟ್ಟು** (ಕ್ರಿ). ಬತ್ತಳಿಕೆಯನ್ನು ರಚಿಸು : ಹೊಸ ಪೊ[ ಪಾಠಾಂ. ಹೊ]ದೆಗಟ್ಟುವಂಬುಗಳ ಕುಪ್ಪೆಯನಾಮರಿಪಾರ್ದ್ರಜಾಳಮಂ ಪಸರಿಪ . . . ಪುಳಿಂದಸಂಕುಳದ ಪೆರ್ಕಣದಿಂದೆಸೆದತ್ತು ಪಕ್ಕಣಂ (ಚಂದ್ರಕು. ೫-೩೪).
[ ಪೊದ$_2$ + ಕಟ್ಟು$_1$]

**ಪೊದೆಗೆದಱು, ಹೊದೆಗೆದಱು** (ಕ್ರಿ). (ದಟ್ಟವಾಗಿರುವುದನ್ನು) ವ್ಯಾಪಿಸುವಂತೆ ಮಾಡು,—ಎಲ್ಲೆಡೆಗೆ ಹರಡು : ಮಾಲೆವೂವಂ ನೆಗಪಿ ಸೊಗಯಿಸುಂ ನೀಱರೊಳ್ ಪುಷ್ಪಚಾಪಂ ಗುಱಿಯೇಸಂ ತೋಱಲಂಬಂ ಪೊದೆಗೆದಱಿದವೋಲ್ ಪುಷ್ಪಲಾವೀಕದಂಬಂ (ಶಂಗಾಶು. ೦-೦೨೦) ; ಮಾಲೆಗಾರ್ತಿಯರೆತ್ತಿದ ಬೆಲೆವೂವಿನ ಸರಂಗಳನಲರಂಬಂಗೆ ಪೊದೆಗೆದಱುವಂತೆ ಕೆದಱೆ (ಚಂದ್ರಕು. ೬-೪ ಪ) ; ಪೊದೆಗೆದಱಿರ್ದ ಪೂಗಣೆಯ ಕೆಂಗಱಿಯಂತೆ . . . ಪೂತ ಚೂತದ ಕಿಱುಗೊಂಬಿನೊಳ್ ನಿಱಿದಳಿರ್ ಮೆಱೆದತ್ತು (ಅಪಂಕು. ೭-೬೨). **ಹೊದೆಗೆದಱು** : ಸುಶರ್ಮ ಶಲ್ಯರು ಸರಳ ಹೊದೆಗೆದಱೆ ಮೊನೆಗಣೆಯನಳವಡಿಸೆ ಗುರು . . . ಸೇನಾವನಧಿ ಗರ್ಜಿಸಲಾಯ್ತು ಸಂಕುಲಸಮರಸಂರಂಭ (ಕುಮಾ.ಭೀ. ೫-೩) ; ಬಾಣವ್ರಾತವನು ಹೊದೆಗೆದಱೆ ಹೊಸ ಹೊಗರೆದ್ದ ನಡಿಗಡಿಗೆ (ಕುಮಾ.ಕ. ೦೩-೨೨).
[ಪೊದ$_2$ + ಕೆದಱು$_1$ (< ಕೆದಱ್$_1$)]

**ಪೊದೆದುಂಬು** (ಕ್ರಿ). (ಬಾಣಗಳು) ಬತ್ತಳಿಕೆಯಲ್ಲಿ ತುಂಬಿರು,—ಭರ್ತಿಯಾಗಿರು : ಸೆಕ್ಕದ ಖಂಡೆಯಂ ಬಿಗಿದ ಬಿಲ್ ಪೊದೆದುಂಬಿದ ಬೋಳೆಯಂಬು . . . ಬಾಸಿಗದಿಂ ಮೆಱೆದತ್ತು ಸತ್ತ್ವಿಗಳ್ (ಶಳಶ. ೨-೪೭).
[ ಪೊದ$_2$ + ತುಂಬು$_1$ ]

**ಪೊದೆಯಿಸು, ಪೊಚ್ಚು, ಪೊದಯಿಸು, ಪೊದಿಸು, ಪೊದೆಸು, ಹೊಚ್ಚು$_1$, ಹೊದಸು, ಹೊದಿಯಿಸು, ಹೊದಿಸು, ಹೊದುಸು, ಹೊದೆಸು, ಹೊದ್ದಿಸು$_2$** (ಕ್ರಿ). ೧. ಮುಚ್ಚು ; ಆಚ್ಛಾದಿಸು : “ಪೊದೆಯಿಸು— ಆಚ್ಛಾದನೇ” (ಶಮದ) ; ಬಿಸರುಹದಳಂಗಳಿಂ ಪೊದೆಯಿಸಿರ್ದ ಹಿಮಗೃಹಮನವನಿಪಾಲಂ ಕಂಡಂ (ಕಾದಂಸಂ. ೨೦೪) ; ಪೊದೆಯಿಸಿದತ್ತೊ ಚಿತ್ರಪಟದಿಂ . . . ಎಂಬಿನಂ ತಳಿರ ಪೂವಿನ ತುಂಬಿಯ ಕಾಯ ಪಣ್ಣ ಬಣ್ಣದಿನೆಸೆದತ್ತು . . . ಬನಂ (ಜಗಶಿ. ೦೦-೫೫) ; ಆ ವಿಷಯದೊಳೊಪ್ಪುವ ಕಳಮಾವಳಿ ನಳನಳಿಸಿ ಬೆಳೆದು ಪಸುರೇಱೆ ಲಸದ್ಭೂವನಿತೆಗೆ ಧಾತ್ರಂ ಪರಿಭಾವಿಸಿ ಪೊದೆಯಿಸಿದ ಹರಿತಪಟದಂತಿರ್ಕುಂ (ಗಂಶ. ೨-೦೨). ೨. ಮುಸುಕು; ಕವಿ; ಆವರಿಸು : ಮುಕುಂದನ . . . ಹಸ್ತದ ಕಾಂಚನವಾರಿಯಂತ್ರಮಂಕದಱೆ ನಿವಿರ್ಕವೆತ್ತ ಘುಸೃಣೋದಕಧಾರೆ ನವಾರುಣಾಂಶುವೋಲ್ ಪೊದೆಯಿಸಿತಂಬುಜಾನನೆಯರೆಂಬ ನವಾಂಬುಜಿನೀಕದಂಬಮಂ (ಜಗಶಿ. ೦೪-೦೦೭). ೩. ವ್ಯಾಪಿಸುವಂತೆ ಮಾಡು ; ಹರಡು : ಸುಗುಡುತನಮಂ ಪುದಿದ ಚತುರಂಗದತ್ತ ಚದುರಂ ಪೊದೆಯಿಸುತೆ ಕೊಯ್ಲೆ ಮಿಂಡರಂ ಪಣದದಿಂ ಮಣೆಯಿಸುತ್ತೆ (ಶಬ್ದರಾ. ೯-೯೬). **ಪೊಚ್ಚು** : ೧. ಗುರುಪಾದೋದಕದಿಂದಲರೆದು ವಸ್ತ್ರವ ಪೊಚ್ಚಿ ವರವಿಭೂತಿಯನು ಫಾಲದೊಳಿಟ್ಟು ಮುದದಿ (ಬ್ರಹಂಶ. ೦೬೪-೨). **ಪೊದಯಿಸು** : ೧. ಪೆಱತೊಂದೆಡೆಯೊಳ್ ಸಹಕಾರರಸದಿಂ ತೊಯ್ದುರನೇಱಿಲ ತಳಿರ್ಗಳಿಂ ಪೊದಯಿಸಿದ ಕುಳಿರ್ವ ಕಾವಣಂಗಳುಮಂ . . . ನೋಡುತ್ತಂ ಪೋಗೆ (ಕಾದಂಉ. ೨೦೪) ; ಪೊದಯಿಸುವಂತೆ ಚಿತ್ರಪಟದಿಂ ತನುವಂ ಬಹುರತ್ನಕಾಂತಿಗಳ್ ಪುದಿಯೆ ಲತಾಂಗಿ . . . ತಳೆದಳ್ ಪುಳಕಾಂಕುರಂಗಳಂ (ಮಲ್ಲಿಕು. ೪-೬೪) ; ಪೆರ್ಮರದ ನಟ್ಟಗೊಂಬಿನ ಕವಲ್ದಲೆಯೊಳಿಟ್ಟ ಗೂಡುಗಳೊಳ್ ಗೂಡುಗೊಂಡಿರ್ದ ಕುಱುಳೆವಱಿಗಳ್ಗೆ ಕುಟ್ಟುಂಕನಿಕ್ಕಿ ಕಡುಗಂದಿತನದಿಂ ಕೋಡಗಱಿಯ ತುಱುಗರೊಳ್ ಪೊದ[ಪಾಠಾಂ. ದೆ]ಯಿಸೆ (ಚಂದ್ರಕು. ೮-೪ ಪ) ; ಸಪುರಬಿಳಿದಂ ಬಿಗಿದುಡಿಸಿ ಬೆಳಗುವ ದುಕೂಲಮಂ ಪೊದಯಿಸಿ (ಶಂಬಿರ. ೦೦-೪೬). **ಪೊದಿಸು** : ೧. ಪರಿಮಳೋದಕದಿಂದೆ ಮಹಮಜ್ಜನಕ್ಕೆಱೆಸಿ ವರದುಕೂಲಮನುಡಿಸಿ ಪೊದಿಸುತಂ (ತಿರುಶ. ರೇ. ೬-೨೦) ; ಕೋಮಳಸಿತಪಕ್ಷಮಂ ಪೊದಿಸಿ ಲಾಲಿಪ ಹಂಸೆಯ ಪುತ್ರಮೋಹಮಂ ಲಳನೆ ಸಮಂತು ಕಂಡು ಮಿಗೆ ಚಿಂತಿಸಿದಳ್ ಸುಕುಮಾರ ಲಾಭಮಂ (ದಶಕು. ೦-೫೬) ; ವಾಯಸಪ್ರತತಿ ಗಱಿಗಳಂ ಪೊದಿಸಿ ಮಗ್ಗುಲೊಳಿಟ್ಟು ಕೋಗಿಲೆಯ ಮಱಿಗಳಂ ಮೈಯೊಳ್ ಪುದುಗಿಕೊಂಡು ಮಱುಕದಿಂದೈದೆ ಪಾಲಿಸುತಿರ್ದವು (ಕೈಬಿಖಾ. ೨೮-೪). **ಪೊದೆಸು** : ೧. ಬಿಳಿಯ ಪಟ್ಟಾವಳಿಯ ಪೊಸ ಸಪುರವಂ ಪೊದೆಸಿ (ಅಶೀರ. ದೇ. ೬೩-೯) ; ದುಗುಲವ ಪೊದೆಸುತ ನಿಱಿಯ ಸುಗಿದನು (ಶರಶ. ೪೦-೬೦). **ಹೊಚ್ಚು$_1$** : ೧. ಶರಪಂಜರವ ಖಳನೆಚ್ಚು ಶರದಲಿ ಕೈಟಭಾರಿಯ ಹೊಚ್ಚಿ ಬೊಬ್ಬಿರಿಯುತ್ತಲಿಂತೆಂದನು ಸರೋಷದಲಿ (ಕೋಗಮ. ೦೦-೩೪) ; ಮೈಮೇಲೆ ಮೆತ್ತಗಾಗಿ ಹೊದಕೆಯೊಂದನ್ನು ಹೊಚ್ಚಿ ತಾಯಿ ದೀಪವನ್ನಾರಿಸಿದಳು (ಕಮುವ. ೦೦೪) ; ಬಡವರಾದವರು ಮನೆಗಳಿಗೆ ಹುಲ್ಲು ಹೊಚ್ಚುತ್ತಾರೆ (ಮುಂಬಯಿ. ೪-೦೦೮). ೨. ಬಚ್ಚಿದವು ಕವಚವಂ ಕಚ್ಚಿದವು ಖಂಡವಂ . . . ಮೈಯೊಳಗೆ ಹೊಚ್ಚಿದವು ಹೊಗರಲಗು ಮಚ್ಚಿದವು ನೆಣವಸೆಯನು (ಕೈಬಿಖಾ. ೦೩-೦೪) ; ಮುಗಿಲ ಹೊಚ್ಚಿತು ಕಪ್ಪುಕಂಬಳಿಯ ಕತ್ತಲು (ನಂಕು. ೦೪-೦೫). ೪. (ಕದ ಮುಂತಾದುವನ್ನು) ಮುಚ್ಚು : ಆ ಉಷ್ಣದಿವಸದೊಂದಿರುಳು . . . ಪಡಿಯ ಹೊಚ್ಚಿದೊಡುಬ್ಬೆ ತಾಗುವುದೆಂದು ಮಡದಿಯಡದ ಕೋಳೊಳೊಱಗಿ ಬಡಗಾಳಿಗೆ ಮೈಯೊಡ್ಡಿ ನೃಪಾತ್ಮಜ ನಡಸಿದ ನಿದ್ರೆಯೊಳಿರಲು (ಶೀಬಸಂ. ೪-೩೭). **ಹೊದಸು** : ೨. ರೋಷಜ್ವಾಲೆ ಹೊದಸಿತು ವದನವನು ಕಣ್ಣಾಲಿ ಕಾಹೇಱಿದವು ಪಾರ್ಥಂಗೆ (ಕುಮಾ.ಕ. ೦೭-೦). **ಹೊದಿಯಿಸು** : ೧. ಭರದಿಂದ ಹೊದಿಯಿಸಲೊಡನಾ ಪೀತಾಂಬರವಳೆದಳಿರಂತಾಗೆ ಸುರುಚಿರಮಪ್ಪ ತಮಾಲಲತಿಕೆಯೆನೆ ಸುದತಿ ಕಣ್ಗೊಪ್ಪವಡೆದಳು (ಶೀಬಸಂ. ೨೫-೦೬೪). **ಹೊದಿಸು** : ೧. ಕಂದನಂ ನೋಡುತ್ತ . . . ತಾಯಿ ಮೇಲ್ಸೆಱಗಿಂದ ಹೊದಿಸುತ ತೆಱೆವುತಂ ಹೊದಿಸುತ್ತ ತೆಱೆವುತ್ತ . . . ಕಲ್ಲಣಿಸುವಳು (ಬಸಕು. ೦೫-೨೦) ; ಗುಡಿಲಂ ಹೊದಿಸಿ ಹಸಮಾಡುವ ಕಳನ ಕೆತ್ತುವ . . . ಕುಡಿಯರುಗಳೊಳಗೊಪ್ಪವಂ ಪಡೆಮುದು (ಶಬ್ದಶ್ರೀ. ೦-೨೪) ; ಬಿಸಿನೀರಿಂದೆ ಮೆಯ್ದೊಳೆದು ಪಕ್ಕಯೊಳೊಱಗಿಸಿ ವಸ್ತ್ರದಿಂ ಮುಚ್ಚಿ ಹೊದಿಸಿ (ಶೋಹಶ. ೬೦-೪೬) ; ಆನೆಗಳಿಗೆ ಬಟ್ಟೆಯನ್ನು ಹೊದಿಸಿರುತ್ತಾರೆ (ಕೃಪಾಇ. II. ೦೫೭) ; ಹಚ್ಚಡ ಹೊದಿಸಿದರೆ ಹುಚ್ಚು ಹೋದೀತೇ ? (ಗಾದೆ). ೨. ಅದಿರ್ದ ಖಡುಗದ ಕಾಂತಿ ಸೂರ್ಯನ ಹೊದಿಸಿದುದು (ಕುಮಾ.ದ್ರೋ. ೬೨-೭) ; ಸರಳು ಗಗನವ ಹೊದಿಸಿದವು (ಕುಮಾ.ಕ. ೪-೩೨). ೫. ಆವೃತವಾಗು; ಮುಸುಕಲ್ಪಡು : ದಿಗುಜಾಲವಂಬಿನ ಹೊರಳಿಯಲಿ ಹೊದಿಸಿದುದೆನಲು ಕವಿದೆಚ್ಚನಾ ಪಾರ್ಥ (ಕುಮಾ.ಕ. ೨೦-೨೦). ೬. ಆವರಿಸುವಂತೆ ಮಾಡು; ಕವಿಯಿಸು : ಹಿಳುಕ ಹೊದಿಸಿದನಖಿಲದೆಸೆಗಳ ನಿಲುಕಲರಿದೆನೆ (ಕುಮಾ.ದ್ರೋ. ೦೫-೬೫) ; ಪಂಚಪಾಂಡವರಡಸಿದರು ಹೊದಿಸಿದರು ಕಣೆಯಲಿ ರವಿಸುತನ ರಥವ (ಕುಮಾ.ಕ. ೦೩-೬೭). ೭. ಬಳಸು; ಸುತ್ತುವರಿ: ಆ ಕುಶದ್ವೀಪವದಱಂ ತುದಿಗೆ ತಿರುಗಿಹುದಿಕ್ಷುವಿಕ್ಷುವ ಹೊದಿಸಿಹುದು ತಾ ಕ್ರೌಂಚದ್ವೀಪವದು

(ಸಂಶಿಶ. ೧೦-೯). **ಹೊದುಸು :** ೧. ಛತ್ರದ ಮನೆಯ ಹೊದುಸುವದಕ್ಕೆ ೬ (ಎಕ. VII, ಶಿಕಾರಿ. ೭೦-೬೨ ; 1431). **ಹೊದೆಸು :** ೧. ಕೋಮ ಲಾಂಗಿಯರಿಗೆ ರಾಯ ತಾ ಹೊದೆದಿದ್ದ ಕ್ಷೌಮವಸ್ತ್ರವ ಹೊದೆಸಿದನು (ಭರತ. ೩೦-೧೦೪). ೨. ಹೃದಯ ಕಳವಳಿಸಿದವು ಕಂಗಳ ಹೊದೆಸಿದವು ನಯನಾಂಬು (ಕೊರಂ. ೨-೨-೨೬). **ಹೊದ್ದಿಸು$_2$ :** ೧. ಜಿಹ್ವೆಯಾಹಾರವ ಜಂಗಮವನೂಡಿಸುವೆ [ತ್ವ]ಚದಾಹಾರವ ಜಂಗಮಕ್ಕೆ ಹೊದ್ದಿಸುವೆ (ಬಸವ. ೯೨೯) ; ಮಂಚದ ಮೇಲೆ ಮಲಗಿಸಿ ಹೊದ್ದಿಸಿ ಬಾಗಿಲು ಹಾಕಿಕೊಂಡು ಬಾ (ಕಂಗಾಳ್. ೨೫೯). [ಪೊದೆ$_1$ + — ಇಸು$_3$]

**ಪೊದೆವಡು** (ಕ್ರಿ). ಹೊದಿಸಲ್ಪಡು : ಪೊದೆವಟ್ಟ ಪಟ್ಟಾವಳಿಗಳಾನೆ ದೊವಲಿಸುವ ಪುಲಿಸಮ್ಮವು (ಚೇರವು. ೦-೩೦). [ಪೊದೆ$_1$ + ಪಡು$_1$]

**ಪೊದೆಸೀರೆ** (ನಾ). ವಸ್ತ್ರದ ಹೊದೆಯುವ ಭಾಗ ; ಮೇಲುಸೆರಗು : ಅತಿವೇಗದೆ ಸಾರೆವಂದು ನೀರೇರುಹನೇತ್ರನಿರ್ದಿರವನೀಕ್ಷಿಸಿ ಗದ್ಗದ ಕಂಠನಾಗಿ ಕಣ್ಣೀರೆತ್[ರೊಗೆ]ದುಣ್ಮೆ ಕಣ್ಗಡೆಗಳಿಂ ಪೊದೆಸೀರೆಯಿನೊತ್ತು ತೊಂದು ಕಾಸರವುನೆಯ್ದಿದರ್ (ಪಂಪಾ ನೇ. ೦೬-೩೩). [ಪೊದೆ$_1$ + ಸೀರೆ$_2$]

**ಪೊದೆಸು** 'ಪೊದೆಯಿಸು' ನೋ.

**ಪೊದ್ದ** 'ಪೊದ್ದೆ$_1$' ಪರಾ.

**ಪೊದ್ದಿಗೆ** 'ಪೊರ್ದುಗೆ' ನೋ.

**ಪೊದ್ದಿಸು** 'ಪೊರ್ದಿಸು' ನೋ.

**ಪೊದ್ದು$_1$** 'ಪೊರ್ದು' ನೋ.

**ಪೊದ್ದು$_2$** 'ಪೊದೆ$_1$' ಪರಾ.

**ಪೊನ್, ಪೊಂ, ಪೊನ್ನು, ಹೊಂ, ಹೊನ್, ಹೊನ್ನು$_1$** (ನಾ). ೧. ಕಬ್ಬಿಣ, ತಾಮ್ರ, ಚಿನ್ನ ಮುಂತಾದ ಖನಿಜ ; ಲೋಹ : 'ಕರ್ಪೊನ್', 'ಬೆಂಬೊನ್' ಪರಾ. ೨. ಬಂಗಾರ ; ಚಿನ್ನ ; ಸ್ವರ್ಣ : "ಪೊನ್ ಸ್ವರ್ಣಂ" (ಕರ್ಣಾಟಿ. ೨) ; ಪಿರಿಯ ಪೊನ್ನ ತಳಿಗೆಯು ಮುಚ್ಚುಮುಪ್ಪಡ್ಡವಣಿಗೆಯುಮನಿಟ್ಟು . . . ತಾನೆ ಬಡ್ಡಿಸಲ್ (ವಡ್ಡಾರಾ. ೭೯-೦೨) ; ಇ[ದ] ಕಾದುಡಿದೋ[೦]ಗೆ ವಾರಣಾಸಿಯೊಳ್ಸಾಸಿರಕವಿಲೆಯು[೦] ಕೋಡುಂ ಕೊಳಗುಮಂ ಪೊನ್ನೊಳ್ಕಟ್ಟಿಸಿ ದಾನಂಗೊಟ್ಟ [ಫ]ಲಮಕ್ಕು (ಸೌಇಇ. XI-i, ೩೯-೦೯ ; 926) ; ಗಗನಗಜಕ್ಕಿಕ್ಕಿದ ಪೊನ್ನ ಗಂಟೆಯೆರಡೆ ನಲುಮೊಂಬರಾಂಭೋನಿಧಿಯೊಳ್ ನೆಗೆದುರಿವೌರ್ವಾನಲದುರ್ಬುಗಳೆನಲುಂ ನೆಗೆದುವಹಿಮಹಿಮಕರಬಿಂಬಂ (ಅಜಿಪು. ೩-೩೨) ; ಉಡಕಂ . . . ಪೊನ್ನ ಬಣ್ಣದ ಮಣ್ಣೊಳ್ ಪರಲಾಗಿ ಕಂಪೆಸೆವ ಮಣ್ಣೊಳ್ ಕೈಪೆಯಾಗಿರ್ಪಂ (ಲೋಕೋಪ. ೩-೬) ; ಪೊನ್ನ ನೇಗಿಲಲುತ್ತು ಗುಳ್ಳದ ಬೀಜವಂ ನೆಟಿ ಬಿತ್ತುವಂದದಿ . . . ಲಿಂಗಪರಾಙ್ಮುಖರನಾಗಳು ಭಜಿಸಿ ಭವಬಂಧನಕ್ಕೊಳಗಾಗದೆಂಶಿಹನು (ಬಸವು. ೬೦-೩೦); ಮಿಸುಪ ಪವಳದ ಪುತ್ಥಳಿ ಪೊನ್ನ ಪೊವಕೆ ರಂಜಿಸಿತು ಚಾವಡಿಯ ಚೌರಸದೆಡೆಯೊಳು (ಕೈವಲ್ಯ. ೦೭-೨೩). ೩. (ಹಿಂದೆ ಚಲಾವಣೆಯಲ್ಲಿದ್ದ) ಹತ್ತು ಹಣ ಬೆಲೆಯುಳ್ಳ ಒಂದು ಚಿನ್ನದ ನಾಣ್ಯ ; ಗದ್ಯಾಣ : "ಪತ್ತುಂ ಪಣದಿಂ ಪೊನ್ನಕ್ಕುಂ" (ವ್ಯವಹಾ. ೪-೨೩) ; ಈ ಪೊನ್ನೆನ್ನು ಕೊಡಗೆಗಾಗಿ ಅಳಿದೊನ್ . . . ಪಞ್ಚಮಹಾಪಾತಕನಕ್ಕು (ಎಕ. III, ತಿರುವು. ೧೦೩-೭; ಕ್ರಿ. 750); ಕವಿವರರುಂ ಪೆಂಡವಾಸಧೊಳ್ಪಿಂಡಿರ್ಕಳುಂ ವಿಮಾನಂಗಳ ಮುಂದಾಡುತ್ತುಂ ದಮ್ಮುಮುಮಂ ಪೊನ್ನುಮಂ ಕೇಳಿ ಮಾಡಿ ಮುಂದೆ ಸೂಸುತ್ತುಮೊಯ್ಯನ್ದಂ . . . ಕಂಡು (ವಡ್ಡಾರಾ. ೯೯-೨); ನಿತ್ಯದಾನಕ್ಕೆ ದೇವಸಬಳದ ಪದಿನೆಂಟುಕೋಟಿ ಪೊನ್ನುಮನಿತ್ತು (ಶಂಶಭಾ. ೨-೯೯ ವ). ೪. ಸಂಪತ್ತು ; ಐಶ್ವರ್ಯ ; ನಿಧಿ : ಅರಸರ ದುಣ್ಣಗೆವೆರಸಿಟ್ಟ ಪೊನ್ನ ಕಯ್ಯಿಡಿಯಪ್ಪಂಗೊಪ್ಪಿಸಿಮೆನ್ದು ತನ್ದು (ಎಕ. III, ಪಂಶವ. ೩೯-೦೩; ಕ್ರಿ. ೯೦೦); ಸಿಡಿಲ್ಗೊಡೆದವೊಲಟ್ಟಿ ಮುಟ್ಟಿ ಕಡಿದಿಕ್ಕಿದುದಾದೆಡರಂ ನಿರಂತರಂ ಕಡಿಕಡಿದಿತ್ತ ಪೊನ್ನ[ಕಾಶಾಂ. ನ್ನೆ] ಬುಧವಾಗಧವಂದಿಜನಕ್ಕೆ ಕೊಟ್ಟ ಕೋ[ಡೆ]ಡಳದ ಬೇಡಿ[ವೋ]ಡಿಮಿದು ಚಾಗದ ಬೀರದ ಮಾತು ಕರ್ಣನಾ (ಶಂಶಭಾ. ೧-೯೯); ಅರಸನುಂ . . . ಪೂಜಿಸಿ ಬಂಡಾರದ ಪೊನ್ನೆಲ್ಲಮಂ ಮುಂದೆ ರಾಸಿಮಾಡುವುದುಂ (ಧರ್ಮಾಮೃ. ೩-೨೦೩); ನಿನ್ನ ನೀನಟಿ ಸಾಕು ಮಾಯೆಯ ಗನ್ನಗತಕವ ಗೆಲುವೆ ಕನಸಿನ ಪೊನ್ನ ಕಾಣದೆ ದುಃಖಿಪಡುವರೆ (ಕುವ್ಯಾರ್ದ್ರೋ. ೭-೨೯). ೫. ಹಣ ; ಧನ ; ದುಡ್ಡು : ಈತಂಗೆ ಪೊಜಗೆ ನಾಡಿಲ್ಲೊಳಗೆ ಭಂಡಾರಮಿಲ್ಲೀತಂಗೆ ಪೊನ್ನೆತ್ತಣಿಂ ಬರ್ಪುದಿದನಾರಯ್ವಂ (ಧರ್ಮಾಮೃ. ೨-೧೦೬). ೬. (ಚಿನ್ನದ) ಒಡವೆ ; ಆಭರಣ : ತೊಟ್ಟ ಪೊನ್, ಡಿಜ್‌ನಾದ ಮಿಡಿದು, ಮೇಲ್ ವಾಯ್ದು ಪೊನಲಿಟ್ಟು ಪರಿದು . . . ಮಲೆದನ್ (ಅಂತಿಗೊ. ೭-೦೦೦). ೭. ಚಿನ್ನದ ಬಣ್ಣ ; ಹೊಂಬಣ್ಣ ; ಹಳದಿಬಣ್ಣ : 'ಪೊಂದಳಿರ್', 'ಪೊನ್ನೀರ್' ಪರಾ. **ಪೊಂ :** ೨. ಅರಸುಮಗಂ ಗಡ ಕಲಿ ಗಡ ಪಿರಿದೀವಂ ಗಡ ಬಟಿಕ್ಕ ಜೈನಂ ಗಡೆನಲ್ದರಣಿಪತಿ ಕೀರ್ತಿದೇವಂ ನಿರುತಂ ಪೊಂ ಕಮ್ಮಿತಾದುದೆನಿಸಿದನಿಳೆಯೊಳ್ (ಸವುತ. ೦-೪೭). ೩. ಕೋಟಿ ಪೊಂಗೆ ಘಂಟೆಯಲುಗುವ ಕಿಙುಕುಳಬೊಜಂಗರುಮಂ . . . ನೋಡಿ (ಶಂಶಭಾ. ೪-೯೭ ವ); ಬುಧರಿಗೆ ಸಕಲರಿಗೆ ಪೊಂಗಳನು ಭೂಷಣವಸ್ತ್ರ ರತ್ನವನೊಲಿದು ದಾನವ ಮಾಡಿದನು ಮುಮುಕಾರಭೂಪಾಲ (ಕೃಶುಂ. ೩-೦೨). ೪. ಪೊಂಗೆಬಗುವ ದೀಪವರ್ತಿ ಮಣ್ಗೆಬಗುಗುಮೆ (ಸವುತ. ೪-೨೩). **ಪೊನ್ನು :** ೩. ದಶಪಣದಿಂದಂ ಪೊನ್ನುಮೊಂದು ತಪ್ಪದು (ವ್ಯವಹಾ. ಅಮುಂಶ. ೬-೩೮). ೫. 'ಪೊಂಬಡೆ' ಪರಾ. ೭. 'ಪೊಂಗೇದಗೆ', 'ಪೊಂಬುಲಿ' ಪರಾ. ೮. ಶ್ರೇಷ್ಠವಾದುದು ; ಅತ್ಯುತ್ತಮವಾದುದು : 'ಪೊಂಬಸಿಱು' ಪರಾ. **ಹೊಂ :** ೨. 'ಹೊಂಗಂಟೆ', 'ಹೊಂಗಡಗ' ಪರಾ. ೩. ಅಕ್ಕಸಾಲೆ ನಾಗೋಜಂ ಹೊಂಗೆ ವೀಸ ××× [ಲೆ]ಕ್ಕದಿಂ ಕೊಟ್ಟ ಪವಣಾಯಮನಾ ಕೊತ್ತಳಿಗ [ಮಾ]ಡಿಸಿದ ಬಸದಿ ದೇವಾಲ್ಯಕ್ಕೆ . . . ಧಾರಾಪೂರ್ವ್ವಕಂ ಮಾಡಿಕೊಟ್ಟ ದಂಣಾಯ ಹೊಂಗೆ ವೀಸ ಲೆಕ್ಕ . . . ಪಚ್ಚುಕುಡುವುದು (ಕೊಲ್ಹಾಶಾ. ೩೯-೦೩ ; 1153) ; ಓಂಗದಾಸ್ಥಾನದಲ್ಲಿ ಮಿಸುನಿಯ ಹೊಂಗಳೊಡನೊಡ ನುಕ್ಕಿ ಹೊಱವಡಲಂಗಣದಲದ್ಭುತರಸಂ ಮಿಗೆ ಮೂಡುತ್ತಿರೆ (ಬಸಪು. ೨೩-೩೩); ನೋಟ ಸವಿಸುಖಕೆ ಕೋಟಿ ಹೊಂ ಬೆಲೆಯಲ್ಲ ಕೂಟಕೆ ನೋಟವನು ಸಾರೆ ವ್ಯಸನಕ್ಕೆ ಬೇಟವೆ ಮೊದಲು (ಸರ್ವಜ್ಞ. ೧೯೮೦). ೭. 'ಹೊಂಗಾಜು', 'ಹೊಂಗೇದಗೆ' ಪರಾ. **ಹೊನ್:** ೨. "ಹೇಮ, ಸ್ವರ್ಣಂ . . . ಕರ್ಬುರಂ, ತಪನೀಯಂ–ಈ ೨೫ ಹೊನ್ (ಪೊನ್)" (ಹಲಾಯು. ೨೯-೦೯); ಸಹಸ್ರಕವಿಲೆಯುಂ ಕೋಡುಮಂ ಕೊಳಗುಮಂ [ಹೊನ್ನ]ಲುಂ ಬೆಳ್ಳಿಯ(೦)ಲುಂ ಕಟ್ಟಿಸಿ (ಸೌಇಇ. XI-i, ೭೯-೦೯; 1033); ಕವಡಿಕೆಯುಂ ಕಾಚುಂ ಸಲ್ಲುಮೆ ಹೊನ್ನವೊಲೆಲ್ಲಿಯಾದೊಡಂ (ಸವುತ. ೩-೦೨); ಧರೆಯಱಿಯೆ ಹೊನ್ನ ಮೆಯ್ಯಾಂತಿರುತಿರ್ದುಂ ಲಜ್ಜೆಯಿಲ್ಲ ತನಗೆಂದು ಕರಂ ಸುರುಚಿರಧವಳಿಮದಿಂ ಸುರಗಿರಿಯುಂ ಹಿಮಾನಗದ ಚೆಲ್ವು ನಗದೇಕಿರ್ಕುಂ (೧೦೪. ೧-೩೭). ೩. ಕೊಠಾರದ ದಿವಾಕರದಂಡನಾಯಕರು ತಮ್ಮ ಕೈಯ ಹೊನ್ನ ಕೊಟ್ಟು (ಇಅ. IV, ೨೭೭-೯೬; 1184). ೭. 'ಹೊಂದಾವರೆ' ಪರಾ. ೮. 'ಹೊನ್ನುಡಿ' ಪರಾ. **ಹೊನ್ನು$_1$ :** ೨. "ಗೈರಿಕಂ ಕರ್ಬುರಂ . . . ಸ್ವರ್ಣಮೆನೆ ಹೊನ್ನಿಂಗೆ ನಾಮಮಕ್ಕು" (ಮಂಗರಾ. ೩೦-೪); ಗಿರಿಯ ಮುತ್ತಿದ ಮಿಂಚುಬುಳುವಿನ ಹೊರಳಿಯಂತಿರೆ ಹೊನ್ನ ಬರಹದ ಸರಳು ಮಿಱಿದವು (ಕುವ್ಯಾರ್ದ್ರೋ. ೩-೨೬); ಹೊನ್ನಿನ ಹೊಳೆವ ಕಠಾರಿಯ ಮೊನೆಮೊಳೆ ಬೆನ್ನೊಳು ತಲೆದೋಱಸಲು (ಪೋಹಕ. ೧೨ ೬೯); ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣಜಲವ ಕೊಂಡು . . . ಕನ್ನಿಕೆಯರು ರಾಜಿಸುವರು (ಕಂಸವ. ೩-೩೩). ೩. ಈ ಗೂಳಿಯ ಕೊಂದ ಪಾತಕಕ್ಕೆ

ಹದಿನೆಂಟು ಲಕ್ಷ ಹೊನ್ನಿನಲ್ಲಿ ಗೂಳಿಯು ಮಾಡಿ . . . ಕೊಟ್ಟಲ್ಲಿ ಈ ಪಾಪ ಹೋಹುದೇ (ಅವಶಂ. ೦೩೭-೭೨೦); ಪೂರ್ವ್ವಾಯವ ಪೂರ್ವ್ವಾಯದಿಂ ಬಹಾಯ ಹೊಂನು ಸಹಿತವಾಗಿ . . . ತಾಮ್ರಶಾಸನಮಂ ಕೊಟ್ಟರು (ಮೈ೮೦. ೦೯೯೦, ೦-೭೨ ; 13ನೆಯ ಶಕ ?); ತಾಳಜಂಘನು . . . ಹೊನ್ನನೊಂದನು ಭೂಮಿದೇವಿಯ ಕೆನ್ನೆಯಲಿ ತಾನಿಡದೆ ಭೂಸುರರುನ್ನತಿಯನೇ ಬಯಸುತಿಪ್ಪನು (ಸಂಶಪ. ೨೩-೩೬) ; ಆಲಕಟ್ಟಲಿಗೆ ಬರಸಿ ಕೊಟ್ಟಹ ಪ್ರಮಾಣ ರೇಖೆ ೧೫೫ ಹೊಂನಿಗೆ (ಎಕ. VII. ಶಿವಮೊ. ೭೦-೨೬ ; 1431). ೪. ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದು ಎಂದು ನೆನೆನೆನೆದು (ಮಹಾದೇ. ೩. ೦೯-೩೦); ಹೊನ್ನುಳ್ಳ ಹೊಲೆಯರುತ್ತಮರು (ಶರಂಪ. ೦-೦೯೯-೪); ಮಣ್ಣು ಬಿಟ್ಟವ ದೈವ ಹೊನ್ನು ಬಿಟ್ಟವ ದೈವ (ಸರ್ವಜ್ಞ. ೦೨೭೯). ೫. ಮನೆಯಲ್ಲಿ ಮಂದಿ ಬಹಳ ಹೊನ್ನಿನ ಪೆಚ್ಚ ಘನವೆಂದು (ಕಂಪಿವಿ. ೬-೦೯೬). ೬. 'ಹೊನ್ನೀರು' ಪರಾ. ೮. 'ಹೊನ್ನುನಡೆ', 'ಹೊನ್ನುನುಡಿ' ಪರಾ. ೯. ಪ್ರೀತಿಪಾತ್ರರಾದವರನ್ನು ಮುದ್ದಿನಿಂದ ಕರೆಯುವ ಮಾತು : ಪುಲ್ಲಶರಾತ್ಮಸಂಭವನ ಕಣ್ಗೆಸಮದು ಹೊಲ್ಲಹ ಮೃಗವೆನ್ನ ಹೊನ್ನೆ (ಹೋಹಕ. ೦೯-೩೩). 'ಚಿನ್ನ₁' ಪರಾ.

**ಪೊನ್ನ ಪೂ, ಹೊನ್ನ ಹೂವು** = ಹೂವಿನ ಆಕಾರದಲ್ಲಿ ಚಿನ್ನದಿಂದ ಮಾಡುವ ಒಂದು ಬಗೆಯ ಕರ್ಣಾಭರಣ : ಆ ಕಿವಿಗಳಲಿ ಪೊನ್ನಪೂ [ಪಾಠಾಂ. ಹೊನ್ನ ಹೂ]ಗಳನಾ ಕಮಳಲೋಚನೆಗೆ ಕೀಲಿಸಲು (ಜಿಶಕೃ. ೯-೩೬); ಚೆನ್ನಾಗಿ ಲಾಲಿಸು ಚೆಲ್ವದರಿದ ನಿನ್ನ ಕರ್ಣಾಂತರದಲಿ ಮೆರೆವ ಹೊನ್ನ ಹೂವಿಗೆ ಪರಿಮಳ ಬರೆ ಪೇಳುವೆ ಬನ್ನಣೆಗಾರ್ತಿ ಚಿತ್ತೈಸು (ಹೋಹಕ. ೨೯-೨); ವಾಲೆ ಮೂಗುತಿ ಹೊನ್ನ ಹೂವು (ಶಿಬಾಕೃ. ೦೦-೩). 'ಚಿನ್ನ ಪೂ' ಪರಾ. **ಪೊನ್ನ ಬೆಟ್ಟು** = ಚಿನ್ನದ ಪರ್ವತ; ಮೇರು : ಪೊನ್ನ ಬೆಟ್ಟು ಕೈಯಂ ಕಾಲಂ ತಳೆದಿರ್ದುದೆಂಬಿನಂ ಕಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ (ಕಬ್ಬಿಕಾ. ೦೬೩). **ಪೊನ್ನ ಮಳೆ, ಹೊನ್ನ ಮಳೆ** = ಚಿನ್ನದ ಮಳೆ ; ಸುವರ್ಣವೃಷ್ಟಿ : ವಸುಮತಿವೆಸರನ್ವರ್ಥಂ ವಸುಧೆಗೆನಲ್ಕರೆದು ಪೊನ್ನ ಮಳೆಯಂ ದಾನವ್ಯಸನಿ ದಶರಥನದೇಂ ಪೊಸಯಿಸಿದನೊ ಚಾಲೋಪನಯನಮಹೋತ್ಸವಮಂ (ಕಂಪಶೂ. ೩-೦೯೨) ; ದಾಸನಂತೆ ತವನಿಧಿಯ ಬೇಡುವನಲ್ಲ ಚೋಳನಂತೆ ಹೊನ್ನ ಮಳೆಯ ಕರೆಸೆಂಬವನಲ್ಲ (ಬಶವ. ೭೬೦). **ಪೊನ್ನ ಮೈಯವನು** = ಹಿರಣ್ಯಗರ್ಭ; ಬ್ರಹ್ಮ : ಪೊನ್ನ ಮೈಯವನು ನಮ್ಮಿಬ್ಬರಿಗೆ ಪೂರ್ವಾನುಕೂಲಗೈದು ಸೃಜಿಸಲು (ಪವಪೊ. ೨೬-೦೦). **ಪೊನ್ನರ್ಧ** = ಗದ್ಯಾಣದ ಅರ್ಧಭಾಗ : "ಭರಣಂ = ಪೊನ್ನರ್ಧಂ" (ಕಾಕಕ. ೭೩). **ಪೊನ್ನವಣ, ಹೊನ್ನವಣ** = ಚಿನ್ನದ ಒಂದು ಬಗೆಯ ನಾಣ್ಯ : ಗಳಂತಿಗೆಯುಲು ಪುಟ್ಟಿದಾಯದೊಳಗೆ ಲೆಕ್ಕಿಯು ನವಿಲುವಾಗಿ ಪೊನ್ನವಣ ಬಿ(೦)ನ್ನವಮಾಯ್ದು ಕಳೆದು (ಕ್ನೌಇ. IX-1. ೦೬೯-೨೬; 1098); ದೀವಿಗೆಗೆ ಗಾಣ ಒಂದು ಅಶೇಷನರ ಹೊನ್ನವಣ ಹೇರಿಂಗೆ ೧೦೦ ಎಲೆಯಂ ಬಿಟ್ಟರು (ಕಇಕ. ೯೩-೬೦-೦೭; 11 ನೆಯ ಶಕ). **ಪೊನ್ನುಳ್ಳವಂ, ಹೊನ್ನುಳ್ಳವಂ** = ಧನಿಕ : ಪೊನ್ನುಳ್ಳವನೆ ಕುಲೀನಂ ಚೆನ್ನಂ ಕಲಿ ಸತ್ಯವಾದಿಯೆನಿಸುಗುಂ (ಕಾವ್ಯಾ.ಸ. ೩೦); "ಧನವಾನ್, ಅಸ್ತಿಮಾನ್-ಈ ೨ ಹೊನ್ನುಳ್ಳವಂ" (ಹಣಾಮು. ೬೦-೨೦೯). **ಹೊನ್ನ ಕನಸು** = ಹೊಂಗನಸು ; ಸುಂದರವಾದ ಕಲ್ಪನೆ : ಗುರು ದೇವನ ಹೊನ್ನ ಕನಸನ್ನು ಹುಡಿಗುಟ್ಟಿ . . . ಮೆರೆಯುತ್ತಿರುವ ನೀನು ಪರಮಪಾತಕಿ (ಕುಂಗಳ. ೯೨). **ಹೊನ್ನುತಾ ಗುಬ್ಬಿಯಾಟ** = ಕೈಯ ಬೆರಳುಗಳನ್ನು ಮುಚ್ಚಿ, ಬಿಡುವ ಆಟ; ಯಾರಾದರೂ ಏನಾದರೂ ಕೊಟ್ಟರೆ ಅದನ್ನು ಅಂಗೈಯಲ್ಲಿ ಹಿಡಿದುಕೊಳ್ಳುವ ರೀತಿ ಕೈಬೆರಳುಗಳನ್ನು ಚಲಿಸುವ ಆಟ ; ಪ ತಾ ತಾ ಗುಬ್ಬಿ, ಹೊನ್ನ ತಾ ಗುಬ್ಬಿ, ರನ್ನ ತಾ ಗುಬ್ಬಿ, ತಾ ತಾ ಗುಬ್ಬಿ, ಚಿನ್ನ ತಾ ಗುಬ್ಬಿ, ಹೊನ್ನ ತಾ ಗುಬ್ಬಿ, ತಾ ತಾ ಗುಬ್ಬಿ-ಎಂಬುದು ಮಗುವನ್ನು ಆಡಿಸುವಾಗ ಹೇಳುವ ಮಾತುಗಳು. ಗುಬ್ಬಚ್ಚಿಯು ಚಿನ್ನವನ್ನು ತಂದುಕೊಡಬೇಕೆಂಬುದನ್ನು ತಿಳಿಸುವ ಆಟ : ಕೈಸನ್ನೆಯಿಂದಾ ಮುಕ್ತಿಬಾಲೆಯಂ ಕೆಳೆತನಕೆ ಕರೆವಂತೆ ಹೊನ್ನ ತಾ ಗುಬ್ಬಿಯಾಟಂಗಳಾಡಿ (ಶಂಕೃ. ೩-೩೯). **ಹೊನ್ನ ದಾರ** = ಚಿನ್ನದ ಒಡ್ಯಾಣ; ಕಾಂಚೀದಾಮ : ಹೊನ್ನ ದಾರ ಉತ್ತಮ ವಿಸುನಿಯ ಗಂಟೆಸರಗಳಿಂದ ಮತ್ತೇಭಯಾನೆಯೊಪ್ಪಿದಳು (ಕುಪವ. ೯-೭೦). **ಹೊನ್ನ ಹುಳು, ಹೊನ್ನೆಹುಳ** = ಮಿಂಚುಹುಳು ; ಮಿಣುಕುಹುಳು : ಹೊನ್ನ ಹುಳು[ಪಾಠಾಂ. ಳ]ವ ಕಂಡು ನರಿ ತನ್ನ ಬಾಲವ ಹುಣ್ಣ ಮಾಡಿಕೊಂಡರೆ ಹೋಲಬಹುದೆ (ಬಶವ. ೨೬೭) ; ಹೊನ್ನೆ ಹುಳಗಳು ಹಾರಾಡುತ್ತಿದ್ದಂತೆ ಕಾಣುವವು (ಮುಂಬಿಯ. ೬-೦೩೯) ; ಗಿಡ ಗಂಟಿ ಪೈಮನಕೆ ಹೊನ್ನೆಹುಳಗಳ ಮಿಣುಕು ಚಲಿಸುತಿಹ ದೀಪಾವಳಿ (ಕಂಮು. ೯೦-೦೦) ; ಹೊನ್ನೆಹುಳ ! ಹೊನ್ನೆಹುಳ ! ಬೆಳಕೇಕೆ ? ನಿನ್ನ ಬೆಳಕೇಕೆ ? (ರಕ್ತಗ್ರ. ೬೩).

[ದೇ.॥ ತಮಿ. ಮಲ. ಪೊನ್ ; ತುಳು. ಪೊನ್ನು; ಕೊಡ. ಪೊನ್ನ್; ತೆಲು. ಪೊನ್ನು, ಹೊನ್ನು, ಹೊಂ]

**ಪೊನಲ್**, ಪೊನಲು, ಹೊನಲ್, ಹೊನಲು, ಹೊನಲಂ (ನಾ). ೧. (ನದಿಯ) ಪ್ರವಾಹ ; ನೀರೋಟ : ಪರಚಕ್ರಭೂಪರಟ್ಟದ ಕರಿಗಳ್ಪಿಡುತಪ್ಪ ಮದದ ಪೊನಲಿಂದೆತ್ತಂ . . . ಕೆಸಱಕ್ಕುಂ (ಕುಂಂ. ೩-೦೬೨) ; ಕಡಲ್ ಕಡಲಂ ಮುಟ್ಟಿ ತರಳ್ದ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ (ಕಂಕಶಾ. ೦೦-೯೦) ; ಎಸೆವುದು ವಳಿತ್ರಯಂಗಳನೆಸೆವಸಿಯಳ ತೆಳ್ವಸಿಱ್ . . . ತೆರೆಮಸಗಿದ ಲಾವಣ್ಯರಸದ ಪೊನಲೆಂಬಿನೆಗಂ (ಮಲ್ಲಿಕೃ. ೩-೬೬) ; ಪಱದುಗುವ ಕರ್ಬುಗಳ ತನಿರಸದ ಪೊನಲಿಂದೆ ನೆಱೆಯೆ ಬೆಳೆದುವು ಪುರದ ಕಳಮಾದಿ ನಯದಿಂದೆ (ಶಂಬಿರ. ೯-೦೯). **ಪೊನಲು** : ೧. ಪನ್ನೀರ ಪೊನಲೇ ಪ್ರವಾಹ ಸುದತಿಯರ ಕಡೆಗಣ್ಣ ಬೆಳಗು ಕುಡಿಮಿಂಚು (ಕ್ಶಾಂದಕೃ. ೧೩-೬) ; ಅಲರ್ವುಡಿವೆರಸಿ ನಲವಿನಿಂದ ಪರಿವ ಪರಿಕಾಲ್ಗಳ ಪೊನಲಲ್ಲಿ ಕುಂಕುಮರಸದಿರವಿನಂತಿಹುದು ನೋಳ್ಪರಿಗೆ (ಕುರಾಶಾಂ. ೨-೨೩). **ಹೊನಲ್** : ೧. "ಹೂರಮೆಂದು ಹೊನಲ್" (ಕಸಾ. ೬೦-೩೬೪) ; "ಹೂರಮೆನಲ್ಕದುವೆ ಹೊನಲೆನಿಕ್ಕುಂ" (ಕಂಕಂ. ೨೩೯). **ಹೊನಲು** : ೧. ವೇದವನೋದಿದ ವಿಪ್ರರು ಹೊನಲ[ಪಾಠಾಂ.ರ]ಲ್ಲಿ ಹೋದ ಕೇಡ ನೋಡಿರೇ (ಬಶವ. ೩೬೭) ; ಉಣ್ಬುವ ಶಿವಾನಂದರಸದ ಹೊನಲೊಳ ಗದ್ದು ಈಸಾಡಿ (ಬಶರ. ೩-೦೦೬) ; ಎರಡು ಗೂಳೆಗಳಲ್ಲಿ ತಮ್ಮೊಳಗುರವಣಿಸಿ . . . ಕಾದುತ್ತಿರಲು ನೆತ್ತರ ಹೊನಲು ಪರಿವುತಿರೆ (ಬಶತ್ರು. ೩೨-೨೦); ಕಡುಹಿನ ಕಾಳಕೂಟದ ನದಿಗೆ ನಂಜಿನ ಹೊನಲು ಬೆರೆಸಿದರೆ ವಾಳೆಯವೆ (ಕುವ್ಯಾಸ. ೦೯-೬೦). ೨. ತೊರೆ ; ಹೊಳೆ : ಹೊನಲು ನೂರೀ ಬಾಳ ಕಡಲನುಬ್ಬಿಸಲಿ (ಮಂಕುಳ. ೬೯೯) ; ಆ ದೊಡ್ಡ ಕಂಬದ ಮನೆಯ ಅನತಿ ದೂರದಿಂದ ಒಂದು ಹೊನಲು ನಸುನಗುತ್ತ ಸದಾ ಸರ್ವದಾ ಹರಿಯುತ್ತಿರುತ್ತದೆ (ಕಂಕಹು. ೨).

**ಪೊನಲಾಗು, ಹೊನಲಾಗು** = ಪ್ರವಾಹದಂತೆ ಹರಿ : ಉಕ್ಕು ; ಪ್ರವಹಿಸು : ಇಂದುವಬಿಂಬದಿಂದಮೃತಬಿಂದುಗಳೊಕ್ಕುವೆಂಬಪೋಲ್ ಮಹಾಕ್ರುಂದನವೇಗದಿಂದೆ ಸುಂವಶ್ರುಜಲಂ ಪೊನಲಾಗೆ (ಧಕಕು. ೬-೩೯) ; ಆ ಭವನಪಂಕ್ತಿಗಳುರಿದು ಕರಗಿದವನಿಯಲಿ ಹೊನಲಾಯ್ತು ಪುರಜನವೈದೆ ಬೆಜಗಾಗೆ (ಕುವ್ಯಾ.ಆ. ೯-೯೯) ; ಇದಿರಾಂತ ಭಟರ ಗೋಣ್ಗಳ ನರಿಯಲು... ಹೊನಲಾಯ್ತು ರುಧಿರಂ ಪ್ರವಾಹದಂತೆ (ಕ್ಷೌಬ್ರಹ್ಮಾ. ೬-೯೩).

[ದೇ.॥ ತಮಿ. ಪುನಲ್ ; ಮಲ. ಪುನಲ್, ಪುಣಲ್ ; ತುಳು. ಪುಣಲ್ = ತೇಲುವುದು ]

**ಪೊನಲಿಡು**, ಹೊನಲಿಡು (ಕ್ರಿ). ೧. ಪ್ರವಾಹವಾಗು : ಉಕ್ಕಿ ಹರಿ ;

ಪ್ರವಹಿಸು : ತಾವ್ರುಧ್ವಜಂ . . . ಕೆಗೆದಿಸಲ್ ಬಱಸಿಡಿಲ್ವೊಡೆದು ಗಿರಿ ಜರಿವಂತಿರೆ ನಿರ್ಜರೇಂದ್ರನ ಸೂನು ಪೊನಲಿಡಲ್ ಬಿಸಿಯ ನೆತ್ತರ್ದೊಂಬಿ ಸುತ್ತೆ ಮೈಮಱೆದು ಬಿದ್ದನು (ಕ್ಮಜಾ. ೨೩-೪೩) ; ತೊಟ್ಟ ಪೊನ್ ಡಿಱ್ ನಾದ ಎಡಿದು, ಮೇಲ್‌ವಾಯ್ದು ಪೊನಲಿಟ್ಟು ಪರಿದು . . . ಮಾಲೆದನ್ (ಅಂತಿಗೊ. ೬-೦೧೨). **ಹೊನಲಿಡು :** ೧. ಎದುಳ ಕೊಳ್ಗಸಱ ಹೊನಲಿಡುವ ರಕುತದ ಕಡಲೊಳಡಿಯಿಡಲು ಬಾರದೆಂಬಂತೆ ವಿಶ್ವಾಮಿತ್ರನು ಅಡವಿಯೊಳಗೆಯ್ದೆ ನಾನಾಭಯಂಕರವ ನಾಲಿಡಲು (ಹಕಾ. ೦೨-೪೯) ; ಬೆಳುನೊರೆ ಮಸಗಿ ನಸುಬಿಸಿರಕುತ ಹೊನಲಿಡಲು . . . ಹೆಣನ ಮೆದೆ ಹೇರಾಳ ರಂಜಿಸಿತು (ಕುಮಾರ್ರೂ. ೦೦-೬) ; ಹೇಳಲೇನದನವಳು ಮೋಘದ ಜಾಳಿಯಲಿ ಮಳೆಗಱೆದಳರುಣಜಲಾಳಿ ಹೊನಲಿಡಲಬ್ಬರಿಸುತಾಸುರವಿಕಾರದಲಿ (ತೊರಾ. ೦-೦೦-೦೬). ೨. ವ್ಯಾಪಿಸು ; ಹೊಮ್ಮು. ಘನರವುದ್ರದ ಘೋರವದನದ ಹೊನಲಿಡುವ ದಾಡೆಗಳ ಹೊಗರಿನ . . . ಮನದ ಕಡುಹಿನ ದೂತರೆದ್ದುದು (ಅಂದಶಾ. ೯-೩೨). [ಪೊನಲ್ + ಇಡು$_1$]

ಪೊನಲು 'ಪೊನಲ್' ನೋ.

ಪೊನಲುವರಿ 'ಪೊನಲ್ವರಿ$_1$' ನೋ.

**ಪೊನಲೇಳ್,** ಹೊನಲೇಳು (ಕ್ರಿ). ಪ್ರವಾಹ ಬರು,-ಉಕ್ಕು: ಚಟ್ಟಮಂ ಇಱಿಯೆ ವಿರೋಧಿ ಬಿದ್ದ ಸಮರಾಂಗಣದೊಳು ಶ್ರೀ ಗವುಣ್ಡಭೂಮಿಯಿಂದೊಱೆದೊಱೆದುದ್ವಕ್ಕುಯಿಂನು ಪೊನಲೇಳ್ವುದು ಭೂತಪಿಶಾಚಕೋಟಿಯುಂ ನೆಱೆ ತಣಿಯುಣ್ದಾ (ಎಕ.XVI, ಶಕ್ಯಾ. ೯೮-೨೩ ; 1169). **ಹೊನಲೇಳು :** ಅರುಣಜಲ ಹೊನಲೆದ್ದು ಮಗ್ಗುಲಲುಗವಣಿಸಲಾರಾವು . . . ನೋಡಿದನೆನಗೆ ಕಡುಮುಳಿದು (ಕುಮಾಕ. ೯-೪೨) ; ಅನಲಾಕ್ಷನಾಣೆ ನಾರದ ಕೇಳು ರೋಹಿತ ಹೊನಲೇಳೆ ಹೊಯ್ವೆ ಹೊಕ್ಕವನ (ಮೋಹತ. ೩೩-೨೦). [ಪೊನಲ್ + ಏಳ್$_1$ (< ಎಱು$_1$)]

**ಪೊನಲ್ಗೊಳ್** (ಕ್ರಿ). ಪ್ರವಾಹವಾಗು : ಮುಕ್ತಿಸಾರಂ ಪೊನಲ್ಗೊಂಡುದೋ . . . ಶಿವಾಂಗರುಚಿ ನದಿಯುಂಗವೆತ್ತುದೆನೆ ಸುರಗಂಗೆ ಕಣ್ಗೆ ಮಂಗಳವಾಗಿ ತೋರ್ದುದು (ಶಂದಸಾ.೦೦ -೨೯). [ಪೊನಲ್ + ಕೊಳ್$_1$]

**ಪೊನಲ್ನಾಡು** (ನಾ). ನದಿಗಳಿರುವ ದೇಶ,-ಪ್ರಾಂತ : ಮಲೆನಾಡೆ, ಪೊನಲ್‌ನಾಡೆ, ಬಯಲ ಪೊನ್‌ನಾಡೇ, ಪಲಕಾಲವಾನಗಲ್ದಿರ್ದೆನ್ (ಅಶ್ವಶಾ. ೮೬-೪೩೩). [ಪೊನಲ್ + ನಾಡು]

**ಪೊನಲ್ವರಿ$_1$,** ಪೊನಲುವರಿ, ಹೊನಲುವರಿ (ಕ್ರಿ). ೧. = ಪೊನಲಿಡು ೧ : ಕೊರೆವೊಡೆ ಬೆಟ್ಟುಗಳ್ ಬಿರಿವುವುಣ್ಮುವ ಲಾಳೆಯ ಲೋಳೆಗಳ್ ಪೊನಲ್ವರಿವುವು (ಶಂಕಥಾ. ೯-೦೦೦); ಅಂತು ತಾಮ್ರಮಯುಗುಹ್ಯಕಪ್ರತಿರೂಪಂ ಕಿಚ್ಚಿಂಗೆ ತೋಱಿದರಗು ಕರಗುವಂತೆ ಕರಗಿ ಪೊನಲ್ವರಿಯೆ (ಶಾಂತಿಪು. ೬-೨೯ ವ) ; ನವಮಣಿಮರೀಚಿಮಂಜರಿ ಕವಿದು ಪೊನಲ್ವರಿದು ದೆಂಬಿನಂ . . . ಜಲಜಲಿಸಿ ಪರಿವ ಬರಿವೊನಲೆಸೆಗುಂ (ವರ್ಧಪು. ೦೦-೮೯). ೨. ಹರಡು; ವ್ಯಾಪಿಸು; ಹೊಮ್ಮು : ಈ ನಾಟ್ಯರಸಂ ಸಮಸ್ತ ಸುರವೃಂದಾಧೀಶನಿಂದು ಪೊನಲ್ವರಿದತ್ತೆಂಬಿನಮಾಡುವಲ್ಲಿ ಮಕುಟವ್ಯಾಲಗ್ನರತ್ನಪ್ರಭಾಪರಿವೇಷಂ ಲಲಿತೇಂದ್ರಚಾಪರುಚಿಯಂ ಮಾಡಿತ್ತು ದಿಕ್ಚಕ್ರದೊಳ್ (ಆದಿಪು. ೬-೦೨೦). **ಪೊನಲುವರಿ :** ೧. ಆ ಮಾತಿಗೆ ಹರುಷಾಶ್ರುವಿನಿಂದ ಪೊನಲುವರಿಯೆ ಪುಳಕಾಂಬು ವನಿತೆ ಮಂಗಳಮಜ್ಜನವ ಮಾಡಿ ಸಿಂಗಾರಕನುವಾದಳು (ಕಂಶಂ. ೯-೬೮). **ಹೊನಲುವರಿ :** ೧. ವಿನುತ ಸುಕವಿಯ ಸೂಕ್ತಿ ತಾಗಿದ ಮುನಿಗಳಂತಃಕರಣದಂತಿರೆ ಹೊನಲುವರಿದವು ಚಂದ್ರಕಾಂತದ ಸಾಲಶಿಲೆ ಕರಗಿ (ಕುಮಾರ್ರೂ. ೦೬-೦೬). [ಪೊನಲ್ + ಪರ್$_1$]

**ಪೊನಲ್ವರಿ$_2$** (ನಾ). (ನೀರಿನ) ರಭಸವಾದ ಓಟ, – ಹರಿವು : ಪರಿವ ಪರಿಕಾಲ ಪೊನಲ್ವರಿಯೊಳಿರ್ಪವೊರೆದು ತಣ್ಪೆಬಲಿಕ್ಕಿದ ಮಡಿವರ್ಗದ ದುಗುಲಂಗಳುಂ (ವರ್ಧಪು. ೩-೬೩ ವ). [ಪೊನಲ್ + ಪರ್$_2$]

**ಪೊನಲ್ವರಿಯಿಸು** (ಕ್ರಿ). ಪ್ರವಾಹವನ್ನುಂಟುಮಾಡು ; ರಭಸವಾಗಿ ಹರಿಯುವಂತೆ ಮಾಡು : ಕರಂ ಪೊನಲ್ವರಿಯಿಪ ಬಂಬಲ್ಸರಿ ಬಲ್ಸರಿ ಕಾಲ್ಸರಿ ಸಾಲ್ಸರಿ ಸಲೆ ಸುರಿದು ಕಱೆದುವಿರುಳುಂ ಪಗಲುಂ (ರಾಶಕೀ. ೮-೦೦೨). [ಪೊನಲ್ವರಿ$_2$ + – ಇಸು$_3$]

**ಪೊನ್ಕವಿ** (ನಾ). ಒಂದು ಸ್ಥಳದ ಹೆಸರು : ಪಶ್ಚಿಮಾಯಾನ್ದಿಶಿ ಪೊನ್ಕವಿ ತಾಬುತ್ತಮಾಯರಾ ಕೆಱೆ (ಎಕ. IV, ನಾಗಮಂ.೮೩-೬೩; 776). [?]

**ಪೊನ್ಕೊಳ** (ನಾ). ಒಂದು ಸ್ಥಳದ ಹೆಸರು : ಶ್ರೀಮಾರಸಿಂಘದೇವ ಪೃಥುವೀರಾಜ್ಯಙ್ಗೆಯ್ಯುತ್ತಿರೆ ಪೊನ್ಕೊಳದ ಎಮ್ಮೆತುಱುಗಳೊ × × × ಹಾಯ್ದು (ಮೈಅಂ. ೦೯೩೦, ೦೨-೨; ಸು. 961). [? + ಕೊಳ$_2$]

**ಪೊನ್ತನ** (ನಾ). ಚಿನ್ನದಂತೆ ಹೊಂಬಣ್ಣವಾಗಿರುವಿಕೆ; ಚಿನ್ನದಂತಿರುವಿಕೆ: ಒಯ್ಯನೊಯ್ಯನೆಯೆ ತುಂಬುದಿಂಗಳ ಕನಕಬಿಂಬಕ್ಕೆ, ಪೊನ್‌ತನಂ ಬಾಡಿ, ಮೂಡಿದುದು ಬೆಳ್ಳಿಯ ತನಂ (ಶ್ರೀರಾಪಟ್ಟಾ. ೯೮೦-೦೬೩). [ಪೊನ್ + – ತನ]

**ಪೊನ್ನಂಗಲ್** (ನಾ) . (?) : ಪೊನ್ನಂಗಲ್ . . . ಕಣ್ಣಂದೊಬಲಿ, ಕಣ್ಣಂಬಾಳೆ (ಕಮಾಪು. ೩೩ ಶ್ರಯೋ). [?]

**ಪೊನ್ನಂಡೆ,** ಹೊನ್ನಂಡೆ (ನಾ) . ಚಿನ್ನದ ಜೀರ್ಕೊಳವೆ ; ಬಂಗಾರದ ಪಿಚಕಾರಿ : ಮನ್ಮಥ ರತಿ ಪೊನ್ನಂಡೆಗಳ ತುಡುಕಿದರು (ಮೋಹತ. ೦೯-೮೦) ; ತಮತಮಗೆ ಹಸ್ತಕಳವಟ್ಟ ಜಲಯಂತ್ರ ಪೊನ್ನಂಡೆಗಳ ಗಡಣದಿಂ ನೀರಾಟಕನುವಾದರು (ಕೆಂಪು. ೩೬-೬೩); ಕರದೊಳ್ ಪೊನ್ನಂಡೆಯುಂ ಜೀರ್ಕೊಳವಿಯೆಸೆಯೆ . . . ಕಾಂತಾಳಿ ನೀರ್ವೊರ್ಕ್ಕುದಾಗಳ್ (ರಾಶಕೀ . ೦೦-೬೦). **ಹೊನ್ನಂಡೆ :** ಕೊಂಡು ಕುಂಕುಮವಾರಿಗಳ ಹೊನ್ನಂಡೆ ಜಲಜಂತ್ರಂಗಳಲಿ ಹೊಯ್ದಾಡಿದರುಮೋಕುಳಿಯ (ತೊರಾ. ೦-೦೬ ೩೩); ಕುಂಕುಮಜಲವ ಹೊನ್ನಂಡೆಗಳೊಳು ತುಂಬಿ ಮುಂಕೊಂಡು ಹೊಯ್ದಾಡಲು (ಮೋಹತ ೦೯-೮೦); ಗುಂಡಿದುಳ್ಳಾಡಿ ಸರ್ವರು ಹೊಕ್ಕು ಕೂಡೆ ಹೊನ್ನಂಡೆ ಜೀರ್ಕೊಳವೆಯೊಳ್ತೆಗೆದು ಸುಂಡಿಲೊಳ್ಸುಸುವಾನೆಗಳಂತೆ ಚಲ್ಲಿದರ್ಮಂಡೆ ಮೈನನೆಯಲೆಲ್ಲರಿಗೆ (ಶರಕ. ೯೦-೨೯). [ಪೊನ್ + ಅಂಡೆ$_2$]

ಪೊನ್ನಂದಣ 'ಪೊನ್ನಂದಳ' ನೋ.

**ಪೊನ್ನಂದಳ,** ಪೊನ್ನಂದಣ, ಹೊನ್ನಂದಣ (ನಾ). ಚಿನ್ನದ ಪಲ್ಲಕ್ಕಿ ; ಬಂಗಾರದ ಶಿಬಿಕೆ : ಅಗಣಿತವಿಲಾಸಿನಿಯರುಗ್ಗಡಿಸೆ ಪಾಯವಧಾರೆನುತ್ತಲಂದು ಪರವೆ ಪೊನ್ನಂದಳವನಡರೆ (ಸೌಂದಪು. ೬-೩೨). **ಪೊನ್ನಂದಣ :** ಬಳಿಕ ಪೊನ್ನಂದಣದ ಮೇಲೆ ವೈವಾಹಮಂಗಳಮಹೋತ್ಸವಕೆ ವಿರಚಿಸಿದ ಮಂಟಪದೆಡೆಗೆ ನಳಿನಪತ್ರಾಕ್ಷಿಯಂ ತಂದರೊಸಗೆಯೊಳು (ಕ್ಮಜಾ. ೩೧-೦೩). **ಹೊನ್ನಂದಣ :** ಹಿಂದೆ ಮುಂದಿಕ್ಕೆಲದ ನಾರೀವೃಂದವೆಯ್ತರೆ ನಡುವೆ ತಾ ಹೊನ್ನಂದಣವನೇಱಿದಳು ಸುರಕರಿಯೆಡೆಗೆ ಗಾಂಧಾರಿ (ಶಂಥಶ. ೨೦-೦೯) ; ಮಣಿಮಯದ ದಡ್ಡಿಗಳು ಹೊನ್ನಂದಣವ ಮುಸುಕಿದವು (ತೊರಾ. ೦-೦೬-೦೩) ; ಸಂದಣಿಸಿದರಣ್ಣಗಳು ದಾದಿಯರು ಹೊನ್ನಂದಣದೆಡದ ಭಾಗದಲಿ (ವೀಶಹತ. ೨೯-೨೩). [ಪೊನ್ + ಅಂದಳ]

**ಪೊನ್ನಂದುಗೆ** (ನಾ). ಚಿನ್ನದ ಕಾಲುಕಡಗ : ಉಂಗುರ ಗೆಜ್ಜೆ ಪೊನ್ನಂದುಗೆ ಪವಳವಂ...ತಂದುಕೊಡುವರು (ಬಸಪು. ೦೯-೦೩). [ಪೊನ್ + ಅಂದುಗೆ]

ಪೊನ್ನಂಬರ 'ಪನ್ನಂಬರ' ನೋ.

**ಪೊನ್ನಂಬು,** ಹೊನ್ನಂಬು (ನಾ). ಚಿನ್ನದ ಬಾಣ : ಇತರ ಕುಮತಂಗಳೊಳುತ್ಪನ್ನಮತಿ ಮನಂಗೆಯ್ವುದು ಪೊ[ಪಾಠಾಂ. ಹೊ]ನ್ನಂಬಂ ನೀರೊಳೆಚ್ಚು ಕಿಡಿಪಂತಕ್ಕುಂ (ಸಮಸ. ೩-೪೩) ; ಸನ್ನುತ ಜಿನಧರ್ಮಂ ನೆಱೆ ತನ್ನಿಂದಂ ತಾನೆ ಬಂದೊಡಲ್ಲದೆ ಬಿಡುಮಾತಂ ನೆಱೆ ಪೋಲ್ಕುಂ ಜಗದೊಳ್ ಪೊನ್ನಂಬಂ ನೀರೊಳೆಚ್ಚು ಕಿಡಿಸುವ ಮರುಳಂ (ರಪರ್ಗಮ್ಮ. ೩-೨೬೧). **ಹೊನ್ನಂಬು :** ಅಱಿತವರ ಮುಂದೆ ತನ್ನಱಿವನ್ನು ಮೆಱೆಯುವುದು ಅಱಿಯದರ ಮುಂದೆ ಹೊನ್ನಂಬ ತೊಱೆಯಲೆಚ್ಚಂತೆ (ಸರ್ವಜ್ಞ. ೦೯೬೯). [ಪೊನ್ + ಅಂಬು$_2$]

**ಪೊನ್ನಕ್ಕ** (ನಾ). ಒಬ್ಬಾಕೆಯ ಹೆಸರು : × × × ಸೆಟ್ಟಿಯ ಮಗ ಳ್ಪೊನ್ನಕ್ಕನ್ × × × (ಎಕ. XII. ಗುಬ್ಬಿ. ೪೪-೫; 965). [ಪೊನ್ + ಅಕ್ಕ$_1$]

**ಪೊನ್ನಗಂಟಿ** 'ಪೊನ್ನಗನ್ನೆ' ನೋ.

**ಪೊನ್ನಗನ್ನೆ, ಪೊನ್ನಗಂಟಿ, ಹೊನಗನೆ, ಹೊನಗನ್ನೆ, ಹೊನಗೊನೆ, ಹೊನಗೊನ್ನೆ, ಹೊನ್ನಗನ್ನೆ, ಹೊನ್ನಗೊನ್ನೆ** (ನಾ). ಒಂದು ಬಗೆಯ ತರಕಾರಿ ಗಿಡ ಮತ್ತು ಅದರ ಸೊಪ್ಪು : "ವಾಂಡುರ-ಕಾಡುದ್ದು, ಕರಿಯ ಹುರುಳಿ, ಪೊನ್ನಗನ್ನೆ" (ಲಿಕಂ. ೯೪) ; ಪೆಸರೆಸೆವ ಪೊನ್ನಗನ್ನೆಯ ರಸಮಂ ಕೋಡಾಡ ಪಾಲೊಳೊಳಱಿ ಮಱುಗಿಸಿ ಹಿಂಗು ಸಮೇತಂ ಕುಡಿಯಿಸೆ ಕಿದ್ದೆಸೆ ದೆಸೆಗೆಟ್ಟೋಡಿ ಪೋಗದೇಂ ನಿಂದಪುದೇ (ಲೋಕೋಪ. ೯-೦೩೩). **ಪೊನ್ನಗಂಟಿ :** ಸೊಪ್ಪುಗಳು : ಅಗಸೆ . . . ಪೊನ್ನಗಂಟಿ, ಕೀರಕಸಾಲೆ (ಪಶ್ಚುಪು. ೨೩೭). **ಹೊನಗನೆ :** ಹೊನಗನೆ ಬಹಳ ತಂಪು (ರೂಶ). **ಹೊನಗನ್ನೆ :** ಯಷ್ಟಿಮಧುಕ, ಹೊನಗನ್ನೆಯ ಬೇರು ಇವಿಷ್ಟನೂ ಪ್ರತ್ಯೇಕ ಒಂದು ವರಹ ತೂಕವ ಸಣ್ಣನಾಗಿ ಕತ್ತರಿಸಿ (ವೈದ್ಯಸಾ. II. ೩೫). **ಹೊನಗೊನೆ :** "ಬ್ರಾಹ್ಮೀ, ಮತ್ಸ್ಯಾಕ್ಷೀ, ವಯಸ್ಥಾ, ಸೋಮವಲ್ಲರೀ — ೪ ಹೊನಗೊನೇಸೊಪ್ಪು" (ನಿಘಂಟು. ೦೯೪) ; ಹಳೆಲಕ್ಕಿಅನ್ನ, ಹೊನಗೊನೆಸೊಪ್ಪು . . . ಚಿಲಿಕೀರೆಸೊಪ್ಪು ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕಪ್ಪ. ೧೧೨). **ಹೊನಗೊನ್ನೆ :** "ಬ್ರಾಹ್ಮೀ, ಮತ್ಸ್ಯಾಕ್ಷೀ, ವಯಸ್ಥಾ, ಸೋಮವಲ್ಲರೀ — ಈ ೪ ಹೊನಗೊನ್ನೆ" (ನಾಶರಾ. ೦೦೦) ; ಹೊನಗೊನ್ನೆ ಸಂಗಡ ಅಪರಿಕೆ ಮುಗುಳಂ ಹಾಲಲ್ಲಿ ಅರೆದು ಕುಡಿಯೆ ಹೊಟ್ಟೆಉರಿ ಸಹ ಗುಣ (ವಿವ್ಯಿ. ೮). **ಹೊನ್ನಗನ್ನೆ :** "ಮತ್ಸ್ಯಾಕ್ಷಕಃ — ಹೊನ್ನಗನ್ನೆ" (ಲಿಕಂ. ೦೦೯) ; ಹೊನ್ನಗನ್ನೆಯ ರಸಮಂ ಕೊಂಡು ಆಡಿನ ಪಾಲೊಳಗೆ ಕೂಡಿ . . . ಕುಡಿಯಲ್ ಕಿದ್ದೆಸೆಯ ಬೇನೆ ಮಾಣ್ಬುದು (ಲೋಕೋಪ. ೯-೦೩೩ ಟೀಕೆ) ; ತೊಟ್ಟ ಮುಸ್ತೆಯನುಜಿ ಚೂರ್ಣವುದುಲಿಗ ಹೊನ್ನಗನ್ನೆ ಸಮೇತಂ (ಐಮದ. ೫-೯೪). **ಹೊನ್ನಗೊನ್ನೆ :** "ವಸುಕಾಂತಿಯೆನೆ ಹೊನ್ನಗೊನ್ನೆ" (ಮಂಗರಾ. ೪೦-೩೩).

[ದೇ. ‖ ತಮಿ. ಪೊನ್ನಾಙ್ಕಣ್ಣಿ, ಪೊನ್ನಾಙ್ಙಾಣಿ ; ತುಳು. ಪೊನ್ನಾಂಕಣ್ಣಿ, ಪೊನ್ನಾಂಗಾಣಿ, ಹೊಣ್ಣಂಗಣಿ ; ತೆಲು. ಪೊನ್ನಗಂಟಿಕೂರ ]

**ಪೊನ್ನಬ್ಬೆ** (ನಾ). ಒಬ್ಬಾಕೆಯ ಹೆಸರು : ಕೋಸಿಗರಾ ಕೋಟೆಯಮ್ಮ ಗೋಸಾಸಿಯ ಪೆಣ್ಡಾತಿ ಪೊನ್ನಬ್ಬೆ (ಪ್ಪ್ರಕಂ. ೦೯೨೯, ೭೯-೨; 964) ; ತಾಗೆ ರತ್ತಿಯ ಮಹಾಜನಕ್ಕೆ ಪೊನ್ನಬ್ಬೆ ಪೊನ್ನ ಕೊಟ್ಟು ಸಾಲೆ ನೀಡೆನ್ದು ಮುತ್ತಲಂ ಕೊಣ್ಡು (ಎಕ. VII. ಶಿಕಾ. ೬೦-೬ ; 978). [ ಪೊನ್ + ಅಬ್ಬೆ$_1$ ]

**ಪೊನ್ನಯ್ಯ, ಹೊನ್ನಯ್ಯ** (ನಾ). ಒಬ್ಬಾತನ ಹೆಸರು : ಪೊನ್ನಸದೇವನ ಮಗ ಪೊನ್ನಯ್ಯ (ಎಕ. XII. ಪಾವುಗ. ೬೦-೧ ; ಸು. 925). **ಹೊನ್ನಯ್ಯ :** ಗೊರವರ ಹೊನ್ನಯ್ಯಂ ತುಱುವಂ ಪಿನ್ದಿಕ್ಕಿ ಪಲರಂ ಕೊನ್ದು ತಳುತ್ತಿಱಿದು ದೇವಲೋಕಕ್ಕೆ ಸನ್ದೋಂ (ಎಕ. VIII. ಸೊರಬ. ೩೪-೦೦ ; 1032).

[ ಪೊನ್ + ಅಯ್ಯ$_1$ ]

**ಪೊನ್ನಲರ್** (ನಾ). ಬಂಗಾರದ ಹೂವು : ಮಾಣಿಕದ ಸೊರ್ಗಳಿಂ ನೇರಾಣಿಯ ಪೊನ್ನಲರ್ಗಳಿಂ ಗೀರ್ವಾಣಿಕಾರ್ಚಿತನಂ ನರೇಂದ್ರುವಧುವರ್ಚಿಸಿದಳ್ (ಮಲ್ಲಿಪು. ೯-೩೬). [ ಪೊನ್ + ಅಲರ್$_2$ ]

**ಪೊನ್ನವಾರಗಾವುಂಡ** (ನಾ). ಒಬ್ಬಾತನ ಹೆಸರು : ಮೋಳಿಯನೂರ ದೇವಯ್ಯನುಂ ಪಾಪಯ್ಯನುಂ ಕಳ್ಳಬುಣಾಸೆಯ ಪೊನ್ನವಾರಗಾವುಣ್ಡನುಂ . . . ಧರ್ಮರಾಸಿಭಟಾರರ ಕಾಲಂ ಕರ್ಚ್ಚಿ ಕೊಟ್ಟ ಸ್ಥಿತಿ ಯಾವುದೆನ್ದೊಡೆ (ಎಕ. XI. ಚಿತ್ರದು. ೭೭-೨೦ ; 937).

[ ಪೊನ್ನವಾರ್ + ಗಾವುಂಡ (< ಗಾಮುಂಡ ) ]

**ಪೊನ್ನವೂರ್** (ನಾ). ಒಂದು ಸ್ಥಳದ ಹೆಸರು : ಜಿಡೂರಾಳ್ಗೆಬ್ಬತ್ತಱ ನಾಟ್ಗಾವುಣ್ಡಮ್ × × × ಕಲಿಯಿಟ್ಟನೊಳೆ ವಿರೋಧವಾಗಿ ನಾಡಿನ್ದಂ ಗಂಗವಾಡಿಗೆ ಪಳ್ಳಿವೆನಿಪ್ಪೊನ್ನವೂರಲೊಳಿರೆ (ಎಕ. VIII. ಸೊರಬ. ೬೬-೬ ; 912). [ < ಪೊನ್ + ಊರ್ ]

**ಪೊನ್ನಳಱು** (ನಾ). ಒಬ್ಬಾತನ ಹೆಸರು : ಕಂಚುಗರ ಗುಜಯ್ಯಂಗೆ ಪೊನ್ನಳಱು ಒಮ್ಮ[ತ್ತ]ಲಂ ಕೊಟ್ಟ (ಎಕ. VIII. ಸೊರಬ. ೧೦೬-೧೯ ; 986). [ ? ]

**ಪೊನ್ನಳೂರ್** (ನಾ). ಒಂದು ಸ್ಥಳದ ಹೆಸರು : ಪೊನ್ನಳೂರ್ ಬೋಯಸ್ಕ . . . ಸರ್ವ್ವಶರ್ಮ್ಮಣ (ಇಆ. VII. ೦೬೬-೪೨ ; 668). [? + ಊರ್]

**ಪೊನ್ನಳ್ಳಿ** (ನಾ). ಒಂದು ಸ್ಥಳದ ಹೆಸರು : ಪೊನ್ನಳ್ಳಿ ನಾಮಗ್ರಾಮಃ (ಎಕ. IV. ನಾಗಮಂ. ೬೫-೬೦ ; 770). [ಪೊನ್ + < ಪಳ್ಳಿ$_1$]

**ಪೊನ್ನಾಣ್ಮ** (ನಾ). ಸಂಪತ್ತಿನ ಒಡೆಯ ; ಕುಬೇರ : "ಧನಪತಿಯೊಳೆ ಪೊನ್ನಾಣ್ಮಂ" (ಕಶಬ್ದಸಾ. ೯೦). [ಪೊನ್ + ಆಣ್ಮ (< ಆಳ್ಮ)]

**ಪೊನ್ನಾಯ** (ನಾ). ಒಂದು ಬಗೆಯ ತೆರಿಗೆ : ವೇಳಾಪುರದ ಬೀಡು ಚತುಶ್ಸೀಮೆ ಸುಂಕ ಪೊಂನಾಯ ಸಹಿತ ದೇವಳಿಗೆನಾಡಂಮೆ ಸಂದಿ ಹಂನೆರಡು (ಎಕ. V. ಬೇಲೂರು. ೫೬-೬೨ ; 1117). 'ಪನ್ನಾಯ' ಪರಾ.

[ಪೊನ್ + ಆಯ$_2$]

**ಪೊನ್ನಾಯುಗ, ಹೊನ್ನಾಯುಗ** (ನಾ). (ಕತ್ತಿಯ) ಚಿನ್ನದ ಹಿಡಿಕೆ : ರಂಜಿಸಿದುದು ಪೊನ್ನಾಯುಗದ ಪೊನ್ನ ಬಜ್ಜರಿ ಕಟಿಯೊಳ್ (ಅಜಿತಪು. ೬-೫೦). **ಹೊನ್ನಾಯುಗ :** ಹೊನ್ನಾಯುಗದ ಖಡುಗದ ಗಜಬು . . . ಮೂದಲೆಗಳ ಮಹಾಧ್ವನಿ ಬಗಿದುದ್ಯೆ ತಾವರೆಯ ತನಯನ ಕರ್ಣಕೋಟರವ (ಕುಮಾರಾರ. ೨-೪) ; ಹೊನ್ನಾಯುಗದ ಖಡುಗವನಕ್ಷಯದ ಮೂಡಿಗೆಯ ದಕ್ಷಿಣದ ಹೆಗಲಿಗೇಱಿಸಿ . . . ಹೊಱವಂಟನು ರಘುಪ್ರಭವ (ತೊರರಾ. ೩-೬-೫). [ಪೊನ್ + ಆಯುಗ (< ಆಯುಗ)]

**ಪೊನ್ನಾಯೋಗ** (ನಾ). ಚಿನ್ನದಿಂದ ಮಾಡಿದ ಅಲಂಕಾರವಸ್ತು,— ಆಭರಣ : ನಡೆಯ ತುರಗು ಪೊನ್ನಾಯೋಗಂಗಳಿಂದಮರ್ದಟ್ಟಿಯಿಂ (ಶಂಕಭಾ. ೯-೦೦೨). [ಪೊನ್ + ಆಯೋಗ]

**ಪೊನ್ನಾಳ್** (ನಾ). ಶ್ರೇಷ್ಠನಾದ ಯೋಧ,— ಸೈನಿಕ : ಪೋದವರಾ ಪೊನ್ನಾಳ್ಗಳ್ ಬಾರದೆ ಬಗೆ ಬೆದರುತಿಹುದು (ಶಾಂತಿಪು. ೦-೦೫). [ಪೊನ್ + ಆಳ್$_3$]

**ಪೊನ್ನಿಗ, ಹೊನ್ನಿಗ** (ನಾ). ೧. ಒಬ್ಬಾತನ ಹೆಸರು : ಬದಿರೂರಲು ಬೂತುಗನಂ ತುಮ್ಬೆವಾಡಿಯ ಗಣ್ಡಯ್ಯನ ಮಗಂ ಪೊನ್ನಿಗಂ ಕಾದಿ ಸತ್ತು ಸ್ವರ್ಗ್ಗದಲಿಟ್ಟಂ (ಎಕ. XII, ಮಧುಗಿ. ೨೭-೨೨ ; ಸು. 950). ೨. (ಕನ್ನಡದಲ್ಲಿ ಪ್ರಸಿದ್ಧನಾದ ಪೊನ್ನನೆಂಬ) ಒಬ್ಬ ಕವಿಯ ಹೆಸರು : ಪೊನ್ನಿಗ[ನಿಂ] ಮಲ್ಲಪನುಂ ಪೊನ್ನನುಮರ್ತಿಯೆ ಪುರಾಣಚೂಡಾಮಣಿಯಂ ಮುನ್ನಂ ಪೇೞಿಸಿದಂತೆ . . . ಪೇೞಿಸಿದಳ್ (ಅಜಿತ. ೦-೬೬). 'ಅರಿಗ' ಹೋ. **ಹೊನ್ನಿಗ :** ೧. ಹೊನ್ನಿಗ ಪಸುಗವೊನ್ನಮೆಣ್ಡೆ ತಮ್ಮ ಚವನಮ ಊರಟಿವನ ಸತ್ತ (ಎಕ. X (s), ಬಾಗೇಪ. ೯೪-೨ ; 10ನೆಯ ಶತ).

[ಪೊನ್ + — ಇಗ]

**ಪೊನ್ನಿಡಿಕಿ** (ನಾ). ಒಂದು ಸ್ಥಳದ ಹೆಸರು ; ▶ ಈಗಿನ ತುಮಕೂರು ಜಿಲ್ಲೆಯ ಹೊನ್ನುಡಿಕೆ : × × × ದ ಪೊನ್ನಿಡಿಕಿಯೊಳ್ ತನ್ನ ಅರ್ತ್ತದಟಿವಿನೊಳ್ ಕಾದಿ ನಾಲ್ವರ ಕೊನ್ದು ಸತ್ತನ್ (ಎಕ. XII, ಮಧುಗಿ. ೪೦-೩ ; ಸು. 950). [ ? ]

**ಪೊನ್ನೀರ್, ಹೊನ್ನೀರು** (ನಾ). ೧. ಹೊಂಬಣ್ಣದ ಕಾಂತಿ : ಒಯ್ಯನೆ ಸುತ್ತಂ ಸೂಸಿದೀಶಾನನ ಜಡೆಗಳವೊಲ್ ಕಾಯ್ದ ಪೊನ್ನೀರ್ಗವಿಲ್ಗೆಂಪಿನ ಪೆಂಪಂ ಸಿಂಪಿಸುತ್ತಿರ್ದಹಿಮರುಚಿಗಳಂ ತಿಗ್ಮರುಚಿಪ್ಪಾಲಿಬಿಂಬಂ (ಕಾದಂಬ

೩೬೪). **ಹೊನ್ನೀರು :** ೨. ಹೊಂಬಣ್ಣದ ನೀರು : ಉದಯೋನ್ಮುಖ ಸೂರ್ಯನ ರಶ್ಮಿ ವಿಕಸನವುಪ್ಪದ ಮೇಲೆ ಹೊನ್ನೀರನೆರಚಿತ್ತು (ಹೇಮಚ. ೨೮); ಹೊಂಗದಿರ ಜೇರ್ಕೊಳವಿಯಿಂ ಸಂಜೆ ಜರ್‍ರೆಂದು ರಂಗೆರಚೆ . . . ಕನ್ನೆಗಳ ಪಸಲೆಯಾಲಿ ಹೊನ್ನೀರ ಮಳೆ ಹೊಯ್ಯಲಿ (ಕನ್ನಾಂಗ. ೨೦-೩೪೦). [ಪೊನ್ + ನೀರ್]

**ಪೊನ್ನು** 'ಪೊನ್' ನೋ.

**ಪೊನ್ನುಗ** (ನಾ). ಚಿನ್ನದಲ್ಲಿ ವ್ಯವಹರಿಸುವವನು; ಅಕ್ಕಸಾಲಿಗ : ಮಣ್ಣುಗಂ, ಪೊನ್ನುಗಂ (ಶಬ್ದಾನು. ೩೨೫ ವೃ.ಯೋ). [ಪೊನ್ + –ಉಗ]

**ಪೊನ್ನುಡೆ** (ನಾ). ಜರತಾರಿ ವಸ್ತ್ರ; ಚಿನ್ನದ ಬಣ್ಣದ ದುಕೂಲ : ಪೀತಾಂಬರ : ತನ್ನ ಮನೆಯ ಮದುವೆಯೊಳು ಮಂಗಲದೊಳು ತನ್ನ ಬಾಂಧವರೆಲ್ಲರನು ಅನ್ನಪಾನಂಗಳಿಂದಾದರಿಪುದು ಮತ್ತೆ ಪೊನ್ನುಡೆಯಿತ್ತು ಪೂಜಿಪುದು (ಪಂಚ. ೪-೩೬); ಪೊನ್ನುಡೆಯಿರೆ ತೊವಲಂ ಕೊಳೆಯುವನೆನ್ನಂ ತಾನಕ್ಕೆ ಪಶುವನೆಂದೇ ಬಗೆವರ್ (ಜಗ. ೦-೩೦). [ಪೊನ್ + ಉಡ್ಪ]

**ಪೊನ್ನುಯ್ಯಲ್, ಹೊನ್ನುಯ್ಯಲ್** (ನಾ). ಚಿನ್ನದ ತೂಗುಮಣೆ,– ಜೋಕಾಲಿ : ಚೂತಮಹೀಜದ ಕೆಟಗಣ ಪೊನ್ನುಯ್ಯಲನೇಱೆ . . . ತರಳಾಕ್ಷಿಯಾಡುತುಮಿರ್ಪಿನಂ (ರಾಜಶೇ. ೩-೨೭). **ಹೊನ್ನುಯ್ಯಲ್ :** ಕಾಂಚನಮಾಲೆ . . . ಕೆಳದಿಯರ ಮೇಳದಲಿ ಹೊನ್ನುಯ್ಯಲಾಡುತ ಲೀಲೆ ಯಿಂದಿರೆ (ಶಾಲ್ಮಲಿ. ೨೯-೦). [ಪೊನ್ + ಉಯ್ಯಲ್]

**ಪೊನ್ನೆ, ಹೊನ್ನೆ** (ನಾ). ಒಂದು ಬಗೆಯ ಮರ; ಪುನ್ನಾಗ: ಚಿನ್ನ ಪೊನ್ನೆಯರಲಂ ಕೊಯ್ದಳ್ (ಆದಿಪು. ೦೦-೯೯. ಅಡಿಟಿಪ್ಪ); ಪೊನ್ನೆಯ ಮುಗುಳೆ ಕ್ಕ್ಯಾವಳ ತನ್ನ ಕೊರಲ್ಗೆಸೆಯೆ . . . ಕಣ್ಗೆಸದಿರ್ದಳ್ (ಶಾಂತಿಪು. ೬-೦೭); ಕದಂಬಮಹೀಜದೊಂದು ಶೋಭಾಗುಣಮೊಂದೆ ಪೂತೆಸೆವ ಪೊನ್ನೆಗೆ ಕರ್ವುಗಿಲೊಡ್ಡು ಬೆಳ್ಮುಗಿಲ್ಗಾಗಿರೆ ಪೋದುದಿಂತು ಜಳದಾಗಮಮಾದುದು ಶಾರದಾಗಮಂ (ಪಂಪಭಾ. ೪-೯೭). **ಹೊನ್ನೆ :** "ಪೀತಸಾ(ಲ)ರಃ, ಅಸನಃ– ಈ ೨ ಹೊನ್ನೆ" (ಹಲಾಯು. ೩೩-೯೭); ಹೊನ್ನೆ ಕುಟಜಂ ಕಬ್ಬುನ್ನಿ ಸೀವನ್ನಿ ತುಂಬುರುಹಂ ತಾಳಂ (ಕಾವ್ಯಸಾ. ೦೦೯೦ ಟಿಪ್ಪಣಿ); ಉಱೆ ಬೀಱುವು ಸುರಗಿ ಹೊನ್ನೆ ಮಲ್ಲಿಗೆ ವನದೊಳ್ (ಜಗ. ೪-೩).

[ದೇ.॥ ತಮಿ. ಪುನ್ನೈ, ಪಿನ್ನೈ; ಮಲ. ಪುನ್ನ; ತುಳು. ಪೊನ್ನೆ, ಹೊನ್ನೆ; ತೆಲು. ಪೊನ್ನ]

**ಪೊನ್ನೆಱೆಯ** (ನಾ).=ಪೊನ್ನಾಣ್ಮ : "ಪೊನ್ನೆಱೆಯ ತಿಸುಳಿಗೆಳೆಯಂ ಕಿನ್ನರಪತಿ" (ಕರ್ಣಾಟ. ೦). [ಪೊನ್ + ಎಱೆಯ]

**ಪೊನ್ನೇಅರಸ** (ನಾ). ಒಬ್ಬಾತನ ಹೆಸರು : ಸಿಙ್ಗಪೋತರಸರು ಪೊನ್ನೇ ಅರಸರು ಧರ್ಮ್ಮಮಹಾದೇವಿಯರುಡಿತಿಟ್ಟು ಪೊನ್ನೇಅ ದೊಡ್ಡರೆನ್ದು ಕಡಗವಿಟ್ಟರ್ (ಎಪಿ. IX-i, ೦೭-೦೨ ; ೯೦೦). [? + ಅರಸ₁]

**ಪೊನ್ನೆರಣೆ** (ನಾ). (ಸೌಭಾಗ್ಯಸೂಚಕವಾಗಿ) ಮದುವೆಯಲ್ಲಿ ಚಿತ್ರ ಬರೆದಿಡುವ ಚಿನ್ನದ ಕೊಡ : ಮದನನ ರತಿಯ ಮದುವೆಯೊಳ್ ಸಿರಿ ಸಂಪದದಿಂ ಪೊನ್ನೆರಣೆಯ ಜವಳಿಗಳಸದ ಮೇಲೊಲಿದಿಕ್ಕಿದ ಮಂದಾರದ ಮಾಲೆಯ ಮಾಳ್ಕೆಯೊಳು ಮದಯೌವನೆಯುನ್ನತಕುಚತಟದೊಳ್ ಚದುರೆಯದೂರ್ವಳ್ ನವನವರತ್ನದ ಪದಕಂಗಟ್ಟಿದಳು (ಜಯನೃ. ೩-೦೯). [ಪೊನ್ + ಏರಣೆ ( < ಅಯ್ರಾಣಿ)]

**ಪೊನ್ನೊಡೆಯ** (ನಾ). = ಪೊನ್ನಾಣ್ಮ : "ಪೊನ್ನೊಡೆಯಂ, ತಿಸುಳಿಗೆಳೆಯಂ–ಈ ೨ ಕುಬೇರಂ" (ಶಕನಿ. ೪೯-೩೯); ಸಸಿಯುಂ ಮೆಯ್ವೆಳಗಿಂದೆ ಪೊನ್ನೊಡೆಯನಂ ಪೆಂಪಿಂದೆ . . . ಉಬ್ಬಸಮಂ ಮಾಡುವ ಬರ್ದುಯರ್ ಪಲಬರುಂ ಕಣ್ಗೇಂ ಬೆಡಂಗಾದರೋ (ಕಬ್ಬಿಗ. ೦೩೪). [ಪೊನ್ +ಒಡೆಯ₁]

**ಪೊನ್ನೊರೆ₁** (ನಾ). ೧. ಚಿನ್ನದ ಬಣ್ಣ,–ಮೆರುಗು,–ಕಾಂತಿ : ಪೊನ್ನೊರೆಗನ್ನದೀಪಮೆಸೆವಂತಿರೆ ಮಾಣಿಕ್ಯಮುದಿ:ಪಮೇನೆಸಗುಗುಮೇ (ಶಂಖಪಾ. ೯-೦೮೦). ೨. ಚಿನ್ನದ ಗೆರೆ : ಧರಣೀರಕ್ಷಣಮಂತ್ರಾಕ್ಷರಮಂ ವಿದ್ವಿಷತ್ಸೈನ್ಯಮಾರಣಮಂತ್ರಾಕ್ಷರಮಂ ಪೊನ್ನೊರೆಯಿಂದಂ ಬರೆದಂತಾ ನೃಪನ ತೋಳ ಬಾಳ್ಗೊಗರೆಸೆಗುಂ (ಮಲ್ಲಿಪು. ೩-೦೫); ಪೊನ್ನ ಬೆಟ್ಟವ ಬಳಸಿದಂ ಸಜ್ಜನ ಗೊಂದು ಪೊನ್ನೊರೆಯನಿತ್ತುದಿಲ್ಲ (ಭಾವಚಂ. ೩-೩೩). [ಪೊನ್ + ಒರ್ಕೆ]

**ಪೊನ್ನೊರೆ₂** 'ಪೊನ್ನೊಱೆ' ನೋ.

**ಪೊನ್ನೊಱೆ, ಪೊನ್ನೊರೆ₂, ಹೊನ್ನೊಱೆ** (ನಾ). ಚಿನ್ನದಿಂದ ಮಾಡಿದ ಶಸ್ತ್ರಕೋಶ; ಕತ್ತಿಯನ್ನಿಡುವ ಚಿನ್ನದ ಕೋಶ : ಪೊಸದುಕುಲಂ ಬೆಡಂಗುಮರ್ದ [ಪ]ಟ್ಟಿಗೆ ಪೊನ್ನೊಱೆ ಸೇತಮಾಲೆ ಬಣ್ಣಸರಮುದಾತ್ತ ಹಸ್ತಕಟಕಂ . . . ತಿರುಳೋಲೆ ಕರ್ಣ ತಮಗೊಪ್ಪೆ (ಪರಿಪಶಾ. ೬-೬೩); ಪೊನ್ನೊಱೆ ಚಿಕ್ಕಗೇಣ್ ಪಟಿಯು ಟೊಪ್ಪಿಗೆ (ಕೃಷ್ಣಪು. ೯-೪೦). **ಪೊನ್ನೊರೆ₂:** ಎಡಕರದಿ ಪೊನ್ನೊರೆ ಕಠಾರಿಯುಮನಾಂತು (ಪಟಶೋ. ೦೭-೩೭). **ಹೊನ್ನೊಱೆ :** ನೆಱೆ ರೂಪುವಡೆದ ಮನ್ಮಥನೆಂಬ ರತ್ನಹೊನ್ನೊಱೆಯಿಂದಲುಗಿದ ಕೂರಸಿಯು ಮಱೆಯಬಾರದು ಮಹಾದೇವ ಸತ್ಯುವರನ ಹೆಱಹಿಂಗಬಹುದೆ ಬಲ್ಲವರು (ಪೋಹತ. ೨೯-೩೩); ಬಲಗೈಯೊಳಾಂತ ಹೊನ್ನೊಱೆಯ ಕಠಾರಿಯ ಕೆಲಕೂಱೆ . . . ಕಲಿಗಳ ದೇವನೊಪ್ಪಿದನು (ಭರತ. ೦-೩೨). [ಪೊನ್ + ಒಱೆ₂]

**ಪೊನ್ನೋಲೆ, ಹೊನ್ನೋಲೆ** (ನಾ). ಚಿನ್ನದ ಓಲೆ : ನಿಕ್ಕುವದಿಂ ತಾಳೋಲೆಯನಿಕ್ಕುವವರ್ಮಲರೊ ನೋಡ ಪೊನ್ನೋಲೆಯನಂತಿಕ್ಕುವವರ್ಮಲರೊ (ರಾಜಶೇ. ೦-೨೦೦); ನಾಗಕುಂಡಲುಂ ಪೊನ್ನೋಲೆಯುಸೆವ ಕಱೆರನ್ನದಾಲೆ (ಹರಿಶ. ೦-೩): ಆತನ ಮತ್ತಗಜಗಮನೆಯ ಕಿವಿಯ ಪೊನ್ನೋಲೆಯಂ ಕಂಡು (ಚಿಕ್ಕದೇ. ೧೦-೯೩). **ಹೊನ್ನೋಲೆ :** ಮಾಗಾಯಿಗಳ ಮುಗ್ಧೆ ಹೊನ್ನೋಲೆಯ ಚೆನ್ನೆ . . . ಪೆಣ್ಗಳ ಪುಣ್ಯಾಕಾರೆಯುಮೆನಿಸಿ ಮನಂಗೊಳಿಸುತ್ತಿರ್ದ್ದಳು (ಉತ್ತರಶಿ. ೩-೩೩ ವ). [ಪೊನ್ + ಓಲೆ]

**ಪೊನ್ಬುಟ್ಟ** 'ಪೊಂಬುಟ್ಟಿ' ನೋ.

**ಪೊನ್ಬೆಟ್ಟು** 'ಪೊಂಬೆಟ್ಟು' ನೋ.

**ಪೊನ್ಮಿಗ** 'ಪೊಮ್ಮಿಗ' ನೋ.

**ಪೊನ್ಮುಡಿ, ಹೊಮ್ಮುಡಿ** (ನಾ). ೧. ಚಿನ್ನದ ಕಿರೀಟ : ಒದೆದೆ ಪೊನ್ಮುಡಿಯನ್, ಒದೆದೆ ಕೌರವನ ಸಿರಿಮುಡಿಯನ್ (ಅಕ್ಕರಾ. ೪೩-೬೪೭). **ಹೊಮ್ಮುಡಿ :** ೨. (ಅಲಂ) ಶ್ರೇಷ್ಠವಾದುದು; ಘನತೆಯಿಂದ ಕೂಡಿದುದು : ಎನಿತೊಂದು ನಾಡುಗಳನಾಳಿದುದು ಸೂಸ, ಹೊಮ್ಮುಡಿಯ ನಮ್ಮ ಸೂಸ ! (ಕಾರಣಿ. ೩೩-೭೩೩). [ಪೊನ್ + ಮುಡಿ₃]

**ಪೊನ್ಮೋದಿರ, ಪೊನ್ಮೋಯಿರ** (ನಾ). ಚಿನ್ನದ ಉಂಗುರ : ಈ ಕಲ್ಲನೆತ್ತುವವರಿಗೆ ಈ ಪೊನ್‌ಮೋದಿರವನ್ನು ಕೊಡುವೆವು (ಪಂಚಾ. ೦೭೭). **ಪೊನ್ಮೋಯಿರ :** ಅಂದು ನಾನು ನಿನ್ನ ಬೆರಳಿಗೆ ತೊಡಿಸಿದ ಪೊನ್ಮೋಯಿರದೊಡನೆ ನನ್ನ ಹೃದಯವನ್ನೂ ನಿನಗೆ ಕೊಟ್ಟೆ (ವಚನಾ. II, ೦೦೩೨) [ಪೊನ್ + ಮೋದಿರ. / ಕೊಡ. ಪೊಮ್ಮೊದ್‌ರ]

**ಪೊನ್ಮೋಯಿರ** 'ಪೊನ್ಮೋದಿರ' ನೋ.

**ಪೊಪ್ಪಳಿ₁, ಪಪುಳ್ಳಿ, ಪಪ್ಪಳಿ, ಪಾಪ್ಪಳಿ, ಪೊಪ್ಪುಳಿ** (ನಾ). ೧. (ಬೇರೆ ಬೇರೆ ಬಣ್ಣಗಳಿಂದ ಕೂಡಿದ) ಒಂದು ಬಗೆಯ ಬಟ್ಟೆ, –ವಸ್ತ್ರ : ಹಳದಿ ಪೊಪ್ಪಳಿ ಚಂದ್ರಗಾವಿ . . . ಬಿಳುಪಟ್ಟೆ ನಾನಾ ವರ್ಣದ ಜವಳಿಯ ಮಳಿಗೆಗಳೆಸೆದುವರ್ತಿಯಲಿ (ಶಂಪರ. ೩-೭೦). ೨. ಒಂದು ಬಗೆಯ ಸೀರೆ : ಪೊಪ್ಪಳಿ ಕರ್ಣಪಾಡಗಳೆಂಬ ಸೀರೆಗಳೊಪ್ಪೆ ಮೇಱೆಯೆ (ಅಭಿನಸಾಂ. ೪-೦೯); ಪೊಪ್ಪಳಿಯಾ ನಾಯಕಿ ರಂಗು ಕೊಪ್ಪಣದ ಬಣ್ಣವನುಟ್ಟು ರಾಯಸಂದಣಿಯ ನೋಡುವರು (ಗೌಂಡಚ. ೭-೭೦). 'ಸಾರಪೊಪ್ಪಳಿ' ಪರಾ. ೩. ಚೌಕಳಿಯ ಆಕಾರವನ್ನು ಅಚ್ಚೊತ್ತಿರುವ ಬಟ್ಟೆ ; ಚೌಕಾಕಾರವಾದ ಅಚ್ಚುಗಳುಳ್ಳ ಬಟ್ಟೆ : ಅವಳು

ಉಟ್ಟಿರುವ ಹಸುರು ಪೊಪ್ಪಳಿ ಸೀರೆ ತುಂಬ ಚೆನ್ನಾಗಿದೆ (ಊ). **ಪಪ್ಪುಳಿ :** ೧. 'ಪಪ್ಪುಳಿಅಚ್ಚಡ' ಪರಾ. **ಪಪ್ಪಳಿ :** ೩. 'ಪಪ್ಪುಳಿಬಟ್ಟೆ' ಪರಾ. **ಪಾಪ್ಪಳಿ :** ೨. ಬರಹದ ಪಾಪ್ಪಳಿ ಮಂಜಿಷ್ಟ ಚೌಪುಲ್ಲಿ ಮೆಚಿವಪ್ಪಗೊಳ ಚಂದ್ರಗಾವಿ (ಜ್ಞಾ.ಪಥ. ೩೬-೯೬). **ಪೊಪ್ಪುಳಿ :** ೧. ಬಂದು ಪೊಪ್ಪುಳಿ ಚಂದ್ರಗಾವಿಗಳೆಳಿಗೆ ಪೊಸತಹ ಮಂಚಿಟಿಕೆ ಗುಜ್ಜರಿ ದುಕೂಲಗಳ ಅಳವಡಿಸಿ. . . ಶ್ರೀಕೃಷ್ಣನೋಲಗಶಾಲೆ ರಂಜಿಸಿತು (ಕೋಣಯ. ೩-೩೮). ೨. ಪೀತಾಂಬ್ರ ಪೊಸ ಚುದ್ರಗಾವಿ ಪೊಪ್ಪುಳಿಯ ಮಿಸುಪ ಶುಭ್ರದ ದಿವ್ಯ ದುಗುಲದ ನಿರಿಗಳ ಶಶಿಮುಖಿಯರು ರಂಜಿಸಿದರು (ಕಂಪತಿ. ೨೯-೯೯) ; ಪೊಪ್ಪುಳಿಯು ಶಿಗುಳಿ ರಾಗಾವಳಿಯ ರತ್ನಾವಳೀ ಥಾವಳ್ಯ ದಿವ್ಯತಾರಾವಳಿಯ . . . ನಾನಾವಿಧದ ಸೀರೆಗಳ ಚಿನ್ನದೆಳೆಮೊಗ್ಗ ಕಂಚುಕವ ಬೇಹನಿತ ತೆಗೆದು (ಪಶಪೋ. ೦೭.೭೦). ೩. ಸುಮಂಗಲಿಯರು . . . ಬಣ್ಣಬಣ್ಣದ ಆನೆಪೊಪ್ಪುಳಿ, ಕವಡೇ ಸೀರೆಗಳನ್ನುಟ್ಟು . . . ಹೊರಟರು (ಮಲಮಂ. ೩೯).

[ದೇ.॥ ತೆಲು. ಪೊಪ್ಪಳಿ, ಪಪ್ಪಳಿ./ಮರಾ. ಪೋಫಳೀ]

**ಪೊಪ್ಪಳಿ₂** 'ಪೊಪ್ಪಿಳಿ' ನೋ.

**ಪೊಪ್ಪಿಳಿ, ಪೊಪ್ಪಳಿ₂, ಪೊಪ್ಪುಳು** (ನಾ). ೧. ಒಂದು ಬಗೆಯ ಮರ : ಮಡ್ಡೀಹಂಬು , ಪೊಪ್ಪಿಳಿಮರ , ಸುಣಾಮರ (ವ್ಯಾಕಿಗ. ೩೩-೦೦೯೭). ೨. (ಹಳದಿಯ ಬಣ್ಣದ ಪುಡಿಯನ್ನು ಕೊಡುವ) ಒಂದು ಬಗೆಯ ಪೊದೆ: (*). **ಪೊಪ್ಪಳಿ₂ :** ೧. "ಮಡ್ಡೀಹಂಬು, ಪೊಪ್ಪಳಿಮರ, ಗುಣಾ ಮರ, ಮಡ್ಡಿಬನ್ನೆ, ಮಡ್ಡಿಚಕ್ಕೆ" (ಸಸ್ಯಾ. ೯೦); ಈ ವೃಕ್ಷಿಗೆ ಸಲ್ಲುವ . . . ಪೊಪ್ಪಳೀಗಿಡಗಾವಲು ಬ್ರಾಹ್ಮಣನಿವೇಶನ ಶೂದ್ರನಿವೇಶನ (ಹುಟ್ಟಿಹ. ೩); ಪೊಪ್ಪಳಿ, ಕುರುಡಿ, ಸಣಬು, ನೀಲಿ (ವಮ್ನುಸು. ೨೩೯). **ಪೊಪ್ಪುಳು :** ೧. ಸೇಬು ಅಂಜುರ ಹಲಸು ಪೊಪ್ಪುಳು ಶೀತಫಲವು ಖರ್ಜೂರದ ಮರನು (ವಂದಿಲೀ. ೬-೨೭). [?]

**ಪೊಪ್ಪು** 'ಪರುಪು' ನೋ.

**ಪೊಪ್ಪುಕ** 'ಪಪ್ಪುಕ₃' ನೋ.

**ಪೊಪ್ಪುಳಿ** 'ಪೊಪ್ಪಳಿ₁' ನೋ.

**ಪೊಪ್ಪುಳು** 'ಪೊಪ್ಪಿಳಿ' ನೋ.

**ಪೊಪ್ಲಿ** 'ಪಪ್ಪುಳಿ' ನೋ.

**ಪೊಮ್ಮು, ಪೊವಮ್ಮು₂, ಪೊಮ್ಮೆ** (ನಾ). ೧. ಒಂದು ಬಗೆಯ ತೆರಿಗೆ : ಸನ್ತೆಯವೊಳಗಣ ಕೊಡದೆಣ್ಣೆ ಯೆಲೆಯ ಹೇಱುಗಳ ಪೊಮ್ಮು ಕಿಱುಕುಳ ಧಾನ್ಯವರ್ಗ್ಗಂಗಳ ಮೊಟ್ಟೆಯ ಸುಂಕವೊಳಗಾಗಿ (ಎ. XIX, ೩೯-೫೦ ; 1144). **ಪೊಮ್ಮು₂ :** ೧. ಪಟ್ಟೆ ಪ್ರುತೀರಕ್ಕೆ ಸಲತಕ್ಕ ಪೊಮಿನ ಹಣವನ್ನು ಕೇಳದೆ (ವ್ಯಾಅಂ. ೦೬೨೬, ೪೮-೦೦ ; ಸು. 1711) ; ಪೊಮ್ಮು ಕೈದುಡುಕುಗಳಂ ಪುಟ್ಟಿಸಿ ಪೊಣರ್ವ ಸೆಟ್ಟಿಗಳಟ್ಟುಳಿಯಂ ನಿಲಿಸಿ ಸುಂಕವಂ ಬಾಳಿಸಿದಂ (ಕಳಕ್ನ. ೭-೩೦); ಸುಂಕ್ಕಾ ಪೊಂಮು ಮಾರ್ಗ ಕರಗ ಪಡಿ ಸುಂಕಾ ಹತ್ತಿ ಪೊಂಮು ಅಲೆಸುಂಕಾ ಕಬ್ಬಿಣದ ಪೊಂಮು (ವ್ಯಾಅಂ. ೦೯೩೯, ೪೨-೯೩ ; 1823) ; ಆ ಸಿದ್ದಾಯ ಈ ಪೊಮ್ಮು . . . ಸತ್ತ ಹೆಣಕ್ಕೂ ಕೊನೆ ಮೊದಲಿಲ್ಲದೆ ಹಣ ಹೊನ್ನು ತೆರುತಿರಬೇಕು (ಬಟ್ಟಿಅ. ೦೩೩-೭). ೨. ಹೊಗೆಸೊಪ್ಪಿನ ಮೇಲೆ ಹಾಕುವ ತೆರಿಗೆ : (*). **ಪೊಮ್ಮೆ :** ೧. ಪೊಮೆ ಸುಂಕ ದೇವಾದಾಯ ಬ್ರಂಹಾದಾಯ ನಟ್ಟ ಕಲ್ಲು ಬಿಟ್ಟ ಬಸವ ಮೊದಲಾದುವುಗಳನು ಈ ಮಠಕೆ . . . ಕೊಡುವುದು (ವ್ಯಾಅಂ. ೦೯೩೦, ೦೩-೩೬ ; 1345).

**ಪೊಮ್ಮಿನ ಚಾವಡಿ** = ಪೊಮ್ಮು ಸುಂಕವನ್ನು ವಸೂಲು ಮಾಡುವ ಚಾವಡಿ : ಪೊಮ್ಮಿನ ಚಾವಡಿ – ಇದರಲ್ಲಿ ಸೀಮೆಯಲ್ಲಿರುವ ತ್ಯಾಜಗಾರರು, ಮಾನ್ಯಗಾರರು . . . ತುರುಕರು ಮುಂತಾದ ಜನಗಳು ವ್ಯಾಪಾರವನ್ನು ತರುವಲ್ಲಿಯೂ ಕೊಡುವಲ್ಲಿಯೂ ಸರಕಾರದ ಶೀರ್ಷು ಆಗದಿದ್ದ ಪದಾರ್ಥಗಳನ್ನು ತೆಗೆದುಕೊಳ್ಳುವಲ್ಲಿಯೂ ಅರ್ಧಸುಂಕವನ್ನು ತೆಗೆದುಕೊಳ್ಳುವುದೆಂದು ನಿಬಂಧನೆ ಮಾಡಿದರು (ಮಹಾವಂ. I. ೦೪೬). [?]

**ಪೊಮ್ಮಗಿಲ್** (ನಾ). ಚಿನ್ನದ ಪ್ರಾಕಾರ,–ಗೋಡೆ : ಪರಿಖೆಯ ತೆರೆವೊಯ್ಲಿಂದಂ ತೆರಳ್ದು ತಡಿವಿಡಿದು ತೆಕ್ಕೆಗಟ್ಟಿದ ಪೊಂದಾವರೆಯ ರಜದಂತೆ ನೃಪಮಂದಿರಮಂ ಬಳಸಿರ್ದ ಪೊಮ್ಮಗಿಲ್ ಸೊಗಯಿಸುಗುಂ (ಪುಲ್ಗೆ. ೨-೬೪) ; ಸರಸ್ವವಿತಿ ಸುತ್ತಿ ಪೊಮ್ಮಗಿಲ ಸುತ್ತಲುಂ ರಂಜಿಕುಂ (ಕಂಠಾಪು. ೪-೦೩೦). [ಪೊ (< ಪೊನ್) + ಮಗಿಲ್]

**ಪೊಮ್ಮಡಿಬೆಳ್ಳಿ** 'ಪೊಮ್ಮಡಿವೆಳ್ಳಿ' ನೋ.

**ಪೊಮ್ಮಡಿವೆಳ್ಳಿ, ಪೊಮ್ಮಡಿಬೆಳ್ಳಿ** (ನಾ). ಶುದ್ಧವಾದ ಬೆಳ್ಳಿ ; ಚೊಕ್ಕ ಬೆಳ್ಳಿ : ರಾಜಮಂದಿರದ ಮುಂದುಗಡೆ ನೆಡಿಸಿರ್ದ ತೋರಣಸ್ತಂಭಯುಗಳಕ್ಕೆ ಪೊಮ್ಮಡಿವೆಳ್ಳಿದಗಡುಗಳನು ತೊಡಿಸಿದಂದದೊಳಿರ್ಪ ಮಾಳ್ಕೆಯಿಂ ಧವಳಾಂಶುವಿಡಿಕಿಱಿದ ಪೊಸದೂವಟದ ಕಾಲ ಕುಪ್ಪಸವ ತೊಡಿಸಿದಳದೋರ್ವ ಕಾಮಿನಿ ಪರವೆನಾಚಿಗೆ (ಶ್ರೀಂದಪು. ೭-೨೯). **ಪೊಮ್ಮಡಿಬೆಳ್ಳಿ :** ಶ್ರೀಗಂಧ ಮಂಚ ಪೊಮ್ಮಡಿಬೆಳ್ಳಿಮಂಚ ಪಂಚರತ್ನದ ಮಂಚ ನವರತ್ನಮಂಚಗಳಂಚಿತವಾದುವಲ್ಲಲ್ಲಿ (ಶಲಕ. ೦೩-೨೩) ; ರಂಜಿಪ ಪೊಮ್ಮಡಿಬೆಳ್ಳಿಯ ಪೂವಪರಂಜಿಯ ಪೂಗಳ ತಂದು . . . ಆದಿಜಿನಗೆ ಪುಷ್ಪಾಂಜಲಿ ಮಾಡಿದರು (ಶಲಕ. ೭೦-೦೯).

[ಪೊಮ್ಮಡಿ₀ (p ← ತೆಲು. ಪವಿಡ = ಚಿನ್ನ) + ಬೆಳ್ಳಿ]

**ಪೊಮ್ಮತ್ತಿ** (ನಾ). ಚಿನ್ನದ ಬಣ್ಣದ ಮಚ್ಚೆ,–ಕಲೆ: ಉತ್ತುಂಗಕುಚಾದ್ರಿಯ ಪೊಮ್ಮತ್ತಿಯ ಮೊಳೆ ಮೊಳೆತ ಜರಗಿನಂತಿರೆ ಕಾಣಲ್ಪೆತ್ತ ಸತಿಗಾಯ್ತು ಸುತನಂ ಪೆತ್ತಂತಪ್ಪೊಂದು ಸಂತಸಂ (ಅರ್ಜಪು. ೨-೪).

[ಪೊ (< ಪೊನ್) + ಮತ್ತಿ₂]

**ಪೊಮ್ಮದಿಲ್, ಪೊಮ್ಮದಿಲು** (ನಾ). = ಪೊಮ್ಮಗಿಲ್ : ನಿತಾಂತವೋಲಗಿಸಲಟ್ಟಿದ ಸಾನುವದೆತ್ತಂ ಬಂದೆಳಸಿರ್ದಪುದೆಂಬಿನಂ ಸೊಗಯಿಪ್ಪುದು ಪೊಮ್ಮದಿಲುಗ್ರಾಂಶೂದ್ಗತವಾಗಿರೆ ಕೆಮ್ಮಗಿಲ್ (ಕೃಷ್ಣಕು. ೨-೯೦) ; ವರ್ಗಪಂಚಮಕ್ಕೆ . . . ಪೊಮ್ಮದಿಲ್, ಪೊಂಮದಿಲ್ (ಶಮದ. ೦೬೦ ಕೃಯೋ). **ಪೊಮ್ಮದಿಲು :** ಇಂಬುವೆತ್ತಿಹ ರಾಜಗೃಹಲಕ್ಷ್ಮಿಯುಟ್ಟ ಪೀತಾಂಬರವೆನಿಸಿ ಪೊಮ್ಮದಿಲು ತಾಂ ಬಳಸಿಹುದವಳಿಕ್ಕಿದ ಮಕುಟ ತಾನೆಂಬಿನ ಕರುಮಾಡವಿಹುದು (ನಾಗಕು. ೨-೬೭).

[ಪೊಂ (< ಪೊನ್) + ಮದಿಲ್]

**ಪೊಮ್ಮದಿಲು** 'ಪೊಮ್ಮದಿಲ್' ನೋ.

**ಪೊಮ್ಮರೆ, ಹೊಮ್ಮರೆ** (ನಾ). ಚಿನ್ನದ ಬಣ್ಣದ ಜಿಂಕೆ ; ಸುವರ್ಣ ಮೃಗ : ತತ್ಪರದೂಷಣರ್ಕಳಂ ಕೊಂದೆಡೆ ಪೋಗಿ ಪೊಮ್ಮರೆಯ ನೆಚ್ಚಿಡೆ ತಪ್ಪಿದಿದಪ್ಪುದು (ಶಂಶಭಾ. ೪-೦೯) ; ಮಱಿದು ಗಿರಿತಟದೊಳ್ಳಿಯ ಮೊಱಗಲೊಡಂ ಪೊರೆದು ಪೊನ್ನ ರಜದಿಂ ಮೆಯ್ಗಳ್ ಮಿಱುಮಿಱುನೆ ಮಿಱುಗೆ ಪೊಸ ಪೊಮ್ಮರೆಯಂತಿರೆ ಪರೆವುವಲ್ಲಿ ಹರಿಣಗಣಂಗಳ್ (ಲೀಲಾವ. ೯-೯೦) ; ಪೊಮ್ಮರೆವೋಲ್ ಪೊಳೆದು ಪಾಱಿ ಪೋದಂ ಶ್ವೇತಂ (ಶಮದ. ಪ. ೨೩೩ ಕೃಯೋ). **ಹೊಮ್ಮರೆ :** ತಾ ಬಳಿಕ ಭೂಸುರನಾಲಯವ ಸಾರಿದನು ಹೊಮ್ಮರೆಯಾಕೃತಿಯ ತಾಳಿ (ಕುವ್ಯಾಅ. ೦೧೨. ೨೬-೨) ; ತೋಱಿದನು ತಾ ಬಳಿಕವಗೆ ಹದಿನಾಱುಬಣ್ಣದ ಪುಟದ ಚಿನ್ನಕೆ ನೂಱುಮಡಿಯೆನೆ ಹೊಳೆಹೊಳೆವ ಹೊಮ್ಮರೆಯ ರೂಪಕವ (ಕೊರಟಾ. ೩-೬-೦೪); ಕಲಿಧನ್ವಿ ಹಳುವ ಹೊಕ್ಕನು ಹೊಮ್ಮರೆಯ ಹಿಂದೆ (ಶ್ರೀರಾಪಜಾ. ೨೩೩-೦೯೦).

[ಪೊಂ (< ಪೊನ್) + ಮರೆ₂]

**ಪೊಮ್ಮಳೆ** 'ಪೊಮ್ಮಟಿ' ನೋ.

**ಪೊಮ್ಮಟಿ, ಪೊಮ್ಮಳೆ, ಹೊಮ್ಮಳೆ** (ನಾ). ಚಿನ್ನದ ಮಳೆ ; ಸುವರ್ಣ ವೃಷ್ಟಿ : ಅಲರ್ವಟಿ ಪೊಮ್ಮಟಿ ಮಂದಾನಿಳನನಿಮಿಷ ದುಂದುಭಿಸ್ವನಂ

ದಿವಿಜಮುಖೋಚ್ಚಳಿತಾಹೋದಾನಸ್ವನವಿಳಾತಳಾ ಶ್ಚರ್ಯಮಾಯು ಪಂಚಾಶ್ಚರ್ಯಂ (ಚಂದ್ರಪ್ರ. ೧೯–೨೨); ನಿರವಿಸೆ ಮನುಷ್ಯಧರ್ಮಂ ಪರವಾಹನೆ ಮೇಱೆ ಬರ್ದನಮ್ಮಂಗಳದೊಳ್ ಸುರಿಗುಂ ಪೊಮ್ಮಱೆ ಭರದಿಂ ಬರವೇಟ್ಟುಂ ಧನದನೆಟ್ಟು ಪೋಗದ ಮುನ್ನಂ (ಶಾಂ. ೬–೨೪೬). **ಪೊಮ್ಮಳೆ :** ಲೋಕವಟ್ಟುಮೆನೆ ಪೊಂಮಳೆಯುಂ ಕಱೆವಂ (ಎಕ. VI, ಕಡೂರು. ೦೬೯–೨೩; 1178); ಪೊಮ್ಮಳೆಯನೀವುತ್ತ ಕೈಲಾಸ ಸೂಱೆಗೊಟ್ಟು (ಚೆನ್ನಪು. ೬–೦–೮); ವಿಳಸದ್ಭಕ್ತಿಗೆ ಕೊರ್ತು ಸಪ್ತದಿನಪರ್ಯಂತಂ ನೆಲಂದೀವಿ ಪೊಮ್ಮಳೆಯುಂ ಪೂಮಳೆಗೂಡಿ ತಾಂ ಕಱೆಯಿಸುತ್ತುಂಸಂವಮಂ ಬೀಱನೇ (ಕೃಷ. ೩೬–೦೨೩). **ಹೊಮ್ಮಳೆ :** ಮೆಱೆವನೆಱೆಯಂಗನಾತನ ಕುಱುಹಿನ ಸುತನೆಱುಗಿದವರ್ಗೆ ಮಳೆಯೆಱಗಿದವೊಲ್ ಕಱೆವಂ ಹೊಂಮಳೆಗಳಂ (ಎಕ. XI, ದಾವಣ. ೨೫–೨೦; 1224); ಸಿರಿಯಾಳನಂದದಲಿ ಆ ಸುತನನರ್ತಿಸೆನು ಹೊಮ್ಮಳೆ ಸೂಸವೇಳೆನು ಬೋಳನಂತೆ (ಬಸವ. ೯–೩೩); ಸುರವಾಕ್ಯ ಸುರಭೇರಿ ಹೂಮಳೆ ಹೊಮ್ಮಳೆ ಸುರಭೀರವವೆಂದಿಂತು ಸುರಕೃತ ಪಂಚವೈಭವಗಳಾದುವು (ಶರ. ೩–೦೨೦).

[ಪೊಂ (< ಪೊನ್) + ಮಱೆ]

**ಪೊಮ್ಮಾಡ** (ನಾ). ಚಿನ್ನದ ಉಪ್ಪರಿಗೆ,—ಮಹಡಿ : ಹರಿಣಾಕ್ಷಿಯಾದರ ದೊಳೀಕ್ಷಿಸುವಿಚ್ಛೆಯಿಂದ ಪೊಮ್ಮಾಡಮಂ ಪರಿದೆಯ್ದುವಾಗ (ರಾಜಶೇ. ೦೬–೯೯); ಬಳಸಿದ ಸಾಲದ ತನೆ ದಳವೊಳಗಣ ಪೊಮ್ಮಾಡಮುಮರ್ದ ಕರ್ಣಿಕೆ ಮಣಿಮಂಗಳಕಳಶಕಾಂತಿ ಮಧುವೆನೆ ಜಳರುಹಮೆನಿಸಿದುದು ರಮೆಗೆ ಭೂವರಭವನಂ (ಕೃಷ. ೯–೬೯). [ಪೊಂ (< ಪೊನ್) + ಮಾಡ₁]

**ಪೊಮ್ಮಿಕೆ** (ನಾ). ವ್ಯಾಪ್ತಿ; ವಿಸ್ತಾರ; ಹರಹು : ಸಮ್ಮುದದೊಳ್ಳಿತಂದು ಏಟರಾ ನೆವದಿ ಬೆಲೆಗೇಳೀ ಪೊಮ್ಮಿಕೆಯ ಜಾಣ್ಮೆಯೊಳು ಬಗೆಗಳ ನೆಮ್ಮದಿಯನರಿಯಲ್ಕೆ (ಕೃಕರ್ಣಾ. ೯–೩೦). [ಪೊಮ್ಮು₁ + –ಇಕೆ]

**ಪೊಮ್ಮಿಗ, ಪೊನ್ನಿಗ, ಹೊಮ್ಮಿಗ** (ನಾ). = ಪೊಮ್ಮರೆ : ಪೊಮ್ಮಿಗವಿರ ದೊಯ್ದುದು ಸೀತೆಯನಗಲ್ಚಿ ನಿಲಲೀಯದಲ್ಲಿ ದಶರಥಸುತನಂ (ಅಭಿರಾಮ. ೦೦೨); ಪಿಡಿಯಲ್ ಪೊಮ್ಮಿಗವೆಂದು ಪೋಗೆ ರಘುಜಂ ಭೂಪುತ್ರಿ ಸಂನ್ಯಾಸಿ ಯೆಂದಡಿಯಿಟ್ಟಳ್ (ಸೋಮೇಶ. ೯೩); ರಾವಣಂ ದುರುಳ ಮಾರೀಚಂಗೆ ಪೇಳಲ್ಕವಂ ಮುದದಿಂ ಪೊಮ್ಮಿಗವಾಗಿ ತೋಱಲ್ (ದಶಾವ. ೬–೨೦೬). **ಪೊನ್ನಿಗ:** ಗವುಕಿವರ್ಯನ ವೇಣುವಾಣಿಗೆ . . . ನರ್ತಿಸುವಂತೆ ನಲಿದುದಾ ಪೊನ್ನಿಗಂ (ಶ್ರೀರಾಮಪ. ೨೩೨–೦೨೬). **ಹೊಮ್ಮಿಗ :** ಸುಟಿದಾ ಹೊಮ್ಮಿಗವಯ್ದೆ ಸೀತೆಯ ಖಳಂ ಕೊಂಡೊಯ್ದು ತಾಂ ಬಾಟ್ಟನೇ (ಸೋಮೇಶ. ೯೨); ರಾಘವನು ಹೊಮ್ಮಿಗವುರುಕಪಟವೆಂದಱಿಯನೇ (ಜೈಮಿ. ೯–೦೩); ಇದುವೆ ಹೊಮ್ಮಿಗವಧೆಗೆ ಕೋ . . . ಎನುತಸುರ ರಾವಣನಟ್ಟು ಮಾಯದಲಿಸಿ (ಕೌಶಿಕಾ. ೩೫–೩೦).

[ಪೊಂ ( < ಪೊನ್ ) + ಮಿಗ]

**ಪೊಮ್ಮಿಣಿ, ಹೊಮ್ಮಿಣಿ, ಹೊಮ್ಮಿಳಿ** (ನಾ). ಬಂಗಾರದ ಸರಪಣಿ : ಪಿಡಿದು ಪೊಮ್ಮಿಣಿಯು ರನ್ನದ ಮಣಿಯ ಮೇಲೆ . . . ಕಡು ನೀಱೆಯೊರ್ವಳುಯ್ಯಲನಾಡುತಿರ್ದಳು (ನೇಮಿ. ೩–೨೩). **ಹೊಮ್ಮಿಣಿ :** ಮಡದಿಯರು ಹೊಮ್ಮಿಣಿಗಳನು ಕೈದುಡುಕಿ ತೆಗೆವ ಬೆಡಂಗು ಮನ್ಮಥ ಕಡುಗಿ ಬಾಳುಗಿವಂದವಾಗೆ . . . ನಲಿದೊಲೆದಾಡಿದರು ಕೋಮಳೆ ಯರುಯ್ಯಾಲೆಯ (ಜೈಮಿ. ೦೬–೭೦); ಬಿಗಿದ ಚೆಂಚಿಯ ಹೊಮ್ಮಿಣಿಯ ಹೊರಚೆಗಳ . . . ದಂತಿಯ ಹೆಗಲ ಹೊಂಗದ್ದುಗೆಗೆ ಬಿಜಯಂಗೈದನಾ ಭೂಪ (ಶುಭ್ರಾ. ೦೨–೯೬); ಒಗುಮಿಂಗೆಯೊಲವಿಂದುಯ್ಯಲನೇಱಿದ ಮುಗುದೆಯುಲಘುಕುಚಮಧ್ಯದ ಹೊಮ್ಮಿಣಿ ಸೊಗಯಿಸಿದುದು (ಜೈಮಿ. ೦೯–೩೩). **ಹೊಮ್ಮಿಳಿ :** ಖಂಡಿಸಿ ಕಳಚಿದನು ಮೊಗರಂಬವನು ಹೊಮ್ಮಿಳಿಯು ಕಣಿಸಿ ಮುಱಿದು ತಱಿದನು ಸುತ್ತ ಚೆಂಚೆಗಳ (ಶುಭ್ರಾಸ್ತ್ರೀ. ೩–೩೨); ಹೊರಜೆ ಹೊಮ್ಮಿಳಿ ನಿಗಳ . . . ಕರದ ಹೊಗರಂಬದ ವಿಲಾಸದಿನೆಸೆದುದಾ ದಂತಿ (ಕೂರಣ. ೬–೨೯–೦೯).

[ಪೊಂ (< ಪೊನ್) + ಮಿಣಿ₂ (< ಮಿಳಿ₂)]

**ಪೊಮ್ಮೀನ್** (ನಾ). ಹೊಳೆಯುವ ನಕ್ಷತ್ರ : ಪ್ರಕಾಶಮಾನವಾದ ತಾರೆ : ಇದು ಬಾನಿಂ ಬರ್ಪ ಪೊಮ್ಮೀಂಬೊಣರ ತೆಱನಿದಲ್ತೊಂದ ಮಳ್ಳಿಂಚು ಮಿಂಚಲ್ಲದಿವರ್ಚಂದ್ರಾರ್ಕರೇಂ . . . ಎಂದುರ್ವಿದಲಂಪಿಂ ನೋಡೆ ಭೂಪಂ ಗಗನದಿನಿೞಿದರ್ಚಾರಣರ್ಚಾರುರೂಪರ್ (ಅರ್ಹದಾ. ೨–೫೯). [ಪೊಂ (< ಪೊನ್) + ಮೀನ್₂]

**ಪೊಮ್ಮು₁, ಹೊಮ್ಮು₁** (ನಾ). ೧. ಆಧಿಕ್ಯ ; ಹೆಚ್ಚಳ : ತರುಲತಾ ಗುಲ್ಮಂಗಳ ಪೊ[ಪಾಠಾಂ. ಹೊ]ಮ್ಮಿನಿಂ ಪೆರ್ಮೆಣಂಗೆಯ್ದು ಸೋಗೆಗಳಿಂದೆ . . . ತಂಬೆಲರಿಂದೆ ತಾವ್ಮನೋಹರದ ವನಮಧ್ಯದೊಳ್ ಸರಸಿ ಮೆಱೆದುದು ಕೂಡೆ ಸೊಗಸುವೆರಸಿ (ಚೇರಮ. ೭–೦೮). **ಹೊಮ್ಮು₁ :** ೨. ಹುರುಪು ; ಉತ್ಸಾಹ : ಬಲುಭಟರ ಹೊಳೆಗಳ ಹೊಮ್ಮುಱಿದು ಕೊಟ್ಟನು ನಳನ ವಶಕೆ (ಕೂರಣ. ೬–೫–೦೦) ; ಹೊಸಹರೆಯದ ಹೊಮ್ಮಿನ ಬಾಲೆಮಂಗಳು ಜಸವದೆದಸದರೇನೆಂಬೆ (ಕಂಠಾ. ೨೯–೯೦). ೩. ಜಂಬ ; ಗರ್ವ ; ಸೊಕ್ಕು : ಹೊಮ್ಮಿನಲಿ ಸಿಂಹಾಸನಾಗ್ರದ ಸೊಮ್ಮಿನಲ್ಲಿರೆ ನೀನು ನಮ್ಮವರೊಮ್ಮದೀ ಮಾತಿದನು ಮಾಡಿದ ನೋಡಿ ಬಳಿಕೆಮಗೆ (ಸಂಚಿಶ. ೩–೦೦) ; ಕಾಗೆಕೂಟದೊಲೆಲ್ಲ ಕುಲಗೆಟ್ಟಾಗಲಾಡಿದ ಹೊಮ್ಮು ನೃಪನೆಡೆಗಾಗುವದೆ (ಚನ್ನಪು. ೬–೩೯). ೪. ಕಾರ್ಯವ್ಯಾಪ್ತಿ ; ನಡವಳಿಕೆ ; ವ್ಯವಹಾರ : ಕಮ್ಮಯನ ಚೇಳಿನ ಹೊಮ್ಮರದು ಒಂದಯ್ಯ (ತತ್ತ್ವಪ. ೦೦೦೯). ೫. ಸತ್ತ್ವ ; ಶಕ್ತಿ : 'ಹೊಮ್ಮಿಱು' ಪರಾ.

**ಪೊಮ್ಮಿದ** = ಮಿಗಿಲಾದವನು : ದಿಮ್ಮಿದರಕ್ಕರಕ್ಕಱಿವರೊಳ್ ನುಡಿಯೊಳ್ ಕಡುಜಾಣರಂದದೊಳ್ ಪೊಮ್ಮಿದರೊಂದಿ ನೀಂದ ಸಿರಿಯೊಳ್ (ಚನ್ನಾ. ೦೦).

[< ಪೊಣ್ಮು./ತಮಿ. ಪೊಮ್ಮಲ್ ; ತೆಲು. ಹೊಮ್ಮು, ಒಮ್ಮು]

**ಪೊಮ್ಮು₂** 'ಪೊಮ್ಮ' ನೋ.

**ಪೊಮ್ಮುಗಿಲ್** (ನಾ). ಹೊನ್ನಿನ ಮಳೆಯನ್ನು ಸುರಿಸುವ ಮೋಡ : ಎಱಗಿದ ಜನಕ್ಕೆ ಪೊಂಮುಗಿಲೆಱಗಿದವೊಲು ಲೋಕ ಮಟ್ಟುಮೆನೆ ಪೊಂಮಳೆಯುಂ ಕಱೆವಂ (ಎಕ. VI, ಕಡೂರು. ೦೬೯–೨೩ : 1178).

[ಪೊಂ (< ಪೊನ್) + ಮುಗಿಲ್]

**ಪೊಮ್ಮೂಡಿಗೆ, ಹೊಮ್ಮೂಡಿಗೆ** (ನಾ). ಚಿನ್ನದ ಬತ್ತಳಿಕೆ : ಪೊಳೆವ ಪೊಮ್ಮೂಡಿಗೆಯ ಪೊಂಗರಿಯ ಬಾಣಗಳ ನಲವಿಂದೆ ಸಿಂಜನಿಗೆಯಳವಡಿಸಿ (ಸದಮೋ. ೦೨–೩೬). **ಹೊಮ್ಮೂಡಿಗೆ :** ಉಗಿದನುರಗಾಸ್ತ್ರವನು ಹೊಮ್ಮೂಡಿಗೆಯೊಳಗೆ ಹೊಱಕಯ್ಯ ಗಾಳಿಗೆ ಹೊಗೆಯು ಹೊದಱಿನ ಹೊರಳಿ ಹಬ್ಬಿತು ಕೂಡೆ ಕಿಡಿಯಿಡುತ (ಕುಭ್ರಾ. ೨೫–೯); ಹೊಮ್ಮೂಡಿಗೆಯ ಹೊದಱುಗಳ ಬಿರುದಿನ ಬೀಡುಕಾಱರು ಬೀದಿವರಿದಿಟ್ಟದರು ಬಲಿ ಮುಖರ (ಕೂರಣ. ೬–೩೬–೦೦). [ಪೊಂ (< ಪೊನ್) + ಮೂಡಿಗೆ]

**ಪೊಮ್ಮೆ** 'ಪೊಮ್ಮ' ನೋ.

**ಪೊಮ್ಮೊಗೆ** (ನಾ). ಚಿನ್ನದ ಪಾತ್ರೆ : ವೃತ್ತಕುಚಾನ್ವಿತೆಯೊಡಲ ಮಾಸಿನ ಬೀಜ ಮಾತ್ರೊಂದು ಶಿಶುವಾಗಲೆನುತ ಬಿತ್ತಲುದ್ಯೋಗಿಪ ತೆಱದಿಂದೆ ಪೂಲ್ದರು ಚಿತ್ರಾಯುವೆತ್ತ ಪೊಮ್ಮೊಗೆಯು (ಮೋಹತ. ೦೬–೨೨).

[ಪೊಂ (< ಪೊನ್) + ಮೊಗ್ಗೆ]

**ಪೊಯ್₁, ಪುಯಿ₁, ಪೊಯಿ, ಹುಯ್₁, ಹುಯಿ₁, ಹುಯ್ಯು₁, ಹೊಯ್₁, ಹೊಯಿ₁, ಹೊಯ್ಯು₁** (ಕ್ರಿ). ಪೊಯ್ದು₁, ಹುಯ್ದು₁, ಹೊಯ್ದು₁ (ಭೂತನ್ಯೂ). ೧. ಹೊಡೆ ; ಬಡಿ ; ಅಪ್ಪಳಿಸು : "ಪೊಯ್—ತಾಡನೇ" (ಶಮದ) ; ಕಡುಗೂಣ್ಪುವೆರಸು ದಾಂಟಿ ಗಡ ಮೇರೆಯನೆಂದು ವಜ್ರವೇದಿಕೆಯಂ ತಾಂ ತೊಡೆಸಕ್ಕೆಪೊಯ್ವುವೊಲ್

ಪೊಯ್ದೊಡನೊಡನುಚ್ಚಳಿಪುವಿದಱ ತುಂಗತರಂಗಂ (ಆದಿಪು. ೦೨-೦೨೯); ಕೆಲರಂ ದೆಸೆವಲಿಗೆಯ್ದಂ ಕೆಲರಂ ಭುಜಬಲದಿನಱೆದು ಶಿಲೆಯೊಳ್ ಪೊಯ್ದಂ (ಗದಾಯು. ೩-೦೦). ೨. ಕಡಿ; ಕತ್ತರಿಸು: ಇಸುವಿಡುವ ಪೊಯ್ವ ಕುತ್ತುವ ಮಸೆಯಂ ಪತ್ತಿಸುವ ಕೈದುಬಿನ್ನಣವಂ ಈಕ್ಷಿಸಲು (ಕ್ಷಪುಕ. ೫-೦೨೫); ಛಲದಿಂ ಪೂಣಿಸಿ ತಲೆಯಂ ಸೆರಗಿಲ್ಲದೆ ಪೊಯ್ಯೆ (ಧರ್ಮಾಮೃ. ೭-೦೦೬); ಪಶುಗಳನ್ ಪೊಯ್ದು ನೆತ್ತರನ್ ಕೋಡಿ ಕೆಡ ಪಿದಯ್! (ಅಕ್ಷ್ಮಕಾ. ೦೫-೩೦೯). ೩. ತಾಕು; ತಗಲು: ಸೊವ ಡೊಂದೊಯ್ಯನೆ ಬಂದು ಪೊಯ್ಯೆ ಮುನಿಸಿಂದಾರಯ್ದು ... ನಿಂದೋ ರೊಂದಱೊಳ್ ತಾಗಿ ಪೋರ್ವುವು ಕಾಡಾನೆಗಳ್ (ಕಾವ್ಯಾಕ. ೩೯); ತಾಂ ಪೊಯ್ಯೆ ನುಣ್ಣಗಿದಂಪಂ ಕರ್ಣಕುಂಡಲಂ (ಉದ್ಭಟ. ೯-೪೮); ಗಂಡಮನೋ ರಂತಿರೆ ಪೊಯ್ಯೆ ಕುಂಡಲಯುಗಂ (ಕಾವ್ಯಸಾ. ೬೫೬). ೪. ಮಿಡಿ; ಮಿಟಿಂ: ತಂತಿಯುಂ ನೀವಿ ನಿರ್ಮಳವಂ ಮಾಡಿ ... ಸುಸ್ಥಾನಕಂಗಳನೋರಂತಿರೆ ಪೊಯ್ದು ಪೊಯ್ದು ... ಸುಕಂಠೆ ಬಾಜಿಸಿದಳಾ ಜಾಣೆಂ ಲಸದ್ವೀಣೆಯಂ (ಕುಸುಮಾ. ೦-೩೬). ೫. ಮೃದಂಗ, ತಬಲ ಮುಂತಾದ ವಾದ್ಯಗಳನ್ನು ಬಾಜಿಸು: "ಸೂಳೆಯಿಸಿತೆನಲ್ ಪೊಯ್ದುದು" (ಛಾರಪ. ೯೦); ಆತ್ತಮಿತ್ತಂ ನಿಱುವ ಕರಯುಗಂಗಳ್ ಪೊಯ್ವ ದೇವಾನಕಂಗಳ್ ... ಬೆಡಂಗಂ ಮೆಱೆಯೆ (ಆದಿಪು. ೭-೫೨); ಆವುಜವುನಳವಡಿಸಿಕೊಂಡು ಝುಂಕಾರವಂ ಪೊಯ್ದು (ಶಾಂತೀಶ್ವ. ೦೬-೬೬ ವ). ೬. ದಡದಡಿಸು; ಬಡಿದುಕೊಳ್ಳು: ಮಾರಾಧ್ವರಪಾವಕಜ್ವಾಲೆಯೆನಲು ಕುಮಾರತಿಯುಸಿರೊಳು ಪೊಯ್ಯೆ (ಪೋಹಕ. ೨೮-೯೦); ಸೂಸುವ ಸುಯ್ ಬೆಮರೇಱದಾನನಂ ಪೊಡೆವರ್ದೆ ಪೊಯ್ವ ಕಿರ್ಬರಿ ... ತೋಱೆ ಪುಳಿಂದನೈದುತೆ (ರಾಜಶೇ. ೫-೦೦೮); ಪೊಯ್ವರ್ದೆಗಳ ಸೆರಗ ಮರೆದು ಬಳಿ ವಿಡಿದು (ಕಾಲೂಕ. ೦೩೦-೨೭೯). ೭. ಪೆಟ್ಟನ್ನು ಹೊಂದು; ಹೊಡೆತಕ್ಕೆ ಒಳಗಾಗು: ಈ ಇರುಳ್ ನಡೆದುದೊಂದದ್ಭುತಂ. ಪಟ್ಟ ಪಡೆ ಪಟ್ಟಂತೆ ಪೊಯ್ದತ್ತು (ಅಕ್ಷ್ಮಕಾ. ೦-೦೨). ೮. (ಭೂತ, ಪಿಶಾಚಿಗಳಂತೆ) ಮೆಟ್ಟಿಕೊಳ್ಳು; ಆವರಿಸು: ಆರೋಗಣೆಯ ಸಮಯಮಾರ್ಗೆ ಭೂತಂ ಪೊಯ್ದುದಾರನೀ ಮನೆಯೊಳಿಂತೀಗಳೇತಕೆ ಮೌನಂ (ಕ್ಷೈಬಿಧಾ. ೬-೫೦). ೯. ಕೊರೆ; ಕಡೆ; ಕಂಡರಿಸು: ಕಲ್ಕುಟಿಗ ದೇಯೋಜು ಪೊಯ್ದಕ್ಕರವು (ಎಷ. XV, ೩೩೨-೩೮; 1028); ಚೆಣ್ಣಆಚಾರಿಯ್ಯ ಮಗಂ ಅನಿ ××ಗ××ಜ್ಜ ಆಚಾರಿ ... ಪೊಯ್ದ ಅಕ್ಕರವು (ಎಕ. IV, ಗುಂಡ್ಲುಪೇ. ೯೩-೦೫; 1049); ದಾಮರಾಜಂ ಸಾಸನಗಬ್ಬಮಂ ಪೇಳ್ದು ಬರೆದಂ ಪೊಯ್ದಂ ಸಾನ್ತೋಜನುಂ ಪದ್ಮನುಂ (ಎಕ. VII, ಶಿಮೊ. ೦೦-೫೯; 1085 ?). ೧೦. ನಾಶಮಾಡು; ಧ್ವಂಸಗೊಳಿಸು: ಭೀಮಸೇನಂ ... ಬಾಟೆಯ ಚೆಲ್ವನಪ್ಪ ಬನಮಂ ಕಾಡಾನೆ ಪೊಯ್ವಂತೆ ಪೊಯ್ದನಿಸಂ ಮಾಣದೆ ನೀಚ ಕೀಚಕನಿಕಾಯಧ್ವಂಸನಂ ಮಾಡಿದಂ (ಕಂಪಭಾ. ೮-೮೦). ೧೧. [ಗಣಿತ] ಗುಣಿಸು: ತಿವಿ, ಪೊಯ್, ಪೆರ್ಚಿಸು ... ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೦೦-೮). ಪುಯಿ$_1$: ೧. ಬಯಿದೊಡೆ ಪುಯಿದನೆ ಪುಯಿದೊಡೆ ಯಿಱಿದನೆ (ಜ್ಞಾವಕ. ೩೯-೮೩). ಪೊಯಿ: ೧. ಇನ್ನಿರೆನೆನ್ದು ಸಿಂಗದನ್ತಿರೆ ಹರಿ ಬೀರಲಕ್ಷ್ಮೀ ನೆರವಾಗಿರೆ ಚೋಟನ ಕೋಟೆಯೆವ್ಪ್ಟ ಸಿನ್ದುರದ ಶಿರಾಗ್ರಮಂ ಬಿರಿಯೆ ಪೊಯಿದಂ ಕದನೈಕ ಸೂದ್ರಕಂ (ಎಕ. III, ಮಂಡ್ಯ. ೯೦-೦೯; 950). ೧೧. ಪೊಯಿ ಗುಣಿಸು ಪೆರ್ಚಿಸೆನಲಿವು ಗುಣಕಾರಭಾಷೆಗಳ್ (ವ್ಯವಹಾ. ೦೦-೦೬). ಹುಯ್$_1$: ೧. ಚಿಕ್ಕತಂಮಸು ಮೂಡಣಬೆಟ್ಟದಲ್ಲಿ ಅಸಹಾಯಸೂರನಾಗಿ ಕೊಡಲಿಯಲ್ಲಿ ಕಳ್ಳರ ಹುಯ್ದು ಕೆಡಹಿ ತಾನು ಬಿದ್ದ (ಸೌಇಇ. IX-ii, ೯೨೦-೫; 1386); ಹರಿಯೊ ಹರಿಯೋ ಹುಯ್ಯೊ ಕಪಿಗಳ (ಕೌಶಿರಾ. ೩೨-೦೩); ಕಡುಭರದಿ ಹತ್ತಿ ಕೋಟೆಯ ಮೇಲೆ ಕುದುರೆ ಕಾಲಿಡುವುದಂ ಕಂಡೆಕ್ಕಟಗಳೊಳಗಣಿಂ ಬಂದು ಕೆಡೆವಂತೆ ಹುಯ್ದು (ಸಪ್ತಕ್ಷೇ. ೩-೩೩). ೫. ಪ್ರಯಾಣಭೇರಿಯ ಹುಯ್ಯ ಹೇಳು (ಬೀಕ್ಕಪು. ೩-೨೩-೩೯). ಹುಯಿ$_1$: ೧. ಇವನು ... ದಾರಿಯನ್ನು ಕಾದು ಬಂದವರನ್ನು ತಲೇ ಹುಯಿದು ಅವರ ಹತ್ತಿರ ಇದ್ದುದನ್ನೆಲ್ಲಾ ಕಸಿದುಕೊಂಡು ಹೊಟ್ಟೆ ಹೊರೆಯುತ್ತಿದ್ದನು (ಬೀತೀಸಂ. XII, ೦೨). ಹುಯ್ಯು$_1$: ೧. ಈ ಕೋಲನ್ನು ಹುಯ್ಯುವಾಗ ವೇಗಕ್ಕೆ ಮತ್ತು ಬಿರುಸಿಗೆ ಪ್ರಾಧಾನ್ಯ ಹೆಚ್ಚು (ಕಬೀಕೋ. I, ೭೦೬). ೨. ಆ ದೊರೆಯು ಇವಳ ತಲೆಯನ್ನು ಹುಯ್ಯುವ ಹಾಗೆ ಚಂಡಾಲನಾದ ವೀರಬಾಹುವಿಗೆ ಆಜ್ಞಾಪಿಸಿದನು (ಬೀತೀಸಂ. IX, ೨೯). ಹೊಯ್$_1$: ೧. ಬಾಯೆದ್ದು ಬಯ್ಯಲಾಱೆ ಕಯ್ಯ ಎದ್ದು ಹೊಯ್ಯಲಾಱೆ (ಬಸವಕ್ಕ. ೬೨); ಬಸುಱಂ ಹೊಸೆದು ಹೊಯ್ದು ನೆಲನಂ ತಿರುಗಿ (ಶಿಬರ. ದೀ. ೦೮-೯); ಒಲೆದು ಕೇಸರಿ ಹೊಯ್ದುಪೋಲವ್ವಳಿಸಿ ಕರ್ಣನ ಹಯರಥವ ನಪ್ಪಳಿಸಿ ಮರಳುವ ಲಾಗಿನಲಿ ಖಂಡೆಯವ ಖಂಡಿಸಿದ (ಕುಮಾವ್ಯರ್ತ್ರೀ. ೬-೫೦). ೨. ಮೆಯ್ದೋಱೆ ಬುದ್ಧಿವೇಳ್ವರಸು ನಂಟರ್ಕಳಂ ಹೊಯ್ದು ನಿಕ್ಕಡಿಯಾಗೆ (ಇಹರ. ದೀ. ೯೦-೬); ಸಾವಿರಕುಱಿಯ ಹೊಯ್ದರು ಪೂಜಿಸಿದರಾ ಚತುರ ಚಂಡಿಕೆಯ (ಸಂಕಕ. ೦೭-೦೦೦); ಮದದಂತಿಗಳ ಸೊಂಡಿಲ ಹೊಯ್ದು ಸುಭಟರ ಸದೆದರೇವೇಳ್ವೆನದ್ಭುತವ (ಸಂಪಪ. ೩-೭೮). ೩. ಸತಿಯರು ಭೂಪನಿರವ ಕಂಡುರಿ ಹೊಯ್ದು ಹೂಗಣೆಗಳಂತಿರ್ದರು (ಹಕಕಾ. ೮-೭೯). ೫. ಹೊಯ್ ಡಂಗುರವನವಂ ಹೊಱಗು ಹೊಱಗೀ ಸಭೆಗೆ ಹೊಯ್ ಡಂಗುರವನಾವನಾದೊಡಂ ಹೊಱಗೆಮಗೆ (ರಾಜಶೇ. ದೀ. ೭೯-೯); ಹಲಾಯುಧನು ತಾಳವಂ ಹೊಯ್ದನು (ಬಕಪು. ೩೭-೯೯). ೬. ಹೊಯ್ವಳ್ಳಿಗಳ ಮುನಿಜನವ ಕಂಡರು ಪಾಂಡುನಂದನರು (ಕುವ್ಯಾಕ. ೨೨-೨೨); ಕಡಲಲ್ಲೆ ಹೊಯ್ವಂತೆ ಸಿಂಧು ಕಂಪಿಸಿತು (ಬೋಹಕ. ೨-೭). ೯. ಗಂಗೋಜಂ ಹೊಯ್ದ ಶಾಸನಂ (ಎಕ. V, ಹಾಸನ. ೩೮-೩೮; ಸು. 1000 ?); ಆಸ್ಕಂದದೇವರು ಬರೆದ ಶಾಸನ ಕೇತೋಜ ಹೊಯ್ದ (ಸೌಇಇ. IX-i, ೨೦೫-೨೭; 1122). ೧೦. ನಾಳೆ ಹಗೆವನ ಹೊಯ್ವೆನೆಂಬುದ್ಬಾಳುತನ ವಿನ್ನೊಮ್ಮೆ ಭೂಪತಿಯೋಲೆಗಾತಿಯರಿದಿರಲಾಡಿದ ಭಾಷೆಯಿನ್ನೊಮ್ಮೆ (ಕುವ್ಯಾರ್ತ್ರೀ. ೯-೯೩). ೧೨. ಕುಟ್ಟು; ಜಜ್ಜು: ಅಱಿಯದವರೊಡನೆ ಸಂಗವ ಮಾಡಿದರೆ ಕಲ್ಲ ಹೊಯ್ದು ಕಿಡಿಯ ತೆಗೆದುಕೊಂಬಂತೆ (ಮಹಾದೇ. ಶ. ೬೮-೦೭೦). ಹೊಯಿ$_1$: ೧. ಅರಗಿನ ಪುತ್ಥಳಿಯನುರಿಯ ನಾಲಗೆ ಹೊಯಿದು ಮಾತಾಡುವ ಸರಸ ಬೇಡ (ಬಸವ. ೬೬೦ ೮); ಮುಂದೆ ತ್ರಿವಿಧಮಲವಿದೆ ಆಸೆಯ ಕಂಳಿ ಆಳವಿದೆ ಎಡ ಬಲದಲ್ಲಿ ರೋಷ ಕಾಮಸ ವೆಂಬ ಹೊಯಿಲು ಹೊಯಿವುತ್ತಿದೆ (ಸರ್ವಪ. ೮೦-೯೯೯); ಶಿಶುಗಳನು ಖಳ ದುರಾತ್ಮಕ ಕಂಸ ತಾನಾಗಳು [ಭರದಿ ಬಂ]ದತ್ತಲೊಯಿದತಿಮುಳಿದು ಶಿಲೆಯೊಳಗಸಗವೊಯಿಲನು ಹೊಯಿದು ಮಿಗೆ ಕೊಂದ (ಸಾಳ್ವಭಾ. ೨೦-೩). ೫. ಹೊಯಿದ ಹೊಱಗೆ ಕುಣಿದಾಡುವರೆಲ್ಲ ಹಾಡಿದ ಗೀತಕ್ಕೆ ತಲೆದೂಗುವರೆಲ್ಲ (ಸಮೂಪ. ೬-೨೩); ಜಡರುಗಳಿರಾ ತೊಲಗಿ ಬೋ ಎನುತಢಗಡಿಗೆ ಜಯಘಂಟೆಯನು ಹೊಯಿದು (ಬಸಪು. ೨೦-೧೦). ೯. ಯಿಾ ಶಾಸನವ ಹೊಯಿದ ಹುಲಿಯೂರ ಸೋಮನಾಥನ ಮಗ ಅಲೋಜಗವುಡಗಳ ಒಪ್ಪ (ಎಕ. XII, ಕುಣಿಗ. ೦೦೮-೨೩; 1429); ಶ್ರೀ ಶಾಸನವ ಹೊಯಿದಾತ ಹೊನ್ನಹಲಿಗೆಯ ಮಗ ಕರವೀರಯ್ಯ (ಎಕ. XI, ಚಿತ್ರದು. ೦೫-೨; 1605). ೧೩. ಒಪ್ಪಿಕೊಳ್ಳು; ಅಂಗೀಕರಿಸು; ಸಮ್ಮತಿಸು: ನೀನಿಕ್ಕಿದ ಜೂಜಂಗೆ ಹೊಯಿದು ಗೆದ್ದ ಸಿರಿಯಾಳ (ಬಸವ. ೭೭೯). ೧೪. ಕಾಳಗ ಮಾಡು: ಕರೆಕರೆದು ಮೂದಲಿಸಿ ಕಡುಹಿನ ದುರುಳರುಬ್ಬಿನ ಮೇಲೆ ಹೊಕ್ಕುಬ್ಬರಿಸಿ ಹೊಯಿದರು ಕಾದಿ ಕೊಂಡರು ಕಾಲನರಮನೆಯ (ಕುವ್ಯಾಭೀ. ೯-೨೮). ಹೊಯ್ಯು$_1$: ೧. ತಾನೋವಿ ಮಿಾಯುತ್ತಿರಲು ನಿನ್ನಯ ತೀವ್ರ ತೆರೆಗಳಲಿ ಓವೆನುತ ಹೊಯ್ಯಲಿಕೆ ನಿನಗೆಯು ನಾವು ನುಡಿದೆವು (ಸಂಕಕ.

೧೨-೨೯); ಚಿತ್ರಜಾ ಕತ್ತಿಯುಂ ಕಿತ್ತುಕೊಂಡೆತ್ತಿ ಹೊಯ್ಯುತ್ತೆ ಬರಲು (ಕೈಬಿಶಾ. ೨೬-೬); ಆ ಅಂಗಿಯನ್ನು ದೊಪ್ಪನೆ ಹಾಸುಗಲ್ಲಿಗೆ ಹೊಯ್ಯುತ್ತಾನೆ (ದೇಕವ್ಯ. ೪೦). ೫. ಹೊಯ್ಯೋ ಡಂಗುರವ ಜಗದಯ್ಯನಯ್ಯ ಶ್ರೀಹರಿಯಲ್ಲದಿಲ್ಲವೆಂದು (ಶ್ರೀರಂದ. ೨-೨೦ ಪಲ್ಲವಿ); ತಪ್ಪದೆ ಗಳಿಗೆಗೊಮ್ಮೊಮ್ಮೆ ಭೇರಿಯ ಹೊಯ್ಯುತಿಪ್ಪುದದೊಂದು ಬಾಗಿಲೊಳು (ಮೋಹತ. ೨೦-೬೦). ೬. ಥಗೆ ಹೊಡೆದಳ್ಳ ಹೊಯ್ಯುತೆ . . . ನಾಯಿಗಳಡಸಿದುವೆಡಬಲದೆ (ಮೋಹತ. ೦೯-೦೪).

[ದೇ.॥ ಮಲ. ಪೊಯ್ಯು; ಕೊಡ. ಪೊಯ್; ಕೋತ. ಪೊಯ್, ಒಯ್]

**ಪೊಯ್₂**, ಹುಯ್₂, ಹುಯಿ₂, ಹುಯ್ಯಿ, ಹುಯ್ಯು₂, ಹೊಯ್₂, ಹೊಯಿ₂, ಹೊಯ್ಯಿ, ಹೊಯ್ಯು₂ (ಕ್ರಿ). ಪೊಯ್ದು₂, ಹುಯ್ದು₂, ಹೂದು, ಹೊಯ್ದು₂ (ಭೂತಕೃ). ೧. ಸುರಿ; ಎರೆ: ಪೊಸವುಣ್ಗಳೊಳ್ ಪೊಯ್ ಮುಱುಗುವಿನಂ ಲೋಹವಾರಿಯುಂ ಮುಱುಗುವಿನಂ (ಶಬ್ದ್ಮಣ. ೦೨೬-೬); ಮಣಿಮಯಕುಂಭದಿನಂದು ಪೊಯ್ದುಳೊರ್ವಳ್ ವಿದಳಿತಪಂಕರುಹವದನೆ ಕುಂಕುಮಜಳಮಂ (ಕಾದಂಪೂ. ೬೬); ಮದವಶೀಕರಣಶೃಂಗಾರರಸಮಂ ಪೊಯ್ವಂತೆ ಕಸ್ತೂರಿವಾರಿಯಂ ಪೊಯ್ದುಂ (ಕುಸುಪು. ೫-೦೫೫ ವ). ೨. ವರ್ಷಿಸು; ಕರೆ: ನೆಲನಱಿದೂಡುವ ಪೊಱನೀರಲಂಬಿನಿ ಪದಕೆ ಪೊಯ್ವ ಮಱನೀರ್ (ಶಬ್ದಮ. ೬೨೬ ವ್ಯಾಖ್ಯಾ). ೩. ನೆಡು; ನಾಟು: ಅಗೆಯಂ ಪೊಯ್ವರ್ ಸೊಡರಂ ಪೊತ್ತಿಸುವರ್ ಸತ್ತೆಡೆಯೊಳ್ ತವಗುಂಜಿ ಭೀತಿಯಿಂದ ಮೂಢರ್ (ಸಶಾಶ. ಅನುಬಂ. I, ೬೭೯-೨೯); ಪೊಸಬೆಳ್ಳಿದಾವರೆಗಳಾವೆಡೆಯೊಳ್ ನಡೆವಲ್ಲಿ ಪೊಯ್ದ ಪೂಗುಡಿ ಗಡ (ಕದ್ಯಕಾ. ೦೯೬); ಗುಡಿಯಂ ಪೊಯ್ದಾನೆಯ ಪೊಂದೊವಲಿಂ ದುಡಿದ ಪತಾಕಾಪಟಸಂತತಿಯಿಂದೆಡೆವಱಿಯದ ಸರವತಿಯಂ ಬಿಟ್ಟು (ಜಯಕಾ. ೭-೨೯). ೪. ಅಚ್ಚಿಗೆ ಹಾಕು; ಎರಕಕ್ಕೆ ಹಾಕು: ಸುವರ್ಣಮನೊರೆದುಂ ಕಡಿದುಂ ಕಾಸಿಯುಂ ಪೊಯ್ದುಂ ನೋಡಿ ಪರೀಕ್ಷಿಪಂತರ್ ಪರೀಕ್ಷಿಸಿಕೊಳ್ವಂತೆ (ಧರ್ಮಾಶ. ೦೦-೬೯ ವ). ೫. ಸೂಸು; ಎರಚು; ಚಿಮುಕಿಸು; ಸಿಂಪಡಿಸು: ಅಗಳಂಗರಾಜಂ . . . ದುಕೂಲಾಂಬರದೊಳಿಂದಾಗಿ ಚಲ್ಲಣಮನುಟ್ಟು ಪುಡಿಗತ್ತುರಿಯ ತಲೆಯೊಳ್ ಶೀವೆ ಪೊಯ್ದು (ಶಾಶಪು. ೦೨-೦೦೯ ವ); ಕಣ್ಣೊಳ್ ಮಳಲಂ ಪೊಯ್ದುಟ್ಟುದಂ ಕೊಂಡರೆಂಬಂತೆ (ಧರ್ಮಾವ್ಯ. ೯-೨೦೬); ಕೆಮ್ಮನೆ ಕೈಗಾದಿರದೋವದುಪ್ಪನೊಲೆಯೊಳ್ ಪೊಯ್ವಂತೆ ಪಾಱೀಱ ದುರ್ಜನನಂ ಬಯ್ವುದು ಬಯ್ದೊಡಲ್ಲದವನಂ ಪೇಱ ಭಾವಿಸಲ್ ಬರ್ಕುಮೇ (ಸೂಕ್ತಿಸು. ೦-೬೨). ೬. ಬೀಸು; ತೀಡು: ಕತ್ತುರಿಯ ತಗುಳ್ದು ಪೊಯ್ವ ಸೊವಡಾ ಸೊವಡೊಳ್ ಕಡುಸೊರ್ಕು ಸೊರ್ಕಿಗಾವರಿಸುವ ತುಂಬಿ ಚೆಲ್ವಸೆಯೆ ಕಣ್ಗೆಸೆದತ್ತು ಖಗೇಂದ್ರನೋಲಗಂ (ಅದಿಪು. ೨-೫). ೭. (ದಾನವಾಗಿ) ಕೊಡು; ನೀಡು: ಪನ್ನಿರ್ವ್ವರಾ ಏಟ್ವರಾ ಪೊಯ್ದು ಧರ್ಮ್ಮಮಿದೊವ್ ಕಡಿಸಿದೊನ್ ಪಞ್ಚಮಹಾಪಾತ[ಕ]ನಪ್ಪೊನ್ (ಎಕ. IV, ಕಾವುರಾ. ೬೬-೦೦ ; ಸು. 750) ; ಈ ಎನೆತುಂ ಜಡಿಯಕ್ಕೆ ಪೊಯ್ದೋದು (ಎಕ. IX, ನೆಲಮಂ. ೬೦-೦೨೬; 797) ; ಮನೆ ತುಂಬಿದ ಪೊನ್ನಂ ಪೊಯ್ದು ಮನಂ ಶೀವಿದ ಪರಿಣಾಮತೆಯಂ ಕೊಟ್ಟು ಅವರಂ ಕಳುಪಿ (ಪಂಪರ. ೨-೪೯). ೮. ಹೊಮ್ಮಿಸು; ಉಂಟುಮಾಡು: ಮದನನಾಜ್ಞೆಗಳ್ಪದರ್ ಮೋಹಿಗಳ ಕುಲಕೆ ಹೊಱಗೆಂದು ನೂಪುರರವದೆ ನಾದಮಂ ಪೊಯ್ವರಂಗನೆಯರಲ್ಲಿ (ಶಬ್ದರಾ. ೯-೪೦). **ಹುಯ್₂**: ೧. ಆಜ್ಯ ಹುಯ್ದರಾಗುವುದಿಲ್ಲ (ಕಾಬಿಕಾ. ೬). ೨. ವೈಡೂರ್ಯಮಣಿಯ ಬೆಳ್ಸರಿ ಹುಯ್ಯೆ (ಸಮ್ಯಕೌ. ೭-೬೯); ದೈವಕೆರಗಳು ತನ್ನ ಪತಿಗೆರಗು ಶೀಳುವಳು ಅಂಥವಳು ಹುಯ್ಯೆನಲು ಮಳೆ ಹುಯ್ವುದು (ಶುಜಕೌ. ೨೫) ೫. ಅಕ್ಕವ್ವೇ ಗಂಗೇ ದಡದಲ್ಲಿ—ಸರಸತಿಯು ಅಕ್ಕೀ 'ಹೂದ'ವಳಾ ಕರೆತನ್ನೀ (ಹುಟ್ಟಪ. ೦೭೬). **ಹುಯಿ₂**: ೧. ಒಮ್ಮಾನ ಹಾಲ ಹುಯಿದದನು ಸಟ್ಟುಗದಿ ತೊಳಸಿ (ಸೂತಕಾ. ೦-೪೦). **ಹುಯ್ಯಿ**: ೧. ಆ ಪಾತ್ರೆಯ ತುಂಬ ನೀರನ್ನು ಹುಯ್ಯಿ (ರೂಢಿ). **ಹುಯ್ಯು**: ೧. ನೀರ ಹುಯ್ಯೋಳವಳಿ ಹಣ್ಣು ಮೆಲ್ಲೋಳವಳಿ (ಜಾಕದ. ೯೬). ೨. ಹಸ್ತಮಳೆ ಎತ್ತಲಾದರೂ ಹುಯ್ಯುತ್ತೆ (ಗಾದೆ); ಹುಯ್ಯೋ ಹುಯ್ಯೋ ಮಳೆರಾಯ ಹೂವಿನ ತೋಟಕೆ ನೀರಿಲ್ಲ (ರೂಢಿ). **ಹೊಯ್₂**: ೧. ಆವಿಕ್ಷೆ-ಕಾಯ್ದು ಬಿಸಿಯಾಗಿರ್ದ ಹಾಲಿನಲಿ, ಆವುದಾನೊಂದು ಮೊಸರ ಹೊಯ್ದುದಱತ್ತಣಿಂದ ಒಡೆದುದು (ವಾಕಶಾ. ೪) ; ಬೇವಿನ ಬೀಜವ ಬಿತ್ತಿ . . . ಜೇನುತುಪ್ಪವ ಹೊಯ್ದರೆ ಸಿಹಿಯಾಗಬಲ್ಲುದೆ ಕಹಿಯಹುದಲ್ಲದೆ (ಬಸವ. ೬೨೬); ನೀರ ಹೊಯ್ ನಂದಿಸು (ಕೊರಶಾ. ೫-೯-೭೬) ; ಒಡೆದ ಹುಳಿಮಜ್ಜಿಗೆಯ ತಿಳಿಯುಮಂ ಚೆಲ್ಲಿ . . . ಕಡುಗಟ್ಟಿಯಾದುದ ತೆಗೆದು ಮಡಕೆಯೊಳು ಹೊಯ್ದು (ಸೂಶಾ. ೨-೦೬). ೨. ಆರುಗಾಲ ಮಳೆ ಹೊಯ್ದರೂ ಮುತ್ತುಗಕ್ಕೆ ಮೂರೇ ಎಲೆ (ಗಾದೆ) ; ಎಮ್ಮೆ ಮೇಲೆ ಮಳೆ ಹೊಯ್ದ ಹಾಗೆ (ಗಾದೆ). ೩. ಹಾರುವನ ಭಕ್ತಿ ಓಡಿನೊಳಗೆ ಅಗೆಯ ಹೊಯ್ದಂತೆ ಕೆಳಯಿಂಕೆ ಬೇರೂಱದು (ಬಸವ. ೪. ೨೬೭-೫೯೦). ೫. ಗುರು ಲಘುವೆಂಬವರ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಣ್ಬನೆ (ಬಸವ. ೫೬೭) ; ಕಳವಳಿಸುವ ಕಪಿಯ ಭೂತ ಹೊಡೆದು ಬೇಳೂಱ ಘಾಳಿಯೊಳು ನಿಂದು ಧೂಳಿಯ ಹೊಯ್ಯುತ್ತಿದೆ (ಅರವ. ೦೫-೬೨). **ಹೊಯಿ₂**: ೧. ಅವನ ಪುಷ್ಪತೋರಣಂಗಳಿಗೆ ದೇವತಾಸ್ತ್ರೀರು ನೀರ ಹೊಯಿವರು (ಗರಹು. ೨-೦೨-೧) ; ಕಾರ್ಬೋಲಿಕ್ ಆಮ್ಲದ ತೀಕ್ಷ್ಣವಾದ ದ್ರವ ಅಥವಾ ಸೀಮೆಎಣ್ಣೆ ಹೊಯಿವರೆ ಇರುವೆಗಳು ಬಾರದಂತೆ ಮಾಡಬಹುದು (ಅಡುಗೆ. ೫೦). **ಹೊಯ್ಯಿ**: ೧. ಗಿಡಗಳಿಗೆ ನೀರನ್ನು ಚೆನ್ನಾಗಿ ಹೊಯ್ಯಿ (ರೂಢಿ). **ಹೊಯ್ಯು₂**: ೧. ಹಿಟ್ಟನ್ನು ಬೆಂಕಿಯಲ್ಲಿ ಸ್ವಲ್ಪ ಕಾಯಿಸಿ, ಅದಕ್ಕೆ ಕುದಿಯುವ ನೀರನ್ನು ಹೊಯ್ಯಬೇಕು (ಅಡುಗೆ. ೯೪) ; ಧಾರೇ ಹೊಯ್ಯುವಾಗ ಹೇಳುವ ಹಾಡು (ಹುಟ್ಟಪ. ೦೯೨). ೨. ಬೆಳಗ್ಗೆಯಿಂದ ಒಂದೇ ಸಮನೆ ಮಳೆ ಹೊಯ್ಯುತ್ತಿದೆ (ರೂಢಿ). [ದೇ.॥ ತಮಿ. ಮಲ. ಪೊಱ ; ತೆಲು. ಪೋಯು]

**ಪೊಯ್₃**, ಹೊಯ್₃ (ನಾ). ಹೊಡೆತ ; ಏಟು ; ಪ್ರಹಾರ ; ಬಡಿತ : ಒರ್ವಾಯ ಪೊ[ಶಾಕಾಂ. ಪಾ]ಯ್ವ ಪೊಯ್ಗಳಿಂ ನೆಗೆದು ಮುಗಿಲ್ಗಳಿಟ್ಟೆಡೆಗಳೊಳ್ ತಲೆಗಳ್ ತೊಡರ್ದಿರ್ದ ಜೇನ ಪುಟ್ಟಿಗಳನೆ ಪೋಲ್ತುವು (ಶಾಂತಪು. ೦೦-೯೦); ಕುದುರೆಗಳನೊಂದೆ ಪೊಯ್ಯಿಂ ಮದಕರಿಗಳನೆರಡೆ ಪೊಯ್ಯೊಳ್ ಕರ್ಗಂಡಂ ಮಾಡಿದ ಖಡ್ಗಧರರ ಭುಜಬಲಮದೇಂ ನಿಮಿರ್ಚಿದುದೊ (ಗದಾಯು. ೪-೬೦); ಕೀಱುವ ಕುಱ ಪೊಯ್ದನವನ್; ಪೊಯ್ಯೆಡೆಯೆಡೆ ಬಯ್ದುಬಯ್ದು ನಲಿದನವನ್ (ಅಕ್ಕಿಶಾ. ೬೦-೨೦೨). **ಹೊಯ್₃**: ಬಯ್ದು ಬಯ್ಗುಳಂ ಬೇಡುವ ಹೊಯ್ದು ಹೊಯ್ಗೆ ಪುಳಕಾವಳಿ ಮೂಡುವ ಗಂಡು ಹೆಣ್ ತಡಂ ಮಾಡುಗುಂ (ಅಶಾಂತಿ. ೮-೫೧); ಪವನಸಂಭವ ಹೊಯ್ದ ಹೊಯ್ಗಳ ನೆನೆದ ನಿಂದಾತ್ರಿ (ಕೌಶಿಕಾ. ೦೯-೬೨) ; ಖಾತಿಗೊಳ್ಳದ ಮುನ್ನ ಪವನಜನೋತು ಕೊಟ್ಟನು ತನ್ನ ಹೊಯ್ಗಳನು (ಕುವ್ಯಾಕ. ೦೦-೬೬). [< ಪೊಯ್₁]

**ಪೊಯಲ್**, ಪುಯಲ್, ಪುಯ್ಯಲ್, ಪೊಯ್ಲು, ಹುಯಲು, ಹುಯ್ಯಲ್, ಹುಯ್ಯಲು, ಹುಯ್ಲು, ಹೂಯಲು, ಹೂಲಿ₃, ಹೊಯಲು, ಹೊಯ್ಯಲಂ, ಹೊಯ್ಲು (ನಾ). ೧. ಏಟು; ಪೆಟ್ಟು; ಹೊಡೆತ : ವಿಷಯಗಳೆಂಬ ಪೊಯಲ್ಗಳಿಂ ಸಾರಲೀಯದೆ . . . ಸಂಸಾರಮೆಂಬ ಮಹಾನದಿಯಂ ದಾಂಟುವುದು (ಧರ್ಮಾಮೃ. ೬-೨೦೯) ; ವೀಚಿಯ ಪೊಯಲ್ಗಳೆಡೆ ಸಿಲ್ಕುವೆಳಮೀನ್ಗಳಿಂ ವೀಚಿಗಳನೊಡೆದುರ್ಬಿ ಪರಿವ ಬಲ್ಮೀನ್ಗಳಿಂ (ಉದ್ಭಟ. ೬-೮೪). **ಪುಯಲ್**: ೧. ಜನುಗುತ್ತುಂ ಭೋಂಕನೆ ಮಧುಪನಿಕಾಯಂ ಸೋಂಕೆ ಕನ್ನನೇವೈಸಿ ಕರಂ ಕೊನೆವಂತಿರ್ದುದು ವನಪವನನ ಪುಯಲಿಂದೊಲೆವ ಕಂಬುಲತೆ ಸೊಗಯಿಸುಗುಂ (ಕುಸುಪು. ೯-೨೫). ೨. ಹೊಡೆದಾಟ ; ಕದನ ; ಕಾಳಗ :

ಶ್ರೀಕಣ್ಣಯ್ಯ ತುಱುಗೊಣ್ಣಲ್ಲಿ ಪುಯಲ್‌ಗಾಗಿ ತುಱು ಅಟ್ಟಿ ಸತ್ತ (ಎಕ. X, ಶ್ರೀನಿವಾ. ೫೦-೦೦; ಸು. 880 ?). **ಪುಯ್ಯಲ್**: ೨. ತುಱುಪಿನ ಪುಯ್ಯಲೊಳ್ ದೊಮ್ಮರ ಕಾಡವಂ ಸತ್ತು ಸ್ವರ್ಗಾಲಯಕ್ಕೇಱಿದನ್ (ಎಇ. VI, ೦೬೩-೩ ; 780) ; ದಾವರಂಗದ ದೊದಿಪನ್ನಿಗಲಿಯು ಕೆಲ್ಲೂರುಂ . . . ಕರ್ಪೂರ ತುಱುವೇ ನೊಟವಪ್ಪನ ಪರಿ ಬನ್ದು ಹೆಮ್ಮಾಗೆಯ ಪಳ್ಳಿಯೊಳಿಕ್ಕಿ ಕೊಣ್ಡು ಪರಿದ್ಯೆದಿ ಬಲವಮ್ಮನಂ ಮೂದಲಿಸಿ ಮುನ್ದಣ ಪುಯ್ಯಲ ಪಿನ್ದಿಕ್ಕಿ . . . ಮಗುಟ್ದು ಬರುತಿಟ್ಟೊಡೆ (ಎಕ. XII, ತಿಪಟೂ. ೦೦-೮ ; ಸು. 930 ?) ; ಪುಯ್ಯಲ್ಗೆ ವಂದ ಖರ ದೂಷಣರನವರ ಸೇನೆವೆರಸು ಕೊಂದು (ಶಂರಾಪೂ. ೦೦-೨೬ ವ) . ೩. ಸೂರೆ ; ಲೂಟಿ : ನೃಪಬಾಧೆ ಕಳ್ಳರಿಂದಾದ ಪುಯ್ಯಲಗ್ನಿಪ್ರಕೋಪಮುಬ್ಬರದಿಂದಪ್ಪುವ ಸರ್ಗಮೆನಿಪ ವಾರ್ತಾಪ್ರಪಂಚಮಾದಲ್ಲಿ ಕೇಳಬೇಡೋಸಱಿಯಂ (ಲೋಕೋಪ. ೧೨-೫೨). ೪. ಆರ್ತನಾದ ; ಆಕ್ರಂದನ ; ಚೀರಾಟ : ಈ ಪುಯ್ಯಲನಾರಯ್ದು ಬರ್ಪೆನೆಂದು ಭೀಮನನಿರಿಸಿ ಕೊಂತಿ ತಾನೆ ಪೋಗಿ (ಪಂಪಭಾ. ೩-೨೯ ವ) ; ತುಱುವಂ ಕೊಣ್ಡು ಪೆಣ್ದಿರುಡೆಯನುಚ್ಚಿದರೆಂಬ ಪುಯ್ಯಲಂ ಕೇಳ್ದು ಕಡಿಗಣಿಸದೆ ಮಾಚಗಾವುಣ್ಡನಟ್ಟಿ ಮುಟ್ಟಂಜೆ . . . ಸಂಗ್ರಾಮಮುಮಂ ಪರಿಚ್ಛೇದಿಯಾಗಿ ಮಾರ್ಬ್ಬಲದಾಳು ಮೂದಲಿಸಿ (ಎಕ. VII, ಶಿಕಾರಿ. ೯೩-೦೬ ; 1058) ; ಈ ನೆಲನೆಯ್ದೆ ಕಾಯ್ದು ಮತ್ತಮ್ಮು ಮನಟ್ಟಿ ಮುಟ್ಟಿ ಸುಡುತಿರ್ದಪುದೆಂದಿಡುವಂತೆ ಪುಯ್ಯಲಂ ತಮ್ಮ ಕರಾಗ್ರದೊಳ್ ತೊವಲನಾಂತು ನೆಟಲ್ಗೆ ತೊಟಲ್ದವಾನೆಗಳ್ (ಚಾರಪು. ೯-೮೨). ೫. ಗಲಾಟೆ ; ಗದ್ದಲ : ಬಂದ ಕತುಗುದುರೆ ಪೊಲದೊಳ್ ನಿಂದವರಂ ತಿವಿದುಮಕಟ ನೋಡಿರೆ ತಾನಿಂತೆಂದಱಿಯಬಾರದಿದು ಪೊಸತೆಂದೊಮ್ಮೆಯಿ ಪೊಜಗೆ ಪುಯ್ಯಲಾದತ್ತಾಗಳ್ (ಕಬ್ಬಿಕಾ. ೨೯೬) . ೬. ದೂರು ; ಮನವಿ ; ಅಹವಾಲು : ಏಂದರ ಪುಯ್ಯಲಂ ಕರೆದಾಳೋಚಿಸಿ ತಿರ್ದಿ ಸಂತಸಂಬಡಿಸದೆ . . . ಕೆಡಿಸಿದು ನೃಪಸುತನೇ (ಧರ್ಮಾಮೃ. ೨-೫೮) ; ನೀನಾರಯ್ಯಲಾರ್ಪೊಡೆನ್ನ ಪುಯ್ಯಲಂ ಪೇಟ್ವೆಂ (ಜೀವಸಂ. ೨೦-೨೨) ; ಅನಿತುಂ ಗಿರಿಗಳು ಖಾಂಡವವನಮಂ ಹಸಿವೋಗೆ ದೋದು ಮೇಲ್ಕೊತ್ತು ತಿರಲ್ ವನಪಾಲನೀಕ್ಷಿಸಿ ಪರಿದನಿಮಿಷಪತಿಯಲ್ಲಿಗೆಯ್ದಿ ಪುಯ್ಯಲನಿಟ್ಟಂ (ಧರ್ಮಶ. ೩-೫೨). **ಪೊಯ್ಲು**: ೧. ಅಡಿಯಿಂ ಮೇಗಣ್ಗೆತ್ತುವ ಕಡುಗಾಳಿಯ ಪೊಯ್ಲೊಳಿದಱ ನೀರೊಗೆದಪುದು (ಅದಿಪು. ೦೩-೫೨) ; ಪೊಱಮಡುವ ಸಾಪದಕ್ಕರದ ಪೊಯ್ಲಿಂಗೆ ನಡುಗುವಂತೆ ಕೆತ್ತುವ ತುಟಿಯುಂ (ಕಬ್ಬಿಕಾ. ೩೦೦); ಉರಿಯ ಪೊಯ್ಲುಗಳೊಳಂದು ಕಾಲುಡುಗಿ ಬೀಳ್ವ ಬಹುದನುಜರಿಂ ಮನುಜರಿಂ . . . ಪಾಳಾದ ಸಕಲಲೋಕಂಗಳಿಂ ಕಂಗಳಿಂ ನೋಡಲುರಿ ಘನಮಾದುದು (ಕಬಿಪು. ೯೬-೨೬). **ಹುಯಲು** : ೧. ಒಂದು ಹುಯಲಂ ಗಣೇಶ್ವರನೆಯ್ದೆ ಹೊಡೆಯಲು (ವೀಕ್ಕೃತು. ೨-೯-೩೦). ೨. ಕಂಬೆಯನಾಯ್ಕ ಮಗ ಬೋಂಮೆಯನಾಯ್ಕನು ಪೂರ ಹುಯಲಿಕಾಗಿ ಕಾದಿ . . . ಸುರಲೋಕಕೆ ಸಂದಂ (ಎಕ. XVI, ತಿಪಟೂ. ೧೬೦-೦೨ ; 1277) ; ಜನ್ನೆಗುರುಗಳ ವ್ರೂರಳಿಯ ಹುಯಲ ಹರಿದು ಕಾದಿ ತಳ್ತಿಱಿದು . . . ಸರ್ಗ್ಗಪ್ರಾಪ್ತರಾದರು (ಎಕ. VII, ಶಿಕಾಪೊ. ೭೦-೨೩ ; 1237) ; ಹೊಂಗನೂರ ಹುಯಲೊಳಗೆ ಬಿದ್ದನು (ಎಕ. IX, ಚನ್ನಪ. ೦೯೭-೭ ; 1437). **ಹುಯ್ಯಲ್** : ೭. ದಾಳಿ ; ಆಕ್ರಮಣ : ಕಡೆಗಣ್ಣಿಂದಿಸುವಂತೆ ಚಂದ್ರಕರಮಂ ತೆಂಗಾಳಿಯಂ ಜೋಲ್ದ ಪೂಮುಡಿಯಿಂ ರ್ಶೋಽಪಿಸುವಂತೆ . . . ಎಲ್ಲರ ಧೈರ್ಯಮಂ ಮೊಲೆಯ ಬಿಣ್ಪಿಂ ನುರ್ಗಿ ನೂಂಕಲ್ಕೆ ಧೀಂಕಿಡುವಂತಾಡಿದಳುಯ್ಯಲಂ ತರುಣಿ ತಂದಳ್ ಕಾಮನಿಂ ಹುಯ್ಯಲಂ (ಅನಂಪು. ೮-೬). **ಹುಯ್ಯಲು**: ೧. ಇನ್ನಿವನಿಂದಂಗ ಭವನ ಹುಯ್ಯಲು ಬಂದೆನ್ನ ನೋಯಿಸಿ ಕೊಲ್ವುದೆಂದು ಉನ್ನತವಪ್ಪ ಭೀತಿಯೊಳು ನಡುಗುವಂತೆ ಕನ್ನೆಯ ತನು ಕಂಪಿಸಿದುದು (ಶ್ರೀಪಾಲ. ೪-೦೦೫). ೨. ಬೊಂಮಂಣ್ಣನು ದಿವಿಗೆಯ ಹಳಿಯ ಹುಯ್ಯಲಲ್ಲಿ ಸಮರಂಗದಲ್ಲಿ ಕಾದಿ ಸುರಲೋಕಪ್ರಾಪ್ತನಾದ .(ಎಕ. VII, ಶಿಕಾರಿ. ೬೩-೨ ; 1048 ?) ; ಮಹಾಗಜವು ಪ್ರಳಯವಹಲ್ಲಿ ಮಣ್ಣು ಮೊರಡಿ ಕದೆಡಿದುದಿಲ್ಲ . . . ಬಲ್ಲಿದರೆಲ್ಲರು ಕಾದಿ ಮಡಿದಲ್ಲಿ ಹುಂದೆ ಹುಯ್ಯಲಲ್ಲಿದ್ದು ಅಂಜಿದುದಿಲ್ಲ (ಪೋೞಬಸ. ೨೫೦-೬೦೨) ; ಹೊಳಲು ತಲೆಕೆಳಕಾಯ್ತು ಹುಯ್ಯಲು ತಳಿತುದೊಳ ತೋಟಿಯಲಿ (ಕುಪ್ಪಾದ್ರೋ. ೭-೬). ೪. ಧಾರುಣಿಯ ಜನದ ಹುಯ್ಯಲ ನಿಲಿಸಬೇಕೆಂದು ಪಾರದಿಗೆ ಪೊಱಮಟ್ಟು . . . ಗುರು ವಿರೂಪಾಕ್ಷನಂ ಕಂಡನವನೀಶನು (ಹರಿಕಾ. ೫ ಸೂಕಪ) ; ಕೇಳಿದನು ಮುರವೈರಿ ತನ್ನಯ ಮೇಳದೈವರ ಸತಿಯ ಹುಯ್ಯಲ (ಕುಪ್ಪಾಸ. ೦೯-೦೩೦). ೫. ತನ್ನಂಗವ ತಾ ಬಡಿದುಕೊಂಡು ಇದಿರಿನಲಿ ನೋವ ಕೇಳುವನಂತೆ . . . ಹೆಮ್ಮೆಗೆ ಹುಯ್ಯಲಿನಲ್ಲಿ ಸಿಕ್ಕಿ ತನ್ನ ತಾನಱಸಿಕೊಂಡಂತಾಯಿತ್ತು (ಪೋೞಬಸ. ೩೨-೦೩೨) ; ಜಗದ ಹುಯ್ಯಲು ಜಡಿಯಲಭ್ರದಲಗಿದು ಕೌರವಸೇನೆ ಹರುಷದ ಸೊಗಸಿನಲಿ ವ್ಯೆಮಱಿಯೆ ಕೃಷ್ಣಾದಿಗಳು ಕೈಮಱಿಯೆ (ಕುಪ್ಪಾದ್ರೋ. ೦೯-೩೩). ೬. ಅಯ್ಯಾ ಅಯ್ಯಾ ಎನ್ನ ಹುಯ್ಯಲ ಕೇಳಯ್ಯಾ (ಬಸವ. ೯೭); ಅಯ್ಯಯ್ಯೋ ನಿಮ್ಮ ಕರುಣದ ಶಿಶು ಎಂದು ಹುಯ್ಯಲ ಲಾಲಿಸಿರೋ (ಶಿವನೀ. ೦೮೨-೯೦೩); ಸುರರು ದಾನವಬಾಧೆಗಾಱದೆ ಹರಿಗೆ ಹುಯ್ಯಲ ನಿಟ್ಟೊಡವರಿಗೆ ಕರುಣದಲಿ ಮೈದೋಱಿ ನರಹರಿಯಭಯವನು ನೆಗಹಿ (ಕೌಶಾರ. ೦-೦೬). **ಹುಯ್ಲು**: ೧. ತತ್ಪುರಾಂಗವನು ತೆಗೆದಂಗಣಕೆ ಹಲ್ಲಣಿಸಿ ಹತ್ತಿ ಹೊಯ್ದಾ ಚಮ್ಮಟಿಗೆಯ ಹುಯ್ಲಿಗೆ ಕರುತ್ತು ನಭ ಕುಪ್ಪರಿಸೆ (ಸಮ್ಮಕಾ. ೦೦-೬೦); ಅರ ನೋಡಲು ಸುರುಟಿಯ ಕತ್ತಿಗಳ ಹುಯ್ಲು ಧಾರೆಗಿಕ್ಕಡಿಯಾಮವರು (ಕಂಪೂ. ೦೫-೯೯). ೨. ಸೈನಿಕರೂ ತಮ್ಮ ಕತ್ತಿಗಳನ್ನು ಹಿರಿದು ಹುಯ್ಲಿಗೆ ಸಿದ್ಧರಾದರು (ಜಾಂಕಲಾ. ೦೬೯). ೫. ಸಾರ್ವಭೌಮನ ಮನೆಯ ತುರಗವನೋರ್ವ ತಸ್ಕರ ಕೊಂಡು ಬರಲಿಕೆ ನೀರ್ವಹದಿ ಹುಯ್ಲಾಯ್ತು ಬೇಗದಿ (ಸಂಪಶ. ೦೯-೦೩). **ಹೊಯಲು**: ೫. ವಿಾಯಲುಣ್ಣಲಿ ವೀಳ್ಯ ಕೊಳ್ಳಲಿ ಹೀಯಲೊಳ್ಗಲಿ ಕಾಂತೆಯರ ಬಲು ಹೊಯಲನು ಮಾಡಲಿ (ಶಿಭಾಗ. ೦೦-೩೯-೨೯). ೬. ಬಂದಿರ್ದ ಸುರವರರು ಹೊಯಲ ತಂದಿರ್ದ ತನಗಕಟ (ಶಿಭಾಗ. ೮-೫-೦೯). **ಹೂಲ್ಕೆ** : ೨. ತಗ್ಗಿಸಿದರೆಡಬಲನ ಹೂಲಿಯ (ಕೊಲ್ಲಾಪ. ೨೯೦). ೫. ಪುರುಷರ ವಿರುದ್ಧ ವ್ಯರ್ಥವಾಗಿ ಹೂಲಿಯನ್ನೆಬ್ಬಿಸಬಾರದು! (ಬ್ರಹ್ಮಜೀ. ೦೮೯); ಹೂಲಿ ಯಬ್ಬರವು ನಿಲಲು ಇವನ ಹೂಲಿ ! (ಕಂಠಪ. ೦೯-೮); ಇಕೋ ನೋಡು ನಾನೆ ಹೂಲಿ! ಬರಿ ಹೂಲಿ! ವನಮಾಲಿ! (ಕ್ರಾಂಕಶ್ರ. ೦೩-೦೩). **ಹೊಯಲು** : ೨. ವರರೂಪ ಶೌರ್ಯಗಳರಸಿ ಅವರ ಹೊಯಲು ಸಾಹಸಗಳನ್ನು ವರಸಸಿಯಿಂ ಭಜಿಸಿ (ಸೌಗಂಧಿ. ೬೯-೭). **ಹೊಯ್ಯಲು** : ೪. ದೇವತತಿ[ವರಕೆ] ನಾ ದೂತ ಕಳುಹಿದರೆನ್ನ ನಿನ್ನ ಹೊಯ್ಯಲ ಕೇಳ್ದು ಕರುಣದಿಂದ (ತುರಂಗ. ೨-೨೯). **ಹೊಯ್ಲು** : ೧. ಕಾಡೆಮ್ಮೆಯ ಹಾಲ ಊರ ಕೋಣ ಕುಡಿದು ಮತ್ತಾರನು ಲೆಕ್ಕಿಸದೆ ಬಹುಜನರ ನೋಯಿಸಿ ಬಾಹಲ್ಲಿ ಒಂದಾಡಿನ ಬಾಲದ ಹೊಯ್ಲಿಗಂಜಿ ಓಡಿ ಹೋಯಿತ್ತು (ಪೋೞಬಸ. ೦೮೨-೬೮೩) ; ದಟ್ಟೈಸಿದುರಿಯ ಹೊಯ್ಲಿಂಗಾಱದಕಟ ಬಾಯ್ಬಿಟ್ಟು ಪಶುಪ್ರ್ಮಗಪಕ್ಷಿ ನೆರೆದೊಱಲುತಿರೆ (ಸಿದ್ಧರಾ. ೭-೩೦) ; ಕೋಮಲೆಯರ ಕಟಾಕ್ಷದ ಹೊಯ್ಲುಗಳುಕದನೇ ಮಹಾಧೀರ (ಜೀವಂಪ. ೫-೭೯) ; ಉರವಣಿಪ ತೇಜಿಗಳ ಕತುಹಿನ ಖುರದ ಹೊಯ್ಲಲಿ ವಿಲಯಪವನನ ಗರಿಯ ಗಾಳಿಯಲಿ ಹರನ ನಯನಜ್ವಾಲೆ ಪಾರ್ಥಿಯ ಸರಳ ಕಿಡಿಯಲಿ ಪಲ್ಲಟಿಸೆ (ಕುಪ್ಪಾದ್ರೋ. ೫-೨). ೨. ಮಱಹ ಪಡೆಯರು ಘಾಯ ಖಂಡಿಗೆ ತೆಱಹುಗಾಣರು ಹೊಯ್ಲ ಹೋರಟೆ ಹೊಱಗೆ ಬಿದ್ದವು ಕದ್ದವಿಬ್ಬರ ದೃಷ್ಟಿ ಮನಮನವ (ಕುಪ್ಪಾಗ. ೬-೨೭). ೫. ಕೇಣವಿಲ್ಲದೆ ಭಟರ ಹಾಣಾಹಾಣಿ ಮಸಗಿತು ಖಣಿಖಟಿಲ ಹೊಯ್ದಾಣೆಗಳ ಬಿಱುಗಿಡಿಯ ಹಿರಿಯುಬ್ಬಣದ ಹೊಯ್ಲುಗಳ (ಕುಪ್ಪಾಶ. ೨-೦೯). ೮. ಮಿಡಿತ ; ತುಡಿತ :

ಲಲನೆ ಮೂಗಿನೊಳುಸುರನಳ್ಕಿಯೊಳು ಹೊಯ್ಲನುಗುರೊಳು ರಜವನೆದೆಯೊಳಲ್ಲಾಟವಮಂ . . . ರೋಮದೊಳು ಬಲ್ಪನಾರಯ್ದು ಕಾಣದೆ ನೊಂದಳು (ಕಕಣ. ೦೨-೨೬). ೯. ನಿಃಶ್ವಾಸ : ಮೇಲುದುಗುಡದ ಮುಖದ ಚಿಂತೆಯ ಜಾಳಿಗೆಯ ಜಡವುನದಲಿದ್ದರು ಸೂಳು ಸುಯ್ಲಿನ ಹೊಯ್ಲ ನಾಸಾಪುಟದ ಬೆರಳಿನಲಿ (ಕುಬ್ಜಾ.ಅ. ೦೭-೦). ೧೦. ಬಾಜನೆ : ಹಜೆಯ ಹೊಯ್ಲಿನಲವುರಗಿರಿ ತಟತಟಿಸೆ ತೂಳಿದರಸ್ತ್ರಶಸ್ತ್ರದ ಹೊಜೆಗೆಯಲಿ ಹೂಳಿದರು ಹೊಗಿಸಿದರಾನೆಕುದುರೆಗಳ (ಕೊರಚ. ೩-೬-೬) ; ನೆಜೆಯದಂಬರವಿವರ ಗವುನದ ತೆಜಿಹಿಗೆನೆ ತೇರಯ್ಲಿ ತೊಡೆಗಳ ಹಜೆಯ ಹೊಯ್ಲಿನಲೀವರಾ ಪ್ರಸ್ರವಣಗಿರಿಗಾಗಿ (ಕೊರಚ. ೩-೯-೦೭). ೧೧. ಚಚ್ಚಿಕೊಳ್ಳುವಿಕೆ ; ಬಡಿದುಕೊಳ್ಳುವಿಕೆ : ಬಾಯ ಬಸುಜಿನ ನೊಸಲ ಹೊಯ್ಲಿನ ರಾಯನರಸಿಯರರಸನದಿರಲಿ ಹಾಯಿದರು (ಕುಬ್ಜಾ.೯. ೦-೩).

ಹುಯ್ಯಲೇಳಿಸು = ಗೋಳಾಡುವಂತೆ ಮಾಡು : ಜೀಯ ಕಳುಪು ಪಾಳಿಯವನೀಗಳೆ ಹೊಕ್ಕು ಹುಯ್ಯಲೇಳಿಸಿ ತುರುಕರನು ಕಯ್ಯಾರೆ ಕೊಂದು . . . ತೋಜಿದಪೆವು (ಕುರಾಸಾಂ. ೦೯-೩೭). ಹೂಲಿ ಎಬ್ಬಿಸು = ಗಲಾಟೆ ಮಾಡು ; ಗಲಭೆಯೆಬ್ಬಿಸು : ಕೂಗು ಕೇಕೆಗಳಿಂದ ಹೂಲಿ ಎಬ್ಬಿಸಿಕೊಂಡು ಇವರೆಡೆಗೆ ಬಂದು ನಿಂತ ಕೊಡಲಿ ಅವರಲ್ಲಿಯ ಒಬ್ಬನು ತನ್ನ ಕೈಯಲ್ಲಿಯ ಕೊಡಲಿಯನ್ನೆತ್ತಿ . . . ಬೀಸಿ ಒಗೆದನು (ಬಂಗಾಹ. ೬೦). 'ಪೊಯಿಲ್' ಪರಾ.

[ಪೊಯ್$_1$ + — ಅಲ್$_2$. / ತಮಿ. ಪೂಟಲ್; ಮಲ. ಪೂಯಲ್]

**ಪೊಯಶಳ** 'ಪೊಯ್ಸಳ' ನೋ.

**ಪೊಯಸಳ** 'ಪೊಯ್ಸಳ' ನೋ.

**ಪೊಯಿ** 'ಪೊಯ್$_1$' ನೋ.

**ಪೊಯಿನೀರು** 'ಪೊಯ್ನಾರ್' ನೋ.

**ಪೊಯಿಲ್**, ಪುಯಿಲ್, ಪೊಯಿಲು, ಹುಯಿಲು, ಹೊಯಿಲ್, ಹೊಯಿಲು$_1$ (ನಾ). ೧. ಏಟು ; ಪೆಟ್ಟು ; ಹೊಡೆತ: ತೃಣಮುಂ ತನೆಪೊಅದ ಬಟಿಕ್ಕೊಣಗುವುದದಜಿಂದೆ ನರರ ಬಾಟ್ ಲಘುಕಾಲಂ ಹಣಿದದ ಪೊಯಿಲ್ಗೆ ಮೊದಲ್ನಡು ಕಣೆಯೆನ್ನದಿದೆಳವೆ ಜನ್ಮನಂ ಮುಪ್ಪಿನ್ನಂ (ಅವಂಕೃ. ೩-೭೦) ; ಪೊಯಿಲ್ಗಳು ಸರಕು ಮಾಡದೆ ಮುಗ್ಗಿ ಕವಿದರಾ ತ್ರಿಪುರಮಂ ಸುತ್ತಲಾ ದಿವಿಜಭಟರು (ಕಬಪು. ೧೨-೩೦). ಪುಯಿಲ್ : ೨. ಹೊಡೆದಾಟ ; ಕದನ ; ಕಾಳಗ : ಇರ್ಕೆಂಗಿ ಬಸವಪಟ್ಟಣದುರ್ಕರಸಗೊಂದು ನೆವದೊಳಂದಿಂಗೆ ಪುಯಿಲ್ ಪೆರ್ಚಳಿಸಿ ಮಯದಿರೆ ಭೃಶಕರ್ಕಶ ರಟಗೆಯ್ಮೆಪಟ್ಟೆಗೊಡನಡಿಯಿಟ್ಟರ್ (ಕಶಂ. ೨-೯೦) ; ಅತ್ತಲಾ ಪುಯಿಲೊಳ್ ನೊಂದು ಪೊಯಿಲ್ಗಳಂ ಪೊರ್ದಿದ . . . ನೆರೆದೊರೆಗಳ್ (ಕಶವಂ. ೧೧-೦೯). ಪೊಯಿಲು : ೩. ದೂರು ; ಮೊರೆ ; ಮನವಿ : ಬೆಳಪ ಕಿಯ್ಗಳೊಳ್ ತಲೆಗೊಯಿಲು ಮುಳಿದ ಕಡುನಲ್ಲರೊಳೆ ಪೊಯಿಲು (ಬಂಹಂ. ೦-೦೯). ಹುಯಿಲು : ೧. ಆವ ದೆಸೆಗೋಡಲಲ್ಲಲ್ಲಿಗೆ ಬಂದು ಬೀಳುವವು ಹುಯಿಲುಗಳು (ಚೀಕೃತ. ೨-೯-೩೦). ೨. ಮೊರೊಪ್ಪೂರಾ ಗವ್ವಣ್ಣನ್ ಅಚೆಚೆ ಹುಯ(ಲೊ)ಳು ಸತ್ತನ್ (ಕ್ಷ್ಮೆಅಂ. ೦೯೨೬, ೧೦-೯ ; ೧೦ನೆಯ ಶತ) ; ನಿಮ್ಮ ತನ್ದೆ ನಮ್ಮ ಕಾರ್ಯನಿಮಿತ್ತ ಹುಯಿಲಲಿ ಬಿದನಾಗಿ ಈ ಕಾನನು ನೆತ್ತರಕೊಡಿಗೆಯಾಗಿ ಕೊಟ್ಟನು (ಕ್ಷ್ಮೆಅಂ. ೦೯೨೩, ೬೬-೩ ; ?). ೪. ಗಲಾಟೆ ; ಗದ್ದಲ : ತಿಳಿಯದ ಮೂರ್ಖರು ಎಬ್ಬಿಸುವ ಹುಯಿಲು ವ್ಯರ್ಥಾಲಾಪವಲ್ಲದೆ ಮತ್ತೇನೂ ಅಲ್ಲ (ಜಿಪ್ಮಾರ. ೭೩) ; ಇದು ಸುಮ್ಮನೆ ಜನಸಾಮಾನ್ಯರನ್ನು ಹುರಿದುಂಬಿಸಲು ಎಬ್ಬಿಸಿದ ಹುಯಿಲು ಆಗಿದ್ದರೆ, ಅದರ ಬಗೆಗೆ ವಿಶೇಷ ಆಕ್ಷೇಪಣೆಯಿಲ್ಲ (ಹುಕ್ಷಶ್ರ. ೩೨). ೫. ದಾಳಿ ; ಆಕ್ರಮಣ : ಹಾದರದಲ್ಲಿ ಬಂದಿದ್ದು ಹುಯಿಲಲ್ಲಿ ಹೋಯ್ತು (ಗಾದೆ). ಹೊಯಿಲ್ : ೧. ಹೊದ್ದಿಯು ಹೊದ್ದದ ಹೊಯಿಲಸಿದುವು ಜೋಡರ ಸುಸಿಲೊಳ್ (ಉದ್ಭಕೀ. ೯-೦೭). ಹೊಯಿಲು$_1$ : ೧. ದಶಮರುತನ ಹೊಯಿಲಿಲ್ಲದೆ ತಾನೆ ಲಿಂಗದ ಜ್ಞಾನಜ್ಯೋತಿಯ ನಿಲವೋ (ಅಪಹಂ. ೨೨೭-೦೦೫೦) ; ಕೆಲಬರನು ಹೊಜಿಕೈಯ ಹೊಯಿಲಲಿ ಕೆಲಬರನು ಧನುವಿನಲಿ ಗದೆಯಲಿ ಹೊಯ್ದು ಕೆಲಕೆಲರ ಕಲಕಿದನು ಬಲಜಲಧಿಯನು (ಕುಬ್ಜಾದ್ರೋ. ೦೬-೩) ; ಕುಂಭಸ್ಥಲ ಬಿಯಲಂಕುಶದ ಹೊಯಿಲಿಂದ ಬರಿಸುತಿಹರು ಸಾಧನೆಯನಂಕದ ಮದಕರಿಗಳೆಗಲ್ಲಿ ಕೋವಿದರು (ಕುರಾಸಾಂ. ೯-೭೦). ೨. ಏನೆಂಬೆನು ಕುಮಾರರ ಹೊಯಿಲ ಬೆಳೆಸಿರಿಯ (ಕುಬ್ಜಾದ್ರೋ. ೦೭ ೨೯). 'ಪೊಯಿಲ್' ಪರಾ.

ಹುಯಿಲು ಎಬ್ಬಿಸು, ಹುಯಿಲೆಬ್ಬಿಸು = ಗಲಾಟೆ ಮಾಡು ; ಗಲಭೆಯೆಬ್ಬಿಸು : ವಿದ್ಯಾರ್ಥಿಗಳು ಅವನ ಭಾಷಣಕ್ಕೆ ಗುಲ್ಲು ಮಾಡಿ ಹುಯಿಲು ಎಬ್ಬಿಸುತ್ತಿರಲಿಲ್ಲ (ದೂರಶ. ೦೬೭); ನಿಃಸ್ವಾರ್ಥಹೃದಯಿಯಾಗಿ ದುಡಿಯುತ್ತಿರುವಾಗ ಈಗ ಈ ಸ್ವಾರ್ಥದ ಸೆಳಕು ಹುಯಿಲೆಬ್ಬಿಸಬೇಕೆ ? (ರಕ್ತರ. ೯೩). ಹುಯಿಲು ಕೊಡು = ಮಾಟ ಮಾಡಿ ಕೊಲ್ಲಿಸು : 'ಹುಯಿಲು ಕೊಡುತ್ತೇನೆ' (ಮಾಟ ಮಾಡಿ ದೆವ್ವದ ಸಹಾಯದಿಂದ ವೈರಿಗಳನ್ನು ಕೊಲ್ಲಿಸುವೆನು ; ಎಂದರ್ಥ) (ಕಾಪೂರು. ೩೬೩). ಹೊಯಿಲು ಹಿಡಿ = ಜೋಲಿ ತಪ್ಪಿಸಿ ನಿಲ್ಲು ; ಸಮತೂಕದಲ್ಲಿರು : ಕುಂಟೆಯನ್ನು ಹತ್ತಿ, ಎರಡು ಕಾಲುಗಳನ್ನೂ ಮೇಣಿಯ ಆಚೆ ಈಚೆ ಇಟ್ಟು . . . ಬೊಡ್ಡ ಎತ್ತುಗಳ ಹಗ್ಗದ ಆಧಾರದಿಂದಲೇ ಹೊಯಿಲು ಹಿಡಿದು ನಿಲ್ಲಬೇಕಾಗಿತ್ತು (ಕಳುಕು. ೨೬೯). [ಪೊಯ್$_1$ + — ಇಲ್$_3$. / ಕೊಡ. ಪೊಯಿಲ್]

**ಪೊಯಿಲು** 'ಪೊಯಿಲ್' ನೋ.

**ಪೊಯಿಲ್ವೆಜು** (ಕ್ರಿ). ಏಟು ತಿನ್ನು : ಪೊಯ್ದೊಡೆ ಬಜಬಂ ಪೊಯಿಲ್ವೆತ್ತಂತೇನುಮನಜಿಯದೆ ಪರಿಭವಾನಿಲನಿಂ ಶೋಕಾನಲನಿರ್ಮಡಿಸೆ (ಶಂಕಶಾ. ೬-೭೦ ವ). [ಪೊಯಿಲ್ + ಪೆಜು$_1$]

**ಪೊಯಿಸು**, ಪೊಯ್ಯಿಸಂ, ಹುಯಿಸು, ಹೊಯಿಸು$_1$ (ಕ್ರಿ). ೧. ಹೊಡೆಯುವಂತೆ ಮಾಡು ; ಹೊಡೆಯಿಸು : ಎಜಿಗಲಜಿಯದೆ ಜೊನ್ನಕಮ್ಮಗುಟ್ಟಂ ಬರಲಣಮಜಿಯದೆ ತಪ್ಪಂ ಪಿನ್ನಂ ತೆಜಿನನಜಿಯದೆ ಭಂಗಮನಿಕ್ಕಿಯುಂ ಮೂಜಡೆಗಲ್ಲದೆ ಕಟ್ಬಾಡಿಯುಂ ಮುಂಜಿಯೆ ಪೊಯಿಸಿದನು (ಎಕ. II. ೦೩೩-೦೫೦ : ೨೮೭). ೨. ವಾದ್ಯವನ್ನು ಬಾಜಿಸುವಂತೆ ಮಾಡು : ಶುಭದಿನಮುಹೂರ್ತದೊಳುತ್ತರಭರತ ವಿಜಯೋದ್ಯೋಗಮಂ ಭರತರಾಜನಜಿಪಲೆಂದು ವಿಜಯಭೇರಿಯಂ ಪೊಯಿಸಿದಾಗಳ್ (ಅಂಪು. ೦೩-೧೦ ವ) ; ಗುಡಿಯಂ ಕಟ್ಟಿರೊ ಭೇರಿಯಂ ಪೊಯಿಸಿರೊ . . . ಎನುತ್ತುತ್ಸವಂಬಡೆಯುತ್ತಾಕ್ಷಣಮೆಯ್ದಿದಂ ನೃಪವರಂ ತತ್ಪೂಸ್ತಿಕಾಗೇಹಮಂ (ದಕಕು. ೨-೬೦). ೩. ಕತ್ತರಿಸುವಂತೆ ಮಾಡು; ಕಡಿಯಿಸಂ : ಚೆಂಡಿನ ನೆವದಿಂದ ಬಂದು ತನ್ನಬಲೆಯ ಕಂಡು ಪಿಡಿದ ರಾಮನೆಂದು ಕೊಂಡೊಯ್ದು ತಲೆಯ ಪೊಯಿಸಿದನೆಂದವನೆಬೆಗೊಂಡು ರಾಯಗೆ ಪೇಳಿದನು (ಕುರಾಸಾಂ. ೩೭-೩೯). ೪. ಬಲಿ ಕೊಡುವ ಉದ್ದೇಶದಿಂದ ಪ್ರಾಣಿಯ ಆಹುತಿಯನ್ನು ಅರ್ಪಿಸು : ಚೌಷಷ್ಟಿ ಯೋಗಿನಿಯರ್ಗೆ ಬಲಿಗೊಟ್ಟು ಭೂತಸಂತುಷ್ಟಿಯಪ್ಪಂತೆ ಕುಜಿ ಕೋಣಂಗಳಂ ಪೊಯಿಸಿ . . . ಭೂವನುತ್ಕೃಷ್ಟಮುಖಮಿನ್ನು ಸಂಪೂರ್ತಿಯಾದಪುದೆಂಬ ಹೃಷ್ಟತೆಯೊಳರ್ಥಮಂ ಸಾಗಿಸಿದನು (ಕೃಬಿಶಾ. ೩-೭೨). **ಪೊಯ್ಯಿಸು** : ೫. ಕೆತ್ತಿಸು ; ಕೊರೆಯಿಸು ; ಕಂಡರಿಸು : ಬೋಳಸೆಟ್ಟಿ ಎಣ್ಣುಸಿರವಿಮ ಪೊಯ್ಯಿಸಿದ ಕಲ್ಲು (ಎಕ. IV. ಹುಣಸೂ. ೦೦-೦೫ ; 1020 ?). ಹುಯಿಸು : ೩. ಆ ಕೃಷ್ಣರಾಯನ ಮೇಲೆ ದೊಡ್ಡ ತಪ್ಪನ್ನು ಹಾಕಿ ಅವನನ್ನು ತಲೆಹುಯಿಸಬೇಕೆಂದು ಗಂಡನೊಡನೆ ಚಾಡಿ ಹೇಳಿದಳು (ಹೀತಿಶಂ. VII. ೨೦). ಹೊಯಿಸು$_1$ : ೨. ಹಜೆಯ ಹೊಯಿಸಿ ಕಜಿಹ ಪೂಜಿಸುವರ ಮೆಚ್ಚ (ಬಸವ. ೨೦೭). ೫. ಶಾಸನವ

ಹೊಯಿಸಿದನು (ಐಕಿ. ೫೯-೫೬) ; ತಮ್ಮಯಗೌಡನು ನನ್ದನಸಂವತ್ಸರದ ಚಯಿತ್ರ ಶು ೧೫ಲು ಹೊಯಿಸಿದ ಕಲೊರಲೂ ೧ (ಎಕ. X. ಬೌಂಗ. ೬೬-೯; ?) ; ಹೊಲತೀಪುರಸ್ತಳದ(ದ) ಗಉಡ ಅರೆಯಂಣನು ಪಾಲಿಹಿಸಿ ದಂತ್ತ ಶಾಸನ ಹೊಯಿಸಿದರೂ (ಎಕ. VII, ಶಿಕಪೊ. ೦೦೦-೮ ; ?). 'ಪೊಯ್ಸು$_1$' ಪರಾ. [ ಪೊಯ್$_1$ + — ಇಸು$_8$ ]

**ಪೊಯ್ಸ್ಂಡು** 'ಪೊಯ್ಸ್ಂಡು' ನೋ.

**ಪೊಯ್ತು ?** (ನಾ). (?) : ಸ್ವಸ್ತಿಶ್ರೀ . . . ವಿಜಯಸಂವತ್ಸರ ಇಪ್ಪದಾ ಎಣ್ಬನೆಯೊಳು ಶಿವಮಾರ ಕದಮ್ಬೂರ ಆಳೆ ಕದಮ್ಬು × ಭೂಮೊಟ್ಟಿ ಯೋನ್ ಕಟುಕಣ್ಣೇಶ್ವಂಕು ಪೊಯ್ತುಮಮೆನ್ನ ಕಟನಿಕಣ್ಣುಗಂ ಎಟ್ಟು × × × ಪಾಟು ಅಯ್ಯು ಮೂಸೇ ಪೊನ್ನದಳಿ ಅಟಿದನ್ನಟ್ಟರ ಕೊಡಿ ಮೆನೂರುಂ ಆಳ್ವ ಅರಸನು ಮಾಡಿಸುವೋರ್ (ಎಕ. X, ಕೋಲಾರ. ೬-೯ ; 753). [ ? ]

**ಪೊಯ್ದು$_1$** 'ಪೊಯ್$_1$' ಪರಾ.

**ಪೊಯ್ದು$_2$** 'ಪೊಯ್$_2$' ಪರಾ.

**ಪೊಯ್ನಾರ್,** ಪೊಯಿನೀರಂ, ಹೊಯ್ನಾರು (ನಾ). ೧. ಮಳೆಯ ನೀರಿನಿಂದ ಬೇರೆಯಾದ, ಪಾತ್ರೆಗಳಲ್ಲಿ ತುಂಬಿ ಸಸಿಗಳಿಗೆ ಹಾಕುವ ನೀರು : ಅವರಿರ್ವರ ಬೇಟಮೆಂಬ ಲತೆಯ ಬೆಳಸಿಂಗೆ ಪೊಯ್ನಾರೆಱೆ ವಂತೆ ಕೆಯ್ನಾರೆಱೆದು ಬಯಮಂ ಮೆಱೆದು (ಕಂಕಬಾ. ೫-೩೫ ವ) ; ಭೂಪಂ ತನ್ನ ಸಂತಾನವೃದ್ಧಿಗೆ ಪೊಯ್ನಾರೆಱೆವಂತೆ . . . ಕೈನೀರೆಱೆದಂ (ಕಂಂಬಮಾ. ೫ ೦೨೯) ; ಮಱೆಯಿಲ್ಲದೆ ಪೊಯ್ನಾರಿಂ ಬೆಳೆಗುಮೆ ಧರ (ರಕರ್ಮಾಪ್ಮ. ೦-೯೯); ಬಾಷ್ಪಬಿಂದುಗಳಂ ಸೂಸಿ ಲತಾಂಗಿ ಭಂಗಿವಡೆದಿರ್ದಳ್ ಬೇಂಟವೆಂಬೊಂದು ಬಳ್ಳಿಗೆ ಪೊಯ್ನಾರೆಱೆವಂದದಿಂ (೫ಗಿರಿ. ೦೦-೦೦). ೨. ನೀರು ಹಾಕಿ ಕಡೆದ ಮೊಸರು ; ಮಜ್ಜಿಗೆ : "ದಧಿಮಂಥಂ ಮಸ್ತು ವೇಬುದಕ್ಕಂ ಪೊಯ್ನಾರ್" (ವಸ್ತುಕೋ. ೯೨-೩). **ಪೊಯಿನೀರು :** ೧. ಸಂತಾನಾಭಿವೃದ್ಧಿಗೆ ಪೊಯಿನೀರೆಱೆವಂತಾ ಕುವರಗಂದವರು ಸಂತಸ ಮಿಗೆ ಕೈಧಾರೆಯೆಱೆದರು (ಕುಂಡಾಕಾಂ. ೬-೦೩೯). **ಹೊಯ್ನಾರು :** ೧. ಬೇವಿನ ಆ ಗಿಡಕ ಬೆಲ್ಲದ ಕಟ್ಟೆ ಕಟ್ಟಿ ಜೇನುತುಪ್ಪದಲ್ಲಿ ಹೊಯ್ನಾರ ಹಣಿಸಿದರು ಬೇವು ತನ್ನಿಸವ ಬಿಡಲಿಲ್ಲ (ಕರ್ನಾಕ. ೩೫೮). [ಪೊಯ್$_2$+ನೀರ್]

**ಪೊಯ್ಸು** 'ಪೊಯಿಸು' ನೋ.

**ಪೊಯ್ವಡೆ,** ಹೊಯ್ವಡೆ (ಕ್ರಿ). ಏಟನ್ನು ತಿನ್ನು ; ಪೆಟ್ಟು ಹೊಂದು : ಪ್ರಣಯಪ್ರಕೋಪಭರದಿಂದೆಯ್ತಂದು ಕಾಂತಾಜನಂ ಪಿಡಿತಂದೊರ್ಮೆಯೆ ಕಂಕಣಂಗಳುಲಿಯಲ್ ಪೂವಾಲೆಯಿಂ ಪೊಯ್ವಡೆವಂ ಕೇಸರದಾಮಬದ್ಧ ಚರಣಂ ಶೃಂಗಾರಸಾರೋದಯಂ (ಕಾದಂಪೂ. ೩೨೩) ; ನೃಪಂ ಪೆಱರ ಸೂಟ ದಿನಂ ಮಱೆದಿರ್ದು ಸೂಟ್ಟಿಡಂ ಬಂದಳ ಸೂಟಿಗ್ಗ ಬಂದು ಬಿಡೆ ಪೊಯ್ವಡೆವಂ ಬಿಡುತರ್ಪ ಕಣ್ಣ ನೀರ್ತಣ್ಂದಲ ಬಳ್ಮಿಂಚಿನೆ ಪಳಂಚುವ ಲೋಲ ಕಟಾಕ್ಷಮಾಲೆಯಿಂ (ಮಲ್ಲಿಪು. ೩-೯೫) ; ಪೊಡೆಯೆ ಕೃಕವಾಕುನಿನದಂ ಬಿಡದುಣ್ಮುತಿರಲ್ಕೆ ಕೆಯ್ಯ ಬಾಳ್ ಬೀಟ್ಸಿರೆ ಪೊ[ ಹಾಂ. ಹೊ ]ಯ್ವಡ ದಂತೆ ಪಂದೆಯಂ ಪಾವಡರ್ದಂತಾಗಿರೆ ಯಶೋಧರಂ ಬೆಚ್ಚಾದಂ (ಯಶೋಚ. ೩-೬೬). **ಹೊಯ್ವಡೆ :** ಈ ಐದು ಬಿಕ್ಕಳುಗಳು ಮುಟ್ಟಿನವರಿಗೂ . . . ಹೊಯ್ವಡೆದವರಿಗೂ ಮರಣಕ್ಕೆ ಕಾರಣವಾಗಿ ಕಾಣಿಸಿಕೊಂಬುದು (ಸಕವೈ. ೨೯೦). [ ಪೊಯ್$_3$ + ಪಡೆ$_1$ ]

**ಪೊಯ್ವಱು** (ಕ್ರಿ). = ಪೊಯ್ವಡೆ : ದಶಾನನಂ . . . ಪೊಯ್ವೆತ್ತಿಭ ವೈರಿಯಂತೊದಱಿ ಕೆಂಗಱಿ ಮೂಡಿದ ಭೃಂಗಮಾಲೆ ನೀಳ್ಪತ್ತಿನೆ ನೋಡಿದಂ ಮಯತನೂಜೆಯ ಬಾಡಿದ ವಕ್ತ್ರಪದ್ಮಮಂ (ಕಂರಾಮಾ. ೦೯-೦೦೬) ; ಪೊಯ್ವೆತ್ತ ಪಾವಂತ ಪೊರೆದು . . . ಪೊಱಮಟ್ಟನ್ (ಆ. ಸಾ. ೧೨-೨೫೨). [ ಪೊಯ್$_3$ + ಪೆಱು ]

**ಪೊಯ್ಸಳ** 'ಪೊಯ್ಸಳ' ನೋ.

**ಪೊಯ್ಸಣ** 'ಪೊಯ್ಸಳ' ನೋ.

**ಪೊಯ್ಸಳ,** ಪೊಚ್ಚಳ, ಪೊಯಂಶಳ, ಪೊಯಸಳ, ಪೊಯ್ಸಳ, ಪೊಯ್ಸಣ, ಪೋಶಳ, ಪೋಶಟಿ, ಪೋಸಳ, ಪೋಸಟಿ, ಹುಯಸಲ, ಹೊಯಸಣ, ಹೊಯಸಳ, ಹೊಯಿಸಣ, ಹೊಯಿಸಳ, ಹೊಯ್ಸಣ, ಹೊಯ್ಸಳ, ಹೊವಿಸಳ, ಹೋಸಣ, ಹೋಸಲ, ಹೋಸಳ, ಹೋಸಾಲ (ನಾ). ಕರ್ನಾಟಕದ ಒಂದು ಪ್ರಸಿದ್ಧ ರಾಜವಂಶ, ಆ ವಂಶದ ಮೂಲಪುರುಷ ಹಾಗೂ ಆ ವಂಶಕ್ಕೆ ಸೇರಿದ ವ್ಯಕ್ತಿ ಮತ್ತು ಅವರ ರಾಜ್ಯದ ಹೆಸರು ; ೯ ಸುಮಾರು ವರ್ಷಗಳ ಹಿಂದೆ ಸಳನೆಂಬ ಒಬ್ಬ ಶೂರಯುವಕನಿದ್ದನು. ಇವನ ಅಧ್ಯಯನಕಾಲದಲ್ಲಿ ಒಮ್ಮೆ ಹುಲಿಯು ಹಾಯ್ದು ಬರಲು 'ಪೊಯ್ ಸಳ' ಎಂದು ಗುರುವು ಸೆಳೆಯೊಂದನ್ನು ಇವನ ಬಳಿ ಗೆಸೆದು ಆಜ್ಞೆಯನ್ನಿತ್ತನು. ಸಳನು ಹುಲಿಗೆ ಕಿಂಚಿತ್ತೂ ಹೆದರದೆ ಗುರುವಿನ ಆಜ್ಞೆಯನ್ನು ಪಾಲಿಸಿ ಗುರುವು ಕೊಟ್ಟ ಸೆಳೆಯಿಂದಲೇ ಹುಲಿಯನ್ನು ಹೊಡೆದು ಕೊಂದನು. ಈ ಘಟನೆಯಿಂದ ಅವನಿಗೆ ಮುಂದೆ 'ಪೊಯ್ಸಳ' ಎಂದೇ ಹೆಸರಾಯಿತಲ್ಲದೆ ಇವನು ರಾಜ್ಯವೊಂದನ್ನು ಕಟ್ಟಿ ಪ್ರಸಿದ್ಧನಾದ ನಂತರವೂ ಇದೇ ಹೆಸರು ಇವನ ಮನೆತನಕ್ಕೂ ಉಳಿದು ಬಂದಿತೆಂಬ ಪ್ರಸಿದ್ಧವಾದ ಕಥೆಯಂ ಶಾಸನಗಳಲ್ಲಿ ಸಿಗುತ್ತದೆ. ಇದಕ್ಕೆ ಚಾರಿತ್ರಿಕ ಆಧಾರಗಳೇನೂ ಇರುವಂತಿಲ್ಲ. ಬಹುಶಃ ಇದಂ ಕಾಲ್ಪನಿಕವಿದ್ದರೂ ಇರಬಹುದು : ಪೊಯ್ಸಳರಾಜ್ಯದ ಮೂಳಸ್ತಂಭಮಿದೆನಿಸಿದ . . . ಚೈತ್ಯಾಯತನದ್ವಯಂಗಳಂ . . . ಮಾಡಿಸಿ (ಎಕ. IV (R), ಹುಣಸೂ. ೦೬-೩೯; 1124) : ಶ್ರೀವಿಷ್ಣುವರ್ಧನ ಪೊಯ್ಸಳ ಶ್ರೀವೀರನಾರಸಿಂಹದೇವರ್ (ಪ್ಮಆಂ. ೦೯೯೯, ೨೨-೫ ; 1124). **ಪೊಚ್ಚಳ :** ಭುಜಬಲವೀರಗಙ್ಗ ಪೊಚ್ಚಳ ಜಗದೇಕಮಲ್ಲ ಶ್ರೀನರಸಿಂಹದೇ[ವ] (ಎಕ. IV (R), ಕೊಳ್ಳೇಗಾ. ೬೭-೦೦ ; ಸು. 12ನೆಯ ಶಕ). **ಪೊಯಂಶಳ :** ಶ್ರೀಮನ್ಮಹಾಮಣ್ಡಳೇಶ್ವರ ಪೊಯಶಳ ಬಿಟ್ಟಿದೇವನ ದಣ್ಣಾಯಕ ಬೊಪ್ಪಣಸೆಟ್ಟಿ ಬರಲು . . . ಬಮ್ಮಯ ನಾಯಕಂ ಸುರಲೋಕಪ್ರಾಪ್ತನಾದ (ಎಕ. VII. ಶಿವಮೊ. ೦೨-೫ ; 1120). **ಪೊಯಸಳ :** ಪೊಯಸಳ ಶ್ರೀವೀರಬಲ್ಲಾಳದೇವರಸರು ಪ್ರಿಥ್ವೀರಾಜ್ಯಂಗೆಯುತ್ತಿರೆ (ಎಕ. IV (R), ಚಾಮರಾ. ೦೫೦-೨ ; 1335). **ಪೊಯ್ಸಳ :** ಪೊಯ್ಸಳ ಶ್ರೀವೀ[ರ]ನಾರಸಿಙ್ಗದೇವನ್ ಪೃಥಿವೀರಾಜ್ಯಮ್ ಪಣ್ಣ (ಎಕ. IV (R), ಕೊಳ್ಳೇಗಾ. ೯-೦ ; 1224). **ಪೊಯ್ಸಣ :** ಸಳಿಯಂ ಪುಲಿಯಂ ಪೊಯ್ಸಳಯೆನೆ ಪೊಯ್ದುದಱಿಂ ಪೊಯ್ಸಣವೆಸರವನಿಂದ ವಾದುದು (ಪ್ಮಆಂ. ೦೯೯೦, ೩೩-೫ ; ಸು. 1110). **ಪೋಶಳ :** [ತ್ರಿ]ಭು[ವ]ನ ಪ್ರತಾಪಚಕ್ರ[ಬ]ವ[ತ್ರಿ] [ಪೋಶಳದೇ]ವನ್ (ಎಕ. IV (R), ಚಾಮರಾ. ೦೫೬-೨ ; ಸು. 11ನೆಯ ಶಕ). **Δಪೋಶಟಿ :** ಪ್ರತಾಪ ಚಕ್ರವತ್ತಿ ಪೋಶಟ ಶ್ರೀವೀರಸೋಮೆಶ್ವರದೇವನ್ (ಎಕ. III (R), ಗುಂಡ್ಲುಪೇ. ೭೦-೯ ; 1224). **ಪೋಸಳ :** ಸ್ವಸ್ತಿಶ್ರೀಪ್ರತಾಪಚಕ್ರವತ್ತಿ ಪೋಸಳ ಶ್ರೀವೀರನಾರಸಿಙ್ಗದೇವನ್ (ಎಕ. IV (R), ಎಳಂದೂ. ೦೫೬-೨ ; ಸು. 12ನೆಯ ಶಕ); ಸ್ವಸ್ತಿಶ್ರೀ ಪೋಸಳ ಸೋಮಿಸುರದೇವನ್ (ಎಕ. IV (R), ಕೊಳ್ಳೇಗಾ. ೯೩-೦ ; 1237). **Δಪೋಸಟಿ :** ಶ್ರೀ ಪೋಸಟ ವೀರವಲ್ಲಾಳದೇವನ್ (ಎಕ. IV (R), ಚಾಮರಾ. ೨೯೬-೦ ; 12ನೆಯ ಶಕ). **ಹುಯಸಲ :** ಹುಯಸಲ ನಾಡಿಗೆ ಸಲುವ ಕೊತ್ತಾಗಾಲಕೆ ಸಲುವ ಉಪಗ್ರಾಮ ಹೊರವುಳಲಿಪುರ ಗ್ರಾಮವನು . . . ಕೊಟೆವಾಗಿ (ಎಕ. III (R), ಹೆಗ್ಗಡ. ೦೬-೯ ; 1669). **ಹೊಯಸಣ :** ಶ್ರೀಮತುಹೊಯಸಣಚಕ್ರವರ್ತ್ತಿವಿನಯಾದಿತ್ಯಾ (ಎಕ. XI, ಚಿತ್ರದು. ೦-೮ ; 1310 ?). **ಹೊಯಸಳ :** ಪ್ರತಾಪಚಕ್ರವರ್ತ್ತಿ

ಹೊಯಸಳ ಶ್ರೀವೀರನಾರಸಿಂಹದೇವರಸರು (ಎಕ. IV (R). ತಾಮರಾ. ೨೨೦-೩ : 1276) ; ಹೊಯಸಳರಾಜ್ಯಾಧೀಸ್ವರ ಶ್ರೀವೀರನಂಜರಾಯ ಒಡೆಯರು (ಎಕ. IV (R). ತಾಮರಾ. ೨೩೬-೬ : 1492). **ಹೊಯಿಸಣ :** ಹೊಯಿಸಣ ವೀರನಾರಸಿಂಹದೇವರ ಬೆಸದಿಂ . . . ಈ ಕಾರ್ಯ್ಯಕ್ಕೆ ತಲೆಗೊಟ್ಟಲ್ಲಿಗೆ ಬಿಟ್ಟವೃತ್ತಿ ತನ್ನ ಮಗಂಗೆ ನಿಲ್ಲಿಸಿದ ವೀರಗಲ್ಲು (ಎಕ. V. ಹಾಸನ. ೩೦-೪ ; 1293 ?) ; ಸ್ವಸ್ತಿಶ್ರೀಮತ್ಪ್ರತಾಪಚಕ್ರವರ್ತ್ತಿ ಹೊಯಿಸಣ ಶ್ರೀ ವೀರಬಲ್ಲಾಳದೇವರ್ಸರು ಸುಖರಾಜ್ಯಂಗೆಯುತ್ತಮಿರೆ (ಎಕ. VII. ಶಿವಮೊ. ೬೯-೦ ; 1313). **ಹೊಯಿಸಳ :** ಸಳನೆಂಬ ಯಾದವಂ ಹೊಯಿಸಳನಾದಂ . . . ಶಶಕಪುರದ ವಾಸಂತಿಕೆಯೊಳ್ (ಎಕ. VI. ಕಡೂರು. ೦೨-೫ ; 1253) ; ಶ್ರೀಮನುಪ್ರತಾಪ ಹೊಯಿಸಳ × × ಬಳ ಶ್ರೀ ವೀರಬಲ್ಲಾಳರು (ಮೈಆಂ. ೧೯೪೬, ೦೦-೨ ; ಸಂ. ೧೩ನೆಯ ಶತ) ; ಹೊಯಿಸಳ ತುಳುವ ಚೋಳ ಚೇರಮ ಪಾಂಡ್ಯ . . . ಕಾಂಬೋಜದೇಶದ ಸಕಲಶರಣರೈತರುತಿರ್ದರು (ಪಶು. ೬-೪೪). **ಹೊಯ್ಸಣ :** ಶ್ರೀಮನುಮಹಾಮಂಡಳೇಶ್ವರನೆನಿಸಿಯಂಗ ಹೊಯ್ಸಣದೇವನಳಿಯಂ (ಎಕ. VII. ಶಿವಮೊ. ೬೪-೯೨ ; 1112 ?) ; ಹೊಯ್ಸಣಶ್ರೀವೀರಭುಜಬಲಬಲ್ಲಾಳದೇವರಸರು (ಎಕ. IV (R). ಹಿಂಯಾ. ೦೯-೩ ; 1338) ; ಹೊಯ್ಸಣ[ಪಾಠಾಂ. ಯಿಸಣ]ದೊಳುದಿ ಸಿರಲು ಭೂಮಿಜಂ (ಮಂಗರಾ. ೬೩-೨೦). **ಹೊಯ್ಸಳ :** ಸಳನೆಂಬ ಶಶಕ ಪ್ರಸಿದ್ಧಪುರದೊಳ್ ವಾಸನ್ತಿಕಾದೇವಿಯಂ ತಳೆದಾರಾಧಿಸುವಾಗಳ್ . . . ಪುಲಿ ಪಾಯೆ ಕಂಡು ಮುನಿನಾಥಂ ಕುಂಚಮಂ ಕೊಟ್ಟು ಪೊಯ್ಸಳಯೆಂದಂ ಬಳಿಕಾಯ್ತು ಹೊಯ್ಸಳವೆಸರ್ತಾಂ ಯಾದವೋರ್ಬ್ಬೀಸರೊಳ್ (ಎಕ. VI, ಕಡೂ. ೯೨-೪ ; 1206) ; ಶ್ರೀಮತು ಪ್ರತಾಪಚಕ್ರವರ್ತ್ತಿ ಶ್ರೀಹೊಯ್ಸಳ ವೀರಬಲ್ಲಾಳದೇವರಸರು ಉಣ್ಣಾಮಲೆಪಟ್ಟಣದೊಳು ಪ್ರಿಥ್ವೀರಾಜ್ಯಂ ಗೆಯುತ್ತಿರಲು (ಎಕ. IX. ಬೆಂಗಳೂ. ೨೦-೪; 1342) ; ಮಾಳವ ಮಗಧ ಕಾಶ್ಮೀರ . . . ಹೊಯ್ಸಳ ಮಲೆಯಾಳದೇಶಂಗಳೊಪ್ಪಿದುವು (ಪೋಹಕ. ೨-೦೪). **ಹೊವಿಸಳ :** ಸ್ವಸ್ತಿಶ್ರೀಪ್ರದಾಪಚಕ್ರವರ್ತಿ ಹೊವಿಸ[ಳ] ಶ್ರೀ ವೀರಬಲ್ಲಾಳದೇವರಸರು (ಎಕ. IV(R). ಕೊಳ್ಳೇಗಾ. ೦೩-೨ ; 1308). **ಹೋಸಣ :** ಹೋಸಣ ಸ್ವಾಮಿಯ ಚಾರದಲಿ ಪೊಕ್ಕು ಹೊಣವಡುವ ಸಾಮನ್ತರ ಗಣ್ಡ (ಎಕ. XII. ತಿಪಟೂ. ೪೦-೦೯ ; 1169) ; ಹೋಸಣ ಗೋವಿಮಸೆಟ್ಟಿಯ ರಾಯನಗ್ರತನೂಜಂ ಬಲ್ಲಗೌಡಂ (ಎಕ. VII. ಶಿವಮೊ. ೪೫-೩೨ ; 1172 ?) ; ಸ್ವಸ್ತಿಶ್ರೀಮತು ಹೋಸಣ ವೀರಬಲ್ಲಾಳು ದೇವ (ಎಕ. VIII. ಸೊರಬ. ೦೯೬-೦ ; 1204). **ಹೋಸಲ :** ಕಾವೇರೀ ತೀರಗೇ ರಾಜ್ಯೇ ಮಹಾಹೋಸಲನಾಡಕೇ ಶ್ರೀರಂಗಪಟ್ಟಣಕ್ಷ್ಮಾಯಾಂ ಬಸುರ ವಾಣಸ್ಥಳೇ ಸ್ಥಿತಂ (ಎಕ. III. ಮಂಡ್ಯ. ೫೫-೯೩ ; 1534). **ಹೋಸಳ :** ವಿಷ್ಣುವರ್ದ್ಧನಪ್ರತಾಪಹೋಸಳವೀರಬಲ್ಲಾಳದೇವರು . . . ಪಿರಿಯ ಬೆಳುಗಲಿಯ ಸರ್ವ್ವಬಾಧೆ ಪರಿಹಾರಾರ್ತ್ಥವಾಗಿ ಧಾರಾಪೂರ್ವ್ವಕ ವಾಗಿ ಬಿಟ್ಟರು (ಎಕ. V. ಬೇಲೂರು. ೦೦೬-೫೦ ; 1173) ; ಶ್ರೀ ಪ್ರತಾಪಚಕ್ರ ವರ್ತ್ತಿ ಹೋಸಳ ಶ್ರೀವೀರನಾರಸಿಂಹದೇವರಸರು ಪೃಥ್ವೀರಾಜ್ಯಂಗೆಯು ತ್ತಿರೆ (ಮೈಆಂ. ೦೯೩೬, ೪೭-೪ ; 1278). **ಹೋಸಾಲ :** ಹೋಸಾಲಬಲಾಲ ಲತಾಲಕ್ಷ್ಮೀಕಂದಸಂದೋಹಮರ್ದನಗಜ (ಮೈಆಂ. ೦೯೨೯, ೬೪-೦೨ ; 1276). [?]

**ಪೊಯ್ಸಳವಮಾರುಗ** (ನಾ). ಒಬ್ಬಾತನ ಹೆಸರು : ಅರಕೆಲ್ಲನ ಮಗ ಅವನ ಮಮ ಪೊಯ್ಸಳ ಮಾರುಗಂ (ಮೈಆಂ. ೦೯೩೨, ೩೭-೫ ; ಸು. 950 ?).
[ಪೊಯ್ಸಳ + ಮಾರುಗ (< ಮಾರಗ) ]

**ಪೊಯ್ಯು**$_1$, ಹುಯ್ಯು$_1$, **ಹೊಯ್ಯು**$_1$ (ಕ್ರಿ). ೧. ವಾದ್ಯವನ್ನು ಬಾಜಿಸುವಂತೆ ಮಾಡು : ಶುಭದಿನನಕ್ಷತ್ರಮುಹೂರ್ತದೊಳ್ ದಿಗ್ವಿಜಯಭೇರಿಯಂ ಪೊಯ್ಸಿದಾಗಳ್ (ಆದಿಪು. ೦೦-೯ ವ); ಪಲತೆಱದ ಪಱೆಗಳಂ ಪೊಯ್ಸಿಯುಂ . . . ಭೇರಿಗಳಂ ತಾಟಿಸಿಯುಂ (ಗದಾಯು. ೬-೦ ವ) : ಪಂಚಮಹಾಶಬ್ದಮನೊಲ್ಲದೆ ಬೇಂಟೆವಱೆಯಂ ಪೊಯ್ಸಿ (ಧರ್ಮಾಮೃ. ೬-೬೩). ೨. (ಡಂಗುರ ಬಾರಿಸುವುದರ ಮೂಲಕ) ಪ್ರಕಟಿಸು; ಸಾರಿಸು : ಗರ್ಭದೊಳಿರ್ದಂತೆ ಅವರ ತಾಯ್ಗೆ ಜೀವಂಗಳಂ ಕೊಲ್ಲ ದಂತಪ್ಪ ಬಯಕೆಯಾಗಿ ಅಭಯಘೋಷಣೆಯಂ ಪೊಟಲೊಳಂ ನಾಡೊಳಂ ಪೊಯ್ಸಿ ಜೀವಂಗಳ್ಗಭಯದಾನಂಗೊಟ್ಟು ಪುಟ್ಟಿದರಪ್ಪುದಱಿಂದವರ್ಗಭಯ ಘೋಷರೆಂಬ ಪೆಸರಾದುದು (ವಡ್ಡಾರಾ. ೪೩-೨೦). **ಹುಯ್ಯು**$_1$ : ೩. ಕತ್ತರಿಸು ; ಕೊರೆಯಿಸು ; ಕಂಡರಿಸು : ಸಟಿಯೋಜನ ಮಾವ ಜಯಿಸೋಜನು ವೀರಗಲ ಹುಯ್ಸಿ ನಿಲ್ಸಿದ ವೀರಗಲು (ಎಕ. III. ಮಳವ. ೦೬-೪; 1381). **ಹೊಯ್ಯು**$_1$ : ೧. ಹರುಷಸ್ವಾಂತದಲಿ ಹೊಯ್ಸಿದನು ಕಮಲಜನಮಲಭೇರಿಗಳ (ತೊರವಾ. ೪-೬-೨೬). ೨. ನಂಬಿಗಿಂಬಿಯ ನಂಬಿ ಗೊಲಿದಿಹ ಶಂಭು ಗಿಂಭು ಸಮಸ್ತಭಕ್ತಾಡಂಬರಕೆ ಹೊಱಹೊಱಗೆನುತ ಹೊಯ್ಸಿದನು ಡಂಗುರವ (ಬಸವಪು. ೨೬-೨೨) ; ಅರಸ ಹದುಳಿಸು ನಿನ್ನ ಸೊಸೆಯರ ಕರೆದು ಸಂತೈಸಕಟ ಹಸ್ತಿನಪುರದ ಗಾವಳಿ ಗಜಬಜಕೆ ಡಂಗುರವ ಹೊಯ್ಸೆಂದ (ಕುಮಾ.ಕ. ೦-೪). ೪. ಪೆಟ್ಟುಕೊಡುವಂತೆ ಮಾಡು ; ಹೊಡೆಸು : ಕಷ್ಟವ ಬಗೆದ ಕೈಕೆಯ ಕಾಳುದೊತ್ತಿರ ಜಗಳದಲಿ ಹೊಯ್ಸಿ [ಪಾಠಾಂ. ಯ್ಯು]ವೆನು ಬಾಯನು (ತೊರವಾ. ೨-೩-೯). 'ಪೊಯಿಸು' ಪರಾ.
[ಪೊಯ್$_1$ + –ಸು$_1$]

**ಪೊಯ್ಯು**$_2$, ಹುಯ್ಯು$_2$, ಹೊಯ್ಯು$_2$ (ಕ್ರಿ). ೧. ಹೊಯ್ಯುವಂತೆ ಮಾಡು ; ಸುರಿಸು : ಚನ್ನಿಗರಂ ಮಸ್ಸಿಸಿಮೆಂದು ಬಡಿದು ಬಾಯ್ತಾವೆ ಪುಡಿಯಂ ಪೊಯ್ಸುವಂ (ಧರ್ಮಾಮೃ. ೨-೬೭). **ಹುಯ್ಯು**$_2$ : ೧. ಮಲ ದೇಹಿಗಳ ದೂತರಿಂ ಹಿಡಿದು ಕೆಡಹಿಸುತ ಘಳಿಲನವದಿರ ಬಾಯೊಳಂ ಹುಡಿಯಂ ಹುಯ್ಸಿ ಮಡಗಳಲೊದೆಸಿ ನರಕದೊಳು ಹಾಯ್ಕುಸುವನಂತಕಂ (ಏಕ್ಕಪು. ೪-೮-೨೮) ; ನಾನು ಅವರ ಹತ್ತಿರ ಹೋಗಿ ಕೈಗೆ ನೀರು ಹುಯ್ಸಿ ಕೊಂಡು ಅವರ ಕೈಯಿಂದ ಚಂಬು ತೆಗೆದುಕೊಂಡ ಮೇಲೆ ಅತ್ತೆಯನೇ . . . ಬೀದಿಬಾಗಿಲಿಗೆ ಹೋದರು (ಕಂಗಾಳ್ಮ. ೦೭೪). **ಹೊಯ್ಯು**$_2$ : ೨. ನೆಡಿಸು ; ಸ್ಥಾಪಿಸು : ಧರಣೀಪಾಲ ಸುಮುಹೂರ್ತದಲಿ ಹೊಯ್ಸಿ ದನುದು ಹೊಱಗುಡಿಯ (ಕುಮಾ.ಶೀ. ೦-೪೩). [ಪೊಯ್$_2$ + –ಸು$_1$]

**ಪೊಯ್ಸೆಂಡಾಡು**, ಹೊಯ್ಚೆಂಡಾಡು (ಕ್ರಿ). ಹೊಡೆದು ಅಥವಾ ಎಸೆದು ಹಿಡಿಯುವ ಚೆಂಡಿನ ಆಟವನ್ನು ಆಡು : ಸಿಡಿಲಂ ನುರ್ಗುವ . . . ಪೆರ್ಗಡಲಂ ಪೀರ್ವ ಕುಲಾಚಲಂದಳೆದು ಪೊಯ್ಸೆಂಡಾಡು ವಾದಿತ್ಯನಂ ಮಿದಿವಾರ್ಪುಳ್ಳ ಗಣಾಧಿನಾಥರೊಡನೇಳ್ತಂದರ್ ಮಹೋ ತ್ಸಾಹದಿಂ (ಶಬಶಂ. ೩-೦೪). **ಹೊಯ್ಚೆಂಡಾಡು :** ತಲೆಯ ಹೊಯ್ ಚೆಂಡಾಡು ತಿನ್ನಿವನೆಲುವನೆನುತೀಟಿಯಲಿ . . . ಹೊಯ್ದರು ಪವನ ನಂದನನ (ಕುಮಾ.ಶ. ೦೦-೫೦) ; ಕುಣಿಯೆ ಕುರುಳು . . . ಮೇಲುದು ನಸು ಜಾಱೆ ಮಣಿಹಾರವಲೆಯೆ ಹೊಯ್ಚೆಂಡಾಡುವ ಬಾಲಗಣಿಕೆಯರೊಪ್ಪಿದರಲ್ಲಿ (ಕುರಾಸಾಂ. ೨೬-೫೦). [ಪೊಯ್ಸೆಂಡು + ಆಡು$_1$]

**ಪೊಯ್ಸೆಂಡು**, ಪೊಯ್ಚೆಂಡು, ಹೊಯಿಸೆಂಡು, ಹೊಯ್ಚೆಂಡು (ನಾ). ೧. ಚೆಂಡನ್ನು ಹೊಡೆದು ಅಥವಾ ಎಸೆದು ಹಿಡಿಯುವ ಒಂದು ಬಗೆಯ ಆಟ : (*). ೨. (ಹೊಡೆದು ಆಡುವ ಅಥವಾ ಎಸೆದು ಹಿಡಿಯುವ ಆಟದಲ್ಲಿ ಬಳಸುವ) ಒಂದು ಬಗೆಯ ಚೆಂಡು : ಮೋಗಣ್ಗೆ ಪಾಱೆ ಮತ್ತೆ ಬೀೞ್ದಂತು ಪೊಯ್ಸೆಂಡಿನಂತೆ ಪಲವು ಸೂಟ್ಸಿಱಿ ಬೀೞ್ದಚ್ಚಜಲಾಱದೆ ನೆಲನು ಕರ್ಚೆ (ಪಸಾರ. ೦೯೪). **ಪೊಯ್ಚೆಂಡು :** ೨. ಅದೆಲ್ಲ ಹಳೇಗಾಲದ ಹಳಸಿದ ಸಂಪ್ರದಾಯಗಳು ಎಂದವನು ಮತ್ತೆ ಮತ್ತೆ ಗಾಳಿ ಊದಿದ. ಅವರೂ ಅದನ್ನು ಕೇಳಿ 'ಪೊಯ್ಚೆಂಡಿ'ನಂತೆ ಉಬ್ಬಿದರು (ಕೈಹಿಕಾ. ೫೪). **ಹೊಯಿಸೆಂಡು :** ೨. ಅಂಜನಾದೇವಿ

ನಿಜಸಖೀವೃಂದದ ನಡುವೆ ಹೊಯಿಸೆಂಡಂ ಚಂದದೆ ಪೊಯ್ವುತಿರಲು (ಅಂಜನ. ೯ ೮೧). **ಹೊಯ್ಸೆಂಡು :** ೨. ಗಂಡನೆಷ್ಟೆಷ್ಟು ಮನ್ನಿಸಿದನಷ್ಟಷ್ಟು ಹೊಯ್ಸೆಂಡಿನಂತುಬ್ಬಿ ಹಾಡುವಳು (ಶರಶ. ೧೦-೬೯). 'ಪೊಡೆಸೆಂಡು' ಪರಾ. [ಪೊಯ್$_1$ + ಸೆಂಡು]

**ಪೊರಕಮಲೆಯ** (ನಾ). ಒಬ್ಬಾತನ ಹೆಸರು : ಮಲ್ಲಯಂ ಊರ ತುಱು ಹುಯಿ(ಲೊ)ಲೊಳು ತುಱುವಂ ಕಟ್ಟಿ ಕಾದು ಸತ್ತು ಸಗ್ಗಿಯಾದಂ ಪೊರಕಮಲೆಯ ಕಲ ನಿಲಿಸಿದೊ (ಪ್ರ.ಕಂ. ೦೯೨೭, ೯೬-೯ ; 10ನೆಯ ಶ೫). [?]

**ಪೊರಕೆ,** **ಪರಕ್ಕೆ** (ನಾ). ಕಸ ಗುಡಿಸುವ ಸಾಧನ ; ಬರಲು : ಪುಸನ್ನಳು ಹಠಾತ್ತಾಗಿ ಪೊರಕೆಯನ್ನು ಕೈಯಲ್ಲಿ ಹಿಡಿದಳು ! (ಕರುಕ. ೦೨೫) ; ಕೈಯಲ್ಲಿದ್ದ ಪೊರಕೆಯನ್ನು ಕೆಳಕ್ಕೆಸೆದು ಆಕೆ ಕೊಠಡಿಯೊಳಕ್ಕೆ ಕಾಲಿಟ್ಟಳು (ಏಕಾಂಗಿ. ೨೯). **ಪರಕ್ಕೆ :** ಆನೆಯ . . . ಬಾಲದ ತುದಿಯ ಕೂದಲುಕುಚ್ಚು ಕಂಡವರು 'ಆನೆ ಪರಕೆಯ ಹಾಗಿದೆ' ಎಂದರು (ಬುದ್ಧ.ಕ. ೬೩) ; ಈ ಪರಕೆಗಳನ್ನು ಉದ್ದವಾದ ಗಳುಗಳಿಗೆ ಕಟ್ಟಿಕೊಂಡು ಛಾವಣಿಯ ಧೂಳನ್ನೂ ಬಲೆಗಳನ್ನೂ ಗುಡಿಸಬಹುದು (ಗೃಹಶಾ. ೦೬೯). [ದೇ. ॥ ತೆಲು. ಪೊರಕ]

**ಪೊರಗಣ** 'ಪೊಱಗು' ಪರಾ.

**ಪೊರಗು** 'ಪೊಱಗು' ನೋ.

**ಪೊರಜಿ** 'ಪೊರಜೆ' ನೋ.

**ಪೊರಜೆ,** **ಪೊರಜಿ,** **ಹುರಜಿ,** **ಹುರ್ಜಿ,** **ಹೊರಜಿ,** **ಹೊರಜೆ,** **ಹೊರ್ಜಿ** (ನಾ). (ಆನೆಯನ್ನು ಕಟ್ಟುವುದಕ್ಕೂ ರಥವನ್ನೆಳೆಯುವುದಕ್ಕೂ ಬಳಸುವ) ದಪ್ಪವಾದ ಹಗ್ಗ, ಸರಪಣಿ ಮುಂತಾದುವು : ಪೊನ್ನೆಯ ಮುಗುಳೆಕ್ಕಾವಳಿ ತನ್ನ ಕೊರಲ್ಗೆಸೆಯೆ ಮಧುಪರುಚಿ ಮದನವಶಾತ್ಮುನ್ನತ ಪೂವಿನ ಪೊರಜೆಯೊಳುನ್ನುನ್ನಂ ಸೊಗಯಿಪಂತೆ ಕಣ್ಗೆಸೆದಿರ್ದಳ್ (ಶಾಂತಿಪು. ೬-೦೭) ; ರನ್ನದ ಪೊರಜೆ ನವಾಂಭೋದಮಾದ್ಯದ್ಗಜಕ್ಕೆಕ್ಕೆದುದೋ ಪೇೞೆಂಬಿನಂ ಕಣ್ಗೆಸೆದುದು ಶಬಲಚ್ಛಾಯೆಯಿಂ ಶಕ್ರಚಾಪಂ (ಶಂಬಾಪು. ೭-೦೯೩) ; ಸರಸಿಜತಂತು ಕಿಂಶುಕದ ಕುಟ್ಮಲವೇಱಿದ ಕಯ್ಯೊಳಂಕುಶಂ ಪೊರಜೆಗಳಾಗೆ (ಅನಂಪು. ೬-೦೯). **ಪೊರಜಿ :** ಪೊರಜಿಯೆ ಪರಿವೇಷವೆಂದಂತೆ ಕೆನ್ನೆಯೊಳಿರದ ಮದವೆ ಲಕ್ಷ್ಮದಂತೆ ಕರದ ತುಷಾರಾಂಬು ಚಂದ್ರಿಕೆಯಂತೆಸೆದಿರೆ ಶಶಿಯಂತಿರ್ದುದಾ ಗಜ (ತ್ರಿ.ಶ.ತಿ. ೨೭-೨೦) ; ರನ್ನದ ಮೊಗರಂಬ ಬೆಳ್ಳಿಯ ಪಕ್ಕರೆ ಚಿನ್ನದ ಪೊರಜಿ ಮೆಱೆಯಲು . . . ಮನ್ನಣೆಯಾನೆಯೆಯ್ದಿದವು (ಕುಮಾರರಾಮ. ೦೦-೨೯). **ಹುರಜಿ :** ಬಸವನ ಆಭರಣದ ಲೆಖ್ಖಾ . . . ೨ ನೂಲುಹಗ್ಗದ ಹುರಜಿ (ಎಕ. XIV. ಸಂಜಿನ. ೨೮೭-೬ನೇ ಕಲಂ ; ಸು. 1849). **ಹುರ್ಜಿ :** ಬಸವನ ಆಭರಣದ ಲೆಖ್ಖಾ . . . ೪ ಕಬ್ಬಿಣದ ಹುರ್ಜಿ ಬಳೆ (ಎಕ. XIV. ಸಂಜಿನ. ೨೮೯-೬ನೇ ಕಲಂ ; ಸು. 1848). **ಹೊರಜಿ :** ಮನವೆಂಬ ಹೊರಜಿಯು ಐರಣಾಂಗಳೆಂಬ ಕಾಲಾಳ್ಗಳಿಂ ಪಿಡಿಸಿ ಸುಬುದ್ಧಿಯೆಂಬ ಭೂಮಿಯಲ್ಲಿ ಆನಂದ ವೆಂಬರಸು ರಥವಂ ನಡೆಸಿ (ತಿಪತಂ. ೨೬೦-೦೨೬೭) ; ಹಿಂಡಿ ಹಿಳಿವ ಕಡಹುವ ಹೊರಜಿ ಹೊಸೆವ ತಿರುಹುವ . . . ರೌರವಂ ಭಯಂಕರವಾದುದು (ಸಿದ್ಧರಾ. ೬-೨೯). **ಹೊರಜೆ :** ಆ ಸಮರಸಂಭ್ರಮದೊಳ್ ಹೊರಜೆ ಯೊಳ್ ಕಾಲ್ಗೋದು ನಿಂದ . . . ಗಜದ (ಅನಂಪು. ೦೯ ೬ ವ) ; ಹೊರಜೆ ಹೊಕ್ಕುಳ ಗಂಟೆ ಡಕ್ಕೆಯು . . . ಐರಿಫಟೆಗಳಿರದೆಯ್ದೆ ತಳರ್ದವು ಕುಲಗಿರಿಗ ಳಂತೆ (ಕುಮುರಾ. ೩-೩೦) ; ಕನಕಘಂಟೆಗಳುಲಿಯೆ ಹೊರಜೆಯ ತನತನಗೆ ಪಿಡಿದಡರಿ ಪೂರ್ವಾಸನದ ಮೆಂಠಣಿಸಿದರು ರಾಜಾರೋಹಕವ್ರಾತ (ಕುವ್ಯಾಲೀ. ೯-೭೦). **ಹೊರ್ಜಿ :** ಜಿನಬಿಂಬಾಂಕಿತ ಅವನೌಲ್ಯರತ್ನನಿರ್ಮಿತ ೨೪ ಘಂಟೆಗಳಂ ಮಾಡಿಸಿ ಅದಕ್ಕೆ ಚಿನ್ನದ ಹೊರ್ಜಿಯಂ ಕಟ್ಟಿಸಿ (ಪುರುಕ. ೨೨೩). [ದೇ. ॥ ತಮಿ. ಪುರಚ್ಚೈ, ಪುರೋಚ್ಚೈ]

**ಪೊರಜೆವಿಡಿ** (ಕ್ರಿ). (ಆನೆಗೆ ಕಟ್ಟಿರುವ) ಹಗ್ಗವನ್ನು ಹಿಡಿ : ಮದೇಭಂಗಳನಾರ್ದು ಬಿಟ್ಟಿಗ್ಯ್ಮವ ನಿಷಾದಿಗ[ಳಟ್]ಯೆ ಪೊರಜೆ[ಗಾಣಂ.ಜ] ವಿಡಿದು ಕೊರಲ ಬಳೆಗಳೊಳೆ ಕಾಲ್ಗೋದು ಪರಿಯಿಸುವ ರಸತ್ತಾರು ಗರುವಂ (ಶಂಕರಾ. ೦೨-೬೦ ವ). [ಪೊರಜೆ + ಪಿಡಿ$_1$]

**ಪೊರಟೆ**$_1$ (ನಾ). ಮೋಸ ; ದ್ರೋಹ : ಪುಸಿಗಂ ಪೊಱ[ರ]ಟೆಗಂ ಮಾಯೆಗಂ ಮಱವೆಗಂ ಕಳವಿಂಗಂ ಕಪಟಕ್ಕಂ . . . ಸೋಱಹಿಂಗಂ ಇಂಬು ಗೊಡದೆ (ಜಶಕಂ. ೬೨-೦೦). [ದೇ. ॥ ತಮಿ. ಪುರಟ್ಟು]

Δ **ಪೊರಟೆ**$_2$ 'ಪೊಟ್ಟರೆ' ನೋ.

**ಪೊರಡು** 'ಪೊಱಮಡು' ನೋ.

**ಪೊರಣೆಮೊಗೆ** (ನಾ). ಒಂದು ಊರಿನ ಹೆಸರು : ಮಾರಿಜವಳಿ ಪೊರಣೆ ಮೊಗೆ ಕಿಟ್ಕಿಟಿ ಗುಡಗತಾಣವ್ ನೊಕ್ಕಿಗೋಡು (ಪ್ರ.ಕಂ. ೦೯೦೬, ೦೦ ; 700). [?]

**ಪೊರತು** 'ಪೊಱತು' ನೋ.

**ಪೊರಪಾಳೆಯ** 'ಪೊಱಪಾಳೆಯ' ನೋ.

**ಪೊರಪು** 'ಪೊರೆಪು' ನೋ.

**ಪೊರಪೊಣ್ಮು** 'ಪೊಱಪೊಣ್ಮು' ನೋ.

**ಪೊರಮಡು** 'ಪೊಱಮಡು' ನೋ.

**ಪೊರಯಿಂಕೆ** 'ಪೊಱಯಿಂಕೆ' ನೋ.

**ಪೊರವಕ್ಕ** (ನಾ). ಒಬ್ಬಾಕೆಯ ಹೆಸರು : ಪೊರವಕ್ಕನುಂ ಸೆಮ್ಬಕ್ಕನುಂ ಪಾಱಯಕ್ಕನ ಕೆಳದಿಯೆ ಪುೞಯಣ್ಣನೀ ಧರ್ಮ್ಮಂ ನಡಯಿಸು × × × (ಎಕ. VIII. ಸಗರ. ೯೩-೦೩; ಸು. 950). [? + ಅಕ್ಕ$_1$]

**ಪೊರವಾರ್** 'ಪೊಱಮಾಱು$_2$' ನೋ.

**ಪೊರವಾರ** 'ಪೊಱಮಾಱು$_2$' ನೋ.

**ಪೊರವಾರು** 'ಪೊಱಮಾಱು$_2$' ನೋ.

**ಪೊರಸು,** **ಹೊರಸು**$_4$ (ನಾ). ಹಗ್ಗ ಅಥವಾ ನುಲಿಯಿಂದ ಹೆಣೆದ ಮಂಚ; ನೂಲುಮಂಚ : ಕೂಸಂ ಮಿಸಿಸಿ ಮನೆಯ ಮುಂದೊಂದು ಪೊರಸಿನ ಮೇಲೆ ಪಟ್ಟಿರಿಸಿದಾಗಳ್ (ಬಂಕಂ. ೬-೯ ವ). **ಹೊರಸು**$_4$ **:** "ಹೊರಸು ಖಟ್ವೆಮೆನಿಕ್ಕು" (ಪಂಗರಾ. ೬೦-೦೫); ಲಗ್ನಕ್ಕೆ ಪಟ್ ತ್ರಿನವ ದ್ವಾದಶಾಲಯಂಗಳ್ ಹೊರಸಿಂಗವು ನಾಲ್ಕು ಕಾಲ್ಗಳ್ (ಜಾತಕ. ೯-೦೬) ; ತನಯಂ ಪಡೆತಂದ ವಸ್ತುವ ನೋೞ್ಪೆವೆಂದತಿಸಂಭ್ರಮದಿಂದಿದಿರಂ ಬಂದು ಹೊರಸಿನ ಕಾಲ್ಗಳಂ ಕಂಡು (ಪುಣ್ಯಾಸ್ರ. ೦೨-೦೫ ವ); ಕಂಡಕಂಡವರು ಏಟಲ್ಕೆ ಕೈಲಾಸ ರಂಡೆಯು ಹೊರಸೆ (ಸರ್ವಜ್ಞ. ೬೯೦). [?]

**ಪೊರಳ್,** **ಪೊರಳು**$_1$, **ಹೊರಡು**$_2$, **ಹೊರಳ್,** **ಹೊರಳು**$_1$ (ಕ್ರಿ). ೧. ಉರುಳಾಡು ; ಉರುಳು : "ಪೊರಳ್_ಲಾಠನೇ" (ಶಮು೨) ; ಪೊರಳೆ ವಾರಿಧಿಗಳ್ ಕಲಂಕಿದುವು[ರ್ದ ಮೆ]ಯ್ಯನುದಗ್ರಮಂದರಮು ದಂದಲುಗಿತ್ತು . . . ದಾಡೆಗುಟ್ಟೆ ಕಟಲ್ದು ತಾರಗೆಗಳ್ ನಭಂಬೆರ[ಸು] ಬಿಟ್ಟುವು ಪೆಂಪಿದೇಂ ಪಿರಿದಾಯ್ತೊ ದೈತ್ಯಮರಾಹವಾ (ಶಂಕರಾ. ೬-೦೫); ಬಡಗೊಂದೆಯಂತೆ ದಡದಡಿಸುವರ್ ಪಾಪಿನಂತೆ ಪೊರಳ್ವರ್ (ಧರ್ಮಾಮೃ. ೩-೬೦). ೨. ತಿರುಗು ; ಚಲಿಸು : ಕಸಕಳಿಯಂತೆ ನಾಲಗೆ ಪೊರಳ್ವುದು ರಾಜಸಭಾಂತರಾಳದೊಳ್ (ಅಂಕಿ. ೨-೦೦) ; ನುಡಿವೊಡೆ ನಾಲಗೆ ಪೊರಳದೆ ಕಿಡುಗುಂ ನೆೞ್ ಮೂಗನಾಗಿ ನಮೆಗುಂ (ಧರ್ಮಾಮೃ. ೬-೦೬೨) ; ಪಲಕಾಲದ ಪುಣಸೆಯ ಪಣ್ಣ ಲೇಹ್ಯಮಂ ಮಾಡೆ ಸನ್ನಿಪಾತಜ್ವರದಿಂ ಸಲೆ ಪೊರಳದಿರ್ದ ನಾಲಗೆಗೆ ಲೇಸನೀಗುಂ (ಕಲ್ಯಾಕಾ. ೩-೩೦). ೩. ಜಾರು ; ಸರಿ : ಮುಂದ್ದುವೊಗಂ ಪೊರಳ್ವ ಮುಂಜೆಱಗು ಕವಟ್ಟು ಪೀರ್ವ ಮೊಲೆ ದಟ್ಟಡಿ ಯೊಳ್ಪರಿದೋಡುವಂಗಣಂ ನೆೞ್ ತನಗೊಪ್ಪುವರ್ಧಕನನೊರ್ವನನಾಂ ಪಡೆವಂದಮಾವುದೋ (ಸುಕುಮಾ. ೯-೯೯). ೪. ಬೇರೆ ದಿಕ್ಕಿಗೆ ತಿರುಗು :

ಬೆಟ್ಟದ ಮೇಲ್ ಪೊರಳೆ ಬನ್ದು ಮೂಡಾಯ್ ಸಿ(ಸೀ)ಮೆಯುಳ್ ಕು(ಕೂ)ಡಿತ್ತು (ಎಕ. XVIII, ೩೬೮-೨೮ ; ೫೩೦ ಕ). **ಪೊರಳ್ಚು₁** : ೧. ರಂಗಮಂಟಪದೊಳಗೆ ಪೊರಳುತಂ ಮುಂದುಗೆಟ್ಟುಜೀವುಗೆಟ್ಟಲ್ಲಲ್ಲಿಯೊಱಲುತಂ (ಕಾ.ಕ. ದೇ. ೧೧೭. ೦೯) ; ಮಡುವಿಸಿಂ ಪೊಱಮಟ್ಟು ಮಱುಮಿನಿಸುತೆ ಕೆಲಸಿಡಿಸಿಡಿದು ಪೊರಳೆ ಬಿರುದ ಬೆಂಕೆಯಿಂ ಬೆಂದು ಕಮಹರವಸಂಬೋದರವಮರಿಯರ್ (ತಂಪು. ೦೯-೪೩); ಸರಸಿಜಗಂಧಿಯ ದಿವ್ಯಾಂಗಲಾವಣ್ಯಶರಧಿಯೊಳ್ಸೆರವಿಗರಕ್ಷಿ ಪರಮೀನಗಳು ನೆಱೆ ಪೊರಳುತ ತೆರಳುತ ಮರಳೆ ಮುಳುಗುತೊಪ್ಪಿದುವು (೪ಂಸಂ. ೯. ೯೩). ೨. ಧರೆಯೊಳು ನಟ್ಟ ದಿಟ್ಟಿಯುಲರಿತಧರದೆ ಪೊರಳುವ ತುಟಿನಾಲಗೆಯು ಬೆರಳಲುಕದೊಳಾಂದೋಳಿಪ ಮಸ್ತಕದರಳುಗಣ್ಣುಬಲೆಯೊಪ್ಪಿದಳು (೪ಂಸಂ. ೯-೦೬೪). **ಹೊರಡ್ಡು₂** : ೧. "ಹೊರ[ಶಾಶಾಂ. ದ]ಡು-ಪರಿಲುಠನೇ (ಹೊರಳು)" (ಶಮಂಪ). **ಹೊರಲ್** : ೧. ಮುರಿವ ಬಡಿಸುವ . . . ಹೊರಳ್ವ ತನು ಹೋರಟೆಯು ಸತ್ತ್ವೋತ್ಕರುಷ ಸರಿಯೆನೆ ಶಂಭು ಶಿಷ್ಯಗೆ ಪರಿವಿಡಿಯು ತೋಱುಸುವೊಲಿದ್ದನು (ಕುಪ್ಪಾ.ಆ. ೬-೪೦) ; ನಾ ಶಿವಿದ ಖಡ್ಗಕೆ ನರನ ವ್ಯೈಲವಲವಿಸಲಡಿಮೇಲಾಗಿ ಹೊರಳ್ವರೆ ಧನ್ಯ ತಾನು (ಕುಪ್ಪಾ.೪. ೮-೪೦). **ಹೊರಳ್ಚು₁** : ೧. [ಚನ್ನಮಲ್ಲಿಕಾರ್ಜುನನಿಱುದಲಗು] ಒಡಲಲ್ಲಿ ಮುಱಿದು ಹೊರಳುವೆನ್ನಳಲನು ನೀವೆತ್ತ ಬಲ್ಲಿರೇ ಎಲೆ ತಾಯಿಗಳಿರಾ (ಶುಹಾದೇ. ಬ. ೦೧೦-೩೦೯) ; ಸೆರೆ ಬಿಗಿದು ಗದುಗದಿಸಿ ಬಿಕ್ಕುತೆ ಬಿದ್ದು ಹೊರಳುತ್ತಳುತ್ತಗಲಲಾಱದೆ (೬ಶಶ. ೩-೨೦) ; ಬಂದು ಭೀಷ್ಮನ ಚರಣಸೀಮೆಯಲಂದು ಕಾಯುವ ಕಡಿಹಿ ವಿಗತಾನಂದ ಭೂಪತಿ ಹೊರಳಿದನು ಹೇರಾಳಶೋಕದಲಿ (ಕುಪ್ಪಾ.೬೭. ೦೦-೦೯). ೨. ಪರಕೆ ಬಾಹಿರನಾಗಿ ನಾನಾಯೋನಿಯೊಳು ಸುಳಿದು ಹೊರಳುವನುವನು ಕೃಷ್ಣದೇವನು ಕರುಣಿಸಿದನೇ (ಕುಪ್ಪಾ.೬೭. ೩-೨೯). ೩. ಭೀಮ ಬಿದ್ದನು ತೊಡೆಯು ಮೇಲಿಂದೀ ಮಹಿಗೆ ತಚ್ಚೈಲಶಿಲೆ ನಿರ್ನಾಮವಾದುದು ಹಸುಳೆ ಹೊರಳಿದು ಬಿದ್ದ ಭಾರದಲಿ (ಕುಪ್ಪಾ.ಆ. ೪-೩೬). ೪. ಹೊರಳೆ ನೋಡು ಮರಮರಳೆ ನೋಡು ಒಳಗರಳೆ ನೋಡು ನೋಟ (ಅರಳು. ೪೦೪-೦೦) ; ಇರುಳೇ ಹೊರಳಿತು ಹಗಲೇ ಮರಳಿತು ಚಿಗುರೆಲೆ ಹೂವಿಗೆ ಹಾಸು (ಕಂಮು. ೦೦-೦೦). ೫. ಹಿಂತಿರುಗು ; ಮರಳು : ನಂಜಮ್ಮ ಹೊನ್ನ ತಳಿಗೆಯನ್ನು ಎತ್ತಿಕೊಂಡು ಸೆರೆಮನೆಯಿಂದ ಹೊರಳಿದಳು (ಜಾಹುತ. ೪೦).

[ದೇ. ೫ ತಮಿ. ಒರಳ್, ಪುರಳ್ ; ಮಲ. ಒರಳು ; ಪುರಳು. ತುಳು. ಪುರಲು, ಪೊರಲು, ಪೊರೆಡು, ಹೊರಳು ; ತೆಲು. ಪೊರಲು, ಪೊರ್ಲು]

**ಪೊರಳನ್ವಯ** (ನಾ). [ಜೈನ] ಯತಿಗಳ ಒಂದು ಶಾಖೆ : ಸ್ವಸ್ತಿಶ್ರೀ ಅರಿಲುರ ಪನ್ನಿರ್ವರು ಮೂ× × ×ಯ್ಯಸ್ತ್ಯಾಲಿ ಮೊಱಮುನಿಱಿಸಿದಾ ಕಾವೆಯರುಂ ಪೊರಳನ್ವಯರುಂ× × ×ಗುಣಸಾಗರತಮ್ಮಡಿಗಳ್ಗೆ ಕೊಟ್ಟ× × × (ಎಕ. IV, ಗುಂಡ್ಲು.ಶೀ. ೬೯-೦೩; ಸು. 760). [?+ಅನ್ವಯ]

**ಪೊರಳಿ, ಹೊರಳಿ, ಹೊರ್ಳಿ** (ನಾ). ೧. ಗುಂಪು; ಸಮೂಹ; ರಾಶಿ : ಶಾಪದಿಂ ಮೃಣಾಳನಾಳದ ಪೊರಳಿಯಂ ಪೊರಳ್ದು ತರ್ಕಯಿಸಿಯುಂ (ಅರ್ಜನ. ೩-೨ ವ); ಕೆಡೆದ ಕರಿಗಳ . . . ಮಡಿದ ಕುದುರೆಗಳ ಪೊಡೆಗಲ್ಲ ಪೊರಳಿಗಳೊಳಗೆ ಕಡಿದ ಕೈಕಾಲ ನರರಟ್ಟೆಗಳ ತುಂಡುಗಳ ಮರಮಟ್ಟೆಗಳನೆಳೆಯುತೆ (ಕ್ಕಿ.ಐಚಾ. ೨೨ ೨೬). **ಹೊರಳಿ** : ೧. "ಬಂಬಲ್, ತುಱುಗಲ್ . . . ಹೊರಳಿ . . . ಗೊಂದಣ(ಉಂಡಲ್)— ಈ ೪೦ ಸಮೂಹಂ" (೪೩ಶಾ. ೩೬-೨೨೨); ಇರುಳ ತಿರುಳಿನ ಹೊರಳಿಗಾ ತರಣಿ ಕೆರಳ್ವಂತೆ ಸರಳ ತೆರಳಿಕೆಗೆ ಮರಳಿತು ಕರುಳ ಸುರುಳಿಯೊಳು ಹೊರಳುತ್ತ . . . ತರಳಚಿತ್ತದ ಹಂದಿ ಮರಳಿ ಕಾನನಕೆಯ್ದಿತು (ಹಶಕಾ. ೬-೩೦); ಇಂದುಕಳೆಯ ಸಂದಣಿಯಂತೆಯುಂ ಅರಲ ಸರಲ ಹೊರಳಿಯಂತೆಯುಂ . . . ವಿಲಾಸದಿಂ ಬರ್ಪ ವಿಲಾಸಿನೀ ಜನದ ನಡುವೆ (ದಳು. ೬-೩೦ ವ) ; ಗಿರಿಯ ಮುತ್ತಿದ ಮಿಂಚುಬುಳುವಿನ ಹೊರಳಿಯಂತಿರೆ ಹೊನ್ನ ಬರಹದ ಸರಳು ಮೆಱೆದವು (ಕುಪ್ಪಾ.ದ್ರೋ. ೩-೨೬). ೨. ಆಧಿಕ್ಯ ; ಹೆಚ್ಚಳ : ಹರುಷದ ಹೊರಳಿಯಲಿ ಹೊಡಕರಿಸಿ ಚಿತ್ತವ ತಿರುಹಿ (ಕುಪ್ಪಾ.ಆ. ೬-೬೯). **ಹೊರಳ್ಳಿ₂** : ೧. 'ಹೊರಳಿಗಡಿ' ಪರಾ. ೩. ಮೊರೆ ; ಮೂಟೆ : ದೇವಾಂಗವಸ್ತ್ರಂಗಳ ಹೊರಳಿಯಂ ಕೈಕೊಳ್ಳಿ (ಕೆರಾಶ. ೩೬-೦೦).

**ಪೊರಳಿಸು, ಹೊರಳಿಸು** (ಕ್ರಿ). ೧. ಉರುಳಾಡುವಂತೆ ಮಾಡು ; ಉರುಳಿಸು : ಪರಿಭವರಜದೊಳ್ ಪಗೆಯಂ ಪೊರಳಿಸಲುಂ . . . ತಕ್ಕುದು ನಿಂ ಪೊರಳಲ್ಕುಕ್ಕುದೆ ಮದೀಶ ಭೂಪಾಲಂಸುವಿನೊಳ್ (ಆಗಂ. ೬-೯೭). **ಹೊರಳಿಸು** : ೧. ಸಕ್ಕರೆಯ ತಳಿಮುದ್ದನು ಅರೆದದಱೊಳಿನಿ ಸಕ್ಕಿವಿಟ್ಟಕ್ಕಿಕೊಂಡದಂ ಹೊರಳಿಸಿ ಒಳಿಕ್ಕ ಕಿಳಿದುಪ್ಪದೊಳು ಕೆಂಪಾಗಿ ಹುರಿದು (ಸೂಶಕಾ. ೪-೬೦). ೨. ತಿರುಗಿಸು ; ಆಡಿಸು : ನಾನು ಕೋಣೆಯೊಳಗೆ ದೃಷ್ಟಿ ಹೊರಳಿಸಿದೆ (೪ಾಂಡಾ. ೦೦) ; ಅವನನ್ನೇ ನಿಟ್ಟಿಸುತ್ತಿದ್ದ ಮಾಲುಗಣ್ಣುಗಳನ್ನು ಅತ್ತಿತ್ತ ಹೊರಳಿಸದೆಯೆ ಅವಳು ಕಲ್ಲಿನಂತೆ ನಿಂತಳು (ಪ್ರಸು. ೦೧೦). [ಪೊರಲ್ + — ಇಸು₁]

**ಪೊರಳ್ಚು₁** 'ಪೊರಲ್' ನೋ.

**ಪೊರಳ್ಚು₂** 'ಪುರುಳ್' ನೋ.

**ಪೊರಳ್ಚು₃, ಹೊರಳಿಚು, ಹೊರಳ್ಚು** (ಕ್ರಿ). = ಪೊರಳಿಸು ೧: "ಪೊರಳ್ಚು —ಲುಠನೇ" (ಶಮಂಪ) ; ಅಸ್ತ್ರಾನಳಂ ಕಿಡಿಯಿಂ ಕೆಂಡದಿನೇಂ ಪೊರಳ್ಚಿದುದೊ ತನ್ನೇಘಾಮರಾನೀಕಮಂ (ಅಂತ್ರ. ೦೩-೬೬) ; ದುರ್ಯೋಧನನೊಕ್ಕಲಂ ಪುಡಿಯೊಳ್ ಪೊರಳ್ಚುವಂತೆ ಪಾಸಂಗೆಯುಂ ಪೊರಳ್ಚಿ (ಕಂಶಕಾ. ೬-೩೦ ವ); ದ್ರುಪದಾತ್ಮಜಾತನೋವದೆ ಪುಡಿಯೊಳ್ಪೊರಳ್ಚಿ ತಲೆಯು ತೆಗೆವಲ್ಲಿ ಪಿನಾಕವೆತ್ತವೋದುದೊ (ಗದಾಯು. ೯-೩೦). **ಹೊರಳಿಚು** : ಹೊಕ್ಕ ವಾನೆಗಳು . . . ಲಾಳವುಂಡಿಗೆಯ ಸಿಡಿಸುಗುಂಡಿನೊಳೊಂದನೊಂದಿಟ್ಟೊರಸಿದವು ಕೊಡಹಿದವು ಸೀಳಿದು ಹೊರಳಿಚಿದವೆಟಗಿದವು ನಾನಾವಿಧದ ಕೊಲೆಗಳಲಿ (ಕುಪ್ಪಾ.೬೭. ೪-೮೦) ; ಹೊಡೆದರಿಱಿದರು ಹೊರಳಿಚಿದರಡಗೆಡೆಹಿದರು ಕೋಳಾಹಳದ ಬಲುಗಡಿಯ ಭಟರಬ್ಬರಿಸಿ ಸದೆದರು ಸೂಳುಪಾಳೆನಲಿ (ಕೂರಾ. ೩-೬-೨). **ಹೊರಳ್ಚು** : ತೆರಳ್ಚಿ ಮರಳ್ಚಿ ಹೊರಳ್ಚಿಯುಟನಿಜವು ಜೀವ ಹತ್ತುತೆಱನೆ ಪ್ರಾಣವೆಂಬರಲ್ಲ ಹುಸಿಯನಂತಜೀವ (ಶಾಸಂಕ. ೬-೩೦). [ಪೊರಲ್ + — ಚು₁]

**ಪೊರಳ್ನುಡಿ** (ನಾ). ದ್ವಂದ್ವಾರ್ಥವುಳ್ಳ ಮಾತು ; ಎರಡರ್ಥ ಬರುವ ಮಾತು : ಅದೊಡಿವು ಅರ್ಥಯಿಸಲಾಗದಸ್ಪಷ್ಟತೆಯು ಪೊರಳ್ನುಡಿಗಳಿನ್ ಮರಲ್ನುಮಯ್ ಏಗಳುಂ (ಅದ್ಯಶ್ರ. ೩೫-೬೩೩). [ಪೊರಲ್ + ನುಡಿ₂]

**ಪೊರಿ** 'ಪುರಿ₁' ನೋ.

**ಪೊರಿಗೆಱೆ** 'ಪುಲಿಗೆಱೆ' ನೋ.

**ಪೊರಿಮಯ್ಯ** (ನಾ). ಒಬ್ಬಾತನ ಹೆಸರು : ಕುಪ್ಪೆಸೆಯ ಮನವನೆಯರ ಪೊರಿಮಯ್ಯ × × × ಕೇಸಿಮಾಣಿ ಕೇಳ್ಚಿಗಣ್ಯಗಾಳುಮದಟನಾಗಿ ನೆಲ ಕುಪ್ಪಿಪೆಸೆಯನಿಱಿಯಿಮೆನ್ದು ಕೇಳ್ಚಿಗಂ ತನ್ನಾಳ್ ಬೆಸವೋಟೆ (ಎಕ. VIII, ಸೊರಬ. ೬೬-೬ ; 912). [? + ಅಯ್ಯ₁]

**ಪೊರಿಸು** 'ಪೊಱಿಸು' ನೋ.

**ಪೊರು** 'ಪೊಱು' ನೋ.

**ಪೊರುಳ್** 'ಪುರುಳ್' ನೋ.

**ಪೊರುಳಱೆ** (ನಾ). ಒಂದು ಊರಿನ ಹೆಸರು : ಅಲಂತೂರ ಪೊರುಳಱೆ ಪೆರ್ನ್ನಗರಾದ್ಯನೇಕ ಸಮರಮುಖಮುಖಾಹೂತಪ್ರಹತಶೂರಪುರುಷಪಶುಪಹಾರ (ಎಕ. IX, ದೊಡ್ಡ. ೬೬-೩೬ ; 517). [ ? ]

**ಪೊರ್ಳೆ₁, ಹೊರ್ಳೆ₁** (ಕ್ರಿ). ೧. ಕಾಪಾಡು ; ರಕ್ಷಿಸು : "ಪೊರೆ—ಪೋಷಣೇ, ಉಪಸರ್ಗೇ ಚ (ಹತ್ತಿರ)" (ಶಮಂಪ) ; ರಾಮೇಶ್ವರ ಎಮ್ಬ ತೀರ್ಥ್ಥದಾ ಮೊದಲೊಳ್ ಮೆಪ್ಪಿಕ್ಕಿ ಪೊರದ ಪನ್ದಿಗಳನಿಱಿಯಲ್ ಬನ್ದಲ್ಲೀ(ಲ್ಲಿ)

(ಇಅ. XI. ೦೨೭-೦೦ ; ೩೮೩) ; ಒಡವಳೆದಂಬರೇಚರರಸನ್ನಿತವುಂತ್ರಿ ಸಮೂಹವುಂ ಮನಂ ಬಿಡೆ ಪೊರೆದಿಷ್ಟಬಂಧುಜನವುಂ ಕರೆದು (ಅಜಿತ. ೨-೩೦) ; ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ ಪೆಣ್ಣಲ್ಲವೆ ಪೊರೆದವಳು (ಹರಿಶ್ಚ. ೩-೬). ೨. ಪೋಷಿಸು : ಈತನಂಗಡಿಯುಲವಡಂ ಪೆಜಂಕಿ ತಿಂದು ದಾಟಿಸ್ಪೊಂ ಬೈಕಂಗುಳಿ ಬೇಡಿ ಪೊಟಲೆಲ್ಲಮಂ ತೊಟಲ್ದು ಬಸಿಱಂ ಪೊರೆವೊಂ (ಶಬ್ದಾನು. ೯೬-೬); ತನ್ನೊಡಲಂ ಪೊರೆಯಲಱಿಯದವನಾರುಮಿಲ್ಲೇಂ (ಶಂಕರ. ೩೦-೦೭) ; ಪೊರೆದೇಂ ಬಾಟವೆ ಪಂದಿ ನಾಯ್ಗಳೊಡಲಂ (ಸೋಮೇಶ. ೦೮). ಹೊರ್ಕೆ : ೧. ನೀನು ಹೊರೆವ ಯುಗಜುಗಂಗಳು ಒಂದು ತೃಣಮಾತ್ರವಾದ ಕಾರಣ ನಿನ್ನ ಹಸುಮಕ್ಕಳವರೆನುತ್ತಿದ್ದೆನಮ್ಮ (ಅನಹ. ೦೯೯-೧೦೦) ; ನೀವಿನ್ನಿದಂ ರಕ್ಷಿಪುದು ಹೊರೆವುದಿನಿತಂ ಬೇಡಿ ಪಡೆದೆ ನಾ ನಿಮ್ಮಲ್ಲಿ ಕರುಣಿಸೆನಗೆ (ಹರಿಶ್ಚ. ೯-೦೯); ನಿನ್ನ ಭೃತ್ಯನ ಹೊರೆವ ಪರಿಯಿದು ಕೃಷ್ಣ ಜಯಜಯ (ಕುಮಾರ. ೭-೦೭). ೨. ಬೇಡೊಡಲ ಹೊರೆವುದಕ್ಕೆ ನಾನಾಟ (ಪುರಾಣ. ೩. ೦೯-೦೭); ಹಗೆಯ ಕೈಯಲಿ ಸಾಯಲಾಟಿವೆ . . . ಹೊರೆಯಲಾಪೆವೆ ಬೆಂದ ಬಸುಱುಗಳ (ಕುಮಾರ. ೦೬.೦೦); ಪ್ರಜೆಗಳಿಗೆ ಹೊಟ್ಟೆಯನ್ನು ಹೊರೆದುಕೊಳ್ಳುವುದೇ ದೊಡ್ಡ ಸಮಸ್ಯೆಯಾಗಿತ್ತು (ಕಿತ್ತೂ. ೪೪೭).

[ದೇ.೩ ತಮಿ. ಪುರ; ತೆಲು. ಪೋಚು; ಕೋಲಾ. ಪುರಾಯ್; ಪರ್ಜಿ. ಪೊರಿವ್; ಗೊಂಡಿ. ಪೊರ್ವನಾ]

**ಪೊರ್ಕೆ$_2$**, ಹೊರ್ಕೆ (ಕ್ರಿ). ೧. ಸೇರು; ಕೂಡು; ಬೆರೆ : ವರಶಬ್ದಾಲಂಕಾರದ ವಿರಚನೆಗಳ್ ನೋಟ್ಪೊಡೊಂದೆ ತೋರ್ಕೆಗಳಿಂತುಂ ಪೊರೆದಿರಲೊಂದೊಂದ ಱೊಳು ಪರಮಕವೀಶಪ್ರಯೋಗಗತಮಾರ್ಗಂಗಳ್ (ಕವಿರಾ. ೨-೯೮); ಅವ ಕಾಲಮುಂ ಕಿಡದುದಂ ಪಾಪದಿಂ ಪೊರೆಯದುದು ಸುಖಮನೊಡೆ ತಪ್ಪದಂ ತನ್ನಂ ತಾನಾದುದನಂತಪ್ಪ ಮೋಕ್ಷಸುಖಮನೆಯ್ದಿ (ಶಬ್ದಾನು. ೯೯-೬) ; ಎಡೆಚೋಡುವಿನಂ ಪೊರೆದೊಳ್ಳೆಗಟ್ಟಿಯೊಳ್ ತೊಡರ್ದಿರೆ ವೃದ್ಧರಾಜ್ಯಮುಮದೇನೆಸೆದತ್ತೊ ನಭಶ್ಚರೇಂದ್ರನಾ (ಅಜಿತ. ೨-೨೯). ೨. ಮೆತ್ತಿಕೊಳ್ಳು ; ಅಂಟು ; ಹತ್ತು : ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮಂ ಸವಿದೀಂಟುವಲ್ಲಿ ತನ್ನಧರದ ರಾಗದೊಳ್ ಪೊರೆದುದಂ ಮಧುವಂ ಬೆಱಗಾಗಿ ನೋಡುತುಂ (ಜಗ. ೦೬-೦೦೬) ; ಅಡಿಗಡಿಗೆ ಪೊಡವಿಯೊಳ್ ಪೊಡೆದುಕೊಳ್ವ ರಭಸದೊಳ್ ಪೊರೆದ ಪುಡಿಯನೊಡನೊಡನೆ ಬೆಮರ ಬಿಂದುಗಳ್ ನಾಂದೆ (ಪರ್ವತಿ. ೯-೬೦ ಪ). ೩. ಬಳಿ ; ಲೇಪಿಸು ; ತೊಡೆ : ಕರಡಿಯ ತೋಲಂ ಕಜ್ಜಲಪರಾಗದಿಂ ಪೊರೆದು ಪಿಡಿದು ಜೇನೆಯ್ಗೊಳ್ ತಂದಿರಿಸಿದಪೊಲರಸನಂ ಪಚನರಚನೆ ಬಳಸಿದುದತೀವತಮಮೊದವುವಿನಂ (ಶಾಂತಿ. ೬-೦೨೭) ; ಚಂದ್ರಗಾಮಿಯ ದುಕೂಲದ ಬೈತಲೆಗೆ ಪೊರೆದ ಚಂದ್ರರಜದೆಂಬೊಪ್ಪೆಯ ಶೃಂಗಾರಸಾರದಿಂ ಚಂದ್ರಶೇಖರನ ಪಟ್ಟದ ರಾಣಿ ನಮಿತಗೀರ್ವಾಣಿ ರಂಜಿಸುತಿರ್ದಳು (ಶಿವತ. ೩೭-೨೯). ೪. ಧರಿಸು ; ತೊಡು : ಪೊರೆದ ದುಕೂಲಮೊಂದಿನಿಸು ಪಾಸಿದೆ ಧಾಳದೊಳಟ್ಟ ಚಂದನಂ ತೆರಳದೆ (ದಶಕು. ೦೦-೨೦). ೫. ನೆನೆಹಾಕು ; ನೆನೆಯಿಸು : ಪೊರೆದಿರ್ಪತ್ರೊಂದುದಿನಂಬರೆಗಂ ಪಾಲೊಳಗೆ ಬೆಳಲ ತಿರುಳು ನೆಟಲೊಳ್ ಪರಿತೋಷಿಸಿ ಬಯ್ಸಿಟ್ಟಕ್ಷುರಸದೊಳಿಕ್ಕಿದೊಡೆ ಸವ್ಯಮುದು ಪಾಲಕ್ಕುಂ (ಲೋಕೋಪ. ೬-೯೭). ೬. ಬಳಿಯಲ್ಪಡು ; ಲೇಪನವಾಗು : ಚರಿಯಿಪ ವನದೇವತೆಯರ ಚರಣಾಲಕ್ತಕದೆ ಪೊರೆದುಮೆಸೆವುವು . . . ಚಂದಲಿರ್ದುಱುಗಲ್ (ಕಾದಂಬ. ೯೭). ೭. ಲೇಪಿಸಿಕೊಳ್ಳು ; ಬಳಿದುಕೊಳ್ಳು : ಕಸ್ತೂರಿಯನಂಗದೊಳ್ಪೊರೆದು ನೀಲಾಂಬರವನೊತ್ತಿ ಬಿಗಿದುಟ್ಟು (ಪದ್ಮನಾ. ೯-೬೨). ೮. ಉಲ್ಲಸಗೊಳ್ಳು ; ಅರಳು : ಶ್ರೀಪಧುವಿನಂಬೇಚಕೋರಕಂ ಪೊರೆಯೆ (ಕೈಪಿಡಿ. ೦೦-೦). ೯. ಅಗಲವಾಗು ; ಹಿಗ್ಗು : ಅಂತ ನಿರ್ಘೂರ್ಣಿತಾಘೂರ್ಣಮನ್ಕು ವೇಗದೊಳ್ ಬೀಗಿ ಬಿಏಪಂತ ಗಗ್ಗರಿಪ

ಕೊರಲೊಳುಬ್ಬರಿಸಿ ಪೊರೆದ ಸೆರೆಗಳೊಳಂ (ಪರ್ವತಿ. ೯-೬೦ ಪ). ೧೦. ಸಿಂಪಡಿಸು; ಚಿಮುಕಿಸು; ತಳಿ : ಸುರಹೊನ್ನೆಯ ಬೀಜಂ . . . ಕರ್ಪೂರ ಮೆಂಬಿವಱಿಂ ಪೂವಂ ಪೊರೆದೊಡೆ ಪುಷ್ಪದ್ರವಂ ಮನೋಹರಮಕ್ಕುಂ (ಲೋಕೋಪ. ೬-೪೭). ಹೊರ್ಕೆ : ೧. ಅಱಿವು ವಸ್ತುವೆಂದಡೆ ಒಂದು ಕುಱುಹಿನ ಹೊರೆಯಲ್ಲಿ ಹೊರೆಯದು ಇಂತೀ ಹೊರೆಯದೆ ಹೊರೆಯದ ಪರೀಕ್ಷೆ ವಿಧ(ದ)ನಾಗಿ ಗಾರುಡೇಶ್ವರಲಿಂಗವನಱಿದವಂಗಲ್ಲದೆ ಸಾಧ್ಯವಲ್ಲ (ಸರ್ವಶ. ೦೦೦-೩೭೭); ತರುಣಿ ನಿಜತನುಪರಿಮಳದಲುಟಿ ಹೊರೆದ ಹೂವಿನ ದಂಡೆಯನು ನಿಜವರನ ಕೊರಳಲಿ ಹಾಯ್ಕಿದಳು (ಕುಮಾರ. ೦೩-೩೩) ; ಪರಿಮಳದ ಪದ್ಮದ ಪರಾಗದಿ ಹೊರೆದ ನಿಱಿದೆರೆಯುಬ್ಬುಗಳ . . . ಸೊಗಸಿನ ಸರಸಿಗಳಿವರು (ಕೊರಟಾ. ೨-೭-೯). ೨. ಹೊರೆದ ರಕುತದ ಧಾರೆಗಳ ತುದಿಕರದೊಳೆಳಲುವ ತಲೆಗಳಂಭ್ರಿಯೊಳೊರೆದ ನೆಣನಡಗಿನ ಮಹಾಗಜ ಮೊಗೆದುದರಿಬಲವ (ಕುಮಾರರಾ. ೩-೨೯). ೩. ಹೊರೆದ ಕಸ್ತೂರಿಸಾರಣೆಯ ನವಪರಿಮಳದ ಪನ್ನೀರ ಚೆಳೆಯುವ . . . ಧೂಪದ ಧೂಮಗಂಧೋತ್ಕರಸಮುದ್ರದೊಳದ್ದನೊಲ್ಲದೆ ಪಥವ ಪವಮಾನ (ಕೊರಟಾ. ೦-೦೭-೩). ೧೦. ಪರಿಮಳದ ಕುಸುಮ ಪನ್ನೀರ ಛಳೆಯಂಗಳಿಂ ಹೊರೆದ ಮುತ್ತಿನ ರಂಗವಾಲಿ ಕಸ್ತೂರಿಗಳ ಪರಿವಿಡಿಯ ಕುಂಕುಮದ ಕಾರಣೆಗಳು (ಅಶ್ವಂ. ೩೦-೩೩). ೧೧. ಹೊಂದು ; ಪಡೆ ; ತಾಳು : ಹೊರದುದಿಳೆ ಸೌರಭ್ಯಶೈತ್ಯೋತ್ಕರವನು (ಕೊರಟಾ. ೦-೦೭-೩೯); ಪರನಾರಿ ಸೋದರನು ಪರಶತ್ರುದಲ್ಲಣನು ಕರ ಪಾಪಘಯವ ಹೊರೆವ ಗುಣೆಯಹ ನೃಪಗೆ ಸ್ಥಿರವಿಹಳು ಲಕ್ಷ್ಮಿ (ಸರ್ವಜ್ಞ. ೭೨೭). [ದೇ.೩ ತಮಿ. ಮಲ. ಪೊರು]

**ಪೊರ್ಕೆ$_3$**, ಹೊರ್ಕೆ (ನಾ). ೧. ರಕ್ಷಣೆ ; ಆಶ್ರಯ ; ಆಧಾರ : ಒಂದು ಮೊಡಂಬಡುಂ ಪೊರೆಯುಮಿಲ್ಲದರ್ಗೆಂಬುದನೆಯ್ದೆ ನಂಬಿ ನಾಡಂ ದಯೆಗೆಯ್ದ ನೀಂ ಕುಡುವಿನಂ ಪೆಱತೇ ಪಡೆವಾತೂ ಪಳ್ಳಿರಲ್ಕೆಂದವರ್ಗೀವುದೊಳ್ಪು ನಿಲೆ . . . ಅಯ್ದುಬಾಡಮಂ (ಶಂಪರಾ. ೯-೯೩); ಸೆರಗಂ ಬೆಱಗಂ ಬಗೆಯದೆ ಪೊರೆಯಿಲ್ಲದೆ ಕಳಿಯ ದಂಡೆಯಂ ನೂಂಕಿದವೋಲ್ ಪೊರೆದಾಳ್ದನ ಕಾರಣದಿಂ ಪರಿಹರಿಪುದು ಭೃತ್ಯನರ್ಥಮಂ ಪ್ರಾಣಮುಮಂ (ಗದಾಯು. ೨-೨೨). ೨. ಪಾಲನೆ; ಪೋಷಣೆ : 'ಪೊರೆಕೈ' ಪರಾ. ಹೊರ್ಕೆ: ೧. ಕಾಯವಸ್ತುವೆಂದಡೆ ನಾನಾಮಲಗುಣಂಗಳ ಹೊಲೆ(ರೆ)ಯದು ಜೀವವಸ್ತುವೆಂದಡೆ ತ್ರಿವಿಧಮಲದ ಹೊರೆ (ಸರ್ವಶ. ೦೦೦-೩೭೭) ; ಉಳಿದ ಮೂವರ ಕಳುಹಿದೆನು ಕುರುಪತಿಯ ಹೊರೆಗಾಗಿ (ಕುಮಾರ. ೯-೨೬) ; ತೋಱಿ ನಿಜರೂಪವನು ಭೀತಿಯ ಬೀಱಿ ಕೌರವನ್ನಪರೊಳಗೆ ಮುರವೈರಿ ಬಿಜಯಂಗೆಯ್ಯಲಾ ಪಾಂಡವರ ಹೊರೆಗಾಗಿ (ಐರಾಗ. ೩ ೦-೩). [<ಪೊರ್ಕೆ]

**ಪೊರ್ಕೆ$_4$**, ಹೆರ್ಕೆ, ಹೊರ್ಕೆ (ನಾ). ೧. ಹತ್ತಿರ; ಬಳಿ ; ಸಮೀಪ : "ಪೊರೆ ಸಮೀಪಂ" (ಕರ್ಣಾಟ. ೩೨); ಬೆಟ್ಟದಾ ಮೂಡಾಯ್ ಪೊರೆವ ಬಸ್ದು ತುಟ್ದಿಲ್ಗಾಲೊಳ್ಕೂಡಿತ್ತು (ಪ್ರಾಕಂ. ೦೯೩೭, ೫೩-೨೯; ಸು. ೬೬೦); ಪೋದಂ ಬಗೆ ಕದಡಿ ತಾಯ ಪೊರೆಗೆ ನೃಪೇಂದ್ರಂ (ಯಶೋಧ. ೨-೬೦). ೨. ಉತ್ಸಾಹ ; ಚೈತನ್ಯ ; ಆನಂದ : 'ಪೊರೆಯೇಱು' ಪರಾ. ೩. ಸಂಬಂಧ ; ನಂಟು : ಕೊಲೆಯೊಳ್ ಪೊರೆಯಿಲ್ಲದ ಪರಲಲನೆಗೆ ಬಗೆಗುಡದ ಕಳ್ಳದುಱ ಪುಸಿಯದ ಕಾದಲಿಸಿ ವಿಷಯಂಗಳೊಳ್ ಪಂಬಲಿಸದ ಗುಣಮೈದಣುವ್ರತಂ ಜಿನಮತದೊಳ್ (ಶಾಂತಿ. ೦-೬೮). ೪. ಲೇಪನ ; ಬಳಿಯುಮಿಕೆ : 'ಪೊರೆಯಿಡು' ಪರಾ. ೫. ಬೆರಕೆ ; ಮಿಶ್ರಣ : 'ಪೊರೆಯಿಕ್ಕು' ಪರಾ. ೬. ಹೊಳಪು ; ಕಾಂತಿ : 'ಪೊರೆಯಿಡು' ಪರಾ. ಹೆರ್ಕೆ: ೧. ಅಲ್ಲಿ[೦] ಮೂಡಲು ಶ್ವೇತಪಾಷಾಣಮಂತಿ ಅಲ್ಲಿ[೦] ಬಡಗಣ ಹೆರೆ ಈಶಾನ್ಯದಲಿ ಹುಪನಟಿ ಅದಱ ತೆಂಕಯಿಣ ಹೊರೆಯಿಂ ಪಡುವ ಮೊಗದೆ ಜಲಪ್ರವಾಹ(ಪ್ರಾಕ. IX-i. ೨೩೯-೯೯; 1148). ೨. 'ಹೆರೆಹೆಚ್ಚು' ಪರಾ. ಹೊರ್ಕೆ: ೧. "ಹತ್ತಿರಕೆ ಹೊರೆಯೆನಿಕ್ಕುಂ" (ಶಬ. ೦೦೬) ;

ಅವಱ ತೆಂಕಯಿಣ ಹೊರೆಯಿಂ ಪಡುವ ಮೊಗದ ಜಲಪ್ರವಾಹ (ಶಾಸ. IX–೧, ೨೫೪–೪೪ ; 1148) ; ಕಿಟ್ಟನ ಕೆಂಡದಂತೆ ಹೊರೆಯಲ್ಲಿಪ್ಪೆಯಃಯ್ಯ (ಅಪಶ. ೬೦–೨೬೫) : ಅಪ್ಸರಗಣಿಕೆಯರು ಕೋಪಾಳನ ಕಾದರು ವಾಸವನ ಸಿಂಹಾಸನದ ಹೊರೆಗೆ (ಉತ್ತರಶ್ರೀ. ೬.೬೫). ೨. 'ಹೊರೆಹೆಚ್ಚು' ಪರಾ. ೪. 'ಹೊರಸು₁' ಪರಾ. [<ಪೊರೆ₂]

**ಪೊರೆ₅, ಪರೆ₄, ಪೆರೆ₃, ಹರೆ₄, ಹೆರೆ₆, ಹೊರೆ₅** (ನಾ). ೧. ಆವರಣ ; ಹೊದಿಕೆ ; ಆಚ್ಛಾದನ ; ಮುಸುಕು : ಎರಡು ಘಟಗೆಯಿಂದೊಳಗೆ ಪಾಸಿನ ಪೊರೆಯೊಳ್ ಪುಟ್ಟಿ ಇಂದ್ರಪ್ರತೀಂದ್ರ . . . ಲೋಕಪಾಲಾಹ ಮಿಂದ್ರತ್ವಮೆಂದೀ ಮಹರ್ಧಿದೇವರಾಗಿ (ಶಬ್ದಾರಾ. ೯೮–೩) ; ದಿವ್ಯತಳ್ಪ ತಳ್ಪದ ಪೊರೆಯೊಳಗೆ ತೊಳತೊಳತೊಳಗಿ ಪೊಱಮಡುವೆಳನೇಸಱ ಬಳಗದ ಬೆಳಗನೊಳಕೊಂಡು (ಅಜಿ. ೨–೬೦ ವ) ; ನಾರದನಿರದೆ ಗಗನತಳಕ್ಕೊಗೆದು ಮುಗಿಲ ಪೊರೆಯೊಳಡಂಗಿದಂ (ಶಂಕಥಾ. ೬–೨೦ ವ). ೨. ಪದರ; ಮಡಿಕೆ : ಪಾಲ್ಗಡಲ ನೊರೆಯ ಪೊರೆಯ ತೆರೆಯನನುಕರಿಸಿಯುಮಲ್ಪ ದಶನದಂಶಮಾತ್ರಖಂಡನೀಯಕರಂಗಳೆನಿಸಿದ ಮಂಡಕಂಗಳುಮಂ . . . ಉಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೧೧–೨೯ ವ) ; ನಿಜೋತ್ತರೀಯಪಲ್ಲವದ ಪೊರೆಯಿಂ ತೆಗೆದು . . . ಮಣಿದೊಡವನೊರ್ವಳಂಗನೆ ಗಿತ್ತಳ್ (ಮಲ್ಲಿ. ೪–೬೦); ಮೆಯ್ಯ ಪೊರೆಗಳಿಂತು ಮಾಱುಭಾಗಂ ಅಲ್ಲಿ ಪೊಱಗಣ ಭಾಗಂ ಧಾತುಮಲಾದಿ ದೋಷಸಹಿತಂ . . . ಒಳಗಣ ಭಾಗಂ ಜ್ಞಾನಮಯಂ (ಜೀಪಂ. ೦೨೯–೦೮ ವ). ೩. ಹಾವು ತನ್ನ ಮೈಮೇಲಿನಿಂದ ಕಳಚುವ ತೆಳುವಾದ ಚರ್ಮದ ಆವರಣ–ಪದರ ; ನಿರ್ಮೋಕ : ದಂಡಕರಿಸಿಯರ ಮೆಯ್ಯ ತೊಗಲ್ ಪಾವಿನ ಪೊ[ಶಾಕಾಂ. ಪೆ]ರೆ ಸುಲಿವಂತೆ ಸುಲಿದು ಪೋಗಿ (ಶಬ್ದಾರಾ. ೦೬೨–೨). ೪. ಕಣ್ಣಿನ ಗುಡ್ಡೆಯ ಮೇಲೆ ಬೆಳೆಯುವ, ನೋಟಕ್ಕೆ ಅಡ್ಡಿ ತರುವ ಒಂದು ಬಗೆಯ ಪದರ ; ಕಣ್ಣಿನ ಒಂದು ದೋಷ : ಕಣ್ಣಿನ ಪೊರೆಯನ್ನು ಶಸ್ತ್ರಚಿಕಿತ್ಸೆ ಮಾಡಿ ತೆಗೆದುಬಿಡಬಹುದು (ರೂಢಿ). ೫. ಕಣ್ಣಿನಲ್ಲಿ ಇರುವ ಒಂದು ಬಗೆಯ ತೆಳುವಾದ ಚರ್ಮ ; ದೃಷ್ಟಿಪಟಲ : ಅಂತ ದ್ರ್ರವದ ಚಲನೆಗೆ ಅಡ್ಡಿಯುಂಟಾಗಿ ಪಾಪೆಯ ಪೊರೆಯು ಕೆರಳಿ ಕಣ್ಣೊಳಗೆ ಅಂತರ್ದ್ರವದ ಒತ್ತಡವು ಹೆಚ್ಚುವುದು (ಶಿಶುರಕ್ಷ. ೦೬೦). ೬. ಕಿವಿಯೊಳಗಿನ ಪಟಲ : 'ರಾಜ' ಎಂಬ ಶಬ್ದ ಕಿವಿಯಲ್ಲಿನ ಪೊರೆಯನ್ನು ಚುಚ್ಚುವಂತೆ ಭಾಸವಾಗುತ್ತಿತ್ತು (ಸಂದರ್ಶ. ೪೮). ೭. ತಪ್ಪು; ದೋಷ ; ಕುಂದು : ಕುಡುವಂ ಗುರು ಪಡೆವರ್ ಪೆಱರೆಡೆಯೊಳ್ ನೀಮಾರ್ಗಮಿದೇಕೆ ಕಿಡೆನುಡಿದಪಿರಿಟ್ಟೆಡೆವೆರ್ಗಡೆತ್ತನದೋದೇವಡೆವಿರ್ ನಿಮಗೆಮ್ಮ ಕಜ್ಜದೊಳ್ ಪೊರೆಯುಂಟೇ (ಅಜಿ. ೯–೦೦೬). ೮. ಮುಚ್ಚು ಮರೆ ; ವಂಚನೆ : ನಿನ್ನಡಿಯೋಗದವರೊಳ್ ನೀಂ ಪೊರೆಯಿಲ್ಲದೊಡವೆರೆದಿರ್ದುಂ ತಣಿಯದೆ ಅರ್ಜುನಾದಿಗಳೊಳಾಳರಸುತನಮಂ ಪಲ್ಲಟಂಗೆಯ್ದು ನಲಿವ ಸುಶೀಲನೆಂದುಂ . . . ನಿನ್ನ ಕಲ್ಯಾಣಗುಣಂಗಳಂ ಕೇಳ್ದು (ಜೈಮಿ. ೩೦). ೯. ಅರಗಿನ ಕೀಟವು ದ್ರವರೂಪದಲ್ಲಿ ವಿಸರ್ಜಿಸುವ ಅರಗಿನ ಕವಚ : ಅರಗಿನ ಲಾರ್ವಗಳು ಪ್ರೌಢಸ್ಥಿತಿ ಮುಟ್ಟುವ ಮುನ್ನ ಮೂರು ಬಾರಿ ತಮ್ಮ ಪೊರೆಗಳನ್ನು ಬಿಡುತ್ತವೆ (ಕೀಟಲೋ. I, ೪೪೫). ೧೦. (ಆಲಂ) ಮಾಯೆ ; ಭ್ರಮೆ : ಸುಬ್ಬುವಿನ ಕಣ್ಣಿನ ಪೊರೆ ಕೊಂಚ ಹಾರಿದಂತಾಯಿತು (ಧೀಮಂತ. ೨೦೫). **ಪರೆ₄** : ೨. ಶ್ವಾಸಕೋಶದ ಒಳಮಗ್ಗುಲಲ್ಲಿ ನೂರಾರು ಸೂಕ್ಷ್ಮರಂಧ್ರಗಳೂ ಪರೆಗಳೂ ಇವೆ (ಶಾಲಶ. I, ೩೦೮) ; ಗಾಳಿಯ ಪರೆಗಳೆಂಬ ಹೆಸರನ್ನು ಪಡೆದಿದ್ದ ಬಟ್ಟೆಗಳು ರಚಿತವಾಗಿದ್ದುವು (ಶಾಕಿಶ. ೩೯೬). ೩. ಸುದತಿಯು ದಿವ್ಯಗಂಧ ಕುಸುಮಚಂದನಶಾಖೆಯೊಳಂಗಜಾಹಿಯಿಕ್ಕಿದ ಪ[ಶಾಕಾಂ. ಹೆ]ರೆಯಂತಿರುಟ್ಟ ದುಕೂಲಮ . . . ಒಪ್ಪಿದುದು (ಅರ್ಥಶಿ. ೨–೦೬ ; ಕಾವ್ಯಸಾ. ೬೪೬ ನೋ) ; ಮಹಾಸರ್ಪವು ಜೀರ್ಣವಾದ ಪರೆಯನ್ನು ಬಿಡುವ ಹಾಗೆ (ಶ್ರೀವಾಣಿ. ೨೬೮) ; ಹಳೆಯ ನೆನಪುಗಳು ಮರುಕಳಿಸಿದವು ಹಾವಿನ ಪರೆಯೊಳು ಜೀವ ನುಸುಳಿದೊಲು (ಸ್ವದರ್ಶಿ. ೨೬). ೪. ಪರೆ ಪ್ರಾರಂಭವಾಗಿರುವ ವ್ಯಕ್ತಿಯ ಮಾನಸಿಕ ಶಕ್ತಿ ಮತ್ತು ಕಾತುರತೆಗೆ ಭಂಗವಾಗದಂತೆ ಎಚ್ಚರಿಕೆಯಿಂದ ವೈದ್ಯರು ಸಲಹೆ ಕೊಡಬೇಕು (ಶಿಶುರಕ್ಷ. ೧೬೩). 'ಪರೆಗಣ್ಣು' ಪರಾ. ೫. ಆಮೆ (Turtle) ಪಾಪೆಯ ಪರೆಯನ್ನು ಹೊಂದಿರುವ ಮೊದಲ ಜೀವಿ. ಪಾಪೆಯ ಪರೆಯು ಕಣ್ಣೊಳಗೆ ಪ್ರವೇಶಿಸುವ ಬೆಳಕಿನ ಕಿರಣಗಳನ್ನು ಮಿತಿಗೊಳಿಸುವುದು (ಶಿಶುರಕ್ಷ. ಪ್ರಕೃತಿಯಲ್ಲಿನ ಕಣ್ಣುಗಳು — ದಶರೂಪಕಗಳು). ೧೧. ಭ್ರೂಣವನ್ನು ಆವರಿಸಿರುವ ತೆಳುವಾದ ಹೊದಿಕೆ ; ಭ್ರೂಣದ ಚೀಲ : ಜರಾಯು–ಗರ್ಭದೊಳಗಿನ ಶಿಶುವಿಗೆ ಸುತ್ತಿದ ಪರೆ (ಗಂಗಾಮ. ೦೩೬). ೧೨. ಮಂಡೆಯ ಚರ್ಮವು ಸುಲಿದು ಕೂದಲಿನ ಬುಡದಲ್ಲಿ ಏಳುವ ಹೊಟ್ಟು; ಹಗರು : (ಆ). **ಪೆರೆ₃** : ೩. ಕರ್ಬಿಲ್ಲದ ಕಾಡಿಗೆ ಕಂದರ್ಪನ ಜಸಂ . . . ಸರ್ಪನ ಪೆರೆ ಜಲಕನಾಯ್ತು ಪೊಸವೆಳ್ದಂಗಳ್ (ಪುಂಪ್ರಕ್ಷ. ೬–೪೪) ; ಪೊರೆವಿಡಿದು ಪೊಕ್ಕು ಪಾವಿನ ಪೆರೆಯಂ ಪೊತ್ತೋಂತಿಯೊಂದು ಪರಿತರೆ (ಅರ್ಥಪೆ. ೫–೮೨) ; ನವರತ್ನರಾಜಿ ಫಣಮಣಿ ಕವಿದ ಮುಗಿಲ್ ಪೆರೆ ಕರಾಳಪವನಂ ಪೂತ್ಕಾರವೆನಲ್ ಮಂಡಳಿತಮಹಾಹಿವೊಲಿರ್ಪುದು ಸುತ್ತಿ ಮಾನುಷೋತ್ತರಶೈಲಂ (ಪುಷ್ಪಕ್ಷ. ೧–೯೨). **ಹರೆ₄**: ೩. ಹಾವಿನ ಹರೆಯ ತಂದು . . . ಹರೆಯನಿಕ್ಕಿ ಕಟ್ಟಲು ಜ್ವರ ಮಾಣ್ಗುಂ (ಶಿವ್ಯಶಿ. ೮೦೮). **ಹೆರೆ₆**: ೩. "ನಿರ್ಲಯನೀ, ನಿರ್ಮೋಕಂ, ಕಂಚುಕಂ—ಈ ೩ ಹಾವಿನ ಹೆರೆ" (ಹಲಾಯು. ೦೦೬–೨೨) ; ಬಿನ್ನವಿಸು ಮನ್ನಣೆಯ ವನಜಾಕ್ಷ ಕೈಮುಗಿದು ನಿನ್ನ ಹೆಡೆಗಳನುಡುಗಿ ನಿಲ್ಲಹಿಪ ಹೆರೆ ತೆಗೆದು (ಶೀರಪ. ಹ. ೪೮೩–೫) ; ಹೀಲಿಗಱಿ ಗುಗ್ಗುಳ ಹಾವಿನ ಹೆರೆ ಇವಂ ಕೂಸಿಂಗೆ ಧೂಪವಿಕ್ಕುವುದು (ಬಾಲಚಿ. ೦೨೪–೦೪). **ಹೊರೆ₅** : ೧. ಬೆಂದ ಮಸಿಯ ತೊಳೆದಡೆ ನೊಂದಿತ್ತೇ ಅದು ಎನ್ನ ಹೊರೆಯನೆತ್ತಿದರೆಂದು (ಶೋಶವಚ. ೨೦–೬೪) ; ಕಾರ್ಗಾಲದ ಕರಿಯ ಮುಗಿಲ ಹೊರೆಯೊಳು ಹರಿದಾಡುವ ಕಱುಮಿಂಚಿನ ತೆಱದಿ (ಜಯಗಾ. ೫–೨). ೮. ಮಱಿಗಳಱಿಗಳು ವೈಶಿಕಂಗಳು ಬಱಿಯ ಹುಸಿ ನುಸುಳುಗಳು ಕಾಮುಕರಱಿಕೆಗಳು ಬಹುಭಾಷಣಗಳು ಹೊರೆಗಳೆರವುಗಳು (ಬಸಪು. ೪೦–೬೦); ಅರಸನಂಕೆಯ ಮನದ ಬಯಕೆಯ ಹೊರೆಯ ಬಳಕೆಯನೀ ಸಮಂಜಸತರದ ಸಾತ್ವಿಕರೆತ್ತ ಬಲ್ಲರು (ಉತ್ತಾಭಾ. ೯–೬೬); ತಪ್ಪೇನು ನಿನ್ನಯ ಹೇಳಿಕೆಗೆ ಹೊರೆಯಿಲ್ಲ ಹೋಗಲು ಬಹುದು ಬಾಂಧವರ ಆಲಯಕೆ (ಶಿಭಾಗ. ೪–೦–೨೩). ೧೩. ಸಿಪ್ಪೆ; ತೊಗಟೆ : ಹಿರಿದು ಹೊರೆಗಳ ನೊಂದನೊಂದು ತರಳಿ ಸುಲಿಯಲು ಬಾಳೆಯದು ತಾನೊರೆಯಲಿಲ್ಲದೆ ಮುನ್ನಿನಾಕೃತಿಯಿಲ್ಲದಿಪ್ಪವೊಲು (ಬಸಪು. ೩೫–೩೮). ೧೪. ವ್ಯತ್ಯಾಸ ; ಭೇದ : ಕ್ಷೀರ ನೀರಿನಂತೆ ಹೊರೆ ಇಲ್ಲದೆ ವರ್ಣಭೇದವಿಲ್ಲದೆ ಕೂಡಬೇಕು (ಷೋಶವಚ. ೨೮೦–೪೩) ; ತ್ರಿಪುಂಡ್ರವ ಧರಿಪಗನ್ನೊಳುಂ ಹೊರೆಯಿಲ್ಲ ನಿಶ್ಚಯವಿದು (ಅಶಿಪಂ. ೪೦–೨೨); ದೇವದೇವಾಧಿಪನ ಹೊರೆಯಿಲ್ಲದೆ ಕೂರ್ತು ಕೃತಿವೇಳು ಖಂಡಶರ್ಕರೆಯಂತೆ ಸವಿಮಾತುವೆರಸಿ (ಮೋಹಕ. ೧೬–೧). ೧೫. ಶ್ವಾಸನಾಳ : 'ಹೊರೆಯೇರಂ₂' ಪರಾ.

**ಪೊರೆಯ ಲಡ್ಡುಗೆ** = ಒಂದು ಬಗೆಯ ಭಕ್ಷ್ಯ; ಪದರಗಳಿಂದ ಕೂಡಿದ ಲಡ್ಡುಗೆ (?) : ಬಿಳಿಯ ಕಡಲೆಯ ಸಣ್ಣ ಹಿಟ್ಟ ಸೋದಿಸಿ ಹಾಲಿನೊಳಗಿಕ್ಕಿ ಸಂಪಳವ ಮಾಡಿ ತೆಂಗಿನ ಕರಟದೊಳಗೆ ಕಿಱುಪೆರಲ ಗಾತ್ರದ ವೆಜ್ಜವಂ ಮಾಡಿ ತುಂಬಿ ತುಪ್ಪವನು ಕಾಸಿ ಇಳಿಯ ಬಿಡೆ ಬುರುಬುರನೆ ಬೆಂದು ಹದನಾದುಂಡೆಗಳಿಗೆ ಸಕ್ಕರೆಯ ಪಾಕವ ಹೊಯ್ದು ನವ್ಯಪರಿಮಳವನಿಕ್ಕಿ ಕಟ್ಟಿ ಪೊರೆಯ [ಶಾಕಾಂ. ಹೊರೆಯ, ಸೊನೆಯ] ಲಡ್ಡುಗೆಗಳೆಂದು ಹೆಸರನೊಲವಿಂ ಕರೆವುದು (ಸೂಶಾ. ೦–೫೬).

[ದೇ. ॥ ತಮಿ. ಪುರ್ರೈ; ತುಳು. ಪರೆ; ತೆಲು. ಪೊರ]

**ಪೊರೆ₇** 'ಪೊಣೆ³' ನೋ.

**ಪೊರೆಕಳಚು, ಪರೆಗಳಚಂ** (ಕ್ರಿ). ೧. (ಹಾವು) ತನ್ನ ಚರ್ಮದ ಆವರಣವನ್ನು ಕಳಚು; ನಿರ್ಮೋಕವನ್ನು ಬಿಡು : ನಿರ್ಮುಕ್ತ್ಯ, ಮುಕ್ತಕಂಚುಕಃ_ ೨ . . . ಪೊರೆ ಕಳಚಿದ ಹಾವು (ಸಿದ್ಧಾಂತಿ. ೭೩). **ಪರೆಗಳಚು :** ೨. (ಆಲಂ) ಜಾಡ್ಯವನ್ನು ಬಿಡು; ಉತ್ಸಾಹವನ್ನು ಹೊಂದು : ರಷ್ಯಾ ಜಪಾನು ತುರ್ಕಿಗಳೆಲ್ಲ ಪರೆಗಳಚಿ ಹೊರಟಿಹವು ಹೊಸಪಯಣಕೆ (ಕೋಗಿಲೆ. ೨೬-೬). [ಪೊರೆ₃ + ಕಳಚು (< ಕಟಲ್ಚು₁)]

**ಪೊರೆಕೈ** (ಕ್ರಿ) . ಪೋಷಣೆ ಮಾಡು ; ಪೋಷಿಸು : ಕವಳವನೊಲ್ದು ಕೂಡಿಸುವ ರೋಗದವಂ ಪೊರೆಕೈವ . . . ಸೂಕಳಾಶ್ಯಮುಂ ಜವಳಿಯು ಸಿಕ್ಕಿಯೋಡಿಸುವ ವಾರುವವಂ ನಡೆಪಾಡಿಸಲ್ಕೆ ನೋಡುವ ಮಂಜಿಗಳ್ಗೆ ಪಾಲನೆಜ಼ಿವೃದ್ಧುಗವಂ ತಳೆದಿರ್ಪನಾವಗಂ (ನಳಚಂ. ೩೪೯) .

[ಪೊರೆ₃ + ಕೈ₁₁ (< ಕೆಯ್₁)]

**ಪೊರೆಗಳೆ** (ಕ್ರಿ) . ಸಾಮೀಪ್ಯವನ್ನು ಕಳೆದುಕೊಳ್ಳು ; ದೂರವಾಗು : ಕೆಲಕೆಲರ್ ಪೊಯ್ಲ್ಲ ಪೊರೆಗಳೆವುತುಂ ಕಳವುತುಂ ಕೆಲಕೆಲರ್ ಪಂಥಗಳನುಡಿವುತುಂ ಜಡಿವುತುಂ ಕೆಲಕೆಲರ್, ಸೊಗಸಿನಿಂದಾಡುತುಂ ಪಾಡುತುಂ ಕಣ್ಗೆ ಸೆದರಾ ಕೊಳದೊಳು (ಕಂಪು. ೩೭-೬೪). [ಪೊರೆ₄ + ಕಳೆ₁]

**ಪೊರೆದೋಱು, ಹೊರೆದೋಱು** (ಕ್ರಿ). ೧. ಪದರವು ತೋರು ; ಪದರು ಬಿಚ್ಚು ; ಅರಳು : ಪರಿಯೆ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋಱೆ ತಂಬೆಲರ್ ಪೊರೆವೊರೆಯಂ ಸಡಿಲ್ಚೆ ನಡುಪೋಗಿರೆ ವಲ್ಲಿಗಳ್ ವಸಂತದೊಳ್ (ಅಂಪು. ೧೧-೧೦೬) ; ಕನಗೋನರೆಲ್ಲೆಯಲ್ಲಿ ವಿಳೆದಾಡುವ ನುಣ್ದಳಿರಲ್ಲಿಯಲ್ಲಿ ಬಲ್ಮನೆಗಳವಲ್ಲಿಯಲ್ಲಿ ಪೊರೆದೋಱುವ ಮೊಗ್ಗೆಗಳಲ್ಲಿಯಲ್ಲಿ . . . ಎನೆ ಸೋಲಿಸುಗುಂ ಬಿಡದಾವನಂ ಬನಂ (ಕಬ್ಬಿಗ. ೩೨). **ಹೊರೆದೋಱು :** ೨. ಭೇದವು ಕಾಣು ; ವ್ಯತ್ಯಾಸವು ತೋರು : ಹೆಸರಿಗಂ ದೇಹಿಗು ಭಿನ್ನವಿಲ್ಲದ ತೆಱದಿಯೆಸೆವ ಪಂಚಾಕ್ಷರಿಗೆ ಶಿವನೊಳಂ ಹೊರೆದೋಱದು (ಚಶಿಪು. ೪೦-೫). [ಪೊರೆ₄ + ತೋಱು]

**ಪೊರೆನೆತ್ತರ್** (ನಾ). ಹತ್ತಿರದ ಸಂಬಂಧ,_ಬಾಂಧವ್ಯ; ರಕ್ತಸಂಬಂಧ: ಪೊರೆನೆತ್ತರಯ್ದುದಿಂಬರ್ ದಾಯಿಗರ ಬೇಂಟವನ್ ತಪ್ಪಿಸಲ್ಕೋಡಿ, ಒತ್ತಂಬದಿಂದಗ್ಗಸ್ಗೆ ಪಿಂದಿರುಗಿದಪ್ಪರ್ (ಬಿಧ್ವಕ್ರ. ೪೩-೪೬೦).

[ಪೊರೆ₄ + ನೆತ್ತರ್]

**ಪೊರೆನೆತ್ತರ** (ನಾ). ಹತ್ತಿರದ ಸಂಬಂಧಿ,_ಬಂಧು ; ರಕ್ತಸಂಬಂಧಿ : ಪೊರೆನೆತ್ತರನೋ ಪೊಱಬಿಗನೋ ಮೇಣ್ ಏನಾದೊಡಮೇಣ್ ಎಲ್ಲವ ರಿಂದಮ್ ನಿನ್ನನೆ ಮಿಗೆ ನಾನ್ ಮನ್ನಿಸಿದಪ್ಪೆನ್ (ಬಿಧ್ವಕ್ರ. ೦೭-೩೪೦).

[ಪೊರೆನೆತ್ತರ್ + _ಅ₇]

**ಪೊರೆಪು₁, ಹೊರಹು₁** (ನಾ). ೧. ರಕ್ಷಣೆ ; ಆಶ್ರಯ : ಗೋವಳಿಗನ ಮಗನೆಂ ಪೊರೆಪಾವುದುಮಿಲ್ಲೇಕೆ ಮುಳಿವನಂತುಂ ಮುಳಿವಂದೇವುದೊ ಚಾತುರ್ದಂತಂ ಕಾವುದೆ ಕಾವಡಮ ಪುಣ್ಯಮೊಂದೇ ಕಾಗುಂ (ಬಂಹರಿ. ೬-೯೬). ೨. ಪಾಲನೆ ; ಪೋಷಣೆ : ದುರಿತಭಯದಿಂ ಕಳತ್ರದ ಪೊರೆಪಂ ಬಿಸುಟಿರ್ದ ಮುನಿಗೆ ಪುತ್ತ್ರಂ ದೋಷಂ ಪೊರೆವೊಡೆ ಮರ್ದಿಂದಟ್ಟುಮೆ ಕರಮಪ್ಪೊದರ್ಕೆ ಮಗುಟ್ಟು[ಪಾಠಾಂ. ಮರ್ದು] ಬಲ್ಲವರೊಳರೇ? (ಜನಸಂ. ೦೩೯-೦೯) ; ನಮ್ಮ ಮಹಾರಾಜಾಶ್ರಯದ ಪೊರೆಪಿನಿಂದ ತೇಜವಡೆದರ ಆ ಶಿಶುಗಳಿಗೆ ಸದಾಕಾಲದಲ್ಲೂ ದ್ವೇಷ ಹಿಂಸೆ ಪ್ರಾಣ ಸಂದೇಹಗಳು ತಪ್ಪದೆ ಆಡಸಲುಳ್ಳುವು (ಪಂಚತ್ರಕ. ೦೭-೨೩). **ಹೊರಹು₁ :** ೨. ಇರುಳೆಡೆಯೊಳಗೆ ಬಲ್ಲಿದರು ಜೊನ್ನದ ಪಾಲ ಹೊರಹಿಂದ ಬೆಳೆದ ರಸಿಕರು ತರುಣಿಯರಾಲಿ ಗಾಯತದ ಚಕೋರಿಯ ದೊರೆಗನ್ನಡಿಗರ ಪಾಜಿದೇಕೊ (ಪರ್ವಕ. ೧೦-೦೩೦).

[ಪೊರೆ₃ + _ಪು₂]

**ಪೊರೆಪು₂, ಪೊರಪು** (ನಾ). ೧. ಸಂಸರ್ಗ ; ಸೋಂಕು : ನೀರಜದ ರಜದ ಪೊರೆಪಾ ನೀರೇಜದ ನೀರ ಪೊರೆಪು ಪೊರೆವೊರೆ ನೀಂ [ಸಂ]ಸಾರಕ್ಕೆ ನಿನಗವಿಪಾ ಸಂಸಾರಂ ಪೊರೆವೊರೆ (ಶಾಂತಿಪು. ೧೦-೯೬). ೨. ಉತ್ಸಾಹ ; ಹುರುಪು : 'ಪೊರೆಪುದೋಱು' ಪರಾ. **ಪೊರಪು :** ೩. ಬಳಿಯುವಿಕೆ ; ಲೇಪನ : ನಾಟಕಶಾಲೆ . . . ಸಿರಿಗಂಪು ಕುಂಕುಮ ಪನ್ನೀರು ಸಾದು ಕತ್ತುರಿಯ ಸಾರಣೆ ಚಳಿಯಗಳಾ ಪೊರಪಿಂದ ಸ್ವರ್ಗದ ಕಂಪ ತುಂಬಿದ ಹೊನ್ನ ಕರಡಿಗೆ ಯಂತೊಪ್ಪುತಿಹುದು (ಅಕ. ೦೨-೧೪). [ಪೊರೆ₄ + _ಪು₂]

**ಪೊರೆಪುದೋಱು** (ಕ್ರಿ). ಉತ್ಸಾಹಗೊಳ್ಳು ; ಹುರುಪಾಗು : ವಿಳಾಸಿನೀ ನಯನಕೈರವದಿಂ ದೆಸೆ ಕೂಡೆ ಪೂಗೊಳಂದೋಱೆ ವಿಳಾಸದೊಳ್ ಪೊರೆಪು ದೋಱಿದುದಾಗ ಮನಂ ನೃಪೇಂದ್ರನಾ (ಅಶಾಂಕು. ೬-೬೩).

[ ಪೊರೆಪು₂ + ತೋಱು ]

**ಪೊರೆಬಿಡು** 'ಪೊರೆವಿಡು' ನೋ.

**ಪೊರೆಯಿಕ್ಕು** (ಕ್ರಿ). ಕೂಡಿಸು ; ಬೆರಸು ; ಮಿಶ್ರಮಾಡು : ನಾರಳೆ ದಂಟ ಕತ್ತರಿಸಿ ಪಿರಿದು ಮಘಮಘಿಪ ತಿಳಿದುಪ್ಪಮಂ ಹೊಯಿದು . . . ಕಾಯ್ದಾಱಿದಮ್ಮೆವಾಲೊಳಗೆ ಮುಱಿದಿರಿಸಿ ಹೊಸಸಕ್ಕರೆಯ ಹಾಕಿ ಪಮಳಗಳಂ ಪೊರೆಯಿಕ್ಕಿದದುವೆ ತುಪ್ಪದ ಪಾಯಸಂ (ಸೂಶಾ. ೬-೦೨).

[ ಪೊರೆ₄ + ಇಕ್ಕು ]

**ಪೊರೆಯಿಡು, ಹೊರೆಯಿಡಂ** (ಕ್ರಿ). ೧. ಬಳಿ ; ಹಚ್ಚು ; ಲೇಪಿಸು : ಅರುಣಾಂಭೋರುಹದಲರ್ಗಲತಗೆಯಂ ಪೊರೆಯಿಟ್ಟು . . . ಕರಂ ಹಂಸದಿ ಬದಿ ನಿರ್ಮಿಸಿದಂದದಿನೊಪ್ಪಿದುವವಳಂಘ್ರಿಗಳು (ಜಯನೃ. ೬-೨೬). ೨. ಪುಷ್ಪರಸ, ಗಂಧ ಮೊದಲಾದ ಪರಿಮಳದ್ರವ್ಯಗಳನ್ನು ಬೆರಸಿ ಸುವಾಸನೆಯು ಹೆಚ್ಚುವಂತೆ ಮಾಡು : ಗೊಂದಣದ ಸಂಭಾರಮಂ ಮೆತ್ತಿ ತಿಳಿದುಪ್ಪದಿಂದೋಟಿಯಡಿಯಾಗಿ ಪೊಗ್ಗರಣೆಮಾಡಿ ಹೂವಿಂದ ಪೊರೆಯಿಟ್ಟು ಮಡಕೆಯೋಳಿರಿಸಲದು ತುಂಬುವಾಳಿಗಾಯ್ಮೆಸರಾದವು (ಸೂಶಾ. ೯-೬೬). ೩. ಹೊಳಪು ಕೊಡು ; ಒಪ್ಪ ಹಾಕು : ಕೊಳೆದಮರ್ದಿನ ತಿರುಳ ಮಿಂಚ ಬಾಂಬೇಳಿವೆಳಗಿಂದವೆ ಪೊರೆಯಿಟ್ಟ ತಿಳಿಜೊನ್ನದೊಳು ಭಾವನೆ ಮಾಡಿದಂತೆ ಪಜ್ಜಳಿಸಿದುದಭವನ ಕಾಂತಿ (ಶ್ರೀಹಾಂ. ೬-೬೦). **ಹೊರೆಯಿಡು :** ೨. ಅಪ್ಪಭಾಗವನಪ್ಪಗಂಧದೊಳಗೆ ಹೊರೆಯಿಟ್ಟು ಬಟ್ಟಲುಗಳ ತೀವಿ ಬಟ್ಟರೀರಾಱು ತುಂಡಹ ಬಳಿಯೆಲೆಯ ತಂದಿಟ್ಟಣಿಸಿದರಬಲೆಯರು (ಅಂಶ. ೬-೯೯). [ಪೊರೆ₄ + ಇಡು₁]

**ಪೊರೆಯಿರ್** (ಕ್ರಿ). ಹತ್ತಿರದಲ್ಲಿರು ; ಸಮೀಪವಿರು : ಕೊನೆಗೆ, ಬಂದಿರ್ದ್ದುದಿನ್ ಇರದೆ ಪೊಡೆದಾಟಕವರ್, ತಡೆವನುವರ್ ಪೊರೆಯಿರ್ದ್ದನಿಲ್ಲ (ಅಂತಿಗೂ. ೦೨-೨೯೨). [ಪೊರೆ₄ + ಇರ್₁]

**ಪೊರೆಯಿಸು** (ಕ್ರಿ). ರಕ್ಷಿಸುವಂತೆ ಮಾಡು; ಸಲಹುವಂತೆ ಮಾಡು : ಈ ಧಾರುಣಿಯನಾಳಿಸುವುದೊಂದೇನರಿದೆ ನಾ ನಿನ್ನ ನೀರಧಿಯ ಪರಿಯಂತ ಭೂವಿಸ್ತಾರವಂ ಪೊರೆಯಿಸುವೆನು (ಜಪು. ೫-೬೪). [ಪೊರೆ₃ + _ಇಸು₁]

**ಪೊರೆಯುರ್ಚು₁, ಪರೆಯುಚ್ಚು, ಪೆರೆಯುಚ್ಚು, ಪೆರೆಯುರ್ಚು, ಹೆರೆಯುಚ್ಚು, ಹೆರೆಯುರ್ಚು** (ಕ್ರಿ). ೧. (ಹಾವು ತನ್ನ) ಹಳೆಯ ಚರ್ಮವನ್ನು ಬಿಡು,_ತ್ಯಜಿಸು : ಹಳೆಚರ್ಮ ಪೊರೆಯುರ್ಚುವ ಮೊದಲು ಈ ಚರ್ಮದ ಜೀವಕಣಗಳು (Hypodermal cells) ಒಳಗಡೆ ಹೊರಚರ್ಮ ಮತ್ತು ಮೇಲ್ಪದರ್ಮಗಳನ್ನು ಸ್ರವಿಸಿರುತ್ತವೆ (ಕೀಟಜೀ. ೦೨೯). **ಪರೆಯುಚ್ಚು :** ೨. ಆವರಣವನ್ನು ತ್ಯಜಿಸು,_ಕಳಚು : ಪರೆಯ ಮರೆಯಲ್ಲಿಹ ಲಿಂಗವೇ ನೀ ಪರೆಯುಚ್ಚಿ ಬಹೆಯೆಂದು ಲಿಂಗವೇ (ಅರಚಂ. ೪೩೭-೫). **ಪೆರೆಯುಚ್ಚು :** ೧. ರಥಕರ್ದಬ್ಬನೆರಡಂಬಿನಿಂದೀತನ ಕಿರೀಟಮಂ ಕವಚವಂ ಮೂಱಿಱಿಂದೆ ಕೊಚ್ಚಿ ಕೆಡಹಿದನಾಗ ಜಾನಕಿಯ ಸೂನು ಪೆರೆಯುಚ್ಚಿದಹಿಪತಿಯ ಶೌರ್ಯವಿಮ್ಮಡಿಸೆ (ಕೈಟಭಾ. ೨೦-೫೪). **ಹೆರೆಯುರ್ಚು :** ೧. ಪೆರೆಯುರ್ಚಿ ದಾಂಟಿ ಕೋಳ್ಪ(ಲ್ಪ)ಪ್ಪಿರೆ ಪಣೆಗೂಳೆ

ಸೊರ್ಕೆ ಶಂಕೆ ದೊರೆಕೊಳೆ . . . ಪಾವು ಕೊಳ್ಗುಂ ನವನು (ಲೋಕೋಪ. ೧೦-೨) ; ಜಾನಕಿಯನುಳಿದು ಪೆರೆಯುರ್ಚಿದುರಗನಂತಿರ್ದಪೆಂ (ಕೃಮಿಚಾ. ೦೬-೩೭). ಪೆರೆಯುಚ್ಚು : ೧. ಪೆರೆಯುಚ್ಚಿದ ಸರ್ಪದಂತೆ (ಶಾಗಂ೦. ೧೦೩-೨). ಹೆರೆಯುರ್ಚು : ೧. ಪಾವುಗಳ್ಗೆ ಹೆರೆಯುರ್ಚುವಾಗಳ್, ಮಂಡಲಂಗೊಂಡಿರ್ದಲ್ಲಿ ದಾಂಟಿ ಪೋಗಲ್, ಕೋಲಿನಲ್ಲಿ ಪೊಯ್ದು ನೋಯೆ ಪಗೆಗೊಂಡಿರ್ದಲ್ಲಿ . . . ಆ ಹಾವು ಮನುಷ್ಯರಂ ಕರ್ಚುವುದು (ಲೋಕೋಪ. ೧೦-೨ ಟೀಕು) ; ನಿರ್ಮುಕ್ತಃ, ಮುಕ್ತಕಂಚುಕಃ — ಈ ೨ ಹೆರೆಯುರ್ಚಿದ ಹಾವಿನ ಹೆಸರು (ನಾಚಿರಾ. ೯೬). [ಪೊರ್೬ + ಉರ್ಚು]

**ಪೊರೆಯುರ್ಚು₂** (ನಾ). (ಕೀಟ ಮುಂತಾದುವು ಹಳೆಯ) ಚರ್ಮವನ್ನು ಬಿಡುವಿಕೆ, –ತ್ಯಜಿಸುವಿಕೆ : ಹೊರಗಡುಸು ಚರ್ಮದ ಕೆಳಗೆ ಒಳಚರ್ಮ ಬಂದು ಪೊರೆಯುರ್ಚು ಪೂರೈಸುತ್ತದೆ (ಕೀಟಕ. ೦೩೪); ಪೊರೆಯುರ್ಚುಗಳ ಸಂಖ್ಯೆ ನಿರ್ದಿಷ್ಟವಲ್ಲ (ಕೀಟಕ. ೦೨೩). [<ಪೊರೆಯುರ್ಚು₁]

**ಪೊರೆಯೆತ್ತು₁** (ಕ್ರಿ). ಕೂಡಿಸು ; ಬೆರಸು ; ಮಿಶ್ರಮಾಡು : ತೊಳೆದ ಗೋಧುವೆಗೆ ಜೇಂಗಿಯೆರಡ ಪೊರೆಯೆ[ತಾಳಾ೦.ಯೊ]ತ್ತಿ (ಸೂಶಾ. ೩-೪೦). [ಪೊರ್೬ + ಎತ್ತು₁]

**ಪೊರೆಯೆತ್ತು₂**, ಹೊರೆಯೆತ್ತು (ಕ್ರಿ). ಪದರವನ್ನು ತೆಗೆ : ಪೊರೆಯೆತ್ತಿದ ಬೆಳ್ದಿಂಗಳ ಪೊರೆ ಗಂಗೆಯ ಪೊನಲೊಳೊಗೆದ ತೆರೆ ಶೇಷನ ಮೆಯ್ವೊರೆಯೆನಿಪ ನವದುಗೂಲಾಂಬರಕ್ಕೆ ಪರಭಾಗಮಾಯ್ತು ದೇಪಪ್ರಭೆಯಿಂ (ಪುಷ್ಪದ. ೬-೦೨೧); ಖಚರಿಯರ್ ನೀರೆಡಸಲೊಡಂ ಕರಿಯ ಕಟಿಯ ಮುಗಿಲಂ ಖಚರರ್ ಒಡೆದು ಪೊರೆಯೆತ್ತಿ ಮಿಂಚಿನ ಪುಡಿಕೆಗಳಂ ತೆಟಿದ ತೆಜದೆ ತೋರ್ಪುವು ನಗಗಳ್ (ಅಧಿತ್ರಾ. ೨.೬೩); ಉಚ್ಚವೆಳ್ದಿಂಗಳನೀಗಳ್ಪೊರೆಯೆತ್ತಿದರೇಬಂತೆಯೊಳ್ಪಂ ಗೆಡಗೊಂಡು ಸೊಗಯಿಸುವ ಮಂಡಗೆಯಂ . . . ಬಟ್ಟಲೊಳಿಟ್ಟರ್ (ಪಾರ್ಶ್ವಪು. ೮-೩೦). ಹೊರೆಯೆತ್ತು : ಮಾಡುವ ಭಕ್ತನ ಕಾಮ ಬಾಳೆಯ ಕಂಭದಂತಿರಬೇಕು ಮೆಲ್ಲಮೆಲ್ಲನೆ ಹೊರೆಯೆತ್ತಿ ನೋಡಿದರೆ ಒಳಗೆ ಕೆಟ್ಟಿಲ್ಲದಿರಬೇಕು (ಬಸವ. ೩೨೩). [ಪೊರ್೬ + ಎತ್ತು₁]

**ಪೊರೆಯೇರು** 'ಪೊರೆಯೇಱು' ನೋ.

**ಪೊರೆಯೇಱಿಸು** (ಕ್ರಿ). ೧. ಲೇಪಿಸು ; ಬಳಿ : ಕೆಂಪಡರಿದ ಅರಲ್ಗೀ ವಿದಸುಕೆದೊಂಗಲ ತಿಱಿದರು ಕೈಗರಳ್ಗೆಂಪ ಪೊರೆಯೇಱಿಸಲೆಂದು (ಸೂದಶೋ. ೩-೩೯). ೨. ಸಂತೋಷಪಡಿಸು : ತನ್ನಂ ಪೊತ್ತು ಮನ್ನಣೆಯಿಂ ಮುನ್ನಂ ಪೊರೆಯೇಱಿಸಿ ಪೊರೆದ ಮಣಿಗರ್ಭಗಣಿಯರಂ ಬಾಗಿ ಬಳ್ಕಿ ಪಣಿವ ಮಾಳ್ಕೆಯಿಂ . . . ಎಱಗಿ ನಿಂದ ರಾಜಕದಳಿಗಳಂ (ಕಬಕಂ. ೨-೯೨ ವ). ೩. ಚಿಗುರಿಸು : ಪಲ್ಲವಿಸುವಂತೆ ಮಾಡು : ಅಶೋಕೆಯನೊದೆದಂಕುರವಂ ಪುಟ್ಟಿಪ ಪದ್ಮಮುಖಿಯುಂ ಕುರುವಕವುಂ ಪರಿರಂಭಣದಿಂ ಪೊರೆಯೇಱಿಸುವ ತರುಣಿಯರಿಂ (ಗಂ೦ಕ. ೬-೧೦ ವ). [ಪೊರೆಯೇಱು + — ಇಸು₂]

**ಪೊರೆಯೇಱು**, ಪೊರೆಯೇರು, ಹೊರೆಯೇರು₁, ಹೊರೆಯೇಱು (ಕ್ರಿ). ೧. ಸಂತೋಷಪಡು ; ಆನಂದಿಸು ; ಉತ್ಸಾಹಗೊಳ್ಳು : ಬಡಿದೊಡೆ ಪೊಂಗಿ ಪಂದೊವಲವೊಲ್ಪೊರೆಯೇಱುವ . . . ಬದಂಗನಂ ಬೆಸನಿಯಲ್ಲದಳಾತನನೊಟ್ಟಿ ಸುಟ್ಟಪಳ್ (ಆದಿಪು. ೨-೬೩) ; ಕೃತಕೃತ್ಯನಾದೆನೆನುತ್ತೆ ಪೊಂಗುತುಂ ಪೊರೆಯೇಱುತುಂ ನುತಿಸಿ (ಪದ್ಮಪು. ೩-೩೪); ತರಳನಯನದೊಳು ನಡೆನೋಡುತ್ತ ಪಾಡುತ್ತ ಪೊರೆಯೇಱಿ ನಲಿದಾಡುತ (ಸೌಂದಪು. ೩-೨೦). ೨. ಪ್ರಖರವಾಗು ; ಉಜ್ವಲವಾಗು : ಪರೆವುದು ದುರಿತತಮಿಸ್ರಂ ಪೊರೆಯೇಱುವುದವುಳದೃಷ್ಟಿ (ಯಶೋ. ೦-೨೩); ಮೆಲ್ಲಮೆಲ್ಲನೆ ಹಿಮಂ ಸರಿಯೆ ಪೊಸಮಿಸಿಲ್ಪೊರೆಯೇಱಿ ಮೆಯ್ಯ ಬಿಱುಬು ಗಳಡಂಗಿ . . . ಮೆಱೆದುದು ವಸಾಗಿಯುಪಜಯಂ ಮಧುವಿನ ಜಯಂ (ಪದ್ಮರಾ. ೮-೨). ೩. ದೊಡ್ಡದಾಗು : ತೆಳುವಸುಱು ಪೊರೆಯೇಱದಾ ಹೊಂಗಳಸವೊಲೆತುದಿ ಕಂದದು (ಸಾಳ್ವಭಾ. ೩೨-೫೯). ೪. ಉಬ್ಬು : ಕೂಡುವ ಪಾರಿವಂಗಳುಲಿ ಕೇಳಿನಗಂಗಳೊಳಗೆಮ್ಮೆ ಕೇಳ್ದಲಂಪೋದ ಕೊಳಂಗಳೊಳ್ ನೆರೆದು ಕಣ್ಗೆಯಲಾಟಿಪ ಹಂಸಯುಗ್ಮಮಂ ನೋಡಿ ಸಪ್ರೋದಬಿಂದುಭರವಂಥರದೃಷ್ಟಿ ಮರಳ್ದು ನಲ್ಲನಂ ನೋಡಿದಳರ್ಮಿ ನೋಡೆ ಪೊರೆಯೇಱಿದ ತನ್ನಯ ಮುಯ್ಯನಂಗಜಂ (ಪರ್ಣಪು. ೬-೨೪); ಕುಸುಮೋಲ್ಲಸತ್ಪರಿಮಳೋತ್ಕರದಿಂ ಪೊರೆಯೇಱಿ . . . ಸುಳಿವುದು ಸಂತತಂ ಪುರಬಹಿರ್ವನಚಾರಣನಾ ಸಮೀರಣಾಂ (ಕುಸುಮಾ. ೨-೬೦). ೫. ಕಾಂತಿಯನ್ನು ಹೊಂದಂ,—ಪಡೆ : ಶಶಿತಿಲಕಮುಖಳ ನೇತ್ರಾಂಶುವಿಂದೆ ಪೊರೆಯೇಱಿ . . . ಉಯ್ಯಲಾಟವಾಡಿದಳೊರ್ವ ಬಾಲೆಯಂಬರದ ಮಿಂಚಾಡುವಂತೆ (ಕಂಪು. ೧೦-೦೯). ೬. ಪುಳಕಗೊಳ್ಳು ; ರೋಮಾಂಚನಹೊಂದು : ಹರ್ಷದ ಶರನಿಧಿಯೊಳ್ ಪೊಕ್ಕು ಲೀಲೆ ವಿಕ್ರೀಡಾಲಾಡುತ್ತಿರಲುತ್ತೀಸಾಡುತ್ತುಂ ಪೊರೆಯೇಱುತೆ ಜಪದ ಪಿವುಳೆ ತವಮುಂ ಬಿಟ್ಟಳ್ (ಗಂ೦ಕ. ೩-೦೬).

**ಪೊರೆಯೇರು** : ೧. ಪೂರ್ಣದಿಂ ಪೂರ್ಣವನೆ ತೆಗೆದರೂ ಪೂರ್ಣವೇ ಉಳಿವುದೆಂದು ಪೂರ್ಣಾನುಭೂತಿಯನು ಪಡೆದು ಪೊರೆಯೇಱಿದರು ಶಿಷ್ಯಸಂತತಿ ಡಿಂಭದಿದಿರು ನಿಂದು (ಕುಶಿಲೇ. ೩೬-೯). ೫. ಎಷ್ಟು ದೊಡ್ಡವನಾಗಿ ಬಳೆದು ಮಯ್ಗೂಡಿ ಪೊರೆಯೇರಿಕೊಂಡಿರುವೆ ! (ಚಟ್ಟಿ. ೦೬-೨೨).

**ಹೊರೆಯೇರು₁** : ೧. ಇಂತಹ ಜಂಗಮದಿಂದಲೇ ಜಗತ್ತು ಪಾವನವೆಂದು ಹಿಗ್ಗಿ ಹೊರೆಯೇರಿದ್ದಾರೆ (ಪೋತಪು. ೦೦೯ ಕೃತ್ಯಾಪ್ರ); ತಂಗಾಳಿಯು ಕೊಳಲೂದಲಿ ಸಾಗಲಿ ಸ್ವರಸಮ್ಮೇಳನ ಹೊರೆಯೇರಿ ! (ಕಕಪು. ೬-೦೯೯).

**ಹೊರೆಯೇಱು** : ೧. ಪೋಗಲಾಱದೆ ತಿರಿಗಿ ತಿರಿಗಿ ಪೊಡವಡುವುತುಂ ರಾಗದಿಂದಗ್ಗಿಸುತೆ ಹಿಗ್ಗಿ ಹೊರೆಯೇಱುತಂ (ತಿರು. ದೇ. ೩-೨೨); ಆಹವವಿಜಯವಾರ್ತೆಯ ಹರಹಿನಲಿ ಹೊರೆಯೇಱಿ ಹೊಂಪುಳಿಯೋದರಡಿಗಡಿಗೆ (ಕುಮ್ಮಾರ. ೬-೩೯). ೬. ತನು ಹೊರೆಯೇಱಿ ಸರ್ವಾಂಗ ಕರಗಿ ಕೊರಗಿ ನೆರೆವ ಭರದುರವಣೆಯ ತವಕದಿಂ ಲಿಂಗದೊಳು ಪರವಶೀಭಾವ ತಲ್ಲೀಯವಾಗಿ (ಶಿವಗೀ. ೨೮-೦೨೪). ೭. ಹೆಮ್ಮೆ ಪಡು ; ಗರ್ವಹೊಂದು ; ಬೀಗು : ಎಲವೊ ಕರ್ಣಾತ್ಮಜನ ಹೊಯ್ದಗ್ಗಳಿಕೆಯಲಿ ಹೊರೆಯೇಱದಿರು ಪಡಿಬಲಕೆ ಕರಸಾ ಕೃಷ್ಣ ಪಾರ್ಥರ ನಿನ್ನಲೇಸಹುದು (ಕುಮ್ಮಾಭೀ. ೦೦-೪೪). [ಪೊರ್೬ + ಏಱು₁ (<ಏಱ್₁)]

**ಪೊರೆಯೊತ್ತು** (ಕ್ರಿ). ೧. ಕೂಡಿಸು ; ಬೆರಸು ; ಮಿಶ್ರಮಾಡು : ಹಿರಿದು ಮೃದುವಾಗಿ ನನೆದಕ್ಕಿಯೊಳಗರಿಸಿನವ ಪೊರೆಯೊತ್ತಿ ಮುಗುಳ್ವದದಿ ಬೆಂದ ವಿದಳಗಳನೊಡವರೆಸಿ (ಸೂಶಾ. ೩-೩). ೨. ನೆನಸಿ ಇಡು ; ನೆನೆ ಹಾಕು : ಎರಡು ಸೂಳ್ ಪೊಸ ಬೆಣ್ಣೆಯಿಂ ಹಸಿಯ ಹಾಲಿನಿಂ ಪೊರೆಯೊತ್ತಿ ದುದ್ದಿನ ಬಿಳಿಯ ಬೇಳೆಯಂ ಕಲ್ಲೊಳರೆದು . . . ಸಂಪಳೆ ಮಾಳ್ಪುದು (ಸೂಶಾ. ೦-೬೦). [ಪೊರ್೪ + ಒತ್ತು₁]

**ಪೊರೆವತ್ತಿಸು** (ಕ್ರಿ). ಪದರಗಳನ್ನು ಕೂಡಿಸು : ಪೊರೆವತ್ತಿಸಿದನೊ ಪಳಿಯಂಬರಮಿದು ನೆಱೆ ಪಱಿಗಾಮೆಂದು ಬಿದಿ ನವನೀಲಾಂಬರದಿನೆನೆ ತೀವಿ ಕವಿದಂಬರಮನದಂ ನೀಲಜಲದಮೇಂ ರಂಜಿಸಿತೋ (ವ್ಯಕಪು. ೦೯-೦೩). [ಪೊರ್೬ + ಪತ್ತಿಸು]

**ಪೊರೆವಿಡಿ** (ಕ್ರಿ). ಸೇರು ; ಸಮೀಪಿಸು ; ಹತ್ತಿರವಿರು : ಪಿರಿಯ ಕೆಱೆಯೊಳಗೆ ಬೆಟ್ಟದ ಪೊರೆವಿಡಿದನ್ತೆಯ್ದೆ ತೋಂಟಗಾಣಮು ಮಠದೇಹರ ಮಲ್ಲಿಕಾರ್ಜುನದೇವರ ತೋಂಟ (ಶಾಇಇ. XI-i, ೬೩-೨೩ ; 1049). [ಪೊರ್೪ + ಪಿಡಿ₁]

**ಪೊರೆವಿಡು**, ಪರೆಬಿಡು, ಪೊರೆಬಿಡು, ಹೊರೆಬಿಡು (ಕ್ರಿ). ೧. ಪದರವನ್ನು ಕಳಚು ; ಬಿರಿ : ಪೊರೆವಿಡೆ ಸೋಂಕಿ ತೆಂಕಣೆಲರೂದಲೊಡು ಸ್ಮರದಗ್ಧಭೂಜ ಮುಂಕುರಿಸಿರೆ (ಆದಿಪು. ೯-೬೩). ಪರೆಬಿಡು : ೨. (ಹಾವು) ತನ್ನ ಹಳೆಯ ಚರ್ಮವನ್ನು ಕಳಚಿಕೊಳ್ಳು ; ನಿರ್ಮೋಕವನ್ನು ಬಿಡು ; ಪರೆ ಬಿಟ್ಟ

ಹಾವಿನಂತೆ ತಾನು ಹೊಸಬಾಳನ್ನು ಹೊಗುತ್ತಿದ್ದಂತೆ ಅವನಿಗೆ ಭಾಸವಾಯಿತು (ಋಷಿಪೂ. ೨೭). ಪೊರೆಬಿಡು : ೨. ಉದಕವು ಪೊರೆಯನು ಕಳಚುವುದಾದರೆ ಉರಗವು ಪೊರೆಬಿಡುವ ಹಾಗೆ ಬೆಳ್ಳಿಡೆಯಾಗುತಲಿದ್ದವು ಸತಿಯರ ನೀರಾಟ ವಾಡುವ ಮೈಗೆ (ಜಂಕಾಶ. ೦೧೧-೮) ; ಪೊರೆ ಬಿಟ್ಟ ಹಾವಿನಂತೆ ದೇಹವನ್ನು ತ್ಯಜಿಸಿ ಹೊರಟುಹೋದನೆಂದರೆ ಮತ್ತೆ ಅವನಿಗೆ ಪುನರ್ಜನ್ಮವಿಲ್ಲ(ಜಗದಾ. ೩೪). ೩. (?) : ತನಿವಣ್ಣಂ ಪೊರೆಬಿಟ್ಟು ಕುತ್ತೆಸಟ್ಟಗೊತ್ತೀದೋಡಿ ನಿಂದೂಡಿ ಪಬ್ಬಿನಿಯೊಳ್ನೋಸಗೆಯುಂಡು ಪಾಡುವಳಿಯಿಂ ಚಾಂಡಾಳಬಾಳಕಳಧ್ವನಿ ಯೊಳ್ ಮಂದ್ರತೆಯಂ ತಗುಳ್ಚಿ ಕವಿಯೊಕ್ಕೀ ಸಂಗದಿಂ ಸೌಖ್ಯಸಾಯನಿಕಂ ತಾನೆನಿಸಿತ್ತೊ ಸಜ್ಜೆವನೆಯೊಳ್ ಸುಪ್ರಾತಗೀತಾನಿಲಂ (ಅನಂತು. ೮-೬೪). ಹೊರೆಬಿಡು : ೨. ಹೊಡೆಯೆ ವಜ್ರಾ ಹಜಾವುದೇ ಕೀಸೆ ನೆಳಲು ಹೊರೆ ಬಿ [ಕೌಕಾಂ. ೧]ಡುವುದೇ (ಸಿದ್ಧರಾ. ೬-೪). [ಪೊರ್ೆ + ಬಿಡು$_1$]

**ಪೊರೆವೋಗು** (ಕ್ರಿ). ಉತ್ಸಾಹವು ಕಡಮೆಯಾಗು : ಪೊರೆವೋಗದ ಕಟ್ಟಾಯ ಮುಮಂ ಒರೆವೋಗದ ಚಲಮುಮಂ . . . ನೋಟಕರಪ್ಪಿನಮಪ್ಪವರಿಂ ಪೊಗಟಿಸುವೆನೆಂದು ತಜಿಸಂದು (ಕಾಂತಿಶ್ರೀ. ೪-೩೬ ವ).

[ಪೊರ್ೆ + ಪೋಗು$_1$ (<ಪೋ$_1$) ]

**ಪೊರೆಸಾರ್** (ಕ್ರಿ). ಹತ್ತಿರಕ್ಕೆ ಬರು; ಸಮೀಪಿಸು: ಚಿರಕಾಲ ಬೇಟವ ಮಾಡಿ ಮುಕ್ಕಣ್ಣಂಗನೆ ಕರೆಯಟ್ಟದಾ ದೂತಿ ಬಂದು ಪೊರೆಸಾರ್ದು ಪೇಳ್ವಂತೆ ನೃಪನ ಕನ್ನೆಯೊಳೊಂದು ನರೆಯಿದ್ದುದು (ಶಕಶ. ೭೭-೦೧). [ಪೊರ್ೆ + ಸಾರ್$_1$]

**ಪೊರೆಹುಲ್ಲು** (ನಾ). ಒಂದು ಬಗೆಯ ಹುಲ್ಲು: ಹಂಬುಹಾಕಹುಲ್ಲು, ಪೊರೆಹುಲ್ಲು (ವೃ.ಕಿಗಿ. ೦೯-೨೧೦). [ಪೊರೆ$_7$ + ಹುಲ್ಲು (<ಪುಲ್)]

**ಪೊರ್ಕುಟ್** 'ಪೊಕ್ಕುಟ್' ನೋ.

**ಪೊರ್ಕುಳ್** 'ಪೊಕ್ಕುಟ್' ನೋ.

**ಪೊರ್ಕುಳಿ** 'ಪೋರ್ಕುಳಿ' ನೋ.

**ಪೊರ್ಕುಳಿಗೊಳ್** 'ಪೋರ್ಕುಳಿಗೊಳ್' ನೋ.

**ಪೊರ್ಕುಳಿಯಿಕ್ಕು** 'ಪೋರ್ಕುಳಿಯಿಕ್ಕು' ನೋ.

**ಪೊರ್ಕುಳಿವಕ್ಕಿ** 'ಪೋರ್ಕುಳಿವಕ್ಕಿ' ನೋ.

**ಪೊರ್ಕುಳಿವುಗು** (ಕ್ರಿ). ಕದನಕ್ಕೆ ಇಳಿ; ಯುದ್ಧಕ್ಕೆ ತೊಡಗು : ಎಕ್ಕೆ ಯೊಳೊಕ್ಕು ಪಳಂಚುವ ಪಾಂಗಿಂ ತಕ್ಕು ಮಿಗಲ್ಕೆಕ್ಕತುಳಾ ಪೊರ್ಕುಳಿವೊಕ್ಕು ಕರಂ ಪಾಡಾಪಾಡಿಯೊಳುಬಿದಿಬಿದರ್ ತವ್ವೊಳಗೆ (ಜಹುಉಆ. ೬-೨೦).

[ಪೊರ್ಕುಳಿ (<ಪೋರ್ಕುಳಿ) + ಪುಗು (<ಪೊಗು)]

**ಪೊರ್ಕುಟ್** 'ಪೊಕ್ಕುಟ್' ನೋ.

**ಪೊರ್ತು** 'ಪೊಟ್ಟು' ನೋ.

**ಪೊರ್ತುಗೀಜ** 'ಪೋರ್ಚುಗೀಸ್' ನೋ.

**ಪೊರ್ದಿಗೆ** 'ಪೊರ್ದುಗೆ' ನೋ.

**ಪೊರ್ದಿಸು**, ಪೊಂದಿಸು, ಪೊದ್ದಿಸು, ಹೊಂದಿಸು, ಹೊದ್ದಿಸು$_1$ (ಕ್ರಿ). ೧. ಸೇರುವಂತೆ ಮಾಡು; ಸೇರಿಸು; ಕೂಡಿಸು : ನಿನ್ನಂ ರಸಾತಲಮಂ ಪೊರ್ದಿಸದಾಯ್ತುದೇಕಳಿ ಮರುತ್ತೇಕದೊಯ್ಯದಾಯ್ತು (ಕಾದಂಬ. ೩೭೨); ಕಿಸುವಂ ಮೂಲಿಕೆಯಂ ಪೊರ್ದಿಸೆ ನಗೆಯೊಳಿ ಹೇಮಮಪ್ಪ ತೆಬಿದಿದು ಸಂಕಿಸದೆ ವರಧರ್ಮದೊಳ್ ಕೂರ್ತೆಸಗುವನರನುಂ ವಿಶೇಷಸುಖಿಯಾಗಿರ್ಕುಂ (ಧರ್ಮಾಮೃ. ೪-೩೪). ೨. ಉಂಟುಮಾಡು : ಮೊದಲೊಳ್ ರಾಜ್ಯಾಭಿಷೇಕ ಪ್ರಬಲಜಲಮೆ ೭೮ಚಿತ್ತು ದಾಕ್ಷಿಣ್ಯಮಂ ಹೋಮದ ಧೂಮಂ ಚಿತ್ತದೊ ಳ್ಪೊಟ್ಟನೆ ಮಲಿನತೆಯಂ ಪೊರ್ದಿಸಿತ್ತು . . . ಎನಲ್ ದುಷ್ಟರಪ್ಪರ್ ನೃಪಾಲರ್ (ಕಾದಂಪೂ. ೩೩೪). ಪೊಂದಿಸು : ೧. ರಘುಪರಂ . . . ಮಿತ್ರ ಸದ್ಭಾವದಿಂದವರವರ ನೋಡಿ ಸೌಮಿತ್ರಿಸಹತಾಪಮಂ ಪರಿಹರಿಸಿ ಶಾತಗುರಿ ಮಿತ್ರವಂಶೋತ್ತಮರ ಸಂಸ್ಕಾರವಿಧಿಯಿಂದ ಪೊಂದಿಸಿದನೊಂದುಗೂಡಿ (ಹಹು. ೨-೩೯). ೩. ಅಳವಡಿಸು ; ಹಚ್ಚು : ಒಂದೆಡೆಯೊಳಗೊರ್ವ ಗಟ್ಟಿವಳಿತ ಸಿರಿಗಂಧವ ವಿಟನುರದೆಡೆಗೆ ಪೊಂದಿಸಿ (ಕಂಚಿಶ. ೨-೩೪). ಪೊದ್ದಿಸು : ೨. ನಿರ್ಮಲತಪಸ್ವಿಗಳ ನಿಶ್ಚಲಹೃದಯಮಧ್ಯಪಂಕೇಜಾತದ ಗದ್ದುಗೆಯೊಳಿಸವ ಚಿದ್ರೂಪನಂ ಜಗವಜಿಯೆ ದೊದ್ದೆಯೊಳ್ಕೂಡಿ ತೇರ್ಗು ದುರೆಯಂ ಪೊಡೆವುದಂ ಪೊದ್ದಿಸಿದ ಪಾರ್ಥನಾರಿದರೊಳೆನಲು (ಕೃಬಿಜ್ಞಾ. ೩-೯). ಹೊಂದಿಸು : ೧. ಅಸಮಸದುಭಕ್ತಾಂಘ್ರಿಗಳನರ್ಚಿಸಿ ಸಮ ಸ್ತಾಂಗಂಗಳಂ ಹೊಂದಿಸಿ ನಮಿಸಿ . . . ಬಸವರಾಜನು ಮುನ್ನೆ ತಾಂ ಮುದ್ರಿಸಿದ ಮುಸುಕಂ ತೆಗೆಯಲು (ಬಸಪು. ೩೪-೩೬) ; ಹಳೆಯದರ ಅಂದವನ್ನು, ಹೊಸದರ ಚಂದವನ್ನು ಹೇಗೆ ಹೊಂದಿಸುವುದು (ಹಣ್ಣುಕು. ೩೦೯). ೪. ಅಣಿಮಾಡಿಕೊಳ್ಳು ; ಜೊತೆಗೂಡಿಸಿಕೊಳ್ಳು : ಅವಳು . . . ಎರಡು ದೋಲಿಗಳನ್ನು ಹೊಂದಿಸಿಕೊಂಡು ಅವನನ್ನು ಸರಿ ಯಾದ ಸ್ಥಳಕ್ಕೆ ಕರೆದುಕೊಂಡು ಹೋಗಿ ಉಪಚರಿಸಿದಳು (ಬಂಕಿಹು. ೨೨೦) ; ಸರಸಮ್ಮ ಸಗಣಿ ಹೊಂದಿಸಿ ಅಡಿಗೆಮನೆ ಮೊದಲು ಸಾರಿಸತೊಡಗಿದಳು (ಕುಸುಸಂ. ೪೦) ; ನಾಳೆಯ ಕೆಲಸಕ್ಕೆ ನಾನು ದುಡ್ಡು ಹೊಂದಿಸಿಕೊಳ್ಳಬೇಕು (ರೂಢಿ). ೫. (ವ್ಯವಹಾರ, ಅಭಿಪ್ರಾಯಭೇದ ಮೊದಲಾದುವನ್ನು) ಇತ್ಯರ್ಥ ಮಾಡು ; ತೀರ್ಮಾನಿಸು ; ನಿರ್ಣಯಿಸು : ಈ ವ್ಯಾಪಾರ ವನ್ನು ನೀವೇ ಹೊಂದಿಸಿ ಕೊಡಬೇಕು (ರೂಢಿ). ೬. (ಧಾರಣೆ ಮೊದ ಲಾದುವುಗಳನ್ನು) ಅನುವು ಮಾಡಿಕೊಡು ; ಕುದುರಿಸು : (೩). ೭. ಸರಿದೂಗಿಸು : ಭೂಪತಿಯು . . . ಲೆಕ್ಕಪತ್ರವನ್ನು ಹೊಂದಿಸಿ ಹೋಲಿಸಿ ನೋಡುತ್ತ ಕುಳಿತು ಬಿಟ್ಟನು (೩ಶ್ಯಕ. ೨೬೪). ೮. ಒಪ್ಪವಾಡು ; ಅಣಿಗೊಳಿಸು : ಅವರು ಗೂಡಿನಲ್ಲಿ ಡಬ್ಬಿಗಳನ್ನು ಅಂದವಾಗಿ ಹೊಂದಿಸಿ ಇಟ್ಟಿದ್ದಾರೆ (ರೂಢಿ). ಹೊದ್ದಿಸು$_1$: ೧. ಬಿದ್ದನು ಭವಾಂಬುಧಿಯೊಳುದ್ಧರಿ ಸುವರ ಕಾಣೆ ಹೊದ್ದಿಸುವರಿಲ್ಲಾದಿರದ್ರನು ನಿಮ್ಮಾಣೆ (೦೬ಕ್ಷ್ಮಪೋ. ೬-೦೪) ; ಇದ್ದರೆಯು ರಣವಿಜಯವನಿತೆಗೆ ಹೊದ್ದಿಗರು ದ್ರುಪದಾದಿರಾಯರ ಹೊದ್ದಿಸಲು ಬೇಡವರಿಗಂಜುವವೆನುತ ನೂಕಿದರು (ಕುವ್ಯಾಶೀ. ೬-೨೦). ೯. ಧರಿಸುವಂತೆ ಮಾಡು ; ಧಾರಣೆ ಮಾಡಿಸು : ಇಂತಿವರು ಮುಟ್ಟ ಲಜಿಯರು ತತ್ವದ ನಿಜವನಜಿಯರು ಇಂತವರಿಗಿಷ್ಟಲಿಂಗವನು ಹೊದ್ದಿ ಸಲೇಕೆ (ವೋೀವಪ. ೦೬-೭೦). ೧೦. ಸ್ಪರ್ಶಿಸುವಂತೆ ಮಾಡು : ನಯನದಾಹಾರವ ಜಂಗಮವ ನೋಡಿಸುವೆ . . . ಜಿಹ್ವೆಯಾಹಾರವ ಜಂಗಮವನೂಡಿಸುವೆ [ತ್ವ]ಚದಾಹಾರವ ಜಂಗಮಕ್ಕೆ ಹೊದ್ದಿಸುವೆ (ಬಸವ. ೪೨೯). [ಪೊರ್ದು + — ಇಸು$_3$]

**ಪೊರ್ದು**, ಪೊಂದು$_1$, ಪೊದ್ದು$_1$, ಪೊಟ್ಟು, ಹೊಂದು$_1$, ಹೊದ್ದು$_1$ (ಕ್ರಿ). ೧. ಕೂಡು ; ಸೇರು : ರವಿ ಪೊರ್ದಿದನಸ್ತಶೈಲಮಂ (ಕಂಕಶಾ. ೯-೯೬) ; ಆತಂ ಕೈಕೋಡುದದಿಂ ಋಷಿವೇಷಕ್ಕಗ್ರಾಮ್ಯತೆಯುಂ ಆತನಂ ಪೊರ್ದಿದ ಜವ್ವನಕ್ಕೆ ಸೌಂದರ್ಯಮುಂ. . . ಆದುದೆಂದು ಬಗೆಯುತ್ತಂ(ಕಾದಂಪೂ.೭೧೦), ಒಡವುಟ್ಟಿದರಂ ಕೊಂದವರಡಗಂ ತಿಂದವರ ನೆತ್ತರಂ ಬೆಸಲಗೆಯೊಳ್ ಕುಡಿವೀ ನಿಸ್ತ್ರಿಂಶತೆಯಂ ಹಿಡಿಂಬಿಯಂ ಪೊರ್ದಿ ಕಲ್ತನಾಗನೆ ಭೀಮಂ (ಗದಾಯು. ೩-೨೬). ೨. ಹೊಂದಿಕೊಳ್ಳು ; ಸರಿಯಾಗು ; ಜೋಡಿ ಯಾಗು : ಬೇಜಿವೇಜಿ ನಿಲೆ ಕಾರಕದೊಳ್ ಕ್ರಿಯೆ ತಳ್ತು ಮುಂ ತೋಚಿ ಪೇಟ್ದವಗುಣಂ ಗುಣರೂಪದೆ ಪೊರ್ದುಗುಂ (ಶಬ್ದಾ. ೦-೦೩೪) ; ಪರ ಮಾರ್ಥಂ ಪೇಟಿಪಟ್ಟರ್ದಧಿಕರಣಮಿವಿಂತಯ್ದುಟಿಗೊಳ್ ಶಬ್ದಸಿದ್ಧಿಸ್ಮರಣಕ್ಕಾ ದ್ಯಕ್ಕುದಾತ್ತಪ್ರಕರಣಗಣನಾವೃತ್ತಿಯಿಂ ಪೊರ್ದಿ ನಿಲ್ಕುಂ (ಕಾವ್ಯಾವ. ೦-೬). ೩. ಹತ್ತಿರಕ್ಕೆ ಬರು; ಸಮೀಪಿಸು; ಬಳಿ ಸಾರು : "ಪೊರ್ದು-ಸಮೀಪೇ (ಹತ್ತಿರಕ್ಕೆ ಹೋಗು)" (ಶಮದಾ); ಪಸರಿಸಿದ ಪದ್ಮರಾಗದ ಪೊಸಗೆಂಪು ಮಾಂಸಮೆಂದು ಮುಂ ಕರ್ದುಕಲ್ಕಾಟಿಸಿಯುಂ ಬಟಿಕದನುರಿಯೆಂಬ ಸಂಕೆಯಿಂ ಪೊರ್ದದಿರ್ದುವೀ ಮತ್ಸ್ಯಂಗಳ್ (ಅಂತಕ. ೦೨-೦೨೨); ಕಿರ್ಚಿನಂತೆ ಪೊರ್ದಿದರಂ ಕಿಡಿಸುವುದು (ಧರ್ಮಾಮೃ. ೪-೦೭೩). ೪. ತಾಕು ; ತಟ್ಟು;

ತಗ್ಗುಲು : ಹೀನಬುಜನನಧಿಕಬಲಂ ತೊತ್ತುಬದುಬದನೆಂಬ ಲೋಕದ ಪಟು ಪೊರ್ದದೆ ಮಾಣ್ಗೆ ಧರ್ಮಯುದ್ಧದೊಳೆನಗಿಂ (ಆದಿಪು. ೦೯-೦೦೨) ; ಶೀಲಾಲಂಕೃತೆಯುಂ ಗುಣಮಾಲಾಲಂಕೃತೆಯುಮಾ ಮಹಾಸತಿಯುಂ . . . ಪೆಸರ್ಗೊಳೆ ಬಾಲೆಯರಂ ಖಳಕಲಂಕಮೇಂ ಪೊರ್ದುಗುಮೇ (ಆದಿಪು. ೦-೭೪); [ವ]ಲ್ಮೀಕಪುರವೆಂಬುದಾದಿಯ ಪೆಸರ್ ತನಗೆ ಕಲ್ಪಿಪದ ಯುಗಧರ್ಮವೆಯ್ದೆ ಪೊರ್ದದು ತನಗೆ (ಶಂಕರ. ೬-೪). ೫. ಅಂಟು; ಹತ್ತು : ತಾವರೆ ನೀರಂ ಪೊರ್ದದಂತೆ (ಧರ್ಮಾಮೃ. ೩-೦೬೪). ೬. ಹೋಗಿ ಸೇರು ; ತಲಪು : ಅದು ಸಂಧ್ಯೋಪಾಸ್ತಿಗೆ ಪೊರ್ದಿದಪುದು ಮಾನಸಸರಕ್ಕಿಮಾಗಳಿದೆಂಬುದದಿನುತ್ತರಾಶೆಯುಮಾ ಪೊರ್ದಿದತ್ತು ಸಪ್ತರ್ಷಿ ಮಂಡಲಂ ಕ್ರಮದಿಂದಂ (ಕಾದಂಪೂ. ೦೬೪). ೭. ಪ್ರವೇಶಿಸು : ವಾರಿಜಷಂಡಮಂ ಪಡೆದು ಪೊರ್ದುವವೊಲ್ ಕಳಹಂಸೆ ತಿಪ್ಪೆಯುಂ ಸಾರಮಿದೆಂದು ಪೊರ್ದುಗುಮೆ (ಧರ್ಮಾಮೃ. ೯-೨೦೦) ; ಎಳಸಿ ಪಿಪಾಸೆಯಿಂ ಮೃಗಚಯಂ . . . ತಚ್ಚರಜ್ಜುಲಹಿಗಂಗಳೊಳ್ಪುಲಿಪುಗೇಳ್ದರದೊಯ್ಯನೆ ಪೊರ್ದಿ ತೀರ್ಥಮಂ ಸಲಿಲಮನೆಂದೊಡೇವೊಗಟ್ಟಿನಾ ವಿಪುಳಾತಟನೀಜಲಾಶ್ರಮಂ (ಕುಸುಮಾ. ೦-೪೦) ; ಕಾಯಜ ನಿಜಪುಷ್ಪಸಾಯಕದಿಂದೆಸಲಾಯತ ಗಿಡದಾ ಸರವ ಕಾಯವ ಪೊರ್ದಲೀಯದೆ ಚರಣದೊಳಂತ ಶ್ರೇಯಾಂಸ ಜನರ ವಂದಿಪನು (ಅಂಜನ. ೦-೦೦). ೮. ಆಶ್ರಯಿಸು ; ಅವಲಂಬಿಸು : ಚಂದ್ರನೊಡೆದುದು ಕಂಡುದಜಿಂ ಸದ್ಧರ್ಮದ ಮೊದಲ ಪೊರ್ದಿದ ಮಾರ್ಗದಿಂ ಬೆಳೆಯೊಳ್ ಪುಗ್ಗಳ್ ಪಲವಕ್ಕುಂ (ಪಂಪಾರಾ. ೬೬-೦೩); ಅನಂತು ತತ್ವಜ್ಞನಾದೆನೆನ್ನ ಪೊರ್ದಿವ ಜನಂಗಳುಮಿಂತೆ ತತ್ವಜ್ಞರಕ್ಕೆಂದು . . . ತತ್ತ್ವೋಪದೇಶಂಗೆಯ್ವಂ (ಕಾರ್ಪುಪು. ೩) ; ಅಲ್ಪಬುದ್ಧಿಗಳ್ ರಾಗಿಸಿ ಪೊರ್ದಲೇಂ ಗಳ ಕುದ್ಯವದೊಳಂ ಫಲಮಾಗಲಾರ್ಪುದೇ (ಧರ್ಮಾಮೃ. ೭-೭೬). ೯. ಪಡೆ ; ಗಳಿಸು : ಪಡಿವಣ್ಣೋ_ಪೊರ್ದಿ [ಪಾಠಾಂ. ಕ್ಕಿ] ದೊಂ (ಪಂಪಾರಾ. ೬೩-೯) ; ಮಂಗಳೇ ನೀನಂತಿವಂ ನಂಬನುಕ್ರಮದಿಂದಂ ದೊರೆವೆತ್ತ ಸಪ್ತಪರಮಸ್ಥಾನಂಗಳಂ ಪೊರ್ದುವೈ (ಆದಿಪು. ೩-೬೩); ಅನಂತಚತುಷ್ಟಯಮಂ ಪೊರ್ದು ಪೊರ್ದದಿರು ಸಂಸ್ಕೃತಿಯಂ (ಆಪಪು. ೬೭). ೧೦. ಉಂಟಾಗು; ಪ್ರಾಪ್ತವಾಗು; ಒದಗು : ನೆರೆಯಲ್ಕೆನ್ನುದಯಪ್ರಭಾವಮನೆ ಪಾರ್ದೀರಂದದಿಂ ಜೇಮಿಪರ್ ರಥಾಂಗಪ್ರಚಯಕ್ಕೆ ಪೊರ್ದುವ ವಿಯೋಗಾವಸ್ಥೆಯಂ ವೇಗದಿಂ ಪಿರಿದುಂ ಬಾರಿಸದೆನ್ನ ತೇಜದೊದವಿನ್ನೇ ಬಾರ್ತೆಯೆಂದೆಯ್ದೆ ತನ್ನುರು ತೀವ್ರಾಂಶುವನಿಂತು ಬಿಟ್ಟನೆನೆ ತಣ್ಪಂ ತಾಳ್ದನಾ ಭಾಸ್ಕರಂ (ಕುಸುಮಾ. ೯-೨೨). ಪೊಂದು$_1$ : ೧. ಅಶುಚಿದೇಹಮನಿದನಿನ್ನನುಮಮಪೊಂದೆನೆಲೆಗದು ಜನಮಾತದೊಳ್ಪೊಂದಿಯುಣುವಿನೊಳ್ಗೆಟ್ಟ ನರಂ (ಧರ್ಮಾಮೃ. ೪-೦೬೪). ೨. ಪೆರ್ಮೆಗೆ ಯೊಳ್ ಬಲಮೇದು ಪೊಂದುಗುಂ (ಶಬ್ದಾಣಿ. ೯೭); ಕದಿದವಂ ಬಂದಿಲ್ಲ ಬಂದವಂ ಪೊಂದಿಲ್ಲ (ಕಾಲಂತ.೩೫-೩೭). ೯. ಸುಖಮಂ ಪೊಂದೆಂದು ಪಾಟಿಸು ತಿರ್ಪನುಂ (ಧರ್ಮಾಮೃ. ೩-೭೦); ಹರಿಯ ಪಾದಜೆಯಳೆರಕದಿಂ ಪಾವನು ಪೊಂದಿ (ಶಬಕು. ೭-೩); ಪುರೋಹಿತರ ಸಂಗಡ ಬ್ರಹ್ಮಾರ್ಚನೆಯಂ ಮಾಡಿಸಿ ಆಶೀರ್ವಾದಮಂ ಪೊಂದಿ (ಮೈ.ಶಾಸ. ೦೯೩೩, ೪೬-೯; 1824). ೧೧. ಕಂದರ್ಪ ಸ್ಪರ್ಧಂಗಿಯ ಮೇಲೆ ವೈಧವ್ಯ ಪೊಂದದೊಲ್ ಮಾಡು (ಮೋಹತ. ೯-೩೯); ಒಂದೆಡೆಯೊಳಗೊರ್ವ ನೀಟಿ ವಿಟನ ಮೇಲ್ಪೊಂದಿದ ಮೋಹವ ಬಿಡದೆ ಕಂದರ್ಪಕೇಳಿಯೊಳೋಲಾಡುತಿರೆ (ಅಂಜನ. ೭-೦೩೦). ೧೧. ಸಂಭೋಗಿಸು: ಬೇಟದ ಲಲ್ಲೆಯ ಬಲ್ಮೆ ಪಕ್ಷಿ ಸುತ್ತಿಸೆ ಪುರುಡುಬುಕ್ಕೆಸೆ ಬಿಯಮಾಜುಸಿ ಪೊಂದದವಂ ಬೊಜಂಗನೇ (ಆದಿಪು. ೦೨-೦೭). ಪೊದ್ದು$_1$: ೧. ವಿದ್ಧದ ಮನುಜರ ಕರೆಸೋದು ರೊಕ್ಕ ಪೊ[ಪಾಠಾಂ. ಹೊ]ದ್ದಿದ ಜನರನು ಬಿಡಿಸೋದು ರೊಕ್ಕ (ಭರಂತ. ೨-೪೬-೩); ಬಂಧಮಾತಿನಲ್ಲಿ ನೆರೆಯಲ್ಕೆಳಸಿ ಬಹಕಪಟವಿಟರುಗಳ ನಿಷ್ಠಣಮೊನುಸ್ಟಮರಿದು ಲಲ್ಲೆಯಿಂ ಬಸಿಲಿಗರಿಸಿನ ತೊಲ್ದಂತವರನೆಲ್ಲಿಯುಂ ಪೊದ್ದದ ವಿದಗ್ಧೆಯರ ಮಂದಿರಗಳಲಿ ಸಿರಿಜವ್ವನಗಳೊಪ್ಪಿರವೆ (ಶಂಕರಾ. ೩-೬-೪೩). ೩. ಕಳವು ಹಾದರಮೆಂಬಿವೆಮ್ಮ ಶಿವ ಭಕ್ತಸಂಕುಳದೊಳಗೆ ಪೊದ್ದಲರಿಯವು (ಶಂಪು. ೭-೨೯); ಹಡಪ ಕಾಳಾಂಜಿ ಪೊಂಗಟ್ಟಿಗೆ. . .ಬಿಜ್ಜಣಿಗೆಗಳ ಪಿಡಿದೂಳಿಗಕ್ಕೆವ ಬಿಂಕಗಾತಿಯರಾ ಪೊಡವಿಯಾಣ್ಮನ ಪೊದ್ದಿಹರು (ಶಂಬ. ೦-೦೬); ಕರಣಗಳ ಕಾಳಟಮೆರಗದ ಗುರುಲಘುತ್ವಗಳಿಲದ ತ್ರಿಗುಣಗಳುರುಬೆ ಪೊದ್ದದ ಮಾಯೆ (ಗಗನಾ. ೦೬-೩). ೪. ಒಳಗೆ ಭಾಳೇಕ್ಷಣನ ನೆನಹು ತೀವಿರೆ ಕರಂ ಬಳಿ ಪೊದ್ದದವರನೆಂತಿ ದೊರ್ಡಂ ಭಕ್ತರಂ (ಇಳೆ. ದೀ. ೩೨-೦೬). ೬. ಹೊಳಲ ಬಳಿಯ ಪೊದ್ದಲ್ದಿರ್ದ ತುರುಕರ . . . ಸಾಸಿರಮಂಗರಿದಾಕ್ಷಣ ದಳಪತಿಯಡಿಗೊಪ್ಪಿಸಿದರು (ಕಂಪಣ. ೦೩-೩೩). ೮. ಎಲೆ ಮುನಿನಾಥ ನಾನಿನಿತು ಕಾಲಪಲ್ಲದ ಸಮಯವಾ ಮುಂದಱಿಯದೇ ಪೊದ್ದಿ ಗತಿಗೆಟ್ಟು ಪೋದೆನು (ಸಮ್ಯಕ್ತ್ವ. ೯-೦೯). ೧೨. ತಳೆ; ಧರಿಸು: ರುದ್ರಾಕ್ಷಭಸಿತವನು ಹೊದ್ದಿರಲು ದೇಹದೊಳಗಿದ್ದ ಪಾಪಗಳು ಬಯಲಾಗಿ ಶಿವನು ತಾನಿದ್ದಲ್ಲಿ ಬರುವ (ಸರ್ವಜ್ಞ. ೦೨೦). ಪೊಟ್ಟು : ೧೧. ವಿಂಶದ್ಗುಣಪದ [ವು]ದಿದೊಡಂ [ವೀ]ತಿ [ಸಾ] x [ತ್ಥ್ರ] ದೊಳ್ ಪೊಟ್ಟುದಿನ್ನಪ್ಪಸಕಂ ತ್ರ್ಯಗವ್ಯ್ಟ ಸನ್ನರ್ತ್ಥ [ಪಾ]ಚಮಹಿಮೆಯಿಂ (ಶಾಸನ. XI-I,೬೦-೬; 1024). ಹೊಂದು$_1$ : ೨. ತಮ್ಮತಮ್ಮೊಳಗೆ ಹೊಂದಿದರೆ ಸಂತೋಷದಿಂದ ವ್ಯವಹಾರ ಮಾಡಬೇಕು (ಮುಂಜಯು.೩-೬೩) ; ಗತಿಯು ತನ್ನ ಧಂದದಲ್ಲಿ ಭಾವ ತನ್ನ ಬಂಧದಲ್ಲಿ ಹರಿವೆನಿಲ್ಲ ಹೊಂದದಲ್ಲಿ ಬಲ್ಲೆ ಎಲ್ಲು ಒಂದರಲ್ಲಿ (ಅರಳು. ೦೬೪-೦೦). ೪. ಭೂಪ ಹೊಂದದು ಪಾಪವೆಮ್ಮಂ (ಜಸಪು. ೩೩-೭). ೯. ಹೊಂದುತಿಹರಾ ಪುರುಷತತ್ವದಿ ನಿಂದು ತೋರುತಲಿರ್ಪ ಭುವನವ (ಗಗನಾ. ೬-೬೫); ಕಾಲಕ್ರಮದಲ್ಲಿ ಅದು ವಿಜಯನಗರವೆಂಬುದಾಗಿ ಬದಲಾವಣೆ ಹೊಂದಿತು (ಕೃದೀಪ. ೨). ೧೩. ಕುದುರು; ವ್ಯವಸ್ಥೆಯಾಗು: ದುಡ್ಡು ಹೊಂದಿರಲಿಲ್ಲಪ್ಪ . . . ಇವೊತ್ತು ಹಣ ಕೈಗೆ ಬಂತು (ದೂರದ.೦೩೨). ಹೊದ್ದು$_1$: ೧. ಇತ್ತ ಬಾ ಎನ್ನದವನ ಹತ್ತ ಹೊದ್ದಲು ಬೇಡ (ದೇವಾಪ. ೨೮-೪೬) ; ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಹೊದ್ದುವಂತೆ ಮಾಡಾ ನಿಮ್ಮ ಧರ್ಮ (ಮಹಾದೇ. ವ. ೦೯-೦೩); ಅರವಿಂದಸಖ ಹೊದ್ದಿದನು ಮೆಲ್ಲನೆ ಪಶ್ಚಿಮಾಂಬುಧಿಯ (ಕುಮಾರರ್ದ್ರೋ. ೦೯-೩೩). ೨. ಸಮ್ಯಕ್ತದಲಿ ಕ್ಷೀರವಾದೊಡೆ ಹೊದ್ದುವುದು . . . ಶುದ್ಧರಾಕ್ಷಸರನ್ನವಿದ ತಾ ಶುದ್ಧಭೂಸುರರುಂಬರೇ (ಸಂಭರ. ೨೩-೦೭); ಹೊದ್ದಿ ನಿಲುವುದೆ ದರ್ಪಣದ ಮೇಲುದ್ದುರುಳಿ ಬೀಳ್ವಂತೆ ನಿಮಿಷದಿ ಬಿದ್ದು ಹೋಗುವ ಕಾಯವು (ಹಂಸಾ. ೭೭). ೩. ನೋಡುವರೆ ಕಾಣ ಬರುತ್ತಿದೆ ಮುಟ್ಟುವರೆ ಕೈಗೆ ಸಿಲುಕದು ಹೊದ್ದುವಡೆ [ಪಾಠಾಂ. ಹೊದ್ದಿದರೆ] ಸಮಿಪಾಪ ಹತ್ತೆಸಾರಿದಡತ್ತತ್ತ ತೋಱುತ್ತಿದೆ (ಅವಕಂ. ೦೬೬-೬೫೦) ; ಸರಳ ಮಂಚವ ಹೊದ್ದಿ ಭೀಷ್ಮನ ಚರಣಕಮಲವ ಹಿಡಿದು ನೊಸಲಿನೊಳೊರಸಿಕೊಂಡನು ನಾದಿದನು ಕಂಬನಿಯೊಳಂಘ್ರಿಗಳ (ಕುಮಾರರ್ದ್ರೋ. ೦-೨೦) ; ಹೊದ್ದಲೀಯದೆ ಬಾಣಂಗಳ ತಱಿದನಿರುದ್ಧ ಮಾತುಲನ ಕೊಂಡಾಡಿ . . . ಎಚ್ಚನು ಸುಭಟ ಪ್ರಸಿದ್ಧ ಬಾಣಾಸುರನೆದೆಯ (ಮೋಹತ. ೩೫-೪೦). ೪. ದೇಶವೆಲ್ಲವನನ್ಯತ ಹೊದ್ದದಂದದಿ ಕೊಟ್ಟು ಕಾಶಿಯ ನಿವಾಸದೊಳು ಸತಿ ಸುತರ ಮಾಱಿ . . . ಋಣವನುತ್ತರಿಸಿದ (ಹಕಕಾ. ೦೦ ಸಂಪನ್ಮ); ಕಕ್ಕುಲಿತೆ ಕುಂದೆದರು ಬಡತನ ಸಿಕ್ಕು ರೋಗಾದಿಗಳು ಹೊದ್ದದ ಉತ್ಕಟದ ವರವೀಯಬೇಕೆನೆ ಕೊಟ್ಟನಾ ಮುನಿಪ (ಕೌಶಿಕಾ. ೪೯-೪೯) ; ಜನನ ಮರಣಾದಿಗಳು ಹೊದ್ದದ ತೋಱಿ ತೋಱದ ಜಗದ ದೇವರ ದೇವನಿದ್ದನು ರಜತಶಿಖರಿಯಲಿ (ಕೊರಗಾ. ೦-೨-೦) . ೫. ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನು ಜಲಪದ್ಮಪತ್ರದಂತೆ ಹೊದ್ದಿಯೂ ಹೊದ್ದದಂತಿಹನು (ವಚನ. ೭) ; ಮನ ವಚನ ಕಾಯದೊಳಗೊಮ್ಮೆಯುಂ ಹುಸಿ ಹೊದ್ದ[ಪಾಠಾಂ. ರ್ದ]ವಂತೆ ನಡೆವ ಕಲಿಗಳಾರಯ್ಯ (ಹಕಕಾ. ೨-೬) ; ವ ೦ದ್ವಿಸಿ ಚುಬುಕಾಗ್ರವಿಡಿದಡೆ ಬೆರಲ್ಗಳ ಹೊದ್ದಿ

ದಾವುರಿಬೊಕ್ಕೆಗೆಯ್ಯ ಬದ್ದಿಸಿ ಬಿಡದೆ ಕಾಲುವೆಯ ತಣ್ಣೀರೊಳಗದ್ದಿದರವಳ ಹಸ್ತವನು (ಕೋಹಕ. ೨೮-೦೯). ೭. ಎದ್ದು ನಡೆವ ಬಲಜಲಧಿಯು ಕಡೆಯನು ಹೊದ್ದಲಾಱದೆ ಖಗನಿವಹ ಎದ್ದವು ಕೆಲವು ಪತಾಕಾಗ್ರದೊಳ್ಳಿ ಬಿದ್ದವು ಕೆಲವು ನೆಲದೊಳು (ಕುಣಾಶಾಂ. ೩೭-೭೦). ೭. ದೊಡ್ಡ ಕೆಗೆಯಲಿ ಪಾರ್ಥ ಪವನಜರಿರ್ದ್ದರಾದರೆ ಬರಲಿ ಸಮರವ ಹೊದ್ದಲಾಪರೆ ಹೊಗಲಿ ಹರಿ ತೋಱಲಿ ಸಹಾಯತೆಯ (ಕುಣ್ವ್ಯಶೀ. ೬-೨೦) ; ಹೊದ್ದಿ ಗೊಲ್ಲರ ಮನೆಯಲ್ಲಿದ್ದಷ್ಟು ಬೆಣ್ಣೆಯನು ಕದ್ದು ಮೆದ್ದುದಕ್ಕೆ ಹೊಟ್ಟೆ ತುಂಬಿತೆ (ಕೃರಂತ. ೦-೬೯-೨). ೮. ನೀನೇಕೆ ಈ ನುಡಿಯೇಕೆ ಹೊದ್ದಿದರಂ ಹೋಗೆಂಬರೆ (ಬಸರ. ೯-೩೯) ; ಸಾಲ ಸಾವಿರದೀವಿಗೆಯ ಹಱದಾಳಿಗಳಾಕದೆ ನೃಪರ ವೋಱಿಗಳೋಳಿಗಳ ನೆಱೆ ಹೊದ್ದಿ ಕತ್ತಲೆ ನಿಂದುದಲ್ಲಲ್ಲಿ (ಕುವ್ಯಾಶ. ೦-೦೯) : ಅಸುರರೀತನ ಹೊದ್ದಿ ಜಗದಲಿ ಹೆಸರು ಪಡೆದವರಿಲ್ಲವೇ ಭಾವಿಸಿದಡೀಯನೆ ಲೋಕಪಾಲತ್ವವನು ನೈರುತಿಗೆ (ಕೊರಣ. ೭-೬-೩೨). ೯. ಚತುರ್ವಿಧ ಪದವಿಯಂ ಹೊದ್ದದೆ ಫಲಭೋಗಂಗಳಂ ಮುಟ್ಟದೆ (ಅರಪ. ೩೦-೮೭) ; ಗದ್ದುಗೆಯೇಱೆ ಸತ್ಕಥೆಗೇಳಿ ಮುಕ್ತಿಯ ಹೊದ್ದುವರಾರು ನಿನ್ನಂತೆ (ಶರಪ. ೨ ೩೯). ೧೦. ಇವರಿಂದ ಪಲವು ಲೇಸೆಮಗೆ ಮಿಗೆ ಹೊದ್ದಿದವು (ಕೇರಿ. ದೀ. ೦೬೩-೯) : ಹೊದ್ದಿದುತ್ಪಾತಗಳನೀಕ್ಷಿಸುತ್ತಿದ್ದನಾ ಮುನಿನಾಥನು (ಕಾತ್ರ. ೯-೯). ೧೧. ಪರಿಣಮಿಸು ; ಫಲ ಕೊಡು : ಯುಕ್ತಿ ಹೊದ್ದದ ಶಿವ ಸ್ನೇಹಿಗಳ್ ಬರುತಮಿರೆ (ತಿರುರ. ದೀ. ೦೯-೦೨).

**ಹೊಂದಿಕೊಳ್ಳು**= ೧. ಸೇರಿದಂತಿರು ; ಕೂಡಿಕೊಂಡಿರು : ಪದ್ಮಬ್ಬರಸಿಯು ತಾನು ಕಟ್ಟಿಸಿದ ಬಸದಿಗೆ ಹೊಂದಿಕೊಂಡಂತೆ ಒಂದು ದಾನಶಾಲೆಯನ್ನು ಕಟ್ಟಿಸಿದಳು (ಕಚಾಶ. ೪೩೦) : ಅವರ ಮನೆ ನಮ್ಮ ಮನೆಗೆ ಹೊಂದಿಕೊಂಡಿದೆ (ರೂಢಿ). ೨. ಒಗ್ಗು ; ಹೊಂದಾಣಿಕೆಯಾಗು : ನಾರಾಯಣನಿಗೆ ಅನುಕೂಲವಾದ ಮನೆಯು ಅವಾಗಿದ್ದು ತುಂಬ ಹೊಂದಿಕೊಂಡಿತ್ತು (ಕಂಬಹು. ೦೨೩) : ಎದುರುಮನೆಯ ಮಗು ನನಗೆ ತುಂಬಾ ಹೊಂದಿಕೊಂಡಿದೆ (ರೂಢಿ).

[ದೇ. ॥ ತಮಿ. ಪೊರುನ್ದು, ಪೊರುತ್ತು ; ಮಲ. ಪೊರುತ್ತು ; ತುಳು. ಪೊರ್ದು, ಪೊಂದು, ಹೊಂದು ; ಕೋತ. ಪೊತ್]

**ಪೊರ್ದುಗೆ, ಪೊಂದಿಗೆ, ಪೊಂದುಗೆ, ಪೊದ್ದಿಗೆ, ಪೊರ್ದಿಗೆ, ಪೊಟ್ಟುಗೆ, ಹೊಂದಿಗೆ, ಹೊಂದುಗೆ, ಹೊದ್ದಿಗೆ, ಹೊದ್ದುಗೆ** (ನಾ). ೧. ಸಹವಾಸ ; ಸಂಬಂಧ : ಅರಿಯ್ದು ನೋಡೆ ತೊಱೆಗಳ ನೀರುಂ ವಾರಿಧಿಯ ನೀರ ಪೊರ್ದುಗೆಯಿಂದಂ ಸಾರಂಗೆಟ್ಟುಪ್ಪಪ್ಪವೊಲ್ (ಧರ್ಮಾಮೃ. ೨. ೭೭) ; ಸಂಬಂಧಮೆಂದು ಪೊರ್ದುಗೆ (ಕಮುದ. ೬೬೬೯. ೭ ವೃತ್ತಿ) ; ಪರವತ್ಸದೇಶಮೆಂಬುದ್ಧುರವತ್ಸದ ನಿಬಿಡಮಾದ ಪೊರ್ದುಗೆಯಿಂದಂ ಧರೆಯೆಂಬ ಸುರಭಿಸುಖಮಂ ಐ ರು ಪರಮಾಮೃತಮನೆಯ್ದೆ ಕಱೆಯುತ್ತಿರ್ಕುಂ (ಚಾರವ. ೪ ೨೩). ೨. ಬಳಿ; ಹತ್ತಿರ; ಸಮೀಪ : "ಪೊರ್ದುಗೆ, ಪೊರೆ, ಪಕ್ಕಂ, ಸಹಂ, ಕೆಲಂ—ಈ ೫ ಸಮೀಪಂ" (ಕ.ಶಾ. ೭೯-೯೩೯) ; ಮೃಗಮೂರ ಪೊರ್ದುಗೆಯ ಬಟ್ಟೆಗೆ ಮೇಪಿನ ಕಾಟಿನಿಂ ಮುರಳ್ದುವು ದಿನನಾಯಕಂ ವರುಣದಿಙ್ಮಗಮಂ ಮಱೆಗೊಳ್ವ ಕಾಲದೊಳ್ (ಸೂಕ್ತಿಸು. ೬-೨೦). ೩. ಅಧೀನವಾದುದಂ : ಅಪ್ರಧಾನವಾದುದು : "ಉಪಾಗ್ರಂ, ಉಪಸರ್ಜನಂ—ಈ ೨ ಪೊ(ಹೊ)ರ್ದುಗೆ" (ಚರಾಯು ೦೨೩-೭೮). ೪. ಆಶ್ರಯ; ನೆಲೆ : 'ಪೊರ್ದುಗೆವಡೆ' ಪರಾ. **ಪೊಂದಿಗೆ :** ೨. ಮಾವನ ವಾಕ್ಯಗಳಿಗಾನಂದಪುಳಕಿತನಾಗಿ ಖಳಪತಿ ಪೊಂದಿಗೆಯ ಹೊಲಬಟ್ಟಲಲಿ ಕರ್ಪುರದ ವೀಳೆಯವ . . . ಇತ್ತು (ಅಂಬಕಾ. ೦೩-೨೦). **ಪೊಂದುಗೆ :** ೧. ರಂಗಯೆಂದೆಂಬ ನೀಱೆಯ ಪೊಂದುಗೆಯೆಂದು ವಂದಪುದೊ (ಕಕಾಂ. ೨೯-೩೦). ೫. ಹೊಂದಾಣಿಕೆ ; ಸೇರಿಕೆ ; ಸರಿಹೊಂದಿರುವಿಕೆ : ಚಂದನಾಗರು ವಿಲೇಪ್ಯಂಗಸೌರಭ್ಯವೊಂದುಗೆಯೊ ಮಾಟ್ಟುದಪೂರ್ವಗಂಧವಂ (ಕೃಷ್ಣಕು. ೩-೩೦). **ಪೊದ್ದಿಗೆ :** ೧. ಪಲವು ಪೊದ್ದಿಗೆಗಳನುಳಿದಾಸೆಯೆಂಬೆಳವಲೆಯ ಪಗ್ಗವ ಪಱಿಬಿಟ್ಟು ನೆಲದೊಳೊಂದಕೆ ಕೈವಶವಾಗದೆ ಬೀಸುವೆಲರಂತೆ ತೊಡಕಿಲ್ಲದಿಹನು (ಕಚಾಪ್ಯ. ೦೦-೨೯). **ಪೊರ್ದಿಗೆ :** ೨. ಆ ನೆಲದ ಪೊರ್ದ್ದಿಗೆಯಲು ಸಿರಿಯುರದಲು ಕರಿಯ ಕೆಯಿ ಮ[ತ್ತ] × × ಪದಿನೈಯ್ದು (ಶಾಇಇ. IX-I. ೦೩೯-೦೯; 1091). **ಪೊಟ್ಟುಗೆ:** ೨. ದೇವರ ಕೆಯ್ಯ ಪೊಟ್ಟುಗೆಯಲು ಬಿಟ್ಟ ಕೆಯಿ ಮತ್ತರು ನಾಲ್ಕು (ಕಇಶ. ೬೯-೬೩-೩೭; 1088). **ಹೊಂದಿಗೆ :** ೫. ಅಂದಂದಿನ ಹೊಂದಿ[ಪಾಠಾಂ. ಹೊದ್ದಿ]ಗೆಯ . . . ಕೆಡಿಸಲಱಿಯದ ಅಂಧಕರ ನೋಡಾ (ಬಸಕ. ೭೬೨); ಒಂದು ಸಾವಿರದೊಂದು ಶತ ಹನ್ನೊಂದು ಪದಮೆಂಬ ಪಸುಪದ ಸಂದ ಸಿಲೆಯನು ಬಳಸಿದಿಪ್ಪತ್ತೈದು ಗತಿಯೆಂಬ ಹೊಂದಿಗೆಯ ಸೋಪಾನಗಳ ಬಲಿದಂದದವಿಸಿಯಲ್ಲವಾನ ಕರವಾನಂದಲೀಲಾಮೃತಸರೋವರವಾಯ್ತು ಜಗದೊಳಗೆ (ಕೃಶುಂಲೀ. ೨೫-೨೫) ; ಹೊಂದೀಗಿ ಮನಿಯಾಗ ಇರವೂಳ ಆ ರಮಣಿ ಚಂದ ಚಂದ ಪಂತ ನಡೆಸೂಳ (ಜಾನಗೀ. ೨೨). **ಹೊಂದುಗೆ :** ೫. ಅಗತೆ=ಹೊಂದುಗೆಯಾಗದಿರೆ (ಕಮುರ. ೬. ೦೯೩ ೮೬ಕು). **ಹೊದ್ದಿಗೆ :** ೧. ರುದ್ರನ ಕಪಾಲ ತುಂಬಿ ಬುದ್ಧಿವಂತರೆಲ್ಲರು ಕಪಾಲದ ಕೊಳನುಂಡು ಬುದ್ಧಿವಂತರಾಗಿರಿ ಎನಗಾ ಹೊದ್ದಿಗೆ ಬೇಡ (ಅಖಿನಾ ೪. ೦೯೮-೦೭೩); ಇದ್ದ ನೆಲೆಗಳವಡುವ ಭಕ್ತಿಯ ಶ್ರದ್ಧೆಯಲಿ ವಿತ್ತಾನುಸಾರವ ಹೊದ್ದಿಗೆಯನಱಿದಱಿದು . . . ಅಳವಟ್ಟೊಡಾತನೆ ಶುದ್ಧಭಕ್ತಿಯನಱಿವನ್ನೆ (ಕೃಶುಂಲೀ. ೦೩-೩೦). ೩. "ಉಪಸರ್ಜನಮುಂಪಾಗ್ರುಮೆನೆ ಹೊದ್ದಿ[ಪಾಠಾಂ. ದ್ದು]ಗೆಗೆ ನಾಮಮಕ್ಕುಂ" (ಮಂಗರಾ. ೦೩೩-೨೯). ೫. ಮುದ್ದಿಸಿ ಮುಂಡಾಡುತೊಲೆದರಲೆಯನು ತಿದ್ದುವ ಕೂರಳ ದಂಡೆಯನು ಹೊದ್ದಿಗೆ ಮಾಳ್ಪನು ಮಾಗಾಯ ಮುಟ್ಟುತ ಮುದ್ದಾಡುತಿರ್ದನಾ ಮಗನ (ಚಕ. ೨೩-೨೯). **ಹೊದ್ದುಗೆ :** ೧. ಕಿಗ್ಗಯ್ಯ ನೀರು ತಟಾಕಕ್ಕೆ ಹೊದ್ದಿದುದುಂಟೆ ಅಱಿದು ಮಱೆದವಂಗೆ ಸಮಯದ ಹೊದ್ದುಗೆ ಏನು (ಕೂಪ್ತಸ. ೨೩೭-೨೨). ೭. ಸಮೀಪದಲ್ಲಿರುವ ಪ್ರದೇಶ; ನೆರೆಹೊರೆ: "ಹೊದ್ದುಗೆಯೊಳುಮುಪಹ್ವರವೆಂದೆನಿಸಿರ್ಪುದು" (ಮಂಗರಾ. ೦೩೬-೩). [ ಪೊರ್ದು + —ಗೆ ]

**ಪೊರ್ದುಗೆವಡೆ** (ಕ್ರಿ). ೧. ಸೇರು : ಕೂಡು ; ಬೆರೆ : ಜಗದಬಳಾ ಜನಕ್ಕೆ ಮಿಗೆ ವರ್ತಿಪ ಗರ್ಭದ ಚಿಹ್ನಜಾಳದೊಳ್ ಬಗೆವಡೆದೊಂದುಮಾ ಸತಿಯ ಭಾಸುರಮಪ್ಪ ಲತಾಂಗದಲ್ಲಿ ಪೊರ್ದುಗೆವಡೆದಿರ್ದುದಿಲ್ಲ (ಚರ್ಚ್ರಾ. ೦೩-೭೭) ; ಪುಂಡವೆಣ್ಗಳೊಳು ಪೊರ್ದುಗೆವಡೆಯದೆ ನಲ್ವೆಂಡಿರೊಡನೆ ಬೆರಸುವುದು (ಜಿರಾ. ೬-೯೩). ೨. ಆಶ್ರಯವನ್ನು ಹೊಂದು,—ಪಡೆ : ಎಮ್ಮಯ ಜನ್ಮಭೂಮಿಯಿಂತಿಲ್ಲಿ ಪೊರ್ದುಗೆವಡೆದು ಬಾಳ್ವೆವೆಂದೆನುತ (ಶಾಂರತ್ನ. ೭-೨೩). [ ಪೊರ್ದುಗೆ + ಪಡೆ$_1$ ]

**ಪೊರ್ದುಗೆವೆಱು** (ಕ್ರಿ). ಹತ್ತಿರವಾಗು ; ಸಮೀಪಗತವಾಗು ; ಸನಿಹದಲ್ಲಿರು : ಕರ್ಣಾಗ್ರದೊಳ್ ಪೊರ್ದುಗೆವೆತ್ತಾ ಮುಷ್ಟಿಯುಂ ಮಂಡಳಿಸಿದ ಧನುವುಂ ದಿಟ್ಟಪಾಲೋಕಮುಂ ನೆಟ್ಟಗೆ ತೋಱುತಿರ್ದುವೆಂಬಂತಗಧರನಿಸುತಿರ್ದಂ (ಜಗಪ. ೬-೩೦). [ ಪೊರ್ದುಗೆ + ವೆಱು$_1$ ]

**ಪೊರ್ಲ್, ಪೊಲಿ$_1$, ಹೊಲಿ$_1$** (ಕ್ರಿ). ೧. ಹೊಲಿಗೆ ಹಾಕು : "ಪೊರ್ಲ್-ಸ್ಯೂತೇ (ಹೊಲಿ)" (ಶಮುಧಾ) ; ಅಡಿಯೊಳ್ ಪಾಸಿದ ಚರ್ಮರತ್ನಪಟಮುಂ ತಚ್ಛತ್ರರತ್ನಂ ಬೆಡಂಗಿಡಿದೋರುತಿರೆ ಮುಟ್ಟೆ ಪೊರ್ಲ್ದ ತೆಱದಿಂದಿಂಬಾಗೆ ತನ್ಮಧ್ಯದೊಳ್ ಸೂಡರಿರ್ಪಂತಿರೆ ಚಕ್ರರತ್ನಮುದಱೊಳ್ ನಿರ್ಬಾಧಮಿರ್ದತ್ತು (ಅರಿಕ್ರ. ೦೩-೭೦) ; ಸೆರೆದೆಗೆಯೆ ಸೂಜಿಯುಂ ಪೊರ್ಲ್ದಿರ್ದ ಕಯ್ಗಳಿಂ (ಕಾದಂಬ. ೨೭೦). **ಪೊಲಿ$_1$ :** ೧. ಕುಪ್ಪಸದಂತೆ ಬೆನ್ನಂ ಪತ್ತಿ ಕೆತ್ತುವರ್ ಸಿಪ್ಪಿಗನಂತೆ ಪೊಲಿವರ್ (ಧರ್ಮಾಮೃ. ೩-೭೩); ಬಾಯಂ ತೆಱೆದಿಕ್ಕಿ ಕಾಯ್ದ ಲೋಹದ ಕೆಱುವೊಂಗಳನಡಸಿ ಪಿಡಿದು ಪೊಲಿವರ್ ಬಾಯಂ (ಶಾಂತೀಶ್ವ. ೯-೯೯). **ಹೊಲಿ$_1$ :** ೧. ದಂಡಿಯೊಳ್ ಪ್ರಚ್ಛನ್ನವೇಷದ

ಖಂಡಪರಶುವೆನಲ್ ಮೆಱೆದು ಕೈಕೊಂಡು ಕೌರಿಗಳಂ ಹೊಲಿವ ಕಾಯಕವೆ ತನಗಾಗಿ (ಬಸವ. ೨೩-೩); ಬಸುಱಿರಿ ಹೊಲಿದ ಹೊಲಿಗೆಯ ದಡಿಗ ರಕ್ಕಸರಾಯರಿದ್ದುದು ಕೋಟಿಸಂಖ್ಯೆಯಲಿ (ಕುಮಾ. ೩-೬-೩): ನೆಲವನ್ನು ಮುಗಿಲನ್ನು ಹೊಲಿವರುಂಟೆಂದರವ ಹೊಲಿವರು ಹೊಲಿವರೆನಬೇಕು ಮೂರ್ಖನಲಿ ಕಲಹ ಬೇಡೆಂದ (ಸರ್ವ. ೦೦೩೬): ಹೊಲಿಯುವವನ ಬಲ್ಮೆಯಿರಬೇಡ, ಆಳುವವನ ಎಡಕ್ಕಿರಬೇಡ (ಗಾದೆ). ೨. ಹೆಣೆ : ಉರುಳು ತಲೆ ಕಾಲ್‌ಬೆರಳ ಕೊನೆಯಲಿ ಮುರಳಿ ಹೊಲಿದಳು ಜಡೆಯನು (ಉತ್ತ. ೩೯-೦೯). [ದೇ.॥ ತಮಿ. ಪೊಲ್ಲವ್ = ಹೊಲಿಯುವುದು; ಮಲ. ಪೊಲ್ಲು; ತುಳು. ಪೊಲ್ಲು, ಪೊಲ್ಲಿಯು ; ಕೊಡ. ಪೊಲಿ, ಪೊಲ್ಲ್]

**ಪೊಲ, ಹೊಲ** (ನಾ). ೧. ಬೆಳೆ ಬೆಳೆಯುವ ಭೂಮಿ ; ಜಮೀನು : ಪೊಸಪೊರ್ಲ್ಗಲ ನೆಲ್ಲು ಪಾರ್ಶ್ವಯುವಳಿವದು ಸರ್ವಪರಿಹಾರತ್ಪೊಟ್ಪೊಪ [ರ್] (ಕ್ಕ.ಶಾ. ೦೯೩೦, ೩೩-೭: ೩೦೦); ದೇವಮಾತೃಕಮೆನಿಪ್ಪ ಪೊಲಂ ನವಗಂಧ ಶಾಳಿಯುಂ ಬೆಳೆವುದು (ಶಾಂತಿ. ೦-೫೯): ಪೊಲಂ ಪಸುರೇಱೆ ಕಾಡ ಮಲ್ಲಿಗೆ ನನೆಯೇಱೆ (ಜಗ. ೪-೪). ೨. ಸ್ಥಳ ; ಪ್ರದೇಶ ; ಎಡೆ : ಊರ ಪೊಱಪೊಲ[ಲ] ಪೊಲದೊಳ್ ಬಟ್ಟೆದು ಕಣ್ಣೊಳ್ ರಾತ್ರಿಪ್ರತಿಮೆ ನಿಂದೊರ್ (ಶಾಸ. ೦೩೨-೦೨). ೩. ಆಶ್ರಯ; ಆಸರೆ: ಪುಸಿ ಪೊಲನಲ್ಲು ನಾಲಗೆಗೆ ಮಂದೆತನಂ ಮೊಱೆಯಲ್ಲು ಕೈಯ ಕೊರಡಿಗೆ (ಶಾಂತಿ. ೬-೦೦೯). 'ಅಡುಂಬೊಲ' ಪರಾ. ೪. ಕ್ಷೇತ್ರ : ಜಿನರ ಪದಸೇವೆಯಿಂದಂ . . . ಈ ವಿಧವಂ ಜನಿಯಿಸುದುದೀಗಳಲ್ಲದೊಡನುಪಮುಸುರವಿಭವಮೆನಗೆ ವಿಷಯಂಮೊ ಪೊಲನೋ (ಸುಕುಮಾ. ೯-೨೬). ೫. ವಿಷಯ ; ಸಂಗತಿ : ಸಕಲವಿದ್ಯಾಧರವಲ್ಲಭಸಭೆಯೊಳಿದು ಪೊಗಟ್ತೆಗೆಪೊಲನೇ (ಶಾಂತಿ. ೩-೨೨); ಖಳಂಗೆ ಪೊಲನಲ್ತೆ ಕೃತಿಯೊಲ್ಲದ ದೋಷಂ (ಕೃಷ್ಣ. ೦-೪೮). ೬. ಗೋಚರ; ಕಾಣಿಸುವಿಕೆ : ದಿಟ್ಟಿಗೆ ಪೊಲನಾದುದು ಪೊಂದೆಟ್ಟಿಂ (ಶಾಂತಿ. ೦-೪೯); ಅಲೋಚನಗೋಚರೇ = ಕಣ್ಗೆ ಪೊಲನಲ್ಲದ (ಎಚನ. ೩-೨೬); ಕೊಟ್ಟನೆ ಟಟ್ಟದಿರೊಳ್ ಪೊಂಬೆಟ್ಟಿಂ . . . ದಿಟ್ಟಿಗೆ ಪೊಲನಾದುದು (ಶಾಂತಿ. ೬-೦೩೪). ೭. ವ್ಯಾಪ್ತಿ ; ಪರಿಮಿತಿ : ನೆಲನಂ ಪೊಟ್ಟಿಂ ಪೊಲನು ಮನಱಿದು ಬಟ್ಟೆಯೊಳ್ ಪೊಸತಂ ಪಟದುಮನಱಿದು ಪರಿಯಿಸಲ್ ನೀನೆ ಬಲ್ಲಯ್ (ಶಾಂತಿ. ೩-೯೬ ಪ). **ಹೊಲ** : ೧. ಸಿರಿಗಾ(ಂ)ವುಂಡನ ಹೊಲ ದೊಳಗೊಂದು ಕೋಟೆಕ್ಕಂ ಹೊಲಗೇರಿಯ ಪಡುವಣ ಕರುವಗೆಯ್ಯಿಂದಂ ತೆಂಕಲಾಱುಮತ್ತರು ಕೆಯಿಂಗಮಱುವಣಮಾಯ್ದು ಗದ್ಯಾಣಮಂ ತಿಱುವರು (ಶಾಸ. XI-i, ೩೦-೦೪; 1005); ಹೊಲದಲ್ಲಿ ಅವಿಲ್ಲ ಮನೆಯಲ್ಲಿ ಕಱುವಿಲ್ಲ ನೆಲಹಿನ ಮೇಲಣ ಬೆಣ್ಣೆಯಿದು ದಿಟವೋ (ಅಪಶಂ. ೦೨೬-೩೭೨); ಧರೆ ಬಿಂಜಂಗನ ಸುಂಗೆ ಬೇಲಿ ಹೊಲನೆಲ್ಲಂ ಮೇದೊಡಂ (ಸೋಮೇಶ. ೩೯); ಕಡಲೆಯು ತನಗೆ ಬೇಕಾದ ಅಂಶಗಳನ್ನು ಮಾತ್ರ ಹೊಲದಿಂದ ಹೀರುತ್ತದೆ (ಜೀವಾತ್ಮ. ೨೨೭). ೨. ಗಹನವಲ್ಲಿ ಸಿಕ್ಕಿದ ಶಿಶುವಿನಂತೆ ಸ್ಥಾನದಪ್ಪಿ ಹೊಲಬುದಪ್ಪಿದ್ದೇನೆ ಹೊಲದ ಹೊಲಬ ಹೇಳು (ಕೋಲಶಾಂ. ೦೩-೬೦) ; ಬರುಶಿರ್ದನವೃತಿಮುಶಿವಭಕ್ತನುರವಣಿಸಿ ಪುರದ ಹೊಲನಂ ದಾಂಟಿ (ಶಿಶ. ದೀ. ೩೪-೨). ೮. ನಿವಾಸ ; ವಾಸಸ್ಥಾನ : ಸಿಂಹದ ಹೊಲನ ಹೊಗಂವಿಭದಂತೆ ಹೊಱಕಾಲ್ಗೊಳುತಲಿರೆ ಕಂಡು (ಉದ್ಭಟಕಾ. ೦೨-೬೦) ; ಹಾಸ್ಯದ ಹೊಲಂ ಮುರುಳಾಟದ ಮಂದಿರಂ . . . ಗಣಿಕಾಪ್ರತೋಳಿ ತಾಂ (ಹಮ್ಮಿ. ೨-೯೨) ; ಕರಿವಿಂಡುಗಳು ಸಿಂಹದ ಹೊಲದಲಿ ಬಂದು ನೆಱೆ ಮೇವ ಕೊಂಡು ಜೀವಿಪುವೆ (ಕಂಪ. ೬-೯೬). ೯. ಕೇವಲ ಮಳೆಯ ನೀರಿನಿಂದ ಬೆಳೆಯುವ ಭೂಮಿ ; ಖುಷ್ಕಿ : ಕೇವಲ ಮಳೆನೀರಿನ ಆಧಾರವಲ್ಲಿ ಆಗಬಹುದಾದ ಬೆಳೆಯಿಡುವಂತಾ ಭೂಮಿಯನ್ನು ಖುಷ್ಕಿ ಅಥವಾ ಹೊಲವೆಂದು ಹೇಳುವುದು (ಕೃಷಿಶಾ. ೩೩).

**ಪೊಲಪೊಲ** (ದ್ವಿರುಕ್ತಿ): ಪಲವಂದದ ಮರ್ದುಗಳಂ ಪೊಲಪೊಲದೊಳ್ ಮಱಸಲೀಕೆ (ಶಬರ. ೦೩-೩೩). **ಪೊಲನಾಗು** = ಆಶ್ರಯವಾಗು: ಪೊಗಟ್ಟು ಮಹಾತ್ಮರುಜ್ವಲಮೆನಿಪ್ಪ ಗುಣಾಂಗಳನುಜ್ವಲಪ್ರಸಿದ್ಧಿಗೆ ಪೊಲನಾಗದೆ... ಪೊಗಟ್ಟು ದುರಾತ್ಮರಂ ಮೊಗದೊಳಿರ್ದಗುಱುಂ ಪೊಱಗಿಕ್ಕಲಾದ ನಾಲಗೆ ಯವನೆತ್ತುನಾಲಗೆಯೊಳೋದಿದಮಂ ಕೃತಿಯೋ ಕೃತಾರ್ಥನೇ (ಶಾಂತಿಪು. ೦-೩೩). **ಹೊಲಹಾಡು** = ಪ್ರದೇಶದಲ್ಲಿ ಓಡಾಡು : ನಾಡೊಳಗೆ ತುಱುಹಟ್ಟಿಯಲಿ ಹೊಲನಾಡಿ ಹೆಚ್ಚಿದ ಗೋಕದಂಬವ ನೋಡುವುದು ನೆವ (ಉದ್ಯೋ. ೦೬-೨೦). **ಹೊಲಮನೆ** = ಹೊಲ ಮತ್ತು ಮನೆ ; ಜಮೀನು ಮತ್ತು ಮನೆ : ಯಾ ಸ್ವಾಮಿಯು ಹೊಲಮನೆಯ ಮಾತಯಿತ್ತು ಆಡಿದವರು ಜಾತಿವಂತನಲ್ಲ (ಎಕ. XII, ತಿಪಟೂ. ೩೩-೩ ; 1776) ; ಹೊಲಮನೆಯೊಳೊಲವುಗಳ ಕಣಕಣಿಸಿ ಹೂ ಕೊಯ್ದು ಬೆಳ್ಳಿಯ ಬೆರಳಿಂದ ಮುಡಿಯುವಳ್ ನೇದು (ಕಾಂಚನ. ೩೩-೩೨). **ಹೊಲ ಮಾಡು** = ವ್ಯವಸಾಯ ಮಾಡು ; ಬೇಸಾಯ ಮಾಡು : ಅವನು ಹೊಲ ಮಾಡಿಕೊಂಡು ಜೀವನ ನಡೆಸುತ್ತಾನೆ (ಆಡು). [ದೇ.॥ ತಮಿ. ಪುಲ, ಪುಲವು; ಮಲ. ಪುಲವ್; ತುಳು. ಪುಲ; ತೆಲು. ಪೊಲ ; ಕೋಲಾ. ಪೊಲವ್]

**ಪೊಲಂಗೊಳ್** (ಕ್ರಿ). ಎಲ್ಲ ಕಡೆಗೂ ಚೆದರು ; ದಿಕ್ಕುಪಾಲಾಗು : ನೃಪರಾರುಂ ವೀರಬಲ್ಲಾಳನೊಳದಿರದೆ ಮಾಱಾಂಪರೇ. . .ಪುಲ್ಲಿವಿಂಡಂತೆ ಪೊಲಂಗೊಂಡೋಡುವರ್ (ಎಕ. V, ಬೇಲೂರು. ೦೦೨-೩೪ ; ಸು. 1220 ?). [ ಪೊಲ + ಕೊಳ್$_1$ ]

∆ **ಪೊಲಂತಿ** ' ಪೊಲತಿ ' ನೋ.

**ಪೊಲಂಬಿಗ, ಪೊಲಬಿಗ, ಹೊಲಬಿಗ** (ನಾ). ೧. ದಾರಿ ತೋರಿಸು ವವನು ; ಮಾರ್ಗದರ್ಶಿ : ಕುರುಡನಪ್ಪ ಪೊಲಂಬಿಗನಂ ನಂಬಿ ಗಟ್ಟಿ ದಿಟ್ಟಿಹೆಯೊಳಿರುಳ್ ದೂರದೇಶಕ್ಕೆ ಪಯಣಂಬೋಪನೆಂದಾತನುಂ . . . ಬುದ್ಧಿವಂತರಲ್ಲರ್ (ಧರ್ಮಾಮೃ. ೬-೩೩). ೨. ನೆಲೆಯನ್ನು ಅರಿತವನು: ಜೋಯಿಸಗಂ, ಲೆಕ್ಕಿಗಂ, ಪೊಲಂಬಿಗಂ (ಶಬ್ದಮ. ೦೯೭ ವೃತ್ತಿ). **ಪೊಲಬಿಗ** : ೧. ಮಿಱುವಮುಹಿಸಿ ಕಾಲೊಳ್ ಕೆರೆದ ಗುಳಿಗಳಿವೆಯೆಂದು ಪೊಲಬಿಗ ಪುಂದಾಳಿಗಳ್ ತೋಱೆದರ್ (ಚಂದ್ರ. ೦೦-೪೪). **ಹೊಲಬಿಗ**: ೧. ಎಲೆ ಯಿಲ್ಲದ ಮರದಿ ಒಂಭತ್ತು ತಲೆಗಳು ನಡೆವುತಿದೆ ಕಲಿಗಳ ಕೈಗಳ ನೋಡಿರೆ ಉಳುವಿಗೆ ಹೊಲಬಿಗರಾದವರು (ಶಿಪಾ. ೦೩೩-೯೦೭) ; ಶಿವಂ ಕೇಶವ ಬ್ರಹ್ಮರುಗಳಂತು ಹೊಸ ಹೊಲಬಿಗರು ರೂಪಾಗಿ ಭೂಮಿಯೊಳಗಿಂತು ಬಸವೇಶನಾದನು (ಬಸವ. ೩೩-೬೦); ಹೊಲಬಿಗರು ಹರಿದರು ಸುರೇಂದ್ರನ ದಳದ ಮಾನ್ಯರು (ಉದ್ಯೋ. ೦೨-೦೨). ೨. ಹೊಲೆಯ ಹೊಲಬಿಗ ನಾದರೆ ಅವನ ಹೊರೆಯಲಿಪ್ಪುದು ಲೇಸು ಕಂಡಯ್ಯ (ಬಸವ. ೦೩೩) ; ಆ ಹೊಱಗಣ ಹೊಲಬ ಕಂಡು ಆ ಹೊಲಬಿಗನ ಹೊಲನ ನೋಡಿ (ಶೂನ್ಯಸಂ. ೦೩೨-೩೦೦) ; ಯೋಗಾವಸ್ಥೆಯಲಿ ಹೊಂದಿ ಚೆನ್ನಸೆದು ತಾನೆಂಬ ಹೊಲಬಿಗನೆನ್ನದಾವ ಕಳಂಕವಿಲ್ಲದೆ ತನ್ನೊಳದು ತಾನಾಗಿ ತಾನಿಪ್ಪಂದವೋ ಮತ್ತೆ (ಬಸವ. ೩೩-೩೩). ೩. ದಾರಿಗ; ಪ್ರಯಾಣಿಕ: ಶಿಲೆ ಹಲವು ತೆಱದಲ್ಲಿ ಹೊಲಬಿಗರಿಂಗೆ ಹೊನ್ನಾಗಿ ಒಲವರವಿಲ್ಲದೆ ಅವರ ಭಾವದಲ್ಲಿ ನಿಲ್ಲುವುದು ಶಿಲೆಯೋ ಮನವೋ (ಸರ್ವಶ. ೩೬-೩೩೩). [ ಪೊಲಂಬು + -ಇಗ ]

**ಪೊಲಂಬು, ಪೊಲಬು, ಹೊಲಬು** (ನಾ). ೧. ದಾರಿ ; ಮಾರ್ಗ : ನಿಮಗಾ ಧರ್ಮದ ಪೋದ ಪೊಲಂಬದು ತಾ ನರ್ಮದೆಯಿಂ ಗೆಂಟದೇಕೆ ಕೇಳ್ದಪೆಯೆಮ್ಮಂ (ಹುಕೋತ. ೦-೩೪): ನಿಮ್ಮ ಚರ್ಮರತ್ನಂ ಪೋದ ಪೊಲಂಬು ಬಲ್ಲೊಡೆ ಪೇಱೆಬುದುಂ (ಧರ್ಮ. ೮-೦೮೦ ಪ). ೨. ರೀತಿ ; ಬಗೆ : ಎಲೆ ನೃಪ ಜೀವತತ್ತ್ವದ ಪೊಲಂಬದು (ಜಾರಾ. ೩-೬೩). ೩. ಸುದ್ದಿ; ಸಮಾಚಾರ : ಸಂಗತಿ : ನಾವದಱ ಪೊಲಂಬಂ ಬಲ್ಲುದಿಲ್ಲ ನೀವು ಬಲ್ಲಡೆ

ಪೇಳ್ಗಂ (ಪುಣ್ಯಾಸ್ರ. ೬-೩೩ ವ). ೪. ಪರಿಚಯ; ಗುರುತು: ಜನಗಣದೊಳು ಮುನ್ನ ತನಗೆ ಪೊಲಬುಳ್ಳ ಜನರ ಕಂಡವರ ಪೂರ್ವವನು ಅನುಜ ರಱಿಯಲೆಂದು ಪೆಸರುಗೊಂಡೆಬಿಗುತೆ (ಜೈಜ. ೬೦-೩೯). **ಪೊಲಬು:** ೧. ನಡೆದಂ ಭರದಿಂ ಪುಷ್ಕರಿಕೆ ಪೇಳ್ದ ಪೊಲಬಿಂಗಾಗಳ್ (ರಕಳು. ೦೦-೬೦); ಬಲ ಕೇಶವರ ಬೆನ್ನ ತಗುಳ್ದುಮವರು ಪೋದ ಪೊಲಬಱಿಯದೆ ಮುಂದೆ ಪೋಗಿ (ಕಾಂತೀಶ. ೩-೪೩). ೩. ಜಟಾಯುವಂ ಕಂಡು ಪೊಲಬಂ ಕೇಳ್ದು ಸೌಮಿತ್ರಿಸಹಿತ ನಡೆದಂ ಮುಂದೆ ರಘುನಾಥನು (ಕೈವಿಜಾ. ೦೬-೪): ಸುಲಭಮೆ ಪೊಲಬನೆಲ್ಲ ಪರರಿಂಗರಿಪಲ್ (ಕೃಷ್ಣಾಕೋ. ೨೬೪). ೫. ಮರ್ಮ; ರಹಸ್ಯ: ನಿಗಮವಱಿಯದು ಬೊಮ್ಮ ಚಿಂತಿಪ ನಗನಿಲಯ ಪೊಲಬಱಿಯ (ಕೈಕರ್ಜಾ. ೦-೨೯). **ಹೊಲಬು:** ೧. ಲಿಂಗದ ಸಂಪೂರ್ಣವ ಕಾಣದಿಹ ಅಂಗಹೀನನಿಗೇಕೆ ವ್ರತಾಚಾರದ ಹೊಲಬು (ಸರ್ವಶ. ೬-೨೬); ಹೋಗು ತಿರ್ದಳು ಹೊಲಬ ಕೇಳುತ (ಪ್ರಭುಲಿ. ೬-೪೨); ಲಂಕಾಪುರದ ಸರಣಿಯ ಹೊಲಬ ತೋಱಿಸಿ ಬೀಳುಕೊಂಡನು (ತೊರರಾ. ೪-೦೦-೨೨). ೨. ಅಕ್ಕಟಾ ಪುಣ್ಯ ಪಾಪದ ಹೊಲಬನಱಿಯಿರೇ (ತಿರುಕ. ದೀ. ೦೬-೫); ಎಲೆ ಮಹಾತ್ಮನೆ ನಿನ್ನ ಸೂತ್ರದ ಹೊಲಬಿದಲ್ಲದೆ ಸುಮ್ಮನೀ ಪಂ ಸಿಲುಕಬಲ್ಲುದೆ (ಪ್ರಭುಲಿ. ೦೦-೬೦); ಮಾಯಾವಿದ್ಯದೇಳ್ಗೆಯ ಹೊಲಬ ತೋಱಿದಳಾಳ್ದನಿಗೆ (ಮೋಹತ. ೦೩-೪೪). ೩. ನಳನೃಪತಿಗೆ ಮುನ್ನಂ ಕಂಗೊಳೆ ಸಾರಥಿಯಾದ ಹೊಲಬನಱಿವಂ (ನಳಚಂ. ೬೬೦); ಸತ್ತವರ ಕಥೆಯಲ್ಲ ಜನನದ ಉತ್ತರದಲಿ ಕುದಿಕುದಿದು ಕರ್ಮದ ಕತ್ತಲೆಗೆ ಸಿಲ್ಕುವರ ಸೀಮೆಯ ಹೊಲಬು [ಶಾಕಾಂ. ಮಾತು]ತಾನಲ್ಲ (ಪ್ರಭುಲಿ. ೦-೦೩); ತರುಣಿ ನೀನಱಿದುದಿಲ್ಲವೆ ನಮ್ಮ ಪಾದರಕ್ಷೆಯ ಹೋದ ಹೊಲಬನು (ಸಮ್ಯಕ್. ೪-೩೫). ೪. ತರಣಿಕುಲ ಪೊರೆಯೋ ಎನುತ್ತಿರೆ ಹಿರಿದು ಶಂಕಿಸಿ ಕೇಳಿದರು ಹೊಲಬುಂಟೆ ನಿನಗೆಂದು (ಕೌಶಿರಾ. ೦೪-೪೬); ನೆಲನಾವುದಾಗಸವಾವುದೆಣ್ದೆಸೆಗಳ ಹೊಲಬಾವುದೆಂದು ತೋಱಿಸದೆ . . . ಬಾಣಾಬ್ಧಿ ಬಲಗೂಡಿ ಹರಿಯ ನುಂಗಿದುವು (ಮೋಹತ. ೪೦-೩೬); ನಾಲ್ಕುಮಂದಿ ಗಳೆಯರಾದ ಮಂತ್ರಿಗಳು ಅವನಂತರಂಗವೇ ಆಗಿದ್ದರೆನ್ನಬಹುದು. ಅವರ ಯೋಗ್ಯತೆಯನ್ನರಿತಲ್ಲಿ ಅರಸನ ಅಂತರಂಗದಾಳಿಕೆಯ ಹೊಲಬು ಪಾಚೇರಿ ಗಾಗಬಹುದು (ಪಾಕೋಶ. ೩೬೬). ೫. ಅಂಗದೊಳಗೆ ಬೆರಸಿಪ್ಪ ಲಿಂಗದ ಹೊಲಬನಾರೂ ಅಱಿಯರು (ಅವಚ. ೨೨-೩೯); ಎಲೆ ಕಿತವ ಚರ್ಮರತ್ನವ ನೊಲವಿಂದು ಕಾವಂವಂಜರಿಗೆ ಕೊಟ್ಟೆನ್ನೊಳ್ ಹೊಲಬು ಪೇಳದೆ ನೀಂ ಸಂಕಲೆಯೊಳ್ ಬೀಟಲ್ಕೆ ಬಿಡುವೆನೆ (ಧಕಳು. ೬-೨೦೦); ನೀನತ್ವಲಕ್ಷಣದ ಹೊಲಬ ಬಲ್ಲೆ (ತೊರರಾ. ೩-೨-೨೦); ಮಾವನ ಮಾತಿನ ಹೊಲಬು ಬಾಬಣ್ಣನಿಗೆ ಹೊಳೆಯಿತು (ಅಕೋಳ. ೨೬). ೬. "ಸರಹದ್ದು" (ಶಪ್ರಶಾ. ಅನುಬಂಧ. ೨): ವೀರಮೊಡಕೆರಿಪುರದ ಹೊಲಮೇರೆಯಿಂದಾ ಹಾಯಿಕಲ್ಲು ಹೊಲಬಿನಲು (ಎಕ. XI. ಜಗ್ರದು. ೬೦-೩; ಕ್ರಿ. 1800 ?); ಈ ಧಳವಾಯಿ ಮುದ್ದಣ್ಣನು ಬದರಕೆರೇ ಹೊಲಬಿನಲ್ಲಿ ಸಂತೇಮುದ್ದಾಪುರದ ಗ್ರಾಮವನ್ನೂ ಅಲ್ಲಿ ಆ ಹನುಮಂತರಾಯನ ದೇವಸ್ಥಾನ, ಕೆರೆಗಳನ್ನೂ . . . ಸ್ಥಾಪನೆ ಮಾಡಿದನು (ಶಪ್ರಶಾ. ೩೫).

**ಹೊಲಬಾಗು**=೧. ದಾರಿಯಾಗು; ದಿಕ್ಕುತೋರು: ಆ ಅರುಣನ ನೆಲೆ ಒಂದೆ ಹಲವು ಜಗಕ್ಕೆ ಹೊಲಬಾದಂತೆ ಸ್ಥಲಜ್ಞನಾದೆಯಲ್ಲಾ ಸ್ಥಲದ ನೆಲೆ ಒಂದುನಱಿತಲ್ಲಿ ಏಕಸ್ಥಲಮೂರ್ತಿ ನೀನೆ (ಮೋಳಮು. ೨೦೦-೬೪೫). ೨. (ಪರಿಸ್ಥಿತಿಯು) ಅರಿವಾಗು; ಪರಿಚಯವಾಗು: ಚೀನದಲ್ಲಿ ಆರಿಸಿದ ೧೬೮ ಸ್ಥಳಗಳ ಜನರಿಗೆ ತಲಾ ಒಂದರ ೧,೪೦೦ ಕಿಲೋಗ್ರಾಂ ಉತ್ಪನ್ನವನ್ನು ಉತ್ತರಅಮೇರಿಕದ ೨೦,೦೦೦ ಕಿಲೋಗ್ರಾಂ ಉತ್ಪನ್ನದೊಡನೆ ಹೋಲಿಸಿದರೆ ಏಶಿಯದ ಜೀವನದ ಮಟ್ಟದ ಹೀನಸ್ಥಿತಿಯ ಹೊಲಬಾಗುವುದಿಲ್ಲವೆ? (ಏಶಿಸಂ. ೩೫).

[ದೇ. ॥ ತುಳು. ಪೊಲಬು, ಪುಲಬು, ಪುಲಮೆ; ತೆಲು. ಪೊಲುಪು]

**ಪೊಲಂಬುಗಿಡಿಸು**, **ಹೊಲಬುಗೆಡಿಸು** (ಕ್ರಿ). ೧. ದಾರಿತಪ್ಪಿಸು; ಮಾರ್ಗ ತಪ್ಪಿಸು: ತೇಜಿಗಳ ಕಾಲ ದೂಳಿ ನೆಗೆದು ಕೊಳಂಗುಳದೊಳ್ ಪಸರಿಸಿ ಬೀರರನಱಸುವಚ್ಚರಸಿಯರಂ ಪೊಲಂಬುಗಿಡಿಸೆಯುಂ (ಕಬ್ಬಿಗ. ೨೬೬). **ಹೊಲಬುಗೆಡಿಸು:** ೧. ನಿನ್ನಾಳ್ದನನು ಹೊಲಬುಗೆಡಿಸಿ. . .ಎಳೆದೊಯ್ವೆನು (ತ್ರಿಪುರಾಂ. ೨೦-೨೩೩); ಹೆಬ್ಬುಲ ಸಫಾಢದಲೌಕಿ ಕರ್ಣನ ಹೊಲಬುಗೆಡಿಸಿದು ದಂಬುಗಳ ಸಾರಾಯ ಸೋನೆಯಲಿ (ಕುಮ್ಮಾಭ. ೦೦-೨೦); ನಾನವನ ಹೊಲಬುಗೆಡಿಸಿ ಹೋರಿ ಹೊಣವಡಿಸುವೆನು (ರಾಜುಚ. ೪-೩೪). ೨. ದಿಗ್ಭ್ರಮೆಯುಂಟುಮಾಡು; ಗೊಂದಲಗೊಳಿಸು: ಚಾತುರ್ಬಲವ ಸವಱಿ . . . ಹೊಲಬುಗೆಡಿಸಿ ಮಹೀಪತಿಯ ಪಡಿಮುಖಕೆ ಮಾಱಾಂತ (ಕುಮ್ಮಾಭ. ೩-೩೬). [ಪೊಲಂಬುಗಿಡು (< ಪೊಲಂಬುಗೆಡು) + - ಇಸು$_1$]

**ಪೊಲಂಬುಗಿಡು** 'ಪೊಲಂಬುಗೆಡು' ನೋ.

**ಪೊಲಂಬುಗೆಡು**, **ಪೊಲಂಬುಗಿಡು**, **ಪೊಲಬುಗೆಡು**, **ಹೊಲಬುಕೆಡು**, **ಹೊಲಬುಗಿಡು**, **ಹೊಲಬುಗೆಡು** (ಕ್ರಿ). ೧. ದಾರಿ ತಪ್ಪಿಸಿಕೊಳ್ಳು: ಮಾರ್ಗ ಕಾಣದಾಗು: ಒಂದೊಟ್ಟೆ ಪೊಲಂಬುಗೆಟ್ಟು ಬಂದಾಡು ತ್ರಿದುರ್ಗದಂ. . . ಕಂಡು (ಕುಶತಂ. ೦೪೦-೮); ಕಾಂತಾರದೊಳ್ ಪೊಲಂಬು [ಶಾಕಾಂ. ಪೊಲ, ಪೊಲೆ]ಗೆಟ್ಟು ಸೇದವಟ್ಟು (ಜಿನಮು. ೬೪-೦೬), ಸಂಸರಣಕಾನನದಲ್ಲಿ ಪೊಲಂಬುಗೆಟ್ಟೆ (ಜಾರತ್ತು. ೪-೦೫೪); ಪಿರಿದಪ್ಪಾನಾಟವಿಯೊಳ್ ಮರುಳಾಗಿ ಪೊಲಂಬುಗೆಟ್ಟು ತಿರುಗುವ ನಮಾಗುದರದಿಂ ಪಥಮಂ ತೋಱಲ್ ಭರದಿಂ ಬಂದೈ (ರರ್ಮಾಶ. ೦೦-೪೫). ೨. ದಿಗ್ಭ್ರಮೆಯಾಗು; ಏನೂ ತೋಚದಂತಾಗು: ರಾಜವೀಥಿಯೊಳ್ ಸುಳಿವ ಜವ್ವನಿಗರಂ ಕಂಡು ಪೊಲಂಬುಗೆಟ್ಟು ಪುಲ್ಲೆಯಂತೆ ದೆಸೆದೆಸೆಗೆ ದೆಚ್ಚುವ (೧೦೪. ೨-೦೦೫ ವ). **ಪೊಲಂಬುಗಿಡು:** ೨. 'ಪೊಲಂಬುಗಿಡಿಸಂ' ಪರಾ. **ಪೊಲಬುಗೆಡು:** ೧. ನೆಲನಾಗಸಮಾವುದೆಂಬುದನಱಿಯದೆ ಪೊಲಬುಗೆಟ್ಟನು (ಅಂಜಕ. ೬-೦೩೪). **ಹೊಲಬುಕೆಡು:** ೧. ಮಾಯಾಪಾಶದಿ ಸಿಕ್ಕಿ ಕಡುನೊಂದೆ ಹೊಲಬುಕೆಟ್ಟೆನು ಜಗದೊಳಗೆ (ದೇಶೀಕು. ೦-೦೦). **ಹೊಲಬುಗಿಡು:** ೨. "ಹೊಲಬುಗಿಡು (ಹೊಲಬು+ಕಿಡು)-ದಿಗ್ಭ್ರಮಣೀ" (ಕಮುರಾ); ಜಠರದೊಳಿಳಿದು ತದ್ಬ್ರಹ್ಮಾಂಡಶತದೊಳು ಹೊಲಬುಗಿಡೆ (ಕುಮ್ಮಾಉ. ೬೧೨. ೦೦-೦೪). **ಹೊಲಬುಗೆಡು:** ೧. ಹೊಲಬುಗೆಟ್ಟೆನು ಬಟ್ಟೆಯ ತೋಱಯ್ಯಾ (ಬಸವ. ೬೩); ಅಡವಿಯೊಳು ಹೊಲಬುಗೆಟ್ಟನೋ (ಹಕಾಶಾ. ೦೨-೮೫); ಕಾನನದ ಕಾಡಾನೆಗಳವೊಲು ಪಥದನುವ ಕಾಣದೆ ಹೊಲಬುಗೆಟ್ಟವು (ತೊರರಾ. ೬-೨೬-೩೫). ೨. ನೆನೆವ ಮನಂ ಹೊಲಬುಗೆಟ್ಟಪುದು (ಶಂಬರ. ೦೪ ೫). [ಪೊಲಂಬು+ಕೆಡು$_1$]

**ಪೊಲಂಬುದಪ್ಪು**, **ಹೊಲಬುತಪ್ಪು**, **ಹೊಲಬುದಪ್ಪು** (ಕ್ರಿ). ೧. ದಾರಿ ತಪ್ಪು; ಮಾರ್ಗ ಕಾಣಿಸದಂತಾಗು: ರವಿರಥವ ಕುದುರೆಯೊಳೊಂದು ಪೊಲಂಬುದಪ್ಪಿ ನೆಲಕ್ಕಿೞಿದುದೆಂಬಂತೆ ಚೆಲ್ವನಪ್ಪ ವಾಜಿಯ ರೂಪನಳವಡಿಸಿ (ಪುಣ್ಯಾಸ್ರ. ೫-೬೨ ವ); ಪೊಲಂಬುದಪ್ಪಿದ ಮಱಿಯಂ ನೆನೆದು . . . ಪಾಯ್ದುಗುತರ್ಪ ವನಮಹಿಷಿಗಳ ಪಾಲ ಧಾರೆಯಂ ಮಿಕ್ಕು ನಟ್ಟುತೊಡ ವರ್ಪ ಕಾನನಬಿಡಾಲಂಗಳಿಂ . . . ವಿಜೃಂಭಿಸಿ (ರಾಜಶೇ. ೫-೫೫ ವ). ೨. ರೀತಿ ತಪ್ಪು; ಕ್ರಮಂ ತಪ್ಪು: ಪೊಲಂಬುದಪ್ಪಿ ಕೋಟಲೆಗೊಳಗಪ್ಪ ಪಾಟ್ಟನದ ಮಾನಸರಂ ಸುಡು ಸುಂದ ಗೊಡ್ಡರಂ (ಚಂದ್ರಶು. ೬-೬೦). **ಹೊಲಬುತಪ್ಪು:** ೧. ಸಂಸಾರವೆಂಬ ಘೋರಾರಣ್ಯದಲ್ಲಿ ಹೊಲಬುತಪ್ಪಿ ಬಳಲುತ್ತಿಹೆ (ವಚರ.೪೨). ೩. ದಿಗ್ಭ್ರಾಂತವಾಗು; ದಿಕ್ಕುತೋಚದಂತಾಗು: ಪದವಿಯ ಫಲವ ಕಾಣದೆ ಹೊಲಬುತಪ್ಪಿದೆನು (ಹಂಶಾ. ೫೪). **ಹೊಲಬುದಪ್ಪು:** ೧. ಗಹನದಲ್ಲಿ ಸಿಕ್ಕಿದ ಶಿಶುವಿನಂತೆ ಸ್ಥಾನದಪ್ಪಿ ಹೊಲಬುದಪ್ಪಿದ್ದೇನೆ (ಕೋಲಶಾಂ. ೦೩-೬೦); ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾದೆನ್ನೆ (ಕುಮ್ಮಾಸ. ೧೫-೦೨೫); ನಿಜವಿರಕ್ತಿಯ ಹೊಲಬುದಪ್ಪದೆ

. . . ಅರ್ತಿಯಿಂದಾಚರಿಸುವರಯ್ಯ ನಿಮ್ಮ ಶರಣರು (ಶಿಶಿ. ೬೦-೩೬). ೨. ಒಂದು ದ್ವಾರದಲ್ಲಿ ಬಂದ ಆತ್ಮಂಗೆ ಹಲವು ದ್ವಾರ ಉಂಟೆಂದು ಹೊಲಬುದಪ್ಪಿ ನುಡಿವವರ ನೋಡಾ (ಪ್ರೋಳವಚ. ೦-೦). ೩. ಹೊಲಬುದಪ್ಪಿದ ಮನದ ಸತಿಯರು ಸುಳಿಯೆ ನಳನೃಪ ಬಂದನಿದೆಯೆಂದೆನುತ ಕಳವಳಿಸಿ ನಿಲುಕಿ ನೋಡುವಳು (ಶಳಶ. ೩-೨). ೪. ಮಾರ್ಗವು ಕಠಿಣವಾಗು ; ಗಹನವಾಗು ; ಅಗಮ್ಯವಾಗು : ಹೊಲಮೇರೆಯಿಂ ಮೇರೆ ಹೊಲಬುದಪ್ಪಿದ ನಾದಕಳೆಗಳ ವಿಾಱರ್ದ ತುರ್ಯಂಗಳ ಗುರುವಿನ ಕರುಣದ ಅನಿಮಿಷದ ಮನೆಯಲ್ಲಿ ಹೊಲಬುದಪ್ಪಿದ ಕಂಡೆ ಮಧ್ಯಮವನು (ಸಿದ್ಧಶ. ೪. ೩೯೦-೦೦೦೦). [ಪೊಲಂಬು + ತಪ್ಪು$_1$]

**ಪೊಲಂಬುದೋಱು** (ಕ್ರಿ). ಮಾರ್ಗ ಕಾಣು ; ಸುಳಿವು ತೋರು : ನಂಬಿರೇ ತತ್ತ್ವವ ವ್ರತದೊಳಾಚರಿಸಿ ಪೊಲಂಬುದೋಱುವುದಾತ್ಮಸಿದ್ಧಿ (ಶರಶ. ೬೯-೪). [ಪೊಲಂಬು + ತೋಱು]

**ಪೊಲಂಬೊಗು** (ಕ್ರಿ). ಕ್ಷೇತ್ರವನ್ನು ಪ್ರವೇಶಿಸು : ಭೇದವಿಲ್ಲದೆ ತಾನೆಯಪ್ಪಂತೆ ಸವಿಕಾರ್ಯವಾದ ವಿದ್ಯೆಯ ಪೊಲಂಬೊಗಲು ತತ್ಕ್ಷಣಕಂಗಳಾದವಂತಾತ್ಮಚೈತನ್ಯದ ಪ್ರತಿಫಲದ ರೂಪವಹ ವಿದ್ಯಂಗಳಾ (ಶೀಕೃಶ.೩-೪-೨೬). [ಪೊಲ + ಪೊಗು]

**ಪೊಲಕೇಶಿ** 'ಪುಲಿಕೇಶಿ' ನೋ.

**ಪೊಲಗ, ಪೊಲೆಗ** (ನಾ). ಒಬ್ಬಾತನ ಹೆಸರು : ಬನವಾಸಿನಾಡಂ ಧಲದಂಕರಾಮ ಸಾನ್ತರನಾಳೆ ರಟ್ಟಪಳ್ಳಿಯ ಪೊಲಗನು (ಎಕ. VIII, ಹೊನ್ನಾ. ೪. ೨೯-೩ ; 934). **ಪೊಲೆಗ** : ಪಿರಿಯಮಾಗುಣ್ಣೆಯ ಪೊಲೆಗ ಊರ್ಗ್ಗಮುಣ್ಣಾಗೆಯ್ಯುತ್ತಿರೆ (ಎಕ. VIII, ಸೊರಬ. ೪೦೩-೦೬; 986) ; ಎಱಕನ ವರಪುತ್ರಂ ಪೊಲೆಗನೀ ಮಹೀಮಣ್ಡಳದೊಳ್ ಸ್ಥಿರಮಾಗಿರೆ (ಕ್ಶಾಇ. XI-I, ೬೩ ೫೬ ; 1029). [?]

**ಪೊಲಗಾ** (ಕ್ರಿ). ಹೊಲದ ಬೆಳೆಯನ್ನು ಕಾಯು,– ರಕ್ಷಿಸು : ಪೊಲಗಾವ ಪಾಮರಿಯರೋಳಿಗಳ ಮೃಗಂಪ . . . ಸುಳಿವ ತಂಗಾಳಿಗಳ ಕಡುಗಂಪ ಸೇವಿಸುತೆ ಪಥಿಕರಾಸರ್ಗಳೆವರಾ ನಾಡೊಳು (ಕೃಮಿಶಾ. ೩-೬). [ಪೊಲ + ಕಾ$_1$]

**ಪೊಲಗಾಪು** (ನಾ). ಪ್ರದೇಶದ ರಕ್ಷಣೆ,–ಕಾವಲು : ಆ ಬೀಡಿನ ಪೊಲಗಾಪಿನವರ್ ಕಾಣುತೆ ಪಲರುಂ ಪರಿತಂದು (ಶೀಪಹ. ೩೬-೩೯). [ಪೊಲ + ಕಾಪು]

**ಪೊಲಗಾಹಿ, ಹೊಲಗಾಹಿ** (ನಾ). ಹೊಲದ ಬೆಳೆಯನ್ನು ರಕ್ಷಿಸುವ ವ್ಯಕ್ತಿ : ಪೊಲಗಾಹಿಯಬ್ಬರಿಸಿ ದಿಙ್ಮದಿಕ ಬೊಕ್ಕು ತಾನೆಳ್ಚುತಿರಲಿರದೆ . . . ಪೆರತೊಂದೆಡೆಗೆ ಪಾಱಿ ಮಂಡಿಸುತೆ (ಕತ್ತ್ರಂಗ. ೩೩-೦೪೪೩). **ಹೊಲಗಾಹಿ** : ಹೊಲಗಾಹಿಗಳೆಲ್ಲ ಗುಡಿಸಲುಗಳಲ್ಲಿ . . . ಸೇರಿಕೊಂಡಿದ್ದರೆ (ಕೆಲಚ. ೨.೬). [ಪೊಲ+ಕಾಹಿ]

**ಪೊಲಗಿಡಿಸು** 'ಪೊಲಗೆಡಿಸು' ನೋ.

**ಪೊಲಗಿಡು** 'ಪೊಲಗೆಡು' ನೋ.

**ಪೊಲಗೆಡಿಸು, ಪೊಲಗಿಡಿಸು** (ಕ್ರಿ). ೧. ದಿಕ್ಕು ತಪ್ಪಿಸು ; ದಿಗ್ಭ್ರಮೆಯುಂಟುಮಾಡು : ಪಚ್ಚೆಯ ಕಂಬಂಗಳ ಬೆಳಗುಂ ಪೊಲಗೆಡಿಸಿದತ್ತು ಸುರರೀಕ್ಷಣಮಂ (ಶಾರಕೃ. ೬-೪೩). **ಪೊಲಗಿಡಿಸು** : ೧. ನೀನಂತು ಪಲವೋದನೋದಿ ಎನ್ನಂ ಪೊಲಗಿ[ಪಾಠಾಂ. ಗೆ]ಡಿಸದೆ ಉಳ್ಳುದನುಳ್ಳಂತೆ ಪೇೞು (ಶಂಶಕಂ. ೦೩೯-೯). ೨. ರೀತಿಗೆಡಿಸು ; ಕ್ರಮತಪ್ಪಿಸು : ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಮೆಂದೆ ಪಟಗನ್ನಡಮಂ ಪೊಲ(ಗಿ) [ಪಾಠಾಂ. ಗೆ]ಡಿಸಿ ನುಡಿವರಾಗಮಬಲಹೀನರ್ (ಕವಿರಾ. ೦-೪೩) ; ಪೇಱವಿಶಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲೆಂ (ಶಾಂತಿಕೃ. ೩-೨೩ ವ). [ಪೊಲ + ಕೆಡಿಸು$_1$]

**ಪೊಲಗೆಡು, ಪೊಲಗಿಡು, ಹೊಲಗೆಡು** (ಕ್ರಿ). ೧. ದಾರಿ ತಪ್ಪು ; ಮಾರ್ಗ ತಿಳಿಯದಂತಾಗು : ಅವಧಿವಿಬೋಧದೆ ಬರೆ ಮುನಿಕ್ಕೆ ಬಗೆಯೊಳ್ ಕಂಡಂ ದಿವಿಜಪತಿ ತನ್ನ ಮುನ್ನಿನ ಭವಮಂ ಪೊಲಗೆಟ್ಟು ಬಟ್ಟೆಗಾಣ್ಬಂತಾಗಳ್ (ಶಾಂತಿಕೃ. ೭-೦೯); ಇರುಳ್ ನಡೆವಂ ಪೊಲಗೆಟ್ಟಲ್ಲಿಯೆ ನೇಸಱಗೊಗೆವವೊಲ್ (ಚಂದ್ರಪ್ರ. ೪-೬೩); ಪೆಱುವಿನೊಳ್ ಪೊಲಗೆಟ್ಟು ತೊಟಲುತ್ತುಂ ಬಂದು ನಿಮ್ಮಂ ಕಂಡೆಂ (ಶೀಪಹಂ. ೦೬೬-೨೦). ೨. ಭ್ರಾಂತಿಗೊಳ್ಳು; ದಿಗ್ಭ್ರಮೆಯನ್ನು ಹೊಂದು; ದಿಕ್ಕು ತೋಚದಂತಾಗು : ಶಿಶುಶ್ರೇಣಿಗಳ್ ಪಿಡಿಮರ್ಕಿಂ ಪೊಲಗೆಟ್ಟು ಪೊಕ್ಕು ಮೃಗಶಾಬಾನೀಕಮಂ ಕೊಂಡು (ಅರ್ಜನೀ. ೩-೫೦); ಬಳಕೋಳಾಹಳದಿಂ ವಿಯಚ್ಚರಗಣಂ ಶೇಷಂ ದಿಶಾಪಾಲಕರ್ ಪೊಲಗೆಟ್ಟೋಡೆ (ಶಗಾ. ೭-೪೧). **ಪೊಲಗಿಡು** : ೨. ನೆಱನೀತಂಗೀಯೆಡೆಯೆಂದು ತೋಱ ಕುಡೆ ಪೊಲಗಿಡದೞದಂ ಪರಮುಪಂಡಿತಂ ಪವನಸುತಂ (ಗದಾಯು. ೬-೩೩); ಕಾದಲನೆಡೆಗಯ್ದಿ ಬರ್ಪ ಖಚರೀನಿಚಯಕೃದಿರ್ಪೋಗಿ ದಿಟ್ಟಿಗಳ್ ಪೊಲಗಿಡೆ ಚಿತ್ತದುಜ್ಜುಗಮುಮಂ ಮುಱಿದಿರ್ದಪೊಲಿರ್ದ ನಲ್ಲಳಂ . . . ನರಪತಿ ಭಾವಿಸಿ (ವರ್ಧಕೃ. ೪-೭೬); ಸವನಕ್ಷೀರಂ . . . ಪರಿದುದು ದಿವಿಜರ್ ಮೇರುಮಹೀಧರಮಲ್ಲದು ತಾರಮಹೀಧರಮಿದೆಂದು ಪೊಲಗಿಡುವಿನೆಗಂ (ಅನಂಪು. ೫-೬೬). **ಹೊಲಗೆಡು** : ೧. ಮುನಿಗಳೊಳೆಱಸಿದರು ಮಾಮುಸಕದಿಂ ಪುರಜನಂ ಭೂಪನಂ ಹೊಲಗೆಟ್ಟ ಕಱು ತಾಯನಱಸುವಂತೆ (ಹಕಶಾ. ೮-೬೦); ಕೆಟ್ಟೆನಿನ್ನೇವೆನೆನ್ನಣುಗನಡವಿಯೊಳು ಹೊಲಗೆಟ್ಟನೋ (ಸಿದ್ಧರಾ. ೨-೪೩). [ಪೊಲ + ಕೆಡು$_1$]

**ಪೊಲಗೆಱೆ** (ನಾ). ಹೊಲಸು ತುಂಬಿದ ಕೆರೆ : ಪಾಪದ ಪುಂಜಂ ತೋಯಿಲಕುಱಿ ಪೊಲಗೆಱೆಯೆಂದಾಯತಿಯಂ ಬಿಗಿವರುಟಿವರಾ ಸೂಳೆಯರಂ (ಶಬಾರ. ೨೯೯). [< ಪೊಲೆ + ಕೆಱೆ]

**ಪೊಲಗೇರಿ** 'ಪೊಲೆಗೇರಿ' ನೋ.

**ಪೊಲತಪ್ಪು** (ಕ್ರಿ). ದಾರಿ ಸಿಕ್ಕದಾಗು; ಹಾದಿ ತಪ್ಪು : ಪೊಲತಪ್ಪಿದ ಹುಲ್ಲೆಯಂತಾ ಸಖಿಯರು ಪಲುಬಿ ಪಂಬಲಿಸಿ (ಅಂಶಕ. ೪-೬೨). [ಪೊಲ + ತಪ್ಪು$_1$]

**ಪೊಲತಿ, ಪೊಲಂತಿ, ಹೊಲತಿ** (ನಾ). ೧. ಹೊಲೆಯರ ಹೆಣ್ಣು : ನೀಳನೆಂಬ ಮಾದೆಗಂಗು ಕೇಶಿಯೆಂಬ ಮಾದೆಗಿಗಂ ಮಗಳ್ . . . ಪೊಲತಿಯಾಗಿ ಪುಟ್ಟಿ (ವಡ್ಡಾರಾ. ೯-೭); ಬಿಡುವಂತುಟದೊಂದಳ್ಗೆ ಪೇೞ ದೊರಕೊಳಲಾರ್ಕುಮೇಂ ಪೊಲತಿಗೆ (ಕಾದಂಬ. ೬೯೬); ಪೊಲತಿಯುಣಲಿಕ್ಕೆ ಶುನಕನ ಕಳೆವರಮಂ ಪೊಕ್ಕು ಪೇಸದುಂಡಾ ಮುನಿ ನಿರ್ಮಳನಾಗಿ ಮುಕ್ತಿರಮೆಯೊಳ್ನಲಿದಂ (ಸಪುಶ. ೦೦-೦೦೯). **Δಪೊಲಂತಿ** : ೧. ಪೊಲಂತಿಯರೊಳೀಜನಮೋಹನಮಪ್ಪ ರೂಪು ತಾಂ ನೆಲಸುಗುಮೇ (ಪ್ರಹಾಸೀ. ೬-೩೦). **ಹೊಲತಿ** : ೧. ಬಡ ಹೊಲತಿ ಮೈಗೆಟ್ಟವಳು ನೀನು . . . ಬಾರದಿರತ್ತ ನಿಲ್ಲು (ಬಸಪು. ೫೭-೫೬); ಹೊಲಗೇರಿಲಿ ಹೊಲೆಯ ಹೊಲತಿಲ್ಲ (ಪುರಂದ. ೧-೦೦೭ ಅನುಪಲ್ಲವಿ). ೨. "ಹೊಲೆಯುಳ್ಳವಳು, ರಜಸ್ವಲೆಯಾದವಳು" (ಬಸವ. ಕೋಶ); ಹೊಲತಿ ಶುದ್ಧನೀರ ಮಿಂದಂತಾಯಿತ್ತಯ್ಯಾ (ಬಸವ. ೬೨೯); ಹೊಲತಿ ತನ್ನ ಹೊಲೆಯ ಮಱೆದು ಶುದ್ಧನೀರ ಮಿಂದನೇಡು ಕೆಲವರ ಮುಟ್ಟುವಂತೆ . . . ತ್ರಿಕರಣಶುದ್ಧವಿಲ್ಲದ ಪೂಜೆ (ಪೋಳವಚ. ೩೯-೦೬೨). [< ಪೊಲೆ + – ತಿ$_1$ (< – ಇತ್ತಿ)./ತಮಿ. ಪುಲೈತ್ತಿ; ಕೊಡ. ಪೊಲತಿ]

**ಪೊಲದಿ** (ನಾ). ಕಾಮುಕ; ವ್ಯಭಿಚಾರಿ : "ಸಿತಗನುಂ ಪೊಲದಿಯುಂ [ಪಾಠಾಂ. ಪೊಲೆಯನುಂ]ದಕ್ಕು" (ಅಭಿಕೃ. ೬೩); "ಪೊಲದಿಯೆನೆ ಸಿತಗ" (ಗ್ರಾಮಪು. ೩೬). [ದೇ. ॥ ಮಲ. ಪುಲಯಾಟಿ]

**ಪೊಲದಿಗಣ್ಣು** (ನಾ). ಕಾಮುಕ ಕಣ್ಣು; ವಿಟದೃಷ್ಟಿ : ನಿನಗೆ ಪೊಲದಿಗಣ್ಣು ಕೊಟ್ಟಾಗ, ನಿನ್ನ ಅದ್ಭುತ ರೂಪ ಸೌನ್ದರ್ಯಗಳ ಕಿರುಜವ್ವನದ

ಅಂಗೋಪಾಂಗಪ್ರದರ್ಶನಗಳ ಹಾವಭಾವವಿಲಾಸವಿಭ್ರಮಗಳ ಪ್ರಯೋಗದಿಂದ ಬಗೆಗಲಂಕಿ ಅವನನ್ನು ಮುಂದಲೆವಿಡಿಯದೆ (ಮುಂಶ್ರೀ. ೩೬-೧೦). [ಪೊಲದಿ + ಕಣ್ಣು (< ಕಣ್)]

**ಪೊಲಬಿಗ** 'ಪೊಲಂಬಿಗ' ನೋ.

**ಪೊಲಬು** 'ಪೊಲಂಬು' ನೋ.

**ಪೊಲಬುಗೆಡು** 'ಪೊಲಂಬುಗೆಡು' ನೋ.

**ಪೊಲಮಚ್ಚು** 'ಪೊಲಮೆಚ್ಚು' ನೋ.

**ಪೊಲಮೆಚ್ಚು**, ಪೊಲಮಚ್ಚು (ನಾ). ತನ್ನ ನೆಲೆಯ ಮೇಲಿರುವ ಪ್ರೀತಿ,–ಸೆಳೆತ; ಸ್ವಸ್ಥಾನದ ಆಕರ್ಷಣೆ: ಅದಟರ ಚೆನ್ನಪೊಗರ ಸಬಂಗಳ ತೊಟ್ಟುಬ್ಬೆಯೊಳ್ ತೊಡಂಕಿ ನಿಲ್ಲದೆ ಪೊಲಮೆಚ್ಚು[ಪಾಠಾಂ. ಪೊಲಮಚ್ಚು] ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ . . . ಎರ್ಬಸುಗಳ್ ಪರಿಗೊಂಡುಮಾಜಿಯೊಳ್ (ಶಂಕಪು. ೬-೦೦೪). **ಪೊಲಮಚ್ಚು:** ನಿಲೆ ಪೊಲಮಚ್ಚು ತಮ್ಮ ಮನದೊಳ್ ಸಲೆ ಕಟ್ಟಸು ಪರ್ವಿದುರ್ವಿಯೊಳ್ ಚಲದಿಱಿದಾಂತು ಬಿಟ್ಟ ಭಟರಂತ್ರದ ತೊಂತುಳಿಯೊಳ್ . . . ಪರಿತಂದುವು ಯುದ್ಧಭೂಮಿಯೊಳ್ (ಜಿಂಪುಕ. ೧೦-೦೩೩). [ಪೊಲ + ಮೆಚ್ಚು$_1$]

**ಪೊಲಮೇರೆ, ಪೊಲೆಮೇರೆ, ಹೊಲಮೇರೆ, ಹೊಲವೆರೆ, ಹೊಲವೇರಿ, ಹೊಲವೇರೆ** (ನಾ). (ಪ್ರದೇಶದ) ಗಡಿ; ಸೀಮೆ; ಸರಹದ್ದು: ಪೊಲಮೇರೆ ತಟ್ಟಗ್ಗಜಿಯ ಕಟ್ಕಿಜ಼್ ಪೋಗಿ (ಎಕ. II, ೩-೩೩; ಸು. 800): ಇನಿತುಮಂ ಪೊಲಮೇರೆ ಸಹಿತಂ ಇತ್ತನ್ (ಎಕ. IX, ಕಂಗಲೂ. ೬೩-೦೬; ಸು. 890); ಅಣಲಿಗೆಯೂರ ಮುಂದಣ ಪೊಲಮೇರೆಯ ಪಳ್ಳದ ತಡಿಯಲು (ಸಾಂದೇಇ. ೬-೩೮; 1070). **ಪೊಲೆಮೇರೆ:** ಪೂವಿನ ಪಿಪ್ಪರಗೆ[ಯ] ನಾಲ್ಕುದೆಸೆಯ ಪೊಲೆಮೇರೆಯುಂ [ನ]ಡು ಸರಿಯಾಗಿ ನಡದು[ಂ] (ಕ್ರಾಇತ. XI-i, ೯-೨೪; 862). **ಹೊಲಮೇರೆ:** "ಅವಧಿಃ, ಮರ್ಯಾದಾ, ಆಘಾಟಃ, ಸೀಮಾ, ಸೀಮಾ—ಈ ೫ ಹೊಲಮೇರೆ" (ಕರಾಯು. ೪೩-೦೦೪); ಸಮ್ಮ ಕೂಡಲಸಂಗನ ಶರಣರ ಅನುಭಾವವಿಲ್ಲದವರ ಹೊಲಮೇರೆಯ ಹೊಂದೆ ಹೊಲನ ಬಿಟ್ಟೋಡುವೆ (ಬಸವ. ೪೪೭); ಹೊಲಮೇರೆಯಂ ಮೆಟ್ಟಲೊಲ್ಲದ ಚಲಂ ಮಿಕ್ಕು ಕಲಿಕಾಮನಲ್ಲಿ ತಿರುಗಿದನುಮ್ಮಳಂ ಮಿಕ್ಕು (ಕಂಠೀ. ದೇ. ೩೦೭-೯). **ಹೊಲವೆರೆ:** ಮೂಡಣ ಮೇರೆ ಮಂಗಳೂರ ಹೊಲವೆರೆಯೊಡವಿನ ಕೊತ್ತುರ ಹೊರೆಯಣ ಕವಿಲೆಯ ಕಲ್ (ಕಇಕ. ೭೭-೦೨-೩೨; 1170). **ಹೊಲವೇರಿ:** ಹೊನ್ನವುರದ ನಿರಗುನ್ದದ ಹೊಲವೇರಿಯ ಕಾಳಗದಲು . . . ಕಾದಿ ಸುರಲೋಕಪ್ರಾಪ್ತನಾದಲ್ಲಿ (ಎಕ. V, ಹಾಸನ. ೩೮-೪; 1174 ?); ಈಶ್ವರಪುರದ ಹೊಲವೇರಿಯ ಚಿಕ್ಕಕುಂಟೆ (ಎಕ. VII, ಶಿವಮೊ. ೨೩-೨೫೧; 1524). **ಹೊಲವೇರೆ:** ಶ್ರೀಮ[ತ್]ತ್ರಿಭುವನೇಶ್ವರ ದೇವರ ನಿವೇದ್ಯಕ್ಕೆ ದೇವಗೇರಿಯ ಹೊಲವೇರೆಯಿಂ ತೆಂಕ . . . ಬಿಟ್ಟಯೆರೆ ಮತ್ತರಯ್ದು (ಎಇ. XIX, ೦೯೨-೨೫; 1121); ಬಡಗವೊಲದ ಹೊಲವೇರೆಯ . . . ಕೆಯಿ ಘಳೆಯ ಮತ್ತರು ೪ (ಸಾಂದೇಇ. ೩೫-೦೦; 1149); ಅಲ್ಲಿಂ ಪಡುಪಲು ತೆಂಕಣ ಮೇರೆ ಸಿರಿಯೂರ ಹೊಲವೇರೆಯೊಡವಿನ ಕೊತ್ತುರ (ಕಾಕಶ. ೭೪-೦೪; 1170). [ಪೊಲ + ಮೇರೆ$_1$]

**ಪೊಲವಾನಸೆ** (ನಾ). = ಪೊಲತಿ ೧: ಚರಿಗೆವೋಗುತ್ತುಂ ನಾನಾನೂನಮಃಖಪೀಡಿತಮಾನಸೆಯಾಗುತ್ತಮಿರ್ದ ಪೊಲವಾನಸೆಯಂ ಕರುಣಾಕೃಮಿಗೆ ಕಂಡು (ಸುಕುಮಾ. ೩-೨). [< ಪೊಲೆ + ಮಾನಸೆ]

**ಪೊಲವಿಡಿ** (ಕ್ರಿ). ನೆಲೆ ಮುಟ್ಟು: ಪೊಲವಿಡಿಯದು . ಬಗೆಯಮಮಾ ಬಲೆಯೊಳ್ ಕಣ್ಬಾಳಿ ತೊಡರೆ ಪಿಡುಕುವುದಮಮಾ (ಕಕಾ. ೩-೦೭೪). [ಪೊಲ + ಪಿಡಿ$_1$]

**ಪೊಲಸಂದು** (ನಾ). ಬೇರೆಬೇರೆ ಹೊಲಗಳು ಕೂಡುವ ಸ್ಥಳ: ಅನ್ನೆಬನ್ದು ಬೆಳ್ಗಲಿಯ ಇಗ್ಗಲಿಯ ಕಲ್ಸನ್ದಿನ ಮೂಜೂರ ಪೊಲಸನ್ದಿನ ಕಱಕೊಡಿಯನ ಕೆಱೆಯಿಂ (ಎಕ. III, ಶಂಕಜ. ೦೩೯–೨೩; 915 ?). [ ಪೊಲ + ಸಂದು$_1$ ]

**ಪೊಲಸೀಮೆ** (ನಾ). = ಪೊಲಮೇರೆ: ಮೂಜೂರ ಮುಕ್ಕೂಡಲಲ್ಲಿ ಪೊಲಸೀಮೆ ಕೂಡಿತ್ತುಂ (ಪ್ರಾಅ. ೦೯೩೪, ೩೬–೨೦; 11ನೆಯ ಶಶ). [ ಪೊಲ + ಸೀಮೆ ]

**ಪೊಲಸು$_1$, ಹೊಲಸು$_1$** (ನಾ). ೧. ಕೊಳೆ; ಕೊಳಕು; ಮಾಲಿನ್ಯ: ಅದ್ರಿಯಾನಗೆಯೆತ್ತುವುರ್ವಿಯಾನಡಂಗಿಪ ಭಂಗಿಯೊಳಿಲ್ಲ ಭೇದಮಾ ಕ್ಷಯಪವನಂಗಮಾತನ ಗದಾಪವನಂಗಮದೊಂದೆ ರಕ್ತಚರ್ಚೆಯ ಪೊಲಸುಂಟೆ ದೈತ್ಯನ ಗದಾನಿಳನಲ್ಲದೊಡಾ ಕ್ಷಯಾನಿಳಂ (ಜಗಪು. ೯–೬೪); ಪೊಲಸಿನ ನೆರೆ ರುಧಿರದ ಕುಳಿ ವಿಲಿವಿಲಿಸುವ ಪುಳುಗಳೊಗೆವ ಪುತ್ತು ಪುರೀಷಮ ನೆಲಸಿದ ದರಿ ಕಾಮಾಹಿಯ ಬಿಲಮಂಗಜಗೃಹಮನಂಗದುರ್ಜಲಕೂಪಂ (ಪ್ರಪು. ೨೬–೬೦). ೨. ಅಮೇಧ್ಯ; ಮಲ: ಪೊಲಸಿನಂತಶುಚಿಯಪ್ಪ . . . ಸಂಸಾರಮಂ ನಂಬಿ ದರ್ಶನಮುಮಂ ವ್ರತಮುಮಂ ಕೆಡಿಸುವುದೆಗ್ಗಿಕೆ (ಧರ್ಮಾಮೃ. ೩–೦೬೩). ೩. ಕಳಂಕ; ದೋಷ: 'ಪೊಲಸುಗೊಳ್' ಪರಾ. **ಹೊಲಸು$_1$:** ೧. ಹೊಲಸಱೆಯಟ್ಟ ನಾರ್ವ ನಿಜದೇಹದ ರಾಜತನೂಜನರ್ತಿಯಿಂ ತಳೆದುಪವಾಸದೊಂದು ಫಲದಿಂ ರತಿವಲ್ಲಭರೂಪನಾಗಿ ಕಣ್ಗೊಳಿಸಿ . . . ಅಮೃತೇಶನಾದಂ (ಪುಣ್ಯಾಸ್ರ. ೯–೦೭); ಬಾತ ಹೆಣ ನುಬ್ಬರದ ಹೊಲಸಿನ ಗವಲು ಕವಿದುದು ಕೂಡೆ ವನದೊಳಗೆ (ಕುಭಾ. ೧೦–೦೨); ಮೈಮೇಲೆ ಹೊಲಸು ಇದ್ದರೆ ಅದು ರೋಮರಂಧ್ರಗಳ ಬಾಯಿಗೆ ಕೂತು, ಬೆವರಿಗೆ ಅಡ್ಡಿ ಮಾಡುತ್ತದೆ (ಕುಂಆಯು. ೯–೨೪). ೨. ಹೊಲಸು ಮಾಂಸದ ಹುತ್ತ ಎಲುವಿನ ಹಂದರವು ಹೊಲೆ ಬಲಿದ ತನುವಿನೊಳಗಿರ್ದುಮದಱೊಳಗೆ ಕುಲವನಱಸುವರೆ (ಸರ್ವಜ್ಞ. ೨೦). ೪. ಕಸ; ಗಲೀಜು: ಮ್ಯುನಿಸಿಪಾಲಿಟಿಯ ಆರೋಗ್ಯಖಾತೆಯ ಟ್ರಕ್ಕೊಂದು ರಸ್ತೆಯ ಮೇಲೆ ಕೂಡಿ ಹಾಕಿದ ಹೊಲಸಿನ ರಾಶಿಯನ್ನು ತೆಗೆಯಲು ಬಂದು ನಿಂತಿತ್ತು (ಅಶೋಕ. ೦೦೨). ೫. (ಆಲಂ) ಹೀನವಾದ ಕಾರ್ಯ; ಕೆಟ್ಟ ಕೆಲಸ; ನೀಚಕಾರ್ಯ: ಇಂತಹ ಹೊಲಸಿನೊಳಗೆ ನಾನು ಕೈಹಾಕುವುದಿಲ್ಲ. ನನ್ನನ್ನು ಹಿಡಿದರೆ ನೀವು ಸಂಸ್ಥಾನದಿಂದ ಉಳಿಸಲು ಬರುವಿರಾ ? (ಕೊತಕಾ. ೭೦). ೬. ಅನಾಗರಿಕತೆ; ಅಸಭ್ಯತೆ: ಮಾತು ಹೊಲಸಿನ ಗಂಧವಾಗಿದೆ ಭೀತಿರಸದಲಿ ಮನ ಮುಳುಗಿತೀ ಪ್ರೀತಿ ಮಾರಿಯ ಮುಸುಕನುಗಿವುದನಾರು ಕಲಿಸಿದರು (ಕುಭಾ. ಸ. ೦೨–೭೭). (ಗು). ೭. ಕೊಳಕಾದ; ಅಶುದ್ಧವಾದ; ಮಲಿನವಾದ: ಹೊಲಸುಮೈಯಯಪಗೇಕೆ ಹೊಸಕಸ್ತೂರಿವಾಟ ತಲೆದೋಱುವವಗೇಕೆ ದಟ್ಟ ಪುನುಗು (ಪುರಂದ. ೦–೦೦೦–೦); ನೆಲೆ ಇಲ್ಲದ ಕಾಯ . . . ಮಲಮೂತ್ರಂಗಳು ಕೀವು ಕ್ರಿಮಿಗಳುಳ್ಳ ಹೊಲಸು ತೊಗಲ ಮೆಚ್ಚಿ ಕೆಡಬೇಡಿರೊ (ಪುರಂದ. ೨–೦೦–೨).

ಪೊಲಸಟ್ಟ ನಾಱು, ಹೊಲಸಟ್ಟ ನಾಱು = ವಿಪರೀತವಾದ ದುರ್ನಾತದಿಂದ ತುಂಬಿರು: ಕಾಡ ಪಂದಿಗಳ ಬಲ್ಣಿನದಿಂ ಪೊಲಸಟ್ಟ ನಾರ್ವ . . . ನೆತ್ತರ ಕೆಯ್ ನಡುಗಲ್ಕೆ (ಕಾದಂಪೂ. ೦೩೩); ಮೆಯ್ಯ ವ್ರಣಮುಂ ಕೀವುಂ ಪೊಲಸಟ್ಟ ನಾಱೆ (ಪುಣ್ಯಾಸ್ರ. ೬–೨೭ ಪ); ಮುಂದೆ ನೋಡದ ಹೊಲಸಟ್ಟ ನಾರ್ಪುದು ಪೆರ್ಬುಲಿಯಿರ್ಪುದಕ್ಕನುತ್ತ ಪೆರ್ಚಿದ ಪನದಲ್ಲಿ ಪಜ್ಜೆವಟ್ಟೆಯಿಂ ನಡೆಗೊಂಡುದು ಭಿಲ್ಲಸಂಕುಳಂ (ದಕಕು. ೨–೦೫೦). **ಹೊಲಸಾಗು** = ಕೊಳಕಾಗು; ಗಲೀಜಾಗು: ಮೊದಲಿಗಿಂತ ನಾಲ್ಕುಪಾಲು ಹೆಚ್ಚಾಗಿ ಸೀನು ಬಂದಿತು; ಮೂಗು ಇನ್ನಷ್ಟು ಹೊಲಸಾಯಿತು ! (ಸಂಟಿರು. ೩೬); ಮಗುವಿನ ಬಟ್ಟೆ ಹೊಲಸಾಗಿದೆ (ಲೂಶಿ). **ಹೊಲಸು ಮಾಡು** = ೧. ಕೊಳಕು ಮಾಡು; ಮಲಿನಗೊಳಿಸು: ಅವನು ಕಸ ಚೆಲ್ಲಿ ಮನೆಯನ್ನೆಲ್ಲ ಹೊಲಸು ಮಾಡಿದ್ದಾನೆ (ಲೂಶಿ). ೨. ಮಲವನ್ನು ವಿಸರ್ಜಿಸು; ಹೇಸಿಗೆ ಮಾಡು: ಮನೆಯ ಬಾಗಿಲಿನಲ್ಲಿ ನಾಯಿ ಹೊಲಸು ಮಾಡಿದೆ

(ಕೂಶಿ). ೩. ಕಳಂಕಗೊಳಿಸು ; ದೋಷಯುಕ್ತವನ್ನಾಗಿ ಮಾಡು : ನಿನಗೆ ಅಕ್ಕ ತಂಗಿ ಇಲ್ಲವೆ ? ಅವರ ಹೆಸರನ್ನು ಹೀಗೆ ಹೊಲಸು ಮಾಡಿದ್ದರೆ ನಿನಗೆ ಹೇಗೆ ಅನಿಸುತ್ತಿತ್ತು (ರಂಗರೂ. ೯೯).

[ಪೊಲೆ + — ಸು₃. / ತುಳು. ಪೊಲಸ್, ಹೊಲಸ್]

**ಪೊಲಸು₂**, ಹೊಲಸು₂ (ನಾ). ಮಾಂಸ ; ಬಾಡು : ಮತ್ತಮಾನಂತೆ ಪೋಗೆವೋಗೆ ಪೊಲಸಿನ ಗಂಧಮಂ ಪೊತ್ತು ಕಿಱುಕವ್ವರೆಗೊಳ್ಳೆ ಕೌರ ಪೊಗೆಯುನಱಿಯಲಾದ ಬೇಡವಟ್ಟಮಂ ಕಂಡಂ (ಕಾದಂಸಾ. ೭೪೩) ; ಇವರವರ್ಗೆ ಕಪಟದಿಂದಂ ಸವಿನಯದಿಂದೆಱೆಯೆ ಕಳ್ಳನಾದರದಿಂ ಮತ್ತ ವರಿವರ್ಗೆ ತಂದು ಪೊಲಸಂ ಸವಿನಯದಿಂದಿಕ್ಕಿ ಕುಡಿದು ತಿಂದಂತಾಗಳ್ ಸಾವುದುಂ (ರಪೂಣ್ಯ. ೨–೨೦೪). **ಹೊಲಸು₂** : ಕೊಲುವನೇ ಮಾದಿಗ ಹೊಲಸ ತಿಂಬವನೇ ಹೊಲೆಯ ಕುಲವೇನೋ ಅವಂದಿರ ಕುಲವೇನೊ (ಬಸವ. ೫೮೩) ; ಅವನ ಕಯ್ಯೊಳು ಹೊಲಸು ಮನದೊಳಮೃತ (ಕನ್ನಕ. ಕೀ. ೦೪೪–೦೩).

[ದೇ. ॥ ತಮಿ. ಪುಲ್ಯೆಚು ; ತೆಲು. ಪೊಲುಸು]

**ಪೊಲಸುಗೊಳ್** (ಕ್ರಿ). ಕಳಂಕಿತವಾಗು ; ದೂಷಿತವಾಗು : ಕಾಯಿ ಮಡಿದವನ ಕೊಲೆಯಿಂದೆ ಪೊಲಸುಗೊಂಡೆಲ್ಲವನು (ಮುಡುಚಾ. ೦೦೪–೩೬೬).

[ ಪೊಲಸು₁ + ಕೊಳ್₁ ]

**ಪೊಲಸುನಾಱು**, ಹೊಲಸುನಾರು, ಹೊಲಸುನಾಱು (ಕ್ರಿ). ಗಬ್ಬುನಾತ ಬರು ; ದುರ್ವಾಸನೆ ಬರು : ನೆತ್ತರೊಳ್ ಪೊರೆದು ನಿರಂತರಂ ಪೊಲಸು ನಾಱುವ ಮೆಯ್ಯನೆ ಕರ್ಚಲೆಂದು ಚೆಚ್ಚರಮಪರಾಂಬುರಾಶಿಗಿೞಿವಂತಿ ಟಿದಂ ಕಮಳೈಕಬಾಂಧವಂ (ಹಂಪಚಾ. ೦೦–೩೦) ; ದೈತ್ಯನಂ ಪೊಲಸು ನಾರ್ಪನೆಗಂ ತ್ರಿಶೂಲದಿನೊತ್ತಿ ಕೋದ ಕುಮಾರಿ ಕೊರ್ತಲಸದಿರ್ಕೆ ಛುಚಾಸಿಧಾರೆಯೊಳಂಕಮುಳ್ಳರ ದೇವನಾ (ಕಾವ್ಯಾ. ೨೦೨). **ಹೊಲಸು ನಾರು** : ಕುಣಪ= ಹೊಲಸುನಾರುವ ಹೆಣ (ಗಂಗಾಮ. ೯೯). **ಹೊಲಸು ನಾಱು** : ಹೊಲಸುನಾರ್ವೆಳಜಲಚರಂಗಳು ಬೆಳಂಪು ನೆಱೆಯದ ಕಿಱುವೆಸಳ ನೆಯ್ದಿಲುಗಳೇ ಮಡದಿಯು ಕುಡಿತೆಗಂಗಳಿಗೆ ಪಡಿಯಲ್ಲ (ಬಸವ. ೪–೨೩).

[ ಪೊಲಸು₁ + ನಾಱು₁ ]

**ಪೊಲಸೇಳು**, ಹೊಲಸೇಳ್, ಹೊಲಸೇಳು (ಕ್ರಿ). ೧. ದುರ್ಗಂಧ ವ್ಯಾಪಿಸು.—ಹರಡು : ಶಿವಶಿವ ಇದೆಲ್ಲಿಯದ್ಭುತವೆನುತೆ ಪೊಲಸೇಳೆ ತಿರುಗಿ ಬಂದಗ್ನಿಣಿಯನೊಂದು ಹಾವಿನೊಳಿರಿಸಿ (ಕನ್ನಕ. ಕೀ. ೦೩೩–೨೦). **ಹೊಲಸೇಳ್** : ೧. ಮೇಲೆ ಮುಸುಕಿರ್ದ ಮಾಂಸ ಸುಲಿಯೆ ಹೊಲಸೇಳ್ದು (ಶಿಃಕೋಶ. ಹ. ೫೦೦–೨೨). **ಹೊಲಸೇಳು** : ೨. ಕಸವು ತುಂಬಿರು ; ಗಲೀಜಾಗು : ಮನೆಯೆಲ್ಲ ಹೊಲಸೆದ್ದು ಹೋಗಿದೆ (ಕೂಶಿ).

[ ಪೊಲಸು₁ + ಏಳು₁ (<ಏೞ್₁) ]

**ಪೊಲಿ₁** 'ಪೊಲ್' ನೋ.

**ಪೊಲಿ₂**, ಹುಲಿ₂, ಹೊಲಿ₂ (ನಾ). (ಕರಾ) ಧಾನ್ಯರೂಪದ ಬಡ್ಡಿ ; ತಲವಾಸಿ : ನೂರ್ಕೊಳ್ಗಾಗ ಭತ್ತ ಪೊಲಿಯೆ ಕೊಣ್ಡುಕೊಟ್ಟುವೊದು (ಎಕ. X, ಕೋಲಾರ. ೬–೯ ; 758) ; ಮುಂದಿಗೆ ಒಂದು ಕಳಸಿಗೆ 'ಪೊಲಿ' (ಚನುಶ. ೩೬). **ಹುಲಿ₂** : ಗದ್ದೆ ಕೊಯ್ಲಾದ ನಂತರ ಹುಲಿ (ಬಡ್ಡಿ) ಸೇರಿಸಿ ಒಂದಕ್ಕೆ ಎರಡರಷ್ಟು ಭತ್ತವನ್ನು ಹಿಂದಕ್ಕೆ ಕೊಡಬೇಕಾಗಿತ್ತು (ಕಃಜಕೊ. ೮). **ಹೊಲಿ₂** : ಅಕ್ಕಿ ಮಳೆಗಾಲದಲ್ಲಿರಿಸಿಕೊಂಡು ಹೊಲಿಗೆ ಕೊಟ್ಟರೆ ಪ್ರಯೋಜನವಿದೆ (ಮುಂಗಯು. ೬೬) ; ಎಷ್ಟೋ ಮಂದಿ ಅವರಿಂದ ಹೊಲಿಗೆ ಬತ್ತ ಹೊಂದಿಕೊಂಡಿದ್ದರು (ಜಃಕಳೂ. ೫).

[ದೇ. ॥ ತಮಿ. ಮಲ. ತುಳು. ತೆಲು. ಪೊಲಿ]

**ಪೊಲಿಕೇಶಿ** 'ಪುಲಿಕೇಶಿ' ನೋ.

**ಪೊಲಿಗೆ** 'ಪೊಲ್ಗೆ' ನೋ.

**ಪೊಲಿಸು**, ಹೊಲಿಸು (ಕ್ರಿ). (ಹರಿದುದನ್ನು ಜೋಡಿಸಿ) ಹೊಲಿಗ ಹಾಕಿಸು : ಹಾಸನಟ್ಟಿದು ಕಂಥೆಯಂ ಪೊಲಿಸುವ (ರಪೂಣ್ಯ. ೩–೨೦) ; ಸಂಜೆಗೆಂಪಿನ ತೆಳ್ಪಮರ್ದಿರೆ ಪೊರೆಯನೆತ್ತಿ ಪೊಲಿಸಿದ ತೆಱದಿಂದೊಳ್ಪಿನ ಪೊಸಟೊಪ್ಪರಂ . . . ಎಸೆದುದು (೦೬ಲಾಶ. ೯–೭೩). **ಹೊಲಿಸು** : ಹೋಳಾದ ಕವಚವ ಹೊಲಿಸಿದರು (ಕುಮಾ೦ಭಾ. ೫–೩೬) ; ಬೇನಸುಗಳ ಡಾಗಗಳನ್ನು ಹೊಲಿಸಿ ತಯಾರ ಇಡೋಣ (ಮುಂಬಯ್ಯಾ. ೨೬೯).

[ಪೊಲ್ + — ಇಸು₁]

**ಪೊಲುಕೇಸಿ** (ನಾ). ಒಬ್ಬಾತನ ಹೆಸರು : ಪೊಲುಕೇಸಿಯು ಬೂದಿಗನ ಕಾಳಿಗ ದೊಳ್ ಪೊಲುಕೇಸಿಯೊಡತಿಹದು ಕೊಕಾಳಿನ ಕೊನ್ದು ಸತ್ತ (ಎಕ. III, ಪ್ಯಸೂರು. ೯೯–೬ ; ಸು. ೭೦೦ ?). 'ಪುಲಿಕೇಶಿ' ಪರಾ. [?]

**ಪೊಲೆ**, ಹೊಲೆ (ನಾ). ೧. ಮೈಲಿಗೆ; ಸೂತಕ : ಮಾನವರ ಮುಖಿಯಾಜನಂ ಪೊಲೆ ಸುರಗುರ್ಗುಚಿತಮಲ್ಲ (ಕೃಷಿಚಾ. ೫–೨೫). ೨. ಮುಟ್ಟು ; ರಜಸ್ಸು : "ಮುಟ್ಟವೆಯನೆ ಮಾಣಿಕವೆನೆ ಮುಟ್ಟೆನೆ ಪೊಲೆ ಸೂತಕಾಭಿಧಾನಂ" (ಕಕುಃ. ೩೦); ಪೊಲೆ ಪಿಂಗದೆ ಪೊಂಗುವುದಕ್ಕಲಸುವರಾಳಿಜನಂಗಳ್ (ಪುಷ್ಪಾ. ೩–೮೩). ೩. ಕೆಟ್ಟುದು ; ಒಳ್ಳೆಯದಲ್ಲದುದು : ಪೊಲೆ ಮುಳಿಸಂಬುದಾ ಮುಳಿಸು ಪುಟ್ಟಿದ ಪೊಟ್ಟಱೊಳಾವನಾದೊಡಂ ಪೊಲೆಯನೆ (ಹಂಪಶಾ. ೦೦–೯೯). ೪. ಪಾಪ ; ದೋಷ ; ಕಳಂಕ : ಪೊಲೆ ಮಸಗಿ ದಿಕ್ಕುವರೆ ಗಂತಲಸದೆ ಭಾರತಮನೆಯ್ದೆ ಕಿಡೆ ಪೇಟ್ದುದಱಿಂ ಪೊಲೆಯರ ಬಸಿಱೊಳ್ಪಂ ದಮ್ಮಕಿನಾತ್ಮಂ ವ್ಯಾಸನೆಂಬರಿವನಿದನಱಿಯರ್ (ಸಮುಶ. ೦೦–೦೭೯) ; ನುಡಿ ಯೆಲ್ಲಂ ಪೊಲೆ ಸೂರುಳೊಳ್ ನಿಱಿ (೦೬ಲಾಶ. ೨–೦೦೨) ; ಪೊಲೆ ಪೊರ್ದಲ್ ಪೇಸಿ ಬೇಸರದಿ (ಎಕ. VII, ಶಿಕಾರಿ. ೫–೬ ; 1218) ; ಮರ್ದಲ್ದು ಪೊಲೆಗೆ ಪೊಲೆ (ಅಕ್ಕಾಕ್ಕಾ. ೦೩–೩೦೨). **ಹೊಲೆ** : ೧. ಹೊಲತಿ ತನ್ನ ಹೊಲೆಯ ಮಱಿದು ಶುದ್ಧನೀರ ಮಿಂದೆನೆಂದು ಕೆಲವರ ಮುಟ್ಟುವಂತೆ . . . ತ್ರಿಕರಣ ಶುದ್ಧವಿಲ್ಲದ ಪೂಜೆ (ಕೋಲಶಾ. ೩೯–೦೩೨); ಸೂರ್ಯನ ಕಿರಣ ಹೊಲೆಯನ ಚರಿಸಿದರೆ ಹೊಲೆ ಹೊಱುವುದೇ (ಕುಮಾ೦ಭಾ. ೩–೯೪); ಈ ದೇಹದೊಳು ನೀ ನೆರೆಸಿರಲು ಹೊಲೆಯುಂಟೆ (ಹಂಸಾ. ೯೯). ೨. ಜನನ ಮರಣದ ಸೂತಕಂ ಕೆಡುವ ತೆಱದಿ ಕೆಟ್ಟವು ಹೊಲೆಗಳಾ ದಿವಸಕೆ (ಸಿದ್ಧರಾ. ೦–೩೯). ೪. ಹುಸಿ ಯೆಂಬುದೇ ಹೊಲೆ (ಮುಚಾರೇ. ಬ. ೫೬–೦೯೦) ; ಮುನಿಗೆ ಹೊಲೆಯಾವುದತಿ ಕೋಪ ಬದ್ಧದ್ವೇಷ (ಹಶಕಾ. ೬–೨) ; ನಿನಗಿನ್ನವದೆಸೆಯು ಹೊಲೆ ಹೋಯ್ತು (ಕುಮಾ೦ಸ. ೦೯–೬೨). ೫. ಕೊಳಕು ; ಮಲ ; ಹೇಸಿಗೆ : ಹೊಲಸು ಮಾಂಸದ ಹುತ್ತ . . . ಹೊಲೆ ಬಲಿದ ತನುವಿನೊಳಗಿರ್ದುಮವಱೊಳಗೆ ಕುಲವನಱಸುವರೆ (ಸರ್ವಜ್ಞ. ೭೦). ೬. ಮೋಸ : ಮೂತ್ರದ ಕುಳಿಯ ಹೊಱವಡುವಾಗ ಹೊಲೆ ಮುಂತಾಗಿ ಮುದುಡಿ ಬಿದ್ದಲ್ಲಿ ಹೆತ್ತವಳು ಹೊಲತಿ ಮುಟ್ಟಿದ ಮಗುವು ಹೊಲೆಯನೆಂದು ನಿಮ್ಮ ಕುಲಗೋತ್ರ ಮುಟ್ಟಲಮ್ಮದೆ (ಸರ್ವಶ. ೦೬೩–೬೨೯).

**ಹೊಲೆಯಾಗಿರು**=(ಸ್ತ್ರೀಯು) ರಜಸ್ವಲೆಯಾಗಿರು ; ಮುಟ್ಟಾಗಿರು : (೬). **ಹೊಲೆಯಾಗು**=ಅಪವಿತ್ರವೆನಿಸು ; ಅಮಂಗಳವಾಗು : ಒಳ್ಳೇ ಕೆಲಸದ ಅರಿವು ಇರದ್ದರಿಂದ ಅವರ ಆಯುಷ್ಯವೆಂಬುದು ಹೊಲೆಯಾಗಿತ್ತು (ಗೌರಾಂಗ. ೮೬).

[ದೇ. ॥ ತಮಿ. ಪುಲ್ಯೆ ; ಮಲ. ಪುಲ ; ತುಳು. ಪೊಲೆ, ಪಿಲೆ, ಹೊಲೆ ; ಕೊಡ. ಪೊಲೆ]

**ಪೊಲೆಕೇಶಿ** 'ಪುಲಿಕೇಶಿ' ನೋ.

**ಪೊಲೆಕೇಸಿ** 'ಪುಲಿಕೇಶಿ' ನೋ.

**ಪೊಲೆಗ** 'ಪೊಲಗ' ನೋ.

**ಪೊಲೆಗಲಸು₁**, ಹೊಲೆಗಲಸು (ಕ್ರಿ). ೧. ಅಪವಿತ್ರಗೊಳಿಸು ; ಮೈಲಿಗೆ ಯಂಟುಮಾಡು : ಕಲ್ಲಂ ಮರನಂ ಕುಲದೈವಮೆಂದು ಪೂಜಿಸಿ ಪೊಲೆಗಲಸುವ ಪೆಂಡಿರಿಂದೆ ಬೆಳಗದು ಧರ್ಮಂ (ಸಮುಶ. ೫–೯೩) ;

ಇಂದೀ ಗಳಿಗೆಯೊಳು ಹೊಲಗೇರಿಯೊಳೊರ್ವ . . . ಭಕ್ತನ ಮನೆಯೊಳ ಗುಂಡುದಲ್ಲದೆ ನಿನ್ನೋಲಗದೊಳು ಪೊಲೆಗಲಸಲುಂ ಬಂದಪಂ (ಬಸರ. ೦೦-೩೦) ; ಕುಲಹೀನನೋರ್ವನಂ . . . ನಿಲಯಕ್ಕೆ ತಂದು ಕಾಲ್ತೊಳೆದು ತಜ್ಜಲವೀಂಟಿಯುಣಲಿಕ್ಕಿ ಮಿಕ್ಕುದುಂಡು ಪೊಲೆಗಲಸಿದಂ (ಪದ್ಮರಾ. ೯-೯೦). ೨. ಮೈಲಿಗೆಯಾಗು ; ಅಪವಿತ್ರವಾಗು : ಪೊಬಲ ಬೇಳ್‌ಕಟ್ಟೆಗಳ್, ಮನೆಯ ಬೇಳ್‌ಕಟ್ಟೆಗಳ್, ಎಲ್ಲಮುಮವ್ ಪೊಲೆಗಲಸಿಯಿರ್ದತ್ತು, ಕೊಲೆವಿಟ್ಟ ದುರ್‌ವಿಧಿಯ ಒಯ್ದುಪೌಸ್ ಮಗನ ಪೆಣದಿನ್ ಪರ್ದುಗಳ್ ನಾಯ್ಗಳುಮವ್ ಪಿಕ್ಕಿದೆರೆಯುನ್ (ಅಂಕಿಗೊ. ೯೩-೯೩೯). **ಹೊಲೆಗಲಸು :** ೧. ನಿಮ್ಮೂರ ಭೋಗಣ್ಣನೆಂಬ ಭಕ್ತಂ ಮಿಾಱ ತಮ್ಮ ಭಕ್ತಾಚಾರವೆಗ್ಗಳಂ ತಲೆಗೇಱ ಹೊಲೆಗಲಸಿ ನೆಲೆಗೆಟ್ಟು ಛಲವುಡುಗಿ ಕುಲಪಳಿದು ಹೊಲೆಯನೆನ್ನದೆ ಹಿರಿಯ ಭಕ್ತನೆಂದಱದಱದು (ಭೋಗರ. ಹ. ೨೭೯-೯) ; ನೀನು ದೇಶಭ್ರಷ್ಟ ನಾಗಿದ್ದು, ಹಿಂತಿರುಗಿ ಬಂದುದಕ್ಕಾಗಿಯೂ ನಿನ್ನ ತಂದೆಯ ಏಕಾಂತ ಭವನವನ್ನು ಪ್ರವೇಶಿಸಿ ಹೊಲೆಗಲಸಿದುದಕ್ಕಾಗಿಯೂ ತಕ್ಕ ಫಲವನ್ನು ಅನುಭವಿಸುವೆ (ಶಾರಿಕೀ. ೦೦೦). ೨. ಬಲ್ಲಹನೆ ಕಲ್ಯಾಣಕಟಕವದೆಲ್ಲವುಂ ಹೊಲೆಗಲಸಿ ಹೋಯಿತು (ಬಸವು. ೩೩-೭) ; ಅಗ್ರಹಾರಂ ಹೊಲೆಗಲಸಿತೆನು ತಾಗ್ರಹಿಸಿ ವಿಪ್ರರು ನುಡಿವುತಿರೆ (ಬಸವು. ೩೭-೩೯). ೩. ಕೆಡಿಸು ; ಹಾಳು ಮಾಡು : ಹೊಲೆಗಲಸದ ಯೋಗಿ ಹೊಲೆಗಲಸದುಳಿವನೇ ಹೊಲೆಗಲಸದಿಪ್ಪ ಕಡುಮೂರ್ಖ ಶಿವಯೋಗಿ ಹೊಲೆಗಲಿಸಿ ಹೋಹ (ಸರ್ವಜ್ಞ. ೩೫೯). ೪. ಜಾತಿಸಂಕರ ಮಾಡು ; ವರ್ಣಸಂಕರ ಮಾಡು : ಸಲುವದಪ್ಪುದಶ ವಿವರ ವರ್ಣಂಗಳಾದಿಯಲಿ ಇಳಿಯೊಳವು ತಾನೀಗಲಾದವೆ ಹೊಲೆಗಲಸಿ ಕುಲಸಂಕರವನಗ್ಗಳಿಸಿ ಈ ಕಲ್ಯಾಣಕಟಕವನಿಂತು ಕೆಡಿಸುವರೇ (ಬಸವು. ೩೩-೦೨). [ಪೊಲೆ + ಕಲಸು₁]

**ಪೊಲೆಗಲಸು₂** (ನಾ). ಜಾತಿಸಂಕರ ; ವರ್ಣಸಂಕರ : ಯುಧಿಷ್ಠಿರನಾಳ್ವ ದೇಶದೊಳ್ಕಳವು ಕೊಲೆ ಪಾದರಂ . . . ಪೊಲೆಗಲಸು . . . ಮೊಳ ದೋಜವು (ಕೃಪಿಬಾ. ೨-೩). [< ಪೊಲೆಗಲಸು₁]

**ಪೊಲೆಗಿಡಿಸು** ' ಪೊಲೆಗೆಡಿಸು ' ನೋ.

**ಪೊಲೆಗೆಡಿಸು,** ಪೊಲೆಗಿಡಿಸು, ಹೊಲೆಗೆಡಿಸು (ಕ್ರಿ). ಮಲಿನಗೊಳಿಸು ; ಅಪವಿತ್ರಗೊಳಿಸು : ಒಲವರದಿಂದಲ್ಲದುದಂ ಸಲೆ ನುಡಿದಪರಿದುವೆ ಚೋದ್ಯ ಮುವರೊಳ್ಕರ್ಮಂ ಪೊಲೆಗೆಡಿಕುಂ ಪೊಲೆವಡಿಕುಂ ತೊಲಗಿಕುಮಪವರ್ಗ ಮಾರ್ಗದಿಂ ಭವ್ಯನುಮಂ (ಸಮರ. ೩೦೩). **ಪೊಲೆಗಿಡಿಸು :** ಪೊಲೆಯನಂ ಕಿಟ್ಟುವ ದೇವರುಂಟೆ . . . ನೀಂ ಬಱದೆ ಕೊಂಡುಯ್ದು ವೈಕುಂಠಮಂ ಪೊಲೆಗಿಡಿಸದಿರಿಂ (ರಾಮಾಶ್ವ. ೮೦-೦೦). **ಹೊಲೆಗೆಡಿಸು :** ಒಂದು ಮಾತನು ಲೋಕ ಹೊಲೆಗೆಡಿಸಿಕೊಂಡಿಹುದು, ಹೊಲೆಗೆಡಿಸೆನದನು ನಾನು (ತಿಂಗೀತ. ೩೩-೦). [ಪೊಲೆಗೆಡು + — ಇಸು₃]

**ಪೊಲೆಗೆಡು,** ಹೊಲೆಗೆಡು (ಕ್ರಿ). ೧. ಹೀನಸ್ಥಿತಿಗೆ ಇಳಿ ; ಕೀಳಾಗು : ಕೊಟ್ಟೊಡಮೇಂ ಕನ್ನಿಕೆಯಂ ಕೊಟ್ಟೊಂಗಮಿದಾಗದೆಂದು ಕುಡೆ ಕೊಂಡೆ ನಗೇಗೆಟ್ಟಪುದೆಂದು ಮನಂ ಪೊಲೆಗೆಟ್ಟಿರೆ ಕೊಂಡಂಗಮೆನಗಮಱಯಲ್ಕಕ್ಕುಂ (ಶಾಂತಿಪು. ೩-೯೯) ; ಕಾಟ್ಟಿಬ್ಬವುಂ ಕಟ್ಟಿ ಕೋಟಲೆಗೊಂಡುರ್ಳ್ವನೋರ್ವ ನೊಲ್ದವರ ಚಾತುರ್ಯಕ್ಕೆ ಕೈವಾರಮಂ ಪೊಲೆಗೆಟ್ಟೀವವನೋರ್ವಂ (ಲೀಲಾವ. ೦-೯೦). **ಹೊಲೆಗೆಡು :** ೧. ಕುಲ ಜಾತಿಗೆಟ್ಟು ಕೂಳುಣಲುಡ ಹಡೆಯದೆ ಹೊಲೆಗೆಟ್ಟು ಹುಟ್ಟು ಹೊಂದಳಿದು ನೆಲಹೊರದಾ ಮೆಯ್ಗೆಟ್ಟು ಸಿದ್ಧರ ಪಾದ-ಲಘುಭಕ್ತಿಯೊಳೀಱಗುವೆನು (ಪ್ರಭಂತ. ೩-೨). ೨. ಮುಟ್ಟಾ ಗುವುದು ನಿಲ್ಲು : ಎನ್ನ ಹರೆಯಂ ಬಿಟ್ಟು ಜರೆವಟ್ಟು ಹೊಲೆಗೆಟ್ಟು . . . ಧಾತುಗಳು ಪಲ್ಲಟವಾದವು ಇನ್ನು ನಾನೆತ್ತ ಮಗನಂ ಹಡೆವುದು (ಸಿದ್ಧರಾ. ೦-೯೦) ; ಹೊಲೆಗೆಟ್ಟು ಹೊಸಬೇಟಗೆಯ್ವ ಪಾತಕಿ ಮೊಗ್ಗೆಮೊಲೆವೆಂಗಳಿಗೆ ಪೇಳ್ದಪರೇ (ಮೋಹತ. ೦೮-೭೮). [ಪೊಲೆ + ಕೆಡು₁]

**ಪೊಲೆಗೆಯ್** (ಕ್ರಿ). ಅಪವಿತ್ರಗೊಳಿಸು ; ಕಲುಷಿತ ಮಾಡು ; ಕೆಡಿಸು : ನೆನೆಯ ಮತ್ತವನ ತಾಯ್‌-ಪೆಂಡತಿಯುನ್ . . . ಪುರಿನೇಣಿನುಸಿರ್ದಿಱ ಪೊಲೆಗೆಯ್ದು ಬಾಟನೀಡಾಡಿದಳ್ (ಅಂಕಿಗೊ. ೩-೯೯). [ಪೊಲೆ + ಕೆಯ್₁]

**ಪೊಲೆಗೆಳೆ** (ನಾ). ಕೆಟ್ಟ ಸ್ನೇಹಿತ : ಆ ಪಾಪಕರ್ಮಂ ಪೊಲೆಗೆಳೆಯುತೆಯುಂ . . . ರಾಜ್ಯಕ್ಕಾಸಪಟ್ಟು ನಿನ್ನಂ ಕೊಂದಪಂ (ಶಂಕತಂ. ೯೨-೦೦). [ಪೊಲೆ + ಕೆಳೆ₂]

**ಪೊಲೆಗೇರಿ,** ಪೊಲಗೇರಿ, ಹೊಲಗೇರಿ, ಹೊಲೆಗೇರಿ (ನಾ). ಹೊಲೆ ಯರು ವಾಸಿಸುವ ಓಣಿ : ಪೂದೋಟ ಮತ್ತರೊನ್ದು [ಪೊ]ಲೆಗೇರಿಯ ಪಾಳರೆಮತ್ತರು (ಚಾಂದೇಜ್. ೯-೨೦ ; 1049); ಪಟ್ಟಣಾವಂ ಬಿಟ್ಟು ಪೊಲಿ ಗೇರಿಯೊಳ್ ಪಡುವಂತೆ (ರವೂಣಮ್ಮ. ೦೦-೦೬೨); ಪೊಲೆಗೇರಿಯೊಳುರಿ ನೆಗೆದೊದವೆ (ಬಂಹುಂ. ೦೪-೨೬ ರಗಳೆ). **ಪೊಲಗೇರಿ :** ಆ ಮೊಸಳೆ ತನುವನು ಟಿಱದು ಬಱಕ್ಕಾ ಪೊಲಗೇರಿಯಾಡಿನುದರದೆ ನೆಲಸಿ (ಹುಬೋಚ. ೩-೯೯). **ಹೊಲಗೇರಿ :** ಹೊಲಗೇರಿಯ ಪಡುವಣ ಕರುವಗೆಯ್ಕೊಂಡು ತೆಂಕಲಾಱು ಮತ್ತರು (ಕೌಇಇ. IX-1, ೫೦-೦೮; 1005); ಹೊಲಗೇರಿಯೊಳೊರ್ವಂ . . . ಹಿರಿಯ ಭಕ್ತನ ಮನೆಯೊಳಗುಂಡುದಲ್ಲದೆ ನಿನ್ನೋಲಗದೊಳು ಪೊಲೆಗಲ ಸಲುಂ ಬಂದಪಂ (ಬಸರ. ೦೦-೨೯) ; ಹೊಲಗೇರಿಲಿ ಹೊಲೆಯ ಹೊಲಶಿಲ್ಲ (ಪುರಂದ. ೦-೦೦೭ ಅನುಬಂಧ). **ಹೊಲೆಗೇರಿ :** ನೆಲನೋಂದೆ ಹೊಲೆಗೇರಿ ಶಿವಾಲಯಕ್ಕೆ ಜಲವೊಂದೆ ಶೌಚ ಮಜ್ಜನಕ್ಕೆ (ಬಸವ. ೯೭೮); ಶಿಲೆಯೊಳುಂಟೇ ಮೃದುವಱಸಲಂಬಿಲದೊಳುಂಟೇ ಬೆಣ್ಣೆ ಕರುಣಾಸುಲಭ ಹೊಲೆಗೇರಿಯೊಳ ಗುಂಟೇ ವೇದಘೋಷಣವು (ಬಸವು. ೩೦-೨೮). [< ಪೊಲೆಯ + ಕೇರಿ]

**ಪೊಲೆತಾಳ್ವ** (ನಾ). ಒಬ್ಬಾತನ ಹೆಸರು : × × ಸತ್ತ ಪೊಲೆತಾಳ್ವನ ಮನೆವಗತಿ ಆಡಿಶದಧ × × × (ಮೈಅಂ. ೦೯೯೨, ೨-೬ ; 973). 'ಪೊಲೆ ತ್ತಾಳ್ವ' ಪಠಾ. [ ? ]

**ಪೊಲೆತೆಱ,** ಹೊಲೆದೆಱ (ನಾ). ಒಂದು ಬಗೆಯ ತೆರಿಗೆ : ತೆಱಯಂ ಕಿಱುದೆಱಯಂ ಪೊಲೆತೆಱಯಂ ಮಾನ್ಯಕ್ಕೆ ಬಂದ ತೆಱಯಂ ದೇವತ್ತೃಬ ವೇಳ್ಕುಮೆಂಬ ಪಾತಕನಱದೀಗಳೊಳಟಿಗುಂ (ಕೊಲ್ಲಾಶಾ. ೩-೯೩; 1110). **ಹೊಲೆದೆಱ :** ಬಡಗಿಕೂಂಟೆಯ ಮನೆದೆಱ ಹೊಲೆದೆಱ ಸಾದಂ ಬಣ್ಣಿಗೆ ಬಳಂಜೆಯ ತೆಱ ತಳಸಾರಿಗೆ ಕಾಣಿಕೆ ಕವಣಾಯ ದಣ್ಣದಾಯ ವಿನ್ನಿನಿತುಮಂ . . . ಕೊಟ್ಟರ್ (ಕೌಇಇ. IX — 1, ೦೭೨-೦೮ ; 1109) ; ಶ್ರೀವೈಜನಾಥದೇವರಿಗೆ ಶಿವಪುರದ ಹಲುಗೂರ ಸುಂಕ ಆಗಂತುಕ ಹೊಲೆ ದೆಱ ಗಾಣದ ತೆಱ . . . ಕೈಯಾರ ಧಾರಾಪೂರ್ವ್ವಕಂ ಮಾಡಿ ಕೊಟ್ಟ ದತಿ (ಎಕ. XIV, ಮಂಡ್ಯ. ೦೯೦-೩ ; ?). [ಪೊಲ್₁ + ತೆಱ₃]

**ಪೊಲೆತ್ತಾಳ್ವ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀಮತ್ ಶ್ರೀಪುರುಷ ಮಹಾರಾಜಂ ಪೃಥ್ವೀರಾಜ್ಯಂಗೆಯ್ಯೆ ಪೊಲೆತ್ತಾಳ್ವೊರೆನ್ನ ಕರಿಕನಾಡ ಬಿದಿ ರ್ಕ್ಕಲ್ಲಾಳ್ದ ಕುಕ್ಕರ ಪಾಳಿಕ್ಕಾಱನಾಡಿಯುರ್ ತುರಿದು (ಎಕ. IX, ಹೆಂಗಳೂ. ೩೭-೨ ; ಸು. 750). [?]

**ಪೊಲೆನುಡಿ** (ನಾ). ಹೊಲಸುಮಾತು ; ಕೀಳುನುಡಿ : ಐವರೊಡ ವುಟ್ಟಿದರು ಸನ್ನುತರು ಲಲನೆಯೋರ್ವಳನಾಳ್ದರೆಂಬೀ ಪೊಲೆನುಡಿಗೆ ಕಿವಿಗುಡದೆ (ಶಾಳ್ಮಶಾ. ೦-೯೭). [ಪೊಲೆ + ನುಡಿ₂]

**ಪೊಲೆಬೂತು** (ನಾ). (ಆಲಂ) ಕ್ಷುದ್ರವ್ಯಕ್ತಿ : ಪಾಣ್ಬಯಪ್ಪ ಸಜ್ಜನ ಯಂತೆ ಸಿಡಿಮಿಡಿಗೊಳ್ಳದೆ ಪೊಲೆಬೂತಿನಂತೆ ಕಿಡೆನುಡಿಯದೆ . . . ನಿಂದು ಸುವ್ರತಂಗಳಂ ತಾಳ್ದಿ (ರವೂಣಮ್ಮ. ೦೦-೩೭). [ಪೊಲೆ + ಬೂತು₁]

**ಪೊಲೆಮನೆ,** ಹೊಲೆಮನೆ, ಹೊಲೆವನೆ (ನಾ). ೧. ಸಾಮಾಜಿಕವಾಗಿ ಚಾತುರ್ವರ್ಣಗಳಿಂದ ಬೇರೆಯಾಗಿರುವವರ ಮನೆ (?) : ಅಲ್ಲಿ ಬೆಸಗೆಯ್ವ ಕಲ್ಕುಟಿಗರ ಮನೆ ೧ ಸಾವಗರಿಪ್ಪ ಪೊಲೆಮನೆ ೧ (ತಇ. XIX, ೨೭೩-೯೦; 1064). **ಹೊಲೆಮನೆ:** ೨. ಹೆಂಗಸರಂ ಮುಟ್ಟಾದಾಗ

ಉಳಿದುಕೊಳ್ಳುವ ಮನೆ : (೬). ೩. ಹೆರಿಗೆಮನೆ : ಸೂತಿಕಾ ಗೃಹ : ಅವರಿಗೆ ಒಂದು ಗಂಡುಮಗುವೂ ಆಗಿತ್ತು . . . ಹೊಲೆಮನೆ ಯಲ್ಲಿಯೇ ಸತ್ತು ಹೋಯಿತು (ಬಂಕಿಮ. ೬೫); ಕೃಷ್ಣನು ಹೊಲೆಮನೆಗೆ ಹೋಗಿ ನಿಶ್ಚೇತನವಾಗಿ ಬಿದ್ದಿದ್ದ ಮಗುವನ್ನು ನೋಡಿ . . . ಕೈಯಾಡಿಸಿದನು (ಬಕಶಾ. ೩೬೩). **ಹೊಲೆಮನೆ :** ೪. ಹೊಲೆಯನ ಮನೆ (?) : ಹೊಲೆಮನೆಯಿಂದಂ ಕಷ್ಟಂ ಪಲಲಮುಯಂ ದೇಹಮಿದಱೊ ಳೊಲ್ವುರ್ಪೆನ್ನಿಂ ಹೊಲೆಯುಂ ಕಷ್ಟನದಾಪಂ (ಉಶಾರ. ೪೦-೨೪೬).

[ಪೊಲೆ + ಮನೆ]

**ಪೊಲೆಮುಡಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀಮರಿಗರ ಪೊಲೆಮುಡಿ ಕೊಟ್ಟುದು ಸೊಡರು ಆಚನ್ದ್ರತಾರಕಂ (ಎಕ. VII, ಶಿಕಾ. ೪೫-೬೪ ; ಸು. 890 ?).

[ಪೊಲ್ಕ + ಮುಡಿ₂]

**ಪೊಲೆಮೇರೆ** 'ಪೊಲಮೇರೆ' ನೋ.

**ಪೊಲೆಯ, ಹೊಲೆಯ** (ನಾ). ೧. ಪಂಚಮವರ್ಣಕ್ಕೆ ಸೇರಿದವನು ; ಚಾಂಡಾಲ : ಎಯ್ದಿದಂ ಪೊಲೆಯನಾ ಪೊಲೆವಟ್ಟನೊಳಿರ್ದ ಕನ್ನೆಯಂ ಕಂಡು ಗೆಂಟಱೊಳೆ ಪೊಡೆವಟ್ಟು (ಕಾದಂಉ. ೬೪೭) ; ಪೊಲೆಯರ್ತಮ್ಮಯ ಕೇರಿಗೆ ಪೊಲೆಯರ್ಬರೆ ತುಷ್ಟಿ ಮಾಳ್ಪರ್ (ಸಮುಪ. ೪-೯೭) ; ಪಿತ್ತಳೆಯ ತೊಡವು ಪೊಲೆಯರ್ಗುತ್ತಮಮೆನಿಸಿರ್ದ ಪೊನ್ನ ತೊಡವೆನಿಸುವವೋಲ್ (ರರ್ತ್ಮವ್ಮ. ೪-೩೫). ೨. ನೀಚ ; ಕೆಟ್ಟವನು : "ಸಿತಗನುಂ ಪೊಲೆಯ ನೆಂದಕ್ಕು" (ಕಬ್ಬಿಕ್ಕ. ೯೩); ನಿನ್ನಿಂದ ಬಿಟ್ಟು ಪೊಲೆಯರ್ಯನ್ನುಮ್ಮನ್ನು ದೊಡೋಳರೆಯಿಂತೀ ಪುರದೊಳ್ (ಪುಹ್ಯಸ್ರ. ೬-೨೨). ೩. ಕುಲಹೀನ ನಾದವನು : ಕಲಿಯನೆ ಪಂದೆ ಮಾಳ್ಪ ಕಡುಮಂದೆಯನೊಳ್ಗಲಿ ಮಾಳ್ಪ ತಕ್ಕನು ಪೊಲೆಯನೆ ಮಾಳ್ಪ ಮುಂ ಪೊಲೆಯನಂ ನೆಱೆ ತಕ್ಕನೆ ಮಾಳ್ಪ ತಮ್ಮೊಳಗ್ಗಲಿಸಿ ಪೊವಟ್ಟು ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿ ಸಂಚಲ ಮದಱಿಂದಮೋಲಗಿಸಿ ಬಾಳ್ವುದೆ ಕಷ್ಟಮಿಳಾಧಿನಾಥರಂ (ಶಂಶಭಾ. ೧೨-೯೨). **ಹೊಲೆಯ :** ೧. "ಅಂತಾವಸಾಯಿ ಚಂಡಾಳಂ ತಾ ಹೊಲೆಯಂ ಜನಂಗಮಂ ಮಾತಂಗಃ" (ಪಸ್ತುಕೋ. ೬೬-೮೭) ; ಹೊಲಸ ತಿಂಬವನೇ ಹೊಲೆಯ (ಬಸವ. ೫೯೨); ಅತಿ ಹುಸಿವ ಯತಿ ಹೊಲೆಯ (ಹಪಕ. ೦೪-೦೦); ಹೊಲೆಯ ಹೊಱಗಿಹನೆ ಊರೊಳಗಿಲ್ಲವೆ . . . ಉಂಡ ಮನೆಗೆರಡನ್ನು ಬಗೆವಾತನೇ ಹೊಲೆಯ (ಪುರಂದ. ೦-೦೬೮ ಪಲ್ಲವಿ). ೨. ಹೊಲೆಯ ಹೋಗೇದ ಒಲೆ ಮುಖದಿರುಹಿದಳು ಖಾತಿಯಲಿ (ತೊರರಾ. ೫-೩-೫೫).

[ಪೊಲೆ + —ಅ₇./ತಮಿ.ಪುಲೈಯ ; ಮಲ.ಪುಲಯ ; ಕೊಡ.ಪೊಲೆಯ]

**ಪೊಲೆಯಣ್ಣ** (ನಾ). ಒಬ್ಬಾತನ ಹೆಸರು : ಪುರಿಗೆಱೆಯಿಂ ಬನ್ದ ಪೊಲೆ ಯಣ್ಣನ ಶಿಲಾಕಮ್ಮರ್ (ಸೌಇಇ. XI-i, ೧೦-೨೬; 865). [ಪೊಲ್ಕ + ಅಣ್ಣ₁]

**ಪೊಲೆಯಮ್ಮ, ಹೊಲೆಯಮ** (ನಾ). ಒಬ್ಬಾತನ ಹೆಸರು : ಪೊಲೆಯಮ್ಮ × × × ಲ್ಲರನೆಱಿದು ಕೊನ್ದು ಗೆಲ್ದು ಪೊನ್ದಿ ಸ್ವರ್ಗ್ಗಾಲಯಮೇಱಿದನ್ (ಎಕ. VIII, ಸೊರಬ. ೦-೬ ; 797) ; ಶ್ರೀ ಬೇವಿಗೆ ಮುತ್ತರಸರ ಮಗನು ಪೊಲೆಯಮ್ಮನ್ಮದಕರಿಕಲ್ಲನಾಳುತ್ತುಮಿರ್ (ಎಕ. XI, ಚಳ್ಳಕೆ. ೩೩-೨೦; ಸು. 815). **ಹೊಲೆಯಮ :** ಹೊಲೆಯಮನೆಂಬ ಗೋತ್ರನಿಧಿಗಂ ಗುಣಭೂಷಣೆ ಚಂಡಿಕವ್ವೆಗಂ ಕುಲತಿಲಕಂ ಗುಣಾಂಬುನಿಧಿ ಪುಟ್ಟಿದಂ . . . ನೆಗಳ್ದ ಜಕ್ಕಣಂ (ಕಇ. IV, ೧೦-೩೪ ; 1121). [ಪೊಲ್ಕ + ಅಮ್ಮ₁]

**ಪೊಲೆಯ್ಗಬ್ಬೆ** (ನಾ). ಒಬ್ಬಾಕೆಯ ಹೆಸರು : ಶ್ರೀಮತ್ ಕನ್ನಯನಬ್ಬೆಗಳ್ ಪೊಲೆಯ್ಗಬ್ಬೆ (ಎಕ. XI, ಹೊಳಲ್ಕೆ. ೩೩-೦೪ ; 965). [ ? + ಅಬ್ಬೆ₁ ]

**ಪೊಲೆವಗೆ** (ನಾ). ಕೆಟ್ಟಬುದ್ಧಿ ; ನೀಚಬುದ್ಧಿ : ಮಂದಾಂಗಾರಕರಿರ್ವರು ಮೊಂದೆಡೆಯೊಳ್ ನಿಂದು ವಕ್ರಿಸಲ್ ಪಶು ಕಱೆಗುಂ ತಂದು ಪೊಲೆವನೆ(ಗೆ) ಯೊಳರಸುಗಳಂದೊರ್ವರನೊರ್ವರಿಱಿದು ಸಾ(ವರ್)ವುಗೆ ಜಗದೊಳ್ (ಜಟ್ಟಮ. ೬-೦೦೪). [ ಪೊಲೆ + ಬಗೆ₂ ]

**ಪೊಲೆವಟ್ಟು** (ನಾ). ಹೊಲೆಯರ ಬೀಡು ; ಚಾಂಡಾಲರ ಕೇರಿ : ಇರದೆಯ್ದಿದಂ ಪೊಲೆಯನಾ ಪೊಲೆವಟ್ಟನೊಳಿರ್ದ ಕನ್ನೆಯಂ ಕಂಡು ಗೆಂಟಱೊಳೆ ಪೊಡೆವಟ್ಟು (ಕಾದಂಉ. ೬೪೭). 'ಪೊಲೆಗೇರಿ' ಪರಾ.

[ <ಪೊಲೆಯ + ಪಟ್ಟು₄ ]

**ಪೊಲೆವಡು** (ಕ್ರಿ). ಕಳಂಕವನ್ನು ಹೊರು : ಈ ಪರಮಜಿನಾಲಯಂಗಳಂ ಪೊಲೆವಟ್ಟದ್ರ್ವ ಪಾಂಡ್ಯಚೋಳನೆಂಬ ಮಹಾಪಾತಕ ತಿವುಳನಳಿದಧೋಗತಿ ಗಿಳಿದ (ಎಇ. XV, ೩೪೦-೩೦; 1071); ಪೊಲೆವಟ್ಟು ಪೊಳಲಿಂ ಪೊಱಮಡಿಸಿ ಕೊಂಡಲಸದೊಂದಡವಿಯೊಳಿರ್ಪ ಕುಲಗೆಟ್ಟು ಬೇಡವಳ್ಳಿಯ ಹೊಕ್ಕಿರ್ದ ಬಳನೊಂದಾನೊಂದು ಪಗಲು . . . ಜೀವದನವ ಕಳ್ದೊಯ್ವುತಮಿರಲು (ನೇಮಿಸಂ. ೬-೫೦). [ ಪೊಲೆ + ಪಡು₁ ]

**ಪೊಲೆಮಾತು, ಹೊಲೆಮಾತು** (ನಾ). ಕೀಳುಮಾತು ; ಕೆಟ್ಟನುಡಿ : ಎಲೆ ಮೂಢ ಲಿಂಗಮಂ ನೀಂ ಪೊಲೆಮಾತಿಂ ಬಳ್ಳಮೆಂಬುದಕ್ಕುಮೆ (ವೃಷಭ. ೬-೦೪). **ಹೊಲೆಮಾತು :** ಹೊಲಬಱಿಯದೆ ತಾನು ರಾಯನೆಂದೆಂಬೀ ಹೊಲೆಮಾತಿಗುತ್ತರವುಂಟೆ (ಕುರಾಶಾಂ. ೧೧-೨೩); ಇಂಥ ಹೊಲೆಮಾತಾಡಿ ದವರ ಬಾಯಲ್ಲಿ ಹುಳು ಸುರಿಯದಿರುತ್ತದೆಯೆ (ಗೃಹಲ. ೬೩); ಇದನ್ನು ಕಂಡು ಅವನು ಕಿಡಿಕಿಡಿಯಾಗುತ್ತಿದ್ದ, ಶಪಿಸುತ್ತಿದ್ದ, ಹೊಲೆಮಾತಾಡುತ್ತಿದ್ದ (ಜೀವಬಾ. ೩೦೦). [ ಪೊಲೆ + ಮಾತು₁ ]

**ಪೊಲೆವೆಣ್, ಹೊಲೆವೆಣ್** (ನಾ). ಕೆಟ್ಟಹೆಣ್ಣು ; ನೀಚಸ್ತ್ರೀ : ಪೊಲೆವೆಣ್ಣ ನಿಪೆನಗೆಂದುಂ ನಿಲಲೊಲ್ಲದೆ ತೊಲಗಿ ಪೋಪ ಗಂಡವಿಮುಕ್ತರ್ ಮಲಧಾರಿ ಸ್ವಾಮಿಗಳಂ ನಿಲಿಸುವ ಸತ್ಪುತ್ರನೆನಗದೆಂದಾದಪನೋ (ಅರ್ಥವೇ. ೧-೦೦೫). **ಹೊಲೆವೆಣ್ :** ಹೊಱಮಿಂಚಿಂ ಹೊಲೆವೆಣ್ಗೆ ಸೋಲ್ವ ಕೆಱದಿಂ . . . ವಿಟ ವೇಶ್ಯಾಕಾವ್ಯಮಂ ಕೇಳ್ದು ಮೆಯ್ ಮಱೆವರ್ (ರಕ್ನಾಕ. ೯೬).

[ ಪೊಲೆ + ಪೆಣ್ ]

**ಪೊಲೆಸೂರುಳ್** (ನಾ). ಹೀನವಾದ ಪ್ರತಿಜ್ಞೆ ; ನೀಚವಾದ ಶಪಥ : ನುಡಿಯೆಲ್ಲಂ ಪೊ[ ಪಾಠಾಂ. ಹೊ ]ಲೆಸೂರುಳ್ (ಲೀಲಾವ. ೨-೧೧೨); ಮಾತೆಲ್ಲಂ ಪೊಲೆಸೂರುಳ್ (ಶಮದ. ೫೫ ಪ್ರಯೋ). [ ಪೊಲೆ + ಸೂರುಳ್₃ ]

**ಪೊಲ್ಗೆ, ಪೊಲಿಗೆ, ಹೊಲಿಗೆ** (ನಾ). ೧. ಹೊಲಿಯುವಿಕೆ : ಗೆಕಾರಕ್ಕೆ ಉಡುಗೆ, ಪಸುಗೆ, ಪೊಲ್ಗೆ (ಶಮದ. ೨೦೦ ಪ್ರಯೋ). **ಪೊಲಿಗೆ :** ೧. "ಸೀವನಂ, ಸೀಪನಂ, ಸ್ಯೂತಿಃ— ಈ ೩ ಪೊಲಿಗೆ" (ನಾಚರಾ. ೬). ೨. ಹೊಲಿದುದು : ತಾಱುಗೆ, ಮಾಱುಗೆ, ಪೊಲಿಗೆ (ಶಬ್ದಾನು. ೫೬೫ ಪ್ರಯೋ). **ಹೊಲಿಗೆ :** ೧. "ಧಕ್, ಡೇಹನಂ, ಈ ೨ ಹೊಲಿಗೆ" (ಕಾಶಕ್ಕ. ೬೬); ಜೋಡು ಪೈಠಣಿಗಳ ಹೊಲಿಗೆಯು ಗರುವ ಚಿಪ್ಪಿಗಗೇರಿಯಿಹವು (ಕಂಪಬಿ. ೬-೫೫). ೨. "ಊತ ಸ್ಯೂತ ಎಂಬಿವು ನೂಲ ನೆಯ್ಗೆಯಲ್ಲಿಯೂ ಹೊಲಿಗೆಯಲ್ಲಿಯೂ ವರ್ತಿಸುಗು" (ನಾಚರಾ. ೬); ಹಱಿಗವಿಗಳ ಕಬ್ಬಂಗಳ ಹೊಱಗಳಿಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ . . . ಎಕ್ಕಸಕ್ಕಮಸ್ತಂಬ್ಯಸ್ತಂ (ಗಂಕ. ೦-೨೩); ಕಲ್ಪಮೇಘದ ಹೊಲಿಗೆ ಹಱಿದವೊಲಾಯ್ತು ಮಾದ್ರೇಶ್ವರನ ಶರಜಾಲ (ಕುವ್ಯಾಶ. ೨-೩೭) ; ಬಸುಱಲಿ ಹೊಲಿದ ಹೊಲಿಗೆಯ ದಡಿಗರಕ್ಕಸರಾಯ ರಿದ್ದುದು ಕೋಟಿಸಂಖ್ಯೆಯಲಿ (ತೊರರಾ. ೩-೬-೫). ೩. ಸಂಬಂಧ ; ಹೊಂದಾಣಿಕೆ : ಕಾಯದ ಜೀವದ ಹೊಲಿಗೆಯನಱಿದವಂಗಲ್ಲದೆ ಲಿಂಗೈಕ್ಯವಿಲ್ಲ (ಮೋಕಮಾ. ೨೫೮-೮೦೯) ; ಕಾಯ ಜೀವದ ಹೊಲಿಗೆಯ ಅಳಿದ ಭೇದವ ತಿಳಿಯಬಲ್ಲಡೆ ನಮ್ಮ ಗುಹೇಶ್ವರಲಿಂಗದ ಅಱಿವು ಸಾಧ್ಯವಪ್ಪುದು (ಅವಶಂ. ೨೭೩-೧೨೫೭). [ಪೊಲ್ + —ಗೆ./ತುಳು. ಪೊಲಿಕೆ, ಪೊಲಿಗೆ, ಪೊಲ್ಲಿಗೆ]

**ಪೊಲ್ಲ, ಹೊಲ್ಲ** (ನಾ). ೧. ಕೆಟ್ಟುದು ; ಹೀನವಾದುದು : ಪಾಪಕರ್ಮಂ ಪೊಲ್ಲಂ (ಕವಿರಾ. ೦-೭೯) ; ಪಗೆ ಪೊಲ್ಲ ಪಾಂಡುನಂದನರೊಳ್ (ಶಂಶಭಾ. ೬-೬೫). ೨. ಕೇಡು ; ಆಪತ್ತು : ಅಪನಂ ನಂಬಿದಂದು ಪೊಲ್ಲಮಕ್ಕುಂ (ಶಂಶಕಂ. ೦೭೬-೩); ಗುರು ಪರಿವೇಷದೊಳ್ ನೆಲಸೆ ವಿಪ್ರಜನಕ್ಕದು ನಾಡೆ

ಪೊಲ್ಲ (ಅಭ್ಯಮ. ೩-೧೮). ೩. ಕೀಳುತನ : (೯). ೪. ಕೆಟ್ಟಗುಣವುಳ್ಳವನು ; ಹೀನನಾದವನು : ಪೊಲ್ಲರಲ್ಲದರಂ ಪೊಲ್ಲರೆಂದು ನುಡಿದೊಡೀ ಬಾಹಾದುದು (ಶಂಠಾಪಮಾ. ೦೬-೩೯ ವ) ; ಕಳ್ಗುಡಿವವರಂ ಪೊಲ್ಲರೆಂಬಂತೆ ಪಾಲ್ಗುಡಿವವರನೇಕೆ ಪೊಲ್ಲರೆನ್ನರ್ (ಧರ್ಮಾಮೃ. ೭-೯೩). ೫. ಕೇಡುಂಟುಮಾಡುವವನು ; ಅನಿಷ್ಟಕಾರಕ : ಹಿಮಧಾಮಂ . . . ಶ್ರೀರಂಧ್ರಂಗಳೊಳತಿಶುಭದಂ ಶೇಷದೊಳ್ ಪೊಲ್ಲನಕ್ಕುಂ (ಜಾತಕ. ೧೦-೪). (ಗು). ೬. ಒಳ್ಳೆಯದಲ್ಲದ ; ಕೆಟ್ಟದ್ದಾದ : ಪದಿನಾಱುಂ ಪೊಲ್ಲ ಕನಸುಗಳಂ ಕಂಡಂ (ವರ್ಧಮಾ. ೯೩-೨೦) ; ಸಂಜೆಯಂತೆ ಪೊಲ್ಲ ವಸ್ತುವಿನೊಳ್ ರಾಗಿಯಾಗದೆ (ಧರ್ಮಾಮೃ. ೩-೯೯) ; ಪೊಲ್ಲ ಕೆಯ್ತಮುಂ ದುರ್ಭಗತ್ವಮುಂ ಕಿವಿಗೆ ಸೊಗಯಿಸಿದ ಪೊಲ್ಲ ಸ್ವರಂಗಳುಂ . . . ಎಂದಿವೆಲ್ಲಮಶುಭನಾಮಂಕರ್ಮಫಲಂಗಳುಂ (ಕರ್ಣಾ. ೩೦) ; ಪೊಲ್ಲ ಸುದ್ದಿಗಳನೊರೆತರ್ಪ್ಪನನ್ ಒಲ್ವನೊರ್ವನುಮಿಲ್ಲ (ಅಂತಿಗೊ. ೦೩-೨೬೦). ಹೊಲ್ಲ : ೧. ಬೇಡ ಬೇಡ ಅನ್ಯದೈವದ ಸಂಗ ಹೊಲ್ಲ (ಬಸವ. ೬೦೮) ; ಬಱಿಯ ವಿಚಾರ ಹೊಲ್ಲ (ಹರಿಶಾ. ೮-೬೦) ; ನೆರೆ ಹೊಲ್ಲ ದುರಾಚಾರಿಗಳ (ಅಜಿಂಡೇ. ೦೨೮-೮೨) ; ಹೇಳಿ ಮಾಡುವುದು ಹೊಲ್ಲ, ಅದು ಆತ್ಮಪ್ರಶಂಸೆ (ಶಾಂತಲಾ. ೫೬). ೪. ಪಲ್ಲವನನಲ್ಲೆಂದು ಪೆಲ್ಲನಂ ಹೊಲ್ಲೆಂದು (ಜಗಂ. ೦೭-೦೦೬ ರಗಳೆ) ; ಇಲ್ಲದಿಹ ಕಾಲಕ್ಕೆ ತಾ ಹೊಲ್ಲನವ[ಪಾಠಾಂ. ಹೊಲ್ಲಹನು]ಜನರಿಂಗೆ ಅಲ್ಲದ ಗುಣದ ಅರಸಿಂಗೆ ಸಾಲಕ್ಕೆ ಕಲ್ಲೆದೆಯು ಬೇಕು (ಸರ್ವಜ್ಞ. ೧೯೦೭). ೭. ಅಪರಾಧ ; ತಪ್ಪು : ಹಗೆ ಹೊಲ್ಲ ದೈವದಲಿ (ಕುಮಾರರಾಮ. ೧-೯). (ಗು). ೮. ಕೆಟ್ಟ ಸ್ವಭಾವದ ; ದುಷ್ಟ : ಕಲ್ಲಿನಲ್ಲಿ ವಲ್ಲಭನ ಕಂಡೆವೆಂದು ಬಡಿದಾಡುತ್ತಾರೆ ನೋಡಾ ಅಲ್ಲಯ್ಯಾ ಈ ಹೊಲ್ಲ ಮಾನುಜರು (ಸಿದ್ಧವ. ೪. ೨೦೩-೬೬೦) ; ಹೊಲ್ಲ ದೈವವನಿನಿತು ನೀ ನೋಡು ವೆನದೆಂದರೆ ಕರವೆ ನಾನೀಗ (ಸಂಶಕ, ೬-೯೭) ; ಹೊಲ್ಲ ಜೋಗಿಯ ಮಾತ ಕೇಳಿದರು (ಸಿದ್ಧಕೃ. ೨-೩೩).

ಪೊಲ್ಲಾಗು, ಹೊಲ್ಲಾಗು = ೧. ಕೆಡುಕಾಗು ; ಅನಿಷ್ಟವಾಗು : ಅದು ಲೇಸಾದೊಡಂ ಪೊಲ್ಲಾದೊಡವೆನ್ನ ಪುಣ್ಯಂ (ಅರ್ಧನೇ. ೩-೭೯ ವ) ; ಕಲ್ಲಾಗಲೇನು ಹೊಲ್ಲಾಗಲೇನು ಅದು ಬಲ್ಲತನಕೆ ಸಲ್ಲ ಆ ನಲ್ಲೆ ತಾನು ಇರುವಲ್ಲೆ ನಿತ್ಯ ಇರುತಿಹನು ಒಬ್ಬ ನಲ್ಲ (ಅರಳು. ೬೩-೦೩). ೨. ಕೇಡು ಬಗೆ ; ಕೆಟ್ಟುದನ್ನು ಎಣಿಸು : ಇದಕ್ಕಾವನಾನುಂ ಹೊಲ್ಲಾಗಿರೆ × × × ಕುರುಕ್ಷೇತ್ರ ವಾರಣಾಸಿ ಸಾಯಿರಕವಿಲೆಯುಮಂ . . . ಕೊಂದ ಪಂಚ ಮಹಾಪಾತಕನಕ್ಕು (ಕಇ. IV, ೨೦-೦೩ ; ೯).

[ದೇ. ೫ ತಮಿ. ಪೊಲವು, ಪೊಲ್ಲಾ ; ಮಲ. ಪೊಲ್ಲಾ]

**ಪೊಲ್ಲಕೆಯ್** 'ಪೊಲ್ಲಗೆಯ್' ನೋ.

**ಪೊಲ್ಲಗೆಯ್, ಪೊಲ್ಲಕೆಯ್** (ಕ್ರಿ). ೧. ಕೆಡುಕುಮಾಡು ; ಕೇಡುಂಟುಮಾಡು : ವನಜಾಕ್ಷಿ ದೋಷಿಯಲ್ಲದ ನಿನಗೆ ಕರಂ ಪೊಲ್ಲಗೆಯ್ದಂ (ಶಂಕಕಂ. ೭೭-೨೦) ; ಇದಾವುದು ಪೊಲ್ಲಗೆಯ್ದನೀ ಮುನಿಸವಿವೇಕಮೆಂದು ನುಡಿದಳ್ (ಶಂಠಾಪಮಾ. ೦೦-೩೮). ೨. ತಪ್ಪು ಮಾಡು : ವಲ್ಲಭೆಯರ್ ಪೊಲ್ಲಗೆಯ್ದುರಂತುಸಿರದೆ ಕುಳ್ಳಿರೆ (ಧರ್ಮಾಮೃ. ೪-೦೫೯). **ಪೊಲ್ಲಕೆಯ್** : ೧. ಎನಿತಾದೊಡಮೇಂ ಪ್ರಭು ಪೊಲ್ಲಕೆಯ್ಗುಮೇ (ಶಂಕಶಾ. ೦೦-೬೩) ; ಕಳವಂ ಮಿಥ್ಯೆಯನೇಱಿಸಿ ಕಳತ್ರದೊಳ್ ಪೊಲ್ಲಕೆಯ್ದರೆಂದಿಲ್ಲದುದಂ ಗಟಪಿದೊಡೆ (ಶಂಠಾಪಮಾ. ೯-೯) ; ಇವರ ಕೊಲ್ವುದುಂ ಪುರುಷಾರ್ಥಮಲ್ಲ ಚೀ ಪೊಲ್ಲ ಕೆಯ್ದರಿ (ಪೇಟುಪು. ೪-೦೦೫ ವ). ೩. ಹಾದರ ಮಾಡು ; ವ್ಯಭಿಚರಿಸಂ : ಬ್ರಹ್ಮ ಘಾತಿಪೋದನೆಂಬುದೇಕೆ . . . ತನ್ನ ಸುತೆ ಪದ್ಮೆಯೊಳು ಪೊಲ್ಲಕೆಯ್ದನೆಂಬುದೇಕೆ (ಕರ್ಣಾ. ೯೬೪). [ ಪೊಲ್ಲ + ಕೆಯ್$_1$ ]

**ಪೊಲ್ಲಗೆಯ್ಮೆ** (ನಾ). ಅಯೋಗ್ಯವಾದ ಕೆಲಸ; ಕೆಟ್ಟ ಕಾರ್ಯ : ಇಲ್ಲದಿರೆ, ಎಂತಕ್ಕುಮವ್ ಈ ಪೊಲ್ಲಗೆಯ್ಮೆ? (ಅಕ್ಕಶಾ. ೬-೦೩೪).

[ ಪೊಲ್ಲ + ಗೆಯ್ಮೆ (< ಕೈಮೆ$_1$) ]

**ಪೊಲ್ಲದು, ಹೊಲ್ಲದಂ** (ನಾ). ೧. ಕೆಟ್ಟುದು ; ಹೀನವಾದುದು : ಒಳ್ಳಿತ್ತಾ ಕೆಯ್ವೊರಾರ್ಪೊಲ್ಲದುಮದಱನ್ನೆ (ಇಅ. X. ೬೧-೭ ; 7ನೆಯ ಕಕ) ; ಇದು ಪೊಲ್ಲದೊ ತಾನಿದೊಳ್ಳಿತೋ ಮೇಣದೆಂಬುದಂ ಬಗೆಯಲಾರ್ತೆ ನಿಲ್ಲಾಕ್ಷಣದೊಳ್ (ಕಾದಂಪೂ. ೬೮೬) ; ಒಳ್ಳಿತ್ತು ಪೊ[ಪಾಠಾಂ. ಹೊ]ಲ್ಲದೆಂಬುದನೊಳ್ಳಿತ್ತಾಗಱಿವವಂಗೆ ಜನವಚನಂ ತಾನೊಳ್ಳಿತ್ತು (ಸಮಪ. ೩-೩೦). ೨. ಅಹಿತವಾದುದು ; ಅಸಹ್ಯವಾದುದು : ಪೊಲ್ಲದಂ ನುಡಿದೊಡೆ ಕೇಳ್ದುಮುಣ್ಬರೆ ಸದಾಚರಿತರ್ಜಿನಭಕ್ತರೆಲ್ಲಿಯುಂ (ಸಮಪ. ೬-೨೩) ; ಮನದೊಳ್ ಪೊಲ್ಲವನೆಂತುಂ ನೆನೆಯರ್ (ಕಾವ್ಯಾವ. ೨೩೫). ೩. ಅಯೋಗ್ಯವಾದಂದು ; ಅನುಚಿತವಾದುದು ; ಸರಿಯಲ್ಲದುದು : ಈ ನೆರೆದ ಗುರುಜನಂಗಳ್ ಮಾನಿನಿಯರ ಮುಂದೆ ಕರ್ಣ ಪೊಲ್ಲದಂ ನುಡಿದೈ (ಶಂಕಶಾ. ೨-೬೦) ; ಪೊಲ್ಲದಂ ನುಡಿದನಾತನಂ ಬಿಸುಟಂ ತಕ್ಕಿಪ ನುಡಿಯ ನುಡಿವನೇ (ಗದಾಯು. ೨-೨೦) ; ಸಲ್ಲದು ವಿಪ್ರಂಗಿಂತಿದು ಪೊಲ್ಲದು (ಸಮಪ. ೨-೬೮). ೪. ಅನಿಷ್ಟವಾದುದು ; ಕೇಡು ; ಕೆಡುಕು : ರಿಸಿಯರೊಂದಿದಱಿವೆಗಪ್ಪೊಡಂ ಪೊಲ್ಲದು ಬಗೆಯಾದವರೆನಗಹಿತವಂ ಬಗೆವರೆ (ವರ್ಧಮಾ. ೦೬೬-೨೭) ; ಎನ್ನ ಪುಣ್ಯೊಳಗೆ ನಿನ್ನ ರೋಮಂ ಪುಗೆ ಪೊಲ್ಲದಪ್ಪುದು (ಶಂಕಕಂ. ೦೯೩-೦೨) ; ನಿಮ್ಮಾಶ್ರಮದತ್ತಲ್ಪೋಗಿಮಿರ್ದಂದ ರಸರ ದೆಸೆಯಿಂ ನಿಕ್ಕುಮಂ ಪೊಲ್ಲದಕ್ಕುಂ (ಸುಕುಮಾ. ೭-೪೦) ; ಭುವನಜನಕ್ಕೆ ಗೋನಿವಹಕ್ಕೆ ಪೊಲ್ಲ[ದು ಸವನಿ]ಕ್ಕು (ಅಭ್ಯಮ. ೭-೦೭). **ಹೊಲ್ಲದು** : ೩. ಕೋಲ ಬಲುಹುಂಟಾಗೆ ನಾಲಗೆ ಹೋಲ ನುಡಿಯದು ಹೊಲ್ಲದೇನಿದು ಖೂಳ ಕಟಕಿಯ ಮಾತು ಬೇಡಂಬಿನಲಿ ಮಾತಾಡು (ಕುಮಾರರ. ೪-೩೦).

[<ಪೊಲ್ಲ./ತಮಿ. ಪೊಲ್ಲತು, ಪೊಲ್ಲಾತು]

**ಪೊಲ್ಲದುಗೆಯ್, ಪೊಲ್ಲದುಗೈ** (ಕ್ರಿ). ೧. ಕೆಡುಕು ಮಾಡು ; ಕೇಡು ಮಾಡು : ಒದವುಗೆ ನಿನ್ನ ಸಂತತಿಗೆ ನೂರ್ವರುದಗ್ರಸುತರ್ಕಳೊಂದೆ ಗರ್ಭದೊಳೆನೆ ಕೆಮ್ಮನಿಂತು ಪೊಸೆದಿಕ್ಕಿದೆ ಪೊಲ್ಲದುಗೆಯ್ದೆಯ್ (ಶಂಕಶಾ. ೦-೧೩೦) ; ಪೊಲ್ಲದುಗೆಯ್ದನೆಂದು ನಹುಷಾಜಗರಂ ಪಿರಿದಪ್ಪ ದೈನ್ಯದಿಂ ಬಲ್ಲಿದನಪ್ಪಗಸ್ತ್ಯಮುನಿಯೊಳ್ ದಯೆಯಂ ಪಡೆಯಲ್ಕೆ ಬಂದಪೋಲ್ (ಕಾದಂಪೂ. ೦೦೩) ; ಕರಮಿಂತೊಂದವಿವೇಕಮಂ ನೆಗೞ್ದಿರೆಂದೇಕಿಂತುಟಂ ಪೇಟದಿರ್ದಿರೆ . . . ಪೊಲ್ಲದುಗೆಯ್ದಿರೆಂದು ಜಡಿದರ್ ಕುಂತೀಸುತರ್ಕೊಂತಿಯುಂ (ಗದಾಯು. ೦೦-೨೦). ೨. ಹೀನಕಾರ್ಯವನ್ನು ಮಾಡು; ಪಾಪ ಮಾಡು: ಭೋಗೋಪಭೋಗಂಗಳ್ಗೆ ಪೊಲ್ಲದುಗೆಯ್ವಲ್ಲದ ಪೆಂಡತಿಗೆ ಪೇಸಿದಂತೆ ಪೇಸಿ (ಧರ್ಮಾಮೃ. ೩-೨೦). **ಪೊಲ್ಲದುಗೈ** : ೧. ಹಿಂದು ಮುಂದರಿಯದೆ ಪೊಲ್ಲದುಗೈವನು ನರಕದ ಭಯುವಿನಿತಿಲ್ಲ (ಬಂಪಾಶ. ೦೬೯-೮೨). [ ಪೊಲ್ಲದು + ಕೆಯ್$_1$ ]

**ಪೊಲ್ಲದುಗೈ** 'ಪೊಲ್ಲದುಗೆಯ್' ನೋ.

**ಪೊಲ್ಲನುಡಿ, ಹೊಲ್ಲನುಡಿ** (ನಾ). ಕೆಟ್ಟ ಮಾತು ; ಅಹಿತವಾದ ನುಡಿ : ಶಿಶುಪಾಲನ ಪೊಲ್ಲನುಡಿಗೆ ಸೈರಿಪುದು (ಜಗಂ. ೦೭-೯೭). **ಹೊಲ್ಲನುಡಿ** : ಆಲಿಪುದುಮಾ ಹೊಲ್ಲನುಡಿಯ ಕಿಡಿಕಿಡಿವೋಗಿ (ಕೇಶಿರಾ. ೩-೩೪) ; ಬಿಲ್ಲೇಶನ ಬಾಯಿಂದ ಹೊಲ್ಲನುಡಿಗಳ ಕೇಳಿ ಎಲ್ಲರು ಬೆರಗುಗೊಂಡರು (ಸಿದ್ಧಕೃ. ೦೩-೪೭). [ ಪೊಲ್ಲ + ನುಡಿ$_1$ ]

**ಪೊಲ್ಲಬ್ಬೆ** (ನಾ). ಒಬ್ಬಾಕೆಯ ಹೆಸರು : ನಾಗುಳರ ಪೊಲ್ಲಬ್ಬೆ ಮಾಡಿಸಿದ ಬಸದಿ (ಬೆಂಕರಾ. ೦೯೩೪, ರಾಜಿಪನ್ನೂರ್. ೦೦೬-೨೦ ; 781).

[ಪೊಲ್ಲ$_?$ + ಅಬ್ಬೆ$_1$]

**ಪೊಲ್ಲಮಾತು** ' ಪೊಲ್ಲವಾತು ' ನೋ.

**ಪೊಲ್ಲಮಾನಸ, ಪೊಲ್ಲಮಾನಿಸ** (ನಾ). ಕೆಟ್ಟ ಮನುಷ್ಯ; ದುರ್ಬುದ್ಧಿಯುಳ್ಳವನು : ಅಧಮರ ಪೊಲ್ಲಮಾನಸರ ದುರ್ಜನರ ಜಾರಜಾತರ ವಿಜಾತಿಗಳ್ಗೆ ಯೋಗ್ಯಮಪ್ಪಯೋಗ್ಯಮಂಗೆಯ್ದರ್ (ವರ್ಧಮಾ. ೬-೦೯) ;

ದುರ್ಯೋಧನನಪ್ಪೊಡೆ ಪೊಲ್ಲಮಾನಸನಾತನುಂ ನೀಮುಮೊಂದೆಡೆಯೊಳಿರೆ ಕಿಸುಱುಂ ಕಲಹಮುಮೆಂದುಂ ಕುಂದದು (ಕಂಕಭಾ. ೩-೯೨ ವ). **ಪೊಲ್ಲಮಾನಿಸ :** ಪೊಲ್ಲಮಾನಿಸರ ಪೊಲ್ಲಮೊಗಂಗಳ್ (ಕವಿಮ. ೧೭೭ ಕ್ರಯೋ).
[ಪೊಲ್ಲ + ಮಾನಸ$_1$ (< ಮಾನುಸ)]

**ಪೊಲ್ಲಮಾನಸಿ** (ನಾ). ದುಷ್ಟಹೆಣ್ಣು : ನೀಂ ಪೊಲ್ಲಮಾನಸಿಯೆ ಎಂದು ಮನದೊಳೆ ಬಗೆದು (ವಡ್ಡಾರಾ. ೦೩-೨೫). [ಪೊಲ್ಲ + ಮಾನಸಿ]

**ಪೊಲ್ಲಮಾನಿಸ** 'ಪೊಲ್ಲಮಾನಸ' ನೋ.

**ಪೊಲ್ಲಮೆ, ಹೊಲ್ಲಮೆ** (ನಾ). ೧. ದುಷ್ಟತನ ; ಕೆಟ್ಟತನ : ಪೊಲ್ಲಮೆಯುಂ ಗುಣಮುಂ ತಮಗಲ್ಲದೆ ಪುದುವಲ್ಲ (ಕರಿರಾ. ೩-೦೭೬); ಅವನೀನಾಥನ ಗೆಯ್ದ ಪೊಲ್ಲಮೊ.ಮೆನ್ನೊಳ್ಪಿಂಗವಿಂ ಸಕ್ಕಿಯಾಗು (ಕಂಕಭಾ. ೯-೨೬); ಪೊಲ್ಲಮೆಯೊಳೊಂದದೆ ಚಾರಿತ್ರದೊಳ್ ಕೂಡಿ ನೆಗಟ್ದ ಧರ್ಮಮೆ ಸದ್ಧರ್ಮಂ (ಧರ್ಮಾಮೃ. ೯-೧೬). ೨. ಕೆಡುಕು; ಅಹಿತ; ಕೇಡು : ಕಂಸಕೃತಾಪಚಾರದಿಂ ನಿರ್ವಿಚಾರಮೆ ಪೊಲ್ಲಮೆಯಾದುದು (ಜಗವಿ. ೨-೬೦ ವ); ಆ ನಿನಗೆ ಮಾಡಿದ ಪೊಲ್ಲಮೆಯುಂಟೆ (ದಶಕು. ೦೦-೭೩) ; ಈಗಳೋ ತಾನೆ ಗೆಯ್ದು ಪೊಲ್ಲಮೆಗೆ ದೇವರ್ಗೆ ತೆತ್ತಪನ್ ಈ ದಂಡಮನ್ (ಬದ್ಧಶ್ರ. ೧-೦೦). ೩. ದೋಷ; ತಪ್ಪು : ಸಂಸಾರದ ಪೊಲ್ಲಮೆಯುಮನನಿತ್ಯತೆಯುಮಂ ಬಗೆದು ವೈರಾಗ್ಯಪರರಾಗಿ (ವಡ್ಡಾರಾ. ೯೩-೬) ; ಏನಾನುಮೊಂದು ಪೊಲ್ಲಮೆಯನಿಲ್ಲದುದನುದ್ಭವಿಸಿ (ವರ್ಧಕೃ. ೦೩-೫೯ ವ); ಮಾರುಳೀ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್ (ಹುಕೋಶ. ೨-೪೨). ೪. ಕಳಂಕ ; ಅಪವಾದ : ಇನ್ನುಮೊಂದು ಕಥೆಯಂ ಪೇಟ್ದಿನ್ನ ಮೇಗಣ ಪೊಲ್ಲಮೆಯಂ ಪಿಂಗಿಸಿಕೊಳ್ವೆಂ (ಧರ್ಮಾಮೃ. ೦೨-೦೪೭). ೫. ಪಾಪ : ಆದಂ ಪೊಲ್ಲಮೆಯೊಳ್ ಸಲೆ ನಡೆವರ್ ದುಷ್ಟಮಮೆಂಬಯ್ದನೆಯ ಕಾಲದೊಳ್ (ಆದಿಪು. ೦೩-೩೭). **ಹೊಲ್ಲಮೆ :** ೧. ಅಗಲ್ಕೆಯಲ್ಲಿಯುಂ ಹೊಲ್ಲಮೆಯಲ್ಲಿಯುಂ ಪ್ರತ್ಯವಾಯಮೆಂಬುದು (ಹಲಾಯು. ೦೩೭-೩೬) ; ಸ್ತ್ರೀಜೀವನದ ಹೊಲ್ಲಮೆ ಸಹ ನಯುಸೇನನ ತೀಕ್ಷ್ಣವಾದ ನೋಟಕ್ಕೆ ಸಿಲುಕದೆ ಹೋಗಿಲ್ಲ (ಕವಿಬಿ. ೯೩). ೨. ವಲ್ಲಭ ನಿನಗೇಗೆಯ್ದೆಂ ಹೊಲ್ಲಮೆಯಂ (ಸಳಕಂ. ೩೪೪). ೩. ಒಸಗೆ ತಮ್ಮದೆನೆ ಪೆರ್ಮೆಯೊಡನಾಡಿ ಹೊಲ್ಲಮೆಯು ಕಳಿಗಿಕ್ಕಿ ತಿಳಿದೆಲರ್ಚುವ ಬಾಳ್ಗೆ ಸೊಲ್ಲೇನು ? (ಕಾಂಜರ. ೭೩-೦೫೭). ೬. ಕೆಟ್ಟ ಮಾತು ; ನಿಂದೆ : ಈ ಕಡೆಯ ಬಾಯಿಂದ ಒಳ್ಳೆಯ ಮಾತಾಡುತಿದೆ ಆ ಕಡೆಯ ಬಾಯಿಂದ ಬರಿಯ ಹೊಲ್ಲಮೆಯ ಹೊರಹೊಮ್ಮುತಿದೆ (ಬಗಾ೪. ೩೦). [ಪೊಲ್ಲ + —ಮೆ$_3$]

**ಪೊಲ್ಲಮೆಗಾಣ್** (ಕ್ರಿ). ದೋಷವನ್ನು ಕಾಣು ; ತಪ್ಪನ್ನು ಕಾಣು : ಮನಮನಗಲ್ಚಲೊಂದೆಡೆಯು ಪೊಲ್ಲಮೆಗಾಣಿನೆ ಬೇಱದೊಂದು ರೂಪಿನ ನಿಧಿ ಬೇಱದೊಂದು ಕಡುಗಾಡಿಯ ಸನ್ನಿಧಿ (ಶಾಂತಿಪು. ೬-೭೯); ಪೊಲ್ಲಮೆಗಂಡದ ನಱಿದುಂ ಮೆಲ್ಲನೆ ಸಯ್ತಾಗೆ ತಿರ್ದುವರ್ಸುಕವೀಶರ್ (ಧರ್ಮಾಮೃ. ೦-೪೩) ; ಪೊಲ್ಲಮೆಗಂಡವರ್ಮುಳಿದು ತಮ್ಮಯ ತೊಟ್ತಿರನೆಂತು ಮಾಟ್ಪೊಡಂ ಸಲ್ಲದೆ (ಶೃಂಗಾರ. ೩-೩೦). [ಪೊಲ್ಲಮೆ + ಕಾಣ್]

**ಪೊಲ್ಲಮೆಗೆಯ್** (ಕ್ರಿ). ಕೆಟ್ಟುದನ್ನು ಮಾಡು ; ಕೇಡುಂಟುಮಾಡು : ಸಂಜೀವಕಂಗೆ ನೀ ಕೂರ್ಪೆಯಪ್ಪ ಕಾರಣದಿಂದಾತನೆನಿತು ಪೊಲ್ಲಮೆಗೆಯ್ದ ನಾದೊಡಮೊಳ್ಳಿದನೆಂದು ನುಡಿದಪೆ (ಕಂಚಕಂ. ೦೦೧-೬); ಪೊಲ್ಲಮೆಗೆಯ್ಯಲಾಱದಿದು (ಕವಿಮ. ೦೪-೬೦) ; ಪೊಲ್ಲಮೆಗೆಯ್ಯಲ್ಪಟ್ಟೆಡೆಗೆ ನೆಲನಲ್ಲ ಮನುಜರಳಱಿಪ ಖಳ ನೀ ನನೆವಿಲ್ಲಂ (ಉದ್ಭರೇ. ೪-೩೩).
[ಪೊಲ್ಲಮೆ + ಕೆಯ್$_1$]

**ಪೊಲ್ಲಯ್ಯ** (ನಾ). ಒಬ್ಬಾತನ ಹೆಸರು : ಮಟ್ಟೂರ ಸಾಯಿರ ಒಟ್ಪೊರ್ಬ್ಬರುಂ ಪೊಲ್ಲಯ್ಯನ ಮಾಡಿಸಿದ ದೇಗುಲಕ್ಕೆ ಕೊಟ್ಟ ಮಣ್ (ಎಕ. IV, ಎಳಂದೂ. ೪೦-೩; 982). [ಪೊಲ್ಲ ? + ಅಯ್ಯ$_1$]

**ಪೊಲ್ಲಲಿಂಗಿ** (ನಾ). (ಅನ್ಯಪಂಥದ) ಹೀನಯತಿ ; ಸಂನ್ಯಾಸಿ : ಪೊನ್ನ ತಳಿಗೆಯೊಳ್ ನಾಯ್ ತುಯ್ಯಲನುಣ್ಬುದಂ ಕಂಡುದಱಿಂ ಪೊಲ್ಲಲಿಂಗಿಗಳರ ಸರ್ಕಳಿಂದಂ ಪೂಜಿಸೆ ಪಡುವರ್ (ವಡ್ಡಾರಾ. ೮೭-೨೬). [ಪೊಲ್ಲ + ಲಿಂಗಿ$_1$]

**ಪೊಲ್ಲವಾತು, ಪೊಲ್ಲಮಾತು** (ನಾ). = **ಪೊಲ್ಲನುಡಿ :** ಎಳ್ಳಿಯದೀ ಸುದ್ದಿ ರಾಮ ಮಡಿದನೆಂಬ ಪೊಲ್ಲವಾತಿದ ತಂದರಾರು (ಕುಂರಾಸಾಂ. ೩೭-೦೦೪). **ಪೊಲ್ಲಮಾತು :** ನಿಮ್ಮಂದಿರ್ಗರ್ವಿಶದ ಕೇಡಂ ನೋಡದೊಳ್ಪಿಂ ಬಗೆಯುದೆ ಪಟುಗಂ ಪಾತಕಕ್ಕಂ ಭಯುಂಗೊಳ್ಳದೆ ಪೇಟರ್ ಪೊಲ್ಲಮಾತಂ ನುಡಿಯುಲಿದು ಮನಂ ನೋಟ್ಪ ಸಂಕಲ್ಪಜಲ್ಪಂ (ಕಂರಾಪಟ. ೯-೦೬೯).
[ಪೊಲ್ಲ + ಮಾತು$_1$]

**ಪೊಸ, ಹೊಸ** (ಗು). ೧. ನೂತನ; ನವೀನ : ಒರ್ವಳ್ ಪೊಸ ಶ್ರಾವಕಿ . . . ಕಟ್ಟಲೆಯೊಳ್ ನಿರ್ಗ್ರಂಥಮಪ್ಪ ರೂಪಂ ಕಂಡು ಬೆರ್ಚಿದೊಡೆ (ವಡ್ಡಾರಾ. ೯೨-೦೧) ; ತಾವರೆಯ ರಜಂಗಳೆಂಬ ಪೊಸ ನುಣ್ಮಳಲಿಂದೆ ಪುಳಿಲ್ಗಳಂ ಮನೋಹರಕೃತಕಪ್ರವಾಹಿನಿಯೊಳಂಗನೆ ಮಾಡಿಸು ತಿರ್ದಳರ್ಥಿಯಿಂ (ಕಾದಂಕಾ. ೨೪) ; ಪೊಸ ಪೊನ್ನ ಪರಿಯಾಣದೊಳೆಸೆವ ಅಮೃತಾನ್ನವನು ನಾಯ್ತಿಂಬುದಂ . . . ನೃಪಾಳಂ ಕಂಡಂ (ಕೃಷ್ಣಾಸ್ರ. ೯-೦೪); ಪೊಸ ಜೊನ್ನಂ ತನ್ನ ಕೀರ್ತಿಪ್ರಭೆ ಪಸರಿಸಿತೆಂಬಂತೆ ಸೊಂಪೇಱೆ (ವೃಕವಿ. ೨೬-೦೦). ೨. ಚೆಲುವಾದ; ಮನೋಹರವಾದ : 'ಪೊಸವೆಳ್ದಿಂಗಳ್', 'ಪೊಸಸಂಜೆ' ಪರಾ. ೩. ಶುಭ್ರವಾದ; ಸ್ವಚ್ಛವಾದ; ನಿರ್ಮಲವಾದ : 'ಪೊಸದಳಿಂಬು', 'ಪೊಸನೀರ್' ಪರಾ. ೪. ಚಿಕ್ಕದಾದ ; ಎಳೆಯ ವಯಸ್ಸಿನ : 'ಪೊಸನವಿಲ್' ಪರಾ. ೫. ಪಕ್ವವಾದ ; ಮಾಗಿದ: 'ಪೊಸಪಣ್' ಪರಾ. ೬. ಬಿಸಿಯಾದ : 'ಪೊಸನೆತ್ತರ್', 'ಪೊಸಪಾಕ' ಪರಾ. ೭. ಮಾಸದಿರುವ ; ಅಳಿಸದಿರುವ: 'ಪೊಸಪಜ್ಜೆ' ಪರಾ. ೮. ಬೇರೆಯ ; ಮತ್ತೊಂದು: 'ಪೊಸವೆಸರ್' ಪರಾ. ೯. ಮೊದಲನೆಯ ; ಪ್ರಥಮ : 'ಪೊಸಗಾರ್' ಪರಾ. ೧೦. ಅಧಿಕವಾದ ; ಅತಿಶಯವಾದ: 'ಪೊಸಸಿರಿ' ಪರಾ. **ಹೊಸ:** ೧. ಆವರಿಸಿದುದು ಮತ್ತೆ ಹೊಸ ಮೇಳಾವದಲಿ ಕುರುಸೇನೆ (ಕುವ್ಯಾಕಿ೦೯-೬೬); ಹೊಳಲು ಹೊಸ ರೀತಿಯಲಿ ಮಿಗೆ ಕಂಗೊಳಿಸುತಿರ್ದುದು (ತೊರರಾ. ೦-೯-೦೦); ಈ ಹಳೆಯ ಹೇಳಿಕೆಗೆ ಹೊಸ ಉಸಿರು ತುಂಬಿದ್ದಾರೆ (ದ್ರಾಬಿಬಿ. ೪೨). ☞ 'ಪೊಸ' ಮತ್ತು 'ಹೊಸ' ಎಂಬ ಈ ಶಬ್ದಗಳು ಇತರ ಅನೇಕ ನಾಮಪದಗಳೊಡನೆ ಸೇರಿ ಸಮಾಸವಾದಾಗ ಬೇರೆ ಬೇರೆ ಅರ್ಥಗಳನ್ನು ಕೊಡುತ್ತವೆ.

**ಪೊಚ್ಚಪೊಸ, ಪೊಸಪೊಸ, ಹೊಚ್ಚಹೊಸ, ಹೊಸಹೊಸ** (ದ್ವಿರುಕ್ತಿ): ಪೊಚ್ಚಪೊಸ ಮಲ್ಲಿಗೆಯುಂ ಮುದದಿಂ ತುಱುಂಬಿ (ಧರ್ಮಾಮೃ. ೭-೦೭೬); ತನಿಗಂಪು ತೀವಿರ್ದ ಪೊಚ್ಚಪೊಸ ಪೂಗಳಂ ಕೊಂಡು (ಕೃಷ್ಣರ.ಹ. ೩೨೩-೨೬); ಪರಿಯಾಣದಲಿ ಪೊಸಪೊಸ ಪದಾರ್ಥಶ್ರೇಣಿಯುಂ ಲೇಸಾಗಿ ಗಡಣಿಸಿ (ಬಸವೃ. ೩೩-೦೦): ಹೊಚ್ಚಹೊಸ ಬೆಣ್ಣೆಗಾಸಿದ ತುಪ್ಪ (ಸಮ್ಮಕೌ. ೭-೨೪); ಹೊಚ್ಚಹೊಸ ಹೊಗರಂಬಿನಲಿ ತೆಗೆದೆಚ್ಚನು (ದೇವೀಮ. ೩-೨೭); ಆ ಅಂಗಡಿಗೆ ಹೊಸ ಹೊಸ ಬಗೆಯ ಸೀರೆಗಳು ಬಂದಿವೆ (ರೂಢಿ). **ಪೊಸವು** (ಬಹುವ): ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಆದಿಪು. ೯-೨೩).
[ದೇ.॥ತಮಿ. ಪುತಿಯ, ಪುತು ; ಮಲ. ಪುದು; ತುಳು. ಪೊಸ, ಹೊಸ; ಕೊಡ. ಪುದಿಯದ್; ಕೋತ. ಪುದ್]

**ಪೊಸಅಡಕೆ** (ನಾ). ತಾಜಾಅಡಕೆ ; ಹಸಿಯಡಕೆ : ಪೊಸಸುಗ್ಗಿ, ಪೊಸ ಅಡಕೆ (ಭಾಷಾಭೂ. ೦೪೪ ಉದಾ); ಪೊಱಅಡಿ, ಒಳಅಟ್ಟಂ, ಪೊಸಅಡಕೆ (ಕವಿತ. ೩೩ ಕ್ರಯೋ). [ಪೊಸ + ಅಡಕೆ$_1$]

**ಪೊಸಎಲರು** (ನಾ). ಸ್ವಚ್ಛವಾದ ಗಾಳಿ ; ನಿರ್ಮಲವಾದ ವಾಯು : ಪಳಪಾನೇ! ಪೊಸಎಲರೇ! (ಹೊಂಗಳು. ಹಾಕೈಕೆ. ೧೭).
[ಪೊಸ + ಎಲರು (< ಎಲರ್)]

**ಪೊಸಒಲುಮೆ** (ನಾ). ನವೀನವಾದ ಪ್ರೇಮ,–ಭಕ್ತಿ : ಭಕ್ತರ ಚರಿತೆಗಳನಾನಂದದಿಂ ತಿರುಪಾಟ ರೀತಿಯೊಳೊಂದಿ ಪಾಡುತ ಪೊಸ ಒಲುಮೆ ಸಲೆ ಪೊಣ್ಮೆ [ಪಾಠಾಂ. ಪೊಡವಡುತವೊಲವೃಣ್ಮೆ] ಕೀರ್ತಿಸುತ (ಬಸಪು. ೨೭-೭೦).
[ಪೊಸ + ಒಲುಮೆ (< ಒಲ್ಮೆ)]

**ಪೊಸಂತಿಲ್**, ಪೊಸಂತಿಲು, ಪೊಸತಿಲ್, ಪೊಸತಿಲು, ಹೊಚ್ಚಲ, ಹೊಸಂತಿಲ್, ಹೊಸಂತಿಲು, ಹೊಸತಿಲ್, ಹೊಸತಿಲು, ಹೊಸಲು, ಹೊಸಿಲು, ಹೊಸ್ತಲು, ಹೊಸ್ತಿಲ್, ಹೊಸ್ತಿಲ, ಹೊಸ್ತಿಲು (ನಾ). ೧. ಬಾಗಿಲ ಚೌಕಟ್ಟಿನ ಕೆಳಭಾಗ; ಉತ್ತರಾಸ; ದೇಹಳಿ: "ಗೃಹಾವಗ್ರಹಣೀ ದೇಹಳೀ—ಈ ೨ ಪೊ(ಹೊ)ಸಂತಿಲ್" (ಹಲಾಯು. ೩೦-೦೪೭) ; ಮೇರು ಪೊಸಂತಿಲ್ ಕುಡಿತೆಯ ನೀರಂಬುಧಿ ಗಗನತಳಮೆ ಕೈ ದಿವಿಜಗಣಂ ಕಾರೊಕ್ಕಲೆಂದೊಡುಟಿದವರಾರಾತನ ಮುಸಪ ಮುಸಲದೆಸಕವಮನಿಟಿಪರ್ (ಕಾವ್ಯಸಾ. ೨೪೯ ಕೂಸ್ತ್ರಕ) ; ಎನಗೆ ಪೊಸಂತಿಲೀ ನೆಗೆದ ವಜ್ರದ ವೇದಿಕೆ ಗೋಪ್ಪದಂದಲೀ ವನನಿಧಿ ಪಾಯ್ದು ಮಾಗಧನನೀಗಳೆ ಕಟ್ಟುವೆನಿಲ್ಲಿ (ಅಜಪು. ೦೨-೭೦) ; ನಿತ್ಯಬಿಂದುಗಂ—ಬೆಡಂಗು. . .ಪೊಸಂತಿಲ್, ಗಳಂತಿಗೆ (ಕಪುರ. ೩೭ ಕ್ರಯೊ). **ಪೊಸಂತಿಲು** : ೧. "ಪೊಸಂತಿಲು ದೇಹಳಿಯುಮಕ್ಕು" (ಕಬ್ಬಮಂ. ೩೬). **ಪೊಸತಿಲ್** : ೧. ಪೊಸತಿಲ ಮೇಲನೊಕ್ಕೆಲಿದು ವಿಾಸಲ ತುಯ್ಯಲನಟ್ಟು ಬಾಗಿಲ್ಗಿರ್ಚಿಸಿ (ಕವಾರ. ೪೬೩) ; ಪೂದೋಂಟಕ್ಕೆ ಪೋಗಿ ನಿಚ್ಚಲುಂ ಪೂಗಳು ಕೊಯ್ದುಕೊಂಡು ಮನೆಗೆ ಬರುತ್ತಾ ಮಾರ್ಗದ ಬಸದಿಯ ಪೊಸತಿಲೊಳೊಂದೊಂದು ಪೂವನರ್ಚಿಸುತ್ತಂ (ಪುಣ್ಯಾಸ್ರ. ೦-೪೨ ಪ). **ಪೊಸತಿಲು** : ೧. ಅಸುವೊರಲೊಸಕೆ ಗೂಟಂ ಪೊಸತಿಲು ಮನೆಮನೆಯ ಕಂಭ . . . ದೆಯ್ವಮಿಂತಿವೆಂಬಮೂರ್ಖರ್ (ಸಪುಕ. ೯-೬೨) ; ಬಸವಿಯರೊಳು ಪಾತಕಿನಿಯರೊಳು ಮತ್ತಸತಿಯರೊಳು ಕೆಳೆಗೊಳದೆ ಪೊಸತಿಲ ಪೊಜಗಡಿಯುಡದೊಳ್ಪೆಂಡಿರ ಜಸವಳ್ಳಿ ಜಗವ ಪರ್ಬುವುದು (ಹರಿಬಿ. ೪-೪೩). **ಹೊಚ್ಚಲ** : ೧. ಬೆಚ್ಚನ ಮನೆಯಾ ಹೊಚ್ಚಲದೊಳಗೆ ನಿಂತರು ಭಟ್ಟರು ಹಣಕುತ ಹೊರಗೆ (ಗಂ. ೪೪-೭) ; ನೀ ಹೊಚ್ಚಲವಾಗ ಕಾಲಿಟ್ಟೇದಿ, ಹಿತ್ತಲದಾಗಿನ ತುಲಸೀಗಿಡ ಕಮರಿ ಹೋತು (ಸಮುಜ. ೭೪). **ಹೊಸಂತಿಲ್** : ೧. "ಗೃಹಾವಗ್ರಹಣೀ, ದೇಹಳೀ—ಈ ೨ ಪೊ(ಹೊ)ಸಂತಿಲ್" (ಹಲಾಯು. ೩೦-೦೪೭) ; ನುಡಿಯೆಲ್ಲಂ ಹೊಲೆ ಸೂರುಳೆಲ್ಲಂ ಹೊ[ಪಾಠಾಂ. ಪೊ]ಸಂತಿಲ್ ಪೊಂಗೊಳಲ್ ಪುತ್ತಾವಾಯ್ಕುಡಿನೀರೊರ್ಮೆಗೆ ಕಮ್ಮನಪ್ಪಬಟಾನೀರೂರ ದೈವಂಗಳುಂ ಪಡಿಗೆತ್ತೋಡಿದುವಿಃಕೆಗಂಜಿ (ಲೀಲಾವ. ೨-೦೦೨). **ಹೊಸಂತಿಲು** : ೧. ಒಂದು ಹೊಸಂತಿಲನ್ನು ದಾಟುವುದರೊಳಗಾಗಿ ಬಿಟ್ಟದೇವನೂ ಬಂದನು (ಸಪಶ. ೨೬೯). **ಹೊಸತಿಲ್** : ೧. "ದೇಹಳಿಯದೊಗೆದ ಹೊಸತಿಲನಿಕ್ಕುಂ" (ಮಂಗರಾ. ೩೯-೦೨). **ಹೊಸತಿಲು**: ೧. ಹೊಸತಿಲ ಪೂಜಿಸಿ ಹೊಲಿಪಟ್ಟು ಹೋದ ಒಕ್ಕಲಿತಿಯಂ ತಾಯಿತ್ತನ್ನ ಭಕ್ತಿ (ಬಸಪ. ೪೨೨); ಈ ಜನದ ಬದುಕಿನ ಸೊಗಸು ಸಂಸ್ಕೃತಿಯರಳಿ ಪರಿಮಳಿಸಲೆಂದು ಹೊಸತಿಲಲಿ ಹಚ್ಚಿಟ್ಟ ಹಣತೆ ಒಳಗು ಹೊರಗೂ ಕೂಡಿ ಬೆಳಗಲೆಂದು (ಪಂಪಮು. ೪-೬); ಹೊಸತಿಲಲ್ಲಿ ಅಡಿಯಿರಿಸುತ್ತಿದ್ದ ಹಾಗೆಯೇ ಮುಕ್ತಾ ಆನಂದಭರಿತಳಾದಳು (ಅಕ್ರಮ. ೦೨೭). **ಹೊಸಲು** : ೧. ಹೋಮಶಾಲೆಯ ಹೊಸಲು, ಹೊಸದಾಗಿ ಮಾಡಿರುವ ಸಮ್ಮಾರ್ಜನೆಯಿಂದ ಶೋಭಿಸುತ್ತಿರುವುದು (ಕಾಳಿಂಕ. ೬೩-೦೭); ರೈತರೆಲ್ಲ ಮನೆಯ ಹೊಸಲಿಗೆ ಕಾಯಿ ಒಡೆದಿಟ್ಟು ಧೂಪ ಹಾಕಿ ಪೂಜಿಸುತ್ತಿದ್ದರು (ಹುಟ್ಟಿಹ. ೭೨). **ಹೊಸಿಲು** : ೧. ಖೋಜಾ ನಸ್ರುದ್ದೀನ್ . . . ಹೊಸಿಲನ್ನು ದಾಟಿದನು (ಪಗಹೂ. ೨೨೯). ೨. (ಅಲಂ) ಅಂಚು ; ಗಡಿ : ನನ್ನ ಬಾಳು ಸಾವಿನ ಹೊಸಿಲನ್ನು ಮುಟ್ಟಿತ್ತು (ಗಿಪಜಸ. ೪೦); ಹದಿನೆಂಟರ ಹೊಸಿಲನ್ನು ದಾಟಿದ್ದರೂ ವಿಲಾಸಜೀವನವೇನೆಂಬುದನ್ನೇ ಅವಳು ಅರಿಯದವಳಾಗಿದ್ದಳು (ರೂಪಸ. ೨೪). **ಹೊಸ್ತಲು** : ೧. ನರಸಿಂಹರೂಪದಿಂ ದೈತ್ಯನಂ ಪಿಡಿತಂದು ಹೊಸ್ತಲೊಳಗೆ ಸಂಜೆಯೊಳ್ ತನ್ನ ತೊಡೆಯೊಳ್ ಕೆಡಪುತುಗುರ್ಗೊನೆಗಳಿಂ ಜಠರಮಂ ಬಗಿದು (ಕಬಚ. ೬೩-೫); ಮುಂದಣಂ ಗಣಮನೆಲ್ಲಮನುಡುಗಿ ಸಲೆ ಹೊಸ್ತಲೊಳೆಗಳಿಗೆ ಸಾರಣೆಯನೇ ಹಾಕಿ (ಮಲ್ಲಿಕ. ೨-೦೫). **ಹೊಸ್ತಿಲ್**: ೧. "ಗೃಹಾವಗ್ರಹಣೀ, ದೇಹಲೀ—ಈ ೨ ಹೊಸ್ತಿಲ ಪೆಸರು" (ನಾಚಿರಾ. ೮೦೪). **ಹೊಸ್ತಿಲ** : ೨. ಬಳ್ಳಾರಿ ಕನ್ನಡ ನಾಡಿನ ಹೊಸ್ತಿಲದಂತೆ (ಮುಂಗಾರು. ೨೭). **ಹೊಸ್ತಿಲು** : ೧. ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ ಮನೆಯೊಳಗೆ ಮನೆಯೊಡೆಯ ನಿದ್ದಾನೊ ಇಲ್ಲವೊ (ಬಸವ. ೯೭); ನಡುಹೊಸ್ತಿಲನು ಮೆಲ್ಲನೆ ದಾಟಿ (ಸಂಕಶ. ೦೪-೪೦); ಬಾಪೂಜಿಯ ಚಿತ್ರವೊಂದು ಮಾತ್ರ ಅವರ ಅರಮನೆಯ ಹೊಸ್ತಿಲನ್ನು ದಾಟಿ ಒಳಗೆ ಕಾಲಿಡುವುದು ಅಸಾಧ್ಯವಾಗಿತ್ತು (ಕಂಬಹು. ೯೯).

**ಹೊಸತಿಲ ಹುಣ್ಣಿವೆ, ಹೊಸ್ತಿಲ ಹುಣ್ಣಿವೆ** = ಮಾರ್ಗಶೀರ್ಷಮಾಸದ ಹುಣ್ಣಿಮೆ ; P ದೇವತೆಗಳ ಆಗಮನಕ್ಕಾಗಿ ಹೊಸ್ತಿಲನ್ನು ಪೂಜೆ ಮಾಡುವ ದಿನ : ಮಾರ್ಗಶೀರ್ಷ ಶುದ್ಧ ೧೫ನೆಯ ತಿಥಿ ಹೊಸತಿಲ ಹುಣ್ಣಿವೆ (ಜಾಹ್ನ. ೦೭೪) ; ಹೊಸ್ತಿಲ ಹುಣ್ಣಿವೆಗೆ ಹೊಸ್ತಿಲ ನಡುಗಿತ್ತು ಬನದ ಹುಣ್ಣಿವೆಗೆಲ್ಲ ಬನ ನಡುಗಿದೆ (ಸಬೀಗೀ. ೨೭-೬೬೫). **ಹೊಸತಿಲು ದಾಟು, ಹೊಸಲು ದಾಟು** = ೧. ಮನೆಯ ಹೊಸ್ತಿಲನ್ನು ದಾಟು ; ಹೊರಗೆ ಹೋಗು : ಮನೆಯ ಹೊಸತಿಲು ದಾಟುವ ಮುನ್ನ, ಅವರು ಹಿತ್ತಲ ಕಡೆಗೆ ಹೋಗಿ, ತಮ್ಮ ಮೂಕಜೀವಗಳನ್ನು ಮಾತನಾಡಿಸಿ ಬರುವರು (ಹಂಪ್ರಹಾ. ೬೨). ೨. (ಅಲಂ) ಹದ್ದು ವಿಾರು ; ಅಂಕೆತಪ್ಪು : ಬೀದಿಯವರ ಮುಂದೆ ನಾಟ್ಯವಾಡಲು ಸರಿಯಾದ ಹೊಸಲು ದಾಟಿದ ಹೆಣ್ಣು ಇವಳು (ಗೋಕುರ. ೩೮).
[< ಪೊಸತು ? + ಇಲ್ಕ]

**ಪೊಸಂತಿಲು** 'ಪೊಸಂತಿಲ್' ನೋ.

**ಪೊಸಂಬ**, ಪೊಸಬ, ಹೊಸಬ (ನಾ). ಗುರುತಿಲ್ಲದವನು; ಅಪರಿಚಿತ : ಒಂದೆಡೆಗೆ ಪಟಿಯನಿಂ ಪೊಸಂಬನೆ ಲೇಸು (ಕಂಪಕಂ. ೦೦೬-೯) ; ವಿಚಾರಿಸದುಂತೆ ಪೊಸಂಬರೆಒತ್ತೆಯಂ ಕೊಳ್ವುದು ತಕ್ಕುದಲ್ತು (ಕಪುರ. ೦೫೩ ಕ್ರಯೊ); ಅವನಾನೊರ್ವನಾಗಲಿ ಪೊಸಂಬಂ ಬರಲ್ [ಪಾಠಾಂ. ಪೊಸಬನೆಯ್ತರಲ್] ಭಾವಜ್ಞರಾದವರ್ ಪತ್ತೆಂಟು ಪಗಲವನ ಭಾವಮಂ ನೋಡಿಯೊಳ್ಪಿದನಾದೊಡೊಳಕೊಳ್ಳಬೇಕು (ಸಮ್ಯಕ್. ೦೦-೩೦). **ಪೊಸಬ** : ಪೊಸಬರೀ ದೇಶದಳಬಳವನಜಿಯಿರಿ (ಕೌಂದಪು. ೬-೬೭) ; ವಿಃಸುನಿವಣ್ಣದ ಮೆಯ್ಯಿ ಗವಾಧಿಪ ಕಂಧರವು ಮೆಚಿವ ಪೊಸಬನಿವನಂಬಿಗನೆನಿಸನೀಕ್ಷಿಸಲು (ಕಾಕ್ಯಕಾ. ೦೪-೩). **ಹೊಸಬ** : ಹೊಸಬರಪ್ಪ ಕೊಯ್ದಾಳಿಗಳು ಬನ್ದಿಯೂರೊಳ್ . . . ಎರಡು ಪಣಮಂ ಕೊಟ್ಟು ಕೊಯ್ವರ್ (ಕಶಾಸ. XII-11, ೭೯೦-೨೦ ; 1094); ಸಂವರ್ತರುದ್ರನೊ ಹೊಸಬನಿವನಾರೆಂದು ತಲ್ಲಣಿಸಿತ್ತು ರಿಪುಸೇನೆ (ಕುಮಾರಾಪ್ರೋ. ೦೨-೨೦) ; ವರ್ತಕನೊಬ್ಬನು ಹೊಸಬ ಗಿರಾಕಿಗೆ ಉಪದೇಶವಿತ್ತನು (ಜಂಪಾಕ. ೦೨೦-೪೦).
[< ಪೊಸ + — ಬ್ಯ. / ತುಳು. ಪೊಸಬೆ]

**ಪೊಸಕಂಪು** 'ಪೊಸಗಂಪು' ನೋ.

**ಪೊಸಕನ್ನಡ** 'ಪೊಸಗನ್ನಡ' ನೋ.

**ಪೊಸಕಳ್ತಲೆ** 'ಪೊಸಗಳ್ತಲೆ' ನೋ.

**ಪೊಸಕಿಟ್ಟಳ** (ನಾ). ತಾರುಣ್ಯದ ಹೊಸಮದ,–ಸೊಕ್ಕು : ಅಸಿಯಸೆಳೆ ತಳದೊಳಕಿ ರಂಜಿಸೆ ಪೂರ್ವವ್ವಳಿಸೆ ಪತ್ರಸಾರ್ವವರಂ ಕರ್ದಿಸಿ ಕಾಮನ ಪಡಿಯಚಿತಿವೊಲೆಸೆದಳ್ ಪೊಸದೆಸೆಕಾರ್ತಿ ಪೊಸಕಿಟ್ಟ [ಪಾಠಾಂ. ಳ್ದ] ಳದೊಳ್ (ಅರಕೇಸ. ೨-೦೩).
[ಪೊಸ + ಕಿಟ್ಟಳ]

**ಪೊಸಕೆಂದಳಿರ್** 'ಪೊಸಗೆಂದಳಿರ್' ನೋ.

**ಪೊಸಗಂಪು,** ಪೊಸಕಂಪು (ನಾ). ಆಗ ತಾನೆ ಹುಟ್ಟಿರುವ ಸುಗಂಧ; **ಹೊಸದಾದ ಸುವಾಸನೆ :** ಮಲರ್ದಲರ್ದ ನಾಗಸಂಪಗೆಯಲರ್ಗಳೊಳ ಗ್ಗಲಿಸಿ ಬರಿವ ಪೊಂಬಾಟ್ಸಿಯು ತಣ್ಮಲೆವ ಪೊಸಗಂಪಿನೊಳ್ ಪುದಿದಲೆವೆಲ ರಾಜೀವುದು ಖಚರರ್ದಪತಿಶ್ರಮಮಂ (ಆದಿಪು. ೧-೬೬); ಕಪ್ಪುರದ ಕಂಪುಮಂ ಸೂಡಿದ ಬಾಸಿಗದ ಪೊಸಗಂಪಸಿಂಬಾಗೊಗದಿರೆ ಮಾಡಿದುದು ಚಮರರುಹ ಗಂಧವಹಂ (ಶಂಶಭಾ. ೦೪-೨೫). **ಪೊಸಕಂಪು :** ಬಂದು ಮನೆಗೆಯ್ದಿ ಪೊಸಕಂಪು ಕವಿದಿರೆ ಕಂಡು ಎಂದಿನಂತಲ್ಲದೆ ನವೀನವಾಗಿರೆ ಕಂಡು (ತಿರುಪ. ದೇ. ೬-೪). [ಪೊಸ + ಕಂಪು]

**ಪೊಸಗನ್ನಡ,** ಪೊಸಕನ್ನಡ, ಹೊಸಗನ್ನಡ (ನಾ). ೧. ಹೊಸ ಬಗೆಯ ಕನ್ನಡ; ನವೀನತೆಯುಳ್ಳ ಕನ್ನಡ : ಪೊಸಗನ್ನಡದಿಂ ವ್ಯಾವರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂತಿಸಿ ಕೊಡಲಾಱದಕ್ಕಟ ಮಿಸುಕದ ಸಕ್ಕದ ವಾನಿಕ್ಕುವವನುಂ ಮಿಯೇ (ರಹಮೀಪು. ೧-೪೦); ವಾಸುಂವಂತಿ ವರ್ಣ್ಣಿಸಿದಂ ಶ್ರೀಸಜ್ಜನತಿಳಕನೊಸೆದು ಪೊಸಗನಡದಿಂ (ಕೊಲ್ಲಾಶಾ. ೦೫-೧೦೦ ; 1186); 'ಪೊಸಗನ್ನಡ' ಎಂಬ ಪದಪ್ರಯೋಗ ಪ್ರಾಚೀನಕನ್ನಡಸಾಹಿತ್ಯದಲ್ಲಿಯೂ ಆಗಾಗ ಬರುತ್ತಿದೆ (ಸಾಸಮಾ. ೦). **ಪೊಸಕನ್ನಡ :** ೧. ಮಹಾಮುನಿಮತ ಮಿಗೆ ಪೇಳ್ವನೆಸೆಯೆ ಪೊಸಕನ್ನಡದಿಂ (ಪುಂದತಿ. ೦-೩೬). **ಹೊಸಗನ್ನಡ :** ೨. ಹಳಗನ್ನಡ, ನಡುಗನ್ನಡಗಳಿಂದ ಭಿನ್ನವಾದ ಈಗಿನ ಕನ್ನಡ : ಈಗ ನಾವು ಬಳಸುತ್ತಿರುವ ಭಾಷೆ 'ಹೊಸಗನ್ನಡ' (ಕ್ಷಶಿಶಾ. ೦) ; ಕನ್ನಡವಮಾತೆಷ್ಟು ವಿಧವಾಗಿರುವದು ?. ಹೊಸಗನ್ನಡವೆಂತಲೂ ಹಳಗನ್ನಡವೆಂತಲೂ ಎರಡು ವಿಧವಾಗಿರುವದು (ಹೊಪುಗ. ೦). [ಪೊಸ + ಕನ್ನಡ$_1$]

**ಪೊಸಗಬ್ಬ** (ನಾ). ನವೀನರೀತಿಯ ಕಾವ್ಯ : ಈಗಡೀಗಡಿನ ಕಥಾನ್ವಯಕ್ಕೆ ರಸಮುಂ ಪೊಸಗಬ್ಬಮಪೂರ್ವಮಾವುವೆಳ್ಕೊಡಮವು ಪೇಟ್ದು ಸಾಧಿಸಿದ ಬ್ಬಮೆ ದಲ್ ಕವಿಚಕ್ರವರ್ತಿಯಾ (ಶಾಂತಿಪು. ೦೨-೭೪). [ಪೊಸ + ಕಬ್ಬ$_1$]

**ಪೊಸಗವಲು,** ಹೊಸಗವಲು (ನಾ). ಹೊಸಬಗೆಯ ವಾಸನೆ,—ಕಂಪು : ಪೊಸಗವಲು ನಾರುತಿದೆ ಬಂದು (ಶಂಕ. ೫೦). **ಹೊಸಗವಲು:** ನಱುಗೋಲನೊತ್ತಿಂದ ದಕ್ಷಿಣದಿದಿರಾಗಿ ಮಱೆಯರಳಿಗಳೋಡಿ ಬಂದು ದುಱುದುಱನೀಕ್ಷಿಸಿ ಹೊಸಗವಲಿಗೆ ಬೆಚ್ಚಿ ಬಿಱಿತೋಡಿದುವು ಕಂಡ ಕಡೆಗೆ (ಭರತ. ೪೭-೬೨). [ಪೊಸ + ಗವಲು (<ಗವುಲು)]

**ಪೊಸಗಳ್ತಲೆ,** ಪೊಸಕಳ್ತಲೆ (ನಾ). ಆಗ ತಾನೆ ಆವರಿಸುತ್ತಿರುವ ಅಂಧಕಾರ : ಪೊದಳ್ದ ಪೆರ್ಗಳ್ತಲೆ ನಾಲ್ದೆಸೆಗಳ್ತಲೆ ಪೊಸಗಳ್ತಲೆ ರಸೆಗಳ್ತಲೆಯೆನಿಸಿ ಕೂಡಿ ತೀವಿತು ತಿಮಿರಂ (ಗಂಧ. ೪-೬೬). **ಪೊಸಕಳ್ತಲೆ :** ಪೊಸಕಳ್ತಲೆಯುದು ತನುವಂ ಮುಸುಂಕೆ ಕರ್ಬಿಕ್ಕಿ ಗೆತ್ತಗಲ್ದುದು ಚಕ್ರಪ್ರಸರಂ (ರಾಜಶೇ. ೦೦-೦೮). [ಪೊಸ + ಕಳ್ತಲೆ (<ಕಟ್ತಲೆ)]

**ಪೊಸಗಟಿಮೆ** (ನಾ). ಆಗತಾನೆ ಬೆಳೆಬಂದ ಬತ್ತ : ಪೊಸಜಾದಿಯ ಬೆಳೆದೊಱಗಿದ ಪೊಸಗಟಿಮೆಯ ಪೊಸತರಲ್ದ ತಾವರೆಗಳ ಕಂಪಸದಳಮೆಸೆದಿರೆ ದೆಸೆದೆಸೆಗೊಸಗೆಯೆ ಬರ್ಪಂತೆ ಕಣ್ಗೆ ವಂದುದು ಶರದಂ (ಆದಿಪು. ೦೦-೬). [ಪೊಸ + ಕಟಿಮೆ (<ಕಟಿವೆ)]

**ಪೊಸಗಾಡಿ** (ನಾ). ನವೀನವಾದ ಸೌಂದರ್ಯ ; ಹೊಸಸೊಬಗು : ಅವರ್ವರ ರೂಡಿವಡೆದ ಪೊಸಗಾಡಿಯುಮಂತವರ್ವರ ಬೇಟಮುಮಂತ ವರ್ವರೊಳಲ್ಲದಿಲ್ಲ ಪಱತೊರ್ವರೊಳಂ (ಕಬ್ಬಿಗಕಾ. ೦೨೪) ; ಮದನಮಹಿಮೆಯ್ಗೆಣ್ಣನ ಪಟ್ಟದ ಸುದತಿಯರ್ಗಿಮ್ಮಡಿಯಾದ್ಯೈಸಿರಿ ಪೊಸಗಾಡಿ ಚದುರು ಚೆಲ್ವು ವಿದಿತವಿಭವಮುಂಟೇಕೆಗೆ (ಜಗನ್ನಾ. ೩-೪೭). [ಪೊಸ + ಗಾಡಿ$_1$]

**ಪೊಸಗಾರ್,** ಪೊಸಗಾರು (ನಾ). ವರ್ಷಾರಂಭದ ಮಳೆಗಾಲ ಮತ್ತು ಆಗ ಸುರಿಯುವ ಮಳೆ ; ಮುಂಗಾರು : ಕರಮುಚ್ಚಮಪ್ಪ ಬೆಟ್ಟುಗಳ ತಟಂಗಳಿಂ ಸುರಿವ ನಿರ್ಝರಮುಂ ಪೊಸಗಾ[ಶಾಂತಿ೦.ಕಾ]ರೊಳಿಂತು ಬೆಳ್ಪಗೆ ಪಥಿಕಾಂಗನಾಜನಮನಂಜಿಸುವಂತಿರೆ ತೋಱೆ ಸುತ್ತಲುಂ (ಕಬಿಗಾ. ೧-೦೨೪); ವಿದಗ್ಧಪುರುಷಾಯಿತಂ ತಗುಳೆ ನರ್ತಕೀಲೀಲೆಯಿಂದದೊಂದು ಪೊಸಗಾರ ಸೋಗೆನವಿಲಾಟಮಂ ತೋಱದಳ್ (ಆದಿಪು. ೦೨-೦೪); ಪಸುರ್ವುಲ್ಲು ಮೇದು. . . ಪೊಸಗಾರೊಳ್ತಾರೆಲೊಳ್ ಕಣ್ಣರೆಮುಗಿದಿರೆ ಸೃಕ್ಕಂಗಳಿಂ ಸೂಸೆ ಫೇನಪ್ರಸರಂ ಮೆಲ್ಲೊತ್ತುತ್ತುಂ ನಿಂದುದು ವನಮಹಿಷೀವೃಂದ ಮಾನಂದದಿಂದಂ (ಶಂರಾಮಾ. ೬-೦೫೬). **ಪೊಸಗಾರು :** ಪೊಸಗಾರೆನಿಸುತಿಕ್ಷಣು ಗರವವುಪಚರದಲ್ಲಿ ಜಾನಕಿವೆರಸು ಲಕ್ಷ್ಮಣಸಹಿತಲ್ಯೆತರಲಾಗ ಘನಕಾಲ (ತೊರವೆರಾ. ೦೯೬-೪೯). [ಪೊಸ + ಕಾರ್$_2$]

**ಪೊಸಗಾರು** 'ಪೊಸಗಾರ್' ನೋ.

**ಪೊಸಗಾವರ** (ನಾ). ಹೊಸದಾದ ಸ್ವರ; ನವ್ಯಧ್ವನಿ: ನುಣ್ಪೆಸೆವ ಮಾಮರನೊರ್ವೊದಲಲ್ಲದುಣ್ಮುವುಯ್ಯಲ ಪೊಸಗಾವರಂ ಪುಗಿಲೊಳೀನೆಸದತ್ತೊ ಬಸಂತಮಾಸದೊಳ್ (ಶಂಶಭಾ. ೩-೦೨). [ಪೊಸ + ಗಾವರ]

**ಪೊಸಗು** (ಕ್ರಿ). ಲಭಿಸು ; ದಕ್ಕು : ವಸುಧೆಯೊಳುಯಿಾ ತನುವು ಯಾರು ನಂಬುವರು ಪೊಸಗಿದಯಿಾ ರಾಜ್ಯಭೋಗಗಳು ನಿಮಿಗ್ಯಾಕೆ (ಯುಪಶ. ೦೬).
[ ← ತೆಲು. ಪೊಸಂಗು, ಪೊಸಗು ]

**ಪೊಸಗೆಂದಳಿರ್,** ಪೊಸಕೆಂದಳಿರ್ (ನಾ). ಎಳೆಯ ಚಿಗುರು,-ಕುಡಿ; ನವಪಲ್ಲವ : ಬಳಸಿದ ಮಾಧವೀಲತೆಯ ಬಳ್ಳಿವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ಳಳಬಳೆದೆಳದಳಿಸುವ ಪೊಸಗೆಂ[ಶಾಂತಿ೦.ಕೆಂ]ದಳಿರ ಗೊಂದಳದೊಳ್ (ಆದಿಪು. ೧೧-೭೦ ವ). **ಪೊಸಕೆಂದಳಿರ್ :** ಪೊಸಕೆಂದಳಿರ್ಗಳ ದಾಳಿಂಬ ಸಾರಮಂ ಕಟ್ಟಿ ತನ್ನ ಬಣ್ಣದೊಳದು ರಂಜಿಸೆ (ಶಾಂತಿಪು. ೯-೦೬). [ಪೊಸ + ಕೆಂದಳಿರ್]

**ಪೊಸಗೆಂಪು** (ನಾ). ಮನೋಹರವಾದ ಕೆಂಪುಬಣ್ಣ : ಪಸರಿಸಿದ ಪದ್ಮರಾಗದ ಪೊಸಗೆಂಪಂ ಮಾಂಸಮೆಂದು ಮುಂ ಕರ್ದುಕಲ್ಕಾಟಿಸಿಯುಂ (ಆದಿಪು. ೦೨-೦೨೨) ; ಪೊಸಗೆಂಪೇಱಿದ ಬಿಂಬಫಲವ ಗಿಳಿ ಮಸಗಿ ಸಂತಸದೆ ಪೀರ್ವಂತೆ (ಶಂಶಪ. ೦೦-೪೦). [ಪೊಸ + ಕೆಂಪು$_1$]

**ಪೊಸಗೆಲ್ಲ** (ನಾ). ನೂತನ ವಿಜಯ : ಸಾರಿಯಂ ನಲಿದಿಡುವಂದು ಪಲ್ಲಟಿಸೆ ಪುಟ್ಟದಂದೋ ಪೊಸಗೆಲ್ಲಮಾಂಪೆನೀ ಲಲನೆಯೊಳೆಂಬ ಸಂಭ್ರಮದಿ ನುಣ್ಪದುದೋ ನಗೆ ನಿನ್ನ ವಕ್ತ್ರದೊಳ್ (ಸೃಷ್ಟಶ. ೨೧-೫೫). [ಪೊಸ + ಗೆಲ್ಲ]

**ಪೊಸಗೆಱೆ,** ಹೊಸಕೆರೆ, ಹೊಸಕೆಱೆ, ಹೊಸಗೆಱೆ (ನಾ). ಹೊಸದಾಗಿ ಕಟ್ಟಿಸಿದ ಕೆರೆ ; ನೂತನತಟಾಕ : ಇದಕ್ಕೆ . . . ಆತ್ಮೂರ ಪೊಸಗೆಱೆಯುಂ ಬೆಲತೂರ ಇನಿಬರ ಸನ್ಮಥ ಬರದೊಂ ಶ್ರೀಧರವ್ಮನ್ (ಎಕ. III, ಮಂಡ್ಯ. ೦೪-೦೫; 907); ವಿದ್ಯಾದಾನಕ್ಕೆ ಪೊಸಗೆಱೆಯ ಬಟ್ಟೆಯಿಂ ಬಡಗಮಣಿಯ ವೀಸಕಡಯ್ದು ಮತ್ತರ್ (ಇಅ. XIII, ೯೩-೨೬ ; 1084). **ಹೊಸಕೆರೆ :** ನಡದು ಹೊಸಕೆರೆಯ ದಂಡಿನ ಹಾದಿಯಿಂ ತೆಂಕಲು ಪಡುವಮುಖವಾದ ಲಿಂಗಮುದ್ರೆಯ ಕಲ್ಲು (ಎಕ. IV (R). ಕೊಳ್ಳೇಗಾ. ೭-೨೦ ; 1512). **ಹೊಸಕೆಱೆ :** ಮಿಣ್ಣಾಂಗಲ್ಲಲ್ ಪಲ್ಲವಕಟ್ಟೆನ್ದು ಹೊಸಕೆಱೆಯ[೦] ಕಟ್ಟಿಸಿ (ಎಇ.V. ೨೦೭-೯; 1047); ಈಶಾನ್ಯಕ್ಕೆ ನಡದು ಹೊಸಕೆಱೆಯ ಮೂಡಣ ಮುರಿಯ ಮಡುವಿನ ಹೆಬ್ಬಳ್ಳಮೆ (ಎಕ. III(R). ಗುಂಡ್ಲುಪೇ. ೪೦-೬೩; 1320). **ಹೊಸಗೆಱೆ :** ಹೊಸಗೆಱೆಯ ಕೆಳಗೆ ಗದ್ದೆ . . . ಖ × × × ಪೂಕೆಱೆ ಕೆಳಗೆ ಖಂ (ಎಕ. IV(R). ಶಾಮರಾ. ೨೭೪-೩೨; 1484). [ಪೊಸ + ಕೆಱೆ$^3$]

**ಪೊಸಜವ್ವನ,** ಪೊಸಜೌವನ, ಹೊಸಜವ್ವನ (ನಾ). ನವಯೌವನ ; ಹೊಸ ಪ್ರಾಯ ; ಏರುಂಜವ್ವನ : ಪೊಸಜವ್ವನದ ಮುಂಬಣ್ಣದಂತೆ ಕರ್ಪಂ ಕೈಕೊಂಡು ಕತ್ತುರಿಯಲಿ ಬರೆದಂತಪ್ಪ ವಿಕ್ರಾಂತತುಂಗನ ವಿಸಾಸೆಗಳಾತನ ಶೀಘ್ರಪ್ರತಾಪಾನಳಧೂಮಲೇಖೆಯಂತಾದುವು (ಶಂಶಭಾ. ೨-೪೯ ವ) ; ಸಿರಿ ಸುರಚಾಪದಂತೆ ಪೊಸಜವ್ವನಮಿದ್ದಿಲ ಬೂದಿಯಂತೆ . . .

ಕಿಡಲಲ್ಲದೆ ತಾಂ ಸ್ಥಿರವಪ್ಪಗಲಾರ್ಕುಮೇ (ಧರ್ಮಾಮೃ. ೩-೦೯); ಸೌಂದರ ಮಹೀಪತಿಗೆ ಪೊಸಜವ್ವನವನಂತವಿಭವದೊಳೊಪ್ಪುತಿರೆ (ಸೌಂದರ. ೪-೭). **ಪೊಸಜೌವನ :** ವಸುವಂ ದ್ವಿಜನ್ಮದಾನದೆ ಪೊಸಜೌವನವಮಂ ಸ್ವದಾರ ಸಂತೋಷದೆ ನಿನ್ನಸುವಂ ಪತಿಕಾರ್ಯದೆ ವರ್ಜಿಸಿದೈ (ಗದಾಯು. ೩-೨೨). **ಹೊಸಜವ್ವನ :** ಚಳಗತ್ತಿಯ ನಿರ್ಮಾಂಸಜಂಘೆಯ ಉಳಿಯ ಲಾಗಿನ ಲಂಘನೆಯಲವ್ವಳಿವ ಹೊಸಜವ್ವನದ ಹೊಮ್ಮರೆ ಹೊಳಕಿಸಿದಿರಿನಲಿ (ಕುಮಾರ. ೩-೮-೦೩). [ಪೊಸ + ಜವ್ವನ]

**ಪೊಸಜವ್ವನೆ, ಪೊಸಜೌವನೆ** (ನಾ). ನವಯೌವನವನ್ನು ಹೊಂದಿದವಳು : ನೋಡಿದರ್ ಭಾಮಿನಿ ಸಗರನನಸಿಯ ಪಸಿಯ ಪೊಸಜವ್ವನೆಯರ್ (ಅಜಿತ. ೯-೩೬); ಸುಧಾಮರೀಚಿಮಣಿವೇದಿಕಾಗ್ರದೊಳ್ಸಸ್ತ್ರಮಿನಿಯಂ ಪಟ್ಟಿರಿಸಿ ಶಿಶಿರೋಪಚಾರಮನಸಪಸದಿಂದಾ ಪೊಸಜವ್ವನೆಯರೆಸಗುತ್ತಮಿರೆ (ಕಾವ್ಯಾ. ೭-೩೩ ವ). **ಪೊಸಜೌವನೆ :** ಪೊಸಜೌವನೆ ನಿನ್ನೀ ದೀರ್ಘಾಂಬಕದೆಸಕದ ಸಂಪತ್ತಿಗೆ ಮಿಗೆ ಸೋಲ್ತೀಯಸಿತೋತ್ಪಲ ದರದಳಿತಂ ತನ್ನ ಪರಾಗದ ಬಪ್ಪವನು ಒಸೆದೀಯಲ್ಬಂದಿದೆ (ಚಂದ್ರ. ೨-೦೭). [ಪೊಸ+ಜವ್ವನೆ]

**ಪೊಸಜಾಗ** (ನಾ). ಮನೋಹರವಾದ ಮರಕತಮಣಿ : ಪೊಸಜಾಗಂ ಪೂರ್ಣಕುಂಭಂ ದಧಿ ಮಧು ಸುಧೆ . . . ಮಿಸುಗೆ ಬಗೆಗೆ ಚೆಲ್ವಾದುದುದ್ವಾಹ ಗೇಹಂ (ಪ್ರಶಂ. ೩-೯). [ಪೊಸ+ಜಾಗ$_1$ (<ಜಾಗ$_1$)]

**ಪೊಸಜಾದಿ** (ನಾ). ಅದೇ ತಾನೆ ಅರಳಿರುವ ಜಾಜಿ : ಪೊಸಜಾದಿಯ ಬೆಳೆದೊಆಗಿದ ಪೊಸಗಟ್ಟಮೆಯ ಪೊಸತರಲ್ದ ತಾವರೆಗಳ ಕಂಪಸದಳಮೆಸೆದಿರೆ ದೆಸೆದೆಸೆಗೊಸಗೆಯೆ ಬರ್ಪಂತೆ ಕಣ್ಗೆ ವಂದುದು ಶರದಂ (ಅಜಿತ. ೧೧-೩); ಪೊಸಜಾದಿ ಚೆಲ್ವನೀಯುತ್ತಿರೆ ದೇಸಿಯಿಂ ನಿವಿರ್ದ ಸೋರ್ಮುಡಿಯೊಳ್ (ರಮಾಪ. ೯-೦೩೭). [ಪೊಸ + ಜಾದಿ]

**ಪೊಸಜೌವನ** 'ಪೊಸಜವ್ವನ' ನೋ.

**ಪೊಸಜೌವನೆ** 'ಪೊಸಜವ್ವನೆ' ನೋ.

**ಪೊಸತಳಿರ್** 'ಪೊಸದಳಿರ್' ನೋ.

**ಪೊಸತಿಕ್ಕು** (ಕ್ರಿ) ಪ್ರಥಮಬಲಿಯನ್ನು ಕೊಡು; P "ಪೊಸತಂ+ಇಕ್ಕು= ಪೊಸತಿಕ್ಕು ; ಒಕ್ಕಣೆ ಆದ ಮೇಲೆ ಅನ್ನವನ್ನು ದಿಕ್ಕುದಿಕ್ಕಿಗೆ ಚೆಲ್ಲಿ ಬಲಿಕೊಡುವುದಕ್ಕೆ ಪೊಸತು ಎಂದು ಹೆಸರು, ಮಲೆನಾಡಿನಲ್ಲಿ ಇದು ರೂಢಿಯಾಗಿದೆಯಂತೆ" (ಶಂಶರಂ. ೩೬೭) : ಉತ್ತರನಂ ಜವಂಗೆ ಪೊಸತಿಕ್ಕುವಂತಿಕ್ಕಿ (ಶಂಶಬಾ. ೧೧-೦೦೨ ವ); ರಣದೊಳ್ ರಾವಣನಂ ಜವಂಗೆ ಪೊಸತಿಕ್ಕಲ್ . . . ಪುಟ್ಟಿದವರೇಂ ಸಾಮಾನ್ಯರೇ (ಶಂರಾಮಾ. ೩-೦೬೦); ಟಕ್ಕಿವನಂ ಸುಟಿ ಮೇಕುದೋರ್ಪನಂ ಮಾಳಚಿಗಿಕ್ಕು ಪೊಟಬ್ ಪುಸಿವನಂ ಪೊಸತಿಕ್ಕು[ಪಾಠಾಂ. ಪೊಸದಿಕ್ಕು]ಗೆ ಪಚ್ಚಿಗಾಟನಂ (ಸೂಕ್ತಿ. ೮-೯೩೬; ೮೮ರಾವ. ೨-೦೦೭ ನೋ). [ಪೊಸತು+ಇಕ್ಕು]

**ಪೊಸತಿಲ್** 'ಪೊಸಂತಿಲ್' ನೋ.

**ಪೊಸತಿಲು** 'ಪೊಸಂತಿಲ್' ನೋ.

**ಪೊಸತು, ಹೊಸತು, ಹೊಸದ್ದು, ಹೊಸ್ತು** (ನಾ). ೧. ನೂತನವಾದುದು ; ನವೀನವಾದುದು : "ನವ್ಯಂ, ನವಂ, ನವೀನಂ, ನೂತನಂ, ಅಭಿನವಂ, ನೂತ್ನಂ—ಈ ೬ ಪೊ(ಹೊ)ಸತು" (ಹಲಾಯು. ೦೦೯-೨೭); ನೆಲನುಂ ಪೊಟ್ಟುಂ ಪೊಲನ್ನುಮನಜಿದು ಬಟಾಯೊಳ್ ಪೊಸತುಂ ಪಟದುಮನಜಿದು ಪೇಯಿಸಲ್ ನೀನೆ ಬಲ್ಲೆಯ್ (ಶಂಶಬಾ. ೩-೪೭ ವ); ಮುಂತೆ ಪರಿದರು ಕೇರಿಕೇರಿಗಿದು ಪೊಸತೆನುತೆ ಬಸವನ ಪ್ರಾಣಮಂ ಪರಿದಬಿಸುವಂದದಿಂ (ಬಸವ. ೯-೦೩೭); ಪರಲಾಸ್ಯತಾಂಡವವೆಸೆದುದ್ವೃ ರಂಭಾದಿ ನರ್ತಕಿಯರಲಿ ಪೊಸತೆನಿಸಿ (ಶಬ್ದಾ.ಶ.೭-೯೩). ೨. (ಅಲಂ) ಅಸಾಮಾನ್ಯವಾದುದು ; ಅಪರೂಪವಾದುದು : ಪೆಸರೇನಾರ್ಗೀತನೀ ಜವ್ವನಿಗ ತವಸಿ ತೊಟ್ಟಿರ್ದ ಕರ್ಣಾವತಂಸಂ ಪೊಸತೀ ಲೋಕಕ್ಕೆ (ಕಾದಂಪೂ. ೬೬೦); ಲೋಕದೊಳ್ಪಧಿಲಿಖಿತಮನ್ನಿವಾರಿಪರುಂಟೆ ಶಿವಶಿವಾ ಪೊಸತೆಂದು ಬಿಸುಸುಯ್ದು ಬೆಜಗಾದನು (ಕೃಮಿಕಾ. ೩೦-೩೩). ೩. ಮೊದಲನೆಯ ಬಲಿ,—ನೈವೇದ್ಯ : 'ಪೊಸತಿಕ್ಕು' ಪರಾ. **ಹೊಸತು:** ೧. ಹೊಸತನು ಹಾಡುವುದೆನ್ನಿಂದಲಾಗದು ಹೊಸತಾವುದಿರುವುದು ಹೇಳು ಈ ಜಗದೊಳಗಿಹುದೆಲ್ಲವು ಹಳೆಯದು ನನ್ನ ಸುಭಾಷಿತ ಕೇಳು (ಇಂಗ್ಲಿ.ಗೀ. ೬೮-೨೭). ೨. ಒಸೆದಿರಿಸಬಾರದಿರಿಸದೆ ತೆಗೆಯಬಾರದೀ ಹಸುಳೆಯುಂದಂ ಹೊಸತು (ಸಿದ್ಧರಾ. ೨-೩); ಮೇದಿನಿಗೆ ಹೊಸತೆನಿಸಿ ವಜ್ರುವ ಕೊಂಡು ಕಾದಿದನು (ಸಂಭರ. ಕು. ೨-೨೩). **ಹೊಸದ್ದು :** ೧. ಆ ವರ್ಣನಾವೈಖರಿಯನ್ನು ಕೇಳಿದವರು ಹೊಸದರಲ್ಲಿ ಸಂತಸಪಡದೇ ಇರುವುದಿಲ್ಲ (ರಾಯಳ. ೯೯); ಹೊಸದರಲ್ಲಿ ಅಗಸ ಗೋಣೆಯನ್ನು ಎತ್ತಿ ಎತ್ತಿ ಒಗೆದ (ಗಾದೆ). **ಹೊಸ್ತು :** ೧. ಕಾಣಿಕೆ ಕಡ್ಡಾಯ ಬೀಡಗೊಳು ಹೊಸ್ತು ಹಳದು ಎರಡು ಎತ್ತಿನ ಹೇಜು ಮಾನ್ಯ (ಎಕ. X. ಮುಳಬಾ. ೨೦-೩ ; 1468).

**ಪೊಸತುಪೊಸತು, ಪೊಚ್ಚಪೊಸತು, ಪೊಸಪೊಸತು, ಹೊಚ್ಚಹೊಸತು, ಹೊಚ್ಚಹೊಸದು, ಹೊಸತುಹೊಸತು, ಹೊಸಹೊಸದು** (ದ್ವಿರುಕ್ತಿ): ಪೊಸತುಪೊಸತೀ ಪರಿಯೆನಲ್ಕೆ . . . ಆರೋಗಿಸುತ್ತಿರಲು (ಬಸವ. ೯-೯೩); ಸಭೆ ಮೆಚ್ಚಿ ಪೊಚ್ಚಪೊಸತಾಯ್ತು ರಸಂ (ಅಜಿತ. ೩-೩೩); ಪೊಸಪೊಸತಿಂತಿದೆಂದುಮೆಮೆಯಾಟಕೆ ಸ್ಮರಿಸದಿಂತಿದೆಂದು ಬಣ್ಣಿಸಲರಿದಪ್ಪ ಮಯ್ಸಿರಿ (ಶಕಂ. ೬-೨೫೯); 'ಕಬ್ಬಿಗರ ಕಾವ' ಎಂಬ ಹೆಸರು ಕನ್ನಡ ಕೃತಿನಾಮಗಳಲ್ಲಿ ಹೊಚ್ಚಹೊಸತಾಗಿ ಕವಿಯ ವೀರವ್ಯಕ್ತಿತ್ವದ ಗುರುತಾಗಿ ನಿಂತಿದೆ (ಕವಾ. ೦೪೯); ನಿನ್ನೆ ಮೊನ್ನೆಯೊ ಏನೊ ನಿನ್ನ ನೋಡಿದ ಪೊಲಿಹುದು ಒಲುಮೆ ಹೊಚ್ಚಹೊಸದಾಗಿರಲು ಇಂದು ! (ಚಿತ್ರ. ೪೦-೯); ಹೊಸಪರುಷಕೆ ಹೊಸಹರುಷವ ಹೊಸತು ಹೊಸತು ತರುತಿದೆ (ಗಂ. ೦೦೯-೧೦) ; ಅದನ್ನನುಸರಿಸುವ ರೀತಿಯೂ ಹೊಸಹೊಸದಾಗಿ ಕಂದಲಿತವಾಗಬೇಕು (ನಾಟಕೀ. ೨೨೬). **ಪೊಸತಾಗು, ಹೊಸದಾಗು, ಹೊಸ್ತಾಗು** = ನವ್ಯವಾಗು; ಹೊಸಪರಿಯಾಗು: ಪಸಂಗಿದಾ ಬಗ ಮನವಂ ಪೊಸತಾಗೆ ನೆಗಟ್ಟಲಜೀಯನಾ ರಚನೆಯೊಳೇಂಬಸನಂ ತನಗೆ (೯ಲಾ. ೦-೦೨); ಪೊಸತಪ್ಪ ಕಡಲಿದೆಂಬಂತೆಸೆದೊಪ್ಪಿರೆ ತಿಸುಳಿ ಬೇಗದಿಂ ಪುಟ್ಟಿಸಿದಂ ಪುಸಿವಡೆಯಂ (ಕಬ್ಬಿಗ. ೨೯೯); ಮತ್ತೆ ಮೂರನೆಯ ದಿನವೊಮ್ಮೆ ಆಳಲು ಹೊಸದಾಯಿತು (ಕಾಲೂರ. ೦೯ ಕಥಾಸಾರ); ಹೊಸ್ತಾಗಿ ದೇವಾಲ್ಯವ ಮಾಡಿದ ಸಂಮಂಧ (ಪ್ರಮ. ೦೯೨೮, ೯-೯; 1369) ; ಗಲುಡಗೆ ಹೊಸ್ತಾಗಿ ಉರ ಕಟ್ಟಿ (ಎಕ. IX. ಕನ್ನಕ. ೦೬೯-೮ ; 1416) ; ಕಾಲುವೆನೂ ಹೊಸ್ತಾಗಿ ತೆಗಸಿ (ಎಕ. XV. ಅರಸೀ. ೨-೨೩; 1515). **ಪೊಸತು ಮಾಡು** = ನವೀಕರಣಗೊಳಿಸು; ಹೊಸದನ್ನಾಗಿ ಮಾಡು : ಸತ್ಕ್ರಿಯೆಯೊಳ್ ಸಮನಾಗಿ ಮಾರ್ಗವಂ ಪೊಸಯಿಸಿ ದೇಸಿಯಂ ಪೊಸತು ಮಾಡಿದಳೊರ್ವಳಪೂರ್ವರೂಪದಿಂ (ಶಂಶಬಾ. ೩-೬೯). **ಹೊಸತನಿಕ್ಕು** = ಮೊದಲನೆಯ ನೈವೇದ್ಯ ಮಾಡು : ನಾಗಂಗೆ ಹೊಸತನಿಕ್ಕಿಹೆವೆಂಬರು ನಾಗ ಬಂದರೆ ಕೋಲ ಕಳೆದುಕೊಂಬರು (ಬಸವ. ೦೯೩). [ದೇ.॥ ತಮಿ. ಪುತಿಯ, ಪುತಿತು ; ತುಳು. ಪೊಸತು]

**ಪೊಸತುಪ್ಪ, ಹೊಸತುಪ್ಪ** (ನಾ). ಆಗ ತಾನೆ ಬೆಣ್ಣೆ ಕಾಯಿಸಿದ ತುಪ್ಪ : ಪಸುವಿನ ಪೊಸತುಪ್ಪಂ ಜಾಜಿಯ ಪೂ ಅತ್ತಿ ಆಲ ಅರಳಿ ಬಸಿರಿ ಗೋಣಿ ಈ ಮರಂಗಳ ಎಳೆಯ ತಳಿರ್ ಯಷ್ಟಿಮಧುಕಂ ಇವಂ ಬಿಸುನೀರಲ್ಲಿ ಅರೆದು ಪೂಸಲ್ ಸ್ತ್ರೀಯರ ಯೋನಿಯ ದುರ್ಗಂಧಂ ಮಾಣ್ಬುದು (ಲೋಕೋಪ. ೯-೦೬೨ ಟೀಕು) ; ಬಾಳೆಯ ಕಾಯ ಕಹಿದೆಗೆದದಕೆ ಪೊಸತುಪ್ಪ ನೀರುಳ್ಳಿ ಕೊತ್ತುಂಬರಿಯನಿಕ್ಕಿ ಕೆಂಪಾಗಿ ಹುರಿದು . . . ಪರಿಪಾಳಂಗಳನಿಡುವುದು (ಸೂಪಶಾ. ೯-೬೦) ; ಪೊಸತುಪ್ಪದಿಂದ ತಲೆ ಕಾಲ್ಗಳೊಳ್ ಸೊಡರಿಕ್ಕೆ (ಕಾಲೂರ. ೦೬೩-೪೦೩). **ಹೊಸತುಪ್ಪ :** "ಹಯ್ಯಂಗವೀನಂ, ಆಜ್ಯಂ—ಈ ೨ ಹೊಸತುಪ್ಪಂ" (ಹಲಾಯು. ೯೬-೦೦೯) ;

ಅಣ್ಣವಾಲೊಳು ಸೂಜ್ಜಿಗೆಯಂ ನನೆಹಿಕ್ಕಿ ಬಳಿಕ ಸಣ್ಣನ[ಪ್ಪ]ಂತೆ ಕಣಕವ ಮಾಡಿಯದಱ ಸರಿಬೆಣ್ಣೆ ನಸುಗೆನೆಯಿಕ್ಕಿ . . . ಗಾರಿಗೆಯ ಮಾಡಿ ಹೊಸ ತುಪ್ಪದೊಳು ಬೇಯಿಸಿದೊಡೆ . . . ಸಮುದ್ರಫೇನ (ಸೂಶಶಾ. ೧–೨೩).
[ಪೊಸ+ತುಪ್ಪ]

**ಪೊಸತೇರ್** (ನಾ). ಹಳೆಯದಲ್ಲದ ತೇರು; ನೂತನವಾದ ರಥ: ಪೊಸತೇರ್ ಪಡಗಂ ನೆಗಟ್ಟಿ ಪೆರ್ಚಿದ ಕಡಲೆಂಬಿನಂ ಮಸಗಿ ಬಂದುದು ಪೆರ್ಬಡೆ ಕರ್ಬುವಿಲ್ಲನಾ (ಕಬ್ಬಿಕಾ. ೨೦೭). [ಪೊಸ+ತೇರ್$_2$]

**ಪೊಸತ್ತಿಗಲ್ಲು** (ನಾ). ಒಂದು ಪ್ರದೇಶದ ಹೆಸರು: ಬಡಗಣ ದೆಶೆ ಪೊಣ್ಪುೞಿ ಬಡಗಣ ಪಡುವಣ ಕೊಣೊದು ಪೊಸತ್ತಿಗಲ್ಲು ಪಡುವಣ ಸೀಮೆ ಕಡಂಬಗೆಱೆಯು ಪೆರ್ವ್ವಾಗಂ (ಎಕ. III (R). ಶಂಜನ. ೨೭೮–೬೦; 808). [ ? + ಕಲ್ಲು (< ಕಲ್$_3$) ]

**ಪೊಸದಳಿಂಬ** (ನಾ). ಶುಭ್ರವಾದ ಬಟ್ಟೆ,—ವಸ್ತ್ರ: ಕಪ್ಪುರವಳಿಕನ ಜಗುಲಿಯ ಮೇಗಣ ಕುಸುಮದಸಿಱ ಮಿಸುಗುವ ಪೊಸದಳಿಂ[ಪಾಠಾಂ. ಣಂ]ಬದ ಮೇಗೆ ಕಿಱಿದುಬೇಗಂ ವಿಶ್ರಮಿಸಿ (ಅಂಪು. ೧೦–೭೦ ವ).
[ಪೊಸ + ದಳಿಂಬ]

**ಪೊಸದಳಿರ್**, ಪೊಸತಳಿರ್, ಹೊಸತಳಿರು (ನಾ). ಕುಡಿಯಿಡುತ್ತಿರುವ ಚಿಗುರು; ನವಪಲ್ಲವ: ಕುಸುಮಾಪಚಯವ್ಯಸನಾವಸಕ್ತ ಸುರಯುವತಿ ಪಾಣಿಪಲ್ಲವರಾಗಂ ಮುಸುಕಿದುದೆನಿಸಿದುದಸುಗೆಯ ಪೊಸದಳಿರ್ಗಳೊಳಸೆವ ಕೆಂಪು ನಂದನವನದೊಳ್ (ಆಂಪು. ೬–೯೩); ತುಂಬಿಯ ಬಂಬಲಂ ಬರುಳ್ಳೊಸದಳಿರ್ದಮಂ ಕರತಳಂ ದನಿ ಕೋಗಿಲೆಯಂ . . . ನೆಱೆ ಪೋಲ್ತು (ಧರ್ಮಾಮೃ. ೯–೦೫೦). **ಪೊಸತಳಿರ್:** ಪೊಸತ[ಪಾಠಾಂ. ದ]ಳಿರ್ಗಳ ಬಿಜ್ಜಣಿಗೆಯನೆಸೆವೆಲರ್ಗಳಿನೊಗೆವ ಘರ್ಮಜಲಮಂ ಕೀರ್ದಾಱಿಸಿದುವು ಕುಸುಮರಜಂಗಳ್ ಪೊಸಯಿಸಿದುವು ಬಣ್ಣಮಂ ಲತಾಂಗಿಯರ್ಗಾಗಳ್ (ಆಂಪು. ೧೦–೭೭); ಪೊಸತಳಿರಿಂದೆ ಬೀಸಿ ಕಳೆದಂತಿರೆ ಕಾಂತೆಯ ಕಾಯ ಕಾಂತಿಯಂ (ಲೀಲಾವ. ೯–೦೨೩). **ಹೊಸತಳಿರು:** ಮಾದಲದ ಹೊಸತಳಿರು ಕರಿಬೇವು ಕೊತ್ತುಂಬರಿಯ ಸೊಪ್ಪು ಶುಂಠಿ ನೀರುಳ್ಳಿಗಳ ಚಿತ್ತಳಿಸಿ ತುಪ್ಪದೊಳು ಹುರಿದು ಪರಿಮಳಗೊಳಿಸಿ ಪೊಡ್ಡಣಿಗೆಯನು ಮಾಡುತ (ಸೂಶಶಾ. ೩–೦೯). [ಪೊಸ+ತಳಿರ್$_2$]

**ಪೊಸದಾಂಗುಡಿ** (ನಾ). =ಪೊಸದಳಿರ್: ಗುಡಿ ತುಱುಗಿ ಲತೆಯ ಪೊಸ ದಾಂಗುಡಿಯೆನಿಸಿದುದು (ಶಾಂತಿಪು. ೦೦–೬೯).
[ಪೊಸ + ದಾಂಗುಡಿ(< ದಾಂಟುಂಗುಡಿ)]

**ಪೊಸದಾವರೆ** (ನಾ). ಆಗ ತಾನೆ ಅರಳಿರುವ ತಾವರೆ; ನಳನಳಿಸುತ್ತಿರುವ ಕಮಲ: ತಳಿರ್ತಸಿವೆಳವಾವು ತುಂಬಿ ಪೊಸದಾವರೆ ಮಲ್ಲಿಗೆಯೆಂಬಿವಾಂತರಂ ದೆಸೆವಲಿಗೆಯ್ವ ಪಾಳಿ ಮೊನೆಯೊಳ್ ನೆಗೞ್ದಿರ್ದ ಬಸಂತಂ (ಕಬ್ಬಿಕಾ. ೦೭೯). [ಪೊಸ+ತಾವರೆ (<ತಾಮರೆ)]

**ಪೊಸದು** 'ಪೊಸ್ಸೆ' ಪರಾ.

**ಪೊಸದುಗುಲ** (ನಾ). =ಪೊಸದಳಿಂಬ: ಕರೆವೆರಸಿದ ಪೊಸದುಗುಲದ ತೆರಳ್ಕೆವೆತ್ತುಡೆ ಹುಟ್ಟಕ್ಕಟೀಸೂತ್ರ ಪರಿಸ್ಫುರಿತದೊಳಂ ಕಟ್ಟಿದ ಪೊಂಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೋ (ಆಂಪು. ೯–೬೭); ಮೆಲ್ಲುಡಿ ವೀಣಾನಾದವಂಗಪ್ರಭೆ ಪೊಸದುಗುಲಂ ಪಕ್ವಬಿಂಬೋಷ್ಠರಾಗಂ ಕಡುಚೆಲ್ವಾದಂಗರಾಗಂ (ಶಾಂತೀಪು. ೧೦೦೨); ಪೊಸದುಗುಲವಸನೊಲವಿಂದೆ ಪೊದೆದು (ಕಬ್ಬಿಕಾ. ೩೩೪). [ಪೊಸ+ದುಗುಲ$_1$]

**ಪೊಸದೂವಟ** (ನಾ). ಹಳೆಯದಲ್ಲದ ವಸ್ತ್ರ; ಹೊಸಬಟ್ಟೆ: ಧವಳಾಂಶು ವಿಡಿಕಿಱಿದ ಪೊಸದೂವಟದ ಕಾಲ ಕುಪ್ಪಸವ ತೊಡಿಸಿದಳದೋರ್ಪ ಕಾಮಿನಿ ಪರವನಿತೆಗಳವಡಿಸಿ ಚಾತುರ್ಯದಿಂದ (ಶಾಂದಪು. ೭–೨೯); ಪೊಸದೂವಟದ ಶೋಭೆಯಿಂ ಮನೋಹರದಿ ಮೋಹಿಸುವ ಭದ್ರಾಸನ ಸುಖಾಸೀನನಾಗಿರ್ದ ಶಶಿಧರ ಶ್ರೀನಂದಿನಾಥಂ (ಶಂದಿಶಾ. ೯–೩೩).
[ಪೊಸ + ದೂವಟ (< ದುಪ್ಪಟಿ)]

**ಪೊಸದೂವೆ** (ನಾ). ಹೊಸದಾದ ಚಿತೆ: ಪಂದಲೆಯೋಳಿದೋರಣದ ಸೀಯದರಂ ಪೊಸದೂವೆ ದೂಪ [ಪಾಠಾಂ.ದಂಬೆತೂಪ] ತೂಗುಂದಲೆ ಬಾಟ್ವಿಣಂ ಪೊಡರೆ ಬಳ್ವುವ ಸಮ್ಮನ ಸೂಲಂ (ಕಾವ್ಯಾವ. ೩೬); ಪರೇತವನದೊಳಗೆ ಪೊಸದೂವೆಯು ಕೆಲದೊಳ್ ಕಳೆದೊಟ್ಟಿದ ತೊಡವುಗಳುಮಂ ಮರದ ಕೊಂಬಿನೊಳ್ ಬರೆದು ಕಟ್ಟಿದ ಕಪ್ಪಡಮುಮಿರ್ದಪ್ಪುದೆಂದು . . . ಬಿನ್ನವಿಸಿ (ಆರಾಸೇ. ೩–೯೦ ವ). [ಪೊಸ + ದೂವೆ$_1$]

**ಪೊಸದೇಶಿ** (ನಾ). ಹಿಂದೆ ಇಲ್ಲದೆ ಇದ್ದ ಬೆಡಗು,–ವಿಲಾಸ; ನೂತನವಾದ ಬೆಡಗು: ಪೊಸದೇಶಿ[ಪಾಠಾಂ. ಸಿ] ಪೊಂಗು ಪೊಂಗೆಸೆವೆಸಕಂ ಕಡುಗಾಡಿ ರೂಢಿಯೆಂಬಿವಱಿಂದಂ ವಸುಧೇಶನಣುಗದಪ್ಪಂ ವಸುದೇವಂ ಧರೆಗೆ ಕಣ್ಣುಮುಳ್ಳಾಗಿರ್ದಂ (ಆರಾಸೇ. ೯–೦೬೦). [ಪೊಸ + ದೇಶಿ$_2$]

**ಪೊಸದೇಸಿ**, ಪೊಸದೇಸೆ, ಹೊಸದೇಸೆ (ನಾ). =ಪೊಸದೇಶಿ: ಸಾಗಿನಿಸಲ್ಕೆ ಸಾಲ್ವ ಸಗ್ಗದ ಪೊಸದೇಸಿಯೋಳಿಗಳನೊರ್ವಳೊಱಲ್ದು ನೆಱಲ್ದು ಪಾಡಿದಳ್ (ಶಂಕಶಾ. ೭–೯೦). **ಪೊಸದೇಸೆ:** ಕವಿಮಾರ್ಗದೊಳಂ ಪೊಸದೇಸೆಯ ನುಡಿಗಳೊಳಂ ಪೊಸಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ (ಗದಾಯು. ೧–೩೯); ನೆಲೆವಾಡದ ಪೊಸದೇಸೆಯ ನೆಲೆವಾಡದ ಸುರವಿಮಾನ ಮೆಯ್ದೂಳಣಂ ಕಿಟ್ಟಿಲೆಯಾದುವಿವಱ ತೆಱದಿಂ ನೆಲೆಯಾದುವೆ ಸಕಲಜನದ ಕಣ್ಗಂ ಮನಕಂ (ಮಲ್ಲಿಪು. ೨–೭೮). **ಹೊಸದೇಸೆ:** ಹೊನ್ನನ ಹೊಸದೇಸೆಯ ನುಡಿ ನೇಮಿಯ ಕನ್ನಡದೊಳ್ಪಭಿನವಪಂಪನ ಬಗೆಯೊನ್ನೀ ಪೇಳ್ದ ಕೃತಿಗೆ ಪಿರಿದುಂ ಸೇರುಗೆ ನಿರ್ವಿಘ್ನತೆಯಂ (ಜಗುಕಾ. ೧–೦೦). [ಪೊಸ + ದೇಸಿ]

**ಪೊಸದೇಸೆ** 'ಪೊಸದೇಸಿ' ನೋ.

**ಪೊಸದೇಸೆಕಾರ್ತಿ** (ನಾ). ತಾರುಣ್ಯವತಿಯಾದ ಸುಂದರಿ,–ಚೆಲುವೆ: ಪತ್ತೆಸಾರ್ವವರಂತರ್ಜಿಸಿ ಕಾಮನ ಪಡಿಯಱತಿಪೊಲೆಸೆದಳ್ ಪೊಸದೇಸೆಕಾರ್ತಿ ಪೊಸಕಟ್ಟಳೆದೊಳ್ (ಆರಾಸೇ. ೨–೦೩).
[ಪೊಸ + ದೇಸೆಕಾರ್ತಿ (< ದೇಸಿಗಾರ್ತಿ) ]

**ಪೊಸದೋಂಟ** (ನಾ). ಹೊಸದಾಗಿ ಬೆಳೆಸಿದ ತೋಟ: ಬಸದಿಯ ಪಡುವಣ ಎಳೆದೋಣ್ಪುಮುಂ ಪಡುವಣ ತೊಱೆಯ ಮೂಡಗಣೆಯ ಪೊಸದೋಣ್ಪುಮುಂ (ಎಕ. X. ಕೋಲಾರ. ೯೦–೯೭; 903). [ಪೊಸ + ತೋಂಟ]

**ಪೊಸನನೆ** (ನಾ). ಎಳೆಯ ಮೊಗ್ಗು; ಹೂಮೊಗ್ಗು: ಪೊಸನನೆಯೊಳ್ ಪಸುರ್ಪೆಲರೊಳಂ ಚಿರಮಲ್ಲದ ಬೆಳ್ಪು ಪಲ್ಲವಪ್ರಸರದೊಳೆಯ್ದೆ ಕಣ್ಗೆ ಪಸರಬಿಡೆದೊಪ್ಪುವ ಕೆಂಪು . . . ಬಗೆಗೊಳ್ವಿನಂ ಬಸಂತದೊಳ್ ಬಸದಿಯ ಬಾಗಿಲಂ ತೆಱೆದ ಮಾಟ್ಕೆಯೊಳಿರ್ದುವು ಬಂದ ಮಾಮಗಳ್ (ಆಂಪು. ೦–೬೬); ಪೊಸನನೆಯ ಬಿರಿಮುಗುಳ ಕುಸುಮಬಾಣಂಗಳಿಂ . . . ಎಸೆವುಮಂ (ಧರ್ಮಾಮೃ. ೦೦–೩೦). [ಪೊಸ + ನನೆ$_3$]

**ಪೊಸನವಿಲ್** (ನಾ). ಎಳೆಯ ವಯಸ್ಸಿನ ನವಿಲು; ಮರಿನವಿಲು: ಸುತ್ತಲುಂ ಪರಿವ ಜರಿಪೊನಲ್ಗಳಿಂದೆತ್ತಲುಂ ನಲಿವ ಪೊಸನವಿಲ್ಗಳೀ (ಶಂಕಶಾ. ೩–೨೨ ರಗಳೆ). [ಪೊಸ + ನವಿಲ್]

**ಪೊಸನಸೆ** (ನಾ). ೧. ಉಂಟಾದ ಬೆದೆ: ಪೊಸನಸೆಯಿಂ ಮೃಗಂ ಮೃಗಿಯ ಮಗ್ಗುಲಿಸುತ್ತಿರೆ (ಸೂಕ್ತಿಸು. ೩–೨೨೯). ೨. ಕಾಮೋದ್ರೇಕದಿಂದ ಆಗ ತಾನೆ ಸೂಸಿದ ಸುರತದ್ರವ: ಪೊಸನಸೆಯ ಸೊಪಡನಾಘ್ರಾಣಿಸಿ ಪಣೆಕದ ಮಿಡುಕುಗಚ್ಚೆಯೊಳ್ ಮೊಗವೆತ್ತುತ್ತೆಸೆಮದವೃಷಮುಮರರನೇಡಿಸುವಪೊಲೇನುಂಟೆ ನಿಮಗವಿಪಾ ಸಂಖಿಮೆಸುತುಂ (ಲೀಲಾವ. ೩–೯೩). [ಪೊಸ + ನಸೆ$_1$]

**ಪೊಸನಾರ್** (ನಾ). ೧. ಒಣಗದಿರುವ ನಾರು; ಹಸಿಯಾದ ಕತ್ತ: ಬದಿರುದಿರ್ದಕ್ಕಿ ಪಕ್ಕಿಪೊಱೆ . . . ಹೂತಿಯ ಬೆಕ್ಕು ಸೀಳ್ದ ಮುತ್ತದ

ಪೊಸನಾರ್ ಸೆಣಂಬು ಪಲವುಂ ಮೃಗವಕ್ಕಿಗಳಿಂದಮೊಪ್ಪಿ ಕಟ್ಟಿದ ಮರಗಂಬಿ ಜೀರ್ಗರೆವಿನಂ ಗುದುಕಿಂ ಮಗುಳ್ದುದ್ದರ್ ವನೇಚರರ್ (ಸುಕು. ಸು. ೩-೦೬೯); ಪೊಸನಾರಂ ಕಲ್ಲೊಳೆತ್ತರ್ಲ್ಲಿಬೀಯಲರಲನಾಕಾಶದೊಳ್ . . . ಆ ಬರ್ದ ಬಲ್ಲಳ್ (ಭ್ರಷ. ೨೯-೯). ೨. ಹೊಳೆಯುವ ನಾರುಮಡಿ,—ವಲ್ಕಲ: ಬಿರಿಯ ಮಡುಗಳ ಮಜ್ಜನಮಾಗೆ ಪೊಸನಾರ ದೇವಾಂಗವಸ್ತ್ರಮಾಗೆ (ಶಂಶಚ. ೬-೨೮). [ಪೊಸ + ನಾರ್]

**ಪೊಸನೀರ್,** ಪೊಸನೀರು, ಹೊಸನೀರು (ನಾ). ೧. ಶುದ್ಧವಾದ ನೀರು; ನಿರ್ಮಲಜಲ: ಪೊಸನೀರಿಂ ಪೊಸಗಂಪಿನಿಂ ಪೊಸತು ಬೆಳ್ಪಾದಕ್ಕಿಯಿಂ ದೇವನಂ . . . ಅರ್ಚಿಸಿ (ಉಲಾವ. ೩-೯೩). **ಪೊಸನೀರು:** ೧. ಶಶಿಕಾಂತಕಲಶದೆ ಚಂದ್ರಮುಖಿಯರಾಗ ಪೊಸನೀರ ಪಥಿಕರಿಗೆಚಿಯೆ (ಶಂಪಂ. ೬-೬೬). ೨. ಮಳೆಯಿಂದ ಹೊಸದಾಗಿ ಬಂದ ನೀರು: ಪೊಸನೀರ ಹೂರದೊಳಗೆ ಮಜಿವಿನ್ನಗಳು ಮಸಗಿ ಮುಂ ಪೊಳೆದಾಡುವಂತೆ (ಶಂಪಂ. ೧೦-೩೮). **ಹೊಸನೀರು:** ೨. ಹೊಸನೀರು ಬಂದು ಹಳೆನೀರು ಕೊಚ್ಚಿಕೊಂಡು ಹೋಯಿತು (ಗಾದೆ). ೩. ಸಿಹಿನೀರು: ಗೋದಾವರಿ—ಕೃಷ್ಣ—ಈ ನದಿಗಳ ಮಧ್ಯ ಕೊಲೇರ್ ಸರೋವರವಿದೆ. ಇದು ಇಂಡಿಯಾದಲ್ಲಿ ಮುಖ್ಯವಾದ ಹೊಸನೀರಿನ ಸರೋವರ (ಭೂಗೋಳ. ೯೦). [ಪೊಸ + ನೀರ್]

**ಪೊಸನೀರು** 'ಪೊಸನೀರ್' ನೋ.

**ಪೊಸನುಡಿ** (ನಾ). ಅಪೂರ್ವವಾದ ಮಾತು; ನೂತನವಾದ ಮಾತು: ಕಿವಿಯಿಂ ಬಗೆವುಗುವೊಡೆ ಕೊಂಕುವೆತ್ತ ಪೊಸನುಡಿಯೆ ಪೊಗುಗುಂ (ಅಂಪು. ೧-೦೯); ರಸಭಾವಂ ಗಮಕಂ ಕಾಣೆಸೆ ನಾಣ್ನುಡಿ ದೇಸಿವೆತ್ತ ಪೊಸನುಡಿ ಮಾರ್ಗಂ ಕುಸುರಿಯ ಬಗೆಯಿಂದಿನಿತಜಿಳಿಸೆಯುದ ಕೃತಿ ಕೃತಿಯೆ ಬಗೆದು ನೋಟಿಪ್ಪೊಡೆ ಜಗದೊಳ್ (ರವಾಸ್ಮ. ೧-೪೦); ನೀಲ್ಕೊಳಿಯ ಪೊಸ ನುಡಿಯ ಕಾಳು ಕೊರಗರ್ಗೆ ಕೇಳಲಿನೊಳಿವ್ದವರ್ ತಳವಳಗಿನಿಂ ನುಡಿಯೆ (ಕಾಲೂರ. ೦೦೬-೨೦೯). [ಪೊಸ + ನುಡಿ$_2$]

**ಪೊಸನೂಲ್** (ನಾ). ಹಸಿಯ ದಾರ; ಹೊಸೆಯದ ದಾರ: ಮಿಸುಗುವ ಶಶಿ ರೋಹಿಣಿಯರನೆಸೆವ ಶರನ್ಮೇಘಮಾಲೆ ಬಳಸಿದವೋಲ್ಕೋಭಿಸಲಾ ಮದುಮಕ್ಕಳನುಟಿ ಪೊಸನೂಲಿಂ ಸುತ್ತಿದರ್ ಮಹೀಸುರರಾಗಳ್ (ಉದ್ಯ.ಟಿ. ೮-೬೩). [ಪೊಸ + ನೂಲ್$_2$]

**ಪೊಸನೆತ್ತರ್** (ನಾ). (ದೇಹದಿಂದ ಅದೇ ತಾನೆ ಹೊರಬಂದ) ಬಿಸಿರಕ್ತ: ತಿಸುಳದೊಳುಚ್ಚಳಿಪ ಪೊಸನೆತ್ತರೆ ಕೆಂದಳಿರಾಗೆ (ಶಂಶಚ. ೦-೬); ಚಲದಿಂ ಮಲೆವ ಮಲುವರಸರ ಪೊಸನೆತ್ತರೊಳ್ ಪೊರೆದ ನಿನ್ನ ಬಾಳಂತೆ ಕಂದ ಳರ್ಗಳಿಂ ಒಳ್ಪುವಡೆದ ಮಿಸುಗುವ ಅಸುಗೆಗಳೊಳಂ (ಶಬ್ದ. ೯೯). [ಪೊಸ + ನೆತ್ತರ್]

**ಪೊಸನೆಯ್** (ನಾ). = ಪೊಸತುಪ್ಪ: ಇಂತೊಂದು ಪೂಕ್ಕೆ ಎಮ್ಮ ಸ್ವರ್ಗ ದಳ್ಳಿಸುವ ಬಲ್ಲಿಚ್ಚಿನೊಳಿಟಿದ ಪೊಸನೆಯ್ಗೆ ಪಾಸಟಿವಾರದೇಂ ಪೋಕುಂ (ರಾವಾಶ್ಯ. ೬೩-೩೦). [ಪೊಸ + ನೆಯ್$_2$]

**ಪೊಸನೆಲ್** (ನಾ). ಹೊಸ ನೆಲ್ಲು,—ಬತ್ತ: ಬೇಟಿವೇಟಿರೆ ವಿಕಲ್ಪ ಸಮುಚ್ಚಯಯುಗ್ಮದೊಳ್ ತೋಱುವೆಂ ಕ್ರಮವಿಕಲ್ಪನೆಯಿಂ ಗುಣ ದೋಷಮಂ ಕೀಱಿಕೊಂಡು ಗುಣಾಮಂ ಕಳೆಗಲ್ಲಿಯ ದೋಷಮಂ ತೋಱಿ ಪಿಂಗಿಸುವವೋಲ್ ಪೊಸನೆಲ್ಲಿರೆ (ಪೊಳ್ಗ)ಳಂ (ಕವಿರಾ. ೧-೦೫೦). [ಪೊಸ+ನೆಲ್]

**ಪೊಸನೇಣ್** (ನಾ). ಹಳೆಯಂದಲ್ಲದ ಹಗ್ಗ; ಹೊಸಹಗ್ಗ: ತೆಂಗಿನ ಪೊಸನೇಣಿಂದಜಿದಿಂಗಳ್ವರಮಡಸಿ ಕಂಬಿಯಿಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ರವಾಸ್ಮ. ೨-೯೨); ಮಾತೆಲ್ಲಮಂ ಬರೆದು ಅರದ ಪೊಸನೇಣ್ಗಳಿಗೆ ಪೊಸೆಯಿಸಿಯದವರಿರವ ರೋಡಾಡುತಿಹುದು (ಕಾಲೂರ. ೨೮-೦೬). [ಪೊಸ + ನೇಣ್$_1$]

**ಪೊಸನೇರಾಣೆ** (ನಾ). ಮಿರುಗುವ ಚಿನ್ನ,—ಅಪರಂಜಿ: ರಾಣಿಯು ವಾಸದ ಪೊಸನೇರಾಣೆಯು ಮಾಡಂಗಳೊಳಗೆ ಕೆಯ್ಗೆಯ್ದಿರೆ ರುದ್ರಾಣಿ ವರುಣಾನಿ ನೆಗಟ್ದಿಂದ್ರಾಣಿಯೆನಲ್ಕಕ್ಕು ಮಿಕ್ಕ ಮಹಿಷೀಬ್ರಂದಂ (ಶಾಂತಿಪು. ೧೦-೬೦). [ಪೊಸ + ನೇರಾಣೆ]

**ಪೊಸನೋಟ,** ಹೊಸನೋಟ (ನಾ). ನೂತನದೃಶ್ಯ; ಹೊಸದಾದ ನೋಟ: ಹರಹರ ಎನ್ನ ಕೈಯ ಹಸಿವೋಡಲಣಂ ತನುವಿಂದೆ ಪೂಜೆಯಂ ವಿರಚಿಪೆನೆಂದೊ ಕಣ್ಗಳ ಬಱಿ ತಿಳಿಯಲ್ ಪೊಸನೋಟದಿಂದೆ ಕಿಂಕರಿಸುವೆ ನೆಂದೊ (ಶಂಶಾಕ. ೯). **ಹೊಸನೋಟ:** ಎಂದಿನದೊ ಹಳೆತೋಟ ಹೊಸಬಗೆಗೆ ಹೊಸನೋಟ (ಕಾಲೂರ. ೬೬-೦೦೬). [ಪೊಸ+ನೋಟ]

**ಪೊಸಪಚ್ಚ** (ನಾ). ಉಜ್ವಲಕಾಂತಿಯಿಂದ ಕೂಡಿದ ಆಭರಣ: ರನ್ನದ ಪೊನ್ನ ಚಿತ್ರವಸ್ತ್ರದ ಪೊಸಪಚ್ಚದೊಟ್ಟಲನೆ ಕೋಶಗೃಹಂ ಬಱಿದಾಗೆ ಕೊಟ್ಟು ಮಾಣದೆ ಮಗುಟಾನೆಯಂ ಕುದುರೆಯಂ ಧರಣೀಪತಿ ಸಾಱಿ ಬೀಱಿದಂ (ಚಂದ್ರಪು. ೬-೩೦); ನಿನಗೆ ವಸಂತದೂತಿವೆಸರೊಪ್ಪುವುದೆಂತೆನೆ ಮುಂತೆ ಬಂದು ನೀನೆನಗೆ ವಸಂತನಾಗಮನಮಂ ನೆಱಿ ಸೂಚಿಸಿ . . . ಇತ್ತ ಪಸಾಯದಚ್ಚಮುತ್ತಿನ ಪೊಸಪಚ್ಚಮಂ ತಳೆದವೋಲದಿರ್ಮುತ್ತೆ ಮುಗುಳ್ತು ದೆತ್ತಲುಂ (ಚಂದ್ರಪು. ೬-೪೦). [ಪೊಸ + ಪಚ್ಚ$_2$]

**ಪೊಸಪಜ್ಜೆ** (ನಾ). ಅಳಿಸಿ ಹೋಗಿರದ ಹೆಜ್ಜೆಯ ಗುರುತು; ಮಾಸದಿರುವ ಹೆಜ್ಜೆಯ ಗುರುತು: ಕುಂಜರಗುರುಕುಂಭವುಂಡಳ ದಿನಲ್ಲುಗುತಂದು ಕುಳುಂಪೆಗೊಂಡ ನೆತ್ತರ ಪೊಸಪಜ್ಜೆ [ಪಾಠಾಂ. ಹೊಸಪಜ್ಜೆ] ಯೊಳ್ಮದಱಿ ಕಣ್ಗೆಸೆದಿರ್ದುವು . . . ಮುತ್ತುಗಳ್ (ಪಂಪಭಾ. ೧೦-೯೪; ಸುಕು. ಸು. ೩-೬೦ (ನೋ); ಅಗಲ್ದ ಪೆಣ್ಣಂಚೆಯ ಪುಳಿನಸ್ಥಳದ ಕುಸುಮಾರಜದ ಪೊಸಪಜ್ಜೆವಿಡಿದಱಿ ಪೋಗಿ (ಗಿರಿ. ೩-೦೦೩ ವ). [ಪೊಸ+ಪಜ್ಜೆ]

**ಪೊಸಪನ್ನೀರ್** (ನಾ). ಶುಭ್ರವಾಗಿರುವ ಪರಿಮಳದ ನೀರು: ಪೊಸ ಪನ್ನೀರೊಳ್ ಲತಾಂತಸ್ತಬಕಮನೊಲವಿಂ ತೊಯ್ದು ಭರ್ತಾರನಾದಬ್ಜ ಸಖಂ (ಉದ್ಯ.ಟಿ. ೪-೨೮). [ಪೊಸ + ಪನ್ನೀರ್ (< ಪನಿನೀರ್)]

**ಪೊಸಪರಿಮಳ,** ಹೊಸಪರಿಮಳ (ನಾ). ಆಹ್ಲಾದಕರವಾದ ವಾಸನೆ; ನರುಗಂಪು: ಪೊಸಪರಿಮಳವಿಡಿದಿಹ ಕರ್ಪೂರದ ಸವಿರಸದಂಬುಲದ ಕುಟುಕಿತ್ತು ನೊಸಲೆಡೆಯನು ಚುಂಬಿಸಿ ತಕ್ಕಿಸುತ ಪರವಶೆಯಾದಳೇನ ಬಣ್ಣಿಸುವೆ (ಶಂಪಂ. ೯-೦೬೬). **ಹೊಸಪರಿಮಳ:** ಹಸನಾಗಿ ಸವಿಯಾದ ಸಂಭಾರಮಿಕ್ಕಿಯವು ಮಸಕದಂದದಿ ನೇತ್ರವಂ ಕಟ್ಟಿ ಪೊಗ್ಗರಿಸಿ ಹೊಸ ಪರಿಮಳವನಿಕ್ಕಲವು ತಾನೆ ಭಿನ್ನರುಚಿವ್ಯಂತಾಕವೆಸರಾದುವು (ಸೂಶಬ. ೪-೯). [ಪೊಸ + ಪರಿಮಳ (= ಪರಿಮಲ)]

**ಪೊಸಪರೆಯ** 'ಪೊಸವರೆಯ' ನೋ.

**ಪೊಸಪಸಲೆ** (ನಾ). ಹಚ್ಚಹಸರಾಗಿರುವ ಹುಲ್ಲು; ಎಳೆಯ ಗರಿಕೆ: ನಳನಳಿಸಿ ಬೆಳೆದ ಪೊಸಪಸಲೆಯ ಮೇಲೆ ಕದಳೀದಳಂಗಳು ಕಮಲ ಪತ್ರಂಗಳಂ . . . ಪಾಸುತ್ತುಂ (ಗಿರಿ. ೩-೬೬ ವ). [ಪೊಸ + ಪಸಲೆ]

**ಪೊಸಪಸೆ** 'ಪೊಸವಸೆ' ನೋ.

**ಪೊಸಪಳುಕು** 'ಪೊಸವಳಿಕು' ನೋ.

**ಪೊಸಪಾಕ,** ಹೊಸಪಾಕ (ನಾ). ಆಗತಾನೆ ತಯಾರಿಸಿದ (ಸಕ್ಕರೆ ಅಥವಾ ಬೆಲ್ಲದ) ಬಿಸಿಯಾಗಿರುವ ಪಾಕ: ಕಳಿತ ಬಾಳೆಯ ಹಣ್ಣ ಸಕ್ಕರೆಯ ಪೊಸಪಾಕದೊಳಗೆ . . . ಇಳುಹುವುದು (ಸೂಶಬ. ೪-೫೦). **ಹೊಸಪಾಕ:** ಕುಂಬಳದ ಕಾಯ ಕೈಸೇವಗೆಯು ಸಮವಾಗಿ ಸಂಬಳಿಸಿಕೊಂಡೊಣಗಲಿಕ್ಕಿ ತುಪ್ಪದೊಳಗಿಳಿಯಂ ಬಿಟ್ಟು ಹುರಿದು ಸಕ್ಕರೆಯ ಹೊಸಪಾಕದೊಳು ಕಟ್ಟುವುದು ಲಡ್ಡುಗೆಯನು (ಸೂಶಬ. ೦-೩೩). [ಪೊಸ+ಪಾಕ$_1$]

**ಪೊಸಪುಟ್ಟು**, ಹೊಸಹುಟ್ಟು (ನಾ). ಹಳೆಯ ಬಾಳಿನಿಂದ ಬೇರೆಯಾದ ಬಾಳು ; ಮತ್ತೊಂದು ಜನ್ಮ : ಎಳೆಯ ಕರ್ನಾಟಕಂ ಪೊಸಪುಟ್ಟು ಪುಟ್ಟುಗೆ ! (ಹೂಂಗಳು. ೪೦-೦೩). **ಹೊಸಹುಟ್ಟು** : ಹೊಸಹುಟ್ಟು ಬರುವದಿದೆ ಇನ್ನು ಮುಂದೆ ಆಗೋಣ ಆ ಜಗದ ತಾಯಿತಂದೆ (ನಾದಂ. ೬೬-೦೬). [ಪೊಸ+ಪುಟ್ಟು$_1$]

**ಪೊಸಪುಲ್** 'ಪೊಸವುಲ್' ನೋ.

**ಪೊಸಪೂ** 'ಪೊಸವೂ' ನೋ.

**ಪೊಸಪೊಡೆ**, ಹೊಸಪೊಡೆ (ನಾ). ಎಳೆಯ ತೆನೆ, – **ಹೊಡೆ** : ತೋಳಪ ಪಸುರ್ಪಣಿಯು ಬೆಳಗುಚ್ಚಳಿಸಲ್ಕನ್ನಿಧ್ಯದೊಳ್ವಿಜೃಂಭಿಪ ಸೂತ್ರೋಜ್ವಳ ರೇಖೆಯಂತೆ ಪೊಸಪೊಡೆಯುಳವಟ್ಟಿರಲೆಸೆದುದವರ್ದ ಕಳವುಕ್ಷೇತ್ರಂ (ಉದ್ಯಟಿ. ೩-೦೬). **ಹೊಸಪೊಡೆ** : ಉತ್ತಮದ ಹೂವು ಕಾಯ್ ಗೆಣಸುಗಳ ಹೊಸಪೊಡೆ [ಪಾಠಾಂ. ಪುಡಿ]ಯು ಮತ್ತುಳಿದವಕ್ಕೆ ಹಸವಾಡಿ ಬಟ್ಟಿತ್ರಿವದ ನಿತ್ತು ಒಗ್ಗರಿಸಿಕೊಂಡವಬಾಳ ಹೆಸರ ಹೂರಣಬದನೆಗಾಯೆಂಬುದು (ಸೂಶಾಸ್ತ್ರ. ೪-೨೦). [ಪೊಸ+ಪೊಡೆ$_3$]

**ಪೊಸಪೊನ್** 'ಪೊಸವೊನ್' ನೋ.

**ಪೊಸಪೊನಲ್** 'ಪೊಸವೊನಲ್' ನೋ.

**ಪೊಸಪೊಟ್ಟುಙು್** (ನಾ). ಯೌವನದ ಕಾಲ ; ತಾರುಣ್ಯ : ಪಾಂಡವರನ ಕಾರಣಂ ಕೆಣಕಿದೀ ಪೊಸಪೊಟ್ಟುಙೊಳಾದ ಕಿರ್ಚುರ್ ಕೌರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳ ಸಯ್ಯು ಪೋಕುಮೇ (ಶಂಖಶಾ. ೨-೯೬). [ಪೊಸ + ಪೊಟ್ಟುಙು್]

**ಪೊಸಬ** 'ಪೊಸಂಬ' ನೋ.

**ಪೊಸಬಗೆ** 'ಪೊಸವಗೆ' ನೋ.

**ಪೊಸಬಣ್ಣ**, ಹೊಸಬಣ್ಣ (ನಾ). ೧. ಉಜ್ವಲವಾದ ಬಣ್ಣ ; ಸ್ವಚ್ಛ ವರ್ಣ : ಪೊಸಬಣ್ಣದೊಳೊಂದಿದ ಪಾರಿಜಾತಮಗ್ಗಳವೆಸೆದೊಪ್ಪುವಂತೆ ತಳಿರಿಂ ಮುಗುಳಿಂ ನವಯೌವನಂ ಮನಂಗೊಳೆ (ಶಂಖಶಾ. ೨-೩೮). **ಹೊಸಬಣ್ಣ** : ೨. ಹೊಸ ಬಗೆ ; ನವೀನ ರೀತಿ : ಇಂದ್ರಚಾಪದ ಮಳೆಗಾಲದ ದಿನದಂತೆ ಬಾಳಿಗೆ ಹೊಸಬಣ್ಣವಾಗೆ ಸಂಸಾರವೆನುವುದು ಸುಖಮಯ ವೆನಿಸುತ ಕಳೆಯಿತು ಕಾಲವು (ಇಂಚರ. ೪೨-೦೦೦). [ಪೊಸ+ಬಣ್ಣ]

**ಪೊಸಬಾಸಿಗ** 'ಪೊಸವಾಸಿಗ' ನೋ.

**ಪೊಸಬಾಸೆ** (ನಾ). (ಎದೆಯ ಮಧ್ಯಭಾಗದಿಂದ ಹೊಕ್ಕುಳ ಮೇಲು ಭಾಗದವರೆಗೆ ಇರುವ) ಮನೋಹರವಾದ ಕೂದಲ ಸಾಲಂ : ಪೊಸಬಾಸೆಯು ಚೆಲ್ವಂ ನಿಟ್ಟಿಸಲಾಂ ಮೊಲೆ ಕಾಣಲೀಯವೇದುಙು ಸುಯ್ವಂತುಸುರಂ ಪಸರಿಸಿಯುಲರೇಙಿಸಿದಲ್ ಸಿಂಧುವಾವರದಲರನ ದೊರ್ವಳ್ (ಉದ್ಯಟಿ. ೯-೪೩). [ಪೊಸ+ಬಾಸೆ$_1$]

**ಪೊಸಬಿಜ್ಜಣಿಗೆ** (ನಾ). ಮಿರುಗುವ ಬೀಸಣಿಗೆ : ಬಿಸಿಲೆಸಕದಿಂದೆ ಕೊರಗಿದ ದೆಸೆವೆಣ್ಗಳ ಬಿಸುಪನಾಙಿಪಂತಿರೆ ಗಿಳಿಗಳ್ ಪಸುರೆಙಿಕೆಯೆಂಬ ಬಾಙಿಯ ಪೊಸಬಿಜ್ಜಣಿಗೆಗಳಿನೆಸಗಿಪುವು ತಣ್ಪೆಲರಂ (ಕಾದಂಪೂ. ೦೩೦). [ಪೊಸ + ಬಿಜ್ಜಣಿಗೆ]

**ಪೊಸಬಿಜ್ಜೆ** (ನಾ). ಹೊಸಬಗೆಯ ಮಾಯಾವಿದ್ಯೆ : 'ಪೊಸಬಿಜ್ಜೆವಳ' ಪರಾ. [ಪೊಸ+ಬಿಜ್ಜೆ]

**ಪೊಸಬಿಜ್ಜೆವಳ** (ನಾ). (ಇಂದ್ರಜಾಲವೆಂಬ) ವಿದ್ಯೆಯನ್ನು ತಿಳಿದವನು; ಮಾಯಗಾರ : ಸಿಸುವಾಗಿ ತಾನಾಲದೆಲೆಯೊಳೊಙಿ ತನ್ನ ಬಸಿಙೊಳೀರೇಳುಲೋಕಗಳ ಪಸರವ ತೋಙಿ ಬಗೆಗೊಳಿಸುವ ಪೊಸಬಿಜ್ಜೆ ವಳಗೆಙಗುವೆನು (ಕರ್ಣಕ. ೦-೦೦). [ಪೊಸಬಿಜ್ಜೆ+–ವಳ]

**ಪೊಸಬಿಸಿಲ್** 'ಪೊಸವಿಸಿಲ್' ನೋ.

**ಪೊಸಬೀಡಾರ** (ನಾ). ನೂತನ ವಸತಿ ; ಹೊಸ ನೆಲೆ : ಪೊಸಬೀಡಾರದೊಳಿರ್ದ ಬಟ್ಟಗನವೊಲ್ ಮೋಹಾಭಿವೇಶೋದಯಂ ವಸುಧಾಧೀಶನ ಚಿತ್ತದಲ್ಲಿ ಕಿಙಿದುಂ ಮೆಯ್ಯೋಙಿತಿಲ್ಲ (ಧರ್ಮಾ. ೦೨-೬೨). [ಪೊಸ+ಬೀಡಾರ]

**ಪೊಸಬು** (ನಾ). (?) : ಮುಕ್ಕಾಲು ದೀವಿಟಿಗೆ ಮುರಿಲೆ ಜನಿವರ ತುದಿಕಲಪ ಪೊಸಬು ಚಕ್ರದ ಕೊಡೆ ಆಳ × × × ಪಿಲುಬೀಕತಕಡಿದೆಡ ತಕಡಿ (ಎಕ. XVI. ಗುಬ್ಬಿ. ೬೯-೨೮ ; ೪). [< ಪೊಸತು ?]

**ಪೊಸಬೆ** (ನಾ). ಅಪರಿಚಿತೆ ; **ಹೊಸಬಿ** : ಎಳೆನಾಭಿಯೆಳೆಯಳ್ ಎಸೆವು ಡಿಯ ಪೊಸಬೆ ನುಣ್ಣನಿಯ ನೂತನೆ ಭಾಳದ ಭಾಮಿನಿ ಕರ್ಣಪಾಲಿಕೆಯ ಕಾಮಿನಿ . . . ಪೆಣ್ಗಳ ಪುಣ್ಯಾಕಾರೆಯುಮೆನಿಸಿ ಮನಂಗೊಳಿಸುತ್ತಿರ್ದ್ದಳು (ಉದ್ಯಟಿ. ೩-೩೩ ವ). 'ಹೊಸಬಿ' ಪರಾ. [ಪೊಸಬ (< ಪೊಸಂಬ) + – ಎ$_1$]

**ಪೊಸಬೆಣ್ಣೆ**, ಹೊಸಬೆಣ್ಣೆ (ನಾ). ಆಗತಾನೆ ತೆಗೆದ ಬೆಣ್ಣೆ ; ನವನೀತ : ರಾಹುಗೆ . . . ಕೊಟ್ಟ ಪೊಸಬೆಣ್ಣೆವೊಲಿರ್ದುದು ಚಂದ್ರಮಂಡಲಂ (ಕಾವ್ಯಸಾ. ೯೬೯ ಚಂದ್ರಶೇ) ; ನನೆದ ಸೊಜ್ಜಿಗೆಯೊಳಗೆ ಪೊಸಬೆಣ್ಣೆ ಸಿಹಿಮೊಸರ ಕೆನೆ ಹಾಲ ಕೆನೆಯುಪ್ಪನಿಕ್ಕಿ ಕಣಿಕವ ಕುಟ್ಟಿಯನುವಾಗಿ ರೊಟ್ಟಿಯಂ ಮಾಡಿ ಒಟ್ಟಿಯ ಹಲ್ಲೆಗಳ ನಡುವೆಯಿರಿಸಿ ಹುದುಗಿ (ಸೂಶಾಸ್ತ್ರ. ೦-೦೨). **ಹೊಸಬೆಣ್ಣೆ** : ನೆಲಕೆ ಗಗನಕೆ ಸೂತ್ರವಿಡಲಂಬಿಲದೊಳಗೆ ಹೊಸಬೆಣ್ಣೆಯಂ ತೆಗೆಯಲು . . . ಬಲ್ಲ ನೆಙಿ ಜಾಣೆ (ಬಸವ. ೪೨-೨) ; ಕುಟ್ಟಿ ಕಣಿಕವನು ಹೆಬ್ಬೆಟ್ಟಂತ ಹೊಸೆದು ಮೂವಟ್ಟಗಲದೊಳಗೊತ್ತಿಯಂತದಕೆ ಹೊಸಬೆಣ್ಣೆ ವಿಟ್ಟುಮಂ ತೊಡೆದು (ಸೂಶಾಸ್ತ್ರ. ೦-೩೦). [ಪೊಸ + ಬೆಣ್ಣೆ]

**ಪೊಸಬೇಟ** 'ಪೊಸವೇಟ' ನೋ.

**ಪೊಸಬೇಸಗೆ** (ನಾ). ಆಗತಾನೆ ಪ್ರಾರಂಭವಾದ ವೈಶಾಖಮಾಸ ; ಮುಂಬೇಸಗೆ : ಪೊಸಬೇಸಗೆಯೊಳ್ ಮೃಗತತಿಯುಸುವೆರಸಿರವೇಳ್ಕು ಮೆಂದು ಕರುಣಿಸಿ ಮಿತ್ರಂ ಬಿಸಿಲಂ ಪೀರ್ದೊಡೆ ಬೆನ್ನೀರೊಸರ್ವಂತಿರ್ದುದು ಮರೀಚಿಕಾಜಲಮೆತ್ತಂ (ಗಿರಿಜಾ. ೯-೦೬). [ಪೊಸ + ಬೇಸಗೆ]

**ಪೊಸಬೋನ** (ನಾ). ಹೊಸದಾಗಿ ಮಾಡಿದ ಅನ್ನ : ಜಂಗಮಕೆ ಮಾಡಿ ದನ್ನವ ಪುತ್ರನುಣುತಿರಲು ಪಿಂಗದವಸಂ ಕೊಂದು ಮುಚ್ಚಿ ಪೊಸ ಬೋನಮಂ ಸಾಂಗವಾಗಿಯೆ ಮಾಡಿ ತಜ್ಜಂಗಮಕೆ ನೀಡೆ (ರಾಜಶೇ. ೬-೦೨). [ಪೊಸ + ಬೋನ]

**ಪೊಸಮಂಜು** (ನಾ). ಶುಭ್ರವಾದ ಮಂಜು, – ಹಿಮ : ಜೊನ್ನದ ವೊಲ್ ಪೊಸಮಂಜು ವಾರ್ಧಿ ಪೆರ್ಚುಗೆಯನವರ್ಚೆ ತಾಳ್ದನುದಿತೋದ ಯಮಂ ಹಿಮಕಾಲಚಂದ್ರಮಂ (ರಾಜಶೇ. ೯-೪). [ಪೊಸ + ಮಂಜು$_1$]

**ಪೊಸಮಕರಂದ** (ನಾ). ಆಗತಾನೆ ಅರಳಿರುವ ಹೂವಿನ ಬಂಡು : ಪೊಸಮಕರಂದದ ಮಾಂದದ ರಸಕ್ಕೆ ಮಂದಲರೊಳೆಙಗಿದಳಿ ರಚನೆಯ ಕರ್ಪೆಸೆಮತೆಸೆವಿನಮೇಂ ಸೊಗಯಿಸಿದುದೊ ವನಯುವತಿವದನತಿಲಕಂ ತಿಲಕಂ (ಶಾಂತಿಪು. ೭-೧೪೩). [ಪೊಸ + ಮಕರಂದ]

**ಪೊಸಮದ**, ಹೊಸಮದ (ನಾ). ೧. ತಾರುಣ್ಯದ ಸೊಕ್ಕು. ೨. ತಾರುಣ್ಯದ ಸೊಕ್ಕಿನಿಂದ ಸುರಿಯುವ (ಆನೆಯ) ಮದಧಾರೆ : ಪೊಸಮದದಾನೆಯಂ ನಸೆಯ ಪೆರ್ಬಿಡಿ ಜಂಗಮಕಲ್ಪವೃಕ್ಷಮಂ ಮಿಸುಗುವ ನಲ್ಬಕಲ್ಪಲತೆ ನೀರದಮಂ ಕುಡುಮಿಂಚು ಪೊರ್ದಿ ಶೋಭಿಸುವವೊಲ್ (ಶಾಂತಿಪು. ೭-೨೯). **ಹೊಸಮದ** : ೨. ಹೊಸಮದದ ವನದಂತಿ ಕದಳಿಯ ಕುಸುರಿದಙಿದಂದದಲಿ ಘನಪೌರುಷವ ಮಾಡಿದನೆಂದನವನೀಪಾಲನನುಜಂಗೆ (ಕುಮಾರವ್ಯಾ. ೬-೨೨). [ಪೊಸ + ಮದ]

**ಪೊಸಮದವಣಿಗ** (ನಾ). ಹೊಸದಾಗಿ ಮದುವೆಯಾದವನು : ಪೊಸ ಮದವಣಿಗಂ ದೇವೇಂದ್ರನ ಶಚಿಯ ವಿಳಾಸಾವಿಷ್ಕೃತವಿವಿಧವಿಭವಮಂ ಮಸುಳಿಸಿದಂ (ಶಾಂತಿಪು. ೭-೨೩೦). [ಪೊಸ+ಮದವಣಿಗ(< ಮದುವಳಿಗ)]

**ಪೊಸಮದವಳಿಗೆ** (ನಾ). ಹೊಸದಾಗಿ ಮದುವೆಯಾದವಳು; ನವವಧು : ಆತನ [ಮನೆಗೆ ವಂದು ಪೊಸಮದವಳಿಗೆಯ ಕೆಲದೊಳಿರ್ದ ಪುಷ್ಪದಾಡನಂ ಕಂಡು] (ಧರ್ಮಾಪ್ಮ. ೬-೧೨೭). [ಪೊಸ + ಮದವಳಿಗೆ (<ಮದುವಳಿಗೆ)]

**ಪೊಸಮನೆ, ಹೊಸಮನೆ** (ನಾ). ಹೊಸದಾಗಿ ಕಟ್ಟಿದ ಮನೆ; ನೂತನ ಗೃಹ : ಕಿಸುರ ಕಸಗಳೆದುಮತ್ತಿಸಿ ಪೊಸಬಗೆಯಂ ಪೂಸಿ ರಾಗರಸದಿಂ ಪೊಕ್ಕಂ ಪುಸಿದಬುವೆಂಡಿರ ಬೇಟಂ ಬಿಸುಟಿರ್ದೆಯಂ ಸ್ಮರನೆ ಪುಗುವವೊಲ್ ಪೊಸಮನೆ [ಶಾಶಾಂ. ಪಾಟ್ಮನೆ]ಯಂ (ಅರ್ಥಸೀ. ೯-೧೪೯) ; ಮಾಡಿದ ತೋರಣಮಟ್ಟುಗಳ್ ಪೊಸಮನೆ ಸುತ್ತಲುಂ ಬಳಸಿ ಪರ್ವಿದ ಕೀದಗೆ ಪಚ್ಚವಾಗಿಲ್ (ಕಬ್ಬಿಗ. ೧೦೦). **ಹೊಸಮನೆ:** ಹೊಸಮನೆಯ ಕಟ್ಟಿದೆನು ಗೃಹಶಾಂತಿ ಮನೆಯೊಳಗೆ (ಭ್ರಕಂದ. ೨-೬೦-೩) ; ಹೊಸ ಊರು ಹೊಸಮನೆಯೆನೆ ಹೊಸತಾಯಿತು ನಮ್ಮ ಜೀವನ ಸುಖವಾಗಿ (೨೦ಶಾಶ. ೩೯-೭೬). [ಪೊಸ + ಮನೆ]

**ಪೊಸಮಲ್ಲಿಗೆ** (ನಾ). ಆಗತಾನೆ ಅರಳಿರುವ ಮಲ್ಲಿಗೆ; ನಳನಳಿಸುತ್ತಿರುವ ಮಲ್ಲಿಗೆ : ಸೊಡರ್ಗುಡಿಯೊಯ್ಯನಾಗೆ ಪೊಸಮಲ್ಲಿಗೆ ಮೆಲ್ಲಗೆ ಕಂಪು ನಾಚಿ (ಕಂಶಕಾ. ೪-೦೦೦) ; ಪೊಸಮಲ್ಲಿಗೆಗಮೊಳ್ಮಾವಿಗಂ ಮದುವೆಮಾಡಿ ದಳ್ಳನದೊಳ್ (ವರ್ಧಕ್ಕೆ. ೯-೩೯). [ಪೊಸ + ಮಲ್ಲಿಗೆ]

**ಪೊಸಮಸೆ, ಹೊಸಮಸೆ** (ನಾ). (ಮಸೆದು) ಹೊಳೆಯುವಂತೆ ಹರಿತಗೊಳಿಸಿರುವುದಂ : ಗಗನಮಡೆನೆಚಿಯವಂತಿರೆ ಗಗನೇಚರಸೈನ್ಯಮಿಸುವ ಪೊಸಮಸೆಯ ಸರಲ್ಗಗಧರನ ಮೇಲೆ ಪಾಯ್ದುವು (ಕಂಠಾಪಾ. ೯-೬೦) ; ದಮನನಂ ಪೊಸಮಸೆಯ ಕೂರ್ಗಣೆಗಳಿನಿಸುತುಂ (ರಾಮಾಶ್ಮ. ೯೦-೦೦). **ಹೊಸಮಸೆ :** ಹೊಸಮಸೆಯ ಹೊಗರಂಬುಗಳನೆಬ್ಬಿಸಿದನು (ಕುಪ್ಪಾದ್ರೋ. ೦೩-೬೦). [ಪೊಸ + ಮಸೆ]

**ಪೊಸಮಾವು** (ನಾ). ಚಿಗುರಿದ ಮಾವಿನ ಮರ : ಮುಸುಕಿದ ತಳಿರಂ ಪೇಚಿದ ಪೊಸಮಾವುಗಳಂ ಬಸಂತಮೆಸೆದಪುದು (ಅಂಕ್ಕೆ. ೦೦-೮೩) ; ತಣಿಪುವುದು ಪೊಸಮಾವೆಳಸಿದ ಪಾಂಥಪ್ರತಾನಪಂಚೇಂದ್ರಿಯಮಂ (ಗಿರಿಕ. ೨-೯೩). [ಪೊಸ + ಮಾವು]

**ಪೊಸಮಿಸುನಿ, ಹೊಸಮಿಸುನಿ** (ನಾ). = ಪೊಸನೇರಾಣೆ : ಪೊಸಮಿಸುನಿಮೆಸದ ತೊಡೆಗುಪ್ಪಸಮೆಸೆದುದು ಪೊಣರಲೆಂದು ಪೊಂಬಾಳೆಯೊಳಂದಸಿಯಳ ನುಣ್ದೊಡೆ ತಾಳ್ದವೊಲಸದೃಶರುಚಿ ಕನಕಕವಚಮಂ ಕಡುಪಿಂದಂ (ರಾಜಕೀ. ೦೨-೬೦). **ಹೊಸಮಿಸುನಿ :** ಹೊಸಮಿಸುನಿಯ ಚಿನ್ನದಿ ಕರುವಿಟ್ಟು ನಿರ್ಮಿಸಿದ ಪುತ್ಥಳಿಯಂದದಲಿ (ತಿಲಂಶಾಂ. ೦-೦೬). [ಪೊಸ + ಮಿಸುನಿ]

**ಪೊಸಮಿಾನ್** (ನಾ). ಹೊಳೆಯುವ ಮಿಾನು : ನನೆಗಣೆಯನ ಮೆಯ್ಸಿಳಗೆಂಬಿನಿಗೊಳದೊಳ್ ಮೊದಲೆ ಮಿಳಿರ್ದು ನೆಗೆದಾಡಿದುವಂದೆನಸುಂ ಕಡುನೀಚಿಯ ಚೆಲ್ವನೆ ತೊಳಗುವ ಕಣ್ಗಳೆಂಬ ಪೊಸಮಿಾಂಬೊಣರ್ಗಳ್ (ಕಬ್ಬಿಗ. ೩೩೦). [ಪೊಸ + ಮಿಾನ್]

**ಪೊಸಮುತ್ತು, ಹೊಸಮುತ್ತು** (ನಾ). ನೂತನವಾಗಿರುವ ಮುತ್ತು : ರಸದಾಡಿಮದ ಬಿತ್ತುಮಂ ಪೊಸಮುತ್ತುಮಂ ಮುಕ್ಕುಳಿಸಿದಂತಪ್ಪ ವಿಬುಧವನಜವನಕಳಹಂಸನ ದಂತಪಂಕ್ತಿಗಳಮ್ಯತಕಿರಣನ ಕಾಂತಿಗಳನಿಳಿಸುವಂತಾದುವು (ಕಂಶಕಾ. ೨-೩೯ ವ) ; ಮತ್ತಗಜಮಸ್ತಕದ ಪೊಸಮುತ್ತಂ ಬಲ್ಪಿಂದೆ ತಂದೆಂ (ಗಿರಿಕ. ೦-೦೦೩) ; ಪಲಪುಸುರ್ದೋರಣ ಪಳಿ ಗುಡಿ ಸಂತಸವಜಿ ಪೊಸಮುತ್ತಿನ ಬಣ್ಣವುರಂ ಮನೆಮನೆದಪ್ಪದೆ ಶೋಭಿಸಿತು (ಜಯಕಾ. ೨-೩೯). **ಹೊಸಮುತ್ತು:** ಹೊಸಮುತ್ತಿನ ಸುಪ್ಪಾಣಿಯಂತೆ ಲಿಂಗೈಕ್ಯವು (ಅವತಂ. ೧೩೩-೭೨೪) ; ಎತ್ತಿದರು ಬಳಿಕಾರತಿಯ ಹೊಸಮುತ್ತುಗಳ ಸೇಸೆಯನು ಪರಿಕಲಿಸುತ್ತ ಹರಸಿದರಖಿಳವಿಪ್ರಸುವಾಸಿನೀನಿಕರ (ಕೂರರಾ. ೦-೦೪-೨೦). [ಪೊಸ + ಮುತ್ತು]

**ಪೊಸಮೃಣಾಳ** (ನಾ). ತಾವರೆಯಂ ಎಳೆಯ ದಂಟು : ಎಳದೆಸಿಸಿರ್ದ ಪಾವಸೆಯ ತಣ್ಣೆಳಿಯಿಂದಮೆ ನೆಯ್ದ ಸೀರೆ ಶೀತಳಿಕೆಯ ಚಾಮರಂ ಪೊಸಮೃಣಾಳದ ತೋಳ್ವಳೆ (ಶಾವಂಶಾ. ೪೩೯). [ಪೊಸ + ಮೃಣಾಳ (= ಮೃಣಾಲ)]

**ಪೊಸಮೆಂಡಿ** (ನಾ). ಒಬ್ಬಾತನ ಹೆಸರು (?) : ಸಿರಿಸಗರನ್ × × × ಯನ್ ಪೊಸಮೆಣ್ಡಿ ಸಗ್ಗಮೇಱಿದ (ಎಕ. IX. ಹೊಸಕೋ. ೯-೪ ; ಸು. 870). [ ? ]

**ಪೊಸಯಿಸು₁** (ಕ್ರಿ). ೧. ಹೊಸದನ್ನಾಗಿ ಮಾಡು ; ಹೊಸತಂಗೊಳಿಸು : ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಅಂಕ್ಕೆ. ೯-೨೩) ; ಅಸಮಾನಮೆನಿಪ್ಪ ಲಾಸ್ಯಲೀಲೆಯುಮಂ ನಿರ್ಮಿಸಿ ತೋಱಿದನೊರ್ವೊರ್ದಲೆನೆ ಪೊಸಯಿಸಿದಂ ನಾಟ್ಯವಿದ್ಯೆಯಂ ಪುರುಹೂತಂ (ಶೀಲಾಂಕ್ಕೆ. ೮-೦೬೪). ೨. ಜೀರ್ಣೋದ್ಧಾರ ಮಾಡು : ಗಂಗವಾಡಿಯ ಬಸದಿಗಳನಿತೊಳವನಿತಂ ತಾನೆಯ್ದೆ ಪೊಸಯಿಸಿದಂ (ಎಕ. II. ೬೩-೩೩ ; 1118). ೩. ಅತಿಶಯವಾಗು; ಅಧಿಕವಾಗು; ಹೆಚ್ಚಾಗು : ಸರಸಿರುಹದ ಮೇಗಾಡುವ ಸುರಸುಂದರಿಯರಾಟದಂದಮೆಂತೆನೆ ಸಿರಿಯಂ ಪರಿಭವಿಸಿ ತಂದು ಪೊಸಯಿಪ ಸಿರಿವಂತಿಕೆಯಿಂದೆ ಕಾಲೊಳೊದೆದಪರೆನಿಕುಂ (ಕಾಂತಿಕ್ಕೆ. ೦೦-೦೭) ; ಈ ಸಮಸ್ತವಸುಧಾತಳರಾಜ್ಯವಿಭೂತಿ ನಿಮ್ಮದೊಂದಸದೃಶಮಂತ್ರದತುಳತಂತ್ರಬಳಪ್ರಥಿತಪ್ರತಾಪದಿಂ ಪೊಸಯಿಸಿ ಸಂದುದಿಂದುವರಂ (ಶೀಲಾಕ್ಕೆ. ೨-೩೪). ೪. ಅಧಿಕಗೊಳಿಸಂ ; ಹೆಚ್ಚುಮಾಡು : ಎಡಱುವಹಿತರಂ ಚಕ್ರಮೆ ಸಾಧಿಸಿದಪ್ಪುದು ನವನಿಧಿಗಳ್ ಪೊಸಯಿಸಿದಪ್ಪುವು ವಿಭೂತಿಯಂ ಪುರುಸುತನಾ (ಅಂಕ್ಕೆ. ೦೪-೬೦). [ಪೊಸ + — ಇಸು]

**ಪೊಸಯಿಸು₂** 'ಪೊಸೆಯಿಸಂ' ನೋ.

**ಪೊಸರಂಗ** (ನಾ). ನೂತನವಾಗಿ ನಿರ್ಮಿಸಿದ ರಂಗಮಂಟಪ : ಪೊಸರಂಗದ ಪರಿಯಂಕಂ ಮಿಸುಕುವ ಕೌಳುಡೆ ಮರಾಳತಳ್ಪಂ ಸಿತಸದೃಸನದಿ ಪಚ್ಚವಡಿಸಿ ರಾಜಿಸುತಿರೆ ಕುಳ್ಳಿರ್ದನಬಲೆವೆರಸಾ ಕುವರಂ (ಶ್ರೀಕೃಹಿ. ೦೪-೬). [ಪೊಸ + ರಂಗ]

**ಪೊಸರಕ್ತ, ಹೊಸರಕ್ತ** (ನಾ). ೧. = ಪೊಸನೆತ್ತರ್ : ಧಾತ್ರಿಗೆ ಪೊಸರಕ್ತ ಪೂರಮೆಸಗಿದತ್ತು (ರಾಜಕೀ. ೩-೦೦೬). **ಹೊಸರಕ್ತ :** ೨. (ಆಲಂ) ನವಯೌವನ : ಉತ್ತಮವಾದವು ಹರೆಯದ ದಿನಗಳು ಹೊಸರಕ್ತ ಹೊಸ ಅನುರಕ್ತಿ (೨೦ಶಾಶ. ೨೦೨-೪೪). [ಪೊಸ + ರಕ್ತ]

**ಪೊಸರಜ್ಜು** (ನಾ). = ಪೊಸನೇಣ್ : ಪೊಸರಜ್ಜುಗಳಂ ಲಿಂಗಮನಸವಸದಿಂ ಸುತ್ತಿ ಮೂಱು ಘಟೆಯಾನೆಗಳಂ ಮಸಗಿ ಕಲಿ ಚೋಳವಿಭು ತೆಗೆಯಿಸೆ ದಿಟದಿಟಯೆನುತೆ ಪಱಿದು ಮುಗ್ಗಿದುವಾಗಳ್ (ಶ್ರೀಕೃಹಿ. ೨೦-೦೦). [ಪೊಸ + ರಜ್ಜು]

**ಪೊಸರತ್ನ** (ನಾ). ನೂತನವಾದ ರತ್ನ : ಸಾಲ ಮುತ್ತಿನ ಕುಚ್ಚಿನ ಪೊಸರತ್ನದ ಮೇಲುಪ್ಪರಿಗೆಗೆನ್ನನೊಯ್ದು ಕಾಲೋಚಿತದ ಕಲೆಗಳಿಂದ ಸೋಲಿಸಿ (ಕಂಶಪ. ೯-೦೯೦). [ಪೊಸ + ರತ್ನ]

**ಪೊಸರನ್ನ** (ನಾ). = ಪೊಸರತ್ನ : ಪೊಸರನ್ನದ ಪೊನ್ನ ಪೊದಟ್ಟಿಸೋನೆ ಮಂದಾನಿಳನಿಚ್ಚಿ ಬೆರ್ಚಯೊಳಗಟ್ಟಿಱಿದಂತಿರೆ ದೇವರಾರ್ವಹೋಧ್ವಾನನಿನಾದಮೊಪ್ಪಿದುದು ರಾಜಿತರಾಜಗೃಹಾಂತರಾಳದೊಳ್ (೭೦ಂತಿಕ್ಕೆ. ೬-೭೪) ; ಮಿಸುಗುವ ಕಣ್ಣ ನುಣ್ಪೆಳಗು ಜೊನ್ನದೊಳೋರಗೆಯಾಗೆ ಸೊಂಪು ಸಂದಿಸೆ ಪೊಸರನ್ನದಾರತಿಯನೆತ್ತಿದರಗ್ಗದ ಗಾಡಿಕಾರ್ತಿಯರ್ (ಕಬ್ಬಿಗ. ೩೪೩). [ಪೊಸ + ರನ್ನ (<ರತುನ)]

**ಪೊಸರೂಪು, ಪೊಸರೂವು** (ನಾ). ಹೊಸದಾದ ಚೆಲುವು ; ನವೀನ ರೂಪ : ಪೂಗಳಂ ತನ್ನುಮಂ ಮಱಿದಂ ನಿರೀಕ್ಷಿಸುತೆ ಮಱಿದಿರ್ದನಂ ಸತಿಯುರಂಮ ಭೋಂಕನೆ ಕಂಡು ಬೆಱಗಾಗಿ ಸೋಲ್ತು ಪೊಸರೂಪಂ

ಮನಂಗೊಂಡು (ಶಂಅಕ. ೧-೪೪). **ಪೊಸರೂವು :** ನೊಸಲ ಕತ್ತುರಿ ಬಾಗಿದ ಪುರ್ಬು ತಾವರೆಯೆಸಳನೇಳಿಪ ನಿಡುಗಣ್ಣು ಪಸರಿಪ ತಿಲಪುಷ್ಪ ನಾಸಿಕ ಸತ್ಕರ್ಣ ಪೊಸರೂವ ನೋಡಿ ಹಿಗ್ಗಿದರು (ಮೋಹತ. ೧೪-೬೨). [ಪೊಸ+ರೂವು]

**ಪೊಸರೂವು** 'ಪೊಸರೂಪು' ನೋ.

**ಪೊಸಲತೆ** (ನಾ). ಹೊಸದಾಗಿ ಚಿಗುರಿದ ಬಳ್ಳಿ : ಪೊಸಲತೆಯಕ್ಕುಮಲ್ಲ ಲತೆಗೆತ್ತಣದೀ ಸವಿಮಾತು ನೀಟ್ಟ ರನ್ನಸರಮದಕ್ಕುಮಲ್ಲ ಸರಕೆತ್ತಣವೀ ನವಘರ್ಮಬಿಂದುಗಳ್ . . . ಎಂದೊಸೆದು ಸಖೀಜನಂ ಪೊಗಟ್ದುದಾ ಸತಿಯಂ (ಉದ್ಭಟ. ೯-೪೦). [ಪೊಸ+ಲತೆ]

**ಪೊಸಮಂದರ್** (ನಾ). ಹೊಸದಾಗಿ ಹಾಕಿದ ಚಪ್ಪರ : ಪರಿವೇಷದ ತೆಱದಿಂದನಪರತಂ ಕರ್ಪೂರರಸದ ಪರಿಕಣೆ ಸುತ್ತಂ ಪರಿಯಲ್ ಮೃಣಾಳ ಪೊಸಮಂದರ ನಡುವಣ ಪೂವಿನೆಸಟ ಪಾಸಿನೊಳಿರ್ದಳ್ (ಕಾದಂಬ. ೨೨೩). [ಪೊಸ+ಮಂದರ್]

**ಪೊಸವಗೆ, ಪೊಸಬಗೆ, ಹೊಸಬಗೆ** (ನಾ). ನವೀನರೀತಿ ; ನೂತನ ಕ್ರಮ : ಅಳಿಯರಗಿಳಿಯರಸಂಚಿಯುಮಿಳಿಯೊಳ್ ಭಾವುಕರ ಕಿವಿಗೆ ಸವಿಯಂ ಪಡೆಗುಂ ಕಳಕಂಠಕಂಠನಾಳೋದ್ಗಳಿತಸುಧಾಸಾರದಿಂಪು ಪೊಸ ವಗೆಯಲ್ತೇ (ಅಕಾ. ೧-೧೯). **ಪೊಸಬಗೆ :** ಪೊಸಬಗೆ ದೇಸೆವೆತ್ತು ಚಿತವಂ ಪ್ರತಿಪಾಲಿಸುವರ್ಥದೊಳ್ಪು ರಂಜಿಸೆ ರಸಭಾವದೊಳ್ ನೆಗಟ್ವ ಳಂಕೃತಿ ಕೈಮಿಗೆ ಪೇಟ್ದು ಕಾವ್ಯಮಂ (ಶೃಂಗಾರ. ೧-೨೦). **ಹೊಸಬಗೆ :** ಈ ಹೊಸಬಗೆ ಎಂದರೆ. ಕಾವ್ಯದ ವಿಶಿಷ್ಟಧರ್ಮವೆಂಬಲ್ಲಿ ಸಂಶಯವಿಲ್ಲ (ಕಾಕೋಶ. ೨೨೬); ಕಂದೆರೆಯ ಮರೆಚಿಲ್ವು ತಂಗಾಳಿ ಪೊರೆಯೆ ಎಂದಿನದೊ ಹಳೆತೋಟ ಹೊಸಬಗೆಗೆ ಹೊಸನೋಟ ತಂದು ತೋರ್ಪುದು ಪಸಂ ಬಾಗಿಲಂ ತೆರೆಯೆ (ಕಾಊಕ. ೬೬-೧೦೬). [ಪೊಸ+ಬಗೆ$_3$]

**ಪೊಸವಟ್ಟ** (ನಾ). ೧. ಹೊಸ ಗದ್ದುಗೆ.–ಪೀಠ : ಅದು ಚಿತ್ರಜಂಗೆ ಕುಲದೈವಮಾದಂಗಜಚಕ್ರವರ್ತಿಗೆತ್ತಿದ ಪೊಸಪಟ್ಟಮಂತದು ಮನೋಜನ ಕೈಪಿಡಿಯೆಂದು ಮಾಣ್ದನಾ ಸುದತಿಯ ರೂಪಿನಿಂ ಪೆಱತನೆಂದೊಡೆ ಚಿಃ ಕರಮುಗ್ಗನಾಗನೇ (ಅದಿಪು. ೨-೬೪). ೨. ಹೊಸದಾದ ಹಣೆಪಟ್ಟಿ : ಧವಳವಿಲೋಚನಂ ಧವಳಚಾಮರಮಾಗೆ ಲಲಾಟಪಟ್ಟಮೊಪ್ಪುವ ಪೊಸ ವ[ಶಾಕಾಂ. ಪೆ]ಟ್ಟಮಾಗೆ . . . ಪೋಲ್ತು ತೋಱುವುದಸಿತೋತ್ಪಲೇಕ್ಷಣೆಯಾ ಯೌವನಲಕ್ಷ್ಮಿಯ ರಾಜ್ಯಲಕ್ಷ್ಮಿಯಂ (ಅಜಪು. ೨-೩೪). [ಪೊಸ + ಪಟ್ಟ$_3$]

**ಪೊಸವಟ್ಟೆ, ಹೊಸಬಟ್ಟೆ** (ನಾ). ಹಳೆಯದಲ್ಲದ ಬಟ್ಟೆ ; ನೂತನವಸ್ತ್ರ : ಮಿಸುನಿಯ ಹಡಪ ಚಾಮರ ಕುಂಚ ಕಾಳಂಜಿ ಪೊಸವಟ್ಟೆಯ ಪಾವಡೆಯ ಜಸವಟ್ಟೋಳಿಗದವರ ಮೇಳದೊಳಾಗ ವಸುಧೇಶ ಸಾರಿಗೈದಿದನು (ಕಂಪಕಾ. ೨೨ ೬೮). **ಹೊಸಬಟ್ಟೆ :** "ಅನಾಹತಂ, ನಿಷ್ಪ್ರವಾಣಿ, ತಂತ್ರಕಂ—ಇ ನವಾಂಬರ, ಹೊಸಬಟ್ಟೆ" (ಸಿದ್ಧಾಂತಿ. ೨೦೨) ; ಸಾಧಾರಣವಾಗಿ ಎಲ್ಲರೂ ಹಬ್ಬಗಳಲ್ಲಿ ಮಕ್ಕಳಿಗೆ ಹೊಸಬಟ್ಟೆ ತರುತ್ತಾರೆ (ಊತ).
[ ಪೊಸ + ಬಟ್ಟೆ$_3$ ]

**ಪೊಸವಣ್** (ನಾ). ಮಾಗಿದ ಹಣ್ಣು ; ಪಕ್ವಫಲ : ಎಸಗುವೆಲರಿನೊಡೆ ದೊಸರ್ವ ಪೊಸವಣ್ಣ ಪಸರದಿನೆಸೆವಸಿಯ ಕೊಂಬಸಿಂಬು ಮಾಡಿ ಸುಟಿದು ಗಟಪ್ಪುವೆಳಗೀಯ ಬಳಗಕ್ಕೆ ತಮರ್ಪನೆಯಾದಿಮ್ಮಾವಿನ ಪೊದಱೊಳಂ (ಕಬ್ಬಿಗ. ೩೯). [ಪೊಸ+ಪಣ್$_3$]

**ಪೊಸವರೆಯ, ಪೊಸಪರೆಯ, ಹೊಸಹರೆಯ** (ನಾ). ನವಯೌವನ : ನುಣ್ಣುರುಳ ಪೊಸವರೆಯದಿಂಬುಡಾಸ್ಯದ ಸೂಳೆವೆಣ್ಗಳೊಡನೈದಲುಜ್ಜುಗಿಸೆ ಪಡೆ ಪೋಂಕಂಪ ಡಾಣ್ಗೆ ಸಂತೋಷಿಸುತ ವಂದಿಗಳು ಜಯ ಜೀಯ ಧುರಿಕೆ ಭಾವೆಂದುಲಿಯಲು (ಶಾಪಕಾ. ೬-೪) : ಬಸಿಱೊಳು ಬಂದ ಕುವರನಾದೊಡಮೇನು ಪೊಸವರೆಯದ ಪುರುಷನಸು ಒಸೆದು ನಿಟ್ಟಿಸಿ . . . ಬಣ್ಣಿಸಲಾಗದು ಭಾವೆಯರು (ಹರಿಶ. ೪-೨೨). **ಪೊಸಪರೆಯ :** ಈ ಮೂರುಲೋಕದೊಳಗಿಂತ ಚನ್ನಿಗ ಚಲ್ವ ಪೊಸಪರೆಯದಾ ಗಂಡುಸರ ನಾ ಕಾಣಲಿಲ್ಲ (ಶಶಪೋ. ೨೬-೨೪). **ಹೊಸಹರೆಯ :** ಅಲಘುಕಬರಿಯ ಕಮಲ ನಿಭವದನದ ಕಳಕಂಠಾಳಿಮದ ಹೊಸಹರೆಯದ ಲಲನೆಯರ ವಿಲಾಸಂ ನೃಪನಱಿತ್ತಮನೆಳಕುಳಿಗೊಳಿಸಿದುದು (ಕಥಾಕಾ. ೨-೩); ದೊರೆರಾಯನ ಸಮ್ಮುಖದೆ ಹೊಸಹರೆಯದ ತರುಣಿಯರುಗಳ ಹಸ್ತದಲಿ ಮಿಱುವ ಮಿಸುನಿಯ ಬೊಂಬಾಳದೀವಟಿಗೆಗಳ್ಸುರುಚಿರಪ್ರಭೆಯ ಸೂಸಿದುವು (ಕಂಪಕಾ. ೬-೨೩). [ಪೊಸ + ಪರೆಯ$_3$ (< ಪರಯ)]

**ಪೊಸವಸೆ, ಪೊಸಪಸೆ, ಹೊಸಹಸೆ** (ನಾ). (ಅರಳಿದ ಹೂವಿನಿಂದ ರಚಿಸಿದ) ಮೃದುವಾದ ಹಾಸುಗೆ : ಮಿಸುಗುವ ಪೊಸವಸೆಯೊಳಸದಳ ಮೆಸೆಯೆ ಬಯಸಿ ಪೊಸಯಿಸಿದ ಪೊಸಸುಸಿಲ ಮಸಕದ ಬಸದೊಳ್ ಬಸದಾಗಿಯುಮಸಿಯಳೆನಗಸವಸದೊಳೆ ಬೆಸೆದು ಪೋಗಿ (ಅದಿಪು. ೪-೧೨ ಪ). **ಪೊಸಪಸೆ :** ಮಿಸುಪೆಸಟ ಪಸರದಿನೆಸೆವ ಪೊಸಪಸೆಯೊಳ್ ಮೆಯ್ಯ ನೀಡಾಡಿ ಪೊಳೆವುವಡೆದ ಪಾಲ್ಗಡಲ ತೆರೆದುಱುಗಲೊಳ್ ಪವಡಿಸುವ ಸಿರಿಯಂ ಪೋಲ್ತಿರ್ಪಳ್ (ಕಬ್ಬಿಗ. ೩೦೫). **ಹೊಸಹಸೆ :** ಹಂಸ ತೂಲಸ್ಥಲದೊಳ್ ತಾಂ ಬೈತೊಡು ಮುಳ್ಗಳ ಹೊಸಹಸೆಯೊಳ್ ಬೈತೊಡಂ . . . ಸರ್ವವೊಂದಂದಮೆಂದಾಂ ಸಲೆ ಕಾಣ್ಬಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆಮ್ಮಂ (ರಘ್ನಶ. ೬೫). [ಪೊಸ + ಪಸೆ$_3$]

**ಪೊಸವಳಿಕು, ಪೊಸಪಳುಕು** (ನಾ). ನೂತನಸ್ಫಟಿಕ : ಪೊಸಪಳಿನ ಸೆಲೆಯೊಳ್ ನೆಟಲೆಸೆಯೆ ಮೊಗಂಬೊಕ್ಕು ಪಾಯ್ದು ಕರಿಯುಂ ಹರಿಯುಂ ಪೊಸವೋರ್ತಮನಱಿಯದೆ ಪುಟ್ಟಿಸೆ ನೆಟಲೊಳ್ ಪೋರ್ದು ಸೇದೆಗಿಡು ವವು ನಗದೊಳ್ (ಶಾಂತಿಪು. ೨-೧೦೩). **ಪೊಸಪಳುಕು :** ಪೊಸಪಳುಕಿನ ಗಂಧಾಶ್ಮದಿನೆಸೆವ ಸುವರ್ಣಾದ್ರಿಯಂತೆ ಪಾಸಿದ ಸಿತಸದ್ವಸನದಿನೊಪ್ಪುವ ವಜ್ರದ ಪಸೆಪಣೆಯಿಂ ಪೊನ್ನ ಜಗುಲಿ ಕಣ್ಗೆಸೆದಿರ್ಕುಂ (ತ್ರಿಪುರ. ೧೯-೩೬). [ಪೊಸ + ಪಳಿಕು( < ಪಟಿಕ)]

**ಪೊಸವಳ್ಳಿ, ಹೊಸವಳಿ, ಹೊಸವಳ್ಳಿ, ಹೊಸಹಳಿ, ಹೊಸಹಳ್ಳಿ, ಹೊಸಳ್ಳಿ** (ನಾ). ಒಂದು ಊರಿನ ಹೆಸರು : ವಳ್ಳಾವಿಷಯ ಪಣ್ಣಾಗ್ರಾಮೋ ಕಱಿಗಾಲಊರ್ಪೊಸವಳ್ಳಿ ಮಿಾದುಂಣ್ಡಾವಳ್ಳಿ (ಮೈಆ. ೧೯೩೦, ೩-೧೯; ಸು. 475); ಪುಂನಾಡಱುಸಾಸಿರಮಂ ತಟಿಕಾಡು ಮಾಯ್ದಿಲೆಗೆಯುಂ ಪೊಸವಳ್ಳಿಯುಂ (ಎಕ. IV (R). ಕಾಮುರಾ. ೧೦೩-೪ ; ಸು. 10ನೆಯ ಶತ) ; ವೀರಸಿದ್ಧೇಶ್ವರಮಹಾದೇ[ವ]ಗ್ಗೆ ಪೊಸವಳ್ಳಿಯ ನೀರಗಾವುಣ್ಡನ ಕೆಯ್ಯಲ್ಲೊನ್ನಱ ಕೊಟ್ಟು ಮಣ್ಣಱ ಕೊಣ್ಡು (ಎಕ. I. ೪೯-೬; 1070). **ಹೊಸವಳಿ :** ಸರಗೂರು ಉಗುನೆಯ ಹೊಸವಳಿ[ಸಿವನ] ಹಳಿ . . ಚತುಸ್ಸೀಮಾಸಮನ್ವಿತವಾದ ಕಾಲುವಳಿಗಳು ಸಹಿತವಾಗಿಟ್ಟ (ಎಕ. IV(R), ಕೊಳ್ಳೆಗಾ. ೩೦-೩೬ ; 1321). **ಹೊಸವಳ್ಳಿ :** ಅಶೇಷಮಹಾಜನಂ[ಗ]ಳು ತಮ್ಮ ಶ್ರೀಹರದೆ ಕಾಲುವಳ್ಳಿ ಹೊಸವಳ್ಳಿ ಶ್ರೀರ × × ದೇವರ ಖಣ್ಡಸ್ಫುಟಿತಜೀರ್ಣೋದ್ಧಾರಕ್ಕಂ ದೇವರ ನಿತ್ಯನಿವೇದ್ಯಕ್ಕಂ . . . ಮಾಡಿ ಬಿಟ್ಟ ಎರೆ (ಎಕ. VII. ಹೊನ್ನಾಳಿ. ೧೧೩-೧೪ ; ಸು. 1250 ?). **ಹೊಸಹಳಿ :** ಚಿರುಕನ ಹಳಿಯ ಗ್ರಾಮವೊಂದಕೆ ಎಂಭತ್ತು ವರಹ ಹೊಸಹಳಿ ಗ್ರಾಮವೊಂದಕೆ ಐವತ್ತಐದುವರಹ (ಎಕ. III (R). ಗುಂಡ್ಲುಪೇ. ೦೩೦-೬೬ ; 1521) ; ಹೊಸಹಳಿಯ ರಾಯಂಣ ಪಱಿಯಂಣ . . . ಯಿವರು ಮುಂತ್ತದ ಸಮಸ್ತರು . . . ಯಿಾ ಸಾಲವನು ಧಾರಾ ಪೂರ್ವ್ವಕವಾಗಿ ಕೊಟ್ಟೆಉ (ಎಕ. II (R). ೩೫೨-೧೯; 1634); ಪಾರ್ಥಿವಕುಲ ಪವಿತ್ರನುಂ ಕ್ರಿಷ್ಣರಾಜಪುಂಗವನುಂ ಬೆಳುಗುಳದ ಜಿನಧರ್ಮಕ್ಕೆ ಬಿಟಂಥ ಗ್ರಾಮಾದಿಗ್ರಾಮಭೂಮಿಗಳ್ ಅರ್ಹನಹಳಿಯುಂ ಹೊಸಹಳಿಯುಂ ಜಿನ ನಾಥಪುರಂ (ಎಕ. II (R). ೩೩೦-೨೦; 1723). **ಹೊಸಹಳ್ಳಿ:** ಹೊಸಹಳ್ಳಿಯ

ಗ್ರಾಮವನು ಕಲ್ಲ ನೆಟ್ಟು ಕೊಟ್ಟೆಉ (ಎಕ. IV (R). ಹುಂಷೂ. ೦೯೦-೦೬ ; 1586) ; ಮಹಿಶೂರ ಶ್ರೀಕೃಷ್ಣರಾಜವಡೆಯರ್ಯ್ಯನವರು ವೆಂಕಟರಾಮ್ಮಗೆ ಬರೆಸಿಕೊಟ್ಟ ಕ್ರಯ ಭೂದಾನ ತಾಮ್ರಶಾಸನದ ಕ್ರಮವೆಂತೆಂದರೆ . . . ಉಪಗ್ರಾಮ ಹರಯೂರ ಗ್ರಾಮ ೧ ಹೊಸಹಳ್ಳಿಗ್ರಾಮ ೧ (ಎಕ. III (R). ಕಂಕಸ. ೦೧೯-೦೦; 1761). **ಹೊಸಳ್ಳಿ:** ಸಿಂಗಸಮುದ್ರವಂ ಕೂಡಿದ ಕಂಬರಲೆಯ ಹಳ್ಳವೆ ಹೊಸಳ್ಳಿಗೆ ಆ ಕಲ್ಲಿಗೆಟಿ³ಗೆ ಆ ಸೀಮೆ ಆ ಕೆಟಿ³ ಹೊರಗಣ ಹಳ್ಳದಲು ಸೀಮೆ (ಎಕ. IV (R). ಕಾಮರಾ. ೩೦೬-೩೨; 1318). [ಪೊಸ + ಪಳ್ಳಿ$_1$]

**ಪೊಸವಾಣತಿ** (ನಾ). ಆಗತಾನೆ ಹಡೆದವಳು ; ಹಸಿ ಬಾಣಂತಿ : ಒಡನೆಯು ಚಕ್ರವಾಕಿ ಪೊಸವಾಣತಿ ಕೋಗಿಲೆಯಿಸಾಟಿ³ಲಿಂದು ಕೇಳ್ಗಡ ಗಿಳಿವೆಣ್ಗೆ ಪೊತ್ತಿನೊಳಗೆಯ್ದೆ ನವಿಲ್ ಮನೆದೀವಿ ಮಕ್ಕಳಂ ಪಡೆದುದು (ಅರ್ಧನೇ. ೦-೯೯) ; ಅಂತು ಮನಂಗೊಳೆ ನೋಟ್ಪಿನಮದಟಿ ಕೆಲನೆಲದ ಪಸುರ್ವುಲ್ಲಂ ಮೇವುತಿರ್ದ ಪೊಸವಾಣೆ[ಣ]ತಿವುಲ್ಲೆ ಮುನ್ನ ತನ್ನ ನಡೆಪಿ ದುದಪ್ಪುದಟಿಂ ಪರಿಚಯಿಕ್ಕೆಳಿಸಿ (ಕೃಕೃ. ೩-೬೬ ವ).
[ ಪೊಸ + ಬಾಣತಿ ( < ಬಾಳಂತಿ) ]

**ಪೊಸವಾದಗ** (ನಾ). ಒಂದು ಊರಿನ ಹೆಸರು : ಶ್ರೀಮತ್ ಅನನ್ತ ವೀರ್ಯ್ಯಯ್ಯಂಗಳ್ಪೆಗ್ಗಡೂರುಂ ಪೊಸವಾದಗವುಮುಮನಭ್ಯನ್ತರಸಿದ್ಧಿಯಾಗೆ ಪಡೆದರ್ (ಎಕ. I (R). ೯೮-೦೦; 978). [ ಪೊಸ + ? ]

**ಪೊಸವಾವುಗೆ** (ನಾ). ಹೊಸತಾದ ಚಪ್ಪಲಿ, – ಪಾದರಕ್ಷೆ : ಆಗಳಂಗ ರಾಜಂ . . . ಪಂಚರತ್ನಗರ್ಭಂಗಳಪ್ಪ ಮಂಗಳಜಳಂಗಳಂ ಮಿಂದು ಮೆಯ್ಯನಾಱಿಸಿ ದುಕೂಲಾಂಬರಮನುಟ್ಟು ಪೊಸವಾವುಗೆಯಂ ಮೆಟ್ಟಿ (ಶಂಶಾ. ೦೨-೦೦೬ ವ). [ ಪೊಸ+ಪಾವುಗೆ ]

**ಪೊಸವಾಸಣಿಗೆ** (ನಾ). ಹೊಳೆಯುವ ಮುಸುಕು: ಬಾಸಣಿಸಿದ ಚಿನ್ನದ ಪೊಸ ವಾಸಣಿಗೆಯ ಪೊನ್ನ ಸಿವಿಗೆ ಮಣಿಮಯಕಳಶೋದ್ಭಾಸಿ ದೆಸೆದೆಸೆಯೊಳೆಸೆಯೆ ವಿಳಾಸಂಬೆರಸಣುಗಭೋಗಿಯರ್ ಕೆಲರಸೆದರ್ (ಅಂಕೃ. ೦೦-೯೦).
[ಪೊಸ+ಬಾಸಣಿಗೆ$_1$]

**ಪೊಸವಾಸಿ** (ನಾ). ಅಂತಃಪುರದವರ ರಕ್ಷಣೆಗಾಗಿ ನಿಯುಕ್ತನಾಗಿರುವ ವೃದ್ಧ: "ಅಜ್ಜೆಂದು ಪೊಸವಾಸಿ (ಸಾವಾಸಿ)" (ಶಬ್ದ. ಪ. ಹು); "ಅಜ್ಜೆಂಬುದು ಪೊಸವಾಸಿ" (ಶಬಾ. ೦೯೦). [?]

**ಪೊಸವಾಸಿಗ, ಪೊಸಬಾಸಿಗ** (ನಾ). ನಳನಳಿಸುತ್ತಿರುವ ಹೂಮಾಲೆ,– ಸರ ; ಬಾಡಿರದ ಹೂವಿನ ದಂಡೆ : ಸುರಕುಸುಮದ ಪೊಸವಾಸಿಗ ಮೆರಪುಂ ಕರತಳದೊಳೆಸೆದು ತನ್ನಯ ತೋಳೊಳೆ ದೊರೆಯೆನೆ ಬಂದತ್ತು ಸೊಯಂಬರಕ್ಕೆ ಬರ್ಪಂತೆ ದೇವಗಣಿಕಾನಿಕರಂ (ಅಂಕೃ. ೦೦-೨೦) ; ಪೊಸ ವಾಸಿಗವುಂಗಜಚಕ್ರವರ್ತಿಗಂದೆತ್ತಿದ ವಿಮಾನಕೇತನಮನೊತ್ತರಿಸುತ್ತಿರೆ ಚಲ್ಲ ವಾಡಿ ಪೂವೆತ್ತುವ ಮಾಲೆಗಾರ್ತಿಯರನಂದರಿಕೇಸರಿ ನಿಂದು ನೋಡಿದಂ (ಶಂಶಾ. ೯-೬೦) ; ಪೊಗಟ್ಟಾಕೆ ಮಾಣಿ ನಾಣಿನಿಸಗಲೆ ನಯಂ ಬೀಟಿ ದಿಟ್ಟ ನೆಯ್ದಿಲ ಪೊಸವಾಸಿಗದೊಳೆಡೆಯೆನೆ ಕುಮಾರನ ಪೆಗಲೊಳ್ ನೆಲೆ ನೆರೆಯೆ ಮಾಲೆ ಮೂಡಿದ ತೆಱದಿಂ (ಶಾಂತಿಪು. ೩-೦೩೬). **ಪೊಸಬಾಸಿಗ:** ಕಟ್ಟಿಯು ಮೇನೊ ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ (ಅನಂಪು. ೦-೪೩) ; ಪೊಸಬಾಸಿಗವಂ ಬಿಸುಡುತೆ ಮಿಸುನಿಯ ಭೃಂಗಾರಿಗಳ ಘಟಂಗಳನೊಡೆವುತ್ತಸವಸದ ಕರ್ಪೂರವಂ ತಾಪಸನುರುಮುಳಿ ಸಿಂದೆ ಮಾಡುತಿರಲಂತಾಗಳ್ (ಶ್ರೀಪು. ೨-೬೩). [ಪೊಸ + ಬಾಸಿಗ]

**ಪೊಸವಾಳೆ** (ನಾ). ಎಳೆಯದಾದ ಬಾಳೆ : ಪಳಗಪ್ಪುರವನನೀರ್ ಪೊಸವಾಳೆಯ ಸುಳಿ ಕಮ್ಮಿದುಮಾದಲರೆಲೆಯಸುಗೆಯ ತಳಿರ್ . . . ಬಳಿರ್ವಣ್ಣನ ಬಾವನ್ನದಿನಾಳಿಯರೆಳಸಿ ಕರಂ ಸತ್ಕರಿಸಲು (ಜಯಕಾ. ೯-೪೦).
[ಪೊಸ + ಬಾಳೆ$_1$ (<ಬಾಟ$^3$) ]

**ಪೊಸವಿಲ್** (ನಾ). ಹೊಳೆಯುವ ಬಿಲ್ಲು : ಇಸಲೊಡರಿಸುವಿಂಗೋಲಿನ ಮಿಸುಗುವ ಪೊಸವಿಲ್ಲ ಜೇವೊಡೆಯ ದನಿಯವೊಲೆಡೆ ಸೆಯೊಳ್ ನೇವುರದುಲಿ ಪಸರಿಸೆ ಮೆಲ್ಲನೆ ಚೆಲ್ಲಗಾರ್ತಿಯರ್ ನಡೆತಂದರ್ (ಕಬ್ಬಿಗ. ೯೬) ; ಪೊಸವಿಲ್ಲಂ ತೋಳ್ಪಲದಿಂ ಪಸರಿಪುದಾಳ್ದಲ್ಲ ಸುತ್ತಿ ಬಳಸುತೆ ಬೆನ್ನೊಳ್ ಮಿಸುಗುವ ಸಿಂಪುಗಳಂ ತಾಳ್ದಿಸೆವುದು ಪುಳುವಲ್ಲ ತಿಳಿದು ಪೇಳ್ ಲಲಿತಾಂಗೀ (ಶ್ರೀಪು. ೨೪-೦೬೩). [ಪೊಸ + ಬಿಲ್$_2$]

**ಪೊಸವಿಸಿಲ್, ಪೊಸಬಿಸಿಲ್** (ನಾ). ಎಳೆಯ ಬಿಸಿಲು ; ಹೊಂಬಿಸಿಲು : ತೆಕ್ಕನೆ ತೀವಿದ ತಮಾಲತರುಗಳುಮಂ ಪೊಸವಿಸಿಲ ಪೊಳೆಪಿನಿಂ ನುಣ್ಣ ನುಜ್ಜಳಿಪ ರನ್ನದೆಳವೆಳಗಿನ ಬಳಗದಿಂ ಬಣ್ಣಿಸಿ (ಕಾದಂಬ. ೩೨೬); ಪೊಸ ವಿಸಿಲೊಳ್ ಮುಗುಳ್ಗಳ್ ಸಡಿಲ್ದುಸಿರ್ವಂತೆ . . . ಬೆಳಪ್ಪನೀಗೆ ಪರಂಗಳ (ಕಾಮ್ಯ. ಕ. ೯೦೬). **ಪೊಸಬಿಸಿಲ್:** ಪೊಸಬಿಸಿಲಮ ಪೆಱದೆಗೆದಿರೆ ಕಿಸುಸಂಜೆಯು ಮುಡುಸಮೂಹಮುಂ ಮಿಸುಪವೊಲೇನೆಸೆದುದೊ ಪವಳಂ ಮುಕ್ತಾವಿಸರಂ ಚಾಂಬವಜಳಂ ಪೆಡಂಮೆಟ್ಟಲೊಡಂ (ಧರ್ಮಪ. ೬-೦೦೯). [ಪೊಸ+ಬಿಸಿಲ್]

**ಪೊಸವುಟ್ಟಿ** (ನಾ). ಹೊಸದಾಗಿ ರಸ ತುಂಬಿದ ಜೇನುಹುಟ್ಟು : ಮುಸುಱಿತು ಕೋಂಟೆಯುಂ ಮಸಗಿ ಜೇಂಬುಟುಗಳ್ ಪೊಸವುಟ್ಟಿಯಂತೆ (ಶಬ್ದ. ೨-೦೦೬). [ಪೊಸ + ಪುಟ್ಟಿ$_2$]

**ಪೊಸವುಣ್** (ನಾ). ಆಗತಾನೆ ಉಂಟಾದ ಗಾಯ ; ಹಸಿಯಾಗಿರುವ ಗಾಯ : ಇಱಿ ಕಿಱಿವನೊದಱಿ ಕೈರಂದಱಿ ಮುಱಿ ನಿಟ್ಟೆಲ್ವನರಿದು ನೆಱ[ನೆ]ಡೆಗಳ್ ಬಾಯ್ದೆಱೆಯೆ ಪೊಸವುಣ್ಗಳೊಳ್ ಪೊಯಿರ್ ಮಱುಗುವಿನಂ ಲೋಹವಾರಿಯುಂ ಮಱುಗುವಿನಂ (ಪಮ್ಪಾರಾ. ೦೨೬-೩) ; ಹರಿ ಶಸ್ತ್ರ [ಹತಿಯಿಂ]ದವಾದ ಪೊಸವುಣ್ಣೀತಂಗೆ ಮೆಯ್ಯೊಳ್ ನವಾಭರಣಂ ಶೋಭಿಸುವಂತೆ ಶೋಭಿಸುವುದು (ಶಾಂತಿಪು. ೯-೬೯). [ಪೊಸ + ಪುಣ್]

**ಪೊಸವುರ**, ಹೊಸಪುರ (ನಾ). ಒಂದು ಊರಿನ ಹೆಸರು : ಶ್ರೀಮತುರುಷಾ ಮಹಾರಾಜರ್ ಪ್ರೀತುವೀರರಾಜ್ಯಂಗೆಯೆ ಲೋಕಗಾಳ್ಪೊಸವುರಂ ಬ್ರಮ್ಮದೆಂ ಕೊಟ್ಟು (ಕ್ವಿಅ. ೦೯೯೩, ೦೦-೩; ಶು. 788). **ಹೊಸಪುರ :** ಈ ಕಲ್ಲಿಗೆ ಬಡಗಲು ಹೊಸಪುರಕ್ಕೆ ವಾಯುವ್ಯಮೂಲೆ ಬಸವನ ಕಿಟ್ಟನ ಹೊಲದಲ್ಲಿ ನೆಟ್ಟ ಕಲ್ಲು ೧ (ಎಕ. IV (R). ಶಾಂಡಪ. ೯೯-೬೯೦; 1722). [ಪೊಸ + ಪುರ$_2$]

**ಪೊಸವುಲ್, ಪೊಸಪುಲ್** (ನಾ). ನಳನಳಿಸುವ ಹುಲ್ಲು ; ಎಳೆಯ ಹುಲ್ಲು : ಪಳಿಗೊಂಡೆ ಬಿಳ್ದ ಪೊಸವುಲ್ಗಳ ಪೊದಱಿಂಳ್ಗನೆತ್ತುವವರಿಲ್ಲದೆ ಮೇಣ್ಪಳಲುತ್ತಿರ್ದಪುದು (ವ್ಯಹು. ೦೦-೬). **ಪೊಸಪುಲ್ :** ಪೊಸ ಪುಲ್ಲೊಳ್ ಕಿಚ್ಚನಿಟ್ಟೊದಿದೊಡುರಿದುರಿ ಕೂರ್ಪಾಗ್ರಮಂ ಪತ್ತೆ . . . ನಂದಿಸಲೇತಂ ಪಾಂಥನುದಾಱದೆ ನಡುಮಡುಮಂ ಪೋಗಿ ಬಿದ್ರ್ಯಕಿಲಿಂ ಕಂಪಿಸುತಿರ್ದಂ (ಲೀಲಾವ. ೯-೨೦). [ಪೊಸ + ಪುಲ್]

**ಪೊಸವೂ, ಪೊಸಪೂ, ಹೊಸಹೂ** (ನಾ). ಬಾಡದೆ ಇರುವ ಹೂವು ; ನಳನಳಿಸುತ್ತಿರುವ ಹೂವು : ಜಲಜಲನೊ[ಟ್ಕು]ತಿರ್ಪ ಪರಿಕಾಲ್ ಪರಿಕಾಲೊಳಳುರ್ಕೆಗೊಂಡ ನೆಯ್ದಿಲ ಪೊಸವೂ (ಶಂಶಾ. ೦-೩೨) ; ತನಗನು ರೂಪದೆಂಬಿನೆಗಮೊರ್ವ ಕುಮಾರತಪಸ್ವಿ ದೇವತಾರ್ಚನೆಗೆ ಪನಕ್ಕೆ ಬಂದು ಪೊಸವೂಗಳನರ್ತಿಯೊಳಾಯ್ದು ಕೊಯ್ದು ಬೆನ್ನನೆ ಬರಲ್ (ಕಾದಂಪೂ. ೬೯೦). **ಪೊಸಪೂ :** ಪೊಸಪೂವಬ್ಬನಿಯೊಂದಜಿಸೊಳ್ ಸೊಗಯಿಂಕುಂ (ಅಂಕೃ. ೬ ೩೪). **ಹೊಸಹೂ :** ಸಿರಿಮುಡಿಗೆ ಹೊಸಹೂಗಳಂ ತಂದು ಸೂಡುತುಂ (ಶಂಬರ. ೦-೩೬). [ ಪೊಸ + ಪೂ$_2$ ]

**ಪೊಸವೂರ್**, ಹೊಸವೂರು, ಹೊಸೂರು (ನಾ). ಒಂದು ಊರಿನ ಹೆಸರು : ಇಂತಿದಕ್ಕೆ ಕಾಕಂಬಾಟ ಕಂಭಯ್ಯನುಂ ಆಸಾಗೊರ ಕನ್ನನುಂ ಪೊಸವೂರ ಬೇದಮ್ಮನುಂ . . .ಸಾಕ್ಷಿ (ಎಕ. XI, ಚಿತ್ರದು. ೬೯-೨೬; 968); ಆಯ × ಪೊಸವೂರ ತಱಾಪಂ ಮಗುಟ್ಟ × × × ಐದ

ಕೊಳ್ಳಿಯು[ಣ್ಣ] ಸತ್ತು ಸುರಗತಿಗೆ ಸನ್ದಂ (ಎಕ. III (R), ಗುಂಡ್ಲುಪೇ. ೩೦-೬; 10ನೆಯ ಶ.). **ಹೊಸವೂರು :** ಹೊಸ[ವೂರು] ಅಲಗಿಕೊಂಡನ ಹಳ್ಳಿ . . . ಮುಂತಾಗಿ × × ವಣ ಚತುಸ್ಸೀಮಾಸಮನ್ವಿತವಹ ಕಾಲು ವಳಿಗಳು ಸಹಿತವಾಗಿ (ಎಕ. IV (R), ಕೊಳ್ಳೇಗಾ. ೩೦-೩೬; 1321). **ಹೊಸೂರು :** ಪುನರ್ವ್ವಸುನಕ್ಷತ್ರದಲು ಹೊಸೂರಾದ ಯಿಳಚಲ ಹೊದ ವಿಚಲು ಬೈರಮಂಗಲದ ಅಶೇಷ ಮಹಾಜನಂಗಳು . . . ಬಿಟ್ಟು ಕೊಡಂಗೆ (ಎಕ.IV (R), ಎಳಂದೂ. ೦೫-೬; 1283); ಬೊಮ್ಮಿದೇಪವೊಡೆಯರಿಂಗೆ ಹಜುಹ ಹೊಸೂರ ನಾಡೊಳಗನ ಮಜುವಕಗೊಂಕನು ಬಲಾಳಪುರವಾಗಿ ಆಚಂದ್ರಾರ್ಕಉ ಸರ್ವಮಾನ್ಯವಾಗಿ ಧಾರಾಪೂರ್ವಕವಾಗಿ ಕೊಟ್ಟೆಉ (ಎಕ. X, ಗೌರಿಬಿ. ೦೬-೦೮; 1333); ಊರಿನ ಹೆಸರು 'ಹೊಸೂರು' ಆದರೂ ಜನರಲ್ಲಿ ಮಾತ್ರ ಹಳೆಯ ಸಂಪ್ರದಾಯದ ಕೊಳೆ ನಖಶಿಖಾಂತವಾಗಿ ತುಂಬಿ ಕೊಂಡಿತ್ತು (ಹೊಸೂಹ. ೦೬). [ಪೊಸ + ಊರ್]

**ಪೊಸವೆಣ್,** ಹೊಸವೆಣ್ (ನಾ). ನವಯುವತಿ : ಕಡುಚೆಲುವೊಪ್ಪೆ ಸಾರ್ದ ಪೊಸವೆಣ್ಣದನಾರಯೆ ಮುನ್ನಮೇಂ ಕರಂಬಿಡಿದೆನೊ ಮೇಣ್ ಕರಂಬಿಡಿಯೆನೋ ಎನುತಂ ಮನದಲ್ಲಿ ನಿರ್ಣಯಂಬಡೆಯದೆ (ಶಾಕುಂತ. ೬೭-೦೦೯). **ಹೊಸವೆಣ್.**

**ಪೊಸವೆಂಡಿರ್, ಹೊಸವೆಂಡಿರ್** (ಬಹುವ) : ಶ್ರೀಮದಜಿತೆಯುವ್ಪರಸನ್ ಸಮಸ್ತರಾಜ್ಯಙಗ್ಗೆಯುತ್ತಮಿರೆ ಅವರ ಸಾಮನ್ತಂ ಶ್ರೀಮುತ್ತರ ಅತಿ ರಥಗಣ್ಡ ಪೊಸವೆಣ್ಡಿರಟ್ಟಿ ಬೀಸಿ ತಪ್ಪದೊನ್ . . . ಆಸನ್ನಿನಾಡನಾಳು ತಿರೆ (ಎಕ. XV, ಅರಸೀ. ೨೦೫-೯; ಸು. 890); ಕಳಸಂ ಕನ್ನಡಿ ಗುಡಿ ಪಜ್ಜಳಿ ಸುವ ಮಾಂದಳಿರ ತೋರಣಂ ದೆಸೆದೆಸೆಯಂ ಬಳಸಿರೆ . . . ಪೊಜಿಮಟ್ಟ ರೂಸಗೆಯಿಂ ಪೊಸವೆಂಡಿರ್ (ಕಬ್ಬಿಗಾ. ೩೨೩); ಆಧುನಿಕಕವಿತೆಯೂ ಹಸು ಮಕ್ಕಳಂತಾಡುವದು. ಹೊಸವೆಂಡಿರಂತೆ ನಗುವುದು (ಶಾಹಿ. ೯೭).

[ಪೊಸ + ಪೆಣ್]

**ಪೊಸವೆಸರ್** (ನಾ). ಬೇರೆಯಂ ಹೆಸರಂ : ಪೊಸ — ಪೆಸರ್, ಪೊಸವೆಸರ್ ; ಎಳ—ಬಿದಿರ್, ಎಳವಿದಿರ್ (ಶಾಶಾಶೂ. ೩೦ ಪ್ರಯೋ). [ಪೊಸ + ಪೆಸರ್]

**ಪೊಸವೆಸಲ್** (ನಾ). ಮೊದಲನೆಯ ಹೆರಿಗೆ ; ಪ್ರಥಮಪ್ರಸೂತಿ : ಪೊಸ ವೆಸಲಾದ ಪೆಣ್ಗಳ ಜನ್ನನದ ಬಿಗುರ್ಪೆಟಿದು ತಿಳಿವಂತೆ ತೋಜೆವೆಂಡಿರ್ಗ ಕಿನುಬ್ಬರಮಡಂಗಿ ತಿಳಿದುದು (ರಾಜಶೇ. ೬೩-೩). [ಪೊಸ + ಬೆಸಲ್]

**ಪೊಸವೆಳ್ದಿಂಗಳ್** (ನಾ). ಚೆಲುವಾದ ಬೆಳುದಿಂಗಳು ; ಮನೋಹರವಾದ ಬೆಳುದಿಂಗಳು: ಪೊಸವೆಳ್ದಿಂಗಳ್ ದೆಸೆದೆಸೆಗೆಸೆದುದು ಕುಮುದವನವುಲರ್ದು ದೆಂಬುತಿರದೇನೆಸೆದುದೊ ಕಟಾಕ್ಷಮಾಲಾಪ್ರಸರಂ ಭ್ರೂಲಾಸ್ಯಸೌಂದರಂ ನರ್ತಕಿಯಾ (ಆದಿಪು. ೯-೩೯); ಪೊಸವೆಳ್ದಿಂಗಳ್ ಪಗಲೊಳಮೆಸೆವಂತಿರೆ ದಂತ ಕಾಂತಿಗಳ್ ವಿಭು ನುಡಿದಂ (ಶಾಂತಿಪು. ೮-೦೬೬); ಪೊಸವೆಳ್ದಿಂಗಳ್ಪುಸುಕಿದ ಮಿಸುಪ ಕುಳಾದ್ರಿಗಳ ತೆಱದಿ ಪೆಱಂಕಿನ ಭವನಪ್ರಸರದೊಳತಿಲೀಲೆಗಳಿಂ ದೆಸೆದಿರ್ದುವು ಸಪ್ರಮದದ ಭದ್ರಗಜಂಗಳ್ (ತ್ರಿಪುರ. ೦೬-೩೯).

[ಪೊಸ + ಬೆಳ್ದಿಂಗಳ್]

**ಪೊಸವೆಳ್ಪು** (ನಾ). ಅತಿಶಯವಾದ ಬಿಳುಪು : ಪಸರಿಸಿದ ಪಯಃಪೂರದ ಪೊಸವೆಳ್ಪು ನಿಜಾಂಗರುಚಿಯ ಪೊಜಿಪೊಜಿಗೆ ಪೊದಟ್ಟಿಸದಿರೆ ಬೆಳ್ಮುಗಿಲಿಂದಂ ಮುಸುಕಿದ ಬಾಲಾರ್ಕಬಿಂಬಮಿರ್ದಂತಿರ್ದಂ (ಆದಿಪು. ೬-೯೩); ಒಳಗೆಸೆವ ವೃಷಭನಂಗದ ಬೆಳರ್ವಣ್ಣಂ ಪೊಗೆ ತೀವಿತೆನೆ ಪೊಸವೆಳ್ಪುಜ್ವಳಿಸಿದುದು ತನು ವಿನೊಳಕ್ಕೋಮಳಿಗೆ (ವೃಷಭ ೩-೩). [ಪೊಸ + ಬೆಳ್ಪು$_1$]

**ಪೊಸವೇಟ, ಪೊಸಬೇಟ, ಹೊಸಬೇಟ** (ನಾ). ಮೊದಲ ಪ್ರಣಯ: ಪೊಸವೇಟಮೆಂಬ ಚೆಲ್ವಿಡಿದೆಳವಾಮರಂ ಪುಳಕಮೆಂಬ ನವಾಂಕುರದಿಂ ವಿಳಾಸಮಂ ಪಡೆದು . . . ಸುಸಿಲೆಂಬ ಬಸಂತದೊಳೇಂ ಪೊವಟ್ಟುವೋ (ಆದಿಪು ೦೨-೨೬), ಪಲ್ಲವಾಧರ ದಂತ (ಕುಚ ಪೊಗರುಗುವ) ಧಮ್ಮಿಲ್ಲದ ಮೆಱೆವ ಹೆಣ್ಣುಗಳು ಪುಲ್ಲದಲಾಕ್ಷಿಗೆ ಪೊಸವೇಟ ಪುಟ್ಟುವಂತೆಲ್ಲರಿಬ್ಬಗೆಯಾದ ರಾಗ (ಸೋಹಕ. ೦೯-೩೩); ಪೊಂಗುವ ಪೊಸವೇಟದ ಗೋಪಾಂಗನೆ ತನ್ನಳವು ಗಿಡಿಸಿ ಮುಮ್ಮೆಱೆಯಿಸಿದಾ ಮಂಗಳಮೂರ್ತಿಯ ಸಿಂಗರದಿಂಗಿತಮಂ ಕೆಳದಿಗಿಂತು ಬಗೆವುಗೆ ಪೇಟ್ದಳ್ (ನೇಮಿನೋ. ೦೦-೨೯). **ಪೊಸಬೇಟ :** ಪುತ್ರ ಮೊಂದೆಡೆಯೊಳೊರ್ವಳ್ ತನ್ನನುಬಿಡದ ಪೊಸಬೇಟದಾಣ್ಮನೇಗೆಯ್ದುಂ ಪೋಗಲೀಯದೆ ತನ್ನಳವನೆ ತೋಱುಂ (ಶಂಕರಾ. ೯-೯೬ ಪ). **ಹೊಸಬೇಟ :** ತಲೆಯಲಿ ೧ರಿದು ಕೂಂದಲುಗಳೌಷಧಿಗಿಲ್ಲ ಸಲೆ ಕುಚಯುಗಳವಿಂಗಿದವು ಹೊಲೆಗೆಟ್ಟು ಹೊಸಬೇಟಗೆಯ್ವ ಪಾತಕಿ ಮೊಗ್ಗೆಮೊಲೆಯಾಗಳಿಗೆ ಪೇಳ್ದಪರೇ (ಸೋಹಕ. ೦೬-೬೮). [ಪೊಸ + ಬೇಟ (< ಬೇಂಟ)]

**ಪೊಸವೇಟಕಾರ್ತಿ** (ನಾ). ಯುವಪ್ರೇಮಿಯಾದವಳು: ಬೆಳಗಾಯ್ತೆಂ ಬೊಂದಱಲಗ್ಗಳಿಸಲ್ ಪೊಸವೇಟಕಾರ್ತಿಯರ ಬಿಸುಸುಯ್ಯೊಳ್ ಬೆಳಗಿದು ದೆಂಬಿನವಾಗಳದೆಂ ಕೊರಗಿದುದೊ ಕುಮುದಿನೀವಿಸ್ತಾರಂ (ಕಾದಂಬ. ೦೬೩); ಪೊಸವೇಟಕಾರ್ತಿಯರ್ತಮ್ಮ ಕನ್ನೆವೇಟಮವನೊಳಾಗದೆ ಕೆಟ್ಟೆವೆಂದು ಕಟ್ಟುಗೆಡೆಯೆಯುಂ (ಅರ್ಧನೇ. ೫-೨ ಕ).

[ಪೊಸವೇಟಕಾಱ + — ತಿ$_1$ (<—ಇತ್ತಿ)]

**ಪೊಸವೇಟಕಾಱ** (ನಾ). ಯುವಪ್ರೇಮಿಯಾದವನು: ಪುತ್ರಮೊಂದೆಡೆ ಯೊಳಂದೆ ಪೊಸಯಿಸಿದ ಪೊಸವೇಟಕಾಱರಪ್ಪ ಕಡುನಲ್ಲರಿರ್ವರಿರೆ (ಅಂತೃ. ೦೨-೨೬ ವ). [ಪೊಸವೇಟ + —ಕಾಱ]

**ಪೊಸವೊಗರ್, ಪೊಸವೊಗರು, ಹೊಸಹೊಗರು** (ನಾ). ಉಜ್ವಲ ವಾದ ಕಾಂತಿ: ನೇಸರೇಂ ನಗುನಗುತ ನಲ್ಮೆಗಳ ತೊಡವೆನಲ್ ಸೂಸುವಂ ಕದಿರ್ಗಳಂ ಕಳ್ತಲೆಯ ಸುಡುವಂ ಪೊಸವೊಗರ್ ಕೋದಿರ್ಪ ಪೊಳ್ತಿಳೆಯನೆಳೆ ಬಿಡುವ ಪೊಸೆದು ನೆಲದೊಳ್ಪುಗಳ ಬಾಳ್ವೆಳ್ಪ ತೊಡೆವಂ (ಕಾಯೂರ. ೬೦-೦೨೯). **ಪೊಸವೊಗರು:** ಹಸುರು ಹೊಲದುಸಿರಾಗಿ ಬೀಸುತಿರೆ ತಂಗಾಳಿ ಸುಸಿಲು ಮೈ ವಡೆಯುತಿದೆ ಪೊಸವೊಗರ ಪೆಂಪು (ಕಾಂಜಿರ. ೬೬-೦೦೬). **ಹೊಸಹೊಗರು :** ಹೊಸಹೊಗರ ಜವ್ವನ ಸಿರಿಯ ಜೋಡಣೆ ಜನಮನವನಾವರಿಸಿದುದು ನಿಪ್ಪಸರದಲಿ ಪಾಂಚಾಲನಂದನೆಯ (ಕುಮ್ಯಾಭಾ. ೦೫-೨೬); ಬಂಬಲುಗುರುಳ ಹೊಸಹೊಗರ ಕಲಿತ ಮದದುಬ್ಬುಗಳ . . . ಪುಳಿನಜಘನಸ್ಥಳದ ದಾನವಸತಿಯರಿರ್ದರದೊಂದು ತಾಣದಲಿ (ಕೊರಂಚ. ೫-೨-೬೯).

[ಪೊಸ + ಪೊಗರ್]

**ಪೊಸವೊಗರು** 'ಪೊಸವೊಗರ್' ನೋ.

**ಪೊಸವೊನ್, ಪೊಸವೊನ್, ಹೊಸಹೊನ್ನು** (ನಾ). ೧. ಹೊಳೆಯುವ ಚಿನ್ನದ ನಾಣ್ಯ,—ವರಹ : ಇನ್ನಿವಕೆ ಬಡ್ಡಿಯೊಳೇತಮನೆನ್ದು ಪತ್ತು ಗದ್ದಿನ ಪೊಸವೊನ್ನನಿತ್ತನು (ಸೌಇಇ. XX, ೫೫-೨೯; 1082). **ಪೊಸವೊನ್ :** ೨. ಹೊಳೆಯುವ ಚಿನ್ನ,— ಬಂಗಾರ : ಪೊಸವೊನ್ನ ವೇದಿ ನಾಲ್ಕುಂ ದೆಸೆಗಳೊಳಂ ಬೆಳ್ಳಿವೆಸದ ಬಾಗಿಲ್ವಾಡಂ ಪಸರಿಸಿದ ಸಕಳಮಂಗಳವಿಸರಂ ನಿಧಿಸಮಿತಿ ಯಕ್ಷರಕ್ಷಕರೆಸೆಗುಂ (ಚಂದ್ರಪ್ರಪು. ೦೫-೫೫); ಲಾವಣ್ಯಾಮೃತ ರಸದೊಳ್ ತೀವಿದ ಪೊಸವೊನ್ನ ಮಿಸುಪ ಶುಕ್ತಿಕೆಗಳೆನಲ್ ದೇವಿಯ ತಾಂಬೂಲಚ್ಛಾಯಾವಿಷ್ಕೃತಮಾದ ತೆಳ್ಗದಂಪುಗಳೆಸೆಗುಂ (ಪುಷ್ಪದ. ೩-೯೬). **ಹೊಸಹೊನ್ನು :** ೨. ಹೊಗರಾಂತ ಹೊಸಹೊನ್ನ ರಸ ಕಾಯ್ದಿರೆ ಕಂಡು ಸೆಗಣಿಯೊಳೆಱೆವಂತೆ ಮೊಱದಿ ಮೃಗಮದಗಂಧಿಯರ್ ಗೋಮಯದಿಂ ಮುದ್ದುಮೊಗನ ದೇಹವ ಸಾರ್ಚಿದರು (ಸೋಹಕ. ೦೬-೨೦); ಕಿವಿಯೊಳೊಪ್ಪುವ ನಾಗರ ಪಣೆ ಹೊಸಹೊನ್ನ ಸವಡಿದಾರದ ಕೊರಳುಗಳ ನವರತ್ನಭೂಷಣದಾಳ್ಗಳ ಮೇಳದ ಭುವನೇಶ್ವರನೈತಂದ (ಕಂಪಪ. ೦೨-೩೫). [ಪೊಸ + ಪೊನ್]

**ಪೊಸವೊನಲ್, ಪೊಸಪೊನಲ್** (ನಾ). (ಕಾರ್ಗಾಲದಲ್ಲಿ) ಹೊಸದಾಗಿ ಉಂಟಾದ ಪ್ರವಾಹ, –ಹೊಳೆ : ಮಡದಿ ನಡೆದಳ್ ಮನಃಪ್ರಿಯ

ನೆಡೆವರಮವರವರ ನಯನರುಚಿ ತನುರುಚಿಯೊಳ್ ತೊಡರ್ದು ಬರೆ ಪೊಸಪೊನಲ್ಗಳ ಗಡಣದಿನಪ್ಪತಿಯನೆಯ್ದುವವರ್ಣಪಗೆವೋಲ್ (ಶಬ್ದಾ. ೯–೪೩). **ಪೊಸಪೊನಲ್**: ಪೊಸಪೊನಲೊತ್ತಿ ಬಂದು ಪುಗೆ ಪುತ್ರದ ಬಾಯೊಳವಲ್ಲಿ ಪಾವುಗಳ್ ಬಸವಂಬಿದು . . . ಪೊಱಮಟ್ಟು ಬಂದು ಸಲೆ . . . ಪೆಡೆಯೆತ್ತಿ ದಲಾಡುತುವಿರ್ದವರ್ಥಿಯಿಂ (ಚಾರಪು. ೦೨–೩೬). [ಪೊಸ + ಪೊನಲ್]

**ಪೊಸಪೋರ್ತ** (ನಾ). ಹೊಸಬಗೆಯ ಹೋರಾಟ,— ಕಾಳಗ: ಪೊಸವಳಿಕಿನ ಸಲೆಯೊಳ್ ನೆಟಲೆಸೆಯೆ ಮೊಗಂಬೊತ್ತು ಪಾಯ್ದು ಕರಿಯುಂ ಹರಿಯುಂ ಪೊಸಪೋರ್ತಮನಱಯಮೆ ಪುಟ್ಟಿಸೆ ನೆಟಲೊಳ್ ಪೋರ್ದು ಸೇದೆಗಿಡುವುವು ನಗದೊಳ್ (ಶಾಂತಿಪು. ೨–೦೦೩); ನೀಪಕುಲನಾಗಿ ನೃಪ ತಿಲಕೋಪಮನೀತನನೆ ಸಾರ್ದು ಗುಣಗಣಮುಂಬಿದತ್ತು ಪೊಸಪೋರ್ತ ಮನವುಕುಲಲೋಪಕನಂ ಪೊರ್ದಿ ಪಗೆಯನುಂಬದಂತೆ ಜಗಂ (ಶಾಂತಿಪು. ೩–೧೨೭). [ಪೊಸ + ಪೋರ್ತ]

**ಪೊಸಸಂಜೆ** (ನಾ). ಮನೋಹರವಾದ ಸಾಯಂಕಾಲ: ಪೊಸಸಂಜೆ ಮುಗಿಲ ತುಱುಗಲ್ ಮುಸುಕಿದುದು ಪಯಃಪಯೋಧಿಯೆಲ್ಲಮನೆಂಬಂ ತಸರ್ದಮೆಸೆದುದು ಮೊಗೆವುದ್ದೆಸದೊಳೆ ತಳತಳಿಸಿ ಪೊನ್ನ ಪೊಸಕಳಸಂಗಳ್ (ಅಂಪು. ೭–೬೫); ಪೊಸಸಂಜೆಗೆಂಪಿನೆಡೆಯೊಳ್ ನಸುತೋರ್ಪ ಶಶಾಂಕಲೇಖೆ ಯೆಂಬಿನೆಗಂ ರಂಜಿಸಿದಳರುಣಾಂಬರವನುಟ್ಟು ಸಿತಾಂಬುಜಪತ್ರನೇತ್ರೆ (ಉದ್ಭಟ. ೩–೩೨). [ಪೊಸ + ಸಂಜೆ]

**ಪೊಸಸಂಪಗೆ** (ನಾ). ಆಗತಾನೆ ಅರಳಿರುವ ಸಂಪಿಗೆ; ನಳನಳಿಸುತ್ತಿರುವ ಸಂಪಿಗೆ: ಸುರಗಿ ಮೊಲ್ಲೆ ಪೊಸಸಂಪಗೆಯಾ ಅರಲಿಂ ಭಕ್ತಿಯಿನಾತಂ ಪರಮಜಿನೇಶ್ವರನ ಪಾದಮಂ ಪೂಜಿಸಿದಂ (ಧರ್ಮಾಮೃ. ೩–೩೭); ಮೊಗವೆತ್ತಿ ನಿಳ್ಕಿ ಪೊಸಸಂಪಗೆಗೊಂಬಂ ಪಿಡಿದು ಪೂಗಳಂ ತಿಱಿವಾ ಪೆಣ್ಬುಗೆಗೊಂಡಳ್ಕಡಕೆ ಬಲ್ಸಿಗೆ ಜಡಿವ ಗಜನ ಪೊಂಗಿನಿಂಗೋಲ್ವಿಲ್ಲೋಲ್ (ಉದ್ಭಟ. ೯–೬೦). [ಪೊಸ + ಸಂಪಗೆ]

**ಪೊಸಸಕ್ಕರೆ**, **ಹೊಸಸಕ್ಕರೆ** (ನಾ). ಆಗತಾನೆ ತಯಾರಿಸಿದ ಸಕ್ಕರೆ; ತಾಜಾ ಸಕ್ಕರೆ: ಪೊಸಸಕ್ಕರೆ, ಮನೆಸರಕು (ಶಬ್ದಾ. ಸು. ೯೯ ಪ್ರಯೋ); ಪೊಸಸಕ್ಕ[ಪಾಠಾಂ. ರ್ಕ]ರೆಯಂ ನವಮಧುರಸಮಂ ನಱುನೆಯ್ಯನೆಸೆವ ಕದಳೀಫಲಮಂ ರಸನೆಯೊಳಸಿದುದನೆನ್ನೊಳ್ಪಸೀಗಳೆ ನಿನಗೆ ತಂದಪೆಂ ಶಶಿವದನೇ (ಪ್ರಶು. ೯–೭೭). **ಹೊಸಸಕ್ಕರೆ**: ಕಾಯ್ದು ಬಿದೆವ್ಮೆ ಪಾಲೊಳಗೆ ಮುಱಿದಿರಿಸಿ ಹೊಸಸಕ್ಕ[ಪಾಠಾಂ. ಶರ್ಕ]ರೆಯ ಹಾಕಿ ಏರಿಮಳಗಳಂ ಪೊರೆಯಿಕ್ಕಿದದುವೆ ತುಪ್ಪದ ಪಾಯಸಂ (ಸೂಪಶಾ. ೩–೦೨). [ಪೊಸ + ಸಕ್ಕರೆ]

**ಪೊಸಸರ** (ನಾ). ಹೊಸ ರಾಗ: ಪೊಸಸರದಲ್ಲಿ ಪಾಡು ಖಿರಿದೀವನ ಕೇಳಿಯೊಳೊಂದು ಸದ್ದುವಂ ಮಿಸುಗಿರೆ ಕಾಮಧರ್ಮಗುಣವೃತ್ತಿ ಯನಾಳ್ದಿರು (ಪ್ರಶು. ೯–೯). [ಪೊಸ + ಸರ₂]

**ಪೊಸಸಿರಿ** (ನಾ). ೧. ಹೊಸತಾದ ಚೆಲುವು,—ಸೌಂದರ್ಯ: ಕಟ್ಟುದ್ದ ಮನಾಂತು ಮಿಸುಪ ಕೊಸಗಿನ ಚೆಲ್ವಿಂ ಪುಟ್ಟಿಸಿದುದೊ ಪೊಸಸಿರಿಗೆ ಜವಟ್ಟನೆ ಪೂಗಣೆಯನಿರ್ಪ ನೆಲೆಮಾಡದ ಪೋಲ್ (ಕಬ್ಬಿಗಕಾ. ೦೦೭). ೨. ಅಧಿಕವಾದ ಐಶ್ವರ್ಯ,—ಸಂಪತ್ತು: ಪುಸಿನುಡಿಯ ವಿಷ ವಿಪಾಕದ ಮಸಣದೆ ಮುಖರೋಗಮಾದಪೋಲಿನಿತಾನುಂ ಬಸವಲ್ಲದುಸಿರ್ವ ರೆಂದುಂ ಪೊಸಸಿರಿಯಿಂ ಮ್ಮೆಮೆವೆತ್ತ ಮಾಯ್ದು ಮನುಷ್ಯರ್ (ಕಾವ್ಯಾವ. ೩೬೨); ಅರರೆ ಸುಭದ್ರೆಯು ಕಣ್ಮನಗಳ ಪೊಸಸಿರಿಯೆಯೆಂದವಳು ಚುಂಬಿಪಳು (ಕರಕ. ೯೦–೧೩೩). [ಪೊಸ + ಸಿರಿ]

**ಪೊಸಸುಗ್ಗಿ** (ನಾ). ಮನೋಹರವಾದ ವಸಂತಕಾಲ: ಇಲ್ಲಿ ಪುಟ್ಟಿ ಪೋಗದು ಪೊಸಸುಗ್ಗಿ ಮಾಗಿಪಡದಿಲ್ಲಿಯು ಕೋಗಿಲೆ ಬಂದ ಮಾವು ಬೀಯದು ಕುಸುಮಾಸ್ತ್ರನಾಜ್ಞೆ ತಪದೆಲ್ಲಿಯುಮಿಲ್ಲಿಯ ನಂದನಂಗಳೊಳ್ (ಶಂಕಶಾ. ೯–೨೦); ಅನಂಗನ ಬೇಂಟೆಯ ಬಿಂದದಂದದಿಂ ಬರೆ ಪೊಸಸುಗ್ಗಿ ಕೆಯ್ಗಟಿಯೆ ಕಣ್ಗೆಸೆದಿರ್ದುವು ನಂದನಾಳಿಗಳ್ (ಶಾಂತಿಪು. ೭–೦೨೪); ಒಸಗೆಗಳ ವ್ಯೆಮುಟ್ಟಿ ಕಣ್ ಬಾಯ್ಗಳಿಂ ಕರೆವ ಪೊಸಸುಗ್ಗಿ ಕಾಲ್ಕೆಟ್ಟಿ ಸುಯಿಲಿಟ್ಟು ಕರೆಯೆ (ಶಾಂಸಿ. ೦೨೨–೨೫೭). [ಪೊಸ + ಸುಗ್ಗಿ]

**ಪೊಸಸುಣ್ಣ**, **ಹೊಸಸುಣ್ಣ** (ನಾ). ಹಳೆಯದಲ್ಲದ ಸುಣ್ಣ: ಉಪ್ಪಿಲ್ಲ ಣೆಂಗು ಸಾಸವೆ ತಪ್ಪಿಲ್ಲದ ಮೆಣಸು ಸುಂಟಿ ಪೊಸಸುಣ್ಣಮಿವಂ ಚಪ್ಪರಿಸಿ ಬಡಿದು ಮೆಯ್ಯಂ ಸೊಪ್ಪಾಗಿರೆ ಮೋದಿ ಪೂಸುವರ್ ನಿರ್ದಯೆಯಿಂ (ಧರ್ಮಾಮೃ. ೩–೭೦); ಪೊಸಸುಣ್ಣ ಸೂಡುಬಾಡಿರೆ ಬಸವಂಬಿದು ಬಿಬಲ್ದು ನೆಲ ಕಳವಳದಿಂ ಪೊಕ್ಕಿಸಿಪತ್ರವಸದ ಕೂರೆಲೆ ಉಸುಮದ ಕೊನೆ ಕೊಯ್ದು ಕೊಬಿದು ಕುಱಿದಱಯಪ್ಪರ್ (ಅಪಂಪು. ೯–೩೭). **ಹೊಸಸುಣ್ಣ**: ಹೊಸಸುಣ್ಣದುದಕದೊಳು ಮಾವಲದ ತನಿಪಣ್ಣ ಕುಸುರಿಗಳನಿರುಳಿರಿಸಿ (ಸೂಪಶಾ. ೩–೯). [ಪೊಸ + ಸುಣ್ಣ]

**ಪೊಸಸುಸಿಲ್** (ನಾ). ನೂತನ ರತಿಕ್ರೀಡೆ: ಮಿಸುಗುವ ಪೊಸಪಸೆ ಯೊಳಸದಳಮೆಸೆಯೆ ಬಯಸಿ ಪೊಸಯಿಸಿದ ಪೊಸಸುಸಿಲ ಮಸಕದ ಬಸದೊಳ್ ಬಸದಾಗಿಯುಮಸಿಯಳೆನಗಸವಸದೊಳೆ ಬೆಸೆದು ಪೋಗಿ (ಅಂಪು. ೯–೦೨ ವ); ಪೊಸಸುಸಿಲೊಳಸಗೆ ರವಣಂ ಮಿಸುಗುವ ನೆಲೆಮೊಲೆಯೊಳಸವ ನುಖಹತಿಯನದಂ ಮುಸುಕುದೆಬಿದೆಱಗಿ ನೋಡುತ್ತ ಸವಸದಿಂ ದಾರಿದಪ್ಪುವರ್ಣಚರಿಯರ್ (ರಾಜಶೇ. ೦–೦೨೪); ಇಂತಿರೆ ಪೊಸಸುಸಿಲೊಳ್ ತವ್ಮೊಂದು ಗೆಯ್ಮಕ್ಕೆ ಬಸಪಬಿದು ಮೆಯ್ಸೋಲ್ತು ಜವ್ವನಿಗರಿರವಂತಿರೆ ಬೀರರಿರಪ್ಪುದುಂ (ರಾಜಶೇ. ೦೫೬–೦೨). [ಪೊಸ + ಸುಸಿಲ್₁]

**ಪೊಸಾಲ್ ?** (?). (?): ಪಚ್ಚಿದೋನ್ ಪಞ್ಚಮಹಾಪಾತಕಸಂಯುತ್ತ ನಕ್ಕೆ ಪೊಸಾಲ್ಪೋಗೆ ವೃತ್ತಿ ಬ್ರಹ್ಮಶಾಪದು ಏಕುಂಚಿತ್ತಿ ದೊಶಾಮಾಪಿರ ಕನ್ಯಾಪುಲನ್ತರಬಿದ ಪಸಲಾನ್ವಿಡಿಸಿದೋರ್ ದರಾ ದಾನ (ಎಕ. VI. ಚಿಕ್ಕಮ. ೯೩–೬; ಸು. ೯೦೦ ?). [?]

**ಪೊಸೆ₁**, ಹೊಸೆ (ಕ್ರಿ). ಪೊಸದು, ಪೊಸೆದು, ಹೊಸದು, ಹೊಸೆದು (ಭೂತನ್ಯೂ). ೧. (ಹಾಲು, ಮೊಸರು ಮೊದಲಾದುವನ್ನು) ಕಡೆ; ಮಥಿಸು: ಪೊಸೆದೊಡೆ ಪಾಲ್ಗಡಲಂ ಮಂದ್ಯಸುರರ್ ಪೊಸೆದಲ್ಲಿ ಕಾಳ ಕೂಟಂಕುರವಂದಸದಳಮೊಗೆದಂತೊಗೆದುವು ಬಸಿಱಿಂ ನೂಱಿಂದು ಪಿಂಡಮರುಣಾಕೀರ್ಣಂ (ಶಂಕಶಾ. ೦–೦೩೦); ನೀರಂ ಪೊಸೆದುಂ ಬೆಣ್ಣೆಯನಾರಾನುಂ ಪಡೆವರೊಳರೆ (ಸಮುಕ. ೯–೦೨೪); ಕೆನೆಯ ತೆಗೆಯದೆ ಕಡೆವ ಕಳಲು ಗೋಳಕವಮಾಯ್ತು ಕೆನೆದೆಗೆದು ನೀರಿಡದೆ ಪೊ[ಪಾಠಾಂ. ಪಾ] ಸೆದುದೇ ಮಥಿತವೆಂದೆನಿಸಿತ್ತು (ಸೂಪಶಾ. ೨–೦೩). ೨. ಕಲಕು; ಕದಡು; ಆಲೋಡಿಸು: (೩). ೩. (ಹೊಟ್ಟೆಯನ್ನು) ಕಿವಿಚು; ಹಿಸುಕು: ಸಂತತಿಗೆ ಪಿರಿಯ ಮಕ್ಕಳ ನಾಂ ತಡೆಯದೆ ಪಡೆವೆನೆಂದೊಡೆನ್ನಿಂ ಮುನ್ನಂ ಕೊಂತಿಯೆ ಪಡೆದಳ್ ಗರ್ಭದ ಚಿಂತೆಯದಿನ್ನೇವುದೆಂದು ಬಸಿಱಂ ಪೊಸೆದಳ್ (ಶಂಕಶಾ. ೦–೨೯೯); ಬಿಸಿಲ ಕಡುಗಾಯ್ಪು ಭೋಂಕನೆ ಪಸರಿಸೆ ಬಿದಿರೊಡೆದು ಸುರಿವ ಬಿಸಿಮುತ್ತುಗಳು ಪೊಸನೀರ್ವನಿಗಳಿವೆಂದುದೊಸೆದೀಂಟಲ್ ಮಿಡುಕಿ ಸೋಗೆ ಪೊಸೆದುದು ಬಸಿಱಂ (ಚಾರಪು. ೯–೬೫); ಪೊಸೆದಳೊಡಲು ಕೂಡೆಕೂಡೆ ಸುತವೋಹದಿಂದಸವಳಿದು . . . ಹಲುಬಿದಳಂಬುಜಾಕ್ಷಿ (ಕೃಬಿಚಾ. ೨೦–೨೦). ೪. ತಿಕ್ಕು; ಉಜ್ಜು; ತೀಡು: ಕರತಳದಿಂ ಕಣ್ಣಂ ಪೊಸೆಯುತ್ತಮೆಟ್ಟು ತಂತಮ್ಮ ತಲೆವೆಸೆಯೊಳಿರ್ದ ಕರವಾಳು ಕೊಂಡು (ಗದಾಯು. ೯–೩೨ ವ); ಜಮದಗ್ನಿಮುನಿ ಮುನಿದು ಪಕ್ಕಿಗಳಂ ಕರತಳದೊಳ್ಪೊಸೆದು ಕೊಲಲುದ್ಯೋಗಿಸುಪ್ಪುದುಂ (ಧರ್ಮಾಮೃ. ೨–೨೨೩); ಹಾ ಪುತ್ರಯೆನುತತ್ತಿಕೊಂಡು ಮುಂಡಾಡಿ ಪಣೆಗಾ

ಪಣೆಯನೊಂದಿಸಿ ಪೊಸೆದು ಚೀರ್ದು ಬಹಳಪ್ರಲಾಪದಿನಳಲ್ದಂ (ಕೃಖಶಾ. ೦೪-೫೩). ೫. ಉಜ್ಜಿ ಬೆಂಕಿಯನ್ನು ಉತ್ಪತ್ತಿಮಾಡು,—ಉಂಟು ಮಾಡು : ಪೊಸೆವಗ್ನಿಯಿನುಗಿದಿರ್ದಂಕುಸದಿಂದಂಜನದಿನಾ ಪ್ರಲೇಪದಿನಿದ ನಂಜಿಸಲಿಕ್ಕಿದ ಧೂಪದಿನಳ್ಕಿಸುವಾತಂ ಬೆನ್ನ ತಕ್ಕನಾತನೆ ನೃಪತೀ (ಶಾಂತಿಪು. ೩-೨೬). ೬. (ಹಗ್ಗ, ನೂಲು ಮೊದಲಾದುವುಗಳನ್ನು) ತಿರಿಚು ; ಹುರಿಮಾಡು : "ಪೊಸೆ-ರಜ್ಜು ಕ್ರಿಯಾಯಾಂ (ಹಗ್ಗ ಹೊಸೆ), ಮಂಥ ದಂಡೇ ಚ (ಕಡೆಗೋಲು)" (ಶಮದ) ; ಪುಲ್ಲ ಬೆಂಟೆಯಿಂ ಪೊಸೆದು ಕಿಚ್ಚು ಮೆಣ್ಣೆಯ ಕೊಡನುಂ ಬೆಂಟೆಯುಮಂ ಕೊಂಡು ಪೋಗಿ ಭಟಾರರ ಮುಂದಿಟ್ಟು (ವಡ್ಡಾರಾ. ೦೫೩-೦೦) : ಪರಿವ ಭಂಡಿಯಂ ಕಾಲಿಂ ಕೋವರು ಮಣಲಂ ಸರವಿ ಪೊಸೆವರು ಬೆಟ್ಟಂಗಳ ಮಿತ್ತುಗರೆವರು ಜವನ ಮೀಸೆಯಂ ಕೀಳುವರು (ಶಾಶಾಇ. IX-1, ೨೯೬-೦೮ ; 1190) ; ಪೊಸವೊಗರ್ ಕೋದಿರ್ಪ ಪೊಳ್ಳಿಳಿಯನೆಳೆಬಿಡುವ . ಪೊಸೆದು ನೆಲದೊಳ್ಪುಗಳ ಬಾಳ್ವಳ್ಪ ತೊಡೆವಂ (ಕಾಲೂರ. ೬೦-೧೨೪). ೭. (ತಲೆಗೂದಲು) ತೆಕ್ಕೆಗಟ್ಟಿರು ; ನುಲಿದು ಕೊಂಡಿರು : ನೆತ್ತಿಯೊಳಿಟ್ಟೆದೆಟ್ಟದಿನಿಸಟ್ಟೆಯೊತ್ತಿ ಬಟಕ್ಕೆಟಿಯೆ ಪೊಸೆದು ಜಡೆಗೊಂಡಿದರ್ಬದ್ವ್ಯತ್ತ ಕುಚಯುಗೆಯ ಕೇಶವನೆತ್ತಂ ಪಸರಿಸಿದ ನೆಯ್ದು ಪಸರಿಸಿದದಟಂ (ಶಂಕಭಾ. ೦೨-೦೫೪) ; ಪೊಸೆದ ಕಂಜೆಡೆಯುಂ ಪುಲಿದೋಲ ಕಚ್ಚೆಯುಂ (ಉಮಾಶ. ೪೯). ೮. (ತಲೆಗೂದಲು ಮೊದಲಾದುವನ್ನು) ನುಲಿ ; ಸುತ್ತು : ಮಂದಾರಮುಖ್ಯ ಮಾದ ಅಲರ್ಗಳಂ ಮುಡಿವ ಕುರುಳಂ ಪೊಸೆದು ಜಡೆಯನಂತಳವಡಿಪರೇ ರತಿಸುಖಂಬಡೆವ ಕಾಲದೊಳ್ ಕೆಳೆಗೊಂಬರೇ ತಪವನು (ಶಬಕ್ರ. ೩೬-೮). ೯. ಸೇರಿರು ; ಕೂಡಿರು ; ಹೊಂದಿರು : ಬೆರಲೊಳ್ ಬೀಣೆಯ ತಂತಿಗಳೊರಸಿದ ಕೆಂಗಲೆಗಳಕ್ಷಮಾಲೆಯೊಳಿಸೆವಂತಿರೆ ಪೊಸೆಯೆ ಮುತ್ತು ಪವಳಂಬೆರಸಿದ ಪೋರಾಯ್ತು ಚೆನ್ನತಪಸಿಯ ಕಯ್ಯೊಳ್ (ಶಂಕಭಾ. ೬-೧೦). ೧೦. ಕೂಡಿಸು; ಸೇರಿಸು ; ಬೆರಸು : ಪೊಸೆದಾತ್ಮಜಳದೆ ಬೇಳೆಯ ರಸಮಂ ಕಿವಿಯೊಳಗೆ ಪಿಟ್ಟಿಗೆ ಪೋಣ್ ಕಟ್ಟುಗೆ ವಾಯಸಜಂಘೆಯ ಬೇಳೆಯ ಕಿಡುಕುಸಾಲೆ ಬೇರೊಂದನಲ್ತೆ ಸೂಟ್ಜ್ವರಮಟಿಗುಂ (ಲೋಕೋಶ. ೯-೨೪). ೧೧. ಹೆಣೆ ; ಕಟ್ಟು ; ರಚಿಸು : ರಘುವಂಶರಾಮಕೃತಿಯೊಳ್ ಪತ್ತೆಂಟು ಪದ್ಯಂಗಳಂ ಪೊಸವೆಂ (ಶಂರಾಪಾ. ೦-೩೩). ೧೨. ಉಂಟುಮಾಡು; ಉಂಟಾಗಿಸು : ಶೋಭೆಯಂ ಪೊಸೆಯುತ್ತಿರ್ದುದು ಮೂಡಲುಂ ಪಡುವಲುಂ ಚಂದ್ರಾರ್ಕಸನ್ಮಂಡಲಂ (ಶಾರಶ. ೫-೬). ೧೩. ಹರಿ ; ಕತ್ತರಿಸು : ತೊಡರಂ ಪೊಸೆದು ಪಟಿವ ಮದಕರಿಯಂತೆ ಪೊಸೆದು ನೋಡಲೊಡಂ (ಶಾಂತಿಪು. ೮-೫೦ ವ); ಆ ನಾಗಪಾಶಮಂ ಜಗತೀನಾಥಂ ಪೊಸೆಯೆ ಕಟ್ಟುಗಳ್ ಬಿಟ್ಟುರೆ (ಶಾಂತಿಪು. ೮-೫೪). ೧೪. (ಹೆಜ್ಜೆಯನ್ನು) ಕೀಳು ; ತೆಗೆದಿಡು : ಪೊಸಯುದೆ ಪಜ್ಜೆಗಳಂ ನಾಲ್ದೆಸೆಯೊಳಮೊಟೆಂಟು ದೆವಸಮಿರುಳುಂ ಪಗಲುಂ ಮಿಸುಕದೆ ನಿಲೆ (ಶಮಾಶ. ೧-೦೬). ೧೫. ಹೊಡೆ ; ಬಡಿ : ಇರುಳ್ ಮೊದಲ ಜಾವಮಪ್ಪನ್ನೆಗಂ ಪೊಸೆಯೆ ಸಸ್ಯಕ್ಕೆ ನಟ್ಟಿರುಳ್ವರೆಗಮಾ ಪಿಶಾಚನಿವಹಕ್ಕೆ . . . ಅಶುಭಮೆಂಗೆ ನಿರ್ಘಾತಮಂ (ಲೋಕೋಶ. ೪-೦೬); ಚಾಟಿಯೊಳ್ ಬಡಿವುತುಂ ಸರಳಿನಿಂ ಪೊಸೆವುತುಂ ಭೂತದಿಂ ಪೊಯ್ಯುತುಂ . . . ಬಳಲಿಸುವರೇನೆಂಬೆನು (ಶಬಕ್ರ. ೫೬-೨೬). ೧೬. ಹೊಸಕು; ನಾಶಮಾಡು; ಹಾಳುಮಾಡು : ಆ[ಚಾ]ರ್ಯ ಪುರುಷ ಇಟ್ಟಿದು ಬಸಪಟ್ಟ[ಯದೆ] ಬೀಟಿಸ್ವೊರನ್ ತೆಟ್ಟ[ಟ]ನ ಮೆಚ್ಚದೊಂ ಪಿಸುಣರ ಪೊಸೆವೊ (ಎಇ. XXIV,೦೯೩-೧೨; ಸು.885); ಎಲ್ಲರಂಯುಮಸುತನುಂ ಸುರೇಂದ್ರಸುತನುಂ ಪೊಸೆದೀಗಳೇ ಮುಕ್ಕಿ ತೋಟಿರೇ (ಶಂಕಭಾ. ೪-೭); ಪೆರ್ಮಾರಿಯನಾವಗಂ ಪೊಸೆದು ನೀಂ ಮುಕ್ಕೆಂಬುದೇಂ . . . ಬೀರಮೇ (ಕವ್ಯಕಾ. ೨೪೦). ೧೭. ಕೊರೆ ; ತೂತು ಮಾಡು : ರಸಮಯಮಂ ಕೃತಿಯಂ ಸೇವಿಸಿ ವಿರಸಮನೆಯ್ದೆ ಜೋಡುಮಾಡುವ ವಿಬುಧಪ್ರಸರಂ

ಪೊಸವಾವಂ ಸೇವಿಸಿ ಬದಿರಂ ಪೊಸೆವ ತುಂಬಿಯೊಡನಾಡಿದರೇಂ (ತ್ರಿಸ್ಪ್ರ. ೦-೫೭). ಹೊಸೆ : ೧. ವಸುಧೆಯಿಲ್ಲದ ಬೆಳಸು ರಾಜಾನ್ನದ ಹೆಸರಿಲ್ಲದ ಓಗರ ವೃಷಭ ಪುಟ್ಟದ ಹಯನು ಬೆಣ್ಣೆಯ ಹೊಸೆವರಿಲ್ಲದೆ ಕಂಡುಂಡೆ (ಅಪಶಂ. ೧೪೫-೬೬೦); ಹೊಸೆದರ್ರೈ ಧರೆ ಗಗನ ನಡುಗಲು ಮಸಗಿ ಮಂದರದಿಂದ ದುಗ್ಧದ ರಸಗಡಲನಾ ದೇವದಾನವರಂದು (ಶಂಭಶ. ೫-೦೦೫); ಸಸಿಯನೊಕ್ಕಲಿಗನು ಹೊಸೆವಾಕೆ ಬೆಣ್ಣೆಯನು ಅಸಗ ಸೀರೆಯನು ಅಟ್ಟವಂತೆ ಸೂಳೆ ತಾ ಹುಸಿವರಟ್ಟ ದಿಹಳು (ಸರ್ವಜ್ಞ. ೦೯೦೦). ೨. ಮಿಸುಗುವ ಸುಗಂಧವಾಳೆಯ ಹಣ್ಣ ಕತ್ತರಿಸಿ ಹೊಸತುಪ್ಪಮುಂ ಕೂಡಿ ಮತ್ತಮಾ ಹಾಲೊಳಗೆ ಹೊಸೆದದಂ ಹಾಕೆ ಕದಳೀ [ಶಾಕಾಂ. ನೊಸೆದದಂ ಹಾಕೆ ಕದಳಿಯ, ವಸೆದದಂ ಹಾಕೆ ಕದಳಿಯ, ಪೊಸೆದು ಹಾಕಿದೊಡೆ ಕದಳಿಯ] ಪಕ್ವಫಲಸಾರಪಾಯಸವೆನಿಸಿಕೊಂಬುದು (ಸೂಶಶಾ. ೩-೦೪). ೩. ಸಕಳಸುಖವಿರಹಿತೆಯಪ್ಪ ರತಿದೇವಿ ನಿಂದಿರ್ದು ಬಿಸುಸುಯ್ದು ಬಸಿಟಿಂ ಹೊಸೆದು ಕೆಯ್ಯೆತ್ತಿ ದೆಸೆದೆಸೆಯಂ ನೋಡಿ (೧ಂಕ. ೬-೬೪ ವ); ಕಾಳುಮಾಡಿದನೆನಗೆ ಮುನಿಪತಿ ಕೌಳಿಕಾಜನಲಾ ಸುಡೀ ಗರ್ಭಾಳಿಗಳನೆಂದಬಲೆ ಹೊಸೆದಳು ಬಸುಟನೊಡೆಮುಟ್ಟಿದು (ಕುವ್ಯಾ. ೪-೪೦); ಪುತ್ರನ[ರ]ಳಿದವರೆಂದು ದೇವಕಿ ಹೆತ್ತ ಹೊಟ್ಟೆಯ ಹೊಸದು ಶೋಕಿಸಿ ಬಿದ್ದು ಹೊರಳಿದಳು (ಶಾಳ್ವಭಾ. ೨೧-೪); ಅಯ್ಯೋ ಎಂದು ಭೋರೆಂದು ಗೋಳಿಟ್ಟು ಹೊಟ್ಟೆ ಹೊಸೆದು ಹುಚ್ಚೆದ್ದು ಹೌಹಾರಿ ಹುಯ್ಯಲಿಟ್ಟಳು (ಶಬೀಗೀ. ೯೮-೨೨). ೪. ವಾಸನೆಯ ಕುಸುಮುವ ಹೊಸೆದು ವಾಸನೆ ಹೋಗಿ ಆ ಸುವಾಸನೆಯೆಲ್ಲಡಗಿತ್ತೆಂಬುದನಟಿದಲ್ಲಿ ಶರಣನ ಶರಣಸ್ಥಲ (ಮೋಕ್ಷಮಾ. ೦೯೩-೫೪೬); ವಿಷದ ಕ್ರೂರತೆ ಲೋಕವೆಲ್ಲವ ಘಸಣಿಸುತ ಬರಲಾ ಸಮೀರಣ ಹೊಸೆವನಂಗೈತಳದಿ ಕೋಪದಿ ನೋಡಿ ಪಡಿಸಣವ (ಶಂಭಶ. ೬-೧೯) ; ನಾಗ ಕೈ ಹೊಸೆದ (ವಶರಾ. II, ೦೦೨೬). ೫. ಕಾಷ್ಠದೊಳಿಹುವಗ್ನಿ ಹೊಸೆದರೆ ತಾನಿರ್ದ ಕಾಷ್ಠವ ತಾನೆ ಸುಡುವುದು (ಶರಶ. ೬೪-೫೨); ಹಸಿಯ ಸಮಿಧೆಯ ತಂದು ಹೊಸೆದರುಂಟೇ ಕಿಚ್ಚು (ಸರ್ವಜ್ಞ. ೯೩). ೬. ಮಳಲ ಹೊಸೆದರೆ ಹೊಸೆದಂತಲ್ಲದೆ ಸರವಿಯ ಹಡೆಯಲು ಬಾರದು (ಬಸವ. ೫೫೪); ಹೊರಜಿ ಹೊಸೆವ ತಿರುಹುವ . . . ನೆಟ್ಟ ಸುಲಿವ ಖಳರ ಕಳಕಳದ ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೮-೨೯); ತಿಣ್ಣವಲೆ ಜೋಡುವಲೆ ಹೊಸೆದಿಕ್ಕಣ್ಣವಲೆ ಚಕ್ರವಲೆ . . . ಪೊಟ್ಟಗಳು ವಿಂಧ್ಯಕನ ಕೂಡೆ (ಶಾಳ್ವಭಾ. ೫-೦೮); ಪುನಃಪುನಃ ನೀರಿನಲ್ಲಿ ಅದ್ದಿ, ಒಣಗಿಸಿ ಅತ್ಯಂತ ತಾಳಿಕೆಯುಳ್ಳದ್ದಾಗುವಂತೆ ಆ ಚರ್ಮವನ್ನು ಹೊಸೆದನು (ಬಂಗಾಹ. ೨೧). ೧೦. ಲೋಕವನು ನಾಕಕ್ಕೆ ಬೆಸೆಯೆ ನಾಕವನು ಲೋಕಕ್ಕೆ ಹೊಸೆಯೆ ಐತಂದೆ ನಾ ಭಕ್ತಿದೇವಿ ! (ಶಂದ್ರಸ. ೫೦-೦). ೧೧. ಕನ್ನಡದ ಆದಿಕವಿ ಪಂಪ ತನ್ನ ಪೋಷಕನಾದ ಅರಿಕೇಸರಿಯನ್ನು ಅರ್ಜುನ ನಿಗೆ ಅಭಿನ್ನವಾಗಿ ಮಾಡಿ, ನೂತನರೀತಿಯಲ್ಲಿ ಕಾವ್ಯವನ್ನು ಹೊಸೆದುದು ಆತನ ಸಂಶೋಧನೆಯ ಪ್ರಜ್ಞಾಫಲವೆನ್ನಬಹುದು (ಸಂಶೋಧ. ೦೮೬). ೧೫. ಕೊಂಕುಸರಳಿಂ ಹೊಸೆವ ಚಕ್ರದಿಂದಿಡುವ ಕುರುಪಿಂ ಕೆರೆವ . . . ಕರಗಸದಿ ಕೊಟ್ಟವ ರೌರವದ ನರಕಂ ಭಯಂಕರವಾದುದು (ಸಿದ್ಧರಾ. ೮-೨೮). ೧೮. ನೆರಿಗೆ ಹಿಡಿ ; ಜೋಡಿಸು : ಹೊಸೆದು ಕಟ್ಟಿದ ಮುನ್ನ ಕಚ್ಚೆಯ ಬೆಸುಗೆ ಶಿಖಿಗಳ ಗಂಟು ಮಿಗೆ ಶೋಭಿಸುವ ಜನಿವಾರವು . . . ಎಸೆವ ಹೊಂಬಣ್ಣದ ಶರೀರದಿ ಮಿಸುಪ ವಾಮನರೂಪನಾಂತಾ ವಿಷ್ಣುಮುನಿ ಬಂದ (ಶಾಳ್ವಭಾ. ೦೮-೨೫). ೧೯. ಕೋಡುಬಳೆ, ಸೇವಗೆ ಮುಂತಾದುವುಗಳ ಹಿಟ್ಟನ್ನು ಬೆರಳುಗಳಿಂದ ಹೊರಳಿಸಿ ಎಳೆಯಾಗಿ ಮಾಡು : ಹದನಾಗಿ ನಾರು ಹಟಿವಂತೆ ಕಣಕವ ಕುಟ್ಟೆ . . . ಸೇವಗೆಯಂತೆ ಹೊಸೆದು ಸಣ್ಣಕ್ಕಿವಿಟ್ಟನೊಳು ಬೆಣ್ಣೆಯನು ಕಲಸಿ ಅದಕಿಕ್ಕಿ (ಸೂಶಶಾ. ೦-೪೭). ೨೦. (ಆಲಂ) ವ್ಯರ್ಥವಾಗಿಸು ; ಪೋಲುಮಾಡು : ನಾಸೇ ಸೈನ್ಯ ತೆಗೆದುಕೊಂಡುಹೋಗಿ ಮೂರೇ ದಿನಗಳಲ್ಲಿ ಮಸೆದು ಬರುತ್ತೇನೆಂದು

. . . ಒಂದು ವರ್ಷವೆಲ್ಲ ಹೊಸೆಯುತ್ತ ಕುಳಿತೇನು (ಶಾಂಕಲಾ. ೧೬೩). ೨೧. ದುಡಿ; ಶ್ರಮಿಸು : ಹೊಸೆಯುದ ಕೈಯಿಂದ ಕುಸಿದು ಹೋಹುದು ಲೇಸು ಅಸಮಾನದವಳ ಬದುಕಿಂದ ತಿಂಗಳಲಿ ಹಸಿದಿಹುದೆ ಲೇಸು (ಸರ್ವಜ್ಞ. ೧೬೪೭).

**ಪೊಸೆದು ಮುಕ್ಕು, ಹೊಸೆದು ಮುಕ್ಕು**=ಹೊಸಕಿ ಹಾಕು ; ನಾಶ ಮಾಡು : ಈ ಮಹಬಲಂದಿದರನೆತ್ತಿನಿಬರುಮನೊರ್ಮೆಯೆ ಪೊಸೆದು ಮುಕ್ಕುವಂ (ಶಂಕಥಾ. ೩-೧೬ ವ) ; ಅಂಘ್ರಿಯುಗ್ಮದಿಂದೊರಸುವ ಕೈಗಳಿಂ ಪೊಸೆದು ಮುಕ್ಕುವಗುರ್ವಿನ ಕುಂಭಕರ್ಣನೀ ಧರಣಿಗೆ ದುತ ವಕ್ರನೆನಿಸಿರ್ದು(ರ್ಪು)ದನಾನಟಿವೆಂ (ಜಗ. ೧-೭೦) ; ಅನುಜರನಿತ್ತುಮಂ ಹೊಸೆದು ಮುಕ್ಕಿದನೀ ವೃಕಕುಕ್ಷಿ ನಿಂದು ಮತ್ತೆನಗಿದಿರಾಗಿ ಬಲ್ಲಡಿಗೆಯಂ ಪಿಡಿದಿರ್ದಪನು (ಕುಹಾಸೀ. ೦೩-೦೬) ; ದೆಸೆಯ ನುಣ್ಣನೆ ನುಂಗಿ ಸೂರ್ಯನ ಹೊಸೆದು ಮುಕ್ಕಿತೋ ರಾಹು (ಸಾಳ್ವಭಾ. ೩-೨).

[ದೇ.॥ ತಮಿ. ಪೊಚುಙ್ಕು ; ತುಳು. ಪೊಯಿ; ತೆಲು. ಪೊಸಗು]

**ಪೊಸೆ₂** (ನಾ). ಕಡೆಗೋಲು ; ಮಂತು : "ಪೊಸೆ_ರಜ್ಜುಕ್ರಿಯಾಯಾಂ (ಹಗ್ಗ ಹೊಸೆ), ಮಂಥದಂಡೇ ಚ (ಕಡೆಗೋಲು)" (ಶಮದ); "ಪೊಸೆಯೆಂದುಂ ಕಡೆಯೋಮುಂ ಮಂಥಾನು" (ಶಶಾ. ೩೩-೦೪೦). [< ಪೊಸೆ₁]

**ಪೊಸೆದು** 'ಪೊಸೆ₁' ಪರಾ.

**ಪೊಸೆಯಿಸು, ಪೊಸಯಿಸು₂** (ಕ್ರಿ). ೧. ಕೂಡು ; ಸೇರು ; ಹೊಂದು : ಪೊಸೆಯಿಸಿ ನಸುಬಿಸುಪೇಱಿದ ಬಿಸಿಲಱಿಯೆ ಬೆಮರ್ತು ಬಂದು ಬಡುವವೊಲೆನಸುಂ ಪೊಸಮುಗುಳಂ ಪೊತ್ತೆಸೆದುದು ವಸಂತದೂತಿಕೆ (ಲೀಲಾವ. ೯-೬೯). ೨. ರಚಿಸು ; ನಿರ್ಮಿಸು : ವಿಮಾರ್ಗದೊಳು ಪೊಸದೇಸೆಯ ನುಡಿಗಳೊಳಂ ಪೊಸೆ [ಪಾಠಾಂ. ಸ]ಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ (ಗದಾಯು. ೦-೩೯) ; ಪುಷ್ಪಮಾಳಿಕೆಯೇಬಳ್ ಪಲತೆಱದಲರ ಪಸವನಂಗಳಂ ಪೊಸೆಯಿಸಿಯುಂ (ಶಾಂತೀಶ್ವ. ೦೩-೨೨೯ ವ). ೩. ಉಂಟುಮಾಡು ; ಒದಗಿಸು : ಯುವತಿಗೆ ನಿಱಿವಿಡಿದು ದುಕೂಲವ ನುಡಿಸುವ ದಿವಿಜ ಕನಕನಗಮೇಖಳೆಯಂ ಧವಳಾಭ್ರಮಾಲೆಯಂ ಸುತ್ತುವ ವಾರಿದಲಕ್ಷ್ಮಿಯೆಸಕಮಂ ಪೊಸೆಯಿಸಿದಳ್ (ಕುಸ್ವಪು. ೯-೬೩). ೪. ಮಾಡು ; ನೆರವೇರಿಸು : ಶಿಶುಗೆ ನಯನಾಂಶುದುಗ್ಧಪ್ರಸರದೆ ಜನ್ಮಾಭಿಷೇಕಮಂ ಮುನ್ನೋದಂ ಪೊಸೆಯಿಸಿ ಸರೋಜದಿಂದರ್ಚಿಸುವಂತಿರ್ದ್ದಾಣೆ ನೆಗಪಿದಳ್ ಕೆಂದಳದಿಂ (ಚಂದ್ರಪು. ೦೩-೩೩). ೫. ಪ್ರಕಟಪಡಿಸು ; ತೋರಿಸು ; ಕಾಣಿಸು : ಏನಂ ಪೇೞ್ವೆಂ ತನ್ನ್ಯುಪಸೂನುವ ಪುಣ್ಯಪ್ರವಾಹಮಂ ಗ್ರಾಹಮಹಾಮಿನಕುಳೀರಾಹಿಗಳಂದೇನುಂ ಪೊಸೆಯಿಸಿದುವಿಲ್ಲ ನಿಜವಿಷಮತೆಯಂ (ಚಂದ್ರಪು. ೩-೯೩). **ಪೊಸಯಿಸು₂** : ೧. ವಿಚಿತ್ರ ಪಾತ್ರಪರಿವರ್ತನಮುಣ್ಮುವ ತೂರ್ಯನಾದದೊಳ್ ಪೊಸಯಿಸೆ . . . ಲೀಲೆ ಕಣ್ಗೆಸವಳಮಾಗೆ ಪಾಱುವ ಮಹೀಧರನೇಬ ವಿಯಚ್ಚರೇಂದ್ರನಂ ಭೋಂಕೆನೆ ಕಂಡು (ಅಂಪು. ೨-೯೦). ೨. ಎಸೆದಿರ್ದೆಯೊಳ್ ಪಳಂಚುವ ಒಲಧ್ವನಿಯಿಂ ಪೊಸತೊಂದು ರಾಗಮಂ ಪೊಸಯಿಸಿ (ಅಂಪು. ೨-೭೭) ; ಸತ್ಕವಿಯೊಳ್ ಸಮನಾಗಿ ಮಾರ್ಗಮಂ ಪೊಸಯಿಸಿ ದೇಸಿಯಂ ಪೊಸತು ಮಾಡಿದಳೊರ್ವಳಪೂರ್ವರೂಪದಿಂ (ಶಂಕಥಾ. ೩-೬೪) ; ಮೇಪುಗಾಡಿಂ ಹಕ್ಕಿದಲೆಗೆ ಹರಿಯಿಡುವ ಹರಿಣೀಗಣದ ಕಡೆವಾಯೊಳರೆಮೆಲ್ದುಟಿದೆಳೆಗಱಂಕೆಯೆಸಟ್ಗಳಂ ಸೆಳೆದು ತಂದು ಬಯಲೊಳ್ ಬಳ್ಳಿವಸಲೆಯುಂ ಪೊಸಯಿಸಿಯುಂ (ಚಂದ್ರಪು. ೬-೪ ವ). ೩. ಪೊಸತಳಿರ್ಗಳ ಬಿಜ್ಜಣಿಗೆಯಿನೆಸೆವೆಲರ್ಗಳಿನೊಗೆವ ಘರ್ಮಜಲಮಂ ಪೀರ್ದಾಱಿಸಿದುವು ಕುಸುಮರಜಂಗಳ್ ಪೊಸ[ಪಾಠಾಂ. ಸೊಗ]ಯಿಸಿದುವು ಬಣ್ಣಮಂ ಲತಾಂಗಿಯರ್ಗಾಗಳ್ (ಅಂಪು. ೦೦-೬೩) ; ರಸಮೊಸರ್ವನ್ನೆಗಂ ತಗುಳೆ ಪಾಡುವ ಗಾಣರ ಗೇಯಮುಬ್ಬಿಱಂ ಪೊಸಯಿಸೆ (ಶಂಕಥಾ. ೦೦-೪) ; ಎಸೆವ ಜಿನೇಂದ್ರಚಂದ್ರನ ಸದಚ್ಛತನುಚ್ಛವಿ ಸಾಂದ್ರಚಂದ್ರಿಕಾಪ್ರಸರಮದೀಕ್ಷಣೋತ್ಪಳಕಮುತ್ಸವವಾರ್ಧಿಗಮಂದಮಂದಮಂ ಪೊಸಯಿಸೆ ಹರ್ಷಸಂಪದಮಂ (ವರ್ಧಪು. ೦೩-೯೮). ೪. ಪತಿಂವರೆಗೆ ಸೊಯಂಬರಮಂ ಪೊಸಯಿಸಿದಂ ನಿಖಿಲರಾಜಕಂ ನೆರೆಯೆ ಸಾನುಜಂ ಬಲದೇವಂ (ಶಾಂತಿಪು. ೪-೮೯) ; ದಾನವ್ಯಸನಿ ದಶರಥನದೇಂ ಪೊಸಯಿಸಿದನೊ ಚೌಲೋಪನಯನನಮಹಿಮೋತ್ಸವಮಂ (ಶಂರಾಮಾ. ೩-೦೪೨) ; ಶಿಶುಗಳು ಕಾಡೆ ತೋಱಿ ಶಶಿಯಂ ಜಳಕೇಳಿಗಳಂ ವಿನೋದದಿಂ ಪೊಸಯಿಸಿ (ಪುಷ್ಪದಂತ. ೦೦-೦೨). ೫. ಧೃತವಿಷಮಬಾಣನಂ ಜನಪತಿ ಗೆಲ್ದುವೊಲಾತ್ತನಂ ಪ್ರಜಾಪತಿ ಧರಣೀಪತಿ ಕಾಮದೇವನಂ ಗೆಲ್ದು ತಳೆರದನಿವಾರ್ಯವೀರ್ಯಮಂ ಪೊಸಯಿಸಿದಂ (ಶಾಂತಿಪು. ೩-೩೭) ; ಬೇಗಂ ಕೂರ್ತಂತೆ ಭಕ್ತಿಯಂ ಪೊಸಯಿಪಕರ್ಪೂರಲವಮಂ ಕಜ್ಜಮಂ ಬಗೆಯುತಿರ್ಪರ್ (ಸುದಶ. ೦೦-೬೩) ; ದೂರದೊಳೆಯ್ದುರೆ ತುಂಬುಮೊಗವ ತೋಱಿ ಭೂರಿಲೀಲೆಗಳ ಪೊಸಯಿಸಿ (ಶಶಿ. ೬-೦೩ ಸಾಂಗತ್ಯ). ೬. ಹೊಂದಿಸು ; ಕೂಡಿಸು ; ಸೇರಿಸು : ಈ ದೂದವರೆಂಬ[ರ್] ಬೇಟಕಾಱರ ಬೇಟಮೆಂಬ ಲತೆಗಳರ್ಪಿರ್ಪಂತಿರ್ದರೆಂತಪ್ಪ ಬೇಟಂಗಳುಮವರ್ ಪೊಸ[ಯಿ]ಸೆ ಪೊಸತಪ್ಪುದು ಕಿಡಿಸೆ ಕಿಡುವುದು (ಶಂಕಥಾ. ೪-೦೦೩ ವ) ; ಅಲ್ಲಿಯ ವಯೋಧಿಕರೀಗಳುಮಾಗಳುಮಱಿವರಾದೊಡಮಿನಿಸೆಡೆಯಾಗಿರ್ದ ಸಂಬಂಧಮಂ ನೀನಿರ್ದು ಪೊಸಯಿಸುವುದು (ಶಾಂತಿಪು. ೨-೭೭ ವ). ೭. ಕಡೆ ; "ಮಥಿಸು" : (ಕಶಬ್ದ. ೪. I, ೭೬). ೮. ಹೂಡು ; ಬಳಸು : ಅಸತ್ಯವಾದವಂ ಪೊಸಯಿಸಿ ಜೀವನಿಲ್ಲ ಮೋಱಿಯಿಲ್ಲಜನಿಲ್ಲ ಪರತ್ರಯಿಲ್ಲೆನಲ್ಕಸಕಳಿಯಂತೆ ನಾಲಗೆ ಪೊರಳ್ವುದು ರಾಜಸಭಾಂತರಾಳದೊಳ್ (ಅಂಪು. ೨-೦೦). [ಪೊಸೆ₁ + — ಇಸು₃]

**ಪೊಸ್ತಕ** 'ಪೊತ್ತಗೆ' ನೋ.

**ಪೊಸ್ತಕಗಚ್ಛ, ಪೊಸ್ತಕಗಥ** (ನಾ). [ಜೈನ] ಮುನಿಗಳ ಒಂದು ವರ್ಗ : ಸ್ವಸ್ತಿಶ್ರೀ ಮೂಲಸಂಘದೇಶಿಯಗಣ ಪೊಸ್ತಕಗಚ್ಛದ ಕೊಣ್ಡಕುನ್ದಾನ್ವಯ ಕೊಲ್ಲಾಪುರದ ಸಾವನ್ತನ ಬಸದಿಯ ಪ್ರತಿಬದ್ಧದ ಶ್ರೀಮಾಘನನ್ದಿಸಿದ್ಧಾನ್ತದೇವರ ಶಿಷ್ಯರು . . . ಕೊಟ್ಟರು (ಎಕ. II, ೩೬೦-೧ ; ಸು. 1200). **ಪೊಸ್ತಕಗಥ** : ಶ್ರೀಮೂಲಸಂಘದೇಸಿಯಗಣ ಪೊಸ್ತಕಗಥ ಕೊಂಡಕುಂದಾನ್ವಯದ ಹೆರಗಿನ ಹರಿಶ್ಚಾಂದ್ರದೇವರ ಪ್ರಿಯಗುಡ್ಡುಗಳಪ್ಪ ತಾತಂಗಿಯ ಪಟ್ಟಣದ ನಖರಂಗಳು ಮಾಡಿಸಿದ ಶ್ರೀಶಾಂತಿನಾಥದೇವರು (ಎಕ. I (R). ೬-೨; 12ನೆಯ ಶತ). [< ಸಂ. ಪುಸ್ತಕ ಗಚ್ಛ]

**ಪೊಸ್ತಕಗಥ** 'ಪೊಸ್ತಕಗಚ್ಛ' ನೋ.

**ಪೊಹಚಿ** 'ಪೌಂಚಿ' ನೋ.

**ಪೊಳ್** (ಸಪೂರೂ). 'ಪೊಳ್ಳು' ಎಂಬ ನಾಮವಾಚಕಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪೊಳ್ನುಡಿ', 'ಪೊಳ್ಮರ' ಪರಾ. [<ಪೊಳ್ಳು]

**ಪೊಳಂಕು, ಪೊಳಕು₁, ಹೊಣಕು, ಹೊಳಕು₁** (ಕ್ರಿ). ೧. ಪ್ರಕಾಶಿಸು; ಮಿಂಚು; ಹೊಳೆ : ನದಿ ಕಣ್ದೆಱಿದಂತೆ ಪೊಳಂಕಿದ ಮಿನಂ ಮೊಸಳೆ ಪಾಯೆ ನರಪತಿಯ ವಿನೋದದ ಗುಜ್ಜ ಸಿಕ್ಕೆ ಪಿಡಿದತ್ತದನಧಿಪತಿ ಜಾಲಗಾಱಿಂ ತೆಗೆಯಿಸಿದಂ (ಹುಕೋಶ. ೩-೯೬). ೨. ಅಗಿದು ತಿನ್ನು; ಜಗಿ : "ಪೊಳಕು, ಪೊಳಂಕು__ಚರ್ವಣಕ್ರಿಯಾಯಾಂ (ಅಗಿಯು)" (ಶಮದ). **ಪೊಳಕು₁** : ೨. ಅರೆಮುಗಿದಿರ್ದ ಕಣ್ ಮುರಿದ ಮಿಸೆ. . .ಸುಲಿಪಲ್ ತಳತ್ತಳಿಸಿ ತಂಬುಲಮಂ ಪೊಳಕುತ್ತೆ ರಾಗದಿಂ ಪ್ರರಕೆಗೆ ಕೊಟ್ಟು ಪಂದಲೆಯು ಗುಂದಲೆಯಾದುದು ಬೀರನಣ್ಣಿನಾ (ಅರ್ಧನೇ. ೩-೩೦). ೩. ಚಪ್ಪರಿಸು : ಪನಸಾಮ್ರವ್ರಾತಕ . . . ದಾಡಿಮಫಲವ್ರಾತಂಗಳಿಂದಾಗಳುಂ ತನಿಗಂಪಂ ಮೊಗೆದೆತ್ತಿ ತೀಡುವೆಲರೊಂದಿಂಪಿಂಗೆ ಪೊಂಗೂರ್ತು ಮೆಲ್ಲನೆ ಬಾಯಂ ಪೊಳಕುತ್ತೆ ನೋಟ್ಟರಮರರ್ ತಾರಾಚಳೋದ್ಯಾನದೊಳ್ (ಅರ್ಧನೇ. ೨-೭೦). ೪. ಬಾಯಾಡಿಸು ; ನಾಲಗೆ ಹೊರಳಿಸು : ಪುತ್ತ್ರಂ ಕಾಯೋತ್ಸರ್ಗಕ್ಕೆ ಮೂವತ್ತೆರಡುದೋಷಂಗಳಪ್ಪುವವಾವುವೆಂದೊಡೆ ಕುದುರೆನಾಲಿಕ್ಕಿ

ನಿಲ್ವುದುಂ . . . ಬಾಯಂ ಪೊಳಕುತ್ತುಂ ನಿಲ್ವುದುಂ ಎರಡು ಕಯ್ಯುಂ ಪಿಡಿಕಿಸಿ ನಿಲ್ವುದುಂ (ಶಿವಾಕ. ೩೪೨). ೫. ಚಿಮ್ಮು; ಪುಟಿ : ತಿರುವಿಂ ಪೊಳಕಿದ ಕಾಮನ ಸರಲಂತಿರೆ ಬಂದಲ್ (ಭುಕ್ಷ್ಮಕೃ. ೯-೦೦೬); ಅವಗಡಿಸಿ ಪೊಕ್ಕು ಪೊಯ್ದಾಡಿದರ್ ಕೋಡಿದರ್ ನವರುಧಿರಧಾರೆಯೊಳ್ ಮುಳುಕಿದರ್ ಪೊಳಕಿದರ್ (ಚಂಪು. ೨೩-೦೬). ೬. ಸೇರು; ಕೂಡಿ ಕೊಳ್ಳು : ಕರ್ಮದ ಬೇರ ಹಬಿದರೆ ಪೊಳಕನೀ ಸಂಸಾರಚಿತ್ರಕೆ (ಬಿಭಾಗ. ೦೦-೨-೧೦). ೭. ನಾಶಮಾಡು ; ಧ್ವಂಸಗೊಳಿಸು : ಪಟುನುಡಿ ಪೆತ್ತು ಪೊಲ್ಲು ಧರಪಂ ತಿರೆಯುಂ ಪದೆದೆತ್ತಿ ದೈತ್ಯನಂ ಪೊಳಕಿ ಬಲೀಂದ್ರುನಂ ತಗುಳ್ದು ಮಟ್ಟಿಸಿ ದುಷ್ಟನೃಪಾಲವಂಶಮಾ (ಜಿಶಿ. ೩-೧೯೩). **ಪೊಣಕು :** ೮. ಸುಟ್ಟುಹಾಕು ; ಭಸ್ಮಮಾಡು : ಕ್ಷಣಕೆ ಕರ್ಮವ ಸುಟ್ಟ ಶಾಂತಿ ಶ್ರೀ ಜಿನರಾಜ ಪೊಣಕಿನ್ನ ಪಾಪೇಂಧನವ (ಜ್ಞಾಪತ. ೯೩-೧). ೯. ಹೊಡೆ; ಬಡಿ : ಮಾರಳಿಸಿದನಾ ರಥನ ಪಾಂಚಾಲರೆಂಟುಸಾವಿರರಥಿಕರ್ಕೈತರಲ್ಕವರ ದೆಸೆಗಾಗಿ ಹೊಕ್ಕುರವಣಿಸಿ ಪೊಣಕಿದಂ ಪೇರಾಳದಂಬಿನಿಂ ದೆಸೆದೆಸೆಗೆ ಪರಿವಂದದಿ (ಲಕ್ಷ್ಮೀಭಾ. ೦-೩೦). **ಪೊಳಕು$_1$ :** ೧. ಬೆಳಗು ಹೊಳಕಿದ ಬಳಿಕಡಗಿತ್ತಲ್ಲಿ ಕತ್ತಲೆ (ಮನೋಲ. ೯-೨೯); ಮುಂಗಾರ ಗಗನಾಂಗಣದ ನಾಟ್ಯಕೆ ಎಂದ ಮಿಂಚಿನ ಭಣಿತೆಯುಪೊಲಸುರೇಂದ್ರರಥ ಪೊಳಕಿದುದು ಕಣನೊಳಗೆ (ತೊರವೆ. ೬-೨೦-೩೦). ೫. ನೊರೆಯನುಬ್ಬಿಸುತೇಳ್ವ ರಣದುಬ್ಬರದ ರಕುತದ ಹೊನಲು ಹೊಳಕಿತು [ಪಾಠಾಂ. ಮಸಗಿತು] ಪೊಳಕಿಸಿ ಪೊರೆಳಿದವು ಪೇರಾಳ ಹೆಣದುಂಡುಗಳು ಕಪಿಬಲದ (ತೊರವೆ. ೬-೩೦-೦೯). ೭. ಕುಲಗಿರಿಗಳಲ್ಲವನೊಂದು ನಿಮಿಷದಿ ಹೊಳಕಿ ಹೊಳಕಿ ಬಿಡುವೆನ್ನ ಕುಲಿಶದಂಡವ ಪಿಡಿದೀ ಸಗ್ಗಿಗರ ಜಂಗುಳಿಸಹಿತವೆ ಬಲಿದೊತ್ತೆ (ಶ್ರೀಪಾಂ. ೭-೩). ೯. ಭೀಮನ ತೊಡಕಿದರು ಹೊಳಕಿದರು ತವಕಿಗರು ತಲ್ಲಣಿಸದೆ (ತುರಂಗ. ೬೯-೨೨). ೧೦. ಝಂಕಿಸು; ಗದರಿಸು : ಅವದಿರ ನಾಡಿನೊಳಗರ್ಥಮಂ ಕೊಟ್ಟು ಬಾಳೆಂದು ಧೃತರಾಷ್ಟ್ರ ಹೊಳಕಿ ನುಡಿದನು (ತುರಂಗ. ೧೦-೦೬). ೧೧. ಜಲಿಸು ; ಅಲುಗಾಡು : ಮೃತ್ಯುವಿನಣಲ ಹೊಳಲೊಳಗೆ ಹೊಳಕಬಹುದಹಿಪನ ಫಣಾಮಂಡಳ ದೊಳಾಡಲುಬಹುದು ಕಾಣೆನು ಗೆಲುವ ಹದನನು ಮಗನೆ ಪದ್ಮವ್ಯೂಹ ದೊಡ್ಡಣೆಯು (ಕುಮಾರವ್ಯಾ. ೯-೩೭). ೧೨. ಅಲುಗುವಂತೆ ಮಾಡು ; ಅಲುಗಾಡಿಸು : ಕೃತ್ರಿಮದ ಸರ್ಪನ ತೊಲಗಿಸಲು ದುಂದುಭಿಯ ಹೊಯ್ದರೆ ಹೊಳಕಲಹುದೇ (ಕನ್ನರು. ೬-೦೨). ೧೩. ಅತಿಶಯವಾಗು ; ಹೆಚ್ಚು : ಮೆಲುವ ಭೂಪರ ಮನಕೆ ಹೊಸಜಕ್ಕುಲಿತೆ ಹುಟ್ಟಲು ಬಾಯಿ ಹಬ್ಬವು ಹೊಳಕಲಮೃತವಿದೆಂಬ ಹಾಲುಂಡೆಗಳನೋರಣದಿ ತೆಲುಗ ನಾರಿ ಯುರ್ಕಿದೆ ಬಡಿಸಿತು (ಕೌರವ. ೨-೬೨). ೧೪. ರಭಸದಿಂದ ಮುಂದುವರಿ; ಮುನ್ನುಗ್ಗು : ಉಲಿವಲಮ್ಮುವರಿಲ್ಲ ಬವರಕೆ ನಿಲುವ ಚೂಣಿಗರಿಲ್ಲ ಮುಂಬಿಗೆ ಹೊಳಕಬಲ್ಲವರಿಲ್ಲ ನಮ್ಮಯ ಬಲದ ನಾಯಕರು (ಕುಮಾರವ್ಯಾ. ಶಂ. ೨೯೦); ಅಲ್ಲಿಯ ಗಲಭೆಕಾರರು ಕವಿಯೆ ಗೋಪುರಪಂಕವೀಥಿಯಲಿ ಹೊಳಕುವೀ ಕಪಿನಾಯ್ಕರ ಗಾವಳಿಯ ಗುಮ್ಮಿದರಸ್ತ್ರಶಸ್ತ್ರಾವಳಿಯಲಿ (ತೊರವೆ. ೯-೯ ೨೦); ನಳಿನಮಿತ್ರುಸ ಮೊಮ್ಮಗಂ ಭೀಮನೋಳ್ಕಾದಿ ಗೆಲಿದು ಮಾದ್ರೀಸುತರನೊಟ್ಟೈಸಿ ಮುಂದಕಂ ಹೊಳಕುತಿರಲರ್ಜುನಂ ಕೊಲಲು (ತುರಂಗ. ೬೬ ಸೂಕಪ). ೧೫. ಎರಗು ; ಮೇಲೆ ಬೀಳು : ಹಳಚಿದನು ಕರ್ಬೊಗೆಯ ತೆರದಲಿ ಹೊಳಕಿದನು ಭೀರುಂಡರೂಪಿನಲಿ . . . ಮುಳಿದು ಕೊಂದನು ಕಲಿಘಟೋತ್ಕಚನಮಿತಸೈನಿಕರ (ಕೊಣಗಯು. ೨೩-೬೩). [< ಪೊಳೆ$_1$]

Δ **ಪೊಳಂಪು** 'ಪೊಳಪು' ನೋ.

**ಪೊಳಕಾಯಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಗುಳ್ಯಕೆ ಪೊಳಕಾಯಿ . . . ಮಹಕಂಚಿ ಮಾತಂಗಿ ಬಕ್ಕಾಯಿ ಎಲ್ಲ ನಾನಾಕದಾ ಕಳ್ಳ ದೇವತೆಗಳನಿಲ್ಲದೆ ಒಲಿಸಿವರು (ಪಾಸು. ೩೬-೨). [ ? ]

**ಪೊಳಕಿ** (ನಾ). ಒಂದು ಬಗೆಯ ಸಸ್ಯ : ಪೊಳಕಿ—ಸಣ್ಣಗಿಡ; ಬೈಲು ಶೀಮೆಯ ಅಡವಿಯಲ್ಲಿ ಬಹಳ (ಶಬಾಗ. ೪೩). [ ? ]

**ಪೊಳಕಿಸು, ಹೊಳಕಿಸು** (ಕ್ರಿ). ೧. ಅಲುಗಾಡಿಸು ; **ಹೊರಳಾಡಿಸು :** ಕಾಗೆಯಂತೆ ಕಡೆಗಣ್ಣೊಳಿ ನೋಡುತ್ತುಂ ಕೀಟುಟ್ಟ ಕುದುರೆಯಂತೆ ಬಾಯಂ ಪೊಳಕಿಸುತ್ತುಂ (ಧರ್ಮಾಮೃ. ೩-೦೩೬). **ಹೊಳಕಿಸು : ೨.** ಮುನ್ನುಗ್ಗುವಂತೆ ಮಾಡು : ಜವದಿಂದೆ ತದ್ವರೂಥವನಿರದೆ ಸೌಭರಿಯು ಸುವಿಲಾಸದಿಂ ಹೊಳಕಿಸಲ್ ಮೇಘಮಾರ್ಗದೊಳ್ (ಶಿಶೀರಾಸು. ೨೩-೩೩). **೩. ಹೊಳೆ ; ಪ್ರಕಾಶಿಸು :** ದಿನಕರನ ಪ್ರಭೆಯಂತೆ ಹೊಳಕಿಸು ತಸಮಕೋಪದಲಿ . . . ಕರಗಳ ಮುಗಿದನಾ ದ್ವಿಜನು (ಸುದಾಪು. ೩-೦೫).

[ಪೊಳಕು$_1$ ( < ಪೊಳಂಕು) + — ಇಸು$_3$]

**ಪೊಳಕು$_1$** 'ಪೊಳಂಕು' ನೋ.

**ಪೊಳಕು$_2$** 'ಪೊಬಿಕು' ನೋ.

**ಪೊಳಚು, ಹೊಳಚು** (ಕ್ರಿ). ೧. ಕತ್ತರಿಸು ; ತುಂಡರಿಸು : ಕಳೆದ ರದಂ ಕಡಿದಿಕ್ಕಿದ ಸೊಂಡಿಲು ಪೊಳಚಿದ ಕಿವಿ ಕತ್ತರಿಸಿದ ಬಾಲಂ ಗಳಿನಾ ಬಲ್ಲಾನೆಯು ಬವರದ ನೆಲನತಿ ವಿಭ್ರಾಜಿಸಿತು (ಜಯುಣ. ೬-೯೦). **ಹೊಳಚು : ೧.** ಪುಮಳಿಪ ಮಲಯಗುರುಹವೃಕ್ಷಂಗಳಂ ಕಂಡು ಹೊಳಚಿ ತಂದಾ ಸೆಕ್ಕಿಗಳನೊಳಗೊಳಗೆ ಶೋಧಿಸಿ ತನ್ನ ಕಂಬಿಯ ನೆಲಹನಿತ್ತರದಲ್ಲಿ ಸುತ್ತಲು ಸೆಕ್ಕೆ ಬಗಿಬಗಿದು (ಜಿಕೃ. ೪೩-೨೩) ; ಬಿಳಿಯುಳ್ಳಿಯಾ ಸುಲಿದು ಹಿಂದು ಮುಂದಂ ಚಿವುಟಿ ಹೊಳಚಿ ನಡುವಣ ದಿಂಡ ತೆಗೆದು (ಸೂಶಶಾ. ೩-೬). ೨. ಒಡೆ; ಸೀಳು : ಸ್ಫಟಿಕದ ಘಟವ ಹೊಳಚಿದಂತೆ ಒಳಹೊಟ ಗೆನ್ನದೆ ನಿರ್ಮಲ ತೋಜುವಂತೆ ಅದಜಿರವು ಸುಚಿತ್ತನಾಗಿ ನಿಂದುದು ನಿರ್ಮಾಯ (ಆಲಾಮಾ.ಕ. ೦೩೯-೦೬೬) ; ಸಕಿಸಹಿತ ಖರಕರಾಘಾತಗೈದಪುವು ಕರಿತತಿಗಳದ ಮರ್ದಿಸಲ್ಕೇಳ್ಕಿನುತ ಕರಖಡ್ಗಹತಿಯಿಂದ ಮಸ್ತಕವ ಹೊಳಚು ವನೊ ಭಾಸ್ಕರನೆಸಲ್ಕೆ ಖರಕಿರಣದಿಂದೆ (ವಂಶಾ. ೩-೬-೨೦). ೩. ಒದೆ: ಆ ರಾಮನಟ್ಟೆಯಂ ನಲವಿನಿಂಮಂಗುಷ್ಠದಿಂ ಕುಟ್ಟಿ ಹೊಳಚ ಲದು ಪಲವು ದಶಯೋಜನಂ ಪಾರಿ ಪೋಗಲ್ಕೆ (ತುರಂಗ. ೩೯-೩೬). [ ? ]

**ಪೊಳಪು, ಪೊಳಂಪು, ಪೊಳೆಪು, ಹೊಳಪು, ಹೊಳಹು** (ನಾ). ೧. ಮೆರುಗು ; ಕಾಂತಿ ; ಪ್ರಕಾಶ : "ತೊಳಗು, ಬೆಳಗು . . . ಹಬೆ, ಪೊಳಪು, ಪೊಣರ್ . . . ಮಸೆ _ ಈ ೧೪ ಕಾಂತಿ" (ಛಶಾ. ೩೩-೨೦೨); ಮಡಿದು ತಂದಿಟ್ಟ ಪೊಸನೆಯ್ದಿಲ ಕಾವನಾವಗಂ ಗೆಲ್ದ ರತ್ನಕುಂಡಲಂಗಳ ಪೊಳಪನೊಳಕೊಂಡಂತೆ ನಸುನೇಲ್ವ ಕರ್ಣಾಟೀಕರ್ಣಪೂರನ ಪಾಲೆಗಳುಂ (ಶಂಶಾ. ೨-೩೯ ವ) ; ಪೊಸವಿಸಿಲ ಪೊಳಪಿನಿಂ ನುಣ್ಣನುಜ್ಜಳಿಪ ರನ್ನದೆಳ ವೆಳಗಿನ ಬಳಗದಿಂ ಬಣ್ಣಿಸಿ ಸುರಶರಾಸನಂಗಳನೆಟಲಿಕ್ಕಿರಂತ ನಿಮಿರ್ವ ನಿರ್ಝರಂಗಳುಮನಪ್ಪುಕೆಯ್ದು ಕೇಳೀಪರ್ವತನಿತಂಬಂಗಳೊಳಂ (ಕಾದಂಬ. ೩೨೬) ; ಸುಲಿಪಲ್ಲ ಬೆಳಗುಂ ಕಣ್ಗಳ ಕಾಂತಿಯುಂ ಮುಖದ ಶಾಂತಿಯು ಪೊಳಪುಂ . . . ದಟ್ಟೈಸಿ ಮೆಜೆಯೆ (ಬಸವ. ೯-೬೩). ೨. ನಡುಗುವಿಕೆ ; ಅಲ್ಲಾಡುವಿಕೆ: (೬). ೩. ಉಯ್ಯಾಲೆ; ಜೋಕಾಲಿ; ತೂಗುಮಣೆ:(೬). ೪. ಕುದುರೆಯ ಓಟದಲ್ಲಿ ಒಂದು ಬಗೆ : ಪೊಳಪು ಗತಿ ವೇಡೆ ಜೋಡತಿ ಚಳಕಂ ದೂವಾಳಿಬಿಡಿಪುದಾಳಿಯಿಂರ ಮನಂಗೊಳಿಸಿರೆ ತುರಂಗಗಳ ವಾಹಳಿ ವಾಹಕರಿಂದೆ ಮೆಚಿದುದಾ ಪೊಚಿಪೊಳಲೊಳ್ (ತ್ರಿಶೃಂ. ೦೭-೦೬).

Δ **ಪೊಳಂಪು :** ೧. ಬೀಜರೂಪದ ಪೂದುಂಬಂಗಲ ಪೊಳಂಪಿನಿಂ (ವಃಶಾನೇ. ೩-೨೦ ವ). **ಪೊಳೆಪು :** ೧. "ತೊಳಗೆನೆ ಮಿನುಗೆನೆ . . . ಪೊಳೆಪ್ರ ಪೊಣರು ಮಸೆಯೆನೆ ತಳಪಮೆನಲ್ ಕವಿಗಳಿಂದೆ ಕಾಂತಿಯೆನಿಕ್ಕುಂ" (ಕಬಿಕು. ೦೦೦) ; ತಲದೊಳ್ ತಂಬುಲದೆಲೆಗಳ ಪೊಳೆಪಮರ್ದಿರೆ ದೇವಕನ್ಯೆ ಮಾತ್ರೊರ್ವಳ್ ಕೋಮಲಲತೆಯ ನಿಮಿರ್ದ ಕುಡಿಯೊಳ್ ಗಿಳಿ ಪಾಯ್ದತ್ತೆನಿಸಿ ಸಕಿಗೆ ತಂಬುಲಮಿತ್ತಳ್ (ಅದಿಶೃ. ೭-೧೨) ; ಮೇಲೆ ಬೀಬ್ಬ ಸಿಡಿಲಂತೆ ಬಂದೆಜಿಗುವ

ದುರ್ನಿರೀಕ್ಷಶೀಕ್ಷ್ಣಾಯುಧಂಗಳ ಪೊಳಪುಗಳುಂ ಚಕ್ಷುರಿಂದ್ರಿಯಮನನವರತ ಮುಗುಬಗಿ ಮಾಡುತ್ತಿರೆಯುಂ (ಪರ್ವ. ೧೦-೯೭ ವ). **ಹೊಳಪು :** ೧. ಪುರಹರಪ್ರಸಾದದಿಂದ ರಂಜಿಸಲ್ಕೆ ಗಂಜಿಯಿಟ್ಟು ಶರಣಸಂಗದಿಂದೆ ಘಟ್ಟಿಸುತ್ತೆ ಹೊಳಪ[ಶಾಣಂ ಹ]ನೊಪ್ಪವಿಟ್ಟು (ತಿರುಕೊಂ. ದೇ. ೨೩೩-೦೯) ; ಬೆಳ್ಳಿಯು ಅಂದವಾದ ಬಿಳೀ ಬಣ್ಣದ ಧಾತು. ಅದಕ್ಕೆ ಹೊಳಪು ಬಹಳ (ಮುಂಬಯಿ. ೪-೦೨೦) ; ಗಾಜನ್ನು ತಯಾರಿಸುವುದು ಹಾಗೂ ಹೊಳಪನ್ನು ಕೊಡುವುದು ಒಂದು ಕೈಗಾರಿಕೆಯಾಗಿತ್ತು (ಕನ್ನಸ್ವಾ. ೫೦೦). **ಹೊಳಹು :** ೧. ಅಪ್ಪುವಿನ ಮಣಿಯ ಹಡುವರ್ಣದ ಟಿಪ್ಪಣದಂತೆ ತೇಜದ ಮಣಿಯ ನವಗುಣದ ಹೊಳಹಿನಂತೆ (ಸೋಮವಾ. ೧೦-೯೦) ; ಲಂಗಳಿನ ಮಿಂಚಿನ ಹೊಳಹಿನಲಿ ನಡೆಗೆಟ್ಟು ನಿಂದರು ಚಿತ್ತವಿಹ್ವಲರು (ಶುಪ್ಲಾವಿ. ೦-೨೫) ; ಹಳದಿಯ ಹೆಡೆಯನು ಬಿಚ್ಚೋ ಬೇಗಾ ಹೊಳಹಿನ ಹೊಂದಲೆ ತೂಗೋ ನಾಗಾ (ಕಪತ. ೨-೩೦). ೪. ದಾಟುದೀಟು ಹೊಳಹು ಹೊಮ್ಮುಚ್ಚುವೆಡೆ ಮೋಡಿ . . . ಪರತರಹವೆಂಬ ನವೀನಗತಿಗಳೊಳು ತನ್ನ ಮನವೆ ಹಯದ ತನುಗತಿಗಳಾದಂತೆ ವಾಹಕವಿನ್ನಾಣಂಗಳಂ ತೋಱುತ (ಕೃಷ್ಣಾಸ್ವ. ೬-೫೦ ವ) ; ಹೊಳಹು ದೂವಾಳಿಯಲಿ ಪಾರ್ಥನ ಕೆಲಕೆ ಬಿಟ್ಟನು ರಥವ (ಕುಪ್ಲಾ. ೪. ೦೯-೩೫). ೫. ಚೆಲುವು ; ಸೊಗಸು : ಸುಳಿದು ಸುಖದಲಿ ತನ್ನ ಲೀಲೆಯ ಬೆಳಸಬೇಕೆಂದೊಂದು ವೇಷದ ಹೊಳಹಿನಲಿ ಬರುತಿರಲು (ಶ್ರಭಂ. ೧೦-೩). ೬. ಸ್ವರೂಪ ; ಲಕ್ಷಣ : ಮೆಯ್ದೊಗೆದರಿದಱೊಳಗೆ ಹೆಸರೆನಗೆಯ್ದೆ ಬೇಕೆನ್ನೈಸಲೇಯೆಂದಯ್ದು ಬಾಣವ ಕೊಂಡು ಯಂತ್ರದ ಹೊಳಹನೀಕ್ಷಿಸಿದ (ಸಂಕರ. ೩೦-೩೨); ಪಂಡಿತನು ಪ್ರಹುಡ ತಾನೆಂಬ ಭಾಷೆಗಳಂತೆ ಕುಂಡಲಿಯ ಹೊಳಹ ಕೇಳ್ದರೆ ಕುದಿವನಂತೆ (ಕನ್ನಕ. ೨೫-೪). ೭. ರೂಪರೇಷೆ ; ಯೋಜನೆ : ಕನ್ನಡನಾಡಿನ ಚರಿತ್ರೆಯ ಚಿತ್ರಕ್ಕೆ ಅವು ಹೊಳಹನ್ನು ಹಾಕಿ ಕೊಟ್ಟಿವೆ (ಕನಾಕ. ೫೮); ಹೊಳಲ ಹೊಳಹನು ಹಾಕುವವರಿಗಿದು ತಿಳಿದಿತ್ತೋ ಇಲ್ಲವೋ ನಾನರಿಯೆ, ಕವಿ ಕುಡನಿಂತು (ಕರುಣಾ. ೭೬-೦೩); ವ್ಯಕ್ತದ ಚೆಲುವಿನಲ್ಲಿ ಅವ್ಯಕ್ತದ ಹೊಳಹನ್ನು ಬಹುಸುಲಭವಾಗಿ ಗುರುತಿಸುತ್ತದೆ (ಸಾಂಚಿ. ೨೬೦). ೮. [ನಾಟ್ಯ] ಕರಣಗಳಲ್ಲಿ ಒಂದು : ಮತ್ತಂ ದಿಂಡುಮುಂಡಾಸನಂ ದಪ್ಪ ಸರಣ ಒಳಗಭವರಿ ಹೊಳಹು ತಿರಿಪು ಸಮಸೂಚಿ . . . ಲಂಕಾದಹನವೆಂಬ ಪಲವುಂ ತೆಱದ ಕರಣಂಗಳಿಂ ವಿಚಿತ್ರಮಪ್ಪ ಚಿತ್ರವಿದ್ಯೆಯಿಂ ಲಾಸ್ಯ ತಾಂಡವವೆಂಬೆರಡುಂ ತೆಱದ ನೃತ್ಯಭೇದದಿಂದಾಡಿ (ಧರ್ಮಾಶ. ೨-೨೭ ವ).

**ಹೊಳಪಾಗು** = ಮಳೆ ನಿಂತ ನಂತರ ಬೆಳಕುಂಟಾಗು ; ಮಳೆಯು ಮೋಡವಿಲ್ಲದಾಗಲಿ ; ಹೊರಪಾಗಂ : ಹವೆಯು ಸ್ಥಿತಿಯನ್ನೂ ಮಳೆ ಬರುವದನ್ನೂ ಹೊಳಪಾಗುವುದನ್ನೂ ಮುಂದಾಗಿ ತಿಳುಕೊಳ್ಳುತ್ತಾರೆ (ಮುಂಬಯಿ. ೫-೬೦). **ಹೊಳಹು ಹಾಕು** = ೧. ಮಿಂಚಿನೇತೆ ಸುಳಿ ; ಸ್ಫುರಿಸು : ತಿರುಗಿ ತಲೆಯಲ್ಲಿ ಹೊಳಹು ಹಾಕಿದ ಸಂಶಯ ಬಾಯಿ ಬಿಡದಾಯಿತು (ಮುರುಬಾ. ೯೬). ೨. ರೂಪರೇಷೆ ಹಾಕು ; ಯೋಜನೆ ಹೂಡು : ಏನಾದರೂ ಮಾಡಿ ಗುಂಡನನ್ನು ಮತ್ತೆ ಹುರಿದುಂಬಿಸಬೇಕೆಂದು ಅವನು ಹೊಳಹು ಹಾಕಿ . . . ಕೇಳಿದನು (ರಂಗಗೋ. ೩೦); ಇಬ್ಬರೂ . . . ಹೊಳಹು ಹಾಕಿ ಅತ್ಯಂತ ಉತ್ಸಾಹದಿಂದ ಈ ತುಣುಕುನೆಲದ ಮೇಲೆ ಒಂದು ಉದ್ಯಾನದ ಕಲ್ಪನೆಯನ್ನು ಹಬ್ಬಿಸಿ ಬಿಟ್ಟಿದ್ದಾರೆ (ಇಕ್ಷ್ವಾಕ. ೨೨೯). [ಪೊಳೆ₁ + — ಪು₁./ಮಲ. ಪುಳಪ್ಪು]

**ಪೊಳಪೇಱು, ಹೊಳಪೇರು** (ಕ್ರಿ). ಕಾಂತಿ ಹೆಚ್ಚಾಗು ; ಕಳೆಯೇರು : ವದನಸುಧಾಮರೀಚಿಯೊಳಣಂ ಪೊಳಪೇಱೆ ವಿಲೋಚನಂಗಳೊಳ್ ಪುದಿದ ವಿಳಾಸವೇಱೆ . . . ನವಯೌವನವೇಱಿದುದಾ ಕುಮಾರನೊಳ್ (ಕುಸುಮಾ. ೬-೦೦೯); ಪೊಸನೀರ ಹೂರದೊಳಗೆ ಮಱಿಮೀನ್ಗಳು ಮಸಗಿ ಮುಂ ಪೊಳೆದಾಡುವಂತೆ ವಿಸುಗುವ ವರಲಾವಣ್ಯಾಂಬುವಲಿ ಕಣ್ಣೆಸೆದುವು ಪೊಳಪೇಱೆ ನಗುತ (ಕಂಸವ. ೧೦-೩೫). **ಹೊಳಪೇರು :** ಅವನನ್ನು ನೋಡಿದ ಕೂಡಲೆ ಅವಳ ಕಣ್ಣುಗಳು ಹೊಳಪೇರಿದುವು (ಕೂಪ). [ಪೊಳಪು + ಏಱು₁ (< ಏಱ್₁)]

**ಪೊಳಯಿಸು** 'ಪೊಳೆಯಿಂಸು' ನೋ.

**ಪೊಳಲ್** 'ಪೊಟಿಲ್₂' ನೋ.

**ಪೊಳಲಿಚ** 'ಪೊಟಲಿಚ' ನೋ.

**ಪೊಳಲು** 'ಪೊಟಿಲ್' ನೋ.

**ಪೊಳವಳಿಗೆ** 'ಪಳವಳಿಗೆ' ನೋ.

**ಪೊಳವೆ** (ನಾ). ಬಿದಿರಿನ ಸೀಳು; ದೆಬ್ಬೆ : ಒಂದುದಿನ ವಿಪಿನಕ್ಕೆ ಹೊರಟ ಕೇತಯ್ಯ ಚಂದದಿಂ ಬಿದಿರನುಂ ಸೋಸಿ ತರುವುದಕೆ ಹೋಗಿ ದಟ್ಟಿಯ ಕಡಿದು ಪೊಳವೆ ಸೀಳುತಿರೆ ನಾಗಭೂಷಣ ಗಿರಿಜೆ ನಂದಿಯನ್ನೇರಿ . . . ಬರಲು (ಶರಣ. ೦೭೨-೦೦). [?./ತಮಿ. ಪೋಲ್ = ಬಿದಿರು ; ಮಲ. ಪೊಳ್ಳ = ಬಿದಿರು]

**ಪೊಳಸು** (ನಾ). ಸಂಬಂಧ ; ಸಂಗ ; ಕೂಟ : ಪೊಳವಿನಿದುಟಿಯ ವ್ಯೆಯಾರಿ ಪೆಂಪುದಳೆದ ಪಲ್ಲವಿಸೆಯ ಮೋಹನಾಕಾರ ಗಿಳಿದೇರನ ಕೈಕಠಾರಿ ನಿನ್ನ ಪೊಳಸಿಗೆ ಪೊಂಚಿಕೊಂಡಿಹಳಾ ನಾರಿ (ಮುದ್ದಣ. VI, ೦೬೭ ಶೃಂಗಾರ ಸೂಕ್ತೋದಾಹರಣ). [?]

**ಪೊಳಿ** (ನಾ). (?) : ಆ ಸ್ಥಾನವುಮಂ ಭಳರಿಯೂರಂ ಬನ್ದ ಸಿಳ ಕೆಬ್ಬಾಯುಂ ಚಿಕ್ಕೇಶ್ವರಕ್ಕೆ ಈಶಾನ್ಯದ ಪೊಳಿಯುಂ ಬಳಿಕೆಱೆಯ ಕೀಟೇರಿಯ ಬೇರುಂಗಾಲಂ ಒಕ್ಕಲೊಳೊನ್ದು ಪೊಱೆಯುಂ ಕೆಯುಂ ಪದಿರ್ಕೋಳಂ ಭತ್ತಮುಂ ವಿಾಸಲು ಬಳಿವತ್ತಮುಂ ಸಲ್ವದು (ಎಕ. III, ಶಂಆವ. ೦೬೩-೦೦ ;977). [?]

**ಪೊಳಿಪೊನ್ ?** (ನಾ). (?) : ಸುರಿಗೆ ಸವನ್ನುಂ ಪೊಳಿ ಪೊನ್ಗವಿ ಕೊಟ್ಟು ಪುನ್ಗಿಣಲ್ಕಟನಿ ಕೊಟ್ಟತ್ತು ಕಿಡಿಪೊನ್ಪಣ್ಣುಮಹಾಪಾತಕ (ಎಕ. XIV, ತಿರುಮ ೨೩೩-೦೨ ; ಸಂ. 800). [?]

**ಪೊಳೆ₁, ಹೊಳೆ₁** (ಕ್ರಿ). ೧. ಪ್ರಕಾಶಿಸು ; ಥಳಥಳಿಸು : ತುಂಗಗಿರಿಶಿಖರದಿಂದಂ ಲಂಗಿಸಿ ಶೂದ್ರಕನ ಪೊಳೆವ ಸುರಿಗೆಯ ಮೊನೆಯೊಳ್ ಪೊಂಗಿ ಸೊದಗುರ್ಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಕಾವ್ಯಕಾ. ೦೦೦೪ ಕೂತ್ರ); ಒರಿಯ ಮರುಂಗಳೆ ಮಾಡವಾಗೆ ಪೊಳೆವೆಳದಳ್ಗಳೆ ಸೆಜ್ಜೆಯಾಗೆ . . . ಪಣ್ಫಲವೆತ್ತಿದ ಬೋನಮಾಗೆ ಸಿರಿಯ ಮಹಿಮೆಯಂ ಮೆಱೆಯಲೇನಾರ್ತುದೊ ಬನದೊಳ್ಪಿರವಾ ಪಾಂಡವರಾ (ಕಂಕಣಾ. ೭-೨೬); ಮಧುದಾತ್ಮಜ ನಿಜರಿಪು ತಲೆಗರೆದಿರ್ದಪನಿಲ್ಲಿ ನೋಡು ಕೊಳದೊಳಗೆಂಬಂತಿರೆ ಪೊಳೆದು ತೋರ್ಪ ಜಲಚರಪರಿಕರಮಱಿದುವು ತಾಮೆ ದುರ್ಯೋಧನನಂ (ಗದಾಯು. ೬-೯೭); ಪೊಳೆಯುತಿರ್ದುದು ಬಿಸಿಲ್ ಕಂಡಳಿಲ್ಲದನಾಕೆ (ಕನ್ನಾಂಗ. ೫೨-೦೯೨೪). ೨. ಕಳೆಯೇರು; ಶೋಭಿಸು; ವಿಜೃಂಭಿಸು: ಬಾಗುತೆ ಬಲಿಯುತೆ ಪೊಳೆದಿನಿದಾಗುತೆ ದಳವೇಱುತಿಡಿದಿಡಿದು ಹಿಗ್ಗುತೆ ಪಣ್ಣಾಗುತೆ ಕಾಯ್ಗಳ್ ಪೊಱಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಿಂಕ. ೨-೫೦). ೩. ಪ್ರತಿಬಿಂಬಿಸು; ಪ್ರತಿಫಲಿಸು: ಸುರುಚಿರ ಸಾಲಭಂಜಿಕೆ ಬೆಮರ್ತುರದೊಳ್ ಪೊಳೆಯುತ್ತಿರಲ್ಕೆ ಮತ್ಸರಿಸಿದಳ್ . . . ಮನೋಹರನನೀಕ್ಷಿಸಲಿತ್ತಪುವಿಲ್ಲ ಹರ್ಷದಿಂದಿರದುಗುತರ್ಪ ಬಾಷ್ಪಮೆನಗೆಂದು ಲತಾಂಗಿಯಬಲ್ಚು ಬಾಡಿದಳ್ (ಕಾದಂಸಂ. ೫೨). ೪. ಹೊಯ್ದಾಡು; ಅಲುಗಾಡು ; ಚಲಿಸು : "ಪೊಳ್—ಲುಠನೇ (ಹೊರಳು), ನಮ್ಕರ್ಥೇ ಱಿಂ (ಪೊಱೆ)" (ಶಮದಾ); ಉನ್ಮತ್ತಚೇಷ್ಟೆಯಿಂದೆರೆಯಂ ತಿಂದ ಮಿಾನಂತೆ ಪೊಳೆಯುತ್ತುಂ (ಧರ್ಮಾಮೃ. ೫-೦೩೭) ; ನಿಮಿರ್ದುವು ಪೊಳೆದುವಳುಂಕಿದುವಮರ್ದುವು ಚುಂಬಿಸಿದುವಪ್ಪಿದುವು ಸಂಭ್ರಮದಿಂ ಸಮದೃಷ್ಟಿಯಾಗಿ ಸಿಲ್ಕಿದುವೆಮೆಯಿಕ್ಕಲ್ಕಱಿದುವವಳ ಧವಳಕಟಾಕ್ಷಂ (ಕಮಲ. ೨೨೫ ಕ್ರಿಯೋ) ;

ಮೂಸಿದೊಡೆ ನಾಸಾಗ್ರಮನುರ್ಚುವ ನಕ್ಕಿದೊಡೆ ನಾಲಗೆಯೊಳ್ನಡುಪ ಪೊಳೆದೊಡೆ ಬೆನ್ನೊಳ್ಮೂಡುವ್ಪೊರಸಿದೊಡೆ ಬರಿಯಂ ಕೊಚ್ಚಿವ . . . ಫಲವುಂ ಬಗೆಯ ಗಾಣಂಗಳಂ . . . ಬರ್ಚಿ ಬೀಸಿದಾಗಳ್ (ರಾಜಶೇ. ೫-೦೦೯ ವ). ೫. ಅಸ್ಥಿರವಾಗು ; ಚಂಚಲವಾಗು : ದಂತಿವಾಹನಂ ದಂತಿವಾಹನನೆಂಬ ಪೆಸರನನ್ವರ್ಥನಂ ಮಾಡಿ ಪೊಳೆಯದೆ ಕಳವಳಿಸದೆ ಪಟುವಿನೊಳ್ ಪೋಗುತ್ತಂ (ಪುಣ್ಯಾಸ್ರ. ೨೩-೬ ವ). ಹೊಳೆ₁: ೧. ಹೊಳೆವ ಕೆಂಜಡೆಗಳ ಮಣಿ ಮುಕುಟದ ಒಪ್ಪುವ ಸುಲಿಪಲ್ಲ ನಗೆಮೊಗದ . . . ದಿವ್ಯಸ್ವರೂಪನಂ ಕಂಡೆನೆನು (ಕುಮಾರರಾ. ಬಿ. ೩೨-೬೮); ಎಳೆಯ ರವಿರಶ್ಮಿಗಳು ರಕ್ತೋತ್ಪಲದೊಳಗೆ ಹೊಳೆವಂತೆ ಹೊನ್ನರೆ ಬಳಿದ ಹಿಳುಕನೆ ಕಾಣಲಾದುದು ಭಟನ ಕಾಯದಲಿ (ಕುಮಾ.ದ್ರೋ. ೬-೫೦); ಹೊಳೆವ ಕನ್ನಡಿ ಕೈಯೊಳಿರ್ದು ನೋಡದೆ ನೀರ ನೆಳಲಲ್ಲಿ ಮೊಗವ ನೋಳ್ಪಂತೆ (ಭರತ. ೦-೦೦೩); ಧಾತುಗಳು ರಾಜಿನಂತೆ ಹೊಳೆಯುತ್ತಿವೆ (ಭೂಗೋಳ. ೯-೯೨). ೨. ಇಂತು ನವವಾಸವಾಕೆಯೊಳಾಗೆ ಸನ್ನುತಂ ಅಂತಃಸ್ಥಳದೆ ಪುಣ್ಯಶಿಶು ತೊಳಗಿ ಹೊಳೆವುತಂ (ಬಸವ. ೦-೦೨೦). ೪. ಹೊಳೆವ ಸಿಂಧದ ಜಡಿವ ಕಹಳಾವಳಿಯ ಲಗ್ಗೆಯ ವಿವಿಧವಾದ್ಯದ ಕಳಕಳದ ಕಾಲಾಳ ಬೊಬ್ಬೆಯ ಬಹಳರಭಸದಲಿ . . . ಸಂದಣಿಸಿತತಿರಥರು (ಕುಮಾ.ದ್ರೋ. ೬-೨). ೬. (ಮಾತಿಗೆ) ತಪ್ಪು ; ನುಣುಚಿಕೊಳ್ಳು : ಕಪಟವನು ಬಿಡರಾತ್ಮಬುದ್ಧಿಯೊಳುಪಮೆಗಾಣದೆ ನುಡಿದು ಹೊಳೆವರು ಚಪಲಚಿತ್ತದಿ ಮನವ ಮೆಚಿಸಿ ಮಾತನಾಡುವರು (ವಳಿಕ. ೩-೨೯); ಬೊಮ್ಮನೆಮ್ಮೊಡನಾಡಿ ಹೋಳೆದನೇ ಅಟಕಟ ತಮ್ಮ ಭಾಗ್ಯದ ಶರಧಿ ಬತ್ತಿ ಬಯಲಾದುದು (ಕಬಪು. ೯೯-೨೬); ಉದ್ರೇಕದಿಂ ಮುನಿಪರನೊಳಾಡಿ ತಪ್ಪಿದ ಗುರುದ್ರೋಹವೊಂದಚ್ಯುತನೊಳಾಡಿ ಹೊಳೆದ ದೈವದ್ರೋಹಮೆರಡು (ಕೃಜಿಚಂ. ೯-೨). ೭. ಬೇರೆಯ ಕಡೆಗೆ ತಿರುಗು; ಪಕ್ಕಕ್ಕೆ ಹೊರಳು : ತಳೆದನು ಬಲಭದ್ರ ರಾಮನ ಗದೆಯರತಳದ [ಗದೆಯೇಟ ತಳೆದ] ಭೈರವನುಪಟಳಕೆ ಹೊಳೆದು ನೀಲಾಂಬರ ನೇಗಿಲ ಕೊರಲ್ಗಿಕ್ಕಿ ಸೆಳೆದವರ್ ಪೊಯ್ದಾಡಿದರು (ತೋಹತ. ೩೯-೦೯). ೮. ವೇಗವಾಗಿ ಹೋಗು ; ಮುನ್ನುಗ್ಗು : ಕಲಕಿ ಹೊಳೆದವು ಕಡುಗುದುರೆ ನೆಲನಳುಕೆ ನಡೆದವು ದಂತಿ (ಕುಮಾ.ದ್ರೋ. ೦೨-೮). ೯. ತೋರು ; ಕಾಣು ; ಪ್ರಕಟವಾಗು : ಮನದೊಳಗೆ ವಿಸ್ಮಯರಸಂ ತುಳುಕುತಿದೆಯೆನ್ನ ನೆನಹಿನೊಳು ಶಿವರೂಪು ಹೊಳೆವುತಿದೆ (ಕಬಪು. ೯-೬). ೧೦. ಸ್ಫುರಿಸು ; ಸ್ಫುಟವಾಗು : ಮಾಡಿದೆನೆಂಬುದು ಮನದಲ್ಲಿ ಹೊಳೆವರೆ ಏಡಿಸಿ ಕಾಡಿತ್ತು ಶಿವನ ಡಂಗುರ (ಬಸವ. ೨೩೯) ; ಈ ವೇಳೆಗಾಗಲೆ ಮನದೊಳು ಹೊಳೆದಂತೆ ಕನ್ನಡಕವಿತೆಯ ರಚಿಸಿ ತೋರಿದ (ಇಂಗ್ಲಾಕಾ. ೨೩-೫); ಇಂತಹ ಒಂದು ಸನ್ನಿವೇಶ ಆ ಹೊತ್ತಿನಲ್ಲಿ ನಡೆಯುವುದು ಹೇಗೆ ಸಾಧ್ಯ ? ಎಂಬುದೂ ಅವರ ವಿವೇಕಕ್ಕೆ ಹೊಳೆಯದೆ ಹೋಯ್ತು (ಕನ್ನಸ. ೦-೯).

[ದೇ.॥ ತಮಿ. ಪೊಲಿ ; ಮಲ. ಪುಳೆ, ಪುಳಯು ; ತೆಲು. ಪೊಲಯು]

**ಪೊಳೆ₂, ಹೊಳೆ₂** (ನಾ). ಕಾಂತಿ ; ಹೊಳಪು : "ಬೆಳಗಿನೊಳ್ ಪೊಳೆಯ ನಿಕ್ಕಂ" (ಸಂಚೀಪ. ೨೫). **ಹೊಳೆ₂** : ವಜ್ರದಲ್ಲಿ ಬಟುವಾಗಿ ಕೆಂಪಾಗಿ ಹೊಳೆಯುತಿಯಿರುವವೆ ಬಿಂದುವು (ಶಾಂಗಂಧಿ. ೩೬೯-೦). [< ಪೊಳೆ₁]

**ಪೊಳೆ₃** 'ಪೊಟೆ' ನೋ.

**ಪೊಳೆಪಿಡು** (ಕ್ರಿ). ಪ್ರಕಾಶಿಸುವಂತೆ ಮಾಡು ; ಹೊಳಪು ಕೊಡು : ಏಳಸಿತಪುಪ್ಪದೊಂದು ಪೊಳೆಪಂ ತಳೆದಿರ್ದುದನಿಂದುಲೇಖೆಯುಂ ಪೊಳೆಪಿಡ ಪೇಟ್ಟುದೇ (ಜಗಧ. ೦೦-೦೦೨). [ಪೊಳೆಪು (< ಪೊಳಪು) + ಇಡು₁]

**ಪೊಳೆಪು** 'ಪೊಳಪು,' ನೋ.

**ಪೊಳೆಪುವಡೆ** (ಕ್ರಿ) . ಕಾಂತಿಯನ್ನು ಹೊಂದು ; ತೇಜಸ್ಸನ್ನು ಪಡೆ : ಮತ್ತಮೊರ್ಮೆ ಮಿಸುಪೆಸಟ ಪಸರದಿನೆಸೆವ ಪೊಸಪಸೆಯೊಳ್ ಮೆಯ್ಯನೀಡಾಡಿ ಪೊಳೆಪುವಡೆದ ಪಲ್ಲಗಡಲ ತೆರದುಬುಗುಲೊಳ್ ಪವಡಿಸುವ ಸಿರಿಯಂ ಪೊಲ್ಮಿರ್ಪಳ್ (ಅಜಿತಾ. ೩೦೫) . [ಪೊಳೆಪು (< ಪೊಳಪು) + ಪಡೆ₁]

**ಪೊಳೆಯಿಸು, ಪೊಳಯಿಸು, ಹೊಳಸು, ಹೊಳೆಯಿಸು, ಹೊಳೆಸು** (ಕ್ರಿ). ೧. (ನಾಲಗೆಯ ಮಿಂಚುವಂತೆ) ಹೊರಳಿಸು ; ಆಡಿಸು : ನೀವಿನಾಗಳ್ ಪೊಟಲ್ಗೆ ಪೋಪಾಗಳ್ ನಿಮಗೆರಟ್ಟಿಲಿಂಗನಾಗಂಗಳ್ ಪೆಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತಂ ಬಂದೊಡೆ ನೀಮೊದಲಿಯವಂ ಬಗ್ಗಿಸಿದೊಡದೃಶ್ಯಂಗಳಾಗಿ ಪೋ ೯ ಕು ೦ (ವಡ್ಡಾರಾ. ೦೦೦-೯). ೨. (ಮಿಂಚಿನ ಹಾಗೆ) ತಿರುಗುವಂತೆ ಮಾಡು,-ಸುತ್ತಿಸು : ಘೋಟಾಯ್ಲರ್ ಪೊಳೆಯಿಸೆ ಬಿಸಿಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ (ಶಂಕಚಂ. ೦೦-೫೦ ವ). ೩. (ಆಯುಧ ಮೊದಲಾದುವನ್ನು ಮಿಂಚುವ ಹಾಗೆ) ಬೀಸು ; ಝಳಪಿಸು : ಪಲಗೆಗಳಂ ಪೊಳೆಯಿಸಿ ಕಡಿತಲೆಯುಂ ಜಡಿದೆಯ್ದುವಣೆಯ ವೀರರನೆಚ್ಚಂ ಪಲಗೆಯುಮುರಮುಂ ತೆತ್ತಿಸೆ ತಲೆಯುಂ ಕಡಿತಲೆಯುಮೊಡನೆ ಪಟಿಯೆ ಮುಕುಂದಂ (ಜಗಧ. ೦೨-೦೭) ; ಇಭಮನಣೆದು ಬಿಟ್ಟಿಕ್ಕಲೆಂದಿರ್ಪ ವಜ್ರಾಂಕುಶಮುಂ ನಾನಾಪ್ರಕಾರಂ ಪೊಳೆಯೆ ಪೊ[ಪಾಠಾಂ. ಳೆ]ಯಿಸುತ್ತಿರ್ಪಮಂ ದೇವರಾಜಂ (ಜಗಧ. ೦೩-೬೬). **ಪೊಳಯಿಸು** : ೨. ಚಮ್ಮಟಗೆಗಳಿನೊಯ್ಯನೊಯ್ಯನೆ ಮೈವಳಿಗೆ ತಂದೊಡಂಬಡಿಸಿ ಕಡಂಗಿ ನಡೆಯಿಪ ಪೊಳಯಿಪ ದೂವಾಳಿಪ ಪೊಜಮಡಿಪದಿರೇಚಪಡ್ಡಂಬರಿಯಿಪ ವಾಘೆಯೊಳ್ಸರಿಸಂಗೊಂಡು . . . ಶಾಳಿಹೋತ್ರನನಾಳಿಗೊಳ್ವ ಘೋಟಾಯಿಲರ್ ನೆರೆದು (ರಾಜಶೇ. ೬-೦೦ ವ) ; ಸುಳಿಸುಳಿದಶ್ವಮನೇಱುತೆ ಪೊಳಯಿಸಿ ಮಿಗೆ ದಂಡೆಗುಡುತಿದಿರ್ಚುತೆ ಪೆಱಕಾಲ್ಗೊಳಿಸಿ ಪೆಡಂಮೆಟ್ಟುತ್ತಿತ್ವವ್ವಳಿಸುತ್ತೆ ಪಳಂಚಿದ ತರ್ಗರಂಗಿಗಳದಱೊಳ್ (ರಾಜಶೇ. ೦೩-೮೫). ೩. ತ್ರಿಜಗದ್ಭೂಷಣಮಾದ್ಯದ್ಗಜಮಂ ಬಂದೇಱ ಪೊಳ[ಪಾಠಾಂ. ಳೆ]ಯಿಸುತ್ತಂಕುಶಮಂ ವಿಜಿಗೀಷು ಲಕ್ಷ್ಮಣಂ ಮದಗಜದಡಕಿಲಿದೆನಿಸಿ ಪೊಕ್ಕನೊಡನರಮನೆಯಂ (ಶಂರಾಷಾ. ೦೫-೯) . **ಹೊಳಸು** : ೨. ತುರಗಪ್ರಸರವನು ಚೋಳೈಸಿ ರಥವನು ದೆಸೆದೆಸೆಗೆ ಹೊಳಸಿದನು ಲುಳಿವಡಿಸಿದ ಮಹಾರಥವ (ಕುಮಾ.ಕ. ೭-೦೯). ೪. (ಮಿಂಚಿನಂತೆ) ತಿರುಗು ; ಹೊರಳು : ಹೊಳಸಿದನು ದಿನನಾಥನಾಗಲೆ ಹೊಳೆಯಲಿಟ್ಟಳು ಜನನಿಯಿದ ನೀ ತಿಳಿದ ಕೆಲಸವೆನುತ್ತಲಪ್ಪಿದ ನೆತಡು ಕೈ ದಣಿಯೆ (ಕೃಷ್ಣಾಕಾ. ೦೨-೨೬). **ಹೊಳೆಯಿಸು**: ೫. ಪ್ರಕಾಶಗೊಳಿಸು; ಸ್ಪಷ್ಟಪಡಿಸು: ಆ ತರದ ಕ್ರಮಾಲಂಕಾರವನ್ನು ತೊಡಿಸಿದರೆ ಆ ರಾಣಿಯುರ ಕುರೂಪವನ್ನು ಹೊಳೆಯಿಸಿದಂತಾಗುವುದು (ಶಾಕುಶೋಕ. ೯೩); ಅವು ಕಥಾನಕದ ಸ್ಥೂಲಸ್ವರೂಪವನ್ನು ಮಿಂಚಿನಂತೆ ಹೊಳೆಯಿಸಿ ತೋರಿಸಬಹುದಾಗಿತ್ತು (ಕಪಾ. ೫೫). **ಹೊಳೆಸು** : ೫. ಗವಿಯೊಳಿದ ಹೊನಲಿನಂ ಶಿವರೆನಗೆ ಹೊಳೆಸುವರು ಗುಡಿಯೆಲ್ಲೆಯನು ತಳೆದ ದೇವಳೆಯ (ಮುರಿದೇ. ೯೯-೭). ೬. ತೋರಿಸು ; ಸ್ಫುರಿಸು : ತಿಳಿದ ಮಾತೆ ಹೊಳೆಸಿದಂತೆ ಎದೆಯ ಬೀಜ ಬೆಳೆಸಿದಂತೆ (ಅರಳು. ೯೪೭-೬). [ಪೊಳೆ₁ + -ಇಸು₃]

**ಪೊಳೆವಲ್** (ನಾ). ಕಾಂತಿಯುತವಾದ ಹಲ್ಲು ; ಮಿನುಗುವ ಹಲ್ಲು : ನಿಟ್ಟೆಸಳುಗಂಗಳ ಸನಾಸಿಕದ ಪೊಳೆವಲ್ಲ ನಸುದೋಱುವ ಕಿಱುನಗೆಯ ಕದಪುಗಳ ಕುಂಡಲದ ಚೆಲ್ವಿನಿಂ ಮೆಱೆವ ಸದ್ವದನನಂ . . . ಕಂಡನವನೀಪಾಲನು (ಕೃಜಿಚಂ. ೨-೪೮). [ಪೊಳೆ₁ + ಪಲ್]

**ಪೊಳೆವಾಳ್** (ನಾ). ಹೊಳೆಯುವ ಕತ್ತಿ,-ಖಡ್ಗ : ಬಳೆದುದು ಕಂದೂಳಿ ಖುರಾವಳಿಯಿನೆನಲ್ ನೆಗೆದ ತಮ್ಮ ರಜಮಂಬರದೊಳ್ ಬೆಳಗುವ ಕಿಸುಸಂಜೆಮುಗಿಲ್ ಪೊಳೆವಾಳ್[ಪಾಠಾಂ. ಪೊಳೆವೆಳೆ] ಮಿಂಚೆನಿಸೆ ಕಾದಿದರ್ ಘೋಟಾಯ್ಲರ್ (ಜಗಧ. ೭-೫೮). [ಪೊಳೆ₁ + ಬಾಳ್₃]

**ಪೊಳ್ತಡ** 'ಪೊಟ್ಟಿಟ್' ನೋ.

**ಪೊಳ್ತಡೆ** 'ಪೊಟ್ಟಿಟ್' ನೋ.

**ಪೊಳ್ತರೆ** 'ಪೊಟ್ಟಿಟ್' ನೋ.

**ಪೊಳ್ತಟ್** 'ಪೊಟ್ಟಿಟ್' ನೋ.

**ಪೊಳ್ಟಟಿ³** 'ಪೊಟ್ಟಿಟಿ' ನೋ.

**ಪೊಳ್ತು** 'ಪೊಟ್ಟು' ನೋ.

**ಪೊಳ್ನುಡಿ** (ನಾ). ಮೋಸಗೊಳಿಸುವ ಮಾತು; ನಂಬಲು ಅನರ್ಹವಾದ ಮಾತು : ಪಾದರದ ಕುಂಟಣಿಯಂತೆ ಖಂಡನ ಪೊಳ್ನುಡಿಯಂತೆ (ಶಬರ್ಶಂ. ೯–೨೩ ೞಚಿ). 'ಪೊಳ್ಳುನುಡಿ' ಪರಾ.

[ಪೊಳ್ (< ಪೊಳ್ಳು) + ನುಡಿ₁]

**ಪೊಳ್ಮರ** (ನಾ). ಜಳ್ಳುಮರ; ಟೊಳ್ಳಾದ ಮರ : ಪೊಳ್ಮರನಂ ಕಿಚ್ಚುರ್ವಂತೆ ದುಃಖಾಗ್ನಿ ತನ್ನಂ ಸುಡೆ ಪ್ರಿಯದತ್ತಸೆಟ್ಟಿ ಪಳಯಿಸಿ ಮಾಣ್ಬುದುಂ (ಶಬರ್ಶಂ. ೩–೨೨೭). 'ಪೊಳ್ಳುಮರ' ಪರಾ.

[ಪೊಳ್ (< ಪೊಳ್ಳು) + ಮರ₁]

**ಪೊಳ್ಳಯಿಸು** (ಕ್ರಿ). ನಿಸ್ಸತ್ತ್ವವಾಗು; ಜಳ್ಳಾಗು : ಬೆಳ್ಳುಳ್ಳಿ ಬಿಸಿಲಿಂಗೆ ಪೊಳ್ಳಯಿಸಿ ಹಣಿವಂತೆ [ಪಾಠಾಂ. ಬೆಳ್ಳುಳ್ಳಿ ಪೊಡದರೆ ಹೊಳ್ಳಪ್ಪ ತೆಱನಂತೆ] ಒಳ್ಳೆಯ ಗುರುವಿನುಪದೇಶದಿಂ ಭವದ ಬಳ್ಳಿ ಹಱಿದಿಹುದು (ಸರ್ವಜ್ಞ. ೬೨).

[< ಪೊಳ್ಳು + – ಇಸು₁]

**ಪೊಳ್ಳಾಸೆ** (ನಾ). ಬರಿಯ ಆಸೆ; ನಿರರ್ಥಕವಾದ ಬಯಕೆ : ಪೊಳ್ಳಾಸೆಯಿಂದವನ್ ತಿರುಳಾಯ್ಕೆಯಾಯ್ತು, ಆ ಬೀಯೋಷಿಯದ ಬಯಲ ತಹ್ಬೊಳೆ ಆಸೋಪಷನ ದಡವಲ್ಲಿ ಒಳಿಗಾಲವನ್ ಮೊಂಕೆ ಬಡಿಸುವನು (ಪಾಠಾ. ೩೦–೬೯೦).

[ಪೊಳ್ಳು + ಆಸೆ₁]

**ಪೊಳ್ಳಿಕ ?** (?). (?) : ಪತ್ತಿದರಪ್ಪ ಡವಾ ಬ್ರಾಹ್ಮಣನ ದೋಶಮವದ ನೆಯ್ದುವದು ಸಮಸ್ತ ಪ್ರತ್ತಿಕಾಜಿರು ಪೊಳ್ಳಿಕ ಹೊಲ್ಲಪಕ ಪರಿಹರಿಸಿದಡೆ ಪಾದದೋಶ ತವಗಂ (ಕ್ಷ. V, ೯೩–೭; 1113). [?]

**ಪೊಳ್ಳು, ಹೊಳ್ಳು** (ನಾ). ೧. ಹುರುಳಿಲ್ಲದುದು; ಸತ್ತ್ವಹೀನವಾದುದು; ಜೊಳ್ಳು : "ಜಳ್ಳೆನೆ ಜಾಳೆನೆ ಜರಡೆನೆ ಪೊಳ್ಳೆನೆ ತಾಂ ನಿಃಪ್ರಯೋಜನಾರ್ಥಮದಕ್ಕುಂ" (ಶಬಂ. ೨೦೯); ಕ್ರಮವಿಕಲ್ಪನೆಯಿಂ ಗುಣದೋಷಮುಂ ಕೀಱಿಕೊಂಡು ಗುಣಮುಂ ಕಳೆಗಲ್ಲಿಯ ದೋಷಮುಂ ತೋಱಿ ಪಿಂಗಿಸುವಪೊಲ್ ಪೊಸ ನೆಲ್ಲಿರೆ ಪೊಳ್ಗಳಂ (ಕಾಂ. ೦–೦೩೦). ☞ ಈ ಪ್ರಯೋಗದಲ್ಲಿ ಶಬ್ದವು ವ್ಯಂಜನಾಂತವಾಗಿದೆ. ಆದರೆ ಜ್ಞಾತಿಶಬ್ದಗಳಲ್ಲಿ ಹೆಚ್ಚಿಗೆ ಸ್ವರಾಂತವೇ ಇರುವುದರಿಂದ ಸ್ವರಾಂತಕ್ಕೇ ಇದನ್ನು ಪ್ರಯೋಗವಾಗಿ ಕೊಡಲಾಗಿದೆ : ಊನಮಿಲ್ಲದೆಸಕಂ ಪೊಳ್ಳಿಲ್ಲದಾಪ್ಪಾರ್ಗ್ಗಮಂಜದ ವಿದ್ಯಾಮಹಿಮೋದಯಂ (ಎಕ. XII. ೨೧೦–೦೩೩ ; 1077); ತನ್ನ ಪ್ರೇಮವನ್ನೇ ಪೊಳ್ಳೆಂದು ಬಗೆದು ನಿರಾಶನಾದನೋ? (ರೂಹಕ. ೯೨); ನೀನು ಇದು ಪೊಳ್ಳೆಂದು ತಿಳಿಯಬೇಡ (ಹಹಾ. ೯೩). ೨. ಹೊಟ್ಟು; ತೌಡು; ಉಮಿ : ಧಾನ್ಯಮುಂ ಕೊಟ್ಟು ಪೊಳ್ಳಂ ಕೊಳ್ವ ನೆಲವಾಟಂ ಬಟ್ಟು ತಿರಿದುಂಬ ಮರುಳಂ ಪೋಲ್ಪುಂ (ಶಬರ್ಶಂ. ೦೦–೬೩); ನೀರಸಂ ಶೈಥಿಲ್ಯವರ್ಣಂ ಕಾರಕವಿರಹಿತಂ ಕ್ರಿಯಾಳಂಕಾರಹೀನವೆನಿಪ್ಪ ಪೊಳ್ಳಂ ತೂಱಿ ಕಳೆದು (ಜಪು. ೦–೦೬). ೩. ಜಳ್ಳುಕಾಳಂ; ತಿರುಳಿಲ್ಲದ ಕಾಳು : ಪೊಳ್ಳುಂ ಬಿತ್ತುಂ ಸಸಿಗಳುಮೊಳ್ಳಿದುವೆನಿಸಿರ್ಪವೆಯ್ದೆ ಫಲದೊಳ್ ತೋರ್ಕುಂ ಪೊಳ್ಳಪ್ಪುದು ಪೊಳ್ಳುಂ ಕರವೊಳ್ಳಿದುವೆನಿಸಿರ್ದ ಬಿತ್ತು ಧಾನ್ಯಮುಮಕ್ಕುಂ (ಶಬರ್ಶಂ. ೩–೦೦೭). ೪. ಪೊಟರೆ; ಡೊಗರು; ಹೋರು: ಪೋಟು=ಪಾಸೆ ಬಂದ ಹಣ್ಣಿಂ!ಮರದ ಪೊಳ್ಳುಂ (ಶಾಕೆ. ೨೨೭); ಸಾಗವಾನಿ ಪಾಲು . . . ಅರಶಿನಬಣ್ಣದ್ದಿರುತ್ತವೆ. ಹಾಂಗು ಕೊಯ್ಯುವದರಲ್ಲಿ ಸಾಫ ಬರುತ್ತದೆ. ಅದಕ್ಕೆ ಗಂಟು ಪೊಳ್ಳು ಮಗ್ಗೆರೆ ಡಾಗುಗಳು ಬಹಳ ಮಾಡಿ ಇರುಪದಿಲ್ಲ (ಮುಂಡಜ್ಞಾ. ೨೦೩). ೫. (ಆಲಂ) ಒಣ ದರ್ಪ, ಜೋರು : ಕಳ್ಳ, ಸುಳ್ಳಾಡುತೀಯಾ? ನಿನ್ನ ಪೊಳ್ಳಿಗಂಜಲು ನಾವೇನು ಮಕ್ಕಳೆಂದರಿತೆಯಾ ? (ಶಂಪ್ರಕ. ೨೩–೦೭). ೬. ನಿಷ್ಪ್ರಯೋಜಕವಾದುದು : ನುಡಿಗಟ್ಟದ ಗಬ್ಬದುಬ್ಬರದಿಂ ನನೆಕೊನೆವೋಗಿ ಕೊನೆವರ್ಚಿನ ಪುರ್ಚಿನ ಪೊಳ್ಳುಬಳ್ಳು ಮುದ್ದಣಂ (ರಾಮಾಶ್ವ. ೦೩೩–೭); ಬಾಯ್ದುದುರೆವಾಯ್ಗ ಕಡಿವಾಣವನ್ನಿಕ್ಕೆಲವೊ ಹಂಬೇಡಿ! ಬಳ್ಳುಕ್ಕುತಿದೆ ಪೊಳ್ಳುಬುಬುಕಂ ಸಿಂಗದಿದಿರಿನಲಿ! (ಜೈಮಿಂಗ. ೬೭–೨೦೦). **ಹೊಳ್ಳು** : ೧. ಸೀ ಹೊಣೆಯಲಿಕ್ಕ ಹೊಳ್ಳಹುದು ದೇವಾಸುರವಹೀತಳವು (ಸಂಶಕ. ೦೭–೩೭); ಮಂದಿ ಮೆಚ್ಚಲದುವೆ ಹೆಚ್ಚೆ ? ಸುಳ್ಳು ಹೊಳ್ಳು ಆ ಸ್ತುತಿ! (ಅಜೀ. ೦೭–೨). ೨. ಒಕ್ಕಿದ ಮೇಟಿ ಕಿತ್ತಿತ್ತು ಹುಲ್ಲು ಮೆದೆಗೆ ಹೋಯಿತ್ತು ಹೊಳ್ಳು ಗೂಡು ಬಿದ್ದಿತ್ತು (ಜೀರಮಾ ೦೯೩–೩೩೩); ಹೊಳ್ಳುಗಳ ತೂಱಿದೆವು ಹಿಡಿಹಿಡಿ ಬಲ್ಲ ಸುಂಸುರಿ ಶರವನಕಟನ್ನಲ್ಲಿ ಹೊಗುವೈ ಕಂದ (ಕುಮಾಕ್ರೋ. ೨–೯೭); ಅಜ ಹರಿ ಸುರಾಸುರರೆನಿಪ್ಪ ಹೊಳ್ಳುಗಳ ತೂಱುವ ಗಾಳಿಯಾ ಬಂದನು (ಬಕ್ಕಪು. ೨–೯–೦೬). ೩. ಹುಸಿಯುಸಾಡಿ ಲಿಂಗವ ಪೂಜಿಸಿದಡೆ ಹೊಳ್ಳ ಬಿತ್ತಿ ಫಲವನಱಸುವಂತೆ ಕಾಣಾ (ಜಂಪಾದೇ. ಬ. ೩೩–೦೯೦); ಹೊಳ್ಳನು ಹುರಿದರಳನು ಕುಱುಕುವನಂತಿದನಱಿಯೆಂದನು (ದೋಣಾಂಶಿ. ೯–೩೭). ೪. ಇರುಳು ಕಗ್ಗತ್ತಲೆಯೊಳೋಂವ ಸರಿವಳೆಗೆ ಸಲೆ ಸೇಡುಗೊಳುತುಬ್ಬರಿಸಿ ಕೃಷ್ಣನ ನೆನೆವುತಿದ್ದನು ಪುರದ ಹೊಳ್ಳನಲಿ (ಕುಮಾಶ. ೦೯–೨೩); ಹುತ್ತಿನೊಳಗಣ ಹೊಳ್ಳು ಹಾವಿಂಗೆತ್ತ ಹೋದೊಡೆ ಸುಸರವಲ್ಲದೆ ಮತ್ತೆ ಮಿಕ್ಕಿನ ಜೀವಜಾಳಕಭೇದ್ಯವಾದಂತೆ (ಪ್ರಭುಲೀ. ೨೦–೨೬); ೭. ನಿಷ್ಪ್ರಯೋಜಕನಾದವನು; ಕೆಲಸಕ್ಕೆ ಬಾರದವನು : ಕೋಟಿ ಬ್ರಹ್ಮಾಂಡದ ನೆನೆಪಿಲ್ಲೆನಲಂತವಱೊಳಗೊಂದಱ ಕಡೆಗೊಂಟಿನ ಹಳ್ಳಿಯ ಹೊಳ್ಳುಗಳೊಂಬತ್ತಱೊಳೊಬ್ಬನವಿವನು ಬಲ್ಲನೆ ಶಿವಮ (ಜಜೀಕ. ೦–೨೦); ಇಲ್ಲಿ ಬಂದಿದಿರಾಂತು ಸಾಯದೆ ಹೊಳ್ಳುಗುರಾ ಹಾಱಿಸುತ್ತಾ ಬಲ್ಲಿದನ ಜಯಘಂಟೆಯೊಳು ಕುಡುಹೊಂದಿಸಿದನೊಡನೆ (ಬಸಪು. ೨೦–೯೦); ಹಳ್ಳಿಯ ಹೊಳ್ಳುಗಳ ಲೆಕ್ಕಿಪನೆ (ಬಕ್ಕಪು. ೩–೨–೦೦). 'ಪೊಟ್ಟು' ಪರಾ.

**ಪೊಳ್ಳಾಗು, ಹೊಳ್ಳಾಗು** = ೧. ಸತ್ತ್ವಗುಂದು; ದೃಢತೆಯನ್ನು ಕಳೆದುಕೊಳ್ಳು : ದಿಟ್ಟತನ ಪೊಳ್ಳಾಯ್ತು ಶೌರ್ಯದ ಘಟ್ಟ ಕರಗಿತು (ಕುಮಾಶ. ೯–೬೨); ತಿರುಳಿಲ್ಲದೊಟೆಗಳ ತಿಂತ್ರಿಣೀಫಲದಂತೆ ಗುಳಿಕ ಕರ್ಕೋಟಕಾದಿಗಳೊಡಲ್ಪೊಳ್ಳಾದುವಿಱುಹೆಗಳ ಮುತ್ತಿಗೆಗೆ ಕಂಗೆಟ್ಟುವು (ಕೃಪಾಭಾ. ೨೯–೩೩); ವೇದಶಾಸ್ತ್ರಪುರಾಣಗಳು ಸುಳ್ಳಾದುವು; ಜನರು ಪೊಳ್ಳಾದರು; ಭಗವಂತನು ಕಳ್ಳನಾದನು (ಬಿಜಾಕ. ೯೦). ೨. ಡೊಗರು ಬೀಳಂ; ಹೋರು ಉಂಟಾಗು: ಮೊದಲಿನ ದೋಣಿಯೊಂದರ ಹೊಳ್ಳಾದ ಮರದ ತುಂಡು (ಜಾಂಶ್ರ. II. ೬೯೨). ೩. ವ್ಯರ್ಥವಾಗು; ಹಾಳಾಗು; ನಾಶವಾಗಂ : ಮನವೆ ಲಿಂಗ ಲಿಂಗವೇ ಮನವಾದ ಬಳಿಕ ಮಾತು ಮಾತುಗಳೆಲ್ಲ ಹೊಳ್ಳಾ[ಪಾಠಾಂ. ಹೋಳಾ]ದ ಕಾರಣ ಲಿಂಗೈಕ್ಯ ಲಿಂಗೈಕ್ಯವೆ (ಸಿದ್ಧವ. ೪೨–೨೨೯); ನಿಜ್ಜಲೋದುವ ಪುರಾಣದ ಮಾತಿನ ಮಾಲೆ ಮಚ್ಚು ನೃಱಿದುವು ಹೋಮನೇಮಂಜಪಸಱೆಸಮಾಧಿಗಳೆಂಬವೆಲ್ಲ ಹೊಳ್ಳಾದುವು (ಷಟ್ಸ್ಥಲ. ದೀ. ೩೦೭–೩). ೪. ಹುಸಿಯಾಗು; ಸುಳ್ಳಾಗು : ಪ್ರಸವೇಱಿಸಿ ನುಡಿದ ಪಾರ್ಥನ ಭಾಷೆ ಹೊಳ್ಳಾಗದು ಸುಯೋಧನ ದೇಶವನು ಬೀಳ್ಕೊಂಡೆನೆಂದನು ಸೈಂಧವನು ಸಭೆಗೆ (ಕುಮಾಕ್ರೋ. ೬–೨೦). **ಹೊಳ್ಳು ಮಾಡು** = ನಿಸ್ಸಾರವಾಗಿಸಂ; ನಿಸ್ಸತ್ತ್ವಗೊಳಿಸಂ : ಹಮಳದಿಂ ಬಲವಸೆಲ್ಲವ ಹೊಳ್ಳು ಮಾಡ ಬಗೆವರೆ ಹೇಳೆನೆಲು (ಜಕಾ. ೯–೦೦); ಅಲ್ಪಜ್ಞಾನಮಾರ್ಗವ ಹೊಳ್ಳು ಮಾಡಿ ವಿಶುದ್ಧಪೂರ್ವಜ್ಞಾನಮಾರ್ಗದಲಿ ಒಳ್ಳಿತಾಗಿಹ ಸುಖವ ಬಯಸಲು (ಪ್ರಭುಲೀ. ೬೩–೦).

[ದೇ. ೩ ತಮಿ. ಪೊಳ್ಳು, ಪೊಳ್, ಪೊಳ್ಳೈ; ಮಲ. ಪೊಳ್ಳು; ತುಳು. ಪೊಲ್ಲು, ಪೊಳ್ಳ, ಪೊಳ್ಳು; ಕೊಡ. ಪೊಳ್ಳೆ, ಪೊಳ್ಳಿ; ತೋಡ. ಪೊಳ್ಲು, ಪೊಲ್ಲ; ಪಾಯ್ಕು. ಪೊಲ್ಲೇ; ಪರ್ಜಿ. ಪೊಲ್, ಪೊಲ್ಕ; ಗೊಂಡಿ. ಪೊಲ್ಲುತು; ಕುಇ. ಪೊಲ್ಗು; ಕುವಿ. ಪೊತೂ]

**ಪೊಳ್ಳುಗಳೆ,** ಪೊಳ್ಳುಗಳೆ (ಕ್ರಿ). ೧. ವ್ಯರ್ಥವಾಗಿಸು ; ಸತ್ತ್ವಗುಂದಿಸು : ಅಮಲಧರ್ಮಜನ ಕೀರ್ತಿ . . . ನಾಗೇಂದ್ರ ವರದಾಯುಧವ ಪೊಳ್ಳುಗಳೆದು ಮಥನಾಗೇಂದ್ರಧರನ ಜಾತೆಯ ನಿಲವುಗೆಡಿಸಿ ನೆಱೆ ರಾಜಿಸಿತು ಮೂಜಗದೊಳು (ಕೃಭಾಕಾ. ೨-೦೨). ೨. ತುಚ್ಛವಾಗಿ ಕಾಣು ; ಜರಿ ; ಮೂದಲಿಸು : ಸುಧನ್ವ ಮತ್ತೆ ಅವನ ಅಗ್ಗಳಿಕೆಯನ್ನು ಪೊಳ್ಳುಗಳೆದುಡಿದ (ದಿದುರ. ೫೪). **ಹೊಳ್ಳುಗಳೆ :** ೧. ಮಗುಳೆಚ್ಚು ಪುನರಪಿಯೆಚ್ಚು ಕರ್ಣನ ಹೊಳ್ಳುಗಳೆದನು ಪಾರ್ಥ ನಿಮಿಷದಲಿ (ಕುವ್ಯಾಕ. ೨೩-೨೫) ; ಹಗೆಗೆ ಹೊಳ್ಳುಗಳೆವುದು ಹೃದಯವುಂ! (ಶ್ರೀರಾಪಟ್ಟಾ. ೫೫೯-೦೯೬). ೨. ಹೊಗಳಿ ಕೆಲವರ ಹೊಳ್ಳುಗಳೆವುತ ನಗುತ ಕೆಲವರನವರ ಮೋಹರ ತೆಗೆದು ಹೋಯಿತು (ಕುವ್ಯಾಕ. ೫-೨) ; ಎಲ್ಲರನು ನೀ ಜಱೆದು ರ್ಝಾಡಿಸಿ ಹೊಳ್ಳುಗಳೆದೊಡೆ ನಿನ್ನಲೆನ್ನಲಿ ಹೊಲ್ಲವೊಳ್ಳಿತನಱೆವ ಮಾತಂತಿರಲಿ ಹೇಳೊಂದ ಬಲ್ಲೆಯಾದೊಡೆ ನೀನು (ಕೃಭುಲೀ. ೭-೬೦). ೩. ಸುಳ್ಳುಮಾಡು ; ಸುಳ್ಳಾಗಿಸು : ನರನ ನುಡಿಯನು ಹೊಳ್ಳುಗಳೆವರೆ ಚರಣದಲಿ ಬೀಳುವೆವು ನಡೆಯೆಂದಿರುಳು ದ್ರೋಣನ ಮನೆಗೆ ಬಂದನು ಕೌರವರ ರಾಯ (ಕುವ್ಯಾದ್ರೋ. ೬-೫೪). [ಪೊಳ್ಳು + ಕಳೆ₁]

**ಪೊಳ್ಳುಗುಂಭ** (ನಾ). ಬರಿದಾದ ಮಂಡಕೆ ; ಖಾಲಿಯ ಗಡಿಗೆ: ಬಸಿರು ಬಯಲು ಪೊಳ್ಳುಗುಂಭ ಬೞೆಗಾಳಿ ಅದರ ತುಂಬ (ಹೃದಸ. ೬೪-೯). [ಪೊಳ್ಳು + ಗುಂಭ₂ (< ಗುಂಬ₃)]

**ಪೊಳ್ಳುಗೆಡೆ** (ಕ್ರಿ). ಹುರುಳಿಲ್ಲದ ಮಾತನಾಡು ; ಜಳ್ಳು ಮಾತನಾಡು: ಬಡವನೊಳ್ಳಿಯ ಮಾತ ನುಡಿದರಲ್ಲೆಂಬುವರು ಪೊಡವೀಶ ಪೊಳ್ಳುಗೆಡೆದರೂ ಕೈವಾರಿ ಕಡುನಗುತಲಿಹರು (ಸರ್ವಜ್ಞ. ೦೨೬೬). [ಪೊಳ್ಳು+ ಕೆಡೆ₂]

**ಪೊಳ್ಳುನುಡಿ,** ಹೊಳ್ಳುನುಡಿ (ನಾ). ಹುರುಳಿಲ್ಲದ ಮಾತು ; ಕೆಲಸಕ್ಕೆ ಬಾರದ ಮಾತು; ವ್ಯರ್ಥಾಲಾಪ : ಒಳ್ಳಿತೊಳ್ಳಿತು ಮದವಾರಣದೊಳಗಾಡು ಕೊಳ್ಳುಕೊಡೆಯು ಮಾಳ್ಪುದೆಂದು ಪೊಳ್ಳುನುಡಿಯಿಂದೇಕೆ ಪೋಗು (ಸೇಬಸಂ. ೦೭-೦೦೮) ; ಈ ಪೊಳ್ಳುನುಡಿಗೆ ಮೊದಲ ಮನಸು ನಗುತ್ತಿತ್ತು (ಎಕಸ. ೦೦೭). **ಹೊಳ್ಳುನುಡಿ :** ಸಾಕಿದೇತಕೆ ಹೊಳ್ಳುನುಡಿಗೆ ವಿವೇಕಿಗಳು ಮೆಚ್ಚುವರೆ (ಕುವ್ಯಾಸ. ೨-೯೪) ; ಹೊಳ್ಳುನುಡಿಗಳನಾಡುತ್ತ ವೃಥಾ ಹೊತ್ತು ಕಳೆಯದೆ ಸಾಮರ್ಥ್ಯವಿದ್ದರೆ ಯುದ್ಧ ಮಾಡಬೇಕು (ರಾಜಸೂ. ೨೨). [ಪೊಳ್ಳು + ನುಡಿ₂]

**ಪೊಳ್ಳುಬೆದರಿಕೆ** (ನಾ). ಸತ್ತ್ವವಿಲ್ಲದ ಬೆದರಿಕೆ ; ಸುಳ್ಳುಬೆದರಿಕೆ : ನಿಮ್ಮ ಈ ತವಡು ಕುಟ್ಟೊ ಮಾತು, ಪೊಳ್ಳುಬೆದರಿಕೆ ಕೇಳಲಿಕ್ಕಂತೂ ನನಗ ಸುತರಾಂ ಅವಕಾಶ ಇಲ್ಲ (ಹೊಸಂಸಾ. ೩೩). [ಪೊಳ್ಳು + ಬೆದರಿಕೆ (< ಬೆದಱಿಕೆ)]

**ಪೊಳ್ಳುಮರ** (ನಾ). ಒಳಗೆ ದಿಂಡಿಲ್ಲದ ಮರ ; ಟೊಳ್ಳಾದ ಮರ : ಆಗಳ್ ದುರ್ಯೋಧನಂ . . . ತನ್ನರ್ದೆಯುಂ ಪೊಳ್ಳುಮರನಂ ಕಿರ್ಚುರ್ವಂತೊಳಗೊಳಗಳುರೆ (ಪಂಭಾ. ೨-೯೯ ವ). [ಪೊಳ್ಳು + ಮರ₁]

**ಪೊಳ್ಳುಮಾತು,** ಹೊಳ್ಳುಮಾತು (ನಾ). ಸುಳ್ಳಾದ ಮತ್ತು ನಂಬಿಕೆಗೆ ಯೋಗ್ಯವಲ್ಲದ ಮಾತು ; ಹುರುಳಿಲ್ಲದ ಮಾತು : ದ್ರೋಹ, ವಂಚನೆ, ಸುಳ್ಳು, ಸೋಗನು ಕಂಡು ಕಂಡೂ ಸಿಡಿದಿದೆ. ಪೊಳ್ಳುಮಾತಿನ ಬುರುಗು ಬೆರಗನು ಕೇಳಿ ಕೇಳಿ ಕುಸಿದಿದೆ (ಬಿಜದ. ೫೪-೯) ; ಅದು ಬರಿಯ ಪೊಳ್ಳುಮಾತೆಂಬುದು ಲಲಿತಳಿಗೂ ಗೊತ್ತು (ಮುರುಳು. ೫೦). **ಹೊಳ್ಳುಮಾತು :** ಹೊಳ್ಳುಮಾತಿದು ನೀತಿಯೋ (ಕುವ್ಯಾವಿ. ೯-೩೫) ; ಹೊಳ್ಳುಮಾತಲ್ಲ ಕೇಳಬಲೆ (ಕುರಾಜಾಂ. ೨೫-೩೩); ಅಳ್ಳರ್ದೆಗರನಂಜಿಸುವೊಲು ರಕ್ಕಸ ಹೊಳ್ಳುಮಾತುಗಳಾಡಬೇಡ (ಸಂಕ್ರಸಾಂ. ೬-೦೧೯). [ಪೊಳ್ಳು + ಮಾತು₁]

**ಪೊಳ್ವಂದಿ** (ನಾ). ಗಾಯಗೊಂಡ ಹಂದಿ (?) ; "ಓಡುವ ಹಂದಿ" (ಅಜಿಪು. ೬೦೪) : ಜಂತ್ರದ ಪಂದಿಯು ಬಾಯಂತೆ ಬಿಚ್ಚಿಬಲ್ವ ಬಾಯುಂ ಬೆರಸು ನಾಲ್ಕುಂ ತಳೆಮಂ ತೋಱುತ್ತುಂ ಸರಳಿಸಿ ಪಾಯ್ದು ಪೋಪ ಪೊಳ್ವಂದಿಯುಂ ಕಂಡು (ಅಜಿಪು. ೬-೦೭ ವ). [? + ಪಂದಿ]

**ಪೊಱ,** ಹೊರ₁, ಹೊಱ (ಸಪೂರೂ). 'ಪೊಱಗು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪೊಱಗೋಟೆ', 'ಪೊಱದಡಿ' ಪರಾ. **ಹೊರ₁ :** 'ಹೊರದೆಗೆ', 'ಹೊರಗಂಡಿ' ಪರಾ. **ಹೊಱ :** 'ಹೊಱದೆಗೆ', 'ಹೊಱವಳಸು' ಪರಾ. [ <ಪೊಱಗು ]

**ಪೊಱಅಡಿ** (ನಾ). ೧. ಹೆಜ್ಜೆಯ ಮೇಲುಭಾಗ : ಮನುಜಮಾಂಧಾತನ ಪೊಱಅಡಿಗಳ್ ವಿರೋಧಿಭೂಪಾಳರನಡಿಗೆಱಗಿಸಿದ ಸಂತೋಷದೊಳುನ್ನತಂಗಳಾದಂತೆ ಕೂರ್ಮೋನ್ನತಂಗಳಾದುವು (ಪಂಭಾ. ೨-೩೯ ವ) ; ಅಳವಿಗಱೆದುರುನಿತಂಬಸ್ಥಳಭಾರಮನಾಂತ ಕಾಲ್ಗೆ ಪೊಱಅಡಿಗಳೊಳೀ ಲಳಿತತಳಾಕೋಟಿಗಳಂ ತಳೆವುದದೇವಿರಿದೊ ಮದಗಜಾಲಸಗತಿಯಾ (ಕಾವ್ಯಾವ. ೨೪೩); ಪೊಱಅಡಿ. ಒಳಅಟ್ಟಂ, ಪೊಸತಿಡಕೆ (ಕಮದ. ಪ. ೬೯ ವೃತ್ತಿ). ೨. (ಕಾರ್ಯೋನ್ಮುಖವಾಗಿ) ಮುಂದಕ್ಕೆ ಇಟ್ಟಿರುವ ಹೆಜ್ಜೆ,-ಮುಂದಿಟ್ಟ ಅಡಿ : ಆಗಳ್ ಮದನು ತಳ್ವದೆ ಕೋಲ್ಬಿಲ್ಗಳು ಕೊಂಡು ಪೊಱಅಡಿಯೊಳ್ . . . ತನ್ನ ಪುಸಿವಡೆವೆರಸು ತಪೋವನದತ್ತಣ್ಗೆಯ್ತರುತುಮಿರ್ದಂ (ರಾಮಾಶ್ವ. ೫೭-೯). [ಪೊಱ ( < ಪೊಱಗು) +ಅಡಿ₁]

**ಪೊಱಂಗುಟ್ಟು,** ಪೊಱಕುಟ್ಟು (ಕ್ರಿ). ಬಹಿರಂಗವಾಗಿ ಹಿಂಸಿಸು, -ನೋಯಿಸು : ಪೆಱಗೆ ಕೇಡುಮಾಪತ್ತುಮುಱಿಲುಮಂ ಮಾಡದುದುಂ ಪೊಱಂಗುಟ್ಟದುದುಂ ನೊಂದು ನುಡಿಯದುದುಂ . . . ಸಾತಾವೇದನೀಯದಾಸ್ರವಮಕ್ಕುಂ (ಕಣಾರ. ೪೩). **ಪೊಱಕುಟ್ಟು :** ರಾಗದ್ವೇಷಂಗಳಿಂ ಪೊಱಕುಟ್ಟ ನುಡಿಯೆ ತನ್ನ ಮರುಳಂ ಮುಚ್ಚಿ ಕಳೆವುದು (ಕಣಾರ. ೪೮೨). [ಪೊಱ (< ಪೊಱಗು) + ಕುಟ್ಟು₁]

**ಪೊಱಂಡ,** ಪೊಱಡ (ನಾ). ಬೆನ್ನಿನ ಮೇಲೆ ಗುಬಟೆದ್ದುಬಾಗಿರುವವನು; ಗೂನ : ಗುಜ್ಜನುಂ ಪೊಱಂಡನುಂ ಮುರುಡನುಮಾಗಿ ಬರೆ ಕಂಡವರ್ ನಗೆ (ಬಂಹಂ. ೯-೨೫ ವ). **ಪೊಱಡ :** ಹರಭಕ್ತನಿಂದಕಂ . . . ಕುರುಡನಾಗುವ ಕೋಟಿಜನ್ಮದೊಳ್ಬಳಿಕಲವ ಪೊಱಡನಾಗುವ ಸಪ್ತಜನ್ಮದೊಳ್ಬಳವನಾಗಿರುವ ಶತಜನ್ಮದೊಳ್ (ಹಸಿಂ. ೦೬-೯). [ಪೊಱಂಡು₂ + – ಅ₇]

**ಪೊಱಂಡಿ** (ನಾ). ಬೆನ್ನಿನ ಮೇಲೆ ಗುಬಟೆದ್ದು ಬಾಗಿರುವವಳು ; ಗೂನಿ : ಕಣ್ಗುರುಡಿಯುಂ ಪೊಱಂಡಿಯುಂ ಕೊಂಟಿಯುಂ ಪೆಟವೆಯುಂ ಕುಷ್ಠಿನಿಯುಂ ಕುಬ್ಜೆಯುಮಪ್ಪ ಮಗಳ್ದಿರಱುವರ್ (ಶಾಂತಿಪು. ೪-೬೬ ವ). [ಪೊಱಂಡ+ – ಇ₂]

**ಪೊಱಂಡು₁** 'ಪೊಱಮಡು' ನೋ.

**ಪೊಱಂಡು₂,** ಪೊಱಡು₂, ಹೊಱಟು, ಹೊಱಡು₂ (ನಾ). ಉಬ್ಬಿನಿಂದ ದೇಹದ ಬೆನ್ನು ಮೊದಲಾದ ಭಾಗಗಳಲ್ಲಿ ಉಂಟಾದ ಬಾಗು,-ವಕ್ರತೆ : ಕುಱೆಯೆ ಪೊಱಂಡಾಗಿರೆಯುಂ ಕುಱೆದಿರೆಯುಂ ಬೆನ್ನನಿಷ್ಟಮುಮಾಳ್ಕುಂ (ಲೋಕೋಪ. ೦೧-೫೬). **ಪೊಱಡು₂ :** 'ಮೇಪ್ಪೊಱಡು' ಪರಾ. **ಹೊಱಟು :** ಹೊಱಟು ಪಾಂಡ್ಯನ ಬೆಲುವಳಿದು ನೆಱೆ ಹೊಱಟು ನೆಲೆಗೊಂಡಿದ್ದ ಬೆನ್ನಿನ ಹೊಱಟು ಹೋಗಲು ವಿಥ್ಯಯಾಯಿತು ಸಾಯದಿರಬಹುದೆ ಹೊಱಟ ಬೆನ್ನೆಂತೆಂಬ ನುಡಿಯದು ಧರೆಗೆ ಕೂನನೆನಿಪ್ಪುದು ಪರಿಹರಿಸಿ ಸೌಂದರಪಾಂಡ್ಯರಾಯನೆನಲು ಪೆಸರ್ವಡೆದ (ಬಸಪು. ೫೦-೩೦). **ಹೊಱಡು₂ :** "ಗಡು ಎಂದೊಡೆ ಕುಬ್ಜ, ಬೆನ್ನ ಹೊಱಡುಂ" (ಶಾಶಿರಾ. ೬) ; ಮುಂಡೆಯಲಿ ಕೈಯಿಟ್ಟು ಹೊಱಡಡೆಗೊಂಡುದೆಂದಿಂದಿತ್ತ ವೈದ್ಯರ ಕಂಡು ಬಲ್ಲರು ತನ್ನ ಪೂರ್ವಜರೆಂದನಸುರಾರಿ (ಪಿಶಿಗ. ೦೨-೩೭-೩೯) ; ಹೊಱಡಾಗದಂತೆ ನಾಲ್ಮೊಗ ಜಂತ್ರದಲಿ ಹೊಂಗರಡಿಗೆ

ಗೆಡೆದು ಕರ್ವಣಿಯ ಬಿರುಡೆಯ ಬಿಗಿದಿಟ್ಟನೆಂಬಂತೆ ಬಲ್ಮೊಲೆಯೆರಡಱ ಮೊಗವು ತೋಱಿದುವು (ಶೋಕಶ. ೨೩-೨೩).

[< ಪೊಱಮಡು./ತೆಲು. ಪೊಱಡು]

**ಪೊಱಂಬೇಱು** (ಕ್ರಿ). (?) : ತಾನರುಮೆ ಮೆಚ್ಚುವೊನ್ನನ್ನ ಮೆಚ್ಚದೆ ಪೊಱಮ್ಬೇಱು ಬೊಜಙ್ಗರ (ಶಾಶಾ. IX-i, ೦೩-೧೫ ; ೨೫ದು ೫೪). [?]

**ಪೊಱಗಣ್**, **ಹೊರಗಣ್ಣು** (ನಾ). ಹೊರಗಿನ ಕಣ್ಣು ; ಬಹಿರ್ಚಕ್ಷು : ಪೊಱಗಣ್ಣಂ [ಪಾಠಾಂ. ಪಡೆಕಣ್ಣಳ್] ಮುನ್ನಂ ತಾಂ ಮಱಸಿದ ನೊಸಲೊಂದು ಕಣ್ಣುವಾಗಳ್ ನೊಸಲಿಂ ಪೊಱಮಟ್ಟಂತಿರೆ (ಶಂಕಥಾ. ೮-೨೩). **ಹೊರಗಣ್ಣು** : ಹೊರಗಣ್ಣಿಗೆ ಕಾಣುವ ಸೃಷ್ಟಿಯು ಮೂಕವಾಗಿದೆ (ಶಾಹಿ. ೦೧೯). 'ಒಳಗಣ್' ಪರಾ. [ಪೊಱ (< ಪೊಱಗು) + ಕಣ್]

**ಪೊಱಕತ್ತರ**, ಹೊಱಕತ್ತರ (ನಾ). [ಸಂಗೀತ] ವಾದ್ಯಗಳನ್ನು ಬಾರಿಸುವ ಒಂದು ಕ್ರಮ,–ಗತ್ತು; ಹೆಬ್ಬೆರಳನ್ನುಳಿದು ಇತರ ಬೆರಳುಗಳನ್ನು ವಿರಳವಾಗಿ ಚಾಚಿ ಅಂಗೈಯನ್ನು ಹೊರಮುಖವಾಗಿ ವೇಗವಾಗಿ ತಿರುಗಿಸುತ್ತ, ಒಂದಾದ ಮೇಲೊಂದರಂತೆ ಬೆರಳುಗಳಿಂದ ವಾದ್ಯಮುಖವನ್ನು ಹೊಡೆದು ಶಬ್ದಗಳನ್ನು ಉತ್ಪತ್ತಿಮಾಡುವುದಕ್ಕೆ 'ಕರ್ತರೀ' ಎಂದು ಹೆಸರು. ಒಳಕರ್ತರಿ, ಹೊರಕರ್ತರಿಗಳು ಸಂಗೀತಶಾಸ್ತ್ರಗ್ರಂಥಗಳಲ್ಲಿ ವರ್ಣಿತವಾಗಿಲ್ಲ. ಕನ್ನಡಿಗ ಮದ್ದಳೆಕಾರರು ವಾದನತಂತ್ರದ ಸ್ವಸಮಯದಲ್ಲಿ ಅವುಗಳನ್ನು ನಿರ್ಮಿಸಿಕೊಂಡು ಹೆಸರಿಸಿರಬಹುದು. ಮೇಲೆ ಹೇಳಿರುವ ಕರ್ತರೀವ್ಯಾಪಾರವನ್ನು ಹೆಬ್ಬೆರಳು ಒಳಮುಖವಾಗಿ (ವಾದ್ಯಮುಖದೆಡೆಗೆ) ಚಲಿಸುವಂತೆ ನಡೆಸಿದರೆ ಒಳಕರ್ತರಿ. ಇದಕ್ಕೆ ವಿರುದ್ಧವಾಗಿ ಹೆಬ್ಬೆರಳು ಹೊರಮುಖವಾಗಿ (ವಾದ್ಯಮುಖಕ್ಕೆ ವಿಮುಖವಾಗಿ ಆಚೆಗೆ) ಚಲಿಸುವಂತೆ ಏರ್ಪಡಿಸಿದರೆ ಹೊರಕರ್ತರೀ ಎಂದು ಅರ್ಥ ಮಾಡಬಹುದು : ಅಳಗಂ ಸುಳಿಯುಳಗಂ ಬೊಟ್ಟಳವೊಳಕತ್ತರವುಮೆಸವ ಪೊಱ [ಪಾಠಾಂ. ಹೊಱ]ಕತ್ತರವಗ್ಗಳಿಸಿರೆ ನಾನಾಭೇದಂಗಳ ಪಹರಣೆ ತುಡುಕು ಮೋಡಿಯಿಂ ಬಾಜಿಸಿದಂ (ಧರ್ಮಾಪ. ೨-೨೩). **ಹೊಱಕತ್ತರ** : ಅವುಜಿಗನಾವುಜಮುನಳವಡಿಸಿಕೊಂಡು ಝುಂಕಾರವಂ ಪೊಯ್ದಳಗ ಸುಳಿಯುಳಗಬೊಟ್ಟಾಳಂ ಒಳಕತ್ತರ ಹೊಱಕತ್ತರ ವಿಷಮಕತ್ತರಮೆಂಬ ವಿಚಿತ್ರವಾದನದ ಬಹುಲಿಕೆಯೊಳ್ಪಿಹಿಲನೆನಿಸಿ...ಬಾಜಿಸುತ್ತಿರೆಯುಂ (ಶಾಂತೀಶ್ವ. ೦೩-೬೭ ವ). 'ಒಳಕತ್ತರ' ಪರಾ. [ಪೊಱ (< ಪೊಱಗು) + ಕತ್ತರ್]

**ಪೊಱಕಾಲ್**, ಹೊರಕಾಲು, ಹೊಱಕಾಲ್, ಹೊಱಕಾಲು (ನಾ). ೧. ಕಾಲಿನ ಹೊರಭಾಗ,– ಹೊರಗು : ಕಾಲ ಪೊಱಗು, ಪೊಱಕಾಲ್ (ಶಬ್ದಾ.ಸು. ೩೯೬). **ಹೊರಕಾಲು** : ೨. ಅಡ್ಡವಾಗಿ ಇಡುವ ಕಾಲು ; ತೊಡರುಗಾಲು : ಓಡುತ್ತಿರುವಾಗ ಕೆಂಚನು 'ಹೊರಕಾಲು' ಕೊಟ್ಟುದರಿಂದ ಶಿವುಗ ನೆಲಕ್ಕೆ ಧೊಪ್ಪನೆ ಕೆಡೆದು (ಸುಪಷಂ. ೦೦೭). **ಹೊಱಕಾಲ್** : ೩. ಓಡಲು ಸಿದ್ಧವಾದ ಕಾಲು ; ಪಲಾಯನಕ್ಕೆ ಸಿದ್ಧವಾದ ಕಾಲು : 'ಹೊಱಕಾಲ್ಗೊಳು' ಪರಾ. **ಹೊಱಕಾಲು** : ೩. ಹೊಱಕಾಲುಗಳ ಹೋರಟಿ ಕಾಣಲಾದುದು ಪರರ ಥಟ್ಟನೆ (ಕುಮಾವ್ಯಾ. ೩-೯೭). 'ಒಳಕಾಲಂ' ಪರಾ.

[ಪೊಱ (< ಪೊಱಗು) + ಕಾಲ್[1]]

**ಪೊಱಕಾಲ್ಗೊಳ್**, ಹೊಱಕಾಲುಗೊಳ್, ಹೊಱಕಾಲ್ಗೊಳು (ಕ್ರಿ). ೧. ಕಾಲನ್ನು ಎತ್ತಿ ಮುಂದಿಡು : ಮುಂಗಾಲ್ಗಳಂ ನೆಗಹಿ ನಿಲ್ವ ಪಿಂಗಾಲ್ಗಳಂ ಕೀಳ್ವು ದಾಂಟುವ ಪೊಱಕಾಲ್ಗೊಳ್ವ ಪಾರಳ ಪೆಟ್ಟುವ . . . ಅಶ್ವಂಗಳ್ (ರಾಜಶೇ. ೬-೦೦ ವ). **ಹೊಱಕಾಲುಗೊಳ್** : ೨. (ಹೆದರಿಕೆಯಿಂದ) ಪಲಾಯನ ಮಾಡು; ಓಡಲು ಸಿದ್ಧವಾಗು : ಹೊಟ್ಟ ನೂಕಿ ವೃಥಾಹವದ ಜಗಜಟ್ಟಿ ನೀ ಹೊಱಕಾಲುಗೊಂಡರೆ ಬಿಟ್ಟನೇ (ಕುಮಾವ್ಯಾ. ೦೦-೩೯). **ಹೊಱಕಾಲ್ಗೊಳು** : ಬಿಲುಂದೆಗಹಿನಾ ಕರ್ಣಪೂರದ ಹಿಳುಕಿನನಿಲಜನಿರಲು ಸಿಂಹದ ಹೊಲನ ಹೊಗುವಿಭದಂತೆ ಪೊಱಕಾಲ್ಗೊಳುತಲಿರೆ ಕಂಡು ತೊಲಗದಿರಿ ತಮ್ಮಂದಿರಿರ . . . ಸುಭಟರು ನೀವೆನುತ ತೆಗೆದೆಚ್ಚನು (ಕುಮಾವ್ಯಾದ್ರೋ. ೦೨-೩೦). [ಪೊಱಕಾಲ್ + ಕೊಳ್[1]]

**ಪೊಱಕುಳಿ**, ಹೊಱಕುಳಿ (ನಾ). ಬೇರೆಯವರ ಆಶ್ರಯದಲ್ಲಿ ವಾಸಿಸುವ ಸ್ವಭಾವವವನು : ಪೊಱಕುಳಿ [ಪಾಠಾಂ. ಪೋರ್ಕುಳಿ], ಓಡುಕುಳಿ (ಕಪಟ. ಪ. ೨೦೯ ಕ್ರಿಯೋ). **ಹೊಱಕುಳಿ** : "ಪರಜಾತಃ, ಪರ್ಯೈಧಿತಃ—ಈ ೨ ಹೊಱಕುಳಿ" (ಕಣಾಯು. ೫೮-೦೬).

[ಪೊಱ (< ಪೊಱಗು) + –ಕುಳಿ[3]]

**ಪೊಱಕೆಯ್**, ಪೊಱಕೈ, ಪೊಱಗಯ್, ಹೊಱಕಯ್, ಹೊಱಕೆಯ್, ಹೊಱಕೈ (ನಾ). ೧. ಕೈಯ ಹೊರಭಾಗ ; ಮಣಿಕಟ್ಟಿನಿಂದ ಕಿರುಬೆರಳಿನವರೆಗಿರುವ ಕೈಯ ಹೊರಪಾರ್ಶ್ವ : "ಮಣಿಬಂಧನದಿಂದಂ ಕಿಱುಕುಣಿಕೆವರಂ ಕರಭಮೆಂಬುದಕ್ಕುಂ ಪೊಱಕೆಯ್" (ವಸ್ತುಕೋ. ೬೬-೯) ; ಸಂಡೆಯ್ಸುರಲ್ ನಲವಿಂದಂ ಪೊಱಕೆಯ್ಯೊಳೊತ್ತು ಮಗುಟ್ವಾರ್ಪಿಂ . . . ಪೊಯ್ವು (ಪಕಶಂ. ೦೨-೩೯). **ಪೊಱಕೈ** : ೧. ಕೈದುಡುಕಿ ಪಿಡಿದನಂ ನೋಡವಂತಿರ್ದ ಪಾಂಗಿಂ ಪೊಱಕೈಯೊಳ್ ಮೋದಿ ಕಂಸಾನುಜನನಧಿಕನಂ ಕೊಂದು (ಜಗಂ. ೬-೯೯). **ಪೊಱಗಯ್** : ೧. ಮಲಪಮಂ ಪಿಡಿಕಿಸಿ ಪೊಱಗಯ್ಯನೊರಸಿ ಕರ್ಚಿದ ತೆಱದಿಂ (ನವುಚ. ೦೩-೨೬). **ಹೊಱಕಯ್** : ೧. ಸೂತನ ಬಾಯ ಹೊಱಕಯ್ಯಿಂದ ಹೊಯ್ದನು ಹಡಪದವರನು . . . ತಿವಿದು ಮುಱಿದನು (ಕುಮಾವ್ಯಾದ್ರೋ. ೦೯-೪). **ಹೊಱಕೆಯ್** : ೧. ದೇವ ಹೊಱಕೆಯ್ಯಿಂದ ತಟ್ಟಿ ಮರಳೀಶ್ವರನನಿಡೆ ನಗುತ (ಬಸಪು. ೩೭-೬೩). ೨. ಬೇರೆಯ ಕೈ ; ಇನ್ನೊಂದು ಹಸ್ತ : ಬಾಯೊಳುದಕಂ ಪೊಗದ ಹಾಗೊಕ್ಕಯ್ಯನಡ್ಡಂ ಬಾಚಿ ಮೇಣ್ ಹೊಱಕೆಯ್ಯ [ಪಾಠಾಂ. ಪೊಱಕಮ್ಮ]ಲುದಕವನೊಯ್ಯನೊಯ್ಯನವುಂಕಿ ತಿರುಹುವಳು (ಬಸಪು. ೧೩-೦೦). ೩. ಹೊರಗಡೆಗೆ (ಬೀಸಿ) ತೆಗೆದ ಕೈ : ಉಗಿದನುರಗಾಸ್ತ್ರವನು ಹೊಮ್ಮೂಡಿಗೆಯೊಳಗೆ ಹೊಱಕೆ[ಪಾಠಾಂ. ಕ]ಯ್ಯ ಗಾಳಿಗೆ ಹೊಗೆಯ ಹೊದಱಿನ ಹೊರಳಿ ಹಬ್ಬಿತು ಕೂಡೆ ಕಿಡಿಯಿಡುತ (ಕುಮಾವ್ಯಾಕ. ೨೩-೪). **ಹೊಱಕೈ** : ೧. ಭರದೊಳೊಳಕ್ಕೈಯಿಂದೆ ಹೊಱಕ್ಕೈಯಿಂದೆ[ಪಾಠಾಂ. ಕೆಯ್ಯಿಂದೆ] ಹೊಡೆಹೊಡೆದು (ಬಸಪು. ೨೨-೯೩); ಗದೆಯ ಕೊಂಡಪ್ಪಳಿಸಿದನು ಹೊಱಕೈಯುಲರೆದಿಟ್ಟಳಿಸಿದರನೆಡಗಾಲಲೊದೆದನು (ಕುಮಾವ್ಯಾಕ. ೦೩-೦೭) ; ನಿಲ್ಲೆನುತ ಹದರಿಕ್ಕಿ ಹೆಡಕನು ಘಲ್ಲಿಸಲು ಹೊಱಕೈಯ[ಪಾಠಾಂ.ಕಯ್ಯ]ಲಾಬೆಯ ಹಲ್ಲುದುರೆ ಹೊಯ್ದೊಡದ ಮುಷ್ಟಿಯಲೆಱಗಿದನು ಬದಿಯ (ಕೆಜೈರಾ. ೩-೧-೨). 'ಒಳಕೆಯ್' ಪರಾ. [ಪೊಱ (< ಪೊಱಗು) + ಕೆಯ್[1]]

**ಪೊಱಕೈ** 'ಪೊಱಕೆಯ್' ನೋ.

**ಪೊಱಗಡೆ**, ಹೊರಕಡೆ, ಹೊರಗಡೆ ಹೊಱಗಡೆ (ನಾ). ೧. ಹೊರಭಾಗ; ಹೊರಪ್ರದೇಶ : ಅಱುಗುಲಿಯಂ ಮುನ್ನೆಮ್ಮ ಗಱಗಳು ತಱದಿಂದ್ರುನಾ ಸಗ್ಗಮನೆನ್ನೀ ಸಱದಲೆಯಿಂ ಪೊತ್ತಬುಜಜನ್ಮಾಂಡದ ಪೊಱಗಡೆಗಾಗಿ ನುಱಿಯಪ್ಪಂದದಿ ಹಾಕದೊಡನಗೇತಱ ದೊಡ್ಡಿತ್ತು (ಜಯುಣಾ. ೦-೩೩). **ಹೊರಕಡೆ** : ೨. ಕಕ್ಕಸ ; ಬಹಿರ್ದೇಶ : (?). ೩. ಮಲವಿಸರ್ಜನೆ : ಮಗುವಿಗೆ ಹೊರಕಡೆಯಾಗದಿದ್ದರೆ–ಅರ್ಧದಿಂದ ಒಂದು ಚಮಚವರೆಗೆ ತುಲಸೀಎಲೆಯ ರಸ ಕುಡಿಸುವುದು (ಮಕಪಾ. ೬). ೪. ಭೇದಿ; ವಿರೇಚನ : ಹೊರಕಡೆ ಹೋಗುವುದು ಕಡಿಮೆಯಾಗಲು ಔಷಧಿ ಕೊಟ್ಟಾಯ್ತು (ಕುಂಣಕು. ೦೦೩). **ಹೊರಗಡೆ** : ೧. ಹುಡುಗರೆಲ್ಲ ತರಗತಿಯ ಹೊರಗಡೆಯಲ್ಲೇ ಇದ್ದಾರೆ (ಲೂ). ೫. ಹೆಂಗಸಿನ ಮುಟ್ಟು,– ರಜೋದರ್ಶನ : ಇವತ್ತು ಹೊರಗಡೆಯಾದ್ದರಿಂದ ಅವಳು ಪೂಜೆಗೆ ಬರಲಿಲ್ಲ (ಲೂ). (ಗು). ೬. ಹೊರಭಾಗದ: ಹೊರಗಡೆ ಕೋಣೆ

ಯಲ್ಲಿ . . . ಚರ್ಚೆ ನಡೆಯಿತು (ಜಿಕಾ. ೦೬೦). ೬. ಪರಸ್ಥಳದ ; ಬೇರೆ ಕಡೆಯ : ಹೊರಗಡೆ ಸಂಚಾರ ಹೊರಟರೆ ಬೆಳ್ಳಿತಟ್ಟೆ, ಕ್ರಿಯಾಭಸ್ಮಘಟ್ಟಿ ಇತ್ಯಾದಿಯೊಂದಿಗೇ ಹೊರಡಬೇಕು (ಋುಶ್ಮಜಾ. ೦೬). **ಹೊಱಗಡೆ :** ೧. ಮಂದಿರದ ಹೊಱಗ[ಣಾಂ. ಕ]ಡೆಯಲಾಡುತ್ತಿರಲು (ಸಂಶಕ. ೬-೨೬ ಅಧಿಕಪಾ. ೪) 'ಒಳಗಡ್ಡೆ' ಪರಾ. [ಪೊಱ (<ಪೊಱಗು) + ಕಡ್ಡೆ]

**ಪೊಱಗಣ್** 'ಪೊಱಗು' ಪರಾ.

**ಪೊಱಗಣ** 'ಪೊಱಗು' ಪರಾ.

**ಪೊಱಗಯ್** 'ಪೊಱಕೆಯ್' ನೋ.

**ಪೊಱಗು**, ಪೊರಗು, ಹೊರಗು, ಹೊಱಗು (ನಾ). ೧. ಹೊರಗಡೆ ; ಹೊರಭ್ಭಾಗ : ಪೊಸತೆ ಮೊಳೆತ ಧಾನ್ಯಂಗಳನಾ ಧರಣೀಶಂ ಕಿದಱಿಸಿದಂ ನಿರಂತರಂ ರಾಜಗೇಹದೊಳಗಂ ಪೊಱಗಂ (ಆದಿಪು. ೦೫-೬) ; ಪೊಸತು ಪಟದೆಳದು ಪೊಱಗೊಳಗು ಸಮಮೆನಿಪ್ಪವೞೊಳ್ (ಜಾನ್ಮಾಪ. ೨೫೯). ೨. ಹೊರತಾದುದು : ಇನಿತುಂ ಪುರಮೇವುದೊ ಪೌದನಪುರಮೆನ್ನಾಳ್ಕೆ ಗಿಂತು ಪೊಱಗೆನಿಪಾಗಳ್ (ಆದಿಪು.೦೯-೨೬) ; ಸೆಟ್ಟಿಯರ್ಗ್ಗಂ ಪನ್ನಸಿಗರ್ಗ್ಗಂ ಗಾವುಣ್ಡುಗಳ್ಗಂ ಬಿಟ್ಟ ಕೊಟ್ಟಣಂ ಬೇಡುಬೆಸಂ ಪೊಱಗು (ಶಾಶಿಇ. IX-೧. ೬೬-೨೬ ; ೨೨೭). ೩. ಬಹಿರಂಗ ; ಬಾಹ್ಯ : ಒಳಗಂ ಭೇದಿಸದನ್ನಂ ಜಳಬುದ್ಧಿಗೆ ಪೊಱಗು ಬೆಟ್ಟಿತಾಗಿರ್ಕುಂ . . . ಜನವಚನಂ (ಸಹುಶ. ೬-೨೬). ೪. ಹೊರತಾದ ವ್ಯಕ್ತಿ : ಇದಂ ಮಹಾಜನಂಗಳ್ ಕಂಡರಪ್ಪೊಡೆ ಸಭಾಜನಕ್ಕಂ ಸಹಪಂಕ್ತಿಗಂ ಪೊಱಗೆಂದು ಸಮಯಬಾಹ್ಯನಂ ಮಾಟ್ಟರ್ (ಪಂಚತಂ. ೦೯೬-೦೬) ; ಈ ನೆಲದೊಳ್ ಪೊಱಗಾರುಮಿಲ್ಲೆನಲ್ ಮನ್ನಿಸಿ (ಜುಕ್ಕಿಪು. ೯-೦೦೯). ೫. ಉಳಿದಿರ್ಪುದು ; ಅವಶಿಷ್ಟ : ಅಪರಾಜಿತ ನಿತ್ತ ಪರಂತಪನ ತಪಶ್ಚರಣಮೊಂದೆ ಪೊಱಗೆನೆ ನಿರ್ವೇಗಪರಾಯಣಂ ಮನಂಗೊಂಡು ಪವಿತ್ರಶ್ರಾವಕವ್ರತಂಗಳೊಳೋರ್ದಂ (ಶಾಂತಿಪು. ೦-೮೬).

**ಪೊರಗು :** ೧. ಒಳ್ಳಿತಂ ಸುಡುವ ಕಿಚ್ಚಂ ಪೊರಗಿನಿಂ ತಣಿಸೆ ಒಳ್ಳಿದರ ನೆಚ್ಚಱಿಸೆ ಪಿಡಿದು ನಡುಗಿಸುಗುಂ (ಶಾಂತಿ. ೬೬-೯೦). **ಹೊರಗು :** ೧. ಹೊರಗಿನ ಕಳ್ಳನನ್ನು ಹಿಡಿಯಬಹುದು, ಒಳಗಿನ ಕಳ್ಳನನ್ನು ಹಿಡಿಯಲಾಗದು (ಗಾದೆ). **ಹೊಱಗು :** ೧. ಹೇಸುತ ಮಾಂಸಮಂ ಹೊಱಗತ್ತ ನೂಂಕಿ ಶಿವಾಲಯವಿದಪವಿತ್ರವಾಯ್ತೆನುತ ಮತ್ತೆ ಮಿಂದು (ಬಸಪು.೦೬-೩೯). ೨. ನಿನ್ನ ಸೌಕುಮಾರ್ಯಕ್ಕೆ ಹೂದೊಡಿಗೆ ಹೊಱಗೆ . . . ನಿನ್ನ ಲೋಚನಕ್ಕೆಳಮಿಂಚು ಹೊಱಗು (ಸಂಶಕ. ೦೯-೦೯). ೩. ಅಭೇದ್ಯಚಿತ್ತಕಾಶಂಗೆ ಒಳಗು ಹೊ[ಱ]ಗಿಲ್ಲ (ಅದಪು. ೪೯-೦೦೬) ; ಹೊಱಗನ ಕೊಯ್ದು ಹೊಱಗನೆ ಪೂಜಿಸಿದವರ ಕಂಡು ನಾಚಿದೆನಯ್ಯ (ಅಪಪಂ. ೯೩-೪೦೬). ೪. ಹೊಯ್ ಡಂಗುರವನವಂ ಹೊಱಗು ಹೊಱಗೀ ಸಭೆಗೆ ಹೊಯ್ ಡಂಗುರವನಾವನಾದೊಡಂ ಹೊಱಗೆಮಗೆ (ಷಟ್ಸ್ಥ. ದೀ. ೬೪-೯) ; ಐದು ತಾಪಸವೇಷವನು ಬಳಸ್ಯದು ಪರವನಿತಾವ್ಯಸನಿಗಳಿಗಾದ ಗತಿಯನು ಹೊಱುವ ಪಾಪಕೆ ಹೊಱಗು ತಾನೆಂದ (ಕೊರಾಠ. ೩-೬-೦೩).

**ಪೊಱಗಣ್** = ಹೊರಗಡೆ : ಪೊಱಗಣ್ಗೆ ಸಯ್ದುರೆನೆ ತಾವೊಳಗಂ ತವೆ ತೋಡಿ ತಿಂದು ರಕ್ಕಸಿಯರ ಕಂಡ ಕಂಬಳದ ಮಾಟ್ಕೆನೊಳಾಗಿರೆ (ಪಂಪಭಾ. ೯-೯೯) ; ಎಲೆಲೆ ಭಕ್ತ ಪೊಱಗಣ್ಗೆಟ್ಟೆಂದಂಡಲೆಯದೇಟದಿರಲುದ್ದಂಡನಿವಂ ಮೂಂಕಿನುತ್ತೆ ಪಿಡಿದರ್ ಕರಮಾ (ಅದ್ಭುರಾ. ೦೦-೩೬). **ಪೊಱಗಣ, ಪೊರಗಣ, ಹೊರಗಣ, ಹೊಱಗಣ** = ೧. ಹೊರಭಾಗದ ; ಹೊರಗಡೆಯ : ಒಳಗಂ ದಕ್ಷಿಣಸುಕರದುಷ್ಕರಮಂ ಪೊಱಗಣ ಸುಕರದುಷ್ಕರಭೇದಮಂ . . . ಎಱೆಯೊಳೋರ್ವ್ವನೆ ಚಾರಿಸಲ್ ಬಲ್ಲಂ (ಎಕ. II. ೦೩೩-೬೬ ; ೨೭೭) ; ಊರಿಂದಂ ಪೊಱಗಣ ಮಯ್ಯೊಕ್ಕೊಲ್ದು ಧರ್ಮಕ್ಕಾರಾನುಂ ಪುರಜನವಿಟ್ಟ ಭೂಮಿಯಿಂದಂ (ಚನ್ನಸೂ. ೬೨-೦೯) ; ಬಸದಿಯ ಪೊರಗಣ ಪುತ್ತಿಲ್ಯೋ ಭಿತ್ತಿಯುಂ ತೊಮ್ಪಲದೊಳು ಎಳ್ಗೊಳವಡೆ ಎಳೆನೊಮ್ಪೆ ದಿವ್ಯಯ ಮಗಂ . . . ಕೊಟ್ಟ ಮಣ್ಣು (ಎಕ. X. ಕೋಲಾರ. ೯೦-೯೧ ; ೨೦೩) ; ದರಿಯಾ ಬೀಬಿಯು . . . ಹೊರಗಣ ವರ್ತಮಾನವನ್ನು ತಿಳಿಸುತ್ತ ಇದ್ದಳು (ಕಂಠೀರ. ೨೦೬) ; ಊರ ಹೊಱಗಣ ಮಸಣವಟ್ಟಿಗೆಯೊಳಿರಲಂದು ಹಾರೈಸು ತೆಮ್ಮ ಮಯ್ದುನನೊಲ್ದು ನಗುತಂದು (ಸಂಶಕ. ೬-೫೫) ; ನಱಗಬ್ಬಿನೊಳಗಣ ರಸವ ಕಾಣದೆ ಪಶು ಹೊಱಗಣೆಲೆಯ ಸವಿವಂತೆ (ಶಶಿಶ. ೦-೦೦೫). ೨. ಬಾಹ್ಯದ; ಬಹಿರಂಗದ : ಇವೆಲ್ಲ ಹೊಱಗಣ ಮಾತು (ಬಸಪ. ೬೬೦). **ಪೊಱಗಣಂ** = ಹೊರಗಿನವನು ; ಅನ್ಯ ; ಪರಕೀಯ : ಒಳಗಣಂ, ಪೊಱಗಣಂ, ಮುಂತಣಂ (ಶಬ್ದಮ. ೦೦೦ ವೃತ್ತಿ) ; ಅರಿಷಡ್ವರ್ಗವಮನವನೀಶ್ವರನಾಟಲೆಯ ಪೊಱಗಣರಿಗೆ ಜಯಾಂಗನೆ ಪಲ್ಮೊರೆದಪಳೆನೆ ಪರಿದುವು . . . ರಥಗಳ್ (ಶಾಂತಿಪು. ೦೦-೦೨೯). **ಪೊಱಗಾಗು, ಹೊರಗಾಗು, ಹೊಱಗಾಗು** = ೧. ಬೇರೆಯಾಗು ; ಹೊರತಾಗು ; ಎರವಾಗು : ಕುವಳಯ ಬಾಂಧವನೆಸವನೆ ಕುವಳಯಮುಮಂ ಬೆಳಗಿ ಕುವಳಯಂ ಪೊಱಗೆನೆ ಪಾಂಡವರೆ ಪೊಱಗಾಗೆ ನಿನಗೀ ಕುವಳಯಪತಿಯೆಂಬ ಪೆಂಪೊತಂಬಡೆ ನೃಪತೀ (ಪಂಪಭಾ. ೯-೩೬) ; ಜೀವಂ ಪೊಱಗಾಗಿ ಪಚ್ಚ ಹಮುಮಾರಯ್ವಂದು ನಿರ್ವೀರ್ಯ ಮಾಗಿರೆ (ಜಾತಕ. ೨೩-೨೬) ; ಕೊಟ್ಟ ಹೆಣ್ಣು ಕುಲಕ್ಕೆ ಹೊರಗಾದರೂ ಹೆತ್ತೊಡಲಿಗೆ ಅವಳ ಚಿಂತನೆ ತಪ್ಪಿದ್ದೆಂದು ? (ಹೊಸಜೆ. ೦೬) ; ಮಲ್ಲೇಶ್ವರ ದೇವರಿಗೆ ಸಿನ್ನಿಹೇಡದಲು ಬಿಟ್ಟ ಭೂಮಿ ಹೊಱಗಾಗಿ ಮೇಲಾದ ಭೂಮಿಯ ಹಡಪವಳಂ ದಂಡನಾಯಕಂ (ಕಇ. II. ೦೩-೦೩ ; ೧೧೫೫) ; ಹೊಗಳಿಕೆಗೆ ಹೊಱಗಾದರ್ಕವರು ವಿಗಡರದಱೊಳಗಿಬ್ಬರಳಿದಿರಿ ಹಗೆಗಳುಳಿದರು ಮೂವರೆಂದನು ಭಾನುಸುತ (ಕುಮ್ಯಾಳ. ೯-೦೬). ೨. ಮಾಡದೆ ಉಳಿದಿರು,—ಹೊರಗಾಗಿರು : ಪಾರಲ್ಕೇಂ ಜೀವಿತಸಂಧಾರಣೆಕಂ ಗಮನಮೊಂದೆ ಪೊಱಗಾಗಿರೆ...ನಮಗಿದು ಕಾರ್ಯಂ (ಶಾಂತಿಪು. ೬೩೬). ೩. ಮುಟ್ಟಾಗು; ಋತುವಾಗು ; ಬಹಿಷ್ಠೆಯಾಗು : ಈ ದಿನ ಅವಳು ದೇವಸ್ಥಾನಕ್ಕೆ ಬರುವಂತಿಲ್ಲ, ಹೊರಗಾಗಿದ್ದಾಳೆ (ಆಡು). **ಹೊರಗಲ್ಸ** = ಹೊರಗಿನ ಕೆಲಸಗಳಿಗೆ ಬಳಸುವಂಥದು ; ಮಡಿಯಲ್ಲದುದು : ಆ ಚೊಂಬನ್ನು ಅಡಿಗೆಮನೆಗೆ ತರಬೇಡ, ಅದು ಹೊರಗಲು (ಆಡು). **ಹೊಱಗಾಲಿಸು** = ಹೊರಗಡೆಯ ಶಬ್ದವನ್ನು ಆಲಿಸು,—ಕೇಳು : ತಱಗೆಲೆ ಗಱಕೆಂದೊಡೆ ಹೊಱಗಾಲಿಸುವೆ (ಬಸಪ. ೩೬೪) ; ಅಡಿಗಡಿಗೆ ಹೊಱಗಾಲಿಸಿ ಮತ್ತ ಮನೆಯೊಡತಿಗಂಜಿ ಕೆಲಸವನು ಮಾಡುತ್ತಿಪ್ಪ ವನಿತೆಗಾದಾಪತ್ತನಾಲಿಸದೆ ತಿಟ್ಟು ದಟ್ಟಿಸು ರು (ಶತಕಾ. ೦೨-೦೦).

[ದೇ. ತಮಿ. ಪುಱ, ಪುಱಕು, ಪುಱಕ್ಕು ; ಮಲ. ಪುಱ ; ಕೊಡ. ಪೊರಮೆ. ಕೋತ. ಪೊರಂಜಿ ]

**ಪೊಱಗುಂಡ**, ಹೊಱಗುಂಡ (ನಾ). ಹೊರಗಿನ ಕೆಲಸವನ್ನು ಮಾಡುವ ಆಳು, —ಸೇವಕ : ಖುಡಿತಸ್ವರಭಕ್ತನಳವಿಂಗೆ ಮೆಚ್ಚಿ ಶಶಿಮಂಡಲಾನನೆ ಭಕ್ತಿಯಿಂದೆಱಗಿ ಪಶುಪತಿಗೆ ಗಂಡುದೊಳ್ಗಾಗಿ ನೀನಿರ್ಪುದಾಂ ನಿನಗೆ ಪೊಱಗುಂಡನಾಗಿರ್ಪೆನೆನುತೆ (ಶದ್ಮರಾ. ೫-೩೩) ; ನಿನಗೆ ನಾನು ಪೊಱಗುಂಡನಾಗಿರುವೆನೆಂದು ಶಿವದೀಕ್ಷೆಯಂ ಪಡೆದು (ಶೃಂಗಸ. I. ೫೬). **ಹೊಱಗುಂಡ :** ಈ ವಿಶ್ವವಂ ಸೃಜಿಸುವಲಿ ಶಂಭುವಿನ ಲೀಲಾವಿಡಂಬನದ ಹೊಱಗುಂಡನಾಗಿರ್ಪುದಱಿನಾ ವಿಷ್ಣುಗಾದುದು ಕಲತ್ರಾಖ್ಯೆ (ಶದ್ಮರಾ. ೦೦ ೫೬).

[ಪೊಱ (<ಪೊಱಗು) + ಗುಂಡ, (ಪ ← ತೆಲು. ಗುಂಡ = ಸೇವಕ)]

**ಪೊಱಗೆ**, ಹೊರಗೆ, ಹೊಱಗೆ (ಅ). ೧. ಹೊರಗಡೆಗೆ ; ಆಚೆಗೆ : ದುರ್ಯೋಧನಂಗಿಂ ಪುಗಲ್ಕೆಡೆ ತ್ರೈಭುವನಂಗಳಿಂ ಪೊಱಗೆ ಮತ್ತಿಲ್ಲಿತ್ತೊ ಬಾಣಾಂತಕಾ (ಪಂಪಭಾ. ೦೩-೬೬) ; ಒಳಗೆ ಬೆಳಗು, ಪೊಱಗೆ ಕತ್ತಲೆ (ಜಾನಪದ. ೫೯ ಗಾದ.) ; ಮಹಾವಿಭವದಿಂದಿರುತೆ ಬ್ರಹ್ಮಾಂಡದಿಂ ಪೊಱಗೆ ಶಿವಲೋಕವಂ ನೆನೆದ ಮಾತ್ರದೊಳಾಗಿಸೆ (ಶಿಪು. ೦೩-೨೦). ೨. ಬೇರೆಯಾಗಿ ; ವ್ಯತಿರಿಕ್ತವಾಗಿ : ಅವಱಿಂ ಪೊಱಗೆ ಮಾಳಾಮೃತ

ದಂಡಕಂಗಳ್ ಮಾತ್ರಾನಿಯಮಸ್ಕಂಧಕಾದಿಜಾತಿಗಳೆಂಬಿವಕ್ಕುಂ (ಛಂದೋಂಬು. ೧-೪೭ ವ). ೩. ಬಹಿರಂಗದಲ್ಲಿ; ಬಾಹ್ಯದಲ್ಲಿ: ಅತ್ರಿಯ ಪಣ್ಗಳಂತೊಳಗಶುದ್ಧನುಂ ಪಟಫಲದಂತೆ ಪೊಱಗೆ ಸೇವ್ಯನುಂ (ಧರ್ಮಾಮೃ. ೬-೬೨); ಪೊಱಗತುಳಧೃತಿಯನಾಂತಂ ನೆಱೆ ಮನದೊಳ್ ತ... ...ವ ಕುಸುಮಾವಳಿಯಂ (ಕುಸುಮ. ೧೧-೧೧೪); ಮನೋಜನೆಚ್ಚ ... ಒಳಗಿಂದೊಳ ನಟ್ಟಿರಲ್ ಪೊಱಗೆ ತೋಱುವ ನುಣ್ಗಱಿಯಂತಿರೊಪ್ಪುಗುಂ (ಕಾವ್ಯಸಾ. ೫೯೪). ೪. ಬಳಿಕ; ಅನಂತರ: ಅಂತು ಪೊಱಮಟ್ಟು ಪೊಱಗೆ ಅವರೋಧ ಪ್ರಮದಾಕದಂಬವಿಗಳತ್ಕ್ಷೀರಸಾರಂ . . . ತೇಂಗೆ ತರಂಗಮಾಲೆ ರತಿ ಕಂದರ್ಪಂಗೆ ತೀವಿಟ್ಟ ಬಣ್ಣಪುರಂ ಹಾನೆನೆ ಕಣ್ಗೆ ಮಾಡಿದುದು ಕಾಸಾರಂ ಸುಧಾಸಾರಮಂ (ಅನಂತಪು. ೭-೩೦ ವ). **ಹೊರಗೆ:** ೧. ಹೀನಾಮಾನವಾಗಿ ಬೈದು, ಹೊರಗೆ ಕಳುಹಿಸಿದರು (ಹಾಯ್ಕ. ೬೨); ಅವು ಹಣ್ಣಾದವೆಂದರೆ ಬಿಸಿಲಿಗೂ ಗಾಳಿಗೂ ಅರಳಿ ಒಳಗಿನ ಹತ್ತಿ ಹೊರಗೆ ಬರುತ್ತದೆ (ಕುಂಬಾರ. ೯-೨೭). ೩. ಈ ವರ್ತಮಾನವನ್ನು ಹೊರಗೆ ಹಬ್ಬಿಸದೆ (ಕುಹಾಶಂ. I, ೨೪೨). **ಹೊಱಗೆ:** ೧. ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ ಹಂಡದ ಮಡಕೆಯ ಹೊಱಗೆ ತೊಳೆದಂತೆ (ಬಸವ. ೧೧೪); ಇಱಿದು ಚಕ್ರವ್ಯೂಹವನು ಬಱಿದಱಿಯ ಮಾಡಿ ಕಿರೀಟಿಯದಱಿಂ ಹೊಱಗೆ ಹಂಸವ್ಯೂಹದಲಿ ಕೆಣಕಿದನು ಕಾಳೆಗವ (ಕುವ್ಯಾದ್ರೋ. ೧೧-೧೪); ಹೊಲೆಯ ಹೊಱಗಿಹನೆ ಊರೊಳಗಿಲ್ಲವೆ (ಪುರಂದ. ೧-೧೭೯ ಪಲ್ಲ). ೩. ಒಳಗೆ ಕುಟಿಲ ಹೊಱಗೆ ವಿನಯವಾಗಿ ಭಕ್ತರೆನಿಸಿಕೊಂಬವರ ಬಲ್ಲನೊಲ್ಲನಯ್ಯಾ ಲಿಂಗವು (ಬಸವ. ೯೭); ಹೊಱಗೆ ಶರೀರನಿತ್ತ ಹಸಿದೆನೆಂದೆನುತಿರಲು (ಇಳೆ.ರೇ. ೫೪-೧೮); ಒಳಗೆ ಕುಜನರು ಹೊಱಗೆ ಧರಣೀವಳೆಯ ಮಾನ್ಯರು (ಕುವ್ಯಾಸ. ೧-೬೪). 'ಒಳಗೆ' ಪರಾ.

**ಪೊಱಪೊಱಗೆ, ಹೊಱಹೊಱಗೆ** (ದ್ವಿರುಕ್ತಿ): ಪಸರಿಸಿದ ಪಯಃಪೂರದ ಪೊಸವೆಳ್ಪು ನಿಜಾಂಗರುಚಿಯ ಪೊಱಪೊಱಗೆ ಪೊದಟ್ಟಿಸದಿರೆ (ಆದಿಪು. ೭-೯೨); ಅಡ್ಡಾಯುಧನಿಹತಿಯಿಂ ಹಱಿದಲೆಯವನ ದೇಗುಲದ ಹೊಱಹೊಱಗ ಬಿದ್ದುದು ಖಳನ ತಲೆ (ಜೈಪು. ೨೮-೨೭). **ಪೊಱಗಿಕ್ಕು, ಹೊಱಗಿಕ್ಕು**=೧. ಹೊರಗಡೆ ಇಡು: ತರುಣಿಯರಾ ವಿಲಾಸಕುಸುಮಾಸ್ತ್ರನಿಕ್ಷೇಪ ಕಾಮತಾಪಮಂ ತರುಣಮೃಣಾಳಮಂ ತೆಗೆದು ಪೊಗೊಳದಿಂ ಪೊಱಗಿಕ್ಕಿದುದದಿಂ ಕೊರಗಿ (ಮಲ್ಲಿಪು. ೩-೨೮); ಕಡೆದು ಕಲಂಕಿ ಮುನ್ನಖಿಳವಸ್ತುಗಳಂ ಪೊಱಗಿಕ್ಕಿ ಸಂಪದಂಗಿಡಿಸಿದ ಮೇರು ದೈವದಿನಿದಿಂದೊಳಗಾಯ್ತೆನಗೆಂದು ಬಂದು ಪಾಲ್ಗಡಲಮಂದ್ರಿಯಂ ಮುಳಿದು ಮುತ್ತಿದುದೆಂಬಿನಂ (ಪುಷ್ಪದ. ೧೧-೪೫). ೨. ದೂರೀಕರಿಸು; ಬಹಿಷ್ಕರಿಸು; ತ್ಯಜಿಸು: ಮುನ್ನಂ ಪಱಿಯುರುಮನಾಪ್ತರುಮಂ ಪೊಱಗಿಕ್ಕಿ ಪತಿಗೆ ಹಿತೋಪದೇಶಂಗೆಯ್ಯರ್ (ಶಂಕರ. ೧೪೯-೨೦); ಆ ಗುರುಗಳೆಂದೈದುಮಂತ್ರವನಾಗಜಱಿಸುತೆ ಚಿತ್ರದೊಳು ಲೇಸಾಗಿ ಜನಪದಭಕ್ತಿಯಲ್ಲದೆ ಪೆಱವ ಪೊಱಗಿಕ್ಕಿ (ಶಾಸ್ತ್ರಾ. ೫-೫೫); ಕುಲದ ಬೇರಿಗೆ ನೀನೆ ಗುದ್ದಲಿಗೊಳಲದೇಕೆ ಸುಪುತ್ರನಾಗಿದನಲಘುವಿಪ್ರರು ಕೇಳಿದಡೆ ಹೊಱಗಿಕ್ಕರೇ ನಿನ್ನ (ಬಸಪು. ೩-೫೯). ೩. ಮೇಲಕ್ಕೆ ತಳ್ಳು; ಮೇಲಂ ಮುಖವಾಗಿ ದೂಡು: ನೀರು ಹೊಱಗಿಕ್ಕುವುದು ಮಱಿಯೇ ಬಾರಿ (ಕುವ್ಯಾವಿ. ೩-೨೭). **ಪೊಱಗಿಡು, ಹೊರಗಿಡು, ಹೊಱಗಿಡು**= ೧. ಹೊರಗಡೆಯಲ್ಲಿ ಇರಿಸು: ಅಡಗಟ್ಟ ಮಡಕೆಯಂ ಪೊಱಗಿಡುವಂತೆ ಕೂಱನಟ್ಟ ಮಡಕೆಯನೇಕೆ ಹೊಱಗಿಡರ್ (ಧರ್ಮಾಮೃ. ೭-೯೪); ತವಮ್ಮಾಯುಷ್ಯ ಭಾಷೆಗಳಂ ಪೊಱಗಿಡುವಂತೆ ಚಪ್ಪರದ ಪೊಱಗೆ ಮೆಲ್ಲನಿಳುಪಿ (ಶಂಬರ. ೩-೫೫); ಮಳೆಯಲ್ಲಿ ಕೊಡೆ ನೆನೆದು ಒದ್ದೆಯಾಗಿದೆ. ಬಿಡಿಸಿ ಹೊರಗಿಡು (ರೂಢಿ); ತಂದು ಹೊಱಗಿಟ್ಟು ಕಬ್ಬಿಲರ ಕೈವಿಡಿದು ನೀವೆಂದ ಪ್ರಸಾದವಿದೆ ಕೊಳ್ಳಿಯೆನಲು (ಸಿದ್ಧರಾ. ೫-೧೫). ೨. ದೂರೀಕರಿಸು: ಮುದಿಯನುಮನ್, ಮಡೆಯನುಮನ್ ನೀನ್ ಎಂಬುದೊರ್ಮೆಯೇ ಪೊಱಗಿಡದ ಮನ್ನಮಂ (ಅಂತಿಗೂ. ೧೪-೨೭೪); ಬೇಡ, ತಡೆಯದಿರು, ಪೊಱಗಿಡಯ್ ಎನ್ನ ಮುಂದಿನ ಪಾಡುಮನ್ (ಬಧ್ಯಶ್ರ. ೪೪-೭೧೬).

[<ಪೊಱಗು]

**ಪೊಱಗೋಟೆ,** ಹೊರಕೋಟೆ, ಹೊಱಕೋಟೆ (ನಾ). ೧. ಒಳಕೋಟೆಗೆ ಬೇರೆಯಾದ ಸುತ್ತಣ ಕೋಟೆ; ಹೊರಗಿನ ಕೋಟೆ. ೨. ಕೋಟೆಯ ಹೊರಭಾಗ: ನೊಳಂಬ ದಡಿಗ ರಾಚಮಲ್ಲ ಮಯ್ಯಾಡಿ ಗುಣ್ಡಿಗೆ × × ವಾಗಿ ಬರುಬಳಿಸಿ ಬಿಟ್ಟಡೆ ಪೊಱಗೋಟೆಯಿಟ್ಟೆಱೆವಲ್ಲಿ ಪಲರಾ ಪಯಣದ ಮಱು[ವ]ಕಸೂರಮಾಚ್ಚಿಡಿರಕಸ ಪಮುಜರಾ ದೇವನಿಱಿದು ಬಿಟ್ಟ (ಎಪಿ. IX-i, ೧೪-೭; ೯೦೦). **ಹೊರಕೋಟೆ:** ೧. ಮುತ್ತಿನ ಒಳಕೋಟೆ ಮುತ್ತಿನ ಹೊರಕೋಟೆ ಮುತ್ತ ಬಿಗಿಸ್ಯಾರ ಹುಲಿಮುಖಕ (ಜೋಕುಮಾ. ೭೯). **ಹೊಱಕೋಟೆ:** ೧. ಮುಱಿಯಲಿಱಿದು ಹೊಱಕೋಟೆಯ ಕೊಂಡು ಮತ್ತುಱುಬಿದರೊಳಗೋಟೆಗಂದು (ಕಂವಿ. ೧೮-೧೫೪). 'ಒಳಕೋಂಟೆ' ಪರಾ. [ಪೊಱ (<ಪೊಱಗು)+ಕೋಟೆ$_1$ (<ಕೋಂಟೆ)]

**ಪೊಱಡ** 'ಪೊಱಂಡ' ನೋ.

**ಪೊಱಡು$_1$** 'ಪೊಱಮಡು' ನೋ.

**ಪೊಱಡು$_2$** 'ಪೊಱಂಡು$_2$' ನೋ.

**ಪೊಱತು,** ಪೊರತು, ಹೊರತು$_1$, ಹೊಱತು (ನಾ). ಹೊರಗೆ ಉಳಿದುದು; ಬೇರೆಯಾದುದು; ಪ್ರತ್ಯೇಕವಾದುದು: ಬರತೆಗೆದುದೊ ನೃಪನ ಗುಣೋತ್ಕರಮೆನೆ ಕಳುಪಲ್ಕೆ ಕಡೆಯ ಬಾಗಿಲ್ವಾಡಂಬರೆಗಂ ಬಂದುದು ಕಾದಂಬರಿ ಪೊಱತಾಗಖಿಳಕನ್ಯಕಾನಿಕುರುಂಬಂ (ಕಾದಂಬ. ೧೭೯). **ಪೊರತು:** ತಮ್ಮ ಜನಕಸುತೆ ಪೊರತಾಗಿ ಲಂಕಾನಗರಿಯನ್ನು ಕಿಚ್ಚಿನಿಂದ ಭಸ್ಮಸಾತ್ಕೃತಗೈದನೇಂ ಪ್ರೌಢನೆನುತೊರೆದರಾಗಸದೊಳು (ಶಂಕಾರಾ. ೫-೮೮-೫೮); ಸಂತಾಪವನೀವ ಘೋರತರಕೋಪದಿ ಕೇಳ್ ಪೊರತಾದೆ (ಅಕುತ. ೪೭). **ಹೊರತು$_1$:** ಹೊಳೆಯ ತೀರದ ಹಸಿರುಹುಲ್ಲುಹಾಸಿಗೆಯು ಎದೆಯ ಸೆಳೆಯುವುದು ಮನವು ಹೊರತಿಹುದು (ಚಿತಾಕ. ೧೨-೮); ಕಾಲ ದೇಶದ ಪ್ರಭಾವದಿಂದ ಎಂಥ ಮಹಾಕವಿಯಾದರೂ ಹೊರತಾಗಲಾರನು (ಕಮ.೭೯). **ಹೊಱತು:** ತಂಮ್ಮ ಹಳಿ ಕೆಂಬಿತ್ತಿಯನು ದೇವಾಸ ಹೊಱತಾಗಿ (ಎಪಿ. VII, ಶಿಕಾ. ೯೭-೫; 1218); ಹರಹರಾ ಇನ್ನಾರೊ ತಂಗಿಗೆ ವರನು ವಾರಿಧಿವಲಯದವನೀಶ್ವರರು ನೆರೆದಿದೆ ರೂಪು ವಿಕ್ರಮವೆರಡು ಹೊಱತಾಗಿ (ಕುವ್ಯಾಆ. ೧೯-೪೪); ತನಗೆ ನಿರ್ಮೂಲವೆಂಬ ಭಾಗ್ಯದ ಘನತೆಯುಳ್ಳಡೆ ಸಾಕು ಹೊಱತನು ನೆನೆಯಲಾಗದು (ಕೌಶಿರಾ. ೩-೨೯).

**ಹೊರತು ಪಡಿಸು** = ಬೇರೆ ಮಾಡು; ಪ್ರತ್ಯೇಕಿಸು: ಹಿಂದಿನ ಪೀಳಿಗೆಯ ಕತೆಗಳಲ್ಲಿಯ ಸೋಲನ್ನು ಮಾಸ್ತಿಯವರ ಕತೆಗಳನ್ನು ಹೊರತುಪಡಿಸಿಯೇ ಹುಡುಕಬೇಕಾಗುತ್ತದೆ (ಹೊಸಕ. ೨೭೮).

[ದೇ.॥ ತವಿ. ಪುಱತ್ತು]

**ಪೊಱತೆಗೆ,** ಹೊರತೆಗೆ, ಹೊರದೆಗೆ, ಹೊಱದೆಗೆ (ಕ್ರಿ). ೧. ಇರುವ ಕಡೆಯಿಂದ ಬೇರೆ ಕಡೆಗೆ ಒಯ್ಯು,—ಸಾಗಿಸು: ಸುಡಲ್ ಚಿತಾರೂಢನಾಗಿರ್ದ ಶ್ರೀವಿಜಯನುಮಂ ಕಂಡು ಬೇಗಮಗ್ನಿಕುಂಡದಿನುರ್ವೀಶ್ವರನಂ ಪೊಱತೆಗೆದು (ಶಾಂತಿಪು. ೬-೪೯ ವ). **ಹೊರತೆಗೆ:** ೨. ಬಹಿರಂಗ ಪಡಿಸು; ಪ್ರಕಾಶಪಡಿಸು: ಅರೆಯೊಳು ಬೈತೊಂದು ಚಾರುವಿಗ್ರಹವನು ವರಶಿಲ್ಪಿ ಪರಿಭಾವಿಸುತ್ತ . . . ಹೊರತೆಗೆದನು ಮತ್ತೆ (ಇಂದಾಕ. ೧೭೮-೬೬). **ಹೊರದೆಗೆ:** ೧. ನೆಕ್ಲ್ದೋವ್ ಚರ್ಮದ ಚೀಲವನ್ನು ಹೊರದೆಗೆದು . . . ನೋಟೊಂದನ್ನು ಕೊಟ್ಟನು (ಪುನರು. ೨೮೭). **ಹೊಱದೆಗೆ:** ೩. ಬೇರೆಯಾಗು; ಹೊರತಾಗು: ಉನ್ನತದ ಸುಖದುಃಖದಲಿ ಸಂಪನ್ನನಾಗದೆ ಹೊಱದೆಗದು ತಾನೇಕನಾಗಿಹುದು . . . ಈ ಭವದ ದಾಂಟುವರೆ (ಶಿಬಾಗ. ೧೧-೫-೧೭). 'ಒಳದೆಗೆ' ಪರಾ. [ಪೊಱ (<ಪೊಱಗು)+ತೆಗೆ$_1$]

**ಪೊಱತೊಲಗು** (ಕ್ರಿ). ೧. ಹೊರಕ್ಕೆ ಹೋಗು. ೨. ಮುಟ್ಟಾಗು ; ಬಹಿಷ್ಠೆಯಾಗು : ಕಾಂತೆಯರು ಪೊಱತೊಲಗೆ ಋತುವೆನಿಕು (ಪುಂಗಪ. ೦೩೯-೪). [ಪೊಱ (<ಪೊಱಗು) + ತೊಲಗು$_1$]

**ಪೊಱದಡಿ** (ನಾ). ಜಲಾಶಯದ ಆಚೆಯ ದಡ : ತೊಱೆಯ ಪೊಱದಡಿಯ ಕರಂಜಕುಂಜದೊಳ್ ಸಂದಣಿಸಿ ನಿಂದು ರೋಮಂಥ ಲೀಲಾತತ್ಪರತೆಯಿಂದರನಿಮೀಲಿತಾಕ್ಷಂಗಳಾದ ಕಾಡೆಮ್ಮೆಯ ಮೊಗದಿನುಗುವ ನೊರೆಯನುರುಳಿಗೊಂಡು ತಂದಡವಿಯ ಗಿಡುಗಳೊಳ್ ಗುಡಿಗಟ್ಟಿದಂತೆ ತೊಡರ್ಚಿಯುಂ (ಚಂದ್ರಪ್ರ. ೯-೪ ವ). [ಪೊಱ (<ಪೊಱಗು) + ತಡಿ$_2$]

**ಪೊಱದೋಂಟ** (ನಾ). (ಊರು, ನಗರ ಮೊದಲಾದುವುಗಳ) ಹೊರಗಡೆಯಿರುವ ತೋಟ,—ಉದ್ಯಾನವನ : ಹೊರಭಾಗದ ತೋಟ : ಕೋಂಟೆಗಳನೇಱಿದು ಪರಿಖೆಯ ಜಲಂಗಳಂ ದಾಂಟಿ ಕತ್ತಲೆಯೊಳೊರ್ವನೆ ಮಂತ್ರಿ ಪೊಳಲ ಪೊಱದೋಂಟದೆಡೆಯೊಳ್ನಿಲಸಿ ದಂಬಿಕಾಭವನವಂ ಸಾರ್ದನು (ಕ್ಷೆಂಚಾ. ೩೦-೫೪). [ಪೊಱ (<ಪೊಱಗು) +ತೋಂಟ]

**ಪೊಱನೋಟ**, ಹೊರನೋಟ (ನಾ). ಹೊರಗಿನ ನೋಟ; ಬಾಹ್ಯ ದೃಷ್ಟಿ : ಅಱಿತು ನಿಟ್ಟಿಸಿ ಗಂಡುಮಕ್ಕಳಿಂದತಿಶಯದೆಱಕದೊಳೆಸೆವ ಪೆಣ್ಗಳನು ಪೊಱನೋಟದಿಂದ ನೋಡದೆ ಪೋಲೆನಿಸದೆ ಮಱುಕವೆರಸಿ ಮನ್ನಿಪುದು (ಹದಿಬ. ೫-೦೩). **ಹೊರನೋಟ** : ಹೊರನೋಟಕ್ಕೆ ಕಾಣುವ, ಪುನರಾವರ್ತನೆಯೆಂದು ತೋರುವ ಇಲ್ಲಿನ ಕೆಲವು ಭಾಗಗಳಿಗೂ . . . ಭಿನ್ನಾಭಿಪ್ರಾಯಗಳಿವೆ (ಜಗಜ್ಯೋ. ೨). 'ಒಳನೋಟ' ಪರಾ. [ಪೊಱ (<ಪೊಱಗು) +ನೋಟ]

**ಪೊಱಪಚ್ಚ**, ಹೊಱಹಚ್ಚ (ನಾ). ೧. ಮೇಲುಹೊದಿಕೆ : ನಿಚ್ಚಲಿ ಕಾಱಿರುಳೊಳ್ ಪೊಱಪಚ್ಚವನುಟ್ಟರ್ದಿಱುಂಕಿ ಕಕ್ಷದೊಳಾ ಪಾಟಚ್ಚರಭಯದಿಂದುಟ್ಟು ಪಟಚ್ಚರಮಂ ಮನೆಗೆ ವಂದು ನಿಂದಂಗಣದೊಳ್ (ಶಾಂತಿಪು. ೬-೩೫). ೨. ಹೊರಗಿನ ವೇಷ ; ಬಾಹ್ಯವೇಷ : ಅಂತಾದೊಡಾಂ ಪುರುಷ ನಲ್ಲ ನಪುಂಸಕನುಮಱಿಯದವರ್ಗೆ ಪೊಱಪೊ[ಪ]ಚ್ಚದ ಶೃಂಗಾರವಂ ಪೆಱವು ಪುರುಷಾಕಾರದೊಳಿರ್ಪೆಂ (ಪುಣ್ಯಾಸ್ರ. ೫-೨೩ ವ). **ಹೊಱಹಚ್ಚ** : ೨. ಎನ್ನ ಭಕ್ತನೆಂದೆಂಬರು ಎನ್ನ ಹೊಱಹಂಚಿ[ಹಚ್ಚ]ಒಳಬೊಳ್ಳೆತನವನಱಿಯರಾಗಿ (ಬಸವ. ೩೦೫) ; ನಿಮ್ಮ ನಿಜವನಱಿಯದ ಶರಣರು ಹೊಱ ಹಚ್ಚ ಒಳಬೊಳ್ಳೆವೊಲ್ಲರು ಲಿಂಗೈಕ್ಯರು (ಶಬಾಶ.೪. ೫೯೦-೭) ; ಇದಱ ವಿಶೇಷವೇನಿದಱ ದೊಡ್ಡಿತದೇನೊಳಬೊಳ್ಳೆಯಾದ ವೇಷದ ಬಲುಹೇನಿದಕ್ಕೆ ಹೊಱಹಚಿಯ[ಹಚ್ಚದ]ಲೇನಹುದು (ಶತಕ. ೩೫) ; ಶ್ರುತಿಗಳ ಮಾರ್ಗ ವೊಂದು ನಡೆಯೊಂದು . . . ನಾಡೆ ಹೊಱಹಚ್ಚದ ಭಕ್ತಿಯೊಳಿರ್ಪನಾ ದ್ವಿಜಂ (ಪ್ರಭುಲಿ. ೨೭-೦೫೭). [ಪೊಱ (<ಪೊಱಗು) +ಪಚ್ಚ$_2$]

**ಪೊಱಪಾಯ್** 'ಪೊರವಾಯ್' ನೋ.

**ಪೊಱಪಾಳೆಯ**, ಪೊರಪಾಳೆಯ, ಹೊಱಪಾಳೆಯ (ನಾ). ಊರ ಹೊರಗಿನ ಸೈನ್ಯದ ಪಾಳೆಯ,—ಬೀಡು : ಕೋಂಟೆಯಂ ಪತ್ತಿ ಪೊಱಪಾಳೆಯವನೀಕ್ಷಿಸುತ್ತಿರ್ಪನಂ (ಕಬ್ಬಿ. ೪೨-೦೩). **ಪೊರಪಾಳೆಯ** : ಬಿದಿರಿಂದನಗಸ್ತ್ಯಂ ತ್ರಿಶಂಕು ತಲ್ಲಣಗೊಂಡ ಚದರಿ ಪೊರಪಾಳೆಯಂ ಪಾಳಾಯ್ತು (ಶಂಕಾಶಾ. ೫-೨-೨೩). **ಹೊಱಪಾಳೆಯ** : ಶಾಲಾವೀಧಿಯೊಳಗೆ ಸಂದಣಿಪ ಕಾಲಾಳುಗಳಾಯುಧವೆಳಗು ಪೇಳಲಳವೆ ಹೊಱಪಾಳೆಯದರ ಟಣ್ಣ ಕೀಲಿಸಿ ಕದುಱದಿಱಿದುವು (ಶಂಕರ. ೦೩-೩೨). [ಪೊಱ (<ಪೊಱಗು) +ಪಾಳೆಯ]

**ಪೊಱಪುರ್ವು** (ನಾ). ಹುಬ್ಬಿನ ಹೊರಭಾಗ ; ಭ್ರೂಮಧ್ಯ : ಕಣ್ಣ ಪೊಱಪುರ್ವು[ಪಾಠಾಂ. ಬುರ್ವು]ಗಳ್ಗಂ ನಣ್ಣನೆ ಭ್ರೂಮಧ್ಯವೆಸರೆ ಹಯಶಾಸ್ತ್ರದೊಳಂ (ಅಶ್ವಶಾ. ೪-೦೭). [ಪೊಱ (<ಪೊಱಗು) +ಪುರ್ವು]

**ಪೊಱಪೊಣ್ಮು**, ಪೊರಪೊಣ್ಮು, ಹೊರಹೊಮ್ಮು, ಹೊಱಹೊಮ್ಮು(ಕ್ರಿ). ೧. ಹೊರಗೆ ಹರಿ ; ಹೊರಸೂಸು : ಅಂತು ಮನದೊಳಾದ ಮೋಹ ರಸಮೆ ಕಣ್ಣಿಂ ತುಳುಂಕುವಂತೆ ಪೊಱಪೊಣ್ಮುವ ನಯನಜಲಂಗಳ ನುತ್ತರೀಯವಲ್ಕಲವಸನೋಪಾಂತದೊಳೊತ್ತುತ್ತುಂ (ಶಂಖಶಾ. ೯-೨ ವ) ; ನದಿಯಿಂ ಸ್ರವಣಂ ಪೊಱಪೊಣ್ಮೆ ಮಿಕ್ಕುಪೊಕ್ಕರಣೆಯ ನಿರ್ಗಳರ್ಕೆ ಪೊಱಪೊಣ್ಮೆ ಘನಾಗಮದೊಳ್ ವಿನಿಂದಿತಂ (ಲೋಕೋಪ. ೪-೭೪). ೨. ಕಾಣಿಸಿಕೊಳ್ಳು ; ಪ್ರಕಟವಾಗು ; ವ್ಯಕ್ತವಾಗು : ಗುರುಕರುಣಾರಸವುದು ಮನದಿಂ ಪೊಱಪೊಣ್ಮೆ (ಶಂಕರ. ೦೦-೦೨೯) ; ಮನೋನುರಾಗಮೆ ತನುವಿಂ ಪೊಱಪೊಣ್ಮುವಂತೆ ಪುಳಕಕುಳಂ ಭೋಂಕನೆ ನೆಗೆಯೆ (ಶಾಂತಿಪು. ೩-೫೭); ಪದೆ ಪಿಡಿದದಂ ಮನವಾರೆ ತಾಳ್ದನವರತಿದುರ್ಗುಣವನಂತವುಱದೆ ಪೊಱಪೊಣ್ಮದಂತೆ (ಶಬ್ದಮ. ೦೨-೦೯). ೩. ಹೊರಗೆಲ್ಲ ಹರಡು,-ಆವರಿಸು,-ವ್ಯಾಪಿಸು : ಆಕೆಯ ವಿಲಾಸಹಾಸಮೆ ಪೊಱಪೊಣ್ಮಿದಂತೆ ಬೀದಿಬೀದಿಗಳೊಳೆಡೆಗಿಱಿದು ಕೆದಱಿದ ಕುಸುಮರಜಂಗಳುಂ (ಅಂಶು. ೭-೩೭ ವ) ; ಮುನೀಶನ ಹೃದಾತ್ಮಜ್ಯೋತಿ ಮೆಯ್ವೆರ್ಚಿ ಪಜ್ಜಳಿಸುತ್ತುಂ ಪೊಱಪೊಣ್ಮಿತೆಂಬ ತೆಱದಿಂ (ಶುಕುಸು. ೦-೦೨೦) ; ಮಂಜೀರಕಧ್ವನಿ ಪಂಚಬಾಣಶರಾಸನಧ್ವನಿಯಂತೆ ವಿಸ್ತಾರದಿಂ ಪೊಱಪೊಣ್ಮಲ್ (ದಶಕು. ೦೨-೩೦). ೪. ವ್ಯಾಪಕವಾಗಿ ನೆರವೇರು : ರಾಜ್ಯಾಭಿಷೇಕೋತ್ಸವಂ ಪೊಱಪೊಣ್ಮುತ್ತಿರೆ ರಾಜ್ಯಮಂ ಕಂಡೆ (ಅಂಶು. ೬-೨೩). ೫. ಹುಟ್ಟು; ಆವಿರ್ಭವಿಸು: ತತ್ಸ್ಥಳಸ್ಥೂಲಭುಜಂಗನಿಶ್ವಸಿತಮಾ ನಗದಿಂ ಪೊಱಪೊಣ್ಮೆ ಲೋಲಕಲ್ಲೋಲಪರಂಪರಾಪರಿಗತಂ ಪುದಿದತ್ತು ನಗೋಪಕಂಠದೊಳ್ (ಅಜಿತಪು. ೪-೩೩) ; ತುಂಬುವೆಱೆಯಿಂ ಪೊಱಪೊಣ್ಮುವ ಜೊನ್ನದಂತೆ (ರಾಜಶೇ. ೦-೯೪). ೬. ಮೇಲಕ್ಕೆ ಚಿಮ್ಮು; ಪುಟಿ : ಚಕಿತತರಂಗಸಂಘಹತಿಯಿಂ ಪೊಱಪೊಣ್ಮುವ ಮುತ್ತು ದಿಗ್ವಧೂನಿಕರದ ತೊಟ್ಟ ಮುತ್ತಿನೊಳೊಡಂಬಡೆ (ಜಗಂ. ೦-೪೪). **ಪೊರಪೊಣ್ಮು** : ೨. ನಲ್ಲೆಯ ಹೃದಯಮಂದಿರದೊಳು ನಲ್ಲನು ಎನಿತನಿತೊಳಪೊಗುತಿಹನು ಪೊರಪೊಣ್ಮುತನಿತನಿತಾಕೆಯ ಕೊಡಮೊಲೆ ಸಂಕೋಚದಿಂದೆಂಬವೋಲೆ (ಶಂಕಾಶ. ೦೭೩-೨). **ಹೊರಹೊಮ್ಮು** : ೧. ಹೃದಯವು ಅರಳಿ ಪ್ರೇಮಪ್ರವಾಹವೇ ಹೊರಹೊಮ್ಮಿರುವ ಸಂದರ್ಭವು ರಾಮಾಯಣದಲ್ಲಿ ವರ್ಣಿತವಾಗಿರುವುದು(ಕೀಗಟ್ಟು. ೨೭). ೨. ಯಾವಾಗಲೂ ನಗು ಅವರ ಮುಖದಲ್ಲಿ ಹೊರಹೊಮ್ಮುತ್ತಿತ್ತು (ಶುಂಕುಸು. ೨೯) ; ಅವರ . . . ತತ್ತ್ವದರ್ಶನಗಳು ವಿಶಿಷ್ಟ ಗದ್ಯದ ವಚನವಾಗಿ ಹೊರಹೊಮ್ಮಿ ಕನ್ನಡಕ್ಕೆ ಸ್ವಾನುಭವಸಾಹಿತ್ಯದ ಸಂಪತ್ತಿಯನ್ನು ಒದಗಿಸಿದುವು (ಕಬಶ. ೩೦). **ಹೊಱಹೊಮ್ಮು** : ೨. ನುಡಿವಲ್ಲಿ ಗದ್ಗದಂಗಳು ಹೊಱಹೊಮ್ಮಿದಿದ್ದರೆ . . . ಆನು ಡಂಭಕ ಕಾಣಿರೇ (ಬಸವ. ೩೭೯) ; ಕಾಮಾಗ್ನಿಯಿಂದ ಕಾದ ಹೃದಯಸ್ಥಗಳ ಜ್ವಾಲೆ ರೋಮಕೂಪದೆ ಹೊಱಹೊಮ್ಮಿ ಧೂಮ ತಳ್ತುದು ಚಿತ್ರಲೇಖೆಯ ವರಮುಖಸೋಮಂಗೆ ಸ್ವರ್ಭಾನುವೆನಿಸಿ (ಮೋಹತ. ೨೭-೩೦). ೩. ಹರಿಯುದರದೊಳಹ ಹದಿನಾಲ್ಕುಜಗಗಳ ಪರಿಪರಿಯತುಳವಿಸ್ತಾರ ಹೊಱಹೊಮ್ಮಿ ತೋರ್ಪೊಲು ಒಹುಬಗೆ ಪುತ್ತಳಿ ಮೆಱೆದುವೊಳಪ್ರಾಕಾರದಲಿ (ಶಂಕರ. ೭-೯೩). ೭. ಮುಂದೆ ಬರು ; ಹೊರಚಾಚು : ಹುಟ್ಟು ದರಿದ್ರಗೆ ಬಹಳಸಂಪದ ಪರೆ ನೆಟ್ಟನೆ ಕೊರ್ಬುವಂದದಲಿ ಕಟ್ಟಾಯತಿ ವೆತ್ತ ಸತಿಯ ತಳೋದರ ನೆಟ್ಟನೆ ಹೊಱಹೊಮ್ಮಿತಾಗ (ಮೋಹತ. ೦೭-೫). [ ಪೊಱ (<ಪೊಱಗು) + ಪೊಣ್ಮು ]

**ಪೊಱಪೊಸಂತಿಲ್** (ನಾ) . ಹೊರಬಾಗಿಲಿನ ಹೊಸ್ತಿಲು ; ಹೊರಗಿನ ಹೊಸ್ತಿಲು : ತುಂಬಿದ ಗುಂಬವುಂ ಪೊಱಪೊಸಂತಿಲ ಪಕ್ಕದೊಳಿಟ್ಟು (ಜಕಬ. ೪-೩೫). [ ಪೊಱ (<ಪೊಱಗು) + ಪೊಸಂತಿಲ್ ]

**ಪೊಱಬಳಸು**, ಹೊಱವಳಸು (ನಾ). (ಕೋಟೆಯ) ಹೊರವಲಯ: ಸುತ್ತುಮುತ್ತು : ಲಗ್ಗೆವಱಿ ಮೊಳಗಿದುವು ಕೂಗಿದುವು ತಮತಮಗೆ

ಬೊಗ್ಗು ಹೆಗ್ಗಾಳೆಗಳ್ ಬಿಡದೆ ನಡೆಗೋಂಟೆಗಳ ಪೊಗ್ಗರಂ ನೂಂಕಿದುವು ಪುರದ ಪೊಱಬಳಸಿನೊಳ್ ಪಡಿಯಟ್ಟಣೆಗಳದ್ದುವು (ಕಬಕ್ಷು. ೪೨-೨೪). **ಹೊಱವಳಸು :** ಹೊಱವಳಸಿನಿಂ ಕುದುರೆ ಅದಱಿಂ ಹೊಱವಳಸಿನಲಿ ಆನೆ ನಿಂದವು (ಶಾಕ್ಸಶಾ. ೨೨-೬೬). [ ಪೊಱ (< ಪೂಱಗು) + ಬಳಸು₂ ]

**ಪೊಱಬಿಗ, ಹೊರಬಿಗ, ಹೊಱಬಿಗ₁** (ನಾ). ಹೊರಗಿನವನು; ಸಂಬಂಧ ಪಡದವನು ; ಅನ್ಯ ; ಪರಕೀಯ : ನಂದಿತಾದುದಿನಕುಲದೇಳ್ಗೆ ಭೂವಲಯದೊಳ್ ತನ್ನ ಬಾಣಮಂ ಬಂಜೆಗೈದವರೆ ಪೊಱ[ಶಾಶಾಂ. ಲ]ಬಿಗ ರೆಂದನು (ಕ್ಯಬಿಶಾ. ೨೦-೩೯); ಏತಕನೆ, ತಾವುವರ್ ಕ್ರೂರಿಗಳ್. ಪೊಱ ಬಿಗರನುಱದವರ್ (ಐತ್ಮಕ್ರ. ೬೯-೬೦೯). **ಹೊರಬಿಗ :** ನನ್ನ ಬಾಣವನ್ನು ಬಂಜೆಗೈಯುವುದು ಹೊರಬಿಗರಿಂದ ಸಾಧ್ಯವೇ ? (ಐದುರಿ. ೨೨೪). **ಹೊಱಬಿಗ₁ :** ಜಾತಿವೃತ್ತಿಗೆ ಹೊಱಬಿಗನು ತಾನಾದನಿನ್ನಾದರೆ ಸಲಹ ಬೇಕೆಂಬ ವಿಟರ ನೃಪಾಲನೀಕ್ಷಿಸಿದ (ಜೀಜಂಕ. ೦೬-೬೦) ; ಅರಗಿಣಿ ವಜ್ರ ಪಂಜರದೊಳಗಿರ್ದ ಬಳಿಕ ಅಂಜಲಿಕೇನು ಕಾರಣ ಹೊಱಬಿಗರೆಂಬ ಮಂಜರ ಕೈದುಡುಕುವುದೆ (ಮೋಹಕ. ೫೦-೩೯).

[ಪೊಱಬ್ಬು₀ (ಪ್ರ—ತವಿ. ಪುಱಮ್ಪು) + — ಇಗ]

**ಪೊಱಬೀಡು** 'ಪೊಱವೀಡು' ನೋ.

**ಪೊಱಮಟ್ಟು** 'ಪೊಱಮಡು' ಪರಾ.

**ಪೊಱಮಡಿಸು, ಹೊರಡಿಸು, ಹೊಱಡಿಸು, ಹೊಱಮಡಿಸು, ಹೊಱ ವಂಡಿಸು, ಹೊಱವಡಿಸು** (ಕ್ರಿ). ೧. ಹೊರಗೆ ಬರುವಂತೆ ಅಥವಾ ಹೋಗುವಂತೆ ಮಾಡು : ಈಗಳೆ ಪೋಗಿ ಪುಗೊಳನಂ ಮುತ್ತಿ ದುರ್ಯೋಧನನಂ ಪೊಱಮಡಿಸಿ ಪಗೆಯಂ ಪೞಿವಡಿವುದು (ಗದಾಯು. ೬-೩೮ ವ) ; ಪೊಱಲೊಳಗೆ ಪೊಗೆಯನಿಕ್ಕಿ ಪಾವಂ ಪೊಱಮಡಿಸಿ ಕಳ್ವುಕೊಂ ಡೊಡವೆಯಂ ಕುಡುವೆಂ (ಶಂಕಶಂ. ೦೬೬-೦೬) ; ಒಡಲೊಳಗಣ ವಾಯು ವಸಲ್ಲಿಂದವೆ ಪೊಱಮಡಿಸಿದ ಮಾಳ್ಕೆಯೊಳರವಿಂದವಿಶಾಲವಿಲೋಚನೆಯಾ ನಿಡುಸುಯ್ಯುರವೊಪ್ಪಿದುದು (ಜಯಶಾ. ೪-೫೦). ೨. ಪಾರುಗಾಣಿಸು ; ಪಾರುಮಾಡು : ಸಂಸರಣಾಂಭೋರಾಶಿಯಿಂದಂ ಪೊಱಮಡಿಸೆನಗಂ ನೀನೆ ಹಸ್ತಾವಲಂಬಂ (ಅಂಕ್ಷ.೨-೪೪); ದುಸ್ತರಸಂಸಾರಾಬ್ಧಿಯಿಂದಂ ಪೊಱಮಡಿಸುಗೆ ಸದ್ಧರ್ಮಶಾಚಾರ್ಯರೆಂದುಂ (ಶುಕುಜಶಾ. ೦-೩). ೩. ಅಟ್ಟು ; ತಳ್ಳು ; ದೂರೀಕರಿಸು : ಪಡಿಯಱನಿಂದವೆಱಿಯಿಸಿ ಪೆಡತಲೆಯಂ ಒಡಿದು ನೂಂಕುತ್ತರವುನೆಯಿಂದಂ ಪೊಱಮಡಿಸಿಯಟ್ಟಿ ಕಳೆದು (ಪಶ್ಯಾಶಾ. ೦೬೬-೩); ಒರ್ವ ಬೆಲೆವೆಣ್ ಕುಟಿಲತ್ವದಿಂದುಳ್ಳೊಡಮೆಯನೊಂದೊಂದು ನೆವ ವಿಟ್ಟೆಲ್ಲವಂ ಕವರ್ದತಿದರಿದ್ರನಂ ಮಾಡಿ ಪೊಱಮಡಿಸಲ್ (ಅದ್ಮಟಿ. ೧೦-೬೬ ವ). ೪. ಹೊರಕ್ಕೆ ಬರಲು ಸಹಾಯ ಮಾಡು : ಮತ್ತಂ ಮುತ್ತ ಕುರುಡ ತವಸಿಗಳ್ ಕೈಯಂ ಪಿಡಿದುಯ್ದುವರ ಗುಹೆಗಳಂ ಪೂಗಿಪ ಪೊಱಮಡಿಪ ಚ ಪ ಳ ಕ ಪಿ ಗ ಳು ಮ ಂ . . . ನೋಡಿ (ಶಂಕಶಾ. ೦-೦೦೩ ವ). ೫. ಬೀಳ್ಕೊಡು : ದೂತನಂ ಪೊಱಮಡಿಸಲಾತಂ ಬಂದು . . : ಪೇೞೆ (ಕ್ಷತ್ರಾಕ್ರ. ೩-೩೩ ವ). **ಹೊರಡಿಸು :** ೧. ಸೇಕಪಾತ್ರಂ, ಸೇಚನಂ—೨ ಹಡಗಿನೊಳಹೊಕ್ಕು ಬರುವ ನೀರನ್ನು ಹೊರಕ್ಕೆ ಹೊರಡಿಸುವ ಪಾತ್ರಕ್ಕೆ ಹೆಸರುಗಳು (ಸಿದ್ಧಾಂತಿ. ೬೦); ಆಗ ಅಪ್ಪನು . . . ಸುಪ್ರಭೆಯನ್ನು ಗದರಿಸಿ ಕೊಠಡಿಯಿಂದ ಹೊರಗೆ ಹೊರಡಿಸಿದಳು (ಬೊಗ್ಗು. ೬೨). **ಹೊಱಡಿಸು :** ೩. ಧನವಾದೊಡವೆ ಕೈಸೇರುವ ಪರಿಯಂತ ಮನೆ ದೇವರೆಂದುಪಚರಿಸು ಅನಂಗೆಡಲಾತನ ಹೊಱಡಿಸಿ ಮತ್ತೊಬ್ಬ ಧನವುಳ್ಳ ಪುರುಷನ ಕರೆಕೊ (ಶಂಕಶ. ೬-೦೫೦); ಸೆಟ್ಟಿ ಕಂಡು ಹಾದರವಾಡಿದಳೆಂದು ಹೆಂಡತಿಯ ಹೊಱಡಿಸಿ ಬಿಟ್ಟನು (ಕೈಕಸೂ. I. ೦೭೨). **ಹೊಱಮಡಿಸು :** ೩.ಛೀ ಛೀ ಛೀ ಹೋಗೆಂದು ಹೊಱಮಡಿಸುವೆನಮ್ಮ (ಶಿರಾ. ೦೫೬-೬೯೬ ವ). **ಹೊಱವಂಡಿಸು :** ೧. ಹೊಯ್ಸಳ ವಣ್ಣಾಳಿಕ ಬಲ್ಪಿಂಗೆ ಹೋಗದಿರ ಲುವಾಸಿಯಿಂದಂ ಹೊಱವಣ್ಡಿಸಿದ ಸಮಯದೊಳ್ (ಕ್ಷ. IV. ೦೬-೩ ; 1160); ಪೌರಜನವೈತರಲು ಬಂಡಿಯನೂರ ಹೊಱವಂಡಿ[ಶಾಶಾಂ. ಟ]ಸಿದನು (ಕುಶ್ಯಾಕ. ೦೦-೨೪) ; ಬಲ್ಲಿದ ವೀರಭಟರೊತ್ತಾಗಿ ಹೊಱವಂಡಿಸಿದರನಿಲಜನ (ಕೂರಶಾ. ೩-೮-೨೯). **ಹೊಱವಡಿಸು :** ೧. ತೋಪಿನೊಳಗಿದ್ದವರ ಹೊಱವಡಿಸಿ ಮುಱಿದು ಕಳೆಗಳ ಬಲಿದು ಬಾಗಿಲ ಹೊಱಗೆ ನಿಂದರು (ಕುಶ್ಯಾಕ. ೦೬-೫೦) ; ಕೈಕೊಳಿಸಿ ಕಾದಿ ಕುಬೇರನನು ಹೊಱವಡಿಸಿದರು ಪುರವ (ಕೂರಶಾ. ೦-೮-೨೬).

**ಪೊಱಮಡಿಸಿ ಕಳೆ** = ಹೊರಕ್ಕೆ ಹಾಕು ; ದೂರಮಾಡು ; ಬಹಿಷ್ಕರಿಸು : ಇನ್ನೀ ಧರ್ಮ್ಮವಂ ನಗರಂ ಪ್ರತಿಪಾಳಿಸುವುದು ನೈಷ್ಠಿಕ ರಲ್ಲದರ ಪೊಱಮಡಿಸಿ ಕಳೆವುದು (ಎಕ. VII. ಶಿಕಾ ೦೨೬-೬೨ ; 1036) ; ಅಂತವರನರಮನೆಯಿಂ ಪೊಱಮಡಿಸಿ ಕಳೆದು ಪರವಾದಿಯಂ ದಾನ ಸನ್ಮಾನಾದಿಗಳಿಂ ಸಂತೋಷಂಬಡಿಸಿ (ಸುಕುಜಶಾ. ೨-೨೯ ವ).

[ಪೊಱಮಡು + — ಇಸು₂]

**ಪೊಱಮಡು, ಪೊರಡು, ಪೊರಮಡು, ಪೊಱಂಡು₁, ಪೊಱಡು₁, ಪೊಱ ವಂಡು, ಪೊಱವಡು, ಹೊರಡು₁, ಹೊರಮಡು, ಹೊರವಡು, ಹೊರಹೊಂಡು, ಹೊಱಂಡು, ಹೊಱಡು₁, ಹೊಱವಂಡು, ಹೊಱವಡು** (ಕ್ರಿ). **ಪೊಱಮಟ್ಟು, ಹೊಂಟು, ಹೊರಟು₁, ಹೊರ ವಟ್ಟು** (ಭೂತನ್ಯೂ). ೧. ಒಂದೆಡೆಯಿಂದ ಬೇರೆಡೆಗೆ ಹೋಗು,— ಚಲಿಸು,— ತೆರಳು : ಎರಡುವ್ವಲದ ವೀರಭಟರ್ಕಳೊಟ್ಟು ಪೊಱ ಮಟ್ಟು (ಎಕ. VIII. ಸೊರಬ. ೦೦-೩; ಸು. ೯೦೦); ಅಕ್ಷಯದಾನವುಮಕ್ಕೆಂದು ವರಸಿ ಪೊಱಮಟ್ಟು ಬಸದಿಗೆ ಪೋಪಾಗಳ್ (ಪಶ್ಯಾಶಾ. ೬೬-೨೬) ; ರಾಜ ಮಂದಿರದಿಂ ಪೊಱಮಟ್ಟು ಬರೆ (ಶಂಕಶಾ. ೪-೭೯ ವ) ; ಕಾಮದೇವರ್ಣಗಳೆ ಕೊಳಗುಳಕ್ಕೆ ಪೊಱಮಡಲಕ್ಕುಂ (ಕಾಜಶಾಕ್ಕ. ೯೬-೨೨). ೨. ಹೊರಕ್ಕೆ ಬರು ; ಹೊರಬರು : ಅಱಿಪಿದಂ ಗುರುಭಾರ್ಗವನಿಂತೀಯೊಡ್ಡನಿದಂ ಗೆಲ ಲಾವನಂ ನೆಱೆಯನಾರ್ಕಿನಳರ್ಕೆಯಿನೊರ್ವಂ ಪೊಕ್ಕೊಡೆ ಪೊಕ್ಕನೆ ಮತ್ತಣಂ ಪೊಱಮಡಂ (ಶಂಕಶಾ. ೦೦-೬೬) ; ಬಱಿಯಿಂದುರ್ಚದೆ ನಡುಗುಮ ನೆಱೆದೆಡೆಯಂ ಮಿಟ್ಟವಸ್ಕಕೋಶದಿನಿಸಿಸುಂ ಪೊಱಮಡದೆ ಕೊಂದು ಕೂಗಲ್ ನೆಱೆದುದು ದುರ್ಜನನ ನಿಶಿತರಸನಾಖಿತ್ತಂ (ಸೂಕ್ತಿಸು. ೦-೫೦) ; ಅರೆದೆಱೆವಬ್ಬದೊಳಿರುತಿರ್ದ ಮುಱಿದುಂಬಿ ಸ್ವರ ಮಾಡಿ ಪೊಱಮಡು ವಂತೆ (ಧರಕ. ೩-೩೭). ೩. ಹೊರಹೊಮ್ಮು ; ಹೊರಸೂಸಂ : ಪೊಱ ಮಟ್ಟಪೊಲಾದುದುಷ್ಣದೀರ್ಘೋಚ್ಛ್ವಾಸಂ (ಅಂಕ್ಷ. ೦೬-೩೯) ; ಕಣ್ಮಲರ್ ನಟ್ಟು ಸುಯ್ಗಳ್ ಪೊಱಮಟ್ಟೊಂದೊಂದನಟ್ಟುತ್ತಿರೆ (ಕಾರಂಕ್ಷು. ೦೧೨). ೪. (ಮಾತು) ಹೊರಬರು ; (ಧ್ವನಿಯು) ಕೇಳಿ ಬರಂ ; ಕಿವಿಗೆ ಬೀಳು : ಕನಸಿನೊಳವಿಾ ಕಪಿಂಜಲಮುನಿವದನದೊಳನ್ಯಭಾಷೆ ಪೊಱ ಮಡದು (ಕಾರಂಕ್ಷು. ೬೬೬) ; ತಳ್ತೊಱದ ಪಱೆಯಂತೆ ದನಿ ಪೊಱಮಡದೆ (ರಕರಾಕ್ಷು. ೦-೦೬೮) ; ಪೊಱಮಡುವ ಸಾವದಕ್ಕರದ ಪೊಯ್ಲಿಂಗೆ ನಡುಗು ವಂತೆ ಕೆತ್ತುವ ತುಟಿಯುಂ (ಕಶ್ಯಕಾ. ೫೦೦). ೫. ಹೊರಗೆ ಕಾಣಿಸಿ ಕೊಳ್ಳು ; ಗೋಚರವಾಗು ; ಆವಿರ್ಭವಿಸು : ಪೊಱಕಣ್ಣಂ ಮುನ್ನಂ ಶಾಂ ಮಱಸಿದ ನೊಸಲೊಂದು ಕಣ್ಣುಮಾಗಳ್ ನೊಸಲಿಂ ಪೊಱಮಟ್ಟಂತಿರೆ ತೋಱದನೆಜಕನೆ ಹರಿಗಂಗೆ ರುದ್ರನಗ್ಗಳಗಣ್ಣಂ (ಶಂಕಶಾ. ೬-೨೩) ; ದೇಶಿ ಕೇಂದ್ರಾಕಾರದಿಂದ ಲಿಂಗಮಧ್ಯದೊಳಭವ ಪೊಱಮಟ್ಟನು (ಶ್ರೀಂದಕ್ಷ. ೬-೨೬) ; ವೆಣ್ಮೀನ ಬಸಿಱ ಬಗಿವನೆಂದೆಸುತ ಅಸಿಧಾರೆಯಲಿ ಮೆಲ್ಲರ್ದೆಯ ಬಗಿಯಲಾ ಶಿಶು ಪೊಱಮಟ್ಟುದಾಶ್ಚರ್ಯ (ಮೋಹಕ. ೦೦-೪೦). ೬. (ಸಭೆ, ಸ್ಥಳ, ದೇಶ ಮುಂತಾದುವನ್ನು) ಬಿಟ್ಟು ನಡೆ ; ತೊಲಗು : ಬಾಳ ದಿನೇಶಬಿಂಬದೊಂದೆಸಕದಿನಾ ದ್ವಿಜನ್ಮಸಭೆಯಂ ಪೊಱಮಟ್ಟೊಡೆ ಮಾಱ ದುಂದಮುಂ ಪಸದನದಂತೆ ಕಣ್ಗೆಸೆದು ತೋಱದುದಾ ಕದನತ್ರಿಣೇತ್ರನಾ

(ಹಂಸಶಾ. ೩-೩೦) : ಇನ್ನೆನ್ನಾಳ್ಗೆ ದೇಶದೊಳಿರದೆ ಪೋಱಮಟ್ಟು ಪೋಗೆಂದು ಜಡಿದು ನುಡಿದೊಡೆ (ರಕ್ಷಾಲ್ಪ. ೨-೯೪). ೬. ಬಿಡುಗಡೆ ಹೊಂದು ; ಪಾರಾಗು : ನಿಮ್ಮಡಿ ನೀವೆಮ್ಮನೀಯಪಾಯಸ್ಥಳದಿಂ ಪೋಱಮಡುವ ಪಾಯಮಂ ಮಾಡಿದಿರಪ್ಪೊಡೆ ನಿಮ್ಮ ಧರ್ಮದಿಂ ಸುಖಂಬಾಳ್ವೆವೆಂಬುದುಂ (ಹಂಸಶಾ. ೯೯-೯) ; ತಾಪದಲಿ ಸಂಸಾರಕೂಪದಲಿ ಬಿದ್ದವರು ಅಪತ್ತನಳಿದು ಪೋಱಮಡಲು ಗುರುಪದ ಸೋಪಾನವಯ್ಯ (ಶರಣ್ಣ. ೯೩). ಪೊಱರಡು : ೧. ನಿಲ್ಲದಲ್ಲಿಂದ ರಾಘವ ಪೊರಟು ಮುನಿಯೊಡನೆ . . . ತುರಿತದಿಂ ಮಿಥಿಲಾಪುರಿಗೆ (ಹಕು. ೨-೯) ; ಅಲ್ಲಿಂದ ಪೊರಟು . . . ಶುಕನಾಥ ಶತವಿಕಟರಾಲಯಂಗಳಂ ಶೋಧಿಸಿದನು (ಹಂಸಶಾ. ೫-೩-೫೨) ; ಕೆಳವರುಂ ಕೋಲೂರಿ ಪೊರ್ಪಟ್ಟರೇಂ ಪೆರ್ವೆ (ಶಾಸಿಅಕ. ೧೯೯-೩೨೬). ಪೊಱಮಡು : ೧. ಕಣ್ಣನಾರಾಯಣನ್ ತನ್ನ ಮನೆಯನ್ನಕನ್ನವಿಟ್ಟು ಪುಗುತನ್ನೊಡೆ ಅಱಿದು ಪೊರಮಟ್ಟು ಪೋತ(ಂ)ನ್ನು ಕದಿ ತಲೆಯನ್ನಟ್ಟಿ ನಾಲ್ವರಾನಿಱಿದೊನ್ (ಸೌಇಇ. IX–i, ೫-೬೦ ; ೬ನೆಯ ಶಶ) ; ರಣವಧೂ ವಲ್ಲಭಂ ವಿಜಯಂ ವಿಜಯಕೇದು ಪೊರಮಟ್ಟು (ಹಣ್ಣಂಗ. ೭೦-೧೯೯೪); ಪದಟಿನಿಂ ಪೊರಮಡಲ್ ಕಾಲೂರ ಕಣ್ಗಳಿಂ ಪುದಿದ ಬಳಿವಿಡಿದ ಮದುಮಗನ ಮೆರವಣಿಗೆ (ಶಾಸಿಅಕ. ೦೫೦-೩೨೯). ಪೊಱಯಿಂದು₁ : ೮. ಹೊರಕ್ಕೆ ಚಾಚು ; ಉಬ್ಬು : ಕುಚಗೊರಲಿಟಾದೆರ್ದೆ ಪೊಱಂಟ ಬೆನ್ ಬಾತ ಬಱಿದಂಗಿದ ಜಘನಂ (ಹಕೋಶ. ೨-೩೪). ಪೊಱಡು₁ : ೧. ಗಮಿಸಿದನು ಮುನಿಯೊಡನೆ ಹರುಷೋದ್ಗಮದಲಾತನ ಬೆಂಬಳಿಯಲಾ ಕ್ರಮದಿನಾ ಸೌಮಿತ್ರಿ ಸರಾಗದಿ ತ್ವರಿತದಿಂ ಪೊಱಟ[ಪಾಠಾಂ. ಕಳುಹಿಸಿಕೊಂಡ ನಾ ನೃಪನ] (ಹೂರಾ. ೦-೯-೪೨). ೬. ಭೂಕಾಂತ ಬಿಜ್ಜಳನೃಪಾಲಂ ಪುರವಿಹಾರಚಿತ್ತಂ ತನಗೆ ಪುಟ್ಟಲರಮನೆಯನೊಲವಿಂ ಪೊಱಡೆ (ಹಂಕ. ೦೦-೨). ಪೊಱವಂಡು : ೨. ಮುಳ್ಳಿಂ ಸಿವುರುಗಳಂ ನಟ್ಟಲ್ಲಿಯೆ ಪೊಱವಂಡದಿರ್ದು ಬಾತೊಡೆ ಮತ್ತಂ ಕಲ್ಲೊತ್ತಿಗರ್ಕದುಗ್ಗದ ಮಳ್ಳಿಸಿ ಯೊಲೆಗಲ್ಲ ಸೇಕಗೆಯ್ಯರ್ ಮಾಣ್ಗಂ (ಹೋಕಅಕ. ೯-೦೬೩). ಪೊಱಮಡು : ೨. ಒಡಲಿಂದಲಸು ಪೊಱಮಡುವವೊಲು ಪೊಱಮಟ್ಟನಲ್ಲಿಂದ (ಹಣ್ಣಶಾ. ೩೬-೨). ೬. ತಳೆದ ಮಣಿಭೂಷಣಾಗಳೆಲ್ಲವ ಕಳಚಿ ಬಿಸುಟನು ಗುರುವಿ ವಂಕ್ಯರಿಗೆ ನೆನೆವುಖಿ ಸಹಿತೆಱಿಗಿ ಪೊ[ಪಾಠಾಂ. ಹೊ]ಱಮಟ್ಟನು ನಿಜಾಲಯವ (ಹಳಕ. ೯-೯೦). ಹೊರಡು₁ : ೧. ಹಿಂದೆ ಆನವೇರಿ ಹನುಮಂತದೇವರು ಹೊರಟು (ಎಳ. VII, ಶಿಮೊ. ೦೦೭-೨೪ ; 1576 ?) ; ಗರ್ವಕ್ಕೆ ತಕ್ಕ ಫಲವನ್ನು ಉಣ್ಣಲು ಸಿದ್ಧನಾಗು. ಹೊಗಡು (ಅಂಶ. ೬). ೨. ಒಳಗಿನಿಂದ ಹೊಗೆ ಹೊರಡುತ್ತಿದೆ, ಜನ ವಾಸವಾಗಿಲ್ಲ ಎನ್ನುತ್ತೀಯಲ್ಲ (ಹೂಂ). ೪. ಶಕ್ತಿಯಿಲ್ಲದ ಶಬ್ದ ಈತನ ಬಾಯಿಂದ ಹೊರಡವು (ಹಾಹಿಪ. ೦೦೦). ೫. ಬಿತ್ತಿರುವ ಕಾಳಿನ ಮೊಳಕೆ ಹೊರಡಲು ಒಂದು ವಾರ ಬೇಕಾಗುತ್ತದೆ (ಹೂಂ). ೯. (ಕಾರ್ಯ ಮಾಡಲು) ತೊಡಗು,— ಪ್ರಾರಂಭಿಸು : ಮೊದಲು ಹೊರಟಿದ್ದು ಕನ್ನಡಕಾವ್ಯದಲ್ಲಿ ಸೌಂದರ್ಯ ಸಮೀಕ್ಷೆಗಾಗಿ (ಸೌಂದಕ. I, ಮೊದಲ ಮಾತು). ಹೊರಮಡು : ೧. ಪಡಿವೇಳದಾ ಕಿರಿಯನಣ್ಣನ ಹಿಂದೆ ಹೊರಮಟ್ಟನೆಂತಾದೊಡಂ ಕೋಸಲದ ರಾಣಿಯನರಸಲೆಂದು (ಕ್ರೀಹಾಮ. ೫೩೬-೬೪೪). ಹೊರವಡು : ೧. ರಾಮದೇವನು ಬೇಟೆಗೆ ಹೊರವಟ್ಟು ಹಿರಿಯ ಹನ್ದಿಗೆ . . . ತಾಗಿ ಕೊನ್ದು (ಎಳ. IX, ಬೆಂಗಳೂ. ೩೨-೩ ; ಹು. 1080). ಹೊರಹೊಂದು : ೧. ಆ ದೂತರು ತಮ್ಮೊಡೆಯನಿಗೆ ಅಭಿವಂದನೆಯಂಗೈದು ಹಸಾದವೆಂದು ಹೊರ ಹೊಂಟು (ಹಹೋರ. ೩೬). ಹೊಱಯಿಂದು : ೨. ಕೊಳದಿಂ ಹೊಱಂಟು ಪುರ್ವರೆಯಾಣ್ಮನುತ್ತಮ ಷಡಕ್ಷರಿಯ ಮಂತ್ರಮಂ ಸ್ಮರಿಸುತ್ತ . . . ಮಹಾಂಧಳಿರ ಮಂಟಪದಲಿ ಕುಳಿತು (ಶೀಶಪು. ೬-೩೬). ಹೊಱಡು₁ : ೧. ಎಂತು ನಾವಿಲ್ಲಿಂದ ಪೊಱಡುವ ಯತ್ನವೆಂದೊಂತದ ಯೋಚನೆಗೈದು (ಕಂಶಪು. ೫-೦೩)

೨. ಮಿಕ್ಕ ಕೆಂಗಱಿಗೋಲ್ಗಳೊಡಲ ಹೊಕ್ಕ ಮಾತ್ರದಿ ಹೊಱಟಿದೆಯಲ್ಲಿ ರಕುತವ ಮುಕ್ಕುಳಿಸಿತು (ಜೋಹಕ. ೩೫-೩೭). ೪. ಪುರುಷರ ನುಡಿ ಹೊಱಡದ ಮುನ್ನ ಸ್ತ್ರೀಯರು ಹರಿಸದೆ ಮೇಲಿಕ್ಕುವರು (ಜೋಹಕ. ೦೦-೦೫). ೮. ಕುಸಿದ ನಡುವಿನ ಹೊಱಟ ಬೆನ್ನಿನ ಬೀಸುಗೈಗಳ ಡೊಂಕುಗಾಲುಗಳ (ಬಸಪು. ೨೦-೦೦). ಹೊಱವಂಡು : ೧. ಹೃದಯ ದೊಳ್ಹನ್ನಕ್ಕರ ಲಿಂಗಪ್ರಾಣಿ ಹೃದಯದಿಂದ ಹೊಱಯಿಂಕೆ ಹೊಱವಂಟರೆ ಭವಿ (ಅಪಶ. ೦೦-೦೬); ಫಲುಗುಣನ ಶಕ್ತಿಗಡುವನು ಹೊಯ್ ಹೊಯ್ಯೆನುತ ಹೊಱವಂಟರತಿರಥರು (ಕುಮ್ಮಾರ್ವ್ಯಾ. ೦೦-೦೬) ; ಮಱಿದು ಮುಱಗಿದ ಬಾಲಕಿಯ ಬಿಟ್ಟಡವಿಯಲಿ ಹೊಱವಂಟನಾ ವನವ (ಶಕಶ. ೬-೦). ೪. ಸಿಕ್ಕಿದಳಿ ಹೊಱವಂಟವಟ್ಟಂಗಳ ಬಸುಱೊಳಿರ್ದು (ಬಶಪು. ೦೨-೯೬). ಹೊಱವಡು : ೧. ಹೊಸತಿಲ ಪೂಜಿಸಿ ಹೊಱವ[ಪಾಠಾಂ. ಹೊಡವಂ, ಹೊರವಂ]ಟ್ಟು ಹೋದ ಒಕ್ಕಲಿತಿಯಂತಾಯಿತ್ತೆನ್ನ ಭಕ್ತಿ (ಬಸವ. ೯೨೨) ; ಕೋಟಿರಥಗಳು ರಣಕೆ ಹೊಱವಡಲು (ಕೌಶಿಶ. ೨೦-೬) ; ವಿಲಸಿತರತ್ನ ಭೂಷಿತನಾಗಿ ಹೊಱವಟ್ಟ ಕಲಿಗಳ ದೇವ ಕಾಳಗಕೆ (ಪೂಲಹಕ. ೯೦-೯). ೪. ಜೀವಿತ × × × ಮಾಱಿ ಹೊಱವಟ್ಟು ಹೋಹ ಸುಂಕ ಸಹಿತ ಧಾರೆಯನೆಱಿದು ಬಿಟ್ಟರು (ಸೌಇಇ. IX–i, ೦೯೫-೯೫ ; 1079) ; ಜನವು ಹೊಱವಡುತಿರಲು ಪದ್ಮಾವತಿ ನಿರೀಕ್ಷಿಸುತಿರ್ದಳಾ ವಿಟನ (ಜೀಜಂಶ. ೩-೨೬). ೬. ಹಿಂದೆ ಪರಸತಿಗಾಗಿ ಹಿಡಿವಡೆದಂದು ಭಂಗಿಸುವಲ್ಲಿ ದೃಗುಂಜಲಬಿಂದು ಪೊಂದುಂ ಹೊಱವಡದು (ಜಶಪು. ೦೯-೩೩).

[ದೇ. ॥ ತಮಿ. ಪುಱಪ್ಪಟು; ಮಲ. ಪುಱಪ್ಪೆಡು]

**ಪೋಱಮದಿಲ್** (ನಾ). ಹೊರಗೋಡೆ : ಭೂಗಧಿಪರ ಗೃಹಗಳ ಪೋಱಮದಿ ಲಂಗಣದ ಮರದ ಕೊನೆಯ ಮೇಗೆ ... ನೋಡಿದರಾ ಪೂಗಣಗೇಯೆಸಿವ ಕುಮಾರನನು (ಜಹುಕಾ. ೦೦-೫೦). [ಪೋಱ (< ಪೋಱಗು)+ಮದಿಲ್]

**ಪೋಱಮಾಱು₁** (ಕ್ರಿ). ಓಡಿ ಹೋಗು ; ಹಿಮ್ಮೆಟ್ಟು ; ಪಲಾಯನ ಮಾಡು : "ಪೋಱಮಾಱು—ಪರಾಯನೇ" (ಶಮಂ) ; ನಗೆ ಪಗೆವಾಡಿ ಗೋಗ್ರಹಣದೊಳ್ ಪೋಱಮಾಱಿದ ಬನ್ನಮೊಂದು ನೆಟ್ಟಗೆ ಮನವಂ ಪಳಂಚಲೆಯೆ (ಹಂಶಾ. ೦೦-೦೦೦) ; ಜಯಂತಕುಮಾರಮುಖ್ಯರೆಲ್ಲಂದು . . . ಈದೆ ಸಸ್ಪಂದಿತಚಿತ್ತನಾಗಿ ಪೋಱಮಾಱಿದನಾರೆಯದುಗ್ರಸೈನಿಕಂ (ಜೀಜಂಶ. ೦೨-೨೦೫); ಪೋಱಮಾಱದೆ ನಿಂದಿಱಿದು ಸತ್ತೊಡಾತನೆ ಬರ್ದಂ (ಹಂಚಂ. ೦೨-೯೦).

[ದೇ. ॥ ತಮಿ. ಪುಱಮಾಱು = ಬಲವನ್ನು ಕಳೆದುಕೊಳ್ಳು]

**ಪೋಱಮಾಱು₂**, ಪೊರವಾರ್, ಪೊರವಾರ, ಪೊರವಾರು, ಪೊಱವಾಱ್, ಪೊಱವಾಱು, ಹೊಱವಾಱ್ (ನಾ). ೧. ಬೆನ್ನು ತೋರಿಸುವುದು ; ಸೋತು ಓಡುವುದು ; ಪಲಾಯನ : "ಪೊಱ ಮಾಱೆಂದು ಬೆನ್ನೀವುದಕ್ಕೆ ಬಡದಿರ್ಪ ನಾಮಂ" (ಕಲ್ಯಕೈ. ೬೮). ೨. ನಿತಂಬ; ಜಘನ. ೧. ೨ : "ಪೊಱ(ರ)ಮಾಱು[ಪಾಠಾಂ. ಱ್]ಯೆಂಬೀ (ಎರಡು) ಶಬ್ದಂ=ಬೆಂಗೊಡುವಲ್ಲಿಯುಂ, ಸ್ತ್ರೀಯರ ಪರಭಾಗದಲ್ಲಿಯುಂ" (ಹಶಬ. ಶು. ಶು) ; ಆ ನೃಪೋತ್ತಮನೊಳ್ ರಾಗೋತ್ಕಂಠವೆಂಬುದು ತಳಂಗಳೊಳ್ [ವೃ]ತಿಯೆಂಬುದೂರುಸ್ತಂಭದೊಳ್ ಪೊಱಮಾಱೆಂಬುದು ನಿತಂಬಸ್ಥಳದೊಳ್ . . . ಕಾಣಲ್ಕಕ್ಕುಮದಲ್ಲದೆ ಪೆಱವುಳ[ಯ]ಱದು ಪಾತ್ರವಿಲ್ಲ (ಎರಣಮಾ. ೯-೨೪ ವ). ಪೊರವಾರ್ : ೨. ಚಲನಾಲಸೆಯರ್ ಪೊರವಾರ್ಗಳಿನೀ ಕಾಮಿನಿಯರಾರ ಸೋಲಿಸದಿರ್ಪರ್ (ಧನ್ಯಾಕೋ. ೨೯೦); ಪೊರವಾರ್ಗಳಂ ಮಿಡಿವ ಹೂಮುಡಿಯ ಪಿಡಿಯಲೆನೆ ಸೆರಗು ದಡದಡಿಸ:ಶಿರೆ ಚಲ್ವೆಯರ್ ಮಾರೆದು (ಶಾಸಿಅಕ. ೦೨೪-೨೬೦). ಪೊರವಾರ : ೨. ಸೈಕತರಾಸಿಯಂತೆಸೆವ ಪೊರವಾರದ ಪೊಂಬಾಳೆಗಂಬದಂತೆ ತೋರ್ಪ ಬಟ್ಟದೊಡೆಯ . . . ಕೆಂದಾವರೆಗಳಂತೆ ವಿರಾಜಿಪ ಪಾಣಿತಳಂಗಳಿಂ

ಶೋಭಿಸೆ (ಹಾಲಕ್ಕ. ೦-೩-೨೬ ವ); ನೀಟವಾದ ಕಣ್ಣುಗಳುಳ್ಳವಳಾಗಿ ಒಳ್ಳೇ ಪೊರವಾರಗಳುಳ್ಳವಳಾಗಿ . . . ದ್ರೌಪದಿಯು ಹುಟ್ಟಿದಳು (ಕೃಪಾಜ. ೦೦೨). ಪೊರವಾರು : ೨. ಹುಬ್ಬುಲಿ, ಕಿರುಬುಲಿ, ಸುರುಸುರಿಗೆ ಈ ಸೊಪ್ಪುಗಳ ರಸ . . . ಪೊರವಾರಿಗೂ ಹಿಮ್ಮಡಿಪರ್ಯಂತವೂ ತೊಡಿಯಲು ಮೂರುದಿನಕ್ಕೆ ಶೀತಜ್ವರಂ ಗುಣವಹುಕ್ಕುಂ (ಸಕವೈ. ೬೦); ಸೋಮರ್ಮಡಿ ಕುಚದ್ವಂದ್ವಮೆಸವ ಪೊರವಾರುಗಳ ಪೆರ್ಮೆಗೆ ಕೊರಲ್ ಮಧ್ಯಮೂರುಗಳ್ ದಡದಡಿಸೆ (ಕುಣ್ಯಂಗ. ೨-೦೬). ಪೊಱಮಾಱ್ : ೨. ಕಡೆದು ಮಾಡಿದುವೆನಿಪ ಪೊಱಮಾಱ ತಿಣ್ಪಿನಿಂ (ಅಶಪು. ೯-೬ ೮೫೪); ನೇಸಱು, ಎಱ್ಱಱು, ಪೊಱಮಾಱು (ತಮಿಳ. ೯೬ ಪ್ರರೂ); ಚೆಲ್ವಿನೊಪ್ಪುವ ಬಾಸಿಗೆ ಹಿಂದಾದವೊದರಿರುವಂತೆಸೆವ ಪೊಱಮಾರ್ಗಳಿಂದೊಪ್ಪುವಾ ಸತಿಯರಾನಂದದಿಂದಲೆಯ್ದಿಂದರು (ಶಾಪಚಂ. ೯-೨೨). ಪೊಱಮಾಱು : ೨. ನಿತಂಬ ಮುಸುಕಿದ ವಿಪುಳಪೊಱಮಾಱು ಮುಂದಗೆ ಮುಸುಕಿದ ಹದಂ (ಹಕಚಾ. ೯-೩೯); ಬಿಗಿದ ಮೊಲೆಗಳ ಮೆಱೆವ ಪೊಱಮಾಱುಗಳ ಬಿಂಬಾಧರದ . . . ಪದ್ಮಿನಿಯರುಗಳೆಸೆದರು ರಾಜಸಭೆಯೊಳಗೆ (ಕುವ್ಯಾಲಾ. ೬೦೩. ೬-೪೬); ಕೊಡಪೊಱಮಾಱ ಭರಕೆ ಪೊಂಬಾಳೆದೊಡೆ ದಡದಡಿಸೆ (ಕೊಹು. ೦೯-೨೬). ಹೊಱಮಾಱ್ : ೨. ಹೊಱಮಾಱಲಿ ಇದ್ದ ಕುಣಿಕೆಗಳೆರಡು ಕೊಕ್ಕಂದರ (ಚಾಣಾ. ೬).

[ < ಪೊಱಮಾಱು$_1$./ತಮಿ. ಪುಱವುರು = ದೇಹದ ಒಂದು ಅಂಗ ]

**ಪೊಱಮಾಱ್ಕು**, ಹೊರಮಾರು, ಹೊರವಾಱು, ಹೊಱವಾಱು (ನಾ). ೧. ಹೊರಗಿನ ಮಾರಾಟ ; ಹೊರಗೆ ಮಾರುವಿಕೆ : ಎಳ ಅಂಚೆ, ಪೊಱಮಾಱು, ಪೊಱಅಡಿ (ಶಾಸಾಶೂ. ೦೯೯ ಉದಾ). ಹೊರಮಾರು : ೧. ಒಳಮಾರು (ಆಮದು) ಹೊರಮಾರು (ರಫ್ತು) ಸರಕುಗಳ ಮೇಲೂ ತೆರಿಗೆ ಹಾಕಿತು (ಇಕ್ಕ್ಯಂಸಂ. ೯೩). ಹೊರವಾಱು : ೨. ಹೊರನಾಡಿನಲ್ಲಿ ಮಾರಾಟವಾಗುವ ಸರಕುಗಳ ಮೇಲೆ ಹಾಕುವ ಸುಂಕ : ಮಗ್ಗ ಮುದ್ರೆ ಒಳವಾಱು ಹೊರವಾಱು ಮದುವೆ . . . ಮುಂತಾದ ಏನುಳ್ಳ ಸುಂಕ ತಳವಾರಿಕೆಗೆ ಸಲುವ ಅಂಬಲಿ (ಎಕ. VII, ಶಿಕಮೊ. ೬೦-೩೦; 1431); ಸುಂಕ ಪೊಳವಾಱು ಹೊರವಾಱು ಕಂಮಾಱದೆಱೆ . . . ಮಾದಱಿಕೆ ಮುಂತಾದ ಏನುಳ್ಳ ಸಕಲ ಸ್ವಾಮ್ಯವನು ಆಗುಮಡಿ (ಕ್ಕುಕಂ. ೦೯೩೬, ೭೪-೩ ; 1507). ಹೊಱವಾಱು : ೨. ಹೊಱವಾಱು ಉಭಯಮಾರ್ಗ ಒಳವಾಱು ಸ್ಥಲ ಕುಳವಿಸಂಚವಿಲ್ಲಾ ಎಂದು ಕೊಟ್ಟ ಚೀಟು ನಿಮ್ಮ ಕೈಹಾಳೆಯಲ್ಲಿ ಅದೆ (ಸುಂಕದಿಂ. ೪. ೬೯೯-೩) ; ಒಳವಾಱು ಹೊಱವಾಱು ತಳಸಾರಿಕೆ ಆಲೆದೆಱೆ (ಎಕ. VIII, ತೀರ್ಥಹ. ೦೩೦-೯೯ ; 1404).

'ಒಳವಾಱು' ಪರಾ. [ಪೊಱ ( < ಪೊಱಗು) + ಮಾಱು$_1$]

**ಪೊಱಮಿಂಚು**, ಹೊಱಮಿಂಚು (ನಾ). ೧. ಹೊರಗಿನ ಬೆಳಕು,– ಪ್ರಕಾಶ. ೨. ಹೊರಗಿನ ಥಳುಕು,–ಆಕರ್ಷಣೆ,–ಸೌಂದರ್ಯ. ೩. (ಅಲಂ) ಬೂಟಾಟಿಕೆ : 'ಪೊಱಮಿಂಚುಗೈ' ಪರಾ. ಹೊಱಮಿಂಚು : ೨. ಜವ್ವನದ ಹೊಱಮಿಂಚಿನಲ್ಲಿ ನಿಮ್ಮ ಕಣ್ಣಗೆ ತೋಱುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯ (ಮಹಾದೇ. ೬. ೬೦-೦೬೩) ; ಹೊಱಮಿಂಚಿ ಹೊಲೆವೆಣ್ಗೆ ಸೋಲ್ವ ತೆಱದಿಂ (ರಕ್ಷಾಶ. ೬೬). [ಪೊಱ ( < ಪೊಱಗು) + ಮಿಂಚು$_1$]

**ಪೊಱಮಿಂಚುಗೈ** (ಕ್ರಿ). ೧. ಹೊರಗಡೆ ಬೆಳಕನ್ನು ತೋರಿಸು ; ಹೊರಗೆ ಪ್ರಕಾಶವನ್ನುಂಟುಮಾಡು. ೨. (ಅಲಂ) ಬೂಟಾಟಿಕೆ ಮಾಡು : ಪೊಱಮಿಂಚುಗೈವನಂ ಬಱುವಾತುಗಾಱನಂ ಕಱುಬವಂ . . . ತೊಱಿಯದುದೆಗ್ಗತನವಲ್ತೆ (ರಾಜಶೇ. ೦೦-೬೨).

[ಪೊಱಮಿಂಚು + ಕೆಯ್$_1$]

**ಪೊಱಮುಯ್ಯು** (ನಾ). ಭುಜದ ಹೊರಭಾಗ ; ಹೊರಭುಜ : ತಳ್ತಪೆರ್ವೊಳೆ ಪೊಱಮುಯ್ಯು ಬೆನ್ನಿನಿತುಮೊರ್ವೋಯ ನಾ[ಂದಿ]ನಮುಱ್ಪೊಣ್ಮೆ ಕಣ್ಮಲರ್ಗಳಿನೆಚ್ಚು ಪಾಯ್ದುವರಲಂಬುಗಳಂತೆ ವಿರೋಚನಾಂಬುಗಳ್ (ಶಂಪು. ೯-೦೦೬) ; ಬಳೆದು ಪೊಱಮುಯ್ಯುವರೆಗಂ ತಳೆದು ಕನತ್ಕನಕಪೀಂಗರುಚಿಯುಂ (ಕಾದಂಪು. ೨೦೯) ; ಪೊಱಮುಯ್ಯಂ ತಾಗೆ ಬಿಲ್ಲಂ ತೆಗೆದೆಚ್ಚಿದು ಸರೋಜಾಕ್ಷನೆಚ್ಚಗ್ನಿಬಾಣಂ . . . ಉರಿಪಿದತ್ತಾ ಪುರೀಚಕ್ರಮಂ (ಜಗೂ. ೦೩-೦೦೬). 'ಒಳಮುಯ್ಯು' ಪರಾ.

[ಪೊಱ ( < ಪೊಱಗು) + ಮುಯ್ಯು$_2$ ( < ಮುಯ್ಯು)]

**ಪೊಱಮೆಯ್**, ಹೊರಮೈ, ಹೊಱಮೈ (ನಾ). ೧. ಹೊರಭಾಗ ; ಹೊರಗಡೆ : ಪೊಱಮುಯ್ಯ ವೇಷದಿರವೇತೆಱದೊಳಮೇನೊ (ಶಪ. ೨-೬೪). ಹೊರಮೈ : ೧. ಭೂಮಿಯ ಹೊರಮೈಯ ಬಿರುಕಲುಗಳಲ್ಲಿ ನೀರು ಸೇರಿಕೊಳ್ಳುವುದಷ್ಟೆ (ಬಾಂಶ್ರ. I, ೦೯೩). ೨. ಪುಸ್ತಕ ಮೊಂತಾದುವುಗಳ ಮೇಲುಹೊದಿಕೆ ; ರಟ್ಟು : ಪುಸ್ತಕದ ಹೊರಮೈ ವರ್ಣರಹಿತವಾಗಿರುವುದರಿಂದ, ಗ್ರಂಥದ ಸರಳತೆಯು ಎತ್ತಿ ತೋರಿಸಲ್ಪಡುವುದು (ರೂಪಸಂ. ೦೯). ಹೊಱಮೈ : ೧. ಅದಱ ಯಿಮ್ಮಡಿ ಪ್ಲಕ್ಷದ್ವೀಪವು ಯದಱ ಹೊಱಮೈ ಸ್ವಾದುಜಲವು (ಸಂಕಷ. ೦೦-೯). 'ಒಳಮೆಯ್' ಪರಾ. [ಪೊಱ ( < ಪೊಱಗು) + ಮೆಯ್$_2$]

**ಪೊಱಯಿಂಕೆ**, ಪೊರಯಿಂಕೆ, ಹೊರಯಿಂಕೆ, ಹೊರಯಿಕೆ, ಹೊಱಯಿಂಕೆ, ಹೊಱಯಿಕೆ (ಅ). ಹೊರಗಡೆಗೆ ; ಹೊರಕ್ಕೆ : ಕಱುವಿನಡಗಂ ಕುದಿಸಿ ತಿಂದುಳಿದ ದೇಹಮಂ ಪೊರೆಯಿಕ್ಕೆ [ಪೊಱಯಿಂಕೆ] ಬಿಸುಟು (ರಾಚಶ. ೦೦-೩೬). ಪೊರಯಿಂಕೆ : ಈಕೆ ಮುಖಮಜ್ಜನಗೈದು ಭುಂಜಿಸಿ ಪೊರಯಿಂಕೆ ಬರುತಿರ್ದಳು (ಪಾಂಚಕ. ೯೦-೦೦). ಹೊರಯಿಂಕೆ : ಶಿರಃಪೋಲಾನಿ = ತಲೆಯಂ ಕಿವಿಯ ಕೆಳಗಣ ಗಲ್ಲದ ಕೀಲಂ, ಧಾರಯಿತ್ವಾ = ಹಿಡಿದು, ವಿನಿರ್ಹರೇತ್ = ಹೊರಯಿಂಕೆ ಎಳೆಯಬೇಕು (ಚಾಚಡೀ. ೨-೨-೩೬ ವ). ಹೊರಯಿಕೆ : ಮನೆಯ ಬದಱಗಳನೊಂದೊಂದ ಹೊರಯು[ಯಿಂ]ಕೆ ತೆಗೆಯೆ ಮನೆಯೊಳಗೆ ಬಯಲೊಂದೆ ಕಡದೆ ನಿಲುವಂತೆ (ಕೃಕಶ. ೩-೦೬-೯). ಹೊಱಯಿಂಕೆ: ಹೃದಯದೊಳಗಿಹನ್ನಕ್ಕರ ಲಿಂಗಪ್ರಾಣ ಹೃದಯದಿಂದ ಹೊಱಯಿಂಕೆ ಹೊಱವಂಟರೆ ಭವಿ (ಆದಪ. ೦೦-೦೩); ಪಟ್ಟಿಗೆಯ ನೀಕ್ಷಿಸುತಂದು ಬೀಸಾಟನೆತ್ತಿ ಹೊಱಯಿಂಕೆ ಕೋಪಿಸುತ್ತಂದು (ಶಿಕುಪ. ದೀ. ೦೩-೬); ಭವಿ ನಮ್ಮ ಮನೆಗೇಕೆ ಬಂದೆ ತೊಲತೊಲಗೆಂದು . . . ಮಂದಿ ಮಕ್ಕಳುಗಳುಂ ಹೊಱಯಿಂಕೆ ನೂಕಲು (ಗುರುಚಾ. ೯-೪೬). ಹೊಱಯಿಕೆ : ತಟ್ಟುಮುಟ್ಟು ಹೊಱಯಿಕೆ ಬಿಸಾಡೆಯುಮ್ಮ (ಶಿಪಗೀ. ೦೩೯-೭೯೯ ಪ); ಆ ತಟ್ಟೆಯಂ ದೇಗುಲದ ಹೊಱಯಿಕೆ ಹಾಯಿಕಿದಂ (ಶಕತ್ರು. ೩೩-೦೬); ಕಡು ಸುಖದ ಮಚ್ಚಿದ್ದ ಮನ ಹೊಱವಡಿಸಿ ಹೊಱಯಿಕೆ ಧೈರ್ಯದಲಿ ಸುಖಗಡಲೆನಿಪ ಶ್ರೀಕೃಷ್ಣಚರಣಾಬ್ಜದಲಿ ಮನವಿರಿಸಿ ಮಡಿದನು (ಶಿಪಗ. ೦೦-೩೩-೨೬). 'ಒಳಯಿಂಕೆ' ಪರಾ. [ಪೊಱ ( < ಪೊಱಗು) + ಇಂಕೆ$_1$]

**ಪೊಱವಂದು** 'ಪೊಱಮಡು' ನೋ.

**ಪೊಱವಡು** 'ಪೊಱಮಡು' ನೋ.

**ಪೊಱವರ್**, ಹೊರಬರು (ಕ್ರಿ). ೧. ಹೊರಕ್ಕೆ ಬರು : ಪೊಱವಂದು ನಿಂದು ಕೆಳೆಯರ್ಕಳೊಂದಿ ತಾಂ ಕಿಱುಮಾಡವೇಱ್ (ಶಕಪ. ೬-೦೯೩). ಹೊರಬರು; ೧. ಅವರಾಗಿ ಹೋಗೆಂದು ಹೇಳುವುದಕ್ಕಿಂತ ತಾನಾಗಿಯೇ ಹೊರಬರುವುದು ಮರ್ಯಾದೆಯೆಂದೆಣಿಸಿ . . . ತನ್ನ ಲೆಕ್ಕಪತ್ರುಗಳನ್ನು ತೀರಿಸಿಕೊಂಡು ಹೊರಬಂದನು (ಮೂರಾಪ. ೦೯೬). ೨. ಪ್ರಕಟವಾಗು ; ಪ್ರಕಾಶಗೊಳ್ಳು : ಪತ್ರಪುಸ್ತಕಮಾಲೆಯಲ್ಲಿ ಹೊರಬರುತ್ತಿರುವ ಮತ್ತೊಂದು ಪುಸ್ತಕ ಈ ಗೃಹವಿಜ್ಞಾನ (ಗೃಹವಿ. IV. ಮುಖ್ಯಪು).

[ಪೊಱ ( < ಪೊಱಗು) + ಬರ್ ( < ವರ್)]

**ಪೊಱವಲಯ**, ಪೊಱವಳಯ, ಹೊರವಲಯ, ಹೊರವಳಯ,

**ಹೊಱವಳೆಯ** (ನಾ). ಹೊರಗಿನ ಪ್ರದೇಶ; ಹೊರಭಾಗ; **ಹೊರಗಡೆ**: ಪೊಳಲ ಪೊಱವಲಯದುದಲಿ ನಂದನಲಕ್ಷ್ಮಿ ಶೋಭಿಪಳು (ಸಾಳ್ವಭಾ. ೨-೨). **ಪೊಱವಳೆಯ**: ಇತ್ತ ವಿಶಾಖಭೂತಿಯರಸುಗೆಯ್ಯುತ್ತಿರೆ ಪೊಲಲ ಪೊಱವಳೆಯದೊಳ್ [ಪಾಠಾಂ. ಪೊಱಪೊಱಲೊಳ್] . . . ವಿಶ್ವನಂದಿ ಮಾಡಿಸಿದನಂದೊಂದು ನಂದನಮಂ (ಶಾಂತಿಪು. ೬-೩೨ ವ); ಇಂತೆಸೆವ ಪಟ್ಟಣದ ಪೊಱವಳೆಯದೊಳ್ ಲತಾಸಂತತಿಗಳಿಂ ಕುಸುಮಶೋಭೆಯಿಂ ತರುಕುಲದ ತಿಂತಿಣಿಗಳಿಂ ಫಲಾನೀಕದಿಂ . . . ಆ ವನು ಕಣ್ಗೆಸೆದುದು (ಕಬ್ಬಿ. ೧೦-೨೦); ಅರ್ಜುನನ ಕಟಕವಿರ್ದುದು ಮಹಾಂಭೋನಿಧಿಯ ಮುಸಕದಿಂ ಪೊಳಲ ಪೊಱವಳೆಯದುದ್ಯಾನವೀಥಿಗಳೊಳು (ಕೃಜಾಭಾ. ೦೬-೨೨). **ಹೊರವಲಯ**: ನಗರದ ಹೊರವಲಯ (Suburb. ಇಂಕೋ). **ಹೊರವಳೆಯ**: ವೆಂಕಮ್ಮನ ಸಂಸಾರ ಸಂಕಾಪುರದ ಹೊರವಳೆಯದ ಮಾರುತೀದೇವಾಲಯದಲ್ಲಿ ಬಹುಕಾಲ ನಡೆಯಿತು! (ಜಗದಾ. ೦೪೭); ಅವರ ಎದುರುಗಡೆ, ಕಟ್ಟೆಗೆಯ ಕಟಕಟೆಯಿಂದ ಆವೃತವಾದ ಹೊರವಳೆಯದ ಒಂದು ಮೂಲೆಯಲ್ಲಿ ಹೈಮವತಿ (ಎಕೆ. ೦೨). **ಹೊಱವಳೆಯ**: ಪುರದ ಹೊಱವಳೆಯದೊಳು ಧರಣಿಪಂ ಪೋಗುತಂ ಸುರೆಯ ಹರವಿಯ ಮೇಲೆ ಭಸಿತವಿರೆ ಕಂಡು (೦೬೩೦. ೩೨-೩೪); ನಿಲಿಸಿದರು ಕೈದುಗಳ ಕರಿ ಸಂಕುಲವ . . . ಊರ ಹೊಱವಳೆಯದಲಿ (ಕೊರವ. ೬-೦೩-೩).

[ಪೊಱ (<ಪೊಱಗು) + ವಲಯ]

**ಪೊಱವಳೆಯ** 'ಪೊಱವಲಯ' ನೋ.

**ಪೊಱವಾಯ್, ಪೊಱಪಾಯ್, ಹೊರಹಾಯು** (ಕ್ರಿ). ೧. ಹೊರಕೆ ಚಾಚು; ಹೊರಬರು: ಕಣ್ಗಳ್ ಪೊಱವಾಯ್ದು ಕೋಪಶಿಖಿ ಪೊಣ್ಮೆ ತ್ತಂದಿನಂ ಕೆಂಕವಾದುವು (ಹರಿವಂ. ೯-೧೬); ಬಿಟ್ಟ ಬಾಯಕ್ಕುಳಿಸಿರ್ದ ಪೊಟ್ಟೆ ಪೊಱವಾಯ್ದಿರ್ದೆಯರ್ವಿಪ ಪುರ್ವು (ಪರಶು. ೦೫-೩೬); ಮರಣವೇ ಶರಣೆನುತ್ತೊಂದೇ ಕಠಾರಿಯಂ ಚರಿತದಿಂದೆತ್ತಿದಂ ನಿಷ್ಕೆಗುಪಕಾರಿಯಂ ಇಱಿದುಕೊಂಡಂ ಕರುಳು ಪೊಱವಾಯಲು [ಪಾಠಾಂ. ಮಾಡಲು] (ಕಲಿ. ಕೀ. ೪೦೨-೦೩). **ಪೊಱಪಾಯ್**: ೧. ಕಣ್ಗುಬ್ಬೆಯು ಗುಳ್ಳೆಯಂತೆ ಪೊಱಪಾಯ್ವನ್ನವಮಟ್ಟೆಳೆವೊಯ್ದೊಡೊರ್ವನಂ (ಸುಕುಮಾ. ೭-೬); ಗಣ್ಪಲ ನೆಱೆಯ ಕಣ್ಪೊಱಪಾಯ್ವನವೊತ್ತಿ ಮುತ್ತಿ ಬಾಯ್ಬಿಡಿಸದೆ ಮಾಣ್ಬನೆ ಸಮರದೊಳ್ಕಲಿ ಬಿಜ್ಜಲದೇವಭೂಭುಜಂ (ಎಕ. XI, ದಾವಣ. ೩೩-೨೭; ಕು. 1160). ೨. ಹೊರಗೆ ಹರಡು,–ವ್ಯಾಪಿಸು: ತನ್ನ ಹೀಗುಂಹಾ ವಿವಹದಿನುಣ್ಮೆ ಪೊಣ್ಮೆ ಪೊಱಪಾಯ್ದಿರದಾಗಳೆ ನೋಡಿ ನೋಡಿ (ಕುಸುಮಾ. ೦-೦೬). **ಹೊರಹಾಯು**: ೩. ಹಾದುಹೋಗು: ಭೂಭಾಗದ ಮೇಲೆ, ಬಂಗಾಳಾ, ಅಸ್ಸಾಂ, ಮಣಿಪುರ ಮಾರ್ಗವಾಗಿ ಹೊರಹಾಯುವ ಕಾಲು ದಾರಿಗಳು ಅನೇಕ ಇದ್ದವೆ (ಭಾರದ. ೩೩೮).

[ಪೊಱ (<ಪೊಱಗು) + ಪಾಯ್$_1$]

**ಪೊಱವಾಱ್** 'ಪೊಱಮಾಱ್ಱು' ನೋ.

**ಪೊಱವಾಱು** 'ಪೊಱಮಾಱ್ಱು' ನೋ.

**ಪೊಱವೀಡು, ಪೊಱಬೀಡು, ಹೊಱಬೀಡು** (ನಾ). ಪಟ್ಟಣದ ಹೊರಗಡೆ ಹೂಡುವ ಬಿಡಾರ, –ಶಿಬಿರ, –ಠಾಣ್ಯ: ಅತಿಮನೋಹರವಾದ ವನಿವಹಿಯ ಭವನನಿವೇಶದಿಂದಮುಂದಂಬಡೆದ ಪೊಱವೀಡಂ ಸೋಮಾನ್ವಯ ಪ್ರದೀಪಂ ಪುಗುವಾಗಳ್ (ಶಾಂತಿಪು. ೦೦-೦೪೭ ವ); ಗೊಂದವಾಡಿಯ ಪೊಱವೀಡಿನಲ್ ಸುಖದಿಂ ರಾಜ್ಯಂಗೆಯ್ಯುತ್ತಿರೆ (ಎಕ. IV. ೨೦೯-೭; 1072): ಪೊಱವೀಡ ಮಂದಿ ಇರ್ದೆಡೆಗಳೊಳೆ ಬಿಟ್ಟಿನ್ (ಅಕ್ಕಕ್ಕಾ. ೩-೪೩). **ಪೊಱ ಬೀಡು**: ಅಂಧಕಾಸುರಂ ಪೊಱಮಟ್ಟು ಪೊಱಬೀಡನುಱೆ ಬಿಟ್ಟನು (ಕಿಂಪು. ೪೭-೩೨). **ಹೊಱಬೀಡು**: ಮುಂದಣ ಪಯಣವ ನಿರ್ಧರಗೈದಾಗ ಬಂದು ಬಿಟ್ಟನು ಹೊಱಬೀಡ (ಕಂಪಪ. ೦೦-೬೯).

**ಪೊಱವೀಡಂ ಬಿಡು, ಹೊಱಬೀಡ ಬಿಡು** = (ಕೋಟೆ, ಪಟ್ಟಣ ಮುಂತಾದುವುಗಳ) ಹೊರಭಾಗದ ಆವರಣದಲ್ಲಿ ಶಿಬಿರವನ್ನು ಹಾಕು,–ಪಾಳೆಯವನ್ನು ಹೂಡು: ಬೆಸವೆಟ್ಟಂ ಭುವನೈಕಮಲ್ಲನು ದಂಯಾದಿತ್ಯಂಗೆ ಕೈಕೊಣ್ಡು ಬನ್ದ ಸಹಾಯಂ ಬನವಾಸೆಯತ್ತ ಪೊಱವೀಡಂ [ಬಿಟ್ಟು] (ಶಾಇಇ. XX, ೯೯-೦೭; 1076 ?); ಜಿನೇಂದ್ರಭಕ್ತಸೆಟ್ಟಿ . . . ಜಿನಮಹಾಪೂಜೆಗಳುಮಂ ಮಾಡಿಸಿ ಪೊಱವೀಡಂ ಬಿಟ್ಟು ತನ್ನ ದೇಹಾರ ದೊಳಿರ್ದ ಬ್ರಹ್ಮಚಾರಿಗೆ ವಂದು (ಧರ್ಮಾಮೃ. ೬-೬೪); ಕೂಡೆ ಹೊಱ ವಂಟುದು ಸಮಂತ್ರಕಗೂಡಿ ಸಚಿವ ಪಸಾಯಿತರು ಹೊಱಬೀಡ ಬಿಟ್ಟುದು ಮುಂದೆ ಮನ್ನೆಯ ಮಂಡಲೇಶ್ವರರು (ಕೊರವ. ೨-೩-೫೦); ನಱುಸಂಯಿ ಗಂಪಿಗೆಳಸಿ ತುಂಬಿಗಳು ಬಂದು ಹೊಱಬೀಡ ಬಿಟ್ಟವೆ (ಕದಾಸಾಂ. ೨೪-೮೦).

[ಪೊಱ (<ಪೊಱಗು) + ಬೀಡು$_1$]

**ಪೊಱವೇಱು** (ನಾ). (ಊರಿನ) ಹೊರಗಿನಿಂದ ಬಂದ ಹೇರು: ಪೊಱ ವೇಱಿಂಗೆಲೆ ನೂಱುಮಂ ಮೆಣಸುಮನ್ನೇಲಕ್ಕಿ ಮುಖ್ಯಂಗಳಂ ನೆಱೆ ಶ್ರಾಂ ಸೊಲ್ಲಗೆಯುಯ್ವತಿನ್ದಡಕೆಯಂ ಮತ್ತಿಲ್ಲಿಮಾಱಿಪಾದಡಂ ತೆಱುಗೆ (ಎಕ. XI, ದಾವಣ. ೫೯-೬೨; 1280). [<ಪೊಱ$^3$ + ವೇಱು$_2$]

**ಪೊಱವೊಳಲ್** 'ಪೊಱವೊಱಲ್' ನೋ.

**ಪೊಱವೊಱಸು** (ನಾ). ೧. ಮನೆಯ ಒಳಗೆ ಬರಲು ಅನರ್ಹವೆಂದು ನಂಬಲಾದ ಪಕ್ಷಿ; ಪಾರಿವಾಳ. ೨. (ಅಲಂ) ತಿರಸ್ಕಾರಯೋಗ್ಯವಾದುದು: ವಾತ್ಸ್ಯಾಯನನಂ ಪೊಱಪೊಱಸು ಮಾಟ್ಟ ಕಂಡವರಂ ಮೂವಣ್ಣಂಬರಿಪ ನವವಾರವಿಲಾಸಿನಿಯರಿರುತಿರ್ಪ ನೆಲೆವನೆಗಳನೊಪ್ಪುವ ಸೂಳೆಗೇರಿ ಸೊಗಯಿಸುತಿರೆ (ಜಗನಾ. ೨-೦೯ ಅಹಿ).

[ಪೊಱ (<ಪೊಱಗು) + ಪೊಱಸು]

**ಪೊಱವೊಱಲ್, ಪೊಱವೊಳಲ್, ಹೊಱವೊಳಲು** (ನಾ). ಪಟ್ಟಣದ ಹೊರಭಾಗ: ಮಾಣಿಗಳ್ವೆರಸು ಪೊಱವೊಱಲೊಳ್ ಬಟ್ಟಾಡುತ್ತಿರೆ (ಪಶ್ವಾಭಾ. ೬೩-೨೨); ಅದಱ ಪೊಱವೊಱಲ ವಿಶಾಳಕನಕಕೃತಕಗಿರಿಗಳಿಂ ಫಳ ಪ್ರಕೀರ್ಣತರುಗಳಿಂ (ಶಂಕಪ. ೦-೩೯ ರಗಳೆ); ಆ ಪುರದ ಪೊಱವೊಱಲ ವೈಹಾಳಿಯ ಬಯಲೀಂದ್ದೊಳಗೆ (ಗಿಂಕ. ೨-೬೩ ವ). **ಪೊಱವೊಳಲ್**: ಪೊಱ ವೊಳಲೊಳ್ಪೊದಲ್ದ ನವನನ್ದನಬ್ಬನ್ದದಿಂ (ಎಕ. XIII, ೩೩೦-೨೭; 929); ಅಲ್ಲಲ್ಲಿಗೆ ತಿಳಿಗೊಳನುಂ ಮಲ್ಲಿಗೆಯ . . . ನೋಡಲೆತ್ತಲುಂ ಪೊಱವೊಳಲೊಳ್ (ಶಾಇಇ. IX-i, ೨೯೭-೦೭; 1177); ಯಾದವರ ವೃಂದವೊಲವಿಂ ದ್ವಾರಕಾಪುರದ ಪೊಱವೊಳಲೊಳಿರುತ ದೂರ್ವಾಸ ಬರಲು (ಶಾಂದಪು. ೯-೩೪); ವಾದ್ಯರವದುಬ್ಬರದನೂನಸಂಭ್ರಮದಿಂದೆ ಕಲ್ಯಾಣಪಟ್ಟಣದ ಪೊಱವೊಳಲ್ ನೆಱೆ ಮೆಱೆದುದು (ಬೂಪು. ೦೦-೩೦). **ಹೊಱವೊಳಲು**: ಹೊಳಲು ಹೊಸ ರೀತಿಯಲಿ ವಿಗೆ ಕಂಗೊಳಿಸುತಿರ್ದುದು ಮುನಿಪತಿಗೆ ಹೊಱವ [ವೊ] ಳಲ ರಮ್ಯೋದ್ಯಾನವೆಸೆದುದು ಚೈತ್ರರಥವಂತೆ (ಕೊರವ. ೦-೯-೦೦). [ಪೊಱ (< ಪೊಱಗು) + ಪೊಱಲ್]

**ಪೊಱಸಾರು** (ಕ್ರಿ). ಹೊರಗೆ ಹೋಗು; ಹೊರಗಡೆಗೆ ನಡೆ: ತೆಱಪ ಬಿಡಿ ಪೊಱಸಾರೆನುತ ಪಡಿಯಱ ಸುರರು ಹೊಂಗಟ್ಟೆಗೆಯ ಬಿಡಿದುಱ [ಕರದ ಕೋಲ್ಗಳ] ಬಡಿದು ಸಮ್ಮುಖ ಬಿಡಿಸಿ ನಡಸಿದರು (ಸಾಳ್ವಭಾ. ೩೩-೩೬). 'ಒಳಸಾರ್' ಪರಾ. [ಪೊಱ (<ಪೊಱಗು) + ಸಾರು$_1$ (<ಸಾರ್)]

**ಪೊಱಿಸು, ಹೊರಸ್ಸು, ಹೊಱಿಸು** (ನಾ). ೧. ಒಂದು ಬಗೆಯ ಪಾರಿವಾಳ; ೨ ಅಶುಭಸೂಚಕವೆಂದು ನಂಬಲಾದ ಪಕ್ಷಿ. ಇದು ಮನೆಯ ಒಳಗೆ ಬಂದರೆ ಅಮಂಗಳವೆಂಬ ನಂಬಿಕೆಯಿದೆ: ಕೋಂಟೆಯಿಂ ಪೊಱಗಣ ದೆಸೆಯೊಳ್ ವಿದ್ಯುಚ್ಚೋರಭಟಾರರ್ ಪ್ರತಿಮಾಯೋಗಂ ನಿಂದೊಡೆ ದೇವತೆ ಮುಳಿದು ಪೊಱಿಸುಗಳನಿಱಿಯುವು ದಂಸ ಮಸಕಂಗಳುಂ ವಿಗುರ್ವಿಸೆ (ವಡ್ಡಾರಾ. ೦೩೪-೦೮); ಜಾಱಿದಿನೊಳ್ ಪೊಱಸಟ್

ವಂತೆ ತವ್ಮರಸುಗೆಟ್ಟು ಕಟಲ್ದೆರ್ದೆಗೆಟ್ಟು (ಶಂಶಭಾ. ೬-೮೩) ; ❡ "ಪೊಱಸಟಿವಂತೆ–ಪಾರಿವಾಳವು ನಾಶ ಮಾಡುವಂತೆ . . . ಈ ಪದ್ಯದಲ್ಲಿ ರೇಫ ಱಕಾರಗಳ ಮಿಶ್ರಪ್ರಾಸವಿದೆ. ಪಾರಿವಾಳವು ವಿನಾಶ ಕಾರಕಪಕ್ಷಿ ಎಂಬ ನಂಬಿಕೆ ಇತ್ತು; 'ಭರತಾನ್ವಯರಾಜಭವನರಾಜ ಕಪೋತಂ' ಎಂಬ ರನ್ನನ ಪ್ರಯೋಗವನ್ನು ನೋಡಿ" (ಶಂಶಂ. ೨೯೯) ; ಪಿಂಗಲಿ ಪೋದಗೆ ಪೊಱಸು ಬಕಂ ಗಿಡಿಗಂ ಗೂಗೆಯಾದಿಯಾದ ಖಗಂ ರಾಜಾಂಗಣದೊಳ್ ಚರಿಸುವೊಡೆ ಸರಂಗೆಯ್ವೊಡೆ ತಡೆಯದಾ ಗೃಹಂ ಪಾಟಿಕ್ಕುಂ (ಲೋಕೋಪ. ೪-೬೩). **ಹೊರಸು** : ೧. ಗುಬ್ಬಳಿಸಿ ಪಟಪಟನೆ ಹಾರಿ ಬಹ ಹೊರಸುಗಳ ಸಮುದಯಂ (ಶಶಾಂಗ. ೩೩-೧೪೯೬) ; ವಾರ್ಧಕ್ಯದ ಹೊರಸು ಅವನ ದೇಹದ ಗೂಡನ್ನು ಹೊಕ್ಕುತ್ತದೆ (ಶಾಗಶಾ. ೧೧). **ಹೊಱಸು** : ೧. ಹಂಸೆಯೊಳಗೆ ಹೊಱಸು ಬಂದಿರ್ಪಂತೆ ಬರ್ಪುದುಂ (ರಘುಕೋಪು. ೭-೨೨೩) ; ನರೆಯೆಂಬ ಹೊಱಸು ಮೊಗಮೆಂಬರಮನೆಯಂ ಪೊಕ್ಕೊಡಂಗನಾಲೋಕನಮೆಂಬರಸೆಂತಿರ್ದಪಂ (ಯಶೋಚ. ೨-೧೨) ; ಹರಡೆ ಚಿಲುಮಿಲಿಗನು ಚಲುವೆ ಗಿಜುಗಿರಳೆ ಕವ್ಮರುಸಗ ಕೊಟ್ಟುಳೆ ಹೊಱಸು ಹೊಡೆಗಳೆಂಬ ಪಕ್ಕಿಗಳವಱೊಳೊಪ್ಪಿದವು (ಶಾಳ್ವಭಾ. ೩-೨೦). ೨. ಮದನಪಕ್ಷಿ. ೩. ತಿತ್ತಿರಿಪಕ್ಷಿ. ೪. ಚಕೋರಪಕ್ಷಿ. ೫. ಹಸುಬನ ಪಕ್ಷಿ. ೬. ಮಂಜುಳವೆಂಬ ಹಕ್ಕಿ: "ಜೀವಂಜೀವಃ, ಕಪಿಂಜಳಃ, ಚಕೋರಃ, ಹಾರೀತಃ, ವಂಜುಳಃ, ಕಪೋತಃ — ಈ ೬ ಹೊಱಸು" (ಹಲಾಯು. ೯೨-೧೧೧). ೭. (ಆಲಂ) ಕ್ಷುದ್ರನಾದವನು ; ಅಲ್ಪ : ಫಡ ಹೊಱಸೆ ಕೇಳೆಲವೊ ರಾವಣ . . . ನಿನಗಾಂ ಬೊಮ್ಮರಕ್ಕಸನು (ತೊರಭಾ. ೧೧-೪೪): ಹೊಱಸೆ ಬೆಳ್ಳಿಯ ಗುಂಡನೆತ್ತಿದ ಗರುವ ಬೇಡವು ನಾನು ಕಿವಿದರೆ ಅಱಸಿ ಯೆಲುಗಳನಾಯ್ದು ಸುಡುವಂತಹುದು ನಿನ್ನವರು (ತೊರಭಾ. ೨೨-೧೬).

[ದೇ. ‖ತಮಿ. ಪುಱ, ಪುಱಾ, ಪುಱವ, ಪುಱವು; ಮಲ. ಪಿಱಾವು, ಪ್ರಾವು; ತುಳು. ಪುರ; ಗೊಂಡಿ. ಪುರಾರ್; ಕೊಂಡ. ಪೊರ್ರೊರ್ಸ್ಟ್; ಕುರುಖ್. ಪುರಾ; ಮಲ್ತೊ. ಪುರೆ]

**ಪೊಱಸುಗೆ** (ನಾ). ( ? ) : ಕಿಱುನೆಲ್ಲಿಯುಪ್ಪು ನೆಣವುಲಿ ತೊಱಿನಾಯ್ ಸತ್ತೆಡೆಯು ಮೞ್ ಶುಕಾಸ್ಯಂ ಮದ್ಯಂ ಮುಱುದೊಂಡೆಯೆಂಬಿವಂ ಪೆಸರ ಱಿಯದ ಬಾಹುಗಳೊಳೊರಸೆ ಪೊಱಸಿ(ಸು)ಗೆ ಪೋಕುಂ (ಲೋಕೋಪ. ೯-೨೦೨).

[ ? ]

**ಪೊಱಸುತ್ತು** (ಕ್ರಿ). ಹೊರಭಾಗದಿಂದ ಆವರಿಸು ; ಹೊರಗಿನಿಂದ ಸುತ್ತುಗಟ್ಟು : ಉರಿವ ಭಾಸ್ಕರಕೋಟಿತೇಜದೆ ಪೊಱಸುತ್ತಿ ಪರಿವ ಚಕ್ರವ ನುತಿಗೆಯ್ದು ತುರಿಯದಿಂದೊಳಪೊಕ್ಕು ಕಾಮದೇವನ ಮಗನಿರುವ ಶಯ್ಯಾಗೃಹದೆಡೆಗೆ (ಕೋಹಕ. ೩೦-೧೩).

[ ಪೊಱ (< ಪೊಱಗು)+ಸುತ್ತು$_1$ ]

**ಪೊಱಸೂಸು**, ಹೊರಸೂಸು, ಹೊಱಸೂಸು (ಕ್ರಿ). ೧. ಹೊರಕ್ಕೆ ತುಳುಕು ; ಹೊರಚೆಲ್ಲು : ಹಾಲ ಹಳ್ಳವೋಲಗದ ನಡುವೆ ಮಡು ಗಟ್ಟಿ ಪರಿದು ಪೊಱಸೂಸೆ ಕಂಡು ಬಿಜ್ಜಳಂ ಕೌತುಕಂಗೊಂಡು (ಬಸವ. ೧೧-೬೩); ಬಾಹುಮೂಲದೆಡೆಗೆ ದಿಟ್ಟಿ ಪರಿಪರಿದು ಮೊಗಮೊಗ್ಗುಡಿಸೆ ಸರಿಸಕಳವಟ್ಟ ಜಲಧಾರೆ ಪೊಱಸೂಸೆ ಬಯಲಿಗೆ ಬಾಯ ಬಿಟ್ಟು ನಗಿಸುವರಲ್ಲಿ ತೃಷೆಯಿಂದೆ ಬಂದ ಪಥಿಕರ್ಕಳಾ ಬಾಲೆಯರನು (ಕೃಬಿಭಾ. ೩-೯). ೨. ಹರಡು; ವ್ಯಾಪಿಸು : ಚಿತ್ರದೊಳ್ ಪಡೆದವ್ಯಾಂಶುರೋಚಿ ಪೊಱ ಸೂಸಿ ಪೊಗಟ್ಗೆ ವಂದ ಚಂದವುಂ ಪಡೆದುದು (ಜಳವಿ. ೪-೬). ೩. ವ್ಯಕ್ತ ವಾಗು ; ಪ್ರಕಟವಾಗು ; ಕಾಣಿಸಿಕೊಳ್ಳು: ವಿಲಾಸಲ್ವಾಯ್ದಱ ನಗೆ ಪೊಱಸೂಸದ ಕಣ್ . . . ಮಾಸರವಾಯ್ತುವರೊಳಡರ್ದ ಕೊಡಗೂಸುತನಂ (ಚಂದ್ರಪು. ೮-೪೯). ೪. ಪ್ರಕಟಗೊಳಿಸು ; ವ್ಯಕ್ತಪಡಿಸು : ಬಗೆ ಪೊಱಸೂಸದೆ ಕೈಯುಂ ಮುಗಿದೊಲವಿಂ ನೋಡಿ ಪೆರ್ಚುತುಂ ತಿರಿಸುಳಿಯುಂ ಪೊಗಟುತ್ತ (ಕಬ್ಬಿಗ. ೧೬೨). **ಹೊರಸೂಸು** : ೧. ಕನಕದಾಸರ ಭಕ್ತಿ ತರಂಗಿಣಿ ಅವರ ಕೀರ್ತನೆಗಳಲ್ಲಿ ಹೊರಸೂಸಿ ಹರಿದಿದ್ದಾಳೆ (ಕದಾ. ೧೬೭). ೨. ಅವು ತಮ್ಮ ಬೆಳಕನ್ನು ಎಲ್ಲಾ ಕಡೆಗಳಲ್ಲೂ ಹೊರಸೂಸುತ್ತಿರುವುವು (ಅಕಾಶ. ೪೯) ; ಸೌಂದರ್ಯ ಸೌರಭ್ಯಗಳನ್ನು ಅನಂತಕಾಲ ದಿಕ್ಕುದಿಕ್ಕಿಗೆ ಹೊರಸೂಸಬೇಕು (ಕುಂಗಳ. ೭). ೪. ಹರಿದಾಸರು ಮೆತ್ತನೆಯ ಧ್ವನಿಯಿಂದ ಮಮತೆಯನ್ನು ಹೊರಸೂಸುತ್ತಾ ಕರೆದರು (ಕಾಪೇಂ. ೨೦) ; ಮಾತಿನಿಂದ ಹೊರಬಂದ ನಿಟ್ಟುಸಿರು ಅವನ ಹೃದಯದಲ್ಲಾಗುತ್ತಿದ್ದ ಅಸಹ್ಯವೇದನೆಯನ್ನು ಹೊರಸೂಸುತ್ತಿತ್ತು (ಮರಳ. ೧೬೦). **ಹೊಱಸೂಸು** : ೧. ಗಂಗೆಯುಂ ಹೊತ್ತ ಹರನೊಳ್ ಪುರುಡಿಸಿ ಶಿರೋಮಧ್ಯದೊಳಿರಿಸಿದ ಕುಂತಳ ಕಾಳಿಂದೀನದಿ ಹೊಱಸೂಸುಗುಮೆಂಬ (ಬಸವ. ೨-೨೦); ಪೂಸಿದ ಸೀರೆ ಮಸಿಯ ತಿಲಕದ ಹೊಱಸೂಸುವ ಬಾಯ ಜೊಲ್ಲಿಂದ . . . ಮುದಿವೇಶಿಯ್ರ ರೆಡೆಯಾಡುತಿಹರು (ಕಾವಪಿ. ೬-೧೯೦). ೨. ಆಸುರದ ಕಬ್ಬೊಗೆಯ ಕವಚದ ಕೇಸುರಿಗಳೊಳಬಿದ್ದುದುರಿ ಹೊಱಸೂಸಿ ಹಿಡಿದವು ಹಾವುಗಳ ಬಲು ಹೊವಱ ಹೊರಳಿಗಳ (ಕುವ್ಯಾಸ. ೨೦-೬೦). ೩. ತ್ರಿವಳಿ ಮೈಗರೆಯೆ ಹೊಕ್ಕುಳ ಗುಣ್ಪು ಹೊಱಸೂಸೆ (ಬಸವ. ೦-೦೦೭). ೫. ಹರಡುವಂತೆ ಮಾಡು ; ವ್ಯಾಪ್ತಗೊಳಿಸು : ಸಣ್ಣ ನನೆಯೊಳಗಣ ಪರಿಮಳವ ಹೊಱಸೂಸಿ ಇನಿಗಂಪುಗಳಿಸಬಲ್ಲುದೇ ವಾಯು (ದೇಬಾಪ. ೬೩-೦೨೯).

[ಪೊಱ (< ಪೊಱಗು) + ಸೂಸು$_1$]

**ಪೊಱಿಗೆ**, ಹೊರಿಗೆ, ಹೊಱಿಗೆ$_1$ (ನಾ). ೧. ತಲೆಯ ಮೇಲೆ ಭಾರವನ್ನು ಹೊತ್ತುಕೊಳ್ಳುವಿಕೆ. ೨. ಭಾರ ; ತಲೆಹೊರೆ. ೩. ಹೊಣೆಗಾರಿಕೆ ; ಬಾಧ್ಯತೆ ; ಜವಾಬ್ದಾರಿ : ಮುಂದೆ ನಮಗುರ್ವ ಕೆಲಸದ ಪೊಱಿಗೆಯುಂಟು ನೀನಿಂದುಹಾಸನಸಿಲ್ಲಿಗೀಗಳೊಡಗೊಂಡು ಬಾ (ಕೃಬಿಭಾ. ೩೦-೪೨). ೪. ಕೆಲಸ ; ಕಾರ್ಯ ; ವ್ಯವಹಾರ : (†). ೫. ಅಧಿಕವಾದ ಪ್ರಯತ್ನ; ಪ್ರಯಾಸ: ಮುಱಿವುದಸುರರ ಸೇನೆಯೊರ್ಮೆ ದಿವಿಜರ ದಳಂ ಪೆಱದೆಗೆವುದೊರ್ಮೆ ಪಡಿಬಲಿಸಿ ನೂಂಕುವುದೊರ್ಮೆ ಪೊಱಿಗೆಯಿಂ (ಶಬಪು. ೨೬-೧೯). **ಹೊರಿಗೆ** : ೧. "ವಹಃ, ವಾಹಃ, ವಹನಂ . . . ಊಢವ್ಯಂ—ಈ ೯ ಹೊರಿಗೆ" (ಕಾಶ್ಯ. ೦೬೦). ೨. ಯಾ ಹೊನ್ನಿಗೆಯೆರಡು ಬೆಳೆಯಲು ಸಹ ವರ್ಷ ೧ಕ್ಕೆ ಬಹ ಅಕ್ಕಿ ಅಂಗಡಿಯ ಹೊರಿಗೆಯ ಬಳ್ಳ ಅಯ್ವತ್ತರ ಲೆಕ್ಕದ ಅಕ್ಕಿ ಮೂಡೆ ೨ (ಎಕ. XX, ೯೪ ೪೪ ; 1556); ಹೊತ್ತರಿಗರಿವ ಹೊರಿಗೆಯನು ಬಿಡದೆತ್ತಿಕೊಂಡಾ ವಸ್ತುಗಳಿಗಂ . . . ಸಂಭೇದವೆಂಬುದು ತೋರದಂತಿಹುದು (ಏವೇಶ. ೪-೨೪). ೩. ಪರಿಜನ ಸಾವಂತ ತಳತಂತ್ರ ಮಾರ್ಬಲದ ಹೊರಿಗೆ ನಿನ್ನದು (ರುಕ್ಮಾಂಗ. ೯-೮) ; ಹೊರಿಗೆಯನು ನೋಡುವರೆ ರಾಯರಿಗೆರೆಯನೆಂಬೀ ಬಿರುದು ದುರ್ಗದ ಪಾರೆಯ ಕಾಳಗವೇಕೆ ಗಂಡ ಸೂರ್ಯನೆಂಬವಗೆ (ಕೊಲ್ಲಾಪ. ೨೪೭). ೫. ಎಡಬಲದೊಳೊಬ್ಬರಂ ನಿಲಗೊಡದೆ ಹೊರಿಗೆಯಿಂದೀರ್ವರೆಬ್ಬಾಡಿದರು ಖಾತಿಯಿಂದ (ತುರಂಗ. ೬೨-೧೪). **ಹೊಱಿಗೆ$_1$** : ೨. ಹಱಿಯ ಹೊಯ್ಲನಲಮಾರಗಿ ತಱತಱಿಸೆ ತೂಳಿದರಸ್ತ್ರ ಶಸ್ತ್ರದ ಹೊಱಿಗೆಯಲಿ ಹೂಳಿದರು ಹೊಗಿಸಿದರಾನೆಕುದುರೆಗಳ (ಕೊರಾ. ೩-೬-೬) ; ಹೊಱಿಗೆಯ ಶಬದಿನದ್ಯುತಕ್ಷಮತ್ವದಿ ಶಾಂತ ಮೆಱೆಯೆ (ಶಕ್ಯಾಕ ೩-೪೨). ೩. ಹೊಱಿಗೆಯಸಮಜ್ಞೆಯವಲ್ಲಿಯೆ ಕುಱುಹಡಂಗಿರಲಱಿವ ತಾ ತನ್ನಱಿವು ಮಱಿದಱಿದೋಗು ಶಿವಸಂಗ್ನತೆಯೊಳಿರ್ದಹನೊ (ಬಸವು. ೩೩-೨೨); ಕದನದ ಹೊಱಿಗೆ ದೊರೆಗಳ ಮೇಲೆ ಬಿದ್ದುದು (ತೊರಭಾ. ೨೦-೦೮); ಮಱುಗಿ ಮಾಡುವುದೇನು ಮುಂದಣ ತೆಱನ ಕಾಬುದೆ ಪೌರುಷಾಂಗದ ಹೊಱಿಗೆ (ಕೊರಾ. ೬-೨೪-೪೩). ೫. ಹೊಱಿಗೆಯಿಂ ಹೊಱಿಯ ಹೊತ್ತುಂ ನಡೆದು ಬೇಸತ್ತು (ಅಶಿಶಂ. ೩೭-೦೬೯) ; ಹಱಿಯದರ್ಜುನನಿಂದ ಭೀಮನ ನೆಱವಣಿಗೆ ನೋಯಿಸದು ನಕುಲನ ಹೊಱಿಗೆ

ಯೊದಗದು ಸೈರಿಸದು ಸಹದೇವನಾಟೋಪ ಇಱಿವಡಾ ಮಾದ್ರೇಶನನು (ಶಾಪ್ತ್ಯ. ೧-೩೦). ೬. ರೀತಿ ; ಕ್ರಮ ; ವಿಧಾನ : ಮಲೆತರನೆಱಗಿಸಿ ಕೊಂಬ ಬಲುಮಂತ್ರದ ಹೊಱಿಗೆಗಳನಱಿದು ಭೂವಲಯವನಾಳು ನೀನು (ಜಯನೃಪಾಂ. ೨೦-೩೩) ; ಮುಂದಣ ರಾಜಕಾರ್ಯಕ್ಕೆ ಹೊಱಿಗೆ ಯಾವುದು ಪೇಳಿಂ (ರಾಮಾ. ೦೩-೭). ೭. ಹೆಚ್ಚಳ ; ಆಧಿಕ್ಯ ; ಅತಿಶಯ : ಹೊಱಿಸುವಡೆ ದುಷ್ಕೀರ್ತಿ ನಮ್ಮಲಿ ಹೊಱಿಗೆಯಾಯಿತು ನಾಭಿಯಿಂ ಕೆಳಗೞಿಗುವುದು ಗದೆಯಿಂದ ಸಲ್ಲದು ಶಸ್ತ್ರವಿದ್ಯೆಯಲಿ (ಶಾಪ್ತ್ಯಗ. ೧೧-೩೯); ಮುಱಿದುದಗ್ಗದ ಮಹಿಮೆ ಶೋಕದ ಹೊಱಿಗೆಯಲಿ ಕಾತರಿಸಿ ನಡೆವನು ನೃಪತಿ (ಪಳಕ. ೩-೧೯). ೮. ಫಲ ; ಪರಿಣಾಮ : ಕೆರೆದು ನುಡಿ ಪಂಬರದ ವಾಣಿಯ ಹೊಱಿಗೆಯನು ನಿಶ್ಚೈಸಿ (ಕೌಶಿರಾ. ೨೯-೨೩); ಇದಱ ಹೊಱಿಗೆಯುನಱಿತು ಭೂಪರು ವಧಿಸುವರು ಸತ್ತವರನಲ್ಲದಡದಕೆ ಪರಿಹಾರಾರ್ಥವನು ನಿಶ್ಕೃತಿಯಿಂದ ನಡಿಸಲಿಕೆ (ಪುಂಚರಾ. ೬-೨೯). ೯. ಶ್ಲಕ್ಷ್ಣವಾದುದು ; ಕಠೋರವಾದುದು ; ಕಠಿನವಾದುದು : ಮಂಜಿನ ನೆರವಿಯಂತಳಿವವು ಹೊಱಿಗೆಯ ತಪಕಘವವರ (ರಾಮಾ. ೨೦-೧೯೦). ೧೦. ನಂಬಿಕೆ ; ವಿಶ್ವಾಸ : ಅಱಿತು ಜಾನಕಿಯಿರ್ದ ಸೆಱೆ ವನೆಯನದೋರ್ವರಱಿಯದಂದದೊಳಾನು ಪೊಕ್ಕು ಮಱಿಯೇನು ನೋಡಿ ಬಂದಪೆನೆಂದವನೊಳು ಹೊಱಿಗೆಯ ಮಾತನಾಡಿದನು (ರಾಮಾ. ೦೯-೬೯). ೧೧. ಕ್ಲೇಶ ; ಸಂಕಟ : ನರಕಗಳ ಪರಿವಿಡಿಯ ನೋಡುತಂ ಸಾನಂದ ಬರುತಿರಲು ನುಡಿದ ಯಮನೊಂದು ಮಾತ ನರರೊಳತ್ಯಧಮಂ ಪಾಪಿಷ್ಠ ಜೀವಿಗಳು ಹೊಱಿಗೆಯಿಂ ಮುಕ್ತಿಯಹರಾವ ತೆಱದಿಂದೆನಲು (ರಾಜಶೇ. ೯೦-೩೩). ೧೨. ಅಂಚು ; ಎಲ್ಲೆ ; ತುದಿ : ಚಂಬಕ ಪಟಹ ಮಾವುರಿ ಕೊಂಬು ಕೊಳಲಿನಾಡಂಬರ ಬುರುಗು ನಫಿರಿಯ ಇಂಬಿನ ರವ ವೆಂಟುದಿಕ್ಕಿನ ಹೊಱಿಗೆಯ ಮುಂಬರಿದೊಡನೆ ಪರಿದುದು (ಕುಸಾ. ೧೧-೨೯). ೧೩. (?): ನಾಯಿಂದರಿಗೆ ತೆಱಿಗೆ ಹೊಱಿಗೆ ಕಾಣಿಕೆ ಕಪ್ಪ ಬಿಟ್ಟಿ ಬಿರಾಡ ಆವುದೂ ಯಿಲ್ಲಯೆಂದು ಕೊಟ್ಟ ನಾಯಿಂದರ ಶಾಸನ (ಸೌಇಇ. IX-ii, ೬೨೩-೦೨ ; 1547). [< ಪೊಱು]

**ಪೊಱಿಸು, ಪೊರಿಸು, ಹೊರಿಸು$_1$, ಹೊಱಿಸು** (ಕ್ರಿ). ೧. ಭಾರವನ್ನು ಹೊರುವಂತೆ ಮಾಡು ; ಭಾರವನ್ನು ಹೇರು : ಬಲಭದ್ರಂ ದಾಸಿಯನೊರ್ಬಳಂ ನಿತಾಂತಪ್ರಿಯಮಾಗಲ್ ಕೊಂಡು ಪೊಱಿಸಿದಂ ಬಲ್ಪೊಱೆಯಂ (ರಜಾ. ೦೨-೦೯೯) ; ಒತ್ತರಿಪ ದನಿಗೇಳುತಾ ಪುರುಷೋತ್ತಮನು ನಂದನು ಬೆರಸಿ ಬರುತೊಕ್ಕಿನಲಿ ಮಡಿವಳನು ಪೊಱಿಸಿದ ಮಡಿಗಳನು ಕಂಡ (ಸಾಳ್ವಭಾ. ೨೨-೩೮). **ಪೊರಿಸು** : ೨. (ಅಪವಾದ ಮೊದಲಾದುವನ್ನು) ಹೇರು ; ಆರೋಪಿಸು : ನೀನು ಪರನ ತಂದಪಕೀರ್ತಿ ಪೊರಿಸಿದೆಲೆ ಮಾಗಳೇ (ಕಂಕ. ೩೨-೧) . **ಹೊರಿಸು$_1$** : ೧. ಋಷಿಯು . . . ಮಣಿನಿಕರವಂ ಶಿಷ್ಯನ ಕೈಯೊಳು ಹೊರಿಸಿಕೊಂಡು (ಸೌಗಂಧಿ. ೩೦೨-೫) ; ಗೂಡೆಗಳನ್ನು . . . ಕೆಲವರಿಗೆ ತಿಮ್ಮನು ಹೊರಿಸಿಕೊಟ್ಟನು (ಕಂಗಾಳ್ಯ. ೮೦). ೨. ಇಲ್ಲದ ತಪ್ಪುಗಳನ್ನು ಮೇಲೆ ಹೊರಿಸಿ ಹೇಳುವುದು (ಸಿದ್ಧಾಂತಿ. ೩೨) ; ಇಲ್ಲದ ಸಲ್ಲದ ಆರೋಪವನ್ನೆಲ್ಲಾ ಅವರ ಮೇಲೆ ಹೊರಿಸುವುದು (ಅಂಹೂ. ೯೩) ; ತಪ್ಪು ಹೊರಿಸಿದರೆ ಒಪ್ಪುವವನ್ಯಾರು ? (ಗಾದೆ) . **ಹೊಱಿಸು** : ೧. ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊಱೆಯ ಹೊಱಿಸದಿರಯ್ಯಾ (ಬಸವ. ೩೯೩) ; ಹೊಱಲ ಜನದ ಸಮಸ್ತಭುವನಾವಳಿಯ ಭರಭಾರವನು ಹೊಱಿಸಿದನಗ್ನಿದೇವರಿಗೆ (ಕೊರಠಾ. ೫-೯-೫೫) ; ಸೂಳೆಯಂದದಿ ನಡೆವಳ ತಲೆ ಬೋಳಿಸಿ ಕಸಹಡಿಗೆ ಹೊಱಿಸಬೇಕವಳ (ಪುರಂದ. ೨-೦೯-೨). ೨. ಭಂಗವಿಲ್ಲದೆ ಬಿದ್ದ ನಿಮ್ಮಯ್ಯಂಗೆ ಹಳಿವನು ಹೊಱಿಸಿದಿಹ ಮನದಂಗವಣೆಯುಂಟಾಗೆ ಮೆಚ್ಚುವೆನು (ಕಪ್ಪಾದ್ರೌ. ೮೯-೦೯) ; ನಿಮಗೂಣಯವ ಹೊಱಿಸುವನೊ ಕೊಱತೆಯು ಹಾಯ್ಸುವನೊ ತನಗೆ (ಕೊರಠಾ. ೫-೩ ೦೦೦).

೩. ನಿರ್ವಹಿಸುವಂತೆ ಮಾಡು ; ವಹಿಸು : ಅರಸಂ ತನ್ನ ಮಗನಲ್ಲಿಯಾದೊಡಂ ತನ್ನ ಕುಲದಲ್ಲಿಯಾದೊಡಂ ಆವನೊರ್ವನ ಮೇಲೆ ರಾಜ್ಯಭಾರವಂ ಹೊಱಿಸಿಯಿಹು ತಾನವನೈಶ್ವರ್ಯವನಪಹರಿಸಬೇಕಾಗಿ ಮಾಡಿದವಂ (ಶಂಕಕಂ. ೯೬-೧೨). [ಪೊಱು + — ಇಸು$_3$]

**ಪೊಱು, ಪೊರು, ಹೊರು, ಹೊಱು** (ಕ್ರಿ). ಪೊತ್ತ$_1$, ಹೊತ್ತ(ಭೂತಕೃ). ಪೊತ್ತು$_2$, ಹೊತ್ತು$_3$ (ಭೂತನ್ಯೂ). ೧. ಭಾರವಾದ ವಸ್ತುವನ್ನು ತಲೆಯ ಮೇಲೆ ಅಥವಾ ಹೆಗಲಿನ ಮೇಲೆ ಇಟ್ಟುಕೊಳ್ಳು,–ಹೊತ್ತುಕೊಳ್ಳು : "ಪೊಱು — ಶಿರೋಧಾರಣೇ" (ಶಬ್ದಾ) ; ಬಲದೇವನಂತೆ ಪೆಣನಂ ಪೊತ್ತು ತೊೞಲ್ವ ಕ್ಷೇತ್ರಪಾಲರಿಂ (ಕಾವ್ಯಸಾ. ೩೨೯ ಕೊಡ್ರಕ) ; ಒಡನಂದಯ್ವರುಮಂ ನಿಜಾಂಸಯುಗದೊಳ್ ಪೊತ್ತೆತ್ತಿ ತಳ್ತೊಳ್ವ ಸೀೞುಡುವಿಂದದ್ಭುತದಾ ಹಿಡಿಂಬವನಮಂ ಪೊಕ್ಕಂ ಮರುನ್ನಂದನಂ (ಶಂಖಕಾ. ೩-೯) ; ಬೆಟ್ಟಂಗಳಂ ಕಿತ್ತು ಪೊತ್ತಿವರನಿಟ್ಟು ಬೆನ್ನಟ್ಟಿದಪೆವು (ಜೆಬಕು. ೨೦-೨೩). ೨. ತಳೆ; ಧರಿಸು : "ಪೊತ್ತನೆನುತಂ ಆಂತನೆನೆ ಧರಿಸಿದರ್ಥಂ" (ಕಟಕಂ. ೦೩೪); ಸತ್ತ ಪೊತ್ತ ಕಣ್ಣಱಿಯದ ಬೆಳ್ಪನಲ್ಲೆ ನಱಿದಂ ಧವಳಾಕ್ಷಿಯ ನೋಟದಂದವಂ (ಶಂಖಕಾ. ೪-೭೬) ; ಪೊತ್ತ ಪೂತಳಿರ್ ಬಾಡಿ ಕಱಂಗಿ ಜುಯ್ಯೆನುತುಮಿರ್ದುವು (ಕಬ್ಬಿಕಾ. ೩೦೪) ; ಎಳೆ ಪೆಱೆಯ ಪೊತ್ತನ ಕುಮಾರನಂ ತಿನ್ನೆನುತ್ತುರಗಾಸ್ತ್ರದಿಂದೆಚ್ಚನು (ಕೆಶಿಕ. ೯೩-೨೨). ೩. ಪಡೆ ; ಹೊಂದು ; ತಾಳು : ಶಿಲೆಯೊಳ್ ತಾಟಿಸಿ ತನ್ನಯ ತಲೆಯಂ ಜರ್ಜರಿತಮಸ್ತಕಂ ಮಡಿದತ್ಯಾಕುಲನೀ ಮಹಾದೇಹ ಮನಲಸದೆ ಪೊತ್ತಿರ್ದು ನಮೆದಪಂ ಧರಣಿಪತೀ (ಅಂಕಿ. ೫-೦೭); ಕರೆಯಂ ನೆರಪಂ ಪಂಶು ಕಱೆಯಂ ಪೊತ್ತಪ್ಪುದೆಂದು ಸಂಗರಮುಖದೊಳ್ (ಕಮದ. ೧೯ ಕ್ರಯೋ). ೪. ಕೈಗೊಳ್ಳು; ಪರಿಗ್ರಹಿಸು : ಭವವಾರಾಶಿ ನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ಮಲಂ ಪೊತ್ತೆತ್ತುಗುಂ (ಆದಿಪು. ೨.೭): ಆರೇನಂ ಪೇಳ್ದೊಡಂ ಕೈಮುಗಿದು ಸುಗಿದು ಪೆರ್ಬಿಟ್ಟಿಯಂ [ಶಾಕಾಂ. ಕೈಂಕರ್ಯಮಂ] ಪೊತ್ತು ಸಂಸಾರಾರಂಭಂಗೆಯ್ದು (ರಕ್ಷಾಶ. ೦೯). ೫. ಸಹಿಸು ; ಅನುಭವಿಸು : ಇನಿವಿರಿದು ಪರಾಭವಂ ಪ್ರಾಕೃತಪುರುಷಂಗಂ ಕಾಪುರುಷಂಗಂ ಪೊತ್ತು ನಿಲ್ವುದರಿದು (ಶಾಂತಿಪು. ೩-೭೭ ವ). ೬. ವಹಿಸಿಕೊಳ್ಳು : ಸಿಂಗಪೊತ್ತರ ಕಲಿ ನೊಱಿವಪ್ಪುದಿ ಅರಸರಾ ಪೆರ್ಮೆನಡಿಗಳ್ಗೆಸಗೆ ಬೆಸಂಬೆತ್ತು ಪೊತ್ತನ್ನು ಮೇಗೆಟ್ಟನ್ನು ಕಾದಿದೊ (ಎಕ. XI, ಡಳ್ಳಕೆ. ೬-೨ ; ಸು. 810 ?); ತಂಗೆವಿರ ಭರಭಾರಕ್ಕ ಮಡಸಿದ ಬಡತನಕ್ಕಮಡರ್ಗಮಳ್ಕದೆ ನೀಂ ಪೊತ್ತು ನಿತ್ತರಿಸುತ್ತುಮಿರೆ (ಶಾಂತಿಪು. ೪-೭೭ ವ). **ಪೊರು** : ೧. ದೊಡ್ಡನೊಳಬಗೆಗುದುರೆ ನಲ್ಕೆಹೇರಂ ಪೊತ್ತು ಗೊಡ್ಡದಿಂದಳ್ಕಲದಿ ನಡೆಯುಡಿಯುತಿತ್ತು (ಕಾಬೂರ. ೫೨-೭೪) ; ಡೆಂಕಣಿಯ ಸಾಲ್ಗಳಂ ಪೊತ್ತು ನೆತ್ತಿಯೊಳಿಸೆವ ಕೊತ್ತಳಗಳಿಂದೆ (ಶತ್ರಾಂಗ. ೩೭-೩೫೭). ೨. ಪರ್ಷಮೇಘಂ ರಮ್ಯಸುರಚಾಪಮಂ ಪೊತ್ತು ನಭದೊಳ್ ಸಡೆಯುವಂತೆ ! (ಶತ್ರಾಂಗ. ೩೩_೦೯೯೩). ೪. ಪಡಿನೆಳಲ ಪೊತ್ತು ತಾಂ ಧನ್ಯನೆಂದಾ ಕೊಳು ಜುಮ್ಮೆಂದು ಪುಳಕಿಸುವ ಮಾಳ್ಕೆ ಕಂಪಿಸಿದತ್ತು (ಶತ್ರಾಂಗ. ೩೯-೯೦೫) ; ಒಯ್ವ ಕೇಡಂ ಪೊತ್ತು ಪೆಣ್ ತೆರಳ್ಕೆಯು ತೆರಳೆ (ಕಾಬೂರ. ೦೩೦-೨೭೯). ೬. ಸತ್ತವರ ಮೇಲೊಲ್ಮೆಯೊಂದೊಡೇಂ ಬಾಳ್ದವರ್ ಪೊತ್ತು ಚೆಲ್ವಿನೊಳಿರ ಕಡೆಗೆಯ್ಮೆ ಮುಗಿಸಿ ಮತ್ತವರ ಬದಿಗಲರ ನಾಡಿಗೆಸೆ ಕಳುಹುವುದು (ಕಾಬೂರ. ೦೮೦-೯೦೦). **ಹೊರು** : ೧. ವಿನೀತಃ, ಸಾಧುವಾಹಿನಃ — ಎಳೆಯುಲಾಪ್ರಸ ಕುದುರೆಗಳಿಗೂ ಚೆನ್ನಾಗಿ ಹೊರಲುಳ್ಳ ಕುದುರೆಗಳಿಗೂ ಹೆಸರುಗಳು (ಸಿದ್ಧಾಂತಿ. ೨೯೯); ತನ್ನ ಬೆನ್ನಿನಲಿ ತನ್ನಕ್ಕರೆಯ ಹೊರೆಯ ಹೊತ್ತ ಹೆಮ್ಮೆಗೆ ಹಿಗ್ಗಿ (ಶತ್ರಾಂಗ. ೦೭-೯೩೫); ಹೊರಬಲ್ಲವನಿಗೆ ಆಳು ಬೇಡ, ಆಡಬಲ್ಲವನಿಗೆ ಹೆಂಡತಿಬೇಡ (ಗಾದೆ). ೫. ಹೊರಬೇಕ್ಕೆ ಕಷ್ಟವ

ಸಹಿಸುವ ತನುವು; ಪರದುಃಖಕೆ ಕೂಗುವ ಮನವು (ಕಬಿ. ೭-೩). ೭. (ಪಕ್ಷ) ವಹಿಸು : ಏನೇನು ಆಗಬೇಕೆಂದಿದೆಯೋ ಅದು ಹಾಗೇ ಆಗಬೇಕಾದದ್ದು ವಿಧಿನಿಯಮ ಎಂಬುದು ಅವರ ಲೆಕ್ಕ. ಆದರಿಂದ ಗಣಪತಿಯನ್ನು ಹೊತ್ತು ಮತ್ತೆ ಹೆಂಡತಿಯಲ್ಲಿ ಅವರು ಮಾತು ಎತ್ತಲಿಲ್ಲ (ಹೊಸಕ್ಷಿ. ೩೦).

**ಹೊಱು :** ೧. ಜಂಗಮವೆನ್ನವರೆನ್ನವರೆನ್ನವರೆಂಬವರ ಕಿರಹ ಹೊತ್ತಿರಿಸೆನ್ನನು (ಬಸವ. ೩೬೨); ಪೃಥಿವಿ ನೆಗ್ಗಿತು ಹೊತ್ತ ಕಮಠನ ವ್ಯಥೆಯನಾರು ಸುರುವರು (ಕುವ್ಯಾದ್ರೋ. ೨-೩೦); ಅಗಣಿತಲೋಕಾದಿ ಲೋಕಂಗಳುದರದಿ ಸೊಗಯಿಪ ನಾರಾಯಣನ ಹೆಗಲೊಳು ಹೊತ್ತು ಖೇಚರರದೆ ಸಂಚರಿಸುವ ಖಗರಾಜ ಕರುಣಿಪುದೆಮಗೆ (ಮೋಹತ. ೦-೧೩). ೨. ಕಕ್ಷಪುಟದಲ್ಲಿ ಕತ್ತುರಿಯ ಹೊಗರೆತ್ತುತಿರೆ ಅಕ್ಷಿಗಳು ಕರುಣರಸವಂ ಹೊತ್ತು ಬಳಲುತಿರೆ (ಬಸರ. ೧-೦೦೪); ಮಹಾಪ್ರಮಥೋತ್ತಮಪುರಾತನಗಣಾಂಘ್ರಿಗಳಂ ಹೃದಯದಲ್ಲಿ ಹೊತ್ತು (ಬಸಪು. ೩೭-೩೦); ಹೊತ್ತ ಜೋಹದ ಜಾಳಿ ಲೇಸಾಯಿತ್ತು ನಿನಗುಪದೇಶಮಂತ್ರವನಿತ್ತವನ ವರ್ತನವದೆಂತುಟೊ (ತೊರರಾ. ೪-೪-೪೦). ೩. ತ್ರಿಣಯನನ ಬೆಸನನಾಂ ಪಡೆದೆನೆಂದುಬ್ಬರ್ತುಂ ಪರವಶೀಭೂತನಾಗುತ್ತೆ ಮಜಹಂ ಹೊತ್ತು ಹರುಷದಿಂ ದೇವಿಯರ್ಗಿತ್ತು (ಬಸರ. ೦-೩೯); ಹರಿಹರನೆನಿಪ ಪೆಸರ ಹೊತ್ತ ಹರನಂತಕಮದಹರಂ (ಬಸಪು. ೩೪-೪೩); ಎತ್ತಿದೆನು ನಾನಾಶರೀರವ ಹೊತ್ತು ಹೊತ್ತಳಲಿದೆನು ಸಲೆ ಬೇಸತ್ತು ನಿನ್ನಯ ಪದವ ಕಾಣದೆ ತೊಳಲಿ ಬಳಲಿದೆನು (ಹಂಸಾ. ೬೦). ೫. ಧನು ಮುಱಿಯೆ ದಿಟ್ಟಾಯ್ಲುತನವೀತನಲಿ ಸಾಕಿನ್ನೆನುತ ಗುರುನಂದನನು ಮುರಿದನು ಹೊಗರು ಮೋಱೆಯ ಹೊತ್ತ ದುಗುಡದಲಿ (ಕುವ್ಯಾಕ. ೧೪-೩೦); ಕುಂದು ಕೊಱತೆಯ ಹೊಱುವ ಹೆಣ್ಣೆ ನೀನು (ಕಂನವಿ. ೬-೦೮೩). ೮. ಭಾರವಾಗಿರು ; ಹೊರೆಯಾಗಿರು : ಈ ನಾಲಗೆಯ ಸಾಲವನೀಗ ಕೈಯಲಿ ತಿದ್ದಿಕೊಡುವರೆ ಹೋಗದೇ ಹೊತ್ತಿಹವೆ ಹೇಳೆನುತೆಚ್ಚನಾ ಭೀಮ (ಕುವ್ಯಾಕ. ೨-೦೯). ೯. ಹೇರಿಕೊಳ್ಳು ; ಆರೋಪಿತಗೊಳ್ಳು : ಅದಱಿಂದಾದ ತಪ್ಪನದೆಂತು ಹೊಱುವೆನು (ಬಸಪು. ೩೯-೩೨); ಮನ್ನಣೆಯ ಬಿಲ್ಲ ಗುರುವಿನ ಬಿಂಕ ಬಯಲಾಯ್ತಿಲ್ಲಿಯೆಂಬಪಕೀರ್ತಿ ಹೊಱುವುದು ಬಲ್ಲೆನು (ಕುವ್ಯಾದ್ರೋ. ೦೩-೦೦). ೧೦. ಗರ್ಭದಲ್ಲಿ ಧರಿಸು : ಸತ್ತವರಿಗಳಲೇಕೆ ತನ್ನನು ಹೊತ್ತವರು ಹೆತ್ತವರುಗಳು ತಾ ಸತ್ತುಹೋಗುವರಲ್ಲದುಳಿವರೆ (ಹಂಸಾ. ೯೨); ಒಂಭತ್ತು ತಿಂಗಳು ಹೊತ್ತ ಮಾತೃಕೆಯ ಪಾದಾಂಭೋರುಹಕಲರ್ಗಱೆದು (ಮೋಹತ. ೨೪-೪೦). ೧೧. (ಋಣವನ್ನು) ಹೊಂದು : ಮಾಱಿದ ತಲೆಯ ಭಂಡವ ಹೊತ್ತಿರದೆ ಕೈಕೊಳಲಿ ಕರ್ಣಾದಿಗಳು (ಕುವ್ಯಾದ್ರೋ. ೩-೯). ೧೨. ಸಂಕಲ್ಪ ಮಾಡಂ ; ಪ್ರತಿಜ್ಞೆ ಮಾಡು : ಹೊತ್ತ ಭಾಷೆಯೊಳಿಪರಿಯೊಳೆಂಬತ್ತುವರುಷಂಗಳು ಶಿವೈಕ್ಯರ ತೊತ್ತುಗೆಲಸಂ ಮಾಡಲು (ಬಸಪು. ೨೭-೬೨).

**ಪೊಱುಪೊಱು, ಹೊಱುಹೊಱು** (ದ್ವಿರುಕ್ತಿ) : ಮತ್ತೆ ಪಿಟ್ಟವ್ವೆಯ ಸುಭಕ್ತಿ ನಿಮಿತ್ತದಿಂ ಚೋಳಂಗೆ ಮಣ್ಣಂ ಪೊತ್ತು ಪೊತ್ತೊತ್ತಿದ ತಲೆಯ ಕಿಱುಕುಣಿಗಳಂದವಲಿ (ಬಸಪು. ೩೮-೩೬); ಎತ್ತಿದೆನು ನಾನಾಶರೀರವ ಹೊತ್ತು ಹೊತ್ತಲಸಿದೆನು (ಹಂಸಾ. ೬೦). **ಪೊತ್ತುಕೊಳ್, ಹೊತ್ತುಕೊಳ್ಳು** = ತಲೆಯ ಮೇಲೆ ಹೊರು,–ಧರಿಸು : ನಿನ್ನಂ ಪೊತ್ತುಕೊಂಡು ಪೋಪೆನೆನೆ (ಶಾಪುಂಪು. ೭೬); ನಲ್ಲಳ ಪಾದವಂ ತಲೆಯೊಳ್ ಪೊತ್ತುಕೊಂಡು (ರರ್ವಾಮ್ಮ. ೨-೧೨೪); ಹೊತ್ತುಕೊಂಡೊಯ್ದಿಳುಹಿದೆನು ನದಿಯೊತ್ತಿನಲಿ ತಾಂಡವನ ಬಳಿಯಲಿ (ತೊರರಾ. ೨-೩-೨೬); ನೀನು ಭೂಮಿಯನ್ನು ಸ್ವಲ್ಪಕಾಲ ಹೊತ್ತುಕೊಂಡರೆ ಅವನೇ ಹೋಗಿ ಚಿನ್ನದ ಸೇಬುಗಳನ್ನು ತಂದುಕೊಡುವನು (ಮಱಗ. ೦೦೦). **ಪೊತ್ತು ತರ್, ಹೊತ್ತುತರು**=ಹೊತ್ತುಕೊಂಡು ಬರು : ತಮ್ಮ ಪೊತ್ತುತಂದಿಪ್ಪೆಯ ಪೂವುಮಂ ಬೇಳದ ಪಣ್ಣುಮಂ ಕನ್ನೆಯ ಮುಂದೆ ಪೊಸುದ್ದು (ರರ್ವಾಮ್ಮ. ೩-೯೩); ಅಮಳಾಂಬುವಂ ತಾಂ ಪೊತ್ತುತಂದು ಸುಗೋಮಯದಿ ಬೆರಸುತ್ತ (ಬಸಪು. ೦೮-೩೪); ಹೊರಗೆ ಇರುವ ಕಟ್ಟಿಗೆ ಹೊರೆಯನ್ನು ಹೊತ್ತುತಂದು ಒಳಗೆ ಹಾಕು (ರೂಢಿ). **ಹೊತ್ತಾಡು** = ಪುರಸ್ಕರಿಸು (?) : ವಸ್ತುಕ್ರೀವಿದನಾಗಿ ನಿತ್ಯಾನಿತ್ಯವ ಹೊತ್ತಾಡಿ . . . ಮುಕ್ತಿ ನಿಶ್ಚಯವಾದಲ್ಲಿ ಪ್ರಾಣಲಿಂಗಸಂಬಂಧ (ಪೋಳಿವಚ. ೧೨೦-೪೭೦). **ಹೊತ್ತುಹಾಕು** = ೧. ಕಳುಹಿಸು ; ರವಾನಿಸು : ಈ ಕಾಗದ ಪತ್ರಗಳನ್ನು ಬೇಗ ಹೊತ್ತುಹಾಕಬಾರದೇ ? (ರೂಢಿ). ೨. (ಶವವನ್ನು ಶ್ಮಶಾನಕ್ಕೆ) ಒಯ್ಯು ; ಸಾಗಿಸು : ಹೊತ್ತು ಹಾಕಲು ಜನ ಸಿಗುವುದಿಲ್ಲ, ವ್ಯಾನಿಗೆ ಹೇಳಿ ಕಳುಹಿಸು (ರೂಢಿ). [ದೇ.‖ ತಮಿ. ಮಲ. ಪೊಱು ; ಕೊಡ. ಪೊರೀ ; ಕೋತ. ಪೊರ್ ; ತೊದ. ಪೀಱ್]

**ಪೊಱುಕೆ** (ನಾ). ಹೊರುವಿಕೆ ; ಧರಿಸುವಿಕೆ : ಕಿಱುಕೆ, ತಿಱುಕೆ, ಪೊಱುಕೆ (ಶಬ್ದಾನು. ೩೩೭ ಪ್ರಯೋ). [ ಪೊಱು + — ಕೆ ]

**ಪೊಱೆ[3], ಪೊರೆ[6], ಹೊರೆ[6], ಹೊಱೆ[3]** (ನಾ). ೧. ಒಜ್ಜೆ ; ತೂಕ ; ಭಾರ : ತುಱುಗೆಮೆ ನೀಳ್ದ ಪುರ್ವು ನಿಡುಗಣ್ ಪೊಱೆಯಲ್ಲದೆ ಬಟ್ಟತಪ್ಪ ಬಾಯ್ದೆಱೆ (ಸಂಶಶಾ. ೦-೦೦೮); ಆಭರಣದ ಪೊಱೆಯಂ ತಳೆವಾಭರಣಪ್ರಿಯರ ತೆಱದೆ . . . ನಿವ್ಯೋಂದಿಗರಾಭರಣದ ಪೊಱೆಯನೇಕದಂ ಪೊತ್ತಿರ್ಪರ್ (ಕಾದಂಉ. ೦೦೮); ಅಲಸಪದಕ್ಕಲಕ್ತಕರಸಂ ಪೊಱೆಯೆಂಬಿನಿತೊಂದು ಚಿತ್ತಮಾ ಲಲನೆಗೆ ದೇವಕೀವನಿತೆಗಾದುದು ನಿರ್ಭರಪೂರ್ಣಗರ್ಭದೊಳ್ (ಜಗಬಿ. ೨-೯೯). ೨. ತಲೆ, ಹೆಗಲು, ಗಾಡಿ ಮೊದಲಾದುವುಗಳ ಮೇಲೆ ಇಟ್ಟುಕೊಂಡು ಸಾಗಿಸುವ ಸೌದೆ, ಹುಲ್ಲು ಮೊದಲಾದಂವುಗಳ ಕಂತೆ,—ಗಂಟು; ತಲೆಭಾರ : ಪುಳ್ಳಿಯ ಪೊಱೆಯಂ ಪೊತ್ತು (ವಡ್ಡಾರಾ. ೭೭-೨೩); ಅಂತು ಪೊತ್ತು ಪುಲುಪುಳ್ಳಿಯ ಪೊಱೆಯನಿಳುಪಿ ಭೇರಿಯಂ ಪೊಯ್ದು (ರರ್ವಾಶ. ೨-೩೪ ವ); ಪುಲಿದೊಗಲ ಪೊಱೆ ಜೇನು ತುಪ್ಪ ನಳಿಗೆ ಮೇಣದ ಮುದ್ದೆ (ಶಾಳ್ವಭಾ. ೦೭-೬). ೩. ದೊಡ್ಡ ಆಕಾರವುಳ್ಳದು ; ಭಾರವಾದುದು : ಒಂದು ಪೊಱೆ ಜಡೆಯುಮಂ ಪಲಮಂವದ ಮುದ್ರೆಯುಮನೆಯ್ದೆ ಪೊತ್ತಿನ್ನಂ ಬಾಯೆಂದು . . . ಕರೆಯರೆಮ್ಮ ಭಳಾರರ್ (ಸಿಪುಚ. ೪-೭೯). ೪. ಹೊಣೆ ; ಜವಾಬ್ದಾರಿ : ಎನ್ನನೋವ ಕಾವ ಪೊಱೆ ತಮ್ಮಡಿಯೊಳೆಂದು ಕಣ್ಣೀರಿಡುವುದುಂ (ರಾಮಾಶ್ವ. ೬೩-೦೦). ೫. (ಹಣದ) ಗಂಟು : ನಿನ್ನ ಪೊಱೆಗಾರ್ಪವರಿಲ್ಲಾದೊಡಮೆನ್ನ ವಿನಯಕ್ಕಲ್ಲಿವರಂ ಪಿಡಿದು ತರಲ್ವೇಟ್ಕುಂ ತನ್ನಿಮೆಂದು ಪೊಱೆಯಂ ಕಳೆದುಕೊಳೆ ಕೊಟ್ಟು ನಡೆದು (ಬಂಹರಿ. ೪-೦೦ ವ). ೬. ಆಧಿಕ್ಯ; ಹೆಚ್ಚಳ : ಪರಿಭವದ ಪೊಱೆಯನಾಂತಿರ್ದರಾತಿಗಳ್ಗಳ್ಕಿ ತನ್ನ ಕುಲಮುಂ ಚಲಮುಂ ದೊರೆಯುಂ ಕಿಡೆ (ಆದಿಪು. ೦೨-೯೬). ೭. ಹೊರೆಯಂತಿರುವ ಮುಡಿ,—ತಲೆಗೂದಲು; ಕೇಶಭಾರ : ಮುಳಿದಾಟಿದೋಪರಳ್ಳಿರ್ದ ಮುಗುಳ್ತುರಿವಂತೆ ಮುಗುಳ್ತು ನಾಣ ಜಾಣೊಳಗುಸಡಿಲ್ದನಂ ಪೊಱೆ ಸಡಿಲ್ದು ಕದಂಪು ಬೆಳರ್ತು ಬಾಡೆ (ಕಾಶ್ಯಸಾ. ೭೨೩).

**ಪೊರ್ಕೆ :** ೧. ಉಡೆಯ ಪೊರೆಯೊಡಲ ಪೊರೆಯಾಗಿ ಬೆಮರೇರೆ (ಕಾಊರ. ೦೩೦-೩೩೦). ೨. ಕೆಟ್ಟಳಿವ ಕಾಡಿನುರುವಲ್ಗಳಂ ಪೊರೆಯರಡ ಕಟ್ಟಿಕೊಂಡೊಯ್ದರೇಂ ಪೊಯ್ದು ಕಾಡಂದಂ (ಕಾಊರ. ೦೨೮-೨೭೩). **ಹೊರ್ಕೆ :** ೧. ಧರಣಿಯ ಹೊರೆಯೊಳು ತಿಣುಕುವ ಫಣಿ ಮೇಲೆ ಹಾಯಾಗಿ ಹರಿ ಮಲಗಿಹನು (ಇಂಶಾಕ. ೦೦೪-೭); ಅಂತರಾಳದ ರಸಗಳು ನಮ್ಮ ಮನಸ್ಸು ಮತ್ತು ಜೀವನವನ್ನು ಪ್ರಚೋದಿಸಲಾರದೆ ಹೋದರೆ ಆ ಜ್ಞಾನ ನಮಗೊಂದು ಹೊರೆ (ಶಿಕ್ಷದ. ೨೩೮). ೨. ಯಿದನು ಬಾಣರಾವಿ ಕಸಬೇಗ್ರಾಮಾನು ಗ್ರಾಮಂಗಳ ಆಯ ಬೆಳಸಿ ಮದೆ ಹೊರೆ ಸೊಪೆ ಆಳಿತ್ತಿ ಕಾಳು ಹಳಗಳ ವಳಗೆ ಯಿದನ್ತ ಮಾನ್ಯಗಳು (ಎಕ. XI, ಚೋಳಶಾ. ೨೩-೦೨೬; 1666); ಬ್ರಹ್ಮಋಷಿಗಳು . . . ಕುಶಾಸನಗಳಲ್ಲಿ ಕಟ್ಟಿರುವ ಅರಣಿ ಮೊದಲಾದ ಯಜ್ಞ

ಪಾತ್ರೆಗಳ ಹೊರೆಗಳಂ ಪೊತ್ತು (ಸೌಗಂ. ೫೦೨-೧೧). ೪. ನಾನು ಋಣ ತೀರಿಸುವ ಹೊರೆಯನ್ನು ನಿರ್ವಹಿಸುತ್ತಿರುವೆನು (ಹಾಹುತ. ೬೧); ಈ ಕೂಸಿನ ಹೊರೆಯೆಲ್ಲಾ ನಿಮ್ಮ ಮ್ಯಾಲ ಒಪ್ಪಿಸೀನಿ (ಸಂದಯ. ೬); ಬರೀ ಮಾತಿನವ ಹೊರೆ ಹೊತ್ತಾನೇ? (ಗಾದೆ). ೮. ಗುಂಪು; ರಾಶಿ : ಕರದ ಶೂಲದ ಪೆಣನ ಹೊರೆಗಳ ಸುರೆಯ ಘಟೆಗಳು ಮುಕ್ಕುಳಿಸಿ ಜೋಂಪಿಸಿವ ಕಂಗಳ . . . ನರಕಪಾಲದ ಮಾಲೆಗಳ ಸಂಗರದ ತಾಟಕಿಯೆನಿಪ ರಕ್ಕಸಿ ಬಂದಳಾಹವಕೆ (ಅಪಂರಾ. ೧-೨೦-೨); ಅವರು ನಮಗೆ ಒಂದು ಹೊರೆ ಪುಸ್ತಕಗಳನ್ನು ಕೊಟ್ಟರು (ಶಾರಿಖ. ೨೦೨). ೯. (ಆಲಂ) ಬೇಡವಾದ ಹೊಣೆ ಅಥವಾ ವ್ಯಕ್ತಿ : ಅವ್ಯಕ್ತರೀತಿಯಲ್ಲಿ ತನ್ನನ್ನು ಹೊರೆಯಾಗಿ ಕಾಣುತ್ತಿರುವಂತೆ ಅವನಿಗೆ ತೋರುತ್ತಿತ್ತು (ಶಿರಾಕ. ೩೦). **ಹೊಱೆ** : ೧. ನಾಗರಾಜನುತ್ತಮಮಣಿಮಸ್ತಕಕ್ಕೆ ಹೊಱೆ ಹಿಂಗಿದುದು (ಎಕ. XVI, ೯೬-೦೩; 1147); ನಿನ್ನ ಸೌಕುಮಾರ್ಯಕ್ಕೆ ಹೊದೊಡಿಗೆ ಹೊಱೆ ನಿನ್ನ ಮುಖಮಂಡಲಕ್ಕೆ ಶಶಿಮಂಡಲಮುಪ್ಪರತಿಯ ಪಾತ್ರೆ (ನಂಪಿರ. ೦೯-೦೩); ಹಸುಳೆಗಮರಾಚಲದ ಹೊಱೆ ಸೈರಿಸುವುದೇ ಮಱಿಹುಲ್ಲೆ ಸಿಂಹದ ಮಸಕಕಿದಿರೇ (ಕುವ್ಯಾಭೀ. ೩-೬೯); ಕ್ಷಿತಿಗೆ ಬಲುಹೊಱೆಯಾಯ್ತು ಬದುಕುವ ಗತಿಯ ಕಾಣದೆ ಸಕಲದೇವಪ್ರತತಿ ನೆರೆದೈತಂದು ಕಂಡುದು ಕಮಲಸಂಭವನ (ತೊರರಾ. ೦-೬-೯೩). ೨. ಸಾಸಿರ್ವರುಂ ಬಿಟ್ಟು ಧರ್ಮ್ಮ ಎಲೆಯ ಹೇಱಿಂಗೆ ಬೇಳೆ ಹೊಱೆಗೆ ಬೇಳೆ ಹೊತ್ತಳಕ್ಕೆ (ಸೌಇಇ. XI-ii, ೦೨೨-೦೨; 1072); ಮಣಿಮಯದ ಮೋಹಳದ ಹಿರಿಯುಬ್ಬಣದ ಸಬಳದ ಶೂಲ ಸುರಗಿಯ ಕಣೆಯ ಹೊಱೆ ಚಾಚಿದವು ಕಟಕಾಚಾರ್ಯನಿದಿರಿನಲಿ (ಕುವ್ಯಾದ್ರೋ. ೦೫-೦೯); ಕರಿಯ ಮದ್ದಿನ ಪೊಟ್ಟಣ ಕಟ್ಟದಂಬಿನ ಹೊಱೆ ಹುರಿಮರಳಿನ ರಾಶಿ ಅರೆದ ಸಾಸವೆಗೊಡ ಕಾದಡವಿಯ ಬಹುಹರವಿಗಳೊಪ್ಪಿದುವಾಗ (ಕಂಪಿಶಿ. ೦೦-೦೩೩). ೭. 'ಹೊಱೆದಲೆ' ಪರಾ.

**ಪೊಱೆಪೊಱೆ** (ದ್ವಿರುಕ್ತಿ) : ನಿನ್ನೀ ಪೊಱೆಪೊಱೆಯಬಲ್ಗಳ ಭಾರಕೆ ನಡುಗಿದಪೆನೆ (ಶದ್ಮಶ್ರ. ೨೮-೬೦೭). [ದೇ.॥ ತಮಿ. ಪೊಱೈ ; ತುಳು. ಪುದೆ, ಹೊರೆ ; ಕೊಡ. ಪೊರೆ ; ತೊದ. ಪಱ್]

**ಪೊಱೆಕಾಱ, ಹೊರೆಕಾರ, ಹೊಱೆಕಾಱ, ಹೊಱೆಗಾಱ** (ನಾ). ೧. ಹೊರೆಯನ್ನು ಹೊತ್ತಿರುವವನು : ಪೊಱೆಕಾಱನ ಪೊಱೆಯೆಂತಂತೆ (ಶಿಶಿವಾ. ೩-೫) ; ಗುಲ್ಮದಂತೊತ್ತುವರ್ ಪೊಱೆಕಾಱನಂತೆ ಬಿಗಿದು ಕಟ್ಟುವರ್ (ಧರ್ಮಾಮೃ. ೩-೭೩); ನಿಸಿಯೆಂಬ ಗಜದ ಪುರದ ಪೊಱೆಕಾಱ ನಂದೆಸೆದು ಮಱಿಯ ಸಾರ ಸೂರ್ಯ್ಯ ವಿಷಮಕೋಪದಿ ಚಾರಿವರಿದಂತಾ ತಮ ದಶದಿಕ್ಕು ತುಂಬಿತೇನೆಂಬೆ (ಅಪಂಶ. ೩-೦೦೫). **ಹೊರೆಕಾರ** : ೧. ದಾರಿಯಲ್ಲಿ ಹೋಗುವ ಒಬ್ಬ ಸೌದೆ ಹೊರೆಕಾರನ ಜೀವನ ಇಷ್ಟು ದುರಂತವಾಗಿರಬಹುದೆಂದು ಯಾರಿಗೆ ತೋರಬೇಕು ? (ಸಖ್ಯಕ. VII, ೯೮). **ಹೊಱೆಕಾಱ** : ೧. "ಭಾರವಾಹ, ಭಾರಿಕ—ಹೊಱೆಕಾಱ" (ಪಾಶರಾ. ೬). ೨. ಹೊಣೆಯನ್ನು ಹೊತ್ತಿರುವವನು,—ವಹಿಸಿಕೊಂಡಿರುವವನು : ಮತ್ತೀಕೆ ಹುಸಿಯ ಹೊಲೆ ಹೊಱೆಕಾಱ ಕರೆದೆಯೆನೆ ತೆತ್ತ ಸಾಲದ ಭರದೊಳಱಿಯದಾಡಿದ ನುಡಿಗೆ ಹೊತ್ತ ಹುಸಿಯುಳಿಯಬೇಕೆಂದೆನಲು ನಿನ್ನ ಕುಲವಳಿದಲ್ಲದಳಿಯದೆನಲು (ಹಕಾಕಾ. ೧೦-೨೯); ಕ್ಷಿತಿಯ ಹೊಱೆಕಾಱರಿಗೆ ಸೌಖ್ಯಸ್ಥಿತಿಯ ಮಾಡುವೆನಿನ್ನು ಕುರುಭೂಪತಿ ವಿರೋಧಿಯ ವಿಧಿಯನೀಗಳೆ ಶೋಱಿಸುವೆನು (ಕುವ್ಯಾಭೀ. ೯-೪). **ಹೊಱೆಗಾಱ** : ೨. ಮೇದಿನಿಯ ಹೊಱೆಗಾಱರೆಲ್ಲರೂ ವೇದಿಸುತ ಬೆಂಡಾಗುತಿರ್ದರು (ಸಂಭಶ. ೯-೬).

[ ಪೊಱೆ + – ಕಾಱ ]

**ಪೊಱೆಗಟ್ಟು, ಹೊರೆಕಟ್ಟು, ಹೊಱೆಗಟ್ಟು** (ಕ್ರಿ). ಹೊರೆಯಾಗಿ ಕಟ್ಟು ; ಗಂಟುಕಟ್ಟು : ಅಂತು ಪೊನ್ನಂ ಪೊಱೆಗಟ್ಟಿಕೊಂಡು ಪಾತ್ರಮಾ ಪಣಸೆಯ ಮರದೊಳ್ ಪೊಕ್ಕಡಂಗಿರ್ಪುದುಂ (ಕಂಕಶಂ. ೦೫೫-೧೬); ಪೆರ್ಬುಲಿ ಬಡುವಾರುಗೋಡುವಲೆಯೆಂಬಿನಿತಂ ಪೊಱೆಗಟ್ಟಿ ಕಾನನಸ್ಥಲದೊಳಗಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ದಕಳು. ೨-೦೦೫). **ಹೊರೆಕಟ್ಟು** : ತೋಟಕ್ಕೆ ಹೋಗಿ ಸೋಗೆಗಳನ್ನು ಆರಿಸಿ ಹೊರೆಕಟ್ಟಿಕೊಂಡು ಬೇಗನೆ ಬಂದುಬಿಡು (ಊತಿ). **ಹೊಱೆಗಟ್ಟು** : ಆ ಹುಲ್ಲ ಒಕ್ಕಿ ಮೆಟ್ಟಿಸಿ ತೂಱುವಾಗ ಹೊಟ್ಟು ಕಳೆದು ಭತ್ತ ನಿಂದು ಹುಲ್ಲು ಹೊಱೆಗಟ್ಟಿತ್ತು (ಬೋಳಪಖ. ೦೯೫-೫೫೩) ; ಬೆಳೆದ ಭೀಮಾಟವಿಯೆಡೆಯೊಳುಜ್ವಳ ಸುಗಂಧದ್ರವ್ಯಮೂಲಿಕೆಗಳನಱಿಸಿ ಹೊಱೆಗಟ್ಟಿ ಹೊತ್ತು ಪಳಾಸಪುರವೆಯ್ದೆ (ಸಾಳ್ವಭಾ. ೦೬-೯೦). [ ಪೊಱೆ + ಕಟ್ಟು$_1$ ]

**ಪೊಱೆಯಾಳ್, ಪೊಱೆಯಾಳು, ಹೊರೆಯಾಳ್, ಹೊಱೆಯಾಳು** (ನಾ). ಹೊರೆಯನ್ನು ಹೊರುವ ಆಳು, —ಸೇವಕ : ಪೊಱೆಯಾಳ್ಗಳೊಟ್ಟೆ ವೇಸರಮೆತ್ತು ಬಂಡಿಗಳ್ನಿಱೆ ಕನಕಭಾರದಿಂದೈದಿದುವು (ಕೃಪಿಚಾ. ೫-೬೩). **ಪೊಱೆಯಾಳು** : ಆಣಿಮುತ್ತಿನ ಕಂಠಮಾಲೆ ಚೌಕುಳಿ ಪೊನ್ನ ಕಾಣಿಕೆ ಪೊಱೆಯಾಳು ಸಹಿತ ಕ್ಷೋಣಿಪ ಮಧುರೆಯ ತಿರುಮಲೇಂದ್ರನ ಸುಪ್ರವೀಣಮಂತ್ರೀಶನೈತಂದ (ಕಂನಪಿ. ೨೦-೬೮). **ಹೊರೆಯಾಳ್** : ನಿಯೋಗಿ ಹೂವಯ್ಯ—ಕೆಳದಿ ಶಿವಪ್ಪನಾಯಕನ ರಾಯಭಾರಿ ಹೂವಯ್ಯನ ಪರಿವಾರದವರು ಹೊರೆಯಾಳ್ಗಳು (ಮಂತ್ರಕ. ೬-೭). **ಹೊಱೆಯಾಳು** : ಅಗಣಿತದ ಪೆಟ್ಟಿಗೆಯ ಹೊಱೆಯಾಳುಗಳ ಸಂದಣಿ ನೂಕಿದುದು ಸರಕುಗಳ ಸದಳದ ಭಂಡಿಗಳು ಭಾರಿಸಿದವಿಳೆ ರ್ಝುಡಿಯೆ (ತೊರರಾ. ೦-೧೬-೦೦).

[ ಪೊಱೆ + ಆಳ್$_3$ ]

**ಪೊಱೆಯಾಳು** 'ಪೊಱೆಯಾಳ್' ನೋ.

**ಪೊಱೆವೊರಕ** (ನಾ). (?): ಸುರಯಿಯ ಬರಿಮುಗುಳ್ಗಳ ಪೊರೆವೊರೆಯೊಳ್ ಪೊಱೆವೊರಕ[ಪಾಠಾಂ. ಪೊರೆವೊರ, ಪೊರೆವೊರೆ]ನಲ್ಲದಲ್ಲುಗುವ ರಜಂಬೊರೆದು ಪರಕಲಿಸಿದಳಿಕುಳಪರಿಕರಮುಮನತನುಶಿಖಿಯ ಕಿಡಿಗಳೆ ಗೆತ್ತಳ್ (ಶಂಶಭಾ. ೫-೫); "ಭಾರವನ್ನು ವಹಿಸುವುದು" (ಶಂಶಭಾ. ಶಬ್ದಕೋಶ); "ಭಾರದ ವ್ಯಾಪ್ತಿ" (ಶಂಶದೀ. ೦೭೯). [ ? ]

**ಪೊೞಕು, ಪೊಳಕು$_2$** (ನಾ). ಸಾಮಾನ್ಯವಾದ ಆಕಾರ; ಸಹಜವಾದ ರೂಪು : "ಪೊೞಕು = ಸಾಮಾನ್ಯಾಕೃತಿ" (ಶಮದ. ಶಂ. ೦) ; "ಪೊೞಕೆಂದು ಸಾಮಾನ್ಯಾಕೃತಿ" (ಕಶಸಾ. ೫೯-೨೯೨) ; "ಪೊೞಕೆನೆ ಸಾಮಾನ್ಯಾಕೃತಿ" (ಕವಿಕಂ. ೦೯೦) ; ನೋಟಱ್ಪಡಿಂದಿನ ಮುಂದಿನ ಖಲನ ಪೊೞಕು ಪೆಟಕಪ್ಪನೆಗಂ, ತುರಿಪದೆ ಕಾದಿ ಗೆಲ್ದು ಹಯಮಂ ತಾರದುೞಿದೆನಾದೊಡೆ (ರಾಪೂಶ್ಯ. ೦೦೦-೦೬). **ಪೊಳಕು$_2$** : ಕೀಳೊರೆಯೊಳಿರ್ದೊಡಂ ಪೊಳಕೆಸೆಯದಿಹುದೇ (ಕಾಂಊರ. ೦೨೮-೨೭೦); ಮಂಜನೊಟ್ಟಲದೊಂದು ಸುಳಿಸುಳಿಗಳಾಗಿ ಪೆಣಪೆಣೆದುಕೊಳುತ್ತಡರ್ದೇರಿ ಪಲಪಲವು ವಿಷಮಾಕೃತಿಗಳಿಂದೆ ಧುಮ್ಮಿಕ್ಕುತೆಲ್ಲ ಪೊಳಕುಗಳಳಿಗ (ಸಂಸಪ. ೩೨-೦೯೩). [ ? ]

**ಪೊೞತ್ರ್ಯಾನ್?** (ನಾ). ಒಬ್ಬಾತನ ಹೆಸರು (?) : ಮನ್ದಿರಾವನ್ತನ್ದಿಕ್ಕಟ್ಟಿ ಪೊೞುತ್ತದು ಕಣ್ಡಗವ್ಯದೆ ಕಟನಿಯು ಪಾೞುಂ ಮಗೆತ್ತಾಣಮುಂ ಸರ್ವ್ವಪರಿಹಾರಂ ಕನ್ದಪಕ್ಕೊಡಾದೊರ್ಪ್ಪಣ್ಗ್ಟ ಮಹಾಪಾತಕಪ್ಪಾಪ್ತರ್ ಪೊೞತ್ರ್ಯಾನ್ಪೆತ್ತದು (ಎಕ. IX (8). ಹೊಸಕೋ. ೫-೦೫ ; 900). [ ? ]

**ಪೊೞರವ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ರಾಚಮಲ್ಲಪೆರ್ಮ್ಮನಡಿ ಪ್ರಿಥುವೀರಾಜ್ಯಗೆಯೆ ಪೊೞರವ ಬೆಸಗೆಯರ್ ಎನೆ (ಎಕ. XII, ತಿಪಟೂ. ೯೭-೦ ; ಸು. 880). [ ? ]

**ಪೊೞಲ್, ಪೊಳಲ್, ಪೊಳಲು, ಹೊಳಲು$_2$** (ನಾ). ೧. (ಹೆಚ್ಚು ಜನರು ವಾಸಮಾಡುವ) ಊರು ; ಪಟ್ಟಣ ; ನಗರ : "ಪೊೞಲೆಂದು ನಗರಂ" (ಕಶಸಾ. ೫೯-೨೯೭) : ಪೊೞಲ ನಿಗ್ಗ್ರಡಿ ಆಚದೊಳ್ ಎರಡು ದ್ರಮ್ಮ (ಮ್ಯಅಂ. ೦೯೩೭, ೨೬-೨೦ ; 872) ; ಜಲನಿಧಿಯಂ ಪಾಯ್ದೊರ್ವನೆ ನಿಲಿಕಿ ದಶಾನನನ ಪೊೞಲನಾ ಲಂಕೆಯನಾ ಕುಲಮಿಲ್ಲದಿೞಿದು ನಿಂದಂ

(೯೭ಬಾ. ೩-೦೯೧) ; ಪಾಟಲೀಪುತ್ರಮೆಂಬ **ಪೊಟಲ್** (ಸುಕುಮಾ. ೭-೦೭ ವ) ; ಈಗಳಿನ್ ಪಿರಿದಾಗಿ ದೇವ್ಪಿಪೆನ್. ಪೊಟಲ್ಗೆಲ್ಲ ಸಾಟ್ ಪೇಟ್ ಪೋಗು (ಅಂತಿಗೊ. ೪-೭೨). **ಪೊಳಲ್ :** ಪೊಳಲ್ ಕುವಳಾಲವಾಗೆ (ಎಕ. VII, ಶಿಕಮೊ. ೪-೩೩ ; 1133). **ಪೊಳಲು :** ಸ್ವಸ್ತಿ ಶ್ರೀಮತು ನಾಲ್ಕುಯುಗದ ಪೊಳಲು ಕೋಗಳಿ (ಸೌಇಇ. XI-i, ೮೭-೩೦ ; 1050) ; ಯತಿಪನಾಜ್ಞೆಯಿಂದ ವದಿರೆಯ್ದುಂದು ಪೊಳಲಂ ಸಾರ್ದರು (ಹಕಾ. ೦೨-೩೭) ; ಸರ್ವಸಂಭ್ರಮವ ಬೀಱುತ್ತಲಾ ಪೊಳಲೊಳು ಮೆಱೆಯುತ್ತತಂದ (ಕಂಪಿ. ೯-೩೯) ; ನಾವು . . . ದೂರದ ಪೊಳಲಿಗೆ ಯಾತ್ರೆ ಹೊರಟಿದ್ದೇವೆ (ಹಾಹುಕ. ೯೦). **ಹೊಳಲು₂ :** ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವ (ಮಹಾದೇ. ಬ. ೪೩-೦೦೦) ; ಹೊಳಲು ಹೊಸರೀತಿಯಲಿ ಮಿಗೆ ಕಂಗೊಳಿಸುತಿರ್ದುದು (ತೊರಾ. ೦-೯-೦೦) ; ಹೊಳಲುಗಳ ಕಟ್ಟಿ ದೊರೆಯಾಗು ಸೊನ್ನಲಿಗೆ ಕಳ ಸಾಗಿ ಬೆಳಗಿ ಹೊಸಮತಕೆ (ಶಸ್ವಾ. ೩೦೪).

[ದೇ.॥ ತಮಿ. ಪೊಟ್ಟಲ್ ; ತೆಲು. ಪ್ರೋಲು]

**ಪೊಟಲಬ್ಬೆ** (ನಾ). ಒಬ್ಬಾಕೆಯ ಹೆಸರು : ಪೊಟಲಬ್ಬೆಯು ಕೊಟ್ಟ ಮಣ್ಣಾಯ್ಗೊಳ (ಎಕ. IV, ಎಳಂದೂ. ೨೫-೦೨ ; ಸು. 925?).

[ಪೊಟಲ್ + ಅಬ್ಬೆ₁]

**ಪೊಟಲಮ್ಮ** (ನಾ). ಒಬ್ಬಾತನ ಹೆಸರು : ಮತ್ತರಸರಾ ಪೊಟಲಮ್ಮನಾ ಮೇಗೆಟ್ಟು (ಎಕ. X, ಶ್ರೀನಿವಾ. ೪೦-೨; ಸು. 900). [ಪೊಟಲ್ + ಅಮ್ಮ₁]

**ಪೊಟಲಿಗ** (ನಾ). = ಪೊಟಲಿಚ : ಪೊಟಲಿಗಂ, ಕಾಲೂರಿಗಮಿತ್ಯಾದಿ (ಶಾಶಾಕೂ. ೦೭೫ ಪ್ರಯೋ). [ಪೊಟಲ್ + —ಇಗ]

**ಪೊಟಲಿಚ, ಪೊಳಲಿಚ** (ನಾ). ನಗರದಲ್ಲಿ ಹುಟ್ಟಿದವನು; ಪಟ್ಟಣಿಗ; ನಾಗರಿಕ : "ಪೊಟಲಿಚರ್ ಪೌರಾಭಿಧಾನಂಗಳೊಳ್" (ಕಶಾಶಾ. ೪೫); ಪೊಟಲಿಂದ್ರಪುರಂ ಕಾಲೂರ್ ಪೊಟಲಿಂದ್ರರ್ ಪೊಟಲ ಮಾನಸರ್. ಕಾಲುರಿಚರ್ ಪೊಟಲಿಚ್ಚರೆನೆ ಸೊಗಯಿಸುವುದು ಪೊಟಲಿಂ ಕಾಲೂರ್ಗ ಳಿಂದಮಂತಾ ವಿಷಯಂ (ಕಾವ್ಯಾವ. ೩೩೫); ಈ ಪೊಟಲ ಪೆಂಡಿರೆಲ್ಲರಂ ಮಱೆದು . . . ಪೊಟಲಿಚರೆಲ್ಲರುಮೊಲ್ಲನುಲಿದು ಮೊಱೆಯಿಟ್ಟು (ಅರ್ಜನೇ. ೫-೭ ವ). **ಪೊಳಲಿಚ :** ಮಡಿವಳರ ಕಾಲುರಿಚ ಪೊಳಲಿಚ ದಡಿಗ . . . ಕಂಚುಗಾಱರ ಕೇರಿ ಮೆಱೆದಿಹವು (ಸಾಳ್ವಭಾ. ೨-೯).

[ಪೊಟಲ್ + — ಇಚ]

**ಪೊಟಲೊಡೆಯ** (ನಾ). ಊರಿನ ಯಜಮಾನ ; ನಗರಪತಿ : ತೊಱಲಲಾಱದಲಿಲನೆಯ್ದಿದ ಪೊಟಲೊಡೆಯನ ಮಗಂ (ವರ್ಧಕ. ೨-೪೯ ವ).

[ಪೊಟಲ್ + ಒಡೆಯ₁]

**ಪೊಟಲ್ಗಾಪು** (ನಾ). ಊರಿನ ಕಾವಲು; ನಗರರಕ್ಷಣೆ.

**ಪೊಟಲ್ಗಾಪಿನವರ್** = ಊರಿನ ಕಾವಲುಗಾರರು; ನಗರರಕ್ಷಕರು; ತಳವಾರರು : ಪೊಟಲ್ಗಾಪಿನವರ್ ಪೊಡಮಟ್ಟು ಪೇಟ್ದರ್ (ಅದ್ಭುತ. ೪೨-೨೦). [ಪೊಟಲ್ + ಕಾಪು]

**ಪೊಟಲ್ಚೋರ, ಪೋಳಲ್ಚೋರ, ಪೋಟಲ್ಚೋರ** (ನಾ). ನೊಳಂಬ ರಾಜರಲ್ಲಿ ಒಬ್ಬಾತನ ಹೆಸರು : ಆತನ ಮಗಂ ಪೊಟಲ್ಚೋರದೇವಂ (ವೈಎಂ. ೦೯೩೨, ೪೮-೫; ಸು. 960); ನೊಟಮ್ಬರ ಭೀಮಂ ಪುಸಿಗೆಗೆಯ್ವೊಂ ರಾಜರಾಜಾಶ್ರಯಂ ಶ್ರೀಮತ್ಪೊಟಲ್ಚೋರದೇವಂ (ಸೌಇಇ. IX-i, ೩೦-೩೪; 965). **ಪೋಳಲ್ಚೋರ :** ಪೊಳಲ್ಚೋರನೆಮ ನೊಟಮ್ಬ ಮಹಾಸಾಮನ್ತನ್ (ಎಕ. XII, ತಿಶಟೂ. ೪೭-೭; 880). **ಪೋಟಲ್ಚೋರ :** ಶ್ರೀವಧುಧರೆ ಪೋಟಲ್ಚೋರಾವನಿಪಂಗಗ್ರಮಹಿಷಿ ಭೂಪಾನಾಮ್ಬಿಕೆ (ಎಕ. X, ಮುಳಬಾ. ೩೮-೩; ಸು. 890). ❡ ಈ ಎರಡು ರೂಪಗಳೂ ' ಪೊಟಲ್ಚೋರ ' ಎಂಬುದರ ಅಪಲಿಖಿತವಿರಬಹುದು.

[ಪೊಟಲ್₇ + ಚೋರ]

**ಪೊಟಲ್ವೀದಿ** (ನಾ). ಊರಿನ ಕೇರಿ ; ನಗರದ ರಸ್ತೆ ; ಪಟ್ಟಣದ ಬೀದಿ : ಪೆಗೆಗಳುಮಂ ಪೆಂಡಿರುಮಂ ಮಿಗೆ ಸೋಲಿಪುವವನ ಬೀರಮುಂ ಗಾಡಿಯುಮಾವಗಮುಡಸಿ ತಾಗೆ ಕಣೆಯುಂ ಮುಗುಳ್ಗಣೆಯುಂ ಮೊನೆ ಯೊಳಂ ಪೊಟಲ್ವೀದಿಯೊಳಂ (ಕಬ್ಬಿಗಾ. ೪೮).

[ಪೊಟಲ್ + ಬೀದಿ]

**ಪೊಟವು** (ನಾ). (?): ಪೊಟವನೆ ಭಾವಿಸದೇಱೆಯುಮಿಟಾಯಿಯಯುಮಾಗಳ್ ನಟಾಗ್ರವಾಲಾಗ್ರದಿನೊಂದುಟಾಯಿಯದವಯುವಮನವಯುವಮುಟಾಯಿಯದು ಮನಿಸದೆ ಕುಮಾರಿ ನೋಡಿದಳನಿಸಂ (ಶಾಂತಿಕ. ೫-೦೦೦).

[ ? ]

**ಪೊಟಾಯೂರ್** (ನಾ). ಒಂದು ಊರಿನ ಹೆಸರು : ಪಡುವಲು ತೊಣ್ಣಾಲದ ಪೊಟಾಯೂರ ಸಂದಿ (ವೈಎಂ. ೦೯೨೫, ೦೦೫-೪೪; 634).

[ಪೊಟ್₇ + ಊರ್]

**ಪೊಟ್³, ಪೊಳ್ಳೆ₃, ಹೊಳ್ಳೆ₃** (ನಾ). ೧. ನದಿ ; ತೊರೆ ; ಹಳ್ಳ : "ತೊಱೆ ಯೊಳ್ ಪೊಟ್³ಯೆಂದು" (ಕಶಾಶಾ. ೬೨); ನೀರ ಪೊಟ್³ ಪಾಡುವೆಡೆ ಹೊಲಗೇರಿ . . . ಎಂಬೆಡೆಗಳುಚಿತವೋಸಜಾಗೇಳಲ್ (ಲೋಕೋಪ. ೦೨-೫೩). ೨. ದಾರಿ; ಹಾದಿ; ಮಾರ್ಗ : "ಪೊಟ್³= ಬಟ್ಟೆ, ತೊರೆ (ಹೊಳೆ)" (ಕಮದ. ಕಂ. ೦) ; " ಪಥ ನದಿಗಳೊಳ್ ಪೊಟ್³ " (ಕಬ್ಬಿಮಂ. ೦೦೫) ; ಆ ನದಿ . . . ಅಗಸರ ಪೊಟ್³ಯೊಳಾಡುತಿರ್ಪ ಕಟ್ತ್ರಿಯಂ ಕಂಡು (ಶಂಕಕಂ. ೨೯೨-೨೦); ಕೊಳದ ತಡಿಯೊಳ್ ಕಾಲ್ಗೊಗಂದೊಳಿವ ಮಾನಸರಂ ಸರೋವರ ಮಂ ಪಾಯ್ವ ಪೊಟ್³ ಯಾವುದೆನೆ (ಅರ್ಜನೇ. ೬-೦೪ ವ). **ಪೊಳ್ಳೆ₃ :** ೧. "ಪೊಳೆಯೆನಲ್ ಹೊಳೆ" (ಕಪ. ೩೯) ; ಸಂಗವದ ಸಂಗವೇಶ್ವರ ××× ಯ ಪೊಳೆಗೆ ನೂಱು ಮತ್ತ (ಸೌಇಇ. XI — i, ೦೦೩-೩೭; 1070); ಬಾವಿ ಕೆಱೆ³ ತೊಱೆ³ ಕಟ್ಟೆ ಪೊಳೆಗಳಿಂದ . . . ಸೊಗಸ ಬೀಱುವುದು (ಸೌಂದಕ. ೨-೩); ಉದಕಂ ಪೊಳೆಯಂತೆ ಪರಿಯಲಾದುದು (ಮಹಾಪು. ೬-೦೭). **ಹೊಳ್ಳೆ₃ :** ೧. ಹೊಳೆಯುಂ ನಡುವಣ ಹುದುವಿನ ಹೊರದ ಮಣ್ಣು (ವೈಎಂ. ೦೯೩೩, ೩-೦೩; 1169); ಹೊಳೆಗಳುಱೆ³ ಬತ್ತಿದುವು ನಿರ್ಜರ ಜಲವಡಂಗಿದವು (ತೊರಾ. ೦-೫-೦೭); ಪೂವಲ ಹನುಮ ಪೊಳಲನೆ ಖಾನನ ನೇಮದೆ ತೆಂಕಣ ಹೊಳೆಯ ತಡಿಯ ಬೀಡ ಬಿಟ್ಟ (ಕಂಪಿ. ೦೨-೦೩); ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದ ಹಾಗೆ (ಗಾದೆ).

[ದೇ.॥ ತಮಿ. ಪುಟ್ಟ್ರಿ; ಮಲ. ಪುಟ; ತುಳು. ಹೊಳೆ; ಕೊಡ. ಪೊಳೆ ]

**ಪೊಟ್³ಗಟ್ಟು** (ಕ್ರಿ). ನದಿಯಾಗಿರುವಂತೆ ಮಾಡು : ಗಟಾಯಿಸುವ ತಮಂ ಮೂಡಲ್ ಪೊಟ್³ಗಟ್ಟುವ ಸಂಜೆಗೆಂಪು ಪಡುವಲ್ ಕೈಕೊಂಡೆಬಲೆ ಧರೆಗರ್ಧನಾರಿಯ ತಟ³ವಿಡಿದಂತಾಯ್ತು ಗಗನಮಂಡಲಮನಿಸುಂ (ಅನಂಪು. ೭-೭೨). [ ಪೊಟ್³ + ಕಟ್ಟು₁ ]

**ಪೊಟ್³ದುಂಗೆ** (ನಾ). ಸುವಾಸನೆಯ ಹುಲ್ಲಿನ ಗೆಡ್ಡೆ ; ಪರಿಮಳ ಯುಕ್ತವಾದ ಹುಲ್ಲುಗೆಡ್ಡೆ : ಪಚ್ಚನೆ ಬೆಳೆದ ಹರಿತ ಶಾದ್ವಲಮುಂ ಸುತ್ತುಂ ನೀಳ್ದ ಪೊಟ್³ದುಂಗೆಯ ಜೊಂಪಮುಂ ವಿರಾಜಿಸೆ (ರಾಮಾಕ್ಯ. ೩೦-೨೦). [ ಪೊಟ್³ ? + ತುಂಗೆ₁ (< ತುಂಗ₁) ]

**ಪೊಟ್³ಮೆಟ್ಟು, ಹೊಳೆಮೆಟ್ಟು** (ಕ್ರಿ). ಹೊಳೆಯ ನೀರನ್ನು ಪೂಜಿಸು ವುದಕ್ಕಾಗಿ ನೀರಿನಲ್ಲಿ ಇಳಿ; ❡ ಬಾಣಂತಿಯು ಸೂತಿಕಾಗೃಹದಿಂದ ಈಚೆಗೆ ಬರುವ ದಿನ ಹೊಳೆಯ ನೀರಿನ ಬಳಿ ಸ್ನಾನಮಾಡಿ ಗಂಗೆ ಯನ್ನು ಪೂಜಿಸಿ ಬರುವ ಪದ್ಧತಿಯಿತ್ತು, ಹಾಗೂ ಇದೊಂದು ಪವಿತ್ರೀಕರಣವಿಧಿಯಾಗಿತ್ತು : ಇಟಾದೊಡೆ ಕೂರದ ಪೆಂಡಿರ ಕೆಟಗಾದಪೆವೆಂದು ರತ್ನಸೋಪಾನಕದೊಳ್ ಗಟಗಟನಿಟಾಯದೆ ಬಾಣತಿ ಪೊಟ್³ಮೆಟ್ಟುವ ತೆಱದೆ ಗುಜ್ಜುಮೆಟ್ಟಿದರರೆಬರ್ (ಅನಂಪು. ೭-೪೪). **ಹೊಳೆಮೆಟ್ಟು :** ಗಾಳಿಯೆಂಬ ಸುಕುಮಾರನಂ ಪಡೆದು ಸಂಧ್ಯಾವನಿತೆ

ಪೊಳೆವೆಟ್ಟು ಹೊದೆದ ಕಾರ್ಗಂಬಳಿಯಿಂದೊ . . . ಪೇಳೆಂಬ ವಿಸ್ತಾರದಿಂ ಕಾಳಗತ್ತಲೆಯೆಂಬ ಲತೆ ಹಬ್ಬಿ ಪರಿಕಲಿಸಿ ಮಡಲಿಱಿದುದು (ಸೋಮಸುಕ. ೨-೭).

[ ಪೊಟ್ + ವೆಟ್ಟು₁ ]

**ಪೊಟ್ಟವಕ್ಕಿ** (ನಾ). ಹೊಳೆಯಲ್ಲಿರುವ ಪಕ್ಷಿ; ನೀರುಹಕ್ಕಿ ; ಚಕ್ರವಾಕ : ಮಿಸನ ಕಣೆ ಪಾವಸೆ ಬಿಡುಮುಡಿ ಪೊಟ್ಟವಕ್ಕಿ ಬಲ್ಮೊಲೆ ಸುಟಿ ಪೊರ್ಕುಳ್ ಮಳಲೊಟ್ಟಿಲ್ ಪೊಱಿಮಾಱ್ (ರಾಮಾಶ್ವ. ೮-೧೦). [ಪೊಟ್ + ಪಕ್ಕಿ]

**ಪೊಟ್ರ** (ನಾ). ಚಿನ್ನದ ಪಾತ್ರೆ : ಭಟಾರಾ ಪ್ರಾಸುಕವಪ್ಪ ನೀರಂ ಪೊಟ್ರದೊ[ಪಾಠಾಂ. ಱೊ]ಳ್ ಬಂದುದಂ ಕುಡಿದು ನಿಮ್ಮ ಸೇದೆಯು ನಾಱುಗುಂ (ವಡ್ಡಾರಾ. ೧೦೩-೩೦); ಪಿರಿದೊಂದು ಪೊನ್ನ ಕರಗವಂ ತೆಕ್ಕನೆ ತೀವಿಯಾದಮಾನುಂ ತಣ್ಣಿದುವುಂ ಕಮ್ಮಿದುವುಮಪ್ಪ ನೀರ್ಗಳಂ ಪೊಟ್ರದೊ[ಪಾಠಾಂ. ಱೊ]ಳ್ ಕೊಂಡು ಪೋಗಿ ಕುಡಿಯಲೆಱೆಯೆ ಕೊಳ್ದರಿಲ್ಲಂ ದೊಡೆ ಭಟಾರರೆಂದರ್ ಪ್ರಾಸುಕಮಾದೊಡಂ ಪೊಟ್ರದೊ[ಪಾಠಾಂ. ಱೊ]ಳ್ ತಂದೊಡಂ . . . ಕುಡಿಯಲುಂ ತಗದು (ವಡ್ಡಾರಾ. ೧೦೪-೩).

[ದೇ.॥ ತಮಿ. ಪೊಱ್ಱು = ಚಿನ್ನದ, ಉತ್ತಮವಾದ]

**ಪೊಟ್ಟಡ** ‘ ಪೊಟ್ಟುಱ್ ’ ನೋ.

**ಪೊಟ್ಟಡೆ** ‘ ಪೊಟ್ಟುಱ್ ’ ನೋ.

**ಪೊಟ್ಟುಱ್**, ಪೊತ್ತೆಡೆ, ಪೊತ್ತುಱ್, ಪೊತ್ತುಱು, ಪೊತ್ತಾಱು, ಪೊಳ್ತಡ, ಪೊಳ್ತಡೆ, ಪೊಳ್ತರೆ, ಪೊಳ್ತುಱ್, ಪೊಳ್ತುಱು, ಪೊಟ್ಪಡ, ಪೊಟ್ಪಡೆ, ಪೊಟ್ಪುಱು, ಹೊತ್ತರು, ಹೊತ್ತರೆ, ಹೊತ್ತಱು, ಹೊತ್ತುಱು, ಹೊತ್ತಾರೆ, ಹೊತ್ತಾಱು (ನಾ). ಪ್ರಾತಃಕಾಲ; ಪ್ರಭಾತ ಸಮಯ ; ಮುಂಜಾವು ; ಬೆಳಗಿನ ಕಾಲ : “ ಪೊಟ್ಟುಱಿಂದುದಯ ಕಾಲಂ ” (ಕಸುಪ. ೧೬೨). ‘ ಪೊಸಪೊಟ್ಟುಱ್ ’ ಪರಾ. **ಪೊತ್ತಡೆ :** ಸಜ್ಜನೆಯೊಳ್ ಶುದ್ಧಾಂತಕಾಂತಾಜನಕ್ಕೆಡೆಯಂ ಮಾಡದವೊಲ್ ಕಡುಗಿ ಬರೆ ನಿದ್ರಾಕಾಂತೆ ಕಣ್ಗೆಯ್ದು ಪೊತ್ತ[ಪಾಠಾಂ. ತ್ತೆ, ಟ್ಟ]ಡೆ ಭೂಕಾಂತನು ಪಾತ್ರನಿತ್ಯನಿಯಮವ್ಯಾಪಾರಪಾರಾಗವಂ (ಅಪಂಪು. ೩-೯೧). **ಪೊತ್ತುಱ್ :** ನಿಲ್ಲದ ತಣ್ಣೆಲರ್ . . . ಪೊತ್ತುಱಿಂ [ಪಾಠಾಂ. ಡಿಂ]ಗಿಲ್ಲದ ಚಂದ್ರಕಾಂತಿ ನೆಲೆಗೊಂಡುದುಗಂಡುಮದೇಕೆ ಕಾವ್ಯದೊಳ್ ಬಲ್ಲ ಮಹಾತ್ಮರುಂ ನಿಲಿಸ ಲೊಲ್ಲರೊ ಭಂಗಚಲದ್ಗುಣಂಗಳಂ (ಲೀಲಾವ. ೧-೩೦). **ಪೊತ್ತುಱು :** ಕತ್ತಲೆಗೆ ತಾರಕೆಗಳಲ್ಲದೆ ಪೊತ್ತುಱಿಗೆ ತಾರಕೆಗಳೇ ಬಲುಮಿತ್ತನಿಸುವರು (ಶಂಕರಾ. ೯-೫೦). **ಪೊತ್ತಾಱು :** ಬಲ್ಲಂ ಕಂಡು ಪೊತ್ತಾಱಿರ್ದು [ಪಾಠಾಂ. ಪೊತ್ತುಱಿ ಲೆರ್ದು] ಸವಣರ ಮೊಗವಂ ಕಾಣ್ಬ ಕಾರಣಂ ಬೇಂಟೆ ದೊರೆಕೊಳ್ಳದು (ಧರ್ಮಾಮೃ. ೯-೨೭ ವ). **ಪೊಳ್ತಡ :** ರಾಜ್ಯಧಾರಣಶುಭದಿನದೊಳ್ಪೊಳ್ತಡಮಾ ರಾಜೇಂದ್ರಂ . . . ನಿಜಾಸ್ಥಾನವಮಂ ಪೊಕ್ಕು (ಪಂಪಾರ. ೭-೧೦ ವ). **ಪೊಳ್ತಡೆ :** ಮೊನ್ನೆ ನಿಮ್ಮೂರೊಳ್ ರಂಜಿಸಿದ ಸಂಜೆಯ ಜೀವವರ್ಣಮ ನಿದೆ! ಈ ಪೊಳ್ತಡೆಯುಂ (ಸಂಸಕ. ೯-೨). **ಪೊಳ್ತರೆ :** “ಪೊಳ್ತರೆಯೆನಲ್ ಹೊತ್ತಾರೆ” (ಕಕರ. ೭೦); ವರುಣದಿಙ್ನಗರಿಯಿಂ ನಡೆದು ಪೊಳ್ತರೆಯಿಂದೆ ನೆಳಲೆಂಬ ದಿವಸಯಾತ್ರಿಕನು (ಶಬ್ದಾಂಗ. ೦೮-೪೯೯); ಪೊಳ್ತರೆಯ ದಾಳಿಂಬ ದರುಣಕಾಂತಿ (ವಿಜಿಗೀ. ೪೪-೦೩). **ಪೊಳ್ತುಱ್ :** ನಿಮ್ಮಂಘ್ರಿಯಂ ಪೊಳ್ತುಱೊಳಿರ್ದಾಲೋಕನಂಗೆಯ್ಯದೆ ನುಸಿಸದೆ ಮೋಣ್ ಧ್ಯಾನಮಂ ಮಾಡದೆ (ಪಾರ್ಶ್ವಕ. ೩೩). **ಪೊಳ್ತುಱು :** ಆವನೀ ಸ್ತುತಿಯಿನೆನ್ನಂ ಸ್ತೋತ್ರಮಂ ಮಾಳ್ಕುಮಿಂ ಮುದದಿಂ ಪೊಳ್ತುಱುಸಂಜೆಯೊಳ್ ಪಸಿಯಿಂಪೆ ತದ್ಗೇಹದೊಳ್ (ವಿಶ್ವಕು. ೦-೨-೨೦೩); ನಿತ್ಯಮುಂ ಪೊಳ್ತುಱು ಬೈಗಿನೊಳ್ತಪ್ಪದೆ ಮಜ್ಜನಮನೆಸ ಗುತ್ತಂ (ಶಾರಶಾಂ. ೯-೩೪). **ಪೊಟ್ಪಡ :** ಪೊಟ್ಪಡ, ತಡಬಡ (ಶಬ್ದಾನು ೬೩ ಪ್ರಯೋ). **ಪೊಟ್ಪಡೆ :** “ಪೊಟ್ಪಡೆ (ಪೊಟ್ಪುಱು) = ಉದಯಕಾಲಂ” (ಕಸುಪ. ಶಂ. ೦); ಕಡುವೆಂಕಯಂ ಕಟಾಕ್ಷಂಬಿಡಿದಿಟ್ಟಾವ ಲಲಾಟಕುಂಕುಮ ಸ್ವೇದಜಲಂ ಕಿಡಿಸಿದುದು ಕದಪಿನೊಳ್ ಪೊಟ್ಪಡೆ ಬರೆದರಸಿಯರ ಪತ್ರ ಲೇಖಾವಳಿಯಂ (ಅಧಿಪು. ೧೦-೫೨); ಬಳವಳವಣ್ಣು ಕಾಯ್ಮೊಪಜೆ ಬಿನ್ನಣ ಮೆಂಬಿವು ಪೊಟ್ಪಡ[ಪಾಠಾಂ. ಱ]ಲ್ಲಿ ಕೈಕೊಳೆ ವನವಹ್ನಿಯಿಂ ಬಿದಿರ ಗಂಟೊಡೆ ವಂತೆ ಭಟಚ್ಛಟಸ್ವನಂ ಬಳೆದುದು ಯುದ್ಧದೊಳ್ (ಜಗರ. ೬-೬೩); ಇನಿ ತೋಂದು ಬೇಗದಿಂ ಪೊಟ್ಪಡೆಯೊಳೀಂ ತೇರಂ ತಂದಯ್ ? (ರಾಮಾಶ್ವ. ೨೭-೨೩). **ಪೊಟ್ಪುಱು :** “ಪೊಟ್ಪಡೆ (ಪೊಟ್ಪುಱು) = ಉದಯಕಾಲಂ” (ಕಸುಪ. ಶಂ. ೦); ಅಂದಿನ ಪೊಟ್ಪುಱಿಯೊಳಯ್ ನೆನ್ನಂ ಕರೆದು (ಕಾದಂಬು. ೭೨೪); ಮಹಾಪುರುಷರ್ ಪೊಟ್ಪುಱಿಯಿರವಂ ದೊರೆಗೊಳಿಸಿದರೆ (ಗೀತಗೋ. ೦೦-೨೦). **ಹೊತ್ತರು :** ‘ಹೊತ್ತರೂಟ’ ಪರಾ. **ಹೊತ್ತರೆ :** ಆ ದೇವ ರಲ್ಲಿ ಬೈಗೆ ನಾಲ್ಕುಘಳಿಗೆ ಪುರಾಣ ಹೇಳುವರು ಹೊತ್ತರೆ ಅಗ್ನಿಷ್ಠಿಗೆಯ ಮಠದಲ್ಲಿ ನಾಲ್ಕುಘಳಿಗೆ ಶ್ರುತಿಯ ಹೇಳುವರು (ಎಕ. XII, ಚಿಕ್ಕನಾ. ೨-೬೨ ; 1261) ; ಎಳೆಯ ಬೆಳಕನು ಮೊಗೆದು ಹೊತ್ತರೆ ಬೆಳ್ಗೆತ್ತಲು ತುಳುಕಲು (ಶಂಗೀತ. ೦೨-೧). **ಹೊತ್ತಱು :** ಗಂಗೇಶ್ವರದೇವರ ಹೊತ್ತಱಿನ ಉಪ ಹಾರಕ್ಕಂ (ಎಕ. VI, ಕಡೂರು. ೦೫೭-೬೩ ; 1191) ; ಹೊತ್ತಱೇಳುತ ಬೈಗೆ ಮುಟ್ಟಲು ತೊತ್ತುಗಲಸಂಗ್ಯೆಯಲದಱಿ ಬತ್ತವೊಬ್ಬಳವಲ್ಲದಿಲ್ಲ (ಬಸಪು. ೨೯-೨೯); ವಿತ್ತಮಂ ಕಳ್ದೊಯ್ವ . . . ಸಮಯದೊಳಗಾ ಹನೆ[ ನಿ ]ಯ ಹೊತ್ತಱೊಳಗಾ ಗಜಬಜೆಯ ಕೇಳಿ ಪುರಜನಂ ಮತ್ತಲ್ಲಿಗೆಯ್ದಲು (ಸಮ್ಯಕ್ತ್ವ. ೨-೨೩). **ಹೊತ್ತುಱು :** ನಡುವಿರುಳ್ ಕೊಂಡು ಪೋಗಿಯವರಿರ್ಪ ಬಸದಿ ಯೊಳಗೊಂದು ಕೋಣೆಯೊಳೊಟ್ಟಿರಿಸಿ ಬಂದು ಹೊತ್ತುಱ[ಪಾಠಾಂ. ಪೊಟ್ಪಡೆ] ಅರಸಂಗಿಂತೆಂದು ಪೇಳ್ದಂ (ವಡ್ಡಾರಾ. ೦೭೭-೬) ; ನಾನಾ ದಿನದ ಹೊತ್ತುಱ ಪುರವ ಹೊಱಿಮಂಟಂಬಿಕಾಪದದರುಶನಕೆ ಬಹುದುಂಟು (ಸಿಫಾಗ.೦೦-೩೮-೯೩). **ಹೊತ್ತಾರೆ :** ಉದಯದ ಹಾಲನು . . . ಕಾಸಿ ಹೊತ್ತಾರಿ (ಹೊತ್ತಾರೆ) ತೊಡಗಿದ, ಕೆಂಡದ ಮೇಲೆಯಿರಿಸಿ ಅಸ್ತಮಾನವಾದ ಜಾವದಲೆ ಹೆಪ್ಪ ಕೊಟ್ಟರೆ ಕೆಂಪಿನ ಮೊಸರಾಗಿಹುದು (ಶೀಮಸೂ. ೨೮); ಮಬ್ಬು ತೆರೆ ಹಿಂದುಗಡೆ ಜಾರಿದುದು ತೂರೆ ಹೆಬ್ಬಿಸಿಲ ಉಗುಳುವಂತಿಹುದು ಹೊತ್ತಾರೆ (ಕುಪು. ೪೪-೩); ಹೊತ್ತಾರೆ ಎದ್ದು ಹೊಲ ನೋಡು (ಗಾದೆ). **ಹೊತ್ತಾಱು :** ಹೊತ್ತಾಱು ಎದ್ದು ಕಣ್ಣ ಹೊಸೆಯುತ್ತ ಎನ್ನೊಡಲಿಂಗೆ ಎನ್ನೊಡವೆಗೆ ಎನ್ನ ಮಡದಿಮಕ್ಕಳಿಗೆಂದು ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ (ಬಸವ. ೭೦೯) ; ಗಂಡುಪಕ್ಷಿ ತಾಂ ಹೊತ್ತಾಱು ಪೋಗಿ ಕಮಲದ ತಂಡುಲಗಳ ಮೆಲ್ಲುತ್ತ (ಪ್ರಭುಲಿಂ. ೯-೩೫) ; ನಿತ್ಯವೂ ಶಿವನ ತಾ ಹೊತ್ತಾಱು ನೆನೆದಿಹರೆ ಉತ್ತಮದ ಗತಿಯು ತನಗಹುದು (ಸರ್ವಜ್ಞ. ೨೮೯).

[<ಪೊಟ್ಟು]

**ಪೊಟ್ಪುಱು** ‘ಪೊಟ್ಟುಱ್’ ನೋ.

**ಪೊಟ್ಟು**, ಪತ್ತು₄, ಪೊತ್ತು₄, ಪೊರ್ತು, ಪೊಳ್ತು, ಹೊತ್ತು₅ (ನಾ). ೧. ನೇಸರು ; ಸೂರ್ಯ ; ರವಿ : “ ತಾವರೆಗೆಳೆಯಂ . . . ನೇಸಱು, ಪೊಟ್ಟು, ಸಾಸಿರ್ಗ್ಯಯಂ . . . ಗರಂಗಳಭ್ಯಂ – ಈ ೧೧ ಸೂರ್ಯನ ಪೆಸರ್ ” (ಕಕಸಾ. ೧೯-೨೮); ಬಟ್ಟೆಗಂ ಗಟ್ಟದೊಳ್ ಪೊಟ್ಟಂ ಮುಟುಂಗಿಸಿದಂ (ಶಬ್ದಾನು. ೩೩೩ ವ್ಯಾಖ್ಯಾ). ೨. ಸಮಯ ; ಕಾಲ ; ವೇಳೆ : “ಪೊಟ್ಟು = ಸಾಮಾನ್ಯಕಾಲಂ, ಪ್ರಸವಕಾಲಂ, ನೇಸಱ್ ” (ಕಸುಪ. ಶಂ. ೦) ; ಒರ್ವಂ ತನ್ನ ನಲ್ಲಳೊಳಿಂತೆಂದನೀ ಪೊಟ್ಟಿ ಪೊಟ್ಟು ನಾಳೆ ದೇವಲೋಕದ ಕನ್ನಿಕೆಯ ರೋಲಗದೊಳಿರ್ಪೆಂ (ಶಂಕಭಾ. ೦೦-೪೪ ವ) ; ಪೊಟ್ಟಿನಂತೆ ನಿಲಿಸಲರಿದ ಪ್ಪುದು (ಧರ್ಮಾಮೃ. ೯-೦೭೩) ; ತಕ್ಕ ಪೊಟ್ಟಿನೊಳೆ ಬಂದುದೇನ್ ? (ಅಂಕಿಗೂ. ೦೮-೩೭೪). ೪. ಹೆರಿಗೆಯ ಕಾಲ; ಪ್ರಸವಕಾಲ : “ ಪೊಟ್ಟು = ಸಾಮಾನ್ಯಕಾಲಂ, ಪ್ರಸವಕಾಲಂ, ನೇಸಱ್ ” (ಕಸುಪ. ಶಂ. ೦); ವಿದಿತಂ ಕಾಂತೆಗೆ ಪೊಟ್ಟು ತೀವಿದುದು (ಜಾತಕ. ೮-೦೮). **ಪತ್ತು₄ :** ೪. ಆವರ್ತಿ ; ಸರದಿ ; ಬಾರಿ : ತಿರುವದ್ಯನ ತಿರುನಾಳಲ್ಲಿ ಆಱನೆಯ ಪತ್ತಿನ ಚಜಪುಯಿಲ್ಲಿ ಮುದ್ರೆಯ ಹಾಕಿಕೊಣ್ಡು ಇಹ ಶ್ರೀವೈಷ್ಣವಗೆ

ತಿನ್ನಗಳು ೧ಕ್ಕೆ ಸವ್ಬಳ ಎರಡು ವರಹ . . . ಸಲೂದು (ಎಕ್. XIV, ಶ್ರೀರಂಗ. ೨೬೯-೦೨ ; ಸು. 1585). **ಪೊತ್ತು₄ :** ೧. ''ಪ್ರಭಾಕರನೊಳಂ ಪೊತ್ತೆಂದು'' (ಕರ್ಣಾಟ. ೬೫). ೨. ಆಕೆ ನಿರುತ್ತರೆಯಾಗಿ ಎನ್ನ ದೆಸೆಯು ಮುಳಿಸನುೞಿದಂದಿಂದಿತ್ತಂಗೆ ನಿಂದು ಪೊತ್ತು ಕಾಯ್ದು ಬೇಸಱಿಸಿ ನಿರ್ವಂದ ದಿನಟ್ಟೆ ಕಳೆಯೆ (ಶಾಂತಿಪು. ೬-೬೪ ವ) ; ಮುಗಿಲಂತೆ ಪೊತ್ತಿಗೊಂದು ಬಣ್ಣ ಮಾಗದೆ (ಧರ್ಮಾಮೃ. ೫-೯೯) ; ಈಸು ಪೊತ್ತೇಕೆ ಪವಡಿಸಿವನೆಂದೆಬ್ಬಿಸಲ್ (ಕಬಕ. ೬-೨೩). ೩. ಒಡನೆಯೆ ಚಕ್ರವಾಕಿ ಪೊಸವಾಣತಿ ಕೋಗಿಲೆ ಯಾೞಿಲಿಂದು ಕೇಳ್ಗಡ ಗಿಳಿವೆಣ್ಗೆ ಪೊತ್ತಿನೊಳೆಯ್ದೆ ನವಿಲ್ ಮನೆದೀವಿ ಮಕ್ಕಳಂ ಪಡೆದುದ ನೋಡ (ಅರ್ಜನೀ. ೦-೯೪). **ಪೊತರ್ :** ೨. ಆ ಪೊತರ್ಗಂ ಕೋಕಿಲಂಗಳುಲಿಗುಂ ಬನದೊಳು (ಎಇ. XVI, ೩-೦೩ ; 980); ಮಾಱು ಪೊತರ್ಗಂ ವರಕಾನ್ತಾಸಂಕುಳಂ ಬಂದಿರದೆ (ಎಇ. XV, ೯೦-೯೯; 1060). **ಪೊಳ್ತು :** ೧. " ಪೊಳ್ತೆನಲ್ ಸೂರ್ಯನಕ್ಕು " (ಶಶರ. ೭೦); ತೀಡಿತ್ತಲೆವ ತಂಗಾಳಿ . . . ಏರ್ದುದು ಪೊಳ್ತು (ಚತ್ರಾಂಗ. ೫೬-೧೫೨೫); ಪೊಳ್ತಿಗೆ ಕಯ್ಯ ಮುಗಿದು (ಕಾಲೂರ. ೦೦೬-೨೪೨). ೨. ಮದ ದಿಂದಂ ಪೊಳ್ತು[ಪಾಠಾಂ. ತ್ತು] ಪೋಗುತ್ತಿದೆ (ರಕ್ಷಾಶ. ೩೫) ; ಇನಿಸು ಪೊಳ್ತಾದೊಡಂ ಸುಖನಿದ್ರೆಗೆಯ್ವೆನೆಂಬೆನೆ (ಪದ್ಮರಾ. ೯-೬೮) ; ಇಂದೇನೊ ನಿಶಿಪೊಳ್ತಿನೊಳಗಿಂತು ಈ ಕಾಳಿಯವತಾರ ! (ಪಠರಾ. I, ೪೫೦). **ಹೊತ್ತು₅ :** ೧. ಬಾನಿನ ನೆತ್ತಿಯನೇರಿತು ಹೊತ್ತು (ವಣಂದೀ. ೦೨-೦೬); ನಿದ್ದೆ ತಿಳಿದಾಗ ಹೊತ್ತು ಏರಿತ್ತು (ಪಾಪಿಲ. ೨೧೫); ಹೊತ್ತು ಬಂದತ್ತ ಕೊಡೆ ಹಿಡಿ (ಗಾದೆ). ೨. ಅರಸಿಂಗೆ ಎಲ್ಲಾ ಹೊತ್ತು ಹಿತವಂ ನುಡಿವ ಮನುಷ್ಯರ್ ಹಲವರುಂಟು (ಪಂಚತಂ. ೦೦೨-೦೩); ಹೊತ್ತು ಹೋಗದ ಮುನ್ನ ಮೃತ್ಯುವೊಯ್ಯದ ಮುನ್ನ ತೊತ್ತುಗೆಲಸವ ಮಾಡು (ಬಸವ. ೧೭೨); ಸಾಕು ಹೆಱತೆಗೆ ಛಾಯವಡೆದವಿವೇಕ ಮೈಮಱೆದಿದ್ದ ಹೊತ್ತಿದು (ಕುಮಾ.ಕ. ೮೨-೩೦); ಹೊತ್ತಲ್ಲದ ಹೊತ್ತಿನಲ್ಲಿ ತೊತ್ತು ಮೈ ನೆರೆದಳು (ಗಾದೆ).

**ಪೊತ್ತುಪೊತ್ತು, ಹೊತ್ತುಹೊತ್ತು ಹೊತ್ತೊತ್ತು** (ದ್ವಿರುಕ್ತಿ) : ಪೊತ್ತುಪೊತ್ತಿಗೆ ಪೋಗಿ ಪೊಡಮಟ್ಟು ನಸು ತಲೆಗುತ್ತಿ ನಾಣ್ಚುತ ನಲವಿನೊಳು (ಹರಿಬ.೪-೮); ಹೊತ್ತುಹೊತ್ತಿಗೆ ಉಣ್ಣಬೇಕು (ಮುಂಬಯಿ. ೪-೩೩); ಹೊತ್ತುಹೊತ್ತಿಗೆ ಅನ್ನ ನೀರನು ಹವಣಿಸಿ ಮಕ್ಕಳ ಗಿಣಿಯಂತೆ ಸಾಕಿ (ಇಂಚಾಶ. ೦೬-೬೭); ಅವುಗಳನ್ನು ಹೊತ್ತೊತ್ತಿಗೆ ಆಡಿಸಿಕೊಂಡು ಬರುತ್ತಿದ್ದನು (ಮುಂಬಯಿ. ೨-೫೪). **ಹೊತ್ತಾಗು**=ತಡವಾಗು ; ವಿಳಂಬವಾಗು : ತುಂಬಾ ಹೊತ್ತಾಯಿತಲ್ಲವೇ! (ಬಟ್ಟಿಶೀ. ೪೫). **ಹೊತ್ತಿಗೆ ಮುಂಚೆ**=ಸಮಯವಾಗುವುದಕ್ಕೆ ಮೊದಲೆ ; ಬೇಗನೆ : ಅವರು ಹೊತ್ತಿಗೆ ಮುಂಚೆ ಊರು ಸೇರಬೇಕೆಂದು ಬೇಗ ಹೊರಟರು (ರೂಢಿ). **ಹೊತ್ತಿನರಸ** = ಸಮಯದ ಒಡೆಯ ; ಸೂರ್ಯ : ಹೊತ್ತಿನರಸ ನೆತ್ತಿಯ ಮೇಲೆ ಬಂದಾಗ ಕಟ್ಟಿಗೆಯ ಹೊರೆ ಹೊತ್ತು ಮಾರಯ್ಯ ಮನೆಗೆ ಬಂದ (ಶರಣ. ೩೯೯). **ಹೊತ್ತಿನುಲಿ** = ಸಮಯವಾಯಿತೆಂದು ಸೂಚಿಸುವ ಧ್ವನಿ : ಹೊತ್ತಿನುಲಿಯಾಗದೊಡೆ ಆಟ ಮೊದಲಾಗುವುದೆ ಹೊತ್ತೆತ್ತೋರ್ಪುದು ಸಾವಿನಾಟಗಳ ಕೊನೆಯಂ (ಕಾಲೂರ. ೯೫-೦೬೩). **ಹೊತ್ತು ಕಂತು** = ಸೂರ್ಯ ಮುಳುಗು ; ಸೂರ್ಯಾಸ್ತವಾಗು : ಹೊತ್ತುಕಂತಿ ಎರಡು ಗಳಿಗೆ ಕಳೆದಿತ್ತು (ಪದ್ಮಸ. ೦೯) ; ಹೊತ್ತು ಕಂತಿ ಎರಡುಗಳಿಗೆ ಕೂಡ ಆಗಲಿಲ್ಲವಂತೆ (ಬಟ್ಟಿಶೀ. ೪೯). **ಹೊತ್ತುಗೊತ್ತು** = ವೇಳೆ ಮತ್ತು ಸ್ಥಳ : ಹೊತ್ತಿದ್ದಂತೆ ಹೊತ್ತಿಲ್ಲ. ಹೊತ್ತು ಗೊತ್ತು — ಒಂದೇ ಆಗಿರುವುದೂ ಇಲ್ಲ (ಬಿಡಿಮಾ. ೨೨೫) ; ನಾವಿರಲು ಹೊಳೆವುದು ಹೊತ್ತು ಗೊತ್ತಿನ ಗತ್ತು ನಾ ಮೈಯು ಎನಲು ದಿಕ್ಕಾಲ ಕಡೆ (ಮುಕ್ತಕಂ. ೪-೧೮). **ಹೊತ್ತು ತುಂಬು** = ಹೆರಿಗೆಯ ಸಮಯವಾಗು ; ಪ್ರಸವಕಾಲ ಬರು : ಹೊತ್ತು ತುಂಬಿದವಳು ತನ್ನ ನಿತ್ತರಿಸುವ ಬೇನೆಯನಱಿವಳು (ಪೋಲಮಾ. ೧೯-೬೫). **ಹೊತ್ತು ನೆತ್ತಿಗೇರು** = ಸೂರ್ಯ ನಟ್ಟನಡುವಿಗೆ ಬರು; ಮಧ್ಯಾಹ್ನವಾಗು : ಹೊತ್ತು ನೆತ್ತಿಗೇರಿದೆ. ಬಿಸಿಲು ಉರಿಯುತ್ತಿದೆ (ಬೆಳುಮ. ೨೩೮) ; ನಾವು . . . ಮರಳಿ ಬರುವ ವೇಳೆಗೆ ಹೊತ್ತು ನೆತ್ತಿಗೇರಿತ್ತು (ಬಟ್ಟಿಶೀ. ೦೫೦). **ಹೊತ್ತು ಬರು** = (ಸಾವು, ಕೇಡು ಇತ್ಯಾದಿಗಳ) ಸಮಯ ಸನ್ನಿಹಿತವಾಗು, ಸಮೀಪಿಸು : ಕೌರವರಿಗೆ ಹೊತ್ತು ಬಂದಿದೆ ; ಅವರು ನಾಯಿನರಿಗಳ ಪಾಲಾಗಿ ಒರಗುತ್ತಾರೆ (ಪಠಭಾ. ೨೪೬). **ಹೊತ್ತು ಮಾಡು** = ತಡಮಾಡು ; ವಿಳಂಬಿಸು : ಹೊತ್ತು ಮಾಡಿ ಆಗಬೇಕಾದುದೇನು? ಬಹಳ ದೂರ ಹೋಗಬೇಕು (ದೇವೀಚಾ. ೩) ; ಹೊಳೆಯಲ್ಲಿ ಬಹಳ ಹೊತ್ತು ಮಾಡಬೇಡಿ (ಬಟ್ಟಿಶೀ. ೩೪). **ಹೊತ್ತು ಮೀರು** = ಅವಧಿ ತೀರು ; ತಡವಾಗು : ಹೊತ್ತು ಮೀರಿದೆ (ಬೆಳುಮ. ೦೯೨) ; ಹೊತ್ತು ಮೀರಿದರೆ ತೊತ್ತು ಹೆತ್ತವಳಾದಾಳೇ ? (ಗಾದೆ). **ಹೊತ್ತು ಮುಣುಗು, ಹೊತ್ತು ಮುಳುಗು** = ಹೊತ್ತು ಕಂತು : ಹೊತ್ತು ಮುಣುಗುತ ಬಂತು ಬತ್ತಲೆಯು ಜಗಕೆಲ್ಲ (ಕನ್ನಜಾ. ೨೪೯) ; ಸೂರಪ್ಪ ಅವ. ಹೊತ್ತು ಮುಳುಗುವಾಗ ಕಳ್ಳು ಕುಡಿದು ಮಲಗಿದರೆ ಹೊತ್ತು ಮೂಡುವಾಗಲೇ ಏಳುವವ (ಮರವು. ೩೪). **ಹೊತ್ತು ಮೂಡು** = ಬೆಳಗಾಗು ; ಸೂರ್ಯೋದಯವಾಗು : ಸೂರಪ್ಪ . . . ಹೊತ್ತು ಮೂಡುವಾಗಲೇ ಏಳುವವ (ಮರವು. ೩೪). **ಹೊತ್ತು ಸಾಧಿಸು**=ಸಮಯ ಕಾಯು ; ಸಮಯ ಸಾಧಿಸು : ಅವನು ಹೊತ್ತು ಸಾಧಿಸಿಕೊಂಡಿದ್ದು ತನ್ನ ಸೇಡು ತೀರಿಸಿಕೊಂಡ (ರೂಢಿ). **ಹೊತ್ತು ಹಾರು** = (ವೇಗವಾಗಿ) ಸಮಯ ಕಳೆ : ಕನಸಿನ ಭ್ರಮೆಯಲ್ಲಿ ಹೊತ್ತು ಹಾರಿಹೋಗುವುದನ್ನು ಮರೆಯುತ್ತೇನೆ (ಜ್ಯೋತಿರ್. ೨). **ಹೊತ್ತು ಹುಟ್ಟು** = ಬೆಳಗಾಗು ; ಸೂರ್ಯೋದಯವಾಗು : ಹೊತ್ತು ಹುಟ್ಟುವುದಕ್ಕೆ ಮುನ್ನವೆ ಮಾದಣ್ಣ 'ಸ್ವಂತಮನೆ' ಯ ಮೇಲಿನಿಂದ ಹೆಂಚುಗಳನ್ನು ಕೊಡಹಿ . . . ಹಾಕುತ್ತಿದ್ದ (ಬೆಳುಮ. ೦೫೨).

[ದೇ. ‖ತಮಿ. ಪೊೞುತು, ಪೋೞ್ತು, ಪೋತು ; ಮಲ. ಪೞುತು, ಪೊೞುತು, ಪೋತು, ಪೋಳ್ ; ತುಳು. ಪೊತರ್; ಕೊಡ. ಪೊಳೀದೀ, ಪೊದೀ ; ತೆಲು. ಪ್ರೊದ್ದು, ಪೊದ್ದು ; ಕೋಲಾ. ಪೊದ್ ; ನಾಯ್ಕಾ. ಪೊದ್ದ್ ; ಗೊಂಡಿ. ಪೊದ್ದ್]

**ಪೊೞ್ತುಗಳೆ, ಪೊತ್ತುಗಳೆ, ಹೊತ್ತುಕಳೆ, ಹೊತ್ತುಗಳೆ** (ಕ್ರಿ). ಕಾಲ ಕಳೆ ; ಸಮಯಹರಣಮಾಡು : ತದ್ರಾಜಹಂಸಂ ನಿರಾಕುಳಮಿಾ ಮಾಟ್ಕೆಗಳಿಂದೆ ಪೊೞ್ತುಗಳೆವಂ ಸಂಸಾರಸಾರೋದಯಂ (ಆದಿಪು. ೦-೯೪); ಮುನ್ನಮೊಳ್ಪಿನಂ ನೆಗಟ್ದ ಮಹಾಪುರುಷರ ಕಥೆಗಳುಮಂ ತಾಂ ಸ್ಮರಿಸುತ್ತುಂ ಪೊೞ್ತುಗಳೆಯುತೀ ತೆಱದಿಂದಂ (ಧರ್ಮಾಮೃ. ೩-೨೬೫); ಕವಿಸಂಗೋಷ್ಠಿಯಿನೊರ್ಮೆ ... ಶಸ್ತ್ರವರಾಭ್ಯಾಸದಿನೊರ್ಮೆ ಪೊೞ್ತುಗಳೆವಂ ವಿಶ್ವಂಭರೋರ್ವೀಶ್ವರಂ (ಕುಸುಮಾ. ೩-೨೪). **ಪೊತ್ತುಗಳೆ :** ಒರ್ಮೆ ಲೀಲಾವಿಲೋಕನದಿಂ ಮಾಣದೆ ಪೋಗಿ ಪೊತ್ತು[ಪಾಠಾಂ. ೞ್ತು]ಗಳೆವಂ ನಿಚ್ಚಂ (ಸುಕುಮಾ. ೯-೪೦); ಪೊತ್ತುಗ[ಪಾಠಾಂ. ಕ]ಳೆಯದೆ ತನ್ನ ತನುವನೆರಡಾಗಿ ಮಸೆವೆತ್ತ ಕರಪತ್ರದಿಂ ಸೀಳ್ವುದೆಂದಾಜ್ಞಾಪಿಸಿ (ಕೃಬಾಭಾ. ೨೬-೫೫). **ಹೊತ್ತುಕಳೆ :** ಹೊತ್ತುಕಳೆಯಲಾರದೆ . . . ಬಟ್ಟೆಯನ್ನು ನೀರಲ್ಲಿ ಅದ್ದಿ ಒಗೆಯಲಾರಂಭಿಸಿದೆ (ಬಟ್ಟಿಶೀ. ೩೫). **ಹೊತ್ತುಗಳೆ :** ಒಬ್ಬನ ಮನೆಯಲ್ಲುಂಡು ಹೊತ್ತುಗಳೆವ ಒಬ್ಬನ ಮನೆಯಾಲಾಡಲೊಂದು ಗಳಿಸಿದೆ (ಬಸವ. ೭೪೧); ಹೊತ್ತುಗಳೆಯದೆ ಎನ್ನ ಕಳುಹೆಂದ (ಕುಮಾದ್ರೋ. ೪-೪೫); ಆ ಪೆಣ್ಗಳೊಡನೆ ಹೊತ್ತುಗಳೆಯಲೋಸುಗ ಕೇಳಿದಳಱುವತ್ತುನಾಲುಕು ವಿದ್ಯೆಗಳ (ಮೋಹತ. ೨೬-೩೭). [ಪೊೞ್ತು + ಕಳೆ₁]

**ಪೊೞ್ತುಪೋಗು** (ನಾ). ಕಾಲ ಕಳೆಯುವಿಕೆ ; **ಹೊತ್ತು ಹೋಗುವಿಕೆ :** ಪೊೞ್ತುಪೋಗಿಂಗಮಟ್ಟಿಗಮಾಡುವ ತಮ್ಮುತ್ತಿರ್ವರುಂ ಪಲಗೆಗೆ ಸಾಯಿರ

ಗದ್ಯಾಣದ ಪೊನ್ನೇ ಸಾಲ್ಗುಮಗ್ಗಳಂ ಬೇಡೆಂದು ದುರ್ಯೋಧನಂ . . . ವಾಸಂಗೆಯುಂ ಪೊರಳ್ದು (ಪಂಪಭಾ. ೬-೭೦ ವ) ; [ಪೊಟ್ಟುಪೋಗಿಂಗೆ . . . ಪೊನ್ನು]ಯ್ಯಲನೇಟು . . . ತರಳಾಕ್ಷಿಯಾಡುತುವಿರ್ಪನಂ (ರರ್ಮಾವು. ೩-೨೭). [ಪೊಟ್ಟು + ಪೋಗು₁]

ಪೊಟ್ಟು 'ಪೊರ್ದು' ನೋ.

ಪೊಟ್ಟುಗೆ 'ಪೊರ್ದುಗೆ' ನೋ.

ಪೊಟ್ಟು (ನಾ). ಒಂದು ಸ್ಥಳದ ಹೆಸರು : ಪೊಟ್ಟು ವಿನೀಶ್ವರಕ್ಕುಂ ಸರ್ವ್ವ ಪರಿಹಾರಂ ಕೊಟ್ಟರ್ (ಎಕ. IV, ಹಾವುರಾ. ೬೩-೩ ; 750) ; ಕಮ್ಮುಂಗೆ ಕನ್ನಿಯರ್ಗ್ಗೆ ಪೊಟ್ಟುದ ಹಡದೆನನ್ದಾಕರ ಮಗನಯ್ಯುಮ್ಮದೆನನ್ದಾಕರ ಮಗಂ . . . ಕೊಟ್ಟವಣ್ಣ್ನ (ಎಕ. X, ಕೋಲಾರ. ೯೦-೯೯ ; 903). [?]

ಪೋ₁, ಪೋಗು₁, ಹೋಗು₁ (ಕ್ರಿ). ಪೋದ, ಹೋದ (ಭೂತಕೃ). ಪೋಪ, ಹೋಪ (ಭವಿಕೃ). ೧. ಇರುವ ಕಡೆಯಿಂದ ಬೇರೆಯ ಕಡೆಗೆ ಚಲಿಸು ; ತೆರಳು ; ಮುಂದೆ ನಡೆ ; ಗಮಿಸು : ಎಲೆ ಪಿಟಿನಿ ಪೋ ಮುಟ್ಟದೆ ತೊಲಗು (ಪಂಪಭಾ. ೬-೯೩) ; ಮಾರ್ಕೊಳ್ಳದೆ ಪೋ ನೀನ್ (ರರ್ಮಾವು. ೨-೦೬) ; ನಾಗರಹಾವೆ . . . ಎರಗುವೆ ನಿನಗೆ, ಈಗಲೆ ಹೊರಗೆ ಪೋ ಪೋ ಪೋ (ಪಂಪಶ. ೦೫೨). ಪೋಗು₁ : ೧. "ಪೋಗು—ಗಮನೇ" (ಶಬ್ದಮ); ಅನ್ತೆ ಸಯ್ಯನೆ ಪೋಗಿ (ಇಕ. XII, ೦೬-೯೮ ; 813) ; ಅರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯುವವ್ಪುವಾ ಪುರವರದೊಳ್ (ಕಾವ್ಯಸಾ. ೦೬೮ ಕೂದ್ರಳ) ; ನೀಂ ಬಾ ಪೋಪು (ಪಂಪಭಾ. ೦-೭೦) ; ಬೇಟರ್ಗೆ ಪೋದ ನಲ್ಲರ ನೆನೆದು ದೂಱಿಸುವ ನೀಱೆಯರ (ಕಬ್ಬಿಗಕಾ. ೩೯). ೨. ಸಾಗು ; ಕಳೆ ; ದಾಟು : ವರಿಷವ್ಪೋ[ಗಿ] × × × ನೆಯ ವರಿಷ (ಸೌಇಇ. XI-i, ೭-೫ ; 837) ; ಪೋದ ಭವಂಗಳಂ ನೆನೆವಿನಂ (ಆದಿಪು. ೫ ೯೬) ; ಎನಗೀ ಜನ್ಮವಿದಿಂತೆ ಬಂಜೆತನದಿಂದಂ ಪೋಕುಮೋ (ಸುಕುಮಾ. ೯-೦೦೯). ೩. ನಿವಾರಣೆ ಯಾಗು ; ಪರಿಹಾರವಾಗು : ಆ ದೀನಾನಾಥರ್ಗೆ ವೃದ್ಧ ದ್ವಿಜಮುನಿನಿಕರಕ್ಕಂದೆಡೆರ್ ಪೋಪಿನು ಕಃ ಕೇನಾರ್ಥೀ ಕೋ ದರಿದ್ರಃ ಎನ್ನುತ್ತುಮನಿತುಮಂ ಧರ್ಮಜಂ ಸೂಱೆಗೊಟ್ಟಂ (ಪಂಪಭಾ. ೬-೯೦) ; ಎನಿತೆನಿತು ಚಳಿ ಪೋಗಲನಿತನಿತು ಪಸಿವಡಸೆ (ಇಳೆರ. ದೇ. ೫೩-೦೫). ೪. ನಾಶವಾಗು ; ಸಾಯು : "ಬೀತುದು ಸವೆದುದೆನಲ್ ಪೋದ್ದು ದೆಂಬರು" (ಶಬ್ದಮ. ೦೬೦) : ಈಗಲೋ ಇನ್ನಾವಾಗಲೋ ಈ ತನುವು ಪೋಗದಿರದು (ಜಗದಾ. ೯೯). ೫. ಕಾಣದಾಗು : ಉದಿಸಿದ ದಶದಿವಸದ ಶಿಶು ಪೋಪಾಗ ವಿಧಿ ವಿಧಿಯನು ವಿಱಬಹುದೇ (ಮೋಹತ. ೪ ೬೬). ಹೋಗು₁ : ೧. ನನ್ನಿಯ ಗಂಗನ ವರಿ ಬನ್ದು ಬೆಳ್ಗೆಱೆಯಂ ಕುನ್ದೂರು ಮನಿಱಿದು ಹೊ ಗೆ (ಎಕ. XII, ತಿಪಟೂ. ೫೫-೨ ; ಸು. 880) ; ಇದಱಿಂದವೊಂದು ಜನನು ನಿನಗೆದೊರಕಿತ್ತು ಮುದದಿಂದ ಹೋಗಯ್ಯ ಜನನವಂ ನೀ ಹೊತ್ತು (ಬಸರ. ೦-೬೪) ; ಒಗತನ ಬಿಟ್ಟು ಹೋಹಾಗ ಹಾಲಿಗೆ ಹೆಪ್ಪ ಮೊಗೆದಿಕ್ಕಿದವ ರಾರುಂಟು (ವೋಹತ. ೯-೦೯) ; ಹೋಗು ಎನ್ನಲಾರದೆ ಹೊಗೆ ಹಾಕಿದರು (ಗಾದೆ). ೨. ಆಯಿತ್ತೆ ಉದಯಮಾನ ಹೋಯಿತ್ತೆ ಅಸ್ತಮಾನ (ಅವಚಂ. ೦೦-೯೦) ; ವರಿಷ ಹೋದಿಂಬಳಿಕ ವಿರೋಧಿಸಂವತ್ಸರದ ಕನ್ನೆಮಾಸ (ವ್ಮಕಾ. ೦೯೩೩, ೯೦-೦೯ ; 1177) ; ಹೋದ ದಿವಸಂಗಳಲಿ ಕಾಳಿಗಮಾದು ದಂದಿನ ಭೀಷ್ಮರೊಡನೆ ವಿವಾದಕಾರಣ ಬೇಡಿಕೊಳಬೇಹುದು ನದೀಸುತನ (ಕುಮಾದ್ರೋ. ೦-೦೯). ೩. ಇಂದ್ರಿಯದ ಪೂರ್ವಾಶ್ರಯವು ಗುರುವಿನಿಂದ ಹೋಗದು ಅಂಗದಿಂದ ಹೋಗದು ತನ್ನಿಂದಹುದು ತನ್ನಿಂದ ಹೋಹುದು (ಸರ್ವಜ್ಞ. ೯-೦೯) ; ಕಾಱುವುದ್ದಿಗೆ ಹೋಹುದೇ ಕ್ಷೆಮ್ಮನಾ ಪವನಿಪನ (ಕುಮಾಶ. ೦-೯) ; ಹೋದುದು ಮನದುಮ್ಮಳವು ಮಧುಸೂದನನಿಗೆ (ಸಾಳ್ವಭಾ. ೫೯-೬೪). ೪. ಹಗೆಯರಲಿ ಹತವಾದನೆ ಹಾ . . . ಮೊಗವ ಕಾಣದೆ ಹೋದನೇ ಎನಗೇನು ಗತಿಯೆಂದ (ಕುಮಾದ್ರೋ. ೯-೨೦) ; ಪುನರಪಿ ಕಾದ ಕಳುಹುವುದು . . . ರಣದಲಿ ನಿನ್ನ ಹಿರಿಯ ಮಗ ಹೋದನೆನಿಸುವೆನು (ಕೌಶಿಭಾ. ೩೬-೨). ೬. ಮರಳು ; ಹಿಮ್ಮೆಟ್ಟು ; ಹಿಂತಿರುಗು : ಬಟ್ಟನು . . . ಕೌರವನೃಪತಿ ರಥವನು ಹೊಟ್ಟುಗರ ತೆಗೆ ಹೋಗಹೇಳೆಂದೆಚ್ಚನತಿರಥರ (ಕುಮಾದ್ರೋ. ೨-೭೦) ; ಕೆಲರು ಹಾಯಿತು ಕೆಲರು ಹೋಯಿತು ಕೆಲವರೋಡಿತು ಕೆಲವರರ್ದ್ದಿತು (ಕೌಶಿಭಾ. ೩೨-೨೫) ; ಹೊಸ ದೋಣಿ ಯೆದಱಿ ಹೋಹೆಯು ಬೀಡಿಗೆ ಒಮ್ಮೆ ಸಾಹಸವನು ಮಾಡು (ಇಂಚಾಪ. ೬೨-೫೦). ೭. ನಂದು ; ಆರು : ಮಳೆ ಬಂದಾಗ ಹೋಗಿದ್ದ ದೀಪ ಈಗ ಬಂತು (ರೂಢಿ). ೮. ಆಗು ; ಜರುಗು ; ನಡೆ : ನಡ[ವ]ಹಾಲ ಧಾರೆಗು ಸಹ ಅಕ್ಕಿ ಮೂಡೆ ೧೧ ತಿಂಗಳು ತಿಂಗಳು ತಪ್ಪದೆ ತಿಂಗಳಲ್ಲಿ ೧೭ ಹೋಹಾಗ ನಡವ ವಾರ ೧ ಮತ್ತಂ ಇಪ್ಪತ್ತೈದು ೨೫ ಹೋಹಾಗ ನಡವ ವಾರ ೧ ಅಂತು ತಿಂಗಳಲ್ಲಿ ಯೆರಡುವಾರ ಸವು ದಾಯ ನಡವುದಕ್ಕೆ ಅಕ್ಕಿ ಮೂಡೆವು ೧೨ (ಎಕ. XX, ೯೯-೯೯ ; 1556). ೯. ನೆರೆ ; ಕೂಡು ; ಸಂಭೋಗಿಸು : ದಾಸಿಯನು ಹೋಗುವಗೆ ವೀಸ ಹಕ್ಕದು ಕೈಗೆ (ಸರ್ವಜ್ಞ. ೦೮೦೭).

ಪೋಪೋಗು, ಪೋಪೋಗು, ಹೋಗಹೋಗು, ಹೋಗುಹೋಗು (ದ್ವಿರುಕ್ತಿ) : ಪುಲಿಪುಲಿ ಪರಿಪರಿ ಪೋಪೋಗು (ಕಬಿರಾ. ೨-೨೬) ; ಕೈವಲ್ಯಂ ಕವಿಗೆಂದೆ ಶಿವ ಬಂದ ಪರವಮಾನನ್ದಂ ದಲತ್ತಣ್ಣವಂ ಪೋಪೋಗಲ್ ಹಾ ! (ಸಂಪಶ. ೫೦-೦೦೨) ; ಹೋಗಹೋಗಲು ಕಾಣ್ಬೆ ಮುಂದಣ ಭಾಗದಲಿ ಲಿಂಗವಂ (ಬಸವು. ೦೯-೪) ; ಹೋಗುಹೋಗ್ಯೆ ನೀನೆಮಗೆ ಬರಲಾಗದಲ್ಲಿಗೆ (ಬಸವು. ೩೭-೦೩). ಪೋಬರವು = ಹೋಗಿ ಬರುವುದು : ಅರಸನ ಪುಟ್ಟಿ ದಿಂಬಟಾಯಮಿ ದಿವಿಜಾಳಿಗೆ ಮಾಣ್ದುದಿಲ್ಲ ಪೋಬರವು (ಆಂಪು. ೯-೭೪). ಹೋಗ ಗೊಡು = ಹೋಗಲು ಅನುಮತಿಯನ್ನು ಕೊಡು ; ಹೋಗಬಿಡು : ನನಗೆ ಹೇಳದೆ ಹೋಹಿರಾದರೆ ಹೋಗಗೊ[ಡಾಕಂ. ಗು]ಡೆನು (ಸಾಳ್ವಭಾ. ೨೦-೦೦) ; ಬೀಳ್ಕೊಡು, ಕಳುಹು, ಅಪ್ಪಣೆ ಕೊಡು, ಹೋಗಗೊಡು (ಕಂಪಹು. ೮೯). 'ಪೋಗೊಡು' ಪರಾ. ಹೋಗಬಿಡು = ಹೋಗ ಗೊಡು : ಹೋಗಬಿಟ್ಟು ಜಂಗಮವ ಹಿಂದೆಯಾಡುವನ ಬಾಯಲಿ ಮೆಟ್ಟಿ ಹುಡಿ ಹೊಯ್ಯದೆ ಮಾಣ್ಬನೆ (ಬಸವ. ೪೧೯) ; ಈಗಳಿರ್ದಂತೀ ಪಶುಗಳು ಹೋಗಬಿಡಿ ನೀವು (ಬಸವು. ೬೦-೨೫) ; ಅರರೆ ನರ ಪೈಸರಿಸಿದನೊ ಪೈಸರಿ ಸಿದನೊ ಫಡ ಹೋಗಬಿಡದಿರಿ (ಕುಮಾಶ. ೦೯-೦೩). ಹೋಗಲಾಡಿಸು = ೧. ಇಲ್ಲದಂತೆ ಮಾಡು ; ಹೋಗುವಂತೆ ಮಾಡು : ಪರಿಕರ್ಮನ್, ಅಂಗಸಂಸ್ಕಾರಃ — ೨ ಶರೀರದ ಕೊಳೀ ಹೋಗಲಾಡಿಸಿ ಸೊಗಸು ಮಾಡುವಿಕೆ (ಸಿದ್ಧಾಂತ. ೨೦೫) ; ಎಣ್ಣೆಪಸೆಯಿದ್ದರೆ ಅದನ್ನು ಹೋಗಲಾಡಿಸಲು ಸಾಬೂನನ್ನುಪಯೋಗಿಸಬೇಕು (ಆರುಸಾ. ೪೫). ೨. ಪರಿಹರಿಸು ; ನಿವಾರಿಸು ; ಕಳೆ : ಅವರವರ ಹೊಡಬಾಳು ಅವರವರೇ ಹೋಗಲಾಡಿಸಿ ಕೊಳ್ಳಬೇಕು (ಪಂಗಾಳ. ೨೦೯). ೩. ನಾಶಮಾಡು ; ಹಾಳುಮಾಡು : ತಲತಲಾಂತರದಿಂದ ಬಂದಿದ್ದ ಆಸ್ತಿಯನ್ನು ಆತ ಅಲ್ಪಕಾಲದಲ್ಲೇ ಹೋಗಲಾಡಿಸಿಬಿಟ್ಟ (ರೂಢಿ). ೪. ಕೊಲ್ಲು ; ಸಾಯಿಸು : (ಟ). ಹೋಗಲಾಡು = ೧. ಹೋಗಗೊಡು : (ಟ). ೨. ಕಳೆದುಕೊಳ್ಳು ; ನೀಗು : (ಟ). ೩. ನಿರರ್ಥಕಗೊಳಿಸು ; ಹುಸಿಮಾಡು : ನಾರದಮುನಿ ಮಹಾರಾಯ ಹೋಗಲಾಡುವವನಲ್ಲ ಮಾತ (ಮೋಹತ. ೩೩-೨೬). ಹೋಗ ಲೀಯು = ಹೋಗಗೊಡು : ಬೆಂದ ಮನವ ನಾನೆಂತು ನಂಬುವೆನಯ್ಯಾ . . . ಎನ್ನ ತಂದೆ ಕೂಡಲಸಂಗಮದೇವನಲ್ಲಿಗೆ ಹೋಗಲೀಯದಯ್ಯಾ (ಬಸವ. ೩೩). ಹೋಗಲೀಸು, ಹೋಗಲಿಸು = ಹೋಗಗೊಡು : ಹೋದಹೆ ನೆಂದರೆ ಒಳಕಾವಲವರು ಹೊಱಕಾವಲವರು ಹೋಗಲೀಸರು (ಶಿವತ. ೯-೨) ; ಭೀಮಸೇನನು ನಮಗೆದುರಾಗಿ ಬರುತಲಿದಾನೆ ; ಹೋಗಲೀಸದೆ ತಬ್ಬಿ

ಹಿಡಿದು ಸಂಹರಿಸೋಣ (ಕೃವಾಶೀ. ೦೦೭) ; ದುರ್ಯೋಧನನನ್ನು ಯುದ್ಧಕ್ಕೆ ಹೋಗಲಿಸಬೇಡ (ಭೀಷ್ಮಕ. ೦೫೨). **ಹೋಗಿಬರು, ಹೋಬರು**=೧. ತೆರಳು ; ಹೊರಡು ; ಬೀಳ್ಕೊಳ್ಳು : ವನಚರವೆ ನಾ ಹೋಗಿಬಹನೇ ನಿಮ್ಮನುಜ್ಞೆಯಲಿ (ಕುವ್ಯಾ೩. ೭-೦೭) ; ನನಗೆ ಅನುಜ್ಞೆಯನ್ನು ಕೊಡು ; ಹೋಗಿ ಬರುವೆನು (ಕಂಕ. ೯೯). ೨. ಹೋಗು ಮತ್ತು ಬರು : ಶ್ರೀಮನ್ತರ ಹರ್ಮ್ಯಕ್ಕೆ ಇರುವೆಯೂ ಹೋಬರಲಾರದಂತೆ ಮುತ್ತಿಗೆಯಿಟ್ಟು ಏತಕ್ಕಾದರೂ ಸನ್ನದ್ಧನಾಗಿರು (ಚಿಟ್ಟಿ೩. ೦೭೯-೦೨). **ಹೋಗಿಬಿಡು**=೧. ಇಲ್ಲವಾಗು : ಮೃಣಾಳಿನಿಯ ಮೇಲೆ ಪ್ರೀತಿ ಹೋಗಿ ಬಿಟ್ಟಿತೆಂದೂ ತಿಳಿದು ಕೊಂಡಳು (ಬಂಕಿಮ. ೦೮೦). ೨. ಸಾಯು ; ಮರಣ ಹೊಂದು : ಗಂಡನ ಕಣ್ಣುಮುಂದೆ ಹೋಗಿಬಿಡುವುದು ಹೆಂಗಸಿಗೆ ಪರಮಭಾಗ್ಯ (ಪತಿಭ. ೯೩) ; ನಮ್ಮ ಚಿಕ್ಕಪ್ಪ ಹೋಗಿ ಬಿಟ್ಟರು (ಮುರುಕು. ೦೭). **ಹೋದ ಜೀವ ಬರು**=ಹೊರಟು ಹೋದ ಪ್ರಾಣ ಮರಳಿ ಬಂದಷ್ಟು ಸಂತೋಷವಾಗು,— ಸಮಾಧಾನವಾಗು : ಅವಳು ಬಂದು ಎಲ್ಲವನ್ನೂ ಹೇಳಿದ ಮೇಲೆ ಹೋದ ಜೀವ ಬಂದಂತಾಯಿತು (ಕಾಂಅರ. ೯ ಕಥಾಸಾರ) ; ಬಿಸಿಲಿನಲ್ಲಿ ನಡೆದು ಬಂದು ಎಳನೀರು ಕುಡಿದ ಮೇಲೆ ಹೋದ ಜೀವ ಬಂತು (ರೂಢಿ). **ಹೋದ ಹೊಲಬು**=ನಡೆದು ಬಂದ ದಾರಿ ; ಸಂಪ್ರದಾಯ ; ಪರಂಪರೆ : ಹೋದ ಹೊಲಬಿಲ್ಲದಟಿಳೊಳಗೆ ದುರ್ಭೇದತಪವೇ ಹೊಗೆವುತದೆ ಹೊಳ್ಳಾದವೆಮ್ಮ ಸಮಾಧಿ ಸ್ಮರಣೆ ಶಮದಮಾದಿಗಳು (ಕುವ್ಯಾ೦. ೩-೨೦). ☞ ಈ ಧಾತು ಅನೇಕ ಶಬ್ದಗಳ ಮುಂದೆ ಸೇರಿ ಬೇರೆ ಬೇರೆ ಅರ್ಥಗಳಲ್ಲಿ ಬಳಕೆಯಾಗುತ್ತದೆ.

[ದೇ.॥ ತಮಿ. ಪೋ, ಪೋಕು, ಪೋಕ್ಕು.; ಮಲ. ಪೋಕ ; ತೆಲು. ಪೋವು]

**ಪೋ₃, ಹೋಗ್ಗು₃** (ಅ). ಛೀ, ತೆಗೆ, ಬಿಡು ಎಂಬರ್ಥದ ಉದ್ಗಾರ ವಾಚಕಪದ : ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಪೋ ಮೆಚ್ಚೆನಾನ್ (ಶಂಶಪಾ. ೯-೩೮) ; ಪೋ ಮಾಣ ಧರ್ಮಜಂ ಗಡ ಭೀಮಂ ಗಡ (ಗದಾಯು. ೯-೦೩) ; ಸತ್ಪಾತ್ರದೊಳ್ ಧನವಂ ಪೋ ನಲಿವಂದದಿಂ ನಲಿವನೇ ಧನ್ಯಂ ಧನಪ್ರಾಪ್ತಿಯೊಳ್ (ಶಂಗಾಪು. ೬-೦೦೭). **ಹೋಗು₃** : ಜನಪತಿಯ ಕಟ್ಟಳೆಯಿಯಲಿ ರವಿತನುಜನಡ್ಡೈಸಿದನು ಫಡ ಹೋಗೆನುತ ನಾರಾಚದಲಿ ಮುಸುಕಿದನರ್ಜುನಾತ್ಮಜನ (ಕುವ್ಯಾದ್ರೋ. ೬-೪೪) ; ನಿನ್ನಯ ಜೋಡಿಗಾರುಂಟವರ ಕರೆ ಮಾತಾಡುವೆವು ಹೋಗೆನುತ ಗಹಗಹಿಸಿದನು ಕೈ ಹೊಯಿದು (ಅನಂರಾ. ೦-೯-೨೨). [ < ಪೋ₁ ]

**ಪೋಂಚಿ** 'ಪೌಂಚಿ' ನೋ.

**ಪೋಂಭಾವಣೆ** (ನಾ). ಸೇರಿಸುವಿಕೆ ; ಕೂಡಿಸುವಿಕೆ; ಜೋಡಣೆ : ಒಂದಕ್ಕೆ ನಾಲ್ಕುಮಾತುಗಳನ್ನು ಪೋಂಭಾವಣೆ ಮಾಡಿ ತಾನೂ ಅಳುತ್ತ ಕುಳಿತಳು (ಮಹಾಗ. ೨೯೦). [< ಪೌಂಚಾಯಿಸು + — ಅಣೆ₄]

**ಪೋಂತು, ಪೋತ್ತ₁, ಪೊತ್ತು, ಹೋತ್ತ₂, ಹೋತ್ತು₂** (ನಾ). ಗಂಡು ಮೇಕೆ; ಗಂಡಾಡು : ಪೋಂತಿನ ಮೂತ್ರದೊಳುಳ್ಳಿಯನರೆದು ನಸ್ಯಮಂ ಮಾಡೆ ಪಿಂಗುಗುಂ ಗ್ರಹನಿವಹಂ (ಲೋಕೋಪ. ೦೦-೪೮); ಮುನ್ನೊಗೆದಾಡಿನ ಬಸಿಟಿಳ್ ಬಂದುದು ಪೋಂತಿನ ರೂಪಿಂ ಬೆಳೆದು ಬಟಿಕ ಮದೋನ್ಮತ್ತಂ (ಹುಪೋಪ. ೩-೫೩); ಸೂಕರದ . . . ಪೋಂತಿನ ವಿಗಂಧಬಂಧುರವಿಣ್ಮೂತ್ರಪ್ರಕಾರ ಗಂಧದ ಶ್ವಾನೀಕಂ ಭಯಹಾನಿಶೋಕ ರುಜ್ಮರಣಕರಂ (ಅಕ್ಕಶಾ. ೩-೨೦). **ಪೋತ₁** : 'ತಿಂಡಿಪೋತ' ಪರಾ. **ಪೋತು** : ಪೋತಿನ ಮೂತ್ರದೊಳಂ ಪರಿಮರ್ದಿಸಿ ಕುಡಿಸಲುರಗತತಿವಿಷಮುಟಿಗುಂ (ಖಮದ. ೩-೬೨); ಪೋತುಮಂಗಂ ಮೊಲಂ. . . ನೀಡುಂ ವೇಗಂಗಳು ತಾಳ್ದಪವು (ಹಾಲಾಸ್ಯ. ೯-೦೦-೫೩). **ಹೋತ್ತ₂** : ಹೋತನ ಕೊಂದು ಹೋಮವ ಬೇಳಿ ಚಾಂಡಾಲರಾಗ ಹೇಳಿತ್ತೇ ವೇದ (ಗಣಭಾ. ೦೩೬-೦); ಯಾತದ ಮೇಲೆ ಹೋತ ಮೇವುದ ಕಂಡೆ (ಪುರಂದ. ೨-೦೨-೨); ಮಾರಿಯು ಕಣ್ಣು ಹೋತನ ಮೇಲೆ (ಗಾದೆ). **ಹೋತ್ತು₂** : "ಅಜಃ . . . ಛಾಗಃ, ಛಗಳಕಃ, ಛಗಃ—ಈ ೬ ಹೋತು" (ಹಲಾಯು. ೯೬-೦೨೨); ತಲೆ ಬೋಟಿಸಿ ಹೋತಂ [ಪಾಠಾಂ. ಹೊಂತಂ] ಸಿಡಿದಲೆಗುಡುವರ್ (ಸಮಪ. ೯-೦೨೦); ವೇದಪುರಾಣ ಹೋತಿಂಗೆ ಮಾರಿ (ಬಸವ. ೫೬೨); ಹೋತಿನ ಕೊರಳೊಳಗೆ ಮೊಲೆ ಇದ್ದರೇನು (ಪುರಂದ. ೦-೦೩೯ ಪಲ್ಲವಿ).

**ಪೊತ್ತಿಮಕ್ಕಳ್, ಪೊತ್ತಿನ್ಮಕ್ಕಳ್, ಪೊತ್ತಿರ್ಮಕ್ಕಳ್, ಪೊತ್ತಿರ್ಮಕ್ಕಳು**= ಗಂಡು ಮಕ್ಕಳು (?) : ಇದೊನ್ಕೆಡಿಸಿದೊನ್ಪಣ್ಚಮಹಾಪಾತಕನಕ್ಕು ತನ್ನೊಕ್ಕಲುಳ್ ಪೊತ್ತಿಮಕ್ಕಳ್ಪುಟ್ಟದೆ ಕೆಡುಗ (ಎಕ. III, ಮೈಸೂರು. ೫೫-೨೦ ; ಸು. 740) ; ಇದಾನಟಿತ್ತೊನ್ಪಣ್ಚಮಹಾಪಾತಕನಾಗಿ ದಿಟ್ಟಗಲುಣ್ಣು ಕೊಟ್ಟತೇದು ಆಟ್ಟುವೆಣ್ಣ ತ್ರಿಲಪೂಸುವೋನಕ್ಕು ಒಕ್ಕಲುಳ್ಪೊತ್ತಿಮಕ್ಕಳ್ಪುಟ್ಟದೆ ಕೆಡುಗ (ಎಕ. III, ನಂಜನ. ೨೬-೮ ; ಸು. 810) ; ಆದಾನ್ ಅಟಿತ್ತೊನ್ . . . ಸಾಸಿರಕವಿಲೆಯುಮಾನ್ ಕೊನ್ದೋನ್ ಅಪ್ಪೋನೆ ಒಕ್ಕಲುಳ್ ಪೊತ್ತಿನ್ಮಕ್ಕಳ್ ಪುಟ್ಟಿಲ್ಕವರ್ ಪುಟ್ಟದೊವುವರ್ ಪುರಿಗಂ (ಎಕ. IV, ಹುಣ್ಸೂ. ೬೭-೦೨ ; ಸು. 700) ; ಇವಾನ್ ಕೆಡಿಸಿದೋನುಂ ದೆತ್ತೊನ್ನವರ್ ಪೊತ್ತಿರ್ಮಕ್ಕಳ್ ಪುಟ್ಟಿಗು ವಾರಣಾಸಿಯು ಸಾಸಿರ್ವ್ವರ ಪಾರ್ವ್ವರ ಕೊನ್ದ ಕೊಲೆ ಎಯ್ದಿ × × ಪಣ್ಚಮಹಾಪಾತಕನಕ್ಕು (ಎಕ. III, ತಿರುಮ. ೦೦೫-೬ ; ಸು. ೨೦೦) ; ಪರಿಯಾರಮಾನ್ಕೆಡಿಸಿದೊನ್ಪಣ್ಚಮಾಹಾಪಾತಕನಕ್ಕೆ ಬಾರಣಾಸಿಯನಟಿದ ಪಾಪಮಕ್ಕೆ ಎಟ್ಂದೆಟಿ ಎತ್ತುವೊನ್ಗೆ ಬಿತ್ತುಂ ಪೊತ್ತಿರ್ಮಕ್ಕಳು ಪುಟ್ಟಾದೆ ಕೆಡುವೊನ್ (ಎಕ. XIV, ತಿರುಮ. ೨೫೩-೦೦ ; ಸು. ೮೦೦). ☞ ಕನ್ನಡದ 'ಪೋಂತು' ಪದವು ಒಂದು ಪ್ರಾಣಿಯ ಗಂಡನ್ನು ಸೂಚಿಸುವ ಹಾಗೆಯೇ ತಮಿ. ಮಲ. 'ಪೊತ್ತು', ತೆಲು. 'ಪೋತು' ಪದಗಳು ಪ್ರಾಣಿ, ಪಕ್ಷಿಗಳ ಗಂಡನ್ನು ಸೂಚಿಸುತ್ತವೆ. ಆದುದರಿಂದ 'ಪೊತ್ತಿಮಕ್ಕಳ್'— ಮುಂತಾದ ರೂಪಗಳು 'ಪೋಂತು' ಪದಕ್ಕೆ ಸಂಬಂಧಪಟ್ಟಿರಬಹುದು. **ಪೋಂತಾನೆಯಂತರ**=ಅಜಗಜಾಂತರ: ಕೇಳ್ದ ಆ ಬಣ್ಣನೆಗೆ ಕಾಣ್ಬ ಈ ಕಾಣಿಕೆಗೆ, ಸಮತೆಯೇಂ ? ಪೋಂತಾನೆಯಂತರಂ (ಶ್ರೀರಾಮಾ. ೯೨೦-೪೦).

[ದೇ.॥ ತಮಿ. ಮಲ. ಪೋತ್ತು ; ಕೊಡ. ಪೋತು ; ತೆಲು. ಪೋತು= ಪ್ರಾಣಿ ಅಥವಾ ಪಕ್ಷಿಗಳಲ್ಲಿ ಗಂಡು ; ಕೋಲಾ. ಪೊತ್=ಹುಂಜ ; ನಾಯ್ಕಾ. ಪೋತ್; ಪರ್ಜಿ. ಪೋತ್=ಗಂಡುಪಕ್ಷಿ; ಕೊಂಡ. ಪೋತ್=ಗಂಡುಪ್ರಾಣಿ; ಕುವಿ. ಪೋತೂ=ಕೆಲವು ಪ್ರಾಣಿಪಕ್ಷಿಗಳಲ್ಲಿ ಗಂಡು]

**ಪೋಕ, ಹೋಕ** (ನಾ). ೧. ತಿರುಗಾಡುವವನು; ಅಲೆದಾಡುವವನು; ಅಲೆಮಾರಿ : ಕಾಪಿಲರ ಮುಟ್ಟಿ ಕಾಲ್ಗೆಡಿಸಿ ಪೋಕರ ಮಾಡಿ (ಚಕುಕ. ೯-೦೪-೦೩). ೨. (ಸಮಯವನ್ನು) ಕಳೆಯುವವನು : 'ಪೊತ್ತು ಪೋಕ' ಪರಾ. ೩. ನೀಚ ; ದುಷ್ಟ : "ಅವಿವೃತ್ತನೆನೆ ಪೋಕನಕ್ಕು" (ಮಂಗರಾ. ೬೩-೨೫); ಪೋಕನಿವನಿವನ ನುಡಿ ಪುಸಿ (ಚಕಪು. ೪-೦೭); ಕಾಕರಾಗಲವರು ವಿಷಯ ನೀಕಲಾಗಲವರು ಬಹಳ ಪೋಕರಾಗಲವರು (ಸಂಸಾರ. ೯೬-೯); ಪೋಕನಿಗೆ ನಾಚ ಸಲ್ಲ ಮೂಕನಿಗೆ ಸ್ವಪ್ನ ಸಲ್ಲ (ಗಾದೆ). ೪. ಪೋಲಿ; ತಂಟ : "ಪೋಕನನೆ ತುಂಟಗಭಿಧಾನವು" (ಕಕರ. ೦೨೭); ತಂದೆಯಿದಿರೊಳು ಪುಂಡರ ಪೋಕರ ನಡೆಯೋ (ಭರತ. ೨೭-೦೦೪); ಮದುವೆ ಯಾಕಾದನಿವನೂ ಪೋಕ ಪುಂಡನು (ಕಂಕ. ೯೩-೨). **ಹೋಕ** : ೧. 'ದಾರಿಹೋಕ' ಪರಾ. [ಪೋ₁ + — ಕ₃]

**ಪೋಕತನ** (ನಾ). ದುಷ್ಟತನ ; ನೀಚತನ : ಎಲೆ ಮರುಳೆ ಪೋಕತನವಿಲ್ಲಿ ಮೆರೆಯದು ಮರಳು (ಕುರಂಗ. ೫೨-೭). [ಪೋಕ + — ತನ]

**ಪೋಕರಿ, ಪೋಕ್ರಿ** (ನಾ). ೧. ದುಷ್ಟನಡತೆಯುಳ್ಳ ವ್ಯಕ್ತಿ; ನೀಚ ಸ್ವಭಾವದ ವ್ಯಕ್ತಿ : ಆತನು ಆವ ಕೆಟ್ಟ ಕೆಲಸವನ್ನು ಮಾಡುವುದಕ್ಕೂ

ಹೇಸದ ಪೋಕರಿ ಹುಡುಗ (ಬಿಕಾಕ. ೭೦); ಪೋಕರಿ ಇವರಲ್ಲೊಬ್ಬಳು (ದೀಪೀಕ. ೦೫೦). ೨. ತುಂಟ ವ್ಯಕ್ತಿ; ಉಡಾಳ: ಪೋಲಿ: ನಾನು ಮೊದಲಿನಿಂದಲೂ ಪೋಕರಿಯೆಂಬುದು ಸರಿಯೇ ಸರಿ (ಕಾಣಿಕ. ೦೦); ನಿಮ್ಮ ತಂಗಿಯ ಮಗ ಶುದ್ಧ ಪೋಕರಿ (ಕುಹಾಗ. ೪೬). ಪೋಕ್ರಿ: ೧. ಬಹಳ ಪೋಕ್ರಿಯಮ್ಮ. ಪಕ್ಕಾ ಹೆಣ್ಣುಮಾರುಳ! (ಕಾ. ೬೫). ೨. ಅಜ್ಜಿ ಯಾವಾಗಲೂ ನನ್ನನ್ನು ಪೋಕ್ರಿ ಎಂದು ಬೈಯುತ್ತಾಳೆ (ಕತಂಗ. ೪೭); ನಿನ್ನನ್ನು ಕಂತ್ರಿಗಳ ಕಣ್ಣುತಪ್ಪಿಸಿ ಸಾಬೀತಿನಲ್ಲಿಟ್ಟುಕೊಳ್ಳುವುದು ತೋಮನಿಗೆ ತುಂಬ ಸುಲಭವಲ್ಲ ಈ ಪೋಕ್ರಿಗಳ ಪಟಲಾಂನಲ್ಲಿ (ಹೊಸಕ್ಷ. ೫೦).
[ದೇ. ॥ ತಮಿ. ಪೋಕ್ಕಿರಿ, ಪೋಕ್ಕಿಲಿ; ಮಲ. ಪೋಕ್ಕಿರಿ; ತುಳು. ಪೋಕೆ, ಪೋಕರಿ, ಪೋಕುರಿ; ತೆಲು. ಪೋಕಿರಿ]

**ಪೋಕರಿತನ** (ನಾ). ತುಂಟತನ; ಉಡಾಳತನ: ಅಫಜಲಖಾನನು ಕ್ರೋಧದಿಂದ, ರಹಿಮನ ಪೋಕರಿತನಕ್ಕೆ ತಕ್ಕ ಶಿಕ್ಷೆ ಮಾಡಬೇಕೆಂದು ಕತ್ತಿಯನ್ನೆತ್ತಿದನು (ಕೋಟೆಹಿಶೂ. ೦೭). [ಪೋಕರಿ + — ತನ]

**ಪೋಕವಿದ್ಯೆ** (ನಾ). ದುಷ್ಟವಿದ್ಯೆ; ನೀಚವಿದ್ಯೆ: ಕಾಕುಮಾತು ಆಡಬೇಡ ಪೋಕವಿದ್ಯೆಗೆ ಹೋಗಬೇಡ (ಗಾದೆ). [ಪೋಕ + ವಿದ್ಯೆ]

**ಪೋಕವೃತ್ತಿ** (ನಾ). ಕೆಟ್ಟಸ್ವಭಾವ; ನೀಚವೃತ್ತಿ: ಏಕಾದಶಿಯ ಮಾಡಿ ಯತಿಗಳನೊಡನಾಡಿ ಪೋಕವೃತ್ತಿಗಳನೀಡಾಡಿ (ದಾದೀಕೀ. ೦೩೭-೦೦). [ಪೋಕ + ವೃತ್ತಿ]

**ಪೋಕಳ** (ನಾ). ನಿಜವಲ್ಲದುದು; ತೋರಿಕೆ; ಸುಳ್ಳಾದುದು: ಸುಳ್ಳ ನಾಟಕ-ಕಂಪನಿ ತಗೀತೇನಿ, ಅಂತ ಪೋಕಳ ಹುರುಪಿನ್ಯಾಗ ಬೇಡಿದರ ಏನು ಕೆಲಸ ಆಗಬೇಕು? (ಗಂಹುಮಾ. ೨೪೫). [← ಮರಾ. ಪೋಕಳ್]

**ಪೋಕಾಟ** (ನಾ). = ಪೋಕತನ: ಮಾನಿನಿಯರೊಳಗೆ ಪೋಕಾಟವೇನಿದು (ಕಪಕ. ೦೪೯-೦). [ಪೋಕ + ಆಟ]

**ಪೋಕಾಟಿಕೆ** (ನಾ). ತುಂಟಾಟ; ಪುಂಡಾಟಿಕೆ: ನೀತಿಶೀಲನಾದ ವಿಮರ್ಶಾಧಿಕಾರಿಯ ಮೇಲೆ . . . ಅಪವಾದವನ್ನು ಹಾಕುವುದು ತೀರಾ ಪೋಕಾಟಿಕೆಯೆನ್ನಬೇಕು (ವಾಗ್ಭೂಷ. ೨೪೭). [ಪೋಕಾಟ + — ಇಕೆ]

**ಪೋಕ್ತ** (ನಾ). ೧. (ಉಕ) ಠಾಕುಠೀಕು; ಶಿಸ್ತು; ಠೀವಿ. ೨. ಠಾಕುಠೀಕಾದ ವ್ಯಕ್ತಿ; ಶಿಸ್ತಾಗಿರುವ ವ್ಯಕ್ತಿ: ಎರಡು ಪೋಲಿಗಳನ್ನು ಬಾಡಿಗೆಗೆ ಹಿಡಿದಿದ್ದಾನೆ. ದೊಡ್ಡ ಪೋಕ್ತನಾಗಿ ತಿರುಗುತ್ತಾನೆ (ಮೂರುದಾ. ೦೫೩); ಆಫೀಸರ ಆದ. ಇನ್ನರ ಪೋಕ್ತ ಆಗಬೇಕು ಅನ್ನೂ ಖಬರೇ ಇಲ್ಲಾ (ದೀಕಹ. II, ೨೦೪).
**ಪೋಕ್ತಾಗಿ** = ಆಡಂಬರದಿಂದ ಕೂಡಿ; ಠೀವಿಯಿಂದ; ಠಾಕುಠೀಕಾಗಿ: ಪಾಸ್' ಎಂದು ಪೋಕ್ತಾಗಿ ಎದೆ ತಟ್ಟಿಕೊಳ್ಳುತ್ತ ಗದ್ದಲದಲ್ಲಿ ನುಗ್ಗಿಬಿಡುತ್ತಿದ್ದೆ (ಸ್ವೈ.ಶಿ. ೪೦೭); ಆಕೆ ದಿಟ್ಟತನದಿಂದ ಎದ್ದುನಿಂತು 'ಪೋಕ್ತಾಗಿ' ಮಾತನಾಡಿದಳು (ಸಮಜೀ. ೭೫೩).
[← ಪಾರ. ಪುಖ್ತ್; ಮರಾ. ಪೋಖ್ತ್]

**ಪೋಕ್ತತನ** (ನಾ), ಗಾಂಭೀರ್ಯ; ದೊಡ್ಡತನ: ಒಂದು ಪ್ರಸಂಗವು ಮಾತ್ರ . . . ಆಕೆಯ ಹುಡುಗತನವನ್ನು ಕಳೆದು ಪೋಕ್ತತನವನ್ನು ಕಲಿಸಿ ಕೊಟ್ಟಿತು (ಗಂಹುಮಾ. ೨೨೪). [ಪೋಕ್ತ + — ತನ]

**ಪೋಕ್ರಿ** 'ಪೋಕರಿ' ನೋ.

**ಪೋಗಂಡ** (ನಾ). ೧. ಅಂಗಹೀನ; ಅಂಗವಿಕಲ: "ವಿಕಲಾಂಗಃ, ಪೋಗಂಡಃ—ಈ ೨ ಅಂಗಹೀನಂ" (ಹಲಾಯು. ೬೪-೨೩೩); ಆ ಗಂಡನ ನೆಣ್ಣಿದ ತೋಳ್ ಪೋಗಂಡನನಪ್ಪಂತೆ ಮಾಡಿದ ಬದಿಯಂ ಮಾಣ್ಗಂ ಕೊಯ್ದುಟ್ಟಿಗೆಯೊಳ್ ಪೋಗೊರಸದೆ ಕಂಡನಾದೊಡೇಂ ಬಿಟ್ಟಪೆನೇ (ಧುಹೋಕ. ೨-೬೧). ೨. ವಯಸ್ಸಾಗದ ಬಾಲಕ; ಪ್ರೌಢನಲ್ಲದವನು.'
[ಸಂ.]

**ಪೋಗಂಡಿಕೆ** (ನಾ). ತೋರಿಕೆಯ ಶೌರ್ಯ: ಕಳೆದಂಹೋದ ಪರಾಕ್ರಮ: 'ನಲ್ಲವೋಗಂಡಿಕೆ' ಪರಾ. [ಪೋಗಂಡ + — ಇಕೆ]

**ಪೋಗಟ್ಟು** (ಕ್ರಿ). ಓಡಿಸು: ನೆಲೆಯೊಳ್ ಸೇರಲು ಪೋರುಗೈದು ಸತಿ ತಾಂ ಪೋಗಟ್ಟುವಳ್ . . . ತೊಲಗಿರಲ್ ಲಕ್ಷ್ಮೀಕಟಾಕ್ಷೇಕ್ಷಣಾಂ (ಸೋಮೇಕ. ೫೦). [ಪೋಗು₁ (< ಪೋ₁) + ಅಟ್ಟು₁]

**ಪೋಗತೊಟಿ ?** (ಕ್ರಿ). (?): ಚಿದ್ದಯ್ಯನು ಜಕ್ಕಯ್ಯನುಮೆಂಬ ಪಾತ್ರವರು ಗುಣ್ಣಮಾಯ್ಯಂದೋಜಿ ಎಡೆಯಾಯ್ಲತನದಿಂ ರಾಜಗಾಮಿತಂಗೆಯ್ದು ಮೆಣ್ಣೆಯತನದಲೂರನೆನ್ನದೆನ್ದು ಮೂಱುಪರಿಷದುಣ್ಬಳಿಯ ಪೋಗತೊಟ್ಟುಣಾತಮಿಪ್ಪುರ್ದಂ (ಕಾಶಾ. IX — 1, ೦೨೩-೦೭; 1059). [?]

**ಪೋಗಾಗು** (ನಾ). ಆಗುಹೋಗು; ಲಾಭ ನಷ್ಟ: ಆತವಱ ಪೋಗಾಗುಗಳನೊರೆದೊರೆದು ಸುಸೂತ್ರಂ ತಪ್ಪದಂತೆ ಸೇರುವೆಗಿಕ್ಕಿ ಬರೆಯಿಸಿ (ಷಡ್ಯಾ. ೪-೨೪). [ಪೋಗು₂ + ಆಗು₂]

**ಪೋಗಾಡು**, ಹೋಗಾಡು (ಕ್ರಿ). ೧. ಕಳೆದುಕೊಳ್ಳು; ನಷ್ಟಹೊಂದು; ನೀಗು: ರಾಜ್ಯವನಿತಂ ಪೋಗಾಡಿದಂ ರಾಕ್ಷಸಂ (ಸೋಮೇಕ. ೪೩); ತನ್ನಿರ್ದ ಮನೆಯಂ ಮಾಱಿಯುಮಳ್ಗೆ ಪೋಗಾಡಿ ತದನಂತರಂ ತನ್ನ ತಾಯಲ್ಲಿರ್ದಂತಪ್ಪ ವಸ್ತುಗಳಂ ಕಱಪುವುದೆಂದು ಪೇಟ್ಟಟ್ಟಲ್ (ಪುಣ್ಯಾಸ್ರ. ೪-೦೮ ಪ); ತಂತಮ್ಮ ತಂದೆಗಳಾರ್ಜಿಸಿದ ಧನಧಾನ್ಯಂಗಳೆಲ್ಲಮಂ ಪೋಗಾಡಿ ಪರಿಕ್ಷೀಣವಾಗಿ (ಧರ್ಮಾ. ೦೬೨). **ಹೋಗಾಡು**: ೧. "ಹೋಗಾಡು (ಹೋಗು + ಆಡು) — ಪ್ರಮಾದತ್ಯಜನೇ" (ಕವಿರಾ); ನುಡಿಯಂ ಲಱಿಯದೆ ಸಲಲರಾಜ್ಯಮಂ ಹೋಗಾಡಿ . . . ನಗೆಗೆಡೆಯಾದ ಪಾತಕ ಹರಿಶ್ಚಂದ್ರ (ಹಕಾ. ೦೨-೪೩); ಕದನದಲಿ ಸುತನಿಧಿಯ ಹೋಗಾಡಿದೆ ನಿಜಾನ್ವಯಕಲ್ಪತರುವನು (ಕುವ್ಯಾಕ. ೦-೪); ಇದ್ದುದನು ಹೋಗಾಡಿ . . . ಉದ್ದನ ಮರನ ತುದಿಗೇಱಿ ತಲೆಯೂಱಿ ಬಿದ್ದು ಸತ್ತಂತೆ (ಸರ್ವಜ್ಞ. ೪೫೩). ೨. (ಮಾತಿಗೆ) ತಪ್ಪು; ಮೀರು: ಒಡಲ ಹಿಡಿದಾಡದಿರು ನುಡಿಯ ಹೋಗಾಡದಿರು (ಸರ್ವಜ್ಞ. ೩೦೦); ಮಾತ ಹೋಗಾಡಿ ಬಳಿಕಾ ನೆನೆನೆನೆದು ಕಡೆಯಲ್ಲಿ ಹುಡುಕಾಡುವನೆ ಮೂರ್ಖ (ಚಿಕಕ. ೪೦). ೩. ಬಿಡು; ತ್ಯಜಿಸು: ಆಡುವುದು ತತ್ವಜ್ಞರೊಡನೆಡೆಯಾಡುವುದು ತತ್ವನ್ನಿಧಿಗೆ ಹೋಗಾಡುವುದು ದುಷ್ಕೃತವನು (ಶಿಭಾಗ. ೭-೫-೪೬). ೪. ಇಲ್ಲವಾಗಿಸು; ನಿವಾರಿಸು: ಮಾಡಿದೆನು ಮುಖಶತವನದು ಹೋಗಾಡಿ ಶಿಂದ್ರುನನಲ್ಲಿ ತನಗೆಡೆಮಾಡಿತರಮನೆ (ಕುವ್ಯಾಶ. ೦೩-೭೪). ೫. ನೆರವೇರಿಸು; ತೀರಿಸು; ಪೂರೈಸು: ಬಾಣಹತಿಗಳ್ಳುಡಿಸಿ ರಾಜ್ಯಶ್ರೇಣಿ ಜರುಗಿತು ಶೌರ್ಯನಗರದ ವಾಣಿಯರು ಹೊಕ್ಕಿಱಿದು ಹೋಗಾಡಿದರು ಪತಿರಿಣವ (ಕುವ್ಯಾಕ. ೨೪-೪೨). [ಪೋಗು₁ (< ಪೋ₁) + ಆಡು₁]

**ಪೋಗಿಸು**, ಹೋಗಿಸು (ಕ್ರಿ). ಹೋಗುವಂತೆ ಮಾಡು; ತೊಲಗಿಸು: ಆ ಗಿರಿತಟದಿಂದವನಂ ಪೋಗಿಸಿ (ಕಬಕಂ. ೨-೦೦೨). **ಹೋಗಿಸು**: "ಜಲಯಂತಿ = ಬಾಯಾರಿಕೆಯಂ ಹೋಗಿಸಿದಪುದು" (ಶಾಕಶ. ೨೩೪).
[ಪೋಗು₁ (< ಪೋ₁) + — ಇಸು₃]

**ಪೋಗು₁** 'ಪೋ₁' ನೋ.

**ಪೋಗು₂**, ಹೋಗು₂ (ನಾ). ೧. ತೆರಳುವಿಕೆ; ನಿರ್ಗಮನ: ಆನೆ ಕುದುರೆಗಳುಮಂ ಮಾನಸರ ಬರುವುಮಂ ಪೋಗುಮಂ ಕಂಡು (ವಡ್ಡಾರಾ. ೬೬-೨೨); ಪುರಜನಗಳೆಲ್ಲಂ ನೆರೆದವರ ಪೋಗಿಂಗೆ ಸೈರಿಸಲಾಱದೆ (ಶಂಶಭಾ. ೭-೦೭ ಪ); ನಿಮ್ಮ ಪೋಗಂ ಪುರಜನಂ ಪೇಱೆ ಕೇಳ್ದು (ಧರ್ಮಾಮೃ. ೦-೪೬). ೨. ಕಳೆದುಹೋಗುವಿಕೆ; ಕೈತಪ್ಪಿಹೋಗುವಿಕೆ: ತನ್ನೊಡವೆಯ ಪೋಗಿಂಗಮವಳ ಪೋಗಿಂಗಂ ನಿಗ್ಗಡಿ ಬೆನ್ನನಱಿಸಿ ಪೋದಂ (ಶಂರಾಪಾ. ೭-೩೫). ೩. (ಮಲಮೂತ್ರಾದಿಗಳ) ವಿಸರ್ಜನೆ: ಮಲಮೂತ್ರದ ಪೋಗುಂ ಮಾಳ್ಕುಮದುವೆ ಜಡತೆಯನೀಗುಂ (ಕಲ್ಯಾಕಾ. ೨-೦೭). ೪.

ಕುಸ್ತಿಯ ಒಂದು ವರಸೆ, —ಪಟ್ಟು : ಕೊಂತವಾರವು ಲಾಟ ಡೊಕ್ಕರ ಪೋಗು ಬಾಣ್[ಗು]ಗಳೂ . . . ತಳಹತ್ತ ಗಳಹತ್ತಂ ತುಳಿಲ ವಿಂದಾಣದಲಿ ಹರಿ ಕಾದಿ ಬಳಲಿಸಿದ (ಜಾಕ್ಕಣ. ೨೨-೭೩). **ಹೋಗು**₂: ೫. ಅಳಿವು ; ನಾಶ : ಸಂಸಾರದಾಗುಂ ಬೋ ಸಂಸಾರದ ಹೋಗುಂ ಬೋ (ಬಸವ. ೦೬೪). 'ಆಗುಹೋಗು', 'ಹೋಕು' ಪರಾ.

[ < ಪೋ₁ /ತಮಿ. ಪೋಕ್ಕೆ ; ಮಲ. ಪೋಕ್ಕು ; ತುಳು. ಪೋಕು ; ಕೊಡ. ಪೋಕ್ =ಮಾರ್ಗ, ರಹಸ್ಯ ; ತೆಲು. ಪೋಕ, ಪೋಕು]

**ಪೋಗುಡು** ' ಪೋಗೊಡು ' ನೋ.

**ಪೋಗುಹ** (ನಾ). ಹೊರಟುಹೋಗುವಿಕೆ ; ಕಳೆದುಹೋಗುವಿಕೆ : ' ಹರೆಯಬೋಗುಹ ' ಪರಾ.

[ಪೋಗು₁ (< ಪೋ₁) + — ಹ₂ (< — ಪ₂)]

**ಪೋಗೊಡು**, ಪೋಗುಡು (ಕ್ರಿ). ೧. ಹೋಗಲು ಅವಕಾಶ ನೀಡು : ಸಾರಿದರೆ ನೂರಾಗಿ ಹರಿದೋಡುತಿಹನು, ಸೇರಿದರೆ ಸೆರೆವಿಡಿದು ಮರಳಿ ಪೋಗೊಡನು (ಕುವ್ಯಾ. ೦೦-೬). **ಪೋಗುಡು** : ೨. ಕಳೆದುಕೊಳ್ಳು ; ನೀಗಿಕೊಳ್ಳು : ಎಳನೆತ್ತರ ಕೊರ್ವಿಂ ತಲೆಯಂ ಪೋಗುಡುವೀ ನೀಂ ಮರುಳಾಗಾ ! (ರಾಮಾಕ್ಕ. ೯೨-೨೬). [ಪೋಗು₁ (< ಪೋ₁) + ಕೊಡು₁]

**ಪೋಗೊದೆ** (ಕ್ರಿ). ದೂರ ಹೋಗುವಂತೆ ಕಾಲಿನಿಂದ ನೂಕು, —ಒದೆ : ಮಂದಸಿನ ಮುಚ್ಚುಳನುಂಗುಟದಿಂದೆ ಮೀಂಟಿ ಪೋಗೊದೆದು (ಜಗಪ. ೬-೩೦).

[ಪೋಗು₁ (< ಪೋ₁) + ಒದೆ₁]

**ಪೋಗೊಳಿಸು**, ಹೋಗೊಳಿಸಂ (ಕ್ರಿ). ಹೋಗಲು ಬಿಡು ; ಬೀಳ್ಕೊಳ್ಳು ; ಕಳುಹಿಸಿ ಕೊಡಂ : ಒಮ್ಮೆಗೆನ್ನಂ ಪೋಗೊಳಿಸು ಮರಳಿ ಸವಮ್ಮಾ ! (ಕುವ್ಯಾ. ೩೨-೨). **ಹೋಗೊಳಿಸು** : ಕೆಳದಿಯರನ್ನು ಮಾಲಿಸು ತ್ತಿದ್ದು, ಶಿರಸ್ಸಂಜ್ಞೆಯಿಂದ ಹೋಗೊಳಿಸಿ . . . ಆತನಿಗೆ ಮುಗ್ಧಾಯತ ಪ್ರಾಢಿಯ ಇದಿನಿರ್ರೋಟವನ್ನೊಡ್ಡಿರುವಳು (ಮುಂತ್ರಕ. ೦೯೦-೩).

[ ಪೋಗು₁ (< ಪೋ₁) + ಕೊಳ್₁ + — ಇಸು₃ ]

**ಪೋಚ** (ನಾ). ಒಬ್ಬಾತನ ಹೆಸರು : ಚಿಂಗಯ್ಯನ ಚಾವಬ್ಬೆಯ ಮಗಂ ಪೋಚನ ಕಲ್ಲ × × × (ಮೈಆಂ. ೦೯೬೨, ೨-೬: 973). [?]

**ಪೋಚಬುಕ್ಕು** (ನಾ). ರಸೀತಿ ಪುಸ್ತಕ : ಜೀನಸಗಳು ಬಂದು ದಾಖಲಾದ ಪೋಚಬುಕ್ಕಿನ ಮೇಲಿಂದ ತಪಾಸ ಮಾಡೋಣದರಲ್ಲಿ ಬಹಳೇ ಅಡಚಣೆಯು ಬೀಳುವದು (ಮುಂಬವ್ಯಾ. ೯೨).

[ ಪೋಚ್₀ (p ← ಮರಾ. ಪೋಂಚ್) + ಬುಕ್ಕು ]

**ಪೋಚಯ್ಯ** (ನಾ). ಒಬ್ಬಾತನ ಹೆಸರು : ದುಗ್ಗಮಾಯ್ಯನ ಮಗ ಪೋಚಯ್ಯ ಬೆಸಗೆಯ್ದುಗಲ್ಲ ನಿಜಿಸಿ (ಎಕ. IV, ಹುಣಸೂ. ೬೪-೦೪: 976).

[ ಪೋಚ + ಅಯ್ಯ₁ ]

**ಪೋಚಿಗಾಮುಂಡ** (ನಾ). ಒಬ್ಬಾತನ ಹೆಸರು : ಉಪ್ಪವಳ್ಳಿಯ ಪೋಚಿ ಗಾಮುಣ್ಡ ವಳಿಯೆಚಿ ಮುದ್ದ ಮಾಗುಣ್ಡಿಯೆಚಿಗ (ಎಕ. XV, ಬೇಲೂರು. ೩೦೬-೦೨ ; 971). [ < ಪೋಚ + ಗಾಮುಂಡ ]

**ಪೋಚು**₁ ' ಪೌಂಚಿ ' ನೋ.

**ಪೋಚು**₂ ' ಪೋಚೆ₂ ' ನೋ.

**ಪೋಚು**₃ (ನಾ). ಮುಂದೇನಾಗಂವುದೆಂದಂ ಕಾದಿರುವಿಕೆ ; ನಿರೀಕ್ಷೆ : ನೀ ಉಲಕೋಚಿತನ ಮಾಡಿ ನಡುವ ಬಾಯಿ ಹಾಕೀ !. . . ಒಳ್ಳೇ ಪೋಚಿಲೆ ಕೂತಿರಬೇಕು ನೋಡು (ತಿರುಗು. ೬೩). [← ಮರಾ. ಪೋಂಚ್ = ದೂರದೃಷ್ಟಿ]

**ಪೋಚೆ**₁ ' ಪೌಂಚಿ ' ನೋ.

**ಪೋಚೆ**₂, ಪೋಚು₂ (ಗು). ಅಲ್ಪವಾದ ; ತಂಚ್ಛವಾದ : ಪಾಚಿ ತೆರ ನಾದ ಪೋಚಿ ಸಂಸಾರದಾಲೋಚನೆ ತೋರುವದು (ವಿಜಾಸು. ೩೦-೨). **ಪೋಚು**₂ : ನೀಚಮಾರ್ಗವ ಬಿಡು ಮೋಹಕವಾಗಿದ್ದ ಪೋಚುಮತವ ಸುಡು ನಲಿ ನಲಿದಾಡು (ವಿಜಾಸು. ೩೬-೪). [← ಪಾರ. ಪೂಚ್ ; ಹಿಂ. ಪೋಚ್ ; ಮರಾ. ಪೋಚಟ್ ; ಗುಜ. ಪೋಚಾ]

**ಪೋಟ**₁ (ನಾ). ೧. ಶರೀರದ ಯಾವುದಾದರೂ ಒಂದು ಭಾಗ ಊನವಾದವನು ; ಪೋಟು ಬಿದ್ದವನು : ಆತಂ ಶಸ್ತ್ರದಿಂ ಗಲ್ಲಮಂ ಪಾಳಿಸಿ ವ್ರಣವೆರಸಿದಕ್ಕಿಯಂ ತೆಗೆದು ಕತ್ತಿಯಿಂದೆತ್ತಿ ತೋಱುಯಿದುಂ ತಂಡುಲವ್ಯಾಧಿಯೆಂದು ಪೆಸರಿಟ್ಟು . . . ಆ ತಂಡುಲಮಂ ಹೊಣಕೆ ನುಂಗಿ ಕಳೆದನಂದದಿಂದೆನ್ನನೆಲ್ಲರುಂ ಗಲ್ಲಪೋಟನೆಂದು ಪೆಸರನಿಟ್ಟರ್ (ಧರ್ಮಾಶ. ೯-೨೬ ವ) ; ಅಂದಿನಿಂದ ನನ್ನನ್ನು ಎಲ್ಲರೂ ಗಲ್ಲಪೋಟ ಎಂದು ಕರೆಯುತ್ತಾರೆ (ನಗಗ. ೩). ೨. (ಅಲಂ) ಪುಂಡ ; ಪೋಕರಿ ; ಸ್ವೇಚ್ಛಾಚಾರಿ : ದ್ಯೂತವನಾಡುತ್ತಿಹ ಪೋಟ ಸೂಳೆಯರೊಳೊಲ್ದಿ ರ್ಪಾಟಮಿಂತೆಲ್ಲ ಮುಂ ಸವಿಯಾಗಂತ್ಯದಿ ಕಷ್ಟವೈ (ಸೋಮೇಶ. ೨೪). ಭಂಡರಿಗೆ ಬಹುಭಾಷಿಗಳಿಗೆ ಪ್ರಚಂಡರಿಗೆ ಪರಸತಿಯ ಬೇಟೆಯ ಪುಂಡತನದಲಿ ಹೇಡಿರನು ಬಿಟ್ಟರ್ಪ ಪೋಟರಿಗೆ . . . ಹೇಳದಿರು ಮಱದೀ ಅನು ಭವಾಮೃತವ (ಅಮೃಶ. ೨-೨) ; ಲೀಲೆಯ ನಾಟಕವಲ್ಲ ಮಾಟಕೂಟವಿದಲ್ಲ ಪೋಟರ ಮಾತಲ್ಲ (ಹರಹ. ೩). [ಪೋಟು (< ಪೋಟ₁) + — ಅ₇]

**ಪೋಟ**₂ (ನಾ). ಅಂಜುಕುಳಿ ; ಹೇಡಿ ; ಭೀರು : " ಆ ಪೋಟನೆನೆ ಧುರ ದೊಳೋಡಿ ಬಹನಕ್ಕು" (ಮಂಗಲಾ. ೬೦-೪) ; ಪೋಟರಪ್ಪ ಜ ಹರಿ ಸುರೇಂದ್ರರಿಗಾಟವಿಕ ದಿತಿಸುತವಿತತಿಗೀ ಕೋಟಿಯಂ ಸಾಧಿಸುವುದವಗಡಂ (ಬಸಕೃ. ೦೬-೦೫). 'ಪೋಡಿ₁' ಹೋ. [ಸಂ. ಪೋಟಾ]

**ಪೋಟಕ** (ನಾ). = ಪೋಟ₁ ೨ : ಪೋಟಕರು ವೇಶ್ಯಾಂಗನೆಯರೊಡನಾಟ ದೊಳು ಪಗಲಿರುಳು ಬಾಳುವ (ಹುಕೋಶ. ೭). [< ಪೋಟ₁]

**ಪೋಟಖರಾಬು** (ನಾ). ಸಾಗುವಳಿ ಮಾಡಲಾಗದ ಜಮೀನು : ರಸ್ತೆಗಳು ಮತ್ತು ಕಾಲುವೆಗಳ ಮಗ್ಗುಲುಗಳಲ್ಲಿರುವಂಥಾ ಭೂಮಿಯನ್ನು ಬೇರೆ ನಂಬರು ಮಾಡಬೇಕೆಂದು ಹುಕುಂ ಆದಾಗ ಹಾಗೆ ಮಾಡತಕ್ಕದ್ದು. ಹಾಗಿಲ್ಲದೆಯಿದ್ದರೆ ಪೋಟಖರಾಬಿನಲ್ಲಿ ಸೇರಿಸಬೇಕು (ಭೂಮಿಅ. ೩೨).

[← ಮರಾ. ಪೋಟ್‌ಖರಾಬ್]

**ಪೋಟಗಲ**, ಪೋಟಗಳ (ನಾ). ೧. ಒಂದು ಬಗೆಯ ಲಾಳದ ಕಡ್ಡಿ. ೨. ಒಂದು ಬಗೆಯ ಹುಲ್ಲು ; ಜಂಬುಹುಲ್ಲು ; ಕಾಶತೃಣ. **ಪೋಟಗಳ** : ೧. "ನಡಃ, ಧಮನಃ, ಪೋಟಗಳಃ—ಇ ದೇವನಾಳದ ಹೆಸರುಗಳು. ದೇವಲಾಲೀಕಡ್ಡಿಗಳಿಗೂ ಹೆಸರುಗಳು" (ಸಿದ್ಧಾಂತಿ. ೦೫೦). ೨. " ಕಾಶಂ, ಇಕ್ಷುಗಂಧಾ, ಪೋಟಗಳಃ—ಇ ಜಂಬುಹುಲ್ಲು " (ಸಿದ್ಧಾಂತಿ. ೦೫೦). [ ಸಂ. ]

**ಪೋಟಗಳ** ' ಪೋಟಗಲ ' ನೋ.

**ಪೋಟಗಿ** ' ಪೋಟಿಗೆ ' ನೋ.

**ಪೋಟತನ** (ನಾ). ಪುಂಡಾಟ ; ಪೋಕರಿತನ : ಮುರಾರಿ ಗೋಪಿಯರಲ್ಲಿ ಹಾದರವಾಡಿ ಸಿಕ್ಕನೆ ಪೋಟತನದಿಂದ (ಬಸಕೃ. ೫೪-೪೦) ; ಪೋಟತನ ನಮ್ಮಲ್ಲಿ ಕೊಂಬುದೆ ಎನುತ ಹರಿಯೆಚ್ಚ (ಕೋಗಳು. ೨೨-೯೦). [ಪೋಟ₁ + — ತನ]

**ಪೋಟತೆ** (ನಾ). = ಪೋಟತನ : ಹುಸಿ ಕೊಲೆ ಕಳವು . . . ನುಸುಳು ಘಾತಕವನ್ಯಾಯ ಪೋಟತೆಗಳು ಮುಸುಳಿಹವಾ ನಾಡೊಳಗೆ (ಮೋಕ್ಷಕೃ. ೦-೩೪).

[ ಪೋಟ₁ + — ತೆ₂ ]

**ಪೋಟಲೀಸು** 'ಪೋಲ್ಬೀಸು' ನೋ.

**ಪೋಟಾಧ್ಯಾಯ** (ನಾ). (ಅಲಂ) ಸೂಳೆಗಾರಿಕೆ ; ಕಾಮಂಕ್ರೀಡೆಯ ಪ್ರಕರಣ : ಅಹಹ ಶಿವನೀ ಸೂಳೆಯೊಳ್ನೆರವುದೆಂತೆನಗೆ ಸಹಜಮೆಂತೆಮಗೆ ಪೋಟಾಧ್ಯಾಯಮೆಂದೆನಲು (ಶೀಕೃಕೃ. ೯-೦೦-೨೬) ; ಶಿವಗೃಹದೊಳು ಆವ ಪೋಟಾಧ್ಯಾಯವೆಲೆ ಮುಂಡೆಯೆನೆ (ಶೀಕೃಕೃ. ೯-೦-೩೬).

[ಪೋಟ₁ + ಅಧ್ಯಾಯ]

**ಪೋಟಾಪೋಟಿ** (ನಾ). ಸ್ಪರ್ಧೆ ; ಮೇಲಾಟ ; ಪೈಪೋಟಿ : ಮಹಾರಾಜರವರು ಅಧಿಕಾರವನ್ನು ವಹಿಸಿದ ಮೇಲೆ ಪೋಟಾಪೋಟಿಗೆ ಪ್ರಾರಂಭವಾಯಿತು (ಶಾಮರಾ. ೩೩೯); ಇಬ್ಬರಿಗೂ ಸಂಗೀತದ ಪೋಟಾಪೋಟಿ ಬಿತ್ತು (ಸಟಿಸಾ. ೧೪೭); ಬುದ್ಧಿಬಲಕ್ಕೂ ಬಾಹುಬಲಕ್ಕೂ ನಡೆದ ಪೋಟಾಪೋಟಿಯಲ್ಲಿ ಬಾಹುಬಲಕ್ಕೆ ಪರಾಜಯವುಂಟಾಯಿತು (ಶಾಶ್ವ. ೬೮).
[<ಪೋಟ್ಟಿ. /ತುಳು. ಪೋಟಾಪೋಟಿ]

**ಪೋಟಿ$_1$, ಹೋಟಿ** (ನಾ). ೧. ಈಡು; ಸಮಾನ; ಎಣೆ : ಸಿಲುಬೆಮೊಳೆಗಳ ಉಳಿಯ, ಪೆಟ್ಟಿ ಇದಕೆ ಸಾಟಿಯೆ? ಪೋಟಿಯೆ? (ಪ್ರಾಕ್ತನಾ. ೩೬-೨). ೨. ಸ್ಪರ್ಧೆ; ಮೇಲಾಟ ; ಹುರುಡು : ಒಂದು ದಿನ ನಗರದ ಜನಗಳನ್ನೆಲ್ಲ ಕರೆದು ಆಯುಧಾಭ್ಯಾಸದ ಪರೀಕ್ಷೆಯನ್ನೂ ಪೋಟಿಯನ್ನೂ ಏರ್ಪಾಡು ಮಾಡಿದರು (ವ್ಯಾಸಿ. ೪೮); ಯಾವ ಗರಡಿಯೋರು ಪೋಟಿ ಹಾಕ್ತಾರೋ! (ದಯ್ಯ. ೧೫). ೩. ಕೂಡಿಸುವುದು ; ಸೇರಿಸಂವುದು : (ಕ). ೪. (ಎರಡು ಭಾಗಗಳು ಸಮವಾಗುವಂತೆ) ಸೇರಿಸುವ ತುಂಡು.— ಚೂರು : ಅದು ಕತ್ತರಿಸಿ ಹೋಗಿತ್ತು, ಪೋಟಿ ಹಾಕಿ ಜೋಡಿಸಿದ್ದಾರೆ (ರೂಢಿ). **ಹೋಟಿ** : ೧. "ಸರಿ, ದೊರೆ . . . ಹೋಟಿ, ಸಂಗಡಂ—ಈ ೧ರ ಸಮಾನಕ್ಕೆ ಪೆಸರ್" (ಶಬಸಾ. ೩೬-೨೯೦) ; ದುರ್ವಾರಂಗೆ ಸುಬಾಹು ಪಾಟಿ, ಹರ್ಯಕ್ಷಂಗೆ ನೀಲರತ್ನಂ ಹೋಟಿ(ರಾಮಾಶ್ವ. ೧೯೯-೨). 'ಹೋಡು' ಪರಾ. [ದೇ.॥ ತಮಿ. ಪೋಟಿ, ಪೋಟ್ಟಿ; ತುಳು. ತೆಲು. ಪೋಟಿ]

**ಪೋಟಿ$_2$** 'ಪೋಟಿ$_1$' ನೋ.

**ಪೋಟಿ$_3$** 'ಪೊಡ್ಡಿ' ನೋ.

**ಪೋಟಿಕೆ** 'ಪೋಟಿಗೆ' ನೋ.

**ಪೋಟಿಗಾರ** (ನಾ). ಪೈಪೋಟಿಗೆ ನಿಂತವನು; ಸ್ಪರ್ಧಾಳು : ಪೋಟಿಗಾರ ಎಂದರೆ ಹೋರಾಟಗಾರ, ಸ್ಪರ್ಧಿ ಎಂದರ್ಥ (ಶಜಶ. ೦೦೩).
[ ಪೋಟಿ$_1$ + — ಗಾರ (<—ಕಾಱ) ]

**ಪೋಟಿಗೆ, ಪೋಟಗಿ, ಪೋಟಿಕೆ** (ನಾ). (ಉಕ) ಜೀವನಾಂಶ; ವರ್ಷಾಶನ: ಎರಡುನೂರುರೂಪಾಯಿಗಳ ಪೋಟಿಗೆಯನ್ನು ಗೊತ್ತುಮಾಡಿ ಈ ತಾಯಿ ಮಕ್ಕಳನ್ನು ಸಾಗಹಾಕಿದ್ದರು (ಕಂಗರೋ. ೦೪); ನಿನಗೆ ಪೋಟಿಗೆ ಕೊಡುವುದು ಕಂದಾಯವನ್ನು ಪೂರ್ತಿಯಾಗಿ ವಸೂಲ್ ಮಾಡುವುದಕ್ಕೆ (ಸಾವಿತ್ರಿ. ೬೦). **ಪೋಟಗಿ** : ನನ್ನ ಪೋಟಗಿ ನನಗ ಚೆಲ್ಲು. ನಿನ್ನ ಮನ್ಯಾಗ ನಾ ನಿಲ್ಲೂದಿಲ್ಲ (ಗಂಪಡಾಯ. ೨೩೦); ನಿಮಗೆ ಮುಂದೆ ಪೋಟಗೀ ಸಿಕ್ಕೀತು (ಶವಕ. ೦೦೦). **ಪೋಟಿಕೆ** : ಊರ ಕಂದಾಯ ಹೆಚ್ಚಿಸುವುದು ಶ್ಯಾನುಭೋಗನಿಗೆ ಲಾಭಕರವಾಗಿತ್ತು. ಅದರಿಂದ ಅವನ ಪೋಟಿಕೆ ಏರುತ್ತಿದ್ದಿತು (ಗರುಡಾ. ೦೦೨).
[←ಮರಾ. ಪೋಟಗೀ, ಪೋಟಗೇ]

**ಪೋಟಿಗೆದಾವೆ** (ನಾ). ಜೀವನಾಂಶಕ್ಕಾಗಿ ಮಾಡುವ ದಾವೆ : ಸರಕಾರದ ಮೇಲೆ ಪೋಟಿಗೆದಾವೆ ಮಾಡ್ರಿ (ತಿರುಗು. ೬).
[ಪೋಟಿಗೆ+ದಾವೆ$_1$ (<ದಾವಾ)]

**ಪೋಟಬೀಳು** 'ಪೋಟಿಬೀಳು' ನೋ.

**ಪೋಟು** 'ಪೋಟ್ಟಿ' ನೋ.

**ಪೋಟುಗಾರಿಕೆ** (ನಾ). ತುಂಟಾಟ (?) : ನಿಮ್ಮ ಪೋಟುಗಾರಿಕೆಯನ್ನು ಹಾರಿಸಿಬಿಟ್ಟೇನು . . . ಸುಮ್ಮನೆ ಹೋಗಿರಿ (ಶಾಕಾಮಂ. IV. ೦೬).
[ ? ]

**ಪೋಟುಬೀಳು** 'ಪೋಟಿಬೀಳು' ನೋ.

**ಪೋಟಿ$_1$, ಪೊಟ್ಟೆ, ಪೊಟ್ಟೆ$_2$, ಪೋಟ್ಟೆ, ಪೋಟು, ಹೊಟ್ಟೆ, ಹೋಟಿ$_1$** (ನಾ). ೧. (ಮರದ) ಪೊಟರೆ; ಡೊಗರು: "ಮರದ ಪೋಟಿಯೆ ಪೊಟಲ್" (ಸಂಕೀಶ. ೦೨); ಹುಣಿಸೆಮರದ ಪೋಟಿಯಲ್ಲಿ ದೇಹ ಬೆಂದು ಬೇಯದುದಕ್ಕಳಲೊ (ಐತ್ತೀಸ. ೪೪). ೨. ತೂತಂ ; ರಂಧ್ರ : 'ಪೋಟಿಬೀಳು' ಪರಾ. ೩. ಪೊಳ್ಳು; ಜಳ್ಳು : ಓಡು ಒಡಕು ಹುರುಳಿ ಪೋಟಿ ಹುರಿವಾಕಿಯ ಕೈಸೊತ್ತು (ಛಪದ. ೩೩-೩೨೭). 'ಪೋಟಿಗೊಂಬು' ಪರಾ. **ಪೊಟ್ಟೆ** : ೧. ನಮ್ಮ ಪೊರೆವರಾರೆಂದು ಬರಕಂಜಿ ಪೊರವಮಡಲಮ್ಮದೆ ಪನ್ನೆರಡುವರುಷಂಬರಂ ಪೊಟ್ಟೆಯೊಳಿರ್ದವು (ಧರ್ಮಾಪ್ರಾ. ೬-೦೩೩). **ಪೊಟ್ಟೆ$_2$** : ೧. "ಪೊಟಲ್=ಮರದ ಪೊಟ್ಟೆ ; ಪುರಂ" (ಶಮಚ. ಶಂ. ೦); ಪೊಳ್ಳು, ಪೊಟ್ಟೆ (ಹೊಟ್ಟೆ), ಪೊದರು (ಹೊದರು), ಪದರು, ಡೊಗರು (ಶಂಮಹು. ೬೮).' ಪೊಟ್ಟೆವೋಗು' ಪರಾ. ೩. ಪೊಟ್ಟೆಯ ನುಡಿಗಳಂತಿರಲಿ ನಾರದ (ಮೋಹತ. ೦೨-೩೩). **ಪೋಟ್ಟೆ** : ೨. 'ಪೋಟಿಬೀಳು' ಪರಾ. **ಪೋಟು** : ೧. ವನಪಾಲಕರು. . .ಎಲ್ಲವನು ಮಾಮರನ ಪೋಟೊಳಿಯೊಳ್ [ಳ] ಹಾಕಲು (ನವಮೋ. ೨೨-೦೯). ೨. 'ಪೋಟುಬೀಳು' ಪರಾ. ೪. (ಕರಾ) ಮೈಥುನಕ್ರಿಯೆ. **ಹೊಟ್ಟೆ** : ೨. 'ಹೊಟ್ಟೆ ಹೋಗು' ಪರಾ. **ಹೋಟಿ$_1$** : ೧. "ಹೋಟೆ[ಪಾಠಾಂ. ಕೋಟರಂ] ಪಿತ್ತಲೆಂಬಿನಿತುಂ ನಿಷ್ಕುಟಮಕ್ಕುಂ" (ನಾನಾರ. ೦೯೩) ; ವಟವೃಕ್ಷದ ಘಟದ ಹೋಟೆಯಲ್ಲಿ ತತ್ತಿಯನಿಕ್ಕಿತ್ತೊಂದು ಗಿಣಿ (ಮಹುಗುಂ. ೪. ೨೩೬-೪೮) ; ತೋಟದ ಕಬ್ಬಿಂದ ಹೋಟಿಯ ಜೇನಿಂದ. . .ಬಲ್ಲವಳ ಕೂಟವೇ ಲೇಸು (ಸರ್ವಜ್ಞ. ೦೬೦೦). ೨. ಮಣ್ಣ ಹೋ[ಪಾಠಾಂ. ಹೊ]ಟೆ ಮಳೆಗೆ ಮುಚ್ಚುವುದಲ್ಲದೆ ಕಲ್ಲ ಹೋ[ಪಾಠಾಂ. ಹೊ]ಟೆ ಮುಚ್ಚುವುದೆ (ಗುಹ್ಯವಂ.೪. ೨೦೬-೩೬); ಅನಲನ ಸತಿಯು ಬಲದ ಮೂಗಿನ ಹೋಟೆಯಂ. . .ಕೊಯ್ಯುತ್ತ (ಏಕರಾ. ೦೨-೬೦). ೩. ಹೊರಗೆ ನೋಡಿದರೆ ಕೋಟೆ ಒಳಗೆ ನೋಡಿದರೆ ಹೋಟೆ (ಗಾದೆ).
[ದೇ.॥ ತಮಿ. ಪೋಟು ; ಮಲ. ಪೋಡು ; ಕೊಡ. ಪೋಟೆ ; ಕೋಲಾ. ಬೋಟ್]

**ಪೋಟಿ$_2$** (ನಾ). ೧. ಮೀಸೆ, ದಾಡಿ ಮುಂತಾದ ಪುರುಷಲಕ್ಷಣಗಳುಳ್ಳ ಹೆಂಗಸು ; ಖೋಜಾ : "ಪೋಟಾ—ಸ್ತ್ರೀಪುಂಸಲಕ್ಷಣಾ—ಸ್ತ್ರೀಲಕ್ಷಣವೂ ಪುರುಷಲಕ್ಷಣವೂವುಳ್ಳ ಶಿಖಂಡಿಯಂಥಾವಳ ಹೆಸರು" (ಸಿದ್ಧಾಂತಿ. ೦೬೦). ೨. ನೀರು ಹೊರುವ ಚೇಟಿ.—ಸೇವಕಿ ; ಕುಂಭದಾಸಿ : "ಪೋಟಾ . . . ದಾಸೀ, ಕುಟಹಾರಿಕಾ—ಈ ೫ ತೊಟ್ಟು" (ಹಲಾಯು. ೬೦-೩೩೪) ; "ನೀರಡಿಕೆ ಪೋಟಿಯೆನಿಸಿಕ್ಕು" (ಮಂಗರಾ. ೯೦-೪). [ಸಂ. ಪೋಟಾ]

**ಪೋಟಿಗೊಂಬು** (ನಾ). ಟೊಳ್ಳು ಕೊಂಬೆ ; ಪೊಳ್ಳಾದ ಟೊಂಗೆ : ಪೋಟಿಗೊಂಬುಗಳ ಪಳಮರದಂತೆ ತಿರುಳಿಲ್ಲದೋಟಿಗಳ ತಿಂತ್ರಿಣೀಫಲದಂತೆ ಗುಳಿಕ ಕರ್ಕೋಟಕಾದಿಗಳೊಡಲ್ಪೊಳ್ಳಾದುವು (ಜೈಮಿಭಾ. ೨೮-೩೩).
[ಪೋಟಿ$_1$ + ಕೊಂಬು$_1$]

**ಪೋಟಿಬೀಳು, ಪೋಟಬೀಳು, ಪೋಟುಬೀಳು** (ಕ್ರಿ). ತೂತು ಬೀಳು; ರಂಧ್ರವುಂಟಾಗು : ಆಕಾಶ ನೋಡಿ ನೋಡಿ ಅವನ ಕಣ್ಣು ಪೋಟಿಬಿದ್ದು ಹೋಗುತ್ತದೆ (ಹಳ್ಳಿಪಾ. ೩೦). **ಪೋಟಬೀಳು** : ಅವನ ತಲೆಯು ಅದರ ಏಣಿನ ಸಲಾಕಿಗಳಿಗೆ ಬಲವಾಗಿ ಬಡಿಯಲು, ಪೋಟಬಿದ್ದು ರಕ್ತಸುರಿಯಲಾರಂಭಿಸಿತು (ಅಂಬಿಕ. ೬೦). **ಪೋಟುಬೀಳು** : ಕೆಳಕ್ಕೆ ಬಿದ್ದ ರಭಸಕ್ಕೆ ಅವನ ತಲೆ ಪೋಟುಬಿದ್ದಿದೆ (ರೂಢಿ).
[ ಪೋಟಿ$_1$ + ಬೀಳು$_1$ (<ಬೀೞ್$_1$) ]

**ಪೋಟಿಹೋಗು, ಪೊಟ್ಟೆವೋಗು, ಹೊಟ್ಟೆಹೋಗು** (ಕ್ರಿ). ೧.= ಪೋಟಿಬೀಳು : ಕಣ್ಣು ಪೋಟಿಹೋದ ಜಡನಂತೆ (ಭಕ್ತಸ. III. ೪). **ಪೊಟ್ಟೆವೋಗು** : ೧. ಕೊಂಬೊಣಗಿರ್ದ ಪೊಟ್ಟೆವೋದೊಣಗಿದ ವೃಕ್ಷದಿಂದಱುವುದಾಯಡೆಯೊಳ್ ಜಳವಾಗದೆಂಬುದಂ (ಲೋಕೋಪ. ೩-೪) ; ಪೊಟ್ಟೆ[ಪಾಠಾಂ. ಪೋದೆ]ವೋದ ಮರದಂತೆ ಕರಂ ನರೆಯೇಱದಿಟ್ಟು ಮುಪ್ಪಡಸದ ಮುನ್ನಮೇಕೆ ಮನುಜರ್ಮುಱಿದಿಕ್ಕರೊ ಮೋಹಮಲ್ಲನಂ (ಮಲ್ಲಿಕಾ. ೦೩-೯೯). ೨. ಹೊಪ್ಪಳೆಯುಂಟಾಗು ; ಬೊಬ್ಬೆಯೇಳು ;

ಪುಟ್ಟಿದ ದಿನ ಮೊದಲಾಗಿ ಧರೆಯೊಳಡಿಯಿಟ್ಟಱಿಯರು ಬಾಲೆಯರು ಬಟ್ಟೆಯೊಳಗೆ ನಡೆಯಲು ಪಾದತಳಗಳು ಪೊಟ್ಟೆಪೋಪುದು ತಾನಂದೆ (ಅಂಜನ. ೯-೯೩). **ಹೊಟ್ಟೆಹೋಗು :** ೧. ಮಂಜುನಾಥಯ್ಯನವರ ಕಿವಿ ಮರದ್ದಾಗಿದ್ದರೆ ಎಂದೇನೆ ಹೊಟ್ಟೆಹೋಗುತ್ತಿತ್ತು (ಸರಸ. ೧೦).
[ ಪೋಟಿ$_1$ + ಹೋಗು$_1$ (< ಪೋ$_1$) ]

**ಪೊಟ್ಲೀಸು** 'ಪೋಲ್ಬೀಸು' ನೋ.

**ಪೋಡಣೆ** 'ಪೊಡ್ಡಣ' ನೋ.

**ಪೋಡಿ$_1$** (ನಾ). ಭಯ ; ಹೆದರಿಕೆ : ಪೂವಿ ಏನು ಮಾಡಿಕೊಳ್ಳುವಳೋ ಎಂದು ನನಗೆ ಪೋಡಿ ಆಗುತ್ತೆ (ಹುಂಪಾ. ೦೯೩): ಥೂತ್, ಪೋಡಿ ಪುಕ್ಕಲಗಳೇ, ಹುಟ್ಟಿದ ಮನುಷ್ಯ ಸಾಯದೇ ಕೂಡುತ್ತಾನೆಯೇ ? (ಪಾತ. ೬೦). [ದೇ. ॥ ತುಳು. ಪೋಡಿಗೆ ; ಕೊಡ. ಪೋಡಿ]

**ಪೋಡಿ$_2$** (ನಾ). ೧. ಹಣ್ಣು ಮುಂತಾದುವುಗಳ ಚೂರು, – ತುಂಡು : (?). ೨. ಅಡಕೆಯ ಚೂರು ; ಚೂರಡಿಕೆ : ಪೋಡಿಭಾಗದ ಬೆಳ್ಳೆಲೆಯ ಮೆಲ್ಲುತೆ ಸಖಿಗೂಡಿ ಬಂದಳು ದಿವಾಣಕ್ಕೆ (ಮೋಹತ. ೨೭-೭) ; ಹವರ್ಮ್ಯಾಗ್ರವನಡರ್ದು ಪೋಡಿಯ ಭಾಗ ಬೆಳ್ಳೆಲೆಯ ಸ್ವೀಕರಿಸಿ ಮಾತಾಡಿದಳ್ ಮಂತ್ರಿಜೆಯೊಡನೆ (ಮೋಹತ. ೨೮-೩೩). ೩. "ಪಟ್ಟೇದಾರನ ಅರಿಕೆಯಿಂದ ಅಥವ ಕೋರ್ಟು ಅಪ್ಪಣೆ ಪ್ರಕಾರ ಮತ್ತಾವ ದಾದರೂ ಕಾರಣದಿಂದ ನಂಬರುವೊಡೆಯಬೇಕೆಂದು ಅಪ್ಪಣೆ ಯಾದರೆ ಹಾಗೆ ವೊಡೆಯಬೇಕು. ಇದಕ್ಕೆ ಪೋಡಿಯೆಂದು ಹೆಸರು" (ಶೂಬಿಅ. ೩೩). 'ಪೋಡು' ಪರಾ. [< ಪ್ರಾ. ಪೋಡಿ, ಪೋಡೀ]

**ಪೋಡು** (ನಾ). ೧. ಸೀಳುವಿಕೆ; ಕತ್ತರಿಸುವಿಕೆ: 'ಪೋಡುಂಗಾಱ' ಪರಾ. ೨. ಪಾಲು; ವಿಭಾಗ: ಜಮೀನಿನ ಪೋಡು ಮಾಡಿಸಲು ತಾಲ್ಲೋಕುಕಚೇರಿಗೆ ಹೋಗಬೇಕು (ರೂಢಿ). 'ಪೋಡ್' ಪರಾ. [<ಪ್ರಾ. ಪೋಡ್=ಸೀಳು./ತೆಲು. ಪೋಡು=ಜಮೀನಿನ ತುಂಡು]

**ಪೋಡುಂಗಾಱ, ಪೋಡುಗಾಱ** (ನಾ). ಸೌದೆ ಕಡಿಯುವವನು; ಮರ ಕತ್ತರಿಸುವವನು : ನೀಂ ಕೊಂಕಣನಾಡೊಳ್ ತುಂಗಭದ್ರನೆಂಬ ಪೋಡುಂಗಾಱನಯ್ ನೀಂ ಕುಮ್ಮರಿಯಂ ಸುಟ್ಟು ಪೋಗಿ ಪೊೞ್ತಿಡೆ ಬಂದು ನೋಡುವನ್ನೆಗಂ (ವಡ್ಡಾರಾ. ೧೬೦-೦) ; ಬಳೆದು ಪುದುಂಗೊಳಿಸಿದ ಬದಿರ ಸಿಡುಂಬನೆಡೆಗೊಳೆ ಕಡಿವ ಪೋಡುಂಗಾಱನಂತೆ (ಶಂಕಪಾ. ೦೨-೦೬೭ ವ). **ಪೋಡುಗಾಱ :** ಒಂದೇ ಕುಠಾರದಿಂದಡವಿಯಂ ಕಡಿವಂತಿರೆ ಪೋಡುಗಾಱನನ್ನೊಂದೆ ಭುಜಾಸಿಯಿಂ ಶಬರಕೋಟಿಯನಿಕ್ಕಿ ಪಿಶಾಚಕೋಟಿಗಾನಂದಮನುಂಟುಮಾಟ್ಪೆಂ (ಶಂರಾಮಾ. ೯-೯೦). [ಪೋಡು + – ಕಾಱ]

**ಪೋಡುಗಾಱ** 'ಪೋಡುಂಗಾಱ' ನೋ.

**ಪೋಣಪಟ್ಟು** 'ಪೌಣಪಟ' ನೋ.

**ಪೋಣಕೆ** 'ಪವಣಿಕೆ' ನೋ.

**ಪೋಣಿಗೆ** 'ಪವಣಿಗೆ' ನೋ.

**ಪೋಣಿಸು** 'ಪವಣಿಸು' ನೋ.

**ಪೋತ$_1$** 'ಪೋಂತು' ನೋ.

**ಪೋತ$_2$** (ನಾ). ೧. ಯಾವುದಾದರೂ ಪ್ರಾಣಿಯ ಮರಿ ; ಶಾಬ : ವಿಯೋಗಿಗಣಾಕೂತ ಕುರಂಗಪೋತ ಭಯಕೃತ್ಕಂಠೀರವಂ (ಅಜಪು. ೬-೯೨); ಪಕ್ಷಂಗಳೊಳ್ ಪಟ್ಟನಿತುಂ ಪೋತಂ[ಪಾಠಾಂ. ಪೊತ್ತಂ]ಗಳಂ ವೀಕ್ಷಿಸುತೆ (ಶಾಂತೀಶ್ವ. ೧೧-೯೬): ಕಲ್ಲಿಯಂ ಚಿಕ್ಕನೆ ತೂತುಗೆಯ್ದು ಗಿಳಿಗಳ್ಕರೆತಂದವು ತಮ್ಮ ಪೋತಮಂ (ಹಮ್ಮೀರ. ೪-೬೨). ೨. ಶಿಶು; ಮಗು : "ಬಾಳಃ, ಪಾಕಃ, ಅರ್ಭಕಃ, ಗರ್ಭಃ, ಪೋತಃ . . . ಡಿಂಬಃ – ಈ ೯ ಮಗುವು" (ಹಲಾಯು. ೮೩-೩೯೮); ಉರುವೈರಾಗ್ಯಂ ಸಾತಿಶಯಮೆನಿಸಿ ಬಳೆಯಲ್ ಪೋತಂ ತದ್ಬಾಲನೈದೆ ಬಳೆಯುತ್ತೆಸೆದಂ (ಉದ್ಭಟ. ೦೦-೩೫). ೩. ಚಿಕ್ಕ ಹಡಗು; ದೋಣಿ; ನಾವೆ : "ಪೋತವೂ ಪ್ರವಹಣಂ ಭೈತ್ರಮೆನೆ ಹಡಗಕ್ಕು" (ಮಂಗರಾ. ೧೨೦-೯) ; ಪಲಬರರಸುಗಳ್ . . . ಧರ್ಮಪೋತಚ್ಯುತರನವಧಿಸಂಸಾರವಾರಾಶಿಮಧ್ಯಾಸ್ಪದಸರ್ಗಾಗ್ರಸಿಭೀಮಾಂತಕ ವದನಮಹಾಗರ್ತದೊಳ್ ಮಗ್ನರಾದರ್ (ಆದಿಪು. ೯-೫೮); ಆ ತಡಿಗಿರದೊಯ್ದುಕ್ಕುವ ಪೋತದವೋಲ್ (ಸಮುಕ. ೭-೩೮); ಪೋತಯಾತ್ರಿಕಜನಂ ಪುಗಲೊಲ್ಲದೆ ವಾರ್ಧಿಮಧ್ಯಮಂ (ಎಕ. XI. ದಾವಣ. ೯೩-೫೩; 1164). ೪. ಹತ್ತು ವರ್ಷ ವಯಸ್ಸಿನ ಆನೆಯ ಮರಿ : ಎಸೆದುದು ಬಳಸಿರೆ ಪೋತಕಲಾಪವಲ್ಲಿ ಯೂಥನಾಥಂ (ಪುಷ್ಪಪು. ೫-೯೩). ೫. ಚಿಗುರು. ೬. ಮನೆಯ ನಿವೇಶನ ಅಥವಾ ತಳಪಾಯ. [ಸಂ.]

**ಪೋತಕ** (ನಾ). ೧. ಯಾವುದಾದರೂ ಪ್ರಾಣಿಯ ಮರಿ : ಮನಂ ಬೆರ್ಚದೆ ಸಿಂಹಪೋತಕಮನೋವಲುಮಾಕೆಯ ದೋಹಳಂ ಕರಂ ಪೆರ್ಚಿದುದು (ಶಂಕಭಾ. ೦-೦೯೨) ; ಮುತ್ತಿನ ಸೂಸಕಂಗಳಂ ಬಾಳಮೃಣಾಳಮೆಂದು ಕರ್ದುಕಲ್ ಬಗೆಗುಂ ಕಲಹಂಸಪೋತಕಂ (ಶಂರಾಮಾ. ೦-೦೨೭). ೨. ಎಳೆಯ ಗಿಡ; ಸಸಿ : ಚೂತಪೋತಕಂ ನನೆಯಿಂ ರಂಜಿಸುವಂತಿರೆ ತನಯಂ ರಂಜಿಸಿದಂ (ಜಗಏ. ೩-೩೯). [ಸಂ.]

**ಪೋತಕಿ** (ನಾ). ಒಂದು ಬಗೆಯ ಸಸ್ಯ; ಬಸಲೆ : "ಪೋತಕಿ ಮಂಥಗಾಳಿಯೆನೆ ಬಸಲೆಯಕ್ಕು" (ಮಂಗರಾ. ೯೯-೯೬). [ಸಂ. ಪೋತಕೀ]

**ಪೋತಗ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಚವಡಿಕೆ ಮಾರಿ ಮಸಣಿ . . . ಕೊಲ್ಲುವ ಪೋತಗನು ಕಚ್ಚಿನ ಗಡಿಗೆವ್ಮ (ಏಶಾಶು. ೫೮-೨).
[ ? ]

**ಪೋತರ್** (ಕ್ರಿ). ೧. ಹೋಗು ; ಗಮಿಸು ; ಸಾಗು : ಅರ್ಕೋದಯ ಭಯವಶದಿಂ ಪಾಣ್ಬೆ ಪೋತಂದಳೊರ್ವಳ್ (ಲೀಲಾವ. ೩-೦೯) ; ಹರಿ ಪೋತಂದಡಿವಜ್ಜೆಗಳ್ ಬಯಲೊಳಿಲ್ಲಿಂದಿತ್ತವಿನ್ನಿಲ್ಲ (ಜಗಏ. ೫-೩೦); ಕಲಿ ಅಜ್ಜಗನ್ನಣ್ಣ ನಾರಾಯಣನ್ ತನ್ನ ಮನೆಯನ್ನನ್ನಮಿಟ್ಟು ಪುಗುತನ್ನೊಡೆ ಅಱಿವು ಪೊರಮಟ್ಟು ಪೋತ(ಂ)ನ್ದು ಕಡಿತಲೆಯನ್ನಟ್ಟೆ ನಾಲ್ವರಾನಿಱಿದೊನ್ (ಶಾಇಇ. IX–1, ೫-೦೨ ; ?). ೨. ಹೊರಗೆ ಬರು; ಹೊರಟು ಕೊಳ್ಳು ; ಮುಂಬರು : ಉಸಿರೊತ್ತಿಂ ತಿದಿಯಂತಿರೊತ್ತಿದ ಬಸಿಱ್ ಪೋತಂದ ಕಣ್ ಬಿಟ್ಟ ಬಾಯ್ (ಶಂಕಭಾ. ೦೨-೦೫೦); ಇಡೆ ಕಾಲಂ ಬಲಿ ಸಿಲ್ಕಿ ಪಲ್ಗಿರಿದು ಕಣ್ಪೋತಂದು ಸುಯ್ಗಟ್ಟು ಸೀರ್ವಡಿಸುತ್ತಿರ್ದ ಧರಾಮರರ್ ನಡುಗೆ ಬಿಟ್ಟಿಲ್ಲಂ ಶರಣ್ ದೇವ ನಿಮ್ಮಡಿಯೆಂದಿರ್ಪುದುಂ (ವೀಬಿಪು. ೫-೨೯). [ಪೋ$_1$ + ತರ್]

**ಪೋತವಣಿಜ** (ನಾ). ೧. ಹಡಗಿನ ಮೂಲಕ (ದೇಶವಿದೇಶಗಳೊಡನೆ) ವ್ಯಾಪಾರ ಮಾಡುವವನಂ ; ಸಮುದ್ರವ್ಯಾಪಾರಿ : "ಸಾಂಯಾತ್ರಿಕಃ, ಪೋತವಣಿಕ್–ಈ ೨ ಭೈತ್ರದ ವ್ಯವಹಾರಿ" (ಹಲಾಯು. ೧೦೮-೩೩) ; ಪೋತವಣಿಜರ್ತಡಿಗೆಯ್ದಿ ತೃಷಾವಿಷಾದಮಂ ಕೊಟಿಚೆಯ ನೀರೊಳೇಕಳೆಗುಮೆಂದೊಡೆ (ಜಕಏ. ೦-೩೭). ೨. ಹಡಗಿನ ವ್ಯಾಪಾರ ಮಾಡುವವನು. [ಸಂ. ಪೋತವಣಿಜ್]

**ಪೋತವಾಹ** (ನಾ). ಹಡಗನ್ನು ನಡೆಸುವವನು ; ನಾವಿಕ ; ಕಲಾಸಿ : "ನಿಯಾಮಕಾಃ, ಪೋತವಾಹಾಃ, ೨ ಹಡಗಿನ ಕಂಭದ ಮೇಲೆಯಿದ್ದು ಹಡಗು ನಡಿಸತಕ್ಕ ಉಪಾಯಗಳನ್ನು ಹೇಳುವವರ ಪೆಸರುಗಳು" (ಸಿದ್ಧಾಂತ. ೭೯). [ಸಂ.]

**ಪೋತವಾಹಿ** (ನಾ). = ಪೋತವಾಹ : "ತತ್ಪೋತವಾಹಿ ನಾವಿಕನಕ್ಕುಂ" (ವಸ್ತುಕೋ. ೨೩-೦೦). [ಸಂ. ಪೋತವಾಹಿನ್]

**ಪೋತಾಧಾನ** (ನಾ). ಮರಿಮೀನುಗಳ ಮೊತ್ತ : "ಕ್ಷುದ್ರಾಂಡಃ, ಮತ್ಸ್ಯಸಂಘಾತಃ, ಪೋತಾಧಾನಂ – ಈ ೩ ಕಿಱಿಯ ಮೀನ ಮೊತ್ತಂ" (ಹಲಾಯು. ೧೦೯-೩೯). [ಸಂ.]

**ಪೋತಿ** 'ಪೌತಿ' ನೋ.

**ಪೋತು** 'ಪೋಂತು' ನೋ.

**ಪೋತುಂಗಲ್ಲು** (ನಾ). ಒಂದು ಸ್ಥಳದ ಹೆಸರು : ತೆಂಙ್ಕಣದೆಸೆ ಗುಡ್ಡೆಗಲ್ಲು . . . ಪಡುವಣದೆಸೆ ಪೋತುಂಗಲ್ಲು ಕೊಮರುಲ ಪಟ್ರು ಕಾಮ್ಮ್ರುಗಿಲ ಪುಣಾಸೆ (ಎಶಿ. XII. ಸಿರಾ. ೩೯–೪೮ ; 878). [ ? ]

**ಪೋತ್ರ** (ನಾ). ೧. ಹಂದಿಯ ಮೂತಿ,–ಮುಂಸುಡಿ : ದಬ್ಬಣದಂತೆ ನಿಬ್ಬಣವಾದ ಕೂದಲ್ಗಳೊಳ್ ಕೋದ ಪೆಣಂಗಳಿಂ ಪೋತ್ರಮೊಯ್ಯದೆ ಪಡೆಯಂ ಪಿಡಿದು ಪೊಡೆಯೊಳ್ಪೊಕುವಂತೆಯುಂ . . . ಮೊಗವಾಸೆತ್ತಿ ಮೆಯ್ಯಂ ನಿಮಿರ್ದು ಅದಿರದಿದಿರೇಱುವೆಕ್ಕಲವಂದಿಯಂ ಕಂಡು (ಆಂಪು. ೩–೦೪ ವ) ; ಪೋತ್ರಮನೆತ್ತುತ್ತವಿತ್ತಲಿತ್ತಲುಂ ಕೆಂದದೆ ನೋಡುತಾಲಿಸುತೆ ಮುಸ್ತಿನ ಕಾಯದ ಸೊಕ್ಕಿದೆಕ್ಕಲಂ ಗೊಂದಣದೊಳ್ ವಿರಾಜಿಸಲ್ (ಹಾಲಾಸ್ಯ. ೩–೦೩–೨೩). ೨. ನೇಗಿಲಿನ ತುದಿ ; ರೆಂಟೆಯ ಗುಳ : "ಹಂದಿ ನೇಗಿಲ ಮುಖಗಳೊಳ್ ಪೋತ್ರಮೆಂಬುದು" (ಮಂಗರಾ. ೦೪೩–೨೩); ಕಡುಗಾಯ್ದು ನೆಲದೊಳಬ್ಬಿಂದೆಡೆವಡೆಯದೆ ಮೇಲೆ ಮೇಲೆ ಪರಿವುದು ಪೋತ್ರಂ (ಜಿತವಂ. ೮–೨೦೦). ೧, ೨ : ಆ ಮಹಾವನಂ . . . ಕ್ಷೇತ್ರಾಕರ್ಷದಂತೆ ಪೋತ್ರಿಪೋತ್ರಾಹತಧರಣಿತಳಮುಂ ಗೃಹೀತಗೋಲಾಂಗೂಲಮುಂ . . . ಆಗಿಯುಂ (ಚಂದ್ರಪು. ೩–೩೨ ವ). ೩. ಪಿಕಾಸಿ ; ಗುದ್ದಲಿ. ೪. ಸಿಡಿಲು. ೫. ಹಡಗು ; ನೌಕೆ. ೬. ವಸ್ತ್ರ ; ಉಡುಪು. [ಸಂ.]

**ಪೋತ್ರಿ** (ನಾ). ೧. ಹಂದಿ ; ವರಾಹ : "ಕೋಳಃ, ಕ್ರೋಡಃ, ಸೂಕರಃ, ವರಾಹಃ, ಪೋತ್ರೀ . . . ಕಿರಿಃ—ಈ ೮ ಹಂದಿ" (ಹಲಾಯು. ೩೯–೬೩);ಒಂದು ಪಲ್ವಲಪ್ರಾಂತದೊಳ್ ಕಾಂತಾರಕಳಭಪ್ರಾಯಪೋತ್ರಿಸಂತಾನದೊಳಗೆ . . . ಸೊಗಯಿಸುತ್ತಿರ್ಪೇಕರಂ ಸೂಕರಂ (ಚಂದ್ರಪು. ೩–೩೯ ವ) ; ಆ ಮಾಯಾಪೋತ್ರಿ ಧಾತ್ರೀಭರವುನಲಟಿಸಿ ತುಳ್ಕಾಡಿದಂದು (ಶಾಇಇ. IV. ೨೬೬–೦೦ ; 1380); ಕೌಶಿಕಂ ನಿರ್ಮಿಸಿದ ಪೋತ್ರಿಯಂ ಕಂಡು ಭಟರುಱಿ ಕೆರಳುತೆ . . . ಬೆಂಬತ್ತೆ ಸಿಕ್ಕದೆ ಬಂದು ಮುನಿಯ ಮಱಿಬಿದ್ದುದಾ ಪಂದಿ (ರಾಘಹ. ೩–೨೯). ೨. ನೇಗಿಲು ; ರೆಂಟೆ. ೧, ೨ : ಆ ಮಹಾವನಂ . . . ಕ್ಷೇತ್ರಾಕರ್ಷದಂತೆ ಪೋತ್ರಿಪೋತ್ರಾಹತಧರಣಿತಳಮುಂ ಗೃಹೀತಗೋಲಾಂಗೂಲಮುಂ . . . ಆಗಿಯುಂ (ಚಂದ್ರಪು. ೩–೩೨ ವ). [ಸಂ. ಪೋತ್ರಿನ್]

**ಪೋತ್ರಿಪ** (ನಾ). ಹಂದಿಗಳ ಸಮೂಹದ ಮುಂದಾಳು : ಭೂವರನಂದು ತೇರನಡರಲ್ಕೋರ್ಚಿತ್ತದಂ ಪೋತ್ರಿಪಂ (ಹಾಲಾಸ್ಯ. ೩–೦೩–೯೩). [ಸಂ.]

**ಪೋಥಿ** (ನಾ). ೧. ಪುಸ್ತಕ ; ಗ್ರಂಥ. ೨. ಪವಿತ್ರಗ್ರಂಥ; ಧಾರ್ಮಿಕಗ್ರಂಥ : ನನ್ನ ಕಾದಂಬರೀ ಏನು, ತುಕಾರಾಮನ ಪೋಥೀ ಅಲ್ಲ (ಲಿಕಶ. II. ೩) : ಒಂದುದಿವಸ ಗಂಗವ್ವ ದೇವರ ಮುಂದೆ ಪೋಥಿ ಹಿಡಿದುಕೊಂಡು ಕುಳಿತಾಗ (ಗಂವಾಯು. ೨೩೦).
[←ಹಿಂ. ಮರಾ. ಗುಜ. ಪೋಥೀ ; ಬಂಗಾಲಿ. ಪುಥೀ ; ಸಿಂಧಿ. ಪೋಥೀ, ಪೋಥು./ಪ್ರಾ. ಪೋತ್ಥಯ]

**ಪೋಥೀಭಕ್ತಿ** (ನಾ). ೧. ಪವಿತ್ರಗ್ರಂಥದ ಮೇಲಿರುವ ಶ್ರದ್ಧೆ,–ವಿಶ್ವಾಸ : 'ಪೋಥೀಭಕ್ತಿ'ಯಿಂದಾಗಿ ಉಂಟಾಗುವ ಅ–ಪ್ರಮಾಣಿತ ಶ್ರದ್ಧೆಯು, ಮುಖ್ಯವಾಗಿ, ನಮ್ಮಲ್ಲಿ ಬೆಳೆದು ಬಂದಿರುವ ದ್ವಿಧಾಭಾವದ ಮೂಲಕಾರಣವಾಗಿದೆ (ಕರ್ನಾಟಿ. XV, ಮುನ್ನುಡಿ). ೨. (ಆಲಂ) ಮುದ್ರಿತವಿಷಯಗಳ ಮೇಲಿರುವ ಅತಿಶ್ರದ್ಧೆ. [ಪೋಥಿ+ಭಕ್ತಿ]

**ಪೋದ** 'ಪೋ₁' ಪರಾ.

**ಪೋದಗೆ₁** (ನಾ). (ಶುಭಾಶುಭಫಲಗಳನ್ನು ಸೂಚಿಸುವುದೆಂದು ನಂಬಲಾದ) ಒಂದು ಬಗೆಯ ಪಕ್ಷಿ: "ಪೋದಗೆ–ಪೋತಕ" (ತರ್ಕಕೋ. ೨೮); ಕೋಗಿಲೆ ಬಾದಗೆ ಪೋದಗೆ . . . ಬಲಾಕಿ ಲಾವುಗೆ ಸೇನಂ (ಕಾವ್ಯಸಾ. ೦೦೪೪ ಶೂದ್ರಕ); ಪಿಂಗಲಿ ಪೋದಗೆ . . . ಗೂಗೆಯಾದಿಯಾದ ಖಗಂ ರಾಜಾಂಗಣದೊಳ್ ಚರಿಸುವೊಡೆ ಸರಂಗೆಯ್ವೊಡೆ ತಡೆಯದಾ ಗೃಹಂ ಪಾಟಕ್ಕಂ (ಲೋಕೋಪ. ೪–೬೩); ನಲವಿಂ ಪೋದಗೆಗಳ ಪಿಂಗಲೆಗಳ . . . ದನಿಯಿಂ ಲುಬ್ಧಕರುಲಿಯಲ್ ಖಗವಿತತಿ ಬೆರ್ಚಿ ಪಾಱಿದುವಾಗಳ್ (ಕೃಪುಪು. ೨೮–೯೯). [<ಸಂ. ಪೋತಕ]

**ಪೋದಗೆ₂** (ನಾ). ಒಂದು ಬಗೆಯ ಸಸ್ಯ ; "ಬಸಲೆಗಿಡ" (ಕಕಟು. ೬. II, ೭). [ ಸಂ. ಪೋತಕೀ ]

**ಪೋದಿಯಮ್ಮ** (ನಾ). ಒಬ್ಬಾತನ ಹೆಸರು : ಈ ಕಲ್ಲಂ ಚಿಕ(ಂ)ಣ್ಣ × × × ಯಂ ಪೋದಿಯಮ್ಮ ಮಾಡಿಸಿದೋನ್ (ಶಾಇಇ. XI—I. ೦೦–೩೪ ; 864). [ ಪೋದಿ₀ + ಅಮ್ಮ₁ ]

**ಪೋದೆ, ಬೋದು₂** (ನಾ). ೧. ಟೊಳ್ಳು ; ಪೊಳ್ಳು : 'ಪೋದೆವೋಗು' ಪರಾ. **ಬೋದು₂** : ೨. ಕಂಡಿ ; ತೂತು ; ರಂಧ್ರ : ಕೀಟಕವು ಸಣ್ಣದಿದ್ದಾಗ ಎಲೆಗಳಲ್ಲಿ ಬೋದು ಮಾಡುತ್ತದೆ (ಕೀಟಶಿ. ೯೯). ೩. ಸಣ್ಣ ತಗ್ಗು,—ಹಳ್ಳ : ತೋಟದಲ್ಲಿ ಮೆಣಸಿನ ಗಿಡಗಳನ್ನು ಹಚ್ಚುವದಕ್ಕೆ ಬೋದುಮಾಡಿ . . . ಆ ಬೋದಿನ ತಳದಲ್ಲಿ . . . ಅರಿಷಿಣದ ಬೀಜವನ್ನು ಊರಿ ನೀರು ಬಿಡಬೇಕು ಮತ್ತು ಬೋದು ನೆನೆದು ಹಸಿಯಾದ ಮೇಲೆ ಬೋದಿನ ತಲೆಯ ಮೇಲೆ ಒಂದೂವರೆಮೊಳ ಅಂತರವಾಗಿ ಎರಡೆರಡು ಮೆಣಸಿನ ಅಗಿಗಳನ್ನು ಹಚ್ಚಬೇಕು (ಕೃಷಿಶಾ. ೦೯೭). 'ಪೋಟೆ₁' ಪರಾ. [ ದೇ. ॥ ತಮಿ. ಪೋತ್ತು, ಪೊತ್ತು ]

**ಪೋದೆವೋಗು** (ಕ್ರಿ). (ಒಣಗಿ) ಟೊಳ್ಳಾಗು ; ಪೊಳ್ಳುಬೀಳು : ಕೋಡಗದಂತೆ ಶಾಖೆಯೊಳ್ ನಡೆಯದೆ ಪೋದೆ[ ಶಾಹಾಂ. ಪೊಟ್ಟೆ ]ವೋದ ಮರದಂತೆ ಕರಂ ನರೆಯೇಱಿದಿಟ್ಟು ಮುಪ್ಪಡಸದ ಮುನ್ನಮೇಕೆ ಮನುಜ ಪರ್ಯಾಱಿದಿಕ್ಕರೊ ಮೋಹಮಲ್ಲನಂ (ಮಲ್ಲಿಪು. ೦೩–೯೪). [ ಪೋದೆ + ಪೋಗು₁ (< ಪೋ₁) ]

**ಪೋದೆಸೆ** (ನಾ). ಹೋಗುವ ದಿಕ್ಕು : ನೃಪಾಳನಳವಂ ನಾವಿನ್ನು[ಟಿ]ನ್ದೆಯ್ದು ಬಾಯ್ವುಲದಿಂ ಬಣ್ಣಿಸದಿರ್ದ್ದೆ[ಳ]ಣ್ಣ ಚಲಮಂ ಕೊಣ್ಡಾಡಿ ಮಾಱಾಂತು ಮುಂ ತಲೆಸುತ್ತಲ್ಗೆಲೆವೋಗಿ ಪೊರ್ದ್ದಲ್ಪಱೇ ಕಾಲೂರಿ ಲ್ನೆಲಂ ಱಿಂಬು[ದೋ]ಗಲಣಂ ಪೋದೆಸೆ ಇಲ್ಲೆನೆಲ್ಕಳಿದರಾತಿವ್ರಾತಮೇಂ ಪೇಳದೇ (ಕಇಇ. ೨–೨–೯೩; 1058). [ ಪೋ₁ + ದೆಸೆ₂ ]

**ಪೋದೊಱೆ** (ಕ್ರಿ). ಹೋಗಲು ಬಿಡು ; ಹೋಗಬಿಡು : ಈ ಪೊಟ್ಟು ಪೋದೊಱೆದ ಯಜ್ಞೀಯಾಶ್ವದ ಬೆಂಬಳಿವೋಗಿ ನೆರಂಗೂಡುವ ನಾಡೆಱೆಯರ ಕೊಟ್ಟಜವನೊಟ್ಟಯಿಸಿಯುಂ (ರಾಮಾಶ್ವ. ೪೭–೦). [ ಪೋ₁ + ತೊಱೆ₁ ]

**ಪೋನಿ** (ನಾ). ಸಣ್ಣ ತಳಿಯ ಕುದುರೆ : ತನ್ನ ತಂದೆಯವರು ಐದನೆಯ ವರ್ಷದಲ್ಲಿಯೇ ಒಂದು ಪೋನಿಯನ್ನು ತಂದುಕೊಟ್ಟಿದ್ದರಷ್ಟೆ (ಜಗಚಂ. ೦೦). [ ←ಇಂ. Pony ]

**ಪೋಪ್** (ನಾ). ಕ್ರೈಸ್ತಮತದ ಮಹಾಧ್ಯಕ್ಷನಾದ ರೋಮಿನ ಧರ್ಮಗುರು : ಫ್ರಾನ್ಸಿನ ದೊರೆಯಾದ ಫಿಲಿಪ್ಪನು ಒಂದು ಬಾರಿ ಒಬ್ಬ ಫ್ರೆಂಚನನ್ನು ಪೋಪ್ ಪದವಿಗೆ ಏರಿಸಿದನು (ಬಾಲಶ್ರ. III. ೦೦೬೨). [ ← ಇಂ. Pop ]

**ಪೋಪ** 'ಪೋ₁' ಪರಾ.

**ಪೋಪು₁, ಹೋಹು₁** (ಕ್ರಿ). (ಹತ್ತಿರ) ಹೋಗು : "ಪೋಪು—ಆಸನ್ನಗಮನೇ" (ಶಮಧಾ). **ಹೋಹು₁** : ಪರಿಸರ್ಯೆ—ಹತ್ತಿರಿಂದ ಹೋಹದೆ ಇರುಹಂ (ನಾಶಾರ. ೬). [ ಪೋ₁ + —ಪು₁ ]

**ಪೋಪು₂, ಹೋಹು₂** (ನಾ). ರೀತಿ ; ಮಾರ್ಗ : ಆದಾ[ ಶಾಹಾಂ. ವಾ]

ಗಲೆನ್ನನನುಭವಿಸುವುದಲ್ಲದೆ ಹೇಳಬಾರದಾರಿಗೆಯೂ ನೋಡಯ್ಯಾ ಕಾಣಬಾರದಾತಂಗೆ ಸವಿದೋಱಬಾರದ ಪೋ[ಪಾಠಾಂ. ಫಾ]ವು ನೋಡಯ್ಯಾ (ಉಂಪ. ೨೯-೦೫). ಹೋಹು$_2$ : ಮೊಲೆ ಮುಡಿಯಿದ್ದುದೇ ಹೆಣ್ಣೆಂದು ಪ್ರಮಾಣಿಸಲಿಲ್ಲ. ಕಾಸೆ-ಮೀಸೆ ಕಠಾರಿಯಿದ್ದುದೇ ಗಂಡೆಂದು ಪ್ರಮಾಣಿಸಲಿಲ್ಲ. ಅದು ಜಗದ ಹೋಹು; ಬಲ್ಲವರ ನೀತಿಯಲ್ಲ (ಕರ್ನಾಕ. ೦೬೦).

[ ಪೋ$_1$ + —ಪು$_2$ ]

**ಪೋಫಳಿ** (ನಾ). ಅಡಕೆ; ಕ್ರಮುಕ : ಅಡಿಕೆ (ಪೋಫಳಿ)—ಪ್ರಸಿದ್ಧ . . . ಕಾಯಿಯ ಮೇಲಿನ ತೊಗಟೆಯನ್ನು ಸುಲಿದು ಚಲ್ಲಿ, ಅಡಿಕೆಗಳನ್ನು ಕುದಿಸಿ ಮಾರಾಟಕ್ಕೆ ಒಯ್ಯುವರು (ಕಭಾಗ. ೩೫).

[ ← ಮರಾ. ಪೋಫಳೀ, ಪೋಫಳ್./ಪ್ರಾ. ಪೋಪ್ಫಲ, ಪೋಪ್ಫಲೀ./ ಸಂ. ಪೂಗಫಲ ]

**ಪೋಬೞಿ**, ಹೋಬಳಿ$_1$ (ನಾ). ೧. ಹೋದ ದಾರಿ,—ಮಾರ್ಗ : ಸ್ಮರನಸ್ತ್ರಸಮಿತಿಯದು ನಿರ್ಭರಮಂಗಮನುರ್ಚಿ ಪೋಗೆಯುಂ ಪೋಬೞಿಯುಂ ದೊರೆಕೊಳಿಸಲಾಗದದಱಿಂ ಶರತತಿಯಲ್ತೆಂಬುದಿಂತು ಧರ್ಮಾಪೋಹಂ (ಕಬಿರಾ. ೩-೦೯೬); ನೆಱೆದಾಯುಷ್ಯಮೆ ಮಿಟ್ಟುಮವನಱಸುವ ತೆಱದಿಂದಮವರ ಪೋಬೞಿಯನೆ ಬಂದಱಿಸಿ (ಶಾಂತಿಪು. ೩-೬೪) ; ಮುನಿದಂತಿರೊರ್ಮೊದಲೆ ಲೋಕಾಂತರಕ್ಕೆ ಪೋದ ನಿಜಜೀವಿತೇಶ್ವರನ ಬೞಿಸಲ್ವ ಬವಸೆಯಿಂ ಪೋಬೞಿಯನಱಸಿ ಪರಿವಂತೆ ನಿಮಿರ್ವ ಬಿಸುಸುಯ್ಗಳೊಳಂ (ವರ್ಧಪು. ೯-೩೦ ವ). **ಹೋಬಳಿ$_1$** : ೧. ತಾಯ ಹೋ[ಪಾಠಾಂ. ಹೊಂ]ಬಳಿಯನಾ ವತ್ಸನಱಿವಂದದಿಂ ಆಯೆಡೆಯೊಳಱಸಿಕೊಳುತುಂ ಬಂದು (ವಂಬರ. ೦೦-೩೦); ಮನಮುಮಂ ಕಣ್ಣುಮಂ ಮೃಗದ ಹೋಬಳಿಗಿತ್ತು . . . ಬರುತಿರೆ (ಕಣ್ಣರ. ದೇ. ೦೨೯-೦೩). ೨. ನಡೆವಳಿಕೆ ; ಆಚರಣೆ ; ವ್ಯವಹಾರ : ಬ್ರಹ್ಮ ಅವ್ವೆಯ ಗಂಡನಾದ ವಿಷ್ಣು ಅಕ್ಕನ ಗಂಡನಾದ ರುದ್ರ ಕಿಱುತಂಗಿಯ ಗಂಡನಾದ ಮೂವರ ಹೋ[ಪಾಠಾಂ. ಹೊಲ]ಬಳಿಯಿಂದೇನು ಚೋದ್ಯ (ವಗವಚ. ೪. ೯೩೪-೯೯). [ಪೋ$_1$ + ಬೞಿ$_3$]

**ಪೋರ್$_1$**, ಪೋರು$_1$, ಹೋರ್$_1$, ಹೋರು$_1$ (ಕ್ರಿ). ೧. ಸೆಣಸು ; ಕಾದಾಡು ; ಹೊಡೆದಾಡು : ಕಡುಗಡಿಯುವಪ್ಪೆರಡಾನೆಗಳ್ ತಮ್ಮೊಳ್ ಪೋರಲ್[ಪಾಠಾಂ. ಪೆಱ]ಸಾರ್ದು ಪೆಱಪಿಂಗಿ ಪೋದುದುಮು . . . ಕಂಡೆಂ (ಪಮ್ಪರಾ. ೯೫-೨೫) ; ಇದು ಭೀಮಂ ದೇವಧಾತ್ರೀಸುತನಿಭದೊಳಿಭಂ ಪೋರ್ವವೊಲ್ಪೋರ್ದ ತಾಣಂ (ಗದಾಯು. ೫-೨) ; ಎನ್ನೊಳ್ ಪೋರ್ದು ಱಿದಂದ್ರಸಿಂಧುರದ ಕೋಡಿಂದಾದ ಪಲ್ಯಂಕದೊಳ್ . . . ಕೇಳೀತಲ್ಪದೊಳ್ ನಿದ್ರೆಗೆಯ್ (ಶಂರಾಮಾ. ೯-೦೬೬). ೨. ಜಗಳವಾಡು ; ಕಚ್ಚಾಡು : ಪುರುಡಿಸೆ ಪೋರದೆ ಪೆಣ್ಗಾತುರಿಸದೆ ಪಿಶಿತಕ್ಕೆ ಪಂದು ಕೊಲ್ಲದೆ . . . ಸುೞಿವುವು ಕರಿ ಕೇಸರಿಯೆರಳೆ ಪುಲ್ಲೆ ಮರೆ ಸಾರಂಗಂ (ಅನಂಪು. ೩-೩೬) ; ಬೇವ ಪೆಣಕ್ಕೆ ಕೋಪದಿಂ ಪೋರ್ವ ಮರುಳ್ಗಳಂ . . . ಈಕ್ಷಿಸಿದಂ ಪ್ರತಿರೂಪಶೂದ್ರಕಂ (ಕಾವ್ಯಸಾ. ೫೩೪) . ೩. ಘರ್ಷಿಸು ; ಮಸೆ ; ತಿಕ್ಕಾಡು : ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳೆ ಬಾಳ್ ಪಳಂಚಿ ಮಾರ್ಕಡಿವಿಡೆ ನೋಡಲಂಜಿ ದೆಸೆದೇವತೆಗಳ್ ಪೆಱಪಿಂಗೆ (ಶಂಶಭಾ. ೦೦-೪೨). ೪. ಸ್ಪರ್ಧಿಸು ; ಪೈಪೋಟಿ ಮಾಡು ; ಹುರುಡಿಸು : ಈಶ್ವರ ನೆಟ್ಟಂದಿದಱಗ್ರದೊಳ್ ನೆಲಸಿ ಚೆಲ್ವಂ ಕಂಡು ತತ್ಕೌತುಕೋದ್ಧುರ ನಾಂದೋಳಿಸೆ ಮೌಳಿಯಿಂದುಗುವ ಗಂಗಾವಾರಿಯೊಳ್ ಪೋರ್ವ ನಿರ್ಝರ ಧಾರಾತತಿಪಾಂಡುವಿಂ ಸೊಗಯಿಸಿತ್ತಾ ಚಿತ್ರಕೂಟಾಚಲಂ (ಕುಸುಮಾ. ೦-೩೮). ೫. ತಿವಿ ; ಹಾಯು : ನೀರುಣ್ಬ ಕನಲ್ವ ಪೋರ್ವ ಮೆಲ್ಕೊತ್ತುವ . . . ಗೋರಾಜಿಯ ಲೀಲೆ ಕಣ್ಗೆ ಪಡೆದುದು ಚೆಲ್ವಂ (ಚಂದ್ರಪು. ೨-೨೬) ; ನೊಸಲ ಶೀಂಟೆ ಶೀರದೆ ಕೊಣಕಿಟ್ಟು ಮುರಿದು ಪರಿದು ಪಿರಿದಪ್ಪ ಪುತ್ತಿನೊಳೊತ್ತಿ ಪೋರ್ದು . . . ಪೊಱಮಟ್ಟ ಕಾಳರಕ್ಕಸರಂತಿರ್ಪ ಕಾಳ್ಕೋಣಂಗಳಿಂ (೧೦ಕ. ೧-೦೨೮ ವ) ; ತೋರ ಹೋರಿಗಳ ಡುರುಕಾರವಂ . . . ಮಾರ್ಮಲೆತು ಪೋರ್ವ ಘನವೃಷಭಶೃಂಗಾರವಂಗೂಡಿ ನಾನಾರವಂ ಕಿವಿಗಳಂ ಪೂರೈಸಿತ್ತೇವೇಳ್ವೆನು (ಚಬಪು. ೦೦-೦೭). **ಪೋರು$_1$** : ೧. ತಗರೆರಡುಂ ತಮ್ಮೊಳ್ ತಾಗಿ ಕಿಡಿಗುಟ್ಟಿದಂತಾಗೆ ಪೋರುತ್ತಿರೆ (ಶಂಪಶಂ. ೭೨-೧೪) ; ಪಿರಿದು ರೋಷದಿ ಕಾದಿ ಸತ್ತು ಕೋಳಿಗಳಾಗಿ ಭರದಿಂ ಪೋರುತಲಿರ್ಪವೀಗ (ಶಾಂತೀಶ. ೫-೦೮) ; ತೊಟ್ಟು ನಿರಹಂಕೃತಿಯ ಕವಚವನು ನೀಂ ಪೋರು ಮುಟ್ಟದಿಳೆಯುಸಿ ನಿನ್ನ (ಮಂಕುಕ. ೬೦೩). ೨. ತತ್ತಬಳ[ಪಾಠಾಂ. ಳೆ]ತಾಳಗೊಟ್ಟೆಯೆನುತ್ತಾದಂ ರುಷಿಯರೊಡನೆ ಜಡಮತಿಗಳು ಪೋರುತ್ತಿಪ್ಪರ್ (ಶವುಶ. ೦೪-೦೭) ; ಅರುಣವರ್ಣದ ನೀಲವಸನದ ಕಾಂತೆ ಪೋರುತ್ತ ಮರಳಿ ಕಚ್ಚುತ ತನ್ನನೆಳವುದ ನರನು ಕಂಡಡೆ ಕನಸಿನಲಿ ಅವನಿರನು ಬೇಗದಲಳಿವನ್ನೆ (ತಿಮ್ಮಆ. ೬-೨೬); ಪುಟ್ಟಿದ ಮನೆಯೊಳು ಪೋರಿ ಪುರುಳುಗೊಂಬ ದಿಟ್ಟ ಗಂಡುಗಳಂತಿರಲಿ ಕೊಟ್ಟುದಱಿಂದ ತಣಿವ ಕುವರಿಗೆ ಮನವುಟ್ಟಿ ಕೊಡುವುದು ಕೋವಿದರು (ಹದಿಬ. ೫-೦೧). **ಹೋರ್$_1$** : ೧. ಕೊಣಕಿಟ್ಟು ಮಹಾರವದಿಂದೆ ಹೋರಲೆಬ್ಬಿಟ್ಟುವ ಸೊಕ್ಕಿದಾನೆಮಕರಂಗಳನೀಕ್ಷಿಸಿದಂ ಸಮುದ್ರದೊಳ್ (ಸೂಕ್ತಿಸು. ೨-೨೫). ೬. ವಾದಮಾಡು ; ವಾದಿಸಂ ; ಚರ್ಚೆಮಾಡು : ಹಿಂದಿರ್ವರು ನಾವೆಕ್ಕೆಯೊಳಗೆ ಹೋರ್ವಂದದೆ ಸೋಮಪ್ರಭನೃಪಸಭಿನವ ಕಂದರ್ಪಂ ಜನಿಸಿದನಾದೊಡೆ (ಜಯುಕಾ. ೦-೩೭). **ಹೋರು$_1$**: ೧. ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು (ಹಶಕಾ. ೨-೦೨) ; ಹೋರಿದರೆ ಹುರುಳಿಲ್ಲೆನುತ ಪರಿವಾರವೊಱಲಿತು (ಕುವ್ಯಾಕ. ೩-೦೫) ; ಹೋರುವೆವು ಮಲ್ಲರೊಲು ಕಾಲದೊಡನೆ ಕಾಲನೆಮ್ಮಯದಾಗಿ ಆಗುವನಕ (ವಿಸೀಗೀ. x, ೧). ೨. ಮುಳಿದು ಸ[illegible]ಯರಿಬ್ಬರುಂ ಜೆಡೆಗಳಿಗೆಯೊಡಲಿಗೆ ಹೋ[ಪಾಠಾಂ. ಪೋ]ರಲ್ (ಬಸವ ೧೮-೦೦) ; ತನತನಗೆ ನೃಪತನಕೆ ಹೋರಲಿಕಾಗ ಮಂತ್ರಿಗಳು ವಿಸಯದಲಿ ಗಜಬಜವ ಮಾಣಿಸಿ (ಸಂಭಶ. ೦೭-೭೩); ಹರಿ ವಿರಂಚಿಗಳು ತಂತಮ್ಮ ಪೆಂಪಿಗೆ ಹೋರಿ ಹರನಡಿ ಮುಡಿಗಾಣಲೆಂದು ಇರದಿಟ್ಟ ಬಟ್ಟೆಗಳೆನಲಿಹವಾ ಪುರ ಕುರುಖಾತಿಪ್ರಾಕಾರ (ಶ್ರೀಪಾರ. ೦-೭೦). ೪. ವೇದಕ್ಕೆ ಹೋರುವರೆ ವೇದಕ್ಕತೀತ ಶಾಸ್ತ್ರಕ್ಕೆ ಹೋರುವರೆ ಬಳಸಿನವನಲ್ಲ ಪುರಾಣದಲ್ಲಿ ಹೋರುವರೆ ರೂಪಿನವನಲ್ಲ (ಮೋಳಿಮಾ. ೬-೨೦) ; ಶಾರದೆ ನಿನ್ನೊಳು ವಿದ್ಯಾಕಲೆಗಳಿಂ ಹೋರಿ ಸೋತಂಜಿ ಬಸತಿಯ ಸಾರಿದಳೆನೆ ನಿನ್ನ ಜಾಣ್ಮೆಗೆ ಸೋಲದರಾರವನಿಯೊಳು (ಕುರಾಸಾಂ. ೨೪-೭೭). ೬. ಹೋರದಿರು ಹೊಗು ಬವರಕೆನಲಸುರಾರಿಯಂಘ್ರಿಯೊಳೆಱಗೆ . . . ತುಡುಕಿದನು ಧನುವ (ಕುವ್ಯಾದ್ರೋ. ೩-೭೩); ಶಾರದೆ ಜಪರತ್ತ ಸಾರದೆ . . . ಇನ್ನು ನೀ ಜಾಱದೆ ಹೋರದೆ ನೇರದಿ ಮಾಡೀ ಕೃತಿಯ (ನಾಗಕು. ಪೀಠಿಕಾಸಂಧಿ. ೦೯). ೭. ಕಾಡಂ ; ಪೀಡಿಸು : ಹಾಲುತುಪ್ಪವನು ಕುಡಿದು ಮಱುದಿನ ಯಾಪನಾಳದ ಪುಡಿಯ ಕದಡನು ಕುಡಿಯಲೊಲ್ಲದೆ ಕೆಡಹಿ ಕಳೆದನು ಯಾಳಿಯಾಡುತವಳುತ ಹೋರುತಿರೆ (ಸಂಭಶ. ೦೭-೯೩); ಶ್ರಮ ಪರಿಹರಿಸೆಂದು ಹೋರೋ ಹೋರೋ . . . ನಮ್ಮ ಪುರಂದರವಿಠಲನ ಸೇರೋ ಸೇರೋ (ಪುರಂದ. ೧-೧೫೪-೩) ; ಕ್ರೂರರೈವರ ಬಾಧೆ ಹೋರುತಲಿದೆಕೊ ಆರಿಂದ ನಿರ್ವಾಹವಾಗದು (ಜಗದ್ಶಾ. ೯೯). ೮. ಕಷ್ಟಪಡು ; ಬವಣೆಗೊಳಗಾಗು : ಧರೆ ಧನ ವನಿತೆಯರು ಎನ್ನವರು ತನ್ನವರೆಂದು ಹೋರಿ ಹೋರಿ ಸಾವುತ್ತಿದೆ ಜೀವ (ಬಸಹ. ೫೯-೦೭೪).

[ದೇ.॥ ತಮಿ. ಮಲ. ಪೊರು ; ತುಳು. ಪೋರಿ ; ಕೊಡ. ಪೋರ್ ; ತೆಲು. ಪೋರು ; ಗಡಬ. ಪೋರ್; ಕುಇ. ಪ್ರೂಹ್ಪ]

**ಪೋರ್$_2$**, ಪೋರು$_2$, ಹೋರು$_2$ (ನಾ). ೧. ಕಾಳಗ ; ಹೋರಾಟ ; ಸೆಣಸಾಟ : ವೈರಿಯೊಳರ್ದಿಕೊಳ್ವರಣ್ಯವಾರಣಂಗಳೊಡನೆ ಭರದಿ ಪೋರ್ಗಂ ಮೊಗಂಬುಗುವ ವೀರ ಪೇರಾನೆಗಳ ತೊಳವಿಗೆಗಳೊಳಂ (ಚಂದ್ರಪು. ೫-೪೦ ವ);

ಸ್ವಸ್ತಿಶ್ರೀನಿಗ್ರುಗ್ರನ್ದಗಾವುಣ್ಡ ತಪಸಿಯ ಪೋರಿಲ್ ಇಭದೆ ಕಾದಿ ಸತ್ತೊಡೆ (ಪ್ರಶಾಂ. ೧೯೨೬, ೦೦೩-೦೨ ; ೯): ಪೋರನ್ ಕಿರಿಪಿದ ಸ್ನೂಸಿಗೆ ಬಿಟ್ಟರ್, ಕಂಚಿನ ಜೋಡನ್ ಕಾಣ್ಕೆಯೆ ಬಿಟ್ಟರ್ (ಅಂತಿಗೂ. ೭-೦೨೮). ೨. ಜಗಳ ; ಕಲಹ ; ಕಾದಾಟ : 'ಪೋರಂಗೈ', 'ಪೋನರ್ನುಡಿ' ಪರಾ. **ಪೋರು$_2$** : ೧. "ಕಾಳಗದೊಳಂ ಬಲದೊಳಂ ಪೋರು" (ಶಬ್ದಮಂ. ೦೦೩). **ಹೋರು$_1$**: ೨. ತಾಯಿ ಮಕ್ಕಳ ಜಗಳ—ಕೊಟ್ಟು ಕೊಂಡವರ ವಾಗ್ವಾದ—ನಂಟರಿಷ್ಟರ—ಹೋರು ಮುಂತಾದ್ದೇನಾದರು ಉಂಟೆಂದು . . . ವಿಂತಿಮಿರಿದ ದಂಡಗಳು ತರಿಸುವವನು (ಕರ್ಣಾಮಂ. IV. ೦೨೦).

[< ಪೋರ್$_1$ ./ತಮಿ. ಮಲ. ಕೋತ. ಪೋರ್ ; ತುಳು. ಪೊದರ್ರ್ ; ತೆಲು. ಕುಇ. ಪೋರು]

**ಪೋರ್$_3$**, ಪೋರು$_3$, ಹೋರ್$_2$, ಹೋರು$_3$ (ನಾ). ೧. ತೂತು ; ಬಿಲ; ರಂಧ್ರ: ಮುನಿಪಂ ಚರ್ಯೆಗೆ ಪೋಗುತಿರ್ಪ ಪದದೊಳ್ ಮೆಯ್ಯಲ್ಲಿ ಪತ್ತಿರ್ದ ಪುತ್ತಿನ ಪೋರಿಂ ಪೊಱಮಟ್ಟು ಪೋದ ಮಧುಪಂ ತನ್ನಿಂದೆ ಕಾನಾಗಿ ಬರ್ಪಿನಂ (ಅರ್ಧನೇ. ೦-೯೦) ; ಹುಲಿ ಹೊಯ್ದು ಜರಿದ ಹೆಗಲ ಪದೆದು ಕೋಣಂ ಹೊಯ್ದ ಹೋರ[ಪಾಠಾಂ. ಹೊಡೆದ ಹೋರೆ] ಭೇರುಂಡ ನೆಱಗಿದ ಗಂಟುಗಳ...ಚಿಹ್ನದ ಬೇಡನಾಯಕರು ನೆರೆದರು (ಹಕಶಾ. ೫-೫); ನೇರ್ಗೋಲ ಪೋರ್ಗಳಾ ನೃಪನಂಗದೊಳ್ಕಾಣಸಿದುವು ಜಾಳಂದ್ರದಂತೆ (ಕೃಷ್ಣಶಾ. ೪-೩೫). **ಪೋರು$_3$** : ೧. "ಕಾಳಗದೊಳುಂ ಬಿಲದೊಳುಂ ಪೋರು" (ಶಬ್ದಮಂ. ೦೦೩). **ಹೋರ್$_2$** : ೧. "ಬಿಲಂ=ಹೋರ್" (ಕಾಶಕ್ಕ. ೪೭). **ಹೋರು$_3$** : ೧. ಕಲ್ಲ ಹೋರಿನೊಳಗೊಂದು ಕಿಚ್ಚು ಹುಟ್ಟಿತ್ತು ಕಂಡೆ (ಅವಶಂ. ೨೭-೦೦೪) ; ಉಪ್ಪು ಮೆಣಸುಗಳ ಹಿರಿಯ ಮೂಗಿನ ಹೋರು ತುಂಬಲು ಭರದಿ ಬಿಱಿಸಿಂದವನು ಸೀತರೆ ಗಿರಿಯ ತೋರದ ಭಟರು ತಱಗೆಲೆಯಂತೆ ಹಾಱಿದರು (ಕೌಶಿಕಾ. ೨೪-೫) ; ಹೆಗ್ಗಣಗಳ ಹೋರುಗಳು ಅಲ್ಲಲ್ಲಿ ಮುಚ್ಚಿಕೊಂಡಿದ್ದು. ಅವು ಪಕ್ಕನೆ ಬಾಯ್ದೆರೆದಾಗ ಮನೆಯವರೆಲ್ಲ ಅದರಲ್ಲಿ ಮಾಯವಾಗುವ ಹೆದರಿಕೆಯೂ ಹಲವೆಡೆ ಉಂಟಾಗಿದೆ (ಹುಕ್ಷತ್ರ. ೦೫).

[ದೇ.॥ ತಮಿ. ಪೋರ್, ಪೋೞ್ಯ್; ತೆಲು. ಬೊರಿಯ, ಬೊಱಿಯ, ಬೊರ್ರ; ಕೊಂಡ. ಬೊಱಿಸ್ಗ]

**ಪೋರ** (ನಾ). (ತುಂಟ) ಹುಡುಗ ; ಬಾಲಕ : ಪೋರಂ ನಾಂ ಗೆಯ್ದ ತಪ್ಪೇಂ (ವ್ಯಸೂಮ. ೨-೬೦); ಪೋರ ನಾನೆಂದು ಬಗೆಯದಿರಸುರ (ಮಹಾಪ್ರ. ೬-೨೯) ; ಈ ಪೋರನ ಹಣೆಯಲ್ಲಿ ಏನು ಬರೆದಿದೆಯೋ ಹಾಗೆ ಆಗಲೇ ಬೇಕಲ್ಲ (ಹೂಸಕ್ಷಿ. ೨೮).

[ದೇ. ॥ ಮಲ. ಪೋಱ = ದಡ್ಡ ; ತುಳು. ಪೋರ, ಪೋರೆ ; ತೆಲು. ಪೋರಡು. /ಮರಾ. ಪೊ.ರ ]

**ಪೋರಗ** (ನಾ). ೧. ಒಂದು ಬಗೆಯ ಆಯುಧ : ಪೊಯೆ ಕಾಳವಟ್ಟದಿಂ ಪೋರಗದಿಂದೆ ಪೊಯ್ದನೆರಡುಂ ಸರಿಪೋದವು ಲಾಗುಬೇಗದೊಳ್ (ಅನಂಪು. ೦೦-೬೦) ; ಬಾಹುಪೋರಗದೆ ಪೊಯ್ದಂ ಭೂಪನಾ ವೀರನಂ (ಅನಂಪು. ೦೦-೬೨). ೨. ಖಡ್ಗಯುದ್ಧದ ಒಂದು ವರಸೆ,—ಪಟ್ಟು: ಚಕತಟ ವದ್ದಳಂ ಪೋರಗಂ [ಪಾಠಾಂ. ಪೊವಗಂ, ಪಾದಂಗಂ, ಪಾರೆಗಂ]ಗಳೆಂಬಡ್ಡ ವೊಯಿಲಿಂ ನಿವಾರಿಸುತಿರ್ದರು (ಸೋಮಚ. ೫-೦೫). [?]

**ಪೋರಗಿ** (ನಾ). (ತುಂಟ) ಹುಡುಗಿ ; ಪೋರಿ : ತೋರಣಬಾಗಿಲ, ಸುಮ್ಮನೆ ತೆರೆಯೆ ಪೋರಗಿ (ಕೋಹಿಮೂ. ೧೦೨). [ ←ಮರಾ. ಪೋರಗೀ]

**ಪೋರಟೆ**, ಹೋರಟೆ (ನಾ). ೧. ಹೋರಾಟ ; ಕಾಳಗ ; ಯುದ್ಧ : ಇಳೆಯೊಡೆತನ ಪೋರಟೆಗಳಿಂ ತಣಿಯದೆ ಪಿತೃದೇವತೆಗಳ ಋಣವನುತ್ತರಿಸದೆ ರಾಯಕುವರರೆಲ್ಲ ರಣಭೂಮಿಯೊಳಡಗಿದರು (ಕರ್ಣವೃ. ೮-೨೦). ೨. ಜಗಳ ; ಕಚ್ಚಾಟ : ಕೃಷ್ಣಗಜಂಗಳ ಪೋರಟೆಯಿಂದಭಿಲಷಿತವೃಷ್ಟಿಯಾಗದುದಂ . . . ಸೂಚಿಸುಗುಂ (ಪುಣ್ಯಾಸ್ರ. ೯-೦೬ ವ) ; ಪುಸಿಗೆ ಪಿಸುಣ್ಗೆ ಪೋರಟೆಗೆ ಮಾಯೆಗೆ ಹಿಂಸೆಗೆ . . . ಪುಗದಂತಿರೆಲ್ಲರಂ ಪೊಸಯಿಸಿ ಕಾರ್ತವೀರ್ಯನೆಸಕಂಬಡೆದಂ (ಜಕಾ. ೩-೦೫). ೩. ಪೈಪೋಟಿ ; ಹುರುಡು ; ಸ್ಪರ್ಧೆ : 'ಪೋರಟೆವೆಱು' ಪರಾ. **ಹೋರಟೆ** : ೧. "ಹೋರಟೆಯೆನೆ ಪೋರ್ಕೆಯು" (ಭಾರತಿ. ೩೪) ; ಹೋರಟೆಗೆ ಬರಹೇಳು ಭರ್ಗನನಿವನ ಪಾಡೇನು (ಕುವ್ಯಾಶೀ. ೯-೪೨) ; ಹೋರಿದರು ಹರಿ ಜಂಭರಿಬ್ಬರ ಹೋರಟೆಗೆ ಹದಿನೆಂಟುಮಡಿಯೆನೆ (ತೊರರಾ. ೬-೩೨-೪೬) ; ಎನಗೆ ತನಗೆಂದಮರದಾನವಜಗಕೆ ಹೋರಟೆಯಾಯ್ತು (ನಿಭಾಗ. ೮-೯-೩). ೨. ಪುರಾಣವೆಂಬುದು ಪುಂಡರ ಗೋಷ್ಠಿ ತರ್ಕವೆಂಬುದು ತಗರ ಹೋರಟೆ (ಅವಶಂ. ೦೦೩-೪೬೫) . ೪. ತಿಕ್ಕಾಟ ; ತಾಕಲಾಟ ; ಘರ್ಷಣೆ : ಕಂಬಿಯ ಕಡಿಯಣದ ಕೀಲಣದ ಹೋರಟೆಯ ಘಾರಾಘಾರಿಯೊಳ್ ಜೋಳಿಸುವ ಲಾಲಾಜಲಂ ಖುರಹತಿಯಿಂ ನೆಗೆವ ದೂಳ್ಗೆ ಚಳೆಯಂಗುಡೆ (೧೦ಕ. ೬-೫೫ ವ) ; ಅಳುವ ಶಿಶುವನು ತೆಗೆದು ತೆಕ್ಕೆಯ ಪುಳಕಜಲದಲಿ ನಾದಿ ಹರುಷದ ಬಳಿಯ ಲಜ್ಜೆಯ ಭಯದ ಹೋರಟೆಗಳುಕಿ . . . ಗಂಗಾಜಲದೊಳಗೆ ಹಾಯ್ಕಿದಳು ಜನದಪವಾದಭೀತಿಯಲಿ (ಕುವ್ಯಾಆ. ೩-೨೦); ಪೊಯ್ದಾಡಿ ತಲೆಯಂ ನಿವಾಳಿಸಿದರಾಳ್ದಂಗೆ ಕೈದುಗಳ ಹೋರಟೆಯ ಖಣಿಕಟಲ ರಭಸದಿಂದೆ (ಕೃಷಿಭಾ. ೨೨-೬). ೫. ವಿವಾದ ; ಚರ್ಚೆ : ಕುಱುಹಿನ ಮಱವೆಯೊಳಗಿಪ್ಪ ವಸ್ತುವ ಕಾಬ ತೆಱನಿನ್ನಾವುದೊ ಇವೆಲ್ಲವು ಮಱವೆಯ ಮಾತಲ್ಲದೆ ಬಱಿಯ ಹೋರಟೆಗೆ ಇವರು ಬಲ್ಲವರಲ್ಲವೆಂದೆ (ಮೋಳಿಮಾ. ೬೪-೨೬೦) ; ಅಱು ಬೆಟ್ಟವನೊಬ್ಬ ಹಾಱಬಹುದೆಂದಿಹರೆ ಹಾಱಬಹುದೆಂದು ಎನಬೇಕು ಮೂರ್ಖನೊಡ ಹೋರಟೆಯೆ ಸಲ್ಲ (ಸರ್ವಜ್ಞ. ೦೦೩೨). ೬. ಹೊಡೆತ ; ಪೆಟ್ಟು ; ಆಘಾತ : ಪೂಗಣೆಯ ಹೋರಟೆಗೆ ತರಹರಿಸದಬಲೆ ನೀನೀಗ ನೋಟದ ಹಂಬಲಂ ಬಿಟ್ಟು ಹೃನ್ಮಧ್ಯಕೀ ಗಾಡಿಕಾಱನಂ ತಂದು ನೆರೆದಪೆನೆಂದು ಕಣ್ಮುಚ್ಚಿ ಜಾನಿಸಿದೊಡೆ ಈ ಗಲಭೆಯೊಳಗಪ್ಪುದೇ (ಜಬಪು. ೦೯-೪೦) ; ಅಯ್ಯೋ ನಾನಾಱಿ ವಿಷಯದ ಹುಯ್ಯಲ ಹೋರಟೆಯ ಹೊಚ್ಚಹೊಸ ಕಮ್ಮರಿಯೊಳು ಕಯ್ಯೂಱಿ ಬಿದ್ದೆ (ಶಂಕಕಂ. ೦೦-೩೯). ೭. ಬಿರುಬು ; ರಭಸ ; ವೇಗ : ಅಳಿಕುಲಾಳಕಿ ಬಂದಳೊಬ್ಬಳೆ ಮಳೆಗೆ ಕೈಯೊಡ್ಡಿ ಬಲಿದು ಮೈ ನಡನಡುಗಿ ಹಲುಹಲು ಹಳಚಿ ನೆನೆದಳು ವಾರಿಯಲಿ ತನು ಹಳಹಳಿಸೆ ಬಳಲಿದಳು ಚರಣದ ಹೊನಲ ಹೋರಟೆಗೆ (ಕುವ್ಯಾಆ. ೯-೨೫) ; ಬಿರಿದುದಬುಜಭವಾಂಡವಿಬ್ಬರ ಧುರದ ಹೋರಟೆಗೆ (ತೊರರಾ. ೪-೨-೩೬). ೮. ಶ್ರಮ ; ಪ್ರಯಾಸ : ಮಿಗ್ಗ ಬೆವಸಾಯವನು ಮಾಡುವ ಹೆಗ್ಗಳದ ಹೋರಟೆಯ ಕಾಣುತಲಿಕ್ಕಱಿಂದಲಿ ನೋಡಿ (ಕೃಭುಲೀ. ೦೦-೫). ೯. ಪೀಡೆ ; ಜಂಜಾಟ ; ಹಿಂಸೆ : ಹೊಕ್ಕು ಹೋರಟೆಯೆಲ್ಲವನು ಹೊಯ್ದಿಕ್ಕಿ ಸುಖಿಸುವೊಡಂತು ನಿಜಪದದಿಕ್ಕೆ ನಿನಗಹುದು (ಕೃಭುಲೀ. ೦೨-೦೩); ಅಯ್ಯಯ್ಯೊ ಧ್ಯಾನವ ತುಯ್ಯಲುಂಡಾತ್ಮನೊಳುಯ್ಯಲನಾಡಿ ಸುಖಿಸದೆ ಗುಯ್ಯಲೆತ್ತುವರುತೆ ಮುಯ್ಯ ಹೋರಟೆಯೊಳು ಹುಯ್ಯಲನುಂಡೆ ನಾನು (ಶರಶ. ೭೬-೨೬).

[ಪೋರ್$_1$ + — ಅಟೆ ]

**ಪೋರಟೆವೆಱು** (ಕ್ರಿ). ಸ್ಪರ್ಧೆಹೂಡು ; ಪೈಪೋಟಿ ನಡೆಸು : ಪುರುಡು ಪೋರಟೆವೆತ್ತು ಜೊತ್ತು ಗತಕಂ ಗನ್ನಂ ಕಚಾಕರ್ಷಣಂ . . . ಪಿರಿದುಣ್ಮಲ್ ವಧು ನಲ್ಲನೊಳ್ ನೆರೆವುತಿರ್ದಳ್ಕಾಮಸಾರಂಭದಿಂ (ತ್ರಿಶುವಿ. ೨೪-೦೮೦).

[ ಪೋರಟೆ + ಪೆಱು$_1$ ]

**ಪೋರತನ** (ನಾ). ಹುಡುಗುತನ ; ಹುಡುಗುಬುದ್ಧಿ : ಇಂತಾ ಪೋರತನ ನಾನರಿಯೆ ಬೇಕೆಂದಾ ನರಪನಂತಡವಿ ಬೆನ್ನಿಗೆ ತರಿಸುವುದು ಗುಣವೆ (ದೇವಪು. ೮-೨೨೫).

[ ಪೋರ + — ತನ ]

**ಪೋರಾಟ**, ಹೋರಾಟ (ನಾ). ೧. ಕಾಳಗ ; ಯುದ್ಧ ; ಕದನ :

ಘನವಂತರಿಂತು ಭಾವಿಸಿದರು ತಮ್ಮಯ ಮನದೊಳಿಂತಿವರ ಪೋರಾಟ ಘನದುಃಖಹೇತು ತಮ್ಮೊಳು ಪರಸ್ಪರ ನೋಳ್ಪ ಜನಕೆ ಪಾಪಾಸ್ರವವೆಂದು (ಶಾಂತೀಶ. ೩-೧೨). **ಹೋರಾಟ :** ೧. ಅದು ಎಲ್ಲ ರೀತಿಯಿಂದಲೂ ಅಂತಿಮಹೋರಾಟಕ್ಕೆ ಸಿದ್ಧವಾಯಿತು (ಅಕ್ಬರ್. ೦೯೩). ೨. ಜಗಳ ; ಕಚ್ಚಾಟ : ಧಾರಿಣೀಶನ ಪಾಣಿಯೊಳು ನಿನ್ನ ಪಾಣಿಯ ಸೇರಿಸಿ ಪಿತನ ಕೈಯಿಂದ ಧಾರೆಯೆಱಸುವೆನು ನಿಮಗಿಬ್ಬರಿಗೆ ಬಂದ ಹೋರಾಟ ಹೊಳೆದು ಹೋಹಂತೆ (ಭರತ. ೯-೦೨೯). ೩. ವಾದ ; ಚರ್ಚೆ : ಮಾತಿನ ಮಾಲೆಯ ಹೆಚ್ಚು ಕುಂದಿನ ಹೋರಾಟವುಳ್ಳನ್ನಕ್ಕರ ಅದ್ವೈತಿಯಲ್ಲ (ಅದವ. ೩೩-೯೭). ೪. ಒದ್ದಾಟ ; ಶ್ರಮ ; ಹೆಣಗಾಟ : ಪೇರೇರುಗಳ ಕಚ್ಚು ಸಿಡಿತದಿಂ ತೆಣರುತಿರೆ ಹೋರಾಟ ಬಾಳ್ವೆಯುಂ ಬೇಡೆನ್ನುತಿತ್ತು (ಕಾಲೂರ. ೦೦೩-೨೦೩) ; ಆ ಮುಗ್ಧಪ್ರಶ್ನೆಯಲ್ಲಿ ಅವನ ಬದುಕಿನ ಸಮಸ್ಯೆಯೇ ಹುದುಗಿತ್ತು . . . ಈ ವಯಸ್ಸಿಗೇ ಇಂಥ ಹೋರಾಟವೇ (ಹೊಸಕ್ಷಿ. ೩೪).

[ಪೋರ್$_1$+ಆಟ./ತಮಿ. ಮಲ. ಪೋರಾಟ್ಟಮ್ ; ತೆಲು. ಪೋರಾಟ]

**ಪೋರಾಣ್ಮ** (ನಾ). ದಂಡನಾಯಕ ; ದಳವಾಯಿ : ಪೋದವನಾ ಪೋರಾಣ್ಮನ್, ಪೋದವರಾ ಪೊನ್ನಾಳ್ಗಳ್ಗೆ ಬಾರದೆ ಬಗೆ ಬೆದರುತಿಹುದು (ಶಾರಸಿ. ೦.೦೪). [ಪೋರ್$_1$+ ಆಣ್ಮ (<ಆಳ್ಮ)]

**ಪೋರಾಳ್,** ಹೋರಾಳು (ನಾ). ಯುದ್ಧ ಮಾಡುವವನು ; ಶೂರ : ಏಷಿಯದ ಸಾಮ್ರಾಜ್ಯಕೇಂದ್ರವೇ ! ಓ ಪರ್ಸ್ ! ಐಶ್ವರ್ಯಭೂಮಿಯೇ, ಪೋರಾಳ ತಾಯ್ ತವರೆ ! (ಶಾರಸಿ. ೦೦-೨೬೨). **ಹೋರಾಳು :** ನಿರ್ಧರವಾದ ದಿನ ಹೋರಾಳುಗಳು ಬರೇ ಚಡ್ಡಿ ಧರಿಸಿ ನಗುಮುಖದಿಂದ ಆಖಾಡಕ್ಕೆ ಇಳಿಯುತ್ತಾರೆ . . . ಹೋರಾಳುಗಳು ತಮ್ಮ ಇಷ್ಟ ದೇವರನ್ನು ಪ್ರಾರ್ಥಿಸಿದ ಮೇಲೆ, ಕತ್ತಿಗಳನ್ನು ತಾಗಿಸುತ್ತಾರೆ (ಶ್ರವಾಜ. II, ೨೯೩). [ಪೋರ್$_1$+ಆಳ್$_3$]

**ಪೋರಿ$_1$** (ನಾ). (ತುಂಟ) ಹುಡುಗಿ ; ಬಾಲಕಿ : ಊರಿಗುಕ್ಕೆಯ ಚಿಂತೆ ಪೋರಿಗೆ ಮದುವೆಯ ತೋರ ಚಿಂತೆ (ಜ್ಞಾಪಪ. ೦೪-೯೯) ; ನಿನ್ನೆ ಹುಟ್ಟಿ ಇಂದು ಕಣ್ಣು ತೆಗೆದ ಪೋರಿ ನೀನು (ಜೀವಕ್ರ. ೦೦೦) ; ಹಾಡು ಮುಗಿಸಿದ ತಾಯಿಯ ಮುಖವನ್ನೇ ನೋಡಿ ಆ ಪೋರಿ ನಕ್ಕಳು (ರಂಗವ. ೦೪೭).

[ಪೋರ + — ಇ$_2$./ ತುಳು. ಪೋರಿ ; ತೆಲು. ಪೋರಿ, ಪೋಱಿ]

**ಪೋರಿ$_2$,** ಹೋರಿ (ನಾ). ೧. ಎಳೆಯ ಪ್ರಾಯದ ಬೀಜದ ದನ ; ಗಂಡುಕರು : "ಕಱವೆಳಗಱು ವತ್ಸ ಶಕೃತ್ಕರಿನಾಮಮುಂ ತಿರ್ದಲಾ[ಪ] ಪೋರಿಯೆ ದಮ್ಯಂ" (ಪಮ್ಪ.ಕೋ. ೯೯-೩) ; ಗೋಮಂಡಳದೊಳೊರ್ಮೆ ಪೋರಿಗಳಾಗಿ ರಾಜಮಂದಿರದ ಸೀಯುಬಾರದೊಳ್ ಪೊಣರ್ದು (ಶಾಂತಿಪು. ೯-೯೭ ವ) ; ಆದೊಡಮಂ ಕೊಟ್ಟು ಪಯನಾಮಂ ಕೊಳ್ವೆಂ ಅವರ್ಕೆ ಪುಟ್ಟಿದ ಪೋರಿಗಳಂ ತಿರ್ದಿಯಾರಂಬಂಗೆಯ್ದು (ಶಂಕರಶಂ. ೦೯೬-೮) ; ಬಾಲವೃಷಭಯುಗದೊಳ್ ಪೂಡಿರ್ದ ರಥಮನೆಳೆಯ ಪೋ[ಶಾಶಾಂ. ಪಾ]ರಿಯುಸೇಜಿದ ನೃಪಪುತ್ರನಂ ನೃಪಾಳಂ ಕಂಡು (ಪುಣ್ಯಾಸ್ರ. ೯-೦೫).೨.ಆಡು, ಎಮ್ಮೆ ಮೊದಲಾದವುಗಳ ಗಂಡುಕರು : ತನ್ನಿಂದಂ ತಾನೋರಂತೆ ಕುದಿದು ಪಱುಗುವ ಸಾರಂಗದ ಪೋರಿಯುಂದವಮಂ ನೆಱೆ ಪೋಲ್ತಂ (ಧರ್ಮಾಮೃ. ೧-೦೫೯) ; ಜನಕಂ ಯಶೋಧರರ . . . ಮಿನಾಾಡಿನ ಪೋರಿ [ಶಾಶಾಂ. ಪೋಂತು] ಪೋಂತು ಕುಕ್ಕುಟಮೆನೆ ಪುಟ್ಟಿಯುಮಿಗಳಭಯರುಚಿಯಾಗಿರ್ದಂ (ಯಶೋಚ. ೪-೩೭). **ಹೋರಿ :** ೧. "ತರ್ಣಕಃ, ವತ್ಸಃ — ಈ ೨ ಹೋ(ಱಿ)ರಿ" (ಹಲಾಯು. ೪೪-೦೦೯) ; ಸ್ಫಟಿಕದ ಮಧ್ಯದಲ್ಲಿ ಬಹುವರ್ಣದ ಹೋರಿಯ ತೋಱಿ ಪಿಡಿವವನಂತೆ (ಪೋಳವಾ. ೦೬೦-೧೦೦) ; ಆ ಪಶುಗಳುಂ ಕಾಮಧೇನುಗಳಾ ಪುರದ ಹೋರಿಗಳು ನಂದಿಯ ರೂಪಿನಂತಹವು (ಜಸಪು. ೪-೩೩); ತರಿಸಿ ಹೋರಿಯ ಗವಿಯ ಗೂಳಿಯ ಬರಿಸಿವನು ಕೆಲಕೆಲವ ಕೃಷಿಕರಿಗಿರಿಸಿದನು ಗೋಲಕ್ಷವಿತ್ತನು ವಿಪ್ರಸಂಕುಲಕೆ (ಕುಮಾ. ೦೭-೩೭). ೩. ಎತ್ತು ; ಬಸವ : ತಳಾರ್ಷಕ್ಷಕನಂ ಕನಲಪೋರಿಗಳ್ ಪೂಡಿ ಪೆಟ್ಟ ಮೆಟ್ಟೆದಪರ್ (ಸುಕುಮಾ. ೭-೩ ವ) ; ಹಿಡಿ ಹಿಡಿ ಬಂಡಿಎತ್ತುಗಳ ಬಗಿದ ಬಲುಹೋರಿಯ ಕೊರಳ ಜೊತ್ತಗೆಗಳಂ ಪಱಿ ಪಱಿ (ಜಸಪು. ೩೭-೨೪) ; ಭಂಡಿಯ ಹರಿದು ಸೆಳೆದೇರಿದನು ತಾ ಬಲುಹುರಿಯ ಹಗ್ಗವ ಹಿಡಿದು ಜಡಿದನು ಹೋರಿ ಕೋಣಗಳ (ಸಂಭಶ. ೨೩-೬೦) ; ಹೋರಿ ನಡೆಯದಿದ್ದರೆ ದಾರಿ ಉದ್ದ ಅಂದ ಹಾಗೆ (ಗಾದೆ).

**ಹೋರಿಗರು** = ಗಂಡುಕರು : "ದಮ್ಯಃ, ವತ್ಸತರಃ—೨ ಹೊರುವದಕ್ಕೂ ಯೆಳೆಯುವದಕ್ಕೂ ಉಳುವದಕ್ಕೂ ತಿದ್ದಲ್ಪಟ್ಟ ಹೋರಿಗರು" (ಸಿದ್ಧಾಂತಿ. ೨೯೨).

[ದೇ.॥ ತುಳು. ಬೋರಿ, ಹೋರಿ ; ಕೊಡ. ಪೋರಿ ; ಕೋತ. ಪೋಯ್ರ್]

**ಪೋರಿಸು,** ಹೋರಿಸು (ಕ್ರಿ). ೧. ಹೋರಾಡಿಸು ; ಯುದ್ಧ ಮಾಡಿಸು : ನೆಗಟ್ದ ಮಲ್ಲರುಮಂ ಪಿಡಿದೊತ್ತಿ ಗೆಲ್ದ ಜೆಟ್ಟಿಗರೆನೆ ಸಂದ ಮಲ್ಲರನೆ ಪೋರಿಸಲುಂ ಪಿರಿದೊಂದು ದೋಹಳಂ ನೆಗಟ್ದುದು ಗರ್ಭದರ್ಭಕನ ದೋರ್ಬಲಗರ್ವಮನಂದು ಪೇಟ್ವೊಲ್ (ಆದಿಪು. ೯-೪೯) ; ಭೀಮನೆಯ್ದಿ ಭರದಿಂದಂ ಯುದ್ಧಮಂ ಬೇಡಿ ಮಾಗಧನೊಳ್ ಪೋರಿಸುವಲ್ಲಿ ಶಕ್ತಿಕಳೆಯಂ ಭೀಮಂಗೆ ಕೊಟ್ಟದ್ಭುತಪ್ರಧನಾಟೋಪದೆ ಭೀಮನಿಂ ಕೊಲಿಸಿದಂ ಕೃಷ್ಣಂ ಜರಾಸಂಧನಂ (ಜಗಪ. ೦೬-೯೦). ೨. ಕಾದಾಡಿಸು ; ಜಗಳವಾಡಿಸು : ತಗರಂ ಪೋರಿಪ ಬಗೆಯಿಂ ತಗರಂ ವಿನೋದದಿಂದಂ ಪೊರೆವಂ (ಶಂಕರಶಂ. ೦೭೯-೧) ; ಪಟುವೈರಿನಿರ್ಧೂತರೆನಿಪ ಜೋದರ್ಕಳುಂಕುಶವಿಕ್ಕಿ ಪೋರಿಸಿದರಾನೆಗಳನು (ಜಸಪು. ೨೪-೯). ೩. ಹಿಂಸೆಗೆ ಒಳಪಡಿಸು ; ಒದ್ದಾಡಿಸಂ ; ಹೆಣಗಿಸು : ಚಾರುಸುರಾಂಗನಾರತಿಸುಖಾಮೃತಸೇಚನೆಗೊಂದು ಕಾಯಮಂ ಪೋರಿಸಿ ನೋಟದೊಳೊಡರ್ದು ಶಬ್ದಮನಾಲಿಸಿ ಬೇವ ಬೇವಸಂ ಪೋ ರುಚಿಯಲ್ಲಂ (ಸುಕುಮಾ. ೯-೩೭). **ಹೋರಿಸು :** ೧. ಮಲ್ಲರ ಹೋರಿಸುತ್ತಿಹ ಪಗಡೆ ನೆತ್ತಗಳಾಡಿ ನಲಿವ . . . ರಾಜಪುತ್ರರು ಸೊಗಸಿದರಾ ಬೀದಿಯೊಳಗೆ (ಕಂಸವ. ೨-೭೭) ; ಶ್ರೀರಾಮ ರಾವಣನ ಹೋರಿಸುತ ಲಂಕೆಯನು ಸೂರೆ ಮಾಡಿಸಿದಂತ ಶೂರ್ಪನಖಿಯಿಂದು . . . ನರಿಯು ನೀನಿಂದು (ಕಂಕ. ೯೩-೪) ; ಕಂಡವರೆದೆ ನಡುಗುವಂತೆ ಅವರನ್ನು ಹೋರಿಸುವನು (ಕಸಾಜ. ೯೭). ೨. ನಿಮ್ಮ ಮಹಿಪನೊಬ್ಬನೆ ಹಿತವಲ್ಲ ಮಹಿಸಿಬಿಟ್ಟೆಮ್ಮ ಹೋರಿಸುತ ತಾ ನೋಡುತುತ್ಸಹದೊಳಿದ್ದಪನೆಂದಲೊಡನೆ (ಭರತ. ೦೪-೯೭). ೩. ಅವರವರ ಕೃತಕರ್ಮಸಂಸ್ಕಾರ ಹೋರಿಸುವುದಳಿಸುವುದು ಸಾಖ್ಯಿಕೆ ಸೇರಿಸುವುದು (ಕುಮಾ. ೨೦-೦೭). [ಪೋರ್$_1$ + — ಇಸು$_3$]

**ಪೋರು$_1$** 'ಪೋರ್$_1$' ನೋ.

**ಪೋರು$_2$** 'ಪೋರ್$_2$' ನೋ.

**ಪೋರು$_3$** 'ಪೋರ್$_3$' ನೋ.

**ಪೋರುಗೈ** (ಕ್ರಿ). ಜಗಳವಾಡು ; ಕಲಹಮಾಡು : ನೆಲೆಯೊಳ್ ಸೇರಲು ಪೋರುಗೈದು ಸತಿ ತಾಂ ಪೋಗಟ್ಟುವಳ್ ಸಾಲಿಗರ್ ಕಲುಗುಂಡಂ ತಲೆಗೇಱಿಪರ್ ತೊಲಗಿರಲ್ ಲಕ್ಷ್ಮೀಕಟಾಕ್ಷೇಕ್ಷಣಂ (ಸೋಮೇಶ. ೩೦).

[ಪೋರು$_2$ (< ಪೋರ್$_2$) + ಗೈ (< ಕೆಯ್$_1$)]

**ಪೋರುಗೊಳ್** (ಕ್ರಿ). = ಪೋರುಗೈ : ಪಳಿವವರೊಳು ಪೋರುಗೊಳದೆ ಮುಳುಗಿಯೆಚ್ಚಪರೊಳು ಮೂದಲೆಯೆಸಗದೆ ಒಳುಮೆಂಡಿರೊಳ್ಪುವಡೆವುದು (ಹರಿಶ. ೪-೯೦). [ಪೋರು$_2$ (<ಪೋರ್$_2$)+ಕೊಳ್$_1$]

**ಪೋರೆ,** ಬೋರು$_1$, ಬೋರೆ$_1$ (ನಾ). ೧. ಸಣ್ಣಗುಡ್ಡ ; ಮೊರಡಿ ; ದಿಬ್ಬ : ಉರಿಗಳಿಂದೊರೆಯಿಂ ಪೋರೆಯಿಂ[ಶಾಶಾಂ. ಉರಿಗಳಿಂದೊರೆಗಳಿಂ ಮೊರೆಗಳಿಂ, ಜರಿಗಳಿಂದುರಿಗಳಿಂ ಪೋರೆಯಿಂ]ದಿಡಿದ ಕಮ್ಮರಿಗಳಿಂ ಕಱೆವ ಕೆಂಡದ ಮಳೆಗಳಿಂ ಗಜರ್ವ ಮರುಳ್ಗಳಿಂ ಶಾಕಿನಿಯರಿಂ ಡಾಕಿನಿಯರಿಂದವಮಾ ಪಥ ಬೆದಱಿಸುವುದು (ಜಸಪು. ೩೭-೨೩); ಲಲನಸಹಿತ

ತೆರಳಿದರು ಮುಂದಕಂ ಗಂಧಮಾದನನೆಂಬ ಗಿರಿಯುನ್ನಡದೋರೆಪೋರೆಗಳ ಮುರಿಗಳಂ ಜರಿಗಳಂ ಕಳಿದು (ತುರಂಗ. ೯೪-೨೩). **ಬೋರು₁ :** ೨. ಏಟು ತಗುಲಿದುದರಿಂದ ಉಂಟಾದ ಬುಗುಟೆ,-ಊತ : ಕಿಟಕಿ ಬಾಗಿಲು ತಾಗಿ ಮಗುವಿನ ಹಣೆ ಮೇಲೆ ಬೋರು ಬಂದಿದೆ (ರೂಢಿ). **ಬೋರೆ₁ :** ೧. ಕುರುಬನ ಕಟ್ಟೆಗೆ ಮೂಡದಿಕ್ಕಿನ ಬೋರೆ ಮೇಲೆ ಹುಟುಗಲ್ಲು ೧ (ಎಕ. III, ಶ್ರೀರಂಗ. ೦೪-೦೩೪ ; 1686) ; ಬೆಟ್ಟಕ್ಕಿಂತಲೂ ಚಿಕ್ಕದಾದರೆ ಗುಡ್ಡ, ದಿಣ್ಣೆ, ತಿಟ್ಟು, ಮರಡಿ, ಬೋರೆ, ತೆಂಬ, ತೆವರು ಎಂಬ ಹೆಸರುಗಳು ಬರುತ್ತವೆ (ಭೂಗೋಳ. ೦೧); ರಜವಿದ್ದ ದಿನ ಮಧ್ಯಾಹ್ನ ದನಕಾಯಲು ಬೋರೆಗೆ ಹೋಗುತ್ತಿದ್ದೆ (ಧರ್ಮಶ್ರೀ. ೦೪). ೨. ಕಬ್ಬಂ ಪೊತ್ತಡೆ ಶಿರೋಭಾಗವೂಱಿದ ಬೋರೆಗಳವೊಲು ಹೊಡದು ರಾವುಗಳು ತಾಗಿದೊರಸಿದ ಮಸಗಿದೊತ್ತಿನ ಮೇಗಣೆಡೆಗಳು (ಬಸವ. ೩೯-೫೯); ಮಕ್ಕಳ ಮಂಡೆ ಬೋರೆ ಡೋಹಂದದಿ ಹೆಟ್ಟೆ (ನೇಮಿಸಂ. ೦೫-೦೦೬); ಹೊತ್ತ ಹೊಱೆಗಳಿಂದ ನೆತ್ತಿ ಬೋರೆಯು (ಅಮಸಾಂ. ೬-೫).

[ದೇ॥. ತಮಿ. ಪೊಱೈ, ಪೊಱ್ಱೈ ; ಮಲ. ಪೊಱ್ಱ; ತುಳು. ಬೋರೆ=ಬೆಟ್ಟದ ತುದಿ]

**ಪೋರ್ಕಳ** (ನಾ). ಯುದ್ಧರಂಗ ; ರಣರಂಗ : ಕಾಳಗದ ಪುಲಿ ತಾನ್, ಕಾಳಗದ ಪುಲಿಗಳನ್ ಪೋರ್ಕಳದೆ ಕಳೆಯನ್, ಸಾವಿಗೀಯನ್ (ಶಾರಸಿ. ೨೫-೨). [ಪೋರ್₃ + ಕಳ₃]

**ಪೋರ್ಕಳಿ** (ನಾ). ಯುದ್ಧ ; ಕಾಳಗ ; ಹೋರಾಟ : ಈ ಬಗೆಯಲ್ಲಿ ಪೋರ್ಕಳಿ ಮುಂದುವರಿದರೆ ನಾವು ಕಾಳೆಗದಲ್ಲಿ ಗೆಲುವು ಗಳಿಸುವುದು ಪ್ರಯಾಸ (ಹುಂಹಾ. ೩೩೬). [< ಪೋರ್ಕಳ]

**ಪೋರ್ಕುಳಿ,** ಪೊರ್ಕ್ಕುಳಿ, ಪೊರ್ಕುಳಿ, ಹೊಕ್ಕುಳಿ, ಹೊರ್ಕುಳಿ, ಹೋಕುಳಿ (ನಾ). ೧. ಯುದ್ಧ ಮಾಡುವವನು; ಹೋರಾಡುವವನು : ಕುಳಿ ಪ್ರತ್ಯಯಕ್ಕೆ-ಪೋರ್ಕುಳಿ[ಪಾಠಾಂ. ಪೊರ್ಕುಳಿ, ಪೊಱಕುಳಿ, ಹೋರುಕುಳಿ] ಓಡುಕುಳಿ (ಶಮದ. ೨೦೩ ಪ್ರಯೋ); ಮಾಟ್ಪುದು ಶೀಲವಿಘಾತಂ ಮಾಟ್ಕುಳಿ, ಏವಂ ಅಟ್ಕುಳಿ, ಪೋರ್ಕುಳಿ (ಶಬ್ದಾನು. ೫೪೫ ಪ್ರಯೋ). ೨. ಕಾಳಗ ; ಯುದ್ಧ; ಹೋರಾಟ : ಪೂವಿನೊಳಂ ಪೋರ್ಕುಳಿ ನಮಗೇವುದೊ (ಹಂಪಾಮ. ೧೨-೬೦). ೩. ಜಗಳ; ಕಚ್ಚಾಟ : ಆಗಳಾಗಜದ ಪೋರ್ಕುಳಿ[ಪಾಠಾಂ. ಪೊರ್ಕುಱು]ಯಿನಮಯುವದೊಳಲ್ಲಲ್ಲಿಗಳವಟ್ಟರದನವಿಘಟ್ಟನರೇಖಾನಿಕಾಯಮುಂ . . . ಬೇಱೊಂದು ಚೆಲ್ವನವಟ್ಟೈಸಿ ವೀರರಸಕ್ಕಾಗರಮಾಗೆ (ಜಗಪ. ೬-೫೫ ವ); ಕಡೆಯೊಳ್ ಕೋಣನ ಪೋರ್ಕುಳಿ ಗಿಡುವಿಗೆ ಮಿತ್ತೆಂಬ ತೆಱದೆ (ಧುಕೋಶ. ೩-೬೨). 'ಪೋರ್ಕುಳಿವಕ್ಕಿ' ಪರಾ. ೪. ಪ್ರತಿಭಟನೆ; ವಿರೋಧ ; ಅಡ್ಡಿ : "ತಳ್ಪೊಯ್, ತಡಂಬರೆ, ಪೋರ್ಕುಳಿ . . . ಈ ೨೬ ಪ್ರತಿಹತಕ್ಕೆ ಪೆಸರ್" (ಕಕಸಾ. ೫೯-೨೯೬). ೫. [ಕಾಮಶಾ] (ರತಿಕ್ರೀಡೆಯಲ್ಲಿಯ) ಸೆಣಸಾಟ; ಪ್ರಣಯಕಲಹ : ವಸುಧಾವಲ್ಲಭೆ ಮೇಘಕಾಲವಿಟನೊಳ್ ಸಂಭೋಗಮಂ ಮಾಡೆ ಬಣ್ಣಸರಂ ಪೋರ್ಕು[ಪಾಠಾಂ. ಪೊರ್ಕ್ಕು]ಳಿಯಿಂದಲೇ ಪಱಿದು ಸೂಸಿತ್ತಲ್ಲದಂದೆ ತ್ರಣಂ ಪೊಸಮುತ್ತುಂ ಕಿಸುಗಲ್ಗಳುಂ ಕೆದಱಿ ಕಣ್ಗಂಬಾದುವೆಂಬಂತ ದೇನೆಸೆದೊಪ್ಪಿರ್ದುವೊ ಸೂಸಿದಾಲಿವರಲುಂ ತಳ್ತಿಂದ್ರಗೋಪಂಗಳುಂ (ಹಂರಾಮ. ೭ ೧೪೬); ಪೋರ್ಕುಳಿ[ಪಾಠಾಂ. ಪೊರ್ಕುಱು]ಯಿಂದಮೆ ಹಂತಿದಪ್ಪಿ ಕಾಱುಂಬಱಿಯುಂ ತೆರಳ್ದ ಕುರುಳ್ ... ಕೂಟದೊಂದು ಸವಿಯುಂ ಪಿಸುಣಾಡುವುವೀ ಲತಾಂಗಿಯಾ (ಚಂದ್ರಕೃ. ೯-೬೨). (ಗು). ೬. ಜಗಳವಾಡುವ ಸ್ವಭಾವದ ; ಕಲಹಶೀಲ : ಸುಣ್ಣದೆಲೆಯನೊತ್ತೆಯಿಟ್ಟು ಮದದಾನೆಯುಮಂ ಮಾಣಿಕಮುಮನೊತ್ತೆವಿಡಿಸಲಟ್ಟುವ ಚಿಕ್ಕ ಪೋರ್ಕುಳಿ ಬೊಜಂಗರುಮಂ . . . ನೋಡಿ (ಹಂಶಭಾ. ೪-೮೭ ವ). **ಪೊರ್ಕ್ಕುಳಿ :** ೨. ಪೂವಿನೊಳಂ ಪೊರ್ಕ್ಕುಳಿ ಕೇಳಾವಂಗಂ ಪೊಲ್ಲದು (ಉಶಾರ. ೦೨-೬೬). ೩. 'ಪೊರ್ಕ್ಕುಳಿವಕ್ಕಿ' ಪರಾ. ೫. ಆಲಿಂಗನಂ ಬಿರಿದುಂ ಪೊರ್ಕ್ಕುಳಿ ಚುಂಬನಂ . . . ಸತ್ಕಾಮಿನೀಸುರತಕ್ರೀಡೆಯೊಳೊಪ್ಪೆ ಸೌಖ್ಯದೊದವಿಂದಿರ್ದಂ ಮಹೀವಲ್ಲಭಂ (ತ್ರಿಕುವಿ. ೦೭-೬೬). ೭. ಜಗಳವಾಡುವ ಸ್ವಭಾವದ ಹಕ್ಕಿ; ಕೋಗಿಲೆ : ವರಫಲವನುಂಬ ಪೊರ್ಕ್ಕುಳಿಗಳಿಂ ಗಿಳಿಗಳಿಂ . . . ವನವನಂಗಳ್ ಮೆಱೆದುವು (ಚಂಪ್ರ. ೪೫-೨೩). **ಪೊರ್ಕುಳಿ :** ೨. ಪೂಣರ್ದು ಕುರುಶ್ರೇಷ್ಠನೊಳ್ ಕಾದುವಾ ಯುದ್ಧದಗುರ್ವುಂ ಪೂವಿನೊಳ್ ಪೊರ್ಕು[ಪಾಠಾಂ. ಪೊರ್ಕ್ಕು]ಳಿ ನೆಗಟ್ದವೊಲಾಯ್ತು ಮುರಧ್ವಂಸಿಗಾಗಳ್ (ಜಗಪ. ೭-೯೨). ೩. 'ಪೊರ್ಕುಳಿವಕ್ಕಿ' ಪರಾ. ೪. "ಪೊರ್ಕುಳಿಯು ತಳ್ಪೊಯ್ಯುಂ" (ಕವಿಕಂ. ೦೩೮). ೫. ಆ ತಂತುವಾಯಂ ಮುನ್ನಮೆ ತನ್ನ ಪೆಂಡತಿ ಜೋಡೆಯೆಂದು ಸಂದೇಹಂಬಡುವಾತನವಳ ವಿಪರೀತವೇಷಂ ತನಗೆ ರೋಷಮನೀಯೆ ಸಾಯೆ ಸದೆಬಡಿದು . . . ಕಳ್ಳ ಸೂರ್ಕಿನೊಳಮವಳ ಪೊರ್ಕುಳಿಯೊಳಂ ಬಱಲ್ದು ನಿದ್ರಿತನಪ್ಪುದುಂ (ಪಂಚತಂ. ೭೫-೦). ೮. ಪೆಟ್ಟು; ಹೊಡೆತ : ನೀರಾಟವಾಡುವ ಗಾಡಿಕಾರ್ತಿಯರ ಘನಜಘನಂಗಳ ಪೆರ್ಮೊಲೆಯ ಪೊರ್ಕುಳಿಯಿಂ ಪಱಿವಱಿಯಾದ ಪೆರ್ದೆಱೆಗಳುಮಂ ತಳೆದ ಪೂಗೊಳಂಗಳೊಳಂ (ಕಾದಂಬ. ೫೨೬). **ಹೊಕ್ಕುಳಿ :** ೨. ಎಲೆ ಪಾತಕಿ ಕಡುಹಂದೆಯು ಕೊಂದು ಹೊಕ್ಕುಳಿಯು ಗೊಂದಣದೊಳು ಹೊಕ್ಕು ಬಹುದುಃಖಪಡೆವುದಂದಹುದೇ ಕಲಿಗಳಿಗೆ (ಶ್ರೀಪಾಂ. ೬-೬೬). 'ಹೊಕ್ಕುಳಿ ಗೊಳ್' ಪರಾ. **ಹೊರ್ಕುಳಿ :** ೨. 'ಹೊರ್ಕುಳಿಸು' ಪರಾ. **ಹೋಕುಳಿ :** ೨. 'ಹೋಕುಳಿಸು' ಪರಾ.

**ಪೋರ್ಕುಳಿಯಾಗು, ಪೊರ್ಕುಳಿಯಾಗು** = ೧. ಯುದ್ಧವಾಗು; ಹೋರಾಟವಾಗು : ಪೋರ್ಕುಳಿಯಾದಡೆ[ಪಾಠಾಂ. ಯಾಡದೆ, ಯೋದಡೆ]ಹರಿಯುಂ ಮಾರ್ಕೊಳ್ಳದೆ ತೆಗೆದ ಕಯ್ಯ ಬಱಿಯನೆ ಬಂದಂ ಸೂರ್ಕಿದಿಭಪತಿಯ ಕಯ್ಯೊಳ್ ಸಿಕ್ಕಿ ತೊಗಲ್ವಾವೆಯಂದದಿಂ ಚಾಣೂರಂ (ಅರ್ಜನೇ. ೮-೦೦೩). ೨. ಪ್ರಣಯಕಲಹವುಂಟಾಗು : ಒಡನಲಿವ ನಲ್ಲಳಚ್ಯುತನಡಿವಜ್ಜೆಗಳಲ್ಲಿ ಕೇಳಿಗೆಳಸಿದಳವನೀಯಡಿಯೊಳ್ ಪೋರ್ಕುಳಿ[ಪಾಠಾಂ. ದನವನೀಯೆಡೆಯೊಳ್ ಪೊರ್ಕುಳಿ]ಯಾಯ್ತೆಂದಡಿಗಡಿಗಾಯೆಡೆಯನೊರ್ವಳೀಕ್ಷಿಸುತಿರ್ದಳ್ (ಜಗಪ. ೫-೨೮); ಒದವಿದಲಂಪು ಪೋಪಿನವನಂಕದ ಬೀಕದ ಪೆರ್ಚು ಪೊಚ್ಚಱಂಗದ ಸಱಿವಿಂಡಿಯೊಳ್ ಪೊರಳಿ ಪೊರ್ಕುಳಿಯಾದೊಡೆ (ಸೂಕ್ತಿಸು. ೮-೪೩೪).

**ಪೋರ್ಕುಳಿಯಾಡು** = ಯುದ್ಧಮಾಡು; ಹೋರಾಡು : ಅಂತು ನೆಱಲೊಳ್ ಪೋರ್ಕುಳಿಯಾಡುವಂತೊರ್ವರೊರ್ವರಂ ಗೆಲಲ್ನೆಱೆಯದಿರೆ ದುರ್ಯೋಧನಂ ಕರಂ ಮುಳಿದು (ಗದಾಯು. ೮-೨೩ ವ); ಕಳದೊಳವರಿರ್ವರುಂ ಪೋರ್ಕುಳಿಯಾಡಲ್ ಧರ್ಮಯುದ್ಧದಿಂದವನಱಿಯಲ್ (ನೇಮಿಪು. ೦೦-೦೨೬). [ಪೋರ್₁ + —ಕುಳಿ₃]

**ಪೋರ್ಕುಳಿಗೊಳ್,** ಪೊರ್ಕುಳಿಗೊಳ್, ಹೊಕ್ಕುಳಿಗೊಳ್ (ಕ್ರಿ). ಹೋರಾಡು ; ಯುದ್ಧಮಾಡು : ಬಂಧುರಭಟರ್ಕಳ್ ಭೂಪನೊಡನೆ ವೈರಂದೆಗೆದು ಭರದೆ ಪೋರ್ಕುಳಿಗೊಳಲ್ ತೊಡಗಿದರ್ (ಆರಾಕ. ೪-೩-೦೬). **ಪೊರ್ಕುಳಿಗೊಳ್ :** ಎನ್ನೊಳು ಪೊರ್ಕುಳಿಗೊಳ್ವುದೆನುತ ವಿಕ್ರಮೋನ್ನತನಿದಿರ್ವಂದು ನಿಲಲು (ನೇಮಿಸಂ. ೩೦-೯೭). **ಹೊಕ್ಕುಳಿಗೊಳ್ :** ತನ್ನೊಳು ಹೊಕ್ಕುಳಿಗೊಂಡ ಉನ್ನತಮಪ್ಪ ಗಜರತ್ನಮಯ್ದಿತು ತನ್ನ ತಾನಾ ನೃಪನೆಡೆಗೆ (ಶ್ರೀಪಾಲ. ೧೩-೦೦) ; ಅಂತಕನೊಳಗೆಕ್ಕೆಯೊಳಂ ಹೊಕ್ಕುಳಿಗೊಳ್ವೆನೆನಿಪ್ಪೆಕ್ಕತುಳದ ಭಟನಿವಹಂ ನಡೆದುದಿಳಾಧಿಪನಂ ಬಳಸಿ (ಜಯಕಾ. ೬-೦೮). [ಪೋರ್ಕುಳಿ + ಕೊಳ್₁]

**ಪೋರ್ಕುಳಿಯಿಕ್ಕು,** ಪೊರ್ಕುಳಿಯಿಕ್ಕು (ಕ್ರಿ). ೧. ಹುರುಡಿಸು ; ಸ್ಪರ್ಧಿಸು : ಮುಡಿವೊಱೆಯ ವಿಷಯದೆ ಮಱೆಗೆ ವಂದಂಧತಮಸಮಂ ಪೆಱಗಿಕ್ಕಿ ತನ್ನೊಳ್ ಮಲೆವ ಲಲನೆಯರ ವದನವಿಧುಬಿಂಬದೊಳ್ ಕಪೋಳಸಂಭೃತಪ್ರತಿಕೃತಿಚ್ಛದ್ಮದಿಂ ಪೊಕ್ಕು ಪೋರ್ಕು[ಪಾಠಾಂ. ಪೊರ್ಕ್ಕು]ಳಿ

ಯಿಕ್ಕೆಯುಂ (ಶರ್ವಪು. ೬-೯೩ ಪ). **ಪೋರ್ಕುಳಿಯಿಕ್ಕು** : ೨. ಜಗಳ ವಾಡು ; ಕಲಹಮಾಡು : ಪೆಱರೊಳು ಪೊರ್ಕುಳಿಯಿಕ್ಕುತ್ತಂ ಮೆಯ್ಯೊರಿಸುತ್ತಂ ಬೊಟ್ಟುವರಿಸುತ್ತುಮಿವು ಮೊದಲಾದ ಪೆಱವುಂ ರಾಗದ್ವೇಷಹೇತುಗಳಪ್ಪುವಂ ಮಾಡುತ್ತಿರ್ಪುದುಂ (ಪಶಾರ. ೩೦೩).
[ಪೋರ್ಕುಳಿ + ಇಕ್ಕು]

**ಪೋರ್ಕುಳಿವಕ್ಕಿ**, ಪೊರ್ಕುಳವಕ್ಕಿ, ಪೊರ್ಕುಳಿವಕ್ಕಿ, ಪೊರ್ಕುಳಿವಕ್ಕಿ (ನಾ). ಜಗಳವಾಡುವ ಸ್ವಭಾವದ ಹಕ್ಕಿ; ಕೋಗಿಲೆ : "ಪೋ:ರ್ಕುಳಿ[ಪಾಠಾಂ. ಪೊರ್ಕುಳಿ, ಪೊಕ್ಕುಳ]ವಕ್ಕಿಯೆಂದು ಕೋಗಿಲೆ" (ಕಪುಚ. ಪ. ೫೦); "ಪಡಿಯಱವಕ್ಕಿ, ಪೋರ್ಕುಳಿವಕ್ಕಿ[ಪಾಠಾಂ. ಯವಕ್ಕಿ] . . . ಪರಪುಟ್ಟಂ — ಈ ೫ ಪಿಕಂ" (ಕಶಾ. ೩೩-೨೦೩). **ಪೊಕ್ಕುಳವಕ್ಕಿ** : "ಪೊಕ್ಕುಳವಕ್ಕಿ[ಪಾಠಾಂ. ಪೊಕ್ಕುಟ್ಟಕ್ಕಿ] . . . ಪಡಿಯಱವಕ್ಕಿ ಕೋಗಿಲೆಯೆನಿಕ್ಕು" (ಕಪ್ರಮಂ. ೨೯) ; ಮಧುಸಮಯದೊಳಗೆ ಮಾಮರ ಚಿಗುರಲೆಳದಳಿರ ಕರ್ದುಕಿ ಪೊಕ್ಕುಳವಕ್ಕಿ ಕೊರಳನಿಂಚರವಮುದಿಸೆ (ಕಂಕ. II, ೯೫೬ ಚತುರಾಶಾರ್ಯಪುರಾಣ). **ಪೊಕ್ಕುಳಿವಕ್ಕಿ** : (೯). **ಪೊರ್ಕುಳಿವಕ್ಕಿ** : ಮೇಲಿನ 'ಪೋರ್ಕುಳಿವಕ್ಕಿ' ಉಲ್ಲೇಖದ 'ಶವಂದ' ಪ್ರಯೋಗದ ಪಾಠಾಂತರವನ್ನು ನೋಡಿ. [ಪೋರ್ಕುಳಿ + ಪಕ್ಕಿ]

**ಪೋರ್ಕೆ**, ಹೋರ್ಕೆ (ನಾ). ಹೋರಾಟ ; ಕಾಳಗ : "ಹೋರಟೆಯೆನೆ ಪೋರ್ಕೆಯು" (ಶಾರಕಿ. ೩೯). **ಹೋರ್ಕೆ** : (೯). [ಪೋರ್₁ + —ಕೆ]

**ಪೋರ್ಚುಗೀಸ್**, ಪೊರ್ತುಗೀಜ, ಪೋರ್ಚುಗೀಸ (ನಾ). ೧. ಪೋರ್ಚುಗಲ್ಲಿಗೆ ಸೇರಿದ ವ್ಯಕ್ತಿ ; ಪೋರ್ಚುಗಲ್ಲಿನವನು. ೨. ಪೋರ್ಚುಗಲ್ಲಿನ ಭಾಷೆ : ಪೋರ್ಚುಗಲ್ಲಿನ ಭಾಷೆ ಪೋರ್ಚುಗೀಸ್. ಅದು . . . ಅನೇಕ ಜರ್ಮನ್ ಮತ್ತು ಸೆಮೆಟಿಕ್ ಶಬ್ದಗಳನ್ನೊಳಗೊಂಡಿದೆ (ಕವಕೋ. XI, ೨೫೨). (ಗು). ೩. ಪೋರ್ಚುಗಲ್ಲಿಗೆ ಸೇರಿದ : ಈ ಪೋರ್ಚುಗೀಸ್ ಜನರು ಅನುಮಾನವಾಗದ ರೀತಿಯಲ್ಲಿ ಅವರೊಡನೆ ವರ್ತಿಸಿದರು (ಕ್ರಪಾ. II. ೦೧೯). **ಪೊರ್ತುಗೀಜ** : ೧. ಫ್ರೆಂಚರವೂ ಪೊರ್ತುಗೀಜರವೂ ಕೆಲವು ಪ್ರದೇಶಗಳು ಹಿಂದುಸ್ತಾನದಲ್ಲಿ ಉಂಟು (ಮುಂಬಯಿ. ೯-೦೦೩). **ಪೋರ್ಚುಗೀಸ** : ೧. ಒಬ್ಬೊಬ್ಬ ಪೋರ್ಚುಗೀಸ ಐದು ಆರು ಹೆಂಗಸರನ್ನು ಇಟ್ಟುಕೊಳ್ಳುತ್ತಿದ್ದ (ಕ್ರಪಾ. II, ೨೯೦). 'ಪುಡುತಕೇಶ' ಪರಾ. [←ಇಂ. Portuguese./ ತೆಲು. ಬುಡುತಕೀಜು]

**ಪೋರ್ಚುಗೀಸ** 'ಪೋರ್ಚುಗೀಸ್' ನೋ.

**ಪೋರ್ತ** (ನಾ). ಹೋರಾಟ ; ಕಾದಾಟ : ವ್ಯಾಳವನಗಜದ ಪೋರ್ತದ ಕೇಳಿಗೆ ವಿಜಯಾರ್ಧಶೈಲಪತಿ ಸವೆಯಿಸಿ ತಂದೋಳಿಯ ನಿಱಿಸಿದ ಬೆಳ್ಳಿಯ ಲಾಳಾವಿಂಡಿಗೆವೊಲಿರ್ಪುವಿವಱ ಮಡಲ್ಗಳ್ (ಶಾಂತಿಪು. ೨-೦೦೪) : ಭಾವಿ ಪೊಡಾಂ ಜಟ್ಟಿಯುವಂ ಗೋವಳನೆಂದಂದು ದೇವ ಪೋರ್ತದೊ[ಳ] [ಪಾಠಾಂ. ಪೋರ್ತದೊಡ, ಪಾರ್ದೊಡವು,[ಪೋ]ರ್ದೊಡವು]ವನ್ನಾವೆಡೆಗೆ ವರ್ಪಂ (ಶರ್ವಪ. ೬-೬೦). 'ಪೋರ್ತಂಗೊಳ್' ಪರಾ.
[ಪೋರ್₁ + — ತ₂]

**ಪೋರ್ತಂಗೊಳ್** (ಕ್ರಿ). ಹೋರಾಡು ; ಕಾದು : ಆ ಗಜಮಲ್ಲ ನೋರ್ಳ್ಪೋರ್ತಂಗೊಂಡುದೆ ಮಲ್ಲಸಿಂಗರಂಗೆಯ್ದಂತಾಗೆ (ಶರ್ವಪ. ೬-೯೬ ಪ).
[ಪೋರ್ತ + ಕೊಳ್₁]

**ಪೋರ್ನುಡಿ** (ನಾ). ಜಗಳದ ಮಾತು ; ಬಯ್ಗುಳ ; ಮೂದಲಿಕೆ : ಪೆಣ್ಮಾಲಗೆಯೊ ನೋಡೆ ಮಸೆಗಣೆಯ ಡೊಣೆಯಲ್ತೆ . . . ಪಣ್ಮಾರಿದ ಪೋರ್ನುಡಿಯ ಮಳೆಗರೆದುದೊರ್ಮೆ (ಕಾಬೂರ. ೦೨೯-೨೬೩).
[ಪೋರ್₂ + ನುಡಿ₂]

**ಪೋರ್ಮೆ** (ನಾ). ಪ್ರೇಮಕಲಹ : ಅಗಲ್ವದ ಕೂರ್ಮೆ ಪೋರ್ಮೆ ಪೊರ್ಮುಗೆಯೊಗೆವಿಚ್ಛೆ ಮುಚ್ಚು ಪಿಟರಂ ಕೊಱಚಾಡುವ ಪಾಡು ಗಾವಡಿಯೆಂಬಗಣಿತಚೇಷ್ಟೆಗಳ್ ಮೞ್ದಿರಲ್ ತಱಿಸಲ್ಕುದು ಸೂಳೆವಿಜ್ಜೆಯೊಳ್ (ಪಶು. ೮-೨೨). [ಪೋರ್₂ + — ಮೆ₁]

**ಪೋಲ್**₁, ಪೋಲು₁, ಹೋಲ್, ಹೋಲು₁ (ಕ್ರಿ). ಹೋತ₁ (ಭೂತಕೃ). ಹೋತು₁ (ಭೂತನಪ್ರ). ಎಣೆಯಾಗು ; ಸಾಟಿಯಾಗು ; ಸದೃಶವಾಗು : "ಪೋಲ್-ಸಾದೃಶ್ಯೇ" (ಶಬ್ದಾ) ; ಕಳ್ಬೆಳ್ಪವಟ್ಟಲ್ ಬಾಯೊಳ್ ಬೆಚ್ಚಂತಿರೆ ಸತೆ ಶಶಿಯಂ ಕಚ್ಚಿ ನೆಲಕ್ಕಿಟಿದ ರಾಹುವಂ ನೆಱೆ ಪೋಲ್ತಳ್ (ಕಾವ್ಯಾ. ೯೬೬ ಪೂರ್ವ್ರ); ಶಚಿಮಹಾದೇವಿಯನೆ ಪೋಲ್ವ ಧಾರಿಣಿಮಹಾದೇವಿಯೆನ್ನ ಕಾಲ್ಗೆಱಗಿ ಪೊಡೆವಟ್ಟಿರ್ದಳ್ (ಪಪ್ಪಾ. ೬೦-೭); ಪಲವು ಪೂಮಾಲೆಗಳಂ ಬಗೆಯಱಿದು ನೀಡುಗುಂ ಮಾಲೆಗಾಱನು ಪೋಲ್ಪುದಗ್ರಮಾಲ್ಯಮಹೀಜಂ (ಅಂಪು. ೫-೩೬) ; ಪ್ರತಿಬಿಮ್ಬಂ ರೂಪಿನೊಳ್ ಪೋಲ್ಕೆಮ (ಎಕ. VIII, ಶಗ .೩೫-೭ ; 1077). **ಪೋಲು**₁ : ಈ ನೆಲದೊಳಾರುವಂ ಪೋಲದವರಿಂತಿವರು (ಕಿರುಕ. ದೀ. ೨೬_೦೬); ಕಾವನ ಪೋಲುವ ಸೋಮವದನನನು ಕೋಮಲಾಂಗಿಯೆ ಕರೆತರಲು ಪ್ರೇಮದಿಂ ಮುತ್ತಿನ ಹಾರವನೀವೆನು (ಕಂಪಂ. ೯_೪೨); ಭುವನ ಮೂರರೊಳರಸಿದೊಡೆ ನಿನ್ನುವನು ಪೋಲುವರಿಲ್ಲ (ಕಪಂಗಾ. ೦-೫-೦೩). **ಹೋಲ್** : ಗುರುಕಚಭಾರ ನೀಳರತ್ನಂ ನಗೆ ವಾಃಕಣವಾಗೆ ಹೋಲ್ತಳೀ ನಿರುಪಮಕಾನ್ತಿ ಸಾನ್ತಲೆ ಶುಧಾಂಶುಕಳಾಶ್ರಿತದುಗ್ಧವಾರ್ಧಿಯಂ (ಎಕ. XVI, ತಕ್ಕಪಾ. ೯೬_೩೬, 1169). **ಹೋಲು**₁ : ಶಬ್ದಿಯಾದಾತ ತರುಗಳ ಹೋತ ನಿಶ್ಶಬ್ದಿಯಾದಾತ ಪಾಷಾಣವ ಹೋತ (ಅಪಕಂ. ೦೦೬-೯೯೦); ಎಲವೋ ನಿನ್ನ ಹೋಲುವರಾರು ಬಾಹಿರ ಭಂಡರವನಿಯಲಿ (ಸುಬ್ರಾ.ದ್ಮೊ. ೦೯-೨೬); ಒಂದೂವರೆವರ್ಷದ ಚೀನಿ ತನ್ನ ತಂದೆಯ ಮೈಕಟ್ಟು ಮುಖಭಾವಗಳನ್ನು ಹೋತು ಹುಟ್ಟಿತ್ತು (ಪಂಶಪ್ಪ. ೯೬). [ದೇ.೩ ತಮಿ. ಪೋಲ್; ಮಲ. ತೆಲು. ಪೋಲು]

**ಪೋಲ್**₂ ? (ನಾ). (?) : ಬಲ್ಗಿಚ್ಚ ಪಳಿವ ಲಿಂಗಂ ಮೂಱಿ ಕಣ್ಗಟ್ಟು ಕಾಲ್ಗಾಣದಾದನಾ ಕಾಳ್ಗೆ ತಕಳ್ಳುಕೆ ತುಳಲ್ಗುಂದಿ ನಾಲ್ಮೊಗಂ ತಲೆಗಂಡನೇ ಶಿವನ ಬಲ್ಗಣೆಯ ಪೋಲ್ಗಾವನು (ಚಾಪಾಂ. ೩-೨೬). [?]

**ಪೋಲ್**₃ '—ವೋಲ್' ನೋ.

**ಪೋಲಕ**, ಪೋಲಕಾ, ಪೋಲ್ಕ (ನಾ). ಒಂದು ಬಗೆಯ ಕುಪ್ಪಸ ;— ರವಿಕೆ : ವತ್ಸಲೆ ಆ ದಿನದ ಪೋಲಕ ಪರಕಾರಗಳನ್ನೇ ಧರಿಸಿದ್ದಳು (ಕ್ರಪ. ೩೬) ; ಉಪಾನ ತಾಯಿ . . . ಒಗೆದ ಪರಕಾರ — ಪೋಲಕಗಳನ್ನು ತೊಡಿಸಿದ್ದರು (ಕ್ರೀಮುಕ. ೩೦). **ಪೋಲಕಾ** : ನನ್ನ ಪೋಲಕಾದ್ದೇ ಒರಸು (ಹೂಬಿ. ೨೦) ; ನೀ ಮುಂದಿನ ಜನ್ಮಕ್ಕ ಬರೋದರೊಳಗ ಪೋಲಕಾ, ರಘುಗಾ ಬಂದಿರತಾವೇಳು. ಕುಬಸದ ಹಂಗ್ಯಾಕ ? (ಹೂಸಂಪಾ. ೬೦). **ಪೋಲ್ಕ** : ಪೋಲ್ಕ . . . (ಹೆಂಗಸಿನ) ಗುತ್ತನಾದ (ಸಾ. ಹಣಿಗೆಯ) ನಡುವಂಗಿ (polka. ಇಂಕ೩). [← ಇಂ. Polka. / ಮರಾ. ಪೋಲಕೇ]

**ಪೋಲಕಾ** 'ಪೋಲಕ' ನೋ.

**ಪೋಲಗಟ್ಟು** (ನಾ). (?) : ಕಡೆಯ ಮಂಡೆಯ ಗೆಜ್ಜೆ ಕಣಕಾಲ ಬಾಸಿಂಗ ಮಂಡೆಯ ಬದ್ದುಗೆಯ ಕಿಗ್ಗಟ್ಟು ಬಿಡೆಯವಿಲ್ಲದೆ ಪೋಲಗಟ್ಟಿನ ಬಿಲ್ಲಾಳ ಪಡೆ ನಡೆಯಿತು ಬಾಣನೊಡನೆ (ಪೋಪಕ. ೯೦-೦೪). [?]

**ಪೋಲಿ**₁ (ನಾ). ೧. ಉಡಾಳ ; **ಪೋಕರಿ** : ಊರಿನ ಹಿರಿಯರು ಇವರಿಬ್ಬರು ಶುದ್ಧ ಪೋಲಿಗಳೆಂದು ಭಾವಿಸಿಬಿಟ್ಟರು (ಹೂಸ್ಕೂಪ. ೨೦) ; ನಿನ್ನ ಸಲಿಗೆ, ಬೇಬಿಯ ಪ್ರೀತಿ — ಇವು ಅವನನ್ನು ಪೋಲಿಯನ್ನಾಗಿ ಮಾಡಿದ್ದವು (ಮುಂಗಾರು. ೬) ; ಪೋಲೀಮುಂಡೇದಕ್ಕೆ ತಾಲೀ ಕಟ್ಟಿದರೆ ತಾಲಿ ತಾಲಿ ಪೋಲಿ ಪೋಲಿ (ಗಾದೆ) . 'ಅಪಾಪೋಲಿ' ಪರಾ. ೨. ದುರ್ಮಾರ್ಗದಲ್ಲಿ ವರ್ತಿಸುವವನು ; ನೀತಿಗೆಟ್ಟವನು : ಅವನು ಪೋಲಿ. ಅವನ ಗೆಳೆಯ ಮಾರ್ಗ ಸನ್ಮಾರ್ಗವಲ್ಲ (ಕಪ್ಪುಹು. ೩೯); ಪೋಲಿಸರೆ, ನಿಮ್ಮ ಹೆಸರಿನಂತೆ ಪೋಲಿಗಳಾಗಿ ವರ್ತಿಸಬೇಡಿರಿ (ದೀಕಥು. ೩೫).

೩. ಅಸಭ್ಯ ; ಲಂಪಟ : ಆ ಪೋಲಿ ನನ್ನ ಕೈಯನ್ನೇ ಹಿಡಿದುಕೊಂಡು (ಬುಜಾಬೂ. ೦೬೬). ೪. ಇಷ್ಟ ಬಂದಂತೆ ವರ್ತಿಸುವಿಕೆ ; ಸ್ವೇಚ್ಛಾಚಾರ: ನಿನ್ನ ಹಾಗೆ ನಾವು ಪೋಲಿಪೋಲಿಯಾಗಿ ಅಲೆದುಕೊಂಡಿದ್ದರೆ ಹೇಗಾದೀತು? (ಕಂಕಥ. ೩೦). ೫. ವ್ಯರ್ಥ ; ಹಾಳು : 'ಪೋಲಿಗ್ಯೆ' ಪರಾ. ೬. ಹಾದರ ; "ವ್ಯಭಿಚಾರ" (ಅನಂನಾ). ೭. ಹೊಣೆಗೇಡಿಯಾದ ಹೆಂಗಸು : "ಪೋಲೀ ... ಕೆಲಸಗಳ್ಳಿ" (ಶಾಶಕ್ಕ. ೪೮). (ಗು). ೮. ಹೊಣೆಗೇಡಿಯಾದ ; ಜವಾಬ್ದಾರಿಯಿಂಲ್ಲದ : ಅವಳ ಚಿಕ್ಕಮ್ಮ . . . ಹೇಗೋ ಕಷ್ಟಪಟ್ಟುಕೊಂಡು ತನ್ನ ಮಕ್ಕಳನ್ನು ಮತ್ತು ಪೋಲಿ ಗಂಡನನ್ನು ಸಾಕುತ್ತಿದ್ದಳು (ಪುನರು. ೯).

ಪೋಲಿದನ = ತೊಂಡುದನ ; ತುಡುಂಗುದನ : ಅವನ ತೋಟಕ್ಕೆ ಪೋಲಿದನ ನುಗ್ಗಿ ಗಿಡಗಳನ್ನೆಲ್ಲಾ ಹಾಳುಮಾಡಿತು (ಊ೦). ಪೋಲಿಪಟಾಲಂ – ಉಡಾಳರ ಗುಂಪು ; ಪೋಕರಿಗಳ ತಂಡ : ಬಯಲಾಟ, ಪೋಲಿ ಪಟಾಲಂ ಎಂದುಕೊಂಡು ವೀರಭದ್ರ ಬಾಲ್ಯದಲ್ಲೇ ಬೀದಿಬಸವನಾದ (ಬಣ್ಣ.ಬಾ. ೦೪೨). ಪೋಲಿ ಬೀಳು = ಹೊಣೆಗೇಡಿಯಾಗಂ : ಗಂಡು ಹುಡುಗರು ಪೋಲಿ ಬೀಳದೆ ಅವರವರ ಪಾಡಿಗೆ ಓದಿ ಪ್ಯಾಸ್ ಮಾಡಿ ಸಂಪಾದನೆ ಮಾಡುತಿದ್ದರೆ ನಮ್ಮ ಜವಾಬ್ದಾರಿ ಇಳಿಯಿತಪ್ಪ (ಮುಹಾಗ. ೪೬). ಪೋಲೀ ತಿರುಗು = ಸ್ವೇಚ್ಛೆಯಿಂದ ಅಲೆದಾಡು ; ಮನಬಂದಂತೆ ತಿರುಗು : ಸೌರಕುಟುಂಬದಲ್ಲಿ ಅನೇಕವೇಳೆ ಅತಿವೇಗದೊಡನೆ ಸಂಚರಿಸುತ್ತ ಪೋಲೀ ತಿರುಗುವ ವಿಷಮಗತಿಯುಳ್ಳ ಮುಂಡಲಗಳೂ ಉಂಟು (ಕ್ರೋ.ಕರ್. ೦೦೪); ನೀನು ಪೋಲೀ ತಿರುಗುವುದನ್ನು ಬಿಟ್ಟು ಯಾವಾಗ ಜವಾಬ್ದಾರಿ ವಹಿಸಿಕೊಳ್ಳುತ್ತಿ ? (ಊ೦). [ದೇ. ಜ ತಮಿ. ಕೊಡ. ಪೋಲಿ; ತುಳು. ಪೋಲಿ = ಸೂರೆಮಾಡುವ, ಅಸಂಬದ್ಧ ; ತೆಲು. ಪೋಲಿ]

ಪೋಲಿ₂ (ನಾ). ಗೋಧಿಹಿಟ್ಟಿನಿಂದ ಮಾಡುವ ಒಂದಂ ಬಗೆಯಂ ಭಕ್ಷ್ಯ: ಫೇಣಿ ಗಾರಿಗೆ ಪೋಲಿ ವಡಿ ಕರಜಿಗಾಯಿ . . . ಮೊದಲಾದ ಬಲು ಸೊಗಸುಳ್ಳ ಪಾಕಂಗಳಂ . . . ದೇವ ನೀನಾರೋಗಿಸ್ಯೆ (ಮುಲ್ಲಕ. ೩-೬). [ಸಂ. ಪೋಲೀ]

ಪೋಲಿಕಾಟಿ 'ಪೋಲಿಗಾಟಿ' ನೋ.

ಪೋಲಿಗಾರ 'ಪೋಲಿಗಾಟಿ' ನೋ.

ಪೋಲಿಗಾಟಿ, ಪೋಲಿಕಾಟಿ, ಪೋಲಿಗಾರ (ನಾ). ಪೋಕರಿ ; ಉಡಾಳ : ಜಾಲಗಾಟಿನ ಕೈಯ ದೀಹದಂತೆ ಬಾಲೆಯರ ಮನದ ಸೋಲುವೆಯಂತ ಇಂತಿವರನಳವಾಡಿ ಸಿಕ್ಕಿಸುವ ಪೋಲಿಗಾಟಿ[ಪಾಠಾಂ. ಪೊಲೆಗಾರ, ಪೊಲ್ಲಗಾರ, ಸೋಲುಗಾಟಿ]ರಿಗಲ್ಲಿಯದೋ ಸತ್ಯ (ಪೋಲೀಪಾ. ೬೩-೨೬೪). ಪೋಲಿಕಾಟಿ : ಕ್ಷಯಕಾರಣವೆಂಬ ಪಟ್ಟಣಕ್ಕೆ ಲಯಕಾರಣವೆಂಬ ಅರಸು ಪೋಲಿಕಾಟಿ ಪ್ರಧಾನ ಮದೋನ್ಮತ್ತ ತಳವಾಟಿ (ಸಂಕಬಂ. ೪. ೬೬೨-೫೨). ಪೋಲಿಗಾರ: ಶೀಲರುತ್ತಮರು ನೀವಹುದು ಪೋಲಿಗಾರರಾವು (ಸರುಸು. ೦೬). [ಪೋಲಿ₁ + – ಕಾಟಿ]

ಪೋಲಿಗ್ಯೆ (ಕ್ರಿ). ನಾಶಮಾಡು ; ವ್ಯರ್ಥಗೊಳಿಸು : ಖೂಳಬಲಿಯು ಬಿಟ್ಟ ಸರಳ ಜಾಲವೆಲ್ಲವಾ ಶೀಲ ನಿರ್ಜರೇಂದ್ರನದನು ಪೋಲಿಗ್ಯೆದನು (ಸರುಸು. ೩೯). [ಪೋಲಿ₁ + ಗ್ಯೆ ( < ಕೆಯ್₁)]

ಪೋಲಿತನ (ನಾ). ೧. ಪೋಕರಿತನ ; ಪುಂಡಾಟಿಕೆ : ದೇವಯ್ಯನ ಪೋಲಿತನಕ್ಕಿಂತ ಇದು ಸಹಸ್ರಪಾಲು ಮೇಲು (ರಂಗವ. ೨೦೬). ೨. ಹೊಣೆಗೇಡಿತನ ; ಜವಾಬ್ದಾರಿಯಿಲ್ಲದಿರುವಿಕೆ : ಅವನ ಪೋಲಿ ತನದಿಂದ ಅದಕ್ಕೆ ಪೋಷಣೆಯೇ ಇರಲಿಲ್ಲ (ಕಂಕಥ. ೦೩೦). [ಪೋಲಿ₁ + – ತನ]

ಪೋಲಿಮೆ 'ಪೋಲ್ಮೆ' ನೋ.

ಪೋಲಿಯೋ (ನಾ). ಮೆದುಳಂಬಳ್ಳಿಯೊಳಗಿನ ಬೂದಂದ್ರವ್ಯದ ಉರಿಯೂತ : ಪೋಲಿಯೋ ತಡೆಗಟ್ಟಲು ಲಸಿಕೆಗಳು ದೊರೆಯುತ್ತಿವೆ (ಕಂಶೋ. ೬). [ಜ ಇದು ಇಂಗ್ಲಿಷಿನ 'Poliomyelitis' ಎಂಬ ಶಬ್ದದ ಸಂಕ್ಷಿಪ್ತರೂಪ ]

ಪೋಲಿಸು, ಹೋಲಿಸಂ (ಕ್ರಿ). ಒಂದರೊಡನೊಂದನ್ನು ತಾಳಿನೋಡಂ,– ತುಲನೆಮಾಡು : ಪೋಲಿಸುವೊಡೆ ಪೋಲಿಸಲ್ಕೆ ದೊರೆ ವೀಣೆಯನಾ ಸುರತ ಪ್ರವೀಣೆಯಂ (ಅಂಪು. ೨-೬೬) ; ಪೆಱರಾರುಮನಾ ಸತಿಯ ಪೆಮ್ಮೆನೊಳ್ ಪೋಲಿಪುದೇ (ಎಕ. II. ೦೬೪-೦೦ ; ಸು. ೨೬೦) ; ಸತ್ಯಾಶ್ರಯದೇವನೆ ಪೃಥ್ವೀ ವಲ್ಲಭಂ ಕಥಾನಾಯಕನಾಗನಿಲಜನೊಳ್ಪೋಲಿಸಿ ಪೇಟ್ದನೀ ಗದಾಯುದ್ಧಮಂ ಮಹಾಕವಿ ರನ್ನಂ (ಗದಾಯು. ೦-೪೦) ; ಸಿರಿಸದ ಬಾಸಿಗಮನೆಂತು ಪೋಲಿಸುವೆಂ ಸುಂದರಿಯ ಮನೋಜನ ಪಾಶದೊಳೆರಡೆರಡೆ ಪರಲ್ಕೆ ಸಾಲ್ದ ಭುಜವಲ್ಲರಿಯಂ (ಮಲ್ಲಪು. ೩-೬೯). ಹೋಲಿಸು : ಆ ಕರಿಯಾಕೃತಿಯು ಸೂಕರನ ಹೋಲಿಸಿದರೆ ಆ ಕರಿಯಾಗಲರಿವುದೆ ಭೂನಾಗನಾಕೃತಿಯನು ವ್ಯಾಳೇಶನ ಹೋಲಿಸಿದರೆ ವ್ಯಾಳೇಶನಾಗಲರಿವುದೆ (ಬಸವ. ೬೦೯); ಹೋಲಿಸು ವಡೊಪ್ಪುವ ಪಸುರ್ವಟ್ಟಾಲವಟ್ಟಂಗಳೊ ಚೆಲುವನಹ ಬಾಳೆಯೆಲೆಗಳೊ (ಬಸಪು. ೨೬-೪೦); ಪಾರ್ಥಿವಜಾತಿಯಲಿ ರಣದಿಟ್ಟರುಂಟೇ ನಿಮ್ಮ ಹೋಲಿಸಲು (ಕುವ್ಯಾದ್ರೋ. ೪-೦೦) ; ಹೋಲಿಸಿ ನುಡಿದೆ ಸುರಪ ಫಲ್ಗುಣರ ಸಮರವಂ (ಕೃಮಿಜಾ. ೦೬-೫೯). [ಪೋಲ್₁ + – ಇಸು₁]

ಪೋಲೀಸ್ 'ಪೋಲೀಸು' ನೋ.

ಪೋಲೀಸು, ಪೋಲೀಸ್ (ನಾ). ೧. ಸಾರ್ವಜನಿಕರಿಗೆ ಸಂಬಂಧ ಪಟ್ಟಂತೆ ಶಾಂತಿಪಾಲನೆ, ರಕ್ಷಣೆಗಳನ್ನು ಕೈಗೊಳ್ಳುವ ಸರ್ಕಾರದ ಒಂದು ಖಾತೆ ; ರಕ್ಷಣಾಇಲಾಖೆ : ಇವನು . . . ಗ್ರಾಮದ ಪೋಲೀಸಿನ ಮೇಲಧಿಕಾರಿಯಾಗಿಯೂ ಇರುವನು (ಗ್ರಾಮಾಕ. ೨) ; ಅಂತೂ ಪೋಲೀಸು ನಗರಕ್ಕೊಂದು ನಯನ (ಬಿನಾಂ. ೩). ಪೋಲೀಸ್ : ೧. ಪೋಲೀಸ್ ಅಧಿಕಾರಿಗಳಿಗೆ ನಾನು ಸಲ್ಲಿಸಿದ್ದ ಪ್ರಪ್ರಥಮ ಸಲಾಂ ಅದು (ನಾಪೋಲೀ. ೨೬). ೨. ರಕ್ಷಣಾಇಲಾಖೆಯಲ್ಲಿ ದುಡಿಯುವವನು ; ಪ್ಯಾದೆ : ನೀನು ಮಾತ್ರ ಪ್ರಾಣ ಹೋಗುವ ಪ್ರಸಂಗ ಬಂದರೂ ಪೋಲೀಸ್ ಮಾತ್ರ ಆಗಬ್ಯಾಡ (ನಾಪೋಲೀ. ೦೬).

ಪೋಲೀಸರು, ಪೋಲೀಸಿನವರು = ರಕ್ಷಣಾಇಲಾಖೆಗೆ ಸೇರಿದವರು : ನನಗೆ ಶಿಕ್ಷೆಯಾಗುವುದು ಖಂಡಿತವೆಂದೇ ಎಲ್ಲ ಪೋಲೀಸರೂ ಅಭಿಪ್ರಾಯ ಪಡುತ್ತಿದ್ದರು (ನಾಪೋಲೀ. ೬೯) ; ಪೋಲೀಸಿನವರು ತಕ್ಷಣ ಅಲ್ಲಿಗೆ ಹೋಗಿ ಕಳ್ಳನನ್ನು ಹಿಡಿಯುತ್ತಾರೆ (ಜೀವಾಕ್ಕ. ೭೦). [← ಇಂ. Police]

ಪೋಲು₁ 'ಪೋಲ್₁' ನೋ.

ಪೋಲು₂, ಹೋಲು₂ (ನಾ). ೧. ಅಪವ್ಯಯ ; ದುಂದುವೆಚ್ಚ: ಜನಕ್ಕೆ ದೇಶಭಾಷೆಯಲ್ಲಿ ಅಭ್ಯಾಸ ನಡೆಯದ ಅಸಹಜತೆ ಪೋಲುಗಳನ್ನು ಪ್ರಧಾನ ವಾಗಿಯೂ ಆನುಷಂಗಿಕವಾಗಿಯೂ ಠಾಕೂರರು ಕಾಣಿಸಿದ್ದಾರೆ (ಬಿಅಂರ. I, XII ಮುನ್ನುಡಿ). ೨. ನಾಶ ; ಹಾಳಂ : ನಾಲ್ವತ್ತುಎಂಟುಯೋಜನದ ಗ್ರಾಮ ಪೋಲಿನ್ನು ಕೇಳು ನಿಸ್ಸೀಮ ಮೇಲೆ ನೀ ಗಳಿಸಿರ್ದ ಹೇಮ ಮುಂದೆ ಪಾಲಿಸುವರಿಲ್ಲ ಕಲಿಭೀಮ (ಕರಂ. ೪೫೩-೪) ; ಪೋಲು ಆದ ವಸ್ತು ಹಾಲಿನ ಹಾಗಿದ್ದರೇನು ? (ಗಾದೆ). ಹೋಲು₂: ೩. ವ್ಯರ್ಥವಾದುದು ; ಉಪ ಯೋಗವಿಲ್ಲದುದು ; ಪೊಳ್ಳು: ಕೋಲ ಬಲುಹುಂಟಾಗೆ ನಾಲಗೆ ಹೋಲ ನುಡಿಯದು [ಪಾಠಾಂ. ಹೋಲುಬುಜುವುದು, ಹೋಲ ನುಡಿವುದು, ಹೊಲ್ಲ ದೇನಿದು] ಖೂಳ ಕಟಕಿಯ ಮಾತು ಬೇಡಂಬಿನಲಿ ಮಾತಾಡು (ಕುವ್ಯಾ. ೪. ೪-೩೦).

ಪೋಲಾಗು = ೧. ಅಪವ್ಯಯವಾಗು ; ದುಂದುವೆಚ್ಚವಾಗಂ : ರಾಜ್ಯಕೋಶದ ಅಪಾರದ್ರವ್ಯ ಜೋಗಿ ಜಂಗಮರನ್ನು ಮೇಯಿಸುವುದಕ್ಕಾಗಿ ಪೋಲಾಗುತ್ತಿದೆ (ಕುಂಗಳ. ೦೬) ; ಸೊಸೈಟಿಯ ಹಣ ಪೋಲಾದ ಬಗ್ಗೆ

ಡ್ಯೆರಕ್ಟರುಗಳಲ್ಲಿ ಕೆಲವರು ಬಿರುಸಾಗಿ ಚರ್ಚಿಸಿದರು (ಶುಶೀ. ೦೬೦). ೨. ವ್ಯರ್ಥವಾಗು ; ನಿರರ್ಥಕವಾಗು : ಸರಣಾಯಾತರ್ಕ್ಕಳಂ ತಾಳ್ದಿ × × ಧಾತ್ರಿಯುಮನ್ಯನ್ಯಪಾಚಾರಕ್ಕೆ ಪೋಲಾಗೆ ವಿಸ್ತರದಿಂ ಪಾಳಿಸೆ ಕೀರ್ತ್ತಿಯುಂ ಭುವನದೊಳು ಪ್ರಕಾಶನಂ ಮಾಡಿದಂ (ಶಾಇಶಾ. XI-i, ೯೬-೦೬ ; 1062) ; ಬಾಲೆ ನೀನಾರೆಂದ ನಾನೀಗ ಕೇಳ್ವಾತನೊಳಗದವಳೆಂದಳವಳು ಪೋಲಾದ ಮಾತು ನೀನೀಗ ಕೇಳ್ವನ ಪ್ರಾಣಪಾಲಕಿಯಲ್ಲವೆಯೆಂದಾ (ಶರಶ. ೪೨-೪೦); ಉದಾತ್ತವಾದ ಕಾವ್ಯಗುಣಗಳನ್ನು ಅರಿತು ಮೆಚ್ಚಿಕೊಂಡಿರುವ ನನಗೆ ಅವು ಎಲ್ಲಿ ಪೋಲಾಗಿಬಿಡುತ್ತವೆಯೋ ಎಂಬ ಹೆದರಿಕೆ ತುಂಬಿದೆ (ಅನುಶ. ೦೯೯). **ಪೋಲುಮಾಡು** = ೧. ಅಪವ್ಯಯಮಾಡು ; ದುಂದುವೆಚ್ಚಮಾಡು : ಕಿಸೆಯ ಚಿಲ್ಲರೆಯನು ಪೋಲುಮಾಡುವುದಕೆ ಯಾರಿಗಾದರೂ ಗುರು ಬೇಕೆ (ಇಂಚಾಕ. ೨೩೨-೯೬). ೨. ವ್ಯರ್ಥವಾಗಿಸು ; ನಿರರ್ಥಕಗೊಳಿಸು ; ಹಾಳು ಮಾಡು : ಒಡವೇಲಿ ಅರ್ಧಾನ ಇವರು ಅರಮನೇಲಿ ಇಟ್ಕೊಂಡಿದ್ದಾರೆ . . . ನಮ್ಮ ಅರಮನೆಗೆ ಬರಬೇಕು ಅಂದರೆ ನಾವು ಪೋಲು ಮಾಡತೇವನ್ನ ಕಾರೆ (ಶಕಣ. ೨೩೬) ; ಸಂಸಾರ ನಡೆಸುವುದರಲ್ಲಿ ನೀವು ಯಾವಾಗಲೂ ಹಿಡಿತ. ಒಂದು ಅಕ್ಕಿಕಾಳು ಪೋಲು ಮಾಡುವುದಿಲ್ಲ (ಮಹಾಗ. ೦೪೨).

**ಪೋಲುಗ** (ನಾ). ದುಂದುವೆಚ್ಚ ಮಾಡುವವನು ; ದುಂದುಗಾರ : ಆನು ಭಕ್ತನಲ್ಲಯ್ಯಾ ಆನು ವೇಷಧಾರಿಯಯ್ಯಾ ಕಾಟುಗ ಕೆತ್ತುಗ ಪೋಲುಗ[ಪಾಠಾಂ. ಹುಲ್ಲುಗ, ಪೊಲ್ಲುಗ]ನೆಂಬುದು ಎನ್ನ ಹೆಸರು (ಬಸವ. ೩೩೫).

[ಪೋಲು$_2$ + — ಗ$_2$]

**ಪೋಲುಮೆ** 'ಪೋಲ್ಮೆ' ನೋ.

**ಪೋಲೋ** (ನಾ). (ಪೂರ್ವದೇಶಗಳಲ್ಲಿ ಮೊದಲು ಬಳಕೆಗೆ ಬಂದ) ಕುದುರೆಯ ಮೇಲೆ ಸವಾರಿ ಮಾಡುತ್ತಾ ಆಡುವ, 'ಹಾಕಿ' ಆಟದಂಥ ಒಂದು ಬಗೆಯ ಚೆಂಡಿನ ಆಟ : ಬ್ರಿಟನಿನ ತರುಣರು, ಮುದುಕರು ದೋಣಿಯ ಓಟ, ಪೋಲೋ . . . ರಗ್ಬಿ ಮೊದಲಾದ ಹಲವು ಆಟ ಪಂದ್ಯಾಟಗಳಲ್ಲಿ ಮುಂದೊತ್ತಿ ಹೋಗಿರುವರು (ಜಾಶ್ರ. II. ೦೦೯೪). [← ಇಂ. Polo]

**ಪೋಲ್ಕ** 'ಪೋಲಕ' ನೋ.

**ಪೋಲ್ಕೆ** (ನಾ). ಸಾದೃಶ್ಯ ; ಸಾಮ್ಯ : ಶೀರ್ಣನಾಳಿಕೇರಪರ್ಣಂಗಳೊಳು ಅಮರ್ಕೆಯುಂ ಪೋಲ್ಕೆಯುಂ ಒಲ್ವಂ ಚೆಲ್ವುಮಾಗೆ ಗೊಜ್ಜಗೆಯ ಮುಗುಳ ಗೆಜ್ಜೆಯುಮಂ . . . ಮನೋಹರಮೆನೆ ಸಮೆದು ತಮತಮಗೆ ವಸದನಂಗೊಂಡು (ಚಂದ್ರಪು. ೬-೦೦೩ ವ) ; ಬಿದಿರಂ ಕರ್ಬಿನ ಪೋಲ್ಕೆಗೆಂದು ಸವಿವಂತಾಯ್ತೆನ್ನ ಪುಣ್ಯೋದಯಂ (ಕಾವ್ಯಸಾ. ೫೭೬). 'ಹೋಲಿಕೆ$_1$' ಪರಾ. [ಪೋಲ್$_1$ + — ಕೆ. / ತೆಲು. ಪೋಲಿಕ, ಪೋಲಿಕೆ, ಪೋಲ್ಕಿ]

**ಪೋಲ್ಕೆಗೊಳ್** (ಕ್ರಿ). ಸಾದೃಶ್ಯವನ್ನು ಹೊಂದು : ಧರಿಸಿ ಕನಕಾಂಬರಮನಾ ವರವಧೂವಾಮೂಲಶಿಖರಪರಿಪುಲ್ಲಸುಮೋತ್ಕರದಿಂದೆ ಪುದಿದ ನವ ಕೇಸರಲತೆಯಂ ಪೋಲ್ಕೆಗೊಂಡದೇನೊಪ್ಪಿದಳೊ (ಮಹಾಕ. ೫-೬೩).

[ಪೋಲ್ಕೆ + ಕೊಳ್$_1$]

**ಪೋಲ್ಟೀಸು**, ಪೋಟಲೀಸು, ಪೋಟ್ಲೀಸಂ (ನಾ). "ಮೆತ್ತಂರೊಟ್ಟಿ, ಸೀಮೆಯುಗಸೆ, ಹಿಟ್ಟು, ಮೊ.ನ್ನು ಸಾ. ಕುದಿಯುವ ನೀರಿನಲ್ಲಿ ಹಾಕಿ ಮೆತ್ತು ಮಾಡಿ ಮಸ್ಲಿನ್ ಬಟ್ಟೆ, ಮೊ.ಗಳ ಮೇಲೆ ಹರಡಿ ಹುಣ್ಣು ಅಥವಾ ಉರಿಯೂತದ ಮೇಲಿಟ್ಟು ಕಟ್ಟುವಂಥದು" (Poultice. ಇಂಕಶ) : ಹೊಟ್ಟೆಗೆ ಪೋಲ್ಟೀಸು ಕಟ್ಟಿಸಿಕೊಂಡು ರಾಮು ಹಾಸಿಗೆಯ ಮೇಲೆ ಮಲಗಿದ್ದ (ಸಾಂಶ. ೨೬). **ಪೋಟಲೀಸು** : ಅವನಿಗೆ . . . ಕಟ್ಟುವುದಕ್ಕೆ ಪೋಟಲೀಸು ಬೇಯಿಸಿ, ನನ್ನ ಕೈಗೆ ಆಗಿರುವ ಗತಿ ನೋಡು (ಕಲ್ಲಕಾ. ೪೪). **ಪೋಟ್ಲೀಸು** : ಹುಣ್ಣಾದ ಕಾಲಿಗೆ ಜೇಡಿಮಣ್ಣನ್ನಾಗಲೀ ಅಥವಾ ರಾಗಿಹಿಟ್ಟಿನ ಪೋಟ್ಲೀಸನ್ನಾಗಲೀ ೪-೫ ದಿವಸಗಳು ಕಟ್ಟಿದರೆ ನೋವು ಕಡಿಮೆಯಾಗುವುದು (ಗ್ರಾಮಕ. ೦೯೩).

[← ಇಂ. Poultice]

**ಪೋಲ್ಮೆ**, ಪೋಲಿಮೆ, ಪೋಲುಮೆ (ನಾ). ೧. ಸಾದೃಶ್ಯ ; ಸಾಮ್ಯ : ರಾಹು ರವಿಯಂ ತುಡುಕುವಂತದರ ಪೋಲ್ಮೆಯಿಂದರಸ ನಿನ್ನಂ ಪಿಡಿವೆಂ (ತುರಂಗ. ೯೯-೧೪). **ಪೋಲಿಮೆ** : ೨. ಒಪ್ಪವಾದುದು ; ಚೊಕ್ಕಟವಾದುದು : ಸಾರಸ್ವತರ . . . ಉಡಿಗೆಗಳು ಶೇಣವೀಜನರಿಗಿಂತ ಪೋಲಿಮೆಯಾಗಿರುತ್ತವೆ (ಕಲಾಗ. ೬೬). **ಪೋಲುಮೆ** : ೧. ಅವುದು ಪೋಲುಮೆಯು ಕೊಡಲ್ಪಡುತ್ತದೆಯೊ ಅದು ಉಪಮಾನಂ (ಕುವಂ. ೬). 'ಪೋಲ್ವೆ' ಪರಾ. [ಪೋಲ್$_1$ + — ಮೆ$_1$. / ತಮಿ. ಪೋಲಿಮ್ಮೈ]

**ಪೋಲ್ವೆ**, ಹೋಲುವೆ, ಹೋಲ್ವೆ (ನಾ). ೧. ಸಾಮ್ಯ ; ಸಾದೃಶ್ಯ ; ಹೋಲಿಕೆ : "ಪಾಟ ಪೋಲ್ವೆ . . . ಸಾಟಿ ಪಾಸಟಿಯೆನಲ್ಕೆ ಪತ್ತುಗುಂ' (ಕಶಾಗಾ. ೦೪) ; ತದ್ವಿದೇಹಜನತಾಸ್ವಾಂತಾರ್ಪಿತೋದ್ಯತ್ಪವೋದೆಯ ಸೀತೋದೆಯ ಪೋಲ್ವೆಗಿಲ್ಲ ತೊಡಿಗೆಗಳ್ ವಿಶ್ವಂಭರಾಭಾಗದೊಳ್ (ಅಂಕ. ೦-೩೪) ; ಮುತ್ತಿನ ತೋರಣಂ ಗಜದ ನೆತ್ತಿಯ ಮುತ್ತುಗಳೆಲ್ಲ ಪಲ್ಗಳೊಳ್ ಪತ್ತಿದ ಪೋಲ್ವೆಯಂ ಪಡೆವ ಗೋಪುರಪಂಚಕಮಾಸ್ಯಮಾಗೆ (ಅರ್ಜಿವ. ೦-೬೬) ; ನಿನ್ನೊಂದು ಪೆಸರ ಪೋಲ್ವೆಯೊಳೆಂದಜಾಮಿಳಂ ತನ್ನ ಪಾತಕಕೋಟಿಯಂ ಪರಿಹರಿಸಿಕೊಂಡಂ (ಕೃಷಿಚಾ. ೦೩-೬೭). ೨. ಸೊಗಸು; ಸೌಂದರ್ಯ : "ಸೊಗಸುಮುಲುಂಪುಂ ವಿಭವಮುಮೊಗೆಗುಂ ತಾವಂದಚಂದಮೆನೆ ಪೋಲ್ವೆಯೊಳಂ" (ಕರಿಕಂ. ೦೬೪). ೩. ಸ್ವರೂಪ ; ಆಕಾರ : ಅಯ್ದು ಮಂತ್ರಾಕ್ಷರಂಗಳನಾಹ್ವಾನಂಗೆಯ್ದು ನಿನ್ನ ಬಗೆಗೆ ಬಂದ ಪೋಲ್ವೆಯ ಮಕ್ಕಳಂ ಪಡೆವೆಯೆಂದು ಬೆಸಸಿದೊಡೆ (ಕಂಪಕಾ. ೦-೮೪ ವ). **ಹೋಲುವೆ**: ೧. ಕೃತಾಂತನ ಹೋಲುವೆಯ ಹೊಸಬಿಗನು ಹೊಕ್ಕನು ಭೀಮನುರವಣೆ (ಕುಮ್ಯಾಭ್ಯೋ. ೨-೬೪); ವಜ್ರಮಾಣಿಕ್ಯದ ಹೋಲುವೆಯ ದಂತಪಂಕ್ತಿಯ . . . ಪೆಣ್ಣಗೊಪ್ಪಿದರು ನವರತ್ನಮಾಲೆಗಳ ಪಾಂಗಿನಿಂದ (ಜಾವಕ. ೫-೨೯); ಗಡ್ಡವಿರಲಿಲ್ಲ, ಗೆರೆಹೋಲುವೆಯ ಮಿಸೆಯಿತ್ತು (ತ್ರಿಪರು. ೦೬೪). **ಹೋಲ್ವೆ** : ೧. ರಕ್ಕಸನು . . . ಎಲವೊ ಗೌರಿಜ ಜನಿಸಿದೀವರಗೆ ಹೊಕ್ಕೆ ಸಮರವ ನಿನಗೆ ಕಾಣಿಕೆ ಚಕ್ಕುಲಿಗಳಲ್ಲದರ ಹೋ[ಹೋ]ಲ್ವೆಯ ಚಕ್ರಮಿದೆ ನೋಡಿದರ ಸವಿಯನನುತ್ತ ತೆಗೆದೆಚ್ಚ (ಅಂಚಿಕಾ. ೨೬-೩೩). 'ಪೋಲ್ಮೆ' ಪರಾ. [ಪೋಲ್$_1$ + — ವೆ]

**ಪೋಲ್ವೆವಡೆ** (ಕ್ರಿ). ಸಾದೃಶ್ಯವನ್ನು ಪಡೆ ; ಸಾಟಿಯಾಗು : ಖರಕರಬಿಂಬದಿಂ ಕಿರಣಸಂತತಿಗಳ್ ಪೊಜಪೊಣ್ಮೆದವ್ಯೊಂಬರ ನುಡಿ ಪೋಲ್ವೆ[ಪಾಠಾಂ. ಲ್ಕೆ]ವೆತ್ತುದೆನೆ ಬಾಣಧಿಯಿಂದಿರದುರ್ಚಿಕೊಂಡು ವಿಸ್ಫುರಿತ ಶರಂಗಳೆಂಟನವಟಿಗೊಳ್ ಪೊಳೆವಯ್ದುಶರಂಗಳಂ ಸುರುಳ್ದುರುಳ್ವಿನಮೆಚ್ಚ (ಕಂಪಕಾ. ೦೨-೬೩).

[ಪೋಲ್ವೆ + ಪಡು$_1$]

**ಪೋವಣಿಕೆ** 'ಪವಣಿಕೆ' ನೋ.

**ಪೋವಿಡು** (ಕ್ರಿ). ಹೋಗಲು ಬಿಡು : ಅರಿಗಳ್ಗಳುಮಾಗದ ಮುನ್ನಮೆ ಕಟ್ಟಿದ ಹಯಮುಮಂ ಪೋವಿಟ್ಟು ಮನೆಗೆ ಪೋಪಂ (ರಾಮಾಶ್ವ. ೦೩೩-೬).

[ಪೋ$_1$ + ಬಿಡು$_1$]

**ಪೋಶಳ** 'ಪೊಯ್ಸಳ' ನೋ.

Δ**ಪೋಶಟ** 'ಪೊಯ್ಸಳ' ನೋ.

**ಪೋಷ$_1$** 'ಪುಸ್ಯ' ನೋ.

**ಪೋಷ$_2$** (ನಾ). ೧. ಪರಿಪೋಷಣೆ ; ಸಾಕುವುದು. ೨. ಬೆಳವಣಿಗೆ ಅಭಿವೃದ್ಧಿ. [ಸಂ.]

**ಪೋಷಕ** (ಗು). ೧. ಸಲಹುವ ; ಕಾಪಾಡುವ : ಈ ಪ್ರಕಾಶನಕೆ ದೊರೆಯಬಹುದಾದ ವಾರ್ಷಿಕ, ಪ್ರೇರಕ, ಪೋಷಕ ಸದಸ್ಯರ ಸಹಾಯವೆ ಕರಾವಲಂಬನ (ಸಂಕೋಶ. VI, ೪೦೬); ಕುಂಬಾರ ಕಮ್ಮಾರ ಕಾಯಕಗಳ

ಪೋಷಕ ದೈವತ ಅಭಿಮಾನಿದೇವತೆ 'ಪ್ರಮಿಥಿಯಸ್' ಅನ್ನು ಸ್ಥಳೀಯ ಅಧೀನಿಯರು ಹಿಂದಿನಿಂದ ಪೂಜಿಸುತ್ತಿದ್ದರು (ಬಿದ್ವಕ್ರ. I. ೩೬೦೪). (ನಾ). ೨. ಪೂರಕವಾದುದು; ಪಾಲನೆ ಮಾಡುವಂಥದು : ಅವನ ಸಂದೇಶ ಆರ್ಯಸಂಸ್ಕೃತಿಯ ಪೋಷಕ ಎಂಬುದು ಇತಿಹಾಸಕಾರರ ಬಹು ಮತ (ಹುಣ್ಣಾರ. ೧೦೩ ೩೬೦೪); ಈ ಮೂರು ಜಾತಿಯ ದ್ರವ್ಯಗಳನ್ನು ರಾಮಾನುಜಗೀತಾಭಾಷ್ಯದಲ್ಲಿ ಧಾರಕ, ಪೋಷಕ, ಭೋಗ್ಯಕ ಎಂದು ಕರೆದಿದೆ (ಶಾರದ. ೩೩೩). ೩. ರಕ್ಷಿಸುವವನು; ಕಾಪಾಡುವವನು : "ಭರ್ತಾ–ಪೋಷಕಂ" (ಶಾಶಕ್ಯ. ೦೬೯); ಈ ಅಂಶವನ್ನು ಶಿಕ್ಷಣಚಿತಂರರು ಪ್ರತಿಪಾದಿಸಿದಂತೆಲ್ಲ ಪೋಷಕರಲ್ಲೂ ಆ ಬಗ್ಗೆ ಆಸಕ್ತಿ ಹೆಚ್ಚುತ್ತಿದೆ (ಶಿಕ್ಷದ. ೦೬೪). ೪. ಬೆಳೆಸುವವನು; ವೃದ್ಧಿಗೊಳಿಸುವವನು. [ಸಂ.]

**ಪೋಷಕಿ** (ನಾ). ಸಲಹುವವಳು; ಪಾಲನೆ ಮಾಡುವವಳು : ಅವಳ ಅಜ್ಜಿಯೇ ಅವಳ ಪೋಷಕಿಯಾಗಿದ್ದಳು (ಕ್ರಿಶಾಕ. ೧೦೦).

[ ಪೋಷಕ + –ಇ ]

**ಪೋಷಣ** (ನಾ). ೧. ರಕ್ಷಣೆ; ಪಾಲನೆ : "ತುಷ, ಹೃಷ–ಪುಷ್ಟೌ, ಪೋಷಣದೊಳ್" (ಶಾಶಕ್ಯ. ೦೯೪); ಇಷ್ಟರ ವಿಶಿಷ್ಟರ ತೋಷಣ ಪೋಷಣಂಗಳೊಳ್ಪು ಗರಮೆನ್ನು ಬಣ್ಣಿ(ಣಿ)ಸುವುದೀ ಧರೆ ಪಂಡಿತಪಾರಿಜಾತನಂ ನಾಗನಂ (ಎಇ. XXI. ೦೩-೩೩; 1260). ೨. ವಿಸ್ತಾರ; ವ್ಯಾಪ್ತಿ : ಸಂಗೀತದ ಸಾಧನ, ನಿರೂಪಣ, ಪೋಷಣ ಮುಂಗಿಲಾಗಿ ಅಭಿರುಚಿ ಮತ್ತು ಪ್ರವೃತ್ತಿಗಳಲ್ಲಿ ಆಗಿರುವ ಬದಲಾವಣೆಗಳು ಗಮನಾರ್ಹ (ಶಾರದ. ೩೪೩). [ಸಂ.]

**ಪೋಷಣೆ** (ನಾ). ರಕ್ಷಣೆ; ಪೋಷಿಸುವಿಕೆ : ಸರಿಯಾದ ಪೋಷಣೆಗೆ ಬೇಕಾದ ಮುಖ್ಯ ವಸ್ತುಗಳು ಜೀವಸತ್ತ್ವಗಳು (ಕಂಕೋ. XI. ೨೩೮).[ಸಂ. ಪೋಷಣ]

**ಪೋಷಾಕ** 'ಪೋಷಾಕು' ನೋ.

**ಪೋಷಾಕು, ಪೋಷಾಕ** (ನಾ). ಉಡುಪು; ಉಡುಗೆ; ತೊಡುಗೆ : ಸ್ವಯಂಸೇವಕನ ಪೋಷಾಕಿನಲ್ಲಿಯೇ ಇರುವುದರಿಂದ ಇವರ ಬಟ್ಟೆಬರೆಗಳಿಗೆ ಹೆಚ್ಚು ವೆಚ್ಚವಿಲ್ಲ (ಸಿಪಾಹ. ೯೬); ಅವರು ಪೋಷಾಕನ್ನು ಗುರುತಿಸುತ್ತಾರೆ, ಮನುಷ್ಯರನ್ನು ಗುರುತಿಸುವುದಿಲ್ಲ (ಶಿಬಂಧ. II. ೨೬೨). **ಪೋಷಾಕ** : ಆತನು ತನ್ನ ಸೂಪರಿಂಟೆಂಡೆಂಟ ಪದವಿಯ ಪೋಷಾಕವನ್ನೇ ಧರಿಸಿದ್ದನೆಂದು ಬೇರೆ ಹೇಳಬೇಕಾದ್ದಿಲ್ಲ (ಶಿಧಿಕ್ಕ. ೯೩).

[← ಪಾರ. ಹಿಂ. ಪೋಶಾಕ್; ಮರಾ. ಪೋಷಾಕ್, ಪೋಷಾಖ್, ಪೋಷಾಗ್, ಪೋಶಾಕ್, ಪೋಶಾಖ್, ಪೋಶಾಗ್]

**ಪೋಷಿತ** (ಗು). ೧. ಸಲಹಿದ; ಕಾಪಾಡಿದ. ೨. ಬೆಳೆಸಿದ; ವೃದ್ಧಿಪಡಿಸಿದ. [ಸಂ.]

**ಪೋಷಿಸು** (ಕ್ರಿ). ೧. ಸಲಹು; ಕಾಪಾಡು; ಸಾಕು : ಭಾವಶಿವದೇವಕ್ಕರ್ಗಳಿಯ ಮಾಣಿಯಂ ಕೈಕೊಣ್ಡು ಪೋಷಿಸಿ (ಸೌಇಇ. XI—I, ೬೪-೦೬; 1028); ವಿಷವಿಕ್ಕಿದವಗೆ ಷಡ್ರಸವನುಣಿಸಲುಬೇಕು ದ್ವೇಷ ಮಾಡಿದವನ ಪೋಷಿಸಲು ಬೇಕು (ಪುರಂದ. ೨-೬೩-೦); ಗಿಳಿಯ ಮರಿಯನು ತಂದು ಪಂಜರದೊಳಗೆ ಪೋಷಿಸಿ ಕಲಿಸಿ ಮೃದುನುಡಿಗಳನು ಲಾಲಿಸಿ ಕೇಳ್ವ ಪರಿಣತರಂತೆ (ಹಂಶಾ. ೨೦). ೨. ಪುಷ್ಟೀಕರಿಸು; ಸಮರ್ಥನೆ ಮಾಡು : ಜಗತ್ತಿನ ಇನ್ನೂ ಇತರೆ ಒಂದೆರಡು ಭಾಷೆಗಳಲ್ಲಿ ಈ ಪರಿವರ್ತನೆಯನ್ನು ಪೋಷಿಸುವ ಆಧಾರಗಳು ಇವೆ (ಭ್ರಾಶಿಶಿ. ೩೩೩); ಒಂದೊಂದು ಸಂಪ್ರದಾಯದವರೂ ವೇದ ಪುರಾಣಗಳಿಗೆ ತಮ್ಮ ತಮ್ಮ ಧರ್ಮಕ್ಕೆ ಅನುಕೂಲವಾಗುವಂತೆ ವ್ಯಾಖ್ಯಾನ ಮಾಡಿ ತಮ್ಮ ತಮ್ಮ ವಾದಗಳನ್ನು ಪೋಷಿಸಿಕೊಂಡಿದ್ದಾರೆ (ಶಾರದ. ೨೩೪). ೩. ಅಭಿವೃದ್ಧಿ ಮಾಡು; ಬೆಳೆಸು : ಮೂಳರಂ ಪಾಳಿಸಿಯುಂ ಕೋಶಮಂ ಪೋಷಿಸಿಯುಂ ಇಂತು ಸಾಮ್ರಾಜ್ಯಮಂ ನಿಷ್ಕಂಟಕಮುಂ ನಿರಾತಂಕಮುಮಂ ನಿಜಾಯತ್ತಮುಮೆನಿಸಿದಂ (ಚಂದ್ರಪು. ೨-೬೦); ಕಾವ್ಯದಲ್ಲಿ ವರ್ಣನೆ ಯಾವ ರೀತಿಯಲ್ಲಿ ಬಂದರೆ ತನ್ನ ಸೊಗಸನ್ನೂ ಕಾವ್ಯದ ಸೊಗಸನ್ನೂ ಒಟ್ಟಿಗೆ ಪೋಷಿಸುವುದೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ (ಸಮಾಲೋ. ೧೦೨). [ಪೋಷಣ + – ಇಸು]

**ಪೋಷ್ಯ** (ಗು). ೧. ಪಾಲಿಸಬೇಕಾದ; ಸಲಹಬೇಕಾದ; ಸಾಕಲು ಅರ್ಹವಾದ : 'ಪೋಷ್ಯವರ್ಗ' ಪರಾ. (ನಾ). ೨. ಪಾಲಿಸುವಿಕೆ; ಪೋಷಣೆ : "ಪೌಷಣಂ . . . ಪೋಷ್ಯಂ, ಪೌಷ್ಯಂ, ಪೋಷಿತವ್ಯಂ — ಈ ೭ ಪೊರೆತಂ" (ಶಾಶಕ್ಯ. ೦೯೬). [ಸಂ.]

**ಪೋಷ್ಯವರ್ಗ** (ನಾ). ರಕ್ಷಿಸಬೇಕಾದ ಬಂಧುಜನರು; ಆ ತಾಯಿ, ತಂದೆ, ಗುರು, ಪತ್ನಿ, ಆಶ್ರಯದಲ್ಲಿರುವವನು, ಮಕ್ಕಳು, ಅಭ್ಯಾಗತ, ಅತಿಥಿ ಮತ್ತು ಅಗ್ನಿ—ಈ ಒಂಬತ್ತು ಜನ ಪೋಷ್ಯವರ್ಗಕ್ಕೆ ಸೇರಿದವರು. ಇಲ್ಲಿಯ ಹೆಸರುಗಳು ಮತ್ತು ಸಂಖ್ಯೆಗಳ ಬಗ್ಗೆ ಭಿನ್ನಾಭಿಪ್ರಾಯಗಳಿವೆ : ಕಡಲ ತಡಿಯೆಯ್ದೆ ನೆಲನಂ ಪಡೆದರ್ ಭವದೀಯ ಪುತ್ರರುಳ್ಳಳವಿಗಳೊಳ್ ಪಡೆದುದು ಬಂಧುಜನಂ ನಿಮ್ಮಡಿಗಾವೇಂ ಪೋಷ್ಯವರ್ಗದಿಂದಂ ಪೊಱಗೇ (ಆದಿಪು. ೯-೯೮); ಹೀಗೆಂದರವರ ಪೋಷ್ಯವರ್ಗಕ್ಕೂ ಬಂಧುವರ್ಗಕ್ಕೂ ಸೇರಿದ ಜನರು ಹೊರತು ಉಳಿದ ಇಲಾಖೆಗಳ ನೌಕರರು ೯೬೮೭ ಮಂದಿ ಇದ್ದರು (ಮಹಾಪಂ. II. ೦೬೬).

[ಸಂ.]

**ಪೋಸ, ಪಾಸ₂, ಹೋಸ, ಹೌಸ₁** (ನಾ). [ಜೈನ]ಕತ್ತಲೆಯಾಗುವುದಕ್ಕೆ ಮೊದಲು ಆಹಾರ ಸ್ವೀಕಾರ ಮಾಡುವ ವ್ರತ, — ನಿಯಮ : ಅಚ್ಚುತ. . . ಅವರ ಮನೆಗೆ ಊಟಕ್ಕೆ ಹೋದ. ನಾಗರಾಜನಿಗೆ 'ಪೋಸ' ವಲ್ಲವೇ ! (ಮುಗಿಯು. ೯೦). **ಪಾಸ₂** : ನಾವು ಜೈನರು. ಕತ್ತಲೆಗೆ ಮುಂಚೆ ಊಟ; ನಾವು ಪಾಸದವರು (ಕಗುಳ. ೩೬). **ಹೋಸ** : ಸ್ಥೂಳಸೂಕ್ಷ್ಮಂಗಳಪ್ಪ ಪ್ರಾಣಿಗಳು ರಾತ್ರಿಯೊಳನ್ನಪಾನಾದಿಗಳಂ ಪೊರ್ದಿದೊಡೆ ಪಿಂಗಿಸಲ್ಬಾರದಪ್ಪುದರಿಂದನ್ನಪಾನಖಾದ್ಯಲೇಹ್ಯಂಗಳಪ್ಪ ಚತುರ್ವಿಧಾಹಾರಮಂ ರಾತ್ರಿಯೊಳು ನವಶುದ್ಧಿಯಿಂ ಪರಿಹರಿಸುವುದು ಹೋಸಮೆಂಬಾಚಿನೆಯಣು ವ್ರತಮಕ್ಕುಂ (ಕಣ್ಣಾರ. ೩೦೬); ಉತ್ತಮಗೋಷ್ಠಿಯೊಳಿರುತಿರೆ ಹೋಸದ ಹೊತ್ತಾಗಲೂಟವಾಯ್ತೊಡನೆ (ಕರಣ. ೩೬-೯೦); ಶರಧಿಗೆ ರವಿ ಸಾರುತಿರೆ ಕಂಡು ಹೋಸಕೆ ಸರಸಿಜಮುಖಿ ಪೋಪೆನೆನಲು (ಜನರಾ. ೪-೬೦). **ಹೌಸ₁** : ತಾಂ ಹೌಸಕ್ಕೆ ಬೇಗೆಳ್ದು ವರಮನೆಯು ಪುಗಲಿತ್ತ ಸೂರ್ಯಂ. . . ಪಶ್ಚಿಮಾಂಬುಧಿಯು ಸಾರಿದಂ (ಶ್ರಭುಪು. ೯-೦೩೪).

[←ತುಳು. ಪೋಸ = ಸೂರ್ಯಾಸ್ತ, ಸಂಜೆ ; ಪೋಸದಾಯೆ = ಸೂರ್ಯಾಸ್ತಕ್ಕೆ ಮೊದಲು ಆಹಾರವನ್ನು ಸ್ವೀಕರಿಸುವ ವ್ರತ]

**ಪೋಸಳ** 'ಪೊಯ್ಸಳ' ನೋ.

Δ**ಪೋಸಟಿ** 'ಪೊಯ್ಸಳ' ನೋ.

**ಪೋಸ್ಟ್** 'ಪೋಸ್ಟು' ನೋ.

**ಪೋಸ್ಟು, ಪೋಸ್ಟ್** (ನಾ). ೧. ಅಂಚೆವ್ಯವಹಾರವನ್ನು ನಡೆಸುವ ಕಚೇರಿ; ಟಪಾಲುಕಚೇರಿ : ಕಾಗದಗಳನ್ನು ತಂದು ಹಂಚುವುದು ಪೋಸ್ಟಿನ ಕೆಲಸ (ಜೀವಾಕ್ಯ. ೬೦). ೨. ಅಂಚೆಯ ಮೂಲಕ ಬಂದಿರುವ ಅಥವಾ ಕಳುಹಿಸಲಿರುವ ಪತ್ರ ಮುಂತಾದುವು; ಟಪಾಲು : ಆ ದಿನ ಪೋಸ್ಟಿನಲ್ಲಿ ವಾಚೊಂದು ನನಗೆ ಧರ್ಮಾರ್ಥವಾಗಿ ಪಾರ್ಸಲ್ ಆಗಿ ಬಂದಿತ್ತು (ಮುಂಗಾಮು. ೦೪). **ಪೋಸ್ಟ್** : ೨. ಅಂಚೆಯವನು 'ಪೋಸ್ಟ್' ಎಂದ ಕೂಡಲೇ ಬಾಗಿಲಿನ ಕಡೆಗೆ ಓಡಿದೆ (ರೂಢಿ).

**ಪೋಸ್ಟ್‌ಕಾರ್ಡ್**=(ಅಂಚೆಯ ಮೂಲಕ ರವಾನಿಸುವ, ಗೊತ್ತಾದ ಅಳತೆಯ) ರಟ್ಟುಕಾಗದ : ಪೋಸ್ಟ್‌ಕಾರ್ಡನ್ನು ಮರೆಯದಂತೆ ಟಪಾಲಿಗೆ ಹಾಕು (ರೂಢಿ). **ಪೋಸ್ಟ್‌ಬಾಕ್ಸ್**=ಅಂಚೆಯನ್ನು ಹಾಕುವ ಡಬ್ಬಿ; ಟಪಾಲುಪೆಟ್ಟಿಗೆ : ಪೋಸ್ಟ್‌ಮ್ಯಾನ್ ಬಂದು ಪೋಸ್ಟ್‌ಬಾಕ್ಸಿನಲ್ಲಿದ್ದ ಕಾಗದಗಳನ್ನೆಲ್ಲಾ ತೆಗೆದುಕೊಂಡು ಹೊರಟನು (ರೂಢಿ). **ಪೋಸ್ಟ್**

ಮಾಸ್ಟರು — ಅಂಚೆಕಚೇರಿಯ ಯಜಮಾನ : ಅವರು ಈ ವಿಭಾಗಕ್ಕೆ ಹೊಸ ಪೋಸ್ಟ್‌ಮಾಸ್ಟರರಾಗಿ ಬಂದಿದ್ದಾರೆ (ರೂಢಿ). ಪೋಸ್ಟಾಫೀಸು = ಅಂಚೆಯ ವ್ಯವಹಾರಗಳನ್ನು ನಡೆಸುವ ಕಚೇರಿ; ಟಪಾಲು ಕಚೇರಿ : ಪೋಸ್ಟಾಫೀಸಿನ ಹತ್ತಿರವೇ ನಮ್ಮ ಮನೆ ಇದೆ (ರೂಢಿ). [←ಇಂ. Post]

**ಪೋಸ್ತು** (ನಾ). ಗಸಗಸೆ ; ಅಫೀಮಿನ ಕಾಳು : ಖುರಾಸಾನಿಪೋಮ, ಪೋಸ್ತು, ಸೈಂಧವಲವಣ . . . ಇಷ್ಟನ್ನೂ ಸಮಚೂರ್ಣ ಮಾಡಿ . . . ಒಂದು ಗುಳಿಗೆಯನ್ನು ಅನುಪಾನವರಿತು ತೆಗೆದುಕೊಂಡರೆ ರಕ್ತಗ್ರಹಣೀ, ಹೊಟ್ಟೆನುಲಿ, ಸಂಗ್ರಹಣಿ ಸಹ ನಿಲ್ಲುವುವು (ಸಕವ್ಯ. ಶಂ. ೯೯೯).
[← ಪಾರ. ಪೋಸ್ತ್ ; ಹಿಂ. ಪೋಸ್ತ್, ಪೋಸ್ತಾ]

**ಪೋಹಚಿ** ' ಪೌಂಚಿ ' ನೋ.

**ಪೋಹಣಿಗೆ** ' ಪವಣಿಗೆ ' ನೋ.

**ಪೋಹಣಿಸು** ' ಪವಣಿಸು ' ನೋ.

**ಪೋಳ್₁** ' ಪೋಟ್₁ ' ನೋ.

**ಪೋಳ್₂** ' ಪೋಟ್₂ ' ನೋ.

**ಪೋಳ** (ನಾ). ಯೋಧ ; ಸೈನಿಕ (?) : ಪೋಳರ್ ಪೊಣ[ರ್ದುವು] ಟ್ಟ್ಯಜ ಸೂ[ಳೇ]ಜಿಜಿವಲ್ಲಿ ಸಿಡಿದ ಬಾಳುಡಿ ಬಾನೊಳ್ ಕೀಲಿಸಿರೆ ಬಳ್ಳಿ ಮಿಂಚುಗಳಾಳಿ[ಗ]ಮಡರಿ ಪೊಳೆವ ತೆಜನಂ ಪೋಲ್ಕುಂ (ವರ್ಧಮಾ. ೯-೬೩).
[ ? ]

**ಪೋಳರೆ** (ನಾ). ಬಿರುಕು ಬಿಟ್ಟಿರುವ ಬಂಡೆ ; ಸೀಳಿದ ಬಂಡೆ : ಪೋಳರೆಗೆ ಏರಿಯೋಡ ತಾಟ ಪೊಳ್ತಲ್ಲದಾ ಬೋಳ ಕೈಗಾಯ್ದನೆನಲೀ ಬೋಳನುಳಿದಂ (ಶಾಂತೀಶ. ೦೩೬-೨೯೬).
[ ಪೋಳ್₂ (< ಪೋಟ್₂) + ಅರೆ₂ (< ಅಜಿ₄) ]

**ಪೋಳಲ್** ' ಪೋಟಲ್ ' ನೋ.

**ಪೋಳಲ್ಗೋರ** ' ಪೊಟಲ್ಗೋರ ' ನೋ.

**ಪೋಳಿ** (ನಾ). ಗುಂಪು; ಪಂಗಡ; ಬಣ : ಅವನ ದಾಯಾದಿಮತ್ಸರವನ್ನು ತೀರಿಸಿಕೊಳ್ಳಲು ದಾರಿಯೊಂದನ್ನು ಹುಡುಕುತ್ತಿದ್ದ. ಊರಿನಲ್ಲಿ ಅವನು ಒಂದು ಪೋಳಿಯನ್ನು ಕಟ್ಟಿದ (ಜುಟ್ಟಿಹಾ. ೦೯೩). [<ಸಂ. ಪೋಲ]

**ಪೋಳಿಗೆ₁**, ಹೋಳಿಗೆ₁ (ನಾ). ೧. ಕಣಕವನ್ನು ಹಪ್ಪಳದಂತೆ ಲಟ್ಟಿಸಿ ಹೂರಣವನ್ನಿಟ್ಟು ಮತ್ತೆ ಲಟ್ಟಿಸಿ ಹಂಚಿನ ಮೇಲೆ ಎಣ್ಣೆ ಸವರಿ ಬೇಯಿಸಿದ ಒಂದು ಬಗೆಯ ಸಿಹಿತಿಂಡಿ ; ಒಬ್ಬಟ್ಟು : "ಪೋಳಿಗೆ— ಪೋಲಿಕಾ = ಹೋಳಿಗೆ " (ತದ್ಭವ. ೨೭); ಪೂರಿಗೆಯಿಡ್ಡಲಿಗೆ ಪೋಳಿಗೆ [ಪಾಠಾಂ. ಸೋದಿಗೆ, ಸೊಂಡಿಗೆ] . . . ಮೊದಲಾಗೊಡೆಯ ಪದಿನೆಂಟುಂ ತೆಜದ ಭಕ್ಷ್ಯರೂಪಂಗಳುಮಂ ನಾನಾಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ ಬಡ್ಡಿಸಿ (ವಡ್ಡಾರಾ. ೬೮-೦೩); ಡಾಕಿನಿಯರ ಕೈಯ ಪೋಳಿಗೆ ಯಂತೆ ರಕ್ಕಸಿಯರ ಮನೆಯ ಬೆಲ್ಲದಂತೆ (ಧರ್ಮಾಮೃ. ೦೩-೦೬೫). ೨. (ಹೋಳಿಗೆ ಮುಂತಾದ ಭಕ್ಷ್ಯಗಳನ್ನು ತಯಾರಿಸಲು ಬಳಸುವ) ಕಣಕವನ್ನು ಲಟ್ಟಿಸಿ ಮಾಡಿದ ಹಪ್ಪಳ : ಅರೆದಿಂಬಾಗಿರೆ ಬೆಂದ ಪೋಳಿಗೆಗಳಂ ತಚ್ಚೂರ್ಣಪಂಚಾಂಶಮಾಗಿರೆ ಖರ್ಜೂರಮನಲ್ಲದುಂದೆಜದ ಪಣ್ಣಂ ದ್ರಾಕ್ಷೆಯುಮಂ ಮತ್ತೆ ಶರ್ಕರೆಯಂ ಪೊಯ್ದು . . . ಖಂಡಲಡ್ಡುಗೆಗಳಂ ಮಾಟ್ಕೆಂದುಮಿಮಾಟ್ಕೆಯಿಂ (ಲೋಕೋಪ. ೮-೦೯). ಹೋಳಿಗೆ₁ : ೧. ಸೊಗಯಿಪ ಘೃತಪೂರಂ ಹೋಳಿಗೆ ಮಂಡಗೆ . . . ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮನಾಗಳ್ ಆಜ್ಯಯುತಮಪ್ಪುವಂ ಮೆಲ್ದು (ಧರ್ಮಾಮೃ. ೦-೦೯೬); ಸೊಕ್ಕಿನೆದಿಂಬಂಗಾಡಿ ಹೋಳಿಗೆಯೆಂಬಂತೆ (ಅರ್ಧನೇ. ೬-೬೩ ವ); ಸಮಸ್ತ ಬ್ರಾಹ್ಮಣಸಮಾಜವು ಹೋಳಿಗೆಯುಂಡಿತು (ಹಬ್ಬ.ಬ. ೦೩); ನೆರೆಮನೇ ಹೋಳಿಗೆಗೆ ತುಪ್ಪಾ ಕಾಯಿಸಿದ ಹಾಗೆ (ಗಾದೆ). ೨. ಬೆಂದ ಕಳಲೆಯ ಹಿಟ್ಟನಿಳಿಹಿಯಾಜಾಸಿ ಹಲವು ಚೆದದ ಹಸುರುಗಾಯ ತೆಜದಿನುತ್ತರಿಸಿಕೊಂಡು . . . ಧೂಪವನಿಡುವುದು ಅದಜೊಳಗೆ ಬೆಂದ ಕಳಲೆಯ ಹೋಳಿಗೆಯ ಹೋಳನೊದವಿಸಿದ ಬಳಿಕ ಪೊಗ್ಗರಣೆಯಂ ಮಾಡುವುದು (ಸೂಪಶಾ. ೬-೯). 'ಪುಲ್ಲಿಗ್ಗೆ' ಪರಾ.

**ಹೋಳಿಗೆ ತುಪ್ಪದಾಗ ಬೀಳು** = (ಆಲಂ) ಕೆಲಸವು ಕೈಗೊಡು : ಹೋಚು ಗಿಂಚು ಎಲ್ಲಾ ಮುಗಿದು ಹೋಳಿಗೆ ತುಪ್ಪದಾಗ ಬೀಳುವ ಹೊತ್ತು ಬಂದಿದೆ (ನಾಕ್ಷೋಲೀ. ೨೫೨). **ಹೋಳಿಗೆಯ ನೈವೇದ್ಯ** = (ಆಲಂ) ಹೊಡೆತ ; ಪೆಟ್ಟು : ಕೊಡುತ್ತೀರೋ ಇಲ್ಲವೇ ಎಲ್ಲರಿಗೂ ಹೋಳಿಗೆಯ ನೈವೇದ್ಯವಾಗಬೇಕೋ ? (ರಂಗರೋ. ೫). [< ಸಂ. ಪೋಲಿಕಾ]

**ಪೋಳಿಗೆ₂**, ಹೋಳಿಗೆ₂ (ನಾ). ಹೊಪ್ಪಳೆ ; ಬೊಕ್ಕೆ : ಸ್ಫೋಟಕ, ಪೋಳಿಗೆ, ಸ್ಫಟಿಕ, ಪಳಿಕು (ಕಬ್ಬಾಸು. ೦೫೦ ಪ್ರಯೋ). **ಹೋಳಿಗೆ₂** : "ಹೋಳಿಗೆಯೆಂದು ಸ್ಫೋಟಕಂ" (ಕಶಾ. ೬೫-೪೫೯); ಸ್ಫೋಟಕ ಶಬ್ದಕ್ಕಾದ ಹೋಳಿಗೆಯೆಂಬುದುಂ, ಲಂಪಟ ಶಬ್ದಕ್ಕಾದ ಲಂಬಳಮೆಂಬುದುಂ ಜಿಟಿಕ್ಕೆ ಸಂದೇಹಂ (ಶಮದ. ೨೨ ವೃತ್ತಿ); ಬಸವಳಿದಂಗ ಹೋಳಿಗೆ ಮೂ[ಪಾಠಾಂ. ಮ]ಾಡುವ ಕಾಲ್ಬೀಸುವಾಂತು ತೀಡುವ ಸುಯ್ಯುಬ್ಬೆಗೊಂಡೊಡಲಿಂದವೆ ಪಾಡಳಿದನು ಸುಕುಮಾರ (ಶ್ರೀಪಾಲ. ೯-೫೩). 'ಹೋಳಿಗೆಮಡೆ ' ಪರಾ. [< ಸಂ. ಪೋಟಿಕ, ಸ್ಫೋಟಕ ]

**ಪೋಳಿಸು** ' ಪೋಟಿಸು ' ನೋ.

**ಪೋಳು₁** ' ಪೋಟ್₁ ' ನೋ.

**ಪೋಳು₂** ' ಪೋಟ್₂ ' ನೋ.

**ಪೋಳ್ಗಳೆ**, ಹೋಳುಗಳೆ (ಕ್ರಿ). ೧. ತುಂಡಂಮಾಡು ; ಕತ್ತರಿಸಿ ಹಾಕು ; ಕಡಿ : ಹರಿಗಳು . . . ಏಗೆ ಪೋಳ್ಗಳೆಯಲೆರಗಿದವಮಮ ಮಸ್ತಕವ (ಅಂಬಿಕಾ. ೯೨-೬೯). **ಹೋಳುಗಳೆ** : ೧. ಹೋಳುಗಳೆದನು ಸುಭಟ ನಿಟ್ಟೆಲ್ವ ಮೂಳೆಯನು (ಶುಪ್ಪಾಡ್ಯೋ. ೦೩-೯೦) ; ಕರಾಳಕಂಜವನು ಮುಸಲಹತಿಯಲಿ ಹೋಳುಗಳೆದನು (ಶಿಬಾಗ. ೦೦-೬೫-೦೪) . ೨. ನಾಶಮಾಡು ; ಧ್ವಂಸಗೊಳಿಸು : ಆಯುಷ್ಯವನು ರವಿ ಹೋಳುಗಳೆಯನೆ ಹರಿಪರಾಙ್ಮುಖರಾದವರನು (ಶಿಬಾಗ. ೨-೨-೫). ೩. ನಾಶವಾಗು ; ಧ್ವಂಸವಾಗು : ಕಾಳಗದೊಳಿರಡುದಳದಲ್ಲಿ ವಂದಕ್ಷೋಣಿ ಹೋಳುಗಳೆದುದು ಮೂರುಸಂಜೆಯೊಳು (ತುರಂಗ. ೩೭-೦). ೪. ಛಿದ್ರವಾಗು ; ತುಂಡಾಗು : ಸೀಳಿ ಬಿದ್ದಿದ್ದವು ಮದೇಭಘಟಾಳಿ ಘೋಟಕನಿಕರ ನೆಲದಲಿ ಹೋಳುಗಳೆದಿರ್ದವು (ತುರಂಗ. ೩-೬-೦೩). [ಪೋಳ್₂ (<ಪೋಟ್₂) + ಕಳೆ₁]

**ಪೋಳ್ಗುಟ್ಟು**, ಹೋಳುಗುಟ್ಟು (ಕ್ರಿ) . ತುಂಡಾಗುವಂತೆ ಹೊಡೆ ; ಸೀಳು : ಇದು ತಮಸ್ಸೇಬ ಪರ್ವತವ ಪೋಳ್ಗುಟ್ಟುವತಿಭಿದುರಂ (ಕಶಿಕ. II. ೯೬೬ ಕತುರಾಚಾರ್ಯಪುರಾಣ). **ಹೋಳುಗುಟ್ಟು** : ಬೆಟ್ಟದ ಮಪ್ರಕವಾಟವ ನೃಪ ಹೋಳುಗುಟ್ಟಿಬಿಟ್ಟನು ನಿಮಿಷದೊಳು (ಭೀಷ. ೨೮-೬೩).
[ಪೋಳ್₂ (< ಪೋಟ್₂) + ಕುಟ್ಟು₁]

**ಪೋಳ್ಗೆಯ್** (ಕ್ರಿ). ಸೀಳು ; ಹೋಳುಮಾಡು : ನಿಮ್ಮುವಂ ಸೀಳಿ ಪೋಳ್ಗೆಯ್ದು ಕುದಿಸುತ್ತಿಹರು (ಶಬಶೋ. ೯-೩೦).
[ಪೋಳ್₂ (< ಪೋಟ್₂) + ಕೆಯ್₁]

**ಪೋಳ್ದಟ್ಟೆ** (ನಾ). (ವೀಳ್ಯದೆಲೆ ಹಾಗೂ) ಚೂರಡಕೆಯನ್ನು ಇಟ್ಟಿರುವ ತಟ್ಟೆ : ಫಣಿವಳ್ಳಿಯ ಪರ್ಣ ಸ್ವರ್ಣವರ್ಣದಿ ಕೇವಣಿಸಿರ್ದ ಕಟ್ಟಿ ಕತ್ತುರಿಯ ಮಣಿಯೆನಲುರ್ದಿದ ಪೋಳ್ದಟ್ಟೆಯ ನಿಟ್ಟಣಿಸಿದರ್ ತಲೆಗಿಂಬಿನಲಿ (ಪೋಪಶ. ೩೦-೫೩). [ಪೋಳ್₂ (<ಪೋಟ್₂) + ತಟ್ಟೆ]

**ಪೋಳ್ದುಂಬು** (ಕ್ರಿ). ಅಡಕೆಯ ಹೋಳನ್ನು ತುಂಬು : ಕೋಮಲವಡೆದ ಬಂದುಗವಾಯ್ದೆ ಪೋಳ್ದುಂಬಿ ಭ್ರಾಮಕವಡೆದು ಚುಂಬಿಸಿದ (ಪೋಪಶ. ೦೩-೩೭). [ಪೋಳ್₂ (<ಪೋಟ್₂) + ತುಂಬು₁]

**ಪೋಟ್₁**, ಪೋಳ್₁, ಪೋಳು₁, ಹೋಳ್, ಹೋಳು₁ (ಕ್ರಿ). ೧.

ಕತ್ತರಿಸು ; ತುಂಡುಮಾಡು : "ಪೊಟ್—ವಿದಾರಣೇ, ಖಂಡೇ ಚ. ವಿರಚನಾರ್ಥೇ ಚ (ವಿರ್ಪಡಿಸು)" (ಶಮಂಧಾ) ; ಅಚ್ಚಗೊಂಡದೊಳಗುರ್ವಿಸೆ ಸೀಳಿಸಿ ಮಾಣದಿಕ್ಕೆ ಪೊೞ್ದುರ್ವಗಿ ಮಾಡಿ ತಾಳಿಸೆ ಸುರುಳ್ವನೆಗಂ ನೆಱ ಸಾಯಂ (ಶಾಂತಿಪು. ೬-೯೩) ; ಎನ್ನನೊದೆದ ನಿನ್ನ ಕಾಲ್ಗಳನೆನ್ನ ಮಕ್ಕಳು ಮಾನುಮೊಂದಾಗಿಯುಮೇನಾಗಿಯುಂ ಸೀಳ್ದು ಪೊೞ್ದು ತಿಂಬೆವು (ಸುಕುಮಾ. ೩-೯ ವ) ; ಎಟ್ಟಟ್ಟ ಪೆಣ್ಗಳನ್ ಪೊೞ್ದನ್ (ಅಕ್ಕಿಕಾ. ೩-೪೩). ೨. ಎರಡು ಭಾಗ ಮಾಡು; ಸೀಳು : ಪುಲಿ ಬಂದು ಪಾಯ್ದು ಬಸಿಱಂ ಪೊೞ್ದು ನೆತ್ತರಂ ಕುಡಿದು ತೆಗಲೆಯುಂ ಪೊೞ್ದು ತಿಂಬಾಗಳ್ (ವರ್ಧಮಾ. ೪೮-೧೪); ಚಲದ್ದಿ ಕೃಷ್ಣೆಯ ಕೇಶಮಂ ಪಿಡಿದ ನಿನ್ನಿಂದಾದಱಿಲ್ ನಿನ್ನುರಸ್ಥಲಮಂ ಪೊೞದೆ ಪೋಪುದಲ್ತು (ಶಂಶಭಾ. ೧೨-೧೪೬); ನಸುನೆನೆದೊಯ್ಯನುಳ್ಳಲರೆ ಪೊೞ್ದಲೆ ಕಂವದೆ ಕೂಡೆ ಕೆಂಪಿನಿಂ ರಸಮೊಸರ್ವಂತಿರೊಕ್ಕ ನಱುದಂಬು ಲಕಂ ಕುರುಳಿಂ ಕಟಿಲ್ದು ಬಿರ್ದಸವಲರ್ಗಂ ಮದಾಳಿ ಮೊರೆದೆರ್ದಱಗುತ್ತಿರೆ (ಅೀಲಾವ. ೩-೧೬). ೩. ಸೀಳಿಹೋಗು ; ಬಿರಿ : ನಡುವೆನ್ನೊಡೆದಿರ್ಬಗಿ ಯಾಗಿ ಪೊೞ್ದು ನೀರೇಱಿದ ನಾಳಿಪುಣ್ಣೊಡೆದು ಸೌಳೆನೆ ಸೀಳ್ದುದು ದೋಣಿಪೋಪಿನಂ (ಸುಕುಮಾ. ೩-೧೬); ಬಱಿಕೆಯ್ಯಂ ನೆತ್ತಿ ಪೊೞ್ವಂತಿರೆ ಪೊಡೆಯಲ್ (ದಕಳು. ೯-೩೮) ; ಪೊೞ್ಗುಂ ಬಲ್ಗಿರಿಗಳಂದು ವಜ್ರಪ್ರಹತಿಯಿಂ (ಶಬ್ದಮ. ೧೬೩ ಪ್ರಯೋ). ೪. ಒಡೆ ; ಪುಡಿಮಾಡು ; ಹುಡಿಗುಟ್ಟು : ಪೊದೆದಪ್ಪಾನಶೈಲೇನ್ದ್ರಮಾನ್ಪೊೞ್ದು (ಎಕ. II, ೧೨.೦ ; ಸು. 700); ತಿರ್ಱಲ್ಲಾಡುವೆನೋ ಕುಲಾದ್ರಿಚಯಮಂ . . . ಬ್ರಹ್ಮಾಂಡಮಂ ಪೊೞ್ವೆನೋ (ಜಗನ್ನಿ. ೬-೩೩). ೫. ನಾಶಮಾಡು ; ಧ್ವಂಸಮಾಡು : ನಿಜಾಯುದ್ಧುಜಾಬಲದಿಂದಿಟ್ಟನನೇಕದುರ್ಗಚಯಮಂ ಪೊೞ್ದಂ ರಿಪು ವ್ರಾತಮಂ (ಪಳಪಿ.೩-೪). **ಪೊೞ್₁**: ೧. ಬಡೆನೀಶಾ ನಿಮ್ಮ ಪಾದಾಬ್ಜವ ನೆಲೆಲೆ ಬಿಡಂ ಸೀಳ್ದೊಡಂ ಪೊೞ್ದೊಡಂ (ರಕ್ಷಾಶ. ೯೮) ; ಓವಂತೆ ಹರ ನೊಲಿದು ತನ್ನ ಭಾಳಾಕ್ಷಿಯಿಂ ತೋರಕಿಡಿಯಂ ಬಿಡಲಾಕ್ಷಣಂ ರುಧಿರಮಂ ಪೀರಿ ಮುರಿದಜನ ಶಿರಮಂ ಪೊೞ್ದುದು (ಚಬಪು. ೧೮-೧೩) ; ಪಿರಿಯ ಪಾವಂ ಪಿಡಿದ ಕರಿಯಂ ಸೀಳ್ವ ಸಿಂಹಮಂ ಪೊೞ್ವ ಶರಭಮಂ ಮಾಲಾ ಕಾರದಿಂ ಸಾಲ್ಗೊಂಡೆತ್ತಿ ನಭೋಮಂಡಳಕೆ ಜಗಿದೊಗೆದು ನೆಗೆವ ಭೇರುಂಡಂ ಗಳಿಂ (ರಾಜಶೇ. ೩-೩೩ ವ). ೨. ವೈರಿವೀರಾವನೀಶ್ವರವಕ್ಷಸ್ಥಳಮಂ ಸ್ವಖಳ್ಗ ನಖರವ್ಯಾಘಾತದಿಂ ಪೊೞ್ದು (ಪ್ರಆಉ. ೧೯೩೪, ೦.೦೬ ; 1174) ; ಜಾತಿಜಾಯಿಲಂಗಳಂ . . . ಉಂಗುಟದಿಂ ಭಾಳಾಗ್ರಂಬರಂ ಪೊೞ್ದತ್ತಿ ತನಗಿದಿರಂ ಕಾಣದೆ ಹೆಕ್ಕಳದಿಂ ಕೆಕ್ಕಳಿಸಿ ನೋಡುವೆಕ್ಕಲಂಗಳುಮಂ (ಶಂಬರ. ೧೮-೧೮). ೪. ಸೀಳ್ವನಿಳೆಯಂ ಕೀಳ್ವನದ್ರಿಗಳನರ್ಣವಂ ತೊಳ್ವನೇಳಬ್ಧಿಯಂ ಪೂಳ್ವನಿದಿರಾದರಂ . . . ಬ್ರಹ್ಮಾಂಡಮಂ ಪೊೞ್ವಂ (ಚಬಪು. ೩೦-೦೦). **ಪೊೞು₁** : ೨. ಸುರಹೊನ್ನೆಯ ಜಿನನಂ ಸೀಳುತ್ತಂ ಅರುಹ ಪ್ರತಿಮೆಯನುಱ ಪೊ[ಪಾಠಾಂ. ಹೋ]ಳುತ್ತಂ (ಆದರ. ಹ. ೪೩೯-೨೯) ; ಮೃತ್ಯುಂಜಯಂ ಗಜಾಸುರನ ಪೊೞುವ ತೆಱದಿ ನೆತ್ತಿಯಂ ಸೀಳ್ದು (ರಾಶಚ. ೧೬-೬೯). **ಹೊೞ್** : ೧. ಬಳಗಳೆವ ಹೊೞ್ವ ಸೀಳ್ವಱಸುವ ನೆಱ ಸುಲಿವ ಖಳರ ಕಳಕಳದ ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೮-೨೯). **ಹೋೞು₁** : ೧. " ಹೋಳು . . . ತುಂಡುಮಾಡು " (ಗಂಗಾಪು. ೩೩೯). ೪. ಏಳುಕಡಲೊಡಲೆಡೆಯುಲವಗಿರ್ದ ಶೈಲಮಂ ಹೋಳು ವರು ವಡಬಶಿಖಿ ತಣ್ಣತೆನೆ ಕೋಪಮಂ ತಾಳುವರು (ಸಿದ್ಧರಾ. ೦-೨೦); ಅದರ 'ರೂಕ್ಷಶಿಖರಾಗ್ರಮನ್ . . . ಮಿಂಚುರಿಯ ಪೊಯ್ಲಿಂದೆ' ಹೋಳುವಾಗ ತೂರುವಾಗ ಅದು ಭೂಗರ್ಭದಾಳಕ್ಕೆ ಉರುಳುವುದು (ಬದ್ಧಕ್ರ 'iv, ಪಾಟಿಕವ ಪಟುಕ್ಕ). ೫. ಎನ್ನ ಜನ್ಮದ ಕೋಳಮಂ ಹೋಳಿದನೆನುತ ಸಲ್ಲೀಲೆ ಸದ್ಭಾವ ದಲಿ ನುತಿಸಿದ ದೇಶಿಕೋತ್ತಮನು (ಸಪ್ತರು. ೨-೨೬) : ಸಚರಾಚರಂಗಳ ಜಾಲವನು . . . ಅವನಾಜ್ಞೆಯಲಿ ಹೋಳುವನು ಹಣೆಗಿಚ್ಚಿನಲಿ ಹರನು (ಏಭಾಗ. ೬.೩-೨೬). ೬. ನಾಶವಾಗು ; ಹಾಳಾಗು : ಅಳು ನಗುವನು ಸಪಜ ನೆಚ್ಚಿ ಬಾಳುವೆಯ ಹೋಳುವೆಯು ? (ಶಲಾಪ. ೬೦-೦೦).

[ದೇ. ‖ತಮಿ. ಪೊೞ್; ತೆಲು. ಪೊಂಚು; ಪರ್ಜಿ. ಪೊೞ್]

**ಪೊೞ್₂**, **ಪೊೞ್₂**, **ಪೊೞು₂**, **ಹೋೞು₂** (ನಾ). ೧. ತುಂಡರಿಸಿದ ಭಾಗ ; ಚೂರು ; ತುಂಡು : ಕರ್ಪೂರಸಮ್ಮಿಶ್ರಮಪ್ಪ ನೆಲವತ್ತಿಯಡಕೆಯ ಪೊೞ್ಗಳುಮಂ . . . ಬ್ರಹ್ಮಯ್ಯಂಗೆ ಕೊಟ್ಟು (ವರ್ಧಮಾ. ೬೮-೨೩) ; ನೀ [ಪಾಠಾಂ. ಸೀ]ಳ್ದ ಮಾವಿನ ಪೊೞುಂದದ ಕಣ್ಗೆ ಬಾಷ್ಪಜಲಮುಂ ಚಿತ್ತಕ್ಕೆ ಸಂತಾಪಮುಂ ನಿಸಗಂ ಮಾಡಿದನಾವನಾತನೆ ವಲಂ ಗಂಧೇಭವಿದ್ಯಾಧರಂ (ಶಂಶಭಾ. ೪-೬೪); ಒಂದು ಪೊೞನಿತಱೊಳಿರ್ದುದೊಂದು ಕಡಿ ಪೀರ ದೊಳಿರ್ದಪುದು (ಸಮಶ. ೯-೮). **ಪೊೞ್₂**: ೧. ಸಿರವೊಡೆದೊಡೇ ನಾಯ್ತು ಸರಸಿರುಹಸಂಭವಂ ಧುರವರಿವ್ರನೆ ಬಿರಿದ ಮಸ್ತಕದ ಪೊೞ್ಗಳಂ ವರಚತುರ್ವದನಂಗಳಂ ಮಾಡಿಕೊಂಡು . . . ಹರಿಗೆ ಮಾಱಾಂತು (ಚಬಪು. ೧೬-೪೦); ಆ ಕುಮುದ್ವತಿ ನರೇಂದ್ರಮಸ್ತಕದ ಪೊೞ್ಗಳನೊಂದು ಗೂಡಿ ಪಿಡಿದು (ಜೈಮಿಭಾ. ೨೬-೬೬); ಪರಿಮಳವೆರದ ಪೂಗೀಫಲದ ಪೊೞ್ಗಳ . . . ಸರಸವಾಡುತಲೀಯಲು (ಅಪಂರಾ. ೦-೩-೩೦). ೨. ಬಿರುಕು ; ಸೀಳು : 'ಪೊೞರೆ' ಪರಾ. ೩. ಅಡಕೆಯ ಚೂರು : ಚುಂಬಿಸ ಲಾಣ್ಮನ ಬಾಯೊಳು ಪೊೞ್ಗಳ ತುಂಬಿದರೆಗಳಿಗೆಯೊಳು (ಮೋಹತ. ೩೨-೦೦). 'ಪೊೞ್ದುಂಬು' ಪರಾ. **ಪೊೞು₂** : ೧. ಉಡಿದು ಬಿದ್ದಿದೆ ಮಣಿಮೇಖಲೆ ಸಿಡಿಲುಱ ಹೊಡೆದ ರೋಹಣಪರ್ವತದ ನಿಡುಗಲ್ಲ ಪೊೞಂತೆ (ಕುರಾಸಾಂ. ೩೪-೪೨). **ಹೋೞು₂**: ೧. ಎತ್ತಿದದುಭುತ ಕೋಪದಲಿ ಹಿಡಿದೊತ್ತಿ ಸೀಳಲು ಹೋಳು ನಿಮಿಷಕೆ ಹತ್ತಿ ಮೂದಲಿಸುತ್ತ ಬರುತಿರೆ ಭೀಮ ಬೆಱಗಾದ (ಕುಮ್ಯಾಸ. ೬೦೩. ೨-೦೩೦); ರಕುತದ ಜಿಗಿಯ ಜೋರಿನಲೆಸೆದವಾ ಹೋಳಿರಡು ರಕ್ಕಸಿಯ (ತೊರಲಾ. ೩-೦ ೨೩); ವೈರಿ ಸುಭಟನ ಗದೆಯ ಗದೆಯಲಿ ಹೊಯ್ದು ನುಗ್ಗೊತ್ತಿದನು ಸಾವಿರಹೋಳಿನಲು ಬಿದ್ದುದು ಧರಿತ್ರಿಯಲಿ (ಏಭಾಗ. ೦೦-೬೯-೦೬). ೩. ಹೋಳು ಬೆಳ್ಳಿಲೆ ಕರ್ಪುರಗಳ ತಿಂಬ ಗಯ್ಯಾಳರ ತಹುದಚ್ಚರಿಯೆ (ಕುರಾಸಾಂ. ೨೪-೪೪) ; ತಿಳಿದು ನೋಡಲು ಮಧ್ಯರಾತ್ರಿಯನೊಂದರೆಗಳಿಗೆಯ ಮಾಡಿ ಕತ್ತುರಿಯ ಗುಳಿಗೆ ಸೇರಿದ ಹೋಳ ಕಾಂತನ ವರಹಸ್ತನಳಿನಕ್ಕೆ ಕೊಟ್ಟಳೆತ್ತಿಯಲಿ (ಮೋಹತ. ೦೬-೩೬).

**ಪೊೞ್ಮಾಡು**, **ಹೋಳು ಮಾಡು**, **ಹೋಳ್ಮಾಡು** = ೧. ಸೀಳು ; ಸಿಗಿ : ಇಡುಗಟ್ಟಿಗೆಯೊಳಿಟ್ಟು ಬಿಡದೆ ಗರಗಸದಲ್ಲಿ ನಡುನೆತ್ತಿಗಳನರಿದು ಪೊೞ್ಮಾಡುವಾಗಳಡರ್ದ ಬಿಡಿಸುವರೆ ಸತಿಸುತರು (ಗುರುಬೋ. ೦-೬೦) ; ಹುಡುಗನು ಕೋಪದಿಂದ ಗೊಂಬೆಯನ್ನು ಎಸೆದು ಎರಡಾಗಿ ಹೋಳು ಮಾಡಿ ಬಿಟ್ಟನು (ಚೂ). ೨. ಒಡೆದು ಹಾಕು ; ಪುಡಿ ಮಾಡು : ವಿಜಯಾರ್ಧಶೈಲದೊಳಿಕ್ಕಿದ ಪಡಿಯಾ ನಾಳೆ ಹೋಳ್ಮಾಡಿ ಬಿಡುವೆನೊಣಗಿದ ಬರಹಾಳೆಯನೊಡೆಯ ಹೊಯ್ವಂತೆ (ಭರತ. ೨೯-೩). **ಪೊೞಾಗು**, **ಹೋಳಾಗು** = ೧. ಸೀಳಂ ; ಬಿರಿ : ಪೊೞಾದತ್ತೆನ್ನ ಹೃದಯವೆಂದು ಲಲಿತಾಂಗಿ (ಉದ್ಭಟ. ೬-೬೪) ; ನಾಗನಿವಾಸವಾಲವ ಮರಂ ಶಶಕಂ ಮೃಗವೆಂದೆನುತ್ತೆ ಪೊೞಾಗಿರಾತಿರ್ಪುದೇನದು ವಿಚಾರಿಸಿ ನೋಡು ವಡಿಂದುಮಂಡಲಂ (ಧರ್ಮಾಶ. ೦-೩೬); ಹಿಳಿದ ಲೋಹದ ಸೀಸಕಂಗಳ ಬಲಿಸಿದರು ಹೋಳಾದ ಕವಚವ ಹೊಲಿಸಿದರು (ಕುಮ್ಯಾಭೀ. ೩-೩೬). ೨. ಚೂರಾಗು ; ತುಂಡಾಗು : ಇಳೆಗವನ ತಲೆಯನು ಬಿಳಿಕ್ಕಿದನ ಕಪಾಲ ಸಾವಿರಹೋಳಹುದು (ಕುಮ್ಯಾದ್ರೋ. ೧೪-೪೦) ; ಎರಡು ಹೋಳಾಗಿ ಬಾಳೆಯ ಕಾಯ ಸಂಬಳಿಸಿ . . . ಸಂಭಾರವಂ ತುಂಬಿ (ಸೂಶಾ. ೪-೬೨). **ಹೋಳಡಕೆ** = ತುಂಡುಮಾಡಿದ ಅಡಕೆ; ಅಡಿಕೆಯ ಚೂರು: ಹೋಳಡಕೆ ಬಿಳಿ ಎಲೆ ನೀವೆ ಕೊಳ್ಳಿರಿ ಕೊಳ್ಳಿರಿ (ಪಾಶವ. ೦೬೩)

[ < ಪೋಟ್$_1$. / ತಮಿ. ಪೋಟ್; ಮಲ. ಪೊಳಿ, ಪೊಳುಕ್ಕು; ತುಳು. ಪೂಳು ]

**ಪೋಟ್$_3$, ಹೋಟ್** (ನಾ). ೧. ಮರದ ಪೊಟರೆ; ಡೊಗರು: ಕಳ್ಳರಂತೆಗೆಯ್ವೆವೆಂದೊಡಂಬಟ್ಟು ಕಳ್ವಲ್ಲಿಯೆಲ್ಲವೆಂಟನೆಯ ಭಾಗವಂ ಮರದ ಪೋಟಿಂ[ಪಾಠಾಂ. ಪೊಟಲೊ, ಪೊಳೊ]ಳಿಟ್ಟು ದಿವಸಕ್ಕಂ ಪೋಪರ್ (ವಡ್ಡಾರಾ. ೨೦-೬); ಪೆರ್ಮರಂಗಳ ಪೋಟ್ಗಳೊಳಗಣಿಂದವೊಗೆದ ಕೇಸುರಿಗಳ ಬಳಗದಂತೆ (ಶಂಕಖಾ. ೧೧-೬೧ ವ); ಪೋಟ್ಗಳೆಡೆಯಲ್ಲಿ ಕವಲ್ಗಣೆಯಲ್ಲಿ ಸುತ್ತಲುಂ ಗಿಳಿಗಿಳ ಹಿಂಡುಗಳ್ ನೆರೆದು ಕೂಡಿಯುವಲ್ಲಿ ಸಹಸ್ರಪಯಂ ನಿರಾಕುಳವನುರಾಗದಿಂ ಪಲವುದೇಶದೊಳಿರ್ಪುವು ಬಂದು ಭೂಪತೀ (ಕಾದಂಪೂ. ೧೨೬). ೨. ಪೊಳ್ಳು; ಜಳ್ಳು: 'ಪೋಟ್ಮರ' ಪರಾ. **ಹೋಟ್:** ೧. "ಕೋಟರವಾಗಿ ಕೂಟವೆನೆ ಹೋಟಕ್ಕು [ಪಾಠಾಂ. ಪೊಟಲಕ್ಕು]" (ಶುಂಗರಾ. ೩೨-೩). 'ಪೋಟೆ$_1$' ಪರಾ.

[ದೇ.॥ ತಮಿ. ಪುಟ್ಟಿ, ಪೊಳ್ಳು]

**ಪೋಟಿಲ್, ಪೋಳಲ್, ಹೊಳಲು$_1$** (ನಾ). ಮರದ ಡೊಗರು; ಪೊಟರೆ; ಕೋಟರ: "ಕೋಟರಾಹ್ವಯಂ ತಾಂ ಪೋಟಲ್" (ವಸ್ತುಕೋ. ೩೦-೬); ಪೋಟಲ ಪಾವಡರೆ . . . ಮರದ ಮೊದಲೊಳ್ ಬೀಟಲ್ ನಿಲ್ವಂತೆ ನಿಶ್ಚಲಂ ಮುನಿ ನಿಂದಂ (ಶಾಂತಿಪು. ೯-೧೦೬); ಬಸಿಱನಪ್ಪಿದ ಮಱಿಗಳಂ ಹೊತ್ತು ಸಾಲ್ಗೊಂಡು ಮರದ ಪೋಟಲ್ಗೆ ಸಾರ್ದುವು ಕೋಡಗದ ಹಿಂಡು (ಅನಂಪು. ೯-೦೬ ರಗಳೆ); ಪೋಟಲೊಳಗಿರ್ದ ದುಷ್ಟವ್ಯಾಳಂ ಮುಳಿದೆನ್ನ ಕೈಯನೌಡಲ್ (ದಶಕು. ೨.೧೧೦). **ಪೋಳಲ್:** ಪೋಳಲೊಳಗಣ ಬಾಲವಿಹಂಗಂಗಳನೆಱಂಕೆಯೊಳಱಂಕೆಕೊಂಡು ಪಾಱಲನುವಾಗಿ ತೂಱಲ್ಗೊಂಬಿನೊಳಿರ್ಪ ವಿಹಂಗಸಂಕುಳದಿಂದತಿಸೌಂದರ್ಯವಂ . . . ಒಳಕೊಂಡಿರ್ಪುದು (ಗಿರಿ. ೦-೦೨೯ ವ). **ಹೊಳಲು$_1$:** ಪ್ರಳಯ ಫಣಿಯಣಲ ಹೊಳಲೊಳಗೆ ಕೈಯ ನೀಡಿ ದಾಡೆಯಂ ಮುಱಿಯ ಬಡಿವಂತೆ (ಹಕಣ. ೯-೧೧); ಬೆರಣಿಯ ಶಿಖಿಯಂ ಹುಣಿಸೆಯ ಹೊಳಲೊಳಗಿಕ್ಕುತ ಕ್ಷಣದೊಳ್ಪೊಕ್ಕಳಿದನಸುವನಾ ಮಹರಾಜಂ (ಹಶ್ನಾ. ೩-೩೯).

[ಪೋಟ್$_3$ + – ಅಲ್$_3$./ತಮಿ. ಪೊಳ್ಳಲ್, ಪುಟಲ್]

**ಪೋಟಲ್ಗೋರ** 'ಪೊಟಲ್ಗೋರ' ನೋ.

**ಪೋಟಿಸು, ಪೋಳಿಸು, ಹೋಳಿಸು** (ಕ್ರಿ). ೧. ಚೂರಂ ಮಾಡು; ತುಂಡು ಮಾಡು: ಈಗಳೆ ಕೊಂದು ಪೋಟಿಸಿ ತಾಳಿಸಿ ಗವ್ಮನೆ ನಿಮ್ಮ ನೆಮ್ಮ ಮಾಲಿನಿಯರ್ಗೆ ಬಲಿಗುಡುವೆಂ (ರಾಜಶೇಖ. ೦೦೨-೯). **ಪೋಳಿಸು:** ೧. ಕಂಡನಾ ಸಮಯದೊಳ್ ಕಮಲಜಂ ಹರಕರದೆ ಖಂಡಿಸಿದ ತನ್ನುತ್ತಮಾಂಗಮಂ ರುಧಿರಜಲಮುಂಡು ಪೋಳಿಸಿದ ನಯನಾಗ್ನಿಯಂ ಪೊಗಳುತಿಹ ಸಕಲವೃಂದಾರಕರನು (ಕಖತ. ೦೯-೦೬). **ಹೋಳಿಸು:** ೨. ಎರಡಾಗಿ ಭಾಗಮಾಡು; ಸೀಳು: ನರಗೆ ಕೊಟ್ಟನು ಹೋಳಿಸಿದ ಕರ್ಪೂರದ ವೀಳೆಯವ (ಕುಮಾರವ್ಯಾ. ೦೦-೩೬); ನಾರು ಬಲಿಯದ ಹುಣಸೆಕಾಯ ಮಾವಿನಕಾಯನಾರ್ಯದು ಕತ್ತಿ ಕಿಱಿದಾಗಿ ಹೋಳಿಸಿ (ಸೂಶತ. ೩-೧೦). ೩. ಮುರಿಯುವಂತೆ ಮಾಡು; ಒಡೆಯುವಂತೆ ಮಾಡು: ರದನದಿ ಹೋಳಿಸುವ ಖಾತಿಯಲಿ ನಾನಾವಿಧದ ಕೊಲೆಗಳಲಿ ಕಾಲನೊಗಡಿಸೆ ಕೊಲುವ ಮದಗಜಜಾಲಗಳೆಡಳಾರೋಹಕರು ಕೆಂಗೋಲ ಮಳೆಗಱೆದಾರಿದರು ನೃಪಸೇನೆಯೆರಡಱಲಿ (ಕುಮಾಭೀ. ೪-೬೩).

[ಪೋಟ್$_3$ + – ಇಸು$_3$]

**ಪೋಟ್ಗಡಿ, ಹೋಳುಗಡಿ** (ಕ್ರಿ). ಚೂರಾಗುವಂತೆ ಕತ್ತರಿಸು,– ತುಂಡರಿಸು: 'ಪೋಟ್ಗಡಿವೋಗು' ಪರಾ. **ಹೋಳುಗಡಿ:** ಹೋಳುಗಡಿದನು ಹತ್ತುವಿಶಿಖದಿ ಜೋಲುತಿರ್ದುದು ಕರುಳು ವನಸಗೆ (ಕೌಶಿಕ. ೨೯-೪೪). [ಪೋಟ್$_3$ + ಕಡಿ$_3$]

**ಪೋಟ್ಗಡಿವೋಗು** (ಕ್ರಿ). ಚೂರಾಗುವಂತೆ ಕತ್ತರಿಸಿ ಹೋಗು; ಛಿದ್ರವಾಗು: ಅಂದು ಚಂಡಿಕೆಯ ಕೂರ್ವಾಳಿಂ ಪೋಟ್ಗಡಿವೋದ ಮಹಿಷಾಸುರನ ಬಿರಿವೊಡೆಯಿಂ ಸುರಿದ ದಂಡೆಗರುಳ್ಗೆ ಪಾಸಟಿಯಪ್ಪ ಅರೆಜರಿದ ಜಾದಿನ ಕೋಡುವೆಟ್ಟನೊತ್ತಿಗೊಂಡು ಸಿಂಧೂರವಿಲಿಪ್ತಮದಸಿಂಧುರಗಂಡಮಂಡಲದೊಂದು ಪಾಂಗಿನಿಂ ತೋರ್ಪ ತಟ್ಟಲಿಂ (ರಾಜಶೇಖ. ೬೨-೦೯).

[ಪೋಟ್ಗಡಿ + ಪೋಗು$_1$ (< ಪೋ$_1$)]

**ಪೋಟ್ಗಿದಱ್** (ಕ್ರಿ). ಹೋಳಾಗು; ಬಿರಿ: ಬೀಗಿ ಬೆಳೆದು ಕಿಂಬಿತ್ತುಗಳಿಂ ಪೋಟ್ಗಿದರ್ದಿರೆ ದಾಳಿಂಬದ ತಾಟ್ಗಳ್ ನಿಟ್ಟಿಪರ ದಿಟ್ಟಿಗಿಟ್ಟಳ ಮೆಸೆಗುಂ (ಶಬ್ದಾಸು. ೦೯೩ ವ್ಯಾಖ್ಯಾ). [ಪೋಟ್$_3$ + ಕೆದಱ್]

**ಪೋಟ್ಮರ** (ನಾ). ಟೊಳ್ಳಾದ ಮರ; ಜಳ್ಳಾಗಿರುವ ಮರ: ಅಲ್ಲಿ ತನ್ನಂ ಕಾಣಲೊಡನಿರ್ಮಡಿಸಿದ ಶೋಕದಾವಾನಲನೆರ್ದೆಯೊಳ್ ಪೋಟ್ಮರದ ಕಿರ್ಚಿನಂತಳುರೆ ತಳಮಳಗಾಗಿ (ಶಾಂತಿಪು. ೦-೯೪ ವ); ಪಟುಗಟದಟಲ ಕಿರ್ಚು ಪೋಟ್ಮ [ಪಾಠಾಂ. ಪೊಳ್ಮ]ರದ ಕಿರ್ಚಿನಂತೊಳಗೊಳಗಳುರೆ (ಅರ್ಧನೇ. ೬-೦೨ ವ). [ಪೋಟ್$_3$ + ಮರ$_1$]

**ಪೌಂಚಾಯಿಸು** (ಕ್ರಿ). ೧. ಸೇರುವಂತೆ ಮಾಡು; ತಲುಪಿಸು: ವೀರ ರಾಜೇಂದ್ರವಡೆಯರವರು ಸರಕಾರದ ಫೌಜಿಗೆ ರಸದು ವಗೈರೆ ಸಾಮಾನು ಪೌಂಚಾಯಿಸಿ ಕುಂಪನಿ ಕೆಲಸಕ್ಕಾಗಿ ಮೆಹನತ್ತು ಮಾಡಿದರಿಂದಾ (ರಾಜೇಂದ್ರ. ೨೩೦). ೨. ನ್ಯಾಯವಿರುದ್ಧವಾದ ಬೋಧನೆಯನ್ನು ಮಾಡು: (*).

[ಪೌಂಚ್ಯಾ$_0$ (p ← ಹಿಂ. ಪಹುಂಚಾನಾ) + – ಇಸು$_3$]

**ಪೌಂಚಿ, ಪವುಂಚಿ, ಪೊಹಚಿ, ಪೋಂಚೆ, ಪೋಚು$_1$, ಪೋಚೆ$_1$, ಪೋಹಚೆ, ಪೌಚಿ** (ನಾ). ಮುಂಗೈಗೆ ತೊಡುವ ಒಂದು ಬಗೆಯ ಆಭರಣ: "ಆವಾಪಕಃ, ಪಾರಿಹಾರ್ಯಃ — ೨ ಸೂಡಗವೆಂಬ ಕಡಗ, ಚೂಡಾಲುಂ, ಪೌಂಚಿ . . . ಮುಂತಾದ ಹಸ್ತಾಭರಣ" (ಸಿದ್ಧಾಂತಿ. ೨೦೦); ಓಲೆ ಮೂಗುತಿ ಕೊಪ್ಪು ಮೇಲೆ ರನ್ನದ ಕುಸುಮ ಕೀಲು ಚಿಂತಾ ಪೌಂಚಿ ಕಡಗ ಹೊನ್ನಬಳೆಯು (ಕಠೋ. ೦೩೪-೯); ಮುಂಗೈಯಲ್ಲಿರುವ ರತ್ನಖಚಿತವಾದ ಪಟ್ಟಿಕಡಗ, ಅದರ ಮೇಲೆ ಮುದ್ದಾದ ಪೌಂಚಿ (ಶುಲ್ಲ. ೪೦). **ಪವುಂಚಿ:** (*). **ಪೊಹಚಿ:** ಕೈಯೊಳಗಿನ ಆರುತೊಲೆಯ ಪೊಹಚಿ ಕಳೆದನು (ಶುಂಠಿಯು. ೪-೦೯೬). **ಪೋಂಚೆ:** "ಪಾರಿಹಾರ್ಯ—ಮುಂಗೈ ಆಭರಣ; ಪೋಂಚೆ" (ಗಂಗಾಕು. ೨೦೬). **ಪೋಚು$_1$:** ಮುಂಗೈಗೆ ಕಟ್ಟಿದ ಪೋಚು, ಬೆರಳಿಗೆ ಹಾಕಿದ ಉಂಗುರಗಳು (ಅಕೋಳ. ೯). **ಪೋಚೆ$_1$:** ಮುತ್ತಿನ ಪೋಚೆಯು ಕೈಯ್ಯಾಗ . . . ಹೂವಿನ ಜರದಂಗಿ ರವಿಶಂಕರ ತೊಟ್ಟಿಹನು (ಸಿದ್ಧಶ್ರೀ. ೦೯-೯೨); ಒಂದು ಕೈಯ ಮುಂಗೈಯಲ್ಲಿ ರಿಸ್ಟ್‌ವಾಚು, ಇನ್ನೊಂದು ಕೈಯಲ್ಲಿ ಪೋಚೆ . . . ಧರಿಸಿದ್ದನು (ಕರುಣೀ. ೪೩). **ಪೋಹಚೆ:** ಕೈಯೊಳಗಿದ್ದ ರತ್ನಜಡಿತ ಪೋಹಚೆಯನ್ನು ಕೊಟ್ಟು ಅವರನ್ನು ಹಾದಿಗೆ ಹಚ್ಚಿದೆನು (ಶುಂಠುಕ. ೦೦೩). **ಪೌಚಿ:** ಕೈಗಳಿಗೆ ಹಾಕಿದ ಚಿನ್ನದ ಪೌಚಿ ತಿರುವುತ್ತಾ ಅತ್ತಿಗೆ ನರಸಮ್ಮ '. . . ಬೆಳಿಗ್ಗೆ ಬತ್ತೀನಿ ಅಂತ ಹೇಳೂ ಅಂದ್ರು' ಎಂದಳು (ಸರಕು. ೦೩).

[←ಹಿಂ. ಪಹುಂಚಿ; ಮರಾ. ಪೋಹಂಚೀ, ಪೋಂಚೀ, ಪೌಂಚೀ./ ತಮಿ. ಪೋಞ್ಚಿ; ತುಳು. ಪೌಂಚಿ, ಪವುಚಿ; ತೆಲು. ಪೋಂಚಿ]

**ಪೌಂಡರೀಕ** (ಗು). ೧. ಕಮಲಗಳಿಗೆ ಸಂಬಂಧಿಸಿದ. ೨. ಕಮಲಗಳಿಂದ ರಚಿತವಾದ. (ನಾ). ೩. ಒಂದು ಬಗೆಯ ಕುಷ್ಠರೋಗ. ೪. ಹನ್ನೊಂದು ದಿನಗಳವರೆಗೆ ಮಾಡುವ ಸೋಮಯಾಗ: ವಾಜಪೇಯ ಪೌಂಡರೀಕಾದಿ ಮಹಾಕ್ರತುಗಳಂ ನಿತ್ಯೇಷ್ಟಿ ಕಾಮ್ಯೇಷ್ಟಿ ಮೊದಲಾದವುಗಳಂ . . . ಕ್ಷತ್ರಿಯನಾದೊಡೆ ಅಧಿಕೃತವಾಗಿ ಮಾಳ್ಪುದು (ಐಪೀಕ. ೧೪೩). [ಸಂ.]

**ಪೌಂಡರ್ಯ** (ನಾ). (ಕಣ್ಣಿನ ರೋಗಗಳಿಗೆ ಔಷಧಿಯಾಗಿ ಬಳಸುವ)

ಬಿಳಿನೈದಿಲೆಯ ಗಡ್ಡೆ: "ಪ್ರಪೌಂಡರೀಕಂ, ಪೌಂಡರ್ಯಂ—೨ ಪುಂಡರೀಕ ನೆಂಬುವ ಗ್ರಂಥದ್ರವ್ಯದ ಹೆಸರುಗಳು . . . ಇದು ಬಿಳೀನೈದಿಲೆಗಡ್ಡೆ" (ಸಿದ್ಧಾಂತಿ. ೦೯೦). [ಸಂ.]

**ಪೌಂಡಿಮನೆ** (ನಾ). ತೊಂಡುದನಗಳನ್ನು ಹಿಡಿದು ಕೂಡುವ ಸ್ಥಳ; ಕೊಂಡವಾಡ: ರಾಮಯ್ಯನು ತನ್ನ ತೋಟದಲ್ಲಿ ಮೇಯುತ್ತಿದ್ದ ತೊಂಡುದನವನ್ನು ಹಿಡಿದು ಪೌಂಡಿಮನೆಗೆ ಹಾಕಿದನು (ರೂಢಿ). [< ಪೌಂಡು + ಮನೆ]

**ಪೌಂಡು** (ನಾ). ೧. ರೋಮನ್ ಪದ್ಧತಿಯ ತೂಕದ ಒಂದು ಏಕಮಾನ: ಒಂದುದಿನಕ್ಕೆ ೨೦ ಪೌಂಡು ಒಣಮೇವಿನ ಈಡುಣಿಸು ತಿನ್ನುವುದಕ್ಕೆ ೮೦ ಪೌಂಡು ನೀರು ಬೇಕೆಂದು ತಿಳಿದುಬಂದಿದೆ (ಗೋಗ್ರಾಸ. ೩೬). ೨. ಇಪ್ಪತ್ತು ಷಿಲಿಂಗುಗಳ ಬೆಲೆಯುಳ್ಳ ಒಂದು ನಾಣ್ಯ: ಬ್ರಿಟಿಷರ ಒಂದು ಬೆಳ್ಳಿಯ ನಾಣ್ಯ (= $\frac{1}{20}$ ಪೌಂಡು) (Shilling. ಇಂಜಿ); ಮೊದಲಿನ ನಾಲ್ಕು ವರುಷಗಳಲ್ಲಿ ಒಂಬೈನೂರು ಪೌಂಡುಗಳ ಸಾಲವು ನಮ್ಮ ಆಫೀಸಿಗೆ ಬಿದ್ದಿತು (ಕಂಐಪ್. ೨೦೯). ೩. = ಪೌಂಡಿಮನೆ: ಸದರಿ ಡಿಸ್ಟ್ರಿಕ್ಟ್‌ಮ್ಯಾಜಿಸ್ಟ್ರೇಟರುಗಳು ಪೌಂಡಿನಲ್ಲಿ ಕೂಡುವ ದನ ಕರುಗಳಿಗೆ ನೀರು, ಮೇವು ಕೊಡುವ ಏರ್ಪಾಟನ್ನು ಮಾಡುವರು (ಗ್ರಾಪೂಕ. ೦೦೪). [← ಇಂ. Pound]

**ಪೌಂಡ್ರ** (ನಾ). ೧. ಒಂದು ಬಗೆಯ ಕಬ್ಬು; ಪಟ್ಟೆಗಳಿರುವ ಬಿಳಿಯ ಕಬ್ಬು. ೨. ಭೀಮನ ಶಂಖ. ೩. ಆಯಾ ಮತೀಯ ಲಾಂಛನವಾಗಿ ಧರಿಸುವ ತಿಲಕ, ಬೊಟ್ಟು ಮುಂತಾದ ಗುರುತು. ೪. ಒಂದು ದೇಶ ಮತ್ತು ಆ ದೇಶದ ಜನ. [ಸಂ.]

**ಪೌಂಡ್ರಕ** (ನಾ). ೧. ಒಂದು ಬಗೆಯ ಕಬ್ಬು. ೨. ಭೀಮನ ಶಂಖ: ಹಳಚಲನುಮಾಯುಭಯಸೇನಾಜಲಧಿ ಕಳಕಳ ಮಿಗಲು ಮಾರುತಿ ಮೊಳಗಿದನು ಪೌಂಡ್ರಕವ ಭೂಪನನಂತವಿಜಯವನು (ಕುವ್ಯಾಶೀ. ೬-೧). ೩. ಪುಂಡ್ರವಂಶದ ವಸುದೇವನೆಂಬ ರಾಜನ ಮಗ: ಪೌಂಡ್ರಕನನಂದೀತ ಕೊಂದನು ಹಂಸ ಡಿಬಿ.ರನೀತನೊರೆಸಿದನರಸ ಚಿತ್ತೈಸು (ಕುವ್ಯಾಉ. ೯-೩೪). P ಪುಂಡ್ರವಂಶದ ವಸುದೇವನೆಂಬ ರಾಜನ ಮಗನಾದ ಇವನು ವಸುದೇವಪುತ್ರ ಶ್ರೀಕೃಷ್ಣನಂತೆಯೇ ಕೀರ್ತಿವಂತನಾಗಬೇಕೆಂಬ ದುರಾಸೆಯಿಂದ ಶ್ರೀಕೃಷ್ಣನಂತೆಯೇ ಶಂಖಚಕ್ರಗಳನ್ನು ಧರಿಸಿದ್ದು, ಶ್ರೀಕೃಷ್ಣನ ಮೇಲೆ ಯುದ್ಧಕ್ಕೆ ಹೋಗಿ ಸೋತು ಹತನಾದನು. ೪. ಪೌಂಡ್ರಕದೇಶದ ಜನ. [ಸಂ.]

**ಪೌಗಂಡ** (ಗು). ೧. ಹುಡುಗುತನದ; ಬಾಲಿಶ. (ನಾ). ೨. ಐದರಿಂದ ಹದಿನಾರುವರ್ಷಗಳೊಳಗಿನ ವಯಸ್ಸು; ಬಾಲ್ಯ. ೩. ಹುಡುಗ; ಬಾಲಕ: ಕಷ್ಟಿಸಿದಿರಲ್ಲ ನಾವು ಹುಟ್ಟಿದಂದಿಂದೀಗೆ ನೀವು ದುಷ್ಟಸಂಸಕ್ತವಾಗಿ ಹೋದ ಕಷ್ಟಬಡಿಸಿದನು ನಿಮ್ಮ ದಿಷ್ಟ್ಯಾ ಹತನಾದ ನಮ್ಮ ಪುಟ್ಟ ಪೌಗಂಡ ಕೈಶೂರತನದಿ (ಕೃಸಭಾ. ೬೩-೨೭). [ಸಂ.]

**ಪೌಚಿ** 'ಪೌಂಚಿ' ನೋ.

**ಪೌಜಿಕ್ಕು** (ಕ್ರಿ). ಸೇನೆಯನ್ನು ಸಿದ್ಧಪಡಿಸು; ದಂಡನ್ನು ಸಜ್ಜುಗೊಳಿಸು: ಮುಂತೆಡಬಲದಿ ಪೌಜಿಕ್ಕಿದ ಚಂದ್ರವಸಂತಮಂದಾನಿಲಾದಿಗಳು ಪಂತದ ಬಿನ್ನಹವನು ಮಾಡಿದರು ರತಿಕಾಂತಂಗೆ ಕೈ ಮುಗಿದೊಡನೆ (ಪೋಶಕ. ೬-೨೦). [ಪೌಜು (<ಫೌಜು) + ಇಕ್ಕು₁]

**ಪೌಜು** 'ಫೌಜು' ನೋ.

**ಪೌಜುಗಂದಾಯ** (ನಾ). ಸೇನೆಯ ಸಲುವಾಗಿ ಹಾಕುವ ತೆರಿಗೆ,—ಕರ: ಪೂರ್ವದಿಂದ ನಡೆದುಬರುತ್ತಿರುವ ದೇವದಾಯ ಬ್ರಹ್ಮದಾಯ . . . ರಕ್ತಕೊಡಗೆ ಮುಂತಾದುವೇನೂ ಹೆಚ್ಚುಕಡಿಮೆಯಾಗದಂತೆಯೂ ಆವೊಂದು ಈ ಪೌಜುಗಂದಾಯಕ್ಕೆ ಒಳಸೇರದಂತೆಯೂ ನಮ್ಮ ಕರಣಿಕರು ಎಚ್ಚತ್ತಿರಬೇಕು (ಐಶಗಂ. ೩೬-೨೩). [ಪೌಜು (<ಫೌಜು) + ಕಂದಾಯ]

**ಪೌಜುದಾರ** 'ಫೌಜುದಾರ' ನೋ.

**ಪೌಜುದಾರಿ** 'ಫೌಜುದಾರಿ' ನೋ.

**ಪೌಜೊಡೆ** (ಕ್ರಿ). ಸೈನ್ಯವನ್ನು ಭೇದಿಸು,—ಚೆದರಿಸು: ಪೌಜೊಡೆಯದೆ ಪೊಱಗೆ ನಿಂದು ಪುಯಿಲೊಳ್ ಪೊಲಂಬುಗೆಟ್ಟುದಂ ನಿಟ್ಟಿಸಿಯೋಡಿಪೋದರ ಪೆಂಡಿರೋಲೆಯುಂಬಿದುದು (ಜಕಪಂ. ೯೨-೦೬). [ಪೌಜು(<ಫೌಜು)+ಒಡೆ₁]

**ಪೌಜೊಡ್ಡು** (ಕ್ರಿ). ಪಡೆಯನ್ನು ಎದುರಿಸು; ಸೇನೆಯನ್ನು ಒಡ್ಡು: ದುರುಳರಕ್ಕಸ ಜಂಭನಾಜ್ಞೆಯಿಂ ದಾನವರ ಬಲವಿರದೆ ಪೌಜೊಡ್ಡಿತು (ಕಂಪ. ೪೬-೩). [ಪೌಜು (<ಫೌಜು) + ಒಡ್ಡು₁]

**ಪೌಡರ್** 'ಪೌಡರು' ನೋ.

**ಪೌಡರು, ಪೌಡರ್** (ನಾ). ಮುಖ ಮತ್ತು ದೇಹಕಾಂತಿಯನ್ನು ಹೆಚ್ಚಿಸಿ ಆಹ್ಲಾದಕರವಾಗಿರುವಂತೆ ಮಾಡುವ ಸುಗಂಧಯುಕ್ತವಾದ ಪುಡಿ: ನಿನಗೇಕೆ ಬಣ್ಣ ಪೌಡರುಗಳ ಅಳಿಯಾಸೆ ಸಹಜಾಭಿರಾಮೆ ನೀನೈಸೆ (ಚಂದ್ರಶೀ. ೯೬-೬೨); ಒಳಗಡೆ ಕನ್ನಡಿ, ಪೌಡರು, ತುಟಿಯ ಕೆಂಬಣ್ಣ . . . ಇವಿಷ್ಟಿವೆ (ಕೈಲಾಕ. ೦೨). **ಪೌಡರ್**: ಸ್ನೋ, ಪೌಡರ್ ಬಳಿದುಕೊಂಡು ... ರೇಸ್ ಕುದುರೆಯಂತೆ ನಡೆಯುವುದು ಅವಳಿಗಿನ್ನೂ ಬಂದಿರಲಿಲ್ಲ (ಪುಊಲಾವ. ೯). [← ಇಂ. Powder]

**ಪೌಣಪಟ, ಪೋಣಪಟ್ಟು** (ನಾ). ನಾಲ್ಕನೆಯ ಮೂರು ಭಾಗ; ಮುಕ್ಕಾಲು ಭಾಗ: ಎಷ್ಟು ಕಿಮ್ಮತ್ತಿಯ ಮಾಲು ರವಾನೆ ಮಾಡಲ್ಪಟ್ಟಿದೆಯೋ ಅದಕ್ಕಿಂತ ಕಡಿಮೆ ಬೆಲೆಯ ಅಂದರೆ ಪೌಣಪಟ (¾) ಅಥವಾ ಅದಕ್ಕೂ ಕಡಿಮೆ ಬೆಲೆಯ ಹುಂಡಿಗಳು ಇರಬೇಕಾಗುತ್ತವೆ (ಪುಂಬಿವ್ಯಾ. ೨೬೨). **ಪೋಣಪಟ್ಟು**: ಯಾವದು ಕಳೆ ವಜನ ಇದ್ದೀತು ಅದರ ಸೂಟಿ ಮಣಾ ಮಾಡಬೇಕು, ಅಂದರೆ ಅದರ ಪೋಣಪಟ್ಟು ಮಾಡಬೇಕು (ಪುಂಬಿವ್ಯಾ. ೦೬೨). [← ಮರಾ. ಪಾಊಣ್‌ಪಾಟಾ]

**ಪೌಣಿಗೆ** 'ಪವಣಿಗೆ' ನೋ.

**ಪೌಣೆ** 'ಪಾವುಣ' ನೋ.

**ಪೌತವ** (ನಾ). ಒಂದು ಬಗೆಯ ಅಳತೆ: "ಪೌತವ_ಪಲ ಕರ್ಷಾದಿಗಳಿಂದಳೆವ ಅಳತೆ" (ಪಾಶಬ್. ೪). [ಸಂ.]

**ಪೌತಿ, ಪವುತಿ, ಪೋತಿ, ಫೋತಿ** (ನಾ). ಸಾವು; ಮರಣ: ಪೌತಿಯಾದ ಒಬ್ಬ ಮನುಷ್ಯನಿಗೆ ಉಂಟುಮಾಡಿದ ಕೆಡಕುಗಳಿಗೋಸ್ಕರ ದಾವಾಮಾಡುವುದಕ್ಕೂ ಮಾಡಲ್ಪಡುವುದಕ್ಕೂ . . . ಒಂದು ವರ್ಷ (ಗ್ರಾಪೂಕ. ೦೬೨). **ಪವುತಿ**: (೪). **ಪೋತಿ**: ಪುತಳಾಬಾಯಿ ಕಾಲರಾ ಬಂದು ಪೋತಿ ಆದಳು (ಗ್ರಾಪೂಹು. ೦೮೦). **ಫೋತಿ**: ಎದೀ ಬಡಕೊಂಡು ನಾನಾ ಫೋತಿ ಆದಾ ಅಂತ ಶಪ್ಪತ್ ಮಾಡಿ ಹೇಳತೀನಿ ರಾವಸಾಹೇಬ (ಗ್ರಾಪೂಹು. ೦೨೩). [← ಅರ. ಹಿಂ. ಮರಾ. ಫೌತ್]

**ಪೌತಿತಃಖ್ತೆ** (ನಾ). ಸತ್ತ ವ್ಯಕ್ತಿಯ ವಾರಸುದಾರರು ಮತ್ತು ಅವರ ಹಕ್ಕಿನ ವಿವರಣೆಗಳನ್ನು ಒಳಗೊಂಡ ಪಟ್ಟಿ: ಪಾತಿತಃಖ್ತೆ ಕೊಡದಿರುವುದು, ಕೊಟ್ಟರೂ ಅದನ್ನು ಯಾರು ಬಂದು ವಿಚಾರಿಸಿದರೂ, ಪೌತಿ ಆದವರನ್ನು ಬಿಟ್ಟು ಬೇರೆ ಯಾರನ್ನು ಕೇಳಿದರೂ, ಅದು ಪತ್ತೆ ಆಗದಿರುವುದು—ಇವು ನನ್ನೂರ ಶಾನುಭೋಗರ ಕಿತಾಪತಿಗಳು (ನನ್ನೂರು. ೦೯೬). [ಪೌತಿ + ತಃಖ್ತೆ (<ತಖ್ತೆ)]

**ಪೌತ್ರ** (ಗು). ೧. ಮಕ್ಕಳಿಗೆ ಸಂಬಂಧಿಸಿದ. (ನಾ). ೨. ಮಗನ ಅಥವಾ ಮಗಳ ಮಗ; ಮೊಮ್ಮಗ: "ದೌಹಿತ್ರಃ, ನಪ್ತಾ —ಈ ೨ (ಮ)ಗಳ ಮಗಂ; ಪೌತ್ರನುಂ ಅಹು" (ಹಲಾಯು. ೬೩-೩೩೦); ಅಂಗಮನ ಧನ ರಾಜ್ಯ ಪುತ್ರ ಪೌತ್ರ ಕಳತ್ರ ಮುಖ್ಯಸ್ವಪ್ನೈಶ್ವರ್ಯವ ಹಿಂಗದೇ ಕೊಡದೆ ಹಿಮ್ಮೆಟ್ಟಿದಡೆ ಎನ್ನ ವ್ರತ ಭಂಗವಾದೀತು (ಶ್ರೀಕಶಾ. ೦೯-೪);

ಅರ್ಜುನನು ಆ ಸೈನ್ಯಗಳಲ್ಲಿ ಪಿತೃಗಳು, ಪಿತಾಮಹರು . . . ಪೌತ್ರರು, ಸ್ನೇಹಿತರು, ಶ್ವಶುರರು, ಆಪ್ತರು ಇವರನ್ನು ನೋಡಿದನು (ಭಾಕಕ್ತ. ೧೦೨). [ಸಂ.]

**ಪೌತ್ರಕ** (ನಾ). = ಪೌತ್ರ ೨: ಎಲೈ ಪೌತ್ರಕ, ಎಲ್ಲಿಗೆ ಹೊರಟು ಹೋದೆ? (ಭಾಸಪಾ. ೩೯). [ಸಂ.]

**ಪೌತ್ರಿ** (ನಾ). ಮಗನ ಅಥವಾ ಮಗಳ ಮಗಳು; ಮೊಮ್ಮಗಳು: "ನಪ್ತ್ರೀ, ಪೌತ್ರೀ—೨ ಸುತಾತ್ಮಜಾ—ಮಗನ ಮಗಳ ಹೆಸರುಗಳು. ಮಗಳ ಮಗಳಿಗೂ ಹೆಸರು. ಮೊಮ್ಮಗಳು, ಮೊಮ್ಮಗನು" (ಸಿದ್ಧಾಂತಿ. ೧೬೩). [ಸಂ. ಪೌತ್ರೀ]

**ಪೌತ್ರಿಕ** (ಗು). ೧. ಮಗ ಅಥವಾ ಮೊಮ್ಮಗನಿಗೆ ಸಂಬಂಧಿಸಿದ. (ನಾ). ೨. ಮಗಳ ಮಗ. [ಸಂ.]

**ಪೌದ್ಗಲಿಕ** (ಗು). ೧. ಭೌತವಸ್ತುವಿಗೆ ಸಂಬಂಧಿಸಿದ; ಭೌತಿಕ ವಿಷಯದ. ೨. ಸ್ವಾರ್ಥದ. (ನಾ). ೩. [ಜೈನ] ಅಜೀವತತ್ತ್ವಗಳಲ್ಲಿ ಒಂದಾದ ಪುದ್ಗಲದಿಂದ ಜನ್ಯವಾದುದು; ಪುದ್ಗಲಕ್ಕೆ ಸಂಬಂಧಿಸಿದುದು: ನೆಳಲು ಕತ್ತಲೆಗಳು ಪೌದ್ಗಲಿಕಗಳೆಂದು ಹೇಳಿದುದು ನ್ಯಾಯಮತಕ್ಕೆ ವಿರೋಧವಾದುದು (ಕೃಪರ. ೧). [ಸಂ.]

**ಪೌನಃಪುನ್ಯ** (ನಾ). ಮತ್ತೆ ಮತ್ತೆ ಆಗುವಿಕೆ; ಪುನರಾವರ್ತನೆ. [ಸಂ.]

**ಪೌನರುಕ್ತ್ಯ** (ನಾ). [ಕಾವ್ಯಮೀ] ವಾಕ್ಯದೋಷಗಳಲ್ಲಿ ಒಂದು; ಹೇಳಿದುದನ್ನೇ ಹೇಳುವುದು; ಪುನರುಕ್ತಿ: ಕರಿಕಳಭಮೆನೆ ಶಿರಶ್ಯೇಖರಮೆನೆ ನವಪುಷ್ಪಮಾಲೆಯೆನೆ . . . ಪೌನರುಕ್ತ್ಯಮಾಗದು ವಿಶೇಷಸಂಭಾವನೆಯೊಳ್ (ಕಾವ್ಯಾವ. ೪೬೨). [ಸಂ.]

**ಪೌನರ್ಭವ** (ನಾ). ಪುನರ್ವಿವಾಹಿತೆಯಲ್ಲಿ ಹುಟ್ಟಿದವನು; ಎರಡನೆಯ ಮದುವೆಯಾದವಳಲ್ಲಿ ಹುಟ್ಟಿದವನು. [ಸಂ.]

**ಪೌನು** 'ಪವನು' ನೋ.

**ಪೌಮುಡ್ಡಿಬೋಯ** (ನಾ). ಒಬ್ಬಾತನ ಹೆಸರು: ಪೌಮುಡ್ಡಿಬೋಯಸ್ಯ ಕೌಣ್ಡಿಲ್ಯಗೋತ್ರ ದೇಪಶರ್ಮ್ಮಣ (ಇಅ. VII, ೧೮೮-೩೬; ೬೬೮). [?]

**ಪೌರ** (ಗು). ೧. ನಗರಕ್ಕೆ ಸಂಬಂಧಿಸಿದ: 'ಪೌರಕಾರ್ಯ', 'ಪೌರಜನ' ಪರಾ. ೨. ಪೂರ್ವದಿಕ್ಕಿನಲ್ಲಿರುವ. ೩. ಪೂರ್ವದೇಶದ. ೪. ಪೂರ್ವಕಾಲದ. (ನಾ). ೫. ನಗರದಲ್ಲಿ ವಾಸಿಸುವವನು; ಪಟ್ಟಣಿಗ. ೬. ನಾಗರಿಕನ ಹಕ್ಕುಬಾಧ್ಯತೆಗಳನ್ನು ಪಡೆದವನು; ನಾಗರಿಕ: ಗುರುಶ್ರೇಣಿಯವರಿಗೆ, ವಿಪ್ರರಿಗೆ, ಪೌರರಿಗೆ . . . ಅವರವರ ಅಂತಸ್ತು, ಅಧಿಕಾರ, ಗೌರವಗಳಿಗೆ ತಕ್ಕಂತೆ ಸುಖಾಸನಗಳನ್ನು ಹಾಕಲಾಗಿತ್ತು (ಶಾಂತಲಾ. ೧೬). ೭. ಪುರ; ಪಟ್ಟಣ; ನಗರ: ಪೌರವಿನಿರ್ಗತೆಯಾಗಿ ಮನೋರಥಮನೆ ಕಣ್ಬ ತೆಱದಿನಿದಿರೊಳ್ ಕಂಡಳ್ ನಾರದನಂ (ಜಗಪ. ೧೧-೨೮). ೮. ಒಂದು ಬಗೆಯ ಸುವಾಸನೆಯ ಹುಲ್ಲು: "ಕತ್ತೃಣಂ, ಪೌರಂ . . . ರೌಹಿಷಂ—೬ ಕಾಚೀಹುಲ್ಲು" (ಸಿದ್ಧಾಂತಿ. ೧೫೦). [ಸಂ.]

**ಪೌರಂದರ** (ಗು). ೧. ಇಂದ್ರನಿಗೆ ಸಂಬಂಧಿಸಿದ, ಸೇರಿದ. (ನಾ). ೨. ಇಂದ್ರ: ಭೈರವರಾಜನ ಧೈರ್ಯವ ನೋಡಲೆಂದಾರ್ಯಮರಾಜಾಗ್ನಿನೇತ್ರ ಪೌರಂದರಗೆ ಪೇಳೆ (ಭೈರವೇ. ೩-೧೬೬). ೩. ಇಂದ್ರಾಸ್ತ್ರ: ಎನಗೆ ವಿದ್ಯಾಧನಮೆ ಧನಮಪ್ಪುದಱಿಂ ದಿವ್ಯಾಸ್ತ್ರಂಗಳಂ ದಯೆಗೆಯ್ವುದೆನೆ ವಾರುಣ ವಾಯುವ್ಯಾಗ್ನೇಯ ಪೌ[ಪಾಠಾಂ. ಪು]ರಂದರಾದಿ ಪ್ರಧಾನಾಸ್ತ್ರಂಗಳಂ ಕುಡೆ ಕೊಂಡು (ಲಂಕಭಾ. ೨-೪೬ ವ). [ಸಂ.]

**ಪೌರಕ** (ನಾ). ನಾಗರಿಕ: ಅಬ್ಬಾಸಿ ಖಲೀಫರೆಲ್ಲರೂ ಪೌರಕ (ಮುಲ್ಕಿ) ಮತ್ತು ಸೈನಿಕ ಮುಖ್ಯಾಧಿಕಾರಗಳಿಗೆಲ್ಲಾ ಪಾರಸೀಕರನ್ನೇ ನೇಮಿಸುತ್ತಿದ್ದರು (ಇಸ್ಲಾಂಸಂ. ೪೩). [< ಸಂ. ಪೌರಿಕ]

**ಪೌರಕಾರ್ಯ** (ನಾ). ಪ್ರಜೆಗಳ ಕೆಲಸ; ಸಾರ್ವಜನಿಕ ಕಾರ್ಯ: ಎಲೆ ವೇತ್ರವತಿ . . . ನಡಸಿದ ಪೌರಕಾರ್ಯವನ್ನು ಪತ್ರಿಕಾಮುಖದಿಂದ ತಿಳಿಸುವಂತೆ ನಾವು ಹೇಳಿದೆವೆಂದು ಮಂತ್ರಿಗೆ ತಿಳಿಸು (ಶಾಕುಂತ. ೬೩-೧೧). [ಸಂ.]

**ಪೌರಜನ** (ನಾ). ಪುರದ ಜನ; ನಾಗರಿಕ ವರ್ಗ; ಜನತೆ: ವಿಸ್ಮಿತಾಶೇಷಪೌರಜನವಿಲೋಕ್ಯಮಾನಾನೂನನಯನನಾಗಿರ್ದು (ಚಂದ್ರಪು. ೬-೦೮ ವ); ನೆಱೆ ನಿನ್ನ ನಂಬಿ ನಚ್ಚಿರ್ದ ಪರಿವಾರಮಂ ಮಱೆದೆಯೋ . . . ಪೇಳು ನೇಸಱುಗುಲಜ ಎಂದೆಂದು ನುಡಿನುಡಿದು ಮಿಡುಮಿಡನೆ ಮಿಡುಕಿತ್ತು ಪೌರಜನವು (ಹಕಾ. ೯-೩); ಪೌರಜನವೈತರಲು ಬಂಡಿಯನೂರ ಹೊಱವಂಡಿಸಿದನು (ಕುಮ್ಯಾಕ. ೧೧-೨೯). [ಸಂ.]

**ಪೌರತ್ವ** (ನಾ). ಪಟ್ಟಣಿಗನ ಸ್ಥಾನಮಾನ: ಪೌರತ್ವ, ಸರ್ಕಾರ, ಸಂವಿಧಾನ ಮುಂತಾದ ವಿಷಯಗಳನ್ನು ಕುರಿತ ಅಧ್ಯಯನಕ್ಷೇತ್ರ (ಸಿವಿಕ್ಸ್) (ಕವಿಕೋ. XI, ೨೮೩). [ಸಂ.]

**ಪೌರಧರ್ಮ** (ನಾ). ೧. ಪ್ರಜೆಯು ಪಾಲಿಸಬೇಕಾದ ಕರ್ತವ್ಯ; ಪ್ರಜಾನೀತಿ. ೨. ಪ್ರಜೆಯ ಹಕ್ಕುಬಾಧ್ಯತೆಗಳನ್ನೂ ಕರ್ತವ್ಯಗಳನ್ನೂ ಕುರಿತ ಶಾಸ್ತ್ರ: ಪೌರಧರ್ಮವನ್ನು ಕಲಿತರೂ ಸತ್ಪ್ರಜಾಜೀವನವನ್ನು ಅವರಲ್ಲಿ ಅಭ್ಯಾಸಕ್ಕೆ ತರುತ್ತಿಲ್ಲ (ಶಿಕ್ಷಣ. ೧೩೦). [ಸಂ.]

**ಪೌರನೀತಿ** (ನಾ). ೧. ನಾಗರಿಕನು ಪಾಲಿಸಬೇಕಾದ ಕಟ್ಟಳೆ. ೨. ಪೌರರ ಹಕ್ಕುಬಾಧ್ಯತೆ, ಕರ್ತವ್ಯ ಮೊದಲಾದುವನ್ನು ವಿವರಿಸುವ ಶಾಸ್ತ್ರ: ಈಚೆಗೆ ಪ್ರಜಾಧರ್ಮ, ಪೌರನೀತಿ ಮುಂತಾದ ಹೆಸರುಗಳಿಂದ ಇದನ್ನೊಂದು ವ್ಯಾಸಂಗವಿಷಯವಾಗಿ ಪಠ್ಯಕ್ರಮದಲ್ಲೂ ಸೇರಿಸಲಾಗಿದೆ (ಕವಿಕೋ. XI, ೨೮೩). [ಸಂ.]

**ಪೌರಲೋಕ** (ನಾ). ಪೌರಜನ; ಪ್ರಜಾಸಮೂಹ: ಪ್ರಭುವಿಂ ಮತ್ತಾಸ್ವಾಮಿ ತಾನಲ್ಲದೆ ಪೆಱರೆನುತುಂ ನೋಡೆ ತತ್ಪೌರಲೋಕಂ ವಿಭುಸದ್ಮಂಗಂಡು ಬಂದಂ ಜನಸಮಯುಸರಸ್ಸಾರಕೇಳೀಮರಾಳಂ (ಚಂದ್ರಪು. ೬-೦೫೮). [ಸಂ.]

**ಪೌರವ** (ಗು). ೧. ಪುರುವಿಗೆ ಸಂಬಂಧಿಸಿದ. (ನಾ). ೨. ಉತ್ತರ ಭಾರತದ ಒಂದು ದೇಶ ಮತ್ತು ಅಲ್ಲಿಯ ಜನತೆ. ೩. ಪುರುವಂಶದವನು; ಕ್ಷತ್ರಿಯ: ಉತ್ಕೃಷ್ಟಮಪ್ಪ ಸರ್ವಾರ್ಥಸಿದ್ಧಿಯಿಂ ಬಂದುದಱಿಂ ಪೌರವನುಂ . . . ವಿಶ್ವಕರ್ಮವಿಧಾನದಿಂ ಶ್ರೇಷ್ಠನುಮೆನಿಸಿ (ಶಾಪುಂಪು. ೩೬). ೪. ಪುರುರಾಜನ ಮಗ. [ಸಂ.]

**ಪೌರವಧು** (ನಾ). ಪಟ್ಟಣದ ಹೆಂಗಸು: ಸೌರಭಕುಸುಮವಿಹಾರಂ ಪೌರವಧೂಶ್ವಸಿತ ಪದ್ಮಗಂಧವಿಚಾರಂ . . . ಸುಳಿವುದಲ್ಲಿ ಚಾರುಸಮೀರಂ (ಜಗಪ. ೨-೨೫). [ಸಂ. ಪೌರವಧೂ]

**ಪೌರಸಂಸ್ಥೆ** (ನಾ). ಸ್ಥಳೀಯ ಆಡಳಿತಾಧಿಕಾರವುಳ್ಳ ಸಂಸ್ಥೆ; ನಗರಸಭೆ; ಮುನಿಸಿಪಾಲಿಟಿ: ಪೌರಸಂಸ್ಥೆಯ ಒಡೆತನಕ್ಕೆ, ಆಡಳಿತಕ್ಕೆ, ಒಳಪಡಿಸು (Municipalize· ಇಂಕಂ). [ಪೌರ + ಸಂಸ್ಥೆ]

**ಪೌರಸಭೆ** (ನಾ). = ಪೌರಸಂಸ್ಥೆ: ಆ ಹಿರಿಯ ಕಲಾವಿದನನ್ನು ನಗರದ ಜನತೆಯ ಪರವಾಗಿ ಪೌರಸಭೆಯು ಸನ್ಮಾನಿಸಿತು (ರೂಢಿ). [ಪೌರ + ಸಭೆ]

**ಪೌರಸ್ತ್ಯ** (ಗು). ೧. ಪೂರ್ವದಿಕ್ಕಿನಲ್ಲಿ ಇರುವ: ಪೂರ್ವಭಾಗಕ್ಕೆ ಸೇರಿದ: ಆ ದಂಡನಾಯಕಂ ಪೌರಸ್ತ್ಯರಾಜನ್ಯಕಸಾಧನಪರನಾಗಿ ಮುಂದಂ ನಡೆಯೆ (ಶಾಂತಿಪು. ೧೧-೦೫೮ ವ); ಪಾಶ್ಚಾತ್ಯಸಂಸ್ಕೃತಿಯು ಭಾರತವರ್ಷದಲ್ಲಿ ತೋರಿಕೊಂಡ ಕಾಲದಿಂದ, ಪೌರಸ್ತ್ಯ ಪಾಶ್ಚಾತ್ಯ ಸಂಸ್ಕೃತಿಗಳ ಪರಸ್ಪರ ಘರ್ಷಣೆಯು ಆರಂಭವಾಯಿತು (ಭಾರದ. ೩೬೩). ೨. ಪೂರ್ವ

ದೇಶದಲ್ಲಿ ಹುಟ್ಟಿದ. ೩. ಎಲ್ಲಕ್ಕೂ ಮುಂದಿರುವ ; ಮುಂಭಾಗ ದಲ್ಲಿರುವ. ೪. ಮೊದಲನೆಯ. (ನಾ). ೫. ಮೊದಲನೆಯದು : " ಆದಿಃ, ಪೂರ್ವಃ, ಪೌರಸ್ತ್ಯಃ, ಪ್ರಥಮಃ, ಆದ್ಯಃ —೫ ಮೊದಲನೇದರ ಹೆಸರುಗಳು " (ಸಿದ್ಧಾಂಶಿ. ೩೪೪). [ಸಂ.]

**ಪೌರಸ್ತ್ರೀ** (ನಾ). = ಪೌರವಧು : ಪೌರಸ್ತ್ರೀನಯನಪ್ರಭಾಸಹಚರಂ ಹಾರಾಂಶುಮಿಶ್ರೀರ್ಣವಕ್ಷೋರಂಗಸ್ಥಲದೊಳ್ ರಸಾಭಿನಯಮಂ ತೋರ್ಪ ನ್ನೆಗಂ . . . ಬರ್ಪೀ ಮಹಾಧೀರರ್ ಕಾಲ್ನಡೆಯೊಳ್ ನೃಪಾವಸಥದಿಂ ಬರ್ಪಂದಮಾವಂದಮೋ (ಶಂಂಬರಾ. ೬–೧೮೦). [ಸಂ.]

**ಪೌರಾಂಗನೆ** (ನಾ). = ಪೌರವಧು : ಪೌರಾಂಗನಾವಶೀಕರಣಚೂರ್ಣ ಮಾದುದು ಬಳೌಘಧೂಳೀಚಯಂ (ಆಂಪು. ೧೧–೦೫). [ಸಂ. ಪೌರಾಂಗನಾ]

**ಪೌರಾಣ** (ಗು). ೧. ಹಿಂದಿನ ; ಪೂರ್ವ : ತಾಯೆ ಬಾ ಗಾಂಧಾರಿ ಮನದಲಿ ನೋಯದಿರು ಪೌರಾಣಜನ್ಮದ ದಾಯಭಾಗದ ಭೋಗ ಭಂಗಿಸ ಲಳುಕಲೇಕಿನ್ನು (ಕುಮ್ಯಾಗ. ೧೨–೩). ೨. ಪುರಾಣಗಳಿಗೆ ಸಂಬಂಧಿಸಿದ. (ನಾ). ೩. ಹಳೆಯದು ; ಪ್ರಾಚೀನವಾದುದು : " ವಿಲಸತ್ಪೌರಾಣ ಮೆಂಬೀ ದ್ವಿತಯ ಚಿರಮೇನಿಕ್ಕುಂ " (ಜಾಜಾಶ. ೦೬೬). ೪. ಹದಿನೆಂಟು ಮಹಾಪುರಾಣ ಹಾಗೂ ಉಪಪುರಾಣಗಳಲ್ಲಿ ಒಂದು : " ಕಡು ದೀರ್ಘಂ ಜರತಂಗಳಾದಿಕಥೆಯುಂ ಪೌರಾಣ ಶಬ್ದಂ " (ಜಾಜಾರ. ೦೩೪) ; ಪೌರಾಣಮಂ ಕಲಿವ ಜಪಸಮಾಧಿಯೊಳಿಪ್ಪ . . . ಕಂದಮೂಲಫಲಮಂ ತಪ್ಪ ಚಾರುಮುನಿಪುತ್ರರ್ಗೆ ವಂದಿಸುತ ಬಂದಿದಿರೊಳೊಂದು ಕೊಳನಂ ಕಂಡನು (ಹರಿಶಾ. ೫–೫೫) ; ಜ್ಞಾನವೃದ್ಧರು ವಿಪ್ರರಲ್ಲಿ ಸನ್ಮಾನನೀಯರು ಶೌರ್ಯವೃದ್ಧರು ಮಾನವೇಂದ್ರರೊಳಧಿಕವಿದು ಪೌರಾಣಸಿದ್ಧವಲೆ (ಕುಮ್ಯಾಸ. ೬–೫೦). ೫. ಪ್ರಾಚೀನವಾದ ಚರಿತ್ರೆಯನ್ನು ಹೊಂದಿದ ಕಾವ್ಯಪ್ರಕಾರ : ಪಂಪಾಕ್ಷೇತ್ರದೊಡೆಯಂ ವಿರೂಪಾಕ್ಷನೇ ಪೇಳಿಸಿದೊಡೆ ಸವಿನುಡಿಗಳಿಂದೀ ಚೆನ್ನಬಸವಪೌರಾಣಮಂ ಪೇಳ್ದೆನಧಿಕೋತ್ಸವದೊಳು (ಚಂಪು. ೧–೩೦). [ಸಂ.]

**ಪೌರಾಣಿ** (ನಾ). ಪುರಾಣವನ್ನು ಹೇಳುವವನು; ಪೌರಾಣಿಕ : ಬಸವನ ಕರುಣದೊಳಿಂತಾತ ಮುಕ್ತಿಸಂತಸನಾದನಿದು ಪುಸಿಯಲ್ಲ ಪಶುಧೀಶ ಮಹಾ ದೇವರಾಯ ಕೇಳೆನುತಲಂದುಸುರಿದ ಪರಮಪೌರಾಣಿ (ಬೋಳಿಪು. ೨–೭೪) ; ಇರಲು ಶ್ರೀಕೃಷ್ಣರಾಯನು ಬಂದು ಪೌರಾಣಿ ಪರಸೆ ಯೋಗ್ಯಾಸನದಿ ಕುಳ್ಳಿರಿಸಲು (ಕಜಮೋ. ೧೧–೭). [ಸಂ. ಪೌರಾಣೀ]

**ಪೌರಾಣಿಕ** (ಗು). ೧. ಹಳೆಯ ಕಾಲಕ್ಕೆ ಸೇರಿದ ; ಹಿಂದಿನ ಕಾಲದ : ವಸ್ತುತಃ ತಂದೆಯವರು ಒಂದು ವೇಳೆ ತುಂಟ ರೇಗಿ ಹೋಗಿ ಜರ್ಬ ಮಾಡದೆ ಬಿಟ್ಟಿದ್ದರೆ . . . ಈ ಪೌರಾಣಿಕ ಪುತ್ತಲಿಯ ಜೊತೆಗೆ ನನ್ನ ಮದುವೆ ಆಗಿಹೋಗುತ್ತಿತ್ತು (ಇಕ್ಕಳ. ೪೬೩). ೨. ಪುರಾಣಗಳಿಗೆ ಸಂಬಂಧಿಸಿದ. (ನಾ). ೩. ಪುರಾಣಗಳಿಗೆ ಸಂಬಂಧಿಸಿದುದು : ಆಂಡಯ್ಯನ ಕಾವ್ಯದ ಕಥೆ ಪೌರಾಣಿಕ, ತಿಮ್ಮಪ್ಪಯ್ಯನವರ 'ಸೊಬಗಿನ ಬಳ್ಳಿ'ಯ ಕಥೆಯೂ ಪೌರಾಣಿಕ (ಕಾಂಆಕ. ಮುನ್ನುಡಿ. ೯); ನಾಟಕದ ವಸ್ತು ಪೌರಾಣಿಕವಾಗಿದ್ದರೆ ನಮ್ಮ ಹಿಂದಿನವರ ಜೀವನವನ್ನು ಚಿತ್ರಿಸಿ ನಮ್ಮ ಧರ್ಮ, ಸಂಸ್ಕೃತಿ, ಸಾಹಿತ್ಯ, ಕಲೆ ಇವುಗಳಲ್ಲಿ ಅಭಿಮಾನ ಹುಟ್ಟಿಸುತ್ತವೆ (ಶ್ರೀದ. ೫೪). ೪. ಪುರಾಣಗಳನ್ನು ಓದಿ ಚೆನ್ನಾಗಿ ತಿಳಿದು ಕೊಂಡಿರುವವನು ; ಪುರಾಣಿಕ : ಪೌರಾಣಿಕರ್ ತಂದು ಮಹಾರಾಜಂ ಗುಂದು ಬಿನ್ನಯಿಸಿದರ್ ಕುವರಂ ಸಾರಪುರಾಣಾರ್ಥಂಗಳನಾರಯ್ದವಧರಿಪ ವಿಮಲಮೇಧಾಬಲಮಂ (ಜಳಂ. ೪–೧೧೪). [ಸಂ.]

**ಪೌರಾತನ** (ಗುಂ). ಪ್ರಾಚೀನವಾದುದಕ್ಕೆ ಸಂಬಂಧಿಸಿದ : ಕಾಲನನು ಮೀಟುವವರಾರು ಪೌರಾತನಕೃತಧ್ರುವವ್ಯತ್ಯಯವನು ಗೆಲುವಾತನಿಲ್ಲ (ಕುಮ್ಯಾದ್ರೋ. ೭–೩೩). [ಸಂ.]

**ಪೌರುಷ** (ಗು). ೧. ಪುರುಷನಿಗೆ ಸಂಬಂಧಿಸಿದ. ೨. ವೀರ್ಯವತ್ತಾದ ; ಗಂಡುತನದ. (ನಾ). ೩. ಪೌರುಷತ್ವ ; ಗಂಡುಸುತನ. ೪. ಶೌರ್ಯ; ಕೆಚ್ಚು ; ಪರಾಕ್ರಮ : " ಪ್ರತಾಪಃ, ಪೌರುಷಂ . . . ಪರಾಕ್ರಮಃ —ಈ ೫ ಪರಾಕ್ರಮಂ" (ಹಲಾಯು. ೦೨೦–೩೮); ಆ ನೃಪನ ಪೌರುಷಮೇಂ ಪೊಗಟಲ್ಕೆವೇಟ್ಕುಮೇ (ಕಾದಂಪೂ. ೦೩): ಆರಾ ದೊಡಮೆಟಿವರ್ಕನ್ಯಾರತ್ನಮನೆಟಿದೊಡೀಯೆಮೆಂಬರೆ ಕುಡುಮಂತಾ ರಾಮನೊಳೀಗಂಡೈ ಪೌರುಷಮಂ ತಕ್ಕುದಟಿದು ನೆಗಟಲ್ವೇಡಾ (ಶಂಂಬಮಾ. ೫–೨೦); ಕೋಪಪ್ರದರ್ಶನಂ ಪೌರುಷಕೆ ಕುರುಹೆಂದು ಬೆದರಿ ಕಂಬನಿ ಗರೆದು, ಸೋಲ್ತೊಮ್ಮೆ ಗೆಲ್ದಳಾಕೆ! (ಚಿತ್ರಾಂಗ. ೨೫–೬೬೫). ೫. ಮನುಷ್ಯಪ್ರಯತ್ನ,—ಸಾಹಸ : ದೈವಬಲವೇ ಬಲವು ಪೌರುಷ ವೇವುದು (ಕೌಶಿಶಾ. ೨೬–೯); ದೈವದ ಹಾಗು ಪೌರುಷದ ಅತ್ಯುಕ್ತಿಯ ಸಿದ್ಧಾಂತದಿಂದ ಸಮಾಜವು ದೂಷಿತವಾದಷ್ಟು ಮತ್ತಾವುದರಿಂದಲೂ ದೂಷಿತವಾಗಲಾರದು (ಪ್ರಬಂಧ. ೩೨). 'ಪೌರುಷವಾದಿ' ಪರಾ. ೬. ಒಬ್ಬ ಮನುಷ್ಯನು ಹೊರಬಹುದಾದಷ್ಟು ಹೊರೆ, —ಭಾರ. ೭. ಸುಮಾರು ಐದರಿಂದ ಆರು ಅಡಿಯವರೆಗಿನ ಎತ್ತರ ; ಒಂದಾಳೆತ್ತರ; ಪುರುಷಪ್ರಮಾಣ : "ಆಳತೆಯಲ್ಲಿಯುಂ ಪೌರುಷಮೆಂಬುದು" (ಹಲಾಯು. ೦೩೪–೦೯). [ಸಂ.]

**ಪೌರುಷವಂತ** (ನಾ). ಶಕ್ತಿವಂತ ; ಪರಾಕ್ರಮಿ : ಆ ಸ್ಫುರದ್ರೂಪಿಯೂ ಪೌರುಷವಂತನೂ ಆದ ರಾಜಕುಮಾರನನ್ನು ನೋಡಿ ಅರಸನ ಸಿಟ್ಟು ಇಳಿಯಿತು (ಮುಹಸ. ೪೭). [ಸಂ. ಪೌರುಷವತ್]

**ಪೌರುಷವಾದಿ** (ನಾ). ಪುರುಷಪ್ರಯತ್ನವನ್ನು ಸಮರ್ಥಿಸುವವನು : ಪೌರುಷದ ಯಾವುದೇ ಸಿದ್ಧಾಂತವು ದೈವವನ್ನು ಸುಳ್ಳೆಂದು ಸಿದ್ಧಮಾಡಿದರೆ, ಪೌರುಷವೂ ಕೂಡ ಕಳೆಗುಂದುತ್ತದೆ ಎಂಬುದು ಎಷ್ಟೋ ಪೌರುಷವಾದಿ ಗಳಿಗೆ ಲಕ್ಷ್ಯಕ್ಕೆ ಬರುವುದಿಲ್ಲ (ಪ್ರಬಂಧ. ೩೦). [ಸಂ. ಪೌರುಷವಾದಿನ್]

**ಪೌರುಷಾಂಗ** (ನಾ). ಶೌರ್ಯದಿಂದ ಕೂಡಿದುದು : ಭೀತಿ ಮನದಲಿ ಪೌರುಷಾಂಗದ ಮಾತು ಮುಖದಲಿ ಮುರಿವು ಕಾಲಲಿ (ಕುಮ್ಯಾದ್ರೋ. ೦೫–೨೫). [ಸಂ.]

**ಪೌರುಷೇಯ** (ಗು). ೧. ಮನುಷ್ಯನಿಗೆ ಸಂಬಂಧಿಸಿದ. ೨. ಮನುಷ್ಯ ನಿಂದ ಮಾಡಲ್ಪಟ್ಟ; ಪುರುಷಕೃತವಾದ : 'ಜೀವನ' ಶಬ್ದವನ್ನು ನಾನು ಮೂರು ತರನಾಗಿ ಕಾಣುತ್ತಿರುವೆನು. ಅದು ಹೀಗೆ : (೧). ಪ್ರಾಕೃತಿಕ ಜೀವನ. (೨). ಪೌರುಷೇಯ ಜೀವನ. (೩). ಸಿದ್ಧ ದೈವೀ ಜೀವನ (ಪ್ರಬಂಧ. ೦. ಲೇಖಕರ ತಿರುಳು). (ನಾ). ೩. ಮನುಷ್ಯನಿಂದ ನಿರ್ಮಾಣವಾದುದು ; ಮನುಷ್ಯ ಕಾರ್ಯ : ಪುರುಷಕೃತವಾಕ್ಯಾರ್ಥ ಸಾಕ್ಷಾತ್ಕಾರವೇ ಆಪ್ತಿ. ವಾಕ್ಯಾರ್ಥವನ್ನು ನೋಡದೆ ಇರುವವನು ಆಪ್ತನಲ್ಲ. ಹಾಗಾದರೆ ವೇದ ಪೌರುಷೇಯವಾಗುವುದು (ಹಿಂದಶಾ. ೦೪೪). ೪. ಜನ ಸಮೂಹ ; ಜನರ ಗುಂಪು. ೫. ಪುರುಷವಧೆ. [ಸಂ.]

**ಪೌರುಸ** (ನಾ). ಶಕ್ತಿ ; ಪೌರುಷ : " ಪೌರುಸ—ಪೌರುಷ " (ಶಬ್ದಕೋ. ೨೭); ಷಕಾರಕ್ಕೆ ಆಮಿಷ—ಆಮಿಸ . . . ಪೌರುಷ—ಪೌರುಸ (ಶಬ್ದ. ೨೫೩ ಪ್ರಯೋ); ಕಂಠೀರವನರಸೇಂದ್ರನ ಪುತ್ರ ಪೌರುಸವ ಪೊಗಳುತ ಸಂತೋಷದೆ ದೆಸೆದೆಸೆಯ ಜನರು ಯಾತ್ರೆಗಂತರಿಸದೆ ತೆರಳಿದರು (ಕಂಪು. ೦೩–೬೪). [ < ಸಂ. ಪೌರುಷ ]

**ಪೌರುಳಲ್** (ನಾ). ಒಂದು ಊರಿನ ಹೆಸರು : ಅನ್ದರಿಯ ಆಲನ್ದೂರ ಪೌರುಳಲ್ ಅ ಪೆನ್ನಗರಾದ್ಯನೇಕಸಮರಮುಖಮುಖಾಹುತ . . . ಪೂರ್ಬ್ಬದತ್ತ ಈಶಾನ್ಯದಿಶಾ ಅಪಕ್ಷೇತ್ರಮ್ (ಇಆ. V. ೦೩೯–೭ ; 513). [ ? ]

**ಪೌರೋಗವ** (ನಾ). ಅರಮನೆಯ (ವಿಶೇಷವಾಗಿ ಪಾಕಶಾಲೆಯ)

ಮೇಲ್ವಿಚಾರಕ, —ಅಧಿಕಾರಿ : "ಪೌರೋಗವಃ, ಸೂದಾಧ್ಯಕ್ಷಃ—ಈ ೨ ಬಾಣಸುವೆಗ್ಗಡೆ" (ಹಲಾಯು. ೬೦-೨೬೬) ; "ಪೌರೋಗವಂ ಸೂಪಕಾರರ ಕರ್ತನಕ್ಕು" (ಮಂಗರಾ. ೬೦-೮). [ಸಂ.]

**ಪೌರೋಭಾಗ್ಯ** (ನಾ). ದೋಷವನ್ನು ಎತ್ತಿ ಹೇಳುವುದು ; ಛಿದ್ರಾನ್ವೇಷಣ : ಪೌರೋಭಾಗ್ಯವ್ಯಪೇತಮನಸ್ಕರಕ್ಕರಿಗರಧಿಕಪ್ರಜ್ಞರ್ ಕೆಯ್ಕೊಂಡು ತಿರ್ದುಗೆ ದೋಷವಮಂ (ಕಾವ್ಯಾವ. ೯೬೩). [ಸಂ.]

**ಪೌರೋಹಿತ** (ಗು). ೧. ಪುರೋಹಿತನಿಗೆ ಸಂಬಂಧಿಸಿದ. (ನಾ). ೨. ವೇದೋಕ್ತ ವಿಧಿಗಳನ್ನು ಮಾಡಿಸುವವನು ; ಪುರೋಹಿತ : "ಪೌರೋಹಿತೇ ದಂಡನಾಥಂ . . . ತಳವಾಱನೆಂಬಿವರು ಭೂರವಮಣರಲ್ಲಿ ವಿನಿಯೋಗಮಂ ತಾಳ್ದು ಪದಿನೆಣ್ಬರ್ ಪ್ರಧಾನರೆನಿಕುಂ" (ಮಂಗರಾ. ೬೦-೧೧) ; ಚಂಡದೈವಜ್ಞನನಧಿಕಗುಣಮಂಡನನ ಬಹುಶಾಸ್ತ್ರಪಠಣನ ಪಂಡಿತನ ಪೌರೋಹಿತನ ಮಾಡುವುದು (ಉಪ್ಪಾ.ಉ. ೩-೬೬). [ಸಂ.]

**ಪೌರೋಹಿತ್ಯ** (ನಾ). ೧. ಪುರೋಹಿತನ ಕೆಲಸ, —ವೃತ್ತಿ : ಹರಿ ಪೌರೋಹಿತ್ಯವಮಂ ತಾಳ್ದೆ ರಾಗಿಸಿ ಶಕ್ರಾಂಗನೆ ದಾದಿಯಾಗೆ...ಜನಂಗೆಸೆದು ದಂತಾ ನಾಮಕರ್ಮೋತ್ಸವಂ (ಶಾಂತಿಕ. ೧೦-೬೮) ; ಪೌರೋಹಿತ್ಯಾಧಿಕಾರ ಪ್ರಮುಖರಿರದೆ ಬಂದುಂ . . . ದೋಷಂ ಪಾರುತ್ತಂ ಪೋಕುಮೆಂದಾಡುತಂ (ಶಾಅಸ್ಥ. ೩-೪-೨೪) : ಸರ್ಾಪ್ಪು ಆದಾಯ . . . ಕಳೆದ ಹದಿನೆಂಟು ವರ್ಷಗಳಿಂದ ಪೌರೋಹಿತ್ಯದ ಮೂಲಕ ಅವನಿಗೊದಗುತ್ತಿತ್ತು (ಪುಶರು. ೧೮೦). ೨. (ಅಲಂ) ಮುಂದಾಳುತನ : ವ್ಯರ್ಥಪ್ರೇಮದ ವೇದನೆಯ ಪೌರೋಹಿತ್ಯವನ್ನೇ ಶರಶ್ಚಂದ್ರರು ವಹಿಸಿದ್ದಾರೆ (ಭಾರತಿ. ೦) ; ಯಾವುದೇ ಒಂದು ಶಾಸ್ತ್ರದ ಅಭ್ಯಾಸದ ವಿಷಯವಾಗಿ ಯಾರೂ ಪೌರೋಹಿತ್ಯ ವಹಿಸುವ ಕಾರಣವಿಲ್ಲ (ಭಾಷಾಶಾ. ೧೯). [ಸಂ.]

**ಪೌರ್ಣಮಾಸ** (ನಾ). ೧. ಹುಣ್ಣಿಮೆಗೆ ಸಂಬಂಧಿಸಿದುದು. ೨. ಹುಣ್ಣಿಮೆ. ೩. ಹುಣ್ಣಿಮೆಯ ದಿನ ಆಚರಿಸುವ ಒಂದು ವ್ರತ. [ಸಂ.]

**ಪೌರ್ಣಮಾಸಿ** (ನಾ). ಪೂರ್ಣಚಂದ್ರನಿರುವ ದಿನ ; ಹುಣ್ಣಿಮೆ : "ಚಂದ್ರುಂ ನೆಟ್ಟನೆ ನೆಱೆದು ಬಿಂಬದಿಂ ಪೂರ್ಣನಾಗೆ ರಾಕಾಖ್ಯೆ ಪೌರ್ಣಮಾಸಿಯದಕ್ಕುಂ" (ವಸ್ತುಕೋ. ೦೬-೯); ಅನ್ನೆಗವಮಾಷಾಢಪೌರ್ಣಮಾಸೀವಾಸರ ಸಾಯಂತನಸಮಯದೊಳ್ ಪರಭಾಗಂಬಡೆದು (ಅಂಕು. ೬-೩೦).
[ಸಂ. ಪೌರ್ಣಮಾಸೀ]

**ಪೌರ್ಣಮಾಸೆ** (ನಾ). = ಪೌರ್ಣಮಾಸಿ : ಸಕವರುಸಂ ಸಾಸಿರದ ನೂಱಯೆಪ್ಪತ್ತನೆಯ ಕೀಲಕಸಂವತ್ಸರದ ಜೇಷ್ಠಸುಧಪೌರ್ಣಮಾಸೆ ಸೋಮವಾರ ಸೋಮಗ್ರಹಣದಂದು (ಕ್ಕೆಇಇ. XX. ೨೦೩-೦೭ ; 1248).
[<ಸಂ. ಪೌರ್ಣಮಾಸೀ]

**ಪೌರ್ಣಮಿ** (ನಾ). = ಪೌರ್ಣಮಾಸಿ : ಪಾಡಿಯ ಮೊದಲು ಪೌರ್ಣಮಿಯ ದಮಾವಾಸ್ಯೆ ಕಡೆ ಮಾಡಿ ರವಿಯಾದಿವಾರಂಗಳಕ್ಕುಮಶ್ವಿನಿಯದಾದಿನಕ್ಷತ್ರ ಪಂಕ್ತಿಯುಂ (ಮಂಗರಾ. ೨೦-೯); ಕುಂದದೆಂದುಂ ದಿನದಿನಕೆ ಕಳೆಗುಂದದೆಂದುಂ ರಾಹುಬಾಧೆಯೊಳೊಂದದೆಂದುಂ ಪೌರ್ಣಮಿಯು ದಿನದಂದು ಶರದಿಂದು (ಜಸಕು. ೯-೨೪) ; ಸುತನೆ ನೀ ಪೌರ್ಣಮಿಯ ದಿನದಲಿ ಸತಿಯ ಹೊದ್ದಲು ಬೇಡ (ಶೀಪಂಕ. ೩-೧೦). [ಸಂ. ಪೌರ್ಣಮಿ]

**ಪೌರ್ಣಮಿಯಾದಿನ** (ನಾ). ಹುಣ್ಣಿಮೆಯಂ ದಿನ, —ತಿಥಿ : ಕೈಲಾಸಪರ್ವತದ ಸಿದ್ಧಕೂಟದೊಳ್ ಪೌಷ್ಯಮಾಸದ ಪೌರ್ಣಮಿಯಾದಿನದಂದು ಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ (ಆದಿಪು. ೧೬-೯೦೫); ಕಾರ್ತಿಕಮಾಸದ ಪೌರ್ಣಮಿಯಾದಿನದೊಳ್ ಸುಕುಮಾರನ ಮೋಹಬಂಧದ ಬಳ್ಳಿವಳ್ಳಿಯ ತೊಡರ್ಪಂ ಪಱಿಪಡೆ ಬಿಡಿಸುವಂತೆ ಯೋಗ ವಿಡಿಸಿ (ಸುಕು:ಚ. ೧೦-೩೪ ವ). [ಸಂ.]

**ಪೌರ್ಣಮ** (ನಾ). ಔದುಂಬರ, ವೈಖಾನಸ, ಪ್ರಕ್ಷಾಳಿಕ ಮತ್ತು ಪೌರ್ಣಮ ಎಂಬ ನಾಲ್ಕು ಪ್ರಕಾರದ ಮುನಿಗಳಲ್ಲಿ ಒಬ್ಬ : ಪಂಚಾಗ್ನಿಮಧ್ಯದಲ್ಲಿ ಏಕಪಾದಸ್ಥಿತಿ ಮೊದಲಾದವಱಿಂದುಗ್ರತಪಸ್ಸನಾಚರಿಸುವಾತನಾಗಿ ಔದುಂಬರ ವೈಖಾನಸ ಪ್ರಕ್ಷಾಳಿಕ [ಶಾಶಾಂ. ೮೧೧] ಪೌರ್ಣ [ಶಾಶಾಂ. ೯೯೧] ಮನೆಂದು ಚತುರ್ವಿಧವಮಾಗಿರ್ಪಾತನೇ ವಾನಪ್ರಸ್ಥನಪ್ಪಂ (ಖಪೇಳ. ೦೨೬). [ಸಂ.]

**ಪೌರ್ಣಿಮೆ** (ನಾ). ಪೂರ್ಣಚಂದ್ರನು ಮೂಡುವ ದಿನ ; ಹುಣ್ಣಿಮೆ : ಆ ಪಕ್ಷಂಗಳೊಳಗೆ . . . ಚಂದ್ರನಧಿದೇವತೆಯಾದ ಪೌರ್ಣಿಮೆ [ಶಾಶಾಂ. ೯೯ಮಿ] ಎಂಬ ಶುಭಾಶುಭರೂಪಮಾದ ಹದಿನೈದು ತಿಥಿಗಳುಳ್ಳುದೇ ಶುದ್ಧವೆನಿಪ ಶುಕ್ಲಪಕ್ಷ (ಖಪೇಳ. ೨೬೨). [ಸಂ. ಪೌರ್ಣಿಮಾ]

**ಪೌರ್ವಾತ್ಯ** (ಗು). ೧. ಪೂರ್ವಭಾಗಕ್ಕೆ ಸೇರಿದ ; ಪೂರ್ವದಿಕ್ಕಿನ : 'ದಾಕ್ಷಿಣಾತ್ಯ' ಎಂಬುದನ್ನು ಅನುಕರಿಸಿ, 'ಪೌರ್ವಾತ್ಯ', 'ಪಾಶ್ಚಿಮಾತ್ಯ' ಎಂಬ ಶಬ್ದಗಳು ರೂಢಿಗೆ ಬಂದಿವೆ (ಸಂಕೋಶ. ೯೬). (ನಾ). ೨. ಪೂರ್ವದೇಶದ ನಿವಾಸಿ : ಅವಳು ಗಂಡನ ವಿಷಯದಲ್ಲಿ ಪೌರ್ವಾತ್ಯರಂತೆ ವಿಧೇಯಳಾದ ಕೂಲಿಯಾಗಿರಬೇಕು (ಪುಶಿಖಾ. ೨೨). ☞ ಇದಂ 'ದಾಕ್ಷಿಣಾತ್ಯ' ಮುಂತಾದ ದಿಕ್ಸೂಚಕಶಬ್ದಗಳ ರೂಪಸಾಮ್ಯದಿಂದ ಆಗಿದೆ.
[<ಸಂ. ಪೂರ್ವ]

**ಪೌರ್ವಾಪರ್ಯ** (ನಾ). ಅನುಕ್ರಮ ; ಆನುಪೂರ್ವಿ ; ಪರಿವಿಡಿ : ಕದಂಬರಾಜರ ಪೌರ್ವಾಪರ್ಯ (Order of Succession) ಆಳಿಕೆಯ ಕಾಲಗಳನ್ನು ತೋರಿಸುವ ವಂಶವೃಕ್ಷವನ್ನು ವಾಚಕರ ಸೌಕರ್ಯಕ್ಕಾಗಿ ಕೊಟ್ಟಿದೆ (ಕಶಾಇ. ೦೩). [ಸಂ.]

**ಪೌರ್ವಾಹ್ನಿಕ** (ಗು). ೧. ಪೂರ್ವಾಹ್ನದಲ್ಲಿ ಮಾಡಬೇಕಾದ. ೨. ಮಧ್ಯಾಹ್ನಕ್ಕೆ ಮುಂಚಿನ. (ನಾ). ೩. ಮಧ್ಯಾಹ್ನಪೂರ್ವದಲ್ಲಿ ಮಾಡುವ ನಿತ್ಯವಿಧಿ: ಆಚಾರ್ಯರು ಊರಿಗೆ ಹೋಗಬೇಕಾಗಿದ್ದುದರಿಂದ ಪೌರ್ವಾಹ್ನಿಕಗಳನ್ನು ದಿನಕ್ಕಿಂತ ಬೇಗನೆ ಮುಗಿಸಿದರು (ಕೂಂ). [ಸಂ.]

**ಪೌಲಸ್ತ್ಯ** (ಗು). ೧. ಪುಲಸ್ತ್ಯಮುನಿಗೆ ಸಂಬಂಧಿಸಿದ. (ನಾ). ೨. ಪುಲಸ್ತ್ಯವಂಶದವನು. ೩. ಕುಬೇರ : "ಐಳಬಿಳಃ, ಪೌಲಸ್ತ್ಯಃ . . . ಪುಣ್ಯಜನೇಶ್ವರಃ—ಈ ೧೭ ಕುಬೇರನ ಪೆಸರ್" (ಹಲಾಯು. ೦೯-೬೮); ಇವ ನಿರುತಿ ಉದಕಪತಿಯಿವನನಿಲ ಪೌಲಸ್ತ್ಯನೀಶಾನ್ಯನೀ ಸವುಸ್ತರನು ನೋಡು (ಕ್ರಿಶರಾ. ೦೦-೯೬). ೪. ರಾವಣ : ಪೌಲಸ್ತ್ಯನ ಲಂಕಾಪುರ ಮನುರಿಪಿದಂ . . . ಹನುಮಂತಂ (ಶಂಕಾಷಾ. ೦೦-೦೬೦) ; ಪೌಲಸ್ತ್ಯ! ಆಲಿಸು, ಬಲ್ದಣಿದೆ. ಇಂದು ಮೊದಲ್ಗೊಂಡು ತಪಸಂ ತಪಿಸ್ಯ (ಅದ್ಭುತ. ೨೯-೪). [ಸಂ.]

**ಪೌಲಿ, ಪೌಳಿ₂** (ನಾ). ೧. ಒಂದು ಬಗೆಯ ಹೋಳಿಗೆ. ೨. ರೊಟ್ಟಿ : "ಪೌಲಿ=ಹೋಳಿಗೆ, ೨. ರೊಟ್ಟಿ" (ಗಂಗಾಕು. ೨೦೬). **ಪೌಳಿ₂** : ೩. ಉಸಲಿ ; ಗುಗ್ಗರಿ : "ಆಪಕ್ವಂ, ಪೌಳಿಃ, ಅಭ್ಯೂಷಃ—೩ ಉಸಲಿಯ ಹೆಸರುಗಳು, ಗುಗ್ಗುರಿ" (ಸಿದ್ಧಾಂತ. ೨೬೬). [ಸಂ. ಪೌಲಿ, ಪೌಲೀ]

**ಪೌಲೋಮ** (ನಾ). ೧. ಪುಲೋಮೆಯ ಮಕ್ಕಳು ; ಒಂದು ರಾಕ್ಷಸವರ್ಗ: ನಿವಾತಕವಚ ಕಾಳಕೇಯ ಪೌಲೋಮ ತಳ ತಾಲುಕರೆಂಬಱುವತ್ತು ಕೋಟಿರಕ್ಕಸರನೆಸಗೆ ಗೆಲ್ದಿಂದ್ರಯಲ್ವೇಟ್ಟುಂ (ಶಂಶಹಾ. ೬-೨೭ ವ). ೨. ಇಂದ್ರ. [ಸಂ.]

**ಪೌಲೋಮಿ, ಪೌಳೋಮಿ** (ನಾ). ೧. ಪುಲೋಮನೆಂಬ ಅಸುರನ ಮಗಳು ; ಇಂದ್ರನ ಪತ್ನಿ ; ಶಚೀದೇವಿ : "ಇಂದ್ರಾಣೀ, ಪೌಲೋಮೀ, ಶಚೀ—ಈ ೩ ಇಂದ್ರನ ಸ್ತ್ರೀಯ ಪೆಸರ್" (ಹಲಾಯು. ೦೦-೩೩); ಮುನ್ನೊಂದು ಸಮಯದೊಳ್ ಪೌಲೋಮಿ ತಾಳಮಧುವಂ ಬಯಸಿ . . . ಪುರಂದರಪುರಸ್ಸರಂ ಬಂದು ಹೃದ್ಯಮಪ್ಪ ಮದ್ಯಮಂ ಕೇಳಿವಟ್ಟ ಲೋಳಿಱಿದು ಕುಡಿಯಲುಜ್ಜುಗಂಗೈವುದುಂ (ಶಗಬಿ. ೯-೩೯ ವ). ೨. ಭೃಗು

ಋಷಿಯ ಹೆಂಡತಿ. **ಪೌಲೋಮಿ :** ೧. ನೇಮಿನಾಥಂಗೆ ಸುರಯೂಥನಾಥಂ ಸರ್ವಾಂಗಪ್ರಣತನಾಗಿ . . . ಪೌಲೋಮಿಯಾದತ್ತ ದಿವ್ಯಾರ್ಚನಾನಿಚಯದಿನರ್ಚಿಸಿ (ನೇಮಿಪು. ೦೩-೯೯ ವ). [ಸಂ. ಪೌಲೋಮಿಾ]

**ಪೌಲೋಮೀಪತಿ, ಪೌಲೋಮಿಾಪತಿ** (ನಾ). ಶಚೀದೇವಿಯ ಗಂಡ ; ಇಂದ್ರ : ಶ್ರೀಮಜ್ಜಿನಮಜ್ಜನದ ಮಹಾಮಹಿಮಾತಿಶಯಮಸದಳಂ ಪೊಗಟಲ್ ಪೌಲೋಮೀಪತಿಗಲ್ಲದೆ ಪೆಱರ್ಗೇಮಾತದು (ಆಜಿಪು. ೩-೦). **ಪೌಲೋಮಿಾಪತಿ :** ಪೌಲೋಮೀಪತಿ ತನ್ನ ದಿವ್ಯಜ್ಞಾನದೊಳ್ ನೋಡಿ ಚಕ್ರಿಯುಂ ವಿಕ್ರಮಾರ್ಜುನನುಮಪ್ಪುದನಱಿದು (ಪಂಪಭಾ. ೩-೯೩ ವ). [ಸಂ.]

**ಪೌವಗೆ** 'ಪವ್ವಗೆ' ನೋ.

**ಪೌವನೆ** 'ಪವ್ವನೆ' ನೋ.

**ಪೌವನೆವೋಗು** (ಕ್ರಿ). ಬೆದರು ; ಭಯಪಡು : ತನ್ನ ನಮ್ಬಿದ ಸುದತೀಕದಮ್ಬದೆರ್ದೆ ಪೌವನೆವೋಗಿರೆ (ಎಕ. II, ೨೪೦-೨೯ ; ಸು. 1176).
[ ಪೌವನೆ (<ಪವ್ವನೆ) + ಪೋಗು$_1$ (< ಪೋ$_1$) ]

**ಪೌಷ** (ನಾ). ೧. ಪುಷ್ಯಮಾಸ : "ಪೌಷಃ, ತೈಷಃ, ಸಹಸ್ಯಃ—೩ ಪುಷ್ಯಮಾಸದ ಹೆಸರುಗಳು" (ಸಿದ್ಧಾಂತಿ. ೩೯). ೨. ಹಬ್ಬ ; ಉತ್ಸವ. ೩. ಕಾಳಗ ; ಯುದ್ಧ. [ಸಂ.]

**ಪೌಷಿ** (ನಾ). ೧. ಪುಷ್ಯನಕ್ಷತ್ರದಿಂದೊಡಗೂಡಿದ ಹುಣ್ಣಿಮೆಯ ರಾತ್ರಿ : "ಪೌಷೀ, ಪುಷ್ಯಯುಕ್ತಾ—ಪುಷ್ಯನಕ್ಷತ್ರದಿಂದೊಡಗೂಡಿದ ಪೌರ್ಣಮಾಸೀ ಹುಣ್ಣಿಮೆಯ ಹೆಸರು" (ಸಿದ್ಧಾಂತಿ. ೩೯). ೨. ಪುಷ್ಯಮಾಸದ ಹುಣ್ಣಿಮೆ. [ ಸಂ. ಪೌಷೀ ]

**ಪೌಷ್ಕರ** (ನಾ). ನೈದಿಲೆಗೆಡ್ಡೆ : "ಪೌಷ್ಕರಂ, ಕಾಶ್ಮೀರಂ, ಪದ್ಮಪತ್ರಂ . . . ತಾವರೇಗಡ್ಡೆ" (ಸಿದ್ಧಾಂತಿ. ೧೯೩). [ಸಂ.]

**ಪೌಷ್ಟಿಕ** (ಗು). ೧. ಶಕ್ತಿಯನ್ನು ಕೊಡುವ ; ಪುಷ್ಟಿದಾಯಕವಾದ : ಅಡುಗೆಯು ಕಲೆಯಲ್ಲಿ ಅವಳು ಪರಿಣತಳಾಗಿದ್ದು ದೊರೆಯುವ ವಸ್ತುಗಳಿಂದಷ್ಟೇ ರುಚಿಕರವಾದ ಮತ್ತು ಪೌಷ್ಟಿಕ ಅಡುಗೆಯನ್ನು ಮಾಡಲು ಬಲ್ಲವಳಿರಬೇಕು (ಆಡುಶಾ. ೩೬). (ನಾ). ೨. ಶಕ್ತಿಯನ್ನು ಕೊಡುವಂಥದು ; ಪುಷ್ಟಿದಾಯಕವಾದ ವಸ್ತು : ಶ್ರೀಖಂಡವು ಪೌಷ್ಟಿಕ, ವೀರ್ಯವರ್ಧಕ (ಆಹ್ಯಾಂಗ. ೦೨೦-೩೩) ; ಫಲಹಾರವಸ್ತುಗಳು ಚಟ್ಟಲು ಸುಲಭವಾಗಿಯೂ ಪೌಷ್ಟಿಕ ಹಾಗೂ ರುಚಿಕರವಾಗಿಯೂ ಇರಬೇಕು (ಆಡುಶಾ. ೧೨೦) ; ಸತ್ವಹೀನನನ್ನು ಸತ್ವಸಂಪುಷ್ಟರನ್ನಾಗಿ ಮಾರ್ಪಡಿಸಬಲ್ಲುದು ಈ ಆಧ್ಯಾತ್ಮ ಪೌಷ್ಟಿಕ (ಕಾವ್ಯಕು. ೨೯). ೩. ವ್ಯವಹಾರದಲ್ಲಿ ಜಯವೇ ಮೊದಲಾದ ಇಷ್ಟಪ್ರಾಪ್ತಿಗಾಗಿ ಮಾಡುವ ಒಂದು ಕರ್ಮ : ಶಾಂತಿಕಪೌಷ್ಟಿಕಕ್ರಿಯಾಕುಶಲನುಂ ಧರ್ಮಕಾರ್ಯಾದಿಕುಶಲನುಮಪ್ಪ ಬುದ್ಧಿಸಾಗರನೆಂಬ ಪುರೋಹಿತರತ್ನಮುಂ (ಆದಿಪು. ೦೦-೩ ವ). ೪. ನೀರಿನ ಧಾರೆಯೆರೆದು ಮಾಡುವ ದಾನ. [ಸಂ.]

**ಪೌಷ್ಟಿಕಕರ್ಮ** (ನಾ). = ಪೌಷ್ಟಿಕ ೩ : ಪಂಡಿತಪ್ರಿಯ ಶಾಂತಿಪೌಷ್ಟಿಕಕರ್ಮದೀಕ್ಷಿತನ ಚಂಡದೈವಜ್ಞನ . . . ಪೌರೋಹಿತನ ಮಾಡುವುದು (ಉಜ್ಜ್ವಾಉ. ೩-೬೩) ; ರೋಗ ವಾಸಿಯಾಗುವುದಕ್ಕೆ ಮಾಡುವ ಭೇಷಜಕರ್ಮಗಳು . . . ಪ್ರಾಯಶ್ಚಿತ್ತರೂಪವಾದ ಶಾಂತಿಕರ್ಮಗಳು, ಕೆಲಸ ಕಾರ್ಯಗಳಲ್ಲಿ ಜಯವಾಗಲೆಂದು ಪೌಷ್ಟಿಕಕರ್ಮಗಳು (ಭಾರತ. ೨೬). [ ಸಂ. ಪೌಷ್ಟಿಕಕರ್ಮನ್]

**ಪೌಷ್ಟಿಕತೆ** (ನಾ). ಪುಷ್ಟಿಯನ್ನುಂಟುಮಾಡುವ ಅಂಶ; ಪುಷ್ಟಿದಾಯಕತ್ವ: ತರಕಾರಿಗಳಲ್ಲಿರುವ ಜೀವಾತುಗಳು ಮತ್ತು ಪೌಷ್ಟಿಕತೆಯು ನಷ್ಟವಾಗದಂತೆ ಅವುಗಳನ್ನು ಎಷ್ಟು ಬೇಗನೆ ಬೇಯಿಸಿ ತೆಗೆಯುತ್ತೋ ಅಷ್ಟು ಒಳ್ಳೆಯದು (ಆಡುಶಾ. ೨೮). [ ಸಂ. ಪೌಷ್ಟಿಕತಾ]

**ಪೌಷ್ಪಕ** (ನಾ). ಹಿತ್ತಾಳೆಯ ಭಸ್ಮದಿಂದ ತಯಾರಿಸಿದ ಒಂದು ಬಗೆಯ ಕಣ್ಣುಕಪ್ಪು ; ಕುಸುಮಾಂಜನ : "ರೀತಿಪುಷ್ಪಂ, ಪುಷ್ಪಕೇತುಃ, ಪೌಷ್ಪಕಂ, ಕುಸುಮಾಂಜನಂ—೪ ಕುಸುಮಾಂಜನದ ಹೆಸರು" (ಸಿದ್ಧಾಂತಿ. ೩೦೩). [ ಸಂ. ]

**ಪೌಷ್ಯ** (ಗು). ೧. ಪುಷ್ಯಮಾಸಕ್ಕೆ ಸಂಬಂಧಿಸಿದ. (ನಾ). ೨. ಪುಷ್ಯಮಾಸ. [ಸಂ.]

**ಪೌಷ್ಯಮಾಸ** (ನಾ). ಪುಷ್ಯಮಾಸ : ಕೈಲಾಸಪರ್ವತದ ಸಿದ್ಧಕೂಟದೊಳ್ ಪೌಷ್ಯಮಾಸದ ಪೌರ್ಣಮಿಾದಿನದಂದು ಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ (ಆದಿಪು. ೦೬-೯೦ ವ). [ಸಂ.]

**ಪೌಸರ** (ನಾ). ಗುಂಪು; ಸಮೂಹ : ಸಿಡಿಲಿನಿಂ ನೋಡಿ ಪಕ್ಕವ ಬಿದಿರ್ದು ಬೆದಱುತ್ತೆ ನಡುಗೊಂಬನೇಱಿ ಸುಸ್ವರಗಳಿಂ ಧ್ವನಿಗೆಯ್ವ ಪಡಿಯಚೂಂಕೆತವಕ್ಕಿ ಪೌಸರದೊಳಿಹಮಿಂತು ಸಂತಸದೊಳುಂ ವನದೊಳು (ಶ್ರೀಕುಪು. ೩-೦೯). [< ಪಸರ]

**ಪೌಳಿ$_1$, ಪಱುಳಿ, ಪವಲ್ಕ, ಪವಳಿ, ಪವುಳಿ** (ನಾ). ೧. ಸುತ್ತುಗೋಡೆ ; ಪ್ರಾಕಾರ : ಭಕ್ತನ ದೇಹವೇ ತ್ರಿಕೂಟದ ಶಿವಾಲಯ . . . ಶಿವಾಚಾರವೆ ಪೌಳಿ (ಚನ್ನಬ. ವ. ೦೧೯-೩೧೦) ; ನಿಂದು ನಿಂದು ನಿಲುಕಿ ನಿಲುಕಿ ಕೈಗುಂದಿ ನೋಡುತ ದೆಸೆದೆಸೆಯನಾನುದವಳಿದುಳಿದು ಪೌಳಿಯ ಒಡೆಗೆ ನಸುಸಾರ್ದು (ಜಾಕ್ಷಿ. ೨೬-೩೦) ; ರಾಯನ ರಾಣಿಯ ಪೌಳಿಯ ಹಿಂದಣ ಬಲು ಬಟ್ಟಬಯಲು (ಕುಂಚಸಾಂ. ೩೦-೦) ; ಸುತ್ತೇಳ ಪೌಳಿ ಮನೆಯಾವಳೆ ನನ ಚೆಲುವೆ ಸುಕ್ಕಿ ಬರಶೀನಿ ದನಿ ಕೋರೆ (ಜಾ.ಕ. ೦೦೦) ; ಶಾಲೆಯ ಸಮಿಾಪದ ದೇವಸ್ಥಾನದ ಪೌಳಿಯಲ್ಲಿ ಕಟ್ಟಿದ ಚಿಕ್ಕ ಕೋಣೆಯೊಂದನ್ನು ಹಿಡಿದು ತಾವೇ ಕೈ ಬಾಯಿ ಸುಟ್ಟುಕೊಂಡಿದ್ದರು (ಬಾಳಿ. ೩). ೨. ಅಂಕಣ; ಆವಾರ; ಆವರಣ : ಬ್ರಹ್ಮಪುರಿಯ [ದೇವಾಲ್ಯದ]ಪೌಳಿಯ ನಿ(ನೀ)ಳದ ೨೫ ಹಸ್ತದಗಲದ ನಿವೇಶನವಂ ಪೌಳಿವಿಡಿದು ತೆಜ್ಕದೆಸೆಯ[ಲು? ಕೊ]ಟ್ಟರು (ಎಇ. XIX, ೨೫-೩೬; 1246) ; ಮಧ್ಯದ ಪೌಳಿಯೊಳಿಸುವುದಾ ನೃಪಗೆ ತರ್ಕಾಧ್ಯಯನದ ದೀರ್ಘಶಾಲೆ (ಶರಶ. ೦೬-೩) ; ಅಷ್ಟರವರೆಗೆ ದೇವಾಲಯದ ಪೌಳಿಯಲ್ಲಿ ವಿಶ್ರಮಿಸಿಕೊಳ್ಳುವ ಕೃಪೆ ಮಾಡಬೇಕು (ಹುಂಚಾ. ೦೨೩). **ಪಱುಳಿ :** ೧. ಪಡು [ವಲು]ಉ[ಪ್ಪ]ರಿಗ[ಬಾ]ಗಿಲು ತೆಂಕಲು ದೇವರ ಗು[ಡಿ ಪ]ಱುಳಿ ಮೇರೆ (ಸೌಇಇ. IV, ೨೪೬-೨೨ ; 1557). **ಪವಲ್ಕ :** ೧. ಸ್ವಯಂಭುದೇವರಿಗೆ ತಪಂಬಟ್ಟು ಈ ಪವಲ್ಕವ ಮಾಡಿಸಿದಂ (ಎಕ. III, ಶ್ರೀರಂಗ. ೩೯-೬; 1126). **ಪವಳಿ :** ೧. ದೇವಸ್ಥಾನದ ಸುತ್ತಲೂ ನಾಲ್ಕುಕಡೆಗೆ ದೊಡ್ಡ ಪವಳಿಯಿದೆ (ಗಂಗಾಸಾ. ೩) ; ಕೌಶಲ್ಯದ ಕಲ್ಲು ಪವಳಿ ಕುಸುರಿನ ಮಾಡ್ವಾರೈದು (ಸಿದ್ಧಕ. ೨೮-೩). ೨. ಅರಮನೆಗೆ ಹೊಂದಿ ಇದ್ದ 'ಪವಳಿ' ಯಲ್ಲಿ ಒಂದು ಸಣ್ಣ ಉದ್ಯಾನವನ್ನು ಮಾಡಿಕೊಂಡಿದ್ದಾಳೆ (ಹರಿದಾಸ್ಯಾ. ೯೯). **ಪವುಳಿ :** ೧. ಯಾದೇವರ ದೇವಾಲ್ಯದ ಕಳಸ ನಿಬ್ಬಾಣ ಪವುಳಿ ಬಾಗಿಲುವಾಡ . . . ಯಾ ಕಟಿದ ಮರಿಯಾದೆಯ ಪಡಿ ನಡುವುದು (ಎಕ. VI, ಕಡೂರು. ೯೯-೬೩; 1291) ; ಪುಂಡರೆಲ್ಲರ ಕೂಡಿಕೊಂಡು . . . ಪವಳಿಯ ಹೊಱಗೆ ಮುಂಕೊಂಡಾಡುತಿರ್ದನುಬ್ಬಿನೊಳು (ಕುಂಚಸಾಂ. ೩೯-೫೦) ; ಪವುಳಿ ಉಪ್ಪರಿಗೆ ಚಿನ್ನದ ಪಂಚಕಳಸವು ವಿವರ ಚಿತ್ರದ ಚಂದ್ರಶಾಲೆ (ಜಸಚ. ೦-೬೩).
[< ಪ್ರಾ. ಪಓಲಿ=ರಾಜಮಾರ್ಗ; ಹೆಬ್ಬಾಗಿಲು./ಹಿಂ. ಪೌಲೀ, ಪೌರೀ; ಮರಾ. ಪೌಳೀ]

**ಪೌಳಿ$_2$** 'ಪೌಲಿ' ನೋ.

**ಪೌಳಿಂದಿನಿ** (ನಾ). ಬೇಡರ ಹೆಂಗಸು; ಶಬರಿ : ಚಂದನದಿಂದೆ ಮಾಡಿದೊರಳೊಳ್ ಬಿದಿರಕ್ಕಿಯನೆಯ್ದೆ ಪೊಯ್ದು ಚೆಲ್ವೊಂದಿದ ದಂತದೊಂದೊನಕೆಯಿಂ ಪಿಡಿದೊಳ್ಪಳಿಸುತ್ತುಮಿರ್ದ ಪೌಳಿಂದಿನಿ . . . ಬಿಲ್ಲ

ಬಲ್ಲಹನೆ ಸೂವಿಯ ಸೂವಿ ದಲೆಂದು ಪಾಡಿದಳ್ (ಧಾರಪು. ೧೦-೧೦೨).
[< ಸಂ. ಪುಲಿಂದೀ]

**ಪೌಳಿಗವಾಕ್ಷಿ** (ನಾ). ಗೋಡೆಯ ಮೇಲ್ಭಾಗದಲ್ಲಿ ಕೊರೆದ ಕಿಂಡಿ,– ಗವಾಕ್ಷಿ : ಪಶ್ಚಿಮದ್ವಾರವೆಂಬ ನಿಜದ್ವಾರವಟ್ಟವಂ ಮಾಡಿ ಸಪ್ತವ್ಯಸನ ಪಂಚೇಂದ್ರಿಯಂಗಳೆಂಬ ಪೌಳಿಗವಾಕ್ಷಿಯನಿಕ್ಕಿ (ಚೂಸ್ತಸಂ. ೩೦೬-೨೬).
[ಪೌಳಿ$_1$ + ಗವಾಕ್ಷಿ$_1$]

**ಪೌಳಿಗೋಡೆ** (ನಾ). ಪ್ರಾಕಾರದ ಗೋಡೆ ; ಸುತ್ತುಗೋಡೆ : ವೃಕ್ಷಗಳ ಸಹಾಯದಿಂದ ಪೌಳಿಗೋಡೆಯನ್ನು ಹಾರಿ ಹೋಗು (ಬಾಜಿ. ೯೬) ; ಗರ್ಭಗುಡಿಯ ಸುತ್ತ ಕಲ್ಲಿನ ಪೌಳಿಗೋಡೆ ಇರುತ್ತದೆ (ಕೃಪಾಇ. II. ೩೦೭); ದೂರದಲ್ಲಿ ಒಂದು ದೇವಸ್ಥಾನದ ಪೌಳಿಗೋಡೆಗಳು ಕಾಣಿಸಿದುವು (ಕಂಗಾಳ್. ೩೦೬). [ಪೌಳಿ$_1$ + ಗೋಡೆ]

**ಪೌಲೋಮಿ** ‘ ಪೌಲೋಮಿ ’ ನೋ.

**ಪೌಲೋಮಿಪತಿ** ‘ ಪೌಲೋಮಿಪತಿ ’ ನೋ.

**ಪ್ಯಾದೆ,** ಪೇದೆ (ನಾ). ೧. ಕಾಲಾಳು; ಕಾಲ್ನಡೆಯ ಭಟ: ಕುದುರೆ ೫೦೦ ಪ್ಯಾದೆ ೬೫೦ ಸಹಾ ಭರ್ತಿ ಮಾಡಿ (ಕೈಜಹ. ೨೦); ಟೀಪುಸುಲ್ತಾನರು ತಮ್ಮ ಕಡೆ ಆಹಶಾಂ ಪ್ಯಾದೇರಿಗೆ ತಯಾರುಮಾಡಿ . . . ಕಳುಹಿದಲ್ಲಿ (ರಾಕೇಂತ್ರ. ೯೨). ೨. ಪೋಲೀಸು ದಳದ ಕೆಳದರ್ಜೆಯ ಸೇವಕ : ಅವನು ನಮ್ಮೂರಿನ ಪೋಲೀಸ್ ಠಾಣೆಯಲ್ಲಿ ಪ್ಯಾದೆಯಾಗಿದ್ದಾನೆ (ರೂಢಿ). ೩. ಸೇವಕ; ಆಳು; ಜವಾನ : ನಿನ್ನೆ ಏನೇ ಎನಿಸಿಕೊಂಡವಳು ಇಂದೊಡತಿ, ತಾನೆಂದಿನಂತೆಯೇ ಪ್ಯಾದೆ (ಗೌಮಲ್ಲಿ. ೦೯); ಕಾಲದ ಪ್ಯಾದೆ ಅವನ ಖ್ಯಾತಿಯ ಎಲ್ಲೆಯ ಗೂಟಗಳನ್ನು ಕೀಳುವುದಕ್ಕೆ ಬಂದಾಗ ಸಮಾಲೋಚಕನು ಈ ತಮಾಷೆಯನ್ನು ನೋಡಲು ಕಾಯಲಾಗುವುದಿಲ್ಲ (ಶಿಂಠ. II. ೨೯೫). ೪. ಚದುರಂಗದಾಟದಲ್ಲಿ ಕನಿಷ್ಠ ನಡೆಯ ಕಾಯಿ : ಸ್ವಲ್ಪ ತಾಳು ಆದಲ್ಲ ಆಟ, ಧೊರೆಗೆ ಷಹ ಕೊಟ್ಟರೆ ಆ ಪ್ಯಾದೇಗೆ ದೇವರೇ ಗತಿ (ದುಂಡಿಳ. ೪) ; ಪ್ಯಾದೆಯನ್ನು ತೆಗೆದು ದೊರೆಗೆ ಶಹಾ ಕೊಡು (ರೂಢಿ). **ಪೇದೆ:** ೧. ರಾಣಿಯು ಕೋಟೆಯ ಮಹಲ್ಲಿನಲ್ಲಿಯೇ ತನ್ನ ಸಖಿಯರು, ಸಿಪಾಯಿಗಳು ಮತ್ತು ಪೇದೆಗಳೊಂದಿಗೆ ವಾಸಿಸುತ್ತಿದ್ದಳು (ಝೂಂಚಿತಿ. ೦೨೬) ೨. ಎಕ್ಸೈಜ್‌ಇನ್ಸ್ಪೆಕ್ಟರು ನಾಲ್ವರು ಪೇದೆಗಳೊಡನೆ ಹಠಾತ್ತನೆ ಪಟೇಲ ತಿಮ್ಮೇಗೌಡನ ತೋಟಕ್ಕೆ ಪೂರ್ವಭಾವಿಯಾಗಿ ಸುದ್ದಿ ಕೊಡದೆ ದಾಳಿ ಇಟ್ಟಾಗ . . . ಆ ಭಂಗಿಯ ಗಿಡವನ್ನು ಅವರಿಗೆ ತೋರಿಸಿದ (ಊರುಳ. ೬೫) ; ಪೇದೆಯ ಕೆಲಸದಿಂದ ಮುಕ್ತನಾದರೆ ಸಾಕಾಗಿತ್ತು ನನಗೆ (ವಾಪೋಇ. ೧೦೨). ೩. ಏನು ಶಾಲೆಯ ಮಾಸ್ತರನೂ ನಾನೇ ಪೇದೆಯೂ ನಾನೇ ಎಂದು ತಿಳಿದಿರಾ ? (ಶಿರಾಐ. ೦೯೭) ; ಒಬ್ಬ ಸಭ್ಯಗೃಹಸ್ಥನು ಪೇದೆಗಳ ಮುಂದಾಳುವಿನೊಟ್ಟಿಗೆ ದ್ರಾಕ್ಷಾರಸ ಕುಡಿಯುವುದು ! ನಾಚಿಕೆಗೇಡು ! (ಯೋಧರು. ೯೦).
[← ಪಾರ. ಪಿಯಾದಾ ; ಹಿಂ. ಮರಾ. ಪ್ಯಾದಾ]

**ಪ್ಯಾದೆಮಾತು,** ಪೇದೆಮಾತ್ (ನಾ). ೧. "(ಚದುರಂಗದಲ್ಲಿ ಎದುರಾಳಿಯ ದೊರೆಯಂ ಚಲನೆಗೆ ಅವಕಾಶವಿಲ್ಲವೆಂದಂ ಹೇಳುವ ಮಾತು) . . . ಪ್ಯಾದೆ ಮಾತು" (Check-mate ಇಂಕಿಶ). ೨. (ಅಲಂ) ಸಂಪೂರ್ಣ ಪರಾಭವ ; ಪೂರಾ ಸೋಲು : ಇದು ಒಳ್ಳೇ ‘ ಪ್ಯಾದೆ ಮಾತು ’ ಆಯಿತೆಂದು ಮರುದಿನ ಪುನಃ ಯಾತ್ರೆ ಹೊರಟದ್ದೇ ! (ಶ್ರೀಕಶ. ೦೦೪) ; ಸುಬೇದಾರರ ಪ್ಯಾದೇಮಾತಿನ ಕಥೆಯನ್ನು . . . ಹೇಳುತ್ತೇನೆ (ಸಣ್ಣಕ. V. ೦೭). **ಪೇದೆಮಾತು :** ೧. ಇದು ಪಾರ್ಥನ ವೀರತ್ವಕ್ಕೆ ಚದುರಂಗದಾಟದೊಳಗಿನ ಕೊನೆಯ ಶಹ – ಪೇದೆಮಾತೇ – ಅಲ್ಲವೇ ? (ಬಿಡುರಿ. ೭ ಕೃಷ್ಣಾಪಣ).

**ಪ್ಯಾದೆಮಾತು ಮಾಡು** = ಸೋಲಿಸು ; ಪರಾಭವಗೊಳಿಸು : ನಿರ್ವಾಳಿಯ ಖಂಡಿತವಾಗಿಯೂ ಔರಂಗಜೇಬನನ್ನು ಸೋಲಿಸಿದಳು ; ಪ್ಯಾದೆಮಾತು ಮಾಡಿ ಕೂರಿಸಿದಳು (ಬಂಕಿಹು. ೨೩೪).
[← ಮರಾ. ಪ್ಯಾದಮಾತ್ , ಪ್ಯಾದೇಮಾತ್ ]

**ಪ್ಯಾರಾ** (ನಾ). ಗ್ರಂಥ, ಲೇಖನ ಮೊದಲಾದುವುಗಳಲ್ಲಿ ಮೊದಲನೆಯ ಪಂಕ್ತಿಯನ್ನು ಒಳಚಾಚಿ ಪ್ರಾರಂಭಿಸುವ ವಾಕ್ಯವೃಂದ : ರಿಜಿಸ್ಟರಿಗೆ ದಾಖಲ್ಮಾಡಲ್ಪಟ್ಟಿರುವವರ್ಯಾರಾದರೂ ಕಾಣದೆ ಗೈರ್‌ಹಾಜರಾದರೆ ೬ನೇ ಪ್ಯಾರಾದಲ್ಲಿರುವ ಮೆಮೊರಾಂಡಂನ ಮೂಲಕ ಸ್ಟೇಷನ್‌ಹೌಸ್ ಆಫೀಸರವರಿಗೆ ತಿಳಿಸತಕ್ಕದ್ದು (ಗ್ರಾಪೂಕ. ೯೬) ; ಬಾಹ್ಯಪರೀಕ್ಷೆಯ ವರದಿ ನಾಲ್ಕು ಪುಟಗಳಷ್ಟಿದ್ದು , ಇಪ್ಪತ್ತೇಳು ಪ್ಯಾರಾಗಳನ್ನೊಳಗೊಂಡಿತ್ತು (ಕೊಪರು. ೯೯).
[P ಇದು ಇಂಗ್ಲಿಷಿನ ‘Paragraph’ ಎಂಬುದರ ಸಂಕ್ಷಿಪ್ತರೂಪ]

**ಪ್ಯಾಲೆ** ‘ ಪೇಲೆ ’ ನೋ.

**ಪ್ರ–**(ಉಪ). ೧. ಮುಂಭಾಗದ, ಮುಂದಿನ, ಮುಂದೆ ಇರುವ ಎಂಬರ್ಥಗಳಲ್ಲಿ ಸಂಸ್ಕೃತಧಾತುಗಳಿಗೆ ಸೇರುವ ಒಂದು ಉಪಸರ್ಗ. ೨. ಬಹಳ, ತುಂಬ, ಅತಿಶಯವಾದ ಎಂಬರ್ಥಗಳಲ್ಲಿ ಸಂಸ್ಕೃತ ಗುಣವಾಚಕಗಳಿಗೆ ಸೇರುವ ಒಂದು ಉಪಸರ್ಗ. ೩. ಪ್ರಾರಂಭ, ಆಧಿಕ್ಯ, ಸೌಂದರ್ಯ, ಶ್ರೇಷ್ಠತೆ ಎಂಬಂಥ ಅನೇಕ ವಿಶೇಷಾರ್ಥಗಳಲ್ಲಿ ಸಂಸ್ಕೃತನಾಮಪದಗಳಿಗೆ ಸೇರುವ ಒಂದು ಉಪಸರ್ಗ.
[ಸಂ.]

**ಪ್ರಕಂದ** (ನಾ). ದೊಡ್ಡಗಾತ್ರದ ಗಡ್ಡೆ: ಆನೆಹುಲ್ಲು ಅಥವಾ ದಪ್ಪ ನೇಪಿಯರ್‌ಹುಲ್ಲು . . . ಇದಕ್ಕೆ ತೆವಳು ಆಕಾರದ ಪ್ರಕಂದಗಳಿವೆ (ಕರಿಕೋ. I, ೭೯೩). [ಸಂ.]

**ಪ್ರಕಂಪ** (ನಾ). ೧. ಅತಿಯಾಗಿ ನಡುಗುವಿಕೆ, – ಅದುರುವಿಕೆ. ೨. ಹೆಚ್ಚಾದ ನಡುಕ, –ಕಂಪನ : ರಮಣೀಹೃದಯದಲ್ಲಿ ನಾಯಕ ಸಂಸ್ಪರ್ಶಜನಿತ ಪ್ರಕಂಪದಂತೆ, ನದೀವಕ್ಷದಲ್ಲಿ ತರಂಗ ಏಳಲು ಮೊದಲಾಯಿತು (ಬಂಕಿಹು. ೦೫೪). ೩. ಒಂದು ನರಕದ ಹೆಸರು : ವಿಕರಾಳ ಪ್ರಕಂಪ ಪದ್ಮ ಸುವಕ್ತ್ರ ಕಾಲವೆಂಬ್ಬೆದು ಮಂತ್ರಿನರಕಂಗಳಿಂ ಕೂಡಿ ಅಘೋರವೆಂಬರಸುನರಕವಿಹುದು (ಶವೇಕ. ೦೫೨). ೪. [ನಾಟ್ಯ] ಐದು ವಕ್ಷೋಭೇದಗಳಲ್ಲಿ ಒಂದು ; P "ಎಡೆಬಿಡದೆ ನಿಟ್ಟುಸಿರು ಬಿಡುವುದು. [ಎಡೆಬಿಡದೆ ಎದೆಯನ್ನು ಮೇಲಕ್ಕೆ ಚಲಿಸುವುದು.] ಹೆದರಿಕೆ, ನಗುವುದು, ಶ್ರಮ, ಶ್ವಾಸ, ಕಾಸರೋಗ, ಬಿಕ್ಕಲು, ಅಳುವುದು ಇವುಗಳನ್ನು ಅಭಿನಯಿಸುವಾಗ" (ಶಾಸ್ತ್ರರಂ. ೨೩೬ ಗದ್ಯಾನುವಾದ) : ಸಮಮಾಭುಗ್ನಂ ನಿರ್ಭುಗ್ನಮುಮುತಿವಿಲಸತ್ಪ್ರಕಂಪವುದ್ವಾಹಿತಮುಂ ಕ್ರಮದಿಂ ವಕ್ಷೋಭೇದಂ ಸಮನಿಸುಗುಂ ನೃತ್ತದಲ್ಲಿ (ಶಾಸ್ತ್ರರಂ. ೨-೯೩).
[ ಸಂ. ]

**ಪ್ರಕಂಪನ** (ಗು). ೧. ರಭಸವಾಗಿ ನಡುಗುತ್ತಿರುವ. (ನಾ). ೨. ಅತಿಯಾದ ನಡುಕ. ೩. ಗಾಳಿ; ವಾಯು. ೪. ನಡುಗಿಸುವವನು. ೩, ೪: ಪ್ರಕಂಪನಜೀವಪ್ರಕಂಪನನಪ್ಪನಗೆ ಗೋಪಾಲಯುಕ್ತನೊಳ್ ಭೇದಮಯುಕ್ತಮುಂ . . . ಅಪ್ಪುದು (ಜಗಂ. ೫-೬೦ ವ). ೫. ಒಂದು ನರಕದ ಹೆಸರು. ೬. [ಕಾವ್ಯಮಾ] ಎಂಟು ಬಗೆಯ ಸಾತ್ವಿಕಭಾವಗಳಲ್ಲಿ ಒಂದು ; ನಡುಗುವುದು : ಸ್ವೇದಂ ವೈವರ್ಣ್ಯಂ ಸ್ವರಭೇದಂ ರೋಮಾಂಚನಂ ಪ್ರಕಂಪನಮಶ್ರೂದ್ಭೇದಂ ಸ್ತಂಭಂ ಲಯವೆಂದಾದುವಿವೆಂಟುಂ ರಸಕ್ಕೆ ಸಾತ್ವಿಕಭಾವಂ (ಕಾವ್ಯಾವ. ೭೯೭). [ ಸಂ. ]

**ಪ್ರಕಂಪಿತ** (ಗು). ೧. ಹೆಚ್ಚಾಗಿ ನಡುಗಿಸಲ್ಪಟ್ಟ : ಅತುಳೋತ್ತಾಲತಿಮಿಂಗಿಳಪ್ರಬಳಪಕ್ಷೋದ್ಧೂತವಾತ ಪ್ರಕಂಪಿತಕುತ್ಕೀಲಸಮಗ್ರದುರ್ಗ್ರಹಘನಗ್ರಾಸಗ್ರಹವ್ಯಗ್ರ . . . ಕೋಲಾಹಲಕಲ್ಪಕಾಲಪ್ರಸ್ಪರ್ಧಿಯಂ ವಾರ್ಧಿಯಂ (ಕಾವ್ಯಸಾ. ೭೩). ೨. ನಡುಗಿದ ; ಅಲ್ಲಾಡಿದ : ನಿಬಿಡ ಪ್ರಕಂಪಿತಕುಚಚ್ಯುತಕುಂಕುಮರೇಣು ತಮ್ಮ ಕೇಸಡಿಗಳ ಕೆಂಪು ಕೆಂದಳಿರ

ಸಾಲಿಡೆ ಸಂಚರಿಪರ್ಲತಾಂಗಿಯರ್ (ರಾಜಶೇ. ೬-೪). [ಸಂ.]

**ಪ್ರಕಟ** (ಗು). ೧. ವ್ಯಕ್ತವಾದ ; ಹೊರಹೊಮ್ಮಿದ ; ಸ್ಪಷ್ಟವಾದ : ಪ್ರಕಟಾಟೋಪದೆ ಪೊಯ್ದು ಪೊಯ್ದು ಶಿಲೆಯೊಳ್ ವೃಕ್ಷಂಗಳೊಳ್ ಮೋದಿ ಮೋದಿ (ಗದಾಯು. ៤-೧៤) ; ಪ್ರಕಟಯಶರ್ಗುಣನಿಧಿಗಳ್ . . . ಗುಣಧರಭಟ್ಟಾರಕರೆ . . . ಎಮಗಭಿವಂದ್ಯರ್ (ಧರ್ಮಾಮೃ. ೦-೦೦) ; ಪ್ರಕಟಾನೇಕವಿಚಿತ್ರವಸ್ತುಗಳ ಜನ್ಮಸ್ಥಾನಕಂ ತಾಂ ವಸಂತಕಮೆಂಬುದು ವಿಷಯಂ ಮದೀಯ ವಿಷಯಂ (ಕುಸುಮಾ. ೦೩-೬೬). ೨. ಪ್ರಸಿದ್ಧವಾದ: ಪ್ರಕಟಾಂಗಿಕ ವಾಚಿಕ ಸಾತ್ವಿಕ ಮಹಾರ್ಯಂಗಳೆಂಬ ನಾಲ್ಕಭಿನಯಮುಂ ಸಕಲಪರೀಷಹಮೆನೆ ರಂಜಕಮಾದುವು ರಂಗಮಧ್ಯದೊಳ್ (ಅಜಿತ. ೫-೯). ೩. ಕಣ್ಣಿಗೆ ಕಾಣುವ ; ಪ್ರತ್ಯಕ್ಷ. (ನಾ). ೪. ಸ್ಪಷ್ಟತೆ ; ನಿಚ್ಚಳತೆ : "ವಿಶದಂ, ಪ್ರಕಟಂ, ಸ್ಪಷ್ಟಂ, ಪ್ರಕಾಶಂ, ಸ್ಫುಟಂ — ಈ ೫ ಅಱುಯಲ್ಬರ್ಪು(ಹು)ದು" (ಶಬ್ದಮ. ೦೨೪-೬೬). ೫. ಬಹಿರಂಗವಾದುದು ; ಸರ್ವವಿದಿತವಾದುದು : ಪ್ರಕಟಮುಮಪ್ಪಂತಿರೆ ಜಾತಕರ್ಮದೊಸಗೆಯುಮನೊಸೆದು ಮಾಡಿಸೆ (ಶಾಂತಿಪು. ೦೦-೬೬). ೬. ಪ್ರಸಿದ್ಧನಾದವನು; ಕೀರ್ತಿಶಾಲಿ : ಪ್ರಕಟರ್ ನೀತಿವಿದರ್ ನೃಪರ್ (ಶಿಶುಪ. ೦೩-೯೯). ೭. ಬಹಿರಂಗವಾದ ಸ್ಥಳ ; ಸಾರ್ವಜನಿಕ ಪ್ರದೇಶ : ಅರಸಿದರು ಸೀತೆಯಂ . . . ಸೋಜಿದರ್ ಗೂಢಮಂ ; ಸೋಜಿದರ್ ಪ್ರಕಟಮಂ (ಶ್ರೀರಾಮಪಟ್ಟಾ. ೩೬೫-೦೦೫). ೮. ವಿಚಾರ ; ವಿವರ ; ಸಂಗತಿ : ಸಕಲಲೋಕಾತ್ಮಾಭಿರಾಮ ನೀನರಿಯದಿಹ ಪ್ರಕಟವೊಂದಿಲ್ಲ (ನವನೀ. ೪-೦೪).

**ಪ್ರಕಟಂ ಮಾಡು** = ಸ್ಪಷ್ಟಪಡಿಸು; ವ್ಯಕ್ತಗೊಳಿಸು: ಪರಭಾಗಭಾವ ವಿಲಸದ್ವರ್ಣಕ್ರಮಾವೃತ್ತಿಯುಂ ಪ್ರಕಟಂ ಮಾಡಿರೆ (ಕಾವ್ಯಾ. ೦-೦೫೦) ; ಘ್ರಾಣೇಂದ್ರಿಯೌತ್ಸುಕ್ಯಮಂ ಪ್ರಕಟಂ ಮಾಡಿ ನೃಪಂಗಲಂಪುವಡೆದತ್ತಂ ಭೋಜಗಂಧಾಸವಂ (ಅಜಿತ. ೪-೬೪). **ಪ್ರಕಟವಾಗು** = ೧. ಹೊರಕ್ಕೆ ಬರು ; ಗೋಚರಿಸು ; ಮೈದೋರು : ಒಂದು ಅರಳಿಮರವಾಗಿಯೂ ಮತ್ತೊಂದು ಆಲದ ಮರವಾಗಿಯೂ ಪ್ರಕಟವಾಗುತ್ತವೆ (ಜೀವಾತ್ಮ. ೦೬೪). ೨. ವ್ಯಕ್ತವಾಗು ; ಅರಿವಿಗೆ ಬರು : ನಾವು ಮೌನದಿಂದಿದ್ದರೆ ನಮ್ಮ ದಡ್ಡತನವು ಒಂದು ವೇಳೆ ಜನರಲ್ಲಿ ಪ್ರಕಟವಾಗದೆ ಇರಬಹುದು (ಮುಂಬಯಿ. ೪-೪೯); ಪ್ರಕಟವಾದರೂ ಅಗಡುತನ ಬಿಡಲಿಲ್ಲ (ಗಾದೆ). ೩. (ಲೇಖನ, ಪುಸ್ತಕ ಮುಂತಾದುವು) ಮುದ್ರಣ ಹೊಂದಿ ಹೊರಬರು ; ಪ್ರಕಾಶಗೊಳ್ಳು ; ಅಚ್ಚಾಗು : ಭಗವದ್ಗೀತೆಯನ್ನು ಕುರಿತು ಬರೆದ ದಿವಂಗತ ಆರ್. ಡಿ. ರಾನಡೆಯವರ ಗ್ರಂಥ ಇತ್ತೀಚೆಗೆ ಪ್ರಕಟವಾಗಿದೆ (ಧರ್ಮಗ್ಲಾ. ೦೪೪). [ಸಂ.]

**ಪ್ರಕಟಂ** (ಅ). ಎಲ್ಲರಿಗೂ ತಿಳಿದಿರುವಂತೆ ; ಬಹಿರಂಗವಾಗಿ : ಪ್ರಕಟಂ ಲೋಕೋತ್ತರಲೌಕಿಕಪರಿಣತಿ ಪುನ್ನಿಗಂಗೆ ಶಾಂತೀಶ್ವರರಾಮಕಥಾ ಪ್ರಶಸ್ತಿಯಿಂದಾದ ಕೃತಿಗಳಿಂ [ಕೃತಿಯುಗಂಗಳ]ನ್ನವುಮೊಳವೇ (ಶಾಂತಿಪು. ೦೨-೬೫) ; ಪ್ರಕಟಂ ವಾರಿಧಿವೇಳೆ ವಾರ್ಧಿಗೆ ಜಲೌಘಸ್ಪರ್ಧೆಯೊಳ್ ಬಾಧ್ಯಬಾಧಕಭಾವಂ ನೆಗಟಲ್ಕೆ ನಿಲ್ವ ತೆಱದಿಂದೆ (ಜಗನ್ನಾ. ೦-೩೦) ; ಪ್ರಕಟಂ ತಾಂ ಹಾಸ್ಯರಸಪ್ರಕಾರಮದು ಮೂಱುತೆಱದಿನೆಸೆಗುಂ (ಶೃಂಗಾರ. ೦-೬೪). [ಸಂ.]

**ಪ್ರಕಟಂಬೆಱು** (ಕ್ರಿ). ೧. ಸ್ಪಷ್ಟವಾಗು : ಪ್ರಕಟಂಬೆತ್ತಾಭಿಘಾತಂಬಿಡದು ಬಿಡದೆ ತಮ್ಮಂ ಕ್ಷಮಾವೃತ್ತಿಯಿಂ ತಾಳ್ದಿ (ಕುಸುಮಾ. ೦-೯೬). ೨. ಹೆಸರುವಾಸಿಯಾಗು ; ಪ್ರಸಿದ್ಧವಾಗು : ಪ್ರಕಟಂಬೆತ್ತಿರ್ಪ ಪೊಂಗೋಂಟೆಯ ತೆನೆಯೊಸಲ್ಗಳ್ . . . ತಾನೆನಲ್ಕೊಪ್ಪುಗುಂ (ದಶಕು. ೦-೨೫). [ಪ್ರಕಟ + ಪೆಱು₁]

**ಪ್ರಕಟಗೈ** (ಕ್ರಿ). ಸ್ಪಷ್ಟಪಡಿಸು; ವ್ಯಕ್ತಗೊಳಿಸು: ಅಲ್ಪವಿವು ಸಾಮಾನ್ಯವೆನೆ ಪ್ರಕಟಗೈಯುತ್ತ ತಮ್ಮಾತುಲಸುಖದುಃಖವೀವ ಶಕ್ತಿ (ಮಲೆದೇ. ೯೯-೩). [ಪ್ರಕಟ + ಕೈ₁ (< ಕೆಯ್₁)]

**ಪ್ರಕಟಗೊಳಿಸು** (ಕ್ರಿ). = ಪ್ರಕಟಗೈ : "ಆಕಾರಃ, ಇಂಗಃ, ಇಂಗಿತಂ—೩ ಅಭಿಪ್ರಾಯವನ್ನು ಪ್ರಕಟಗೊಳಿಸುವ ಚೇಷ್ಟೆಯ ಹೆಸರುಗಳು" (ಸಿದ್ಧಾಂತಿ. ೩೩೦). [ಪ್ರಕಟ + ಕೊಳ್₁ + — ಇಸು₃]

**ಪ್ರಕಟಗೊಳ್ಳು** (ಕ್ರಿ). ಸ್ಪಷ್ಟವಾಗು ; ವ್ಯಕ್ತವಾಗು : ಈ ದುಷ್ಕರು ಮಾಡಿದ್ದ ಭ್ರಷ್ಟಾಚಾರಗಳೆಲ್ಲ ಈಗ ಒಂದೊಂದಾಗಿ ಪ್ರಕಟಗೊಳ್ಳುತ್ತಿವೆ (ರೂಢಿ). [ಪ್ರಕಟ + ಕೊಳ್ಳು₁ (< ಕೊಳ್₁)]

**ಪ್ರಕಟಣಾಲಯ** (ನಾ). ಪುಸ್ತಕ ಮುಂತಾದುವುಗಳನ್ನು ಮುದ್ರಿಸಿ ಪ್ರಕಾಶಪಡಿಸುವ ಕಾರ್ಯಾಲಯ : ಇಂದು ವಿವಿಧ ಪ್ರಕಟಣಾಲಯಗಳಲ್ಲಿ ಮುದ್ರಣವಾಗಿರುವ ರಾಮಾಯಣದ ಎಲ್ಲ ಪ್ರತಿಗಳಲ್ಲಿಯೂ . . . ೨೪ ಸಾವಿರ ಶ್ಲೋಕಗಳೇ ಕಾಣಬರುತ್ತವೆ (ವಾಲ್ಮೀಕ. ೬). [< ಸಂ. ಪ್ರಕಟನಾಲಯ]

**ಪ್ರಕಟಣೆ** (ನಾ). ೧. ಗ್ರಂಥ ಮುಂತಾದುವುಗಳನ್ನು ಮುದ್ರಿಸುವುದು,— ಪ್ರಕಾಶಪಡಿಸುವುದು : ಎಲ್ಲಕ್ಕಿಂತ ಮೊದಲು ಆಗಬೇಕಾಗಿರುವುದು ನಾಲ್ಕೂ ಶೂನ್ಯಸಂಪಾದನೆಗಳ ಪ್ರಕಟಣೆ (ಶೂನ್ಯಸಂ. ೦೪೬). ೨. ಯಾವುದಾದರೊಂದು ವಿಷಯವನ್ನು ಸಾರ್ವಜನಿಕರಿಗೆ ತಿಳಿಯಪಡಿಸಲು ಸರ್ಕಾರ ಅಥವಾ ಸಂಘಸಂಸ್ಥೆಗಳು ಹೊರಡಿಸುವ ತಿಳಿವಳಿಕೆಯ ಪತ್ರ ; ಘೋಷಣೆ : ಭೂಮಿಯ ಹಿಡುವಳಿಯ ಬಗ್ಗೆ ಸರ್ಕಾರವು ಒಂದು ಪ್ರಕಟಣೆಯನ್ನು ಹೊರಡಿಸಿದೆ (ರೂಢಿ). [< ಸಂ. ಪ್ರಕಟನ]

**ಪ್ರಕಟನ** (ನಾ). ೧. = ಪ್ರಕಟಣೆ ೧ : ನನ್ನ ಕಾವ್ಯ ಸದ್ಯದಲ್ಲೆ ಪ್ರಕಟನಕ್ಕೆ ಸಿದ್ಧವಾಗುತ್ತದೆ (ರೂಢಿ). ೨. = ಪ್ರಕಟಣೆ ೨ : ಮನೆಗಂದಾಯದ ವಿಷಯದಲ್ಲಿ ಸರ್ಕಾರಿ ಪ್ರಕಟನವೊಂದು ಇಂದು ಹೊರಬಿದ್ದಿದೆ (ರೂಢಿ). [ಸಂ.]

**ಪ್ರಕಟನೆ** (ನಾ). ೧. = ಪ್ರಕಟಣೆ ೧ : ಕನ್ನಡಸಾಹಿತ್ಯಪರಿಷತ್ತು ಉತ್ತಮಗ್ರಂಥಗಳ ಪ್ರಕಟನೆಯನ್ನು ಕೈಗೊಂಡಿದೆ (ರೂಢಿ). ೨. = ಪ್ರಕಟಣೆ ೨ : ರದ್ದಾದ ಸ್ಥಳಗಳಿಗೆ ಪುನರ್‌ಚುನಾವಣೆ ನಡೆಯಲಿದೆ ಎಂದು ನಗರಸಭೆಯ ಅಧ್ಯಕ್ಷ ಶಿವಾಜಿರಾಯರ ಪ್ರಕಟನೆ ಹೊರಬಿದ್ದಿತ್ತು (ಅಶನಾ. ೨೬೦) ; ಮಕ್ಕಳ ಜೀವನದಲ್ಲಿ ಪರಿಣಾಮಕಾರಿಯಾಗುವಂತೆ ಶಿಕ್ಷಣ ನೀಯುವ ಸಂಘಸಂಸ್ಥೆಗಳಲ್ಲಿ . . . ಜಾಹೀರಾತು, ಪ್ರಕಟನೆ, ವಸ್ತುಪ್ರದರ್ಶನ . . . ಮುಂತಾದುವು ಪ್ರಧಾನವಾದವು (ಶಿಕ್ಷಣ. ೩೩). [ಸಂ. ಪ್ರಕಟನ]

**ಪ್ರಕಟಿತ** (ಗು). ೧. ಗೋಚರವಾದ ; ವ್ಯಕ್ತಗೊಂಡ : ಪ್ರಕಟಿತವಿಳಾಸನಧಿರಾಜಕುಮಾರಂ ನಳಿನಕೇತು ಕಂಡವರಂ (ಶಾಂತಿಪು. ೯-೦೦). ೨. ಪ್ರಸಿದ್ಧವಾದ ; ಜನಜನಿತವಾದ : ಪ್ರಕಟಿತಜಿನಪ್ರವಚನಪ್ರಕಾರದೊಳ್ ಸಾರಘೋರಸಂಸಾರಂ . . . ಪಂಚವಿಧಂ (ಸುಕುಮಾ. ೬-೬). (ನಾ). ೩. ಪ್ರಕಟಗೊಳ್ಳುವಂಥದು ; ಬಹಿರಂಗವಾಗುವಂಥದು : ಕರುಳ ಕಲೆ ಪ್ರಕಟಿತವುಂಟೆ . . . ದೇವಾ (ಬಸವ. ೮೨೫). ೪. ಪ್ರಸಿದ್ಧವಾದುದು : ಸುಕುಮಾರತರಾಕ್ಷರಪದನಿಕರವಿಶಿಷ್ಟಪ್ರಯೋಗಗತಮಪ್ಪುದದಾ ಸುಕುಮಾರಮೆಂಬುದಕ್ಕುಂ ಪ್ರಕಟಿತಮದಱಾಪ್ರಯೋಗಮಿಾ ತೆಱನಕ್ಕುಂ (ಕಾವ್ಯಾ. ೨-೬೦). [ಸಂ.]

**ಪ್ರಕಟಿತೋಕ್ತಿ** (ನಾ). ಸ್ಪಷ್ಟಪಡಿಸಲ್ಪಟ್ಟ ಮಾತು,—ವಚನ : ಪ್ರಕಟಿತೋಕ್ತಿ ವಿವಿಕ್ತಕಳಾಕಳಾಪಕ[ನು]ಪಾಹಿತಸಾಹಿತ್ಯವಿದ್ಯೆಯೊಳ್ (ಕಾವ್ಯಾ. ೩ ೨೦೬). [ಸಂ.]

**ಪ್ರಕಟಿಸು** (ಕ್ರಿ). ೧. ಪ್ರದರ್ಶಿಸು; ತೋರ್ಪಡಿಸು: ಇವಱಿಂ ಸಮ್ಯಗ್ದರ್ಶನಮುಮವಶ್ಯಮುಜ್ಜ್ವಳಿಕುಂ . . . ಅಂತದು ಕವಲ್ತು ಸಮ್ಯಕ್ಚರಿತ್ರಮುಂ

ಪ್ರಕಟಿಸುಗುಂ (ಆದಿಪು. ೩-೩೯) ; ಸಕಲಸಾಮರ್ಥ್ಯಮುಂ ಪ್ರಕಟಿಸುವ ಸಭೆಯೊಳಗೆ ಕುಳ್ಳಿರ್ದ ಸೌದರನ ಯೌವನವುಮುಮಂ ಕಂಡು (ಶಂಪರ. ೩-೭೮); ಭೂಷಣಖಚಿತವಮೌಕ್ತಿಕಮರೀಚಿ ಪಗಲೊಳು ಜೊನ್ನಮಂ ಪ್ರಕಟಿಸೆ (ಶಂಪು. ೬-೪). ೨. ಗ್ರಂಥ ಮೊದಲಾದುವನ್ನು ಪ್ರಕಾಶಿಸು,—ಹೊರತರು: ಕೆಲವು ವಾರಪತ್ರಿಕೆ, ಮಾಸಪತ್ರಿಕೆಗಳಲ್ಲಿ ತನ್ನ ಲೇಖನಗಳನ್ನು ಪ್ರಕಟಿಸಿ ಪ್ರಭಾವಿ ಬರಹಗಾರ ಎಂದು ಎನಿಸಿಕೊಂಡಿದ್ದು ರಂಗಣ್ಣನವರಿಗೆ ಧೈರ್ಯ ತಂದುಕೊಟ್ಟಿತು (ಅಚಾ. ೧೦) ; ಪಠ್ಯಪುಸ್ತಕವನ್ನು ಸರ್ಕಾರವೇ ಪ್ರಕಟಿಸಲಿ (ಶಿಕ್ಷಣ. ೬೯೯). ೩. ಸರ್ವವಿದಿತವಾಗುವಂತೆ ಮಾಡು ; ತಿಳಿಯಪಡಿಸು : ಅತ್ತಿಮಬ್ಬೆ . . . ದಾನಂ ಪೂಜೆ ಶೀಲಮುಪವಾಸಮೆಂಬಿವಂ ಪ್ರಕಟಿಸಿದಳ್ (ಅಜಪು. ೦-೩೨). ೪. ಉಂಟಾಗು; ಹುಟ್ಟು; ಉದ್ಭವಿಸು: ಪಾತಕವ ನೆನೆದೆನೊ ಪಶಿಯೊಳಕಟು ಪ್ರಕಟಿಸಿತೆ ದುಷ್ಕರ್ಮಫಲವೆನಗೆ (ಕೊರಟಾ. ೩-೩-೯೭). [ ಪ್ರಕಟನ + — ಇಸು ]

**ಪ್ರಕಟೀಕರಣ** (ನಾ). ಪ್ರಕಾಶಪಡಿಸುವುದು ; ವ್ಯಕ್ತಪಡಿಸುವುದು : ತೀರ್ಥಾಖ್ಯಾನಮೆಂಬುದು ದುರಿತವಿನಾಶಕಾಂಕ್ಷಿಗಳ್ ಸಂಸಾರಸಮುದ್ರಮ ನೀಸಲೆಂದು ಜಿನಪತಿಮುಖಕಮಲವಿನಿರ್ಗತಧರ್ಮಸಂತತಿಯಂ ಪ್ರಕಟೀಕರಣಂಗೆಯ್ವುದು (ಜಾವುಂಪು. ೦೩). [ ಸಂ. ]

**ಪ್ರಕಟೀಕೃತ** (ಗು). ಪ್ರಸಿದ್ಧವಾದ : ಪರಿಗೃಹೀತ ಸಮ್ಯಗ್ದರ್ಶನ ಪ್ರಕಟೀಕೃತ ಕ್ಷಾಯಿಕ ಸಮ್ಯಗ್ದೃಷ್ಟಿಗಳುಮಾಗಿ ಬಂದು (ಜಾವುಂಪು. ೦೦) ; ಪ್ರಕಟೀಕೃತ ನಿರ್ಮಲವಿನುತಕೀರ್ತಿಯಂ ಪುಣ್ಯಮೂರ್ತಿಯಂ ಬಾಲಕನಂ ಸುಕುಮಾರನೆಂದು ಪೆಸರಿಟ್ಟು ಕಾಂತೆ ತನಯಂಗೆ ನಾಮಕರಣಂಗೆಯ್ದಳ್ (ಸುಕುಮಾ. ೦೦-೩೬) ; ಅದು . . . ಪ್ರಕಟೀಕೃತ ರಾಜಲೀಲೊ ದಯಮಲ್ತು (ಚಂದ್ರಪು. ೯-೬೨ ವ). [ಸಂ.]

**ಪ್ರಕರ** (ನಾ). ೧. ಗುಂಪು ; ಸಮೂಹ : “ ನಿಕರಂ . . . ಪ್ರಕರಮನೀಕಂ ಗಣಂ ಸಮಿತಿ ಸಮುದಯಂ ಪ್ರತತಿ ಸಂತತಿ ಸಮೂಹಂ ” (ಮಂಗರಾ. ೦೨೬-೦) ; ಶುಕ ಶಾರಿಕಾದಿ ವಿಹಗಪ್ರಕರು ಮುಂ ಕೇಳ್ದ ವಚನಮಂ ನುಡಿವುದು (ಕಾದಂಪು. ೬೯); ಪ್ರಕರಾಂದೋಳಕಿರೀಟಪ್ರಕರಂ . . . ಆಗಿಂತು ಕರಂ ಮೆಚ್ಚುತ್ತಿರ್ದುದು ಸಕಲಸಭಾಜನಮುದಾ ಕುಮಾರನ ಮತಿಯಂ (ಕುಸುಮಾ. ೬-೩೨); ವಿಕಳ ದುರ್ಯೋಧನನು ನಿಗಮಪ್ರಕರವಹೊಳಿಯ ವಹೊಳಿಯತ್ತಲು ಸಾರ್ದು ಮಂಡಿಸಿದ (ಕುವ್ಯಾ. ಉ. ೦-೨೯). ೨. ಹೂಗೊಂಚಲು; ಪುಷ್ಪಗುಚ್ಛ. ೩. ಒಂದು ಬಗೆಯ ಸಂಗಂಧವಸ್ತು; ಅಗುರು. ೪. ನೆರವು; ಸಹಾಯ. ೫. ಬಳಕೆ; ಉಪಯೋಗ. ೬. ಗೌರವ. [ಸಂ.]

**ಪ್ರಕರಣ** (ನಾ). ೧. ಚೆನ್ನಾಗಿ ಮಾಡುವುದು. ೨. ಚೆನ್ನಾಗಿ ನಡೆಸಿಕೊಡುವುದು. ೩. ವಿವರಣೆ ; ವ್ಯಾಖ್ಯಾನ. ೪. ಪ್ರಸ್ತಾವ; ಉಲ್ಲೇಖ : ಗಾಂಧೀಜಿಯವರ ಆತ್ಮಚರಿತ್ರೆಯಲ್ಲಿ ಅಗಸನ ಪ್ರಕರಣವೂ ಇದೆ (ದೀಕನ್ನ. ೩೯). ೫. ಸಂದರ್ಭ ; ಸನ್ನಿವೇಶ : ದಯಮಿಟ್ಟು ಪ್ರಕರಣಕ್ಕೆ ಸಂಬಂಧಪಟ್ಟ ವಿಷಯವನ್ನು ಮಾತ್ರ ಕುರಿತು ಚರ್ಚೆಮಾಡಬೇಕಾಗಿ ವಿನಂತಿ (ಅದೇ). ೬. ಯಾವುದಾದರೊಂದು ನಿರ್ದಿಷ್ಟ ವಿಷಯವನ್ನು ಪ್ರತಿಪಾದಿಸುವ ಅಥವಾ ವಿವರಿಸುವ ಗ್ರಂಥಭಾಗ; ಅಧ್ಯಾಯ : ಆತನ ರಾಜನೀತಿಯೂ ಅಷ್ಟಾಗಿ ಯಶಸ್ವಿಯಾಗಲಿಲ್ಲವೆಂದೂ ಹಿಂದಿನ ಪ್ರಕರಣದಲ್ಲಿ ತಿಳಿಸಲಾಗಿದೆಯಷ್ಟೆ (ಕ್ಕದೀಪ. ೦೦); ಭಗವದ್ಗೀತೆಯನ್ನು ಕುರಿತು ಬರೆದ . . . ಗ್ರಂಥ ಇತ್ತೀಚೆಗೆ ಪ್ರಕಟವಾಗಿದೆ. ‘ ಟಿಳಕರ ಗೀತಾರ್ಥ ’ವನ್ನು ಕುರಿತು ಒಂದು ಪ್ರಕರಣ ಅದರಲ್ಲಿದೆ (ಧರ್ಮಸಾ. ೦೯೯). ೭. (ಅಹಿತಕರವಾದ) ಘಟನೆ ; ಹಗರಣ : ರಮಾನ ಹಿಂದೂ ಮುಂದೂ ಓಡಾಡುತ್ತಿದ್ದವರಿಗೆ ಕಡಿಮೆ ಇರಲಿಲ್ಲ. ಪ್ರಕರಣಗಳಾದುವು. ರಮಾ ಬೇಸತ್ತು ಅಧ್ಯಯನವನ್ನೇ ಬಿಟ್ಟು ಕೊಟ್ಟಳು (ಅನ್ನಪೂ. ೩೯) ; ಊರಿನ ಘಟಿಂಗರ ಸಂಗಡ “ ಪ್ರಕರಣ ” ಮಾಡಿ ಇವಳು ಮನೆಗೆ ಬಂದು ಇಲ್ಲದ ಹಗರಣ ಮಾಡಿದರೆ ನಾವು ಹೆದರಿ ಮಲಗಲಿಕ್ಕೆ ರಾತ್ರಿ ಪರರ ಮನೆಗೆ ಹೋಗಬೇಕು (ಕುಂಟುಣಾ. ೬೨). ೮. ಅವಕಾಶ; ಆಸ್ಪದ : ಯಾವುದೋ ಪ್ರಕರಣ ಬಂತು. ದಟಾಯಿಸಿಬಿಟ್ಟೆ (ಅದೇ). ೯. ಪೀಠಿಕೆ ; ಮುನ್ನುಡಿ ; ಉಪಕ್ರಮ. ೧೦. [ಕಾವ್ಯಮೀ] ದಶರೂಪಕಗಳಲ್ಲಿ ಒಂದು ; ಕಾಲ್ಪನಿಕಕಥಾಂಶವನ್ನು ಹೊಂದಿರುವ, ಧೀರಶಾಂತನಾಯಕನುಳ್ಳ, ಇತರ ಲಕ್ಷಣಗಳಲ್ಲಿ ನಾಟಕವನ್ನು ಹೋಲುವ (ಮೃಚ್ಛಕಟಿಕ, ಮಾಲತೀಮಾಧವ ಮುಂತಾದ) ದೃಶ್ಯಕಾವ್ಯ : ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರವೀಥಿ, ಅಂಕ, ಈಹಾಮೃಗ ಎಂದು ರೂಪಕಗಳು ಹತ್ತು ವಿಧ (ಸಂನಾಟಿ. ೨೯) ; ಪ್ರಕರಣ. ಉದಾ:—ಮೃಚ್ಛಕಟಿಕಾ, ಮಾಲತೀಮಾಧವ (ಕ್ವಬಿ. ೨೦೪). ೧೧. [ತತ್ತ್ವಶಾ] ಪ್ರಮೇಯವನ್ನು ವಿವರಿಸುವ ವಾಕ್ಯಸಮೂಹ: ಪ್ರಕರಣವೆಂದರೆ ಯಾವುದಾದರೂ ಒಂದು ಪ್ರಮೇಯವನ್ನು ನಿರೂಪಿಸಲು ಹೊರಟ ವಾಕ್ಯಸಮೂಹ (ಭಾತತ್ತ್ವ. ೨೬). ೧೨. [ನ್ಯಾಯಶಾ] ಒಂದು ನಾನಾರ್ಥವಾಚಕವಾದ ಪದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಗೊತ್ತುಮಾಡಲು ಇರುವ ಸಂದರ್ಭ ; ‘ಸೈಂಧವ ಬೇಕು’ ಎಂದು ಊಟಮಾಡುವ ಸಂದರ್ಭದಲ್ಲಿ ಹೇಳಿದರೆ ‘ಉಪ್ಪು, ಕುದುರೆ’ ಎಂಬ ಎರಡು ಅರ್ಥವುಳ್ಳ ‘ಸೈಂಧವ’ ಪದವು ಸಂದರ್ಭದಿಂದ ‘ಉಪ್ಪು’ ಎಂಬ ಅರ್ಥವನ್ನು ಮಾತ್ರ ಕೊಡುತ್ತದೆ: ಆತ್ಮಶಬ್ದವು . . . ಪ್ರಕರಣ, ಉಪಪದ ಮುಂತಾದ ಯಾವುದಾದರೊಂದು ಕಾರಣವಿದ್ದ ಹೊರತು ಅದು ಇಂಥ ಅರ್ಥದಲ್ಲಿಯೇ ಪ್ರಯುಕ್ತವಾಗಿದೆಯೆಂದು ತೀರ್ಮಾನ ಮಾಡುವುದಾಗಲಾರದು (ಬ್ರಹ್ಮಸೂ. ೯೩). [ಸಂ.]

**ಪ್ರಕರಣೆ** (ನಾ). = ಪ್ರಕರಣ ೧೦ : ನಾಟಕೆಯಲ್ಲಿ ವರ್ತಕಾದಿಗಳು ನಾಯಕರಾಗಿಯೂ ನಾಯಕನ ವಂಶದಲ್ಲಿ ಹುಟ್ಟಿದವಳೇ ನಾಯಿಕೆಯಾಗಿಯೂ ಇದ್ದರೆ ಅದೇ ಪ್ರಕರಣೆ (ಸಂನಾಟಿ. ೩೩). [ಸಂ. ಪ್ರಕರಣೀ]

**ಪ್ರಕರಿ** (ನಾ). [ಕಾವ್ಯಮೀ] ದೃಶ್ಯಕಾವ್ಯಗಳಲ್ಲಿ ಬರುವ ದೃಶ್ಯವನ್ನು ರಮಣೀಯವನ್ನಾಗಿ ಮಾಡಲು ಸಾಧಕವಾದ ಐದು ಅರ್ಥಪ್ರಕೃತಿಗಳಲ್ಲಿ ನಾಲ್ಕನೆಯದು ; ಮುಂದೆ ಬರುವ ಘಟನೆಗೆ ಪೂರಕವಾಗಿರುವಂತೆ ನಾಟಕದಲ್ಲಿ ಅಳವಡಿಸಿರುವ ಪ್ರಾಸಂಗಿಕವೃತ್ತಾಂತ : ಪ್ರಾಸಂಗಿಕವೆಂದರೆ, ಮುಖ್ಯಕಥೆಗೆ ಅಂಗವಾಗಿ ಮಧ್ಯೆ ಬರತಕ್ಕ ಕಥೆ . . . ಪ್ರಾಸಂಗಿಕವು ದೊಡ್ಡದಾಗಿದ್ದರೆ ಅದಕ್ಕೆ ‘ಪತಾಕಾ’ ಎಂದೂ ಸ್ವಲ್ಪವಾಗಿದ್ದರೆ . . . ‘ಪ್ರಕರೀ’ಯೆಂದೂ ಹೆಸರು (ಕ್ವಬಿ. ೨೦೫). [ಸಂ. ಪ್ರಕರೀ]

**ಪ್ರಕರೀನಾಯಕ** (ನಾ). [ಕಾವ್ಯಮೀ] ನಾಟಕಾದಿಗಳ ಮಧ್ಯೆ ಬರುವ ಪ್ರಸಂಗದ ಪ್ರಧಾನವ್ಯಕ್ತಿ : ನಾಯಕ, ಪ್ರತಿನಾಯಕ, ಪತಾಕಾನಾಯಕ, ಪ್ರಕರೀನಾಯಕ, ಹೀಗೆ ಬೇರೆಬೇರೆ ಪಾತ್ರಗಳಲ್ಲಿ ಬೇರೆಬೇರೆ ರಸಗಳಿರುವಂತೆ (ಕ್ವಾಲೋ. ೦೭೩ ಅಡಿ). [ಸಂ.]

**ಪ್ರಕರ್ಷ** (ಗು). ೧. ಶ್ರೇಷ್ಠವಾದ : ಅದು . . . ಪ್ರಕರ್ಷಾನೇಕವರ್ಷಾನುಗತಮಾಗಿಯುಂ ಅಚಪಲಾಚರಣಪರಿಣತಮಲ್ತು (ಚಂದ್ರಪು. ೯-೬೨ ವ). (ನಾ). ೨. ಶ್ರೇಷ್ಠತೆ: ಅತಿಶಯತೆ. ೩. ಉತ್ಕರ್ಷ ; ಆಧಿಕ್ಯ ; ಹೆಚ್ಚಳ : ಸತ್ಯಮೆಂಬುದು ಅತ್ಯಂತ ಪ್ರಕರ್ಷದಿಂ ಲೋಭನಸ್ವಭಾವಮಂ ನಿವೃತ್ತಿಗೆಯ್ದು ನಡೆವುದು (ವರ್ಧಮಾ. ೬-೬೨ವ); ಕರಮೊಸೆದು ನೋಡಿ ದಶಕಂಧರನಂ ಹರ್ಷಪ್ರಕರ್ಷದಿಂದೆನ್ನಂ ಖೇಚರಪತಿಗೆ ಕೊಟ್ಟನಾಂ ದಶಶಿರನ ಬೆಸಂಬಿಡಿದು ತಾಗಿದೆಂ ಲಕ್ಷ್ಮಣನಂ (ಪಂರಾಮಾ. ೦೯-೬೭); ಎಲೆ ಕೃಷ್ಣ ನಿನ್ನ ರೂಪಮಂ ಸೌಷ್ಠವಪ್ರತಿಷ್ಠೆಯಂ ಪ್ರಭಾವಪ್ರಕರ್ಷಮಂ

. . . ನೋಡಲ್ ನೀಂ ಪರದೈವತಕಳಾಸ್ವರೂಪನಾಗಿ ತೋರ್ಪೆ (ಜಸಾ. ೪-೬೮ ಪ) ; ಆಪ್ಯಾಯಿಕೆಯಲ್ಲಿ ವಿಕಟಬಂಧದ ಪ್ರಲೇಪವೂ ಉಂಟು (ರೈತ್ನಾಕೋ. ೦೧೩). ೪. ಶಕ್ತಿ ; ಬಲ. [ಸಂ.]

**ಪ್ರಕಲಿತ, ಪ್ರಕಳಿತ** (ಗು). ೧. ಚೆನ್ನಾಗಿ ಸೇರಿಕೊಂಡಿರುವ,-ಕೂಡಿಕೊಂಡಿರುವ : ಪರಮಮಾಹೇಶ್ವರಚರಣವಾರಿರುಹರೇಣುಪ್ರಕಲಿತವಿಭಾಸ್ಮರಲಲಾಟನನಭವಭಕ್ತಿಸ್ಥಳಕಿರೀಟನನು ... ಕೊಂಡಾಡಿ (ಬಸಪು. ೪೬-೬೯). ೨. ಜೋಡಿಸಿದ ; ಸೇರಿಸಿದ. **ಪ್ರಕಳಿತ** : (ನಾ). ೩. ವಾಸಕ್ಕೆ ಉಪಯುಕ್ತವಾದ ಸಾಮಗ್ರಿಗಳಿಂದ ಸುಸಜ್ಜಿತವಾದುದು : ಪೂರೊಳಗೆ ಗುರುಂಗಳಿಗಿರಲು ಪ್ರಕಳಿತವಪ್ಪ ಮನೆ ೧ಯಿನ್ನಿನಿತುಮಂ ಸರ್ವಾಭಾಧ ಪರಿಹಾರವಾಗಿ ಬಿಟ್ಟರು (ಶಾಸ. IX-1, ೨೯೬-೨೬ ; 1147). [ಸಂ.]

**ಪ್ರಕಳಿತ** 'ಪ್ರಕಲಿತ' ನೋ.

**ಪ್ರಕಾಂಡ** (ಗು). ೧. ದೊಡ್ಡದಾದ ; ಭಾರಿಯದಾದ ; ಬೃಹದಾಕಾರವುಳ್ಳ : ಅವುಗಳ ಹಿಂದೆ ಐನೂರು ಪ್ರಕಾಂಡ ದೇಹವುಳ್ಳ ಮಹಾಬಲವುಳ್ಳ ಆನೆಗಳು ಗಂಭೀರವಾದ ನಡಿಗೆಯಿಂದ ಬಂದು ಪ್ರಾಸಾದಕ್ಕೆ ಎಳಭಾಗದಲ್ಲಿ ನಿಂತವು (ಕೋಟಿಪೂ. ೬೩) ; ಅವರಿಬ್ಬರಿಗೂ ಹಿಂಬದಿಯು ರಕ್ಷೆಯಾಗಿತ್ತು ಆ ಪ್ರಕಾಂಡ ವೃಕ್ಷದ ದೀಡು (ಪುಳಿಮ. ೨೯೯). ೨. ಶ್ರೇಷ್ಠವಾದ; ಉತ್ತಮವಾದ; ಅತಿಶಯವಾದ. (ನಾ). ೩. ದೊಡ್ಡದು; ಬೃಹತ್ತಾದುದು: ಸ್ನಾನ, ವ್ರತ, ಉಪವಾಸಗಳ ಆಕರ್ಮಕಾಂಡವು ಪ್ರಕಾಂಡವಾಗಿ ಬೆಳೆಯದಿದ್ದರೆ ಅವರು ಬದುಕುವ ಬಗೆ ಹೇಗೆ! (ಏಕ್ಕಳ. ೬೭೬) ೪. ಉತ್ತಮವಾದಂದು ; ಒಳ್ಳೆಯದು. ೫. ಒಳ್ಳೆಯವನು ; ಉತ್ತಮನಾದವನು : "ಪ್ರಕಾಂಡಃ, ಉದ್ಗಃ — ಈ ೨ ಒಳ್ಳಿದಂ" (ಹಲಾಯು. ೬೨-೨೨೩). ೬. (ಉತ್ತರಪದವಾಗಿ ಬಂದಾಗ) ತನ್ನ ಜಾತಿಯಲ್ಲಿ ಅಥವಾ ವರ್ಗದಲ್ಲಿ ಬಹಳ ಮೇಲಾದವನು, —ಶ್ರೇಷ್ಠನಾದವನು: ಪರ್ವತಶರಮು ಖಂಡಿಸಿದನಕಾಂಡತಟತ್ಕಾಂಡಾಭಪವಿಪ್ರಕಾಂಡಕಾಂಡದೆ ಕೃಷ್ಣಂ (ಜಗನ. ೦೪-೬೭); ಸರ್ವಜ್ಞನು ಕನ್ನಡಿಗರ 'ತಿರುವಳ್ಳುವರ್' ಎಂದರು ಪಂಡಿತಪ್ರಕಾಂಡ ಎ. ಆರ್. ಕೃಷ್ಣಶಾಸ್ತ್ರಿಗಳು (ಕಲಕ. ೬೭೦). ೭. ಮರದಲ್ಲಿ ಬೇರಿನಿಂದ ಕೊಂಬೆಯವರೆಗೆ ಇರುವ ಭಾಗ ; ಕಾಂಡ : "ಮರದ ಹನೆ (ಪಣೆ?)ಯಿಂ ಕೆಟಗೆ ಪ್ರಕಾಂಡಮೆಂಬುದು" (ಹಲಾಯು. ೩೦-೨೪೮). ೮. ಕೊಂಬೆ ; ಗೆಲ್ಲು ; ರೆಂಬೆ : "ಆ ಮರನ ಕವಲೊತ್ತು ಪ್ರಕಾಂಡಮೆನಿಸಿಕ್ಕು" (ಮಂಗಗಾ. ೬೨-೩). ೯. ಒಂದು ಬಗೆಯ ಸರ. ೧೦. ಮೊಳಕೈಯ ಮೇಲುಭಾಗ : "ಪ್ರಕಾಂಡ ಮೆಂಬುದು ಮೊ(ಟ)ಣಕ್ಕೆಯಿಂದ ಮೇಗಣ ಭಾಗ" (ಹಲಾಯು. ೬೬-೭೭೯); "ಆ ಮೊಟಕ್ಕೆಯ ಮೇಲು ಪ್ರಕಾಂಡಮೆನಿಸಿಕ್ಕು" (ಮಂಗಗಾ. ೯೩-೯). ೧೧. ತಾವರೆಯ ದಂಟು ; ಮೃಣಾಳ. ೧೨. ಕೈಬೆರಳು. ೧೩. ಕಾಲದ ಒಂದು ಗಣನೆ. ೧೪. ಕಿರಣ. ೧೫. ಒಂದು ಬಗೆಯ ಮರ : "ಕಿರಣ ಮೃಣಾಳ ಕಾಲ ತರುಭೇದ ಕರಾಂಗುಳಿಗಳ್ ಪ್ರಕಾಂಡಮಕ್ಕು" (ನಾನಾರ. ೬೦). [ಸಂ.]

**ಪ್ರಕಾಂಡಕ** (ಗು). ೧. ಶ್ರೇಷ್ಠವಾದ. (ನಾ). ೨. ರೆಂಬೆ ; ಟೊಂಗೆ. ೩. ಒಂದು ಬಗೆಯ ಸರ ; "ಮಧ್ಯದಲ್ಲಿ ಕ್ರಮವಾಗಿ ದೊಡ್ಡ ಐದು ಮುತ್ತುಗಳಿರುವ ಹಾರ" (ಅಭಿ. ಕೋಶ) : ಪ್ರತ್ಯೇಕಶೀರ್ಷ ಕೋಪಶೀರ್ಷಕಾವಘಾಟಕಪ್ರಕಾಂಡಕತರಲತರಬಂಧೋಪಪದಮಂಚಕಸಮೋತಂಗಳಾಗಿ (ಅಭಿ. ೬-೩೪ ಪ). [ಸಂ.]

**ಪ್ರಕಾಮ** (ನಾ). ೧. ಹೆಚ್ಚಾದ ಅಪೇಕ್ಷೆ ; ಅತ್ಯಾಸೆ. ೨. ಹೆಚ್ಚಾದ ವಿಷಯಾಭಿಲಾಷೆ ; ಭೋಗಾಸಕ್ತಿ. ೩. ಆನಂದ ; ಹಿಗ್ಗು. [ಸಂ.]

**ಪ್ರಕಾಮಂ** (ಅ). ೧. ಅಧಿಕವಾಗಿ ; ಹೇರಳವಾಗಿ ; ಯಥೇಚ್ಛವಾಗಿ : "ಕಾಮಂ, ಪ್ರಕಾಮಂ, ಪರ್ಯಾಪ್ತಂ, ನಿತಾಂತಂ, ಭೃಶಂ, ಅತ್ಯರ್ಥಂ, ಅತಿಮಾರ್ಯಾದಂ, ಅತಿವೇಳಂ—ಈ ೮ ಹಿರಿದಾಗಿರ್ದುದು" (ಹಲಾಯು. ೦೦೯-೩೩) ; ಸಂತಮಿರೆಂದು ಪೊಣ್ದು ಕಾಮಂ ಪ್ರಕಾಮಂ ತನ್ನ ಪುಸಿವಡೆ ವೆರಸು ತಪೋವನದತ್ತಣ್ಗೈತರುತುಮಿರ್ದಂ (ರಾಘಾಕ್ಯ. ೫೬-೦೬). ೨. ಇಷ್ಟಬಂದಂತೆ ; ಸ್ವೇಚ್ಛೆಯಾಗಿ. ೩. ಸಂತೋಷವಾಗಿ. ೪. ತೃಪ್ತಿಯಾಗುವಂತೆ. [ಸಂ.]

**ಪ್ರಕಾರ** (ನಾ). ೧. ರೀತಿ ; ವಿಧಾನ ; ಬಗೆ : ಸುಕುಮಾರನೆಂಬ ಪೆಸರೀ ಸುಕುಮಾರಂಗೀ ಸಮಸ್ತಧಾರಿಣಿಯೊಳ್ ಸಾರ್ಥಕಮಾದುದೆಂದು ನಾನಾಪ್ರಕಾರದಿಂದಂ ಪ್ರಶಂಸೆಗೆಯ್ದಂ ಭೂಪಂ (ಸುಕುಚ. ೦೦-೩೬) ; ಲ್ಯೂಸಿ ಭಾರತದಲ್ಲಿ ಕಾಣದ ಒಂದು ನವೀನಪ್ರಕಾರವನ್ನು ವಿವರಿಸುತ್ತಾಳೆ (ಸಮಜೀ. ೦೩ ೩೮೯೪). ೨. ಸಮಾನತೆ ; ಸಾಮ್ಯ ; ಸಾದೃಶ್ಯ : "ಪ್ರಕಾರಃ—೧. ಬೇರೆಯಾಗಿರುವಿಕೆ. ೨. ಹೋಲ್ವಿಕೆ" (ಸಿದ್ಧಾಂತಿ. ೪೦೨) ; ಅಂತಿಂತುಂತೆಂತೆಂಬಿವು ತಾಂ ಪ್ರಕಾರಕಾಲ್ಯಾರ್ಥಂಗಳ್ (ಶಮದ. ೩೨೦). ೩. ವಿಶಿಷ್ಟತೆ ; ವೈಶಿಷ್ಟ್ಯ. ೪. ಭೇದ ; ವ್ಯತ್ಯಾಸ. ೫. [ತತ್ತ್ವಶಾ] ಗುಣವಿಶಿಷ್ಟವಾದ ವಸ್ತುವಿನ ಗುಣ,—ಧರ್ಮ : ಈ ಜಗತ್ತು ಪರಮಾತ್ಮನಿಗೆ ಶರೀರವಾಗಿ ಅಥವಾ ಪ್ರಕಾರವಾಗಿರುವುದರಿಂದ ಉಬ್ಬರ—ಇಳಿತಗಳು, ಸುಖ—ದುಃಖಗಳು . . . ನಡೆಯುತ್ತ ಇದ್ದರೂ ಪರಮಾತ್ಮನಿಗೆ ಲೇಪವಿಲ್ಲ (ಭಾರಕ. ೨೬೦). [ಸಂ.]

**ಪ್ರಕಾರವಾಚಕ** (ನಾ). [ವ್ಯಾಕ] ನಾಮಪದದ ಬಗೆಗಳಲ್ಲಿ ಒಂದು : ಇಂಥದು ಇಂಥವನು ಎಂಬ ಶಬ್ದಗಳು ತಾವು ಹೆಸರು ಹೇಳುವ ವಸ್ತುವಿನ ಗುಣ ಯಾವುದೇ ಆಗಿರಲಿ, ಅದರ ಪ್ರಕಾರವನ್ನು (ಎಂದರೆ ರೀತಿಯನ್ನು) ಹೇಳುತ್ತವೆ. ಅಂಥದು ಎಂಬ ಶಬ್ದವೂ ಇದೇ ಬಗೆಯ ಗುಣವಾಚಕ. (ಇವನ್ನು ಪ್ರಕಾರವಾಚಕಗಳೆಂದು ಕರೆಯುವುದುಂಟು) (ಮುಧ್ಯಮ. ೨೬). [ಸಂ.]

**ಪ್ರಕಾರಾಂತರ** (ನಾ). ೧. ಬೇರೆ ರೀತಿ ; ಬೇರೆ ವಿಧಾನ : "ಆವರೆ ನಿಮಗೆ ಮನಸಿಲ್ಲದಿದ್ದರೆ ತೊಂದರೆ ತೆಗೆದುಕೊಳ್ಳಬೇಕಾಗಿಲ್ಲ" ಎಂದವಳು ಪ್ರಕಾರಾಂತರವಾಗಿ ಮತ್ತೆ ಕೂಡಿಸಿದಳು (ಪ್ರನರು. ೨೩೦). ೨. ಪ್ರತ್ಯೇಕ ; ಅನ್ಯ : ಆಂಜನೇಯನೂ ಅವನ ಕಡೆಯ ಲಕ್ಷಗಟ್ಟಲೆ ವಾನರರೆಲ್ಲರೂ . . . ಮಾನವರೆ ಹೊರತು ಪ್ರಕಾರಾಂತರವಾಗಿರಲಾರರು (ಭಾರಕ. ೮೮). [ಸಂ.]

**ಪ್ರಕಾರ್ಯ** (ನಾ). ಕೆಲಸ ; ಕೃತ್ಯ : ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದಾದರೂ ವಿಧಿಯಿಂದ . . . ಯಾವುದಾದರೂ ಪ್ರಕಾರ್ಯಗಳನ್ನು ರಾಷ್ಟ್ರಪತಿಯವರಿಗೆ ವರ್ಗಾಯಿಸುವಂತೆ ಭಾವಿಸತಕ್ಕುದಲ್ಲ (ಭಾರಾಸ. ೨೬). [ಸಂ.]

**ಪ್ರಕಾಶ** (ಗು). ೧. ಹೊಳೆಯುವ ; ಪ್ರಕಾಶಿಸುವ. ೨. ಕಣ್ಣಿಗೆ ಕಾಣುವ ; ತೋರುವ. ೩. ಸ್ಫುಟವಾದ ; ನಿಚ್ಚಳವಾದ. ೪. ಹೆಸರುವಾಸಿಯಾದ ; ಪ್ರಸಿದ್ಧವಾದ. ೫. ಬಹಿರಂಗವಾದ. ೬. ಅರಳಿದ. (ನಾ). ೭. ಬೆಳಕು ; ಹೊಳಪು ; ಕಾಂತಿ : ದೇವಿ ನೀಂ . . . ಪ್ರಕಾಶ ಗರ್ಭಪ್ರಭೆಯಂತೆಯುಂ . . . ಮಹತ್ತ್ವಮಂ ಪಡೆದೆ (ಜಗನ. ೨-೯೭ ವ). ೮. ಬಿಸಿಲು ; ಸೂರ್ಯಾತಪ : "ಪ್ರಕಾಶಃ, ದ್ಯೋತಃ, ಆತಪಃ—೩ ಬಿಸಿಲಿನ ಹೆಸರು" (ಸಿದ್ಧಾಂತಿ. ೩೩). ೯. ಕಣ್ಣಿಗೆ ಕಾಣುವುದು; ತೋರುವುದು : "ವಿಶದಃ, ಪ್ರಕಟಂ, ಸ್ಪಷ್ಟಂ, ಪ್ರಕಾಶಂ, ಸ್ಫುಟಂ—೫ ಅಬಿಯಲ್ಪರ್ಪು(ಹು)ದು" (ಹಲಾಯು. ೦೨೪-೬೭); ಲೋಕದಲ್ಲಿ ಸಕಲವಸ್ತುಗಳಲ್ಲೂ ಅಸ್ತಿತ್ವ, ಪ್ರಕಾಶ, ಇಷ್ಟತ್ವ, ನಾಮ, ರೂಪ—ಈ ೫ ಅಂಶಗಳು ವ್ಯವಹರಿಸಲ್ಪಡುವುವು (ಹಿಂತಸಾ. ೨೨೩); ಅನಂತರ ನವೀನ ನಾಗರಿಕತೆಯೊಂದರ ಇರವು ಪ್ರಕಾಶಕ್ಕೆ ಬಂದಿತು

(ಧ್ವನ್ಯಾ. ೨೨). ೧೦. ಕೀರ್ತಿ: ಪ್ರಸಿದ್ಧಿ. ೧೧. ಸಾಟಿ; ಸಮಾನ: "ಸದೃಕ್ . . . ಪ್ರಕಾಶಂ, ಪ್ರತಿಮಂ, ಪ್ರಕಾರಂ, ತುಲ್ಯಂ, ಸಮಂ, ಸನ್ನಿಭಂ—ಈ ೧೧ ಸರಿ" (ಶಬ್ದಮ. ೦೧೩–೪). ೧೨. ಬಯಲು. ೧೩. ಗ್ರಂಥದ ಪರಿಚ್ಛೇದ. ೧೪. ಅರಿವು; ಜ್ಞಾನ. ೧೫. ಒಂದು ಬಗೆಯ ಲೋಹ; ಕಂಚು. ೧೬. [ನಾಟ್ಯ] ಎಲ್ಲರಿಗೂ ಕೇಳಿಸುವಂತೆ ಪಾತ್ರಗಳು ಹೇಳುವ ಮಾತು; ☞ ಅಭಿನಯಕಾಲದಲ್ಲಿ ಪಾತ್ರಗಳು ಮನಸ್ಸಿನಲ್ಲಿ ಹೇಳುವ ಮಾತು (ಸ್ವಗತ, ಆತ್ಮಗತ), ಎಲ್ಲರಿಗೂ ಕೇಳುವಂಥದು (ಸರ್ವಶ್ರಾವ್ಯ, ಪ್ರಕಾಶ), ಕೆಲವರಿಗೆ ಮಾತ್ರ ಕೇಳಿಸಬೇಕಾದುದು (ನಿಯತಶ್ರಾವ್ಯ)—ಎಂಬ ಮೂರು ಬಗೆಯ ಕಥಾಂಶ(ವಾಕ್ಯ)ಗಳಿವೆ: ದೇವಿ . . . (ಪ್ರಕಾಶವಾಗಿ, ವಾಸುದೇವನಂ ನೋಡಿ) . . . ಆನಿಲ್ಲಿಂದು ಪೋಪೆಂ (ಚಿತ್ರಗೋ. ೩೬); ರಾಜಂ . . . (ಪ್ರಕಾಶವಾಗಿ) ಎಲೌ ಪೂಜ್ಯಳೆ . . . ನಾನು ಆಶ್ರಮವಾಸಿಗಳ ನಿರ್ವಿಘ್ನವಾದ ಕ್ರಿಯೆಯನ್ನು ತಿಳಿಯುವುದಕ್ಕೆ ಈ ಧರ್ಮಾರಣ್ಯಕ್ಕೆ ಬಂದಿರುವೆನು (ಶಾಕುಂತ. ೦೩–೦೪); ಪ್ರಕಾಶ—ಎಲ್ಲರೂ ಕೇಳಬಹುದಾದದ್ದು (ಶ್ರಾವ್ಯ) (ಸಂಪಾಟಿ. ೦೩). ೧೭. [ಜೈನ] ಭಿನ್ನವಾದ ಬಾಹ್ಯಪದಾರ್ಥಗಳ ಜ್ಞಾನ,-ಅರಿವು: ಪ್ರಕಾಶವೆಂದರೆ ವ್ಯವಹಾರಕ್ಕೆ ಬೇಕಾದ ಯೋಗ್ಯತೆ . . . ಜ್ಞಾನಕ್ಕೆ ವಿಚಿತ್ರಶಕ್ತಿಯೂ ವಿಚಿತ್ರವೇಗವೂ ಇರುವುದರಿಂದ ಅಂತರ ಬಾಹ್ಯವಸ್ತುಗಳ ಸಂಬಂಧವೇ ಪ್ರಕಾಶವೆಂದು ತಿಳಿಯಬೇಕು (ಹಿಂದಸಾ. ೬೩). ೧೮. [ಶೈವ] ಪರಮಶಿವನಲ್ಲಿರುವ ಒಂದು ಅಸಾಧಾರಣಧರ್ಮ: ಪರಮಶಿವನೇ ಎಲ್ಲಾ ಸೃಷ್ಟಿಗೂ ಕಾರಣನಾದವನು . . . ಪ್ರಕಾಶ ವಿಮರ್ಶಮಯನು. ಪ್ರಕಾಶವೆಂದರೆ ತನ್ನ ಶಕ್ತಿಪ್ರಸಾರ (ಭಾರದ. ೨೦೦). [ಸಂ.]

**ಪ್ರಕಾಶಕ** (ಗು). ೧. ಬೆಳಕು ಬೀರುವ; ಹೊಳೆಯುವ: ದೀಪದ ಪ್ರಕಾಶಕಶಕ್ತಿಯನ್ನು (illuminating Power) ತಿಳಿಯಬೇಕಾದರೆ . . . ಅವುಗಳಿಂದುಂಟಾದ ಪ್ರಕಾಶಸಾಂದ್ರತೆಗಳನ್ನು ಹೋಲಿಸಬೇಕು (ಭೌತಶಾ. ೦೩೭). ೨. ಬಹಿರಂಗಗೊಳಿಸುವ; ಹೊರಗೆಡಹುವ. ೩. ವ್ಯಕ್ತಪಡಿಸುವ. ೪. ವಿಶದೀಕರಿಸುವ. ೫. ಹೆಸರುವಾಸಿಯಾದ; ಪ್ರಸಿದ್ಧವಾದ. (ನಾ). ೬. ಸೂರ್ಯ. ೭. ಗ್ರಂಥಗಳನ್ನು ಪ್ರಕಟಿಸುವವನು: ಕ್ರಮೇಣ ಪ್ರಕಾಶನೋದ್ಯಮದ ಮೂರು ಮುಖಗಳಾದ ಮುದ್ರಕ, ಪ್ರಕಾಶಕ, ಪುಸ್ತಕವ್ಯಾಪಾರಿ ಬೇರೆ ಬೇರೆಯಾದರು (ಕಂಕೋ. XI, ೩೦೭). ೮. ವ್ಯಾಖ್ಯಾನಕಾರ. ೯. ಸಂಶೋಧಕ. ೧೦. ಒಂದು ಬಗೆಯ ಖನಿಜ; ರಂಜಕ: ಸುಣ್ಣ, ಕಬ್ಬಿಣ, ಪ್ರಕಾಶಕ ಮುಂತಾದ ಖನಿಜಗಳು . . . ಎಲುವು, ಕೂದಲು ಮುಂತಾದ ಅವಯವಗಳನ್ನು ಪೋಷಿಸುತ್ತದೆ (ಮುಂಬಯಿ. ೩–೦೭೩). [ಸಂ.]

**ಪ್ರಕಾಶಗೊಳಿಸು** (ಕ್ರಿ). ೧. ಬೆಳಕುಂಟಾಗುವಂತೆ ಮಾಡು: ಅವಳು ದೀಪದ ಕುಡಿಯನ್ನು ಮುಂದೂಡಿ ಪ್ರಕಾಶಗೊಳಿಸಿದಳು (ರೂಢಿ). ೨. ಹೊರಹೊಮ್ಮಿಸು: ಪ್ರಬೋಧನಂ, ಅನುಬೋಧಃ–೨ ಸುಗಂಧದ್ರವ್ಯಗಳಲ್ಲಿ ಅಡಗಿಕೊಂಡಿರುವ ಪರಿಮಳಾದಿಗಳನ್ನು ಪ್ರಕಾಶಗೊಳಿಸುವ ತೈಲಾದ್ಯುತ್ತೇಜಕ ಸಾಮಗ್ರಿಯ ಹೆಸರು (ಸಿದ್ಧಾಂತಿ. ೨೦೬).

[ಪ್ರಕಾಶ + ಕೊಳ್$_1$ + — ಇಸು$_3$]

**ಪ್ರಕಾಶಗೊಳ್ಳು** (ಕ್ರಿ). ೧. ಬೆಳಕಾಗು: ಹಿಂದೆ ಮೈಸೂರು ಮಹಾರಾಜರು ಸಿಂಹಾಸನವನ್ನು ಏರುತ್ತಿದ್ದಂತೆಯೇ ಇಡೀ ಅರಮನೆಯು ವಿದ್ಯುದ್ದೀಪಗಳಿಂದ ಪ್ರಕಾಶಗೊಳ್ಳುತ್ತಿತ್ತು (ರೂಢಿ). ೨. ಬಹಿರಂಗವಾಗು; ಎಲ್ಲರಿಗೂ ತಿಳಿಯುವಂತಾಗು: ಅವನ ಭ್ರಷ್ಟಾಚಾರಗಳೆಲ್ಲ ಈಗ ಪ್ರಕಾಶಗೊಳ್ಳುತ್ತಿವೆ (ರೂಢಿ). [ಪ್ರಕಾಶ + ಕೊಳ್ಳು$_1$ (<ಕೊಳ್$_1$)]

**ಪ್ರಕಾಶನ** (ನಾ). ೧. ಹೊಳೆಯುವಿಕೆ; ಪ್ರಕಾಶಿಸುವಿಕೆ: ಆದಿತ್ಯನು ಸಕಲ ಜಗತ್ತನ್ನೂ ತನ್ನ ಪ್ರಕಾಶನಾದಿಕರ್ಮಗಳಿಂದ ಸರ್ವತ್ರ ನೋಡುತ್ತಾನೆ (ಋಕ್ಸಾರ. ೨೩೭). ೨. ಗ್ರಂಥ, ಪತ್ರಿಕೆ ಮುಂತಾದುವುಗಳ ಪ್ರಕಟನೆ: ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ತನ್ನದೇ ಆದ ಪ್ರಕಾಶನ ಉದ್ಯಮವನ್ನು ನಿರ್ವಹಿಸುತ್ತಿದೆ (ಕಂಕೋ. XI, ೩೦೪); ಈ ಸುಲಭಸಾಹಿತ್ಯದ ದಿನಗಳಲ್ಲಿ, ಪ್ರಕಾಶನಕಾರ್ಯದಲ್ಲಿ ಧ್ಯೇಯವಾದಿತ್ವವೆಂದರೆ ಅದೊಂದು ಮರೀಚಿಕೆಯಾಗಿದೆ (ವಿಕಾಸ. VI, ಪ್ರಕಾಶಕರ ಮಾತು). ೩. ಪುಸ್ತಕ ಮೊದಲಾದುವನ್ನು ಪ್ರಕಟಿಸುವ ಸಂಸ್ಥೆ: ಭಾರತೀಯಜ್ಞಾನಪೀಠ ಪ್ರಕಾಶನವು ಅನೇಕ ಪಾಂಡಿತ್ಯಪೂರ್ಣಗ್ರಂಥಗಳನ್ನು ಪ್ರಕಟಿಸಿದೆ (ರೂಢಿ). [ಸಂ.]

**ಪ್ರಕಾಶಪಡಿಸು** (ಕ್ರಿ). ಹೊರಗೆಡಹು; ಬಹಿರಂಗಗೊಳಿಸು: ಭಾರತದ ಇತಿಹಾಸ ಮಹಾಪುರುಷರ ಆವಿರ್ಭಾವವನ್ನು ಪ್ರಕಾಶಪಡಿಸುತ್ತಿದೆ (ಋಕ್ಸಾರ. ೦೦೩ ಪೀಠಿಕೆ); ಅಗತ್ಯಕಾಲ ಪ್ರಾಪ್ತವಾದಾಗ ದೇವತೆಗಳು ತಮ್ಮಿಂದ ರಕ್ಷಿತವಾದ ರಹಸ್ಯವನ್ನು ಲೋಕಕ್ಕೆ ಪ್ರಕಾಶಪಡಿಸುತ್ತಾರೆ (ಚಿತಂಬಾ. ೮). [ಪ್ರಕಾಶ + ಪಡಿಸು]

**ಪ್ರಕಾಶಿತ** (ಗು). ೧. ಪ್ರಕಾಶಗೊಳಿಸಿದ; ಬೆಳಗಿಸಿದ. ೨. ಪ್ರಸಿದ್ಧಪಡಿಸಿದ. ೩. ಪ್ರಕಾಶಗೊಂಡ. ೪. ಬಹಿರಂಗವಾದ; ಎಲ್ಲರಿಗೂ ತಿಳಿದ. ೫. ತೋರಿಸಿದ; ಪ್ರದರ್ಶಿಸಿದ. [ಸಂ.]

**ಪ್ರಕಾಶಿಸು** (ಕ್ರಿ). ೧. ಹೊಳೆ; ಬೆಳಗು: ಕನೋತಿ, ಕನುತೇ= ಪ್ರಕಾಶಿಸಿದಪು (ಶಬ್ದಕ್ಕ. ೨೪೦). ೨. ವ್ಯಕ್ತವಾಗು; ಪ್ರಕಟವಾಗು: ಸ್ಫುರತ್=ಪ್ರಕಾಶಿಸುವ, ಅನುಕೃತಿಗಂ—ಅನುಕರಣಶಬ್ದಕ್ಕೆಯುಂ (ಶಮದ. ೬೦ ಪೀಠಿ); ನಿನ್ನಲ್ಲಿ ಪ್ರಶ್ನಾರೂಪವಾಗಿ, ನನ್ನಲ್ಲಿ ಉತ್ತರರೂಪವಾಗಿ ಪ್ರಕಾಶಿಸುವುವೆಲ್ಲವೂ ಒಂದೇ ಶಕ್ತಿಯ ಕ್ರಿಯೆ (ಚಿತಂಬಾ. ೪೪). [ಪ್ರಕಾಶನ + — ಇಸು$_3$]

**ಪ್ರಕೀರ್ಣ** (ಗು). ೧. ತುಂಬಿದ; ಕಿಕ್ಕಿರಿದ: ಅದಱ ಪೊಱಪೊೞಲ ವಿಶಾಳ ಕನಕಕೃತಕಗಿರಿಗಳಿಂ ಘಳಪ್ರಕೀರ್ಣತರುಗಳಿಂ (ಶಂಕರಾ.೧–೩೩ ರಗಳೆ); ಮರುದುದ್ಧೂತಪಯಃಪ್ರಕೀರ್ಣಕಣಲಾಜಂ ಮೇಲೆ ಸಾಲಿಟ್ಟು (ರಾಜಶೇ. ೦೦–೬೨). ೨. ಹರಡಿಕೊಂಡಿರುವ; ಕ್ರಮವಾಗಿರದ; ಅಸ್ತವ್ಯಸ್ತಗೊಂಡ. ೩. ಮಿಶ್ರಗೊಳಿಸಿದ; ಬೆರಸಿದ. ೪. ನಾನಾವಿಷಯಗಳನ್ನು ಸೇರಿಸಿ ರಚಿಸಿದ. ೫. ಎಸೆದ. ೬. ಸಂಬಂಧವಿಲ್ಲದ; ಅಸಂಗತವಾದ. ೭. ಸಡಿಲವಾದ; ವಿರಳವಾದ. ೮. ಅಲ್ಲಾಡುತ್ತಿರುವ; ಅಲುಗಾಡುತ್ತಿರುವ. (ನಾ). ೯. ತುಂಬಿರುವಿಕೆ; ಭರ್ತಿಯಾಗಿರುವಿಕೆ: ಎಸೆವ ಕೇತನಾನೀಕಪ್ರಕೀರ್ಣದೊಳಿರ್ತು ತೋಱುವ (ಚಿತ್ರ. ೬–೨೦). ೧೦. (ವಸ್ತುವು) ತುಂಬಿಕೊಂಡಿರುವುದು; ವ್ಯಾಪ್ತವಾಗಿರುವುದು: ವಿಚಿತ್ರಜಿನೇಂದ್ರಪ್ರತಿಕೃತಿಪ್ರಕೀರ್ಣಮುಂ . . . ಆಗಿ . . . ಪೊಂಪಿಂದಗುಂದಲೆಯಾಗಿರ್ದುದು ದೇವದಂಪತಿರತಿಶ್ರೀಸುಂದರಂ ಮಂದರಂ (ಆದಿಪು. ೦–೪೪ ವ). ೧೧. ಹೊಂದಾಣಿಕೆಯಿಲ್ಲದ ವಿವಿಧ ವಿಷಯಗಳಿಂದ ಕೂಡಿದ ಗ್ರಂಥಭಾಗ: ವ್ಯವಹಾರಕಾಂಡದಲ್ಲಿ . . . ಸ್ತ್ರೀಸಂಗ್ರಹಣ, ಪ್ರಕೀರ್ಣ ಎಂಬ ೨೫ ಪ್ರಕರಣಗಳಿವೆ (ಭಾರದ. ೬೨); ೧೯ನೆಯ ಭಾಗ. ಪ್ರಕೀರ್ಣ (ಭಾರಾಸ. ೨೦೪). [ಸಂ.]

**ಪ್ರಕೀರ್ಣಕ** (ಗು). ೧. ಹರಡಿಕೊಂಡಿರುವ; ಚೆಲ್ಲಾಪಿಲ್ಲಿಯಾಗಿರುವ. (ನಾ). ೨. ಮುಖ್ಯವಿಷಯಗಳನ್ನು ಹೇಳಿದ ಮೇಲೆ ಉಳಿದಿರುವ ಭಿನ್ನವಾದ ಸಣ್ಣಸಣ್ಣ ವಿಷಯಗಳು ಮತ್ತು ಅವುಗಳನ್ನು ವಿವರಿಸುವ ಗ್ರಂಥಭಾಗ; ಸಂಕೀರ್ಣಪ್ರಕರಣ: ಮುನ್ನ ಪೇೞದೆಯುಂ ಪೇೞ್ದರ್ಥಂಗಳಂ ವಿಶ್ಲೇಷಿಸಿ ಪೇೞ್ವುದು ಪ್ರಕೀರ್ಣಕಮೆಂಬುದು ತಾತ್ಪರ್ಯಂ (ಶಬ್ದಮ. ೩೦–೦). ೩. (ದೇವರು, ರಾಜ ಮೊದಲಾದವರಿಗೆ ಬೀಸುವ) ಚಾಮರ: "ಚಾಮರಂ, ಪ್ರಕೀರ್ಣಕಂ—ಈ ೨ ಸೀಗುರಿ" (ಶಬ್ದಮ.

೬೦-೨೬೯) ; "ಸುತ್ತ ಕೆದಱುವ ಚಾಮರಂ ಪ್ರಕೀರ್ಣಕಮಕ್ಕುಂ" (ಶಬ್ದಮ. ೬೬-೪). ೪. [ಜೈನ] ಪ್ರಮಾಣಗಳಲ್ಲಿ ಒಂದು : ಭಾಗಂಬೋಗದೆ ಉೞಿದಕ್ಕರಂಗಳೆಲ್ಲಂ ಪ್ರಕೀರ್ಣಕ ಪ್ರಮಾಣಮಕ್ಕುಂ (ಶಬ್ದಸ್ಮೃ. ೬೬). ೫. ಪ್ರಮಾಣಗ್ರಂಥಭಾಗಗಳಲ್ಲಿ ಒಂದು : ಕೇವಲ ಒಂದೇ ಸಭೆಯಲ್ಲಿ ಬರೆಯಲ್ಪಟ್ಟ—ಇನ್ನೊಂದು ಸಭೆಯಿಂದ ಆ ವಿಷಯಕ್ಕೆ ಉಲ್ಲೇಖ ಸಿಕ್ಕದೆ ಹೋಗುವ—ಸಿದ್ಧಾಂತಗಳನ್ನು 'ಪ್ರಕೀರ್ಣಕ'ಗಳಲ್ಲಿ ಉಲ್ಲೇಖಿಸಿದರು (ಕೈನಶ. ೧೬೭). ೬. ಒಂದು ನರಕದ ಹೆಸರು : ಆ ಬಿಲಂಗಳುಮಿಂದ್ರಕ ಶ್ರೇಢೀಬದ್ಧಪ್ರಕೀರ್ಣಕಂಗಳೆಂದು ಮೂಱುತೆಱನಕ್ಕುಂ (ಅಜಿತ. ೫-೬೩ ವ) ; ಆ ನರಕಬಿಲಂಗಳೆಲ್ಲಮೆಣ್ಬತ್ತುನಾಲ್ಕುಲಕ್ಷಪಂಪ್ರಮಾಣಮಾಗಿಯುಮಿಂದ್ರಕ ಶ್ರೇಣೀಬದ್ಧಪ್ರಕೀರ್ಣಕಂಗಳೆಂದು ಮೂಱುತೆಱನಕ್ಕುಂ (ಸುಕುಮಾ. ೧೦-೪೦ ವ). ೭. ಮೂರುಬಗೆಯ ವಿಮಾನಗಳಲ್ಲಿ ಒಂದು ; ಶ್ರೇಣೀಬದ್ಧ ವಿಮಾನಗಳ ಮಧ್ಯದಲ್ಲಿ, ಹೂವನ್ನು ಎರಚಿದಂತೆ ಚೆಲ್ಲಾಪಿಲ್ಲಿಯಾಗಿರುವ ವಿಮಾನ : ಅಲ್ಲಿ ಸ್ವರ್ಗಮೆಂಬಿನಂ ಸೌಧರ್ಮೇಶಾನಾದಿಗಳ ವರವಿಮಾನಂಗಳಿಂದ್ರಕಶ್ರೇಣೀಬದ್ಧಪ್ರಕೀರ್ಣಕಂಗಳೆಂದು ಮೂಱೆಱಂ (ಚಂದ್ರಪ್ರ. ೩-೩೨ ವ). ೮. ದೇವತೆಗಳ ಒಂದು ವರ್ಗ ; ಗ್ರಾಮಾಂತರ ಹಾಗೂ ಪಟ್ಟಣಗಳಲ್ಲಿ ಪ್ರಜೆಗಳಂತೆ ವಾಸಿಸುವ ವರ್ಗ : ಸೈನಿಕ ದೇವತೆಗಳು ಅನೀಕರೆನಿಸುವರು. ಪ್ರಜೆಗಳಂತಿರುವವರು ಪ್ರಕೀರ್ಣಕರು (ಜೈನಧ. ೪೪). ೯. ಜ್ಯೋತಿರ್ಲೋಕದ ಜ್ಯೋತಿಗಳಲ್ಲಿ ಒಂದು ಭೇದ: ಮಧ್ಯಮಲೋಕಪ್ರತಿಬದ್ಧಮಪ್ಪ ಚಂದ್ರಾದಿತ್ಯಗ್ರಹನಕ್ಷತ್ರ ತಾರಕಾ ಪ್ರಕೀರ್ಣಕವಿಕಲ್ಪಜ್ಯೋತಿರ್ಗಣಾಲಂಕೃತಮಾಗಿರ್ದ ದಶೋತ್ತರಶತ ಯೋಜನವಿಸ್ತಾರಬಹಳತೆಯೊಳಂ (ಅಜಿತ. ೧೦-೨೨ ವ). [ಸಂ.]

**ಪ್ರಕೀರ್ತನ** (ನಾ). ೧. ಸಾರುವುದು ; ತಿಳಿಯಪಡಿಸುವುದಂ. ೨. ಹೊಗಳಿಕೆ ; ಕೊಂಡಾಟ. [ಸಂ.]

**ಪ್ರಕೀರ್ತಿತ** (ಗು). ೧. ಸಾರಿದ ; ಘೋಷಿಸಿದ. ೨. ಪ್ರಸಿದ್ಧಪಡಿಸಿದ. (ನಾ). ೩. ಹೊಗಳಿಕೆಗೆ ಪಾತ್ರವಾದುದು ; ಖ್ಯಾತಿಹೊಂದಿದುದಂ: ನಾನಾಹೆಸರುಗಳಿಂದ ಪ್ರಕೀರ್ತಿತವಾಗಿರುವ ಎರಡನೆಯ ಯುಗವು ಅತ್ಯಂತ ಚೇತೋಹಾರಿಯಾಗಿರುತ್ತದೆ (ಶೂನ್ಯಸಂ. ೧ ಪೀಠಿಕೆ). [ಸಂ.]

**ಪ್ರಕೀರ್ಯ** (ಗು). ೧. ಎರಚಿದ ; ಚೆಲ್ಲಾಪಿಲ್ಲಿಯಾಗಿರುವ. (ನಾ). ೨. ಒಂದು ಬಗೆಯ ಗಿಡ; ತವಸಿ : "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಕಾರಕಃ—೪ ತಪಸೀಗಿಡದ ಹೆಸರುಗಳು" (ಸಿದ್ಧಾಂತಿ. ೦೨೩). [ಸಂ.]

**ಪ್ರಕುಪಿತ** (ಗು). ೧. ಹೆಚ್ಚಾಗಿ ಕೋಪಗೊಂಡ ; ಕೆರಳಿದ : ಪ್ರಕುಪಿತ ಮೃಗಪತಿ ಶಿಶುಸನ್ನಿಕಾಶರತಿವಿಕಟಭೀಷಣಭ್ರೂಭಂಗರ್ ನಕುಲ ಸಹದೇವರ್ (ಪಂಪಭಾ. ೭-೮); ಅಕಟಕಟ ನೊಂದಳೆತ್ತಿರೆ ಸುಕುಮಾರಿಯನೆನು ತುಮಿನಿತು ಕೊಂಕಿಂ ನುಡಿದಂ ಪ್ರಕುಪಿತ [ಪಾಠಾಂ. ಪ್ರಕಟಿತ, ಪ್ರಕುಟಿಲ] ಚಿತ್ತಂ ಭೂನಾಯಕಂ (ಉಃಕೋಶ. ೨-೬೮). (ನಾ). ೨. ಹೆಚ್ಚಾದ ಕೋಪ : ಪ್ರಕುಪಿತದಿಂ ತೆಗೆದಿಸೆ ಮಸ್ತಕಮಂ ಕರಿ ನೊಂದು ತಿರುಗೆ (ಗಂಕ. ೦-೦೦೦). [ಸಂ.]

**ಪ್ರಕೃತ₁** (ಗು). ೧. ಚೆನ್ನಾಗಿ ಮಾಡಿದ,—ನೆರವೇರಿಸಿದ. ೨. ಪ್ರಾರಂಭಿಸಿದ; ಉಪಕ್ರಮಿಸಿದ; ತೊಡಗಿದ. ೩. ಪ್ರಕರಣಕ್ಕೆ ಸಂಬಂಧಿಸಿದ; ಸಂದರ್ಭಾನುಸಾರವಾದ; ಪ್ರಸ್ತುತ : ಪ್ರಕೃತ ಸ್ವದ್ರವ್ಯಕ್ಷೇತ್ರಕಾಲ ಭಾವಾಶ್ರಯಂಗಳಿಂ ಪುದ್ಗಲವೃತ್ತಕಮಂ ಮರ್ಯಾದಾಪೂರ್ವಕಮಱಿ ಪುದದವಧಿಯೆಂಬ ಪೆಸರ್ವಡೆದಿರ್ಕುಂ (ಚಂದ್ರಪ್ರ. ೦೪-೩೩). ೪. ಮುಖ್ಯವಾದ ; ಪ್ರಧಾನವಾದ. ೫. ಬದಲಾವಣೆ ಹೊಂದದಿರುವ ; ನೈಜವಾದ. (ನಾ). ೬. ಈಗಿನ ಪ್ರಕರಣ ; ಸದ್ಯದ ವಿಷಯ : ಈಗ ಪ್ರಕೃತಕ್ಕೆ ಸಂಬಂಧಿಸಿದಂತೆ ಮಾತನಾಡೋಣ (ರೂಢಿ). ೭. ನಿಜ ; ಸತ್ಯ. ೮. [ಕಾವ್ಯಮೀ] ಉಪಮಾಲಂಕಾರದಲ್ಲಿ ಹೋಲಿಸಲ್ಪಡುವ ವಸ್ತು; ಮುಖ, ರಾಜ ಮೊದಲಾದುವು; ವರ್ಣ್ಯ; ಉಪಮೇಯ. [ಸಂ.]

**ಪ್ರಕೃತ₂** (ಅ). ಸದ್ಯಕ್ಕೆ; ಈಗ್ಗೆ ಸಂಬಂಧಿಸಿದಂತೆ : ವಿವಿಧದೇಶಗಳ ನಾಣ್ಯಗಳ ಪರಸ್ಪರಬಾಂಧವ್ಯ 'ಪ್ರಕೃತ' ಹೇಗಿದೆಯೆಂದು ಈ ಕೆಳಗೆ ಕೊಟ್ಟಿದೆ (ಜಾಂಕ್ರ. III. ೦೩೩೩). [ಸಂ.]

**ಪ್ರಕೃತತುಲ್ಯಯೋಗಿತೆ** (ನಾ). [ಕಾವ್ಯಮೀ] ವರ್ಣಿತವಾದ ಹಲವಾರು ವಸ್ತುಗಳಿಗೆ ಗುಣರೂಪವಾದ ಅಥವಾ ಕ್ರಿಯಾರೂಪವಾದ ಒಂದೇ ಧರ್ಮವನ್ನು ಅನ್ವಯಿಸಿ ವರ್ಣಿಸುವುದು : ವರ್ಣ್ಯಂಗಳಾದನೇಕ ವಸ್ತುಗಳೊಳ್ ಗುಣಕ್ರಿಯಾರೂಪೈಕಧರ್ಮಾನ್ವಯಮಂ ಪೇಳೆ ಪ್ರಕೃತ ತುಲ್ಯಯೋಗಿತೆಯೆಂದುಂ ಅವರ್ಣ್ಯಂಗಳಾದನೇಕವಸ್ತುಗಳೋಳ್ ಅದಂ ಪೇಳೆ ಅಪ್ರಕೃತತುಲ್ಯಯೋಗಿತೆಯೆಂದುಂ ತುಲ್ಯಯೋಗಿತಾಲಂಕಾರ ಮಿರ್ತೆರಂ (ಶರಶ. ೬೮ ವೃತ್ತಿ). [ಸಂ. ಪ್ರಕೃತತುಲ್ಯಯೋಗಿತಾ]

**ಪ್ರಕೃತಿ** (ನಾ). ೧. ಯಾವುದಾದರೂ ಒಂದು ವಸ್ತುವಿನ ಅಥವಾ ಪ್ರಾಣಿಯ ನಿಜಸ್ವರೂಪ, —ಮೂಲಸ್ವರೂಪ : ಅರಸನಾತನ ಮನುಷ್ಯಾತೀತಮಪ್ಪ ಪ್ರಕೃತಿಯಂ ಕಂಡು (ಶಾಂತಿಪು. ೯-೦೨೬ ವ) ; ಧರಣಿಯಿಂದುದ್ಭವಿಸಿತೋಷಧಿಯೋಷಧಿಗಳಿಂದವತರಣಮನ್ನಾದಿಪುರುಷ ಪ್ರಕೃತಿ ವಿಕೃತಿಗಳ (ಕುಮಾ.ಅ. ೬೦೩. ೪-೬) ; ಪ್ರಕೃತಿ ವಿಕೃತಿಗಳಿಲ್ಲದಂದು . . . ಅಖಂಡೇಶ್ವರಾ ನಿಮ್ಮ ನೀವಱಿಯದೆ ಅನಂತಕಾಲವಿರ್ದಿರಂದು (ಅಖಂಡೇ. ೨-೪). ೨. ಪ್ರತಿಯೊಬ್ಬ ವ್ಯಕ್ತಿ ಅಥವಾ ಪ್ರತಿಯೊಂದು ವಸ್ತುವಿನ ಸಹಜಗುಣ,—ಸ್ವಭಾವ,—ಮನೋಧರ್ಮ : ಇರದೊಯ್ವುದಾ ತನ್ನಿಚ್ಛೆಗೆ ವರಯುವ್ವನದಂದು ಪುರುಷನಂ ಪ್ರಕೃತಿ (ಕಾದಂಪೂ. ೩೩೩); ಪ್ರಕೃತಿ ಪ್ರೋದ್ಭವಮಲ್ತು ಜೈನರುಸಿರ್ವಂತಾರಯ್ಕೆ ಲೋಕಂ ಸಕರ್ತೃಕಮೆಂಬ್ರಾ ಮತಮಂ ನಿರಾಕರಿಪವೋಲ್ (ಪಾರ್ಶ್ವಪು. ೪-೬೬) ; ಈ ದೃಷ್ಟಿಯಿಂದ ನನ್ನ ಮತ್ತು ಅವರ ಪ್ರಕೃತಿಗಳು ಭಿನ್ನಭಿನ್ನವಾಗಿರಬಹುದು (ಜೀವಾತ್ಮ. ೪೮). ೩. ಸತ್ತ್ವ, ರಜಸ್ಸು ಮತ್ತು ತಮಸ್ಸು ಎಂಬ ಮೂರುಬಗೆಯ ಮೂಲಗುಣಗಳು. ೪. ಪಂಚಭೂತಗಳು. ೫. ಮಾನವನಿಂದ ನಿರ್ಮಿತವಾಗದ ಸೃಷ್ಟಿ ; ನೈಸರ್ಗಿಕಸೃಷ್ಟಿ : ಪ್ರಕೃತಿಯ ಪ್ರಭಾವವನ್ನೂ ಅದು ಎಷ್ಟು ಮುಖ್ಯವೆಂಬುದನ್ನೂ ಮೇಲೆ ಕೊಟ್ಟ ಉದಾಹರಣೆಗಳು ನಿಮಗೆ ತಿಳಿಸುತ್ತವೆ (ಶೂದ್ರತ. ೦೪೦) ; ವಿಶ್ವದ ಚಟುವಟಿಕೆಗಳೆಲ್ಲ ಪ್ರಕೃತಿಯ ಆಜ್ಞೆಯ ಮೇರೆಗೆ ಸಾಗುತ್ತವೆ (ಧರ್ಮಶಾ. ೦೩೨). ೬. ಜನನೇಂದ್ರಿಯ : "ಪ್ರಕೃತಿಯೊಳು ಶೈವಮೂರ್ತಿಯೊಳು ಲಿಂಗಮಕ್ಕುಂ" (ಶಬ್ದಮ. ೧೩೦-೩೦). ೭. ಮಂತ್ರಿ ; ಸಚಿವ : ಅರಸನನುಮತದಿನೊಂದು ಯಕ್ಷಪ್ರತಿಮೆಯಂ ಮಾಡಿ ಪೌದನಪುರಾಧಿಪತ್ಯಮಂ ಪ್ರಕೃತಿಗಳೆಲ್ಲಮಿರ್ದು ಕೊಟ್ಟೊಡೆ (ಶಾಪುಃಪು. ೦೬೮). ೮. ಪುರಜನ ; ಪ್ರಜಾವರ್ಗ : ಆಗಳಾ ಕಂಸಕೃತವಿಕೃತಿಯಿಂ ಪ್ರಕೃತಿಕ್ಷೋಭವಾಗೆ (ಜಗಿ. ೬-೭೦ ವ); ನೀವ್ ಕೇಳಿ ಪೌರಪ್ರಕೃತಿಗಳು ಕರಿತುರಗವಾಹಕರು (ವಿಭಾಗ. ೦೦-೩೦-೨೭); ಪ್ರಕೃತಿಹಿತಾರ್ಥಂ ಕ್ಷಿತಿಪಾಲಕರುದ್ಯೋಗಿಸುಗೆ (ಕಾಳಂತ. ೦೦೭-೦೯೮). ೯. ಹೆಂಗಸು ; ಸ್ತ್ರೀ. ೧೦. ಕಾರ್ಯ. ೧೧. ಕಾರಣ : "ಪತ್ತನಜನಂಗಳೊಳು ಕಾರ್ಯದೊಳು ಕಾರಣದೊಳುತ್ತಮದ ಸಚಿವನೊಳು ಸತ್ವಾದಿ ಗುಣವಿಪ್ಪ ಚಿತ್ತದೊಳು ನಿಜದೊಳು ಸ್ವರೂಪದೊಳು ಪ್ರಕೃತಿಯೆಂದೆಂಬಾಭಿಧಾನಮಕ್ಕುಂ" (ಶಬ್ದಮ. ೦೪೭-೩೬). ೧೨. ಶಿಲ್ಪಿ ಮೊದಲಾದ ಕುಶಲಕರ್ಮಿಗಳು : "ಶಿಲ್ಪೀ, ಕಾರುಃ, ಪ್ರಕೃತಿಃ, —ಈ ೩ ಪಾಚಕಾರುಕರ್" (ಹಲಾಯು. ೯೭-೪೩೯). ೧೩. ನಿಜ ; ಸತ್ಯ. ೧೪. ನಿಯಮ ; ನಿಬಂಧನೆ ; ಕಟ್ಟಳೆ. ೧೫. ಕೋಪ, ದುಃಖ ಮೊದಲಾದ ಮನೋಭಾವನೆಗಳನ್ನು ಹತೋಟಿಯಲ್ಲಿಟ್ಟು

ಕೊಳ್ಳುವುದು. ೧೬. ಕಂದಾಯ ; ತೆರಿಗೆ : (ಶ). ೧೭. ಮುಖ್ಯವಾದುದು ; ಶ್ರೇಷ್ಠವಾದುದು : "ಪ್ರಕೃತಿಯಲ್ಲಿಯುಂ ಪ್ರಧಾನಮೆಂಬುದು" (ಶಬ್ದಮ. ೦೩೩-೦೬). ೧೮. ಆದಿ ಮತ್ತು ಅಂತ್ಯ. ೧೯. ಬಿಡುವುದು ; ತ್ಯಾಗ. ೨೦. ನಡತೆ ; ನಡವಳಿಕೆ. ೨೧. ಸಮೂಹ : "ನಿಜದೊಳ್ ಕಾರಣದೊಳ್ ಗುಣತ್ರಯದೊಳುಂ ಸಪ್ತಾಂಗದೊಳ್ ಚಿತ್ತದೊಳ್ ಪ್ರಜದೊಳ್ ಕಾರ್ಯದೊಳಾದಿಯಂತ್ಯದೊಳೆ ಛಂದೋಭೇದದೊಳ್ ಸ್ತ್ರೀಯರೊಳ್ ತ್ಯಜದೊಳ್ ತನ್ನ ಸ್ವರೂಪದೊಳ್ ಜನರೊಳುಂ ಚಾರಿತ್ರದೊಳ್ ಮುಖ್ಯದೊಳ್ ರಜದೊಳ್ತಾಂ ಪ್ರಕೃತ್ಯಾಖ್ಯೆ" (ನಾಪಾರ. ೧೦೨). ೨೨. [ವೈದ್ಯಶಾ] ಶರೀರಸ್ಥಿತಿ ; ದೇಹಧರ್ಮ : ಪ್ರಕೃತಿಯೆಂತೆಂದೊಡೆ — ವಾತಪ್ರಕೃತಿ, ಪಿತ್ತಪ್ರಕೃತಿ, ಶ್ಲೇಷ್ಮಪ್ರಕೃತಿ, ಮಿಶ್ರಪ್ರಕೃತಿ ಎಂದು ಪ್ರಕೃತಿಯು ನಾಲ್ಕು ತೆರನಾಗಿರುವುದು (ಸಳಶ್ಯ. ೦೬) ; ಜೋಳದ ನುಚ್ಚು ತಿಂದರೆ ಪ್ರಕೃತಿ ಮತ್ತಷ್ಟು ಕೆಡುತ್ತದೆ (ಶ್ರಣಸ. ೬) ; ಸಾಹೇಬರ ಪ್ರಕೃತಿ ಮಜಭೂತ ಇದ್ದರೂ ಸೊರಗಿರುವರೆಂಬ ಸುಳ್ಳು ಸಾಂತ್ವನವನ್ನು ಕೊತರೆ ನಿಂತರೆ ಗಾಯತ್ರಿ ಮಾಡಿಕೊಂಡೆವು (ದೀಶಹ. II. ೨೩೪). ೨೩. [ವ್ಯಾಕ] ನಾಮಪದ ಕ್ರಿಯಾಪದಗಳಲ್ಲಿ ಪ್ರತ್ಯಯಾಂಶವನ್ನು ಬೇರ್ಪಡಿಸಿದರೆ ಉಳಿಯುವ ಮೂಲರೂಪ ; ಪ್ರಾತಿಪದಿಕ: ಪ್ರಕೃತಿಗಳಂ ಧಾತ್ವರ್ಥದ ವಿಕಲ್ಪದಿಂದ ಬಿದು ಸಮಬೆಕೊಳ್ವುದು (ಶಾವ್ಯಾ.ಪ. ೪೨೦) ; ಪದದರ್ಥಮಂ ವಿಭಾಗಿಸುವುದರಿಂದೆ ವಿಭಕ್ತಿಯಂತದಂ ಪ್ರತ್ಯಯಮೆಂಬುದು ತತ್ಪ್ರತ್ಯಯದಿಂ ಪೂರ್ವದೊಳಿರ್ಕುಂ ಪ್ರಕೃತಿ (ಶಮದ. ೩೫) ; ಒಂದು ಶಬ್ದದ ಮೂಲರೂಪಕ್ಕೆ 'ಪ್ರಕೃತಿ' ಎಂದು ಹೆಸರು (ಕೈಪಿಡಿ. ೦೪). ೨೪. [ಛಂದ] ಇಪ್ಪತ್ತಾರು ಬಗೆಯ ವರ್ಣಛಂದಸ್ಸುಗಳಲ್ಲಿ ಇಪ್ಪತ್ತೊಂದನೆಯದು ; ಪ್ರತಿಸಾಲಿನಲ್ಲಿಯೂ ಇಪ್ಪತ್ತೊಂದು ಅಕ್ಷರಗಳಿರುವ ಒಂದು ಛಂದಸ್ಸು : "ಅತಿಧೃತಿ ಕೃತಿ ಪ್ರಕೃತಿಯಾಕೃತಿ ವಿಕೃತಿ . . . ಉತ್ಕೃತಿಗಳೆಂದೆನಿಪುವಿಪ್ಪತ್ತಾಱು ಛಂದಂಗಳಕ್ಕುಂ" (ಛಂಗರಾ. ೦೦೬-೦೮) ; ಅಲ್ಲಿ ಉಕ್ತ ಅತ್ಯುಕ್ತ . . . ಪ್ರಕೃತಿ ಆಕೃತಿ ವಿಕೃತಿ ಸಂಕೃತಿ ಅತಿಕೃತಿ ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೦-೪೬ ವ). ೨೫. [ತತ್ತ್ವಶಾ] ಸಾಂಖ್ಯಮತದಂತೆ ಪ್ರಪಂಚಕ್ಕೆ ಮೂಲಕಾರಣವಾದ, ಸತ್ತ್ವ, ರಜಸ್ಸು ಮತ್ತು ತಮೋಗುಣಗಳ ಸಾಮ್ಯಾವಸ್ಥೆ ; ಇಪ್ಪತ್ತುನಾಲ್ಕು ತತ್ತ್ವಗಳಲ್ಲಿ ಮೊದಲನೆಯದು ; ಪುರುಷನಿಂದ ಭಿನ್ನವಾದುದು : ಆ ಪ್ರಕೃತಿ ಪುರುಷರ್ವರ್ಗವೊಂದೆಡೆಯೊಳುಂ ಸ್ವಾತಂತ್ರ್ಯಮುಂ ಕಾರಣತ್ವಮುಮಿಲ್ಲೆಂದು ಪೇಳಲ್ಪಡುಗುಂ (ಯಶಾರಕಂ. ೬-೨೦ ವ) ; ಪ್ರಕೃತಿಯು ಇನ್ನೊಂದನ್ನು ಹುಟ್ಟಿಸುತ್ತದೆಯೇ ಹೊರತು ತಾನು ಯಾವುದರಿಂದಲೂ ಹುಟ್ಟಿದ್ದಲ್ಲ . . . ಈ ಪ್ರಕೃತಿಯ ಮೇಲೆ ಪ್ರಭುವಾದ ಈಶ್ವರನೊಬ್ಬನಿಲ್ಲ (ಭಾರದ.೦೨೬). ೨೬. [ವೇದಾಂತ] ಭಗವಂತನ ಮಾಯಾಶಕ್ತಿ ; ಮೂಲಾಜ್ಞಾನ, ಮಾಯೆ, ಅವಿದ್ಯೆ ಮೊದಲಾದ ಶಬ್ದಗಳಿಂದ ಹೇಳುವ ಪ್ರಪಂಚದ ಪೂರ್ವಸ್ಥಿತಿ : ಇಹದಲ್ಲಿ ಸುಖಿ ಪರದಲ್ಲಿ ಪರಿಣಾಮಿ ಎಂಬರು ಅದು ಹುಸಿ ನಿಲ್ಲು ಇಹದಲ್ಲಿ ದುಃಖಿ ಪರದಲ್ಲಿ ಪ್ರಕೃತಿ ಎಂದೆ (ಮೋಕ್ಷಮ. ೦೯-೬೪) ; ಮೂಲಪ್ರಕೃತಿ ಒಂದರಲಿ ವಿಸ್ತರಿಸೆ ಬ್ರಹ್ಮಾಂಡತಂಡಗಳೆತ್ತಲೆತ್ತಲು ತೋರುತಿಹವು (ಜ್ಞಾಕಸಿಂ. ೨೬-೩) ; ಈ ಶಕ್ತಿ ಶಿವನಿಗಧೀನವಾಗಿ ಅವನಲ್ಲಿ ಗುಣವೆನಿಸಿರುವುದು. ಅವನ ಇಚ್ಛೆಯಂತೆ ಪ್ರಪಂಚಾಕಾರವಾಗಿ ಪರಿಣಮಿಸಿದಾಗ ಅದೇ ಶಕ್ತಿ ಸ್ವತಂತ್ರದ್ರವ್ಯವಾಗಿ ಪ್ರಕೃತಿಯೆನಿಸುವುದು (ಶಕ್ತಿ.ಪಿ. ೩೬). ೨೭. [ದ್ವೈತ] ಜೀವನನ್ನೂ ಪರಮಾತ್ಮನನ್ನೂ ಮುಚ್ಚಿಕೊಂಡಿರುವ ಆವರಣ : ಮೇಲೆ ಹೇಳಿದ ಷೋಡಶಕಳೆಗಳುಳ್ಳ ಲಿಂಗಶರೀರಕ್ಕೂ ಅನಿರುದ್ಧಶರೀರಕ್ಕೂ ಮಧ್ಯದಲ್ಲಿ ಜೀವಾಚ್ಛಾದಿಕವೆಂತಲೂ ಪರಮಾಚ್ಛಾದಿಕವೆಂತಲೂ . . . ದುಷ್ಟವಾದ ಎರಡು ಪ್ರಕೃತಿಗಳು ಸೇರಿಕೊಂಡಿರುವುವು (ಹಸಾರ. ೪-೦೪ ತಾತ್ಪರ್ಯ). ೨೮. [ಜೈನ] ಆತ್ಮನಿಗೆ ಅಜ್ಞಾನ ಮುಂತಾದ ಫಲವನ್ನು ಉಂಟುಮಾಡಿಕೊಡುವುದು ; ಜೀವನಿಗೆ ವರ್ತಮಾನ ಮತ್ತು ಭವಿಷ್ಯತ್ಕಾಲಗಳಲ್ಲಿ ಫಲವನ್ನು ಕೊಡುವ ಕರ್ಮಸ್ಕಂಧ : ತದುಪಾಂತಸಮಯದೊಳನ್ಯತರವೇದನೀಯ . . . ನೀಚೈರ್ಗೋತ್ರಂಗಳೆಂಬೆಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ (ಶಂಖಾಪಮ. ೦೬-೮೦ ವ); ಪ್ರಕೃತಿಗಳೊಳ್ ಸಮ್ಯಕ್ತ್ವಪ್ರಕೃತಿಯೆ ತಲೆದೋಱೆ . . . ಉದಯಿಸಿತಾ ಗಜೇಂದ್ರನೊಳ್ ಸಮ್ಯಕ್ತ್ವಂ (ಶಾರ್ಕ್ಯಕೌ. ೫-೪೩). ೨೯. ಆತ್ಮನ ಗುಣಕ್ಕೆ ಘಾತಕವಾದ ಕರ್ಮ ; ಘಾತಿಕರ್ಮ : ಜ್ಞಾನಾವರಣಮುಂ ದರ್ಶನಾವರಣಮುಂ ಮೋಹನೀಯಮುಮಂತರಾಯಮುಮೆಂಬೀ ನಾಲ್ಕುಂ ಪ್ರಕೃತಿಗಳು ಘಾತಿಗಳಪ್ಪುವು (ಗೊಮ್ಮಸಾ. ೨-೨). ೩೦. [ರಾಜನೀ] ಸ್ವಾಮಿ, ಅಮಾತ್ಯ, ಸುಹೃತ್ತು, ಕೋಶ, ಬಲ, ರಾಷ್ಟ್ರ ಮತ್ತು ದುರ್ಗ ಎಂಬ ರಾಜನ ಏಳುಬಗೆಯ ರಾಜ್ಯಾಂಗಗಳು : ಈ ರಾಜ್ಯಾಂಗಗಳೇ ಪ್ರಕೃತಿಗಳು (ಸಿದ್ಧಾಂತಿ. ೨೩೮). ೩೧. [ಸಂಗೀತ] ಧ್ವನಿವ್ಯತ್ಯಾಸ ಹೊಂದದಿರುವ ಸ್ವರ ; ಮೂಲಸ್ವರ : ಪ್ರಕೃತಿ ಮತ್ತು ವಿಕೃತಿಸ್ವರಸ್ಥಾನಗಳ ಮತ್ತು ಅವುಗಳ ಧ್ವನಿಭೇದಗಳನ್ನು ವೀಣಾವಾದ್ಯದ ಮೊದಲ ಹನ್ನೆರಡು ಮೆಟ್ಟಲುಗಳು . . . ಪರಿಚಯ ಮಾಡಿಕೊಡುತ್ತವೆ (ಸಂಗೀಶಾ. ೦೭). [ಸಂ.]

**ಪ್ರಕೃತಿಚಿಕಿತ್ಸೆ** (ನಾ). ಗಾಳಿ, ನೀರು, ಬೆಳಕು, ಮಣ್ಣು ಮೊದಲಾದ ನೈಸರ್ಗಿಕ ವಸ್ತುಗಳಿಂದ ರೋಗಗಳಿಗೆ ಮಾಡುವ ಚಿಕಿತ್ಸೆ : ಬೆಳಕಿಗೆ ಸಂಬಂಧಪಟ್ಟ ಈ ಚಿಕಿತ್ಸೆಯು ಪ್ರಕೃತಿಚಿಕಿತ್ಸೆ (Naturo Therapy)ಯ ಒಂದು ಶಾಖೆ (ಅಕೋ. X. ಮುನ್ನುಡಿ). [ಸಂ. ಪ್ರಕೃತಿಚಿಕಿತ್ಸಾ]

**ಪ್ರಕೃತಿಬಂಧ** (ನಾ). [ಜೈನ] ಜ್ಞಾನಾವರಣಾದಿ ಅಷ್ಟವಿಧಕರ್ಮಗಳಂ ತಮಗೆ ಅನುಗುಣವಾದ ಪುದ್ಗಲದ್ರವ್ಯವನ್ನು ಸ್ವೀಕರಿಸುವುದು ; ಕರ್ಮಸಂಬಂಧವೆಂಬ ಬಂಧದಲ್ಲಿ ಒಂದು : ಮೂಲಪ್ರಕೃತಿಗಳೆಂಟುಮಂ ಬಾದರಸ್ವರೂಪದಿಂ ನೂಱ ನಾಲ್ವತ್ತೆಂಟು ವಿಕಲ್ಪಮಾದುತ್ತರಪ್ರಕೃತಿಗಳು ಮನೊಳಕೊಂಡನುಬಂಧಿಸುವ ಬಂಧಂ ಪ್ರಕೃತಿಬಂಧವೆಂಬುದಕ್ಕುಂ (ಸುಕುಮ. ೬-೨೬ ವ); ಕರ್ಮಸಂಬಂಧವೆಂಬ ಬಂಧವು ಪ್ರಕೃತಿ, ಸ್ಥಿತಿ, ಅನುಭಾಗ, ಪ್ರದೇಶವೆಂದು ನಾಲ್ಕುವಿಧ. ಕರ್ಮಾಣುಗಳ ಸ್ವಭಾವದಿಂದ ಉಂಟಾಗುವ ಬಂಧವು ಪ್ರಕೃತಿಬಂಧ (ಹಿಂದಸಾ. ೮೪). [ಸಂ.]

**ಪ್ರಕೃತಿಭಾವ** (ನಾ). ೧. ಯಾವುದಾದರೊಂದು ವಸ್ತುವಿನ ಸ್ವಾಭಾವಿಕ ಸ್ಥಿತಿ,—ಸ್ವರೂಪ : ಲಿಂಗದೇಹಿಯ ಅಂಗದಲ್ಲಿ ತೋಱುವ ತೋಱಕೆ ಬೇಱೊಂದು ಪ್ರಕೃತಿಭಾವದಲ್ಲಿ ಕಂಡರೆ ಲಿಂಗದಂಗವಾದುದಕ್ಕೆ ಅದೆ ದೂರ (ಶಪಿಗೋ. ೦೨-೪೪). ೨. [ವ್ಯಾಕ] ಸ್ವರಕ್ಕೆ ಸ್ವರ ಪರವಾದ ಸಂದರ್ಭವಿದ್ದು ಸಂಧಿಯಾಗದೆ ಇರುವುದು : ಸ್ವರಕ್ಕೆ ಸ್ವರ ಪರವಾದಾಗ ಕೆಲವು ವೇಳೆ ಸಂಧಿಯಾಗುವುದಿಲ್ಲ. ಇದಕ್ಕೆ ಪ್ರಕೃತಿಭಾವವೆಂದು ಹೆಸರು (ಕೈಪಿಡಿ. ೯). [ಸಂ.]

**ಪ್ರಕೃತಿಶಾಸ್ತ್ರ** (ನಾ). ಪ್ರಕೃತಿಯ ರಹಸ್ಯ, ನಿಯಮ ಮೊದಲಾದುವುಗಳನ್ನು ನಿರೂಪಿಸುವ ಶಾಸ್ತ್ರ ; ಭೌತಿಕಶಾಸ್ತ್ರ : ಪ್ರಕೃತಿಶಾಸ್ತ್ರವೆಂದರೆ ಕೇವಲ ಯಂತ್ರಾತ್ಮಕವಾದ ಪ್ರಕೃತಿನಿಯಮಜ್ಞಾನವಲ್ಲ (ಮುಕ್ತಾರ. ೩೪ ಬೀಲ೪). [ಸಂ.]

**ಪ್ರಕೃತಿಸೌಂದರ್ಯ** (ನಾ). ನಿಸರ್ಗದ ಚೆಲುವು; ನೈಸರ್ಗಿಕ ಸೌಂದರ್ಯ: ರೊಮ್ಯಾಂಟಿಕ್ ಕವಿಗಳೇ ಪ್ರಕೃತಿಸೌಂದರ್ಯವನ್ನನುಭವಿಸುವ ಭಾವುಕಶಕ್ತಿಯ ಮಹತ್ವವನ್ನು ತೋರಿಸಿಕೊಟ್ಟರು (ಮುಕ್ತಾರ ೩೨ ಬೀಲ೪).

[ಸಂ.]

**ಪ್ರಕೃತಿಸ್ಥ** (ನಾ). ಮೊದಲಿನ ಪರಿಸ್ಥಿತಿಗೆ ಹೊಂದಿಕೊಂಡಿರುವಂಥದು : ಒಂದು ಪಕ್ಷದ ಸರ್ವಾಧಿಕಾರದಿಂದ ಜನತೆ ಪ್ರಕೃತಿಸ್ಥವಾಗಿರಲು ಆಗಲಾರದು (ಜಿಬಂಧ. I. ೧೧೧). [ಸಂ.]

**ಪ್ರಕೃತಿಸ್ವರ** (ನಾ). ೧. [ವ್ಯಾಕ] ಶಬ್ದದ ಮೂಲರೂಪಕ್ಕೆ ಸಂಬಂಧಿಸಿದ ಅಂತ್ಯದ ಸ್ವರಾಕ್ಷರ : ಸ್ವರಮಿದಿರೊಳಿರೆ ವಿಭಕ್ತಿಸ್ವರಕಂ ಪ್ರಕೃತಿಸ್ವರಕ್ಕ ಮಕ್ಕುಂ ಲೋಪಂ (ಶಮದ. ೫೨). ೨. ಅ, ಇ, ಉ, ಎ ಎಂಬ ಹ್ರಸ್ವ ಸ್ವರಗಳು : ಕ್ರಿ. ಶ. ೧೬೫೦ರಲ್ಲಿದ್ದ ಸಿದ್ಧನಂಜೇಶನೆಂಬ ವೀರಶೈವಕವಿ . . . ಹ್ರಸ್ವಸ್ವರಗಳನ್ನು "ಪ್ರಕೃತಿಸ್ವರ"ಗಳೆಂದೂ ದೀರ್ಘಸ್ವರಗಳನ್ನು "ವಿಕೃತಿಸ್ವರ"ಗಳೆಂದೂ ಹೆಸರಿಸಿದ್ದಾನೆ (ಸಂಕೋಶ. ೧೬). ೩. [ಸಂಗೀತ] ಸಪ್ತಸ್ವರಗಳಲ್ಲಿ ಯಾವ ಧ್ವನಿಭೇದವನ್ನೂ ಹೊಂದದೆ ಇರುವ ಷಡ್ಜ ಮತ್ತು ಪಂಚಮ : ಷಡ್ಜ ಮತ್ತು ಪಂಚಮಗಳು ಯಾವಾಗಲೂ ನಿರ್ದಿಷ್ಟ ಶ್ರುತಿಗಳನ್ನೇ ಪಡೆದು ಮತ್ತಾವ ಧ್ವನಿಭೇದವನ್ನೂ ಹೊಂದದೆ ಇರುವುದರಿಂದ ಇವೆರಡೂ ಪ್ರಕೃತಿಸ್ವರಗಳೆನಿಸಿಕೊಂಡಿವೆ (ಸಂಗೀಶಂ. ೧೫). [ಸಂ.]

**ಪ್ರಕೃಷ್ಟ** (ಗುಂ). ೧. ಹೆಚ್ಚಾಗಿ ಎಳೆದ,—ಸೆಳೆದ. ೨. ದೀರ್ಘವಾದ ; ನೀಳವಾದ. ೩. ಶ್ರೇಷ್ಠವಾದ ; ಉತ್ಕೃಷ್ಟವಾದ : ಸಕಲಸುಹೃದ್ವರ್ಗಂಬೆರಸನುಭವಿಸುಗೆ ದುರ್ಗಂ ವರ್ಗತ್ರಯಪ್ರಕೃಷ್ಟೋದಯಮಂ (ಶಂಶಂ. ೩೦೦-೨೫). ೪. ಪ್ರಧಾನವಾದ ; ಮುಖ್ಯವಾದ. ೫. ಹೆಚ್ಚಾದ; ಅಧಿಕವಾದ : ಅಪಾಕೃತಪ್ರಕೃಷ್ಟಾಷ್ಟಲೋಕಪಾಲಪರಿಪಾಲಿತ ಸಾಹಸನುಂ . . . ಅಪ್ಪ ಸ್ತಿಮಿತಸಾಗರಮಹೀವಲ್ಲಭಂಗೆ (ಶಾಂತಿಪು. ೦-೬೦ ವ). ೬. ಬಲವಾದ ; ಶಕ್ತಿಯುತವಾದ. (ನಾ). ೭. ಶ್ರೇಷ್ಠವಾದುದು ; ಉತ್ಕೃಷ್ಟವಾದುದು : ಅಪ್ರಿಯವಾದದ್ದನ್ನು ತಪ್ಪಿಸಿಕೊಂಡು ಹೋದರೆ ನಡೆಯುವುದಿಲ್ಲ ; ಅದನ್ನು ತಳ್ಳಿ ಹೋಗುವುದೇ ಪ್ರಕೃಷ್ಟವಾದ ದಾರಿ (ಜಿಬಂಧ. II, ೧೫೫). ೮. ಮುಖ್ಯವಾದುದು : ಪ್ರಕೃತಿ ಶಬ್ದಕ್ಕೆ ಅರ್ಥ ಪ್ರಕೃಷ್ಟವಾದ ಕೃತಿಯೆಂದು (ಶಾರದ. ೦೦೫). [ಸಂ.]

**ಪ್ರಕೋಪ** (ನಾ). ೧. ಕೋಪಾಟೋಪ ; ರೋಷಾವೇಶ : ರಾಹು ತಾಂ ದಿನಕರನಂ ಪ್ರತಾಪಭರನಂ ವಿಳಸತ್ಕರನಂ ಪ್ರಕೋಪದುರ್ವಿನೊಳೆ ನುಂಗುವಂ (ಜೀವಸಂ. ೩೨-೯) ; ಕಣ್ಣೀರ ಪೆರ್ವೊನಲಿಂ ನಂದಿಸಿದಳ್ಪ್ರಕೋಪ ಶಿಖಿಯಂ ಪಾಯ್ದುಪ್ಪಿದಳ್ನಲ್ಲನಂ (ರಾಜಶೇ. ೦೦-೦೩೫). ೨. [ವೈದ್ಯಶಾ] ಆಧಿಕ್ಯ ; ಅತಿರೇಕ : ವಾತಾದಿಗಳಿಗೆ ಸಂಚಯವೂ ಪ್ರಕೋಪವೂ ಶಾಂತಿಯೂ ಇರುವುವು (ಸಕವೈ. ೦೫). [ಸಂ.]

**ಪ್ರಕೋಪಿಸು** (ಕ್ರಿ). ೧. ಹೆಚ್ಚಿಸು ; ಉತ್ತೇಜಿಸು ; ಅಧಿಕಗೊಳಿಸು : ಅವನ ಮನಸ್ಸಿನಲ್ಲಿ ಸುಳಿದಾಡುತ್ತಿದ್ದ ಅವನ ಆಸೆಯನ್ನು ಪ್ರಕೋಪಿಸುತ್ತಿದ್ದ ವ್ಯಕ್ತಿಯೆಂದರೆ ಶಾಂತಾಳೊಬ್ಬಳೇ (ಶ್ರವಣಾವ. ೪೬). ೨. [ವೈದ್ಯಶಾ] ಹೆಚ್ಚಾಗು ; ಉಲ್ಬಣವಾಗು : ಪ್ರಕೋಪಿಸಿದ ವಾತಾದಿ ದೋಷಗಳಿಂದ . . . ಮೂಲವ್ಯಾಧಿ ಮೂರು ಪ್ರಕಾರವಾಗಿ ಅಪಾನದ್ವಾರದ ಮೂರು ನರಗಳ ಮೂಲದಲ್ಲಿ ಕಾಣಿಸಿಕೊಂಬುದು (ಸಕವೈ. ೨೯೬).
[ಪ್ರಕೋಪ+—ಇಸು]

**ಪ್ರಕೋಷ್ಠ** (ನಾ). ೧. ಮೊಳಕೈಯಿಂದ ಮಣಿಕಟ್ಟಿನ ವರೆಗಿನ ಭಾಗ: "ಪ್ರಕೋಷ್ಠಮೆಂಬುದು ಮುಂಗೆಯ್" (ಹಲಾಯು. ೯೪-೩೭೯) ; ವೃತ್ತಘನಪ್ರಕೋಷ್ಠಯುಗಳಂ ಮೇಲಾದ ಮಾಣಿಕ್ಯಕಂಕಣದಿಂ . . . ಅಲಂಕೃತನಾಗಿಯುಂ (ಶಾಂತಿಪು. ೦೦-೫೮) ; ಸರಸೀರುಹನಾಳಮನಾವರಿಸಿದ ಶೈವಾಲಮನೆ ಹರಿದ್ರತ್ನಮಯಸ್ಫುರಿತಕಟಕಂ ಪ್ರಕೋಷ್ಠದೊಳರುಣಾಧರೆ ತೊಳಗಿ ಬೆಳಗದಿರ್ಪುದಿದೇನೋ (ಚಂದ್ರಪ್ರಭ. ೩-೫೮). ೨. ನಾಲ್ಕು ಪಕ್ಕಗಳಲ್ಲಿಯೂ ಪಟ್ಟಡಗಳಿಂದ ಸಂತ್ತುವರಿದ ಅಂಗಳ ; ಹಜಾರ ; ತೊಟ್ಟಿ : "ಕಕ್ಷಾಂತರಂ, ಪ್ರಕೋಷ್ಠಂ—ಈ ೨ ನೆಲೆ" (ಹಲಾಯು. ೫೦-೭೪೯) ; "ಕಕ್ಷಾಂತರಂ ಪ್ರಕೋಷ್ಠಂ ಮನೆಯ ನಿಲುವದು" (ಮಂಗರಾ. ೬೦-೦೪). [ಸಂ.]

**ಪ್ರಕ್ರಮ** (ನಾ). ೧. ಮುಂದೆ ಹೆಜ್ಜೆಯಿಡುವುದು ; ಮುಂದಕ್ಕೆ ಹೋಗುವಿಕೆ. ೨. ಹೆಜ್ಜೆ. ೩. ಒಂದು ಹೆಜ್ಜೆಯಷ್ಟು ದೂರ; ದಾಪು. ೪. (ಕಾರ್ಯದ) ಪ್ರಾರಂಭ ; ಉಪಕ್ರಮ : "ಪ್ರಕ್ರಮಃ, ಉಪಕ್ರಮಃ—೨ ಕೆಲಸಕ್ಕೆ ಮೊದಲುಮಾಡುವಿಕೆ" (ಸಿದ್ಧಾಂತಿ. ೩೬೪) ; ಜನ್ಮೋತ್ಸವಪ್ರಕ್ರಮಮೆಂದಾನುದನ್ಯತ್ಕ್ರಮದಮನಧಿಕಂ ಮಾಡಿ (ಆದಿಪು. ೬-೦೨೭) ; ಅಮಿತಗುಣವರ್ಣನಪ್ರಕ್ರಮಕ್ಕೆ ಸಲೆ ನಾಣ್ಚಿ ತಲೆಯನೆಱಗಿದ ಸುಜನೋತ್ತಮರಂತೆ ಭರದಿನೆಱಗಿದುವಮೇಯಪರಿಪಕ್ವಗಂಧಶಾಲಿವನಂಗಳ್ (ಶಾಂತಿಪು. ೧-೫೯). ೫. ವಿಧಾನ ; ಕ್ರಮ ; ರೀತಿ : ಪುರಾಣಗಳಿಗೆ ಯಾವೊಂದು ತರ್ಕಪ್ರತಿಷ್ಠಿತವಾದ ದಾರ್ಶನಿಕಪ್ರಕ್ರಮದೊಡನಾಗಲಿ ಅಥವಾ ಯಾವೊಂದು ಪಾಂಥಿಕಧರ್ಮದೊಡನಾಗಲಿ ತಾದಾತ್ಮ್ಯವಿಲ್ಲ (ತತ್ವಪ್ರಾ. ೦೨೧). [ಸಂ.]

**ಪ್ರಕ್ರಯ** (ನಾ). ಬೆಲೆ : "ಪ್ರಕ್ರಯಃ, ಕ್ಲಿಪ್ತಕಃ—ಈ ೨ ಬೆಲೆ" (ಹಲಾಯು. ೯೪-೪೧೯). [ಸಂ.]

**ಪ್ರಕ್ರಿಯೆ** (ನಾ). ೧. ಪ್ರಕಾರ ; ವಿಧಾನ ; ರೀತಿ : ಇದುವರೆಗೆ ತೋರಿಸಲಾದ 'ಧ್ವನಿ' ಮತ್ತು 'ಗುಣೀಭೂತವ್ಯಂಗ್ಯ' ಇವುಗಳ ಪ್ರಕ್ರಿಯೆಗೆ ಇನ್ನೂ ಒಂದು ಫಲವಿದೆ (ಧ್ವನ್ಯಾಲೋ. ೨೩೯). ೨. ಕಾರ್ಯವಿಧಾನ : ವಿಧಿದ್ವಾರಾ ಏರ್ಪಟ್ಟಿರತಕ್ಕ ಪ್ರಕ್ರಿಯೆಯನ್ನು ಬಿಟ್ಟು ಮತ್ತಾವ ರೀತಿಯಲ್ಲಿಯೂ ಯಾವನೊಬ್ಬನಿಗೂ ಪ್ರಾಣಹಾನಿಯಾಗುವಂತೆ ಅಥವಾ ದೈಹಿಕಸ್ವಾಧೀನತೆಯಿಲ್ಲದಂತೆ ಮಾಡತಕ್ಕುದಲ್ಲ (ಶಾಧಾನ. ೦೨). ೩. ಬದಲಾವಣೆ ; ಪರಿವರ್ತನೆ : ಏಕಕಾಲಿಕವಾಗಿ ಒಂದೇ ರೀತಿ ಪ್ರಕ್ರಿಯೆಯನ್ನು ತೋರಿಸುವ ಮನಸ್ಸುಗಳಿಗೆ ಏನೆನ್ನಬೇಕು ? (ದೂರಕ. ೫೬). ೪. ಶಾಸ್ತ್ರೋಕ್ತವಾದ ಕರ್ಮಾಚರಣೆ ; ವಿಧಿ : ಸಾಂಖ್ಯಶಾಸ್ತ್ರದ ಕೆಲವು ಪ್ರಕ್ರಿಯೆಗಳು ವೇದಗಳಲ್ಲಿ ದೃಗ್ಗೋಚರಿಸುವುದರಿಂದ ಅದು ಸಿದ್ಧವಾಗುತ್ತದೆ (ಶಾರದ. ೦೨೫). ೫. ಉನ್ನತಸ್ಥಾನ : "ಪ್ರಕ್ರಿಯಾ, ಅಧಿಕಾರಃ—೨ ಅಧಿಕಾರದ ಹೆಸರು. ನಿರ್ವಹಿಸತಕ್ಕ ಕೆಲಸಕ್ಕೂ ಪ್ರಜೆಗಳ ಕಾರ್ಯನಿರ್ವಾಹಕ್ಕೂ ಅಧಿಕಾರನಿರ್ವಾಹಕ್ಕೂ ಹೆಸರು" (ಸಿದ್ಧಾಂತಿ. ೨೪೪). ೬. ಪುಸ್ತಕದ ಒಂದು ಪರಿಚ್ಛೇದ. ೭. ಹಕ್ಕು ; ಸ್ವಾಮ್ಯ. ೮. ಸೌಕರ್ಯ. ೯. [ವ್ಯಾಕ] ಶಬ್ದನಿಷ್ಪತ್ತಿಯಲ್ಲಿ ನಡೆಯುವ ಶಾಸ್ತ್ರೋಕ್ತವಾದ ಕ್ರಮ : ಕೊಂದಂ, ಬೆಂದಂ ಎಂಬ ಕ್ರಿಯಾಪದಗಳ ಪ್ರಕ್ರಿಯೆಯನ್ನು ಬರೆಯಿರಿ (ರೂಢಿ). [ಸಂ. ಪ್ರಕ್ರಿಯಾ]

**ಪ್ರಕ್ವಾಣ** (ನಾ). ವೀಣೆಯ ಧ್ವನಿ : "ಪ್ರಕ್ವಾಣಃ, ಪ್ರಕ್ವಣಃ, ಅನುಕ್ವಣಃ ಇತ್ಯಾದಿಗಳು ವೀಣೆಯ ಧ್ವನಿಗೆ ಹೆಸರುಗಳು" (ಸಿದ್ಧಾಂತಿ. ೫೬). [ಸಂ.]

**ಪ್ರಕ್ಷಾಲನ, ಪ್ರಕ್ಷಾಳನ** (ನಾ). ೧. ನೀರಿನಿಂದ ತೊಳೆಯುವುದು,—ಶುದ್ಧಿಗೊಳಿಸುವುದು : ಉಚ್ಚಾಸನಮಂ ಕೊಟ್ಟು ಪ್ರಾಸುಕೋದಕಂಗಳಿಂ ಪಾದಪ್ರಕ್ಷಾಲನಂಗೆಯ್ದು (ಕಸಾರ. ೩೦೮). ೨. ಚೊಕ್ಕಟಗೊಳಿಸುವುದು; ಶುದ್ಧಮಾಡುವುದು. ೩. ಸ್ನಾನಮಾಡುವುದು. ೪. ತೊಳೆಯಲು ಉಪಯೋಗಿಸುವ ನೀರು. ಪ್ರಕ್ಷಾಳನ : ೧. ಅಂತು ನೃಪತಿ ವ್ಯಗ್ರನಾಗಿ ಮುಖಪ್ರಕ್ಷಾಳನಾರ್ಥಂ ಪೇರಡವಿಯೊಳಂಜಳಿಯಿಂ ಜಲಮಂ ತಂದು (ಕಾದಂಬೂ. ೬೦೧) ; ಕೆಳಗಿಳಿದು, ತಣ್ಣನೆಯ ನೀರಿನಲ್ಲಿ ಮುಖಪ್ರಕ್ಷಾಳನ, ಪಾದಪ್ರಕ್ಷಾಳನಗಳನ್ನು ಮಾಡಿ (ಶಾಂತಲಾ. ೨೯೬). 'ಪ್ರಕ್ಷಾಲನಂಗೆಯ್' ಪರಾ. [ಸಂ.]

**ಪ್ರಕ್ಷಾಲನಂಗೆಯ್, ಪ್ರಕ್ಷಾಳನಂಗೆಯ್** (ಕ್ರಿ). ನೀರಿನಿಂದ ತೊಳೆ,—ಶುದ್ಧಿಗೊಳಿಸು : ಸ್ತುತಿಸುತಂ ಸಾಷ್ಟಾಂಗದಲಿ ನಮಿಸುತ ಗುರುಶ್ರೀಚರಣಯುಗಮಂ ರತಿ ಮಿಗಲ್ ಪ್ರಕ್ಷಾಲನಂಗೆಯ್ದು (ಬಸವಪು. ೩೯-೫).

**ಪ್ರಕ್ಷಾಳನಂಗೆಯ್** : ಇದಿರ್ಗೊಂಡುದ್ದದೋಳೇಬಿಲಿಕ್ಕಿ ಚರಣಪ್ರಕ್ಷಾಳನಂಗೆಯ್ದು ಸನ್ಮದದಿಂದರ್ಚಿಸಿ ಭಕ್ತಿಯಿಂದೆ ಪೊಡೆವಟ್ಟಾಗಳ್ (ಸುಕುಮಾ. ೪-೨೨) ; ಮುದದೊಳಿದ್ದು ಶರೀರಧರ್ಮಮಂ ಚರಿಸಿ ಕರಪದಮುಖ ಪ್ರಕ್ಷಾಳನಂಗೆಯ್ದು (ಹರಿಶ. ೪-೩೯). [ಪ್ರಕ್ಷಾಲನ + ಕೆಯ್$_1$]

**ಪ್ರಕ್ಷಾಲಿತ**, ಪ್ರಕ್ಷಾಳಿತ (ಗು). ೧. ನೀರಿನಿಂದ ತೊಳೆದ,–ಶುದ್ಧಿಗೊಳಿಸಿದ : ಆ ಮರುದೇವಿಮಹಾದೇವಿ ಚತುರ್ಥಸ್ನಾನದೊಳ್ ಕಲ್ಪದ್ರುಮದುಕೂಲವಸನೆಯುಮಾರ್ಜಿತ ದಶನಮಯೂಖಜಲಪ್ರಕ್ಷಾಳಿ[ತಾತಾಂ. ೪]ತ ದಶನವಸನೆಯುಂ . . . ಆಗಿ (ಆದಿಪು. ೬-೨೬ ವ). (ನಾ). ೨. ನೀರಿನಿಂದ ತೊಳೆದುದು,–ಶುದ್ಧಿಗೊಳಿಸಿದುದು. **ಪ್ರಕ್ಷಾಳಿತ** : ೨. "ನಿರ್ಣಿಕ್ತಂ, ಪ್ರಕ್ಷಾಳಿತಂ, ಧೌತಂ—ಈ ೩ ತೊಳೆಯಲ್ಪಟ್ಟುದು" (ಹಲಾಯು. ೬೮-೨೫೪). ೩. ತೊಳೆದುಬಿಡುವಿಕೆ ; ತಳ್ಳಿಹಾಕುವಿಕೆ ; ಕೊಚ್ಚಿಸಿ ಬಿಡುವಿಕೆ : ಮಚಿದೀ ಕುಲಕ್ರಮಮನಾನಿಂತಿರ್ದು ಸನ್ಮಾರ್ಗಪದ್ಧತಿಯಂ ಹಾಸ್ಯರಸಪ್ರವಾಹಭರದಿಂ ಪ್ರಕ್ಷಾಳಿತಂ ಮಾಟ್ಪೆನೇ (ಶಂರಾಮಾ. ೬-೬೦). [ಸಂ.]

**ಪ್ರಕ್ಷಾಲಿಸು**, ಪ್ರಕ್ಷಾಳಿಸು (ಕ್ರಿ). ೧. ನೀರಿನಿಂದ ತೊಳೆ,–ಶುದ್ಧಿಗೊಳಿಸು: ಸೂಕ್ಷ್ಮಪರಮಾರ್ಥತತ್ತ್ವಭಾವನಾಜಲದಿಂ ಪ್ರಕ್ಷಾಲಿಸಿ ಕಟ್ಟಿದ ಸೆರೆಯೊಳು ನಸುಗಂಪಿನಂತೆ (ಶಾಸ್ತ್ರ. ೦೦೩-೪) ; ಆಳಿಯರ್ ಗಂಧೋದಕಹೂಜೆಯಿಂದೆ ಪ್ರಕ್ಷಾಲಿಸಿದರ್ ಪದಯುಗವ (ಪೋಹಕ. ೨೭-೩೩). **ಪ್ರಕ್ಷಾಳಿಸು** : ೧. ಭಟಾರರ ಕಾಲಂ ಮಹಾದೇವಿ ನೀರ್ವೊಯ್ಯೆ ಅರಸು ತಾನೆ ಪ್ರಕ್ಷಾಳಿಸಿ [ತಾತಾಂ. ಅರ್ಚಿದ] (ವಡ್ಡಾರಾ. ೬೮-೯) ; ಪುಣ್ಯಜಲದಿಂ ಪ್ರಕ್ಷಾಳಿಸುವಂತೆ ಶಾಂತದೃಷ್ಟಿಗಳಿಂದೆನ್ನಂ ಮುನ್ನಂ ಕಂಡಜಾವನುತೆ . . . ನೋಡಿ (ಕಾದಂಪೂ. ೨೬೨) ; ಜಿನಮುನಿಗಳ್ಗೆ ಆಹಾರಮಂ ಕುಡುವುದುಂ . . . ಪಾದಯುಗಳಮಂ ಗುಣಾನುರಾಗದಿಂ ತನ್ನೆರಡುತೊಡೆಯ ಮೇಲಿಟ್ಟೊತ್ತುವುದುಂ ಒರಸುವುದುಂ ಪ್ರಕ್ಷಾಳಿಸುವುದುಂ ಮತ್ತಂ ಪೆಜವು ವ್ಯಾಪಾರಂಗಳಂ ವೈಯಾವೃತ್ಯಮೆಂಬುದು (ಕರ್ಣಾಟ. ೩೦೬). ೨. (ಆಲಂ) ಅವಮಾನ ಮಾಡು ; ಹೀನಾಯಗೊಳಿಸು : ಅವರ ಹತ್ತಿರ ಹೋದರೆ ಚೆನ್ನಾಗಿ ಪ್ರಕ್ಷಾಳಿಸಿ ಕಳುಹಿಸುತ್ತಾರೆ (ರೂಢಿ). [ಪ್ರಕ್ಷಾಲನ + — ಇಸ್ಸು$_1$]

**ಪ್ರಕ್ಷಾಳನ** 'ಪ್ರಕ್ಷಾಲನ' ನೋ.

**ಪ್ರಕ್ಷಾಳನಂಗೆಯ್** 'ಪ್ರಕ್ಷಾಲನಂಗೆಯ್' ನೋ.

**ಪ್ರಕ್ಷಾಳನೆ** (ನಾ). ೧. = ಪ್ರಕ್ಷಾಲನ ೧. ೨. (ಆಲಂ) ಅವಮಾನ ; ಮಾನಹಾನಿ : ಆತ ಅಲ್ಲಿಗೆ ಹೋಗಿ ಚೆನ್ನಾಗಿ ಪ್ರಕ್ಷಾಳನೆ ಮಾಡಿಸಿಕೊಂಡು ಬಂದ (ರೂಢಿ). [ಸಂ. ಪ್ರಕ್ಷಾಲನ]

**ಪ್ರಕ್ಷಾಳಿತ** 'ಪ್ರಕ್ಷಾಲಿತ' ನೋ.

**ಪ್ರಕ್ಷಾಳಿಸು** 'ಪ್ರಕ್ಷಾಲಿಸು' ನೋ.

**ಪ್ರಕ್ಷಿಪ್ತ** (ಗು). ೧. ಎಸೆದ; ತೂರಿದ. ೨. ಒಳಕ್ಕೆ ಹಾಕಿದ; ಒಳಗೆ ಸೇರಿಸಿದ. (ನಾ). ೩. ಗ್ರಂಥದಲ್ಲಿ ಕವಿಯು ಬರೆಯದೆ ಇದ್ದುದನ್ನು ಇತರರು ಅನಂತರ ಸೇರಿಸಿದ ಭಾಗ : ಈ ಕೊನೆಯ ಮಾತು ಪ್ರಕ್ಷಿಪ್ತವೆಂದು ಸಿದ್ಧವಾದರೆ ಮಾತು ಬೇರೆ (ಕಸಾಚ. ೫೩) ; ಜಯದ್ರಥನು ದ್ರೌಪದಿಯನ್ನು ಹೊತ್ತುಕೊಂಡು ಹೋದ ವೃತ್ತಾಂತವೇ ಪ್ರಕ್ಷಿಪ್ತ (ರಕಪಾ. ೪೧೩). [ಸಂ.]

**ಪ್ರಕ್ಷಿಪ್ತಪಾಠ** (ನಾ).=ಪ್ರಕ್ಷಿಪ್ತ ೩ : ಗಂಗನ ಪ್ರತಿಗಳಲ್ಲಿ . . . ಸಂಕ್ಷಿಪ್ತ ಮತ್ತು ಪ್ರಕ್ಷಿಪ್ತಪಾಠಗಳೆರಡೂ ವಿದಿತವಾಗುತ್ತವೆ (ಕುಮಾಶಾಂ. ೯೦). [ಸಂ.]

**ಪ್ರಕ್ಷೀಣ** (ಗು). ೧. ತುಂಬ ಕಂಗ್ಗಿದ,–ಕಡಮೆಯಾದ. ೨. ಸೊರಗಿದ; ಕೃಶವಾದ. ೩. ನಷ್ಟವಾದ ; ನಾಶವಾದ : ತಮೋವಪ್ರಾಪ್ರಕ್ಷಯೋಪಶಮಂ ಪ್ರಕ್ಷೀಣಾವರಣಂ ವಾ ಪ್ರತಿನಿಯತಂ ಪ್ರತ್ಯಕ್ಷಮೆಂಬೀ ವ್ಯುತ್ಪತ್ತಿಯಿಂ ಪರಾಯತ್ತಮಲ್ಲೆಂಬುದರ್ಥಂ (ತತ್ತ್ವಪ್ರ. ೩೪). [ಸಂ.]

**ಪ್ರಕ್ಷುಬ್ಧ** (ಗು). ೧. ಅಲ್ಲೋಲಕಲ್ಲೋಲವಾದ ; ಕದಡಿದ : ವಿಸ್ತೃತ ವಕ್ತ್ರೋದರಭಾಗಘೂರಿಕಮಠಪ್ರಕ್ಷುಬ್ಧಕಲ್ಲೋಲಕಲ್ಪಿತಕೋಲಾಹಲಕಲ್ಪಕಾಲರಭಸಪ್ರಸ್ಪರ್ಧಿಯಂ ವಾರ್ಧಿಯಂ (ಕಾವ್ಯಸಾ. ೮೩). ೨. ನೆಮ್ಮದಿಯಿಲ್ಲದ ; ಶಾಂತಿಯನ್ನು ಕಳೆದುಕೊಂಡ : ಆಕೆಯ ಬುದ್ಧಿಯ ಶಕಲವೊಂದು . . . ಆಕೆಯ ಪ್ರಕ್ಷುಬ್ಧಚಿತ್ತಕ್ಕೆ ಸಮಾಧಾನ ಹೇಳಿತು (ಬೆಕಂಜ. ೦೨). ೩. ಗೊಂದಲಗೊಂಡಿರುವ : ದೇಶದಲ್ಲಿ ಪ್ರಕ್ಷುಬ್ಧಪರಿಸ್ಥಿತಿಯುಂಟಾದಾಗ ಜನರು ಭೇದಭಾವ ಮರೆತು ಒಂದಾಗಬೇಕು (ರೂಢಿ). [ಸಂ.]

**ಪ್ರಕ್ಷುಭಿತ** (ಗು). ೧. = ಪ್ರಕ್ಷುಬ್ಧ ೧ : ನಾನಾಜಲಚರನಿಕರಾಸ್ಫಾಳನ ಪ್ರೋಚ್ಚಲತ್ತಚ್ಛದನಚ್ಛನ್ನಚ್ಛಟಾಪ್ರಕ್ಷುಭಿತಲಹರಿಕಾಸ್ಫಾರರೌದ್ರಂ ಸಮುದ್ರಂ (ಕಾವ್ಯಸಾ. ೭೪). ೨.=ಪ್ರಕ್ಷುಬ್ಧ ೨: ಶಂಬರನಾಗಸ್ಥಾನಮಂ ಪ್ರಕ್ಷುಭಿತ ಬಹುಜನಧ್ವಾನಮಂ ಪೊಕ್ಕಂ . . . ರಾಜಹಂಸಂ (ಸುಕುಮಾ. ೩-೬೨). [ಸಂ.]

**ಪ್ರಕ್ಷೇಪ** (ನಾ). ೧. ಎಸೆಯುವುದು ; ತೂರುವುದು. ೨. ಇಡುವುದು; ಇರಿಸುವುದು. ೩. ಮೂಲಗ್ರಂಥದಲ್ಲಿ ಇಲ್ಲದುದನ್ನು ಹೊಸದಾಗಿ ಸೇರಿಸುವಿಕೆ ಮತ್ತು ಹಾಗೆ ಸೇರಿಸಿದ ಅಂಶ : ಇಂತಹ ಪ್ರಕ್ಷೇಪಗಳು ಕೆಲವೊಮ್ಮೆ ಸನ್ನಿವೇಶದ ಪ್ರಭಾವವನ್ನು ಹೆಚ್ಚಿಸಿರುವುದೂ ಉಂಟು (ಜನಪ. VII ಮುನ್ನುಡಿ) ; ಕುಮಾರವ್ಯಾಸಭಾರತವು ವ್ಯಾಸಭಾರತವನ್ನು ಎಷ್ಟು ಮಟ್ಟಿಗೆ ಅನುಸರಿಸಿದೆ . . . ಎರಡೂ ಭಾರತಗಳಲ್ಲಿ ಅನೇಕ ಪ್ರಕ್ಷೇಪಗಳಾಗಿವೆ (ಕಸಾಚ. ೨೪೭). [ಸಂ.]

**ಪ್ರಕ್ಷೇಪಕ** (ನಾ). ೧. ಎಸೆಯುವವನು. ೨. ಇರಿಸುವವನು. ೩. ಮೂಲಗ್ರಂಥದಲ್ಲಿ ಇಲ್ಲದುದನ್ನು ಹೊಸದಾಗಿ ಸೇರಿಸುವವನು: ಒಂದು ವೇಳೆ ವಾಸ್ತವವಾಗಿ ಹಾಗಾಗದಿದ್ದರೂ ಪ್ರಕ್ಷೇಪಕರು ಹಾಗೆ ಭಾವಿಸಿಕೊಂಡದ್ದೂ ತಮ್ಮ ಚಪಲವನ್ನು ತೀರಿಸಿಕೊಂಡದ್ದೂ ಸತ್ಯ ! (ಜನಪ. VII ಮುನ್ನುಡಿ). ೪. ದೂರವಾಣಿ ಅಥವಾ ದೂರಲೇಖಕ ಸಲಕರಣೆಗಳಲ್ಲಿ ಸುದ್ದಿಗಳನ್ನು ಬಿತ್ತರಿಸುವ ಸಾಧನ ; ರೇಡಿಯೋ ನಿಸ್ತಂತುತರಂಗಗಳನ್ನು ಕಳುಹಿಸುವ ಯಂತ್ರಸಲಕರಣೆ : ೧೯೩೫ಕ್ಕೆ ಮುಂಚೆ ಬೊಂಬಾಯಿ ಮತ್ತು ಕಲ್ಕತ್ತನಗರಗಳಲ್ಲಿ ೧೫ ಕಿಲೋವ್ಯಾಟ್ ಸಾಮರ್ಥ್ಯದ ಎರಡು ಪ್ರಕ್ಷೇಪಕಗಳು (Transmitters) ಇದ್ದವು (ಶಿಲ್ಪಸಾ. ೫೦೨). [ ಸಂ. ]

**ಪ್ರಕ್ಷೇಪಕಾರ** (ನಾ). ಮೂಲಗ್ರಂಥದಲ್ಲಿ ಮೊದಲು ಇಲ್ಲದ ಅಂಶವನ್ನು ಹೊಸದಾಗಿ ಸೇರಿಸುವವನು : ಈ ಒಂದು ಪ್ರಸಂಗವನ್ನು ಕುರಿತು ಪ್ರಕ್ಷೇಪಕಾರರ ಬುದ್ಧಿ ಎಷ್ಟು ವೈವಿಧ್ಯಮಯವಾಗಿ ಕೆಲಸ ಮಾಡಿದೆ (ಶಂಶೀ. ೦೯೨). [ ಸಂ. ]

**ಪ್ರಕ್ಷೇಪಣ** (ನಾ). ಸರಿಸುವುದು : ಭೂಪಾಳಂಗವಟಯಿಸಿದುದಾ ಪೂಗೊಳದೊಳ್ಪಿಚಿತ್ರಕಾಂಡಪಟೀಪ್ರಕ್ಷೇಪಣವಿಳಾಸಮಂ ತತ್ಸೋಪಾನೋತ್ಪಾನಮಣಿಮಯೂಖವಿತಾನಂ (ಮಲ್ಲಿಪು. ೬-೦೦೪). [ ಸಂ. ]

**ಪ್ರಕ್ಷೇಪಿತ** (ನಾ). ೧. ಎಸೆದುದು ; ಬಿಸಾಡಿದುದು. ೨. ಇಟ್ಟುದು; ಇರಿಸಿದುದು. [ ಸಂ. ]

**ಪ್ರಕ್ಷೇಪಿಸು** (ಕ್ರಿ). ಮೂಲಗ್ರಂಥದಲ್ಲಿ ಇಲ್ಲದುದನ್ನು ಹೊಸದಾಗಿ ಸೇರಿಸು : ಅರ್ಥಸೌಲಭ್ಯಕ್ಕಾಗಿ ಅರ್ಥವಾಗುವಂತಹ ಪಾಠಾಂತರಗಳನ್ನು ಕಲ್ಪಿಸಿ, ಅಲ್ಲಲ್ಲಿ ಮೂಲಧಾಟಿಗೆ ಭಂಗ ಬರದಂತೆ ತಮ್ಮ ಸ್ವಂತರಚನೆಗಳನ್ನು ಪ್ರಕ್ಷೇಪಿಸಿಬಿಟ್ಟಿರುವುದೂ ಉಂಟು (ಜನಪ. VII ಮುನ್ನುಡಿ). [ಪ್ರಕ್ಷೇಪ + — ಇಸ್ಸು$_1$]

**ಪ್ರಕ್ಷೋಭ** (ನಾ). ೧. ಅಲ್ಲೋಲಕಲ್ಲೋಲ ; ಪ್ರಕ್ಷುಬ್ಧತೆ : ಅಗುರ್ವು ವೆತ್ತುದಂ ತ್ರೈಲೋಕ್ಯಕಂಟಕವೆಂಬಾನೆಯನೇಱೆ ಪ್ರಳಯಪ್ರಕ್ಷೋಭ ಮಾದಂತೆ ಮುಳಿದು ಬರೆ (ಶಂಖಪು. ೦೩-೦೩೩ ವ). ೨. ಗೊಂದಲ ; ತಳಮಳ : ಆಕಾಶಂ ಮೇಗೆ ಕವಿದವ್ವುದು ಗಾಳಿಯೆ ನಂಜಾದುದು ಎಂಬ ಸಕಲಪ್ರಕ್ಷೋಭದೊಳ್ ವಿಹ್ವಳರಾಗಿರ್ದ ನಿರಯುಜರನೆಯ್ದಿ (ಶಾಂತಿಪು. ೬-೪೯ ವ) ; ಬನ್ನಿಮಿನ್ನುಮುಱಿಸುವವೆಂದು ಪುರಪ್ರ[ಕ್ಷೋ]ಭವಾಗೆ ಪುರದೊಳಗೆ ತೊಬಲ್ದುಱಿಸುತ್ತುಂ (ಸುಕುಮಾ. ೦೩-೨೦ ವ). [ಸಂ.]

**ಪ್ರಕ್ಷೋಭಿಸು** (ಕ್ರಿ). ಅಲ್ಲೋಲಕಲ್ಲೋಲವುಂಟಾಗು ; ಪ್ರಕ್ಷುಬ್ಧ ಗೊಳ್ಳು : ಬಾಹಾಗದಾಯುಧವಿಕ್ಷೇಪವಿಜೃಂಭಣಭ್ರಮಣದಿಂ ಪ್ರಕ್ಷೋಭಿಸಲ್ ಯುದ್ಧಕೇಳಿಧುರೀಣರ್ . . . ಪೊಯ್ದರ್ ಗದಾದಂಡದಿಂ (ಜಗಜಿ. ೯-೭೩).
[ಪ್ರಕ್ಷೋಭ + — ಇಸು₁]

**ಪ್ರಕ್ಷ್ವೇಡನ** (ನಾ). ೧. ಗದ್ದಲ ; ಗಜಿಬಿಜಿ. ೨. ಕಬ್ಬಿಣದ ಬಾಣ : "ಪ್ರಕ್ಷ್ವೇಡನಃ, ನಾರಾಚಃ—೨ ನಾರಸದ ಹೆಸರುಗಳು" (ಸಿದ್ಧಾಂತ. ೨೬೪).
[ ಸಂ. ]

**ಪ್ರಖರ** (ಗು). ೧. ಬಹಳ ಬಿಸಿಯಾದ ; ಚುರುಕಾದ. ೨. ತೀಕ್ಷ್ಣ ವಾದ ; ಕಟುವಾದ. (ನಾ). ೩. ಬಹಳ ಬಿಸಿಯಾದಂದು; ಚುರು ಕಾದಂದು : ಸೂರ್ಯನ ಪ್ರಖರವಾದ ಕಿರಣಗಳು ಒಳಗೆ ತೂರಿಬರದಂತೆ ತಕ್ಕ ಪ್ರಮಾಣದ ಕಾಜಿನ ಕಿಟಕಿಗಳು . . . ಹಚ್ಚಿರಬೇಕು (ಗ್ರಂಥಾಲ. ೭) ; ಸೂರ್ಯನು ಒಳ್ಳೆ ಪ್ರಖರವಾಗಿ . . . ಬಿಸಿಯಾದ ಕಿರಣಗಳನ್ನು ಅವನ ಮೇಲೆ ಬಿಡುತ್ತಿದ್ದನು (ಮಲಿನಾ. ೦೦೦). ೪. ನಾಯಿ. ೫. ಹೇಸರಗತ್ತೆ.
[ ಸಂ. ]

**ಪ್ರಖರತೆ** (ನಾ). ೧. ತೀಕ್ಷ್ಣತೆ : ಮಾಯಾದೇವಿಯು ಆ ಭೇದಕಕಣ್ಣು ಗಳ ಪ್ರಖರತೆಯನ್ನು ಸಹಿಸಲಾರದಾದಳು (ಪ್ರಸಂ. ೯). ೨. ಕಾವು; ಬಿಸುಪು : ಅವನ ಆತ್ಮವಿಶ್ವಾಸದಲ್ಲಿ ಒಂದು ಪ್ರಖರತೆಯಿತ್ತು (ಸಮಾಜ. ೪೦೯). [ಸಂ. ಪ್ರಖರತಾ]

**ಪ್ರಖೇಣ** (ನಾ). ಒಂದು ಬಗೆಯ ಮರ ; ಕದಂಬವೃಕ್ಷ : ಪಟ್ಟದೇಷ್ಟ . . . ಪ್ರಖೇಣ . . . ನೀರುಕಡವಾಲ (ಹಸುಹೂ. ೪೬). [ ಸಂ. ]

**ಪ್ರಖ್ಯ** (ಗು). ೧. ಕಾಣುವ ; ಸ್ಫುಟವಾದ. ೨. ಹೋಲುವ ; ಸಮಾನ ವಾದ : ಪರಮೇಷ್ಠಿಪ್ರಖ್ಯವಿಪ್ರಪ್ರತತಿಗಳಿನಿಳಾಪ್ರಖ್ಯಶೂದ್ರಾಳಿಯಿಂ ಖೇಚರಕಾಂತಪ್ರಖ್ಯರಪ್ಪ ವಣಿಜರಿಂ ಇನಜಪ್ರಖ್ಯ ಕೊಯ್ಯಾಳ್ಗಳಿಂ . . . ಅರಸಿಯ ಕೆರೆ ಭೂಭಾಗದೊಳ್ ಶೋಭಿಸಿರ್ಕ್ಕುಂ (ಪ್ರಶಂಸಾ. ೦೯೨೬, ೦೦-೪೩ ; 1189). ೩. ಪ್ರಖ್ಯಾತ ; ಶ್ರೇಷ್ಠ : ಇಳಾಪ್ರಖ್ಯಶೂದ್ರಾಳಿಯಿಂ . . . ಶೋಭಿಸಿರ್ಕ್ಕುಂ (ಪ್ರಶಂ ೦೯೨೬. ೦೦-೪೨ ; 1189). (ನಾ). ೪. ಸಮಾನವಾದುದು : "ಸದೃಕ್, ಸಮಾಸಂ, ಸದೃಶಂ, ಸದೃಕ್ಷಂ, ಪ್ರಖ್ಯಂ . . . ಸನ್ನಿಭಂ—ಈ ೧೧ ಸರಿ" (ಹಲಾಯು. ೦೦೩-೯). [ಸಂ. ಪ್ರಖ್ಯಾ]

**ಪ್ರಖ್ಯಾತ** (ಗು). ೧. ಹೆಸರುವಾಸಿಯಾದ ; ಪ್ರಸಿದ್ಧವಾದ : ಪ್ರಖ್ಯಾತ ಕವಿಯಾದ ಮುದ್ದಣನ ಬರವಣಿಗೆ ಬಹು ರಮ್ಯವಾಗಿದೆ (ರೂಢಿ). ೨. ಮಾನ್ಯತೆಯುಳ್ಳ ; ಅಂಗೀಕೃತವಾದ. (ನಾ). ೩. ಹೆಸರುವಾಸಿ ಯಾದುದು ; ಪ್ರಸಿದ್ಧವಾದುದು : ಕನ್ನಡಸಾಹಿತ್ಯದಲ್ಲಿ ಕುಮಾರವ್ಯಾಸ ಭಾರತವು ಪ್ರಖ್ಯಾತವಾಗಿದೆ (ರೂಢಿ). ೪. ಪ್ರಸಿದ್ಧನಾದವನು ; ಕೀರ್ತಿ ವಂತ. ೫. ಎಲ್ಲರಿಗೂ ತಿಳಿದುದು ; ಸರ್ವವಿದಿತ ; ಬಹಿರಂಗ : ಲೆಕ್ಕದಲ್ಲಿ ಲೇಪಿತವಾಹರಿಗೇಕೆ ಅಜಾತನ ಸುದ್ದಿ ಪ್ರಖ್ಯಾತದಲ್ಲಿ ನೀತಿಯ ಹೇಳಿಹೆನೆಂದು ದೇಶವಲ್ಲಿ ಸುಳಿವವರಿಗೇಕೆ ಪರದೋಷನಾಶನದ ಸುದ್ದಿ (ಪೋಳಪು. ೦೩-೪೪). ೬. [ಕಾವ್ಯಮೀ] ರೂಪಕಗಳಲ್ಲಿನ ಮೂರು ಬಗೆಯ ಕಥಾಂಶಗಳಲ್ಲಿ ಒಂದು ; ರಾಮಾಯಣ, ಭಾರತ ಮೊದ ಲಾದ ಪ್ರಾಚೀನಗ್ರಂಥಗಳಲ್ಲಿ ನಿರೂಪಿಸಿರುವ ಕಥೆ : ಈ ಮೂರು ವಿಧವಾದ ವಸ್ತುವೂ "ಪ್ರಖ್ಯಾತ" ಎಂದರೆ—ರಾಮಾಯಣ, ಭಾರತ, ಕಥಾಸರಿತ್ಸಾಗರ ಮುಂತಾದ ಗ್ರಂಥಗಳಲ್ಲಿ ಬಂದು—ಪ್ರಸಿದ್ಧವಾಗಿರಬಹುದು (ಕೈಪಿಡಿ. ೨೦೩) ; ನಾಟಕ—ಇದರ ವಸ್ತು ಪ್ರಖ್ಯಾತ (ಸಂಪಾಟಿ. ೨೯).
[ಸಂ.]

**ಪ್ರಖ್ಯಾತಿ** (ನಾ). ೧. ಯಶಸ್ಸು ; ಕೀರ್ತಿ : ಪ್ರಖ್ಯಾತಿ ಹೊಂದಿ ಅಪಖ್ಯಾತಿ ಪಟ್ಟ (ಗಾದೆ). 'ಪ್ರಖ್ಯಾತಿವೆಱು' ಪರಾ. ೨ ಹೊಗಳಿಕೆ ; ಸ್ತುತಿ. ೩. ಅರಿವು ; ತಿಳಿವಳಿಕೆ. [ಸಂ.]

**ಪ್ರಖ್ಯಾತಿವೆಱು** (ಕ್ರಿ). ಹೆಸರುವಾಸಿಯಾಗು ; ಪ್ರಸಿದ್ಧಿ ಹೊಂದು : ಸಂತತಜಿನಸವನೋದ್ಯತ್ಸಯೋಧಾರೆಯಿಂ ಮಾಡಿ ಕರಂ ಪ್ರಖ್ಯಾತಿವೆತ್ತಂ ನೃಪತನಯನನೇಕಾಂತವಿದ್ಯಾವಿನೋದಂ (ಶಂಕ್ರಪು. ೯-೮೪)
[ಪ್ರಖ್ಯಾತಿ + ಪೆಱು₁]

**ಪ್ರಖ್ಯಾಪನ** (ನಾ). ಪ್ರಸಿದ್ಧಪಡಿಸುವುದು ; ಎಲ್ಲರಿಗೂ ತಿಳಿಯ ಪಡಿಸುವುದು : ಅದನ್ನು ರಾಷ್ಟ್ರಪತಿಯವರು ಪ್ರಖ್ಯಾಪನ ಮಾಡಿದಾಗ, ಅದು ಅಂಥ ರಾಜ್ಯಕ್ಷೇತ್ರಕ್ಕೆ ಅನ್ವಯಿಸುವಂಥ ಸಂಸತ್ತಿನ ಒಂದು ಅಧಿನಿಯಮದಂತೆಯೇ . . . ಪ್ರಭಾವ ಉಳ್ಳದ್ದಾಗಿ ಇರತಕ್ಕುದು (ಭಾಧಾಸ. ೦೬೮). [ಸಂ.]

**ಪ್ರಖ್ಯೆ** (ನಾ). ೧. ಗ್ರಹಣಶಕ್ತಿ : ಪಂಪನು . . . ಮಹಾವಿಪ್ರತಿಭೆಗೆ ಮಾತ್ರ ಸಹಜವಾದ ಪ್ರಖ್ಯೆಯಿಂದ ಕತೆಯನ್ನು ನಡೆಸಿಕೊಂಡು ಹೋಗು ತ್ತಾನೆ (ಕಸಾಚ. ೯೬). ೨. ಕೀರ್ತಿ ; ಪ್ರಸಿದ್ಧಿ ; ಪ್ರಖ್ಯಾತಿ.
[ ಸಂ. ಪ್ರಖ್ಯಾ ]

**ಪ್ರಗಂಡ** (ನಾ). ಮೊಳಕೈಯಿಂದ ಹೆಗಲಿನ ವರೆಗಿನ ತೋಳಿನ ಭಾಗ : "ಪ್ರಗಂಡಃ . . . ಅಸ್ಯೋಪರಿ, ಮೊಳಕೈಗಿಂತಲೂ ಮೇಲೆ ಕಂಕಳವರೆಗೂ ಮೇಲುತೋಳಿನ ಪೆಸರು" (ಸಿದ್ಧಾಂತ. ೦೯೨). [ಸಂ.]

**ಪ್ರಗಣಿತ** (ಗು). ೧. ಎಣಿಸಿದ ; ಗುಣಿಸಿದ. ೨. ಗಮನಿಸಿದ : ಬಗೆದು ಮೋಕ್ಷ ಪರಮಧರ್ಮಮನರ್ಥಿಯಿನನ್ವಯಪ್ರಗ(ಣಿ)ಣಿತಾಭ್ಯು ದಯಮೋಕ್ಷಸುಖಾಶ್ರಯಹೇತುಮಂ ನೆಗಟ್ಟಿ (ಕಬಿರಾ. ೩-೨೨೩) ; ನಿಗುರ್ವ ಚೌಕುಳಮೆಂಬ ಶಾರಿರ ಸುಗತಿಯಿಂದನುಬದ್ಧಗೂಡಿ ಪ್ರಗಣಿತಾಳತಿಯೆಸಯೆ ಸಂಧಿಸೆ ಗಮಕಸಪ್ತಕವು (ಏಕತ್ರಿ. ೦೯-೦೦). (ನಾ). ೩. ಅತಿಶಯತೆ : ಕನಕಾಂಚೀನಿನದಪ್ರಗಣಿತಮಗಲ್ದ ನಲ್ಲಳ ಜಗನವಿದೆನ್ನೆರ್ದೆಯನೆಂತು ಪೊಕ್ಕಳಿಪವುದೋ (ಶಂಶಕಾ. ೯-೭೩). [ಸಂ.]

**ಪ್ರಗತ** (ಗು). ೧. ಮುಂದುವರಿದ : ಇಂದಿನ ಪ್ರಗತ ದೇಶಗಳು ಬಟ್ಟೆ ಯನ್ನೂ ಅರಿಯದ ಕಾಲದಲ್ಲಿ ಭರತಖಂಡವು ಜ್ಞಾನವಿಜ್ಞಾನದ ಶಿಖರದಲ್ಲಿ ಇದ್ದಿತು (ಕರ್ನಾಟಿ. XIV ಮುನ್ನುಡಿ). ೨. ಅಪರೂಪವಾದ ; ವಿರಳ ವಾದ ; ಲೋಕೋತ್ತರವಾದ : ಸಕಲಜನವಿನುತನಂ . . . ಪ್ರಗತ ಗುಣಗಣನನರಿಬಲವಿಘಟನನಂ ಕಂಡನಣುವನಾ ರಾಘವನಂ (ಕಬಿರಾ. ೨-೨೮). ೩. ಹೆಚ್ಚಾಗಿ ಬಳಕೆಯಲ್ಲಿರುವ,—ವ್ಯವಹಾರದಲ್ಲಿರುವ : ಮಧ್ಯ ಮೋತ್ತಮಪುರುಷಪ್ರಗತಬಹೂಕ್ತಿಯೊಳಿಮುಮೆಂದೊಗೆತರ್ಕುಂ (ಶಮದ. ೨೨೯). [ಸಂ.]

**ಪ್ರಗತಿ** (ನಾ). ಏಳಿಗೆ ; ಮುನ್ನಡೆ ; ಪುರೋಭಿವೃದ್ಧಿ : ಇತರ ಕಾರ್ಯ ಕ್ಷೇತ್ರಗಳಲ್ಲಿಯೂ ದೇಶವು ಪ್ರಗತಿಯನ್ನು ಹೊಂದಿತು (ಪ್ರಪಾಸ್ತ್ರ. ೨೦); ಅಡಿಗೆಯ ಅನಾಗರಿಕಸ್ಥಿತಿಯಿಂದ ಮನುಷ್ಯನು ಹೊಂದಿದ ಪ್ರಗತಿಯ ಸೂಚಿಕೆ (ಅಡುಗೆ. ೬೮). [ಸಂ.]

**ಪ್ರಗತಿಪಥ** (ನಾ). ಏಳಿಗೆಯ ಹಾದಿ ; ಅಭಿವೃದ್ಧಿಯ ಮಾರ್ಗ : ಜೀವನ ಹಿಂದಿನದಕ್ಕಿಂತ ನವೀನವೂ ಉತ್ತಮವೂ ಆಗಿ ಪ್ರಗತಿಪಥದಲ್ಲಿ ಸಾಗುತ್ತಿದೆ (ಶಿಕ್ಷಣ. ೧). [ಸಂ.]

**ಪ್ರಗತಿಪರ** (ಗು). ೧. ಏಳಿಗೆಯಲ್ಲಿ ಆಸಕ್ತಿಯುಳ್ಳ ; ಪ್ರಗತಿಶೀಲ :

ಅದು ಪ್ರಗತಿಪರ ವಿಚಾರಶೀಲರ ಸಂಘವಾಗಿತ್ತು (ಕಂಕೋ. I, ೦೩೬). (ನಾ). ೨. ಏಳಿಗೆಯಲ್ಲಿ ಆಸಕ್ತಿಯುಳ್ಳವನು : ಬೇ ಪ್ರಗತಿಪರನಾದ ವ್ಯಕ್ತಿ. ಪ್ರಕೃತಶತಮಾನದ ಉತ್ತರಾರ್ಧದ ಪ್ರಾರಂಭದಲ್ಲಿ ಪ್ರಚಾರದಲ್ಲಿದ್ದ ಪ್ರಗತಿಪರಸಂಪ್ರದಾಯ ಅತ್ಯಂತ ಪವಿತ್ರವಾದದ್ದೆಂದು ಅವನು ಪರಿಗಣಿಸಿದ್ದನು (ಕೃಕು. ೩೬೩). [ಸಂ.]

**ಪ್ರಗತಿವಾದಿ** (ನಾ). (ಹಳೆಯ ಕಂದಾಚಾರಕ್ಕೆ ಶರಣಾಗದೆ) ಯಾವುದಾದರೊಂದು ಕ್ಷೇತ್ರದಲ್ಲಿ ಸುಧಾರಣೆಯನ್ನು ಮಾಡಬೇಕೆಂದು ವಾದಿಸುವ ವ್ಯಕ್ತಿ : ನಾನು ಪ್ರಗತಿವಾದಿಯೋ ಅಲ್ಲವೋ ನನಗೆ ಗೊತ್ತಿಲ್ಲ (ಕೃಕು. ೨೨೪) ; ಅತಿತ್ವರಿತದಲ್ಲಿ ಸುಧಾರಣೆಯನ್ನು ಬಯಸುವ ಪ್ರಗತಿವಾದಿಗಳನ್ನು ಗುರುತಿಸಬಹುದು (ದಾಶ. ೨೫). [ಸಂ. ಪ್ರಗತಿವಾದಿನ್]

**ಪ್ರಗತಿಶೀಲ** (ಗು). ೧. = ಪ್ರಗತಿಪರ ೧ : ಭಾರತದ ಇತರ ಭಾಷೆಗಳಲ್ಲಿ ನವ್ಯಕವಿಗಳು ಹಾಗು ಪ್ರಗತಿಶೀಲಪಂಥಗಳವರು ನಡೆಸುತ್ತಿರುವ ಚಳವಳಿಗಳನ್ನು ಗಮನಿಸಬೇಕಾದುದು ಅಗತ್ಯ (ಕಂಕೋ. I, ೮೮೩). (ನಾ). ೨. ದೀನದಲಿತರನ್ನು ಕುರಿತು ಕೃತಿರಚನೆ ಮಾಡಬೇಕೆಂಬ ತತ್ತ್ವವನ್ನು ಅನುಸರಿಸಿ ಬರೆದ ಸಾಹಿತ್ಯ : ಪ್ರಗತಿಶೀಲಲೇಖಕರು ಸಾಹಿತ್ಯಕ್ಕೆ ಹೆಚ್ಚಿನ ವಸ್ತುವೈವಿಧ್ಯ, ವಿಸ್ತಾರಗಳನ್ನು ತಂದರು (ಕಂಕೋ. XI, ೩೦೮) ; ಇತರ ಸಾಹಿತಿಗಳ ಸಾಹಿತ್ಯಸೃಷ್ಟಿಯನ್ನು ೧. ಅನುಭಾವಿಸಾಹಿತ್ಯ—ರಹಸ್ಯವಾದ . . . ೩. ಪ್ರಗತಿಶೀಲ, ೪. ನವ್ಯಕಾವ್ಯ ಅಥವಾ ಪ್ರಯೋಗವಾದ ಎಂದು ವಿಭಾಗಿಸಬಹುದಾಗಿದೆ (ಶಾರಿ. ೪೬೩). ೩. ದೀನದಲಿತರನ್ನು ಕುರಿತು ಕೃತಿರಚನೆ ಮಾಡಬೇಕೆಂದು ಹುಟ್ಟಿಕೊಂಡ ಲೇಖಕರ ಒಳಗದ ಸದಸ್ಯ : ಬಡವರು, ಕಾರ್ಮಿಕರು, ಕೂಲಿಕಾರರು ಮೊದಲಾದವರ ಬದುಕಿನ ನೋವುನಲಿವುಗಳಿಗೆ ಅಭಿವ್ಯಕ್ತಿ ನೀಡಿ ಪ್ರಗತಿಶೀಲರು ಕನ್ನಡಸಾಹಿತ್ಯಕ್ಕೆ ಹೊಸ ಆಯಾಮಗಳನ್ನಿತ್ತರು (ಕಂಕೋ. XI, ೩೦೮). [ಸಂ.]

**ಪ್ರಗಲ್ಭ** (ಗು). ೧. ಪ್ರತಿಭೆಯಿಂದ ಕೂಡಿದ. ೨. ಧೈರ್ಯದಿಂದ ಕೂಡಿದ ; ಕೆಚ್ಚುಳ್ಳ. ೩. ಚೆನ್ನಾಗಿ ಬೆಳೆದಿರುವ. ೪. ಪಾಂಡಿತ್ಯಪೂರ್ಣವಾದ ; ಪ್ರೌಢವಾದ : ನೃಪನಂ ಜಾಣ್ಗೊಂಡ ನಿಜಪ್ರಗಲ್ಭವಚನದೆ ನುಡಿದಳ್ (ಕಾದಂಕಾ. ೬೬೦). (ನಾ). ೫. ಧೈರ್ಯಶಾಲಿ ; ದಿಟ್ಟ. ೬. ಪ್ರೌಢ ; ಪ್ರವೀಣ ; ನಿಪುಣ : "ಪ್ರಗಲ್ಭಃ, ಪ್ರೌಢಃ—ಈ ೨ ಪ್ರೌಢಂ" (ಕಅಭಿಧಾ. ೬೪-೨೩೩) ; ನೆಗಟ್ದರೆ ಪುಣ್ಯಾಹಸ್ವರಂ . . . ಪುಗವೇಟ್ಟಂ ವಿವಿಧಾಸ್ತ್ರಪ್ರಗಲ್ಭರಂ ತನ್ನ ಚಟ್ಟರಂ ಕಳಶಭವಂ (ಕಂಶಕಾ. ೨-೬೯) ; ಬಹುಶ್ರುತನುಂ ಅತಿಪ್ರಗಲ್ಭನುಂ . . . ಆಚಾರ್ಯನಕ್ಕುಂ (ಆಶು. ೧೦-೨ ವ). ೭. ಚುರುಕಾದ ಬುದ್ಧಿಯುಳ್ಳವನು ; ಪ್ರತಿಭಾವಂತ : "ಪ್ರಗಲ್ಭಃ, ಪ್ರತಿಭಾನ್ವಿತಃ—೨ ಆಗಾಗ್ಯ ಹೊಸಹೊಸದಾಗಿ ಪ್ರಕಾಶಿಸುವ ಪ್ರಜ್ಞೆಯುಳ್ಳವನ ಪೆಸರು" (ನಿಘಂಶಿ. ೩೬೮). [ಸಂ.]

**ಪ್ರಗಲ್ಭತೆ** (ನಾ). ೧. ಧೈರ್ಯ ; ಕೆಚ್ಚು. ೨. ಆಳವಾದ ತಿಳಿವಳಿಕೆ ; ಪಾಂಡಿತ್ಯ : "ಪ್ರತಿಪತ್ತಿಃ, ಪ್ರಗಲ್ಭತಾ — ಈ ೨ ಅಱಿವುದು" (ಕಅಭಿಧಾ. ೦೨೬-೯೪) ; ಪ್ರಗಲ್ಭತೆಯಿನಾಯ್ದುವೋಲ್ ಬೆಳಗುವೂಗಳಂ ಗಾಳಿ ದುಂಬಿಗಳ್ ಬಗೆದು ಮೊಲ್ಲೆ ಮಲ್ಲಿಗೆಯ ಮಾಲೆ ಮೆಲ್ಪಿಂಗೆ ವಾಯ್ತುಗೆತ್ತಿಱಿಗೆ (ಲೀಲಾವ. ೦೩-೯೭). ೩. ಪ್ರೌಢಿಮೆ ; ನೈಪುಣ್ಯ : ಆ ಕೃತಿ ಮುನ್ನಂ ಚೆಲ್ವಿಂಗಾಕರಮೆನಿಸಿರ್ದು ಮತ್ತೆ ಕನ್ನಡಿಸಿತ್ತಿನ್ನೀ ಕವಿತೆಯಿಂ ಪ್ರಗಲ್ಭತೆಯಾ ಕಾದಂಬರಿಯ ಸೊಬಗದೇನಚ್ಚರಿಯೋ (ಕಾದಂಪೂ. ೬). [ಸಂ. ಪ್ರಗಲ್ಭತಾ]

**ಪ್ರಗಲ್ಭೆ** (ನಾ). ೧. ದಿಟ್ಟ ಹೆಂಗಸು. ೨. ಪ್ರೌಢವಯಸ್ಸಿನ ಮಹಿಳೆ. ೩. ಗಯ್ಯಾಳಿ ; ಗಟವಾಣಿ. ೪. [ಕಾವ್ಯಮಿ] ಯೌವನದ ಅನುಭವದ ಪರಿಣಾಮವಾಗಿ ಭಾವಪರವಶತೆಯುಳ್ಳವಳು : ಅನುರಕ್ತಿ ಸರಸತರವಾನಿನಿ ಪರಿಚಿತೆಯಖಿಳವಿಷಯನಿಶ್ಚಿತಮತಿ ಕಾಮಿನಿಯೆನಿಸಿದಾಕೆ ಕವಿಕಾವನ ಮತದಿಂ ಪ್ರಗಲ್ಭೆಯೆನೆ ಪೆಸರ್ವಡೆಗುಂ (ಶೃಂಗಾರ. ೩-೩೬) ; ಮತಿಯನುಳ್ಳ ವೈಶಿಕಕ್ಕೆ ಗತಿಯೆನಿಸುವ ಮಾತಿನಿಂದೆ ರತಿಗೆ ತಪ್ಪದಂತೆ ರತಿಯನ್ನೆದೆ ಬೆಳೆಯಿಪ ಚತುರರಂಬೆಗೆಯ್ವ ತರ್ಕರತಿಶಯವನೆ ಗೆಲ್ವ ಪಲವು ಕೃತಕವಚೋವಳೇ ಪ್ರಗಲ್ಭೆ (ಶಶಿ. ೩-೦೨). [ಸಂ. ಪ್ರಗಲ್ಭಾ]

**ಪ್ರಗಾಢ** (ಗು). ತೀವ್ರವಾದ ; ಗಾಢವಾದ : ಇತರರ ಮೇಲೆ ಕೂಡ ಪ್ರಗಾಢ ಪ್ರಭಾವವನ್ನು ಬೀರುವ ದುಷ್ಟಪ್ರವೃತ್ತಿ ನೆಗಡಿಗೆ ಇದೆ (ದೀಕಕ್ಕ. ೦೪). [ಸಂ.]

**ಪ್ರಗಾಥ** (ನಾ). ೧. [ಛಂದ] ಮಿಶ್ರಛಂದಸ್ಸುಗಳಿಂದಾದ ಒಂದು ಬಗೆಯ ವೈದಿಕಛಂದಸ್ಸು : ೮ ಮತ್ತು ೧೨ ಅಕ್ಷರಗಳ ಪಾದಗಳನ್ನು ಬೆರಸಿ ನಾಲ್ಕುಪಾದದ ವೃತ್ತವನ್ನು ಏಳರ ವರೆಗೆ ವಿಸ್ತರಿಸಿ ಪ್ರಗಾಥಗಳನ್ನು ವೈದಿಕಕವಿಗಳು ರಚಿಸಿರುತ್ತಾರೆ (ಕೃಶಿ. ೦೦೪) ; ವೈದಿಕಛಂದಸ್ಸಿನಲ್ಲಿ ಗಾಯತ್ರಿ, ಅನುಷ್ಟುಭ್, ತ್ರಿಷ್ಟುಭ್, ಜಗತೀ, ಪ್ರಗಾಥ ಹೀಗೆ ಐದು ಮುಖ್ಯ ಪ್ರಕಾರಗಳೆಂದು ತೋರುತ್ತದೆ (ಛಂದೋಶಿ. ೪೬). ೨. ಆಧುನಿಕ ಕವಿಗಳು ರಚಿಸುವ, ಸಾಮಾನ್ಯವಾಗಿ ದೀರ್ಘಪಾದಗಳಿರುವ, ಘನವಾದ ವಸ್ತುವನ್ನು ಕುರಿತು ಸಂಬೋಧನಪರವಾದ ಒಂದು ಕವಿತೆಯ ಪ್ರಕಾರ : ಇಂಗ್ಲೀಷಿನ ಮುಖಾಂತರ ಕನ್ನಡಕಾವ್ಯಕ್ಷೇತ್ರದಲ್ಲಿ ಸುಳಿದು ಬಂದ ಛಂದೋರೂಪಗಳಲ್ಲಿ ಪ್ರಗಾಥವು ಒಂದು . . . ಪ್ರಗಾಥವು ಭಾವಗೀತದ ಒಂದು ಪ್ರಕಾರ (ಛಂದೋಶಿ. ೩೦೬) ; ಕನ್ನಡದಲ್ಲಿ ಅನೇಕ ಕವಿಗಳು ಪ್ರಗಾಥಗಳನ್ನು ಬರೆದಿದ್ದಾರೆ (ಕಂಕೋ. XI, ೩೦೬). [ಸಂ.]

**ಪ್ರಗೀತ** (ಗು). ೧. ಹಾಡಿದ. (ನಾ). ೨. ಹಾಡು; ಗೀತೆ. ೩. ಕೊಂಡಾಟಕ್ಕೆ ಪಾತ್ರನಾದವನು ; ಪ್ರಸಿದ್ಧ : ಪೊನೆಗಾಱರುಂ ಪ್ರಗೀತರನಿಂಬಾಗಿರೆ ಚೌಪಳಿಗೆಗಳೊಳ್ ಕುಳ್ಳಿರಿಸಿದರೊಡನೆಸೆಯೆ ನೆರೆದ ಪುರಜನಸಹಿತಂ (ಕಂಶಕಾ. ೨-೬೬). ೪. ಹ್ರಸ್ವಸ್ವರವನ್ನು ದೀರ್ಘಸ್ವರದಂತೆ ಹೇಳುವುದು : ಸಾಮಗಾನದಂತೆ ಎಳೆದು ಹೇಳುವುದು "ಪ್ರಗೀತ" ವೆನಿಸುವುದು (ಸಂಕೋಶ. ೦೨೦). [ಸಂ.]

**ಪ್ರಗೀತಿ** (ನಾ). ೧. ಪ್ರಶಂಸೆಯ ಉಲ್ಲೇಖ : ಮಿಗೆ ಕನ್ನಡಗಬ್ಬಂಗಳೊಳಗಣಿತಗುಣಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸುವರ್ಗದ್ಯಕಥಾಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್ (ಕವಿರಾ. ೧-೨೬). ೨. [ಛಂದ] ಸಂಸ್ಕೃತದ ಒಂದು ಬಗೆಯ ಛಂದಸ್ಸು. [ಸಂ.]

**ಪ್ರಗುಣ** (ಗು). ೧. ಪ್ರಶಸ್ತವಾದ ಗುಣಗಳಿಂದ ಪರಿಪೂರ್ಣವಾದ.— ಶ್ರೇಷ್ಠವಾದ : ಬಗೆದು ಮಾರ್ಗದ್ವಿತಯಗತಿಗಳಂ ಪ್ರಗುಣಗುಣಗಣೋದಯರ್ಕಳಿ . . . ಬೆರಸಿ ಪೇಟ್ಗಿ ರಸವಿಶೇಷದೊಳ್ (ಕವಿರಾ. ೨-೯೪) ; ತರವೇಟ್ ಕೇಯೂರಹಾರಪ್ರಗುಣಮಣಿವಿಭೂಷಾವಿಶೇಷಂಗಳಂ (ಆಶು. ೩-೭೪). ೨. ನೇರವಾಗಿರುವ ; ವಕ್ರವಲ್ಲದ : " ಪ್ರಗುಣಮೞಟಿಲಂ ರಿಜು ಸರಲಂ" (ಚಸುಕೋ. ೦೦೪-೩೪). [ಸಂ.]

**ಪ್ರಗ್ರಹ** (ನಾ). ೧. ಬಿಗಿಯಾಗಿ ಹಿಡಿದುಕೊಳ್ಳುವಿಕೆ. ೨. ತೆಗೆದುಕೊಳ್ಳುವಿಕೆ ; ಸ್ವೀಕರಿಸುವಿಕೆ. ೩. (ಇಂದ್ರಿಯಗಳ) ಹತೋಟಿ ; ನಿಗ್ರಹ. ೪. ಹಗ್ಗ ; ರಜ್ಜು : "ಆ ಹಗ್ಗದಲ್ಲಿಯುಂ ಪ್ರಗ್ರಹ ಮೆಂಬುದು " (ಕಅಭಿಧಾ. ೦೩೪-೦೪). ೫. ಕುದುರೆಯ ಕಡಿವಾಣ : ನಾನಾರತ್ನಕೂಟಾಂಶುಜಾಲದಿನಾಶಾವಧುಗಿತ್ತು ಚಿತ್ರಪಟಮಂ ಚೈತ್ಯಾಲಯಮಂ ಮತ್ತಮಿತ್ತುದು ಸಪ್ತಾಶ್ವನ ಸಪ್ತಸಪ್ತಿಗೆ ಸಮಗ್ರ ಪ್ರಗ್ರಹಾಶಂಕೆಯುಂ (ಕಂಶಾಪು. ೪-೦೨೬). ೬. ಸೆರೆ ಸಿಕ್ಕವನು ; ಬಂದಿ ; ಸೆರೆಯಾಳು : " ಪ್ರಗ್ರಹಃ, ಗ್ರಾಹಕಃ, ವಂದೀ—ಈ ೩ ಬಂದಿ "

(ಹಲಾಯು. ೬೨೩-೬೯). ೭. ಸೆರೆಹಿಡಿಯುವಿಕೆ ; ದಸ್ತಗಿರಿ ಮಾಡುವುದು : "ಗ್ರಾಹಕಂ ಪ್ರಗ್ರಹವೆನಲ್ಬಂದಿವಿಡಿಹವಕ್ಕು" (ಪಂಗಠಾ. ೧೩೬-೪೦). ೮. ಕಿರಣ ; ಕದಿರು : "ಉಸ್ರಃ . . . ಪ್ರಗ್ರಹಃ, ಉಪಧೃತಿಃ . . . ಗೌಃ—ಈ ೩೨ ರಶ್ಮಿಗಳ ಪೆಸರ್" (ಹಲಾಯು. ೯-೬೯); "ಪ್ರಗ್ರಹಂ ದೀಪ್ತಿ . . . ಪ್ರದ್ಯೋತವಮಾ ರಶ್ಮಿ" (ಶಬಂಗಠಾ. ೦೦-೩). ೯. ತೂಕವು ಏರುಪೇರಾಗದಿರಲು ತಕ್ಕಡಿಯ ಮಧ್ಯದಲ್ಲಿ ಕಟ್ಟಿರುವ ದಾರ: "ಪ್ರಗ್ರಾಹಃ, ಪ್ರಗ್ರಹಃ—೨ ತ್ರಾಸಿನ ದಾರ, ಕುದುರೆ ಮುಂತಾದುವನ್ನು ಕಟ್ಟುವ ಹಗ್ಗ" (ಸಿದ್ಧಾಂತಿ. ೪೨೮). ೧೦. ಮುಖಂಡ ; ನಾಯಕ : ಅಂತು ಪ್ರಥಮನಾಕನಾಯಕ ಪ್ರಗ್ರಹಾಮರರ್ ಬಂದು ಷೋಡಶತೀರ್ಥಕರಪಾದಪಯೋಜಂಗಳ್ಗವನತವಣಿಮಕುಟರಾಗಿ ಪರಿಚಾರಕಕೃತ್ಯದೊಳ್ ನೆಗಟ್ (ಶಾಂತಿಪು. ೧೦-೯೯ ಪ). ೧೧. ತೋಳು ; ಭುಜ. ೧೨. ದಯೆ ; ಅನುಗ್ರಹ. ೧೩. ವಿಷ್ಣು. ೧೪. ಚಿನ್ನ. [ಸಂ.]

**ಪ್ರಗ್ರಾಹ** (ನಾ). ೧. ತೆಗೆದುಕೊಳ್ಳುವುದು. ೨. ತಕ್ಕಡಿಯ ಮಧ್ಯದಲ್ಲಿರುವ ದಾರ. ೩. ಕುದುರೆಯ ಕಡಿವಾಣ. ೪. ಕುದುರೆಯನ್ನು ಕಟ್ಟುವ ಹಗ್ಗ : "ಪ್ರಗ್ರಾಹಃ, ಪ್ರಗ್ರಹಃ—೨ ತ್ರಾಸಿನ ದಾರ, ಕುದುರೆ ಮುಂತಾದುವನ್ನು ಕಟ್ಟುವ ಹಗ್ಗ" (ಸಿದ್ಧಾಂತಿ. ೪೨೮). [ಸಂ.]

**ಪ್ರಘಟ್ಟ** (ನಾ). ೧. ಸಂದರ್ಭ ; ಸನ್ನಿವೇಶ ; ಪ್ರಸಂಗ : ಅನಿತೊಂದು ಮಹಾಪ್ರಘಟ್ಟದೊಳಗ್ರಪೂಜೆಯಂ ನಾರಾಯಣಂಗೆ ಕೊಟ್ಟು (ಪಂಪಭಾ. ೬-೬೩ ಪ). ೨. ಸಂಗತಿ ; ವಿಷಯ : ಕಪಿಧ್ವಜರುಮಂ ನೆಲದೊಳಿಕ್ಕಿ ಮಗುಟ್ದು ಬಪ್ಪುದುಮಾ ಪ್ರಘಟ್ಟಮಂ ವಿಶಾಖಭೂತಿಭೂಪಾಳಂ ಕೇಳ್ದು (ವರ್ಧಮಾ. ೨-೬೫ ಪ). [ಸಂ.]

**ಪ್ರಘಟ್ಟಕ** (ನಾ). ೧. = ಪ್ರಘಟ್ಟ ೧ : ಇನಿತೊಂದುಗ್ರರಣಪ್ರಘಟ್ಟಕದೊಳೀ ಭಾರಾಪಹಾರಂ ಧರಾಂಗನೆಗೀಯುರ್ವರಿನಾದುದಾಯ್ತು (ಪಂಪಭಾ. ೦೯-೦೦); ಚೋಳಿಕರ ಪ್ರಘಟ್ಟಕದಿಂ ಕೆಟ್ಟ ಸಮ್ಯಕ್ತ್ವಿಯಿಂ ಪುನರ್ಭ್ರಗಣಂ ಮಾಡಿ (ಎಇ. XV, ೬೧-೦೭; 1060) ; ನಲ್ಲನೊಲ್ಲದೆ ಪೋದೀ ವಿರಹಪ್ರಘಟ್ಟಕದೊಳೀ ನೈಪಥ್ಯಮುಮಂ ಪಥ್ಯವೇ (ಚಂದ್ರಪ್ರಪು. ೯-೩೪). ೨. ವಿಧಿ ; ಆಜ್ಞೆ ; ನಿಯಮ ೩. ಬೋಧನೆ; ಉಪದೇಶ. [ಸಂ.]

**ಪ್ರಘಟ್ಟನ** (ನಾ). ೧. = ಪ್ರಘಟ್ಟ ೧ : ಐವರ್ ಮಂತ್ರಿಗಳಂ ಬರಿಸಿ ಮೇಘವರ್ಣಂ ಈ ಪ್ರಘಟ್ಟನಕ್ಕೇಗೆಯ್ವೆಮೆಂದು ಪೇಟ್ ಮಂತ್ರಿಗಳಿಂತೆಂದರ್ (ಪಂಚತಂ. ೨೦೪-೨) ; ಅಂತು ಮೂವರುಂ ಪ್ರೀತಿಮತಿಕನ್ಯಾಸ್ವಯಂವರಪ್ರಘಟ್ಟನದೆ ಜಿನರೂಪಮಂ ತಳೆದು (ಶಾಂತಿಪು. ೨-೬ ಪ). ೨. ವಿಧಿ ; ನಿಯಮ. [ಸಂ.]

**ಪ್ರಘಣ** (ನಾ). ೧. ಮನೆಯ ಮುಂದಿನ ಅಂಗಳ ; ಮೊಗಸಾಲೆ : "ಪ್ರಘಣಃ, ಪ್ರಘಾಣಃ , ಅಳಿಂದಕಃ—ಈ ೩ ಮೊಗಸಾಲೆ" (ಹಲಾಯು. ೩೦-೧೪೪); ಆ ಪದಿನಾಱುಂ ನಾಟ್ಯಗೃಹದ ಪ್ರಘಣಂಗಳೊಳಿರ್ಕುಂ ದೂಪಘಟಂಗಳ್ (ಮಲ್ಲಿಪು. ೦೪-೦೪೪). ೨. ನೆಲಗಟ್ಟು : ಅಂತು ನಿಜ ಮುಖ ಪ್ರತಿಬಿಂಬಕದಂಬದಿಂ ಮರಕತಪ್ರಘಣದೊಳ್ ಪದ್ಮಪುಷ್ಪೋಪಹಾರಮಂ ವಿರಚಿಸಿ (ಚಂದ್ರಪ್ರಪು. ೦೦-೦೨೪ ಪ) ; ತಾರಾತತಿ ಮಾರ್ಪೊಳೆಯೆ ಮನಂಗೊಳಿಪ ತಿಳಿಗೊಳಂಗಳ ತೆಱನಂ ತಳೆದುವು ಬಲಿಗೆದಱಿದ ವಿಚಕಿಳದಲರಿಂ ನೀಲಮಣಿಮಯಪ್ರಘಣಂಗಳ್ (ಕೃಷ್ಣಪು. ೪-೬೪). ೩. ಕಬ್ಬಿಣದ ಹಾರೆ. ೪. ತಾಮ್ರದ ಪಾತ್ರೆ. [ಸಂ.]

**ಪ್ರಘಾಟ** (ನಾ). ಗುಂಪು ; ಸಮೂಹ : ಆದಡೆಲೆ ಪವಮಾನಸುತ ನೀನಾದರಿಸು ನಡೆ ನೃಪತಿಯನು ನಾ ಕಾದುವೆನು ಕೌರವರ ಸಕಲಬಲಪ್ರಘಾಟದಲಿ (ಕುಮಾವ್ಯಾ. ೦೪-೬೪). [<ಸಂ. ಪ್ರಘಟಾ]

**ಪ್ರಘಾಣ** (ನಾ) ೧. = ಪ್ರಘಣ ೧ : "ಪ್ರಘಣಃ, ಪ್ರಘಾಣಃ, ಅಳಿಂದಕಃ—ಈ ೩ ಮೊಗಸಾಲೆ" (ಹಲಾಯು. ೩೦-೧೪೪). ೨. ಮರದ ಕವಲು : "ಪ್ರಘಾಣಃ, ಸ್ಕಂಧಂ—ಈ ೨ ಮರದ ಪಣೆ" (ಹಲಾಯು. ೩೦-೨೮); "ಮರದ ಕವಲು ಪ್ರಘಾಣಂ ಸ್ಕಂಧಮಕ್ಕುಂ" (ಶಬ್ದಮ. ೩೨-೩). [ಸಂ.]

**ಪ್ರಘಾತ** (ನಾ.) ೧. ಕಾಳಗ; ಯುದ್ಧ : "ಸಂಗ್ರಾಮಃ . . . ಪ್ರಘಾತಃ, ಜನ್ಯಂ, ಅಭಿಸಂಪಾತಃ, ಸಮ್ಮರ್ದಃ, ವಿಗ್ರಹಃ—ಈ ೩೫ ಕಾಳಗಂ" (ಹಲಾಯು. ೬೩-೪೦೦). ೨. ಕೊಲೆ ; ವಧೆ. ೩. ಕಡಿಯಂಬುದು; ಭೇದ: ಸಮ್ಯಕ್ತ್ವಂ . . . ಸಾಮ್ಯೋರ್ವೀಜಪ್ರಘಾತಂ ರಜನಿಘುರತರಾಗಂ ಮಹದ್ಬ್ರಹ್ಮಚರ್ಯಂ (ಶಾಂತಿಪು. ೬-೩೦) . ೪. ಕೇಡುಕು; ಅಪಾಯ: ಜಾನಕಿಬಾಯಿಯರು ತಮ್ಮ ಸತೀತ್ವವನ್ನು ನಿಧಿಯನ್ನು ಕಾಯುವ ಘಟಸರ್ಪದಂತೆ ಕಾಯ್ದುಕೊಂಡು ಬಂದಿದ್ದರು. ಈ ಸತೀತ್ವದ ಮೇಲೆ ಪ್ರಘಾತ ಬರುವ ಸನ್ನಿವೇಶಗಳು ಸಂಭವಿಸಿದ್ದಿಲ್ಲ ನಿಜ (ನಮಜೀ. ೨೨೬). [ಸಂ.]

**ಪ್ರಘೋಷಣ** (ನಾ). ದೊಡ್ಡ ಧ್ವನಿ; ಉದ್ಘೋಷಣೆ : ವಿನುತಶಿವವಿದ್ಯಾಗಮದಿ ಸಂಜನಿತ ಸಾನುಭವಪ್ರಘೋಷಣಾಪನಪರತಮುಂ ಬಸವರಸನರ ಮನೆಯೊಳೀಂ ಪೇಳ್ವೆ (ಬಸಪು. ೩೬-೬೪). [ಸಂ.]

**ಪ್ರಚಂಡ** (ಗು). ೧. ಬಹಳ ಉಗ್ರವಾದ; ತೀಕ್ಷ್ಣವಾದ. ೨. ಕ್ರೂರವಾದ ; ಭಯಂಕರವಾದ : ಮತ್ತೇಭವಧಪ್ರಚಂಡಯಮದಂಡಪದೇಂ ಮಾಣ್ಬುದೆ ಪಿಪೀಲಿಕಾವಧವಿಧಿಯಂ (ಜಗ. ೨-೩೪). ೩. ಶಕ್ತಿಯುತವಾದ; ಬಲದಿಂದ ಕೂಡಿದ : ಮಹಾಸಾಮನ್ತಪ್ರಚಣ್ಡದಣ್ಣ[ನಾ]ಥಶ್ರೀಮತು ಬಯ್ಸರೊಳ್ಗಣ್ಡರೆಬ್ಬರಸರ್ (ಸೌಇಇ. XX. ೨೨-೦೨; 1027) ; ಸಾಳರಾಜ್ಯಕಂಟಕೋತ್ಪಾಟನಪ್ರಚಣ್ಡದೋರ್ದಣ್ಡನುಂ (ಕಇ. ೫-೨-೦೪೪; 1058). (ನಾ). ೪. ಭಯಂಕರವಾದುದು : ಸಿಂಹವು . . . ಪ್ರಚಂಡವಾದ ಗರ್ಜನೆ ಮಾಡುವುದು (ಮುಂಬಯಿ. ೪-೨೦೮); ಬಹುಶಃ ಬಹು ಪ್ರಚಂಡವಾದ ಮತ್ತು ಅಪೂರ್ವವಾದ ಪದ್ಧತಿಯಲ್ಲಿ ನಾನು ಆರಂಭಿಸಿದ್ದೇನೆಂದು ತೋರುತ್ತದೆ (ಬೀಚಿ. ೫೯). ೫. ನಿಪುಣ ; ಪ್ರಗಲ್ಭ : ಅಜಂತಾ ಚಿತ್ರಗಳನ್ನು ನಿರ್ಮಿಸಿದ ಕಲಾವಿದರು ಕಲಾಕೌಶಲ್ಯದಲ್ಲಿ ಪ್ರಚಂಡರಾಗಿದ್ದರು (ಭಾರದ. ೩೨೩). ೬. ಪರಾಕ್ರಮಿ : ಈ ವಜ್ರಾವರ್ತಕೋದಂಡ ಮನವಯವದಿಂದೇಜ಼ಸಲ್ ಸಾಲ್ವ ದೋರ್ದಂಡಾವಷ್ಟಂಭಪ್ರಚಂಡಂ ಜನಕಂಗೆ ವರಂ ಬರ್ಪುದು (ಪಂಪರಾ. ೩-೬೬). ೭. ಅಸಾಮಾನ್ಯನಾದವನು ; ಅಸಾಧಾರಣ ವ್ಯಕ್ತಿ : ಅವರ ಕಡೆಯ ಮಗ ಬಲು ಪ್ರಚಂಡ. ಎಲ್ಲ ತರಗತಿಗಳಲ್ಲೂ ಅವನೇ ಮೊದಲಿಗ (ರೂಢಿ). ೮. ಒಂದು ನರಕದ ಹೆಸರು : ಉಗ್ರ ವೃಕಾಸ್ಯ ಗ್ರಾಹ ಕುಂಭಿ ನಕ್ರವೆಂಬ್ಬಿದು ಮಂತ್ರಿ ನರಕಂಗಳಿಂದೊಡಗೂಡಿ ಪ್ರಚಂಡವೆಂಬರಸುನರಕವಿಹುದು (ಶಿವೀಶ. ೦೪೦).

**ಪ್ರಚಂಡದಂಡನಾಯಕ**=ಒಂದು ಬಿರುದು : ಮಹಾಪ್ರಚಣ್ಡದಣ್ಡನಾಯಕಂ . . . ಶಂಕರಕಿಂಕರಂ ನಾಮಾದಿ ಸಮಸ್ತಪ್ರಶಸ್ತಿಸಹಿತಂ ಶ್ರೀಮದ್ದಣ್ಣನಾಯಕರೀಶ್ವರ ಭಟ್ಟರ್ಗ್ಗೆ (ಸೌಇಇ. XX. ೪೬-೨೦; 1072). [ಸಂ.]

**ಪ್ರಚಂಡಿ** (ನಾ). ಬೆದೆ ಬಂದ ಹಸು. —ಆವು "ಪ್ರ[ಕಾಶ. ಅ]ಚಂಡೀ, ಸುರತಾ—ಈ ೨ ಬೆದೆಯಾವು" (ಹಲಾಯು. ೪೩-೦೦೩) ; "ಪ್ರಚಂಡಿಯೆನೆ ಬೆದೆಯಾಕಳೆಂದೆನಿಕ್ಕುಂ" (ಶಬಂಗಠಾ. ೩೬-೩). [ಸಂ. ಪ್ರಚಂಡೀ]

**ಪ್ರಚಂಡೆ** (ನಾ). ೧. ಬುದ್ಧಿವಂತೆ ; ನಿಪುಣೆ : ನೀನು ಬಿಡಪ್ಪ. ಕೆಲವು ವಿಷಯಗಳಲ್ಲಿ ಪ್ರಚಂಡೆ (ದೂಚಟ್ಟಿ. ೬). ೨. ಮೊಂಡುಸ್ವಭಾವದವಳು ; ಹಟಮಾರಿ : ಅವರೇನೆಂದೊಡಮೇಗೆಯ್ದೊಡಮುಸಿರದಿರಲಾರ್ಪಿರಪ್ಪೊಡೆ ಪೋಗಿಮಲ್ಲದಾಗಳ್ ಪೋಗಲ್ವೇಡೆಂದೊಡಾ ಪ್ರಚಂಡೆ ಇಂತೆಂದಳ್ (ಪಂಚತಂ. ೦೩೬-೬). [ಸಂ. ಪ್ರಚಂಡಾ]

**ಪ್ರಚಕ್ರ**(ನಾ). ೧. ಆಕ್ರಮಣಕ್ಕಾಗಿ ಸೈನ್ಯವು ಪಾಳೆಯದಿಂದ ಹೊರಡಂ

ವುದು : "ಪ್ರಚಳ್ರಂ, ಚಲತಾರ್ಥಕಂ—ದಂಡು ಠಾಣ್ಯದ ಸ್ಥಲ ಬಿಟ್ಟು ಹೊರಟದ್ದಕ್ಕೆ ಹೆಸರು" (ಸಿದ್ಧಾಂತಿ. ೨೬೭). ೨. ಚಲನೆಯಲ್ಲಿರುವ ಸೈನ್ಯ. [ಸಂ.]

**ಪ್ರಚಯ** (ನಾ). ೧. ಒಟ್ಟುಗೂಡಿಸುವಿಕೆ ; ಕಲೆಹಾಕುವಿಕೆ. ೨. ಗುಂಪು ; ಸಮೂಹ : ಸಕಲಬಂಧುಪ್ರತಪ್ರಚಯಮೆಂಬ ಪಿಕಾವಳಿಯೆಂಬ ಸದ್ವಚಃಶುಕಕುಳಮೆಂಬ ವೆಚ್ಚಿಸಿದ ಗಾಯಕ ಸತ್ಪ್ರತಿಹಾರವೃತ್ತ್ರಪಾಠಕ ತತಿಗಿತ್ತು . . . ಜೀವಿತಮಂ ಮದನಂ ಬಸಂತದೊಳ್ (ಶಾಂತಿಪು. ೬–೧೨೯) ; ಕೊಳಲ್ಯುಚಿತಮದಲ್ಗ [ಲ್ವು] ವಿನೇಯಪ್ರಚಯಕ್ಕುಪಭೋಗ ಭೋಗಪರಿಮಿತಗತಿಯೊಳ್ (ಧರ್ಮಪಡ. ೬–೧೭) ; ಉಮೇಶನ ಮುಂದೆ ಮಲುಹಣನೀಕ್ಷಿಸುತ ಕಾಂತಾಕಚಪ್ರಚಯ ಎಂದೆನುತಲಿ (ಬಸವು. ೪೨–೪೬). ೩. ವೃದ್ಧಿ; ಅಭ್ಯುದಯ; ಏಳಿಗೆ: ದಿನವೇಂದುಪ್ರಚಯಾದ್ರಿಯಿಂದೆ . . . ಮೇರೆಯಾಗೆ ತಳೆದಂ ಭೂಚಕ್ರಮಂ ಭೂಭುಜಂ (ಕಾದಂಪೂ. ೩೦೦). ೪. ವೇದಗಳ ಉಚ್ಚಾರಣೆಯಲ್ಲಿ ಒಂದು ಬಗೆಯ ಸ್ವರವಿಶೇಷ : ಆ ಬ್ರಾಹ್ಮಣಂ ಬ್ರಹ್ಮಸಭೆಯ ಮುಂದೆ ಉದಾತ್ತಾನುದಾತ್ತಸ್ವರಿತ ಪ್ರಚಯಮೆಂಬ ಚತುಸ್ಸ್ವರಂಗಳಿಂ . . . ನಾಲ್ಕು ವೇದಂಗಳಿಂ ಮಂತ್ರ ವನುಚ್ಚರಿಸೆ (ಪಶ್ನಶಾ. ೨–೦೩೦ ಪ); ಹರಿಯೆ ಪಂಚಾಶದ್ವರಣಸುಸ್ವರ ಉದಾತ್ತಾನುದಾತ್ತಪ್ರಚಯಸ್ವರಿತಸಂಧಿವಿಸರ್ಗಬಿಂದುಗಳೊಳಗೆ ತದ್ವಾಚ್ಯ (ಹಸಾರ. ೯–೦) ; ವೇದದಲ್ಲಿ ಹೇಳಲ್ಪಡುವ ಉದಾತ್ತಾನುದಾತ್ತಸ್ವರಿತ ಪ್ರಚಯಗಳೆಂಬ ಸ್ವರಗಳು . . . ಅರ್ಥಜ್ಞಾನಕ್ಕೆ ಉಪಯೋಗವಿಲ್ಲವೆಂದು ನಿರ್ಣಯಿಸಿದ್ದಾರೆ (ಹಿಂದಶಾ. ೦೯೯). ೫. [ತತ್ತ್ವಶಾ] ಪರಿಮಾಣ ವನ್ನುಂಟುಮಾಡುವ ಒಂದು ಸಂಯೋಗ ; ಶಿಥಿಲಸಂಯೋಗ : ಅನಿತ್ಯವಸ್ತುವಿನ ಪರಿಮಾಣವು ಸಂಖ್ಯೆಯಿಂದಲೂ ಪರಿಮಾಣದಿಂದಲೂ ಪ್ರಚಯದಿಂದಲೂ ಹುಟ್ಟುವುದು . . . ಶಿಥಿಲವಾದ ಸಂಯೋಗಕ್ಕೆ ಪ್ರಚಯ ಎಂದು ಹೆಸರು. ಉದಾ. ಹತ್ತಿ (ಭಾತತ್ತ್ವ. ೨೯೯). [ಸಂ.]

**ಪ್ರಚರ** (ನಾ). ೧. ಹೋಗುವಿಕೆ; ಗಮನ: ಕುಪ್ರತರ್ಕಿಗನಾವನಾದಡೆ ಭೂಪ್ರಚರನಾಗಿಯೆದ್ದು ತಿರಿತಿಂಬ ಪ್ರಸಿದ್ಧನಶುದ್ಧನಲ್ಲದೆ ಭಕ್ತನೆಂತಹನು (ಬಸವು. ೯೩–೬೨). ೨. ಜಡವಲ್ಲದುದು ; ಚೈತನ್ಯವುಳ್ಳ ಪ್ರಾಣಿ : ಹರಿಯ ನಾಭಿಸರೋಜದೊಳಗವತರಿಸಿಯಚರಪ್ರಚರಗಳ ವಿಸ್ತರಿಸಿ . . . ರಾಜಿಪ ವರಚತುರ್ಮುಖ ಪಾಲಿಪುದು (ಆಸಂಶಾ. ೦–೦–೩). ೩. ಆಚರಣೆ ; ನಡವಳಿಕೆ ; ಪದ್ಧತಿ. ೪. ದಾರಿ ; ಮಾರ್ಗ. [ಸಂ.]

**ಪ್ರಚರಿಸು** (ಕ್ರಿ). ಸಂಚರಿಸು ; ಪ್ರಯಾಣ ಮಾಡು: ಭರತಖಂಡವನು ಪ್ರಚರಿಸಿ ಕೀರ್ತಿ ಪಡೆದು (ಶಿವಾಕ್ಯ. ೬೮–೩). [ಪ್ರಚರ + —ಇಸು]

**ಪ್ರಚರ್ಯ** (ನಾ). ಹೋಗುವುದು; ಗಮನ: ಮಹಿತವೀರೋದಗ್ರಭಕ್ತಿ ಸ್ಪೃಹದಿನೊಮ್ಮೆ ಪ್ರಾಣಮಂ ಕುಡಬಹುದು ಜಂಗಮದೊಳು ನಿಜಪ್ರಾಣ ಪ್ರಚರ್ಯ[ಬಾಶಾಂ. ರಿಯ]ದಲಿ ಸಹಜವಾಗಲೆಹಂಗೆ ಸಂಧಿಸಬಹುದು (ಬಸವು. ೩೬–೫೭). [ಸಂ. ಪ್ರಚರ್ಯಾ]

**ಪ್ರಚಲ**, ಪ್ರಚಳ (ಗು). ೧. ಅಲುಗಾಡುವ ; ನಡುಗುವ. ೨. ಬಳಕೆಯ ; ರೂಢಿಯ. (ನಾ). ೩. ಚಂಚಲವಾದುದು ; ಸ್ಥಿರವಲ್ಲ ದುದು ; ಅಸ್ಥಿರ. **ಪ್ರಚಳ** : ೩. "ಲೋಲಂ, ಚಪಳಂ, ಚಟುಳಂ, ಪ್ರಚಳಂ, ತರಳಂ . . . ಸಂಚಳಂ—ಈ ೧೦ ಸಂಚಳಂ" (ಹಲಾಯು. ೧೧೩–೦೦). [ಸಂ.]

**ಪ್ರಚಲನ** (ನಾ). ೧. ಹೆಚ್ಚಾಗಿ ನಡುಗುವುದು, — ಕಂಪಿಸುವುದು. ೨. ಬಳಕೆ ; ಚಲಾವಣೆ. ೩. ಹಿಂಜರಿತ; ಪಲಾಯನ. ೪. [ವಿಜ್ಞಾನ] "(ಕಣಗಳ ಚಲನೆಯಿಂದಾಗುವ) ಶಾಖದ ಅಥವಾ ವಿದ್ಯುತ್ತಿನ ಪ್ರಸರಣ ; ಪ್ರಚಲನ" (Convection. ಇಂಕೋ). [ಸಂ.]

**ಪ್ರಚಲಾಕ**, ಪ್ರಚಳಾಕ (ನಾ). ನವಿಲುಗರಿ ; ಪಿಂಛ : "ಪ್ರಚಲಾಕಂ ಬರ್ಹಂ" (ವಸ್ತುಕೋ. ೯೨–೦೨). **ಪ್ರಚಳಾಕ** : "ಪ್ರಚಳಾಕಃ, ಶಿಖಂಡಃ —ಈ ೨ ಹೀಲಿ" (ಹಲಾಯು. ೧೦–೯೦); "ಪ್ರಚಳಾಕಂ ಶಿಖಂಡಮೆನೆ ಹೀಲಿ" (ಮಂಗರಾ. ೫೦–೩). [ಸಂ.]

**ಪ್ರಚಲಾಕಿ** (ನಾ). ಪಿಂಛವನ್ನುಳ್ಳದು ; ನವಿಲು : "ಪ್ರಚಲಾಕಿ ಮಯೂರಂ" (ವಸ್ತುಕೋ. ೯೨–೧೨) ; "ಕೇಕೀ, ಶಿಖೀ, ಶಿಖಂಡಿ:, ಪ್ರಚಲಾಕೀ . . . ಶ್ಯಾಮಕಂಠ(ಃ)—ಈ ೧೦ ನವಿಲ್" (ಹಲಾಯು. ೧೦–೯೯). [ಸಂ. ಪ್ರಚಲಾಕಿನ್]

**ಪ್ರಚಲಾಪ್ರಚಲೆ**, ಪ್ರಚಳಾಪ್ರಚಳೆ (ನಾ). [ಜೈನ] ನಿದ್ರೆಯ ಒಂದು ಭೇದ; ಪದೇಪದೇ ತೂಕಡಿಸುವುದು, ಜೊಲ್ಲು ಸುರಿಸುವುದು ಮೊದಲಾದ ಲಕ್ಷಣಗಳುಳ್ಳ ನಿದ್ರಾಭೇದ : ಪೂರ್ವೋಕ್ತ ವಿಧಾನ ದಿನಂತಮುಹೂರ್ತದಿಂ ನಿದ್ರಾನಿದ್ರಾಪ್ರಚಲಾಪ್ರಚಲಾಸ್ತ್ಯಾನಗೃದ್ಧಿ ನರಕಗತಿ . . . ಸೂಕ್ಷ್ಮಂಗಳೆಂಬ ಪದಿನಾಱುಂ ಕರ್ಮಪ್ರಕೃತಿಗಳಂ ನಿರವ ಶೇಷಂ ಕಿಡಿಸಿ (ಆದಿಪು. ೦೦–೦೯ ವ); ಕೇವಲದರ್ಶನಾವರಣೀಯಂ ನಿದ್ರಾ ನಿದ್ರಾ ನಿದ್ರಾಪ್ರಚಲಾಪ್ರಚಲಾಪ್ರಚಲಾಸ್ತ್ಯಾನಗೃದ್ಧಿಭೇದದಿಂ ನವವಿಧ ಭೇದಮಪ್ಪ ದರ್ಶನಾವರಣೀಯಮುಮಂ (ಸುಕುಪಡಾ. ೩–೩೯ ವ). **ಪ್ರಚಳಾಪ್ರಚಳೆ** : ಅಂತರ್ಮುಹೂರ್ತದಿಂ ನಿದ್ರಾನಿದ್ರಾಪ್ರಚಳಾ ಪ್ರಚಳಾಸ್ತ್ಯಾನಗೃದ್ಧಿನರಕಗತಿ . . . ಸೂಕ್ಷ್ಮಂ[ಗಳೆಂಬ]ಷೋಡಶಕರ್ಮ ಪ್ರಕೃತಿಗೆ ವಿಳಯಂ ಮಾಡಿ (ಶಾಂತಿಪು. ೦೦–೦೦೦ ವ). [ಸಂ. ಪ್ರಚಲಾಪ್ರಚಲಾ]

**ಪ್ರಚಲಾಯಿತ** (ನಾ). ತೂಕಡಿಸುವವನು: "ಘೂರ್ಣಿತಃ, ಪ್ರಚಲಾ ಯಿತಃ — ೨ ತೂಕಡಿಕೆಯಿಂದ ತಲೆತಿರುಗಿ ಬೀಳುವವನ ಹೆಸರು" (ನಿಘಂಟು. ೩೩೦). [ಸಂ.]

**ಪ್ರಚಲಿತ**, ಪ್ರಚಳಿತ (ಗು). ೧. ಅಲುಗಾಡಿದ; ಕ್ಷೋಭೆಗೊಂಡ. ೨. ಚಲಿಸುವ. ೩. ಅಲೆದಾಡುತ್ತಿರುವ. ೪. ಮುಂದುವರಿದ; ಮುನ್ನಡೆದ. ೫. ಇಂದಿನ; ಪ್ರಸಕ್ತ; ಸದ್ಯದ: ಪ್ರಸಿದ್ಧ ವಿಜ್ಞಾನಿಗಳ ಅಭಿಪ್ರಾಯಗಳನ್ನು ಉಲ್ಲೇಖಿಸುವುದರ ಮೂಲಕ ಪ್ರಚಲಿತ ಸಮಸ್ಯೆ ಗಳಿಗೆ ಪರಿಹಾರ ಸೂಚಿಸಿದೆ (ಶ್ರಾವಿಬಿ. v. ಮುನ್ನುಡಿ). ೬. ಬಳಕೆಯಲ್ಲಿ ರುವ. (ನಾ). ೭. ಆಚರಣೆಯಲ್ಲಿರುವುದು ; ಚಾಲ್ತಿ ; ಬಳಕೆ : ಎಲ್ಲರಿಗೂ ತಿಳಿದಿರುವಂತೆ ಮೂಷಕನಿಯಂತ್ರಣಕ್ಕೆ ಪ್ರಚಲಿತವಾದ ವಿಧಾನ ಮೂರು (ಜೀಕಪ್ಪ. ೯೭); ತಮ್ಮ ಭಾಗದಲ್ಲಿ ಪ್ರಚಲಿತವಿಲ್ಲದ ಹೊಸ ಅಡುಗೆ ಗಳನ್ನು ಮಾಡಲು ಪ್ರಯತ್ನಿಸುವ ಗೃಹಿಣಿಯರು ಕಡಿಮೆ (ಆಮುಹಾ. ೯೨). **ಪ್ರಚಳಿತ** : ೪. ಮತ್ತಂ ಸಸಂಭ್ರಮಪ್ರಚಳಿತ ಸಮದ ಗಜಘಟಾ ಘಂಟಾರವಂಗಳಿಂದು . . . ಅಗುರ್ವಾಗೆ (ಶಂಶಚ. ೯–೦೦೯ವ). [ಸಂ.]

**ಪ್ರಚಲೆ** (ನಾ). [ಜೈನ] ಒಂಬತ್ತು ವಿಧವಾದ ದರ್ಶನಾವರಣೀಯ ಕರ್ಮಗಳಲ್ಲಿ ಒಂದು ; ನಿದ್ರೆ, ನಿದ್ರಾನಿದ್ರೆ, ಪ್ರಚಲೆ, ಪ್ರಚಲಾ ಪ್ರಚಲೆ, ಸ್ತ್ಯಾನಗೃದ್ಧಿ ಎಂಬ ಐದು ಬಗೆಯ ನಿದ್ರೆಗಳಲ್ಲಿ ಒಂದು; ಶೋಕ, ಶ್ರಮ, ಮದ ಮೊದಲಾದ ಕಾರಣಗಳಿಂದ ಉಂಟಾಗಿ ಕುಳಿತುಕೊಂಡೇ ಕಣ್ಣು ಮತ್ತು ದೇಹಗಳಲ್ಲಿ ವಿಕ್ರಿಯೆಯನ್ನು ಉಂಟುಮಾಡುವ ಹಾಗೂ ದೇಹವನ್ನು ತೂಗಾಡುವಂತೆ ಮಾಡುವ ನಿದ್ರೆ : ಚಕ್ಷುರ್ದರ್ಶನಾವರಣೀಯಮಚಕ್ಷುರ್ದರ್ಶನಾವರಣೀಯಮವಧಿ ದರ್ಶನಾವರಣೀಯಂ ಕೇವಲದರ್ಶನಾವರಣೀಯಂ ನಿದ್ರಾನಿದ್ರಾನಿದ್ರಾ ಪ್ರಚಲಾಪ್ರಚಲಾಪ್ರಚಲಾಸ್ತ್ಯಾನಗೃದ್ಧಿಭೇದದಿಂ ನವವಿಧಭೇದಮಪ್ಪ ದರ್ಶನಾವರಣೀಯಮುಮಂ (ಸುಕುಪಡಾ. ೩–೩೯ ವ) ; ಅಳಿಯಲುಳಿದ ಕರ್ಮ ಜರಿವುತಿರಲು ಬಾಣ ಕೊಳಲು ನಿದ್ರಾಪ್ರಚಲೆಗಳು (ಧರ್ಮಪ. ೧೨–೫೭). [ಸಂ. ಪ್ರಚಲ]

**ಪ್ರಚಳ** 'ಪ್ರಚಲ' ನೋ.

**ಪ್ರಚಳಾಕ** 'ಪ್ರಚಲಾಕ' ನೋ.

**ಪ್ರಚಳಾಪ್ರಚಳೆ** 'ಪ್ರಚಲಾಪ್ರಚಲೆ' ನೋ.

**ಪ್ರಚಳಿತ** 'ಪ್ರಚಲಿತ' ನೋ.

**ಪ್ರಚಾರ** (ನಾ). ೧. ಎಲ್ಲ ಕಡೆಗಳಲ್ಲೂ ಇರುವಂಥದು ; ಬಳಕೆಯಲ್ಲಿರುವಂಥದು: ಯೋಗಂಗಳು ಜಗತ್ತಿನೊಳಗಣಿತಗಳುಂಟದರಿನೊಳ್ಳಿವಗೆಯ ಯೋಗಂಗಳೆ ಪ್ರಚಾರವು ಮುಖ್ಯಮೆನಿಸುವುವು (ಗಗಣ. ೦೦-೦೪). ೨. ಸಾರ್ವಜನಿಕರ ಗಮನವನ್ನು ಸೆಳೆಯಲು ಮಾಡುವ ಬಹಿರಂಗ ಪ್ರಕಟಣೆ : ಹೆಚ್ಚು ಪ್ರಚಾರವಿಲ್ಲದುದರಿಂದ ಅಂದಿನ ಕಾರ್ಯಕ್ರಮಕ್ಕೆ ತುಂಬಾ ಜನ ಬಂದಿರಲಿಲ್ಲ (ರೂ). ೩. ಜನಬಳಕೆ ; ವ್ಯವಹಾರ ; ಚಾಲ್ತಿ : ಯಹೂದ್ಯರು ಮುಸಲ್ಮಾನರು ಮತ್ತು ಕ್ರೈಸ್ತರು ಇವರ ವಿನಹ ಉಳಿದ ಎಲ್ಲಾ ಜನಾಂಗದವರಲ್ಲೂ ಈ ಸಿದ್ಧಾಂತ ಪ್ರಚಾರದಲ್ಲಿತ್ತು (ಜೀವಾತ್ಮ. ೦೪೪) ; ಅಕ್ಷರವೆಂದರೆ ವರ್ಣ ಎಂಬ ಅರ್ಥವೇ ಇಂದಿಗೂ ಪ್ರಚಾರದಲ್ಲಿ ನಿಂತಿತು (ಧ್ವನಿ. ೯೩). ೪. ಚಲಾವಣೆ ; ಬಳಕೆ : ಆಣೆ ಕಾಸುಗಳ ಪ್ರಚಾರ ಈಗ ಇಲ್ಲ (ರೂ) ; ದಕ್ಷಿಣಭಾರತದಲ್ಲಿ ರಾಗಿ ಹೆಚ್ಚು ಪ್ರಚಾರದಲ್ಲಿದೆ (ರೂ). ೫. ಪದ್ಧತಿ ; ರೂಢಿ ; ಸಂಪ್ರದಾಯ. ೬. ನಡತೆ ; ವರ್ತನೆ ; ಚರ್ಯೆ. ೭. ನಡೆಯುವುದು ; ತಿರುಗಾಟ ; ಸಂಚಾರ: ವಿವಾನಧ್ವಜವನಳವಡಿಸಿ ವಿದ್ಯುತ್ಪ್ರಚಾರವಂ ಗೆಲ್ವ ಹಯಮಂ ಪೂಡಿ . . . ಬಂದನಾಹವಕೆ ನಲಿದು (ಕೈಪಿಡಿ. ೭-೩೭) ; ಮುಳ್ಗಳಂಘ್ರಿಯಂ ಬಾರಿಪುದೆಂದು ಬಿಟ್ಟುದೆ ಮದದ್ವಿರದಂ ಗಹನಪ್ರಚಾರಮಂ (ರಾಜಶೇ. ೦೩-೦೯).

**ಪ್ರಚಾರ ಮಾಡು**=ಎಲ್ಲರಿಗೂ ತಿಳಿಯಪಡಿಸು ; ಪ್ರಸಿದ್ಧಪಡಿಸು : ಬುದ್ಧನ ತತ್ತ್ವಗಳನ್ನು ಪ್ರಚಾರ ಮಾಡಲು ಆತನ ಅನುಯಾಯಿಗಳು ದೇಶ ವಿದೇಶಗಳಲ್ಲೆಲ್ಲಾ ಸಂಚಾರ ಮಾಡಿದರು (ರೂ). [ಸಂ.]

**ಪ್ರಚಾರಕ** (ನಾ). ಎಲ್ಲರಿಗೂ ತಿಳಿಯುವಂತೆ ಮಾಡುವವನು ; ಪ್ರಚಾರ ಮಾಡುವವನು : ಜೈಮಿನೀಯಮೀಮಾಂಸಾಶಾಸ್ತ್ರಕ್ಕೆ ಪ್ರಮುಖ ಪ್ರಚಾರಕನು ಕುಮಾರಿಲಭಟ್ಟ (ಭಾರದ. ೦೨೪); ಫ್ರಾನ್ಸಿಸ್ ಜೇವಿಯರ್ ಎಂಬಾತ ಭಾರತಕ್ಕೆ ಬಂದ ಜೆಸ್ಯೂಟ್ ಪ್ರಚಾರಕರಲ್ಲಿ ಮೊದಲನೆಯವ (ಕವಿಕೋ. V, ೬೦೩). [ಸಂ.]

**ಪ್ರಚಾರಕಾರ್ಯ** (ನಾ). ಯಾವುದಾದರೊಂದು ವಿಷಯವನ್ನು ಸಾರ್ವಜನಿಕವಾಗಿ ತಿಳಿಯಂಪಡಿಸುವುದು : ಅವರು ಘೋಷಣೆಗಳನ್ನು ಪ್ರಕಟಿಸಿದರು ; ಗಿರಣಿಗಳಲ್ಲಿ ಪ್ರಚಾರಕಾರ್ಯ ಕೈಗೊಂಡರು (ಪುಸರು. ೨೪೦); ದಕ್ಷಿಣಭಾರತದಲ್ಲಿ ಕ್ರೈಸ್ತಧರ್ಮದ ಪ್ರಚಾರಕಾರ್ಯ ಮೂರೂ ಸಮುದ್ರತೀರಗಳ ರೇವುಗಳಲ್ಲಿ ಆರಂಭವಾಯಿತು (ಕವಿಕೋ. V, ೬೦೪). [ಸಂ.]

**ಪ್ರಚಾರಗೊಳಿಸು** (ಕ್ರಿ). ಎಲ್ಲರಿಗೂ ತಿಳಿಯುವಂತೆ ಮಾಡು ; ಪ್ರಸಿದ್ಧಪಡಿಸು: ಭಿಕ್ಕುಗಳು . . . ಬುದ್ಧನ ತರುವಾಯವೂ ಅವನ ಉಪದೇಶವನ್ನು ಪ್ರಚಾರಗೊಳಿಸುತ್ತ ನಡೆದರು (ಬಾಂಪ್ರ. I, ೫೦೬).
[ ಪ್ರಚಾರ + ಕೊಳ್$_1$ + — ಇಸು$_3$ ]

**ಪ್ರಚಾರತೆ** (ನಾ). ಹರಡುವಿಕೆ ; ವಿಸ್ತರಿಸುವಿಕೆ : ಆಸ್ಯಮಿಂಬಿಲ್ಲ ಭಾಸುರನೇತ್ರದ್ವಿತಯಪ್ರಚಾರತೆಗೆ ಜನ್ನಿಂಬಿಲ್ಲ ಧಮ್ಮಿಲ್ಲಬಂಧುರಸೀಮಾವಳಯಕ್ಕೆ (ಗಿಂಳ. ೪-೩೩). [ ಸಂ. ಪ್ರಚಾರತಾ ]

**ಪ್ರಚಾರಮಾಧ್ಯಮ** (ನಾ). ದೇಶದ ರಾಜಕೀಯ, ಕಲೆ, ಕ್ರೀಡೆ ಮುಂತಾದುವುಗಳ ಬಗ್ಗೆ ಸಾರ್ವಜನಿಕರಲ್ಲಿ ಅರಿವನ್ನು ಮೂಡಿಸಲಂ ಬಳಸುವ ರೇಡಿಯೋ, ದೂರದರ್ಶನ, ಚಲನಚಿತ್ರ ಮುಂತಾದ ಸಾಧನ : ಇಪ್ಪತ್ತನೆಯ ಶತಮಾನದ ಅಗಾಧವೈಜ್ಞಾನಿಕ ತಾಂತ್ರಿಕ ಬೆಳವಣಿಗೆಯ ಫಲವಾಗಿ ಪ್ರಚಾರಮಾಧ್ಯಮಗಳು ವೈವಿಧ್ಯಮಯವೂ . . . ವಿಶ್ವರೂಪಿಗಳೂ ಆಗಿವೆ (ಕವಿಕೋ. XI, ೬೦೪). [ಸಂ.]

**ಪ್ರಚಾರಸಾಧನ** (ನಾ). = ಪ್ರಚಾರಮಾಧ್ಯಮ : ಅತ್ಯಂತಸಂಕೀರ್ಣವಾದ, ಅಗಾಧಪ್ರಚಾರಸಾಧನಗಳಿಂದ ಕೂಡಿದ ಇಂದಿನ ಸಮಾಜದಲ್ಲಿ ಈ ವ್ಯತ್ಯಾಸವನ್ನು ಗುರುತಿಸುವುದು ಕಷ್ಟವಾಗುತ್ತದೆ (ಕವಿಕೋ. XI, ೬೦೯). [ಸಂ.]

**ಪ್ರಚಿಂತೆ** (ನಾ). ಆಲೋಚನೆ ; ವಿಮರ್ಶೆ : ಆಚಂದ್ರಾರ್ಕ್ಕಸ್ಥಾಯಿಯಾಗಿ × × × ಸಲ್ವನ್ನಿರೆ ಪ್ರಚಿಂತೆಯಂ ಮಾಡಿ ಪರಿರಕ್ಷಿಸಲುವೇಳ್ಕುಂ (ಶಾಇ. XX, ೦೦೦-೪೬ ; 1140). [ಸಂ. ಪ್ರಚಿಂತಾ]

**ಪ್ರಚುರ** (ಗು). ೧. ಹೆಚ್ಚಾದ ; ಅತಿಶಯವಾದ ; ಮಹತ್ತರವಾದ : ಪ್ರಚುರಕಲಾನ್ವಿತರ್ . . . ದೋಷಾಪಚಯಪ್ರಕಾಶರೆನೆ ಬಾಲಚಂದ್ರದೇವಪ್ರಭಾವವೇನಚ್ಚರಿಯೋ (ಪಂಪಭಾ. ೦-೨೦) ; ಸ್ತುತಿಗೆಯ್ವಂ . . . ಚತುರೋಕ್ತಿಪ್ರಚುರಾರ್ಥಕಾವ್ಯಜನಿತೋರ್ವೀಹರ್ಷನಂ ಹರ್ಷನಂ (ಜಗ. ೦-೮). ೨. ಹೆಸರುವಾಸಿಯಾದ ; ಪ್ರಸಿದ್ಧವಾದ : ಎಸೆಗುಂ ವೃಂದಾವನಂ ಕೀರಕೇಕಿಮರಾಳವ್ರಜದಾ ವನಂ ಪ್ರಚುರಕಾಳಿಂದೀವನಂ ಪಾವನಂ (ಜಗಪು. ೩-೬೩). (ನಾ). ೩. ಹೆಚ್ಚಳ ; ಆಧಿಕ್ಯ ; ಹೇರಳ : "ಪ್ರಾಜ್ಯಂ, ಭೂರಿ, ಪ್ರಭೂತಂ, ಪ್ರಚುರಂ . . . ಅದಭ್ರಂ — ಈ ೧೮ ಮೊಕ್ಕಳಂ" (ಹಲಾಯು. ೦೦೬-೦೩). ೪. ಗಾಢವಾದುದು ; ತೀವ್ರವಾದುದು : ಕವಿಯಲ್ಲಿ ಪ್ರಚುರವಾಗಿರುವುದು ಮುಕ್ತಿಯ ಆಸೆ (ಕಾವ್ಯಕು. ೦). ೫. ಪ್ರಚಾರದಲ್ಲಿರುವುದು ; ವ್ಯವಹಾರದಲ್ಲಿರುವುದು ; ಚಾಲ್ತಿಯಲ್ಲಿರುವುದು : ಸಿಲ್ವಿಯಸ್–ಫೀಬಿಯರ ಪ್ರಣಯ ಇಂಗ್ಲೆಂಡಿನಲ್ಲಿ ಆಗ ಪ್ರಚುರವಾಗಿದ್ದ ಪಾಸ್ಟೊರಲ್ ಕವನಗಳಲ್ಲಿ ಕಾಣುವಂಥ ಪ್ರೇಮ (ಶೇಕ್ಸ್ಪಿ. ೩೩೦) ; ಭಾರತದಲ್ಲಿ ಪ್ರಚುರವಾದ ಜೈನ ಮತ್ತು ಬೌದ್ಧಧರ್ಮಗಳೆರಡು ಈ ಲೋಕಸೌಂದರ್ಯಕ್ಕಾಗಲೀ ಆ ಕೇವಲ ಪರಮತತ್ತ್ವ ಸೌಂದರ್ಯರೂಪ ಎಂಬ ಭಾವನೆಗಾಗಲೀ ಗಮನಕೊಟ್ಟಂತೆ ತೋರುವುದಿಲ್ಲ (ಸೌಂದಸ. ೦೦೬). ೬. ಕಳ್ಳ ; ಚೋರ. [ಸಂ. ]

**ಪ್ರಚುರಂ** (ಅ). ಹೆಚ್ಚಾಗಿ ; ಬಹಳ ಮಟ್ಟಿಗೆ : ಪ್ರಚುರಂ ಪತ್ತೊಳಗಾಗೆ ರಂಧ್ರವನೆ ಕೈಗೊಂಡೆಂಟನೀಗೇಟಿ ಬಿಟ್ಟು . . . ಬಂದಟಿಗೊಳ್ ನಿಲ್ಲದಾವಚಬ್ರಹ್ಮದೆ ಮುಕ್ತಿಯೇ (ಶೋಪಂಶ. ೦೦೦) ; ಪ್ರವಿಲೋಮಕ್ರಿಯೆಗದು ವೆಂದವೆಂದು ಬಂದಿರ್ಕುಮುದುಗವುುವುಗಂ ಪ್ರಚುರಂ (ಕಮುದ. ೨೪೪).
[< ಪ್ರಚುರ ]

**ಪ್ರಚುರಗೊಳಿಸು** (ಕ್ರಿ). ಪ್ರಸಾರ ಮಾಡು ; ಬಿತ್ತರಿಸು : ಆಕಾಶವಾಣಿಯವರು ಈ ಕೃತಿಯನ್ನು . . . ತಜ್ಞಕಲಾವಿದರ ಮೂಲಕ ಬಾನುಲಿಯಲ್ಲಿ ಪ್ರಚುರಗೊಳಿಸಿದ್ದಾರೆ (ಗೋಕುಪಿ. X, ೩೪೬೪).
[ ಪ್ರಚುರ + ಕೊಳು (< ಕೊಳ್$_1$) + — ಇಸು$_3$ ]

**ಪ್ರಚುರಗೊಳ್ಳು** (ಕ್ರಿ). ಹರಡು ; ವ್ಯಾಪಿಸು ; ಪ್ರಚಾರವಾಗು : ಭಾರತೀಯ ವೇದಾಂತ ಮತ್ತು ಅದರ ಪರಿಣಾಮವಾಗಿ ಪ್ರಚುರಗೊಂಡ ಧರ್ಮಗಳೆಲ್ಲವೂ . . . ಒಂದು ಆಂತರಿಕಸೂತ್ರವನ್ನು ರಚಿಸಿವೆ (ಸೌಂದಸ. ೦೦೬). [ ಪ್ರಚುರ + ಕೊಳ್ಳು$_1$ (< ಕೊಳ್$_1$) ]

**ಪ್ರಚುರತೆ** (ನಾ). ಹೆಚ್ಚಳ ; ಆಧಿಕ್ಯ ; ಅತಿಶಯ : ವಾಚ್ಯವಾಚಕವಿಶೇಷ್ಯವಿಶೇಷಣಲಕ್ಷ್ಯಲಕ್ಷಣಪ್ರಚುರತೆ ಕಾಳಿದಾಸನುಮನೇಳಿಸಿಕೀ ಕೃತಿ ನಾಗವರ್ಮನಾ (ಛಂದೋಂಬು. ೦-೭) ; ಉಪವಾಸಪ್ರಚುರತೆಯಿಂ ವಪು ಗಿಡಿಗಿಡಿಜಂತ್ರಮಾದುದು (ಸುಕುಮಾ. ೪-೪) ; ಮತ್ತಮವಟಿ ವಿಪರ್ಯಯವೃತ್ತಿಯೆ ಬವರಿಸುಗುಮುದೀಚ್ಯಮಾರ್ಗದೊಳ್ ಪ್ರಚುರತೆಯಿಂ (ಕಾವ್ಯಾವ. ೩೨೦). [ ಸಂ. ಪ್ರಚುರತಾ ]

**ಪ್ರಚುರದುಗ್ಧೆ** (ನಾ). ಹೆಚ್ಚಾಗಿ ಹಾಲು ಕರೆಯುವ ಹಸು : "ದ್ರೋಣದುಘಾ, ಪ್ರಚುರದುಗ್ಧಾ — ಈ ೨ ಕೊಡವಾಲ್ ಕಱಿವಾವು" (ಹಲಾಯು. ೪೩-೦೦೬). [ ಸಂ. ಪ್ರಚುರದುಗ್ಧಾ ]

**ಪ್ರಚುರಪಡಿಸು** (ಕ್ರಿ). ಪ್ರಚಾರ ಮಾಡು ; ಹರಡುವಂತೆ ಮಾಡು ; ಪ್ರಸಿದ್ಧಪಡಿಸು : ಅಕೆಡೆಮಿಷಿಯನ್ ಷ್ಮಿಡ್ಟ್ ಎಂಬುವನು ಭೂಮಿ ಮತ್ತಿತರ ಗ್ರಹಗಳ ಮೂಲದ ವಿಷಯವಾಗಿ ಒಂದು ಸಿದ್ಧಾಂತವನ್ನು ಪ್ರಚುರಪಡಿಸಲು ಆರಂಭಿಸಿದನು (ಭೂಹುಟ್ಟು. ೩೨); ಒಳ್ಳೆಯ ರಸರೂಪಕಗಳನ್ನು ಬರೆದು ಬರೆಸಿ ಆಡಿ ಆಡಿಸಿ ಪ್ರಚುರಪಡಿಸಬೇಕು (ನಾಟಕಲ. ೭೮). [ ಪ್ರಚುರ+ಪಡಿಸು]

**ಪ್ರಚೇತ** (ನಾ). ಎಂಟುಜನ ದಿಕ್ಪಾಲಕರಲ್ಲಿ ಒಬ್ಬ; ಪಶ್ಚಿಮದಿಕ್ಕಿನ ಅಧಿಪತಿ ; ವರುಣ : "ವರುಣಃ, ಯಾದಸಾಂನಾಥಃ, ಪಾಶಪಾಣಿಃ, ಪ್ರಚೇ(ತಸ್)ತಾಃ, ಜಲಾಧಿದೈವತಂ, ಪ್ರತ್ಯಗಾಶಾಪತಿಃ — ಈ ೬ (ಪ್ರಾಹುರ್ಬುಧಾ) ವರುಣನ ಪೆಸರ್" (ಕಲಾಯು. ೦೩-೭೪) ; ತನ್ನೊಳ್ ಸಮುದ್ರಾಧಿಪತಿತ್ವಂ ಸಂದ ಪಾಶಾನ್ವಿತನುರುಮಕರಾರೂಢನೀತಂ ಪ್ರಚೇತಂ (ಜಗಂ. ೦೩-೬೦). [ ಸಂ. ಪ್ರಚೇತಸ್ ]

**ಪ್ರಚೇತಸ** (ನಾ). ೧. = ಪ್ರಚೇತ : "ವರುಣಂ ಪಶ್ಚಿಮದಿಕ್ಪತಿ . . . [ವಾರಿರಾಶಿ]ನಿಳಯಂ ಪ್ರಚೇತಸಂ ಪೆಸರಿಂದಂ" (ವಸುಕೋ. ೬-೪೩). ೨. ವಾಲ್ಮೀಕಿಯ ತಂದೆ : ವೇದಗಳು . . . ಪ್ರಚೇತಸನ ಮಗನಾದ ವಾಲ್ಮೀಕಿಯಿಂದ ರಾಮಾಯಣದ ರೂಪದಲ್ಲಿ . . . ಅವತರಿಸಿದವು (ಭಾರತ. ೬೩). [ಸಂ. ಪ್ರಚೇತಸ್]

**ಪ್ರಚೋದಕ** (ಗು). ೧. ಪ್ರೇರಿಸುವ ; ಪ್ರೇರಣೆ ಮಾಡುವ : ಇದಕ್ಕೆ ಪ್ರಚೋದಕಶಕ್ತಿ ಆ ಹುಟ್ಟುಗುಣದಲ್ಲೇ ಇದೆ (ಶಿಕ್ಷಣ. ೪೨೩). (ನಾ). ೨. ಪ್ರೇರಿಸುವುದು ; ಪ್ರೇರಣೆ ಮಾಡುವುದು : ನಮ್ಮ ಮುನ್ನಡೆಗೆ ಜೀವನದ ಚೇತೋರಶ್ಮಿಗಳು ಪ್ರಚೋದಕಗಳಾದರೆ ತತ್ತ್ವದೃಷ್ಟಿ ಮಾರ್ಗದರ್ಶನ ನೀಡುತ್ತದೆ (ಶಿಕ್ಷಣ. ೬೬೬). [ಸಂ.]

**ಪ್ರಚೋದನ** (ನಾ). ೧. ಪ್ರೇರಿಸುವುದು ; ಪ್ರೇರಣೆ : 'ಪ್ರಚೋದನಗೊಳಿಸು' ಪರಾ. ೨. ಹೇಳುವುದು. ೩. ಕಳುಹಿಸುವುದು. ೪. ವಿಧಿಸುವುದು ; ನಿಯಮಿಸುವುದು. [ಸಂ.]

**ಪ್ರಚೋದನಗೊಳಿಸು** (ಕ್ರಿ). ಪ್ರೇರಿಸು ; ಉತ್ತೇಜನಗೊಳಿಸು ; ಹುರಿದುಂಬಿಸು : ನಮ್ಮ ಬುದ್ಧಿಯನ್ನು ಪ್ರಚೋದನಗೊಳಿಸು — ಎಂಬುದೇ ಇವರ ಬೇಡಿಕೆ. ಪ್ರಾರ್ಥನೆ (ಭಾರತ. ೪೬೦).

[ಪ್ರಚೋದನ + ಕೊಳು (< ಕೊಳ್$_1$) + — ಇಸು$_3$]

**ಪ್ರಚೋದನಿ** (ನಾ). ಒಂದು ಬಗೆಯ ಗಿಡ ; ಹೆಗ್ಗುಳ್ಳ : "ನಿದಿಗ್ಧಿಕಾ, ಸ್ಪೃಶೀ, ವ್ಯಾಘ್ರೀ, ಬೃಹತೀ, ಕಂಟಕಾರಿಕಾ, ಪ್ರಚೋದನೀ . . . ರಾಷ್ಟ್ರಿಕಾ — ೧೦ ಹೆಗ್ಗುಳ್ಳದ ಹೆಸರು" (ಸಿದ್ಧಾಂತಿ. ೦೬೩).

[ಸಂ. ಪ್ರಚೋದನೀ]

**ಪ್ರಚೋದನೆ** (ನಾ). = ಪ್ರಚೋದನ ೧ : ಪ್ರತಿಯೊಂದು ಮನೋವ್ಯಾಪಾರಕ್ಕೂ ಒಂದೊಂದು ಪ್ರಚೋದನೆ ಅಗತ್ಯ (ಶಿಕ್ಷಣ. ೪೦೪) ; 'ಬೇಕು' ಎನ್ನುವುದು ಪ್ರಯತ್ನಕ್ಕೆ ಪ್ರಚೋದನೆ (ಶಿಕಂಬಾ. ೩೩).

[ ಸಂ. ಪ್ರಚೋದನ ]

**ಪ್ರಚೋದಿತ** (ಗು). ೧. ಪ್ರೇರಣೆ ಹೊಂದಿದ. (ನಾ). ೨. ಪ್ರೇರಣೆ ಹೊಂದಿದುದು : ಕಲೋಪಾಸನೆ ಪ್ರಚೋದಿತವಾಗಿ ಕಲಾವಿದರೂ ಆಗಬಹುದು (ಶಿಕ್ಷಣ. ೨೩೭). ೩. ಮುಂದಕ್ಕೆ ಅಟ್ಟಿದುದು,— ಹೊಡೆದುದು. ೪. ಚಿತಾವಣೆ ಹೊಂದಿದುದು. [ ಸಂ. ]

**ಪ್ರಚೋದಿಸು** (ಕ್ರಿ). ೧. ಪ್ರೇರಣೆ ಮಾಡು ; ಪ್ರೇರಿಸು : ಗಾಯತ್ರಿಯನೆ ಪರಮಮಂತ್ರವೆಂದಾರ್ಯರ್ ಧೀಯಂ ಪ್ರಚೋದಿಸೆಂದನುದಿನದಿ ಬೇಡಿದರು (ಮಂಕುತಿ. ೩೪೬) ; ಎಲ್ಲ ತರಂಗಮಾನಗಳು . . . ಸಮನಾಗಿ ಪ್ರಚೋದಿಸುವುದಿಲ್ಲ (ಕೀಟಶಿ. ೩೮) ; ಸೌಂದರ್ಯ ಪ್ರಚೋದಿಸುವುದು ಒಂದು ನಿರ್ದಿಷ್ಟವಾದ ಭಾವವನ್ನು (ಸೌಂದಕ. ೭೪). ೨. ಹೆಚ್ಚಿಸು ; ಅಭಿವೃದ್ಧಿಗೊಳಿಸು ; ಉದ್ಬೋಧಿಸು : ಅವರ ವಿವೇಚನೆಯನ್ನು ಪ್ರಚೋದಿಸಿ ಉಚಿತವೆನಿಸುವ ಮಾರ್ಗ ಅರಿವಾಗುವಂತೆ ಮಾಡಬೇಕು (ಶಿಕ್ಷಣ. ೦೦೪). [ ಪ್ರಚೋದನ + — ಇಸು$_3$ ]

**ಪ್ರಚ್ಛದ** (ನಾ). ೧. ಹೊದಿಕೆ; ಮೇಲುಹೊದಿಕೆ. ೨. ಹಾಸುಗೆ ಮೊದಲಾದುವುಗಳ ಮೇಲೆ ಹಾಸುವ ಬಟ್ಟೆ; ಹಾಸುಗೆಯ ಹೊದಿಕೆ : "ಪ್ರಚ್ಛದಃ, ಉತ್ತರಚ್ಛದಃ — ಈ ೨ ಹಚ್ಚಡಿಗೆ" (ಕಲಾಯು. ೩೦-೦೫೩); ಶಯ್ಯಾಶ್ರಿತಸಿತಮೃದುಲಪ್ರಚ್ಛದಚ್ಛನ್ನಶಯ್ಯಾತಲದೊಳ್ . . . ಶೂದ್ರಕನೃಪತಿ ಸುಖಾಸೀನನಾಗಿರ್ದನಾಗಳ್ (ಕಾದಂಪೂ. ೪೦) ; ಹಂಸಾಂಸೋಪಧಾನಪ್ರಧಾನಮೃದುಪ್ರಚ್ಛದತಲ್ಪದೊಳ್ ನೆಲಸಿದಂ ಸಾಹಿತ್ಯವಿದ್ಯಾಧರಂ (ಮಲ್ಲಿಪು. ೯-೦೩೪). [ ಸಂ. ]

**ಪ್ರಚ್ಛದಪಟ** (ನಾ). ೧. = ಪ್ರಚ್ಛದ ೧. ೨. = ಪ್ರಚ್ಛದ ೨ : "ನಿಚೋಳಃ, ಪ್ರಚ್ಛದಪಟಃ — ೨ ಮೇಲುಹಾಸಿಗೆ. ಹಾಸಿಗೆ ಮೇಲೆ ಹಾಸುವ ನೌರುಬಟ್ಟೆ" (ಸಿದ್ಧಾಂತಿ. ೨೦೪). [ಸಂ.]

**ಪ್ರಚ್ಛನೆ** (ನಾ). ೧. ಪ್ರಶ್ನೆಯನ್ನು ಕೇಳುವುದು; ಪ್ರಶ್ನಿಸುವುದು. ೨. [ಜೈನ] ವಾಚನೆ, ಪ್ರಚ್ಛನೆ, ಅನುಪ್ರೇಕ್ಷೆ, ಚಿಂತನೆ ಮತ್ತು ಧರ್ಮೋಪದೇಶಗಳೆಂಬ ಸ್ವಾಧ್ಯಾಯದ ಐದು ಭೇದಗಳಲ್ಲಿ ಎರಡನೆಯದು ; (ತಿಳಿಯಬೇಕಾದ ವಿಷಯದಲ್ಲಿ ಸಂಶಯವನ್ನು ಪರಿಹರಿಸಿಕೊಳ್ಳಲು ಹಾಗೂ ನಿಷ್ಕೃಷ್ಟಜ್ಞಾನವನ್ನು ಪಡೆಯಲು) ತಿಳಿದವರನ್ನು ಕೇಳುವುದು : ತನಗೆ ಸಂದೇಹಮಾದುದಂ ಪೆಱರ ಬೆಸಗೊಳ್ವುದುಂ ಪ್ರಚ್ಛನೆಯೆಂಬುದು (ಶ್ರಾವಕಾ. ೬೮). [ಸಂ. ಪ್ರಚ್ಛನಾ]

**ಪ್ರಚ್ಛನ್ನ** (ಗು). ೧. ಮುಚ್ಚಿರುವ; ಹೊದಿಸಿರುವ : ನೀಲವಸನಪ್ರಚ್ಛನ್ನಪರ್ಯಂಕಮಂಡಳದೊಳ್ . . . ಕುಳ್ಳಿರ್ದ ಕೋಮಳೆಯಂ ದೂರದೆ ನೋಡಿ ಕಂಡನರಸಂ ಕಾದಂಬರೀದೇವಿಯಂ (ಕಾದಂಪೂ. ೦೦೦೩). ೨. ವೇಷಾಂತರದ ; ಛದ್ಮವೇಷದ : ವಿವಿಧವೇಷವಿದ್ಯಾಶಾರದಪ್ರಚ್ಛನ್ನಪ್ರಣಿಧಿಗಳಂ ಪ್ರಯೋಗಿಸಿಯುಂ (ಚಂದ್ರಪ್ರ. ೨-೬೦) ; ಕಲಿಯುಗದ ಪ್ರಚ್ಛನ್ನ ಕಲ್ಕಿ ಸತ್ಯಾಗ್ರಹಿ ! (ಕಾಂಚಜ. ೨೦-೦೭). (ನಾ). ೩. ಗೋಪ್ಯ; ರಹಸ್ಯ ; ಗುಟ್ಟು : "ರಹಃ, ಪ್ರಚ್ಛನ್ನಂ . . . ರಹಸ್ಯಂ, ಗುಹ್ಯಂ — ಈ ೯ ಏಕಾಂತಂ" (ಕಲಾಯು. ೦೦೭-೨೩) ; ಪ್ರಚ್ಛನ್ನಮಪ್ಪೆಡೆಯೊಳ್ ಮೃತಕಸೆಜ್ಜೆಯೊಳಿರ್ದು ಸಂನ್ಯಸನಂಗೆಯ್ದು (ವಡ್ಡಾರಾ. ೩೯೧) ; ಬೆನ್ನೊಳೆ ಪೋದಂ . . . ಅರಸಂ ಪ್ರಚ್ಛನ್ನದಿಂ (ಯಶೋಚ. ೨-೪೮). ೪. ಕಣ್ಣಿಗೆ ಕಾಣದಿರುವವನು; ಅಗೋಚರ; ಪರಮಾತ್ಮ : ಸ್ವೇಚ್ಛಾಶೀಲನ ಪ್ರಚ್ಛನ್ನನ . . ನುತಿಪೆಂ (ಉದ್ಭಟದೇ. ೬-೧). ೫. ರಹಸ್ಯವಾದ ದ್ವಾರ ; ಒಳಬಾಗಿಲು : "ಪ್ರಚ್ಛನ್ನಂ, ಅಂತರ್ದ್ವಾರಂ — ೨ ಒಳಬಾಗಿಲ ಹೆಸರು, ರಹಸ್ಯವಾದ ಬಾಗಿಲು" (ಸಿದ್ಧಾಂತಿ. ೦೦೨). ೬. ನಡುನಡುವೆ ಕಂಡಿಗಳುಳ್ಳ ಅಡ್ಡಪಟ್ಟಿಗಳ ಚೌಕಟ್ಟು; ಜಾಲಂದ್ರ. ೭. ಬಂದೂಕು ಮೊದಲಾದುವುಗಳಿಂದ ಹೊಡೆಯುವುದಕ್ಕಾಗಿ ಅಥವಾ ಗಾಳಿ ಬೆಳಕು ಬರುವುದಕ್ಕಾಗಿ ಗೋಡೆಯಲ್ಲಿ ಮಾಡಿರುವ ಕಿರಿದಾದ ಉದ್ದ ಕಂಡಿ. ೮. ತಪ್ಪಿಸಿಕೊಂಡು ಹೋಗಲು ಅನುಕೂಲವಾಗುವಂತೆ ಕೋಟೆ ಮೊದಲಾದುವುಗಳಲ್ಲಿ ಮಾಡಿರುವ ಕಂಡಿ. [ಸಂ.]

**ಪ್ರಚ್ಛನ್ನತೆ** (ನಾ). ಮುಚ್ಚುವುದು ; ಮರೆಮಾಡುವುದು : ಸಂಭಾಷಣೆಯ ವಿಮರ್ಶಾತ್ಮಕಪರಿಶೀಲನೆಯಲ್ಲಿ ಸಹಜಮೌನದ ಮತ್ತು ಒಮ್ಮೊಮ್ಮೆ ಉದ್ದೇಶಪೂರ್ವಕ ಪ್ರಚ್ಛನ್ನತೆಯ ಅಗತ್ಯಗಳಿಗೆ ಅವಕಾಶ ಕೊಡಬೇಕಾಗುವುದು (ಸಾಹಿತ್ಯ. ೦೬೩). [ಸಂ. ಪ್ರಚ್ಛನ್ನತಾ]

**ಪ್ರಚ್ಛನ್ನವೇಷ** (ನಾ). ವೇಷಾಂತರ ; ಮಾರುವೇಷ : ಕದ್ದೋಡಿ ಬಂದು ಪ್ರಚ್ಛನ್ನವೇಷದಿ ಕಳ್ಳರಲ್ಲಿರಲು ಭೂತಿಲಕನೃಪತಿ ಹಿಡಿತರಿಸಿ ಕೇಳಿ (ಗುರುಬಾ. ೬-೬೨). [ಸಂ.]

**ಪ್ರಚ್ಛರ್ದಿಕೆ** (ನಾ). ೧. ವಾಂತಿ; ಕಾರಿಕೆ; ವಮನ: "ಪ್ರಚ್ಛರ್ದಿಕಾ, ವಮಿಃ, ವಮಥುಃ—ಇ ಕಕ್ಕುರೋಗ, ವಾಂತಿ, ವಮನ" (ಸಿದ್ಧಾಂತಿ. ೦೬೪). ೨. ವಾಂತಿ ಮಾಡಿಸುವ ಔಷಧಿ. [ಸಂ. ಪ್ರಚ್ಛರ್ದಿಕಾ]

**ಪ್ರಚ್ಛಾದನ** (ನಾ). ೧. ಮುಚ್ಚಿಡುವುದು; ಕಾಣದಂತೆ ಮಾಡುವುದು: ಸ್ವಗುಣಪ್ರಚ್ಛಾದನಮನ್ಯಗುಣಾವಿಷ್ಕರಣಂ . . . ಉಚ್ಚಗೋತ್ರದಾಸ್ರವಮಕ್ಕುಂ (ಸುಕುಮಾ. ೬–೨೩). ೨. ಹೊದೆಯುವ ವಸ್ತ್ರ; ಉತ್ತರೀಯ. [ಸಂ.]

**ಪ್ರಚ್ಛಾದಿತ** (ಗು). ೧. ಹೊದಿಸಿದ; ಆಚ್ಛಾದಿಸಿದ. ೨. ಬಚ್ಚಿಟ್ಟ; ಮರೆಮಾಡಿದ. [ಸಂ.]

**ಪ್ರಚ್ಛಾದಿಸು** (ಕ್ರಿ). ಮುಚ್ಚು; ಮರೆಮಾಡು: ರಾಹುವಿನ ವಿಮಾನಂ . . . ಚಂದ್ರವಿಮಾನಮಂ ಪ್ರಚ್ಛಾದಿಸಿ ಷಣ್ಮಾಸಕ್ಕೊಮ್ಮೆ ಪುಣ್ಣಮಿಯ ಕಡೆಯೊಳು ಸೋಮಗ್ರಹಣಮಕ್ಕುಂ (ಶ್ರಾವಕಾ. ೪೦). [ಪ್ರಚ್ಛಾದನ+—ಇಸು]

**ಪ್ರಜ** (ನಾ). ೧. ಹುಟ್ಟು; ಜನ್ಮ; ಉತ್ಪತ್ತಿ. ೨. ಸಂತತಿ; ಸಂತಾನ. ೩. ಒಂದು ಸಂತತಿಗೆ ಸೇರಿದ ವ್ಯಕ್ತಿ; ವಂಶಜ. ೪. ಮನುಷ್ಯ ಜಾತಿ; ಮಾನವಕುಲ. ೫. ಸೃಷ್ಟಿಯಾದ ಯಾವುದೇ ಜೀವಿ. ೬. ಒಂದು ದೇಶದಲ್ಲಿ ವಾಸಿಸುವ ಜನ; ಪ್ರಜೆ: ಸೃಜಿಸಿದಳು ಭೂವನಿತೆ ರಾಜನ ಪ್ರಜರ ಹಿತ ಸಾಧಿಸಲು ವಿಧವಿಧರಜತಮೌಕ್ತಿಕ ಹೇಮರತ್ನಗಳನ್ನು ಭೋದದಲಿ (ರಘುವಂ. ೬–೨೭); ನಾನು ನಾಳೆ ನಿಮ್ಮ ಕಚೇರಿಯಲ್ಲಿ ಬಂದು ಕುಳಿತುಕೊಳ್ಳುವೆ . . . ಎಲ್ಲ ಪ್ರಜರಿಗೂ ತಿಳಿಸು (ಕೋದತಿ. ೪). ೭. ವೀರ್ಯ; ರೇತಸ್ಸು. [ಸಂ. ಪ್ರಜಾ]

**ಪ್ರಜನ** (ಗು). ೧. ಸೃಷ್ಟಿಸುವ; ಉತ್ಪತ್ತಿಮಾಡುವ. (ನಾ). ೨. ಹುಟ್ಟುವುದಂ; ಜನಿಸುವುದು. ೩. ಹುಟ್ಟಿಸುವುದು; ಉತ್ಪತ್ತಿ ಮಾಡುವುದು. ೪. ಗರ್ಭಧಾರಣೆ ಮಾಡುವುದು. ೫. ಪಶುಗಳಿಗೆ ಗರ್ಭಧಾರಣೆ ಮಾಡಿಸುವುದು,—ಹೋರಿ ಕೊಡುವುದು: "ಪ್ರಜನಃ, ಉಪಸರಃ — ೨ ದನಗಳ ಮೇಲೆ ಗೂಳಿಗಳು ಹಾರುವ ಸಮಯ" (ಸಿದ್ಧಾಂತಿ. ೩೬೪). 'ಉಪಸರ' ಹೋ. ೬. ಉತ್ಪತ್ತಿಗೆ ಕಾರಣ ವಾದುದು; ಜನನಹೇತು. ೭. ಜನನೇಂದ್ರಿಯ. [ಸಂ.]

**ಪ್ರಜನನ** (ಗು). ೧. ಹುಟ್ಟಿಸುವ; ಸೃಷ್ಟಿಮಾಡುವ: ಭೂಮಿತಾಯ್ಗೆ ಪ್ರಜನನಚಾಪಲ್ಯ (ಶ್ರೀಂಶರ್ಮ. ೪೪–೬); ನಿರ್ಜೀವಿಗಳಲ್ಲಿ ಪ್ರಜನನಕ್ರಿಯೆ ಇಲ್ಲ (ಕಲಿಕೋ. XI. ೩೨೦). (ನಾ). ೨. ಹುಟ್ಟುವಿಕೆ; ಜನನ. ೩. ಹುಟ್ಟಿಸುವುದು; ಉತ್ಪತ್ತಿಮಾಡುವುದು: ಜೀವಿಗಳು ನಿರ್ಜೀವಿಗಳಿಗಿಂತ ಭಿನ್ನವಾಗಿರುವುದಕ್ಕೆ ಪ್ರಜನನ ಕೂಡ ಒಂದು ಕಾರಣ (ಕಲಿಕೋ. XI. ೩೨೦). ೪. ಗರ್ಭಧಾರಣೆ ಮಾಡುವುದು. ೫. ಪಶುಗಳ ಗರ್ಭಧಾರಣೆ. ೬. ಹೆರುವುದು; ಹಡೆಯುವುದು. ೭. ಸಂತಾನ; ಸಂತತಿ. ೮. ಜನನೇಂದ್ರಿಯ. ೯. ವೀರ್ಯ; ರೇತಸ್ಸು. [ಸಂ.].

**ಪ್ರಜವ** (ನಾ). ಹೆಚ್ಚಾದ ವೇಗ,—ಚುರುಕು: ನಿಜರಾಜ್ಯದೊಳುತ್ಪತ್ತಿಯ ನಿಜಮಂ ಕಾಣಲ್ಕೆ ಭೂಪ ಮನಮಂ ಮಾಡಲ್ ಪ್ರಜವದೆ ಲೇಖಕಜನ ಕಾಗಜಮಂ ಬಟ್ಟೆಯಲಿ ಕಟ್ಟಿ ಪೊತ್ತರ್ ಪೆಗಲೊಳ್ (ಕರ್ನಾಟ. ೩೪). [ಸಂ.]

**ಪ್ರಜಾತ** (ಗು). ಹುಟ್ಟಿದ; ಜನಿಸಿದ; ಉತ್ಪನ್ನವಾದ: ಪಾತಕವ್ರಾತ ಪ್ರಜಾತನಿಕೇತನಂಗಳು ತುಡುಗುಣಿಗಳು ನಿಘಾತಕಕರ್ಮಕ್ರಿಯೆಗಳವಿಚಾರಿಗಳು ಕೋಪಿಗಳು (ಚಿಕಪು. ೧೦–೬೩). [ಸಂ.]

**ಪ್ರಜಾತಂತ್ರ** (ನಾ). ಪ್ರಜೆಗಳೇ ಪರಮಾಧಿಕಾರವನ್ನು ಹೊಂದಿರುವ ಆಡಳಿತ; ಪ್ರಜಾಪ್ರಭುತ್ವ: ವ್ಯಾಕರಣವು ನಿರಂಕುಶಪ್ರಭುವಿನ ಶಾಸನವಲ್ಲ. ಅದು ಧರ್ಮನಿಷ್ಠ ಪ್ರಜಾತಂತ್ರ ಜನತೆಯ ರಾಜ್ಯಸಂವಿಧಾನ (ಸಂಶೋಧ. ೮೫). [ಸಂ.]

**ಪ್ರಜಾತೆ** (ನಾ). ಬಾಣಂತಿ; ಪ್ರಸೂತೆ: "ಜಾತಂ ಪ್ರಜಾತಂ ಪ್ರಸೂತೆಯೆನೆ ಬಾಣಂತಿಯಕ್ಕು" (ಮಂಗರಾ. ೬೦–೪). [ಸಂ. ಪ್ರಜಾತಾ]

**ಪ್ರಜಾಧರ್ಮ** (ನಾ). ೧. ಒಂದು ದೇಶದ ಪ್ರಜೆಗಳು ಅನುಸರಿಸಬೇಕಾದ ನಡವಳಿಕೆ,—ಕರ್ತವ್ಯ: ಕುಲಧರ್ಮವೆಂದರೆ ಒಂದು ಕುಲದವರು ಮಾತ್ರ ಅನುಸರಿಸುವ ಸಂಪ್ರದಾಯವು ಅಥವಾ ಪದ್ಧತಿಯು. ರಾಜಧರ್ಮ ಪ್ರಜಾಧರ್ಮ ಇತ್ಯಾದಿಗಳಲ್ಲಿ ಕರ್ತವ್ಯವೆಂದರ್ಥವು (ಅರ್ಥಾಂಗ. ೦೦). ೨. ಪ್ರಜೆಗಳಿಗೆ ಸಂಬಂಧಿಸಿದ ಹಕ್ಕು, ಕರ್ತವ್ಯ ಮೊದಲಾದ ವಿಷಯಗಳನ್ನು ಒಳಗೊಂಡಿರುವ ಶಾಸ್ತ್ರ; ಪೌರನೀತಿ: "ಪ್ರಜೆಯ ಹಕ್ಕು—ಬಾಧ್ಯತೆಗಳನ್ನೂ ಕರ್ತವ್ಯಗಳನ್ನೂ ಕುರಿತ ಶಾಸ್ತ್ರ; ಪ್ರಜಾಧರ್ಮ; ಪ್ರಜಾನೀತಿ" (civics. ಇಂಕೋ). [ಸಂ.]

**ಪ್ರಜಾಧಿಪ** (ನಾ). ಪ್ರಜೆಗಳ ಒಡೆಯ; ಅರಸಂ; ರಾಜ: "ನೃಪತಿ ರಾಟ್ ರಾಜಂ ನರಾಮರಂ ಪಾರ್ಥಿವಂ ಕುಪತಿ ಮೂರ್ಧಾಭಿಷಿಕ್ತಂ ಕ್ಷತ್ರಿಯಂ ಪ್ರಜಾಧಿಪನೆನಲ್ಕರಸಕ್ಕು" (ಮಂಗರಾ. ೭೪–೧). [ಸಂ.]

**ಪ್ರಜಾಧಿಪತ್ಯ** (ನಾ). ಪ್ರಜೆಗಳ ಪರಮಾಧಿಕಾರದಿಂದ ನಡೆಯುವ ಆಡಳಿತ; ಪ್ರಜಾಪ್ರಭುತ್ವ: ಪ್ರಪಂಚದ ಅತ್ಯಂತ ಪುರಾತನ ಚಕ್ರಾಧಿಪತ್ಯಗಳಲ್ಲಿ ಒಂದಾದ ಚೀನಾ ೧೯೧೨ರಲ್ಲಿ ಪ್ರಜಾಧಿಪತ್ಯವಾಯಿತು (ಭೂಪಿಪ. ೪೦೭). [ಸಂ.]

**ಪ್ರಜಾನೀತಿ** (ನಾ). = ಪ್ರಜಾಧರ್ಮ ೨: "ಪ್ರಜೆಯ ಹಕ್ಕುಬಾಧ್ಯತೆಗಳನ್ನೂ ಕರ್ತವ್ಯಗಳನ್ನೂ ಕುರಿತ ಶಾಸ್ತ್ರ: ಪ್ರಜಾಧರ್ಮ; ಪ್ರಜಾನೀತಿ" (civics. ಇಂಕೋ). [ಸಂ.]

**ಪ್ರಜಾನುರಾಗ** (ನಾ). ಪ್ರಜೆಗಳ ಪ್ರೀತಿಗೆ ಪಾತ್ರನಾದವನು: ಅತಿಪ್ರವರ್ಧನಪ್ರಜಾನುರಾಗನುಮತಿಪ್ರಬಲರಣರಾಮನುಮೆನಿಸಿದ ರಣರಂಗಸಿಂಹನಿಂ . . . ಪುಟ್ಟಿದಂ (ಗದಾಯು. ೨–೭ ವ). [ಸಂ.]

**ಪ್ರಜಾಪಕ್ಷೀಯ** (ನಾ). ಪ್ರಜಾಪಕ್ಷಪಾತಿಯಾದ ವ್ಯಕ್ತಿ; ಪ್ರಜೆಗಳ ಹಿತಚಿಂತಕನಾದವನು: ಮಂತ್ರಿಯಾದವನು ನಿಜವಾಗಿ ಪ್ರಜಾಪಕ್ಷೀಯನಾಗಿದ್ದಲ್ಲಿ ಅವನ ಮೇಲುಸ್ತುವಾರಿ ಒಹುಮಟ್ಟಿಗೆ ಸಹಾಯಕಾರಿಯಾಗುತ್ತದೆ (ರಾಜ್ಯಶಾ. ೩೪೭). [ಸಂ].

**ಪ್ರಜಾಪತಿ** (ನಾ). ೧. ಪ್ರಜೆಗಳನ್ನು ಸೃಷ್ಟಿಮಾಡುವವನು; ಸೃಷ್ಟಿಕರ್ತ; ಪರಮಾತ್ಮ. ೨. ಬ್ರಹ್ಮ: "ಬ್ರಹ್ಮಾ . . . ಪ್ರಜಾಪತಿಃ, ಪಿತಾಮಹಃ, ಜಗತ್ಕರ್ತಾ, ವಿಶ್ವಾತ್ಮಾ, ಕಮಲಾಸನಃ — ಈ ೨೦ ಬ್ರಹ್ಮನ ಪೆಸರ್" (ಹಲಾಯು. ೨–೭); ಪ್ರಜಾಪತಿಯ ರೂಪ ನಿರ್ಮಾಣಕೌಶಲಮುಮಂ . . . ನೀನುಂ ಕಾಣ್ಬೆಯೆಂದೆಂತಾನುಮಿಲ್ಲಿಗೊಡಗೊಂಡು ಬಂದೆಂ (ಕಾದಂಬ. ೪೦); ಅಪ್ರತಿಮಪ್ರಜಾಪತಿಸಮಾನ ನೆನೆನ್ನ ಮಗಳ್ಗೀನಾನುಮುಪಾಯದ ಮಾಯೆಯಿಂ ಪ್ರತಮನಾಗ್ರಹದಿಂದಮೆ ನೀಮಿಂತೀಮೃದಿದಾವುದು ಸಮ್ಮದಂ (ಸುಕುಮಾ. ೭–೪೯). ೩. ವಿಷ್ಣು. ೪. ಪ್ರಜಾಸೃಷ್ಟಿಗಾಗಿ ಬ್ರಹ್ಮನಿಂದ ಮೊದಲು ಸೃಷ್ಟಿ ಹೊಂದಿದ ಹತ್ತುಜನ ಸೃಷ್ಟಿಕರ್ತರು; ಬ್ರಹ್ಮನ ಮಾನಸಪುತ್ರರು; ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ಪ್ರಚೇತಸ, ವಸಿಷ್ಠ, ಭೃಗು ಮತ್ತು ನಾರದ—ಇವರು ದಶಪ್ರಜಾಪತಿಗಳು. ಈ ವಿವರಣೆಯ ಬಗೆಗೆ ಭಿನ್ನಾಭಿಪ್ರಾಯವೂ ಇದೆ. ಬ್ರಹ್ಮ, ಸ್ಥಾಣು, ಮನು, ದಕ್ಷ, ಭೃಗು, ಧರ್ಮ, ಯಮ, ಮರೀಚಿ, ಅಂಗಿರಸ್ಸು, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ಪರಮೇಷ್ಠಿ, ವಿವಸ್ವಾನ್, ಸೋಮ, ಕರ್ದಮ, ಕ್ರೋಧ, ಅರ್ವಾಕ್ ಮತ್ತು ಪ್ರೀತ—ಈ ಇಪ್ಪತ್ತೊಂದು ಜನ ಪ್ರಜಾಪತಿಗಳೆಂದು ಮಹಾಭಾರತದ ಮೋಕ್ಷಧರ್ಮಪ್ರಕರಣದಲ್ಲಿ ಹೇಳಿದೆ. ೫. ವಿಶ್ವಕರ್ಮ. ೬. ಸೂರ್ಯ. ೭. ಅಗ್ನಿ.

೮. ಇಂದ್ರ. ೯. ಮನು. ೧೦. ಪ್ರಜೆಗಳ ಒಡೆಯ; ಅರಸ; ರಾಜ: "ರಾಜಾ, ರಾಜನ್ಯಃ, ರಾಟ್, ಪ್ರಜಾಪತಿಃ . . . ಲೋಕಪಾಲಃ—ಈ ೧೨ ಅರಸು" (ಕರಾಹು. ೬೯-೨೬೬). ೧೧. ಅಳಿಯ; ಜಾಮಾತ. ೧೨. ತಂದೆ; ಜನಕ. ೧೩. ಒಂದು ಯಾಗದ ಹೆಸರು. ೧೪. ಹಿಂದೂಕಾಲಮಾನದ ಅರುವತ್ತು ಸಂವತ್ಸರಗಳಲ್ಲಿ ಒಂದು. ೧೫. ಪುರುಷನ ಜನನೇಂದ್ರಿಯ; ಶಿಶ್ನ: ಯಿ ದರ್ಮಕೆ ಅಳುಪಿದವ ಕತ್ತೆ ಪ್ರಜಾಪತಿಗೆ ಅಳುಪಿದಾಗೆ (ಪ್ರುಅಂ. ೦೯೩೦. ೨೫-೨೦; 1656). [ಸಂ.]

**ಪ್ರಜಾಪತಿತ್ವ** (ನಾ). ಅರಸುತನ; ರಾಜತ್ವ: ಕುಲಧ್ವಜ ಬೆಸಸು ನಿನ್ನಪೋಲೀ ಪ್ರಜಾಪತಿತ್ವಕ್ಕೆ ಮುನ್ನ ನೋಂತರುಮೊಳರೇ (ಆಂಪು. ೬-೬೩). [ಸಂ.]

**ಪ್ರಜಾಪತಿಯೋಗ** (ನಾ). [ಜ್ಯೋತಿ] ಶುಭಕಾರ್ಯಗಳಿಗೆ ಪ್ರಶಸ್ತವಾದ ಇಪ್ಪತ್ತೇಳುಯೋಗಗಳಲ್ಲಿ ಇಪ್ಪತ್ತೈದನೆಯ ಬ್ರಹ್ಮವೆಂಬ ಯೋಗ; ಬ್ರಹ್ಮಜ್ಞಾನೋತ್ಪತ್ತಿಗೆ ಸೂಕ್ತವಾದ ಕಾಲ: ಕೃತ ಭವ್ಯೋತ್ಸವ ಮಾಘಶುದ್ಧದಶಮೀಪುಣ್ಯಾಹಯುಕ್ತಂ ಪ್ರಜಾಪತಿಯೋಗಂ ಬೆರೆದಂದು . . . ಆದುದಂದಜಿತತೀರ್ಥೇಶಾಬ್ಜಮಿತ್ರೋದಯಂ (ಅಜಿಪು. ೩-೨೨). [ಸಂ.]

**ಪ್ರಜಾಪತಿವ್ರತ** (ನಾ). ಪ್ರಾಜಾಪತ್ಯ, ಸೌಮ್ಯ, ಆಗ್ನೇಯ ಮತ್ತು ವೈಶ್ವದೇವ ಎಂಬ ನಾಲ್ಕು ವೇದವ್ರತಗಳಲ್ಲಿ ಒಂದು; ಪ್ರಾಜಾಪತ್ಯವ್ರತ: ಪ್ರಜಾಪತಿವ್ರತವೇ ಮುಂತಾದವುಗಳನ್ನು ಬಿಟ್ಟರೆ ವಿಂಕ್ಕ ಕಡೆಗಳಲ್ಲೆಲ್ಲ ಪ್ರತಿಷೇಧಕ್ಕೆ ಇದೇ ಅರ್ಥವು ಎಂದು ನಮ್ಮ ಅಭಿಪ್ರಾಯ (ಬ್ರಹ್ಮಶಾ. ೬೩). [ಸಂ.]

**ಪ್ರಜಾಪಾಲನ** (ನಾ). ಪ್ರಜೆಗಳನ್ನು ಕಾಪಾಡುವುದು: ಕ್ಷತ್ರಿಯಜಾತಿಗೆ ಸತ್ಯತ್ಯಾಗಪ್ರಜಾಪಾಲನಶರಣಾಗತರಕ್ಷಣಪ್ರಹರಣಕ್ಷಮಾದಿಗುಣಾಚರಣಮುಮಂ . . . ನಿಱಿಸಿ (ಆಂಪು. ೬-೬೩ ವ). [ಸಂ.]

**ಪ್ರಜಾಪಾಲನೆ** (ನಾ). = ಪ್ರಜಾಪಾಲನ: ಹಿಂದಿನ ಕಾಲದಲ್ಲಿ ಪ್ರಜಾಪಾಲನೆಯೇ ರಾಜನ ಮುಖ್ಯಕರ್ತವ್ಯವಾಗಿದ್ದಿತ್ತು (ರೂಢಿ). [ಸಂ. ಪ್ರಜಾಪಾಲನ]

**ಪ್ರಜಾಪ್ರತಿನಿಧಿ** (ನಾ). ಪ್ರಜೆಗಳಿರುವ ಆಡಳಿತಾಧಿಕಾರವನ್ನು ನಿರ್ವಹಿಸುವುದಕ್ಕಾಗಿ ಮತದಾನದ ಮೂಲಕ ಆರಿಸಿ ಬಂದ ಮುಂದಾಳು: ಪ್ರಜಾಪ್ರತಿನಿಧಿಗಳಾದ ದೇಶಪ್ರಮುಖರು ಸಮರ್ಥರೂ ಯೋಗ್ಯರೂ ಆಗಿರಬೇಕೆಂಬುದು ಸ್ವತಃ ಸಿದ್ಧವಾದ ಸಂಗತಿ (ರಾಜ್ಯಶಾ. ೨೬೦). [ಸಂ.]

**ಪ್ರಜಾಪ್ರತಿನಿಧಿಸಭೆ** (ನಾ). (ರಾಜ್ಯದ ಆಡಳಿತವಿಚಾರಗಳಲ್ಲಿ ಸಲಹೆ ಕೊಡಲು ನೇಮಿಸಲ್ಪಟ್ಟವರಾದ) ಚುನಾಯಿತ ಪ್ರತಿನಿಧಿಗಳ ಸಭೆ: ಪ್ರಜಾಪ್ರತಿನಿಧಿಸಭೆ, ನ್ಯಾಯವಿಧಾಯಕಸಭೆ ಮುಂತಾದ ಸಂಸ್ಥೆಗಳಲ್ಲಿ 'ಮೆಂಬರು' ಗಳಾಗಿರುವವರು ಮತ್ತು ಹಾಗೆ ಸದಸ್ಯರುಗಳಾಗಲು ಬಯಸುವವರು (ಸಾಹಿಕ. ೪೬). [ಪ್ರಜಾಪ್ರತಿನಿಧಿ + ಸಭೆ]

**ಪ್ರಜಾಪ್ರಭುತ್ವ** (ನಾ). = ಪ್ರಜಾಧಿಪತ್ಯ: ಆಧುನಿಕ ಪ್ರಜಾಪ್ರಭುತ್ವವು, ರಾಜ್ಯದ ವಿಶಾಲತೆಯ ಕಾರಣದಿಂದ, ಪ್ರತಿನಿಧಿಪ್ರಭುತ್ವವನ್ನು ಒಪ್ಪಲೇಬೇಕಾಯಿತು (ರಾಜಕ. ೪); ಪ್ರಜಾಪ್ರಭುತ್ವವು ಇಂದಿನ ಜಗತ್ತಿನಲ್ಲಿ ಪ್ರಚಲಿತವಾದ ಒಂದು ನಿಯಂತ್ರಣ ಪದ್ಧತಿಯಾಗಿದೆ (ನವ್ಯಶಾ. ೦೭). [ಸಂ.]

**ಪ್ರಜಾವತಿ** (ನಾ). ೧. ಮಕ್ಕಳುಳ್ಳವಳು. ೨. ತಾಯಿ; ಜನನಿ. ೩. ಸಹೋದರನ ಹೆಂಡತಿ; ನಾದಿನಿ: "ಪ್ರಜಾವತೀ, ಭ್ರಾತೃವಧೂಃ—ಈ ೨ ನಾಮು[ದಿ]ನಿ" (ಕರಾಹು. ೬೩-೩೩೦); "ನಾದಿನಿ ಪ್ರಜಾಪತಿಯಕ್ಕು" (ಮಂಗರಾ. ೬೨-೦೨). [ಸಂ. ಪ್ರಜಾವತೀ]

**ಪ್ರಜಾಲ** (ನಾ). ದೊಡ್ಡ ಗುಂಪು,—ಸಮೂಹ: ಭಾಳಾಕ್ಷನಂ ಸ್ತುತಿಸಿಯೊಲಿಸನ್ಯಸಮಯಪ್ರಜಾಲಮಂ ಗೆಲಿದ ಹಂಪೆಯ ಹರೀಶ್ವರಂ (ರಾಶಿಕ. ೦-೦೬). [ಸಂ.]

**ಪ್ರಜಾಸಂಬಂಧಾಂತರ** (ನಾ). [ಜೈನ] ಜೈನಬ್ರಾಹ್ಮಣನಿಗಿರಬೇಕಾದ ಹತ್ತು ಬಗೆಯ ಅಧಿಕಾರಗಳಲ್ಲಿ ಒಂದು; ೯ ಜೈನಗ್ರಂಥವಾದ ಉಪಾಸನಾಧ್ಯಯನ ಸೂತ್ರದಲ್ಲೂ ಸಂಸ್ಕೃತ ಭಾಷೆಯಲ್ಲಿರುವ ಆದಿಪುರಾಣದಲ್ಲೂ ಹತ್ತುಬಗೆಯ ಅಧಿಕಾರಗಳನ್ನು ಜೈನಬ್ರಾಹ್ಮಣನಿಗೆ ಉಪದೇಶ ಮಾಡಲಾಗಿದೆ. ೧. ಅತಿಬಾಲವಿದ್ಯೆ—ಬ್ರಾಹ್ಮಣನು ಬಾಲ್ಯದಿಂದಲೆ ಯಾವ ವಿದ್ಯೆಯನ್ನು ಕಲಿಯಲು ಪ್ರಯತ್ನ ಮಾಡಿ ಸಾಧಿಸಿದನೊ ಆ ವಿದ್ಯೆ. ೨. ಕುಲಾವಧಿ—ಕುಲಾಚಾರವನ್ನು ರಕ್ಷಿಸುವುದು. ೩. ವರ್ಣೋತ್ತಮತ್ವ—ಇತರ ವರ್ಣದವರಿಗಿಂತ ತಾನು ಮೇಲೆನಿಸಿರುವುದು. ೪. ಪಾತ್ರತ್ವ—ಗುಣಾಧಿಕನಾಗಿರುವುದರಿಂದ ದಾನಮಾನಾದಿಗಳಿಗೆ ಸತ್ಪಾತ್ರನಾಗಿರುವಿಕೆ. ೫. ಸೃಷ್ಟ್ಯಧಿಕಾರಿತೆ—ತೀರ್ಥಂಕರರಿಂದ ಜನ್ಮ ತಾಳಿ ಪ್ರಾಚೀನಕಾಲದಿಂದಲೂ ಬಂದಿರುವ ಧರ್ಮವನ್ನೇ ಪ್ರಚಾರಮಾಡುವುದು. ೬. ವ್ಯವಹಾರೇಶಿತ್ವ—ಜೈನಧರ್ಮಾವಲಂಬಿಗಳಾದವರಿಗೆ ಪ್ರಾಯಶ್ಚಿತ್ತ ಮೊದಲಾದ ವ್ಯವಹಾರಗಳನ್ನು ಜೈನಸಂಪ್ರದಾಯಾನುಸಾರವಾಗಿ ನಿರ್ವಹಿಸುವ ಹೊಣೆಗಾರಿಕೆ,—ಸ್ವಾತಂತ್ರ್ಯ. ೭. ಅವಧ್ಯತ್ವ—ಸಾಮಾನ್ಯವಾಗಿ ಯಾವ ಪ್ರಾಣಿಗಳನ್ನೂ ಕೊಲ್ಲಬಾರದು. ವಿಶೇಷವಾಗಿ ಬ್ರಾಹ್ಮಣನನ್ನಂತೂ ಕೊಲ್ಲಲೇಬಾರದು. ಅವನು ವಧೆಗೆ ಯೋಗ್ಯನಲ್ಲ, ಅವಧ್ಯ. ೮. ಅದಂಡ್ಯತ್ವ—ಬ್ರಾಹ್ಮಣನು ದಂಡನೆಗೆ ಅರ್ಹನಲ್ಲ, ಶಿಕ್ಷಾರ್ಹನಲ್ಲ. ೯. ಮಾನಾರ್ಹತೆ—ಬ್ರಾಹ್ಮಣನು ಎಲ್ಲರ ಮನ್ನಣೆಗೂ ಪಾತ್ರನಾದವನು. ಎಲ್ಲರೂ ಅವನನ್ನು ಗೌರವಿಸಬೇಕು. ೧೦. ಪ್ರಜಾಸಂಬಂಧಾಂತರ—ಹೇಗೆ ಸಿದ್ಧರಸವು ತನ್ನೊಡನೆ ಸಂಬಂಧ ಹೊಂದಿದ ಲೋಹಗಳನ್ನೆಲ್ಲಾ ಚಿನ್ನವನ್ನಾಗಿ ಮಾಡುವುದೋ ಹಾಗೆ ತನ್ನ ಸಂಗವನ್ನು ಮಾಡಲು ಬಂದ ಎಲ್ಲರನ್ನೂ ತನ್ನಂತೆಯೇ ಒಳ್ಳೆಯವರನ್ನಾಗಿ ಮಾಡಿ, ತಾನು ಮಾತ್ರ ತನ್ನತನವನ್ನು ಉಳಿಸಿಕೊಂಡಿರುವಿಕೆ: ಅತಿಬಾಲವಿದ್ಯಾಕುಲಾವಧಿವರ್ಣೋತ್ತಮತ್ವ ಪಾತ್ರತ್ವ ಸೃಷ್ಟ್ಯಧಿಕಾರ ವ್ಯವಹಾರೇಶಿತ್ವಾವಧ್ಯತ್ವಾದಂಡ್ಯತ್ವ ಮಾನಾರ್ಹತ್ವ ಪ್ರಜಾಸಂಬಂಧಾಂತರಮೆಂಬ ಪತ್ತುಮಧಿಕಾರಂಗಳುಮನಱಿಪಿ (ಆದಿಪು. ೦೩-೦೬೭); ದಶಾಧಿಕಾರಮುಪಾಸಕಾಧ್ಯಯನದೊಳ್ಪೇಳ್ದುದವಾವುವೆಂದಡೆ ಅತಿಬಾಳವಿದ್ಯೆಯುಂ . . . ಪ್ರಜಾಸಂಬಂಧಾಂತರ [ಪಾಠಾಂ. ಪ್ರಜಾಸಂಬಂಧತ್ವ]ಮುಮೆಂದು ದಶವಿಧಮುಮಕ್ಕುಂ (ಚಾವುಂಪು. ೨೩೬). [ಸಂ.]

**ಪ್ರಜಾಸತ್ತೆ** (ನಾ). = ಪ್ರಜಾಧಿಪತ್ಯ: ಪಟೇಲಸಾಹೇಬರು . . . ಪ್ರಜಾಸತ್ತೆಯ ಈ ಕಾಲದಲ್ಲಿ ಪ್ರಜರ ಬೇಡಿಕೆಗೆ ಗೌರವ ಕೊಟ್ಟು . . . ನಮ್ಮ ಪ್ರಾಂತವನ್ನು ಕೊಡಬೇಕು (ಹನ್ನೊಂದ. ೦೦೨); ನಿಜವಾದ ಪ್ರಜಾಸತ್ತೆಯ (Democratic) ಸಮಾಜವು ಏರ್ಪಡಬೇಕಾದರೆ . . . ಸಹಕಾರಬುದ್ಧಿಯಿಂದ ವರ್ತಿಸುವುದು ಹೆಚ್ಚಬೇಕು (ಕ್ರಿಯಾಶ. ೦೮೨). [ಸಂ. ಪ್ರಜಾಸತ್ತಾ]

**ಪ್ರಜಾಸರ್ಕಾರ** (ನಾ). = ಪ್ರಜಾಧಿಪತ್ಯ: ಭಾರತವು . . . ಪ್ರಜಾಸರ್ಕಾರಪದ್ಧತಿಯನ್ನೂ ಗ್ರಾಮಾಡಳಿತವ್ಯವಸ್ಥೆಯ ಮೂಲಕ ನಮಗೆ ಕೃಪೆ ಮಾಡಿದ ನಮ್ಮ ತಾಯಿ (ಕಾರದ. ೩೯೩). [ಸು. (ಪ್ರಜಾ+ಸರ್ಕಾರ)]

**ಪ್ರಜಾಸ್ವಾತಂತ್ರ್ಯ** (ನಾ). ಮಾನವನ ಆಜನ್ಮಸಿದ್ಧವಾದ ಹಾಗೂ ಮೂಲಭೂತವಾದ ಸ್ವಾತಂತ್ರ್ಯ; ಒಂದು ಸ್ವತಂತ್ರರಾಷ್ಟ್ರದಲ್ಲಿ ಜನರಿಗಿರುವ ಪರಮಾಧಿಕಾರ: ಒಂದು ದೇಶದ ಪ್ರಜಾಸ್ವಾತಂತ್ರ್ಯಗಳ ನಿರಾಕರಣೆಯೆಂದರೆ ಅಲ್ಲಿ ನಿರಂಕುಶಆಡಳಿತವಿದೆಯೆಂದೇ ಪರಿಗಣಿಸಲಾಗುತ್ತದೆ (ಕವಿಕೋ. XI, ೩೩೦). [ಸಂ.]

**ಪ್ರಜಾಹಿತ** (ನಾ). ಜನರ ಕ್ಷೇಮ,—ಸೌಖ್ಯ : ಪ್ರಜಾಹಿತವೂ ಮತ್ತು ಧರ್ಮಸಹಿಷ್ಣುತೆಯೂ ಈತನಲ್ಲಿ ನೆಲಸಿತ್ತು (ಕೊಳಂಬ. ೨೯) ; ಪತ್ರಿಕೆ . . . ಪ್ರಜಾಹಿತಸಾಧನಾಧ್ಯೇಯದಿಂದ ಸಮಾಜದಲ್ಲೊಂದು ಅಪೂರ್ವಸ್ಥಾನಮರ್ಯಾದೆಯನ್ನು ಕಲ್ಪಿಸಿಕೊಂಡಿರುತ್ತದೆ (ಕರಿಕೋ. I. ೦೮೬). [ಸಂ.]

**ಪ್ರಜೆ** (ನಾ). ೧. ಹುಟ್ಟು ; ಜನ್ಮ ; ಉತ್ಪತ್ತಿ. ೨. ಸಂತತಿ ; ಸಂತಾನ. ೩. ಒಂದು ಸಂತತಿಗೆ ಸೇರಿದ ವ್ಯಕ್ತಿ ; ವಂಶಜ. ೪. ಮನುಷ್ಯ ಜಾತಿ ; ಮಾನವಕುಲ. ೫. ಸೃಷ್ಟಿಯಾದ ಯಾವುದೇ ಜೀವಿ. ೬. ಒಂದು ದೇಶದಲ್ಲಿರುವ ಜನ ; ಒಂದು ಆಧಿಪತ್ಯಕ್ಕೆ ಸೇರಿದ ಜನವರ್ಗ : "ಲೋಕಂ ಬಹುತ್ವಂ ಜನಂ ಪ್ರಜೆಗೆ ಪೆಸರಕ್ಕು" (ಪಂಗಣ. ೩೬-೨) ; ಪ್ರಜೆಯೆಲ್ಲಂ ಕ್ಷೇಮದಿಂದಿರ್ದುದು (ಶಾರಂಜ. ೨೩೯) ; ರಾಜ್ಯವೆಂದರೆ ಕೆಲವು ಮೂಲನಿಬಂಧನೆಗಳಿಗೆ ಅನುಸಾರವಾಗಿ ಒಟ್ಟುಗೂಡಿಕೊಂಡು ಬದುಕಲು ಒಡಂಬಟ್ಟಿರುವ ಜನರ ಸಂಘ . . . ಹಾಗೆ ಒಡಂಬಟ್ಟಿರುವ ಜನಕ್ಕೆ ರಾಜ್ಯಭಾಷೆಯಲ್ಲಿ "ಪ್ರಜೆ" ಎಂದು ಹೆಸರು (ರಾಜ್ಯಶಾ. ೪೩). ೭. ವೀರ್ಯ ; ರೇತಸ್ಸು. [ಸಂ. ಪ್ರಜಾ]

**ಪ್ರಜೇಶ** (ನಾ). ೧. = ಪ್ರಜಾಪತಿ ೪: 'ನವಪ್ರಜೇಶ' ಪರಾ. ೨. ರಾಜ ; ದೊರೆ. [ಸಂ.]

**ಪ್ರಜೇಶ್ವರ** (ನಾ). ೧. ಪ್ರಜೆಗಳ ಒಡೆಯ ; ರಾಜ. ೨.=ಪ್ರಜಾಪತಿ ೪: ಇಂದು ಕಮಳಭವ ಪ್ರಜೇಶ್ವರರೊಂದು ಮೂರುತಿ ವಿಷ್ಣು ಮನುಗಳು ಸಂದ ಪಾರ್ಥಿವಲೋಕಪಾಲಕರೊಂದು ಮೂರ್ತಿಯದು (ಕುಮಾರವ್ಯಾ. ೩-೬೯). ೩. ಮರೀಚಪುತ್ರನಾದ ಕಶ್ಯಪಪ್ರಜಾಪತಿ ; ೧೦ ಪ್ರಜಾಪತಿಗಳ ಸಾಲಿನಲ್ಲಿ ಕಶ್ಯಪನಿಗೆ ಗಣನೆಯಿಲ್ಲವಾದರೂ ದೇವತೆಗಳು ರಾಕ್ಷಸರೇ ಮೊದಲಾದ ದೇವಯೋನಿಗಳ ಜನಕನಾದುದರಿಂದ ಇವನಿಗೂ ಈ ಹೆಸರು ಸಲ್ಲುತ್ತದೆ : ಸರಸಿಜಭವನಿಂ ಪುಟ್ಟಿದ ಮರೀಚಿ ಗಣಾಗಂ ಪ್ರಜೇಶ್ವರಂ . . . ಚರಿಪಂ ಸತಿವೆರಸು ತಪವನೀ ಪರ್ವತದೊಳ್ (ಶಾಕುಂತ. ೦೦೮-೦೬೨). [ಸಂ.]

**ಪ್ರಜೈತ್ರ** (ನಾ). ಹೆಚ್ಚಾದ ಗೆಲುವನ್ನು ಪಡೆದವನು; ಅತಿಪರಾಕ್ರಮಿ: ವಿನುತನಿಸ್ಪೃಹನಿರಾತಂಕ ಸಂಸ್ಕೃತಿಲತಾಸಂಕುಲಗುಣಪ್ರಜೈತ್ರಂ (ರಾಶಕ. ೦೯-೪೦). [ಸಂ.]

**ಪ್ರಜೋತ್ಪತ್ತಿ** (ನಾ). ಹಿಂದೂಕಾಲಮಾನದ ಅರುವತ್ತು ಸಂವತ್ಸರಗಳಲ್ಲಿ ಐದನೆಯದು : ಶ್ರೀಮತು ಪ್ರಜೋತ್ಪತ್ತಿಸಂವತ್ಸರದ ಮಾರ್ಗಸಿರ ಬ ೭ ಸೋ (ಎಕ. V. ಬೇಲೂರು. ೦೯೨-೦ ; 1211 ?). [ಸಂ.]

**ಪ್ರಜ್ಞ** (ಗು). ೧. ಬಹಳ ವಿಷಯಗಳನ್ನು ತಿಳಿದುಕೊಂಡಿರುವ ; ವಿದ್ವಾಂಸನಾದ: ಮಾತಿಗಾರ್ಯನು ನೆನಹುಗಳಿಗೆಯತೀತನಪ್ಪ ಮಹಾನುಭಾವ ಪ್ರಜ್ಞಮಾನಸನು (ಜಕವು. ೮-೦೨). ೨. ಬುದ್ಧಿವಂತನಾದ ; ತಿಳಿವಳಿಕೆಯುಳ್ಳ. (ನಾ). ೩. ಬಹಳ ವಿಷಯಗಳನ್ನು ತಿಳಿದುಕೊಂಡಿರುವವನು ; ವಿದ್ವಾಂಸ ; ಪಂಡಿತ : ಬಹುಶ್ರುತನ ಮಂತ್ರನಿಶ್ಚಯಮುಮಂ ... ಪ್ರಜ್ಞರುಂ ನಿರ್ಮತ್ಸರರುಂ ... ಸಚಿವ ಸಮೂಹಂ ಮೆಚ್ಚಿ (ಶಾಂತಿಪು. ೨-೭೦ ವ); ಪ್ರಜ್ಞಾರ್ಗಮುಮಂ ಲೋಕಜ್ಞರ್ಗಜಿ ವನಿತನುಸಿರ್ವುದೆಗ್ಗು (ಅವಂಪು. ೩-೨). ೪. ಬುದ್ಧಿವಂತ. [ಸಂ.]

**ಪ್ರಜ್ಞಪ್ತ** (ಗು). ೧. ಗೊತ್ತುಪಡಿಸಿದ ; ವಿಧಿಸಿದ. (ನಾ). ೨. ಚೆನ್ನಾಗಿ ಬೋಧಿಸುವುದು ; ತಿಳಿವಳಿಕೆಯನ್ನು ನೀಡುವುದು. ೩. [ಬೌದ್ಧ] ಕ್ರಮವಾಗಿರುವುದು ; ಕ್ರಮಬದ್ಧವಾಗಿರುವುದು : ಮಿಲಿಂದ ಪ್ರಶ್ನೆಯು ಪಿಟಕಗಳಷ್ಟೇ ಪ್ರಜ್ಞಪ್ತವಾದ ಪ್ರಮಾಣಗ್ರಂಥವಾಗಿತ್ತು (ಬುದ್ಧಕ. ಉಲಂವ. ೦೦). [ಸಂ.]

**ಪ್ರಜ್ಞಪ್ತಿ** (ನಾ). ೧. ಅರಿವು ; ಜ್ಞಾನ ; ಪ್ರಜ್ಞೆ. ೨. ಬುದ್ಧಿ. ೩. ತಿಳಿಸುವುದು ; ಕಲಿಸುವುದು. ೪. [ಜೈನ] ಒಬ್ಬ ದೇವತೆಯ ಹೆಸರು : ವಿದ್ಯಾದೇವಿ. [ಸಂ.]

**ಪ್ರಜ್ಞಪ್ತಿವಿದ್ಯೆ** (ನಾ). [ಜೈನ] ಒಂದು ಬಗೆಯ ವಿದ್ಯೆ : ಅವರ್ಗಂ ಪ್ರಜ್ಞಪ್ತಿವಿದ್ಯೆ ಮೊದಲಾಗಿ ಕುಲಜಾತಿಸಾಧಿತವಿದ್ಯೆಗಳ್ ಪಲವುಂ ಬೆಸಕೆಯ್ವುವು (ಆದಿಪು. ೯-೦೨೦ ವ) ; ಅಂತು ಪ್ರಜ್ಞಪ್ತಿವಿದ್ಯಾಲಾಭಾಂತರಾಯಮಂ ಮಾಡಲ್ (ಶಾಂತಿಪು. ೯-೩ ವ) ; ಅಂತು ನಡನಡ ನಡಗುತ್ತುಮಾಂ ವಿಜಯೆಯೆಂಬೆಂ ಪ್ರಜ್ಞಪ್ತಿವಿದ್ಯೆಯಿಂ ಕಿಱಿಯಳೆಂ (ಕಂರಾಪು. ೦೪-೬೬ ವ). [ಸಂ. ಪ್ರಜ್ಞಪ್ತಿ ವಿದ್ಯಾ ]

**ಪ್ರಜ್ಞಾಗ್ರಾಹಿತ್ವ** (ನಾ). ಸಂಪೂರ್ಣಾರ್ಥವನ್ನು ಸ್ವೋಪಜ್ಞವಾಗಿ (ಅಂತರಂಗದ ಚೇತನದಿಂದ) ಕಂಡುಕೊಳ್ಳುವುದು : ಒಂದು ಉತ್ತಮರೂಪಕವು ಭಿನ್ನವಸ್ತುಗಳಲ್ಲಿರುವ ಸಾದೃಶ್ಯದ ಪ್ರಜ್ಞಾಗ್ರಾಹಿತ್ವ (Intutive Perception)ವನ್ನು ಸೂಚಿಸುತ್ತದೆ (ಅಂಕಾ. ೧೨೭). [ಸಂ.]

**ಪ್ರಜ್ಞಾತೀತ** (ನಾ). ಬುದ್ಧಿಗೆ ಮೀರಿದುದು ; ಊಹೆಗೆ ನಿಲುಕದಿರುವುದು : ಅಂಥ ಪ್ರೇಮ ಪ್ರಜ್ಞಾತೀತವಾಗಿ ಅಂತರ್ಜ್ಞಾನಪ್ರೇರಿತವಾಗಿರುತ್ತದೆ (ಕೃಪರು. ೭೩). [ಸಂ.]

**ಪ್ರಜ್ಞಾನ** (ನಾ). ೧. ಹೆಚ್ಚಾದ ತಿಳಿವಳಿಕೆ ; ಅಧಿಕವಾದ ಜ್ಞಾನ : ಈ ಪ್ರಜ್ಞಾನಕ್ಕಾಗಿ, ವಿಶುದ್ಧಬುದ್ಧಿಗಾಗಿ ಮೂಲತಃ ಬೇಕಾದದ್ದು ಅಂತರಂಗದ ಒಂದು ಸುಸಂಬದ್ಧತೆ (ಪಜಾವಾ. ೨೦) ; ದುರಾಚಾರದಿಂದ ನಿವೃತ್ತನಾಗದವನೂ ಶಾಂತನಲ್ಲದವನೂ ಸಮಾಹಿತನಲ್ಲದವನೂ ಮನಶ್ಶಾಂತಿಯಿಲ್ಲದವನೂ ಪ್ರಜ್ಞಾನದಿಂದ ಇವನನ್ನು ಪಡೆಯಲಾರರು (ತತ್ವಜ್ಞಾ. ೬೩). ೨. ವಿಚಾರ ಮಾಡುವ ಶಕ್ತಿ ; ವಿವೇಚನೆ. ೩. ಚೈತನ್ಯ. ೪. ತಿಳಿದವನು ; ಬುದ್ಧಿವಂತ. ೫. ಗುರುತು ; ಅಭಿಜ್ಞಾನ : "ಪ್ರಜ್ಞಾನಂ—೧. ಶುದ್ಧಬುದ್ಧಿ, ಗುರ್ತು ೨" (ಸಿದ್ಧಾಂತಿ. ೪೦೩). [ಸಂ.]

**ಪ್ರಜ್ಞಾನಿ** (ಗು). ೧. ಬಹಳ ಬುದ್ಧಿವಂತನಾದ. ೨. ವಿಶೇಷ ಜ್ಞಾನಿಯಾದ : ಪ್ರಜ್ಞಾನಿ ರಾಮಚಂದ್ರಂ . . . ನಿಂದನಚಲಂ ಧನುಷ್ಪಾಣಿ ಬಾಣಧಿ ನಿಮಿರೆ ಬೆನ್ನಿನಲಿ ! (ಶ್ರೀರಾಮಾ. ೬೯೦-೩೪೩). [ಸಂ. ಪ್ರಜ್ಞಾನಿನ್]

**ಪ್ರಜ್ಞಾಪಾರಮಿತೆ** (ನಾ). [ಬೌದ್ಧ] ಅತ್ಯಂತ ಶ್ರೇಷ್ಠವಾದ ಜ್ಞಾನ,—ತಿಳಿವಳಿಕೆ : ಈ ಸಾಕ್ಷಾತ್ಕಾರವೆಂಬ ಭಾವನೆಯು ವೇದಾಂತಿಗಳ ಶ್ರವಣ, ಮನನ, ನಿದಿಧ್ಯಾಸಗಳಂತೆ ಶ್ರುತಿಮಯಿಾ, ಚಿಂತಾಮಯಿಾ, ಭಾವನಾಮಯಿಾ ಎಂಬ ಕ್ರಮದಿಂದ ಪ್ರಜ್ಞಾಪಾರಮಿತಾ ಎಂಬ ನಾಮಧೇಯದಿಂದ ಪ್ರಸಿದ್ಧವಾಗಿರುವುದು (ಹಿಂಪಸಾ. ೪೦). [ಸಂ. ಪ್ರಜ್ಞಾಪಾರಮಿತಾ]

**ಪ್ರಜ್ಞಾವಂತ** (ನಾ). ಅರಿವುಳ್ಳವನು ; ಜ್ಞಾನಿ : ಅಶಾಶ್ವತಸುಖವನ್ನು ಕೊಡುವ ಈ ಯಾವ ವರವೂ ಆ ಪ್ರಜ್ಞಾವಂತನಾದ ಬಾಲಕನಿಗೆ ಬೇಡವಾಯಿತು (ಜುಕ್ಕಾರ. ೨ ೬:೩೯); ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಆಧ್ಯಾತ್ಮಿಕವಿಚಾರಗಳು . . . ಸರ್ವಕಾಲದ ಪ್ರಜ್ಞಾವಂತರಾದ ಮಾನವರ ಧ್ಯಾನಚಿಂತನೆಗಳಿಗೆ ಮುಗಿಯದ ತತ್ವಸಂಪತ್ತನ್ನು ಒದಗಿಸಿ ಕೊಡುತ್ತಿವೆ (ಭಾರವ. ೮೩). [ ಸಂ. ಪ್ರಜ್ಞಾವತ್ ]

**ಪ್ರಜ್ಞಾವಾದ** (ನಾ). (ಆಲಂ) ತಾನು ಬುದ್ಧಿವಂತನೆಂದು ಭಾವಿಸಿ ಆಡುವ ಮಾತು : 'ಪ್ರಜ್ಞಾವಾದವನ್ನೇ ಆಡುತ್ತಿರದೆ, ಜಿಜ್ಞಾಸೆ ಮಾಡಿ . . . ಇಲ್ಲಿಯೇ ಮುಕ್ತಿಯನ್ನು ಪಡೆಯಬೇಕು (ಳಬಸಾ. ೦೪೪). [ ಸಂ. ]

**ಪ್ರಜ್ಞಾವಾದಿ** (ನಾ). (ಆಲಂ) ತಾನು ಬುದ್ಧಿವಂತನೆಂದು ಭಾವಿಸಿ ಮಾತುಗಳನ್ನಾಡುವವನು : ಅಲ್ಲದ ಕೆಲಸದಲ್ಲಿ ಅವರು ಸಲ್ಲದ ರೀತಿ

ಯಲ್ಲಿ ಕೈಯಿಕ್ಕುತ್ತಿರುವರೆಂದು ಗೊಣಗುಟ್ಟುವ ಪ್ರಜ್ಞಾವಾದಿಗಳೂ ವಿಪುಲರಾಗಿದ್ದಾರೆ (ವಿಚಾರಮಂ. ೩೬); ಪ್ರಜ್ಞಾವಾದಿಯಾಗಿದ್ದೀಯಾಗಲಿ ಪ್ರಜ್ಞಾವಿದನಾಗಿಲ್ಲ (ಭಾರತ. ೦೦೩). [ಸಂ. ಪ್ರಜ್ಞಾವಾದಿನ್]

**ಪ್ರಜ್ಞಾಶೂನ್ಯ** (ನಾ). ೧. ಬುದ್ಧಿಗೇಡಿ; ಅಜ್ಞ. ೨. ಮೈಮನಸ್ಸುಗಳ ಮೇಲೆ ಅರಿವು ಇಲ್ಲದ ವ್ಯಕ್ತಿ; ಮೂರ್ಛಾವಸ್ಥೆಯಲ್ಲಿರುವವನು: ರಸ್ತೆಯ ಅಪಘಾತದಲ್ಲಿ ಪ್ರಜ್ಞಾಶೂನ್ಯನಾದವನನ್ನು ಆಸ್ಪತ್ರೆಗೆ ಸಾಗಿಸಿದರು (ರೂಢಿ). [ಸಂ.]

**ಪ್ರಜ್ಞಾಸ್ತ್ರ** (ನಾ). ಮೂರ್ಛೆಗೊಂಡವರನ್ನು ಎಚ್ಚರಗೊಳಿಸುವ ಒಂದು ಬಗೆಯ ಮಂತ್ರಾಸ್ತ್ರ: ವಿಭೀಷಣನು ಬಂದು ಅವರನ್ನು ಪ್ರಜ್ಞಾಸ್ತ್ರದಿಂದ ಎಚ್ಚರಗೊಳಿಸಿದನು (ಕಥಾ. ೯೦೦). [ಸಂ].

**ಪ್ರಜ್ಞಾಹೀನ** (ನಾ). ೧.=ಪ್ರಜ್ಞಾಶೂನ್ಯ ೧. ೨.=ಪ್ರಜ್ಞಾಶೂನ್ಯ ೨: ತೀವ್ರವಾದ ಜ್ವರದಿಂದ ಅವನು ಪ್ರಜ್ಞಾಹೀನನಾಗಿದ್ದಾನೆ (ರೂಢಿ). [ಸಂ.]

**ಪ್ರಜ್ಞಾಹೀನತೆ** (ನಾ). ೧. ಬುದ್ಧಿಯಿಲ್ಲದಿರುವಿಕೆ; ದಡ್ಡತನ; ಅಜ್ಞತೆ: ಪ್ರಜ್ಞಾಹೀನತೆಯಿಂದ ಮೆಯಿಸಿದ ಸಂಬಂಧ ನೀ[ಉ] ಮಾಡಿದ ಶಿಕ್ಷೆಗಳಿಗೊಳಗಾಗಿ . . . ನಾಲು ನಂಮ ಜಿನಸಮಯಕ್ಕೆ . . . ಸಲ್ಲವೆಂದು ಕೊಟ್ಟ ಜಯಪತ್ರಿಕೆ (ಶಾಇಪ. XX. ೩೯೦–೯; 1538). ೨. ಮೈ ಮನಸ್ಸುಗಳ ಮೇಲೆ ಅರಿವು ಇಲ್ಲದ ಸ್ಥಿತಿ; ಮೂರ್ಛಾವಸ್ಥೆ. [ಸಂ. ಪ್ರಜ್ಞಾಹೀನತಾ]

**ಪ್ರಜ್ಞು** (ನಾ). ಕಿಸುಗಾಲುಂ ಹಾಕುವವನು: "ಪ್ರಜ್ಞುಃ, ಪ್ರಗತ ಜಾನುಕಃ, ಒಂದಕ್ಕೊಂದು ದೂರವಾಗಿ ಅಗಲವಾದ ಮೊಳಕಾಲು ಗಳುಳ್ಳವನ ಹೆಸರು, ಕಿಸುಗಾಲವನು" (ಸಿದ್ಧಾಂತ.೦೮೦). [ಸಂ.]

**ಪ್ರಜ್ಞೆ** (ನಾ). ೧. ತಿಳಿವಳಿಕೆ; ಅರಿವು; ಬುದ್ಧಿ: "ಸಂಖ್ಯಾ ರುಚಿಮುಕಿ ಪ್ರಜ್ಞೆ ಮೇಧೆ ಸಂವಿತ್ತುಮುಪಲಬ್ಧಿಯೆನೆ ಬುದ್ಧಿಯಕ್ಕುಂ" (ಮಂಗರಾ. ೬೬–೨); ಮಾಯುವಾದತ್ತುಳಿದುದನಿತುಮುಂ ಪ್ರಜ್ಞೆಯಿಂ ಜಗುಳ್ದು ಲಯಮೊಂದಿ (ಶ್ರೀಣಮಾ. ೦೭–೪೪೩); ಓದುಗನ ಪ್ರಜ್ಞೆಯಲ್ಲಿ ಮೂಲದರ್ಶನವನ್ನು ಸ್ಫುರಿಸಲೆಂದೇ ಕಲಾಕೃತಿಯಲ್ಲಿ ಇಂತಹ ಬಗೆಬಗೆಯ ಹೊಂಚನ್ನು ಹಾಕಿರುತ್ತದೆ (ಸಮಜೀ. ೦ ಏಂ೪). ೨. ಪ್ರತಿಭೆ. ೩. ವಿವೇಕ; ವಿವೇಚನೆ. ೪. ಪೂರ್ವಸಂಸ್ಕಾರ; ವಾಸನೆ. ೫. ಭಾವನೆ; ಚಿತ್ತವೃತ್ತಿ. ೬. ಮೈ, ಮನಸ್ಸುಗಳ ಮೇಲಿನ ಎಚ್ಚರ,– ಅರಿವು: ಅಪಘಾತದಲ್ಲಿ ತಲೆಗೆ ಏಟು ಬಿದ್ದು ಅವನಿಗೆ ಪ್ರಜ್ಞೆ ತಪ್ಪಿದೆ (ರೂಢಿ). ೭. ಒಂದು ನಿರ್ದಿಷ್ಟವಾದ ಶಕ್ತಿ. ೮. ಸರಸ್ವತಿ. ೯. ತಿಳಿವಳಿಕೆಯುಳ್ಳ ಹೆಂಗಸು. ೧೦. [ಬೌದ್ಧ] ಬೌದ್ಧರ ಪ್ರಧಾನದೇವತೆ; ತಾರಾದೇವಿ: ಈ ಶಾಸನದಲ್ಲಿ ತಾರಾಭಗವತಿ ಯನ್ನು 'ಪ್ರಜ್ಞಾ' ಎಂದೂ 'ಬೋಧಿಸತ್ವರೂಪ' ಎಂದೂ ಕರೆದಿರುವುದರ ಔಚಿತ್ಯವನ್ನು ಕಾಣಬಹುದು (ಕಶಾಅ. ೦೨೨).೧೧. ಪಾರಮಾರ್ಥಿಕ ವಾದ ಜ್ಞಾನ. [ಸಂ. ಪ್ರಜ್ಞಾ]

**ಪ್ರಜ್ವಲ, ಪ್ರಜ್ವಳ** (ಗು).೧. ಚೆನ್ನಾಗಿ ಉರಿಯುವ; ಧಗಧಗಿಸುವ. ೨. ಹೆಚ್ಚಾಗಿ ಪ್ರಕಾಶಿಸುವ. (ನಾ). ೩. ಚೆನ್ನಾಗಿ ಉರಿಯುವುದು; ಧಗಧಗಿಸುವುದು. ೪. ಹೆಚ್ಚಾಗಿ ಪ್ರಕಾಶಿಸು ವುದು; ಉಜ್ವಲವಾಗಿರುವುದು. ೫. ಬೆಳಕು; ಪ್ರಕಾಶ; ದೀಪ್ತಿ.೬. [ಜೈನ] ಒಂದು ನರಕಬಿಲದ ಹೆಸರು: ವಾಲುಕಾ ಪ್ರಭೆಯೊಳ್ ತಪ್ತತಪಿತ ತಪನ ತಾಪನ ವಿತಾನ ಉಜ್ವಲ ಪ್ರಜ್ವಲ . . . ಪ್ರಕೀರ್ಣಕವಿಕಲ್ಪದಿಂ ಪಂಚದಶಲಕ್ಷಬಿಲಂಗಳಪ್ಪುವು (ತತ್ತ್ವಸೂತ್ರ. ೦೨೦).

**ಪ್ರಜ್ವಳ**: ೩. ಪ್ರಜ್ವಳಮಾಯ್ತು ವಹ್ನಿ ಹಿಮಗಂಧೋದ್ಗಾರಿ ಯಾಯ್ತೆಂದು ಗಾಳಿ (ಕೃಷ್ಣಕ. ೦೦–೩). [ಸಂ.]

**ಪ್ರಜ್ವಲನ** (ನಾ).೧. ಚೆನ್ನಾಗಿ ಉರಿಯುವುದು, – ಜ್ವಲಿಸುವುದು. ೨. ಪ್ರಕಾಶಿಸುವುದು. [ಸಂ.]

**ಪ್ರಜ್ವಲಿತ** (ಗು). ೧. ಹೆಚ್ಚಾಗಿ ಉರಿಯುವ,– ಜ್ವಲಿಸುವ. ೨. ಪ್ರಕಾಶಿಸುವ; ಉಜ್ವಲವಾದ: ಪರಮಜ್ಞಾನ ಪ್ರಕಾಶಜ್ಞಾನ ಪ್ರಜ್ವಲಿತಜ್ಞಾನ ಪ್ರಭಾಮಜ್ಞಾನ (ಅಣಮಾ.೪. ೦೩೬–೩೦೦). (ನಾ). ೩. ಪ್ರಕಾಶಿಸುವುದು; ಉಜ್ವಲವಾಗಿರುವುದು: ಸವಿತೃವಿನ ತೇಜಸ್ಸು ಪ್ರಜ್ವಲಿತವಾಗಿದೆ (ಹುಚ್ಚಾರ. ೨೬೯). [ಸಂ.]

**ಪ್ರಜ್ವಲಿಸು, ಪ್ರಜ್ವಳಿಸು** (ಕ್ರಿ). ೧. (ಬೆಂಕಿಯು) ಚೆನ್ನಾಗಿ ಉರಿ; ಧಗಧಗಿಸು: ಆ ಅಸ್ತ್ರವು ಖಾಂಡವವನವಂ ದಹಿಸುವ ಅಗ್ನಿಯಂತೆ ಪ್ರಜ್ವಲಿಸುತ ಚಾಪದಿಂ ಹೊರಡುತ್ತಿರಲು (ಶಾಗಂ೦.೨೯೭–೬); ಕಳೆದ ನೆನಪಿನ ಒಡಲು ಅಗ್ನಿಕುಂಡವದಿಹುದು ಪ್ರಜ್ವಲಿಸಬಹುದೊಮ್ಮೆ ಬೂದಿ ಹಾರಿ (ವಿಚಾಕ. ೩೪–೪); ಘೃತದ ಧಾರೆಗಳು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತವೆ (ಹುಚ್ಚಾರ. ೨೦೦). ೨. ಹೊಳೆ; ಪ್ರಕಾಶಿಸು: ಬಾಲಾರ್ಕ ನಂತೆ ಪ್ರಜ್ವಲಿಸುವ ರತ್ನದ ಬೆಳಗಂ ಕಂಡು ಕಳಕಳರವಮಂ ಮಾಡುವುದುಂ (ಧರ್ಮಾಮೃ. ೬–೯೬); ನಾಸಿಕಾಗ್ರಭ್ರೂನಿಟಿಲಮಧ್ಯದೊಳ್ಪ್ರಜ್ವಲಿಸಿ ಬೆಳಗುವ ಸ್ವಯಂಪ್ರಕಾಶಲಿಂಗಕ್ಕೆ . . . ಅಷ್ಟವಿಧಾರ್ಚನೆಯಿಂದರ್ಚಿಸಿ (ಅದಪ. ೨೯–೩೪); ಪ್ರಜ್ವಲಿಸುತ್ತಿರುವ ಆ ನೀಲೀವರ್ಣಜಾಲದಲ್ಲಿ ಪರವಶಳಾದಳು ಆ ಊರ್ಮಿಳೆ (ಮೊಗ್ಗು. ೪೩). ೩. (ದೀಪವು) ಹೆಚ್ಚು ಬೆಳಕನ್ನು ಬೀರುತ್ತಾ ಉರಿ,— ಪ್ರಕಾಶಮಾನವಾಗಿ ಬೆಳಗು: ಕೆಲಬಲದ ದೀವಿಗೆಗಳುಂ ಪ್ರಜ್ವಲಿಸದಿದ್ದುವೊ (ಐಕಥ. ೧೮–೦೭). ೪. ಕಳೆಯೇರು; ಕಾಂತಿಯುಕ್ತವಾಗು: ಹುಸಿನಗೆಯಿಂದ ವದನವು ಪ್ರಜ್ವಲಿಸಿತು (ಕಂಗಾಳ. ೦೨೨). ೫. (ಆಲಂ) ಉಲ್ಬಣವಾಗು; ಕ್ಷೋಭೆಗೊಳಗಾಗು: ಜನರಲ್ಲಿ ಕ್ರಾಂತಿಯ ಬೇಗೆ ಕುದಿಯುತ್ತಿತ್ತು. ಅದು ಯಾವ ಗಳಿಗೆಯಲ್ಲಿ ಯಾವ ರೂಪದಿಂದ ಹೊರಬಿದ್ದು ಪ್ರಜ್ವಲಿಸುವುದೋ ಎಂಬ ಭೀತಿ ಎಲ್ಲರಲ್ಲಿಯೂ ಇದ್ದಿತು (ರಾಜವ. ೪೬). **ಪ್ರಜ್ವಳಿಸು**: ೬. ಪ್ರಕಾಶಗೊಳಿಸು; ಪ್ರಸಿದ್ಧ ಪಡಿಸು: ವೀರಲಕ್ಷ್ಮೀನಿವಾಸಂ ಧರಣೀಸಂಕೀರ್ತ್ತಿಯಂ ಪ್ರಜ್ವಳಿಸಿದ ವಿನಯಾದಿತ್ಯನಾದಿತ್ಯತೇಜಂ (ಎಕ. V. ಅರಸೀ. ೦೮೬–೪; ಸು. 1060). [ಪ್ರಜ್ವಲನ + –ಇಸು]

**ಪ್ರಜ್ವಲ್ಯ** (ನಾ). ಹೊಳಪು; ಕಾಂತಿ; ಪ್ರಕಾಶ: ವಿಚಿತ್ರಕನಕಪ್ರಜ್ವಲ್ಯ ದಿಗ್ಮಿಕ್ಕುದಾನ್ ಸಾಸಿರ್ವ್ವರ್ಪೂಜೆದನ್ನುಯೆ ಅವರ್ ಸ್ವರ್ಗ್ಗಾಗ್ರ ಮಾನೇಱಿದಾರ್ (ಎಕ. II. ೨೬–೨; ಸು. 700). [ಸಂ.]

**ಪ್ರಜ್ವಳ** 'ಪ್ರಜ್ವಲ' ನೋ.

**ಪ್ರಜ್ವಳಿಸು** 'ಪ್ರಜ್ವಲಿಸು' ನೋ.

**ಪ್ರಡೀನ** (ನಾ). (ಪಕ್ಷಿ ಮುಂತಾದುವು) ಹಾರುವಿಕೆ: ''ಉಡ್ಡೀನಂ ಪ್ರಡೀನಂ ಪಕ್ಷಿಗಳ ಗತಿಯಕ್ಕು'' (ಮಂಗರಾ. ೫೦–೨). [ಸಂ.]

**ಪ್ರಣತ** (ಗು). ೧. ಬಾಗಿರುವ; ಬಗ್ಗಿರುವ. ೨. ಎರಗುತ್ತಿರುವ; ನಮಸ್ಕರಿಸುತ್ತಿರುವ: ಪ್ರಣತರಿಪುನೃಪತಿಚೂಡಾಮಣಿರಂಜಿತಪಾದನಧಿಕ ಸತ್ವಗುಣೈಕಾಗ್ರಣಿಗಾ ನೃಪಂಗೆ ಮನದೊಳ್ ತೃಣವಲ್ಲಘುವಾದುದಾವಗಂ ಸ್ತ್ರೈಣಸುಖಂ (ಕಾದಂಪೂ. ೦೯); ಪ್ರಣತಕ್ಷತ್ರಿಯಪುತ್ರರಂ ಸಚಿವರಂ . . . ರಾಗದಿಂ ಕಟುಪಿದಂ ಶ್ರೀರಾಜಕಂಠೀರವಂ (ಕೃಷ್ಣಕ. ೭–೨೦). ೩. ವಿಧೇಯವಾದ; ವಿನೀತವಾದ. ೪. ಚಾತುರ್ಯದಿಂದ ಕೂಡಿದ; ಬುದ್ಧಿಯುಳ್ಳ. (ನಾ). ೫. ನಮಸ್ಕರಿಸಿದವನು: ರಾಜೇಂದ್ರಚಂದ್ರ . . . ಮಾತಾಪಿತೃಗಳಲ್ಲಿಗೆ ಬಂದು ತತ್ಪಾದಪ್ರಣತನಾಗಿ ಕದೀಯಾ ಶೀರ್ವಾದಶತಸಹಸ್ರಂಗಳಂ ತಲೆಯೊಳಾಂತು (ಕಾದಂಬ. ೬೦೪). ೬. ವಿನೀತ; ವಿಧೇಯ: ಪ್ರಣತನಿಜಯಚೇತಶ್ಚಾತಕಕ್ಕೀಗೆ ಬೇಗಂ ತಣಿವಂ. . .ಗಣಧರವಿಭುದತ್ತಂ (ಶಂಪ್ರಕ. ೦–೭); ಪ್ರಣತನಿಕುರುಂಬ

ರಕ್ಷಾಮಣಿಯೆನಿಪಾ ನಾಯನಾರವಮಾಹೇಶಂಗಂ ಗಣವದವನಿತ್ತು ಮೆಱೆದತಿ ಗುಣನಿಧಿ ಸೋಮೇಶನೊಲ್ದು ಪಾಲಿಕೆ ನಮ್ಮಂ (ತ್ರಿಪುರ. ೦೩-೧). ೭. ಚತುರ ; ಬುದ್ಧಿವಂತ. [ಸಂ.]

**ಪ್ರಣತಾರಾತಿ** (ನಾ). ನಮಸ್ಕರಿಸುತ್ತಿರುವ ಶತ್ರುರಾಜರನ್ನುಳ್ಳವನು; ಪರಾಕ್ರಮಿ : ಪ್ರಣತಾರಾತಿ ಧ ನು ರ್ಗ ರ್ ಣ ಕಿಣೀಕೃತೋದ್ಯತ್ಪ್ರಕೋಷ್ಠ ನನುಪಮಧೈರ್ಯಂ . . . ಎನೆ ನೆಗಟ್ದ ನೃಪಂ (ಶಾಂತಿಪು. ೩೦೪-೩೦೨). [ಸಂ.]

**ಪ್ರಣತಾರಿ** (ನಾ). = ಪ್ರಣತಾರಾತಿ: ಪ್ರಣತಾರಿ[ಘ]ಟಿತಮುಕ್ತಾ[ಮಣಿಗಣಮು]ತ್ತಂಸದಿಂ ಕಟಬ್ದುದುರೆ ಸಭಾಂಗಣಮೊಪ್ಪೆ (ಕಬ್ಬಿಗ. ೩-೦೬೦); ಈಯೊಳ್ಗುಣಮುಂ ಕಲಿತನಮುಮಿವೇಂ ಪ್ರಣತಾರೀ ಸೂತಸುತನೊಳೊಡವುಟ್ಟುಗುಮೋ (ಶಂಕಭಾ. ೦೨-೬೮). [ಸಂ.]

**ಪ್ರಣತಿ₁** 'ಪಣಿತೆ' ನೋ.

**ಪ್ರಣತಿ₂** (ನಾ). ೧. ಬಗ್ಗುವಿಕೆ ; ಬಾಗುವಿಕೆ. ೨. ನಮಸ್ಕಾರ; ವಂದನೆ : "ಪ್ರಣಿಪಾತಮನುನಯಂ ಪ್ರಣತಿಯೆಂದನೆ ಸಂತವಣೆಯಕ್ಕುಂ" (ಮಂಗರಾ. ೦೩೪-೩೭) ; ಕಲಶೋದ್ಧಾರಮಂತ್ರಪೂರ್ವಕಂ ಪ್ರಣತಿ [ಪಾತಾಂ. ವ.ಯ]ಪ್ರಸ್ತಾವನಾಪುರಸ್ಸರಂ ಮಾಡಿ ಪ್ರಥಮಕಲ್ಪೇಶ್ವರನುಮಿಶಾನೇಂದ್ರನುಮೆತ್ತಿಕೊಳೆ (ಆದಿಪು. ೬-೬೦ ವ); ವೃದ್ಧಸೇವೆ ಯಾನಂ ತ್ರಿಜಗದ್ಗುರು ಪ್ರಣತಿಯೆಂಬಿವನಾಗಳುಮೊಂದೆ ಕೀಲೆ ದಲ್ ಜಂತ್ರದ ಪಾಪೆಯಂತೊಡನೊಡರ್ಚುವನಿಂದ್ರನುಮಾ ಪ್ರತೀಂದ್ರನುಂ (ಶಾಂತಿಪು. ೬-೦೦೦); ನೆರೆದ ಶರಣಗಣಂಗಳ ಶ್ರೀಪಾದಂಗಳಿಗೆ ಪ್ರಣತಿಗಳನ್ನು ಸಮರ್ಪಿಸಿ ಶರಣದಂಪತಿಗಳು . . . ನಿರ್ವಯಲನೈದಿದರು (ಸೋಮನಾ. ೬೩ ಶ್ವ ಸ್ತಾ ಪನೆ). ೩. ವಿನಯ ; ನಮ್ರತೆ. [ಸಂ.]

**ಪ್ರಣತೆ** 'ಪಣಿತೆ' ನೋ.

**ಪ್ರಣಮ** (ನಾ). ವೇದಮಂತ್ರಗಳ ಆರಂಭದಲ್ಲಿ ಸೇರಿಸುವ ಪವಿತ್ರವಾದ ಬೀಜಾಕ್ಷರ; ಓಂಕಾರ ಪ್ರಣವ : ಇಂತಪ್ಪ ಮಹಾಪ್ರಣಮಂಗಳೇ ಬಸವಣ್ಣನಾಗಿ ಆ ಬಸವಣ್ಣನೆ ಮಹಾಪ್ರಣಮಂಗಳಾಗಿ ತನ್ನ ಮಂತ್ರಕ್ಕೆ ತಾನೆ ಬಂದು ಭಕ್ತಿವಸ್ತುವನಿತ್ತಡೆ (ಸೋಮೇಶ. ೨೦-೬೦); ಪ್ರಣಮೋಚಿತಕಲಶೋದ್ಧಾರಣಮಂತ್ರದಿನಿದ್ರುರ್ವಿರ್ರರುಂ ಕಲಶೋದ್ಧಾರಣಮಂ ಸ್ವಚಿತ್ತವಸತಿಗೆ ಮಣಿಕಲಶಮನಿಡುವ ತೆಱದೆ ಮಾಡಿದರೊಲವಿಂ (ಪಾರ್ಶ್ವಪು. ೦೯-೭೩); ಆ ಸಿಂಹಾಸನದಗ್ರದಲ್ಲಿ ಗುಣತ್ರಯಾತೀತನಾದ ಪ್ರಣಮದರ್ಥವಾದ . . . ಮಹೇಶ್ವರನೊಪ್ಪುತ್ತಿರಲಾಗಿ (ಭೈರಸೂ. I, ೦೭). [< ಸಂ. ಪ್ರಣವ]

**ಪ್ರಣಮನ** (ನಾ). ನಮಸ್ಕಾರ; ವಂದನೆ: ಗಣಧರಾದಿ ಮುನಿ ಸಮುದಾಯಕ್ಕೆ ಅಭ್ಯುತ್ಥಾನಮುಂ ಅಭಿಮುಖಗಮನಮುಂ ಅಂಜಲಿ ಕರಣಮುಂ ಪ್ರಣಮನಮುಂ . . . ಪರೋಕ್ಷೋಪಚಾರವಿನಯಮಕ್ಕುಂ (ತತ್ವಪ್ರ. ೩೯೩). [ಸಂ.]

**ಪ್ರಣಮಪಂಚಾಕ್ಷರಿ** (ನಾ). ಓಂಕಾರವೆಂಬ ಬೀಜಾಕ್ಷರದಿಂದ ಕೂಡಿದ ಪಂಚಾಕ್ಷರಿಮಂತ್ರ; ಓಂನಮಃಶಿವಾಯ ಎಂಬ ಮಂತ್ರ: ಪ್ರಣಮ[ಪಾತಾಂ. ವ] ಪಂಚಾಕ್ಷರಿಯ ಜಪಿಸಿಹೆನೆಂದು ತನುವ ಮಱೆದು ನಿಜಮುಕ್ತಳಾದೆನಯ್ಯಾ (ಲಿಂಗವ. ೪. ೭೯-೬೫). [ಪ್ರಣಮ + ಪಂಚಾಕ್ಷರಿ]

**ಪ್ರಣಮಮೂಲ** (ನಾ). ಓಂಕಾರವನ್ನೆ ತಳಹದಿಯಾಗಿ ಹೊಂದಿ ಪ್ರತಿಪಾದಿತನಾಗುವವನು ; ಪರಮಾತ್ಮ : ತ್ರಿಪುರಕೋಲಾಹಲ ಪ್ರಣಮಮೂಲ (ಶೀಲ್ವ ಪು. ೬-೦೩-೦). [ಪ್ರಣವ + ಮೂಲ₁]

**ಪ್ರಣಯ** (ನಾ). ೧. ಸ್ತ್ರೀಪುರುಷರಲ್ಲಿ ಪರಸ್ಪರವಾಗಿರುವ ನಲ್ಮೆ ; ಗಂಡು ಹೆಣ್ಣಿನ ಅನುರಾಗ : ಅವತಂಸೋತ್ಪಲತಾಡನಂ . . . ತರಳಿತ ತಾಮ್ರಾಧರಂ ಚಕ್ರಿಗಿತ್ತುವಲಂಪಂ ಪ್ರಣಯಪ್ರಕೋಪಸುರತಪ್ರಾರಂಭ ದೊಳ್ ಕಾಂತೆಯಾ (ಆದಿಪು. ೦೨-೯೬); ಪ್ರಣಯದಿನಾದ ಹೋರಟೆಯೆ ಹೋರಟೆ ಮಾಣ್ದೊಡೆ ಕೂಟದೊಳ್ ಮನಂ ತಣಿಯದದೊಂದು ಕೋಟಲೆಯೆ (ಚಂದ್ರಪು. ೬-೩೪); ಸೆಣಸುವ ಮಹೀಶರವೌಳಿಮಣಿಕಿರಣ ಓಲಗಿಸಿತು ಪ್ರಣಯದಮರೀಬಾಲೆಯರ ಪದನಖವನು (ಕುಮಾ. ೮. ೪-೩). ೨. ವಿನಯ; ವಿಧೇಯತೆ: ದೇವಿ ನೀಂ . . . ಪ್ರಣಯಗರ್ಭಭಕ್ತಿಯುಂತೆಯುಂ . . . ಮಹತ್ತ್ವಮಂ ಪಡೆದೆಯೆಂದಮರಸಮುದಯಂ . . . ಸ್ತುತಿಗೆಯ್ದು ಪೋಗೆ (ಜಗ. ೨-೯೬ ವ). ೩. ದಯೆ; ಕರುಣೆ; ಕನಿಕರ. ೪. ಬೇಡಿಕೆ: "ಪ್ರಣಯಃ . . . ನಂಬಿಕೆ, ಯಾಚನೆ, ಪ್ರೇಮ" (ಸಿದ್ಧಾಂತಿ. ೯೦೯). ೫. ಸಂತೋಷ ; ಆನಂದ : ಕೆಲರ್ದಂದುಗ್ರರಣಾಗ್ರಹಪ್ರಣಯ ದಿಂದಾಗಳ್ ಕುರುಕ್ಷೇತ್ರಮಂ ಕಳವೇಟ್ದು (ಶಂಕಭಾ. ೧-೭೯) ; ಫಣಿಪತಿಗಮರಪತಿಗಂ ಪ್ರಣಯಪ್ರದಮಪ್ಪ ಪಿರಿಯ ಸಿರಿಯಂ ದೇವರ್ ತೃಣಮಾತ್ರಮಾಗಿ ಬಗೆವೊಡಮಣುಗುಣರಿದನೆಮ್ಮವಂದಿಗರ್ತಾಳ್ದುವರೇ (ಮಲ್ಲಿಪು. ೯-೯೧); ಪ್ರಣಯಾಲಂಬವಿಧಾಯನರ್ತನವಿಧಂ ಕರ್ಣಾಮೃತಂ ಘರ್ಘರೀ ಕ್ವಣಿತಂ (ಅಪಂಪು. ೩-೯೬). ೬. ಗಾಢವಾದ ಆಪ್ತತೆ, –ಸ್ನೇಹ: ಗುಣಮಿದು ದೋಷಮಿದೆಂದೆಬೀ ಗಣಿವಮನೆತ್ತಱಿಗುಮಶ್ರುತಪ್ರಕೃತಿಜನಂ ತೃಣಸಸ್ಯಘಾಸವಿಷಯಪ್ರಣಯಂ ಸಮವೃತ್ತಿಯಪ್ಪವೋಲ್ ಮೃಗಗಣದೊಳ್ (ಕಬ್ಬಿಗ. ೦-೬); ಪ್ರಣಯಮಿದನನ್ಯಸಾಧಾರಣವೆನಿಪ ಭವತ್ಪ್ರಸಾದ ಮೆಂಬ ಮೃತದಿನಾಂ ತಣಿದೆಂ (ಆದಿಪು.೯-೩೦). ೭. ವಾತ್ಸಲ್ಯ; ಮಮತೆ: ಪ್ರಣಯವಚೋವಿಲಾಸಮಣಮಲ್ಲು ದಿಟಕ್ಕೆ ವಿಚಾರಿಪಂದು ದಕ್ಷಿಣ ಭುಜಮಲ್ತೆ ನೀನೆನಗೆ (ಚಂದ್ರಪು. ೯-೦೯); ತರುಣಿ ತಾರೆಂದೀಶ್ವರಂ ಪಾತ್ರೆಯಂ ಪ್ರಣಯದಿನೀಳ್ದುಕೊಳ್ಳುತ್ತುಂ ಫಣಿಕಟಕಂ ಸವಿದು ಪುಳ್ಗಿಯುಂ ಬಟ್ಟಲನಂಗಣಕಟ್ಟಂ (ವೃಷಭ. ೨೨-೦೯). ೮. ದೇವರು, ಗುರುಹಿರಿಯರಲ್ಲಿ ತೋರುವ ಅತಿಶಯವಾದ ಗೌರವ ; ಭಕ್ತಿ : ಪ್ರಣಯಂ ಕೈಮಿಗೆ . . . ಪೊಡೆವಟ್ಟಂ ರಾಜರಾಜಚ್ಚಿರೋಮಣಿ ವಿಶ್ವಂಭರನಾ ತ್ರಿಲೋಕವಿಭು ವಿಶ್ವೇಶಂಗೆ ಸದ್ಭಕ್ತಿಯಿಂ (ಕುಸುಮಾ. ೦೩-೦೯೯); ಪ್ರಣಯಂ ಕೆಯ್ಗಣ್ಮಿರಲ್ ಕಣ್ಮಲರೊಳಲಸದಾನಂದವಾರ್ಬಿಂದುಗಳ್ ಸಂದಣಿಸಲ್ ಸೌರಂಭದಿಂ ವಂದಿಸಿ ಮುನಿಪತಿಯಂ (ಧರ್ಮಾ. ೯-೦೨೨). ೯. ಮನಸ್ಸು ನಿರ್ಮಲವಾಗಿರುವುದು: '' ಪ್ರಸಾದಂ ಪ್ರಣಯಂ '' (ವಸ್ತುಕೋ. ೦೦೩-೦೭); ''ಪ್ರಣಯಂ ಪ್ರಸಾದವೆನೆ ತಿಳಿವಕ್ಕು'' (ಮಂಗರಾ. ೦೩೯-೩೩). ೧೦. ಮುಂದಾಳು; ಮುಖಂಡ; ನಾಯಕ. ೧೧. ಮಾರ್ಗದರ್ಶನ ; ನೇತೃತ್ವ. ೧೨. ಮುಕ್ತಿ ; ಮೋಕ್ಷ. [ಸಂ.]

**ಪ್ರಣಯಕಲಹ** (ನಾ). (ಪ್ರೇಮಿಗಳು) ಪ್ರೀತಿಗಾಗಿ ಮಾಡುವ ಹುಸಿಜಗಳ : ಒಂದೆಡೆಯೊಳೊರ್ವಂ ಪ್ರಣಯಕಲಹಕಲುಷಿತೆಯಾದ ವಲ್ಲಭೆಯ ನಿರ್ಭರಪ್ರೇಮಭರದಿನೆಱಗಿದ ನಿಜಸಖನ ಸೌಭಾಗ್ಯಮನೆ ಕೊಂಡು ಕೊನೆದು (ಮಲ್ಲಿಪು. ೬-೬೫); ಪರವೆಗೆ ನಂಬಿಗೆ ಪಲವುಕಾಲದಗಲ್ಕೆ ಪಯನಾಗಿ ಪ್ರಣಯಕಲಹಂ ಕಾಲೂಱಿ (ನಂಬಿರ. ೦೬-೯೬). [ಸಂ.]

**ಪ್ರಣಯಕೇಲಿ, ಪ್ರಣಯಕೇಳಿ** (ನಾ). ಶೃಂಗಾರದ ಕ್ರೀಡೆ ; ಸುರತ ; ಸಂಭೋಗ: ಅದು ಪ್ರಣಯಕೇಲಿಯಲ್ಲ ಪ್ರಾಣಕಲಹ! (ಮೂಂದಿಮ. ೯೭). **ಪ್ರಣಯಕೇಳಿ:** ದೇವಕೀದೇವಿ . . . ಬಹುವಿಧಪ್ರಣಯಕೇಳೀಕಳಾವಿಡಂಬ ಸಂಭೋಗಸುಖಸುಧಾರಸತೃಪ್ತಿಯಿಂ ಸುಖಸುಪ್ತೆಯಾಗಿರ್ಪಿನಂ (ಜಗ. ೨-೩೯ ವ). [ಸಂ.]

**ಪ್ರಣಯಕೇಳಿ** 'ಪ್ರಣಯಕೇಲಿ' ನೋ.

**ಪ್ರಣಯಚೇಷ್ಟೆ** (ನಾ). (ಪ್ರೇಮಿಗಳು) ಪ್ರೀತಿಯಲ್ಲಿ ಮಾಡುವ ಆಂಗಿಕವಾದ ಚಲನವಲನ ಮುಂತಾದುವು: ಅವನ ವಿದ್ವತ್ಪ್ರಕಾಶನವೂ, ವಿಧವೆಯೂ ದಾಸಿಯೂ ಆದ ಆಶ್ಮನಿಯೊಡನೆ ಪ್ರಣಯಚೇಷ್ಟೆಯೂ ತುಂಬ ಆಭಾಸವಾಗಿವೆ ( ಬಂಕಿಮ. ೦೩೩ ); ಆಗಾಗ್ಗೆ ತನ್ನ ದೃಷ್ಟಿಪಥಕ್ಕೆ

ಬೀಳುತ್ತಿದ್ದ ಪುರುಷರ ಪ್ರಣಯಚೇಷ್ಟೆಗಳಿಂದ ಅವಳ ಹೃದಯ ತಲ್ಲಣಿಸು ತ್ತಿತ್ತು (ಕುಕಮ. ೪೯೬). [ಸಂ. ಪ್ರಣಯ ಚೇಷ್ಟಾ]

**ಪ್ರಣಯದೌತ್ಯ** (ನಾ). ಒಬ್ಬರ ಅನುರಾಗವನ್ನು ಮತ್ತೊಬ್ಬರಿಗೆ ತಿಳಿಸುವ ಮಧ್ಯಸ್ಥಿಕೆ,–ದೂತಭಾವ : ದಮಯಂತಿಯ ಬಗೆಗೆ ತನಗಿದ್ದ ಪ್ರೀತಿಯನ್ನೂ ಅವರಿಗಾಗಿ ಬದಿಗೊತ್ತಿ ಅವರ ಪರವಾಗಿ ಪ್ರಣಯದೌತ್ಯ ವನ್ನು ವಹಿಸುವಂಥ ಮನಃಸ್ಥೈರ್ಯ ಅವನಲ್ಲಿದೆ (ಕಂಚಿ. ೧೦೪). [ಸಂ.]

**ಪ್ರಣಯಪ್ರಸಂಗ** (ನಾ). ಪ್ರೇಮದ ಘಟನೆ : ಕತ್ತಲೆಯಲ್ಲಿ ಹಕ್ಕಲದ ದಾರಿಯಲ್ಲಿ ಪ್ರಣಯಪ್ರಸಂಗ ನಡೆಯುತ್ತದೆ ಎಂಬ ಕಲ್ಪನೆಯೂ ಅವರಿಗಿರ ಲಿಲ್ಲ (ಕದ್ಮಸ. ೦೬೪). [ಸಂ.]

**ಪ್ರಣಯಭಿಕ್ಷೆ** (ನಾ). ಪ್ರೇಮವನ್ನು ನೀಡುವುದು ; ಪ್ರೀತಿಯ ದಾನ : ವೀರ ಅರ್ಜುನದೇವ, ಅಪರಿಚಿತೆಯಾದಡಂ ನಿನ್ನ ಪ್ರೇಯಸಿ ನಾನು ಪ್ರಣಯಭಿಕ್ಷೆಯ ಬೇಡಿ ಬಂದೆ ನಾಂ (ಕಣ್ವಾಂಗ. ೨೪–೬೩೦). [ಸಂ. ಪ್ರಣಯಭಿಕ್ಷಾ]

**ಪ್ರಣಯಾಲಂಬಿನಿ** (ನಾ). ವಾತ್ಸಲ್ಯವನ್ನು ಹೊಂದಿರುವವಳು; ಮಮತೆಯುಳ್ಳವಳು : ಪ್ರಣಯಾಲಂಬಿನಿಯಂತೆ ಪೂತನಿ ಯಶೋದಾ ಕಾರದಿಂ ಬಂದು (ಜಗಾ. ೩–೨೪). [ಸಂ. ಪ್ರಣಯಾಲಂಬಿನೀ]

**ಪ್ರಣಯಿ** (ಗು). ೧. ಪ್ರೀತಿಯಿಂದಿರುವ ; ಅನುರಕ್ತನಾದ : ಪ್ರಣಯಿಃ ಜನಕ್ಕೆ ಕಾಮನಸಿತೋತ್ಪಲವರ್ಣ್ಣನವನ್ (ಎಕ. XI. ಚಳ್ಳಕು. ೯೩–೩; ಸು. ೩೦೦ ?). ೨. ವಿಶ್ವಾಸಪಾತ್ರನಾದ. ೩. ಮಮತೆಯುಳ್ಳ. (ನಾ). ೪. ಪ್ರೀತಿಯುಳ್ಳವನು ; ನಲ್ಲ ; ಕಾಂತ : ಉಪಮೆಗಳಲ್ಲಿ ಸುಂದರವಾದ ಯುವಕ, ಸುಂದರಳಾದ ಯುವತಿ, ಪ್ರಣಯಿ, ಪ್ರಣಯಿನಿ–ಇತ್ಯಾದಿ ಮಾತುಗಳು ಬರುತ್ತವೆ (ಶ್ರಾಂದಸ. ೦೦೦). ೫. ಗಂಡ ; ಪತಿ : "ಪ್ರಭು ಪರಿವೃಢನೀಶಂ . . . ವಲ್ಲಭಂ ಪ್ರಿಯಂ ಪ್ರಣಯಿ ಕಾಂತನಿಷ್ಟಂ ದಯಿತಂ" (ಚನ್ನುಕೋ. ೯೯–೯). [ಸಂ. ಪ್ರಣಯಿನ್]

**ಪ್ರಣಯಿನಿ** (ನಾ). ಪ್ರೀತಿಯುಳ್ಳವಳು ; ನಲ್ಲೆ ; ಕಾಂತೆ : ಪ್ರಣಯಿ ನ್ಯಾಸಕ್ತಿಯುಕ್ತಂ ಗಗನಗಹನಸದ್ಯುಕ್ತಿಯವ್ಯಕ್ತಮಲ್ತೇ (ಚಂದ್ರಕ್ರ. ೦–೬೪) ; ತನ್ನ ಪ್ರಣಯಿನಿಯ ವಿಷಯದಲ್ಲಿ 'ಈಕೆಯು ಯೋಗ್ಯನಾದ ವರನಿಲ್ಲದೆ ಶೋಚನೀಯಳಾಗಿರುವಳು' ಎಂದು ಹೇಳುವುದು ಅಸಂಭವ (ಕೃಷ್ಣಾಕೋ. ೨೨೨) ; ಉಪಮೆಗಳಲ್ಲಿ . . . ಪ್ರಣಯಿ, ಪ್ರಣಯಿನಿ ಇತ್ಯಾದಿ ಮಾತು ಗಳು ಬರುತ್ತವೆ (ಶಾಂದಸ. ೦೦೦). ೨. ಹೆಂಡತಿ ; ಪತ್ನಿ. [ಸಂ. ಪ್ರಣಯಿನೀ]

**ಪ್ರಣವ** (ನಾ). ೧. ವೇದಮಂತ್ರಗಳ ಪ್ರಾರಂಭದಲ್ಲಿ ಸೇರಿಸುವ ಪವಿತ್ರವಾದ ಬೀಜಾಕ್ಷರ ; ಓಂಕಾರ ; ಈ ಓಂಕಾರಕ್ಕೆ ಪ್ರಣವ ಅಥವಾ ಏಕಾಕ್ಷರ ಎಂಬ ಹೆಸರೂ ಇದೆ. ಓಂಕಾರದಲ್ಲಿ 'ಅ' 'ಉ' ಮತ್ತು 'ಮ್' ಎಂಬ ಮೂರು ಅಕ್ಷರಗಳ ಸಮ್ಮಿಲನವಿದೆ. 'ಅ' ಎನ್ನುವುದು ವೈಶ್ವಾನರ, 'ಉ' ಎನ್ನುವುದು ತೈಜಸ, 'ಮ್' ಎಂಬುದು ಪ್ರಜ್ಞ–ಇವುಗಳ ಸಮ್ಮಿಲನದಿಂದ ಓಂಕಾರ ಉಂಟಾಗು ತ್ತದೆ ಎಂದು ನಂಬಲಾಗಿದೆ. ಬರಬರುತ್ತ ಇದು ಬ್ರಹ್ಮ, ವಿಷ್ಣು, ಮಹೇಶ್ವರರ ಕೂಟವನ್ನು ತಿಳಿಸುತ್ತದೆ: "ಓಂಕಾರಃ, ಪ್ರಣವಃ (ಪ್ರೋಕ್ತಃ)—ಈ ೨ ಓಂಕಾರಕ್ಕೆ ಪೆಸರ್" (ಹಲಾಯು. ೩–೮) ; ಪ್ರಣವೋ ಚ್ಚಾರಣಪೂರ್ವಪ್ರಣೀತನಾಂದೀಸ್ತವಂಗಳಂ . . . ಗಂಭೀರಪ್ರಣಾದ ದಿಂದೋದಿದರ್ ಮರುದ್ಗಣರಮಣರ್ (ಶಶೀಕೃ. ೦೪–೨೨); ಅಕಾರವೇ ನಾದ ಉಕಾರವೇ ಬಿಂದು ಮಕಾರವೇ ಕಳೆ ಇಂತೀ ತ್ರಿವಿಧಕ್ಕೆ ತಾಯಿ ಚಿತ್ತು ಇಂತೀ ನಾಲ್ಕು ಒಂದಾದಲ್ಲು ಓಂಕಾರವೆಂಬ ಪ್ರಣವ ಉತ್ಪತ್ತಿಯಾಯಿತ್ತು ಆ ಓಂಕಾರವೆಂಬ ಪ್ರಣವವೇ ಅಖಂಡಪರಿಪೂರ್ಣಗೋಳಕಾಕಾರ ತೇಜೋ ಮೂರ್ತಿಯಪ್ಪ ಮಹಾಲಿಂಗ ನೋಡಾ (ಸಿದ್ಧೇಶ. ೦೦–೩೩); ಅಣುರೇಣು ವಂದ್ಯದ ಪ್ರಣವದ ಬೀಜವನು ಅಣುವಿನೊಳಗಣುವೆಂದಱಿದ ಮಹಾತ್ಮನು ಶ್ರೀಣಯ ತಾನಕ್ಕು (ಸರ್ವಜ್ಞ. ೩೦೩). ೨. ಒಂದು ಬಗೆಯ ವಾದ್ಯ. ೩. ಪರಮಾತ್ಮ ; ಭಗವಂತ. ೪. ನವೀನವಾದುದು : 'ಪ್ರಣವೋತ್ಥ' ಪರಾ. [ಸಂ.]

**ಪ್ರಣವನ್ಯಾಸ** (ನಾ). ವೈದಿಕಮಂತ್ರಗಳನ್ನು ಪಠನಮಾಡುವುದಕ್ಕೆ ಮುಂಚೆ ಓಂಕಾರವನ್ನು ಉಚ್ಚರಿಸುವುದು : ಪ್ರತ್ಯೇಕಾಂಗುಳಿ ಗಳಲ್ಲಿಯೂ ಸಮುಚ್ಚೀಕರಿಸಿ ಪ್ರಣವನ್ಯಾಸಮಂ ಮಾಡುವುದು (ಶಿವೇಶ. ೬೩). [ಸಂ.]

**ಪ್ರಣವಬೀಜ** (ನಾ). ಪ್ರಣವವೆಂಬ ಬೀಜಾಕ್ಷರ ; ಓಂಕಾರ : ವಿಶ್ವಮಯನಾಗಿ ವಿಶ್ವಾಸಕ್ಕೆ ಒಡಲಾಗಿ ಪ್ರಣವಬೀಜವಾಗಿ ಉತ್ಪತ್ತಿ ಸ್ಥಿತಿ ಲಯಕ್ಕೆ ಕರ್ತರ ಕೊಟ್ಟು . . . ನಿನ್ನ ಲೀಲೆಗೆ ನೀನೇ ಹುಂಗಾದೆಯಲ್ಲಾ (ಕೋಳೂರು. ೩೦–೨೦೦). [ಸಂ.]

**ಪ್ರಣವಮಂತ್ರ** (ನಾ). ಓಂಕಾರರೂಪವಾದ ಮಂತ್ರ : ಪಂಚಬ್ರಹ್ಮವ ಕೆಡಿಸಿತ್ತು ಪ್ರಣವಮಂತ್ರವನೀಡಾಡಿತ್ತಲ್ಲಾ . . . ಕೂಡಲಸಂಗಯ್ಯನ ಭಕ್ತಿಗಜ ಹೋ (ಬಸವ. ೬೪೬). [ಸಂ.]

**ಪ್ರಣವಸ್ವರೂಪ** (ನಾ). ಓಂಕಾರಸ್ವರೂಪನಾದವನು ; ಪರಮಾತ್ಮ: ನಿಮ್ಮ ಮಹಿಮೆಯ ಪ್ರಣವಸ್ವರೂಪಂಗಲ್ಲದೆ ಕಾಣಲಾರಿಗೆಯೂ ಬಾರದಯ್ಯಾ (ಬಸವ. ೬೨೩) ; ಎಲೆ ಅಯ್ಯಾ ಎಲೆ ಅಯ್ಯಾ ಪ್ರಣವಸ್ವರೂಪ ಬಸವಾ (ಚೆಂಬ. ೪. ೯–೦೬). [ಸಂ.]

**ಪ್ರಣವೋತ್ಥ** (ಗು). ೧. ಓಂಕಾರದಿಂದ ಹೊರಟ. ೨. ನವೀನತೆ ಯಿಂದ ಉಂಟಾದ. ೧, ೨ : ಪ್ರಣವೋತ್ಥ ಶ್ರುತಿಮಧುರಕ್ವಣಿತಂ ದ್ವಿಜಮುಖ್ಯವೃತ್ತಿ ಕೃಷ್ಣರುಚಿತ್ವಂ ಪೆಣೆದಿರೆ ಪುರೋಹಿತಬ್ರಾಹ್ಮಣನೆನಿಸಿ ದುದತನು ನೃಪತಿಗೀ ಪರಪುಷ್ಟಂ (ಚಂದ್ರಕ್ರ. ೬–೮೪). [ಸಂ.]

**ಪ್ರಣಷ್ಟ** (ಗು). ೧. ನಾಶಮಾಡಿದ; ಪರಿಹರಿಸಿದ: ಪ್ರಣಷ್ಟಪ್ರಮಾದ ಪ್ರಕೃಷ್ಟಪ್ರಮೋದ ಪ್ರಧೃಷ್ಟದ್ಗಭಸ್ತೇ ನಮಸ್ತೇ ನಮಸ್ತೇ (ಅಜಿತ. ೬–೦೫ ೩). ೨. ನಾಶಹೊಂದಿದ. [ಸಂ.]

**ಪ್ರಣಾದ** (ನಾ). ೧. ದೊಡ್ಡ ನಾದ, –ಶಬ್ದ: ಪಟಹಪ್ರಣಾದಮಂ ಘನರವವೆಂದೆ ನರ್ತಿಸುವ ಕೇಕಿಗಳಿಂ ಕಡುರಯ್ಯಮಪ್ಪ ಹಸ್ತಿನಪುರಮಂ ಜಿತೇಂದ್ರಪುರಮಂ ಪರಮೇಶ್ವರರಾಗಳೆಯ್ದಿದರ್ (ಶಂಕಪು. ೯–೩); ಆಗಡೆ ಪೊಣ್ಮತ್ತಲ್ಲಿ ಮಧ್ಯಂದಿನಸಮಯಸಮುದ್ಭೂತಶಂಖಪ್ರಣಾದಂ (ಆದಿಪು. ೩೩); ಘಟಿಕಾಭೇರೀ ಭೂರಿಪ್ರಣಾದವಮೊಗೆದತ್ತಾದಂ (ಚಂದ್ರಕ್ರ. ೬–೦೬). ೨. ಗಟ್ಟಿಯಾದ ಕೂಗು ; ಗರ್ಜನೆ. ೩. ಆರ್ತನಾದ. ೪. [ಕಾಮಶಾ] ಸಂಭೋಗಸಮಯದ ಸೀತ್ಕಾರ: ಮಣಿತ: "ಪ್ರಣಾದಃ_೧_ಅನುರಾಗಜಃ_ಅನುರಾಗದ ದೆಸೆಯಿಂದ ಹುಟ್ಟಿದ ಶಬ್ದ" (ಸಿದ್ಧಾಗಿ. ೩೨). [ಸಂ.]

**ಪ್ರಣಾಮ** (ನಾ). ೧. ಬಗ್ಗುವುದು; ಬಾಗುವುದು. ೨. ನಮಸ್ಕಾರ; ವಂದನೆ : ಕಾಯದಿಗ್ಬಂಧ ಪ್ರಣಾಮ ವಿಧೇಯವರ್ತನೆ ಯೋಗಸಿದ್ಧಿ ನಿಕಾಯ ನಾಲ್ಕಟ ಇಂದ್ರಿಯಸ್ಥಿತಿಗತಿಯನಾರ್ಯದು . . . ನಿಶ್ಚಯಿಸ ಬೇಹುದು (ಕುಮಾ. ಉ. ೯–೩೩)); ಮನೆಯವರಿಗೆಲ್ಲ ನನ್ನ ಪ್ರಣಾಮಗಳು (ಕಂಬಸು. ೦೨೬). ೩. ಸಾಷ್ಟಾಂಗನಮಸ್ಕಾರ. [ಸಂ.]

**ಪ್ರಣಾಯ್ಯ** (ನಾ). ೧. ಪ್ರೀತಿಪಾತ್ರನಾದವನು ; ಪ್ರಿಯ. ೨. ಪ್ರಾಮಾಣಿಕ ; ಋಜುಬುದ್ಧಿಯುಳ್ಳವನು. ೩. ಯೋಗ್ಯನಾದ ವನು; ಅರ್ಹನಾದವನು. ೪. ಇಷ್ಟವಾಗದವನು; ಬೇಡವಾಗಿ ರುವವನು: "ಅಕ್ಷಿಗತಃ, ದ್ವೇಷ್ಯಃ, ಪ್ರಣಾಯ್ಯಃ, ಅಸಮ್ಮತಃ—ಈ ೪ ಅನಿಷ್ಟಂ" (ಹಲಾಯು. ೬೦–೨೦೦). ೫. ಐಹಿಕವಿಷಯಂಗಳಲ್ಲಿ

ಆಸಕ್ತಿಯಿಲ್ಲದವನು; ವಿರಕ್ತ. ೬. ಬಿಡಬೇಕಾದುದು; ತ್ಯಾಜ್ಯ. [ಸಂ.]

**ಪ್ರಣಾಲ**, ಪ್ರಣಾಳ (ನಾ). ನೀರು ಮುಂತಾದುವು ಹರಿಯುವ ಮಾರ್ಗ; ನೀರಿನ ದೋಣಿ: 'ಜಲಪ್ರಣಾಲ' ಪರಾ. **ಪ್ರಣಾಳ** : ತ್ರಿಭುವನಪ್ರಾಸಾದರಮ್ಯಪ್ರಣಾಳದವೋಲ್ ಕಣ್ಗೆಸೆವಿಂದುಮಂಡಲದಿನೇಂ ಗಂಗಾಪ್ರವಾಹಂಗಳುಣ್ಮಿದುವೋ (ಕಾದಂಪೂ. ೯೯೯) ; ಸುಟಿಪೆಳವೆಂಡಿರ ಕಡೆಗಣ್ಬಟ್ಟೆಯಿಂ ಪಸರಿಸುವ ಬೆಳಗು ಬೆಳದಿಂಗಳ ಪೊಂಪುಳಿಯೆಂದು ಸುರಿವುವದಱೊಳ್ ಮುಟೆಯಿಲ್ಲದೆಯುಂ ಪ್ರಣಾಳಶಶಿಕಾಂತಂಗಳ್ (ಚಂದ್ರಪ. ೬–೯೭). [ಸಂ.]

**ಪ್ರಣಾಲಿ**, ಪ್ರಣಾಳಿ (ನಾ). ೧. = ಪ್ರಣಾಲ. ೨. ಅವಿಚ್ಛಿನ್ನವಾಗಿ ಮುಂದುವರಿಯುವುದು; ಅನುಕ್ರಮ; ಸರಣಿ: ತನ್ನ ಹೃದಯೇಶ್ವರಿಯನನ್ಯಕಾಪುರುಷರಿಂ ಪೊರೆವ ಹರಕ್ಯಪಾರೂಪಿಯೇಂ ಚಾಪಮಾತ್ರಮೆ ಪೇಳಾ? ಶಿವೇಚ್ಛಾಪ್ರಣಾಲಿಯೆ ದಿಟಂ ! (ಶ್ರೀರಾಮಾ. ೩೫–೨೦೯); ಈ ವರೆಗೆ ನಾವು ಪಾಶ್ಚಾತ್ಯಶಾಸ್ತ್ರಗಳನ್ನೆಲ್ಲ ಹೇಗೆ ವೈಜ್ಞಾನಿಕ, ಐತಿಹಾಸಿಕ ಮತ್ತು ಯುಕ್ತಿ ಮೂಲಕ ಪ್ರಣಾಲಿಗಳ ಮೂಲಕ ಪರಿಶೀಲಿಸುತ್ತಾ ಬರುವೆವೊ ಹಾಗೆ ನಮ್ಮ ಶಾಸ್ತ್ರಗಳನ್ನು ಮಾಡುತ್ತಿಲ್ಲ (ಶಿವಂದ. I. ೩೬೦). **ಪ್ರಣಾಳಿ**: ೧. "ಪ್ರಣಾಳೀ, ಜಳಪದ್ಧತಿ—ಈ ೨ ಹರಿನಾಳಿ" (ಹಲಾಯು. ೧೦೩–೬೩); ಎರಡುಂ ತ್ರಟಮಾಳಿಮೀಳಿತು ಸರೋವರಂ ಸುರಿವ ಮದಜಲಂ ನದಿಯೆನೆ ಪುಷ್ಕರ ವರಕರಪ್ರಣಾಳೀಪರಿಕಳಿತಂ ಸೀಳಗಿರಿಗೆ ಕರಿ ದೊರೆಯೆನಿಕುಂ (ಶಾಕ್ಯೇಶ. ೯–೦೨೯). [ಸಂ. ಪ್ರಣಾಲೀ]

**ಪ್ರಣಾಲಿಕೆ**, ಪ್ರಣಾಳಿಕೆ (ನಾ). ೧. = ಪ್ರಣಾಲ. ೨. = ಪ್ರಣಾಲಿ ೨. ೩. ಅಭಿಪ್ರಾಯಂಗಳನ್ನು ಪ್ರಚುರಪಡಿಸಲು ಉಪಯೋಗಿಸುವ ಮಾಧ್ಯಮ : ಸಾಹಿತ್ಯದ ವಿವಿಧಪ್ರಕಾರಗಳು ತನ್ನ ಸಾಮಾಜಿಕತೆಯ ಹೊರಹೊಮ್ಮುವಿಕೆಗಾಗಿ ಅವನು ತೆರೆದ ಹಲವು ಪ್ರಣಾಲಿಕೆಗಳೆಂದೂ . . . ಪರಿಗಣಿಸಬೇಕು (ಸಾಹಿತ್ಯ. ೬). **ಪ್ರಣಾಳಿಕೆ**: ೩. ಈ ದಿವ್ಯ ಸಂದೇಶ ಉಪನಿಷತ್ತು, ಗೀತಾ, ಬ್ರಹ್ಮಸೂತ್ರ . . . ಇತ್ಯಾದಿ ನಾನಾ ಪ್ರಣಾಳಿಕೆಗಳ ಮೂಲಕ ಅವಿಚ್ಛಿನ್ನವಾಗಿ ಪ್ರವಹಿಸಿ . . . ತನ್ನ ಪ್ರಭಾವವನ್ನು ಬೀರಿದೆ (ಪುಣ್ಯಕ. ೯೩ ೩೬೬೪). ೪. ತತ್ತ್ವ, ರಾಜನೀತಿ, ಸಾಹಿತ್ಯ ಮುಂತಾದುವುಗಳಲ್ಲಿ ಯಾವುದೊಂದರ ರೀತಿನೀತಿಗಳನ್ನು ಪಟ್ಟಿಮಾಡಿ ಪ್ರಚುರಪಡಿಸುವ ಘೋಷಣೆಯ ಬರಹ,—ಹೇಳಿಕೆ : ವಿಶ್ವಸಂಸ್ಥೆಯ ಸರ್ವತೋಮುಖ ಉದ್ದೇಶಗಳನ್ನೂ ಮೂಲಭೂತತತ್ತ್ವಗಳನ್ನೂ ಪ್ರಣಾಳಿಕೆಯಲ್ಲಿ (Charter) ವಿವರಿಸಲಾಗಿದೆ (ಅಂತಸಂ. ೦೫); ಶಾಲೆಯ ಕಾರ್ಯಕ್ರಮಗಳ ಪ್ರಣಾಳಿಕೆ, ಶಾಲೆಯ ವಾರ್ಷಿಕ ವರದಿ, ಶಾಲೆಯ ಪತ್ರಿಕೆ—ಮುಂತಾದುವನ್ನು ಪೋಷಕರಿಗೂ ಬೋಧಕರಿಗೂ ಹಂಚುವುದು ಅಗತ್ಯ (ಶಿಕ್ಷದ. ೩೨೦). [ಸಂ. ಪ್ರಣಾಲಿಕಾ]

**ಪ್ರಣಾಶ** (ನಾ). ೧. ಹಾಳಾಗುವುದು; ಇಲ್ಲದಂತಾಗುವುದು : ಈ ಪ್ರಣಾಶದಿಂದ ಪಾರಾದ ಒಂದೇ ಒಂದು ಗ್ರಂಥವೆಂದರೆ ಈಶ್ವರಕೃಷ್ಣನ "ಸಾಂಖ್ಯಕಾರಿಕೆ" (ತತ್ತ್ವಪ್ರಾ. ೨೩೯). ೨. ಸಾವು ; ಮರಣ : ಅದು ಬುದ್ಧಿನಾಶದವರೆಗೂ ಹೋಯಿತು. ಆದರೆ ಅದಕ್ಕೆ ಸಕಾಲದಲ್ಲಿ ತಕ್ಕ ಪ್ರತೀಕಾರ, ಚಿಕಿತ್ಸೆ ನಡೆದದ್ದರಿಂದ ಅದು ಅವಳ ಪ್ರಣಾಶದಲ್ಲಿ ಪರಿಣಮಿಸಲಿಲ್ಲ (ಬಂಕಿಮ. ೨೦೯). [ಸಂ.]

**ಪ್ರಣಾಳ** 'ಪ್ರಣಾಲ' ನೋ.

**ಪ್ರಣಾಳಿ** 'ಪ್ರಣಾಲಿ' ನೋ.

**ಪ್ರಣಾಳಿಕೆ** 'ಪ್ರಣಾಲಿಕೆ' ನೋ.

**ಪ್ರಣಿತೆ** 'ಪಣತೆ' ನೋ.

**ಪ್ರಣಿಧಾನ** (ನಾ). ೧. ಸರಿಯಾಗಿ ಇಡುವುದು,—ಇರಿಸುವುದು. ೨. ಅಧಿಕವಾದ ಪ್ರಯತ್ನ,—ಸಾಹಸ. ೩. ಕಣ್ಣು ಅಥವಾ ಬುದ್ಧಿಯನ್ನು ಒಂದು ಕಡೆ ನೆಲೆಗೊಳಿಸುವುದು. ೪. ತಪಸ್ಸು: ಧ್ಯಾನ; ಸಮಾಧಿ : "ಪ್ರಣಿಧಾನಂ, ಸಮಾಧಾನಂ, ಸಮಾಧಿಃ—ಈ ೩ ಸಮಾಧಿಯ ಪೆಸರ್" (ಹಲಾಯು. ೨೦–೦೨೯); ಪತಂಜಲಿಯ ಪುನರ್ಜನ್ಮಗಳ ಬಂಧದಿಂದ ಮುಕ್ತಿಗೆ ಒಯ್ಯುವ ಜ್ಞಾನಕ್ಕೆ ಭಕ್ತಿಪೂರ್ವಕವಾದ ಈಶ್ವರಪ್ರಣಿಧಾನವೊಂದೇ ಮಾರ್ಗವೆಂದು ಹೇಳುವುದಿಲ್ಲ (ತತ್ತ್ವಪ್ರಾ. ೨೬೯). ೫. (ದೇವರಿಗಾಗಿ) ಎಲ್ಲ ಕರ್ಮಫಲಗಳನ್ನು ತ್ಯಾಗ ಮಾಡುವಿಕೆ : ಪ್ರಣಿಧಾನವೆಂದರೆ ಈಶ್ವರನನ್ನು ಕುರಿತು ನಿರಪೇಕ್ಷವಾದ, ನಿಷ್ಕಲಂಕವಾದ ಪೂಜೆ (ಧರ್ಮಸಾ. ೨೨). ೬. ಭಕ್ತಿ. [ಸಂ.]

**ಪ್ರಣಿಧಿ** (ನಾ). ೧. ಗೂಢಚಾರನಾಗಿರುವಿಕೆ ; ಬೇಹುಗಾರಿಕೆ. ೨. ಬೇಹುಗಾರ; ಗುಪ್ತಚಾರ; ಗೂಢಚಾರ : "ಪ್ರಣಿಧಿಃ, ಗುಪ್ತಪೂರುಷಃ—ಈ ೨ ಗುಪ್ತಹೇರಿಗಗಳ್" (ಹಲಾಯು. ೬೦–೨೬೦); ಇತ್ತ ದುರ್ಯೋಧನನ ಗೂಢಪ್ರಣಿಧಿಗಳಾ ಮಾತಂ ಜಲಕ್ಕನಱಿದು (ಕಂಚಿಕಾ. ೯–೮೨ ಪ); ವಿವಿಧವೇಷವಿದ್ಯಾವಿಶಾರದಪ್ರಚ್ಛನ್ನಪ್ರಣಿಧಿಗಳಂ ಪ್ರಯೋಗಿಸಿಯುಂ . . . ಸಾಮ್ರಾಜ್ಯಮಂ ನಿಷ್ಕಂಟಕಮುಂ ನಿರಾತಂಕಮುಂ ನಿಜಾಯತ್ತಮುಮೆನಿಸಿದಂ (ಚಂದ್ರಪ. ೨–೬೦). ೩. ರಾಯಭಾರಿ : "ಒಂದು ದೇಶದ ರಾಜನಿಗಾಗಲಿ ರಾಜ್ಯಕ್ಕಾಗಲಿ ಪ್ರತಿನಿಧಿಯಾಗಿ ಪರರಾಜ್ಯದಲ್ಲಿ ಸಾರ್ವಕಾಲಿಕವಾಗಿರುವ ನಿಯೋಗಿ ; ಪ್ರಣಿಧಿ ; ರಾಜದೂತ ; ನಿಯೋಗಿ" (Ambassador. ಇಂಕಾ). ೪. ಬೇಡಿಕೆ; ಪ್ರಾರ್ಥನೆ : "ಪ್ರಣಿಧಿ:—ಪ್ರಾರ್ಥನೆ, ಬೇಹಿನ ಗೂಢಚಾರ" (ಸಿದ್ಧಾಂತಿ. ೩೯೯). ೫. ಆನೆಯ ಅನುಚರ : ಆನೆಯನ್ನು ಪಳಗಿಸಿ ಹತೋಟಿ ಮಾಡುವವನು : ನಯನಿಪುಣಸೂತ್ರಧಾರರ್ ನಿಯಮಿಸುವರ್ ಭದ್ರಮಂದಮೃಗಸಂಕೀರ್ಣಾನ್ವಯದ ನೃಪಕರಿಗಳಂ ಪ್ರಣಿಧಿಯೊಡಂಬಡಟೆ ಸಕಳಶಿಕ್ಷೆ ಕಣ್ಗೊಳಿಸುವಿನೆ (ಕೃಷ್ಣಕ. ೨–೫೬). ೬. ಗಮನ; ಎಚ್ಚರಿಕೆ; ಅವಧಾನ. [ಸಂ.]

**ಪ್ರಣಿಪತ್ತಿ** (ನಾ). = ಪ್ರಣಿಪಾತ ೧ : ಇತ್ತಲೀ ಬಸವಣ್ಣನಿಂ ಪ್ರಣಿಪತ್ತಿಯಂ ಕೈಗೊಳುತ ಕೂರ್ತು (ಬಸಪು. ೨೨–೬). [ಸಂ.]

**ಪ್ರಣಿಪಾತ** (ನಾ). ೧. ನಮಸ್ಕರಿಸುವುದು ; ನಮಸ್ಕಾರ : ಬರ್ದುಂಕಿದೊರುಂ ಪಿರಿಯನ ಮುನಿಸೆಂಬುದು ಪ್ರಣಿಪಾತಪ್ರತೀಕಾರಮೆಂದಱಿದರಸನ ದಂಡನಾಯಕಂಗೆ ಶರಣಾಗತರಾಗಿ ನಿಜಶಿರಸ್ತ್ರಾಣಪರಾಯಣರಾದರ್ (ಶಾಂತಿಪು. ೧೧–೨೪ ಪ); ತಮ್ಮ ಮಗನಂತಿರುವ ನನಗೆ ಸಾಷ್ಟಾಂಗಪ್ರಣಿಪಾತ ಮಾಡುವುದುಂಟೇ ಎಲ್ಲಿಯಾದರೂ! (ಗೌರಾಂಗ. ೩೨). ೨. ಕಾಲಿಗೆ ಬಿದ್ದು ಶರಣಾಗತನಾಗುವುದು. [ಸಂ.]

**ಪ್ರಣಿಹಿತ** (ಗು). ೧. ಇರಿಸಿದ; ಸ್ಥಾಪಿಸಿದ : ಪ್ರಣಿಹಿತಕಲಶಾವಳಿ ಕಿಂಕಿಣಿಯೊಳ್ ಪೊಱಮಡುವ ಪುಗುವ ಜನದುಲಿಯುಲಿಯೊಳ್ ತೋಣೆಯಾಗೆ . . . ಗೋಪುರಂ ಸೊಗಯಿಸುಗುಂ (ಕೃಷ್ಣಕ. ೨–೬೬). ೨. ಕೊಟ್ಟ; ನೀಡಿದ. ೩. ಸೇರಿಸಿದ ; ಕೂಡಿಸಿದ : ಗುಣದೋಷಾದಿಗಳಿಂದನುಗುಣಮಾಗಿರೆ ಪೇಟ್ದು ತದನುಸದೃಶದಿನೊಂದಂ ಪ್ರಣಿಹಿತನಿದರ್ಶನ ಕ್ರಮದೆಣಿಸುವುದಕ್ಕುಂ ನಿದರ್ಶನಾಲಂಕಾರಂ (ಕಾವ್ಯಾ. ೨–೦೯೦). ೪. ಪಡೆದ ; ಹೊಂದಿದ. ೫. ಒದಗಿದ; ಪ್ರಾಪ್ತವಾದ. ೬. ಸಾವಧಾನವಾದ ಮನಸ್ಸುಳ್ಳ. (ನಾ). ೭. ಇರಿಸಿದುದು. ೮. ಕೊಟ್ಟುದು ; ನೀಡಿದುದು. ೯. ಒದಗಿದುದು; ಪ್ರಾಪ್ತವಾದುದು : "ಪ್ರಾಪ್ತಂ, ಪ್ರಣಿಹಿತಂ—೨ ಹೊಂದಲ್ಪಟ್ಟುದು" (ಸಿದ್ಧಾಂತಿ. ೩೯೬). ೧೦. ಒಂದು ವಿಷಯದ ಮೇಲೆ ಚಿತ್ತೈಕಾಗ್ರತೆಯನ್ನು ಹೊಂದಿರುವುದು,—ಅವಧಾನವನ್ನು ಹೊಂದಿರುವುದು. [ಸಂ.]

**ಪ್ರಣೇತ** (ಗು). ೧. ಮುಂದಕ್ಕೆ ಒಯ್ದ. ೨. ಮಾರ್ಗದರ್ಶನ

ಮಾಡಿದ; ನಿರ್ದೇಶಿಸಿದ: ಆ ರಾಮಾಯತಿಪತಿ ಪರಮಾಗಮಪ್ರಣೀತ ಮಾರ್ಗದಿಂ . . . ಗುಪ್ತಿಗಳಂ ಪಾಲಿಸಿ ಪಂಚಮಹಾವ್ರತಲೀಲೆಯನೆಸೆವ (ಶಂಖಕಾ. ೦೬-೩೭ ಪ); ಪ್ರಣೀತವೇದಾಗಮಶಾಸ್ತ್ರಸಂಕುಳೇ . . . ಗುಣಾಭಿರಾಮೇ ಜಯ ಸರ್ವಮಂಗಳೇ (ಪ್ರಶಂ. ೨೦-೩೬). ೩. ಕೊಟ್ಟ; ನೀಡಿದ. ೪. ಆಗುಮಾಡಿದ; ನೆರವೇರಿಸಿದ; ಸಾಧಿಸಿದ. ೫. ರಚಿತವಾದ; ನಿರ್ಮಿತವಾದ: ಮಹಾಕವೀಶ್ವರಕೃತಿ ಶಾಸ್ತ್ರಾಂತರಸ್ಮಾರತೆ ನಿಶ್ಚಿ ನಿರಂತರಮಸ್ಮತ್ಪ್ರಣೀತ ಜಾತಕಕೃತಿಯೊಳ್ (ಜಾತಕ. ೦-೩). (ನಾ). ೬. ಹೇಳಿದುದು; ನಿರ್ದೇಶಿಸಿದುದು: ಇಂಡಿಯಾದೇಶದಲ್ಲಿರುವ ಹಲವಾರು ಗಮನಾರ್ಹವಾದ ಪದ್ಧತಿಗಳಲ್ಲಿ ಪುರಾತನ ಋಷಿಗಳಿಂದ ಪ್ರಣೀತವಾದ ಒಂದು ಪದ್ಧತಿ ಇದೆ (ಕ್ರ.ಜಾ. I. ೪೬); ಟಿಳಕರ ಪೌರುಷ-ಪ್ರಕೃತಿ . . . ಸರ್ವರಿಗೆ ಉಪದೇಶಿಸಲು ಯೋಗ್ಯವಾದ ಕರ್ಮಯೋಗರೂಪವನ್ನು ತಾಳಿ ಅವರ ಮುಖದಿಂದ ಪ್ರಣೀತವಾಯಿತು (ರರ್ಮಿತಾ. ೦೬೨). ೭. ಬರೆದುದು; ರಚಿತವಾದುದು: ಬಹುಕಾಲದ ಹಿಂದೆ ಪ್ರಣೀತವಾಗಿ ಈಗಲೂ ನಮ್ಮಿಂದ ಆದರಿಸಲ್ಪಡುತ್ತಿರುವ ಕಾವ್ಯಗಳೆಲ್ಲವೂ ಈ ಅಲೌಕಿಕ ಆಲೋಕದಿಂದ ತುಂಬಿವೆ (ಕಾವ್ಯಕು. ೬೪). ೮. ರುಚಿಯಾಗಿ ತಯಾರಿಸಿದ ಅಡುಗೆ; ರಸಪಾಕ: "ಪ್ರಣೀತಂ, ಉಪಸಂಪನ್ನಂ-೨ ಪಾಕದಿಂದಲೂ ರಸದಿಂದಲೂ ಯುಕ್ತವಾಗಿ ಶಾಕಾದಿ ಸಮಗ್ರವಾದ ಅಡಿಗೆ; ರುಚಿಯಾಗಿ ಅಟ್ಟಲ್ಪಟ್ಟ ಅಡಿಗೆ" (ಸಿದ್ಧಾಂತಿ. ೨೮೭). ೯. ಮಂತ್ರಸಂಸ್ಕಾರವನ್ನು ಹೊಂದಿದ ಅಗ್ನಿ: "ಕಿಚ್ಚುಂ ಪ್ರಣೀತಮಕ್ಕುಂ" (ಮುಂಗಾ. ೭೭-೦೩); "ಪ್ರಣೀತಃ, ಸಂಸ್ಕೃತಃ—ಮಂತ್ರದಿಂದ ಸಂಸ್ಕರಿಸಲ್ಪಟ್ಟು ಹುತನಾದ ಅಗ್ನಿಗೆ ಹೆಸರು" (ಸಿದ್ಧಾಂತಿ. ೨೦೯). [ಸಂ.]

**ಪ್ರಣೀತೆ** (ನಾ). ಯಜ್ಞ, ಯಾಗ, ಹೋಮಗಳಲ್ಲಿ ಬಳಸುವ ಒಂದು ಬಗೆಯ ಪಾತ್ರೆ; ಯಜ್ಞಪಾತ್ರೆ. [ಸಂ. ಪ್ರಣೀತಾ]

**ಪ್ರಣುತ** (ಗು). ೧. ಹೊಗಳಿದ; ಕೊಂಡಾಡಿದ. ೨. ಹೆಸರಾಂತ; ಪ್ರಸಿದ್ಧವಾದ: ಪ್ರಣುತಪದಾಂತರೀಕರಣಮಂತದೆ ತಾಣದೊಳಾದೊಡಂ ಮಹಾಗುಣಮನೆ ತರ್ಕಂ (ಶಬ್ದಾ. ೦-೦೨೨); ಪ್ರಣುತಜಿನ ಚರಿತಮಂ ಲಕ್ಷಣಮಿಲ್ಲದೆ ಕುಕವಿ ಕಬ್ಬದೊಳ್ಕಟ್ಟೆ . . . ಅಪ್ಪುದೆ ಶುಭದಂ (ಅರ್ಧನೇ. ೦-೩೦); ಪ್ರಣುತ ಶ್ರುತಿಗಳ್ ನಾಲ್ಕು (ಏಸ್ಸ್ರ್ಕು. ೩-೦-೦೧೯). [ಸಂ.]

**ಪ್ರಣುತಿ** (ನಾ). ಅತಿಶಯವಾದ ಹೊಗಳಿಕೆ; ವಿಶೇಷವಾದ ಸ್ತೋತ್ರ: ಶಿವಶರಣರಂ ಕಂಡುಕಂಡುಬ್ಬಿ ವಿನತನಾಗಿ ಪ್ರಣುತಿಯಿಂ ಪುಗೆ ಮನಮೊಸೆದೊಸೆದು ಹಾಡಿಹಾಡಿ (ಬಸವ. ೩೫-೩). [ಸಂ.]

**ಪ್ರಣುತಿಸು** (ಕ್ರಿ). ಅತಿಶಯವಾಗಿ ಹೊಗಳು; ಬಹಳವಾಗಿ ಸ್ತೋತ್ರಮಾಡು: ಪ್ರಣವಮಂತ್ರಾಗಮದ ಕಳೆಗಳೊ ಪ್ರಣುತಿಸಲ್ಕಿಂತೊಪ್ಪುವಾ ಕಲಧೌತಶೈಲದಲಿ (ಏಕಪು. ೦-೩೯); ಭಕ್ತಿಯಲಿ ಪ್ರಣುತಿಸಲು ಶರ್ವಾಣಿ ರತಿಯರಿಗೆಣೆಯೆನಿಪ ಸುಂದರಿಗೆ ಮಿಕ್ಕಿನ ಬಣಗುಸತಿಯರು ಸರಿಯೆ ಲೋಕದೊಳು (ಪಳಕ. ೦-೩೯) [ಪ್ರಣುತಿ+-ಸ್ಸು]

**ಪ್ರಣುತೆ** 'ಪಣುತೆ' ನೋ.

**ಪ್ರಣೂತ** (ಗು) ೧. ವಿಶೇಷವಾಗಿ ಹೊಗಳಿದ,—ಪ್ರಶಂಸೆ ಮಾಡಿದ. ೨. ಪ್ರಸಿದ್ಧವಾದ; ಹೆಸರುವಾಸಿಯಾದ: ವ್ಯಾಸಮುನಿಪ್ರಣೂ[ತಾಂ. ನೇ]ತಕೃತಿಯಂ ಸಲೆ ಪೇಟ್ದು . . . ನಾಡೊಬಜನಾದನೊ ಪೇಟ್ಬ ಕವಿತಾಗುಣಾರ್ಣವಂ (ಪಂಪಭಾ. ೦೧-೬೨); ಮನ್ವಾದಿಪುರಾಣಮುನಿಗಣಪ್ರಣೂತಶ್ರುತಿವಿಹಿತ ವಿಶುದ್ಧಮಾರ್ಗನುಂ . . . ಧರಾಮರಾಗ್ರಗಣ್ಯನುಮಾಗಿ . . . ದುರ್ಗಮಯ್ಯಂ ನೆಗಟ್ದಂ (ಪಂಚತಂ. ೩-೦೦); ಪರಮಾನಂತಗುಣಪ್ರಣೂತಪರಿನಿರ್ವಾಣೋರ್ವಿಯಂ . . . ಭಕ್ತಿಯಿಂದು ವಂದಿಸಲ್ (ಸುಕುಮಾ. ೮-೬೩). (ನಾ). ೩. ಹೆಚ್ಚಾಗಿ ಹೊಗಳಿದುದು; ವಿಶೇಷವಾಗಿ ಪ್ರಶಂಸಿತವಾದುದು. ೪. ಪ್ರಸಿದ್ಧವಾದುದು; ಹೆಸರುವಾಸಿಯಾದುದು: ಆ ಮಹಾವನಂ . . . ನಾಕನಿಳಯದಂತೆ ಅನೂನಾಪ್ಸರೋಗಣಪ್ರಣೂತಮುಮತರ್ಕ್ಯಗೋಚರಮುಂ (ಶಂಪ್ರಪು. ೩-೫೨ ವ). ೫. ವಿಶೇಷವಾಗಿ ಹೊಗಳಿಕೆಯನ್ನು ಹೊಂದಿದವನು,—ಪ್ರಶಂಸಿತನಾದವನು: ಈತನತ್ಯಂತವಿದ್ವಜ್ಜನಸಂದೋಹಪ್ರಣೂತಂ ಪರಮಜಿನಮತಾಂಭೋಜಿನೀರಾಜಹಂಸಂ (ಸುಕುಮಾ. ೦-೪೯). [ಸಂ.]

**ಪ್ರಣೇತಾರ** (ನಾ). ೧. (ಉತ್ತಮನಾದ) ನಾಯಕ,—ಮುಂದಾಳು: ಪ್ರಣೇತಾರನು ಇಲ್ಲದಿದ್ದರೆ ಮಹತ್ತಮವಾದ ಸೈನ್ಯವಾದರೂ ಯುದ್ಧದಲ್ಲಿ ಭಗ್ನವಾಗುವುದು (ಶೀಕ್ಸ್ಕ. ೦೩). ೨. (ಗ್ರಂಥವನ್ನು) ರಚಿಸುವವನು; ಕರ್ತೃ. [ಸಂ. ಪ್ರಣೇತೃ]

**ಪ್ರಣೇತೃ** (ನಾ). ೧. ನಾಯಕ; ಮುಂದಾಳು. ೨. ಬೋಧಿಸುವವನು; ಗುರು. ೩. =ಪ್ರಣೇತಾರ ೨: ನಮಗೆ ಈಗ ಉಪಲಬ್ಧವಾಗಿರುವ ವೇದಾಗಮಗಳಲ್ಲಿಯ ಪ್ರವರ್ತಕರಾಗಲಿ ಅನುವಾದಕರಾಗಲಿ ಪ್ರಣೇತೃಗಳಲ್ಲ (ಚಾರಿತ. ೬೨). [ಸಂ.]

**ಪ್ರಣೇಯ** (ನಾ). ೧. ವಿನಯವಂತ; ವಿನೀತ. ೨. ವಶೀಕರಣ ವಿಧಾನದಿಂದ ವಶವರ್ತಿಯಾಗಿರುವವನು: "ವಶ್ಯಃ, ಪ್ರಣೇಯಃ, ೨ ಔಷಧಾದಿಗಳಿಂದ ವಶ್ಯನಾದವನ ಹೆಸರು" (ಸಿದ್ಧಾಂತಿ. ೩೨೯). [ಸಂ.]

**ಪ್ರತತ** (ಗು). ಹರಡಿರುವ; ವಿಸ್ತಾರವಾದ; ವ್ಯಾಪ್ತವಾದ. [ಸಂ.]

**ಪ್ರತತಿ** (ನಾ). ೧. ಗುಂಪು; ಸಮೂಹ: ನಾಗವಿಭೂಷಣಪ್ರತತಿನಾಗರಖಂಡಮಪೂರ್ವಮಪ್ಪ ಪುನ್ನಾಗದ ಬಾಸಿಗಂ (ಶಂಶಾ. ೯-೦೬); ಭುವನದೊಳು ಧರ್ಮಗುಣಪ್ರತತಿಗೆ ನೆಲೆಯಾಗಿ ಮಹಾಸತಿ ಮೋಚಲದೇವಿ ಸನ್ನತಂ ಸೊಗಯಿಸುಗುಂ (ಎಕ. V, ಶುಂಜಾ. ೦೪-೩೬; 1095); ಅವದಿರನಿಬರು ಕ್ಷಿತಿಸುರರ ಕೊಂದಮಳಭೂಷಪ್ರತತಿಯನು ಕೊಂಡೊಯ್ದರು (ಕುಬ್ಬಾಕ. ೦೭-೦೫). ೨. ಬಳ್ಳಿ; ಲತೆ: "ಲತೆ ಪ್ರತಾನನಿ ಪ್ರತತಿ ವಲ್ಲರಿ ವಲ್ಲಿ ವೀರುದೆನೆ ಬಳ್ಳಿಯೆನಿಕುಂ" (ಮುಂಗಾ. ೩೨-೯). [ಸಂ.]

**ಪ್ರತನ** (ನಾ). ಹಳೆಯದು; ಪ್ರಾಚೀನವಾದುದು: "ಪುರಾಣಃ, ಪ್ರತನಃ, ಪ್ರತ್ನಃ, ಪುರಾತನಃ, ಚಿರಂತನಃ—೫ ಹಳೇದು, ಬಹುಕಾಲದ್ದು" (ಸಿದ್ಧಾಂತಿ. ೩೯೩). [ಸಂ.]

**ಪ್ರತಪನ** (ನಾ). ೧. ಹೆಚ್ಚಾಗಿ ಬಿಸಿಮಾಡುವುದು,—ಕಾಯಿಸುವುದು. ೨. (ಆಲಂ) ಕ್ಲೇಶಕ್ಕೀಡುಮಾಡುವುದು; ಸಂಕಟಪಡಿಸುವುದು: ಸ್ವರೂಪಪ್ರತಪನಲಕ್ಷಣನಿಶ್ಚಯತಪಶ್ಚರಣಹೇತುಭೂತಾನಶನಾದಿ ದ್ವಾದಶವಿಧಾನುಷ್ಠಾನಂ ತಪವೆಂಬುದಕ್ಕುಂ (ತತ್ತ್ವಕ್ರ. ೨೬೬). [ಸಂ.]

**ಪ್ರತರ** (ಗು). ೧. ಹೆಚ್ಚಾದ; ಅಧಿಕವಾದ: ಅತಿತೂರ್ಯಚ್ಛಕ್ರರೋಚಿರ್ವಳಯವಿಳಸನಂ ನನ್ನ[ನ್ನೋ]ನ್ನಾಳಿರತ್ನಪ್ರತರಾಭೀಷುಪ್ರಕಾಶಂ ಬೆಳಗೆ (ವರ್ಧಮಾ. ೯-೩೩). ೨. ವಿಸ್ತಾರವಾದ: ದಂಡಕವಾಟಪ್ರತರಲೋಕಪೂರಣಕ್ರಿಯೆಗಳಂ ಪ್ರತಿಸಮಯಂ ಪ್ರಯೋಗಿಸಿ (ಶಂಶಾಕಾ. ೦೬-೭೮ ವ). 'ಪ್ರತರಕ್ರಿಯೆ' ಪರಾ. [ಸಂ.]

**ಪ್ರತರಕ್ರಿಯೆ** (ನಾ). [ಜೈನ] ಪರಿನಿರ್ವಾಣಕಾಲದಲ್ಲಿ ಒದಗುವ ಅವಸ್ಥಾವಿಶೇಷ; ಆತ್ಮವು ವಿಸ್ತಾರವಾಗಿ ವ್ಯಾಪಿಸುವುದು: ಲೋಕಾಕಾಶವ್ಯಾಪಕಕವಾಟಕ್ರಿಯೆಯಂ ನೆಱಿ ತದನಂತರಸಮಯದೊಳ್ ವಾತವಲಯಮುಟಿಯೆ ಜೀವಪ್ರದೇಶಂಗಳಿಂ ಲೋಕಪ್ರದೇಶಮಂ ಪರ್ವಿ ನಿರ್ವರ್ತಿತ ಪ್ರತರಕ್ರಿಯಾವಿಶೇಷಂ (ಆದಿಪು. ೦೬-೪೯ ವ); "ಪ್ರತರಕ್ರಿಯೆ—ಪ್ರತರಾವಸ್ಥೆಯಲ್ಲಿ ಲೋಕದ ಅಸಂಖ್ಯಾತಭಾಗಗಳು ಕೇವಲಿಯ ಪ್ರತರಾಕಾರದ ಆತ್ಮಪ್ರದೇಶಗಳಿಂದ ವ್ಯಾಪ್ತವಾಗುತ್ತವೆ" (ಆದಿಪು. ಶಬ್ದಕೋಶ ಟಿಪ್ಪಣಿ). [ಸಂ. ಪ್ರತರಕ್ರಿಯಾ]

**ಪ್ರತರಾಂಗುಲ** (ನಾ). [ಜೈನ] ಒಂದು ಚದರಳತೆ; ಸೂಚ್ಯಂಗುಲದ ವರ್ಗ : ತದ್ಭಾಗಹಾರಮುಂ ಯಥಾಕ್ರಮದಿಂ ಪ್ರತರಾಂಗುಲಸಂಖ್ಯೇಯ ಭಾಗಮುಮಕ್ಕುಂ (ಚಕ್ಕ್ರ. ೨೦); ಕಾಲಪ್ರಮಾಣದಲ್ಲಿ ವಿವರಿಸಿದ ಅದ್ಧಾಪಲ್ಯದಲ್ಲಿ ಬರುವ ಸಂಖ್ಯೆಯೊಳಗೆ ಅರ್ಧಮಾಡಿ, ಒಂದರಿಂದ ಇನ್ನೊಂದು ಗುಣಿಸಿದರೆ ಸೂಚ್ಯಂಗುಲದ ಪ್ರಮಾಣ ಬರುತ್ತದೆ. ಸೂಚ್ಯಂಗುಲದ ವರ್ಗಕ್ಕೆ ಪ್ರತರಾಂಗುಲವೆಂದೂ ಘನಕ್ಕೆ ಘನಾಂಗುಲ ವೆಂದೂ ಹೇಳುವರು (ತ್ರಿಪಜ. ೩೦೪). [ಸಂ.]

**ಪ್ರತರೆ** (ನಾ).=ಪ್ರತರಕ್ರಿಯೆ : ನೀರು ಪಸಿವಂತೆ ಪ್ರತರೆಯು ಪರಮನು ಮಾಡಲು ಘನವರ್ಗಪಿಂಡವಾಜಿದುದು (ತ್ರಿಪಜ. ೪೩–೯೬).

[ಸಂ. ಪ್ರತರ]

**ಪ್ರತಲ, ಪ್ರತಳ** (ನಾ). ೧. ಬೆರಳುಗಳನ್ನು ನೀಡಿ ಅಗಲಿಸಿರುವ ಅಂಗೈ : "ಚಪೇಟಃ, ಪ್ರತಲಃ, ಪ್ರಹಸ್ತಃ – ೩ ವಿಸ್ತೃತಾಂಗುಳೌ– ಚಾಚಲ್ಪಟ್ಟ ಬೆರಳುಗಳುಳ್ಳ ಅಂಗೈ ಹೆಸರುಗಳು" (ಸಿದ್ಧಾಂತ. ೦೯೩). ೨. ಸಪ್ತಪಾತಾಳಲೋಕಗಳಲ್ಲಿ ಒಂದು. **ಪ್ರತಳ** : ೧. ಬೆರಲುಂ ತಳಮುಂ ಬೆರಸಿದೊಡೆ ಪ್ರತಳಮೆಂಬುದು ಅದನೆ ತಳಮುಮೆಂಬುದು (ಪಜಾಘುನಿ. ೬೬–೩೬೩). [ಸಂ.]

**ಪ್ರತಳ** 'ಪ್ರತಲ' ನೋ.

**ಪ್ರತಾನ** (ನಾ). ೧. ಕವಲುಕವಲಾಗಿ ಹರಡುವುದು; ಶಾಖೋಪ ಶಾಖೆಗಳಾಗಿ ವಿಸ್ತರಿಸುವುದು. ೨. ಗುಂಪು; ಸಮೂಹ : ಮಣಿಗಣಾತ್ತ ಮರೀಚಿಲತಾಪ್ರತಾನಸಂವಳಯಿತ ವಿದ್ರುಮದ್ರುಮವಿಳಾಸ ವಿಶೇಷಿತಬಾಡವಾನಳಾವಿಳಜಳಮುಂ ಮನಂ ಬಯಸಿ ನೋಡಿದರ್ಣವಮಂ ಗುಣಾರ್ಣವಂ (ಪಂಪಭಾ. ೪–೨೩); ಲಸದುದ್ವೃತ್ತಕ್ಷೀರಪಾರಾವತಶಿಖಿಹರಿಣೀ ಹಂಸಶಾರೀಪ್ರತಾನಂ (ರಾಜಶೇ. ೯–೯೦). ೩. ಬಳ್ಳಿಯ ಕುಡಿ; ಸಣ್ಣ ಹಂಬು : 'ಪ್ರತಾನಿನಿ' ಪರಾ. ೪. (ನೆಲದಲ್ಲಿಯೇ ಹಬ್ಬುವ) ಬಳ್ಳಿ; ಹಂಬು. [ಸಂ.]

**ಪ್ರತಾನಿನಿ** (ನಾ). ಬಳ್ಳಿ; ಹಂಬು; ಲತೆ : "ಲತಾ, ಪ್ರತಾನಿನೀ, ವಲ್ಲೀ, ಪ್ರತತೀ, ಪ್ರತತಿಃ – ಈ ೫ ಬಳ್ಳಿ" (ಶಬ್ದಮ. ೩೦–೨೬).

[ಸಂ. ಪ್ರತಾನಿನೀ]

**ಪ್ರತಾಪ** (ನಾ). ೧. ಬಿಸಂಪು; ಕಾವು; ಉಷ್ಣ : ದಿವಸ್ಪತಿಗೆ ಪ್ರತಾಪಮಂ . . . ಕೊಟ್ಟು ಗುರುಮೂರ್ತಿ ಪಂಪಾಪತಿವಿರೂಪಾಕ್ಷ ನೆಮಗಿಷ್ಟಸಿದ್ಧಿಯಂ ಮಾಳ್ಕೆ (ಪಶಾ. ೧–೧). ೨. ಬಿಸಿಲು. ೩. ಬೆಳಕು; ಪ್ರಕಾಶ. ೪. ಶಕ್ತಿ; ಬಲ; ಪರಾಕ್ರಮ :"ಪ್ರತಾಪಃ, ಪೌರುಷಂ, ತೇಜಃ, ವಿಕ್ರಮಃ, ಪರಾಕ್ರಮಃ–ಈ ೫ ಪರಾಕ್ರಮಂ" (ಪಶಾಯು. ೦೨೧–೩೮); ಪತಿವಿಯೋಗ [ವಿದ್ಯುದ್ಧನಿತಾ] ಹೃದಯಂಗಳೊಳಾವಗಮುರಿವುದು ಕಡುಪಿ ನೊಳಾ ನೃಪಪ್ರತಾಪಜ್ವಲನಂ (ಕಾದಂಪೂ. ೦೪); ರಣರಂಗಭೈರವನುಭಯ ಬಳಸುಭಟಕೀರ್ತಿತಪ್ರತಾಪಂ ವೈರಿಸಂತಾಪಂ (ಕ್ಕೆ೩. XX, ೯೬–೩೯; 1072). ೧. ೪: ಉಚ್ಚಂಡಪ್ರತಾಪೋದಯಮರಿಕುಮುದಾಭೋಗವಿಧ್ವಂಸಿಯಾಗಿ ರ್ಪಿನಂ . . . ಒಳ್ಪಂ ಪೆತ್ತುದಾತ್ತಂ ಬೆಳಗುಗೆ ಜಗಮಂ ಗೋಪ ಮಾರ್ತಾಂಡದೇವಂ (ಜಗಂ. ೦–೯). ೫. ತೇಜಸ್ಸು; ಪ್ರಭಾವ; ವರ್ಚಸ್ಸು : "ಪ್ರತಾಪಃ, ಪ್ರಭಾವಃ – ೨ . . . ಪ್ರಭುಗಳ ಯಾವದೋ ಅದರ ಹೆಸರು" (ಸಿದ್ಧಾಂತ. ೨೯೦). ೬. ಕೀರ್ತಿ; ಯಶಸ್ಸು. ೭. ಹಿಂದಿನ ಕಾಲದಲ್ಲಿ ಚಲಾವಣೆಯಲ್ಲಿದ್ದ ಒಂದು ನಾಣ್ಯ: ಪ್ರತಾಪದ ಲೆಕ್ಕ . . . ಪ್ರತಾಪಕೆ ಪಣವು ಬಾಣಂ ಪ್ರತಾಪಕಂ ಧರಣವೆರಡು ಚೌಲ ನಾಲ್ಕುಂ (ಕೃಶಾ. ಅಮುಂ. I, ೩); ಅರು ವರುಷಾವಧಿಯ ಪಂಚಪರ್ವಗಳ ಮಹೋ ತ್ಸಾಹಕ್ಕೆ ಪ್ರತಾಪ ಇಪತ್ತುಂ ಬೆಲ್ಲಪತ್ರ ಹುವ ತಹದಕೆ ಪ್ರತಾಪ ಹನೆರಡು (ಎಫ್. XI. ಜೊಳಾ. ೩೦–೦೭; 1366); ರಾಮಟೆಂಕೀನಾಣ್ಯವು ಕಟಾಟಟ ನಾಲ್ಕು ತೊಲಿ ಇರುತ್ತಿತ್ತು. ಅದರ ಅರ್ಧದ ನಾಣ್ಯಕ್ಕೆ ಪ್ರತಾಪವೆನ್ನುವರು (೯ಶಾಗ. ೨೬೦). ಈ ಸಂಸ್ಕೃತಕೋಶಗಳಲ್ಲಿ ಈ ಅರ್ಥವಿಲ್ಲ. ಆದರೆ ಮರಾಠಿಕೋಶದಲ್ಲಿ, ಧಾರವಾಡದ ಕಡೆ ಪ್ರಚಾರದಲ್ಲಿರುವ ಎರಡು ರೂಪಾಯಿ ಬೆಲೆಯ ಒಂದು ನಾಣ್ಯ, ಅರ್ಧಹೊನ್ನು ಎಂಬರ್ಥದ ಸಂಸ್ಕೃತಶಬ್ದ ಎಂದು ಹೇಳಿದೆ.

**ಪ್ರತಾಪಗದ್ಯಾಣ**=ಪ್ರತಾಪ ೭ : ಸೀಮೆ ಸಣ ಪ್ರತಾಪಗದ್ಯಾಣ ೧೦ (ಕ್ಕೆ೩. IX – ii. ೯೬೦–೦೯; 1466). **ಪ್ರತಾಪಚಕ್ರವರ್ತಿ** = ಪರಾಕ್ರಮಿ ಯೂ ಹಾಗೂ ಪ್ರಭಾವಶಾಲಿಯೂ ಆದ ಸಾರ್ವಭೌಮ; ಹೊಯ್ಸಳ ವೀರಬಲ್ಲಾಳನ ಒಂದು ಬಿರುದು : ಸಮಸ್ತಭುವನಾಶ್ರಯಂ ಯಾದವನಾರಾಯಣಂ ಪ್ರತಾಪಚಕ್ರವರ್ತಿ ವೀರಬಲ್ಲಾಳದೇವರ ಬೆಸ (ಕ್ಕ. IV. ೬–೦; 1204). **ಪ್ರತಾಪಜನಾರ್ದನ** = ಪರಾಕ್ರಮದಲ್ಲಿ ಹಾಗೂ ಪ್ರಭಾವದಲ್ಲಿ ನಾರಾಯಣನಂತೆ ಇರುವವನು; ಚಾಲುಕ್ಯ ವಿಜಯಾದಿತ್ಯದೇವನ ಒಂದು ಬಿರುದು : ವೈರಿಮದಮರ್ದ್ದನ ಪ್ರತಾಪ ಜನಾರ್ದ್ದನನಚಳಿತವಾಕ್ಯ ವಿಷ್ಣುವರ್ಧನಮಹಾರಾಜವಿಜಯಾದಿತ್ಯದೇವರ್ . . . ಆಳುತ್ತಮಿರೆ (ಎಫ್. XI. ಚಕ್ರದು. ೯೭–೬; 1067). **ಪ್ರತಾಪಲಂಕೇಶ್ವರ** = ೧. ಪರಾಕ್ರಮದಲ್ಲಿ ರಾವಣನಂತಿರುವವನು; ಶತ್ರುಗಳಿಗೆ ಭಯ ವನ್ನುಂಟುಮಾಡುವ ಪರಾಕ್ರಮವುಳ್ಳವನು; ಕಳಚುರ್ಯವಂಶದ ರಾಜರ ಒಂದು ಬಿರುದು : ಕಲಿಗಳಂಕುಶಂ ಗಜಸಾಮನ್ತಶರಣಾಗತ ವಜ್ರಪಂಜರಂ ಪ್ರತಾಪಲಂಕೇಶ್ವರಂ (ಕ್ಕ. II, ೦೦–೦೦; 1092); ಮಾರ್ತಂಡಪ್ರತಾಪಲಂಕೇಶ್ವರ ರಿಪುಮದನಮಹೇಶ್ವರ (ಕ್ಕೆ೩. ೬೯–೦೨–೦೯; 1170). ೨. [ವೈದ್ಯಶಾ] ಒಂದು ಬಗೆಯ ಗುಳಿಗೆ, – ಮಾತ್ರೆ : ಪ್ರತಾಪಲಂಕೇಶ್ವರ–ಶಂಖುಪಾಷಾಣ . . . ಸಾಸಿವೆಪ್ರಮಾಣ ಗುಳಿಗೆಯಂ ಮಾಡಿ ಸಮಜ್ವರಕ್ಕೆ ಜೀರಿಗೆ ಸಕ್ಕರೆಯಲ್ಲಿ ಕೊಡುವುದು (ಚಿಕ್ಕಿ. ೩೯).

[ಸಂ.]

**ಪ್ರತಾಪವಂತ** (ನಾ). ಪ್ರಭಾವಶಾಲಿ; ತೇಜಸ್ವಿ: ಪ್ರತಾಪವಂತಂ ಕಳಿಗೀತ ತಕ್ಕವಂ (ಗೋಕಾ. ೦೬–೦೨). [ಸಂ. ಪ್ರತಾಪವತ್]

**ಪ್ರತಾಪವರಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ಶೋಕವರಾಳಿ . . . ಪ್ರತಾಪವರಾಳಿ . . . ನಾಗವರಾಳಿಯೆಂಬ ವರಾಳೀ ಸಪ್ತಕವೇ ಶುದ್ಧವರಾಳಿಗೆ ಮಿಶ್ರಂಗಳು (ಶಿವೇಳ. ೨೩೩).

[ಸಂ. ಪ್ರತಾಪವರಾಲೀ]

**ಪ್ರತಾಪಶಾಲಿ** (ಗುಂ). ೧. ಪರಾಕ್ರಮವುಳ್ಳವ; ಶೂರ : ಮಹೇಂದ್ರನು ನೊಳಂಬವಂಶದಲ್ಲೇ ಅತೀಪ್ರತಾಪಶಾಲಿ ರಾಜನಾಗಿ ಮೆರೆದಿದ್ದಾನೆ (ನೊಳಂಬ. ೩೩). (ನಾ). ೨. ಶೂರನಾದವನು; ವೀರ.

[ಸಂ. ಪ್ರತಾಪಶಾಲಿನ್]

**ಪ್ರತಾಪಸ** (ನಾ). ಬಿಳಿ ಎಕ್ಕದ ಗಿಡ : "ಅಲರ್ಕಃ, ಪ್ರತಾಪಸಃ– ೨ . . . ಶ್ವೇತಾರ್ಕ–ಬಿಳಿಎಕ್ಕ ಯಕ್ಕೆ" (ಸಿದ್ಧಾಂತ. ೬೪೦). [ಸಂ.]

**ಪ್ರತಾಪಿ** (ನಾ). = ಪ್ರತಾಪಶಾಲಿ ೨ : ದಾರುಣಕೋಪಂ ಪ್ರತಾಪಿ ಸಾಹಸಭೀಮಂ (ಗಜಾಘು. ೭–೦). [ಸಂ. ಪ್ರತಾಪಿನ್]

**ಪ್ರತಾಪೋದಯ** (ನಾ). ೧. ಪರಾಕ್ರಮದ ಏಳಿಗೆ; ಶೌರ್ಯೋ ನ್ನತಿ : ವೀರನಾರಾಯಣನಪ್ರತಿಶಯಧಟಳಂ ನಮಗೀಗತರ್ಕಿತೋಪಸ್ಥಿತ ಪ್ರತಾಪೋದಯಮಂ (೯೦೦. ೦–೨). ೨. ಶೌರ್ಯೋನ್ನತಿಯನ್ನು ಹೊಂದಿದವನ.; ಅತಿಪರಾಕ್ರಮಿ : ಪದ್ಮರಾಜನರಿದುಷ್ಪ್ರಾಪಪ್ರತಾ ಪೋದಯಂ (ಕಕ್ಷ್ಯಘ. ೩–೦೪). [ಸಂ.]

**ಪ್ರತಾಪೋಷ್ಮ** (ನಾ). ಪರಾಕ್ರಮದ ಕಾವು; ಶೌರ್ಯದ ತೀಕ್ಷ್ಣತೆ: ಉಲ್ಕಮಾಯಾತ ಪ್ರತಾಪೋಷ್ಮಮಂ ಶತ್ರುವಿಡುವರಾತಿಗಳ ಸಂಖ್ಯೆಯೊಳಂ (ಅರಿಕ್ಷ. ೦೯–೮೯ ವ). [ಸಂ.]

**ಪ್ರತಾರಕ** (ನಾ). ಮೋಸಗಾರ; ವಂಚಕ : ಈ ವಿಷಯದಲ್ಲಿ ನನಗೆ ಪುತ್ರಪ್ರತಾರಕನೆಂದರೂ ಸರಿ. ಮಗನ ಅವಿವೇಕಕ್ಕೆ ತಡೆ ಹಾಕಲೇಬೇಕು (ಪೂರಣ. ೪೦). [ಸಂ.]

**ಪ್ರತಾರಣ** (ನಾ). ೧. ಮೋಸ; ವಂಚನೆ: ವಾರಣಾವತಂ ಸಂದ ಸಭಾಪ್ರತಾರಣಕೆ ಕಾರಣಮೆಂದಱಿವಲ್ಕೆ ಬೇಡಿದರ್ ಸಂಧಿಗೆಯಲ್ಕೆ ಬೇಡಿದರೆ ಪಾಂಡುತನೂಭವರಯ್ದುಬಾಡಮಂ (ಗದಾಯು. ೩-೨೦). ೨. ಮೋಸಗೊಳಿಸುವಂಥದು; ವಂಚಿಸುವಂಥದು: ಕೋಪಮೆಂಬುದೆ ಸಾಧು ಸಂಗಪ್ರತಾರಣಂ ಕೋಪಮೆಂಬುದೆ ಸಕಲಸನ್ಮಾರ್ಗದಾರಣಂ ಚಿತ್ತವೈಕಲ್ಯಕರಣಂ (ವಂಕಾರಾ. ೨-೯-೧೬). ೩. ಹೊಳೆ ದಾಟಿಸುವುದು. ೧, ೩ : ಪ್ರತಾರಣಂ ನಾವೆಯೊಳ್ . . . ಮಹಾಮಾತ್ರವರ್ತನಂ ಸೃಣಿಯೊಳಲ್ಲದಿಲ್ಲಮೆಲ್ಲಿಯುಂ (ಶಂಧ್ರಪು. ೩-೯ ಪ). [ಸಂ.]

**ಪ್ರತಾರಿಸು** (ಕ್ರಿ). ಮೋಸಗೊಳಿಸು; ವಂಚನೆ ಮಾಡು : ಕಾಮಿನೀತತಿ ವಿಲಾಸಾಪಾಂಗದಿಂದಂ ಪ್ರತಾರಿಸದಂತಾಗಿರಲಾತ್ಮವಂತನೆನಿಸೆಂದುಂ ರಾಜ್ಯವಿದ್ಯಾಧರಾ (ಕಾದಂಸಂ. ೩೭೪). [ಪ್ರತಾರಣ+—ಇಸು]

**ಪ್ರತಿ** (ನಾ). ೧. ಸರಿ; ಸಾಟಿ; ಸಮಾನ : "ಸದೃಶಂ ಸರಿ ಪ್ರತಿ ಸದೃಕ್ಷಂ ಪ್ರಕಾಶಂ ಸಮಾನಮೆನೆ ಪಾಸಟಿಗೆ ನಾಮಮಕ್ಕುಂ" (ಮಂಗರಾ. ೦೨೬-೩). ೨. ಸಮಾನವಾದುದು; ಸಾಟಿಯಾದುದು : ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲಾ ಕೂಡಲಸಂಗಮದೇವಾ (ಬಸವ. ೩೬೨); ಬೊಮ್ಮನ ಸತಿಯ ಸೊಬಗಂತಿರಲಿಯೂ ಬಾಲಕಿಯ ರೂಪಿಂಗೆ ಪ್ರತಿಯ ಕಾಣೆನು (ಕುಮಾ. ೬: ೨-೦೦). ೩. ಸಮಾನನಾದ ವ್ಯಕ್ತಿ; ಸರಿಸಾಟಿಯಾದ ವ್ಯಕ್ತಿ : ಪ್ರತಿ ತನಗಿಲ್ಲ ಸಲ್ಲಲಿತರೂಪದಿನೀ ತ್ರಿಜಗಂಗಳಂಗನಾತತಿಯೊಳಿದೊಂದೆ ತಾಂ ಪ್ರತಿ ನಿಜಪ್ರತಿಮಾನಂ (ಶಾಂತೀಶ್ವ. ೯-೨೪೩). ೪. ಎದುರು; ವಿರೋಧ : ನನ್ನಿಂದ ಏನಾದರೂ ಆಗತಕ್ಕ ಕಾರ್ಯವಿದ್ದರೆ ನಾನು ಸಿದ್ಧನಾಗಿದ್ದೇನೆ. ನಿಮ್ಮ ಮಾತಿಗೆ ಪ್ರತಿಯುಂಟೆ ? (ಶ್ರೀಣಾಯ. ೦೦೯). ೫. ಒಂದಕ್ಕೆ ಬದಲಾಗಿ ಇನ್ನೊಂದನ್ನು ಕೊಡುವುದು; ಮುಯ್ಯಿ : "ಪ್ರತಿಯಾತನಂ ಪ್ರತಿ ಪ್ರತಿಕೃತಿಯೆನಲ್ಕೆ ಮುಯಿ" (ಮಂಗರಾ. ೦೩೩-೩೬). ೬. ಎದುರಾದುದು; ವಿರುದ್ಧವಾದುದು : ಅವನ ತೀರ್ಮಾನಕ್ಕೆ ಪ್ರತಿ ಯಾವುದೂ ಇಲ್ಲ (ಕೂಶಿ). ೭. ಒಂದಕ್ಕೆ ಬದಲಾಗಿ ಇರುವ ಇನ್ನೊಂದು: 'ಪ್ರತಿನಿಧಾನ', 'ಪ್ರತಿನಿಧಿ' ಪರಾ. ೮. ಒಂದೊಂದು: ಪ್ರತಿಗೃಹಕುಂಕುಮಚ್ಛಟೆಗಳಿಂ ಪ್ರತಿಮಂದಿರರಂಗವಲ್ಲಿಯಿಂ ಪ್ರತಿನಿಲಯ ಪ್ರರೂಢಮಣಿತೋರಣದಿಂ ಪ್ರತಿಸದ್ಮವಾದ್ಯದಿಂ ಪ್ರತಿಭವನೋತ್ಸವ ಧ್ವಜದಿನಾ ಪೊಲಲೊಪ್ಪಿರೆ (ಜಗು. ೦೨-೩೮); ವರ್ಷಕ್ಕೆ ಮೂರರಿಂದ ಆರು ಸಲ ಇಲಿ ಬಾಣಂತಿಯಾಗುತ್ತದೆ. ಪ್ರತಿ ಹೆರಿಗೆಯಲ್ಲಿ ಆರರಿಂದ ಹತ್ತು ಮಕ್ಕಳು (ಜೀವಸ್ವ. ೪೩). ೯. ಒಬ್ಬೊಬ್ಬ : ಪ್ರತಿ ಮನುಷ್ಯನಿಗೂ ತನ್ನ ಕರ್ತವ್ಯ, ಜವಾಬ್ದಾರಿಗಳ ಅರಿವಿರಬೇಕು (ಕೂಶಿ). ೧೦. ದರ್ಜೆ; ಮಟ್ಟ : ಕೂಲಿಕಾರರು ಕಡಿಮೆ ಪ್ರತಿಯ ಒಕ್ಕಲಿಗರಿಗಿಂತ ವಾಡಿಕೆಯಾಗಿ ಹೆಚ್ಚು ಸುಖದಿಂದ ಇದ್ದಾರೆಂದು ಹೇಳಬಹುದು (ಕಥಾಗೆ. ೨೪೬); ಭೌತಿಕಶಾಸ್ತ್ರಗಳಿಗಿಂತ ಆಧ್ಯಾತ್ಮಿಕಶಾಸ್ತ್ರಗಳು ಗೂಢವೆನಿಸುವುವೆಂಬುದು ನಿಜ. ಆದರೆ ಅಷ್ಟು ಮಾತ್ರದಿಂದಲೇ ಅವು ಕಡಿಮೆ ಪ್ರತಿಯವು ಎಂದು ನಿರ್ಧರಿಸಲಾಗುವುದಿಲ್ಲ (ಶ್ರಬಂಧ. ೦೦೬). ೧೧. ಒಂದು ಮೂಲಗ್ರಂಥದ ನಕಲು : ವರಾಹಮಿಹಿರನ ಬೃಹತ್‌ಸಂಹಿತೆಯಲ್ಲಿ, ಅದರ ಕೆಲವು ಪ್ರತಿಗಳಲ್ಲಿ ಮಾತ್ರ—ದ್ರವಿಡ ಪದಕ್ಕೆ ಬದಲು ದ್ರಮಿಡ ಎಂಬ ಅನುನಾಸಿಕದ ಉಚ್ಚಾರ ಪಡೆದ ಪದವಿದೆ (ದ್ರಾಶಿಶಿ. ೦೦೯); ನಾಡಿದ್ದಿನ ಹೊತ್ತಿಗೆ ನನಗೆ ಇದರ ಪ್ರತಿ ಬೇಕು (ಜಾಜಿ. ೪).

**ಪ್ರತಿ ನಿಲ್ಲು**=ವಿರುದ್ಧವಾಗಿ ನಿಲ್ಲು : ಆ ದುಷ್ಟನಿಗೆ ಪ್ರತಿನಿಲ್ಲುವವರು ಆ ಊರಿನಲ್ಲಿ ಯಾರೂ ಇಲ್ಲ (ಕೂಶಿ). **ಪ್ರತಿ ಮಾಡಿಸು**=ಮೂಲಕೃತಿಯನ್ನು ಯಥಾವತ್ತಾಗಿ ಬರೆಸು,—ನಕಲು ಮಾಡಿಸು : ಅತ್ತಿಮಬ್ಬೆ . . . ಅಚ್ಚಕನ್ನಡಕೃತಿಗಳಲ್ಲಿ ಒಂದೊಂದನ್ನೂ ಸಹಸ್ರಸಹಸ್ರವಾಗಿ ಪ್ರತಿ ಮಾಡಿಸಿದಳು (ದಾಸಶಿ. ೦೬೯). **ಪ್ರತಿ ಮಾಡು**=ಮೂಲಕೃತಿಯನ್ನು ಯಥಾವತ್ತಾಗಿ ಬರೆ,— ನಕಲು ಮಾಡು : ಹರಿಶಂಕರಾಖ್ಯನು ಶಿಷ್ಯ ಸನ್ಮಿತ್ರನು ಪ್ರತಿ ಮಾಡಿದನು ಕೃತಿಯಿದನು (ಇಂಶಾಪ. ೨೪೯-೦೦೯). **ಪ್ರತಿಯಿಡು** = ಸಮಾನನಾದ ವ್ಯಕ್ತಿಯನ್ನು ಹುಡುಕು: ಪ್ರತಿಯಿಡಲು ಬಾರದ ಮಹಾಗರ್ವಿತಹೃದಯನಂ ಕಪಟನಂ . . . ಸ್ವೈರಿಸಿ (ಜಿಸಪು. ೨೩-೪೦). **ಪ್ರತಿಯೆತ್ತು**=ಪ್ರತಿ ಮಾಡು : ಪುಸ್ತಕಭಂಡಾರಕ್ಕೆ ಹೋಗಿ ಈ ಪುಸ್ತಕದ ಭಾಗವನ್ನು ಪ್ರತಿಯೆತ್ತಿಕೊಂಡು ಬಂದೆ (ಕೂಶಿ).

[ಈ ಸಂಸ್ಕೃತದಲ್ಲಿ ಇದೊಂದು ಉಪಸರ್ಗಾವ್ಯಯ. 'ಪ್ರತಿಗಾಣು', 'ಪ್ರತಿಮಾತು', 'ಪ್ರತಿಯೊಂದು', 'ಪ್ರತಿಯೊಬ್ಬ' ಮುಂತಾದುವುಗಳಲ್ಲಿ ಯಂತೆ ನಾಮಪ್ರಕೃತಿ ಮತ್ತು ಧಾತುಗಳೊಡನೆ ಸೇರಿದಾಗ ಬೇರೆಬೇರೆ ಅರ್ಥಗಳನ್ನು ಕೊಡುತ್ತದೆ]

**ಪ್ರತಿಕಂಟ** (ನಾ). ಪ್ರತಿಯೊಂದು ಬರಹ,–ಬರವಣಿಗೆ : ನಿರತಿಶಯೋನ್ನತಮತಿ ಭಾಸ್ಕರ ಸರಸಕವೀಂದ್ರರಚಿತಶಾಸನಮಂ ಬಿತ್ತರದಿಂ ಪ್ರತಿಕಂಟಂ ಸಾಕ್ಷರನಿಳಯಂ ತಿದ್ದಿ ಭಾಸ್ಕರಯ್ಯಂ ಬರೆದಂ (ಕಶಾ. ೦೯-೦-೯೨ ; 1127). [ಸಂ.]

**ಪ್ರತಿಕಕ್ಷಿ** (ನಾ). ಎದುರಾಳಿ ; ಪ್ರತಿಸ್ಪರ್ಧಿ ; ವಿರೋಧಿ : ಮಣೆಗೆ ಒಬ್ಬ ಪ್ರತಿಕಕ್ಷಿ ಸಿಕ್ಕಿದ (ನ್ಯಾಬಸ್ಕಿ. ೦೬) ; ನಮ್ಮ ದಿನಗಳು ಕಳೆದ ಮೇಲೆ ಲಕ್ಷ್ಮಿಯ ಸಂತಾನ ತನ್ನದೆಂದು ಸಿಂಹಾಸನಕ್ಕೆ ಹೊಡೆದಾಡಿದರೆ ? ದೇಶದಲ್ಲಿ ಕಕ್ಷಿ ಪ್ರತಿಕಕ್ಷಿಗಳು ಎದ್ದರೆ ? (ಜಾಂಕಶಾ. ೨೪೦). [ಪ್ರತಿ+ಕಕ್ಷಿ]

**ಪ್ರತಿಕರ್ಮ** (ನಾ). ೧. ಪ್ರತ್ಯುಪಕಾರ ಮಾಡುವುದು ; ಪ್ರತಿಫಲ ನೀಡುವುದು. ೨. ಸೇಡು ತೀರಿಸಿಕೊಳ್ಳುವಿಕೆ ; ಪ್ರತೀಕಾರ. ೩. ವಿರೋಧ; ಪ್ರತಿಭಟನೆ. ೪. ಅಲಂಕಾರ ಮಾಡಿಕೊಳ್ಳುವುದು; ಸಿಂಗರಿಸಿಕೊಳ್ಳುವುದು : "ಆಕಲ್ಪಃ, ಮಂಡನಂ, ವೇಷಃ, ಪ್ರತಿಕರ್ಮ, ಪ್ರಸಾಧನಂ—ಈ ೫ ಶೃಂಗಾರಂಗೆಯ್ಯುದು" (ಹಲಾಯು. ೯೯-೩೬೩). [ಸಂ. ಪ್ರತಿಕರ್ಮನ್]

**ಪ್ರತಿಕಾಯ** (ನಾ). (ಒಂದು ವಸ್ತು ಅಥವಾ ವ್ಯಕ್ತಿಯನ್ನು ಹೋಲುವ ಲೋಹ, ಶಿಲೆ ಮುಂತಾದುವುಗಳ) ಪ್ರತಿಮೆ ; ಪ್ರತಿರೂಪ : "ಪ್ರತಿಬಿಂಬಂ, ಪ್ರತಿರೂಪಂ . . . ಪ್ರತಿಕಾಯಂ . . . ಪ್ರತಿಚ್ಛಾಯಂ—ಈ ೯ ಪ್ರತಿಬಿಂಬದ ಪೆಸರ್" (ಜಜಾಯು. ೨೦-೦೪೦). [ಸಂ.]

**ಪ್ರತಿಕಾರ$_1$** (ನಾ). ಗ್ರಂಥದ ಪ್ರತಿಗಳನ್ನು ಬರೆದು ಸಿದ್ಧಪಡಿಸುವವನು : ಪ್ರತಿಕಾರರ ಮತ್ತು ತಿದ್ದುಗಾರರ ಹೆಸರುಗಳೂ ಇಂದಿಗೂ ಇರುವುದನ್ನು ನೋಡಬಹುದು (ಕನ್ನಸಂ. ೨೦) ; ಓಲೆಗರಿಯ ಪ್ರತಿಕಾರರಿಗೆ ಬರಹಕಾರರೆಂದು ಕರೆಯುತ್ತಿದ್ದರು (ದ್ರಾಶಿಶಿ. ೩೪).
[ಪ್ರತಿ+—ಕಾರ$_1$ (<—ಕಾಱ)]

**ಪ್ರತಿಕಾರ$_2$** (ನಾ). ೧. ಮಾಡಿದಂದಕ್ಕೆ ಪ್ರತಿಯಾಗಿ ಮಾಡುವುದು ; ಪ್ರತಿಕ್ರಿಯೆ : ಹತದೇಹ ಹತಭುಜದ್ವಯ . . . ಹತಹೃತ್ಪ್ರತಿಕಾರಮೆಂಬುದುಂಟೇ ಗತಿಯಂ ಸಾಧಿಸುವುದಲ್ತೆ ತಾಂ ಪ್ರತಿಕಾರಂ (ಗದಾಯು. ೯-೨೬) ; ಪ್ರತಿಕಾರೋಪಾಯಮೇನಿಲ್ಲಿಗೆ ನುಡಿಯಂ (ಜಗು. ೬-೩೨). ೨. ಪರಿಹಾರ; ನಿವಾರಣೆ. ೩. [ವೈದ್ಯಶಾ] ರೋಗಪರಿಹಾರಕ್ಕೆ ಮಾಡುವ ಚಿಕಿತ್ಸೆ : 'ಪ್ರತೀಕಾರ' ಪರಾ. [ಸಂ.]

**ಪ್ರತಿಕೂಲ** (ಗು). ೧. ದಡಕ್ಕೆ ಎದುರಾದ. ೨. ಅನುಕೂಲವಲ್ಲದ ; ವ್ಯತಿರಿಕ್ತವಾದ ; ವಿರುದ್ಧವಾದ : ಪ್ರತಿಕೂಲಾನಿಲನಿಂ ಪತಾಕೆ ಮಗುಟೆಂಬಂತಾಗೆ ಕೈಸನ್ನೆಯಿಂ . . . ಸಾರ್ತಂದುದು . . . ಪುಷ್ಪಕವಿಮಾನಂ

ದಂಡಕಾರಣ್ಯಮಂ (ಶಂಕಾಪು. ೯-೬೩) ; ಪ್ರತಿಕೂಲಕರ್ಮವೇಘಂ ಪ್ರತಿಸಮಯಮನಂತಗುಣವಿಶೋಧಿಮಹಾಮಾರುತನಿಂ ಕಿಡೆ (ಶಾಕ್ಮೇಕ. ೩-೪೧) ; ಭಾಳಲಿಪಿಗಳ ಲೆಕ್ಕವನು ಪ್ರತಿಕೂಲವಿಧಿ ಪಲ್ಲಟಿಸಿ ಬರೆದಡೆ ಹೇಳಿ ಫಲವೇನು (ಕುಮ್ಮಾ. ೩-೨೮). (ನಾ). ೩. ಎದುರಂ ದಡ ; ಆಚೆಯ ದಡ. ೪. ಅನುಕೂಲವಲ್ಲದುದು ; ವ್ಯತಿರಿಕ್ತವಾದುದು ; ವಿರುದ್ಧವಾದುದು : "ಪ್ರತಿಕೂಲಂ, ಪ್ರತಿಲೋಮಂ, ಪ್ರತೀಪಂ, ಪ್ರಸವ್ಯಂ—ಈ ೪ ಪ್ರತಿಕೂಲಂ" (ಹಲಾಯು. ೦೨೨-೩೮) ; ಇಲ್ಲಿ ಕೊಟ್ಟ ಸಂಗತಿಗಳು ಇತಿಹಾಸಕ್ಕೆ ಪ್ರತಿಕೂಲವಿಲ್ಲ (ಕರ್ಣಾಕ. ೬೦). ೩, ೪ : ನಿಟ್ಟಿಸೆ ಕುಮುದವೋಟಾಗಿಯುಂ ಕುಮುದವಿಲ್ಲಲ್ಲಿ ಪ್ರತಿಕೂಲವುಂಟಾಗಿಯುಂ ಹೆಸರಿಡಲು ಪ್ರತಿಕೂಲವಿಲ್ಲಲ್ಲಿ (ಹರಿಕಾ. ೩-೯೨). [ಸಂ.]

**ಪ್ರತಿಕೂಲತೆ** (ನಾ). ವ್ಯತಿರಿಕ್ತವಾಗಿರುವಿಕೆ ; ವಿರುದ್ಧವಾಗಿರುವಿಕೆ: ಅವಳ ಪ್ರತಿಕೂಲತೆಯನು ಅಂತರಿಸದೆಲ್ಲಮಂ ಪೇಳ್ವೊಡೆ (ಕೃಬಭಾ. ೦೦-೨೫). [ಸಂ. ಪ್ರತಿಕೂಲತಾ]

**ಪ್ರತಿಕೂಲದೈವ** (ನಾ). ೧. ವಿರುದ್ಧವಾದ ವಿಧಿ ; ದುರದೃಷ್ಟ : ಆಕೆಯ ಪ್ರತಿಕೂಲದೈವಶದಮನಾರ್ಥವಾಗಿ ಸೋಮತೀರ್ಥಕ್ಕೆ ಈಗ ತಾನೆ ಹೋಗಿರುವರು (ಶಾಕುಂತ. ೩-೦೦). ೨. ದುರದೃಷ್ಟಶಾಲಿ ; ದುರ್ದೈವಿ : ಪ್ರತಿಕೂಲದೈವನೆನ್ನ ನೀಂ ಪ್ರತಿನೃಪರನುಕೂಲದೈವರ್ (ಗದಾಯು. ೩-೯೩); ಪ್ರತಿಕೂಲದೈವರಿಗಾರು ಸಹಾಯಕರು ತಂದೆಯ ತಾಯಿಯ ಮಗನೆ (ಶಂಕಾಶ. ೦೬೩-೩). [ಸಂ.]

**ಪ್ರತಿಕೂಲವರ್ಣ** (ನಾ). [ಕಾವ್ಯಮೀ] ಕಾವ್ಯಗಳಲ್ಲಿ ಬರಬಹುದಾದ ವಾಕ್ಯದೋಷಗಳಲ್ಲಿ ಒಂದು ; ರಸೋಚಿತವಲ್ಲದ ಅಕ್ಷರಗಳಿಂದ ಕೂಡಿರುವುದು ; ☞ ಶೃಂಗಾರ, ಕರುಣ, ಶಾಂತರಸಗಳನ್ನು ಪ್ರತಿಪಾದಿಸುವಾಗ ಮೃದುವಾದ ವರ್ಣಗಳೂ ರೌದ್ರ, ವೀರ, ಬೀಭತ್ಸರಸಗಳನ್ನು ಪ್ರತಿಪಾದಿಸುವಾಗ ಕಠೋರವಾದ ಅಕ್ಷರಗಳೂ ದೀರ್ಘಸಮಾಸವೂ ಇರಬೇಕೆಂಬ ನಿಯಮವಿದೆ. ಇದಕ್ಕೆ ವಿರುದ್ಧವಾಗಿರುವ ವರ್ಣಗಳಿಂದ ಕೂಡಿದ ವಾಕ್ಯವು ಪ್ರತಿಕೂಲವರ್ಣದೋಷವುಳ್ಳುದಾಗುವುದು : ಪ್ರತಿಕೂಲವರ್ಣ—ಪ್ರಸಕ್ತವಾದ ರಸಕ್ಕೆ ಅನುಗುಣವಲ್ಲದ ಅಕ್ಷರಗಳಿರುವದು (ಕೃಬಿಡಿ. ೨೨೪). [ಸಂ.]

**ಪ್ರತಿಕೂಲೋಕ್ತಿ** (ನಾ). ಅನುಕೂಲವಲ್ಲದ ನುಡಿ ; ವಿರುದ್ಧವಾದ ಮಾತು,—ವಚನ : ಪ್ರತಿಕೂಲೋಕ್ತಿಗಳೆನ್ನ ಮಾತುಗಳವಜ್ಞಾರ್ಗಂ ವಿವೇಕಾನ್ವಿತರ್ಗೆ ಶಿವಧ್ಯಂಗಳೆನಿಕ್ಕುಂ (ಶಾಕ್ಮೇಪು. ೨-೬೯). [ಸಂ.]

**ಪ್ರತಿಕೃತ** (ಗು). ೧. ಪ್ರತಿಯಾಗಿ ಮಾಡಿದ ; ಪ್ರತಿಫಲ ನೀಡಿದ. ೨. ಪ್ರತೀಕಾರ ಮಾಡಿದ ; ಸೇಡು ತೀರಿಸಿದ. ೩. ಪರಿಹರಿಸಿದ ; ನಿವಾರಿಸಿದ. ೪. [ವೈದ್ಯಶಾ] (ರೋಗ ಮುಂತಾದುವುಗಳಲ್ಲಿ) ಚಿಕಿತ್ಸೆ ಮಾಡಿದ. (ನಾ). ೫. ಅಡ್ಡಿ ; ಅಡಚಣೆ ; ವಿರೋಧ. ೬. ಪ್ರತಿಬಿಂಬ ; ಪ್ರತಿರೂಪ : "ಪ್ರತಿಬಿಂಬಂ, ಪ್ರತಿರೂಪಂ, ಪ್ರತಿಮಾನಂ, ಪ್ರತಿಕೃತಂ . . . ಪ್ರಸಿಚ್ಛಾಯಂ—ಈ ೯ ಪ್ರತಿಬಿಂಬದ ಪೆಸರ್" (ಹಲಾಯು. ೨೦-೦೩೦). [ಸಂ.]

**ಪ್ರತಿಕೃತಿ** (ನಾ). ೧. ಪ್ರತಿಮೆ ; ವಿಗ್ರಹ : ಅಂತು ತನ್ನ ಮಾಡಿಸಿದ ಚೈತ್ಯಾಲಯಂಗಳೊಳ್ ಆದಿಭಟ್ಟಾರಕರಾದಿಯಾಗಿ ಭವಿಷ್ಯತ್ತೀರ್ಥಕರ ಪ್ರತಿಕೃತಿಗಳಂ ಪಂಚರತ್ನಮಯಂಗಳಂ ಮಾಡಿಸಿ (ಆದಿಪು. ೦೬-೦ ವ) ; ಅತಿಶಯ ಪಂಚರುಚಿಪ್ರತಿಕೃತಿಪರಿತಂ ತಾಮ್ರೋತ್ಕೃಷ್ಟಪೀಠಸಿತಶ್ರೀಧೃತಮಾಗಿ ಸೂಯಿಯಾಣಾದ ವಿತಾನವಮಂ ಪೋಲ್ತುದು (ಶಾಂತಿಪು. ೦೦-೨೨). ೨. ಪ್ರತಿಬಿಂಬ ; ಪ್ರತಿಚಿತ್ರ : "ಆ ಪ್ರತಿಕೃತಿ ಪ್ರತಿಕಾಯಮಾ ಪ್ರತಿಪ್ರಾಣಮೆಂದೆನಲುದುಂ ಪ್ರತಿಯಪ್ಪ ರೂಪೆನಿಕ್ಕುಂ" (ಸುಂಗಾ. ೬-೨೮) ; ಮರ್ಗಾದ ನೀಂ ಪ್ರತಿಕೃತಿಯೆ ವಲಂ ಪೂನ್ನೊಡವೆ ನನ್ನ ಸೀತಾಸ್ಥಿತಿಗೆ! (ಶ್ರೀರಾಪು. ೨೧೩-೨೬೦) ; ಸುಭಾಷಿಣಿಯೂ ಅವಳ ಗಂಡ ರಮಣಬಾಬುವೂ ವಿಷವೃಕ್ಷದ ಕಮಲಮಣಿ ಶ್ರೀಶರ ಪ್ರತಿಕೃತಿಗಳು (ಶಂಕಪು. ೦೨೩). ೩. ಸದೃಶವಾದುದು ; ಸಮಾನವಾದುದು. ೪. ಒಂದಂ ಕೆಲಸದಿಂದ ಉಂಟಾಗುವ ಪರಿಣಾಮ.— ಪ್ರತಿಕ್ರಿಯೆ : ಸ್ಮೃತಿಶಕ್ತಿಯು ಸಾಲುಸಾಲಾಗಿ ನೆನಹುಗಳನ್ನೂ ಮಾನಸಿಕ ಪ್ರತಿಕೃತಿಗಳನ್ನೂ ತಂದೊದಗಿಸುತ್ತದೆ (ಪಶ್ಕಾ. ೦೨೦). ೫. ಪ್ರತಿಭಟನೆ ; ವಿರೋಧ. ೬. ಒಂದು ಕಾರ್ಯಕ್ಕೆ ಪ್ರತಿಯಾಗಿ ಮಾಡುವ ಕಾರ್ಯ ; ಮುಯ್ಯಿ : "ಪ್ರತಿಯಾತನಂ ಪ್ರತಿ ಪ್ರತಿಕೃತಿಯೆನಲ್ಕೆ ಮುಯಿ" (ಶಬ್ದಮಣಿ. ೦೩೩-೩೬). [ಸಂ.]

**ಪ್ರತಿಕೃತಿಸು** (ಕ್ರಿ). ಪ್ರತಿಬಿಂಬಿಸು ; ಪ್ರತಿಫಲಿಸು : ಅದೊ ನದಿಯ ನೀರ್ ಮಿರುಗುತ್ತಿದೆ ಪಾದರಸದೊಲ್, ಪ್ರತಿಕೃತಿಸಿ ದಿವಾಕೀರ್ತಿಯಂ! (ಶ್ರೀರಾಪು. ೨೦೨-೨೨೦). [ಪ್ರತಿಕೃತಿ+—ಇಸು]

**ಪ್ರತಿಕೃಷ್ಟ** (ನಾ). ೧. ಹಿಂದಕ್ಕೆ ಎಳೆದುದು ; ಹಿಮ್ಮೆಟ್ಟಿಸಿದುದು. ೨. ಕಡೆಗಣಿಸಿದಂದು ; ತಿರಸ್ಕೃತವಾದುದು. ೩. ನೀಚ ; ಅಧಮ : "ನಿಕೃಷ್ಟಃ, ಪ್ರತಿಕೃಷ್ಟಃ . . . ಗರ್ಹ್ಯಃ ಅಣಕಃ, ೧೩ ಜಾತ್ಯಾಚಾರ ಗುಣಾದಿಗಳಿಂದ ಕಡಿಮೆಯಾದಂಥಾ ಅಧಮನ ಪೆಸರುಗಳು" (ಸಿದ್ಧಾಂತಿ. ೩೩೭). [ಸಂ.]

**ಪ್ರತಿಕ್ರಮಣ** : (ನಾ). ೧. ಮುಂದಕ್ಕೆ ಹೋಗುವುದು. ೨. [ಜೈನ] ಸಾಧುಗಳಿಗೆ ಹೇಳಿರುವ ಇಪ್ಪತ್ತೆಂಟು ಮೂಲಗುಣಗಳಲ್ಲಿ ಒಂದು ; ಪ್ರಮಾದದಿಂದ ಮಾಡಿದ ಪಾಪಗಳನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಗುರುಗಳ ಸನ್ನಿಧಿಗೆ ಬಂದು ಪಶ್ಚಾತ್ತಾಪಪೂರ್ವಕವಾಗಿ ಒಪ್ಪಿಕೊಳ್ಳುವುದು : ಪರಮಾಲೋಚನದೊಳ್ ಪ್ರತಿಕ್ರಮಣದೊಳ್ . . . ಶುದ್ಧಿ ತಳ್ತಿರೆ ದೋಷಪ್ರತಿಕಾರಸಾರತಪಮಂ ತತ್ತಾಪಸಂ ತಾಳ್ದಿದಂ (ಸುಕುಮಾ. ೯-೦೫). 'ಪಡಿಕಮಣ' ಪರಾ. ☞ ಬೌದ್ಧರಲ್ಲೂ ಈ ತಪ್ಪೊಪ್ಪಿಗೆಯ ಪ್ರಾಯಶ್ಚಿತ್ತವಿದೆ. [ಸಂ.]

**ಪ್ರತಿಕ್ರಿಯೆ** (ನಾ). ೧. ಒಂದು ಕ್ರಿಯೆಯಿಂದ ಉಂಟಾಗುವ (ಒಳ್ಳೆಯ ಅಥವಾ ಕೆಟ್ಟ) ಪರಿಣಾಮ : ಅವನ ಈ ಹೆದರಿಕೆಯು ಆ ಹತ್ತೆಂಟು ದಿನಗಳು ಮಾತ್ರ ಸ್ವಲ್ಪ ಪ್ರತಿಕ್ರಿಯೆಯನ್ನುಂಟು ಮಾಡಿದ್ದರೂ ಅದರಿಂದ ಶಾಶ್ವತವಾದ ಯಾವ ಉಪಯೋಗವೂ ಉಂಟಾಗಲಿಲ್ಲ (ಚಿಕಿ. ೦೦೭). ೨. ವಿರುದ್ಧವಾದ ಕಾರ್ಯ,— ಕೆಲಸ : ಓದುವುದನ್ನು ಮಾಡಲೇಕೂಡದೆಂದು ಡಾಕ್ಟರರು ವಿಧಿಸಿದ್ದರು. ಅದರ ಪ್ರತಿಕ್ರಿಯೆಯೆಂದು ಆಕೆ ಆ ಅವಧಿಯಲ್ಲಿ . . . ಒಂದು ನಾಟಕವನ್ನೂ ಬರೆದಿದ್ದಳು (ಕ್ರಾಂತ.೬೧); ಮೋನಪ್ಪನಾಯ್ಕರು ಅಂಗಡಿ ಬಿಟ್ಟು ಹೋದದ್ದೇ ಅವರೊಡನೆ ಆದ ಚರ್ಚೆಗೆ ಪ್ರತಿಕ್ರಿಯೆ ಸುರುವಾಗಿತ್ತು (ಕಾನೂರು. ೨೬೦). ೩. ಸೇಡು ತೀರಿಸಿಕೊಳ್ಳುವಿಕೆ; ಪ್ರತೀಕಾರ. ೪. ವಿರೋಧ; ಪ್ರತಿಭಟನೆ. ೫. [ವೈದ್ಯಶಾ] ರೋಗನಿವಾರಣೋಪಾಯ ; ಚಿಕಿತ್ಸೆ : "ಚಿಕಿತ್ಸಾ, ರುಕ್ಪ್ರತಿಕ್ರಿಯಾ_ರೋಗಕ್ಕೆ ಶಾಮಕವಾಗಿ ಔಷಧಾದಿ ಪ್ರತಿಕ್ರಿಯೆಗಳನ್ನು ಮಾಡುವಿಕೆ" (ಸಿದ್ಧಾಂತಿ. ೦೮೨); ರಾಜಕೀಯದ ಸಹಜವಿಷಕ್ಕೆ ಸತ್ಯಾಪ್ಯದ ಸಹಜ ಅಮೃತವನ್ನು ಬಿಟ್ಟರೆ ಬೇರೆ ಪ್ರತಿಕ್ರಿಯೆ ಇಲ್ಲವೆಂದು ಹೇಳುತ್ತಾರೆ (ಗಾಪಿಕ. ೦೯). [ಸಂ. ಪ್ರತಿಕ್ರಿಯಾ]

**ಪ್ರತಿಕ್ಷಣಂ** (ಅ). ಪ್ರತಿಯೊಂದು ಕ್ಷಣದಲ್ಲೂ ; ಕ್ಷಣಕ್ಷಣದಲ್ಲೂ ; ಮತ್ತೆ ಮತ್ತೆ: "ಪ್ರತಿಕ್ಷಣಂ, ಅಭೀಕ್ಷ್ಣಂ, ಭೂಯಃ, ಅಸಕೃತ್, ಮುಹುಃ – ಈ ೫ ಮಗುಟೆ ಮಗುಟೆ" (ಹಲಾಯು. ೧೨೦-೪೧) ; ಪ್ರತಿಕ್ಷಣಂ ವಿಶರಾರುಗಳ್ ಚಿತ್ತಕ್ಷಣಂಗಳ್ ಪೂರ್ವಾಪೂರ್ವಚಿತ್ತವಿಶೇಷಪ್ರಭವಂಗಳ್ ಪ್ರಬಂಧದಿಂದಂ ಪ್ರವರ್ತಿಸುವುವು (ಶಾಂತಿಪು. ೬-೦೯೩ ವ). [ಸಂ.]

**ಪ್ರತಿಕ್ಷಿಪ್ತ** (ಗು). ೧. ತಿರಸ್ಕಾರ ಹೊಂದಿದ ; ನಿರಾಕೃತವಾದ.

೨. ಆಕ್ಷೇಪಣೆಯನ್ನು ಹೊಂದಿದ; ನಿಂದಿತವಾದ. ೩. ವಿರೋಧಕ್ಕೆ ಒಳಗಾದ; ಪ್ರತಿಭಟನೆ ಹೊಂದಿದ. ೪. ಪರಿಹಾರವಾದ; ನಿವಾರಣೆಯಾದ. ೫. ಕಳುಹಿಸಿದ ; ರವಾನಿಸಿದ. (ನ). ೬. ತಿರಸ್ಕರಿಸಿದುದು ; ನಿರಾಕೃತವಾದುದಂ : "ಪ್ರ(ತ್ಯಾ)ಖ್ಯಾತಂ, ಪ್ರತಿಕ್ಷಿಪ್ತಂ, ಪ್ರತ್ಯಾದಿಷ್ಟ, ನಿರಾಕೃತಂ . . . ಪರಿಹೃತಂ — ಈ ೭ ಪರಿಹರಿಸಲ್ಪಟ್ಟುದು" (ಶಬ್ದಮ. ೦೦೭-೮೯). ೭. ಆಕ್ಷೇಪಣೆಯನ್ನು ಹೊಂದಿದವನು ; ನಿಂದಿತನಾದವನು : "ಅಧಿಕ್ಷಿಪ್ತಃ, ಪ್ರತಿಕ್ಷಿಪ್ತಃ —೨ ಆಕ್ಷೇಪಿಸಲ್ಪಟ್ಟವನ ಪೆಸರುಗಳು" (ಸಿದ್ಧಾಂತಿ. ೩೩೪). ೮. (ಇನ್ನೊಬ್ಬರು) ಕಳುಹಿಸಿದವನು; ಪ್ರೇಷಿತ. ೯. ನಿರಾಕರಣೆ: "ನಿರಾಕೃತಿ ಪ್ರತಿಕ್ಷಿಪ್ತವೆನಲು" (ಮಂಗರಾ. ೦೨೯-೯). [ಸಂ.]

**ಪ್ರತಿಕ್ಷೇತ್ರ** (ನಾ). ಒಂದು ಭೂಮಿಯನ್ನು ಕೊಟ್ಟು ಅದರ ಬದಲಾಗಿ ತೆಗೆದುಕೊಂಡ ಭೂಮಿ, ಹೊಲ, ಗದ್ದೆ ಮೊದಲಾದುವು; ವಿನಿಮಯವಾಗಿ ತೆಗೆದುಕೊಂಡ ಭೂಮಿ : ಆಚಾರ್ಯ್ಯ ಅಪ್ಪಯ್ಯನುಮಗ ರಂಗಯ್ಯನು ಆಳಿಯ ಕಸವದೇವನು ತಂಮ ಇತಿಕೆಱೆಯಂ ಕೊಟು ಹಿರಿಯಕೆಱೆಯ ಕೆಳಗಣ ಏಡೆಯ ಗದ್ದೆ ನಾಲುಸಲಗೆಯಂ ಪ್ರತಿಕ್ಷೇತ್ರವಂ ಕೊಂಡರು (ಎಕ. V, ಹಾಸನ-೦೩೦-೩೨ ; 1156 ?). [ಸಂ.]

**ಪ್ರತಿಗಾಣು** (ಕ್ರಿ). ಬೇರೊಬ್ಬರನ್ನು ಕಾಣು ; ಮತ್ತೊಬ್ಬರನ್ನು ನೋಡು : ಯತಿಗಳೊಳು ನಿನ್ನಂಥವರುಗಳ ಪ್ರತಿಗಾಣೆನು ಈ ಕ್ಷಿತಿಯೊಳಗೆ ಯತಿರಾಯ (ಜಗದಾ. ೯೩). [ಪ್ರತಿ + ಕಾಣು ( < ಕಾಣ್)]

**ಪ್ರತಿಗಾಮಿ** (ಗು). ೧. ಎದುರಾಗಿ ಹೋಗುವ ; ವಿರುದ್ಧವಾಗಿ ಹೋಗುವ . ೨. (ಸಂಘ, ಸರ್ಕಾರ, ರಾಜಕೀಯಪಕ್ಷ ಮೊದಲಾದುವುಗಳಲ್ಲಿ) ವಿರುದ್ಧಾಭಿಪ್ರಾಯವನ್ನು ಹೊಂದಿರುವ ; ಆಡಳಿತಕ್ರಮದ ರೀತಿನೀತಿಗಳನ್ನು ವಿರೋಧಿಸುವ : ೧೯೧೧ರಲ್ಲಿ ವಿದೇಶೀಯ ಬ್ಯಾಂಕರ ಜನ ಪ್ರತಿಗಾಮಿ ನಾಯಕನಾದ ಯುವಾನ್-ಶಿ-ಕೈ ಎಂಬವನಿಗೆ ೨೫೦ ಲಕ್ಷ ಪವನಿನ ಸಾಲ ಕೊಟ್ಟಿತು (ಚೀಸಂ. ೦೪). (ನಾ). ೩. ದೇಶದ ಪ್ರಗತಿಗೆ ವಿರುದ್ಧವಾದುದು ; ರಾಷ್ಟ್ರದ ಕಲ್ಯಾಣಕ್ಕೆ ವ್ಯತಿರಿಕ್ತವಾದುದು : ವಿಜ್ಞಾನ ಯಾವಾಗಲೂ ಪ್ರಗತಿಮುಖವಾದುದು. ಛಡ ವಾಳಶಾಹಿ ಪ್ರತಿಗಾಮಿಯಾದುದು (ಕಾಂಯೂ. ೩೯); ತನ್ನ ಹಿತವನ್ನೇ ಸ್ವಾರ್ಥವನ್ನೇ ಅದು ಮೊದಲು ಗಮನಿಸತೊಡಗುತ್ತದೆ. ಅಂದಿನಿಂದ ಅದೇ ವರ್ಗವು ಪ್ರಗತಿವಿರೋಧಿಯಾಗುತ್ತದೆ, ಪ್ರತಿಗಾಮಿಯಾಗುತ್ತದೆ (ಮಾಣವ. ೯೪). ೪. ವಿರುದ್ಧಪಕ್ಷಕ್ಕೆ ಸೇರಿದವನು ; ಪ್ರತಿಪಕ್ಷಕ್ಕೆ ಸೇರಿದವನು : ಕೈಲಾಸದಲ್ಲಿ ಕಮ್ಯೂನಿಷ್ಟರನ್ನು ಕಂಡು ಪುರೋಗಾಮಿಗಳಂತೆಯೇ ಪ್ರತಿಗಾಮಿಗಳೂ ಹೌಹಾರಬಹುದು (ಕೈಲಾ. ೦ ಮುನ್ನುಡಿ). [ಸಂ. ಪ್ರತಿಗಾಮಿನ್]

**ಪ್ರತಿಗಾಮಿಪಕ್ಷ** (ನಾ). ಒಂದು ಪಕ್ಷವು ಪ್ರಗತಿಪರವೆಂದು ಭಾವಿಸಿರುವ ತತ್ತ್ವಕ್ಕೆ ವಿರುದ್ಧವಾದ ಪಕ್ಷ; ವಿರೋಧ ಪಕ್ಷ: ಸಂಪ್ರದಾಯಬದ್ಧವಾದ ಪ್ರತಿಗಾಮಿಪಕ್ಷದ ಪತ್ರಿಕೆಯೊಂದರಲ್ಲಿ ಕಳೆದ ಹನ್ನೆರಡು ತಿಂಗಳಿಂದ ಪ್ರಕಟವಾಗುತ್ತಿದ್ದ ಅಭಿಪ್ರಾಯವನ್ನವನು ಓದಿದ್ದನು (ಕೃಪರು. ೨೨೪). [< ಸಂ. ಪ್ರತಿಗಾಮಿಪಕ್ಷ]

**ಪ್ರತಿಗೈ** (ಕ್ರಿ). ಪ್ರತಿಕ್ರಿಯೆಯನ್ನು ತೋರಿಸು.— ವ್ಯಕ್ತಪಡಿಸು : ಮೇಳೈಸಿ ನಾನಾರವಕ್ಕೆ ಪ್ರತಿಗೈವವಂ ಚರ್ಮಣಂ ವಾಗ್ಮಿಯಕ್ಕುಂ (ಮಂಗರಾ. ೦೦೬-೦೬). [ಪ್ರತಿ + ಗೈ (<ಕೆಯ್$_1$) ]

**ಪ್ರತಿಗ್ರಹ** (ನಾ). ೧. ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ ಮತ್ತು ಪ್ರತಿಗ್ರಹಗಳೆಂಬ ಬ್ರಾಹ್ಮಣನ ಷಟ್ಕರ್ಮಗಳಲ್ಲಿ ಒಂದು; ದಾನವನ್ನು ತೆಗೆದುಕೊಳ್ಳುವುದು,— ಸ್ವೀಕರಿಸುವುದು : ಅಂತು ಭವಿಷ್ಯದ್ದ್ವಿಜನ್ಮವರ್ಣಕ್ಕೆ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಯಜನ ಯಾಜನ ವಿಶಿಷ್ಟವೃತ್ತಿಯುಮಂ . . . ನಿಱಿಸಿ (ಆದಿಪು. ೯-೬೩ ವ); ಎಮಗಂ ಪ್ರತಿಗ್ರಹ ಸಲ್ಲದು (ಹರಿಕಾ. ೯-೬೬) ; ಕ್ಷತ್ರವೈಶ್ಯಾದಿಗಳು ಕೊಡುವರು ತತ್ಪ್ರತಿಗ್ರಹ ಯೋಗ್ಯವಲ (ಕುಮಾವ್ಯಾ. ೬-೦೬). ೨. ಮತ್ತೊಬ್ಬರು ಕೊಟ್ಟುದನ್ನು ತೆಗೆದುಕೊಳ್ಳುವುದು,—ಸ್ವೀಕರಿಸುವುದು : ಪ್ರಾಚೀನ ಕಾಲದಲ್ಲಿ . . . ಪ್ರತಿಗ್ರಹಕ್ಕೇ ಪ್ರಾಶಸ್ತ್ಯವಿರಲಿಲ್ಲ (ಆರ್ಯಧ. ೮೩). ೩. ದಾನ; ಕೊಡುಗೆ. ೪. ದಾನವನ್ನು ಸ್ವೀಕರಿಸುವವನು. ೫. (ಒಬ್ಬ ವ್ಯಕ್ತಿಯನ್ನು) ಸ್ನೇಹಪೂರ್ವಕವಾಗಿ ಅಥವಾ ಕನಿಕರದಿಂದ ಬರಮಾಡಿಕೊಳ್ಳುವುದು. ೬. ಸೈನ್ಯದ ಹಿಂಭಾಗ: "ಪಡೆಯ ಹಿಂದಣ ಮೆಯ್ಕಲ್ಲಿಯುಂ ಪ್ರತಿಗ್ರಹವೆಂಬುದು" (ಶಬ್ದಮ. ೦೩೨-೬). ೭. ಉಗುಳುವ ಪಾತ್ರೆ; ಪೀಕದಾನಿ : 'ಪ್ರತಿಗ್ರಾಹ' ಪರಾ. [ಸಂ.]

**ಪ್ರತಿಗ್ರಹಿಸು** (ಕ್ರಿ). ೧. ದಾನವಾಗಿ ತೆಗೆದುಕೊಳ್ಳು : ಋತ್ವಿಜರೆಲ್ಲರ್ ಕೊಳಗ ಮಾತ್ರವಿರ್ಬಳ್ಳ ರನ್ನಮುಂ ಪೊನ್ನ ಹೇಱಂ ಚಿನ್ನಾಕಳಂ ಪ್ರತಿಗ್ರಹಿಸಿ ರಾಮನಂ ಪರಸಿ ಬೀಳ್ಕೊಂಡರ್ (ರಾಮಾಕ. ೦೬೬-೦೩). ೨. ಒಪ್ಪಿಕೊಳ್ಳು ; ಅಂಗೀಕರಿಸು : ಆ ರಾಜ ಋಷಿವಾಕ್ಯಮಂ ಕೇಳಿ ಹಾಗೆ ಆಗಲಿ ಎಂದು ಪ್ರತಿಗ್ರಹಿಸಿದನು (ಕಳಸು. ೨೯೨-೬). ೩. ಬರಮಾಡಿಕೊಳ್ಳು ; ಸ್ವೀಕರಿಸು : ಗರ್ಭಿಣಿಯಾದ ಈಕೆಯನ್ನು ಧರ್ಮಾಚರಣಾರ್ಥವಾಗಿ ಪ್ರತಿಗ್ರಹಿಸುವುದು (ಶಾಕುಂತ. ೬೬-೯). [ಸಂ. ಪ್ರತಿಗ್ರಹಣ + — ಇಸು$_3$ ]

**ಪ್ರತಿಗ್ರಾಹ** (ನಾ). ಉಗುಳುವ ಪಾತ್ರೆ; ಪಡಿಗ; ಪೀಕದಾನಿ : "ಪ್ರತಿಗ್ರಾಹಃ, ಪತದ್ಗ್ರಹಃ — ೨ ಪಡಿಗದ ಪೆಸರು" (ಸಿದ್ಧಾಂತಿ. ೨೦೦). [ಸಂ.]

**ಪ್ರತಿಗ್ರಾಹಕ** (ನಾ). ಅಂಗೀಕರಿಸುವವನು : ಪ್ರಾಣಲಿಂಗಪ್ರತಿಗ್ರಾಹಕನಾದ ಬಳಿಕ ಲಿಂಗವಿರಹಿತವಾಗಿ ನಡೆವ ಪರಿಯನ್ನೆಂತೊ (ಬಸವ. ೬೯೬). [ಸಂ.]

**ಪ್ರತಿಘ** (ನಾ) ೧. ನಿರಾಕರಣೆ : ತಿರಸ್ಕಾರ. ೨. ಪ್ರತಿಭಟನೆ; ವಿರೋಧ. ೩. ಪರಸ್ಪರ ಹೊಡೆದಾಟ, — ಕದನ. ೪. ಸಿಟ್ಟು; ಕೋಪ ; ಕ್ರೋಧ: "ಕೋಪ, ಕ್ರೋಧಃ, ಅಮರ್ಷಃ, ರೋಷಃ, ಪ್ರತಿಘಃ —ಈ ೫ ಮುನಿಸು" (ಶಬ್ದಮ. ೫೯-೨೦೬) ; ಆಸ್ಯದಿಂ ಪ್ರತಿಘದೊಳೊತ್ತಿ ಬೀಸುವುದದೊಂದು ಮದದ್ವಿರದಂ ಮಹಾಹಿಯಂ (ಜಗನ್ನಾ. ೦೬-೬). ೫. ಶತ್ರು ; ವೈರಿ. [ಸಂ.]

**ಪ್ರತಿಘಾತ** (ನಾ). ೧. ನಿರಾಕರಣೆ ; ತಿರಸ್ಕಾರ. ೨. ವಿರೋಧ ; ಪ್ರತಿಭಟನೆ. ೩. ಹೊಡೆತಕ್ಕೆ ಪ್ರತಿಯಾಗಿ ಹೊಡೆಯುವುದು : "ಪ್ರತಿಘಾತೇ — ಮಗುಳ್ದು ಹೊಡೆವಲ್ಲಿ" (ಕಾಕಿ. ೦೩೦); ಪ್ರತಿಘಾತಪ್ರಕಟಾಸ್ತ್ರಶಸ್ತ್ರಚಯದಿಂ ದೈತೇಯಸಾಮಂತರದ್ಭುತಮಾಯಾಮಯಶಕ್ತಿಯಂ ಕೆಡಿಸಿ ಭೂಮಾನಕ್ಕೆ ಬಂದಾಹವಪ್ರತಿಮಲ್ಲಂ . . . ಕ್ರೋಧಾನಳಂಗಿತ್ತನಾಹುತಿಯಂ (ಆಪುಂಕು. ೦೪-೦೦) ; ಪ್ರತಿಘಾತಾಯತಲೋಲಕಂಕಣ ರಥಣಜ್ಝಂಕಾರಚಂಚತ್ಕಳಾತತಿ . . . ರಮ್ಯಮಾಯ್ತು (ಸೂಕ್ತಿಸು. ೦೪-೩೦). ೪. ಸಂಘರ್ಷ ; ತಿಕ್ಕಾಟ : ಸಾವಿರಾರು ವರ್ಷಗಳಿಂದ ಭಾರತಕ್ಕೆ ನಾನಾ ಸಂಸ್ಕೃತಿಗಳು ಹರಿಯುತ್ತಿವೆ. ಕೆಲವು ತೀಕ್ಷ್ಣವಾದ ಪ್ರತಿಘಾತವನ್ನೂ ಉಂಟುಮಾಡಲು ಯತ್ನಿಸಿದವು (ಮುಕ್ತಾರ. ೦೨೨ ಪೀಠಿಕೆ). ೫. ಹೊಡೆತ ; ಏಟು : ನಡುಗೆ ಧರಾತಲಂ ಕದಳಿಕಾಪರಿಘಪ್ರತಿಘಾತದಿಂ (ಕುಂದಮಾ. ೦೩-೬೩). ೬. ಹೊಡೆತದಿಂದ ತಪ್ಪಿಸಿಕೊಳ್ಳುವುದು. ೭. ಹಾಳುಮಾಡುವುದು ; ನಾಶಪಡಿಸುವುದು. ೮. [ಗಣಿತ] ಒಂದು ಬಗೆಯ ಗಣನಾಪದ್ಧತಿ ; ಲಘುಗಣಕ ; ಲೆಕ್ಕಾಚಾರ ಮಾಡುವುದನ್ನು ಸುಲಭಗೊಳಿಸಲು ಗುಣಾಕಾರ ಭಾಗಾಕಾರಗಳಿಗೆ ಬದಲಾಗಿ ಸಂಕಲನ ವ್ಯವಕಲನವನ್ನೂ, ಸಂಖ್ಯಾಘಾತ ಮತ್ತು ಘಾತಮೂಲವನ್ನೂ ಕಂಡುಹಿಡಿ

ಯುವುದಕ್ಕೆ ಬದಲಾಗಿ ಗುಣಾಕಾರ ಭಾಗಾಕಾರಗಳನ್ನೂ ಉಪಯೋಗಿಸುವಂತೆ ಕೋಷ್ಟಕವನ್ನು ರಚಿಸಿರುವ ಗಣನಾಸೌಲಭ್ಯ ಪದ್ಧತಿ : ಎರಡು ಬಹುಮುಖ್ಯವಾದ ಹೊಸ ಭಾವನೆಗಳು ಮೂಡಿದುವು . . . ಎರಡನೆಯದು, ಅಂಕಗಣಿತ ಬೀಜಗಣಿತಗಳೆರಡಕ್ಕೂ ವಿಶೇಷ ಉಪಯೋಗವಾದ Logarithms ("ಪ್ರತಿಘಾತಗಳು") ಎಂಬ ಭಾವನೆ (ಗಣಿತ. ೦೦೩). [ಸಂ.]

**ಪ್ರತಿಘಾತಕೋಷ್ಟಕ** (ನಾ). [ಗಣಿತ] ಲಘುಗಣಕದ ಪಟ್ಟಿ : ಪ್ರತಿಘಾತಕೋಷ್ಟಕಗಳೂ (tables of logarithms), ಕೊಟ್ಟ ಪ್ರತಿಘಾತವುಳ್ಳ ಸಂಖ್ಯೆಯ ಕೋಷ್ಟಕಗಳೂ . . . ಇದ್ದರೆ, ಇವುಗಳ ಸಹಾಯದಿಂದ ಅಂಕಗಣಿತದ ಪರಿಕರ್ಮಗಳು ಎಷ್ಟು ಸುಲಭವಾಗುತ್ತವೆ ಎಂಬುದನ್ನು ಉದಾಹರಿಸೋಣ (ಗಣಿತ. ೦೦೫). [ಪ್ರತಿಘಾತ+ಕೋಷ್ಟಕ]

**ಪ್ರತಿಘಾತನ** (ನಾ). ಕೊಲ್ಲುವಿಕೆ ; ವಧೆ : "ಪ್ರಮಾಪಣಂ, ನಿಬರ್ಹಣಂ . . . ವಿಶಸನಂ, ಮಾರಣಂ, ಪ್ರತಿಘಾತನಂ . . . ವಧಃ — ಈ ೩೦ ಕೊಲ್ಲುವುದಕ್ಕೆ ಹೆಸರುಗಳು ; ಸಂಹಾರ ಮಾಡುವಿಕೆ" (ಸಿದ್ಧಾಂತಿ. ೨೬೨). [ಸಂ.]

**ಪ್ರತಿಘೋಷ** (ನಾ). ಮಾರ್ದನಿ ; ಪ್ರತಿಧ್ವನಿ : ಕುವರನ ಬಾಹಾಸ್ಫಾಲನರವಮುರ್ಬಿಸೆಯಗಿದು ಪಾಡಿ ಬಿಡದೊದಱುತ್ತಿರ್ದವೊಲಾದುದು ತದ್ಗಹ್ವರನಿಪಹಪ್ರಭವಾತಿಭೀಷಣಂ ಪ್ರತಿಘೋಷಂ (ಶಂಪ್ರಕೃ. ೩-೬೬). [ಸಂ.]

**ಪ್ರತಿಚಿತ್ರ** (ನಾ). ಮೂಲಚಿತ್ರದ ಪ್ರತಿಕೃತಿ : ಅವರು ರ್‍ಯಾಫೇಲ್, ಮೈಕೇಲ್ಏಂಜಲೊ . . . ಅವರ ಪ್ರತಿಬಿಂಬಗಳಾಗಿದ್ದರೆ ಜಗತ್ತು ಮೂಲಕೃತಿಗಳಿಗೆ ಗೌರವವೀಯುತ್ತಿತ್ತೇ ವಿನಾ ಪ್ರತಿಚಿತ್ರಗಳಿಗಲ್ಲ (ಕಾಳಿ. ೩೬೦). [ಸಂ.]

**ಪ್ರತಿಚ್ಛಂದ** (ನಾ). ೧. ಒಂದರಂತೆ ಮತ್ತೊಂದು ಇರುವುದು; ಪ್ರತಿಬಿಂಬ : "ಪ್ರತಿಬಿಂಬಂ, ಪ್ರತಿರೂಪಂ, ಪ್ರತಿಮಾನಂ, ಪ್ರತಿಕೃತಂ, ಪ್ರತಿಚ್ಛಂದಂ . . . ಪ್ರತಿಚ್ಛಾಯಂ— ಈ ೯ ಪ್ರತಿಬಿಂಬದ ಪೆಸರ್" (ಶಬ್ದಾಮ. ೨೦-೦೩೦) ; ಶ್ರೀಮತಿಯೆಂಬರಸಿಯೊಳ್ ಕಳಾಭಿನೂತಚಂದ್ರಪ್ರತಿಚ್ಛಂದಂ ಚಂದ್ರನೆಂಬೊಂ ಮಗನಂ ಪಡೆದು ಸಂತಸದಿಂದಿರ್ಪಿನಂ (ಶಾಂತಿಪು. ೬-೨೦ ವ). ೨. ವಿಗ್ರಹ; ಪ್ರತಿಮೆ. ೩. ಪ್ರತಿನಿಧಿ. [ಸಂ.]

**ಪ್ರತಿಚ್ಛಂದತೆ** (ನಾ). ಸಮಾನವಾಗಿರುವಿಕೆ; ಪ್ರತಿರೂಪವಾಗಿರುವಿಕೆ: ಮುನೀಂದ್ರಕಳಾಪಕ್ಕೆ ನಿಮಿರ್ಚಿದಂ ಪ್ರತಿಚ್ಛಂದತೆಯಂ (ಶಾಂತಿಪು. ೯-೦೦೪). [ಸಂ. ಪ್ರತಿಚ್ಛಂದತಾ]

**ಪ್ರತಿಚ್ಛನ್ನ** (ಗು). ೧. ಮುಚ್ಚಿದ; ಹೊದಿಸಿದ. ೨. ಮುಚ್ಚಿಟ್ಟ; ಅಡಗಿಸಿದ ; ಮರೆಮಾಡಿದ. ೩. ಆವರಿಸಿದ ; ಆಕ್ರಮಿಸಿದ. ೪. (ಉಡುಪನ್ನು) ಧರಿಸಿದ; ತೊಟ್ಟ. [ಸಂ.]

**ಪ್ರತಿಚ್ಛಾಯ** (ನಾ). ೧.=ಪ್ರತಿಚ್ಛಾಯೆ ೧ : "ಪ್ರತಿಬಿಂಬಂ, ಪ್ರತಿರೂಪಂ . . . ಪ್ರತಿಯಾತನಂ, ಪ್ರತಿಚ್ಛಾಯಂ — ಈ ೯ ಪ್ರತಿಬಿಂಬದ ಪೆಸರ್" (ಶಬ್ದಾಮ. ೨೦-೦೩೦). ೨.=ಪ್ರತಿಚ್ಛಾಯೆ ೨: "ಪ್ರತಿಬಿಂಬಮಾ ಪ್ರತಿಚ್ಛಾಯಮಾ ಪ್ರತಿನಿಧಿ . . . ಪ್ರತಿಪ್ರಾಣಮೆಂದೆನಲದುಂ ಪ್ರತಿಯಪ್ಪ ರೂಪೆನಿಕ್ಕುಂ" (ಮಂಗರಾ. ೬-೨೮). [ಸಂ. ಪ್ರತಿಚ್ಛಾಯಾ]

**ಪ್ರತಿಚ್ಛಾಯೆ** (ನಾ). ೧.=ಪ್ರತಿಬಿಂಬ ೧: ಮಂಗಳಮಯಂ ನೋಡಿದಂ ವಿಮಲ ವಿರಳಮಂ ನೋಡಲದಱೊಳ್ ಪ್ರತಿಚ್ಛಾಯೆ ತೋಱುತ್ತಮಿರ (ಶಂಶಿತ. ೦-೨೪). ೨. ಒಂದರಂತೆಯೇ ಒಂದು ಇರುವ ಆಕೃತಿ ; ಪ್ರತಿರೂಪ. ೩. ವಿಗ್ರಹ ; ಪ್ರತಿಮೆ : "ಪ್ರತಿಮಾನಂ . . . ಪ್ರತಿಚ್ಛಾಯಾ, ಪ್ರತಿಕೃತಿ, ಅರ್ಚಾ, ಪ್ರತಿನಿಧಿ— ೮ ವಿಷ್ಣು ಮೊದಲಾದವರ ಆಕಾರಂಗಳಿಗೆ ಸಮನಾಗಿ ಶಿಲಾದಿಗಳಿಂದ ಮಾಡಿದ ಪ್ರತಿಮೆ ಹೆಸರು" (ಸಿದ್ಧಾಂತಿ. ೩೦೭). [ಸಂ. ಪ್ರತಿಚ್ಛಾಯಾ]

**ಪ್ರತಿಜಾಗರ** (ನಾ). ಎಚ್ಚರಿಕೆಯಿಂದ ಇರುವುದು ; ಗಮನವಿಟ್ಟಿರುವುದು : "ಅವೇಕ್ಷಾ, ಪ್ರತಿಜಾಗರಃ — ಈ ಎರಡು ಎಚ್ಚತ್ತಿರ್ಪುದು" (ಶಬ್ದಾಮ. ೦೨೯-೯೬). [ಸಂ.]

**ಪ್ರತಿಜ್ಞಾಜಯ** (ನಾ). ಶಪಥವನ್ನು ಈಡೇರಿಸಿಕೊಳ್ಳುವುದು,— ಸಾಧಿಸುವುದು : ನಯನಿಕ್ಷೇಪಪ್ರಮಾಣಂಗಳೊಳೆ ಪಡೆದನೈಕಾಂತಸಿದ್ಧಿ ಪ್ರತಿಜ್ಞಾಜಯಮಂ (ಶಂಪ್ರಕೃ. ೦-೪). [ಸಂ].

**ಪ್ರತಿಜ್ಞಾತ** (ನಾ). ೧. ಒಪ್ಪಿಕೊಂಡುದು ; ಅಂಗೀಕರಿಸಿದುದು. ೨. ವಾಗ್ದಾನ; ಭಾಷೆ. ೩. ಪ್ರತಿಜ್ಞೆ; ಶಪಥ. ೪. ಶಪಥ ಮಾಡಿದಂದು ; ಪ್ರತಿಜ್ಞೆ ಮಾಡಿದಂದು : "ಊರೀಕೃತಂ, ಉರರೀಕೃತಂ, ಅಂಗೀಕೃತಂ, ಆಶ್ರುತಂ,ಪ್ರತಿಜ್ಞಾತಂ . . . ಉಪಗತಂ— ಈ ೧೧ ಅಂಗೀಕರಿಸಲ್ಪಟ್ಟದ್ದು, ಒಪ್ಪಿಕೊಳ್ಳಲ್ಪಟ್ಟದ್ದು, ಪ್ರತಿಜ್ಞೆ ಮಾಡಿ ನುಡಿಯಲ್ಪಟ್ಟದ್ದು" (ಸಿದ್ಧಾಂತಿ. ೩೫೩). [ಸಂ.]

**ಪ್ರತಿಜ್ಞಾನ** (ನಾ). ೧. ಒಪ್ಪಿಕೊಳ್ಳುವುದು; ಒಪ್ಪಿಗೆ ; ಅಂಗೀಕಾರ: "ಸಂವಿತ್, ಆಗೂಃ, ಪ್ರತಿಜ್ಞಾನಂ . . . ಸಮಾಧಿಃ—೧೦ ಅಂಗೀಕಾರದ ಹೆಸರುಗಳು" (ಸಿದ್ಧಾಂತಿ. ೪೪). ೨. ಭರವಸೆ ; ವಾಗ್ದಾನ. ೩. ಪ್ರತಿಜ್ಞೆ; ಶಪಥ. [ಸಂ.]

**ಪ್ರತಿಜ್ಞಾಪತ್ರಿಕೆ** (ನಾ). [ರಾಜನೀ] ಚುನಾವಣೆಯ ಸಮಯದಲ್ಲಿ ರಾಜಕೀಯಪಕ್ಷಗಳು ತಾವು ಅಧಿಕಾರಕ್ಕೆ ಬಂದರೆ ಈಡೇರಿಸುವುದಾಗಿ ತಿಳಿಸುವ ಸೌಕರ್ಯಗಳ ಭರವಸೆಯ ಪಟ್ಟಿ : ಅನೇಕ ಮಂದಿ ಅಭ್ಯರ್ಥಿಗಳ ವಾಗ್ದತ್ತಗಳಲ್ಲಿ ಸಮಾನವಾಗಿರುವ ಅಂಶಗಳನ್ನು ಕಲೆಹಾಕಿದರೆ ಅದು ಒಂದು ನೂತನ ರಾಜಕೀಯಪಕ್ಷಕ್ಕೆ ಮೂಲಸೂತ್ರಸಂಗ್ರಹವಾಗುತ್ತದೆ. ಇಂಥ ಆದರ್ಶನಿರೂಪಣೆಯೇ (ಮ್ಯಾನಿಫೆಸ್ಟೊ) ಪಕ್ಷದ ಪ್ರತಿಜ್ಞಾಪತ್ರಿಕೆ (ರಾಜ್ಯಶಾ. ೭೩). [ಸಂ. ಪ್ರತಿಜ್ಞಾಪತ್ರಿಕಾ]

**ಪ್ರತಿಜ್ಞಾಭಾರ** (ನಾ). ಶಪಥದ ಹೊಣೆಗಾರಿಕೆಯನ್ನು ಹೊತ್ತವನು; ಪ್ರತಿಜ್ಞೆ ಮಾಡಿದವನು : ಕುರುರಾಜನಿರ್ವ್ಯಾಜನಿಬಿಡೋರುದ್ವಯಭಂಗಪ್ರತಿಜ್ಞಾಭಾರನುಂ . . . ಸಾಹಸಾಂಕನುಮೆನಿಸಿದ ಭೀಮಸೇನಂ (ಗದಾಯು. ೨-೦ ವ). [ಸಂ.]

**ಪ್ರತಿಜ್ಞಾರೂಢ** (ನಾ). ಶಪಥವನ್ನು ಕೈಗೊಂಡವನು ; ಪ್ರತಿಜ್ಞೆ ಮಾಡಿದವನು : ಅಚಲಿತಪ್ರತಿಜ್ಞಾರೂಢನಾದ ಗಾಂಗೇಯನನೇಗೆಯ್ದುಂ ಮೊಡಂಬಡಿಸಲಾಱದೆ (ಶಂಶಿತ. ೦-೪೪ ವ) ; ಭೀಮಸೇನನಂತು ಆರೂಢಕೋಪನುಂ ಪ್ರತಿಜ್ಞಾರೂಢನುಮಾಗಿ (ಗದಾಯು. ೨-೦ ವ) ; ಅತಿಪ್ರತಿಜ್ಞಾರೂಢನುಂ ರಥಾರೂಢನುಮಾಗಿ . . . ವಂದಂ . . . ಸುವರ್ಣನಾಭಂ (ಶಂಪ್ರಕೃ. ೦೭-೪೦ ವ). [ಸಂ.]

**ಪ್ರತಿಜ್ಞಾವಚನ** (ನಾ). ೧. ಶಪಥದ ಮಾತು. ೨. [ರಾಜನೀ] ರಾಷ್ಟ್ರಪತಿ, ಮುಖ್ಯಮಂತ್ರಿ ಮೊದಲಾದವರು ತಮ್ಮ ಹುದ್ದೆಯನ್ನು ವಹಿಸಿಕೊಳ್ಳುವುದಕ್ಕೆ ಪೂರ್ವಭಾವಿಯಾಗಿ ನಿಯಮಪೂರ್ವಕವಾಗಿ ಮಾಡಬೇಕಾದ ಪ್ರತಿಜ್ಞೆ : ಪ್ರತಿಯೊಬ್ಬರೂ ರಾಷ್ಟ್ರಪತಿಯವರೂ . . . ತಮ್ಮ ಪದಗ್ರಹಣ ಮಾಡುವುದಕ್ಕೆ ಪೂರ್ವಭಾವಿಯಾಗಿ . . . ಕೆಳಗೆ ಕಂಡ ಪ್ರಪತ್ರದ ಮೇರೆಗೆ ಪ್ರಮಾಣವಚನ ಅಥವಾ ಪ್ರತಿಜ್ಞಾವಚನ ಸ್ವೀಕಾರ ಮಾಡತಕ್ಕುದು (ಶಾಭಾಸ. ೩೦). [ಸಂ.]

**ಪ್ರತಿಜ್ಞಾವಾಕ್ಯ** (ನಾ.) [ತರ್ಕಶಾ] ಶಾಸ್ತ್ರಗಳಲ್ಲಿ ವಾದ ಮಾಡುವಾಗ ಸ್ವಸಿದ್ಧಾಂತವನ್ನು ಪ್ರತಿಪಾದಿಸುವ ವಾಕ್ಯ,—ಮಾತು : ಬಳಿಕ ಆಯನುಮಾನಪ್ರಮಾಣಕ್ಕೆ ಪ್ರತಿಜ್ಞೆ ಹೇತು ದೃಷ್ಟಾಂತಗಳೆಂಬ ಅಂಗತ್ರಯ ಮುಂಟದಱೊಳು ಪರ ಪ್ರತಿಪತ್ತ್ಯರ್ಥವಾಗಿ ಪ್ರಯೋಗಿಸುವಾಗ ಪರ್ವತ ವಹ್ನಿವುಳ್ಳದ್ದೆಂಬುವುದೇ ಪ್ರತಿಜ್ಞಾವಾಕ್ಯವು (ವಿವೇಕ. ೦೪). [ಸಂ.]

**ಪ್ರತಿಜ್ಞಾಸ್ಥಾಪನ** (ನಾ). ಮಾಡಿದ ಶಪಥವನ್ನು ಈಡೇರಿಸುವಿಕೆ :

ಕೋಪ ಕುಡಿಯಿಡಲೀ ವೃಕೋದರನಾಪನಿತ ನುಡಿದನು ಪ್ರತಿಜ್ಞಾಸ್ಥಾಪನಕೆ ಬಳಿಕೇನ ಮಾಡುವುದೆಂದನಸುರಾರಿ (ಕುಭಾ.ಗ. ೯-೩೪). [ಸಂ.]

**ಪ್ರತಿಜ್ಞೆ** (ನಾ). ೧. ಒಪ್ಪಿಗೆ ; ಅಂಗೀಕಾರ ; ಸಮ್ಮತಿ. ೨. ಕ್ರಮ ಬದ್ಧವಾದ ಘೋಷಣೆ. ೩. (ವಿವಾಹ ಮುಂತಾದ ಸಂದರ್ಭಗಳಲ್ಲಿ) ಮಾಡುವ ವಾಗ್ದಾನ; ನಿಶ್ಚಿತಾರ್ಥ. ೪. ಶಪಥ; ಪ್ರೋಕ್ಕೆ: "ಆಗೂಃ, ಸಂಗರಃ, ಸಂಧಾ, ಪ್ರತಿಶ್ರವಃ, ಸಂಶ್ರವಃ, ಪ್ರತಿಜ್ಞಾ–ಈ ೬ ಪ್ರತಿಜ್ಞೆ" (ಕಠಾಡು. ೦೦೮–೩೦) ; ಪೂಣ್ದ ಪ್ರತಿಜ್ಞೆಯುಂ ನೆನೆವೆಯೊ ನೆನೆಯೆಯೊ (ಪಚ್ಚಾರಾ. ೦೨೩–೬) ; ನೀನುಂ ನಿನ್ನ ಪ್ರತಿಜ್ಞೆಯುಂ ನೆಱೆಪಿದೆಯಾನುಮೆನ್ನ ಪ್ರತಿಜ್ಞೆಯುಂ ನೆಱೆಪುವೆಂ (ಕಂಕಥಾ. ೦೨–೦೫೬ ವ). ೫. [ನ್ಯಾಯಶಾ] ಹಿಂದಿನ ಕಾಲದಲ್ಲಿ ನ್ಯಾಯಾಲಯಂಗಳಲ್ಲಿ ಫಿರ್ಯಾದಿಯು ನ್ಯಾಯ ಪಡೆಯಲು ನ್ಯಾಯಾಲಯಕ್ಕೆ ಸಲ್ಲಿಸುತ್ತಿದ್ದ ದೂರು; ಫಿರ್ಯಾದು: ಪ್ರತಿಯೊಂದು ವ್ಯವಹಾರವೂ ನಾಲ್ಕು ಹಂತಗಳನ್ನು ಹೊಂದಬೇಕಾಗಿತ್ತು. ಅವು ಕ್ರಮವಾಗಿ ಪ್ರತಿಜ್ಞಾ (complaint), ಉತ್ತರ (Written statement), ಸಂಶಯಹೇತುಪರಾಮರ್ಶ (Weighing of evidence) ಮತ್ತು ನಿರ್ಣಯಪ್ರಮಾಣ (Final Conclusion) ಎಂದು ವಿಭಾಗಿಸಲ್ಪಟ್ಟಿದ್ದವು (ಭಾರಚ. ೫೬). ೬. [ತರ್ಕಶಾ] ಅನುಮಾನಪ್ರಮಾಣದಲ್ಲಿ ಪ್ರಯೋಗಿಸುವ ಪ್ರತಿಜ್ಞಾ, ಹೇತು, ಉದಾಹರಣ, ಉಪನಯ ಮತ್ತು ನಿರ್ಗಮನ ಎಂಬ ಪಂಚಾವಯವಗಳಲ್ಲಿ ಮೊದಲನೆಯದು ; ಸಾಧಿಸಬೇಕೆಂದಿರುವ ವಿಷಯವನ್ನು ತಿಳಿಸುವುದು; ಸಾಧ್ಯನಿರ್ದೇಶ: ನ್ಯಾಯವಾಕ್ಯಗಳಾದ ಪ್ರತಿಜ್ಞಾಹೇತೂದಾಹರಣೋಪನಯನಿಗಮನಗಳಲ್ಲಿ ಐದೂ ಅವಶ್ಯಕವಿಲ್ಲ (ಹಿಂದಶಾ. ೨೦೨) ; ಪರಾರ್ಥಾನುಮಾನವು ಪ್ರತಿಜ್ಞಾ . . . ನಿಗಮನ ಎಂಬ ಐದು ಅಂಗವುಳ್ಳದ್ದು (ಭಾತತ್ತ್ವ. ೨೬೩). [ಸಂ. ಪ್ರತಿಜ್ಞಾ]

**ಪ್ರತಿಜ್ಞೆಗೆಯ್**, ಪ್ರತಿಜ್ಞೆಗೈ (ಕ್ರಿ). ಶಪಥ ಮಾಡು ; ಪ್ರತಿಜ್ಞೆ ಮಾಡು: ಇರ್ವರುಮೋರೊರ್ವರಂ ಮೂದಲಿಸಿ ಪ್ರತಿಜ್ಞೆಗೆಯ್ದು (ಪಚ್ಚಾರಾ. ೦೨೯–೦೨); ಗಂಗಾಸುತಂ ಪೃಥಾಸುತರಂ ಗೆಲ್ವೊಡೆ ತಪಕೆ ಪೋಪೆಂ . . . ಎಂದು ಕರ್ಣಂ ಪ್ರತಿಜ್ಞೆಗೆಯ್ದುದುಂ (ಕಂಕಥಾ. ೦೦–೨೨ ವ). **ಪ್ರತಿಜ್ಞೆಗೈ** : ಹಯಮೇಧವಿಧಿಯಂ ತನಗೆ ಸೂಚಿಸೆ ಪ್ರತಿಜ್ಞೆಗೈದಂ ಭೀಮನದಕಶ್ವಮಂ ತಾದು ಕುದುವೆನೆಂದು (ಜೈಮಿಭಾ. ೨–೩೩). [ಪ್ರತಿಜ್ಞೆ + ಕೆಯ್$_1$]

**ಪ್ರತಿಜ್ಞೆಗೈ** 'ಪ್ರತಿಜ್ಞೆಗೆಯ್' ನೋ.

**ಪ್ರತಿಜ್ಯೋತಿ** (ನಾ). ಒಂದು ದೀಪದಿಂದ ಹತ್ತಿಸಿದ ಮತ್ತೊಂದು ದೀಪ : ದೀಪ ಒಂದರಲ್ಲಿ ಉದ್ಭೈಸಿ ಪ್ರತಿಜ್ಯೋತಿ ಪ್ರಮಾಣಿಸಿದಾಗವೇ ಪ್ರಾಣಲಿಂಗಿಯ ಪ್ರಾಣಲಿಂಗಸ್ಥಲ (ಶೂನ್ಯಸಂ. ೦೪೬–೫೬೦). [ಸಂ. ಪ್ರತಿಜ್ಯೋತಿಸ್]

**ಪ್ರತಿಟ್ಟೆ** 'ಪದಿಟೆ' ನೋ.

**ಪ್ರತಿಟ್ಟೆಗೆಯ್** 'ಪದಿಟೆಗೆಯ್' ನೋ.

**ಪ್ರತಿಟ್ಟೆಗೆಯಿಸು** 'ಪದಿಷ್ಟೆಗೆಯ್ಸು' ನೋ.

**ಪ್ರತಿತೂನಿ** (ನಾ). ಒಂದು ಬಗೆಯ ವಾಯುರೋಗ : ಅಪಾನಪ್ರದೇಶದಿಂದ ಪಕ್ವಾಶಯಕ್ಕೆ ಮೇಲು ಮುಂತಾಗಿ ಹಾಯುವ ವೇದನೆಯನ್ನುಂಟು ಮಾಡುವ ವಾಯು ಪ್ರತಿತೂನಿ ಎನಿಸಿಕೊಂಬುದು (ವೈದ್ಯಸಾ. I, ೩೨೩). 'ತೂನಿ$_2$' ಪರಾ. [< ಸಂ. ಪ್ರತಿತೂಣೀ./ತೆಲು. ಪ್ರತಿತೂಣಿ]

**ಪ್ರತಿದಿನ** (ನಾ). ೧. ಪ್ರತಿನಿತ್ಯ ; ಪ್ರತಿದಿವಸ : ಆತ್ಮಪತಿಸೇವೆಯುಂ ಪ್ರತಿದಿನದೊಳಲಸದೆ ನೆಗಳ್ದೊಡೆ ಸತಿಯರ್ಗೆ ಕೀರ್ತಿ ಸುಗತಿಗಳಪ್ಪುವಿಹಪರದೊಳು (ಜೈಮಿಭಾ. ೩–೬೨) ; ಪ್ರತಿದಿನದೊಳವಿವಾ ಪರಿಯೆಸಗುತಿರೆ ಯುಪಕ್ರಾಂತಮೇಕಮುಪಸಂಹೃತಿಯಾಗಿ ಪೂರ್ತಿಯಿಲ್ಲದನಿತಱಿಂ ಪೂರಿಸಲ ವೇಳ್ಕುಮಿನ್ನೆಂತಾನುಂ (ರಸ್ಮಕ. ೯–೨೬). [ಸಂ.]

**ಪ್ರತಿದಿನಂ** (ಅ). ಪ್ರತಿನಿತ್ಯದಲ್ಲೂ ; ನಿತ್ಯವೂ : ಪ್ರತಿದಿನಮಭ್ಯಾಸ ಚಮತ್ಕೃತಿಯಂ . . . ಮಾಡುತ್ತುಮಿರ್ಪನಾ ಕಂದರ್ಪಂ (ಕುಸುಮಾ. ೬–೬೩) ; ಪ್ರತಿದಿನಮಿಾ ತೆಱದಿಂ ಸನ್ನುತಮುಹಿಮಂ . . . ಮೃಗಯಾ ವಿನೋದಮಂ ತಳೆದೆಸೆದಂ (ಕೃತಪು. ೨೨–೪೦). [ಸಂ.]

**ಪ್ರತಿದಿವಸ** (ನಾ).=ಪ್ರತಿದಿನ : ಅವನು ಪ್ರತಿದಿವಸವೂ ಒಂದೊಂದು ಮೈಲಿ ದೂರವನ್ನು ನಡೆಯುತ್ತಾನೆ (ಕವಿ). [ಸಂ.]

**ಪ್ರತಿದಿವಸಂ** (ಅ).=ಪ್ರತಿದಿನಂ : ಆ ಕೂಟಾಷ್ಟಕದೊಳ್ ಪ್ರತಿದಿವಸಂ ರಮಿಯಿಪ ದೇವತೆಗಳ್ ಸುಪ್ರಣಿಧಿ . . . ಸುತಸುಸ್ಥಿತೆ ಸುಪ್ರಬುದ್ಧೆ ಚಿತ್ರಿಕೆಯೆಂಬಳ್ (ಶಾಂತಿಪು. ೯–೦೬೬). [ಸಂ.]

**ಪ್ರತಿದೇಯ** (ನಾ). ೧. ಹಿಂದಕ್ಕೆ ಕೊಡಬೇಕಾದುದು ; ಮರುಪಾವತಿ ಮಾಡಬೇಕಾದುದು. ೨. ಒತ್ತೆಯಿಟ್ಟ ವಸ್ತು ; ಗಿರವಿಯಿಟ್ಟ ಪದಾರ್ಥ. ೩. ಕೊಂಡ ಮೇಲೆ ಪುನಃ ಹಿಂತಿರುಗಿಸಿದ ವಸ್ತು. [ಸಂ.]

**ಪ್ರತಿದೋಱು** (ಕ್ರಿ). ೧. (ಮಾಡಿದ ಉಪಕಾರ ಅಥವಾ ಅಪಕಾರಕ್ಕೆ) ಪ್ರತಿಯಾಗಿ ಮಾಡಿ ತೋರಿಸು : ದುರುಳನರನಂ ಕೊಲುವುದಿಂತೇನರಿದೆ ಮೂದಲಿಸಿದ ಬಳಿಕ್ಕೀ ಧರಣಿಯೊಳ್ ಪ್ರತಿದೋಱದಿದ್ದಡೆ ಪಥವಿದಲ್ಲಲ್ಲ (ಜಸಪು. ೧೯–೦೩). ೨. ಹೋಲಿಸು; ಪಡಿಯಿಡು : ರತಿಯೂರ್ವಶಿ ರಂಭೆ ಮೇನಕೆಯರ ನೆಱೆ ಪ್ರತಿದೋಱಲಿವಳ ಚೆಲ್ವಿಕೆಗೆ ಮತಿಗೆ ಮಾಂಗಲ್ಯಕೆ ಚದುರತೆಗೆಣೆಯಲ್ಲ (ಕಂಕಪು. ೯–೦೬). [ಪ್ರತಿ + ತೋಱು]

**ಪ್ರತಿದ್ವಂದ್ವಿ** (ನಾ). ಹಗೆ ; ವಿರೋಧಿ; ಶತ್ರು : ಇಂತಹ ಪ್ರಬಲಪ್ರತಿದ್ವಂದ್ವಿಯನ್ನು ಜಯಿಸಿದರಲ್ಲವೇ ನನ್ನ ಹೆಸರು ಉಳಿಯುವುದು (ರಾಜಿ. ೩೨). [ಸಂ. ಪ್ರತಿದ್ವಂದ್ವಿನ್]

**ಪ್ರತಿಧ್ವನಿ** (ನಾ). ಶಬ್ದ ತರಂಗಗಳ ಪ್ರತಿಫಲನದಿಂದ ಉಂಟಾಗುವ ಮರುದನಿ.–ಪಡಿನುಡಿ.–ಹೊಳಲು : ನೃಪನೀತಿಶಾಸ್ತ್ರಮಂ ನೀನ ಪೂರ್ವಮಂ ನುಡಿಯೆ ನುಡಿಯೆ ಮತ್ತದನನುವರ್ಣಿಪನ ನುಡಿಗಳ್ ಪ್ರತಿಧ್ವನಿಯ ಪೋಲ್ವೆಗಳ್ ನಿನ್ನ ನುಡಿಗೆ ಸಮನಾದುವೇ (ಶಾಂತಿಪು. ೨–೩೬); ನಿಧಾನವಾಗಿ ಕಾಡಿನಲ್ಲಿ ಧ್ವನಿಯಾಗುತ್ತಾ ಮತ್ತೆ ಪ್ರತಿಧ್ವನಿಯಾಗುತ್ತಾ ದೂರದೂರದಲ್ಲಿ ಆ ಧ್ವನಿ ಸುರುಳಿಸುರುಳಿಯಾಗಿ ಕೇಳಿಸಿತು (ಮರಳಿ. ೦೦೮); ಪ್ರತಿಫಲಿತವಾದ ಶಬ್ದವು ಮೂಲದಿಂದ ಬಂದ ಶಬ್ದದಿಂದ ಪ್ರತ್ಯೇಕವಾಗಿ ಕೇಳಿದರೆ ಅದಕ್ಕೆ ಪ್ರತಿಧ್ವನಿ (Echo) ಯೆಂದು ಹೆಸರು (ಭೌತಪ. ೦೪೬). [ಸಂ.]

**ಪ್ರತಿಧ್ವನಿತ** (ಗು). ೧. ಮಾರ್ದನಿಗೊಂಡ. ೨. ಮಾರ್ದನಿಯಂತಿರುವ: ಪಾಶ್ಚಾತ್ಯರ ಮಿಕ್ಕ ಪ್ರತಿಧ್ವನಿತ ಅಭಿಪ್ರಾಯಗಳಂತೆ ಈಅಭಿಪ್ರಾಯವೂ ತಪ್ಪಾದುದು (ಭಾರಚ. ೫೭೦). [ಸಂ.]

**ಪ್ರತಿಧ್ವನಿಸು** (ಕ್ರಿ). ೧. ಪ್ರತಿಧ್ವನಿಯನ್ನುಂಟುಮಾಡು ; ಮಾರ್ದನಿಯನ್ನು ಕೊಡು; ಹೊಳಲುಕೊಡು: ಕಾಲೇಜಿನ ಕುರಿತಾದ ಮಾತುಕತೆ ಇಡೀ ಮನೆಯಲ್ಲಿ ಪ್ರತಿಧ್ವನಿಸಿತೋ ಎಂಬಂತೆ ಶ್ರೀಧರನಿಗೆ ವಸಂತರಾಯರಿಂದ ಕರೆ ಬಂತು (ಜಾತ್ರೆ. ೯೩); ಕೇರಿಯ ಗೋಡೆಗೋಡೆಯಲ್ಲೂ ಆ ಮನೆಯ ಬಗ್ಗೆ ಪಿಸುಮಾತಿನ ಗುಲ್ಲು ಪ್ರತಿಧ್ವನಿಸುತ್ತಿದೆ (ಕರ್ಮ.ಕ. ೦೪೯). ೨. ಮೂಡು ; ಉಂಟಾಗು : ಮಕ್ಕಳ ಸಂತೋಷ ತಾಯಿಯ ಎದೆಯಲ್ಲೂ ಅಸ್ಪಷ್ಟವಾಗಿ ಪ್ರತಿಧ್ವನಿಸದಿರಲಿಲ್ಲ (ರಂಗಪ. ೦೫೩). ೩. ಇನ್ನೊಬ್ಬರು ಹೇಳಿದುದನ್ನು ಮತ್ತೊಮ್ಮೆ ಹೇಳು ; ಇನ್ನೊಬ್ಬರ ಮಾತನ್ನು ಪುನರುಚ್ಚರಿಸು : 'ಗ್ರೀನ'ರು ಪುನರ್ಜನ್ಮವನ್ನು ಕುರಿತು ಬೈಬಲ್ಲಿನ ಒಂದು ಮಾತನ್ನು ಓದಲು . . . ಜನಕ್ಕೆ ಹೇಳಿದರು. ಈ ಸಂಗತಿ ಭಗವದ್ಗೀತೆಯ ಕೆಳಗಿನ ಮಾತನ್ನು ಪ್ರತಿಧ್ವನಿಸುತ್ತದೆ (ರರ್ಮಶಾ. ೦೪೬). [ಪ್ರತಿಧ್ವನಿ + –ಇಸು$_1$]

**ಪ್ರತಿಧ್ವಾನ** (ನಾ). = ಪ್ರತಿಧ್ವನಿ : ಯುವತಿಯರೋರೊರ್ವರ ತಲೆಸವಿರಂ ತಲೆನವಿರೊಳಡಸಿ ಕಟ್ಟುತ್ತಂ ಮೋದುವುದುಂ ದ್ವಿಗುಣಿಸಿದುದು ಹಾರವಂ ಪ್ರತಿಧ್ವಾನದಿಂ ಜಿನೇಂದ್ರಾಲಯದೊಳ್ (ಶಂಖಾಪು. ೦೪-೦೦೦). [ಸಂ.]

**ಪ್ರತಿನಾದ** (ನಾ). = ಪ್ರತಿಧ್ವನಿ : ಭೂಚರಖೇಚರವಂದನಾಸುಂದರರವ ಪ್ರತಿನಾದಮುಂ. . . ಕರವೊಪ್ಪೆ (ಶಾಂತಿಪು. ೦೨-೦೯ ಪ). [ಸಂ.]

**ಪ್ರತಿನಾದಿತ** (ನಾ). ಪ್ರತಿಧ್ವನಿಯುಳ್ಳದು ; ಮಾರ್ದನಿಗೊಂಡಿರುವುದು : ದುಮುಕುತಿದೆ ಆ ತಪೋವನದ ನೇಮಿಯೊಳೊಂದು ನಿರ್ಝರಿಣಿ . . . ಘೋಷದೋಂಕೃತಿಗೆ ಪರ್ವತಾರಣ್ಯಮಂ ಪ್ರತಿನಾದಿತಂ ಮಾಡಿ (ಶ್ರೀರಾಪು.೦೬೨-೨೦೭). [ಸಂ.]

**ಪ್ರತಿನಾಮ** (ನಾ). ಒಂದು ಊರು ಅಥವಾ ಒಬ್ಬ ವ್ಯಕ್ತಿಗೆ ಇಟ್ಟಿರುವ ಮತ್ತೊಂದು ಹೆಸರು ; ಅಡ್ಡಹೆಸರು : ವರದನದೀತೀರದ ವದಿರಾಪುರ ಗ್ರಾಮ ೧ಕ್ಕೆ ಪ್ರತಿನಾಮವಾದ ನಾರಸಿಂಹ್ಯಪುರವೆಂಬ ಸರ್ವಮಾ(ಂ)ನ್ಯದ ಅಗ್ರಹಾರದಲ್ಲಿ (ಶಾಇಇ. XX. ೨೪೦-೨೦; 1571); ಎಚಿಗಂಗನ ಶಿವಮಾರನ ಮಾಂಡಲಿಕನೋ ಆ ಪ್ರತಿನಾಮವುಳ್ಳ ಶಿವಮಾರನೋ ಎಂಬುದಾದರೂ ಸ್ಪಷ್ಟವಿಲ್ಲ (ಕರ್ನಾಶಿ. ೦೫೬). [ಸಂ. ಪ್ರತಿನಾಮನ್]

**ಪ್ರತಿನಾಯಕ** (ನಾ). [ಕಾವ್ಯಮಿಾ] ಕಾವ್ಯ ನಾಟಕಾದಿಗಳಲ್ಲಿ ಕಥಾನಾಯಕನನ್ನು ವಿರೋಧಿಸುವ ಅಥವಾ ನಾಯಕನು ಪಡೆಯಲಿರುವ ಫಲಪ್ರಾಪ್ತಿಗಾಗಿ ಸ್ಪರ್ಧಿಸುವ ಪುರುಷಪಾತ್ರ : ದುರ್ಯೋಧನನು ಮಹಾಭಾರತದಲ್ಲಿ ಪ್ರತಿನಾಯಕ (ರೂಢಿ). [ಸಂ.]

**ಪ್ರತಿನಾಯಿಕೆ** (ನಾ). [ಕಾವ್ಯಮಿಾ] ಕಾವ್ಯ ನಾಟಕಾದಿಗಳಲ್ಲಿ ಕಥಾನಾಯಿಕೆಯನ್ನು ವಿರೋಧಿಸುವ ಅಥವಾ ನಾಯಿಕೆಯು ಪಡೆಯಲಿರುವ ಫಲಪ್ರಾಪ್ತಿಗಾಗಿ ಸ್ಪರ್ಧಿಸುವ ಸ್ತ್ರೀಪಾತ್ರ : ನಾಯಿಕೆ ಅಸಿಲತೆ ನಾಯಕ ಭೂಪತಿ ಧುರವೆ ಅಂತಃಪುರ ಕೇಳು ಸಮ್ಮುಖಿಯಾದರು ವೈರಿವಾಹಿನಿ ಪ್ರತಿನಾಯಿಕೆ ಮೊಗದಿರುಹಿದಳು (ಇಂಶಾಪ. ೦೪೩-೦೦). [ಸಂ. ಪ್ರತಿನಾಯಿಕಾ]

**ಪ್ರತಿನಾರಾಯಣ** (ನಾ). [ಜೈನ] ಅರುವತ್ತುಮೂವರು ಶಲಾಕಾಪುರುಷರಲ್ಲಿ ಒಂದು ವರ್ಗಕ್ಕೆ ಸೇರಿದವನು; ನಾರಾಯಣನ ಪ್ರತಿನಾಯಕ; ಪ್ರತಿವಾಸುದೇವ; ೯ ಅಶ್ವಗ್ರೀವ, ತಾರಕ, ಮೇರಕ, ನಿಶುಂಭ, ಮಧುಕೈಟಭ, ಬಲಿ, ಪ್ರಹರಣ, ರಾವಣ ಮತ್ತು ಜರಾಸಂಧ ಎಂದು ಇವರು ಒಂಬತ್ತು ಜನ ಇರುವರು. [ಸಂ.]

**ಪ್ರತಿನಿತ್ಯ**$_1$ (ನಾ). ಪ್ರತಿದಿವಸ; ಎಲ್ಲಾ ದಿವಸ : ಸುತ್ತಮುತ್ತ ಎಲ್ಲಿ ನೋಡಿದರೂ ಪ್ರತಿನಿತ್ಯವೂ ಯಾವುದೋ ಒಂದು ಅಕ್ರಮ. . . ಅವರ ಕಣ್ಣಿಗೆ ಬೀಳುತ್ತಿರುತ್ತದೆ (ರಾಕ್ಷಾ. ೨೪೩). [ಸಂ.]

**ಪ್ರತಿನಿತ್ಯ**$_2$ (ಅ). ಪ್ರತಿದಿನವೂ; ಎಲ್ಲಾ ದಿವಸವೂ : ಅವರು ಪ್ರತಿನಿತ್ಯ ನಮ್ಮ ಮನೆಗೆ ಬರುತ್ತಾರೆ (ರೂಢಿ). [ಸಂ. ಪ್ರತಿನಿತ್ಯಂ]

**ಪ್ರತಿನಿಧಾನ** (ನಾ). ಒಂದಕ್ಕೆ ಬದಲಾಗಿ ಮತ್ತೊಂದನ್ನು ಇರಿಸುವುದು : ನುತಸಂಪ್ರದಾನರೂಢಂ ಚತುರ್ಥಿಯದು . . . ಪ್ರತಿನಿಧಾನದೊಳವಿಷ್ಟದೊಳಂ (ಶಮದ. ೦೩೦) ; ಪ್ರತಿನಿಧಾನದೊಳಂ=ಪ್ರತಿನಿಧಿಯಲ್ಲಿಯುಂ (ಶಮದ. ೦೩೦ ಟೀಕು). [ಸಂ.]

**ಪ್ರತಿನಿಧಿ** (ನಾ) .೧. ಪ್ರತಿಬಿಂಬ; ಪ್ರತಿರೂಪ : "ಪ್ರತಿಬಿಂಬಂ, ಪ್ರತಿರೂಪಂ . . . ಪ್ರತಿನಿಧಿಃ, ಪ್ರತಿಯಾತನಂ, ಪ್ರತಿಚ್ಛಾಯಂ – ಈ ೯ ಪ್ರತಿಬಿಂಬದ ಪೆಸರ್" (ಶಠಾಯು. ೨೦-೦೩೦). ೨. ಒಂದಕ್ಕೆ ಬದಲಾಗಿರುವಂಥದು. ೩. ಒಂದು ರಾಷ್ಟ್ರದ ಅಥವಾ ರಾಜನ ಪರವಾಗಿ ಅಧಿಕಾರವನ್ನು ನಿರ್ವಹಿಸುವ ಅಧಿಕಾರಿ : ಆವೇದನ ಪತ್ರವನ್ನು ತತ್ಕಾಲದಲ್ಲಿ ತಾನು ವಾಸ ಮಾಡುತ್ತಿರುವ ದೇಶದಲ್ಲಿರುವ ಭಾರತದ ರಾಜ್ಯವ್ಯವಹಾರ ಅಥವಾ ವಾಣಿಜ್ಯವ್ಯವಹಾರ ಪ್ರತಿನಿಧಿಗೆ . . . ಕೊಟ್ಟು ಆ ಪ್ರತಿನಿಧಿಯಿಂದ ತನ್ನ ಹೆಸರನ್ನು ರಿಜಿಸ್ಟರು ಮಾಡಿಸಿಕೊಂಡಿದ್ದ ಪಕ್ಷದಲ್ಲಿ ಆತನು ಭಾರತದ ನಾಗರಿಕನೆಂಬುದಾಗಿ ಭಾವಿಸತಕ್ಕುದು (ಭಾಧಾಪ. ೬). ೪. ಒಂದು ಸಂಸ್ಥೆ ಅಥವಾ ವ್ಯಕ್ತಿಯ ಪರವಾಗಿ ವ್ಯವಹಾರ ನಡೆಸುವವನು : ತಾವು ತಯಾರು ಮಾಡಿದ ಪದಾರ್ಥಗಳನ್ನೆಲ್ಲ . . . ಸ್ವಂತವಾಗಿಯೊ ತಮ್ಮ ಪ್ರತಿನಿಧಿಗಳ ಮೂಲಕವೊ ಮಾರಿಸಿ, ಬಂದ ಲಾಭವನ್ನು ತಾವೇ ಹಂಚಿಕೊಳ್ಳುವುದು (ಹಣಶ್ರ.೦೬೬). ೫. ಜಾಮಿಾನು. [ಸಂ.]

**ಪ್ರತಿನಿಧಿತ್ವ** (ನಾ). (ವಿಧಾನಸಭೆ ಮೊದಲಾದುವುಗಳ) ಪ್ರತಿನಿಧಿಯಾಗಿರುವಿಕೆ ; ಚುನಾಯಿತ ಸದಸ್ಯತ್ವ : ವಿಧಾನಮಂಡಲಗಳಲ್ಲಿಯ ಅಥವಾ ಸಂಸತ್ತಿನಲ್ಲಿಯ ಪ್ರತಿನಿಧಿತ್ವದ ವಿಚಾರವಾದ ಉಪಬಂಧಗಳೂ ಸೇರಿ . . . ಅಡಕವಾಗಿರಬಹುದು (ಭಾಧಾಪ.೩). [ಸಂ.]

**ಪ್ರತಿನಿಧಿಸು** (ಕ್ರಿ). ೧. (ವ್ಯಕ್ತಿ, ಭಾವನೆ, ನಿರೂಪಣೆ ಮುಂತಾದ ವಿಚಾರಗಳಲ್ಲಿ) ಒಂದರ ಬದಲು ಮತ್ತೊಂದು ಇರು : ವಿಭೀಷಣ, ಆಂಜನೇಯ · ಮೊದಲಾದ ಪಾತ್ರಗಳನ್ನು ಪ್ರತಿನಿಧಿಸುವವರ ವಾಕ್ಚಾತುರ್ಯ, ಕುಳಿತಲ್ಲೇ ಅವರು ಮಾಡುವ ಅಭಿನಯ . . . ಇವುಗಳನ್ನು ನೋಡಿ, ಕೇಳಿ ಮೋಹಗೊಂಡು (ಯಕ್ಷಗಾ. ೦೬); ಚಳಿಗಾಲದಲ್ಲಿ ಈ ಜಟಿಯಾ ನೃತ್ಯವನ್ನಾಡುತ್ತಾರೆ. ಪ್ರೇಮವನ್ನು ಪ್ರತಿನಿಧಿಸುವುದೇ ಇದರ ತತ್ವ (ಭಾರಜಾ. ೮೬); ಮೇಳದವರು . . . ಪ್ರಕೃತಿಯು ಪರಿತಾಪವನ್ನು ಪ್ರತಿನಿಧಿಸುತ್ತಾರೆ. ಪ್ರತಿಧ್ವನಿಸುತ್ತಾರೆ (ಐತ್ಮಕೃ.XXXI ಜಾಟಿಳದ ಸಮಸ್ಯೆ). ೨. ತಿಳಿಸು; ಸ್ಪಷ್ಟಪಡಿಸು; ಅಭಿವ್ಯಕ್ತಗೊಳಿಸು: ಅನುಭವ, ಭಾವನೆ, ಸನ್ನಿವೇಶ, ಸಂಬಂಧ, ಅನುಮೇಯ, ನಿರ್ಣಯ ಇತ್ಯಾದಿ ಅಂಶಗಳನ್ನು ಸರಿಯಾದ ಪಾರಿಭಾಷಿಕಪದಗಳಿಂದ ಪ್ರತಿನಿಧಿಸಬೇಕು (ಶಿಕ್ಷದ. VI. ಮುಮ್ಮುಖ). ೩. ಒಬ್ಬರ ಪರವಾಗಿ ಕಾರ್ಯವನ್ನು ನಿರ್ವಹಿಸು ; ಪ್ರತಿನಿಧಿಯಾಗಿರು : ನಾನು ಮನವಿದಾರನನ್ನು ಪ್ರತಿನಿಧಿಸುತ್ತೇನೆ (ರೂಢಿ). [ಪ್ರತಿನಿಧಿ + –ಇಸು$_3$]

**ಪ್ರತಿನಿಯತ** (ಗು). ೧. ಮೊದಲೇ ಗೊತ್ತು ಮಾಡಿದ,–ತೀರ್ಮಾನಿಸಿದ. ೨. ವ್ಯತ್ಯಾಸವಾಗದಿರುವ ; ಬದಲಾಗದ : ನಿಗೂಢಚತುರ್ಥಂ ಪ್ರತಿನಿಯತಗತಪ್ರತ್ಯಾಗತಂ ದಲೆಂದಿಂತು ಪೇಚಿವುವುಂತ್ಯಂ ಚಿತ್ರಂ (ಕಾವ್ಯಾಪ. ೩೮೭); ಪ್ರತಿನಿಯತಸ್ಥಾಯಿಭಾವವಿವು ತಾಮಕ್ಕುಂ (ಕಾವ್ಯಾಪ. ೬೪೪). [ಸಂ.]

**ಪ್ರತಿನಿರ್ಯಾತನ** (ನಾ). ೧. ನ್ಯಾಸವನ್ನು ಅದರ ಯಜಮಾನನಿಗೆ ಮರಳಿ ಒಪ್ಪಿಸುವುದು. ೨. ಸೇಡು ತೀರಿಸಿಕೊಳ್ಳುವುದು : "ಪ್ರತಿನಿರ್ಯಾತನವೆಂಬುದು ಮುಯ್ಯಂ ಮಗುಟ್ಚುವುದು" (ಹಠಾಯು. ೦೨೬-೮೦). ೩. ಉಪಕಾರಕ್ಕೆ ಪ್ರತ್ಯುಪಕಾರ ಮಾಡುವುದು.[ಸಂ.]

**ಪ್ರತಿನೃಪ** (ನಾ). ಎದುರಾಳಿಯಾದ ಅರಸು; ಶತ್ರುರಾಜ : ಪ್ರತಿಕೂಲದೈವನ್ನೆ ನೀಂ ಪ್ರತಿನೃಪರನುಕೂಲದೈವರ್ (ಗದಾಯು. ೩-೪೩). [ಸಂ.]

**ಪ್ರತಿಪಕ್ಷ** (ನಾ). ೧. ಶತ್ರುಪಕ್ಷ: ವೈರಿವರ್ಗ : ಪ್ರತಿಪಕ್ಷಕ್ಷೋಣಿಪಾಳಪ್ರಕರಹೃದಯಶೂಲೋಪಮಸ್ಥೂಳಶಾತಾಯತಕುಂತನ್ಯಸ್ತಹಸ್ತಂ . . . ಈ ಸೈನ್ಯಮಾಂಧ್ರಾ (ಶಾಶ್ವಕೃ. ೦೦-೫೩); ಪ್ರತಿಪಕ್ಷೋರ್ವೀಶವಂಶಕ್ಷಿತಿರುಹತತಿಯುಂ ಕಿಟ್ಟು ಬೇರಿಂದೆ (ಕೃಕೃಕೃ.೭-೨೪); ಪ್ರತಿಪಕ್ಷಕ್ಷತ್ರಿಯ ಪ್ರಾಕ್ತನನಿಖಿಳಧರಾಕೋಶಸೇನಾಚಯಸ್ವೀಕೃತನುದ್ಯದ್ಧಾರ್ಮಿಕಂ . . . ಋತುಪರ್ಣಂ (ನಳಚಂ. ೬೩೭). ೨. ಹಗೆ; ಶತ್ರು : "ಅಭಿಯಾತಿಃ, ಅರಾತಿಃ, ಅಮಿತ್ರಂ, ರಿಪುಃ, ಪ್ರತಿಪಕ್ಷಃ . . ದ್ವಿಷತ್ —ಈ ೨೪ ಹಗೆ" (ಹಠಾಯು. ೬೩-೩೦೦) ; ಪ್ರತಿಪಕ್ಷಮುಂಟೆ ಲಂಕಾಪತಿಗಣುವಂ ರಾವಣಂಗಿದಿರ್ಚುವನೆ (ಶಂಖಾಪು. ೦೦-೦೩೮) ; ಕೋಪನಪ್ರತಿಪಕ್ಷಕುಲನಿರ್ವಾಪಣೈಕಸಮರ್ಥ ಎನುತಭಿರೂಪನನು ಹೊಗ

ಳಿದರು ವಂದಿಗಳು (ಕುಮಾ.ಗ. ೬-೨೯). ೩. ವಿಧಾನಸಭೆ, ಚುನಾವಣೆ, ಚರ್ಚಾಕೂಟ, ಮೊದಲಾದಂವುಗಳಲ್ಲಿ ಇರುವ ವಿರೋಧ ಪಕ್ಷ; ಒಂದು ಪಕ್ಷದವರು ಹೇಳಿದ ಅಭಿಪ್ರಾಯವನ್ನು ಖಂಡಿಸುವ ಮತ್ತೊಂದು ಪಕ್ಷ: ಪ್ರತಿಪಕ್ಷದಲ್ಲಿ ಅವನು ಬಹಳ ಚೆನ್ನಾಗಿ ಮಾತನಾಡಿದನು (ರೂಢಿ). [ಸಂ.]

**ಪ್ರತಿಪಕ್ಷಿ** (ನಾ). ವಿರೋಧಪಕ್ಷದವನು; ವೈರಿ; ಶತ್ರು: ಇಬ್ಬರೂ ಪ್ರತಿಪಕ್ಷಿಗಳು ಈ ವಿಚಾರದಲ್ಲಿ ತಾಕಲಾಟದಲ್ಲಿದ್ದಾರೆ (ಜಮಾಪ್ರಾ. ೦೪೯); ಅರ್ಜುನನಿಗೆ ಕರ್ಣನು ಪ್ರತಿಪಕ್ಷಿಯಿರಬಹುದು (ಸಾಹಿವಿ. ೩೦).
[ಸಂ. ಪ್ರತಿಪಕ್ಷಿನ್]

**ಪ್ರತಿಪತ್ತಿ** (ನಾ). ೧. ಪಡೆಯುವುದು; ಪ್ರಾಪ್ತಿ. ೨. ಅರಿವು; ಜ್ಞಾನ; ತಿಳಿವಳಿಕೆ: ಬಹುತ್ವನಿರ್ದೇಶಂ ವ್ಯಾಖ್ಯಾತೃಭೇದಪ್ರತಿಪತ್ತ್ಯರ್ಥ ಮಾದುದು (ಶಶಸ್ತ್ರ. ೨೬೨). ೩. ನಿರ್ಣಯ; ನಿರ್ಧಾರ. ೪. ಜಾಣ್ಮೆ; ಬುದ್ಧಿವಂತಿಕೆ: "ಪ್ರತಿಪತ್ತಿಃ, ಪ್ರಗಲ್ಭತಾ — ಈ ೨ ಅಚ್ಚುಯಿಯುವುದು" (ಹಲಾಯು. ೧೨೫-೯೯). ೫. ಪ್ರತಿಭೆ. ೬. ಒಪ್ಪಿಗೆ; ಸಮ್ಮತಿ. ೭. ಕಾರ್ಯವನ್ನು ಕೈಗೊಳ್ಳುವುದು; ಕಾರ್ಯನಿರ್ವಹಣೆ. ೮. ನಡವಳಿಕೆ; ಪ್ರವೃತ್ತಿ. ೯. ಗೌರವ; ಮನ್ನಣೆ; ಮರ್ಯಾದೆ: ಅವರ ದಾಯಿಗಂ ಶಾಸ್ತ್ರಂಗಳಂ ಬಲ್ಲೊಂಗಂ ಮಂತ್ರಿಪದವಿಯಂ ಬಾಳುಮಂ ಪ್ರತಿಪತ್ತಿಯುಮಂ ಕೊಟ್ಟುದಂ ಕೇಳ್ದವರು ಮುಬ್ಬೆಗಂಬಟ್ಟು (ವಡ್ಡಾರಾ. ೨-೨೩); ನದೀತನೂಜ ಭಾರದ್ವಾಜ ಕೃಪಾದಿಗಳ್ವೆರಸಿದಿರ್ವಂದು ಯಥೋಚಿತಪ್ರತಿಪತ್ತಿಗಳಿಂದಯ್ವರುಮಂ ನಿಬಿಡಾಲಿಂಗನಂಗೆಯ್ದು (ಪಂಪಭಾ. ೪-೩೭); ನಿತ್ಯ ಪರೀಕ್ಷಣಸ್ಥಳವಿಪರ್ಯಾಯ ಪ್ರತಿಪತ್ತಿ ದಾನಂಗಳಿಂ ನಿಯೋಗಿಗಳಂ ಕಾಪುದುಘರ್ ಮಾಡಿಯುಂ (ಚಂದ್ರಪು. ೨-೬೧). ೧೦. ಸ್ಥಾನ; ಅಧಿಕಾರ: ಪ್ರತಿಪತ್ತಿಯ ಮೈಮೆಯ ನಾನತಿಶಯಿಸಲು ಕರೆಯೆ ಕೇಳಿ ಸಿಂಹಾಸನದೌಸ್ಥಿತಿಯುಂಟೆಯೆ ರೇಚಗಾತ್ರ ಪ್ರತಿಪತ್ತಿಯನಿತ್ತನೊಸೆದು ಜಯಸಿಂಹನೃಪಂ (ಸುದಶ. ೦-೯); ಭೂಮಂಡಲದಲ್ಲಿ ಸಮಸ್ತ ರಾಜಕುಲಗಳೊಳಗೆ ಧನ ಮಾನ ಪ್ರತಿಪತ್ತಿಗಳಲ್ಲಿ ನಮ್ಮ ಕುಲವು ಶ್ರೇಷ್ಠವಾಗಿರುವುದು (ಶೀಕೃಶ. ೨೩). ೧೧. ಕೀರ್ತಿ; ಯಶಸ್ಸು. ೧೨. ದಿಟ್ಟತನ; ಧೈರ್ಯ. ೧೩. ಉಪಾಯಂ; ಯುಕ್ತಿ. ೧೪. "ಯಜ್ಞದಲ್ಲಿ ಉಳಿದಿರುವದನ್ನೆಲ್ಲ ವಿನಿಯೋಗಿಸುವುದು" (ಮಹಾಭಾ. ೦೦೭ ೪೩೬). ಪ್ರತಿಪತ್ತಿಕರ್ಮ' ಪರಾ. [ಸಂ.]

**ಪ್ರತಿಪತ್ತಿಕರ್ಮ** (ನಾ). ಯಜ್ಞ ಯಾಗಾದಿಗಳಲ್ಲಿ ಮಾಡುವ ಒಂದು ಕ್ರಿಯೆ; P ಹೋಮ ಮಾಡಿದ ಮೇಲೆ ಉಳಿದಿರುವ ದ್ರವ್ಯವನ್ನು ಮತ್ತಾವ ವಿಧದಿಂದಲೂ ಅಪವಿತ್ರವಾಗದಂತೆ ಅಗ್ನಿಗೆ ಹಾಕುವುದಂ, ಪೂಜೆ ಮಾಡಿ ವಿಸರ್ಜನೆ ಮಾಡಿದ ಗಣಪತಿಪ್ರತಿಮೆ ಮೊದಲಾದುವನ್ನು ಜಲದಲ್ಲಿ ವಿಸರ್ಜಿಸುವುದು ಮುಂತಾದುವು ಪ್ರತಿಪತ್ತಿಕರ್ಮವೆನಿಸಿಕೊಳ್ಳುತ್ತವೆ: ವಿಶ್ವಾಮಿತ್ರನು ವಿಶ್ವಜಿದ್ಯಜ್ಞವನ್ನು ಸಂಕಲ್ಪ ಮಾಡಿ, ತ್ರಿಶಂಕುವಿನ ಸೋಮಯಾಗದ ಅವಭೃತವನ್ನು ನೆರವೇರಿಸಿದನು. ಪ್ರತಿಪತ್ತಿಕರ್ಮವೂ ನಡೆಯಿತು (ಮಹಾಭಾ. ೦೦೭).
[ಸಂ. ಪ್ರತಿಪತ್ತಿಕರ್ಮನ್]

**ಪ್ರತಿಪತ್ತಿಮೂಢೆ** (ನಾ). ಏನಂ ಮಾಡಬೇಕೆಂದು ತಿಳಿಯಲಾರದವಳು; ದಿಕ್ಕು ತೋಚದಿರುವವಳಂ; ದಿಙ್ಮೂಢೆ: ಪ್ರತಿಪತ್ತಿಮೂಢೆಯೆನಿಸಿರ್ದ ತರುಣಿಯುಂ ಗುರುಜನಕ್ಕೆ ಪೊಡವಡಿಪುದುಂ (ಕಾದಂಊ. ೬೮೧).
[ಸಂ. ಪ್ರತಿಪತ್ತಿಮೂಢಾ (ಪ್ರತಿಪತ್ತಿ + ಮೂಢ + —)]

**ಪ್ರತಿಪತ್ತಿವಿಧಿ** (ನಾ). [ಅದ್ವೈತ] ಮೋಕ್ಷಕ್ಕಾಗಿ ಜ್ಞಾನವನ್ನು ಸಂಪಾದಿಸು ಎಂದು ನೇಮಿಸುವುದು: ಇದರಲ್ಲಿ ಧ್ಯಾನನಿಯೋಗವಾದ, ನಿಷ್ಪ್ರಪಂಚೀಕರಣನಿಯೋಗವಾದ ಇವೇ ಮೊದಲಾದ ಪ್ರಭೇದಗಳಿರುವುವು. ಇವುಗಳಿಗೆಲ್ಲಾ ಒಟ್ಟು ಪ್ರತಿಪತ್ತಿವಿಧಿಯೆಂದು ಹೆಸರು (ಸಿಂದುಶಾ. ೨೨೩).
[ಸಂ.]

**ಪ್ರತಿಪತ್ತಿಶಾಲಿ** (ನಾ). ಗೌರವಾರ್ಹನಾದವನು; ಸನ್ಮಾನ್ಯ: ನಮ್ಮ ನಡುವೆ ಇದ್ದ ವಿಪುಲಸಂಪತ್ತಿಶಾಲಿಯಾದ ಮತ್ತು ಪ್ರತಿಪತ್ತಿಶಾಲಿಯಾದ ಒಬ್ಬ ಗೃಹಸ್ಥರು ವರ್ತಮಾನಪತ್ರ ಓದುತ್ತಿದ್ದರು (ಇಶಕ. ೪೫೦).
[ಸಂ. ಪ್ರತಿಪತ್ತಿಶಾಲಿನ್]

**ಪ್ರತಿಪತ್ತು** (ನಾ). ೧. ಚಾಂದ್ರಮಾನದ ತಿಂಗಳುಗಳಲ್ಲಿ ಬರುವ ಎರಡು ಪಕ್ಷಗಳ ಮೊದಲನೆಯಂ ದಿನ; ಪಾಡ್ಯ: "ಪಕ್ಷತಿಃ, ಪ್ರತಿಪತ್ — ೨ ಪಾಡ್ಯದ ಹೆಸರುಗಳು" (ಸಿದ್ಧಾಂತಿ. ೩೪). ೨. ಬುದ್ಧಿ: "ಬುದ್ಧಿಃ, ಮನೀಷಾ . . . ಪ್ರತಿಪತ್, ಜ್ಞಪ್ತಿಃ, ಚೇತನಾ — ೧೪ ಬುದ್ಧಿಯ ಹೆಸರುಗಳು" (ಸಿದ್ಧಾಂತಿ. ೪೪). ೩. ಮುಂದಕ್ಕೆ ಹೋಗುವುದು; ಮುಂದುವರಿಯುವುದಂ. ೪. ಹತ್ತಿರಕ್ಕೆ ಹೋಗುವುದು; ಸಮೀಪಿಸುವುದಂ. ೫. ಒಳಹೊಗುವಿಕೆ; ಪ್ರವೇಶ. ೬. ಮೊದಲು ಮಾಡುವುದು; ಪ್ರಾರಂಭ. ೭. ಅಂತಸ್ತು; ಪದವಿ; ಸ್ಥಾನ. ೮. ಒಳ್ಳೆಯ ಹೆಂಗಸರ ಗುಂಪು: "ಆಸನ್ನಮುಂ ಪಾಡ್ಯ ಸದ್ವನಿತಾ ಸಂಚಯಮೆಂತಿವೆಯ್ದೆ ಪ್ರತಿಪತ್ಪ್ರಖ್ಯಾನಮುಂ" (ಜಾಜಾಕ. ೦೬೯).
[ಸಂ. ಪ್ರತಿಪದ್]

**ಪ್ರತಿಪತ್ನಿ** (ನಾ). ಸವತಿ; ಸಪತ್ನಿ: ಕ್ಷಿತಿನಾಥಾಪಾಂಗವಿಲೋಕಿತೆಯರ್ ಶ್ರೀಯೊರ್ವಳಾ ಜಯಶ್ರೀಯೊರ್ವಳ್ ಪ್ರತಿಪತ್ನಿಯರೆಂಳರೆನಿಸಲ್ಕರರ್ಕ್ಕೆ ನೇಪಥ್ಯಮವರ್ಗದೇಂ ಸೊಗಯಿಸಿತೋ (ಶಾಂತಿಪು. ೦-೭೪). [ಸಂ.]

**ಪ್ರತಿಪತ್ರ** (ನಾ). ಒಂದು ಪತ್ರದ ಪ್ರತಿ,—ನಕಲು: ವಿನಿಮಯ ಪತ್ರಗಳು ಚೆಕ್ಕುಗಳು . . . ಋಣಪತ್ರಗಳು ಪ್ರತಿಪತ್ರಗಳು ಮತ್ತು ಸಲಿಕೆಗಳು ಇವುಗಳ ವಿಷಯದಲ್ಲಿ ಮುದ್ರಾಂಕಶುಲ್ಕದ ದರಗಳು (ಕಾಠಾಪ. ೨೮೬). [ಸಂ.]

**ಪ್ರತಿಪದ** (ನಾ). ೧. ಒಂದು ಪದದ ಸಮಾನಾರ್ಥಕವಾದ ಪದ; ಪರ್ಯಾಯಪದ: ಅಗ್ನಿ, ವಾಯು, ಸೂರ್ಯ ಎಂಬ ಪದಗಳಿಗೆ ಪ್ರತಿಪದಗಳನ್ನು ಬರೆಯಿರಿ (ರೂಢಿ). ೨. ಪ್ರತಿಯೊಂದು ಪದ: ಇಲ್ಲಿ ಕೊಟ್ಟಿರುವ ಪ್ರತಿಪದಕ್ಕೂ ಅರ್ಥ ಬರೆಯಿರಿ (ರೂಢಿ). [ಸಂ.]

**ಪ್ರತಿಪದಿ** (ನಾ). ೧. ಪಾಡ್ಯ; ಪ್ರತಿಪದೆ. ೨. ಮನ್ನಣೆ; ಗೌರವ. ೩. ವಿರೋಧವಾಗಿ ಹೋಗುವಿಕೆ. ೪. ಕೆಳಮಟ್ಟ; ಅವನತಿ: "ಪಾಡ್ಯಮುಂ ಮನ್ನಣೆಯುಂ ಕೀಟಿಂಬಿವುಂ ತಾಂ ಪ್ರತಿಪದಿಯೆನಿಕು" (ನಾನಾರ. ೦೩೬). [ಸಂ. ಪ್ರತಿಪದೀ]

**ಪ್ರತಿಪದೆ** (ನಾ). = ಪ್ರತಿಪತ್ತು ೧: ದೀಪಾವಳಿಯಲ್ಲಿ ಬಲಿಪ್ರತಿಪದೆಯಿದೆ (ಶಾಶಾಶಾ. ೭೩); ಶಾಲಿವಾಹನಶಕದ ವರ್ಷ ಚೈತ್ರಶುದ್ಧಪ್ರತಿಪದೆಯಿಂದ ಆರಂಭವಾಗುತ್ತಿದೆ (ಶಾಹದ್ಮ. ೩೭). [ಸಂ. ಪ್ರತಿಪದಾ]

**ಪ್ರತಿಪದ್ದಿನ** (ನಾ). ಪಾಡ್ಯ: ವಿತತಾಷಾಢದ ಬಹುಲಪ್ರತಿಪದ್ದಿನದಂದು ಕೀರ್ತಿ ನೆಗಟ್ದಿರೆ (ಅದಿಪು. ೯-೬೬); ನುತಮಾರ್ಗಶಿರದ ಶುದ್ಧಪ್ರತಿಪದ್ದಿನದ ಪರಯಾಮದೊಳ್ (ಪುಶ್ಚಪು. ೦೩-೨೦೩). [ಸಂ.]

**ಪ್ರತಿಪನ್ನ** (ಗು). ೧. ಸಮೀಪಿಸಿದ; ಹತ್ತಿರಕ್ಕೆ ಬಂದ. ೨. ಪಡೆದ; ಹೊಂದಿದ. ೩. ಮಾಡಿದ; ನಿರ್ವಹಿಸಿದ; ನೆರವೇರಿಸಿದ: ಪ್ರತಿಪನ್ನಯಜ್ಞವಿಳಾಸನೊಪ್ಪಿದನಿಂದ್ರವಿಭವದಲಿ (ಕುಮ್ಯಾಸ. ೦೦-೯). ೪. ಒಪ್ಪಿದ; ಸ್ವೀಕೃತವಾದ. ೫. ತಿಳಿದ: ಅರಿತ. ೬. ಪ್ರಾರಂಭಿಸಿದ; ತೊಡಗಿದ. ೭. ಗೆದ್ದ; ಜಯಿಸಿದ. (ನಾ). ೮. ಒಪ್ಪಿಗೆಯಾದುದು; ಸ್ವೀಕೃತವಾದುದು: ಎನಗಂ ತಾಂ ಪ್ರತಿಪನ್ನಮೆಂಬ ಬಗೆಯುಂ ತಾನಂತುಪಾದೇಯಮೋ (ಚಂದ್ರಪು. ೯-೯೮). ೯. ತಿಳಿದುದು; ಅರಿತುದು: "ಬುದ್ಧಂ, ಬುಧಿತಂ, ಮನಿತಂ, ವಿದಿತಂ, ಪ್ರತಿಪನ್ನಂ.

ಅವಸಿತಂ, ಅವಗತಂ—೭ ತಿಳಿಯಲ್ಪಟ್ಟುದು (ಸಿದ್ಧಾಂತಿ. ೩೩೨). ೧೦. ಗೆದ್ದುದು ; ಜಯಿಸಿದುದಂ.

**ಪ್ರತಿಪನ್ನಮಂದರ** = (ದೃಢತೆಯಲ್ಲಿ) ಮಂದರಪರ್ವತವನ್ನು ಮೀರಿದವನು ; ಒಂದು ಬಿರುದು : ಗಣ್ಡರ ಗಣ್ಡಂ ವೈರಿಭೇರುಣ್ಡಂ ಪ್ರತಿಪನ್ನಮಂದರಂ ಶರಣಾಗತವಜ್ರಪಂಜರಂ ಶ್ರೀಮತ್‌ಶಾನ್ತಿವರ್ಮ್ಮರಸರ ವಂಶಾವತಾರಮೆಂತೆಂದೊಡೆ (ಶಾಇ. XX. ೦೬–೯ ; ೯೭೦) ; ವಿಬುಧವರ ದಾಯಕಂ × × × ಪ್ರತಿಪನ್ನಮಂದರಂ ವಾಣಸ್ಯನ್ವಯಪುರಂದರಂ . . . ಮಧುವಪರಸಂ (ಕಇ. ೭–೩–೨೬೨ ; 1062). **ಪ್ರತಿಪನ್ನಮೇರು** = (ದೃಢತೆಯಲ್ಲಿ) ಮೇರುಪರ್ವತವನ್ನು ಜಯಿಸಿದವನು ; ಒಂದು ಬಿರುದು : ಶರಣಾಗತವಜ್ರಪಂಜರಂ ಪ್ರತಿಪನ್ನಮೇರು ನಾಮಾದಿ ಸಮಸ್ತ ಪ್ರಸಸ್ತಿಸಹಿತಂ (ಶಾಇ. XX. ೬೬–೯ ; 1056). [ಸಂ.]

**ಪ್ರತಿಪನ್ನತೆ** (ನಾ). ವಿವೇಕ ; ವಿವೇಚನೆ : ಇನ್ನು ಧೃತರಾಷ್ಟ್ರಾವನೀಶನು ತನ್ನ ಮಕ್ಕಳ ಬಾಂಧವಪ್ರತಿಪನ್ನತೆಯ ನೆಟಿ ಕಾಬನೆಂದನು ಧರ್ಮಸುತ ನಗುತ (ಕುಮ್ಮಾಭಾ. ೨–೩೬). [ಸಂ. ಪ್ರತಿಪನ್ನತಾ]

**ಪ್ರತಿಪನ್ನಿಕೆ** (ನಾ). =ಪ್ರತಿಪನ್ನತೆ: 'ಪ್ರತಿಪನ್ನಿಕೆಗಿಡು' ಪರಾ. [ಪ್ರತಿಪನ್ನ + — ಇಕೆ]

**ಪ್ರತಿಪನ್ನಿಕೆಗಿಡು** (ಕ್ರಿ). ವಿವೇಚನೆಯನ್ನು ಕಳೆದುಕೊಳ್ಳು; ವಿವೇಕ ಶೂನ್ಯವಾಗು : ಮುಳಿಗುಂ ಪ್ರತಿಪನ್ನಿಕೆಗಿಡೆ ದಶರಥಸುತನಾ ವಿಭು ಮುಳಿದವಂಗೆ ಜವನುಂ ಮುಳಿಗುಂ (ಕಂಠಾಮಾ. ೧೦–೪೭). [ಪ್ರತಿಪನ್ನಿಕೆ+ಕಿಡು (<ಕೆಡು$_1$)]

**ಪ್ರತಿಪಾಕ** (ನಾ). [ವೈದ್ಯಶಾ] ಬೇಯಿಸದ ಹಸಿರಸಗಳ ಮಿಶ್ರಣ; "ದ್ವಿಪಥಂ ಬೇಯಲು ಕಷಾಯಮನಿಸಿಕ್ಕು ಹಸಿ ಬೆರಸೆ ಪ್ರತಿಪಾಕಮಕ್ಕುಂ" (ಖಂಗಶಾ. ೦೧೫–೭); ಕಿರುಗಡಸಿಗೆ ಸಮೂಲವಂ ಕಷಾಯವಿಕ್ಕಿ ಶುಂಠಿ ೪ ವರಹ ತೂಕ ಪ್ರತಿಪಾಕವಂ ಕೂಡಿ ಕೊಡಲು ಗ್ರಹಿಣೀರೋಗಂ ಗುಣಮಕ್ಕುಂ (ಹಸ್ತ್ಯ. ೩೩೩). [ಸಂ.]

**ಪ್ರತಿಪಾತಿ** (ನಾ). ಎದುರು ಬೀಳುವವನು; ವಿರೋಧಿ: ಸ್ವಾಮಿಗಳ್ ಕಷಾಯೋದಯದಿಂ ಎಲ್ಲಿಯಾನುಂ ಹೀಯಮಾನಚಾರಿತ್ರೋದಯರಪ್ಪುದಱಿಂ ಋಜುಮತಿಮನಃಪರ್ಯಾಯಂ ಪ್ರತಿಪಾತಿಯಕ್ಕುಂ (ತತ್ತ್ವಸೂ. ೬೦). [ಸಂ. ಪ್ರತಿಪಾತಿನ್]

**ಪ್ರತಿಪಾದಕ** (ಗು). ೧. ಹೇಳುವ; ವಿವರಿಸುವ. ೨. ಬೋಧಿಸುವ; ತಿಳಿಸುವ. ೩. ಸಮರ್ಥಿಸುವ; ದೃಢಪಡಿಸುವ. (ನಾ). ೪. ಹೇಳುವವನು; ವಿವರಿಸುವವನು. ೫. ಬೋಧಿಸುವವನು; ಬೋಧಕ. ೬. ಸಮರ್ಥಿಸುವವನು; ಸಾಧಿಸುವವನು: ಕಾಶ್ಮೀರ ದೇಶದ ಅಭಿನವಗುಪ್ತನ (ಹತ್ತನೆಯ ಶತಮಾನ) ಕಾಶ್ಮೀರದೇಶದ ಪ್ರಖ್ಯಾತವಿದ್ವಾಂಸ ಮತ್ತು ತತ್ತ್ವಜ್ಞಾನಿ. ಅವನೇ ಈ ಸಿದ್ಧಾಂತದ ಪ್ರಮುಖಪ್ರತಿಪಾದಕ (ಕಕ್ಕಾ. ೩೦೬). [ಸಂ.]

**ಪ್ರತಿಪಾದನ** (ನಾ). ೧. ನೀಡುವಿಕೆ; ದಾನ: "ತ್ಯಾಗಃ, ವಿಹಾಪಿತಂ, ದಾನಂ . . . ಪ್ರತಿಪಾದನಂ . . . ಸತ್ಪಾತ್ರದಲ್ಲಿ ಶಾಸ್ತ್ರೋಕ್ತಪ್ರಕಾರ ತಾನಾಗಿ ಕೊಡುವಿಕೆ, ತನ್ನ ಒಡವೆಯನ್ನು ಪುಣ್ಯಕ್ಕಾಗಿ ಮತ್ತೊಬ್ಬರಿಗೆ ಕೊಟ್ಟು ತನ್ನ ಸ್ವತ್ವಸಂಬಂಧವನ್ನು ಬಿಡುವಿಕೆ" (ಸಿದ್ಧಾಂತಿ. ೨೨೨). ೨. ಹೇಳುವುದು ; ವಿವರಿಸುವುದು. ೩. ಉಪದೇಶಿಸುವುದು; ಬೋಧಿಸುವುದು. ೪. ಪ್ರಚುರಪಡಿಸುವುದು ; ಪ್ರಸಿದ್ಧ ಪಡಿಸುವುದು. ೫. ಪ್ರಮಾಣಗಳಿಂದ ಸಿದ್ಧಪಡಿಸುವುದು. ದೃಢಪಡಿಸುವುದು; ೬. ಉತ್ಪಾದಿಸುವುದು. [ಸಂ.]

**ಪ್ರತಿಪಾದನೆ** (ನಾ). ೧. ವಿವರಣೆ; ನಿರ್ವಚನ: ಅದರ ನಿರೂಪಣೆಯು ಕೆಲವು ಪ್ರಸಿದ್ಧವಾದ ಅಲಂಕಾರವಿಶೇಷಗಳ ಪ್ರತಿಪಾದನೆಗೆ ಯಾವ ಬಗೆಯಿಂದಲೂ ಸಮಾನವಲ್ಲವೆಂಬುದೂ ಮನದಟ್ಟಾಗುವುದು (ಧ್ವನ್ಯಾಲೋ. ೪೯): ಈ ಪ್ರತಿಪಾದನೆ ಕನ್ನಡನುಡಿಯ ಅಭಿಮಾನಿಗಳಿಗೆ ಸಮ್ಮೋಹನೀಯವಾಗಿ ತೋರಿದರೂ . . . ಇನ್ನೂ ನಿಷ್ಕರ್ಷೆ ಮಾಡಬೇಕಾಗಿದೆ (ಪ್ರಾಹಿ. ೨೫); ಗಹನವಾದ ವಿಷಯದ ಪ್ರತಿಪಾದನೆಯಾಗಬೇಕಾಗಿದ್ದರೂ ಸರಳವೂ ಆಕರ್ಷಣೀಯವೂ ಆದ ಶೈಲಿ ಮಕ್ಕಳ ಬೇಸರವನ್ನು ಕಡಮೆ ಮಾಡೀತು (ಶಿಕ್ಷದ. ೬೪೯). ೨. ಪ್ರಮಾಣಗಳಿಂದ ಸಿದ್ಧಪಡಿಸಿದುದು; ಸಿದ್ಧಾಂತ: ಇವನ ಪ್ರತಿಪಾದನೆಯಂತೆ ಜಗತ್ತಿನ ಉಪಾದಾನ ಕಾರಣ (Material Cause) "ಅಪ್" ತತ್ತ್ವ (ಮುಕ್ತಾರ. ೭ ೩೮೬). [ಸಂ. ಪ್ರತಿಪಾದನ]

**ಪ್ರತಿಪಾದಿತ** (ಗು). ೧. ವಿವರಣೆಯನ್ನು ಹೊಂದಿದ,—ಒಳಗೊಂಡ. ೨. ತಿಳಿಸಿದ; ಹೇಳಿದ. ೩. ಸ್ಥಿರಪಡಿಸಿದ; ಸಮರ್ಥನೆಯನ್ನು ಹೊಂದಿದ. (ನಾ). ೪. ಹೇಳಿದುದು; ವಿವರಿಸಿದುದು: ಪ್ರತಿಪಾದಿತವಾಗಿರುವ ವಿಷಯ ಮಕ್ಕಳಿಗೆ ಆಸಕ್ತಿ ಹುಟ್ಟಿಸುವಂತಿರಬೇಕು (ಶಿಕ್ಷದ. ೬೪೯). [ಸಂ.]

**ಪ್ರತಿಪಾದಿಸು** (ಕ್ರಿ). ೧. ವಿವರಿಸು; ಹೇಳು: ಬೃಹದಾರಣ್ಯಕಶ್ರುತಿಯು ಪರಶಿವನ ಮೂರ್ತ, ಅಮೂರ್ತರೂಪಗಳೆರಡನ್ನೂ ಪ್ರತಿಪಾದಿಸುತ್ತದೆ (ಶಿತ್ರಿಂ. ೨೩); ವಿಷಯವನ್ನು ಪ್ರತಿಪಾದಿಸುವಾಗ ಲೇಖಕರ ವೈಯಕ್ತಿಕ ಅಭಿಪ್ರಾಯಗಳನ್ನು . . . ಸ್ಪಷ್ಟಪಡುವಂತೆ ಮಾಡಬೇಕು (ಶಿಕ್ಷದ. ೨೬೦). ೨. ಬೋಧಿಸು; ಉಪದೇಶಿಸು: ಧರ್ಮಾನುಧರ್ಮವಂ ಪ್ರತಿಪಾದಿಪ . . . ತಥಾಗತಂ(ಧ್ವಶಾಕ. ೬೫–೩೦೩); ಪುರಾಣಗಳು ಕೂಡ ಭಕ್ತಿಮಾರ್ಗವನ್ನೇ ಪ್ರತಿಪಾದಿಸಿರುವುವು (ಜಗದಾ. ೦೦); ಚೈತನ್ಯರು ಪ್ರತಿಪಾದಿಸಿದ ತತ್ತ್ವಗಳ ಮೇಲೆ ನಿಂತ ವೈಷ್ಣವಸಂಪ್ರದಾಯವೇ ಇಂದು ಮಣಿಪುರದಲ್ಲಿ ಸಜೀವತತ್ತ್ವವನ್ನು ಪಡೆದಿದೆ ಎನ್ನಬಹುದು (ಭಾರಕಾ. ೯೩). ೩. ಪ್ರಚಾರ ಮಾಡು; ಪ್ರಸಿದ್ಧಪಡಿಸು: ಪ್ರೌಢವಿವಾಹ, ವಿಧವಾವಿವಾಹ . . . ಮೊದಲಾದ ವಿಷಯಗಳನ್ನು ಪ್ರತಿಪಾದಿಸುವ ಈ ಧರ್ಮವು ಬಂಗಾಲದ ಈ ವಿಚಾರವಂತರನ್ನು ಆಕರ್ಷಿಸಿತು (ರರ್ಮಿನಾ. ೬೩). ೪. ದೃಢಪಡಿಸು; ಸಮರ್ಥಿಸು; ಸಾಧಿಸು : ವಿಮರ್ಶೆ ಮಾಡುವ ಅಧಿಕಾರ ಎಲ್ಲರಿಗೂ ಇದೆಯೆಂದು ನಾನು ಮೊದಲಿಂದ ಪ್ರತಿಪಾದಿಸಿದ್ದೇನೆ (ಸಮೀಕ್ಷೆ. ೦೨೫೩). [ಪ್ರತಿಪಾದನ + — ಇಸು$_1$]

**ಪ್ರತಿಪಾದುಕ** (ನಾ). ಮಂಚ ಮೊದಲಾದುವನ್ನು ಇಡುವುದಕ್ಕಾಗಿ ಮಾಡಿದ ಎತ್ತರದ ಪೀಠ,—ವೇದಿಕೆ: ಅನೇಕರತ್ನರಚಿತಪ್ರತಿಪಾದುಕ ವಿನ್ಯಸ್ತಕಾಂಚನಮಂಚೋಪಶೋಭಿತದೊಳ್ . . . ನಿದ್ರಾರಸವಶಗತ ರಾಗಿರ್ದರ್ (ಅಂಕು. ೫–೨೨ ವ). [ಸಂ. ಪ್ರತಿಪಾದುಕಂ]

**ಪ್ರತಿಪಾದ್ಯ** (ಗು). ೧. ವಿವರಣೆ ಹೊಂದುವ,—ಹೇಳುವ : ಗ್ರಂಥಾರಂಭದಲ್ಲಿ ಮಂಗಳಾಚರಣಾದಿಗಳು ಮಾಡಬೇಕಾದರೆ ಅದಕ್ಕೆ ಅರ್ಹರಾದ ದೇವತೆಗಳು ಎರಡು ವಿಧ. ಗ್ರಂಥ ಪ್ರತಿಪಾದ್ಯದೇವತೆ; ಇಷ್ಟದೇವತೆ (ಕಶಾರ. ೦–೦ ವಿಶೇಷಾರ್ಥ). ೨. ಸಮರ್ಥನೆ ಹೊಂದುವ. (ನಾ). ೩. ಉಪಯೋಗಿಸಲು ಅರ್ಹವಾದುದು ; ಪ್ರಯೋಗಿಸಲು ಯೋಗ್ಯವಾದುದು : ಪ್ರತಿಪಾದ್ಯಮುತ್ತಮಿತ್ಥಂ ಮತಿವಂತರಿನೆಯ್ದೆ ಪೂರ್ವಕಾಲಕ್ರಿಯೆಗೆ (ಶಮದ. ೨೩೬). ೪. ವರ್ಣನೆ ಹೊಂದುವಂಥದು; ವಿವರಿಸುವಂಥದು : ಸಕಲಜ್ಞ ಪ್ರತಿಪಾದ್ಯಮಪ್ಪ ಭುವನಂ ದೇಶಂ . . . ಇವೆಂಟೆನಿಕ್ಕುಂ (ಪುಳ್ಳಿಶು. ೦.೩೪). ೫. [ಕಾವ್ಯಮೀ] ವ್ಯಕ್ತಿಯು ಮಾತಿನಿಂದ ಹೇಳಬೇಕೆಂದಿರುವ ಅರ್ಥ : 'ಪ್ರತಿಪಾದ್ಯ' ವಾದರೋ ಹೇಳುವವನ ಅರ್ಥಪ್ರತಿಪಾದನೇಚ್ಛೆಗೆ ಲಕ್ಷ್ಯವಾದ ಅರ್ಥ; (ಶಬ್ದವಲ್ಲ). ಆ ಅರ್ಥವೂ ಎರಡು ವಿಧ : (೧) 'ವಾಚ್ಯ' ಮತ್ತು (೨) 'ವ್ಯಂಗ್ಯ' (ಧ್ವನ್ಯಾಲೋ. ೨೦೫). [ಸಂ.]

**ಪ್ರತಿಪಾನ** (ನಾ). ೧. ಕುಡಿಯುವುದು. ೨. ಕುಡಿಯುವ ನೀರು. ೩. [ಅಶ್ವಶಾ] ಕುದುರೆಗಳಿಗೆ ಕುಡಿಸುವ ಬಲವರ್ಧಕಪಾನೀಯ : ಪ್ರತಿಪಾನಮೆಂಬುದಾಋಂ ಋತುಗಳೊಳಂ ಬೇಱೆವೇಱೆ ದಿವ್ಯೌಷಧಸಂಯುತ ದೊಳ್ ಕುಡುಗುಂ (ಅಶ್ವಶಾ. ೭-೬೬): ಮಾಗಧತೈಲಂ ಸೈಂಧವನಾಗರ ಸುರದಾರುಗಳ್ ಸುರಾಪಾನದ ಸಂಯೋಗದೊಳಶ್ಚಂಗಳ್ಗೆ ಘನಾಗವು ದೊಳ್ ಕೊಡೆ ಮನೋಹರಂ ಪ್ರತಿಪಾನಂ (ಅಶ್ವಶಾ. ೭-೯೬). [ಸಂ.]

**ಪ್ರತಿಪಾನಕ** (ನಾ). = ಪ್ರತಿಪಾನ ೩ : ಪಿಪ್ಪಲಿ ಸಿಂಧೂತ್ಥಂ ಸದಗುಪ್ಪೆ [ಯು] ಮರಿಚಾಗ್ನಿ ನಾಗರಂ ವಾಸಿತದಿಂದೊಪ್ಪುವ ಕಳ್ ಪ್ರತಿಪಾನಕ ಮಪ್ಪುದು ತುರಗಕ್ಕೆ ವರುಷಋತುವರ್ತಕದೊಳ್ (ಅಶ್ವಶಾ. ೭-೯೭). [ಸಂ.]

**ಪ್ರತಿಪಾಪ** (ನಾ). ಒಂದು ಪಾಪಕ್ಕೆ ಬದಲಾಗಿ ಮಾಡುವ ಅಥವಾ ಮಾಡಿಸುವ ಮತ್ತೊಂದು ಪಾಪ : ಅವನ ತೊಡೆಯುಡಗನೆ ತಳ್ವಿಲ್ಲದ ಪಂಗಿಕ್ಕುವರೇಂ ಪೊಲ್ಲದುದೋ ಮಾಂಸಸೇವನಪ್ರತಿಪಾಪಂ (ಶಾಂತಿಪು. ೭-೯೬). [ಸಂ.]

**ಪ್ರತಿಪಾಲ** (ನಾ). ಕಾಪಾಡುವವನು ; ಸಂರಕ್ಷಿಸುವವನು ; ರಕ್ಷಕ : ಪುರಾರಿಯ ದೇಗುಲಕ್ಕವರೆಯ್ದಿ ತಚ್ಚರಣಾಗತಪ್ರತಿಪಾಲನು ಕಾಣುತ್ತ ಪೊಡವಂಟು (ಬಸಪು. ೨೮-೯೭). [ಸಂ.]

**ಪ್ರತಿಪಾಲನ** (ನಾ). ೧. ಕಾಪಾಡುವುದು ; ರಕ್ಷಿಸುವುದು. ೨. ಪೋಷಿಸುವುದು ; ಪೋಷಣೆ. [ಸಂ.]

**ಪ್ರತಿಪಾಲನೆ** (ನಾ). = ಪ್ರತಿಪಾಲನ ೧ : ಕೋಲಾರಜಿಲ್ಲೆಯ ಎರಡು ಶಾಸನಗಳಲ್ಲಿ . . . ಬೀರನೊಳಂಬ ಅಣ್ಣಿಗನು ' ದುಷ್ಟನಿಗ್ರಹಶಿಷ್ಟಪ್ರತಿ ಪಾಲನೆ 'ಯನ್ನು ಮಾಡಿ ರಾಜ್ಯವನ್ನು ಆಳುತ್ತಿದ್ದನೆಂದು ಹೇಳಿದೆ (ನೊಳಂಬ. ೪೦). [ಸಂ. ಪ್ರತಿಪಾಲನ]

**ಪ್ರತಿಪಾಲಿತ** (ಗು). ಕಾಪಾಡಿದ ; ರಕ್ಷಿತವಾದ : ಅನಂತಭೋಗನಿಲಯಂ ಪ್ರತಿಪಾಲಿತಧರ್ಮಚಕ್ರನಬ್ಜಾಯತನೇತ್ರನಾದಿಪುರುಷಂ . . . ಈಗೆಮಗೆ ಮಂಗಳಕಾರಣಮುತ್ಸವಂಗಳಂ (ಗದಾಯು. ೧-೧). [ಸಂ.]

**ಪ್ರತಿಪಾಲಿಸು**, ಪ್ರತಿಪಾಳಿಸು (ಕ್ರಿ) ೧. ಕಾಪಾಡು ; ರಕ್ಷಿಸು : ಎಲ್ಲಾ ಋಷಿಸಮುದಾಯಮುಮಂ ಪ್ರತಿಪಾಲಿಸಲ್ಕೆ ಸಮರ್ಥರಾಗಿರ್ಪನ್ನೆಗಂ ಗೋವರ್ಧನಭಟ್ಟಾರರ್ ಸಮಾಧಿಮರಣದಿಂದಂ . . . ದೇವಲೋಕಕ್ಕೆ ಪೋದರ್ (ವಡ್ಡಾರಾ. ೭೪-೨೭) ; ನೆಲನಂ ಪ್ರತಿಪಾಲಿಸಿ ಧರ್ಮಸೂನು ಸುಖ ಮಿರ್ದಂ ರಿಪುಬಳತಿಮಿರಭಾನು (ಪಂಪಭಾ. ೪-೦೦) ; ಮಹಾಮಂಡಳೇಶ್ವರ ಪದವಿಯನಲಂಕರಿಸಿ ಮಹೀಮಂಡಲಮಂ ಪ್ರತಿಪಾಲಿಸಿ . . . ಸಾಮ್ರಾಜ್ಯ ಲಕ್ಷ್ಮಿಯಂ ತಾಳ್ದಿ (ಆದಿಪು. ೯-೬ ವ). ೨. ನಡೆಸು ; ನೆರವೇರಿಸು : ಅರಸುಗಳವಿಚಾರದಿಂದಾರಾನುಮಂ ಕೊಲಲುಂ ಕಿಡಿಸಲುಮೆಂದಿರ್ದರಲ್ಲದೆ ಮಂತ್ರಿಗಳಿಚ್ಚೆಯಂ ಪ್ರತಿಪಾಲಿಸರ್ (ಪಂಚತಂ. ೦೩೬-೩); ಪೊಲ್ಲರೊಳ್ಕೆಳೆ ಗೊಳ್ಳದಿರ್ಪುದು ಶಿಷ್ಟರೊಳ್ವಿನಯಮಂ ಪ್ರತಿಪಾಲಿಸಿರ್ಪುದು (ಧರ್ಮಾಮೃ. ೩-೦೦೦). ೩. ಯಥಾಸ್ಥಿತಿಯಾಗಿರುವಂತೆ ನೋಡಿಕೊಳ್ಳು ; ಲೋಪ ಬರದಂತೆ ಆಸಕ್ತಿವಹಿಸು : ಸೋದರರಣ್ಣರುಂ ಪಸುಗೆಯಂ ಪ್ರತಿ ಪಾಲಿಸಿ ಲೋಕಪಾಲರೇತಾದರದಿಂದೆ ಬೆಚ್ಚು ಬೆಸಕೆಯ್ಯೆ (ಅರ್ಜನೇ. ೪-೦೩೦); ಈ ಧರ್ಮ್ಮಮಂ ಸಾಸಿರ್ವ್ವರು ತಪ್ಪದೆ ಪ್ರತಿಪಾಲಿಸುವದು (ಇಆ. IV, ೨೭೬-೬೬ ; 1184). **ಪ್ರತಿಪಾಳಿಸು** : ೧. ಪಲವುಂ ಋದ್ಧಿಗಳಿಂ ಕೂಡಿ ದೊರೆಲ್ಲಾ ಋಷಿಸಮುದಾಯಮುಮಂ ಪ್ರತಿಪಾಳಿಸುತ್ತಂ (ವಡ್ಡಾರಾ. ೭೩-೩); ಕ್ಷಿತಿಯಂ ನಯವಿಕ್ರಮದಿಂ ಪ್ರತಿಪಾಳಿಸಿ ಪಡೆದು ಗೋತ್ರನಿಸ್ತಾರಕನಂ ಸುತನಂ (ವರ್ಧಮಾ. ೨-೬೪). ೩. ಮೇಂಟಿ ಖಣ್ಡುಗ ದೇವರ್ಗ್ಗೆ ಇನ್ತೀ ಧರ್ಮ್ಮಮಂ ಪ್ರತಿಪಾಳಿಸಿದವರ್ . . . ಪತ್ತು [ಸಾ]ಸಿರಕಪಿಳೆಯಂ ದಾನಂಗೊಟ್ಟ ಫಳಮಕ್ಕುಂ (ಸೌಇಇ. XI – I, ೨೨-೪೦ ; 897) ; ಆ ನೆಲನ ದೇವರ್ಗ್ಗೆ ಧಾರೆಯೆಱೆದು ಕೊಟ್ಟು ತಮ್ಮ ಧರ್ಮ್ಮಂ ಮಾಡಿ ಪ್ರತಿ ಪಾಳಿಸಿದರ್ (ಸೌಇಇ. XX. ೨೦-೬೭ ; 1019) ; ಇನ್ತು ಬಿಟ್ಟ ದತ್ತಿಯಂ ಪ್ರತಿಪಾಳಿಸಿದ ಮಹಾಪುರುಷಂಗೆ . . . ದಾನಂಗೊಟ್ಟ ಫಳಮನೆಯ್ದುವಂ (ಎಕ. VIII, ತೀರ್ಥಹ. ೫೭-೬೪ ; 1116). [ಪ್ರತಿಪಾಲನ + – ಇಸು₁]

**ಪ್ರತಿಪಾಳಿಸು** 'ಪ್ರತಿಪಾಲಿಸು' ನೋ.

**ಪ್ರತಿಪೂಜೆ** (ನಾ). ಗೌರವ ; ಮರ್ಯಾದೆ : ವಸುಧೆಯೊಳು ಮುನ್ನ ಪ್ರತಿಷ್ಠಿಸಿದ ಲಿಂಗಗಳಿಗೆಸಗದಿರು ಪ್ರತಿಪೂಜೆಯನ್ನು ಶ್ರೀವೀರಶೈವಾಚಾರಕದು ಹಾನಿಯು (ಸವಪೂ. ೦೯-೪೦). [ಸಂ. ಪ್ರತಿಪೂಜಾ]

**ಪ್ರತಿಪ್ರಾಣ** (ನಾ). ಪ್ರತಿಬಿಂಬ: "ಪ್ರತಿಬಿಂಬಂ...ಪ್ರತಿಪ್ರಾಣಮೆಂದೆನಲದುಂ ಪ್ರತಿಯಪ್ಪ ರೂಪೆನಿಕ್ಕುಂ" (ಮಂಗರಾ. ೬-೨೬). [ಸಂ.]

**ಪ್ರತಿಫಲ** (ನಾ). ೧. ಮಾಡಿದ ಕೆಲಸಕ್ಕೆ ಪ್ರತಿಯಾಗಿ ದೊರಕುವ ಫಲ,–ಪ್ರಯೋಜನ : ಸಾಮಾನುಗಳನ್ನು ಕೊಂಡುಕೊಳ್ಳುವಾಗ ನೀವು ಕೊಡುವ ಬೆಲೆಗೆ ಸರಿಯಾದ ಪ್ರತಿಫಲ ಸಿಗಬೇಕಾದರೆ . . . ದೂರದೃಷ್ಟಿ ಯಿರಬೇಕು (ಅಡುಗ. ೦೬೪); ಯಾವ ಕೆಲಸಕ್ಕೂ ಪ್ರತಿಫಲವನ್ನು ಅಪೇಕ್ಷಿಸು ತ್ತೇವೆ. ಪ್ರತಿಫಲ ಬಾರದಿದ್ದಲ್ಲಿ ಮರುಗುತ್ತೇವೆ (ಧರ್ಮಶಾ. ೦೩೩); ತೋಟಗಾರರಿಗೆ ಸಲ್ಲುತ್ತಿದ್ದ ಪ್ರತಿಫಲ ವಿಧವಿಧವಾದುವು (ಶಾಸಗ. ೩೭). ೨. ಪ್ರತಿಬಿಂಬ ; ಪಡಿನೆಳಲು. ೩. ಪ್ರತ್ಯುಪಕಾರ. [ಸಂ.]

**ಪ್ರತಿಫಲನ** (ನಾ). ೧. ಪ್ರತಿಬಿಂಬ; ಪಡಿನೆಳಲು : ಪರಶಿವನು . . . ಅಧಿಕಭಾವವನ್ನು ಹೊಂದಿದ ಸ್ವಪ್ರಕಾಶತ್ವದಲ್ಲಿ ಪ್ರತಿಫಲನರೂಪದಿಂದ ಸ್ಫುರಿಸಿ ಲಿಂಗವೆನಿಸಿದನು (ಶಾರದ. ೨೫೩); ಮಯೂರದ ಗರಿಗಳ ಪ್ರತಿ ಫಲನವು ಅವನ ಮೇಲೆ ಬಿದ್ದುದರಿಂದ ಮಯೂರವರ್ಮನೆಂದೂ ಬಿರುದಾಂಕಿತನಾದನು (ಕುಳುವಾ. ೬೦೪). ೨. ಪ್ರತಿಬಿಂಬಿಸುವುದು. ೩. ಪ್ರತಿಫಲ. [ಸಂ.]

**ಪ್ರತಿಫಲಿತ**, ಪ್ರತಿಫಳಿತ (ಗು). ೧. ಪ್ರತಿಫಲಿಸಿದ ; ಪ್ರತಿಬಿಂಬಿತವಾದ. ೨. ಪ್ರತಿಫಲವನ್ನುಂಟುಮಾಡಿದ ; ಪರಿಣಾಮ ಬೀರಿದ: ಜಲಧಿಯಲಿ ಘಣಿವದನದಲಿ . . . ಸಿಲುಕಿದಡೆ ಬಿಡಿಸುವವಲೇ ಪ್ರತಿಫಲಿತ ಪೂರ್ವಾದತ್ತಪುಣ್ಯಾವಳಿಗಳೆಂಬುದು ತನ್ನೊಳಾದುದು (ಕುಮಾ.ಗ. ೪-೨೫). (ನಾ). ೩. ಪ್ರತಿಬಿಂಬಿತವಾದುದು : ಕನ್ನಡಿಯಂತಹ ಪ್ರತಿಫಲನ ಕಾರಕವಾದ ಮೇಲ್ಮೈಯಿಂದ ಒಂದು ನಿಯಮವನ್ನನುಸರಿಸಿ ಪ್ರತಿಫಲಿತ ವಾದರೆ ಅಂತಹ ಮೇಲ್ಮೈಯು ನಮಗೆ ಗೋಚರವಾಗುವುದಿಲ್ಲ (ಶೌತಿಸ. ೦೩೪). **ಪ್ರತಿಫಳಿತ** : ೧. ಲಲನಾನಿಕಾಯನಿವಳಿತ ನೀರಾಜನ ದೀಪಕಳಿಕಾಪ್ರತಿಫಳಿತಮೌಳಿಮಾಣಿಕ್ಯನುಂ (ಚಂದ್ರಪ್ರ. ೮-೨೪ ವ). [ಸಂ.]

**ಪ್ರತಿಫಲಿಸು** (ಕ್ರಿ). ೧. ಪ್ರತಿಬಿಂಬಿಸು : ನಲಕೂಬರನು. . . ದೂರದರ್ಶಕ ವೆಂಬ ಕನ್ನಡಿಯೊಳ್ ಪ್ರತಿಫಲಿಸಿದ ದಿಕ್ಪಾಲಕಪುರಂಗಳನೀಕ್ಷಿಸುತ್ತಲು (ಸೌಗಂಧಿ. ೩೦೬-೬); ಈ ಎಲ್ಲ ವಸ್ತುಗಳಲ್ಲಿ ಬೆಳಕನ್ನು ಕೊಡುವ ಶಕ್ತಿ ಇಲ್ಲದಿದ್ದರೂ ಬೆಳಕನ್ನು ಪ್ರತಿಫಲಿಸುವ ಶಕ್ತಿ ಇದೆಯಷ್ಟೆ (ಪಾಂಶ್ರ. II, ೮೭೩). ೨. ಪರಿಣಾಮವಾಗಿ ಬರು,–ಆವಿರ್ಭವಿಸು : ಅತಿಮಥಸಿದರೆ ಶ್ರೀಗಂಧದೊಳು ಕಿಚ್ಚು ಪ್ರತಿಫಲಿಸುವುದಲ್ತೆ (ಶರತ. ೦೯-೯೭); ಅವನ ಧ್ವನಿಯಲ್ಲಿ ಅಷ್ಟೊಂದು ಹೊತ್ತಿನವರೆವಿಗೂ ಮನೆಗೆ ಹೋಗದೆ ಇರಬೇಕಲ್ಲಾ ಎಂಬ ಜುಗುಪ್ಸೆಯು ಪ್ರತಿಫಲಿಸಿತು (ಪೊಗ್ಗು. ೩೪). [ಪ್ರತಿಫಲನ + – ಇಸು₁]

**ಪ್ರತಿಫಳಿತ** ' ಪ್ರತಿಫಲಿತ ' ನೋ.

**ಪ್ರತಿಬಂಧಿ₁** (ನಾ). ವಿರೋಧವಾದುದು ; ಪ್ರತಿಯಾದುದು : ನಾನು ಹೇಳಿದ್ದಕ್ಕೆಲ್ಲ ಪ್ರತಿಬಂಧಿಯಾಗಿಯೇ ಉತ್ತರ ಕೊಡುತ್ತೀಯಲ್ಲ (ರೂಢಿ). [ ಸಂ. ಪ್ರತಿಬಂಧೀ ]

**ಪ್ರತಿಬಂಧಿ₂** (ನಾ). ಮೋಜಣಿ ; ಸರ್ವೆ; ಚಕ್ಕುಬಂದಿ : ಯಾವತ್ತು

ಭೂಮಿಯನ್ನು ಅಳೆದು ಪ್ರತಿಬಂದಿಯ ದರಗಳನ್ನು ಗೊತ್ತುಮಾಡಿದ ಬಳಿಕ ಪುಟ್ಟು ಸರಕಾರಿ ಕಂದಾಯದಲ್ಲಿ ಶೇಕಡಾ ಮೂವತ್ತರಂತೆ ಸರಕಾರಕ್ಕೆ ಸುಕಸಾಬು ಬಂತು (ಕರ್ನಾಗ. ೩೬೬). [ಪ್ರತಿ + < ಬಂದು]

**ಪ್ರತಿಬಂಧ** (ನಾ). ೧. ತಡೆ ; ಅಡಚಣೆ ; ಅಡ್ಡಿ : "ವಿಷ್ಕಂಭಃ. ಪ್ರತಿಬಂಧಃ — ಈ ೨ ತಗುವುದು" (ಹಲಾಯು. ೦೨೬–೯೪). ೨. ಸಂಬಂಧವನ್ನು ಹೊಂದುವುದು. [ಸಂ.]

**ಪ್ರತಿಬಂಧಕ** (ಗು). ೧. ಅಡ್ಡಿಯನ್ನುಂಟುಮಾಡುವ ; ಅಡಚಣೆಯನ್ನುಂಟುಮಾಡುವ : ದೇವತಾಕಾರ್ಯಕ್ಕೆ ಪ್ರತಿಬಂಧಕವಾಕ್ಯಗಳನ್ನು ಹೇಳಬೇಡಿ (ಕೂಹ). (ನಾ). ೨. ಅಡ್ಡಿಯಾಗಿರುವುದು; ಅಡಚಣೆಯಾಗಿರುವುದು : ಸುತಜನ್ಮಕ್ಕಂ ಪಿರಿದುಂ ಪ್ರತಿಬಂ[ಧಕಂ. ಬೋ] ಧನೊಂದು ಪೂರ್ವಜನ್ಮಾಂತರಸಂಗತಮುಂಟು (ಹರ್ಷಚ. ೩–೭೬). ೩. ಅಡ್ಡಿ ; ಅಡಚಣೆ; ತಡೆ : ಧರ್ಮಚಿಂತನೆಗೆ ಪ್ರಬಲವಾದ ಪ್ರತಿಬಂಧಕಗಳಿಷ್ಟೋ ಇವೆ (ಅರ್ಥಶ. ೩); ಈ ಅಹಂಕಾರ ವಿಶ್ವಸಾಮರಸ್ಯದರ್ಶನಕ್ಕೆ ಪ್ರತಿಬಂಧಕವಾಯಿತು (ಸುಶ್ರೀಕ. ೩೨ ೩೬೯). ೪. ಅಡ್ಡಿಪಡಿಸುವವನು; ಕಟ್ಟುಗಟ್ಟುವವನು : ಅಂಧತೆಯನೇನೆಂಬೆನ್ನೆ ಪ್ರತಿಬಂಧಕರು ಬೇಡವಲು ನಯದಭಿಸಂಧಿಯಲಿ ಸೀವರಿಸಿ ಸಂವರಿಸಿದನು ಸೈನಿಕವ (ಉದ್ಯೋ. ೨೨–೨). ೫. [ನ್ಯಾಯಶಾ] ಕಾರ್ಯವು ನಿಂತುಹೋಗುವುದಕ್ಕೆ ಕಾರಣವಾದುದು : ಪ್ರತಿಬಂಧಕವೆಂದರೆ ಸಾಮಗ್ರಿಯೆಂಬ ಕಾರಣಸಮುದಾಯಕ್ಕೆ ನ್ಯೂನತೆಯನ್ನುಂಟುಮಾಡುವುದು. ಅದೇ ಸಾಮಗ್ರಿಕವೈಕಲ್ಯವು. ಅದನ್ನುಂಟುಮಾಡುವುದು ಪ್ರತಿಬಂಧಕ (ಹಿಂದಶಾ. ೦೩೦). [ಸಂ.]

**ಪ್ರತಿಬಂಧಕಾಜ್ಞೆ** (ನಾ). [ರಾಜನೀ] ಜನರು ಗುಂಪುಗೂಡುವುದರಿಂದ ಶಾಂತಿಭಂಗವಾಗುವುದೆಂದು ನಿರ್ಧಾರವಾದಾಗ (ನಾಲ್ಕು ಜನರಿಗಿಂತ ಹೆಚ್ಚು ಜನರು ಒಟ್ಟಿಗೆ ಸೇರಬಾರದು, ಮೆರವಣಿಗೆ ನಡೆಸಬಾರದು ಮೊದಲಾದ) ನಿರ್ಬಂಧಗಳನ್ನು ವಿಧಿಸುವ ರಕ್ಷಣಾಧಿಕಾರಿಗಳ ಅಪ್ಪಣೆ : ಭಾರತಶಾಸನದ ೫೬, ೧೪೪ ಮೊದಲಾದ ವಿಧಿಗಳ ಚಲಾವಣೆ : ತುರ್ತುಪರಿಸ್ಥಿತಿಯಲ್ಲಿ ಜಾರಿಗೊಳಿಸಿದ ಪ್ರತಿಬಂಧಕಾಜ್ಞೆಯನ್ನು ಮೀರಿ ನಡೆದವರನ್ನು ದಸ್ತಗಿರಿ ಮಾಡಲಾಗುವುದು (ಕೂಹ). 'ನಿಷೇಧಾಜ್ಞೆ' ಪರಾ. [ಪ್ರತಿಬಂಧಕ + ಆಜ್ಞೆ]

**ಪ್ರತಿಬಂಧನ** (ನಾ). ೧. ಕಟ್ಟು ಹಾಕುವುದು. ೨. ತಡೆಯುವುದು ; ಅಡ್ಡಿಪಡಿಸುವುದು. ೩. ಸೆರೆ; ಬಂಧನ. [ಸಂ.]

**ಪ್ರತಿಬಂಧಪಡಿಸು** (ಕ್ರಿ). ಅಡ್ಡಿಪಡಿಸು ; ತಡೆ : ಎಲ್ಲ ಸೂಚಕನೆ, ಎಲ್ಲವನ್ನು ಕ್ರಮವಾಗಿ ಹೇಳಲಿ. ಅಷ್ಟರೊಳಗೆ ಇವನನ್ನು ಪ್ರತಿಬಂಧಪಡಿಸಬೇಡ (ಶಾಕುಂತ. ೬೩–೦೬). [ಪ್ರತಿಬಂಧ + ಪಡಿಸು]

**ಪ್ರತಿಬಂಧಿನಿ** (ನಾ). ಪ್ರತಿಸ್ಪರ್ಧಿಯಾದಂದು : ಕಟ್ಟಿದ ಕಂಠಿಕಗಮೆತ್ತಿದಯ್ಯಗೊಡೆಗಂ ದಯಗೆಯ್ದ ಯುವರಾಜಲಕ್ಷ್ಮಿಗಂ ಪ್ರತಿಬಂಧಿ[ನಿ. ಬದ್ಧ]ನಿಯನಿಸಿದ ಮಧುಮಹೀಪಾಲನ ವಕ್ಷಲಮುಕುಲದ ಕಂಠಿಕೆಯುಂ . . . ಮಾಧವೀಲಕ್ಷ್ಮಿಯುಂ ತನಗಮರೆ (ಕಾಂತಿಪು. ೬–೨೩ ವ).
[ಸಂ. ಪ್ರತಿಬಂಧಿನೀ]

**ಪ್ರತಿಬಂಧಿಸು** (ಕ್ರಿ). = ಪ್ರತಿಬಂಧಪಡಿಸು : ಅವನ ಈ ಸುತ್ತಾಟವನ್ನು . . . ಅವಳು ಎಂದೂ ಪ್ರತಿಬಂಧಿಸುತ್ತಿರಲಿಲ್ಲ (ರಂಗಕೂ. ೩೩) ; ನಿನ್ನ ದೀರ್ಘಜೀವನದ ಗುಟ್ಟೇನು ? ನೆಗಡಿಯನ್ನು ಹೇಗೆ ಪ್ರತಿಬಂಧಿಸಿದಿ ? (ದೀಕನ್ನ. ೦೦). [ಪ್ರತಿಬಂಧನ + –ಇಸು]

**ಪ್ರತಿಬದ್ಧ** (ಗು). ೧. ಕೂಡಿಕೊಂಡಿರುವ; ಸೇರಿದ : ಪೂರ್ವವಿದೇಹದ . . . ವತ್ಸಕಾವತೀವಿಷಯಪ್ರತಿಬದ್ಧಪ್ರಭಾವತೀಪುರಿಯೊಳ್ (ಆದಿಪು. ೩–೫೬ ವ); ಹಾ ಮನಃಪ್ರಿಯ ಪುಂಡರೀಕ ಜನ್ಮಾಂತರಾವಿಸ್ಮೃತಮದನುರಾಗ . . . ಎಂದುದ್ಗತಶೋಕೆಯಾಗಿ (ಕಾದಂಬ. ೬೦೪). (ನಾ). ೨. ಕೂಡಿಕೊಂಡಿರುವುದು ; ಸೇರಿರುವುದು ; ಸಂಬಂಧಿಸಿದುದು : ಇಂತೀ ಕಥೆಗಳೆಲ್ಲಂ ಗುರುದತ್ತಭಟಾರರ ಕಥೆಗೆ ಪ್ರತಿಬದ್ಧಂಗಳ್ (ವಡ್ಡಾರಾ. ೦೬೨–೨೦); ಹಾರಲತೆಯಂತೆ ಕಂಠಯೋಗ್ಯಮುಂ ಗೃಹಪಂಕ್ತಿಯಂತೆ ಧ್ರುವಪ್ರತಿಬದ್ಧಮುಂ . . . ಅಪ್ಪ ಗೀತೆಯುಂ ವೀಣೆಯುಂ ಬಾಜಿಸುತ್ತಿರ್ದರ್ (ಕಾದಂಪೂ. ೬೬೮); ಈ ಮಧ್ಯಮಲೋಕದ ಪ್ರತಿಬದ್ಧಮಾಗಿ ಚಿತ್ರೆಯೆಂಬ ನೆಲದಿಂ ಮೇಗೆ . . . ತಾರಾಗಣವಿಮಾನಂಗಳಿರ್ಕುಂ (ಸುಕುಮಾ. ೦೦–೫೪). ೩. ಅಡ್ಡಿಪಡಿಸಿದುದು ; ಪ್ರತಿಭಟನೆಯನ್ನು ಹೊಂದಿದುದು. ೪. ಬಂಧಿಸಿದುದು ; ಬಂಧನಕ್ಕೊಳಗಾದುದು. ೫. ಚಿನ್ನ ಮೊದಲಾದ ಲೋಹಗಳಲ್ಲಿ ಕುಂದಣಿಸಿರುವುದು,—ಮೆಟ್ಟಿರುವುದು. ೬. ನಿರಾಶೆಗೊಂಡವನು ; ಹತಾಶ : "ಮನೋಹತಃ ಪ್ರತಿಹತಃ, ಪ್ರತಿಬದ್ಧಃ, ಹತಃ — ೪ ಮನಸ್ಸಿನ ಉತ್ಸಾಹವು ತಪ್ಪಿದವನ ಹೆಸರು" (ಸಿದ್ಧಾಂತಿ. ೩೩೪).
[ಸಂ.]

**ಪ್ರತಿಬಲ** (ನಾ). ೧. ಶತ್ರುವಿಗೆ ಸಮಾನವಾದ ಬಲವುಳ್ಳವನು,— ಸಾಮರ್ಥ್ಯವುಳ್ಳವನು. ೨. ಸಮರ್ಥ ; ಶಕ್ತ. ೩. ಶತ್ರುಸೈನ್ಯ; ಪರಬಲ. ೪. ಹಗೆ; ಅರಿ; ಶತ್ರು : ಅಸಹಾಯನೆ ನೀಂ ಪ್ರತಿನೃಪರ ಸಹಾಯರ್ಗಿಂ ಪ್ರತಿಬಲನದಱಿಂದನರ್ಥಕಂ ವಾಕ್ಯಾರ್ಥಂ (ಗದಾಯು. ೩–೪೫). [ಸಂ.]

**ಪ್ರತಿಬಿಂಬ** (ನಾ). ೧. ನೀರು, ಕನ್ನಡಿ ಮೊದಲಾದುವುಗಳಲ್ಲಿ ತೋರುವ ವಸ್ತುವಿನ ಪಡಿನೆಳಲು, –ಪ್ರತಿಚ್ಛಾಯೆ : "ಮಾರ್ಪೊಳೆದುದು ಪಡಿನೆಟಲಿಂಗಕ್ಕುಂ ಬುಧರಿಂ ಪ್ರತಿಬಿಂಬ" (ಕಬಿಕಂ. ೨೩೨) ; ರತ್ನಸ್ತ್ರೀ ಪ್ರತಿಕೃತಿಯೊಳರ್ಕಬಿಂಬಪ್ರತಿಬಿಂಬಂ ನೆಲಸಿ ಪೀಡೆಯುಂ ಮಾಡುಗುಮೇ (ಶಾಂತಿಪು. ೯–೨೦೪) ; ಪ್ರತಿಬಿಂಬದ ನೆವದಿಂ ವನತತಿಶೈಲಗ್ರಹನಿಕಾಯತಾರಾಂಕ ಜಗತ್ತ್ರಿತಯಮನಬ್ಜೋದರನಾಕೃತಿಯಂ ತನ್ನೊಳಗೆ ತಳೆದು ತಿಳಿಗೊಳ ನೆಸೆಗುಂ (ಕಾದಂಪೂ. ೬೩೮). ೨. ಮೂಲಾಕೃತಿಗೆ ಸದೃಶವಾದ ರೂಪ, ವಿಗ್ರಹ, ಪ್ರತಿಮೆ, ಚಿತ್ರ ಮುಂತಾದುವು : "ಪ್ರತಿಬಿಂಬಮಾಪ್ರತಿಚ್ಛಾಯಂ . . . ಪ್ರತಿಪ್ರಾಣಮೆಂದೆನಲದುಂ ಪ್ರತಿಯಪ್ಪ ರೂಪಕಕ್ಕಂ" (ಶಬ್ದಮ. ೮–೨೮) ; ನಿರ್ಮಲಪ್ರತಿಬಿಂಬ ಕಾಣಿಸಿತಾದಿನಾರಾಯಣನ ಮೂರುತಿಯ ಅಂಬುಜಾಸನೆ ಕೌಸಲೆಯ ಗರ್ಭಾಂಬುನಿಧಿಯಲಿ (ತೊರವೆ. ೬–೪); ಪರಮಾತ್ಮನ ಪ್ರತಿಬಿಂಬ ಅಥವಾ ಸಾದೃಶ್ಯಕ್ಕೆ "ಪ್ರತಿಮಾ" ಎಂಬ ಶಬ್ದವನ್ನು ಭಾರತೀಯರು ಉಪಯೋಗಿಸುತ್ತಾರೆ (ಭಾರದ. ೫೦೮). ೩. [ದ್ವೈತ] ಇಪ್ಪತ್ತು ಬಗೆಯ ದ್ರವ್ಯಗಳಲ್ಲಿ ಒಂದು ; ಉಪಾದಾನ ಕಾರಣವಾಗಿರುವುದು : ಪರಮಾತ್ಮ, ಲಕ್ಷ್ಮಿ . . . ವಾಸನಾ, ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಹಿಂದಶಾ. ೯೬೫). [ಸಂ.]

**ಪ್ರತಿಬಿಂಬಕಲ್ಪ** (ನಾ). [ಕಾವ್ಯಮೀ] ಪೂರ್ವಕವಿಗಳು ಹೇಳಿರುವ ವಿಷಯವನ್ನು ತನ್ನ ಕೃತಿಯಲ್ಲಿ ಅಳವಡಿಸಿಕೊಳ್ಳುವ ಮೂರು ಬಗೆಗಳಲ್ಲಿ ಒಂದು ; ಹಿಂದಿನ ಕವಿಗಳ ಕಾವ್ಯಾರ್ಥವನ್ನು ಬೇರೆ ಮಾತುಗಳಲ್ಲಿ ತನ್ನ ಕೃತಿಯಲ್ಲಿ ವರ್ಣಿಸುವುದು : ಹೋಲಿಕೆಗಳನ್ನು ಆನಂದವರ್ಧನನು "ಪ್ರತಿಬಿಂಬಕಲ್ಪ", "ಆಲೇಖ್ಯಪ್ರಖ್ಯ", "ಸಮಾನದೇಹಿಕಲ್ಪ" ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾನೆ. . . "ಪ್ರತಿಬಿಂಬಕಲ್ಪ" ಎಂಬುದರ ಹೆಸರೇ ಸೂಚಿಸಿರುವಂತೆ, ಅದರ ತಿರುಳೆಲ್ಲವೂ ಪರಕೀಯವು. ಮಾತಿನ ಹೊದಿಕೆ ಮಾತ್ರ ಇವನದು (ಭಾರಕಾ. ೦೪೬). [ಸಂ.]

**ಪ್ರತಿಬಿಂಬಚೈತನ್ಯ** (ನಾ). [ಅದ್ವೈತ] ಜೀವಿಯ ಅಂತಃಕರಣದಲ್ಲಿ ಮೂಡಿರುವ ಪರಮಾತ್ಮ; ಶುದ್ಧಚೈತನ್ಯ: ಅಧಿಷ್ಠಾನಚೈತನ್ಯವು ಪ್ರತಿಬಿಂಬಚೈತನ್ಯವೂ ಯೀಯೆರಡು ಕೂಡಿ ಯಿಾಶ್ವರನು (ಕೈವಸ. ೨-೬). [ಸಂ.]

**ಪ್ರತಿಬಿಂಬನ** (ನಾ). ೧. =ಪ್ರತಿಬಿಂಬ ೧. ೨. ಹೋಲಿಕೆ ; ಸಾದೃಶ್ಯ: ಎಣೆ: ಎಲ್ಲಕ್ಕೂ ಹೆಚ್ಚಿನ ಪ್ರತಿಬಿಂಬನ ಸ್ವಾಮಿದಾಸರ ಹಿಮಾಲಯ ಯಾತ್ರೆಯನ್ನು ವರ್ಣಿಸುವ ೧೪೩ನೆಯ ಪ್ರಕರಣದಲ್ಲಿ ದೊರೆಯುತ್ತದೆ (ಸಭಾಪ. ೩೩ ಪೀಠಿ). [ಸಂ.]

**ಪ್ರತಿಬಿಂಬಿತ** (ಗು). ೧. ಪಡಿಮೂಡಿದ; ಪ್ರತಿಫಲಿತವಾಗಿರುವ : ಅನರ್ಘರತ್ನಮಣಿಮಕುಟಕಿರೀಟಮಯೂಖಮಾಲಿಕಾಪರಿಚಿತಪ್ರಭಾಕದಂಬಕ ಪ್ರತಿಬಿಂಬಿತವಿಮಾನಭಿತ್ತಿವಿತಾನಂ (ಶಾಂತಿಪು. ೬-೦೩ ವ). (ನಾ). ೨. ಪಡಿಮೂಡಿದುದು; ಪ್ರಕಾಶಿತವಾದುದು: ಭರತನು . . . ನುಡಿಯುವ ಮಾತುಗಳಲ್ಲಿ ಸನಾತನಹಿಂದೂಧರ್ಮದ ಸಾರವೇ ಪ್ರತಿಬಿಂಬಿತವಾಗಿದೆ (ಭಾರತ. ೪೪೭). [ಸಂ.]

**ಪ್ರತಿಬಿಂಬಿಸು** (ಕ್ರಿ). ೧. ಪಡಿಮೂಡು ; ಪ್ರತಿಫಲಿತವಾಗು : ಚಂದ್ರಾಪೀಡನಂ . . . ಅಂಗನಾಜನಘನಸ್ತನದೊಳ್ ಪ್ರತಿಬಿಂಬಿಸುತ್ತಿರಲ್ ಪುರುಡಿಸಿದಳ್ (ಕಾದಂಬ. ೩೨); ಅಂಬುವನೆಚೆವಾಗಳ್ ಪ್ರತಿಬಿಂಬಿಸೆ ಕೆಯ್ನಾರೊಳವಳ ವದನಂ ಪಥಿಕಂ ನಂಬಿ ನಲಿದೀಂಟಿದಂ (೧೦೬. ೨-೨೬); ಪೊಂಬಣ್ಣದಿಹ ಜಡೆಯು ಬಂಬಲೊಳ್ ಥಳಥಳಿಸುವಂಬರಾಪಗೆಯು ವಿಮಲಾಂಬುವೊಳ್ ನೋಡೆ ಪ್ರತಿಬಿಂಬಿಸುವ ಚೆಲ್ವುವಡೆದಂಬು ಜಾರಿಯ ಕಲೆಯು ತುಂಬಿ (ಶಬಪು. ೦೯-೧). ೨. ಪಡಿಮೂಡಿಸು; ಪ್ರತಿಫಲಿತವಾಗುವಂತೆ ಮಾಡು: ಎಂದೋ ನಿರ್ಮಿಸಿದ ಪಠ್ಯವಸ್ತು ಪ್ರಗತಿಪಥದಲ್ಲಿ ಮುಂದುವರಿಯುತ್ತಿರುವ ಜೀವನವನ್ನು ಪ್ರತಿಬಿಂಬಿಸಲಾರದು (ಶಿಕ್ಷಣ. ೦೩೩). [ಪ್ರತಿಬಿಂಬನ + –ಇಸು$_3$]

**ಪ್ರತಿಬುದ್ಧ** (ಗು). ೧. ಎಚ್ಚತ್ತಿರುವ; ಎಚ್ಚರಗೊಂಡಿರುವ. ೨. ಪ್ರಜ್ಞೆಯಿಂದ ಕೂಡಿದ; ಜ್ಞಾನೋದಯವಾದ. ೩. ಅರಳಿದ; ವಿಕಸಿತವಾದ. ೪. ಪ್ರಕಾಶಪಡಿಸಿದ; ಪ್ರಸಿದ್ಧಪಡಿಸಿದ. (ನಾ). ೫. ಅರಳಿದುದು; ವಿಕಸಿತವಾದುದು: ಪ್ರತಿಬುದ್ಧಂ ತ್ವನ್ಮುಖಮುಚಿತ ತಾರಕಂ ತುಂಬಿವೆರಸಿದಂಬುಜಮೆಂಬೀ ದ್ವಿತಯಮುಮೋರೊಂದಂ ಪೋಲ್ತು ತೋಱಿ ಗತನಿದ್ರನಾಗು ನೀಂ ಜಿನಚಂದ್ರಾ (ಶಾಂತಿಪು. ೩-೯೭). ೬. ಗಮನಿಸಿದುದು; ಗುರುತಿಸಿದುದು. ೭. ಪ್ರಸಿದ್ಧವಾದುದು; ಹೆಸರಾದುದು. ೮. ಮೂರ್ಛೆಯಿಂದ ಎಚ್ಚತ್ತಿರುವವನು; ಪ್ರಜ್ಞೆಯಿಂದ ಕೂಡಿದವನು. ೯. ಪ್ರಜ್ಞಾವಂತ; ಬುದ್ಧಿವಂತ: ಪ್ರತಿಬುದ್ಧರಂ ಕುಱಿತ್ತೀ ಸ್ಥಿತಿಯಿಂದಂ ಕಿಱಿದು ಮಾರ್ಗಸೂಚನೆಗೆಯ್ದಂ ಮತಿವಂತರಱಿದು ಪೇಳ್ವುದು ವಿತರ್ಕದಿಂ ಮತ್ತಮುಕ್ತಶೇಷಮನಿದಱೊಳ್ (ಕಾವ್ಯಾವ. ೪೦೨). [ಸಂ.]

**ಪ್ರತಿಬೋಧಕ** (ನಾ). ೧. ನಿದ್ದೆಯಿಂದ ಎಚ್ಚರಗೊಳಿಸುವವನು. ೨. ಬೋಧಿಸುವವನು ; ಉಪದೇಶಿಸುವವನು : ಇಂದ್ರಕದಂಬ ಪ್ರತಿಬೋಧಕರ್ . . . ತಮ್ಮ ನೆಲೆಯಿಂ ಲೋಕಾಂತಿಕರ್ ಬರ್ಪುದುಂ (ಶಾಂತಿಪು. ೦೧-೯೨). [ಸಂ.]

**ಪ್ರತಿಬೋಧನ** (ನಾ). ೧. ಬೋಧಿಸುವಿಕೆ ; ತಿಳಿಸುವಿಕೆ; ಅರಿವುಂಟು ಮಾಡುವಿಕೆ: ಮುನಿಪತಿ ನಿಮ್ಮಿಂ ಪ್ರತಿಬೋಧನಮಿಂದಾದತ್ತು (ಸುಕುಮಾ. ೧೨-೦೪). ೨. ಅರಿವು; ಜ್ಞಾನ. [ಸಂ.]

**ಪ್ರತಿಬೋಧಿಸು** (ಕ್ರಿ). ತಿಳಿವಳಿಕೆಯನ್ನುಂಟುಮಾಡು; ಜ್ಞಾನೋದಯವಾಗುವಂತೆ ಮಾಡು : ಅವರ್ಪ್ರತಿಬೋಧಿಸಿ ಪೋಗಲೊಡಂ ಪರಿನಿಷ್ಕ್ರಮಣಕಲ್ಯಾಣೋತ್ಸವೋತ್ಸುಕರಾಗಿರಲ್ (ಆದಿಪು. ೯-೩೩ ವ); ಅವರ್ ತನ್ನಂ ಪ್ರತಿಬೋಧಿಸಿ ಮೂದಲಿಸಿ ನುಡಿಯಲೊಡಂ (ಅಜಿಪು. ೬-೯೪ ವ) ; ಮುನ್ನಿನ ಭವದೊಳ್ ತನ್ನಂ ಪ್ರತಿಬೋಧಿಸಿ ಮಹಾಪುರುಷನಪ್ಪುದನಱಿದು (ಸುಕುಮಾ. ೬-೨ ವ). [ಪ್ರತಿಬೋಧನ + –ಇಸು$_3$]

**ಪ್ರತಿಭಟ** (ನಾ). ೧. ಹುರುಡಿಸುವವನು; ಪ್ರತಿಸ್ಪರ್ಧಿ. ೨. ಶತ್ರುಪಕ್ಷದ ಸೈನಿಕ; ಎದುರಾಳಿ : ಎಲವೊ ಸಾರಥಿಯಾಗು ನಡೆ . . . ಕೊಲುವೆನೀ ಪ್ರತಿಭಟನಿಕಾಯವ ನಿನ್ನ ಸಾಕ್ಷಿಯಲಿ (ಕುಮಾವ್ಯಾ. ೬-೩೦); ಬೇಗದಿಂ ಪ್ರತಿಭಟನ ಶಿರವನಿಳುಹು (ಕೃಷ್ಣಚರಿ. ೭೩-೩೭). [ಸಂ.]

**ಪ್ರತಿಭಟನೆ** (ನಾ). ಎದುರಿಸುವಿಕೆ ; ವಿರೋಧಿಸುವಿಕೆ : ಇದು ತನ್ನ ಮಗನಾದವನಿಗೂ ಆಗಬಾರದೆಂದು ಅವನು ಯೋಚಿಸುತ್ತಿರುವುದೇ ಅವನ ಪ್ರತಿಭಟನೆಗೆ ಕಾರಣವಾಗಿತ್ತು (ಕಂಗರೂ. ೦೪೯); ರಚನೆ, ಪ್ರತಿಭಟನೆ, ಹೋರಾಟ, ಪರಾಜಯ, ಸಂಗ್ರಹಾಸಕ್ತಿ—ಇವು ಸನ್ನಿವೇಶಗಳಿಗೆ ಪ್ರತಿಕ್ರಿಯಾತ್ಮಕವಾದವು (ಶಿಕ್ಷಣ. ೬೬). [ಸಂ. ಪ್ರತಿಭಟನ]

**ಪ್ರತಿಭಟಿಸು** (ಕ್ರಿ). ಎದುರಿಸು ; ವಿರೋಧಿಸು : ಮುಂದೆ ನಿಂತ ರಾವಣನನ್ನು ಪ್ರತಿಭಟಿಸುವ ಧೈರ್ಯ ಈಶ್ವರನಿಗಿಲ್ಲ (ಶಾಹಿಸ. ೦೪೪); ಘಟ್ಟಿವಾಳಯ್ಯ . . . ಸಂಪ್ರದಾಯವನ್ನು ಪ್ರತಿಭಟಿಸಿ ನಿಂತ ವ್ಯಕ್ತಿ (ಕೂಪ್ಯಕು. ೦೨೭). [ಸಂ. ಪ್ರತಿಭಟನ + –ಇಸು$_3$]

**ಪ್ರತಿಭಾನ** (ನಾ). ೧. ಬೆಳಕು ; ಕಾಂತಿ; ಪ್ರಕಾಶ. ೨. ಅರಿವು; ಜ್ಞಾನ; ತಿಳಿವಳಿಕೆ. ೩. ಹೊಸಹೊಸ ವಿಷಯಗಳು ಹೊಳೆಯುವಂತೆ ಮಾಡುವ ಚೈತನ್ಯ ; ಪ್ರತಿಭೆ : ಪ್ರತಿಭಾನಂ ಕಾವ್ಯವಿದ್ಯಾಪ್ರಚಯಪರಿಚಯಂ . . . ಕವಿತೆಗೆ ನಿಯತಂ ಕಾರಣಂ (ಕಾವ್ಯಾವ. ೪೨೪); ಹಳೆಯ ಶಬ್ದಗಳೆಂದು ಮೂಲೆಗಿಟ್ಟು ನಮ್ಮ ಪ್ರತಿಭಾನಶಕ್ತಿಯನ್ನು ಮಂಕುಗೊಳಿಸುವುದೇಕೆ ? (ಮೋಳಪಾ. ೦೩೦ ಪ್ರಸ್ತಾವನೆ). ೪. ಸಮಚಿತ್ತತೆ. ೫. ದಿಟ್ಟತನ; ಧೈರ್ಯ. [ಸಂ.]

**ಪ್ರತಿಭಾನ್ವಿತ** (ಗು). ೧. ಪ್ರಕಾಶದಿಂದ ಕೂಡಿದ. ೨. ತಿಳಿವಳಿಕೆಯುಳ್ಳ. ೩. ಹೊಸಹೊಸ ವಿಷಯಗಳು ಸ್ಫುರಿಸುವ ಚೈತನ್ಯವುಳ್ಳ; ಪ್ರತಿಭೆಯಿಂದ ಕೂಡಿದ : ಪ್ರತಿಭಾನ್ವಿತವ್ಯಕ್ತಿಗಳಿಗೆ ಸರಿಯಾದ ಅವಕಾಶ ಸಿಕ್ಕಿದರೆ ಒಳ್ಳೆಯ ಕಾರ್ಯಗಳಾಗುತ್ತವೆ (ರೂಢಿ). (ನಾ). ೪. ಹೊಸಹೊಸ ವಿಷಯಗಳು ಸ್ಫುರಿಸುವ ಚೈತನ್ಯವುಳ್ಳವನು ; ಪ್ರತಿಭಾವಂತ; ಧೀಮಂತ: "ಪ್ರಗಲ್ಭಃ, ಪ್ರತಿಭಾನ್ವಿತಃ– ೨ ಆಗಾಗ್ಗೆ ಹೊಸ ಹೊಸದಾಗಿ ಪ್ರಕಾಶಿಸುವ ಪ್ರಜ್ಞೆಯುಳ್ಳವನ ಪೆಸರು" (ನಿಘಂಟು. ೩೨೯). ೫. ಧೈರ್ಯಶಾಲಿ. [ಸಂ.]

**ಪ್ರತಿಭಾವಂತ** (ಗು). ೧.=ಪ್ರತಿಭಾನ್ವಿತ ೩ : ನೀನು ಶಿಶ್ಯನನ್ನು ಅನುಸರಿಸಲು ಅವನೇನಂಥ ಪ್ರತಿಭಾವಂತವಿದ್ಯಾರ್ಥಿಯೇ ? (ಕಾಲಚು. ೯೨); ಪಾಶ್ಚಾತ್ಯವೈಜ್ಞಾನಿಕಸಂಸಿದ್ಧಿಗಳು . . . ಭಾರತೀಯ ಪ್ರತಿಭಾವಂತ ತರುಣರನ್ನು ಆಕರ್ಷಿಸಿದವು (ಪುಣ್ಯಕ. ೦೦೭ ಪೀಠಿ). (ನಾ). ೨.=ಪ್ರತಿಭಾನ್ವಿತ ೪ : ನಿಜವಾದ ಪ್ರತಿಭಾವಂತನ ಸೃಷ್ಟಿ ಎಲ್ಲವೂ ಸೌಂದರ್ಯವಾಗುತ್ತದೆ (ಗೌಂಪ. ೭೦). [ಸಂ. ಪ್ರತಿಭಾವತ್]

**ಪ್ರತಿಭಾವತ್ವ** (ನಾ). ಪ್ರತಿಭೆಯನ್ನು ಹೊಂದಿರುವಿಕೆ : ಪ್ರತಿಭಾವತ್ವಮುಮಕೃತಕಚತುರತೆಯುಂ . . . ತರ್ಕಂ ಪ್ರತೀತಿಯಂ ವಾಗ್ವಿದಗ್ಧತಾನಿಪುಣತೆಯೊಳ್ (ಕವಿರಾ. ೧-೧೧). [ಸಂ.]

**ಪ್ರತಿಭಾವನೆ** (ನಾ). ಬೇರೆಯ ಭಾವನೆ,– ಅಭಿಪ್ರಾಯ : ನೆವದ ತಪವಲ್ಲದಲೆ ಮತ್ತಿನ್ನವಗೆ ಪ್ರತಿಭಾವನೆಗಳಿಲ್ಲದೆ ತವಗೆ ತಾ ದೇವಾಗಿ ಪಡೆದನು ಕೇವಲಜ್ಞಾನ (ಭಾಕ್ಪು. ೦೨-೩೦). [ಸಂ. ಪ್ರತಿಭಾವನ]

**ಪ್ರತಿಭಾಶಾಲಿ** (ನಾ). = ಪ್ರತಿಭಾನ್ವಿತ ೪: ಸ್ಕಾಟ್ ಎಡಿಸನ್ ಇವರು ಬಾಲ್ಯದಲ್ಲಿ ಮಂಕುದಿಣ್ಣೆಗಳಾಗಿದ್ದರು. ಅನಂತರ ಪ್ರತಿಭಾಶಾಲಿಗಳೆನಿಸಿದರು (ಶಿಕ್ಷಣ. ೩೦೩); ಪ್ರತಿಭಾಶಾಲಿಯಾದ ಈ ಲೇಖಕ ಆ ವೇಳೆಗಾಗಲೇ ಕೆಲವು ಧ್ವನಿತತ್ವಗಳನ್ನು ಕುರಿತು ಪ್ರಸ್ತಾಪಿಸುತ್ತಾನೆ (ದ್ರಾವಿಡ. ೦೩ ಟಿಪ್ಪಣಿ). [ ಸಂ. ಪ್ರತಿಭಾಶಾಲಿನ್ ]

**ಪ್ರತಿಭೂ** (ನಾ). ಹೊಣೆಗಾರ ; ಜಾಮೀನುದಾರ :"ಪ್ರತಿಭೂಃ, ಲಗ್ನಕಃ – ಈ ೨ ಹೊಣೆ(ಗಾಱು)" (ಹಲಾಯು. ೩೨-೨೨೩); ಪ್ರತವ

ಸುಸ್ಥಿರವಾಗೆ ನಿನ್ನೊಳು ವ್ಯಾಪಿತವಡೆಯುದರ ಸುದತಿಯರು ನಿಶ್ಚಿತದಿ ನಿನಗಾಗುವವರು ನಾನೀ ವಿಷಯದೊಳ್ ಪ್ರತಿಭೂ (ಸೌಶಂಡ. ೦೦-೬೩). [ಸಂ.]

**ಪ್ರತಿಭೂತ್ವ** (ನಾ). ಹೊಣೆಗಾರಿಕೆ; ಜವಾಬ್ದಾರಿ: ನನಗಪ್ಸರೆಯರ್ಕಳೊಳ್ ಅವರಿಂ ಫಲಮಿಲ್ಲಾಗೆ ಬಿಟ್ಟೆಂ ತ್ವತ್ಪ್ರತಿಭೂತ್ವಮಂ (ಸೌಶಂಡ. ೦೨-೦೩). [ಸಂ.]

**ಪ್ರತಿಭೆ** (ನಾ). ೧. ಹೊಳಪು; ಕಾಂತಿ; ಪ್ರಕಾಶ "ಪ್ರತಿಭೆ" ಎಂಬ ಶಬ್ದದ ಅಕ್ಷರಾರ್ಥ "ಹೊಳಹು" (ಭಾರತಿಶಾ. ೦೬೨). ೨. ಪ್ರತಿಬಿಂಬ. ೩. ಬುದ್ಧಿಶಕ್ತಿ; ಜ್ಞಾನಬಲ: ಪ್ರತಿಭೆಗೆ ಫಲವುಂಟೆವಿನ ಗತಿ ಗತಿಗೆ ಫಲಂ ವಿಷಯವಿರತಿ (ಕೃಕೃಶ. ೦೩-೩೯); ಶಿವಾಜಿಯು ಪುತ್ರನಾದ ಶಂಭುವಿಗೆ ತಂದೆಯ ಪ್ರತಿಭೆಯಾಗಲಿ ನೀತಿಶಕ್ತಿಯಾಗಲಿ ಇರಲಿಲ್ಲ (ಹುಣ್ಸೂರ. ೦೦೩ ಟೀಕೆ); ಅವನ ಪ್ರತಿಭೆಗೆ, ಪಾಂಡಿತ್ಯಕ್ಕೆ ದೊರೆತ ಬಹುಮಾನ, ಪ್ರಮಾಣಪತ್ರಗಳಿಗಂತೂ ಲೆಕ್ಕವಿಲ್ಲ (ಹೊಸಕ್ಕ. ೩೭). ೪. ಕವಿಯು ಕಾವ್ಯವನ್ನು ಬರೆಯಲು ಪ್ರಧಾನಸಹಾಯಕವಾದ, ಹೊಸಹೊಸ ಭಾವನೆಗಳನ್ನು ಮೂಡಿಸುವ ಒಂದು ಬಗೆಯ ಪ್ರಜ್ಞೆ ಯು ಅಥವಾ ಭಾವನೆಯ ಶಕ್ತಿವಿಶೇಷ: ಪ್ರತಿಭೆ ನಿಸರ್ಗಮುಂಟು ಕೆಲರೊಳೆದು ಗಳೊಳ್ ಕೆಲರ್ದುಂಟು ಬಳ್ಕೆ (ಗದಾಯು. ೦-೯೦); ಪ್ರತಿಭೆಯುಮಭ್ಯಾಸಮುಂ ವಿದ್ವತ್ಸೇವೆಯುಂ ಕಾವ್ಯಪರಿಚಯಮುಮಂ ಕವಿತೆಗೆ ಕಾರಣಂ (ಶಮದ. ೦೪೯ ಪ್ರಯೋ); ಶಬ್ದಸಮೂಹ, ಅರ್ಥಸಂಪತ್ತು, ಅಲಂಕಾರವೈಚಿತ್ರ್ಯ, ಉಕ್ತಿಕ್ರಮ ಮುಂತಾದವು ಮನಸ್ಸಿನಲ್ಲಿ ಪ್ರತಿಫಲಿಸುವಂತೆ ಮಾಡತಕ್ಕದ್ದೇ ಪ್ರತಿಭೆ ಎಂದು ರಾಜಶೇಖರನೂ ಹೇಳಿದ್ದಾನೆ (ಕೃಶಿಶಿ. ೦೬೪ ಅಡಿಟಿ). ೫. ದಿಟ್ಟತನ; ಧೈರ್ಯ. ೬. [ಯೋಗ] ಸಮಾಧಿಗೆ ಪ್ರತಿಬಂಧಕವಾಗಿರುವ ಕೇವಲ ಲೌಕಿಕಸಿದ್ಧಿ: ಮತಿಯುತನೆ ಪ್ರತಿಭಾಶ್ರವಣವೇಣತಿಶಯದ ವಾರ್ತಾದರುಶನಗಳು ... ಬ್ರಹ್ಮಾಭ್ಯಾಸಕಾಲದಲಂತರಾಯಗಳು (ಅಮೃತ. ೬-೯೯);" ಪ್ರತಿಭಾ – ಪ್ರತಿಭಾದ್ವಾಸರ್ವಂ" ಎಂಬ ಯೋಗಸೂತ್ರದಂತೆ ಪ್ರತಿಭೆಯೆಂಬ ಶಕ್ತಿಯಿಂದ ಎಲ್ಲಾ ತಿಳಿವಳಿಕೆಯೂ ಆಗುವುದು ... ಯೋಗಸೂತ್ರದಂತೆ ಇವು ಸಮಾಧಿಗೆ ಅಡ್ಡಿಗಳು. ವ್ಯವಹಾರದಲ್ಲಿ ಸಿದ್ಧಿಗಳು (ಅಮೃತ. ೬-೯೯ ಟೀಕೆ). [ಸಂ. ಪ್ರತಿಭಾ]

**ಪ್ರತಿಭೋಗ** (ನಾ). ಸುಖಾನುಭವ; ಉಪಭೋಗ: ರತಿಕಾಮದಂಪತಿಗಳಿಂದೆ ಸಮರಿಲ್ಲೆಂದು ಕ್ಷಿತಿಯೊಳಗೆ ಸಾರುತಿರೆ ರೂಪು ಗುಣಯವ್ವನ ಪ್ರತಿಭೋಗವೈಶ್ವರ್ಯದೊಳೊಂದು ಕೊರತೆಯಿಲ್ಲ (ನಲಚರಿ. ೭-೨೩). [ಸಂ.]

**ಪ್ರತಿಮ** (ಗು). ೧. ಸಾಟಿಯಾದ; ಸಮಾನವಾದ: ಅಮೃತಾಂಭೋರಾಶಿಪೂರಪ್ರತಿಮನಿಜತಪಸ್ಸಂಚಯಂ ಪರ್ವಿತೋ ಲೋಕಮಂ (ಕಾದಂಪೂ. ೬೩೯). 'ಅಪ್ರತಿಮ' ಹೋ. (ನಾ). ೨. ಸಮಾನವಾದುದು; ಸದೃಶವಾದುದು: "ಸದೃಕ್ ... ಪ್ರತಿಮಂ, ಪ್ರಕಾರಂ, ತುಲ್ಯಂ, ಸಮಂ, ಸನ್ನಿಭಂ– ಈ ೧೧ ಸರಿ" (ಹಲಾಯು.೦೦೩-೯). ೩. ಸಮಾನನಾದವನು; ಸಾಟಿಯಾದವನು: ಅಖಿಂಡಭೂಮಂಡಲೈಕಪತಿ ದಕ್ಷಿಣದೊಳ್ ಸುಖಿಮರಸುಗೆಯ್ಯೆ ಕುರುಕುಲಶಿಖಾಮಣಿ ಪ್ರತಿಮನಾಗಿ ನೃಪನ ಪ್ರತಿಮಂ (ಶಾಂತಿಪು. ೯-೦೬೦); ಪಾಂಡವಪ್ರತಿಮನಲ್ಲನೆ ಮಂಡಲಸಾಮಿ ಲೋಕದೊಳ್ (ಎಕ. IV, ನಾಗಮಂ. ೪೭-೩೩; 1199); ಗೋದಾವರಿಯ ಮಿಂದರರ್ಘ್ಯಮೆತ್ತಿದರಿನಗೆ, ವಂಶಾಧಿದೇವತಾಪ್ರತಿಮನಿಗೆ (ಶ್ರೀರಾಮಪ. ೨೨೯-೩೦). ೪. ಸಮಾಸದ ಕೊನೆಯಲ್ಲಿ ಸದೃಶವಾದ, ಸಮಾನವಾದ ಎಂಬರ್ಥದಲ್ಲಿ ಸೇರುವ ಶಬ್ದ. [ಸಂ.]

**ಪ್ರತಿಮಧ್ಯಮ** (ನಾ). [ಸಂಗೀತ] ಶುದ್ಧಮಧ್ಯಮ ಮತ್ತು ಪ್ರತಿಮಧ್ಯಮ ಎಂಬ ಮಧ್ಯಮಸ್ವರದ ಭೇದಗಳಲ್ಲಿ ಒಂದು; ಉನ್ನತ ಶ್ರುತಿ ಸಂಖ್ಯೆಯ ಮಧ್ಯಮಸ್ವರ: ಆಲಾಪನೆಯಲ್ಲಿ ಪ್ರತಿಮಧ್ಯಮವನ್ನು ಅಂಶಸ್ವರವನ್ನಾಗಿ ತೆಗೆದುಕೊಂಡು, ಅದರ ಸುತ್ತ ಇಬ್ಬರೂ ರಾಗದ ಸೊಬಗಿನ ಚಿತ್ತಾರವನ್ನು ಸುಂದರವಾಗಿ ಹೆಣೆದರು (ಸಂಗೀತ.೦೦೦). [ಸಂ.]

**ಪ್ರತಿಮಲ್ಲ** (ನಾ). ಎದುರಾಳಿಯಾದ ಜಟ್ಟಿ: ಪ್ರತಿಮಲ್ಲರ್ ಗಿರಿಕಲ್ಪನೆಂದಿತರರೆಲ್ಲರ್ ಬಾಲನೆಂದು ... ಈಕ್ಷಿಸಲ್ (ಜಗದ. ೬-೩೬). [ಸಂ.]

**ಪ್ರತಿಮಾತಂತ್ರ** (ನಾ). ಕವಿಯು ಪ್ರಯೋಗಿಸುವ ರೂಪಕವಿಧಾನ: ಈ ಪ್ರತಿಮಾತಂತ್ರವನ್ನು ತಿಳಿದು ಅರ್ಥ ಮಾಡಿಕೊಳ್ಳುವ ರೂಢಿಯಿದ್ದವರಿಗೆ ಇದರಿಂದ ಹೆಚ್ಚಿನ ಆನಂದವಾಗುತ್ತದೆ (ಪವ್ಯಕಾ. ೪೩). [ಸಂ.]

**ಪ್ರತಿಮಾತು** (ನಾ). ಮಾತಿಗೆ ಬದಲಾಗಿ ಆಡುವ ಮಾತು; ಎದುರುಮಾತು: ಯಶೋದೆ ಪ್ರತಿಮಾತು ಹೇಳಲಿಲ್ಲ (ಪಾಶ್ಚಾತ್ಯ. ೨೨೪); ಹಾಗಾದರೆ ಯೇಸುವನ್ನು ಏನು ಮಾಡಲಿ ಎಂದು ಆತನು ಕೇಳಿದ ಪ್ರತಿಮಾತಿಗೆ, ಅವನನ್ನು ಶಿಲುಬೆಗೆ ಹಾಕು! ಎಂದು ಅವರು ಮರಳಿಯೂ ಕೋಲಾಹಲಿಸಿದರು (ಸೂಕ್ತಿಕಾ. VII, ಮುನ್ನುಡಿ). [ಪ್ರತಿ + ಮಾತು₁]

**ಪ್ರತಿಮಾನ** (ನಾ). ೧. ಹೋಲಿಕೆ; ಸಾದೃಶ್ಯ. ೨. ಸದೃಶವಾದುದು; ಸಮಾನವಾದುದು: ಅರವಿಂದಾಸ್ಯೆಯ ನೊಸಲ ಸಮಾನಂ ನಿರುಪಮಮರ್ಧೇಂದುಪ್ರತಿಮಾನಂ (ಸುಕುಮಾ. ೩-೩೦ ಕಗಳೆ); ರೌದ್ರರಸ ಕುಂಭಂ ಕುಂಭಮುಚ್ಚೈಶ್ಶಿಲಾಪ್ರತಿಮಾನಂ ಪ್ರತಿಮಾನಂ ... ನಾಗಾರಿಚ್ಛದಾಕಾರದಿಂ ಶ್ರುತಿಗಳ್ ವಿಶ್ರುತಿ ಮಾಟೆ ಬೀಜಿದವೊದೀ ಸ್ತಂಬೇರಮಂ ಬೀರಮಂ (ಜಗದ. ೬-೩೦). ೩. ಪ್ರತಿಬಿಂಬ; ಪ್ರತಿಕೃತಿ: "ಪ್ರತಿಬಿಂಬಂ ... ಪ್ರತಿಮಾನಂ, ಪ್ರತಿಕೃತಂ– ಈ ೯ ಪ್ರತಿಬಿಂಬದ ಪೆಸರ್" (ಹಲಾಯು. ೨೦-೦೩೦); ಪ್ರತಿ ತನಗಿಲ್ಲ ಸಲ್ಲಲಿತರೂಪದಿನೀ ತ್ರಿಜಗಂಗಳಂಗನಾತತಿಯೊಳಿದೊಂದೆ ತಾಂ ಪ್ರತಿ ನಿಜಪ್ರತಿಮಾನಂ (ಶಾಂತೀಶ್ವ. ೪-೨೪೩). ೪. ಒಂದು ಆಕಾರಕ್ಕೆ ಸಮಾನವಾಗಿರುವ ಪ್ರತಿಮೆ, ವಿಗ್ರಹ, ಚಿತ್ರ ಮೊದಲಾದುವು: "ಪ್ರತಿಮಾನಂ, ಪ್ರತಿಬಿಂಬಂ ... ಪ್ರತಿನಿಧಿ –೮ ವಿಷ್ಣು ಮೊದಲಾದವರ ಆಕಾರಗಳಿಗೆ ಸಮನಾಗಿ ಶಿಲಾದಿಗಳಿಂದ ಮಾಡಿದ ಪ್ರತಿಮೆ ಹೆಸರು" (ಸಿದ್ಧಾಂತಿ. ೩೦೭). ೫. ಸಮಾನನಾದ ವ್ಯಕ್ತಿ; ಸರಿಸಾಟಿಯಾದ ಮನುಷ್ಯ: ಪ್ರತಿಮಾನಂ ಶರವಿದ್ಯೆಯೊಳಿತರರ್ ತನಗಿಲ್ಲೆನಿಪ್ಪನಲ್ಲಿ ಕುರಂಗಂ (ಪಾರ್ಶ್ವಪು. ೦೮-೬೦). ೬. ಆನೆಯ ಎರಡು ದಂತಗಳ ಮಧ್ಯಪ್ರದೇಶ, –ಕುಂಭಸ್ಥಳದ ಕೆಳಭಾಗ: "ದಂತವೆರಡರ ನಡು ಪ್ರತಿಮಾನಮಕ್ಕುಂ" (ಮಂಗರಾ. ೪೬-೩); ರೌದ್ರರಸಕುಂಭಂ ಕುಂಭಮುಚ್ಚೈಶ್ಶಿಲಾಪ್ರತಿಮಾನಂ ಪ್ರತಿಮಾನಂ ... ನಾಗಾರಿಚ್ಛದಾಕಾರದಿಂ ಶ್ರುತಿಗಳ್ ವಿಶ್ರುತಿಮಾಟೆಬೀಜಿದವೊದೀ ಸ್ತಂಬೇರಮಂ ಬೀರಮಂ (ಜಗದ. ೬-೩೦); ಏನ ಹೇಳುವೆ ಗಜಘಟಾಪ್ರತಿಮಾನದಲಿ ಕೋದಂಬುಗಳು ಹಿಂಡಾನೆಗಳನೇಳಿಂಟನೊದೆದೋಡಿದವು ಪಂ(ಪೇ) ಚಕವ (ಕುಮ್ಯಾಕ. ೩-೧೫); ಕೊಳದೊಳೆ ಕಿಳ್ತು ಪಂಕರುಹಮಂ ಪ್ರತಿಮಾನದೊಳೊಟ್ಟಿಕೊಂಡು ... ಕರೇಣುವಿರ್ದೆಡೆಗದೇಂ ತಳರ್ದತ್ತೊ ಮದಾಂಧಸಿಂಧುರಂ (ಶಬಶಂ. ೩-೪೨). [ಸಂ.]

**ಪ್ರತಿಮಾನಿಷ್ಠ** (ಗು). ೧. ನಿರ್ದಿಷ್ಟವಾದ ಕಲ್ಪನಾಚಿತ್ರಗಳ ಮೂಲಕ ಭಾವವನ್ನು ಸ್ಪಷ್ಟಪಡಿಸುವ: ಪ್ರತಿಮಾನಿಷ್ಠ ಆಂಗ್ಲಕವನಗಳಲ್ಲಿಯೂ ಇಂಥ ಪ್ರತೀಕಗಳ ಆರಾಧನೆ ನಡೆದಿತ್ತು (ಪವ್ಯಕಾ. ೩೨). 'ಪ್ರತಿಮಾನಿಷ್ಠ ಕವಿ' ಪರಾ. (ನಾ). ೨. ನಿರ್ದಿಷ್ಟವಾದ ಕಲ್ಪನಾಚಿತ್ರಗಳ ಮೂಲಕ ಭಾವವನ್ನು ಸ್ಪಷ್ಟಪಡಿಸುವುದು: 'ಜಾರ್ಜಿಯನ್', 'ಪ್ರತಿಮಾನಿಷ್ಠ' (Imagist) ಮೊದಲಾದ ಶತಮಾನದ ಆದಿಯಲ್ಲಿಯ ಸಣ್ಣಪುಟ್ಟ ಸಾಹಿತ್ಯಕಚಳುವಳಿಗಳು ನವ್ಯಮಾರ್ಗದಲ್ಲಿಯೇ ಲಯವಾಗಿ ಸಫಲವಾದವು (ಪವ್ಯಕಾ. ೨೭). [ಸಂ.]

**ಪ್ರತಿಮಾನಿಷ್ಠಕವಿ** (ನಾ). ನಿರ್ದಿಷ್ಟವಾದ ಕಲ್ಪನಾಚಿತ್ರಗಳ ಮೂಲಕ

ಭಾವವನ್ನು ಸ್ಪಷ್ಟವಾಗಿ ವ್ಯಕ್ತಪಡಿಸಬೇಕೆಂಬ ಆಧುನಿಕಮಾರ್ಗದ ಕವಿ: ಪ್ರತಿಮಾನಿಷ್ಠಕವಿ (Imagist-poet)ಯು ಸಮರ್ಥಿಸುವ ಏರಿಳಿತವೂ ತೊಡಕವೂ ಎಚ್. ಡಿ. ಎಂಬ ಕವಯಿತ್ರಿಯ ಕೃತಿಗಳಲ್ಲಿ ಉತ್ತಮವಾಗಿ ಕಾಣುತ್ತವೆ (ಗೊತ್ತು.ಗು. ೦೦೯). [ಸಂ.]

**ಪ್ರತಿಮಾಭಾಷಣ** (ನಾ). ವಿಗ್ರಹ, ಪ್ರತಿಮೆ ಮೊದಲಾದುವುಗಳೊಂದಿಗೆ ಮಾತನಾಡುವುದು; ತಂತ್ರವಾರ್ತಿಕ ಮುಂತಾದ ಗ್ರಂಥಗಳಲ್ಲಿ ಹೇಳಿರುವ ಒಂದು ಬಗೆಯ ಕುತ್ಸಿತಸಿದ್ಧಿ: ಪಾಷಂಡಿಸಹವಾಸ, ಪಾಷಾಣಪಾಟನ, ಪ್ರತಿಮಾಭಾಷಣ, ವೃಕ್ಷಶೋಷಣ ಮೊದಲಾದ ಕಪಟ ಕುತ್ಸಿತಸಿದ್ಧಿಗಳಿಂದ ಸಾಧುಜನವಂಚನೆ ಮೊದಲಾದುವುಗಳು . . . ಗ್ರಂಥಗಳಲ್ಲಿ ವಿಸ್ತರಿಸಲ್ಪಟ್ಟಿರುವುವು (ಹಿಂದಸಾ. ೦೫೨). [ಸಂ.]

**ಪ್ರತಿಮಾಭೋಗ** (ನಾ). (?) : ಪ್ರಾಣಾವಸಾನಸಮಯದೊಳು ಅನಾದ್ಯನುಸ್ಮೃತ ಸುಕೃತ ದುಷ್ಕೃತಪರಿಪಾಕ ವೈಚಿತ್ರ್ಯಾನುಸಾರವಾಗಿ ಚರಮವೃತ್ತಿಯೊಳಗಾವ ಭಾವವು ಸ್ಫುರಿಸುವುದೋ ಅಂತಾ ಜನ್ಮ ಪ್ರಾಪ್ತಿಯಹುದೆಂದು ನರಭೋಗ ಶಿಲಾಭೋಗ ಪ್ರತಿಮಾಭೋಗ . . . ದ್ರುಮಭೋಗಾದಿಗಳ ವೈಚಿತ್ರ್ಯಮುಳ್ಳ ಲೋಕದೃಷ್ಟಾಂತಗಳಿಂ (ಶಿವೇಶ. ೦೪೬). [ಸಂ.]

**ಪ್ರತಿಮಾಮಾನ** (ನಾ). ಪ್ರತಿಮೆಯ ಅಳತೆ,—ಪ್ರಮಾಣ : ಪ್ರತಿಮೆಗಳನ್ನು ಮಾಡಲಿಚ್ಛಿಸುವವರು ಪ್ರತಿಮಾಮಾನಲಕ್ಷಣವನ್ನು . . . ಅರಿತಿರಲೇಬೇಕು (ಭಾರತ. ೩೦೭). [ಸಂ.]

**ಪ್ರತಿಮಾಯೋಗ** (ನಾ). [ಜೈನ] ಒಂದು ಬಗೆಯ ತಪಸ್ಸು ; "ಆಹಾರತ್ಯಾಗ ಮಾಡಿ ಒಂದು ವರ್ಷದವರೆಗೆ ಒಂದೇ ಸ್ಥಳದಲ್ಲಿ ನಿಂತುಕೊಂಡು ತಪ ಮಾಡುವುದು. ಅದರೊಳಗೆ ಅಭ್ರಾವಕಾಶಯೋಗ, ಆತಾಪನಯೋಗ, ವರ್ಷಾಯೋಗವೆಂದು ಮೂರು ಭೇದಗಳಿವೆ" (ಅಂತು. ಜೈನಪಾರಿಭಾಷಿಕ ಶಬ್ದಕೋಶ. ೭೪) : ಅಂತು ಜೈನದೀಕ್ಷೆಯಂ ಕೈಕೊಂಡು . . . ಏಕವಿಹಾರಿಯಾಗಿ ಸಂವತ್ಸರಾವಧಿವರಂ ಪ್ರತಿಮಾಯೋಗದೊಳ್ ನಿಲೆ (ಆದಿಪು. ೦೪-೦೩೯ ವ) ; ತಪಶ್ಚರಣಪರಾಯಣರಾಗಿ ಕೈಲಾಸಾಚಲದೊಳ್ ಅಚಲಿತಪ್ರತಿಮಾಯೋಗದೊಳಿರ್ದು (ಸುಕುಮಾ. ೦೨-೬೩ ವ) ; ಪ್ರತಿಮಾಯೋಗನಿಯುಕ್ತರೆಂಟುದಿವಸಂ ಕೈಯೆತ್ತಿಮೆಂದಿರ್ದರ್ (ಶಂಖಾಪು. ೦೦-೫೬). [ಸಂ.]

**ಪ್ರತಿಮಾಯೋಗಿ** (ನಾ). ಪ್ರತಿಮಾಯೋಗದಲ್ಲಿ ನಿರತನಾದವನು : ಇಡೀ ಮೆಯ್ಯೇ ಸ್ತಬ್ಧವಾಗಿ ನೋಟಕರಿಗೊಂದು ಪ್ರತಿಮಾಯೋಗಿಯಾಗಿ ಭಾಸವಾದನವನು (ವೀರಬಂ. ೩೬). [ಸಂ. ಪ್ರತಿಮಾಯೋಗಿನ್]

**ಪ್ರತಿಮಾರೂಪ** (ನಾ). = ಪ್ರತಿಮಾಯೋಗ : ಪ್ರತಿಮಾರೂಪವಮೂಳಾತಿಪ್ರತಿರೂಪದ ಗರ್ವಪರ್ವತಾರೂಢತೆಯಂ ಶತಖಂಡಂ ಮಾಡಿದುವು (ಶಾಂತಿಪು. ೦೨-೬೨). [ಸಂ.]

**ಪ್ರತಿಮಾರೋಹಣ** (ನಾ). ದೇವತಾಪ್ರತಿಮೆಗಳನ್ನು ಪೀಠಗಳಲ್ಲಿ ಪ್ರತಿಷ್ಠಿಸುವುದು; ವಿಗ್ರಹಪ್ರತಿಷ್ಠೆ : ವ್ರತ, ದೀಕ್ಷಾವಿಧಿ, ಕುಂಡಮಂಡಳವಿಧಾನ, ಲಿಂಗಪೀಠಕ್ರಮ, ಪ್ರತಿಮಾರೋಹಣ . . . ಇಂತಹ ಆಗಮಶಾಸ್ತ್ರವಿದ್ಯಾವಳಿಗಳನ್ನು ಅರಿತವರಾಗಿದ್ದರಂತೆ (ಕರ್ನಾಸಂ. ೨೨೬). [ಸಂ.]

**ಪ್ರತಿಮಾಲಕ್ಷಣ** (ನಾ). ೧. ಪ್ರತಿಮೆಗಳ ಸ್ವರೂಪ ; ವಿಗ್ರಹಗಳ ಲಕ್ಷಣ. ೨. ಪ್ರತಿಮೆಗಳ ಸ್ವರೂಪವನ್ನು ವಿವರಿಸುವ ಆಗಮಶಾಸ್ತ್ರದ ಒಂದು ಪ್ರಕರಣ : ಆಗಮಶಾಸ್ತ್ರದ ಪ್ರತಿಮಾಲಕ್ಷಣದಲ್ಲಿ ಎಲ್ಲಾ ಮೂರ್ತಿಗಳ ಲಕ್ಷಣವನ್ನೂ ಹೃದಯಂಗಮವಾಗಿ ವರ್ಣಿಸಿದ್ದಾರೆ (ಭಾರದ. ೬೭). [ಸಂ.]

**ಪ್ರತಿಮಾವಿಧಾನ** (ನಾ). ಆನಂದಾತಿಶಯವನ್ನುಂಟುಮಾಡುವ ಪ್ರತಿಮೆಗಳನ್ನು ಕಾವ್ಯದಲ್ಲಿ ಉಪಯೋಗ ಮಾಡುವ ರೀತಿ; ರಸ ಭಾವಗಳೆರಡನ್ನೂ ಹೊಂದಿಸುವ ಒಂದು ಕಾವ್ಯರಚನಾಕ್ರಮ : ವರಕವಿಯು ಕಾವ್ಯಸತ್ಯೆಯೊಳಾತ್ಮರಸಸತ್ಯಮಂ ಪ್ರಕಟಿಸುವನೀ ಬ್ರಹ್ಮನನ್ಯವಿಧದಿಂದೆಮ್ಮ ಮರ್ತ್ಯಪೃಥಿವೀತತ್ತ್ವದೊಳ್ . . . ಪ್ರತಿಮಾವಿಧಾನದಿಂ ರಸಖುಷಿ ಪ್ರತಿಭಾನಮಾತ್ರಸಂವೇದ್ಯಮಂ (ಶ್ರೀರಾಮಾ. ೩೩-೭) ; ಆ ಕತೆಗಳ ಭಾಷೆಯಲ್ಲಿಯ ಆಕ್ರೋಶ ಮತ್ತು ಪ್ರತಿಮಾವಿಧಾನದ ಜಟಿಲತೆಗಳು ಈ ತಪ್ಪುತಿಳುವಳಿಕೆಯ ಸೂಕ್ಷ್ಮತೆಯನ್ನು ಮರೆಸಿಬಿಡುತ್ತವೆ (ಹೊಸಕ. ೨೪೬). [ಸಂ.]

**ಪ್ರತಿಮಾಶಾಸ್ತ್ರ** (ನಾ). ಪ್ರತಿಮೆ, ವಿಗ್ರಹಗಳ ರಚನಾಕ್ರಮವನ್ನು ಕುರಿತು ಬರೆದಿರುವ ಶಾಸ್ತ್ರ : (Iconology. ಇಂಕಪ.). [ಸಂ.]

**ಪ್ರತಿಮಾಶಿಲ್ಪ** (ನಾ). ೧. ಪ್ರತಿಮೆಗಳನ್ನು ರಚಿಸುವ ಕಲೆ. ೨. ಒಂದು ವಿಷಯಂವನ್ನು (ಕಲ್ಲು, ಕಾಗದ, ಬಟ್ಟೆ ಮುಂತಾದುವುಗಳ ಮೇಲೆ) ಚಿತ್ರಗಳ ವಿನ್ಯಾಸದಿಂದ ತಿಳಿಸುವುದು : "ಒಂದು ವಿಷಯವನ್ನು ಚಿತ್ರಗಳಿಂದ, ರೇಖೆಗಳಿಂದ, ಉದಾಹರಿಸುವುದು : ಚಿತ್ರೋದಾಹರಣೆ; ಪ್ರತಿಮಾಶಿಲ್ಪ" (Iconography. ಇಂಕಪ). [ಸಂ.]

**ಪ್ರತಿಮಾಸೃಷ್ಟಿ** (ನಾ). = ಪ್ರತಿಮಾವಿಧಾನ : ಅರ್ಥವನ್ನೆಲ್ಲ ಪ್ರತಿಮಾಸೃಷ್ಟಿಯಲ್ಲಿ ಬಚ್ಚಿಡಲು ನವ್ಯಕವಿಯು ಹವಣಿಸುವಂತೆ ನಮಗೆ ತೋರುತ್ತದೆ (ನವ್ಯಕಾ. ೪೪). [ಸಂ.]

**ಪ್ರತಿಮಿತ** (ನಾ). ೧. ಅನುಕರಿಸಿದುದು; ಅನುಕರಣೆ ಮಾಡಿದುದು. ೨. ಹೋಲಿಸಿದುದು; ತುಲನೆಮಾಡಿದುದು. ೩. ಪ್ರತಿಬಿಂಬಿತವಾದುದು. ೪. ಸ್ಥಾಪಿತವಾದುದು. ೫. ವ್ಯಕ್ತಿಯ ಆಕಾರದಲ್ಲಿ ನಿರ್ಮಿಸಿದ ಪ್ರತಿಮೆ : ಪಂಚಧ್ಯಾನಿಬುದ್ಧರು . . . ಸಾಮಾನ್ಯವಾಗಿ ಪ್ರತ್ಯೇಕವಾಗಿ ಮೂರ್ತೀಕೃತರಾಗುವುದಿಲ್ಲ. ಎಲ್ಲರೂ ಒಂದೆಡೆ ಪ್ರತಿಮಿತರಾಗುವರು (ಭಾರತ. ೩೦೪). [ಸಂ.]

**ಪ್ರತಿಮಿಸು** (ಕ್ರಿ). (ಕಣ್ಣಿಗೆ ಕಟ್ಟುವಂತೆ) ಚಿತ್ರೀಕರಿಸು; ರೂಪಿಸು : ಕುವೆಂಪು ಅವರು 'ಈ ಚೈತನ್ಯದ ಚಿರನಿಧಿ'ಯನ್ನು 'ಕಲಾಸುಂದರಿ'ಯಾಗಿ ಪ್ರತಿಮಿಸಿದ್ದಾರೆ (ಕಾಂದಸ. ೩೫).; ಭರತೇಶವೈಭವದಲ್ಲಿ ಅಲ್ಲಲ್ಲಿ ಕವಿಗೆ ಸಂಪ್ರದಾಯದತ್ತವಾದ ಭರತನ ಕಥೆಗೂ ತಾನು ಪ್ರತಿಮಿಸಲಿರುವ ದರ್ಶನಕ್ಕೆ ಪಾತ್ರವಾಗಿರುವ ಭರತನ ಕಥೆಗೂ ಉದ್ದಕ್ಕೂ ಒದಗಿರುವ ಎಷ್ಟೋ ಸಂದಿಗ್ಧತೆಗಳೂ ಆಭಾಸಗಳೂ ನಿವಾರಣೆಯಾಗಬಹುದಾಗಿತ್ತು (ಹಂಶೀ. ೦೩೩). [ಪ್ರತಿಮೆ + – ಇಸು]

**ಪ್ರತಿಮುಕ್ತ** (ಗು). ೧. ಬಿಡುಗಡೆ ಹೊಂದಿದ. ೨. ಧರಿಸಿದ; ತೊಟ್ಟ. ೩. ಬಂಧಿಸಿದ. ೪. ಹಿಂತಿರುಗಿದ; ಹಿಂದಕ್ಕೆ ಹೋದ. ೫. (ಯುದ್ಧದ) ಆಯುಧ ಹಾಗೂ ಉಡುಪುಗಳನ್ನು ತೊಟ್ಟು ಸಜ್ಜಾದ,—ಸನ್ನದ್ಧವಾದ. ೬. ಎಸೆದ; ಒಗೆದ. (ನಾ). ೭. ಬಿಡುಗಡೆ ಹೊಂದಿದುದು. ೮. ಉಡುಪುಗಳನ್ನು ಹಾಕಿಕೊಂಡವನು; ಪೋಷಾಕು ತೊಟ್ಟವನು : ''ಆಮುಕ್ತಃ, ಪ್ರತಿಮುಕ್ತಃ, ಪಿನದ್ಧಃ, ಅಪಿನದ್ಧಃ—ಬಟ್ಟೆಗಳನ್ನು ತೊಟ್ಟುಟ್ಟು ಕಟ್ಟಿಕೊಂಡವನ ಹೆಸರುಗಳು'' (ಸಿದ್ಧಾಂತಿ. ೨೩೬). ೯. (ಯುದ್ಧಕ್ಕಾಗಿ) ಆಯುಧ ಹಾಗೂ ಉಡುಪುಗಳಿಂದ ಸಜ್ಜಾದವನು. [ಸಂ.]

**ಪ್ರತಿಮುಖ** (ನಾ). ೧. ಎದುರುಮುಖವನ್ನು ಹೊಂದಿರುವುದು; ಅಭಿಮುಖವಾಗಿರುವುದು. ೨. ಎದುರುಗಡೆ; ಮುಂಭಾಗ : ದೂರದೊಳಂ ಪ್ರತಿಮುಖಾವಲೋಕನದೊಳಂ ವೀಪ್ಸೆಯೊಳಂ . . .' ಚಪಳತೆಯೊಳಂ ಪದಮನೆರಡು ನುಡಿಯುಚ್ಚರಿಪುದು (ಶಮದ. ೦೯೫ ವೃತ್ತಿ); ಉಗ್ರಭಾಷೆಯದೇಕೆ ಶಿವಶಿವ ವಿಗ್ರಹಪ್ರತಿಮುಖದ ವಿಷಮಾವಗ್ರಹದಲಿದು ಬೆಂದು ಹೋಗದೆ ಭರತಸಂತಾನ (ಕುಮ್ಯಾಸ. ೦೬-೩೨). ೩. ಹತ್ತಿರ; ಸಮೀಪ. ೪. [ಕಾವ್ಯಮೀ] ನಾಟಕಾದಿ ದೃಶ್ಯಕಾವ್ಯಗಳ ವಸ್ತುನಿರೂಪಣೆಯಲ್ಲಿ ಹೇಳಿರುವ ಐದು ಬಗೆಯ ಸಂಧಿಗಳಲ್ಲಿ ಎರಡನೆಯದು; ಕಾಣಿಸಿಕೊಂಡು ಮರೆಯಾದಂತಿರುವ

ಮೂಲಕಥಾಂಶವನ್ನು ಹೊರಪಡಿಸುವುದು : ಸವಸಂದ ಮುಖಂ ಪ್ರತಿಮುಖಮವಮರ್ಶಂ ಗರ್ಭಮಂತೆ ನಿರ್ವಹಣಮೆನಿಪ್ಪುವವೈದು ಸಂಧಿ ಯಕ್ಕುಂ (ಕಾವ್ಯಾಕ. ೯೩೭); ಮೇಲೆ ಹೇಳಿದ ಐದು 'ಅರ್ಥಪ್ರಕೃತಿ'ಗಳೂ ಐದು ಅವಸ್ಥೆಗಳೂ ಕ್ರಮವಾಗಿ ಸೇರಿದರೆ ವಸ್ತುವಿನಲ್ಲಿ ಮುಖ, ಪ್ರತಿ ಮುಖ, ಗರ್ಭ, ಅವಮರ್ಶ, ಉಪಸಂಹೃತಿ (ನಿರ್ವಹಣ) 'ಸಂಧಿ'ಗಳೆಂಬ ಐದು ವಿಭಾಗಗಳಾಗುತ್ತವೆ (ಸಂಕಾಟಿ. ೦೭). [ಸಂ.]

**ಪ್ರತಿಮುಖರ** (ನಾ). ನಾಯಕ; ಮುಂದಾಳು : ತದ್ವೇತ್ರಹಸ್ತಪ್ರತಿ ಮುಖರ ಪ್ರೋದ್ಗತಾಭೀಳಘೋಷಂ . . . ಸಭಾವಾಸವಕ್ತ್ರಂ (ಗಂಳ. ೩-೯). [ಸಂ.]

**ಪ್ರತಿಮೆ** (ನಾ). ೧. ಮರ, ಲೋಹ ಮೊದಲಾದುವುಗಳಿಂದ ಮಾಡಿದ ಮೂರ್ತಿ; ವಿಗ್ರಹ, ಬೊಂಬೆ ಮೊದಲಾದುವು : "ಅರ್ಚಾ, ಪ್ರತಿಮಾ- ಈ ೨ ಪ್ರತಿಮೆಯ ಪೆಸರ್" (ಕರ್ಣಾಟು. ೨೨-೦೫೦); ಅರಸನುಮಿರ್ವರು ಮನೆರಡು ಕಾಯ್ದು ಕರ್ಬೊನ್ನ ಪ್ರತಿಮೆಗಳನಪ್ಪವೇಟಿಮೆಂದು ತಳಾಜಂಗೆ ಬೆಸವೇಟ್ಟೊಡಂ (ವಡ್ಡಾರಾ. ೨೦-೨೧); ಪ್ರತಿಮೆಗಳಟ್ಟುತ್ತವು ಮೊಟಗಿದುದತಿ ರಭಸದೆ ಧಾತ್ರಿ (ಕಂಶಕಾ. ೧-೦೩೨); ಕೃಷ್ಣ ಶಿಶುಪಾಲರ ಮಹಾಸಂಗ್ರಾಮ ಮಧ್ಯದೊಳು . . . ಮಿಡುಕಿದವು ಪ್ರತಿಮೆಗಳು (ಕುವ್ಯಾಸ. ೦೦-೭೦). ೨. ಒಂದರಂತೆ ಒಂದು ಇರುವುದು ; ಹೋಲಿಕೆ ; ಸಾದೃಶ್ಯ. ೩. ಪ್ರತಿಫಲನ ಹೊಂದಿದ ಆಕೃತಿ ; ಪ್ರತಿಬಿಂಬ ; ಪ್ರತಿಚ್ಛಾಯೆ. ೪. ಸ್ವರೂಪ ; ಆಕೃತಿ : ತನ್ನ ನಾಯಕನ ವಿರಹದಿಂ ಚಿತ್ರದೊಳು ಅವನ ಪ್ರತಿಮೆಯಂ ನೋಡುವುದು ಒಂದು (ಕಾಮಶಾ. ೨೯೭). ೫. ಆನೆಯ ದಂತಗಳ ಮಧ್ಯಪ್ರದೇಶ. ೬. ಆಧುನಿಕ ಸಾಹಿತ್ಯದಲ್ಲಿ ಲೇಖಕನು ಮನಸ್ಸಿನ ಭಾವನೆಗಳನ್ನು ಕಣ್ಣಿಗೆ ಕಟ್ಟು ವಂತೆ ಚಿತ್ರಿಸುವ ರೂಪ, ಚಿತ್ರ ಇತ್ಯಾದಿ : ತೀರ ವಾಸ್ತವಿಕವಾದ ಪ್ರತಿಮೆಗಳಲ್ಲಿ ಐಂದ್ರಿಯಕ ಅನುಭವವು ಮನದಟ್ಟಾಗುವಂತೆ ಕವಿಯು ಮಾಡುತ್ತಾನೆ (ವಚ್ಚಕಾ. ೩೩); ಭಾಷೆ ಹಾಗೂ ಪ್ರತಿಮೆಗಳ ಧ್ವನಿಪೂರ್ಣ ವಾದ ನಿರ್ವಹಣ ತೀರ ಖಚಿತವಾಗಿ ಈ ಕತೆಗಳಲ್ಲಾಗಿದೆ (ಹೊಸಕ್ಷಿ. ೨೩೪); ತವಿಳರಿಗೆ ಕದಂಬಮರ ಸಂಗ್ರಾಮವಿಜಯದ ಪ್ರತಿಮೆಯಾಗಿ ಅಡಿಗಡಿಗೆ ಕಾಣಸಿಕೊಳ್ಳುತ್ತದೆ (ಹಸುಹೊ. ೯೭). ℗ ಇದು ಇಂಗ್ಲಿಷಿನ 'Image' ಎಂಬ ಪದದ ಅರ್ಥಾನುವಾದ. ೭. [ಜೈನ] ಶ್ರಾವಕನು ಸಾಧಿಸ ಬೇಕಾದ ಆಧ್ಯಾತ್ಮಿಕೋನ್ನತಿಯ ಸಾಧನೆಯ ಕ್ರಮವಾದ ಮೆಟ್ಟಿಲು,-ನೆಲೆ: ℗ "ಪರಿಸ್ಥಿತಿ, ಅನುಕೂಲ, ಶಾರೀರಿಕ ಮತ್ತು ಮಾನಸಿಕವೃತ್ತಿಗಳಿಗೆ ಅನುಸರಿಸಿ ಶ್ರಾವಕಧರ್ಮದಲ್ಲಿ ರೂಪಿ ಸಿರುವ ಹನ್ನೊಂದು ನೆಲೆಗಳು" (ಕೃಪಕೋ. ೦೬೪). ಇವುಗಳಲ್ಲಿ ಶ್ರಾವಕರು ಹಿಂದಿನ ಪ್ರತಿಮೆಗಳಲ್ಲಿನ ಆಚಾರಗಳನ್ನು ಮುಂದಿನ ಪ್ರತಿಮೆಗಳಲ್ಲಿಯೂ ನಡೆಸಬೇಕಾಗುತ್ತದೆ. ೧. ದರ್ಶನಪ್ರತಿಮೆ- ಮದ್ಯ, ಮಾಂಸ, ಮಧು ಇವುಗಳ ತ್ಯಾಗ. ೨. ವ್ರತಪ್ರತಿಮೆ- ಅಣುವ್ರತ, ಗುಣವ್ರತ, ಶಿಕ್ಷಾವ್ರತಗಳನ್ನು ಸ್ವೀಕರಿಸುವುದು. ೩. ಸಾಮಾಯಿಕ-ಮುಂಜಾನೆ, ಮಧ್ಯಾಹ್ನ ಮತ್ತು ಸಂಜೆಯಲ್ಲಿ ಸಾಮಾಯಿಕ ಮಾಡುವುದು. ೪. ಪ್ರೋಷಧೋಪವಾಸ-ಅಷ್ಟಮಿ, ಚತುರ್ದಶಿ ದಿವಸಗಳಲ್ಲಿ ಉಪವಾಸ ಮಾಡುವುದು. ೫. ಸಚಿತ್ತ ತ್ಯಾಗ - ಕಾಯಿಪಲ್ಯ, ಹೂವು ಮುಂತಾದುವುಗಳನ್ನು ಉಪಯೋಗಿಸದಿರುವುದು. ೬. ರಾತ್ರಿಭೋಜನತ್ಯಾಗ-ರಾತ್ರಿಯಲ್ಲಿ ಊಟ ಮಾಡದಿರುವುದು. ೭. ಬ್ರಹ್ಮಚರ್ಯ-ಅವಿವಾಹಿತ ನಾಗಿರುವುದು. ೮. ಆರಂಭತ್ಯಾಗ-ಕೃಷಿ, ವಾಣಿಜ್ಯ ಮುಂತಾದ ಹಿಂಸಾತ್ಮಕವ್ಯಾಪಾರಗಳನ್ನು ಮಾಡದಿರುವುದು. ೯. ಪರಿಗ್ರಹತ್ಯಾಗ-ಮನೆ ಮಾರು, ಧನಧಾನ್ಯಗಳ ಮೇಲಿನ ಪ್ರೀತಿಯ ತ್ಯಾಗ. ೧೦. ಅನುಮತಿತ್ಯಾಗ-ಆರಂಭ, ಪರಿಗ್ರಹ, ವಿವಾಹ ಮುಂತಾದ ಕಾರ್ಯಗಳಲ್ಲಿ ಅಪ್ಪರಿಗೆ ಸಮ್ಮತಿ ಕೊಡದಿರುವುದು. ೧೧. ಉದ್ದಿಷ್ಟಾಹಾರತ್ಯಾಗ-ತಮ್ಮ ದೆಸೆಯಿಂದಲೇ ಮಾಡಿದ ಆಹಾರವನ್ನು ತ್ಯಾಗಮಾಡುವುದು : ಕ್ರಿಯಾದೇವತಾಯೆಂಬುದು ಛತ್ರತ್ರಯಮುಂ ಚಕ್ರತ್ರಯಮುಂ ಅಗ್ನಿತ್ರಯಮುಂ ಪ್ರತಿಮೆಯು ಮೆಂದಿಂತು ದಶವಿಧಮಕ್ಕುಮಿವು ಶಾಂತಿಸೇತುಗಳ್ (ಚಾಪುಂತಿ. ೨೨೨) ; ಅಜ್ಜಣನ್ದಿಭಟಾರರ್ ಪ್ರತಿಮೆ ಮಾಡಿದಾರ್ (ಎಇ. IV, ೧೮೦-೯; ೧) ; ನೈಷ್ಠಿಕಶ್ರಾವಕರಲ್ಲಿ ಹನ್ನೊಂದು ತರಗತಿಗಳುಂಟು. ಈ ತರಗತಿಗಳಲ್ಲಿ ಕ್ರಮಗಡೆ ಹೊಂದುತ್ತ ಮುಂದೆ ಸಾಗಿದಂತೆ, ಶ್ರಾವಕನು ತನ್ನ ಆಧ್ಯಾತ್ಮಿಕ ಉನ್ನತಿಯನ್ನು ಮಾಡಿಕೊಂಡುತಾಗುವುದು. ಈ ಹನ್ನೊಂದು ತರಗತಿ ಗಳಿಗೆ ಜೈನಪರಿಭಾಷೆಯಲ್ಲಿ "ಪ್ರತಿಮೆ"ಗಳೆಂದು ಕರೆಯುವರು (ಕೃಪಕ. ೯೭೭). 'ಏಕಾದಶನಿಳಯ' ಪರಾ. [ಸಂ. ಪ್ರತಿಮಾ]

**ಪ್ರತಿಯತ್ನ** (ನಾ). ೧. ಒಂದು ಪ್ರಯತ್ನಕ್ಕೆ ಪ್ರತಿಯಾಗಿ ಮಾಡುವ ಮತ್ತೊಂದು ಪ್ರಯತ್ನ ; ಪ್ರತಿಕ್ರಿಯೆ : ಯತ್ನ ಪ್ರತಿಯತ್ನಗಳು ಒಂದಕ್ಕೊಂದಕ್ಕೆ ಸಮನಾಗಿ ಮತ್ತು ವಿರುದ್ಧವಾಗಿ ಇರುವುವು (ಭೌಶಂ.೬೯). ೨. ಪ್ರಯತ್ನ; ಉದ್ಯಮ. ೩. ಸೇಡು ತೀರಿಸಿಕೊಳ್ಳುವುದು ; ಪ್ರತೀಕಾರ. ೪. ಅಭಿಲಾಷೆ ; ಅಪೇಕ್ಷೆ. ೫. ಸೆರೆಹಿಡಿಯುವುದು ; ಬಂಧಿಸುವುದು : "ಪ್ರತಿಯತ್ನಃ-೧. ಅಭಿಲಾಷೆ, ೨. ಸೆರೆಹಿಡಿಯುವಿಕೆ" (ಸಿದ್ಧಾಂತಿ. ೪೦೦). ೬. ವಿರೋಧ ; ಪ್ರತಿಭಟನೆ. [ಸಂ.]

**ಪ್ರತಿಯಾತನ** (ನಾ). ೧. ಸೇಡು; ಮುಯ್ಯಿ : "ಪ್ರತಿಯಾತನಂ ಪ್ರತಿ ಪ್ರತಿಕೃತಿಯೆನಲ್ಕೆ ಮುಯಿ" (ಶಬ್ದಮಣಿ. ೦೩೫-೩೭). ೨. ಪ್ರತಿರೂಪ ; ಪ್ರತಿಬಿಂಬ : "ಪ್ರತಿಬಿಂಬಂ, ಪ್ರತಿರೂಪಂ . . . ಪ್ರತಿಯಾತನಂ, ಪ್ರತಿಚ್ಛಾಯಂ- ಈ ೯ ಪ್ರತಿಬಿಂಬದ ಪೆಸರ್" (ಕರ್ಣಾಟು. ೨೦-೦೫೦). [ಸಂ.]

**ಪ್ರತಿಯಾತನೆ** (ನಾ). ೧.=ಪ್ರತಿಯಾತನ ೨ : "ಪ್ರತಿಬಿಂಬಂ . . . ಪ್ರತಿಯಾತನಾ ಪ್ರತಿಚ್ಛಂದಮಾ ಪ್ರತಿಕೃತಿ ಪ್ರತಿಕಾಯಮಾ ಪ್ರತಿಪ್ರಾಣ ಮೆಂದೆನಲದುಂ ಪ್ರತಿಯಪ್ಪ ರೂಪೆನಿಕ್ಕುಂ" (ಶಬ್ದಮಣಿ. ೬-೨೬). ೨. ವಿಗ್ರಹ, ಪ್ರತಿಮೆ, ಚಿತ್ರ ಮುಂತಾದ ಪ್ರತಿಕೃತಿ : "ಪ್ರತಿಮಾನಂ, ಪ್ರತಿಬಿಂಬಂ, ಪ್ರತಿಮಾ, ಪ್ರತಿಯಾತನಾ . . . ಪ್ರತಿನಿಧಿಃ- ೮ ವಿಷ್ಣು ಮೊದಲಾದವರ ಆಕಾರಗಳಿಗೆ ಸಮನಾಗಿ ಶಿಲಾದಿಗಳಿಂದ ಮಾಡಿದ ಪ್ರತಿಮೆ ಹೆಸರು" (ಸಿದ್ಧಾಂತಿ. ೪೦೭). [ಸಂ. ಪ್ರತಿಯಾತನಾ]

**ಪ್ರತಿಯಿಕ್ಕು** (ಕ್ರಿ). ಒಂದು ವಸ್ತುವಿನ ಸ್ಥಾನಕ್ಕೆ ಮತ್ತೊಂದನ್ನು ಇಡು ; ಒಂದರ ಸ್ಥಾನದಲ್ಲಿ ಮತ್ತೊಂದನ್ನು ಭರ್ತಿಮಾಡು : ಆಜಿಯುದೆ ದಕ್ಷನ ಶಿರಮಂ ತಱಿಯಲು ಶಿವಪಿತ್ತ ನೇಮವಂ ನೆನೆ ದಾಗಳ್ ಕುಱಿದಲೆಯುಂ ಪ್ರತಿಯಿಕ್ಕುತ ಭರದಿಂ ವೀರೇಶನಿತ್ತ ಪ್ರಾಣ ವನವಗಂ (ವಚ್ಚಕಾ. ೬-೯೯). [ಪ್ರತಿ + ಇಕ್ಕು]

**ಪ್ರತಿಯಿಡು** (ಕ್ರಿ). ೧. ಹೋಲಿಸು : ಪ್ರತಿಯಿಡಲು ಬಾರದ ಮಹಾ ಗರ್ವಿತಹೃದಯನು ಕಪಟನು . . . ಸ್ವೈರಿಸಿ (ಬಸಪು. ೨೩-೪೦). ೨. ತಿರುಗಿ ಬರೆ; ಬೇರೆಯಾಗಿ ಬರೆ: ಬೆಸಗೊಂಡಿರ್ದುದಯಕ್ಕೆ ಪೂರ್ವಗದಿತ ವ್ಯಾಪಾರಮಂ ಕೂಡಿ ಯೋಜಿಸಿ ನಾಲ್ಕುಂ ಪ್ರತಿಯಿಟ್ಟು (ಜಾಕತಿ. ೨೪-೨೭). ೩. (ತೂಗಲು) ಪಡಿಯಿಡು ; ಬೆಲೆಕಟ್ಟು : ಬಾಪಂನ ನಿರತಂ ತಂದಾಪವಗಮೊಂದೆಸೆಯೊಳಿಟ್ಟು ತಂನಂ ಪ್ರತಿಯಿಟ್ಟ ವೀರರೊಡನೆ ತೂಗಿ ದೊಡೋವತ ವೀರಕ್ಕೆ ಮಾಧವಂ ಗೆಲೆವಂದಂ (ಕೌಇಇ. Ix-i, ೨೪೯-೯೭ ; 1147). [ಪ್ರತಿ + ಇಡು₁]

**ಪ್ರತಿಯಿನ** (ನಾ). ಅಂತರಿಕ್ಷದಲ್ಲಿ ಎರಡನೆಯ ಸೂರ್ಯನಂತೆ ಕಾಣಿಸುವ ಒಂದು ಉತ್ಪಾತ : ಜಗತಿಯೊಡೆಯನು ಶಿರಸುವಿಲ್ಲದ

ಬಿಗಿದ ಹೆಣನಂ ಕಂಡಸುದಯಾದ್ರಿಗೆ ತರಣಿ ಬಹ ಸಮಯದಲಿ ಪ್ರತಿಯಿನನುದಯಿಸಿದನು (ಚಸಪು. ೬೧-೦೩). 'ಪ್ರತಿಸೂರ್ಯ' ಪರಾ. [ಸಂ.]

**ಪ್ರತಿಯೋಗ** (ನಾ). ೧. ವಿರೋಧ; ಪ್ರತಿಭಟನೆ. ೨. ಸಹಯೋಗ; ಸಹಕಾರ. ೩. ಪ್ರತೀಕಾರ. ೪. ರೋಗವನ್ನು ನಿವಾರಿಸುವ ಮದ್ದು; ಪರಿಹಾರೌಷಧ. [ಸಂ.]

**ಪ್ರತಿಯೋಗಿ** (ಗು). ೧. ವಿರೋಧಿಸುವ; ಸ್ಪರ್ಧಿಸುವ. (ನಾ). ೨. ಸರಿಸಮಾನವಾದುದು; ಈಡಾದುದು : ಹನ್ನೊಂದನೆಯ ಶತಾಬ್ದದಲ್ಲಿ ಹೂಗ್ಲಿಯು ನೂತನವಾದ ಸೌಷ್ಠವದಿಂದ ಸಪ್ತಗ್ರಾಮಕ್ಕೆ ಪ್ರತಿಯೋಗಿ ನಗರವಾಗಿತ್ತು (ಕಪಾಕುಂ. ೩೬). ೩. ಎದುರಾಳಿ; ವಿರೋಧಿ. ೪. ಬೇರೆಯಾಗಿರುವುದು ; ಭಿನ್ನವಾಗಿರುವುದು : ಇಲ್ಲಿ ಈಶ, ಜೀವ, ಜಡ ಎಂದು ಮೂರೇ ಪ್ರತಿಯೋಗಿಗಳು (ಹಿಂದಸಾ. ೨೮೨). ೫. [ನ್ಯಾಯ] ಯಾವ ವಸ್ತುವಿನ ಅಭಾವವನ್ನು ಹೇಳಬೇಕೋ ಆ ಪದಾರ್ಥ ; ಅಭಾವಕ್ಕೆ ಪಕ್ಕಾದ ವಸ್ತು : ಅನ್ಯೋನ್ಯಾಭಾವ ವೆಂಬ ಭೇದಪದಾರ್ಥವು ಪ್ರತಿಯೋಗಿಭೇದದಿಂದ ಬೇರೆ ಬೇರೆಯಾಗಿ ಘಟಭೇದ, ಪಟಭೇದ ಎಂದು ವಿಭಿನ್ನಗಳಾಗಿದ್ದರೂ ಆಶ್ರಯಭೇದದಿಂದ ಬೇರೆ ಬೇರೆಯಲ್ಲವೆಂದು ಇತರರ ಅಭಿಪ್ರಾಯವು (ಹಿಂದಸಾ. ೨೮೦). [ಸಂ. ಪ್ರತಿಯೋಗಿನ್]

**ಪ್ರತಿರಕ್ಷಣ** (ನಾ). ೧. ಕಾಪಾಡುವುದು; ರಕ್ಷಣೆ. ೨. [ರಾಜನೀ] ಅಪಾಯವೊದಗದಂತೆ ನೋಡಿಕೊಳ್ಳುವುದು ; ಅಪಾಯದ ದೆಸೆಯಿಂದ ರಕ್ಷಿಸುವುದು : ನಾನು. . . ಭಾರತಸಂವಿಧಾನದ ಮತ್ತು ವಿಧಿಯ ಪರಿರಕ್ಷಣ, ಸಂರಕ್ಷಣ ಮತ್ತು ಪ್ರತಿರಕ್ಷಣ ಮಾಡುತ್ತೇನೆಂದೂ. . . ಪ್ರತಿಜ್ಞೆ ಮಾಡುತ್ತೇನೆ (ಭಾರಾಸ. ೩೦). [ಸಂ.]

**ಪ್ರತಿರಕ್ಷಣೆ** (ನಾ). ೧. = ಪ್ರತಿರಕ್ಷಣ ೧. ೨. ನ್ಯಾಯಾಲಯ ಮುಂತಾದ ಕಡೆಗಳಲ್ಲಿ ಅಪರಾಧವು ಹೊರಿಸಲ್ಪಟ್ಟರೆ ತಾನು ನಿರ್ದೋಷಿಯೆಂದು ಸಾಧಿಸುವಿಕೆ : ಅವನಿಗೆ ವಿರೋಧವಾಗಿ ಹೂಡಲಾದ ಕಾನೂನುಸಂಬಂಧವಾದ ವ್ಯವಹರಣೆಗಳಲ್ಲಿ ಪ್ರತಿರಕ್ಷಣೆ ಮಾಡಿಕೊಳ್ಳುವುದಕ್ಕಾಗಿ. . . ಪರಾಮರ್ಶನ ನಡೆಯತಕ್ಕುದು (ಭಾರಾಸ. ೦೬೬). [ಸಂ. ಪ್ರತಿರಕ್ಷಣ]

**ಪ್ರತಿರಕ್ಷೆ** (ನಾ). ೧. = ಪ್ರತಿರಕ್ಷಣ ೧ : ನನಗೆ ತಿಳಿದ ಮಟ್ಟಿಗೆ ಪ್ರತಿರಕ್ಷೆಯ ಸನ್ನಾಹವನ್ನು ಪೂರೈಸಿ ಹಾಸಿಗೆಯನ್ನು ಆಶ್ರಯಿಸಿದೆನು (ಪಂಟಿರು. ೪೮). ೨. = ಪ್ರತಿರಕ್ಷಣೆ ೨ : ಬಂದೀಕರಣ ಮಾಡಿದ ಯಾವ ವ್ಯಕ್ತಿಯನ್ನೂ. . . ಆ ವ್ಯಕ್ತಿಯು ತನಗೆ ಇಷ್ಟವುಳ್ಳ ಲಾಯರ ಪರಾಮರ್ಶವನ್ನು ಕೇಳುವ ಮತ್ತು ಆತನಿಂದ ಪ್ರತಿರಕ್ಷೆ ಪಡೆಯುವ ಅಧಿಕಾರವು ಆ ವ್ಯಕ್ತಿಗಿಲ್ಲದಂತೆ ಮಾಡತಕ್ಕುದಲ್ಲ (ಭಾರಾಸ. ೦೩). [ಸಂ. ಪ್ರತಿರಕ್ಷಾ]

**ಪ್ರತಿರಣನೆ** (ನಾ). ಪ್ರತಿಧ್ವನಿ; ಅನುರಣನ : ಮೃದಂಗವನ್ನು ಸರಿಯಾಗಿ ತಯಾರಿಸಿದ್ದರೆ, ಅದರ ನಾದಭಾಗವು ಒಂದೇ ಸಮನಾದ . . . ಪ್ರತಿರಣನೆಗೊಳ್ಳುವ ತುಂಬುನಾದವನ್ನು ಕೊಡುತ್ತದೆಂದೂ ಅವರು ಚೆನ್ನಾಗಿ ಬಲ್ಲರು (ಸಂಗೀತ. ೦೧೨). [ಸಂ. ಪ್ರತಿರಣನ]

**ಪ್ರತಿರಣಿತ** (ನಾ). ಮಾರ್ದನಿಗೊಂಡುದು; ಪ್ರತಿಧ್ವನಿತವಾದುದು : ಮಹಾಧ್ವಾನಮಸುರನುಸಿರಿಂದುರ್ಕಿ ರೋದಿಸಿತು, ಗಗನಗಿರಿವನಗುಹಾ ಮುಖಂಗಳಿಂ ಪ್ರತಿರಣಿತಮಾಗಿ ! (ಶ್ರೀರಾಮಾ. ೨೩೬-೨೬೮). [ಸಂ.]

**ಪ್ರತಿರವ** (ನಾ). ಪ್ರತಿಧ್ವನಿ : ಬಂಹಿಮವನ್ನಂದರಕಂದರಪ್ರತಿರವಂ ಕೊಟ್ಟಕ್ಕೆ ಮೆಯ್ಯೊಡ್ಡೆ ಪಂಚಮಮಾಗಲ್ಕದೊಳಿಂದ್ರಗಾಯಕರದೇನಿಂಬಿ ನಯಂಬೆತ್ತರೋ (ಶಾಂತಿಪು. ೦೧-೩೩). [ಸಂ.]

**ಪ್ರತಿರವಂಗುಡು** (ಕ್ರಿ). ಮಾರ್ದನಿಯನ್ನು ಕೊಡು ; ಪ್ರತಿಧ್ವನಿಸು : ಉರುತರಪರ್ವತಂ ಪ್ರತಿರವಂಗುಡೆ. . . ಜವದಿನೇಳ್ವರುತಿರ್ದುದು ಸೋರ್ಕಿ ದೆಕ್ಕಲಂ (ಶಬಶಂ. ೪-೩). [ಪ್ರತಿರವ + ಕುಡು₁ (<ಕೊಡು₁)]

**ಪ್ರತಿರಹಿತ** (ಗು). ೧. ಎದುರಿಲ್ಲದ; ಸಾಟಿಯಿಲ್ಲದ : ಯೋಗವುಂ ಕೊಡುವ ದೇವಿಗಂ ಪ್ರತಿರಹಿತಯೋಗಿಗಳ ಗುರುರೂಪಗಂ. . . ನಮೋ ನಮೋಯೆಂದೆನು (ಬೀಶೃತು. ೨-೨-೩೪). (ನಾ). ೨. ಸಾಟಿಯಿಲ್ಲದವನು; ಅಸದೃಶನಾದವನು : ಪ್ರತಿರಹಿತ ನುತವಿಹಿತ . . . ಶರಣಾಗು ಗುರುಮೂರ್ತಿ ಪಂಪಾಪುರಾಧೀಶ್ವರ (ಹಕಕಾ. ೦.೩). [ಸಂ.]

**ಪ್ರತಿರೂಪ** (ಗು). ೧. ತದ್ರೂಪವಾದ ; ಸದೃಶವಾದ : ನಿರಂತರಂ ಪಾರ್ವ ಪುರಾಣರಾಕ್ಷಸರನೀಕ್ಷಿಸಿದಂ ಪ್ರತಿರೂಪಶೂದ್ರಕು (ಕಾವ್ಯಸಾ. ೩೩೪). (ನಾ). ೨. ಪ್ರತಿಮೆ ; ವಿಗ್ರಹ : ಅಂತು ತಾಮ್ರನುಯಗುಹ್ಯಕಪ್ರತಿರೂಪಂ ಕಿಚ್ಚಿಂಗೆ ತೋಱದರಗು ಕರಗುವಂತೆ ಕರಗಿ ಪೊನಲ್ವರಿಯೆ (ಶಾಂತಿಪು. ೬-೨೯ ವ) ; ನೆನೆದ ಘಳಿಗೆಯೊಳಾತ ಕಟ್ಟುಕ್ಕಿನಲಿ ಸರ್ವಾವಯವವನು ಸಂಜನಿಸಿದನು ಪ್ರತಿರೂಪವನು ಪವಮಾನನಂದನನ (ಕುವ್ಯಾಗ. ೦೧-೬೭). ೩. ಪ್ರತಿಬಿಂಬ : "ಪ್ರತಿಬಿಂಬಂ, ಪ್ರತಿರೂಪಂ. . . ಪ್ರತಿಚ್ಛಾಯಂ – ಈ ೯ ಪ್ರತಿಬಿಂಬದ ಪೆಸರ್" (ಹಲಾಯು. ೨೦-೦೫೦). ೪. ತದ್ರೂಪವಾಗಿ ಇರುವುದು; ತದ್ವತ್ತಾಗಿರುವುದು : ಪ್ರತಿಮಾ ರೂಪಮುಘಾತಿಪ್ರತಿರೂಪದ ಗರ್ವಪರ್ವತಾರೂಢತೆಯುಂ ಶತ್ರಖಂಡಂ ಮಾಡಿದುವು (ಶಾಂತಿಪು. ೦೨-೩೩); ಆಳು ಸೂಳೆಯು ನಾಯಿ ಕೋಳಿ ಜೋಯಿಸ ವೈದ್ಯ ಗೂಳಿಯು ತಗರು ಪ್ರತಿರೂಪ ಕಂಡರೆ ಕಾಳಗವೆಂದ (ಸರ್ವಜ್ಞ. ೦೫೮೭). [ಸಂ.]

**ಪ್ರತಿರೂಪು** (ನಾ). ಪ್ರತಿಬಿಂಬ : ಅಂಬುರುಹದೊಳಾ ಪ್ರತಿರೂಪು ಕರಂ ಬಿಂಬಿಸೆ ಕಣ್ಗೆಡ್ಡಂಬಡೆದುದು (ಜಯುಕಾ. ೦-೪೩). [<ಸಂ. ಪ್ರತಿರೂಪ]

**ಪ್ರತಿರೋಧ** (ಗು). ೧. ತಡೆಯುವ; ನಿರೋಧಿಸುವ : ನೀವು ನಿಮ್ಮ ಘ್ರಾಣೇಂದ್ರಿಯವನ್ನು ಚಳಿಗೂ, ಕಾವಿಗೂ ಬೀಳದಂತೆ ಮಾಡಿ ಮಾಡಿ ಅದರ ಪ್ರತಿರೋಧಶಕ್ತಿಯನ್ನೇ ಕಳೆದಿದ್ದೀರಿ (ದೀಕವ್ಯ. ೯). (ನಾ). ೨. ವಿರೋಧ; ಪ್ರತಿಭಟನೆ. ೩. ಅಡಚಣೆ ; ಅಡ್ಡಿ ; ತಡೆ. ೪. ಎದುರಾಳಿ; ವಿರೋಧಿ. ೫. ಆಕ್ರಮಣ. ೬. ತಿರಸ್ಕಾರ. ೭. ಕಳ್ಳತನ ; ಚೌರ್ಯ. [ಸಂ.]

**ಪ್ರತಿರೋಧಕ** (ಗು). ೧. ತಡೆಯುವ ; ಅಡ್ಡಿಪಡಿಸುವ. (ನಾ). ೨. ತಡೆ ; ಅಡ್ಡಿ ; ಅಡಚಣೆ. ೩. ಎದುರಾಳಿ ; ವಿರೋಧಿ. ೪. ತಡೆಯುವವನು; ಅಡ್ಡಿಪಡಿಸುವವನು. ೫. ಕಳ್ಳ; ದರೋಡೆಕೋರ: "ಏಕಾಗಾರಿಕಃ, ತಸ್ಕರಃ, ದಸ್ಯುಃ, ಪ್ರತಿರೋಧಕಃ . . . ಸ್ತೇನಃ __ ಈ ೧೦ ಕಳ್ಳಂ" (ಹಲಾಯು. ೩೬-೦೬೩). [ಸಂ.]

**ಪ್ರತಿರೋಧಿ** (ನಾ). ಕಳ್ಳ; ದರೋಡೆಕೋರ : "ಚೋರಃ, ಏಕಾಗಾರಿಕಃ, . . . ಪ್ರತಿರೋಧೀ, ಪರಾಸ್ಕಂದೀ, ಪಾಟಚ್ಚರಃ, ಮಲಿಮ್ಲುಚಃ – ೧೦ ಕಳ್ಳನ ಪೆಸರುಗಳು" (ಸಿದ್ಧಾಂತಿ. ೩೦೪). [ಸಂ. ಪ್ರತಿರೋಧಿನ್]

**ಪ್ರತಿರೋಧಿಸು** (ಕ್ರಿ). ತಡೆ ; ಅಡ್ಡಿಪಡಿಸು : ಪ್ರತಿರೋಧಿಸಿ ವಜ್ರದ ಪರ್ವತಂಗಳೆನಿತಾನುಮಿರ್ದೊಡವನವಯವದಿಂ ಸ್ವತನುವೆ ಭೇದಿಸಲಾರ್ಪ ಪ್ರತಿಘಾತದಿನಾದಮೆಸದನಿಂದ್ರಪ್ರತಿಮಂ (ಚಂದ್ರಪು. ೦೪-೩೩). [ಸಂ. ಪ್ರತಿರೋಧನ + __ಇಸು₃]

**ಪ್ರತಿಲಿಪಿ** (ನಾ). ಮೂಲದಾಖಲೆಯ ನಕಲು : ಅಂಥ ವರದಿಯು ತಲಪಿದ ತರುವಾಯ ರಾಷ್ಟ್ರಪತಿಯವರು, ಅದರ ಒಂದು ಪ್ರತಿಲಿಪಿಯನ್ನೂ . . . ಸಂಸತ್ತಿನ ಪ್ರತಿಯೊಂದು ಸದನದ ಸಮಕ್ಷಮ ಇರಿಸುವಂತೆ ಏರ್ಪಡಿಸತಕ್ಕುದು (ಭಾರಾಸ. ೦೬೬). [ಸಂ.]

**ಪ್ರತಿಲೇಖನ** (ನಾ). ೧. = ಪ್ರತಿಲಿಪಿ. ೨. [ಜೈನ] ಪ್ರತಿನಿತ್ಯವೂ ಭೂಶುದ್ಧಿ, ಉಪಕರಣಗಳ ಶುದ್ಧಿ ಮುಂತಾದುವನ್ನು ಮಾಡುವುದು:

ಪ್ರತಿಲೇಖನದೊಳನಾಲೋಕಿತಮನುಚಿತಮೆಂದು ಪಲವು ಕಣ್ಬಡೆದವೊಲಾ ಯತಿಪತಿಯ ದಯಾರ್ದ್ರಮೇನತಿಶಯಮಾದತ್ತೊ ಮೇದುರಂ ಮಾಯೂರಂ (ಧರ್ಮಾಮೃ. ೧೦-೦೩೩) : ನೋಡದೆ ಪ್ರತಿಲೇಖನವನು ಮಾಡದೆ ಕೂಡಿ ಪೂಜೋಪಕರಣವ ರೂಢಿಯೊಳಿಡುವುದು ತೆಗೆವುದು ಮೆಂಬಿದು ನೋಡಲು ಗ್ರಹಣಾತಿಚಾರ (ದ್ವಾದಶಾ. ೧೧-೬೦೯). [ಸಂ.]

**ಪ್ರತಿಲೇಖನೆ** (ನಾ). = ಪ್ರತಿಲೇಖನ ೨ : ನೋಡದೆ ಪ್ರತಿಲೇಖ [ನಾ. ಪ]ನೆಯುಂ ಮಾಡದೆ ಮಡಗಿಡುವ ಕೊಳ್ವ ಪಾಸುವುದುಂ ಕೊಂಡಾಡದುದುಂ ನೆನೆಯದುದುಂ ಕೇಡಿನಿತುಂ ಪ್ರೋಷಧೋಪವಾಸವ್ರತ ದೊಳ್ (ಸುಕುಮಾ. ೬-೨೩). [ಸಂ. ಪ್ರತಿಲೇಖನ]

**ಪ್ರತಿಲೇಖಿಸು** (ಕ್ರಿ). [ಜೈನ] ಪ್ರತಿನಿತ್ಯವೂ ಭೂಶುದ್ಧಿ, ಉಪಕರಣ ಗಳ ಶುದ್ಧಿ ಮುಂತಾದುವನ್ನು ಮಾಡು : ನೋಡದೆ ಪ್ರತಿಲೇಖಿಸದೆ ಮೂತ್ರ ಪುರೀಷಂಗಳಂ ಕಳೆವ ಅಪ್ರತ್ಯವೇಕ್ಷಿತಾಪ್ರಮಾರ್ಜಿತೋತ್ಸ ರ್ಗಮುಂ ನೋಡದೆ ಪ್ರತಿಲೇಖಿಸದೆ ಚಿನ್ಮಯಾರ್ಹದಾಚಾರ್ಯಾದಿ ಪೂಜೋಪಕರಣಂಗಳುಮಂ . . . ಕೊಳ್ವ ಅಪ್ರತ್ಯವೇಕ್ಷಿತಾಪ್ರಮಾರ್ಜಿ ತಾದಾನಮುಂ (ಕಸ್ತ್ರ್ಯ. ೨೬೩) ; ನೋಡದೆ ಪ್ರತಿಲೇಖಿಸದೆ ಪೂಜೋಪ ಕರಣಂಗಳಂ ಕೊಳ್ವ ಅಪ್ರತ್ಯವೇಕ್ಷಿತಾಪ್ರಮಾರ್ಜಿತಾದಾನಮುಂ . . . ಇವಯ್ದುಂ ಪ್ರೋಷಧೋಪವಾಸದತಿಚಾರಮಕ್ಕುಂ (ಕಸಾರ. ೩೦೬) ; ಹಾಸಿಕೆಯನು ಹಾಸಿಕೊಂಬಲ್ಲಿ ತೆಗೆದಿಡುವಾ ಸಮಯದಿ ಠಾವ ನೋಡಿ ಲೇಸಾಗಿ ಪ್ರತಿಲೇಖಿಸದಿರಿಸುವುದದು ಸಂಸ್ತರಣವ್ಯಯೆಂಬ ದೋಷ (ದ್ವಾದಶಾ. ೧೧-೬೨೦). [ಪ್ರತಿಲೇಖನ + —ಇಸು]

**ಪ್ರತಿಲೋಮ** (ಗು). ೧. ಯಥಾಕ್ರಮವಲ್ಲದ ; ನಿಯಮಕ್ಕೆ ವಿರುದ್ಧವಾದ: 'ಪ್ರತಿಲೋಮವಿವಾಹ' ಪರಾ. ೨. ನಿಮ್ನವರ್ಗದ. (ನಾ). ೩. ನಿಯಮವಿರುದ್ಧವಾದುದು ; ಯಥಾಕ್ರಮವಲ್ಲದುದು: "ಪ್ರತಿಕೂಲಂ, ಪ್ರತಿಲೋಮಂ, ಪ್ರತೀಪಂ, ಪ್ರಸವ್ಯಂ — ಈ ೪ ಪ್ರತಿಕೂಲಂ" (ಹಲಾಯು. ೦೨೨-೩೮) ; ವಾಯುವು ಊರ್ಧ್ವಮುಖವಾಗಿ ಶ್ಲೇಷ್ಮವನ್ನು ಪ್ರತಿಲೋಮವಾಗಿ ಶಿರಸ್ಸಿಗೈದಿಸಿ ತಮಕವೆಂಬ ಶ್ವಾಸ ವನ್ನುಂಟುಮಾಡುವುದು (ಸಕಪ್ರ. ೨೨೮) ; ಪ್ರಾಯೋಗಿಕವಿಜ್ಞಾನವು ಪ್ರತಿಲೋಮವಾಗಿ ಬೆಳೆದಿದೆ (ಶಿಲ್ಪಶಾ. ೦೨೮). ೪. ಹಿಂದೂಜನಾಂಗ ದಲ್ಲಿರುವ ನಾಲ್ಕು ವರ್ಣಗಳಲ್ಲಿ ಮೇಲುವರ್ಣದ ಹೆಣ್ಣನ್ನು ಕೀಳುವರ್ಣದ ಗಂಡಿಗೆ ಕೊಟ್ಟು ಮಾಡುವ ಮದುವೆ: 'ಅನು ಲೋಮ' ಸಲ್ಲುವುದು ; 'ಪ್ರತಿಲೋಮ'ಶಾಸ್ತ್ರಕ್ಕೆ ವಿರೋಧ (ವ್ಯಾಸಚಿ. ೩೮); ಈ ವಿವಾಹಗಳೇ ಅನುಲೋಮ ಪ್ರತಿಲೋಮಗಳೆಂದು ಹೆಸರು ಪಡೆದಿರತಕ್ಕವು (ಬಾಇಕ್ರ. ೬೮). [ಸಂ.]

**ಪ್ರತಿಲೋಮಕ್ರಿಯೆ** (ನಾ). ವಿಪರೀತವಾದ ಕಾರ್ಯ ; ವಿರುದ್ಧ ವಾದ ಕೆಲಸ : ಭಾಗಾಹಾರವು ಗುಣಾಕಾರದ ಪ್ರತಿಲೋಮಕ್ರಿಯೆ (ಇನ್‌ವರ್ಸ್ ಪ್ರೊಸೆಸ್) (ಶವಿಕೋ. I, ೪). [ಸಂ. ಪ್ರತಿಲೋಮಕ್ರಿಯಾ]

**ಪ್ರತಿಲೋಮಜ** (ನಾ). ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳಲ್ಲಿ ಮೇಲುವರ್ಣದ ಹೆಣ್ಣಿನಲ್ಲಿ ಕೀಳುವರ್ಣದ ಗಂಡಿನಿಂದ ಹುಟ್ಟಿದವನು. [ಸಂ.]

**ಪ್ರತಿಲೋಮವಿವಾಹ** (ನಾ). = ಪ್ರತಿಲೋಮ ೪ : ಪ್ರತಿಲೋಮ ವಿವಾಹಗಳು ಎಂದೂ ಅಷ್ಟು ಮನ್ನಣೆಯನ್ನು ಪಡೆಯಲಿಲ್ಲ (ಕರ್ನಾಭೂ. ೧೦೬); ಹಿಂದೆ ಅನುಲೋಮವಿವಾಹಗಳು ಜಾರಿಯಲ್ಲಿದ್ದು ಪ್ರತಿಲೋಮ ವಿವಾಹಗಳು ನಿಷಿದ್ಧವಾಗಿದ್ದವು (ಭಾರತ. ೩೩). [ಸಂ.]

**ಪ್ರತಿವಸ್ತೂಪಮಾಲಂಕಾರ** (ನಾ). = ಪ್ರತಿವಸ್ತೂಪಮೆ : ಉಪಮಾ ನೋಪಮೇಯವಾಕ್ಯಂಗಳೊಳ್ ಒಂದೇ ಸಾಧಾರಣಧರ್ಮವಾಗಿ ಬೇಱೆ ಬೇಱೆ ಪೇೞೆ ಪ್ರತಿವಸ್ತೂಪಮಾಲಂಕಾರಂ (ಶಬ್ದ. ೯೦ ವೃತ್ತಿ) ; ಪರ್ಣ್ಯಾ ವರ್ಣ್ಯಪರವಾದ ವಾಕ್ಯಗಳು ಪ್ರತ್ಯೇಕ ಪ್ರತ್ಯೇಕವಾಗಿದ್ದು ಅವುಗಳಲ್ಲಿ ಸಮಾನಧರ್ಮವೂ ಪ್ರತ್ಯೇಕ ಪ್ರತ್ಯೇಕವಾಗಿ ಉಕ್ತವಾಗಿದ್ದರೆ ಪ್ರತಿವಸ್ತೂ ಪಮಾಲಂಕಾರವಾಗುವುದು (ಕೃಬಿಶಿ. ೨೬೦). [ಸಂ.]

**ಪ್ರತಿವಸ್ತೂಪಮೆ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ; ಯಾವುದಾದರೂ ಒಂದು ವಸ್ತುವನ್ನು ಕುರಿತು ಹೇಳಿ ಅದಕ್ಕೆ ಸಮಾನವಾದ ಧರ್ಮವುಳ್ಳ ಇನ್ನೊಂದು ವಸ್ತುವನ್ನು (ಪ್ರತಿವಸ್ತುವನ್ನು) ತಿಳಿಸುವುದರ ಮೂಲಕ ಅವುಗಳ ನಡುವಣ ಸಾಮ್ಯವು ಪ್ರತೀತವಾಗುವಂತೆ ವರ್ಣಿಸುವುದು : ಪ್ರತಿವಸ್ತೂಪಮಿ ತಾಲಂಕೃತಮಿಂತಕ್ಕುಂ ಧರಾಧಿಪಾ ನಿನ್ನನ್ನಂ ವಿಶ್ರುತಯಶನಿಲಯ ತಾರಾಪತಿ ದಿನಕರಸದೃಶತೇಜನೆಂಬುದುಮುಂಟೇ (ಪ್ರತಿವಸ್ತೂಪಮೆ) (ಕವಿರಾ. ೩-೬೪) ; ಪ್ರತಿವಸ್ತೂಪಮೆಗೆ — ನಿನ್ನನ್ನನೊರ್ವನುಂ ಸಂಪನ್ನ ಗುಣಂ ಪುಟ್ಟಲರಿಯನಿನ್ನುಂ ಮುನ್ನುಂ ಸನ್ನುತನಮೇರುಭೂರುಹದನ್ನವು ಪೆಱತಾವಮರನುಮೇಂ ಪುಟ್ಟುಗುಮೇ (ಕಾವ್ಯಾವ. ೬೮೬) ; ಉಪ ಮಾನೋಪಮೇಯ ಪರವಾಕ್ಯಂಗಳೊಳ್ಸಮಾನಧರ್ಮಮೊಂದಾಗಿರೆಯದು ಪ್ರತಿವಸ್ತೂಪಮೆಯೆನಿಪುದು (ಅಶ್ರತ. ೬೦-೬೬). [ಸಂ. ಪ್ರತಿವಸ್ತೂಪಮಾ]

**ಪ್ರತಿವಾದ** (ನಾ). ೧. ಒಂದು ಹೇಳಿಕೆಗೆ ವಿರುದ್ಧವಾದ ಹೇಳಿಕೆ ; ಒಂದು ಅಭಿಪ್ರಾಯವನ್ನು ಖಂಡಿಸಿ ಹೇಳುವ ಮಾತು : ಶ್ರುತಿ- ಮೂಲವಾಗಿರಲಿಲ್ಲ ನೋಡೆನ್ನ ಪ್ರತಿಜ್ಞೆಯನೆಲ್ಲರುಂ ಪ್ರತಿವಾದಮೆಂದೆ ನಲಾಗದಿದನಿಂತು (ಬಸವು. ೩೪-೩೪). ೨. ಪ್ರತ್ಯುತ್ತರ : "ಪ್ರತಿವಾದಃ — ಪಡಿನುಡಿ" (ಶಾಕಕ್ಕ. ೦೬೦) ೩. ನ್ಯಾಯಾಲಯ, ಆಯೋಗ ಮೊದಲಾದ ಕಡೆ ಕಕ್ಷಿದಾರನ ಕಡೆಯ ನ್ಯಾಯವಾದಿಯು ಮಾಡಕ್ಕೆ ಪ್ರತಿಕಕ್ಷಿಯ ವಕೀಲನು ಕೊಡುವ ಎದುರುತ್ತರ : ಅವನು ತನ್ನ ಪ್ರತಿವಾದ ಮುಗಿಸಿದ ನಂತರ ಪ್ರತ್ಯುತ್ತರ ನೀಡುವ ಸಲುವಾಗಿ ಸರ್ಕಾರಿವಕೀಲ ನಿಂತನು (ಭುಸರು. ೧೩). [ಸಂ.]

**ಪ್ರತಿವಾದಿ** (ನಾ). ೧. ತನ್ನ ಸಿದ್ಧಾಂತವು ಸರಿಯೆಂದು ವಾದಿ ಸುತ್ತಿರುವವನಿಗೆ ವಿರುದ್ಧವಾಗಿ ಅದು ಸರಿಯಲ್ಲವೆಂದು ವಾದಿಸು ವವನು; ವಾದಿಯ ಮತವನ್ನು ಖಂಡಿಸುವವನು; —ಆಕ್ಷೇಪಿಸು ವವನು:ಶತಮತಿವೆರಸು ಮೂವರುಂ ಪ್ರತಿವಾದಿಗಳನಪ್ರತಿಹತಪ್ರತಿಭೆಯಿನ ಪಗತಪ್ರತಿಭರ್ಮಾಡಿ (ಆದಿಪು. ೨-೧೦ ವ); ಕಂಡಲ್ಲದೞಿಯೆನೆಂಬರ್ ಎಂಬ ನಾಣ್ಣುಡಿಯುಂ ಪೋಲ್ಕುಮೆಂಬುದುಂ ಪ್ರತಿವಾದಿ ನಿರುತ್ತರನಾಗಿ ಪಕ್ಷಪರಿ ತ್ಯಾಗಂ ನಿಗ್ರಹಸ್ಥಾನಮೆಂಬುದಱಿಂ ನಿಗ್ರಹಸ್ಥಾನಮನೆಯ್ದುಯುಮಿರದೆ . . . ಸುಗತಮತಮಂ ಪಿಡಿದು (ಶಾಂತಿಪು. ೮-೦೯೦ ವ); ವಾದವೆಂಬ ವಿಚಾರ ಗುರು ಶಿಷ್ಯರುಗಳಿಗೂ ವಾದಿ ಪ್ರತಿವಾದಿಗಳಿಗೂ ನಡೆಯುವುದು (ಹಿಂದಸಾ. ೦೦೬). ೨. ವಿರುದ್ಧವಾಗಿ ಮಾತನಾಡುವವನು; ವಿರೋಧಿಸುವವನು; ಅಸಮ್ಮತಿಯನ್ನು ಸೂಚಿಸುವವನು : ಗಾಬರಿಗೊಳಬೇಡ ನಾಚಿಕೆಯನು ಬಿಡು ಪ್ರತಿವಾದಿಯನು ಕಡೆಗಣಿಸು (ಇಂಶಾಪ. ೦೬೬-೬೬); ಸುಸಂಬದ್ಧ ವ್ಯವಸ್ಥೆಯನ್ನು ತೋರಿಸಿ ಈ ಸೂಚಿಯನ್ನು ಒಣ್ಣಿಸುವ ಪ್ರತಿವಾದಿಗಳೂ ಇದ್ದಾರೆ (ಗ್ರಂಶಾಶಾ ೩೯). ೩. ನ್ಯಾಯಾಲಯ, ಆಯೋಗ ಮೊದ ಲಾದ ನ್ಯಾಯನಿರ್ಣಯಸ್ಥಾನಗಳಲ್ಲಿ ಬೇರೊಬ್ಬನಿಂದ ಆರೋಪ ವನ್ನು ಹೊಂದಿರುವವನು ; ಆರೋಪಿತ : ವಾದಿ ಮತ್ತು ಪ್ರತಿ ವಾದಿಗಳು ಸಂಕಟದಿಂದ ಸುತ್ತಾಡುತ್ತಿದ್ದರು (ಭುಸರು. ೨೩) ; ವಾದಿಯು ತನ್ನ ದಾವಾ ಅರ್ಜಿಯಲ್ಲಿ ಅಂಥಾ ಮನುಷ್ಯನನ್ನು ನೇಮಿಸಿದ್ದರೆ, ಪ್ರತಿ ವಾದಿಯು ಸಹ ಒಬ್ಬನನ್ನು ನೇಮಿಸಬೇಕೆಂದು ಸಮನ್ ಮೂಲಕ ಆತನಿಗೆ ತಿಳಿಸತಕ್ಕದ್ದು (ಗ್ರಾಮಪಾಕ. ೦೬). [ಸಂ. ಪ್ರತಿವಾದಿನ್]

**ಪ್ರತಿವಾದಿಸು** (ಕ್ರಿ). ೧. ಎದುರಿಸಿ ಮಾತನಾಡು ; ವಿರುದ್ಧವಾಗಿ ಮಾತನಾಡು : ಕೆಡೆನುಡಿಯುವೆ ಅನ್ಯರ ಪ್ರತಿವಾದಿಸದಿದ್ದರೆ ಏನ

ಮಾಡನಯ್ಯಾ ಲಿಂಗವು (ಬಸವ. ೨೪೬). ೨. ಒಬ್ಬನ ಸಿದ್ಧಾಂತವನ್ನು ಖಂಡಿಸಿ ಮಾತನಾಡು ; ಒಬ್ಬನು ಪ್ರತಿಪಾದಿಸುವ ವಿಷಯವನ್ನು ಒಪ್ಪದೆ ನಿರಾಕರಿಸು : ಮತಮತಾಂತರಗಳ ಸಂಘರ್ಷಣದ ಯುಗದಲ್ಲಿ . . . ಒಬ್ಬನು ಒಂದನ್ನು ಕುರಿತು ವಾದಿಸುವುದು ಮತ್ತೊಬ್ಬನು ಅದನ್ನು ಪ್ರತಿವಾದಿಸುವುದು ... ಎಲ್ಲ ಮತಗಳಲ್ಲಿಯೂ ಕಂಡುಬರುವ ಮಾತು (ಸಾಹಿಸ. ೧೪೬); ಶೂನ್ಯವಾದಿಗಳಾದ ಬೌದ್ಧರು 'ಸರ್ವಂ ಶೂನ್ಯಂ' ಎಂದು ವಾದಿಸಿದರೆ ಸಾಂಖ್ಯರು 'ಸರ್ವಂ ಸತ್ಯಂ' ಎಂದು ಪ್ರತಿವಾದಿಸುತ್ತಾರೆ (ಭಾರದ. ೧೨೩). [ಪ್ರತಿವಾದ +— ಇಸು₃]

**ಪ್ರತಿವಾಸುದೇವ** (ನಾ). =ಪ್ರತಿನಾರಾಯಣ: ತನ್ನಿವಾಸಿಗಳ ದೇಹಾಯುಃಪ್ರಮಾಣಂಗಳುಮಂ ಸುಖದುಃಖಾದಿಗಳುಮಂ ತೀರ್ಥಕರ ಚಕ್ರಧರ ಬಲದೇವ ವಾಸುದೇವ ಪ್ರತಿವಾಸುದೇವ ಕಥಾಸಂಬಂಧಮುಮಂ ನಿರ್ಣಯಂ ಮಾಡಿದಾಗಳ್ (ಆದಿಪು. ೧೦-೬೩ ವ); ಬಲದೇವರುಂ ನಂದಿಪ್ರಮುಖನವ ವಾಸುದೇವರುಂ ಶ್ರೀಕಂಠಪ್ರಮುಖನವಪ್ರತಿವಾಸುದೇವರುಂ ಅಪ್ಪರ್ (ತತ್ತ್ವಸ್ತ್ರ. ೦೯೯). [ಸಂ.]

**ಪ್ರತಿವಿತರ್ಕಿತ** (ಗು). ಚೆನ್ನಾಗಿ ಚರ್ಚಿಸಿದ, — ವಿಚಾರ ಮಾಡಿದ : ಪ್ರತಿವಿತರ್ಕಿತ ಲಕ್ಷಣಲಕ್ಷ್ಯ[ನಾ]ಶ್ರಿತಮಹಾನೃಪತುಂಗಸಭಾಸದಂ (ಕವಿರಾ. ೩-೨೦೯). [ಸಂ.]

**ಪ್ರತಿವಿದ್ಯೆ** (ನಾ). [ಜೈನ]ಮಾಯೆಯಿಂದ ಏನನ್ನಾದರೂ ಸೃಷ್ಟಿಸುವ ವಿದ್ಯೆಗೆ ವಿರುದ್ಧವಾಗಿ ಅದನ್ನೆಲ್ಲ ನಾಶಪಡಿಸುವ ವಿದ್ಯೆ : ಪ್ರತಿವಿದ್ಯೆಯನಾಕೆ ಕುಲಕ್ಷತಿಯುಂ ಪತಿಗಪ್ಪ ಹಾನಿಯಂ ಬಗೆಯದೆ ದುರ್ಮತಿ ಕೊಟ್ಟಳ್ (ಶಂರಾಪಾ. ೧೦-೧೯೩). [ಸಂ. ಪ್ರತಿವಿದ್ಯಾ]

**ಪ್ರತಿವಿಷ** (ನಾ). ವಿಷವನ್ನು ಪರಿಹರಿಸುವ ವಿಷ : ಪ್ರತಿವಿಷಮಗ್ನಿಗಗ್ನಿ ವಿಷಕಂ ವಿಷಮೆಂಬವೊಲಾ ನಿಶಾಚರಂಗತಿಬಲರೀ ನಿಶಾಟರಿವರಕ್ಕೆ (ರಂಕಥಾ. ೦೨-೯). [ಸಂ.]

**ಪ್ರತಿವಿಷೆ** (ನಾ). ಒಂದು ಬಗೆಯ ಗಂದಿಗೆಪದಾರ್ಥ; ಅತಿಬಜೆ : "ವಿಶ್ವಾ, ವಿಷಾ, ಪ್ರತಿವಿಷಾ . . . ಮಹೌಷಧಂ—೮ ಅತಿಬಜೆ ಹೆಸರು ; ಗ್ರಂಥಿದ್ರವ್ಯವಿಶೇಷವು" (ಸಿದ್ಧಾಂತಿ. ೦೩೯). [ಸಂ. ಪ್ರತಿವಿಷಾ]

**ಪ್ರತಿವಿಹೀನ** (ನಾ). ಸಮಾನವಿಲ್ಲದುದು; ಅಸದೃಶವಾದುದು : ಚೆಲುವಿನಿಂ ತ್ರೈಲೋಕ್ಯದೊಳು ಪ್ರತಿವಿಹೀನವೆನಿಸಿರ್ಪ ಕೀರ್ತ್ಯಾಳಾಪದಿಂದಯೋಧ್ಯಾಪುರದ ದುರ್ಗವಿಂತೆಸೆದುದೇವಣ್ಣಿಸುವೆನು (ಹಕಕಾ. ೦೦-೩೩). [ಸಂ.]

**ಪ್ರತಿವೀರ** (ನಾ). ಎದುರಿಸುವ ಶೂರ : ಈಷಣತ್ರಯದೂರ . . . ರೋಷಣಪ್ರತಿವೀರ ರಣವಿಜಿಗೀಷಣಾಧಿಕಶೂರ (ಬಸಪು. ೨೦-೩೮). [ಸಂ.]

**ಪ್ರತಿವೆರಸು** (ಕ್ರಿ). ಒಂದಕ್ಕೆ ಬದಲಾಗಿ ಮತ್ತೊಂದನ್ನು ಸೇರಿಸು ; ಪ್ರತಿವಸ್ತುವನ್ನು ಬೆರಸು : ನೆವದೊಳೆಡೆಯಾಡಿಸುತ ತವೆ ಸಖಿನ ಸುಡಿಯಿಸುತ ಕವಿದಿರಲು ಒಗಿದ ಚಿನ್ನವನು ಪ್ರತಿವೆರಸಿ ತವಕದಲಿ ತೆಗೆವ (ಸರ್ವಜ್ಞ. ೮೯೦೩). [ಪ್ರತಿ+ಬೆರಸು₁ (<ಬೆರೆಯಿಸು)]

**ಪ್ರತಿವೆಱು** (ಕ್ರಿ). ಬೇರೊಂದು ಆಕಾರವನ್ನು ಪಡೆ ; ರೂಪಾಂತರವನ್ನು ಹೊಂದು : ಶ್ರುತಿ ಶಾಸ್ತ್ರಾಗಮುಮುಪನಿಷತ್ಪುರಾಣ ಪ್ರತಿವೆತ್ತು ಹರಿಯ ನಿಟ್ಟಿಸಲು ಅತಿಭಕುತಿಯಲಿ ಬಂದಂತೆ ರಂಜಿಸಿತು ಗೋಮತಿನದಿ ದ್ವಾರಕಾಪುರದಿ (ಮೋಹತ. ೨-೩೬). [ಪ್ರತಿ+ಪೆಱು₁]

**ಪ್ರತಿವ್ಯೂಹ** (ನಾ). ಶತ್ರುಗಳು ಒಡ್ಡಿರುವ ಸೇನಾರಚನೆಗೆ ಪ್ರತಿಯಾಗಿ ಒಡ್ಡುವ ಸೇನಾರಚನೆ : ಎಲೈ ದುರ್ವಿಧಿಯೆ, ನಿನ್ನ ವ್ಯೂಹಕೆ ಪ್ರತಿವ್ಯೂಹಮಂ ಒಡ್ಡದಿರೆ ನಷ್ಟಬುದ್ಧಿಯೆ ನಾ ದಿಟಂ, ದುಷ್ಟಬುದ್ಧಿಯಲ್ತು ! (ಚಂದ್ರಸ. ೯೨-೨೬); ಪಾಂಡವರು ತಮ್ಮ ಕಡೆ ಅರ್ಧಚಂದ್ರಾಕಾರದ ಪ್ರತಿವ್ಯೂಹವನ್ನು ರಚಿಸಿದರು (ಪಕಥಾ. ೨೬೦). [ಸಂ.]

**ಪ್ರತಿಶಾಸನ** (ನಾ). ೧. ಭೃತ್ಯನಿಗೆ ಕಾರ್ಯಗಳನ್ನು ನಿಯಮಿಸುವುದು,-ಆಜ್ಞಾಪಿಸುವುದು : "ಪ್ರತಿಶಾಸನಂ ... ಭೃತ್ಯರನ್ನು ಕರೆದು ಹೀಗೆ ಮಾಡು ಎಂಬದಾಗಿ ಆಜ್ಞಾಪಿಸುವುದು" (ಸಿದ್ಧಾಂತಿ. ೩೬೭). ೨. ಮೂಲಶಾಸನದ ಇನ್ನೊಂದಂ ಪ್ರತಿ : ಆ ಶಾಸನಂ ಸ್ಫುಟಿತವಾಗಲು . . . ಧಾರಾಪೂರ್ವ್ವಕವ್ಮಾಡಿ ಪ್ರತಿಶಾಸನವಂ ಕೊಟ್ಟರು (ಸೌಇಇ. XI – i, ೩೦-೩೩ ; 1138). ೩. ಚಾಲ್ತಿಯಲ್ಲಿರುವ ಆಜ್ಞೆ, ಕಾನೂನು ಮುಂತಾದುವನ್ನು ತಡೆ ಹಿಡಿಯುವುದು. [ಸಂ.]

**ಪ್ರತಿಶ್ಯಾಯ** (ನಾ). ಒಂದು ಬಗೆಯ ಮೂಗಿನ ರೋಗ ; ಪೀನಸ : "ಪ್ರತಿಶ್ಯಾಯಃ, ಪೀನಸಃ—೨ ಪೀನಸರೋಗದ ಹೆಸರುಗಳು" (ಸಿದ್ಧಾಂತಿ. ೦೯೩). [ಸಂ.]

**ಪ್ರತಿಶ್ರಯ** (ನಾ). ೧. ಆಶ್ರಯ ; ಆಸರೆ. ೨. ಸಹಾಯ ; ಸಹಕಾರ. ೩. ಬಡವರಿಗೆ ಅನ್ನದಾನ ಮಾಡುವ ಸ್ಥಳ ; ಛತ್ರ ; ಧರ್ಮಶಾಲೆ : "ಸತ್ರಶಾಲಾ, ಪ್ರತಿಶ್ರಯಃ—ಈ ೨ ಸತ್ರದ ಮನೆ" (ಹಲಾಯು. ೩೦-೦೯೨). ೪. ಮನೆ; ಗೃಹ. ೫. ಸಭೆ : "ಪ್ರತಿಶ್ರಯಃ—ಸಭೆ ಇರತಕ್ಕ ಸ್ಥಳ, ಮನೆ" (ಸಿದ್ಧಾಂತಿ. ೯೦೦). ೬. ಯಜ್ಞಶಾಲೆ. ೭. ಜೈನಮಠ. ೮. ಒಪ್ಪಿಗೆ ; ಅಂಗೀಕಾರ. [ಸಂ.]

**ಪ್ರತಿಶ್ರವ** (ನಾ). ೧. ಪ್ರತಿಧ್ವನಿ. ೨. ಭಾಷೆ ; ಪ್ರತಿಜ್ಞೆ : "ಆಗೂಃ, ಸಂಗರಃ, ಸಂಧಾ, ಪ್ರತಿಶ್ರವಃ, ಸಂಶ್ರವಃ, ಪ್ರತಿಜ್ಞಾ—ಈ ೬ ಪ್ರತಿಜ್ಞೆ" (ಹಲಾಯು. ೦೦೬-೩೦). ೩. ಒಪ್ಪಿಗೆ ; ಸಮ್ಮತಿ. [ಸಂ.]

**ಪ್ರತಿಷಿದ್ಧ** (ನಾ). ೧. ತಡೆದುದು ; ನಿಷೇಧಿತವಾದುದು: ಯಾರೊಬ್ಬರೆ ಆಗಲಿ . . . ಸಂಸತ್ತಿನ ದ್ವಾರಾ ರಚಿತವಾದ ಯಾವುದಾದರೂ ವಿಧಿಯ ಉಪಬಂಧಗಳಿಂದ ತಾವು ಹಾಗೆ ಮಾಡಕೂಡದೆಂದು ಪ್ರತಿಷಿದ್ಧವಾಗಿರುವುದು ಅವರಿಗೆ ತಿಳಿದಿದ್ದೂ ಅವರು ಅದರ ಸದಸ್ಯಸ್ಥಾನದಲ್ಲಿ ಕುಳಿತರೆ . . . ದಂಡದ್ರವ್ಯವನ್ನು ಕೊಡಲು ಬದ್ಧರಾಗಿರತಕ್ಕುದು (ಭಾಥಾವ. ೩೦). ೨. ತಿರಸ್ಕೃತವಾದುದು. [ಸಂ.]

**ಪ್ರತಿಷೇಧ** (ನಾ). ೧. ಅಡ್ಡಿ ; ತಡೆ ; ನಿಷೇಧ : ಪ್ರತಿಪದಾರ್ಥತತ್ತ್ವಭೇದದೊಳ್ ಪ್ರತಿಷೇಧಮಂ ನೆಗಳ್ಚುಮನಿತೆ ಮಾಟ್ಕಿಯಿಂದತಿಶಯಾಕ್ಷೇಪಗಣಸಾಸ್ಯತಿಗತಿ (ಕವಿರಾ. ೩-೦೦೭) ; ಕುರುಪಿತಾಮಹಂ ಸಂಜಯನಂ ಧೃತರಾಷ್ಟ್ರನಲ್ಲಿಗೆ ಸಂಧಾನವಾರ್ತೆಯಂ ಸಮಕೊಳಿಸುವಂತನಾಗತಬಾಧಾಪ್ರತಿಷೇಧಂ ಮಾಡುವಂತಟ್ಟೆ (ಕುಕಥಾ. ೦೩-೬೦ ವ) ; ಸಂಭಾವನಾರ್ಥದಲ್ಲಿ ಮಧ್ಯಮಪುರುಷದ ರೂಪಗಳು ಕೆಲವು ವೇಳೆ 'ಈ ಕೆಲಸವನ್ನು ಮಾಡಬೇಡ' ಎಂಬ ಪ್ರತಿಷೇಧದ ಅರ್ಥವನ್ನೂ ಕೊಡುತ್ತವೆ (ಹುರ್ಕ್ಷು. ೯೭). ೨. ಇಲ್ಲವೆಂದು ಹೇಳುವುದು ; ನಿಷೇಧಿಸುವುದು : ಜೀವನಿಲ್ಲೆಂಬ ನಿನ್ನ ಪ್ರತಿಷೇಧೋಕ್ತಿಯಿಂದಮೆ ಜೀವಸಿದ್ಧಿ ಹೇಳಾಸಾಧ್ಯಂ (ಶಾಂತಿಪು ೯-೦೩೯ ವ). ೩. ವಿರುದ್ಧವಾದ ಮಾತು ; ವ್ಯತಿರಿಕ್ತವಾದ ನುಡಿ. ೪. [ಕಾವ್ಯಮೀ] ಅರ್ಥಾಲಂಕಾರದ ಒಂದು ಭೇದ ; ಪ್ರಸಿದ್ಧವಾದ ವಿಷಯಂವನ್ನು ಇಲ್ಲವೆನ್ನುವುದು : ಖ್ಯಾತ ನಿಷೇಧದ ಕೀರ್ತನಂ . . . ಪ್ರತಿಷೇಧಂ(ಕರಕ. ೦೦೯-೩೦೯). ೫. [ವ್ಯಾಕ] ನಿಷೇಧಾರ್ಥ: ವುದಿಯದು ಲೋಪಂ ಪ್ರತಿಷೇಧದೊಳ್(ಶಬ್ದ. ೯೭). ೬. [ರಾಜನೀ] ನಿಷೇಧಾಜ್ಞೆ ; ಪ್ರತಿಬಂಧಕಾಜ್ಞೆ : ಉಚ್ಚತಮನ್ಯಾಯಾಲಯದವರು ಆಯಾ ಸಂದರ್ಭದಲ್ಲಿ ಉಚಿತವಾಗಿರಬಹುದಾದಂತೆ ೧. ಬಂದೀಪ್ರತ್ಯಕ್ಷೀಕರಣ, ೨. ಪರಮಾದೇಶ, ೩. ಪ್ರತಿಷೇಧ, ೪. ಅಧಿಕಾರಪೃಚ್ಛಾ . . . ಅಥವಾ ನಿರೂಪಲೇಖವನ್ನಾಗಲಿ ಸಾದರು ಮಾಡಲು ಶಕ್ತರಾಗಿ ಇರತಕ್ಕುದು (ಭಾಥಾವ. ೦೯). [ಸಂ.]

**ಪ್ರತಿಷೇಧಕ್ರಿಯೆ** (ನಾ). [ವ್ಯಾಕ] ನಿಷೇಧಾರ್ಥವನ್ನು ತಿಳಿಸುವ ಕ್ರಿಯಾಪದ : ಪರಿಭಾವಿಸೆ ಕಾಲತ್ರಯಪರಿಣಾಮಿಗಳೆನಿಸಿ ನೆಗಳ್ಚ

ಮೂಱುಂ ಕ್ರಿಯೆಯೊಳ್ ನಿರುತಂ ಪ್ರತಿಷೇಧಕ್ರಿಯೆ ಬರೆ ಭೂತಾರ್ಥ ದೊಳೆ ಸಲ್ವುದೆಂಬರ್ ಪಿರಿಯರ್ (ಶಮತ. ೨೨೨). [ಸಂ. ಪ್ರತಿಷೇಧಕ್ರಿಯಾ]

**ಪ್ರತಿಷೇಧವಾದ** (ನಾ). [ಅದ್ವೈತ] ಮೋಕ್ಷದಶೆಯಲ್ಲಿ ಆತ್ಮವ್ಯತಿರಿಕ್ತ ವಾದ ಯಾವುದೂ ಇರುವುದಿಲ್ಲವೆಂದು ಪ್ರತಿಪಾದಿಸುವುದು : ಈ ಮಾರ್ಗದಲ್ಲಿ ಬಹುಕಾಲ ಪರಿಶ್ರಮಪಟ್ಟವರು ಮೂರನೆಯ ಸೋಪಾನ ವೆಂಬ ಸುಷುಪ್ತ್ಯವಸ್ಥಾಸದೃಶವಾದ ಪರಮಾರ್ಥಾವಸ್ಥೆಗೆ ಉತ್ತಮಾಧಿ ಕಾರಕ್ಕೆ ಅರ್ಹರಾಗುವರು. ಇದೇ ಪ್ರತಿಷೇಧವಾದ, ಪರಮಾರ್ಥವಾದ (ಹಿಂದಶಾ. ೦೯೨). [ಸಂ.]

**ಪ್ರತಿಷೇಧಾಲಂಕಾರ** (ನಾ). =ಪ್ರತಿಷೇಧ ೪ : ಪ್ರಸಿದ್ಧಮಾದ ನಿಷೇಧಮಂ ಬಣ್ಣಿಸಲ್ ಪ್ರತಿಷೇಧಾಲಂಕಾರಂ (ಪರಿಶ. ೦೦೩-೩೦೫ ವೃತ್ತಿ). [ಸಂ.]

**ಪ್ರತಿಷೇಧಿಸು** (ಕ್ರಿ). ತಡೆ ; ನಿರೋಧಿಸು : ಯೇಸುವೆ . . . ಬಂದಿ ಗಳಿಗೆಲ್ಲ ಸ್ವಾತಂತ್ರ್ಯ ನೀಡುವ ಸಲುವಾಗಿ ತಾನು ಬಂದಿದ್ದುದಾಗಿ ತಿಳಿಸಿ, ಹಿಂಸಾಕಾರ್ಯವನ್ನೆಲ್ಲ ಪ್ರತಿಷೇಧಿಸಿದ್ದನು (ಪುನರು. ೦೬೯).

[ಪ್ರತಿಷೇಧ + — ಇಸು$_3$]

**ಪ್ರತಿಷ್ಟಂಭ** (ನಾ). ಅಡ್ಡಿ ; ಅಡಚಣೆ ; ನಿರೋಧ : "ಪ್ರತಿಬಂಧಃ, ಪ್ರತಿಷ್ಟಂಭಃ — ೨ ಕಾರ್ಯವಿಘಾತವು" (ಚಿದ್ಗಾಂಕ. ೩೬೩). [ಸಂ.]

**ಪ್ರತಿಷ್ಠಾಕರಣ** (ನಾ). ದೇವತಾವಿಗ್ರಹದ ಪ್ರತಿಷ್ಠಾಪನೆಯನ್ನು ಮಾಡುವುದಂ : ಪ್ರತಿಷ್ಠಾಕರಣ, ಯಂತ್ರೋದ್ಧಾರಣ . . . ಮೊದಲಾದ ವಿವರಣಗಳು . . . ಪಾಂಚರಾತ್ರಾಗಮದಲ್ಲಿಯೂ ಸುಂದರ ವಾಗಿ ಚಿತ್ರಿತವಾಗಿವೆ (ಭಾರತ. ೭೬). [ಸಂ.]

**ಪ್ರತಿಷ್ಠಾನ** (ನಾ). ೧. ತಳಪಾಯ. ೨. ನಿವೇಶನ. ೩. ವೇದಿಕೆ. ೪. ಯಾವುದಾದರೊಂದು ಸತ್ಕಾರ್ಯವು ನಡೆಯಲೆಂದು ನಿಧಿ ಯನ್ನು ಸ್ಥಾಪಿಸುವುದು, — ನೆಲೆನಿಲ್ಲುವಂತೆ ಮಾಡುವುದು. ೫. ದತ್ತಿಸ್ಥಾಪನೆಯನ್ನು ನೋಡಿಕೊಳ್ಳಲು ಇರುವ ಸಂಸ್ಥೆ ಅಥವಾ ವ್ಯವಸ್ಥೆ : ನನಗೆ ನ್ಯೂಯಾರ್ಕಿನ ರಾಕಿಫೆಲರ್ ಪ್ರತಿಷ್ಠಾನದವರ (The Rockefeller Foundation) ಒಂದು ವಿಶೇಷವೇತನ . . . ದೊರೆಯಿತು (ಪಂಟಿರು. vii, ೫೦೬). ೬. ಚಂದ್ರವಂಶದ ಮೊದಲಿನ ದೊರೆಗಳ ರಾಜಧಾನಿಯಾಗಿದ್ದ ಗಂಗಾತೀರದಲ್ಲಿನ ಒಂದು ನಗರ. ೭. ಶಾಲಿವಾಹನನ ರಾಜಧಾನಿಯಾಗಿದ್ದ ಪೈಠಣ. [ಸಂ.]

**ಪ್ರತಿಷ್ಠಾಪಕ** (ನಾ). ಸ್ಥಾಪಿಸುವವನು ; ನೆಲೆಗೊಳಿಸುವವನು : 'ಧರ್ಮಪ್ರತಿಷ್ಠಾಪಕ' ಪರಾ. [ಸಂ].

**ಪ್ರತಿಷ್ಠಾಪನ** (ನಾ). ನೆಲೆಗೊಳಿಸುವುದು ; ಸ್ಥಾಪಿಸುವುದು : ವಿಶುಧ ವೈದಿಕಾದ್ವೈತಸಿದ್ಧಾಂತಪ್ರತಿಷ್ಠಾಪನ ಶಿವಗುರುಭಕ್ತಿಪರಾಯಣರಾದ ಕೆಳದಿ ವೆಂಕಟಪ್ಪನಾಯಕರು . . . ಪುತ್ರರಾದ ವೀರಭದ್ರನಾಯಕರು (ಎಪಿಕ. ೧೯೪೪, ೪೭-೯ ; 1641). [ಸಂ.]

**ಪ್ರತಿಷ್ಠಾಪನಾಸಮಿತಿ** (ನಾ). [ಜೈನ] ಸಾಧಕರ ಇಪ್ಪತ್ತೆಂಟು ಮೂಲ ಗುಣಗಳಲ್ಲಿ ಹೇಳಿರುವ ಪಂಚಸಮಿತಿಗಳಲ್ಲಿ ಒಂದು ; ಉತ್ಸರ್ಗ ಸಮಿತಿ : ಈ ಅವಸ್ಥೆಯಲ್ಲಿದ್ದ ಸಾಧುಗಳಿಗೆ ಇಪ್ಪತ್ತೆಂಟು ಮೂಲಗುಣ ಗಳನ್ನು ಹೇಳಿದ್ದಾರೆ. (೧). ಅಹಿಂಸೆ . . . (೧೦). ಪ್ರತಿಷ್ಠಾಪನಾ ಸಮಿತಿ (ಜೀವರಹಿತಸ್ವಚ್ಛಭೂಮಿಯಲ್ಲಿ ಮಲಮೂತ್ರ ವಿಸರ್ಜಿಸುವುದು) ಈ ಗುಣಗಳಿಂದ ಸಾಧಕನು ತನ್ನ ಅಧ್ಯಾತ್ಮಸಾಧನೆಯಲ್ಲಿ ಪ್ರಗತಿಯನ್ನು ಹೊಂದುವನು (ಕೈಶಕ. ೪೯೬). [ಸಂ.]

**ಪ್ರತಿಷ್ಠಾಪನೆ** (ನಾ). ದೇವತಾವಿಗ್ರಹವನ್ನು ಶಾಸ್ತ್ರೋಕ್ತವಾಗಿ ಸ್ಥಾಪಿಸುವುದು : ಪ್ರತಿಷ್ಠಾಪನೆಗೆ ಪೂರ್ವಭಾವಿಯಾದ ವಿಧಿಗಳೆಲ್ಲ ಸಾಂಗವಾಗಿ ನಡೆದುವು (ಶಾಂತಲಾ ೧೨೯); ಭಗವಾನ್ ಶಾಂತಿನಾಥಸ್ವಾಮಿ ಯುವರ ಪ್ರತಿಷ್ಠಾಪನೆಯ ನೆನಪಿಗಾಗಿ . . . ಒಂದು ಪುಸ್ತಕವನ್ನು ಪ್ರಕಟಿಸಬೇಕೆಂದು ಹಿರಿಯರು ಸಲಹೆ ಇತ್ತರು (ಶಿಟ್ಟೋಶಾಂ. II, ೫೦೬). [ಸಂ. ಪ್ರತಿಷ್ಠಾಪನ]

**ಪ್ರತಿಷ್ಠಾಪನೆಗೊಳ್ಳು** (ಕ್ರಿ). ನೆಲಸು ; ಸ್ಥಿರವಾಗಿರು : ಅವಳ ಹೃದಯದಲ್ಲಿ ಪತಿಪ್ರೇಮ ಅಧಿಷ್ಠಾನಗೊಂಡಿದ್ದಂತೆಯೇ ಭ್ರಾತೃ ಪ್ರೇಮವೂ ಪ್ರತಿಷ್ಠಾಪನೆಗೊಂಡಿತ್ತು (ಕುನರು. ೪೬೦).

[ಪ್ರತಿಷ್ಠಾಪನೆ + ಕೊಳ್ಳು$_1$ ( < ಕೊಳ್$_1$)]

**ಪ್ರತಿಷ್ಠಾಪಿಸು** (ಕ್ರಿ). ೧. ನೆಲೆಗೊಳಿಸು ; ಸ್ಥಾಪಿಸು : ನೊಳಂಬರ ಪ್ರಭುತ್ವವನ್ನು ಪುನಃ ಪ್ರತಿಷ್ಠಾಪಿಸಿದ ನೊಳಂಬಾಧಿರಾಜ ಮಹೇಂದ್ರನು, ಒಂದನೆಯ ಮಹೇಂದ್ರನಂತೆ ಮಹತ್ವಾಕಾಂಕ್ಷೆಯುಳ್ಳ ದೊರೆಯಾಗಿದ್ದನು (ನೊಳಂಬ. ೩೦). ೨. ದೇವತಾವಿಗ್ರಹವನ್ನು ಪ್ರತಿಷ್ಠೆ ಮಾಡು : ಚಾವುಂಡರಾಯನು ಬಾಹುಬಲಿವಿಗ್ರಹವನ್ನು . . . ವಿಂಧ್ಯಗಿರಿಯ ಮೇಲೆಯೇ ಏಕೆ ಪ್ರತಿಷ್ಠಾಪಿಸಿದನೆಂಬುದನ್ನು ತಿಳಿಸಲು ಹಳೆಯ ಕಥೆಗಳಿವೆ (ಸಮಾಲೋ. ೨೬೦). [ಪ್ರತಿಷ್ಠಾಪನ + — ಇಸು$_3$]

**ಪ್ರತಿಷ್ಠಿತ** (ಗು). ೧. ನೆಲೆಗೊಂಡಿರುವ ; ಸ್ಥಿರವಾಗಿರುವ ; ಶಾಶ್ವತ : ನಿಜರೂಪವಿಜಿತಮಕರಧ್ವಜನಖಿಳದಿಶಾಂತರಪ್ರತಿಷ್ಠಿತಕೀರ್ತಿ ಧ್ವಜನದನಾಳ್ವಂ ಧರಣೀಧ್ವಜನೆಂಬಂ ಖೇಚರೇಂದ್ರಂ (ಶಂಪ್ರಕು. ೬-೬). ೨. ಇರಿಸಿದ ; ಸ್ಥಾಪಿಸಿದ : ಆ ಜಂಬೂದ್ವೀಪದ ನಟ್ಟನಡುವೆ . . . ವಿರಾಜಿರತ್ನಶಿಲಾತಳಪ್ರತಿಷ್ಠಿತಭಗವಜ್ಜನ್ಮಾಭಿಷೇಕಸಿಂಹಾಸನಾಲಂಕೃತಮು ಮಾಗಿ (ಅದಿಪು. ೦-೯೯ ವ). ೩. (ದೇವತಾಮೂರ್ತಿಗಳ ವಿಷಯದಲ್ಲಿ) ಶಾಸ್ತ್ರೋಕ್ತವಿಧಾನದಿಂದ ಪ್ರತಿಷ್ಠೆಮಾಡಿದ,— ಸ್ಥಾಪನೆಮಾಡಿದ. (ನಾ). ೪. ಯಾವುದಾದರೊಂದು ಪದವಿ ಅಥವಾ ಸ್ಥಾನದಲ್ಲಿ ಇರುವವನು,—ಅಧಿಕಾರವನ್ನು ನಿರ್ವಹಿಸು ವಂತೆ ನೆಲೆಗೊಂಡವನು : ಅಂತು ಯುಪರಾಜಪದವೀಪ್ರತಿಷ್ಠಿತಂ ಮಾಡಿ (ಮಲ್ಲಿಪು. ೪-೦೯೩ ವ). ೫. ದೃಢವಾದ ಪಾಂಡಿತ್ಯ ವುಳ್ಳವನು : ಮತ್ತಂ ತುಂಬುರ ಕೌಶಿಕರೊಲ್ ಪಾಡುಂಗಾಟಿಕೆ ಯೊಳಾಂ ಪ್ರತಿಷ್ಠಿತನಪ್ಪಂತೆ ಬಟ್ಟೆದೋಱಿಸೈ (ಅದ್ಭುತ. ೨೦.೦೬). ೬. ಹೆಸರುವಾಸಿಯಾದವನು ; ಕೀರ್ತಿವಂತ ; ಗೌರವಾನ್ವಿತ ವ್ಯಕ್ತಿ : ಅಮಳತತ್ತ್ವಪರಿಷ್ವಗೋಷ್ಠೀವಾಗ್ವರಿಷ್ಠಯಶಃಪ್ರತಿಷ್ಠಿತನು (ಬಸವು. ೨೦-೪); ಪ್ರತಿಷ್ಠಿತರಾದ ದೇಸಾಯರ ಮನೆಗೆ ಪ್ರತಿಷ್ಠಿತರಾದ ಆಚಾರ್ಯರು ಹೆಣ್ಣು ಕೊಟ್ಟರು (ಸಪಂಶೀ. ೯೭). ೭. ಶ್ರೇಷ್ಠವಾದುದು ; ಉತ್ತಮ ವಾದುದು : ಧರ್ಮವೇ ಸರ್ವಪ್ರತಿಷ್ಠಿತ ಧರ್ಮವೆಂಬುದು ಪರಮ- ಪದವಾ ಧರ್ಮವನು ಬಿಟ್ಟಿಹುದು ಬದುಕಲ್ಲ (ಕೌಪ್ರಾ‌ಣ. ೪-೩೯). ೮. ಸ್ಥಾಪನೆ ಹೊಂದಿದವನು; ಪ್ರತಿಷ್ಠಾಪಿತನಾದವನು : ಸರಸರನೆ ಸೌರಾಷ್ಟ್ರನಾಥನು ಪಿರಿಯ ಕಣಜವನೊಡೆದುಕೊಳುತಂ ಕರಮೆಸೆದು ಧರೆಯೊಳ್ ಪ್ರತಿಷ್ಠಿತನಾದನಂದು (ಬಸವು. ೩೩-೨೬). [ಸಂ.]

**ಪ್ರತಿಷ್ಠಿಸು** (ಕ್ರಿ). ೧. ನೆಲೆಗೊಳಿಸು ; ಸ್ಥಾಪಿಸು; ಸ್ಥಿರಪಡಿಸು : ಕನ್ನೆ ಯಿಲ್ಲದೆ ಗಡ ಪೋಗನೆಂದು ಕಡೆಯೊಳ್ ನುಡಿದಾ ನುಡಿಯಂ ಪ್ರತಿಷ್ಠಿಸಲ್ ಪದೆದೊಡೆ ಪೋಗು ನಿನ್ನ ಪತಿಯಂ ಬರವೇಟ್ (ಶಂಪ್ರಕು. ೬-೨೪) ; ಪರವಾದವುಂ ತಿರಸ್ಕರಿಸುತೆ ಶಿವಾಧಿಕ್ಯಮುಂ ಪ್ರತಿಷ್ಠಿಸುತೆ (ಶಪ್ಯ. ೩-೮) ; ಪೊಸತಪ್ಪ ವೀರಶೈವಾಚಾರಮಂ ಪ್ರತಿಷ್ಠಿಸಿ . . . ನಿಜಪದವನು ಒಸೆದೀವನೌ ನಿನ್ನ ಗರ್ಭದರ್ಭಕನುದಯಿಪೊಸಗೆಯ ಸಕಲಗಣಂಜೀವು (ಬಸವು. ೪-೩). ೨. (ದೇವರ ವಿಗ್ರಹವನ್ನು) ಪ್ರತಿಷ್ಠೆ ಮಾಡು ; ಸ್ಥಾಪನೆ ಮಾಡು : ಆ ಚೈತ್ಯಮಂ . . . ಈ ಮಹೇಂದ್ರನ ಮಕುಟಪೀಠದೊಳ್ ನಿಜಾಜ್ಞಾದೇವತೆಯುಂ ಪ್ರತಿಷ್ಠಿಸಿಯುಂ (ಜಗದಿ. ೦೦-೮೦ ವ); ಒಡನೆ ಗುಡ್ಡಾ ದೇವಿಗಳಿಪಲ್ಲಿಗೆ ಪೋಗಿ ಮೃಡಮೂರ್ತಿಯಂ ಪ್ರತಿಷ್ಠಿಸಿ ಪರರ ಸಮಯಮಂ ಜಯಿದು ಭಂಗಿಸಿ (ಚಿಬಪು. ೩೩ ೯೯). [ಪ್ರತಿಷ್ಠೆ + —ಇಸು$_3$]

**ಪ್ರತಿಷ್ಠೆ** (ನಾ). ೧. ಇರುವಿಕೆ ; ಸ್ಥಿತಿ. ೨. ಉನ್ನತಸ್ಥಾನ, –ಸ್ಥಿತಿ : ಕೃಷ್ಣ ನಿನ್ನ ರೂಪವಂ ಸೌಖ್ಯವಪ್ರತಿಷ್ಠೆಯಂ . . . ನೋಡಲ್ ನೀಂ ಪರದೈವತಕಳಾಸ್ವರೂಪನಾಗಿ ತೋರ್ಪೆ (ಜಗಂ. ೯–೭೯ ಪ). ೩. ಭದ್ರವಾಗಿರುವಿಕೆ: ಸ್ಥಿರತೆ. ೪. ಸ್ಥಾಪನೆ ಮಾಡುವುದು ; ಸ್ಥಾಪಿಸುವುದು. ೫. ದೇವತಾವಿಗ್ರಹಗಳನ್ನು ಶಾಸ್ತ್ರೋಕ್ತವಾಗಿ ಸ್ಥಾಪಿಸುವುದು : ತಮ್ಮಯ್ಯನ ಹೆಸರಲು ಚೋಳೇಶ್ವರದೇವರೆಂದು ಪ್ರತಿಷ್ಠೆಯಂ ಮಾಡಿ (ಎಕ. XII. ತಿಪಟೂ. ೬೦–೬೯ ; 1162). ; ಪಂಡಿತರೂ ಆಗಮಿಕರೂ ಸೇರಿ ಶುಭದಿನ ಶುಭಮುಹೂರ್ತವನ್ನು ಪ್ರತಿಷ್ಠೆಗೆ ನಿಶ್ಚಯಿಸಿದರು (ಶಾಂತಲಾ. ೦೨೯). ೬. ಕೀರ್ತಿ ; ಪ್ರಸಿದ್ಧಿ : ಗೌರವವೂ ಪ್ರತಿಷ್ಠೆ ಅಧಿಕಾರಗಳೂ ಕೆಲಸಕ್ಕೆ ಬಾರದ ವಸ್ತುಗಳೆಂದು ಅವನಿಗೆ ಬಹಳ ಕಾಲದಿಂದಲೂ ಗೊತ್ತಾಗಿದ್ದಿತು (ಜಲಜಾ. ೯). ೭. ಗೌರವ; ಹಿರಿಮೆ; ಮರ್ಯಾದೆ: ವಸಿಷ್ಠನು ಯಾವ ದಿಕ್ಕಿನಲ್ಲಿ ಜನ್ಮವನ್ನೈದಿ ಪ್ರತಿಷ್ಠೆಯನ್ನೂ ಧರ್ಮವನ್ನೂ ಪಡೆದನೋ (ಕೃವಾಉ. ೦೭೬). ೮. ರಾಜನೇ ಮೊದಲಾದವರನ್ನು ಪಟ್ಟಕ್ಕೇರಿಸುವುದು, –ಅಧಿಕಾರಕ್ಕೆ ತರುವುದು. ೯. (ಆಲಂ) ಜಂಭ ; ಅಹಂಕಾರ : ಹೀಗೆ ನಾನಾ ವಿಧವಾಗಿ ಪ್ರತಿಷ್ಠೆಯನ್ನು ಕೊಚ್ಚಿಕೊಳ್ಳುತಾ ನನ್ನನ್ನು ಸದ್ದೆ ಮಾಡದೆ ಇರುವವರು (ಸೀತಾಜ. XV. ೦೭). ೧೦. [ಛಂದ] ವರ್ಣಛಂದಸ್ಸಿನಲ್ಲಿರುವ ಇಪ್ಪತ್ತಾರು ಛಂದಸ್ಸುಗಳಲ್ಲಿ ನಾಲ್ಕನೆಯದು ; ಪ್ರತಿಪಾದದಲ್ಲೂ ನಾಲ್ಕು ಅಕ್ಷರಗಳಿರುವ ನಾಲ್ಕುಸಾಲಿನ ವೃತ್ತ: ಅಲ್ಲಿ ಉಕ್ತೆ ಅತ್ಯುಕ್ತೆ ಮಧ್ಯೆ ಪ್ರತಿಷ್ಠೆ . . . ಉತ್ಕೃತಿ ಎಂದಿಪ್ಪತ್ತಾರು ಛಂದಂಗಳಕ್ಕುಂ (ಛಂದೋಂಬು. ೦–೪೭ ಪ); ೪ನೆಯ ಪ್ರತಿಷ್ಠೆಯೆಂಬ ಛಂದಸ್ಸಿನ ಪ್ರತಿಪಾದದಲ್ಲಿಯೂ ಭಗಣ ಮತ್ತು ಒಂದು ಗುರುವುಳ್ಳ ಪದ್ಯವು ಸೌಂದರವೃತ್ತವೆನಿಸುವುದು (ಕೃಶಿ. ೭೪). ೧೧. [ಶೈವ] ನಿಯಂತಿ, ವಿದ್ಯಾ, ಪ್ರತಿಷ್ಠಾ, ಶಾಂತಿ ಮತ್ತು ಶಾಂತ್ಯತೀತಗಳೆಂಬ ಪರಮೇಶ್ವರನ ಐದು ಕಲೆಗಳಲ್ಲಿ ಒಂದು : ಷಡ್ಗುಣೈಶ್ವರ್ಯಸಂಪನ್ನನಾದ ಪರಮೇಶ್ವರನು –ನಿಯತಿ, ವಿದ್ಯಾ, ಪ್ರತಿಷ್ಠಾ, ಶಾಂತಿ, ಶಾಂತ್ಯತೀತಗಳೆಂಬ ಐದು ಕಲೆಗಳಿಗಾಶ್ರಯವಾದ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಮುಖಗಳಿಂದ . . . ಪಂಚಕೃತ್ಯಗಳನ್ನು . . . ಪಂಚಮೂರ್ತಿಗಳಿಂದ ನೆರವೇರಿಸುತ್ತ ಭಕ್ತಾನುಗ್ರಹ ಮಾಡುತ್ತಾನೆಂಬುದು ಶೈವಾಗಮದ ಸಿದ್ಧಾಂತ (ಛಾರಿದ. ೭೪). ೧೨. [ವೀಶೈ] ಸ್ಥಾವರಲಿಂಗ : ಆಕಾಶದ ಸೂರ್ಯ ಹಲವು ಕುಂಭದಲ್ಲಿ ತೋರುವ ತೆರ ಮರ್ಕಿಡದೆ ಪ್ರತಿಷ್ಠೆ ಅಲ್ಲದೆ ಸ್ವಯಂಭು (ಮೋಳಿಗೆ. ೦೦–೯೧).

**ಪ್ರತಿಷ್ಠೆಯ** ಮಾಡು = ಸ್ಥಾಪನೆ ಮಾಡು ; ನೆಲೆಗೊಳಿಸು ; ಸ್ಥಿರಪಡಿಸು : ಶರೀರಂಗಳು ಅನಂತ ಆತ್ಮನೊಬ್ಬನೇ . . . ಇನ್ನು ಆವ ಠಾವಿನಲ್ಲಿ ನಿಮ್ಮ ಕುಲವ ಪ್ರತಿಷ್ಠೆಯ ಮಾಡಿ ತೋರುವಿರೋ (ಸರ್ವಪ. ೦೭೭–೮೫೯). [ಸಂ. ಪ್ರತಿಷ್ಠಾ]

**ಪ್ರತಿಷ್ಠೆಗೆಯ್** (ಕ್ರಿ). (ದೇವತಾವಿಗ್ರಹ ಮುಂತಾದುವನ್ನು) ಸ್ಥಾಪಿಸು : ನುಗುನಾಡ ಒಡೆಯ ಬೆಳೆತೂರ ಒಡೆದು ಬಿಟ್ಟು ಭೂಮಿಲವ್ಪವಾಗಿ ಕೊಟ್ಟು ದೇಗುಲವಂ ಮಾಡಿಸಿ ಕಿಲ್ತು ಪಟ್ಟಲಿಂಗವಂ ಪ್ರತಿಷ್ಠೆಗೆಯ್ದು (ಎಕ. IV. ಹಗ್ಗ. ೦೬–೬; ೪ನೆಯ ಶತ). [ಪ್ರತಿಷ್ಠೆ + ಕೆಯ್$_1$]

**ಪ್ರತಿಸಂಧಿ** (ನಾ). ೧. ಮತ್ತೆ ಸೇರುವುದು, –ಒಟ್ಟುಗೂಡುವುದು. ೨. ಮರುಹುಟ್ಟು ; ಪುನರ್ಜನ್ಮ : ‘ಪ್ರತಿಸಂಧಿಸು’ ಪರಾ. ೩. ವಿರಾಮ ; ನಿಲುಗಡೆ. ೪. ಎರಡು ಯುಗಗಳ ನಡುವಿನ ಸಂಕ್ರಮಣಕಾಲ; ಮನ್ವಂತರ. [ಸಂ.]

**ಪ್ರತಿಸಂಧಿಸು** (ಕ್ರಿ). ೧. ಮತ್ತೆ ಸೇರು, – ಕೂಡು ; ಪುನರ್ಮಿಲನ ಹೊಂದು. ೨. ಮತ್ತೆ ಹುಟ್ಟು ; ಪುನರ್ಜನ್ಮವನ್ನು ಪಡೆ : ಕ್ಲೇಶದಿಂದ ಕೂಡಿದವರು ಪ್ರತಿಸಂಧಿಸುವರು. ಕ್ಲೇಶದಿಂದ ಕೂಡದವರು ಪ್ರತಿಸಂಧಿಸುವುದಿಲ್ಲ (ಬುದ್ಧಪ. ಖಿಲಂದ. ೯೩). [ಪ್ರತಿಸಂಧಿ + –ಇಸು$_3$]

**ಪ್ರತಿಸಮಯಂ** (ಅ). ಎಲ್ಲಾ ಕಾಲದಲ್ಲೂ ; ಯಾವಾಗಲೂ ; ಸರ್ವದಾ : ಪ್ರತಿಸಮಯಮನಂತಗುಣಶಕ್ತಿವಿಚಿತ್ರೈಕಪರಿಣಾಮನಿವೃತ್ತಿಕರಣಕ್ಷಪಕನಾಗಿ (ಆದಿಪು. ೦೦–೦೯ ಪ) ; ದಂಡಕವಾಟಲೋಕಪೂರಣಾಪ್ರತರಕ್ರಿಯೆಗಳೊಳಂ ಪ್ರತಿಸಮಯಂ ಪ್ರಯೋಗಿಸಿ (ಮಲ್ಲಿಪು. ೦೯–೨೫೯) [ಸಂ.]

**ಪ್ರತಿಸರ** (ನಾ). ೧. ರಕ್ಷೆಗಾಗಿ ಕೈ ಅಥವಾ ಕುತ್ತಿಗೆಗೆ ಕಟ್ಟುವ ಮಂತ್ರಿಸಿದ ದಾರ; ತಾಯಿತಿ; ಯಂತ್ರ. ೨. ವಿವಾಹ ಮೊದಲಾದ ಶುಭಕಾರ್ಯಗಳಲ್ಲಿ ಕೈಗೆ ಕಟ್ಟುವ ಅಭಿಮಂತ್ರಿಸಿರುವ ದಾರ; ಕಂಕಣ ; ☞ ಶುಭಕಾರ್ಯಗಳಲ್ಲಿ ಅರಿಶಿನದ ದಾರಕ್ಕೆ ಕೊನೆಯನ್ನು ಕಟ್ಟಿ ಶಾಸ್ತ್ರೋಕ್ತವಾದ ವಿಧಾನದಿಂದ ಪೂಜಿಸಿ ವೇದಮಂತ್ರಗಳಿಂದ ಅಭಿಮಂತ್ರಿಸಿ ಹೆಂಗಸರ ಎಡಮಣಿಕಟ್ಟಿಗೆ ಹಾಗೂ ಗಂಡಸರ ಬಲಮಣಿಕಟ್ಟಿಗೆ ಕಟ್ಟುವ ಸಂಪ್ರದಾಯವಿದೆ : “ಕಂಕಣಂ, ಹಸ್ತಸೂತ್ರಂ, ಪ್ರತಿಸರಂ—ಈ ೩ ನೂಲ ಕಂಕಣಂ” (ಹಲಾಯು. ೯೨–೪೦೪). ೩. ಬಳೆ ; ಕಡಗ : “ ಪ್ರತಿಸರು ಬಳೆಯಕ್ಕು” (ಮಂಗರಾ. ೦೦೦–೨೬). ೪. ಮಾಲೆ ; ಹೂವಿನ ಸರ. ೫. ಸೇವಕ ; ಆಳು. ೬. ಸೈನ್ಯದ “ ಹಿಂಭಾಗ : ‘‘ಪ್ರತಿಸರಃ — ಸೈನ್ಯದ ಹಿಂಭಾಗ ” (ಸಿದ್ಧಾಂತಿ. ೪೦೪). [ಸಂ.]

**ಪ್ರತಿಸರ್ಗ** (ನಾ). ೧. ಪ್ರಥಮಸೃಷ್ಟಿಕರ್ತನಾದ ಬ್ರಹ್ಮನ ಸೃಷ್ಟಿಗೆ ಸಮಾನವಾಗಿ ಮನು, ದಕ್ಷ ಮೊದಲಾದ ಪ್ರಜಾಪತಿಗಳು ಮಾಡಿದ ಸೃಷ್ಟಿ ; ಪ್ರತಿಸೃಷ್ಟಿ ; ☞ ಇದರ ವರ್ಣನೆ ಪುರಾಣದ ಪಂಚಲಕ್ಷಣಗಳಲ್ಲಿ ಒಂದು. ಬ್ರಹ್ಮನು ಸೃಷ್ಟಿಸಿದ ಮನು ಮಾನವರೇ ಮೊದಲಾದವರನ್ನೂ ದಕ್ಷನು ಪಿತೃಗಣವನ್ನೂ ಮರೀಚಿಯು ಕಶ್ಯಪನನ್ನೂ ಸೃಷ್ಟಿಸಿದರು. ೨. ಪ್ರಳಯ; ನಾಶ. ೩. ಪ್ರತಿಯೊಂದು ಸರ್ಗ. [ಸಂ.]

**ಪ್ರತಿಸಾರಣ** (ನಾ). ೧. ಹಿಂದಕ್ಕೆ ಹೋಗುವಂತೆ ಮಾಡುವುದು : ಉತ್ತರತುದಿಗಳನ್ನೇ ಅಥವಾ ದಕ್ಷಿಣತುದಿಗಳನ್ನೇ ಒಂದಕ್ಕೊಂದು ಹೊಂದಿಸಿದರೆ ಅವು ಒಂದರಿಂದೊಂದು ಹಿಂದಕ್ಕೆ ಸರಿಯುತ್ತವೆ. ಈ ಧರ್ಮಕ್ಕೆ ಪ್ರತಿಸಾರಣವೆಂಬ ಹೆಸರು (ಭೌಪಾಠಮು. -೫-೨೨೯). ೨. ಗಾಯಕ್ಕೆ ಮಾಡುವ ಚಿಕಿತ್ಸೆ. ೩. ಗಾಯಕ್ಕೆ ಮುಲಾಮು ಹಚ್ಚುವ ಸಾಧನ. [ಸಂ.]

**ಪ್ರತಿಸೀರೆ** (ನಾ). (ನಾಟಕಾದಿಗಳಲ್ಲಿ ಉಪಯೋಗಿಸುವ) ಬಟ್ಟೆಯ ತೆರೆ ; ಪರದೆ : “ ಅಪಟೀ, ಕಾಂಡಪಟಃ, ಪ್ರತಿಸೀರಾ, ಯವನಿಕಾ, ತಿರಸ್ಕರಿಣೀ — ಈ (೫)ತೆರೆ” (ಹಲಾಯು. ೫೨–೩೫೪). [ಸಂ. ಪ್ರತಿಸೀರಾ]

**ಪ್ರತಿಸೂರ್ಯ** (ನಾ). ೧. = ಪ್ರತಿಬಿಂಬ : ಪ್ರತಿಸೂರ್ಯಂ ಸೂರ್ಯನಿಂದಂ ಬಡಗಲೊಗೆಯೆ ವೃಷ್ಟಿಪ್ರದಂ (ಕೋಕಿಲೋಕ. ೯–೪೭) ; ಪ್ರತಿಸೂರ್ಯಂ ಪಿಂಗಿದಾದಿತ್ಯನೊ ಘನತಿಮಿರಂ ಪಿಂಗಿದೊಂದಿಂದುವೋ . . . ಎಂಬಂತೆ . . . ಶೋಭಾನ್ವಿತನಾಗಿರ್ದಂ ನಳಂ (ಚಳನಂ. ೪೦೫). ೨. ಸೂರ್ಯನಿಗೆ ಸಮಾನನಾಗಿರುವವನು; ಮತ್ತೊಬ್ಬ ಸೂರ್ಯ: ಅರ್ಕ ಬಾಂದಳದೊಳಂ ಬೆಳಗುತಿರೆ ಪ್ರತಿಸೂರ್ಯಯೆತ್ತಣಿಂದಲಿ ಬಂದನೊ (ಪಡಮೋ. ೨೭. ೫೨). ೩. ಒಂದು ಬಗೆಯ ಓತಿಕೇತ; ಗೋಸುಂಬೆ: “ಪ್ರತಿಸೂರ್ಯಃ, ಶಯಾನಕಃ—ಈ ೨ ಗೋಸುಂಬೆ” (ಹಲಾಯು. ೩೯–೬೦). [ಸಂ.]

**ಪ್ರತಿಸೃಷ್ಟಿ** (ನಾ). ೧. = ಪ್ರತಿಸರ್ಗ ೧. ೨. (ಆಲಂ) ಹಿಂದಿನಿಂದಲೂ ಬಂದಿರುವ ಯಾವುದಾದರೂ ವೇಷ, ಭೂಷಣ, ಪದ್ಧತಿಗಳಿಗೆ ಪ್ರತಿಯಾಗಿ ಮತ್ತೊಂದನ್ನು ಕಲ್ಪಿಸುವುದು: ಈಗಿನ ಅದ್ಭುತಕಲಾಕೃತಿಗಳನ್ನು ನೋಡಿ ಅವನ್ನು ವಿಶ್ವಾಮಿತ್ರಸೃಷ್ಟಿಯೆಂದು ಕರೆಯುವ ರೂಢಿ ಈಗಲೂ ಇದೆ. ಇಂತಹ ಪ್ರತಿಸೃಷ್ಟಿಯ ರಚನೆಗೆ ಆಧಾರವಾದ ವಿಜ್ಞಾನವು ಪ್ರತ್ಯಕ್ಷಾದಿ ಪ್ರಮಾಣಗಳಿಂದಲೇ ಸಾಧ್ಯ (ಜನಾತ್ಮ. ೨೨); ಈ ಎಲ್ಲ ಸೌಂದರ್ಯದ ಪ್ರತಿಸೃಷ್ಟಿಯನ್ನು—ನಿರೂಪಣೆಯನ್ನು—ಕಲೋಪಾಸಕನು ತನ್ನ ಕೃತಿಯಲ್ಲಿ ಮಾಡುತ್ತಾನೆ (ಪಶ್ಚಿಕಾ. ೬೪). [ಸಂ.]

**ಪ್ರತಿಸ್ಪಂದನ** (ನಾ). ಕಾವ್ಯ ಮುಂತಾದ ಕಲೆಗಳಲ್ಲಿ ಅಭಿವ್ಯಕ್ತವಾಗಿರುವ ಭಾವಗಳಿಗೆ ಅನುಕೂಲಕರವಾದ, ವಿಮರ್ಶಕನ ಮನಸ್ಸಿನಲ್ಲಿ ಹೊಳೆಯುವ ಭಾವನೆ: ಎಷ್ಟೋ ವೇಳೆ ಕುಮಾರವ್ಯಾಸನ ಕಾವ್ಯಸೃಷ್ಟಿಗೆ ಅನೇಕರು ಪ್ರತಿಸ್ಪಂದನ ಮಾಡಲಾರರು (ರೂಢಿ). [ಸಂ.]

**ಪ್ರತಿಸ್ಪಂದಿಸು** (ಕ್ರಿ). ಮೆಚ್ಚು, ಪ್ರತಿಕ್ರಿಯೆಯನ್ನು ತೋರಿಸು: ಕುಮಾರವ್ಯಾಸಭಾರತದಂಥ ಕಾವ್ಯಗಳಿಗೆ ಪ್ರತಿಸ್ಪಂದಿಸುವುದು ವಿಮರ್ಶಕನಿಗೆ ಹಿರಿಮೆಯನ್ನು ತರುತ್ತದೆ (ರೂಢಿ). [ಪ್ರತಿಸ್ಪಂದನ + —ಇಸು]

**ಪ್ರತಿಸ್ಪರ್ಧಿ** (ನಾ). ೧. ಒಬ್ಬನು ಸಾಧಿಸಲಿರುವ ಗುರಿಯನ್ನು ಸಾಧಿಸಲು ಪೈಪೋಟಿಮಾಡುವ ವ್ಯಕ್ತಿ; ಪ್ರತಿದ್ವಂದ್ವಿ: ಸ್ಥಳಗಳ ಭರತಿಯ ಕಾಲಕ್ಕೆ ಅವಳು ನನಗೆ ಪ್ರತಿಸ್ಪರ್ಧಿಯಾಗಿ ಬರುವಳೆಂದು ನಾನು ಎಣಿಸಿರಲಿಲ್ಲ (ಜೀಹುಂತ. ೨೬೭); ಮಹಾವೈದ್ಯನಾಥ ಅಯ್ಯರ್ ಅವರು ...ಪರಮೇಶ್ವರಭಾಗವತರಿಗೆ ಸರಿಯಾದ, ಸಮನಾದ ಪ್ರತಿಸ್ಪರ್ಧಿ (ಸಂಗೀತ. ೯೪). ೨. ಎದುರಾಳಿ; ವಿರೋಧಿ: ಪ್ರತಿಸ್ಪರ್ಧಿವೀರ ಆಲಾಪಮುಗ್ಗವಂತೆ ಬೆಸಗೊಂಡಳೊರಟಾಗಿ ಆಟವಿಕಸ್ತ್ರೀಯವೋಲ್ (ಚಿತ್ರಾಂಗ. ೨೨-೩೩೬); ಹಿಮಶೈಲವು ಜ್ಯೂಪಿಟರ್ ತನ್ನ ಪ್ರತಿಸ್ಪರ್ಧಿಯನ್ನು ಶಿಕ್ಷಿಸಲು ನಿರ್ಮಿಸಿದ ಕಾರಾಗೃಹವೆಂಬುದು ಬಹುಸೀಮಿತ ದೃಷ್ಟಿಯಲ್ಲಿ ಮಾತ್ರ ನಿಜ (ಬದ್ಧಕ್ರ. XXIV, ೩೬೪೪); ಈ ಎರಡೂ ಕೋಟೆಗಳು ಪ್ರತಿಸ್ಪರ್ಧಿಗಳಾಗಿ ಮತ್ಸರವನ್ನೇ ಕಾರುತ್ತಿದ್ದವು (ರಂಗರೂ. ೦೮೪). [ಸಂ. ಪ್ರತಿಸ್ಪರ್ಧಿನ್]

**ಪ್ರತಿಹತ** (ಗು). ೧. ಹಿಂದಿರುಗಿ ಹೊಡೆಯಿಸಿಕೊಂಡ; ಪ್ರತಿಯಾಗಿ ಹೊಡೆತ ತಿಂದ. ೨. ಗಾಯಗೊಂಡ. ೩. ಹಿಂದಕ್ಕೆ ಅಟ್ಟಿದ; ಹಿಮ್ಮೆಟ್ಟಿಸಿದ. ೪. ಪ್ರತಿಭಟನೆಯನ್ನು ಹೊಂದಿದ; ಎದುರಿಸಿದ. ೫. ಸೋತ; ಸೋಲನ್ನು ಹೊಂದಿದ. ೬. ಕೆಳಕ್ಕೆ ಬಿದ್ದ; ಪತಿತ. ೭. ನಿರಾಶೆಗೊಂಡ; ಆಸೆಯನ್ನು ತೊರೆದ. ೮. ಅಡ್ಡಿಪಡಿಸಿದ; ಪ್ರತಿರೋಧವನ್ನು ಹೊಂದಿದ: ಬಂಗಾಳದಲ್ಲಿ ಅತೃಪ್ತಿಲಕ್ಷಣ ಅತ್ಯಂತ ಪ್ರಬಲವಾಗಿ ಕಂಡುಬರುತ್ತಿರುವುದರ ಏಕಮಾತ್ರಕಾರಣ ನಮ್ಮ ಪ್ರತಿಹತ ಗಮನ (ಶಿಬಂಧ. II, ೦೯೦). ೯. ಇನ್ನೊಬ್ಬರ ದ್ವೇಷಕ್ಕೊಳಗಾದ. ೧೦. ಹೋಗಲಾಡಿಸಿದ; ನಾಶಪಡಿಸಿದ. (ನಾ). ೧೧. ಸೋತುದು; ಪರಾಭವಗೊಂಡುದು: ಪ್ರತಿಹತಮಾದುದು ಪರಶುರಾಮನಿಗಾ ರಘುರಾಮನಾ ಸರಿತ್ಪತಿ ಕುಮರಂಕರಾಮನಿನದೇಂ ಕಟೀಪಾದುದೊ ಮೂಡುಸೂಟಿಕೊಳು (ಗದಾಯು. ೦-೨೪). ೧೨. ಅಡ್ಡಿಪಡಿಸುವುದು; ತಡೆಯುವುದು: "ಪಜಿಹತ ಪ್ರತಿಹತಮಪಕ್ಕು" (ಶಬಕಂ. ೨೪೬). ೧೩. ನಿರಾಶನಾದವನು: "ಮನೋಹತಃ, ಪ್ರತಿಹತಃ, ಪ್ರತಿಬದ್ಧಃ, ಹತಃ —೪ ಮನಸ್ಸಿನ ಉತ್ಸಾಹವು ತಪ್ಪಿದವನ ಹೆಸರು, ಮನಗೆಟ್ಟವನು" (ಶಿವ್ಯಾಂಶಿ. ೩೩೪). [ಸಂ.]

**ಪ್ರತಿಹರ್ತೃ** (ನಾ). ೧. ಹೊಡೆಯುವವನಿಗೆ ಪ್ರತಿಯಾಗಿ ಹೊಡೆಯುವವನು. ೨. ಪರಿಹರಿಸುವವನು; ನಿವಾರಿಸುವವನು. ೩. ಯಾಗಗಳಲ್ಲಿ ಭಾಗವಹಿಸುವ ಹದಿನಾರುಜನ ಋತ್ವಿಜರಲ್ಲಿ ಒಬ್ಬ; ಉದ್ಗಾತೃವಿಗೆ ಸಹಾಯಕನಾಗಿರುವವನು: ಯಥಾವಿಹಿತವಾಗಿ ಮಂತ್ರಮಂತ್ರಾರ್ಥಗಳೆಂಬಲ್ಲಿ ನೈಷ್ಠಿಕರಾದ...ಪ್ರತಿಹರ್ತೃ... ಅಗ್ನೀಧ್ರಪ್ರಮುಖ ಋತ್ವಿಕ್ಸಂಪತ್ತಿಯಿಂದಲೂ (ಶಿವೀಕ. ೦೩೪); ಪ್ರತಿಹಾರದ ದೇವತೆ ಯಾವುದು? ಎಂಬ ಪ್ರತಿಹರ್ತೃವಿನ ಪ್ರಶ್ನೆಗೆ ಅನ್ನವೆಂದೂ ಚಾಕ್ರಾಯಣನು ಉತ್ತರವನ್ನು ಕೊಟ್ಟರುತ್ತಾನೆ (ಬ್ರಿಹ್ಮಥಾ. ೦೯೬ ಅಡಿಟಿ). P ಬ್ರಹ್ಮ, ಉದ್ಗಾತೃ, ಹೋತೃ, ಅಧ್ವರ್ಯು, ಬ್ರಾಹ್ಮಣಾಚ್ಛಂಸಿ, ಪ್ರಸ್ತೋತೃ, ಮೈತ್ರಾವರುಣ, ಪ್ರತಿಪ್ರಸ್ಥಾತೃ, ಪೋತೃ, ಪ್ರತಿಹರ್ತೃ, ಅಚ್ಛಾವಾಕ, ನೇಷ್ಟೃ, ಅಗ್ನೀಧ್ರ, ಸಂಬ್ರಹ್ಮಣ್ಯ, ಗ್ರಾವಸ್ತೋತೃ ಮತ್ತು ಉನ್ನೇತೃ ಎಂಬ ಹದಿನಾರು ಜನರು ಯಾಗದಲ್ಲಿ ಭಾಗವಹಿಸುವ ಋತ್ವಿಜರು. [ಸಂ.]

**ಪ್ರತಿಹಸ್ತ** (ನಾ). ಒಬ್ಬನಿಗೆ ಪ್ರತಿಯಾಗಿ ಇರುವವನು; ಪ್ರತಿನಿಧಿ: "ಪಜಿಯುತ್ತ[ಪಾಠಾಂ. ಪಜಿಹತ್ತ]ನೆಂದು ಪ್ರತಿಹಸ್ತಂ" (ಕಶಸಾ. ೭೬-೬೩೬); ಈ ಧರ್ಮಮಂ ನಿಮ್ಮ ಪ್ರತಿಹಸ್ತನಾಗಿ [ಮಾ]ಡಿಸಿದ ರಾಜರಕ್ಷಿತಂ ಧರ್ಮಮೆಂಬುದಂ (ಸೌಇಇ. XX, ೦೦೨–೪೬; 1140). [ಸಂ.]

**ಪ್ರತಿಹಾರ** (ನಾ). ೧. ಬಾಗಿಲು; ದ್ವಾರ: "ದ್ವಾರದಲ್ಲಿಯುಂ ಪ್ರತಿಹಾರವೆಂಬುದು" (ಹಲಾಯು. ೦೭-೦೨); ಪ್ರತಿಹಾರನೇತ್ರ ಪುತ್ರಿಕಮತಿವಿಪುಳಕವಾಟಪಕ್ಷ್ಮಮೆಸೆವುದು ರಾಜಾಯತನಕ್ಕೆ ನೊಸಲ ಕಣ್ಣೆನಿಸಿ, ತೇಜಮುಂ ತೆಜಿಯೆ ಮೆಜಿವ ಪೂರ್ವದ್ವಾರಂ (ಪರ್ಜಪು. ೦-೭೬). ೨. ಬಾಗಿಲು ಕಾಯುವವನು; ಪಡಿಯರ ದ್ವಾರಪಾಲಕ: "ಪಡಿಯಜನೆನೆ ಪ್ರತಿಹಾರನುಂ" (ಶಬಕಂ. ೦೫೪); ತನ್ನ ಬೆಸನನೆ ಪಾದರ್ಮಲಲಾಟತಟಘಟಿತಮುಕುಳಿತಕರಕಮಳನಾಗಿರ್ದ ಮಹಾಪ್ರತಿಹಾರನ ವೊಗಮುಂ ನೋಡಿ (ಶಂಕಶಾ. ೯-೩೦ ವ); ಪ್ರತಿಹಾರನು ತಾನೆ ಚಂಚಚ್ಚಮರಮಹಧರಂ ತಾನೆ ಪೀಠಾರ್ಚನಾಪ್ರಸ್ತುತಿಯುಕ್ತಂ ತಾನೆ (ಕಂಪ್ರಕಿ. ೦೫-೦೨೨). ೩. ಗಾರುಡಿಗ; ಐಂದ್ರಜಾಲಿಕ. ೪. ಕಣ್ಕಟ್ಟುವಿದ್ಯೆ; ಇಂದ್ರಜಾಲ. ೫. ಸಾಮಗಾನದ ಒಂದು ಅಂಗ: ಉದ್ಗೀಥ, ಪ್ರಸ್ತಾವ, ಹಿಂಗಿರ, ಪ್ರತಿಹಾರ, ನಿಧನವೆಂಬ ೫ ಪ್ರಕಾರವಾಗಿ ಸಾಮಗಾನವು ಭಾಗಿಸಲ್ಪಟ್ಟಿರುವುದು (ಹಸಾರ. ೬-೦೪ ತಾತ್ಪರ್ಯ); ಪ್ರತಿಹಾರದ ದೇವತೆ ಯಾವುದು? ಎಂಬ ಪ್ರತಿಹರ್ತೃವಿನ ಪ್ರಶ್ನೆಗೆ ಅನ್ನವೆಂದೂ ಚಾಕ್ರಾಯಣನು ಉತ್ತರವನ್ನು ಕೊಟ್ಟರುತ್ತಾನೆ (ಬ್ರಿಹ್ಮಥಾ. ೦೯೬ ಅಡಿಟಿ). ೬. [ದ್ವೈತ] ವಿಷ್ಣು, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧರೆಂಬ ಪರಮಾತ್ಮನ ಐದು ವ್ಯೂಹಗಳಲ್ಲಿ ಒಂದು; ಅನಿರುದ್ಧ: ಒಂದೊಂದು ಕಾರ್ಯದಲ್ಲಿಯೂ ಈ ಜಗತ್ತನ್ನು ಪ್ರತಿಹರಣ ಮಾಡುವುದರಿಂದಲೂ ಮೂರ್ತಿಗಳನ್ನು ಪ್ರತಿಹರಣಮಾಡುವುದರಿಂದಲೂ ಪ್ರತಿಹಾರನೆಂದು ಅನಿರುದ್ಧನೆಂದು ಹೆಸರು (ಹಸಾರ. ೬-೦೪ ತಾತ್ಪರ್ಯ). [ಸಂ.]

**ಪ್ರತಿಹಾರಕ** (ನಾ). ೧. ಬಾಗಿಲು ಕಾಯುವವನು; ದ್ವಾರಪಾಲಕ: ಪ್ರತಿಹಾರಕರುಂ ಗೋಪುರಚತುಷ್ಕಮುಂ ಪುದಿದ ಶಾಳೆಮುಂ ಪೂರ್ವೋಕ್ತಸ್ಥಿತಿಯಿಂ ಕಣ್ಗಂ ಬಗೆಗಂ ಪ್ರತೀತಿಯಂ ಪಡೆವು ಪಡೆದುವಧಿಕೋತ್ಸವಮಂ (ಮಲ್ಲಿಪು. ೦೪-೦೩೩); ಪಸರಿಸಿದತ್ತು . . . ಮಹಾಪ್ರತಿಹಾರಕಸ್ವನಂ (ಶಾಂಪು. ೦೭-೨೨). ೨. ಗಾರುಡಿಗ. [ಸಂ.]

**ಪ್ರತಿಹಾರಿ** (ನಾ). ರಾಜನ ಹದಿನೆಂಟು ಬಗೆಯ ಪರಿವಾರದವರಲ್ಲಿ ಒಬ್ಬ; ದ್ವಾರಪಾಲಕ: "ಪೌರೋಹಿತಂ . . . ಪ್ರತಿಹಾರಿಯುಂತಸ್ಥಿತಂ ದ್ವಾರಪಾಲಂ ಕರಣಿಕಂ ದಂಡಪಾಣಿ ಕೊಠಾರಿ ಯುವರಾಜನಾ ತಳವಾಜನೆಂಬಿವರು ಭೂರಮಣರಲ್ಲಿ ವಿನಿಯೋಗಮಂ ತಾಳ್ದು ಪದಿನೆಣ್ಬರ್ ಪ್ರಧಾನರೆನಿಕುಂ" (ಮಂಗರಾ. ೬೦-೦೦). P ಈ ಪ್ರಯೋಗದಲ್ಲಿ ಪ್ರತಿಹಾರಿ, ದ್ವಾರಪಾಲ ಎಂಬ ಎರಡೂ ಸೇರಿರುವುದು ವಿಚಾರಯೋಗ್ಯ. [ಸಂ. ಪ್ರತಿಹಾರಿನ್]

**ಪ್ರತಿಹಾಸ** (ನಾ). ೧. ಇನ್ನೊಬ್ಬರ ನಗುವಿಗೆ ಪ್ರತಿಯಾಗಿ ನಗುವುದು. ೨. ಕಣಗಿಲೆ ಗಿಡ; ಪಡ್ಡಳಿ : "ಪ್ರತಿಹಾಸಃ, ಶತಪ್ರಾಸಃ, ಚಂಡಾತಃ, ಹಯಮಾರಕಃ, ಕರವೀರಃ — ೫ ಗನ್ನೇರಳೆ, ಕಣಗಿಲಗಿಡದ ಹೆಸರು" (ಸಿದ್ಧಾಂತಿ. ೧೨೯). [ಸಂ.]

**ಪ್ರತಿಹಿಂಸೆ** (ನಾ). ಒಬ್ಬನು ಮಾಡಿದ ಹಿಂಸೆಗೆ ಪ್ರತಿಯಾಗಿ ಹಿಂಸೆ ಮಾಡುವ ಪ್ರವೃತ್ತಿ ; ಸೇಡಿನ ಬುದ್ಧಿ : ಹೃದಯದೊಳಗೆ ಮನೋಹರನ ಬಗೆಗೆ ಭೀಷಣಪ್ರತಿಹಿಂಸೆ ಇದ್ದಿತು (ಕೂಕಕಾ. ೩೪).
[ಸಂ. ಪ್ರತಿಹಿಂಸಾ]

**ಪ್ರತೀಂದ್ರ** (ನಾ). [ಜೈನ] ಇಂದ್ರನಿಗಿಂತ ಸ್ವಲ್ಪ ಕೆಳಮಟ್ಟದ ಇಂದ್ರ; ಇತರ ದೇವತೆಗಳಿಗಿಂತಲೂ ಹೆಚ್ಚಾದ ಅಣಿಮಾದಿ ಗುಣಗಳನ್ನು ಪಡೆದಿರುವ ದೇವಯೋನಿವಿಶೇಷ; ೪ ನಾಲ್ಕು ಪ್ರಕಾರದ ದೇವವರ್ಗಗಳಲ್ಲಿಯೂ ಇಂದ್ರನ ಕೆಳಗೆ ಪ್ರತೀಂದ್ರರಿರುತ್ತಾರೆ. ಭವನವಾಸಿ ದೇವರುಗಳಲ್ಲಿ ಇಪ್ಪತ್ತು ಜನ ಇಂದ್ರರೂ ಇಪ್ಪತ್ತು ಜನ ಪ್ರತೀಂದ್ರರೂ ಇರುತ್ತಾರೆ. ವ್ಯಂತರದೇವರುಗಳಲ್ಲಿ ಹದಿನಾರು ಜನ ಇಂದ್ರರೂ ಹದಿನಾರು ಜನ ಪ್ರತೀಂದ್ರರೂ ಇರುತ್ತಾರೆ. ಜ್ಯೋತಿರ್ದೇವರುಗಳಲ್ಲಿ ಚಂದ್ರನು ಇಂದ್ರನಾದರೆ ಸೂರ್ಯನು ಪ್ರತೀಂದ್ರ. ಕಲ್ಪವಾಸಿಗಳಲ್ಲಿ ಹನ್ನೆರಡು ಜನ ಇಂದ್ರರೂ ಹನ್ನೆರಡು ಜನ ಪ್ರತೀಂದ್ರರೂ ಇರುತ್ತಾರೆ : ಕೇಶವನುಮಾತ್ಮೀಯಗುರುವಿಯೋಗದೊಳ್ ಪರಿತ್ಯಕ್ತಸಕಲರಾಜ್ಯಪರಿಚ್ಛೇದಂ ಪ್ರವ್ರಜ್ಯಪದವಿಯೊಳ್ ಪರಿತಕ್ತ್ಯನುಮಾ[illegible]ದಚ್ಯುತಕಲ್ಪದೊಳ್ ಪ್ರತೀಂದ್ರನಾದಂ (ಆದಿಪು. ೬-೦೨ ವ); ಕೇಶವನ[illegible]ೋಗದೊಳು ದೀಕ್ಷೆಯಂ ಕೈಕೊಂಡಲ್ಲಿಯ ಪ್ರತೀಂದ್ರನಾದೊಂ (ಶಾಪು. [illegible]) [ಸಂ.]

**ಪ್ರತೀಕ** (ಗು). ೧. ಪ್ರತಿಕೂಲವಾದ; ವಿರುದ್ಧವಾದ; ವ್ಯತಿರಿಕ್ತವಾದ. ೨. ತಲೆಕೆಳಗಾದ; ವಿಲೋಮವಾದ. (ನಾ). ೩. ಭಾಗ; ಅಂಶ; ಪಾಲು. ೪. ಅಂಗ; ಅವಯವ: "ಅಂಗಂ, ಪ್ರತೀಕಃ, ಅವಯವಃ, ಅವಘನಃ — ೪ ಕೈ ಕಾಲು ಮುಂತಾದ ಅಂಗಗಳ ಹೆಸರುಗಳು" (ಸಿದ್ಧಾಂತಿ. ೦೬೯). ೫. ಗುರುತು ; ಚಿಹ್ನೆ ; ಸಂಕೇತ : ಧೂಮಪ್ರತೀಕದಿಂ ರಾಮನಂ ಭಾವಿಸಿರೆ ಬಂದು ಮುಟ್ಟಿತ್ತೋಡಮಾ ಪಾರವಂ (ಶ್ರೀರಾಮಾ. ೦೬೨-೨೬೩); ಬಿಳಿವರ್ಣವು ಯಾವಾಗಲೂ ಪರಿಶುದ್ಧತೆಗೆ ಪ್ರತೀಕವಾಗಿರುವುದು (ಹೇಮಂತ. ೬೦). ೬. ಪ್ರತಿಕೃತಿ ; ಪ್ರತಿರೂಪ : ದಾಂಪತ್ಯಜೀವನವು. . . ಸಮರಸವಾಗಿ ಬೆಳೆದುಕೊಂಡು ಬಂದ ಅಂತಃಕರಣಪ್ರವೃತ್ತಿಗಳ ಏಕೀಭೂತವಾದ ಪ್ರತೀಕವೆಂಬುದನ್ನು ರಾಮನು ನಮಗೆ ಕಲಿಸಿ ಕೊಟ್ಟಿದ್ದಾನೆ (ವಾರಾಕ್ಷ. ೦೦೩) ; ಮಾತು ಅಂತರಂಗದ ಪ್ರತೀಕ (ಹೊಸಕ್ಷಿ. ೩೩). ೭. ಒಂದಕ್ಕೆ ಬದಲಾಗಿ ಇರುವಂಥದು ; ಪ್ರತಿನಿಧಿಯಾಗಿರುವುದು : ಯಾವುದನ್ನು ಯಾವುದರ ಸ್ಥಾನದಲ್ಲಿ ಉಪಾಸ್ಯವೆಂದು ಹೇಳಿದೆಯೋ ಅದು ಅದರ ಪ್ರತೀಕವು (ಬೃಹ್ಯಭಾ. ೨೦೦) ; ಪ್ರತಿಯೊಂದು ಊರಿಗೂ ಚಾವಡಿಯೊಂದು ಬೇಕೇಬೇಕು. ಸಾರ್ವಭೌಮಸರಕಾರದ ಪ್ರತೀಕವದು (ಗಾಳಿಗು. ೧). ೮. ಆಕೃತಿ ; ಸ್ವರೂಪ ; ಆಕಾರ : 'ಪ್ರತೀಕಂಗೊಳ್ಳು' ಪರಾ. [ಸಂ.]

**ಪ್ರತೀಕಂಗೊಳ್ಳು** (ಕ್ರಿ). ಆಕೃತಿಯು ಕಣ್ಣಿಗೆ ಕಟ್ಟಿದಂತಾಗು ; ಮೂರ್ತಿವತ್ತಾಗು : ಇಂತೆಲ್ಲಮುಂ ಪ್ರತೀಕಂಗೊಳ್ಳಲೊರ್ದಿನಂ ಹೊಳೆಯ ನುಣ್ಮಳಲ ಬೆಣ್ಣೆಯ ದಿಣ್ಣೆ ಮೇಲಿರ್ದು, ಸೀತೆ ತಾಂ ಪತಿ ಮೈದುನರ ಕೂಡೆ ಮಾತಾಡುತಿರೆ (ಶ್ರೀರಾಮಾ. ೦೯೭-೯೭).
[ಪ್ರತೀಕ + ಕೊಳ್ಳು$_1$ (< ಕೊಳ್$_1$)]

**ಪ್ರತೀಕವಾದ** (ನಾ). ೧. ಸಾಹಿತ್ಯದಲ್ಲಿ ಸಂಕೇತಗಳ ಮೂಲಕ ವಿಷಯನಿರೂಪಣೆ ಮಾಡಬೇಕೆಂಬ ವಾದ ; ೪ ಕಾವ್ಯಗಳಲ್ಲಿ ಒಂದು ಪದದ ಅಥವಾ ವಾಕ್ಯದ ಅರ್ಥಕ್ಕೆ ಪ್ರತಿಯಾಗಿ ಬೇರೊಂದು ಸಾಂಕೇತಿಕಪದವನ್ನಾಗಲೀ ವಾಕ್ಯವನ್ನಾಗಲೀ ಪ್ರಯೋಗಿಸುವ ವಿಧಾನ ; ಅಂತರಾರ್ಥವಿಟ್ಟು ಬರೆಯುವ ತತ್ತ್ವ : 'ಸಿಂಬಾಲಿಸಂ' ಅಂದರೆ ಪ್ರತೀಕವಾದವೇ 'ಆಯ್‌ಡಿಯಾಲಿಸಂ' ಅಂದರೆ ಆದರ್ಶವಾದ ಎಂಬ ಮಾತನ್ನು ತಂದೆ . . . ನನ್ನೆದುರಿಗೆ ಚರ್ಚಿಸಿದ್ದಾರೆ (ಇಕ್ಬಕ. ೪೭೪). [ಸಂ.]

**ಪ್ರತೀಕಾರ** (ನಾ). ೧. ಪರಿಹಾರ ; ನಿವಾರಣೆ : ಪುರುಪರಮೇಶ್ವರತನೂಭವರ ಯುದ್ಧಾಡಂಬರೋಪಸರ್ಗದೊಳಮಾಕುಲವ್ಯಾಕುಲರಾಗಿ ತತ್ಪ್ರಶಮನಪ್ರತೀಕಾರಮಾಗೆ ನಾಕಲೋಕಸುಂದರಿಯರೊಡನೆ ಅನಿಮೇಷರ್, . . . ಸರ್ವಜ್ಞಬಿಂಬಾವಳಿಗೆ ಪರಸಿದರ್ (ಆದಿಪು. ೧೪-೦೦೩ ವ); ಬದರ್ಕಿದೊರುಂ ಹರಿಯನ ಮುನಿಸೆಂಬುದು ಪ್ರಣಿಪಾತಪ್ರತೀಕಾರಮೆಂದು ಜೀದರಸನ ದಂಡನಾಯಕಂಗೆ ಶರಣಾಗತರಾಗಿ ನಿಜಶಿರಪ್ರಾಣಪರಾಯಣರಾದರ್ (ಶಾಂತಿಪು. ೦೦-೨೪ ವ). ೨. ಅಪಕಾರಕ್ಕೆ ಪ್ರತಿಯಾಗಿ ಅಪಕಾರ ಮಾಡುವುದು ; ಸೇಡು ತೀರಿಸಿಕೊಳ್ಳುವುದು : "ವೈರಶುದ್ಧಿಃ, ಪ್ರತೀಕಾರಃ, ವೈರ ನಿರ್ಯಾತನಂ — ೩ ಹಗೆ ತೀರಿಸಿಕೊಳ್ಳುವುದರ ಹೆಸರು" (ಸಿದ್ಧಾಂತಿ. ೨೬೦) ; ನಂಜರಾಜನು . . . ಕೃಷ್ಣಪ್ಪನಾಯಕನ ಮೇಲೆ ಪ್ರತೀಕಾರವನ್ನು ಮಾಡುವುದಾಗಿ ಸಂಕಲ್ಪ ಮಾಡಿದನು (ಶ್ರೀರಾಜು. ೦೦೬). ೩. [ವೈದ್ಯಶಾ] ರೋಗ ಪರಿಹಾರಕ್ಕಾಗಿ ಮಾಡುವ ಚಿಕಿತ್ಸೆ ; ರೋಗನಿವಾರಣೋಪಾಯ : ಸ್ಥಾವರವಿಷ, ಜಂಗಮವಿಷ, ಕುಷ್ಠ . . . ಮುಂತಾದ ರೋಗಗಳು ಕಾಣಿಸಿದಲ್ಲಿಯೇ ಜಾಪ್ಯ ಮಾಡದೆ ಶೀಘ್ರದಲ್ಲಿಯೇ ಪ್ರತೀಕಾರವಂ ಮಾಡಬೇಕು (ಕಕಪ್ಪ. ೨೨). [ಸಂ.]

**ಪ್ರತೀಕಾರಸಂಧಿ** (ನಾ). [ರಾಜನೀ] ಹದಿನಾರಂಬಗೆಯ ಸಂಧಿಗಳಲ್ಲಿ ಒಂದು ; ಒಬ್ಬ ರಾಜನು ಮಾಡಿದ ಉಪಕಾರಕ್ಕೆ ಪ್ರತಿಯಾಗಿ ಉಪಕಾರ ಮಾಡುವೆನೆಂಬ ಒಪ್ಪಂದ : ಪರಸ್ಪರೋಪಕಾರಂಗೆಯ್ವುದು ಪ್ರತೀಕಾರಸಂಧಿಯೆಂಬುದಕ್ಕುಂ (ಶಂಕಕೋ. ೨೨೪-೮೨). 'ಸಂಧಿ' ಪರಾ.
[ಸಂ.]

**ಪ್ರತೀಕಾಲಂಬನ** (ನಾ). ೧. ದೇವತೆಯ ಪ್ರತಿಮೆ, ಸಾಲಿಗ್ರಾಮಶಿಲೆ ಮೊದಲಾದುವುಗಳನ್ನು ಉಪಾಸ್ಯದೇವತೆಯೆಂದು ನಂಬಿ ಪೂಜಿಸುವುದು. ೨. [ದ್ವೈತ] ತನ್ನ ಶರೀರದಲ್ಲಿಯೇ ಭಗವಂತನನ್ನು ಕಾಣುವವನು : ತೃಣ, ಕ್ರಿಮಿ, ಪಶು, ಮನುಷ್ಯೋತ್ತಮರು, ಚಕ್ರವರ್ತಿಗಳು, ಮನುಷ್ಯ, ಗಂಧರ್ವರೆಂಬ ಏಳುವಿಧ ಜೀವರು ನಿರಂಶರೆನಿಸುವರು . . . ಇವರಿಗೆ ಪ್ರತೀಕಾಲಂಬನರೆಂತಲೂ ಮತ್ತೊಂದು ಹೆಸರು. ಪ್ರತೀಕವೆಂದರೆ ತನ್ನ ಶರೀರವು. ತನ್ನ ಶರೀರದಲ್ಲಿ ಹರಿಯನ್ನು ಅಪರೋಕ್ಷದಲ್ಲಿ ಕಾಣುವವರಾದುದರಿಂದ ಪ್ರತೀಕಾಲಂಬನರೆಂದು ಹೆಸರು (ಹಕಾರ. ೨೩-೩ ತಾತ್ಪರ್ಯ). [ಸಂ.]

**ಪ್ರತೀಕಾಶ** (ನಾ). ೧. ಪ್ರತಿಬಿಂಬ. ೨. ಕಾಣ್ಕೆ ; ನೋಟ. ೩. (ಸಮಾಸದ ಉತ್ತರಪದವಾಗಿ ಬಂದಾಗ) ಸಮಾನವಾದುದು : ಸದೃಶವಾದದು : "ನಿಭಃ, ಸಂಕಾಶಃ, ನೀಕಾಶಃ, ಪ್ರತೀಕಾಶಃ, ಉಪಮಾ . . . ಸಮಾಸದಲ್ಲಿ ತುದಿಪದಗಳಾಗಿಯೇ ಸಮಾನವಸ್ತುವಿನ ಹೆಸರಾಗುವುವು" (ಸಿದ್ಧಾಂತಿ. ೩೦೭). [ಸಂ.]

**ಪ್ರತೀಕ್ಷಣ** (ನಾ). ಎದುರುನೋಡುವುದು ; ನಿರೀಕ್ಷಣೆ : ಆತಿಪುರಸ್ಸರವಿದಿರ್ಗೊಂಡು ತತ್ಕ್ರಿಯಾಪರಿಸಮಾಪ್ತಿಪ್ರತೀಕ್ಷಣಪರನವರಂ ಗುರುಭಕ್ತಿಪೂರ್ವಕಂ ಬಂದಿಸಿ (ಆದಿಪು. ೨-೩೩ ವ). [ಸಂ.]

**ಪ್ರತೀಕ್ಷಿಸು** (ಕ್ರಿ). ಎದುರು ನೋಡು ; ಕಾಯು ; ನಿರೀಕ್ಷಿಸು : ಸೌಗಂಧಿಕಾದೇವಿಯು ಬರುವುದಂ ಪ್ರತೀಕ್ಷಿಸುತ್ತಿರಲು (ಸೌಗಂಧಿ. ೨೦೯-೬):

ನಮಿಸಿದರು ತಪೋರುದ್ರಂಗೆ, ಚಿತ್ರಕೂಟಕೆ ರಾಮನೈತಂದ ವಾರ್ತೆಯಂ ಕೇಳ್ದಂದಿನಿಂದಾತನಂ ಪ್ರತೀಕ್ಷಿಸುತಿರ್ದ ಕೆಂಜೆಡೆಯ ಕಿತ್ತಡಿಗೆ (ಶ್ರೀರಾಪ. ೦೯೪-೨೨೦). [ಪ್ರತೀಕ್ಷಣ + –ಇಸು]

**ಪ್ರತೀಕ್ಷೆ** (ನಾ). = ಪ್ರತೀಕ್ಷಣ : ನಮ್ಮ ಅಂತಃಕರಣದ ಆಸೆ ಒಂದಿಲ್ಲೊಂದು ದಿನ ಈಡೇರಿತೆಂಬ ಪ್ರತೀಕ್ಷೆಯಲ್ಲಿ ಇನ್ನೆಲ್ಲವನ್ನೂ ಅಲ್ಲಗಳೆದು ನಿಂತಿದ್ದೇವೆ (ದೀಕನ್ನ. ೩); ಭಾರತೀಯಸಂಸ್ಕೃತಿಯನ್ನು ತಿಳಿಯಲು ಸಹಾಯವಾಗುವುದೆಂದೂ ಅವನ ಪ್ರತೀಕ್ಷೆಯಿತ್ತು (ಸಮಜೀ. ೬೬೩). [ಸಂ. ಪ್ರತೀಕ್ಷಾ]

**ಪ್ರತೀಕ್ಷ್ಯ** (ಗು). ೧. ಕಾಯಬೇಕಾದ ; ನಿರೀಕ್ಷಿಸತಕ್ಕ. ೨. ಪರಿಗಣಿಸಬೇಕಾದ ; ಲಕ್ಷಿಸಬೇಕಾದ. ೩. ಗೌರವಕ್ಕೆ ಪಾತ್ರವಾದ ; ಮನ್ನಣೆಗೆ ಅರ್ಹವಾದ. (ನಾ). ೪. ಮನ್ನಣೆಗೆ ಅರ್ಹನಾದವನು; ಪೂಜ್ಯ ; ಮಾನ್ಯ : "ಪ್ರತೀಕ್ಷ್ಯಃ, ಪೂಜ್ಯಃ–ಈ ೨ ಪೂಜಿಸಲ್ತಕ್ಕವಂ" (ಹಲಾಯು. ೬೩-೨೨೯). [ಸಂ.]

**ಪ್ರತೀಚಿ** (ನಾ). ಪಡುವಣದಿಕ್ಕು ; ಪಶ್ಚಿಮ: "ಪ್ರತೀಚಿಯೆನೆ ಪಡುವಲು" (ಮಂಗರಾ. ೦೬-೦೯); ಆನುಂ ಪ್ರತೀಚೀಸಮಾಗಮಸಂತುಷ್ಟನೆನಪ್ಪೆನೆಂದು ದಿನಪಂ ರಕ್ತತ್ವದಿಂ ಪೋಗೆ (ಶಾಂತಿಪು. ೬-೬೦); ಆ ಪ್ರತೀಚೀಜಲಧಿಗಿಂಬಾದ ನಂಭೋಜಿನೀಜೀವಿತೇಶಂ (ಚಂದ್ರಪು. ೨-೪೫). [ಸಂ. ಪ್ರತೀಚೀ]

**ಪ್ರತೀಚೀನ** (ನಾ). ಪಶ್ಚಿಮದಿಕ್ಕಿನದು : "ಪ್ರತ್ಯಕ್, ಪ್ರತೀಚೀನಂ–ಈ ೨ ಪಡುವಲಾದುದು" (ಹಲಾಯು. ೦೬-೦೦೩). [ಸಂ.]

**ಪ್ರತೀಚ್ಯ** (ಗು). ೧. ಪಶ್ಚಿಮಕ್ಕೆ ಸಂಬಂಧಿಸಿದ ; ಪಡುವಣದ. ೨. ಪಶ್ಚಿಮದೇಶದ ; ಪಾಶ್ಚಾತ್ಯದೇಶಕ್ಕೆ ಸೇರಿದ : ಈ ರೀತಿ ಪ್ರಾಚ್ಯ–ಪ್ರತೀಚ್ಯ ಶಾಸ್ತ್ರಗಳಲ್ಲಿ ಕಾವ್ಯಾನುಭವ ಅಥವಾ ಕಾವ್ಯಾನಂದದ ವಿಷಯದಲ್ಲಿ . . . ಸಿದ್ಧಾಂತಗಳು ಕಾಣದೊರೆಯುತ್ತವೆ (ಕ್ರೀಷ್ಕೃ. ೨೩). (ನಾ). ೩. ಪಶ್ಚಿಮದೇಶಕ್ಕೆ ಸಂಬಂಧಪಟ್ಟವನು ; ಪಾಶ್ಚಾತ್ಯ : ಆಧುನಿಕಪಂಡಿತರೆಂದರೆ ಪ್ರಾಚ್ಯಶಾಸ್ತ್ರಗಳನ್ನು ತಿಳಿದ ಪ್ರತೀಚ್ಯರು ಮತ್ತು ಅವರ ದೃಷ್ಟಿವಿಶೇಷಕ್ಕೆ ಸಂಗತವಾಗಿ ಪ್ರಾಚ್ಯತತ್ತ್ವಶಾಸ್ತ್ರಗಳಿಗೆ ವ್ಯಾಖ್ಯಾನ ಮಾಡುವ ಆಧುನಿಕಭಾರತೀಯರು (ಶಾತತ್ತ್ವ. XVI ೬೧೪೯). [ಸಂ.]

**ಪ್ರತೀತ** (ಗು). ೧. ಎದುರಿಗೆ ಬಂದ ; ಅಭಿಮುಖವಾಗಿ ಬಂದ. ೨. ಒಪ್ಪಿಕೊಂಡ ; ಸಮ್ಮತಿಸಿದ. ೩. ನಿಜವಾದ ; ಸತ್ಯವಾದ. ೪. ಅನುಭವಸಿದ್ಧವಾದ. ೫. ಚೆನ್ನಾಗಿ ತಿಳಿದ ; ಸುಪ್ರಸಿದ್ಧವಾದ: ಯತಿಯೆಂಬುದುಸಿರ್ವ ತಾಣಂ . . . ಸತತಂ ಛಂದೋವಿದಿತಪ್ರತೀತಶಾಸ್ತ್ರೋಕ್ತಮಾರ್ಗದಿಂದಬೀವುದಿದಂ (ಕವಿರಾ. ೦-೬೦) ; ಚತುರಂಗಸ್ಸನ ವಿನುತಂ ಪ್ರತೀತನಯಮತ್ಸವತ್ಸಲಂ . . . ಗೋಮಂಡಲಮಾಕ್ಷಿತಿಪತಿ ಗೋರಂತೆ ಕಜಿಪುದಿರುಳುಂ ಪಗಲುಂ (ಚಂದ್ರಪು. ೬-೩೬). ೬. ತೃಪ್ತನಾದ; ಸಂತುಷ್ಟ: ಅತ್ಯಂತಪ್ರಿಯಂ ಪ್ರತೀತಸ್ವಾಂತಂ ನೃಪನೆಟ್ಟಿ ಸಿಂಹವಿಷ್ಟರದಿಂದ . . . ಮಚ್ಚುಗೊಟ್ಟುಂ (ಶಾಂತಿಪು. ೦-೮೨). (ನಾ). ೭. ಹೆಸರುವಾಸಿಯಾದುದು ; ಪ್ರಸಿದ್ಧವಾದುದು: ಇಂತಿವಜಿತ್ರೋರ್ಕೆಯಿಂ ಗರ್ಭದರ್ಭಕನಳುರ್ಕೆಯುಮಂದಟುಮಖಿಲಜನಪ್ರತೀತಮಾಗೆ (ಶಂರಾಪ. ೦೦-೦೪೪೪); ಆಗುಂಬೆಯಿಂದ ಕಾಣುವ ಸೂರ್ಯಾಸ್ತಮಯವು ಎಷ್ಟು ಪ್ರತೀತವೋ ಅದರ ಕಾಡುಗಳೂ ಅಷ್ಟೇ (ಹಸುಹೂ. ೨೩೦). ೮. ಹೆಸರುವಾಸಿಯಾದವನು ; ಪ್ರಸಿದ್ಧನಾದವನು : "ಪ್ರತೀತಃ, ಪ್ರಥಿತಃ, ಖ್ಯಾತಃ, ವಿತ್ತಃ, ವಿಜ್ಞಾತಃ, ವಿಶ್ರುತಃ–೬ ಧನಾಧಿಗಳಿಂದ ಪ್ರಸಿದ್ಧನಾದವನ ಪೆಸರು" (ಸಿದ್ಧಾಂತಿ. ೩೨೫). ೯. ತಿಳಿವಳಿಕೆಗೆ ಬಂದುದು; ಅರಿವಾದುದು. ೧೦. ತೃಪ್ತನಾದವನು ; ಸಂತುಷ್ಟನಾದವನು. [ಸಂ.]

**ಪ್ರತೀತಿ** (ನಾ). ೧. ಎದುರಾಗಿ ಹೋಗುವುದು ; ಅಭಿಮುಖಗಮನ. ೨. ಸ್ಪಷ್ಟವಾದ ತಿಳಿವಳಿಕೆ; ಪರಿಜ್ಞಾನ: ಮಾನಿತಪದಮಂ ಪದಸಂಧಾನಮನರ್ಥಪ್ರತೀತಿಯಂ ಕವಿಹೃದಯಸ್ಥಾನಮನಱಿದೋದದ ಕಣ್ಬೇನೆಯ ಕರಡಿಯಮೊಲಲೂಳ್ದಪಂ ವಾಚಕನೇ(ಛಂದೋಂಬು. ೦-೩೦ ಅತಿಶಯ) ; ನಿಮ್ಮನ್ನರಪ್ಪ ನಿಶಿತಮತಿಗಳ್ಗೆ ಪಂಚರಾತ್ರಿಯೊಳೆ ಪ್ರತೀತಿಯಕ್ಕುಂ (ಸುಕುಮಾ. ೩-೬೭ ವ); ದೇವಸಮಾನವಾದ ಸಹಾಯಭೂತಿ ಅನುಕಂಪಗಳೂ ಅವುಗಳಲ್ಲಿ ತುಂಬಿರುವುದರಿಂದ ಕವಿಹೃದಯದ ಪ್ರತೀತಿಯು ಹೆಜ್ಜೆಹೆಜ್ಜೆಗೂ ಬರುತ್ತಿರುವುದು (ಕ್ರಶಿಂದ. ೬೮). ೩. ಪ್ರಸಿದ್ಧಿ ; ಖ್ಯಾತಿ : ಪ್ರತಿಭಾವತ್ತ್ವಮುಮುತ್ಕೃತಕಚತುರತೆಯುಂ ಪರಮಬುಧಜನೋಪಾಸನಮುಂ ಶ್ರುತಪರಿಚಯಮುಂ ತರ್ಕಂ ಪ್ರತೀತಿಯಂ ವಾಗ್ವಿದಗ್ಧತಾನಿಪುಣತೆಯೊಳ್ (ಕವಿರಾ. ೦-೦೦). ೪. ನಂಬಿಕೆ ; ವಿಶ್ವಾಸ : "ಪ್ರತೀತಿಃ, ಪ್ರತ್ಯಯಃ, ಶ್ರದ್ಧಾ–ಈ ನಂಬುಗೆ" (ಹಲಾಯು. ೦೨೬-೯೩) ; ನೀಲಮ್ಮನೇ ರಚಿಸಿದವುಗಳೆಂದು ಪ್ರತೀತಿಯಿರುವ ಇನ್ನೂ ಕೆಲವು ವಚನಗಳು ಸಿದ್ಧರಾಮನನ್ನು ಕುರಿತು ಹೇಳಿದವುಗಳು ಇವೆ (ಕರ್ಣಾಕ. ೦೨೬); ಮೊದಲನೆಯ ಸುಕುಮಾರಸ್ವಾಮಿಯ ಕಥೆಯನ್ನು ನೋಡಿದರೆ ಈ ಮಾತಿನ ಪ್ರತೀತಿಯಾಗುತ್ತದೆ (ಕಸಾಕ. ೬೨). ೫. ಕರ್ಣಪರಂಪರೆಯಿಂದ ಬಂದಿರುವ ಸಂಗತಿ ; ಜನಶ್ರುತಿ ; ಜನಜನಿತವಾದ ವೃತ್ತಾಂತ : ಗಾಂಧರ್ವವಿಧಿಯಿಂದ ಮದುವೆ ನಿಲೆ, ಬಭ್ರುವಾಹನಜನನವಾಯ್ತೆಂದು ಕರ್ಣಪ್ರತೀತಿಯಿದೆ (ಕಪ್ಯಾಂಗ. ೬೩-೦೯೯೯); ಸೋಲಿಗಯ್ಯ ಎಂಬುವನು ಸೋಲಿಗರ ಮೂಲಪುರುಷನೆಂಬ ಪ್ರತೀತಿಯಿದೆ (ಪ್ರಾಶಿಪಿ. ೯೦೦). ೬. ಸಂತೋಷ ; ಆನಂದ : ಕಾಟ್ಬುರಮಾಗೆ ಕಾವ್ಯರಸಂ ಅರ್ಥಮುಮುತ್ಕರಮುಂ ಪ್ರತೀತಿಯಂ ಮಾಟ್ಪಿನೆಗಂ (ಕಮದ. ೬೬ ಕೃಯೋ). ೭. ಮನ್ನಣೆ; ಗೌರವ. ೮. ವರ್ತಮಾನ ; ಸಮಾಚಾರ : ಈ ತಿಂಗಳ ಕೊನೆಯಲ್ಲಿ ನಮ್ಮ ರಾಜ್ಯಕ್ಕೆ ರಾಷ್ಟ್ರಪತಿಯವರು ಬರುವರೆಂಬ ' ಪ್ರತೀತಿ ಇದೆ (ರೂಢಿ). ೯. [ವೇದಾಂತ]ಪ್ರತ್ಯಕ್ಷಾದಿ ಪ್ರಮಾಣಗಳಿಂದ ಉಂಟಾಗುವ ಜ್ಞಾನ : ಇಂತಹ ಸತ್ತ್ವವಿಲ್ಲದಿರುವುದು ಅಸತ್ಪದಾರ್ಥ. ಇದಕ್ಕೆ ಪ್ರಮಾಣಸಂಬಂಧವಿಲ್ಲ . . . ಪ್ರತೀತಿಯೆಂಬ ಪ್ರಮಾಣಜ್ಞಾನ ಗೋಚರವಲ್ಲ (ಹಿಂದಸಾ. ೦೯೯). [ಸಂ.]

**ಪ್ರತೀಪ** (ಗು). ೧. ಪ್ರವಾಹಕ್ಕೆ ವಿರುದ್ಧವಾಗಿರುವ. ೨. ಪ್ರತಿಕೂಲವಾದ ; ವಿರುದ್ಧವಾದ. ೩. ಎದುರುಪಕ್ಷದ ; ಪ್ರತಿಪಕ್ಷದ. (ನಾ). ೪. ಪ್ರತಿಕೂಲವಾದುದು ; ವಿರುದ್ಧವಾದುದು : "ಪ್ರತಿಕೂಲಂ, ಪ್ರತಿಲೋಮಂ, ಪ್ರತೀಪಂ, ಪ್ರಸವ್ಯಂ–ಈ ೪ ಪ್ರತಿಕೂಲಂ" (ಹಲಾಯು. ೦೨೨-೩೪). ೫. [ಕಾವ್ಯವಿದ್ಯಾ] ಒಂದು ಅರ್ಥಾಲಂಕಾರ ; ವರ್ಣನೀಯವಾದ ವಸ್ತುವಿಗೆ ಅಂದರೆ ಉಪಮೇಯಕ್ಕೆ ಕನಿಕರವನ್ನಾಗಲೀ ತಿರಸ್ಕಾರವನ್ನಾಗಲೀ ತೋರಿಸುವುದು ; ಇದರಲ್ಲಿ ಐದು ಬಗೆಗಳಿವೆ. ೧. ಪ್ರಸಿದ್ಧವಾದ ಉಪಮಾನವಸ್ತುವನ್ನು ಉಪಮೇಯವನ್ನಾಗಿ ಮಾಡಿ ವರ್ಣಿಸುವುದು. ೨. ಉಪಮಾನವಸ್ತುವಿದೆಯೆಂದು ಉಪಮೇಯವನ್ನು ಕಡೆಗಣಿಸಿ ಹೇಳುವುದು. ೩. ವರ್ಣಿಸುವ ವಸ್ತುವಿನ ಅತಿಶಯದಿಂದ ಉಪಮಾನವಸ್ತುವಿಗೆ ಅನಾದರಣೆ ಮಾಡುವುದು. ೪. ವರ್ಣಿಸುವ ವಸ್ತುವಿಗೆ ಅಂದರೆ ಉಪಮೇಯಕ್ಕೆ ಉಪಮಾನವಸ್ತು ಯೋಗ್ಯವಲ್ಲವೆಂದು ಹೇಳುವುದು. ೫. ವರ್ಣಿಸುವ ವಸ್ತುವಿನಿಂದಲೇ ಬೇಕಾದ ಕೆಲಸವಾಗುವುದರಿಂದ ಉಪಮಾನವಸ್ತುವೇತಕ್ಕೆಂದು ಹೇಳುವುದು : ಅನುಕಂಪೆಯಕ್ಕೆ ಮೇಣ್ ಕುತ್ಸನಮುಪಮೇಯಸ್ಥಿತಂ ಪ್ರತೀಪಂ (ಕಾವ್ಯಾಪ. ೬೦೭); ಪ್ರಸಿದ್ಧಮಾದುಪಮಾನವಸ್ತುವಂ ಉಪಮೇಯಂಗೆಯ್ದು ಪೇಟಿಯದು ಪ್ರತೀಪಂ (ಅಪ್ರತಿ. ೩೯-೦೭) ; ಸಂಗತಮಾಗಲ್ಕುಪಮೆಗೆ ಮಂಗಳಮೂರ್ತಿ ಪ್ರತೀಪಮುಪಮೇಯತೆ ತಾಂ (ಶಠಕ. ೦೫-೦೩). [ಸಂ.]

**ಪ್ರತೀಪದರ್ಶಿನಿ** (ನಾ). ಹೆಂಗಸು ; ಸ್ತ್ರೀ : "ರಾಮಾ . . . ಪ್ರತೀಪದರ್ಶಿನೀ, ವಧೂಃ, ವಶಾ, ಯುವತಿಃ—ಈ ೨೮ ಸ್ತ್ರೀಯರ್" (ಹಲಾಯು. ೭೯-೩೦೮). [ಸಂ. ಪ್ರತೀಪದರ್ಶಿನೀ]

**ಪ್ರತೀಪಾಲಂಕಾರ** (ನಾ). = ಪ್ರತೀಪ ೫ : ಪ್ರತೀಪಾಲಂಕಾರವಮಯ್ದುಂತೆಱಂ (ಅಪ್ರತಿ. ೩೯-೦೩) ; ಉಪಮಾನವೆಂದು ಸುಪ್ರಸಿದ್ಧವಾಗಿರುವ ವಸ್ತುವನ್ನು ಉಪಮೇಯವಾಗಿ ಉಪಯೋಗಿಸುವುದು 'ಪ್ರತೀಪಾಲಂಕಾರ' (ಕೃಶಿಎ. ೨೫೯). [ಸಂ.]

**ಪ್ರತೀಯಮಾನ** (ಗು). ೧. ತೋರುವ ; ಕಾಣುವ ; ಪ್ರಕಟವಾಗುವ : ಅಂ ತ ವ ರೋ ಧ ಪ ರಿ ಚಾ ರಿ ಕಾ ಚತುರವಿಳಾಸಿನೀಪ್ರತೀಯಮಾನಶೋಭಾವಿಭವನಪ್ಪಕಳಂಕಾಚಾರಸಾರನಪ್ಪವಜ್ರಾಯುಧನೆರಡುಂ ಕೆಲದೊಳ್ . . . ಬಂದರ್ ಕೆಲರುಂ ಯೋಷಿಜ್ಜನಂ (ಶಾಂತಿಪು. ೬-೨೨ ವ). (ನಾ). ೨. [ಕಾವ್ಯಮಿ] ವಾಚ್ಯಾರ್ಥ ಮತ್ತು ಲಕ್ಷ್ಯಾರ್ಥಕ್ಕಿಂತ ಬೇರೆಯಾದ ವ್ಯಂಗ್ಯಾರ್ಥ ; ವಾಚ್ಯವಾಗಿ ತೋರದಿದ್ದರೂ ಪ್ರಕರಣಾದಿ ಪರ್ಯಾಲೋಚನೆಯಿಂದ ತೋರುವ ಅರ್ಥವಿಶೇಷ ; ಧ್ವನಿ : "ವಾಚ್ಯ" ವಾದುದಕ್ಕಿಂತಲೂ ಬೇರೆಯಾದ "ಪ್ರತೀಯಮಾನ" ವೆನಿಸುವ ವಸ್ತುವು ಮಹಾಕವಿಗಳ ವಾಣಿಗಳಲ್ಲಿ ಉಂಟು (ಧ್ವನ್ಯಾಲೋ. ೦೩); ವಾಕ್ಯದಿಂದ ತಿಳಿದುಬರುವ ವಕ್ತೃವಿನ ಒಟ್ಟು ಅಭಿಪ್ರಾಯಕ್ಕೇ ಇಲ್ಲಿ ತಾತ್ಪರ್ಯವೆಂದು ಹೆಸರು. ಇದು ಅಭಿಧೀಯಮಾನ, ಪ್ರತೀಯಮಾನ, ಧ್ವನಿರೂಪ ಎಂದು ಮೂರು ಬಗೆ . . . ಪ್ರತೀಯಮಾನಕ್ಕೂ ಧ್ವನಿರೂಪಕ್ಕೂ ವ್ಯತ್ಯಾಸವೇನೆಂಬುದು ಸರಿಯಾಗಿ ಗೊತ್ತಾಗುವುದಿಲ್ಲ (ಕಾರಶಿಎ. ೯೯). [ಸಂ.]

**ಪ್ರತೀರ** (ನಾ). ಅಂಚು ; ದಡ ; ದಂಡೆ : "ಕೂಲಂ, ರೋಧಃ, ತೀರಂ, ಪ್ರತೀರಂ, ತಟಂ—೫ ದಡದ ಹೆಸರುಗಳು" (ಸಿದ್ಧಾಂತಿ. ೭೭). [ಸಂ.]

**ಪ್ರತೀವಾಪ** (ನಾ). ೧. ಸೇರಿಸುವುದು ; ಕೂಡಿಸುವುದು ; ಬೆರಸುವುದು. ೨. (ಹಾಲಿಗೆ) ಹೆಪ್ಪು ಹಾಕುವುದು : ''ಆತಂಚನಂ . . . ಪ್ರತೀವಾಪಕ್ಕೆ ಹೆಸರು. ಅಂದರೆ ಹೆಪ್ಪಿಡುವಿಕೆ'' (ಸಿದ್ಧಾಂತಿ. ೪೦೨). ೩. ಚಿನ್ನ ಮೊದಲಾದ ಲೋಹಗಳನ್ನು ಭಸ್ಮಮಾಡುವುದು. ೪. ಒಂದು ಬಗೆಯ ರೋಗ ; ಪ್ಲೇಗು. [ಸಂ.]

**ಪ್ರತೀಷ್ಟ** (ನಾ). ಒಪ್ಪಿಕೊಂಡುದು; ಅಂಗೀಕರಿಸಿದುದು : "ಪ್ರತೀಷ್ಟಂ, ಪ್ರತಿನೋದ್ಧೃತಂ – ಈ ೨ ಕೊಟ್ಟು ಆಗುಮಾಡಲ್ಪಟ್ಟುದು" (ಹಲಾಯು. ೦೨೮-೯೭). [ಸಂ.]

**ಪ್ರತೀಹಾರ** (ನಾ). ೧. ಹಿಂದಕ್ಕೆ ಅಟ್ಟುವುದು; ಹಿಮ್ಮೆಟ್ಟಿಸುವುದು. ೨. ಬಾಗಿಲು; ದ್ವಾರ : " ದ್ವಾರಮುಂ ಪ್ರತೀಹಾರಮೆಂಬುದಕ್ಕುಂ " (ವಸ್ತುಕೋ. ೦೩೯-೦೨೫). ೩. ಬಾಗಿಲು ಕಾಯುವವನು ; ದ್ವಾರಪಾಲಕ : " ಪ್ರತೀಹಾರಃ, ದ್ವಾರಪಾಲಃ, ದ್ವಾಸ್ಥಃ, ದ್ವಾಸ್ಥಿತಃ, ದರ್ಶಕಃ—೫ ಬಾಗಿಲುಕಾಯುವ ಜವಾನನ ಹೆಸರುಗಳು " (ಸಿದ್ಧಾಂತಿ. ೨೫೭). ೪. ಕಣ್ಕಟ್ಟುವಿದ್ಯೆಯನ್ನು ಬಲ್ಲವನು ; ಗಾರುಡಿಗ. ೫. ಕಣ್ಕಟ್ಟುವಿದ್ಯೆ ; ಗಾರುಡಿ. [ಸಂ.]

**ಪ್ರತೀಹಾರಕ** (ನಾ). ೧. ಬಾಗಿಲು ಕಾಯುವವನು ; ದ್ವಾರಪಾಲಕ : ಪ್ರತೀಹಾರಕತರ್ಜನಂ ಪರಿವಿನಂ ಪರಿದತ್ತು ನರೇಂದ್ರನೋಲಗಂ (ಮಲ್ಲಿಪು. ೬-೭೨); ಮಸ್ತಕಾವೇಷ್ಟಿತೋದಂಚಚ್ಛ್ವೇತಪಟಂ ಪ್ರಸನ್ನವದನಂ ಬಂದಂ ಪ್ರತೀಹಾರಕಂ (ರಾಜಶೇ. ೫-೨೩). ೨. = ಪ್ರತೀಹಾರ ೪. [ಸಂ.]

**ಪ್ರತೀಹಾರಕಿ** (ನಾ). ಬಾಗಿಲು ಕಾಯುವವಳು ; ದ್ವಾರಪಾಲಿಕೆ : ತಚ್ಚರಣಸರಸಿರುಹಯುಗದೊಳ್ ಸರಭಸಮಿರದಿರೆಱಗಿದರ್ ಪ್ರತೀಹಾರಕಿಯರ್ (ಕಾದಂಪೂ. ೯೯೭). [ಸಂ. ಪ್ರತೀಹಾರಕೀ]

**ಪ್ರತೀಹಾರಿ** (ನಾ). ೧. = ಪ್ರತೀಹಾರಕಿ : ಒಯ್ಯನೆ ಬರುತ್ತಿರ್ದಳ್ ಪ್ರತೀಹಾರಿ ಭೂಪಾಳಯಾಧೀಶ್ವರನಲ್ಲಿಗಾಗಿ ನಯದಿಂ ವಿಜ್ಞಾಪನೋತ್ಕಂಠೆಯಿಂ (ಕಾದಂಪೂ. ೨೪). ೨. ಬಾಗಿಲು ಕಾಯುವವನು ; ದ್ವಾರಪಾಲಕ: ರಾಜನು ಪ್ರತೀಹಾರಿ ವಿದೂಷಕರೊಡನೆ ಬರುವನು (ಶಾಕುಂತ. ೬೨-೯). [ಸಂ. ಪ್ರತೀಹಾರೀ]

**ಪ್ರತೀಹಾರಿಕೆ** (ನಾ). = ಪ್ರತೀಹಾರಕಿ : ಆಗಳರಸನು ತತ್ಪ್ರತೀಹಾರಿಕಾಜನೋಪದಿಶ್ಯಮಾನಮಾರ್ಗನಾಗಿ ಪೊಕ್ಕು ನೋಟ್ಪನ್ನೆಗಂ (ಕಾದಂಪೂ. ೯೯೭). [ಸಂ. ಪ್ರತೀಹಾರಿಕಾ]

**ಪ್ರತೀಹಾಸ** (ನಾ). = ಪ್ರತಿಹಾಸ. [ಸಂ.]

**ಪ್ರತುಮೆ** 'ಪಡಿಮೆ' ನೋ.

**ಪ್ರತೂರ್ಣ** (ನಾ). ವೇಗವುಳ್ಳವನು : "ಪ್ರತೂರ್ಣಃ, ತ್ವರಿತಃ, ತೂರ್ಣಃ, ಉತ್ಸುಕಃ, ಪ್ರಸೃತಂ – ಈ ೫ ಚುರ್ಚಿನಿಗಂ" (ಹಲಾಯು. ೩೮-೧೯೮). [ಸಂ.]

**ಪ್ರತೋದ** (ನಾ). ೧. ಹೂಡಿದ ಎತ್ತು, ಕುದುರೆ ಮೊದಲಾದುವನ್ನು ನಡೆಸುವ, ಉದ್ದವಾದ ದಾರವುಳ್ಳ ಕೋಲು; ಚಾವಟಿ. ೨. ತಿವಿಗೋಲು; ಚುಚ್ಚುಗೋಲು : "ಪ್ರತೋದಃ, ಪ್ರಾಜನಂ, ತೋತ್ರಂ — ಈ ೩ ಮುಳುಹುಗೋಲ್" (ಹಲಾಯು. ೯೪-೪೨೩). ೩. ಅಂಕುಶ. [ಸಂ.]

**ಪ್ರತೋಲಿ, ಪ್ರತೋಳಿ** (ನಾ). ೧. ನಗರದ ಮುಖ್ಯರಸ್ತೆ ; ರಾಜಮಾರ್ಗ : ಪಂಚರತ್ನತೋರಣದ್ಯುತಿಸಮುದ್ಯೋದಿತಕನಕಪ್ರಾಕಾರಪ್ರತೋಲಿದ್ವಾರಗಮನೆಯ್ದುವಂದಾಗಳ್ (ಆದಿಪು. ೦೦-೩೩ ವ). **ಪ್ರತೋಳಿ**: ೧. "ಪ್ರತೋಳೀ, ವಿಶಿಖಾ, ರಥ್ಯಾ — ಈ ೩ ಬೀದಿ" (ಹಲಾಯು. ೪೬-೦೩೪); ನಿರಂತರಾಟ್ಟಾಳಕಪ್ರತೋಳೀಂದ್ರಕೋಶದೇವಪಥಸನಾಥಂಗಳುಂ (ಆದಿಪು. ೦೩-೩೭ ವ); ಅಂತುದ್ಯಾನಪ್ರತೋಳೀದ್ವಾರದಿಂ ಪೊಱಮಟ್ಟು ಸೌಜನ್ಯಕಂದಾಂಕುರಂ ರಾಜಭವನಾಭಿಮುಖನಪ್ಪುದುಂ (ಶಾಂತಿಪು. ೬-೩೭ ವ). ೨. ಚಾವಡಿಯ ಜಗಲಿ : "ರಥ್ಯಾ, ಪ್ರತೋಳೀ, ವಿಶಿಖಾ — ೩ ಊರೊಳಗಿರುವ ಮುಖ್ಯವಾದ ಚಾವಡಿಜಗಲಿ, ಬೀದಿಜಗುಲಿ" (ಸಿದ್ಧಾಂತಿ. ೯೯). [ಸಂ. ಪ್ರತೋಲೀ]

**ಪ್ರತೋಳಿ** 'ಪ್ರತೋಲಿ' ನೋ.

**ಪ್ರತೋಳಿಕೆ** (ನಾ). = ಪ್ರತೋಲಿ ೧ : ಅನಂತರಂ ಬಂಧುರಸಿಂಧುರಸ್ಕಂಧದಿನಿೞಿದು ವನಪ್ರತೋಳಿಕಾದ್ವಾರಮಂ ಪೊಕ್ಕು (ಚಂದ್ರಪ್ರ. ೬-೮೩ ವ); ಪ್ರತೋಳಿಕಾಯುಕ್ತಪುರಮಧ್ಯದಲ್ಲಿ ಎಡೆಯಾಡುತ್ತಿರ್ಪ ನಾರೀಜನದ ವಿಪುಳಭೂಷಾಂಶುತೋಯಪ್ರತಾನಂ ಗಡಣಂಗೊಂಡೆತ್ತಲುಂ ತೀವಿರೆ (ಜಾಲ್ಸ್ಮ. ೦-೪-೭೩ ವ). [ಸಂ. ಪ್ರತೋಲಿಕಾ]

**ಪ್ರತ್ನ** (ಗು). ೧. ಹಳೆಯ ; ಪ್ರಾಚೀನ ; ಪುರಾತನ : ಪ್ರತ್ನಕವಿಪ್ರವರರ್ ಮೇಣ್ ನೂತ್ನಕವಿಪ್ರವರರಕ್ಕೆ (ಅಜಿಪು. ೪-೬೨); ನರಜಪ್ರಾಕೃತನಕೆ ನೂತನಸತ್ತ್ವ ಬೆರೆತು ಪರಿವುದೀ ವಿಶ್ವಜೀವನಲಹರಿಯನವರತ ಚಿರಪ್ರತ್ನನೂತ್ನಜಗ (ಮಂಕುತಿ. ೦೨೯). (ನಾ). ೨. ಹಳೆಯದು ; ಪುರಾತನವಾದುದು : "ಜೀರ್ಣಂ, ಜರತ್, ಪುರಾಣಂ, ಪ್ರತ್ನಂ, ಪ್ರತನಂ, ಪುರಾತನಂ— ಈ ೬ ಪ(ಹ)ೞದು" (ಹಲಾಯು. ೦೦೩೪-೩೬). ೩. [ಛಂದ] ಸಂಸ್ಕೃತದ ಒಂದು ವೃತ್ತ. [ಸಂ.]

**ಪ್ರತ್ಯಂಗ** (ನಾ). ಶರೀರದ ಬೇರೆ ಬೇರೆ ಭಾಗ,– ಪ್ರತಿಯೊಂದು ಅಂಗ : ಕೊರಲುಂ ತೋಳ್ ಬೆನ್ ಪೊಡೆ ತೊಡೆ ಕರಮೊಸೆವೀ ಜಂಘೆಯೆಂಬಿವಾಱುಂ ಭೇದಂ ಉರು ಮಣಿಬಂಧಂ ಮೊಳಕಾಲ್ ವಿರಚಿಪಲಂ ಕಾರಮಿಂತು ಪ್ರತ್ಯಂಗಂಗಳ್ (ಶಾಸ್ತ್ರಸಾ. ೨-೦೦೩); ಅಂಗ ಪ್ರತ್ಯಂಗ ಉಪಾಂಗವೆಂಬ ಆಂಗಿಕದಲ್ಲಿ ರಸಭಾವಂ ತುಳ್ಕುವಂತೆ ಗೀತ ಶಬ್ದ ನೇಮ ಉರುಪು ಪದ ಪಟ್ಟ ದರುಗಳಂ ತೋಱಿಸುವ . . . ಪಾತ್ರಂಗಳಿಂ (ದಶಾವ. ೨-೦೦ ವ); ಪುರುಷನ ಶರೀರದಲ್ಲಿರುವ ವೀರ್ಯಮೇ ಗರ್ಭ: ಈ

ವೀರ್ಯವು ಶರೀರದ ಪ್ರತ್ಯಂಗಗಳಿಂದಲೂ ಸ್ರವಿಸಿ ಬಂದುದು (ಜೀವಾತ್ಮ. ೮೬೦). [ಸಂ.]

**ಪ್ರತ್ಯಂಚ** (ಗು). ೧. ಅಭಿಮುಖವಾದ ; ಎದುರಿಗಿರುವ. ೨. ಹಿಂದಿರುವ; ಹಿಂಬದಿಯಲ್ಲಿರುವ. ೩. ಹಿಂತಿರುಗಿದ ; ವಿಮುಖವಾದ. ೪. ಪಶ್ಚಿಮಕ್ಕೆ ಸಂಬಂಧಿಸಿದ ; ಪಡುವಣ. ೫. ಸಮಾನವಾದ ; ಸದೃಶವಾದ. ೬. ಒಳಗಿನ ; ಅಂತಃಸ್ಥಿತವಾದ. (ನಾ). ೭. ಪಶ್ಚಿಮ ದಿಕ್ಕು. ೮. ಪಶ್ಚಿಮದಿಕ್ಕಿಗೆ ಸಂಬಂಧಿಸಿದುದು. ೯. ಪಶ್ಚಿಮದೇಶ ; ಪಾಶ್ಚಾತ್ಯದೇಶ. ೧೦. ಒಳಗಿರುವುದು ; ಅಂತಃಸ್ಥಿತವಾದುದು : ಮಹಾಂತಂ, ಪ್ರಾಂಚಂ, ಪ್ರತ್ಯಂಚಂ (ಶಬ್ದಾನು. ೦೬೬ ಪ್ರಯೋ). ೧೧. ಭವಿಷ್ಯತ್ಕಾಲ. ೧೨. ಜೀವಾತ್ಮ. [ಸಂ. ಪ್ರತ್ಯಂಚ್]

**ಪ್ರತ್ಯಂತ** (ಗು). ೧. ಗಡಿಯಲ್ಲಿರುವ ; ಎಲ್ಲೆಯಲ್ಲಿರುವ : ಭವತ್ಪ್ರತಾಪ ಕಥೆಯಂ ಪ್ರತ್ಯಂತಭೂಚಕ್ರದೊಳ್ ಬಿಡೆ ಕೇಳ್ವಾಗ್ರುಹಮಾಯ್ತು (ಕುಸುಮಾ. ೩-೬). 'ಪ್ರತ್ಯಂತಭೂಪಾಲಕ' ಪರಾ. ೨. ಹತ್ತಿರದಲ್ಲಿರುವ ; ಸಮೀಪದಲ್ಲಿರುವ : ಪ್ರತ್ಯಂತದೇಶಭೂಭೃದಪತ್ಯರನೆಟ್ಟಟ್ಟಿ ಪುಗಿಸಿ ಕಾಂತಾರನಗೋಪತ್ಯಕಮಂ ಕೌಸಲ್ಯಾಪತ್ಯಂಗೋಲಗಿಪನವರ ಹರಿವಿಷ್ಟರಮಂ (ರಾಮಾಶ್ವ. ೬-೦೩೪). (ನಾ). ೩. ಗಡಿ ; ಎಲ್ಲೆ ; ಸರಹದ್ದು. ೪. ಗಡಿಯಲ್ಲಿರುವ ದೇಶ ; ಗಡಿನಾಡು : ಪೊಂಗುವ ಮಲೆಪರ ಮಲೆಗಳ ಡಂಗಂ ಕಣ್ಮಲೆವ ಮಂಡಲಂಗಳ್ ಪ್ರತ್ಯಂತಂಗಳೆನಲೊಳವೆ ಪಾಂಡವರು ಗೆಡೆಗೊಳೆ ನಿನಗೆ ಕುರುಕುಲಾಂಬರಭಾನೂ (ಪಂಪಭಾ. ೯-೩೯). ೫. ಮ್ಲೇಚ್ಛದೇಶ : "ಮ್ಲೇಚ್ಛದೇಶಃ, ಪ್ರತ್ಯಂತಃ—ಭಾರತವರ್ಷದ ತುದಿಯಲ್ಲಿರುವ ಕಾಮರೂಪಾದಿ ದೇಶದ ಹೆಸರು" (ಸಿದ್ಧಾಂತಿ. ೯೪). ೬. ಹತ್ತಿರ; ಸಮೀಪ : ಸವಿಧಂ ದೂರಂ ಪ್ರತ್ಯಂತವಿದೆನ್ನದೆ ಭೂತ ಭಾವಿ ಭವದಖಿಳ ಪದಾರ್ಥವನೊರ್ಮೆಯೆ ಕರಣಾವನಾಸೆವಡೆಯದೆ ನೆಗಟ್ದತ್ತಗಾಢಬೋಧಂ ಜನನೊಳ್ (ಪುಷ್ಪದಂ. ೦೪-೪೦); ಘೋರಾಟವಿಯ ದೂರದಿಂ, ಗಿರಿಭುಜಪ್ರತ್ಯಂತದಿಂ ಕರದ ಲಕ್ಷ್ಮಣನ ಕೊರಳುಲಿಯನಾಲಿಸಿವನಂತರಂ . . . ಸಲ್ಲಿಲಕೇಳೀನಿರತರಾಯಿರ್ವರುಂ ಬೆಚ್ಚರುಂ ದಡಕಾಱಿದರ್ (ಶ್ರೀರಾಮಾ. ೦೩೩-೬೭). [ಸಂ.]

**ಪ್ರತ್ಯಂತಭೂಪಾಲಕ** (ನಾ). ನೆರೆನಾಡಿನ ದೊರೆ ; ಗಡಿಯಾಚೆಯ ನಾಡಿನ ರಾಜ : ಬಲವತ್ಪ್ರತ್ಯಂತಭೂಪಾಲಕನಿಕರಮಹಾವಾಹಿನೀವಾಹಿನೀಸಂಕುಲ ಮತ್ಯುತ್ಸಾಹದಿಂದ ಪುಗೆ ದೆಸೆದೆಸೆಯಂ (ಆದಿಪು. ೦೩-೯೩). [ಸಂ.]

**ಪ್ರತ್ಯಂತವಾಸ** (ನಾ). ಸರಹದ್ದಿನ ಸ್ಥಳ; ಗಡಿಪ್ರದೇಶ: ತೀವಿದ ಕೆಚ್ಚ ನಡುಬತ್ತಿದುದು ಕಂಡುದಱಿನಯ್ದನೆಯ ಕಾಲದ ಕಡೆಯೊಳು ಪ್ರತ್ಯಂತವಾಸಂಗಳೊಳಲ್ಲದೆ ನಡುನಾಡೊಳಱಿನಾಗದು (ವಾಪುಂಶ್ರು. ೩೩). [ಸಂ.]

**ಪ್ರತ್ಯಂತವಾಸಿ** (ನಾ). ಗಡಿಪ್ರದೇಶದಲ್ಲಿ ವಾಸಿಸುವವನು: ನಿಜಾಧೀಶ್ವರ ರಾಜ್ಞೆಯಿಂ ಪ್ರತ್ಯಂತವಾಸಿಗಳಾಗಿ ಮಲೆದ ರಿಪುನ್ರಿಪರ ಸಮಿತಿಯ ದರ್ಪ್ಪಮಂ ಪೊಡಪ್ಪುವಮನಡಂಗಿಸಿ (ಶಾಂದೇಲ್ ೩-೨೨ ವ; 1047); ಒಂದು ದಿನಂ ಪ್ರತ್ಯಂತವಾಸಿಗಳೆತ್ತಿ ಬಂದು ನಾಡ ಗಡಿಗಳಂ ಕೊಂಡು ನಂದನನಂ ಸಮರಕ್ಕೆ ಬರವೇಳ್ಪುದಂ ಸಕಟಾಳ ಮಂತ್ರಿ ಪೇಳೆ (ಕಗಪ. ೯೪ ರಾಜಾವಳೀಕಥೆ). [ಸಂ. ಪ್ರತ್ಯಂತವಾಸಿನ್]

**ಪ್ರತ್ಯಂತಸೀಮೆ** (ನಾ). ಅಕ್ಕಪಕ್ಕದ ಪ್ರದೇಶ ; ಹತ್ತಿರದ ಸ್ಥಳ : ಬಹುದಿನಗಳಾಶೆ ಸಿದ್ಧಿಸಿತೆಂದು ಸಡಗರಿಸಿ ಶರಧಿಗುರುದರ್ಶನಕ್ಕೆ ಮುಟ್ಟಿ ಬೆಟ್ಟವನದರ ಪ್ರತ್ಯಂತಸೀಮೆಯನಡರಿದುದು ಸೇನೆ (ಶ್ರೀರಾಮಾ. ೩೪೩-೪೦). [ ಸಂ. ಪ್ರತ್ಯಂತಸೀಮಾ ]

**ಪ್ರತ್ಯಂಬರ** (ನಾ). ಸುತ್ತಲೂ ಹಾಕಿರುವ ತೆರೆ ; ಸುತ್ತುದೆರೆ : "ಪ್ರತ್ಯಂಬರಂ ಕಾಂಡಪಟಮಪಟಿಯುಮನಿಕೆಯು ಸುತ್ತುದೆರೆಯಕ್ಕು" (ನಂಗರಾ. ೬೦-೦೬). [ಸಂ.]

**ಪ್ರತ್ಯಕ್ಶ್ರೇಣಿ** (ನಾ). ಇಲಿಯಾಲದ ಗಿಡ ; ಇಲಿಕಿವಿಗಿಡ : "ಚಿತ್ರಾ, ಉಪಚಿತ್ರಾ . . . ಪ್ರತ್ಯಕ್ಶ್ರೇಣೀ, ಸುತಶ್ರೇಣೀ, ರಂಡಾ, ಮೂಷಕಪರ್ಣೀ— ಈ ೧೦ ಎಲಿಯಾಲದ ಮರಕ್ಕೆ ಹೆಸರು" (ಸಿದ್ಧಾಂತಿ. ೦೬೨). [ಸಂ. ಪ್ರತ್ಯಕ್ಶ್ರೇಣೀ]

**ಪ್ರತ್ಯಕ್ಪರ್ಣಿ** (ನಾ). ಉತ್ತರಣೆ ಗಿಡ : "ಅಪಾಮಾರ್ಗಃ . . . ಪ್ರತ್ಯಕ್ಪರ್ಣೀ, ಕೇಶವಲ್ಲೀ, ಕಿಣಿಹೀ, ಖರಮಂಜರೀ—೮ ಉತ್ತರಣೇ ಗಿಡದ ಹೆಸರುಗಳು" (ಸಿದ್ಧಾಂತಿ. ೦೬೨). [ಸಂ. ಪ್ರತ್ಯಕ್ಪರ್ಣೀ]

**ಪ್ರತ್ಯಕ್ಷ** (ನಾ). ೧. ಕಣ್ಣಿಗೆ ಕಾಣುವುದಂ ; ಚಕ್ಷುರಿಂದ್ರಿಯಕ್ಕೆ ಗೋಚರವಾಗುವುದಂ : ಪದಾರ್ಥಂಗಳೆಲ್ಲಂ ಪ್ರತ್ಯಕ್ಷಂಗಳಲ್ಲದುವಿಲ್ಲ (ಶಾಂತಿಪು. ೬-೦೧೦ ವ); ಪ್ರತ್ಯಕ್ಷಮಾಗೆ ದಯೆಯಿಂ ಕಾತ್ಯಾಯಿನಿದೇವಿ [ಚಿತ್ರಮತಿದೇವಿ]ಗೆ ತಾನಿತ್ತಳ್ ಪ್ರಸೂನಮಾಲೆಯಂ (ಕುಸುಮಾ. ೦೨-೨೩); ಚಿತ್ರಾಂಗದೆಗೆ ಸಂತಸಂ ಕೈಗಣ್ಮಿದತ್ತು, ಬಹುಕಾಲದಾನಂತರಂ ಪ್ರತ್ಯಕ್ಷಮಹುದೆಂದು ಪತಿಯ ಸಂದರ್ಶನಂ (ಚಿತ್ರಾಂಗ. ೬೦-೦೩೩). ೨. ಸಮರ್ಥನೆ ಮಾಡುವ ಸಾಧನ ; ನಿದರ್ಶನ ; ದೃಷ್ಟಾಂತ : ನಾನು ಮರ್ತ್ಯಲೋಕದ ಹಂಬಲ ಹಱಿದು ನಿನ್ನ ನಂಬಿ ನಚ್ಚಿದೆನೆಂಬುದಕ್ಕೆ ಪ್ರತ್ಯಕ್ಷಮಂ ತೋಱುತಿರ್ಪೆ ನೋಡಯ್ಯ ಲಿಂಗವೆ (ಶಿವವ. ೦೨-೦೦). ೩. ಪವಾಡ; ಅತಿಮಾನುಷಕೃತ್ಯ ; ಅದ್ಭುತಕೆಲಸ : ಪರಸಮಯದ ಗರ್ವಮಂ ನಿಲಿಸಿ ಭಕ್ತರಂ ಗೆಲಿಸಿ ಪ್ರತ್ಯಕ್ಷಂಗಳಂ ತೋಱಿ . . . ಬಿಜಯಂಗೆಯ್ಯೆ (ಬಸರ. ೯-೩೯). ೪. ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ ಮತ್ತು ಮನಸ್ಸು ಎಂಬ ಇಂದ್ರಿಯಂಗಳಿಗೆ ಗೋಚರವಾಗುವುದಂ,-ಅನುಭವವಾಗುವುದಂ : "ಪ್ರತ್ಯಕ್ಷಂ, ಐಂದ್ರಿಯಕಂ—೨ ಚಕ್ಷುರಾದಿ ಬಹಿರಿಂದ್ರಿಯಂಗಳಿಂದುಂಟಾಗುವ ರೂಪಾದಿ ಸಾಕ್ಷಾತ್ಕಾರಗಳಿಗೂ, ಅಂತಃಕರಣದಿಂದುಂಟಾಗುವ ಸುಖಾದಿ ಸಾಕ್ಷಾತ್ಕಾರಗಳಿಗೂ ಹೆಸರು" (ಸಿದ್ಧಾಂತಿ. ೩೯೩). ೫. ನಿಸ್ಸಂದೇಹವಾದುದಂ; ಸ್ಪಷ್ಟವಾದುದು. ೬. [ತತ್ತ್ವಶಾ] ಇಂದ್ರಿಯ ಮತ್ತು ವಿಷಯಂದ ಸಂಬಂಧದಿಂದ ಉಂಟಾಗುವ ಜ್ಞಾನ; ✻ ಆತ್ಮವು ಮನಸ್ಸಿನೊಂದಿಗೆ ಸೇರುತ್ತದೆ. ಮನಸ್ಸು ಇಂದ್ರಿಯಂದೊಂದಿಗೆ ಸೇರುತ್ತದೆ. ಇಂದ್ರಿಯಂವು ಗಡಿಗೆ ಮೊದಲಾದ ಪದಾರ್ಥದೊಂದಿಗೆ ಸೇರುತ್ತದೆ. ಬಳಿಕ ಪ್ರತ್ಯಕ್ಷವುಂಟಾಗುತ್ತದೆ ಎಂದು ನ್ಯಾಯಶಾಸ್ತ್ರ ಹೇಳುತ್ತದೆ. ಪ್ರಮಾಣದ ಸಂಖ್ಯೆಯಲ್ಲೂ ಹೇಗೆ ಪ್ರತ್ಯಕ್ಷವುಂಟಾಗುತ್ತದೆ ಎಂಬ ಅಂಶದಲ್ಲೂ ಪ್ರತ್ಯಕ್ಷವು ಎಷ್ಟು ವಿಧ ಎಂಬ ವಿಷಯಂದಲ್ಲೂ ಬೇರೆ ಬೇರೆ ಶಾಸ್ತ್ರಕಾರರು ಬೇರೆ ಬೇರೆ ಅಭಿಪ್ರಾಯಗಳನ್ನು ತಳೆದಿರುತ್ತಾರೆ : ಆ ವಸ್ತುಮಂ ತಿಳಿವ ಪ್ರಮಾಣಂಗಳ್ ಪ್ರತ್ಯಕ್ಷಮೆಂದುಂ ಅನುಮಾನಮೆಂದುಂ ಶಬ್ದಮೆಂದುಂ ಮೂಱುಂತೆಱನಾಗಿರ್ಕುಂ (ಶಬರ. ೩-೦೬ ವ) ; ಈ ಸಪ್ತಪದಾರ್ಥಗಳು ಪ್ರತ್ಯಕ್ಷ, ಅನುಮಾನ, ಉಪಮಾನ, ಮತ್ತು ಶಬ್ದವೆಂಬ ಪ್ರಮಾಣಗಳಿಗೆ ಗೋಚರಿಸುವುವು (ಭಾರದ. ೦೨೪).

**ಪ್ರತ್ಯಕ್ಷ ಚಾಣಾಕ್ಯ**=ಚಾಣಕ್ಯನಂತೆ ನೀತಿಶಾಸ್ತ್ರಪಾರಂಗತನಾಗಿರುವವನಂ ; ಒಂದು ಬಿರುದು : ಕಾಂಚೀಪುರವರೇಶ್ವರಂ ಪ್ರತ್ಯಕ್ಷಚಾಣಾಕ್ಯನಮೋಘವಾಕ್ಯಂ (ಸೌಇಇ. XX. ೩೯-೧೧; 1064). **ಪ್ರತ್ಯಕ್ಷ ಪಾರ್ವತಿ**=(ಸೌಂದರ್ಯದಲ್ಲಿ) ಪಾರ್ವತಿಯಂತಿರುವವಳಂ ; ಒಂದು ಬಿರುದಂ : ಕಳಹಂಸಯಾನೆ ಕಲಿಕಾಲ ಸರಸ್ವತಿ ಪ್ರತ್ಯಕ್ಷಪಾರ್ವ್ವತಿ ಪರಿವಾರಸಮುದ್ಧರಣೆ . . . ಪಟ್ಟಮಹಾದೇವಿ (ಸೌಇಇ. XX, ೬೦-೬; 1094). **ಪ್ರತ್ಯಕ್ಷ ಭೂರಿಶ್ರವ**=ಪರಾಕ್ರಮದಲ್ಲಿ ಭೂರಿಶ್ರವನಂತಿರುವವನು ; ಒಂದು ಬಿರುದು : ಸ್ವಸ್ತಿಸಮಧಿಗತ[ಪಂಚಮಹಾಶಬ್ದ]ಮಹಾಸಾಮನ್ತಂ ಪ್ರತ್ಯಕ್ಷಭೂರಿಶ್ರವಂ . . . ಶ್ರೀಮದಾಹವಮಲ್ಲದೇವಪಾದಪಂಕೇಜಭ್ರಮರಂ ಶ್ರೀಮತ್ಶೋಭನರಸರ್ (ಚಾಸಶ. ೨೩; 991). **ಪ್ರತ್ಯಕ್ಷವಾಗು**=ಮೈದೋರು;

ಕಣ್ಣಿಗೆ ಕಾಣು : ಸೋಮೇಶ್ವರನೊಸೆದು ನಿನಗಿಲ್ಲಿಯೇ ಪ್ರತ್ಯಕ್ಷವಾದಹನು (ಬಸವು. ೫೩-೧೮) ; ಟಾಂಗಾ ರಿಕ್ಷಾಗಳ ಸೆಳೆಗೊಳಗಾಗದೆ ನಿಂತೆ ತಾಸಿನ ತವಗ್ಯೆದೆ ಪ್ರತ್ಯಕ್ಷವಾಯಿತು ಕಡೆಗೂಮ್ಮೆ ಆ ಬಸ್ಸು (ತಂಜಾತ. ೧೦೩-೫). ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡು (ಗಾದೆ). [ಸಂ.]

**ಪ್ರತ್ಯಕ್ಷಕಥನ** (ನಾ). ೧. ಎದುರಿಗೆ ಹೇಳುವುದು. ೨. [ವ್ಯಾಕ] ಒಬ್ಬರಂ ಹೇಳಿದುದನ್ನು ಅದೇ ರೀತಿಯಲ್ಲಿ ಪುನರಾವೃತ್ತಿ ಮಾಡುವುದು,—ನೇರವಾಗಿ ಹೇಳುವುದು : "ಆಡಿದ ಭಾಷಣದ ಮಾತುಗಳನ್ನೇ ಉಪಯೋಗಿಸಿ ಹೇಳುವುದು (ಬೇರೆ ಮಾತುಗಳಲ್ಲ), ಪ್ರತ್ಯಕ್ಷಕಥನ" (Direct-speech. ಇಂಕನಿ). [ಸಂ.]

**ಪ್ರತ್ಯಕ್ಷಜ್ಞಾನ** (ನಾ). ೧. ವಸ್ತುವನ್ನು ಸಾಕ್ಷಾತ್ತಾಗಿ ನೋಡುವುದರಿಂದಾಗುವ ಅನುಭವ. ೨. [ಜೈನ] ಇಂದ್ರಿಯ ಮತ್ತು ಮನಸ್ಸುಗಳ ನೆರವಿಲ್ಲದೆ ನೇರವಾಗಿ ಆತ್ಮನಿಗೆ ಉಂಟಾಗುವ ಜ್ಞಾನ : ಅವಧಿ, ಮನಃಪರ್ಯಯ ಮತ್ತು ಕೇವಲಜ್ಞಾನಗಳು ಪ್ರತ್ಯಕ್ಷವೆನಿಸುತ್ತವೆ (ಕೈಪಿಪ. ೨೯೭). [ಸಂ.]

**ಪ್ರತ್ಯಕ್ಷಪ್ರಮಾಣ** (ನಾ). ೧. ಕಣ್ಣೆದುರಿಗೆ ಕಾಣುವ ಸಾಕ್ಷಿ,—ಪುರಾವೆ; ಸ್ಪಷ್ಟವಾದ ಆಧಾರ : ಪ್ರತ್ಯಕ್ಷಪ್ರಮಾಣಪೂರ್ವಕವಾಗಿ ಸಿಕ್ಕು ಬೀಳುತ್ತಲೇ ಅವನು ರೂಕ್ಷಸ್ವರ ತೆಗೆದು ಹೇಳಿದನು (ಇಶ್ವಕ. ೨೬೨). ೨.= ಪ್ರತ್ಯಕ್ಷ ೪ : ಪಿಷ್ಟೋದಕಗುಡಧಾತಕ್ಯಾದಿಯತ್ತಣಿಂ ಮದಶಕ್ತಿ ಪುಟ್ಟುವಂತೆ ಪುಟ್ಟುಗುಮಾ ಭೂತಂಗಳುಂ ಕಾಯಾಕಾರಪರಿಣತಂಗಳಕ್ಕುಮಿದು ಪ್ರತ್ಯಕ್ಷಪ್ರಮಾಣಸಿದ್ಧಂ (ಶಾಂತಿಪು. ೮-೧೨೬ ವ). ೩. ಪ್ರತ್ಯಕ್ಷಕ್ಕೆ ಸಾಧನವಾದ ಕಣ್ಣು, ಕಿವಿ ಮೊದಲಾದ ಇಂದ್ರಿಯ : ಪ್ರತ್ಯಕ್ಷಪ್ರಮಾಣವೆಂದರೆ ಸಾಕ್ಷಾತ್ಕಾರವೆಂಬ ಪ್ರಮೆಗೆ ಸಾಧ್ಯವಾಗಿರುವ ಚಕ್ಷುರಾದಿ ಇಂದ್ರಿಯಗಳು (ಹಿಂದಣಾ. ೦೩೬) ; ಘಟಾದಿದರ್ಶನವೆಂಬ ಸಾಕ್ಷಾತ್ಕಾರಕ್ಕೆ ಮುಖ್ಯಕಾರಣಗಳಾದ ಚಕ್ಷುರಾದಿಗಳೇ ಪ್ರತ್ಯಕ್ಷಪ್ರಮಾಣವೆನಿಸುವುದು (ವಿವೇಕ. ೧೬). [ಸಂ.]

**ಪ್ರತ್ಯಕ್ಷಫಲ** (ನಾ). ಕಣ್ಣಿಗೆ ಕಾಣುವ ಫಲ; ಅನುಭವಕ್ಕೆ ಬರುವ ಪ್ರಯೋಜನ : ಸತ್ಕರ್ಮಂ ಪ್ರತ್ಯಕ್ಷಫಲಮನೀವುದು ಪುಸಿಯೇ (ಪುಶ್ಶಕು. ೩-೦೮೬). [ಸಂ.]

**ಪ್ರತ್ಯಕ್ಷವೀಕ್ಷಣ** (ನಾ). ತನ್ನ ಕಣ್ಣಿನಿಂದಲೇ ನೋಡುವುದು ; ಸ್ವತಃ ನೋಡಿ ತಿಳಿದುಕೊಳ್ಳುವುದು : ಈ ಸತ್ಯಾಂಶಗಳು ತನ್ನ ದೀರ್ಘಕಾಲದ ಪ್ರತ್ಯಕ್ಷವೀಕ್ಷಣ ಮತ್ತು ಅನುಭವಗಳಿಂದೂ ನಿರ್ಭಯವಾಗಿ ಸಾರಿದನು (ಪುಶ್ಪಾರ. ೦೪ ಪಿ೬೦). [ಸಂ.]

**ಪ್ರತ್ಯಕ್ಷಾನುಭವ** (ನಾ). ಸ್ವಂತ ಅನುಭವ ; ತಾನು ನೋಡಿ ಪಡೆದುಕೊಂಡಿರುವ ತಿಳಿವಳಿಕೆ : ಸ್ತುತ್ಯವು ಜನಪ್ರಿಯವಲ್ಲವೆಂಬುದು ಪ್ರತ್ಯಕ್ಷಾನುಭವದ ವಿಚಾರವಾಗಿದೆ (ರೂಂ). [ಸಂ.]

**ಪ್ರತ್ಯಗಾತುಮ** (ನಾ). = ಪ್ರತ್ಯಗಾತ್ಮ : ಪ್ರತ್ಯಗಾತುಮ ತೋರ್ವನೊಬ್ಬನು ಅದು ನಿದಿಧ್ಯಾಸ (ಜ್ಞಾನಸಿಂ. ೧೨-೩೪); ತಿಳಿ ತ್ವಂ ಪ್ರತ್ಯಗಾತುಮವು ಪರಮಸತ್ಯಜ್ಞಾನರೂಪದ ಪರಿಯ (ಗಗಣಾ. ೨-೯).
[< ಸಂ. ಪ್ರತ್ಯಗಾತ್ಮನ್]

**ಪ್ರತ್ಯಗಾತ್ಮ** (ನಾ). ಎಲ್ಲಾ ಜೀವಿಗಳಲ್ಲಿರುವ ಆತ್ಮ ; ಜೀವಾತ್ಮ : ಕೇಳು ಧಾರುಣಿಯಲ್ಲಿಯೂ ಪ್ರತ್ಯಗಾತ್ಮನಿಂದನ್ಯನಪ್ಪಂತೆಸೆವ ವಿಶ್ವೇಶನೇ (ಏಕ್ಕೈಕು. ೫-೦೩-೦೨); ಸತ್ಯವತಿಯಾತ್ಮಜನು ಪುತ್ರಗೆ ಪ್ರತ್ಯಗಾತ್ಮವೆನಿಪ್ಪ ತ್ವಂಪದವಸ್ತುನಿರ್ದೇಶವನು ಬೋಧಿಸಿ ತಿಳುಹಿದನು ನಿಜವ (ಅಪ್ಪ್ಯತ. ೩ ಸೂಚನೆ); ಪ್ರತ್ಯಗಾತ್ಮನು ನೀನು (ಮಂಕುಳ. ೬೫೦). [ಸಂ. ಪ್ರತ್ಯಗಾತ್ಮನ್]

**ಪ್ರತ್ಯಗ್ಬೋಧ** (ನಾ). "ತನ್ನೊಳಗಿರುವ ಶುದ್ಧಾತ್ಮನ ಅರಿವು" (ಅಪ್ಪ್ಯತ. ೩-೨೬. ಅಡಿಟಿ) : ಈ ವಿಧದಲೀ ದೇಹದೊಳಗೊಳಗೋವಿ ದೃಗ್ದೃಶ್ಯಗಳ ಸಾಧಿಸಿ ತೀವಿ ಪ್ರತ್ಯಗ್ಬೋಧವನು ಸಂಪಾದಿಸುವದು (ಅಪ್ಪ್ಯತ. ೩-೨೬). [ಸಂ.]

**ಪ್ರತ್ಯಗ್ಭೂಧ** (ರನಾ). ಪಶ್ಚಿಮದ ಪರ್ವತ; ಅಸ್ತಾಚಲ: ಪ್ರತ್ಯಗ್ಭೂಧರವಾತ್ಯಾಧಿತ್ಯಕದೊಳ್ ತಳೆದುದಸ್ತಗತಿಯಿಂ ಬೀಟ್ವಾದಿತ್ಯನಂ (ಚಂದ್ರಕು. ೮-೩). [ಸಂ.]

**ಪ್ರತ್ಯಗ್ರ** (ಗು). ೧. ಹೊಸದಾದ ; ನವೀನವಾದ : ದೈತ್ಯನಸಂಖ್ಯಾತಕೋಟಿಮೂರ್ತಿಯನಾಂತೊಂದತ್ಯಾರಭಟೆಯಿನಿರ್ದಂ ಪ್ರತ್ಯಗ್ರಭ್ರಾಂತಿ ಕೃಷ್ಣನೊಳ್ ನೆಗೞ್ವಿನೆಗಂ (ಜಗಂ. ೦೫-೬). ೨. ಶುದ್ಧವಾದ : ಪ್ರತ್ಯಗ್ರಸಮುತ್ಪನ್ನಾಪತ್ಯಮುಖಾಲೋಕಸುಖಮನಱಿಯದ ದಿವಿಜಸ್ತ್ಯುತ್ಯಸುಖಂ ಸುಖಮಲ್ತೆಂದತ್ಯಂತಸುಖಾನಭವದೊಳರಸಂ ತಣಿದಂ (ಪುಣ್ಯಕು. ೪-೦೨೨). (ನಾ). ೩. ಹೊಸದಾದುದು ; ನವೀನವಾದುದು : " ಪ್ರತ್ಯಗ್ರಃ, ಅಭಿನವಃ, ನವ್ಯಃ, ನವೀನಃ, ನೂತನಃ, ನವಃ, ನೂತ್ನಃ—೭ ಹೊಸದು" (ಸಿದ್ಧಾಂತಿ. ೩೧೩). [ಸಂ.]

**ಪ್ರತ್ಯಗ್ರೂಪ** (ನಾ). ಅಂತರಾತ್ಮ; ಸ್ವರೂಪ: ಆತ್ಮನು ಪ್ರತ್ಯಗ್ರೂಪನು ಎಂದರೆ ನಮ್ಮೊಳಗಿನ ಸ್ವರೂಪ ; ಅನಾತ್ಮವು ಪರಾಗ್ರೂಪ ಎಂದರೆ ನಮಗೆ ಹೊರಗೆ ಎದುರಿಗೆ ತೋರುವ ವಸ್ತು (ಭ್ರಹ್ಮಾ. ೦೭); ಜೀವನು ಈಶ್ವರನಂತೆ ಪ್ರತ್ಯಗ್ರೂಪ . . . ಪ್ರತ್ಯಗ್ರೂಪ ಎಂದರೆ ತನಗೆ ತಾನೆ ಭಾಸಮಾನನಾಗುವನು ಎಂದರ್ಥ (ಛಾಕಸ್ತ್ವ. ೬೬೯). [ಸಂ.]

**ಪ್ರತ್ಯನೀಕ** (ನಾ). ೧. ಹಗೆ; ಶತ್ರು: "ಅಭಿಯಾತಿಃ, ಅರಾತಿಃ . . . ಭ್ರಾತೃವ್ಯಃ, ಪ್ರತ್ಯನೀಕಃ, ದ್ವಿಷತ್—ಈ ೨೪ ಹಗೆ" (ಹಲಾಯು. ೬೫-೩೦೨). ೨. ಶತ್ರುಸೈನ್ಯ. ೩. ಶತ್ರುತ್ವ. ೪. ನಿವಾರಣೆ; ಪರಿಹಾರ : ಕಾಲಸ್ವರೂಪನಿರೂಪಣಂಗೆಯ್ದುವರ ಶೋಕಪ್ರತ್ಯನೀಕವು ನದಿರ್ಪದಂ ಈ ಪೇಟ್ದ ಕುಲಧರಸಂಕುಲಕ್ಕೆ (ಹಂಥಾ. ೦-೬೪ವ). ೫. = ಪ್ರತ್ಯನೀಕಾಲಂಕಾರ : ಸಮಾಸೋಕ್ತಿ . . . ಪ್ರತ್ಯನೀಕ ಪ್ರತೀಪ . . . ಉದಾತ್ತವೆಂಬ ಅಱುವತ್ತೈದಲಂಕಾರಂಗಳಿಂದೊಡಗೂಡಿ (ವಿವೇಕ. ೦೬೪). [ಸಂ.]

**ಪ್ರತ್ಯನೀಕಾಲಂಕಾರ** (ನಾ). [ಕಾವ್ಯಮಿ] ಅರ್ಥಾಲಂಕಾರಗಳಲ್ಲಿ ಒಂದು ; ಶತ್ರುವು ಪ್ರಬಲನಾದಾಗ ಸೇಡು ತೀರಿಸಿಕೊಳ್ಳಲಾರದೆ ಅವನ ಕಡೆಯವರ ಮೇಲೆ ಪರಾಕ್ರಮವನ್ನು ತೋರಿಸಿದಂತೆ ಚಮತ್ಕಾರವಾಗಿ ವರ್ಣಿಸುವುದು : ಬಲವಂತನಾದ ಶತ್ರುವಿನೊಳ್ಸೆಣಸಲಾಱದೆ ಆ ಪಕ್ಷದವರ ಮೇಲೆ ಪರಾಕ್ರಮಂಗೆಯ್ವುದು ಪ್ರತ್ಯನೀಕಾಲಂಕಾರಂ (ಅಕ್ರತಿ. ೦೦೩-೭). [ಸಂ.]

**ಪ್ರತ್ಯಭಿಜ್ಞಾದರ್ಶನ** (ನಾ). [ಶೈವ] ಕಾಶ್ಮೀರದೇಶದಲ್ಲಿ ಬಹಳ ಪ್ರಚಾರದಲ್ಲಿದ್ದ ಶೈವಮತತತ್ತ್ವದ ಒಂದು ಪ್ರಭೇದ ; 'ಶಿವನೇ ನಾನು' ಎಂದು ಗುರುತಿಸುವುದೇ ಮೋಕ್ಷವೆಂದು ಬೋಧಿಸುವ ಶೈವದರ್ಶನ : ಈಗ ಮುಖ್ಯವಾಗಿ ಜೀವಂತವಾಗಿ ಉಳಿದು ಪ್ರಚಾರದಲ್ಲಿರುವ ಶೈವಸಂಪ್ರದಾಯಗಳೆಂದರೆ ಕಾಶ್ಮೀರದ ಪ್ರತ್ಯಭಿಜ್ಞಾದರ್ಶನ, ವೀರಶೈವರ ವಿಶೇಷಾದ್ವೈತ, ತಮಿಳರ ಶೈವಸಿದ್ಧಾಂತ (ಭಾರತ. ೨೦೦); ಸರ್ವದರ್ಶನಸಂಗ್ರಹದಲ್ಲಿ ಮಾಧವಾಚಾರ್ಯರು ಈ ಸಂಪ್ರದಾಯವನ್ನು ಪ್ರತ್ಯಭಿಜ್ಞಾದರ್ಶನವೆಂದು ಕರೆದಿರುವರು (ತತ್ವಶಾ. ೪೧೯). [ಸಂ.]

**ಪ್ರತ್ಯಭಿಜ್ಞಾನ** (ನಾ). ೧. ಗುರುತುಹಿಡಿಯುವುದು ; ಗುರುತಿಸುವುದು. ೨. ತಿಳಿಯುವುದು ; ಅರಿಯುವುದು : ತದೇಕತ್ವಗ್ರಾಹಕಪ್ರತ್ಯಭಿಜ್ಞಾನಮುಂ ಲೂನಪುನರ್ಜಾತ ನಖಕೇಶಾದಿಗಳೊಳ್ ಪೂರ್ವಾಪರೈಕತ್ವಮಿಲ್ಲದಲ್ಲಿಯುಂ ಕಾಣಲಕ್ಕುಂ (ಅಂಜು. ೨-೯ ವ); ಅದುವೆ ಇದೆಂಬ ನೆನಪು ಪ್ರತ್ಯಭಿಜ್ಞಾನ (ತತ್ತ್ವಶ್ರ. ೨೪೭); ಅದೇ ಇದು ಎಂದಾಗುವ ಅರಿವಿಗೆ ಪ್ರತ್ಯಭಿಜ್ಞಾನವೆಂದು ಹೆಸರು (ಭ್ರಹ್ಮಾ. ೪೭೦ ಅಡಿಟಿ). [ಸಂ.]

**ಪ್ರತ್ಯಭಿಜ್ಞೆ** (ನಾ). ೧. ಗುರುತಿನ ವಸ್ತುವಿನಿಂದ ಉಂಟಾಗುವ ಪೂರ್ವಸ್ಮರಣೆ : ಕಟಕದ ನಡುವನೆಯ್ದಿ ಬರ್ಪನ್ನೆಗಮಿಂದ್ರಾಯುಧ ಪ್ರತ್ಯಭಿಜ್ಞೆಯೊಳಂ . . . ಚಂದ್ರಾಪೀಡದೇವನೆಂದಱಿದು (ಕಾದಂಸಂ. ೯೬೭) ; ಹಿಂದೊಮ್ಮೆ ನೋಡಿದ್ದನ್ನು ನಡುವೆ ಮರೆತಿದ್ದು ಆಮೇಲೆ ಗುರ್ತಿಸುವುದಕ್ಕೆ ಪ್ರತ್ಯಭಿಜ್ಞೆಯೆಂದು ಹೆಸರು (ಅಮೃತ. ೭-೦೫ ಟೀಕು); ತಿಳಿದ ವಸ್ತುವಿನ ಸೂಕ್ಷ್ಮತರಸಂಧಾನವೇ ಪ್ರತ್ಯಭಿಜ್ಞೆ (ಕೃಷ್ಣಾಕೋ. ೨೨ ೩೨೫). ೨. [ಶೈವ] "ತನ್ನ ಶಿವತ್ವವನ್ನು ಮರೆತು ಜೀವಿಯಾದವನಿಗೆ ಮರಳಿ ತನ್ನ ಶಿವತ್ವದ ಅರಿವು ಮರುಕಳಿಸುವುದೇ ಪ್ರತ್ಯಭಿಜ್ಞೆ ಯೆನಿಸುವುದು" (ಶ್ರೀಕರ. ೦೫೦). ೩. [ಜೈನ] ಪರೋಕ್ಷಪ್ರಮಾಣ ಗಳಲ್ಲಿ ಒಂದು : ಪರೋಕ್ಷ–ಸ್ಮೃತಿ ಪ್ರತ್ಯಭಿಜ್ಞಾ, ತರ್ಕ, ಅನುಮಾನ, ಆಗಮ ಎಂದು ಐದು ವಿಧ. ಇವುಗಳು ಜ್ಞಾನಸ್ವರೂಪಗಳಾಗಿರುವುದರಿಂದ ಆಯಾ ವಿಷಯದಲ್ಲಿರುವ ಅಜ್ಞಾನನಿವೃತ್ತಿಯನ್ನು ಫಲವಾಗಿ ತಿಳಿಯಬೇಕು (ಹಿಂದಸಾ. ೯೭). [ಸಂ. ಪ್ರತ್ಯಭಿಜ್ಞಾ]

**ಪ್ರತ್ಯಭಿಯೋಗ** (ನಾ). ಒಂದು ಆರೋಪಣೆಗೆ ಪ್ರತಿಯಾಗಿ ಆರೋಪಿಸುವುದು. [ಸಂ.]

**ಪ್ರತ್ಯಯ** (ನಾ). ೧. ಅಭಿಮುಖವಾಗಿ ಹೋಗುವುದು. ೨. ನಂಬಿಕೆ ; ವಿಶ್ವಾಸ ; ಶ್ರದ್ಧೆ : "ಪ್ರತೀತಿಃ, ಪ್ರತ್ಯಯಃ, ಶ್ರದ್ಧಾ— ಈ ೩ ನಂಬುಗೆ" (ಹಲಾಯು. ೦೨೬-೯೫) ; ಚಂದ್ರಾಪೀಡಚರಣಕಮಲಂಗಳ ದೃಢಪ್ರತ್ಯಯದಿನಾರಾಧಿಸುತ್ತಿರ್ದಳ್ (ಕಾದಂಸಂ. ೬೩೦) ; ಅನಿಲಾತ್ಮಜಂ . . . ಬ್ರಹ್ಮಚರ್ಯಜದೃಢಪ್ರತ್ಯಯಮಹೋದಾರಶಾಂತಿಯಿಂ ಪರಿ ಚಯಿಸಿದನು ದಶರಥಾತ್ಮಜಗೆ ಕಿಷ್ಕಿಂಧೆಯಂ (ಶ್ರೀರಾಮಪ. ೨೯೦-೦೯೩). ೩. ನಂಬಿಕೆಯನ್ನುಂಟುಮಾಡುವ ಕೆಲಸ,—ಕಾರ್ಯ : ಇರುಳ್ ಪೊಟ್ಟಲೆಲ್ಲಮಂ ಕಳ್ದು ದಿವಸಕ್ಕೇ ಪಾಂಗಿನೊಳ್ ತೊನ್ನನಾಗಿರ್ಪೊಂ ನೀಮುಂ ನಂಬದಾಗಳ್ ಪ್ರತ್ಯಯಮಂ[ಪಾಠಾಂ.ಪ್ರತ್ಯಕ್ಷಂ] ಮಾಡಿ ತೋರ್ಪೆಂ (ವಡ್ಡಾರಾ. ೦೨೯-೦೦); ಪ್ರತ್ಯಯದಿಂದವನಿಗೆ ಪ್ರಬೋಧವನ್ನುಂಟುಮಾಡಲೆಂದು . . . ಒಂದು ಹಿರಿಯ ಬೊಬ್ಬುಲಿಮರದ ನೆರಳಿನಲ್ಲಿ ಕುಳ್ಳಿರಿಸಿ . . . ಹೋಗು ತ್ತಾನೆ (ಕರಶ. ೨೬೮). ೪. ತಿಳಿವಳಿಕೆ ; ಜ್ಞಾನ ; ಅರಿವು : ಪ್ರತ್ಯಯ ಎಂಬ ಮಾತಿಗೆ ಸಂಸ್ಕೃತದಲ್ಲಿ ಅನೇಕ ಅರ್ಥಗಳುಂಟು. ಇಲ್ಲಿ ಅರಿವು ಎಂಬರ್ಥದಲ್ಲಿ ಇದನ್ನು ಉಪಯೋಗಿಸಿರುತ್ತದೆ (ಬ್ರಹ್ಮಸೂ. ೩) ; ಶಾಲೆಯ ಹೊರಗೂ ಈ ಮಾತು ನಮ್ಮ ಪ್ರತ್ಯಯಕ್ಕೆ ಬರುವುದು (ಶಿಕ್ಷಕ. ೯೩). ೫. ಶಪಥ ; ಪ್ರತಿಜ್ಞೆ : 'ಪ್ರತ್ಯಯಂಗೆಯ್' ಪರಾ. ೬. ಕಾರಣ ; ಹೇತು ; ಉದ್ದೇಶ. ೭. ನಿಶ್ಚಯ ; ನಿರ್ಧಾರ : "ಸೂರುಳೊಳ್ ವಿಶ್ವಾಸದೊಳ್ ನಿಶ್ಚಯದಱಿವಿನಾರಯಿಕೆಯೊಳು ಪ್ರತ್ಯಯಾಖ್ಯವೆನಿಸಿರ್ಕುಂ" (ಶಬ್ದಮಣಿ. ೦೯೫-೨೯). ೮. ಪ್ರಖ್ಯಾತಿ ; ಪ್ರಸಿದ್ಧಿ. ೯. ಛಾವನೆ; ಕಲ್ಪನೆ. ೧೦. ಕಂಡಿ; ರಂಧ್ರ. ೧೧. [ವ್ಯಾಕ] ನಾಮಪ್ರಕೃತಿ ಅಥವಾ ಕ್ರಿಯಾಪ್ರಕೃತಿ(ಧಾತು)ಯ ಮುಂದೆ ಯಾವುದಾದರೊಂದು ಅರ್ಥವನ್ನು ತಿಳಿಸುವುದಕ್ಕಾಗಿ ಸೇರುವ ಅಕ್ಷರ ಅಥವಾ ಪದಾಂಶ; ಇದರಲ್ಲಿ ವಿಭಕ್ತಿಪ್ರತ್ಯಯ, ಆಖ್ಯಾತ ಪ್ರತ್ಯಯ, ಕೃತ್ಪ್ರತ್ಯಯ, ತದ್ಧಿತಪ್ರತ್ಯಯ ಮೊದಲಾದ ಭೇದ ಗಳಿವೆ : ಇವು ಪುಣ್ಯಮಿವರ್ಗೆ ಮೋಣಂತಿಪ್ಪ ಶಿಲ್ಪಂ ಮೋಣ್ ನಿಯೋಗಮಿವ ನಱಿವಂ ಮೋಣಿವನಾಚರಿಸುವನೆಂದಿಂತಿಪಱಿಯೋಗಪ್ರತ್ಯಯಂ ಯಥೋಕ್ತಿ ಯಿನಕ್ಕುಂ (ಕಾವ್ಯಾವ. ೩೨೨) ; ಪದದರ್ಥಮಂ ವಿಭಾಗಿಸುವುದಱಿಂದೆ ವಿಭಕ್ತ್ಯಂತದಿಂ ಪ್ರತ್ಯಯಮೆಂಬುದು ತತ್ಪ್ರತ್ಯಯದಿಂ ಪೂರ್ವದೊಳಿರ್ಕುಂ ಪ್ರಕೃತಿಯೆರಡುಮಮರ್ದೊರ್ದವೆ ಪದಂ (ಶಮದ. ೩೫) ; ವಾಕ್ಯದಲ್ಲಿ ಶಬ್ದ ಗಳಿಗಿರುವ ಸಂಬಂಧವನ್ನು ಪ್ರತ್ಯಯ ಸೂಚಿಸುತ್ತವೆ (ಕೈಪಿಡಿ. ೩೩). [ಸಂ.]

**ಪ್ರತ್ಯಯಂಗೆಯ್** (ಕ್ರಿ). ಪ್ರತಿಜ್ಞೆಮಾಡು : ನೀನೆನ್ನುಂ ಕಾಡವೇಡಾಂ ತೊಡರ್ದವಸರದೊಳ್ ಪ್ರತ್ಯಯಂಗೆಯ್ದಿನೋರ್ವಂಗೆ (ಸುಕುಮಾ. ೭-೨೦). [ಪ್ರತ್ಯಯ + ಕೆಯ್[1]]

**ಪ್ರತ್ಯಯಾಂತ** (ನಾ). ಪ್ರತ್ಯಯಸಹಿತವಾದ ಪದ : ಏಕ ದ್ವಿ ತ್ರಿ ಚತುಃ ಶಬ್ದಾಕೃತಿಗೆಕ್ಕ ದು ತಿ ಚೌಗಳಾದೇಶಂಗಳ್ ಸ್ವೀಕೃತ ಸಮಾಸಪೂರ್ವದೊಳಾ ೞಿಪರ್ ಪ್ರತ್ಯಯಾಂತದೊಳಮಿಾ ವಿಧಿಯಂ (ಶಮದ. ೨೯೦) ; ಧಾತುಗಳಲ್ಲಿ ಸಹಜ, ಪ್ರತ್ಯಯಾಂತ(ವ್ಯುತ್ಪನ್ನ), ಸಂಯುಕ್ತ (ಸಮಗ್ರ) ಎಂದು ಮೂರು ವಿಧಗಳಿವೆ (ಕೈಪಿಡಿ. ೯೨). [ಸಂ.]

**ಪ್ರತ್ಯಯಾಂತಧಾತು** (ನಾ). [ವ್ಯಾಕ]ಸಹಜಧಾತುಂ, ಪ್ರತ್ಯಯಾಂತ ಧಾತು ಮತ್ತು ಸಂಯುಕ್ತಧಾತು ಎಂಬ ಮೂರು ಬಗೆಯ ಧಾತು ಗಳಲ್ಲಿ ಒಂದು ; ಸಹಜ ಧಾತುವಿಗೆ ಇಸು ಮೊದಲಾದ ಪ್ರತ್ಯಯ ವನ್ನು ಸೇರಿಸಿ ಸಾಧಿಸಿದ ಧಾತು : ಸಹಜಧಾತುಗಳಿಗೆ ಪ್ರೇರಣಾರ್ಥದಲ್ಲಿ ಇಸು ಮೊದಲಾದ ಪ್ರತ್ಯಯಗಳು ಸೇರಿ ಪ್ರತ್ಯಯಾಂತಧಾತುಗಳಾಗು ತ್ತವೆ. ಉದಾ. . . . ಮಾಡಿಸು, ಬೇಯಿಸು (ಕೈಪಿಡಿ. ೯೨). [ಸಂ.]

**ಪ್ರತ್ಯಯಿತ** (ನಾ). ನಂಬಿಕೆಗೆ ಯೋಗ್ಯನಾದವನು ; ಆಪ್ತ : "ಆಪ್ತಃ, ಪ್ರತ್ಯಯಿತಃ—೨ ಆಪ್ತನಾದವನ ಹೆಸರು, ನಂಬಿಕೆಯುಳ್ಳ ಯಥಾರ್ಥ ವಾದಿ" (ಸಿದ್ಧಾಂತಿ. ೨೩೬). [ಸಂ.]

**ಪ್ರತ್ಯಯೋಪಮೆ** (ನಾ). [ಕಾವ್ಯಮಿಾ]ಉಪಮಾಲಂಕಾರದ ಒಂದು ಭೇದ ; ಉಪಮಾನಾರ್ಥಕ ಪ್ರತ್ಯಯಗಳುಳ್ಳ ಪದಗಳಿಂದ ಸಾದೃಶ್ಯವು ತೋರುವ ಅಲಂಕಾರ : ಪ್ರತ್ಯಯೋಪಮೆಗೆ ಜಲಜಾಯ ಮಾನವಮಲರ್ಗಣ್ ಪುಲಿನಮಾನ್ಯಂ ನಿತಂಬಮಳಿದೇಶೀಯಂ ಚಲದಳಕಪ್ರತತಿ ಮೃಣಾಳಲತಾಕಲ್ಪಂಗಳಾ ಲತಾಂಗಿಯ ತೋಳ್ಗಳ್ (ಕಾವ್ಯಾವ. ೬೬೬). [ಸಂ. ಪ್ರತ್ಯಯೋಪಮಾ]

**ಪ್ರತ್ಯರ್ಥಿ** (ಗು). ೧. ವಿರೋಧಿಸುವ ; ವಿರುದ್ಧವಾದ. (ನಾ). ೨. ಹಗೆ ; ಶತ್ರು; ವೈರಿ : ಜಿತಜಗತ್ಪ್ರತ್ಯರ್ಥಿಯಂ . . . ಮನುಜೇಶರ್ ಮಲೆರಾಜರಾಜನನದೇಂ ಬಲ್ಲಾಳನಂ ಪೋಲ್ವರೇ (ಎಕ. V, ಅರಸೀ. ೦-೦೭ ; 1169) ; ಗುರ್ಜರಪೃಥ್ವೀಶಂ ಪ್ರತ್ಯರ್ಥಿಮಹೀಶಮದದಪದಿಭಮಸ್ತಕವಿದಲನ ಪಂಚಾಸ್ಯಂ (ಉದ್ಭಟೀ. ೩-೦೬). ೩. (ನ್ಯಾಯಾಲಯದಲ್ಲಿ) ಎದುರಾಳಿ ; ಪ್ರತಿವಾದಿ : ದುಷ್ಟಬುದ್ಧಿ . . . ಧರ್ಮಾಧಿಕರಣಕ್ಕಿಂತೆಂದು ಪ್ರತ್ಯರ್ಥಿ ಬಂದನಿಲ್ಲ ಪಿರಿದುಂ ಪೊಟ್ಟುಪೋದುದು (ಪಂಚತಂ. ೦೬೫-೨೦). ೪. ಅಡ್ಡಿ ; ತಡೆ. [ಸಂ. ಪ್ರತ್ಯರ್ಥಿನ್]

**ಪ್ರತ್ಯವಸಾನ** (ನಾ). ಊಟ ; ಭೋಜನ : "ವಲ್ಭನಂ, ಅಭ್ಯವಹಾರಃ, ಪ್ರತ್ಯವಸಾನಂ . . . ಸ್ವದನಂ—ಈ ೧೧ ಊಟ" (ಹಲಾಯು. ೩೯-೦೭೦). [ಸಂ.]

**ಪ್ರತ್ಯವಸಿತ** (ನಾ). ೧. ಊಟ ಮಾಡಿದುದು ; ತಿಂದುದು : "ಭಕ್ಷಿತಂ, ಚರ್ವಿಂ, ಲಿಪ್ತಂ, ಪ್ರತ್ಯವಸಿತಂ . . . ಭುಕ್ತಂ—೧೪ ಭುಜಿಸಲ್ಪಟ್ಟದ್ದು, ಉಣ್ಣಲ್ಪಟ್ಟದ್ದು, ತಿನ್ನಲ್ಪಟ್ಟದ್ದು" (ಸಿದ್ಧಾಂತಿ. ೩೬೨). [ಸಂ.]

**ಪ್ರತ್ಯವಾಯ** (ನಾ). ೧. ತೊಂದರೆ ; ಹಾನಿ : ಈತನ ಕಟಕಕ್ಕೆ ನಿತ್ಯ ಕ್ಷಯ ವ್ಯಯಪ್ರತ್ಯವಾಯಂಗಳಂ ಮಾಡಿ ಬೇಸಱಿಸಿ ನೆಲೆಯಿಂ ತಳರ್ಚುವಂ (ಅಂಥ. ೦೩-೩೬ ವ). ೨. ಅಡ್ಡಿ ; ತಡೆ : ಸಾಮಾನ್ಯವಾಗಿ ನಾವು ಈ ಗೀತಾಸಂದೇಶ ದಲ್ಲಿ ತೋರಿಸಿರುವ ಮಾರ್ಗದಲ್ಲಿ ಹೋಗಲು ಯಾವ ಪ್ರತ್ಯವಾಯವೂ ಇರುವುದಿಲ್ಲ (ಗೀತಾಸಂ. ೦೯೨) ; ಮೇಲೆ ಹೇಳಿದ ಎಲ್ಲ ಲಕ್ಷಣಗಳು ಅವನಲ್ಲಿ ತೋರಿದರೆ ಅವನಿಗೆ ನಿಸ್ಸಂಶಯವಾಗಿ ಚೋರನೆಂದನ್ನಲಿಕ್ಕೆ ಪ್ರತ್ಯವಾಯವಿಲ್ಲ (ಬ್ರಹ್ಮಕ್ಷಃ. ೨೮). ೩. ಪಾಪ ; ದೋಷ : ನಿತ್ಯನೈಮಿತ್ತಿಕವ ಕಳೆದಾ ಪ್ರತ್ಯ ವಾಯಕೆ ಮಾಡಿ ಪ್ರಾಯಶ್ಚಿತ್ತವನು . . . ಮೋಕ್ಷವನರ್ಥಿಸುತಿಹ ಸಾಧುಗಳೆ ತತ್ತ್ವಾಧಿಕಾರಿಗಳು (ಅಮೃತ. ೦-೨೦) ; ಅಖಂಡಜ್ಞಾನವರ್ಜಿತರಿಂಗೆ ಕರ್ಮದ ನ್ಯೂನದಿಂದವೆ ಪ್ರತ್ಯವಾಯವುಪಾಧಿಬಾಧಕವು (ಗಗಸಾ. ೦೬-೩೨). ೪.

ಅಗಲಿಕೆ ; ವಿಯೋಗ : "ಅಗಲ್ಕೆಯಲ್ಲಿಯುಂ ಹೊಲ್ಲಮೆಯಲ್ಲಿಯುಂ ಪ್ರತ್ಯವಾಯಮೆಂಬುದು" (ಶಬ್ದಾಯು. ೦೩೭-೩೯). ೫. ವಿರುದ್ಧವಾದುದು. ೬. ಸೋಲು ; ಅಪಜಯ : "ಅಪಜಯದೊಳತ್ಯಗಲಿಕೆಯೊಳಂ ಪ್ರತ್ಯವಾಯಮೆಂಬುದು" (ಮಂಗರಾ. ೦೧೨–೦೯). [ಸಂ.]

**ಪ್ರತ್ಯಸ್ತ್ರ** (ನಾ). ಒಂದು ಅಸ್ತ್ರವನ್ನು ತಡೆಗಟ್ಟಲು ಪ್ರಯೋಗಿಸುವ ಮತ್ತೊಂದು ಅಸ್ತ್ರ : ಹರಿಸಿದರು . . . ಪರಿಪರಿಯ ಪ್ರತ್ಯಸ್ತ್ರವನು ಗಾಂಗೇಯ ಫಲುಗುಣರು (ಕುಮ್ಯಾ. ೬-೩೦) ; ಅರ್ಜುನನು ಪ್ರತ್ಯಸ್ತ್ರಗಳನ್ನು ಬಲ್ಲವನಾದ್ದರಿಂದ . . . ಅಶ್ವತ್ಥಾಮನು ನಿರುತ್ಸಾಹನಾಗಿ ಶಿಬಿರಕ್ಕೆ ಹಿಂತಿರುಗಿದನು (ಪಚಭಾ. ೨೯೦). [ಸಂ.]

**ಪ್ರತ್ಯಹ** (ನಾ). ಪ್ರತಿದಿನ : ಪ್ರತ್ಯಹವೂ ನಿಷ್ಠೆಯಿಂದ ತನ್ನ ಕರ್ತವ್ಯವನ್ನು ನೆರವೇರಿಸುತ್ತ . . . ಒಮ್ಮುಖವಾದ ಅಧಿಕಾರವನ್ನು . . . ನೆಲೆಗೊಳಿಸಿದನು (ಕೃಗಂಜ. ೦೩೨). [ಸಂ. ಪ್ರತ್ಯಹಂ]

**ಪ್ರತ್ಯಹಂ** (ಅ). ಪ್ರತಿನಿತ್ಯದಲ್ಲೂ; ದಿನದಿನವೂ : ಪ್ರತ್ಯಹವೊಪ್ಪುಗುಂ ವಿವಿಧರತ್ನವಿನಿರ್ಮಿತಕೂಟಕೋಟಿಮಚ್ಛ್ಯಕೃಗೃಹಾವಹಂ ಶುಕಪಿಕಾಕುಳಸೌಂದರನಂದನಾವಳೀವೃತ್ತುಪಶೋಭಿತಂ . . . ಪುರರತ್ನಗೋಪುರಂ (ಹಂಪ್ರ ಪು. ೬-೩). [ಸಂ.]

**ಪ್ರತ್ಯಾಕರ** (ನಾ). ಒರೆ ; ಕೋಶ : "ಕೃಪಾಣಮೆಂದಿರಲಡಾಯುಧಮೆನಿಕ್ಕು ಪ್ರತ್ಯಾಕರಂ ಕೋಶಮುಮವರೊಟಿಗಳಕ್ಕುಂ" (ಮಂಗರಾ. ೯೯-೩೭). [< ಸಂ. ಪ್ರತ್ಯಾಕಾರ]

**ಪ್ರತ್ಯಾಕಾರ** (ನಾ). = ಪ್ರತ್ಯಾಕರ : "ಕೋಶಃ, ಪ್ರತ್ಯಾಕಾರಃ, ಖಡ್ಗಪಿಧಾನಂ—ಈ ೩ ಒಟಿ" (ಶಬ್ದಾಯು. ೬೯-೩೦೯). [ಸಂ.]

**ಪ್ರತ್ಯಾಖ್ಯಾತ** (ನಾ). ತಿರಸ್ಕೃತವಾದುದು; ನಿರಾಕೃತವಾದುದು: "ಪ್ರತ್ಯಾಖ್ಯಾತಂ, ಪ್ರತಿಕ್ಷಿಪ್ತಂ . . . ಪರಿಹೃತಂ—ಈ ೭ ಪರಿಹರಿಸಲ್ಪಟ್ಟುದು" (ಶಬ್ದಾಯು. ೦೦೭–೦೯). [ಸಂ.]

**ಪ್ರತ್ಯಾಖ್ಯಾನ** (ನಾ). ೧. ತಿರಸ್ಕಾರ; ನಿರಾಕರಣೆ : ಕ್ರೋಧಪ್ರತ್ಯಾಖ್ಯಾನ—ಮುಳಿಸಂ ತೊಟಿವುದುಂ (ತತ್ತ್ವಸ್ರ. ೨೭೦). ೨. [ಜೈನ] ಮುಂದೆ ಪಾಪ ಮಾಡಂವುದಿಲ್ಲವೆಂದು ಪ್ರತಿಜ್ಞೆ ಮಾಡುವುದುಮತ್ತು ಸೀಮಿತಕಾಲದವರೆಗೆ ಆಹಾರಾದಿಗಳನ್ನು ತ್ಯಜಿಸಂವುದು ; ■ ಇದರಲ್ಲಿ ಮನಸ್ಸಿನಿಂದ ಪಾಪವನ್ನು ಮಾಡುವುದಿಲ್ಲವೆಂದು ಸಂಕಲ್ಪಿಸುವುದು ಮನಃಪ್ರತ್ಯಾಖ್ಯಾನ, ಮಾತಿನಲ್ಲಿ ಪಾಪವನ್ನು ಮಾಡುವುದಿಲ್ಲವೆಂದು ಸಂಕಲ್ಪಿಸುವುದು ವಚನಪ್ರತ್ಯಾಖ್ಯಾನ, ಶರೀರದಿಂದ ಪಾಪ ಮಾಡದಿರುವುದು ಶರೀರಪ್ರತ್ಯಾಖ್ಯಾನ : ನಾಗಶ್ರೀಯುಂ ಭುಕ್ತಪ್ರತ್ಯಾಖ್ಯಾನವಿಧಿಯಿಂ ರತ್ನತ್ರಯಮಂ ಸಾಧಿಸಿ (ವಡ್ಡಾರಾ. ೨೯-೩೦); ಆ ಸ್ವಯಂಬುದ್ಧಂ . . . ಮಹಾಬಲನಂ ಜಾತರೂಪಧರನಂ ಮಾಡಿ ಚತುರ್ವಿಧಾಹಾರಶರೀರಪ್ರತ್ಯಾಖ್ಯಾನಮಂ ಕೊಟ್ಟು (ಆದಿಪು. ೨-೫೦ ವ). ೩. ಇಪ್ಪತ್ತೆಂಟು ಬಗೆಯ ಮೋಹನೀಯಗಳಲ್ಲಿ ಒಂದು : ಅಪ್ರತ್ಯಾಖ್ಯಾನಪ್ರತ್ಯಾಖ್ಯಾನಸಂಜ್ವಲನಕ್ರೋಧಮಾನಮಾಯಾಲೋಭಕಷಾಯವೇದನೀಯಮೆನಿಸಿಯುಮಿರ್ಪತ್ತೆಂಟು ತೆಱನಪ್ಪ ಮೋಹನೀಯಮುಮಂ (ಸುಕುಮಾ. ೩-೩೯ ವ); ಅಪ್ರತ್ಯಾಖ್ಯಾನಾಖ್ಯಮಂ . . . ಪ್ರತ್ಯಾಖ್ಯಾನಕಷಾಯಮನತ್ಯೂರ್ಜಿತಸತ್ವನೆಂಟುಮಂ ವಿಘಟಿಸಿದಂ (ಪಾರ್ಶ್ವಪು. ೦೩–೦೧೯). [ಸಂ.]

**ಪ್ರತ್ಯಾಗತ** (ನಾ). ೧. ಹಿಂದಿರುಗಿ ಬಂದುದು. ೨. ಹಿಂದಿರುಗಿ ಬಂದವನು. [ಸಂ.]

**ಪ್ರತ್ಯಾಗಮನ** (ನಾ). ಹಿಂದಿರುಗಿ ಬರುವುದು : ಶ್ರೀಗಧಿಪನೊಳಗೆ ಪೊಱಮಡುವಾಗಡಿನ ವಿಳಾಸಮಂ ಪುರಸಮಿತಿಯ ಕಣ್ಗಿಂಬಾಗೆ ಸದೀಗಮನಪ್ರತ್ಯಾಗಮನದ ಸುಪ್ರತೀಕಗಜಮನೆ ಪೋಲ್ತಂ (ಶಾಂತಿಪು. ೦೦-೯೭) ; ಪತಿಯು ಪ್ರವಾಸಿಯಾದಾಗ ಪತ್ನಿಯು ಪತಿಯ ಪ್ರತ್ಯಾಗಮನವನ್ನು ನಿರೀಕ್ಷಿಸುತ್ತಾ ಪತಿಪರಾಯಣಳಾಗಿರಬೇಕು (ಅರ್ಥಾ. ೦೩೯). [ಸಂ.]

**ಪ್ರತ್ಯಾದಿಷ್ಟ** (ನಾ). ೧. ತಿರಸ್ಕೃತವಾದುದು ; ನಿರಾಕೃತವಾದುದು : "ಪ್ರ(ತ್ಯಾ)ಖ್ಯಾತಂ, ಪ್ರತಿಕ್ಷಿಪ್ತಂ, ಪ್ರತ್ಯಾದಿಷ್ಟಂ . . . ಪರಿಹೃತಂ—ಈ ೭ ಪರಿಹರಿಸಲ್ಪಟ್ಟುದು" (ಶಬ್ದಾಯು. ೦೦೭-೦೯). ೨. ತಿರಸ್ಕೃತನಾದವನು ; ನಿರಾಕೃತನಾದವನು : "ಪ್ರತ್ಯಾದಿಷ್ಟಃ . . . ನಿರಾಕೃತಃ – ೪ ನ್ಯಾಯದಿಂದ ಪರಿಹರಿಸಲ್ಪಟ್ಟವನ ಪೆಸರುಗಳು" (ಸಿದ್ಧಾಂತಿ. ೩೩೪). [ಸಂ.]

**ಪ್ರತ್ಯಾದೇಶ** (ನಾ). ತಿರಸ್ಕರಿಸುವಿಕೆ ; ನಿರಾಕರಣೆ : "ಪ್ರತ್ಯಾಖ್ಯಾನಂ, ನಿರಸನಂ, ಪ್ರತ್ಯಾದೇಶಃ, ನಿರಾಕೃತಿಃ - ೪ ತಿರಸ್ಕರಿಸುವಿಕೆ, ಜರಿಯುವಿಕೆ" (ಸಿದ್ಧಾಂತಿ. ೩೩೬). [ಸಂ.]

**ಪ್ರತ್ಯಾಪತ್ತಿ** (ನಾ). ೧. ಹಿಂದಿರುಗುವುದು. ೨. ಐಹಿಕವಿಷಯಗಳಲ್ಲಿ ತೋರುವ ಅನಾಸಕ್ತಿ,—ಉದಾಸೀನತೆ ; ವೈರಾಗ್ಯ. [ಸಂ.]

**ಪ್ರತ್ಯಾಮ್ನಾಯ** (ನಾ). ೧. ಒಂದು ವಸ್ತು ಅಥವಾ ವ್ಯಕ್ತಿಯ ಬಿಡುಗಡೆಗೆ ಪ್ರತಿಯಾಗಿ ಕೊಡಬೇಕಾದ ವಸ್ತು ಅಥವಾ ದ್ರವ್ಯ: ಈಗ ನಮ್ಮ ರಾಜರು ಸೆರೆ ಸಿಕ್ಕಿದ್ದಾರೆ . . . ಆ ಬಿಡುಗಡೆಯ ಪ್ರತ್ಯಾಮ್ನಾಯ ವೇನೆಂದು ತಾವು ಅರುಹಬೇಕು (ಶ್ರೀಣಾಯು. ೩೧೨). ೨. ವಿರುದ್ಧವಾದ ನಿರ್ಣಯ. [ಸಂ.]

**ಪ್ರತ್ಯಾಲೀಢ** (ನಾ). ೧. ಬಿಲ್ಲು, ಗದೆ ಮುಂತಾದ ಆಯುಧಗಳನ್ನು ಹಿಡಿದು ಯುದ್ಧ ಮಾಡುವಾಗ ನಿಲ್ಲುವ ಆಲೀಢ, ಪ್ರತ್ಯಾಲೀಢ, ಸಮಪದ, ವಿಶಾಖ ಮತ್ತು ಮಂಡಲಗಳೆಂಬ ಐದು ಬಗೆಯ ವರಸೆಗಳಲ್ಲಿ ಒಂದು : "ಪ್ರತ್ಯಾಲೀಢ—ಎಡದ ಕಾಲು ಹೆಜ್ಜೆ ಮುಂದಕ್ಕೆ ನೀಡಿಟ್ಟು ಬಲದ ಮೊಳಕಾಲಾಗಲಿ ಅಂಗುಷ್ಠವಾಗಲಿ ಹಿಂದುಃಕಡೆಗೆ ನಿಲ್ಲಿಸಿ ಮಂಡಿಯೂರಿ ಕುಳಿತಂತೆ ವಾರೆಯಾಗಿ ಹಿಂಬಾಗುವ ಹಾಗೆ ನಿಲ್ಲುವಿಕೆ" (ಸಿದ್ಧಾಂತಿ. ೨೩೯) ; ಆಲೀಢ ಪ್ರತ್ಯಾಲೀಢ ಸಮಪಾದಂಗಳೆಂಬಾಸನಂಗಳೊಳಂ ಪೆಱವುಂ ಶರಾಸನವಿದ್ಯೆಗಳೊಳತಿಪ್ರವೀಣನುಂ ಜಾಣರುಮಾಗಿ (ಚಂಪಭಾ. ೦೩-೩೭೮) ; ಗದೆಗಳುಮನಿರ್ವರುಮಾಯ್ದುಕೊಂಡು ಆಲೀಢ ಪ್ರತ್ಯಾಲೀಢ ಸಮಪಾದ ವೈಷ್ಣವ ಮಂಡಲಾಗ್ರಮುಮೆಂಬ ಪಂಚವಿಧಸ್ಥಾನಕತಂಗಳೊಳಂ . . . ಅತಿಪರಿಚಿತರಾಗಿ ವೈಶಾಖಸ್ಥಾನದೊಳ್ ನಿಂದು (ಗದಾಯು. ೬-೦೫). ೨. [ನಾಟ್ಯ] ವೈಷ್ಣವ, ಸಮಪಾದ, ವೈಶಾಖ, ಮಂಡಲ, ಆಲೀಢ ಮತ್ತು ಪ್ರತ್ಯಾಲೀಢವೆಂಬ ಆರು ಬಗೆಯ ಪುರುಷಸ್ಥಾನಕಗಳಲ್ಲಿ ಒಂದು,—ಪುರುಷರು ನಿಲ್ಲುವ ಭಂಗಿಗಳಲ್ಲಿ ಒಂದು ; ■ "ಆಲೀಢಸ್ಥಾನಕವನ್ನು ಪಾರ್ಶ್ವವ್ಯತ್ಯಾಸದಿಂದ ಮಾಡುವುದು. ಇದಕ್ಕೂ ರುದ್ರನು ಅಧಿದೇವತೆ. ಶಸ್ತ್ರಮೋಕ್ಷಣದಲ್ಲಿ ಇದನ್ನು ವಿನಿಯೋಗಿಸಬೇಕು" (ಅಭಿನಯ. ೩೨೬ ಗದ್ಯಾನುವಾದ) : ಇಂತೆಸವಾಲೀಢಮನತ್ಯಂತದೆ ವಿಪರೀತಮಾಗಿ ಮಾಡಲ್ಪದು . . . ಪ್ರತ್ಯಾಲೀಢಂ (ಅಭಿನಯ. ೬-೨೩). [ಸಂ.]

**ಪ್ರತ್ಯಾಶೆ** (ನಾ). ಒಂದು ವಸ್ತುವು ತನಗೆ ದೊರಕುವುದೆಂಬ ಭರವಸೆ ; ಇಷ್ಟವಾದ ವಸ್ತುವಿನ ನಿರೀಕ್ಷಣೆ : ಆವಿರ್ವರುಂ ಸಮಸುಖದುಃಖವೃತ್ತಿಗಳಾದೆವದಱಿಂ ಪ್ರಿಯುತಮನವಾಗಮಪ್ರತ್ಯಾಶೆಯಿಂ ಕರಣೀಯವಾವುದದನೆ ಮಾಡವೇಟ್ಟುದು (ಕಾದಂಬ. ೬೨೭) ; ವಿರಹದಿಂ ಪ್ರಿಯತಮ ಸಮಾಗಮಪ್ರತ್ಯಾಶೆ ಹೃದಯಮುಮಂ ಬೇಯಿಸಲ್ಕೆ ಬೇಟವೆಣ್ ಸೋಗೆ ನವಿಲುಕಲ್ಲಿಗೆ ಮರಳಿ ಬಂದು ಕರೆವುದು ಕೇಳಿ ತನ್ನೆರೆಯನಂ (ಚಿತ್ರಾಂಗ. ೩೩-೦೫೦೦). [ಸಂ. ಪ್ರತ್ಯಾಶಾ]

**ಪ್ರತ್ಯಾಸತ್ತಿ** (ನಾ). ೧. ನಿಕಟವಾದ ಸಮೀಪ,— ಸಂಬಂಧ : ಸಮ್ಯಗ್ದರ್ಶನಕ್ಕೆ ವಿಧಿಪ್ರತಿಷೇಧಗ್ರಹಣಂ ಸಿದ್ಧಮಾದೊಡಂ ಪ್ರಧಾನ ಪ್ರತ್ಯಾಸತ್ತಿಯಿಂ ನೋಡೆ (ತತ್ತ್ವಸ್ರ. ೬). ೨. ಸಾದೃಶ್ಯ ; ಸಾಮ್ಯ. [ಸಂ.]

**ಪ್ರತ್ಯಾಸನ್ನ** (ಗು). ೧. ಹತ್ತಿರದ ; ಸಮೀಪದಲ್ಲಿರುವ ; ಸನ್ನಿಹಿತವಾಗಿರುವ : ಪ್ರತ್ಯಾಸನ್ನಮೃತ್ಯು' ಪರಾ. (ನಾ). ೨. ಹತ್ತಿರ ; ಸಮೀಪ : ಪ್ರತ್ಯಾಸನ್ನದೊಳಿರ್ದುದು ಯತ್ಯಾಶ್ರಮಂ (ಕಾದಂಪೂ. ೨೦೦) ; ಪ್ರತ್ಯಾಸನ್ನದೆ ನಡೆವಾದಿತ್ಯನ ರುಚಿ ಪೊನ್ನ ಕೋಂಟೆಯಂ ಕರಗಿಸಿದಂತ ತ್ಯುಚ್ಚಕೂಟಹತಿಯಿಂ ನಿತ್ಯಂ ಪಱಿಪಱಿದು ಸಾವರ್ಣವಲ್ಲಿಯು ಮುಗಿಲ್ಗಳ್ (ಕೃಕ್ಕೃ. ೨-೬೫). [ಸಂ.]

**ಪ್ರತ್ಯಾಸನ್ನಭವ್ಯ** (ನಾ). ಬೇಗನೆ ಮೋಕ್ಷವನ್ನು ಪಡೆಯುವವನು : ಆ ಜೀವನಭವ್ಯನಲ್ಲ ಪ್ರತ್ಯಾಸನ್ನಭವ್ಯಂ (ಸುಕುಸು. ೩-೨೨೫). [ಸಂ.]

**ಪ್ರತ್ಯಾಸನ್ನಮೃತ್ಯು** (ನಾ). ೧. ಸಾವು ಸಮೀಪಿಸಿರುವುದು ; ಮರಣ ಸನ್ನಿಹಿತವಾಗಿರುವಿಕೆ. ೨. ಮರಣಕಾಲ ಸಮೀಪಿಸಿರುವವನು : ಬಹ್ವಾರಂಭಸಂರಂಭತಾದ್ರಧ್ಯಾನಪರಿಣತನುಪಾರ್ಜಿತನರಕಾಯುಷ್ಯಂಪ್ರತ್ಯಾಸನ್ನಮೃತ್ಯುವಾಗಿ (ಆದಿಪು. ೨-೦೦ ವ). [ಸಂ.]

**ಪ್ರತ್ಯಾಸಾರ** (ನಾ). ಸೈನ್ಯದ ಹಿಂಭಾಗ ; ಹಿಂಚೂಣಿ : "ಪ್ರತ್ಯಾಸಾರಃ, ವ್ಯೂಹಪಾರ್ಷ್ಣಿಃ —ಅಂಥಾ ವ್ಯೂಹಕ್ಕೆ ಹಿಂದುಗಡೇ ಕಾವಲಾಗಿರುವ ಹಿಮ್ಮುತ್ ಫೌಜಿನ ಹೆಸರು" (ಸಿದ್ಧಾಂತಿ. ೨೬೦). [ಸಂ.]

**ಪ್ರತ್ಯಾಹತ** (ಗು). ೧. ಹಿಮ್ಮೆಟ್ಟಿಸಿದ; ಮರಳಿ ಹೋಗುವಂತೆ ಮಾಡಿದ. ೨. ಕುಂಠಿತಗೊಳಿಸಿದ ; ಶಕ್ತಿ ಕಡಿಮೆ ಮಾಡಿದ ; ಶಕ್ತಿ ಕುಂದಿಸಿದ : ಪ್ರತ್ಯಾಹತಂಗೆಯ್' ಪರಾ. ೩. ಪ್ರತಿಯಾಗಿ ಹೊಡೆದ : (೪). (ನಾ). ೪. [ಸಂಗೀತ] ಆರೋಹಣ, ಅವರೋಹಣ, ಢಾಲು, ಸ್ಫುರಿತ, ಕಂಪಿತ, ಆಹತ, ಪ್ರತ್ಯಾಹತ, ತ್ರಿಪುಚ್ಛ, ಆಂದೋಳನ ಮತ್ತು ಮೂರ್ಛನ ಎಂಬ ಹತ್ತು ಬಗೆಯ ದೇಶೀಗಮಕಗಳಲ್ಲಿ ಒಂದು : ವೀಣೆಯುಂಗೈಗಿತ್ತು . . . ಜಾಣಾಳ್ಕೆ. ಜೋಕೆಯಿಂ ಜತಿ ರೀತಿ ತಾಳ ಪ್ರಮಾಣ ಕಂಪಿತ ಮೂರ್ಛೆ ರಸ ಪಾಡು ಬೆಡಗು ಬಿನ್ನಾಣ ಲಯಮಾಹತಪ್ರತ್ಯಾಹತವ್ಯಾಪ್ತಿಯುಱಿದು ಕೇಳಿಸಿದರವರು (ಕೈಜಿಪಾ. ೨೦-೩೬); ಪ್ರತ್ಯಾಹತ—ಅವರೋಹಣಕ್ರಮದ ಆಹತ. ಉದಾ : ಸನಿ ನಿಧ ಧಪ ಪಮ (ಸಂಗೀಸಂ. ೨೮). ' ಆಹತ ' ಪರಾ. [ಸಂ.]

**ಪ್ರತ್ಯಾಹತಂಗೆಯ್** (ಕ್ರಿ). ಶಕ್ತಿಗುಂದಿಸು ; ಕುಂಠಿತಗೊಳಿಸು : ಪ್ರಾಣಾಯಾಮದಿನೊಪ್ಪಿಯಿಂದ್ರಿಯಗಣಪ್ರತ್ಯಾಹತಂಗೆಯ್ಯುತುಂ (ಪ್ರಸೂಪು. ೩-೦೦೬). [ಪ್ರತ್ಯಾಹತ + ಕೆಯ್$_1$]

**ಪ್ರತ್ಯಾಹರಿಸು** (ಕ್ರಿ). ನಿಯಂತ್ರಿಸು ; ಅಧೀನದಲ್ಲಿಡು : ವಿವಿಧ ವಿಷಯಂಗಳೊಳ್ ಬಾಹ್ಯೇಂದ್ರಿಯಂಗೂಡಿ ತವೆ ಚರಿಪ ಚಿತ್ತಮಂ ಪ್ರತ್ಯಾಹರಿಸಿ (ಶಬ್ದಮ. ೨-೪೮). [< ಪ್ರತ್ಯಾಹಾರ + — ಇಸು$_3$]

**ಪ್ರತ್ಯಾಹಾರ** (ನಾ). ೧. ಹಿಂದಕ್ಕೆ ತೆಗೆದುಕೊಳ್ಳುವುದು ; ಮರಳಿ ಪಡೆಯುವುದು : ನಿನ್ನನ್ನು ಪ್ರಸನ್ನ ಮಾಡುವುದಕ್ಕಾಗಿ ಮತ್ತೆ ಅದನ್ನು ಪ್ರತ್ಯಾಹಾರ ಮಾಡುತ್ತಿದ್ದೇನೆ (ಶಾಂಹಿಂ. ೬೩). ೨. [ಯೋಗ] ಅಷ್ಟಾಂಗಗಳಲ್ಲಿ ಒಂದು ; ಇಂದ್ರಿಯಗಳನ್ನು ಆಯಾ ವಿಷಯಗಳಿಂದ ಹಿಂತಿರುಗಿಸಿ ಉದ್ದಿಷ್ಟವಾದ ಕಡೆಯಲ್ಲಿ ಮನಸ್ಸನ್ನು ನಿಲ್ಲಿಸುವುದು ; ಇಂದ್ರಿಯಗಳನ್ನು ವಿಷಯಗಳಿಂದ ನಿಗ್ರಹಿಸಿ ನಿರ್ಬಂಧದಲ್ಲಿಟ್ಟುಕೊಳ್ಳುವುದು, — ನಿಯಂತ್ರಿಸುವುದು : ಯಮ ನಿಯಮಆಸನಪ್ರಾಣಾಯಾಮಪ್ರತ್ಯಾಹಾರಧ್ಯಾನಧಾರಣ ಸಮಾಧಿಗಳೆಂಬ ಅಷ್ಟಾಂಗಯೋಗದೊಳಗೆ (ಅಬಂಚೆ. ೨೦೪-೩೩) ; ಪ್ರತ್ಯಾಹಾರವ ಕೊಂಬ ಮಿಥ್ಯಾಯೋಗವ ಬಿಡಿಸಿ ತಥ್ಯವಾಗಿರ್ದ ನಿತ್ಯತೃಪ್ತಿಯ ಲಿಂಗಮಿತ್ರ ಶ್ರೀಗುರುವೆ ಕೃಪೆಯಾಗು (ಪ್ರಭುಲಿಂ. ೩೦-೯೭); ಪ್ರತ್ಯಾಹಾರವೆಂದರೆ ಚಕ್ಷುರಾದೀಂದ್ರಿಯಗಳನ್ನು ಅವುಗಳ ವಿಷಯಗಳಿಂದ ಹಿಂತಿರುಗಿಸಿ ಅಂತಃಕರಣಕ್ಕೆ ಅನುಕೂಲವಾಗಿರಿಸುವುದು (ಹಿಂದಸಾ.೦೦೬). ೩. [ಕಾವ್ಯಮೀ] ದೃಶ್ಯಕಾವ್ಯಗಳನ್ನು ಅಭಿನಯಿಸುವಾಗ ಮಾಡುವ ಪೂರ್ವರಂಗದ ಒಂದು ಕ್ರಿಯೆ ; ಉಪಕರಣಗಳನ್ನು ತಂದಿಟ್ಟುಕೊಳ್ಳುವುದು : ಇದರಲ್ಲಿ 'ಪ್ರತ್ಯಾಹಾರ' (ವಾದ್ಯಗಳನ್ನು ತಂದು ಇಟ್ಟುಕೊಳ್ಳುವುದು) . . . ರಂಗದೇವತಾಪೂಜೆ ಮುಂತಾದ ನಾನಾಅಂಗಗಳಿವೆ (ಕೈಶಿಷ.೨೦೨). ೪. [ವ್ಯಾಕ] ಸಂಸ್ಕೃತವ್ಯಾಕರಣದಲ್ಲಿ ಒಂದು ಸಂಜ್ಞೆ; ೧ ಹದಿನಾಲ್ಕು ಮಾಹೇಶ್ವರಸೂತ್ರಗಳ 'ಇತ್' ಸಂಜ್ಞೆಯುಳ್ಳ ಕೊನೆಯ ವರ್ಣದೊಡನೆ ಸೇರಿಸಿ ಹೇಳುವ ಮೊದಲನೆಯ ವರ್ಣಕ್ಕೆ ಮತ್ತು ಅವೆರಡರ ಮಧ್ಯದ ವರ್ಣಗಳಿಗೆ ಉಪಯೋಗಿಸುವ ಸಂಜ್ಞೆ. [ಸಂ.]

**ಪ್ರತ್ಯುಕ್ತಿ** (ನಾ). ಮರುನುಡಿ ; ಜವಾಬು : ಉಕ್ತಿ ಪ್ರತ್ಯುಕ್ತಿಯಿಂದಲೇ ಕಾಲವನ್ನು ಕಳೆಯುತ್ತಿದ್ದರೆ ಕೆಲಸ ಸಾಗುವುದಿಲ್ಲ (ಲೂಶಿ). [ಸಂ.]

**ಪ್ರತ್ಯುತ್ಕ್ರಮ** (ನಾ). ೧. ಯುದ್ಧಕ್ಕಾಗಿ ನಡೆಸುವ ಪ್ರಯತ್ನ,— ಸನ್ನಾಹ : "ಪ್ರತ್ಯುತ್ಕ್ರಮಃ, ಪ್ರಯೋಗಾರ್ಥಃ.—ಯುದ್ಧಕ್ಕೆ ಸೈನಿಕರು ಕೆಲಸವನ್ನು ನಡಸುವಿಕೆ" (ಸಿದ್ಧಾಂತಿ. ೩೬೪). ೨. ತೊಡಗುವುದು ; ಮೊದಲು ಮಾಡುವಿಕೆ. [ಸಂ.]

**ಪ್ರತ್ಯುತ್ತರ** (ನಾ). ೧. = ಪ್ರತ್ಯುಕ್ತಿ : ವನ್ಯಕನು ಪ್ರತ್ಯುತ್ತರವನ್ನು ಕೊಡಲಿಲ್ಲ (ಮುಲಪಾ.೩೬). ೨. ಎದುರುಮಾತು ; ಪ್ರತಿಮಾತು: ಸ್ವಾಮಿಭೃತ್ಯಸಂಬಂಧವೆ ಎನ್ನ ಭಕ್ತಿ ಪ್ರತ್ಯುತ್ತರ ನಾಯಕನರಕ ಕೂಡಲ ಸಂಗಮದೇವಾ (ಬಸವ.೨೯೬) ; ಗುರುಭಕ್ತನಾದ ಬಳಿಕ ಗುರುವಿಂಗೆ ಪ್ರತ್ಯುತ್ತರವ ಕೊಡದಿರಬೇಕು (ಅಬಂಚೆ. ೦೨೩-೮೦). [ಸಂ.]

**ಪ್ರತ್ಯುತ್ತರಂಗುಡು** (ಕ್ರಿ). ಜವಾಬನ್ನು ಹೇಳು ; ಉತ್ತರ ಕೊಡು : ಸತ್ಯಭಾಮಾದೇವಿ ನುಡಿದ ಕಟಕಿಯ ಮಾತಿಗೆ . . . ಪ್ರತ್ಯುತ್ತರಂಗುಡುವೆ ನೆಂಬನಿತಱೊಳ್ (ಕೈಜಿಪಾ.೬-೫೦).

[ಪ್ರತ್ಯುತ್ತರ+ಕುಡು$_1$ (< ಕೊಡು$_1$)]

**ಪ್ರತ್ಯುತ್ತರಂಬಡೆ** (ಕ್ರಿ). ಜವಾಬನ್ನು ಪಡೆ; ಉತ್ತರವನ್ನು ಹೊಂದು: ಸಮ್ಮುಖದೊಳೊಮ್ಮೆ ಮಾತಾಡಿದವನೇ ಶೈವಮಾರ್ಗಿ ಪ್ರತ್ಯುತ್ತರಂಬಡೆದವನೆ ನಿತ್ಯನು (ಚಿಪ್ಪು.೦-೨೨). [ಪ್ರತ್ಯುತ್ತರ + ಪಡೆ$_1$]

**ಪ್ರತ್ಯುತ್ಥಾನ** (ನಾ). ಅತಿಥಿಯ ಆಗಮನವಾದಾಗ ಗೌರವಸೂಚಕವಾಗಿ ಆಸನದಿಂದ ಎದ್ದು ನಿಲ್ಲುವುದು : ಪ್ರತ್ಯುತ್ಥಾನಾನಂತರಮತ್ಯುನ್ನತಕನಕಪೀಠಮಂ ಮುನಿಗಿತ್ತು (ಜಗಂ. ೨-೯೨). [ಸಂ.]

**ಪ್ರತ್ಯುತ್ಪನ್ನ** (ಗು). ೧. ಕೂಡಲೆ ಉಂಟಾದ ; ತತ್ಕ್ಷಣದಲ್ಲಿ ಸ್ಫುರಿಸಿದ : 'ಪ್ರತ್ಯುತ್ಪನ್ನಬುದ್ಧಿ' ಪರಾ. ೨. ಪ್ರತಿಕ್ರಿಯೆಯ. **ಪ್ರತ್ಯುತ್ಪನ್ನವಾಚಸ್ಪತಿ**=(ಹೊಯ್ಸಳಚಕ್ರವರ್ತಿ ವಿಷ್ಣುವರ್ಧನನ ಪಟ್ಟಮಹಿಷಿ ಶಾಂತಲೆಯ) ಒಂದು ಬಿರುದು: ಪ್ರತ್ಯುತ್ಪನ್ನವಾಚಸ್ಪತಿಯುಂ ಮುನಿಜನವಿನೇಯಜನವಿನೀತೆಯುಂ . . . ಅಪ್ಪ ವಿಷ್ಣುವರ್ಧನ ಪೊಯ್ಸಳದೇವರ ಪಿರಿಯರಸಿ ಪಟ್ಟಮಹಾದೇವಿ ಶಾಂತಲದೇವಿ . . . ಸವತಿಗಂಧವಾರಣಜಿನಾಲಯಮಂ ಮಾಡಿಸಿ (ಎಕ. II (R). ೦೬೨-೩೯ ; 1123).

[ಸಂ.]

**ಪ್ರತ್ಯುತ್ಪನ್ನಪ್ರತಿಭ** (ನಾ). ಸಮಯಕ್ಕೆ ಸರಿಯಾಗಿ ಸ್ಫುರಿಸುವ ಬುದ್ಧಿಯುಳ್ಳವನು: ಆಯಾ ಕಾಲಕ್ಕೆ ತಕ್ಕಂತೆ ಸ್ಫುರಿಸುವ ಬುದ್ಧಿಯುಳ್ಳವನು : ಮಹಾಸಂಧಿವಿಗ್ರಹಿಗೆ ಬೆಸಸಿದೊಡಾಗಳಾತಂ . . . ಪ್ರತ್ಯುತ್ಪನ್ನಪ್ರತಿಭನುಂ . . . ಪ್ರಸಿದ್ಧನುಮಪ್ಪ ಮಹತ್ತರನ ಕೈಯೊಳ್ ಸನ್ಮಾನದಾನಪುರಸ್ಸರಮಾಗೆ ಕೊಟ್ಟು (ಆದಿಪು.೦೪-೯೩ ವ). [ಸಂ.]

**ಪ್ರತ್ಯುತ್ಪನ್ನಬುದ್ಧಿ** (ನಾ). ಸಮಯಕ್ಕೆ ತಕ್ಕಂತೆ ಹೊಳೆಯುವ ಬುದ್ಧಿ; ಸಮಯಸ್ಫೂರ್ತಿ: ಈ ಪ್ರತ್ಯುತ್ಪನ್ನಬುದ್ಧಿಯ ಸಹಾಯದಿಂದಲೇ ಅನೇಕ ಅನರ್ಥಗಳಿಂದ ಆತನು ಪಾರಾದನು (ಶಾರದ.೦೦೬). [ಸಂ.]

**ಪ್ರತ್ಯುತ್ಪನ್ನಮತಿ** (ನಾ). ೧. = ಪ್ರತ್ಯುತ್ಪನ್ನಬುದ್ಧಿ : ಆಕೆಯ ಪ್ರತ್ಯುತ್ಪನ್ನಮತಿಯಂ ಮನಂಗೊಂಡು ಪೊಗಟುತ್ತುಂ (ಶಾಂತಿಪು.೬-೬೩ವ) ; ಈ

ಬಗೆಯ ಅಧ್ಯವಸಾಯವೂ, ದೃಢಸಂಕಲ್ಪವೂ, ಇಂತಹ ಪ್ರತ್ಯುತ್ಪನ್ನಮತಿಯೂ ಹುಚ್ಚರಿಗಿರಲು ಸಾಧ್ಯವೇ ? (ಬಿನ್ನಹೇ. ೧೩೪). ೨. = ಪ್ರತ್ಯುತ್ಪನ್ನಪ್ರತಿಭ : "ಪ್ರತ್ಯುತ್ಪನ್ನಮತಿಃ, ತತ್ಕಾಲೋತ್ಪನ್ನಧೀಃ — ಈ ೨ ಉತ್ಪನ್ನಮತಿ" (ಹಲಾಯು. ೬೨-೨೨೧). [ಸಂ.]

**ಪ್ರತ್ಯುದ್ಗಮನ** (ನಾ). ಗಣ್ಯರು ಬಂದಾಗ ಮರ್ಯಾದೆಯಿಂದ ಎದ್ದು ಎದುರಿಗೆ ಹೋಗುವುದು,– ಎದುರುಗೊಳ್ಳುವುದು,– ಸ್ವಾಗತಿಸುವುದು: ಚಂದ್ರಾಪೀಡನುಂ ವೈಶಂಪಾಯನಪ್ರತ್ಯುದ್ಗಮನಾರ್ಥಂ ಶುಕನಾಸಮುಖದಿಂ ತಂದೆಯಿಂ ಬೀಳ್ಕೊಂಡು (ಕಾದಂಬ. ४೦೬). [ಸಂ.]

**ಪ್ರತ್ಯುದ್ಭವ** (ನಾ). ಮತ್ತೆ ಹುಟ್ಟುವಿಕೆ ; ಜೀವ ಬರುವಿಕೆ : ಒರ್ವನಪ್ಪುತಸ್ವರೂಪದೊಳೊರ್ವಂ ತಾನಿರ್ದಪಂ ತದಮೃತದಿನಂತಾಯಿರ್ವರ್ಗಂ ಪ್ರತ್ಯುದ್ಭವಮುರ್ವೀಪತಿ ಸಮನಿಸಿರ್ಪುದೇಂ ಸಂದೆಯಮೋ (ಕಾದಂಬ. ೬೫೦). [ಸಂ.]

**ಪ್ರತ್ಯುಪಕಾರ** (ನಾ). ಒಬ್ಬರು ಮಾಡಿದ ಉಪಕಾರಕ್ಕೆ ಪ್ರತಿಯಾಗಿ ಮಾಡುವ ಉಪಕಾರ ; ತಾನು ಪಡೆದ ಉಪಕಾರಕ್ಕೆ ಪ್ರತಿಯಾಗಿ ಮಾಡುವ ಉಪಕಾರ : ಪ್ರತ್ಯುಪಕಾರಮಂ ನಿನಗೆ ಮಾಡುವ ಸೈಪೆನಗಿಲ್ಲ (ಪುಷ್ಪ. ೬-೩೩) ; ಬಿಸತಂತುವನು ತಿಂದೆ . . . ಪ್ರತ್ಯುಪಕಾರವನೇನನು ಸಿನ್ನಿಂದೆ ಪಡೆಯಿತು ಕೊಳವು (ಜಂಡಾಕ. ೦೬೪-೫೯). [ಸಂ.]

**ಪ್ರತ್ಯುಪಕೃತಿ** (ನಾ). = ಪ್ರತ್ಯುಪಕಾರ : ಪ್ರತ್ಯುಪಕೃತಿಯಿದಕಿಲ್ಲದು ಸತ್ಯಂ ಪ್ರಾಣೋಪಕಾರಕದಱಿಂ ಭುವನಸ್ತುತ್ಯ ಸಲೆ ನಿಮ್ಮ ಭೃತ್ಯರ ಭೃತ್ಯಕೆಯಿಂ ಬಾಳ್ವೆವೆಮ್ಮನುದ್ಧರಿಸೊಲವಿಂ (ನೃಕಪಿ. ೨೦-೪೫). [ಸಂ.]

**ಪ್ರತ್ಯುಪಕೃತಿವಡೆ** (ಕ್ರಿ). ಪ್ರತ್ಯುಪಕಾರವನ್ನು ಹೊಂದು : ರತಖಿನ್ನಕಿನ್ನರೀಸನ್ನತಿಯಂ ತಣ್ಣೆಲರು ಒಳೆದು ಸುಯ್ಯಿಂ ಸುರಭೀಕೃತಮಾಗುತ್ತುಂ ಪ್ರತ್ಯುಪಕೃತಿವಡೆವುದು ತದುಪವನದ ಪಾವನಪವನಂ (ಚಂದ್ರ ಪು. ೦೦-೪೨).

[ಪ್ರತ್ಯುಪಕೃತಿ + ಪಡೆ[1]]

**ಪ್ರತ್ಯುಪಾಯ** (ನಾ). ಒಂದು ಉಪಾಯಕ್ಕೆ ಪ್ರತಿಯಾಗಿ ಮಾಡುವ ಉಪಾಯ ; ಹಂಚಿಕೆಗೆ ಮಾಡುವ ಪ್ರತಿಹಂಚಿಕೆ : ಇಂತಹ ಮೋಸದ ಕೃತ್ಯಗಳನ್ನು ಬಯಲು ಮಾಡುವುದರಿಂದ ಆವ ಪಾಪವೂ ಬರಲಾರದೆಂದು . . . ಇಲ್ಲಿ ಪ್ರತ್ಯುಪಾಯಗಳನ್ನು ಅವಲಂಬಿಸುವೆನು (ಬಿನ್ನಹೇ. ೨೪). [ಸಂ.]

**ಪ್ರತ್ಯುಪಾಯನ** (ನಾ). ಕಾಣಿಕೆಗೆ ಪ್ರತಿಯಾಗಿ ಕೊಡುವ ಕಾಣಿಕೆ : ಅದಱಿಂ ನೀನುಮಾತಂಗೆ ಸಾಮಪುರಸ್ಸರಂ ಪ್ರತ್ಯುಪಾಯನಂಬೆರಸು ಅನುಮತನುಮಾಪ್ತನುಮಧಿಗತಶಾಸ್ತ್ರನುಂ . . . ಅಪ್ಪ ದೂತಮುಖ್ಯನ ನಟ್ಟ (ಶಾಂತಿಪು. ೨-೩೦ ವ). [ಸಂ.]

**ಪ್ರತ್ಯುಷ** (ನಾ). ಬೆಳಗಿನ ಜಾವ ; ಪ್ರಾತಃಕಾಲ ; ಮುಂಜಾವ : "ಪ್ರತ್ಯೂಷಃ, ಅಹರ್ಮುಖಂ, ಕಲ್ಯಂ, ಉಷಃ, ಪ್ರತ್ಯುಷಃ, ಪ್ರಭಾತಂ–೬ ಪ್ರಾತಃಕಾಲದ ಹೆಸರುಗಳು ಅಂದರೆ ಬೆಳಗ್ಗೆ" (ಸಿದ್ಧಾಂತಿ. ៤४). [ಸಂ.]

**ಪ್ರತ್ಯುಷೆ** (ನಾ). = ಪ್ರತ್ಯುಷ : ಮುನಿವರಂ ಮರುದಿನಂ ಪ್ರತ್ಯುಷೆಗೆ, ಕರೆದೊಯ್ದನವರಿರ್ವರಂ ಕೂಡಲಿಯ ದರ್ಶನಕೆ (ಶ್ರೀರಾಮಾ. ೦೩೬-೩೩೫).

[ಸಂ. ಪ್ರತ್ಯುಷ]

**ಪ್ರತ್ಯೂರ್ಜಿತ** (ನಾ). ಮತ್ತೆ ಏಳಿಗೆಯನ್ನು ಪಡೆದವನು; ಮತ್ತೆ ನೆಲೆಯಾಗಿ ನಿಂತವನು; ಸತ್ತ ಮೇಲೆ ಮತ್ತೆ ಬದುಕಿ ಬಂದ ವ್ಯಕ್ತಿ : ಚಂದ್ರಮನೆ ದೇವರ್ಗೆ ಚಂದ್ರಾಪೀಡನಾಗಿ ಪುಟ್ಟಿದನೆಂಬುದುಮಾಸವರ್ಕತಿಪಯದಿನದಿಂ ಪ್ರತ್ಯೂರ್ಜಿತರಾದಪ್ಪುದುಮುಂ . . . ಬಿನ್ನವಿಸೆ (ಕಾದಂಬ. ೬೪೩). [ಸಂ.]

**ಪ್ರತ್ಯೂಷ** (ನಾ). = ಪ್ರತ್ಯುಷ : "ಕಾಲ್ಯಂ, ಉಷಃ, ಪ್ರತ್ಯೂಷಂ . . . ವ್ಯುಷ್ಟಂ – ಈ ೧೦ ಸಮುಟ್ಟ(ಡೆ)ಟಿ" (ಹಲಾಯು. ೦೪-೦೦೦); ಸೊಗಯಿಪ ತಾವರೆಗೊಳನಂ ಪ್ರತ್ಯೂಷದೊಳ್ ಜಿನಾಂಬಿಕೆ ಕಂಡಳ್ (ಶಾಂತಿಪು. ೬-೨೦೫); ಏಳು ನೀ ಪ್ರತ್ಯೂಷದಲಿ ಶಶಿವಾಳಿ ಮೈದೋಱಲಿ (ಕುಮಾರ. ४-೨೦).

[ಸಂ.]

**ಪ್ರತ್ಯೂಷಕೃತ್ಯ** (ನಾ). ಬೆಳಗಿನ ಜಾವದಲ್ಲಿ ಮಾಡಬೇಕಾದ ವಿಧಿಪೂರ್ವಕವಾದ ಕರ್ಮ : ನಿದ್ರಾಲಿಂಗನವಿಮುಖನಾಗಿ ಸೆಜ್ಜೆಯಿಂದೆಟ್ದು ಪ್ರತ್ಯೂಷಕೃತ್ಯಮಂ ನಿರ್ವರ್ತಿಸಿ (ಶಾಂತಿಪು. ೮-೦೦೪ ವ) ; ನೃಪನೊಡರಿಸಿದಂ ಬೇಗಂ ಪ್ರತ್ಯೂಷಕೃತ್ಯಮಂಗಳವಿಧಿಯಂ (ಕೃಷ್ಣ ಕು. ೬-೨೪). [ಸಂ.]

**ಪ್ರತ್ಯೂಹ** (ನಾ). ಅಡ್ಡಿ ; ತಡೆ ; ಅಡಚಣೆ: "ವಿಘ್ನಃ, ಅಂತರಾಯಃ, ಪ್ರತ್ಯೂಹಃ, ವ್ಯವಾಯಃ—ಈ ४ ವಿಘ್ನಂ" (ಹಲಾಯು. ೬೬-೨೪೬); ಮುನಿಯ ತಪಕ್ಕೆ ಏನಾನುಂ ಪ್ರತ್ಯೂಹಂ ಜನಿಯಿಸಿದೊಡೆ ಮಾಟ್ಪತತ್ಸಂಧಾರಣಾತ್ಮಕಸಮಾಧಿಯುಂ (ತತ್ತ್ವ ಸ್ರ. ೨೬೬) ; ಬೋಧಿಸಿದಳಮಿತಕುಟಿಲೋಪಾಯತಂತ್ರಗಳ . . . ಮಂದರೆಯು ರಾಮಾಭಿಷೇಕಕಂ ಪ್ರತ್ಯೂಹರೂಪಳಾಗಿ (ವೆಂಕಾರಾ. ೨-೪ ಸೂಚನೆ). [ಸಂ.]

**ಪ್ರತ್ಯೇಕ** (ಗು). ೧. ಬೇರೆ ಬೇರೆಯಾದ; ಭಿನ್ನ ಭಿನ್ನವಾದ: ಪ್ರತ್ಯೇಕಾಪ್ತೋಕ್ತಶರತಮಿತ್ಯುಪಯುಕ್ತಂಗಳಿರ್ಪುವೊಪ್ಪದಿಂ (ಚಂದ್ರ ಪು. ೦೫-೦೪); ಪ್ರತ್ಯೇಕಗ್ರಾಮಾನುಗ್ರಾಮಗಳು ಹಳ್ಳಿ ಹಿರಿಊರು ಪುರಗಳು ಮೊದಲಾದ ಪ್ರತ್ಯೇಕ ಗ್ರಾಮಗಳಿಂದ (ಎಕ. XIV, ಗುಂಡ್ಲು ಪೇ. ೬-೦೦ ; 1520); ನಾಟಕಶಾಲೆಯಲ್ಲಿ ಸ್ತ್ರೀಯರಿಗೂ ಪುರುಷರಿಗೂ ಪ್ರತ್ಯೇಕ ಸ್ಥಾನಗಳನ್ನು ಏರ್ಪಡಿಸಿದೆ (ರೂಢಿ). (ನಾ). ೨. ಬೇರೆಯಾದುದು; ಭಿನ್ನವಾದುದು: ಉತ್ತರವನ್ನು ಪ್ರತ್ಯೇಕವಾಗಿ ಬರೆಯಬೇಕಾಗಿಲ್ಲ (ಶಿಕ್ಷಣ. ೩೫೨); ಅದಕ್ಕೊಂದು ಪ್ರತ್ಯೇಕವಾದ ವ್ಯಾಕರಣರಚನೆ ಇದೆ (ದ್ರಾವಿಭಾ. ೦೪೦). [ಸಂ.]

**ಪ್ರತ್ಯೇಕಂ** (ಅ). ಬೇರೆಯಾಗಿ; ಭಿನ್ನವಾಗಿ; ಅನ್ಯರೀತಿಯಲ್ಲಿ: ಪ್ರತ್ಯೇಕಂ ಪಾರ್ಥನಿರಲ್ ದೈತ್ಯನಸಂಖ್ಯಾತಕೋಟಿಮೂರ್ತಿಯನಾಂತೊಂದತ್ಕಾರಭಟೆಯಿನಿರ್ದಂ (ಜಗಪಿ. ೦೫-೬); ಪೋಲೆಂಬುದುಂ ಅಂತೆ ಎಂಬುದುಂ ಉಪಮೆಯೊಳ್ ಪ್ರತ್ಯೇಕಂ ಪತ್ತುಗುಂ (ಕವಿಮಾ. ೨೦೪ ವೃತ್ತಿ); ಬೇಱೆಬೇಱೆವರವರ್ಗೆ ಪ್ರತ್ಯೇಕವೊಂದೊಂದು ಬಳ್ಳ ಮುಕ್ತಾಫಲವನು . . . ಕುಡುವುದು (ಜೈಮಿಭಾ. ೨-೨೬). [ಸಂ.]

**ಪ್ರತ್ಯೇಕತಾವಾದ** (ನಾ). [ರಾಜನೀ] ಮೊದಲು ಸಂಯುಕ್ತವಾಗಿದ್ದ ರಾಜ್ಯವು ಬೇರ್ಪಟ್ಟು ಸ್ವತಂತ್ರರಾಜ್ಯವಾಗಬೇಕೆಂದು ವಾದಿಸುವುದು, – ಕೇಳುವುದು: "(ಸಾಮ್ರಾಜ್ಯ, ಮೊ.ಗಳಲ್ಲಿ) ಪ್ರತಿಯೊಂದರ ಸಂಸ್ಥಾನಕ್ಕೂ ರಾಜಕೀಯ ಸ್ವಾತಂತ್ರ್ಯವಿರಬೇಕೆಂಬ ವಾದ, ತತ್ತ್ವ ; ಪ್ರತ್ಯೇಕತಾವಾದ" (Particularism. ಇಂಕಪಿ). [ಸಂ.]

**ಪ್ರತ್ಯೇಕತೆ** (ನಾ). ಬೇರೆಯಾಗಿರುವಿಕೆ ; ಭಿನ್ನತೆ: ಇಲ್ಲಿ ಮಹತ್ವದ ಪ್ರಶ್ನೆಯೆಂದರೆ ಕೊನೆಯ ಹಂತದಲ್ಲಿ ಜೀವವು ದೇವನಲ್ಲಿ ಪೂರ್ಣವಾಗಿ ಲೀನವಾಗುವುದೋ ಅಥವಾ ಪ್ರತ್ಯೇಕತೆಯನ್ನು ಕಾಯ್ದುಕೊಂಡು ಬರುವುದೋ ಎಂಬುದು (ಧರ್ಮಸಾ. ೦೨೩). [ಸಂ. ಪ್ರತ್ಯೇಕತಾ]

**ಪ್ರತ್ಯೇಕಿಸು** (ಕ್ರಿ). ಬೇರೆ ಮಾಡು ; ಬೇರ್ಪಡಿಸು : ಅಡುಗೆಮನೆಯು ಸುವ್ಯವಸ್ಥಿತವಾದುದೆಂದಾಗಬೇಕಾದರೆ ಬೇರೆ ಬೇರೆ ಕೆಲಸಗಳಿಗೆ ಸ್ಥಳವನ್ನು ಪ್ರತ್ಯೇಕಿಸಿಡುವುದರಲ್ಲಿ ಪರಸ್ಪರ ಹೊಂದಾಣಿಕೆಯಿರಬೇಕು (ಅಡುಗೆ. ೦೨).

[ಪ್ರತ್ಯೇಕ + –ಇಸು[3]]

**ಪ್ರತ್ಯೇಕೀಕರಣ** (ನಾ). ಬೇರ್ಪಡಿಸುವಿಕೆ; ಬೇರೆ ಮಾಡುವಿಕೆ: ಅವರ ಆಸಕ್ತಿಯನ್ನು ಕೆರಳಿಸಿ ಪರಿಪೂರ್ಣವಾದ ಜ್ಞಾನ ಹುಟ್ಟುವಂತೆ ಮಾಡುವುದು ಈ ಪ್ರತ್ಯೇಕೀಕರಣದಿಂದ ತೊಡಕಾಗಿ ಪರಿಣಮಿಸುತ್ತದೆ (ಶಿಕ್ಷಣ. ೨೪೬). [ಸಂ.]

**ಪ್ರಥನ** (ಗು). ಹರಡಿರುವ ; ವಿಸ್ತರಿಸಿರುವ. [ಸಂ.]

**ಪ್ರಥಮ** (ಗು). ೧. ಮೊದಲನೆಯ ; ಆದಿಯಾದ : ಪ್ರಥಮ

ದ್ವಿತೀಯಕಲ್ಪಪ್ರಥಿತಸುರಾಂಗನೆಯರಿತರಕಲ್ಪಜರ್ಗೆ ಮನೋರಥಮಂ ಪುಟ್ಟಿಸುವರ್ (ಆಪು. ೦೦-೬೭). ೨. ಪ್ರಧಾನವಾದ ; ಮುಖ್ಯವಾದ (ನಾ). ೩. ಮೊದಲನೆಯದು. ೪. ಮೊದಲನೆಯವನು ; ಮೊದಲಿಗ : ನಮ್ಮ ಊರಿನಿಂದ ವಿದೇಶಕ್ಕೆ ಹೋದವರಲ್ಲಿ ಅವನೇ ಪ್ರಥಮ (ರೂಢಿ). ೫. ಹಿಂದಿನದು ; ಪೂರ್ವ : "ಆದಿಃ , ಅಗ್ರಂ, ಪು(ರಾ)ರಂ, ಪೂರ್ವಂ, ಪ್ರಥಮಂ, ಪ್ರಾಕ್, ಪುರಃ - ಈ ೭ ಮುನ್ನಂ" (ಹಣಾಯು. ೧೧೬-೨೨) ; ಪ್ರಥಮಕ್ಕುತ್ತರರಾಮಚಂದ್ರಚರಿತಂ ಗೀರ್ವಾಣಸದ್ವಾಣಿಯಿಂದತಿರಮ್ಯಂ ಭವಭೂತಿಯಿಂ ವಿರಚಿತಂ (ಉರಾಚ. ೧). ೬. ಊಟದಲ್ಲಿ ಎಲ್ಲಕ್ಕಿಂತ ಮುಖ್ಯವಾದುದು ಮತ್ತು ಮೊದಲು ಬಡಿಸುವುದು ; ಪರಮಾನ್ನ ; ಪಾಯಸ. ೭. [ಜೈನ] (ಜೈನವೇದವೆಂದು ಪ್ರಸಿದ್ಧವಾದ) ನಾಲ್ಕು ಅನುಯೋಗಗಳಲ್ಲಿ ಮೊದಲನೆಯದು : ಪ್ರಥಮ, ಕರಣ, ಚರಣ, ದ್ರವ್ಯ ಎಂಬ ನಾಲ್ಕು ಅನುಯೋಗಗಳನ್ನು ಜೈನರ ಚತುರ್ವೇದಗಳೆಂದು ಕರೆಯಬಹುದು (ಭಾರದ. ೧೬೪). 'ಅನುಯೋಗ' ಪರಾ. [ಸಂ.]

**ಪ್ರಥಮಋತು** (ನಾ). ಹೆಣ್ಣಿನ ಮೊದಲನೆಯ ಮುಟ್ಟು ; ಮೈನೆರೆಯುವಿಕೆ. [ಸಂ.]

**ಪ್ರಥಮಕಲ್ಪ** (ನಾ). ೧. ಮೊದಲನೆಯ ನಿಯಮ,—ವಿಧಿ : (ಶ). ೨. [ಜೈನ] ಮೊದಲನೆಯ ಸ್ವರ್ಗ ; ಸೌಧರ್ಮ : ಕಲಶೋದ್ಧಾರಮಂತ್ರಪೂರ್ವಕಂ ಪ್ರಣತಿಪ್ರಸ್ತಾವನಪುರಸ್ಸರಂ ಮಾಡಿ ಪ್ರಥಮಕಲ್ಪೇಶ್ವರನುಮೀಶಾನೇಂದ್ರನುಮೆತ್ತಿಕೊಳೆ (ಆದಿಪು. ೭-೬೦ವ) ; ಪ್ರಥಮಕಲ್ಪಾಮರೇಂದ್ರಂ . . . ದಿವಿಜೇಂದ್ರಲೋಕೋತ್ತಮಭೂಷಣಂಗಳಂ ತುಡಿಸೆ (ಶಾಂತಿಪು. ೦೦-೫೭ ವ). [ಸಂ.]

**ಪ್ರಥಮಕಲ್ಯಾಣ** (ನಾ). [ಜೈನ] ತೀರ್ಥಂಕರನ ಜೀವಿತದ ಐದು ಮಹಾಕಲ್ಯಾಣಗಳಲ್ಲಿ ಮೊದಲನೆಯದು ; ಪಂಚಕಲ್ಯಾಣಗಳಲ್ಲಿ ಒಂದು ; ಗರ್ಭಾವತರಣ : ದೇವೇಂದ್ರಂ . . ಪ್ರಥಮಕಲ್ಯಾಣಮಂ ನಿರ್ವರ್ತಿಸಿದಂ (ಆದಿಪು. ೭-೩೨ವ). [ಸಂ.]

**ಪ್ರಥಮಚಿಕಿತ್ಸೆ** (ನಾ). ಅಪಾಯಕರವಾದ ಸಂದರ್ಭಗಳಲ್ಲಿ ಮೊತ್ತಮೊದಲು ನಡೆಸಬೇಕಾದ ವೈದ್ಯಕೀಯಚಿಕಿತ್ಸೆ,— ಶುಶ್ರೂಷೆ : ತಿಮ್ಮಪ್ಪ ತನಗೆ ತಿಳಿದ ಪ್ರಥಮಚಿಕಿತ್ಸೆಯನ್ನೆಲ್ಲ ಉಪಯೋಗಿಸಿದ (ಮುಂಗಾರು. ೬೩). [ಸಂ. ಪ್ರಥಮಚಿಕಿತ್ಸಾ]

**ಪ್ರಥಮತಃ** (ಅ). ಮೊತ್ತಮೊದಲು : ಮದ್ರಾಸಿನ ಸಭೆಯೊಂದರಲ್ಲಿ ಸ್ವಾಮಿಗಳು ಚಿಕಾಗೋದ ಸರ್ವಧರ್ಮಸಮ್ಮೇಳನಕ್ಕೆ ಹೋಗುವುದಾಗಿ ಪ್ರಥಮತಃ ಬಹಿರಂಗ ಪಡಿಸಿದರು (ಧರ್ಮಸಾ. ೪೮); ಪ್ರಥಮತಃ ಅವನು ತೀರ ಹತ್ತಿರವಿದ್ದ . . . ದೊಡ್ಡ ಜಮಾನಿಗೆ ಹೋದನು (ಪ್ರನರು. ೨೬೦). [ಸಂ.]

**ಪ್ರಥಮತರಗತಿ** (ನಾ). ೧. ಮೊದಲನೆಯ ವರ್ಗ,—ದರ್ಜೆ : ರೈಲಿನ ಪ್ರಥಮತರಗತಿಯ ಟಿಕೆಟ್ಟಿನ ದರವನ್ನು ಕಚೇರಿಯವರೇ ಕೊಟ್ಟಿದ್ದರು (ರೂಢಿ). ೨. ಪರೀಕ್ಷೆಯಲ್ಲಿ ಶೇಕಡಾ ಅರುವತ್ತಕ್ಕಿಂತ ಹೆಚ್ಚು ಅಂಕಗಳನ್ನು ಗಳಿಸಿ ತೇರ್ಗಡೆಯಾಗುವಿಕೆ : ಮಕ್ಕಳಿಬ್ಬರೂ ಪ್ರಥಮತರಗತಿಯಲ್ಲಿ ಪಾಸಾಗಿದ್ದಾರೆ (ರೂಢಿ). [ಪ್ರಥಮ + ತರಗತಿ]

**ಪ್ರಥಮತ್ವ** (ನಾ). ೧. ಮೊದಲನೆಯದಾಗಿರುವಿಕೆ. ೨. [ವ್ಯಾಕ] ವರ್ಗದ ಮೊದಲನೆಯ ಅಕ್ಷರವಾಗುವಿಕೆ : ಧಾತುವಿನಂತ್ಯದ ವರ್ಗೋಕ್ತತೃತೀಯಾಕ್ಷರಕ್ಕೆ ತಾಂ ಪ್ರಥಮತ್ವಂ (ಶಮದ. ೨೩೪). [ಸಂ.]

**ಪ್ರಥಮದ್ವೀಪ** (ನಾ). [ಜೈನ] ಗ್ರಂಥಗಳಲ್ಲಿ ಹೇಳಿರುವ ಮುಖ್ಯವಾದ ಎಂಟುದ್ವೀಪಗಳಲ್ಲಿ ಮೊದಲನೆಯದು ; ಲವಣಸಮುದ್ರದಿಂದ ಸುತ್ತುಗಟ್ಟಲ್ಪಟ್ಟಿರುವ ಜಂಬೂದ್ವೀಪ : ಅಂತಶಿಕಾಕ್ರಾಂತಜ್ಯೋತಿಃಕಲಾಪಮುಂ ಪ್ರಾಪ್ತಪ್ರಥಮದ್ವೀಪಮುಮಾಗಿ (ಚಂದ್ರಪ್ರ. ೦೨-೧೯೩ ವ). 'ದ್ವೀಪ' ಪರಾ. [ಸಂ.]

**ಪ್ರಥಮನಂದೀಶ್ವರ** (ನಾ). [ಜೈನ] ವರ್ಷದಲ್ಲಿ ಮೊದಲ ಸಲ ಮಾಡುವ ನಂದೀಶ್ವರವ್ರತ : ಜಯಕೇಶಿನೃಪಂ ಸ್ವಸ್ತಿ ಸಕವರ್ಷ ೯೯೬ನೆಯಾನನ್ದ ಸಂವತ್ಸರದ ಚೈತ್ರಸುದ್ಧ ಪ್ರಥಮನನ್ದೀಶ್ವರದ ೮ ಆದಿತ್ಯವಾರದನ್ದು ಪುರಿಗೆಱೆಗೆ ಬಿಜಯಂಗೆಯ್ದು (ಕಶಾಇ. ೪೬-೨೮ ; 1074). 'ನಂದೀಶ್ವರ' ಪರಾ. [ಸಂ.]

**ಪ್ರಥಮಪುರುಷ** (ನಾ). ೧. ಮೊದನೆಯ ಪುರುಷ ; ಆದಿಪುರುಷ ; ಪರಮಾತ್ಮ. ೨. [ವ್ಯಾಕ] ಕನ್ನಡದ ಪುರುಷವಾಚಕ ಸರ್ವನಾಮಗಳಲ್ಲಿ ಒಂದು ; ಉತ್ತಮಪುರುಷ, ಮಧ್ಯಮಪುರುಷ ಮತ್ತು ಪ್ರಥಮಪುರುಷ ಎಂಬ ಮೂರು ಪುರುಷವಾಚಕಗಳಲ್ಲಿ ಮೂರನೆಯದು : ಉದುವುವುವೆಂಬಾದೇಶಂ ಪುದಿದಿರ್ಕುಂ ಪ್ರಥಮಪುರುಷದೇಕಬಹುತ್ವಕ್ಕೆ (ಶಮದ. ೨೨೫). ಮಾತಾಡುವವರನ್ನೂ ಯಾರೊಂದಿಗೆ ಮಾತಾಡುತ್ತಾರೋ ಅವರನ್ನು ಬಿಟ್ಟು ಮಿಕ್ಕ ಎಲ್ಲ ಜನರನ್ನೂ ವಸ್ತುಗಳನ್ನೂ ವಿಷಯಗಳನ್ನೂ ಅವನು, ಅವರು, ಅದು ಮೊದಲಾದುವು ಸೂಚಿಸುತ್ತವೆ. ಇವಕ್ಕೆ ಪ್ರಥಮಪುರುಷದ ಸರ್ವನಾಮಗಳೆಂದು ಹೆಸರು (ಮಧ್ಯಸು. ೨೯). 'ಪುರುಷ' ಪರಾ. [ಸಂ.]

**ಪ್ರಥಮಮಂಗಳ** (ನಾ). ಅತ್ಯಂತ ಶುಭಕರವಾದುದು ; ಅಧಿಕಕಲ್ಯಾಣವನ್ನುಂಟುಮಾಡುವುದು : ಲೋಕಪತಿಗಿಟ್ಟನನುಸ್ಮೃತಮಾತ್ರ ಪಾಪವಿಚ್ಛೇದನಮಂ ಜಗತ್ಪ್ರಥಮಮಂಗಳಮಂ ಹರಿಶಾಂತಿನಾಮಮಂ (ಶಾಂತಿಪು. ೦೦-೬೯). [ಸಂ. ಪ್ರಥಮಮಂಗಲ]

**ಪ್ರಥಮಮಂಜರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಕೌಶಿಕಿ ವೇಳಾವಳಿ . . . ಪ್ರಥಮಮಂಜರಿ . . . ಶಯಸೋದರಿಯೆಂಬ ಮೂವತ್ತನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದವು (ವಿವೇಕ. ೨೩೪). [ಸಂ. ಪ್ರಥಮಮಂಜರೀ]

**ಪ್ರಥಮವರಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ಸಿಂಧುವರಾಳಿ ಕನ್ನಡವರಾಳಿ ದ್ರಾವಿಡವರಾಳಿ ಪ್ರಥಮವರಾಳಿಯೆಂಬ ನಾಲ್ಕು ಉಪಾಂಗವರಾಳಿಗಳು (ವಿವೇಕ. ೦೬೬). [ಸಂ. ಪ್ರಥಮವರಾಲೀ]

**ಪ್ರಥಮಸಂಗಮ** (ನಾ). ಮೊದಲನೆಯ ಕೂಟ ; ಪ್ರಥಮಸಂಭೋಗ: ನಾಣ್ಗಿಡೆ ನೆರೆದೂಢೆಯಂ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ (ಚಂದ್ರಪ್ರ. ೬-೮೨). [ಸಂ.]

**ಪ್ರಥಮಸ್ತನ್ಯ** (ನಾ). ಹೆರಿಗೆಯಾದ ಮೂರು ನಾಲ್ಕು ದಿನಗಳ ಬಾಣಂತಿಗೆ ಉತ್ಪತ್ತಿಯಾಗುವ ಎದೆಹಾಲು : "ಪ್ರಸವವಾದ ಮೇಲೆ ಸಸ್ತನಿಪ್ರಾಣಿಗಳಲ್ಲಿ ಉತ್ಪತ್ತಿಯಾಗುವ ಮೊದಲ ಮೊಲೆಹಾಲು ; ಪ್ರಥಮಸ್ತನ್ಯ" (Colostrum. ಇಂಕಪ). [ಸಂ.]

**ಪ್ರಥಮಸ್ಥಾನ** (ನಾ). ೧. ಮೊದಲನೆಯ ಸ್ಥಾನ ; ಆದ್ಯಸ್ಥಾನ. ೨. ಪರೀಕ್ಷೆ ಮುಂತಾದಂವುಗಳಲ್ಲಿ ಎಲ್ಲರಿಗಿಂತ ಅತಿ ಹೆಚ್ಚಿನ ಅಂಕಗಳನ್ನು ಪಡೆದು, ಹೊಂದುವ ಮೊದಲ ಸ್ಥಾನ : ನಮ್ಮ ಹುಡುಗನಿಗೆ ಪರೀಕ್ಷೆಯಲ್ಲಿ ಪ್ರಥಮಸ್ಥಾನ ದೊರಕಿದೆ (ರೂಢಿ). [ಸಂ.]

**ಪ್ರಥಮಾಂತ** (ನಾ). [ವ್ಯಾಕ] ಪ್ರಥಮಾವಿಭಕ್ತಿಯ ಪ್ರತ್ಯಯವನ್ನು ಕೊನೆಯಲ್ಲಿ ಹೊಂದಿರುವ ಪದ : ಉವು—ಆ ಪ್ರಥಮಾಂತವಾದ ಪದಂಗಳ್, ಅನ್ವಯಮುಖದೊಳ್ = ಅರ್ಥದ . . . ಮುಖದಲ್ಲಿ, ತಳೆಪುವು = ಧರಿಸುವುವು (ಶಮದ. ೧೯೦ ಟೀಕ). [ಸಂ.]

**ಪ್ರಥಮಾದ್ರಿ** (ನಾ). ಮೊದಲನೆಯ ಬೆಟ್ಟ ; ಮೇರುಪರ್ವತ : ಪ್ರಥಮಾದ್ರಿಶಿಖರದಿಂದುದಿಸಿ ಪೊಂಬಿಸಿಲ್ಗರೆದು ಬಾಲಾರ್ಕ ಪ್ರಜ್ವಲಿಸುವಾತಿಶಯದಲಿ (ನಪಮೋ. ೯-೩೨). [ಸಂ.]

**ಪ್ರಥಮಾನುಯೋಗ** (ನಾ). [ಜೈನ] ತೀರ್ಥಂಕರರು ಉಪದೇಶಿಸಿದ ಶಾಸ್ತ್ರಸಮುದಾಯದಲ್ಲಿ ಮೊದಲನೆಯದು ; ೪ ತೀರ್ಥಂಕರರು ಉಪದೇಶಿಸಿದ ಶಾಸ್ತ್ರಸಮುದಾಯಕ್ಕೆ ಶ್ರುತಸ್ಕಂಧವೆಂದು ಹೆಸರು. ಈ ಶ್ರುತಸ್ಕಂಧದಲ್ಲಿ ಪ್ರಥಮಾನುಯೋಗ, ಕರಣಾನುಯೋಗ, ಚರಣಾನುಯೋಗ ಮತ್ತು ದ್ರವ್ಯಾನುಯೋಗವೆಂಬ ನಾಲ್ಕು ಭಾಗಗಳಿವೆ. ಪ್ರಥಮಾನುಯೋಗದಲ್ಲಿ ೨೪ ತೀರ್ಥಂಕರರು, ೧೨ ಚಕ್ರವರ್ತಿಗಳು, ೯ ಬಲದೇವರು, ೯ ವಾಸುದೇವರು, ೯ ಪ್ರತಿವಾಸುದೇವರು ಮತ್ತು ೬೩ ಶಲಾಕಾಪುರುಷರು ಇವರುಗಳ ಚರಿತ್ರೆಗಳನ್ನು ವಿವರಿಸಿದೆ. ಮಹಾಪುರಾಣ ಮುಂತಾದ ಪುರಾಣಗಳು ಪ್ರಥಮಾನುಯೋಗಕ್ಕೆ ಸೇರಿವೆ : ಎರಡು ಪರಿಕರ್ಮಮುಂ ಮನೆಂಭತ್ತೆಂಟುಸೂತ್ರಂಗಳುಮಂ ಪ್ರಥಮಾನುಯೋಗಮುಮಂ . . . ಯಥೋಚಿತವಿಧಿಯಿಂ ನೋಂತು (ಆದಿಪು. ೩-೮೦ ವ). 'ಅನುಯೋಗ' ಪರಾ. [ಸಂ.]

**ಪ್ರಥಮಾವಿಭಕ್ತಿ** (ನಾ). [ವ್ಯಾಕ] ನಾಮಪದಗಳಿಗೆ ಬರುವ ಏಳು ವಿಭಕ್ತಿಗಳಲ್ಲಿ ಮೊದಲನೆಯದು ; ಕರ್ತೃವಿನ ಅರ್ಥವನ್ನು ತಿಳಿಸುವ ವಿಭಕ್ತಿ : ಅಭಿರೂಪದಿನಾ ಪ್ರಥಮಾವಿಭಕ್ತಿ ಲಿಂಗಾರ್ಥವಚನಸಂಬೋಧನದೊಳ್ ಪ್ರಭವಿಪ್ಪುದು (ಶಮದ. ೦೭೭) ; ಬಹುವಚನದಲ್ಲಿ, ಬಹುವಚನ ಪ್ರತ್ಯಯವನ್ನುಳ್ಳ ರೂಪಗಳೇ ಪ್ರಥಮಾವಿಭಕ್ತಿಯ ರೂಪಗಳಾಗುತ್ತವೆ (ಮಗ್ಗಮ. ೫೭). [ಸಂ.]

**ಪ್ರಥಮೆ** (ನಾ). = ಪ್ರಥಮಾವಿಭಕ್ತಿ : ಪಿಂತೆ ಪೇಳ್ದ ನಾನಾತೆಱದ ಲಿಂಗಂಗಳ್ಗೆ ಪರವಾಗಿ ನಾಮವಿಭಕ್ತಿಗಳ ಮರ್, ಅವರ್, ಇವರ್, ಕೆ, ಅತ್, ಒಳ್ ಎಂದು ಪ್ರಥಮೆಗುಂ ದ್ವಿತೀಯೆಗಂ . . . ಪತುಗಂ (ಶಮದ. ೯೩ ವೃತ್ತಿ). [ಸಂ. ಪ್ರಥಮಾ]

**ಪ್ರಥಮೈಕಾದಶಿ** (ನಾ). ಆಷಾಢಮಾಸದ ಶುಕ್ಲಪಕ್ಷದ ಏಕಾದಶಿ ; ಚಾತುರ್ಮಾಸದ ಮೊದಲನೆಯ ಏಕಾದಶಿ : ಪ್ರಥಮೈಕಾದಶಿಯ ದಿನಕ್ಕೆ ಪಟದ ಹಬ್ಬ ಎಂದೂ ಹೆಸರಿದೆ (ರೂಢಿ). [ಸಂ. ಪ್ರಥಮೈಕಾದಶೀ]

**ಪ್ರಥಿತ** (ಗು). ೧. ಹರಡಿದ ; ವಿಸ್ತರಿಸಿದ. ೨. ಬಹಿರಂಗವಾಗಿ ಘೋಷಣೆಯಾದ ; ಪ್ರಕಟಿಸಿದ. ೩. ಹೆಸರಾದ ; ಪ್ರಖ್ಯಾತವಾದ ; ಪ್ರಸಿದ್ಧವಾದ : ಆ ಪರಮೇಶ್ವರಂ ಪ್ರಥಿತಷೋಡಶತೀರ್ಥಕರಂ ಸಚೋದ್ಯವಿದ್ಯಾಪರಿಪಾಕಶಾಸನಸಭಾವಳಯಂ . . . ಇಂತೆಂದು ಬೆಸಸಿದಂ (ಶಾಂತಿಪು. ೦೨-೩) ; ಕಿಡೆದುವು ನೋಡಾ ರಥಚೋದಕರೊಂದೆಸೆಯೊಳ್ ಪೃಥಾಸುತಪ್ರಥಿತಪೃಥುಗದಾಪ್ರಹರಣೆಯಿಂ (ಗದಾಯು. ೩-೬) ; ಭೂಭುವನಪ್ರಥಿತಯಶಂ ಶ್ರೀಭೂತಿ ಸುಭೂತಿವೆಸರ ಸುತನಂ ಪಡೆದಂ (ಶಂಬಾಪು. ೬-೭೦). (ನಾ). ೪. ಪ್ರಖ್ಯಾತವಾದುದು ; ಪ್ರಸಿದ್ಧವಾದುದು : ಹರಿ ನಿನ್ನ ಮಹತ್ತ್ವಂ ಪ್ರಥಿತಮಗಾಧಮಗಾಧವಮುಮುನ್ನತೋನ್ನತೋನ್ನತಮಲ್ತೇ (ಜಗಪು. ೩-೦೦೩). ೫. ಪ್ರಸಿದ್ಧನಾದವನು; ಕೀರ್ತಿಶಾಲಿ : ''ಪ್ರತೀತಃ, ಪ್ರಥಿತಃ, ಖ್ಯಾತಃ, ವಿತ್ತಃ, ವಿಜ್ಞಾತಃ, ವಿಶ್ರುತಃ — ೭ ಧನಾದಿಗಳಿಂದ ಪ್ರಸಿದ್ಧನಾದವನ ಹೆಸರು'' (ಸಿದ್ಧಾಂತಿ. ೩೨೫). [ಸಂ.]

**ಪ್ರಥಿಮ** (ನಾ). ೧. ದೊಡ್ಡತನ ; **ಹಿರಿಮೆ** ; ಮಹತ್ವ. ೨. ಅಗಲ; ವಿಸ್ತಾರ. [ಸಂ. **ಪ್ರಥಿಮನ್**]

**ಪ್ರಥೆ** (ನಾ). ೧. ಹರಡುವಿಕೆ ; ವಿಸ್ತರಿಸುವಿಕೆ : (?). ೨. ಕೀರ್ತಿ; ಪ್ರಸಿದ್ಧಿ : ''ಪ್ರಥಾ, ಖ್ಯಾತಿಃ . . . ೨ ಪ್ರಸಿದ್ಧಿಯ ಪೆಸರುಗಳು, ಬಹುಮಂದಿಗೆ ತಿಳಿಯುವಿಕೆ ; ಹೆಸರುವಾಸಿ'' (ಸಿದ್ಧಾಂತಿ. ೩೫೭) ; ಪ್ರಥೆಯನ್ನುಳ್ಳವರಲ್ಲಿ ಕೂಡುವೆನೆಂಬಳಿಂದುಮುಖಿ (ಶಭಾಗ. ೦೦-೦೫-೦). [ಸಂ. ಪ್ರಥಾ]

**ಪ್ರದಕ್ಷಿಣ** (ನಾ). (ಗೌರವಸೂಚಕವಾಗಿ ದೇವರಂ ಅಥವಾ ಹಿರಿಯರನ್ನು) ಎಡಗಡೆಯಿಂದ ಪ್ರಾರಂಭಿಸಿ ಬಲಗಡೆಯಲ್ಲಿ ಮುಗಿಯುವಂತೆ ಸುತ್ತುವುದು ; ಬಲಕ್ಕೆ ತಿರುಗುತ್ತಾ ಸುತ್ತು ಬರುವುದು : ಶ್ರೀಪಾದದ್ವಿತಯಪ್ರದಕ್ಷಿಣಕೃತಿವ್ಯಾಸಕ್ತಗೀರ್ವಾಣಕಾಂತಾಪಾಂಗಪ್ರತಿಬಿಂಬ ಕೋಟಿಘಟಿತಸ್ಮೇರಸ್ಥಳೇಂದೀವರ ಶ್ರೀಪೂರ್ಣಂ (ಚಂದ್ರಪ್ರ. ೦-೦) ; ಉರಿ ಪ್ರದಕ್ಷಿಣವಾಗಿ ಚರಿಸಿತು ಸಿರಿಯ ಸೂಚಿಸುತಿರ್ದುದಸುರರಿಗೆ (ಕೌಶಿರಾ. ೨೮-೦೩) ; ಅದರ ಸುತ್ತು ಪ್ರದಕ್ಷಿಣಕ್ಕೆ ಸ್ಥಳ ಬಹು ಇಕ್ಕಟ್ಟು . . . ಬಹಳ ಎಚ್ಚರದಿಂದ ಪ್ರದಕ್ಷಿಣ ಬರಬೇಕು (ಶಾಂತಲಾ. ೨೮೮). [ಸಂ.]

**ಪ್ರದಕ್ಷಿಣೆ** (ನಾ). = ಪ್ರದಕ್ಷಿಣ : ತನ್ನ ಮೋಕ್ಷಕ್ಕೆ ತನ್ನ ದೇವತೆಯಂ ಪ್ರದಕ್ಷಿಣಾಪೂರ್ವಕಂ ಪ್ರಾರ್ಥಿಸುವಳೆಂಬಂತೆ ಮಂತ್ರಘೋಷಂಗೈದು (ಶ್ರೀರಾಮಾ. ೨೭೭-೫೫೯) ; ಮಹಾರಾಣಿಯವರು ಕೋಡುಗಲ್ಲು ಬಸವನ ಪ್ರದಕ್ಷಿಣೆ ಮಾಡುತ್ತಿರುವಾಗ . . . ಈ ಅನ್ಯಾಯವಾಗಿರಬೇಕು (ಶಾಂತಲಾ. ೩೦೩). [ಸಂ. ಪ್ರದಕ್ಷಿಣ]

**ಪ್ರದರ** (ನಾ). ೧. ಹರಿಯುವುದು ; ಸೀಳುವುದು. ೨. ಸೀಳು; ಬಿರುಕು. ೩. ಬಾಣ : ''ಶಂಕಪತ್ರಃ, ಶರಃ . . . ಪ್ರದರಃ, ಕಾಂಡಃ — ಈ ೧೬ ಅಂಬು'' (ಹಲಾಯು. ೭೭-೩೦೨) ; ಮೇಘಮುಖಾಸ್ತ್ರಂಗಳ್ಗೆ ವಾಯುಪ್ರದರಮಂ. . .ತೊಟ್ಟು (ವರ್ಧಮಾ. ೯-೯೩). ೪. (ಯೋನಿಯಲ್ಲಿ ರಕ್ತ ಮೊದಲಾದ ಧಾತುಗಳು ಅಕಾಲದಲ್ಲಿ ಸ್ರವಿಸುವ) ಹೆಂಗಸರ ಒಂದು ಬಗೆಯ ರೋಗ : ''ಪ್ರದರಃ — ಮುರಿಯುವಿಕೆ, ಕುಸುಮಜಾಡ್ಯ, ಬಾಣ, ೩'' (ಸಿದ್ಧಾಂತಿ. ೪೦೩) ; ದುಃಖದಿಂದಲೂ ಉಪವಾಸದಿಂದಲೂ ಬಹಳ ಸಂಯೋಗದಿಂದಲೂ ವಿದಾಹಗಳಾದ ವಸ್ತುಗಳ ಸೇವನೆಯಿಂದಲೂ ಆ ರಕ್ತಪೈತ್ಯವೆಂಬ ದುಷ್ಟರಕ್ತವು ಅಕಾಲದಲ್ಲಿ ಯೋನಿಯಲ್ಲಿ ಸ್ರವಿಸುವುದು, ಅಸೃಗ್ದರವೆಂದೂ ಪ್ರದರವೆಂದೂ ಎರಡು ಪ್ರಕಾರವಾಗಿ ಪೇಳ್ವರು (ಸಕವೈ. ೦೯೯). ೫. ಸೈನ್ಯವು ಚೆದರುವಿಕೆ ; ಸೈನ್ಯದ ಪಲಾಯನ. [ಸಂ.]

**ಪ್ರದರ್ಶಕ** (ನಾ). ೧. ತೋರಿಸುವುದು ; ಪ್ರದರ್ಶಿಸುವುದು. ೨. ಮುಂದಿನದನ್ನು ಈಗಲೇ ಹೇಳುವುದು ; ಭವಿಷ್ಯ ನುಡಿಯುವುದು. ೩. ನಾಟಕ, ಚಿತ್ರ, ಯಕ್ಷಿಣಿ ಮುಂತಾದ ಕಲೆಗಳನ್ನು ತೋರಿಸುವವನು,– ಪ್ರದರ್ಶಿಸುವವನು. ೪. ಮುಂದೆ ಸಂಭವಿಸುವುದನ್ನು ಮೊದಲೇ ಹೇಳುವವನು; ಭವಿಷ್ಯ ಹೇಳುವವನು. [ಸಂ.]

**ಪ್ರದರ್ಶನ** (ನಾ). ೧. ತೋರಿಸುವುದು ; ತೋರ್ಪಡಿಸುವುದು ; ಪ್ರಕಟಿಸುವುದು : ಕೋಪಪ್ರದರ್ಶನಂ ಪೌರುಷಕೆ ಕುರುಹೆಂದು ಬೆದರಿ. ಕಂಬನಿಗರೆದು, ಸೋಲ್ತೊಪ್ಪೆ ಗೆಲ್ದಳಾಕೆ ! (ಚಿತ್ರಾಂಗ. ೨೫-೭೭೯). ೨. ಭವಿಷ್ಯವನ್ನು ತಿಳಿಸುವುದು. ೩. ವಿವರಿಸುವುದು ; ಕಲಿಸುವುದು; ಬೋಧನೆ. ೪. ದೃಷ್ಟಾಂತ; ಉದಾಹರಣೆ. ೫. ನಾಟಕ, ಚಿತ್ರಪಟ, ಕಲಾವಸ್ತುಗಳು ಮೊದಲಾದುವುಗಳನ್ನು ತೋರಿಸುವುದು,–ಪ್ರದರ್ಶಿಸುವುದು : ಎರಡನೆಯ ಸೋಪಾನ ಪ್ರದರ್ಶನ. ಉಪಾಧ್ಯಾಯರು ಮಾದರಿಯ ಚಿತ್ರ . . . ಇನ್ನಾವುದಾದರೊಂದನ್ನು ಪ್ರದರ್ಶಿಸಬೇಕು (ಶಿಕ್ಷದ. ೨೩೩) : ಮರುದಿನ ಪ್ರದರ್ಶನವು ಪ್ರಾರಂಭವಾಯಿತು. ಅತಿಥಿಗಳೆಲ್ಲರು ಪ್ರದರ್ಶನವನ್ನು ನೋಡುತ್ತ ಹೊರಟರು (ಕವಿಪು. ೯-೭೭). [ಸಂ.]

**ಪ್ರದರ್ಶಿತ** (ಗು). ೧. ತೋರಿಸಿದ : ಶಯ್ಯಾತಳದಿನರಸಿವೆರಸೆಳ್ದು ತತ್ಪ್ರದರ್ಶಿತಾದರ್ಶದೊಳ್ನಿಜಮುಖಾವಲೋಕನಂಗೈದ ನಂತರಂ (ರಾಜಶೇ. ೦೩-೪೫ ವ). ೨. ಭವಿಷ್ಯ ಹೇಳಿದ. (ನಾ). ೩. ತೋರ್ಪಡಿಸಿದುದು : ಈ ಸಿನಿಮಾಗೃಹದಲ್ಲಿ ಕನ್ನಡ ಚಿತ್ರಗಳು ಮಾತ್ರ ಪ್ರದರ್ಶಿತವಾಗುತ್ತವೆ (ರೂಢಿ). [ಸಂ.]

**ಪ್ರದರ್ಶಿಸು** (ಕ್ರಿ). ತೋರಿಸು ; ತೋರ್ಪಡಿಸು ; ಪ್ರಕಟಗೊಳಿಸು : ಪಾಠ ಮಾಡುವಾಗ ಹಾಕುವ ಪ್ರಶ್ನೆಗಳು, ಉಪಯೋಗಿಸುವ ಪಠ್ಯಪುಸ್ತಕ, ಪ್ರದರ್ಶಿಸುವ ಚಿತ್ರ . . . ಮಕ್ಕಳ ನೋಟುಪುಸ್ತಕಗಳು— ಇವೆಲ್ಲ ಬೋಧಿಸಲೂ ಕಲಿಸಲೂ ನೆರವಾಗುತ್ತವೆ (ಶಿಕ್ಷದ. ೨೬೩) ; ಮಾನವನಿಗೆ ಸ್ತ್ರೀಚಾಪಲ್ಯವನ್ನು ಧಿಕ್ಕರಿಸಿ ನಿಲ್ಲುವುದು ಸಾಧ್ಯವೆಂದು ನನ್ನ ಜೀವಮಾನದಲ್ಲಿ ಅನೇಕವೇಳೆ ಪ್ರದರ್ಶಿಸಿದೆ (ಜಿಂಗಾಳ್ವ. ೦೫೦). [ಪ್ರದರ್ಶನ + —ಇಸ್ಸು]

**ಪ್ರದಾತ** (ನಾ). ಕೊಡುವವನು; ದಾನ ಮಾಡುವವನು: ಚಿಪಳೂಣಕರರು ಪ್ರಬಂಧಕಾರರಾಗಿರುವರಲ್ಲದೆ . . . ಬೌದ್ಧಿಕವಿವೇಕದ ದೃಷ್ಟಿಪ್ರದಾತರು (ಮಸಾಹಿ. ೩೨). [ಸಂ. ಪ್ರದಾತೃ]

**ಪ್ರದಾನ** (ನಾ) ೧. ಕೊಡುವುದು; ದಾನ; ಕೊಡುಗೆ: ಆ ಪ್ರದಾನ ಲಾಭದಾಯಕವೆಂದೂ ಅದರ ಸ್ವೀಕರಣದಿಂದ ಅಪಾಯವಿಲ್ಲವೆಂದೂ ಪಕ್ಷ ತನಗರ್ಥವಾಗದ ಪ್ರದಾನ ಸಂಶಯಾತ್ಮಕವೆಂದು ಒಂದು ಹೆದರಿದ ಮತ್ತೊಂದು ಪಕ್ಷ (ಪುಸರು. ೬೦೭). ೨. ಅರ್ಪಿಸುವುದು; ಅರ್ಪಣೆ : 'ಪಿಂಡಪ್ರದಾನ' ಪರಾ. [ಸಂ.]

**ಪ್ರದಾಯ** (ನಾ). ಕೊಡುವುದು ; ಕೊಡುಗೆ; ಬಳುವಳಿ. [ಸಂ.]

**ಪ್ರದಾಯಕ** (ಗು). ೧. ಕೊಡುವ ; ಅನುಗ್ರಹಿಸುವ ; ನೀಡುವ: ಸಮಸ್ತಸಿದ್ಧಿಪ್ರದಾಯಕ ವಿನಾಯಕ ಮಾಳ್ಪುದೆಮಗೆ ನಿರ್ವಿಘ್ನತೆಯನು (ಕೃಬಿಚಾ. ೦-೩). (ನಾ). ೨. ಕೊಡುವವನು ; ನೀಡುವವನು : ವಿಬುಧಹೃದಯಾನನ್ದಪ್ರದಾಯಕಂ ಪತಿಹಿತವೈನತೇಯಂ (ಶಾಇ. XX. ೯೬-೨೦; 1072); ಉದ್ಯತಾಯುಷ್ಯಪ್ರದಾಯಕನು . . . ಎನೆ ಜನರು ಕೀರ್ತಿಸಲು ವರ್ತಿಸುತ (ಬಸಪು. ೯೬-೯). [ಸಂ.]

**ಪ್ರದಾಯಕಿ** (ನಾ). ಕೊಡುವವಳು; ನೀಡುವವಳು; ಅನುಗ್ರಹಿಸುವವಳಂ : ಸಮಸ್ತಾನ್ತಃಪುರಜಗದಳಪವಿತ್ರೀಕೃತ ವಿಶುದ್ಧಕುಳೆ ರಾಯನಾರಾಯಣಹೃ[ದಯಾ]ನಂದಪ್ರದಾಯಕಿ ಗೌರೀಪದಾಂಬುಜಾರಾಧಕಿ (ಎಇ. XXVIII. ೩೫-೯೨; 1082). [ಪ್ರದಾಯಕ + —ಇ]

**ಪ್ರದಾರಿತ** (ಗು). ಸೀಳಿದ ; ಭೇದಿಸಿದ: ವಿಳೋಳವೀಚೀರಯ ಪ್ರದಾರಿತ ಕುಳಾಚಲೋದಧಿಪರೀತಮಾಗಿರ್ದ ಜಂಬೂದ್ವೀಪದೊಳಗೆ (ಶಂಶಬಾ. ೦-೩೦ ವ). [ಸಂ.]

**ಪ್ರದಿಗ್ಧ** (ಗು). ೧. ಬಳಿದ; ಲೇಪಿಸಿದ. (ನಾ). ೨. ಮಾಂಸದಿಂದ ತಯಾರಿಸಿದ ಒಂದು ಬಗೆಯ ಖಾದ್ಯ. [ಸಂ.]

**ಪ್ರದಿಟೆ** 'ಪದಿಟೆ' ನೋ.

**ಪ್ರದಿಶ** (ನಾ). ೧. ಸೂಚನೆ; ಆಜ್ಞೆ; ನಿರ್ದೇಶನ. ೨. ದಿಕ್ಪ್ರದೇಶ ; ದಿಕ್ಕು. ೩. ಆಗ್ನೇಯ, ನೈರುತ್ಯ, ವಾಯುವ್ಯ ಮತ್ತು ಈಶಾನ್ಯವೆಂಬ ನಾಲ್ಕು ಮೂಲೆದಿಕ್ಕು: ವಿರುಪ್ಕು : "ಅಂತರಾಳದಿಶಃ, ವಿದಿಶಃ, ಪ್ರದಿಶಃ — ಈ ೩ ಗೊಂಟುಗಳ ಪೆಸರ್" (ಹಲಾಯು. ೧೭-೦೦೨). [ಸಂ. ಪ್ರದಿಶ್]

**ಪ್ರದಿಶೆ** (ನಾ). = ಪ್ರದಿಶ ೨: "ಪ್ರದಿಶೆ ವಿದಿಶೆಯೆನೆ ಗೊಂಟೆನಿಕ್ಕುಂ" (ಮುಂಗರಾ. ೦೬-೨೦). [ಸಂ. ಪ್ರದಿಶಾ]

**ಪ್ರದೀಪ** (ನಾ). ೧. ದೀವಿಗೆ; ದೀಪ: "ದೀಪ, ಪ್ರದೀಪ, — ೨ ದೀವಿಗೆ" (ಸಿದ್ಧಾಂತಿ. ೨೦೦); ಆ ಸಮಯದೊಳರಿಬಲಸಂತ್ರಾಸಿ ಬಲಿಷ್ಠಂ ತ್ರಿಪೃಷ್ಠನಶ್ವಗ್ರೀವೋದ್ಭಾಸಿ ಪ್ರದೀಪಮಂ ಕಿಡೆ ಬೀಸುವವೋಲ್ (ಶಾಂತಿಪು. ೫-೩೨); ತನಗಿನಿಯನಿತ್ತ ಮೆಚ್ಚಂ ನೆನೆದಳ್ . . . ಕಾಂತೆ ಚಿಂತಾಘನಾಂಧಕಾರಪ್ರದೀಪರೂಪೋಪಮಮಂ (ಶಂಚಾಪು. ೬-೯೨); ಅಂಧಕಾರದಿಂದ ಮುಚ್ಚಿಹೋಗಿರುವವರು ನೀವು. ಪ್ರದೀಪವನ್ನು ಹುಡುಕಿಕೊಂಡು ಹೋಗುವುದಿಲ್ಲವೇಕೆ? (ಭಾರದ. ೨೦೦). ೨. (ಅಲಂ) ಹೆಚ್ಚಾಗುವಿಕೆ; ಅಭಿವೃದ್ಧಿ : ಮೇಘವರ್ಣಂ ಪ್ರದೀಪಿಯ ಮಾತುಗಳ್ಗೆ ಕೋಪಂ ಪ್ರದೀಪಮಾಗೆ ಮನದೊಳ್ ಮುನಿದು (ಶಂಶಕಂ. ೨೦೬-೦೦). [ಸಂ.]

**ಪ್ರದೀಪಕ** (ಗು). ೧. ಬೆಳಗುವ ; ಬೆಳಕು ಕೊಡುವ. (ನಾ). ೨. ಬೆಳಗುವವನು : ಪಾರ್ವನೀ ಭವದೊಳೆ ಕರ್ಮಕ್ಷಯಭಾಗಿಯೆನಿಕ್ಕುಂ ಸಾಕ್ಷಾಜ್ಜಿನಶಾಸನಪ್ರದೀಪಕನಕ್ಕುಂ (ಸುಕುಮಾ. ೩-೦೦). [ಸಂ.]

**ಪ್ರದೀಪಕತೆ** (ನಾ). ಬೆಳಗುವಿಕೆ ; ಪ್ರಕಾಶಿಸುವಿಕೆ : ಇದು ಚಿತ್ರಂ ವಜ್ರಾಂಗಂಗೆ ದೃಢೀಕೃತಮಾರ್ದವಪ್ರಭಾವಂ ನಿಸ್ನೇಹದವಂಗೆ ಭುವನಭವನಪ್ರದೀಪಕತೆ ನಿನಗೆ ಜಿನ ಜಗತ್ತ್ರಯಮಿತ್ರಾ (ಶಂಪ್ರಪು. ೬-೦೨). [ಸಂ. ಪ್ರದೀಪಕತಾ]

**ಪ್ರದೀಪಕಲಿಕೆ** (ನಾ). ದೀಪದ ಕುಡಿ : ಅಮಲತರಪ್ರದೀಪಕಲಿಕಾಕೃತಿಯಿಂ ಸ್ವಪರಪ್ರಕಾಶನ ಕ್ಷಮಮೆನಿಸಿರ್ದ ತಮ್ಮ ಮತಿಯಿಂ ಜಿನರಾಜಚರಿತ್ರಮಂ ಪವಿತ್ರಮನೊಲವಿಂದೆ ಪೇಳ್ದು (ಶಂಪ್ರಪು. ೦-೩೬). [ಸಂ. ಪ್ರದೀಪಕಲಿಕಾ]

**ಪ್ರದೀಪನ** (ನಾ). ೧. ಬೆಳಗಿಸುವುದು ; ಪ್ರಕಾಶಿಸುವಂತೆ ಮಾಡುವುದು. ೨. ಕೆರಳಿಸುವುದು; ಉದ್ರೇಕಗೊಳಿಸುವುದು. ೩. ಕೆಂಪು ಬಣ್ಣದಿಂದ ಕೂಡಿ ಪ್ರಕಾಶಮಾನವಾದ, ಸೇವಿಸಿದರೆ ಬಹಳ ಉರಿಯನ್ನುಂಟುಮಾಡುವ ಒಂದು ಬಗೆಯ ವಿಷ : "ಬ್ರಹ್ಮಪುತ್ರಕ, ಶೌ(ಕ್ಲಿ)ಲ್ಕಿಕೇಯಃ, ದಾರದಃ, ಪ್ರದೀಪನಃ, ರಸಃ, ಸೌರಾ(ಷ್ಟ್ರಿ)ಷ್ಟ್ರಿಕಃ, ಕ್ಷ್ವೇಡಃ, ತೀಕ್ಷ್ಣಃ, ವಿಷಂ—ಈ ೯ ವಿಷಂ" (ಹಲಾಯು. ೦೦೬-೨೪). [ಸಂ.]

**ಪ್ರದೀಪ್ತ** (ಗು). ೧. ದೀಪ ಹತ್ತಿಸಿದ. ೨. ಪ್ರೇರಿತವಾದ ; ಉತ್ತೇಜಿತವಾದ. [ಸಂ.]

**ಪ್ರದೀಪ್ತಿ** (ನಾ). ಹೆಚ್ಚಾದ ಬೆಳಕು,—ಕಾಂತಿ. [ಸಂ.]

**ಪ್ರದುಷ್ಟ** (ಗು). ಬಹಳ ಕೆಟ್ಟ; ದೋಷಪೂರಿತವಾದ : ಸರ್ವದೋಷಪ್ರದುಷ್ಟಗಜಂಗಳನುಪಲಾಲನೆಯೊಳಮಿಚ್ಛಾನುವರ್ತನದೊಳಮೊಳಪಡಿಸುವ ಕುಶಲಗಜೋಪಜೀವಿಯಂತೆ ಪ್ರಸಂಗಾಭಿಪ್ರಾಯವಚನಂಗಳಿನೊಳವಡಿಸಿ (ಶಾಂತಿಪು. ೩-೬೨ ವ). [ಸಂ.]

**ಪ್ರದೇಯ** (ಗು). ಕೊಡಲು ಅರ್ಹವಾದ. [ಸಂ.]

**ಪ್ರದೇಶ** (ನಾ). ೧. ತೋರಿಸುವುದು; ನಿರ್ದೇಶಿಸುವುದು : (ಶ). ೨. ಸ್ಥಳ ; ಎಡೆ ; ಸ್ಥಾನ : ತದನಂತರಸಮಯದೊಳ್ ವಾತವಲಯ ಮುಟ್ಟಿಯೆ ಜೀವಪ್ರದೇಶಂಗಳಿಂ ಲೋಕಪ್ರದೇಶಮಂ ಪರ್ವಿ (ಆದಿಪು. ೦೬-೯೯) ; ಮನೆಯನ್ನು ನಗರದ ಒಳ್ಳೆಯ ಪ್ರದೇಶದಲ್ಲಿ ಕಟ್ಟಬೇಕು (ಗೃಹಂ. ೦೫೩). ೩. ದೇಶ; ಪ್ರಾಂತ್ಯ; ನಾಡು : ದ್ರಾವಿಡರು ಆರ್ಯರಿಗಿಂತ ಸ್ವಲ್ಪ ಮುಂಚೆ ಬಂದರೆಂದೂ ಬಹುಶಃ ಮೆಸಪೊಟೇಮಿಯಾ ಪ್ರದೇಶಗಳಿಂದ ಬಂದರೆಂದೂ . . . ಹಲವು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ (ದ್ರಾಬಿ. ೨೦). ೪. ಚಾಚಿದ ಹೆಬ್ಬೆರಳಿನ ತುದಿಯಿಂದ ತೋರುಬೆರಳ ತುದಿಯ ವರೆಗಿನ ಅಳತೆ ;ಗೋಟು :(ಶ). ೫. [ಜೈನ]ಒಂದುಂ ಪರಮಾಣು ಇರುವಷ್ಟು ಸ್ಥಳ ; ಪುದ್ಗಲದ್ರವ್ಯದ ಅಂಶ : ಕಾಲವನ್ನು ಬಿಟ್ಟು ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶಗಳು ಸತ್ತಾಯುಕ್ತವಾಗಿದ್ದು, ಬಹಳ ಪ್ರದೇಶವುಳ್ಳವುಗಳಾಗಿವೆ (ಜೈನಸ. ೯೨೩); ಅಣುಗಳ ಪುಂಜವೇ ಪುದ್ಗಲದ್ರವ್ಯವು ಅದರಲ್ಲೂ ಅಸಂಖ್ಯಾತ ಅಂಶಗಳಿರುವುವು. ಅವುಗಳಿಗೆ ಪ್ರದೇಶವೆಂದು ಹೆಸರು (ಹಿಂದಸಾ. ೯೦). [ಸಂ.]

**ಪ್ರದೇಶನ** (ನಾ). ೧. ತೋರುವಿಕೆ ; ನಿರ್ದೇಶನ. ೨. ಕೊಡುವುದು ; ಕಾಣಿಕೆ ; ಕೊಡುಗೆ. ೩. ದೇವರು, ಅರಸ ಮುಂತಾದವರಿಗೆ ಅರ್ಪಿಸುವ ಕಾಣಿಕೆ : "ವಿಶ್ರಾಣನಂ, ವಿಹಾಯನಂ . . . ಉತ್ಸರ್ಗಃ, ಪ್ರದೇ(ಶ)ನಂ, ದಾನಂ – ಈ ೧೦ ಕುಡುವುದು" (ಹಲಾಯು. ೬೯-೨೬೩). ೪. ಸಲಹೆ ; ಸೂಚನೆ. [ಸಂ.]

**ಪ್ರದೇಶನಿ** (ನಾ). ತೋರುಬೆರಳು ; ತರ್ಜನಿ. [ಸಂ. ಪ್ರದೇಶನೀ]

**ಪ್ರದೇಶಬಂಧ** (ನಾ). [ಜೈನ] ಬಂಧನವನ್ನು ಹೊಂದಿರುವ ಕರ್ಮಗಳ ಸಂಖ್ಯೆಯ ನಿರ್ಣಯ : ಒದವಿದ ಕರ್ಮದ ಶಕ್ತಿಯೆ ವಿದಿತಮದನುಭಾಗ ಬಂಧಮಕ್ಕುಂ ಬಹುಭೇದದಿನಾದ ಜೀವ ಕರ್ಮ ಪ್ರದೇಶಯೋಗಂ ಪ್ರದೇಶ ಬಂಧಮೆನಿಕ್ಕುಂ (ಕಂದ್ರಪು. ೦೬-೨೩) ; ಜೀವನಿಗೆ ಫಲಪ್ರದಾನಾವಸ್ಥೆಯಲ್ಲಿ ರುವ ಪುಣ್ಯ ಪಾಪವೆಂಬ ಕರ್ಮದ ಅಣುಗಳು ಜೀವದೊಡನೆ ಸೇರುತ್ತವೆ, ಬೆರೆಯುತ್ತವೆ. ಇದಕ್ಕೆ ಪ್ರದೇಶಬಂಧವೆಂದು ಹೆಸರು (ಹಿಂದಸಾ. ೯೪). [ಸಂ.]

**ಪ್ರದೇಶಸಂಹರಣ** (ನಾ). [ಜೈನ] ಜೀವಪ್ರದೇಶದ ಸಂಕೋಚ,– ಆಕುಂಚನ ; ಕಾರ್ಮಣಶರೀರದಲ್ಲಿರುವುದರಿಂದ ಆ ಶರೀರಕ್ಕೆ ಅನುಸಾರವಾಗಿ ಚಿಕ್ಕದು ಅಥವಾ ದೊಡ್ಡದಾಗುವ ಜೀವದ ಸ್ಥಿತಿ : ಕರ್ಮವಶದಿಂ ಅಣು ಮಹಚ್ಛರೀರಂಗಳು ಕೊಳುತಿರ್ದು ತದ್ವಶದಿಂ ಪ್ರದೇಶಸಂಹರಣವಿಸರ್ಪಣಸ್ವಭಾವಸಮನ್ವಿತಜೀವಕ್ಕೆ ತಾವತ್ಪ್ರಮಾಣ ಮಪ್ಪುದಱಿಂ ಅಸಂಖ್ಯೇಯಭಾಗಾದಿಗಳಲ್ಲಿ ವೃತ್ತಿವಿರುದ್ಧಮಲ್ತು (ತತ್ತ್ವಸೂ. ೨೩೬). [ಸಂ.]

**ಪ್ರದೇಶಸೌಷ್ಠವ** (ನಾ). ಕಲಾಕೃತಿಯ ಅವಯವಗಳ ಸೌಂದರ್ಯ,– ಸೌಷ್ಠವ : ಇದು ಭೂಮಾಪನರೂಪಿದು ಲೆಪ್ಪದ ರೂಪೆನಲೆಂತುಮಱಿಯ ಲರಿದೆನೆ ಬಗೆಗೊಂಡುದು ನಡೆವ ನುಡಿವ ತೆಱದಿಂ ಪ್ರದೇಶಸೌಷ್ಠವ ಮಂದೇಂ ವಿಚಿತ್ರಮೊ ಚಿತ್ರಂ (ಶಂರಾವಿಜ. ೬–೨೬). [ಸಂ.]

**ಪ್ರದೇಶಿನಿ** (ನಾ). ೧. ತೋರುಬೆರಳು ; ತರ್ಜನಿ : "ಪ್ರದೇಶಿನೀ— ಹೆಬ್ಬೆಟ್ಟಿನ ವತ್ತುಬೆರಳು" (ಸಿದ್ಧಾಂತಿ. ೦೯೩) ; ದರಸ್ಮಿತೆಯಾಗಿ, ಕುಳಿತು ಅಭೀಕ್ಷಿಸುತ್ತಾ ಪ್ರದೇಶಿನಿಯನ್ನು ನೀಡಿ (ಮಂತ್ರಶ. ೯೦–೨೩). ೨. ಕಾಲಿನ ಹೆಬ್ಬೆರಳ ಪಕ್ಕದ ಬೆರಳು : ಎಡದ ಕಾಲ ಹೆಬ್ಬೆರಳ ಬಳಿಯ ಕೊಂಚ ಉದ್ದವಾದ ಬೆರಳು ಪ್ರದೇಶಿನಿ (ಕಾಮಶಾ. ೩೩೩). ೩. [ಸಾಮುದ್ರಿ] ಒಂದು ರೇಖೆ : ಆವ ಪುರುಷನ ಪ್ರದೇಶಿನಿಯೆಂಬ ರೇಖೆ ಆವಾತನು ಕುಳ್ಳನು ಕುಟಿಲವಾಗಿರೆ ಡೊಂಕಾಗಿರೆ ಆತನು ಭೋಗವಿಲ್ಲದಾತನು (ಸಾಮುಂ. ೬–೦೭). [ಸಂ. ಪ್ರದೇಶಿನೀ]

**ಪ್ರದೋಷ** (ನಾ). ೧. ತಪ್ಪು ; ಪಾಪ ; ಅಪರಾಧ. ೨. ರಾತ್ರಿಯ ಮೊದಲನೆಯ ಭಾಗ ; ಮುಂಚ್ಚಂಜೆ : "ಬೈಗಿನ ಪೊಱ್ತುಂ ಸಾಯ ಮೆಂಬುದು – ಮುನ್ನಿರುಳಂ ಪ್ರದೋಷಮೆಂಬುದು" (ಹಲಾಯು. ೦೯–೦೧೧) ; ಕಡೆಗೆ ಒಮ್ಮಿಂದೊಮ್ಮೆ ಪ್ರದೋಷದ ಕತ್ತಲೆಯು ಬಂದು ಕಪ್ಪಾದ ಜಲದ ಮೇಲೆ ಹರಡಿಕೊಂಡಿತು (ಕಪಾಕುಂ. ೦೬). ೩. ಶುಕ್ಲ ಮತ್ತು ಕೃಷ್ಣ ಪಕ್ಷ ಗಳಲ್ಲಿ ಸಾಯಂಕಾಲಕ್ಕೆ ತ್ರಯೋದಶಿ ಬರುವ ದಿನ : ತರುವಾಯ ಪ್ರದೋಷ ಬಂತು. ಸಾಯಂಕಾಲದಲ್ಲಿ ಎಂದಿನಂತೆ ಸರಸ್ವತೀಪೂಜೆ ಮೊದಲಾದ್ದು ಜರುಗಿತು (ಮಾಮುರಾ. ೩೪). ೪. [ಜೈನ] ಮೋಕ್ಷಕ್ಕೆ ಕಾರಣವಾದ ತತ್ತ್ವಜ್ಞಾನವನ್ನು ಉಪದೇಶಿಸುವಾಗ ಅಥವಾ ಅದರ ಗುಣಗಾನ ಮಾಡುವಾಗ ಏನನ್ನೂ ಮಾತನಾಡದಿರುವಿಕೆ: ಪ್ರದೋಷ (ಪರರ ಜ್ಞಾನವನ್ನು ಹೊಗಳದೆ ಮೌನವನ್ನು ಧರಿಸುವುದು) (ಕೃಷ್ಣಶ. ೬೩). ೫. ಜ್ಞಾನಾವರಣಕರ್ಮದ ಬಂಧಕ್ಕೆ ಕಾರಣವಾದ ಭಾವ; ಮನಸ್ಸಿನ ದ್ವೇಷಭಾವ : ತತ್–ಆ ಜ್ಞಾನದರ್ಶನಂಗಳೊಳಪ್ಪ, ಪ್ರದೋಷ – ಮುಳಿಸುಂ (ತತ್ತ್ವಸೂ. ೨೩೯). [ಸಂ.]

**ಪ್ರದೋಷಕಾಲ** (ನಾ). ೧. ರಾತ್ರಿಯ ಪ್ರಾರಂಭಕಾಲ; ಸಾಯಂಕಾಲ: ಆ ಘನಸಮಯಂ . . . ಪ್ರದೋಷಕಾಲದಂತೆ ನೀಲಕಂಠತಾಂಡವಾಡಂಬರ ಮುಂ . . . ಎನಿಸಿರ್ದುದು (ರಾಜಶೇ. ೬–೦೦೬ ಪ) ; ಸರ್ವಭೂಷಣರು ಅಂದಿನ ಪ್ರದೋಷಕಾಲದ ಪೂಜೆಗೆ ಕುಳಿತುಕೊಳ್ಳುತ್ತಾರೆ (ಕರಿಪ. ೭೬೭) ; ನನ್ನ ಚಿತ್ತವಂತೂ ಗೂಡು ಕಳೆದುಕೊಂಡು ಗುಬ್ಬಳಿಸುವ ಗುಬ್ಬಚ್ಚಿಯ ಹಾಗೆ, ಪ್ರದೋಷಕಾಲದಲ್ಲಿ . . . ಹಾರಾಡಿ ಸುತ್ತುತ್ತಿತ್ತು (ಇಕ್ಕಳ. ೦೪೬). ೨. ಬಹಳ ದೋಷಯುಕ್ತವಾದ ಕಾಲ ; ಬಹಳ ಪಾಪಕೃತ್ಯಗಳು ನಡೆಯುವ ಕಾಲ. ೧,೨ : ಪಿರಿದುಂ ಪ್ರದೋಷಕಾಲಂ ಬರೆ ಮಯ್ಗುರಿ ದಂ ಪ್ರಭಾಕರಂ ವಾರಿಧಿಯೊಳ್ ಧರೆಯೊಳ್ಪ್ರದೋಷಕಾಲದೊಳಿರ ಲಾರ್ಪರೆ ಹೂಣ್ಯವಂತರೀ ಏರಿಣಿಯೊಳ್ (ಶಿರಪು. ೬–೨೦). [ಸಂ.]

**ಪ್ರದೋಷಪೂಜೆ** (ನಾ). ಸಾಯಂಕಾಲದಲ್ಲಿ ಮಾಡುವ ಪೂಜೆ : ಈಗ ಪ್ರದೋಷಪೂಜಾದಿಗಳನ್ನು ಮುಗಿಸಿ ಧ್ಯಾನ್ಯಮಗ್ನನಾಗಿದ್ದಾಗ ನಿನ್ನ ಪೂರ್ವಾಪರವೆಲ್ಲವೂ ತಿಳಿಯಿತು ! (ಹೇಮಕೂ. ೬೦). [ಸಂ. ಪ್ರದೋಷಪೂಜಾ]

**ಪ್ರದೋಷವ್ರತ** (ನಾ). ಪ್ರತಿಪಕ್ಷದಲ್ಲೂ ಸಾಯಂಕಾಲದಲ್ಲಿ ತ್ರಯೋದಶಿ ಇರುವ ದಿನ ಮಾಡುವ ಒಂದು ಪವಿತ್ರವಾದ ವ್ರತ ; ॰ಹಗಲು ಉಪವಾಸವಿದ್ದು ಸಾಯಂಕಾಲ ಸ್ನಾನ ಮಾಡಿ ಮಡಿಯುಟ್ಟು, ಕಲ್ಪೋಕ್ತಕ್ರಮದಿಂದ ಆಚರಿಸುವ ಶಿವಪೂಜೆ ಮತ್ತು ರುದ್ರಾಭಿಷೇಕ ಹಾಗೂ ಸಹಸ್ರನಾಮಾರ್ಚನೆ. ಇವುಗಳಿಂದ ಬಡತನವು ಪರಿಹಾರವಾಗುತ್ತದೆಯೆಂಬ ನಂಬಿಕೆಯಿದೆ : ಪ್ರದೋಷ ವ್ರತವನ್ನು ಮಾಡಲು ಆರಂಭಿಸಿದ ಮೇಲೆ ಅವನಿಗೆ ಅದೃಷ್ಟ ಒದಗಿ ಬಂತು (ಬೂಶಿ). [ಸಂ.]

**ಪ್ರದ್ಯುತಿ** (ನಾ). ಹೆಚ್ಚಾದ ಹೊಳವು,–ಪ್ರಕಾಶ : ಕೌಸ್ತುಭಪ್ರದ್ಯುತಿ ಬೀಱುತ್ತಿರ್ಪನಂ ಶಾಶ್ವತನವತರಿಸಿರ್ದಂ . . . ವಾಸುದೇವಂ (ಜಗಂ. ೨–೦೦೦); ವಿಳಸತ್ಸಂಧ್ಯಾರುಣ ಪ್ರದ್ಯುತಿಗೆ ರುಧಿರವಿಭ್ರಾಂತಿಯಿಂ ಬಗ್ಗವಿಂಡವ್ವಳಿಕುಂ (ರಾಜಶೇ. ೬–೨೦). [ಸಂ.]

**ಪ್ರದ್ಯುಮ್ನ** (ನಾ). ೧. ಹೆಚ್ಚಾದ ಶಕ್ತಿಯುಳ್ಳವನು ; ಬಹು ಸಮರ್ಥ ನಾದವನು. ೨. ಕೃಷ್ಣನ ಮಗ; ಮನ್ಮಥ ; ಕಾಮ : "ಪ್ರದ್ಯುಮ್ನಃ, ಮಕರಧ್ವಜಃ . . . ಮನೋಭವಃ–ಈ ೨೮ ಕಾಮದೇವನ ಪೆಸರ್" (ಹಲಾಯು. ೬–೩೩) ; ಉಳಿದ ಪ್ರದ್ಯುಮ್ನಗದ ಸಾಂಬನನಿರುದ್ಧ ನಿಶಠಶಠ ನಕ್ರೂರ ಸಾತ್ಯಕಿ ಪ್ರಮುಖಿಯಾದವರೆಮ್ಮ ಕೂಡೆ ಬರಲಿ (ಕೃಮಿಜ. ೬–೨). ೩. [ವಿಶಿಷ್ಟಾ]ವ್ಯೂಹರೂಪನಾದ ನಾರಾಯಣನ ನಾಲ್ಕು ವ್ಯೂಹ ಗಳಲ್ಲಿ ಒಂದು ; ॰ನಾರಾಯಣನು ಪರ, ವ್ಯೂಹ, ವಿಭವ, ಅಂತ ರ್ಯಾಮಿ ಮತ್ತು ಅರ್ಚಾವತಾರ ಎಂಬ ಐದು ಪ್ರಕಾರ ಉಳ್ಳವ ನಾಗಿದ್ದಾನೆ. ವ್ಯೂಹ ಎಂದರೆ ಪರನೇ ಉಪಾಸನೆಗೋಸ್ಕರವೂ ಜಗತ್ಸೃಷ್ಟಿ ಮೊದಲಾದುವುಗಳಿಗೋಸ್ಕರವೂ ವಾಸುದೇವ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಭೇದವನ್ನು ಹೊಂದುವ ರೂಪ. ಪ್ರದ್ಯುಮ್ನನು ಐಶ್ವರ್ಯ ಮತ್ತು ವೀರ್ಯ ದಿಂದ ಪರಿಪೂರ್ಣನಾಗಿರುತ್ತಾನೆ : ವ್ಯೂಹ ಎಂದರೆ . . . ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಭೇದವನ್ನು ಹೊಂದುವ ರೂಪ (ಶಾತತ್ತ್ವ. ೭೬೪). [ಸಂ.]

**ಪ್ರದ್ಯುಮ್ನಗೋತ್ರ** (ನಾ). ೧. ಪ್ರಸಿದ್ಧವಾದ ವಂಶಕ್ಕೆ ಸೇರಿದವನು. ೨. ಮನ್ಮಥಸಮಾನನಾದವನು. ೧, ೨ : ವಿಳಸತ್ಕಳಾಧರಸುಖಿ ಪ್ರದ್ಯುಮ್ನಗೋತ್ರಂ ರಮೋತ್ಸವಧಾಮಂ ಸುಮನೋವಿನಿರ್ಮ್ಮಿತ ಸುಧರ್ಮ್ಮಂ ತಾನೆನಲ್ಕೀ ಸುಕೇಶವಪುತ್ರಂಗೆಸೆವಾಚಿರಾಜವಿಭುವಿಂಗೊಪ್ಪಿ ಪುದೇಂ ಚೋದ್ಯಮೋ (ಎಕ. VI, ಕಡೂರು. ೬೬–೬೭: 1178). [ಸಂ.]

**ಪ್ರದ್ಯೋಗ** (ನಾ). ಹೆಚ್ಚಾದ ಪ್ರಯತ್ನ ; ಮಹಾಪ್ರಯತ್ನ: ಶಕ್ತಿ ಸಾಧಕನಿಂತು ರೌದ್ರವಿದ್ಯಾಶಕ್ತಿಯಂ ಸಾಧಿಪ ಪ್ರದ್ಯೋಗದೊಳ್ ಯೋಗಿ ಯಾಗಿರಲು (ಶ್ರೀಲಾವಪು. ೬೦೭–೨೪೭). [ಸಂ.]

**ಪ್ರದ್ಯೋತ** (ನಾ). ೧. ಕಿರಣ ; ರಶ್ಮಿ : "ರೋಚಿಃ, ಶೋಚಿಃ, ಅಭೀಷುಃ, ಪ್ರದ್ಯೋತಃ . . . ಗೌಃ–ಈ ೩೨ ರಶ್ಮಿಗಳ ಪೆಸರ್" (ಹಲಾಯು. ೬–೪೯) ;

ಅಂತು ಕನಕಶಾಂತಿಮುನಿರಾಜಂ ಕೇವಲಬೋಧಪ್ರದ್ಯೋತಕ್ಕಾದಿತ್ಯನಾಗೆ (ಶಾಂತಿಪು. ೯-೨೩ ವ); ವಿಕ್ರಮಾಂಕಂ ಸೋಮಪ್ರದ್ಯೋತಕೀರ್ತಿ ಪ್ರಕಟಿತದಶ ದಿಗ್ಭಿತ್ತಿ (ಎಕ. VIII, ಸೊರಬ. ೨೭೬-೭೭; 1070). ೨. ಕಾಂತಿ; ಪ್ರಕಾಶ; ತೇಜಸ್ಸು: ದಿನಲಕ್ಷ್ಮೀಕಾಂತೆ . . . ಎಯ್ದುಪರ್ವಲ್ಲಿ ಕಾಲಿಂ ನವಮಣಿ ಮಯಮಂಜೀರಕಂ ನುಣ್ಚುತಂ ಶೀವಿ ನಿಜಪ್ರದ್ಯೋತದಿಂ ಪಶ್ಚಿಮಶಿಖರಿ ಶಿರೋಭಾಗದೊಳ್ ಬಿಟ್ಟುದೆಂಬಂತಿನಬಿಂಬಂ ರಂಜಿಸಿತ್ತಸ್ತಮಯಸಮಯ ದೊಳ್ ಮುಕ್ತಪಾದಾವಲಂಬಂ (ಕಾದಂಭೂ. ೫೦೭); ಕಾಂತಾಕಪೋಲೇಂದು ನವಪ್ರದ್ಯೋತಮಂ ಮುಂ ತಳೆಯೆ ಹಿಮಕರಂ ಪಿಂತೆ (ರಾಜಶೇ. ೯-೪೪). [ಸಂ.]

**ಪ್ರದ್ಯೋತನ** (ನಾ). ಸೂರ್ಯ; ರವಿ: "ಆದಿತ್ಯಃ, ಸವಿತಾ, ಸಹಸ್ರ ಕಿರಣಃ, ಪ್ರದ್ಯೋತನಃ . . . ತ್ರಯೀತನುಃ –ಈ ೪೭ ಆದಿತ್ಯನ ಪೆಸರ್" (ಶಬ್ದಮ. ೭-೩೩). [ಸಂ.]

**ಪ್ರದ್ಯೋತಿ** (ನಾ). ಬೆಳಕು; ಕಾಂತಿ; ಪ್ರಕಾಶ: ತಳಿರ್ದೊಂಗಲ್ ವುದಿದಂದದಿಂದಿರೆ ತಳಪ್ರದ್ಯೋತಿಯಿಂದುದ್ಗಮೋಜ್ವಳದಾಮಂ ತದುದಾರ ಸೌರಭಚಯಂ ಸುಯ್ಗಂಪಿನಿಂದಾವಗಂ ದಳವೆ ಬುತ್ತಿರೆ (ಚಂದ್ರಪ್ರ. ೦-೧೩೨). [ಸಂ. ಪ್ರದ್ಯೋತಿಸ್]

**ಪ್ರದ್ರಾವ** (ನಾ). ೧. ಓಡುವುದು; ವೇಗವಾದ ಚಲನೆ. ೨. ಹಿಂಜರಿದು ಓಡಿಹೋಗುವಿಕೆ; ಪಲಾಯನ: "ಪ್ರದ್ರಾವಃ . . . ಅಪಯಾನಂ-೮ ಪಲಾಯನವಾಗುವುದಕ್ಕೆ ಹೆಸರು, ತಪ್ಪಿಸಿಕೊಂಡು ಓಡಿ ಹೋಗುವಿಕೆ" (ಸಿದ್ಧಾಂತ. ೨೬೦). [ಸಂ.]

**ಪ್ರಧನ** (ನಾ). ೧. ಕಾಳಗ; ಯುದ್ಧ; ಸಮರ: ಸಮಧಿಕರಸ್ತ್ರಶಸ್ತ್ರಬಲ ದೊಳ್ ದೃಢಕಾಯದೊಳತ್ಯುದಗ್ರವಿಕ್ರಮದೊಳನಂತವೀರ್ಯದೊಳನೇಕ ವಿಧಪ್ರಧನಂಗಳೊಳ್ (ಪಂಪಭಾ. ೦೪-೦೩೬). ೨. ಯುದ್ಧದಲ್ಲಿ ಸೂರೆ ಮಾಡಿದ ಲೂಟಿ-ಕೊಳ್ಳೆ. ೩. ಹರಿದು ಹಾಕುವುದು. ೪. ಹಾಳು ಮಾಡುವುದು; ನಾಶಮಾಡುವುದು. ೫. ಧನವಂತ; ಐಶ್ವರ್ಯ ವಂತ. ೬. ಒಂದು ನರಕದ ಹೆಸರು: ಪ್ರಧ[ಧ]ನ. . . ಬಾಧೆಯೆಂ ಬೈದು ಮಂತ್ರಿನರಕಂಗಳಿಂ ಕೂಡಿ ಅಘೋರಮೆಂಬರಸುನರಕವಿಹುದು (೩ವೇಕ.೦೭೯). [ಸಂ.]

**ಪ್ರಧಾನ** (ಗು). ೧. ಪ್ರಮುಖವಾದ; ಮುಖ್ಯವಾದ: ಪ್ರಧಾನ ಪುರುಷಾರ್ಥಾಶ್ರಿತಂಗಳಪ್ಪ ಪುರಂಗಳುಮಂ (ಆದಿಪು. ೬-೬೩ ವ). ೨. ಶ್ರೇಷ್ಠ ವಾದ; ಉತ್ಕೃಷ್ಟವಾದ: (೬). (ನಾ). ೩. ಮುಖ್ಯವಾದುದು; ಪ್ರಮುಖವಾದುದು: "ಅಗ್ರ್ಯಂ, ಪ್ರಧಾನಂ, ಪ್ರಮುಖಂ, ಪುರೋಗಂ, ಮುಖ್ಯಂ. . . ಅಗ್ರಣೀಃ – ಈ ೧೩ ಮುಖ್ಯಂ" (ಶಬ್ದಮ. ೦೦೩-೫); ಅಖಿಲಮಂತ್ರಿಮಂಡಳಿಕಪ್ರಧಾನನುಮಪ್ಪ ಕುಮಾರಪಾಲಿತನೆಂಬ ಮಂತ್ರಿಮುಖ್ಯನನಿಂತೆಂದಂ (ಕಾದಂಭೂ. ೬೨); ಮಾನವಇತಿಹಾಸದಲ್ಲಿ ನದಿ ಗಳ ಪಾತ್ರ ಬಹು ಪ್ರಧಾನವಾದುದು (ನನದ. ೦೪). ೪. ಮುಖ್ಯವಾದ ನಿಯಮ: ವಚನಗಳನ್ನು ವಿಧಿನಿಷೇಧ ಅರ್ಥವಾದಗಳೆಂದೂ ಪ್ರಧಾನ ಲಿಂಗಗಳೆಂದೂ, ಮುಖ್ಯ ಗೌಣಗಳೆಂದೂ, ಗುರುಲಘುಗಳೆಂದೂ ಸಾಮಾನ್ಯ ವಿಶೇಷಗಳೆಂದೂ, ವಿಂಗಡಿಸಿಕೊಂಡು ನಡೆಯಬೇಕು (ಅರ್ಥಶಾ. ೩೯). ೫. [ವೇದಾಂತ] ಜಗತ್ತಿಗೆ ಮೂಲಕಾರಣವೆಂದು ಹೇಳಲಾಗಿರುವ ಪ್ರಕೃತಿ; ಮೂಲಪ್ರಕೃತಿ; ಸತ್ತ್ವ, ರಜಸ್ಸು ಮತ್ತು ತಮಸ್ಸು— ಮೂರು ಗುಣಗಳುಳ್ಳ ಪ್ರಕೃತಿ; ಸಾಂಖ್ಯರೇ ಮೊದಲಾದ ಅನೇಕ ದಾರ್ಶನಿಕರು ಪ್ರಧಾನ ಅಥವಾ ಪ್ರಕೃತಿಯನ್ನು ತಾವು ಗಣಿಸಿರುವ ಇಪ್ಪತ್ತೈದು ತತ್ತ್ವಗಳಲ್ಲಿ ಮೊದಲನೆಯದು ಹಾಗೂ ಮುಖ್ಯವಾದುದು ಎಂದು ಹೇಳಿದ್ದಾರೆ. ಪ್ರಧಾನ ೧, ಮಹತ್ತತ್ತ್ವ ೧, ಅಹಂಕಾರತತ್ತ್ವ ೧, ಭೂತತನ್ಮಾತ್ರೆಗಳು ೫, ಮಹಾಭೂತ ಗಳು ೫, ಇಂದ್ರಿಯಗಳು ೧೧, ಪುರುಷ ೧–ಹೀಗೆ ಇಪ್ಪತ್ತೈದು ತತ್ತ್ವಗಳು ಉಕ್ತವಾಗಿವೆ: "ಪ್ರಕೃತಿಯಲ್ಲಿಯುಂ ಪ್ರಧಾನವೆಂಬುದು" (ಶಬ್ದಮ. ೦೩೩-೧೬); ಅಚೇತನವಾದ ಪ್ರಧಾನದಿಂದಾಗಲಿ, ಅಣುಗಳಿಂದಾ ಗಲಿ ... ಜಗತ್ತಿನ ಉತ್ಪತ್ತಿಯೇ ಮುಂತಾದದ್ದು ಆಗಿರಬಹುದೆಂದಿಟ್ಟು ಕೊಳ್ಳುವುದಕ್ಕೆ ಆಗಲಾರದು (ಬ್ರಹ್ಮಭಾ. ೨೦). ೬. ಪರಮಾತ್ಮ; ದೇವರು. ೭. ಬುದ್ಧಿ; ಪ್ರಜ್ಞೆ: "ಪ್ರಧಾನಂ, ಪರಮಾತ್ಮ, ಬುದ್ಧಿ, ಮೂಲಪ್ರಕೃತಿ, ಪ್ರಧಾನಿ, ಮುಖ್ಯನಾದವನು, ಸಾಂಖ್ಯ ಜಗತ್ಕಾರಣ" (ಸಿದ್ಧಾಂತ. ೪೦೩). ೮. ರಾಜನಿಗೆ ಮುಖ್ಯಸಹಾಯಕನಾದ ಹಿರಿಯ ಅಧಿಕಾರಿ; ಮಹಾಮಾತ್ರ: "ಮಹಾಮಾತ್ರಃ, ಪ್ರಧಾನಂ–೨ ಅರಸನ ಬಳಿಯಲ್ಲಿ ಅಧಿಕಾರಿಗಳಾದ 'ದೊಡ್ಡಮನುಷ್ಯರಿಗೆ ಹೆಸರುಗಳು. ದಳವಾಯಿ ಮುಂತಾದವರಿಗೂ ಹೆಸರುಗಳು" (ಸಿದ್ಧಾಂತ. ೨೩೬); ಮಂಡಲಿಕಮಹಾಸಾಮಂತ ಮಂತ್ರಿಪ್ರಧಾನಪುರೋಹಿತಾಂತರ್ವಂಶಿಕಾದಿ ಪರಿವಾರಪರಿವೃತಂ (ಆದಿಪು. ೨-೨ ವ); ಪಿರಿಯರಸಿ ಕಂಚಲಮಹಾದೇವಿಯರ ಸಮಾಪದಲ್ . . . ಸಮಸ್ತಪ್ರಧಾನವೆಲ್ಲರುಮಿರೆ (ಸೌಇಇ. XX, ೪೬-೩೦; 1072). 'ಅಷ್ಟಾದಶಪ್ರಧಾನ' ಪರಾ. ೯. ಒಂದು ಬಗೆಯ ಆಭರಣ: ಅಶ್ವರತ್ನದ ಆಭರಣದ ಲೆಖ್ಖಾ . . . ೫ ಹಿಡಕಿ ೪ ಪ್ರಧಾನ ೧ ಭಾಲೆ (ಎಕ. XIV, ನಂಜನ. ೨೯೩, ಪುಟ ೧೪೩; 1847). ೧೦. ಒಳ್ಳೆಯ ಕುಲದಲ್ಲಿ ಹುಟ್ಟಿದವನು; ಸದ್ವಂಶಜ. ೧೧. ಒಳ್ಳೆಯ ನಡತೆ: "ಮಂತ್ರಿ ಸತ್ಕುಲಜಂ ಸಚ್ಚರಿತಂಗಳೆಂಬಿವು ಪ್ರಧಾನಾಖ್ಯಂ" (ನಾನಾರ. ೦೬೦). ೧೨. [ವ್ಯಾಕ] ಸಮಾಸದಲ್ಲಿ ಪ್ರಧಾನವಾದ ಅರ್ಥವನ್ನು ಕೊಡುವ ಪದ. [ಸಂ.]

**ಪ್ರಧಾನಕ್ರಿಯೆ** (ನಾ). [ವ್ಯಾಕ] ವಾಕ್ಯದಲ್ಲಿರುವ ಮುಖ್ಯವಾದ ಕ್ರಿಯಾ ಪದ: ಕಾದುತ್ತುಂ ಬಂದಂ . . . ಕಡೆದೊಡೆ ಪಾಲ್ಗಡಲ್ ವಿವಿಧವಸ್ತು ವನೀಯದೆ . . . ಮೊದಲನೆಯ ವಾಕ್ಯದಲ್ಲಿ 'ಬರುವುದೂ' ಎರಡನೆಯ ವಾಕ್ಯದಲ್ಲಿ 'ಈವುದೂ' ಪ್ರಧಾನಕ್ರಿಯೆಗಳು (ಕೃಶಿಏ. ೪೯). [ಸಂ. ಪ್ರಧಾನಕ್ರಿಯಾ]

**ಪ್ರಧಾನತೆ** (ನಾ). ಪ್ರಾಮುಖ್ಯತೆ: ಹೊನ್ನಿನ ಪ್ರಧಾನತೆಯಿಂದ ಹೆಂಜೇರು ಅಥವಾ ಹೇಮಾವತಿ ಎಂಬ ಹೆಸರು ಈ ಪಟ್ಟಣಕ್ಕೆ ಬಂದಿರಬಹು ದೆಂಬುದು ಊಹೆ (ಕೊಳಂಬ. ೬೬). [ಸಂ. ಪ್ರಧಾನತಾ]

**ಪ್ರಧಾನಮಂತ್ರಿ** (ನಾ). ೧. ಮುಖ್ಯಸಚಿವ; ಮೊದಲ ಸಚಿವ; ಪ್ರಧಾನ ಅಮಾತ್ಯ: ನಿಜಪ್ರಿಯಪ್ರಧಾನಮಂತ್ರಿಮತಿವರನೊಳಂ . . . ಆಲೋಚಿಸಿ (ಆದಿಪು. ೪-೮೯ ವ); ಅರಸು ಪ್ರಧಾನಮಂತ್ರಿ ಆನೆ ಸೇನೆ ಪ್ರಜೆ ಪರಿವಾರವೆಲ್ಲವೂ ಸತ್ತು ಅರಸಿನ ಅರಸುತನ ಕೆಟ್ಟಿತ್ತು ನೋಡು (ಸಿದ್ಧೇವ. ೦೪೯-೬೭೦). ೨. ಸಂಸದೀಯವ್ಯವಸ್ಥೆಯುಳ್ಳ ದೇಶಗಳ ಸರ್ಕಾರದ ಕಾರ್ಯಾಂಗದ ಪ್ರಮುಖವ್ಯಕ್ತಿ; ರಾಷ್ಟ್ರದ ಮುಖ್ಯ ಮಂತ್ರಿ: ಜವಹರಲಾಲರು ಭಾರತದೇಶದ ಪ್ರಧಾನಮಂತ್ರಿಗಳು ಆದರು (ಕಶಕ್ತಿ. ೩-೯೪). [ಸಂ. ಪ್ರಧಾನಮಂತ್ರಿನ್]

**ಪ್ರಧಾನಶ್ರೇಷ್ಠಿ** (ನಾ). ಪ್ರಮುಖನಾದ ವರ್ತಕ; ಮುಖ್ಯ ವ್ಯಾಪಾರಿ: ಪ್ರಧಾನಶ್ರೇಷ್ಠಿ ಧನಮಿತ್ರನೊಳಮಾಲೋಚಿಸಿ (ಆದಿಪು. ೪-೬೯ ವ). [ಸಂ.ಪ್ರಧಾನಶ್ರೇಷ್ಠಿನ್]

**ಪ್ರಧಾನಿ** (ನಾ). ೧.=ಪ್ರಧಾನಮಂತ್ರಿ ೧: ಜೈನಪಂಡಿತನಿಗೆ ಪ್ರಧಾನೀ ಕೆಲಸ ಕೊಟ್ಟು (ಮುಂಬಯಿ. ೪-೬೦). ೨. = ಪ್ರಧಾನಮಂತ್ರಿ ೨: ಆ ಸಮಾರಂಭದ ಉದ್ಘಾಟನೆಯನ್ನು ಪ್ರಧಾನಿಯವರು ನೆರವೇರಿಸಿದವರು (ರೂಢಿ). [ಪ್ರಧಾನ + — ಇ]

**ಪ್ರಧಾನಿಕೆ** (ನಾ). ಪ್ರಧಾನಮಂತ್ರಿಯ ಪದವಿ; ಪ್ರಧಾನಿಯ ಅಧಿಕಾರ: ತಪ್ಪದೊಪ್ಪಿಸಿ ಹೋಗು ಸಾಕಿನ್ನೊಪ್ಪದಿಂ ಭಂಡಾರದೊಡೆ

ತನಮುಂ ಪ್ರಧಾನಿಕೆಯುಂ (ಜಿನಕ್ಷ. ೦೦-೭). [ಪ್ರಧಾನ + — ಇಕೆ]

**ಪ್ರಧಾನಿತಿ** (ನಾ). ಪ್ರಧಾನನಮಂತ್ರಿಯ ಹೆಂಡತಿ : ಅರಸನ ಪೆಂಡತಿ, ಅರಸಿತಿ. ಏವಂ ಪ್ರಧಾನಿತಿ, ತಳವಱಿತಿ (ಕಬ್ಬಾಪು. ೦೯೦. ಶ್ರಯೋ).
[ಪ್ರಧಾನ + — ಇತಿ₁ ( < — ಇತ್ತಿ )]

**ಪ್ರಧಿ** (ನಾ). ೧. ಚಕ್ರದ ಅಂಚು ; ಗಾಲಿಯ ಸುತ್ತು,–ಪರಿಧಿ : "ಚಕ್ರಧಾರಾ, ಪ್ರಧೀಃ, ನೇಮಿಃ — ಈ ೩ ನೆತ್ತಿವಟ್ಟಗೆ" (ಶಬ್ದಾಯು. ೭೩-೨೯೩). ೨. ಬಾವಿಯ ರಾಟೆ : "ಅಂಧುಃ, ಕೂಪಃ — ಈ ೨ ಬಾವಿ, ಪ್ರಸೀಃ, ನೇಮಿಃ (ಅದಱ ಱಾಟ)" (ಶಬ್ದಾಯು. ೦೦೩-೬೨).
[ಸಂ.]

**ಪ್ರಧ್ವಂಸ** (ನಾ). ಸಂಪೂರ್ಣ ನಾಶ : ನೃಸಿಂಹನೆನಿಪ್ಪಾಕೃತಿಯಿಂ ಹಿರಣ್ಯಕಶಿಪು ಪ್ರಧ್ವಂಸವಂ ಮಾಡಿದೈ (ಜಗಪ. ೦-೩೮); ಖಿಳಕರ್ಮಾಷ್ಟವಿಧೋಗ್ರ ಕಂಟಕಕುಳಪ್ರಧ್ವಂಸದಿಂದಂ ನಿರಾಕುಳರುಂ . . . ತಾವಾಗಿ (ಜೀವಸಂ. ೨-೨).
[ಸಂ.]

**ಪ್ರಧ್ವಂಸನ** (ನಾ). ೧. ಸಂಪೂರ್ಣನಾಶ ಮಾಡುವಿಕೆ ; ಪೂರ್ತಿ ಹಾಳುಮಾಡುವಿಕೆ : ಅಘಕುಲಪ್ರಧ್ವಂಸನೋಪಾಯುವುಂ ಬಗೆಯುತ್ತುಂ (ಸುಕುಪೂ. ೦-೩); ಆಚಾರ್ಯರ್ ತಾಮೆಮಗೀವರಕ್ಕೆ ದುರಿತಪ್ರಧ್ವಂಸನೋಪಾಯುವುಂ (ಜೀವಸಂ. ೧-೩). ೨. ಹಾಳು ಮಾಡುವವನು.
[ಸಂ.]

**ಪ್ರಧ್ವಂಸಾಭಾವ** (ನಾ.) [ದ್ವೈತ] ನಾಲ್ಕು ಬಗೆಯ ಅಭಾವಗಳಲ್ಲಿ ಒಂದು; ವಿನಾಶ ಹೊಂದುವ ಅಭಾವ : ಪುಟ್ಟಿದ ಘಟನೊಡದ ಬಳಿಕಿನ್ನಿಲ್ಲವೆಂಬುದೇ ಪ್ರಧ್ವಂಸಾಭಾವವೆನಿಸುವುದು (ವಿವೇಕ. ೨೩); ಈ ಅಭಾವವೆಂಬುದು ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವ, ಅನ್ಯೋನ್ಯಾಭಾವವೆಂದು ನಾಲ್ಕು ಪ್ರಕಾರ (ಹಿಂದಸಾ. ೧೯೯). [ಸಂ.]

**ಪ್ರಧ್ವಾನ** (ನಾ). ದೊಡ್ಡ ಶಬ್ದ,–ಧ್ವನಿ,–ಮೊಳಗು: ವನಧಿಪ್ರಧ್ವಾನದಿಂ ಮಂಗಳಪಟಹರವಂ ಪೆರ್ಚೆ (ಶಂಶಖಾ. ೦೯-೦೮); ನಿನ್ನೊಳ್ಳುಣಂಗಳ ನಾಲೋಳವಾದಾಳಿ ಮಂದ್ರಮಧುರಪ್ರಧ್ವಾನದಿಂ ಪಾಡಿದಳ್ (ಎಕ. VIII. ಸಾಗರ. ೦೧೯-೪೦ : 1042); ಪಟುಪ್ರಧ್ವಾನವುಂ ಬೀಱಿದುವು ಕಹಳೆಗಳ್ (ರಾಜಶೇ. ೬-೦೭). [ಸಂ.]

**ಪ್ರನವ** (ಗು). ತೀರ ಹೊಸ ; ಬಹಳ ನವೀನವಾದ : ಮನಸಿನ ಮಾತಿದು ಮನದಂತಾದರೆ ಪ್ರನವಸುಮಂಗಲೆಯಾಗುವೆನು (ಪವಲ್ಲಿ. ೩೦-೩). [ಸಂ. (ಪ್ರ+ನವ). / P ವ್ಯಾಕರಣದ ನಿಯಮದ ಪ್ರಕಾರ ಇದು ಅಶುದ್ಧ ರೂಪ]

**ಪ್ರನಾಳ** (ನಾ). ರಾಸಾಯನಿಕಪರೀಕ್ಷೆಯ ಪ್ರಯೋಗ ಮುಂತಾದುವುಗಳಲ್ಲಿ ಬಳಸುವ ಗಾಜಿನ ಕೊಳವೆ : ಹೀಲಿಯಂ ತುಂಬಿದ ಪ್ರನಾಳವನ್ನು ಹೀಲಿಯಂ ಪಾತ್ರೆಯ ಮೇಲೆ ಹಿಡಿದಾಗ ಪ್ರನಾಳದ ಹೀಲಿಯಂ ಗೋಡೆಯ ಅಂಚಿನಲ್ಲಿ ಹರಿದು ಪಾತ್ರೆಗೆ ಬೀಳುತ್ತದೆ (ಕವಿಕೋ. I. ೨೫೩).
[ಸಂ. ಪ್ರನಾಲ]

**ಪ್ರನಾಳಶಿಶು** (ನಾ). ಭ್ರೂಣವನ್ನು ವೈಜ್ಞಾನಿಕವಾಗಿ ಗಾಜಿನ ಪಾತ್ರೆಯಲ್ಲಿ ಮೊದಲು ವೃದ್ಧಿ ಪಡಿಸಿ, ನಂತರ ತಾಯಿಯ ಗರ್ಭದ ಮೂಲಕ ಜನಿಸುವಂತೆ ಮಾಡುವ ಶಿಶು. [ಸಂ. ಪ್ರನಾಲಶಿಶು. / P ಇದು ಇಂಗ್ಲಿಷಿನ 'Test-tube baby' ಎನ್ನುವುದರ ಅನುವಾದ]

**ಪ್ರಪಂಚ** (ನಾ). ೧. ಹರವು ; ವಿಸ್ತಾರ : "ವ್ಯಾಸಃ, ಪ್ರಪಂಚಃ, ವಿಸ್ತಾರಃ — ಈ ೩ ಹಿಂದು ಮಾಡುಹ" (ಶಬ್ದಾಯು. ೦೨೬-೯೦); ಪ್ರಪಂಚವೆಂದರೆ ವಿಸ್ತಾರ (ಶಕ್ತ್ರಿ. ೩೩). ೨. ಜಗತ್ತು ; ವಿಶ್ವ; ಲೋಕ : ಪ್ರಪಂಚವು ಮುಳುಗಿಹೋದರೂ ಅದನ್ನು ಮತ್ತೊಬ್ಬರಿಗೆ ಕೊಟ್ಟಾನೇ ? (ಕವಿಕ. ೨೩) ; ಕಲಿಯ ಪ್ರಪಂಚದೊಳಿಂತೆನಗವರಾದಿಗುರುವಾಗಿ ತೆರೆದರು ಹಾದಿ (ಇಂಚಾಕ. ೦೦-೪೦). ೩. ಲೌಕಿಕವಾದ ಬಾಳು; ಸಂಸಾರ: ಬಿಡೆಯಲಾನಿನ್ನ ಪ್ರಪಂಚವ ನಾನು ನನ್ನೊಡಹುಟ್ಟಿದವರೆಂದ ಮೇಲೆ ಕಡುಬೇಗ ಕರೆಸುವೆನೆನ್ನದೆ ನೀನಿದ ನುಡಿವರೆ (ಭರತ. ೩೯-೦೨೯); ತಿಂಗಳಿಗೆ ಒಟ್ಟು ನೂರಾ ಐವತ್ತು ಸಂಬಳ, ಪ್ರಪಂಚ ಸಾಗುವುದು ಬಿಗಿ (ಕುಂಹಿಂ. ೨೭) ; ಪ್ರಪಂಚ ಬಿಡುತ್ತೇನೆಂದು ಪಂಚಮಹಾಪಾಪ ಹೊಂದಿಕೊಂಡ (ಗಾದೆ). ೪. ಮೋಸ ; ವಂಚನೆ. ೫. ಸಮೂಹ ; ಮೊತ್ತ ; ಗುಂಪು : ಅದೇ ವಾನರಪ್ರಪಂಚ. ಆ ಪ್ರಪಂಚದಿಂದ ಪ್ರಾರಂಭವಾಗುವ ದೃಶ್ಯಗಳು ವೀರರಸಕ್ಕೆ ಎಡೆಗೊಡುತ್ತವೆ (ಭಾರತ. ೯೯). ೬. ವರ್ತಮಾನ ; ಸಂಗತಿ : ಅಬ್ಜದಳಾಕ್ಷಿ ಪೇಟಿ ಸಾಮಾನ್ಯಮೆ ಬಗೆಯ ಭವತ್ಕೇಶಪಾಶಪ್ರಪಂಚಂ (ಶಂಶಖಾ. ೦೨-೦೩೬); ನಾಗಶರ್ಮನಾ ಪ್ರಪಂಚಮೆಲ್ಲಮಂ ತಳಾಱನಂ ಬೆಸಗೊಂಡು (ಸುಕುಪೂ. ೭-೩೩೪) ; ಕಂಸಕೃತಾಪಚಾರವುಂ ತತ್ಪ್ರಪಂಚಮನಱಿಪೆ (ಜಗಪ. ೩-೩ ವ) . ೭. ವಿವಿಧತೆ; ವೈವಿಧ್ಯ; ಭಿನ್ನತೆ; ವೈಚಿತ್ರ್ಯ. ೮. ವಿಭಜನೆ ; ವಿಶ್ಲೇಷಣೆ. ೯. ಆವಿರ್ಭಾವ; ತೋರಿಕೆ. [ಸಂ.]

**ಪ್ರಪಂಚಜ್ಞಾನ** (ನಾ) . ಲೌಕಿಕಜ್ಞಾನ ; ವ್ಯವಹಾರಜ್ಞಾನ : ದೇವರು ನಿಮಗೆ ವಿವೇಕ ಕೊಟ್ಟಿದ್ದಾನೆ. ಪ್ರಪಂಚಜ್ಞಾನವಿದೆ (ದೇವಹಂ. ೬೨).
[ಸಂ.]

**ಪ್ರಪಂಚತೆ** (ನಾ). ಮೋಸ ; ವಂಚನೆ : ಸತಿಯರಲ್ಲಿಯ ಪ್ರಪಂಚತೆಯ ನೆಲ್ಲವನು ಕಾಣುತ . . . ಕ್ಷಿತಿಯೊಡೆತನವ ಬಿಟ್ಟತಿವೇಗದಿಂದ ವಿರತಿದಾಳಿ ಪೋದೊಲಿದಲ್ಲ (ಮೋಹವಾ. ೩-೦೯). [ಸಂ. ಪ್ರಪಂಚತಾ]

**ಪ್ರಪಂಚನ** (ನಾ). ಹರಡುವುದು ; ವಿಸ್ತರಿಸುವುದು ; ಅರಳುವುದು : ಅಮಿತಪ್ರಪಂಚನಾಕುಂಚನಾವರ್ತನಕ್ರಮವೆ ವಿಶ್ವಚರಿತ್ರ (ಮಂಕುತ. ೯೦).
[ಸಂ.]

**ಪ್ರಪಂಚಿ** (ನಾ). ೧. ಸಂಸಾರದಲ್ಲಿ ಆಸಕ್ತನಾದವನು ; ಲೌಕಿಕವ್ಯಕ್ತಿ. ೨. ಮೋಸಗಾರ ; ವಂಚಕ : ತನು ಮನ ಧನದಲ್ಲಿ ವಂಚನೆಯುಳ್ಳ ಪ್ರಪಂಚಿಯ ಮನೆಯ ಕೂಳು ಶುನಕನ ಬಾಯ ಎಲುವ ಪ್ರತಿಶುನಕ ತಿಂದಂತೆ (ದೇವಾವ. ೩೦-೩೩); ನುಡಿದು ಹುಸಿವ ನಡೆದು ತಪ್ಪುವ ಪ್ರಪಂಚಿಯ ನೊಲ್ಲ ಕೂಡಲಸಂಗಮದೇವ (ಬಸವ. ೨೩೭). ೩. ವ್ಯವಹಾರಕುಶಲನಾದವನು. [ಸಂ. ಪ್ರಪಂಚಿನ್]

**ಪ್ರಪಂಚಿಸು** (ಕ್ರಿ). ವಿವರಿಸು ; ವಿಸ್ತಾರವಾಗಿ ತಿಳಿಸು : ಕ್ರಿಯಾಕರ್ಮವೆಂಬುದು ಅರ್ಹತ್ಸಿದ್ಧಾಚಾರ್ಯಬಹುಶ್ರುತಸಾಧುಪೂಜಾಕ್ರಿಯೆಯುಂ ಪ್ರಪಂಚಿಸುಗುಂ (ತತ್ತ್ವ. ಶ್ರ. ೬೩); ಇಂತು ಪಂಚಾಶ್ಚರ್ಯಮಂ ಪ್ರಪಂಚಿಸುತ್ತುಮಿರೆ (ಬಾಧಶ. ೭-೨೦೪) ; ಸಂಧಿ . . . ಅವ್ಯಯವೆಂಬಷ್ಟು ಪ್ರಕಾರವುಂ ಪ್ರಪಂಚಿಸುವ ವ್ಯಾಕರಣದೋಷಮಿಲ್ಲದೆ (ವಿವೇಕ. ೨೨೬).
[ಪ್ರಪಂಚ + — ಇಸು₁]

**ಪ್ರಪಂಚು** (ನಾ). ೧. ವ್ಯಾಪ್ತಿ; ವಿಸ್ತಾರ: ಸಂಚುವ ಸತೀಜನದೊಳಂಗಭವ ಕೇಳೀಪ್ರಪಂಚುವರನೊಳ್ಸಮನಿಸಿ (ಕೃಪಿಚಾ. ೨೬-೦೦). ೨. ಲೌಕಿಕವಾದ ಬದುಕು ; ಸಂಸಾರ : ಪ್ರಪಂಚಿನ ಡಂಬಿನಲಿ ಎನ್ನನೊಂದು ರೂಹು ಮಾಡಿ ನೀವಿರಿಸಿದಿರಿ (ಬಸವ. ೨೯), 'ಪ್ರಪಂಚುಜೀವಿ' ಪರಾ. ೩. **ಮೋಸ**; ವಂಚನೆ : ಸಟೆಯಿಲ್ಲದಂತೆ ಪ್ರಪಂಚುವಿಲ್ಲದಂತೆ ವೈಶಿಕವಿಲ್ಲದಂತೆ ನಡೆಸಯ್ಯಾ ಲಿಂಗತಂದೆ (ಬಸವ. ೧^) ; ಪ್ರಪಂಚಿಲ್ಲದುದಱಿ ತೂಗಿದಾ ಬಯಲ ಲಿಂಗನ ಚರಣಾಂಬುಜಕ್ಕೆ ಶರಣು (ಅಕಸಂ. ೩೮-೬೬) ; ಸವಿನೋಟ ದೊಳ್ಸಂಚು ನಗೆಯೊಳ್ ಪ್ರಪಂಚು . . . ಗಣಿಕೆಯರ ತಂಡಮಾ ತೆಱದ ಚೆಲ್ವಾ ಪಡೆದುದು (ಕೃಪಿಚಾ. ೬-೬೪). ೪. **ಮಾಯೆ ; ಮೋಹ** : ಮಣ್ಣು ದೇಹ ಹೊನ್ನು ಪ್ರಾಣ ಹೆಣ್ಣು ಸರ್ವಪ್ರಪಂಚು (ನೋಳಿಮಾ. ೪೩-೦೮೪) ; ಪ್ರಾಣಲಿಂಗವಾದ ಶರಣಂಗೆ ಪ್ರಪಂಚಿನ ಕುಱುಹಿಲ್ಲ (ಅಖಂಡೇ.

೦೦೬-೪೪). ೫. ಜೀವಿ ; ಬದುಕುವ ವ್ಯಕ್ತಿ (?) : ಕುಸುಮಬಾಣ ಪ್ರಪಂಚುಗಳ್ಶಿರಹಸ್ಯದಿಂದೊಸೆದು ತಮ್ಮ ಪವಲ್ಲಭರನಗಲ್ದು ಮನೆಗಿಯ್ದು ಪೋಪ ಜಾರೆಯರೆಸೆದರು (ಬಕೋಕ್ಷ. ೪-೬೭). 'ಪರಪಂಚ' ಪರಾ. [<ಸಂ. ಪ್ರಪಂಚ]

**ಪ್ರಪಂಚುಜೀವಿ** (ನಾ). ಲೌಕಿಕಜಗತ್ತಿನಲ್ಲಿ ಆಸಕ್ತಿ ಇರುವವನು ; ಲೌಕಿಕವ್ಯಕ್ತಿ : ಜೀವನೋಪಾಯಕ್ಕೆ ಪರಮಾರ್ಥವನು ಅಲ್ಲ ಎಂಬ ಪ್ರಪಂಚುಜೀವಿಗಳ ಮೆಚ್ಚನು ಕಾಣಾ (ಸಿದ್ಧೇವ. ೫೬-೧೬೫). [ಪ್ರಪಂಚು + ಜೀವಿ₁]

**ಪ್ರಪಂಚುಭಾವ** (ನಾ). ಇಹಲೋಕದ ಆಸಕ್ತಿ ; ಲೌಕಿಕಭಾವ : ಈ ಹೊನ್ನು ಹೆಣ್ಣು ಮಣ್ಣು ಎಂಬಿವು ಪ್ರಾಣಂಗೆ ಪ್ರಪಂಚುಭಾವವೆಂದಱಿದು (ಸಿದ್ಧೇವ. ೯೪-೨೮೫). [ಪ್ರಪಂಚು + ಭಾವ₁]

**ಪ್ರಪತ್ತಿ** (ನಾ). ೧. ಮರೆಹೊಗುವಿಕೆ ; ಆಶ್ರಯಿಸುವುದು : ರಿಪುಜಯಕಾರಣಶರಮಂ ಪ್ರಪತ್ತಿಯಿಂ ಪಡೆವೆಂ (ಕಬಕಂ. ೨-೦೦೬). ೨. [ವಿಶಿಷ್ಟಾ] ಮೋಕ್ಷಸಾಧನೆಯ ಮಾರ್ಗಗಳಲ್ಲಿ ಒಂದು ಬಗೆ ; ಶರಣಾಗತಿ ; ಆಳ್ವಾರರ ಕಾಲದಲ್ಲಿ ಆರಂಭವಾದ ಈ ಸಂಪ್ರದಾಯಕ್ಕೆ ಶ್ರೀವೈಷ್ಣವರಲ್ಲಿ ಒಂದು ವಿಶಿಷ್ಟಸ್ಥಾನವಿದೆ : ಜೀವಸಾಮಾನ್ಯವೂ ಪ್ರಪತ್ತಿ ಎಂಬ ಮಾರ್ಗದಿಂದ ಆಯಾ ಜನ್ಮದಲ್ಲೇ ಮೋಕ್ಷವನ್ನು ಹೊಂದಬಹುದು (ಹಿಂದಸಾ. ೨೬೦) ; ಈ ಪ್ರಪತ್ತಿಯು ಆರ್ತಪ್ರಪತ್ತಿ, ದೃಪ್ತಪ್ರಪತ್ತಿ ಎಂದು ಎರಡು ಬಗೆಯಾಗಿರುತ್ತದೆ (ಭಾರದ. ೨೬೪). [ಸಂ.]

**ಪ್ರಪತ್ತಿಮಾರ್ಗ** (ನಾ). ಶರಣಾಗತಿಯ ಮಾರ್ಗ : ರಾಮಾನುಜರಿಂದ ಪ್ರಪತ್ತಿಮಾರ್ಗಕ್ಕೆ (ಭಕ್ತಿಪಂಥಕ್ಕೆ) ದೊರೆತ ಪುರಸ್ಕಾರದಿಂದಾಗಿ ಹಾಗೂ . . . ರಾಜಾಶ್ರಯದಿಂದಾಗಿ, ಅನೇಕರು ಈ ಭಕ್ತಿಪಥವನ್ನು ಹಿಡಿದರು (ಕರ್ನಾಕ. ೬೫) ; ಇವೆಲ್ಲಕ್ಕಿಂತಲೂ ಪ್ರಪತ್ತಿಮಾರ್ಗವು ಶ್ರೇಷ್ಠತಮವಾದ ಮಾರ್ಗವೆಂಬುದನ್ನೂ ಶ್ರೀಚಿಕ್ಕದೇವರಾಜರ ಬಿನ್ನಪದಲ್ಲಿ ಹೀಗೆ ವರ್ಣಿಸಿದ್ದಾರೆ (ಕಾಂಕಜೀ. ೫೮). [ಸಂ.]

**ಪ್ರಪತ್ರ** (ನಾ). ಅರ್ಜಿಯ ನಮೂನೆ ; ಅಭ್ಯರ್ಥಿಪತ್ರದ ನಮೂನೆ : ಭಾರತಸರ್ಕಾರದಿಂದ ವಿಧಾಯಕವಾದ ಪ್ರಪತ್ರದಲ್ಲಿ ಅಥವಾ ರೀತಿಯಲ್ಲಿ ಆವೇದನಪತ್ರವನ್ನು. . .ರಿಜಿಸ್ಟರು ಮಾಡಿಸಿಕೊಂಡಿದ್ದ ಪಕ್ಷದಲ್ಲಿ ಆತನು ಭಾರತದ ನಾಗರಿಕನೆಂಬುದಾಗಿ ಭಾವಿಸತಕ್ಕದು (ಭಾಧಾನ. ೬). [ಸಂ.]

**ಪ್ರಪದ** (ನಾ). ೧. ಪಾದದ ಅಗ್ರಭಾಗ,—ಮುಂಭಾಗ ; ಕಾಲಿನ ತುದಿ : "ಪಾದಾಗ್ರಮಂತದಕ್ಕು ಪ್ರಪದಂ" (ವಸ್ತುಕೋ. ೬೭-೩) ; ವಸುಧೆ ಪದತಳದಲ್ಲಿ ಪ್ರಪದದಲಿ ಶಕ್ರನಜನೆಸೆವ ಜಂಘೆಯಲಿ (ಹೀಕ್ಕಕೃ. ೧-೬-೮೨) ; ಪೋಗಿ ಚರಣಂಗಳಿಗೆ ನಮಿಸಿ ಬರುವೆನಗ್ರಜವೆರಸಿ ಪ್ರಪದಾಕಲಂಕನೆನಿಸಿ ಪರಿಪೂರ್ಣದಯೆಯಿಂದ ಪಾಲಿಸುವುದು (ವೆಂಕಾರಾ. ೨-೨೬-೨೭). ೨. ಹೆಬ್ಬೆರಳಿನ ತುದಿ. [ಸಂ.]

**ಪ್ರಪದ್ಯ** (ನಾ). ಉತ್ಕೃಷ್ಟವಾದ ಕಾವ್ಯ : ಸಕಲವಿಬುಧಹೃದ್ಯಂ ಸಮಂತ್ರೀಪ್ರಪದ್ಯಂ (ಜಗಂ. ೦-೨೨). [ಸಂ.]

**ಪ್ರಪನ್ನ** (ನಾ). ಮರೆಹೊಕ್ಕವನು ; ಶರಣಾಗತನಾದವನಂ : ಪ್ರಪನ್ನರಪ್ಪವರ್ಗೆ ಸಕಲಸಾಂಸಾರಿಕದುಃಖನಿವೃತ್ತಿ (ಗೀಕಗೋ. ೫೪-೩ ವ) ; ಪ್ರಪನ್ನನು ಸರ್ವಸಂಗಪರಿತ್ಯಾಗ ಮಾಡಿ ಅನನ್ಯಗತಿಕನಾಗಿ, ಭಗವಂತನನ್ನು ಆಶ್ರಯಿಸಿದವನು (ಭಾಕಕ್ಕ. ೬೬೦). [ಸಂ.]

**ಪ್ರಪನ್ನತ್ವ** (ನಾ). ಶರಣಾಗತಿ. [ಸಂ.]

**ಪ್ರಪನ್ನೆ** (ನಾ). ಹೊಂದಿದವಳು ; ಪಡೆದವಳು : ಅಪರಾಜಿತಪ್ರಸಾದಪ್ರಪನ್ನೆಯಾ ಕನ್ನೆ (ಶಾಂತಿಪು. ೪-೬೫) ; ಬಾಯುಱಿದು ಪಳವಿಸುತ್ತಂ ಮೂರ್ಛಾಪ್ರಪನ್ನೆಯಾಗಿ (ಕಾದಂಬ. ೬೪೦). [ಸಂ. ಪ್ರಪನ್ನಾ]

**ಪ್ರಪಾಂಗನೆ** (ನಾ). ಪಥಿಕರಿಗೆ ನೀರು ಕೊಡುವ ಅರವಟ್ಟಿಗೆಯಲ್ಲಿರುವ ಹೆಂಗಸು : ಲಾವಣ್ಯತೋಯಮನಾಲೋಕನಮಾತ್ರದಿಂ ಪಱಿದು ಪಾಂಥಶ್ರೇಣಿ ನೀರಟ್ಟಿಯುಂ ಶ್ರಮಮಂ ತೀರಮೆಯುಂ ಪ್ರಪಾಂಗನೆಯರಂ ಕಣ್ಗಾವುವಾ ದೇಶದೊಳ್ (ಶಂಗಾಪು. ೧-೦೦೩). [ಸಂ. ಪ್ರಪಾಂಗನಾ]

**ಪ್ರಪಾಂಥ** (ನಾ). ಪ್ರಯಾಣಿಕ ; ದಾರಿಹೋಕ : ಪುಷ್ಪಚಾಪಾಸ್ತ್ರಟಂಕಾರರವೋದ್ಭಿನ್ನಪ್ರಪಾಂಥಪ್ರಕರಹೃದಯರಕ್ತಾಂಬುಗಳ್ ಕೂಡ ಮಾರ್ಗಾಂತರದೊಳ್ ಸೂಸುತ್ತಿರಲ್ ಬಂದುದು ಶಿಶಿರನೃಪೋದ್ಯತ್ಕೃತಾಂತಂ ವಸಂತಂ (ಕಾದಂಪೂ. ೬೨೦). [ಸಂ.]

**ಪ್ರಪಾಕಳಾಪ** (ನಾ). ಅರವಟ್ಟಿಗೆಯ ಕೆಲಸ : ನಿರುಪಮ ಪ್ರಪಾಕಳಾಪಪ್ರಕಾಂಡಮಂಡಪಂಗಳಲ್ಲಿ (ಬಾಧಕ್ಷ. ೧-೮೯ ವ). [ಸಂ. ಪ್ರಪಾಕಲಾಪ]

**ಪ್ರಪಾಠಕ** (ನಾ). ಗ್ರಂಥದ ಒಂದು ಭಾಗ ; ಅಧ್ಯಾಯ, ಪ್ರಕರಣ, ಸಂಧಿ ಇತ್ಯಾದಿ : ಛಾಂದೋಗ್ಯದ ಕಡೆಯ ಪ್ರಪಾಠಕದಲ್ಲಿ ಇಂದ್ರ ವಿರೋಚನನ ಉಪಾಖ್ಯಾನವು ಬಂದಿದೆ (ಭಾರದ. ೪೦). [ಸಂ.]

**ಪ್ರಪಾಣ** (ನಾ). ಕುದುರೆಯ ಮೇಲ್ದುಟಿಯ ಒಳಭಾಗ : ಮೋಗಣ ತುಟಿಯ ಮುಂದುಗಡೆ ಪ್ರಪಾಣ (ಅಶ್ವಟೀ. ೫೮-೧೨). [<ಸಂ. ಪ್ರಪಾಣ]

**ಪ್ರಪಾತ** (ನಾ). ೧. ಕಡಿದಾದ ಕೊರಕಲು ; ಕಣಿವೆ : ವಿಜಯಾರ್ಧಪರ್ವತದ ಕಾಂಡಕಪ್ರಪಾತಗುಹೆಗಭಿಮುಖನಾಗಿ (ಶಾಂತಿಪು. ೦೧-೬೬ ವ). ೨. ತಡಸಲು ; ಜಲಪಾತ. ೩. ಆಕ್ರಮಣ ; ಮುತ್ತಿಗೆ ; ದಾಳಿ : "ಅವಸ್ಕಂದಃ, ಪ್ರಪಾತಃ—ಈ ಎರಡು ದಾಱಿ" (ಹಲಾಯು. ೬೪-೨೪೮) ; ಪವನಪ್ರಪಾತಚಲಿತಕಲ್ಲೋಲಮಾಲೆಯಿಂ (ರಾಜಶೇ. ೨-೮ ವ). ೪. ದಂಡೆ : ತೀರ ; ದಡ : "ತೀರಂ, ಕೂಲಂ, ತಟಂ, ಕಚ್ಛಃ, ಪ್ರಪಾತಃ, ರೋಧಃ—ಈ ಆಱು ತೊಱೆಯ ತಡಿ" (ಹಲಾಯು. ೧೦೦-೪೫) ; ಹಿಮವತ್ಪರ್ವತದ ಸಿಂಧುಪ್ರಪಾತಮನೆಯ್ದಿ (ಆದಿಪು. ೦೩-೬೬ ವ). [ಸಂ.]

**ಪ್ರಪಾನ** (ನಾ). ೧. ಕುಡಿಯುವುದಂ. ೨. = ಪ್ರಪಾಣ : ಉತ್ತರದೋಷ್ಠದ ನಡುವದು ಬಿತ್ತರಿಪ ಪ್ರಪಾನವೆಂಬ ಪೆಸರಾ ಪ್ರಪಾನದುತ್ತರಪ್ರೋಥಮದಕ್ಕುಂ (ಅಶ್ವಶಾ. ೯-೧೨). [ಸಂ.]

**ಪ್ರಪಾಪಾಲಿಕೆ** (ನಾ). ನೀರನ್ನು ಒದಗಿಸುವವಳು ; ಅರವಟ್ಟಿಗೆಯನ್ನು ನಡೆಸುವವಳಂ : ಕೆಯ್ವೊಲಗಾವ ಪಾಮರಿಯರುಂ ಮಾರ್ಗಪ್ರಪಾಪಾಲಿಕಾಜನಮುಂ . . . ಪುರವರವ್ಯಾವರ್ಣನಕ್ಕಾಸ್ಪದು (ಸೂಕ್ತಿಸು. ೪-೦) ; ಅಷ್ಟರಲ್ಲಿ ಸಮೀಪದ ಅರವಂಟಿಗೆಯ ಪ್ರಪಾಪಾಲಿಕೆ ಅಲ್ಲಿಗೆ ಬಂದು . . . ಹರಿವಾಣವನ್ನು ಎದುರಿಗಿಟ್ಟಳು (ರೂಲೇಖಾ. ೦೨೯). [ಸಂ. ಪ್ರಪಾಪಾಲಿಕಾ]

**ಪ್ರಪಾಪ್ರಣಯಿನಿ** (ನಾ). = ಪ್ರಪಾಂಗನೆ : ಪಾಂಥರ್ . . . ದಿಟ್ಟಿಗಳಿಂದೀಂಟುವರಾ ಪ್ರಪಾಪ್ರಣಯಿನೀಲಾವಣ್ಯನೀರಂಗಳಂ (ಮಲ್ಲಿಕಾ. ೨-೨೯) ; ಜಳಪಾನಚ್ಛಳದಿಂ ಪ್ರಪಾಪ್ರಣಯಿನೀಶೃಂಗಾರಲೀಲಾಸುಧಾಜಳಮಂ ಕಣ್ಗಳಿನೀಂಟಿ (ಚಂದ್ರಪ್ರ. ೦-೯೯). [ಸಂ. ಪ್ರಪಾಪ್ರಣಯಿನೀ]

**ಪ್ರಪಾಪ್ರಮದೆ** (ನಾ). = ಪ್ರಪಾಂಗನೆ : ಕುಡಿನೀರೆತ್ತುವವೊಲ್ ಪ್ರಪಾಪ್ರಮದೆಯರ್ ಸತ್ರಂಗಳೊಳ್ (ಅನಂತ. ೦-೮೪). [ಸಂ. ಪ್ರಪಾಪ್ರಮದಾ]

**ಪ್ರಪಾಮಂಟಪ** (ನಾ). ಪಥಿಕರಿಗೆ ನೀರನ್ನು ಒದಗಿಸುವ ಸ್ಥಳ ; ಅರವಟ್ಟಿಗೆ : ಕಣ್ಗೊಳಿಕುಂ ನಾನಾಲತಾಂತಪ್ರಸರಸರಯುತಂಗಳ್ ಪ್ರಪಾಮಂಟಪಂಗಳ್ (ರಾಜಶೇ. ೨-೨೦). [<ಸಂ. ಪ್ರಪಾಮಂಡಪ]

**ಪ್ರಪಾವಧು** (ನಾ). = ಪ್ರಪಾಂಗನೆ : ಏಂ ವ್ಯಾಧವಧುಗಳೋ ಮೇಣ್ ಪ್ರಪಾವಧುಗಳೋ (ಶಬ್ದರಾ. ೮-೯). [ಸಂ.]

**ಪ್ರಪಾಶಾಲೆ** (ನಾ). = ಪ್ರಪಾಮಂಟಪ : ಜಳಧಾರೆ ಕಂಗೊಳಿಸು ತಿರ್ಪುದಧ್ವಶ್ರಮಗಳನಾಂತು ಬಂದ ಪಥಿಕರ್ಕಳೀಂಟುವ ಸಮಯದೊಳ್ಪ್ರಪಾಶಾಲೆಗಳೊಳು (ಕೃಪಾಭಾ. ೩-೦೧). [ಸಂ. ಪ್ರಪಾಶಾಲಾ]

**ಪ್ರಪಾಸದನ** (ನಾ). = ಪ್ರಪಾಮಂಟಪ : ಇದು ಕಾಮೋನ್ಮಾದ ಪಾನ ಪ್ರಪಾಸದನಂ . . . ಎನೆ ಚೆಲ್ವಾದತ್ತು ಚಂದ್ರಾತಪಂ (ಮಲ್ಲಿಪು. ೬-೯೩). [ಸಂ.]

**ಪ್ರಪಿತಾಮಹ** (ನಾ). ತಂದೆಯ ತಂದೆಯ ತಂದೆ ; ತಾತನ ತಂದೆ ; ಮುತ್ತಜ್ಜ : ಭಕ್ತಾಂಗನೆಯ ಸುತನಹ ಸದ್ಭೃತ್ಯಂಗೆ ಪಿತನು ಗುರು ಪಿತಾಮಹನ ಜಂಗಮ ಪ್ರಪಿತಾಮಹನು ಮಹಾಲಿಂಗ ಉಂಟು ಕೇಳಿರಣ್ಣಾ (ಉಂಶಿ.ಕ. ೩೨-೩೮) ; ಪಿತೃ, ಪಿತಾಮಹ, ಪ್ರಪಿತಾಮಹ ರೆಂಬ ಮೂರು ವಿಧ ಪಿತೃಗಳಿಗೆ ಅಧಿಪತಿಗಳು ವಸುಗುಣ, ರುದ್ರಗಣ, ಆದಿತ್ಯಗಣ ಎಂಬ ಮೂರು ಗಣಗಳು (ಹಸಾರ. ೧೯-೦ ತಾತ್ಪರ್ಯ). [ಸಂ.]

**ಪ್ರಪಿತಾಮಹಿ** (ನಾ). ತಂದೆಯ ತಂದೆಯ ತಾಯಿ ; ತಾತನ ತಾಯಿ ; ಮುತ್ತಜ್ಜಿ. [ಸಂ. ಪ್ರಪಿತಾಮಹೀ]

**ಪ್ರಪುನಾಟ** (ನಾ). ಒಂದು ಬಗೆಯ ಸಸ್ಯ ; ಚಗಚೆ : "ಏಡಗಜಃ, ಪ್ರಪುನಾಟಃ, ದದ್ರುಘ್ನಃ, ಚಕ್ರಮರ್ದನಃ - ಈ ೪ ತಗ(ಚೆ)ಟೆ" (ಹಲಾಯು. ೦೦೦-೯೬೩). [ಸಂ.]

**ಪ್ರಪುನ್ನಾಟ** (ನಾ). = ಪ್ರಪುನಾಟ : "ಪ್ರಪುನ್ನಾಟಮದೇಡಗಜಂ" (ವಸ್ತುಕೋ. ೩೬-೨೦). [ಸಂ.]

**ಪ್ರಪುನ್ನಾಡ** (ನಾ). = ಪ್ರಪುನ್ನಾಟ.

**ಪ್ರಪೂರ** (ನಾ). ಅತಿಶಯವಾದ ಪ್ರವಾಹ ; ದೊಡ್ಡ ಪ್ರವಾಹ : ಚಕೋರವ್ರಜಕೆ ಶಾಂತಿರಸದ ಪ್ರವಾಹಪ್ರಪೂರವೆನೆ ನವರಸೋದಯಮಯು ವೆನಿಸಿದ ಹಿಮಕರನೆಸೆದಿರುತ್ತಿರ್ದನು (ಹರಿಕಾ. ೩-೮೩). [ಸಂ.]

**ಪ್ರಪೂರಿತ** (ಗು). ತುಂಬಿದ ; ಭರ್ತಿಯಾದ : ಅಖಿಳಕಳಾಪ್ರಪೂರಿತ ಹೃದಯ ಭೀಮಕವಿ ಪ್ರಣೀತಾಭ್ಯುದಯ ಬಸವಪುರಾಣಕಥೆಯೊಳು ನಾಲ್ಕನೆಯ ಕಾಂಡ (ಬಸವು. ೨೭-೬೦). [ಸಂ.]

**ಪ್ರಪೂರ್ಣ** (ಗು). ೧. ತುಂಬಿದ ; ಭರ್ತಿಯಾದ ; ಇಡಿಕಿರಿದ : ಪ್ರಪೂರ್ಣಸಪ್ತಸುರೋಚಿಕನದಂಕುಶಕೃತದೀರ್ಘ ಪ್ರ ಣೂ ತ ಕೋ ಪ ನ ಂ (ಶಾಂತಿಪು. ೦೦-೦೯೩); ಪರಿಗ್ರಹಸಂಗತಿಯಾ ಸುಧಾಮಯವ್ಯಾಪ್ತಿಯಾ ಪ್ರಪೂರ್ಣವಲಯಾಕೃತಿಯಾಗಳದೆತ್ತವೋದುದು (ಚಂದ್ರಪು. ೯-೬). ೨. ಪೂರ್ತಿಯಾದ ; ಪೂರ್ಣಗೊಂಡ. (ನಾ). ೩. ಪೂರ್ತಿಯಾದುದು ; ತುಂಬಿದುದಂ : "ಭರಿತಂ ಪ್ರಪೂರ್ಣಮಾಚಿತನಿಚಿತಮಾಕುಳಂ ಪರಿಕೀರ್ಣ ಮಾಪ್ಯದನಮೆನಲು ಸಂದಣಿಯಕ್ಕು" (ಮಂಗರಾ. ೦೨೮-೯). [ಸಂ.]

**ಪ್ರಪೂರ್ತಿ** (ನಾ). ತುಂಬಿರುವಿಕೆ ; ಭರ್ತಿಯಾಗಿರುವಿಕೆ : ಅವಿರಳಿತ ತೇಜಃಪ್ರಪೂರ್ತಿ ಸಮಸ್ತ ವಿಸ್ಫೂರ್ತಿ (ಬಸವು. ೯೬-೦೦). [ಸಂ.]

**ಪ್ರಪೆ** (ನಾ). ಪಥಿಕರಿಗೆ ನೀರು, ಪಾನಕ ಮೊದಲಾದುವನ್ನು ಕೊಡುವ ಗೃಹ ; ಅರವಟ್ಟಿಗೆ : "ಪ್ರಪೆಯೆಂಬುದರವಟ್ಟಿಗೆ ಪಾನೀಯ ಶಾಲೆ" (ವಸ್ತುಕೋ. ೯೮-೨೦); ಉಪವನತಟಾಕಪ್ರತಿಷ್ಠೆ ದೇವಾಲಯ ಪ್ರಪೆಗಳ . . . ಸುಕೃತಂಗಳಾದವುವು ಜೈಮಿನಿಭಾರತದೊಳೊಂದು ವರ್ಣಮಂ ಪ್ರೀತಿಯಿಂ ಕೇಳ್ದವರ್ಗೆ (ಜೈಮಿಭಾ. ೩೪-೯೩). [ಸಂ. ಪ್ರಪಾ]

**ಪ್ರಪೌಂಡರೀಕ** (ನಾ). ಒಂದು ಬಗೆಯ ಔಷಧೀಸಸ್ಯ ; ಬಿಳಿನೈದಿಲೆಗೆಡ್ಡೆ : ಪ್ರಪೌಂಡರೀಕ . . . ಚೆಂಗಲನೀರಕೋಷ್ಠ, ಇವಿಷ್ಟನು ಸಮಾಂಶವಾಗಿ ನೀರಲ್ಲಿ ಅರೆದು ಲೇಪನಂಗೈಯಲು ವಾತದಿಂದ ಉಂಟಾದ ಉಪದಂಶ ಶಮನವಹುದು (ವೈದ್ಯಸಾ. II. ೦೩೬). [ಸಂ.]

**ಪ್ರಪೌತ್ರ** (ನಾ). ಮಗನ ಮಗನ ಮಗ; ಮೊಮ್ಮಗನ ಮಗ ; ಮರಿಮಗ. [ಸಂ.],

**ಪ್ರಪ್ರಥಮ** (ಗು). ಮೊತ್ತ ಮೊದಲ ; ಅತ್ಯಂತ ಆದಿಯ : ಕೇವಲ ಮಾರ್ಗದರ್ಶಕವಾಗಿ ತೋರಿದರೂ, ಅದಕ್ಕೆ ಪ್ರಪ್ರಥಮ ಪ್ರಾಮುಖ್ಯತೆ ಯನ್ನು ನೀಡಬೇಕೆಂಬುದಾಗಿ ... ಪ್ರತಿಪಾದಿಸಿದೆ (ಪುನರು. ೨೦೩). [ಸಂ.]

**ಪ್ರಫುಲ್ಲ** (ಗು). ೧. ಅರಳಿದ ; ವಿಕಸಿತವಾದ. ೨. ಪ್ರಸನ್ನವಾದ : ಎಲ್ಲರೂ ಪ್ರಫುಲ್ಲ ಮಾನಸರಾಗಿದ್ದರು (ಸಮಹೀ. ೦೩೩) ; ಗಂಗರಾಜರು ಪ್ರಫುಲ್ಲವದನರಾಗಿ . . . ವೀರಪ್ರತಿಜ್ಞೆ ಮಾಡಿದರು (ಶಾಂತಲಾ. ೦೧೬). (ನಾ). ೩. ಅರಳಿದುದು : "ಪ್ರಫುಲ್ಲಂ ಫುಲ್ಲ" (ವಸ್ತುಕೋ. ೦೦೩-೧೦). ೪. ಪ್ರಸನ್ನವಾದುದು : ಜವಾನನೊಬ್ಬ ಮೂರು ರೂಬಲ್ ಹಣ ತಂದಾಗ ಅವಳ ಮುಖ ಪ್ರಫುಲ್ಲವಾಯಿತು (ಪುನರು. ೦೩೬). [ಸಂ.]

**ಪ್ರಫುಲ್ಲಿಸು** (ಕ್ರಿ). ಅರಳಿಸು ; ವಿಕಾಸವಾಗುವಂತೆ ಮಾಡು : ನಡೆ, ವಿನಾಯಕ, ಪ್ರಫುಲ್ಲಿಸು ರಘೂತ್ತಮಮನೋಂಬುಜದಿ ಅಭವಸಂಜ್ಞಾನ ಮಹದಿಚ್ಛೆಯಂ (ಸಮೂರೋ. ೨೦೪). [ಪ್ರಫುಲ್ಲ + — ಇಸು]

**ಪ್ರಬಂಧ** (ನಾ). ೧. ಬಾಂಧವ್ಯ ; ಕಟ್ಟು. ೨. ವ್ಯವಸ್ಥೆ ; ಏರ್ಪಾಡು: ಸಂಸ್ಥಾನದ ಪ್ರಬಂಧವನ್ನು ಮಾಡಿದಳು (ಐತಿಹಾಸ್ಮಾ. ೬೩). ೩. ನಿರಂತರತೆ; ಎಡೆಬಿಡದಿರುವಿಕೆ ; ಪರಂಪರೆ : ಪೂರ್ವಾಪೂರ್ವ ಚಿತ್ರವಿಶೇಷ ಪ್ರಭವಂಗಳ್ ಪ್ರಬಂಧದಿಂದಂ ಪ್ರವರ್ತಿಸುವುವು (ಶಾಂತಿಪು. ೬-೧೫೨ ವ) ; ಈ ಮಹೋತ್ಪಾತ ಪ್ರಬಂಧ ವಿರಾಮಕರ್ಮವ ಬೆಸಸಿಯೆನೆ (ಕುಮ್ಯಾಸ. ೦೦-೨೮). ೪. ಕಾವ್ಯ ಗ್ರಂಥ : ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇಟಿಕ್ವೊಡೆ ಪಂಪನೆ ಪೇಟ್ಗುಮೆಂದು ಪಂಡಿತರೆ ತಗುಳ್ದು ಬಿಚ್ಚಟಿಸೆ ಪೇಟಲೊಡರ್ಚಿದೆನೀ ಪ್ರಬಂಧಮಂ (ಪಂಭಾ. ೦-೦೦) ; ಕವಿಗಿನಿದಾಗೆ ನಿಚ್ಚ ಪೊಸತಾಗೆ . . . ಪೇಟಲೊಡರ್ಚಿದೆನೀ ಪ್ರಬಂಧಮಂ (ಛಂದೋಂಬು. ೦-೦೦). ೫. ಆಧುನಿಕ ಗದ್ಯಸಾಹಿತ್ಯದ ಒಂದು ಪ್ರಕಾರ ; ನಿಬಂಧ ; ► ಇದು ಇಂಗ್ಲಿಷಿನ 'Essay' ಎಂಬ ಶಬ್ದಕ್ಕೆ ಸಮಾನಾರ್ಥಕವಾದ ಶಬ್ದ : ಈ ಸಂಕಲನದೊಳಗಿನ ಕೆಲವು ಪ್ರಬಂಧಗಳು ಸ್ವತಂತ್ರ ಹಾಗೂ ಕೆಲವು ಅನುವಾದಗಳಾಗಿರುವುವು (ಪ್ರಬಂಧ. ಹೃದ್ಯತ. ೪). ೬. ಸಂಗೀತಕ್ಕೆ ಅಳವಟ್ಟ (ಆಧ್ಯಾತ್ಮಿಕ ವಿಚಾರವುಳ್ಳ) ಸಾಹಿತ್ಯರಚನೆ : ಸ್ವರ, ರಾಗ ಮತ್ತು ತಾಳಯುಕ್ತವಾಗಿ, ಅನೇಕ ಭಾಗಗಳನ್ನೊಳಗೊಂಡ ಭಗವದ್ವಿಷಯಸಾಹಿತ್ಯವುಳ್ಳ ಯಾವ ರಚನೆಗೂ ಪ್ರಬಂಧವೆಂಬ ಹೆಸರು ಅನ್ವಯಿಸುತ್ತದೆ . . . ಅಷ್ಟಪದಿಗಳು ಪ್ರಬಂಧವೂ ಹೌದು (ಸಂಗೀಶಂ. ೭೩). ೭. (ತಮಿಳುದೇಶದ ವೈಷ್ಣವಭಕ್ತರು ರಚಿಸಿದ, ವೇದಾಂತ ತತ್ವಗಳನ್ನೊಳಗೊಂಡ) ಕೃತಿ ; ಆಳ್ವಾರುಗಳ ರಚನೆ : ಶ್ರೀವೈಷ್ಣವ ಪ್ರಬಂಧಗಳಿಗೆ ದ್ರಾವಿಡವೇದವೆಂಬ ಪೂಜ್ಯನಾಮಕರಣವಾಯ್ತು (ಕಥಾ. ೨೩) ; ಆಳ್ವಾರುಗಳು ಮುಖ್ಯವಾಗಿ ಹನ್ನೆರಡು ಜನರು. ಇವರುಗಳ ತಮಿಳುಪ್ರಬಂಧಗಳು ನಾಲ್ಕು ಸಾವಿರ ಪದ್ಯಗಳನ್ನೊಳ ಗೊಂಡಿವೆ (ಭಾರವ. ೨೩೭). 'ದ್ರಾವಿಡಪ್ರಬಂಧ', 'ದ್ರಾವಿಡವೇದ' ಪರಾ. [ಸಂ.]

**ಪ್ರಬಂಧಧ್ವನಿ** (ನಾ). [ಕಾವ್ಯಮೀ] ಸುಲಭವಾಗಿ ಅರ್ಥಮಾಡಿಕೊಳ್ಳ ಬಹುದಾದ ಒಟ್ಟು ಕಾವ್ಯದ ಧ್ವನಿವಿಶೇಷ : ಸುಲಭವಾಗಿ ಗ್ರಹಿಸುವುದಕ್ಕಾಗಿ ಕ್ಲೇಶವಿಲ್ಲದೆ ವಿಚಾರ ಮಾಡುವುದಕ್ಕಾಗಿ . . . ಕಾವ್ಯದಿಂದ ಒಂದು ಧ್ವನಿ ಹೊರಡುತ್ತದೆ ; ಇದನ್ನೇ ಪ್ರಬಂಧಧ್ವನಿಯೆಂದು ಕರೆಯುವುದು (ಭಾರಮೀ. ೩೦೩). [ಸಂ.]

**ಪ್ರಬಂಧಲಿಪಿ** (ನಾ). ಒಂದು ಬಗೆಯ ಲಿಪಿ : ವ್ಯಾಗಲಿಪಿ ಪ್ರಬಂಧಲಿಪಿ ರಗಣಲಿಪಿ . . . ಯಿಾ ಅಗಣಿತ ಲಿಪಿಗಳ ನೋಡಲಱಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲ (ಭಾಸ್ಕರ. ೭೭-೬). [ಸಂ.]

**ಪ್ರಬರ್ಹ** (ಗು). ೧. ಉತ್ಕೃಷ್ಟವಾದ ; ಶ್ರೇಷ್ಠವಾದ. (ನಾ). ೨. ಮುಖ್ಯವಾದುದು ; ಪ್ರಧಾನವಾದದು ; ಉತ್ತಮವಾದುದು ; "ಪ್ರಮುಖಮ ಪ್ರಬರ್ಹಂ" (ವಸ್ತುಕೋ. ೯೮ ೨) ; "ಅಗ್ರೇಸರಂ ಪ್ರಬರ್ಹಂ ಪ್ರಮುಖಮಾ ಪ್ರ ವ ರ ಮ ಗ್ರ ಗ ಣ್ಯ ಮು ತ್ತ ಮ ಂ ಸತ್ತಮಂ

ಗ್ರಾಮಣೀಯೆನಲು ಮುಖ್ಯಕ್ಕೆ ನಾಮಂ" (ಶಬ್ದಮ. ೦೨೬-೪). [ಸಂ.]

**ಪ್ರಬಲ,** ಪ್ರಬಳ (ಗು). ೧. ಹೆಚ್ಚು ಶಕ್ತಿಯುತವಾದ ; ಬಹಳ ಬಲವಾದ : ಪ್ರಬಲಶುಂಡಾಲವಿಭುವಂ ತನ್ನಿ (ಬಸವು. ೩೯-೩೩); ಅಂತಃಕರಣದ ಪ್ರಬಲ ಸ್ವಭಾವದಂತೆ ವಸ್ತುಸ್ವಭಾವವೂ ವ್ಯಕ್ತವಾಗುವುದು (ಹಿಂದಸಾ. ೬೨). ೨. ತೀವ್ರವಾದ ; ತೀಕ್ಷ್ಣವಾದ. ೩. ಮುಖ್ಯವಾದ ; ಪ್ರಧಾನವಾದ. ೪. ವಿನಾಶಕಾರಕ ; ಹಾನಿಕರವಾದ. ೫. ತುಂಬಿದ ; ಸಮೃದ್ಧಿಯಾದ. (ನಾ). ೬. ಬಹಳ ಶಕ್ತಿಶಾಲಿ; ಗಟ್ಟಿಗ : ಪ್ರಬಲನಬಲನವೊಲಂತಾ ಶಬರಂ ಬೀಟಿಕ್ಕೊಂಡು (ಶಂಭಾಪು. ೪-೭೩). ೭. ಚಿಗುರು ; ಪಲ್ಲವ. ಪ್ರಬಳ : ೧. ಅತುಳೋತ್ತಾಲ ತಿಮಿಂಗಿಳಪ್ರಬಳಪಕ್ಷೋದ್ಭೂತವಾತಪ್ರಕಂಪಿತ . . . ವಾರ್ಧಿಯಂ (ಕಾವ್ಯಸಾ. ೬೩). ೬. ಅದಿರ್ಪುವೆ ಪ್ರಬಳಂ ಬಳನಂ (ಜಗಪ. ೦೬-೩೩). [ಸಂ.]

**ಪ್ರಬಲಿ** (ನಾ). ಪ್ರಬಲನಾದವನು ; ಹೆಚ್ಚು ಶಕ್ತಿಶಾಲಿ ; ಗಟ್ಟಿಗ : ಯಾವ ಬಲಿಯೀಳುವನೋ, ಎಂತು ತುಳಿಯಲು ಬೇಕೋ ಯಾವನೋ ಪ್ರಬಲಿ (ಪ್ರಾಕ್ಷಿಣಾ. ೨೨-೩). [ಸಂ. ಪ್ರಬಲಿನ್]

**ಪ್ರಬಲಿತ** (ಗು). ಬಲಗೊಂಡ ; ಶಕ್ತಿಶಾಲಿಯಾದ : ನಿನ್ನ ಮಹಿಮೆಯ ಪ್ರಬಲಿತೋತ್ಪನ್ನ ನಿಜಗುರುಭಕ್ತಿಯುತ ಮಹಿಮೋನ್ನತಿಕೆಯನದಾರು ಬಲ್ಲರು (ಏಕಪು. ೬೯-೬೭). [ಸಂ.]

**ಪ್ರಬಲಿಸು** (ಕ್ರಿ). ಬೆಳೆ ; ವೃದ್ಧಿಯಾಗು ; ಹೆಚ್ಚಾಗು : ಇನ್ನು ಮುಂದೆ ಕಾವ್ಯಗಳಲ್ಲಿ ಹೊಸಗನ್ನಡವು ಇನ್ನೂ ಪ್ರಬಲಿಸುವ ಚಿಹ್ನೆಗಳಿವೆ (ಸಮಾಲೋ. ೦೬೨); ನೆಗಡಿ ಅಜೀರ್ಣದಿಂದ ಪ್ರಬಲಿಸುತ್ತದೆ (ಶಂಟಿರು. ೩೮). [ಪ್ರಬಲ + — ಇಸು]

**ಪ್ರಬಲೆ** (ನಾ). ಶಕ್ತಿವಂತೆ ; ಸಮರ್ಥೆ : ಶ್ರೀಪಾದಪ್ರಕ್ಷಾಳನಂ ಮಾಡಿ ಪಾದೋದಕದಿಂ ಪ್ರಬಲೆಯಾಗಿ . . . ಬಿಬ್ಬನೆ ಬಿರಿಧರಲ್ವ ಶಿವದೇವಿಯರಂ ಕಂಡು (ಶಂಬರ. ೦೨-೦೦೪). [ಸಂ. ಪ್ರಬಲಾ]

**ಪ್ರಬಳ** 'ಪ್ರಬಲ' ನೋ.

**ಪ್ರಬಾಲ** (ನಾ). ೧. ಮರ ಗಿಡ ಬಳ್ಳಿಗಳಲ್ಲಿ ಹೊಸದಾಗಿ ಹುಟ್ಟಿದ ಎಲೆ ; ಚಿಗುರು. ೨. ಹವಳ. ೩. ಕೊಳಲಿನ ತುದಿ. [ಸಂ.]

**ಪ್ರಬುದ್ಧ** (ಗು). ೧. ಎಚ್ಚರಗೊಂಡ ; ಎದ್ದ. ೨. ಅರಿವಿಗೆ ಬಂದ ; ತಿಳಿದ. ೩. ಸಂಪೂರ್ಣವಾಗಿ ಅರಳಿದ, — ವಿಕಾಸವಾದ. ೪. ಪ್ರೌಢವಾದ : ಪ್ರಬುದ್ಧ ಭಾಷಣಗಳಿಂದ ಮಕ್ಕಳು ವಿಷಯುಪರಂಪರೆಯನ್ನಾಗಲಿ . . . ಅರಿತುಕೊಳ್ಳಲಾರರು (ಶಿಕ್ಷಣ. ೨೬೬). (ನಾ). ೫. ಜ್ಞಾನಿ ; ವಿದ್ವಾಂಸ ; ಪ್ರೌಢ : "ಧೀರಃ . . . ಪ್ರಬುದ್ಧಃ . . . ಮತಿವಾನ್ — ಈ ೨೮ ವಿದ್ವಾಂಸರ್" (ಹಲಾಯು. ೩೫-೦೬೬) ; ಅವರು ವಿಷಯವನ್ನು ಪ್ರಬುದ್ಧರ ವಿಚಾರದೃಷ್ಟಿಯಿಂದ ತರ್ಕಸಮ್ಮತವಾಗಿ ಬರೆದಿರುತ್ತಾರೆ (ಶಿಕ್ಷಣ. ೨೬೬). [ಸಂ.]

**ಪ್ರಬೋಧ** (ನಾ). ೧. ಎಚ್ಚರಗೊಳ್ಳುವುದು ; ಜಾಗ್ರತವಾಗುವುದು : ಚೇಷ್ಟಿಸಲೀಯವು ನಿದ್ರೆಯವೋಲ್ ನಿಸದಂ ನರರಂ ಪ್ರಬೋಧ ಮಪ್ಪನ್ನೆವರಂ (ಶಂಪ್ರಪು. ೨-೩೪). ೨. ಅನುಗ್ರಹ : ಪ್ರಬೋಧವೆಂದರೆ ಅನುಗ್ರಹ (ಹಿಂದಸಾ. ೬೦). ೩. ಜ್ಞಾನ ; ತಿಳಿವು ; ಪಾಂಡಿತ್ಯ : ಇನಿತಾಗಮಾರ್ಥಮಿಲ್ಲಿನಿತುಪರಂ ಪ್ರಬೋಧಮಣಮಿಲ್ಲ (ಅಜಿತಪು. ೦೨-೩೩). ೪. ಎಚ್ಚರಿಸುವವನು : "ಕೀರ್ತಿಪ ನರಂ ವಂದಿ ವೈತಾಳಿಕಂ ಮಾಗಧಂ ಸೂತಂ ಪ್ರಬೋಧನಕ್ಕುಂ" (ಶಬ್ದಮ. ೮೦-೯). [ಸಂ.]

**ಪ್ರಬೋಧಕ** (ಗು). ೧. ಜಾಗ್ರತಿಯನ್ನುಂಟುಮಾಡುವ ; ತಿಳಿವಳಿಕೆಯನ್ನುಂಟುಮಾಡುವ : ಶ್ರೀ ಕೃಷ್ಣಶಾಸ್ತ್ರಿಗಳು ಈಗ ನಾಲ್ಕು ಐದು ದಶಕಗಳಿಂದಲೂ ಕನ್ನಡದ ಪ್ರಬೋಧಕಶಕ್ತಿಗಳಲ್ಲಿ ಪ್ರಮುಖವಾದ ಪ್ರಬೋಧಕಶಕ್ತಿಯಾಗಿ ಕೆಲಸ ಮಾಡಿದರು (ಬಂಕಿಮ. X ಮುನ್ನುಡಿ). (ನಾ). ೨. ತಿಳಿವಳಿಕೆಯನ್ನುಂಟುಮಾಡುವವನು. ೩. = ಪ್ರಬೋಧಕ : "ವೈತಾಳಿಕ ಪ್ರಬೋಧಕ ಸೂತ ಸ್ತುತಿಪಾಠಕಾಖ್ಯೆ ವಂದಿಯೊಳಕ್ಕು" (ವಸ್ತುಕೋ. ೬೩-೬೮). [ಸಂ.]

**ಪ್ರಬೋಧನ** (ನಾ). ೧. ಎಚ್ಚರಗೊಳ್ಳುವಿಕೆ ; ಜಾಗೃತಿ : ಮುಕುಳನನಿಮೀಳನಂಗಳ್ ವಿಕಾಸಹಾಸಪ್ರಬೋಧನೋನ್ಮೇಷಂಗಳ್ ಪ್ರಕಟಿಸುಗುಮ್ಮೈಕ್ಯಮಂ (ಕಾವ್ಯಾವ. ೪೦೪). ೨. ತಿಳಿವು ; ಜ್ಞಾನ. ೩. ಬೋಧಿಸುವುದು. ೪. ಸುವಾಸನೆಯನ್ನು ಉದ್ದೀಪನಗೊಳಿಸುವುದು : "ಸ್ವಾಸಕಂ ಪ್ರಬೋಧನಮುಕ್ಕುಂ" (ವಸ್ತುಕೋ. ೬೬-೯). [ಸಂ.]

**ಪ್ರಬೋಧಿತ** (ಗು). ೧. ಜಾಗ್ರತಗೊಂಡ : ನಿಜಪ್ರಮೋದಪ್ರಬೋಧಿತ ನಿಜದಿವ್ಯಪರಿಮಲಾಮೋದಿತ ದಿಗಂಗನಾಮುಖಂಗಳಪ್ಪ ಸುಗಂಧದ್ರವ್ಯಗಳಂ ಪೂಸಿ (ಆದಿಪು. ೬-೦೦೬ ವ) ; ಪ್ರಥಮಕಲ್ಪಾಮರೇಂದ್ರಂ ಸಾಂದ್ರಭಕ್ತಿಪ್ರಬೋಧಿತಾಶಯಕುಶೇಶಯನಾ ಗುಣಗಣಮಣಿಭೂಷಣಂಗೆ ದಿವಿಜೇಂದ್ರಲೋಕೋತ್ತಮಭೂಷಣಂಗಳಂ ತುಡಿಸೆ (ಶಾಂತಿಪು. ೦೦-೩೬ ವ). (ನಾ). ೨. [ಕಾಮಶಾ] ಒಂದು ಬಗೆಯ ರತಿಬಂಧ : ಪುರುಷನ ತಿಕದ ಕೆಳಗೆ ಮೊಳಕಾಲನಿಕ್ಕಿ ಒತ್ತಿ ಪುರುಷಾಯಿತಂಗೈದು ಅಲ್ಲಾ ಪುರುಷನ ಕಟಿಯನ್ನು ವಿತತಭಾವದಿಂ ಕುಳ್ಳಿರ್ದು ಕಾಲ ನೀಡಿ ಕೀಲ ತಪ್ಪದ ಹಾಗೆ ಕೂಡಿದಡೆ ಪ್ರಬೋಧಿತಮೆಂಬ ಕರಣಂ (ಕಾಮಶಾ. ೨೪೯). [ಸಂ.]

**ಪ್ರಭಂಜನ** (ನಾ). ೧. ಚೂರು ಮಾಡುವುದು ; ಪುಡಿ ಮಾಡುವುದು. ೨. ಗಾಳಿ ; ವಾಯು : "ಪವನಃ . . . ಪ್ರಭಂಜನಃ . . . ಮಹಾಬಲಃ —ಈ ೨೦ ಗಾಳಿಯ ಪೆಸರ್" (ಹಲಾಯು. ೦೪-೬೩) ; ನಿಜರಾಜಸದನಸರಸೀಸರೋಜರಜಮನಟ್ಟಿಕೊಂಡು ಸುಟಿವ ಸುಪ್ರಭಾತಪ್ರಭಂಜನನುಂ (ಶಂಭಾಪು. ೩-೬೦ ವ) ; ಬೀಸಿದುದಸದೃಶಸೋಷ್ಣಪ್ರಭಂಜನಂ ಬೇಸಗೆಯೊಳ್ (ರಾಜಶೇ. ೩-೩೨). ೩. ಗಾಳಿಯ ಅಧಿದೇವತೆ; ವಾಯುದೇವ; ಮೃಗವಾಹನಿವಂ ಪ್ರಭಂಜನಂ (ಜಗಪ. ೦೩-೬೦) ; ನೀನೆ ಅನಂತಂ, ನೀನೆ ಹವ್ಯವಾಹಂ, ಪ್ರಭಂಜನಂ ನೀನೆ (ಅದ್ಭುತ. ೬-೨೩). 'ಪ್ರಭಂಜನ ಸಂತ' ಪರಾ. ೪. ನಾಲ್ಕು ಬಗೆಯ ಜೀವಸಂಬಂಧವಾಯುಗಳಲ್ಲಿ ಒಂದು : ವೈರಂಭ ಮುಖ್ಯ ಪ್ರಭಂಜನ ಅಂತರ್ಯಾಮಿಸೌಂಜ್ಞೆಯುಳ್ಳ ನಾಲ್ಕು ಜೀವಸಂಬಂಧವಾದ ವಾಯುಗಳೇ ಮಾನಸಾದ್ಯಂತಃಕರಣ ಚೇಷ್ಟಾಕಾರಣಂಗಳಾಗಿರ್ಕುಂ (ಶಿವೇಕ. ೩೪). ೫. ಬಿರುಸಾಗಿ ಬೀಸುವ ಗಾಳಿ ; ಬಿರುಗಾಳಿ : ಯುಗಾಂತಪ್ರಭಂಜನನೀರಾವತಚಕ್ರದಂತೆ ತಿರಿವಂತಾಳ್ದುಂ (ಅಜಿಪು. ೨-೩) ; ಶ್ರೀಮಹಿತನಹಿತಸಕಲ ಮಹೀಮಹಿತಪಯೋಧರಪ್ರಭಂಜನನಂ (ಸುಕುಮಾ. ೨-೧). ೬. ಧ್ವಂಸಮಾಡಿದವನು ; ನಾಶಕ: ಪ್ರಭಂಜನಸಖಪ್ರಭಾವಪ್ರಭಂಜನನಪ್ಪನಗೆ ಕುಲಹೀನವನಿತಾಸ್ತನ್ಯೋಪಪುಷ್ಟನೊಳನುಬಂಧಿಕೆಯತಿಕಷ್ಟಮುಂ (ಜಗಪ. ೩-೬೧ ವ). [ಸಂ.]

**ಪ್ರಭಂಜನಪ್ರದರ** (ನಾ). ಒಂದು ಬಗೆಯ ಅಸ್ತ್ರ ; ವಾಯುವ್ಯಾಸ್ತ್ರ : ಆ ಪ್ರಭಂಜನಪ್ರದರಂ ಮೇಘಮಾರ್ಗದೊಳೆ ಮೇಘಬಾಣಮಂ ಪ್ರತಿಹತಂ ಮಾಡೆ (ಜಗಪ. ೦೩-೦೦೩ ವ). [ಸಂ.]

**ಪ್ರಭಂಜನಪ್ರಿಯ** (ನಾ). ಗಾಳಿಯನ್ನು ಪ್ರೀತಿಸುವವನು ; ಅಗ್ನಿ : ಪ್ರಭಂಜನಪ್ರಿಯನತಿನಿಷ್ಠುರಜಿಹ್ವಂ (ಶಂಪ್ರಪು. ೧-೪೨). [ಸಂ.]

**ಪ್ರಭಂಜನಸಖ** (ನಾ). = ಪ್ರಭಂಜನಪ್ರಿಯ : ಪ್ರಭಂಜನಸಖಪ್ರಭಾವಪ್ರಭಂಜನನಪ್ಪನಗೆ ಕುಲಹೀನವನಿತಾಸ್ತನ್ಯೋಪಪುಷ್ಟನೊಳನುಬಂಧಿಕೆಯತಿಕಷ್ಟಮುಂ (ಜಗಪ. ೩-೬೧ ವ). [ಸಂ.]

**ಪ್ರಭಂಜನಸುತ** (ನಾ). ವಾಯುಪುತ್ರ ; ಭೀಮ : ಕುರುರಾಜಾನುಜರಂ ಪ್ರಭಂಜನಸುತಂ ಕೊಂದಿಕ್ಕುಗುಂ (ಗದಾಯು. ೩-೩೮). [ಸಂ.]

**ಪ್ರಭಗ್ನ** (ಗು). ಹೆಚ್ಚಾಗಿ ಮುರಿದ ; ಚೂರುಚೂರಾದ : ಗಜದಂತಾ ಕಾರಂಗಳ್ ಗಜದಂತಾದ್ರಿಗಳಿವಲ್ತೆ ತೋರ್ಪುವು ಮಧುಪವ್ರಜಪರಿವಾರಿತ

ಮಾದ್ಯದ್ಗಜಕಟಕರ್ಷಣಪ್ರಭಗ್ನಚಂದನತರುಗಳ್ (ಆದಿಪು. ೨-೨೭). [ಸಂ.]

**ಪ್ರಭವ** (ಗು). ೧. ಉತ್ತಮವಾದ; ವೈಶಿಷ್ಟ್ಯಪೂರ್ಣವಾದ. ೨. ಉಂಟಾದ; ಹುಟ್ಟಿದ: ಎಸಗುಂ...ಮತ್ತಾಳಿಪರಭೃತಪ್ರಭವ ರವಂ (ಆದಿಪು. ೬-೧೦); ಸಂಗಳಿಸದೆ ತನಯನ ಲೀಲಾವಿಳೋಕನಪ್ರಭವ ಸೌಖ್ಯಮಾ ದಂಪತಿಯೊಳ್ (ಚಂಪ್ರಪು. ೩-೪೦). ೩. ಉತ್ಪತ್ತಿ ಸ್ಥಾನ; ಉಗಮಸ್ಥಾನ: ಅನೇಕಲಕ್ಷಣಗುಣಪ್ರಭವಂ ಮೃದಪಾದವಾದ ವಾಕ್ಯೈಸುಭಗಂ ಕಳಾಕಳಿತಮೆಂಬ ನೆಗಟ್ತೆಯನಾಳ್ದ ಕಬ್ಬಮಂ... ಈವುದು (ಕಂಶಭಾ. ೧-೯). ೪. ಹುಟ್ಟು; ಉತ್ಪತ್ತಿ: ಅಭಿಮತಕ್ರೀಡಾ ವಿನೋದದ ರಭಸದಲಿ ದಿನ ಸವೆಯೆ ಗರ್ಭಪ್ರಭವವಾಯ್ತು (ಕುಮಾ.ಆ. ೧೯-೧೦). ೫. ಮೂಲಕಾರಣ; ಮುಖ್ಯ ಕಾರಣ. ೬. ಬಲ; ಪರಾಕ್ರಮ. ೭. ಅರುವತ್ತು ಸಂವತ್ಸರಗಳಲ್ಲಿ ಮೊದಲನೆಯದು: ಆ ವರುಷವೇ ಪ್ರಭವ ... ಅಕ್ಷಯವೆಂದಱವತ್ತು ತೆಱನಾಗಿಹುದು (ವಿವೇಕ. ೩೨೦); ನಿನ್ನ ಹೆಸರಳಿದು ನೀರಾದುದಾ ಪ್ರಭವಂ (ಗಿರಿಜಾ. ೩೭-೦). ೮. ನದಿಯ ಉಗಮಸ್ಥಾನ. ೯. ವಿಷ್ಣುವಿನ ಹೆಸರು. ೧೦. ಏಳಿಗೆ; ಅಭಿವೃದ್ಧಿ. ೧೧. (?): ಪ್ರಭವಂ ನೀಳಘನಾಘನು ಸಮ ವಸ್ತೃತ್ಯರ್ವೀತಳಂ . . . ನವಮೇಘಕಾಲಮೆನೆ ಬಂದಂ ದೇವದೇವಂ ಸ್ವಯಂಪ್ರಭನುದ್ಯನ್ಮನಿಜಾತಕಂ ಕಱಿಯುತುಂ ಧರ್ಮಾಮೃತಾಸಾರಮಂ (ಚಂಪ್ರಪು. ೬-೫). [ಸಂ.]

**ಪ್ರಭವಿಷ್ಣು** (ಗು). ೧. ಸರ್ವೋತ್ಕೃಷ್ಟವಾದ. ೨. ಬಲಿಷ್ಠವಾದ; ಬಲಶಾಲಿಯಾದ. (ನಾ). ೩. ಒಡೆಯ; ಸ್ವಾಮಿ: ಭೂವರ್ ಕಪ್ಪಮಂ ತರ್ಪರುದ್ಧತವೃತ್ತಪ್ರಭವಿಷ್ಣುಸಿಂಹಳನದೆಂದುಂ ತೆತ್ತನಲ್ತು (ರಾಜಶೇ. ೬-೩೩). [ಸಂ.]

**ಪ್ರಭವಿಸು** (ಕ್ರಿ). ೧. ಹುಟ್ಟು: ಜನಿಸು: ಅಭಯಕರವರದಪುತ್ರಂ ಪ್ರಭವಿಸಲೊಡನೀಶಭಕ್ತಿಪಂಕಜಮಿತ್ರಂ ಶುಭಮಯವಾದುದು ಭೂಮಿ (ಹಮ್ಮೀರ.೨-೨೫); ರೂಪಿಸಿದ ಷಟ್ಖಾಂಡಗಳ ಶುಕರೂಪ ತದನಂತರದಿ ಜಂಬೂದ್ವೀಪದೊಳು ಪ್ರಭವಿಸಲು ಉತ್ತರಕಾಂಡಕಥನವನು ಶ್ರೀಪತಿಯು ತಾ ಪೇಳ್ವೆನೆಂದು ನಿರೂಪಿಸಲು (ಉತ್ತರ. ೦-೦೯). ೨. ಉಂಟಾಗಂ; ಸಮನಿಸು; ಘಟಿಸು: ಪ್ರಭವಿಸಿದುದು ಭಾನುಗೆ ಚಿತ್ರಭಾನುಮೆಸರೀ ಗಳೆನಿಸಿ...ನಭದೊಳೆಸೆದಂ ಕೃಷ್ಣಂ (ಜಗಪಿ. ೦೩-೯೯); ಸಭೆಯೊಳು ಕುಳಿ ತಾಗ ನಾಲ್ಕೆಂಟು ವಚನ ದುರ್ಲಭವಾಗಿಹವು ಭಾವ ನಿನಗೆ ಅಭಿಮುಖವಡೆ ದೀಗ ವಚನಸುಲಭನಾಗಿ ಪ್ರಭವಿಸಿದಂದವಿದೇನು (ಭರತ. ೯-೦೦೯); ಮುಂತಿವರ್ಗಾ ಕ್ರೂರಾಸದ್ರಾಜನಿಂದೇಂ ಪ್ರಭವಿಕುಮೊ (ದಿವ್ಯಸ. ೦೯-೦೩). ೩. ರಚಿಸು; ಉಂಟುಮಾಡು: ದೇವಿಯ ರೂಪವಿದ್ದಮಂ ಪ್ರಭವಿಸುವಲ್ಲಿ ಬಿಟ್ಟ ಪರಮಾಣುಗಳಿಂ ಸಮೆದಂ ಸುಧಾಬ್ಧಿಯಂ (ಶಾಂತಪು. ೨-೩೦); ಶುಭಲಗ್ನವಱಿದು ಮಂಗಲವ ಪ್ರಭವಿಸಿದನು (ಭರತ. ೪೩-೧೦೭). [ಪ್ರಭವ + -ಇಸು]

**ಪ್ರಭಾಕರ** (ನಾ). ೧. ಬೆಳಕನ್ನುಂಟುಮಾಡುವವನು: ಅಹಿತತಮೋಪಹಂ ದನುಜಸಂಹೃತಿಶಕ್ತಿಧರಂ ಪ್ರಭಾಕರಂ (ರಾಜಶೇ. ೦-೯). ೨. ಇನ; ಸೂರ್ಯ: "ಆದಿತ್ಯಃ, ಸವಿತಾ...ಪ್ರಭಾಕರಃ...ತ್ರಯಿಾತನುಃ—ಈ ೪೭ ಆದಿತ್ಯನ ಪೆಸರ್" (ಹಲಾಯು. ೭-೩೭). ೩. ಚಂದ್ರ. ೪. ಅಗ್ನಿ. ೫. ಸಮುದ್ರ. [ಸಂ.]

**ಪ್ರಭಾಕರದಾಸ** (ನಾ). ಒಬ್ಬಾತನ ಹೆಸರು: ಶ್ರೀ ಪ್ರಭಾಕರದಾಸನ್ (ಪ್ರ್ಯಾಂ. ೦೯೩೯, ೨೧-೦; ಸು. ೩ನೆಯ. ೫೩). [ಸಂ.]

**ಪ್ರಭಾಗ** (ನಾ). ವಿಭಾಗ: ದ್ವೀಪ ಸಮುದ್ರಂಗಳ್ ಕಲ್ಪವೃಕ್ಷವನಾಕೀರ್ಣಂ ಭಾಗಿಗಳಾಗಿ ಪುಟ್ಟಿ ಜಘನ್ಯಭೋಗಭೂಮಿಪ್ರಭಾಗಂಗಳಾಗಿರ್ಕುಂ (ಸುಕುಮಾ. ೧೧-೫೯ ವ). [ಸಂ.]

**ಪ್ರಭಾಚಕ್ರ** (ನಾ). ಬೆಳಕಿನ ವರ್ತುಲ; ಪ್ರಕಾಶದ ವೃತ್ತ: ಚಕ್ರರತ್ನಮೊಂದೆಯಲ್ತು ಚಕ್ರಿಗಾನುಮಲ್ತೆ ದೋಶ್ಚಕ್ರಮೆಂದು ಬಂದು ಮುಂದೆ ನಿಲ್ವ ಮಾಟಕ್ಕಿಯಿಂ ಪ್ರಭಾಚಕ್ರಮೆಸೆಯೆ (ಆದಿಪು. ೦೨-೫೩). [ಸಂ.]

**ಪ್ರಭಾತ್‌ಫೇರಿ** 'ಪ್ರಭಾತಫೇರಿ' ನೋ.

**ಪ್ರಭಾತ** (ನಾ). ೧. ಬೆಳಗು: ಪ್ರಾತಃಕಾಲ; ಉದಯಕಾಲ: "ಕಾಲ್ಯಂ . . .ಪ್ರಭಾತಂ. . .ವ್ಯುಷ್ಟಂ—ಈ ೧೧ ಸಮುಟ್ಟಿ(ಡೆ)ಟಿ" (ಹಲಾಯು. ೦೯-೦೦೧); ಪ್ರಭಾತಪಟಹಧ್ವನಿಗಳ್ ದೆಸೆದೆಸೆಯೊಳೆಸೆಯೆಯುಂ (ಆದಿಪು. ೬-೨೭ ವ); ಪುಷ್ಪಪ್ರಭಾತದೊಳ್ ಕ್ರೌಂಚಪಕ್ಷಿಯು ಪಂಕ್ತಿ ನೆರೆದು...ದನಿಸಂತೆಗೈವಂತೆ ಪೋಲ್! (ಶ್ರೀರಾಮಪಾ. ೯೦-೩೫೯). ೨. [ಛಂದ] ಒಂದು ವೃತ್ತದ ಹೆಸರು; ಹದಿಮೂರು ಅಕ್ಷರಗಳ ಒಂದು ವೃತ್ತ: ನ ಜ ಜ ರ ಗಂ ಮೆ ಱೆ ಯ ಲ್ ಪ್ರಭಾತವೃತ್ತಂ (ಛಂದೋ. ೬೨). [ಸಂ.]

**ಪ್ರಭಾತಕಾಲ** (ನಾ). ಬೆಳಗಿನ ಹೊತ್ತು; ಉದಯಕಾಲ: "ಪೊಟ್ರಱ ಯೆಂದೆನಲ್ ಪ್ರಭಾತಕಾಲಂ" (ಕಬ್ಬಿಗ. ೬೯). [ಸಂ.]

**ಪ್ರಭಾತಫೇರಿ**, ಪ್ರಭಾತ್‌ಫೇರಿ (ನಾ). ೧. ಯಾವುದಾದರೂ ಧಾರ್ಮಿಕ ಅಥವಾ ಅನ್ಯಉತ್ಸವಗಳ ಆಚರಣೆಯ ಅಂಗವಾಗಿ ಮಾಡುವ ಪ್ರಾತಃಕಾಲದ ಸಾಮೂಹಿಕಮೆರವಣಿಗೆ: ಮುಂಜಾವಿನ ನಾಲ್ಕು ಗಂಟೆಯಿಂದಲೇ ಪ್ರಭಾತಫೇರಿಗೆ ಪ್ರಾರಂಭ (ಕ್ರಾಂತಿ. ೯೬); ಪ್ರಭಾತಫೇರಿ ಯನ್ನು ಪೋಲೀಸರು ಲಾಠಿಪ್ರಯೋಗ ಮಾಡಿ ಚದುರಿಸಿದರು (ಕರಣ. ೦೫೯) **ಪ್ರಭಾತ್‌ಫೇರಿ**: ೨. ಬೆಳಗಿನ ಜಾವದಲ್ಲಿ ಮಾಡುವ ತಿರುಗಾಟ,— ಸುತ್ತಾಟ: ಪ್ರಭಾತ್‌ಫೇರಿ—ಉದಯಕಾಲದಲ್ಲಿ ಹಾಕುವ ಸುತ್ತು (ನಮ್ಮ ನು. ೦೨೬). [←ಹಿಂ. ಪ್ರಭಾತ್‌ಫೇರೀ]

**ಪ್ರಭಾತವಿಧಿ** (ನಾ). ಬೆಳಗಿನ ಹೊತ್ತು ಆಚರಿಸುವ ನಿಯಮ; ಪ್ರಾತರ್ವಿಧಿ: ಪಾಸರೆಯ ತುದಿಗೈದಿ, ಪ್ರಭಾತವಿಧಿಗಳಂ ಪೂರಯಿಸಿ . . .ಕುಳಿತರ್ಕೆ (ಶ್ರೀರಾಮಪಾ. ೨೬೫-೦೨). [ಸಂ.]

**ಪ್ರಭಾಮಂಡಲ**, ಪ್ರಭಾಮಂಡಳ (ನಾ). ೧. ಬೆಳಕಿನ ವರ್ತುಲ; ತೇಜೋವಲಯ. ೨. [ಜೈನ] ಜನಕರಾಜನ ಮಗ: ಸೀತೆಯ ಸೋದರ. ೧. ೨: ಪ್ರಭಾಮಂಡಲನ ಮಂಡಲಾಗ್ರಮಂ ಚಂದ್ರಹಾಸ ಪ್ರಭಾಮಂಡಲದಿಂ ಹತಪ್ರಭಾಮಂಡಲಂ ಮಾಡಲುಂ ನಳನ ಕೋಪಾ ನಲನಂ ಖಡ್ಗಧಾರಾಜಲದಿಂ ನಂದಿಸಲುಂ. . .ಉತ್ಕಂಠನಾಗಿ (ಪಂಪರಾಮಾ. ೦೩-೦೩೩ ವ). ೩. ಪರಿವೇಷ; ಪ್ರಭಾವಳಿ: ರಾಜವಂಶೀಯರ ಚಿತ್ರ ಗಳನ್ನು ಪ್ರಭಾಮಂಡಲ (Halo) ಮತ್ತಿತರ ಅರಸೊತ್ತಿಗೆಯ ಕುರುಹುಗಳ ಸಹಿತವಾಗಿ ಬರೆಯುತ್ತಿದ್ದರು (ಶಾಚಿತ್ರ. ೩೦). **ಪ್ರಭಾಮಂಡಳ**: ೧. ಇಂಬಾದುದು ಕಯ್ಯ ಚಾಮರ ಚಳತ್ಪಾಂಡುಪ್ರಭಾಮಂಡಳಂ (ಕೃಷ್ಣಪು. ೧೧-೨೯). [ಸಂ.]

**ಪ್ರಭಾಮಂಡಳ** 'ಪ್ರಭಾಮಂಡಲ' ನೋ.

**ಪ್ರಭಾವ** (ನಾ). ೧. ಬಲ; ಪರಾಕ್ರಮ: ಪ್ರಭಾವಪ್ರಕಟೀಕೃತ ಕದಂಬಕುಳಾಂಬರಪ್ರಚಂಡಮಾರ್ತಾಂಡಂ (ಎಕ. XX, ೯೦-೫; 1068). ೨. ಘನತೆ; ಹಿರಿಮೆ: ಸಿದ್ಧಪುರುಷರ ಆತ್ಮಪ್ರಭಾವದಿಂದ ಅವರ ವಾಕ್ಕಿಗೆ ಅನಂತವಾದ ಪ್ರಭಾವವಿದೆ (ಭಾರತ. ೦೩೯). ೩. ಪ್ರಾಬಲ್ಯ; ಮಾಹಾತ್ಮ್ಯ; ಮಹಿಮೆ: ಮಾನವನು ಮಹಾ ದೇವನ ಅಂಶನೇ ಆಗಿದ್ದರೂ, ಮಾಯಾಶಕ್ತಿಯ ಪ್ರಭಾವದಿಂದ ತನ್ನ ಜ್ಞಾನಕ್ರಿಯೆಗಳ ಪ್ರಾಬಲ್ಯವನ್ನು ಕಳೆದುಕೊಂಡಿರುವನು (ಶಕ್ತಿ.ವಿ. ೦). ೪. ಅತಿಮಾನುಷಶಕ್ತಿ: ಶ್ರೀಮಾಸೇನಪ್ರ್ವರಮಪ್ರಭಾವರಿಸಿಯರ್ ಕಟ್ಟಿಪ್ಪಿನಾವಟ್ಟದುಳ್ಳಿ್ರಸಂಗಂಗಳ ಪೇಟ್ಟ ಸಿದ್ಧಸಮಯನ್ನಪ್ಪಾದೆ ನೋಂನ್ತು (ಎಕ. II, ೨೭-೦; ಸು. 700). ೫. ತೇಜಸ್ಸು;

ವರ್ಚಸ್ಸು : ದೇವಿ ನೀಂ ... ಪ್ರಭಾವಗರ್ಭಶಕ್ತಿಯಂತೆಯುಂ . . . ಮಹತ್ವಮಂ ಪಡೆದೆ (ಜಗಾ. ೨-೯೬ ವ); ದೇಶದ ಪ್ರತಿಷ್ಠೆ, ಪ್ರಭಾವಗಳನ್ನು ಹೆಚ್ಚಿಸಲಿಕ್ಕಾಗಿ ಹೊಡೆದಾಡಿದ ಆ ನಾಯಕರಿಗೆ ತಾವು ಎಷ್ಟು ಋಣಿಗಳೋ (ಸಂಗೀತ. III, ೮ ಮುಖ).

ಪ್ರಭಾವ ಬೀರು = ಪರಿಣಾಮವನ್ನುಂಟುಮಾಡು : ಸರಸಮ್ಮ ಪಕ್ಕದ ಮನೆಗೆ ಬಂದ ಮೇಲೆ . . . ನನ್ನ ಮೇಲೆ ತುಂಬಾ ಪ್ರಭಾವ ಬೀರಿ ಬಿಟ್ಟಿದ್ದಾರೆ (ಕಹುಸಂ. ೮೬). [ಸಂ.]

**ಪ್ರಭಾವಕಾರಿ** (ನಾ). ವರ್ಚಸ್ಸನ್ನುಂಟು ಮಾಡುವಂಥದು ; ಪರಿಣಾಮ ಕಾರಿಯಾದುದು : ಭೂಸ್ವಾಮ್ಯಸಂಬಂಧವಾದ ಸ್ಪೆನ್ಸರ್‌ನ ಅಭಿಪ್ರಾಯಗಳು ಅವನ ಮನಸ್ಸಿನ ಮೇಲೆ ತುಂಬ ಪ್ರಭಾವಕಾರಿಯಾದುವು (ಘನರು. ೫೪). [ಸಂ. ಪ್ರಭಾವಕಾರಿನ್]

**ಪ್ರಭಾವತೆ** (ನಾ). ಘನತೆ ; ಹಿರಿಮೆ : ಕವಿಕಾವ್ಯಪ್ರಕಟಪ್ರಭಾವಮನದಂ ಕೀಳ್ಪಬ್ಬಿಗಂ ಗುಪ್ತಿಗೈದವರಾತ್ಮೀಯಶಕ್ತಿಪ್ರಭಾವತೆಯನಾದಂ ತೋರ್ಪವೋಲ್ (ರಾಜಶೇ. ೬-೯೯). [ಸಂ. ಪ್ರಭಾವತಾ]

**ಪ್ರಭಾವನೆ** (ನಾ). ೧. ಭಾವನೆ: ಆ ಪ್ರವರರಿಗೆ ಬಿನ್ನವಿಸಿಯವರ ಪ್ರಸನ್ನವನಾಜ್ಞೆಯುಂ ಕರುಣಾಪ್ರಭಾವನೆಯುಂ ಪಡೆದು ತಾ ಮತ್ತೆ ವಂದಿಸುತ (ಬಸವು. ೪೬-೬೩). ೨. [ಜೈನ] ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಕೊನೆಯದು : P "ಜೈನಧರ್ಮದ ಪ್ರಭಾವವನ್ನು ಬೆಳಗುವುದು" (ಕೈವಕೋ. ೦೬೭) : ಸಮ್ಯಗ್ದರ್ಶನಜ್ಞಾನಚಾರಿತ್ರರತ್ನತ್ರಯಪ್ರಭಾವದಿಂದಾತ್ಮಪ್ರಕಾಶಂಗೆಯ್ವುದು ಪ್ರಭಾವನೆ (ಶಾಪುಂಪು. ೨೯೦) : ಪುಣ್ಯಕಥಾಶ್ರವಣಸಂಭಾವನೆಯೊಳಂ ಜಿನಪೂಜಾಪ್ರಭಾವನೆಯೊಳಂ (ಚಂದ್ರಪ್ರ. ೯-೬೭ ವ). 'ಮಾರ್ಗಪ್ರಭಾವನೆ' ಪರಾ. [ಸಂ. ಪ್ರಭಾವನಾ]

**ಪ್ರಭಾವಮುದ್ರೆ** (ನಾ). ವರ್ಚಸ್ಸಿನ ಮುದ್ರೆ, – ಪರಿಣಾಮ : ಪ್ರತಿಯೊಬ್ಬರಲ್ಲಿಯೂ ಸ್ವಪ್ರತಿಷ್ಠೆಯ ಮತ್ತು ಶ್ರೀಮಂತಿಕೆಯ ಪ್ರಭಾವ ಮುದ್ರೆ ಎದ್ದು ಕಾಣುತ್ತಿತ್ತು (ಘನರು. ೯೬೭). [ಸಂ. ಪ್ರಭಾವಮುದ್ರಾ]

**ಪ್ರಭಾವಲಯ** (ನಾ). ೧. ಬೆಳಕಿನ ವರ್ತುಲ ; ವೃತ್ತಾಕಾರವಾದ ಬೆಳಕು : (ಸೂರ್ಯನ ಅಥವಾ ಚಂದ್ರನ ಸುತ್ತಲೂ ಕಾಣುವ ಕಿರಿದಾದ) ಪ್ರಭಾವಲಯ (Corona. ಇಂಕಶ). ೨. (ಅಲಂ) ತೇಜೋವಲಯ ; ಸೊಗಸಂ : ನಾಯಕಪಾತ್ರಕ್ಕೆ ರಸಭಾವಗಳ ಪ್ರಭಾವಲಯವನ್ನು ಕಟ್ಟುವುವು. (ಸಾಲಗೀ. ೨ ಭಾವಸಂದರ್ಶ). [ಸಂ.]

**ಪ್ರಭಾವಲ್ಲಭ** (ನಾ). ಬೆಳಕಿನ ಒಡೆಯ ; ಸೂರ್ಯ : ಸುಕವಿವೃಂದಸ್ತೋತ್ರಪಾತ್ರಂ ಷಡಕ್ಷರಿದೇವಂ ಸರಸಪ್ರಬಂಧಸುಭಗಾಂಭೋಜಪ್ರಭಾವಲ್ಲಭಂ (ರಾಜಶೇ. ೦-೬೮). [ಸಂ.]

**ಪ್ರಭಾವಶಾಲಿ** (ಗು). ೧. ವರ್ಚಸ್ವಿಯಾದ ; ಪ್ರಭಾವವನ್ನು ಬೀರುವ : ಅರ್ಜಿಸಮಿತಿಯ ಪ್ರಭಾವಶಾಲೀ ವ್ಯಕ್ತಿಯೊಬ್ಬನ ಹೆಸರಿಗೆ ಮತ್ತೊಂದು ಪತ್ರ ಬರೆದು . . . ಕೊಟ್ಟನು (ಘನರು ೩೩೪). (ನಾ). ೨. ಶಕ್ತಿಯುತವಾದುದು; ಪರಿಣಾಮಕಾರಿಯಾದುದು : ಬರೆಹಕ್ಕಿಂತ ಮಾತೇ ಹೆಚ್ಚು ಪ್ರಭಾವಶಾಲಿಯಾದುದಲ್ಲವೇ ? (ವಾತ್ಸಲ್ಯ. ೨೫೭); ಕೋಪರ್ನಿಕಸ್ ಮತ್ತು ನ್ಯೂಟನ್ನರ ಕಾಲಗಳಲ್ಲಿ ನಡೆದ ಸಂಶೋಧನೆಗಳಷ್ಟು ಪ್ರಭಾವಶಾಲಿಗಳಾಗಲಿಲ್ಲ (ಮುಕ್ತಾರ. ೩೩ ಪೀಠಿಕೆ). ೩. ವರ್ಚಸ್ವಿಯಾದ ವ್ಯಕ್ತಿ; ಪ್ರಭಾವವನ್ನು ಬೀರುವವನು : ಆತ ತುಂಬಾ ಪ್ರಭಾವಶಾಲಿ. ನಮ್ಮ ಕೆಲಸಕ್ಕೆ ಅವನು ಸಹಾಯ ಮಾಡಬಹುದು (ರೂಢಿ).

[ಸಂ. ಪ್ರಭಾವಶಾಲಿನ್]

**ಪ್ರಭಾವಳಿ** (ನಾ). ವಿಗ್ರಹದ ಶಿರೋಭಾಗದಲ್ಲಿ ಅಳವಡಿಸುವ ವರ್ತುಳಾಕಾರದ ಒಂದು ಅಲಂಕಾರಸಾಧನ : ಶ್ರೀಆದಿತೀರ್ಥೇಶ್ವರರಿಂಗೆ ಮಾಡಿಸ್ತ ಲೋಹದ ಪ್ರಭಾವಳಿಗೆ ಆ ಸಮಸ್ತಜನಂಗಳಿಗೆ ಮಂಗಳ ಮಹಾಶ್ರೀ (ಪ್ರಮಿಉಂ. ೦೯೪೪, ೪೪-೨; 1583); ಉಮಾಮಹೇಶ್ವರನ ಮೇಲೆ ಕೆತ್ತಿರುವ ಪ್ರಭಾವಳಿಯು ಅತ್ಯಂತ ಸುಂದರವಾದ ಬಳ್ಳಿಯಿಂದ ಕೂಡಿದಂತೆ ಕೆತ್ತಲ್ಪಟ್ಟಿದೆ (ಕಾರಿದ. ೫೦೨). [ಸಂ. ಪ್ರಭಾವಲಿ]

**ಪ್ರಭಾವಳೆ, ಪ್ರಭಾಳಿ** (ನಾ). = ಪ್ರಭಾವಳಿ : ಇದರಲ್ಲಿ ತರಹೇವಾರಿ ಉತ್ಸವಗಳಿರುತ್ತವೆ. ಪ್ರಭಾವಳೆ, ಶೇಷ, ಗರುಡ, ಪುಷ್ಪಮಂಟಪ ಇತ್ಯಾದಿ (ಗರುಡಾ. ೫೩). **ಪ್ರಭಾಳಿ** : ನವರತ್ನ [ಖಚಿತ]ವಾದ ಚಿಂನದ ಪ್ರಭಾಳಿಯನೂ ಸಮರ್ಪಿಸಿ (ಸೌಇಇ. IX – ii, ೪೮೪-೩೭; 1513).

[<ಪ್ರಭಾವಳಿ./ ಮರಾ. ಪ್ರಭಾವಳ, ಪ್ರಭಾಳ]

**ಪ್ರಭಾವಿ** (ಗು). ೧. ವರ್ಚಸ್ಸಿನಿಂದ ಕೂಡಿದ; ಪರಿಣಾಮಕಾರಿಯಾದ: ತನ್ನ ಲೇಖನಗಳನ್ನು ಪ್ರಕಟಿಸಿ ಪ್ರಭಾವಿ ಬರಹಗಾರ ಎಂದು ಎನಿಸಿಕೊಂಡಿದ್ದು ರಂಗಣ್ಣನವರಿಗೆ ಧೈರ್ಯ ತಂದುಕೊಟ್ಟಿತು (ಅಶಪಾ. ೦೦). (ನಾ). ೨. ವರ್ಚಸ್ವಿಯಾದಂದು : ಅಷ್ಟು ಪ್ರಭಾವಿಯಾಗಿತ್ತು ಮಹಾದೇವಯ್ಯನವರ ಉಜ್ವಲವ್ಯಕ್ತಿತ್ವ (ರಂಗಲೋ. ೦೬೦). ೩. ಪ್ರಭಾವ ಬೀರಬಲ್ಲವನು : ಎಲ್ಲ ಅಂಗಗಳಲ್ಲಿಯೂ ಜೈನರೇ ಪ್ರಭಾವಿಗಳಾಗಿದ್ದ ಕಾಲವು ಮುಗಿದುಹೋಗಿತ್ತು (ಶಾಟಿಸ. ೦೩೫).

[ಸಂ. ಪ್ರಭಾವಿನ್]

**ಪ್ರಭಾವಿತ** (ನಾ). ವರ್ಚಸ್ಸಿಗೊಳಗಾದವನು: ಅವರ ಮುಗ್ಧ ನಡೆನುಡಿಗಳಿಂದ ಪ್ರಭಾವಿತರಾದವರು . . . ನಿಜವಾಗಿ ಧನ್ಯರು (ಶಿಕ್ಷದ. ೬೬೮) ; ಅವಳ ಸೊಬಗಿನಿಂದ ಅವನು ಪ್ರಭಾವಿತನಾದನು (ಯೋಧರು. ೦೦).

[ ಸಂ. ]

**ಪ್ರಭಾವಿಸು** (ಕ್ರಿ). ೧. ಬೆಳಗಿಂ ; ಪ್ರಕಾಶಪಡಿಸಂ : ಮಣೋರಥಮೆ ಪುಟ್ಟುವ ಮಾಳ್ಕೆಯಿನೊಲ್ದು ಪುಟ್ಟಿ ವಂಶಾಂಬರಮಂ ಪ್ರಭಾವಿಸಿದನ ಪ್ರತಿಮಪ್ರಬಳಪ್ರತಾಪವೀರಾಂಬುಧಿ ಪದ್ಮಿದೇವನ್ (ಸೌಇಇ. IX-i, ೨೭೬-೩೦; 1184). ೨. ಹೊಮ್ಮಿಸು ; ಪ್ರಕಟಪಡಿಸಂ : ಸಾಕ್ಷಾತ್ಸರಸ್ವತಿ ತಾನೆಂಬಿನಮೇಂ ಪ್ರಭಾವಿಸಿದಳೋ ನಾನಾಕಳಾಳಾಪಮಂ (ಸುಕುಮಾ. ೬-೩೩); ನೋಂಪಿಯೊಳಾದ ಮಹಾಮಹಿಮೆಯುಂ ಪ್ರಭಾವಿಸುತ್ತಂ ನಾನಾಜಿನಜಿನಾಲಯಂಗಳಂ (ಸೇವೆ) ಮಾಡುತ್ತಂ (ಮಡಿಕ್ಕಾ. III, ೫೧೦ ನವಸಿಧಿಶಂಕಾರದ ಕೋಂಶ). [ಪ್ರಭಾವ + – ಇಸು₂]

**ಪ್ರಭಾಳಿ** 'ಪ್ರಭಾವಳೆ' ನೋ.

**ಪ್ರಭಿನ್ನ** (ಗು). ೧. ಒಡೆದ; ಚೂರುಚೂರಾದ : ನೆಟಿದ ಚಾತುರ್ದಂತಬಲಜಲಧರರಭಸಂ ಪ್ರಭಿನ್ನ ಬ್ರಹ್ಮಾಂಡಾಖಂಡಶಂಕೆಯುಂ ಪುಟ್ಟಿಸೆ (ಶಾಂತಿಪು. ೩-೦೦೦ ವ) ; ಕುತೀರ್ಥಧ್ವಾನ್ತಸಂಘಾತಪ್ರಭಿನ್ನಘನಭಾನವೇ (ಸೌಇಇ. XX. ೪೬-೨; 1072). ೨. ಅರಳಿದ ; ಬಾಸಣಿಸಿದುದುತ್ಕಟಕುಸುಮಾಸವಸೌರಭದೆ ದೆಸೆಗಳೊಡನಳಿಕುಳಮಂ ವಾಸವವನಿತಾವದನಾಬ್ಜಾಸವಸೇಕಪ್ರಭಿನ್ನಮುಕುಲಂ ವಕುಲಂ (ಆದಿಪು. ೬-೯೬). (ನಾ). ೩. ಮದವೇರಿದ ಆನೆ ; ಮದ್ದಾನೆ: "ಲಗ್ನಃ, ಪ್ರಭಿನ್ನಃ, ಮತ್ತಃ —ಈ ೩ ಮದದಾನೆ" (ಹಲಾಯು. ೩೬-೬೭). [ ಸಂ. ]

**ಪ್ರಭು** (ನಾ). ೧. ರಾಜ; ಅರಸು; ಒಡೆಯ: "ಆರ್ಯಃ, ಪರಿವೃಢಃ, ಸ್ವಾಮಿ, ಪ್ರಭುಃ . . . ಅಧಿಪತಿಃ- ಈ ೧೦ ಒಡೆಯಂ" (ಹಲಾಯು. ೫೭-೦೬೮); ಪ್ರಭುಗಳ್ ಭಯದೊಡನೆ ಕೂಡಿ ಚಿಂತಿಪರಾಗಳ್ (ಹರಿಶ್ಚಾರ. ೨-೨೫); ವೈದ್ಯಗ್ರಂಥವನ್ನು ಬರೆದಾತನು ಕಳಲೆಯ ಪ್ರಭುವಾದ ವೀರ ರಾಜನು (ಕಕಚ. V, ಪ್ರಸ್ತಾವನೆ). ೨. ಬಸವಣ್ಣನ ಸಮಕಾಲೀನನಾಗಿದ್ದ ಶರಣನೊಬ್ಬನ ಹೆಸರು ; ಅಲ್ಲಮ : ಸಿದ್ಧರಾಮನ ಪುರಕೆ ಪ್ರಭು ಬಂದ (ಪ್ರಭುಲಿಂ. ೧೧-೩). ೩. ಒಬ್ಬಾತನ ಹೆಸರು : ಇದಱ ಮುನ್ದೆ ಕೊಣ್ಡಶರ್ಲಕುಪ್ಪ ಕೀರ್ತಿವರ್ಮ ಗೋಸಾಸಿಯ ನಿಱಿಸಿದಾ ಕೀರ್ತ್ತನ ದಿಶಾಪಾಲಸ್ಯಲಿಖಿತಂ ಪ್ರಭುನಾಮಂ (ಎಇ. XXI, ೩೪-೦೪; 751).

**ಪ್ರಭುಗಳುಂಬಳಿ** = ರಾಜನು ಬಿಟ್ಟ ಮಾನ್ಯ : ಮಹಾಜನಂ ಪ್ರಭುಗಳುಂಬಳಿಯುಮಂ ದೇವರುಂಬಳಿಯುಮಂ ಸರ್ವ್ವಬಾಧಾಪರಿಹಾರವಾಗಿ ಕಾದೂಡುವರು (ಶಾಂದೇಶ. ೩-೨೨; 1047). [ಸಂ.]

**ಪ್ರಭುಗೊಡಗೆ** (ನಾ). ರಾಜನು ಕೊಟ್ಟ ಕೊಡುಗೆಯ ಭೂಮಿ : ಪ್ರಭುಗೊಡಗೆ ಗಳುಡುಗಳೂ ಗ್ರಾಮದ ಸೇನಬೋವನ ಕೊಡಗಿ ಮುನ್ತಾದ ಮಾನ್ಯಗಳನೂ ಸರ್ವಮಾನ್ಯವಾಗಿ ಬಿಟ್ಟು (ಎಕ. XIV, ಶ್ರೀರಂಗ. ೦೯೯-೨೦; 1563). [ಪ್ರಭು + ಕೊಡಗೆ (<ಕೊಡುಂಗೆಯ್$_2$)]

**ಪ್ರಭುತೆ** (ನಾ). ಪ್ರಭುವಾಗಿರುವಿಕೆ; ರಾಜನ ಅಧಿಕಾರ; ಪ್ರಭುತ್ವ: ಗಭೀರದೊಳ್ ಗರಿಮೆಯೊಳೂರ್ಜಿತಪ್ರಭುತೆಯೊಳ್ . . . ನಿಸಗಾರ್ ದೊರೆ ಮಾನವರೀ ಧರಿತ್ರಿಯೊಳ್ (ಧರ್ಮಪು. ೧-೬೦); ಪ್ರಭುತೆಯ ತೆರನಂತೆ ಜನರನು ಸೆಳೆವಳು (ಇಂಶಾಪ. ೦೦೬-೨೦). [ಸಂ. ಪ್ರಭುತಾ]

**ಪ್ರಭುತ್ತಿಕೆ** (ನಾ). = ಪ್ರಭುತ್ವ : ಅಸಗೋಡ ಪಲ್ಲವಸಾವಂತನು ಉಬ್ಬೆಂಗಿ ಮೂವತ್ತಱಕೋಳು ತಂನ ಪ್ರಭುತ್ತಿಕೆಯ ಕೂಱಗೋಳದ ಮೂಲಸ್ಥಾನ ಕಲಿದೇವ × × × ನಿವೇದ್ಯಕ್ಕಂ . . . ಬಿಟ್ಟ ದತ್ತಿ (ಸೌಇಇ. IX-i, ೩೩೯-೨೨; 1222). [< ಪ್ರಭುತ್ವ + — ಇಕೆ]

**ಪ್ರಭುತ್ವ** (ನಾ). ಒಡೆತನ; ಅಧಿಕಾರ : ಆರ ನೆಗೞ್ತಿಯುಂ ಬಲಮುಂ ಮಾಯತಿಯುಂ ಚಲಮುಂ ಪ್ರಭುತ್ವಮುಂ ದೂರದೊಳಿರ್ದು ನೋಡೆ ಸೊಗಯಿಪ್ಪುದು ಬೆಟ್ಟದ ನುಣ್ಪಿನಂತೆ (ಕಾವ್ಯಸಾ. ೪೬೩); ಪ್ರಭುತ್ವಗಳು —ಇವು . . . ರಾಜಾಧೀನಪ್ರಭುತ್ವವೆಂತಲೂ . . . ಪ್ರಜಾಧೀನ ಪ್ರಭುತ್ವವೆಂತಲೂ ಎರಡು ವಿಧವು (ಭೂಗೋಳ. ೦೯). [ಸಂ.]

**ಪ್ರಭುಮಾಣಿ** (ನಾ). ಒಬ್ಬಾತನ ಹೆಸರು : ಶ್ರೀಪ್ರಭುಮಾಣಿ ಪರಮಸುಭಗನ್ ಪಗೆವರ ಗಂಧಾಸ್ತಿ ಪಾರ್ವ್ವರ ಇಚ್ಛೆ (ಎಕ. XVI, ಮಧ್ಯಗಿ. ೦೦೯_೦: ೩ನೆಯ ಶತ). [ಪ್ರಭು + ಮಾಣ್ಕೆ]

**ಪ್ರಭುವಳಿತ** (ನಾ). ಅರಸನ ಅಂಕಿತಕ್ಕೆ ಒಳಪಟ್ಟುದು ; ರಾಜನ ಅಧೀನಕ್ಕೊಳಗಾದಂದು : ನಾವು ಎಲ್ಲರನ್ನೂ ಜಯಿಸಿ ರಾಜ್ಯಗಳನ್ನು ಕಟ್ಟಿಕೊಂಡು ಕಳಲೆಯನ್ನು ಮಾತ್ರ ಅವನಿಗೆ ಪ್ರಭುವಳಿತವಾಗಿ ಕೊಟ್ಟು ಇದ್ದೆವು (ಚಾಮವಂ. ೪೬); 'ಪ್ರಭುವಳಿತವಾದ ಕಟ್ಟುಂಬಳಿ' ಎಂಬ ಒಕ್ಕಣೆಯಿದೆ (ಮಂತ್ರಕ.೦೬-೨). [ಸಂ. ಪ್ರಭುವಲಿತ]

**ಪ್ರಭುಶಕ್ತಿ** (ನಾ). [ರಾಜನೀ] ಮಂತ್ರಶಕ್ತಿ, ಪ್ರಭುಶಕ್ತಿ ಮತ್ತು ಉತ್ಸಾಹಶಕ್ತಿಗಳೆಂಬ ಮೂರು ಶಕ್ತಿಗಳಲ್ಲಿ ಒಂದು ; ರಾಜನ ಅಧಿಕಾರದಿಂದ ಬರುವ ಶಕ್ತಿ; ಕೋಶಬಲ ಮತ್ತು ದಂಡಿಸುವ ಶಕ್ತಿ—ಇವುಗಳಿಂದ ಬರುವ ತೇಜಸ್ಸು,—ವರ್ಚಸ್ಸು ; ಆಳುವ ಶಕ್ತಿ : ಉತ್ತಮಪ್ರಭುಶಕ್ತಿಯುಕ್ತ ಜಿನೇಂದ್ರಶಾಸನಭಕ್ತ (ಎಕ. VII, ಶಿಕಾ. ೨೦೯-೦೯; 918) ; ಪ್ರಭುಶಕ್ತಿ ಶಕ್ತಿ ನಿರ್ಮಳ ಮಣಿಭೂಷಣಂ ಫಣಿವಿಭೂಷಣಮಾಗೆ ನೆಗೞ್ತಿಯಂ ಪುದುಗೊಳಿಸಿದನೀಶ್ವರಂ ನೆಗೞ್ದಾರಮಹೇಶ್ವರನೀಗೆ ಭೋಗಮಂ (ಶಂಕಭಾ. ೦-೨); ರಾಜಕೀಯವ್ಯವಸ್ಥೆಗಳು ಪ್ರಭುಶಕ್ತಿ ಇರುವವರ ಅಭಿಪ್ರಾಯಗಳಿಗೆ ಸರಿಯಾಗಿ ರೂಪಾಂತರಗಳನ್ನು ಪಡೆಯುತ್ತವೆ (ಭಾರದ.೨೨೦). 'ಉತ್ಸಾಹಶಕ್ತಿ' ಪರಾ. [ಸಂ.]

**ಪ್ರಭುಸಮ್ಮಿತ** (ನಾ). [ಕಾವ್ಯಮೀ] ಪ್ರಭುಸಮ್ಮಿತ, ಮಿತ್ರಸಮ್ಮಿತ ಮತ್ತು ಕಾಂತಾಸಮ್ಮಿತವೆಂಬ ಮೂರು ಬಗೆಯ ಸಮ್ಮಿತಗಳಲ್ಲಿ ಒಂದು ; ನಮಗೆ ಪ್ರಿಯವಾಗಿರಲಿ ಇಲ್ಲದಿರಲಿ ರಾಜಶಾಸನದಂತೆ ಅವುಗಳನ್ನು ಅನುಸರಿಸಿ ನಡೆಯಬೇಕಾದುದು : ಅಲಂಕಾರಿಕರು ಗ್ರಂಥರಾಶಿಯನ್ನು ಉಪದೇಶದೃಷ್ಟಿಯಿಂದ ಪ್ರಭುಸಮ್ಮಿತ, ಮಿತ್ರಸಮ್ಮಿತ, ಕಾಂತಾಸಮ್ಮಿತ ಎಂದು ಮತ್ತೊಂದು ಪ್ರಕಾರವಾಗಿ ಮೂರು ಭಾಗ ಮಾಡುವರು. "ಹೀಗೆ ಮಾಡಬೇಕು, ಹೀಗೆ ಮಾಡಕೂಡದು" ಎಂದು ಕರ್ತವ್ಯಾಕರ್ತವ್ಯಗಳನ್ನು ವಿಧಿಸುವ ಮತ್ತು ನಿಷೇಧಿಸುವ ವೇದಶಾಸ್ತ್ರಾದಿಗಳು ಪ್ರಭುಸಮ್ಮಿತ (ಕೈಶಿಪ. ೦೬೮ ಅಡಿಟಿ) ; ವಿಧಿ-ನಿಷೇಧಗಳನ್ನು ಪ್ರಭುಸಮ್ಮಿತವಾಗಿ ನಿರೂಪಿಸುವ ವೇದಗಳಲ್ಲಿ ಶ್ರದ್ಧೆಯಿಟ್ಟು ಪ್ರವರ್ತಿಸುವುದೇ ಪ್ರಸ್ತುತವಾಗಿತ್ತು (ಭಾರದ. ೦೨೦). [ಸಂ.]

**ಪ್ರಭೂತ** (ಗು). ೧. ಸಮೃದ್ಧವಾದ ; ಹೆಚ್ಚಾದ ; ಅಧಿಕವಾದ : ಆ ವಿವಿಧಪ್ರಭೂತಭುವನಸ್ತುತಸಾರಸಮಸ್ತವಸ್ತುವಂ ತೀವಿದ ಭಂಡಿಯೊಳ್ . . . ಸಂಜೀವಕ ನಂದಕಾಖ್ಯ ವೃಷಭಂಗಳನಿಂಬೆನೆ ಪೂಡಿ (ಪಂಚತಂ. ೨೩ ೪). ೨. ಹುಟ್ಟಿದ ; ಉಂಟಾದ : ಪುರಾಣಕವಿಪ್ರಭುಪ್ರಯೋಗಾವಿಳಸದುಗ್ರಕೋದಯಮಣಾಯ್ದವಱಿಂ ಸಮೆದೊಂದು ಕಾವ್ಯದಿಂ ಶ್ರೀವಿಜಯಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ (ಕವಿರಾ. ೨-೦೫೫); ಅಭಿಮನ್ಯುಮರಣವಾರ್ತಾಪ್ರಭೂತಶೋಕಾಗ್ನಿ ಧರ್ಮಾತನಯನನಿರದಂದಭಿಭವಿಸಿ ತನ್ನನಳುರ್ದಂತೆ ಭಾಸ್ಕರಂ ಕಂಕಮಾದನಸ್ತಾಚಲದೊಳ್ (ಪಂಪಭಾ. ೦೦-೦೦೬). ೩. ಪಕ್ವವಾದ ; ಬಲಿತ. (ನಾ). ೪. ಹೆಚ್ಚಳ ; ಆಧಿಕ್ಯ : " ಪ್ರಾಜ್ಯಂ, ಭೂರಿ, ಪ್ರಭೂತಂ . . . ಅದಭ್ರಂ-ಈ ೧೮ ಮೊಕ್ಕಳಂ" (ಹಲಾಯು. ೦೦೬-೦೬) ; ಜನಸಾಧಾರಣವೆಂದರೆ, ಒಂದು ದೊಡ್ಡ ಜೀವವನ್ನು ಸೂಚಿಸುತ್ತದೆ ; ಸ್ವಭಾವವಾಗಿ ಅದರ ಅವಶ್ಯಕತೆ ಪ್ರಬಲ ಮತ್ತು ಪ್ರಭೂತ (ಶಿಬಂಧ. II, ೦೯೬). ೫. ಶ್ರೇಷ್ಠವಾದುದು. ೬. ಒಬ್ಬ ವ್ಯಕ್ತಿಯು ಸತ್ತ ನಂತರದ ಹತ್ತನೆಯ ದಿನ ಕೊಡಲಾಗುವ ಮೊಸರನ್ನದ ಬಲಿ : (ಶ). [ಸಂ.]

**ಪ್ರಭೂತೆ** (ನಾ). ಸಮೃದ್ಧವಾದುದು ; ವಿಪುಲವಾಗಿರುವಿಕೆ : "ಬಹುಳಂ ಪ್ರಭೂತಂ ಪ್ರಭೂತಿ [ಶಾಕಂ. ೦] ಬಹುಪುಷ್ಕಳಂ ಪುಷ್ಕಮೆನೆ ಮೊತ್ತಮಕ್ಕುಂ" (ಮಂಗರಾ. ೦೨೬-೬); ಶೈಲಸಾಗರಧರಾಶಾಚಕ್ರವಾಳಾಂಬರಂ ಪರಮಶ್ರೀವಿಜಯ ಪ್ರಭೂತಿಜಯಶ [೦] . . . ಪರಮಾನಂದಿತ ಲೋಕಮೊಪ್ಪೆ ನೆಲೆಗೊಳ್ಗಾಚಂದ್ರತಾರಂಬರಂ (ಕವಿರಾ. ೩-೨೩೦). [ಸಂ.]

**ಪ್ರಭೃತಿ$_1$** (ನಾ). ೧. ತೂಕವುಳ್ಳುದು ; ಶ್ರೇಷ್ಠವಾದುದು ; ಉತ್ತಮವಾದಂದು : ಭಾಸ್ವದುಗ್ಗಣಯುತಕಪಿಲಾದ್ಯ ಪ್ರಭೂತಾವನೀಪಾವನರೂಪ ಶ್ರೀವಿಭೂತಿಪ್ರಭೃತಿಯನುೞಿ ಪತ್ರಪೂರ್ವಕಂ ಲೇಪನಂಗೈದು (ರಾಜಶೇ. ೦೩-೯೬). ೨. ತೂಕದ ವ್ಯಕ್ತಿ; ಶ್ರೇಷ್ಠಪುರುಷ ; ಶ್ರೇಷ್ಠವ್ಯಕ್ತಿ : ಕೊಳಗಾಲದ ವೀರಣ್ಣಶೆಟ್ಟಿ, ಅಣ್ಣಯ್ಯಶಾಸ್ತ್ರಿ ಪ್ರಭೃತಿಗಳೆಲ್ಲಾ ಯೋಚಿಸಿ (ಹೈದರ. ೪೬); ಆಧಾರಗ್ರಂಥಗಳಲ್ಲಿ ನಮೂದಿಸಲ್ಪಟ್ಟ ಕೆಲವು ಹೆಸರುಗಳನ್ನು . . . ನಮ್ಮ ತುಳುನಾಡಿಗೆ ಹೊಂದಿಸಿಕೊಳ್ಳುವ ಪ್ರಯತ್ನವನ್ನು ನಮ್ಮ ನಾಡಿನ ಪ್ರಭೃತಿಗಳು ಮಾಡಿದ್ದಾರೆ (ತುಳುಚಾ.೦೭).
[<ಸಂ. ಭೃತಿ=ಭಾರವಾದುದನ್ನು ಹೊತ್ತುಕೊಂಡಿರುವುದು]

**ಪ್ರಭೃತಿ$_2$** (ಅ). ಮೊದಲಾಗಿ; ಮೊದಲುಗೊಂಡು ; ಪ್ರಾರಂಭಿಸಿ : ಸಿದ್ಧಾಯತನ ಪ್ರಭೃತಿ ನವಕೂಟಂಗಳೊಳಂ ನೆಱೆದು (ಆದಿಪು. ೦-೬೨ ವ) ; ಯಾಚಕ ವಾಚಕ ನರ್ತನ ಕಥಕ ಪುಣ್ಯಪಾಠಕ ಪ್ರಭೃತಿ ಸಮಸ್ತಜನಕ್ಕಂ ಬೇಡಿದುದಂ ಕೊಟ್ಟು (ಸುಕುಮಾ. ೬-೨೫ ವ). [ಸಂ.]

**ಪ್ರಭೆ** (ನಾ). ೧. ಕಾಂತಿ; ಪ್ರಕಾಶ : " ವರ್ಚಃ . . . ಪ್ರಭಾ, ರಶ್ಮಿಃ —ಈ ೧೧ ದೀಪ್ತಿ" (ಹಲಾಯು.೦೨-೬೩); ಪ್ರಭೆಯಿಂ ಚಿಂತಾಮಣಿ ಕಲ್ಪಭೂರುಹಂ ಪುಷ್ಪಮಂಜರಿಯೆನಿಸೆವವೊಲಾ ತ್ರಿಭುವನಭೂಷಣನೆಸೆದಂ (ಅರ್ಜನೇ. ೯-೩೯) ; ಆ ಚಿತ್ತಿನ ಪ್ರಭೆಯಲ್ಲಿ ಶರಣನುದಯಿಸಿದನು (ಸಿದ್ಧೇಪ. ೦೭-೪೩). ೨. ರಶ್ಮಿ ; ಕಿರಣ : "ರೋಚಿಃ . . . ದ್ಯುತಿಃ, ಪ್ರಭಾ ...ಗೌಃ— ಈ ೩೨ ರಶ್ಮಿಗಳ ಪೆಸರ್" (ಪಲಾಯು.೭-೩೯).

**ಪ್ರಭಾಪ್ರಭಾವನ್ಯಾಯ**=ದೀಪ ಮತ್ತು ಅದರ ಪ್ರಕಾಶ ಎರಡೂ ಒಂದೇ ಎಂಬ ನ್ಯಾಯ: ಪ್ರಭಾಪ್ರಭಾವನ್ಯಾಯದಂತೆ ಈ ವಿಶ್ವವು ಈಶ್ವರನಿಗೆ ಶರೀರವಾಗಿದೆ (ಭಾರದ. ೨೬೬). [ಸಂ. ಪ್ರಭಾ]

**ಪ್ರಭೆವೆಱು** (ಕ್ರಿ). ಪ್ರಕಾಶವನ್ನು ಹೊಂದು; ತೇಜಸ್ಸನ್ನು ಪಡೆ;

ಅತುಳಿತಪ್ರಭೆವೆತ್ತು ಸುತನೀ ಗತಿಯೊಳೀಶಧ್ಯಾನತತ್ಪರಮತಿಯೊಳಿರ್ದನು ತಾಯ ಬಸುಱಿಲಿ ವತ್ಸರತ್ರಯವು (ಬಸಪು. ೩-೦೨). [ಪ್ರಭೆ+ಪೆಱು$_1$]

**ಪ್ರಭೇದ** (ನಾ). ೧. ಒಡೆಯುವಿಕೆ; ಮುರಿಯುವಿಕೆ. ೨. ವಿಭಾಗ. ೩. ಪ್ರಕಾರ; ರೀತಿ; ವಿಧ: ರಘಟೆಗಳ (ತೆಲುಗು–ರಗಡ) ಪ್ರಭೇದಗಳನ್ನು ತಿಳಿಸುವ . . . ಈ ಎರಡು ಪದ್ಯಗಳು ಪ್ರಕ್ಷಿಪ್ತಗಳಾಗಿ ಕಾಣುತ್ತವೆ (ಕೈಬಿಡಿ. ೦೩೬). ೪. ವ್ಯತ್ಯಾಸ; ಭೇದ: ಇಂತೀ ಅಂಗ ಪ್ರಾಣಂಗಳಲ್ಲಿಯೂ ಲಿಂಗವೇ ಎಡೆಕಡೆ ಇಲ್ಲದಿರ್ಪ ಪ್ರಭೇದ [ಪಾಠಾಂ. ಭೇಧ]ವನು ಅಱಿದಾತನೇ ಸರ್ವಾಂಗಲಿಂಗಿ (ಸಿದ್ಧೇವ. ೦೦೬-೩೩೫). [ಸಂ.]

**ಪ್ರಭೇದಕ** (ನಾ). ಭೇದಿಸುವವನು; (ಇಂಗಿತವನ್ನು) ಅರಿಯುವವನು: ಪರರಿಂಗಿತಾಕಾರಪ್ರಭೇದನ ಮನ್ನಣೆಗೆ ಬೆಱೆಯದನನು . . . ಪಡಿಹಾಱಿಕನ ಮಾಡುವುದು (ಕುವ್ಯಾಉ. ೩-೯೯). [ಸಂ.]

**ಪ್ರಭ್ರಷ್ಟಕ** (ನಾ). ತಲೆಯಲ್ಲಿ ಧರಿಸಿದ ಹೂಮಾಲೆ: "ಚಂಡಿಕೆಯಲ್ಲಿ ಮುಡಿದ ಹೂ ಪ್ರಭ್ರಷ್ಟಕವೆಂಬುದು" (ಹಲಾಯು. ೯೦-೩೯೯). [ಸಂ.]

**ಪ್ರಮಂಥ** (ನಾ). ಅಗ್ನಿಯನ್ನುಂಟುಮಾಡಲು ಬಳಸುವ ಮರದ ತುಂಡು; ಅರಣಿ: ಮನುಷ್ಯ ಬಿದಿರುಜಾತಿಯ ಕಾಷ್ಠದ ಮೆತ್ತನೆ ಮರದಲ್ಲಿ 'ಪ್ರಮಂಥ'ದಿಂದ (ಅರಣಿಯಿಂದ) . . . ಮಥಿಸಿದಾಗ ಬೆಂಕಿಯಡಗಿದೆ ಯೆಂದು ತಿಳಿಯುತ್ತಾನೆ (ಐದ್ಮಶ್ರ. V ೩೮೫). [ಸಂ.]

**ಪ್ರಮತ್ತ** (ಗು). ೧. ಸೊಕ್ಕುವ; ಮದವೇರುವ: ಸೌಂದರ್ಯದಿಂದ ಪ್ರಮತ್ತವಾಗುವ ಚೇತನ ಶಿವದ ನೆನಹಿನಲ್ಲಿ ನಾಂದು ಹಗುರವಾಗಲಿ (ಸೌಂದ. ೪೦೮). ೨. ಅಜಾಗರೂಕವಾದ; ಎಚ್ಚರಗೇಡಿಯಾದ. (ನಾ). ೩. [ಜೈನ] ಆತ್ಮನ ಎರಡು ಅವಸ್ಥೆಗಳಲ್ಲಿ ಒಂದು; "ಅಶುದ್ಧಾತ್ಮನಲ್ಲಿ ಕೆಳತರಗತಿಯ ಆರು ಗುಣಸ್ಥಾನಗಳಲ್ಲಿ ಕಾಣಬರುವ ಪರಿಣಾಮ" (ಜೈಪಕೋ. ೦೭೭): ಅಂತರ್ಮುಹೂರ್ತಕಾಲಂ ಪ್ರಮತ್ತಾಪ್ರಮತ್ತಪರಾವರ್ತನಸಹಸ್ರಂಗೆಯ್ದು (ಆದಿಪು. ೦೦-೦೯ ವ); [ಮತ್ತಂ]ಮಂತರ್ಮುಹೂರ್ತಕಾಲಂ ಪ್ರಮತ್ತಾಪ್ರಮತ್ತ ಪರಿವೃತ್ತಿ . . . ಪ್ರವೃತ್ತಕರಣಕ್ಷಪಕನಾಗಿ (ಶಾಂತಿಪು. ೦೦-೦೦೦ ವ). 'ಅಪ್ರಮತ್ತ'ಪರಾ. [ಸಂ.]

**ಪ್ರಮತ್ತತೆ** (ನಾ). ಸೊಕ್ಕುವಿಕೆ; ಅಮಲೇರುವಿಕೆ: ಈ ಲಲನೆಯರ ಸೌಂದರ್ಯಾನುಭವದಲ್ಲಿ ಒಂದು ರೀತಿಯ ಪ್ರಮತ್ತತೆ ಮೊದಮೊದಲಿಗೆ ಕಂಡುಬಂದರೂ (ಕುಶೀ. ೮). [ಸಂ. ಪ್ರಮತ್ತತಾ]

**ಪ್ರಮತ್ತಯೋಗ** (ನಾ). [ಜೈನ] "ಕಷಾಯಕ್ಕೆ ಅಧೀನವಾಗಿ ಅಸತ್ಯವನ್ನಾಡುವುದು" (ಜೈಪಕೋ. ೦೭೭): ಉಮಾಸ್ವಾಮಿಯವರು 'ತತ್ತ್ವಾರ್ಥಸೂತ್ರ'ದಲ್ಲಿ 'ಪ್ರಮತ್ತಯೋಗದಿಂದ ಪ್ರಾಣದ ನಾಶವಾಗುವುದೇ ಹಿಂಸೆ' ಎಂದು ಪ್ರತಿಪಾದಿಸುತ್ತಾರೆ (ಜೈಪಕ. ೨೫೦). [ಸಂ.]

**ಪ್ರಮತ್ತಸಂಯುತ** (ನಾ). [ಜೈನ]ಪ್ರಮತ್ತಗುಣಗಳಿಂದ ಕೂಡಿದವನು: ಸಂಜ್ವಲನಕಷಾಯ . . . ದುಸ್ಸ್ವಪ್ನಾದಿ ವ್ಯಕ್ತಾವ್ಯಕ್ತ ಪ್ರಮಾದಂಗಳೊಳು ವರ್ತಿಸುವ ತಪಸ್ವಿಯಾರನೆಯ ಗುಣಸ್ಥಾನವರ್ತಿ ಪ್ರಮತ್ತಸಂಯುತನಕ್ಕುಂ (ಭ್ರಾಪಕಾ. ೭೮-೦೯). [ಸಂ.]

**ಪ್ರಮತ್ತಿ** (ನಾ). = ಪ್ರಮಾದಿ ೨: × × × ವಹಳನ ಪ್ರಮತ್ತಿ ಸಂವತ್ಸರದ ಕಾರ್ತ್ತಿಕ ಬಹ ಸೋಲುದೊಡ ತಂಮಣ್ಣಗೆ ನಿಂದ ವೀರಗಲ್ಲು (ವ್ಯಾಅಂ. ೦೯೯೭. ೦೬-೨: 1399). [< ಪ್ರಮಾದಿ ?]

**ಪ್ರಮಥ** (ನಾ). ಶಿವನ ಪರಿವಾರವರ್ಗದಲ್ಲಿ ಒಬ್ಬ: "ಆತನ ಗಣಂಗಳಂ ಪ್ರಮಥರೆಂಬುದು" (ಹಲಾಯು. ೯-೦೯); ಎಲ್ಲಿ ನೋಡಿದಡಲ್ಲಿ ಮನವೆಳಸಿದರೆ ಆಣೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ (ಬಸವ. ೯೯೫); ಜ್ಯೋತಿಯಿಂದ ಜ್ಯೋತಿ ಉದಯಿಸಿದಂತೆ ಉದಯಿಸಿದ ಶುದ್ಧಚಿದ್ರೂಪರಪ್ಪ ಪ್ರಮಥರು (ಸಿದ್ಧೇವ. ೨೦-೩೩). [ಸಂ.]

**ಪ್ರಮಥಗಣ** (ನಾ). ಶಿವನ ಪರಿವಾರ; ಶಿವಗಣ; ಪ್ರಮಥರ ಸಮೂಹ: ಕಲ್ಯಾಣಕ್ಕೆ ಪ್ರಮಥಗಣಂಗಳ ರುದ್ರಗಣಂಗಳ ಅಮರಗಣಂಗಳ . . . ತಂದು ನೆರಹಿದಾತ ನಮ್ಮ ಬಸವಯ್ಯನು (ಶೀಲವ. ೪. ೩-೯); ಘನತರ ಪ್ರಮಥಗಣರೊಡನೆ ತಾಂಡವಮನೆಸಗುವನು (ಏಕ್ಕೆಶ್ರ. ೨-೦-೩೭). [ಸಂ.]

**ಪ್ರಮಥತ್ವ** (ನಾ). ಶಿವಗಣದ ಪದವಿ: ಕಾಲಕಾಲಂ ಮೆಚ್ಚಿ ಕರುಣಾಲೋಲದಿಂ ಪ್ರಮಥತ್ವಮಂ ಕೊಡೆ (ಬಸಪು. ೨೭-೯೭). [ಸಂ.]

**ಪ್ರಮಥನ** (ನಾ). ೧. ಕಡೆಯುವಿಕೆ; ಮಥಿಸುವಿಕೆ: ಸುಪ್ರಸನ್ನರು ನೀವು ನಿಮ್ಮುಭಯಪ್ರಕಟತರ ವಚನಪೀಯೂಷಪ್ರಮಥನಾಭಾವದಿಂದೀ ಶಿವಗಣಾವಳಿಯು . . . ವರ್ಧಿಸಿತು (ಬಸಪು. ೩೭-೯೮). ೨. ಪೀಡಿಸುವಿಕೆ; ಹಿಂಸಿಸುವುದು. ೩. ಕೊಲೆ; ವಧೆ. [ಸಂ.]

**ಪ್ರಮಥನಾಥ** (ನಾ). ೧. ಪ್ರಮಥರ ಒಡೆಯ; ಈಶ್ವರ: ಬರುತಿರ್ದನಾ ಪ್ರಮಥನಾಥಂ (ಏಕ್ಕೆಪು. ೨-೩-೦೬). ೨. ಗಣಪತಿ: (೩). [ಸಂ.]

**ಪ್ರಮದ** (ಗು). ೧. ಮತ್ತೇರಿದ; ಸೊಕ್ಕಿದ: 'ಪ್ರಮದಾಳಿ' ಪರಾ. ೨. ಎಚ್ಚರಗೇಡಿಯಾದ. (ನಾ). ೩. ಸಂತೋಷ; ಆನಂದ: "ಪ್ರಮೋದಃ, ಪ್ರಮುದಃ . . . ಸುಖಂ—ಈ ೧೩ ಸುಖದ ಪೆಸರ್" (ಹಲಾಯು. ೨೦-೦೨೩); ಆನಂದನೃತ್ಯಪ್ರಮದಮನಧಿಕಂ ಮಾಡಿ (ಆದಿಪು. ೭-೦೨೬); ಧರ್ಮ್ಮಾರ್ಜನಕಂ ಸನ್ಮಾರ್ಗ್ಗವಿದ್ಯೋತನಂ ಪ್ರಮದಾಪೂರಿತ ಮಿತ್ರಚಕ್ರನಜಡಂ ನಿತ್ಯೋದಯಭ್ರಾಜಿ ಲೋಕಮನೆಲ್ಲಂ ಬೆಳಗುತ್ತುಮಿರ್ಕ್ಕೆ (ಎಕ. VI, ಕಡೂರು. ೩೭-೩೮,1172). ೪. ದತ್ತೂರ. ೫. ಕಾಲಿನ ಹರಡು. [ಸಂ.]

**ಪ್ರಮದಂಬೆಱು** (ಕ್ರಿ). ಆನಂದವನ್ನು ಹೊಂದು: ಪ್ರಮದಂಬೆತ್ತ ಚಕೋರದಂಪತಿಯ ವೋಲ್ (ಕುಸುಮಾ. ೪. ೫೯). [ಪ್ರಮದ+ಪೆಱು$_1$]

**ಪ್ರಮದವನ** (ನಾ). ರಾಜನ ಅಂತಃಪುರದ ಸ್ತ್ರೀಯರ ವಿಹಾರಕ್ಕಾಗಿರುವ ಉದ್ಯಾನವನ: "ಅರಸರುಂ ಅರಸಿಯರುಂ ಕೂಡಿಹ ಬನಮಂ ಪ್ರಮದವನಮೆಂಬುದು" (ಹಲಾಯು. ೩೭-೭೦); ಅಂತಃಪುರಪ್ರಮದವನ ಪ್ರವಿಷ್ಟನಾಗಿ (ಆದಿಪು. ೮-೪೦ವ); ತರಳಿಕೆವೆರಸು ಪ್ರಮದವನಪಕ್ಷದ್ವಾರದಿಂ ಪೊಱಮಟ್ಟು ಪೋಗುತ್ತುಂ (ಕಾದಂಪೂ. ೯೮೨). [ಸಂ.]

**ಪ್ರಮದಾಳಿ** (ನಾ). ೧. ಮದಿಸಿದ ದುಂಬಿ; ಸೊಕ್ಕಿದ ಭ್ರಮರ. ೨. ಸ್ತ್ರೀಯರ ಸಮೂಹ; ಹೆಂಗಸರ ಗುಂಪು: ೧, ೨: ಆ ಮಂಟಪಂ ಮಧುಸಮಯದಂತೆ ಪೊಲ್ಮೆವೆತ್ತು ಪ್ರಮದಾಳಿ ಸಂಮನೋಜ್ಞಮುಂ (ರಾಜಶೇ. ೬-೬ವ). [ಸಂ. ಪ್ರಮದಾಲಿ (ಪ್ರಮದಾ+ಅಳಿ (=ಅಲಿ); ಪ್ರಮದ+ಅಳಿ (=ಅಲಿ)]

**ಪ್ರಮದೆ** (ನಾ). ೧.ಹೆಂಗಸು; ಸ್ತ್ರೀ: "ರಾಮಾ . . . ಪ್ರಮದಾ, ರಮಣೀ . . . ಯುವತಿಃ —ಈ ೨೮ ಸ್ತ್ರೀಯರ್" (ಹಲಾಯು. ೭೯ ೩೨೯). ೨. ತರುಣಿ; ಯುವತಿ ವಿಳಾಸವಿಭ್ರಮಸಿಂಹಾಸನಾಸೀನನುಂ ಪ್ರಮದಾಹಸ್ತವಿನ್ಯಸ್ತಚಾಮರಕ್ರಮುಕಮಳನುಂ (ಶಂಕರಭಾ. ೯-೨೮ವ); ಪ್ರಮದೆಯರಂ ಮನೋಭವನೆ ಸೂಱೆಗೊಳ್ಳೆದ್ದಪನಗ್ನಿಬಾಣದಿಂ (ಶಂಪ್ರಪು. ೭-೦೩೩). ೩. ಸುಂದರಿ. ೪. ಹೆಂಡತಿ; ಪತ್ನಿ. [ಸಂ. ಪ್ರಮದಾ]

**ಪ್ರಮದೋದ್ಯಾನ** (ನಾ). = ಪ್ರಮದವನ: ಪ್ರಮದೋದ್ಯಾನದೊಳಾವ ನಿರ್ಜನವನಂ ಕೊಂಡಿಕ್ಕುಂ (ಶಂರಾಮಾ. ೦೦-೦೦೬). [ಸಂ.]

**ಪ್ರಮದೋನ್ಮತ್ತ** (ನಾ). ಅತಿಶಯವಾಗಿ ಮತ್ತೇರಿದವನು; ಮದೋನ್ಮತ್ತನಾದವನು: ಮತ್ತನತಿಶ್ರಾಂತನು ಪ್ರಮದೋನ್ಮತ್ತನತಿ ಕುಪಿತಾನನನು . . . ಇಂತೀ ಹತ್ತುಜನವಾವಾಗ ಧರ್ಮದ ತತ್ತ್ವವಣೆಗಳ ನಱಿಯರ್ರೈ (ಕುವ್ಯಾಉ. ೩-೬೬). [ಸಂ.]

**ಪ್ರಮಯೆ** (ನಾ). ೧. ಮರಣ; ಸಾವು. ೨. ಕೊಲ್ಲುವುದು; ಕೊಲೆ:

"ಮಾರಣಂ . . . ಪ್ರಮಯಾ, ಹಿಂಸಾ . . . ಸಂಜ್ಞಪನಂ—ಈ ೨೧ ಕೊಲೆ" (ಶಠಾಯು. ೭೬-೩೨೯). ೩. ನಾಶ ; ಅಳಿವು. [ಸಂ. ಪ್ರಮಯ]

**ಪ್ರಮಾಣ** (ನಾ). ೧. (ಎತ್ತರ, ಉದ್ದ ಮತ್ತು ಅಗಲ ಇತ್ಯಾದಿಗಳ) ಅಳತೆ: "ಪ್ರಮಾಣ ಪವಣೆಂದಕ್ಕುಂ" (ಕಬಕಂ. ೨೪೦) ; ಮಾನ್ಯದ ಭೂಮಿಯ ನಿವೇಶನದ ಪ್ರಮಾಣವನ್ನನೆ (ಎಇ. XX. ೬-೦೬; 1012); ತಾರೆಕಾಯ ಪ್ರಮಾಣ ಗುಳಿಗೆಯಂ ಮಾಡಿ (ಸಕಕ್ಕ. ೩೪೫). ೨. ಎರಡು ಮೊತ್ತಗಳಿಗಿರುವ ಪರಸ್ಪರ ಭಾಜ್ಯ, ಭಾಜಕಸಂಬಂಧ: ಗಾತ್ರವು ಯಾವ ಪ್ರಮಾಣ (Ratio)ದಲ್ಲಿ ಹೆಚ್ಚುವುದೋ . . . ಒತ್ತಡವು ಅದೇ ಪ್ರಮಾಣದಲ್ಲಿ ಹೆಚ್ಚುತ್ತದೆ(ಭೌತಶಿ. ೨೪೪). ೩. ಮರ್ಯಾದೆ. ೪. ಯಥಾರ್ಥಜ್ಞಾನ ; ಸತ್ಯ : ಪ್ರಮಾಣಮಂ ಜ್ಞಾನಮೆಂಬುದು (ತಸೂವ್ಯ . ೩೦); ದೂರತ್ವ ಸೂಕ್ಷ್ಮತ್ವ ಮೊದಲಾದ ವಿಷಯದೋಷಗಳು, ಕಾಚಕಾಮಲ ಅನವಧಾನ ನಿದ್ರಾ ಮೊದಲಾದ ಕರಣದೋಷಗಳು ಇಲ್ಲದಿರುವಾಗ, ಬರುವಂಥ ಜ್ಞಾನವು ಪ್ರಮಾಣವು (ಹಿಂದಸಾ. ೦೭೬). ೫. ವಿಧಿ; ನಿಯಮ. ೬. ಕಾರಣ ; ಹೇತು : ಜ್ಞಾನೋತ್ಪತ್ತಿ, ವ್ಯಾಪಾರಾಶ್ರಯದ ಅಸಾಧಾರಣ ಹೇತುವೇ ಪ್ರಮಾಣವೆನ್ನಿಸಿಕೊಂಬುದು (ವಿವೇಕ. ೦೬) ೭. ವಸ್ತುವಿನ ಯಥಾರ್ಥಜ್ಞಾನವನ್ನು ಕೊಡುವ ಸಾಧನ ; ಆಧಾರ ; ಸಾಕ್ಷಿ ; ರುಜುವಾತು : ಸದ್ಗುರುವಿನ ವಚನ ಪ್ರಮಾಣವೇ ಅಲ್ಲ (ಸಿದ್ಧೇವ. ೨೦-೩೭); ಪರಮಾತ್ಮಸ್ವರೂಪವನ್ನು ತಿಳಿಸಲು ಶ್ರುತಿಗಿಂತಲೂ ಅಧಿಕವಾದ ಪ್ರಮಾಣವನ್ನು ನಾವು ಕಾಣಲಾರೆವು (ಶಶ್ರಿ. ೨೩). ೮. ಶಾಸ್ತ್ರ; ಆಗಮ . ೯. ಅಧಿಕೃತವಾಗಿ ತೀರ್ಮಾನ ಹೇಳುವವನು ; ತೀರ್ಪುಗಾರ. ೧೦. ಅವಧಿ; ಗಡುವು: ಯಶೋಭದ್ರೆಯ ಬೇಡಿದ ಮೋನದ ದಿವಸದ ಪ್ರಮಾಣಾವಸಾನದೊಳ್ . . . ಸುಕುಮಾರಸ್ವಾಮಿ ಕೇಳ್ದು ಜಾತಿಸ್ಮರನಾಗಿ (ವಡ್ಡಾರಾ. ೨೬-೬). ೧೧. [ಯೋಗ] ಐದು ಬಗೆಯ ಚಿತ್ತವೃತ್ತಿಗಳಲ್ಲಿ ಒಂದು : ಪ್ರಮಾಣ, ವಿಪರ್ಯಯ ವಿಕಲ್ಪ, ನಿದ್ರೆ ಸ್ಮೃತಿ—ಈ ಐದೂ ಅಂತಃಕರಣ ವೃತ್ತಿಗಳು (ಭಾರದ. ೦೨೭); ಅಬಾಧಿತವಾದ ಚಿತ್ತವೃತ್ತಿಗೆ ಪ್ರಮಾಣವೆಂದು ಹೆಸರು (ಹಿಂದಸಾ. ೦೦೩). ೧೨. [ನ್ಯಾಯಶಾ] ಹದಿನಾರು ಪದಾರ್ಥಗಳಲ್ಲಿ ಒಂದು : ನ್ಯಾಯದರ್ಶನದಲ್ಲಿ ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ . . . ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದಸಾ. ೦೦೨). 'ಪ್ರಮಾಣಶಾಸ್ತ್ರ' ಪರಾ. ೧೩. ಸನ್ನಿಧಿ ; ಸವಿಾಪ : "ಸಮಸ್ಥಾನ ಮಂಜುಳಮುಂ ಕಾರಣ ನಿತ್ಯಶಾಸ್ತ್ರ ತಟ ಸತ್ಯಂ ಕೂಟಮುಂ ಧರ್ಮಮುಂ ಮಿಳನುಂ ಸನ್ನಿಧಿಯುಂ ಪ್ರಮಾಣಮೆನಿಕುಂ" (ಪಾವಾರ. ೦೪೦).

**ಪ್ರಮಾಣ ಮಾಡು** = (ಸಾಕ್ಷಿಯ ಎದುರು) ಆಣೆ ಮಾಡು : ಪ್ರಮಾಣ ಮಾಡಿಸಬೇಕಾದರೆ ಇದನ್ನು ಮುಟ್ಟಿ ಪ್ರಮಾಣ ಮಾಡಬೇಕು (ನಮ್ಮೂರು. ೦೦); ಅವರು ದೇವಸ್ಥಾನಕ್ಕೆ ಹೋಗಿ ಅಲ್ಲಿ ಪ್ರಮಾಣ ಮಾಡಬೇಕು (ಕ್ರಪಾಇ. II. ೪೭೯). **ಪ್ರಮಾಣವಾಗಿ ಹೇಳು** = ಆಣೆ ಮಾಡಿ ಹೇಳು: ಸುಳ್ಳು ಹೇಳಬೇಡ, ಪ್ರಮಾಣವಾಗಿ ಹೇಳು (ರೂಢಿ). [ಸಂ.]

**ಪ್ರಮಾಣಗ್ರಂಥ** (ನಾ). ಆಧಾರಗ್ರಂಥ; ಅಧಿಕೃತವಾದ ಗ್ರಂಥ: ಕೆಲವೊಂದು ಪ್ರಮಾಣಗ್ರಂಥಗಳ ಕೊರತೆಯನ್ನು ಇಂದು ನಾವು ಅನುಭವಿಸುತ್ತಿದ್ದೇವೆ (ನವ್ಯಕಾ. ೭) ; ಈ ದಿಶೆಯಲ್ಲಿ ನಾವು ಅನೇಕ ಪ್ರಮಾಣ ಗ್ರಂಥಗಳನ್ನು ನಿರೀಕ್ಷಿಸಬಹುದು (ದ್ರಾವಿಶಿ. ೩ ಪಿನ್ನಲೆ). [ಸಂ.]

**ಪ್ರಮಾಣತೆ** (ನಾ). ಅಧಿಕಾರ ; ಪ್ರಭುತ್ವ : ಸರ್ವಜ್ಞಪ್ರಮಾಣತೆಯಿಂ ತತ್ಪ್ರಮಾಣಿಕಾಗಮದೊಳ್ ಪೇಳ್ದುದೆಲ್ಲಂ ಅವಶ್ಯಂ ತಪ್ಪುವುದಲ್ಲೆಂದು (ಅಜಿತ. ೮-೨೮ ವ). [ಸಂ. ಪ್ರಮಾಣತಾ]

**ಪ್ರಮಾಣನ** (ನಾ). ೧. ದೃಢೀಕರಿಸುವಿಕೆ; ಸಮರ್ಥನೆ : ರಚಿತವಾದ ರಾಜ್ಯದ ಯಾವುದಾದರೂ ವಿಧಿಯನ್ನು . . . ಅವರು ಅದನ್ನು ಪ್ರಮಾಣನ ಮಾಡುವುದಕ್ಕಾಗಿ ಒಪ್ಪಿಸಬಹುದು (ಭಾರಾಸ. ೧೪). ೨. = ಪ್ರಮಾಣ ಪತ್ರ ೧ : ಅದರ ಮೇಲೆ ಲೋಕಸಭೆಯ ಅಧ್ಯಕ್ಷರವರ ಹಸ್ತಾಕ್ಷರ ಸಹಿತವಾಗಿ ಪ್ರಮಾಣನವು ಲಿಖಿತವಾಗಿರತಕ್ಕುದು (ಭಾರಾಸ. ೩೬). **[ಸಂ.]**

**ಪ್ರಮಾಣನಿರ್ಮಾಣ** (ನಾ). [ಜೈನ] ಸ್ಥಾನನಿರ್ಮಾಣ, ಪ್ರಮಾಣ ನಿರ್ಮಾಣವೆಂಬ ಎರಡು ಬಗೆಯ ನಿರ್ಮಾಣನಾಮಕರ್ಮಗಳಲ್ಲಿ ಒಂದು; ಯೋಗ್ಯಪ್ರಮಾಣದಲ್ಲಿ ಇಂದ್ರಿಯಗಳನ್ನು ರಚಿಸುವಂಥದು : ನಿರ್ಮಾಣಂ ತದ್ವಿವಿಧಂ ಸ್ಥಾನನಿರ್ಮಾಣಂ ಪ್ರಮಾಣ ನಿರ್ಮಾಣಂ (ಗೊಮ್ಮಸಾ. ೬-೪). [ಸಂ.]

**ಪ್ರಮಾಣಪತ್ರ** (ನಾ). ೧. ವಿಷಯವನ್ನು ರುಜುವಾತು ಪಡಿಸಲು ಲಿಖಿತದ ಮೂಲಕ ಸಮರ್ಥಿಸಿಕೊಳ್ಳುವ ಪತ್ರ ; ದೃಢೀಕರಣಪತ್ರ; ಆಧಾರಪತ್ರ : ಕಮಂಡಲಮುಂ ಪ್ರಮಾಣಪತ್ರಮುಂ ಸಹಿತ ಬಂದು ನಂಬಿಯಣ್ಣನ ಸಿಂಹಾಸನದ ಮುಂದೆ ನಿಲೆ (ನಂಬಿರ. ೬-೮೪); ಆಸ್ಪತ್ರೆಯಿಂದ ಪ್ರಮಾಣಪತ್ರವನ್ನು ಪಡೆದು ಹೆಂಡತಿಯ ಪರವಾಗಿ ತಾನೇ ಅರ್ಜಿಯನ್ನು ಬರೆದು (ಪಂಕಪ್ಪ. ೩೦೦). ೨. ಅರ್ಹತಾಪತ್ರ; ಯೋಗ್ಯತಾಪತ್ರ: ಅವನ ಪ್ರತಿಭೆಗೆ ಪಾಂಡಿತ್ಯಕ್ಕೆ ದೊರೆತ ಬಹುಮಾನ, ಪ್ರಮಾಣಪತ್ರಗಳ ಗೆಂತೂ ಲೆಕ್ಕವಿಲ್ಲ (ಹೊಸಕ್ಷಿ. ೩೭). [ಸಂ.]

**ಪ್ರಮಾಣಪುರುಷ** (ನಾ). ೧. ಯಾರ ನಿರ್ಧಾರದಲ್ಲಿ ನಂಬಿಕೆಯುಂಟಾಗುವುದೊ ಅಂಥ ಪಾಂಡಿತ್ಯದ ಅಧಿಕಾರವುಳ್ಳ ವ್ಯಕ್ತಿ; ಆಧಾರವಾಗಿರಬಲ್ಲ ವ್ಯಕ್ತಿ : ಕೇಶಿರಾಜನು ತನ್ನ ವ್ಯಾಕರಣಗ್ರಂಥದಲ್ಲಿ 'ಸುಮಾರ್ಗಮಿದಟಿಗೊಳೆ ಲಕ್ಷ್ಯಂ' ಎಂದು ಹೇಳಿದ ಪ್ರಮಾಣಪುರುಷರಲ್ಲಿ ಗುಣನಂದಿಯನ್ನು ಹೆಸರಿಸಿದ್ದಾನೆ (ಕಸಾಚ. ೪೬). ೨. ನ್ಯಾಯಾಧಿಕಾರಿ; ನ್ಯಾಯಾಧೀಶ; ತೀರ್ಪುಗಾರ. [ಸಂ.]

**ಪ್ರಮಾಣಪೂರಣ** (ನಾ). ಪರಿಮಾಣವನ್ನು ಸೂಚಿಸುವಿಕೆ; ವರ್ಗೀಕರಣ : ಅನೆಯ ಪ್ರತ್ಯಯಮನಿತಿನಿತೆನಿತೆಂಬ ಲಸತ್ಪ್ರಮಾಣಪೂರಣದೊಳ್ ನೆಟ್ಟನೆ ಸಂಖ್ಯಾಪೂರಣದೊಳ್ ಜನಿಯಿಪುದು ಮೆಯ್ಯಂಬುದಿಕ್ಕುಮೆಣಿಸುವ ಸೂಟಿಗೊಳ್ (ಶಮದ. ೨೦೭). [ಸಂ.]

**ಪ್ರಮಾಣವಚನ** (ನಾ). (ಅಧಿಕಾರ ಸ್ವೀಕಾರದ ಪ್ರಾರಂಭದಲ್ಲಿ ಮಾಡುವ) ಪ್ರತಿಜ್ಞೆ ;ಆಣೆ : ಈ ಕೆಳಗೆ ಕಂಡ ಪ್ರಪತ್ರದ ಮೇರೆಗೆ ಪ್ರಮಾಣವಚನ ಅಥವಾ ಪ್ರತಿಜ್ಞಾವಚನ ಸ್ವೀಕಾರ ಮಾಡತಕ್ಕುದು (ಭಾರಾಸ.೩೦); ವಧುಗಳಿಬ್ಬರೂ ಹೆಜ್ಜೆ ಹೆಜ್ಜೆಗೂ ನಿಂತು ಅಗ್ನಿ, ಸದಸ್ಯುಗಳ ಎದುರಿಗೆ ಪ್ರಮಾಣವಚನಗಳನ್ನಿತ್ತರು (ಶಾಂತಲಾ. ೦೦೩). [ಸಂ.]

**ಪ್ರಮಾಣವಾಕ್ಯ** (ನಾ). ಆಧಾರಸಹಿತವಾದ ವಾಕ್ಯ; ಅಧಿಕಾರವಾಣಿ: ತಾನಾಡಿದುದು ಪ್ರಮಾಣವಾಕ್ಯ. ಅದಕ್ಕೆ ಯಾರೂ ಇದಿರಾಡಬಾರದು (ಬೆಕಂಬಾ. ೯೦). [ಸಂ.]

**ಪ್ರಮಾಣವಾಚಕ** (ನಾ). [ವ್ಯಾಕ] ಅನಿತು, ಇನಿತು, ಎನಿತು ಇತ್ಯಾದಿ ಪರಿಮಾಣವನ್ನು ಸೂಚಿಸುವ ಶಬ್ದ : 'ಪ್ರಮಾಣ ಸೂಚಕ' ಪರಾ. [ಸಂ.]

**ಪ್ರಮಾಣಶಾಸ್ತ್ರ** (ನಾ). ಸಾಕ್ಷಿ, ಆಧಾರಗಳಿಂದ ಪರೀಕ್ಷೆ ಮಾಡುವ ಶಾಸ್ತ್ರ; ನ್ಯಾಯಶಾಸ್ತ್ರ : ವೈಶೇಷಿಕವನ್ನು ಪ್ರಮೇಯಶಾಸ್ತ್ರವೆಂದೂ ನ್ಯಾಯವನ್ನು ಪ್ರಮಾಣಶಾಸ್ತ್ರವೆಂದೂ ಪರಿಗ್ರಹಿಸಿ ಒಂದು ಶಾಸ್ತ್ರವಾಗಿ ಪರಿಷ್ಕರಿಸಿರುವರು (ಹಿಂದಸಾ. ೦೦೦). [ಸಂ.]

**ಪ್ರಮಾಣಶ್ರುತಿ** (ನಾ). [ಸಂಗೀತ] ಶ್ರುತಿಯ ಪರಿಕೆಯ ಮೂರು ಹಂತಗಳಲ್ಲಿ ಒಂದು; ಶ್ರುತಿಯಲ್ಲಿರುವ ಪ್ರಮಾಣಶ್ರುತಿ, ನ್ಯೂನ ಶ್ರುತಿ ಮತ್ತು ಪೂರ್ಣಶ್ರುತಿ ಎಂಬ ಮೂರು ಬಗೆಯ

ಪ್ರಮಾಣಾಂತರಗಳಲ್ಲಿ ಒಂದು : ಈ ಪ್ರಮಾಣಾಂತರಗಳು ಕ್ರಮವಾಗಿ ಏರಿಕೆಯ ಕ್ರಮದಲ್ಲಿವೆ. ಇವುಗಳಲ್ಲಿ ಮೊದಲ ಹಂತ 'ಪ್ರಮಾಣಶ್ರುತಿ' (ಸಂಗೀತಂ.೪). [ಸಂ.]

**ಪ್ರಮಾಣಸಪ್ತಭಂಗಿ** (ನಾ). [ಜೈನ] ಪ್ರಮಾಣಸಪ್ತಭಂಗಿ ಮತ್ತು ನಯಸಪ್ತಭಂಗಿ ಎಂಬ ಎರಡು ಬಗೆಯ ಸಪ್ತಭಂಗಿಗಳಲ್ಲಿ ಒಂದು : "ಪ್ರಮಾಣಸಪ್ತಭಂಗಿಯೆಂದರೆ—ಒಂದು ಧರ್ಮವನ್ನು ತಿಳಿಸುವುದರ ಮೂಲಕ ನಿಯಮವಾಗಿ ಆ ಧರ್ಮದೊಡನೆ ಎಲ್ಲ ಧರ್ಮ ಸ್ವರೂಪವಾದ ವಸ್ತುವನ್ನು ಬೋಧಿಸತಕ್ಕ ವಾಕ್ಯ ಎಂದರ್ಥ" (ಜಾತತ್ತ್ವ. ೨೧೬). 'ನಯಸಪ್ತಭಂಗಿ' ಪರಾ. [ಸಂ.]

**ಪ್ರಮಾಣಸಿದ್ಧ** (ನಾ). ಆಧಾರಗಳಿಂದ ಸಾಧಿಸಿದುದು ; ದೃಢೀಕರಿಸಿದುದು : ಆದಱಿಂದಮಾತ್ಮವಚನಂ ಪ್ರಮಾಣಸಿದ್ಧಂಗಳಾಗಿ ಪದಾರ್ಥಂಗಳೆಲ್ಲಂ ಪ್ರತ್ಯಕ್ಷಂಗಳಲ್ಲದುವಿಲ್ಲ (ಶಾಂತಿಪು. ೧೬-೪೦೨). [ಸಂ.]

**ಪ್ರಮಾಣಸೂಚಕ** (ನಾ). ಪರಿಮಾಣವನ್ನು ಸೂಚಿಸುವಂಥದು ; ಅಳತೆಯನ್ನು ತೋರಿಸುವಂಥದು : ಅನಿತಿನಿತುಯೆನಿತೆನೆ ಪ್ರಮಾಣ ಸೂಚಕಮಕ್ಕುಂ (ಶಬ್ದಸ್ಮೃ. ೬೦). [ಸಂ.]

**ಪ್ರಮಾಣಸ್ವೀಕಾರ** (ನಾ). (ಅಧಿಕಾರಸ್ವೀಕಾರದ ಪ್ರಾರಂಭದಲ್ಲಿ) ಪ್ರತಿಜ್ಞೆಯನ್ನು ಕೈಗೊಳ್ಳುವುದು : ಈ ದಿನ ಮಂತ್ರಿಗಳ ಪ್ರಮಾಣ ಸ್ವೀಕಾರ ಕಾರ್ಯಕ್ರಮವಿದೆ (ರೂಢಿ). [ಸಂ.]

**ಪ್ರಮಾಣಾಲಂಕಾರ** (ನಾ). [ಕಾವ್ಯಮೀ] ಅನುಮಾನ, ಪ್ರತ್ಯಕ್ಷ ಮೊದಲಾದುವುಗಳನ್ನು ಬಳಸಿ ಮಾಡಿದ ಕಾವ್ಯಾಲಂಕಾರ : ರಸವದಾದಿ ಏಳು ಅಲಂಕಾರಗಳೂ, ಪ್ರತ್ಯಕ್ಷಾದಿ ಎಂಟು 'ಪ್ರಮಾಣಾಲಂಕಾರ'ಗಳೂ ವಸ್ತುತಃ ಅಲಂಕಾರಗಳೇ ಅಲ್ಲ (ಕೃಬಿಡಿ. ೨೫೦). [ಸಂ.]

**ಪ್ರಮಾಣಿಕ$_1$** (ನಾ). [ಛಂದ] ಅನುಷ್ಟುಪ್ಪು ಛಂದಸ್ಸಿನ ಒಂದು ವೃತ್ತದ ಹೆಸರು : ಜರಂಲಗಂ 'ಪ್ರಮಾಣಿಕಂ (ಕೃಬಿಡಿ. ೭೯). [ಸಂ. ಪ್ರಮಾಣಿಕಾ]

**ಪ್ರಮಾಣಿಕ$_2$** (ನಾ). ೧. ಅಳತೆಯಾಗಿರುವಿಕೆ. ೨. ಆಧಾರವನ್ನೊದಗಿಸುವಿಕೆ. ೩. ಒಂದು ಅಳತೆ; ಮೊಳ : "ಅಳಿವ ಮೊಟನು ಪ್ರಮಾಣಿಕಮೆನಿಕ್ಕು" (ಮಂಗರಾ.೯೫-೯). [ಸಂ.]

**ಪ್ರಮಾಣಿಸು** (ಕ್ರಿ). ೧. ಅಳೆ ; ತೂಕ ಮಾಡು : ಎಲ್ಲಾ ಲೋಕವುಂ ಪದಿನಾಲ್ಕು ರಜ್ಜುವೆಂದು ಪ್ರಮಾಣಿಸುವುದಾಗದು (ಶಾಸ್ತ್ರಟೀ. ೧೦೦-೫). ೨. ಆಧಾರಸಮೇತವಾಗಿ ಪರೀಕ್ಷಿಸಂ; ಪರಿಶೀಲಿಸಂ : ಪ್ರತ್ಯಕ್ಷಮಿರೆ ಪ್ರಮಾಣಿಸಿ ನೋಡಬೇಕೆಂಬುದತ್ಯಧಿಕ ನೀತಿಶಾಸ್ತ್ರಮದು (ಚಪು. ೯-೨೬); ಇದನ್ನು ಪ್ರಯೋಗಪರೀಕ್ಷೆಯಿಂದ ಪ್ರಮಾಣಿಸಿ ನೋಡಿರುವೆನು (ವಿಜ್ಞಾನ. ೨೯) ; ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡು (ಗಾದೆ). ೩. ಅರಿ ; ತಿಳಿ : ಕೃಷಿಯ ಮಾಡುವಾಗ ಪಶುಪತಿಗೆಂದೇ ಪ್ರಮಾಣಿಸಿ . . . ಮಾಡುತಿಪ್ಪ ಭಕ್ತನ ಅಂಗಳವೇ ವಾರಣಾಸಿ (ಮೋಳಿಗೆ. ೦೫-೩೭). ೪. ರುಜುವಾತು ಮಾಡು : ಶಿವಂ ಶಿವಂಕರನೆಂಬುದಂ ಪ್ರಮಾಣಿಸಿ ತನ್ನಿಗಮಭಕ್ತಿಯುಂ ಉರ್ವಿಯೊಳ್ ಪ್ರಕಟೀಕರಿಪೆನು (ಶಬ್ದರಾ. ೧-೯) ; ಈ ಮಾತನ್ನು ಅವಳು ಪ್ರಮಾಣಿಸಿ ಕೊಡದೆ ಬಿಡತಕ್ಕವಳಲ್ಲ (ಇಶ್ವಕ. ೨೫೦). [ಪ್ರಮಾಣ + – ಇಸು]

**ಪ್ರಮಾಣು** (ನಾ). ೧. ಅಳತೆ ; ಪ್ರಮಾಣ : ನಾಯಕವಾಡಿಗಳು ಪೂರ್ವ ಭೊ × ಹಾನುಭವಿಸಿ ಬಹ ಹುಟ್ಟುವಳಿ × ಕು ಪ್ರಮಾಣು ಹೊಂನು (ಎಕ. VII, ಶಿವಮೊ. ೬೦-೨೬ ; 1431) ; ಯಿ ಪ್ರಮಾಣಿನ ಉಂಬಳಿಯ ಸರ್ವಮಾನ್ಯದ ಗ್ರಾಮವನೂ ನಡಸಿ ಬಾರದೆ ಆರೊಬ್ಬರು ಅಳುಪಿದರೆ ವಾರಣಾಸಿಯಲಿ ತಮ್ಮ ತನ್ದೆ ತಾಯನೂ ಗೋವು ಬ್ರಾಂಹ್ಮರನು ಕೊನ್ದ ಪಾಪಕೆ ಹೋಹರು (ಎಕ. XIV, ಗುಂಡ್ಲು.ಶೀ. ೦೩೨-೦೪ ; 1540). ೨. ಸಾಕ್ಷಿ ; ಆಧಾರ : ಆಚಾರವೇ ಸ್ವರ್ಗ ಅನಾಚಾರವೇ ನರಕ ಕೂಡಲಸಂಗಮದೇವಾ ನೀವೆ ಪ್ರಮಾಣಾ (ಬಸವ. ೨೩೯) ; ಭೃತ್ಯಾಪರಾಧ ಸ್ವಾಮಿನೋ ದಂಡ ಕೂಡಲಸಂಗಮದೇವಾ ನೀವೇ ಪ್ರಮಾಣು (ಬಸವ. ೩೪೦). [<ಸಂ. ಪ್ರಮಾಣ]

**ಪ್ರಮಾತ** (ನಾ). [ತರ್ಕಶಾ] ಯಥಾರ್ಥಜ್ಞಾನವನ್ನು ಉಂಟುಮಾಡುವವನು ; ನಿಶ್ಚಿತಜ್ಞಾನವನ್ನು ಕೊಡುವವನು : ಪ್ರಮಾಣವೆಂದರೆ ಪ್ರಮೆಗೆ ಸಾಧನ, ಪ್ರಮೆಯೆಂದರೆ ಯಥಾರ್ಥಜ್ಞಾನ, ಇದಕ್ಕೆ ಆಶ್ರಯನಾಗಿರುವವನು ಪ್ರಮಾತ (ಹಿಂದೂಶಾ. ೦೩೨). [ಸಂ. ಪ್ರಮಾತೃ]

**ಪ್ರಮಾತೃ** (ನಾ). = ಪ್ರಮಾತ: ಅಱಿಯಲ್ಪಡುವದೆ ನೀನಱಿ ಸುಪ್ರಮೋಯಾಖ್ಯಮಱಿವಾತನಾ ಪ್ರಮಾತೃವೆನಿಕ್ಕು (ಶರಬೋ. ೩-೦೭-೪); ಪ್ರಮಾತೃ ಎಂದರೆ ಸರಿಯಾದ ತಿಳಿವಳಿಕೆಯನ್ನು ಸಂಪಾದಿಸುವುದಕ್ಕೆ ಪ್ರಮಾಣಗಳನ್ನು ಉಪಯೋಗಿಸುವವನು (ಬ್ರಹ್ಮಛಾ. ೨-೨೩). [ಸಂ.]

**ಪ್ರಮಾತೃತ್ವ** (ನಾ). ಯಥಾರ್ಥಜ್ಞಾನದ ಅರಿವನ್ನು ಹೊಂದಿರುವ ಸ್ಥಿತಿ : ಇದಿಷ್ಟೂ ಆಗದಿದ್ದರೆ ಯಾವುದರ ಸೋಂಕೂ ಇಲ್ಲದ [ಅಸಂಗಸ್ಯ] ಆತ್ಮನಿಗೆ ಪ್ರಮಾತೃತ್ವವು ಕೂಡುವುದಿಲ್ಲ (ಬ್ರಹ್ಮಛಾ. ೫). [ಸಂ.]

**ಪ್ರಮಾಥಿ** (ಗು). ೧. ಕಲಕುವ ; ಕದಡುವ. ೨. ಒಡೆಯುವ ; ಸೀಳುವ. ೩. ದುಃಖ ಕೊಡುವ ; ಸಂಕಟವನ್ನುಂಟು ಮಾಡುವ. ೪. ಕೊಲ್ಲುವ; ವಧಿಸುವ. (ನಾ). ೫. ಕೊಲ್ಲುವವನು; ನಾಶಪಡಿಸುವವನು. [ಸಂ. ಪ್ರಮಾಥಿನ್]

**ಪ್ರಮಾದ** (ನಾ). ೧. ಅಲಕ್ಷ್ಯ; ಅನಾದರ. ೨. ಗಮನವಿಲ್ಲದಿರುವಿಕೆ; ಅಜಾಗರೂಕತೆ; ಎಚ್ಚರಗೇಡಿತನ : "ಪ್ರಮಾದಃ, ಅನವಧಾನಂ— ಈ ೨ ಮಱಹು" (ಪಠಾಯು. ೦೨೯-೬೯); "ಅನವಧಾನಮಾ ಪ್ರಮಾದ ಮೆನಲ್ಕೆ ಮೈಮಱಹು" (ಮಂಗರಾ. ೦೩೩-೩೯). ೩. ಹುಚ್ಚು ; ಉನ್ಮಾದ. ೪. ತಪ್ಪು ; ದೋಷ ; ಅಪರಾಧ : ಧರ್ಮಾರ್ಥಂಗಳಿಂಗೆ ಕಾಮಂ ಪ್ರತಿಕೂಲಮಾ ಕಾಮಮುಂ ನಿಲಿಸುವಡೆ ಪಿರಿದುಂ ಪ್ರಮಾದಮಗ್ರಾಹ್ಯಮವಿಶ್ವಾಸಂ (ಮದಕ. ೦-೫೮ ವ); ಆ ರಾಮಯತಿಪತಿ... ಗುಪ್ತಿಗಳಂ ಪಾಲಿಸಿ ಪಂಚಮಹಾವ್ರತಲೀಲೆಯಿನೆಸೆದಂ ಪ್ರಮಾದಮಿಲ್ಲೆಂಬಿನೆಗಂ (ಸಂರಾಮಾ. ೦೭-೩೯); ಏನೋ ಪ್ರಮಾದವಾಯಿತು ನನ್ನಿಂದ ಎಂಬ ಭಯವಾಗಿ ನೆಟ್ಟಗೆ ಮನೆಗೆ ಹೋದೆ (ಮೂಕಜ್ಜ. ೦೦). ೫. ಕೇಡುಕು; ಅಪಾಯಂ; ಆಪತ್ತು : ರಾಮಲಕ್ಷ್ಮಣರ ದೆಸೆಯಿಂ ಕೂಸುಗಳ್ಗೆ ಪ್ರಮಾದಮಕ್ಕುಂ (ಸಂರಾಮಾ. ೦೭-೯ ವ); ಪರಮ ಪರಮಾ ನಂಬಲಾಱೆನು ಕೊರಳ ಗರಳವದಿನಿತಿನಿತು ಪೊತ್ತರಿಸಿ ನಿಮ್ಮುದರದೊಳಗಿಳಿದಡತಿಪ್ರಮಾದವಲ (ಬಸವು. ೦೩-೦೩) ; ಉಚ್ಚಬೃಂಹಿತನಾದಮಮರಪ್ರಮಾದಮುನ್ನತಕರಂ ಭೀಕರಂ . . . ಎನಲ್ಕಾ ಮಹ್ಯಗಜದದ್ಭುತಾಕೃತಿಯ ಬಣ್ಣಿಸುವೊಡಹಿಪತಿಗೆ ಸಾಧ್ಯಮಲ್ತು (ಚಪು. ೨೬-೭). ೬. [ಜೈನ] ಸ್ತ್ರೀಕಥೆ, ಭೋಜನಕಥೆ, ರಾಷ್ಟ್ರಕಥೆ, ಅವನೀಪಾಲಕಥೆ ಎಂಬ ನಾಲ್ಕು ವಿಕಥೆಗಳು, ಕ್ರೋಧ, ಮಾನ, ಮಾಯೆ, ಲೋಭ ಎಂಬ ನಾಲ್ಕು ಬಗೆಯ ಕಷಾಯಗಳು, ಸ್ಪರ್ಶೇಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ, ಚಕ್ಷುರಿಂದ್ರಿಯ, ಕರ್ಣೇಂದ್ರಿಯ ಎಂಬ ಐದು ಇಂದ್ರಿಯಗಳು, ನಿದ್ರೆ ಮತ್ತು ಸ್ನೇಹ—ಹೀಗೆ ಹದಿನೈದು ಬಗೆಯ ದೋಷಗಳು: ಹದಿನೈದುತೆಱದ ಪ್ರಮಾದದಿಂ ಚಿಲ್ವಾದ ವಿದಿತ ಹುಲಿಯ ಮುಖಗಳನು ತುದಿಮೊದಲಾಗಿ ಬಣ್ಣಿಸುವೊಡಮಗೆ ತೋಱದಧಮಮತಿಗೆ ಗೋಚರವೆ (ತ್ರಿಭುಸಾಂ. ೯-೯೩). 'ಪಂಚದಶಪ್ರಮಾದ' ಪರಾ. ೭. ಜೀವನಿಗೆ ಉಂಟಾಗುವ ಮಿಥ್ಯಾದರ್ಶನ, ಅವಿರತಿ, ಪ್ರಮಾದ, ಕಷಾಯ

ಮತ್ತು ಯೋಗಗಳೆಂಬ ಐದು ವಿಧವಾದ ಸಂಸಾರಸ್ವರೂಪ ಭೇದಕ್ಕೆ ಬಂಧಹೇತುವಾಗಿರುವಂಥದ್ದರಲ್ಲಿ ಒಂದು ; ಭಾವಶುದ್ಧಿ ಮೊದಲಾದ ಎಂಟು ಶುದ್ಧಿಗಳು ಹಾಗೂ ದಶಧರ್ಮಗಳಲ್ಲಿ ಉಂಟಾಗುವ ಉತ್ಸಾಹರಾಹಿತ್ಯ : ಮಿಥ್ಯಾದರ್ಶನಾವಿರತಿಪ್ರಮಾದ ಕಷಾಯಯೋಗೋಪಾರ್ಜಿತಜ್ಞಾನಾವರಣೀಯಾದಿ ಕ ರ್ಮ ಗ ಳ್ ಸಂಸಾರಕಾರಣಂಗಳನಾದಿ ಬಂಧನಬದ್ಧದ್ರವ್ಯಭಾವಕರ್ಮವಿಗಮದಿನತಂನ ಜ್ಞಾನಾದಿ ನಿಜರೂಪಮಂ ಪಡೆವುದು ಮುಕ್ತಿ (ಅಂಪು. ೦೦-೬೩ ವ) ; ಮಿಥ್ಯಾದರ್ಶನಾವಿರತಿಪ್ರಮಾದಕಷಾಯಯೋಗಂಗಳೆಂಬ ಬಂಧಹೇತುಗಳಂ ಪರಿಹರಿಸುತ್ತಂ (ಆಶಪು. ೬-೬ ವ) ; ಮಿಥ್ಯಾದರ್ಶನ ಅವಿರತಿಪ್ರಮಾದ ಕಷಾಯ ಯೋಗಗಳು ಬಂಧಹೇತುಗಳು (ಹಿಂದಶಾ. ೯೯). ೮. ಆತ್ಮಾಕಾರವಾಗದೆ ಸ್ತಬ್ಧವಾಗಿದ್ದ ಮನಸ್ಸನ್ನು ಆತ್ಮಾಕಾರವಾಗಿ ಮಾಡುವುದಕ್ಕೆ ಉಂಟಾಗುವ ಹತ್ತು ಬಗೆಯ ವಿಘ್ನಗಳಲ್ಲಿ ಒಂದು ; ಆಲಸ್ಯ, ರೋಗ, ದುಃಖತ್ರಯಗಳು (ಶರೀರದಲ್ಲಿ ಹುಟ್ಟಿದ ಆಧ್ಯಾತ್ಮಿಕ, ಇತರ ಪ್ರಾಣಿಗಳಿಂದುಂಟಾಗುವ ಆಧಿಭೌತಿಕ, ಪಂಚಭೂತಗಳಿಂದುಂಟಾಗುವ ಆಧಿದೈವಿಕ) ಸಂಶಯ, ಪ್ರಮಾದ (ತಪ್ಪು), ಅನವಸ್ಥೆ (ದೃಢವಾಗಿಲ್ಲದಿರುವಿಕೆ ಅಥವಾ ಒಂದಕ್ಕೊಂದು ಕಾರಣವಾಗುತ್ತ ಕೊನೆಯಿಲ್ಲದಿರುವಿಕೆ), ಅದು ಎಂದರೆ ತನಗಿಂತ ಭಿನ್ನವಾದುದು ತತ್ತ್ವವೆನ್ನುವುದು, ಒಂದೇ ಮನಸ್ಸಿನಿಂದ ವಿಷಯಚಿಂತನೆ, ದರ್ಶನಭ್ರಾಂತಿ (ಭ್ರಾಂತಿದರ್ಶನ ಎಂದರೆ ಬೇರೆ ತಿಳಿಯುವುದು), ಅಶ್ರದ್ಧೆ—ಹೀಗೆ ಹತ್ತು ಬಗೆಯ ವಿಘ್ನಗಳಿವೆ : ತನಯ ಕೇಳಾಲಸ್ಯರೋಗಗಳನುಗತದ ದುಃಖತ್ರಯಂಗಳು ಮನದಲುದಿಸಿದ ಸಂಶಯಪ್ರಮಾದಗಳು . . . ದರುಶನಭ್ರಾಂತಿಯಶ್ರದ್ಧೆಗಳು ವಿಘ್ನಗಳು (ಅಪ್ಪಕ. ೬-೯೯). [ಸಂ.]

**ಪ್ರಮಾದಚರಿತ** (ನಾ). [ಜೈನ] ಅಪಧ್ಯಾನ, ಪಾಪೋಪದೇಶ, ಪ್ರಮಾದಚರಿತ, ಹಿಂಸಾಪ್ರದಾನ ಮತ್ತು ಅಶುಭಶ್ರುತಿ ಎಂಬ ಐದು ಬಗೆಯ ಅನರ್ಥದಂಡಗಳಲ್ಲಿ ಒಂದು; ಅವಶ್ಯವಿಲ್ಲದೆ ನೆಲವನ್ನು ಅಗೆಯುವುದು, ಗಿಡಗಳನ್ನು ಕಡಿಯುವುದು ಇವೇ ಮುಂತಾದ ಅನ್ಯರಿಗೆ ಹಾನಿಯನ್ನು ಉಂಟುಮಾಡುವಂಥ ಕಾರ್ಯ : ಅಪಧ್ಯಾನಂ ಪಾಪೋಪದೇಶಂ ಪ್ರಮಾದಚರಿತಂ ಹಿಂಸಾಪ್ರದಾನಮಶುಭಶ್ರುತಿಯೆಂದು ನಿರರ್ಥಕಪಾಪಹೇತುಭೂತಾನರ್ಥದಂಡಂ ಐದುತೆಱಂ (ಕತ್ಥ್ರ್ಕ್ರ. ೨೬೩). [ಸಂ.]

**ಪ್ರಮಾದಚರ್ಯೆ** (ನಾ).=ಪ್ರಮಾದಚರಿತ : ಪಾಪೋಪದೇಶ, ಹಿಂಸಾದಾನ, ಅಪಧ್ಯಾನ, ದುಃಶ್ರುತಿ ಮತ್ತು ಪ್ರಮಾದಚರ್ಯಾ—ಹೀಗೆ ಐದು ಅನರ್ಥದಂಡದ ಭೇದಗಳೆಂದು ಗಣಧರ ಮೊದಲಾದವರು ಹೇಳಿದ್ದಾರೆ (ಶ್ರಾವಕಾ. ೦೯೩-೬೩ ಅರ್ಥ); ಪ್ರಮಾದಚರ್ಯಾ:—ಅವಶ್ಯವಿಲ್ಲದೆ ನೆಲವನ್ನು ಅಗೆಯುವುದು . . . ಬೆಂಕಿಯನ್ನು ಉರಿಸುವುದು ಮೊದಲಾದ ಕೆಲಸಗಳನ್ನು ಮಾಡಬಾರದು (ಕ್ರಿಶಕೆ. ೪೬೯). [ಸಂ. ಪ್ರಮಾದಚರ್ಯಾ]

**ಪ್ರಮಾದಫಲಕ** (ನಾ). ಜಲಪ್ರಯಾಣದಲ್ಲಿ ಅಪಾಯ ಸಂಭವಿಸಿದಾಗ ಜೀವವನ್ನು ರಕ್ಷಿಸುವಂಥ ಹಲಗೆ; "ಹಡಗಿನಲ್ಲಿ ಸಮುದ್ರಪ್ರಯಾಣ ಮಾಡುವಂದು ಯಾವುದಾದರೂ 'ಪ್ರಮಾದ' ಸಂಭವಿಸಿ, ಹಡಗು ಒಡೆದು, ಪ್ರಯಾಣಿಕರು ನೀರುಪಾಲಾಗಬೇಕಾದ ಅಪಾಯಸಂಭವವು ಒದಗಿದಾಗ, ಜೀವವನ್ನು ಸಂರಕ್ಷಿಸಿಕೊಳ್ಳಲಂ ಉಪಯೋಗಿಸುವ ಫಲಕ (ಹಲಗೆ)" (ಕಬಿರಾ. ೨-೩೬ ಟಿಪ್ಪಣಿ): ಪತ್ತಿ ಪ್ರಮಾದಫಲಕಮನತ್ಯುಗ್ರಗ್ರಾಹನಿವಹಸಂಕ್ಷೋಭಿತದೊಳ್ ಮತ್ತೀ ರತ್ನಾಕರದೊಳ್ ಪುತ್ರಿಕೆಯೆನೆ ಬಟ್ಟಿಂತು ಬಾಟ್ಟುದೆ ಚೋದ್ಯಂ (ಕಬಿರಾ. ೨-೩೬). 'ಪ್ರಮಾದವಲಗೆ' ಪರಾ. [ಸಂ.]

**ಪ್ರಮಾದವಲಗೆ** (ನಾ).=ಪ್ರಮಾದಫಲಕ : ಯಮುನೆಂಬ ಸೋರೆ ವೊಗಂ ಬಂದು ಮುಟುಗಿಸಲ್ಕನ್ನಜಳಧಿಯೊಳ್ ದೇಹಬಹಿತ್ರಮದೊಡೆಯೆ ಜೈನಮೆಂಬಾ ಪ್ರಮಾದವಲಗೆಯನೆ ಪಿಡಿಯದವನಡಿಗಿಟಿಗುಂ (ಸಮುಶ. ೦೩-೬೩); ಕಂಡಿದೇನಸದುದ್ಯಮಂ ನಿಲ್ಲಿಮೆಂದಲ್ಲಿ ಸೆಟಿಗೆಯ್ದು ಪ್ರಮಾದವಲಗೆಯನತಿವೇಗದಿಂ ತಂದು ಸಾರ್ಚಿ ಚಾರುದತ್ತನೇಱಿ ನೂಂಕುವುದುಂ (ನೇಬಿಪು. ೪-೬೪ ವ). [ಪ್ರಮಾದ + ಪಲಗೆ]

**ಪ್ರಮಾದಿ** (ಗು). ೧. ಅಲಕ್ಷ್ಯದಿಂದ ಕೂಡಿರುವ; ಗಮನವಿಲ್ಲದ. ೨. ಪಾನಮತ್ತನಾದ; ಅಮಲೇರಿದ. (ನಾ). ೩. ಮರುಳ; ಹುಚ್ಚ : ಅಮರಗುರುವಾಣಿ ಮದಿರಾಪ್ರಮತ್ತ ವಾಣೀಸಮಾನಮುನ್ಮತ್ತವಚಃ ಸಮುಮಂತಲ್ಲದೊಡೆಂತೀ ಪ್ರಮಾದಿ ಚಾರ್ವಾಕನೆಂಬ ಪೆಸರಂ ಪಡೆಗುಂ (ಶಾಂತಿಪು. ೬-೦೩೬); ಭೈತ್ರಮನೇಱಿದರ್ ಸಡಿಲ್ದ ಬಂಧಂಗಳಿಂ ಬಿಗಿಯದಿರ್ದೊಡಂ ಅಱಿವನೊಳಕೊಂಡವರ್ ಪ್ರಮಾದಿಗಳಾಗದಿರ್ದೊಡಂ ಅವರ್ ಸಮುದ್ರದೊಳಗಟ್ಟಿ(ದೇವ)ರ್ ಇವರ್ ಸಂಸಾರಸಮುದ್ರದೊಳಗೆಟ್ಟರ್ ಎಂಬುದೇ ವಿಸ್ಮಯಮೆ (ಕೀಪಸಂ.೦೩೩-೦೦೨). ೪. ಅರುವತ್ತು ಸಂವತ್ಸರಗಳಲ್ಲಿ ಹದಿಮೂರನೆಯ ಸಂವತ್ಸರದ ಹೆಸರು : ಆ. ವರುಷವೇ ಪ್ರಭವ ವಿಭವ ಶುಕ್ಲ ಪ್ರಮೋದೂತ . . . ಪ್ರಮಾದಿ [ಜಾಶಾಂ. ೧] ವಿಕ್ರಮ ... ಕ್ರೋಧನ ಅಕ್ಷಯವೆಂದಱುವತ್ತುತೆಱನಾಗಿಹುದು (ಶಿವ್ಲಕ. ೩೨೨). ೩. ೪ : ಮನೆ ಸಲೆ ಹೇವಿಳಂಬಿ . . . ವ್ಯಯನನೆ ೯ರಂ ಪ್ರಮಾಥಿ [ದಿ] ನಿಜವಲ್ಲಭೆ ದುರ್ಮುಖಿಯೆಂದೊಡೆನ್ನ ಪೆಂಪಿನ ವಿಭವಂ ಪ್ಲವಂಗದ ಪೋಲ್ವದುದು ಮನ್ಮಥಚಿತ್ರಭಾನುವಿಂ (ಸೂಕ್ತಿಸು. ೬-೪೩೬). [ಸಂ. ಪ್ರಮಾದಿನ್]

**ಪ್ರಮಾಪಣ** (ನಾ). ಕೊಲೆ; ವಧೆ: "ಮಾರಣಂ, ನಿಶರಣಂ . . . ಪ್ರಶಮನಂ, ಪ್ರಮಾಪಣಂ, ವರ್ಜನಂ . . . ಹಿಂಸಾ, ಸಂಜ್ಞಪನಂ—ಈ ೨೧ ಕೊಲೆ" (ಪಲಾಡು. ೬೬-೩೩೩); "ವಿಶಸನಂ ಸೂದನಂ ಮಾರಣಂ ಘಾತನಂ . . . ಪ್ರಮಾಪಣಂ ಕೊಲೆಗೆ ನಾಮಂ" (ಮಂಗರಾ. ೮೮-೪೯). [ಸಂ.]

**ಪ್ರಮಾರ್ಜನ** (ನಾ). ೧. ತೊಳೆಯುವಿಕೆ; ಶುಚಿಗೊಳಿಸುವಿಕೆ. ೨. ಒರಸುವುದು; ತೊಡೆಯುವಿಕೆ. ೩. ನಿವಾರಣೆ; ಪ್ರಾಯಶ್ಚಿತ್ತ : "ಪ್ರಾಯಶ್ಚಿತ್ತ, ಪ್ರಮಾರ್ಜನ" (Atonement. ಶಾಂಶಿ. ೬). [ಸಂ.]

**ಪ್ರಮಾರ್ಜಿತ** (ಗು). ೧. ಒರಸಿದ. ೨. ನಿವಾರಿಸಿದ; ಹೋಗಲಾಡಿಸಿದ: "ಮೃಷ್ಟಂ ಪ್ರಮಾರ್ಜಿತಂ" (ಚತ್ತುಕೋ. ೦೦೩-೩೦). [ಸಂ.]

**ಪ್ರಮಾಳೆ** (ನಾ). (?) : ಯಿ ಧರ್ಮ್ಮ ಪ್ರಮಾಳೆ ಹಲದಣ ಹರಿವಾಳ ಯಿ ಧರ್ಮ್ಮವಂನು ಅರು ಪುಂಬರು ಲರಿ ಎಂದರೆ ದಕ್ಷಿಣವಾರಣಾಸಿಯಲಿ ಕಪಿಲೆಯ ಕೊಂದ ಪಾಪಕೆ ಹೋಹರು (ಎಕ XIV. ತಿರುಚು. ೨೪೩-೬; ೯).
[?]

**ಪ್ರಮಿತ** (ಗು). ೧. ಪ್ರಮಾಣಕ್ಕೆ ತಕ್ಕ; ಅಳತೆಗೆ ಒಳಪಟ್ಟ : ಸಪ್ತಸಾಗರಪ್ರಮಿತಜೀವಿತನುಂ ಲಬ್ಧಾವಧಿಲೋಚನನುಮಾಗಿ (ಆದಿಪು. ೨-೦೯ ವ). ೨. ಚೆನ್ನಾಗಿ ತಿಳಿದ, — ಗ್ರಹಿಸಿದ. ೨. ಮಿತಿಗೆ ಒಳಪಟ್ಟ; ಪರಿಮಿತವಾದ : ಅಡಗಿತೀತನ ಕೋಪವಸು ಒಡಿದೊಡಲಿನ ಸುರನ ಕಾಣುತಿಡೆಯಲಿ ಮಿಡುಕಿನಂಶಾಂಶು [ಜಾಶಾಂ. ೮] ಪ್ರಮಿತದಸುವಱೆ ಗುಡದಂತೆ (ಕೊರಾ. ೬-೨೪-೩೨). ೪. ಎಲ್ಲರಿಗೂ ತಿಳಿದಿರುವ; ಪ್ರಸಿದ್ಧವಾದ : ಭಕ್ತೋಪದಂಶಘ್ಯತಸಿತಸಿಚಯಹೃದ್ಯದಿಂ ವರ್ತಿಕಾರತ್ನ ಪ್ರಮಿತದೀಪ್ರದೀಪದಿಂ (ಚಂದ್ರಪು. ೬-೦೦೦ ರಗಳೆ). (ನಾ). ೫. ಅಳತೆಯುಳ್ಳುದು : ನಿಮಿರ್ದ ಚತುರ್ದಶರಜ್ಜುಪ್ರಮಾಣಮಿರ್ದಪುದು ಸಯ್ತು ಧೋಲೋಕಂ ಮಧ್ಯಮಲೋಕಮೂರ್ಧ್ವಲೋಕಂ ಕ್ರಮದಿಂ ತ್ರಸನಾಳಿ ವೇಕರಜ್ಜುಪ್ರಮಿತಂ (ಆಪು. ೬-೩೬). ೬. ಮಿತಿಗೆ ಒಳಪಟ್ಟುದು; ಪರಿಮಿತವಾದುದು : ಅದೆಂದರೆ—ಜೀವನ, ವಿಷಯ ಮತ್ತು ಭಾವ

ಗಳೊಡನೆ ಸ್ಫುಟವೂ ಪ್ರಮಿತವೂ ಆದ ರೀತಿಯಿಂದ ವ್ಯವಹರಿಸುವುದು (ಶಬ್ದಕಾ. ೦೦೭). ೭. [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು : ಸ್ಫುರಿತ ಪ್ರಮಿತ ದೀರ್ಘ. . . ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕಗಳೆಂತಲುಂ (ಏವೀಕ. ೨೩೨). 'ಶ್ರುತಿ' ಪರಾ. [ಸಂ.]

**ಪ್ರಮಿತಾಕ್ಷರ₁** (ನಾ). [ಛಂದ] ಜಗತೀಛಂದಸ್ಸಿನಲ್ಲಿ ಪ್ರತಿಯೊಂದು ಸಾಲಿನಲ್ಲಿಯೂ ಹನ್ನೆರಡು ಅಕ್ಷರಗಳಿರುವ ಒಂದು ಅಕ್ಷರವೃತ್ತದ ಹೆಸರು: ೧೨ನೆಯ ಜಗತಿಯಲ್ಲಿ . . . ಪ್ರಮಿತಾಕ್ಷರಂ ಸಜಸಸಂಗಳಿರಲ್ (ಛಂಬು. ೯೦). [ಸಂ. ಪ್ರಮಿತಾಕ್ಷರಾ]

**ಪ್ರಮಿತಾಕ್ಷರ₂** (ನಾ). ಮಿತವಾದ ಮಾತು ; ಮಿತಭಾಷಣ: ಕಮನೀಯವಿಭ್ರಮಗುಣಾನ್ವಿತೆಯರ್ ಪ್ರಮಿತಾಕ್ಷರಾಭರಣಭೂಷಿತೆಯರ್ ತಮರೂರ್ಗೆವೋಪ ಕುಲಜಾಂಗನೆಯರ್ ಕಮಲೋದರಂಗೆ ಪಡೆದರ್ ಮುದಮಂ (ಕಾವ್ಯಾವ. ೬೨). [ಸಂ.]

**ಪ್ರಮಿತಿ** (ನಾ). ೧. ಅಳತೆ; ಪ್ರಮಾಣ : ಒಸೆದಖುದಿಂಗಳ್ವೆರಂ ಪಂಚರತ್ನೋತ್ಕರದಿಂ ಸಾರ್ದ ತ್ರಿಕೋಟಿಪ್ರಮಿತಿಯ ಮಟೆಯಿಂ ಪಣ್ಣಿದಂ ಲೋಕಪಾಳಂ (ಶಾಂತಿಪು. ೯-೦೬೨). ೨. [ವೇದಾಂತ] (ಪ್ರತ್ಯಕ್ಷಾದಿ ಪ್ರಮಾಣಗಳಿಂದ ಉಂಟಾದ) ನಿಶ್ಚಿತಜ್ಞಾನ ; ಸರಿಯಾದ ತಿಳಿವು ; ಯಥಾರ್ಥಜ್ಞಾನ : "ಪ್ರಮಿತಿಃ, ಪ್ರಮಾ—೨ ನಿಜವಾಗಿ ತಿಳಿಯುವಿಕೆ ; ಯಥಾರ್ಥಜ್ಞಾನ, ಪ್ರಮಾಣಜನ್ಯಜ್ಞಾನ, ಯಥಾರ್ಥಾನುಭವ" (ಸಿದ್ಧಾಂತಿ. ೩೩೮); ಪ್ರಮೆ ಎಂದರೆ ಸರಿಯಾದ ಅನುಭವ, ಇದನ್ನು ಪ್ರಮಿತಿ ಎಂದೂ ಕರೆಯುವರು (ಬ್ರಹ್ಮಭಾ. ೨-೨೩). ೩. ಯಥಾರ್ಥಜ್ಞಾನವನ್ನುಂಟು ಮಾಡುವ ಉಪಾಯ; ಪ್ರಮಾಣ. [ಸಂ.]

**ಪ್ರಮಿತ್ತ** (ಗು). ೧. ಮರಣ ಹೊಂದಿದ ; ಸತ್ತ. (ನಾ). ೨. ಯಜ್ಞದಲ್ಲಿ ಬಲಿ ಕೊಟ್ಟ ಪಶು : "ಪ್ರಮೀತಃ, ಉಪಸಂಪನ್ನಃ, ಪ್ರೋಕ್ಷಿತಃ—ಇನ್ನು, ಹತೇ—ಯಜ್ಞದಲ್ಲಿ ಕೊಲ್ಲಲ್ಪಟ್ಟ ಪಶು ಮುಂತಾದವುಗಳ ಹೆಸರುಗಳು" (ಸಿದ್ಧಾಂತಿ. ೨೨೦). ೩. ಸತ್ತವನು ; ಮರಣ ಹೊಂದಿದವನು: "ಪರಾಸುಃ, ಉಪಸಂಪನ್ನಃ, ಪ್ರಮೀತಃ, ಸಂಸ್ಥಿತಃ, ಮೃತಃ—ಈ ೫ ಸತ್ತಾತಂ" (ಹಲಾಯು. ೦೦೪-೭). [ಸಂ.]

**ಪ್ರಮಿಾಲೆ,** ಪ್ರಮಿಾಳೆ (ನಾ). ೧. ಯಾವ ಕೆಲಸದಲ್ಲೂ ಉತ್ಸಾಹವಿಲ್ಲದಿರುವುದು ; ಆಲಸ್ಯ ; ಜಡತೆ. ೨. (ಆಲಸ್ಯದಿಂದುಂಟಾಗುವ) ತೂಕಡಿಕೆ; ಮಂಪರು; ನಿದ್ರಾಪರತೆ : "ತಂದ್ರೀ, ಪ್ರಮೀಲಾ—೨ ಆಲಸ್ಯದಿಂದ ಕಣ್ಣು ಮುಚ್ಚಿ ಮೈಮರೆತು ಗುರುಕಿಡುತ ಬರುವ ಗಾಢನಿದ್ರೆಗೆ ಹೆಸರುಗಳು, ತೂಕಡಿಕೆ ಎಂದು ಕೆಲವರನ್ನುವರು" (ಸಿದ್ಧಾಂತಿ. ೭೦). ೩. ಒಂದು ಸ್ತ್ರೀರಾಜ್ಯದ ರಾಣಿಯ ಹೆಸರು ; ಯುಧಿಷ್ಠಿರನ ಅಶ್ವಮೇಧಯಾಗದ ಕುದುರೆಯನ್ನು ಕಟ್ಟಿಹಾಕಿ, ಅರ್ಜುನನೊಡನೆ 'ಯುದ್ಧ ಮಾಡು ಇಲ್ಲವೇ ವರಿಸು' ಎಂದು ಪಂಥ ಹೂಡಿ ಅರ್ಜುನನನ್ನು ವರಿಸಿದವಳು : ಆ ಪ್ರಮೀಲೆ ಪಾರ್ಥನ ಮೇಲೆ ಕಣೆಗಱೆದಳು (ಜೈಮಿಭಾ. ೦೬-೦೩). ಪ್ರಮಿಾಳೆ : ೩. ಎಸೆವ ಭದ್ರಾಸನವನಿಳಿದು ಸಂಗ್ರಾಮಕ್ಕೆ ಪೊಱಮಟ್ಟಳಾ ಪ್ರಮೀಳೆ (ಜೈಮಿಭಾ. ೦೬-೨); ಪೆಣ್ಣು ದಳಮೈದೆ ಜೋಡಿಸಿತು ಪಾರ್ಥನ ಸಮರಕಾ ಪ್ರಮೀಳೆಯ ಸುತ್ತಲು (ಜೈಮಿಭಾ. ೦೬-೩). ೪. (ಆಲಂ) ಗಂಡುಬೀರಿ; ದಿಟ್ಟೆ : "ಸ್ಥಿತಿಯಾದೇಶದಲ್ಲಿದ್ದರೆಂದು ಪ್ರಸಿದ್ಧಿಯಾಗಿರುವ ಸ್ತ್ರೀಯೋಧಜಾತಿ. ವೀರಸೀ, ವೀರಕನ್ಯೆ; ರಣಶೂರಳಾದ ಹೆಂಗಸು; ಪ್ರಮೀಳೆ. ಗಂಡುಬೀರಿ" (Amazon. ಇಂಕಿ).

**ಪ್ರಮಿಾಲಾರಾಜ್ಯ**=೧. ಹೆಂಗಸರೇ ಆಡಳಿತವನ್ನು ನಡೆಸುವಂಥ ಪ್ರದೇಶ. ೨. ಕೇವಲ ಹೆಂಗಸರು ಮಾತ್ರ ಇರುವ ಪ್ರದೇಶ. [ಸಂ. ಪ್ರಮೀಲಾ]

**ಪ್ರಮಿಾಳೆ** 'ಪ್ರಮಿಾಲೆ' ನೋ.

**ಪ್ರಮುಕ್ತ** (ಗು). ೧. ಅಳ್ಳಕಗೊಳಿಸಿದ; ಸಡಿಲಮಾಡಿದ. ೨. ಬಂಧನದಿಂದ ಬಿಡುಗಡೆಹೊಂದಿದ. ೩. (ಬಾಣದಂತೆ) ಎಸೆದ; ಪ್ರಯೋಗಿಸಿದ : ಹೂಂಕೃತಿ ಬಲ್ಲಾಳರ ಗುಣಠಂಕೃತಿ ಚಾಪಪ್ರಮು[ಪಾಠಾಂ. ಯು]ಕ್ತಶರನಿಕರಮಹಾಘೀಂಕೃತಿ ನೋಳ್ಪವರ್ಗೆ ಭಯಂಕೃತಿ ಗೆಯ್ದುದು ತದೀಯ ರಣಭೂತಳದೊಳ್ (ರಾಜಶೇ. ೬-೪೬). [ಸಂ.]

**ಪ್ರಮುಖ** (ಗು). ೧. ಮುಂಭಾಗದಲ್ಲಿರುವ; ಸಮ್ಮುಖದ; ಎದುರಿನ. ೨. ಮುಖ್ಯವಾದ; ಪ್ರಧಾನವಾದ : ಬಡಗಭಾಷೆ ಕನ್ನಡದ ಒಂದು ಪ್ರಮುಖ ಶಾಖೆ (ದ್ರಾವಿ. ೦೯೩). ೩. ಮೊದಲಾದ; ಮುಂತಾದ : ಸಿದ್ಧಿಸೆಟ್ಟಿ ಸೋಭನಯ್ಯ ಮಲ್ಲಯ್ಯಸೆಟ್ಟಿ ಅಣ್ಣಮ್ಮನಿನ್ನಿವರ್ಪ್ರಮುಖವಾಗಿ ತಂಬುಲಿಗ ಸಾಸಿರ್ವ್ವರುಂ ಅಯ್ನೂರ್ವ್ವರುಂ ಪೋಗಿ (ಕಾಇಇ. IX-i, ೭೬-೦೦ ; 991) ; ಮತ್ತಮನೇಕಪನಸಜಂಬೀರನಾರಿಕೇಳಸಹಕಾರಕದಳೀಪ್ರಮುಖಫಲಿತಭೂಜರಾಜಿಗಳ್ (ಪುಷ್ಪಪು. ೩-೯೭ ವ). (ನಾ). ೪. ಶ್ರೇಷ್ಠನಾದುದು; ಮುಖ್ಯವಾದುದು; ಪ್ರಧಾನವಾದುದು : "ಅಗ್ರಂ ಪ್ರಧಾನಂ . . . ಪ್ರಮುಖಮಾ ಪ್ರವರಂ . . . ಗ್ರಾಮಣೀಯೆನಲು ಮುಖ್ಯಕ್ಕೆ ನಾಮಂ" (ಮಂಗರಾ. ೦೨೭-೪). ೫. ಮುಖಂಡ ; ಮುಖ್ಯಸ್ಥ : "ಅಗ್ರ್ಯಂ, ಪ್ರಧಾನಂ, ಪ್ರಮುಖಂ, ಪುರೋಗಂ . . . ಅಗ್ರಣೀ—ಈ ೧೩ ಮುಖ್ಯಂ" (ಹಲಾಯು. ೦೫೫-೫). ೬. ಒಂದು ನರಕದ ಹೆಸರು : ಕುಂಭೀಪಾಕ ಸುಪಾಕ ಪ್ರಮುಖದಾರುಣ ಅಂಗಾರಕಮೆಂಬೈದು ಮಂತ್ರಿನರಕಂಗಳಿಂ ಸೇರಿ ತರಳತಾರವೆಂಬರಸುನರಕವಿಹುದು(ಏವೀಕ. ೦೯೦). ೭. ಗುಂಪು ; ಸಮೂಹ. [ಸಂ.]

**ಪ್ರಮುಖಕರಣ** (ನಾ). ಲೆಕ್ಕದ ಮುಖ್ಯಾಧಿಕಾರಿ; ಪ್ರಧಾನಕರಣಿಕ : ಪ್ರಭುಮಂತ್ರೋತ್ಸಾಹಶಕ್ತಿತ್ರಯಸಂಪನ್ನರಪ್ಪ ಶ್ರೀಮತ್ಪೆರ್ಗ್ಗಡೆ ನಾರಣಯ್ಯ ಪ್ರಮುಖಕರಣಂ ಬನವಾಸಿ ಪನ್ನಿರ್ಚ್ಛಾಸಿರಕ್ಕಂ ಪೆರ್ಗ್ಗಡೆ ತನಗೆಯ್ಯೆ (ಕಾಇಇ. XX, ೩೫-೭; 1055). [ಸಂ.]

**ಪ್ರಮುಗ್ಧ** (ಗು). ೧. ಮೈಮೇಲೆ ಪ್ರಜ್ಞೆ ಇಲ್ಲದ ; ಎಚ್ಚರವಿಲ್ಲದ. ೨. ಮನೋಹರವಾದ. [ಸಂ.]

**ಪ್ರಮುದ** (ನಾ). ಅತಿಯಾದ ಸಂತೋಷ,—ಆನಂದ : ಕರಮೆಸೆವಾದಿನಂದಿಯನು ಪ್ರಮುದ[ಪಾಠಾಂ. ಮಥ]ಚಿತ್ತದಿ ನೋಡಿ (ಬಸಪು. ೨-೭). [ಸಂ. ಪ್ರಮುದ್]

**ಪ್ರಮುದಿತ** (ಗು). ೧. ಸಂತೋಷ ಹೊಂದಿದ ; ಆನಂದಪಟ್ಟ : ಅಮರನದೀಪ್ರವಾಹದೊಳಗಿಂದೊಗೆತರ್ಪ ವಿಶಾಲಪುಣ್ಯಮೋ ಪ್ರಮುದಿತಶ್ರೀವಕೀರ್ತಿ ಬರುತಿರ್ದಪುದೋ ಎನೆ ಬಂದನಳ್ಕಱಿಂ (ಗಂಕ. ೪-೩೭). ೨. ಆನಂದವನ್ನುಂಟುಮಾಡುವ ; ಸಂತೋಷದಾಯಕವಾದ : ಪ್ರಮುದಿತಭವ್ಯಮಂ ಸುಕವಿಸಂಕುಳಸೇವ್ಯಮಂ . . . ಜಿನಾನ್ವಯಕ್ರಮಯುತಕಾವ್ಯಮಂ ನೆಱೆಯೆ ನಿರ್ಮಿಸಿ(ಚಂದ್ರಪ್ರ.೧೬-೬೨). ೩. (ಆಲಂ) ಅರಳಿದ ; ಬಿರಿದ : ಪ್ರಮುದಿತ ಕಂಕೇಲ್ಲಿಯವೋಲ್ ಪ್ರಮದಾಪದಜತುರಸಾಂಕಿತಂ ಸರಸೀವಿಭ್ರಮದಂತೆ ನೀರಜಸ್ತೋಮವಾಗಿ ರಾಜಿಪುದು ಪುರದ ವೀಧಿಯೂಥಂ (ಕುಸುಮಾ. ೨-೯೬). ೪. ವ್ಯಾಪ್ತವಾದ : ಅಮರಗಣಯುಗ್ಮದಿಂ ಮುಂದಮರ್ದೆಱುಂ ಶಿಖಿಗಣಂ ಬರಲ್ ದಂಡಕದಾಪ್ರಮುದಿತಲಕ್ಷಣಮಕ್ಕುಂ (ಛಂದೋಂಬು. ೩-೨೪); ಕ್ರಮದಿಂದೆ ಸಂಧಿನಾಮಂ ಸಮಾಸಮಾ ತದ್ಧಿತಂ ಪೊದಬ್ದಾಖ್ಯಾತಂ ಪ್ರಮುದಿತಧಾತುವಪಭ್ರಂಶಮವ್ಯಯಂ ಸಂಧಿ ಶಬ್ದಮಣಿದರ್ಪಣದೊಳ್(ಶಮದ. ೧). (ನಾ). ೫. ಸಂತೋಷಪಟ್ಟವನು ; ಆನಂದಪಟ್ಟವನು: "ಹೃಷ್ಟಃ, ಮತ್ತಃ ತೃಪ್ತಃ, ಪ್ರಹ್ಲನಃ, ಪ್ರಮುದಿತಃ, ಪ್ರೀತಿಃ—೬ ಸಂತೋಷಪಟ್ಟವನು" (ಸಿದ್ಧಾಂತಿ. ೩೩೦). [ಸಂ.]

**ಪ್ರಮೃಷ್ಟ** (ಗು). ೧. ಉಜ್ಜಿದ ; ತಿಕ್ಕಿದ. ೨. ಲೇಪಿಸಿದ ; ಬಳಿದ : ಘನಸಾರಚಂದನಸಾರಪ್ರಮೃಷ್ಟ ಕರತಳನುಮಂಗೀಕೃತಕಸ್ತೂರಿಕಾವಿಲೇಪನನುಂ (ಆದಿಪು. ೧೧-೨೭ ವ). ೩. ಸಾಣೆ ಹಿಡಿದ ; ಮೆರುಗು ಕೊಟ್ಟ. [ಸಂ.]

**ಪ್ರಮೆ** (ನಾ). ೧. ಅಳತೆ ; ಪರಿಮಾಣ ; ಪ್ರಮಾಣ. ೨. [ತರ್ಕಶಾ] ಸರಿಯಾದ ತಿಳಿವಳಿಕೆ ; ನಿಶ್ಚಿತಜ್ಞಾನ ; ಪ್ರಮಿತಿ ; ☞ ಇದರಲ್ಲಿ ಸಾಕ್ಷಾತ್ಕಾರ, ಅನುಮತಿ, ಉಪಮಿತಿ ಮತ್ತು ಶಾಬ್ದಬೋಧವೆಂಬುದಾಗಿ ನಾಲ್ಕು ಪ್ರಕಾರಗಳು ಇವೆ : "ಪ್ರಮಿತಿಃ, ಪ್ರಮಾ—೨ ನಿಜವಾಗಿ ತಿಳಿಯುವಿಕೆ, ಯಥಾರ್ಥಜ್ಞಾನ" (ಸಿದ್ಧಾಂತಿ. ೩೩೬); ಪ್ರಮೆ ಎಂದರೆ ಸರಿಯಾದ ಅನುಭವ. ಇದನ್ನು ಪ್ರಮಿತಿ ಎಂದೂ ಕರೆಯುವರು (ಬ್ರಿಹ್ಮಶಾ. ೨.೨೩); ಪ್ರಮೆ, ಬುದ್ಧಿ ಉಪಲಬ್ಧಿ ಮೊದಲಾದ ಪದಗಳಿಂದ ಹೇಳಲ್ಪಡುವ ಜ್ಞಾನವೆಂಬುದು ಸೂಕ್ಷ್ಮವಾದ ಅತೀಂದ್ರಿಯವಾದ ಕ್ರಿಯೆ (ಹಿಂದಶಾ. ೧೬೬).

[ಸಂ. ಪ್ರಮಾಣ]

**ಪ್ರಮೇಯ** (ಗು). ೧. ಅಳೆಯಬಹುದಾದ ; ಅಳೆಯಲು ಶಕ್ಯವಾದ. ೨. ಸೂಕ್ಷ್ಮವಾಗಿ ಪರೀಕ್ಷಿಸಬೇಕಾದ ; ವಿವೇಚಿಸಬೇಕಾದ. (ನಾ). ೩. ಪ್ರಸಂಗ ; ಸನ್ನಿವೇಶ ; ಸಂದರ್ಭ : ನೀನು ದಿನಾ ಸಕಾಲದಲ್ಲಿ ಊಟ ತಿಂಡಿ ಇಲ್ಲದೆ ರೈಲಿನಲ್ಲಿ ತಿರುಗಿ ಹೋಗಿ ಓದೋ ಪ್ರಮೇಯವೇನು ? (ವಂಶವೃ. ೬೯); ಇವರು ನಮ್ಮ ಗುಂಪನ್ನು ಬಿಟ್ಟು ಬೇರೆಯಾಗಬೇಕಾಗಿದ್ದ ಪ್ರಮೇಯವೇನಿತ್ತು? (ಹಸುಹೂ. ೦೬೩); ನಿಮ್ಮನ್ನೆಲ್ಲ ಇಲ್ಲಿಗೆ ಬರಮಾಡಿಕೊಳ್ಳುವ ಪ್ರಮೇಯವಾದರೂ ಏನಿದ್ದಿತು ? (ಶಾಂತಲಾ. ೦೯). ೪. [ತರ್ಕಶಾ] (ಮುಖ್ಯವಾದ) ವಿಷಯ ; ತತ್ತ್ವ; ಸಿದ್ಧಾಂತ : ಮಂತ್ರ, ಬ್ರಾಹ್ಮಣ ಮುಂತಾದವುಗಳ ಕರ್ಮಸಿದ್ಧಾಂತವನ್ನೇ ಆಧಾರವಾಗಿಟ್ಟುಕೊಂಡು ಕರ್ಮದಿಂದ ಜ್ಞಾನಪ್ರಾಪ್ತಿಯೆಂಬ ಪ್ರಮೇಯದ ಮೇಲೆ ಉಂಟಾದದ್ದು ಪೂರ್ವಮೀಮಾಂಸೆ (ಭಾರತ. ೦೬೦); ಈ ಬಗೆಯ ಹೇರಳವಾದ ದೃಷ್ಟಾಂತಗಳಿಂದ ಅತ್ಯಂತಗಹನವಾದ ಪ್ರಮೇಯವನ್ನೂ ತಿಳಿಹೇಳುವುದರಲ್ಲಿ ರಂಗನಾಥಕವಿ ಬಹುಮಟ್ಟಿಗೆ ಯಶಸ್ವಿಯಾಗಿದ್ದಾನೆ (ಕಸಾಡ. ೩೦೨). ೫. [ರೇಖಾಗ] ತರ್ಕಸರಣಿಯ ಮೂಲಕ ಸಿದ್ಧಪಡಿಸಬೇಕಾದ ವಿಷಯ ; ರೇಖಾಗಣಿತದಲ್ಲಿ ಸಾಧನೀಯ ತತ್ತ್ವ,—ನಿಯಮ : ಯೂಕ್ಲಿಡ್ (Euclid)ಬರೆದ ರೇಖಾಗಣಿತವಲ್ಲಿನ ಪ್ರಮೇಯಗಳನ್ನೂ ಸಾಧನೆಗಳನ್ನೂ ನೋಡಿದರೆ ಅವುಗಳನ್ನು ಕಂಡುಹಿಡಿದವರು ಯಾರು, ಈ ಪ್ರಮೇಯಗಳನ್ನು ಊಹಿಸಿದುದು ಹೇಗೆ ಎಂಬುದು ಸ್ವಲ್ಪವೂ ತಿಳಿಯುವುದಿಲ್ಲ (ಭೌತವಿ. ೬೩); ರೇಖಾಗಣಿತದಲ್ಲಿ ಹೆಚ್ಚಿನ ಪರಿಜ್ಞಾನವೂ ಅಭ್ಯಾಸವೂ ಆಗುವಂತೆ ಪ್ರಮೇಯಗಳನ್ನೂ ರಚನೆಗಳನ್ನೂ ಸೇರಿಸಬೇಕು (ಶಿಕ್ಷದ. ೦೬೩). ೬. [ತತ್ತ್ವಶಾ] ಯಥಾರ್ಥಜ್ಞಾನದಿಂದ ತಿಳಿಯಲಾಗುವ ವಸ್ತು ; ನಿಶ್ಚಿತಜ್ಞಾನದಿಂದ ಗ್ರಹಿಸುವ ವಿಷಯ,—ತತ್ತ್ವವಿಚಾರ: ಪ್ರಮಾಣವೆಂದರೆ ಪ್ರಮೆಗೆ ಸಾಧನ. ಪ್ರಮೆಯೆಂದರೆ ಯಥಾರ್ಥಜ್ಞಾನ. ಇದಕ್ಕೆ ಆಶ್ರಯನಾಗಿರುವವನು ಪ್ರಮಾತ. ವಿಷಯವಾಗಿರುವುದು ಪ್ರಮೇಯ (ಹಿಂದಶಾ. ೦೩೨); ಪ್ರಮೇಯ:—ಯಥಾರ್ಥಜ್ಞಾನದಿಂದ ತಿಳಿಯಲ್ಪಡುವ ವಸ್ತು (ಭಾತತ್ತ್ವ. ೧೬೩). ೭. [ನ್ಯಾಯಶಾ] ಆತ್ಮ, ಶರೀರ, ಇಂದ್ರಿಯ, ಅರ್ಥ, ಬುದ್ಧಿ, ಮನಸ್ಸು, ಪ್ರವೃತ್ತಿ, ದೋಷ, ಪ್ರೇತ್ಯಭಾವ, ಫಲ, ದುಃಖ ಮತ್ತು ಅಪವರ್ಗವೆಂಬ ಹನ್ನೆರಡು ವಿಧವಾದ ವಿಷಯ : ನ್ಯಾಯಶಾಸ್ತ್ರದಲ್ಲಿ ಹೇಗೆಂದರೆ — ಆತ್ಮ ಶರೀರ . . . ಅಪವರ್ಗವೆಂದು ಹನ್ನೆರಡು ವಿಧವಾಗಿ ಪ್ರಮೇಯವನ್ನು ಒಂಬತ್ತನೆಯ ಸೂತ್ರದಲ್ಲಿ ವಿಭಾಗ ಮಾಡಿರುವರು (ಹಿಂದಶಾ. ೧೧೩). ೮. ಆತ್ಮಾನಾತ್ಮ ವಿವೇಕಕ್ಕೆ ಬೇಕಾದ ಪ್ರಮಾಣ, ಪ್ರಮೇಯಂ, ಸಂಶಯಂ, ಪ್ರಯೋಜನ, ದೃಷ್ಟಾಂತ, ಸಿದ್ಧಾಂತ. ಅವಯವ, ತರ್ಕ, ನಿರ್ಣಯ, ವಾದ, ಜಲ್ಪ, ವಿತಂಡಾ, ಹೇತ್ವಾಭಾಸ, ಛಲ, ಜಾತಿ ಮತ್ತು ನಿಗ್ರಹಸ್ಥಾನ ಎಂಬ ಹದಿನಾರು ಬಗೆಯ ಪದಾರ್ಥಗಳಲ್ಲಿ ಒಂದು: ಗೌತಮೋಕ್ತನ್ಯಾಯವು ಪ್ರಮಾಣ ಪ್ರಮೇಯ ಸಂಶಯ . . . ನಿಗ್ರಹಸ್ಥಾನಗಳೆಂಬ ಷೋಡಶಪದಾರ್ಥಂಗಳಂ ನಿರೂಪಿಸುತ್ತಲೀ ಪ್ರಪಂಚಕ್ಕೆ ಪರಮೇಶ್ವರಕರ್ತೃಕಮಂ ನಿಶ್ಚಯಿಸುವುದು (ವಿವೇಕ.೧೦) ; ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ . . . ನಿಗ್ರಹಸ್ಥಾನ ಎಂದು ಹದಿನಾರುಪದಾರ್ಥಗಳನ್ನು ನಿರೂಪಿಸಿರುವರು (ಹಿಂದಶಾ. ೧೧೨). [ಸಂ.]

**ಪ್ರಮೇಹ** (ನಾ). ೧. ಮೂತ್ರಕೋಶದಲ್ಲಿ ಕಲ್ಲು ಉಂಟಾಗುವ ಒಂದು ಬಗೆಯ ರೋಗ ; ಶಿಲಾಮೇಹ : "ಅಶ್ಮರಿಯೆನೆ ಪ್ರಮೇಹ ಮಕ್ಕು" (ಮಂಗರಾ, ೧೧೪-೯); ಎಲೆಹುರಿಯ ಬೇರು ಹಳೇನೀರಿಂ ಕುಡಿಯೆ ಪ್ರಮೇಹಂ ತೀರ್ಗುಂ. ಕಲ್ಲು ಒಡೆದು ಬೀಳ್ಗುಂ (ವಿವ್ಯವಿ. ೦೯೯) ; ಚಿಲ್ಲದ ಬೀಜದ ಗಂಧವನ್ನು ತೆಗೆದು ಅದಕ್ಕ ಸ್ವಲ್ಪ ಶ್ರೀಗಂಧ ಹಾಕಿ ತೆಗೆದುಕೊಂಡರೆ ಪ್ರಮೇಹದ ಕಲ್ಲು ಬೀಳುತ್ತದೆ (ಸಕವೈ. ಶಂ. ೪೯೩). ೨. (ಶುಕ್ರಧಾತುವು ಯಾವಾಗಲೂ ಸ್ರವಿಸುವುದು ಮತ್ತು ಮಧುಮೇಹ ಇತ್ಯಾದಿ ಯಾವುದಾದರೂ) ಮೂತ್ರರೋಗ. ೩. ಗುಹ್ಯಪ್ರದೇಶದಲ್ಲಿ ಉಂಟಾಗುವ ವ್ರಣರೋಗ ; ಭಗಂದರ. [ಸಂ].

**ಪ್ರಮೋದ** (ನಾ). ೧. ಸಂತೋಷ ; ಆನಂದ: "ಪ್ರಮೋದಃ, ಪ್ರಮದಃ, ಹರ್ಷಃ . . . ಶಂ, ಸುಖಂ—ಈ ೧೩ ಸುಖದ ಪೆಸರ್"(ಹಲಾಯು. ೨೦-೦೨೩); ಜಲಪಾಲಂಗೆ ಪ್ರಮೋದಮಾಗೆ ರಾಗಿಸಿ ಪಲಕಾಲಕ್ಕನ್ನ ಪಗೆಯೊಳಗಾದಂ ಬನ್ನಿಮೆಂಬುದುಂ (ಶಂಚತಂ. ೨೭೦-೯): ಮೇದಿನೀದೇವಿಗತಿಪ್ರಮೋದಮಂ ಪಡೆದು ಕಟಿಪಿ (ಜಗವಿ. ೦-೩೯ ವ). ೨. ಸುಗಂಧ ; ಸುವಾಸನೆ. ೩. ಅರುವತ್ತು ಸಂವತ್ಸರಗಳಲ್ಲಿ ನಾಲ್ಕನೆಯ ಸಂವತ್ಸರದ ಹೆಸರು : ಆ ವರುಷವೇ ಪ್ರಭವ ವಿಭವ ಶುಕ್ಲ ಪ್ರಮೋದ [ಪಾಠಾಂ. ಪ್ರಮಾದಿತ, ಪ್ರಮಾದೌತ, ಪ್ರಮೋದೂತ] . . . ಕ್ರೋಧನ ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೦). ೪.[ಯೋಗ] ಸಾಂಖ್ಯದರ್ಶನದ ಶಾಸ್ತ್ರಾಭ್ಯಾಸ, ಶಾಸ್ತ್ರಜ್ಞಾನವಿಚಾರ, ಗುರುಶಿಷ್ಯಸಹವಾಸ, ಸದಾಮುದಿತ, ವಿವೇಕಖ್ಯಾತಿ, ಪ್ರಮೋದ, ಮುದಿತ ಮತ್ತು ಮೋದಮಾನಗಳೆಂಬ ಎಂಟು ಸಿದ್ಧಿಗಳಲ್ಲಿ ಒಂದು; ಪ್ರತ್ಯಯಸರ್ಗದ ಒಂದು ಭಾಗ : ಶಾಸ್ತ್ರಾಭ್ಯಾಸ . . . ಪ್ರಮೋದ ಮುದಿತ ಮೋದಮಾನಗಳೆಂಬುವು ಅಷ್ಟಸಿದ್ಧಿಗಳು(ಹಿಂದಶಾ. ೬೪). [ ಸಂ. ]

**ಪ್ರಮೋದಿತ** (ಗು). ೧. ಸಂತೋಷಗೊಂಡ ; ಹರ್ಷ ಹೊಂದಿದ. ೨. ಸುಗಂಧಗೊಳಿಸಿದ ; ಪರಿಮಳವುಂಟುಮಾಡಿದ. [ಸಂ.]

**ಪ್ರಮೋದೂತ** (ನಾ). = ಪ್ರಮೋದ ೩ : ಪ್ರಮೋದೂತ ಸಂವತ್ಸರದ ಮಾರ್ಗಶಿರ ಬ ೧ ಲೂ ಶ್ರೀಮತು ಕೆಳದಿ ಚೆಂನ್ನಮಾಜಿಯವರು ದೊಡ್ಡ ಚೆಂನಪ್ಪಯಗೆ ಬರಶಿ ಕಳುಹಿದ ಪ್ರಯೋಜನ (ಮೈಆಂ. ೦೯೩೯, ೯-೦; 1690). [☞'ಪ್ರಮೋದ' ಎಂಬ ಹೆಸರಿನ ಸಂವತ್ಸರದ ರೂಪಾಂತರವಾಗಿ ಈ ಶಬ್ದರೂಪವು ಪ್ರಚಾರದಲ್ಲಿದೆ]

**ಪ್ರಯತ** (ಗು). ೧. ಶುದ್ಧವಾದ; ಪವಿತ್ರವಾದ. ೨. ನಮ್ರವಾದ ; ವಿನೀತವಾದ. ೩. ಇಂದ್ರಿಯಗಳನ್ನು ಅಧೀನದಲ್ಲಿಟ್ಟುಕೊಂಡ ; ಜಿತೇಂದ್ರಿಯನಾದ. (ನಾ). ೪. ಶುದ್ಧವಾದುದು ; ಶುಚಿ ; ಪವಿತ್ರತೆ : " ಪ್ರಯತಃ, ಅನುಚ್ಛಿಷ್ಟಃ - ಈ ೨ ಶುಚಿ ". (ಹಲಾಯು. ೬೭-೨೯೬); ಕ್ಷಯವೃಜಿನಂ ಜಿನಸಮಯಂ ಸ್ಮಯರಹಿತಂ ಹಿತವಚಃ ಪ್ರಿಯಂ ಪ್ರಿಯಧರ್ಮಂ ಪ್ರಯತಯುತಂ ಸದ್ವಿನಯಂ ನಯವಾಕ್ಯಸರಂ

ಸರಸ್ವತೀಮುಖಮುಕುರಂ (ಶುಲುಚ. ೦-೩೦). ೫. ಪವಿತ್ರನಾದವನು ; ಪರಿಶುದ್ಧನಾದವನು : "ಪವಿತ್ರಃ, ಪ್ರಯತಃ, ಪೂತಃ–ಪವಿತ್ರನಾದವನ ಹೆಸರುಗಳು. ಪರಿಶುದ್ಧನು " (ಸಿದ್ಧಾಂತಿ. ೨೨೬). [ಸಂ.]

**ಪ್ರಯತ್ನ** (ನಾ). ೧. ಉದ್ಯಮ ; ಉದ್ದೇಶ ; ಯತ್ನ : ಪ್ರಯತ್ನಮಲ್ಲದ ಗುರುತ್ವಕ್ಕೆ– ಎಮ್ಮ ತಂದೆಗಳ್ (ಚಉದ. ೦೦೩ ಪ್ರಹೋ); ಚಂದ್ರನಿಗೊ ಮಂಗಳಗ್ರಹಕ್ಕೊ ವಲಸೆ ಹೋಗುವ ಪ್ರಯತ್ನ . . . ಕಾಣುತ್ತದೆ (ಜೀಕಕ್ಕ. ೯೬) ; ಸಮಂಜಸವಾದ ಉತ್ತರ ಹೇಳುವ ಹತ್ತಾರು ಪ್ರಯತ್ನಗಳು ನಡೆದಿವೆ (ದ್ರಾಚಿ. ೨೦). ೨. ಹೆಚ್ಚು ಶ್ರಮ ; ಬಹುಶ್ರಮ : ಪತ್ನಿಯರ ದೆಸೆಯಿಂದೆ ಮಡಿದಿರ್ದ ಪಾರ್ಥಂ ಪ್ರಯತ್ನದಿಂ ನಿಜಸುತಂ ತಂದ ಸಂಜೀವಕದ ರತ್ನದಿಂ ಕೃಷ್ಣಪ್ರಸಾದದಿಂ ಜೀವಿಸಿದನು (ಕೃಚಿಜ. ೨೧ ಸೂಚಕ). ೩. ತೊಂದರೆ ; ಕಷ್ಟ. ೪. "ಒಂದು ಭಾಗವು ಇನ್ನೊಂದರ ಮೇಲೆ ಪ್ರಯೋಗಿಸುವ ಬಲವನ್ನು ಆ ಭಾಗದ ಖಂಡವಿಸ್ತಾರದಿಂದ (Area of cross section) ಭಾಗಿಸಿದರೆ ಬರುವ ಲಬ್ಧಕ್ಕೆ ಪ್ರಯತ್ನವೆಂದು ಹೆಸರು" (ಭೌತಶಾ. ೦೦೬).

**ಪ್ರಯತ್ನಪಡು**=ಯತ್ನ ಮಾಡು : ಎಷ್ಟು ಪ್ರಯತ್ನಪಟ್ಟರೂ ನಮ್ಮಿಂದ ಅವುಗಳನ್ನು ತೆರೆಯಲಾಗಲಿಲ್ಲ (ಕೃಕಕ್ಕ. ೯೯); ಮುಂದೆ ನಡೆಯಬೇಕೆಂದು ಎಷ್ಟು ಹೆಚ್ಚಾಗಿ ಪ್ರಯತ್ನ ಪಟ್ಟರೆ, ಅವು ಅಷ್ಟು . . . ಹಿಂದಕ್ಕೆ ಎಳೆಯಲು ಪ್ರಾರಂಭ ಮಾಡುವುವು (ಸಂಯುಕ್ತ. ೯೬). **ಪ್ರಯತ್ನ ಮಾಡು**= ಯತ್ನ ಮಾಡು ; ಉದ್ಯೋಗಿಸು : ತಾವು ಅಭ್ಯಾಸ ಮಾಡಿದ ಪುಸ್ತಕ ಯಾವುದೆಂದಾಗಲಿ, ಅದರ ವಿವರಗಳನ್ನಾಗಲಿ ಅವರು ತಿಳಿಸುವ ಪ್ರಯತ್ನ ಮಾಡಿಲ್ಲ (ಜೀಕಕ್ಕ. ೬೬) ; ಮುಂದೆ ಪ್ರಯತ್ನ ಮಾಡುವುದಾದರೂ ಏಕೆ (ಕೃಕಕ್ಕ. ೩೭). [ಸಂ.]

**ಪ್ರಯತ್ನಿಸು** (ಕ್ರಿ). ಯತ್ನ ಮಾಡು : ರತ್ನಪರೀಕ್ಷೆ ಗಜಾಶ್ವಪರೀಕ್ಷೆ ಪ್ರಯತ್ನಿಸ ಬಾಹ್ಯವಿಜ್ಞಾನ ರತ್ನತ್ರಯರೂಪನಾತ್ಮನೆಂದಱಿವುದು ನೂತ್ನಾಂತರಂಗವಿಜ್ಞಾನ (ಚಚಚ. ೨-೦೯): ಭಾರತದೇಶವು ಬಡಜನರ ಜೀವನಸ್ಥಿತಿಗಳನ್ನು ಸುಧಾರಿಸುವುದಕ್ಕಾಗಿ ಪ್ರಯತ್ನಿಸುತ್ತಿದೆ (ಆಹಾರ. ೩೦); ಅವಳಿಗಾದರೂ ಮಾಧವಿಯ ಪಾಲಿನ ನೃತ್ಯಗಾನಗಳನ್ನು ಕಲಿಸೋಣವೆಂದು ಎಣಿಸಿ ಪ್ರಯತ್ನಿಸಿದಳು (ಕೂಗ್ಸು. ೯೬). [ಪ್ರಯತ್ನ + –ಇಸು]

**ಪ್ರಯಸ್ತ** (ನಾ). ಸಂಬಾರ ಪದಾರ್ಥ, ಒಗ್ಗರಣೆ ಮುಂತಾದುವುಗಳನ್ನು ಹಾಕಿ ಸಂಸ್ಕರಿಸಿದ ವ್ಯಂಜನ.–ಅಡುಗೆ : "ಪ್ರಯಸ್ತಂ, ಸುಸಂಸ್ಕೃತಂ–ಉದ್ದಿನಬೇಳೆ, ಕಡಲೆ, ಸಾಸುವೆ, ಜೀರಿಗೆ, ಮೆಣಸಿನಕಾಯಿ, ತುಪ್ಪ ಮುಂತಾದವುಗಳಿಂದ ವಗ್ಗರಿಸಿ ಹಿಂಗು, ಕರಿಬೇವು ಮುಂತಾದ ಪರಿಮಳಗಳಂ ಕಲ್ಪಿಸಿದ ರುಚಿಯಾದ ಪದಾರ್ಥಗಳು" (ಸಿದ್ಧಾಂತಿ. ೨೯೬). [ಸಂ.]

**ಪ್ರಯಾಗ** (ನಾ). ೧. ಯಜ್ಞ; ಯಾಗ. ೨. ಯಜ್ಞ ಮಾಡುವ ಸ್ಥಳ; ಯಾಗಭೂಮಿ. ೩. ಈಗಿನ ಅಲಹಾಬಾದ್ ಬಳಿಯ ಒಂದು ಪುಣ್ಯಕ್ಷೇತ್ರ ; ಗಂಗೆ, ಯಮುನೆ ಮತ್ತು (ಗುಪ್ತಗಾಮಿನಿಯಾದ) ಸರಸ್ವತಿ ನದಿಗಳ ಸಂಗಮ ಸ್ಥಳ ; ಬ್ರಹ್ಮನು ಈ ಪ್ರದೇಶದಲ್ಲಿ ಅನೇಕ ಯಾಗಗಳನ್ನು ಮಾಡಿದ ಕಾರಣ ಇದಕ್ಕೆ ಪ್ರಯಾಗವೆಂಬ ಹೆಸರು ಬಂದಿತೆಂಬ ನಂಬಿಕೆಯಿದೆ : ಅಸುರಮರ್ದನನ ಬೆಸದಿಂ ಪ್ರಯಾಗದೊಳ್ಪೊಡುವೇ ಶಿರಮಂ ಬಱಿದೆ ಗಾಸಿಯಾಗದಿರು (ಕೃಚಿಜ. ೯೯-೨೦) ; ಇನ್ನು ಮೂರು ದಿನಗಳಲ್ಲಿ ಕಾಶಿ, ಹರಿದ್ವಾರ, ಗಯಾ, ಪ್ರಯಾಗ ಮೊದಲಾದ ಮಹಾಮಹಾಕ್ಷೇತ್ರಗಳಿಗೆ ಹೊರಡಬೇಕಾದೀತು! (ಚಂಡ. ೯೩). ೪. ಇಂದ್ರ. ೫. ಕುದುರೆ. [ಸಂ.]

**ಪ್ರಯಾಗ** (ನಾ). = ಪ್ರಪಾಗ ೩ : ಶ್ರೀಪರ್ವತದೊಳಂ ಪ್ರಯಾಗಯೊಳಂ ಚಾಣರಾಸಿಯೊಳಂ ಕುರುಕ್ಷೇತ್ರದೊಳಂ ಹತ್ತು ಸಾಸಿರ ಕವಿಲೆಯುಮಂ ಹತ್ತು ಸಾವಿರ ವೇದಪಾರಗರುಮನಳಿದ ಬ್ರಹ್ಮಾಹತ್ಯಕ್ಕು (ಕಶಾ. ೦೦೬-೨೨-೬೨ ; 1078) ; ಇನ್ನೀ ಧರ್ಮ್ಮಮನಾವನೋರ್ವ್ವ ಪ್ರತಿಪಾಳಿಸಿದಂಗೆ ಗಂಗೆ ವಾರಣಾಸಿ ಗುರುಕ್ಷೇತ್ರ ಪ್ರಯಾಗೆಯಲು ಸಾಸಿರ್ವ್ವ ಬ್ರಾಹ್ಮಣರ್ಗ್ಗೆ ಸಾಸಿರ ಕವಿಲೆಯ ದಾನಂಗೆಯ್ದ ಫಲಮಕ್ಕು (ಎಕ. XII, ತಿಪಟೂ. ೬೦-೯೭ ; 1163). [ಸಂ.]

**ಪ್ರಯಾಣ** (ನಾ). ೧. ಪಯಣ ; ಸಂಚಾರ ; ಯಾತ್ರೆ : "ಯಾತ್ರಾ, ಪ್ರಯಾಣಂ, ಪ್ರಸ್ಥಾನಂ–ಈ ೩ ಪಯಣಂ" (ಕಅಯು. ೬೯-೨೯೬) ; ನಂದಗೋಪಂ . . . ಕತಿಪಯಪ್ರಯಾಣಂಗಳಿಂ ಪೋಗಿ (ಜಗಚ. ೩-೬೩ ಚ); ಪ್ರಯಾಣ ಅಲೆದಾಟ ಮೊದಲಾದುವುಗಳ ಆಯಾಸದಿಂದ ನಿದ್ರೆಯೇನೋ ತಡವಿಲ್ಲದೆ ಬಂದಿತು (ಹಂಚಿಮು. ೯೯). ೩. ಯುದ್ಧಕ್ಕೆ ಹೊರಡುವಿಕೆ ; ಆಕ್ರಮಣ ; ಧಾಳಿ. ೪. (ಪ್ರಪಂಚದಿಂದ) ನಿರ್ಗಮನ ; ಸಾವು. ೫. [ಸಂಗೀತ]ಗಾಯಕನು ಹಾಡುವಾಗ ಅದಕ್ಕನುಗುಣವಾಗಿ ಮಾಡುವ ಮೈಯ ಚಲನವಲನ ; ಒಂದು ಬಗೆಯ ದೋಷ : ಕಂಪಿತ . . . ಪ್ರಯಾಣ [ಚಾಚಾಂ. ಣು] . . . ತಾಳವಿಹೀನವೆಂಬ ಪದಿನೈದು ಸ್ವರದೂಷಣಂ ಪೊರ್ದದೆ ಪಾಡಿ ಮೋಹಿಸುವ ಗಾಯಕರಿಂ (ಚಿಚೀಕ. ೦೯೦). 'ಪ್ರಸಾರ' ಪಾಠ.

**ಪ್ರಯಾಣ ಮಾಡು** = ೧. ಸಂಚಾರ ಮಾಡು : ಆಗುಂಬೆಯಲ್ಲಿ ಎರಡು ದಿನ ತಂಗಿದ್ದು ಮುಂದಕ್ಕೆ ಪ್ರಯಾಣ ಮಾಡುತ್ತಾರೆ (ಹಸುಹೂ. ೨೯೬). ೨. ಸಾಯು ; ಮರಣ ಹೊಂದು. [ಸಂ.]

**ಪ್ರಯಾಣಿಕ** (ನಾ). ಸಂಚಾರ ಮಾಡುವವನು; ಪಯಣಿಗ ; ಪ್ರವಾಸಿ: ನನಗಂತೂ, ಬಹುದೂರ ಎಲ್ಲೊ ಹೋಗಿ ಊರಿಗೆ ಹಿಂತಿರುಗಿದ ಪ್ರಯಾಣಿಕನಂತೆ ಆಗಿತ್ತು (ಚಾರಿಪು. ೨) ; ಸೋಮೇಶ್ವರದ ಮೂಲಕ ಹಾದು ಹೋಗುವ ಪ್ರಯಾಣಿಕರ ಸಂಖ್ಯೆ ಹೆಚ್ಚು (ಹಸುಹೂ. ೨೬೦). [ಸಂ.]

**ಪ್ರಯಾತ** (ಗು). ೧. ಹೊರಟಿರುವ ; ಹೋಗುವ. ಆಯಾತಪ್ರಯಾತಾಂಗನಾನಿಕರೋದ್ಯಚ್ಚರಣಾಂಶುಪಲ್ಲವಿತಂ . . . ರಾಜಗೇಹಾಜಿರಂ (ಕಂದ್ರಪ್ರ. ೦-೩೦). ೨. ಹೊಂದಿರುವ, ಪಡೆದಿರುವ : (ನಾ). ೩. ಪ್ರಯಾಣ ; ಸಂಚಾರ. ೪. ಪ್ರಪಾತ ; ಕೊಳ್ಳ. [ಸಂ.]

**ಪ್ರಯಾಮ** (ನಾ). ೧. (ಆಹಾರಧಾನ್ಯ, ನೀರು ಮೊದಲಾದುವುಗಳ) ಕೊರತೆ. ೨. ಆಹಾರಧಾನ್ಯಗಳ ಕೊರತೆಯಿಂದಾಗಿ ಕೊಳ್ಳುವವರಲ್ಲಿ ಉಂಟಾಗುವ ಪೈಪೋಟಿ. ೩. ಕ್ಷಾಮ ; ಬರ. [ಸಂ.]

**ಪ್ರಯಾಸ** (ನಾ). ೧. ಶ್ರಮ; ಆಯಾಸ: ಕಾದಂಬರಿಯ ಪ್ರಯಾಸದಿಂದ ನಾಲ್ಕಡಿಯಿಟ್ಟು . . . ಮಹಾಶ್ವೇತೆಯನ್ನು ಕಂಠಾಲಿಂಗನ ಮಾಡಿಕೊಳ್ಳಲಾಗಿ (ಚಕಕ. ೩೬). ೨. ಕಷ್ಟ ; ತೊಂದರೆ : ಅಕ್ಷರ ಕಲಿಯುವುದು ಹೆಚ್ಚಿನ ಪ್ರಯಾಸವಾಗಬಾರದು (ದ್ರಾಚಿಚ. ೬೩). ೩. ಅನುಭವ; ಪರಿಶ್ರಮ : ಧನುರ್ವಿದ್ಯಾಪ್ರಯಾಸಗಳಲ್ಲಿ ಕೃತಯುಗದಲ್ಲಿ ತಾನು ಸಮರ್ಥನು (ಚಿತ್ರಚಿ. ೦-೬೯-೬).

**ಪ್ರಯಾಸ ಪಡು** = ಕಷ್ಟಪಡು; ಶ್ರಮಪಡು : ಆ ವಿವಾಹವನ್ನು ನಿಲ್ಲಿಸಲು ನನ್ನ ತಾಯಿ ಎಷ್ಟೋ ಪ್ರಯಾಸ ಪಟ್ಟಳು (ಕೃಚಾಕ. ೨೬) ; ಪ್ರಯಾಸ ಪಟ್ಟು ಮೇಲೆದ್ದರು (ಹಸುಹೂ. ೩೩೬). [ಸಂ.]

**ಪ್ರಯುಕ್ತ**₁ (ಗು). ೧. ಕೂಡಿದ ; ಹೊಂದಿಕೊಂಡ ; ಸೇರಿದ. ೨. ಜೋಡಿಸಿದ ; ಸೇರಿಸಿದ. (ನಾ). ೩. ಕೂಡಿದುದು ; ಹೊಂದಿಕೆ : "ಯುತಮನ್ವಿತಂ ಸಂಹಿತಂ ಸಮನ್ವಿತಮುಚಿತಮಾ ಪ್ರಯುಕ್ತಂ . . . ಕೂಡಲ್ಕೆ ನಾಮಂ" (ಶಬಂಗಣ. ೦೬೦-೦೬). ೪. ಕಾರಣ ; ಹೇತು ; ನಿಮಿತ್ತ : ಈ ಪರಿಯೊಳತ್ಯಂತಧರ್ಮಕಳಾಪರೂಪವಿಳಾಸದಿಂ ಲೋಕೋಪಕಾರಾರ್ಥಪ್ರಯುಕ್ತನಿರೂಢಿಯಲಿ ಮೆಱೆದು (ಚಕಚಿ. ೨-೬);

ಅದರ ಪ್ರಯುಕ್ತವಾಗಿ ಕೆಲವು ವಾಸಸ್ಥಳಗಳು ನೀರಿನಲ್ಲಿ ಮುಳುಗಡೆ ಆಗುವ ಸಂಭವವಿದ್ದಿತು (ಭಾಗ್ಯ೩. ೭೬). [ಸಂ.]

**ಪ್ರಯುಕ್ತ₂** (ಅ). ಕಾರಣದಿಂದ ; ಸಂಬಂಧವಾಗಿ ; ಸಲುವಾಗಿ : ಈ ಪ್ರಯುಕ್ತ ನಂದವನಕ್ಕಾಗಿ ಭೂಮಿಯನ್ನು ದಾನ ಮಾಡಿದ ಸಂಗತಿಯನ್ನು ಕೊಂಗುನಾಡಿನ ಶಾಸನವೊಂದು ತಿಳಿಸುತ್ತದೆ (ಶಾಸಗ. ೩೩). [ <ಪ್ರಯುಕ್ತ₁ ]

**ಪ್ರಯುಕ್ತಿ** (ನಾ). ೧. ಬಳಕೆ ; ಪ್ರಯೋಗ ; ಉಪಯೋಗ : ಇಂತು ವರ್ತಿಸುತಿರ್ಪದಿದು ನಿಶ್ಚಿಂತಗುರುಭಕ್ತಿಪ್ರಯುಕ್ತಿಯದಂತುಮಲ್ಲದು ದರನಿಮಿತ್ತಕ್ಕೆ ಭಾಷೆಯಂ ನೀಗಿ (ಬಸಪು. ೩೯-೧೭) ೨. ಕಾರಣ ; ಹೇತು ; ನಿಮಿತ್ತ ; ಉದ್ದೇಶ : ಧಾತ್ರಿಯೊಳಗಾ ಅಯ್ಯನ ಮಹಚರಿತ್ರಮಂ ಕೇಳಲ್ಕೆ ತಾನತಿಚಿತ್ರಮತಿಶಯಶೀಲಸಂಬಂಧಪ್ರಯುಕ್ತಿಯಲಿ . . . ಗೃಹಚರರನೆಲ್ಲಂ ಶಿವಸಹಿತರುಂ ಮಾಡಿ (ಚಕಪು.೬೦-೦೩). [ಸಂ.]

**ಪ್ರಯುತ** (ಗು). ೧. ಕೂಡಿದ ; ಸೇರಿದ ; ಹೊಂದಿಕೊಂಡ : ಮಡಿವಾಳ ಮಾಚಯ್ಯಂ ಶಿವಗಣಾರ್ತೋಲನಶಿವೀರವ್ರತಾಚಾರ ಪ್ರಯುತಚ [ಪಾಠಾಂ. ತಾಚಾ]ರ್ಯ ಕಾಲಕರ್ಮವಿರಹಿತನು (ಚಪು. ೩೦-೩). ೨. ಕೂಡಿಲ್ಲದ ; ಸೇರಿಲ್ಲದ ; ಬೇರೆಯಾದ. (ನಾ). ೩. ಒಂದು ಸಂಖ್ಯೆ ; ಹತ್ತು ಲಕ್ಷ : ಅಂಕೆಗಳ ಶ್ರೇಣಿ ಹದಿನೆಂಟರ ವರೆಗೂ ಹೋಗುತ್ತದೆ . . . ಸಹಸ್ರಂ, ಅಯುತ, ಲಕ್ಷ, ಪ್ರಯುತ, ಕೋಟಿ (ಕ್ರ.ವಾ೩. I, ೩೩೭). [ಸಂ.]

**ಪ್ರಯೋಕ್ತೃ** (ನಾ). ೧. ಉಪಯೋಗಿಸುವವನು ; ಬಳಸುವವನು. ೨. ನಡೆಸುವವನು ; ನಿರ್ದೇಶಿಸುವವನು : ಭೇದೋಪಾಯದ ಸಾಧನೆಯಲ್ಲಿ ಮುಖ್ಯವಾಗಿ ಬೇಕಾದವು ಪ್ರಯೋಕ್ತೃವಿನ ಬುದ್ಧಿ, ಕಾರ್ಯನಿರ್ವಾಹದಲ್ಲಿನ ಗುಟ್ಟು (ಸಂಪಾಟಿ. ೦೭೨). ೩. ಬಡ್ಡಿಯ ಮೇಲೆ ಹಣ ಸಾಲ ಕೊಡುವವನು. ೪. ಬಾಣ ಹೊಡೆಯುವವನು ; ಬಾಣಪ್ರಯೋಗ ಮಾಡುವವನು. [ಸಂ.]

**ಪ್ರಯೋಗ** (ನಾ). ೧. ಒಂದಾಗಿ ಸೇರುವುದು ; ಜೊತೆಯಾಗಿರುವಿಕೆ; ಒಟ್ಟಿಗೆ ಸೇರುವುದು. ೨. (ಶಬ್ದ, ವಾಕ್ಯ ಇತ್ಯಾದಿಗಳ) ಬಳಕೆ ; ಉಪಯೋಗ : ತಮಿಳು ಮತ್ತು ಕನ್ನಡ ಭಾಷೆಯಲ್ಲಿ ಈ ಪದದ ಪ್ರಯೋಗಗಳು ಇಂತಿವೆ (ದ್ರಾಏಂ. ೩೩) ; ಭಾಷೆಯ ಪ್ರಯೋಗದಿಂದ ಅಭಿವ್ಯಕ್ತವಾಗುವ ಅಥವಾ ಜನಿಸುವ ಎಲ್ಲಾ ವಿಷಯಗಳು (ಅಂಕಾ. ೦೦೪). ೩. ಉದಾಹರಣೆ ; ನಿದರ್ಶನ ; ದೃಷ್ಟಾಂತ : ಡಕಾರಕ್ಕಾದೇಶಮಾದ ಱಟುಕ್ಕ ಪ್ರಯೋಗಂ, ಕಾಡುಱಿಚ್ಚು – ಕಾಱುಕಿಚ್ಚು (ಶಮದ. ೦೯ ಪ್ರಯೋ). ೪. ಆರಂಭ ; ಪ್ರಾರಂಭ. ೫. ಅಪ್ಪಣೆ ; ಆಜ್ಞೆ : “ ಆ ಪ್ರಯೋಗಂ ಶಾಸನಂ ಪೇೞ್ವುದಕೆ ಪೆಸರೆನಿಕ್ಕುಂ” (ಹುಂಗಶಾ. ೦೬೦-೦೮). ೬. ಹಂಚಿಕೆ ; ಯೋಜನೆ. ೭. ಕಾರ್ಯ ; ಕೆಲಸ : ಮಿಂಚು ಮಿಂಚಿದಡೆ ಮಿಂಚಿನಲುಳ್ಳ ಪ್ರಯೋಗವನಾಕ್ಷಣವೆ ಪ್ರಯೋಗಿಸಬೇಕು (ಕಲ್ಯಕ. ೪. ೩೬೭-೦೨೪೬). ೮. ಧಾರ್ಮಿಕಕರ್ಮಗಳನ್ನು ಮಾಡಿಸುವ ಕ್ರಮ,— ನಿಯಮಾಚರಣೆಯ ರೀತಿ ; ಕರ್ಮಕಾರ್ಯವಿಧಾನ. ೯. ಬಿಡುವುದಂ ; ಎಸೆಯುವುದು ; ಹೊಡೆತ : ‘ಬಾಣಪ್ರಯೋಗ’ ಪಥಾ. ೧೦. ನಾಟಕ ಅಥವಾ ನೃತ್ಯ ಇತ್ಯಾದಿ ಪ್ರದರ್ಶನ : ನೃತ್ತ— ಸಂಗೀತಗಳಿಂದೊಡಗೂಡಿದ ಪ್ರಯೋಗವೇ ನಾಟಕದ ಕೊನೆಯ ರೂಪ ಎಂದು ನಾವು ತಿಳಿಯಬಹುದು (ಭಾಕದ. ೩೭೨). ೧೧. ಪರೀಕ್ಷೆ ಮಾಡಿ ನೋಡುವಿಕೆ ; ಪರಿಶೀಲನಾಕಾರ್ಯ : ಅದು ಸಾಧನ ದೂಷಣ ಪ್ರಯೋಗಾನ್ಯಥಾನುಪತ್ತಿಯಿಂ ಬಹಿರರ್ಥಸಿದ್ಧಿಯಕ್ಕುಂ (ಅಂಪು. ೨-೦೦ ಚ) ; ಬೇರೆಬೇರೆ ವಿಜ್ಞಾನಭಾಗಗಳು ತಮ್ಮದೇ ಆದ ದಾರಿಗಳನ್ನು ಹಿಡಿದು ಬೆಳೆಯುತ್ತಿದ್ದರೂ ಅವುಗಳಿಗೆಲ್ಲಾ ಸಾಮಾನ್ಯವಾದ ಒಂದು ಮಾರ್ಗವುಂಟು. ಊಹೆ, ಪ್ರಯೋಗ, ಸಾಧನೆ, ನಿದರ್ಶನ ಇವುಗಳೇ ಈ ಮಾರ್ಗದ ಬೇರೆ ಬೇರೆ ಘಟ್ಟಗಳು (ಭೌತಶಾ. ೭). ೧೨. ಫಲ ; ಪರಿಣಾಮ. ೧೩. ಉಪಕರಣ ; ಸಾಧನ. ೧೪. ಬಡ್ಡಿಗೆ ಸಾಲ ಕೊಡುವಿಕೆ. [ಸಂ.]

**ಪ್ರಯೋಗಶಾಲೆ** (ನಾ). ತತ್ತ್ವಗಳ ಸತ್ಯವನ್ನು ಅರಿಯಲು ನಡೆಸುವ ಪರಿಶೀಲನಾಕಾರ್ಯದ ಮಂದಿರ,—ಶಾಲೆ : ಪ್ರಯೋಗಶಾಲೆಯಲ್ಲಿ ಆಹಾರದಿಂದ ರಂಜಕವನ್ನು ಬೇರ್ಪಡಿಸಿ ಅದನ್ನು ಇಲಿಗಳಿಗೆ ಕೊಟ್ಟರೆ, ಆಹಾರದಲ್ಲಿ ರಂಜಕದ ನ್ಯೂನತೆ ಕಂಡುಬರುತ್ತದೆ (ಗೃಹಶಾ. ೨೦). [ಸಂ. ಪ್ರಯೋಗಶಾಲಾ]

**ಪ್ರಯೋಗಸಿದ್ಧಿ** (ನಾ). ಪ್ರದರ್ಶನದಿಂದ ಬರುವ ಅನುಭವ,— ಪಡೆಯುವ ಸಿದ್ಧಿ : ಇಂಥ ನಾಟಕಗ್ರಹದೊಳಗೆ ಪ್ರಯೋಗಸಿದ್ಧಿಯನ್ನು ಪಡೆದ ನಾಟಕವು ರಂಗಭೂಮಿಯ ಮೇಲೆ ರಸದ ಸುರಿಮಳೆಯನ್ನು ಸುರಿಸೀತು (ಕ್ರಾಂಆ. ೩೯). [ಸಂ.]

**ಪ್ರಯೋಗಿಸು** (ಕ್ರಿ). ೧. ಬಳಸು ; ಉಪಯೋಗಿಸು : ವಿದಿತಾರ್ಥವಿಪರ್ಯಾಸಾಸ್ಪದಮೆ ದಲಾಕ್ಷೇಪಮೆಂಬಳಂಕಾರಂ ಮತ್ತದಱ ವಿಶೇಷ ವಿಭಾಗಮನುದಾಹರಣಮಾರ್ಗದಿಂ ಪ್ರಯೋಗಿಸಿ ತೋರ್ಪೆಂ (ಕವಿರಾ. ೩-೪೯) ; ಭಟ್ಟಾರರವಧಿಜ್ಞಾನಮಂ ಪ್ರಯೋಗಿಸಿ ಇಂತೆಂದು ಪೇೞ್ದರ್ (ವಡ್ಡಾರಾ. ೦೨-೨೮) ; ಕಾರ್ಯವನಱಿವಾತನು ಮೊದಲಲ್ಲಿ ಸಾಮವನೆ ಪ್ರಯೋಗಿಸುವುದು (ಹಂಪಕಾಂ. ೦೬೬-೦೩) ; ಮಾರ್ಗವಿದರ್ ಸಂಖ್ಯೆಯೊಳಂ ಭೋರ್ಗರೆವನುಕೃತಿಯೊಳಂ ಪ್ರಯೋಗಿಸುತಿರ್ಪರ್ (ಶಮದ. ೦೯). ೨. (ಅಸ್ತ್ರ ಶಸ್ತ್ರಾದಿಗಳನ್ನು) ಬಿಡು ; ಎಸೆ ; ಹೊಡೆ : ಕಾಲದೇಶವನ್ನರಿತು ಶತ್ರುಗಳ ಮೇಲೆ ಪ್ರಯೋಗಿಸುತ . . . ಯಶೋವಂತನಾಗು (ಶಿಗಂಂ. ೨೫೦-೦೩) ; ಕಾಮನು ಪ್ರಯೋಗಿಸಿದ ಕುಸುಮಬಾಣಗಳಿಂದ ಈಶ್ವರನು ಆರವೇಷ್ಟಾಗುವನು (ಶಾಚಿಕ. ೦೩೨). ೩. ಹರಿಸಂ; ಹಾಯಿಸು ; ಪ್ರವಹಿಸುವಂತೆ ಮಾಡು : ಬಿತ್ತುವ ಮುನ್ನ ಬೀಜಗಳ ಮೇಲೆ ವಿದ್ಯುತ್ತನ್ನು ಪ್ರಯೋಗಿಸುತ್ತೇವೆ (ಉಂಡಾ. ೦೦೦). [ಪ್ರಯೋಗ + — ಇಸು₂]

**ಪ್ರಯೋಜಕ** (ಗು). ೧. ಉಪಯುಕ್ತವಾದ ; ಅಗತ್ಯವಾದ ; ಪ್ರಯೋಜನಕಾರಿಯಾದ : ನಿರ್ಮಾಪಕಶಾಸ್ತ್ರಗಳಾದರೋ ಜ್ಞಾನವನ್ನು ಪ್ರಯೋಜಕ ಮತ್ತು ಸುಂದರ ವಸ್ತುಗಳ ನಿರ್ಮಾಣಕ್ಕೆ ಉಪಯೋಗಿಸುತ್ತವೆ (ಅಂಕಾ. ೦೦ ಹೀಂ೪). (ನಾ). ೨. ಉಪಯುಕ್ತವಾದುದು : ರಾಜಕೀಯದೃಷ್ಟಿಯಿಂದ ಮಾತ್ರ ಪಾಶ್ಚಾತ್ಯರ ಅದರಲ್ಲೂ ಆಂಗ್ಲರ ಸಾಮ್ರಾಜ್ಯಸ್ಥಾಪನೆ ಭರತಖಂಡಕ್ಕೆ ಬಹಳ ಪ್ರಯೋಜಕವಾಯಿತು (ಹುಕ್ಕಾಕ. ೦೦೩ ಹೀಂ೪). ೩. ಉಪಯುಕ್ತನಾದವನು : (೬). [ಸಂ.]

**ಪ್ರಯೋಜನ** (ನಾ). ೧. ಬಳಕೆ ; ಉಪಯೋಗ ; ಪ್ರಯೋಗ : ಸಂಧಿವಿಷಯಂ—ಸಂಧಿಪ್ರಯೋಜನಂ (ಶಮದ ೩. ೩೦ ಹೀಂ). ೨. ಬೇಕಾಗಿರುವಿಕೆ ; ಅಗತ್ಯ ; ಆವಶ್ಯಕತೆ : ಹಸನಾದ ಕರಭೂಮಿಯಲ್ಲಿ ವರ್ಷವರ್ಷ ಕಳೆ ಹೊಡೆಯುವ ಪ್ರಯೋಜನವಿಲ್ಲ (ಕೃಷಿಶ. ೩೬೭). ೩. ಲಾಭ; ನಫೆ : ಲೋಕದಲ್ಲಿ ಯಾರಿಗೆ ಯಾವುದು ಇಷ್ಟವೋ ಅದೇ ಅವರಿಗೆ ಪ್ರಯೋಜನ (ಹಿಂಹಾ. ೭೯); ಮಾತಲಿಯು ಈ ನನ್ನ ಪ್ರಯೋಜನವು ಇಂದ್ರನಿಗೆ ತಿಳಿಯಲಿಲ್ಲವಲ್ಲಾ (ಶಾಕುಂತ. ೦೦೦-೦೩). ೪. ಉದ್ದೇಶ: ಗುರಿ : ಕೆಳದಿ ಚೆಂನ್ನಮ್ಮಾಜಿಯವರು ದೊಡ್ಡ ಚೆಂನಪ್ಪಯ್ಯಗೆ ಬರಸಿ ಕಳುಹಿಸಿದ ಪ್ರಯೋಜನ (ಪ್ರಾಂಅ. ೦೯೩೪; ೯-೨; ೧೦೦೦). ೫. ಸಮಾರಾಧನೆ; ಅನ್ನಸಂತರ್ಪಣೆ : ಒಂದಾನೊಂದು ದಿವಸ ಊರೊಳಗೆ ಲಿಂಗವಂತರು ದೊಡ್ಡ ಪ್ರಯೋಜನವನ್ನು ಮಾಡಿಸಲಾಗಿ (ಕಥಾಗಿ. ೬೨೦).

೬. [ನ್ಯಾಯಶಾ]ಪದಿನಾರು ಬಗೆಯ ಪದಾರ್ಥಗಳಲ್ಲಿ ಒಂದು : ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ. . . ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದಶಾ. ೧೦೨). [ಸಂ.]

**ಪ್ರಯೋಜನಕಾರಿ** (ಗು). ೧. ಉಪಯೋಗಕರವಾದ. (ನಾ). ೨. ಉಪಯೋಗಕರವಾದುದು ; ಉಪಯುಕ್ತವಾದುದು : ಸಲಕರಣೆಗಳು ಸರಳರೀತಿಯವುಗಳಾಗಿದ್ದು ಪ್ರಯೋಜನಕಾರಿಯೂ ಆಗಿರಬೇಕು (ಅಡುಗಾ. ೩೨): ಈ ಪೀಠಿಕೆ ಅನುಬಂಧಗಳು ಅತ್ಯಂತ ಆವಶ್ಯಕವಾದುವೂ ಪ್ರಯೋಜನಕಾರಿಗಳೂ ಆಗಿವೆ (ಅಂಕಾ. X ಮುನ್ನುಡಿ). [ಸಂ. ಪ್ರಯೋಜನಕಾರಿನ್]

**ಪ್ರಯೋಜನವಸ್ತು** (ನಾ). ಬಳಕೆಯ ವಸ್ತು; ಉಪಯೋಗಿಸುವ ಪದಾರ್ಥ : ಪ್ರಯೋಜನವಸ್ತುವಿನೊಳ್ ಕರ್ತೃವಿವಕ್ಷೆಯಾಗೆ ಇಸುವಕ್ಕುಂ (ಶಮದ. ೨೫೦ ವೃತ್ತಿ). [ಸಂ.]

**ಪ್ರಯೋಜ್ಯ** (ಗು). ೧. ಬಳಸಬಹುದಾದ ; ಉಪಯೋಗಿಸಲರ್ಹವಾದ. ೨. ಬಿಟ್ಟ ; ಪ್ರಯೋಗಿಸಿದ ; ಎಸೆದ. (ನಾ). ೩. ಬಳಸಬಹುದಾದಂದು ; ಉಪಯುಕ್ತವಾದುದಂ : ವಿದ್ಯಾಧರಶ್ರೇಣಿಯ ಪರಿಭಾಷೆಗಳ್ ನಿನ್ನವಾಗದೆ ಸಾವಂ ಪ್ರಿಯಜನಪ್ರಯೋಜ್ಯಂ ಅಲ್ಲದೆಡೆಯೊಳುನ್ಮತ್ತವಿಳಸಿತಂ (ಶಾಂತಿಪು. ೩-೯೬ ವ). ೪. ಆಳಂ ; ಸೇವಕ. ೫. ಬಡ್ಡಿಗೆ ಕೊಟ್ಟ ಹಣ ; ಮೂಲಧನ ; ಅಸಲು. [ಸಂ.]

**ಪ್ರರತ್ನ** (ನಾ). ಶ್ರೇಷ್ಠವಾದ ರತ್ನ : ಭೂಭುಜನಿಕರಕಿರೀಟಪ್ರರತ್ನಪ್ರಭೂಸತಾಂತಪ್ರದ್ಯೋತ ನೂತ್ನೋದಕಜನಿತಪದಾಂಭೋಜಂ (೧೦೪. ೩-೨). [ಸಂ.]

**ಪ್ರರೂಢ** (ಗು). ೧. ಪೂರ್ತಿಯಾಗಿ ಬೆಳೆದ; ಚೆನ್ನಾಗಿ ವೃದ್ಧಿಯಾದ : ಆ ಶೈಶವಪ್ರಭೃತಿಪ್ರರೂಢನಿರ್ಭರಪ್ರೇಮರಸರುಮನೇಕಾರ್ಥಶಾಸ್ತ್ರಪ್ರಯೋಗಕುಶಲರುಂ (ಆದಿಪು. ೦-೬೦ ವ); ಪ್ರರೂಢಯೌವನಮನೋಹರನುಂ ಕವಚಹರನುಂ ಆದ ನಿಜತನೂಜನಂ ನೋಡಿ (ಚಂದ್ರಪು. ೨-೬೬). ೨. ಹೆಚ್ಚಾದ; ಅಧಿಕವಾದ : ಬರಿಸಿ ಕ್ಷಿತಿಪತಿಯಂ ಸಯ್ತಿರಿಸಿ ಪ್ರಿಯಕುಶಲವಾರ್ತೆಯಂ ಬೆಸಗೊಂಡು ಸ್ಥಿರಮಿರ್ದು ಪ್ರಭು ನುಡಿಯೆ ಪ್ರರೂಢಮುದನಾದನಾತನೆಂಬುದು ದೂಷ್ಯಂ (ಕಪಿಾ. ೨-೭). (ನಾ). ೩. ಹೊಟ್ಟೆ; ಜಠರ. [ಸಂ.]

**ಪ್ರರೂಪಣ** (ನಾ). ಚೆನ್ನಾಗಿ ರೂಪಿಸುವಿಕೆ; ಉತ್ತಮವಾದ ನಿರೂಪಣೆ: ನಿರೂಪಿತಾವನಿ ಮನುಷ್ಯಸ್ಥಿತಿ ಪ್ರರೂಪಣಾರ್ಥಂ ಉತ್ತರಸೂತ್ರಾವತಾರಂ (ತತ್ತ್ವಸ್ರ. ೦೬೫). [ಸಂ.]

**ಪ್ರರೂಪಿತ** (ನಾ). ಹೇಳಿಕೆ; ನಿರೂಪಿತವಾದುದು : ನಿರತಿಶಯಾಲಂಕಾರಪ್ರರೂಪಿತಂಗಳ್ಪುರಾಣಕವಿವಿದಿತಂಗಳ್ (ಕವಿರಾ. ೨-೦); ಕರ್ಮಕಾಂಡಬಂಧೋದಯ ಸತ್ತ್ವಯುಕ್ತಸ್ತವಂ ಮಹಾಧಿಕಾರಂ ಪ್ರರೂಪಿತವಮಾದುದು (ಗೂಮ್ಮಸಾ. ೯೭-೦೦). [ಸಂ.]

**ಪ್ರರೂಪಿಸು** (ಕ್ರಿ). ಹೇಳಂ; ನಿರೂಪಿಸು : ಸ್ಥಾನಸಮುತ್ಕೀರ್ತನಮೇನು ನಿಮಿತ್ತಂ ಬಂದುದೆಂದೊಡೆ ಮುನ್ನಂ ಪ್ರಕೃತಿ ಸಮುತ್ಕೀರ್ತನದಿಂದ ಮಾವುವು ಕೆಲವು ಪ್ರಕೃತಿಗಳು ಪ್ರರೂಪಿಸಲ್ಪಟ್ಟುವವಕ್ಕೆ ಬಂಧಮೇನು ಕ್ರಮದಿಂದಮಕ್ಕುಮೋ ಮೇಣಕ್ರಮದಿಂದಮಕ್ಕುಮೋಯೆಂದಿಂತು ಪ್ರಶ್ನೆಮಾಗುತ್ತಿರಲು (ಗೂಮ್ಮಸಾ. ೦೦೩-೮). [ಪ್ರರೂಪಣ + —ಇಸು]

**ಪ್ರರೋಚನ** (ನಾ). ೧. ರುಚಿ ಹುಟ್ಟಿಸುವುದು; ಪ್ರೋತ್ಸಾಹಿಸುವುದು. ೨. [ನಾಟ್ಯ] (ನರ್ತಕಿಯ ರಂಗಪ್ರವೇಶದ ಮೂಲಕ ಪ್ರೇಕ್ಷಕರಲ್ಲಿ) ಅಭಿರುಚಿಯನ್ನುಂಟು ಮಾಡುವುದು.– ಆಸಕ್ತಿಯನ್ನು ಕೆರಳಿಸುವುದು: ವಿಚಿತ್ರಸುರಸೂತ್ರಧಾರನಪ್ಸರಃಪಾತ್ರೀ ಪ್ರವೇಶ ಪ್ರದೇಶಪ್ರರೋಚನಾನಂತರಂ ಪುಷ್ಪಾಂಜಲಿವಿಕ್ಷೇಪಂಗೆಯ್ಯೆ (ಶಾಂತಿಪು. ೬-೩೦ ವ). [ಸಂ.]

**ಪ್ರರೋಚನೆ** (ನಾ). = ಪ್ರರೋಚನ ೨ : ಸಚಿವೋತ್ತಮರೊಳ್ ರಾಜನೀತಿಶಾಸ್ತ್ರನಾಟಕಪ್ರಾರಂಭಕ್ಕೆ ಸೂತ್ರಧಾರನಾಗಿ ತತ್ಪೂರ್ವರಂಗಪ್ರಸಂಗಕ್ಕೆ ಪ್ರರೋಚನೆಯಪ್ಪ ಪ್ರಥಮಪಾತನಿಕೆಯಂ ಪ್ರಸ್ತುತಂ ಮಾಡಿ (ಶಾಂತಿಪು. ೨-೩೦ ವ). [ಸಂ. ಪ್ರರೋಚನ]

**ಪ್ರರೋಹ** (ನಾ). ೧. ಮೊಳೆಯುವಿಕೆ ; ಅಂಕುರಿಸುವಿಕೆ. ೨. ಮೊಳಕೆ ; ಅಂಕುರ : ಬಲದೇವ ವಾಸುದೇವರ್ . . . ಸುಖದ್ರುಮಪ್ರರೋಹದಂತೆಯುಂ . . . ಪ್ರಮೋದಪ್ರವರ್ಧಮಾನಮಾಗೆ ಸುಖಮಿರ್ಪನ್ನೆಗಂ (ಶಾಂತಿಪು. ೦-೬೦ ವ) ; ಪೆಚಿತೇಂ ಸತ್ಯಪ್ರರೋಹಂ ತುಱುಗಿದಪ್ಪುದು (ಕಾದಂಪೂ. ೨೩೪) ; ಕಣ್ಮರಲರೆಮುಚ್ಚಿ ಕಂಡು ಕೊಣಕಿಟ್ಟವುದಲ್ಲಿಗೆ ಗೋರಿಗೊಂಡದೊಂದೆರಳೆಯನಲ್ಲಿರುಳ್ ಶಶಿ ತೊಡರ್ಚುವನಾತ್ಮವಟಪ್ರರೋಹದೊಳ್ (ಚಂದ್ರಪು. ೦-೧೨೪). [ಸಂ.]

**ಪ್ರರೋಹಣ** (ನಾ). = ಪ್ರರೋಹ ೧ : ನಿಖಿಲಶರೀರಪ್ರರೋಹಣಬೀಜಭೂತಕಾರ್ಮಣಶರೀರಂ ಕರ್ಮಮೆನೆ ಪಡುಗುಂ (ತತ್ತ್ವಸ್ರ. ೯೯). [ಸಂ.]

**ಪ್ರಲಂಪಟ** (ನಾ). ಅತಿ ಲಂಪಟ ; ಬಹಳ ಕಾಮುಕನಾದವನು : ದೇವಪರನಾರಿಪ್ರಲಂಪಟ ದನುಜಪಾಲಕನೆ . . . ಬಾಳಿಂದಸುರಪಾತಕರೋವಿಕೈವಾರಿಸಲು ಮುಂದೆಯ್ತಂದ ದಶಕಂಠ (ಕೌಶಿರಾ. ೨೦-೨೨). [ಸಂ.]

**ಪ್ರಲಂಬ**, ಪ್ರಳಂಬ (ಗು). ೧. ತೂಗುಬಿದ್ದ ; ಇಳಿಬಿದ್ದ ; ಜೋತಾಡುವ : ಪ್ರಲಂಬಕರ್ಣಾಭರಣಮಂಚರಿಕಾವಿತಾಡ್ಯಮಾನ ಕಪೋಲಫಲಕಂ (ಶಾಂತಿಪು. ೬-೦೩ ವ); ನೀಲದ ನೆಲಗಟ್ಟಂ ಮಣಿಧೂಲೀಸಾಳಂ ಪ್ರಲಂಬಪಲ್ಲವಮೊಸೆಗುಂ (ಅರ್ಥನೇ. ೨-೯೨). ೨. ಉದ್ದವಾದ; ದೊಡ್ಡದಾದ : ಕಂಬಳಿಹುಳು . . . ಹೊಟ್ಟೆಯ ಕೆಳಗೆ ೨-೮ ಜೊತೆ ಹೊಟ್ಟೆಯ ಪ್ರಲಂಬ ಮಾಂಸಲ ಕೀಲುಗಳಿಲ್ಲದ ಬದಲುಕಾಲುಗಳಿವೆ (ಕೀಟಜೆ. ೦೫). (ನಾ). ೩. ಇಳಿಬಿದ್ದಿರುವ ಸರ; ಜೋಮಾಲೆ: ಅತಿತರಲಮುಕ್ತಾಮಣಿಪ್ರಲಂಬಂಗಳಿಂದಂ . . . ಅಸುಕ್ರಮಂದಪ್ಪದರ್ಚಿಸಿ(ಆದಿಪು. ೨-೩೨ ವ) ೪. ಕೊಂಬೆ; ರೆಂಬೆ. ೫. ಹಾರ; ಮಾಲೆ. ೬. ಸೌತೆಕಾಯಿ. ೭. ಒಂದು ಬಗೆಯ ಲೋಹ; ತಪರ. ೮. ಪದ್ಯ; ಗಾಥೆ. ೯. ಸ್ತನ. ೧೦. ಬಲರಾಮನು ಕೊಂದ ಒಬ್ಬ ರಾಕ್ಷಸನ ಹೆಸರು : 'ಪ್ರಲಂಬಘ್ನ' ಪರಾ. ಪ್ರಳಂಬ : ೧೧. ಆಧಿಕ್ಯ; ಅತಿಶಯ. ೧೦, ೧೧: ನಿಸ್ಸೀಮ ನಿಕಾಮಬಾಹುಸಾಹಸಾಡಂಬರಪ್ರಳಂಬನೆಂಬ ಪ್ರಳಂಬನುಮಂ . . . ಕರೆದು (ಜಗಂ. ೩-೨೨ವ). [ಸಂ.]

**ಪ್ರಲಂಬಘ್ನ** (ನಾ). ಪ್ರಲಂಬನೆಂಬ ರಾಕ್ಷಸನನ್ನು ಕೊಂದವನು; ಬಲರಾಮ : "ಬಲದೇವಃ . . . ಪ್ರಲಂಬಘ್ನಃ . . . ಹಲಾಯುಧಃ- ಈ ೧೮ ಬಲದೇವನ ಪೆಸರ್" (ಹಲಾಯು. ೬-೨೫); ವಿಘ್ನದಾಯಕ ಶ್ರೇಷ್ಠನೆರ್ದೆಗೇಡಿಯ ಪ್ರಲಂಬಘ್ನ ತಾನೊಡಗೊಂಡು ಬಂದು ವಿಘ್ನವಿಲ್ಲದೆ ಮನೆದುಂಬಿಸಬೇಕೆಂದು ಲಗ್ನವ ಪೇಳ್ದನನುಜಗೆ (ಮೋಹತ. ೦೫-೦೩). [ಸಂ.]

**ಪ್ರಲಗ್ನಕ** (ನಾ). ಜವಾಬ್ದಾರಿಯನ್ನು ಹೊತ್ತವನು; ಹೊಣೆಗಾರ: "ಪ್ರತಿಭೂ ಪ್ರಲಗ್ನಕಂ ಪೊಣೆಗಾಜಿಸಕ್ಕು" (ಮಂಗರಾ. ೭೦-೧೭). [ಸಂ.]

**ಪ್ರಲಪನ**(ನಾ). ೧. ಮಾತನಾಡುವುದು; ಸಂಭಾಷಣೆ. ೨. ಪ್ರಯೋಜನವಿಲ್ಲದ ಮಾತು; ಅಸಂಬದ್ಧಪ್ರಲಾಪ. ೩. ಅಳುವಿಕೆ ; ರೋದನ. [ಸಂ.]

**ಪ್ರಲಪಿತ** (ಗು). ೧. ಮಾತನಾಡಿದ; ಹೇಳಿದ. ೨. ಗಳಹಿದ: ಹರಟಿದ. (ನಾ). ೩. ಮಾತನಾಡುವುದು. ೪. ಪ್ರಯೋಜನವಿಲ್ಲದ ಮಾತು; ಹರಟೆ. ೫. ಅಳು; ರೋದನ. [ಸಂ.]

**ಪ್ರಲಪಿಸು** (ಕ್ರಿ). ೧. ಮಾತನಾಡು. ೨. ಗಳಹು; ಹರಟೆ ಹೊಡೆ. ೩. ಅಳು; ರೋದಿಸು: ಇಂತು ಪ್ರಲಪಿಸುವ ರಾಘವನರ್ಥಾಂಗಿಯಿರವಂ ಕಂಡು (ರಾಮಾಶ್ವ. ೩೪–೦೩); ಅವಳು ಯಾವ ಮೂಲೆಯಲ್ಲಿ ಕುಳಿತು ನಾದಿನಿಗಾಗಿ ಪ್ರಲಪಿಸುತ್ತಿದ್ದಾಳೋ (ಮೂಕಾನ. ೨೦೪). [ಪ್ರಲಪನ + – ಇಸ್ಸು]

**ಪ್ರಲಯ**, ಪ್ರಳಯ (ನಾ). ೧. ನಾಶ; ನಿರ್ಮೂಲನ: ಸುಭಟಜನಚಮತ್ಕಾರಿ ತೇಜೋಮಹಾರ್ವಾನಲಮುಗ್ರಾರಾತಿವರ್ಗಪ್ರಲಯಕರವೊಂದೆಯ್ದೆ ತಾಳ್ದಿತ್ತಗುರ್ವಂ (ಅಜಿತ. ೦೩–೪೩). ೨. ಕಲ್ಪದ ಕೊನೆಯಲ್ಲಿ ಉಂಟಾಗುವ ಪ್ರಪಂಚದ ನಾಶ,–ಅಳಿವು; ᴘ ಇದರಲ್ಲಿ ನಿತ್ಯಪ್ರಲಯ, ಪ್ರಾಕೃತಪ್ರಲಯ, ನೈಮಿತ್ತಿಕ ಪ್ರಲಯ ಮತ್ತು ಆತ್ಯಂತಿಕಪ್ರಲಯ ಎಂಬ ನಾಲ್ಕುವಿಧಗಳಿವೆ. (೧) ನಿತ್ಯಪ್ರಲಯ–ಸುಷುಪ್ತಿ (ನಿದ್ರೆ). ಆಗ ಪ್ರಾಣಿಗಳ ಸಮಸ್ತ ಶಕ್ತಿಯೂ ಅಡಗಿ ಹೋಗಿರುತ್ತದೆ. (೨) ಪ್ರಾಕೃತಪ್ರಲಯ–ಈಗಿರುವ ಬ್ರಹ್ಮನ ಅವಧಿ ಮುಗಿದ ನಂತರ ಪ್ರಕೃತಿಯೆಂಬ ಮಾಯೆಯಲ್ಲಿ ಆ ಬ್ರಹ್ಮನೊಡನೆ ಆಗುವ ಇಡೀ ಬ್ರಹ್ಮಾಂಡವಿನಾಶ. (೩) ನೈಮಿತ್ತಿಕ ಪ್ರಲಯ–ಚತುರ್ಯುಗಸಹಸ್ರಪರಿಮಿತವಾದ ಕಾಲವು ಬ್ರಹ್ಮನಿಗೆ ಒಂದು ದಿನವಾಗುತ್ತದೆ. ಆ ಕಾಲಮಾನದ ಕೊನೆಯಲ್ಲಿ ಮೂರು ಲೋಕಗಳೂ ನಾಶವಾಗುತ್ತವೆ. (೪) ಆತ್ಯಂತಿಕಪ್ರಲಯ–ಪ್ರತಿ ಜೀವನಿಗೂ ಬ್ರಹ್ಮಜ್ಞಾನದಿಂದ ಉಂಟಾಗುವ ಪರಬ್ರಹ್ಮೈಕ್ಯ: ಪ್ರಲಯೋಗ್ರಜ್ವಾಲೆಯಂ ತಾಳನೆ ಗಣಪರನೊರ್ವಂ ಲಲಾಟಾಕ್ಷಿಯೊಳ್ (ವೃಷಭ. ೨೯–೦೮೨); ಪ್ರಪಂಚದ ಸಂಹಾರವೇ ಪ್ರಲಯ (ಹಿಂದಸಾ. ೨೬೪). ೩. ಸಾವು; ಮರಣ. ೪. ಮೂರ್ಛೆ; ವಿಸ್ಮೃತಿ. ೫. ಓಂ ಎಂಬ ಮಂತ್ರಾಕ್ಷರ; ಓಂಕಾರ. ೬. ಲಯ; ಐಕ್ಯ. ೭. [ಕಾವ್ಯಮೀ] ಸ್ತಂಭ, ಸ್ವೇದ, ರೋಮಾಂಚ, ಸ್ವರಭಂಗ, ವೇಪಥು, ವೈವರ್ಣ್ಯ, ಅಶ್ರು ಮತ್ತು ಪ್ರಲಯಗಳೆಂಬ ಎಂಟು ವಿಧವಾದ ಸಾತ್ವಿಕಭಾವಗಳಲ್ಲಿ ಒಂದು; ಮೂರ್ಛೆ; ಪ್ರಜ್ಞೆ ಕಳೆದುಕೊಳ್ಳುವುದು: ಸ್ತಂಭ, ಪ್ರಲಯ, ರೋಮಾಂಚ, ಸ್ವೇದ, ವೈವರ್ಣ್ಯ, ವೇಪಥು, ಅಶ್ರು, ವೈಸ್ವರ್ಯ–ಈ ಎಂಟು [ಸಾತ್ವಿಕ ಭಾವಗಳಾಗಿವೆ]. ಅವುಗಳಲ್ಲಿ ಪ್ರಜ್ಞೆ ಕಳೆದುಕೊಳ್ಳುವುದು 'ಪ್ರಲಯ' (ದಶರೂ. ೦೬೬). **ಪ್ರಳಯ :** ೨. ಪ್ರಳಯದುರಿ ಕಾಳಕೂಟದ ಗುಳಿಗೆ ಪುರಾಂತಕ ಲಲಾಟನೇತ್ರಾನಳನೊಂದಳವಿಗಮುಗ್ಗಳಮವರ್ಗಳ ಮುಳಿಸುಗಳುಂ ಮುಳಿದು ತುಡುವ ದಿವ್ಯೇಷುಗಳುಂ (ಕಂಕಭಾ. ೩–೬೬); ಪ್ರಳಯಕ್ಕೆ ಹೊಟಗು ಕಲಿಕಾಲ ಹೊಗದಂತಕನ ಸುಳಿವವಟೊಳಿಲ್ಲ (ಹಕಕಾ. ೬–೩೯). ೩. "ಪಂಚತಾ, ಕಾಲಧರ್ಮಃ, ದಿಷ್ಟಾಂತಃ, ಪ್ರಳಯಃ . . . ೧೦ ಸಾಯುವುದಕ್ಕೆ ಹೆಸರುಗಳು, ಮರಣ" (ಸಿದ್ಧಾಂತಿ. ೨೬೩). ೭. ಕಾರುಣ್ಯಂ ಹಾಸ್ಯಂ ಶೃಂಗಾರಮಿವಿನಿತಟೊಳಮಕ್ಕೆ ವೈದರ್ಭಿ ಮನೋಹಾರಿ ಪ್ರಳಯಾದ್ಭುತರಸ ವೀರರಸಂಗಳ್ಗೆ ಪೇಟ್ಗೆ ಪಾಂಚಾಳಿಕೆಯಂ (ಕಾವ್ಯಾವ. ೭೪೪); ಸ್ತಂಭ . . . ಪ್ರಳಯಂಗಳೆಂಬಷ್ಟವಿಧ ಸಾತ್ವಿಕಭಾವಗಳಿಂ (ವಿವೇಕ. ೨೨೬). [ಸಂ.]

**ಪ್ರಲಯಕಾಲ**, ಪ್ರಳಯಂಕಾಲ (ನಾ). ಪ್ರಪಂಚದ ವಿನಾಶದ ಕಾಲ; ಜಗತ್ತಿನ ಕೊನೆಗಾಲ. **ಪ್ರಳಯಕಾಲ :** "ಸಂವರ್ತಃ, ಪರಿವರ್ತಃ : . . ಮಹಾಪ್ರಳಯಃ–ಈ ಪ್ರಳಯಕಾಲಂ" (ಹಲಾಯು. ೨೦–೦೦೭); ಬಟಿಯ ಬಟಸಿಡಿಲ್ಗಳಿತ್ತೆತ್ತಲುಂ ತುಟಗಿತೆತ್ತೆತ್ತಲುಂ ಪ್ರಳಯಕಾಲದ ಮೇಘಮಟಗುತಿವೆ (ಕೈಬಿಡಾ. ೯–೧೦). [ಸಂ.]

**ಪ್ರಲಯಭೈರವ** (ನಾ). ಪ್ರಳಯಕಾಲದ ರುದ್ರ; ಮಹಾರುದ್ರ: ಪ್ರಲಯಭೈರವನೆಂಬ ಬಿರುದು ಅವನಿಯ ಮೇಲೆ ನೆಲೆಗೊಳಿಸಿ (ಕೆರೆಂದ. ೧–೨೦೭–೩). [ಸಂ.]

**ಪ್ರಲಯಾಗ್ನಿ**, ಪ್ರಳಯಾಗ್ನಿ (ನಾ). ಪ್ರಪಂಚದ ಲಯಕಾಲದಲ್ಲಿ ಏಳುವ ಬೆಂಕಿ; ಪ್ರಳಯಕಾಲದ ಬೆಂಕಿ: ಬಂದ ತತ್ಪ್ರಲ[ಪಾಠಾಂ. ಳ]ಯಾಗ್ನಿಯೊಲು ಜಗದಂದವಂ ಮಾಡುತ್ತ (ಬಸವ. ೩೪–೩೬); ಪ್ರಲಯಾಗ್ನಿ ಪೊತ್ತಿ ಲೋಕಂ ದಹಿಸುತಿರೆ (ಶ್ರೀರಾಮಾ. ೦೦೪–೦೨೦). **ಪ್ರಳಯಾಗ್ನಿ:** ಪ್ರಳಯಾಗ್ನಿಯಾದುದೋ ನಿಜಬಳದಳವಂ ತೋಟಲಗ್ನಿ ಬಳೆದೊದವಿದುದೋ (ಬಂಹಂ. ೦೦–೪೦). [ಸಂ.]

**ಪ್ರಲಾಪ**, ಪ್ರಳಾಪ (ನಾ). ೧. ಮಾತನಾಡುವಿಕೆ; ಸಂಭಾಷಣೆ: ಅದೊಂದು ವ್ಯರ್ಥಪ್ರಲಾಪವೆಂದು ಆಕ್ಷೇಪಕರ ಅಭಿಪ್ರಾಯ (ಜೀವಾತ್ಮ. ೦೦೨). ೨. ಅಸಂಬದ್ಧವಾದ ಮಾತು; ಹರಟೆ: "ಪ್ರಲಾಪಃ, ಅನರ್ಥಕಂ, ವಚಃ — ಪ್ರಯೋಜನವಿಲ್ಲದ ಮಾತಿಗೆ ಪೆಸರು" (ಸಿದ್ಧಾಂತಿ. ೩೪); ಮೆದುಳಿನ ಕಸರತ್ತಿನಿಂದ ಬರುವ ಭಾಗ್ಯವಾದರೂ ಏನು? ಎಂಬ ಪ್ರಶ್ನೆ ಮೂರ್ಖರ ಪ್ರಲಾಪ (ಜೀವಾತ್ಮ. ೬). ೩. ಅಳು; ರೋದನ: ಇವಳ ಪ್ರಲಾಪವನ್ನು ನೆರೆಮನೆಯಲ್ಲಿದ್ದ ಕುಂತಿದೇವಿಯು ಕೇಳಿ . . . ಎಂದಳು (ಸೀತಿಶಂ. XII, ೨೦); ಯುದ್ಧದಲ್ಲಿ ಮೃತರಾದವರ ಸಂಬಂಧಿಗಳಾದ ಸ್ತ್ರೀಯರ ಪ್ರಲಾಪ (ಶಾರದ. ೯೯). ೪. ರೋಗಿಯು (ಸನ್ನಿಪಾತದಿಂದ) ಬಡಬಡಿಸುವುದು; (ಜ್ವರವು ಅತಿ ಹೆಚ್ಚಾದಾಗ ರೋಗಿಯು) ವ್ಯರ್ಥವಾದ ಮಾತುಗಳನ್ನಾಡುವುದು: ನಡುಕ, ಪ್ರಲಾಪ, ದಾಹ, ಮೈನೋವು (ವೈದ್ಯಸಾ. I, ೯೩); ಅಳಲೆಕಾಯಿ, ಪರ್ಪಾಟಕ . . . ಕಷಾಯ ಹಾಕಿ, ಶೋಧಿಸಿ ದ್ರಾಕ್ಷಿ ಹಣ್ಣು ಕೊಡಲು, ಪ್ರಲಾಪ, ಮೂರ್ಛೆ . . . ಪೈತ್ಯಜ್ವರ ಮಾಣುವುವು (ಸಕವೈ. ೮೩). 'ಪ್ರಲಾಪಸನ್ನಿಪಾತ' ಪರಾ. **ಪ್ರಳಾಪ :** ೨. "ಪ್ರಳಾಪವೆಂಬುದು ಬಟುವಾತು" (ಹಲಾಯು. ೨೪–೦೪೯). ೩. ಜೀಯ ನಿಮ್ಮಡಿಗಳಿಗೆ ಗುರು ಗಾಂಗೇಯ ವಿದುರಾದಿಗಳು ಹೇಳಿದ ಜೋಯಿಸವ ಕೈಕೊಂಡಿರೇ ನಮ್ಮಾ ಪ್ರಳಾಪದಲಿ (ಕುಮ್ಯಾಗ. ೩–೩೪); ಅಳದವರಳು ತಿರ್ದರು ರತಿಕಾಂತನ ಹಳವಳಿಸುವ ಪ್ರಳಾಪದಲಿ (ಮೋಹತ. ೬–೨೩). ೪. ತೆಗಟ ಕುಡಿಯಿಸುಗೆ ಶಿವೆ ಕಳವಿಗೆ ಬಾಳಂ ಕಕ್ಕೆ ಮುಸ್ತೆ ಕರ್ಕಟಕಂ ಮುಟ್ಟಿಗೆಯೆಂಬಿವನಿತುಮುಂ ಪೈತ್ತಿಗಜ್ವರಂ ದಾಹಮುಂ ಪ್ರಳಾಪಮುಮಟಗುಂ (ಲೋಕೋಪ. ೯–೦೮). [ಸಂ].

**ಪ್ರಲಾಪಂಗೆಯ್** (ಕ್ರಿ). ಅಳು; ರೋದಿಸಂ: ಬಡವರ ನಂಟನಾವೆಡೆ ದಯಾಪರನಾವೆಡೆ . . . ಮನೋರಮನಾವೆಡೆ ಪೇಟಲಾಗದೇ ಎಂದು ಪ್ರಲಾಪಂಗೆಯ್ದು (ಅಜಿತ. ೬–೧೨೦ ವ); ಅಂತು ಕಾಲಪ್ರಾಪ್ತನಪ್ಪುದುಂ ಲಕ್ಷ್ಮಣನಂತಃಪುರಪುರಂಧ್ರಿಯರ್ ಕಂಡತಿಪ್ರಲಾಪಂಗೆಯ್ವುದುಂ (ಕಂರಾಮಾ. ೦೬–೪೪ ವ). [ಪ್ರಲಾಪ + ಕೆಯ್$_1$]

**ಪ್ರಲಾಪಸನ್ನಿಪಾತ**, ಪ್ರಳಾಪಸನ್ನಿಪಾತ (ನಾ). = ಪ್ರಲಾಪ ೪: ಗಂಧಿಕತಗರ, ಹಿರಿಮದ್ದು . . . ಕಾಸಿ ಕೊಡಿಸಲು ಪ್ರಲಾಪಸನ್ನಿಪಾತ ಮಾಣ್ಗುಂ (ವೈದ್ಯಸಾ. I, ೯೭). **ಪ್ರಳಾಪಸನ್ನಿಪಾತ :** ಮೈಯಲ್ಲಿ ನಡುಕ, ಪ್ರಳಾಪ, ದಾಹ . . . ಇವೆಲ್ಲವು ಉಂಟಾದುದೆ ಪ್ರಳಾಪಸನ್ನಿಪಾತವೆಂದರಿವುದು (ಸಕವೈ. ೦೬೩). [ಸಂ.]

**ಪ್ರಲಾಪಿಸು**, ಪ್ರಳಾಪಿಸು (ಕ್ರಿ). ೧. ಮಾತನಾಡು: (೬). ೨. ವ್ಯರ್ಥವಾದ ಮಾತನಾಡು; ಹರಟು: (೬). ೩. ಅಳು; ರೋದಿಸು: ಪರಮನೀ ಬಾರಿಗೆ ಬದುಕಿದಡೆ ಮರಣವಿಲ್ಲೆನ್ನೆಂದಿಗೆಂದಿಗೆ ನಿರುತವೆನುತಂ ರುದ್ರಪಶುಪತಿ ತಾಂ ಪ್ರಲಾ[ಪಾಠಾಂ. ಳಾ]ಪಿಸುತ (ಬಸವ. ೦೩–೬); ನನ್ನ ಕಂದಾ! ಹಾಹಾ! ಎಂದು ಪ್ರಲಾಪಿಸಿ ಮೂರ್ಛೆ ಹೋದನು (ಸೀತಿಶಂ. I, ೨೩). **ಪ್ರಳಾಪಿಸು :** ೩. ಕಂದರ್ಪನ ದೇಹ ಹತವಾಗೆ . . . ರತಿ ದುಃಖದಿಂದೆ ಪ್ರಳಾಪಿಸುತಿರಲು (ಮೋಹತ. ೬–೩).

[ಪ್ರಲಾಪ + – ಇಸ್ಸು]

**ಪ್ರಲೀನ** (ಗು). ೧. ಕರಗಿದ ; ಲೀನವಾದ. ೨. ಹಾಳಾದ ; ನಾಶವಾದ. (ನಾ). ೩. ಲೀನವಾದವನು ; ಐಕ್ಯ ಹೊಂದಿದವನು : ಜಂಗಮಪ್ರಾಣಪ್ರಲೀನಾ ಜಂಗಮಪ್ರಾಣಪ್ರದಾನಾ (ಬಸಪು. ೩೩-೧೨). [ಸಂ.]

**ಪ್ರಲೋಕಿತ** (ನಾ). [ನಾಟ್ಯ] ಕಣ್ಣುಗುಡ್ಡೆಗಳ ಎಂಟು ಬಗೆಯ ಚಲನೆಗಳಲ್ಲಿ ಒಂದು : ಕಣ್ಣು ಆಲಿಗಳ ೮ ಚಲನೆಗಳಿವೆ . . . ೧. ಸಮ . . . ೬. ಪ್ರಲೋಕಿತ (ಅಭಾಪ್ರ. ೯೬). [ಸಂ.]

**ಪ್ರಲೋಭನ** (ನಾ). ಆಸೆ ಹುಟ್ಟಿಸುವುದು ; ಮರುಳು ಮಾಡುವುದು ; ಆಮಿಷ : ಸೀತಾಪ್ರಲೋಭನಂ ದೀಪಿಸುವ ಮೂಳ್ಕೆಯಿಂ . . . ತೋರಿದತ್ತೊಮ್ಮೆ (ಶ್ರೀರಾಪು. ೨೩೨-೧೧೬) ; ನೀನು ನಾನಾ ವಿಧದ ಪ್ರಲೋಭನವನ್ನು ಬೀರಿ ನನ್ನನ್ನು ನನ್ನ ಬಾಲವಿಧವಾಪದದಿಂದ ಚ್ಯುತಿಗೊಳಿಸಿದೆ (ಅಂಬಿಕೆ. ೧೬). [ಸಂ.]

**ಪ್ರಲೋಭನೆ** (ನಾ). = ಪ್ರಲೋಭನ : ಚಿತ್ತೈಕಾಗ್ರತೆಯನ್ನು ಭಂಗಗೊಳಿಸುವಂಥ ಪ್ರಲೋಭನೆಗಳಾವುವೂ ಅಲ್ಲಿಲ್ಲದುದರಿಂದ, ಅವನು ಆ ಜಾಗವನ್ನಾರಿಸಿಕೊಂಡಿದ್ದನು (ಕೃಸಟು. ೩೪) ; ನೀತಿತತ್ವಗಳಿಗೂ ಪ್ರಾಪಂಚಿಕ ಪ್ರಲೋಭನೆಗಳಿಗೂ ನಡುವಣ ಘರ್ಷಣೆ . . . ಪ್ರತಿಪಾದಿತವಾಗಿದೆ (ಕಾಕೋ. I, ೬೪೪). [ಸಂ. ಪ್ರಲೋಭನ]

**ಪ್ರವಕ್ತೃ** (ನಾ). ವಿವರಿಸಿ ಹೇಳುವವನು ; ಪ್ರವಚನಕಾರ ; ವಾಗ್ಮಿ : ಶ್ರುದ್ಧಾಳುವೆಂಬೋಂ . . . ಪ್ರವಕ್ತೃವಚನ ಪಾರಾವಾರಾವಗಾಹನ ಪರಿಣತಮತಿವಿಶೇಷನುಂ (ಚಾವುಂಪು. ೬) ; ಉಪನಿಷತ್ತಿನ ಪ್ರವಕ್ತೃಗಳು ಋಷಿಗಳು (ಭಾರದ. ೩೭). [ಸಂ.]

**ಪ್ರವಣ** (ನಾ). ೧. ದೊಡ್ಡ ಧ್ವನಿ ; ಭಾರಿ ಶಬ್ದ : "ಕಂಚುಕಂ ಮರ್ಮರ ವರ್ಮ ಚರ್ಮ ಕುಟಜು ಪ್ರವಚಂ ಕವಚಾಭಿಧಾನಕಂ" (ಅಭಿಧಾನ. ೯೮). ೨. ಸಾರುವಿಕೆ ; ಘೋಷಣೆ : (?). [ಸಂ.]

**ಪ್ರವಚನ** (ನಾ). ೧. ಮಾತು ; ನುಡಿ. ೨. ವಿವರಣೆ ; ವ್ಯಾಖ್ಯಾನ: ನಾನೇನು ವಿದ್ಯಾರ್ಥಿಯ ತಮ್ಮ ಪ್ರವಚನಕ್ಕೆ ? (ಚಂದ್ರಸ. ೯೪); ಪಾಠ ಪ್ರವಚನಗಳು ನಡೆಯುತ್ತಿರುವಾಗ ಉಪಾಧ್ಯಾಯರ ಕೊರಲಿನೊಂದಿಗೆ ತಮ್ಮದನ್ನೂ ಸೇರಿಸುತ್ತವೆ (ಹಸುಹೊ. ೦೩೬). ೩. ಒಳ್ಳೆಯ ಮಾತು; ಉತ್ತಮವಾದ ಮಾತು. ೪. [ಜೈನ] "ವೀತರಾಗ ಸರ್ವಜ್ಞರಾದ ಆಪ್ತರ ದ್ವಾದಶಾಂಗರೂಪ ಜಿನವಾಣಿ ; ವ್ಯಾಖ್ಯಾನ, ವಿವರಣೆ" (ಜೈಪಕೋ. ೦೩೬) : ಪ್ರಕಟಿತಜಿನಪ್ರವಚನಪ್ರಕಾರದೊಳ್ (ಸುಕುಮಾ. ೬-೬); ಪ್ರವಚನಪರಿಪಠನಕ್ಷಮತೆ ವಾಣಿಯಂ ತೀರ್ಥಯಾನದಕ್ಷತೆ ಪದಮಂ ಕಿವಿಯಂ ಜಿನವರಚರಿತಶ್ರವಣಪಟುತೆ ಪಿಂಗದನ್ನಮಾರ್ಜಿಪೆನೆಬಿನಂ (ಚಂಪ್ರಪು. ೪-೦೬). [ಸಂ.]

**ಪ್ರವಚನಕಾರ** (ನಾ). ಧಾರ್ಮಿಕ ವಿಷಯಗಳನ್ನು ವಿವರಿಸುವವನು,—ವ್ಯಾಖ್ಯಾನ ಮಾಡುವವನು : ಇದರಲ್ಲಿ ಛಾಂದೋಗ್ಯರ ಪ್ರವಚನ ಕಾರರು...ಆತ್ಮವಾದದ ಮಹಿಮೆಯನ್ನು ಬಹಳ ಸುಂದರವಾಗಿ ವರ್ಣಿಸಿದ್ದಾರೆ (ಭಾರದ. ೪೦) ; ಜೈನತತ್ವವನ್ನು ಪ್ರವಚನಕಾರನಂತೆ ವಿವರಿಸಿ, ಕೀರ್ತನಕಾರನಂತೆ ಕಥೆಯಿಂದ ಅದನ್ನು ಉದಾಹರಿಸಿ ಹೇಳುವ ರೀತಿ ಪ್ರೌಢ ಕಾವ್ಯಮಾರ್ಗದಲ್ಲಿ ಹೊಸದಾಗಿದೆ (ಕಸಾಕ. ೦೯೬). [ಸಂ.]

**ಪ್ರವಚನಭಕ್ತಿ** (ನಾ). [ಜೈನ] ನಾಮಕರ್ಮದ ಹದಿನಾರು ಭಾವನೆಗಳಲ್ಲಿ ಒಂದು ; ಅರ್ಹಂತರ ಅಥವಾ ಆಗಮಗಳ ಮೇಲಿರುವ ಭಕ್ತಿ : ಪ್ರವಚನಭಕ್ತಿ: — ಅರ್ಹದ್ಭಟ್ಟಾರಕರುಂ ಆಚಾರ್ಯರುಂ ಉಪಾಧ್ಯಾಯರುಂ ಆಗಮಮುಂ ಎಂದಿವಱೊಳಪ್ಪ ಭಕ್ತಿಯುಂ (ಚಕ್ರ್ಯಕ್ರ. ೨೬೩). [ಸಂ.]

**ಪ್ರವಚನವತ್ಸಲತ್ವ** (ನಾ). = ಪ್ರವಚನಭಕ್ತಿ : ದರ್ಶನವಿಶುದ್ಧಿ... ಮಾರ್ಗಪ್ರಭಾವನಾಪ್ರವಚನವತ್ಸಲ [ತಾ]ತ್ವಮೆಂಬ ಷೋಡಶ ಭಾವನೆಗಳೊಳ್ (ಚಾವುಂಪು. ೨೪) ; ಪ್ರವಚನವತ್ಸಲತ್ವಮಿತಿ—ಚಾತುರ್ವರ್ಣ್ಯದೊಳಪ್ಪ ವಾತ್ಸಲ್ಯಮುಂ (ಚಕ್ರ್ಯಕ್ರ. ೨೬೩). [ಸಂ.]

**ಪ್ರವಣ** (ಗು). ೧. ಇಳಿಜಾರಾದ. ೨. ಬಾಗಿದ ; ಬಗ್ಗಿರುವ. ೩. ಆಸಕ್ತವಾದ; ತತ್ಪರವಾದ; ಮಗ್ನವಾದ: ಗುರುಶೈಕ್ಷ್ಯಗ್ಲಾನಸಂಘ ಪ್ರವಣಗಣತಪೋನಿಷ್ಠಿತಾನೀತಸಾಧೂತ್ಕರದೊಳ್...ಕೈಕೊಂಡು ಪರ್ಯುಷ್ಟಿಯಂ (ಸುಕುಮಾ. ೪-೦೭) ; ಪ್ರಣವಧ್ಯಾನಪ್ರವಣಪದ್ಮಾಸನಸ್ಥರೈ (ಶ್ರೀಂಚಗ್ರ. ೨೨). ೪. ನಮ್ರನಾದ ; ವಿನೀತನಾದ : ಪ್ರವಣ ಪಂಡಿತ ತಪೋಭರಮಂಡಿತಚಿಂತನಾ (ಪಾಲಾಶ್ಚ. ೦-೦೦-೨೩). (ನಾ). ೫. ಆಸಕ್ತನಾದವನು ; ತತ್ಪರನಾದವನು : ಪ್ರವಣನೆಂದರೆ ಆಸಕ್ತಿಯುಳ್ಳವನು (ಹೊಸಗ. ೯೬). ೬. ಆಸಕ್ತಿ; ತತ್ಪರತೆ : ಅಪೋಂ ವಾದಿ ಕಥಾತ್ರಯ ಪ್ರವಣದೊಳ್ ವಿದ್ವಜ್ಜನಂ ಮೆಚ್ಚೆ ವಿದ್ಯಾವಿಜೃಂಭಮನಪ್ಪುಕೆಯ್ದು... ತ್ರೈವಿದ್ಯಶ್ರುತಕೀರ್ತಿದಿವ್ಯಮುನಿಪೋಲ್ ವಿಖ್ಯಾತಿಯಂ ತಾಳ್ದಿದಂ (ಶಂಚಾಮಾ. ೦-೨೪). ೭. ವಿನೀತ ; ನಮ್ರನಾದವನು : "ಪ್ರವಣಃ, ಪ್ರಹ್ವಃ— ಈ ೨ ವಿನೀತಂ" (ಹಲಾಯು. ೩೬-೦೬) ; ರಿಪುಗೆ ಮಾರಿ ಪಗೆವರ ಗಣ್ಡಂ ಪ್ರವಣಾಂಗಂ ಜಕ್ಕಿಗನತಿಧವಳಯಸಂ (ಕ್ರಾಇ. XX, ೨೪-೨೦;1034). ೮. ಪ್ರಸಿದ್ಧನಾದವನು ; ಕೀರ್ತಿಶಾಲಿ : ಪ್ರವಣನೊಳ್—ಪ್ರಸಿದ್ಧವಾದವನಲ್ಲಿ (ಕಪುಡ. ೨೦೪ ೩೬೫). ೯. ನಾಲ್ಕು ದಾರಿಗಳು ಕೂಡುವ ಸ್ಥಳ ; ಚೌಕ : "ಪ್ರವಣಃ—೧. ಕ್ರಮದಿಂದ ವಾಟವಾಗಿ ಇಳಿಯತಕ್ಕ ನೆಲ, ಬೊಗ್ಗಿದವನು, ಈ ೨ ಕ್ಕೂ ಪೆಸರು, ನಾಲ್ಕು ಬೀದಿಗಳೂ ಸೇರಿದ ಚೌಕಕ್ಕೆ ಪೆಸರಾದಾಗ" (ಸಿದ್ಧಾಂತಿ. ೩೬೫). [ಸಂ.]

**ಪ್ರವಣತೆ** (ನಾ). ತತ್ಪರತೆ ; ಆಸಕ್ತಿ : ಮರಾಠ ಸರದಾರರ ವೀರ ವೃತ್ತಿಯೂ, ಸಾಹಸ ಪ್ರವಣತೆಯೂ. ಲಾವಣಿಕಾರರ ರಸಿಕವೃತ್ತಿಯೂ ಮಹಾರಾಷ್ಟ್ರಮನೋಧರ್ಮದ ಕೆಚ್ಚಿನ ಘಟಕಗಳಾಗಿವೆ (ಮಹಾಹಿ. ೨೪) ; ಆಯಾ ಮಾರ್ಗದಲ್ಲಿ ಹೆಚ್ಚಿನ ಪ್ರವಣತೆ ಇದ್ದವರನ್ನು ಆಯಾ ಅಂಕಿತಗಳಿಂದ ಕರೆದುದಾಗಿರಬೇಕು (ಕನ್ನಾ. ೦೭). [ಸಂ. ಪ್ರವಣತಾ]

**ಪ್ರವತೆ** (ನಾ). ಒಂದು ಬಗೆಯ ಸಸ್ಯ : "ಪ್ರವತಾ— ಕೋಟಾಕುಟುಮ" (ಚಿತ್ರಧಿ. ೯೪). [?]

**ಪ್ರವಯಣ** (ನಾ). ರಥದ ಕುದುರೆ ಮೊದಲಾದುವನ್ನು ನಡೆಸಲು ಉಪಯೋಗಿಸುವ ಕೋಲು,—ಚಾವಟಿ,—ಮೊನೆಗೋಲು. [ಸಂ.]

**ಪ್ರವಯಸ್ಕ** (ನಾ). ೧. ತುಂಬ ವಯಸ್ಸಾದವನು ; ಅತಿವೃದ್ಧ. ೨. ಶಕ್ತಿವಂತನಾದವನು : ಮೂಱನೆಯ ಪಕ್ಷಮೆಂಬೊಂ ಪ್ರವಯಸ್ಕನುಂ ವಪುಷ್ಮಂತನುಂ . . . ಚಾರಿತ್ರವಂತನುಮೆಂದಪ್ಪಗುಣಸಮನ್ವಿತನಕ್ಕುಂ. ಅಲ್ಲಿ ಪ್ರವಯಸ್ಕನೆಂಬೊಂ ಅತಿವೃದ್ಧನುಮತಿಬಾಳಕನುಮಲ್ಲದೆ ಸಮತಿಕ್ರಾಂತ ದಶವರ್ಷನುಮತಿಕ್ರಾಂತಸಪ್ತತಿಸಂವತ್ಸರನುಮಕ್ಕುಂ (ಚಾವುಂಪು. ೫). [ಸಂ.]

**ಪ್ರವರ** (ಗು). ೧. ಶ್ರೇಷ್ಠವಾದ ; ಉತ್ತಮವಾದ ; ಮುಖ್ಯವಾದ : ಪ್ರವರನೃಪಕುಮಾರಾತ್ಮೋದಯಾ[ದಿ] ಪ್ರಮೋದಾಸವಸಮುದಿತಸೇನಾರಾತಿವೃತ್ತಾಂತವೃತ್ತಂ (ಕಬಿರಾ. ೩-೨೦೨) ; ನಮ್ಮೊಳಗೊರ್ವನಂ . . . ಪ್ರವರವಿಹಂಗಮಕುಲಚಕ್ರವರ್ತಿಪಟ್ಟಕ್ಕೆ ಯೋಗ್ಯನಂ ಮಾಡಿ (ಪಂಚತಂ. ೨೨೩-೫). ೨. ಹಿರಿಯ ; ಜ್ಯೇಷ್ಠ. (ನಾ). ೩. ಪ್ರಮುಖ ವ್ಯಕ್ತಿ ; ಪ್ರಧಾನವ್ಯಕ್ತಿ : "ಅಗ್ರ್ಯಂ . . . ಪ್ರವರಂ . . . ಅಗ್ರಣೀ —ಈ ೧೩ ಮುಖ್ಯಂ" (ಹಲಾಯು. ೧೧೫-೫) ; ಕವಿ ಗಮಕಿ ವಾದಿ ವಾಗ್ಮಿ ಪ್ರವರರ್ ಗುಣವರ್ಮನೊಳ್ ಸಮಂಬರ್ಪರಾರ್ (ಪುಷ್ಪದಂ. ೦-೩೪) ; ಅಪ್ರತಿಮ ಶಿವಗುಣಕುಲಕೆ ದಂಡಪ್ರಣಾಮವನಾಚರಿಸಿ . . . ಆ ಪ್ರವರರಿಗೆ

ಬಿನ್ನವಿಸಿ (ಬಸವ. ೪೬-೬೩). ೪. ಪೀಳಿಗೆ ; ವಂಶ : ಅವರು ಪಿತ್ರಾರ್ಜಿತದ ರಾಜ್ಯಪ್ರವರಪಾತ್ರರು (ಕುಶ್ವಾ.ಕ. ೦೩-೦೪) ; ನಿನಗೆ ಸಂಧ್ಯಾವಂದನೆ ಬರುವುದೇ ? ನಿನ್ನ ಪ್ರವರವೇನು ಹೇಳುವಿಯಾ (ಶಶಿ. ೩೯೦). ೫. ಸಂತತಿಯ ಮೂಲಪುರುಷರ ವರ್ಗ. ೬. ಕುಲದ ಪೂರ್ವಿಕ ; ವಂಶದ ಮೂಲಪುರುಷ ; ಪೂರ್ವಜ. ೭. ನಲವತ್ತೆರಡು ಗೋತ್ರಗಳಲ್ಲಿ ಯಾವುದಾದರೂ ಒಂದು. ೮. ಸಂತಾನ ; ಸಂತತಿ. ೯. ಒಂದು ಬಗೆಯ ಸಸ್ಯ : "ಪ್ರವರ—ತ್ರಿಫಲೆ, ಕುಸ್ತುಂಬರಿ, ಲಾಮಂಚ[ಲಾಮಚ]" (ಓಷಧಿ. ೯೪). ೧೦. (ಅಲಂ) ಅನವಶ್ಯಕವಾದ ವಿವರಣೆ : ತನ್ನ ಪ್ರವರವನ್ನು ಶುರು ಮಾಡುವ ಲಕ್ಷಣಗಳನ್ನು ತೋರಿಸಿದ (ಕುಸೋಪಸಂ. ೦೦೦). ೧೧. [ಛಂದ] ಅಕ್ಷರಛಂದಸ್ಸಿನಲ್ಲಿ ಮೂರನೆಯ ಛಂದಸ್ಸಾದ ಮಧ್ಯೆಯಲ್ಲಿ ಒಂದು ಭೇದದ ಹೆಸರು : ಪವನೋದ್ಭವದಿಂ ಪ್ರವರಂ ಪ್ರವರೇ (ಛಂದೋಂಬು. ೨-೩೭). [ಸಂ.]

**ಪ್ರವರಶೈವ** (ನಾ). ೧. ಶೈವಧರ್ಮದ ಆರು ಬಗೆಗಳಲ್ಲಿ ಒಂದು : ಆದಿಶೈವ ಮಹಾಶೈವ ಅನುಶೈವ ಅಂತರ (ಅವಾಂತರ) ಶೈವ ಪ್ರವರಶೈವ ಅಂತ್ಯಶೈವ ಎಂಬ ಈ ಆಱು ಶೈವದ ನೀತಿಯಲ್ಲ (ಸಿದ್ಧೇಶ. ೪-೯). ೨. (ಸೂಕ್ಷ್ಮಾಗಮದ ಪ್ರಕಾರ)ಶೈವಧರ್ಮದ ಏಳು ಬಗೆಗಳಲ್ಲಿ ಒಂದು : ಅನಾದಿಶೈವ ಆದಿಶೈವ ಮಹಾಶೈವ ಅನುಶೈವ ಅವಾಂತರಶೈವ ಪ್ರವರಶೈವ ಅಂತರಶೈವವೆಂಬವೇ ಸಪ್ತಶೈವಂಗಳವಱಲ್ಲಿ . . . ಶಿವದೀಕ್ಷಾಯುಕ್ತರಾದ ಅಂಬಷ್ಠ ಕುಲಾಲಾದಿಗಳೇ ಪ್ರವರಶೈವರು (ಏಕೋಶ. ೬೭). [ಸಂ.]

**ಪ್ರವರಾಕ್ಷರ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಹನ್ನೆರಡನೆಯ ಛಂದಸ್ಸಾದ ಜಗತಿಯಲ್ಲಿ ಒಂದು ಪ್ರಭೇದ : ಪವಮಾನಮರ್ಕಮರುತದ್ವಯ ಸಂತವಿರಾಮಮೆಂಬಿನೆಗಮಾಱನೆಯೊಳ್ ಕವಿರಾಜಹಂಸಮತದಿಂ ಜಗದೊಳ್ ಪ್ರವರಾ[ಪಾಠಾಂ. ವಿತಾ]ಕ್ಷರಾಹ್ವಯಮನೋದಬಲೇ (ಛಂದೋಂಬು. ೨-೦೩೩). [ಸಂ.]

**ಪ್ರವರೆ** (ನಾ). ಶ್ರೇಷ್ಠಳಾದವಳು : ಪವನೋದ್ಭವದಿಂ ಪ್ರವರಂ ಪ್ರವರೇ (ಛಂದೋಂಬು. ೨-೫೭). [ಸಂ. ಪ್ರವರಾ]

**ಪ್ರವರ್ತ** (ಗು). ತೊಡಗಿದ ; ವ್ಯವಹರಿಸಿದ : ಪೂಗಳಂ ತವೆ ಕೊಯ್ದು ಧರಣೀಭಾಗದೊಡೆಯನನಂತು ಕಾಣುತನಾಗತಾತೀತಪ್ರವರ್ತಜ್ಞಾನನಿಧಿಯಾಗಿ (ಬಸವ. ೪೬-೬). [ಸಂ.]

**ಪ್ರವರ್ತಕ** (ಗು). ೧. ಕಾರ್ಯದಲ್ಲಿ ತೊಡಗುವಂತೆ ಮಾಡುವ,—ತೊಡಗಿಸುವ. ೨. (ದುಷ್ಕಾರ್ಯಕ್ಕೆ) ಪುಸಲಾಯಿಸುವ ; ಚಿತಾವಣೆ ಮಾಡುವ : 'ಪ್ರವರ್ತಕಿ' ಪರಾ. (ನಾ). ೩. ಕೆಲಸದಲ್ಲಿ ತೊಡಗಿರುವುದು ; ಪ್ರವೃತ್ತಿ : ಪುಣ್ಯ ಪಾಪ ಸ್ವರ್ಗ ನರಕ ಬಂಧ ಮೋಕ್ಷ ಪ್ರವರ್ತಕ ನಿವರ್ತಕ ಆದಿಯಾದ ಕರ್ಮಭ್ರಮೆ (ಕನ್ನಕ. ೪. ೫೬೨-೦೩೩೦). ೪. ಮೂಲಪುರುಷ ; ಮೊದಲಿಗ : ಈ ಭವಕ್ಕೆಂಟನೆಯ ಭವದೊಳ್ ಭರತದೊಳ್ ನೀನಾದಿತೀರ್ಥಪ್ರವರ್ತಕನಾದಂದೀ ಶ್ರೀಮತಿ ದಾನತೀರ್ಥಪ್ರವರ್ತಕಂ ಶ್ರೇಯಾಂಸನಕ್ಕುಂ (ಆದಿಪು. ೫-೦೩ ವ) ; ಭವ ಕರ್ಮ ಸಂಸ್ಕಾರಪ್ರವರ್ತಕನು (ಬಸವ. ೫೫-೦೯). ೫. ಸ್ಥಾಪಕ ; ಸ್ಥಾಪನೆ ಮಾಡಿದವನು ; ಸಂಸ್ಥೆ, ಮತ, ಸಿದ್ಧಾಂತ ಮೊದಲಾದುವುಗಳನ್ನು ಪ್ರಾರಂಭಿಸಿದವನು : ಡಿಥಿರಾಂಬ್ ಎಂಬ ಸಾಮೂಹಿಕಗೀತಗಳ ರಚನಕಾರರೇ ರುದ್ರನಾಟಕದ ಪ್ರವರ್ತಕರಾದರು (ಅಂಕಾ. ೨೦). ೬. ನಿರ್ಣಯಕಾರ ; ನ್ಯಾಯನಿರ್ಣಯ ಮಾಡುವವನು. [ಸಂ.]

**ಪ್ರವರ್ತಕಿ** (ನಾ). ದುಂಬೋಧನೆ ಮಾಡುವ ವ್ಯಕ್ತಿ : ನರ್ತಕಿಯ ಪಾಪಿತೆಯ ಪಣ್ಯವಿಕ್ರಯಿಯ ಪ್ರವರ್ತಕಿಯ ದಾಸಿಯ . . . ಒಡನಾಡಿ ದೊಡೆ ಬಾಲೆಯರ್ತಮೆ ದುರಾಚಾರಮಂ ಕಲಿವರು (ಕೈಏಂಟಾ. ೫-೫೦). [ಸಂ. ಪ್ರವರ್ತಕೀ]

**ಪ್ರವರ್ತನ** (ನಾ). ೧. ಮುನ್ನಡೆ ; ಮುಂದುವರಿಯುವಿಕೆ : ನರಕಂ ತುರಗನಿಕುರುಂಬ ಕೀಲಾಲಕಲ್ಲೋಲಪ್ರವರ್ತನಾನೇಕನದನದೀಪ್ರವಾಹ ಬಾಹುಳ್ಯದುಸ್ತರಾವತ ರಣಮಾರ್ಗಮುಂ (ಪಂಪಭಾ. ೦೩-೫೦ ವ) ; ಜಘನ್ಯ ಭೋಗಭೂಮಿಪ್ರವರ್ತನಮೆರಡು ಕೋಟಿ ಕೋಟಿ ಸಾಗರೋಪಮದ ಕಡೆಯ ಪಳಿತೋಪಮದೆಂಟನೆಯ ಭಾಗಮುಳಿಯ (ಪಂಪಾಪು. ೦-೬೫ ವ). ೨. ತೊಡಗುವುದು: ಪಂಚಾಣುವ್ರತಾದಿಪ್ರವರ್ತನಸ್ವಭಾವಸಂಯಮಮುಂ (ಅಂಪು. ೦೫-೦೩ ವ). ೩. ಚಟುವಟಿಕೆ ; ಕಾರ್ಯಶೀಲತೆ. ೪. ನಡತೆ ; ನಡವಳಿಕೆ : ದ್ವಿಜಮಾರ್ಗವನೆ ದಿಟವಾಗಿ ನೀ ಹಿಡಿದಾಡಿದಡೆಯೆಮಗಾಗದೀ ಕರ್ಮಕ್ರಿಯಾಚಾರಪ್ರವರ್ತನವು (ಬಸವ. ೬-೮೯). ೫. ರೀತಿ ; ಕ್ರಮ. [ಸಂ.]

**ಪ್ರವರ್ತನೆ** (ನಾ). = ಪ್ರವರ್ತನ ೧ : ಸರ್ವಜಗದ ಜೀವದ ಪ್ರವರ್ತನೆಯ ಚಾರಿತ್ರಂಗಳ ನೆನಹುಮಾತ್ರದಿಂದ ಶಿವನು ಒಂದೇ ವೇಳೆಯಲ್ಲಿ ನಿರ್ಮಿಸಿದನು (ಶಸ್ತ್ರವ. ೪. ೦೬೦-೩೬೦) ; ಹಿಂದಣದ ಕಾಲ ಪ್ರವರ್ತನೆಯಿಂದೆ ಸಜ್ಜನಭಕ್ತಿಯೊಳು ಬಳಿಸಂದು ನಿಶ್ಚಲಭಾವದಿಂದಾ ಚರಿಸುತಿರು (ಬಸವು. ೪-೬೦). [ಸಂ. ಪ್ರವರ್ತನ]

**ಪ್ರವರ್ತಿ** (ಗು). ೧. ಮುನ್ನಡೆವ ; ಕ್ರಮಿಸುವ. ೨. ಕ್ರಿಯಾಶೀಲವಾಗಿರುವ. ೩. ವ್ಯಾಪ್ತವಾದ ; ವಿಸ್ತಾರವಾದ. (ನಾ). ೪. ತೊಡಗುವವನು ; ಅನುಸರಿಸುವವನು : ಯಮ ನಿಯಮಯೋಗ ವ್ರತಾಯತಶಮದಮಾಶ್ರಯಸಚ್ಚರಿತನುತ್ತಮ ಶಿವಾಚಾರ ಪ್ರವರ್ತಿನಿರಸ್ತ ಸಕಳಾರ್ಥಿ (ಬಸವ. ೦೯-೩). [ಸಂ. ಪ್ರವರ್ತಿನ್]

**ಪ್ರವರ್ತಿತ** (ಗು). ೧. ಮುನ್ನಡೆಸಿದ ; ಸಾಗಿಸಿದ : ಮಂತ್ರಿಮುಖ್ಯರುಂ ಪುರಾತನಚಕ್ರವರ್ತಿಪ್ರವರ್ತಿತಮಾರ್ಗಮಿದೆಂದು ಕಾಕಿಣೀರತ್ನದಿಂದಲ್ಲಿ ಮುನ್ನಿರ್ದೊಂದು ಪ್ರಶಸ್ತಿಯಂ ಪರಾಮೃಷ್ಟಂ ಮಾಡಿ (ಶಾಂತಿಪು. ೦೦-೬೩ ವ). ೨. ತೊಡಗಿದ : ನಿತ್ಯಪ್ರವರ್ತಿತದಯದಾನಧರ್ಮೋದ್ಯೋಗಿನಿ (ಶಾಇಇ. XX. ೪೬-೦೦ ; 1072). ೩. ಹಬ್ಬಿದ ; ವ್ಯಾಪ್ತವಾದ : ಸೌಭಾಗ್ಯನಿಧಾನದೀಪವರ್ತ್ತಿ ಸಕಳದಿಗನ್ತರಪ್ರವರ್ತ್ತಿತಕೀರ್ತ್ತಿ (ಶಾಇಇ. XX. ೪೬-೦೪ ; 1072). [ಸಂ.]

**ಪ್ರವರ್ತಿಸು** (ಕ್ರಿ). ೧. ವರ್ತಿಸು ; ವ್ಯವಹರಿಸು : ಪ್ರತಿಕ್ಷಣಂ ವಿಶರಾರುಗಳ್ ಚಿತ್ತಕ್ಷಣಂಗಳ್ ಪೂರ್ವಾಪೂರ್ವ ಚಿತ್ತವಿಶೇಷಪ್ರಭವಂಗಳ್ ಪ್ರಬಂಧದಿಂದಂ ಪ್ರವರ್ತಿಸುವುವು (ಶಾಂತಿಪು.೬-೦೯೨ ವ) ; ಶೋಷಣೆ ದೋಹನೆ ಸ್ಥಾಪನೆ ಚಾಲನೆ ಕಳಾಪಮಂ ಮಾಡಿ ತ್ರಿದೋಷಾದಿಗಳಂ ಪ್ರವರ್ತಿಸಲೀಯದೆ (ಅದಪ. ೨೯-೫೭) ; ಕಷ್ಟಮಂ ಮಾಳ್ಪಾ ಜಗಚ್ಛತ್ರು ಮನಸಿಜ ಭ್ರಷ್ಟನಂ ಗೆಲ್ವವೋಲ್ ಶೈವಮಂ ತತ್ವಸನ್ನಿಷ್ಠೆ ತಲ್ಲೋಕಂಗಳೊಳ್ ಪ್ರವರ್ತಿ ಸಲೀಶನರಸುಗೆಯ್ವುತ್ತಿರ್ದನು (ಶಿವಪು. ೨೯-೯೩). ೨. (ಕಾಲವು) ನಡೆ ; ಸಾಗು : ವ್ಯಯಮೆಮ್ಬ ಸ[೦]ವತ್ಸರಂ ಪ್ರವರ್ತ್ತಿಸೆ (ಇಇ. XII. ೨೦೯-೦೫ ; 814) ; ಶಕವರ್ಷಮೆಣ್ಬನೂಱ ಅಯ್ದನೆಯ ವರ್ಷಂ ಪ್ರವರ್ತ್ತಿಸುತ್ತಿರೆ (ಎಇ. XXI. ೫೫-೩ ; 883) ; ತ್ರಿಸಾಗರೋಪಮ ಕೋಟಾಕೋಟಿಸ್ಥಿತಿಯಿಂ ಪ್ರವರ್ತಿಸುವಂದಾ ಕಾಲದ ಮನುಷ್ಯರು ಚಾಮಿಾಕರನಿರ್ಮಳಶರೀರರುಂ (ಚಾವುಂಪು. ೯). ೩. ಆರಂಭವಾಗು ; ಪ್ರಾರಂಭವಾಗು : ಒದಗದಿನ್ನುಂ ಮುರಾರಿಯ ಸಮರಮರ್ಜುನನ ಕದನಂ ಪ್ರವರ್ತಿಸದು (ಕೈಏಂಟಾ. ೦೦-೫೨). ೪. ಆಚರಿಸು ; ಅನುಸರಿಸು : ಪರಮೇಶ್ವರ ಧರ್ಮಪ್ರಭಾವನೆಯಂ ಪ್ರತಿದಿನಂ ಪ್ರವರ್ತಿಸಿಯುಂ (ಅಜಪು. ೦೨-೪) ; ಭಕ್ತಗೋಷ್ಠಿಸುಸಂಗತಿಯೊಳಾ ಬಸವನುಂ ತಾವುಂ ಪ್ರವರ್ತಿಸಲು (ಬಸವು. ೬೦-೨). [ಪ್ರವರ್ತನ+ —ಇಸು]

**ಪ್ರವರ್ಧ** (ಗು). ಬೆಳೆಯುವ : ಅಮಿತಸಂಸೃತಿಜೀವಘಟಚಕ್ರಮಲ ಕರ್ಮಬಲಪ್ರವರ್ಧಭ್ರಮಣಮೊಡಗೂಡಲ್ಕೆ (ಬಸವು. ೨೦-೨೯). [ಸಂ.]

**ಪ್ರವರ್ಧತೆ** (ನಾ). ಬೆಳವಣಿಗೆ : ಬಳಿಕಾ ಗರ್ಭದೊಳಗೆ ಮೂಱು ಪೊಳ್ತಿಗೆ ಮೂಱು ವರ್ತಿಸುವಜಾಯತೆ ಅಸ್ತಿತೆ ವಿಪರಿಣತೆ ಪ್ರ[ಪಾಠಾಂ.ವಿ] ವರ್ಧತೆ ಅಪಕ್ಷೀಯತೆ ವಿನಶ್ಯತೆ ಎಂಬ ಷಡ್ಭಾವವಿಕಾರವುಳ್ಳಾತನೆನಿಸಿ (ಜಿನೇಶ-೨೩೭). [ಸಂ. ಪ್ರವರ್ಧತಾ]

**ಪ್ರವರ್ಧನ** (ಗು). ೧. ವೃದ್ಧಿಪಡಿಸುವ ; ಹೆಚ್ಚಿಸುವ : ಬಸವನೆಂಬ ಪ್ರಮಥನೊರ್ವಂ ನಿಶಿತಸದ್ಭಕ್ತಿಪ್ರವರ್ಧನಕಾರಣಾರ್ಥದಲಿ ವಸುಮತಿಗೆ ಬಂದಿದ್ದಪನು (ಬಸ‌ಪು. ೨೦-೨೯). ೨. ಬೆಳೆಯುವ ; ವರ್ಧಿಸುವ : ಅತಿ ಪ್ರವರ್ಧನಪ್ರಜಾನುರಾಗನುಮತಿಪ್ರಬಲರಣರಾಮನುಮೆನಿಸಿದ ರಣರಂಗ ಸಿಂಹನಿಂ (ಗದಾಯು.೨-೬ ವ). (ನಾ). ೩. ಬೆಳವಣಿಗೆ ; ವೃದ್ಧಿ : ವಿಶ್ವಯಶಃಪ್ರವರ್ಧನವಂ ಆಚಾಮ್ಲವರ್ಧನಮುಂ ನೋಂತಳ್ (ಸುಕುಮಾ.೯-೦೯). [ಸಂ.]

**ಪ್ರವರ್ಧಮಾನ** (ಗು). ೧. ಅಭಿವೃದ್ಧಿ ಹೊಂದುತ್ತಿರುವ ; ಏಳಿಗೆ ಹೊಂದುತ್ತಿರುವ : ಬಲದೇವ ವಾಸುದೇವರ್ . . . ಮಾತಾಪಿತೃಗಳನುರಾಗದೊಡನೆ ಪ್ರಮೋದಪ್ರವರ್ಧಮಾನವಾಗೆ ಸುಖಮಿರ್ಪನ್ನೆಗಂ (ಶಾಂತಿಪು. ೧-೮೦ ವ). ೨. ಬೆಳೆಯುತ್ತಿರುವ. [ಸಂ.]

**ಪ್ರವರ್ಧಿತ** (ಗು). ಬೆಳೆದ ; ವೃದ್ಧಿಯಾದ : ಮೋದದಿಂ ಜಾಬಾಲ ಕೈವಲ್ಯಾದಿ ಶಾಖೆಗಳೊಳ್ ಪ್ರವರ್ಧಿತವಾದ ಭಸ್ಮೈಶ್ವರ್ಯಪದವಿ ಸಮಗ್ರವಾಯ್ತೆನಗೆ (ಬಸಪು.೯೩-೬೩). [ಸಂ.]

**ಪ್ರವರ್ಧಿಸು** (ಕ್ರಿ). ಬೆಳೆ; ವೃದ್ಧಿಯಾಗು : (*). [ಪ್ರವರ್ಧನ+−ಇಸು]

**ಪ್ರವಲ್ಹಿಕೆ** (ನಾ). ಒಗಟು ; ಸಮಸ್ಯೆ : "ಒಗಟೆಯದು ಪ್ರಹೇಳಿಕೆ ಪ್ರವಲ್ಹಿಕೆ [ಪಾಠಾಂ. ಪ್ರವಲ್ಲಿಕೆ, ಪ್ರವಪ್ವಿಕೆ] ಯುಂ" (ಮಂಗರಾ. ೨೬-೬); ಉಲ್ಲಸಿತ ಪ್ರವಲ್ಹಿ[ಲ್ಹಿ]ಕಾಪಾನಗಾನಾದಿ ವಿವಿಧವಿನೋದವಿಧಾಯಿಬಾಳಿಕಾ ಲೋಳಲೋಚನಮರೀಚಿಪುಂಜವಿಸರದಿಂ ಕುಸುಮಿತವಾಗೆಯುಂ (ವರ್ಧಪು. ೬-೪೯ ವ). 'ಪ್ರಹೇಳಿಕೆ' ಪರಾ. [ಸಂ. ಪ್ರವಲ್ಹಿಕಾ]

**ಪ್ರವಹ** (ಗು). ೧. ಮುಂದಕ್ಕೆ ಹೋಗುವ ; ಹರಿಯುವ ; ಪ್ರವಹಿಸುವ. (ನಾ). ೨. ಹೊರಗೆ ಹೊರಡುವುದು : "ಪ್ರವಹಃ, ಬಹಿರ್ಗಮನಂ — ಗೃಹಾದಿಗಳಿಂದ ಈಚೆಗೆ ಬರುವಿಕೆ, ಹೊರಕ್ಕೆ ಹೊರಡುವಿಕೆ" (ಸಿದ್ಧಾಂತಿ. ೩೬೦). ೩. ಗಾಳಿ; ವಾಯು. ೪. ವಾಯುದೇವ : ಗಣಪ ಮಿತ್ರರು ಸಪ್ತಋಷಿಗಳು ವಹ್ನಿ ನಾರದ ವರುಣನು ಇನಜಗೆ ಸಮ ಚಂದ್ರಸೂರ್ಯರು ಮನುಸುತೆಯು ಹೆಚ್ಚು ಪ್ರವಹನು (ಪುರಂದ. ೧-೦೩೦-೩). [ಸಂ.]

**ಪ್ರವಹಣ** (ನಾ). ೧. ಓಟ; ಹರಿವು : "ಪ್ರವಹಣಂ, ಡಯನಂ — ಈ ೨ ರಥದ ಹರಿ" (ಹಲಾಯು. ೬೩-೨೧೦); ಇವುಗಳ ಯೋಗದಿಂದ ಈ ಪ್ರಜ್ಞಾ ಪ್ರವಹಣತಂತ್ರಗಳೂ ನವ್ಯವಾಗುತ್ತವೆ (ಕಾವ್ಯಕು.೩). ೨. ಹಡಗು ; ಜಹಜು : "ಪೋತಃ, ಪ್ರವಹಣಃ—ಈ ೨ ಛೈತ್ರಂ" (ಹಲಾಯು. ೦೦೬-೩೩). ೩. ತೆರೆಯಿರುವ ಮೇನೆ ; ಅಂದಣ : "ಕರ್ಣೀರಥಃ, ಪ್ರವಹಣಂ, ಡಯನಂ — ೩ ಮನುಷ್ಯರು ಹೊರುವ ವಿಮಾನದ ಹೆಸರು, ಡೋಲಿಗೂ ಹೆಸರು" (ಸಿದ್ಧಾಂತಿ.೨೫೨). [ಸಂ.]

**ಪ್ರವಹಿಸು** (ಕ್ರಿ). (ನೀರು) ಮುಂದೆ ಸಾಗು : ವಸುಮತಿಯೊಳು ಶುಭ್ರಸಂಕಾಶದಿಂ ಪ್ರವಹಿಸುತಿರ್ದಳಾ ಪುಣ್ಯಗಂಗೆ (ಸೋಹಕ. ೬-೩೪); ವನಮಧ್ಯದೊಳ್ ಪ್ರವಹಿಸುತ್ತಲಿರುವ ನದಿ (ಸಗಂಂ. ೨೯೯-೯); ಮೆಯ್ಸಿರಿಗೆ ಷೋಡಶವಸಂತವೀಚಿಯನೊತ್ತಿ ಪ್ರವಹಿಸಿತು ಕಾಲನದಿ ರಾಮಲಕ್ಷ್ಮಣಭರತಶತ್ರುಘ್ನಜೀವನದಿ (ಶ್ರೀರಾಮಾ. ೨೬-೨). [ಪ್ರವಹ + − ಇಸು]

**ಪ್ರವಳ** (ಗು). ವೇಗವಾಗಿ ಚಲಿಸುವ ; ರಭಸವಾಗಿ ಚಲಿಸುವ : ಪ್ರವಳ ಕರಿ ಮಕರ ಫೂತ್ಕಾರವಾತದಿಂದುದ್ಧವೊಗೆವ ಜಲಬಿಂದುಗಳಿಂ ದಿವದೊಳೆ ತಾರಕಿತಂ ಮಾಡುವುದು ನಭೋಭಾಗಮುಂ ತದಂಭಃಪೂರಂ (ಚಂದ್ರಕೃ. ೦೦-೯೯). [ಸಂ. ಪ್ರವಲ]

**ಪ್ರವಾಣಿ** (ನಾ). ನೆಯ್ಗೆಯವರ ಲಾಳಿ ; ಹಾಸುಂಎಳೆಗಳ ನಡುವೆ ಹೊಕ್ಕು ಎಳೆಗಳನ್ನು ಹಾಯಿಸುವ ಲಾಳಿ. [ಸಂ.]

**ಪ್ರವಾದ** (ನಾ). ೧. ಶಬ್ದವನ್ನು ಮಾಡುವುದು. ೨. ಹೇಳುವುದು; ಹೇಳಿಕೆ : 'ಪ್ರವಾದಿಸು' ಪರಾ. ೩. ಸುದ್ದಿ ; ಸಮಾಚಾರ : ಅವರು ಮಹಮ್ಮದನಿಗೆ ಭೂತವು ಹಿಡಿದಿದೆಯೆಂದು ಪ್ರವಾದವನ್ನೆಬ್ಬಿಸಿ ಹರಡತೊಡಗಿದರು (ಸೈಗಂಬ. ೨೨); ಅವನನ್ನು ಕಾಳಗುಡ್ಡನೆಂದು ಪ್ರತಿ ನಾಮಧೇಯದಿಂದ ಕರೆಯುತ್ತಿದ್ದರೆಂದೂ ಪ್ರವಾದವಿತ್ತು (ಕೋಹಿಪೂ.೪೯). ೪. ಜನರ ಆಡುಮಾತು ; ವದಂತಿ ; ಗಾಳಿಸುದ್ದಿ : ಇಲ್ಲಿ ವಿಶೇಷವಾಗಿ ಮಹತ್ತು ನಡೆಯುವುದೆಂದು ಪ್ರವಾದವಿದೆ (ಪೂವಿರಾ. ೪೬); ನಿಂತುಕೊಂಡೇ ಮತದ ಬೋದು ಹಾಗೂ ತೊಲೆಗಳ ಮೇಲೆ ಬರೆಯುತ್ತಿದ್ದನೆಂಬ ಪ್ರವಾದವಿದೆ (ಕರಕ. ೭೮೦). [ಸಂ.]

**ಪ್ರವಾದಿ** (ನಾ). ೧. ಶಬ್ದವನ್ನು ಮಾಡುವುದು. ೨. ಮಾತನಾಡುವುದು. ೩. (ದೇವರ ಪ್ರತಿನಿಧಿಯಾಗಿ) ಪ್ರಚಾರ ಮಾಡುವವನು, ಬೋಧಕ : ಸರ್ವಜ್ಞ ಪಂಡಿತರ ಕವಿಯಲ್ಲ, ಪಾಮರರ ಪ್ರವಾದಿ (ಕರಕ. ೬೭೦) ; ಆದಕ್ಕೆ ಸಾಧುಗಳು, ಸಂತರು, ಪ್ರವಾದಿಗಳು . . . ಉತ್ತರ ಕೊಡುತ್ತ ಬಂದಿದ್ದಾರೆ (ಧರ್ಮಸಾ .೧). [ಸಂ. ಪ್ರವಾದಿನ್]

**ಪ್ರವಾದಿಸು** (ಕ್ರಿ). ದೈವಿಕವಾದ ಮಾತುಗಳನ್ನು ಹೇಳು,—ವಿವರಿಸು. [ಪ್ರವಾದ + —ಇಸು]

**ಪ್ರವಾರಣ** (ನಾ). ೧. ಕೇಳಿದುದನ್ನು ಕೊಡುವುದು ; ಬಯಸಿದುದನೆಲ್ಲ ಪೂರೈಸುವ ದಾನ ; ಮಹಾದಾನ : "ಪ್ರವಾರಣವೆಂಬುದು ಮಹಾದಾನಂ" (ಹಲಾಯು. ೦೨೬-೯೯). ೨. ಫಲಾಭಿಲಾಷೆಯಿಂದ ಮಾಡುವ ದಾನ ; ಕಾಮ್ಯದಾನ : "ಪ್ರವಾರಣಂ — ಕಾಮ್ಯದಾನಂ, ಫಲಾಪೇಕ್ಷೆಯಿಂದ ಕೊಡುವದಕ್ಕೆ ಪೆಸರು" (ಸಿದ್ಧಾಂತಿ. ೩೩೩). [ಸಂ.]

**ಪ್ರವಾಲ, ಪ್ರವಾಳ** (ನಾ). ೧. ಚಿಗುರು ; ಪಲ್ಲವ : "ಪಲ್ಲವಾಂಕುರವಮಾ ಪ್ರವಾಳ[ಪಾಠಾಂ. ಳ]ಮೆನಲು ಎಳೆಯ ಕೊನರಕ್ಕುಂ" (ಮಂಗರಾ. ೩೨-೪). ೨. ಹವಳ ; ವಿದ್ರುಮ : "ಪವಳಂ ಪ್ರವಾಲಂ[ಪಾಠಾಂ. ಳಂ] ಕಪೋತಾಂಘ್ರಿ ವಿದ್ರುಮಂ ಹವಳಮಕ್ಕು" (ಮಂಗರಾ. ೯೩-೪೦) ೩. ವೀಣೆಯ ದಂಡ : ಮೂರುಸ್ಥಾಯಿಗಳಲ್ಲಿ (ಸ್ವರ)ಶುದ್ಧಿಗಾಗಿ ಇದರ ಪ್ರವಾಲವು ಸ್ವಲ್ಪ ಉದ್ದವಾಗಿರುತ್ತದೆ (ಕಸುಶ್ರ. ೧). **ಪ್ರವಾಳ:** ೧. "ಪ್ರವಾಳಃ, ಪಲ್ಲವಾಂಕುರಃ—ಈ ೨ ಮರದ ಕೊನರ್" (ಹಲಾಯು. ೩೦-೩೦) ; ಲೋಧ್ರ ಲವಂಗಪ್ರಕರ ಪ್ರವಾಳರುಚಿರಂ . . . ಕಣ್ಗೊಳಿಸುಗುಂ ಋಷ್ಯಾಶ್ರಮೋಪಾಂತದೊಳ್ (ಕಾದಂಪೂ. ೨೦೩); ಕಾಂತಾ ಕಟಾಳಿಪ್ರಚಯದೊಳಬಳಾಂಘ್ರಿಪ್ರವಾಳೌಘದೊಳ್ . . . ತಾನಿರ್ದನಾ ಸ್ಥಾನದೊಳತುಳ ವನಸ್ಪರ್ಧಿಯೊಳ್ಬುವಸಂತಂ (ರಾಜಶೇ. ೯-೬೬). ೨. ಕಣ್ಗೆಸೆವುದು ಲಹರೀಲೋಳಬಾಳಪ್ರವಾಳ (ಎಕ. VIII, ಸೊರಬ. ೩೨೩-೬ ; 1178) ; ಭಾಳಾಕ್ಷದ್ಯುತಿ ಬಾಡಬಾಗ್ನಿಗೆ ಜಟಾಜೂಟಂ ಪ್ರವಾಳಕ್ಕೆ ಸಪ್ಪಾರ್ಳಂಕಾರಮದಾಹಿಕೋಟಿಗೆ . . . ಎಣೆಯಾಗಲು (ಶಾಸಕ. ೬೫-೫ ; 1179) ; ವದನಂ ಚಂದ್ರನಿಭಂ ವಿಲೋಚನಯುಗಂ ಪಂಕೇಜಪತ್ರಪ್ರಭಂ ರದನಂ ವಜ್ರಸಮಂ ಪ್ರವಾಳಸದೃಶಂ ದಂತಚ್ಛದಂ . . . ಭೂಪಾಳನಾ (ರಾಜಶೇ. ೩-೬). ೧, ೨ : ಕೃತಿಯಿಂತಿದಕ್ಕೆ ಮೊದಲಾವುದೆಂದೆನೆ ಪತಿವ್ರತೆಯಂತೆ ಕಾಂತಾನುಕೂಲದಿಂ ಕೌರವಕ್ಷಿತಿವರನ ಸೇನೆಯಂತಾ ದ್ರೌಣಿಯಿಂ ವೃಕ್ಷದಂತಾ ಪ್ರವಾಳದಿಂದ . . . ಒಪ್ಪಿತು ಸಮುದ್ರಂ (ಭಾವಕಂ. ೦-೨೩). ೩. "ಪ್ರವಾಳಃ, ವೀಣಾದಂಡಃ — ವೀಣೆಯ ದಂಡಿಗೆಕೋಲಿನ ಹೆಸರು" (ಸಿದ್ಧಾಂತಿ. ೫೯); ಬೀಣೆಯಂ ಮಿಡಿದು

ನೋಡಿ ತಂತಿಯೊಳ್ ತನುರೋಮಮಂ ಸೋರೆಯೊಳ್ ಶಲ್ಯಮಂ ಪ್ರವಾಳದೊಳ್ ಪಾಷಾಣಮಂ ತೋಱ ಕುಡುವೊಡೆ ನಿರ್ದೋಷಮಪ್ಪ ವೀಣೆಯಂ ಕುಡಿಮನೆ (ಅರ್ಥವೇ. ೬-೦೬ ವ). ೪. ಕೂದಲು. ೫. ಹಸಿರು ಬಣ್ಣ. ೬. ಕೆಂಪು ಬಣ್ಣ : "ಎಳೆದಳಿರುಂ ರೋಮ ನೇಗಿಲ ಈಚು ಪಚ್ಚೆ ವಿಪಂಚಿ ಬಾಲಂ ಪವಳಂ ಸಲೆ ಕೆಂಪಿದೆಂಟು ನಾಮಂ ಚಲುವಿಂ ರಾಜಿಪ ಪ್ರವಾಳಶಬ್ದಂ" (ನಾನಾರ್ಥ. ೩೮). [ಸಂ.]

**ಪ್ರವಾಸ** (ನಾ). ೧. ಪರಸ್ಥಳಕ್ಕೆ ಹೊರಟು ಬರುವುದು; ಪರಸ್ಥಳದ ಪ್ರಯಾಣ,—ಸಂಚಾರ : ತನ್ನೊಡವುಟ್ಟಿದರ್ಗಾದ ಪ್ರವಾಸಾಯಾಸಂಗಳ್ಗಂ ದೆಸೆಗಂ ಮನ್ಯು ಮಿಕ್ಕು ಬರೆ (ಶಂಶಖಾ. ೩-೮೦ ವ) ; ಹಿಂದೆ ಯಾರಣ್ಯಪ್ರವಾಸದಿ ಬಂದ ದೂರ್ವಾಸಾದಿ ಋಷಿಗಳಿಗಂದು ತೃಪ್ತಿಯ ನೆಸಗಲೋಸುಗ (ಗಗಶಾ. ೦೩-೪೬) ; ಬಲು ಚೆನ್ನಾಗಿದೆ, ನಿಮ್ಮ ಪ್ರವಾಸದ ಏರ್ಪಾಟು ! (ಹಸುಹೂ. ೩೨೭). ೨. [ಕಾವ್ಯಮೀ] ವಿಪ್ರಲಂಭಶೃಂಗಾರದ ಪೂರ್ವಾನುರಾಗ, ಮಾನ, ಪ್ರವಾಸ ಮತ್ತು ಕರುಣಾತ್ಮಕವೆಂಬ ನಾಲ್ಕು ಬಗೆಗಳಲ್ಲಿ ಒಂದು ; ನಲ್ಲನು ಸಂಚಾರದಲ್ಲಿರುವುದು: ಇನಿಯನಗಲ್ದು ಪೋಗಿ ಪರದೇಶದೊಳಿರ್ದಪನಾನುಮಿಲ್ಲಿ ಮಾವಿನ ತಳಿರ್ವಾಸಿನೊಳ್ ಪೊರಳುತಿರ್ದಪೆನಾಗಳುಮಿಂತೆ ನೀನುಮೆನ್ನನೆ ನಡೆ ನೋಡುತುಂ ನಭದೊಳಿರ್ದಪೆಯಪ್ಪುದಱಿಂದೆ ನಿನ್ನನಾನನುಪಿಪೆನೆನ್ನ ಮೆಯ್ ಬಡವೊ ನಲ್ಲನ ಮೆಯ್ ಬಡವೋ ನಿಶಾಕರಾ—ಇದು ಪ್ರವಾಸಂ (ಕಾವ್ಯಾವ. ೬೦೭) ; ಪೂರ್ವಾನುರಾಗ ಮಾನಾಖ್ಯ ಪ್ರವಾಸ ಕರುಣಾತ್ಮಕವೆಂಬ ವಿಯೋಗಚತುಷ್ಟಯವಿಶಿಷ್ಟರಿಂ ಪ್ರಚ್ಛನ್ನ ಪ್ರಕಾಶ ವಿಪ್ರಲಂಭ ವಿದಗ್ಧರಿಂ (ಪಿವೇಕ. ೦೬೪). [ಸಂ.]

**ಪ್ರವಾಸಕಥನ** (ನಾ). ದೇಶ, ವಿದೇಶಗಳಲ್ಲಿ ಮಾಡಿದ ಪ್ರವಾಸವನ್ನು ಕುರಿತ ವಿವರಣಾತ್ಮಕವಾದ ನಿರೂಪಣೆ : ತನ್ನ ಪ್ರವಾಸಕಥನವನ್ನು ಬರೆದಿಟ್ಟು ಎಂಬತ್ತೆಂಟನೆಯ ವಯಸ್ಸಿನಲ್ಲಿ ಇಹಲೋಕಯಾತ್ರೆ ಮುಗಿಸಿದನು (ಪ್ರವಾಇ. I, ೦೩೬). [ಸಂ.]

**ಪ್ರವಾಸನ** (ನಾ). ೧. ಪರಸ್ಥಳಕ್ಕೆ ಕಳುಹಿಸುವುದು ; ಊರಿನಿಂದ ಹೊರಗೆ ಕಳುಹಿಸುವುದು. ೨. ದೇಶಭ್ರಷ್ಟನನ್ನಾಗಿ ಮಾಡುವುದು; ಗಡೀಪಾರು ಮಾಡುವುದು. ೩. ಕೊಲ್ಲುವಿಕೆ ; ವಧೆ : "ಮಾರಣಂ . . . ಪ್ರವಾಸನಂ . . . ಸಂಜ್ಞಪನಂ—ಈ ೨೧ ಕೊಲೆ" (ಹಲಾಯು. ೭೬-೩೨೩) ; ಪ್ರವಾಸನಕ್ಕೆ (ಕೊಂದು ಹಾಕುವುದಕ್ಕೆ) ನಾನೊಪ್ಪುವುದಿಲ್ಲ (ಕಪಾಕುಂ. ೦೦೦). [ಸಂ.]

**ಪ್ರವಾಸಪತ್ರ** (ನಾ). (ಒಬ್ಬನು ಒಂದು ದೇಶದಲ್ಲಿ ಪ್ರಯಾಣ ಮಾಡಲು ಮತ್ತು ಹಾಗೆ ಮಾಡುವಾಗ ತಕ್ಕ ಸಂರಕ್ಷಣೆ ಪಡೆಯುವ ಹಕ್ಕನ್ನು ಹೊಂದಿರಲು ಆ ದೇಶದ ನಿಯುಕ್ತಾಧಿಕಾರಿಯು ಕೊಡುವ) ಪ್ರವಾಸಾಧಿಕಾರಪತ್ರ ; ರಹದಾರಿ : "ಪ್ರವಾಸದ ರಹದಾರಿ ; ಪ್ರವಾಸಪತ್ರ ; ಪಾಸ್‌ಪೋರ್ಟು" (Pass—port. ಕಶ್ರಿನಿ. ೬೦) ; ಸಾಮಾನುಗಳನ್ನು ತೂಕ ಹಾಕಿಸುವುದು, ಪ್ರವಾಸಪತ್ರ ("ಪಾಸ್‌ಪೋರ್ಟ್") "ವೀಸಾ" ಮೊದಲಾದುವುಗಳನ್ನು ತನಿಖೆ ಮಾಡಿಸುವುದು . . . ಇದರಲ್ಲಿ ವೇಳೆ ಹಾಗೂ ಹೀಗೂ ಕಳೆಯಿತು (ನಂಟರು. ೯೪). [ಸಂ.]

**ಪ್ರವಾಸಮಂದಿರ** (ನಾ). ಯಾತ್ರಿಕರು ಇಳಿದುಕೊಳ್ಳಲು ಮಾಡಿರುವ ವಸತಿ : ಅವರು ಪ್ರವಾಸಮಂದಿರದಲ್ಲಿ ಇಳಿದುಕೊಂಡರು (ಕಶಪು. ೩-೫೩). [ಸಂ.]

**ಪ್ರವಾಸಸಾಹಿತ್ಯ** (ನಾ). ಪ್ರವಾಸಕಥನದ ಬರವಣಿಗೆ : ನಮ್ಮಲ್ಲಿ ಪ್ರವಾಸ ಸಾಹಿತ್ಯ ಬಂದುದು ಈಚೆಗೆ (ರೂಢಿ). [ಸಂ.]

**ಪ್ರವಾಸಿ** (ನಾ). ಪ್ರವಾಸ ಮಾಡುವವನು ; ಯಾತ್ರಿಕ : ತಾನು ಕಂಡ ಪ್ರವಾಸಿಗಳನ್ನೂ ನಾವಿಕರನ್ನೂ ವಿಚಾರಿಸಿ ತಾನೆ ರಚಿಸಿದ ಆತನ ಗ್ರಂಥವು ಪ್ರತ್ಯಕ್ಷತಃ ತೀರ ನಿರ್ದುಷ್ಟವೂ ಅಲ್ಲ . . . ನಿಷ್ಕೃಷ್ಟವೂ ಅಲ್ಲ (ದ್ರಾಪಿಪಿ. ೬೦) ; ನಮ್ಮ ದೇಶಕ್ಕೆ ಬಂದು ಹೋದ ಪ್ರವಾಸಿಗಳ . . . ಕಥನಗಳನ್ನು ಹೇಳಿದ್ದಾಗಿದೆ (ಪ್ರವಾಇ. II. vii ಪ್ರಸ್ತಾವನೆ). [ಸಂ.]

**ಪ್ರವಾಸಿಕೇಂದ್ರ** (ನಾ). ಪ್ರವಾಸಿಗಳ ಆಕರ್ಷಣೆಯ ಮುಖ್ಯಸ್ಥಳ : ನಂದಿಬೆಟ್ಟ ಪ್ರವಾಸಿಕೇಂದ್ರವಾಗಿದೆ (ರೂಢಿ). [ಸಂ.]

**ಪ್ರವಾಸಿಗ** (ನಾ). = ಪ್ರವಾಸಿ : ಆ ವೃದ್ಧಿಯುಳು ಎಣ್ಬರ್ ಪ್ರವಾಸಿಗರುಣ್ಬ ಸತ್ರಕ್ಕೆ ಕೊಟ್ಟ ಮೊದಲ್ ಗದ್ಯಾಣಮಿಪ್ಪತ್ತಯ್ದು (ಸೌಇಇ. XI-i, ೯೨-೩೪; 1054) ; ಹದಿಮೂಱು ಕಮ್ಮ ಗರ್ದೆಯಂ ಬಂದ ಪ್ರವಾಸಿಗರುಣ್ಬಂತಾಗಿ ಆಚಂದ್ರಾರ್ಕಸ್ಥಾಯಿ ಮಾಡಿ (ಕಇ. IV, ೨೫-೨೦; 1054); ದೇಸಿಗ ಪ್ರವಾಸಿಗಳ ಆಹಾರದಾನಕ್ಕೆ ಬಿಟ್ಟ ಸತ್ರಂ (ಎಕ. VII, ಶಿಕಾರಿ. ೦೪-೦೪ ; 1080). [ಪ್ರವಾಸ + —ಇಗ]

**ಪ್ರವಾಸಿಬಂಗಲೆ** (ನಾ). = ಪ್ರವಾಸಮಂದಿರ : ಪ್ರವಾಸಿಬಂಗಲೆಯ ಆಳುಗಳು ಕಾಫಿ ತಂದರು (ಹಸುಹೂ.೩೬೨). [ಪ್ರವಾಸಿ + ಬಂಗಲೆ]

**ಪ್ರವಾಸಿಮಂದಿರ** (ನಾ). = ಪ್ರವಾಸಮಂದಿರ : ಆ ಊರಿಗೆ ಒಂದು ಮೈಲಿ ದೂರದಲ್ಲಿ ಲಕ್ಷಣವಾದ ಪ್ರವಾಸಿಮಂದಿರವಿದೆ (ನಂಟರು. ೪೭); ಹರ್ಷವರ್ಧನ . . . ದೇಶದಲ್ಲೆಲ್ಲ ಪ್ರವಾಸಿಮಂದಿರಗಳನ್ನೂ, ಬೌದ್ಧಸಂಘಾರಾಮಗಳನ್ನೂ ನಿರ್ಮಿಸಿದ್ದಾನೆ (ಪ್ರವಾಇ. I, ೨೨೨). [ಸಂ.]

**ಪ್ರವಾಸೋದ್ಯಮ** (ನಾ). ದೇಶ ವಿದೇಶಗಳ ಜೀವನಪದ್ಧತಿ, ಸಂಸ್ಕೃತಿ, ನಾಗರಿಕತೆಗಳನ್ನು ಅರಿಯಲು ಅಥವಾ ವಿಹಾರಾರ್ಥವಾಗಿ, ಪ್ರೇಕ್ಷಣೀಯಸ್ಥಳಗಳಿಗೆ ಪ್ರವಾಸ ಮಾಡುವ ಜನರಿಗೆ ಅನುಕೂಲಗಳನ್ನು ಒದಗಿಸುವ, ಸಂಚಾರಕ್ಕೆ ಸಂಬಂಧಿಸಿದ ವ್ಯವಸ್ಥಿತವಾದ ಏರ್ಪಾಟು : ಅಭಿವೃದ್ಧಿಶೀಲದೇಶಗಳಲ್ಲಿ ಪ್ರವಾಸೋದ್ಯಮಕ್ಕೆ ಸರ್ಕಾರದಿಂದ ಹೆಚ್ಚು ಪ್ರೋತ್ಸಾಹ ದೊರೆಯಬೇಕು (ರೂಢಿ). [ಸಂ.]

**ಪ್ರವಾಹ** (ನಾ). ೧. ಹರಿಯುವಿಕೆ ; ಪ್ರವಹಿಸುವಿಕೆ: "ಓಘಃ, ಪ್ರವಾಹಃ . . . ರಯಃ —ಈ ೬ ತೊಱೆಯ ಹರಿಹಂ" (ಹಲಾಯು. ೦೦೦-೪೭); ನವರೌಪ್ಯಕುಂಭಮೋ ನಾಕತರಂಗಿಣೀಪ್ರವಾಹದೊಳದೆ ಕಾಣಲಾದಪುದೆನಲ್ . . . ಪೊಳೆಯುತಿರ್ದುದು ಚಂಡಮರೀಚಿಮಂಡಲಂ (ಜಗಪಿ. ೪-೬೦). ೨. ದಂಡೆಯ ನೈಸರ್ಗಿಕಮಿತಿಯನ್ನು ಅತಿಕ್ರಮಿಸಿ ಹರಿಯುವ ಹೊನಲು ; ನೆರೆ : ದಕ್ಷಿಣದ ನದಿಗಳು ಆಳದಲ್ಲಿ ಹರಿಯುವುದರಿಂದ ಪ್ರವಾಹದ ಅಪಾಯವೇನೋ ಕಡಿಮೆ (ನಪಿಪ. ೨೫). ೩. ಎಡೆ ಬಿಡದಿರುವಿಕೆ ; ಅವಿಚ್ಛಿನ್ನವಾದ ಮುನ್ನಡೆ : "ಪ್ರವಾಹಃ, ಪ್ರವೃತ್ತಿಃ—ಅವಿಚ್ಛಿನ್ನವಾಗಿ ಹರಿಯುವ ನೀರು ಮುಂತಾದವುಗಳ ಪರಂಪರೆ, ಪ್ರಸರಿಸುತ್ತಾ ಇರುವುದು" (ಸಿದ್ಧಾಂಶಿ. ೩೬೦). ೪. ಒಂದು ನರಕದ ಹೆಸರು : ನಾದ ಪ್ರವಾಹ ರುಕ್ಷಸುಪ್ರವಾಹ ಮೇಷವೆಂಬೈದು ಮುಂತ್ರಿನರಕಂಗಳ ಮಧ್ಯದಲ್ಲಿ ಚಂಡವೇಂಬರಸುನರಕವಿಹುದು (ಪಿವೇಕ. ೦೫೨). [ಸಂ.]

**ಪ್ರವಾಹಿ** (ನಾ). ಹರಿಯುವಂತಹುದು ; ದ್ರವ : ಘನ, ಪ್ರವಾಹಿ, ವಾಯುರೂಪ ಈ ಮೂರು ರೂಪಗಳಿಂದ ಪದಾರ್ಥಗಳು ಕಣ್ಣಿಗೆ ಬೀಳುತ್ತವೆ (ಮುಂಬಿಯು. ೫-೫೦). [ಸಂ. ಪ್ರವಾಹಿನ್]

**ಪ್ರವಾಹಿಕೆ** (ನಾ). ಅತಿಸಾರದಲ್ಲಿ ಒಂದು ವಿಧ : ವಾಯುವಿನಿಂದ ಮಲ ಶ್ಲೇಷ್ಮ ರಕ್ತಂಗಳು ಕೆಲನಾಗುತ್ತಿರಲಾಗಿ ಮಲವಿಲ್ಲದೆ ನೊರೆಸಹಿತ ಬರೀ ನೀರೇ ಸುರಿವುದು ಅದು ಪ್ರವಾಹಿಕೆ ಎನಿಸಿಕೊಂಬುದು. ಭಾಷೆಯಲ್ಲಿ ಇದನೇ ನೀರಕೊಂಬು ಎಂಬರು. ಅದಕ್ಕೆ ಎಣ್ಣೆ, ತುಪ್ಪ, ಮೊಸರು, ಜೇನುತುಪ್ಪ, ಶುಂಠಿ, ಖಂಡಸಕ್ಕರೆ, ಇಷ್ಟನೂ ಸಮಾಂಶವಾಗಿ ಕೂಡಿಸಿ ಕೊಡಲು ಆ ಕ್ಷಣದಲ್ಲಿ ಪ್ರವಾಹಿಕೆ ಪರಿಹರವಹದು (ವೈದ್ಯಸಾ. I, ೨೨೩). [ಸಂ. ಪ್ರವಾಹಿಕಾ]

**ಪ್ರವಾಹಿನಿ** (ನಾ). ನದಿ : ಮಹಾಪ್ರವಾಹಿನೀಸಲಿಲಸಮ್ಮಿಶ್ರಕರ್ಪೂರದಳ ಬಹುಳಕಾಂತಿದಂತುರಿತ ಚಂದ್ರಕಾಂತಕಲಶಂಗಳಿಂ . . . ಮನಂಗೊಳಿಪ ದೇವಪೂಜಾಗ್ಗೃಹಮಂ ಪೊಕ್ಕು (ಹಂಗಾಟ. ೦೨-೨ ಪ). [ಸಂ. ಪ್ರವಾಹಿನೀ]

**ಪ್ರವಾಹಿಸು** (ಕ್ರಿ). ಹರಿ ; ಪ್ರವಹಿಸಂ : ಪರಮನೆರ್ದೆ ಕಟ್ಟನೆ ಕರಗಿ ಮೇಣ್ಪ್ರವಾಹಿಸಿತೋಯೆನೆ ಗಂಗೆ ಕಂಗೊಳಿಸಿತು (ಪದ್ಮರಾ. ೦೩-೩೦) ; ಅಡಿಗಡಿಗೆ ಹತ್ತುಸಾವಿರಲಕ್ಷಕೋಟಿಗಿಮ್ಮಡಿಯಾಗಿ ಪೆಚ್ಚಿ ಪ್ರವಾಹಿಸಿ . . . ಜಲಮಯವಾಗಲು (ಕಟಪ್ಪ. ೧೬-೨೯) ; ಕಾವೇರಿಯು . . . ಪ್ರವಾಹಿಸಳು (ಕೀಪರ. ೨೩-೩೦). [ಪ್ರವಾಹ + —ಇಸು]

**ಪ್ರವಾಳ** ' ಪ್ರವಾಲ ' ನೋ.

**ಪ್ರವಾಳಮಣಿ** (ನಾ). ೧. ಒಂದು ಬಗೆಯ ರತ್ನ ; ಹವಳ. ೨. [ಕಾಮಶಾ] ಒಂದು ವಿಧವಾದ ದಂತಕ್ಷತ : ರಾಗೋಪಗೂಢ ಅಂಕುಲಯಾನಕ ಪ್ರವಾಳಮಣಿ . . . ವರಾಹಚರ್ವಿತಮೆಂಬಷ್ಟವಿಧ ರದನಕ್ಷತ ಲಾಕ್ಷಣಿಕರಿಂ (ಪಚೀಳ. ೦೬೯) ; ಆ ಎಡಗಲ್ಲದಲ್ಲಿ ಪಲ್ಲು ತುಟಿಯು ಎರಡರ ಕೇಪಯೋಗದಿಂ ಅಡಿಗಡಿಗೆ ಒಂದೇ ಠಾವಿನಲ್ಲಿ ದಂತಕ್ಷತ ಮಾಡು ತ್ತಿರಲು ಅಭ್ಯಾಸಸಾಧನೆಯಿಂ ಪ್ರವಾಳಮಣಿ ಎಂಬುದಹುದು (ಕಾಮಚಾ. ೨೨೯). [ಸಂ. ಪ್ರವಾಲಮಣಿ]

**ಪ್ರವಿಕಸಿತ**(ಗು). ಚೆನ್ನಾಗಿ ಅರಳಿರುವ ; ವಿಕಾಸವಾದ : ಪ್ರವಿಕಸಿತಾಂ ಬುಜವನಮಂ ಸವಿಶೇಷಂ ಪೋಲ್ಗುವೆಂಗೆ ವಾಕ್ಯೋಪಮೆಯಂ (ಕಲಾ. ೩-೬೨). [ಸಂ.]

**ಪ್ರವಿಖ್ಯಾತಿ** (ನಾ). ಬಹಳ ಪ್ರಸಿದ್ಧಿ ; ಅತಿಖ್ಯಾತಿ : "ವಿಶ್ರಾವಃ, ಪ್ರವಿ ಖ್ಯಾತಿಃ—೨ ಅಧಿಕವಾದ ಪ್ರಸಿದ್ಧಿ, ಹೆಚ್ಚಾದ ಹೆಸರುವಾಸಿ" (ಸಿದ್ಧಾಂತಿ. ೩೬೩). [ಸಂ.]

**ಪ್ರವಿಘಟನ** (ನಾ). ಸೀಳಂವುದು ; ಕುಟಿಲಪರಸಮಯಕ್ರಿಯಾಪ್ರವಿಘಟನ ದೇವರ ದಾಸಿಗಳ ತತ್ಪಟುಕರಸ್ಥಳಘಟಿತಮಾಗಿ ಪ್ರಭವಿಸುತಮಿರಲು (ಅಕಪ್ಪ. ೩೦-೬೨). [ಸಂ.]

**ಪ್ರವಿಚಾರ** (ನಾ). ೧. ಗೌರವ. ೨. ಬಗೆ ; ರೀತಿ. ೩. [ಜೈನ] ಇಂದ್ರಿಯಸಂಬಾನುಭವ : 'ಕಾಯಪ್ರವಿಚಾರ', 'ಪ್ರವೀಚಾರ' ಪರಾ. [ಸಂ.]

**ಪ್ರವಿತತ** (ಗು). ಹರಡಿದ ; ವ್ಯಾಪ್ತವಾದ : ಪ್ರವಿತತ ಪುಣ್ಯೋ ದಯದಿಂ ಭುವನಸ್ತುತಸುಕೃತಿಯೆನಿಪ ಕುವಳಯಕಮಳೋತ್ಸವಕರ ನೆನಿಪೀ ಸ್ವಾಮಿಗೆ ಸುವಿಧಿಮೆಸರ್ ಪುಷ್ಪದಂತಮೆಸರನ್ವರ್ಥಂ (ಧ್ರಕ್ರಪು. ೦೨-೩೩) ; ಭವಭವದಂಬ್ರುಸ್ಮರಣಮಿದವಿರತವಿರ್ಕೆಮಗೆ ನಿನ್ನ ಗಣಮುಂ ನೀನುಂ ಪ್ರವಿತತಸುಖಮಿರ್ಪುದು (ಧ್ರಕಂ. ೯-೬೩). [ಸಂ.]

**ಪ್ರವಿದಾರಣ** (ನಾ). ೧. ಸೀಳಂವಿಕೆ ; ಒಡೆಯಂವುದು. ೨. ಕಾಳಗ ; ಯುದ್ಧ : "ಸಂಗ್ರಾಮಃ . . . ಪ್ರವಿದಾರಣಂ . . . ವಿಗ್ರಹಃ —ಈ ೩.೫ ಕಾಳೆಗಂ" (ಶಬ್ದಮ. ೬೩-೨೯೯). [ಸಂ.]

**ಪ್ರವಿದಿತ** (ಗು). ಚೆನ್ನಾಗಿ ತಿಳಿದ ; ಪ್ರಸಿದ್ಧವಾದ : ಇವು ಕಾಳಿಂಗಾ ಭಿಧೇಯಪ್ರವಿದಿತಮಿವು ಕಾಂಭೋಜ ಬಾಹ್ಲೀಕದೇಶೋದ್ಭವಮಶ್ವಂ ರಾಶಿಯಾಗಿರ್ದಪುವು (ಕಾದಂಬ. ೬೨೩) ; ಪ್ರವಿದಿತಕೌಶಿಕಪಾದಂ ದಿವಿಜಾಶಾಶಿಖರಿ ಶಿಖರಶೇಖರನಾದಂ (ಹಂಕಕಂ. ೬೬-೦೯). [ಸಂ.]

**ಪ್ರವಿನಾಶನ** (ನಾ). ಸಂಪೂರ್ಣವಾದ ನಾಶ : ಘನಮಿಥ್ಯಾತ್ವದವಾನಳ ಹಿನದ್ದ ಜೀವಕ್ಕೆ ದೃಷ್ಟಿಮೋಹಪ್ರವಿನಾಶನೆಮಿಲ್ಲದಂದು ಪುಟ್ಟದು ಮನ ದೊಳ್ ಸ್ವಪರೋರ್ಪಕ್ಷಸಾಧನಂ ಸಮ್ಯಕ್ತ್ವಂ (ಅದಪು. ೩-೩೨). [ಸಂ.]

**ಪ್ರವಿಪುಳ** (ಗು). ಹೆಚ್ಚಾದ ; ಬಹಳವಾದ : ಪ್ರವಿಪುಳಲಕ್ಷ್ಮೀನಂದನಂ . . . ಪ್ರಾಪ್ತಮಹಾರ್ಣವಮಪ್ಪುದಜಿಂದವನಿಪ ಭವದಾಜ್ಞೆ ಪೊಲಿದಟಿ ಕನಕವೇದಿಕೆಯೆಸೆಗುಂ (ಜಾರ್ಕ್ಯಾಕಿ. ೯-೬). [ಸಂ. ಪ್ರವಿಪುಲ]

**ಪ್ರವಿಭಕ್ತ** (ಗು). ಬೇರೆಯಾದ ; ಪ್ರತ್ಯೇಕವಾದ : ಅವಱ ವಿಪರ್ಯಯ ವೃತ್ತಿ ಪ್ರವಿಭಕ್ತವಿಕಲ್ಪಮಕ್ಕುಮುತ್ತರವಾಗಗಂ (ಕಲಾ. ೨-೩೩). [ಸಂ.]

**ಪ್ರವಿಭಗ್ನ** (ಗು). ಚೆನ್ನಾಗಿ ಮುರಿದ ; ಬಹಳವಾಗಿ ತುಂಡಾದ : ಅದು ಮದದಂತಿದಂತಮುಸುಲ ಪ್ರವಿಭಗ್ನಮಹಾಮಹೀರುಹಾಸ್ಪದಂ (ಹಂಕಕಾ. ೩-೦೦). [ಸಂ.]

**ಪ್ರವಿಭಾಗ** (ನಾ). ಭಾಗ ; ಪಾಲು : ಎಸೆದಿರೆ ಲೋಕವಿಭಾಗಪ್ರಸರ ಪ್ರವಿಭಾಗಮಂ ಸವಿಸ್ತರಮಭಿವರ್ಣಿಸಲಸದಳಂ (ಸುಕುಮಾ. ೦೦-೪೦) ; ಯೋಗಂ ಪಲವುಮಲಂಕೃತಿಗಾಗಿರೆ ಸಂಶ್ಲೇಷಮೆಂಬುದನ್ವರ್ಥಗತಂ ಯೋಗಮುಮಂಗಾಂಗಿಪ್ರವಿಭಾಗಂ ಸಮಕ್ಷಕಮೆಂದೆರಟ್ಟಿಜನಕ್ಕುಂ (ಕಾವ್ಯಾವ. ೭೭೦). [ಸಂ.]

**ಪ್ರವಿಭಾಸಿ** (ನಾ). ಬಹಳವಾಗಿ ಪ್ರಕಾಶಿಸುತ್ತಿರುವವನು ; ತೇಜಸ್ವಿ : ಗಂಧೇಭಕಂಧರಬಂಧಪ್ರವಿಭಾಸಿಯಪ್ಪರಿಗನಂ ಕಾಣುತ್ತೆ ಕಣ್ಸೋಲ್ತು (ಹಂಕಕಾ. ೯-೩೯). [ಸಂ. ಪ್ರವಿಭಾಸಿನ್]

**ಪ್ರವಿಮಲ, ಪ್ರವಿಮಳ** (ಗು). ೧. ಬಹಳ ಪರಿಶುದ್ಧವಾದ, —ನಿರ್ಮಲ ವಾದ : ಪ್ರವಿಮಲಮತಿಗನಿಶಂ ರಾಜವಿದ್ಯೆಗಳ್ ನೆಱೆಯವಮಲಕೀರ್ತಿಗೆ ದಶದಿಗ್ವಿವರಂ ನೆಱೆಯವು (ಶಾಂತಿಪು. ೨-೫) ; ಪ್ರವಿಮಲರುಚಿಬಿಂಬಂ ವರ್ಧಿತೋದ್ಯನ್ನನೋಜಂ . . . ಮೂಡಿದಂ ಪೂರ್ಣರಾಜಂ (ಅದ್ಭುತ. ೦೦-೦೯). **ಪ್ರವಿಮಳ** : ೧. ಪ್ರವಿಮಳಜಿನಶಾಸನದಿಂ ಪವಿತ್ರಮೆನೆ ಮಾಡಿ (ಸಮಪಿ. ೦-೪೪)- (ನಾ). ೨. ಬಹಳ ಪವಿತ್ರನಾದವನು: ಪ್ರವಿಮಳನತಿಸ್ವತಂತ್ರಂ ಭವವ್ಯತಿಸಂಸಾರಕರ್ಮರಹಿತಂ (ಧ್ರಕಂ. ೩೫-೩೭). [ಸಂ.]

**ಪ್ರವಿಮಳ** ' ಪ್ರವಿಮಲ ' ನೋ.

**ಪ್ರವಿರಳ** (ಗು). ೧. ಅಪರೂಪವಾದ ; ದುರ್ಲಭವಾದ ; ಶ್ರೇಷ್ಠ ವಾದ : ' ಪ್ರವಿರಳಮಣಿ ' ಪರಾ. [ಸಂ. ಪ್ರವಿರಲ]

**ಪ್ರವಿರಳಮಣಿ** (ನಾ). ಅತ್ಯಂತ ದುರ್ಲಭವಾದ ಮಣಿ ; ಅಪರೂಪ ವಾದ ರತ್ನ : ಪ್ರವಿರಳಮಣಿಯಿರೆ ವರ್ಣಿಯನವಿರಳಗುಣಸಹಜಕವಿಯ ಕಾವ್ಯಮದಿರೆ ಬಲ್ಲವರಿತರಕಾವ್ಯಮಂ ಮಾಡುವನ್ನರಾರ್ ಕರ್ಣಾಪ್ಯದಯ ನವಭೂಷಣವಮಂ (ಜಾರ್ಕ್ಯಾಕಿ. ೦-೬೭). [ಸಂ. ಪ್ರವಿರಲಮಣಿ]

**ಪ್ರವಿಲಿಪ್ತ** (ಗು). ಅಂಟಿಕೊಂಡ ; ಅಂಟಿದ : ದಿವಿಜೇಂದ್ರವನಿತೆ ದೇವಾಂಗವಸ್ತ್ರದಿಂ ತೊಡೆದಳಾ ಜಿನಾರ್ಭಕದೇಹಪ್ರವಿಲಿಪ್ತಸ್ನಪನಪಯೋಲವ ಮಂ ನೀರಂಜಿಪಂತೆ ರತ್ನಮನಾಗಳ್ (ಹುಲ್ಪಪು. ೦೩-೩). [ಸಂ.]

**ಪ್ರವಿಲೀನ** (ನಾ). ಲೀನಗೊಳಿಸಂವುದಂ ; ಒಳಸೇರುವಂತೆ ಮಾಡು ವುದಂ : ದಿವಸಕರನುದಯಗಿರಿಶಿಖರವಿಶೇಷಭೂಷಣಂ ತಮೋರಿಪುಬಳಮಂ ಪ್ರವಿಲೀನಂ ಮಾಡಿದನವಯವದೊಳ್ ತಾರಾವಿತಾನತೇಜಮನಟೀದಂ (ಕಲಾ. ೩-೫೭). [ಸಂ.]

**ಪ್ರವಿಲೋಮ** (ನಾ). ವಿರುದ್ಧಕ್ರಮ ; ಪ್ರತಿಷೇಧ : 'ಪ್ರವಿಲೋಮ ಕ್ರಿಯೆ' ಪರಾ. [ಸಂ.]

**ಪ್ರವಿಲೋಮಕ್ರಿಯೆ** (ನಾ). [ವ್ಯಾಕ] ವಿರುದ್ಧಕ್ರಿಯೆ ; ಪ್ರತಿಷೇಧ ಕ್ರಿಯೆ ; ನಿಷೇಧಕ್ರಿಯೆ : ಅವಧರಿಪಿಕರ್ಮವುದುಳ್ಳಾತುವಿನ ಈಕಾರಕ್ಕೆ ಇತ್ವಮುಂದುಗೆ ಟುಕಾರಂ ಪ್ರವಿಲೋಮಕ್ರಿಯೆಗದುವೆಂದವೆಂದು ಬಂದಿರ್ಪ್ಪುಮುದುಗಮುಪುಗಂ ಪ್ರಚುರಂ (ಶಮದ. ೨೯೯). 'ವಿಲೋಮ ಕ್ರಿಯೆ' ಪರಾ. [ಸಂ. ಪ್ರವಿಲೋಮಕ್ರಿಯಾ]

**ಪ್ರವಿವೇಕ** (ನಾ). ೧. ಅತಿಶಯವಾದ ಜ್ಞಾನ, —ವಿವೇಕ : ಲೋಕ ವೈದಿಕಮುಖ್ಯಸಕಲಕಲಾಕುಶಲರಾದರು ಧನುಃಪ್ರವಿವೇಕನಿಪುಣರನಱಸುತ್ತಿ ದ್ದನು ಮತ್ತೆ ಗಾಂಗೇಯ (ಕುಮ್ಯಾಕ. ೬-೨೦). ೨. ಪೂರ್ಣವಾದ ಏಕಾಂತ. [ಸಂ.]

**ಪ್ರವಿಷ್ಟ** (ಗು). ೧. ಪ್ರವೇಶಿಸಿದ ; ಒಳಗೆ ಹೋದ. (ನಾ). ೨. ಒಳಗಿರುವುದು ; ಸೇರಿರುವುದು : ರಾಜಧಾನಿ ಉದ್ಬೃಗವೊಳು ಪ್ರವಿಷ್ಟಂ ವಂಕಸಮುದ್ರದ ಶ್ರೀವತ್ಸಾಧೋರೆ (ಕಶಿ. ೦೩-೩-೨೩; ೧೧೩೦). ೩. ತಲ್ಲೀನನಾದವನು: ರಾಮಭಟ್ಟಾರಕರೆಂತುಮಸ್ಖಲಿತಚಿತ್ತದಿಂ ಶುಕ್ಲಧ್ಯಾನಪ್ರವಿಷ್ಟರಾಗಿ (ಸಂರಾಪು. ೦೬-೬೬ ವ). [ಸಂ.]

**ಪ್ರವೀಚರಣ** (ನಾ). = ಪ್ರವಿಚಾರ ೩ : ಒಯ್ಯದೆ ಪೊಯ್ಯದೊಂದು ಪುರುಡಪ್ಪದ ಚುಂಬಿಸದಿಂಪು ದೇವಿಯರ್ ಮೆಯ್ಯಳವಾರೆ ಕೂಡಿಸದ ಕೂಟದ ಸಂತಸಮುಂಬಿವಿಲ್ಲವಾರಯ್ಯ ಮನಃಪ್ರವೀಚರಣದಿಂ ಸಮಸಂದು ಚಿತಾರ್ಥವೃತ್ತಿ ತಳ್ಪೊಯ್ಯ ಮನೋಜಕೇಳಿಗವರಂ ತಣಿದಂ ಸುರತೋಪಭೋಗದೊಳ್ (ಸಂಧ್ರಕು. ೯-೫೩). ☞ ಇದಂ ಛಂದಸ್ಸಿಗಾಗಿ ಮಾಡಿಕೊಂಡ ರೂಪ. [< ಸಂ. ಪ್ರವಿಚರಣ]

**ಪ್ರವೀಚಾರ** (ನಾ). = ಪ್ರವಿಚಾರ ೩ ; ☞ ಕಾಯಪ್ರವೀಚಾರವೂ ಸೇರಿದಂತೆ ಸ್ಪರ್ಶಪ್ರವೀಚಾರ, ರೂಪಪ್ರವೀಚಾರ, ಶಬ್ದಪ್ರವೀಚಾರ, ಮನಃಪ್ರವೀಚಾರಗಳೆಂದು ಪ್ರವೀಚಾರಗಳು ಐದು ಬಗೆ. ಇವುಗಳಲ್ಲಿ ಕಾಯಪ್ರವೀಚಾರವು ಈಶಾನಕಲ್ಪದವರೆಗೂ ಇರುತ್ತದೆ. ಇಲ್ಲಿನ ದೇವತೆಗಳು ಮನುಷ್ಯರಂತೆ ಸ್ತ್ರೀವಿಷಯಸುಖವನ್ನು ಅನುಭವಿಸುವರು. ಮುಂದೆ ಸನತ್ಕುಮಾರ, ಮಾಹೇಂದ್ರಕಲ್ಪಗಳ ದೇವತೆಗಳು ದೇವಾಂಗನೆಯರ ಸ್ಪರ್ಶಮಾತ್ರದಿಂದಲೇ ಇಂದ್ರಿಯಜನಿತಸುಖವನ್ನು ಹೊಂದುವರು. ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠಕಲ್ಪಗಳ ದೇವತೆಗಳು, ದಿವ್ಯಾಂಗನೆಯರ ಶೃಂಗಾರವಿಲಾಸದ ವೇಷಗಳ ಅವಲೋಕನ ಮಾತ್ರದಿಂದಲೇ ಇಂದ್ರಿಯಜನಿತಸುಖವನ್ನು ಹೊಂದುವರು, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರಕಲ್ಪಗಳ ದೇವತೆಗಳು ದೇವವನಿತೆಯರ ಮಧುರಸಂಗೀತ, ಮೃದುಲಲಿತವಾದ ನಗು ಹಾಗೂ ಭೂಷಣಗಳ ಧ್ವನಿಯ ಶ್ರವಣಮಾತ್ರದಿಂದಲೇ ಇಂದ್ರಿಯಜನಿತಸುಖವನ್ನು ಹೊಂದುವರು. ಆನತ, ಪ್ರಾಣತ, ಆರಣ, ಅಚ್ಯುತಕಲ್ಪಗಳ ದೇವತೆಗಳು ಸುರಾಂಗನೆಯರನ್ನು ಹೊಂದುವ ಮನಃಸಂಕಲ್ಪಮಾತ್ರದಿಂದಲೇ ಇಂದ್ರಿಯಜನಿತಸುಖವನ್ನು ಹೊಂದುವರು: ಪ್ರವೀಚಾರಮೆಂಬುದು ವೇದನಾಪ್ರತೀಕಾರಂ (ಶತ್ರ್ಯ ಶ್ರ. ೦೫೩): ಪುರುಷಂ ತನ್ನೊಳೊಡರ್ಚುತಿರ್ಪ ವಿಳಸದ್ರೂಪಪ್ರವೀಚಾರಮುಂ ಸುರಲೋಕಸ್ಥಿತಿ ಬೇಜಿದೊಂದೆನಿಸಿದತ್ತಾ ಕಾಂತೆಗಾ ಗರ್ಭದೊಳ್ (ಸಂಧ್ರಕು. ೦೨-೨೯). 'ಕಾಯಪ್ರವೀಚಾರ' ಪರಾ. [<ಸಂ. ಪ್ರವಿಚಾರ]

**ಪ್ರವೀಣ** (ನಾ). ೧. ಕುಶಲ; ಪರಿಣತ ; ನಿಪುಣ : "ಚತುರಃ . . . ಪ್ರವೀಣಃ—ಈ ೧೧ ಬಲ್ಲವಂ" (ಹಲಾಯು.೩೩-೦೫೦); ದಿವಸೇಂದ್ರಂ ಕನ್ನೆಯೊಳ್ ಕೂಡಿರೆ ಲಿಪಿಗಣಿತಾಲೇಖ್ಯಕಾವ್ಯಪ್ರವೀಣಂ (ಜಾತಕ. ೦೭-೦೩); ಅವನು ಕಂದುಕಾಗಮ (A kind of Polo) ಎಂಬ ಆಟದಲ್ಲಿ ಪ್ರವೀಣನಾಗಿದ್ದನೆಂದು ಉಲ್ಲೇಖಿಸಿದೆ (ಜಾಹಿಸ. ೦೨); ಸಸ್ಯಶಾಸ್ತ್ರದ ಪರಿಚಯವಿಲ್ಲದವರು ಈ ಕಾರ್ಯವನ್ನು . . . ಒಣಸಸ್ಯಸಂಗ್ರಹಾಲಯಗಳಿಗೆ ಕಳುಹಿಸಿ, ಅಲ್ಲಿರುವ ಪ್ರವೀಣರಿಂದ ಮಾಡಿಸಬಹುದು (ಹಸುಹೊ. ೦೨೭). ೨. ಒಬ್ಬ ದೇವತೆಯ ಹೆಸರು : ಮಕರಧ್ವಜ ನಳಕೂಬರ ಜಯಂತ ಅನಿರುದ್ಧ ಕೂಚಿಮಾರ ಪಾಂಚಾಲ ಪಲ್ಲವ ಪ್ರವೀಣಾದಿ ದೇವವಿಟರುಂ (ಲೀಲಾ.೦೭೦). [ಸಂ.]

**ಪ್ರವೀಣತೆ** (ನಾ). ನಿಪುಣತೆ ; ಪರಿಣತಿ : ಬರೆಹ ವಾಚನ ಗಣಿತ ಶಬ್ದಾರ್ಥರಸ ಭಾವೋಕ್ತಿ ಪ್ರವೀಣತೆ ಭರತ ಛಂದೋವ್ಯಾಕರಣ . . . ಕಲೆಗಳು ಸ್ಮರಿಸಲೊಡನೆ ಮುಖದೊಳುದ್ಗತಂ ಬಸವಂಗೆ (ಬಸವು. ೩-೯೩). [ಸಂ. ಪ್ರವೀಣತಾ]

**ಪ್ರವೀಣೆ** (ನಾ). ಪರಿಣತೆ ; ನಿಪುಣೆ : ತನ್ನೊಳಿಂತು ಪೋಲಿಸುವೊಡೆ ಪೋಲಿಸಲ್ಕೆ ದೊರೆ ವೀಣೆಯನಾ ಸುರತಪ್ರವೀಣೆಯುಂ (ಆದಿಪು. ೩-೭೬); ಅವಳು ಸಂಗೀತದಲ್ಲಿ ಪ್ರವೀಣೆ (ಕೂಶಿ). [ಸಂ. ಪ್ರವೀಣಾ]

**ಪ್ರವೀರ** (ಗು). ೧. ಪರಾಕ್ರಮಶಾಲಿಯಾದ : 'ಪ್ರವೀರಪುರುಷ' ಪರಾ. (ನಾ). ೨. ಶೂರ ; ವೀರ ; ಪರಾಕ್ರಮಿ : ನಿಸ್ಸಹಾಯಸಾಹಸೋತ್ಕೀರ್ಣ ಮಹಾಹವಾರ್ಣವ ಪ್ರವೀರಪ್ರಾರಬ್ಧಾರಭಟೀ ಸಮುದ್ಧಟಕಥೆಗಳನೆ ಕೇಳಲುಂ (ಆದಿಪು. ೮-೩೫); ಬಗೆಯದೆ ದಾನವಾಧಿಪನ ದೋರ್ಬಲಮಂ ಖಚರಪ್ರವೀರರಂ ಬಗೆಯದೆ (ಸಂರಾಪು. ೦೦-೦೩೯). ೩. ಶ್ರೇಷ್ಠಪುರುಷ ; ಉತ್ತಮಪುರುಷ. [ಸಂ.]

**ಪ್ರವೀರಪುರುಷ** (ನಾ). ಪರಾಕ್ರಮಿಯಾದವನು ; ವೀರಪುರುಷ : ವಿವಿಧಾಯುಧಪೂರ್ಣಂಗಳ್ ಪ್ರವೀರಪುರುಷಪ್ರತಿಷ್ಠಿತಂಗಳ್ . . . ರಥಂಗಳ್ (ಆದಿಪು. ೦೦-೩೨). [ಸಂ.]

**ಪ್ರವುಡ**, ಪವುಡ, ಪ್ರಹುಡ (ನಾ). ೧. ನಿಪುಣ; ಪ್ರೌಢ: ಗವುಡನೊಳು ಹಗೆತನವು ಕಿವುಡನೊಳು ಏಕಾಂತ ಪ್ರವುಡನೊಳು ಮೂಢನುಪದೇಶ ಹುಸಿದೆದ್ದು ತವುಡು ತಿಂದಂತೆ (ಸರ್ವಜ್ಞ. ೦೩೯೩). ೨. [ಕಾಮಶಾ] ರತಿಶಾಸ್ತ್ರದಲ್ಲಿ ಚತುರನಾದವನು : ಕೊಡಬಲ್ಲಂಗೆ ದಂಡ್ರುವಂ ಪ್ರವುಢ [ಡ] ಗಂ ಮೂಢಾಂಗನಾಲಾಭವಂ . . . ನೀಡುವಂ ಸುಡು ಪಾಪಿಷ್ಠನ ಬೊಮ್ಮನಂ (ಸೋಮೇಶ. ೩೩). **ಪವುಡ** : ೧. "ಪವುಡ (ಪಹುಡ)— ಪ್ರೌಢ=ಬಲ್ಲಿದ" (ಶಬ್ದಕೋ. ೨೫). **ಪ್ರಹುಡ** : ೨. ಪುರುಷಪ್ರಹುಡನು ವಾವನೆಂದರೆ ಸುರಸ ನಡವಳಿಯಿಂದ ತಿಳಿವರು (ಕಲ್ಕೊ.ಳ. ೯-೦೪). [ <ಸಂ. ಪ್ರೌಢ]

**ಪ್ರವುಡೆ** (ನಾ). ೧. ಚತುರೆ ; ಪರಿಣತೆ : ಡವುಡೆ ಜೇಗಟೆ ಮಲಹರಿಯ ಜಾಡಿಸಿಕೊಂಬ ಪ್ರವುಡೆಯರಿರ್ದರು (ಸೋಪಹ. ೨೦-೬೯). ೨. [ಕಾಮಶಾ] ರತಿಶಾಸ್ತ್ರನಿಪುಣೆ ; ವಿದಗ್ಧೆ : ಪ್ರವುಡೆ ಬಲುಬುದ್ಧಿ ಪೇಳಲು ಬಾಲೆಯಂದಾಬುಭುಜವಾಗೆ ಹಿಗ್ಗಿ (ಸಂಕಪಾ. ೬-೦೯೩). [<ಸಂ ಪ್ರೌಢಾ]

**ಪ್ರವೃತ್ತ** (ಗು). ೧. ತೊಡಗಿದ ; ಪ್ರವರ್ತಿಸಿದ. (ನಾ). ೨. ಪ್ರವರ್ತಿತವಾದುದು : ಎಲ್ಲಿದಳೊ ಭಾನುಮತಿ . . . ಎಲ್ಲಿತ್ತೊ ಗೀತವಾದ್ಯಂ ಸಲ್ಲಲಿತವಧೂಜನಪ್ರವೃತ್ತಂ ನೃತ್ತಂ (ಗದಾಯು. ೩-೯೩). ೩. ಉಪಯೋಗವಾದುದು : ದ್ರಾವಿಡ ಎಂಬ ಈ ಹೆಸರು ಹಳೆಯದಾದರೂ ಈಗಿನ ಅರ್ಥದಲ್ಲಿ ಅದು ಹೊಸದೇ. ಈ ಶಬ್ದ ಮಹಾಭಾರತದಲ್ಲಿ ಒಂದು ಪ್ರಾಂತದ ಹೆಸರಾಗಿ ಪ್ರವೃತ್ತವಾಗಿದೆ (ಪಮ್ರುಮ. ೦೩). ೪. ತೊಡಗಿದವನು ; ಆರಂಭಿಸಿದವನು : ಅಸಮರಸವತ್ತಾಂಡವಾರಂಭಣಕ್ಕಾರಭಟೀವೃತ್ತಿಪ್ರವೃತ್ತಂ ಸುರಪರಿವೃಢನೊಲ್ದಾಡಿದಂ ಭಕ್ತಿಯಿಂದಂ (ಶಾಂತಿಪು. ೦೦-೬೨) ; ವಿವೇಕಹೀನರಂತೆ ಆತ್ಮಘಾತಕ್ಕೆ ಪ್ರವೃತ್ತನಾಗಬೇಡ (ಕೃತಕ್ಕ. ೪). [ಸಂ.]

**ಪ್ರವೃತ್ತಿ** (ನಾ). ೧. ನಡೆ ; ಓಟ ; ಹರಿವು ; ಗತಿ. ೨. ಪ್ರಾರಂಭ ; ಉಪಕ್ರಮ. ೩. (ಐಹಿಕಜೀವನದಲ್ಲಿ ತೋರುವ) ಆಸಕ್ತಿ. — ಅಭಿಲಾಷೆ : ಇಂತೀ ಪ್ರಕಾರದಿಂ ಷಟ್ಸ್ಥಲಬ್ರಹ್ಮವು ನಿರಂತರಂ ಸೃಷ್ಟಿಮಾರ್ಗದೊಳುಂ ಪ್ರವೃತ್ತಿಮುಖಮಂ ತಳೆವುತ್ತೈಕ್ಯಾದಿಭಕ್ತಾಂತವಾಗಿಪ್ಪುದದುವೆ ಸಂಕ್ಷೇಪದಿಂದ (ಏಕೋ. ೩೦-೨೨); ವೇದಾಂತವು ಬರಿಯ ಸನ್ಯಾಸವನ್ನು ಬೋಧಿಸುವುದಿಲ್ಲ. ಪ್ರವೃತ್ತಿ — ನಿವೃತ್ತಿಗಳ ಸಾಮರಸ್ಯವನ್ನು ಸೂಚಿಸಿ . . . ಎಚ್ಚರ ಮಾಡಿಕೊಡುತ್ತದೆ (ಧರ್ಮಸಾ. ೩೨) ; ಅದರ ಮಹಿಮೆ ನಮ್ಮ ದಿನದಿನದ ಪ್ರತಿಯೊಂದು ವ್ಯಾಪಾರದಲ್ಲೂ ಪ್ರತಿಯೊಂದು ಕ್ರಿಯೆಯಲ್ಲೂ ಪ್ರತಿಯೊಂದು ಪ್ರವೃತ್ತಿಯಲ್ಲೂ ತೋರಿಬರಬೇಕು (ಜಾಹಿತ. ೩೦). ೪. ಬಳಕೆ ; ಅಭ್ಯಾಸ ; ಉಪಯೋಗ : ಮೃಗಪಶುಶಕುನಿಗಣಂಗಳೊಳಗಣಿತನಿಜಜಾತಿಜನಿತಭಾಷೆಗಳೆಂದುಂ

ನೆಗಟ್ದಂತಿರೆ ನರರೊಳಮಪ್ರಗಲ್ಭವಚನಪ್ರವೃತ್ತಿ ನೆಗಟ್ಗುಂ ಸಹಜಂ (ಶಬರ. ೧-೭). ೫. ವ್ಯವಹರಿಸುವುದು; ವ್ಯವಹಾರ: ಜ್ಞಾನ ಹುಟ್ಟಿದ ಮೇಲೆ ಮನುಷ್ಯನು ಪ್ರವರ್ತಿಸುತ್ತಾನೆ. ಪ್ರವೃತ್ತಿ ಸಫಲವಾದರೆ ಜ್ಞಾನ ಸರಿಯಾದುದೆಂದೂ . . . ತಿಳಿಯುವನು (ಹಿಂದಶಾ. ೦೬೬). ೬. ಗುಣ; ಸ್ವಭಾವ: ಶಕ್ತಿಯೆ ಪ್ರವೃತ್ತಿಯೆನಿಸಿತ್ತು (ವಚನ. ೧೦); ವೃತ್ತಿಯಿಂದ ಅಂಬಿಗನಾದರೂ ಪ್ರವೃತ್ತಿಯಿಂದ ಕ್ಷತ್ರಿಯನೆಂಬಂತೆ ಇದ್ದಾನೆ ಅಂಬಿಗರ ಚೌಡಯ್ಯ (ಶರಣ. ೯೬೨). ೭. ಸಂದ್ದಿ; ವಾರ್ತೆ; ಸಮಾಚಾರ: "ವಾರ್ತಾ, ಉದಂತಃ, ಪ್ರವೃತ್ತಿಃ, ವೃತ್ತಾಂತಃ —ಈ ೪ ವಾರ್ತೆ" (ಹಲಾಯು. ೨೪–೦೯೩). ೮. ಭೇದಿ; ವಿರೇಚನ: ಸೂರ್ಯನಿಗೆ ಅಭಿಮುಖವಾಗಿ ಇದ್ದ ಕಗ್ಗಲೀ ಕೊನರು ಒಂದು ಹಿಡಿಯನ್ನು ಮೂರು ಉಗುನಿಯ ಎಲೆಯಲ್ಲಿ ಪೊಟ್ಟಣಂಗಟ್ಟಿ . . . ಮೂರನೆಯ ದಿನ ೯ ಗುಳಿಗೆಯ ಕೊಡಲು ಪ್ರವೃತ್ತಿ ನಿಲ್ಲುವುದು (ಸಕಲವೈ. ೩೩೩); ಅತಿಸಾರವೆಂದರೆ ಒಮ್ಮಿಂದೊಮ್ಮೆಲೇ ಹೊಟ್ಟೆ ಜಾಡಿಸುವ ರೋಗವು. ಇದಕ್ಕೆ ದಕ್ಷಿಣ ದೇಶದಲ್ಲಿ ಭೇದಿ — ಪ್ರವೃತ್ತಿ — ರೋಗವೆಂದೂ ಹೇಳುವರು (ಗೃಹವೈ. ೨೬). 'ಕಾಲಪ್ರವೃತ್ತಿ' ಪರಾ. ೯. ನೀರು ಮೊದಲಾದ ದ್ರವ ಪದಾರ್ಥದ ಹೊನಲು; ಪ್ರವಾಹ: "ಪ್ರವಾಹಃ, ಪ್ರವೃತ್ತಿಃ, —ಅವಿಚ್ಛಿನ್ನವಾಗಿ ಹರಿಯುವ ನೀರು ಮುಂತಾದುವುಗಳ ಪರಂಪರೆ, ಪ್ರಸರಿಸುತ್ತಾ ಇರುವುದು" (ಸಿದ್ಧಾಂತಿ. ೩೬೦). ೧೦. [ನಾಟ್ಯ] "ಪಾತ್ರ ಮತ್ತು ದೇಶಭೇದಗಳನ್ನು ಅನುಸರಿಸಿ ನಟರು ಉಪಯೋಗಿಸುವ ಭಾಷಾವೇಷಭೂಷಣಭೇದಗಳಿಗೆ ಪ್ರವೃತ್ತಿಯೆಂದು ಹೆಸರು" (ಕೃಶಿಅ. ೨೦೦): ಪಾತ್ರಭೇದ ದೇಶಭೇದಗಳನ್ನು ಅನುಸರಿಸಿ ಅವುಗಳಿಗೆ ಉಚಿತವಾಗುವಂತೆ, ನಟರು ಉಪಯೋಗಿಸುವ ಭಾಷೆ, ವೇಷ ಭೂಷ ಮುಂತಾದವುಗಳ ಭೇದಗಳು 'ಪ್ರವೃತ್ತಿ'ಗಳೆನ್ನಿಸಿಕೊಳ್ಳುತ್ತವೆ (ಸಂಪಾಟ. ೦೩). ೧೧. [ನ್ಯಾಯಶಾ] ನ್ಯಾಯಶಾಸ್ತ್ರದಲ್ಲಿ ವಿಭಾಗ ಮಾಡಿರುವ ಹನ್ನೆರಡುವಿಧವಾದ ಪ್ರಮೇಯಗಳಲ್ಲಿ ಒಂದು: ನ್ಯಾಯಶಾಸ್ತ್ರದಲ್ಲಿ ಹೇಗೆಂದರೆ — ಆತ್ಮ ಶರೀರ ಇಂದ್ರಿಯ ಅರ್ಥ ಬುದ್ಧಿ ಮನಸ್ಸು ಪ್ರವೃತ್ತಿ ಅಪವರ್ಗವೆಂದು ಹನ್ನೆರಡು ವಿಧವಾಗಿ ಪ್ರಮೇಯವನ್ನು ಒಂಬತ್ತನೆಯ ಸೂತ್ರದಲ್ಲಿ ವಿಭಾಗ ಮಾಡಿರುವರು . . . ಪ್ರವೃತ್ತಿಯೆಂಬುದು ಪುಣ್ಯ ಪಾಪಗಳು (ಹಿಂದಶಾ. ೦೦೩). ೧೨. [ತರ್ಕಶಾ] ಕರ್ಮ; ಕ್ರಿಯೆ; ನಡವಳಿಕೆ: ಅವು ಮೇಲ್ಕಂಡ ಶುಭಾಶುಭರೂಪವಾದ ಹತ್ತುಹತ್ತು ಕರ್ಮಗಳಿಂದ ಹುಟ್ಟುವುವು. ಈ ಕರ್ಮಗಳಿಗೆ ಪ್ರವೃತ್ತಿಯೆಂದು ಹೆಸರು (ಹಿಂದಶಾ. ೦೨೨). [ಸಂ.]

**ಪ್ರವೃತ್ತಿಮಾರ್ಗ** (ನಾ). [ವೇದಾಂತ] ಪರಲೋಕಸಾಧನೆಯ ಎರಡು ಮಾರ್ಗಗಳಲ್ಲಿ ಒಂದು; ᴘ ಸಾಧಕನು ಪ್ರಪಂಚವ್ಯವಹಾರವನ್ನು ಬಿಡದೆ ದೇವತಾರಾಧನೆ, ಜಪ ಇತ್ಯಾದಿ ಪುಣ್ಯಕರ್ಮಗಳನ್ನು ಮಾಡಿ, ಆ ಪುಣ್ಯದಿಂದ ಪರಲೋಕಸಾಧನೆಗೆ ಪ್ರಯತ್ನಿಸುವುದು: ಅದು ಪ್ರವೃತ್ತಿಮಾರ್ಗ ನಿವೃತ್ತಿಮಾರ್ಗವೆಂದೆರಡುಬಗೆಯಾಗಿಪ್ಪದು (ವಿವೇಕ. ೪೪); ನಿವೃತ್ತಿಮಾರ್ಗಕ್ಕಿಂತ, ಪ್ರವೃತ್ತಿಮಾರ್ಗವನ್ನು ಅನುಸರಿಸುವುದು ಅಗತ್ಯ (ಭಾಕಿದ. ೪೬೦); ದಾಸರದು ಮುಖ್ಯವಾಗಿ ನಿವೃತ್ತಿಮಾರ್ಗ, ಗೀತಾಂಜಲಿಯ ಕವಿಯದು ಪ್ರವೃತ್ತಿಮಾರ್ಗ (ಧರ್ಮಶಾ. ೪೪). [ಸಂ.]

**ಪ್ರವೃದ್ಧ** (ಗು). ೧. ಬೆಳೆದ; ವೃದ್ಧಿಯಾದ. ೨. ಹೆಚ್ಚಾದ; ಅಧಿಕವಾದ: ಪ್ರವೃದ್ಧಪಟಹಸ್ವನಂ ಮಧುರಗೀತಗಾನಂ ವಲಂ ಸುವೃದ್ಧಜನಮಂಗಳೋಕ್ತಿ ನೆಗಟ್ವಂತು (ಜಗಿಪು. ೦೬–೬೦). ೩. ಅಹಂಕಾರವನ್ನುಳ್ಳ; ಗರ್ವಿತವಾದ. (ನಾ). ೪. ಬೆಳೆದುದು; ವೃದ್ಧಿಯಾದುದು: "ಪ್ರವೃದ್ಧಂ, ಪ್ರೌಢಂ, ಏಧಿತಂ—೩ ಬೆಳೆದಂಥಾದ್ದು" (ಸಿದ್ಧಾಂತಿ. ೩೪೩). ೫. [ನಾಟ್ಯ] ನಿಃಶ್ವಾಸದ ಭೇದಗಳಲ್ಲಿ ಒಂದು; ᴘ "ಶಬ್ದವಾಗುವಂತೆ ಜೋರಾಗಿ ಬಾಯಿಂದ ಉಸಿರು ಬಿಡುವುದು. ವ್ಯಾಧಿ ಮೊದಲಾದವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಅಸ್ಮರಂ. ಗದ್ಯಾನುವಾದ. ೨೬೬): ಪಿರಿದುಂ ಸ್ವಸ್ಥಂ ಸಂಚಲಮುರುಪ್ರವೃದ್ಧ ನಿರಸ್ತಿಯುಮುಲ್ಲಾಸಿತಮುಂ ಸ್ಥಿರದ ವಿಮುಕ್ತಂ ವಿವೃತಂ ತರುಣೀ ಪ್ರಸೃತಮುಮಿವಿಂತು ಕೋಹಳನ ಮತಂ (ಅಸ್ಮರಂ. ೩–೬೬). [ಸಂ.]

**ಪ್ರವೃದ್ಧಿ** (ನಾ). ಬೆಳವಣಿಗೆ; ವೃದ್ಧಿ. [ಸಂ.]

**ಪ್ರವೇಕ** (ಗು). ೧. ಶ್ರೇಷ್ಠವಾದ; ಉತ್ಕೃಷ್ಟವಾದ. (ನಾ). ೨. ಒಳ್ಳೆಯದು; ಒಳ್ಳಿತು: "ಪ್ರಾಗ್ರ್ಯಂ, ಪ್ರಾಗ್ರಹರಂ, ಪ್ರವೇಕಂ . . . ಪೇಶಲಂ—ಈ ೨೯ ಒಳ್ಳಿತು" (ಹಲಾಯು. ೦೦೯–೪). ೩. ಶ್ರೇಷ್ಠನಾದವನು: ಧವಳಯಶಂ ತ್ರೈವಿದ್ಯಪ್ರವೇಕರವಮಳಿನಚರಿತ್ರರೆನೆ ಸಂದಂ ಭೂಭುವನಕ್ಕೆ ಚಂದ್ರಿಕಾವಾದಿವಂಶದೊಳ್ ನೆಗಟ್ದ ಧರ್ಮಸೇನಾಚಾರ್ಯರ್ (ಶಾಪುಂಶು. ೩); ನರ್ಮಸಚಿವಪ್ರಧಾನಪ್ರಕೃತಿಪುರುಷಪ್ರವೇಕಪರಿವೃತಂ ಪ್ರಜಾಪತಿಮಹರಾಜನಾಸ್ಥಾನಭೂಮಿಯೊಳಿಪ್ಪುದುಂ (ವರ್ಧಮಾ. ೩–೨೩ ವ); ಕಿವಿಗಳೊಳ್ ಪೀಯೂಷಮಂ ಪಿಂಡಲುರ್ವರೆಯೊಳ್ ಸಂದ ಕವಿಪ್ರವೇಕರೆ ವಲಂ ಬಲ್ಲರ್ ಪೆಜರ್ ಬಲ್ಲರೇ (ಲೀಲಾವ. ೦–೦೩). [ಸಂ.]

**ಪ್ರವೇಣಿ** (ನಾ). ೧. ಹೆಣೆದ ಕೂದಲು; ಜಡೆ: "ವೇಣೀ, ಪ್ರವೇಣೀ . . . ಹೆಣೆದ ಜಡೆಯ ಹೆಸರುಗಳು" (ಗುರುಬಾ. ೨೪೦). ೨. (ಗಂಡನು ಊರಿನಲ್ಲಿಲ್ಲದಾಗ ಸತಿಯರು ಹಾಕಿಕೊಳ್ಳುತ್ತಿದ್ದ) ತಲೆಗಂಟು; ಮುಂಡಿ. ೩. ಆನೆಯ ಮೇಲೆ ಹಾಕುವ ಗೌಸು: "ಆಸ್ತರಣಮಾ ಪ್ರವೇಣಿಯೆನೆ ಗವಸಣಿಗೆಯಕ್ಕು" (ಶಬ್ದಗಣ. ೬೦–೦೬). [ಸಂ. ಪ್ರವೇಣೀ]

**ಪ್ರವೇಶ** (ನಾ). ೧. ಒಳಕ್ಕೆ ಹೋಗುವುದು; ಒಳಹೊಗುವಿಕೆ: ಅಲ್ಲಿ ಸಾಮಾನ್ಯವಾಗಿ ಯಾರಿಗೂ ಪ್ರವೇಶವಿಲ್ಲ (ಜನಪ. ೦೬೬); ದ್ರಾವಿಡ ಭಾಷೆಗಳಲ್ಲಿ ಕರ್ಮಣಿಪ್ರಯೋಗವಿಲ್ಲದಿದ್ದರೂ ಅಲ್ಲಲ್ಲಿ ಇಂದಿಗೂ ಹೇಗೂ ಬಾಯಿಮಾತಿನಿಂದ ಬರವಣಿಗೆಯವರೆಗೂ ಪ್ರವೇಶ ಗಿಟ್ಟಿಸಿಕೊಂಡಿವೆ (ದ್ರಾಶಿಅ. ೩೦೦). ೨. ಪ್ರಾರಂಭ; ಮೊದಲು. ೩. ಶಾಸ್ತ್ರಗ್ರಂಥಗಳ ತಿಳಿವಳಿಕೆಗಾಗಿ ಬರೆದಿರುವ ಪರಿಚಯಭಾಗ. ೪. ಬಾಗಿಲು; ದ್ವಾರ. ೫. [ನಾಟ್ಯ] ಕಣ್ಣುಗುಡ್ಡೆಯ ಚಲನೆಯಲ್ಲಿ ಒಂದು ಬಗೆ; ᴘ "ಅಲಿಯನ್ನು ರೆಪ್ಪೆಯೊಳಕ್ಕೆ ಸೇರಿಸುವುದು" (ಅಸ್ಮರಂ. ಗದ್ಯಾನುವಾದ. ೨೬೪): ಭ್ರಮಣ, ವಲನ, ಪಾತ, ಚಲನ, ಪ್ರವೇಶ, ವಿವರ್ತ, ಸಮುದ್ವೃತ್ತ, ನಿಷ್ಕ್ರಾಮ, ಪ್ರಾಕೃತ—ಈ ಒಂಬತ್ತು [ಸ್ವನಿಷ್ಠ] ಆಲಿಯ ಭೇದಂಗಳ್ (ಅಸ್ಮರಂ. ೩–೫೪ ವ); ಗೆಳೆಗೊಂಡ ತಾರೆಯದು ತಾಂ ನಳಿನಾಕ್ಷೀ ಕೇಳ್ ಪ್ರವೇಶಮೆಂದೆನಿಸಿರ್ಕುಂ (ಅಸ್ಮರಂ. ೩–೫೬). ೬. [ಕಾವ್ಯಮೀ] ರಂಗದ ಮೇಲೆ ಬರುವುದು; ರಂಗಪ್ರವೇಶ. ೭. = ಪ್ರವೇಶಕ: 'ಪ್ರವೇಶ', 'ಪ್ರವೇಶಕ' ಎಂಬೆರಡೂ ಹೆಸರುಗಳು ಬಳಕೆಯಲ್ಲಿವೆ (ದಶರೂ. ೬೦). [ಸಂ.]

**ಪ್ರವೇಶಂಗೈ** (ಕ್ರಿ). ಒಳಕ್ಕೆ ಹೋಗು; ಪ್ರವೇಶಿಸು: ನೃಪಂ . . . ಮಡಿಯೆ ಕೇಳ್ದು ಚಿತ್ರಭಾನುಪ್ರವೇಶಂಗೈದಳಂದು ಶತಪತ್ರಲೋಚನೆ ಪತಿವ್ರತೆಯಾಗಿ (ಕೃಮಿಶಾ. ೨೯–೦೩). [ಪ್ರವೇಶ+ಗೈ (<ಕೆಯ್$_1$)]

**ಪ್ರವೇಶಕ** (ನಾ). [ಕಾವ್ಯಮೀ] ದೃಶ್ಯಕಾವ್ಯಗಳಲ್ಲಿ ಬರುವ ಐದು ಬಗೆಯ ಸೂಚನೆಯ ಸಾಧನೆಗಳಲ್ಲಿ ಒಂದು; ಐದು ವಿಧವಾದ ಅರ್ಥೋಪಕ್ಷೇಪಕಗಳಲ್ಲಿ ಒಂದು; ಹಿಂದೆ ನಡೆದ ಮತ್ತು ಮುಂದೆ ನಡೆಯಲಿರುವ ಕಥೆಯ ವಸ್ತುವನ್ನು ನೀಚಪಾತ್ರಗಳ ಮೂಲಕ ಸೂಚಿಸುವುದು; ᴘ ಇದಕ್ಕೆ ಮೊದಲನೆಯ ಅಂಕದಲ್ಲಿ ಅವಕಾಶವಿಲ್ಲ: ಉದಾತ್ತವಲ್ಲದ ಮಾತುಗಳು [ಮತ್ತು] ನೀಚಪಾತ್ರಗಳಿಂದ, ಎರಡು ಅಂಕಗಳ ನಡುವೆ, ಯೋಜಿತವಾಗುವ 'ಪ್ರವೇಶ[ಕ]'ವು ಅದರಂತೆಯೇ [ಎಂದರೆ, ವಿಷ್ಕಂಭದಂತೆಯೇ] ಉಳಿದ [ಹಿಂದುಮುಂದಿನ] ವಿಷಯಗಳನ್ನು

ಸೂಚಿಸುವುದು (ದಶರೂ. ೬೧); ಹಿಂದೆ ನಡೆದ ಮತ್ತು ಮುಂದೆ ನಡೆಯುವ ಕಥಾಂಶಗಳನ್ನು ಬರಿಯ ನೀಚಪಾತ್ರಗಳಿಂದಲೇ ಸೂಚಿಸುವುದು. ಇದು ಎರಡು ಅಂಕಗಳ ಮಧ್ಯದಲ್ಲಿಯೇ ಬರುತ್ತದೆ (ಎಂದರೆ, 'ವಿಷ್ಕಂಭ'ವು ನಾಟಕದ ಮೊದಲಲ್ಲಿಯೇ ಬರಬಹುದು ; ಪ್ರವೇಶಕವು ಹಾಗೆ ಬರುವುದಿಲ್ಲ. ಒಂದು ಅಂಕವು ಮುಗಿದು ಮತ್ತೊಂದು ಅಂಕವು ಆರಂಭವಾಗುವುದ ಕ್ಕಿಂತ ಮುಂಚೆ ಬರತಕ್ಕದ್ದು (ಕ್ಕಬಿಊ. ೩೦೬) ; ಪ್ರವೇಶಕ ನಡೆದು ಹೋದ ಕಥಾಂಶವನ್ನು ಬರಿಯ ನೀಚಪಾತ್ರಗಳಿಂದಲೇ ಸೂಚಿಸುವುದು (ಸಂನಾಟ. ೧೫). [ಸಂ.]

**ಪ್ರವೇಶದ್ವಾರ** (ನಾ). ಹೆಬ್ಬಾಗಿಲು; ಮಹಾದ್ವಾರ; ತಲೆಬಾಗಿಲು: ಪ್ರವೇಶದ್ವಾರದ ಹಿಂದಿದ್ದ ಕೋಣೆ ದೊಡ್ಡದಾಗಿದ್ದು ಕಮಾನುಚಾವಣಿ ಯಿಂದ ಕೂಡಿತ್ತು (ಕೃಸರು. ೧೮೩). [ಸಂ.]

**ಪ್ರವೇಶಪತ್ರ** (ನಾ). ಒಂದು ದೇಶವನ್ನು ಪ್ರವೇಶಿಸಲು ಕೊಡುವ ಅಪ್ಪಣೆಯ ಪತ್ರ; ರಹದಾರಿ: "ಪ್ರವೇಶಪತ್ರ" (Visa. ಶಬ್ದಾ. ೯೭). [ಸಂ.]

**ಪ್ರವೇಶಪರೀಕ್ಷೆ** (ನಾ). ೧. ಯಾವುದಾದರೂ ಉದ್ಯೋಗಕ್ಕೆ ಅಥವಾ ಉನ್ನತವಿದ್ಯಾಭ್ಯಾಸಕ್ಕೆ ಅರ್ಹತೆಯನ್ನು ಪರೀಕ್ಷಿಸಲು ನಡೆಸುವ ಪರೀಕ್ಷೆ: ವಿಶ್ವವಿದ್ಯಾನಿಲಯದ ಪ್ರವೇಶಪರೀಕ್ಷೆಯಲ್ಲಿ ಮೊದಲನೇ ತರಗತಿ ಯನ್ನು ದೊರಕಿಸಿದ ಶ್ರೇಯಸ್ಸು ನರೇಂದ್ರನದು (ಧರ್ಮನಾ. ೧೭). [ಸಂ. ಪ್ರವೇಶಪರೀಕ್ಷಾ]

**ಪ್ರವೇಶಿಸು** (ಕ್ರಿ). ೧. ಒಳಕ್ಕೆ ಹೋಗು ; ಒಳಸೇರು : ಹಿಡಿಯ ಪೋಪುದಱಿಂದ ಮುನ್ನವೆ ಮೃಡನ ಹೊಱಗೊಮ್ಮಾಟು ಸೀರೆಯ ಕಡೆ ಸೆಱಂಗಿರೆ ಲಿಂಗದೊಳಗಾತಂ ಪ್ರವೇಶಿಸಿದ (ಬಸಪು. ೩೭-೯೯); ಪರಮರ್ಷಿ ನಾರದಂ ತನಗೊರೆದು ಕೊಡೆ ತಾನುರಿಯೊಳ್ಪವೇಶಿಸಿದನೆನೆ (ಶೈಬಿಜಾ. ೩-೩೨). ೨. ರಂಗದ ಮೇಲೆ ಬರು; ರಂಗಪ್ರವೇಶ ಮಾಡು : ಕೃಷ್ಣನು ಬಾಲಕನಾಗಿ ಗೊಲ್ಲರ ಹುಡುಗರೊಂದಿಗೆ ಪ್ರವೇಶಿಸುವುದನ್ನು ನಾವು ಕಾಣುತ್ತೇವೆ (ಭಾರಜಾ. ೨೭). [ ಪ್ರವೇಶ + — ಇಸು₃ ]

**ಪ್ರವೇಷ್ಟ** (ನಾ). ೧. ತೋಳು ; ಬಾಹು ; ಭುಜ : "ದೋಃ, ಪ್ರವೇಷ್ಟಃ, ಭುಜಃ, ಬಾಹುಃ, ಭುಜಾ — ಈ ೫ ತೋಳ್" (ಹಲಾಯು. ೯೬-೭೬೮). ೨. ಕೈಯ ಹರಡು ; ಮಣಿಕಟ್ಟು. ೩. (ಮಾವುತನು ಕುಳಿತುಕೊಳ್ಳುವ) ಆನೆಯ ಬೆನ್ನಿನ ಮೇಲಿನ ಮಾಂಸಲವಾದ ಪ್ರದೇಶ. ೪. ಆನೆಯ ದಂತದ ಮೇಲ್ಭಾಗ. ೫. ಆನೆಗೆ ಹೊದಿಸುವ ಗೌಸಂ. [ಸಂ.]

**ಪ್ರವೇಷ್ಟನ** (ನಾ). ಮುಸುಂಕು; ಆಚ್ಛಾದನೆ: 'ಪ್ರವೇಷ್ಟಿಸು' ಪರಾ. [ಸಂ.]

**ಪ್ರವೇಷ್ಟಿಸು** (ಕ್ರಿ). ಆವರಿಸು ; ಮುಸುಂಕು : ಕುಸುಮದಿಂದ ಕಾಯಿ ಕಾಯಿಂದ ಹಣ್ಣು ಇಂತಿವೆಲ್ಲಕ್ಕೂ ಮೂಲ ಬುಡ ಒಂದೇ ಭೂಮಿ ಅಲ್ಲಿ ಗಿಡ ನಿಂದು ಪ್ರವೇಷ್ಟಿಸಿಕೊಂಡಿರ್ಪಂತೆ (ಮೋಳಿವಚ. ೨೪೭-೭೯೯); ಮತ್ತ ಹಂಕಾರವಮಂ ಬಳಸಿಕೊಂಡಿರ್ಪುದು ಮಹತ್ತಾಮಹತ್ತನವ್ಯಕ್ತಂ ಪ್ರವೇಷ್ಟಿಸಿ ರ್ದತ್ತು (ಶಬಿಪು-೦೩-೬). [ಪ್ರವೇಷ್ಟನ + — ಇಸು₃]

**ಪ್ರವ್ಯಕ್ತ** (ಗು). ೧. ಸ್ಫುಟವಾದ; ಸ್ಪಷ್ಟವಾದ. (ನಾ). ೨. ಪ್ರಕಟ ವಾದುದು ; ವೇದ್ಯವಾದುದು : "ಸ್ಪಷ್ಟಂ, ಸ್ಫುಟಂ, ಪ್ರವ್ಯಕ್ತಂ, ಉಲ್ಬಣಂ — ಪ್ರಕಟವಾದದ್ದು" (ಸಿದ್ಧಾಂತಿ. ೩೯೯); ಸೂಕ್ತಂ ಭವ್ಯಜನ ಪ್ರವ್ಯಕ್ತಂ ಜೈನಾಂಗವೋಕ್ತಮಿಂ ನಿನಗೆ ಮದೀಯೋಕ್ತಮಿದೆರ್ದೆಯೊಳ್ ನೆಲಸುಗೆ (ಆದಿಪು. ೫-೬೦). [ಸಂ.]

**ಪ್ರವ್ರಜನ** (ನಾ). ೧. ಸಂಚಾರ ; ಪ್ರವಾಸ ; ಪ್ರಯಾಣ: ಅವನು . . . ಮುಂಚಿತವಾಗಿ ಆ ರೀತಿ ಪ್ರವ್ರಜನ ಮಾಡಿ ಬಂದಿದ್ದು, ತಾನು ಪ್ರವ್ರಜನ ಮಾಡಿ ಬಂದ ತಾರೀಖಿನಿಂದ ಭಾರತರಾಜ್ಯ ಕ್ಷೇತ್ರದಲ್ಲಿ ಸಾಮಾನ್ಯವಾಗಿ ನಿವಾಸಿಸುತ್ತಿದ್ದ ಸಂದರ್ಭದಲ್ಲಿ . . . ಭಾರತದ ನಾಗರಿಕನೆಂಬುದಾಗಿ ಭಾವಿಸಲ್ಪಡತಕ್ಕದು (ಭಾಥಾಸ. ೯). ೨. ಸಂನ್ಯಾಸ ಸ್ವೀಕಾರ : 'ಪ್ರವ್ರಜಿಸು' ಪರಾ. [ಸಂ.]

**ಪ್ರವ್ರಜಿತ** (ಗು). ೧. (ದೇಶದಲ್ಲಿ) ತಿರುಗಾಡುವ; ಸಂಚರಿಸುವ. (ನಾ). ೨. ಮುನಿ; ಸಂನ್ಯಾಸಿ. ೩. ಬೌದ್ಧ ಅಥವಾ ಜೈನ ಭಿಕ್ಷು: "ಮುನಿಃ . . . ಪ್ರವ್ರಜಿತಃ, ಶ್ವೇತವಾಸಾಃ, ಸಂಯತಃ — ಈ ೯ ಸವಣರ ಪೆಸರ್" (ಹಲಾಯು. ೫೭-೦೯೦); ಕ್ಷಿತಿಯ ನಯವಿಕ್ರಮದಿಂ ಪ್ರತಿ ಪಾಳಿಸಿ ಪಡೆದು ಗೋತ್ರವಿಸ್ತಾರಕನಂ ಸುತನಂ ಬೞಿಕ್ಕಮೆವಿಸ್ಥಾ ಸ್ಥಿತಿಯಿಂ ಪ್ರವ್ರಜಿತಮಪ್ಪುದುಚಿತಂ ಮಗನೇ (ವರ್ಧಮಾ. ೨-೩೯); ಹೀನಮುಭಯ ಮನರ್ಥಕರಮನಾರ್ಯಂ ಗಡಾ! ಪ್ರವ್ರಜಿತರಿಗೆ ಸಲ್ಲವು (ಸೈಶಾಖ. ೯೪-೩೩೬). ೪. ಸಂನ್ಯಾಸ : ದ್ವಿಜಕುಲನೆನಿಸುವನೀ ಪ್ರವ್ರಜಿತದೊಳಿಸಗಿದೊಡೆ ದೋಷಮುಂಟು (ಸುಕುಮಾ. ೩-೩೦). [ಸಂ.]

**ಪ್ರವ್ರಜಿಸು** (ಕ್ರಿ). ಸಂನ್ಯಾಸವನ್ನು ಸ್ವೀಕರಿಸು : ಮೊದಲು ಒಂದು ಸಾಮಾಜಿಕಬಂಧಕ್ಕೆ ಒಳಗಾಗದೆ ವಿರಕ್ತಿಯನ್ನು ಹೊಂದಲು ಅಸಾಧ್ಯ ಎನ್ನುತ್ತಾನೆ ತಂದೆ; ಆದರೆ ಮಗ ಭ್ರಾಂತಿನಿರಸನವಾದ ಕ್ಷಣದಲ್ಲೇ ಪ್ರವ್ರಜಿಸಬೇಕು . . . ಎಂದೇ ವಾದಿಸುತ್ತಾನೆ (ತತ್ವಪ್ರಾ. ೯೭). [ಪ್ರವ್ರಜನ + — ಇಸು₃]

**ಪ್ರವ್ರಜ್ಯ** (ನಾ). (ದೇಶವಿದೇಶಗಳಲ್ಲಿ ಸಂಚರಿಸುವ) ಸಂನ್ಯಾಸದೀಕ್ಷೆ : ಮೊದಲೊಳ್ ದೇವರ ದಯೆಗೆಯ್ದುದಲ್ತೆ ಯುವರಾಜಪದವಿಯೆನಿಗೀಗಳು ಮಭ್ಯುದಯಕರಪ್ರವ್ರಜ್ಯದ ಪದವಿಯ ಯುವರಾಜಪದವಿಯಂ ದಯೆ ಗೆಯ್ಸಿಂ (ಆದಿಪು. ೦೯-೦೩೮); ಮಹಾಪ್ರಜಾಪತಿ ಗೌತಮಿಯು ಐನೂರು ಶಾಕ್ಯರನ್ನು ಜೊತೆಗೊಂಡು ಹೊರಟು ಪ್ರವ್ರಜ್ಯವನ್ನು ಬೇಡಿ, ಪ್ರವ್ರಜ್ಯವನ್ನೂ ಉಪಸಂಪದೆಯನ್ನೂ ಪಡೆದಳು (ಬುದ್ಧಕ. ೦೦). [ಸಂ. ಪ್ರವ್ರಜ್ಯಾ]

**ಪ್ರವ್ರಜ್ಯಪದವಿ** (ನಾ). ಸಂನ್ಯಾಸದೀಕ್ಷೆ : ಕೇಶವನುಮಾತ್ಮೀಯಗುರು ವಿಯೋಗದೊಳ್ ಪರಿತ್ಯಕ್ತಸಕಲರಾಜ್ಯಪರಿಚ್ಛೇದಂ ಪ್ರವ್ರಜ್ಯಪದವಿಯೊಳ್ ಪರಿತ್ಯಕ್ತನುಮಾಗಿ ತದಚ್ಯುತಕಲ್ಪದೊಳ್ ಪ್ರತೀಂದ್ರನಾದಂ (ಆದಿಪು. ೬-೦೨ ವ). [ಸಂ.]

**ಪ್ರವ್ರಜ್ಯೆ** (ನಾ). ಸಂನ್ಯಾಸದೀಕ್ಷೆ : "ಪರಿವ್ರಜ್ಯಾ, ವ್ರತಾದಾನಂ, ಪ್ರವ್ರಜ್ಯಾ, ಗತಿಃ — ಈ ೪ ತಪಂಬಡುಹ" (ಹಲಾಯು. ೦೨೮-೯೦). [ಸಂ. ಪ್ರವ್ರಜ್ಯಾ]

**ಪ್ರವ್ರಾಜ್ಯ** (ನಾ). = ಪ್ರವ್ರಜ್ಯ : ವರಸೇನಮುನಿಯಲ್ಲಿ ಪರಮ ಪ್ರವ್ರಾಜ್ಯವ ಎಱದಿಂದವೆ ತಾ ಧರಿಸಿ (ಜ್ಞಾನಚ. ೨೯-೬೩). [< ಸಂ. ಪ್ರವ್ರಾಜ್]

**ಪ್ರಶಂಸಕ** (ನಾ). ಹೊಗಳುವವನು. [ಸಂ.]

**ಪ್ರಶಂಸಾಪತ್ರ** (ನಾ).ಮೆಚ್ಚುಗೆಯ ಪತ್ರ: ರಾಯರು . . . ಪ್ರಶಂಸಾ ಪತ್ರಗಳನ್ನು ತೋರಿಸಿದರು (ರಾಯುಕ. ೯). [ಸಂ.]

**ಪ್ರಶಂಸಿಸು** (ಕ್ರಿ). ಹೊಗಳು; ಕೊಂಡಾಡು; ಸ್ತುತಿಸು : ಸರಕಾರವು ಸಹ ಅವರನ್ನು ಕೊಂಡಾಡಿ ಅವರ ಕಾರ್ಯನಿರ್ವಾಹಕಶಕ್ತಿಯನ್ನು ಪ್ರಶಂಸಿಸಿತು (ರಾಜಪ. ೩೭); ಅವನ ಸ್ವಾಮಿನಿಷ್ಠೆಯನ್ನು ಪ್ರಶಂಸಿಸುವನು (ಸಂಕಪ. ೩೭); ದಾಸರು ರಾಜಕೀಯವನ್ನು ಸಮಯೋಚಿತವಾಗಿ ಟೀಕಿಸುತ್ತಲೂ ಪ್ರಶಂಸಿ ಸುತ್ತಲೂ ಇದ್ದರು (ಐದುಕೈ. ೩). [ಪ್ರಶಂಸೆ + — ಇಸು₃]

**ಪ್ರಶಂಸೆ** (ನಾ). ೧. ಹೊಗಳಿಕೆ ; ಕೊಂಡಾಟ ; ಸ್ತುತಿ : " ಅರ್ಥ ವಾದಃ, ಪ್ರಶಂಸಾ . . . ವರ್ಣನಂ (ನಾ) — ಈ ೧೦ ಸ್ತುತಿಯ ನಾಮಂ " (ಹಲಾಯು. ೨೪೬-೦೯೯); ಸುಕುಮಾರನೆಂಬ ಪೆಸರೀ ಸುಕುಮಾರಂಗೀ ಸಮಸ್ತ

ಧಾರಿಣಿಯೊಳ್ ಸಾರ್ಥಕವಮಾದುದೆಂದು . . . ಪ್ರಶಂಸೆಗೆಯ್ದಂ (ಸುಕುಮಾ. ೧೧-೩೬); ತಮ್ಮ ಬಾಯಲ್ಲಿ ತಮ್ಮ ಪ್ರಶಂಸೆ ಹೇಳಿಕೊಳ್ಳಬಾರದು (ಪ್ರಬಂಧಯ. ೯-೩೪). ೨. ಕೀರ್ತಿ ; ಪ್ರಸಿದ್ಧಿ. [ಸಂ. ಪ್ರಶಂಸಾ]

**ಪ್ರಶಂಸೋಪಮೆ** (ನಾ). [ಕಾವ್ಯಮೀ] ಉಪಮಾಲಂಕಾರಗಳಲ್ಲಿ ಒಂದು : ಅಮೃತಭವಂ ಶಿಶಿರಕರಂ ಕಮಳಂ ಜಗದೇಕಪಾವನೀಯಶ್ರೀಕಂ ಸಮನವಜಿಗೊಳ್ ನಿನ್ನ ಮೊಗಂ ಕ್ರಮವೆಂಬುದನಱಿವುದಾ ಪ್ರಶಂಸೋಪಮೆಯಂ (ಕವಿರಾ. ೩-೩೪). [ಸಂ. ಪ್ರಶಂಸೋಪಮಾ]

**ಪ್ರಶಮ** (ನಾ). ೧. ಶಾಂತತೆ; ಸಮಾಧಾನ; ಪ್ರಶಾಂತಿ : ಶಾಂತಿದಾಂತಿಪ್ರಶಮದಯಯುತಕಾಂತನೇಕಾಂತಿಕಭಕ್ತನಿತಾಂತಂ (ಜಗತ್ತು. ೯೯-೩). ೨. ಉಪಶಮನ ; ತಣಿವು. ೩. [ಕಾವ್ಯಮೀ] ತಗ್ಗುವುದು ; ಇಳಿಯುವುದು : ವ್ಯಭಿಚಾರಿಭಾವಗಳಿಗೆ "ಉದಯ", "ಸ್ಥಿತಿ", "ಪ್ರಶಮ" ಎಂಬ ಮೂರು ಅವಸ್ಥೆಗಳುಂಟು (ಕೃಷ್ಣಾಲೋ. ೩೯); ಏಕೆಂದರೆ ವೀರವು ಅಭಿಮಾನಮಯವಾದುದೆಂದು ವ್ಯವಸ್ಥಿತವಾಗಿದೆ ; ಇದಾದರೋ ಅಹಂಕಾರದ ಪ್ರಶಮವೆಂಬ ಒಂದೇ ಸ್ವರೂಪವನ್ನುಳ್ಳುದು (ಕೃಷ್ಣಾಲೋ. ೨೦೬). [ಸಂ.]

**ಪ್ರಶಮನ** (ನಾ). ೧. = ಪ್ರಶಮ ೨ : ಆತಂಗೆ ತದುಕ್ತಿ ಶಶಿಖಿಶಿಖಾಕಳಾಪ ಪ್ರಶಮನದರ್ಶನದಿಂದೊಂದು ತಿಂಗಳಾಯುಷ್ಯಂ (ಅಂಪು. ೨-೯೩ ವ). ೨. ನಿವಾರಣೆ ; ಪರಿಹಾರ; ಉಪಶಮನ: ದುಸ್ಸ್ವಪ್ನಫಲಪ್ರಶಮನಾರ್ಥಂ ಚೈತ್ಯಾಲಯ ಪೂಜೆಗೆ ಕಾಂತವತಿಯುಂ ರತಿವೇಗೆಯುಂ . . . ಪರಿಜನಂ ಬೆರಸು ಬಂದು (ಕಾಪುಂಕ. ೬೬). ೩. (ತೊಂದರೆ ಮುಂತಾದಂವುಗಳನ್ನು) ನಿವಾರಣೆ ಮಾಡುವುದು ; ಪರಿಹರಿಸುವುದು. ೪. ನಾಶಮಾಡುವುದು ; ಅಡಗಿಸುವುದು. ೫. ಪಾತ್ರರಾದವರಿಗೆ ಮಾಡುವ ದಾನ. ೬. ರಕ್ಷಿಸುವುದು; ರಕ್ಷಣೆ ಮಾಡುವುದು. ೭. ರೋಗವನ್ನು ಹತೋಟಿಗೆ ತರುವುದು,–ಗುಣಪಡಿಸುವುದು. ೮. ಕೊಲೆ; ಸಂಹಾರ : "ಮಾರಣಂ . . . ಪ್ರಶಮನಂ . . . ಸಂಜ್ಞಪನಂ –ಈ ೨೧ ಕೊಲೆ" (ಪಠಾಯು. ೬೬-೩೩೪). [ಸಂ.]

**ಪ್ರಶಮಾವಸ್ಥೆ** (ನಾ). ಉಪಶಮನದ ಸ್ಥಿತಿ : ಪ್ರಣಯಕೋಪನಪ್ರಶಮಾವಸ್ಥೆ ಆಸ್ವಾದ್ಯವಾದ್ದರಿಂದ 'ಭಾವಪ್ರಶಮ' (ಕೃಷ್ಣಾಲೋ. ೩೯). [ಸಂ. ಪ್ರಶಮಾವಸ್ಥಾ]

**ಪ್ರಶಮಿತ** (ಗು). ೧. ಉಪಶಮನ ಹೊಂದಿದ ; ಆರಿದ ; ಶಾಂತವಾದ : ಪ್ರಚಂಡಕೋಪಪಾವಕಪ್ರಶಮಿತಶೋಕರಸನುಂ . . . ಆಗಿ (ಶಂಕಭಾ. ೧೧-೧೧೩ವ). ೨. ನಿಗ್ರಹಗೊಂಡ : ನವೋದಯದೊಳವಾ ಪ್ರಶಮಿತತಮನೊಳಾ ನೆಱೆದುದು ಶಿಶುತೆಯೊಳಂ ನಾಡೆ ರೂಢಿವೆತ್ತ ವಿವೇಕಂ (ಚಂದ್ರಪ್ರ. ೨-೧೯). (ನಾ). ೩. ಶಾಂತನಾದವನು : ಆಂಡಯ್ಯನ ಕಾಮದೇವನು . . . ಕೋಪಾವಿಷ್ಟನಾಗಿದ್ದರೂ ಪ್ರಶಮಿತನಾಗಿ ಗದಗದನೆ ನಡುಗುತ್ತ ವಂದನೆಯನ್ನರ್ಪಿಸುವನು (ಕಾಹಿಸ. ೦೪೦). [ಸಂ.]

**ಪ್ರಶಮಿಸು** (ಕ್ರಿ). ೧. ಉಪಶಮನವಾಗು : ಪ್ರಶಮಿಸುಗುಂ ಲಕ್ಷ್ಮೀಧರನ ಶಕ್ತಿಯಿಂದಾದ ಬಾಧೆ (ಶಂರಾಮಾ. ೦೪-೬೦). ೨. ಕ್ಷೋಭೆಯಿಲ್ಲದಿರಂ ; ಸ್ಥಿರವಾಗು : ವಿಶದ್ಧಯಶಧರ್ಮಮಪ್ಪಾದಶಕೋಟ್ಯನುಕೋಟಿ ಸಾಗರೋಪಮಕಾಲಂ ಪ್ರಶಮಿಸಿ ನಿಂದುದದಂ ನೀಂ ವಿಶದಂ ಮಾಳ್ಪುದು ಜಗದ್ವಿಶೇಷಚರಿತಾ (ಆಂಪು. ೯-೬೩). ೩. ನಾಶವಾಗು : ಬೆಸಸಿಮಿದನೆನ್ನ ಮನದೊಂದು ಸಂಶಯಂ ಪತ್ತುವಿಡುವಿನಂ ವ್ಯಾಮೋಹಂ ಪ್ರಶಮಿಸುವಿನ ಮೆಂಬುದುಮಂದೆಸೆದುದು ವಾಕ್ಯಸರವಮಾಗಳಾ ಯತಿಪತಿಯಾ (ಸುಕುಮಾ. ೩-೬); ಪ್ರಶಮಿಸಿದ ಮೋಹನೀಯಪ್ರಶಾಂತಿಯಿಂ ಸೂಕ್ಷ್ಮಸಾಂಪರಾಯ ಕ್ಷಪಕೋಪಶಮಕಸಂಯುತನಾದಂ ದಶಮಗುಣಸ್ಥಾನವರ್ತಿ ಮುನಿಮುಖತಿಲಕಂ (ಆಪಂಪು. ೯-೩೪). ೪. ನಿಗ್ರಹವಾಗು ; ಹತೋಟಿಗೆಬರು ; ನಿವಾರಣೆಯಗಾಗು : ಮೋದಕದಿಂ ಮಧು ಪೀಲಿಯ ಬೂದಿಕಣಾಚೂರ್ಣಮೆಂಬಿವಂ ತಿನೆ ರುಜೆಯಿಂದಾದಿರ್ಕುಟುಮೂರ್ಧ್ವಶ್ವಾಸೋದಯಮುಂ ಕಂಠರೋಗಮುಂ ಪ್ರಶಮಿಸುಗುಂ (ಲೋಕೋಪ. ೯-೩೨) ; ಬಿಸು(ಸಿ ನೀರೊಳ್ ಕುಡೆ ವಾತಂ ಪ್ರಶಮಿಸುಗುಂ (ಅಶ್ವಶಾ. ೬-೯೭). [ಪ್ರಶಮನ + –ಇಸು]

**ಪ್ರಶಮೆ** (ನಾ). = ಪ್ರಶಮ ೧ : ನಿಮಗಭ್ಯುದಯಮೆ ತಾಮೆಮಗೆ ನಿತ್ಯಕರ್ಮಾನುಷ್ಠಾನದ ಪ್ರಶಮೆಯಪ್ಪುದೆಂದಶಿಮುದದಿಂದಭ್ಯುದಯವಾಗೆ ಪರಸಲ್ಪಂದೆಂ (ಅಪಂಪು. ೦೩-೩೨). [ಸಂ. ಪ್ರಶಮ]

**ಪ್ರಶಸ್ತ** (ಗು). ೧. ಹೊಗಳಿದ ; ಕೊಂಡಾಡಿದ. ೨. ಉತ್ತಮವಾದ ; ಶ್ರೇಷ್ಠವಾದ : ಆತ್ಮೀಯಗೃಹಾಭ್ಯಂತರಪ್ರಶಸ್ತಪ್ರದೇಶಂಗಳೊಳಂ ಪ್ರಶಸ್ತಮೃತ್ತಿಕಾವಿರಚಿತೋನ್ನತವೇದೀತಲಾ ಷ್ಟ ಮ ಹಾ ಪ್ರಾ ತಿ ಹಾ ರ್ಯ ಸಮನ್ವಿತಜಗತ್ಪೂಜ್ಯಪೂಜಿಕಾರ್ಹತ್ಪ್ರತಿಮೆಗಳ ನಿಱಿಸಿ (ಆಂಪು. ೦೩-೦೬ ವ). ೩. (ಗ್ರಹ, ತಾರೆಗಳಂತೆ) ಮಂಗಳಕರವಾದ ; ಶುಭಕರವಾದ : ಪ್ರಶಸ್ತಲಗ್ನದೊಳಾತ್ಮೀಯಸ್ವಾಮಿಯಪ್ಪ ಶಿಬಿಳಮಹಾರಾಜನನು ಚಿ ತ ಪ್ರ ತಿ ಪತ್ತಿಗಳಿಂ ಕಂಡು (ಸುಕುಮಾ. ೨-೬೩ ವ). (ನಾ). ೪. ಉತ್ತಮವಾದುದು; ಶ್ರೇಷ್ಠವಾದುದು: "ಪ್ರಶಸ್ತಂ, ಸಂಸ್ಕೃತಂ – ಈ ೨ ಲೇಸು ಮಾಳ್ಪುದು" (ಪಠಾಯು. ೦೨೯-೯೬); ಆಹಾ ! ತುಂಬಾ ಪ್ರಶಸ್ತವಾಗಿ (ರಾಜಮು. ೫೦). ೫. ಚೆಲುವಾದುದು ; ಸುಂದರವಾದುದು: "ಕಮನೀಯಮಭಿರಾಮಂ. . . ಪ್ರಶಸ್ತಂ ವರಂ ರಮಣೀಯಂ" (ಶಂಗಣಾ. ೦೨೬-೨). ೬. ಮಂಗಳವನ್ನು ನುಡಿಯುವವನು ; ಶಂಭ ನುಡಿಯುವವನು : "ಪ್ರಶುತಂ ಪ್ರಶಸ್ತನೆನೆ ಗೆಲೆ ನುಡಿವವಂ" (ಶಂಗಣಾ. ೬೦-೦೬). ೭. [ಸಂಗೀತ] ನೂರೆಂಟು ತಾಳಗಳಲ್ಲಿ ಒಂದು: ಧ್ರುವ . . .ಪ್ರಶಸ್ತ . . . ಜಯಾಳಮೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೪). [ಸಂ.]

**ಪ್ರಶಸ್ತಕಾಲ** (ನಾ). ಶುಭಸಮಯಂ ; ಒಳ್ಳೆಯ ಕಾಲ : ಅವರ ಮದುವೆ ಪ್ರಶಸ್ತಕಾಲದಲ್ಲಿ ನೆರವೇರಿತು (ಲಬ). [ಸಂ.]

**ಪ್ರಶಸ್ತಮುಹೂರ್ತ** (ನಾ). = ಪ್ರಶಸ್ತಕಾಲ : ವಧೂವರರಿರ್ವರುಮಂ ಮೌಹೂರ್ತಿಕಗಣನಿರೂಪಿತಪ್ರಶಸ್ತಮುಹೂರ್ತದೊಳ್ . . . ಮುಂದಿಟ್ಟು ತಂದು (ಆಂಪು. ೯-೯೭ ವ). [ಸಂ.]

**ಪ್ರಶಸ್ತಿ** (ನಾ). ೧. ಹೊಗಳಿಕೆ ; ಪ್ರಶಂಸೆ : ದರ್ಪಕನ ವರ್ಣನೆ ದರ್ಪಕನ ಪ್ರಶಸ್ತಿ (ಗಿಂಕ. ೯-೦೨೦) ; ಕನ್ನಡಸಾಹಿತ್ಯದಲ್ಲಿ ಕಬ್ಬಿಗರ ಕಾವಕ್ಕೆ ಅಷ್ಟೊಂದು ಪ್ರಶಸ್ತಿ ! (ಸಾಹಿಸ. ೦೦೬). ೨. ಹೊಗಳಿಕೆಯನ್ನೊಳಗೊಂಡ ಶಾಸನ : ಕಾಕಿಣಿರತ್ನದಿಂದಲ್ಲಿ ಮುನ್ನದ್ದುದೊಂದು ಪ್ರಶಸ್ತಿಯಂ ಪರಾಮೃಷ್ಟಂ ಮಾಡಿ (ಶಾಂತಿಪು. ೦೦-೬೩ ವ). ೩. ಗೌರವಸೂಚಕವಾದ ಪದವಿ ; ಬಿರುದು : ಸಮನೆನಿಸುವ[ರ್] ಪ್ರಶಸ್ತಿಕ್ರಮದೊಳ್ ಸ್ವಸ್ತಿಸಮಧಿಗತ ಪಂಚ[ಮಹಾ]ಮಹಾಸಾಮಂತರೆನಲ್ ಸಮನೆನಿಪರೆ ಗುಣದೊಳರಿಗನೊಳ್ ಸಾಮಂತರ್ (ಪಂಪಭಾ. ೦-೯೯); ಅಯ್ಯನ ಗಂಧವಾರಣಂ ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಕಇಅ. ೦-೦-೪; 1092). ೪. ಉತ್ಕೃಷ್ಟತೆ ; ಶ್ರೇಷ್ಠತೆ. ೫. ಪ್ರಚಾರ ; ಪ್ರಸಾರ ; ಹರಡುವಿಕೆ. ೬. ಮಾರ್ಗದರ್ಶನ ; ನಿರ್ದೇಶನ. ೭. ಕಲ್ಯಾಣ ; ಶ್ರೇಯಸ್ಸು. [ಸಂ.]

**ಪ್ರಶಸ್ತಿಪತ್ರ** (ನಾ). ಪ್ರಶಂಸೆಯನ್ನು ಸೂಚಿಸುವ ಪತ್ರ; ಯೋಗ್ಯತಾ ಪತ್ರ : "ಪ್ರಮಾಣಪತ್ರ, ಯೋಗ್ಯತಾಪತ್ರ, ಪ್ರಶಸ್ತಿಪತ್ರ" (Certificate. ಶಶ್ರಿಶಿ. ೦೪). [ಸಂ.]

**ಪ್ರಶಸ್ತಿಲೇಖನ** (ನಾ). ಹೊಗಳಿಕೆಯ ಬರಹದ ಶಾಸನ : ಪ್ರೇಂಖೋಲಿತಮನಸಿಜವಿಜಯಪ್ರಶಸ್ತಿಲೇಖನೋಚಿತಚ್ಛದ ಶ್ರೀತಾಳಿಕಮುಮಪ್ಪ ವೇಲಾವನದೊಳಾವಾಸಿತವಿಜಯಕಟಕನಾಗಿ (ಆಂಪು. ೦೩-೩ ವ). [ಸಂ.]

**ಪ್ರಶಾಂತ** (ಗು). ೧. ಸದ್ದು ಗದ್ದಲವಿಲ್ಲದ ; ನಿಃಶಬ್ದವಾದ : ಆ ಪ್ರಭಾಮಯವಾದ ಪ್ರಶಾಂತನಿಶಿಯಲ್ಲಿ . . . ಗಾನಮಾಧುರ್ಯದಲ್ಲಿ ಮಗ್ನನಾದ ಖಾನನು ಎಲ್ಲವನ್ನೂ ಮರೆತಿದ್ದಾನೆ (ರಾಲಿಕ್. ೫೩). ೨. ತಾಳ್ಮೆಯಿಂದ ಕೂಡಿದ ; ಶಾಂತವಾಗಿರುವ. (ನಾ). ೩. ಶಾಂತತೆ : ಪ್ರಸನ್ನಗಂಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತದಿಂ (ಶಬಾ. ೨-೯೯). ೪. ಶಾಂತನಾಗಿರುವವನು ; ಸಮಾಧಾನಿ : ತಂದೆ ಅಪ್ಪರ ಮಟ್ಟಿಗೆ ಪ್ರಶಾಂತರಾದುದನ್ನು ಕಂಡು ರಾಮಯ್ಯನಿಗೆ ಆಶ್ಚರ್ಯವಾಯಿತು (ಕಾನೂರು. ೩೭೪). [ಸಂ.]

**ಪ್ರಶಾಂತಿ** (ನಾ). ೧. ಸದ್ದುಗದ್ದಲವಿಲ್ಲದುದು ; ಪ್ರಶಾಂತ ವಾದುದು. ೨. ಶಾಂತತೆ ; ಸಮಾಧಾನ : ಭೂಪಾಟೋಪಂ ಬರ್ಕುಮೆ ವೃಜಿನವಿಲೋಪಿ ಜಿನೇಂದ್ರಪ್ರಶಾಂತಿಯೊರೆಗಂ ದೊರೆಗಂ (ಶಾಂತಿಪು. ೧೧-೯೪). ೩. [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು ; ಶ ವಂಶೋದ್ಧಾರಕನಾದ ಮಗನನ್ನು ಪಡೆದು, ಅವನು ಸಮರ್ಥನಾದ ಮೇಲೆ ಸಂಸಾರವನ್ನು ಅವನಿಗೆ ವಹಿಸಿ ತಾನು ಸಂಸಾರದಿಂದ ನಿವೃತ್ತನಾಗುವುದು ; ವೈರಾಗ್ಯ ವೃತ್ತಿ: ಪ್ರಶಾಂತಿಯುಂ ಸ್ವಗೃಹತ್ಯಾಗಮುಂ . . . ಅಪ್ಪುಯ್ಯತ್ತು ಮೂರು ಗರ್ಭಾನ್ವಯಕ್ರಿಯೆಯೊಳ್ (ಚಾವುಂಪು. ೨೦೨). 'ದೀಕ್ಷೆ' ಪರಾ. [ಸಂ.]

**ಪ್ರಶಾಸನ** (ನಾ). ಆಳುವುದು ; ಆಡಳಿತ : ಸಂಘಕಾರ್ಯಗಳ ಪ್ರಶಾಸನಸಂಬಂಧವಾಗಿ . . . ರಾಷ್ಟ್ರಪತಿಯವರು ತಮಗೆ ಒದಗಿಸ ಬೇಕೆಂದು ಕೋರುವಂಥ ಸಂಗತಿಗಳನ್ನು ಅವರಿಗೆ ಒದಗಿಸುವುದೂ . . . ಪ್ರಧಾನಮಂತ್ರಿಯವರ ಕರ್ತವ್ಯವಾಗಿರತಕ್ಕುದು (ಭಾರಾಸ. ೩೯). [ಸಂ.]

**ಪ್ರಶಿಕ್ಷಣ** (ನಾ). ೧. ಉಚ್ಚ ಶಿಕ್ಷಣ. ೨. ಬೇರೆ ಬೇರೆ ವೃತ್ತಿಗಳಿಗಾಗಿ ನೀಡುವ ತರಬೇತಿ ; ವೃತ್ತಿಶಿಕ್ಷಣ : ಕೆಲವು ಸ್ಥಳಗಳಲ್ಲಿ ಪ್ರಶಿಕ್ಷಣ ಹಾಗೂ ಸಂಶೋಧನಕೇಂದ್ರಗಳನ್ನು ತೆರೆಯಲಾಗಿದೆ (ಕವಿಕೋ. I.೩೪). [ಸಂ.]

**ಪ್ರಶಿಷ್ಯ** (ನಾ). ಶಿಷ್ಯನ ಶಿಷ್ಯ : ವಿದ್ಯಾರ್ಥಿಯ ವಿದ್ಯಾರ್ಥಿ : ಪ್ರತಿ ಯೊಬ್ಬ ದೊಡ್ಡ ಅಧ್ಯಾಪಕನಿಗೂ ಈ ಪಂಗಡದ ಶಿಷ್ಯ ಪ್ರಶಿಷ್ಯರ ಸಂಖ್ಯೆಯೇ ಅಧಿಕ (ಕಬಸಾ. IV ೩೮೯); ಅಭಿನವಗುಪ್ತನು (೯೩೦ ಕ್ರಿ. ಶ.) ಉತ್ಪಲಾ ಚಾರ್ಯನ ಪ್ರಶಿಷ್ಯನು (ಕಸ್ತ್ರಾ. ೪೦೯). [ಸಂ.]

**ಪ್ರಶ್ನ** (ನಾ). ಕೇಳುವಿಕೆ ; ಪ್ರಶ್ನೆ : "ಪ್ರಶ್ನಃ, ಅನುಯೋಗಃ—ಈ ಬೆಸಗೊಳುಹ" (ಹಲಾಯು. ೨೫-೦೫೩). [ಸಂ.]

**ಪ್ರಶ್ನಕಾರ** (ನಾ). ಪ್ರಶ್ನೆಯನ್ನು ಕೇಳುವವನು : "ಪ್ರಶ್ನೆ ಕೇಳುವವನು ; ಪ್ರಶ್ನಕಾರ" (Querist. ಇಂಕನಿ). [ಸಂ.]

**ಪ್ರಶ್ನಚಿಹ್ನೆ** (ನಾ). ಪ್ರಶ್ನೆಯನ್ನು ಸೂಚಿಸಲು ಹಾಕುವ ಗುರುತು : ಪ್ರಶ್ನಾರ್ಥಕವಾಕ್ಯದ ಕೊನೆಯಲ್ಲಿ ಪ್ರಶ್ನಚಿಹ್ನೆಯನ್ನು ಹಾಕಬೇಕು (ರೂಢಿ). [ಸಂ. ಪ್ರಶ್ನಚಿಹ್ನ]

**ಪ್ರಶ್ನಲಗ್ನ** (ನಾ). [ಜ್ಯೋತಿ] ಜೋಯಿಸರಿಗೆ ಪ್ರಶ್ನೆಯನ್ನು ಹಾಕುವ ಕಾಲ.—ಲಗ್ನ: ರವಿಜಂ ಮೇಣ್ ಬುಧನಕ್ಕೆ ಕೇಂದ್ರಗ್ರಹದೊಳ್ ನಿಂದಂದು ಮೇಣ್ ಪ್ರಶ್ನಲಗ್ನವನಾಳೋಕಿಸೆ (ಜಾತಿಕ. ೩-೦). [ಸಂ].

**ಪ್ರಶ್ನವ್ಯಾಕರಣ** (ನಾ). = ಪ್ರಶ್ನವ್ಯಾಕರಣಾಂಗ : ಆಚಾರಮುಂ . . . ಅನುತ್ತರೋಪಪಾದಿಕದಶಮುಂ ಪ್ರಶ್ನವ್ಯಾಕರಣಮುಂ . . . ಎಂದು ಅಂಗಪ್ರವಿಷ್ಟಭೇದದಿಂ ದ್ವಾದಶವಿಕಲ್ಪಮುಂ ಅಕ್ಕುಂ (ತತ್ತ್ವಸೂ. ೫೬) ; ಆಚಾರ, ಸೂತ್ರಕೃತ, ಸ್ಥಾನ, ಸಮವಾಯ, ವ್ಯಾಖ್ಯಾಪ್ರಜ್ಞಪ್ತಿ . . . ಪ್ರಶ್ನವ್ಯಾಕರಣ, ವಿಪಾಕಸೂತ್ರ, ದೃಷ್ಟವಾದ ಎಂಬುವು ಹನ್ನೆರಡು ಅಂಗ ಗಳು (ಶಾಕತ್ತ. ೨೨೬) ; ಅಂಗಶ್ರುತಜ್ಞಾನವು ಆಚಾರ . . . ಪ್ರಶ್ನ ವ್ಯಾಕರಣ, ವಿಪಾಕಸೂತ್ರ, ದೃಷ್ಟಿವಾದ ಎಂದು ಹನ್ನೆರಡು ಬಗೆಯಾಗಿದೆ (ಕೈಸರ. ೦೦೪). [ಸಂ.]

**ಪ್ರಶ್ನವ್ಯಾಕರಣಾಂಗ** (ನಾ). [ಜೈನ] ಅಂಗಶ್ರುತಜ್ಞಾನದ ಹನ್ನೆರಡು ಬಗೆಗಳಲ್ಲಿ ಒಂದು ; ಆಕ್ಷೇಪಣೀಯು, ವಿಕ್ಷೇಪಣೀಯು, ಸಂವೇದ ನೀಯು, ನಿರ್ವೇದನೀಯುವೆಂಬ ನಾಲ್ಕು ಬಗೆಯ ಧರ್ಮಕಥೆಗಳ ವರ್ಣನೆ ; ಅನೇಕ ಪ್ರಶ್ನೆಗಳಿಗೆ ಉತ್ತರ ಹೇಳುವ ರೀತಿ ; "ಶ್ರುತಾಂಗಗಳಲ್ಲಿ ಒಂದು—ಪ್ರಾಣಿಗಳ ಸುಖದುಃಖಗಳ ಸಂಬಂಧ ವಾದ ಪ್ರಶ್ನೆಗಳಿಗೆ ಉತ್ತರ ಕೊಡುವ ರೀತಿ. ಇದು ತೊಂಬತ್ತು ಮೂರು ಲಕ್ಷದ ಹದಿನಾರುಸಾವಿರಪದಗಳುಳ್ಳ ಶಾಸ್ತ್ರ" (ಕೈಸಕೋ. ೦೬೯) ; ಪ್ರಶ್ನವ್ಯಾಕರಣಾಂಗ (ಪ್ರಶ್ನ ಮಾಡುವುದು, ವ್ಯಾಕರಣವಿವರ ವುಳ್ಳುದು) (ಕೈಸಹ. ೪೯೯) ; ಆಚಾರಾಂಗ, ಸೂತ್ರಕೃತ್ತಾಂಗ, ಸ್ಥಾನಾಂಗ, ಸಮವಾಯಾಂಗ, ವ್ಯಾಖ್ಯಾಪ್ರಜ್ಞಪ್ತ್ಯಂಗ, ಜ್ಞಾತೃಕಥಾಂಗ, ಉಪಾಸಕಾಧ್ಯ ಯನಾಂಗ, ಅಂತಕೃದ್ದಶಾಂಗ, ಔಪಪಾದಕದಶಾಂಗ, ಪ್ರಶ್ನವ್ಯಾಕರಣಾಂಗ, ವಿಪಾಕಸೂತ್ರಾಂಗ, ದೃಷ್ಟಿವಾದಾಂಗಗಳೆಂಬ ಹನ್ನೆರಡು ಅಂಗಗಳಿವೆ (ಕಾರದ. ೦೬೪). 'ದ್ವಾದಶಾಂಗ' ಪರಾ. [ಸಂ.]

**ಪ್ರಶ್ನಾರ್ಥಕ** (ಗು). ಪ್ರಶ್ನೆಯಿಂದ ಕೂಡಿದ ; ಪ್ರಶ್ನೆಯ ಅರ್ಥವುಳ್ಳ: ಅವಳು ಪ್ರಶ್ನಾರ್ಥಕ ದೃಷ್ಟಿಯಿಂದ ಮಾಸ್ತರರ ಕಡೆಗೆ ನೋಡತೊಡಗಿದಳು (ರಂಗರೋ. ೦೦೩) ; ಈ ಕೆಳಗಿನ ವಾಕ್ಯಗಳಲ್ಲಿ ಪ್ರಶ್ನಾರ್ಥಕ ವಾಕ್ಯ ಯಾವುದು ? (ರೂಢಿ). [ಸಂ.]

**ಪ್ರಶ್ನಾರ್ಥಕಸರ್ವನಾಮ** (ನಾ). [ವ್ಯಾಕ] ಪ್ರಶ್ನೆಯನ್ನು ಕೇಳುವಾಗ ಉಪಯೋಗಿಸುವ ಸರ್ವನಾಮಗಳಲ್ಲಿ ಒಂದು : ಯಾರು, ಯಾವುದು, ಏನು ಮುಂತಾದ ಸರ್ವನಾಮಗಳು ಪ್ರಶ್ನೆಗೆ ವಿಷಯವಾಗಿರುವ ಪದಾರ್ಥ ಗಳನ್ನು ಸೂಚಿಸುತ್ತವೆ. ಇವು ಪ್ರಶ್ನಾರ್ಥಕಸರ್ವನಾಮಗಳು (ಮಧ್ಯಪು. ೩೦). [ಸಂ. ಪ್ರಶ್ನಾರ್ಥಕಸರ್ವನಾಮನ್]

**ಪ್ರಶ್ನಾವಳಿ** (ನಾ). ಪ್ರಶ್ನೆಗಳ ಪಟ್ಟಿ,—ಯಾದಿ: "(ನಿರ್ದಿಷ್ಟರೂಪಕ್ಕಿಳಿ ಸಿದ) ಪ್ರಶ್ನಾವಳಿ" (Questionary. ಇಂಕನಿ). [ಸಂ. ಪ್ರಶ್ನಾವಲಿ]

**ಪ್ರಶ್ನಿಸು** (ಕ್ರಿ). ೧. ಕೇಳು ; ಪ್ರಶ್ನೆ ಹಾಕು : ನಾನು ಪುನಃ ಪ್ರಶ್ನಿಸುವುದರಲ್ಲಿ ಸುಬ್ಬಾವಧಾನಿಗಳು ಮನೆಯೊಳಕ್ಕೆ ಹೊರಟರು (ಕಂಗಾಳ್ಳ. ೦೫೩) ; ಪ್ರಶ್ನಿಸಿದ ದಿವಿಜೇಂದ್ರಸೂನುವಿಗೆ ತರುಣಿಯೆಂದಳ್ ನಗುತೆ (ಚಿತ್ರಾಂಗ. ೪೭-೦೨೯). ೨. ವಿರೋಧಿಸು ; ಪ್ರತಿಭಟಿಸು : ಕೇಂದ್ರದ ತೀರ್ಮಾನವನ್ನು ಪ್ರಾಂತಸರ್ಕಾರವು ಪ್ರಶ್ನಿಸಿತು (ರೂಢಿ). [ಪ್ರಶ್ನ + — ಇಸು₃]

**ಪ್ರಶ್ನೆ** (ನಾ). ೧. ಕೇಳುವುದು ; ಪೃಚ್ಛೆ : ಬೋಧಾಯನಸ್ಮೃತಿ—ಇದು ಸೂತ್ರರೂಪದಲ್ಲಿದೆ. ನಾಲ್ಕು ಪ್ರಶ್ನೆಗಳು, ೪೦೭ ಅಧ್ಯಾಯಗಳಿವೆ (ಕಾರದ. ೬೬) ; ನಮ್ಮ ಪ್ರಶ್ನೆಗಳೇ ಯಾರಿಗೂ ಅರ್ಥವಾಗಲಿಲ್ಲ (ಕಸುಹೂ. ೨೬೮). ೨. ಸಂಶಯ ; ಸಂದೇಹ : ಆ ಮಾತುಗಳು ಯಾವ ಭಾಷೆಯ ಮಾತುಗಳು ಎಂಬುದೇ ಮುಖ್ಯ ಪ್ರಶ್ನೆ (ದ್ರಾಬಿ. ೭೬).

**ಪ್ರಶ್ನೆ ಮಾಡು** = ಕೇಳು ; ಪ್ರಶ್ನಿಸು : ನಚಿಕೇತ ಮೌನವಾಗಿ ಕುಳಿತು ಏನೋ ವಿಚಾರಿಸಿ, ಬಳಿಕ ಪ್ರಶ್ನೆ ಮಾಡಿದ (ಕಠಂಬಾ. ೦೫೨). **ಪ್ರಶ್ನೆ ಹಾಕು** = ಪ್ರಶ್ನೆ ಮಾಡು : ಉಪಾಧ್ಯಾಯರು ವಿದ್ಯಾರ್ಥಿಗಳಿಗೆ ಪ್ರಶ್ನೆ ಹಾಕಿದರು (ರೂಢಿ). [ಸಂ. ಪ್ರಶ್ನ]

**ಪ್ರಶ್ನೆಕೇಳು** 'ಪ್ರಶ್ನೆಗೇಳು' ನೋ.

**ಪ್ರಶ್ನೆಗೇಳು, ಪ್ರಶ್ನೆಕೇಳು** (ಕ್ರಿ). ೧. ಪ್ರಶ್ನಿಸು ; ಕೇಳು. ೨. (ಭವಿಷ್ಯ ವನ್ನು ತಿಳಿಯಲು) ಜ್ಯೋತಿಷಿಯ ಬಳಿ ಶಕುನವನ್ನು ಕೇಳು : ನಾಟಕ ವಲ್ಲದೆ [ವೆ] ನರರಂತೆ ನಕ್ಷತ್ರಪಾಠರ ಪ್ರಶ್ನೆಗೇಳುವುದು ಕೀಟಕರೇನ ಬಲ್ಲರು ಕೃಷ್ಣ ನಿನಗೆ ಚುನ್ನಾಟ ಬೇಡ (ಮೋಹತ. ೦೩-೬೦). **ಪ್ರಶ್ನೆ ಕೇಳು**:

೧. ಪ್ರಶ್ನೆಕೇಳುವುದಕ್ಕಾಗಿ ಎದ್ದು ನಿಂತಳು (ಹಸುಹೊ. ೩೩೬).
[ಪ್ರಶ್ನೆ + ಕೇಳು (< ಕೇಳ್)]

**ಪ್ರಶ್ನೋಪನಿಷತ್ತು** (ನಾ). (ಆರು ಪ್ರಶ್ನೆಗಳು ಮತ್ತು ಆರು ಉತ್ತರಗಳನ್ನು ಒಳಗೊಂಡ) ಒಂದು ಉಪನಿಷತ್ತಿನ ಹೆಸರು : ಪ್ರಶ್ನೋಪನಿಷತ್ತು, ಅಥರ್ವವೇದದ ಪೈಪ್ಪಲಾದಶಾಖೆಗೆ ಸೇರಿದೆ. ಇದರಲ್ಲಿ ಸುಕೇಶಾ, ಸತ್ಯಕಾಮ, ಸೌರ್ಯಾಯಣಿ, ಅಶ್ವಲಾಯನ, ಭಾರ್ಗವ, ಕಬಂಧಿ — ಈ ಆರು ಮಂದಿ ಕೇಳಿದ ಆರು ಪ್ರಶ್ನೆಗಳಿಗೆ ಪೈಪ್ಪಲಾದರು ಉತ್ತರ ಕೊಟ್ಟಿದ್ದಾರೆ. ಇದರಲ್ಲಿ ಪ್ರಾಣವಿದ್ಯೆ, ತನ್ಮಾತ್ರಗಳು, ಮಹಾಭೂತಗಳು, ದಶೇಂದ್ರಿಯಗಳು — ಮೊದಲಾದ ವಿಚಾರಗಳಿವೆ. ಸಾಂಖ್ಯದರ್ಶನದ ಮೂಲಸಿದ್ಧಾಂತಗಳು ಇದರಲ್ಲಿವೆ (ಕಾರತ ೩೬.).[<ಸಂ. ಪ್ರಶ್ನೋಪನಿಷದ್]

**ಪ್ರಶ್ರಯ** (ನಾ). ವಿಧೇಯತೆ ; ನಮ್ರತೆ ; ವಿನಯ : ಉಡುಗಿ ಪಿಂಛಚ್ಛತ್ರಮಂ ಪ್ರಶ್ರಯಾಕಾರವೇಪೋಚಿತರಘ್ಯಹಸ್ತರಿದಿರಂ ಬಂದರ್ ಭಯಭ್ರಾಂತಿಯಿಂ (ಆದಿಪು. ೦೩-೬೮) ; ತನ್ನನೀಂದ್ರಪಾದಪಾರ್ಶ್ವದೊಳ್ ಮುಕುಳಿತಕರಸರೋಜನುಂ ಪ್ರಶ್ರಯಾವನತಶಿರಸ್ಸರೋಜನುಮಾಗಿ ಕುಳ್ಳಿರ್ದು (ಶಂಪ್ರಪು. ೩-೭೦ ವ). [ಸಂ.]

**ಪ್ರಶ್ರಿತ** (ನಾ). ೧. ವಿನಯ ; ನಮ್ರತೆ : ಸಂಜೆಪೂಜೆಯಾರತಿ ಗೆಲವಾಗಿ ನಡೆದಿರೆ ನಾ ಪ್ರಶ್ರಿತವನು ಮರೆತು. . .ಬೆನಕನ ಬಣ್ಣನೆಯೊಳು ಬೇಡಲು (ಗಜೇಶ. ೦೯-೩೩೩). ೨. ವಿನೀತನಾದವನು ; ನಮ್ರನಾದವನು : "ನಿಭೃತಃ, ವಿನೀತಃ, ಪ್ರಶ್ರಿತಃ — ೩ ಶಿಕ್ಷಿಸಲ್ಪಟ್ಟವನ ಹೆಸರು" (ನಿಘಂಟು. ೩೨೯). [ಸಂ.]

**ಪ್ರಶ್ವಾಸ** (ನಾ). ಉಸಿರಾಟ : ಹೆಚ್ಚು ಗಮನಿಸಿ ಕಿವಿಗೊಟ್ಟು ಕೇಳಿದನು; ನಿಶ್ವಾಸ ಪ್ರಶ್ವಾಸದ ಶಬ್ದವು ಕೇಳಿತು (ಕಪಾಕುಂ. ೪೦) ; ಪ್ರಾಣಶಕ್ತಿಯಿಂದ ನಡೆಯುವುದು ಕೇವಲ ಶ್ವಾಸ ಪ್ರಶ್ವಾಸಗಳೇ ಅಲ್ಲ (ಜೀವಾತ್ಮ. ೧೫೨). [ಸಂ.]

**ಪ್ರಷ್ಠ** (ಗು). ೧. ಮುಂಭಾಗದಲ್ಲಿ ನಿಲ್ಲುವ ; ಮುಂದಿರುವ. ೨. ಮುಖ್ಯವಾದ ; ಪ್ರಧಾನವಾದ. (ನಾ). ೩. ನಾಯಕ; ಮುಂದಾಳು. ೪. ಮುಂದುಗಡೆಯಲ್ಲಿ ಹೋಗುವ ಸೇವಕ : "ಪುರೋಗಃ, ಅಗ್ರೇಸರಃ, ಪ್ರಷ್ಠಃ ... ಪುರೋಗಾಮೀ—೭ ಮುಂದುಕಡೇ ನಡಿಯುವ ಉಳಿಗದವನು" (ನಿಘಂಟು. ೨೫೮). [ಸಂ.]

**ಪ್ರಷ್ಠೌಹಿ** (ನಾ). ಮೊದಲನೆಯ ಸಲ ಗರ್ಭವಾದ ಹಸು: "ಪ್ರಷ್ಠೌಹೀ, ಗರ್ಭಿಣೀ—ಈ ೨ ತೆನೆಯಾವು" (ಶಬಾಯು. ೪೫-೦೦೪) ; "ತೆನೆ ನಿಲಲು ಪ್ರಷ್ಠೌಹಿ [ಪಾಠಾಂ. ಸ್ವಲೂಹಿ]ಯದು" (ಮಂಗರಾ. ೫೪-೩). [ಸಂ. ಪ್ರಷ್ಠೌಹೀ]

**ಪ್ರಸಂಗ** (ನಾ). ೧. ಸೇರಿಕೆ ; ಕೂಟ : ಹರಗಣಂಗಳನೆಗ್ಗ ಹಿಡಿದೆನೆ ಹಿರಿಯರುಗಳಂ ನಾಚಿಸಿದೆನೇ ಶರಣಜನತತ್ವಾನುಭವಗೋಷ್ಠೀಪ್ರಸಂಗದಲಿ (ಬಸಪು. ೪೫-೦೫). ೨. ಸಂಪರ್ಕ; ಸಹವಾಸ ; ಸಂಬಂಧ : ತನ್ನ ಪರಿಚಾರಕಜನದ ವಧೂಜನದ ಪ್ರಸಂಗಮನಲ್ಲದುಟಿದ ಜನದ ಸೋಂಕುಮುಪ್ರಸಂಗಮುಮಂ ಎಂತುಂಟೆಂದಱಿದವನಲ್ಲಂ (ಸುಕುಮಾ. ೦೦-೩೫ ವ) ; ಮಹಾಲಿಂಗದ ಪ್ರಸಂಗಿಯಾಗಿಪ್ಪಾತನಂಗವೆನಗೆ ಮಂಗಳತರಂಗ ಆತನ ಪ್ರಸಂಗದಲ್ಲಿರಿಸಾ ಉರಿಲಿಂಗದೇವ (ವಚಸಂ. ೨೩೬-೪೦). ೩. ಸಂದರ್ಭ ; ಘಟನೆ ; ಸನ್ನಿವೇಶ : ದಿವಿಜೇಂದ್ರಂಗಾದುದು ಗೀತವಾದ್ಯನೃತ್ಯಪ್ರಸಂಗಮುಚಿತನ ಕೆಲದೊಳ್ (ಆದಿಪು. ೩-೮೩) ; ಬಲ್ಲವರ ಬೆಸಗೊಂಡರೆ ಎನ್ನ ಬಿಮ್ಮು ಕೆಟ್ಟಿಹುದೆಂದು ಮೆಲ್ಲನೆ ಪ್ರಸಂಗದಿಂದ ತಿಳಿದು ನೋಡುವೆ (ಬಸವ. ೬೬೮) ; ದೇಶಾಧಿಪತಿ ಹರಿಶ್ಚಂದ್ರರಾಯನ ಸತ್ಯ ವಾಸವನ ಸಭೆಯೊಳಗೆ ನೆಗಳ್ದ ಪ್ರಸಂಗದಿಂ ಕೌಶಿಕ ವಶಿಷ್ಠಮುನಿಗಳಿಗೆ ಘನತರದ ಸಂವಾದಮಂ ಮಾಡಿ ತಂದು (ಹಕಾ. ೦ ಸೂಚನೆ). ೪. ವಾದ; ವಿವಾದ: ಅನುಭಾವ ಅನುಭಾವ ವೆಂದೆಂಬಿರಿ...ಅನುಭಾವ ಬಂದ ಬಂದಲ್ಲಿ ಪ್ರಸಂಗ [ಪಾಠಾಂ. ಅನುಭಾವ]ವ ಮಾಡುವ ಪಾತಕರ ತೋಱದಿರಯ್ಯಾ (ಕನ್ನಪ. ೪. ೩೯೮-೬೪೦) ; ಇನ್ನೊಂದು ಪ್ರಸಂಗದಲ್ಲಿ ಅಲ್ಲಸು ತನ್ನ ಅಭಿಪ್ರಾಯಗಳನ್ನು ಇತರರು ಖಂಡಿಸಿದಾಗ ಅವರ ವಾದವನ್ನು ಒಪ್ಪಿಕೊಳ್ಳುತ್ತಾನೆ (ಕೂಸ್ಕಕು. ೦೬೪) ; ಈಗಲಾದರೂ ಈ ಪ್ರಸಂಗವನ್ನು ಇಲ್ಲಿಗೇ ಮುಕ್ತಾಯ ಮಾಡುವುದು ನಿಮ್ಮ ಕೈಲೇ ಇದೆ (ಹಸುಹೊ. ೦೩೪). ೫. ವಾರ್ತೆ ; ಸುದ್ದಿ : ನಿನ್ನ ಪ್ರಸಂಗವನ್ನು ಇವನಿಗೆ ಬಹು ಬಗೆಯಲ್ಲಿ ಹೇಳಿದ್ದೇನೆ (ವಚಕಾ. ೫೭). ೬. (ಕರಾ) ಯಕ್ಷಗಾನಕ್ಕಾಗಿ ರಾಮಾಯಣ, ಭಾರತ, ಭಾಗವತ ಮುಂತಾದುವುಗಳಿಂದ ಆರಿಸಿಕೊಂಡ ಕಥಾವಸ್ತು, ಕಥಾನಕ ಮತ್ತು ಅವುಗಳಿಂದ ಆಡುವ ನಾಟಕರೂಪ : ಬಾಲ್ಯದಲ್ಲಿ ಈತನ ಪ್ರಸಂಗಗಳನ್ನು ಓದಿ ಹಾಡಿ ಕನ್ನಡ ಸಾರವನ್ನು ಹೀರಿದುದರಿಂದಲೇ ತೊರವೆರಾಮಾಯಣ—ಗದುಗಿನ ಭಾರತಗಳನ್ನು ಓದಬೇಕೆಂಬ ಆಸೆ ನನಗಾಯಿತು (ಪಾರ್ತಿಸು. V ಮುನ್ನುಡಿ); ಆಟದವರು ಒಂದು ರಾತ್ರಿಯಲ್ಲಿ ಎರಡು ಮೂರು ಬೇರೆ ಬೇರೆ ಪ್ರಸಂಗಗಳನ್ನು ಆಡಿ ಮುಗಿಸಿದರೂ ಮುಗಿಸಬಹುದು (ಯಕ್ಷಬ. ೩೯); ಇಂದಿನ ಬಯಲಾಟದಲ್ಲಿ ಯಾವ ಪ್ರಸಂಗವನ್ನು ಆಡಿ ತೋರಿಸಲಿರುವರು ? (ಕಪಪು. ೬-೭೨).

ಪ್ರಸಂಗವಾಡು=೧. ಸಲ್ಲಾಪಿಸು ; ಸಂಭಾಷಿಸು ; ಆ ಕಪಿಂಜಲನು ನನ್ನ ಕೂಡೆ ಪ್ರಸಂಗವಾಡುತ್ತ ಇದ್ದಲ್ಲಿಯೆ ಆ ಪುಂಡರೀಕನು ನನ್ನ ಸಮೀಪಕ್ಕೆ ಬಂದು (ವಚಕಾ. ೨೦). ೨. ಲೋಕಾಭಿರಾಮವಾಗಿ ಮಾತನಾಡು. [ಸಂ.]

**ಪ್ರಸಂಗಕಾರ** (ನಾ). ಯಕ್ಷಗಾನ ಅಥವಾ ಬಯಲಾಟದ ನಾಟಕಗಳನ್ನು ರಚಿಸುವವನು; ಭಾಗವತ : ನಮ್ಮ ಪ್ರಸಂಗಕಾರರು ಗದುಗಿನ ಭಾರತದಿಂದಲೋ, ಜೈಮಿನಿಭಾರತದಿಂದಲೋ ... ಹೆಚ್ಚಾಗಿ ಕಥೆಗಳನ್ನು ಆರಿಸಿಕೊಂಡರು (ಯಕ್ಷಬ. ೩೪). [ಸಂ.]

**ಪ್ರಸಂಗತ** (ಗು). ಕೂಡಿದ ; ಸೇರಿದ : ಗಂಗಾತರಂಗಪ್ರಸಂಗತಜಟಾಪಟಲಮಂಗಳಾತ್ಮಕ ಭಕ್ತಸಂಘಮಂ ರಕ್ಷಿಪುದು (ಚಬಪು. ೩೫-೦). [ಸಂ.]

**ಪ್ರಸಂಗತಿ** (ನಾ). ಕೂಟ; ಸೇರುವೆ; ಐಕ್ಯ : ವರಕರತಳಸ್ಪರ್ಶನಂ ವಿಸ್ತರಿಸುವಡೆ ತಾಂ ಪರುಷವೇದಿಗಳಿರವಘನನಂಘ್ರಿಪ್ರಸಂಗತಿ ಮುಕ್ತಿಗಾಗರವು (ಬಸಪು. ೩೦-೦೯). [ಸಂ.]

**ಪ್ರಸಂಗಾವಧಾನ** (ನಾ). ಸಂದರ್ಭೋಚಿತವಾದ ಉಪಾಯಗಳನ್ನು ತಿಳಿದಿರುವುದು ; ಪ್ರತ್ಯುತ್ಪನ್ನಮತಿ : ಗಂಡಾಂತರ ಬಂದಾಗ ಧೈರ್ಯಗೊಂಡು, ಅದನ್ನು ದಾಟಿ ಹೋಗತಕ್ಕ ಹಂಚಿಕೆಗಳನ್ನು ನೋಡಿಕೊಳ್ಳುವ ಗುಣಕ್ಕೆ ಪ್ರಸಂಗಾವಧಾನ ಅನ್ನುತ್ತಾರೆ (ಮುಂಬಯಿ. ೪-೬೨) ; ಪ್ರಸಂಗಾವಧಾನ ಚೆನ್ನಾಗಿ ಸಾಧಿಸಿತು (ಸ್ವಶಿಕ್ಷ. ೨೯೦). [ಸಂ.]

**ಪ್ರಸಂಗಿ** (ಗು). ೧. ಸೇರಿದ; ಸಂಬಂಧಿಸಿದ. ೨. ಅವಲಂಬಿಸಿದ. ೩. ಪ್ರಾಸಂಗಿಕವಾದ. ೪. ಎರಡನೆಯ ದರ್ಜೆಯ. (ನಾ). ೫. ವಾದಿಸುವವನು; ಚರ್ಚೆ ಮಾಡುವವನು :. (೬). ೬. ಸಂಬಂಧವಿರುವವನು; ಸಂಬಂಧ ಹೊಂದಿದವನು : ಮಂಗಳಮಯಲಿಂಗವ ಮನ ಹಿಂಗದೆ ಸುಸಂಗಿಯಾಗಿ ಮಹಾಲಿಂಗದ ಪ್ರಸಂಗಿಯಾಗಿಪ್ಪಾತನಂಗವೆನಗೆ ಮಂಗಳತರಂಗ (ವಚಸಂ. ೨೩೬-೪೦). [ಸಂ. ಪ್ರಸಂಗಿನ್]

**ಪ್ರಸಂಗಿಸು** (ಕ್ರಿ). ೧. ವ್ಯಾಖ್ಯಾನ ಮಾಡು : ಶಬ್ದಸಮುದ್ರವ ಹೊಕ್ಕೊಂದು ಪದಕೆ ನೂಱಬ್ಬ ಪ್ರಸಂಗಿಸಬಹುದು (ಭರತ. ೨-೪೦). ೨. ಮಾತನಾಡು; ಸಲ್ಲಾಪಿಸು : ತಂಗೀ ನೀ ಕೇಳು ಸಮಸ್ತಚಿತ್ರಂಗಳ ಭಂಗಿಸಿಬಿಟ್ಟೆ ನಿನ್ನೆದೆಗೆ ಅಂಗೀಕೃತ ಪ್ರಾಣಕಾಂತನಾರೆಂದು ಪ್ರಸಂಗಿಸಿದಳು ನಸುನಗುತೆ (ಮೋಹತ. ೩೦ – ೨೦); ಆ ಗೌತಮೇಂದ್ರನ

ಯೇಕೋರಾಮ್ಯೆಯನವರು ಕುಳ್ಳಿರಿಸಿಕೊಂಡು ಆತನ ಕೂಡೆ ಪ್ರಸಂಗಿಸು ತಿರ್ದರು (ಕೂಲ್ಕಾ. ೦೦೩-೬). ೩. ಪ್ರಸ್ತಾಪಿಸಂ : ಪಂಪ ಮೊದಲಾದವರು ಬಗೆಬಗೆಯ ರಗಳೆಗಳನ್ನುಪಯೋಗಿಸಿದ್ದರೂ ಅವು ಗಳನ್ನು ಕುರಿತು ಅವನು ಪ್ರಸಂಗಿಸಿಲ್ಲ (ಸವಾಶೋ. ೦೬೬). [ಪ್ರಸಂಗ + —ಇಸು]

**ಪ್ರಸಕ್ತ** (ಗು). ೧. ಕೂಡಿದ; ಸೇರಿದ. ೨. ಅಂಟಿರುವ. ೩. ಎಡೆ ಬಿಡದ; ನಿರಂತರವಾದ. ೪. ಪಡೆದ; ಹೊಂದಿದ. ೫. ಐಹಿಕದಲ್ಲಿ ಆಸಕ್ತವಾದ; ಪ್ರಾಪಂಚಿಕವಾದ. ೬. ವಿವರಗೊಳಿಸಿದ. (ನಾ). ೭. ಆಸಕ್ತಿಯಿಂದ ಮಾತನಾಡುವವನು; ಚಿತ್ತಾಕರ್ಷಕವಾಗಿ ಸಂಭಾಷಿಸುವವನು: "ಪ್ರಸಕ್ತಃ, ಪ್ರಸ್ತುತಃಈ— ೨ ಗೆಲೆ ನುಡಿವವಂ" (ಕರಾಚು. ೬೦-೨೦೯). [ಸಂ.]

**ಪ್ರಸಕ್ತಿ** (ನಾ.) ೧. ಕೂಡಿರುವುದು; ಸೇರಿಕೆ; ಹೊಂದಿಕೆ. ೨. ತೊಡಗಿರುವುದು; ಪ್ರವರ್ತನೆ. ೩. ಪ್ರಸಂಗ; ಪ್ರಸ್ತಾಪ : ಆ ಪ್ರಸಕ್ತಿಗೆ ಹೋಗದೆ, ಭಾಮಹ ದಂಡಿಗಳ ಕಾಲವು ಕ್ರಿ.ಶ. ಏಳನೆಯ ಶತಮಾನವಾಗಿರಬಹುದೆಂದೂ... ಹೇಳಿ ಮುಗಿಸುವುದು ವಾಸಿ(ಭಾರಪಿಚಿ. ೨೬); ಶೂನ್ಯಸಂಪಾದನೆಯಲ್ಲಿ ಅನೇಕ ಧಾರ್ಮಿಕತತ್ವಗಳ... ಪ್ರಸಕ್ತಿ ಬರುತ್ತದೆ (ಶೂಪ್ನಕು. ೦೨೯). ೪. ಸಂದರ್ಭ; ಅವಕಾಶ: ಅವರಿಗೆ ನನ್ನಿಂದ ನಿರಾಶೆಯಾಗುವ ಪ್ರಸಕ್ತಿಯೆ ಇರುತ್ತಿದ್ದಿಲ್ಲ (ಗಾಂಆ. ೦೫೯). ೫. ಸತತ ಪ್ರಯತ್ನ. ೬. ಲಾಭ. [ಸಂ.]

**ಪ್ರಸನ್ನ** (ಗು.) ೧. ತಿಳಿಯಾದ ; ಸ್ವಚ್ಛವಾದ ; ಕಶ್ಮಲವಿಲ್ಲದಿರುವ: ಲಲಿತಾಲಂಕರಣಪ್ರಸನ್ನರಸವದ್ಗೇಯಂಗಳೊಳ್ ಮೂಡುತುಂ ಮುಬುಗುತ್ತುಂ (ಅಂಕೃ. ೦-೯೪). ೨. ಸ್ವಸ್ಥವಾದ; ಶಾಂತವಾದ. ೩. ಸಂತುಷ್ಟವಾದ; ಸಂಪ್ರೀತವಾದ. ೪. ಕೃಪೆಯುಳ್ಳ; ದಯೆಯಿಂದ ಕೂಡಿದ. (ನಾ). ೫. ತಿಳಿಯಾದುದು; ಸ್ವಚ್ಛವಾದುದು : "ಪ್ರಸನ್ನಃ, ಅಚ್ಛಃ — ೨ ನಿರ್ಮಲವಾದ ವಸ್ತುವಿನ ಹೆಸರುಗಳು"(ಸಿದ್ಧಾಂತಿ. ೪೦). ೬. ತೃಪ್ತಿ; ಸಂತುಷ್ಟಿ : ಇನ್ನೆಯ್ದಿ ನಿಮ್ಮರಮನೆಗೆಂದರವರು ಪ್ರಸನ್ನದೆಊಳೆಯ್ದಿದರೊಡನೆ (ಶರಚ. ೩೯-೬೬); ನೀರು . . .ಪೂಜೆಗೊಂಡು ಪ್ರಸನ್ನವಾಗುವುದಿಲ್ಲ (ಕಲ್ಕೋ೯.೦೦-೬). ೭. (ಅಲಂ) ಸಾಕ್ಷಾತ್ಕಾರ ; ಎದುರಿಗೆ ಬರುವುದು; ಪ್ರತ್ಯಕ್ಷ : ಅನ್ನೆಗವಿಶಾಂ ಪ್ರಸನ್ನನಾದಂ ತರುಣೀಪ್ರಸನ್ನಮಾದಂತಕವ್ಯೆರಿಯಂ ನಿರೀಕ್ಷಿಸುತ್ತೆ (ಅಭ್ಯಟಿ. ೦೨-೯೬). ೮. [ಕಾವ್ಯಮೀ] ಕಾವ್ಯದ ಹತ್ತು ಗುಣಗಳಲ್ಲಿ ಒಂದು ; ಮೃದುತ್ವ ; ಮಾರ್ದವತೆ ; ಕೋಮಲತೆ : ಲೋಕಪ್ರತೀತ ಸುಭಗವಿವೇಕಾಳಾಪಂ ಪ್ರಸನ್ನಮದುಮಿಂತಕ್ಕುಂ (ಕಂರಾ. ೨-೬೬) ; ಕರಮುಸ್ಫುಕ್ಷರಮುಚಿತಾಕ್ಷರಮವಲಂಬಪ್ರಸನ್ನಮತಿಮಧುರಮಲಂಕರಣ ಯುತಮೆನಿಸಿ (ಛಂದೋಂಬು. ೦-೯) ; ಪ್ರಸನ್ನ (=ಮೃದುವಾದ ಶಬ್ದಗಳಿಂದಲೇ ಈ ಅರ್ಥದ ಓಜಸ್ಸನ್ನು ಸಂಪಾದಿಸಬಹುದು(ಶ್ರೀಕೃಷ್ಣಾ ಓಲ. ೬೨). ೫, ೮ : ವಿಳಸಿತಮಪ್ಪಳಂಕರಣಶಾಸ್ತ್ರದಪೊಲ್ಡೆಸಗಳ್ಪ್ರಸನ್ನಮಂ ತಳೆದು ಪೊದಟ್ಟುದಾ ರುಚಕಭೂಷೆಯದೊಲ್ನೆಲೆಗೊಂಡು ಕಂಠದೊಳ್ ಪೊಳೆವ ಪಯಃಪ್ರವಾಹಮುಯಮಾಯ್ತು ನದೀತತಿ ಸತ್ಕವೀಂದ್ರುಜ್ಜ್ವಳ ಕವಿತೋಕ್ತಿಪೊಲ್ಕ್ಯದುಪದನ್ಯಸನೋಚಿತಮಾಯ್ತಿಳಾತಳಂ (ಕಾಂತೀಕ್ಕ. ೦೨-೬೩). [ಸಂ.]

**ಪ್ರಸನ್ನತೆ** (ನಾ). ೧. ಶುದ್ಧವಾಗಿರುವುದು ; ಸ್ವಚ್ಛತೆ; ನೈರ್ಮಲ್ಯ : ಪಂಪಾಂಬಿಕೆ ಮದೀಯ ಮತಿಗೀಗೆ ಪ್ರಸನ್ನತೆಯನುತ್ಸವದೊಳು (ಪಶಕಾ. ೦-೬). ೨. ತೃಪ್ತಿ; ಸಂತುಷ್ಟಿ : ಪ್ರಸನ್ನತೆಯನಾಂತುವಾ ಪದದೊಳಾಸೆಗಳ್ (ವರ್ಧಕ್ಕ. ೩೦-೬೯); ಇಳಿವಯಸ್ಸಾದರೂ ... ಮುಖದಲ್ಲಿ ಪ್ರಸನ್ನತೆ ಅರಳಿತು (ಸವಕಿ. ೩೨). [ಸಂ. ಪ್ರಸನ್ನತಾ]

**ಪ್ರಸನ್ನಭಾವ** (ನಾ). ೧. ನಿರ್ಮಲವಾದ ಸ್ಥಿತಿ. ೨. ಸಂತೋಷದ ಮನಸ್ಥಿತಿ; ಸಂತುಷ್ಟದ ಭಾವ : ಮುಖದ ಪ್ರಸನ್ನಭಾವದಿಂದಲೂ ಆಶೀರ್ವದಿಸುತ್ತ ಪ್ರಕಟನಾದ, ಯಜ್ಞೇಶ್ವರನನ್ನು ಕಾಣುತ್ತಿದ್ದ ಹಾಗೇ ಬಾಧ್ಯೋಗಮುನಿಗಳು ... ನಮಸ್ಕರಿಸಿದರು (ಚೆಕಂಬಾ. ೩). ೧, ೨ : ಪ್ರಸನ್ನಭಾವಂ ಜಲದೊಳಂ ಜನದೊಳಮಾದ ಶರತ್ಸಮಯದೊಳ್ (ಜಗಪು. ೪-೬೩ ಪ). [ಸಂ.]

**ಪ್ರಸನ್ನಮನ** (ನಾ). ಸಂತೋಷಗೊಂಡವನು; ಸಂತುಷ್ಟನಾದವನು: ಭರತೇಶ್ವರಂ ಪ್ರಸನ್ನಮನನಾಗಿ ವೃಷಭಸೇನಾದ್ಯನುಪಮಪರ್ಯಂತ ಗಣಧರದೇವಚರಿತಾಕರ್ಣನಮನೆ ತನಗೆ ಕರ್ಣಪೂರಂ ಮಾಡಿ (ಆಪು. ೦೩-೯೬ ವ). [ಸಂ. ಪ್ರಸನ್ನಮನಸ್]

**ಪ್ರಸನ್ನವದನ** (ನಾ.) ೧. ಅನುಗ್ರಹಿಸಂವಂತಿರುವ ಮುಖ; ಪ್ರಸನ್ನವಾದ ಮುಖ. ೨. ಮುಖದಲ್ಲಿ ಪ್ರಸನ್ನತೆಯುಳ್ಳವನು : ನೀಂ ದರಸ್ಮಿತಪ್ರಸನ್ನವದನನಪ್ಪ ಕಾರ್ಯಮೇ ಕರಣೀಯಮೆಂದು ಮಹೇಂದ್ರು ಮಹವಂ ಮಾಣ್ದು (ಜಗಪು. ೪-೬೯ ವ); ರಾಯರು ಪ್ರಸನ್ನವದನರಾಗಿದ್ದರು (ಕಂಬಹು. ೦೨೩). [ಸಂ.]

**ಪ್ರಸನ್ನೆ** (ನಾ). ೧. ಸಂತೋಷಗೊಂಡವಳು. ೨. ಅನುಗ್ರಹಿಸುವ ಮನಸ್ಸುಳ್ಳವಳು. ೩. ಅಮಲು ಬರಿಸುವ ವಸ್ತು; ಹೆಂಡ; ಮದ್ಯ: "ಆಸವಃ ... ಪ್ರಸನ್ನಾ...ಮಧು—ಈ ೨೪ ಕಳ್ಳು" (ಕರಾಚು. ೩೩-೦೬೩). ೪. [ಸಂಗೀತ] ನಿಷಾದಸ್ವರದಿಂದ ಉತ್ಪತ್ತಿಯಾಗುವ ಎರಡು ಶ್ರುತಿಗಳಲ್ಲಿ ಒಂದು : ಪ್ರಸನ್ನೆ ಸರ್ವವ್ಯಾಪಿಯೆಂಬೆರಡು ನಿಷಾದಸ್ವರ ದಿಂದುತ್ಪತ್ತಿಯಾದವು (ಶಿವೇಕ. ೨೬೨). [ಸಂ. ಪ್ರಸನ್ನ]

**ಪ್ರಸಭ** (ನಾ). ಒತ್ತಾಯ; ಬಲವಂತ : "ಹಠಃ, ಪ್ರಸಭಂ — ಈ ೨ ಬಲುಹು (ಬಲ್ಪು)" (ಕರಾಚು. ೦೨೩-೬೪). [ಸಂ.]

**ಪ್ರಸರ** (ನಾ). ೧. ಹರಡುವುದು; ವಿಸ್ತರಣೆ. ೨. ಹರಹು; ವಿಸ್ತಾರ : ತಪಶ್ಚರಣಪರಾಯಣನಾದಂ ಪ್ರತಿಮನುಂ ಪ್ರತಾಪ ಪ್ರಸರಪ್ರಕಟಪಟುವಾಗಿ ಪಲವುಕಾಲಮರಸುಗೆಯ್ದು (ಶಂಪಕಾ. ೦-೬೩ ವ). ೩. ವೇಗ; ರಭಸ : "ರಂಹಃ . . . ಪ್ರಸರಃ . . . ವಾಜಃ— ಈ ೮ ಕುದಿರೆಯ ವೇಗಂ" (ಕರಾಚು. ೬೩-೨೮೯). ೪. ಪ್ರವಾಹ; ರಭಸ. ೫. ಮುನ್ನಡೆಯುವುದು. ೬. ಹೆಚ್ಚಳ; ಆಧಿಕ್ಯ : ಓಲಗಕ್ಕೆ ಪದಪಿಂ ಬಂದಿರ್ದ ಕಾಂತಾಜನೋತ್ಕರರತ್ನಾಭರಣಪ್ರಭಾಪ್ರಸರವಾದಂ ತಳ್ತು . . . ನಡೆದಂ ಭೂಪಾಲವಿದ್ಯಾಧರಂ (ಕಾದಂಪೂ. ೦೦೦೦). ೭. ಪ್ರಭಾವ. ೮. ಗುಂಪು; ಸಮೂಹ : ದೆಸೆದೆಸೆಗೋಡಿದನ್ಯಕರಿ ದಿಕ್ಕರಿಯಾದುದರಾತಿಭೂಭುಜಪ್ರಸರಮೆ ದಿಕ್ಪತಿಪ್ರಸರಮಾದುದು (ಗದಾಯು. ೦-೩೩); ವಿಲಸತ್ಪುಷ್ಕರಶೀಕರಪ್ರಸರದಿಂ ಸೇಸಿಕ್ಕುತಿರ್ಪಂತೆ . . . ಉದ್ಘಮಾಂಗಲ್ಯಮುಂ ತಳೆದೊರ್ಪಿರ್ದುದನೇಟಾದಂ ದ್ವಿರದಮಂ ವ್ಯಾಳೇಭ ವಜ್ರಾಂಕುಶಂ (ಪುಶೃಕ್ಕ. ೩-೦೫); ಬಸವರಾಜಂ ಮುಗ್ಧಭಕ್ತಪ್ರಸರದುತ್ತಮ ಕಥೆಗಳಂ ಸಲೆ ಪಸರಿಸಿದನಾ ಚನ್ನಬಸವಂ ಕೂರ್ತು ಕೇಳುತಿರೆ (ಚಪು. ೦೬-೦೦೭). ೯. ಒಲುಮೆ; ಪ್ರೀತಿ. ೧೦. ಕದನ; ಕಾಳಗ. ೧೧. ಕಬ್ಬಿಣದ ಬಾಣ. ೧೨. ನಾಶ. ೧೩. ಅವಕಾಶ. [ಸಂ.]

**ಪ್ರಸರಣ** (ನಾ). ೧. ಹರಡುವಿಕೆ; ವಿಸ್ತರಣೆ; ಪ್ರಸಾರ : "ಪ್ರಸ[ಹಾಕಾಂ. ಸಾ]ರಣ ಸಮೂಹಂಗಳೊಳ್ ಪೆಸರು" (ಶಬ್ದಮಂ. ೦೦೯); ಭಾವನಾಪ್ರಸರಣವೇ ಸಾಹಿತ್ಯದ ಮುಖ್ಯಕೆಲಸ (ಸಾಶ್ಚಕ್ಕು. ೬೨). ೨. ಸೈನ್ಯವು ಮುತ್ತುವುದು,—ವ್ಯಾಪಿಸುವುದು : "ಆಸಾರಃ, ಪ್ರಸರಣಂ—ಎಲ್ಲ ಕಡೆಗಳಲ್ಲಿಯೂ ಸೇನೆ ವ್ಯಾಪಿಸುವಿಕೆ, ಮುತ್ತಿಕೊಳ್ಳುವಿಕೆ" (ಸಿದ್ಧಾಂತಿ. ೨೬೬). [ಸಂ.]

**ಪ್ರಸರಣೆ** (ನಾ). = ಪ್ರಸರಣ ೧: ಹಣ ಪ್ರಸರಣೆಯಲ್ಲಿರಬೇಕಾ

ದಂತೆ ವಿದ್ಯೆ ಪ್ರಚಾರದಲ್ಲಿರಬೇಕು (ಹೊಸಕ. ೪೦) : ಕೀಟಗಳ **ಪೊಟ್ಟೆ**ಗಳಲ್ಲಿ ಉಸಿರಾಟ ಪ್ರಸರಣೆಯಿಂದ (diffusion); ಸೂಕ್ಷ್ಮರಂಧ್ರದ (Micro pyle) ಮೂಲಕ ಅನಿಲಗಳ ಬದಲಾವಣೆ (ಕೀಟಶ. ೩೭). [ಸಂ. ಪ್ರಸರಣ]

**ಪ್ರಸರಿಸು** (ಕ್ರಿ). ಹರಡಂ; ವ್ಯಾಪಿಸಂ; ಹಬ್ಬು : ಪ್ರಸರಿಸಿದುನ್ನತ ತಿಮಿರಪ್ರಸರದೊಳಡಿಸಿಲ್ಕಿ ಮಿಱುಪ ಕಿಸುಸಂಜೆಯಪೋಲ್ ಮಿಸುಗುವ ಬೈತಲೆವಟ್ಟೆಯೊಳೆಸೆದುದು ಸಿಂದೂರಲೇಪೆ ತದ್ಬಾಲಿಕೆಯಾ (ಉದ್ಭಟ. ೩-೯೩) ; ಇತಿಹಾಸ ಪುರಾಣಗಳು, ಅತ್ಯುತ್ತಮಕಾವ್ಯಗಳು, ಶಿಲ್ಪಕಲೆಗಳು ಇವುಗಳ ಮೂಲಕ ಧರ್ಮಸಂದೇಶ ಸರ್ವತ್ರ ಪ್ರಸರಿಸುವಂತಾಯಿತು (ಹುಕ್ಕಾರ. ೦೦೭ ಟೀಕೆ). [ಪ್ರಸರ + –ಇಸು]

**ಪ್ರಸರ್ಪಿತ** (ಗು). ೧. ಹರಡಿದ; ವ್ಯಾಪ್ತವಾದ. (ನಾ). ೨. [ನಾಟ್ಯ] ನೂರೆಂಟಂ ಬಗೆಯಂ ಕರಣಗಳಲ್ಲಿ ಒಂದಂ; P "ಒಂದು ಕೈಯನ್ನು ರೇಚಿತ ಮಾಡಿ, ಆ ಪಾರ್ಶ್ವದ ಚರಣದಿಂದ ನೆಲವನ್ನು ಉಜ್ಜುತ್ತ ನಡೆದಂ ಇನ್ನೊಂದಂ ಪಾರ್ಶ್ವದ ಕೈಯನ್ನು ಲತಾ ಹಸ್ತದಲ್ಲಿ . . . ಹಿಡಿದು, ಕಾಲನ್ನು ಎತ್ತುತ್ತಿ ಇಡುವುದು" (ಶಾಸ್ತ್ರರಂ. ಗದ್ಯಾನುವಾದ ೩೦೨) : ಒರಮಂದುವೆ ರೇಚಿತಂಬೆತ್ತಿರಲಾ ಪದ ಮಿಳೆಯನುದ್ಧುತವೆ ನಡೆಯೆ ಲತಾಕರಮಾಗೆ ಹಸ್ತಮೊಂದಾಚರಿಸುತ್ತಂ ನೆಗೆಯೆ ಕೇಳ ಪ್ರಸರ್ಪಿತಕರಣಂ (ಶಾಸ್ತ್ರರಂ. ೪-೦೯೩). [ಸಂ.]

**ಪ್ರಸವ** (ನಾ). ೧. ಹಡೆಯುವುದು; ಹೆರಿಗೆ; ಪ್ರಸೂತಿ : ಪ್ರಸವ ಪರಿಕ್ಷಾಮಪಾಂಡುಮೂರ್ತಿಯಪ್ಪ ವಿಳಾಸವತೀಮಹಾದೇವಿಯುಂತ್ಸಂಗ ದೊಳ್ . . . ಬಾಲಕನಾದಪೊಪ್ಪಿದಂ (ಕಾದಂಪೂ. ೪೦೩); ಕೊನೆಯ ಎರಡು ದಿನದ ಕ್ಷೋಭೆಯನ್ನು ಸಹಿಸಲಾರದೆ ಪ್ರಸವ ಸ್ವಲ್ಪ ಮುಂದಾಗಿ ಆಗಿರಬೇಕು (ಚಕರಾ. ೨೦೫). ೨. ಹುಟ್ಟುವಿಕೆ; ಜನನ; ಜನ್ಮ : ಆವಗಂ ತ್ರಿಭುವನಪ್ರಸವಕ್ಕದು ಭೂಮಿಯೆಂಬ ಪೆಂಪೊದವಿರೆ ಪೆರ್ಮೆಯಿಂ ಎದಿಸೆಯೆಂಬುದು ನಚ್ಚಿನ ರಾಜಧಾನಿಯಾದುದು . . . ಮಾಳವಮಧ್ಯ ದೇಶದೊಳ್ (ಕಾದಂಪೂ. ೦೫). ೩. ಮೂಲ; ಆಕರ; ಉತ್ಪತ್ತಿಸ್ಥಾನ. ೪. ಹೂವು; ಪುಷ್ಪ: "ಪುಷ್ಪಂ, ಪ್ರಸವಃ . . . ಸುಮನಸ್—ಈ ೫ ಹೂವಿನ ಪೆಸರ್" (ಹಲಾಯು. ೩೦-೩೨); ಅರವಿಂದೋತ್ಪಲಮಲ್ಲಿಕಾಪ್ರಸವಸೌರಭ್ಯಂ ಗಳಂ ಪೇಱಿ ಬರ್ಪಲರುಂ (ಸುಕುಮಾ. ೪-೪೯); ಕಂಪಿಡಿದ ಸುರದ್ರುಮ ಪ್ರಸವ[ಪಾಠಾಂ. ರ]ದಂತೆ ಪರಾಪರಮುಕ್ತಿಯಂತೆ ಸಂಗಡಿಸಿದ ಕಾಮ ಧೇನುವಿನಪೋಲ್ ಗಿರಿರಾಜತನೂಜೆಯೊಪ್ಪಿದಳ್ (ಗಿರಿಜಾ. ೩-೯೯). ೫. ಹಣ್ಣು ; ಫಲ : "ಪ್ರಸವಃ—ಹುಟ್ಟುಹಾಕುವಿಕೆ, ಹಣ್ಣು, ಹುವ್ವು, ಹೆರುವಿಕೆ" (ಸಿದ್ಧಾಂತಿ. ೪೨೦). ೬. ಸಹಾಯ; ಅನುಕೂಲ. ೭. ಸಂತಾನ; ಸಂತತಿ. ೮. ಸೋಮರಸವನ್ನು ಹೊರತೆಗೆಯುವುದು. ೯. ಮುನ್ನಡೆಯುವುದು. ೧೦. ಪ್ರವಾಹ; ಹೊನಲು. ೧೧. ಉತ್ಸಾಹ; ಸಡಗರ. ೧೨. ಕಟ್ಟಳೆ ಮಾಡುವುದು. ೧೩. ಲಾಭ.

**ಪ್ರಸವಮಾಗು, ಪ್ರಸವವಾಗು** = ಹೆರಿಗೆಯಾಗಂ : ತೋಟಿಯ ಬಡಗ ಹಱಿದ ಬೇರು ನೀರಲ್ಲಿ ಅರೆದು ಯೋನಿಯಿಂದಿಳಿಯ ಪೂಸಲು ಪ್ರಸವ ಮಾಗುವುದು (ಚಿಕಿ. ೦೦೭) ; ವೈದ್ಯರಿಂದ ಪರೀಕ್ಷೆ ಮಾಡಿಸಿಕೊಂಡು ಹೆರಿಗೆಯ ಸಮಯದಲ್ಲಿ ಯಾವ ತೊಡಕೂ ಇಲ್ಲದೆ ಸುಖವಾಗಿ ಪ್ರಸವ ವಾಗುವುದೆಂದು ಆಶ್ವಾಸ ಪಡೆಯಬೇಕು (ಗೃಹಶಿ. ೦೦೨). [ಸಂ.]

**ಪ್ರಸವಕಾಲ** (ನಾ). ಹೆರಿಗೆಯ ಕಾಲ; ಹಡೆಯುವ ಸಮಯಂ : ತತ್ಸಂಖ್ಯೆ ಗೇಹದಿನತ್ತಲ್ ನಿಲೆ ಚಂದ್ರಮಂ ಪ್ರಸವಕಾಲಂ ಕಾಂತೆಗಂತಾ ದಿನಂ (ಜಾತಕ. ೩-೦೬). [ಸಂ.]

**ಪ್ರಸವದಿನ** (ನಾ). ಹೆರಿಗೆಯಂ ದಿನ; ಪ್ರಸೂತಿದಿನ : ಸ್ತ್ರೀ ಪೂರ್ಣಗರ್ಭಿಣಿ; ಪ್ರಸವದಿನದಲ್ಲಿ ಎಷ್ಟು ಹೊತ್ತಿಗೆ ಜನನವಾಗುತ್ತದೆ? (ಜಾತಕ. ೩-೦೯ ಟೀಕೆ). [ಸಂ.]

**ಪ್ರಸವನಕ್ಷತ್ರ** (ನಾ). [ಜ್ಯೋತಿ] ಮಗು ಹುಟ್ಟಿದ ಕಾಲದಲ್ಲಿ ಪ್ರಧಾನ ವಾಗಿರುವ ನಕ್ಷತ್ರ ; ಜಾತಕನ ನಕ್ಷತ್ರ; ಜನ್ಮತಾರೆ : ಆಧಾನ ಅಥವಾ ಪ್ರಶ್ನಕಾಲದ ಚಂದ್ರಸ್ಫುಟದಿಂದ ಪ್ರಸವನಕ್ಷತ್ರವನ್ನೂ ತಿಳಿಯಬಹುದು (ಜಾತಕ. ೩-೦೯ ಟೀಕೆ). [ಸಂ.]

**ಪ್ರಸವಬಂಧ** (ನಾ). ಹೂವಿನ ತೊಟ್ಟು,—ಕಾವು : "ಪ್ರಸವಬಂಧಂ ವೃಂತಮೆನೆ ಪೂದೊಡಂಬೆಗಳ ಪೆಸರಕ್ಕು" (ಪಂಗರಾ. ೩೩-೩). [ಸಂ.]

**ಪ್ರಸವಬಂಧನ** (ನಾ). = ಪ್ರಸವಬಂಧ : "ವೃಂತಂ, ಪ್ರಸವಬಂಧನಂ,— ಈ ೨ ಹೂವಿನ ತೊಡಂಬೆ" (ಹಲಾಯು. ೩೦-೩೦). [ಸಂ.]

**ಪ್ರಸವವೇದನೆ** (ನಾ). ಹೆರಿಗೆಯ ಕಾಲದ ನೋವು, –ಯಾತನೆ : ಬೆಳಗ್ಗೆ ಶುರುವಾದ ಪ್ರಸವವೇದನೆ ರಾತ್ರಿಯಾಗಿ ಮತ್ತೆ ಬೆಳಗಾದರೂ ಮುಗಿಯಲಿಲ್ಲ (ಅನಾಥೆ. ೨೦೭). [ಸಂ. ಪ್ರಸವವೇದನ]

**ಪ್ರಸವವೇಧೆ** (ನಾ). = ಪ್ರಸವವೇದನೆ : ಸಮುದ್ರಾಂಬೆ ತಾಂ ದ್ವೀಪ ಪ್ರಸವವೇಧೆಯಿಂದೊಯ್ಯನುತ್ತರಿಸಿ (ಶ್ರೀರಾಮಪ. ೦೬೩-೩೬೩). [ಸಂ. ಪ್ರಸವವೇಧ]

**ಪ್ರಸವಶಾಸ್ತ್ರ** (ನಾ). ಹೆರಿಗೆಯಂ ವಿಷಯಕ್ಕೆ ಸಂಬಂಧಿಸಿದ ಶಾಸ್ತ್ರ : ಪ್ರಸವಶಾಸ್ತ್ರದ ವ್ಯಾಸಂಗ ಮುಗಿದ ನಂತರ ಅವಳು ಕ್ರಾಂತಿಸಮ್ಮೇಲನದ ಜನರೊಂದಿಗೆ ಸಂಬಂಧ ಬೆಳೆಸಿದಳು (ಕೃಷರು. ೨೪೦). [ಸಂ.]

**ಪ್ರಸವಶಾಸ್ತ್ರಜ್ಞ** (ನಾ). ಹೆರಿಗೆಯ ಶಾಸ್ತ್ರವನ್ನು ತಿಳಿದವನು: ಗರ್ಭದ ಚಲನೆಗಳ ಮುಖಾಂತರ ಕಾರ್ಯಕಾರಿಯಾಗುವಂತೆ ಕಾಣುವ ಭಗವಂತನ ಆಂತರಿಕ ಇಕ್ಕುಳಗಳು, ಆಧುನಿಕ ಪ್ರಸವಶಾಸ್ತ್ರಜ್ಞರ ಬಾಹ್ಯ ಇಕ್ಕುಳಗಳು— ಇವುಗಳಲ್ಲಿಯ ವಿರೋಧವನ್ನು ಕಾಣಿಸಲಾಗಿದೆ (ಶರಶ. ೧೩೬). [ಸಂ.]

**ಪ್ರಸವಸಮಯ** (ನಾ). = ಪ್ರಸವಕಾಲ : ಪ್ರಸವಸಮಯದೊಳಾದಾ ಪತ್ತಂ . . . ಉಣ್ಬುದುಂ (ಜಾವುಂಪು. ೩೦೩); ಪ್ರಸವಸಮಯಮನೆ ಪಾರ್ದಿರ್ದಸುರಂ ಬಂದೆನ್ನ ಶಿಶುವನುಯ್ವುದುಗೆಟ್ಟೇ ಬಸಿಱೊಳ್ ಕರಗಿಸೆ ಪಡೆದೆಂ ಪೊಸತಪ್ಪದವಟಲಂ (ಜಗಪು. ೨-೬೫); ತನ್ಮಹಾದೇವಿಯ ಪರಿಪೂರ್ಣ ಪ್ರಸವಸಮಯಂ ಮಾರ್ಗಶಿರ ಬಹುಳದಶಮಿಯಾಗೆ (ಕೃಷ್ಣಕು. ೦೦-೦೪). [ಸಂ.]

**ಪ್ರಸವಾಂಗ** (ನಾ). [ಜೈನ] ಹತ್ತು ಬಗೆಯ ಕಲ್ಪಕುಜಗಳಲ್ಲಿ ಒಂದಂ; ಹೂಮಾಲೆಗಳನ್ನು ಒದಗಿಸುವ ಕಲ್ಪವೃಕ್ಷ : ವಸನಾಂಗಾತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗಾನ್ನಾಂಗ ಸುರಾಂಗ ಭಾಜನಾಂಗಾ ವಸಥಾಂಗ ವಿಭೂಷಣಾಂಗ ದಶಕಲ್ಪಕುಜಂ (ಚಂದ್ರಪ್ರಭ. ೩-೩೪). [ಸಂ.]

**ಪ್ರಸವಾಗಾರ** (ನಾ). ಹೆರಿಗೆಮನೆ; ಸೂತಿಕಾಗೃಹ : ಪ್ರಸವಾಗಾರದಂತೆ ನಿಷಿದ್ಧಾನ್ಯಪ್ರವೇಶಮುಂ ರಾಜಭವನದಂತೆ ಕೃತರಕ್ಷಾವಿಧಿಯುಂ. . .ಅಪ್ಪ ತಮಿಸ್ರಗುಹೆಯನೆಯ್ದಿದಾಗಳ್ (ಆದಿಪು. ೦೩-೪೬ ವ). [ಸಂ.]

**ಪ್ರಸವಾಲಯ** (ನಾ). = ಪ್ರಸವಾಗಾರ : ಪ್ರಸವಾಲಯದೊಳ್ ಜಗತೀ ಪ್ರಸವಾಭಾರಕ್ಕೆ ಕಿಟ್ಟು ಕೆಲದೊಳ್ಸಾರ್ದಿರ್ದಸಿಲತೆಗೆ ಕಾಳಬಜ್ಜರಿವೆಸ ರಾಯ್ತೆಂದಿಂಗೆ ಕೃಷ್ಣನಂಗಚ್ಛವಿಯಿಂ (ಅನಂಪು. ೦೨-೬೩). [ಸಂ.]

**ಪ್ರಸವಿತ** (ಗು). ಹೂವು ಬಿಟ್ಟ ; ಪುಷ್ಪಿತವಾದ : ಸುರದ್ರುಮ ವಂಕುರಿತ ಪಲ್ಲವಿತ ಕೋರಕಿತ ಪ್ರಸವಿತ ಫಲಿತ ಪರಂಪರದಾ ವಿವರದಿಂ ವರ್ಧಿಸಿತೆನುತ (ಶಿಸಪು. ೩೩-೪೯).

[P ಇದು 'ಪಲ್ಲವಿತ', 'ಕೋರಕಿತ' ಮುಂತಾದ ಸಂಸ್ಕೃತಶಬ್ದಗಳ ರೂಪಸಾಮ್ಯದಿಂದ ಮಾಡಿಕೊಂಡ ಶಬ್ದವಿರಬಹುದು]

**ಪ್ರಸವಿತೃ** (ನಾ). ಜನ್ಮ ಕೊಡುವವನು; ತಂದೆ. [ಸಂ.]

**ಪ್ರಸವಿಸು** (ಕ್ರಿ). ಹೆರು; ಹಡೆ : ಭೂಮಿಯ ರಾಕ್ಷಸಸೇನೆಯಂ ಪ್ರಸವಿ ಸಿತೊ (ಸೌಗಂಧಿ. ೨೬೬-೨). [ಪ್ರಸವ + – ಇಸು]

**ಪ್ರಸವೋತ್ಸವ** (ನಾ). ಹೆರಿಗೆಯಾದಾಗ ಮಾಡುವ ಸಮಾರಂಭ ;

ಜನ್ಮೋತ್ಸವ : ಮಹತ್ತರದಿಕ್ಕುಮಾರಿಯರೆಣ್ಬರುಮಂ ಪ್ರಸವೋತ್ಸವೋತ್ಸವದೊಳ್ ತುಂಗಭೃಂಗಾರುಗಳಂ ಪೊತ್ತು ನಡೆಯಲಿಂದ್ರಂ ಬೆಸಸಿದಂ (ಶಾಂತಿಪು. ೯-೦೬೪೪); ಮೂಡಿದ ಶೀತದೀಧಿತಿಗೆ ಕಾಲಪಿತಂ ಪ್ರಸವೋತ್ಸವಂಗಳಂ ಮಾಡುವ ವ್ಯಾಳ್ಕೆಯಿಂ . . . ಮಾಡಿದನಳ್ಕಱಿಂದೆ ಗಿರಿರಾಜನಜಾತೆಗೆ ಜಾತಕರ್ಮಮಂ (ಗಿರಿಶ. ೩-೩೬). [ಸಂ.]

**ಪ್ರಸವ್ಯ** (ಗು). ೧. ಎಡಗಡೆಗೆ ತಿರುಗಿದ. ೨. ಪ್ರತಿಕೂಲವಾದ; ವಿರುದ್ಧವಾದ. ೩. ಅನುಕೂಲವಾದ. (ನಾ). ೪. ವಿರುದ್ಧವಾದುದು ; ಪ್ರತಿಕೂಲವಾದುದು : "ಪ್ರತಿಕೂಲಂ, ಪ್ರತಿಲೋಮಂ, ಪ್ರತೀಪಂ, ಪ್ರಸವ್ಯಂ—ಈ ೪ ಪ್ರತಿಕೂಲಂ" (ಹಲಾಯು. ೧೨೨-೫೬). [ಸಂ.]

**ಪ್ರಸಸ್ತಿ** (ನಾ). ಗೌರವಸೂಚಕವಾದ ಪದವಿ ; ಬಿರುದು : ಪಾರ್ವತೀವಲ್ಲಭಚರಣಸರಸೀರುಹಭೃಂಗಂ ಮಹಾಮಹಿಮೋತ್ತುಂಗಂ ನಾಮಾದಿ ಸಮಸ್ತಪ್ರಸಸ್ತಿಸಹಿತಂ (ಸೌಇಇ. XX. ೪೬-೩೫; 1072) ; ಆಂಗೀರಸಂವತ್ಸರದ ಫಾಲ್ಗುಣ ಸು ೧ ಆ ಸ್ವಸ್ತಿಸಮಸ್ತಪ್ರಸಸ್ತಿಸಹಿತಂ ಪೊಡರಹಳಿಯ ಚೇಚಗವುಡನ ಮಗ ಕೇತಗವುಡನು . . . ಎತಿಸಿದ ಬೀರಗಲು (ಎಕ. II. ೪೦೫-೨;1273). [P ಇದು 'ಪ್ರಶಸ್ತಿ' ಎಂಬುದರ ಅಪಲಿಖಿತ]

**ಪ್ರಸಹ** (ಗು). ೧. ಸ್ಥಿರವಾದ; ಶಾಶ್ವತವಾದ : ಅಸಹಾಯಸಾಹಸ ವಿನೋದಿ ವಿವಿಕ್ತಚಿತ್ರಪ್ರಸಹ[ಶಾಶಾಂ. ವ]ಪ್ರಕಾಶಿತಮಹೋದಯತತ್ತ್ವಸತ್ತ್ವಂ ವ್ಯಸನವ್ಯಪೇತ[ಸು]ಪನೀತಕಲಾಕಲಾಪಂ ಶಶಿಖಂಡನಿರ್ಮಲಯಶೋವಿವಿಧಾವತಂಸಂ (ಕವಿರಾ. ೩-೨೨೯). (ನಾ). ೨. ಸಹನೆ; ತಾಳ್ಮೆ. ೩. ಮಾಂಸಾಹಾರಿಯಾದ ಪಕ್ಷಿ ಅಥವಾ ಪ್ರಾಣಿ. [ಸಂ.]

**ಪ್ರಸಹ್ಯ** (ಗು). ೧. ಬಲವಂತದ; ಒತ್ತಾಯದ. (ನಾ). ೨. ಒತ್ತಾಯ; ಬಲಾತ್ಕಾರ : "ಪ್ರಸಹ್ಯಂ — ೧. ಹಠಾರ್ಥಕಂ — ಬಲಾತ್ಕಾರವು" (ಸಿದ್ಧಾಂತಿ. ೪೩೪). [ಸಂ.]

**ಪ್ರಸಾದ** (ನಾ). ೧. ಅನುಗ್ರಹ; ಕೃಪೆ : ಕುಲಮುದ್ದ ನೀನೀ ಕಯ್ಯ ಪೊಕ್ಕು ಕಾದೆನ್ನು ಬೆಸಸೆ ಪ್ರಸಾದಮೆನ್ದಯ್ದಿ ಕಿಟ್ಟಿ ಕಾದಿ (ಎಕ.VIII. ಸೊರಬ. ೦೦-೬, ಸು; 800) ; ಪದ್ಮಲದೇವಿ ರಾಜಸುತವಿರ್ಪ್ಪಳು ಹುಳ್ಳರಾಜಾನ್ತರಂಗ ಮರಾಳಂ ರಮಿಯಿಪ್ಪ ಪದ್ಮಿನಿಯವೊಲು ನಿತ್ಯಪ್ರಸಾದಾಸ್ಪದಂ (ಎಕ.II, ೩೪೭-೦೨; ಸು, 1165); ಈ ಶಾಸನದಲ್ಲಿ ವಿಕ್ರಮಾದಿತ್ಯನು ಪಲ್ಲವರನ್ನು ನಿರ್ಮೂಲ ಮಾಡಿದ್ದನೆಂದೂ ಅವನ ಪ್ರಸಾದದಿಂದ ಜಯಸಿಂಹವರ್ಮನಿಗೆ ರಾಜ್ಯ ಸಿಕ್ಕಿತೆಂದೂ ಬರೆದಿದೆ (ಕರ್ಣಾಟ.೬೮). ೨. ಶಾಂತಿ; ಸಮಾಧಾನ; ಸ್ವಾಸ್ಥ್ಯ: ಕೋಪಪ್ರಸಾದಮಂ ತದ್ಭೂಪತಿ ದುಷ್ಟರೊಳದುಷ್ಟರೊಳ್ ತಳೆದಂ (ಚಂದ್ರಪ್ರ. ೨-೬೨). ೩. ಸ್ಪಷ್ಟಗೊಳಿಸುವುದು; ತಿಳಿಯುವಂತೆ ಹೇಳುವುದು: "ಪ್ರಸಾದಃ, ಪ್ರಣಯಃ—ಈ ೨ ತಿಳಿ(ಪು)ಹುವುದು" (ಹಲಾಯು. ೦೨೭-೮೮). ೪. ನೈರ್ಮಲ್ಯ ; ಪರಿಶುದ್ಧತೆ. ೫. ದೇವರಿಗೆ ಅಥವಾ ಗುರುವಿಗೆ ನಿವೇದಿಸಿ ಅನುಗ್ರಹರೂಪವಾಗಿ ಪಡೆಯುವ ಆಹಾರ; ನೈವೇದ್ಯ ಮಾಡಿದ ಪದಾರ್ಥ : 'ತೀರ್ಥ ಕುಡಿದರೆ ಥಂಡಿ ; ಪ್ರಸಾದ ತಿಂದರೆ ಅಜೀರ್ಣ' ಎನ್ನುವಂತಹ ನಾಜೂಕಾದ ಪ್ರಕೃತಿ (ಮೂರುದಾ. ೪೯); ಪ್ರತಿದಿನ ಪುರಾಣ ಮುಗಿದ ಬಳಿಕ ಅವನು ಪ್ರಸಾದ ಹಂಚುವಾಗಲೂ ತಿಮ್ಮಿಯನ್ನು ಕಾಣುತ್ತಿರಲಿಲ್ಲ (ಜೀವರಂ.೫೦) ; ದಾಸಿ ಅಲ್ಲಿ ತಂದಿಟ್ಟಿದ್ದ ಚಿನ್ನದ ಹರಿವಾಣದಲ್ಲಿ ತಾವು ತಂದಿದ್ದ ತೀರ್ಥ ಪ್ರಸಾದಗಳನ್ನಿಟ್ಟರು (ಕೃಷ್ಣಭೂ.೨೪). ೬. ರುಚಿಕರವಾದ ಆಹಾರ. ೭. ಅನ್ನ : ಮಠದ ಸಂತರ್ಪಣೆಯಲ್ಲಿ ಅನ್ನವನ್ನು ಬಡಿಸುವಾಗ, 'ಪ್ರಸಾದ ಬೇಕೆ?' ಎಂದು ಕೇಳುತ್ತಾರೆ (ರೂಢಿ). ೮. (ಆಲಂ) ಹೊಡೆತ; ಏಟು; ಪೆಟ್ಟು : ಘನವಾದ ಪ್ರಸಾದ ಪಡೆದು ಮೂರು ತಿಂಗಳು ಆಸ್ಪತ್ರೆಯಲ್ಲಿ ಮಲಗಿ ಮೊನ್ನೆ ಮೊನ್ನೆ ಡ್ಯೂಟಿಗೆ ಬಂದಿದ್ದ (ಬಂಗಬ. ೦೦೩) ; ಕಾಲಿನ ಬೆರಳಿಗೆ ಅರಿವೆ ಸುತ್ತಿಕೊಂಡದ್ದು ಕಾಣಿಸಿತು. "ಇದೇನು ಮಹಾರಾಯ ?" ಎಂದು ಪ್ರಶ್ನಿಸಿದೆ. "ನಿನ್ನೆಯ ಪ್ರಸಾದ, ಮೂರು ಮೂರು ಸಾರಿ ಒಲ ಹೆಬ್ಬೆರಳಿಗೆ ಬೇರು ಬಡಿದು ಇಷ್ಟು ಬಾತುಕೊಂಡಿವೆ . . . ಎಂಬ ಉತ್ತರ ಬಂದಿತು (ಮೂಕಜ್ಜ. ೮೦). ೯. [ವೀಶೈ] ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರಗಳೆಂಬ ಅಷ್ಟಾವರಣಗಳಲ್ಲಿ ಒಂದು; ಗುರು, ಲಿಂಗ, ಜಂಗಮಕ್ಕೆ ಎಡೆಮಾಡಿ ಅವರಿಂದ ಅನುಗ್ರಹವಾಗಿ ಬಂದುದೆಂದು ಸ್ವೀಕರಿಸುವ ಭೋಜ್ಯಪದಾರ್ಥ : ಗಂಡ ಕೊಂಬುದು ಪಾದೋದಕಪ್ರಸಾದ ಹೆಂಡತಿ ಕೊಂಬುದು ಸುರೆ ಮಾಂಸ (ಬಸವ.೦೦೪); ಮೋಹದ ಮುನಿಸು ಮನದೊಳ್ ತೀವಿ ಪ್ರಣಯಕಲಹಂ ಬಲಿದು ಪ್ರಸಾದಮನೊಲ್ಲದೆ ಬಸವಂ ಮುಸುಂಕಿಟ್ಟು . . . ಪಟ್ಟಿರ್ದಿರೆ (ಬಸರ.೪-೪೩); ಜೀವನು ಗಡಿಗೆಯಿಂದ ನೀರನ್ನು ತರುವಾಗ ಆ ನೀರು ಪದಾರ್ಥ; ಶಿವ ನಿಗರ್ಪಿತವಾದ ಮೇಲೆ, ಅವನಿಗೆ ಅದು ಪ್ರಸಾದ (ಶಕ್ತಿ.೬.೫೭). ೧೦. [ಕಾವ್ಯಮೀ] ಕಾವ್ಯದ ಹತ್ತು ಅರ್ಥಗುಣಗಳಲ್ಲಿ ಒಂದು; ಸುಲಭವಾಗಿ ತಿಳಿಯುವಂಥ ಕಾವ್ಯರಚನಾಶೈಲಿ; ಸ್ಫುಟವಾದ ಶೈಲಿ; P "ಓಜಸ್ಸು (ಬಿಗಿಯಾದ ರಚನೆ) ಮತ್ತು ಶೈಥಿಲ್ಯ (ಬಿಗಿಯಿಲ್ಲದ ರಚನೆ) ಇವುಗಳ ಬೆರಕೆ" (ಕೃಷಿಡಿ.೨೩೩): ಅಸಮಸ್ತಪದನ್ಯಾಸಂ ಪ್ರಸಾದ ಮಾಧುರ್ಯ ಗುಣಸಮಗ್ರಮುದಾರಂ ರಸಭಾವಭಾವಿತೋಕ್ತಿಪ್ರಸರಂ ವೈದರ್ಭರೀತಿಯೆನೆ ಪೆಸರ್ವಡೆಗುಂ (ಕಾವ್ಯಾವ. ೬೮೨); ಪ್ರಸಾದ ಎಂದರೆ ಕಿವಿಗೆ ಬೀಳುತ್ತಿದ್ದ ಹಾಗೆಯೇ ಕ್ಲೇಶವಿಲ್ಲದೆ ವಾಚ್ಯಾರ್ಥವನ್ನು ಸಮರ್ಪಿಸುವ ಶಕ್ತಿ (ಭಾರಶಿಪಾ. ೬೨). [ಸಂ.]

**ಪ್ರಸಾದಂಗೆಯ್** (ಕ್ರಿ). (ಅನುಗ್ರಹ ಅಥವಾ ಪ್ರಸನ್ನತೆಯನ್ನು ಪಡೆಯುವ ಉದ್ದೇಶದಿಂದ) ದಾನವಾಗಿ ಕೊಡು: ಪರಮುಕುಳರ್ಮ್ಮಗನ್ದಿರರಕೇಸಿಗಳಾಣತ್ತಿ ಅಗ ಪಳ್ಳಿಟ್ಟಿಟ್ಟು ಪ್ರಸಾದಂಗೆಯ್ದಾರ್ (ಎಕ. III. ತಿರುಮ. ೦-೯; 726) ; ರಣವಿಕ್ರಮರಸರ್ವ್ವಾಡಾಳೆ ರಸಪ್ಪಮೇ ನೋಸ್ತು ಪ್ರಸಾದಂಗೆಯ್ದರ್ (ಎಕ.XVI. ಗುಬ್ಬಿ. ೬೫-೪೬;733) ; ಈ ಊರನ್ನ ಸರ್ವ್ವಬಾಧಾಪರಿಹಾರಮಾಗೆ ಪ್ರಸಾದಂಗೆಯಿ (ಸೌಇಇ. IX-i, ೪೬-೫, ೩ನೆಯ ಶತ). [ಪ್ರಸಾದ+ಕೆಯ್$_1$]

**ಪ್ರಸಾದಕರ್ಮ** (ನಾ). [ವೀಶೈ] ಶುಭ, ಅಶುಭ, ಜ್ಞಾನ, ಪ್ರಸಾದಗಳೆಂಬ ನಾಲ್ಕು ಬಗೆಯ ಕರ್ಮಗಳಲ್ಲಿ ಒಂದು ; ಶಿವನ ಅನುಗ್ರಹವನ್ನು ಪಡೆಯುವ ಕಾರ್ಯ: ಕರ್ಮ ಅಶುಭಕರ್ಮವು, ಶುಭಕರ್ಮ, ಜ್ಞಾನಕರ್ಮ, ಪ್ರಸಾದಕರ್ಮವೆಂದು ನಾಲ್ಕು ತೆರನಾಗಿರುವುದು . . . ಪಾಪ ಪುಣ್ಯ ಜ್ಞಾನಗಳು ಮೂರನ್ನು ಬಿಟ್ಟು, ಶಿವಪ್ರಸಾದವನ್ನು ಸಂಪಾದಿಸಿದರೆ, ಆ ಪ್ರಸಾದಕರ್ಮದಿಂದ ಭಕ್ತಿಯು ಲಭಿಸುವುದು (ಶಿವಾಸೂ.೦೩೦). [ಸಂ. ಪ್ರಸಾದಕರ್ಮನ್]

**ಪ್ರಸಾದಕಾಯ** (ನಾ). [ವೀಶೈ] ಲಿಂಗಪೂಜೆಯ ನಂತರ ಮಂತ್ತೊಂದು ಪೂಜೆಗೆ ಪ್ರಾರಂಭಿಸುವ ತನಕದ ಅವಧಿಯಲ್ಲಿ ಶಿವಭಕ್ತನ ದೇಹವು ಪಡೆಯುವ ಹೆಸರು : ಕೂಡಲಸಂಗಮದೇವನೊಲಿಸ ಬಂದ ಪ್ರಸಾದಕಾಯವು ಕೆಡಿಸಲಾಗದು (ಬಸವ. ೬೪) ; ಪ್ರಸಾದಕಾಯವಾದ ಬಳಿಕ ಸರ್ವಾಂಗ ಉತ್ತಮಾಂಗ (ಚನ್ನವ.೮-೫೩೩-೦೨೬೩); ಭಕ್ತನು ತನ್ನ ಭಕ್ತಿ ಪ್ರಭಾವದಿಂದ ಪೂಜಾದಿಯಿಂದ ಪೂಜಾಂತದವರೆಗೂ ಪದಾರ್ಥಕಾಯನಾಗಿರುವನು ಮತ್ತು ಪೂಜಾಂತದಿಂದ ಪೂಜಾದಿಯವರೆಗೂ ಪ್ರಸಾದಕಾಯನಾಗಿರುವನು (ಶಿವಾಸೂ.೦೦೮). [ಸಂ.]

**ಪ್ರಸಾದತ್ರಯ** (ನಾ). [ವೀಶೈ] ಗುರು, ಲಿಂಗ, ಜಂಗಮಗಳಿಗೆ ಸಮರ್ಪಿಸಿ ಪಡೆಯುವ ಶುದ್ಧ, ಸಿದ್ಧ, ಪ್ರಸಿದ್ಧಗಳೆಂಬ ಮೂರು ಬಗೆಯ ಪ್ರಸಾದಗಳು : "ಪ್ರಸಾದತ್ರಯ—ಶುದ್ಧ, ಸಿದ್ಧ, ಪ್ರಸಿದ್ಧ" (ಕರಶಾ. ೨೪-೭). 'ತ್ರಿವಿಧಪ್ರಸಾದ' ಪರಾ. [ಸಂ.]

**ಪ್ರಸಾದದ್ರೋಹ** (ನಾ). [ವೀಶೈ] ಪಂಚಮಹಾಪಾತಕಗಳಲ್ಲಿ ಒಂದು; ಗುರುಪ್ರಸಾದಕ್ಕೆ ಸರಿಯಾಗಿ ನಡೆದುಕೊಳ್ಳದಿರುವುದು : ಗುರು ಕಾರುಣ್ಯವ ಪಡೆದ ಭಕ್ತನು ಹಿಂದಣ ಪೂರ್ವಾಶ್ರಯವ ಬೆರಸಿದರೆ ಗುರು ದ್ರೋಹ ಲಿಂಗದ್ರೋಹ ಜಂಗಮದ್ರೋಹ ಆಚಾರದ್ರೋಹ ಪ್ರಸಾದ ದ್ರೋಹ ಇಂತೀ ಪಂಚಮಹಾಪಾತಕಂಗಳು ಭಕ್ತಂಗಲ್ಲದೆ ಭವಿಗೆಲ್ಲಿಯದೊ (ಬಸವ.೬೬೭). [ಸಂ.]

**ಪ್ರಸಾದನ** (ನಾ). ೧. ಶುದ್ಧಪಡಿಸುವಿಕೆ; ಸ್ವಚ್ಛತೆಗೊಳಿಸುವುದು. ೨. ಸಮಾಧಾನಪಡಿಸುವುದು ; ಸಂತೈಸುವುದು. ೩. ಸಂತೋಷ ಗೊಳಿಸುವುದು : ಇಲ್ಲಿ ಕೋಪ ಪ್ರಸಾದನಪರವಾದ 'ಚಾಟು' ವ್ಯಂಗ್ಯ ಎನ್ನಬಹುದು (ಧ್ವನ್ಯಾಲೋ. ೦೬ ಅವತ). ೪. ಉಪಚಾರ ಮಾಡುವುದು ; ಸೇವೆ ; ಶುಶ್ರೂಷೆ: "ವರಿವಸ್ಯಾ . . . ಪ್ರಸಾದನಃ, ಆರಾಧನಃ, ಉಪಚಾರಃ—ಈ ೧೧ ಬೆಸಕೆಯ್ವುದರ್ಕೆ ಪೆಸರ್" (ಹಲಾಯು. ೨೦-೦೨೯). [ಸಂ.]

**ಪ್ರಸಾದಭಕ್ತ** (ನಾ). [ವೀಶೈ] ದೈವಾನುಗ್ರಹಕ್ಕೆ ಪೂರ್ಣಪ್ರಾಪ್ತ ನಾದವನು ; ಪರಮಶರಣ: ಶಿವಾಶಿವಾ ಪ್ರಸಾದಭಕ್ತರ ತೋಱಿ ಸಯ್ಯಾ ಹರಹರಾ ಪ್ರಸಾದವೇ ಪ್ರಾಣ[ಣ]ವಾಗಿರ್ಪ ಪರಮಭಕ್ತರ ತೋಱಿಸಯ್ಯಾ (ಶಿಖಂಡೇ.೦೬೦-೨೦). [ಸಂ.]

**ಪ್ರಸಾದಲಿಂಗ** (ನಾ). [ವೀಶೈ] ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳೆಂಬ ಆರು ವಿಧ ವಾದ ಲಿಂಗಗಳಲ್ಲಿ ಒಂದು : ಪ್ರಸಾದಲಿಂಗವುಳ್ಳನ್ನಕ್ಕರ ಪ್ರಾಣಲಿಂಗ ವೆಂಬ ವಾರ್ತೆ ಭಂಗ ನೋಡಾ (ಅವತಂ. ೨೫೩-೦೦೫೩); ಪರಂಜ್ಯೋತಿ ಸ್ವರೂಪ, ಸತ್ಯ, ಅಖಂಡ, ಇಂದ್ರಿಯಗೋಚರ, ಅಮೃತಸ್ವರೂಪ ಜಗತ್ಪರಿಣಾಮಕಾರಣವೂ ಆಗಿ, ಪರಾಶಕ್ತಿಯುಕ್ತವೂ ಸಾದಾಖ್ಯ ತತ್ತ್ವಾಶ್ರಯವೂ ಉಪಾಧಿರಹಿತವೂ ಜ್ಞಾನಗಮ್ಯವೂ ಆಗಿರುವ ಲಿಂಗವನ್ನೇ ಪ್ರಸಾದಲಿಂಗವೆಂದು ಹೇಳುತ್ತಾರೆ (ಶಿವಾಸೂ. ೯೦-೨೯ ಅವತ). [ಸಂ.]

**ಪ್ರಸಾದವಿಕಾರಿ** (ನಾ). [ವೀಶೈ]ಅನುಗ್ರಹದ ಅಭಿಮಾನಕ್ಕೆ ಒಳಗಾದ ವನು : ಲಿಂಗವಿಕಾರಿಗೆ ಅಂಗವಿಕಾರವೆಂಬುದಿಲ್ಲ ಜಂಗಮವಿಕಾರಿಗೆ ಧನ ವಿಕಾರವೆಂಬುದಿಲ್ಲ ಪ್ರಸಾದವಿಕಾರಿಗೆ ಮನವಿಕಾರವೆಂಬುದಿಲ್ಲ (ಬಸವ.೬೯೩). [ಸಂ. ಪ್ರಸಾದವಿಕಾರಿನ್]

**ಪ್ರಸಾದವಿನಿಯೋಗ** (ನಾ). ಪ್ರಸಾದವನ್ನು ಹಂಚುವುದು; ಚರಪ್ರ ಹಂಚುವುದು : ವಿರೂಪಾಕ್ಷನಿಗೆ ಮಹಾಮಂಗಳಾರತಿ ಬಹುವಿಜೃಂಭಣೆ ಯಿಂದ ನಡೆಯುತ್ತಿದೆ. ಮುಂದೆ—ಮಂತ್ರಪುಷ್ಪ ; ರಾಜಾಶೀರ್ವಾದ ; ಪ್ರಸಾದವಿನಿಯೋಗ (ಕಂದುಪತ್ರ. ೩೨). [ಸಂ.]

**ಪ್ರಸಾದಶರೀರಿ** (ನಾ). [ವೀಶೈ] ಭಸ್ಮ ಮೊದಲಾದುವುಗಳನ್ನು ದೇಹದ ಮೇಲೆ ಧರಿಸಿಕೊಂಡಿರುವವನು : ಅನುರಕ್ತಿಸಲು ಸದ್ಯ ಪ್ರಸಾದಶರೀರಿಯಂ ಮಾಡಿ ತ್ವಕ್ಕಾಯುಪ್ರಾಣಸದ್ವಿದ್ಯೋಕ್ತಿಗಳನಳವಡಿಸಿ (ಬಸಪು. ೯೯-೩೪). [ಸಂ. ಪ್ರಸಾದಶರೀರಿನ್].

**ಪ್ರಸಾದಸೇವನೆ** (ನಾ). [ವೀಶೈ] ಗುರು, ಲಿಂಗ, ಜಂಗಮಾದಿಗಳಿಗೆ ಅರ್ಪಿಸಿ ಅನುಗ್ರಹವಾಗಿ ಪಡೆದುದನ್ನು ತಿನ್ನುವುದು,—ಸೇವಿಸು ವುದು : ಸದ್ಗುರುಶಂಭುಸೋಮೇಶ್ವರನ ಭಜಿಸಿ ಪ್ರಸಾದಸೇವನೆಯ ಮಾಡದಿರಲಘೋರನರಕ (ಶಿವಗೀ. ೯೬-೨೦೭). [ಸಂ. ಪ್ರಸಾದಸೇವನ]

**ಪ್ರಸಾದಿ** (ನಾ). ೧. ಶುದ್ಧಗೊಳಿಸುವುದು. ೨. ಸಮಾಧಾನ ಗೊಳಿಸುವುದು ; ಸಂತೈಸುವುದು. ೩. ಸಂತೋಷಗೊಳಿಸು ವುದು ; ಹರ್ಷವನ್ನುಂಟುಮಾಡುವುದು. ೪. [ವೀಶೈ] ಪ್ರತಿ ಯೊಂದು ಭೋಗಪದಾರ್ಥವನ್ನೂ ಮೊದಲು ಲಿಂಗಕ್ಕೆ ಅರ್ಪಿಸಿ, ಆಮೇಲೆ ಅದನ್ನು ಭಕ್ತಿಪೂರ್ವಕವಾಗಿ ಪ್ರಸಾದರೂಪದಲ್ಲಿ ಸ್ವೀಕರಿಸುವವನು : ಪರಸ್ತ್ರೀಯ ಪರರರ್ಥದಾಸೆ ಬಿಡದನ್ನಕ್ಕ ಪ್ರಸಾದಿ ಯೆಂತೇಬೆನಯ್ಯಾ (ಬಸವ. ೩೦೦) ; ರುದ್ರಪಶುಪತಿ ಮಂತ್ರವಾದಿ ಜಗದ್ರಮಣ ನಿಮ್ಮ ಪ್ರಸಾದಿ . . . ಚೇರಮಮಹೇಶನು ನಿಮ್ಮ ದಳವಾಯಿ (ಬಸಪು. ೯-೪೩) ; ಪ್ರತಿಯೊಂದು ಇಂದ್ರಿಯದ ಮುಖದಿಂದಲೂ ತಾನು ಅನುಭವಿಸುವ ಪದಾರ್ಥಗಳನ್ನು ಮೊದಲು, ಲಿಂಗಕ್ಕೆ ಸಮರ್ಪಿಸಿ, ಬಳಿಕ ಅರ್ಪಿತಪದಾರ್ಥವನ್ನು ಅವಧಾನಭಕ್ತಿಪೂರ್ವಕವಾಗಿ . . . ಪರಿಗ್ರಹಿಸುತ್ತಿರುವುದೇ ಪ್ರಸಾದಿಯ ಲಕ್ಷಣ (ಶಿವಾಸೂ. ೩೯). ೫. ಷಟ್ಸ್ಥಲ ಗಳಲ್ಲಿ ಒಂದು ; ಮೂರನೆಯ ಸ್ಥಲ : ಈ ಭಕ್ತಿಮಾರ್ಗವನ್ನು ಅನುಸರಿಸುತ್ತಾ ಹೋದರೆ ಕ್ರಮವಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಆಧ್ಯಾತ್ಮಿಕಸ್ಥಾನಗಳನ್ನು ಹೊಂದುತ್ತಾನೆ (ಭಾರದ. ೨೦೭). [ಸಂ. ಪ್ರಸಾದಿನ್]

**ಪ್ರಸಾದಿತ** (ಗು). ೧. ತಿಳಿಯಾದ ; ಪರಿಶುದ್ಧವಾದ. ೨. ತೃಪ್ತಿ ಗೊಂಡ ; ಸಮಾಧಾನ ಹೊಂದಿದ. ೩. ಅನುಗ್ರಹಕ್ಕೊಳಗಾದ ; ಕೃಪೆ ಹೊಂದಿದ : ಕರುವಾಡದ ಮುಂದಣ ಮಣಿಮಯಪ್ರಘಣದೊಳ್ ಕತಿಪಯಪ್ರಸಾದಿತ ಪರಿವಾರಪರಿವೃತಪಾದಪೀಠನುಂ . . . ಆಗಿ (ಚಂದ್ರಪು. ೯-೨೪ ವ). ೪. ಪ್ರಸಾದವನ್ನು ಪಡೆದ : (೬). (ನಾ). ೫. ಬಹು ಮಾನ ; ಬಳುವಳಿ : (೬). [ಸಂ.]

**ಪ್ರಸಾದಿಸು** (ಕ್ರಿ). ಅನುಗ್ರಹ ಮಾಡು ; ದಯಪಾಲಿಸು ; ನೀಡು : ಪದವಿಗಳು ಗಿದವಿಗಳವೇತಕೆ ಮದನಹರ ನಿಮ್ಮಚಲಭಕ್ತಿ ಸುಪದವಿಯುಂ ಕೃಪೆಯಿಂ ಪ್ರಸಾದಿಸಿ ಸಲುಹು (ಬಸಪು.೨-೨೪). [ಪ್ರಸಾದ+—ಇಸು]

**ಪ್ರಸಾದಿಸ್ಥಲ** (ನಾ). [ವೀಶೈ] ಷಟ್ಸ್ಥಲಗಳಲ್ಲಿ ಒಂದು ; ಮೂರ ನೆಯ ಸ್ಥಲ : ಪ್ರಸಾದಿಸ್ಥಲ ತ್ರಿವಿಧ ಅರ್ಪಿತಪ್ರಸಾದಿ ಅವಧಾನ ಪ್ರಸಾದಿ ಪರಿಣಾಮಪ್ರಸಾದಿ (ಚನ್ನವ .ಕ. ೯೭-೧೦೦) ; ಚರಲಿಂಗಗತವಾದ ಇಚ್ಛಾಶಕ್ತಿಯಿಂದ ಜ್ಯೋತಿರ್ಮಯ ಸುಶೋಭನಶಿವಲಿಂಗವು ಜನಿಸಿತು, ಅದರ ಉಪಾಸನೆಗಾಗಿ ಪ್ರಸಾದಿಸ್ಥಲವುಂಟಾದುದು (ಶಿವಾಸು. ೯೯). [ಸಂ.]

**ಪ್ರಸಾದೋಕ್ತಿ** (ನಾ). ೧. ಅನುಗ್ರಹಿಸುವ ಮಾತು,— ನುಡಿ. ೨. ಸಮಾಧಾನದ ಮಾತು ; ಸಂತೈಸುವ ನುಡಿ : ವನರುಹಗರ್ಭ ಪ್ರಸಾದೋಕ್ತಿಯಂ ಕೇಳ್ದನಿತಾನುಂ ಗದ್ಗದತ್ವಂ ನೆಗೞೆ ವಸುಮತೀಕಾಂತೆ ಯಿಂತೆಂದಳಾಗಳ್ (ಜಗಂ. ೧-೨೯). [ಸಂ.]

**ಪ್ರಸಾಧಕ** (ಗು). ೧. ಶುದ್ಧಗೊಳಿಸುವ ; ಸ್ವಚ್ಛಮಾಡುವ. ೨. ಅಲಂಕರಿಸುವ. (ನಾ). ೩. ಅಲಂಕರಿಸುವವನು. [ಸಂ.]

**ಪ್ರಸಾಧನ** (ನಾ). ೧. ಸಿಂಗರಿಸುವುದು ; ಅಲಂಕರಿಸುವುದು : "ಆಕಲ್ಪಃ . . .ಪ್ರಸಾಧನಂ—ಈ ೫ ಶೃಂಗಾರಂಗೆಯ್ವುದು " (ಹಲಾಯು. ೯೯-೬೭೩). ೨. ಅಲಂಕಾರ ; ಶೃಂಗಾರ : ಪ್ರಸಾಧನವಿರಹಿತೆಯುಂ ನಿರಾನಂದಜನೋಪೇತೆಯುಂ . . . ಆಗಿರ್ದ ತನ್ನನ್ವಯ ರಾಜಧಾನಿ ಯನನುಜಸಮೇತನಪರಾಜಿತನೆಯ್ದೆ ವಂದು (ಶಾಂತಿಪು. ೦-೯೩ ವ) ; ಮಾಲತಿ ಸ್ನಾನ, ಪ್ರಸಾಧನ ತೀರಿಸಿ ಇವರಿದ್ದಲ್ಲಿಗೆ ಬಂದಳು (ವಾತ್ಸಲ್ಯ. ೨೭). ೩. ಒಡವೆ ; ಆಭರಣ : ತನು ತನುವಾದ ಗರ್ಭಿಣಿಗೆ ತತ್ಸಮಯೋಚಿತ ಮಂಗಳಪ್ರಸಾಧನಮೆಸೆದತ್ತು ಕಪ್ಪುರದ ಕಂಠಿಕೆ . . . ಪೂವಿನ ಪಿಂಡುಗಂಕಣಂ (ಕಂಠಾಮಾ. ೩-೧೦೭). [ಸಂ.]

**ಪ್ರಸಾಧನಕರಣ** (ನಾ). ಅಲಂಕರಿಸುವ ಕೆಲಸ ; ಶೃಂಗಾರಕಾರ್ಯ : ಅಂತಃಪುರಕಾಂತೆಯರುಂ ಶಶಿಪ್ರಭಾಪ್ರಸಾಧನಕರಣನಿರತೆಯರಾಗಿ . . . ಪೊಸದುಗುಲಮಂ ನಿಱಿವಿಡಿದುಡಿಸಿಯುಂ (ಚಂದ್ರಪು. ೬-೬೩ ವ). [ಸಂ.]

**ಪ್ರಸಾಧನಿ** (ನಾ). ಬಾಚಣಿಗೆ ; ಹಣಿಗೆ : "ಪ್ರಸಾಧನೀ ಕಂಕತಿಕಾಶಬ್ದಗಳು ಬಾಚಣಿಗೆಯ ಹೆಸರುಗಳು " (ಗುರುಬಾ. ೨೯೩). [ಸಂ. ಪ್ರಸಾಧನೀ]

**ಪ್ರಸಾಧಿತ** (ಗು). ೧. ಅಲಂಕರಿಸಿದ; ಸಿಂಗರಿಸಿದ : ತೀರ್ಥಕರಕುಮಾರಂಗೆ ಸೌಧರ್ಮೇಂದ್ರಂ ಪ್ರಸಾಧಿತ ವಿಷ್ಟಪತ್ರಿತಯನಪ್ಪುದನಱಿದು ಪ್ರಸಾಧನ ಪ್ರಾರಂಭಂಗೆಯ್ಯೆ (ಶಾಂತಿಪು. ೧೦-೫೬ ವ). (ನಾ). ೨. ಅಲಂಕಾರ ಗೊಂಡವನು ; ಸಿಂಗರಿಸಿಕೊಂಡವನು : ಸುರರಾಜಸಮರ್ಪಿತಸಂತಾನ ಕುಸುಮದಾಮಾಂಬರಭೂಷಣಪ್ರಸಾಧಿತಂ ಪುರುದೇವಂ ಮೃಗೇಂದ್ರ ವಿಷ್ಟರದೊಳಿರೆ (ಆದಿಪು. ೮-೭೦ ವ). [ಸಂ.]

**ಪ್ರಸಾರ** (ನಾ). ೧. ಹರಡುವಿಕೆ ; ಹಬ್ಬುವಿಕೆ ; ವ್ಯಾಪ್ತಿ : ಆರ್ಯಸಂಸ್ಕೃತಿಯ ಪ್ರಸಾರವನ್ನು ಪ್ರಭಾವಯುತವನ್ನಾಗಿ ಮಾಡಲು ಇತಿಹಾಸ ಪುರಾಣಗಳ ಪರಿಷ್ಕರಣ ಬಹುಮಟ್ಟಿಗೆ ನಡೆಯಿತು (ಪುಣ್ಯಾರ. ೦೦೬ ೩೯೦೪); ಜನಪದಕಥೆಗಳ ಪ್ರಸಾರ (Diffusion)ದ ದೃಷ್ಟಿಯಿಂದ ಕಿನ್ನರಕಥೆಗಳು ತುಂಬ ಮಹತ್ವದವಾಗಿವೆ (ಸುವರ್ಣ. ೨೫). ೨. ವ್ಯಾಪಾರದ ಮಳಿಗೆ; ಅಂಗಡಿ. ೩. [ಸಂಗೀತ] ಗಾಯಕನ ದೋಷಗಳಲ್ಲಿ ಒಂದು : ಗಾಯಕ ದೋಷಗಳು ೧. ಸಂದಷ್ಟ – ಹಲ್ಲು ಕಚ್ಚಿ ಹಾಡುವವನು . . . ೧೬. ಪ್ರಸಾರ – ಅವಯವಗಳ ಚೇಷ್ಟೆಗೂಡಿ ಹಾಡುವವನು (ಸಂಗೀತಂ. ೦೦೩).

ಪ್ರಸಾರ ಮಾಡು = ಹರಡುವಂತೆ ಮಾಡು ; ಬಿತ್ತರಿಸಂ : ಅಂದಂದು ಭವ್ಯವಾದ ಸಂಗೀತವನ್ನು ಪ್ರಸಾರ ಮಾಡುತ್ತ ಸಹಸ್ರಾರ್ಮೈಲಿಗಳ ವಿಷಯಗಳನ್ನು ಅಂದಂದೇ ಹರಡುತ್ತಿರುವ ರೇಡಿಯೋ (ಶಿಕ್ಷದ. ೮). [ಸಂ.]

**ಪ್ರಸಾರಣ** (ನಾ). ೧. ಹರಡುವಿಕೆ ; ಹಬ್ಬುವುದು : ಈತನ ಹೆಸರಿನಲ್ಲಿರುವ ತರಂಗಗಳೇ (Hertzian waves) ಆಮೇಲೆ ರೇಡಿಯೋ ಪ್ರಸಾರಣದಲ್ಲಿ ಉಪಯೋಗವಾದವು (ಶಿಲ್ಪಾ. ೦೦೬). ೨. (ಬಟ್ಟೆ ಮುಂತಾದುವುಗಳ) ಮಡಿಕೆಯನ್ನು ಬಿಚ್ಚಿ ಹರಡುವುದು. [ಸಂ.]

**ಪ್ರಸಾರಣಿ** (ನಾ). ಒಂದು ಬಗೆಯ ಬಳ್ಳಿ; ಹೆಸರಣಿ ; ಮಂಳ್ಳಗಸೆ : " ಸಾರಣೀ, ಪ್ರಸಾರಣೀ, ಕಟುಂಭರಾ, ರಾಜಬಲಾ, ಭದ್ರಬಲಾ – ೫ ಕ್ರಿಯ ಹಸಾರಣೀಗಿಡ, ಸಾರಣೀಗಿಡ" (ಸಿದ್ಧಾಂತಿ. ೦೪೬); ಗೊಂತೆಮೊಗರು ಚಿಟ್ಟು, ಪ್ರಸಾರಣಿ, ಹೆಸರಣಿ ಹಸರಾಣಿ (ಸಸ್ಯಶಿ. ೧೦೦). [ಸಂ. ಪ್ರಸಾರಣೀ]

**ಪ್ರಸಾರಾಂಗ** (ನಾ). (ವಿಶ್ವವಿದ್ಯಾನಿಲಯಗಳಲ್ಲಿ ವಿಶೇಷವಾಗಿ) ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರಸಾರಕ್ಕಾಗಿ ಇರುವ ವಿಭಾಗ : ವಿಶ್ವವಿದ್ಯಾನಿಲಯದ ಪ್ರಕಟನ ಹಾಗೂ ಪ್ರಸಾರಾಂಗದ ಮುಖ್ಯಾಧಿಕಾರಿಗಳು (ಮುದ್ರಕ. V ಮೊದಲ ಮಾತು). [ಸಂ.]

**ಪ್ರಸಾರಿಣಿ** (ನಾ). = ಪ್ರಸಾರಣಿ : "ರಾಜಬಲಾ—ಮಹಾಬಲೆ, ಪ್ರಸಾರಿಣಿ" (೬ಪಧ. ೦೩೪). [ಸಂ. ಪ್ರಸಾರಿಣೀ]

**ಪ್ರಸಾರಿತ** (ಗು). ೧. ಹರಡಿದ ; ಹಬ್ಬಿದ : ಕುಟ್ಮಳಿತವದನಂ ಸ್ನಿಗ್ಧಾಲೋಕಂ ಪ್ರಸಾರಿತ ಕಜ್ಜಲಂ . . . ತಳೆದಂ ಚೆಲ್ವಂ ಲಂಬಾಳಕಂ ನೃಪಬಾಲಕಂ (ಸುಕುಮಾ. ೬-೧೩೦). ೨. (ಬಟ್ಟೆಯ ಮಡಿಕೆಯನ್ನು ಬಿಚ್ಚಿ) ಮಾರಾಟಕ್ಕೆ ಇಟ್ಟ. (ನಾ). ೩. [ನಾಟ್ಯ] ಸ್ಥಾನಕಗಳಲ್ಲಿ ಒಂದು ಬಗೆ ; P " ಕಾಲುಗಳನ್ನು ನೀಡಿ ಒಂದು ಕೈಯನ್ನು ತಲೆದಿಂಬಾಗಿ ಇರಿಸುವುದು. ಸುಖವಾಗಿ ನಿದ್ರಿಸುವುದನ್ನು ಅಭಿನಯಿಸುವಾಗ ಇದನ್ನು ವಿನಿಯೋಗಿಸಬೇಕು " (ಭಾಸ್ಕರಂ. ಗದ್ಯಾನುವಾದ. ೩೩೩) : ಸಮ, ಆಕುಂಚಿತ, ಪ್ರಸಾರಿತ, ವಿವರ್ತಿತ, ಉದ್ವಾಹಿತ, ನತ ಈ ಆಱು ಮಲಗಿರ್ದ ಸ್ಥಾನಕಂಗಳ್ (ಭಾಸ್ಕರಂ. ೭-೦೨ ವ). [ಸಂ.]

**ಪ್ರಸಾರಿಸು** (ಕ್ರಿ). ಹರಡು ; ಹಬ್ಬಿಸು ; ಬಿತ್ತರಿಸಂ : ತನಿಸೊಬಗಂ ಪ್ರಸಾರಿಸಿ ಸಮಂಚಿತಕೈತವಮರಿ ನಿರ್ಮಿಸಿ ಮಿಂಡನ ಕೆಳೆಯರ್ಕಳೊಳ್ ಬಱಿದೆ ಮೆಚ್ಚಿದವೊಲ್ಪೃಥೆಯಂ ನಿರ್ಮಿ (ಉದ್ಭಟ. ೦೦-೬೦); ತತ್ಪ್ರದೇಶಗತ ಶಕ್ತಿಯಂ ಬುದ್ಧಿಯಿಂದಂ ಪ್ರಸಾರಿಸಿ (ಗೂಮ್ಮಟಸ. ೪೬-೫). [ಪ್ರಸಾರ + – ಇಸು]

**ಪ್ರಸಿತ** (ಗು). ೧. ಬಿಗಿದ ; ಕಟ್ಟಿದ ; ಬಂಧಿಸಿದ. ೨. ತೊಡಗಿದ ; ಆಸಕ್ತಿ ಹೊಂದಿದ; ಮಗ್ನವಾದ : ಸದಮಲಪ್ರಚುರವಿಶ್ರುತಪರಮಭಕ್ತಗಣಪದಸರೋರುಹಸಾಂದ್ರಮಕರಂದಪಾನಸಮ್ಮುದಿತಚಂಚಚ್ಚಂಚರೀಕನವರತ ಪಂಚಾಕ್ಷರೀಪ್ರಸಿತಹೃದಯಂ (ಅರಾಜ. ೦-೦-೦೦೨). (ನಾ). ೩. ಆಸಕ್ತಿಯುಳ್ಳ ವ್ಯಕ್ತಿ ; ಆಸಕ್ತನಾದವನು : " ತತ್ಪರಃ, ಪ್ರಸಿತಃ, ಆಸಕ್ತಃ -೩ ಒಂದು ಪದಾರ್ಥದಲ್ಲಿ ತಗಲಿದ ಮನಸ್ಸುಳ್ಳವನ ಪೆಸರುಗಳು" (ಸಿದ್ಧಾಂತಿ. ೩೨೪). ೪. ಕೀವು. [ಸಂ.]

**ಪ್ರಸಿದ್ಧ** (ಗು). ೧. ಎಲ್ಲರಿಗೂ ತಿಳಿದ ; ಹೆಸರುವಾಸಿಯಾದ : ವಿಂಬಲ್ಡನ್ ಮೊದಲಾದ ಪ್ರಸಿದ್ಧ ಕ್ರೀಡಾಕ್ಷೇತ್ರಗಳು . . . ಸುತ್ತಲಿನ ನಿಸರ್ಗಮಯ ಸುಂದರತಮ ಪ್ರದೇಶಗಳು ; ಇವನ್ನೆಲ್ಲ ನೋಡಿ (ಸಪುಟ. ೬೦೨).(ನಾ). ೨. ಎಲ್ಲರಿಗೂ ತಿಳಿದುದು; ಹೆಸರುವಾಸಿಯಾದುದು. ಶೇಷಪಂಡಿತರ ಕೈಗುಣ ಸುತ್ತಮುತ್ತಲೆಲ್ಲ ಬಹಳ ಪ್ರಸಿದ್ಧ (ಅನಾಥ. ೨೬). ೩. ಕೀರ್ತಿಶಾಲಿಯಾದವನು; ಪ್ರಖ್ಯಾತ: ಜೈನಸಾಹಿತ್ಯದಲ್ಲಿ ಕುಣಿಕನೆಂದೂ, ಬೌದ್ಧಸಾಹಿತ್ಯದಲ್ಲಿ ಅಜಾತಶತ್ರುವೆಂದೂ ಪ್ರಸಿದ್ಧನಾದ ಮಗಧರಾಜನು ಚೇಟಕನ ಮೊಮ್ಮಗನು (ಭಾರಿದ. ೦೬೩). ೪. [ವೀಶೈ] ಶುದ್ಧ, ಸಿದ್ಧ, ಪ್ರಸಿದ್ಧಗಳೆಂಬ ಮೂರು ಬಗೆಯ ಪ್ರಸಾದಗಳಲ್ಲಿ ಒಂದು ; ಜಂಗಮರು ಸ್ವೀಕರಿಸಿ ಉಳಿದಂದು : ಶುದ್ಧವ ಗುರುವಿಂಗೆ ಕೊಟ್ಟು ಶುದ್ಧವಾಯಿತ್ತೆಂಬೆನಯ್ಯಾ ಸಿದ್ಧವ ಲಿಂಗಕ್ಕೆ ಕೊಟ್ಟು ಸಿದ್ಧವಾಯಿತ್ತೆಂಬೆನಯ್ಯಾ ಪ್ರಸಿದ್ಧವ ಜಂಗಮಕ್ಕೆ ಕೊಟ್ಟು ಪ್ರಸಿದ್ಧವಾಯಿತ್ತೆಂಬೆನಯ್ಯಾ (ಬಸವ. ೬೮೩) ; ವರಲಿಂಗಮುಖಸಮರ್ಪಿತ ಶುದ್ಧವೆನಿಸುವುದು ಚರಲಿಂಗಕರ್ಪಿಸಿದುದು ಪರಮಸಿದ್ಧಂ ನಾಡೆ ಗುರುಭುಕ್ತಶೇಷದಿಂ ಧರಿಸಿ ಪ್ರಸಿದ್ಧಮೆಂಬಿನಿತುಮಂ ನಿಯಮದಿಂದಿರದೆ ಕೊಂಬರ ವಿವರಮಂ ಪೇಳ್ವೆಂ (ಲಿಂಗಂ. ೪೭-೦೫); ಜಂಗಮಭುಕ್ತಶೇಷವೇ ಪ್ರಸಿದ್ಧಮೆನಿಸುವುದು (ಏಕೋತ್ತ. ೨೩).

ಪ್ರಸಿದ್ಧವಾಗು = ಎಲ್ಲರಿಗೂ ತಿಳಿದಿರು ; ಖ್ಯಾತವಾಗು : ಚಹಾ ವ್ಯಾಪಾರದಲ್ಲಿ ಬಹಳ ಪ್ರಸಿದ್ಧವಾದವು (ಮುಂಬಯು. ೪-೦೫೯); ಅರಿಸ್ಟಾಟಲನು . . . ಪ್ರಸಿದ್ಧವಾದ ರುದ್ರನಾಟಕದ ಲಕ್ಷಣವನ್ನು ರಚಿಸಿದ್ದಾನೆ (ಅಂಕಾ. ೬೨). [ಸಂ.]

**ಪ್ರಸಿದ್ಧತೆ** (ನಾ). ಕೀರ್ತಿ ; ಪ್ರಖ್ಯಾತಿ : ಈ ವಿನುತ ಸಿತಕೀರ್ತಿಯಾ ಸದ್ಭಾವಶುದ್ಧತೆಯಾ ಪ್ರಸಿದ್ಧತೆಯಾ ವಿಬುಧಸನ್ಮಾನತೆಯು ನಿಮಗೀಯ ಹಂಕೃತಿಯೆ ಇಂದು ನೀವೆನ್ನರಿ ಪರಸದಡೆ ಕುಂದುವುದೆ ಇನಿತಾಯುವದು (ಬಸಪು. ೪೬-೦೦). [ಸಂ. ಪ್ರಸಿದ್ಧತಾ]

**ಪ್ರಸಿದ್ಧಾಂತ** (ನಾ). [ವೀಶೈ] ಅತಿಶ್ರೇಷ್ಠವಾದ ಅರಿವು ; ಪರಮತತ್ತ್ವ: ಗುರುಸ್ಥಲವೆ ವೇದಾಂತ ಲಿಂಗಸ್ಥಲವೆ ಸಿದ್ಧಾಂತ ಜಂಗಮಸ್ಥಲವೆ ಪ್ರಸಿದ್ಧಾಂತ (ಪೋಲೀಪಮ. ೦೫೬-೫೪೬). [ಸಂ.]

**ಪ್ರಸಿದ್ಧಾನ** (ನಾ). ಕೀರ್ತಿ ; ಪ್ರಸಿದ್ಧಿ ; ಪ್ರಖ್ಯಾತಿ: ಪ್ರಸಿದ್ಧಾನಮಂ ಪಡೆದ ಪರಾರ್ಥಮಂ ಶಾಶ್ವತಮೆಂಬುದನುಕ್ತಸಿದ್ಧಮಲ್ಲದಂದಭಿಧಾನಂ ನಿರರ್ಥಕರಮುಮಾಧಾರರಹಿತಮುಮಕ್ಕುಂ (ಶಾಂತಿಪು. ೬-೦೪೬ ವ). [?]

**ಪ್ರಸಿದ್ಧಿ** (ನಾ). ೧. ಹೆಸರುವಾಸಿ; ಖ್ಯಾತಿ; ಕೀರ್ತಿ: ಮಧ್ವಾಚಾರ್ಯರೆಂಬ ನಾಮಪ್ರಸಿದ್ಧಿಯನು ಪಡೆದನುದಿನದಿ (ಪ್ರಸಂದ. ೪-೩೬-೩); ಪಾರ್ಸಿಜನಗಳ ಭಾಷೆಯು ಹಿಂದಿನ ಕಾಲದಲ್ಲಿ ಝುಂಡ್ (ಅಥವಾ ಅವೆಸ್ತಾ) ಎಂದು ಪ್ರಸಿದ್ಧಿ ಪಡೆದಿತ್ತು (ಭಾರಿಗ. ೪೩೪) ; ನಮ್ಮ ಆಸುಪಾಸಿನ ಜನಕ್ಕೆಲ್ಲ ಅವರ ಹೆಸರು ಗೊತ್ತಿತ್ತು. ಅಷ್ಟು ಪ್ರಸಿದ್ಧಿಯಿದೆ (ಮೂಕಜ್ಜಿ. ೨೬). ೨. ಕಾರ್ಯ ಕೈಗೂಡುವುದು ; ಕಾರ್ಯಸಿದ್ಧಿ. [ಸಂ.]

**ಪ್ರಸಿದ್ಧಿಸು** (ಕ್ರಿ). ಎಲ್ಲರಿಗೂ ತಿಳಿಯುವಂತೆ ಮಾಡು ; ಪ್ರಕಟಪಡಿಸು; ಬಹಿರಂಗಪಡಿಸು: ೧೯೧೮ರಲ್ಲಿ ಪ್ರಕಟವಾಗಿದ್ದ ಒಂದು ಪುಸ್ತಕವನ್ನು . . . ೧೯೨೭ರಲ್ಲಿ ಸೂಕ್ತ ಬದಲಾವಣೆಗಳೊಂದಿಗೆ ಮತ್ತೆ ಪ್ರಸಿದ್ಧಿಸಿದನು

(ಸಸ್ಯ. ೯೦) ; ನಿಮ್ಮ ದೇಶಸೇವೆಯನ್ನು ಪ್ರಸಿದ್ಧಿಸುವ ಸಲುವಾಗಿಯೇ ಹೊರಟಿದ್ದೇನೆ (ದೇಶಪು. ೬೩) ; ಇಂದಿನ ಪತ್ರದಲ್ಲಿ ನಿನ್ನೆ ಅದೃಶ್ಯರಾದ ಜನರ ಹೆಸರುಗಳು ಪ್ರಸಿದ್ಧಿಸಲ್ಪಟ್ಟಿರುತ್ತವೆ (ಕೃಕಥೆ. ೦೬೧). [ಪ್ರಸಿದ್ಧ + —ಇಸು೨]

**ಪ್ರಸುಪ್ತ** (ಗು). ೧. ನಿದ್ರಿಸುತ್ತಿರುವ. (ನಾ). ೨. ನಿದ್ರಿಸಿದವನು : ಶಯ್ಯಾಗೃಹಕ್ಕೆ ಬಿಜಯಂಗೆಯ್ದು ದುಕೂಲಪ್ರಚ್ಛದಾಚ್ಛಾದಿತವಿಶಾಲಹಂಸ ತೂಲತಲ್ಪತಲದೊಳ್ ಸುಖಪ್ರಸುಪ್ತನಿರೆ (ಶಂಚಾಪು. ೧೧–೧೬೩ ವ). [ಸಂ.]

**ಪ್ರಸೂಚಕ** (ಗು). ೧. ತಿಳಿಸುವ ; ಹೇಳುವ ; ಸೂಚಿಸುವ. (ನಾ). ೨. ತಿಳಿಸುವವನು ; ಸೂಚಿಸುವಂಥದು : ಮುಂಚೆ ಬಂದ ಜಳದಾಗಮಪ್ರಸೂಚಕಂಗಳಪ್ಪಾಲಿವರಲ್ಲಗಳೆಂದುಂ ಸರೋಜವನದಿಂ ಶಾಳಿ ವನಕ್ಕೆ ಪರಿವ ಪರಿಕಾಲ್ಗಳಂ ನೆರೆದು (ಸುಕುಮಾ. ೧೦–೩೬ ವ). [ಸಂ.]

**ಪ್ರಸೂತ** (ಗು). ೧. ಹುಟ್ಟಿದ ; ಜನಿಸಿದ ; ಜನ್ಮ ತಾಳಿದ : ಪ್ರಸೂತ ಭೂತಾಳಿನಗಾಗಸಂಕುಳಂ ವಸಂತಲಕ್ಷ್ಮೀಚಿರಭೃತ್ಯರುವೃಜಂ ಲಸತ್ಸುರಾಧೀಶ ಭಯಂಕರಪ್ರಭಾಪ್ರಸನ್ನಶೈಲಾವಳಿಯಲ್ಲಿ ರಂಜಿಕುಂ (ವೃತ್ತ. ೧೦–೩೨). (ನಾ). ೨. ಹುಟ್ಟಿದವನು; ಜನ್ಮ ತಾಳಿದವನು: ದಿವಸಕರನಕ್ಕಿಳಾಸಂಭವನಕ್ಕಿರೆ ನಾಲ್ಕಟಿಯೊಳ್ ದಶಸ್ಥಾನಕದೊಳ್ ರವಿಸುತನಿರೆ ಶೂಲದೊಳಿಕ್ಕುವರಾ ಲಗ್ನಪ್ರಸೂತನಂ ಪಾತಕನಂ (ಜಾತಕ. ೨೭–೭) ; ಕನಸಿನೊಳ ಪ್ಪೊಡಂ ಭಯದ ಲೋಭದ ಮಾತು ಮನುಪ್ರಸೂತರೊಳ್ ಜನಿಯಿಸದು (ಶಂಚಾಪು. ೮–೦೯). ೩. ಹಡೆಯುವಿಕೆ ; ಹೆರಿಗೆ : ತುಂಬಿಯಂ ಪ್ರೀತಿಯೊಳಟ್ಟಿ ಗರ್ಭಿಣಿಯದಾಯ್ತು ಸರೋರುಹಮುತ್ಪಲಂ ಪ್ರಸೂತಾತುರೆಯಾಗಿ ಪೆತ್ತುದಳಿಯಂ (೧೦೯. ೪–೧೦೩). ೪. ಹೂವು ; ಪುಷ್ಪ. [ಸಂ.]

**ಪ್ರಸೂತಿ** (ನಾ). ೧. ಹಡೆಯುವಿಕೆ; ಹೆರಿಗೆ: ಉತ್ತರಣಿಯ ಬೇರಂ ಯೋನಿಯೊಳಗೆ ಇಕ್ಕೆ ಪ್ರಸೂತಿಯಕ್ಕು (ಖಪ್ನಶಿ. ೬೩). ೨. ಮಗು : "ಸೂನುಃ . . . ಪ್ರಸೂತಿಃ . . . ಅಪತ್ಯಂ—ಈ ೧೨ ಮಗುವು" (ಹಲಾಯು. ೯೩–೪೯೩) ; ಓತು ಮಾಡುವ ಲಿಂಗವಂತರ ಭಾತಿಗಳು ಶಿವಭಕ್ತಿ ಬೀಜಕೆ ಪಾತಿಗಳು ಪರಮಾರ್ಥನಿಜಯೋಗಪ್ರಸೂತಿಗಳು (ಬಸಪು. ೩೬–೯೭). [ಸಂ.]

**ಪ್ರಸೂತಿಕರ್ಮ** (ನಾ). ಮಗು ಹುಟ್ಟಿದಾಗ ಅದಕ್ಕೆ ಮಾಡುವ ಒಂದು ವಿಧಿ; ಜಾತಕರ್ಮ : ಎಲ್ಲ ಪ್ರಸೂತಿಕರ್ಮವ ತೀರ್ಚಿ ತೊಟ್ಟಿಲ ಸಮುಲ್ಲಾಸದಿಂ ಕಟ್ಟಿ (ಪಪುರಾ. ೨೨–೨೯). [ಸಂ. ಪ್ರಸೂತಿಕರ್ಮನ್]

**ಪ್ರಸೂತಿಕಾಗೃಹ** (ನಾ). ಹೆರಿಗೆಯ ಮನೆ: ಪ್ರಸೂತಿಕಾಗೃಹನಿಹಿತ ನಿಖಿಳಜನಮುಮಂ . . . ಮನಮೊಸೆದು ಮನ್ನಿಸಿ (ಪುಷ್ಪದ. ೪–೩೯ ವ). [ಸಂ.]

**ಪ್ರಸೂತಿಕೆ** (ನಾ). ೧. ಮಗುವನ್ನು ಹೆತ್ತಿರುವವಳು ; ಬಾಣಂತಿ. ೨. ಹೆರಿಗೆ : ಅಭೂತಪೂರ್ವಮಾದ ಪ್ರಸೂತಿಕಾಕೌತುಕಮನಾತ್ಮೀಯಾಪ್ತಗುಪ್ತವಾಕ್ಯದಿಂ ಕೇಳ್ದು (ಜಗಪು. ೩–೦ ವ). [ಸಂ. ಪ್ರಸೂತಿಕಾ]

**ಪ್ರಸೂತಿಕ್ರಿಯೆ** (ನಾ). = ಪ್ರಸೂತಿಕರ್ಮ : ಪ್ರಸೂತಿಕ್ರಿಯಾಪರಿಣ ತಾಂತಃಪುರಪರಿಚರಾತಿ ಸಂತಾನನಿರಂತರಮುಮಂ (ಚಂದ್ರಪ್ರ. ೩–೯೭ ವ). [ಸಂ. ಪ್ರಸೂತಿಕ್ರಿಯಾ]

**ಪ್ರಸೂತಿಗೃಹ** (ನಾ). = ಪ್ರಸೂತಿಕಾ ಗೃಹ : ಮರುದೇವೀವಿಳಸತ್ಪ್ರಸೂತಿಗೃಹಮಂ . . . ಪೊಕ್ಕು (ಆದಿಪು. ೭–೪೪); ಹುಟ್ಟಿದ ಕೂಸೂ ಒಮ್ಮೆ ಪ್ರಸೂತಿ ಗೃಹದಿಂದ ಹೊರಗೆ ಬಂದಿತೆಂದರೆ ಅದಕ್ಕೆ ತಾಯಿ ತೋರೆ ತಿರುಗಿ ಕಾಣುವ ಹಾಗಿರಲಿಲ್ಲ (ಸಪುಚಿ. ೪೬೯). [ಸಂ.]

**ಪ್ರಸೂತಿವೈರಾಗ್ಯ** (ನಾ). ಹೆರಿಗೆಯ ನೋವನ್ನು ತಾಳಲಾರದೆ, ತಾತ್ಕಾಲಿಕವಾಗಿ ಉಂಟಾಗುವ ವೈರಾಗ್ಯ: ಮಗುವಿನ ಮುದ್ದುಮುಖ ನೋಡಿದ ಕೂಡಲೆ ಅರ್ಧಗಂಟೆಯ ಹಿಂದೆ ಉಂಟಾಗಿದ್ದ ಪ್ರಸೂತಿವೈರಾಗ್ಯ ಎಲ್ಲಿಗೆ ಓಡಿತೋ ! (ರೂತಿ). [ಸಂ.]

**ಪ್ರಸೂತೆ** (ನಾ). ೧. ಮಗುವನ್ನು ಹೆತ್ತವಳು ; ಬಾಣಂತಿ. ೨. ಹೆಣ್ಣುಕುದುರೆ : "ಅರ್ವತೀ . . . ಪ್ರಸೂತಾ, ವಾಜಿನೀ — ಈ ೫ ಘೋಟಿಗೆ" (ಹಲಾಯು. ೬೩–೨೯೬). [ಸಂ. ಪ್ರಸೂತಾ]

**ಪ್ರಸೂನ** (ಗು). ೧. ಹುಟ್ಟಿದ ; ಉತ್ಪತ್ತಿಯಾದ. (ನಾ). ೨. ಹುಟ್ಟು; ಉತ್ಪತ್ತಿ. ೩. ಹೂವು ; ಪುಷ್ಪ : ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಕಂಪಕಾ. ೦–೩೬ ರಗಳೆ) ; ಆತುಳಸ್ವಚ್ಛಾಂಬುವಿಂ ಮಜ್ಜನಕೆಟೆದು ನವೀನಪ್ರಸೂನಪ್ರತಾನದ್ಯುತಿ ಸುತ್ತಲ್ (ರಕ್ಷಾಶ. ೬೪) ; ಹಗಲಿರುಳು ನಿನ್ನೊಡನೆ ನಲಿದಾಡಿದೀ-ದೀನ ಕಾನನಪ್ರಸೂನವಂ, ಹೇ ಕಾಂತ, ಮರೆಯದಿರು (ಪಕ್ಷಿಕಾಶಿ. ೯೬–೦೨೩೯). ೪. ಮೊಗ್ಗು. ೫. ಹಣ್ಣು ; ಫಲ. [ಸಂ.]

**ಪ್ರಸೂನಕ** (ನಾ). ಹೂವು ; ಪುಷ್ಪ : "ಪುಷ್ಪಂ . . . ಪ್ರಸೂನಕಂ, ಸುಮನಸ್ — ಈ ೫ ಪೂವಿನ ಪೆಸರ್" (ಹಲಾಯು. ೩೦–೩೨). [ಸಂ.]

**ಪ್ರಸೂನಾಯುಧ** (ನಾ). ೧. (ಮನ್ಮಥನ) ಹೂವಿನ ಬಾಣ : ಉಪೇಂದ್ರನೊಳ್ ನೆರೆವಟ್ಟಿಕೆಯಿಂ ಪ್ರಸೂನಾಯುಧತಾಪತಪ್ತೆ . . . ನಿಜಾಲಯದಿಂ ಪೊರಮಟ್ಟಳ್ (ಶಂಕರ. ೬೪–೭). ೨. ಹೂವಿನ ಬಾಣವನ್ನುಳ್ಳವನು ; ಕಾಮ. [ಸಂ.]

**ಪ್ರಸೂನಾಸ್ತ್ರ** (ನಾ). ೧. ಹೂವಿನ ಬಾಣ ; ಕುಸುಮಾಸ್ತ್ರ : ಮಿಾನಾಂಕನು ಬಲುಮಾನದಿ ತನ್ನ ಪ್ರಸೂನಾಸ್ತ್ರ [ಶಾಕಾಂ. ಯುಧ] ಗಳನು ತೊಡರ್ಚಿ ಮಾನನಿಧಿಯ ಪರಿವಾರವನಿಸಲು ಸುಮ್ಮಾನವಳಿದರತಿ ರಥರು (ತ್ರಿಭುಶಾಂ. ೨೦–೨೩೦). ೨. = ಪ್ರಸೂನಾಯುಧ ೨. [ಸಂ.]

**ಪ್ರಸೃತ** (ಗು). ೧. ಮುಂದ್ನಡೆದ ; ಗಮಿಸಿದ. ೨. ಹರಡಿದ ; ವಿಸ್ತರಿಸಿದ. (ನಾ). ೩. ಒಳ್ಳೆಯ ಮಾತನಾಡುವವನು ; ವಿನಯಶಾಲಿ: "ಪ್ರಸಕ್ತಃ, ಪ್ರಸೃತಃ—ಈ ೨ ಗೆಲೆ ನುಡಿವವಂ" (ಹಲಾಯು. ೭೦೪–೩೦೯). ೪. ಉತ್ಸಾಹವುಳ್ಳವನು : "ಪ್ರತೂರ್ಣಃ, ತ್ವರಿತಃ, ತೂರ್ಣಃ, ಉತ್ಸುಕಃ, ಪ್ರಸೃತಃ—ಈ ೫ ಚೆಚ್ಚರಿಗಂ" (ಹಲಾಯು. ೩೬–೦೯೬). ೫. ಬೊಗಸೆ ; ಅರ್ಧಾಂಜಲಿ. ೬. [ಗಣಿತ] ಒಂದು ಅಳತೆ ; ಎರಡು ಪಲಗಳ ಪ್ರಮಾಣ : ಅಳತೆ ವಿವರಾ ಭತ್ತ ನಾಲ್ಕಿಕೆ ಪಂದಂ ಕಾಣ್ಮಮೆನಿಪುದದು ಮತ್ತೆ ಪಂಚಕಕೊಂದು ಪಣ ಮಕ್ಕುಮಾ ಪಣ ಮೂವತ್ತೆನಿಸಲದು ನಿಷ್ಕ ನಿಷ್ಕತ್ರಯಕ್ಕೆ ಕರುಪ ದ್ವಾದಶಕ್ಕೆ ಮಾಗಧಮೆನೆ ಬಿತ್ತರಿಸದೆರಡ ಕೂಡಲು ಪ್ರಸೃತಮೆನಿಪುದದು (ಭಾಸ್ಕರ. ೬೪–೬). ೭. [ನಾಟ್ಯ] ನಿಃಶ್ವಾಸದ ಭೇದಗಳಲ್ಲಿ ಒಂದು ; ℗ "ಮಲಗಿರುವಾಗ ಶಬ್ದ ಮಾಡುತ್ತ ಬಾಯಿಂದ ಉಸಿರು ಬಿಡುವುದು" (ಭಾಸ್ಕರಂ. ಗದ್ಯಾನುವಾದ. ೨೬೬) : ಸ್ವಸ್ಥ, ಚಲ . . . ಪ್ರಸೃತ — ಈ ಒಂಬತ್ತೂ ಕೋಹಳನ ಮತದಂತೆ ಗಾಳಿಯ ಭೇದಂಗಳ್ (ಭಾಸ್ಕರಂ. ೩–೬೮ ವ). ೮. ರೆಪ್ಪೆಯ ಒಂಬತ್ತು ವಿಧವಾದ ಚಲನೆಗಳಲ್ಲಿ ಒಂದು; ℗ "ರೆಪ್ಪೆಗಳನ್ನು ವಿಶಾಲವಾಗಿ ತೆರೆಯುವುದು" (ಭಾಸ್ಕರಂ. ಗದ್ಯಾನುವಾದ. ೨೬೩) : ಪ್ರಸೃತ, ಕುಂಚಿತ . . . ಸಮ — ಈ ಒಂಬತ್ತು ಎವೆಯ ಭೇದಂಗಳ್ (ಭಾಸ್ಕರಂ. ೩–೪೯ ವ). ೯. "ಕಾಲ್ಬೆರಳುಗಳನ್ನು ಚಲಿಸದೆ ನೀಡುವುದು" (ಭಾಸ್ಕರಂ. ಗದ್ಯಾನುವಾದ. ೨೯೩) ; ಅಧಃಕ್ಷಿಪ್ತ . . . ಪ್ರಸೃತ, ಸಂಲಗ್ನ — ಈ ಐದು ಚರಣಾಂಗುಲಿಯ ಭೇದಂಗಳ್ (ಭಾಸ್ಕರಂ. ೩–೧೦೫ ವ). ೧೦. ಕೈಬೆರಳುಗಳ ಏಳು ವಿಧವಾದ ಚಲನೆಗಳಲ್ಲಿ ಒಂದು: ಸಂಯುತ . . . ಪ್ರಸೃತ — ಈ ಏಳು ಹಸ್ತಾಂಗುಲಿಯ ಭೇದಂಗಳ್ (ಭಾಸ್ಕರಂ. ೩–೧೦೪ ವ). [ಸಂ.]

**ಪ್ರಸೃತಕರಣ** (ನಾ). [ಕಾಮಶಾ] ರತಿಬಂಧಗಳಲ್ಲಿ ಒಂದು : ಸಲೆ ಮಗುಳ್ದೊ ಱಗಿದ ಲಲನೆಯಿನೆಯನ ಪೆಗಲೊಳಗೆ ಕಾಲಿಟ್ಟೆರ್ತೊಡೆಯ ಅಲರ್ವಸೆಯೊಳಗಿಟ್ಟೊಲವಿಂ ರತಿಗಗ್ಗಲಿಸಲದೇ ಪ್ರಸೃ[ಪಾಠಾಂ. ಸ್ತ, ಸ್ತ್ಯ]ತಕರಣಂ (ಜನವ. ೯-೨೪). [ಸಂ.]

**ಪ್ರಸೃತಿ** (ನಾ). ೧. ಮುನ್ನಡೆ : ಪ್ರಗತಿ ; ಬೆಳವಣಿಗೆ. ೨. ಬೊಗಸೆ ; ಅರ್ಧಾಂಜಲಿ : "ಅಂಗುಳಿ ಮಡಿದ ಕುಡಿತೆಯಂ ಪ್ರಸೃತಿಯೆಂಬುದು" (ಹಲಾಯು. ೮೮-೩೮೩). ೩. [ಗಣಿತ] ಒಂದು ಅಳತೆ ; ಎರಡು ಪಲಗಳ ಪ್ರಮಾಣ : ಶಿವನ ನೈವೇದ್ಯದಳತೆಯ ಗಣನೆಗಳ ಪೇಳುವೆವು ನೆಲ್ಲಳಿಂ ನೂಱಿಯಿರ್ಪತ್ತ ಐದೆಂಬುದವನಿಯೊಳು ಶುಕ್ತಿ . . . ಸಾವಿರ ದೆಂಟುನೂರ್ನೆಲ್ ಪ್ರಸೃತಿಯೆನಿಸುವವು (ಶೀಕೃತಿ. ೭-೧೧-೬೧). [ಸಂ.]

**ಪ್ರಸೃತೆ** (ನಾ). ಮೊಳಕಾಲು ; ಜಂಘೆ : "ಪ್ರಸೃತಾ, ಜಂಘಾ—ಈ ೨ ಕಿಱುದೊಡೆ" (ಹಲಾಯು. ೬೩-೩೬೦). [ಸಂ. ಪ್ರಸೃತಾ]

**ಪ್ರಸೇಕ** (ನಾ). ಮೂಗು ಅಥವಾ ಬಾಯಿಯಿಂದ ಸುರಿಯುವ ನೀರಿನ ಸ್ರಾವ : ವಮನಯೋಗ್ಯರು — ಮಂದಾಗ್ನಿಯವರು . . . ಪ್ರಸೇಕ ರೋಗದವರು, ಶ್ವಾಸರೋಗದವರು (ಸಕವೈ. ೨೩). [ಸಂ.]

**ಪ್ರಸೇವ** (ನಾ). ೧. ಬಿದಿರಿನಿಂದ ಹೆಣೆದ ತಟ್ಟೆ ಅಥವಾ ಮಂಕರಿ : "ಸ್ಯೂತಃ, ಪ್ರಸೇವಃ . . . ೨ ಬಿದುರುತಟ್ಟೆಗಳು, ಮಕ್ಕರಿಗಳಿಗೂ ಹೆಸರು" (ಸಿದ್ಧಾಂತಿ. ೩೬೨). ೨. ವೀಣೆಯ ಬುರುಡೆ. [ಸಂ.]

**ಪ್ರಸೇವಕ** (ನಾ). ವೀಣೆಯ ಬುರುಡೆ : "ಪ್ರಸೇವಕಃ . . . ವೀಣೆಯ ಹೆರಳಿನ ಹೆಸರುಗಳು" (ಸಿದ್ಧಾಂತಿ. ೩೯). [ಸಂ.]

**ಪ್ರಸ್ಖಲಿತ** (ಗು). ಎಡವಿದ; ಮುಗ್ಗುರಿಸಿದ : ವಿದ್ಯುತ್ಕೇಶವಿದ್ಯಾಧರಂ ತ್ವರಿತಪ್ರಸ್ಖಲಿತಪ್ರಯಾಣರಭಸಂ ಶುದ್ಧಾಂತಕಾಂತಾಜನಂ ಬೆರಸುತ್ಕಂಪಿತ ನೋಡಿ ದಿವ್ಯಮುನಿಪಾದಾಂಭೋಜವಮಂ ಪೊರ್ದಿದಂ (ಶಂಪಾಪು. ೧೧-೧೦೯). [ಸಂ.]

**ಪ್ರಸ್ತ** (ನಾ). ೧. ಅವಕಾಶ ; ಸಂದರ್ಭ ; ಸಮಯ : ಎಱಗುವುದಕೆ ಪ್ರಸ್ತವೇನು ತನ್ನಯ ಹಂಗು ಕಿಱಿದುಂಟೆ ನನಗಯ್ಯನೆಂದು ಓರಿಬಿ ಕೊಟ್ಟಂಬಳಿಯಲ್ಲಿ ನಾನಿಹೆನು (ಭರತ. ೯೮-೩೭) ; ಪ್ರಸ್ತಕ್ಕೆ ನುಡಿದಿಹರೆ ಬೆಸ್ತಂತೆ ಇರಬೇಕು ಪ್ರಸ್ತವ ತಪ್ಪಿ ನುಡಿದಿಹರೆ ನಡು ಬೆನ್ನಿನಸ್ತಿ ಮುಱಿ ದಂತೆ (ಸರ್ವಜ್ಞ. ೦೩೩೯). ೨. ಶುಭಕಾರ್ಯ ; ಮಂಗಳಕಾರ್ಯ : ನೆರೆಹೊರೆಮನೆಯಲ್ಲಿ ಪ್ರಸ್ತವಾಗಲು ಆಗ ಕರೆಯದೆ ಪೋಗಿನ್ನು ಹಾಳು ಹರಟೆ ಬಱಗಟ್ಟು ನೂಱಾಱು ಸುದ್ದಿ ಹೇಳುತ ಅವನ ಹಿರಿಯ ಮಗನಂತೆ ಉದರವ ಪೊರೆದೆ ಮನವೆ (ಪುರಂದ. ೪-೩೨-೪); ದೀನನಾದೆನಗೊಂದು ಕವಡೆಯು ಪಾಣಿಯೊಳಗಿಲ್ಲವರ್ಗೆ ಸರಿಯಾಗಾನು ಪ್ರಸ್ತವ ಮಾಡಬಲ್ಲೆನೆ (ಅರ್ಜಾವಿ. ೦೮-೦೦). ೩. ಗರ್ಭಾಧಾನದ ಶುಭಕಾರ್ಯ ; ನಿಷೇಕ ; ಒಸಗೆ : ಲಗ್ನ ಮುಗಿದ ಮೇಲೆ ಪ್ರಸ್ತವೂ ರಾಘಪ್ಪನ ಮನೆಯಲ್ಲಿಯೆ ಆಗಬೇಕಾಗಿತ್ತು (ಗಂಪಜಾಯು. ೦೩೪).

ಪ್ರಸ್ತದ ಊಟ = ಶುಭಸಮಾರಂಭದ ಊತಣ,—ಭೋಜನ : ಪ್ರಸ್ತದ ಊಟದಲ್ಲಿ ಹೆಂಗಳೆಯರು ಬಡಿಸುವಾಗ (ಸವಜೀ. ೯ ಶೀಲಕೆ) ; ಪ್ರಸ್ತದ ಊಟಕ್ಕೆ ಹೋಗಿ ಸ್ವಸ್ಥವಿಲ್ಲದೆ ಬಿದ್ದ (ಗಾದೆ).

[< ಸಂ.ಪ್ರಸ್ತುತ./ಮರಾ. ಪ್ರಸ್ತ ; ತುಳು. ಪ್ರಸ್ತ]

**ಪ್ರಸ್ತರ** (ನಾ). ೧. ಹೂವು, ಎಲೆ ಮೊದಲಾದುವುಗಳಿಂದ ನಿರ್ಮಿಸಿದ ಹಾಸುಗೆ. ೨. ಹಾಸುಗೆ ; ಶಯ್ಯೆ. ೩. ಸಮತಲವಾದ ಪ್ರದೇಶ; ಬಯಲು. ೪. ಕಲ್ಲು ; ಶಿಲೆ : "ಶಿಲಾ . . . ಪ್ರಸ್ತರಃ, ದೃಷತ್ —ಈ ೭ ಕಲ್ಲ ಪೆಸರ್" (ಹಲಾಯು. ೨೮-೦೪); ಸುರೆಯಿಂ ಸೊರ್ಕಂ ಸುರೋರ್ವೀರುಹಕಿಸಲಯದಿಂ ರಾಗಮಂ ಕೌಸ್ತುಭಪ್ರಸ್ತರದಿಂ ನೈಷ್ಠುರ್ಯಮಂ . . . ತಾಳ್ದಿ (ಕಾದಂಕೂ. ೩೪೬); ಅಹಲ್ಯಾದೇವಿ ಶಿಲೆಯಾಗಿ ಧರಿಸಿದಳು ನಿಜತನುವನಾ ಪ್ರಸ್ತರವಿದೀಗಾ ಸತಿಗೆನುತ ಹತ್ತಿರಕೆ ಬರೆ ರಾಮಾಂಘ್ರಿರಜಪಾವರಿಸಿತಾ ಶಿಲೆಯ (ತೊರರಾ. ೦-೦೨-೦೫). [ಸಂ].

**ಪ್ರಸ್ತರಣ** (ನಾ). ೧. ಹರಡುವುದು; ಹಾಸುವುದು. ೨. ಹಾಸುಗೆ; ಶಯ್ಯೆ : ತವಮೊಳದಳಪ್ರಸ್ತರಣಂ ಲತಾಂಗಿ ಮಳಯಕ್ರೀಡಾಚಳಂ ನೀನುಮಿಾ ಮದನಾಕಾರನುಮಲ್ಲಿ ನಿಚ್ಚಲುಮಿರಿಂ ಕೇಳೀವಿನೋದಂಗಳಿಂ (ಶಾಂತಿಪು. ೩-೦೪೩). ೩. ಪೀಠ ; ಆಸನ. [ಸಂ.]

**ಪ್ರಸ್ತರಭವನ** (ನಾ). ಕಲ್ಲಿನಿಂದ ಕಟ್ಟಿದ ಮನೆ ; ಶಿಲಾಭವನ : ಹೇಯೋಪಾದೇಯತತ್ವಮನಱಿಪಿ ಮತ್ತಮಿವರ್ಗಾಧಾರಭೂತಜಗತ್ರಯಾಂತಸ್ಥಿತ್ಯೈಕೋನಪಂಚಾಶನ್ನರಕ ಪ್ರಸ್ತರ [ಪಾಠಾಂ.ಪ್ರಸಾರ] ಭವನವ್ಯಂತರಾವಾಸಾಸಂಖ್ಯಾತದ್ವೀಪಾಬ್ಧಿತ್ರಿಷಷ್ಟಿಸ್ವರ್ಗಪಟಲಂಗಳುಮಂ ವಿಸ್ತರಿಸಿ (ಆದಿಪು. ೦೦-೬೩೭). [ಸಂ.]

**ಪ್ರಸ್ತರಿಸು** (ಕ್ರಿ). ೧. ಹರಡು ; ವಿಸ್ತರಿಸು. ೨. [ಛಂದ] ಲಘು ಮತ್ತು ಗುರುಗಳನ್ನು ಗುರುತಿಸು ; ಪ್ರಸ್ತಾರ ಹಾಕು : ಎರಡುಂ ಮೂಱುಂ ನಾಲ್ಕುಂ ಗುರುವಿಂ ಪ್ರಸ್ತರಿಸಲುಂಬುನಿಧಿಗಜ[ಪಾಠಾಂ. ಪ್ರಸ್ತಾರವಾಗಿಯುಂ ಜಗ] ಧರಣೀಶ್ವರಗಣವೊಗೆಗುಂ (ಛಂದೋಂಬು. ೩-೨೧೦); ಪಾದ ಈಗಿರುವಂತೆಯೇ ಪ್ರಸ್ತರಿಸಿದರೆ ಧರೆ, ಗೆ, ಲ್ಲಿಂ ಎಂಬ ಕೊನೆಯ ಗಣವೂ ವಿಷ್ಣುವೇ ಆಗುತ್ತದೆ (ಸವಾಲೋ. ೨೨೯).

[ಪ್ರಸ್ತರಣ + —ಇಸು$_3$]

**ಪ್ರಸ್ತಾಪ** (ನಾ). ೧. ಯಾವುದಾದರೊಂದು ವಿಷಯದ ಅಥವಾ ಮಾತಿನ ಪ್ರಾರಂಭ : "ಪ್ರಸ್ತಾಪ—ಪ್ರಸ್ತಾವ= ಮಾತೆತ್ತುವಿಕೆ" (ತದ್ಭಕೋ. ೨೭); ಮಗುವಿನ ವಿದ್ಯಾಭ್ಯಾಸ ಪೂರ್ಣವಾಗುವವರೆಗೂ ದಯವಿಟ್ಟು ಈ ಪ್ರಸ್ತಾಪ ಬೇಡ (ಶಾಂತಲಾ. ೧೧). ೨. ವಿಷಯ; ಸಂಗತಿ : ಅದೇ ಪ್ರಸ್ತಾಪ ಹೇಳಬೇಕು ಎಂದು ಇಲ್ಲಿಗೆ ಬಂದೆ (ತ್ಯಾಗವು. ೬೪). ೩. ಸಂದರ್ಭ; ಅವಕಾಶ ; ಸಮಯ : ನಾಟಕದ ಒಂದು ಪಾತ್ರವಾದ ಶ್ಯಾಮಲಾ ಕುಮಾರಿಯ ವಿವಾಹದ ಪ್ರಸ್ತಾಪ (ಶೀರಯೋ. xii, ಅನುವಾದಕನ ಬಿನ್ನಹ) ; ಪ್ರಸ್ತಾಪಕ್ಕೆ ಬಾರದ ಗಾದೆ ಪ್ರಸ್ತಕ್ಕೆ ಆಗದ ಬಿಜ್ಜಾಯ (ಗಾದೆ).

<ಸಂ. ಪ್ರಸ್ತಾವ]

**ಪ್ರಸ್ತಾಪಿಸು** (ಕ್ರಿ). ಮಾತಿನಲ್ಲಿ ವಿಚಾರವನ್ನು ಪ್ರಾರಂಭಿಸು ; ಮಾತು ಎತ್ತು : ಬೊಮ್ಮರಸಪಂಡಿತರ ಯೋಗ್ಯತೆಯ ವಿಚಾರವನ್ನು ಪ್ರಸ್ತಾಪಿಸಿದರು (ಶಂಗಾಳ್ಮ. ೬೦); ಶಾಲೆಯು ಆರಂಭವಾಗುವ ತನಕ ಗೋವಿಂದಮಾಸ್ತರರು ಮೇರಿಯೊಡನೆ ವಿಷಯ ಪ್ರಸ್ತಾಪಿಸಲಿಲ್ಲ (ಕಾವೇರಿ. ೯೪); ಇಲ್ಲದ ಧೈರ್ಯ ತಂದುಕೊಂಡು ಶ್ರೀಧರ ಮಾಲತಿಗೆ ಅಪ್ರಿಯವಾದ ವಿಚಾರವನ್ನೇ ಮತ್ತೆ ಪ್ರಸ್ತಾಪಿಸಿದ್ದ (ವಾತ್ಸಲ್ಯ. ೦೬೪).

[ಪ್ರಸ್ತಾಪ + —ಇಸು$_3$]

**ಪ್ರಸ್ತಾರ** (ನಾ). ೧. ಹರಡುವುದು ; ವ್ಯಾಪಿಸುವುದು. ೨. ಹಾಸುಗೆ; ಶಯ್ಯೆ. ೩. ಸಮತಲವಾದ ಭೂಮಿ,—ಪ್ರದೇಶ ; ಬಯಲು. ೪. (ದಟ್ಟವಾದ) ಕಾಡು ; (ಗಹನವಾದ) ಅರಣ್ಯ. ೫. [ಛಂದ] ವೃತ್ತದ ಪ್ರತಿಸಾಲಿನಲ್ಲಿಯೂ ಗುರುಲಘುಗಳನ್ನು ಗುರುತಿಸಿ ಬಳಿಕ ಅಕ್ಷರ ಗಣಗಳನ್ನು ಕಂಡುಹಿಡಿದು ವೃತ್ತವು ಯಾವ ಛಂದಸ್ಸಿಗೆ ಸೇರಿದುದು ಎಂಬುದನ್ನು ಕಂಡುಹಿಡಿಯುವ ಕ್ರಮ : ಮಿಗಿಲಾಗಲಧ್ವಯೋಗಂ ನೆಗಟ್ದಪದೇಶದೊಳಪರಿಮಿತಂ ಪ್ರಸ್ತಾರಂ (ಛಂದೋಂಬು. ೬-೨೩೬). ೬. ಒಂದು ಛಂದಸ್ಸಿನಲ್ಲಿ ಎಷ್ಟು ವೃತ್ತಗಳಾಗಬಹುದು ಎಂಬುದನ್ನು ಕಂಡುಹಿಡಿಯುವ ಕ್ರಮ : ಉಕ್ತೆ ಮೊದಲಾದ ಆಯಾ ಛಂದಸ್ಸಿನ ಅಕ್ಷರಗಳ ಸಂಖ್ಯೆಯಷ್ಟು ಗುರುಗಳನ್ನು ಮೊದಲು ಸಾಲಾಗಿ ಬರೆದು . . . ಮುಂದುಮುಂದಕ್ಕೆ ಇಪ್ಪತ್ತಾರರವರೆಗೂ ಆಯಾಸ್ಥಾನದಲ್ಲಿ ಗುರು ಲಘುಗಳು ಅದರ ಹಿಂದಿನ ಸ್ಥಾನಕ್ಕಿಂತ ದ್ವಿಗುಣವಾಗಿರು

ವಂತೆ ಕಡೆಗೆ ಎಲ್ಲವೂ ಲಘುಗಳಾಗುವವರೆಗೆ ಗುರು ಲಘುಗಳನ್ನು ಸಾಲು ಸಾಲಾಗಿ ಬರೆಯುವುದು. ಇದಕ್ಕೆ ಪ್ರಸ್ತಾರವೆಂದು ಹೆಸರು (ಕೃಶಿಪಿ. ೯೦). ೭. [ಸಂಗೀತ] ತಾಳಾಂಗದ ವಿಸ್ತರಣೆ : ತಾಳಕ್ಕೆ ಹತ್ತು ಪ್ರಾಣಗಳುಂಟು ; ಕ್ರಮವಾಗಿ ಅವು—೧. ಕಾಲ . . . ೧೦. ಪ್ರಸ್ತಾರ (ಸಂಗೀಕಂ. ೩೨); ಪ್ರಸ್ತಾರ : ಪ್ರಸ್ತರಿಸುವುದು ಎಂದರೆ ವಿಶದವಾಗಿ ಕಾಣುವಂತೆ ಹರಡುವುದು ಅಥವಾ ವಿಸ್ತರಿಸುವುದು. ಒಂದು ತಾಳಾಂಗವನ್ನು ವಿಸ್ತರಿಸುವುದು ಎಂದರೆ ಅದರಲ್ಲಿ ಬರುವ ಉಪಾಂಗಗಳೂ ಗೋಚರವಾಗುವಂತೆ ವಿಂಗಡಿಸುವುದು (ಸಂಗೀಕಂ. ೩೦).

**ಪ್ರಸ್ತಾರ ಹಾಕು** = ಲಘು, ಗುರುಗಳನ್ನು ಗುರುತಿಸು : ಸಾಂಗತ್ಯದ ಲಕ್ಷಣಗಳನ್ನು ಹೀಗೆ ಪ್ರಸ್ತಾರ ಹಾಕಿ ಇದು ಸಾಂಗತ್ಯವೆನ್ನುವುದು . . . ಅಸ್ಥಿಪಂಜರವನ್ನು ತೋರಿಸಿ ಇವನು ಮನುಷ್ಯ ಎಂದಂತೆ ಆಗುತ್ತದೆ (ಇಂಜಾಪ. V ೫೦೪). [ಸಂ.]

**ಪ್ರಸ್ತಾರಿಸು** (ಕ್ರಿ). [ಛಂದ] ಲಘು ಗುರುಗಳನ್ನು ಗುರುತಿಸು : ಗುರುವೊಂದಂ ಲಘುವೊಂದನೆಂಟುವರೆಗಂ ಪ್ರಸ್ತಾರಿಸು (ಛಂದೋಂಬು. ೦-೯೦). [ಪ್ರಸ್ತಾರ + — ಇಸು]

**ಪ್ರಸ್ತಾವ** (ನಾ). ೧. ಉಪಕ್ರಮ ; ಆರಂಭ ; ಪ್ರಾರಂಭ. ೨. ಪ್ರಸಂಗ; ಸಂದರ್ಭ : ಅಂತು ಧನುರ್ಧರಾಗ್ರಗಣ್ಯನಾಗಿರ್ದೊಂದು ದಿವಸಂ ತನ್ನ ತೊಡೆಯ ಮೇಲೆ ತಲೆಯನಿಟ್ಟು ಪರಶುರಾಮಂ ಮಱಿದೊಱಗಿದಾ ಪ್ರಸ್ತಾವದೊಳ್ (ಪಂಪಭಾ. ೦-೦೦೪ ವ) ; ಸಂನ್ಯಸನದಿಂ ಪರತ್ರಯಂ ಸಾಧಿಸುವೆನೆಂದು ಪರಮಾಗಮಭಾವನೆಯಿಂದಿರ್ಪನ್ನೆಗಮಾ ಪ್ರಸ್ತಾವದೊಳ್ (ಪಂಪಾಪು. ೦೩-೭೯ ವ) ; ಹರ್ಷಚಿತ್ತರಾದಾತಪಸಿಗಳುಂ ವರ್ಣಾಶ್ರಮಧರ್ಮಂಗಳಂ ರಾಘವಂಗೆ ನಿರವಿಸುತುಮಿರ್ದರ್ ಆ ಪ್ರಸ್ತಾವದೊಳ್ (ರಾಮಾಶ್ವ. ೦೬-೦೪). [ಸಂ.]

**ಪ್ರಸ್ತಾವನೆ** (ನಾ). ೧. ಪ್ರಾರಂಭ ; ಉಪಕ್ರಮ. ೨. ವಿಷಯ ; ಸಮಾಚಾರ : ದೇವಾರಣ್ಯಂ ದೇವರ ದೇವನ ಮನಕಿಂಬನೀಯೆ ತನ್ನಂದನದೊಳ್ ದೇವರ್ ಸಿವಿಗೆಯನಾ ಪ್ರಸ್ತಾವನೆಯುಂ ಕಟಿಪದಿಟಿಪೆ ಪುಳಿನಸ್ಥಳದೊಳ್ (ಶಾಂತಿಪು. ೬-೦೩೨). ೩. ವಿಚಾರಸೂಚನೆ ; ವಿಷಯ ಮಂಡನೆ ; ಪೀಠಿಕೆ : ಅಂಥ ದೋಷಾರೋಪವನ್ನು ಮಂಡಿಸುವ ಪ್ರಸ್ತಾವನೆಯು ಲಿಖಿತಮೂಲಕವಾದ ಒಂದು ಸಂಕಲ್ಪದಲ್ಲಿ ಉಲ್ಲಿಖಿತವಾಗಿ ನಮೂದಾಗಿದ್ದು (ಶಾಪಾಪ. ೩೦) ; ಮುಂದಿನ ಮಾತಿನ ಪ್ರಸ್ತಾವನೆಯನ್ನು ಮಾಡುತ್ತ . . . ಕೇಳಿದ (ಅಪೋಕ. ೫೦). ೪. ಪುಸ್ತಕದ ಪೀಠಿಕೆ ; ಉಪೋದ್ಘಾತ : ವಿಷಯ ನಿರ್ಣಯಿಸುವಾಗ ಗ್ರಂಥದ ಶಿರೋನಾಮ, ಮುನ್ನುಡಿ, ಪ್ರಸ್ತಾವನೆ, ಪರಿವಿಡಿ . . . ಇತ್ಯಾದಿಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಾನೆ (ಗ್ರಂಥಾಂ. ೦೬). ೫. [ಕಾವ್ಯಮೀ] ನಾಟಕ (ರೂಪಕ)ಗಳ ಪ್ರಾರಂಭದಲ್ಲಿ ನಟಿ, ವಿದೂಷಕ ಅಥವಾ ಪಾರಿಪಾರ್ಶ್ವಕನು ಸೂತ್ರಧಾರನೊಡನೆ ಕಲೆತು ಮಾತನಾಡುವುದು; ನಟಿ, ಸೂತ್ರಧಾರರು ತಮ್ಮ ಸ್ವಂತವ್ಯವಹಾರದಿಂದ ನಾಟಕದ ಕಥಾವಸ್ತುವನ್ನು ಸೂಚಿಸಿ ಮುಂದಿನ ಪಾತ್ರ ಪ್ರವೇಶವನ್ನು ಸೂಚಿಸುವುದು ; ಆಮುಖ : ಸೂತ್ರಧಾರನು ಈ ಮಂಗಳಶ್ಲೋಕವನ್ನು ಹೇಳಿ . . . ಹೊರಟು ಹೋಗುವನು. ಅನಂತರ ಕಥೆಯು ಆರಂಭವಾಗುವುದು. ಇಲ್ಲಿಯವರೆಗೆ 'ಆಮುಖ' ಅಥವಾ 'ಪ್ರಸ್ತಾವನೆ' ಎಂದು ಹೆಸರು (ಕೃಶಿಪಿ. ೨೦೨). [ಸಂ. ಪ್ರಸ್ತಾವನಾ]

**ಪ್ರಸ್ತಾವಿತ** (ಗು). ೧. ಪ್ರಾರಂಭವಾದ ; ತೊಡಗಿದ. ೨. ಹೊರಸೂಸಿದ ; ಸಂದಿದ : ವ್ಯೋಮಮುಮಂ ತೀವಿದುದು ತತ್ಕರಪ್ರಸ್ತಾವಿತ ಮಂದಾರಪಾರಿಜಾತಾಸಾರಂ (ಚಂದ್ರಪು. ೬-೯೦). [ಸಂ.]

**ಪ್ರಸ್ತಾವಿಸು** (ಕ್ರಿ). = ಪ್ರಸ್ತಾಪಿಸು : ಲೌಕಿಕದೃಷ್ಟಿಗೆ ಕೂಡ ಈ ಭಾಷೆಯಲ್ಲಿ ಗೋಚರವಾಗುವ ಇನ್ನೊಂದು ಅಪೂರ್ವತ್ವವನ್ನು ಇಲ್ಲಿ ಸ್ವಲ್ಪಮಟ್ಟಿಗೆ ಪ್ರಸ್ತಾವಿಸಬೇಕೆನ್ನಿಸುತ್ತದೆ (ಸಮಾಲೋ. ೦೨೯).

[ಪ್ರಸ್ತಾವ + — ಇಸು]

**ಪ್ರಸ್ತುತ** (ಗು). ೧. ಹೊಗಳಿದ ; ಪ್ರಶಂಸಿಸಿದ. ೨. ಸಿದ್ಧವಾದ ; ತಯಾರಾದ : ಸನ್ಮಾರ್ಗನಾಟಕಾರಂಭಪ್ರಸ್ತುತಪವಿತ್ರಸೂತ್ರಧಾರನೆ ಮುಂದೆ ನಿಂದು ಪುಷ್ಪಾಂಜಳಿಯಂ ಕೆದಱಿ (ಶಾಂತಿಪು. ೦೦-೬೦ ವ). ೩. ಸೇರಿದ ; ಸಮೀಪಿಸಿದ. ೪. ತತ್ಕಾಲದ ; ಸದ್ಯದ ; ಈಗಿನ : ಪ್ರಸ್ತುತ ಪ್ರಸಂಗದಲ್ಲಿ ಅವನ ವಾಗ್ವೈಖರಿಯನ್ನು ಕತ್ತರಿಸಿ ಒಗೆಯಲು ನನ್ನ ಬತ್ತಳಿಕೆಯಲ್ಲಿ ಅಸ್ತ್ರವಿಲ್ಲ (ದೇಶನ್ನ. ೩೪) ; ಪ್ರಶ್ನೆಗಳಿಗೆ . . . ಉತ್ತರವೀಯುತ್ತವೆಯೋ ಎಂಬುದನ್ನು ತಿಳಿಯುವ ಕುತೂಹಲವೇ ಪ್ರಸ್ತುತ ಅಧ್ಯಯನದ ಉದ್ದೇಶ (ಶಾಸಗ. ೪ ಮುನ್ನು೩). ೫. ಸಂದರ್ಭೋಚಿತವಾದ : ಭೃಂಗಿನಾಟ್ಯಸ್ವನಂ ಪ್ರಸ್ತುತನಾನಾವಾದ್ಯಘೋಷಂಬೆರಸಿ ಬಳೆದುದೆತ್ತೆತ್ತಲುಂ ಪರ್ಬಿತಾಗಳ್ (ರಾಜಶೇ. ೦೯-೦೬೪). (ನಾ). ೬. ಸಂದರ್ಭ ; ಪರಿಸ್ಥಿತಿ : ಅವಳುಕ್ತಿವಕ್ರಿಮಕ್ಕೆ ಸೂಕ್ತಿರತ್ನಾಕರಂ ಮನದೊಳ್ ಮೆಚ್ಚಿ ಮತ್ತೊರ್ವನಾ ಪ್ರಸ್ತುತಕ್ಕಿಂತೆಂದಂ (ಚಂದ್ರಪು. ೬-೭೯ ವ). ೭. ಸಂದರ್ಭಕ್ಕೆ ತಕ್ಕುದು ; ಸಂದರ್ಭೋಚಿತವಾದುದು : ಪ್ರಸ್ತುತಮಲ್ಲದುದನೆ ಮಿಗೆ ವಿಸ್ತಾರಿಸಿ ನೆಗಟ್ಟೆ ಪೇೞ್ದೊಡಕ್ಕುಂ ಮತ್ತಪ್ರಸ್ತುತಮೆಂಬುದಳ್ಕ್ರಕತಿ (ಕಪಿರಾ. ೩-೦೩೮). ೮. ಅಗತ್ಯ ; ಆವಶ್ಯಕತೆ : ಪ್ರಸ್ತುತವೆಂಬಾಗ ಹೇರಳದ ಹರುಗೋಲವದಗಿಸಿ ಕೊಟು (ಎಕ. VI, ಶಿವಮೊ. ೩-೦೦; 1671) ; ಆವ ಕಡೆಯಿಂದ ಛಿಜಿಮಾಡಿದಿರಿ ನಿಮ್ಮಿಂದಲಾದ ಪ್ರಸ್ತುತಮಿಹುದು (ಪವಮೋ. ೫-೭) ; ವಿಧಿನಿಷೇಧಗಳನ್ನು ಪ್ರಭುಸಮ್ಮಿತವಾಗಿ ನಿರೂಪಿಸುವ ವೇದಗಳಲ್ಲಿ ಶ್ರದ್ಧೆಯಿಟ್ಟು ಪ್ರವರ್ತಿಸುವುದೇ ಪ್ರಸ್ತುತವಾಗಿತ್ತು (ಭಾರದ. ೦೨೦). ೯. [ಸಂಗೀತ] ಶ್ರುತಿಗಮಕಗಳಲ್ಲಿ ಒಂದು ಬಗೆ : ಸ್ಫುರಿತ . . . ಪ್ರಸ್ತುತ. . . ಕೋಮಲವೆಂಬ ಯಿಪ್ಪತ್ತೆರಡೇ ಶ್ರುತಿಗಮಕಂಗಳು (ಏಪೇಕ. ೨೩೨). [ಸಂ.]

**ಪ್ರಸ್ತುತಕಾಲ** (ನಾ). ಯೋಗ್ಯವಾದ ಕಾಲ ; ತಕ್ಕ ಸಮಯ ; ಜನನಪ್ರಸ್ತುತಕಾಲದೊಳ್ ಸ್ವಭವನದ್ರೇಕ್ಕಾಣ ವರ್ಗೋತ್ತಮಾಂಶ ನವಾಂಶೋಪಗತ ಸಕೃದ್ದ್ವಿಗುಣಮಂ . . . ಈಗುಂ (ಜಾತಕ. ೬-೩).

[ ಸಂ. ]

**ಪ್ರಸ್ತುತಮತಿ** (ನಾ). ಸಂದರ್ಭದ ಅರಿವಿರುವವನು : ಪ್ರಸ್ತುತಮತಿಯಾದ ಜನಮೇಜಯನಿಗೆ ತಟಕ್ಕನೆ ರಾಮಾಯಣದ ಆ ಕಥೆಯನು ಕೇಳುವ ಹಂಬಲ ಮೂಡುತ್ತದೆ (ಪಂಪಿ. ೦೨೯). [ಸಂ.]

**ಪ್ರಸ್ತುತಾಂಕುರ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ; ಒಂದು ಪ್ರಸ್ತುತ ವಿಷಯದ ವರ್ಣನೆಯಲ್ಲಿ ಮತ್ತೊಂದು ಪ್ರಸ್ತುತವಾದ ವಿಚಾರವು ಹೊರಹೊಮ್ಮುವುದು: ಪರಪ್ರಸ್ತುತದೊಳು ಪ್ರಸ್ತುತವು ತೋರಲು ಉರೆ ಪ್ರಸ್ತುತಾಂಕುರವು (ಕುವಲ. ೬೦).

[ಸಂ.]

**ಪ್ರಸ್ತುತ್ಯ** (ಗು). ೧. ಹೊಗಳಿದ ; ಕೀರ್ತಿಸಿದ : ಕಥೆಯುಂ ತದಾದಿಪುರುಷಪ್ರಸ್ತುತ್ಯಜನ್ಮಾಳಿಬಂಧುರಮೆಂದಂದೆ ಮದೀಯ ವಾಗ್ವಿಭವವಿನ್ಯಾಸಂ ಬಲಂಬೆತ್ತುದು (ಆದಿಪು. ೦-೨೫). (ನಾ). ೨. ಹೊಗಳಿಕೆಗೆ ಪಾತ್ರನಾದವನು; ಕೀರ್ತಿಶಾಲಿ: ಶ್ರೀವೀರನಾರಾಯಣಂ ವಿಸ್ತಾರೋಜ್ವಳಕೀರ್ತಿಸೌಖ್ಯನಿಳಯಂ . . . ದಾಯಾದಕೋಳಾಹಳಂ ಪ್ರಸ್ತುತ್ಯಂ ನಯನಾಭಿನನ್ದನೆಸೆದಂ ಶ್ರೀವೀರಭೂಪಾಳಕಂ (ಎಕ. VIII, ಪಗರ. ೯೬-೭; 1060); ಆಸ್ತೇಯಮಹಾವ್ರತಮಂ ಸಲಿಸಿಂ ಪ್ರಸ್ತುತ್ಯರೆನಿಪ್ಪವರಂ ನಿಲಿಸಿಂ (ಜೀವಸಂ. ೦೬೪-೩೨ ರಗಳೆ). [ಸಂ.]

**ಪ್ರಸ್ಥ** (ಗು). ೧. ಮುನ್ನಡೆಯುವ; ಗಮಿಸುವ. ೨. ಇರುವ; ನೆಲಸುವ: 'ವನಪ್ರಸ್ಥ' ಹೋ. (ನಾ). ೩. ಹೋಗಿ ಬರುವಿಕೆ; ಓಡಾಟ: ಅವರ ದೃಷ್ಟಿಯಲ್ಲಿ ಕುಡಚಿಯ ಸ್ಥಾನಃನ್ನಿಷ್ಟುಉನ್ನತವಾಯಿತು. ಅವರ ಮನೆಯಲ್ಲಿ ಅವನ ಪ್ರಸ್ಥವು ವಿಶೇಷವಾಗಿ ಬೆಳೆಯಿತು (ಸಮಚೀ. ೯೩೨); ಮಹಾರಾಜರ ದರ್ಬಾರದಲ್ಲಿ ಅವನ ಪ್ರಸ್ಥ ಚನ್ನಾಗಿ ಬೆಳೆಯಿತು (ಗ್ರಾಮಾಯ. ೪೬೦). ೪. ಬೆಟ್ಟದ ಮೇಲಿನ ಸಮತಲಭೂಮಿ; ಸಾನು; ತಪ್ಪಲು : "ನಿತಂಬಃ, ಕಟಕಃ, ಸಾನುಃ, ಪ್ರಸ್ಥಂ, ತಟಂ, ಭೃಗುಃ- ಈ ೬ ತಪ್ಪಲ್" (ಹಲಾಯು. ೨೭-೧೨); ರಜತಾದ್ರಿಪ್ರಸ್ಥವೇದಿಕಾವಕಾಶಂ ಬಿಡಿದು . . . ಪಡುವಣ ಮ್ಲೇಚ್ಛಖಂಡಮಂ ಮೂವಳಸು ಬಳಸಿ ಸಾಧಿಸಿ (ಶಾಂತಿಪು. ೧೦-೪೨ ವ). ೫. ಬೆಟ್ಟದ ತುದಿ,—ಅಗ್ರಭಾಗ. ೬. ಹಿರಿಮೆ; ಔನ್ನತ್ಯ: ಬ್ರಾಹ್ಮಣ, ಬೌದ್ಧ ಹಾಗೂ ಜೈನಸಂಪ್ರದಾಯಗಳಲ್ಲಿ ಆಗ ತಮ್ಮ ತಮ್ಮ ಪ್ರಸ್ಥ ಬೆಳಸಿಕೊಳ್ಳುವ ಒಳಸಂಚುಗಳು ನಡೆದಿದ್ದುದು ಈ ಐತಿಹ್ಯಗಳಿಂದ ಸ್ಪಷ್ಟವಾಗುತ್ತಿದೆ (ಕರ್ನಾಟ. ೧೮೭). ೭. ಮೂವತ್ತೆರಡು ಪಲಗಳ ಒಂದು ಅಳತೆ : ಮೃದ್ವಗ್ನಿಯಿಂದ ಪಾಕ ಮಾಡಿ ಶೋಧಿಸಿ ಆ ಘೃತದಲ್ಲಿ ದ್ರಾಕ್ಷಿ ಒಂದು ಪ್ರಸ್ಥ ಹಾಕಬೇಕು (ಸಕವೈ. ಶಂ. ೪೫೦). ೮. ಒಂದು ಕೊಳಗ ಅಥವಾ ಬಳ್ಳ; ಎಂಟು ಸೇರು: "ಬಳ್ಳದಲ್ಲಿ ಯುಂ ಪ್ರಸ್ಥಮೆಂಬುದು" (ಹಲಾಯು. ೦೩೩-೦೫); ಯಿದ್ದ ಪ್ರಸ್ಥಕ್ಕೆ ವಸು (ಚತು)ಸಾಸಿರ ? ತಿದ್ದಿದ ಕೊಳಗಕ್ಕೆ ಲಕ್ಷಗೂಡಿತ್ತೆರಡುಂ ಸಾಸಿರ ಬುದ್ಧಿಯ ಖಂಡುಗವೊಂದಕೆ ನಿರ್ಧರ ಮೂಪತ್ತ ಎಂಟುಲಕ್ಷಸಾಸಿರ ಕಾಳಂ (ವ್ಯವಹಾ. ಅನುಬಂಧ. ೧-೨); ಒಂದು ಸೊಲ್ಲಗೆಯೇ ನಿಟುಂಜವದು ನಾಲ್ಕಾಗಲೊಂದು ಕುಡುಬವದು ನಾಲ್ಕಾಗಲೊಂದು ಪ್ರಸ್ಥವಾ ಪ್ರಸ್ಥವೆರಡಾಗಲೊಂದು ವಾಹ (ವಿವೇಕ. ೯). [ಸಂ.]

**ಪ್ರಸ್ಥಪುಷ್ಪ** (ನಾ). ಸುವಾಸನೆಯ ಎಲೆಗಳುಳ್ಳ ಒಂದು ಬಗೆಯ ಪತ್ರೆ; ಮರುಗ : "ಸಮೀರಣಃ, ಮರುವಕಃ, ಪ್ರಸ್ಥಪುಷ್ಪಃ, ಫಣಿಜ್ಜಕಃ, ಜಂಬೀರಃ – ೫ ಮಗುವ, ಮರುಗದ ಹೆಸರು" (ಸಿದ್ಧಾಂತಿ. ೦೩೦). [ಸಂ.]

**ಪ್ರಸ್ಥಭೂಮಿ** (ನಾ). ಎತ್ತರವಾದ ಸಮತಲಭೂಮಿ : ವಿಶಾಲವಾಗಿ ಮೇಲ್ಮಟ್ಟ ಸಮವಾಗಿರುವ ಎತ್ತರ ಪ್ರದೇಶಕ್ಕೆ ಪ್ರಸ್ಥಭೂಮಿ ಎಂದು ಹೆಸರು (ಭೂವಿವ. ೦೩೩); ಸಾಮಾನ್ಯವಾಗಿ ನದಿಯ ಬಯಲುಗಳು, ತೀರ ಪ್ರದೇಶಗಳು, ಪ್ರಸ್ಥಭೂಮಿಗಳೆಂದು ವಿಭಾಗ ಮಾಡಿದ್ದಾಗ್ಲೂ ಈ ದೇಶವು . . . ಭಿನ್ನಭಿನ್ನವಾಗಿಲ್ಲ (ಭಾಇತ್ರ. ೩) ; ಚೋಟಾನಾಗಪುರದ ಬಳಿಯ ಪ್ರಸ್ಥಭೂಮಿಯ ಹರವು (ದ್ರಾವಿವಿ. ೪೩೯). [ಸಂ.]

**ಪ್ರಸ್ಥಾನ** (ನಾ). ೧. ಪ್ರಯಾಣ; ಯಾತ್ರೆ; ಸಂಚಾರ: "ಯಾತ್ರಾ, ಪ್ರಯಾಣಂ, ಪ್ರಸ್ಥಾನಂ—ಈ ೩ ಪಯಣಂ" (ಹಲಾಯು. ೭೪-೨೯೯); ಹರಿಗಂಗುತ್ಸಾಹದಿಂ ಪಟ್ಟಬಂಧನಮಂ ಮಾಡುವಮಿಂದೆ ಹಸ್ತಿನಪುರ ಪ್ರಸ್ಥಾನಮಂ ಮಾಡುವಂ (ಶಂಕಖಾ. ೦೪-೦೦) ; ಭೀಮಂಗೆ ನೀಂ ಪಟ್ಟಬಂಧನಮಂ ಮಾಟ್ಟುದದರ್ಕೆ ಹಸ್ತಿನಪುರಪ್ರಸ್ಥಾನಮಂ ಮಾಡುವಂ (ಗದಾಯು. ೦೦-೨೦) ; ಇನ್ನು ತಮ್ಮ ಮುಂದಿನ ಪ್ರಸ್ಥಾನದ ದಿನವನ್ನು ಅವರು ನಿರ್ಣಯಿಸಬೇಕಾಗಿತ್ತು (ವಂಶವೃ. ೪೮೭). ೨. ಶತ್ರುಗಳನ್ನು ನಿಗ್ರಹಿಸಲು ಮಾಡುವ ಪ್ರಯಾಣ ; ದಂಡಯಾತ್ರೆ : ಪಳಿಕಿನ ಶಿಲಾಪಟ್ಟಂ ಪ್ರಸ್ಥಾನದೊಳ್ ವಿಜಯದ್ವಿಪಾವಳಿಯ ದರಿಗೊಂಡುದ್ದೇಶ ಚಕ್ರವರ್ತಿಯ ನಾಮದಗ್ಗಳದ ಸಿರಿಯುಂ ಪೋಲ್ವನ್ನಂ (ಶಾಂತಿಪು. ೦೦-೧೯) ; ತನ್ನ ವಜೀರನಿಗೆ ಆ ಮಂತ್ರಿಯು ತಕ್ಕ ಸತ್ಕಾರ ಮಾಡೆಂದು ಶಾಸನವಿರಿಸಿ ತಾನು ಪ್ರಸ್ಥಾನದ ಸಿದ್ಧತೆ ಮಾಡತೊಡಗಿದನು (ಕಗದ್ಯ. ೦೫). ೩. [ನಾಟ್ಯ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು; ಕೆಳವರ್ಗದ ನಾಟಕಗಳಲ್ಲಿ ಒಂದು : ಉಪರೂಪಕಗಳು—೧. ನಾಟಿಕಾ . . . ೬. ಪ್ರಸ್ಥಾನ (ಸಂನಾಟ. ೩೨). [ಸಂ.]

**ಪ್ರಸ್ಥಾನಂಗೆಯ್** (ಕ್ರಿ). ಪ್ರಯಾಣ ಮಾಡು; ಯಾತ್ರೆ ಹೋಗು : ಆ ಸ್ಥಳದೊಳಿನ್ನೆಗಂ ದೇವಸ್ಥಪತಿ ನಿಜಾಜ್ಞೆಯಿಂದೆ ನಿರ್ಮಿಸುಗುಂ ರತ್ನಸ್ಥಗಿತಮೆನಲ್ ಪುರಮಂ ಪ್ರಸ್ಥಾನಂಗೆಯ್ಗ ತಡೆಯದಲ್ಲಿಗೆ ಕಟಕಂ (ಜಗವಿ. ೯-೨೫). [ಪ್ರಸ್ಥಾನ + ಕೆಯ್$_1$]

**ಪ್ರಸ್ಥಾನತೂರ್ಯ** (ನಾ). ಪ್ರಯಾಣ ಹೊರಡುವಾಗ ಮಾಡುವ ವಾದ್ಯಘೋಷ: ಅನಂತರಂ ವಸಂತವನಕೇಳೀಪ್ರಸ್ಥಾನತೂರ್ಯಂಗಳಂ ಪೊಯ್ಸಿದಾಗಳ್ (ಚಂದ್ರಪು. ೭-೭೭ ವ). [ಸಂ.]

**ಪ್ರಸ್ಥಾನತ್ರಯ** (ನಾ). ಬ್ರಹ್ಮಸೂತ್ರ, ಉಪನಿಷತ್ತುಗಳು ಮತ್ತು ಭಗವದ್ಗೀತೆಗಳೆಂಬ ಮೂರು ಪ್ರಮಾಣಗ್ರಂಥಗಳು : ಬ್ರಹ್ಮಸೂತ್ರಗಳು, ಉಪನಿಷತ್ತುಗಳು, ಭಗವದ್ಗೀತೆ ಎಂಬವು ಇಂದಿಗೂ ಪ್ರಸ್ಥಾನತ್ರಯಗಳೆಂದು ಪ್ರಸಿದ್ಧ (ಭಾಇತ್ರ. ೨೬೦) ; ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ – ಈ ಮೂರೂ ಪ್ರಸ್ಥಾನತ್ರಯವೆಂದು ಹೆಸರು ಪಡೆದು ವೈದಿಕಧರ್ಮಕ್ಕೆ ಅತಿಪ್ರಮಾಣಗ್ರಂಥಗಳೆಂದು ನಿರ್ಧರಿತವಾಗಿದೆ (ಭಾರದ. ೧೦೯). [ಸಂ.]

**ಪ್ರಸ್ಥಾನತ್ರಯಿ** (ನಾ). = ಪ್ರಸ್ಥಾನತ್ರಯ : ಕರ್ಮಮಾರ್ಗವೇ ಶ್ರೇಷ್ಠವೆಂದು ಪ್ರಸ್ಥಾನತ್ರಯಿಗಳಲ್ಲಿ ಒಂದಾದ ಗೀತೆಯೂ ಹೇಳಿದೆ (ಜೀದಾಪ. ೦೦೦) ; ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ_ ಪ್ರಸ್ಥಾನತ್ರಯಿಗೆ ಟೀಕೆ ಬರೆಯದೆ ಆಚಾರ್ಯರಿಗೆ ಪ್ರಧಾನ್ಯ ದೊರೆಯುತ್ತಿರಲಿಲ್ಲ (ಕರ್ನಾಕ. ೩೦). [ಸಂ. ಪ್ರಸ್ಥಾನತ್ರಯೀ]

**ಪ್ರಸ್ಥಾನಪಾಂಶು** (ನಾ). (ರಥದ) ಚಲನೆಯಿಂದ ಉಂಟಾದ ಧೂಳು : ದಿನನಾಥರಥಪ್ರಸ್ಥಾನಪಾಂಶುವೆನಿಸಿ ದಿಶಾಸ್ಥಗಿತಂ ರಂಜಿಸಿತ್ತು ಸಂಧ್ಯಾರಾಗಂ (ಮಲ್ಲಿಪು. ೭-೧೦೫). [ಸಂ.]

**ಪ್ರಸ್ಥಾನಭೇರಿ** (ನಾ). ೧. ದಿಗ್ವಿಜಯಕ್ಕಾಗಿ ಕೈಗೊಂಡ ದಂಡಯಾತ್ರೆಗಳಲ್ಲಿ ಮಾಡುವ ವಾದ್ಯಘೋಷ : ವಿಜಯೋದ್ಯೋಗಮನೆತ್ತಿಕೊಣ್ಡು ಪ್ರಸ್ಥಾನಭೇರಿಯಂ ಪೊಯ್ಸಿದುದು (ಸೌಇಇ. XX. ೪೪-೦೫ ; 1076 ?) ; ಅಷ್ಟದಿಗ್ಭಿತ್ತಿಯಂ ಧೀಂಕಿಟ್ಟುತ್ತು ರಘುಪ್ರವೀರವಿಜಯಪ್ರಸ್ಥಾನಭೇರೀರವಂ (ಶಂರಾವಿ. ೦೨-೦೭) ; ಮಗಧರಾಜಂ ಪ್ರಸ್ಥಾನಭೇರಿಯಂ ಪೊಯ್ಸೆಂದು ಸೇನಾಗ್ರಣಿಗೆ ಬೆಸಸಿದಾಗಳ್ (ಜಗವಿ. ೭-೩೯ ವ). [ಸಂ. ಪ್ರಸ್ಥಾನಭೇರೀ]

**ಪ್ರಸ್ಥಾನಮಂಗಳ** (ನಾ). ಪ್ರಯಾಣಕ್ಕೆ ಹೊರಡುವ ಮೊದಲು ಮಾಡುವ ಮಂಗಳಕಾರ್ಯ : ಎಲೆ ಸಖಿ, ಏಳು ಏಳು ! ಶಕುಂತಳೆಯ ಪ್ರಸ್ಥಾನಮಂಗಳವನ್ನು ನೆರವೇರಿಸೋಣ (ಶಾಕುಂತ. ೪೮-೨೩). [ಸಂ. ಪ್ರಸ್ಥಾನಮಂಗಲ]

**ಪ್ರಸ್ಥಾನಶಿಬಿರ** (ನಾ). ಪ್ರಯಾಣಕಾಲದಲ್ಲಿ ತಂಗಲು ಏರ್ಪಡಿಸುವ ಬಿಡಾರ, – ವಿಶ್ರಾಂತಿಸ್ಥಳ : ಗೃಹಮಹತ್ತರಂ ಮುನ್ನಮೆ ಸಮೆದುದಂ ಪ್ರಸ್ಥಾನಶಿಬಿರಮಂ ಪೊಕ್ಕು (ಚಂದ್ರಪು. ೦೦-೧೭ ವ) ; ಆ ಪ್ರಸ್ಥಾನಶಿಬಿರದಿಂದಂ ತಳರ್ದಾಗಳ್ (ಬಾಧಪು. ೦೦-೩೩ ವ). [ಸಂ.]

**ಪ್ರಸ್ಥಾಪಿಸು** (ಕ್ರಿ). ಪ್ರಚಾರಕ್ಕೆ ತರು ; ಪ್ರಚಲಿತಗೊಳಿಸು : ಸ್ವಾಮಿ ವಿವೇಕಾನಂದರು ಭಾರತೀಯ ಆಧ್ಯಾತ್ಮದ ಮೌಲ್ಯಗಳನ್ನು ಸಪ್ತಸಾಗರಗಳಾಚೆಯಲ್ಲಿ ಪ್ರಸ್ಥಾಪಿಸಿದರು (ಪ್ರಬಂಧ. ೬೦) ; ಒಬ್ಬರಿಗೊಬ್ಬರು ತಮ್ಮ ಮತವೇ ಶ್ರೇಷ್ಠವೆಂದು ಪ್ರಸ್ಥಾಪಿಸಲು ಹೆಣಗುತ್ತಿದ್ದರು (ಸಾಹಿಸ. ೦೩೫). [ಸಂ. ಪ್ರಸ್ಥಾಪನ + –ಇಸು$_3$]

**ಪ್ರಸ್ಥಿತಿ** (ನಾ). ಮುನ್ನಡೆಯುವುದು ; ಸಂಚಾರ ; ಗಮನ. [ಸಂ.]

**ಪ್ರಸ್ಪರ್ಧಿ** (ಗು). ೧. ಪೈಪೋಟಿ ಮಾಡುವ ; ಸ್ಪರ್ಧಿಸುವ : ನೀಹಾರ ಪ್ರಸ್ಪರ್ಧಿ ಚಂಚಚ್ಚಮರಜಕಲಹಂಸಾಸ್ಪದಂ (ಆದಿಪು. ೦೦-೦೯) ; ಮದನ ಪ್ರಸ್ಪರ್ಧಿಸೌಂದರ್ಯದೆ ನೃಪಸುತೆಯುಂ ಸತ್ಕಳಾಜಾಳಚಾತುರ್ಯದೆ . . . ಎಱಗಿಸಿ (ಚಂದ್ರಪು. ೫-೦೩೯). (ನಾ). ೨. ಎದುರಾಳಿಯಾದುದು ; ಪ್ರತಿ

ಸ್ಪರ್ಧಿಯಹುದುದಂ: ಪ್ರಕ್ಷುಬ್ಧಕಲ್ಲೋಲಕಲ್ಪಿತಕೋಲಾಹಲಕಲ್ಪಕಾಲರಭಸ ಪ್ರಸ್ಪರ್ಧಿಯಂ ವಾರ್ಧಿಯುಂ (ಕಾವ್ಯಸಾ. ೬೩). [ಸಂ. ಪ್ರಸ್ಪರ್ಧಿನ್]

**ಪ್ರಸ್ಫಾರ** (ಗು). ೧. ಹೊಳೆಯುವ : ಲೋಕೈಕಭೀಕರಮಾಟಂದುದು ನೀಲ ಮೇಘನಿಕಟಪ್ರಸ್ಫಾರದಂಭೋಳಿವೊಲ್(ಶಂರಾಪಶಾ. ೦೪-೦೭೪). ೨.ಉಬ್ಬಿದ; ಊದಿದ ; ಹಿಗ್ಗಿದ. ೩. ಅಹಂಕಾರವುಳ್ಳ. [ಸಂ.]

**ಪ್ರಸ್ಫುಟ** (ಗು). ೧. ಅರಳಿದ ; ವಿಕಾಸವಾದ. ೨. ಪ್ರಕಟವಾದ. ೩. ಸ್ಪಷ್ಟವಾದ ; ವ್ಯಕ್ತವಾದ. ೪. ಹೊಳೆಯುವ; ಪ್ರಕಾಶಿಸುವ ; ಬೆಳಗುವ : ವಿನುತಶ್ವೇತಾತಪತ್ರಾವಳಿಯರುಣಮಣಿಪ್ರಸ್ಫುಟೋತ್ತುಂಗ ಸಿಂಹಾಸನಮಂ . . . ತಂದರ್ (ಶಂಖಶಂ. ೨೨೩-೦೭) ; ಚೀನಚೇಲಾವೃತ ಮಧ್ಯಂ ಮೌಕ್ತಿಕಪ್ರಸ್ಫುಟಮಕುಟನುದಂಚಿತ್ಸುವರ್ಣೋರುವೇತ್ರಾಂಚಿತ ಹಸ್ತಂ ನಿಂದು ಕಣ್ಗೊಪ್ಪಿದಂ (ರಾಜಶೇ. ೦೪-೦೫೨). [ಸಂ.]

**ಪ್ರಸ್ಫುಟಿಸು** (ಕ್ರಿ). ವ್ಯಕ್ತವಾಗು ; ಪ್ರಕಟವಾಗು : ಈಶ್ವರಪ್ರಕೃತಿ ರೂಪಂ ಪ್ರಸ್ಫುಟಿಸಿಸೀಯೆಡೆಯೆ ಸತ್ಯಶಿವಸುಂದರದ ಸಚ್ಚಿದಾನಂದಸ್ವರೂಪಂ (ಮಲೆದೇ. ೩೪-೦೦). [ಪ್ರಸ್ಫುಟ +— ಇಸು]

**ಪ್ರಸ್ಫುರಿತ**(ಗು). ೧. ನಡುಗುವ ; ಅದುರುವ; ಚಂಚಲವಾದ: ಪ್ರಸ್ಫುರಿತ ದಶನವಸನನುಮಾಗಿ (ಚಂದ್ರಪ್ರ. ೩-೦೦೦ ವ). ೨. ಹೊಳೆಯುವ ; ಪ್ರಕಾಶಿಸುವ : ಹೇಮಪ್ರಭಾಪ್ರಸ್ಫುರಿತ ಗಿರಿಶಚಂಚಜ್ಜಟಾಜಾಲಜೂಟವ್ಯೋಮ ಪ್ರೋದ್ಭಾಸಿಚಂದ್ರಂ ತ್ರಿಭುವನಜನಕಾನಂದಮಂ ಮಾಡುಗೆಂದುಂ (ಕಾದಂಪೂ. ೧); ಒಡಗೊಂಡು ಬಂದತ್ಯಂತವಿಭವದಲಿ ಇರಿಸಿ ಕೃಷ್ಣಾ ಜಿನಕುಶಾ ಪ್ರಸ್ಫುರಿತಪೀಠದೊಳರ್ಘ್ಯಪಾದ್ಯಾದ್ಯುರುಸಪರ್ಯೆಗಳಿಂದ ಸತ್ಕರಿಸಿದರು ಮುನಿವರನ (ತಿಮ್ಮಕ್ರ. ೩-೬೩). ೩. ಚೆದರಿಸಿದ ; ಚೆಲ್ಲಾಪಿಲ್ಲಿ ಮಾಡಿದ: ಯುವತೀಸಂತಾನ ನಾನಾಚಲದಲಕಲಸಲ್ಲಾಸ್ಯಲೀಲಾಪ್ರಬದ್ಧಂ ವಿವಿಧಾ ಗಾರಾಂಗಣಪ್ರಸ್ಫುರಿತಕೃತಕಕಾಸಾರಪಾನೀಯಭಂಗೋದ್ಭವಬಿಂದುವ್ರಾತ ಶೀತಾವರಣನೊಲವಿನಿಂ ತೀಡಿದಂ (ಗಿರಿಜಾ. ४-೦೦೯) ; ಕರಿ ಕೇಸರಿಯಂ ಕೆಣಕಿದ ಪರಿಯಿಂ ಪರುಟವಿಸದಿರ್ ಮದಾಂಧತೆಯಿಂದಾಂತರಿಬಲಬಲಾಹಕ ಪ್ರಸ್ಫುರಿತಮಹಾನಿಲನೊಳ್ (ಶಬಶಂ. ೪-೨೯). [ಸಂ.]

**ಪ್ರಸ್ಫುರಿಸು** (ಕ್ರಿ). ಶೋಭಿಸು ; ಪ್ರಕಾಶಿಸು : ಅವರ ಮನದಜ್ಞಾನವಂ ಬಿಡಿಸಿ ಸಹಜವೆನಿಸುವದೇ ವಿಶೇಷವೆಂದೀರೈದುಭುಜಗಳಂ ತವೆ ಪಂಚ ಮುಖತ್ರಿಲೋಚನಗಳಂ ತೋರ್ಪ ಪ್ರಸ್ಫುರಿಸುತ್ತಲಿರ್ದನಯ್ಯಂ (ಗುರುಬಸಾ. ೩-೪). [ಪ್ರಸ್ಫುರಣ + — ಇಸು]

**ಪ್ರಸ್ಫೋಟನ** (ನಾ). ೧. ಅರಳುವಿಕೆ ; ವಿಕಸನ. ೨. ಬಿರಿಯುವುದು ; ಒಡೆಯುವುದಂ. ೩. ಕೇರುವುದಂ ; ತೂರುವುದು. ೪. ಕೇರುವ ಸಾಧನ ; ಮೊರ : "ಪ್ರಸ್ಫೋಟನಂ, ಶೂರ್ಪ — ೨ ಮೊರ" (ಸಿದ್ಧಾಂತಿ. ೨೯೦). [ಸಂ].

**ಪ್ರಸ್ಯಂದ** (ನಾ). ೧. ಸ್ರವಿಸುವುದು ; ಸೋರುವುದು; ಸ್ರಾವ. ೨. ಸ್ರವಿಸುವ ದ್ರವ ಕರಕಂಜಾತಕ್ಕೆ ಪುಟ್ಟಿದರ್ಜಂಜಮೆನಿಸೆ ಲೀಲಾಂಬುಜಂ ತುಂಬಿ ಬಿಂಬಾಧರರಾಗಂ ಸೂಸಿತೆಂಬಂದದೊಳೆ ಪೊಳೆಯೆ ಕೆಂಬಲ್ಲೆಳೊಳ್ಗೆಂಪು ಪಾದಾಂಬುರುಹಪ್ರಸ್ಯಂದವೊಕ್ಕಂತಿರೆ (ರಾಜಶೇ. ೬-೩೨). [ಸಂ.]

**ಪ್ರಸ್ಯಂದಿ** (ಗು). ಸುರಿಯುವ : ಅವಿರಳಪ್ರಸ್ಯಂದಿಬಾಷ್ಪೋದಕಾನನನಾ ಕಾನನದೊಳ್ಪೊಟಲ್ದು ರಘುರಾಮಂ ಸೇದೆವಟ್ಟಿರ್ಪುದುಂ(ಶಂರಾಪಶಾ. ೯-೦೨೦). [ಸಂ. ಪ್ರಸ್ಯಂದಿನ್]

**ಪ್ರಸ್ರವ** (ಗು). ೧. ಹರಿಯುವ ; ಸ್ರವಿಸುವ. (ನಾ). ೨. ಪ್ರವಾಹ. ೩. ಬೆಟ್ಟದ ಝರಿ ; ಅಬ್ಬಿ. ೪. ಮೂತ್ರ. [ಸಂ.]

**ಪ್ರಸ್ರವಣ** (ನಾ). ೧. ಬೆಟ್ಟದ ಝರಿ; ಒಜ್ಜರ; ಅಬ್ಬಿ: "ಒಜಿತೆವೊಜ್ಜರ ಪ್ರಸ್ರವಣಮೆನಿಕುಂ" (ಮಂಗರಾ. ೦೨೪-೦೫) ; ಪರ್ವತ ಮುಂತಾದ ಎತ್ತರವಾದ ಪ್ರದೇಶದಿಂದ ಜಿನುಗಿ ರಿದು ಬರುವ ನೀರು ಪ್ರಸ್ರವಹಣವು (ಅರ್ಥಶಾ. ೦೬೬). ೨. ಜಲಪಾತ : ವಿವಿಧಗುಲ್ಮನಿಕುಂಜದಲಿ . . . ಪವನನಿಸ್ವನ ಪರ್ಣರವಪ್ರಸ್ರವಣಧಾರಾಧ್ವಾನಖಗಮೃಗನಿವಹನಿನದದಲಟಿಸಿ ನೋಡಿದ ರಿವರು ಜಾನಕಿಯ (ತೊರರಾ. ೩-೦೦-೩೨) ; ಪ್ರಸ್ರವಣಸ್ಥಾನವು ಪ್ರಸ್ರವಣ ಗಳಿರುವ ಗಿರಿದುರ್ಗಪ್ರದೇಶದ ನಿವಾಸಿಗಳಿಗಲ್ಲದೆ ಮೈದಾನದಲ್ಲಿರುವವರಿಗಲ್ಲ (ಅರ್ಥಶಾ. ೩೦). ೩. ನೆಲದೊಳಗಿಂದ ಉಕ್ಕಿ ಬರುವ ನೀರು; ಬುಗ್ಗೆ ; ತಲಪರಿಗೆ ; ಊಟೆ. ೪. ಬೆವರು ; ಸ್ವೇದ. ೫. ಮೂತ್ರ ವಿಸರ್ಜನೆ. [ಸಂ.]

**ಪ್ರಸ್ರಾವ** (ನಾ). ೧. ಹರಿಯುವಿಕೆ ; ಸ್ರವಿಸುವಿಕೆ. ೨. ಮೂತ್ರ : "ಮೂತ್ರಂ, ಪ್ರಸ್ರಾವಃ— ೨ ಮೂತ್ರದ ಹೆಸರುಗಳು" (ಸಿದ್ಧಾಂತಿ. ೦೮೮). [ಸಂ.]

**ಪ್ರಸ್ವಾಪನ** (ನಾ). ೧. ನಿದ್ರಿಸುವಂತೆ ಮಾಡುವುದು; ನಿದ್ರೆಯುನ್ನುಂಟು ಮಾಡುವುದು. ೨. ಜೃಂಭಕ, ಪ್ರಸ್ವಾಪನ, ಅಪ್ರತಿಹತ, ನಿಶ್ಶೇಷೀಕರಣ, ಜೀವಗ್ರಾಹಗಳೆಂಬ ಐದು ಬಗೆಯ ಮಂತ್ರ ಗಳಲ್ಲಿ ಒಂದು ; ಎದುರಾಳಿಗೆ ನಿದ್ರೆಯನ್ನುಂಟುಮಾಡುವ ಒಂದು ಮಂತ್ರ: ಜೃಂಭಕ ಪ್ರಸ್ವಾಪನ ಅಪ್ರತಿಹತ . . . ಎಂಬ ಪಂಚಶಕ್ತಿಯ ಮಂತ್ರಗಳಂ (ವಿವೇಕ. ೯೦). [ಸಂ.]

**ಪ್ರಸ್ವಿನ್ನ** (ಗು). ಚೆನ್ನಾಗಿ ಬೆವತಿರುವ : ದೀನಂ ವಿವರ್ಣವದನಂ ಕೃಶಂ ದಿಂಡುರುಳೆ, ಪ್ರಸ್ವಿನ್ನಚೀರವಲ್ಕಲಜಟಾಜಟಿಲನಂ ಕಷ್ಟದಿಂ ಗುರುತಿಸಿ (ಶ್ರೀರಾಪಶಾ. ೦೬೪-೩೨೭). [ಸಂ.]

**ಪ್ರಸ್ವೇದ** (ನಾ). ೧. ಅತಿಯಾದ ಬೆವರು : ಆಮರಣಮಸ್ನಾನವ್ರತಮಂ ತಾಳ್ದಿದನುಂ ರವಿಕಿರಣಪ್ರತಾಪಜನಿತಪ್ರಸ್ವೇದಾಕುಲಪವನಾನೀತಪಾಂಶು ನಿಚಯನುಂ . . . ಅಪ್ಪ ಜಿನಮುನಿಗೆ ಮಲಪರೀಷಹಜಯಂ ಅಱಿಯೆ ಪಡುಗುಂ (ಶಬ್ದಮ್ಮಕೃ. ೩೩೬). ೨. ಆನೆ. [ಸಂ.]

**ಪ್ರಹತ** (ಗು). ೧. ಹೊಡೆದ ; ಬಾಜಿಸಿದ : ಮೌಹೂರ್ತಿಕಗಣನಿರೂಪಿತ ಪ್ರಶಸ್ತಮುಹೂರ್ತದೊಳತಿಪ್ರಮೋದನಿರ್ಭರಪ್ರಣಯಪ್ರಹತಮಂಗಳ ಪಟ ಹರವಂಗಳುಂ . . . ಅಂತಃಪುರಜನಾಶೀರ್ವಾದಕೋಲಾಹಳವುಂ ಮಸೆಯೆ (ಆದಿಪು. ४-೯೭ ವ). ೨. (ಚಪ್ಪಾಳೆಯಂತೆ) ತಟ್ಟಿದ : ತಾಳ ತತ್ಪರಶಿಶುನರ್ತನ ಪ್ರಹತಕಂಕಣಝಂಕೃತಹಸ್ತತೂರ್ಯಸುಂದರರವ ದಿಂದದಂ ಮಱಸಿದಳ್ ಗಡ ಮುಗ್ಧೆಯದೇಂ ವಿದಗ್ಧೆಯೋ (ಶಾಂತಿಪು. ೬-೬೩). ೩. ಹೊಡೆತ ತಿಂದ; ಗಾಯಗೊಂಡ. ೪. ಸೋತ ; ಅಪಜಯ ಹೊಂದಿದ. ೫. ಹರಡಿದ; ವಿಸ್ತಾರಗೊಂಡ. ೬. ಅರಿತ; ತಿಳಿದಿರುವ. (ನಾ). ೭. ತಿಳಿದವನು ; ಪ್ರಾಜ್ಞ ; ಜ್ಞಾನಿ : "ವ್ಯುತ್ಪನ್ನಃ, ಪ್ರಹತಃ, ಕ್ಷುಣ್ಣಃ, ಸಂಸ್ಕೃತಃ — ಈ ४ ಪಂಡಿತಂ" (ಹಲಾಯು. ೫೬-೦೪೭). [ಸಂ.]

**ಪ್ರಹತಿ** (ನಾ). ಹೊಡೆತ ; ಏಟು ; ಪೆಟ್ಟು : ನೀಂ ಕೆರಳ್ಚಿ ಮೋಣ್ಪ್ರಹತಿಯನಾನದೆಯ್ದುವೆಯದೆಂತೆಲೆ ತೀರ್ಚದೆ ನಿನ್ನನಿರ್ಪನೇ (ರಾಜಶೇ. ೬-೯೦). [ಸಂ.]

**ಪ್ರಹತಿಸು** (ಕ್ರಿ). ೧. ಹೊಡೆ ; ಏಟು ಕೊಡು ; ಪೆಟ್ಟು ಹಾಕು. ೨. ನಾಶ ಮಾಡು : ಶರತ್ಕಾಲದವೊಲ್ ಪ್ರಹತಿಸುಗೆ ಸಮಗ್ರಪಂಕಮಂ ಸುಜನೌಘಂ (ಬಾರಪು. ೦-೩೦). [ಪ್ರಹತ + — ಇಸು]

**ಪ್ರಹರ** (ನಾ). ೧. ಹೊಡೆತ ; ಏಟು ; ಪೆಟ್ಟು : 'ಪ್ರಹರಿಸು' ಪರಾ. ೨. ನಿವಾರಣೆ ; ನಾಶ : ದುಸ್ತರಜ್ಞಾನಪ್ರಪಂಚತಮಸ್ತತಿ ಪ್ರಹರಾರ್ಥದತ್ತಪ್ರಸ್ತುತಜ್ಞಾನ (ಬಸವು. ೬-೪೯). ೩. ಒಂದು ದಿವಸದ ಎಂಟನೆಯ ಭಾಗ ; ಜಾವ ; ಯಾಮ : "ಪ್ರಹರಃ, ಯಾಮಃ — ಈ ೨ ಜಾವಂ" (ಹಲಾಯು. ೦೮-೦೦೭) ; ಎರಡನೆಯ ಪ್ರಹರದ

ರಕ್ಷಕರು ಬರುವುದರೊಳಗಾಗಿ ಇವರು ತಮ್ಮ ಕಾರ್ಯಸಾಧನೆ ಮಾಡಿಕೊಳ್ಳಬೇಕಾಗಿತ್ತು (ಶಾಂತಲಾ.೨೨೮); ಜೈಲಿನಲ್ಲಿ . . . ಎಂಟೂ ಪ್ರಹರ ಮತ್ತು ಅರವತ್ತ ನಾಲ್ಕುಗಳಿಗೆಯಲ್ಲೂ ಹೃದಯದಲ್ಲಿ ಅಂಕಿತವಾದ ನಿನ್ನ ಮೂರ್ತಿಯ ದರ್ಶನ ಮಾಡುತ್ತಲೇ ಇದ್ದೆ (ಶ್ರೀಕಾಕ. ೦೬೩). [ಸಂ.]

**ಪ್ರಹರಣ** (ನಾ). ೧. ಹೊಡೆತ ; ಏಟು ; ಪೆಟ್ಟು : ರಣಾಂಗಣದಂತೆ ಚಮೂರಚಿತಪ್ರಹರಣವಿಶೀರ್ಣರೂಪಮುಂ (ಚಂದ್ರಪ್ರ. ೩-೩೨ ವ). ೨. ಗದಾಯುದ್ಧದ ಒಂದು ವರಸೆ : ವಿಳಂಬಿತಮಾಕುಂಚಿತಮಾಸ್ಫೋಟಿತಮಾಕ್ಷಿಪ್ತಮುದ್ಭ್ರಾಮಿತಂ ದಿಗ್ಭ್ರಾಮಿತಮುಚಿತವಿರುದ್ಧಮಚಿಂತ್ಯಮುಮೆಂಬೆಂಟುಂತೆಱದ ಪ್ರಹರಣಂಗಳೊಳಂ ಅತಿಪರಿಚಿತರಾಗಿ (ಗದಾಯು. ೯-೧೮). ೩. ಯಾವುದಾದರೊಂದು ವಾದ್ಯದ ಬಾಜನೆ, –ವಾದನ : ಪ್ರಹರಣಮಿಂಪಂ ಪಡೆದಿರೆ ಸುರವಧು ಮೃದಂಗಮಂ ಬಾಜಿಸಿದಳ್ (ಚಂದ್ರಪ್ರ. ೧೧-೦೯೩). ೪. ಎಸೆಯುವುದು ; ಬಿಸಾಡುವುದು. ೫. ಆಕ್ರಮಣ : ಕ್ಷತ್ರಿಯಜಾತಿಗೆ ಸತ್ಯ ತ್ಯಾಗ ಪ್ರಜಾಪಾಲನ ಶರಣಾಗತ ರಕ್ಷಣಪ್ರಹರಣಕ್ಷಮಾದಿ ಗುಣಾಚರಣಮುಮಂ . . . ನಿಱಿಸಿ (ಆದಿಪು. ೯-೭೩ ವ). ೬. ನಿವಾರಿಸುವುದು ; ತೆಗೆದುಹಾಕುವುದು. ೭. ಆಯುಧ; ಶಸ್ತ್ರ : “ಹೇತಿಃ, ಶಸ್ತ್ರಂ, ಪ್ರಹರಣಂ, ಆಯುಧಂ, ಅಸ್ತ್ರಂ–ಈ ೫ ಕೆಯ್ದು” (ಹಲಾಯು. ೭೬-೩೦೪). ೮. ಕಾಳಗ; ಯುದ್ಧ: “ಸಂಗ್ರಾಮಃ . . . ಪ್ರಹರಣಂ . . . ವಿಗ್ರಹಃ–ಈ ೩೫ ಕಾಳೆಗಂ” (ಹಲಾಯು. ೭೩- ೨೯೯); ಅರವಿಂದಬಾಂಧವತನೂಜನ ಮಹಾಪ್ರಹರಣಹತಿಯೊಳ್ ಯಮನಂದನನ ನೋವುಮನಾತ್ಮೀಯಬಲದ ನಾಯಕರ ಸಾವು ಮನಱಿದು (ಕಂಪಭಾ. ೦೨-೦೨೦ ವ). [ಸಂ.]

**ಪ್ರಹರಣಕಲಿಕ** (ನಾ). [ಛಂದ] ಪಾದವೊಂದಕ್ಕೆ ಹದಿನಾಲ್ಕು ಅಕ್ಷರಗಳನ್ನುಳ್ಳ, ಪ್ರತಿಸಾಲಿನಲ್ಲಿಯೂ ನನಭನಲಗವೆಂಬ ಗಣಗಳೂ ಒಂದು ಲಘು ಮತ್ತು ಒಂದು ಗುರುವೂ ಇರುವ, ಶಕ್ವರೀ ಛಂದಸ್ಸಿನ ಒಂದು ವೃತ್ತ : ನನಭನಲಗವೆಂಬಿವು ಗಣನಿವಹಂ ಜನಿಯಿಸಿ ಯತಿ ನಿಲ್ತಿರೆ ಹಯತತಿಯೊಳ್ ನಿನಗಿದನಱಿವಂತಿರೆ ವಿರಚಿಸಿದೆಂ ವನರುಹವದನೇ ಪ್ರಹರಣಕಲಿಕಂ [ಶಾಕಾಂ. ೮ಂ] (ಛಂದೋಂಬು.೨-೦೯೭). [ಸಂ. ಪ್ರಹರಣಕಲಿಕಾ]

**ಪ್ರಹರಣಶ್ರಮ** (ನಾ) ೧. ಇತರರನ್ನು ಹೊಡೆದು ಆಯಾಸ ಪಡಿಸುವುದು, –ನೋಯಿಸುವುದು. ೨. ಆಯುಧಗಳಿಂದ ಮಾಡುವ ವ್ಯಾಯಾಮ ; ಶಸ್ತ್ರಾಭ್ಯಾಸ . ೧, ೨ : ಪ್ರಹರಣಶ್ರಮಂ ಖಿರಳಿಯೊಳ್ ಮುಖರತೆ ಪುರ[ರು]ಳಿಯೊಳ್ . . . ಅಲ್ಲದಿಲ್ಲಮಲ್ಲಿಯುಂ (ಚಂದ್ರಪ್ರ. ೩-೯ ವ). [ಸಂ.]

**ಪ್ರಹರಣೆ** (ನಾ). = ಪ್ರಹರಣ ೧ : ಅತ್ವಕ್ಕೆತ್ವಂ – ಅರ್ಕೆ – ಏರ್ಕೆ . . . ಪ್ರಹರಣ – ಪ್ರಹರಣೆ (ಶಬ್ದಮ. ೨೭೮ ಪ್ರಯೋ). [ಸಂ. ಪ್ರಹರಣ]

**ಪ್ರಹರಿ** (ನಾ). (ಸರದಿಯಂತೆ) ಕಾಯುವವನು ; ಕಾವಲುಗಾರ : ನವಕುಮಾರನು. . .ಕಪಾಲಕುಂಡಲಿಗೆ ಸಲುವಾಗಿ ಒಬ್ಬ ದಾಸಿಯನ್ನೂ ಒಬ್ಬ ಪ್ರಹರಿಯನ್ನೂ. . . .ಕಳುಹಿದನು (ಕಪಾಕುಂ. ೪೧). [ಸಂ. ಪ್ರಹರಿನ್]

**ಪ್ರಹರಿಣಿ** (ನಾ). [ಜೈನ] ಮಂತ್ರದ ಸಹಾಯದಿಂದ ಪೆಟ್ಟು ಕೊಡುವ ಒಂದು ವಿದ್ಯೆ : ಪ್ರಮೋಹಿನಿ ಪ್ರಹರಿ [ಶಾಕಾಂ. ರ]ಣಿ ಸಂಕ್ರಮಣಿ. . . ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಚಾಪುಂಪು. ೦೯೮). [ಸಂ. ಪ್ರಹರಿಣೀ]

**ಪ್ರಹರಿಸು** (ಕ್ರಿ). ೧. ಹೊಡೆ ; ಏಟು ಹಾಕು : ಸ್ವಾಧೀನವಾಗದಿದ್ದರೆ ಶೂಲಗಳಿಂ ಪ್ರಹರಿಸುತ (ಕೌಗಂಧಿ.೨೯೨-೩) ; ಅವರು ಅವನನ್ನೂ ಅವನ ಕುದುರೆಯನ್ನೂ ದೊಣ್ಣೆಯಿಂದ ಪ್ರಹರಿಸುತ್ತಿದ್ದರು (ಮುಕಿಶಾ. ೦೪೭). ೨. ನಾಶಪಡಿಸು ; ನಾಶ ಮಾಡು : ಮಹಿಸು ಕೆಲಭಾರಗಳ ; ಸಹಿಸು ಕೆಲನೋವುಗಳ ಪ್ರಹರಿಸರಿಗಳನನಿತುಯುಕ್ತಿಗಳನರಿತು (ಮಂಕುತಿ. ೯೦೪). [ಪ್ರಹರ + –ಇಸು]

**ಪ್ರಹರ್ಷ** (ನಾ). ಅತಿಶಯವಾದ ಆನಂದ ; ಸಂತೋಷ. [ಸಂ.]

**ಪ್ರಹರ್ಷಣ** (ನಾ). ೧. ಬುಧಗ್ರಹ. ೨. ಅತಿಶಯವಾದ ಆನಂದ, –ಸಂತೋಷ. ೩. ಅತಿಶಯವಾದ ಸಂತೋಷವನ್ನುಂಟು ಮಾಡುವುದು. ೪. [ಕಾವ್ಯವಿ] ಅರ್ಥಾಲಂಕಾರಗಳಲ್ಲಿ ಒಂದು; P ಇದು ೧. ಯತ್ನವಿಲ್ಲದೆ ಅಪೇಕ್ಷಿತ ಫಲಸಿದ್ಧಿ. ೨. ಅಪೇಕ್ಷಿತಕ್ಕಿಂತಲೂ ಅಧಿಕ ಫಲಸಿದ್ಧಿ. ೩. ಫಲಸಿದ್ಧಿಗಾಗಿ ಉಪಾಯವನ್ನು ಹುಡುಕುವ ಪ್ರಯತ್ನದಿಂದಲೇ ಫಲಪ್ರಾಪ್ತಿ–ಎಂದು ಮೂರು ವಿಧ : ಮನದಲ್ಲಿ ಭಾವಿಸಿದ್ದು ಪ್ರಯಾಸವಿಲ್ಲದಲೆ ಅನುಕೂಲವಾಗೆ ಪ್ರಹರ್ಷಣಾ ಇನಿಯನಲ್ಲಿಹ ದೂತಿಕೆಯನು ಧ್ಯಾನವ ಮಾಡೆ ವಿನಯದಿ ಬಂದಳು ತಾನ್ (ಕುವಲ. ೦೨೩-೦); ಮನದಲ್ಲಿಚ್ಛೆಯು ಪ್ರಯತ್ನ ಮಾಡದೆ ಸಿದ್ಧವಾದಡೆ ಪ್ರಹರ್ಷಣವೆನಿಸುವುದು (ಕುವಲ. ೦೨೩–೦ಟಿಪ್ಪಣಿ). ೫. [ಛಂದ] ಪಾದವೊಂದಕ್ಕೆ ಹದಿಮೂರು ಅಕ್ಷರಗಳನ್ನುಳ್ಳ, ಪ್ರತಿಸಾಲಿನಲ್ಲಿಯೂ ಮನಜರಗ ಗಣಗಳೂ ಒಂದು ಗುರುವೂ ಇರುವ, ಅತಿಜಗತಿಛಂದಸ್ಸಿನ ಒಂದು ವೃತ್ತ : ಕಣ್ಗೊಪ್ಪಲ್ ಮನಜರಗಂ ಪ್ರಹರ್ಷಣಂ ತಾಂ (ಛಂದೋ. ೬೨). [ಸಂ.]

**ಪ್ರಹಸನ** (ನಾ). ೧. ಬಹಳವಾದ ನಗು ; ಅತಿಯಾದ ನಗೆ ; ಅಟ್ಟಹಾಸ. ೨. ನಗಿಸುವುದು: ನೃಪಸೇವನಾಪ್ರಹಸನಪ್ರಾವೀಣ್ಯಮುಂ ಬುದ್ಧಿವರ್ಧನಮುಂ ಮಾಸರಮಕ್ಕುಮೆಂದಮದಶೋಕ್ರಾರೋಹಗೇಹಂಗಳೊಳ್ (ಜಾತಕ. ೯-೨೩). ೩. [ಕಾವ್ಯವಿ] ಹತ್ತು ಬಗೆಯ ರೂಪಕಗಳಲ್ಲಿ ಒಂದು ವಿಧ ; ಕೆಳವರ್ಗದ ನಾಟಕಗಳಲ್ಲಿ ಒಂದು ; ಆಧುನಿಕಸಾಹಿತ್ಯದ ಹಾಸ್ಯನಾಟಕ ; P ಇದು ಇಂಗ್ಲಿಷಿನ 'Farce' ಎಂಬುದರ ಅನುವಾದ : ಪ್ರಹಸನ – ಇದರ ವಸ್ತು ಕಲ್ಪಿತ ಮತ್ತು ಕೀಳುಜನರ ಚರಿತ್ರೆ ; ಹಾಸ್ಯಪ್ರಧಾನ ರಸ ; ಸಂಧಿ, ಸಂಧ್ಯಂಗ, ಲಾಸ್ಯಾಂಗ,ಅಂಕ ಇವು ಭಾಣದಲ್ಲಿರುವಂತೆಯೇ ; ವೀಥ್ಯಂಗಗಳು ಇರುವುದೂ ಉಂಟು ಇಲ್ಲದ್ದೂ ಉಂಟು ಆರಭಟೀವೃತ್ತಿಯಾಗಲಿ , ವಿಷ್ಕಂಭಕ ಪ್ರವೇಶಕಗಳಾಗಲಿ ಇಲ್ಲ (ಸಂನಾಟ. ೩೦) ; ನಾಟಕ, ಪ್ರಕರಣ, ಭಾಣ ಪ್ರಹಸನ. . . ಈಹಾಮೃಗ ಎಂಬುದಾಗಿ (೧೦) ದಶರೂಪಕಗಳಿರುವುವು (ಕಾರಲ. ೪೩೪). [ಸಂ.]

**ಪ್ರಹಸನಶೀಲ** (ನಾ). ನಗುವ ಸ್ವಭಾವದವನು : ತುಹಿನಾಂಶಂ ಕೂಡಿರೆ ಋಷಗೃಹದೊಳ್ ಬುಧ ಜೀವ ಶುಕ್ರರೀಕ್ಷಿಸುವೊಡಮ ಪ್ರಹಸನಶೀಲಂ (ಜಾತಕ. ೨೦-೦೨). [ಸಂ.]

**ಪ್ರಹಸಿತ** (ಗು). ೧. ನಗುವ ; ಹರ್ಷಿಸುವ ; ಆನಂದಿಸುವ. ೨. ನಗುವಿನಿಂದ ಕೂಡಿದ : ಪ್ರಹಸಿತವದನನಾಗಿ ಖೇಚರರೆಂಬೆರಲೆಗಳಂ ನಿಪಾತಿಸಲ್ಕನಗೆ ವಿದ್ಯೆಯುಂ ಬೇಟ್ಕುಮೆ ಎಂದೊಲ್ಲದೆ (ಪಶ್ವಾಭಾ. ೬೦-೭) ; ಕಿಂಚಿತ್ಪ್ರಹಸಿತಾನನವನಜನಾಗುತ (ಐಶಕ. ೪೩-೭೩). [ಸಂ.]

**ಪ್ರಹಸ್ತ** (ನಾ). ೧. ಚಾಚಿದ ಕೈ; ನೀಡಿದ ಹಸ್ತ : ಅಂತು ಸಮಱಿದ ಸಂಗ್ರಾಮರಂಗದೊಳ್ ಪರಸ್ಪರವಿರೋಧಕ್ರೋಧವಿಕ್ಷೇಪರ್ಷಿತಮಾರ್ಗ ಪ್ರಹಸ್ತಪ್ರಾಸಾಧಿತಘೋರಸಂಗ್ರಾಮರುಂ (ಕಂಪಭಾ. ೦೩–೯೨ ವ). ೨. ಒಬ್ಬ ರಾಕ್ಷಸನ ಹೆಸರು ; ರಾವಣನ ಮಂತ್ರಿಗಳಲ್ಲಿ ಒಬ್ಬ: ಅರೆಮಗಿದಿರ್ಚುವರ್ ಸಮರಾರಂಭಕ್ಕಾಮೆ ಮುಖ್ಯನಾಯಕರೆನುತ್ತಾರಂ ಮುನ್ನಂ ಸೆರಗಂ ಪಾರದೆ ಹಸ್ತಪ್ರಹಸ್ತರುಱಿದೊಡ್ಡಿರ್ದರ್ (ಕಂರಾಮಾ. ೦೩-೦೨). [ಸಂ.]

**ಪ್ರಹಾರ** (ನಾ). ೧. ಹೊಡೆಯುವಿಕೆ ; ಪೆಟ್ಟು ಕೊಡುವುದು. ೨. ಹೊಡೆತ ; ಏಟು ; ಪೆಟ್ಟು : ಅನ್ಯಶರಪ್ರಹಾರಜರ್ಜರಿತಶರೀರನಾಗಿ (ಗದಾಯು.-೯-೩೩) ; ನಖಪ್ರಹಾರಭರದಿಂದ್ಯದಾಬು. . . ಏಣಶ್ರೇಣಿಯಂ ಪಾಯ್ದು ಕೊಂದುದು (ಪುಷ್ಪಕೃ. ೫-೬೦); ಭೀಮಂ. . .ಮೇಲಾಳ ಮುಟ್ಟಿದನು ವಿವಿಧಶಸ್ತ್ರಾಸ್ತ್ರಪ್ರಹಾರದಲಿ (ಕುವ್ಯಾ.ಕ. ೧೦-೦೬). [ಸಂ.]

**ಪ್ರಹಾರತ್ರಯ** (ನಾ). [ಸಂಗೀತ] ಸಮ, ವಿಷಮ ಮತ್ತು ಸಮ ವಿಷಮಗಳೆಂಬ ಮೂರು ಬಗೆಯ ವಾದ್ಯಬಾಜನಗಳು : ಸಮ ಪ್ರಹಾರ ವಿಷಮಪ್ರಹಾರ ಸಮವಿಷಮಪ್ರಹಾರಮೆಂಬ ಪ್ರಹಾರತ್ರಯ ದೊಳಂ (ಅಶಕೃ. ೫-೩೩ ವ). [ಸಂ.]

**ಪ್ರಹಾರಿ** (ನಾ). ನಾಶಪಡಿಸುವವನು; ಪರಾಕ್ರಮಿ : ಸೂರ್ಪಕಪ್ರಹರ ಪ್ರಹಾರಿಗೆ ದರ್ಪಿತ ತ್ರಿಪುರೇಂದ್ರನಾಗ್ನಿಗಹರ್ಪತಿಪ್ರಣುತ ಪ್ರಭಾವಮಯ ದಿವ್ಯದೇಹಂಗೆ. . . ಅರ್ಪಿಸುವೆನಿಂದುಗ್ರಗರಳವ (ಬಸಪು. ೫೯-೯೦). [ಸಂ. ಪ್ರಹಾರಿನ್]

**ಪ್ರಹಾರಿಸು** (ಕ್ರಿ). ಹೊಡೆ; ಏಟು ಕೊಡು; ಪೆಟ್ಟು ಹಾಕು : ನಾನಾ ಯುಧಂಗಳಿಂದಂ ಪ್ರಹಾರಿಸುವ ಸುಭಟಾನೀಕದಬ್ಬರದ. . .ಅನೂನಸಂಭ್ರಮ ದಿಂದೆ ಕಲ್ಯಾಣಪಟ್ಟಣದ ಪೊಱವೊಳಲ್ ಮೆಱೆದುದು (ಚಬಪು. ೧೦-೬೦); ಖುರದಿಂ ಪ್ರಹಾರಿಸಲ್ ಸೀಳ್ದುದದು ಸಕ್ಕಸಮವಾಗಿ (ಚಬಪು. ೪೪-೨೩). [ಪ್ರಹಾರ + — ಇಸು]

**ಪ್ರಹಿ** (ನಾ). ಬಾವಿ : "ಅಂಧುಃ, ಪ್ರಹಿಃ, ಕೂಪಃ, ಉದಪಾನಂ – ೪ ಸೇದುವ ಭಾವಿಯ ಹೆಸರುಗಳು'' (ಸಿದ್ಧಾಂತಿ. ೮೩). [ಸಂ.]

**ಪ್ರಹಿತ** (ಗು). ೧. ಇಟ್ಟ; ಇರಿಸಿದ : ಐಕಲ ಭರದೆ ಪಡಲ್ಪಟ್ಟು ಗೇಣಾಗಿ ಪಾಂಥರ್ತೊಡೆ ತೋಳ್ಗಳ್ಕೂಡೆ ಜಾನುಪ್ರಹಿತಶಿರರದೇನಿರ್ದರೋ ಶೀತ ಭೀತರ್ (ರಾಚಕ. ೯-೨೨). ೨. ಕಳುಹಿಸಿದ : ಅಮರಾಧಿಪಪ್ರಹಿತ ಸುರತರುಪ್ರಸೂನಗ್ರಥಿತಸುರಭಿದಾಮದುಕೂಲಾಂಬರವಿಚಿತ್ರಭೂಷಸುರಭಿ ವಿಲೇಪನಪ್ರಮುಖಭೋಗೋಪಭೋಗಂಗಳೊಳಂ (ಅಜಿಪು. ೬-೩ ವ). ೩. (ಬಾಣದಂತೆ) ಬಿಟ್ಟ; ಪ್ರಯೋಗಿಸಿದ. [ಸಂ.]

**ಪ್ರಹುಡ** 'ಪ್ರವುಡ' ನೋ.

**ಪ್ರಹುಡಿ** (ನಾ). ನೈಪುಣ್ಯ; ಪಾಂಡಿತ್ಯ ; ಪ್ರೌಢಿ : ಕಂಡೆವ್ವೆ ಕೌಣಪನ ಸಾಹಸತಂಡವನು ಪುಸಿಯಲ್ಲ ಪ್ರಥಮದಿ ಚಂಡ ಚಾಮುಂಡರಿಗೆ ನಮ್ಮಿಂದ ಳಿಯದುಗ್ಗಡದಖಂಡವರಗಳನಿತ್ತಿರಿನ್ನೇನಂಡಿಸಿಕೆ ಮಾರ್ಗವನು ಬಿಡುವದೆ ಪಂಡಿತತ್ವದ ಪ್ರಹುಡಿ (ಅಂಬಿಕಾ. ೦೭-೬೩). [<ಸಂ. ಪ್ರೌಢಿ]

**ಪ್ರಹುಡಿಕಾಱ** (ನಾ). ನೈಪುಣ್ಯವುಳ್ಳವನು ; ನಿಪುಣ : ಲೆತ್ತ ಪಗಡೆ ಜೂಜು ಪ್ರಹುಡಿಕಾಱರೊಳುಬ್ಬಿ ಚಿತ್ತವಿಭ್ರಮಿತರಾಗಿಹರು [ಶಾಕಾಂ. ಜತ್ತಿಲಿ ಪಗಡೆಯನಾಡುಶಿರಲು. ಓರ್ವ ಚಿತ್ತಭ್ರಮನಾಗುತಿಂತು] (ಅಶ್ವಲೂ. ೩-೬೩). [ಪ್ರಹುಡಿ + — ಕಾಱ]

**ಪ್ರಹುಡಿಕೆ** (ನಾ). = ಪ್ರಹುಡಿ : ಯೋಗ್ಯವಯೋಗ್ಯವರಿಯದಲೆ ಮಾಡುವರು ಪ್ರಹುಡಿಕೆಯ [ಯೆ] (ಬಿಜ್ಜಪು. ೬೨–೪೦). [ಪ್ರಹುಡ (<ಪ್ರವುಡ) + — ಇಕೆ]

**ಪ್ರಹುಡು** (ನಾ). ನೈಪುಣ್ಯ; ಪ್ರೌಢಿಮೆ : ಆನೆಗಳು ವೃಷಭಾದಿ ಲೆಕ್ಕಿಯ ನಾನುವರೆ ಅವರೀಗ ಕುಲಗಟ್ಟೇನು ಪ್ರಹುಡೆನಲಕ್ಕು (ಬಿಜ್ಜಪು. ೬೨-೩೩). [ಪ್ರಹುಡ (<ಪ್ರವುಡ) + — ಉ]

**ಪ್ರಹೃತಿ** (ನಾ). ಅಳಿವು; ಲಯ; ನಾಶ : ಆತಂ ನಿಮುಗಭೇದ್ಯನಾತನಿಂದೀ ಜಗದ್ವ್ಯಾತದುತ್ಪತ್ತಿಸ್ಥಿತಿಪ್ರಹೃತಿಗಳ್ ನಡೆಗುಂ (ಕದ್ಮರಾ. ೦೦-೨೫೨). [ಸಂ.]

**ಪ್ರಹೃಷ್ಟ** (ಗು). ಸಂತುಷ್ಟವಾದ ; ಆನಂದಿತ: ಓರ್ವ ಪುರುಷಂ ಪ್ರಹೃಷ್ಟವದನಂ ತ್ವರಿತಗತಿಯಿಂ ಬಂದು (ಕಾದಂಪೂ. ೪೨೫). [ಸಂ.]

**ಪ್ರಹೇಯ** (ನಾ). ಅತ್ಯಂತ ಹೇಯಂವಾದುದು : ಈಯೊಡಲಂ ಒಡಿ ದಾವಂ ಸಾಯದೆ ಪುಟ್ಟದೆ ಸಮಸ್ತಪಾಪಾಯಾಸಕ್ಕಾಯತನವಾಗಿದಿರ್ಕುಂ ಶ್ರೇಯೋರ್ಥಿಜನ ಪ್ರಹೇಯಮಿದೆ ದಲ್ ಮೊದಲೊಳ್ (ಉಸಾರ. ೨೫೪). [ಸಂ.]

**ಪ್ರಹೇಲಿಕೆ**, ಪ್ರಹೇಳಿಕೆ (ನಾ). ಗೂಢಾರ್ಥವುಳ್ಳ ಮಾತು; ಒಗಟು; ಸಮಸ್ಯೆ : "ಒಗಟೆಯದು ಪ್ರಹೇಲಿ[ಶಾಕಾಂ.೪]ಕೆ ಪ್ರವಲ್ಹಿಕೆ" (ಮಂಗರಾ. ೨೭-೬). **ಪ್ರಹೇಳಿಕೆ** : "ಪ್ರವ(ಲ್ಲೀ)ಲ್ಹೀಕಾ, ಪ್ರಹೇಳಿಕಾ—ಈ ೨ ಒಗಂಟೆ" (ಹಲಾಯು. ೨೫-೦೫೦); ರಸವತ್ಕಾವ್ಯಕಥಾಪ್ರಹೇಳಿಕೆಗಳಂ ಪೇಟುತ್ತುಂ. . . ಓಲಗಿಪ್ಪರವನೀಭೃತ್ಕಾಂತೆಯಂ ಕಾಂತೆಯರ್ (ಕುಸುಮಾ. ೫-೦೯); ಮಣಿಮಯಮಂಟಪದ ಮತ್ತವಾರಣದೊಳ್ಮಲಂಗಿ ತನ್ನೋಪಂಗೆ ಜಾಣೆಂ ಪ್ರಹೇಳಿಕೆಯಂ ಪೇಳ್ದೊಡೆ (ತ್ರಿಶಪು. ೨೯-೦೬೦ ವ); "ಕಾಯವೆ ಮೂರು ಕಾಲಾರು ಮಸ್ತಕ ನವ ಬಾಯಿ ಒಂಬತ್ತು ಬಾಲೆರಡು ಕೈಗಳು ನಾಲ್ಕು ಕಂಗಳ ರವೆ ಹದಿನೆಂಟು ಮೈಯಿಕ್ಕಿ ನಾನೆರಗುವೆನು" ಎಂಬ ಪ್ರಹೇಳಿಕೆಯೂ ಅನೇಕ ಪ್ರತಿಗಳಲ್ಲಿ ಕಂಡುಬರುತ್ತದೆ (ಕುವಸೂಶಾಂ. ೯೦). ☞ ದಂಡಿಯ ಕಾವ್ಯಾದರ್ಶದಲ್ಲಿ ಸಮಾಗತಾ, ವಂಚಿತಾ, ವ್ಯುತ್ಕ್ರಾಂತಾ, ಪ್ರಮುಷಿತಾ, ಸಮಾನರೂಪಾ, ಪರುಷಾ, ಸಂಖ್ಯಾತಾ, ಪ್ರಕಲ್ಪಿತಾ, ನಾಮಾಂತರಿತಾ, ನಿಭೃತಾ, ಸಮಾನ ಶಬ್ದಾ, ಸಂಮೂಢಾ, ಪರಿಹಾರಿಕಾ, ಏಕಚ್ಛನ್ನಾ, ಉಭಯಚ್ಛನ್ನಾ ಮತ್ತು ಸಂಕೀರ್ಣಾ ಎಂಬ ಹದಿನಾರು ಬಗೆಯ ಪ್ರಹೇಳಿಕೆಗಳು ವಿವರಿಸಲ್ಪಟ್ಟಿವೆ. [ಸಂ.ಪ್ರಹೇಲಿಕಾ]

**ಪ್ರಹೇಳಿಕೆ** 'ಪ್ರಹೇಲಿಕೆ' ನೋ.

**ಪ್ರಹ್ಲಾದ** (ನಾ). ೧. ಅಧಿಕವಾದ ಸಂತೋಷ ; ಅತಿಶಯವಾದ ಆನಂದ : ಪರಮತತ್ತ್ವಪರಿಚಿತಗುರುಜನಮನಃಪ್ರಹ್ಲಾದಜನಕನುಂ (ಕಂಪ್ರತೃ. ೯-೬೦ ವ). ೨. ಅವ್ಯಕ್ತವಾದ ಶಬ್ದ. ೩. ಹಿರಣ್ಯಕಶಿಪು ಎಂಬ ಅಸುರನ ಮಗ : ಈತ ತಾ ಪ್ರಹ್ಲಾದದೇವನು (ಸಂಭಕ. ೬-೩೦); ಓಂ ನಮಶ್ಶಿವ ಎಂಬ ವರ್ಣಗಳ ತೇದು ತೇದವ ಬರಸಿ ಮಿಗೆ ಪ್ರಹ್ಲಾದ ನೀನೇ ಬರೆಯೆನಲು ಮಧುಸೂದನನ ನಾಮಗಳನೊಂದೊಂದಾಗಿ ವಿರಚಿಸಿದ (ಶ್ರಹ್ಯಾಕ. ೬-೧). [ಸಂ.]

**ಪ್ರಹ್ವ** (ಗು). ೧. ನಮ್ರನಾದ; ವಿನೀತನಾದ. (ನಾ). ೨. ಬಾಗಿದ ವನು; ವಿನೀತನಾದವನು : "ಪ್ರವಣಃ, ಪ್ರಹ್ವಃ—ಈ ೨ ವಿನೀತಂ" (ಹಲಾಯು. ೫೬-೦೪೭). [ಸಂ.]

**ಪ್ರಳಂಬ** 'ಪ್ರಲಂಬ' ನೋ.

**ಪ್ರಳಯ** 'ಪ್ರಲಯ' ನೋ.

**ಪ್ರಳಯಕರ** (ನಾ). ವಿನಾಶಕಾರಿಯಾದುದಂ : ಸುಭಟಜನಚಮತ್ಕಾರಿ ತೇಜೋಮಹಾರ್ವಾನಲಮುಗ್ರಾರಾತ್ರಿವರ್ಗಪ್ರಳ[ಶಾಕಾಂ.ಲ]ಯಕರಮ ದೊಂದೆಯ್ದಿತಾಳ್ದಿತ್ವಗುರ್ವಂ (ಅಂಪು.೦೭-೪೩). [ಸಂ.ಪ್ರಲಯಕರ]

**ಪ್ರಳಯಕಾಲ** 'ಪ್ರಲಯಕಾಲ' ನೋ.

**ಪ್ರಳಯಗತ** (ಗು). ೧. ನಾಶ ಹೊಂದಿದ ; ನಾಶವಾದ. (ನಾ). ೨. ನಾಶವಾದ ವ್ಯಕ್ತಿ : ಕೃತಯುಗಕ್ಕೆ ಅರಸು ಶೂಲಿ . . . ಆ ಶೂಲಿ ಆಚಾರ್ಯನಾದ. . . ಇಷ್ಟವ ಹಂಚಿಕೊಂಡರು ದೃಷ್ಟವ ಕಾಬುದಕ್ಕೆ ಮಾಟವನಿರಿಸಿ ಪ್ರಳಯಗತರಾದರಯ್ಯಾ (ವೋಳವಸಾ. ೯-೦೦). [ಸಂ. ಪ್ರಲಯಗತ]

**ಪ್ರಳಯಗಲೂರ ?** (ನಾ). ಒಂದು ಬಗೆಯ ಚಿನ್ನದ ನಾಣ್ಯ : ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು, ಯಾವವೆಂದರೆ—೧ ಗಬರು . . . ಧಾರವಾಡಿ ೧ ಪ್ರಳಯಗಲೂರ ೧ ಪಾಪನಾಯಕಿಹೊನ್ನು (ಕಕ್ಕಕಾ. ೦೦೪). [?]

**ಪ್ರಳಯತಿಮಿರ** (ನಾ). ವಿನಾಶಕಾಲದಲ್ಲಿ ಕವಿಯುವ ಕತ್ತಲು ; ಮಹಾಂಧಕಾರ : ಪ್ರಳಯತಿಮಿರದ ಬೀಜ ನೀಲಾಚಳದ ಸಾಯುಜ್ಯವೊ ನಭೋಮಂಡಲದೊಳದನೇವೊಗಳುವೆನು ಮಸಗಿತು ತಮಸ್ತೋಮ (ಕುವ್ಯಾದ್ರೋ. ೦೫-೨೬). [ಸಂ. ಪ್ರಲಯತಿಮಿರ]

**ಪ್ರಳಯಪಯೋಧಿ** (ನಾ). ವಿನಾಶಕಾಲದಲ್ಲಿ ಉಕ್ಕಿ ಜಗತ್ತನ್ನು ನಾಶ ಮಾಡುವ ಸಮುದ್ರ : ಪ್ರಳಯಪಯೋಧಿವೋಲಲಳುರ್ದು ಪೆಂಕುಳಿಗೊಂಡ ಮದೇಭವೈರಿವೋಲ್ ಕೆಳರ್ದು . . . ತಾಗಿದಂ (ಶಂಶಕಾ. ೧೦-೦೦೬). [ಸಂ. ಪ್ರಲಯಪಯೋಧಿ]

**ಪ್ರಳಯವಹ್ನಿ** (ನಾ). = ಪ್ರಲಯಾಗ್ನಿ : ಪ್ರಳಯವಹ್ನಿ ತಪವೊತ್ತಿದೋ ಭಾಳಲೋಚನನ ಕೋಪ ಕಡುಗಿ ಮುನಿಯಾಯ್ತೊ ಪೇಳೆನೆ ಕಣ್ಣಿ ಕಡೆ ತೋರಗಿಡಿಗೆದಱೆ . . . ವಿಶ್ವಾಮಿತ್ರನುರವಣಿಸಿ ಬಂದನು (ಹಕಕಾ. ೬-೦). [ಸಂ. ಪ್ರಲಯವಹ್ನಿ]

**ಪ್ರಳಯಾಗ್ನಿ** 'ಪ್ರಲಯಾಗ್ನಿ' ನೋ.

**ಪ್ರಳಯಾತೀತ** (ನಾ). ವಿನಾಶವನ್ನು ಮೀರಿದವನು ; ನಾಶವಾಗದವನು : ಪ್ರಳಯಾತೀತ ಶರಣಸನ್ನಿಹಿತ ನಮ್ಮ ಅಖಂಡೇಶ್ವರ (ಅಖಂಡೇ. ೦೦೫-೬೦). [ಸಂ. ಪ್ರಲಯಾತೀತ]

**ಪ್ರಳಯಾನಿಳ** (ನಾ). ಪ್ರಳಯಕಾಲದಲ್ಲಿ ಬೀಸುವ ಬಿರುಗಾಳಿ : ಪ್ರಳಯಾನಿಳನಿಂ ಕನಕಾಚಳಮೆಂತು ತರಳದಂತೆ ದರ್ಶನಶುದ್ಧಂ ಚಳಿಯಿಸಲರಿಯಂ ಕುಮತಂಗಳಿನಾಪ್ತಪದಾರ್ಥದಲ್ಲಿ ದೃಢನಪ್ಪುದಱಿಂ (ಸಮಹ. ೪-೦೩೩). [ಸಂ. ಪ್ರಲಯಾನಿಲ]

**ಪ್ರಳಾಪ** 'ಪ್ರಲಾಪ' ನೋ.

**ಪ್ರಳಾಪಸನ್ನಿ** (ನಾ). = ಪ್ರಲಾಪ ೪ : ಇವು ಮುಂತಾದ ಚಿಕಿತ್ಸೆಗಳು ಪ್ರಯೋಗಿಸಲು ಪ್ರಳಾಪಸನ್ನಿ ಪರಿಹರವಹುದು (ಸಕವೈ. ೦೬೬). [ಪ್ರಳಾಪ (=ಪ್ರಲಾಪ) + ಸನ್ನಿ]

**ಪ್ರಳಾಪಸನ್ನಿಪಾತ** 'ಪ್ರಲಾಪಸನ್ನಿಪಾತ' ನೋ.

**ಪ್ರಳಾಪಿಸು** 'ಪ್ರಲಾಪಿಸು' ನೋ.

**ಪ್ರಾಂಗಣ** (ನಾ). ಅಂಗಳ ; ಅಂಗಣ : "ಅಜಿರಂ, ಪ್ರಾಂಗಣಂ_ ಈ ೨ ಅಂಗಣಂ" (ಹಲಾಯು. ೫೦-೦೪೪) ; ಶ್ರೀದೇವಂ ವಿಮಾನೋಪಾಂತಸ್ಥಿತಿಯೊಳ್ ಜಿನನಿಲಯಪ್ರಾಂಗಣದೊಳ್ . . . ತ್ರಿಲೋಕತಿಲಕಂಗೆ ಮಹಾಮಹಮಂ ಪೊಣರ್ಚಿದಂ (ಶಾಂತಿಪು. ೭-೨೪ ವ) ; ವಿಸರುಹವದನೆಯರ ನೂಪುರಂಗಳ ದನಿಯಿಂ . . . ಅಳಿಗಳ ರಸಿತಂ ದ್ವಿಗುಣಿಸಿತು ನೃಪಗೃಹ ಪ್ರಾಂಗಣದೊಳ್ (ಕೃಷ್ಣಕೃ. ೪-೫೩) ; ಊಟ ಮುಗಿದ ಮೇಲೆ ಮಠದ ಪ್ರಾಂಗಣದಲ್ಲಿ ತಂಪಾದ ಸಿಮೆಂಟುನೆಲದ ಮೇಲೆ ಕೂತ ಬ್ರಾಹ್ಮಣರ ನಡುವೆ (ಸಂಸ್ಕಾರ. ೯೦). [ಸಂ.]

**ಪ್ರಾಂಚಿತ** (ಗು). ೧. ಮನೋಹರವಾದ. (ನಾ). ೨. ಮನೋಹರವಾದುದು ; ರಮಣೀಯವಾದುದು : ಕಾಂಚನದಂತೆ ರಮ್ಯತರಮಪ್ಪ ಜಿನಾಧಿಪಮೂರ್ತಿ ಸತ್ತ್ವಭಾಸಂಚಯ ಮಧ್ಯವರ್ತಿಯೆನಿಸಿರ್ದು ಸುರೇಂದ್ರಮದೇಭಮಸ್ತದೊಳ್ ಪ್ರಾಂಚಿತವಾಗಿ ತಾಂ ಪೊಳೆಯುತಿರ್ದುದು . . . ಚಂದ್ರನಂದದಿಂ (ಶಾಧಕು. ೭-೯೦); ವಿತತಾನೇಕ ಪದಾವಭಾಸಿ ಹರಿನಾಗ ಪ್ರಾಂಚಿತಂ ಖಡ್ಗಮಂಡಿತಮುತ್ಕೀರ್ಣವರಾಹವಾಸಮುಬಲಾಂಚದ್ದೀವರಾ ಭಾಶ್ರಿತಂ (ವೃಷಪು. ೦೦-೫೦). ೩. ಗೌರವಾರ್ಹವಾದುದು: ಅದು ಪಂಚಾಕ್ಷರದಂತೆವೊಲ್ಪಿಣವರ್ಣಪ್ರಾಂಚಿತಂ ಭಸ್ಮದಂತುದಿತಶ್ರೀಕರಲಕ್ಷಣಪ್ರಕಟಿತಂ (ವೃಷಪು. ೨೬-೯೯). [ಸಂ.]

**ಪ್ರಾಂಜಲ, ಪ್ರಾಂಜಳ** (ಗು). ೧. ಮನೋಹರವಾದ ; ಸುಂದರವಾದ : ಭಕ್ತಿರಸಾರ್ದ್ರಚಿತ್ತಯುತಹೃದ್ರಾಜೀವಸಂಪೂರ್ಣಸಂಕಾಶಂ ಪ್ರಾಂಜಲ[ಶಾಶಾಂ. ಕಾಶಪ್ರಜ್ವಲ]ಮೂರ್ತಿಕೀರ್ತಿಭರಿತಂ ಶ್ರೀ ಮಾದಿರಾಜಾಹ್ವಯಂ (೧೧೪. ೦-೩೬). ೨. ಸರಳವಾದ; ನೇರವಾದ. **ಪ್ರಾಂಜಳ** (ನಾ). ೩. ಗೌರವಾರ್ಹ ವ್ಯಕ್ತಿ ; ಪೂಜ್ಯನಾದವನಂ : ಶಾಂಭವಭಕ್ತಿಪ್ರಾಂಜಳಭೂಮಹಿತಮಹಿಮರೇಳ್ಪಿಂದರಾನಂದದಿಂದಂ (ವೃಷಪು. ೫-೪೬).

**ಪ್ರಾಂಜಲವಾಗು** = ಸರಳವಾಗು ; ನೇರವಾಗು : ಇಷ್ಟದೇವತೆಯ ಇದಿರಿನಲ್ಲಿ ಭಕ್ತಿನಮ್ರವಾದ ಪ್ರಾಂಜಲವಾದ ಅಂತರಂಗನಿರೀಕ್ಷಣೆ (ಕನಾತ. ೦೬೯) ; ಅವರಲ್ಲಿ ನನಗಿರುವ ಭಕ್ತಿಯನ್ನು ಪ್ರಾಂಜಲವಾಗಿ ಈ ರೀತಿ ಅರ್ಪಿಸಿಕೊಂಡಿದ್ದೇನೆ (ಗಾಳಕ. ೬೯) ; ತಾವು ಕಂಡುಂಡ ಬಾಳನ್ನು ಪ್ರಾಂಜಲವಾಗಿಯಾದರೂ ಪರಿಣಾಮಕಾರಕವಾಗಿ ಇಲ್ಲಿ ಕೊಟ್ಟಿದ್ದಾರೆ (ಸಾಸಮೂ. ೦೬೬). [ಸಂ.]

**ಪ್ರಾಂಜಲತೆ** (ನಾ). ಸರಳತೆ : ಥಂಡಿ ನೆಗಡಿ ಆದಾಗ ಕುಡೀತಿರತೇನಿ ನಾನೆ ಒಮ್ಮೊಮ್ಮೆ ಎಂದು ಆಚಾರ್ಯರು ತಮ್ಮ ಪ್ರಾಂಜಲತೆಯನ್ನಷ್ಟು ತೋರಿಸಿದರು (ಸವುಜೀ. ೩೯೬). [ಸಂ. ಪ್ರಾಂಜಲತಾ]

**ಪ್ರಾಂಜಲಿ** (ಗು). ೧. ಕೈಮುಗಿದಿರುವ : ಅಂಜನದಿಂ ಪುದಿದ ತಮಃಪುಂಜಂ ಕಿಡೆ ಸೂಕ್ಷ್ಮದೃಷ್ಟಿ ಸಮನಿಸುವವೊಲಾ ಪ್ರಾಂಜಲಿ ವಿಬುದ್ಧಮತಿಗೆ ನಿರಂಜನನಿಂದಾದುದಮಳದೃಷ್ಟಿವಿಕಾಸಂ (ವರ್ಧಮಾ. ೦೪-೦೬). (ನಾ). ೨. ಹಸ್ತಗಳ ಜೋಡಣೆ ; ಅಂಜಲಿ. [ಸಂ.]

**ಪ್ರಾಂಜಳ** 'ಪ್ರಾಂಜಲ' ನೋ.

**ಪ್ರಾಂತ** (ನಾ). ೧. ದಡ ; ಅಂಚು. ೨. ಮೇರೆ ; ಗಡಿ ; ಸೀಮೆ. ೩. ತುದಿ ; ಮೊನೆ. ೪. ಪಕ್ಕ ; ಪಾರ್ಶ್ವ. ೫. ಎಡೆ ; ಸ್ಥಳ ; ಪ್ರದೇಶ : ಆಕಾಶದ ಪ್ರಾಂತದಿಂದ ಭಯಂಕರವಾದ ವೇಗದಿಂದ ಗಾಳಿಯು ಗರ್ಜಿಸಿಕೊಂಡೆದ್ದುದು ಕೇಳಿಸಿತು (ದೇವೀಜಾ. ೦೫೦). ೬. ರಾಜ್ಯ; ನಾಡು : ಆ ಪ್ರಾಂತಗಳೊಳಗಿಂದ ಸಹ ಬದಕು ಬಹಳ ಬರಬೇಕೆಂದು ನಮ್ಮ ಅಪೇಕ್ಷೆ (ಮುಂಬವ್ಯಾ. ೬ ಶ್ರಾವಣ) ; ಹೊಗೆಸೊಪ್ಪಿನ ಕಾರ್ಖಾನೆಗಳು ಮದ್ರಾಸು, ಬರ್ಮಾ ಮುಂತಾದ ಪ್ರಾಂತಗಳಲ್ಲಿಯೂ ಅನೇಕ ಭಾಗಗಳಲ್ಲಿ ಸಕ್ಕರೆ ಕಾರ್ಖಾನೆಗಳೂ ಇವೆ (ಭೂಪಿಚ. ೨೪೩). [ಸಂ.]

**ಪ್ರಾಂತಭೇದ** (ನಾ). ೧. ನಾಡುಗಳಲ್ಲಿರುವ ವ್ಯತ್ಯಾಸ, _ ಅಂತರ : ಈಗ ಪ್ರಯಾಣ ಸೌಕರ್ಯಗಳೂ ವ್ಯವಹಾರಸಾಧನಗಳೂ ಹೆಚ್ಚಾಗಿರುವುದರಿಂದ ದೂರವಾಗಲಿ ಪ್ರಾಂತಭೇದಗಳಾಗಲಿ ಪರ್ವತ ನದಿಗಳಾಗಲಿ ಪ್ರಾಂತಭೇದಕ್ಕೆ ಅಷ್ಟು ಮುಖ್ಯ ಕಾರಣಗಳಾಗಿಲ್ಲ (ಕೈಬಿ. ೨೪೮). ೨. ಒಂದು ಭಾಷೆಯನ್ನು ಆಡುವ ನಾಡಿನಲ್ಲಿಯೇ ಪ್ರತ್ಯೇಕವಾಗಿ ಕಂಡುಬರುವ ವ್ಯತ್ಯಾಸ : ಈಗ ಕನ್ನಡದಲ್ಲಿ ಧಾರ್ವಾಡದ ಕನ್ನಡ, ಮೈಸೂರು ಕನ್ನಡ, ಮಂಗಳೂರು ಕನ್ನಡ ಎಂದು ಮೂರು ಪ್ರಾಂತಭೇದಗಳಿವೆ (ಕೈಬಿ. ೨೪೪). [ಸಂ.]

**ಪ್ರಾಂತರ** (ನಾ). ೧. ಎರಡು ಊರಿನ ಮಧ್ಯಪ್ರದೇಶ ; ಎಡೆಯ ನಾಡು : "ಎರಡೂರೆಡೆಯು(ಂ) ನಿಡುಮಾಳ(ವು)ಂ ಪ್ರಾಂತರಮೆಂಬುದು" (ಹಲಾಯು. ೪೩-೦೦೬). ೨. ಬಹಳ ದೂರ ನಡೆಯಬೇಕಾದ ದಾರಿ. ೩. ಬಹಳ ದೂರ ಮರ, ನೆರಳು, ನೀರು ಯಾವುದೂ ಇಲ್ಲದ ದಾರಿ ೪. ಕಾಡು; ಅರಣ್ಯ : ಆಕಾಶ, ಪ್ರಾಂತರ, ಸಮುದ್ರ, ಸರ್ವತ್ರ ನಿಶ್ಶಬ್ದ _ಅವಿರತವಾಗಿ ಕಲ್ಲೋಲವಾಗಿದ್ದ ಸಮುದ್ರ ಗರ್ಜನೆ (ಕಪಾಕುಂ. ೦೨). [ಸಂ.]

**ಪ್ರಾಂತರಕ್ಷಕ** (ನಾ). ಗಡಿಯನ್ನು ಕಾಯುವವನು ; ಸೀಮಾರಕ್ಷಕ : ಪ್ರಾಂತರಕ್ಷಕರಿಗೆ 'ಸದ್ಯದಲ್ಲಿಯೇ ಯವನಸಾಮ್ರಾಟನಿಂದ ಕೆಲವು ಜನ ದೂತರು ಬರುತ್ತಾರೆ ; ಅವರಿಗೆ ಅಡ್ಡಿಪಡಿಸಬೇಡಿ !' ಎಂದು ತಿಳಿಸಿದ್ದನು (ಚಂಕಿವು. ೦೬೩). [ಸಂ.]

**ಪ್ರಾಂತಲೋಪ** (ನಾ). [ವ್ಯಾಕ]ಅಂತ್ಯಾಕ್ಷರದ ಲೋಪ : ಸಾಸಿರಮಿಕೆ

ಮುಂದೊತ್ತಿ ಸಮಾಸದೊಳಕ್ಕುಂ ಪಯಿನ್ನರ್ದರ್ಕೆ ಯಥೋಕ್ತಂ ಶಾಸಿಸು ವರ್ ನೂರ್ಬರ್ಕಂ ಸಾಸಿರಕಂ ಪ್ರಾಂತಲೋಪಮುಂ ಕೆಲವೆಡೆಯೊಳ್ (ಶಾಬ್ದಾಮ. ೨೭೬). [ಸಂ.]

**ಪ್ರಾಂತು** (ನಾ). = ಪ್ರಾಂತ ೬ : ಇಲ್ಲಿ ಕರ್ನಾಟಕ ಪ್ರಾಂತಿನ ಪೈಕಿ ಬೆಳಗಾಂವಿ ಎಂಬಲ್ಲಿಯ ತುಪ್ಪ ಬಹಳ ಉತ್ತಮವೆಂದು ತಿಳಿಯುತ್ತಾರೆ (ಮುಂಬ್ವ. ೩೭). [<ಸಂ. ಪ್ರಾಂತ]

**ಪ್ರಾಂತ್ಯ** (ನಾ). = ಪ್ರಾಂತ ೬ : ಡಾನ್‌ಕಾಸರ್ಸ್ ಪ್ರಾಂತ್ಯದಲ್ಲಿ ಆಗಲೇ ಅವನ ಕುದುರೆಯ ಗಾಡಿಯನ್ನು ಎತ್ತಿನ ಗಾಡಿಗೆ ಬದಲಾಯಿಸಿಯಾಗಿದ್ದಿತು (ಮಲೆನಾ. ೧೭); ನನ್ನ ಅಜ್ಜಂದಿರಾದ ಏಕಾಂಬರಮುದಲಿಯಾರರು ಈ ಪ್ರಾಂತ್ಯವನ್ನು ಆಳುತ್ತಿದ್ದ ನವಾಬರಲ್ಲಿ, ದಿವಾನಗಿರಿ ನಡೆಸಿ ತುಂಬಾ ಆಸ್ತಿ ಮಾಡಿದರು (ಕೃತಾಂತ. ೦) ; ಪ್ರಾಂತ್ಯ ಸೇರಿದರೂ ಭ್ರಾಂತಿ ಬಿಡಲಿಲ್ಲ (ಗಾದೆ). [ < ಪ್ರಾಂತ]

**ಪ್ರಾಂಶು** (ಗು). ೧. ಎತ್ತರವಾದ; ಉನ್ನತವಾದ: ಸಾಲಪ್ರಾಂಶು ವಿಶಾಲ ಲೋಲನಯನಂ . . . ಗಂಗಾತ್ಮಜನ್ಮಂ ಜಯಶ್ರೀಲೋಲಂ ಜಮದಗ್ನಿ ರಾಮಮುನಿಯೊಳ್ ಕಲ್ತಂ ಧರ್ಮವಿದ್ಯೆಯಂ (ಕಂಕಪ. ೦-೬೮). ೨. ಉದ್ದವಾದ ; ನೀಳವಾದ : ರಾಜತ್ಕಳಕಂಠನಿಸ್ವನೆ ಕಳಾಪಪ್ರಾಂಶು ಧಮ್ಮಿಲ್ಲೆಯೆಂಬ ನಿಜಾಕಾರಮನುಂಟುಮಾಡಿ (ಸುಕುಮಾ. ೬-೫೪). (ನಾ). ೩. ಉದ್ದವಾಗಿರುವುದು : "ಪ್ರಾಂಶು, ಉಚ್ಚಂ, ಉನ್ನತಂ, ತುಂಗಂ, ಉದಗ್ರಂ_ಈ ೫ ಉದ್ದಿತು" (ಹಲಾಯು. ೦೨೪-೩೩); ಪುರನಾರೀನಯನಾಂಚಳ ಸ್ಮಿತಲಸದ್ಬಿಂಬಾಧರಪ್ರಾಂಶು ಸ್ವೈಪರಿದೊಂದಾಗಿ ಕಳಿಂದಜಾಮರನದೀ ಶೋಣಾಪಗಾವಾರಿಗಳ್ಬೆರಸಿರ್ದಂದಮನಾನೆ . . . ಚಾಮರವ್ರಂದಂ ನೆಗೆ ವಲ್ಲಿ ಪಾಜುವ ಮರಾಳವ್ರಾತದಂತೊಪ್ಪುಗುಂ (ಧ್ರ ಷಟ. ೩-೦೨). ೪. ಎತ್ತರವಾಗಿರುವ ವ್ಯಕ್ತಿ : ರೋಧೋವಳಯುಮೆಲ್ಲಮವಿರಳ ಬಹಳಪ್ರಾಂಶುಪ್ರಕರಮಯಮಾಗೆಯುಂ (ವರ್ಧಮಾ. ೬-೩೦ ವ); ವನಿತಾ ರತ್ನಂ ದಲಾ ಕೋಮಲೆ ಜನಕಜೆ ರಾಮಂ ದಲಾ ಬರ್ಪ ನೀಹಾರನಗೇಂದ್ರ ಪ್ರಾಂಶು (ಕಂಠಾಮಾ. ೭-೯೩). [ಸಂ.]

**ಪ್ರಾಂಶುಪಾಲ** (ನಾ). ಉನ್ನತಶಿಕ್ಷಣಸಂಸ್ಥೆಯ ಮುಖ್ಯಸ್ಥ ; ಪ್ರಿನ್ಸಿಪಾಲ್ : ಅವರು ಧಾರವಾಡದ ಕಾಲೇಜೊಂದರಲ್ಲಿ ಪ್ರಾಂಶುಪಾಲ ರಾಗಿದ್ದಾರೆ (ರೂಢಿ). [ಈ ಬಳಕೆಯಲ್ಲಿರುವ ಈ ಶಬ್ದವು ಸಂಸ್ಕೃತದಲ್ಲಿ ಈ ಅರ್ಥದಲ್ಲಿ ವ್ಯುತ್ಪನ್ನವಾಗುವುದಿಲ್ಲ. ಇಂಗ್ಲಿಷಿನ 'ಪ್ರಿನ್ಸಿಪಾಲ್' ಎಂಬ ಶಬ್ದಕ್ಕೆ ರೂಪ ಸಾಮ್ಯವಿರುವುದರಿಂದ ಇದಕ್ಕೆ ಪ್ರಯೋಗಾರ್ಹತೆಯಿದೆ]

**ಪ್ರಾಂಸರಿನೋಟು** 'ಪ್ರಾಮಿಸರಿನೋಟು' ನೋ.

**ಪ್ರಾಕಟ** (ನಾ). ಎಲ್ಲರಿಗೂ ತಿಳಿದುದು; ಪ್ರಕಟವಾದುದು : ಅಭ್ಯುದಯ ಪರಮನಿಃಶ್ರೇಯಸಮುಂ ಪ್ರಾಕಟಮಕ್ಕುಂ ವಿದಿತಾನೇಕ ಕವಿಶ ಪ್ರಯೋಗಪದಪದ್ಧತಿಯೊಳ್ (ಕವಿರಾ. ೦-೦೯) ; ಕೇಕರಪಿಂಗವಿಳೋಕನ ಮುಗ್ರಂ ಪ್ರಾಕಟಕಟಕಟ ದಶನಸಮಗ್ರಂ (ವರ್ಧಮಾ. ೦೩-೨೦ ರಗಳೆ); ಪ್ರಾಕಟದೆ ಹೊಳೆವ ಪೂರ್ಣಮಿಯ ಚಂದ್ರನವೋಲನೇಕರೂಪಾಗಿ (ಶೀಕೃಕೀ. ೨-೬-೩೪). [ < ಪ್ರಕಟ]

**ಪ್ರಾಕಟ್ಯ** (ನಾ). ಹೊರಗೆ ಕಾಣುವಿಕೆ ; ಪ್ರಕಟವಾಗುವಿಕೆ : ಪ್ರಕಾಶ ವೆಂದರೆ ವ್ಯವಹಾರಕ್ಕೆ ಬೇಕಾದ ಯೋಗ್ಯತೆ. ಇದನ್ನು ತಾರ್ಕಿಕರು ವಿಷಯತೆ ಎನ್ನುವರು. ಮೀಮಾಂಸಕರು ಪ್ರಾಕಟ್ಯವೆನ್ನುವರು (ಹಿಂದಸಾ. ೯೩); ಜ್ಞಾನದಿಂದ ಉತ್ಪನ್ನವಾಗಿ, ಜ್ಞಾನಕ್ಕೆ ವಿಷಯವಾದ ವಸ್ತುವಿನಲ್ಲಿ ಪ್ರಾಕಟ್ಯವೆಂಬ ಧರ್ಮ ಕಾಣಿಸಿಕೊಳ್ಳುತ್ತದೆ (ತತ್ವಪ್ರಾ. ೨೭೪). [ಸಂ.]

**ಪ್ರಾಕಾಮ್ಯ** (ನಾ). ೧. ತನ್ನ ಇಷ್ಟಕ್ಕೆ ಅನುಸಾರವಾಗಿ ನಡೆಯುವ ಸ್ವಾತಂತ್ರ್ಯ ; ಇಚ್ಛಾಸ್ವಾತಂತ್ರ್ಯ. ೨. ವಿಧೇಯವಾಗಿಲ್ಲದಿರುವಿಕೆ ; ಸ್ವೇಚ್ಛೆ. ೩. ಶಿವನ ಎಂಟು ಬಗೆಯ ಸಿದ್ಧಿಗಳಲ್ಲಿ ಒಂದು ; ಆರನೆಯ ಸಿದ್ಧಿ ; ಶಕ್ತಿ, ಸೌಂದರ್ಯ, ಆಯುಸ್ಸು, ಮಹಿಮೆ, ಮತ್ತು ಕಾಂತಿಗಳನ್ನು ಉಂಟುಮಾಡುವ ಸಿದ್ಧಿ : ಅಣಿಮಾ . . . ಪ್ರಾಕಾಮ್ಯ . . . ಕಾಮರೂಪಿತ್ವಾದಿ ಭೇದದಿಂ ಕ್ರಿಯಾಗೋಚರರ್ದ್ಧಿ ಬಹುವಿಧಂ(ತತ್ತ್ವಾರ್ಥಸೂ. ೦೬೪); ಸ್ವೇಚ್ಛೆಯಿಂದಾಕಾಶಗಮನಾದಿ ಸರ್ವಸಿದ್ಧಿಯೋ ಪ್ರಾಕಾಮ್ಯವೆನಿಸುವದು ಸ್ವಶರೀರಪ್ರಕಾಶದಿಂ ಸರ್ವಾರ್ಥಂಗಳಂ ಬೆಳಗುವ ತನಪಾದೊಡಂ ಪ್ರಾಕಾಮ್ಯಮಕ್ಕುಂ (ವಿವೇಕ. ೨೯೦); ಪ್ರಾಕಾಮ್ಯ ಸಿದ್ಧಿಯ ತಿಳಿಯು ಪರರಿಗೆ ಕೊಡುವ ವಿವರವ, ಬಲುಬಲವು ಬಲುಸುಂದ ರಾಯುಷು ಬಲುಮಹಿಮೆ ಬಲುಕಳೆಯುಯೆಂಬವನೊಲಿವುಯಾವುದೆ ಯಿದುವೆ ಪ್ರಾಕಾಮ್ಯನಿಪ ಸಿದ್ಧ್ಯಂದ (ಜ್ಞಾನಸಿಂ. ೨೦-೯೯); ಐಶ್ವರ್ಯವು ಅಣಿಮಾ, ಲಘಿಮಾ, ಗರಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ಎಂದು ಎಂಟು ವಿಧ (ಶಾಕತ್ತ್ವ. ೩೨೯). [ಸಂ.]

**ಪ್ರಾಕಾರ** (ನಾ). ೧. ಬೇಲಿ. ೨. ಸುತ್ತಲೂ ಕಟ್ಟಿರುವ ಗೋಡೆ; ಸುತ್ತುಗೋಡೆ ; ಪಾಳಿ: "ವಪ್ರಂ, ಸಾಲ (೦):, ಪ್ರಾಕಾರಃ_ಈ ೩ ಕೋಂಟೆ" (ಹಲಾಯು. ೯೯-೦೩೩); ಎನಗೀ ಪ್ರಾಕಾರವಿಭೇದನಮಾವುದೊ ಗಹನಂ (ಕಂಠಾಮಾ. ೦೦-೬೮); ದೊಡ್ಡ ದೇವಾಲಯಗಳಲ್ಲಿ ಇಂತಹ ದ್ವಾರ ಗಳೂ ಗೋಪುರಗಳೂ ಪ್ರಾಕಾರದ ನಾಲ್ಕು ದಿಕ್ಕುಗಳಲ್ಲಿಯೂ ಇರುವು ದುಂಟು (ವ್ಯಾಪಾಸ್ತ್ಯ. ೩೪). [ಸಂ. ]

**ಪ್ರಾಕು**[1], **ಪ್ರಾಕ್ಕು**[1] (ಗು). ೧. ಹಿಂದಿನ; ಪೂರ್ವಕಾಲದ. (ನಾ). ೨. ಹಿಂದಿನ ಕಾಲ ; ಪೂರ್ವಕಾಲ : "ಆದಿಃ . . . ಪ್ರಾಕ್, ಪುರಃ_ಈ ೭ ಮುನ್ನಂ" (ಹಲಾಯು. ೯೦೭-೨೨); ದಾರಿಯ ಎರಡು ಸಾಲುಗಳಲ್ಲೂ ಪ್ರಾಕಿ ನಲ್ಲಿ ನೆಟ್ಟಿದ್ದ ಈ ಧೂಪದ ಮರಗಳು (ಸ್ವತ್ವಹೂ. ೪೪); ಭಾರೀ ಪುರಾತನ ವಾದ ಮನೆ ಇದು, ಪ್ರಾಕಿನ ಕಟ್ಟೋಣ ಬೇರೆ (ಕಂಠಹು. ೬೦). ೩. ಮೂಡಲು; ಪೂರ್ವದಿಕ್ಕು: "ಪ್ರಾಚೀನಂ, ಪ್ರಾಕ್_ಈ ೨ ಮೂಡಲಾ ದುದು" (ಹಲಾಯು. ೧೭_೦೦೩); "ಪ್ರಾಕ್ ಪುರಮೊಂದನುಗ್ರಹಿಸೆ ಪೂರ್ವಕ್ಕೆ ಪೆಸರಕ್ಕು" (ಮಂಗರಾ. ೨೭-೪). **ಪ್ರಾಕ್ಕು:** ೨. ಜೋಕೆಯೊಳ್ಳಿದು ಕ್ರಿಯವನು ಪೇಳ್ವುದಲ್ಲದೊಡೆ ಪ್ರಾಕ್ಕಿನೊಳ್ಬೀಳುತಿಹ ಪದ್ಮರಾಗದ ಪರಿ ಯೊಳೀ ಕತೆಯೊಳಿದು ಪೇಳ್ವುದು (ರತ್ನಶಾ. ೦೪-೬).

**ಪ್ರಾಕಿನ ಬಾಕಿ** =ಹಳೆಯ ಬಾಕಿ; ಬಹಳ ಹಿಂದಿನ ಸಾಲ : ಕೊನೆಗೆ ಪ್ರಾಕಿನ ಬಾಕಿ ಹಣ ಖಂಡಣೆ ಸಹಾ ೩ ಲಕ್ಷರೂಪಾಯಿ ಮೇಲೆ ಚುಕಾಯಿಸಿ (ಹೈದ. ೯೩). **ಪ್ರಾಕಿನವ** = ಹಿಂದಿನ ಕಾಲದವನು ; ಪುರಾತನ ವ್ಯಕ್ತಿ : ನಮ್ಮ ಎಳಚಿತ್ತಾಯರು ಹೇಳಿದರು—ನೀನು ಈ ಊರಿಗೇನೆ ಪ್ರಾಕಿನವನೆಂದು; ವಯಸ್ಸಾದವನೆಂದು (ಜಗುಳ. ೯೩). [<ಸಂ. ಪ್ರಾಚ್]

**ಪ್ರಾಕು**[2], **ಪ್ರಾಕ್ಕು**[2] (ಅ). ಹಿಂದೆ; ಮೊದಲು: ಯಿದಕ್ಕೆ ನೀಉ ಪ್ರಾಕು ಕೊಡುವ ಗುತ್ತಿಗೆ ರೊಕ್ಕ ಬಿಟ್ಟ ಬಿರಾಡು ಕ್ರಯಾದಾಯ × × × ವೆಚ್ಚ ಬಿರಾಡ ಗಉಡ ಸೇನಬೋವ ಆಯಗಾಱರಿಗೆ ಕೊಡುವ ಉಪ್ಪು ಸಹಾ ಎನಿಸಿ ಸರ್ವಮಾನ್ಯದ ಶಿಲಾಶಾಸನ (ಎಕ. XI. ಮೊಳಕಾ. ೮-೦೦; 1551); ಎಱದಿಮ್ಮ ರಾಜಯ್ಯಗೆ ಪುಣ್ಯವಾಗಬೇಕೆನ್ದು ಪ್ರಾಕು ತೆಱುವ ರೊಕವನೂ ಸರ್ವ ಮಾನವಾಗಿ ಬಿಟೆಉ (ಎಕ. XI. ಹಿಂದುೂ. ೪೦-೦೬; 1556 ?); ಪ್ರಾಕು ರೈತರು ಮಾಡಿದ್ದ ಭೂಮಿಯಲ್ಲಿ ಪೌತಿ ಪರಾರಿ ಆದವರ ಪಾಳು ಭೂಮಿಯು . . . ಸಾಗುವಳಿ ಮಾಡಬೇಕು (ಮಹಾಪಂ. II. ೬೦). **ಪ್ರಾಕ್ಕು**[2].

**ಪ್ರಾಕ್ಕು ಮುತ್ತೈದೆ** = ಹಿಂದೆ ಮುತ್ತೈದೆಯಾಗಿದ್ದವಳು ; ವಿಧವೆ : (೪). [< ಸಂ. ಪ್ರಾಕ್]

**ಪ್ರಾಕುಪ್ರಮಾಣ** (ನಾ). ಪುರಾತನಕಾಲದ ಪ್ರಮಾಣ : ಗುತ್ತಿಗೆಪ್ರಾಕು ಪ್ರಮಾಣನು . . . ಸೋಮೇಶ್ವರದೇವರ ಭಂಡಾರಕ್ಕೆ ಮಾಸಗದಿಯಾಗಿ ಸಲಿಸುವೆವಿ (ವ್ಯಾಳಂ. ೦೯೪೬. ೨೯-೦೩; 1530). [ಪ್ರಾಕು[1]+ಪ್ರಮಾಣ]

**ಪ್ರಾಕೃತ** (ಗು). ೧. ನೈಸರ್ಗಿಕವಾದ; ಸಹಜವಾದ: ಮೊದಲು ಸ್ತ್ರೀಯು ಯಾವ ಸೌಂದರ್ಯದಿಂದ ಸೃಷ್ಟಿಕರ್ತನಿಂದ ಸೃಷ್ಟಳಾಗಿ ಈಚೆಗೆ ಬಂದಳೋ ಅಂತಹ ಪ್ರಾಕೃತ ಗಂಭೀರಸೌಂದರ್ಯದ ಸ್ತ್ರೀಯನ್ನು ನೀವು ನೋಡಬೇಕು (ಮಲಿವಾ. ೧೭೬); ಪ್ರಾಕೃತಘಟನೆಗಳ್ಗೆ ಪ್ರಕೃತಿಕಾರಣದಂತೆ ದೇವಕಾರಣ ಮಿರ್ಪುದೆಂದು ಗುರು ಕಲಿಸಿದರ್ ನನಗೆ (ಶ್ರೀರಾಮಾ. ೩೭-೮೪). ೨. ಸಾಮಾನ್ಯವಾದ; ಸಾಧಾರಣವಾದ. ೩. ಒರಟಾದ; ಅಸಂಸ್ಕೃತವಾದ; ಅಸಭ್ಯವಾದ. (ನಾ). ೪. ಸಾಮಾನ್ಯವಾದುದು; ಸಾಧಾರಣವಾದುದು: ಈಕೆಯ ರೂಪಿನ ಪರಿಯಂ ಕೋಕನದಜನಂದು ಕಂಡೊಡಂತಾ ಗೌರೀ ಶ್ರೀಕಾಂತೆಯರಾಕೃತಿಯಂ ಪ್ರಾಕೃತಮೆನೆ ಮಾಡನೆನಿಸಿ ರುಕ್ಮಿಣಿಯೆಸೆಗುಂ (ಜಗದ. ೧೦-೪೪). ೫. ಸಾಮಾನ್ಯನಾದವನು; ನಾಡಾಡಿ; ಪಾಮರ: ಪ್ರಾಕೃತನಲ್ಲನೀ ದಶರಥಾಗ್ರತನೂಭವಂ (ಪಂಪಾರಾ. ೩-೭೨); ಅರಿಯನೀ ಲಕ್ಷ್ಮಣನು ಮಾಯಾನಿರುಗೆಯಾಕೃತಿಯಾದ ಸೀತೆಯು ತೆರನ ವಂಚಿಪೆನೀತನನು ಪ್ರಾಕೃತನ ತೆರದಂತೆ (ಅರಾಮಾ. ೩-೮-೨); ನೀನು ಭಾವಿಸುವನಿತ್ತು ಗಾಲವನು ಪ್ರಾಕೃತನೆ? (ಪಂಪ್ರಸ. ೦೩). ೬. ಪ್ರಕೃತಿತತ್ತ್ವವಾದಿ; ನಿಸರ್ಗವಾದಿ: ಶಾಸ್ತ್ರವನ್ನು ನಂಬದೆ ಕೇವಲ ಜಗತ್ತನ್ನು ನೋಡಿ ಸಿದ್ಧಾಂತಗಳನ್ನು ಕಲ್ಪಿಸತಕ್ಕ ಪ್ರಾಕೃತರು ಮತ್ತು ಚಾರ್ವಾಕರು ನಾಲ್ಕು ತತ್ತ್ವಗಳನ್ನು ಮಾತ್ರ ನಂಬುತ್ತಾರೆ (ಜೀವಾತ್ಮ. ೧೭). ೭. ಯಾಗದ ಪಶು; ಯಜ್ಞಪಶು: "ಯಾಗಕೆಯ್ದುದ್ದರ ಪಶುವು ಪ್ರಾಕೃತವೆನಿಕು" (ಮಂಗರಾ. ೭೭-೦೪). ೮. ಆರ್ಯಭಾಷಾವರ್ಗದ ಪ್ರಾಚೀನಭಾರತದ ದೇಶಭಾಷೆಗಳು ಮತ್ತು ಆ ಭಾಷೆಗಳಲ್ಲಿ ಯಾವುದಾದರೊಂದು: ಸಂಸ್ಕೃತಂ ಪ್ರಾಕೃತಂ ಅಪಭ್ರಂಶಿಕಂ ಪೈಶಾಚೀಕಮೆಂಬ ಮೂಱುವರೆ ಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವವಿಷಯಭಾಷಾಜಾತಿಗಳಕ್ಕುಂ (ಛಂದೋಂಬು. ೦-೯೭ ವ); ಸಂಸ್ಕೃತ ಪ್ರಾಕೃತ ಅಪಭ್ರಂಶ ಪೈಶಾಚಿಕಾದಿ ಭಾಷಾಭೇದದಿಂ ಪೇಳ್ವ ಲಾಕ್ಷಣಿಕರಪ್ಪ ಕವೀಶ್ವರರಿಂ (ಕವೀಜ. ೦೫೦). ೯. ಕ್ಷುದ್ರಮಂತ್ರಗಳಲ್ಲಿ ಒಂದು ಬಗೆ: ದ್ರಾವಿಡ, ವೈಕೃತ, ಪ್ರಾಕೃತ ಇತ್ಯಾದಿ ಕ್ಷುದ್ರಮಂತ್ರಂಗಳಂ ... ತಿಳಿದಿರಲಕ್ಕುಂ (ಕವೀಜ. ೫೦). ೧೦. ನಿತ್ಯ, ನೈಮಿತ್ತಿಕ, ಪ್ರಾಕೃತ ಮತ್ತು ಆತ್ಯಂತಿಕಗಳೆಂಬ ನಾಲ್ಕುವಿಧ ಪ್ರಳಯಗಳಲ್ಲಿ ಒಂದು; ಪ್ರಕೃತಿಯ ನಾಶರೂಪವಾದ ಪ್ರಳಯ: ಪ್ರಲಯವು, ನಿತ್ಯ, ಪ್ರಾಕೃತ, ನೈಮಿತ್ತಿಕ, ಆತ್ಯಂತಿಕ ಎಂದು ನಾಲ್ಕು ವಿಧ . . . ಪ್ರಾಕೃತ ಪ್ರಲಯವೆಂದರೆ ಪ್ರಕೃತಿಯೆಂಬ ಮಾಯೆಯಲ್ಲಿ ಬ್ರಹ್ಮನೊಡನೆ ಬ್ರಹ್ಮಾಂಡ ವಿನಾಶ (ಹಿಂದಸಾ. ೦೯೭). ೧೧. [ಯೋಗ] ಪ್ರಾಣಾಯಾಮದ ಪ್ರಾಕೃತ, ವೈಕೃತ, ಕೇವಲಕುಂಭಕಗಳೆಂಬ ಮೂರು ಪ್ರಕಾರಗಳಲ್ಲಿ ಒಂದು: ಪ್ರಾಕೃತ ವೈಕೃತಮಾದ ದ್ವಿವಿಧರೇಚಕ ಪೂರಕ ಕುಂಭಕ ಉತ್ಕರ್ಷ ಅಪಕರ್ಷ ಶೂನ್ಯ ಉತ್ಕ್ರಾಂತಿ ಎಂಬ ಸಪ್ತ ಪ್ರಾಣಾಯಾಮಲಕ್ಷಣಂಗಳಂ (ಕವೀಜ. ೦೩೩); ಪ್ರಾಕೃತಪ್ರಾಣಾಯಾಮವೆಂದು ವೈಕೃತಪ್ರಾಣಾಯಾಮವೆಂದು ಆ ಎರಡಱಂ ಪೊಱಗಾದ ಕೇವಲಕುಂಭಕವೆಂದು ಮೂಱು ಪ್ರಕಾರವಾಗಿ ಪೂರ್ವದದೆಂತೆನೆ ದಿನವೊಂದಕ್ಕೆ ಇಪ್ಪತ್ತೊಂದುಸಾವಿರದ ಆಱುನೂಱು ಹಂಸ ಹಂಸವೆಂದುಚ್ಚರಿಸುವ ಅಹಂಕಾರಾತ್ಮಕವಾದ ಜೀವಜಪವೇ ಪ್ರಾಕೃತ ಪ್ರಾಣಾಯಾಮವೆನಿಸುವುದು (ಅಪಂಚೀ. ೨೦೭-೩೯). ೧೨. [ನಾಟ್ಯ] ಕಣ್ಣುಗುಡ್ಡೆಯ ಒಂಬತ್ತು ವಿಧವಾದ ಚಲನೆಗಳಲ್ಲಿ ಒಂದು; ಕಣ್ಣುಗುಡ್ಡೆಯ ಸ್ವಾಭಾವಿಕಚಲನೆ; P "ಆಲಿಗಳು ಸ್ವಭಾವವಾಗಿರುವುದು . . . ಪ್ರಾಕೃತವನ್ನು ಅದ್ಭುತರಸ ಮತ್ತು ಆವೇಶಗಳಲ್ಲೂ ವಿನಿಯೋಗಿಸಬೇಕು" (ನಾಟ್ಯಶಾ. ಗದ್ಯಾನುವಾದ. ೨೭೪); ಭ್ರಮಣಂ ವಲನಂ ಪಾತಂ . . . ಸಮುದ್ವೃತ್ತಂ ನಿಷ್ಕ್ರಾಮಂ ಅಮಿತಪ್ರಾಕೃತಗಳಾಲಿಯೊಂಬತ್ತಕ್ಕುಂ (ನಾಟ್ಯಶಾ. ೩-೩೪). [ಸಂ.]

**ಪ್ರಾಕೃತಕಾವ್ಯ** (ನಾ). ಪ್ರಾಕೃತಭಾಷೆಗಳಲ್ಲಿ ರಚಿತವಾಗಿರುವ ಕಾವ್ಯ: ಆನಂದವರ್ಧನನ ಕಾಲದಲ್ಲಿ ಪ್ರಾಕೃತಕಾವ್ಯಕ್ಕೆ ಇನ್ನೂ ಹೆಚ್ಚಾದ ಮನ್ನಣೆಯಿತ್ತು (ಧ್ವನ್ಯಾಲೋ. XI ಮುನ್ನುಡಿ). [ಸಂ.]

**ಪ್ರಾಕೃತಜನ** (ನಾ). ಪಾಮರಜನ; ನಾಡಾಡಿಜನ: ವಲಂ ವಿಷಯಾಸಕ್ತಿಯೊಳಾಯಾಸ್ಯಕನಿರತರಾಗಿರ್ಪ ಪ್ರಾಕೃತಜನಂಗಳ ಗಮನಮೇ ಸಮಸ್ತವೇದಿಗೆ ಹೃದಯಂಗಮಮಾಗದು (ಶಾಂತಿಪು. ೯-೦೦೩ ವ). [ಸಂ.]

**ಪ್ರಾಕೃತಪುರುಷ** (ನಾ). ಸಾಮಾನ್ಯಮನುಷ್ಯ; ನಾಡಾಡಿ; ಪಾಮರ: ಮೊಗಮಂ ನೋಡುತ್ತುಮಿನಿವಿಂದು ಪರಾಭವಂ ಪ್ರಾಕೃತಪುರುಷಂಗಂ ಕಾಪುರುಷಂಗಂ ಪೊತ್ತು ನಿಲ್ವುದರಿದು (ಶಾಂತಿಪು. ೩-೭೭ ವ). [ಸಂ.]

**ಪ್ರಾಕೃತಭಾಷೆ** (ನಾ). = ಪ್ರಾಕೃತ ೮: ಪ್ರಾಕೃತಭಾಷೆಗೆ ಸಂಸ್ಕೃತವೇ ಮೂಲವಾಗಿ (ಪ್ರಕೃತಿಯಾಗಿ)ರುವುದು. ಇದು ಸಂಸ್ಕೃತದಿಂದ ಹುಟ್ಟಿದುದೆಂದಾಗಲಿ, ಸಂಸ್ಕೃತದಿಂದ ಬಂದಿತೆಂದಾಗಲಿ . . . ಈ ಭಾಷೆಗೆ ಪ್ರಾಕೃತಭಾಷೆಯೆಂದು ಹೆಸರು ಬಂದಿದೆ (ಭಾರದ. ೪೩೭). [ಸಂ. ಪ್ರಾಕೃತಭಾಷಾ]

**ಪ್ರಾಕೃತಾಸ್ತ್ರ** (ನಾ). ಸಾಮಾನ್ಯವಾದ ಬಾಣ — ಅಸ್ತ್ರ: ಪ್ರಾಕೃತಾಸ್ತ್ರನಿಕರಂಗಳನಂತಾ ಭೀಕರರ್ ಕರಮ ಕಾದೆ ಬಟ್ಟಿಕ್ಕಪ್ರಾಕೃತಾಸ್ತ್ರನಿಧಿಯಂ ತೆಗೆದಂ ಶೌರ್ಯಾಕರಂ ನೆಗಟ್ಟ ಮಾಗಧಭೂಪಂ (ನೇಮಿಪು. ೦೨-೨೯೦). [ಸಂ.]

**ಪ್ರಾಕೃತಿಕ** (ಗು). ಪ್ರಕೃತಿಗೆ ಸಂಬಂಧಿಸಿದ; ಸ್ವಾಭಾವಿಕವಾದ; ನೈಸರ್ಗಿಕವಾದ: ಘ್ರಾಣ ಮೊದಲಾದುವು ಪ್ರಕೃತಿಯಿಂದ ಸಿದ್ಧಿಸಿದುವು. ಇವಕ್ಕೆ ಪ್ರಾಕೃತಿಕ ಎಂದು ಹೆಸರು (ಶಾಕ್ತ್ಯ. ೫೩೬); ಬೆಂಗೂರಿನ ಪ್ರಾಕೃತಿಕಸ್ವರೂಪ ಅಂಥದು (ದಂಬವಾ. ೧). [ಸಂ.]

**ಪ್ರಾಕ್ಕು₁** 'ಪ್ರಾಕ್ಕು₁' ನೋ.

**ಪ್ರಾಕ್ಕು₂** 'ಪ್ರಾಕ್ಕು₂' ನೋ.

**ಪ್ರಾಕ್ತನ** (ಗು). ೧. ಹಿಂದಿನ; ಪೂರ್ವದ: ಪ್ರಾಕ್ತನಜನ್ಮವಿದ್ಯೆಗಳ್ ಬಂದನಿತುಂ ನೆಲಸಿದವು ಸಕಲವಿದ್ಯಾನಿಧಿಯೊಳ್ (ಆಕ್ತು. ೩-೭೮); ಪ್ರಾಕ್ತನಪುಣ್ಯಪ್ರಾಪ್ತಿಯಿಂದಾ ಬಯಸಿಕೆ ಸಮನಿಸಂ ಚಿಂತಿವೇಡಂ (ಸುಕುಚ. ೯-೨೪); ಮನದೊಳೆನಗೀಶ ಮತ್ತಪ್ರಾಕ್ತನಜನ್ಮಾವಳಿಯನೆಯ್ದೆ ಕೇಳ್ವಟ್ಟು ಕರಂ ಜನಿಯಿಸಿದಪುದು (ಪಂಪ್ರಪು. ೩-೬). (ನಾ). ೨. ಅತಿ ಹಿಂದಿನ ಕಾಲ; ಪೂರ್ವಕಾಲ: ವ್ಯಕ್ತವಾಗಿಹ ಶಬ್ದವುದಿಸದು ಪ್ರಾಕ್ತನದ ಜನ್ಮದಲಿ ಪುಣ್ಯದ ಶಕ್ತಿಯಿಲ್ಲದರಿವುದಕಾರ್ಯವು ದುರ್ಲಕ್ಷ್ಯವೆಂದೆನಲು (ಏಕೀಭ. ೩-೩೦); ಪ್ರಾಕ್ತನವೇ ಹೂತ ಹಾಗೆ ನೂತನವಿದು ರಮ್ಯವಾಗೆ (ಕರುಣಾ. ೪೬-೦೩). ೩. ಹಿಂದಿನ ಕಾಲದ ವಿದ್ವಾಂಸ: ವರ್ಗದಕ್ಕರಂಗಳ್ ನಾಲ್ಕುಂ ಶಾಂತಮಿರೆ ಪೇಟ್ದ ತಾಣದೊಳಂತಕ್ಕುಂ ಪ್ರಾಕ್ತನೋಕ್ತವರ್ಗಪ್ರಾಸಂ (ಛಂದೋಂಬು. ೦-೯೭ ಅವ). ೪. ಹಣೆಯ ಬರೆಹ; ವಿಧಿ; ಅದೃಷ್ಟ: ಪ್ರಾಕ್ತನದಲ್ಲಿ ಸುಖವನ್ನು ನೋಡದೆ ಕಷ್ಟವನ್ನೇ ಅನುಭವಿಸಬೇಕೆಂದಿದ್ದರೆ ಅದಕ್ಕೆ ನಾನಾದರೂ ಏನು ಮಾಡಲಿ? (ಶರಮೀ. ೦೩). [ಸಂ.]

**ಪ್ರಾಕ್ತನವಿಮರ್ಶಕ** (ನಾ). ಪ್ರಾಚೀನಕಾಲದ ವಿಷಯವನ್ನು ಪರಿಶೀಲಿಸುವವನು—ಅಭ್ಯಾಸ ಮಾಡುವವನು: ಇದು ಕೃಷ್ಣಾ—ಗೋದಾವರೀನದಿಗಳ ನಡುವಣ ಆಂಧ್ರಶಿಲ್ಪಿಯೊಬ್ಬನ ಕೈಕೆಲಸವೆಂದು ಪ್ರಾಕ್ತನ ವಿಮರ್ಶಕರ ನಿರ್ಣಯ (ಭಾರದ. ೩೩೯). [ಸಂ.]

**ಪ್ರಾಕ್ತನಶಾಸ್ತ್ರ** (ನಾ). ಪ್ರಾಚೀನಅವಶೇಷಗಳ ಶೋಧನೆಗೆ ಸಂಬಂಧಿಸಿದ ಶಾಸ್ತ್ರ: ಅವನು ಅಭ್ಯಾಸಕ್ಕೆ ಪ್ರಾಕ್ತನಶಾಸ್ತ್ರವನ್ನು ಮುಖ್ಯವಿಷಯವಾಗಿ ಆರಿಸಿಕೊಂಡನು (ರೂಢಿ). [ಸಂ.]

**ಪ್ರಾಕ್ತನಶೋಧಕ** (ನಾ). ಪ್ರಾಚೀನಅವಶೇಷಗಳನ್ನು ಶೋಧಿಸುವವನು: ಪ್ರಾಕ್ತನಶೋಧಕನ ಕೆಲಸ ಬಹಳ ಕಷ್ಟಕರವಾದುದು (ರೂಢಿ). [ಸಂ.]

**ಪ್ರಾಕ್ತನಶೋಧನೆ** (ನಾ). ಪ್ರಾಚೀನ ಅವಶೇಷಗಳನ್ನು ಅನ್ವೇಷಿಸುವುದು : ರಾಷ್ಟ್ರೀಯಮಹತ್ತ್ವವುಳ್ಳವೆಂದು ಸಂಸತ್ತಿನಿಂದ ವಿಧಿದ್ವಾರಾ ಘೋಷಿತವಾದ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಅಭಿಲೇಖಗಳು ಮತ್ತು ಪ್ರಾಕ್ತನಶೋಧನೆಯ ನಿವೇಶನಗಳು ಮತ್ತು ಅವಶೇಷಗಳು (ಕಾರಾನ. ೨೬೪). [ಸಂ.]

**ಪ್ರಾಕ್ಪ್ರಣೀತ** (ನಾ) ಐದು ಬಗೆಯ ಭಿಕ್ಷೆಗಳಲ್ಲಿ ಒಂದು ; ತಂಗಳು : ಮಾಧೂ[ಧು]ಕರ ಅಸಂಕ್ಲಪ್ತ ಪ್ರಾಕ್ಪ್ರಣೀ [ಶಾಕಾಂ-ಣಿ]ತ ಅಯಾಚಿತ ತಾತ್ಕಾಲಿಕವೆಂಬ ಪಂಚವಿಧಭಿಕ್ಷಂಗಳನಾದೊಡಂ . . . ಭೋಜನಗೈದು (ವಿವೇ. ೦೨೬). [ಸಂ.]

**ಪ್ರಾಗಲ್ಭ್ಯ** (ನಾ). ೧. ದಿಟ್ಟತನ ; ಧೈರ್ಯ : ಅಕಠೋರಶಿರೀಷಪುಷ್ಪಸುಕುಮಾರಪ್ರಕೃತಿಯಪ್ಪ ನಾರೀಜನಕೆ ಪ್ರಾಗಲ್ಭ್ಯಂ ದೊರೆಕೊಳ್ವುದಲ್ಲ (ಕಾದಂಸಂ. ೩೦೩). ೨. ಜಂಬ ; ಹೆಮ್ಮೆ ; ಅಹಂಕಾರ. ೩. ಪ್ರಾವೀಣ್ಯ ; ನಿಪುಣತೆ ; ಕೌಶಲ : ಸುಹೃದ್ಬಲಕಂ ಪೂರ್ವಲಕಂ ಗುಣಾರ್ಣವ ಶರಪ್ರಾಗಲ್ಭ್ಯಮಂ ತೋಱುವಂ (ಶಂಕಕಾ. ೩-೩೩) ; ಚಿತ್ರಕನ ಚಿತ್ರವಿದ್ಯಾಪ್ರಾಗಲ್ಭ್ಯಮಂ ಪ್ರತ್ಯೇಕಮವಲೋಕಿಸಿ (ವಲ್ಲಿಕೃ. ೩-೯೩); ಹೀಗೆ ಉಚಿತವಾದ ಪದಮೈತ್ರಿಯಿಂದಲೂ ರೀತಿಯಿಂದಲೂ ಚಿಂತನೆಯ ಪ್ರಾಗಲ್ಭ್ಯದಿಂದಲೂ ನವ್ಯರಸಸ್ಯಂದಿಯಾದ ಭಾವನೆ (ಕಾವ್ಯಕು. ೯೬). ೪. ಪ್ರವೀಣ; ನಿಪುಣ : ಅಪ್ರತಿಹತಪ್ರಾಗಲ್ಭ್ಯರೀಗಳ್ ಪೃಥಾಸುತರ್ (ಶಂಕಶಾ. ೬-೮೭). [ಸಂ.]

**ಪ್ರಾಗವಸ್ಥೆ** (ನಾ). ಹಿಂದಿನ ಸ್ಥಿತಿ; ಪೂರ್ವದ ಅವಸ್ಥೆ : ಪ್ರಧಾನವೂ ಜಗತ್ತಿನ ಪ್ರಾಗವಸ್ಥೆ ಅತ್ಯಾಕೃತವೂ ಪ್ರಾಗವಸ್ಥೆ (ಬ್ರಹ್ಮಕಾ. ೩೩೦). [ಸಂ. ಪ್ರಾಗವಸ್ಥಾ]

**ಪ್ರಾಗೈತಿಹಾಸಿಕ** (ಗು). ಇತಿಹಾಸಕ್ಕೂ ಪೂರ್ವಕಾಲದ : ಜನಪದ ಸಾಹಿತ್ಯವು ಪ್ರಾಗೈತಿಹಾಸಿಕಜೀವನದ ಪರಂಪರಾಗತಸಂಗತಿಯಾಗಿದೆ (ಕನ್ನಕಾ. IV, ಕೃಸ್ತಾವನೆ) : ಆಗ ಹಳೆಗಾಲದ ಪ್ರಾಗೈತಿಹಾಸಿಕಜನರ ಪರಿಶೀಲನೆಯೂ . . . ಅಗತ್ಯವಾಗಿ ಕಂಡು ಬಂತು (ತುಳುವಾ. ೪). [ಸಂ.]

**ಪ್ರಾಗ್ಜನ್ಮ** (ನಾ). ಹಿಂದಿನ ಹುಟ್ಟು; ಪೂರ್ವಜನ್ಮ : ಪ್ರಾಗ್ಜನ್ಮಕಥಾವಳಿಯಲ್ಲಮಂ ಬಗೆದು ನೋಡೆವೆನಗಾದುದು (ಆದಿಪು. ೩-೩೩) ; ಮಿಗೆ ಮತಂಗನು ಮತ್ತೆ ಪ್ರಾಗ್ಜನ್ಮಗಳ ಕರ್ಮವಿಶೇಷದಿಂದಜೀಕೆಗಳನ್ನುಳ್ಳವ ತಿಳಿವ ತಿರ್ಯಗ್ಜಾತಿಭಾಷೆಗಳ (ತಿಮ್ಮಭಿ. ೨-೩). [ಸಂ.]

**ಪ್ರಾಗ್ಭವ** (ನಾ). ೧. ಮೂಡಲಲ್ಲಿ ಹುಟ್ಟಿದುದು ; ಪೂರ್ವದಲ್ಲಿ ಅವತರಿಸಿದುದು : "ಪ್ರಾಚೀನಂ, ಪ್ರಾಗ್ಭವಮ್-ಮೂಡಲಲ್ಲಿ ಹುಟ್ಟಿದ್ದು" (ಸಿದ್ಧಾಂತಿ. ೨೭). ೨. ಹಿಂದಿನ ಜನ್ಮ,-ಹುಟ್ಟು. [ಸಂ.]

**ಪ್ರಾಗ್ಭಾರತೀಯ** (ಗು). ಭಾರತದ ಚರಿತ್ರೆಗೆ ಹಿಂದಿನ : ಹರಪ್ಪ ಸಂಸ್ಕೃತಿ ಅಥವಾ ಪ್ರಾಗ್ಭಾರತೀಯಸಂಸ್ಕೃತಿ (ಪ್ರೋಟೋ-ಇಂಡಿಕ್) ಆಕಸ್ಮಿಕವಾಗಿ ಬೆಳಕಿಗೆ ಬಂದಿತು (ಭಾರಚ. ೯). [ಸಂ.]

**ಪ್ರಾಗ್ರ** (ಗು). ೧. ಎತ್ತರವಾದ ; ಉನ್ನತವಾದ. (ನಾ). ೨. ತುತ್ತತುದಿ. ೩. ಮುಖ್ಯನಾದವನು; ಪ್ರಮುಖ : ಉಗ್ರತಪದಿಂದೆಯತುಳಸಮುಗ್ರೋಯನಭವಂಗೆ ವಧುವೆನಿಪ್ಪಳನಾನವ್ಯಗ್ರದೆ ಪಡೆವೆಂ ಕುಧರಪ್ರಾಗ್ರನೆ ಕೆಳೆಪೆಂದು ಮೇನೆ ನುಡಿವವಸರದೊಳ್ (ಗಿಂಕ. ೩-೯). [ಸಂ.]

**ಪ್ರಾಗ್ರೂಪ** (ನಾ). ೧. ಹಿಂದಿನ ಆಕಾರ; ಪೂರ್ವರೂಪ. ೨. ರೋಗವು ವ್ಯಕ್ತವಾಗುವ ಮೊದಲು ತೋರುವ ರೋಗಲಕ್ಷಣ : ಪ್ರಾಗ್ರೂಪವೆಂಬುದು ರೋಗ ಹುಟ್ಟುವ ಮೊದಲೇ ಅವ್ಯಕ್ತವಾದ ಲಕ್ಷಣ (ವೈದ್ಯಸಾ. I, ೨೩); ಪ್ರಾಗ್ರೂಪ ಎಂದರೆ ರೋಗ ಹುಟ್ಟುವುದಕ್ಕೆ ಮೊದಲೇ ಉಂಟಾದ ಅವ್ಯಕ್ತವಾದ ರೋಗಲಕ್ಷಣ (ಸಕವೈ. ೨೦). [ಸಂ.]

**ಪ್ರಾಗ್ವಂಶ** (ನಾ). ಹೋಮದ್ರವ್ಯವಿರುವ ಗೃಹಕ್ಕೆ ಪೂರ್ವಭಾಗದಲ್ಲಿರುವ, ಯಜಮಾನ ಮತ್ತು ಋತ್ವಿಕ್ಕುಗಳು ಇರುವ ಗೃಹ ; ಯಜ್ಞಶಾಲೆಯ ಒಂದು ಭಾಗ : "ಪ್ರಾಗ್ವಂಶಃ . . . ಹವಿಸ್ಸಂಬ ಹೋಮದ್ರವ್ಯವಿರುವ ಮನೆಗಿಂತಲೂ ಮೂಡಲಲ್ಲಿ ಯಜಮಾನ ಮುಂತಾದವರಿಗಿರುವುದಕ್ಕೆ ನಿರ್ಮಿಸಿದ ಮನೆಗೆ ಹೆಸರು" (ಸಿದ್ಧಾಂತಿ. ೨೦೭) ; ಮಯಂ ವಿಸ್ಮಯಮಾಗೆ ಮಾಡಿದ ಸಭಾವಿಸ್ತಾರಮಂ . . . ಯಾಗದೇವ ಯಜನಪ್ರಾಗ್ವಂಶಪಕ್ಷೀವಿಚಿತ್ರಮಹಾಶಾಲೆಗಳಂ (ಜಗಂ. ೦೭-೩) ; ಈ ಜನವಳಯದೊಳು ಪ್ರಾಗ್ವಂಶದಲಿ ಪರಿವಿಳಿತವಾಯ್ತು ಸದಸ್ಯ ಋತ್ವಿಜರ ವಿಧಾನದಲಿ (ಕುಮಾವ್ಯಾಸ. ೭-೩೦). [ಸಂ.]

**ಪ್ರಾಗ್ವಾಸನೆ** (ನಾ). ಹಿಂದಿನ ಜನ್ಮದ ಸ್ವಭಾವಗಳ ತೋರಿಕೆ : ಮತ್ತೆ ಪ್ರಾಗ್ವಾಸನೆಯ ಪೆಸರಿನ ಸುತ್ತುವಳ್ಳಿಯ ಮೆಟ್ಟಿರದೆ ಮೈವತ್ತುತಿಹ ಸಂಕಲ್ಪ ಚಿಗುರಿಗೆ ಜುಟ್ಟು ತಗಲಿಸದೇ (ಗಗಕಾ. ೦೬-೧೪). [ಸಂ. ಪ್ರಾಗ್ವಾಸನಾ]

**ಪ್ರಾಗ್ವೈಭವ** (ನಾ). ಹಿಂದಿನ ಕಾಲದ ವೈಭವ : ಪುಟಿಯುತ್ತಿದೆ ಪಾಷಾಣಾದಿ ಪ್ರಾಗ್ವೈಭವ ಜೀವ (ಕರುಕ್ವಾ. ೭೦-೧). [ಸಂ.]

**ಪ್ರಾಘಾರ**(ನಾ). ೧. ಸೋರುವಿಕೆ; ಒಸರುವಿಕೆ: "ಶ್ಚ್ಯೋತಃ, ಪ್ರಾಘಾರಃ —೨ ಸೋರಿಹೋಗುವಿಕೆ, ಸೋರುವಿಕೆ" (ಸಿದ್ಧಾಂತಿ. ೩೬೯). ೨. ಹೋಮದಲ್ಲಿ ಅಗ್ನಿಗೆ ಮಾಡುವ ಆಜ್ಯಾಹುತಿ. [ಸಂ.]

**ಪ್ರಾಘುಣಕ** (ನಾ). ಆಮಂತ್ರಣವನ್ನು ಪಡೆದು ಅಥವಾ ಪಡೆಯದೆ ಮನೆಗೆ ಬರುವ ಗೌರವಸ್ಥ ; ಅತಿಥಿ ಅಥವಾ ಅಭ್ಯಾಗತ : "ಅತಿಥಿ ಯಾಗಂತು ಪ್ರಾಘುಣಕನೆನೆ ಬರ್ದಿನಂ" (ಮಂಗರಾ. ೭೦-೦೭). [ಸಂ.]

**ಪ್ರಾಙ್ಮುಖ** (ಗು). ೧. ಪೂರ್ವದಿಕ್ಕಿಗೆ ಮುಖ ಮಾಡಿಕೊಂಡಿರುವ; ಪೂರ್ವಾಭಿಮುಖವಾದ : ಮಹಾಪಥಗಮನವುಪವಾಸವ್ರತವ ಓಡಿದ ಮಲಚರಿತರು ಮನವ ಬಲಿದಿಹ ಗಾಢಧೈರ್ಯದಲಿ ಅಮರಶೈವಲಿನೀತಟಕೆ ನಿರ್ಗಮಿಸಿ ಪ್ರಾಙ್ಮುಖವರ್ತನದಿನುತ್ತಮವೆನಿಪ ನಿಜಯೋಗಬಲದಲಿ ನಡೆದರಲ್ಲಿಂದ (ತಿಮ್ಮಮು. ೦-೨೭). (ನಾ). ೨. ಪೂರ್ವಾಭಿಮುಖವಾಗಿರುವುದು : ಮುನ್ನಮೆ ನಿಱಿಸಿದ ಮಣಿಖಚಿತೋನ್ನತಹರಿಪೀಠದೋಳ್ ಜಗತ್ಪತಿಯ ಮಾನೋನ್ನತನಂ ಪ್ರಾಙ್ಮುಖದಿಂದುನ್ನತಸುರಮಾಲಿಲಾಲಿತಾಂಘ್ರಿದ್ವಯನಂ ಇರಿಸಿ (ಆದಿಪು. ೯-೩೮). [ಸಂ.]

**ಪ್ರಾಚಾರ್ಯ** (ನಾ). ಮುಖ್ಯ ಉಪಾಧ್ಯಾಯ; ಪ್ರಮುಖ ಗುರು : ಹಂಜೇರುಪಟ್ಟಣ ಒಂದು ಮಹಾಘಟಿಕಾಸ್ಥಾನವಾಗಿತ್ತು . . . ಅನಂತಶಿವದೇವರು ಎಂಬ ಗುರು ಅದರ ಪ್ರಾಚಾರ್ಯರಾಗಿದ್ದರು (ಸೊಕಂಬ. ೭೭); ಪ್ರಾಚಾರ್ಯ ಪರಾಂಜಪೆಯವರ ಕಡೆಗೆ ಹೋದಾಗ ಅವನ ವಿಷಯವನ್ನೆಲ್ಲ ಜ್ಞಾಪಕಕ್ಕೆ ತಂದುಕೊಂಡು ಅವರು ನರಹರಿಗೆ ನಗುತ್ತ ನುಡಿದಿದ್ದರು (ಸಮಜೀ. ೦೨೨೪). [ಸಂ.]

**ಪ್ರಾಚಿಕೆ** (ನಾ). ೧. ಒಂದು ಬಗೆಯ ಪಕ್ಷಿ; ಗಿಡುಗ; ಡೇಗೆ : "ಪ್ರಾಚಿಕೆ ವಿಷಮುಷ್ಟೀಡನಂ ಶ್ಯೇನಮೆನೆ ಗಿಡುಗನಕ್ಕುಂ" (ಮಂಗರಾ. ೩೨-೪). ೨. ಕಾಡುನೊಣ. ೩. ಸೊಳ್ಳೆ. [ಸಂ. ಪ್ರಾಚಿಕಾ]

**ಪ್ರಾಚೀನ** (ಗು). ೧. ಪೂರ್ವದಿಕ್ಕಿನಲ್ಲಿರುವ. ೨. ಹಳೆಯ; ಹಿಂದಿನ; ಪುರಾತನಕಾಲದ : ಸತ್ಯಕ್ಕೇ ಅಂತಿಮವಿಜಯ ಸುನಿಶ್ಚಿತ . . . ಎಂದು ಪ್ರಾಚೀನಮುನಿಪುಂಗವರು ಹೇಳಿದರು (ರವೀಗಾ. ೩); ಪ್ರಾಚೀನ ಆಸ್ಟ್ರೇಲಿಯನರೇ ಭಾರತದ ಮೂಲನಿವಾಸಿಗಳೆನ್ನಬಹುದು (ದ್ರಾವಿಬಿ. ೨೯). (ನಾ). ೩. ಹಳೆಯದು; ಪುರಾತನವಾದುದು : ದಕ್ಷಿಣಭಾರತದಲ್ಲಿ ಚಿತ್ರಕಲೆ ಸಾಕಷ್ಟು ಪ್ರಾಚೀನವಾದುದೇ ಆಗಿದೆ (ಭಾರಚ. ೩೨೭); 'ವಿಂಧ್ಯಗಿರಿ' ಎಂಬ ಹೆಸರು ಎಷ್ಟು ಪ್ರಾಚೀನವೋ ತಿಳಿಯದು (ಸಂಶೋತ. ೭೭). ೪. ಮೂಡಲಿಗೆ ಸೇರಿದುದು; ಪೂರ್ವಕ್ಕೆ ಸಂಬಂಧಿಸಿದುದು : "ಪ್ರಾಚೀನಂ, ಪ್ರಾಕ್—ಈ ೨ ಮೂಡಲಿನದುದು" (ಪಲಾಯು. ೦೭-೦೦೩).

೫.—ಪ್ರಾಚೀನಕರ್ಮ : ನಮ್ಮ ಪ್ರಾಚೀನಕ್ಕೆ ಯಾರು ಹೊಣೆ ರಂಗಮ್ಮ (ಶಾಯಿಕ. ೧೧೭); ಹೇಗೆ ಪ್ರಾಚೀನದಲ್ಲಿ ಬರೆದಿದೆ ಹಾಗೆ ಇರಬೇಕು ಸಂಸಾರದಲ್ಲಿ (ಹೇರುಕೂ. ೯೭). ೬.—ಪ್ರಾಚೀನಾವೀತ : "ಜನ್ನಿವಾರವ ನೆಡಂದೊಡಲು ಪ್ರಾಚೀನಂ" (ಶಬ್ದಮ. ೬೩-೮). ೭. ಬೇಲಿ; ಗೋಡೆ; ಪೌಳಿ : "ಪ್ರಾಚೀನಂ . . . ಊರ ಸುತ್ತಲೂ ಹಾಕಿರುವ ಬೇಲೀ ಮುಂತಾದ ತಡೆಗಳ ಹೆಸರುಗಳು" (ಸಿದ್ಧಾಂತಿ. ೯೯). ೮. ಹಳಬ; ಮುದುಕ; ವೃದ್ಧ : ಅವರಲ್ಲೊಬ್ಬ ವೃದ್ಧನೂ ಒಬ್ಬ ಯುವಕನೂ . . . ಎಚ್ಚರವಾಗಿದ್ದರು. ಪ್ರಾಚೀನನು ಯುವಾಪುರುಷನ ಸಂಗಡ ಮಾತಾಡುತ್ತಿದ್ದನು (ಕಥಾಕಂ. ೧). 'ಅರ್ವಾಚೀನ' ಪರಾ. [ಸಂ.]

ಪ್ರಾಚೀನಕರ್ಮ (ನಾ). ಪೂರ್ವಜನ್ಮಗಳಲ್ಲಿ ಮಾಡಿದ ಪಾಪಕರ್ಮ ಮತ್ತು ಅದರ ಫಲ : ಪ್ರಾಚೀನಕರ್ಮವು ಬಿಡಲರಿಯದು (ಪುರಂದ. ೪-೧೬ ಪಲ್ಲವಿ). [ಸಂ. ಪ್ರಾಚೀನಕರ್ಮನ್]

ಪ್ರಾಚೀನಕಾಲ (ನಾ). ಹಿಂದಿನ ಕಾಲ : ನಮ್ಮ ದೇಶದಲ್ಲಿ ಬಹಳ ಪ್ರಾಚೀನಕಾಲದಿಂದ ಅರಳೆಯ ನೂತು ಬಟ್ಟೆಗಳನ್ನು ಮಾಡುವ ರೀತಿಯು ಜನರಿಗೆ ಗೊತ್ತುಂಟು (ಮುಂಬಯಿ. ೪-೨೬); ಈ ಸಾಹಿತ್ಯದ ಸಮಗ್ರವಾದ ಇತಿಹಾಸವನ್ನು ಪ್ರಾಚೀನಕಾಲದ ಯಾರೂ ಬರೆಯಲಿಲ್ಲ (ಅಂಕಿಾ. ೨೦೫). [ಸಂ.]

ಪ್ರಾಚೀನತೆ (ನಾ). ಹಳೆಯದಾಗಿರುವಿಕೆ : ಭಾರತದಲ್ಲಿ ಮೂರ್ತಿಶಿಲ್ಪದ ಪ್ರಾಚೀನತೆಯನ್ನು ಸಮರ್ಥಿಸಲು ನಮಗೆ ಅನೇಕ ಗ್ರಂಥಗಳ ಆಧಾರ ದೊರೆತಿದೆ (ಭಾರದ. ೫೦೯); ದ್ರಾವಿಡಭಾಷೆಗಳ ಉಗಮ ವಿಕಾಸ ವರ್ಗೀಕರಣ ಅವುಗಳ ಪ್ರಾಚೀನತೆ . . . ಇವೇ ಮೊದಲಾದ ಅನೇಕ ವಿಷಯ ಗಳನ್ನೊಳಗೊಂಡಿದೆ (ದ್ರಾಎಬಿ. v, ಮುನ್ನುಡಿ). [ಸಂ. ಪ್ರಾಚೀನತಾ]

ಪ್ರಾಚೀನಪಾಠ (ನಾ). ಹಸ್ತಪ್ರತಿಗಳಲ್ಲಿ ತುಂಬಾ ಹಳೆಯದಾದ ಪ್ರತಿಯ ಪಾಠ : ಇದು ಪ್ರಾಚೀನಪಾಠವೂ (Antiquarian's text) ಆಗಿರದೆ ವಿಮರ್ಶನಪಾಠವೂ (Critic's text) ಆಗಿರದೆ ಎರಡರ ಮಧ್ಯದ ಒಡಂಬಡಿಕೆಯಾಗಿರುತ್ತದೆ (ಶಾರಕ. ೮೫). [ಸಂ.]

ಪ್ರಾಚೀನಬರ್ಹಿ (ನಾ). ಇಂದ್ರ; ೯ ನೂರು ಯಜ್ಞಗಳನ್ನು ಮಾಡಿರುವುದರಿಂದ ಹಿಂದೆ ಬಹುಕಾಲ ಅಗ್ನಿಯ ಮುಂದೆ ಕುಳಿತಿದ್ದವನು: "ಇಂದ್ರಃ . . . ಪ್ರಾಚೀನಬರ್ಹಿಃ . . . ವೃಷವಾಹನಃ — ಈ ೩೯ — ದೇವೇಂದ್ರನ ಪೆಸರ್" (ಕಲಾಯು. ೦೦-೩೨); ಪ್ರಾಚೀನಬರ್ಹಿರುಪಮಂ ಪ್ರಾಚೀಹರಿದಭಿಮುಖಂ ಮರುದ್ಧತಕೇತೂತ್ಕ್ಯೋಚಿತತರ್ಜಿತರಿಪುಚಳಿತಾಚಳ ಸನ್ನಿಭಗಜಾಧಿರೂಢನಧೀಶಂ (ಶಾಂತಿಪು. ೦೦-೦೯೭); ಪ್ರಾಚೀನಬರ್ಹಿ [ಸಕಲ]ಚರಾಚರಂ ಗುರುಸವನ[ದ] ಸಮಯದೊಳಾ [ಹೇಮಾ]ಚಳಮ ಬೇವಸಂ ಕಾಳೋಚಿತಗತಿ ನೆಗಟ್ ಬಹುವಿಧಂ ನರ್ತಿಸುಗುಂ (ವರ್ಧಮಾ. ೦೨-೪೯); ಆ ಮೇರುಪರ್ವತಂ . . . ಪ್ರಾಚೀನಬರ್ಹಿಯುತೆ ನವಖಂಡ ಗೋತ್ರಾವಲಂಬಿಯುಂ (ದಶಾವ. ೦-೩೨ ವ). [ಸಂ. ಪ್ರಾಚೀನಬರ್ಹಿಸ್]

ಪ್ರಾಚೀನವಾಸನೆ (ನಾ). = ಪ್ರಾಗ್ವಾಸನೆ : ತ್ರಿಗುಣವಾದ ಅಂತಃಕರಣ ದಲ್ಲೂ ಪ್ರಾಚೀನವಾಸನೆಯೆಂಬ ಕರ್ಮಾಧೀನವಾಗಿ ಆಯಾ ಕಾಲದಲ್ಲಿ ಒಂದೊಂದು ಗುಣವು ಉತ್ಕಟವಾಗಿ ಪ್ರಬಲವಾಗುವುದು (ಹಿಂದುಶಾ. ೬೦). [ಸಂ. ಪ್ರಾಚೀನವಾಸನಾ]

ಪ್ರಾಚೀನಾವೀತ (ನಾ). ಎಡತೋಳಿನ ಕೆಳಗಡೆಯೂ ಬಲಭುಜದ ಮೇಲೆಯೂ ಬರುವಂತೆ ಧರಿಸುವ ಯಜ್ಞೋಪವೀತ ; ೯ ಪಿತೃ ಕಾರ್ಯಗಳಲ್ಲಿ ಮಾತ್ರ ಹೀಗೆ ಧರಿಸುತ್ತಾರೆ : "ಜನ್ನವಿರಮಂ . . . ಎಡದೊಡುವುದು ಪ್ರಾಚೀನಾವೀತಮೆಂಬುದು" (ಕಲಾಯು. ೬೬-೨೫೩). [ಸಂ.]

ಪ್ರಾಚೀನಾವೀತಿ (ಗು). ಜನಿವಾರವನ್ನು ಎಡತೋಳಿನ ಕೆಳಗಡೆಯೂ ಬಲಭುಜದ ಮೇಲೆಯೂ ಬರುವಂತೆ ಧರಿಸಿರುವ. [ಸಂ. ಪ್ರಾಚೀನಾವೀತಿನ್]

ಪ್ರಾಚೀನೆ (ನಾ). ಒಂದು ವಿಧವಾದ ಮೂಲಿಕೆ ; ಆಗಳುಶುಂಠಿ : "ಪ್ರಾಚೀನಾ, ವನತಿಕ್ತಕಾ . . . ಅಗರುಶೊಂಠಿ, ಆಗಳುಶೊಂಠಿ" (ಸಿದ್ಧಾಂತಿ. ೦೫೦). [ಸಂ. ಪ್ರಾಚೀನಾ]

ಪ್ರಾಚೀರ (ನಾ). ಸುತ್ತುಗೋಡೆ; ಪೌಳಿ: ಅಲ್ಲಿ ಕೊಂಚದೂರ ಹೋಗಿ ನೋಡಲಾಗಿ, ಒಬ್ಬ ಹೆಂಗುಸು ತಮ್ಮ ಮನೆಯ ಪ್ರಾಚೀರ(ಮನೆಯ ಬಹಿರಾವರಣದ ಗೋಡೆ)ವನ್ನು ಅವಲಂಬಿಸಿಕೊಂಡು ಹೊರಗೆ ಏನನ್ನೋ ನೋಡುತ್ತಿದ್ದಳು (ಕಿಶಾಕ. ೨೪); ಸೌಭಾಗ್ಯಮಂದಿರದ ಪ್ರಾಚೀರದ ಮೇಲೆ ಮುಳ್ಳಿನ ಸಲಾಕೆಗಳು ಒತ್ತೊತ್ತಾಗಿ ನಡಲ್ಪಟ್ಟಿರುವುವು (ಕನ್ನಕೀ. ೦೨೬). [ಸಂ.]

ಪ್ರಾಚುರ (ನಾ). ಅಧಿಕವಾಗಿರುವಿಕೆ ; ಸಮೃದ್ಧಿಯಾಗಿರುವಿಕೆ : ಖೇಚರರುಯೆಡೆಗೆಯ್ದು ತಮ್ಮಯ ಪಥಶ್ರಮವಿಮೋಚನಂಗೆಯ್ದು ಪೋಗಲಿಮೆಂದು ರಚಿಸಿದ್ದ ಪ್ರಾಚುರದ ವೈಜಯಂತಿಗಳು ಕರಮೆಸೆದವಾ. ಪುರದ ಕೇರಿಗಳ ನಡುವೆ (ಗುರುಚಾ. ೦-೨೯). [< ಸಂ. ಪ್ರಚುರ]

ಪ್ರಾಚುರ್ಯ (ನಾ). ಹೆಚ್ಚಾಗಿರುವುದು ; ಅಧಿಕವಾಗಿರುವುದು ; ಸಮೃದ್ಧಿ : ಪ್ರಾಚುರ್ಯಾತಿಶಯಂ ಪೊದಟ್ಟಮಳಪಟ್ತ್ರಿಂಶದ್ಗುಣಶ್ರೇಣಿ ಪಂಚಾಚಾರಂ ಸುತಪಃಪರೀಷಹಜಯಂ . . . ಸಪ್ತರ್ಧಿಸಂಪನ್ನರ ಪ್ರಾಚಾರ್ಯರ್ ನಮಗೀಗೆ ನಿರ್ಮಳತೆವೆತ್ತಾಚಾರಸಂಪತ್ತಿಯಂ (ಶಾಂತೀಶ್ವ. ೦-೩) ; ಪ್ರಾಚುರ್ಯಸಮ್ಯಗ್ದಲಕೀರ್ತಿಯುಷ್ಮತ್‌ಪ್ರಭಾಚಾರುತರಕಟಾಕ್ಷ ಪ್ರಭಾವದೆ ದಲಾ ವಾಚಾಲವಾದಿಯಂ ಗೆಲ್ದು ಬರ್ಪೆಂ (ಶಬ್ದಮ. ೯-೨೭) ; ಕನ್ನಡ ಭಾಷೆಯು ಸಂಸ್ಕೃತಜನ್ಯವೆಂದು ಕರೆಯಲ್ಪಡಲು ಪ್ರಮುಖವಾದ ಕಾರಣವೆಂದರೆ ಈ ಭಾಷೆಯ ಕೋಶದಲ್ಲಿ ಕಂಡುಬರುವ ಸಂಸ್ಕೃತಶಬ್ದಗಳ ಪ್ರಾಚುರ್ಯವೆಂದೇ ಹೇಳಬೇಕು (ಭಾಷಾಶಾ. ೯೩). [ಸಂ.]

ಪ್ರಾಚೇತಸ (ನಾ). ೧. ವಾಲ್ಮೀಕಿ : "ಪ್ರಾಚೇತಸಃ, ವಾಲ್ಮೀಕಿಃ, ಮೈತ್ರಾವರುಣಃ—(ಈ ೩) ವಾಲ್ಮೀಕಿ" (ಕಲಾಯು. ೬೯-೨೫೪) ; ಕುಶ ಲವರಿಗಬುಹಿದನು ಪ್ರಾಚೇತಸನಗಸ್ತ್ಯನು ರಾಮಚಂದ್ರಗೆ ಬೆಸಸಿದುತ್ತರ ರಾಮಕಥೆಯನು ಸಾಂಗವಾಗಿರಲು (ಅಶ್ವತ್ಥ. ೨ ಸೂಚನೆ); ಭೂಜಾತೆ ಪ್ರಾಚೇತಸನೊಲ್ಮೆಗಾಪಿಂ ಪುಣ್ಯಾಶ್ರಮದೊಳಿರ್ದನಂ (ರಾಮಾಶ್ವ. ೪೯-೦೦). ೨. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು; "ಶತಭಿಶೆ" (ಜಾತಕ. ಕಂ. ೩). [ಸಂ.]

ಪ್ರಾಚ್ಯ (ಗು). ೧. ಎದುರಿಗಿರುವ ; ಸಮ್ಮುಖದ ; ಮುಂದಿನ. ೨. ಹಳೆಯದಾದ; ಪುರಾತನವಾದ. ೩. ಮೂಡಲ ದಿಕ್ಕಿನ; ಪೂರ್ವ ದಲ್ಲಿರುವ : ಪ್ರಾಚೀನಕಾಲದಲ್ಲಿ ಚೈನ, ಭಾರತ ಮುಂತಾದ ಪ್ರಾಚ್ಯದೇಶ ಗಳಲ್ಲಿ ಈ ಬೆಳವಣಿಗೆ ಮೊದಲು ಆರಂಭವಾಯಿತು (ಶಿಲ್ಪದ. ೩೫). (ನಾ). ೪. ಪೂರ್ವದಿಕ್ಕಿನಲ್ಲಿರುವ ದೇಶ : 'ದೂರಪ್ರಾಚ್ಯ' ಪರಾ. [ಸಂ.]

ಪ್ರಾಚ್ಯತೆ (ನಾ). = ಪ್ರಾಚೀನತೆ : ಈ ಕಲೆಯು ಸುಮಾರು ಇನ್ನೂರು ವರ್ಷಗಳ ಪ್ರಾಚ್ಯತೆಯುಳ್ಳುದಿರಬಹುದು ಎಂಬ ಊಹೆಯಿಂದ ತೃಪ್ತ ನಾಗಿದ್ದೆ (ಯಕ್ಷಗಾ. ೦೧). [ಸಂ. ಪ್ರಾಚ್ಯತಾ]

ಪ್ರಾಚ್ಯವೃತ್ತಿ (ನಾ). [ಛಂದ] ಮಾತ್ರಾಛಂದಸ್ಸಿನಲ್ಲಿರುವ ಒಂದು ವೃತ್ತ; ವೈತಾಲೀಯದಲ್ಲಿ ಒಂದು ಭೇದ: ಔಪಚ್ಛಂದಸಿಕಂ ಮೊದಲಾಗೆ ವೈತಾಳಿಯುಂ ಉದೀಚ್ಯವೃತ್ತಿಯುಂ ಪ್ರಾಚ್ಯವೃತ್ತಿಯುಮಪರಾಂತಿಕೆಯುಂ ಮೆಂದು ಮಾತ್ರಾಗಣಂಗಳಿಂ ವೈತಾಳಿಗಳ್ ಬೇಱೆವೇಱೆ ಪೆಸರ್ವಡೆಗುಂ (ಛಂದೋಂಬು. ೩-೨೨೦ ವ). [ಸಂ.]

ಪ್ರಾಚ್ಯಶೈಲ (ನಾ). ಮೂಡಲ ಗಿರಿ; ಪೂರ್ವಾಚಲ: ಮನುವಂಶಪ್ರಾಚ್ಯ ಶೈಲದ್ಯುಮಣಿ ಜನಿಯಿಸಿದಂ ಚಕ್ರವರ್ತಿಪ್ರಧಾನಂ (ಆದಿಪು. ೬-೩೪). [ಸಂ.]

**ಪ್ರಾಚ್ಯಶೋಧನೆ** (ನಾ). = ಪ್ರಾಕ್ತನಶೋಧನೆ : ಪ್ರಾಚ್ಯಶೋಧನೆಯನ್ನು ವೈಜ್ಞಾನಿಕವಾಗಿ ನಡೆಸಬೇಕಾದರೆ ಬಹಳ ಹಣವು ಬೇಕಾಗುತ್ತದೆ (ಕೂಃ). [ಸಂ. ಪ್ರಾಚ್ಯಶೋಧನ]

**ಪ್ರಾಜನ** (ನಾ). ಚಾವಟಿ ; ಚಾಟಿಕೋಲು ; ಬಾರುಕೋಲು : "ಪ್ರತೋದಃ, ಪ್ರಾಜನಂ, ತೋತ್ರಂ – ಈ ೩ ಮುಳುಹುಗೋಲ್" (ಹಲಾಯು. ೯೪–೪೨೩); "ತೋತ್ರಮುಱು ಕೋಲಕ್ಕು ಪ್ರಾಜನಂ ಮುಳುಹು" (ಪಂಗಿರಾ. ೦೦೯–೨). [ಸಂ.]

**ಪ್ರಾಜಾಪತ್ಯ** (ಗು). ೧. ಪ್ರಜಾಪತಿಗೆ ಸೇರಿದ, – ಬ್ರಹ್ಮನಿಗೆ ಸಂಬಂಧಿಸಿದ. (ನಾ). ೨. ಬ್ರಾಹ್ಮ, ಪ್ರಾಜಾಪತ್ಯ, ಆರ್ಷ, ದೈವ, ಗಾಂಧರ್ವ, ಆಸುರ, ರಾಕ್ಷಸ ಮತ್ತು ಪೈಶಾಚಗಳೆಂಬ ಎಂಟು ವಿಧವಾದ ಮದುವೆಗಳಲ್ಲಿ ಒಂದು; ವರನಿಂದ ತೆರ, ಕಾಣಿಕೆ ಮುಂತಾದುವನ್ನು ತೆಗೆದುಕೊಳ್ಳದೆ, ಇಬ್ಬರೂ ಧರ್ಮಕಾರ್ಯಗಳನ್ನು ಆಚರಿಸುತ್ತ ಸಂತೋಷವಾಗಿ ಬಾಳುತ್ತಿರಬೇಕೆಂದು ಹಾರೈಸಿ ಕನ್ಯಾಪ್ರದಾನ ಮಾಡುವುದು. ೩. ಗಂಗಾ ಮತ್ತು ಯಮುನಾ ನದಿಗಳು ಸಂಗಮಗೊಳ್ಳುವ ಸ್ಥಳ; ಪ್ರಯಾಗ. ೪. ವಿಷ್ಣು. ೫. ಒಂದು ಬಗೆಯ ತಪಸ್ಸು. ೬. ಪಿತೃಗಳ ಲೋಕ; ಪಿತೃಲೋಕ. ೭. ಸಂನ್ಯಾಸಾಶ್ರಮವನ್ನು ಸ್ವೀಕರಿಸುವ ಮೊದಲು ತನ್ನ ಸ್ವತ್ತೆಲ್ಲವನ್ನೂ ಇತರರಿಗೆ ದಾನ ಮಾಡುವಿಕೆ. ೮. ರೋಹಿಣೀನಕ್ಷತ್ರ. ೯. (ರಾಜನ) ಅಧಿಕಾರ; ಆಳ್ವಿಕೆ : ಪಶ್ಚಿಮದೇಶಗಳ ಪ್ರಾಜಾಪತ್ಯ ಇಂಥಲ್ಲಿ ಕ್ರಮೇಣ ಶಿಥಿಲವಾಗುತ್ತಿದೆ (ಚಿಕಸಂ. ೧೯). ೧೦. ಶಿಲ್ಪಶಾಸ್ತ್ರದ ಹಸ್ತಪ್ರಮಾಣಗಳಲ್ಲಿ ಒಂದು : ಈ ಪ್ರಕಾರದಿಂದಂಗುಲಿಗಳ ಭೇದವನಱುವುದಿನ್ನು ಹಸ್ತಭೇದವೆಂತೆನೆ ಪೂರ್ವೋಕ್ತಮಾನಾಂಗುಲವಿಪ್ಪತ್ತು ನಾಲ್ಕಾಗಲೊಂದು ಕಿಷ್ಕುಹಸ್ತವೆನಿಸುವುದು ಅದು ಇಪ್ಪತ್ತೈದಾದೊಡೆ ಪ್ರಾಜಾಪತ್ಯಹಸ್ತವೆನಿಸುಗು (ಶಿವೇಳ. ೨೪೦). [ಸಂ.]

**ಪ್ರಾಜಾಪತ್ಯಕೃಚ್ಛ್ರ** (ಗು). ಹೆಚ್ಚಾದ ಕಾಯಕ್ಲೇಶದಿಂದ ನಿರ್ವಹಿಸಬೇಕಾದ ಒಂದು ಬಗೆಯ ತಪಸ್ಸು : ದೋಷಪರಿಹಾರಾರ್ಥವಾಗಿ ಶರೀರಬಾಧಾತ್ಮಕತ್ವದಿಂ ಮಹಾಕಷ್ಟಂಗಳಾದ ತಪ್ತಕೃಚ್ಛ್ರ ಪ್ರಾಜಾಪತ್ಯಕೃಚ್ಛ್ರ . . . ಯಾವಕಕೃಚ್ಛ್ರಾದಿ ಕೃಚ್ಛ್ರಂಗಳಿಂ ಪಕ್ಷ ಮಾಸಾದಿಗಳಲ್ಲಿ ಅನ್ನಮಂ ಪೆಚ್ಚಿಸಿ ತಗ್ಗಿಸಿಕೊಂಬುದು (ಶಿವೇಳ. ೦೨೨). [ಸಂ.]

**ಪ್ರಾಜ್ಞ** (ನಾ). ೧. ಜಾಣ ; ಬುದ್ಧಿವಂತ; ಪಂಡಿತ : "ಧೀರಃ . . . ಪ್ರಾಜ್ಞಃ . . . ಮತಿಮಾನ್ – ಈ ೨೮ ವಿದ್ವಾಂಸರ್" (ಹಲಾಯು. ೩೫–೦೬೬); ದಿವಿಜೇಜ್ಯಂ ನಿಲೆ ಜನ್ಮಲಗ್ನಗೃಹದೊಳ್ ಪ್ರಾಜ್ಞಂ (ಜಾತಿ. ೦೬–೦೦); ಲೋಭವೀ ವೆಗ್ಗಳದ ನಿರ್ಬಂಧನವು ಪ್ರಾಜ್ಞರಿಗುಚಿತವಲ್ಲೆಂದ (ಶಾವ್ಯಾಉ. ೯–೯); ರಾಮನೇನೊಂದುಮಂ ನುಡಿಯಲಾರದೆ ನೋಡುತಿರ್ದನ್ ಮನೋಜ್ಞನಂ, ವಾನರಮಹಾಪ್ರಾಜ್ಞನಂ! (ಶ್ರೀರಾಮಾ. ೨೪೯–೦೨೬). ೨. ಪರಮಾತ್ಮ. ೩. [ತತ್ತ್ವಶಾ] ಆತ್ಮನ ಒಂದು ಅವಸ್ಥೆ; ಕಾರಣಶರೀರದಲ್ಲಿದ್ದು ಸುಷುಪ್ತ್ಯವಸ್ಥೆಯನ್ನು ಅನುಭವಿಸುವ ಜೀವ : ಕಾರಣಶರೀರದಲ್ಲಿರುವ ಜೀವನಿಗೆ ಪ್ರಾಜ್ಞನೆಂದೂ, ಪರಮಾತ್ಮನೆಂದೂ... ಹೇಳುವರು (ಶಿವಾಸೂ. ೯೪); ಈ ವಿಧದವಸ್ಥೆಯಲಿ ಹೊಳೆಯುವ ಜೀವನೆನಿಸುತ ವಿಶ್ವ, ತೈಜಸನೊಲಿ ಪ್ರಾಜ್ಞನೆನಿಪ್ಪ ಪೆಸರನು ತಳೆದು ತೋಱುವನು (ಅಕ್ಕುಕ. ೯–೦೨) ; ಒಬ್ಬನೇ ಪರಮಾತ್ಮನು ವಿಶ್ವ, ತೈಜಸ, ಪ್ರಾಜ್ಞ ಎಂಬ ರೂಪಗಳಿಂದ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳನ್ನು ಜೀವರಿಗೆ ಕೊಡಿಸುವನೆಂದು ತಾತ್ಪರ್ಯ (ಹರಿಕ. ೯–೦೯ ಟೀಕು). [ಸಂ.]

**ಪ್ರಾಜ್ಞಕ** (ನಾ). = ಪ್ರಾಜ್ಞ ೩ : ನಿತ್ಯಂ ಸಕಲಾತ್ಮಂ ಸೂತ್ರವೈಶ್ವಾನರರಧಿಗತವಿಶ್ವಾತ್ಮನುಂ ತೈಜಸಂ ಪ್ರಾಜ್ಞಕನಾದಂ (ಶಬಶಂ. ೩–೩೩). [ಸಂ.]

**ಪ್ರಾಜ್ಞಮತಿ** (ನಾ). ಬುದ್ಧಿವಂತ ; ಪಂಡಿತ : ಪ್ರಾಜ್ಞಮತಿ ಭರತನುರಿಯಿಕ್ಕಿದನ್ (ಶ್ರೀರಾಮಾಶ್ವ ೦೨೦–೨೨೬). [ಸಂ.]

**ಪ್ರಾಜ್ಞೆ** (ನಾ). ೧. ತಿಳಿದವಳು; ಪಂಡಿತೆ : "ಪ್ರಾಜ್ಞೆ, ಪ್ರಜ್ಞಾ – ೨ ಲೌಕಿಕವ್ಯವಹಾರದಲ್ಲಿ ಜಾಣೆಯಾದವಳು" (ಸಿದ್ಧಾಂತಿ. ೦೬೦). ೨. ಪಂಡಿತನ ಪತ್ನಿ. [ಸಂ. ಪ್ರಾಜ್ಞೀ]

**ಪ್ರಾಜ್ಞೆ** (ನಾ). ೧. ಅರಿವು ; ಬುದ್ಧಿ ; ತಿಳಿವಳಿಕೆ : ಆಗಲೇನಾಯ್ತಾಗ ಕಾಂಬೆವು ಯೋಗಪುರುಷನ ನೆಲೆಯನೆಂದೆನುತಾಗಲೇ ಹೊತ್ತಿಕ್ಕಿ ಪ್ರಜ್ವಲಿಸಿದುದು ಪ್ರಾಜ್ಞೆಯಲಿ (ಶಿಕಾಗ. ೪–೭–೩೬). ೨. = ಪ್ರಾಜ್ಞೆ ೧ : "ಪ್ರಾಜ್ಞಾ, ಧೀಮತೀ – ೨ ಬಹಳ ಬುದ್ಧಿಯುಳ್ಳವಳು" (ಸಿದ್ಧಾಂತಿ. ೦೬೦). [ಸಂ. ಪ್ರಾಜ್ಞಾ]

**ಪ್ರಾಜ್ಯ** (ಗು). ೧. ಬಹಳವಾದ; ಅತಿಶಯವಾದ. ೨. ಉತ್ತಮವಾದ; ಶ್ರೇಷ್ಠವಾದ : ಹಿತಪುರೋಹಿತ ಪ್ರಾಜ್ಯಾಜ್ಯಾಹುತಿಹುತಹುತವಹ ಸಮುಕ್ಷರೊಳ್ (ಶಂಕಶಾ. ೩–೭೯ ಪ) ; ಪರಪೀಡಾಮುಖದುಷ್ಟದುರ್ಜನನೀಕಾಯಾತಂಕದಿಂ... ಮೇಣಜೀರ್ಣಭಯದಿಂ ಪ್ರಾಜ್ಯಾಜ್ಯಮೇಂ ತ್ಯಾಜ್ಯಮೇ (ಶಂಧ್ರಪು. ೦–೯೩). (ನಾ). ೩. ಬಹಳವಾದುದು ; ಹೆಚ್ಚಾದುದು : "ಪ್ರಾಜ್ಯಂ . . . ಅದಭ್ರಂ – ಈ ೧೮ ಮೊಕ್ಕಳಂ" (ಹಲಾಯು. ೦೦೬–೦೬). ೪. ಉತ್ತಮವಾದುದು ; ಶ್ರೇಷ್ಠವಾದುದು : ನಿನಗಿಂ ತ್ಯಾಜ್ಯಂ ಪರಿಗ್ರಹಂ ದಲ್ ಪ್ರಾಜ್ಯಂ ತಪಮದುವೆ ಪಾಲ್ಯಮಾ ಕೈವಲ್ಯಂ (ಅಜಿತ. ೬–೭೭) ; ಪೂಜ್ಯರುಮೇಕೆ ಪೇಟ್ಟಸುಗೆದಪ್ಪುವರಾ ಪುರುಷಾರ್ಥಸಂಗ್ರಹಪ್ರಾಜ್ಯ [ಪಾಠಾಂ. ಪ್ರಾಜ, ಪೂಜ್ಯ] ಮಿದೆನ್ನದಾಂ ಪಿರಿದುಮೊಲ್ಲದೊಡಂಬಡೆ (ಅರ್ಥಸಾ. ೨–೫೨). [ಸಂ.]

**ಪ್ರಾಡ್ವಿವಾಕ** (ನಾ). (ನ್ಯಾಯಾಲಯದ) ವ್ಯವಹಾರಗಳನ್ನು ತೀರ್ಮಾನಿಸುವ ಅಧಿಕಾರಿ ; ನ್ಯಾಯಾಧಿಪತಿ : "ಪ್ರಾಡ್ವಿವಾಕಃ... ನ್ಯಾಯಾಧ್ಯಕ್ಷಃ – ಈ ೪ ನ್ಯಾಯಾಧ್ಯಕ್ಷಂ" (ಹಲಾಯು. ೬೦–೨೬೩) ; ವಿಳಸತ್ಸುಂದರನೆಯ್ದೆ ಮಾತುಳತೆಯಿಂದಿಂದಂದು ದಾಯಾದ್ಯರುಂ ಬಳಿಸಂದಾಡಿಸುತೆಂದಿನಂತೆ ದಯೆಯಿಂ ಕಾಪಾಡುತುಂ ಬಾಲನುಂ ಮಿಳಿತಜ್ಞಾತಿಗಳೀ ತೆಱಂ ಜಗದೊಳೆಂದಾ ಪ್ರಾಡ್ವಿವಾಕ [ಪಾಠಾಂ. ಪೌಢಿವಾಕ್ಯ]ರ್ಗೆ ತಾಂ ಜ್ವಳನಾಕ್ಷಂ ನುಡಿಯಲ್ (ಹಾಲಾಕ್ಷ. ೩–೭–೩೯); ಒಡನೆಯೆ ಈ ಊರಿನ ಪ್ರಾಡ್ವಿವಾಕನ ಹತ್ತಿರ ಶರ್ಮನ ಮೇಲೆ ಅಭಿಯೋಗವನ್ನು ತಂದು ನಮ್ಮ ಹುಡುಗಿಯನ್ನು ನಾವು ಸ್ವಾಧೀನ ಮಾಡಿಕೊಳ್ಳಬೇಕು (ಲಕ್ಷ್ಮೀಶೃ. ೨೬೬). [ಸಂ.]

**ಪ್ರಾಣ** (ನಾ). ೧. ಉಸಿರಾಟ. ೨. ಗಾಳಿ; ಉಸಿರು ; ವಾಯು : 'ಪ್ರಾಣ' ಎಂದರೆ 'ಉಸಿರು' ಎಂದು ಅರ್ಥ (ಪುಥ್ಯವು. ೦೪). ೩. ಪ್ರತಿಯೊಂದು ಜೀವಿಯಲ್ಲೂ ಇರುವ ಚೈತನ್ಯವಸ್ತು ; ಜೀವ : "ಅಸವಃ, ಜೀವಿತಂ, ಪ್ರಾಣಾಃ, ಜೀವಃ, ಜೀವಾ – ಈ ೫ ಪ್ರಾಣದ ಪೆಸರ್" (ಹಲಾಯು. ೨೨–೦೩೪) ; ಎನ್ನೊಡಲ್ಗೆ ನೀಂ ಪ್ರಾಣಮಮೋಘಮಪ್ಪುದಱಿನೊಪನೆ ನಿನ್ನನಗಲ್ವಗಲ್ಕೆಯುಂ ಪ್ರಾಣದಗಲ್ಕೆಯುಂ ಸಮನದಕ್ಕೆ ವಿಯೋಗಮನೆಂತು ಸೈರಿಪೆಂ (ಆದಿಪು. ೦೨–೩೩); ಪ್ರಾಣದಿನಧಿಕಮೆನಗೆ ನೀಂ ಪ್ರಾಣಮಣಂ ತೃಣಮೆ ಗೆತ್ತು ನವೆಯುತ್ತಾ ನೀ ಕ್ಷೋಣಿಗೆ ನಿನ್ನ ವಿಯೋಗಮನೇಕ್ಷಣಿಕೆ ಎನಿತು ಸೈರಿಸದ ಕಾರಣದಿಂ (ಶಾರ್ಕ್ನಪು. ೩–೨೪). ೪. ಅನ್ನ; ಆಹಾರ : "ಬಾಹ್ಯಾ – ಪ್ರಾಣ, ಅನ್ನ" (ಓಕಂ. ೦೦೬). ೫. ಬಲ ; ಶಕ್ತಿ : "ಪ್ರಾಣಃ, ಸ್ಥಾಮ, ಬಲಂ . . . ಸಹಃ – ಈ ೮ ಬಲ್ಪು (ಬಲುಹು)" (ಹಲಾಯು. ೦೨೦–೬೬). ೬. ಶರೀರದೊಳಗಿರುವ ಪ್ರಾಣ, ಅಪಾನ, ಸಮಾನ, ಉದಾನ ಮತ್ತು ವ್ಯಾನಗಳೆಂಬ ಐದು ಬಗೆಯ ವಾಯುಗಳಲ್ಲಿ ಒಂದು : ಪ್ರಾಣಾದಿ ವಾಯುಗಳು – ಪ್ರಾಣ, ಅಪಾನ, ಸಮಾನ,

ಉದಾನ, ವ್ಯಾನ (ಅಪ್ಯು.ಕ. ೩-೩೨ ೬೪೩); ಸಮುದಾಯದಿಂದ ಪ್ರಾಣಾಪಾನ ವ್ಯಾನೋದಾನ ಸಮಾನಗಳೆಂಬ ಪಂಚಪ್ರಾಣಗಳು ಹುಟ್ಟುವುವು (ಹಿಂದಶಾ. ೦೯೬). ೭. ಪರಮಾತ್ಮ; ಈಶ್ವರ: ಪ್ರಾಣನೂ ಪರಮನೂ ಕಾಣದಲೆ ಒಳಗಿರಲು ಮಾಣದೆ ಸಿಲೆಯ ಹಿಡಿದದಕೆ ಮೂರ್ಖ ತಾ ಪ್ರಾಣಾತ್ಮನೆಂಬ (ಸರ್ವಜ್ಞ. ೨೦೬); ಪ್ರ+ಅ+ಣ=ಪ್ರಾಣ, ಎಂದು ಪರಮಾತ್ಮನಿಗೆ ಹೆಸರು (ಹಹಾರ. ೬-೨೯ ತಾತ್ಪರ್ಯ). ೮. ಒಂದು ಬಗೆಯ ಸಸ್ಯ; ಬಾಣಂತಿಬೋಳ: "ಬೋಲಃ, ಗಂಧರಸಃ, ಪ್ರಾಣಃ . . . ರಸಃ— ೬ ಬೋಳದ ಹೆಸರುಗಳು, ಬಾಣಂತೀಬಾಳ್" (ಸಿದ್ಧಾಂತಿ. ೩೦೬). ೯. ಪ್ರೀತಿಪಾತ್ರ ವ್ಯಕ್ತಿ ಅಥವಾ ವಸ್ತು: ಹೊಳ್ಳರೇ ಹೇಳುತ್ತಿದ್ದರು ಹೆಂಡತಿಗೆ ನಾನೆಂದರೆ ಪ್ರಾಣ ಎಂದು (ಶಕ್ಯ.ಕ. ೦೨೮); ಅವನಿಗೆ ಚಕ್ಕುಲಿಯೆಂದರೆ ಪ್ರಾಣ (ರೂಢಿ).

**ಪ್ರಾಣ ಕಳೆದುಕೊಳ್ಳು**=ಜೀವ ತೆಗೆದುಕೊಳ್ಳು: ಹೆಂಗಸು, ಪಾಪ! ಕಾಲು ಜಾರಿ ಬಿದ್ದು ಸತ್ತಿರಬೇಕು. ಆಕೆಯ ತಮ್ಮಂದಿರಾದ ಈ ರಾಜರು ಆ ದುಃಖದಿಂದ ತಾವೂ ದುಮುಕಿ ಪ್ರಾಣ ಕಳೆದುಕೊಂಡರು (ಕಾಂತಲಾ. ೩೦೦); ನಾನೆಲ್ಲಿ ಪ್ರಾಣ ಕಳೆದುಕೊಂಡು ಬಿಟ್ಟೆನೋ ಎಂದು ಅಜ್ಜಿ ಎಷ್ಟು ಗೋಳಿಡುತ್ತಾಳೋ ? (ಮರಳು. ೭೦೦). **ಪ್ರಾಣಕ್ಕೆ ಬರು**=(ಆಲಂ)ವಿಪರೀತ ಕಷ್ಟವಾಗು: ಈ ಬಿಸಿಲಲ್ಲಿ ಎರಡು ಮೈಲು ನಡೆದರೆ ನಮಗೇ ಪ್ರಾಣಕ್ಕೆ ಬರುತ್ತದೆ (ಶಸುತ. ೦೭೬). **ಪ್ರಾಣಪ್ರಯತ್ನಮಾಡು**=(ಆಲಂ) ಬಹಳ ಕಷ್ಟಪಡು: ದಂಡಿಗೆ ಬೇಕಾದ ಸಾಮಾನು ಸರಂಜಾಮು ಪ್ರಾಣಪ್ರಯತ್ನ ಮಾಡಿ ತರಿಸಿಕೊಟ್ಟು (ರಾಜೇಂದ್ರ. ೪೯). **ಪ್ರಾಣ ಹಿಂಡು** = (ಆಲಂ) ಅತಿಶಯವಾಗಿ ಕಾಡು; ಬಹಳ ತೊಂದರೆ ಕೊಡು: ಹೆಂಡತಿ ಪ್ರಾಣ ಹಿಂಡುತಿ (ಪುರಂದ. ೩-೨೦೦-೪). **ಪ್ರಾಣ ಹಿಡಿ**=(ಆಲಂ) ಜೀವಧಾರಣೆ ಮಾಡು; ಬದುಕಿರು: ಅರೆಹೊಟ್ಟೆ ತುಂಬಿಸಿಕೊಂಡಾದರೂ ಪ್ರಾಣ ಹಿಡಿದರು (ಶುಣ್ಣಸು. ೬). **ಪ್ರಾಣ ಹೋಗು**=ಜೀವ ಹೋಗು: ಪ್ರಾಣ ಹೋಗಲು ಮುಟ್ಟಲಂಜ್ವಳು ಜಾಣೆ ಕರೆದರು ಬಾರಳು (ಪುರಂದ. ೩-೨೦೦-೪); ಪ್ರಾಣ ಹೋಗುವ ಆಸನ್ನವಾದ ಕಾಲದಲ್ಲಿ . . . ಕಪಾಲಕುಂಡಲೆಯ ಕಂಠದಿಂದ ಅಂತಹ ಸ್ವರವು ಹುಟ್ಟುವುದೆಂದಾರು ಬಲ್ಲವರಾಗಿದ್ದರು (ಕಪಾಕುಂ. ೦೩೦). [ಸಂ.]

**ಪ್ರಾಣಂಬಡೆ** (ಕ್ರಿ). ಜೀವವನ್ನು ಪಡೆ: ವೀರಭಕ್ತಿಯೊಳಟ್ಟೆಯಲಿ ತಲೆ ಸೇರಿಸಲು ಪ್ರಾಣಂಬಡೆ [ಪಾಠಾಂ. ಪಡೆ]ದನು (ಬಸವು. ೪೯-೦೨).

[ಪ್ರಾಣ + ಪಡೆ₁]

**ಪ್ರಾಣಂಬೊಯ್** (ಕ್ರಿ). ಜೀವ ತುಂಬು; ಜೀವಂತವಾಗಿಸು: ಪ್ರಾಣಂಬೊಯ್ದನೊ ಚಿತ್ರಿಸುತ್ತುಮವಳಂ ಸೌಂದರ್ಯಸಾರಂಗಳಿಂ (ಕಾಕುಂತ. ೨೩-೪೪). 'ಜೀವಂಬೊಯ್' ಪರಾ. [ಪ್ರಾಣ+ಪೊಯ್₁]

**ಪ್ರಾಣಕಂಟಕ** (ನಾ). ೧. ಜೀವಕ್ಕೆ ಉಂಟಾಗುವ ಅಪಾಯ; ಪ್ರಾಣಕ್ಕೆ ಆಗುವ ಆಘಾತ: ಪ್ರಾಣಕಂಟಕವಾಗುವ ಭಯಂಕರ ಹಾಯಿಲೆ ಅದು (ರೂಢಿ). ೨. ಜೀವಕ್ಕೆ ಅಪಾಯವನ್ನುಂಟುಮಾಡುವವನು; ಪ್ರಾಣ ತೆಗೆಯುವವನು; ಕೊಲೆಗಡುಕ: ಆ ಪ್ರಾಣಕಂಟಕನಿಂದ ಕೊನೆಗೂ ಅವರಿಗೆ ಬಿಡುಗಡೆ ಸಿಗಲಿಲ್ಲ (ರೂಢಿ).

[ಸಂ.]

**ಪ್ರಾಣಕಾಂತ** (ನಾ). ಜೀವಕ್ಕೆ ಸಮನಾದವನು; ಪ್ರಿಯವ್ಯಕ್ತಿ; ಪತಿ: ಕಾಣದಿರಲಾಜೆ ಪ್ರಾಣಕಾಂತನ ವೇಣುನಾದನ ತೋರಿಸೆ (ಪುರಂದ. ೩-೦೩೬ ಪಲ್ಲವಿ); ಪ್ರಾಣಕಾಂತಾ ಲಾಲಿಸಿನ್ನಾ ಕ್ಷೋಣಿಪನೀ ಪರಿಯೊಳ್ ನಿನ್ನಾ ತಾನೇ ಸಲಹಿರಲ್ಕೆ ಪಿತಸಮಾನನವನ ಕಾವುದೈಸೆ (ರತ್ನಾಕ. ೦೪).

[ಸಂ.]

**ಪ್ರಾಣಕಾಂತೆ** (ನಾ). ಜೀವಕ್ಕೆ ಸಮನಾದವಳು; ಪ್ರಿಯೆ; ಪತ್ನಿ: ನನ್ನ ಪ್ರಾಣಕಾಂತೆಯಿಂದ ಉಪಭೋಗಿಸಲ್ಪಟ್ಟ ಈ ಲತಾಮಂಟಪದಲ್ಲಿಯೇ ಒಂದು ಮುಹೂರ್ತನಿಲ್ಲುವೆನು (ಶಾಕುಂತ. ೪೩-೦೦). [ಸಂ. ಪ್ರಾಣಕಾಂತಾ]

**ಪ್ರಾಣಕೊಡು** (ಕ್ರಿ). ೧. (ಇನ್ನೊಬ್ಬರ ಪ್ರಯೋಜನಕ್ಕಾಗಿ) ಜೀವ ಕೊಡು; ಬಲಿಯಾಗು: ನೀನು ನನಗಾಗಿ ಪ್ರಾಣಕೊಡಲು ನಿಜವಾಗಿಯೂ ಸಿದ್ಧಳಿದ್ದೀಯಾ ? (ಶಶಿಉ. ೬೬). ೨. (ಆಲಂ) ಯಾವುದಾದರೂ ಕಾರಣಕ್ಕಾಗಿ ಸರ್ವಸ್ವವನ್ನೂ ತ್ಯಜಿಸು: ಪ್ರಾಣ ಕೊಟ್ಟಾದರೂ ಹಿಡಿದಿರುವ ಕೆಲಸವನ್ನು ಪೂರೈಸುತ್ತೇನೆ (ರೂಢಿ).

[ಪ್ರಾಣ + ಕೊಡು₁]

**ಪ್ರಾಣಗುಣ** (ನಾ). ಜೀವದ ಸ್ವಭಾವ; ಪ್ರಾಣದ ಗುಣ: ಅಂತರಂಗದಲ್ಲಿ ಸುಳಿದಾಡುವ ತನುಗುಣಾದಿಗಳ ಮನಗುಣಾದಿಗಳ ಪ್ರಾಣಗುಣಾದಿಗಳ ಕಳೆದಲ್ಲಿ ಶರಣರಹರೆ (ಅವಚಂ. ೯೦-೪೦೪). 'ತನುಗುಣ' ಪರಾ. [ಸಂ.]

**ಪ್ರಾಣಗೇಡಿ** (ನಾ). ಜೀವವನ್ನು ತೆಗೆಯುವವನು; ಪ್ರಾಣಘಾತಕ: ಪ್ರಾಣಗೇಡಿಯ ಮಾಡಿದರು ಪಾಲಕನನೀ ಧರೆಗೆ (ಐಭಾಗ. ೪-೦೧-೦೪).

[ಪ್ರಾಣ + ಕೇಡಿ₁]

**ಪ್ರಾಣಘಾತಕ** (ಗು). ೧. ಜೀವಕ್ಕೆ ಹಾನಿಯನ್ನುಂಟುಮಾಡುವ: ಇವರು ಪ್ರಾಣಘಾತಕ ಗಾಯ ಹೊಂದಿ ಸರಕಾರೀ ರುಗ್ಣಾಲಯದಲ್ಲಿ ವಾಸವಾಗಿರುವರು (ಸ್ಕೂಲಬು. ೦೪೨). (ನಾ). ೨. ಜೀವವನ್ನು ತೆಗೆಯುವುದು; ಕೊಲೆ; ಪ್ರಾಣವಧೆ: ಇರುಳು ಹಗಲೆನ್ನದೆ ಪ್ರಾಣಘಾತಕವ ಮಾಡಿದ ಬೇಡನ ಕೈಲಾಸಕೊಯ್ದೆಯಯ್ಯಾ (ಬಸವ. ೬೩). ೩. ಜೀವವನ್ನು ತೆಗೆಯುವವನು; ಕೊಲೆಗಡುಕ: ಇವನಂತಹ ಪ್ರಾಣಘಾತಕರು ಅವರ ವಂಶದಲ್ಲಿ ಯಾರೂ ಇರಲಿಲ್ಲ (ರೂಢಿ). [ಸಂ.]

**ಪ್ರಾಣತ** (ನಾ). [ಜೈನ] ಹದಿನಾರು ಸ್ವರ್ಗಗಳಲ್ಲಿ ಒಂದು; ► ಊರ್ಧ್ವಲೋಕದಲ್ಲಿರುವ ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣತ, ಆರಣ ಮತ್ತು ಅಚ್ಯುತಗಳೆಂಬವು ಹದಿನಾರು ಸ್ವರ್ಗಗಳು. ಇವುಗಳಿಗೆ ಕಲ್ಪಗಳೆಂದೂ ಹೆಸರಿದೆ. ಈ ಎಲ್ಲದರ ಗುಂಪಿಗೂ ಕಲ್ಪವೆಂಬ ಹೆಸರಿದೆ: ಅತಿಬಲಕೃಷ್ಣಂ ಗತಜೀವಿತನಾಗೆ ಮಹಾಬಲಂ ಮಹಾವ್ರತದಿಂದನ್ನಿತವಂತಿ ಸಮಾಧಿಗುಪ್ತವ್ರತಿಯುಪದೇಶದೊಳೆ ಪುಟ್ಟಿದಂ ಪ್ರಾಣತದೊಳ್ (ಆದಿಪು. ೩-೭೭); ಆನತ ಪ್ರಾಣತ ಆರಣಾಚ್ಯುತ ಕಲ್ಪಸಂಭವದೇವರ್ (ಚತ್ರ್ಯಕ್ರ. ೦೬೨). [ಸಂ.]

**ಪ್ರಾಣತಕಲ್ಪ** (ನಾ). = ಪ್ರಾಣತ: ಆರಾಧನಾವಿಧಿಯಿಂ ಪ್ರಾಣತ ಕಲ್ಪದೊಳ್ ಪ್ರಾಣತವಿಮಾನದೊಳ್ ಪ್ರಾಣತೇಂದ್ರನಾಗಿ . . . ಸುಖವಿರ್ಪನಂ (ಶಾಪುಂತ್ರ. ೨೭೭); ಪ್ರಾಣತಕಲ್ಪದೊಳತುಳಪ್ರಾಣತಸುರರಾಜನಾಗಿ . . . ಸುಖವಿರ್ದಂ (ಪುಣ್ಯಪು. ೪-೦೦). [ಸಂ.]

**ಪ್ರಾಣತೆಗೆ** (ಕ್ರಿ). ಜೀವವಿಲ್ಲದಂತೆ ಮಾಡು; ಜೀವ ಕಳೆ; ಕೊಲ್ಲು: ಪ್ರಾಣ ತೆಗೆಯುತ್ತೇನೆ ಎಂದು ಬೆದರಿಕೆ ಹಾಕುವುದೆ ? (ಜೀವಹ. ೦೬೬).

**ಪ್ರಾಣ ತೆಗೆದುಕೊಳ್ಳು** = ಆತ್ಮಹತ್ಯೆ ಮಾಡಿಕೊಳ್ಳು; ಜೀವವಿಲ್ಲದಂತೆ ಮಾಡಿಕೊಳ್ಳು: ಧಾರೆಯ ದಿನವೇ ಹಳ್ಳಕ್ಕೆ ಹಾರಿ ಪ್ರಾಣ ತೆಗೆದುಕೊಂಡ ಸುದ್ದಿ ಕಿವಿಗೆ ಬಿದ್ದಿದ್ದೇ ತಡ . . . ಪ್ರಜ್ಞೆ ತಪ್ಪಿ ಕಣ್ಣು ಮುಚ್ಚಿದವರು ಮತ್ತೆ ಕಣ್ಣು ತೆರೆಯಲೇ ಇಲ್ಲವಂತೆ (ಮಲೆಮ. ೬೭೬).

[ಪ್ರಾಣ + ತೆಗೆ₁]

**ಪ್ರಾಣತ್ಯಾಗ** (ನಾ). ೧. ಜೀವವನ್ನು ಬಿಡುವುದು; ಪ್ರಾಣವನ್ನು ತ್ಯಜಿಸುವುದು; ಆತ್ಮಹತ್ಯೆ: ಯಾವುದಾದರೂ ಪುಣ್ಯಕ್ಷೇತ್ರದ ಕೆರೆ ಹಾರಿ ಪ್ರಾಣತ್ಯಾಗ ಮಾಡುವುದೇ ಒಳ್ಳೆಯದೆಂಬ ಯೋಚನೆಯೂ ಒಮ್ಮೆ ಮನಸ್ಸನ್ನು ಹದಗೆಡಿಸಿತು (ಶಪ್ಯಸ. ೦೩೦). ೨. ಸಾವು; ಮರಣ:

ಭೋಗಿವಿಷಂಬೋಲ್ಪ್ರಾಣತ್ಯಾಗವಮಾಗಿಸುಗುಮಮಳಕೃತಿವಧುಗಿನಿತಂ (ಶಬರಾ. ೧-೬೦). [ಸಂ.]

**ಪ್ರಾಣದಾನ** (ನಾ). ೧. ಜೀವವನ್ನು ಉಳಿಸುವುದು; ಪ್ರಾಣಾಪಾಯು ದಿಂದ ಕಾಪಾಡುವುದು : ಒಡೆಯನಟ್ಟಿದ ದಂಡು ಮೇಲ್ವರಿದಡೆ ತೆರಳ್ದೋಡುವುದು ವೀರವೆ ಕಡಗಿ ಬಂದು ಪ್ರಾಣದಾನವನೊಮ್ಮೆಯುಂ ಬೇಡಿ (ಬಸವ. ೯೬-೩೦); ಪ್ರಾಣದಾನದ ಹಿರಿಮೆ ತಾಂ ಪ್ರಾಣಮಯಕೆ (ಅಶೀ. ೩೬-೯). ೨. (ಅಲಂ) ಅಧಿಕಾರ ಅಥವಾ ಅವಕಾಶವನ್ನು ಉಳಿಸಿ ಕೊಡುವುದು : ಹಲವಾರು ಬಾರಿ ಅವನು ತಪ್ಪು ಮಾಡಿ ಸಿಕ್ಕಿಬಿದ್ದಿದ್ದರೂ ಅವನ ಹೆಂಡತಿ ಮಕ್ಕಳ ಮುಖ ನೋಡಿ ಸಾಹೇಬರು ಅವನಿಗೆ ಪ್ರಾಣದಾನ ನೀಡಿದ್ದಾರೆ (ರೂಢಿ). [ಸಂ.]

**ಪ್ರಾಣದೇವರು** (ನಾ). [ದ್ವೈತ] ಜೀವಕ್ಕೆ ಒಡೆಯನಾದವನು; ವಾಯುಪುತ್ರನಾದ ಮಾರುತಿ : ಹೀಗೆಯೆ ಪ್ರಾಣದೇವರಲ್ಲಿ ಪರ ಮಾತ್ಮನಿದ್ದರೂ ಮುಖ್ಯಪ್ರಾಣರೂಪಿಯಾಗಿಯೇ ತೋರುತ್ತಿರುವನು (ಹಸಾರ. ೯-೦೯ ಟಿಪ್ಪಣಿ). [ಪ್ರಾಣ + ದೇವರು]

**ಪ್ರಾಣಧರ್ಮ** (ನಾ). ಜೀವದ ರೀತಿ,–ನೀತಿ : ಅನಲಯೋಗ ದೊಳನ್ನವನು ಜೀರ್ಣಿಸುತ ಮೇಲಲ್ಲಿಂದ ತನುವಂ ದಿನದಿ ಬೆಳ್ಚಿಸಿ ಧರಿಸಿ ಹುದೆ ಕೇಳ್ ಪ್ರಾಣಧರ್ಮವದು (ಗಗಕಾ. ೯-೬೩). [ಸಂ.]

**ಪ್ರಾಣಧಾರಣೆ** (ನಾ). ಜೀವವನ್ನು ಹಿಡಿದಿರುವುದು; ಬದುಕಿರು ವುದಂ : ಪ್ರಾಣಧಾರಣೆಗೆ ಬೇಕಾದಷ್ಟು ವೆಚ್ಚ ಮಾಡಿ ಮಿಕ್ಕಿದುದನ್ನು ಸಹಾಯಹೀನರಾದ ಹೆಂಗಸರ ಸೇವಾರ್ಥವಾಗಿ ದಾನ ಮಾಡುವೆನು (ಕರ್ಣಾಕಂ. ೦೬೦). [ಸಂ. ಪ್ರಾಣಧಾರಣ]

**ಪ್ರಾಣನ** (ನಾ). ೧. ಕಂಠ; ಕುತ್ತಿಗೆ. ೨. ನೀರು; ಜಲ. ೩. ಬದುಕಿಸು ವುದು; ಜೀವವನ್ನು ಉಳಿಸುವುದು : ಜಾಯಾವಿಯೋಗದಿಂ ದುಃಖಿತ ನಾಗಿಯುಮನ್ನ ತಂದೆ ಪುತ್ರಸ್ನೇಹದಿಂದಳವಿಗಟಿದ ಹೃದಯಶೋಕಮನ ಡಂಗಿಸಿರ್ದು ಪ್ರಾಣನಪ್ರಯತ್ನತತ್ಪರನಾಗಿ (ಕಾದಂಪೂ. ೦೩೯). [ಸಂ.]

**ಪ್ರಾಣನಷ್ಟ** (ನಾ). ಜೀವ ಹೋಗುವುದು; ಸಾವು; ಮರಣ : ಬಸ್ಸು ಅಪಘಾತಕ್ಕೊಳಗಾದರೂ ಹೆಚ್ಚು ಪ್ರಾಣನಷ್ಟವಾಗಲಿಲ್ಲ (ರೂಢಿ). [ಸಂ.]

**ಪ್ರಾಣನಾಥ** (ನಾ). ೧. ಗಂಡ; ಪತಿ : ಮತ್ತೊಂದೆಡೆಯೊರ್ವಳ್ ಆತ್ಮೀಯಪ್ರಾಣನಾಥನಗಲ್ಕೆಯಂ ಸೈರಿಸಲಾಱದೆ (ಆದಿಪು. ೦೨-೩೯ ವ). ೨. ಯಮ. ೩. ಜೀವದ ಒಡೆಯ; ಶಿವ : ಎನ್ನ ಭಾವದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪೆಯಯ್ಯಾ ಕೂಡಲಸಂಗಮ ದೇವಾ ನೀನೆನ್ನ ಪ್ರಾಣನಾಥನಾಗಿ (ಬಸವ. ೮೦೨); ಕೇಳು ಕೇಳಯ್ಯಾ ಪ್ರಾಣ ನಾಥನೆ ಎನ್ನ ಪ್ರಾಣಪೂಜೆಯ ಬಗೆಯ ಬಣ್ಣಿಸುತಿರ್ಪೆನು (ಅಚಂಕೇ. ೨೯೦-೮೭). [ಸಂ.]

**ಪ್ರಾಣನಾಥೆ** (ನಾ). ಹೆಂಡತಿ; ಪತ್ನಿ : ಸಾಕೆವಿಡಿದಿರ್ದ ಕರಪತ್ರಮು ಕೊಡಿಸಿದಂ ಪ್ರಾಣನಾಥೆಯ ಕೈಯೊಳು (ಕೈಬಿಡಾ. ೨೬-೬೦). [ಪ್ರಾಣನಾಥ + –ಎ]

**ಪ್ರಾಣನಾಶಕ** (ಗು). ಸಾವನ್ನುಂಟುಮಾಡುವ; ಜೀವ ಕಳೆಯುವ : ಗಿಡಗಳಿಗೆ ಹಾಕಲು ತಂದಿರುವ ಆ ಪ್ರಾಣನಾಶಕದ್ರವ್ಯವನ್ನು ಮಕ್ಕಳ ಕೈಗೆ ಸಿಗುವಂತೆ ಇಡಬೇಡ (ರೂಢಿ). [ಸಂ.]

**ಪ್ರಾಣಪಂಚಕ** (ನಾ). ಶರೀರದೊಳಗಿರುವ ಪ್ರಾಣ, ಅಪಾನ, ಸಮಾನ, ಉದಾನ ಮತ್ತು ವ್ಯಾನಗಳೆಂಬ ಐದು ಬಗೆಯ ಪ್ರಾಣವಾಯು ಗಳು : ಸುಜ್ಞಾನಜಿ ಇದು ಪ್ರಾಣಪಂಚಕನಿರ್ಗಮ ಸಾಮಾನ್ಯ ವ್ಯಾನವು ಗರ್ಭಾಪೂ ದಾನವು ಅಪಾನವು ಪ್ರಾಣಗಳುಯೆಂದ (ಪ್ರಾ ಪಸಿಂ. ೩-೨೯). 'ಪಂಚಪ್ರಾಣ' ಪರಾ. [ಸಂ.]

**ಪ್ರಾಣಪಣ** (ನಾ). ಜೀವವನ್ನೇ ಒಡ್ಡುವುದಂ; ಪ್ರಾಣವನ್ನೇ ಪಣ ವಾಗಿಡುವುದು : ಪ್ರಾಣಪಣ[ಚಂಪೂ. ಪಥ, ಪದ]ವಿದು ನಿಖಿಳವಿದ್ಯದ ಜಾಣತನವಿದು ವಿನಯವೆಂದಿದು ಕೇಣವಿಲ್ಲದೆ ನೆರವಿ ನೆಟೆ ಹೊಗಳಿತು ಧನಂಜಯನ (ಕುಭಾ. ೫-೭-೯೬). [ಸಂ.]

**ಪ್ರಾಣಪತಿ** (ನಾ). = ಪ್ರಾಣನಾಥ ೧ : ಮಧುರೆಯಲಿ ಬಿಲ್ಲ ಹಬ್ಬ ವುಟ್ಟಿಸಿ ಕುಟಿಲದಲಿಯೆಮ್ಮ ಪ್ರಾಣಪತಿಯ ಕರೆಸಿದ ಸುದತಿಯರ ಮನದಳಲು ತಟ್ಟದಿಹುದೆ ನಮ್ಮ ಎದೆಗಿಚ್ಚು ಕಂಸನ ತಲೆಗೆ ಮೂಡಲಿಯೆನುತ (ಕೃರೂಹ. ೯-೦೦೦-೧೪). [ಸಂ.]

**ಪ್ರಾಣಪದ** (ನಾ). ಜೀವಕ್ಕೆ ಸಮವಾಗಿ ಪ್ರೀತಿಸುವ ವಸ್ತು; ಅತಿ ಪ್ರಿಯವ ವಸ್ತು : ಧರೆಯೊಳೆಲ್ಲಂ ಸ್ವಾತಿವರುಷಂ ಸುರಿಯಲೆಂತಹ ಹನಿಗಳಿಗೆ ಏ ಪರಿಯೊಳಂ ಕಜೆಗೊಳ್ಳದಂತಾಗಿದಱ ಪರಿ ದೇಟೆ ನಿರತವದಱಿಂ ಪ್ರಾಣಪದವಾದಿರವಿಗಲ್ಲದೆ ಬಾಯಿದೆಱೆಯದು ಕರಮೆಸೆವ ಸಿಂಪೊಂದು ನೆನವುತಮಿಹುದು ಮಳೆಗಳಿಗೆ (ಬಸವ. ೩೦-೨೯). [ಸಂ.]

**ಪ್ರಾಣಪದಕ** (ನಾ). ಬದುಕಿನಲ್ಲಿ ಪ್ರಿಯವಾದ ವಸ್ತು : ಓದಿಗಿಂತಲೂ ಕ್ರಿಕೆಟ್ ಆಟ ಅವನ ಪ್ರಾಣಪದಕವಾಗಿತ್ತು (ರೂಢಿ). [ಸಂ.]

**ಪ್ರಾಣಪರಿಚ್ಛೇದ** (ನಾ). ಜೀವ ಬಿಡುವುದಂ; ಪ್ರಾಣ ಕಳೆದುಕೊಳ್ಳು ವುದಂ : 'ಪ್ರಾಣಪರಿಚ್ಛೇದಂಗೆಯ್' ಪರಾ. [ಸಂ.]

**ಪ್ರಾಣಪರಿಚ್ಛೇದಂಗೆಯ್** (ಕ್ರಿ). ಜೀವ ಬಿಡು; ಪ್ರಾಣ ಕಳೆದುಕೊಳ್ಳು : "ಪ್ರಾಣಪರಿಚ್ಛೇದಂಗೆಯ್ವನಂ ಆಯಶ್ಲೋಕನೆಂಬುದು" (ಕರ್ಣಾಯು.೬೦–೨೦೬). [ಪ್ರಾಣಪರಿಚ್ಛೇದ + ಕೆಯ್$_1$]

**ಪ್ರಾಣಪವನ** (ನಾ). ಜೀವದ ಉಸಿರು; ಪ್ರಾಣವಾಯು : ಪ್ರಾಣಪವನನ ಬೀಡು ಬಿಟ್ಟುದು ಗೋಣನಲಿ (ಕುಭಾ. ೫.೦೯-೯೭). [ಸಂ.]

**ಪ್ರಾಣಪೂಜೆ** (ನಾ). ಪರಮಾತ್ಮನ ಅರ್ಚನೆ; ದೇವರ ಪೂಜೆ : ಕೇಳು ಕೇಳಯ್ಯಾ ಪ್ರಾಣನಾಥನೆ ಎನ್ನ ಪ್ರಾಣಪೂಜೆಯ ಬಗೆಯ ಬಣ್ಣಿಸುತಿರ್ಪೆನು (ಅಚಂಕೇ. ೨೯೦-೮೭). [ಸಂ. ಪ್ರಾಣಪೂಜಾ]

**ಪ್ರಾಣಪ್ರತಿಷ್ಠಾಪನೆ** (ನಾ). ೧. ವಿಧಿಪೂರ್ವಕವಾಗಿ ಪ್ರಾಣವನ್ನು ಆವಾಹನೆ ಮಾಡಿ ವಿಗ್ರಹವನ್ನು ಪ್ರತಿಷ್ಠಿಸುವ ಪೂಜೆಯ ಒಂದು ಅಂಗ ; ವಿಗ್ರಹದಲ್ಲಿ ದೇವತ್ವವನ್ನು ಆವಾಹಿಸುವುದು. ೨. ಜೀವ ತುಂಬುವುದು ; ಜೀವಂತಗೊಳಿಸುವುದು : ಘಟನೆಗಳನ್ನು ಸನ್ನಿವೇಶ ಗಳನ್ನು ಕಲ್ಪಿಸಿಕೊಂಡು ಅವುಗಳಲ್ಲಿ ಪ್ರಾಣಪ್ರತಿಷ್ಠಾಪನೆ ಮಾಡಿ . . . ಅವು ಜೀವಿಸುವಂತೆ ಮಾಡಿಕೊಳ್ಳಬೇಕು (ಕಂಡೂಕ್ತ್ರ. ೬೨). [ಸಂ. ಪ್ರಾಣಪ್ರತಿಷ್ಠಾಪನ]

**ಪ್ರಾಣಪ್ರತಿಷ್ಠೆ** (ನಾ). = ಪ್ರಾಣಪ್ರತಿಷ್ಠಾಪನೆ ೧ : ಶಾಸ್ತ್ರೋಕ್ತವಾಗಿ ನಿರ್ಮಿತವಾದ ಪ್ರತಿಮೆಯಲ್ಲಿ ನಿರ್ದಿಷ್ಟದೇವತೆಯನ್ನು ಆವಾಹನೆ ಮಾಡು ತ್ತಾರೆ. ಈ ವಿಧಿಗೆ 'ಪ್ರಾಣಪ್ರತಿಷ್ಠಾ' ಎಂದು ಹೆಸರು (ಶಾರದ. ೩೦೩); ಮೂಲಬೇರದ ಸ್ಥಾಪನೆಯಾದ ಮೇಲೆ ಪ್ರಾಣಪ್ರತಿಷ್ಠಾ ನೇತ್ರೋ ನ್ಮೀಲನಾದಿ ಕರ್ಮಗಳನ್ನು ವಿಧಿವತ್ತಾಗಿ ಮಾಡಿ (ಹೊಯ್ಸಳಾ. ೦೯). [ಸಂ. ಪ್ರಾಣಪ್ರತಿಷ್ಠಾ]

**ಪ್ರಾಣಪ್ರಿಯ** (ಗು). ಜೀವಕ್ಕೆ ಸಮವಾದ ; ಬಹಳವಾಗಿ ಪ್ರೀತಿಸುವ : ಬಗೆಯಂ ಪ್ರಾಣಪ್ರಿಯಸ್ತ್ರೀಜನತನಯಧನವ್ರಾತದೊಳ್ ಮಾಡದಾರ್ತಾಜಿಗೆ ಬಂದೊಡ್ಡಲ್ಕೆ ಪೆಟ್ಟಂಗರನಿಕಷದೊಳಿಮ್ಮಂದವಂ ನೀನೆ ಕಾಣ್ಬೈ (ಆದಿಪು. ೦೯-೬೨) ; ಪ್ರಾಣಪ್ರಿಯಾಣ್ಮನಂ ಕಾಣದಿರೆ ಪೊತ್ತುವುದು ಹರಣದುರಿ (ಶಕ್ತ್ಯಾಂಗ. ೩೫-೦೩೦೩). [ಸಂ.]

**ಪ್ರಾಣಪ್ರಿಯೆ** (ನಾ). ಹೆಂಡತಿ; ಪತ್ನಿ : ಪ್ರಾಣಪ್ರಿಯೆಯಿಲ್ಲದೆ ನಿಃಪ್ರಾಣಮದೆಂತುಂಬ್ಬದೀಗಳೀಯೊಡಲಹಿತಪ್ರಾಣಾನಿಲನಿಂದೆನ್ನ ಕೃಪಾಣಾ ಹಿಯನೂಡಿ ಬಟೆಕಿಮಾನುಂಡಪ್ಪೆಂ (ಅಪಂಪು. ೦೦-೬೭). [ಸಂ. ಪ್ರಾಣಪ್ರಿಯಾ]

**ಪ್ರಾಣಬಾಧೆ** (ನಾ). ಜೀವ ಹೋಗುವ ಸ್ಥಿತಿಯಲ್ಲಿ ಆಗುವ ತೊಂದರೆ ; ಪ್ರಾಣ ಹೋಗುವಾಗ ಆಗುವ ಹಿಂಸೆ : ಅವರು ಪ್ರಾಣಬಾಧೆ ತಡೆಯಲಾರದೆ ಬಹಳ ನರಳಾಡುತ್ತಿದ್ದರು (ದೂಾ). [ಸಂ. ಪ್ರಾಣಬಾಧಾ]

**ಪ್ರಾಣಬಿಡು** (ಕ್ರಿ). ೧. ಸಾಯು; ಮರಣವನ್ನು ಹೊಂದು : ಶುಕ್ಲ ಶೋಣಿತಶರೀರ . . . ಪ್ರಾಣಬಿಟ್ಟರೆ ದುರ್ಗಂಧ ನಾಱುವುದು (ಶ್ರೀಂದ. ೩-೯೩-೨); ಹೆತ್ತ ತಾಯಿ ದುಸ್ಸಹ ಸಮಾಚಾರವನ್ನು ಕೇಳಿ ಪ್ರಾಣಬಿಟ್ಟರು (ಶಾಂತಲಾ. ೧೭೦); ಫಕೀರನು ಪ್ರಾಣಬಿಟ್ಟಿದ್ದಾನೆ ಎಂದು ಹೇಳಿದರು (ದಾಂಡ್. ೨೯೭). ೨. (ಅಲಂ) ಅತ್ಯಂತ ಕಷ್ಟಪಡು ; ಶ್ರಮಿಸು : ಇಷ್ಟು ಪ್ರಾಣಬಿಟ್ಟರಲ್ಲ ನೀವು, ಕೊನೆಗೂ ಒಂದು ಕುಂಟುಪಂಕ್ತಿ ಬರೆದೇ ಹೋದರು ಅವರು (ಕುಗಿಯು. ೩೯೭). [ಪ್ರಾಣ+ಬಿಡು$_1$]

**ಪ್ರಾಣಭಯ** (ನಾ). ಜೀವಕ್ಕೆ ಉಂಟಾಗುವ ಅಪಾಯದ ಅಂಜಿಕೆ; ಪ್ರಾಣದ ಹೆದರಿಕೆ : ನಿಮ್ಮ ಪ್ರಸಾದದಿಂ ಪ್ರಾಣಭಯಂ ಪಿಂಗಿದುದು (ಧರ್ಮಾಮೃ. ೧೨-೧೭೩) ; ಪ್ರಾಣಭಯ ತನ್ನಂತೆ ಸಕಲಪ್ರಾಣಿಗಳಿಗುಂಟು (ತಿಮ್ಮಿಅ. ೯-೩೦). [ಸಂ.]

**ಪ್ರಾಣಮಯಕೋಶ** (ನಾ). ಜೀವವನ್ನು ಆವರಿಸಿಕೊಂಡಿರುವ ಐದು ಬಗೆಯ ಆವರಣಗಳಲ್ಲಿ ಒಂದು: ಸೂಕ್ಷ್ಮತನುವಿನಲ್ಲಿ ಪ್ರಾಣವಾರುತನುಂ ಕರ್ಮೇಂದ್ರಿಯಂಗಳುಂ ಕೂಡಿ ಪ್ರಾಣಮಯಕೋಶವೆನಿಸುವುದು (ವಿವೇಕ. ೪೦) ; ಪಂಚಪ್ರಾಣವು ಕರ್ಮೇಂದ್ರಿಯವು ಕೂಡಿ ಪ್ರಾಣಮಯ ಕೋಶವೆಂದು ಹೇಳಲ್ಪಡುವುದು (ಊಕ್ಕಸ್ಮ. ೦೩-೦೦) ; ದೇಹದಲ್ಲಿ ಪೂರ್ಣಬಲ ವನ್ನು ಕೊಡತಕ್ಕ ಇಂದ್ರಿಯಗಳನ್ನು ಪ್ರೇರಿಸತಕ್ಕ ವಾಯುವೇ ಪ್ರಾಣಮಯಕೋಶ (ಜೀವಾತ್ಮ. ೦೩೦). 'ಕೋಶಪಂಚಕ' ಪರಾ. [ಸಂ.]

**ಪ್ರಾಣಮಿತ್ರ** (ನಾ). ಜೀವಕ್ಕಿಂತಲೂ ಅತಿಶಯವಾದ ಸ್ನೇಹವನ್ನು ಹೊಂದಿರುವವನು ; ಪ್ರಾಣಸಖ : ಪ್ರಾಣಮಿತ್ರನೆನಿಪ್ಪ ಭಕ್ತತ್ರಾಣನಂ ಬಸವಣನನಗಲ್ದಿಂತೇಣಧರಧರನಲ್ಲಿಗೆಂತುಱಿ ಹೋಗಬಹುದಯ್ಯಾ (ಬಸಪು. ೩೭-೩೨) ; ಅವರಿಬ್ಬರೂ. . . . ಪ್ರಾಣಮಿತ್ರರು (ಪುಪರು. ೩೮೦). [ಸಂ.]

**ಪ್ರಾಣಯಾತನೆ** (ನಾ). = ಪ್ರಾಣಬಾಧೆ : ಕೃಷ್ಣನನ್ನು ನೋಡುತ್ತ, ಪ್ರಾಣಯಾತನೆಯನ್ನೂ ಲಕ್ಷಿಸದೆ. . .ನಮ್ಮೊಡನೆಯೆಲ್ಲಾ ಋಜುಮಾರ್ಗದಲ್ಲಿ ಯುದ್ಧಮಾಡಿದರೆ ಖಂಡಿತವಾಗಿಯೂ ನಿಮಗೆ ವಿಜಯವಾಗುತ್ತಿರಲಿಲ್ಲ ಎಂದನು (ವಚಭಾ. ೩೦೯). [ಸಂ. ಪ್ರಾಣಯಾತನಾ]

**ಪ್ರಾಣರಕ್ಷಣೆ** (ನಾ). ಜೀವವನ್ನು ಕಾಪಾಡಿಕೊಳ್ಳುವುದು : ಅಂತು ಮಯ್ಯಱಿಯದಿರ್ದನಂ ಕಂಡು ಭಯಂಗೊಂಡುಪದೇಶಕ್ಕೆಡೆಯಿಲ್ಲದೆ ಪ್ರಾಣ ರಕ್ಷಣೋಪಾಯಮನಾದೊಡಂ ಮಾಟಿಪ್ಪೆನೆಂದಲ್ಲಿಂದ ಮೆಲ್ಲ ಬೊಳ್ಳೀ ದ ಸರೋವರಮಂ ಪೊಕ್ಕು (ಕಾದಂಪೂ. ೬೩೩) ; ಸುಲ್ತಾನನನ್ನು ನಗರದಿಂದ ಚಿತ್ರದುರ್ಗದ ಕೋಟೆಗೆ ಹೋಗಿ ಪ್ರಾಣರಕ್ಷಣೆ ಮಾಡಿಕೊಳ್ಳುವಂತೆ ಮಾಡಿದ್ದೇನೆ (ದಾಂಡ್. ೦೩೩). [ಸಂ. ಪ್ರಾಣರಕ್ಷಣ]

**ಪ್ರಾಣಲಿಂಗ** (ನಾ). ೧. ಪರಮಾತ್ಮ ; ಶಿವ : "ಶಿವ ಃ = ಪ್ರಾಣಲಿಂಗ" (ಕಾಶಕೃ. ೦೭೨). ೨. [ಶೈವ] ಐದು ಬಗೆಯ ಲಿಂಗಗಳಲ್ಲಿ ಒಂದು : ಶೈವಸಿದ್ಧಾಂತಸಮ್ಮತವಾದ ಪಂಚಲಿಂಗಾರ್ಚನದೊಳು ಸ್ವಯಂಭುಲಿಂಗ ಬಾಣಲಿಂಗ ಚರಲಿಂಗ ಸಂಕೀರ್ಣಲಿಂಗ ಪ್ರಾಣಲಿಂಗವೆಂಬೈದಱೊಳಗೆ ತಮ್ಮ ತಮ್ಮ ಶಕ್ತ್ಯನುಸಾರವಾಗಿ ಅರ್ಚನತತ್ಪರರಾಗಬೇಕೆಂದು ನಿಶ್ಚಯಿಸ ಲಕ್ಕುಂ (ವಿವೇಕ. ೦೦೨). ೩. [ವೀಶೈ] ಇಷ್ಟಲಿಂಗ, ಭಾವಲಿಂಗ ಮತ್ತು ಪ್ರಾಣಲಿಂಗಗಳೆಂಬ ಮೂರು ಬಗೆಯ ಲಿಂಗಗಳಲ್ಲಿ ಒಂದು; ದೇಹಗುಣವ್ಯಾಪ್ತಿಯನ್ನು ಬಿಟ್ಟು ಶಿವಸ್ವರೂಪದಲ್ಲಿ ಮನಸ್ಸು ಲೀನವಾಗುವ ಒಂದು ಸ್ಥಿತಿ : ಪ್ರಾಣಲಿಂಗವು ಸಕಲ ನಿಷ್ಕಲರೂಪ ವಾಗಿದ್ದು, ಮನಸ್ಸಿನಿಂದ ಗ್ರಹಿಸತಕ್ಕುದಾಗಿರುವುದು (ಶಿವಾಸೂ. ೩೩) ; ಇಷ್ಟಲಿಂಗ ಪ್ರಾಣಲಿಂಗ ತೃಪ್ತಿಲಿಂಗವೆಂದು ಶಿವಲಿಂಗತ್ರಯಭೇದಂಗಳವು ಗಳಲ್ಲಿ ದೇಹಗುಣವ್ಯಾಪ್ತಿಯಂ ಬಿಟ್ಟು ಶಿವಲಿಂಗಸ್ವರೂಪದಲ್ಲಿ ಮನವು ಮುಟ್ಟಹುದೇ ಪ್ರಾಣಲಿಂಗವೆನಿಸುವುದು (ವಿವೇಕ. ೦೨೩). [ಸಂ.]

**ಪ್ರಾಣಲಿಂಗಿ** (ನಾ). [ವೀಶೈ] ಷಟ್ಸ್ಥಲಗಳಲ್ಲಿ ನಾಲ್ಕನೆಯ ಹಂತವಾದ ಪ್ರಾಣಲಿಂಗಸ್ಥಲವನ್ನು ತಲಪಿರುವವನು ; ನಾನು, ನನ್ನದು ಎಂಬ ಮೋಹವನ್ನು ತೊರೆದು ಸರ್ವವನ್ನೂ ಲಿಂಗಮಯವೆಂದು ಭಾವಿಸುವವನು: ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣೈಕ್ಯನು ಮೆಲ್ಲಮೆಲ್ಲನೆ ಆದಹೆನ್ನೆಂಬನ್ನಬರ ನಾನೇನು ವಜ್ರದೇಹಿಯೆ (ಬಸವ. ೯೯೬); ನಾನು ನನ್ನದೆಂಬ ಭ್ರಮಾಜನ್ಯವಾದ ಮೋಹವನ್ನು ತ್ಯಜಿಸಿ ಇದೆಲ್ಲವೂ ಲಿಂಗಮಯವಾದುದೆಂದು ತಿಳಿದು ತದೇಕಯತ್ತ ಮಾನಸನಾಗಿರುವುದೇ ಪ್ರಾಣಲಿಂಗಿಯ ಸ್ವರೂಪವು (ಶಿವಾಸೂ. ೩೯) ; ಎನ್ನ ಸಿದ್ಧರಾಮನಂತೆ ಶುದ್ಧ ಪ್ರಾಣಲಿಂಗಿಯೆಂದೆನಿಸಯ್ಯ (ಅಶಂದೀ. ೭೩-೯೩). [ಸಂ. ಪ್ರಾಣಲಿಂಗಿನ್]

**ಪ್ರಾಣಲಿಂಗಿಸ್ಥಲ** (ನಾ). [ವೀಶೈ] ವೀರಶೈವಮತದಲ್ಲಿ ಸಾಧನೆಯ ಷಟ್ಸ್ಥಲವರ್ಗದ ನಾಲ್ಕನೆಯ ಸೋಪಾನ,— ಹಂತ; ಷಟ್ಸ್ಥಲ ಗಳಲ್ಲಿ ಒಂದು : ಅನಿಲಾಂಗದಲ್ಲಿ ಮನೋಹಸ್ತದಿಂದ ಚರಲಿಂಗಾರ್ಚನ ಯುಕ್ತವಾದುದೇ ಪ್ರಾಣಲಿಂಗಿಸ್ಥಲ (ಶಿವಾಸೂ. ೯೭) ; ಪ್ರಾಣಲಿಂಗಿಸ್ಥಲ . . . ಅಂಗಲಿಂಗಿಸ್ಥಲ ಈ ಐದು ಪ್ರಾಣಲಿಂಗಿಸ್ಥಲಂಗಳು (ಅಶಂದೀ. ೨೩೦-೦೯). [ಸಂ.]

**ಪ್ರಾಣವಂಚಕ** (ನಾ). (ತನ್ನ) ಜೀವಕ್ಕೆ ವಂಚನೆ ಮಾಡಿಕೊಳ್ಳುವವನು : ಮೂದಲಿಸಲುಂ ಪ್ರಾಣವಂಚಕನಾದವಂಗಂ ಲಿಂಗಭಕ್ತಿ ಸುಮೇಧಿಸದು ಧನವಂಚಕಂಗೆ ಸುಸಾಧ್ಯವಾಗದದು ಆದಿಜಂಗಮಭಕ್ತಿ (ಬಸಪು. ೩೯-೦೯). [ಸಂ.]

**ಪ್ರಾಣವಧೆ** (ನಾ). ಕೊಲ್ಲುವುದು ; ಪ್ರಾಣಹಾನಿ : ಜಿನಚಂದ್ರದೇವಂ ನಡೆಯೆ ಧರ್ಮಚಕ್ರಂ ಮುಂದೆ ನಡೆಯೆ ನಡೆವ ನಾಲ್ಕುಂ ದೆಸೆಗಳೊಳಂ ನೂಱುಯೋಜನಪ್ರಮಾಣಾಂತರದೊಳಾವ ಜೀವಕ್ಕಂ ಪಸಿವು ಪಸವುಂ ಪ್ರಾಣವಧೆಯುಮಾಗದಿರೆಯುಂ (ಶಾಂತಿಪು. ೦೨-೦೯ ವ) ; ಶಾಸ್ತ್ರ ಘನ ವಂಬೆನೆ ಕರ್ಮವ ಭಜಿಸುತ್ತಿದೆ ವೇದ ಘನವೆಂಬೆನೆ ಪ್ರಾಣವಧೆ [ಶಾಕಾಂ. ವೇಧೆ] ಯ ಹೇಳುತ್ತಿದೆ (ಬಸವ. ೨೦೬). [ಸಂ. ಪ್ರಾಣವಧ]

**ಪ್ರಾಣವಲ್ಲಭ** (ನಾ). ೧. ಪ್ರೀತಿಪಾತ್ರ ವ್ಯಕ್ತಿ : ಬಿಡದೆ ಪೊಗೆ ಸುತ್ತೆ ತೋಳಂ ಸಡಲಿಸದಾ ಪ್ರಾಣವಲ್ಲಭರ್ ಪ್ರಾಣಮನಂದೊಡೆಗಳೆದರೋವ ರೋವರೊಳೊಡೆಸಾಯಲ್ಪಡೆದರಿನ್ನವೇಂ ಸ್ನೆಹೋಳವೇ (ಅಂಪು. ೩-೨೪). ೨. ಗಂಡ ; ಪತಿ : ಹಾ ಮದೀಯ ಪ್ರಾಣವಲ್ಲಭನೆ . . . ಎಮ್ಮ ದೃಷ್ಟಿಗೆ ದೂರವಾದ್ಯೆ (ಕೌಶಿರಾ. ೩೭-೭). [ಸಂ.]

**ಪ್ರಾಣವಲ್ಲಭೆ** (ನಾ). ಹೆಂಡತಿ ; ಪತ್ನಿ: ಪೊಲ್ಲಮೆಯೊಳ್ ತೀವಿರ್ದ ಗೃಹಸ್ಥರೆಲ್ಲಂ ಕಣ್ಣೆವೆ ಮಱೆಯಾದೊಡೆ ಬಾಟದನಿತಂ ಮಾಟ್ಪ ಸ್ನೇಹದ ಪ್ರಾಣವಲ್ಲಭೆಯುಮಂ ದೋಷಂಗೆಯ್ದಲೆಂಬುದಂ ಕೇಳ್ದನಿತಱೊಳೆ ಪೊಱ ಮಡಿಸಿ ಕಳೆವರ್ (ಜೀವಸಂ. ೩೯-೦೯ವ) ; ಶಕುಂತಲೆ . . . ತಾನು ಹೃದ ಯೇಶ್ವರನ ಪ್ರಾಣವಲ್ಲಭೆಯಾಗಿ, ರಾಣಿಯಾಗಿ ಬಾಳಿ ಸುಖಿಸುವೆನೆಂದಾಶಿಸಿದಳು (ಧರ್ಮಸಾ. ೭೦). [ಸಂ. ಪ್ರಾಣವಲ್ಲಭಾ]

**ಪ್ರಾಣವಾಯು** (ನಾ). ೧. ಜೀವನಾಧಾರವಾದ ಗಾಳಿ ; ಆಮ್ಲಜನಕ : ಪ್ರಾಣವಾಯುಗಳವರು ಸುಭಟಶ್ರೇಣಿದೇಹಕೆ ನಿನ್ನ ತನು ವಿಕ್ರಾಣವದ ಱಿಂದಾಯ್ತು ಪರಿಭವವು (ಕುವ್ಯಾಅ. ೨೦-೦೨) ; ಶ್ಲೇಷ್ಮದಿಂದ ತಡೆಯಲ್ಪಟ್ಟ ಪ್ರಾಣವಾಯುವು ಅನ್ನಜೆ, ಯಮಳೆ, ಗಂಭೀರೆ, ಕ್ಷುದ್ರೆ, ಮಹತೆ ಎಂದೈದು ಪ್ರಕಾರದಿಂದ ಬಿಕ್ಕುಳನ್ನುಂಟುಮಾಡುವುದು (ಚಕಕ್ಕ. ೨೫೦). ೨. [ಯೋಗ] ಪ್ರಾಣವೆಂಬ ಹೆಸರುಳ್ಳ ವಾಯುಂ : ರೇಚಕ ಪೂರಕ ಕುಂಭಕ ರೂಪಿಂದೆ ಚೇಷ್ಟಿಸುವುದೊಂದು ಪ್ರಾಣವಾಯು (ಚಕ್ಕಿಶ. ೩೩-೯೩). [ಸಂ.]

**ಪ್ರಾಣವಿಯೋಗ** (ನಾ). ಜೀವವು ಶರೀರದಿಂದ ಬೇರೆಯಾಗುವುದು ; ಸಾವು ; ಮರಣ : ಚೈತ್ಯವೃಕ್ಷದೊಳು ಪಂಚನಮಸ್ಕಾರಮನುಚ್ಚರಿಸುತ್ತಂ ಪ್ರಾಣವಿಯೋಗಮಾಗೆ (ಶಾಪುಂಕೃ. ೧೭) ; ಪಾಪ್ಪದಿ ನವೆದಜಾಮಿಳಗೊಲಿದು ಪ್ರಾಣವಿಯೋಗಕಾಲದಲಿ ಕಾಯ್ದವನು ನೀ (ಹಂಚಾ. ೯೩); ಕೈನಾಡಿಯನ್ನು ಹಿಡಿದು ನೋಡಿದನು ; ನಾಡಿಯ ಗತಿಯು ಕಾಣಲಿಲ್ಲ, ಪ್ರಾಣವಿಯೋಗವಾಗಿದ್ದಿತೇ ? (ಕಹಾಕುಂ. ೯೦). [ಸಂ.]

**ಪ್ರಾಣಸಂಕಟ** (ನಾ). ೧. ಸಾಯುವಾಗ ಉಂಟಾಗುವ ನೋವು ; ಪ್ರಾಣಬಾಧೆ : ಗಡ್ಡಂ ಮೀಸೆಗಳು ಬೀಯಲು ಸಮೀಪದ ಗಡಿಗೆ ಬಾವಿಗಳೊಳಗೆ ಧುಮ್ಮಿಕ್ಕುವರು ತಮ್ಮಯ ಪ್ರಾಣಸಂಕಟಕೆ (ಬಸಪು. ೫೬-೩೯) ; ಬೆಕ್ಕಿಗೆ ಚೆಲ್ಲಾಟ ಇಲಿಗೆ ಪ್ರಾಣಸಂಕಟ (ಗಾದೆ). ೨. (ಆಲಂ) ಅತ್ಯಂತ ಹಿಂಸೆ ; ಪೀಡೆ : ಕರಿ ಕೊಳೆಗಳಿಂದುಂಟಾಗುವ ವಿಷಣ್ಣತೆ, ಒದ್ದೆಸೌದೆಯಿಂದಾಗಿ ಪ್ರಾಣಸಂಕಟ ಇವುಗಳಿಂದ ಕೂಡಿದ ಅನಾರೋಗ್ಯಕರವಾದ ಅಡುಗೆಮನೆಗಳಿಂದಾಗಿ ಎಷ್ಟು ಮಂದಿ ಸ್ತ್ರೀಯರು ತಮ್ಮ ಆರೋಗ್ಯವನ್ನು ಕಳೆದುಕೊಂಡಿಲ್ಲ ? (ಅಡುಸಾ. ೨೦). [ಸಂ.]

**ಪ್ರಾಣಸಂಯಮ** (ನಾ). ೧. ಉಸಿರಾಟವನ್ನು ಹತೋಟಿಯಲ್ಲಿಡುವುದು. ೨. [ಜೈನ] ಷಟ್ಕಾಯಜೀವಗಳ ವಧೆ ಮಾಡದಿರುವುದು : ಅಭ್ಯಂತರಂ ಬಾಹ್ಯಮೆಂಬೆರಡುಂ ತೆಱದ ಪರಿಗ್ರಹಮನೀಡಾಡಿ ಪ್ರಾಣಸಂಯಮಮಿಂದ್ರಿಯಸಂಯಮಮೆಂಬೆರಡುಂ ತೆಱದ ಸಂಯಮಮಂ ತಾಳ್ದಿ (ಜೀವಸಂ. ೦೦-೦ ವ). 'ಇಂದ್ರಿಯಸಂಯಮ' ಪರಾ. [ಸಂ.]

**ಪ್ರಾಣಸಖಿ** (ನಾ). ಜೀವಕ್ಕೆ ಸಮವಾದ ಗೆಳತಿ ; ಅತ್ಯಂತ ಪ್ರಿಯಳಾದವಳು : ಕ್ಷಮಿಸು ನೀಂ ಪ್ರಾಣಸಖೀ ರಮಣೀ ರಾಕೇಂದುಮುಖೀ (ಶಾಕುಂತ. ೦೦೦ ಅಂಕಪದ್ಯ). [ಸಂ. ಪ್ರಾಣಸಖೀ]

**ಪ್ರಾಣಸಮೆ** (ನಾ). ೧. ಜೀವಕ್ಕೆ ಸಮನಾದವಳು; ಪ್ರಾಣಪ್ರಿಯೆ : ಪ್ರಾಣಸಮೆ ಹೃದಯದಿಂ ಮತ್ಪ್ರಾಣದೊಳೊಡಗೂಡಿ ಪೋಗಲಾಗೆಂದೆನ್ನಂ ಮಾಣಿಪವೋಲ್ ಕಯರ್ ಸುಮನೋಬಾಣಾಗ್ನಿಸ್ಫುರಿತಹೃದಯದೊಳ್ ಸೊಗಯಿಸುಗುಂ (ಕಾದಂಪೂ. ೧೦೩). ೨. ಹೆಂಡತಿ ; ಪತ್ನಿ. [ಸಂ. ಪ್ರಾಣಸಮಾ]

**ಪ್ರಾಣಸ್ಥಾನ** (ನಾ). ಜೀವವಿರುವ ಸ್ಥಳ ; ಹೃದಯ : ವಾತಾದಿದೋಷಗಳು . . . ಅತ್ಯಂತಬಲವುಳ್ಳುದಾಗಿ ಪ್ರಾಣಸ್ಥಾನವಾದ ಹೃದಯವನ್ನಾಶ್ರಯಿಸಿ ಸನ್ಯಾಸವೆಂಬ ರೋಗವನ್ನುಂಟುಮಾಡುವುದು (ಸಕವೈ. ೨೮೦). [ಸಂ.]

**ಪ್ರಾಣಸ್ನೇಹಿತ** (ನಾ). ಜೀವಕ್ಕೆ ಸಮನಾದ ಗೆಳೆಯ ; ಪ್ರಿಯಮಿತ್ರ : ನಾವು ಧನಿಕರಲ್ಲದಿದ್ದರೂ ಪ್ರಾಣಸ್ನೇಹಿತರನ್ನು ಹೇಗೆ ಆದರಿಸಬೇಕೆಂದು ನಮಗೆ ಗೊತ್ತು (ಮರಳಾ. ೦೨೪) ; ಪ್ರಾಣಸ್ನೇಹಿತನಾದರೂ ಮೀನಿನ ಬುಟ್ಟಿಗೆ ಕೈಹಾಕಬೇಡ (ಗಾದೆ). [ಸಂ.]

**ಪ್ರಾಣಸ್ವರೂಪ** (ನಾ). ಜೀವದ ರೂಪದಲ್ಲಿರುವವನು; ಪ್ರಾಣಪ್ರಿಯ: ಪತಿಯೆನಗೆ ಪ್ರಾಣಸ್ವರೂಪನಾಗಿದ್ದಾನೆ (ಕಹಾಕುಂ. ೦೨೦). [ಸಂ.]

**ಪ್ರಾಣಹತಿ** (ನಾ). ಮರಣ ; ಸಾವು : ಸಹಜಾಶುಚಿದೇಹಂ ಪ್ರಾಣ[ಶಾಣಂ. ೫]ಹತಿ ಪ್ರಾರಂಭಮೆಂದು ವನಿತಾರತಿನಿಸ್ಪೃಹನಾಗಿ ತೊಱೆದು ನೆಗೞ್ವಂ ಗೃಹಸ್ಥರೊಳ್ ಬ್ರಹ್ಮಚಾರಿಯೆಂಬನೆಯಾತಂ (ಸುಕುಮಚ. ೬-೩೨). [ಸಂ.]

**ಪ್ರಾಣಹತ್ಯೆ** (ನಾ). ಕೊಲ್ಲುವುದು ; ಸಾಯಿಸುವುದು : ಬಿರಡಿಗಳನ್ನು ತಾನು ಕೊಲ್ಲುವುದಿಲ್ಲವೆಂತಲೂ ಇಸ್ತ್ರಿಯ ಬಾಯಿಗೆ ಸಿಕ್ಕು ಅವು ತಾವೆ ಪ್ರಾಣಹತ್ಯೆ ಮಾಡಿಕೊಳ್ಳುತ್ತವೆಂತಲೂ ಅಗಸನು ಹೇಳುತ್ತಾನೆ (ದೇಕನ್ನ. ೩೨); ಪ್ರಾಣಹತ್ಯೆಗೆ ಪ್ರವೃತ್ತವಾಗಲು, ನಿನಗೊದಗಿದ ವಿಪತ್ತಿ ಯಾವುದು ? (ಕೃತಕ್ಕ. ೬). [ಸಂ. ಪ್ರಾಣಹತ್ಯಾ]

**ಪ್ರಾಣಹರ** (ಗು). ೧. ಜೀವವನ್ನು ತೆಗೆಯುವ ; ಕೊಲ್ಲುವ. (ನಾ). ೨. ಜೀವವನ್ನು ತೆಗೆಯುವಂಥದು ; ಸಾಯಿಸುವಂಥದು : "ಕ್ಷ್ವೇಳಃ ಗರಳಂ, ವಿಷಂ—ೱ ಸಾಮಾನ್ಯವಾಗಿ ಸಕಲ ವಿಷಗಳಿಗೂ ಹೆಸರುಗಳು. ಅಂದರೆ ಪ್ರಾಣಹರವಾದ ಪಿತ್ತನಂಜು" (ಸಿದ್ಧಾಂತಿ. ೭೩). [ಸಂ.]

**ಪ್ರಾಣಾಂತಿಕ** (ಗು). ೧. ಮರಣವು ಸಮೀಪಿಸಿದ ; ಸಾವು ಸಮೀಪಕ್ಕೆ ಬಂದ : ಪ್ರಾಣಾಂತಿಕ ಸಂಕಟವು ದೊಡ್ಡದಲ್ಲವೆ ? (ಕೃತಕ್ಕ. ೭೯). (ನಾ). ೨. ಸಾವು ; ಮರಣ. [ಸಂ.]

**ಪ್ರಾಣಾತಿಪಾತ** (ನಾ). ೧. ಕೊಲ್ಲುವಿಕೆ ; ಸಾಯಿಸುವಿಕೆ. ೨. [ಜೈನ] ಇಪ್ಪತ್ತೈದು ಕ್ರಿಯೆಗಳಲ್ಲಿ ಒಂದು; ಆಯುಸ್ಸು, ಇಂದ್ರಿಯ, ಪ್ರಾಣಗಳ ವಿಯೋಗದಿಂದಾಗುವ ಕ್ರಿಯೆ : ಪಂಚವಿಂಶತಿಕ್ರಿಯೆಗಳು ೧ ಸಮ್ಯಕ್ತ್ವಕ್ರಿಯೆ . . . ೧೧ ಪ್ರಾಣಾತಿಪಾತ (ಆಯುಸ್ಸು, ಇಂದ್ರಿಯಶಕ್ತಿ, ಪ್ರಾಣ ಇವುಗಳ ವಿಯೋಗಕ್ರಿಯೆ) (ಕೃಕಥ. ೬೩). 'ಪಂಚವಿಂಶತಿಕ್ರಿಯೆ' ಪರಾ. [ಸಂ.]

**ಪ್ರಾಣಾಪಹರಣ** (ನಾ). ಜೀವವನ್ನು ತೆಗೆದುಕೊಂಡು ಹೋಗುವುದು; ಸಂಹಾರ ; ಕೊಲ್ಲುವುದು : ಪ್ರಾಣಾಪಹರಣದ ದುರುದ್ದೇಶದಿಂದ ಅವಳು ಪ್ರೇರಿತಳಾಗಿದ್ದಳೆಂಬುದಕ್ಕೆ ಸಾಕಷ್ಟು ರುಜುವಾತಿಲ್ಲ(ಪುಸಹು. ೨೦೪). [ಸಂ.]

**ಪ್ರಾಣಾಪಾಯ** (ನಾ). ಜೀವಕ್ಕೆ ಉಂಟಾಗುವ ತೊಂದರೆ,—ಅಪಾಯ: ಪ್ರಾಣಾಪಾಯದ ಭೀತಿ ಇಲ್ಲವೆಂದು ಹರ್ಷ ತಾಳಿದರು (ಕುಂಡಕೂ. ೨೬); ತಾನು ಪ್ರಾಣಾಪಾಯದಿಂದ ಪಾರುಗಾಣಬಹುದೆಂಬ ಆಶೆ ಜನಿಸಿತು (ಕೃತಕ್ಕ. ೯). [ಸಂ.]

**ಪ್ರಾಣಾಯಾಮ** (ನಾ). [ಯೋಗ] ಪ್ರಾಣವಾಯುವನ್ನು ಒಂದು ಕ್ರಮದಲ್ಲಿ ವ್ಯವಸ್ಥೆಗೊಳಿಸುವುದು : ವಿಪ್ರೋತ್ತಮರನುಮತದಿಂ ಪ್ರಾಣಾಯಾಮಮಂ ಮಂತ್ರಿಸಿ (ಗಿರಿಕ.೦೦-೯೭ ವ) ; ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿಗಳೆಂಬ ಅಷ್ಟಾಂಗ ಯೋಗದೊಳಗೆ (ಅವಿಂಗೀ. ೨೦೯_೩೩). [ಸಂ.]

**ಪ್ರಾಣಾರ್ಪಣೆ** (ನಾ). ಜೀವವನ್ನು ಅರ್ಪಿಸುವುದು ; ಸಾಯುವುದು : ದೇಶದ ಸಲುವಾಗಿ ಹಠಾತ್ ಪ್ರಾಣಾರ್ಪಣೆ ಮಾಡುವುದು ಅತ್ಯಂತ ಆವಶ್ಯಕ (ಇಕ್ಷ್ವಕ. ೯) ; ದಂಬನ ಕಾಲುಬುಡದಲ್ಲಿ ಹೋಗಿ ತನ್ನ ಪ್ರಾಣಾರ್ಪಣೆ ಮಾಡಿತು—ಬಾಡು (ದಂಬಿಪಾ. ೦೦೬). [ಸಂ. ಪ್ರಾಣಾರ್ಪಣ]

**ಪ್ರಾಣಾವಧಿ** (ನಾ). ಜೀವಿತದ ಅವಧಿ ; ಸಾಯುವವರೆಗಿನ ಕಾಲ : ಪ್ರಾಣಾವಧಿಯ ರಿಪುಗಳಂ ನುತಿಗೆ ರಕ್ಷಿಪ ಧುರೀಣಯನ್ನವಗುಣಗಳಂ ಹರಿಸು (ಜೀಕೃತು. ೩-೬-೦). [ಸಂ.]

**ಪ್ರಾಣಾಹುತಿ** (ನಾ). ೧. ಜೀವದ ಬಲಿ ; ಸಾವು ; ಮರಣ : ಗಾಳದ ತುದಿಯೊಳಿಪ್ಪ ಭೂನಾಗನಂ ಕಂಡು ಪ್ರಾಣಾಹುತಿಯೆಂದು ಸವಿವ ಮೀನಿನಂತೆ (ಕವಕ. ೬೯-೩). ೨. ಊಟಕ್ಕೆ ಮೊದಲು ಪಂಚಪ್ರಾಣಗಳ ಹೆಸರಿನಿಂದ ಇಡುವ ಅನ್ನದ ಬಲಿ : ರಾಯರು ಪ್ರಾಣಾಹುತಿ ಯನ್ನಿಟ್ಟು ಊಟವನ್ನು ಪ್ರಾರಂಭಿಸಿದರು (ಕೂಠ). [ಸಂ.]

**ಪ್ರಾಣಿ** (ನಾ). ೧. ಜೀವವನ್ನು ಹೊಂದಿರುವಂಥದು ; ಜೀವಿ. ೨. ಮೃಗ ; ಪಶು : ಅಲ್ಲಿ ನಾನಾಜಾತಿಯ ಪ್ರಾಣಿಗಳು ಇದ್ದವು (ಕಪಪು. ೨-೨೭) ; ಮನುಷ್ಯಶಿಶು ಇತರ ಪ್ರಾಣಿಗಳ ಶಿಶುಗಳಿಗಿಂತ ದುರ್ಬಲ (ಕರ್ನಾಟಿ. ೦೭೪). ೩. ಮನುಷ್ಯ ; ಮಾನವ : ಬೇಡಲು ಹುಟ್ಟಿದ ಪ್ರಾಣಿಗೆ ಬೇಡಲು ವಿಧಿಯೇ ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣ ಸಜ್ಜನವಪ್ಪುದೆ (ಬಸವ. ೦೨೮) ; ಪಂಥ ಬೇಡಿ ಪ್ರಾಣಿಗಳಿರಾ ಸಂತತ ಹರಿದಾಸರಾಗಿ (ಪುರಂದ. ೩-೦೦೩ ಪಲ್ಲವಿ). [ಸಂ. ಪ್ರಾಣಿನ್]

**ಪ್ರಾಣದ್ಯೂತ** (ನಾ). ೧. ಯುದ್ಧ ; ಕಾಳಗ : " ಯುದ್ಧದಲ್ಲಿಯುಂ ಪ್ರಾಣದ್ಯೂತಮೆಂಬುದು" (ಹಲಾಯು. ೦೩೦-೪). ೨. ಹುಂಜ, ಟಗರು ಮೊದಲಾದ ಪ್ರಾಣಿಗಳ ಮೇಲೆ ಪಣವಿಟ್ಟು ನಡೆಸುವ ಕಾಳಗ : "ಪ್ರಾಣದ್ಯೂತಂ, ಸಮಾಹ್ವಯಃ—೨ ಕೋಳಿ ಮೊದಲಾದ ಜಂತುಗಳ ಪಂದ್ಯದ ಹೆಸರುಗಳು " (ಸಿದ್ಧಾಂತಿ. ೩೨೦). [ಸಂ.]

**ಪ್ರಾಣಿಧರ್ಮ** (ನಾ). ಜೀವಿಗಳು ಬದುಕಿರಲು ಕೈಗೊಳ್ಳುವ ಕಾರ್ಯ: ಪ್ರಾಣಿಧರ್ಮ ಎಂಬಲ್ಲಿ ಜೀವಿಗಳಲ್ಲಿ ಪ್ರಾಣರಕ್ಷಣ ಅಥವಾ ಪ್ರಾಣಧಾರಣಕ್ಕಾಗಿ ಸ್ವಾಭಾವಿಕವಾಗಿ ನಡೆಯುವ ಕಾರ್ಯಗಳು (ಆರ್ಯಧ. ೧೧). [ಸಂ.]

**ಪ್ರಾಣಿವಧೆ** (ನಾ). ಪ್ರಾಣಿಗಳನ್ನು ಕೊಲ್ಲುವುದು : ಪ್ರಾಣರಕ್ಷಣಮೆ ಪರಮಧರ್ಮಂ ಪ್ರಾಣಿವಧೆಯೆ ಪರಮಪಾತಕಮೆಂಬುದರಿಂ ಪ್ರಾಣಿವಧೆಗೆಯ್ಯಲಾಗದು (ಸಂಕಕಂ. ೬೦_೨೦) ; ಪ್ರಾಣಿವಧೆ . . . ಸುಳ್ಳಾಡುವುದು ಎಂಬ ನಾಲ್ಕು ಕೆಟ್ಟಕೆಲಸಗಳನ್ನು ಅವನು ನೀಗುವನು (ಬುದ್ಧ ಕ. ೦೬೯).
[ಸಂ. ಪ್ರಾಣಿವಧ]

**ಪ್ರಾಣಿವಧೆಗೆಯ್** (ಕ್ರಿ). ಜೀವಿಗಳನ್ನು ಕೊಲ್ಲು ; ಪ್ರಾಣಿಗಳನ್ನು ವಧಿಸು : ವಿಧಿಪೂರ್ವಕಂ ಪ್ರಾಣಿವಧೆಗೆಯ್ವುದಲ್ಲದೆ ವೃಥಾ ವಧೆಗೆಯ್ವುದಿಲ್ಲ (ಸಂಕಕಂ. ೬೨-೧೧). [ಪ್ರಾಣಿವಧೆ+ಕೆಯ್$_1$]

**ಪ್ರಾಣಿಶಾಸ್ತ್ರ** (ನಾ). ಪ್ರಾಣಿಗಳ ಜೀವನಕ್ಕೆ ಸಂಬಂಧಿಸಿದ ಶಾಸ್ತ್ರ; ಪ್ರಾಣಿಗಳನ್ನು ಕುರಿತ ಶಾಸ್ತ್ರ : ಭೌತಶಾಸ್ತ್ರ (Physics) ರಸಾಯನಶಾಸ್ತ್ರ (Chemistry) ಸಸ್ಯಶಾಸ್ತ್ರ (Botany) ಪ್ರಾಣಿಶಾಸ್ತ್ರ (Zoology) . . . ಬೇರೆಬೇರೆಯಾದವು (ಭೌತಪ. ೦೨) ; ನಾನು ಆ ಕಾಲದಲ್ಲಿ ಪ್ರಕೃತಿಶಾಸ್ತ್ರ, ವನಸ್ಪತಿಶಾಸ್ತ್ರ, ಪ್ರಾಣಿಶಾಸ್ತ್ರಗಳನ್ನು ಅವರಿಂದ ಕಲಿತೆನು (ಪುತಿನ. ೨೨).
[ಸಂ.]

**ಪ್ರಾಣಿಶಾಸ್ತ್ರಜ್ಞ** (ನಾ). ಪ್ರಾಣಿಶಾಸ್ತ್ರವನ್ನು ತಿಳಿದವನು : ಪ್ರಾಣಿಶಾಸ್ತ್ರಜ್ಞರ ಪರಿಶೋಧನೆಗಳಿಂದ ಹೊರಪಡುವ ವಿಷಯಗಳನ್ನು ಶಾಸ್ತ್ರೀಯವಾಗಿ ವಿಂಗಡಿಸುವುದು ವರ್ಗೀಕರಣದ ಮೊದಲನೆಯ ಮಜಲು (ಪ್ರಾಣಿಶಾ. ೦೨). [ಸಂ.]

**ಪ್ರಾಣಿಸಂಗ್ರಹಾಲಯ** (ನಾ). ಸಾರ್ವಜನಿಕರ ಪ್ರದರ್ಶನಕ್ಕಾಗಿ ವಿಸ್ತಾರವಾದ ಪ್ರದೇಶದಲ್ಲಿ ಕಾಡುಮೃಗಗಳನ್ನು ಕೂಡಿಟ್ಟಿರುವ ಸ್ಥಳ ; ಮೃಗಾಲಯ ; ಖಾಸಬಂಗಲೆ : ಮನುಷ್ಯನೆಂಬ ಒಂದು ಪ್ರಾಣಿಯೂ ಇದೆ. ಆದರೆ ಅವನಿಗೆ ಪ್ರಾಣಿಸಂಗ್ರಹಾಲಯ ಕಟ್ಟಿ ಪ್ರದರ್ಶಿಸುವ ಬುದ್ಧಿ ಇದೆ (ಅಪಜಾ. ೨೯೨). [ಸಂ.]

**ಪ್ರಾಣಿಸು** (ಕ್ರಿ). ಬದುಕುವಂತೆ ಮಾಡು ; ಬದುಕಿಸು : ಗೋಣಕೊಯ್ದರೆ ನೆನೆಯಲಾ ಹರಿಯನ್ನ ಪ್ರಾಣಿಸುವ (ಸಂಭಪ. ೬-೭೦).
[ಪ್ರಾಣ + — ಇಸು]

**ಪ್ರಾಣಿಹಿಂಸೆ** (ನಾ). ಪ್ರಾಣಿಗಳನ್ನು ಕೊಲ್ಲುವಿಕೆ ; ಪ್ರಾಣಿವಧೆ ; ಜೀವಹಿಂಸೆ : ಯಮ ತನ್ನ ಪುರದಿ ಸಾರಿದನು . . . ಪ್ರಾಣಿಹಿಂಸೆಯ ಮಾಳ್ಪ ಬ್ರಹ್ಮಹತ್ಯಗಾರರ ಎಳೆದು ತನ್ನಿರೋ ಎಂದು (ಭೀಕಂದ. ೨-೦೨೩-೨); ಕೆಲವು ನಿರೂಪಕರು ಪ್ರಾಣಿಹಿಂಸೆ ತ್ಯಾಗ ಮಾಡಿದರು (ಹಿಂದಪಾ. ೦೪). 'ಜೀವಹಿಂಸೆ' ಪರ್ಯಾ. [ಸಂ.. ಪ್ರಾಣಿಹಿಂಸಾ]

**ಪ್ರಾಣೇಶ** (ನಾ). ೧. ಗಂಡ ; ಪತಿ : ಪ್ರಾಣೇಶನ ಬರವಿಂಗಿವು ಮಾಣದೆ ಕೆತ್ತಿದಪುವೆಡದ ಕಣ್ಣುಂ ತೋಳುಂ ಪ್ರಾಣೇಶನ ಬರವಿಲ್ಲಂ (ಜಗಮ. ೦೦-೩೩); ಬರ್ಹಿವಧು ತಾಂ ಪ್ರಾಣಭಯದಿಂದೆ ಪ್ರಾಣೇಶನಂ ಮರಣಮುಖನಂ ಬಿಟ್ಟು . . . ಪಾರಿದಪುದು (ಚಕ್ರಾಂಗ. ೩೯-೦೪೧೦). ೨. ಪರಮಾತ್ಮ : ಈಶ ಸರ್ವೇಶ ಪ್ರಾಣೇಶ ನೀಂ ರಕ್ಷಿಪುದು (ದೀಕ್ಷಾಬೋ. ೪-೦೪); ಇತ್ತಲೀ ಪ್ರಾಣೇಶನಿದ್ದ ನಿಮಿತ್ತದಲಿ ಪಶುಗಳು ಬೆಳೆದ ಹೊಲದತ್ತ ತೆಗೆಯಲು (ಜಕಪು. ೬೦-೨೩). ೩. ಯಮ : ಪ್ರಾಣೇಶಂ ಬರ್ಕುವೆನ್ನನುಯ್ಯಲ ಮೋಘಂ (ಜಗಮ. ೦೦-೩೩). ೪. ಗಾಳಿಯ ಅಧಿದೇವತೆ ; ವಾಯು.
[ಸಂ.]

**ಪ್ರಾಣೇಶ್ವರ** (ನಾ). =ಪ್ರಾಣೇಶ ೧ : ಒರ್ವಳ್ ನಿಜಪ್ರಾಣೇಶ್ವರನನೆಂತುಂ ತನ್ನೊಳೆಳವಡಿಸಲಾರದೆ ನಿಜಪ್ರಿಯಸಖಿಗಿಂತೆಂದಳ್ (ಆದಿಪು. ೦೨-೩೩ ವ); ಪ್ರಾಣೇಶ್ವರನೊಳ್ ಮನ್ನಣೆಗಾಣೆಗೆ ಗೋಸನೆಗೆ ಸೂಟ ಪಾಟಿಗೆ ನಮ್ಮೊಳ್ಮಾಣದೆ ಮಚ್ಚರಿಪಂತಿರೆ ಹೂಣಿಸಿ ಮುಂಚಲ್ಕೆವೇಟ್ಕುಮೊರ್ವರಿನೊರ್ವರ್ (ಅನಂಪು. ೦೨-೦೩). [ಸಂ.]

**ಪ್ರಾಣೇಶ್ವರರಸ** (ನಾ). [ವೈದ್ಯಶಾ] ಪ್ರಾಣವಾಯುವು ಶ್ಲೇಷ್ಮವನ್ನು ಕತ್ತರಿಸಿ ಶ್ವಾಸ ನಿಶ್ವಾಸಗಳು ನೇರ್ಪಡುವಂತೆ ಮಾಡುವ ಒಂದು ಬಗೆಯ ಔಷಧಿ : ಶ್ವಾಸ ಬಿಕ್ಕುಳುಗಳೆಂಬ ಎರಡು ರೋಗಕ್ಕೂ ಪ್ರಾಣೇಶ್ವರರಸವ ಕೊಡುವುದೆಂದು ಅಶ್ವಿನೀದೇವತೆಗಳ್ನುನ್ನುಮೆ ವಚಿಸಿ ಇರ್ಪರು (ಸಕವ್ಯ. ೨೪೦). [ಸಂ.]

**ಪ್ರಾಣೇಶ್ವರಿ** (ನಾ). ೧. ಹೆಂಡತಿ ; ಪತ್ನಿ : ಆತನ ಪ್ರಾಣೇಶ್ವರಿ ವಜ್ರಮಾಲಿನಿ ಕಂಡು (ಶಾಂತಿಪು. ೪-೯೬ ವ); ದಿಲ್ಲೀಶ್ವರನ ಪ್ರಾಣೇಶ್ವರಿಯಾಗಲು ಯೋಗ್ಯೆಯಾದವಳು (ಕಥಾಕಂ. ೬೬). ೨. ನಲ್ಲೆ; ಪ್ರೇಯಸಿ : ಒರ್ವಂ ತನ್ನ ಪ್ರಾಣೇಶ್ವರಿಯ ಮೊಗಮಂ ನೋಡಿ (ಆದಿಪು. ೦೨-೦೩ ವ).
[ಸಂ. ಪ್ರಾಣೇಶ್ವರೀ]

**ಪ್ರಾಣೋಪ** (ನಾ). ಜೀವಕ್ಕೆ ಸಮವಾದವನು ; ಗಂಡ : ಪೋಪು ದುಚಿತವಲ್ಲ ಜೀಯ ಕೇಳ್ ದೈತ್ಯಚಮೂಪನ ಮಹದೈಶ್ವರ್ಯ ನೀ ಪರಿಗ್ರಹಿಸಿಕೊಂಡಿಹುದೆಂದು ರತಿಯ ಪ್ರಾಣೋಪಗೆ ಖಳಮಂತ್ರಿ ನುಡಿದ (ಪೋಪಕ. ೦೩-೯); ಅರಿದು ಭ್ರಮಿಸುವರೆ ಸ್ತ್ರೀಯು ಪ್ರಾಣೋಪಂಗೆ ಉತ್ತರಮನೀಯ (ಪಪಪೋ. ೯-೦೪). [ಸಂ.]

**ಪ್ರಾಣೋಪಕಾರ** (ನಾ). ಜೀವವನ್ನು ಉಳಿಸುವುದು ; ಕೊಲೆಯನ್ನು ತಪ್ಪಿಸುವುದು : ನಿಮ್ಮಡಿ ನೀಮೆನಗೆ ಪ್ರಾಣೋಪಕಾರಮಂ ಗೆಯ್ದಿರ್ (ಸಂಕಕಂ. ೦೦೦-೬) ; ಪ್ರಾಣೋಪಕಾರಮಂ ಕಲ್ಯಾಣಮನೆನಗಿತ್ತು ದೇವ ಶರಣಮುದ ನಿಮ್ಮಾ ತ್ರಾಣ ಪ್ರವೀಣ ಪರಮಪ್ರಾಣಿ ಹಿತಾಚರಣವಿತರ ಸಾಧಾರಣಮೇ (ಸಂಪಾಮು. ೭-೬೬). [ಸಂ.]

**ಪ್ರಾತ** (ನಾ). ಬೆಳಗು ; ಪ್ರಭಾತಸಮಯ : ವಸಂತಪ್ರಾತದಲ್ಲಿ ಬಿರಿದು ಅರಳುತ್ತಿರುವ ಗುಲಾಬಿಯಂತೆ ಇರುವ ಮುಖ (ಸಂಪುರ್ಣ. ೩೩).
[<ಸಂ. ಪ್ರಾತರ್]

**ಪ್ರಾತಃಕಾಲ** (ನಾ). ಬೆಳಗಿನ ಹೊತ್ತು ; ಹೊತ್ತಾರೆ : ಪ್ರಾತಃಕಾಲದಲ್ಲಿ ಅಗ್ರೋದಕವ ತಂದು ಲಿಂಗದನುವನರಿದು ಪಾದೋದಕವ ತಪ್ಪದೆ ಕೊಂಬುದು (ಚನ್ನಬ.ವ. ೦೦೫-೨೬೨) ; ಅವ್ಯಯಸವನಾಸಕ್ತ—ಅಂತರ್ಮುಖ . . . ಪುನಃಪಾಕ, ಪ್ರಾತಃಕಾಲ (ಶಮದ.೮೦ ಶ್ರಯೋ). [ಸಂ.]

**ಪ್ರಾತಃಸವನ** (ನಾ). ಬೆಳಗಿನ ಸಮಯದಲ್ಲಿ ಸೋಮರಸವನ್ನು ಅಗ್ನಿಗೆ ಆಹುತಿ ಮಾಡುವುದು : ಪ್ರಾತಃಸವನ ಮಾಧ್ಯಂದಿನವು ಸಾಯಮುಸವನಗಳು ವಸುರುದ್ರ ಆದಿತ್ಯರೊಳು ರಾಜಿಸುವ . . . ಮೂರ್ತಿತ್ರಯವ ಚಿಂತಿಸಿ ದಿವಸವೆಂಬಾಹುತಿಗಳಿಂದರ್ಚಿಸುತ ಸುಖಿಸುತಿರು (ಹಪಾರ. ೦೨-೩೪). [ಸಂ.]

**ಪ್ರಾತಃಸ್ನಾನ** (ನಾ). ಬೆಳಗಿನ ಹೊತ್ತು ಮಾಡುವ ಸ್ನಾನ : ಹೇಗೆ ಉದ್ಧಾರ ಮಾಡ್ವನು ಶ್ರೀಹರಿ . . . ಮರೆತು ಪ್ರಾತಃಸ್ನಾನ ಮಾಡದೆ ಮನೆಮನೆ ತೆಲಿನಾಗಿ ಬೆಸಗೊಂಡು ತಿಂಬವನ (ಶ್ರೀಕಂದ. ೦-೦೩೩-೦); ಪ್ರಾತಃಸ್ನಾನವ ಮಾಡಿ ರಕ್ಕಸರಾಯ ಭೂತೇಶನ ಪಾದಯುಗವ ಶ್ವೇತಾಬ್ಜದಿಂದರ್ಚಿಸಿ ದಾನವಬುಧವ್ರಾತಕೆ ಕೊಟ್ಟನುತ್ಸವದಿ (ಪೋಪಕ. ೦೦-೩೦).
[ಸಂ.]

**ಪ್ರಾತಃಸ್ಮರಣೀಯ** (ಗು). ೧. ಬೆಳಗಿನ ಹೊತ್ತು ಪ್ರಪ್ರಥಮವಾಗಿ

ಸ್ಮರಿಸಲು ಯೋಗ್ಯವಾದ : ವಿಜ್ಞಾನಾಸಕ್ತಿಯಿರುವವರೆಲ್ಲರಿಗೂ ಪ್ರಾತಃಸ್ಮರಣೀಯನಾದ ಮೈಕೇಲ್ ಫ್ಯಾರಡೆ (ವಿಜಾಸ. XIV ವಿಜಾರದರ್ಶನ). (ನಾ). ೨. ಲೋಕಕಲ್ಯಾಣವನ್ನು ಸಾಧಿಸಿರುವ, ದೇವತೆಗಳ ಸಾಲಿನಲ್ಲಿ ನೆನೆಯಲು ಯೋಗ್ಯನಾದ ವ್ಯಕ್ತಿ : ಇಂತಹ ಪ್ರಾತಃಸ್ಮರಣೀಯರಾದ ನಿರೀಹಪುರುಷರು ನಮ್ಮ ದೇಶದಲ್ಲಿರುವುದೇ ನಮ್ಮ ಭಾಗ್ಯೋದಯವು (ಚನ್ನಬೀ. ೦೨೬). [ಸಂ.]

**ಪ್ರಾತರಾಶ** (ನಾ). ಬೆಳಗಿನ ಊಟ ; ಪ್ರಾತಃಕಾಲದ ಭೋಜನ : ಭಿಲ್ಲನು ಇವರನ್ನು ನೋಡಿ ಪ್ರಾತರಾಶ(ಬೆಳಗಿನ ಭೋಜನ)ವು ಎಷ್ಟು ಹೊತ್ತಿಗೆ ಸಿದ್ಧವಾಗುವುದೆಂದು ಕೇಳಿದನು (ಚನ್ನಬೀ. ೩೪). [ಸಂ.]

**ಪ್ರಾತರ್ವಿಧಿ** (ನಾ). ಪ್ರಾತಃಕಾಲದಲ್ಲಿ ಮಾಡಬೇಕಾದ ದೇಹಶೌಚ, ಸಂಧ್ಯಾವಂದನಾದಿ ಕಾರ್ಯಗಳು ; ಬೆಳಗಿನ ಕರ್ತವ್ಯ : ಮರುದಿನ ಬೆಳಗ್ಗೆ ಕೃಷ್ಣನು ತನ್ನ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಸಿದ್ಧನಾಗಲು . . . ತಿಳಿಸಿದರು (ವಚಚಾ. ೨೫೦); ಬಾಣಸಿಗರೂ . . . ಹತ್ತಿರದ ಹಳ್ಳಕೆ ಹೋಗಿ ಪ್ರಾತರ್ವಿಧಿಗಳನ್ನೆಲ್ಲ ಮುಗಿಸಿಕೊಂಡು ಬಂದದ್ದಾಯಿತು (ಕಂಖಹು. ೨೪). [ಸಂ.]

**ಪ್ರಾತಿಕೂಲ್ಯ** (ನಾ). ವಿರೋಧ ; ಪ್ರತಿಕೂಲ : ನಾನು ಇನ್ನು ಮುಂದೆ ತಮಗೆ ಆನುಕೂಲ್ಯವನ್ನೇ ಮಾಡುತ್ತೇನೆ. ಪ್ರಾತಿಕೂಲ್ಯವನ್ನು ಮಾಡುವುದಿಲ್ಲ (ಹಿಂದಹಾ. ೨೬೩). [ಸಂ.]

**ಪ್ರಾತಿನಿಧಿಕ** (ಗು). ೧. ಪ್ರತಿನಿಧಿಸುವ : ಇದು ನವೀನಪ್ರಜ್ಞೆಯಲ್ಲಿ ಬರೆದ ಶ್ರೇಷ್ಠಕೃತಿಗಳ ಪ್ರಾತಿನಿಧಿಕಸಂಗ್ರಹವೇನಲ್ಲ (ಹೊಸಕ್ಷಿ. ೨೪೬) ; ಕರುಣರಸಾಸ್ವಾದನೆಯೂ ಶೃಂಗಾರಾದಿ ರಸಗಳ ಆಸ್ವಾದನೆಯಂತೆಯೇ ಸುಖಾತ್ಮಕವಾಗಿರುತ್ತದೆ ಎಂಬುದು ಭಾರತೀಯ ಕಾವ್ಯಮೀಮಾಂಸೆಯ ಪ್ರಾತಿನಿಧಿಕ ಅಭಿಪ್ರಾಯ (ಶ್ರೀಕೃಶ್ರ. ೩೦). (ನಾ). ೨. ಪ್ರತಿನಿಧಿಸಂವಂತಹುದು : ಅದೃಷ್ಟವಶಾತ್ ಗ್ರೀಕ್ ದುರಂತನಾಟಕದಲ್ಲಿ ಹೆಚ್ಚು ವಿಪುಲವಾದ ಮತ್ತು ಪ್ರಾತಿನಿಧಿಕವಾದ ಕೃತಿಸಮೂಹ ಉಳಿದು ಬಂದಿದೆ (ಸಾಹಿಪ್ರ. ೨೨೬). [ಸಂ.]

**ಪ್ರಾತಿನಿಧ್ಯ** (ನಾ). ಒಬ್ಬರ ಪ್ರತಿಯಾಗಿ ಅಧಿಕಾರವನ್ನು ವಹಿಸಿಕೊಂಡಿರುವುದು ; ಪ್ರತಿನಿಧಿತ್ವ : ಪ್ರೊ. ರೈಟ್ . . . ಪ್ರಾತಿನಿಧ್ಯ ದೊರಕಿಸಿಕೊಡುವದಾಗಿ ಸಮ್ಮೇಳನದ ಅಧಿಕಾರಿಗಳಿಗೆ ಪತ್ರ ಬರೆದು (ಧರ್ಮಸಾ. ೧೪). [ಸಂ.]

**ಪ್ರಾತಿಪದಿಕ** (ನಾ). [ವ್ಯಾಕ] ವಿಭಕ್ತಿಯ ಪ್ರಕಾರ ಸಿದ್ಧವಾದ ನಾಮಪದದ ಮೂಲರೂಪ : ಪ್ರಾತಿಪದಿಕಂಬೊಲಾತನಧಾತುಕನವಿಭಕ್ತಿಭೂಷಿತಂ ನಿಯತಾರ್ಥೋಪೇತಂ ನಿಶ್ಚಿತನಾಮಖ್ಯಾತಂ ತಾಂ ಪ್ರತ್ಯಯಾರ್ಹನಾದಂ ದಿವಿಜಂ (ಕರಚ. ೩-೨೪) ; ಸುಪ್ಪ್ರತ್ಯಯಕ್ಕೂ ಸ್ತ್ರೀಪ್ರತ್ಯಯಕ್ಕೂ ಪ್ರಕೃತಿಯಾದದ್ದು ಲಿಂಗವು ; ಈ ಲಿಂಗಕ್ಕೆ ಸಂಸ್ಕೃತವ್ಯಾಕರಣದಲ್ಲಿ ಪ್ರಾತಿಪದಿಕವೆಂದು ಹೆಸರು (ಹೊಸಗ. ೪). [ಸಂ.]

**ಪ್ರಾತಿಭ** (ಗು). ೧. ಪ್ರತಿಭೆಯಿಂದ ಕೂಡಿದ : 'ಪದಪದದಕ್ಕರಕ್ಕರದ ವಾಕ್ಯದ ವಾಕ್ಯದ' ಪರೆಪರೆಗಳನ್ನು ಉಜ್ಜಿ, ಬಿಚ್ಚಿ, ಬಿಡಿಸಿ ನೋಡುವ ಸೂಕ್ಷ್ಮದರ್ಶಕವಾದ ಸಹೃದಯತೆಯ ಪ್ರಾತಿಭನೇತ್ರ ಬೇಕು (ಸಾಹಿವಿ.೬೩). (ನಾ). ೨. ಹೊಸಹೊಸದಾಗಿ ವಿಷಯಗಳಂ ಹೊಳೆಯಿಸುವ ಬುದ್ಧಿ ; ಪ್ರತಿಭೆ. ೩. [ತರ್ಕಶಾ] ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿ, ಸಂಭವ, ಐತಿಹ್ಯ, ಲಿಪಿ, ಲೋಕಪ್ರಸಿದ್ಧಿ, ಚೇಷ್ಟೆ ಮತ್ತು ಪ್ರಾತಿಭಗಳೆಂಬ ಹನ್ನೆರಡು ಬಗೆಯ ಪ್ರಮಾಣಗಳಲ್ಲಿ ಒಂದು : ಪ್ರಮಾಣವು ಪ್ರತ್ಯಕ್ಷ . . . ಚೇಷ್ಟೆ, ಪ್ರಾತಿಭ ಎಂದು ಹನ್ನೆರಡು ವಿಧವೆಂದು ಕೆಲವರು ಹೇಳುತ್ತಾರೆ (ಹಿಂದಸಾ. ೦೩೩). [ಸಂ.]

**ಪ್ರಾತಿಭಾವ್ಯ** (ನಾ). ಹೊಣೆಗಾರಿಕೆ ಜಾಮೀನು : ಈಡು. [ಸಂ.]

**ಪ್ರಾತಿಭಾಸಿಕ** (ಗು). ೧. ತೋರಿಕೆಗೆ ಮಾತ್ರ ಕಾಣುವ ; ವಾಸ್ತವವಲ್ಲದ: ಕವಿಯ ಪ್ರಾತಿಭಾಸಿಕ ಅನುಭವದಿಂದ ನಾವು ಜೀವನದ ಸ್ವಾರಸ್ಯವನ್ನು ಕಂಡುಕೊಳ್ಳುತ್ತೇವೆ (ಸಾಸಮ. ೬೯). (ನಾ). ೨. ಭ್ರಮೆಯ ತತ್ಕಾಲದಲ್ಲಿ ಮಾತ್ರ ಸತ್ಯವೆನಿಸುವ ತೋರಿಕೆ ; ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯಿದೆಯೆಂಬ ಜ್ಞಾನವು ಪ್ರಾತಿಭಾಸಿಕವೆನಿಸುವುದು : ಪಾರಮಾರ್ಥಿಕ ವ್ಯಾವಹಾರಿಕ ಪ್ರಾತಿಭಾಸಿಕ ತುಚ್ಛವೆಂದು ಪದಾರ್ಥಗಳು ನಾಲ್ಕಾಗಿ ತಿಳಿಯಲಕ್ಕುಂ ಅವುಗಳೊಳು ರಜ್ಜುಭುಜಂಗ ಶುಕ್ತಿಕಾರಜತ ಮರುಮರೀಚಿಕಾದಿಗಳೇ ಪ್ರಾತಿಭಾಸಿಕಗಳು (ವಿವೇಕ. ೨೦) ; ಅನಿರ್ವಾಚ್ಯವು ವ್ಯಾವಹಾರಿಕ, ಪ್ರಾತಿಭಾಸಿಕ ಎಂದು ಎರಡು ವಿಧ. ವ್ಯಾವಹಾರಿಕವು ಗವಾದಿಗಳು, ಪ್ರಾತಿಭಾಸಿಕವು ಭ್ರಾಂತಿಯಲ್ಲಿ ತೋರಿ ಬರುವ ರಜ್ಜುಸರ್ಪಾದಿಗಳು (ಹಿಂದಸಾ. ೦೪೪). [ಸಂ.]

**ಪ್ರಾತಿವೇಶ್ಯ** (ನಾ). ೧. ಪಕ್ಕದ ಮನೆಯ ವ್ಯಕ್ತಿ ; ನೆರೆ. ೨. ಒಂದೇ ಮನೆಯ ಬೇರೆ ಭಾಗದಲ್ಲಿ ವಾಸಮಾಡುವ ವ್ಯಕ್ತಿ : ಸ್ತ್ರೀಯಿದ್ದ ಮನೆಯ ಬಿಟ್ಟು ಕೆಲದ ಮನೆಯೊಳಿರ್ಪನಂ ಪಾರ್ಶ್ವಸ್ಥನೆಂಬುದು ಇದ್ದ ಮನೆಯೊಳಿರ್ಪುದು ಪ್ರಾತಿವೇಶ್ಯನೆಂಬುದು (ಕಾಮಶಾ. ೨೩೨). [ಸಂ.]

**ಪ್ರಾತಿಶಾಖ್ಯ** (ನಾ). ವೇದದ ಪ್ರತಿಯೊಂದು ಶಾಖೆಗೂ ಇರುವ ವ್ಯಾಕರಣ : ನ್ಯಾಯ ವೈಶೇಷಿಕ . . . ಪ್ರಾತಿಶಾಖ್ಯ ಕಲ್ಪ ಹೋರಾದೋಹಳ ಧರ್ಮ ವೇದಾಂತ ಸಿದ್ಧಾಂತಗಳಲ್ಲಿ ಪ್ರಮಾಣಪ್ರಮೇಯೋಪನ್ಯಾಸ ದೃಷ್ಟಾಂತ ಸಮನ್ವಯಾದಿ ಸದ್ಯುಕ್ತಿ ನಿರೂಪಕರಾದ ವಾದಿಗಳಿಂ (ವಿವೇಕ. ೨೨೬). [ಸಂ. ಪ್ರಾತಿಶಾಖ್ಯ]

**ಪ್ರಾತಿಹಾರಕ** (ನಾ). ಯಕ್ಷಿಣಿ ಮಾಡುವವನು ; ಮಾಟಗಾರ ; ಗಾರುಡಿಗ : "ಮಾಯಾಕಾರಃ, ಪ್ರಾತಿಹಾರಕಃ — ೨ ಮಾಯೆ ಮಾಡುವವನ ಹೆಸರುಗಳು" (ಸಿದ್ಧಾಂತಿ. ೩೦೦). [ಸಂ.]

**ಪ್ರಾತಿಹಾರ್ಯ** (ನಾ). ೧. ಗಾರುಡಿ ; ಯಕ್ಷಿಣಿ. ೨. [ಜೈನ] ಕೇವಲಜ್ಞಾನವನ್ನು ಪಡೆದ ತೀರ್ಥಂಕರನಿಗೆ ಒದಗುವ ಅಶೋಕ ವೃಕ್ಷ, ದಿವ್ಯಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಆಸನ, ಭಾಮಂಡಲ, ದೇವದುಂದುಭಿ ಮತ್ತು ಆತಪತ್ರಗಳೆಂಬ ಎಂಟು ವಿಧದ ಸಂಪತ್ತು : ಪುರುಪರಮೇಶ್ವರನಂದನ ದೊರೆಕೊಳಿಸುಗೆ ನಿನಗೆ ತಡೆಯದಾ ಪುರುಪರಮೇಶ್ವರನ ನಿರತಿಶಯಗುಣಪರಿಕರಮುಂ ತತ್ಪ್ರಾತಿಹಾರ್ಯಮುಂ ಮಂಗಳಮುಂ (ಆದಿಪು. ೦೨-೩೩) ; ಯತಿಪಂ . . . ಚೈತ್ಯಕ್ಷಿತಿಜಾತಪ್ರಾಂತದೇಶಸ್ಥಿತ ಕನಕಮಯಪ್ರಾತಿಹಾರ್ಯಾಷ್ಟಕಾರ್ಹತ್ಪ್ರತಿಬಿಂಬಭ್ರಾಂತಿಯಂ ಮಾಡಿದಂ (ಚಂದ್ರಪ್ರ. ೨-೬೨). [ಸಂ.]

**ಪ್ರಾತ್ಯಕ್ಷಿಕ** (ಗು). ೧. ತನ್ನ ಕಣ್ಣುಗಳಿಂದಲೇ ನೋಡಿದ ; ಪ್ರತ್ಯಕ್ಷವಾಗಿ ನೋಡಿದ. (ನಾ). ೨. ಕಣ್ಣಾರೆ ನೋಡಿದುದು : ಪ್ರತಿತಾಳೆಯು ಕೇವಲ ಮಾನಸಿಕವಾಗಿರದೆ ಪ್ರಾತ್ಯಕ್ಷಿಕವಾಗಿರಬೇಕು (ಪ್ರವಿಂರ. ೩೩). [ಸಂ.]

**ಪ್ರಾತ್ಯಯಿಕ** (ಗು). ೧. ಬೇರೆಯಾದ ; ಪ್ರತ್ಯೇಕವಾದ : ಪ್ರಾತ್ಯಯಿಕ ಸೀಮೆ ಸೀಮೆಗೆ ಶಿಲಾಶಾಸನವ ಬರಸಿ (ಕಇಇ. XX, ೨೪೯-೦೫ ; 1547). (ನಾ). ೨. ಸಾಲಗಾರನಿಗೆ ಜಾಮೀನಾಗಿ ನಿಲ್ಲುವವನು : ಜಾಮೀನುದಾರ. [ಸಂ.]

**ಪ್ರಾತ್ಯಯಿಕಿ** (ನಾ). [ಜೈನ] ಇಪ್ಪತ್ತೈದಂ ಕ್ರಿಯೆಗಳಲ್ಲಿ ಒಂದು ; ಭೋಗ್ಯವಸ್ತುಗಳನ್ನು ಸಂಗ್ರಹಿಸುವುದು : ಪಂಚವಿಂಶತಿಕ್ರಿಯೆಗಳು —೧. ಸಮ್ಯಕ್ತ್ವಕ್ರಿಯೆ . . . ೧೩. ಪ್ರಾತ್ಯಯಿಕಿ (ಭೋಗ್ಯವಸ್ತುಸಂಗ್ರಹ), ೧೪. ಸಮಂತಾನುಪಾತ (ಪ್ರಾಣಿಗಳು ವಾಸಿಸುವಲ್ಲಿ ಮಲ

ಮೂತ್ರತ್ಯಾಗ) (ಶೈಶಥ. ೬೩). 'ಪಂಚವಿಂಶತಿಕ್ರಿಯೆ' ಪರಾ. [ಸಂ. ಪ್ರಾತ್ಯಯಿಕೀ]

**ಪ್ರಾಥಮಿಕ** (ಗು). ೧. ಮೊದಲನೆಯ ; ಪ್ರಾರಂಭದ : ಪ್ರಾಥಮಿಕ ವಾಲ್ಕನೆಯ ತರಗತಿಯೊಳು ಕಿರಿಯವನೋದುತಲಿಹನು (ಇಂಕಾಪ. ೩೬-೬೮). (ನಾ). ೨. ಮೊದಲನೆಯದು ; ಪ್ರಾರಂಭದ ಹಂತಕ್ಕೆ ಸೇರಿದುದು : ಈ ಅಕ್ಷರಸಂಜ್ಞೆಗಳ ಸರಿಯಾದ ಪರಿಜ್ಞಾನವೇ ಭಾಷಾಭ್ಯಾಸಕ್ಕೆ ಪ್ರಾಥಮಿಕವೆನಿಸುವ ಸಾಧನವೆಂದು ವೈಯಾಕರಣರು ಹೇಳುತ್ತಾರೆ (ಸಂಕೋಠ. ೦). ೩. ಮೊದಲನೆಯವನು : ತದಾಗಮದರ್ಥೋಕ್ತಿ ಪದಾರ್ಥಮಂದು ನಿಶ್ಚಯಿಪ ಪರಮದರುಶನೀನುತವಂ ಪ್ರಾಥಮಿಕಂ (ಸುಕುಮಾ. ೬-೨೬). [ಸಂ.]

**ಪ್ರಾಥಮಿಕವಿದ್ಯಾಭ್ಯಾಸ** (ನಾ). ಆರಂಭದ ವಿದ್ಯಾಭ್ಯಾಸ : ಲಚ್ಚನು ಈ ನಡುವೆ ತನ್ನ ಪ್ರಾಥಮಿಕವಿದ್ಯಾಭ್ಯಾಸವನ್ನು ಮುಂದುವರಿಸಿದನು (ಮರಳು. ೦೯೯). [ಸಂ.]

**ಪ್ರಾಥಮಿಕಶಾಲೆ** (ನಾ). ಪ್ರಾರಂಭದ ಶಿಕ್ಷಣವನ್ನು ನೀಡುವ ಶಾಲೆ ; ಪ್ರೈಮರಿಸ್ಕೂಲು: ಬೆಂಗಳೂರಿನ ಹತ್ತಾರು ಪ್ರಾಥಮಿಕಶಾಲೆಗಳ ಬಳಿಗೂ ರಾಯರು ಹೋಗಿ ನಿಂತಿದ್ದರು (ಕಂಜಹು. ೦೩೦). [ಸಂ. ಪ್ರಾಥಮಿಕಶಾಲಾ]

**ಪ್ರಾಥಮಿಕಶಿಕ್ಷಣ** (ನಾ). = ಪ್ರಾಥಮಿಕವಿದ್ಯಾಭ್ಯಾಸ : ಎಲ್ಲರೂ ಪ್ರಾಥಮಿಕಶಿಕ್ಷಣವನ್ನು ಪಡೆಯುವಂತಾದರೆ ಅವರು ಮುಂದೆ ತಮ್ಮ ಅಭಿರುಚಿ ಆಸಕ್ತಿಗಳನ್ನು ಬೆಳೆಸಿಕೊಂಡು ಸಮಾಜಕ್ಕೆ ತಮ್ಮ ವಿಶಿಷ್ಟಕಾಣಿಕೆಯನ್ನು ಸಲ್ಲಿಸಲು ಅವಕಾಶವಾಗುತ್ತದೆ (ಶಿಕ್ಷರ. ೦೩೬). [ಸಂ.]

**ಪ್ರಾದಕ್ಷಿಣ** (ನಾ). ಬಲಗಡೆಯಿಂದ ಸುತ್ತು ಹಾಕುವುದು; ಪ್ರದಕ್ಷಿಣೆ : ಕೂಡೆ ಪ್ರಾದಕ್ಷಿಣವ ಬಂದಡಿಮಾಡಿ ಕಾಯುವ ನೀಡಿ ಕರಣಗಳ ಬೇಡಿಕೊಂಡನು ಗುರುವೆ ಭವಗಳು ಬೇಡವೆನಗೆನುತ (ಗಗಕಾ. ೨-೨೦). [<ಸಂ. ಪ್ರಾದಕ್ಷಿಣ್ಯ]

**ಪ್ರಾದುರ್ಭವಿಸು** (ಕ್ರಿ). ಕಾಣಿಸಿಕೊಳ್ಳು ; ಹುಟ್ಟು ; ಆವಿರ್ಭವಿಸು : ವೇದವು ವ್ಯರ್ಥ, ವೇದವು ಅನರ್ಥ ಎನ್ನುವ ನಾಸ್ತಿಕವಾದ ಆಸ್ತಿಕರಲ್ಲಿಯೇ ಪ್ರಾದುರ್ಭವಿಸಿದಾಗ ವೇದಾರ್ಥನಿರ್ಣಯಕ್ರಮವನ್ನು ಮೀಮಾಂಸಾಕಾರರು ಕೈಗೊಂಡರು (ಭಾರದ. ೦೨೬). [ಪ್ರಾದುರ್ಭಾವ + —ಇಸು]

**ಪ್ರಾದುರ್ಭಾವ** (ನಾ). ಕಣ್ಣಿಗೆ ಕಾಣಿಸಿಕೊಳ್ಳುವುದು ; ಗೋಚರಿಸುವುದು; ಆವಿರ್ಭಾವ: ಕಾರ್ಯಸಿದ್ಧಿ ಪ್ರಾದುರ್ಭಾವಕ್ಕೆ ವಿಘ್ನಂ ಪಲವೊಳವೆಯಲ್ಲ[ರ್ದು]ಮೇ ಬಾರದು (ಶಂಶಭಾ. ೬-೩೦); ಅಂತು ಗರ್ಭನಿರ್ಭರ ಪ್ರಾದುರ್ಭಾವಮಾಗಿ ನವಮಾಸಂ ಶೀವೆ (ಜಗಂ. ೨-೯೬ ವ). [ಸಂ.]

**ಪ್ರಾದೇಶ** (ನಾ). ೧. ನೀಡಿದ ಹೆಬ್ಬೆರಳು ಮತ್ತು ತೋರುಬೆರಳುಗಳ ನಡುವಿನ ಅಳತೆ: "ಪ್ರಾದೇಶಮೆಂಬುದು ಒಚ್ಚೋಟು" (ಹಲಾಯು. ೯೯-೩೬೯); ಚಂದ್ರಾಪೀಡಂ ಅಂತ್ತದನೇಜು ದಿವ್ಯಾಜಿಯ ಮಹಾಜವಮಂ ಕಂಡು ಭುವನತ್ರಯಮಂ ಪ್ರಾದೇಶಮಾತ್ರಮಾಗಿ ಬಗೆದು (ಕಾದಂಪೂ. ೯೬೩). ೨. ಪ್ರದೇಶ; ಸ್ಥಳ. [ಸಂ.]

**ಪ್ರಾದೇಶನ** (ನಾ). ಕಾಣಿಕೆ ; ಕೊಡುಗೆ: "ತ್ಯಾಗಃ . . . ಪ್ರತಿಪಾದನಂ, ಪ್ರಾದೇಶನಂ, ಅಂಹತಿಃ – ೧೩ ಕೊಡುವುದಕ್ಕೆ ಹೆಸರುಗಳು" (ಸಿದ್ಧಾಂತಿ. ೨೨೨). [ಸಂ.]

**ಪ್ರಾದೇಶಿಕ** (ಗು). ೧. ಒಂದು ಪ್ರದೇಶಕ್ಕೆ ಸೇರಿದ,–ಸಂಬಂಧಿಸಿದ: 'ಪ್ರಾದೇಶಿಕಭಾಷೆ' ಪರಾ. (ನಾ). ೨. ಒಂದು ಪ್ರದೇಶಕ್ಕೆ ಸೇರಿದುದು,–ಸಂಬಂಧಿಸಿದುದು: ಪ್ರಾದೇಶಿಕವಾಗಿ ಇತರ ಮೌಲ್ಯಗಳನ್ನು ಅವಲಂಬಿಸಿರುವ ಕೌಶಲ್ಯವಾಗಿಯೇ ಉಳಿದುಕೊಂಡಿದೆ(ಶಿಕ್ಷದ. ೩೩೦). ೩. ಒಂದು ಪ್ರದೇಶಕ್ಕೆ ಸೇರಿದವನು : ದ್ಯಾವಾಪೃಥಿವೀಮೂರ್ತಿಗದಾಮಂ ಪ್ರಾದೇಶಿಕಂ ಪೊಣರ್ಕೆಗೆ ನೆಱೆವಂ (ಜಗಂ. ೧೭-೩). [ಸಂ.]

**ಪ್ರಾದೇಶಿಕಭಾಷೆ** (ನಾ). ಒಂದು ಪ್ರದೇಶಕ್ಕೆ ಸೀಮಿತವಾದ ನುಡಿ; ಸ್ಥಳೀಯಭಾಷೆ : ಇಲ್ಲಿ ನಮಗೆ ಪ್ರಾದೇಶಿಕಭಾಷೆಯ ತೊಂದರೆ ಬೇರೆ (ಹೇಮಂತ. ೨೨೯). [ಸಂ. ಪ್ರಾದೇಶಿಕಭಾಷಾ]

**ಪ್ರಾದೇಶಿಕಸೈನ್ಯ** (ನಾ). ಬೇರೆ ಬೇರೆ ಪ್ರಾಂತ್ಯಗಳಲ್ಲಿ ಶಾಂತಿರಕ್ಷಣೆಗಾಗಿ ವ್ಯವಸ್ಥೆ ಮಾಡಿರುವ (ಕೇಂದ್ರದ) ಸೈನ್ಯ: "ದೇಶರಕ್ಷಣೆಗೆ ಪ್ರಾಂತವಾರಾಗಿ ವ್ಯವಸ್ಥೆ ಮಾಡಿದ ಸೈನ್ಯ: ಪ್ರಾದೇಶಿಕಸೈನ್ಯ"(Territorial army. ಇಂಕಶ). [ಸಂ.]

**ಪ್ರಾದೋಷಿಕ** (ಗು). ೧. ಸಾಯಂಸಂಧ್ಯೆಗೆ ಸಂಬಂಧಿಸಿದ. (ನಾ). ೨. [ಜೈನ] ಇಪ್ಪತ್ತೈದು ಕ್ರಿಯೆಗಳಲ್ಲಿ ಒಂದು; ಕೋಪಾವೇಶದಲ್ಲಿ ಇತರರನ್ನು ತಿರಸ್ಕಾರ ಅಥವಾ ನಿಂದೆಗೆ ಗುರಿಮಾಡುವುದು : ಪಂಚವಿಂಶತಿಕ್ರಿಯೆಗಳು :–೧ ಸಮ್ಯಕ್ತ್ವಕ್ರಿಯೆ . . . ೬. ಪ್ರಾದೋಷಿಕ (ಕ್ರೋಧಾವೇಶದಲ್ಲಾಗುವ ಪ್ರಮಾದ) (ಶೈಶಥ. ೬೩). 'ಪಂಚವಿಂಶತಿಕ್ರಿಯೆ' ಪರಾ. [ಸಂ.]

**ಪ್ರಾಧಾನ್ಯ** (ನಾ). ಪ್ರಧಾನತೆ ; ಪ್ರಾಮುಖ್ಯ : ಟೀಕಕರು . . . ಕರ್ಮಯೋಗಕ್ಕೇನೇ ಹೆಚ್ಚು ಪ್ರಾಧಾನ್ಯವಿತ್ತಿರಬಹುದು (ಧರ್ಮಜಾ. ೦೪೯); ಯುರೋಪುಖಂಡದಲ್ಲಿ ಅವನ ಪ್ರಾಧಾನ್ಯವು ತಗ್ಗುತ್ತಿರುವಂತೆ ಕಂಡರೂ... ಅವನ ಮಹತ್ತ್ವವು ನವಜೀವನವನ್ನು ಪಡೆಯಲಾರಂಭಿಸಿದೆ (ಅಂಕಾ. ೨). [ಸಂ.]

**ಪ್ರಾಧಾನ್ಯತೆ** (ನಾ).–ಪ್ರಾಧಾನ್ಯ : ನಿನಗೆ ವಯಸ್ಸು ಎಷ್ಟೇ ಆಗಿರಲಿ, ಅದರ ಪ್ರಾಧಾನ್ಯತೆಯಿಲ್ಲ (ಹೇಮಂತ. ೩೬೨). ☞ ಇದು ವ್ಯಾಕರಣಬದ್ಧ ರೂಪವಲ್ಲ. [ಪ್ರಾಧಾನ್ಯ + –ತೆ]

**ಪ್ರಾಧಿಕಾರ** (ನಾ). ೧. ವಿಶೇಷವಾದ ಅಧಿಕಾರ; ಹೆಚ್ಚಿನ ಅಧಿಕಾರ: ಪರಂತು ಪಾಕಿಸ್ಥಾನದ ಈಗಿನ ರಾಜ್ಯಕ್ಷೇತ್ರಕ್ಕೆ ಪ್ರವಚನಮಾಡಿದ್ದು ಮತ್ತೆ ಭಾರತದಲ್ಲಿ ನೆಲಸುವುದಕ್ಕಾಗಿ ಅಥವಾ ಖಾಯಮಾಗಿ ಭಾರತಕ್ಕೇ ಹಿಂತಿರುಗುವುದಕ್ಕಾಗಿ ಯಾವುದಾದರೂ ವಿಧಿಯಿಂದ ಅಥವಾ ಯಾವುದಾದರೂ ವಿಧಿಯ ಪ್ರಾಧಿಕಾರದ ಮೇರೆಗೆ ಕೊಡಲಾದ ಅನುಜ್ಞೆ (ಭಾರಸಂಸ. ೫). ೨. ವಿಶೇಷವಾದ ಅಧಿಕಾರವನ್ನು ಕೊಟ್ಟು ಸ್ಥಾಪಿಸಿರುವ ಸರಕಾರದ ಒಂದು ಸಂಸ್ಥೆ ಅಥವಾ ವ್ಯವಸ್ಥೆ : ಕರ್ನಾಟಕ ಸರಕಾರವು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವನ್ನು ಸ್ಥಾಪಿಸಿದೆ (ರೂಢಿ). [ಸಂ.]

**ಪ್ರಾಧಿಕಾರಿ** (ನಾ). ಹೆಚ್ಚಿನ ಅಧಿಕಾರವುಳ್ಳವನು ; ವಿಶೇಷ ಅಧಿಕಾರಿ : ಉಚ್ಚತಮ ನ್ಯಾಯಾಲಯದ ನ್ಯಾಯಾಧೀಶ ಪದಧಾರಣೆ ಮಾಡಿದ್ದವರು ಯಾರೊಬ್ಬರೇ ಆಗಲಿ . . . ಯಾವುದೇ ಪ್ರಾಧಿಕಾರಿಯ ಸಮಕ್ಷಮ ವಕೀಲತ್ತನ್ನಾಗಲಿ ಕಾರ್ಯವನ್ನಾಗಲಿ ನಡೆಯಿಸತಕ್ಕದಲ್ಲ (ಭಾರಸಂ. ೬೬). [ಸಂ. ಪ್ರಾಧಿಕಾರಿನ್]

**ಪ್ರಾಧ್ಯಾಪಕ** (ನಾ). ಪ್ರಧಾನ ಅಧ್ಯಾಪಕ; ಮುಖ್ಯೋಪಾಧ್ಯಾಯ : ವಿದ್ಯಾಲಯಗಳಲ್ಲೂ ಸಹ ಪ್ರಾಧ್ಯಾಪಕರು . . . ಪ್ರಮಾಣ ಮಾಡಬೇಕಾಯಿತು (ಮುಕ್ತಾರ. ೦೭ ಶೀಳಿಕೆ); ಮುಂದೆ ವಿಶ್ವವಿದ್ಯಾನಿಲಯದಲ್ಲಿ ಆತ ಹಿರಿಯ ಪ್ರಾಧ್ಯಾಪಕನಾಗಿ ತಮಗೆ ಗೌರವ ತರಬೇಕೆಂಬ ಬಯಕೆ ಅವರಿಗಿತ್ತು (ರಂಗವ. ೦೨೦). [ಸಂ.]

**ಪ್ರಾಧ್ವ** (ಗು). ೧. ದೂರದ; ದೂರದಲ್ಲಿರುವ. ೨. ಬಗ್ಗಿದ ; ಬಾಗಿರುವ. ೩. ಕಟ್ಟಿದ; ನಿರ್ಮಿಸಿದ. ೪. ಅನುಕೂಲಕರವಾದ ; ಸಹಾಯಕವಾದ. ೫. ಪ್ರಯಾಣ ಮಾಡುತ್ತಿರುವ. (ನಾ). ೬. ಸಾಗಿಸುವ ಸಾಧನ ; ವಾಹನ. ೭. ಪ್ರಾರಂಭ ; ಉಪಕ್ರಮ. ೮. ದೂರದ ಪ್ರಯಾಣ. ೯. ಕಟ್ಟುವಿಕೆ ; ಬಂಧನ. ೧೧. ಗೇಲಿ ; ತಮಾಷೆ ; ಹಾಸ್ಯ. [ಸಂ.]

**ಪ್ರಾಪಂಚಿಕ** (ಗು). ೧. ಪ್ರಪಂಚಕ್ಕೆ ಸಂಬಂಧಿಸಿದ. ೨. ಲೋಕ

ವ್ಯವಹಾರದ; ಲೌಕಿಕವಾದ; ಐಹಿಕ : ಅವಳ ಜೀವನ ಪ್ರಾಪಂಚಿಕ ಭೋಗವಿಲಾಸಗಳಿಗೆ ಮಾರುಹೋಯಿತು (ಕ್ಷಿಪರು. ೩೬೦). (ನಾ). ೩. ಲೋಕವ್ಯವಹಾರ ; ಲೌಕಿಕತೆ : ಪ್ರಾಪಂಚಿಕವನಱಿಯದೆ ಪರಮ ಭಕ್ತಂ ಚಮತ್ಕೃತಿಯಿಂದೆ ಕಿನ್ನರವೀಣೆಯಂ ಪಿಡಿದು. . . ಕೇಳಿಸಲು (ಬಸವು. ೨೬–೩). ೪. ಲೋಕವ್ಯವಹಾರವನ್ನು ಬಲ್ಲ ವ್ಯಕ್ತಿ; ಲೌಕಿಕ ವ್ಯಕ್ತಿ : ಗುರುಗೋವಿಂದಭಟ್ಟರು ಪ್ರಾಪಂಚಿಕರು (ಕಾಲಚ. ೩೪ ಕರ್ನಾಟಕ ಹುಟ್ಟು) ; ನಾನೊಳ್ಳೆಯ ಪ್ರಾಪಂಚಿಕಳು. ನನ್ನ ಸಂಗ್ರಾಹಕಬುದ್ಧಿಯೂ ಆಶ್ಚರ್ಯಕರವಾದದ್ದು (ಸ್ಮೃತಿಚಿ. ೩೦೯). [ಸಂ.]

**ಪ್ರಾಪಕ** (ಗು). ೧. ಪಡೆಯುವ; ಹೊಂದುವ. (ನಾ). ೨. ಪಡೆದುದು; ಹೊಂದಿದುದು : ನಿರತಿಶಯನಿಜಾನಂದಸುಧಾರಸಸ್ಯಂದಿ ಚಿನ್ಮಯನಿಜಾತ್ಮಸ್ವರೂಪಪ್ರಾಪಕವುಂ (ಉಷಾರ. ೫೦–೩೦೨ ಪ). ೩. ಪಡೆದವನು; ಹೊಂದಿದವನು : ಪಾಪಪುಣ್ಯಗಳು ಬರಲಾಪವೇ ನಿನ್ನುಳಿದು ಪ್ರಾಪಕನು ನೀನು ಇರಲಾಗಿ (ಕಳಹ. ೨೦೨). [ಸಂ.]

**ಪ್ರಾಪಣ** (ನಾ). ೧. ಹೊರಿದುವುದು; ಪಡೆಯುವುದು. ೨. ತೆಗೆದು ಕೊಳ್ಳುವುದು ; ಸ್ವೀಕರಿಸುವುದು : ನಿಮ್ನುಟಕ್ಷೇತ್ರದೊಳ್ ಪುಟ್ಟುವ ಜೀವಕ್ಕೆ ನಿಮ್ನುಟಕ್ಷೇತ್ರಾನುಪೂರ್ವ್ಯನುಶ್ರೇಣ್ಯಜಗತ್ಪ್ರಭಾವಂ ನಿಮ್ನುಟಕ್ಷೇತ್ರ ಪ್ರಾಪಣನಿಮಿತ್ತಂ ಶ್ರಿವಿಗ್ರಹಗತಿಯಕ್ಕುಂ (ತತ್ತ್ವಸೂತ್ರ. ೦೦೦); ಮತ್ತಂ ಮುತ್ಪಾದಿತ ಘ್ರಾಣೇಂದ್ರಿಯಪ್ರಾಪಣಂಗಳಪ್ಪ ಗಂಧಾಪಣಂಗಳೊಳ್ (ಕಂಪ್ರಕೃ. ೦–೦೨೯) ೩. ಸ್ಪಷ್ಟಪಡಿಸುವುದು; ಸ್ಪಷ್ಟೀಕರಣ; ವಿವರಣೆ. [ಸಂ.]

**ಪ್ರಾಪಣಿಕ** (ನಾ). ವ್ಯಾಪಾರ ಮಾಡುವವನು; ವ್ಯಾಪಾರಿ; ವರ್ತಕ : "ವಣ್ಯಾಜೀವಃ, ವಣಿಕ್, ಪ್ರಾಪಣಿಕಃ, ನೈಗಮಃ, ನೈದೇಹಃ — ಈ ೫ ಹರದಂ" (ಹಲಾಯು. ೯೩–೫೦೭). [ಸಂ.]

**ಪ್ರಾಪನ್ನ** (ನಾ). ಮರೆಹೊಕ್ಕವನು ; ಶರಣಾಗತ : ಎನ್ನ ಪಾಲಿಸಿ ದಂದದಿ ಸಕಲ ಪ್ರಾಪನ್ನರ ಸಲಹೊ (ಜಗದಾ. ೦೩೭). [<ಸಂ. ಪ್ರಪನ್ನ]

**ಪ್ರಾಪ್ತ** (ಗು). ೧. ಪಡೆದ; ದೊರೆತ ; ಲಬ್ಧವಾದ : ಶ್ರೀಷೇಣ ಭೂಪತಿ . . . ಪ್ರಾಪ್ತಸಪ್ತಪರಮಸ್ಥಾನನಾದಂ (ಚಂದ್ರಪ್ರ. ೪–೨೪ ಪ). ೨. ಯೋಗ್ಯವಾದ; ತಕ್ಕ : 'ಪ್ರಾಪ್ತವಯಸ್ಕ' ಪರಾ. (ನಾ). ೩. ದೊರೆತುದಂ ; ಲಾಭ ; ಲಬ್ಧ : ಒಂದು ಮುಗಿಯುವುದ ರೊಳಗೆ ಇನ್ನೈದು ಪ್ರಾಪ್ತ (ಶಾಂತಲಾ. ೨೪೪). ೪. ಯೋಗ್ಯವಾದುದಂ; ತಕ್ಕುದು : "ಯುಕ್ತಂ, ಉಚಿತಂ, ನ್ಯಾಯಂ, ಪ್ರಾಪ್ತಂ, ಔಪಯಿಕಂ — ಈ ೬ ಉಚಿತಂ" (ಹಲಾಯು. ೦೨೩–೬೦). ೫. ತಿಳಿದವನು; ಪಂಡಿತ : "ಸೂರಿ, ಮೇಧಾವಿ. . . ಪ್ರಾಪ್ತಂ, ವಿಶಾರದಂ. . . ವಿದ್ವಾಂಸನೆನಿಸಿಕ್ಕು" (ಮಂಗರಾ. ೬೬–೨). [ಸಂ.]

**ಪ್ರಾಪ್ತವಯಸ್ಕ** (ನಾ). ಯೋಗ್ಯವಾದ ವಯಸ್ಸನ್ನು ಮುಟ್ಟಿದವನು; ಪ್ರೌಢ : ಅವನು ಪ್ರಾಪ್ತವಯಸ್ಕನಾದನು (ಕ್ಷಿಪರು. ೬೦) ; ಈ ಕಾಯಿಲೆ ಹೆಚ್ಚಾಗಿ ಮಕ್ಕಳಿಗೆ ಮತ್ತು ಪ್ರಾಪ್ತವಯಸ್ಕರಿಗೆ ಬರುತ್ತದೆ (ಕಂಠೀಃ. ೬೬). [ಸಂ.]

**ಪ್ರಾಪ್ತಿ** (ನಾ). ೧. ಪಡೆಯುವಿಕೆ ; ಹೊಂದುವಿಕೆ. ೨. ಸೇರುವಿಕೆ ; ತಲುಪುವಿಕೆ. ೩. ದೊರಕಿದುದಂ ; ಲಭ್ಯವಾದುದು ; ಲಾಭ : ಪ್ರಾಪ್ತಿಯನಸಕಟಿಯಿಲುಮಪ್ರಾಪ್ತಿಯನಾಗಿಸಲುಮಾಗದದಱಿಂ ದೋಷಾ ವಾಪ್ತಿಯನೇಂ ನಿಮ್ಮನ್ನರ್ ಸುಪ್ತರವೋಲ್ಮೋಹಮೂರ್ಛೆಯಿಂ ತಾಳ್ದು ವರೇ (ಶಂಕರಾಮಾ. ೬–೦೨೦). ೪. ಸುದೈವ ; ಅದೃಷ್ಟ : ಪ್ರಾಪ್ತಿ ಇಲ್ಲದ್ದಕ್ಕೆ ಬಾಯಿ ಬಿಟ್ಟರೆ ಬರುತ್ತದೆಯೆ ? (ಶ್ರೀಕಹ. ೦೩೪). ೫. ಸಾಧ್ಯವಾದುದು; ಶಕ್ಯವಾದುದು : ಕಂತುಹರನ ಸಮಾನವನಿಪ ಮಹಂತರುಗಳೆಂತರವನಱಿಸಲು ಪ್ರಾಪ್ತಿಯೇ ನಿನಗೆ (ಬಸವು. ೦೨–೦೦). ೬. [ಯೋಗ] ಎಂಟು ಬಗೆಯ ಸಿದ್ಧಿಗಳಲ್ಲಿ ಒಂದು ; ಯಾವುದನ್ನು ಬೇಕಾದರೂ ಪಡೆಯುವ ಶಕ್ತಿ: ಮಹರ್ಧಿಕದೇವರಾಗಿ ಅಣಿಮಾ ಮಹಿಮಾ ಲಘಿಮಾ ಪ್ರಾಪ್ತಿ ಪ್ರಾಗಲ್ಭ್ಯ ವಿಶತ್ವ ಮತ್ತ್ತ ಕಾಮರೂಪಿತ್ವಮೆಂದೀ ಅಷ್ಟಗುಣೈಶ್ವರ್ಯಂಗಳೊಳ್ ಕೂಡಿ (ಚಣ್ಣಾರಾ. ೯೬–೩). [ಸಂ.]

**ಪ್ರಾಪ್ತಿಸು** (ಕ್ರಿ). ಉಂಟಾಗು ; ಒದಗು ; ಲಭಿಸು : ಇಕ್ಕುವ ಸೂಲ ಪ್ರಾಪ್ತಿಸಲಿ . . . ಮತ್ತೆಯೂ ಲಿಂಗಾರಾಧನೆಯ ಮಾಡುವೆ (ಬಸವ. ೬೦೬); ಮಾತಂಗಸಂಗತಮಿತ್ರದ್ರೋಹವು ಪ್ರಾಪ್ತಿಸುವುದು (ಬಸವು. ೬೦–೦೦) ; ಮಳೆ ಹೆಚ್ಚಿ, ನೀರ ಒರತೆ ಪ್ರಾಪ್ತಿಸಿ, ಬೆಟ್ಟದ ಮಗ್ಗುಲುಗಳು ಎಷ್ಟೋ ಕಡೆಗಳಲ್ಲಿ ಜರಿದು, ಹೀಗೆ ಕುಸಿದು ಮುಕ್ಕುಗೊಂಡಿದ್ದವು (ಕುಂಡಕೂ. ೩೦೩).

[ಪ್ರಾಪ್ತಿ + — ಇಸ್ಸು]

**ಪ್ರಾಪ್ತ್ಯಾಶೆ** (ನಾ). [ಕಾವ್ಯಮೀ] ನಾಟಕದ ಕಥಾಸಂವಿಧಾನದಲ್ಲಿ ಇರುವ ಆರಂಭ, ಯತ್ನ, ಪ್ರಾಪ್ತ್ಯಾಶಾ, ನಿಯತಾಪ್ತಿ ಮತ್ತು ಫಲಾಗಮಗಳೆಂಬ ಐದು ಹಂತಗಳಲ್ಲಿ ಮೂರನೆಯದಂ ; ಫಲವನ್ನು ಪಡೆಯುವ ಆಸೆಯನ್ನು ಸೂಚಿಸುವ ಅಂಕ : ಪ್ರಾಪ್ತ್ಯಾಶೆ ಸಾಧನೋ ಪಾಯಗಳೂ ಅವುಗಳಿಗೆ ಅಡಚಣೆಗಳೂ ಇರುವುದರಿಂದ ಫಲಪ್ರಾಪ್ತಿ ಆದರೂ ಆಗಬಹುದೆಂಬ ಸಂಭವ (ಕೃಬಿಡಿ. ೨೦೬). [ಸಂ. ಪ್ರಾಪ್ತ್ಯಾಶಾ]

**ಪ್ರಾಪ್ಯ** (ಗು). ೧. ಪಡೆಯಬಹುದಾದ ; ಹೊಂದಲು ಯೋಗ್ಯ ವಾದ. (ನಾ). ೨. ಪಡೆಯಬಹುದಾದುದು : ಪ್ರಾಪ್ಯವೆಂದು ಎಯ್ದಲ್‌ಪಡುವುದು (ಕಮುದ. ೦೨೬ ವೃತ್ತಿ). (ನಾ). ೩. ದೊರೆಯು ವವನು ; ಲಭಿಸುವವನು : ಹಾಲು ಮೊಸರಂದದ ವಿಕಾರ್ಯನು ಕೇಳು ಸ್ವರ್ಗದ ವೋಲು ಪ್ರಾಪ್ಯನು (ಅಮೃತ. ೬–೨೦). [ಸಂ.]

**ಪ್ರಾಬಲ್ಯ** (ನಾ). ೧. ಹೆಚ್ಚಳ ; ಆಧಿಕ್ಯ : ಈ ರೋಗದ ಪ್ರಾಬಲ್ಯ ವನ್ನು ತಡೆಯಬೇಕಾದರೆ . . . ಮರಿಗಳ ಬೆಳವಣಿಗೆಗೆ ನೆರ ವಾಗುವ ಸನ್ನಿವೇಶಗಳನ್ನು ಹತೋಟಿಯಲ್ಲಿಡಬೇಕು (ಪ್ರಾಣಿಕಾ. ೦೬೨). ೨. ಸಾಮರ್ಥ್ಯ ; ಪ್ರಭಾವ : ವಿಶೇಷವಾಗಿ ಕಲಿಯ ಪ್ರಾಬಲ್ಯದಿಂದ ಈಗ ಇಂತಹ ಕಾರ್ಯಕ್ಕಾರೂ ಸಹಕಾರಿಗಳಾಗುವುದಿಲ್ಲ (ಕವಾಕಂ. ೦೦೬). ೩. ಏಳಿಗೆ ; ಅಭ್ಯುದಯಂ : ಉತ್ತರಖಂಡದಲ್ಲಿ ಅಲ್ಲಲ್ಲಿ ತುರುಷ್ಕರ ಪ್ರಾಬಲ್ಯವಿದ್ದಿತೆಂಬುದು ನಿಜ (ಶ್ರೀರಾಯ. ೦೩೪). [ಸಂ.]

**ಪ್ರಾಬೋಧಿಕ** (ನಾ). ೧. ಬೆಳಗಿನ ಕಾಲ ; ಮುಂಜಾವು ; ಪ್ರಾತಃ ಕಾಲ. ೨. ರಾಜನನ್ನು ಉದಯಕಾಲದಲ್ಲಿ ಎಬ್ಬಿಸಲು ಹೊಗಳಿ ಹಾಡುವ ಸ್ತುತಿಪಾಠಕ. [ಸಂ.]

**ಪ್ರಾಭಂಜನ** (ನಾ). ಗಾಳಿ ; ವಾಯುಂ : ಕಂಜವ್ಯಜನಘನನಿರ್ಧೂತ ಪ್ರಾಭಂಜನ ಕಂಜಾಂಬಕ ಪೂಜಿತಪದಕಂಜಮುನಿನುತ ಧನಂಜಯನಯನ ಧನಂಜಯವರದ ಜಯ (ಉದ್ಭಟದೇ. ೬೯–೨೨). [<ಪ್ರಭಂಜನ]

**ಪ್ರಾಭವ** (ನಾ). ಅತಿಶಯತೆ ; ಹೆಚ್ಚುಗಾರಿಕೆ ; ಮೇಲ್ಮೆ : ಇಂತಿದು ವಿಸ್ತಾರಿತ ಕಾಮಹೋಮಹುತ ಭುಕ್ಪ್ರಜ್ವಾಲೆಯೋ ಎಂಬ ಸಂಪದಮಂ ಬೀಱುದುದಿಂದ್ರದಿಗ್ವಿವರದೊಳ್ ಚಂದ್ರದ್ಯುತಿಪ್ರಾಭವಂ (ಗಿಂಕ. ೪–೯೪); ಎಮಗೆ ರಚಿಸಿತು ರಾಜ್ಯವಿಭ್ರಂಶವನು ತತ್ಸುಕೃತೋದಯ ಪ್ರಾಭವವೆ ತಿರುಗಿಸಿತೆಂದು ನೆಯದಲಿ ಧರ್ಮಸುತ ನುಡಿದ (ಕುಮ್ಯಾಗ. ೧೦–೪೪). [ಸಂ.]

**ಪ್ರಾಭಾಕರ** (ಗು). ೧. ಪೂರ್ವಮೀಮಾಂಸಾಪ್ರಚಾರಕನಾದ ಪ್ರಭಾ ಕರನಿಗೆ ಸಂಬಂಧಿಸಿದ : ಧರ್ಮವೆಂಬುದು ಸುಖಕ್ಕೆ ಸಾಧನೆಯೆಂಬುದು ಭಾಟ್ಟಮತವಾದರೆ ಧರ್ಮವೇ ಈ ಪುರುಷಾರ್ಥವೆಂಬುದು ಪ್ರಾಭಾಕರ ಮತ (ಭಾರಿಚ. ೦೨೪). (ನಾ). ೨. ಪ್ರಭಾಕರನಂ ಬೋಧಿಸಿದ ಮತ. ೩. ಪೂರ್ವಮೀಮಾಂಸಾ ಪ್ರಚಾರಕನಾದ ಪ್ರಭಾಕರನ ಮತದ ಅನುಯಾಯಿ : ಚಾರ್ವಕ ಬೌದ್ಧ ಸಾಂಖ್ಯರುಖರ್ವ ಪ್ರಾಭಾಕರರ್ . . .

ಉರ್ವೀಶನ ಸಭೆಯೊಳಿರ್ದರತಿಮುದದಿಂ (ಚಾರಕೃ. ೬-೧೨) ; ಪ್ರಾತಿಜ್ಞಾನದಲ್ಲಿಯೂ ಆತ್ಮನು ಪ್ರತ್ಯಕ್ಷನಾಗಿರುವನು ಎಂದು ಪ್ರಾಭಾಕರರು ತಿಳಿಯುವರು (ಭಾತತ್ತ್ವ. ४०೩). [ಸಂ.]

**ಪ್ರಾಭಾತ** (ನಾ). ಬೆಳಗಿನ ಕಾಲ ; ಪ್ರಾತಃಕಾಲ : ಕುಂಕುಮದ ತೀರ್ಥದೊಳ್ ಮಿಂದೇಳ್ವ ಫಾಲ್ಗುಣ ಪ್ರಾಭಾತರವಿಯಂತೆ ಮೆರೆದುದು ವದನಮಂಡಲಂ (ಶ್ರೀರಾಪಟ್ಟಾ. ೦೩-೩೩೯). [ಸಂ.]

**ಪ್ರಾಭಾತಿಕ** (ಗು). ಬೆಳಗಿನ : ಪ್ರಾತಃಕಾಲದ : ಸಕಲ ಪ್ರಾಭಾತಿಕ ಕ್ರಿಯೆಯಂ ನಿರ್ವರ್ತಿಸಿ (ಆದಿಪು. ೦೩-೨೦ ವ) ; ಅಂತು ಚಿಂತಿಸುತಿರ್ದಿರುಳಂ ಕಳೆದು ಬೆಳಗಪ್ಪುದುಂ ಕೃತಪ್ರಾಭಾತಿಕ ನಿಯಮನಾಗೆ ಮಹಾಶ್ವೇತೆಯುಮಘಮರ್ಷಣನಿಯಮಜಪಂಗಳಂ ಮಾಡುತಿರ್ದಳ್ (ಕಾದಂಬೂ. ೯೮೬). [ಸಂ.]

**ಪ್ರಾಭೃತ** (ನಾ). ೧. ರಾಜ, ದೇವತೆ ಮೊದಲಾದ ಹಿರಿಯರ ಸಂದರ್ಶನಕ್ಕೆ ಹೋದಾಗ ಕೊಡುವ ಕಾಣಿಕೆ, — ನಜರು : "ಪ್ರಾಭೃತಂ . . . ಉಪದಾ— ೬ ರಾಜದರ್ಶನಾರ್ಥವಾಗಿ ತರತಕ್ಕ ಕಾಣಿಕೆ, ನಜರ್ ಮುಂತಾದಕ್ಕೆ ಪೆಸರು" (ಸಿದ್ಧಾಂತಿ. ೨೯೩); ನಿಜೋಚಿತ ಸ್ಥಾನದೊಳ್ಕಿದಾಸನದೊಳ್ ಕುಳ್ಳಿರ್ದುದುಮನಂತರಮರಸನಾ ಪ್ರಾಭೃತಂ ಕೋಶಾಧ್ಯಕ್ಷರಿಂ ಕೈಕೊಳಲ್ವೇಟ್ಟು (ಪರ್ಣಪುಟಾ. ೩-೩೬ ವ) ; ಪ್ರಾಭೃತತ್ರಯಗಳನುರ್ವಿ ಸೋಂಕದೆ ತರಲು (ನಾಗಕು. ೦-೯). ೨. ಕಾರ್ಯವನ್ನು ಸಾಧಿಸುವ ಉದ್ದೇಶದಿಂದ ನ್ಯಾಯವಿರುದ್ಧವಾಗಿ ಕೊಡುವ ಹಣ ; ಲಂಚ ; ರುಷುವತ್ತು. [ಸಂ.]

**ಪ್ರಾಮಾಣಿಕ** (ಗು). ೧. ಅಳತೆಗೆ ಸಿಕ್ಕಿದ ; ಪ್ರಮಾಣದ. ೨. ಆಧಾರದಿಂದ ಸಾಬೀತು ಪಡಿಸಿದ ; ಪ್ರಮಾಣದಿಂದ ಸಿದ್ಧವಾದ. ೩. ವಿಶ್ವಾಸಾರ್ಹವಾದ ; ನಂಬಿಕೆಗೆ ಅರ್ಹವಾದ. (ನಾ). ೪. ವಿಶ್ವಾಸಾರ್ಹವಾದುದು : ಅವರ ಈ ವಿಧಾನಕ್ಕೆ ಪ್ರಾಮಾಣಿಕವಾದ ಯಾವ ಆಧಾರವೂ ಇಲ್ಲ (ಅಂಕಾ. ೬). ೫. ನಂಬಿಕೆಗೆ ಅರ್ಹನಾದವನು ; ನಂಬಿಕಸ್ಥ : ನೀನು ಪ್ರಾಮಾಣಿಕನಾಗಿದ್ದ (ಕಂಬಿಹು. ೦೩೪); ಇದನ್ನು ಪ್ರಾಮಾಣಿಕರಾದವರು ಒಪ್ಪದಿರಲು ಸಾಧ್ಯವಿಲ್ಲ (ರಾಜ್ಯಶಾ. ೦೦). [ಸಂ.]

**ಪ್ರಾಮಾಣಿಕತನ** (ನಾ). ನಂಬಿಕೆಗೆ ಅರ್ಹವಾಗಿರುವಿಕೆ : ಅವನ ಪ್ರಾಮಾಣಿಕತನವನ್ನು ಪರೀಕ್ಷಿಸಿ ನೋಡಬೇಕೆಂಬ ಲವಲವಿಕೆ ಅವನಲ್ಲಿ ಹುಟ್ಟಿತು (ಮುಂಬಿಯು. ೪-೩೦) ; ಸಂಪಾದಕರ ಪ್ರಾಮಾಣಿಕತನಕ್ಕೆ ಮೆಚ್ಚಿ, ಒಳನೋಡಿದೆ (ಹುಚ್ಚುಹು. ೩೩). [ಪ್ರಾಮಾಣಿಕ + — ತನ]

**ಪ್ರಾಮಾಣಿಕತೆ** (ನಾ). = ಪ್ರಾಮಾಣಿಕತನ : ಕೃತ್ರಿಮರಾಹಿತ್ಯ ಪ್ರಾಮಾಣಿಕತೆಗಳಿಗೆ ಹೆಸರಾಗಿದ್ದ ಅವನು ಮತತ್ಯಾಗದ ವಿಷಯವನ್ನು ಗೆಳೆಯರಿಗೆ ತಿಳಿಸಿದ್ದನು (ಕೃಸರು. ೩೬೨) ; ಪ್ರಾಮಾಣಿಕತೆ ಎನ್ನುವ ಮಾತೇ ಇಲ್ಲ ನಿಮ್ಮ ಜಾತಕದಲ್ಲಿ (ಬೆಂಗಬ. ೬೬). [ಸಂ. ಪ್ರಾಮಾಣಿಕತಾ]

**ಪ್ರಾಮಾಣ್ಯ** (ನಾ). ೧. ಆಧಾರ ; ಪುರಾವೆ ; ಸಾಕ್ಷಿ : ಜನ ಗಳಿಸಬಯಸುವ ಅಪೂರ್ವಗುಣ ಬರಿಯ ಹೊಸತನವಲ್ಲ, ಪ್ರಾಮಾಣ್ಯ ಮಾತ್ರ (ಸಾಹಿಪ್ರ. ೦೨) ; ಜ್ಞಾನಸ್ವರೂಪದಲ್ಲಿರುವ ಪ್ರಾಮಾಣ್ಯ, ಸಂಶಯ, ಸಂಭಾವನಾ ಮೊದಲಾದ ಅಂಶಗಳು ಸಾಕ್ಷಿಸ್ವರೂಪೇಂದ್ರಿಯಕ್ಕೆ ಗೋಚರಗಳಾಗುವುವು (ಹಿಂದತಾ. ೨೮೬). ೨. ಆಧಾರಭೂತವಾದುದು; ಸಮರ್ಥನೆ ಮಾಡುವ ಪ್ರಮಾಣ : ಬಹು ಹಿಂದಿನಿಂದ ಭಗವದ್ಗೀತೆಗೆ ಸಾಕಷ್ಟು ಪ್ರಾಧಾನ್ಯವೂ ಪ್ರಾಮಾಣ್ಯವೂ ಇತ್ತು (ಭಾರದ. ೦೦೯). ೩. ಅಳತೆ ; ಪ್ರಮಾಣ : (ಕ). [ಸಂ.]

**ಪ್ರಾಮಿಸರಿನೋಟು**, ಪರಮೇಶ್ವರಿನೋಟು, ಪರಮೇಸೂರನೋಟು, ಪ್ರಾಂಸರಿನೋಟು (ನಾ). ಒಂದು ಗೊತ್ತಾದ ಮೊಬಲಗನ್ನು ಒಬ್ಬ ಗೊತ್ತಾದ ವ್ಯಕ್ತಿಗೆ ಅಥವಾ ಆ ಪತ್ರ ತಂದವನಿಗೆ ಒಂದು ಗೊತ್ತಾದ ದಿನ ಅಥವಾ ಯಾವಾಗ ಕೇಳಿದರೆ ಆವಾಗ ಪಾವತಿಮಾಡುವುದಕ್ಕಾಗಿ ವಾಗ್ದಾನ ಮಾಡಿ ರುಜು ಹಾಕಿಕೊಟ್ಟ (ಸಾಲ) ಪತ್ರ ; ವಾಗ್ದಾನ ಪತ್ರ ; ಪ್ರೋನೋಟು : ಬೇಕಾದರೆ ಪ್ರಾಮಿಸರಿನೋಟು ಬರೆದು ಕೊಡುತ್ತೇನೆ (ಮೋಹಿನೀ. ೫೯); ಸಾಹುಕಾರರು ತಾಳುವ ಹಾಗಿದ್ದರೆ ಒಂದು ಪ್ರಾಮಿಸರಿ ನೋಟನ್ನು (ವಾಗ್ದಾನದ ಸಾಲಪತ್ರ) ಬರೆದುಕೊಟ್ಟು ಮುಂದಕ್ಕೆ ತೀರಿಸುವೆವೆನ್ನಬಹುದು (ಹಣಕ್ರ. ೬೬). **ಪರಮೇಶ್ವರಿನೋಟು :** ನೀನು ಸರಳ ಮನುಷ್ಯನೆಂಬುದು ಊರೊಳಗೆ ಯಾರಿಗೇನು ಗೊತ್ತಿಲ್ಲವೆ ? . . . ನೆನಪಿಗೆಂದು ಪರಮೇಶ್ವರಿನೋಟು ಬರೆದುಕೊಡು (ಎರಡು. ೬೯). **ಪರಮೇಸೂರನೋಟು :** ಪರಮೇಸೂರನೋಟು ಬರಕೊಟ್ಟು ತಗೊಂಡು ಹೋಗು (ಬೀದಿ. ೬೯). **ಪ್ರಾಂಸರಿನೋಟು :** ಸಾಲ ಪಡೆಯಲು ಪ್ರಾಂಸರಿನೋಟು ಬರೆದುಕೊಟ್ಟಿದ್ದಾರೆ (ರೂಢಿ).

[←ಇಂ. Promissorynote./ ತುಳು. ಪ್ರಮೇಸ್ರಿನೋಟು]

**ಪ್ರಾಮುಖ್ಯ** (ನಾ). ಮುಖ್ಯವಾಗಿರುವಿಕೆ; ಪ್ರಧಾನತೆ ; ಮಹತ್ವ : ಧರೆಯಲ್ಲಿ ಸೊಗಸಾದ ವಾಳಿಗೆ ಮನೆಗಳಿರಲಿ . . . ಕೊರತೆಯೇಂ ತನ್ನದೇ ಪ್ರಾಮುಖ್ಯವೆಂದು ? (ಕಂಕ್ರ. ೦೯-೦). [ಸಂ.]

**ಪ್ರಾಮುಖ್ಯತೆ** (ನಾ). ಪ್ರಮುಖವಾಗಿರುವುದು : ಈ ದೃಷ್ಟಿಯನ್ನವಳು ತ್ಯಜಿಸಿದ್ದರೆ ಅವಳ ಜೀವನದ ಪ್ರಾಮುಖ್ಯತೆಯೆ ಕುಂಠಿತವಾಗುತ್ತಿತ್ತು (ಕೃಸರು. ೦೯೬) ; ಜ್ಞಾನದ ಪ್ರಾಮುಖ್ಯತೆ ವಿಷಯವಾಗಿ ಹೋರಾಡಿದ ಶ್ರೀ ಶಂಕರಾಚಾರ್ಯರು ಪ್ರಚಂಡಬೌದ್ಧಿಕಕರ್ಮವಾದಿಗಳಾಗಿದ್ದರು (ಧರ್ಮಗಾ. ೦೫೦). [ಪ್ರಾಮುಖ್ಯ + — ತೆ]

**ಪ್ರಾಯ** (ನಾ). ೧. ಜೀವ ಹೋಗುವಿಕೆ ; ಮರಣ. ೨. ಪ್ರಾಣತ್ಯಾಗಕ್ಕಾಗಿ ಮಾಡುವ ಉಪವಾಸ, — ಆಹಾರತ್ಯಾಗ : "ಪ್ರಾಯಃ, ಭೋಜನತ್ಯಾಗಃ, ಸನ್ಯಾಸಃ, ಅನಶನಂ— ಈ ೪ ಕಡೆಗಾಲದ ಅನಶನಂ" (ಹಲಾಯು. ೦೨೩-೬೩). ೩. ತಾರುಣ್ಯ ; ಹರೆಯ; ಯೌವನ : "ಯೌವನಂ — ಪ್ರಾಯಂ" (ಕಾಶಕ್ಕ. ೦೬೩) ; ಪ್ರಾಯದ ಪೆಂಪೆ ಪೆಂಪೆವುಗೆ (ಕಂಪಟಾ. ೦೯-೦೭) ; ಪ್ರಾಯದ ಮಿಂಡರಿಂದೆ ಗಳಿಸಿರ್ದ ಧನಂಗಳಿನಾಗಳುಂ . . . ತೃಪ್ತಿಯನಾಗಿಸುತ್ತೆ (ಹಾಲಾಸ್ಯ. ೩-೯-೦೦). ೪. ವಯಸ್ಸು : ಕ್ರಮಕ್ರಮದಿಂ ಸುಖದಿಂ ಬೆಳೆದು ಮುಂಜಿಗಟ್ಟುವ ಪ್ರಾಯಮಾದೊಡೆ . . . ಮುಂಜಿಬಂಧನಕ್ರಿಯೆಯಂ ಮಾಡಿ (ವಡ್ಡಾರಾ. ೬೩-೨೦) ; ಪ್ರಾಯಂ ಕೂಸಾದೊಡಭಿಪ್ರಾಯಂ ಕೂಸಕ್ಕುಮೆ (ಕಮಪ. ೨೯೩ ಪ್ರಯೋ) ; ನರಸಿಂಹನಿಗೆ ಈಗ ಹದಿನೆಂಟು ವರ್ಷ ಪ್ರಾಯವಾಗಿತ್ತು (ಮರವು. ೦೬೩). ೫. ಸಮಾಸಾಂತ್ಯಗಳಲ್ಲಿ ಸಮಾನವಾದುದು ಎಂಬರ್ಥದಲ್ಲಿ ಸೇರುವ ಶಬ್ದ : ಅನಂತ . . . ಅವಘಡಪ್ರಾಯವಾದ ಅಪವಾದಗಳು ಬಂದರೂ ಅಕ್ಕರ ಅಗ್ಗಸ ತಾಳದೆ ಸಮುದ್ರನಾಥನಂತೆ ಎಲ್ಲವನ್ನೂ ಒಡಲಿನಲ್ಲಿ ನುಂಗಿಕೊಂಡು ಸಾಗುತ್ತಿದ್ದ (ಜೀವಾನ. ೨೯).

**ಪ್ರಾಯಕ್ಕೆ ಬರು**=೧. ವಯಸ್ಸಿಗೆ ಬರು; ಪ್ರೌಢವಾಗು: ಅನೇಕ ಜೀವಿಗಳು ಪ್ರಾಯಕ್ಕೆ ಬರುವ ಮೊದಲೇ ನಾಶವಾಗುತ್ತವೆ (ಕೀಟಜಿ. ೦). ೨. ಮೈನೆರೆ ; ಪುಷ್ಪವತಿಯಾಗು; ದೊಡ್ಡವಳಾಗು : ನಾನು ಪ್ರಾಯಕ್ಕೆ ಬಂದ ಹೊಸದು; ಆಗ ಒಂದು ದಿನ ಪರಾಶರಋಷಿಯು ಯಮುನಾನದಿಯನ್ನು ದಾಟಬೇಕಾಯಿತು (ಪಕಟಾ. ೭); ಅವಳು ಪ್ರಾಯಕ್ಕೆ ಬಂದ ಕೂಡಲೆ ದುರಾಚಾರಿಯಾದ್ದರಿಂದ ಅವಳನ್ನು ಯಾರೂ ವರಿಸಲಿಲ್ಲ (ಸ್ತ್ರೀಂಬಿ. ೨೦೬). **ಪ್ರಾಯ ತುಂಬು**=ಬಾಲ್ಯಾವಸ್ಥೆ ಕಳೆದು ಯೌವನ ಬರು; ತಾರುಣ್ಯವನ್ನು ಹೊಂದು : ನಾರಾಯಣಮಾಸ್ತರರ ಹಿರಿಮಗು, ಮೆಟ್ರಿಕ್‌ನಲ್ಲಿದ್ದವ, ಪ್ರಾಯ ತುಂಬಿದ ಮಗು, ಕೇಶವ ಹೋದನಂತೆ ವಿಷಮಜ್ವರದಿಂದ (ಮುಗಿಯು. ೩೦೭) ; ಪ್ರಾಯ ತುಂಬಿರಲು

ಪಾತ್ರೆ ತುಂಬಿರಲಿ, ಬರಿದು ಭ್ರಾಂತಿ ಏಕೆ ? (ಅಕಉ. ೦೦೯-೯). ಪ್ರಾಯ ಬರು = ಪ್ರಾಯ ತುಂಬು : ಪುರುವಿಗೆ ಪ್ರಾಯ ಬಂತು (ಶೀತಿಶಾ. I. ೨೦೪); ಶಾಲೆಗೆ ಸೇರಿದ್ದು ತಡ, ಪಾಸಾದುದು ಮೆಲ್ಲಗೆ ಹೊರತು, ಈಗಾಗಲೇ ಪ್ರಾಯ ಬಂದಿದೆ (ಹುಗಿಯು. ೫೬). ಪ್ರಾಯ ಮೀರು = ವಯಸ್ಸಾಗು ; ವಯಸ್ಸು ಕಳೆ: ಇಬ್ಬರೂ ಸುಮಾರು ಐವತ್ತು ವರ್ಷ ಪ್ರಾಯ ಮೀರಿದವರು (ಹುಕು. ೫೦೪). ಪ್ರಾಯ ಸಲ್ಲು = ವಯಸ್ಸಾಗು: ನಿನಗೆ ಪ್ರಾಯ ಸಂದಿತಲ್ಲ ; ನಾಳೆ ಯಾರು ನಿನ್ನ ನಂತರ ಗುರಿಕಾರನೆಂದು ಯೋಚಿಸಿದ್ದೀಯಾ ? (ಕುಂಕೊ. ೬೬). ಪ್ರಾಯ ಹೋಗು = ಪ್ರಾಯ ಸಲ್ಲು: ಪ್ರಾಯ ಹೋದರೂ ಪ್ರಯಾಸ ಬಿಡದು (ಗಾದೆ). [ಸಂ.]

**ಪ್ರಾಯಃ** (ಅ). ಬಹುಮಟ್ಟಿಗೆ ; ಬಹುಪಾಲು : ಆತ್ಮನಿರುವ ಕಡೆಗಳಲ್ಲೆಲ್ಲಾ ಈ ಚಿಹ್ನೆಗಳು ಪ್ರಾಯಃ ಕಂಡುಬರುತ್ತವೆಯೆಂದು ಅದರ ಅಭಿಪ್ರಾಯ (ಜಿಜಾಕೃ. ೩೪). [ಸಂ. ಪ್ರಾಯಸ್]

**ಪ್ರಾಯತ** (ನಾ). ಇಂದ್ರಿಯಂಗಳನ್ನು ಹತೋಟಿಯಲ್ಲಿಟ್ಟುಕೊಂಡಿರುವ ವ್ಯಕ್ತಿ ; ಸಂಯಮಿ : ಮಿಥಿಲೆಯಲಿ ಮುನ್ನೊಬ್ಬ ವೇಶಿಯ ಕಥೆಯ ಪೇಳುವೆ ಕೇಳು ಭೂಪತಿ ಮಥಿಸುವಳು ಪ್ರಾಯತರ ಮನಗಳನಧಿಕಚೆಲುವಿನಲಿ(ಶಿಶಾಗ. ೦೦-೦೩-೦); ಏಕಪತ್ನೀವ್ರತಂ ಪ್ರಾಯತಂ ಕೋಮಲಂ (ಕೈಐಶಾ. ೦೦-೯೦). [.< ಪ್ರಯತ]

**ಪ್ರಾಯತೆ** (ನಾ). ಇಂದ್ರಿಯಂವನ್ನು ಹತೋಟಿಯಲ್ಲಿ ಇಟ್ಟುಕೊಂಡಿರುವವಳು; ಇಂದ್ರಿಯಂಲಾಲಸೆಯಿಲ್ಲದವಳು: ಆ ರಾಜ್ಯದೊಳ್ ಬಱಿಯ ನಾರಿಯರ್ ಪ್ರಾಯತೆಯರಾಗಿ . . . ಸ್ತ್ರೀಯೋರ್ವಳರಸಾಗಿರಲ್ಕವಳ ಕೆಳಗಾಗಿ ಬದುಕುವರ್ (ಕೈಐಶಾ. ೦೩-೯೨). [ಸಂ. ಪ್ರಾಯತ + —ಎ]

**ಪ್ರಾಯಶಃ** (ಅ). ೧. ಬಹುಮಟ್ಟಿಗೆ; ಬಹುಪಾಲು; ಬಹುಶಃ: ನೊಳಂಬ ರಾಜ್ಯವನ್ನು ಪೂರ್ಣವಾಗಿ ಗಂಗಮಾರಸಿಂಹನು ಆಕ್ರಮಿಸಿಕೊಂಡಿದ್ದರಿಂದ . . . ಪ್ರಾಯಶಃ ಅವರೆಲ್ಲರೂ ತಮ್ಮ ರಾಜ್ಯವನ್ನು ಬಿಟ್ಟು ತಲೆಮರೆಸಿಕೊಂಡು ಹೋದಂತೆ ತೋರುತ್ತದೆ (ಹೊಳಂಬ. ೪೬); ಪ್ರಾಯಶಃ ನಾನು ಕಾಕಸಸ್‌ನಿಂದ ಹಿಂದಿರುಗುವುದಿಲ್ಲ (ಹಲಿಣ. ೭). ೨. ಸಾಮಾನ್ಯವಾಗಿ: ಪ್ರಾಯಶಃ ಎಲ್ಲಾ ಪ್ರಾಚೀನ ನಾಟಕಕಾರರ ವಿಷಯದಲ್ಲಿಯೂ ಇದನ್ನೇ ಹೇಳಬಹುದು (ಅಂಕಾ. ೬೬). [ಸಂ. ಪ್ರಾಯಶಸ್]

**ಪ್ರಾಯಶ್ಚಿತ್ತ** (ನಾ). ೧. ಮಾಡಿದ ತಪ್ಪಿಗಾಗಿ ವ್ಯಥೆ ಪಟ್ಟು ಪರಿಹಾರ ಮಾಡಿಕೊಳ್ಳುವ ಕರ್ಮ.- ವಿಧಿ: ಈ ನಾಯಿನೀಡಾಡಿ ಪ್ರಾಯಶ್ಚಿತ್ತಮಂ ಕೈಕೊಳ್ಳಿರಿಂ (ಶಂಕತಂ. ೦೯೭-೦೯); ಕುಲಮದಕ್ಕೆ ಹೋರಿ ಜಂಗಮಭೇದವ ಮಾಡುವ ಫಲವೇನು ನಿತ್ಯಲಿಂಗಾರ್ಚನೆ ಪ್ರಾಯಶ್ಚಿತ್ತ (ಬಸವ. ೨೯೪); ನಾನು ಪ್ರಾಯಶ್ಚಿತ್ತ ಮಾಡಿಕೊಳ್ಳುವುದಿಲ್ಲ (ರುತಾರಾತ. ೫೨); ಪಾದಕ್ಕೆ ತಕ್ಕ ಪಾಪೋಸು, ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ (ಗಾದೆ). ೨. [ಜೈನ] ಅಭ್ಯಂತರತಪಗಳಲ್ಲಿ ಒಂದು ; ಪ್ರಮಾದದೋಷಗಳ ಪರಿಹಾರಕ್ಕಾಗಿ ಆಲೋಚನೆ ಮೊದಲಾದ ಚಿತ್ತಶೋಧಕಕ್ರಿಯೆಗಳಲ್ಲಿ ಮನಸ್ಸು ಪ್ರವೃತ್ತವಾಗುವುದಂ: ಅಭ್ಯಂತರತಪಷಟ್ಕದೊಳಂ ಪ್ರಾಯಶ್ಚಿತ್ತವಿನಯವೈಯಾವೃತಸ್ವಾಧ್ಯಾಯಧ್ಯಾನವ್ಯುತ್ಸರ್ಗಂಗಳಂ ಕೈಕೊಂಡು (ಆದಿಪು. ೬-೩೩ ವ). [ಸಂ.]

**ಪ್ರಾಯಶ್ಚಿತ್ತಕರ್ಮ** (ನಾ). ನಿತ್ಯ, ನೈಮಿತ್ತಿಕ, ಪ್ರಾಯಶ್ಚಿತ್ತ, ಕಾಮ್ಯ ಮತ್ತು ನಿರ್ಮಲಗಳೆಂಬ ಐದು ಬಗೆಯ ಕರ್ಮಗಳಲ್ಲಿ ಒಂದು; ತಾನು ಮಾಡಿದ ತಪ್ಪಿನ ಪರಿಹಾರಕ್ರಿಯೆಯಾಗಿ ಮಾಡುವ ಕರ್ಮ: ಕರ್ಮವಾದೊಡೆ ನಿತ್ಯ ನೈಮಿತ್ತಿಕ ಪ್ರಾಯಶ್ಚಿತ್ತ ಕಾಮ್ಯ ನಿರ್ಮಲವೆಂದು ಪಂಚವಿಧಂ (ಶಿವೇಕ. ೦೩೪); ಜ್ಞಾತಾಜ್ಞಾತ ಪಾಪಕ ಪರಿಹಾರದ್ದೇಶಯಿಂದ ಮಾಡುವುದೇ ಪ್ರಾಯಶ್ಚಿತ್ತಕರ್ಮವು (ಶಿಗಮು. ೦-೪-೦). [ಸಂ. ಪ್ರಾಯಶ್ಚಿತ್ತಕರ್ಮನ್]

**ಪ್ರಾಯಸ್ಥ** (ನಾ). ವಯಸ್ಸಿಗೆ ಬಂದವನು ; ತರುಣ : ಒಬ್ಬ ಪ್ರಾಯಸ್ಥನ ಸಮತೂಕಆಹಾರವೆಂದರೆ . . . ಜೀವಾತುಗಳು ಸಾಕಷ್ಟು ಪ್ರಮಾಣದಲ್ಲಿ ಇರುವುದು ಅಗತ್ಯ (ಆಹುಶಾ. ೭೦) ; ಪ್ರಾಯಸ್ಥನಾದರೂ ಪ್ರಾಚೀನ ಬಿಡಲಿಲ್ಲ (ಗಾದೆ). [ಸಂ.]

**ಪ್ರಾಯಸ್ಥೆ** (ನಾ). ವಯಸ್ಸಿಗೆ ಬಂದವಳು ; ತರುಣಿ : (೬). [ಪ್ರಾಯಸ್ಥ + —ಎ]

**ಪ್ರಾಯಿಕ** (ನಾ). ಸಾಮಾನ್ಯವಾದುದು: ನಾಮಪದಗಳೇ ಮುಂತಾದುವಲ್ಲಿ . . . ವ್ಯಂಜಕತ್ವವಿರುವುದನ್ನು ಮಹಾಕವಿಗಳ ಪ್ರಬಂಧಗಳಲ್ಲಿ ಪ್ರಾಯಿಕವಾಗಿ ನೋಡಬಹುದು (ಧ್ವನ್ಯಾಲೋ. ೦೫೩) ; ಹಿಂದಿನ ಸಾಹಿತಿಗಳು ಬಾಯಿ ಮಾತಿನಲ್ಲಾಗಲಿ, ಬರವಣಿಗೆಯಲ್ಲಾಗಲಿ ಪ್ರಾಯಿಕವಾಗಿ ನನಗೆ ಪ್ರೋತ್ಸಾಹ ಕೊಡಲಿಲ್ಲ (ಶಿಂರ. II. ೪). [ಸಂ.]

**ಪ್ರಾಯೋಗಿಕ** (ಗು). ೧. ಪರೀಕ್ಷೆಯ ಮೂಲಕ ಮಾಡಿ ತೋರಿಸುವ ; ಪ್ರಯೋಗದ ಮೂಲಕ ಸಿದ್ಧಪಡಿಸುವ : ಫ್ಯಾರಡೆ ಅತ್ಯುತ್ತಮ ವರ್ಗದ ಪ್ರಾಯೋಗಿಕ ವಿಜ್ಞಾನಿ (ವಿಶಾಸ. XV. ಹುಟುಕೆದರ್ಶಿ). (ನಾ). ೨. ಪ್ರಯೋಗದಿಂದ ಕೂಡಿರುವುದು : ವಿಷಯಗಳನ್ನು ಪ್ರಾಯೋಗಿಕವಾಗಿ ಉಪಯೋಗಿಸಿಕೊಳ್ಳುವ ರೀತಿ . . . ಅಲ್ಲಿರಬೇಕು (ಶಿಕ್ಷದ. ೨೬೩). ೩. ಪ್ರಯೋಗವನ್ನು ಮಾಡಿ ತೋರಿಸುವವನು : ಶುದ್ಧವಿಜ್ಞಾನಿಗೆ ಇಷ್ಟವಿರಲಿ, ಇಲ್ಲದಿರಲಿ, ಅವನ ತಪಸಾರ್ಜಿತವಾದ ಜ್ಞಾನವನ್ನು ಪ್ರಾಯೋಗಿಕನು ಬಳಸಿಕೊಳ್ಳದೆ ವಿಧಿಯಿಲ್ಲ (ಕಿರ್ಬಾ. ೬೨). ೪. [ಜೈನ] ಅಭಾಷಾತ್ಮಕವಾದ ಶಬ್ದಭೇದ, ಪ್ರಯೋಗಜನ್ಮವಾದ ವೀಣಾದಿಗಳ ತತಶಬ್ದ, ಡೋಲು ಮೊದಲಾದುವುಗಳ ವಿತತಶಬ್ದ, ತಾಳ ಮೊದಲಾದುವುಗಳ ಘನಶಬ್ದ ಮತ್ತು ಕೊಳಲು ಮೊದಲಾದುವುಗಳ ಸುಷಿರಶಬ್ದ : ಶಬ್ದವು ಪ್ರಾಯೋಗಿಕ, ವೈಸ್ರಸಿಕ (ಸ್ವಾಭಾವಿಕ) ಎಂದು ಎರಡು ವಿಧವಾಗಿದೆ (ಕೈಶಥ. ೫೬). [ಸಂ.]

**ಪ್ರಾಯೋಗಿಕವಿಮರ್ಶೆ** (ನಾ). ವಿಮರ್ಶೆಯಲ್ಲಿ ಕಾವ್ಯಾರ್ಥವಿಶ್ಲೇಷಣೆಯನ್ನು ಅನುಸರಿಸಿ ರಚಿಸಿರುವ ಪ್ರಯೋಗಾತ್ಮಕ ಬರಹ ; P ಇದು ಇಂಗ್ಲಿಷಿನ 'practical criticism' ಎಂಬುದರ ಅನುವಾದ : ನಮ್ಮ ಕಾವ್ಯಮೀಮಾಂಸೆಯ ಕೂಲಂಕಷವಾದ ಪರಿಜ್ಞಾನವನ್ನು ಪಡೆದು ಅದರ ಬೆಳಕಿನಲ್ಲಿ ಪ್ರಾಯೋಗಿಕವಿಮರ್ಶೆಯನ್ನು ಬೆಳೆಸಬೇಕು (ಐಂಶಿಮ. IX. ಮುನ್ನುಡಿ). [ಸಂ. ಪ್ರಾಯೋಗಿಕ ವಿಮರ್ಶ]

**ಪ್ರಾಯೋಗ್ಯತಾಲಬ್ಧಿ** (ನಾ). [ಜೈನ] ಕಾಲಲಬ್ಧಿ, ಕರಣಲಬ್ಧಿ, ಉಪಶಮಲಬ್ಧಿ, ಕ್ಷಯೋಪಶಮಲಬ್ಧಿ ಮತ್ತು ಪ್ರಾಯೋಗ್ಯತಾಲಬ್ಧಿಗಳೆಂಬ ಐದು ಬಗೆಯ ಲಬ್ಧಿಗಳಲ್ಲಿ ಒಂದು ; ಕರ್ಮವು ಕ್ರಮಕ್ರಮವಾಗಿ ಕಡಮೆಯಾಗುವ ಪ್ರಾಪ್ತಿ : ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿಯೆಂಬ ಲಬ್ಧಿಪಂಚಕಮುಮಂ (ಸುಕುಮಾ. ೩-೩೯ ವ); ಭವ್ಯಾಭವ್ಯಸಾಮಾನ್ಯಂ ಪ್ರಾಯೋಗ್ಯತಾಲಬ್ಧಿಯುಕ್ಕುಂ (ಶಕ್ಯ್ಕ್ರ. ೮೦). [ಸಂ.]

**ಪ್ರಾಯೋಜಿತ** (ಗು). ಯಾವುದಾದರೂ ಒಂದು ಕೆಲಸದ ಖರ್ಚಿನ ಜವಾಬ್ದಾರಿಯನ್ನು ಹೊತ್ತಿರುವ.

ಪ್ರಾಯೋಜಿತ ಕಾರ್ಯಕ್ರಮ = (ಜಾಹಿರಾತಿನ ಪ್ರಚಾರಕ್ಕಾಗಿ) ಹಣ ಕೊಟ್ಟು ಪ್ರಚುರಪಡಿಸುವ ಕಾರ್ಯಕ್ರಮ: ಟಿ.ವಿ.ಯಲ್ಲಿ ಈಗೀಗ ಪ್ರಾಯೋಜಿತ ಕಾರ್ಯಕ್ರಮಗಳು ಚೆನ್ನಾಗಿರುತ್ತವೆ (ರೂ). [ಸಂ.]

**ಪ್ರಾಯೋಪಗಮನ** (ನಾ). [ಜೈನ] ಉಪವಾಸದಿಂದ ಮರಣ ಹೊಂದುವ ವ್ರತ ; P ಏಕಾಂಗಿಯಾಗಿ, ನಿರಾಹಾರಿಯಾಗಿ ನಿಶ್ಚಲನಾಗಿ ನಿಂತು ತಪಸ್ಸು ಮಾಡುವುದು : ದ್ವಾದಶವಿಧವಪ್ಪ ತಪದೊಳ್

ನೆಗಟ್ದು ಪ್ರಾಯೋಪಗಮನದಿಂ ಸಂನ್ಯಸನಂಗೆಯ್ದು ಕರ್ಮಕ್ಷಯಂಗೆಯ್ದು ಮೋಕ್ಷಕ್ಕೆ ಪೋದ . . . ಸುಕುಮಾರಸ್ವಾಮಿಯ ಕಥೆಯಂ ಪೇಟ್ವೆಂ (ವಡ್ಡಾರಾ. ೧-೧೧) ; ಚತುರ್ವಿಧಾರಾಧನಾಪೂರ್ವಕಂ ವಿಹಿತಪ್ರಾಯೋಪಗಮನವಿಧಾನನಾಗಿ (ಚಂದ್ರಪ್ರ. ೧೧-೩೩ ವ). [ಸಂ.]

**ಪ್ರಾಯೋಪವೇಶ** (ನಾ). = ಪ್ರಾಯೋಪಗಮನ : ಮುನಿರಾಜಂ . . . ಅಳ್ಳದಾಟಾಮ್ಲವರ್ಧನಮಂ ತಪ್ಪದೆ ನೋಂತು ತಪ್ಪತ ನುವಂ ಪ್ರಾಯೋಪವೇಶಕ್ಕೆ ತಂದು (ಶಾಂತಿಪು. ೯-೬೪) ; ನಾನು ಪ್ರಾಯೋಪವೇಶ ಮಾಡಿ ಈ ಪ್ರಾಣತ್ಯಾಗಮಾಡಲು ನೀನು ಸಮ್ಮತಿಸಬೇಕು (ನಾಳೀಹಂ. ೦೦೩). [ಸಂ.]

**ಪ್ರಾರಂಭ** (ನಾ). ೧. ಮೊದಲು ಮಾಡುವಿಕೆ; ಉಪಕ್ರಮ; ಆರಂಭ : ಶ್ರೀಮನ್ ಮಾನಾಕ್ಷ್ಯಧೀಶಂ . . . ಕಲಾಶಾಲಿಧೈರ್ಯಂ ಕ್ಷೇಮಪ್ರಾರಂಭಮಂ ಮಾಳ್ಕೆಮಗತಿದಯೆಯಿಂ (ಶಾಲಾಸ್ಕ. ೦-೦-೦) ; ಸಂಗರಪ್ರಾರಂಭಸಮಯತೂರ್ಯಧ್ವನಿಗೆ ವೇಗದುದ್ವೇಗದಿಂ ರೋಷದಿಂ ಘೋಷದಿಂ ಸಂಧಿಸಿತುಭಯಬಲಂ (ಜಗನ್ನಾಂಗ. ೬೩-೨೨೪೭). ೨. ಕೆಲಸ ; ಕಾರ್ಯ : ಸಕಲಕ್ಷತ್ರಿಯಮೋಹದಿಂ ನಿಜಭುಜಪ್ರಾರಂಭದಿಂ ಪೋಗೆ ತಾಗಿ ಕೆಲರ್ ನೊಂದೊಡೆ (ಶಂಕರಾ. ೧-೬೪). ೩. [ಜೈನ] ಇಪ್ಪತ್ತೈದು ಕ್ರಿಯೆಗಳಲ್ಲಿ ಒಂದು ; ಛೇದನಭೇದನಾದಿ ಕ್ರಿಯೆಗಳಲ್ಲಿ ತಾನು ಪ್ರವೃತ್ತನಾಗುವುದು ಅಥವಾ ಅನ್ಯರನ್ನು ಪ್ರವರ್ತಿಸಿ ಆನಂದಪಡುವುದು : ಪಂಚವಿಂಶತಿಕ್ರಿಯೆಗಳು ೧. ಸಮ್ಯಕ್ತ್ವಕ್ರಿಯೆ . . . ೨೧. ಪ್ರಾರಂಭ (ಸ್ವಕೃತ – ಪರಕೃತಭೇದನ ಛೇದನಗಳಲ್ಲಿ ಹರ್ಷ) (ಕೈಪರ. ೬೪). 'ಪಂಚವಿಂಶತಿಕ್ರಿಯೆ' ಪರಾ. [ಸಂ.]

**ಪ್ರಾರಂಭಿಗ** (ನಾ). ಮೊದಲು ಮಾಡುವವನು ; ಆರಂಭಿಸುವವನು ; ಮೊದಲಿಗ : ಸಮಶುದ್ಧಸ್ಫುಟಮಪ್ಪುದೊಂದು ಸುತಿಯಂ ಪ್ರಾರಂಭಿಗಂ ಮಾಡೆ (ಶಾಂತಿಪು. ೦೦-೩೩). [ಪ್ರಾರಂಭ + – ಇಗ]

**ಪ್ರಾರಂಭಿಸು** (ಕ್ರಿ). ಮೊದಲು ಮಾಡು ; ಆರಂಭಿಸು : ವಿದ್ಯುಚ್ಛಕ್ತಿಯನ್ನು ಉರವಲಾಗಿ ಬಳಸಲು ಹೆಚ್ಚು ಹೆಚ್ಚು ಜನರು ಪ್ರಾರಂಭಿಸುತ್ತಿರುವುದರಿಂದ ಇಲ್ಲಿ ಅದರ ಕುರಿತು ಒಂದೆರಡು ಮಾತುಗಳು ಅನವಶ್ಯವಾಗಲಾರವು (ಆಡುಕಾ. ೦೩) ; ಜಾನಕಮ್ಮನವರೇ ಊಟದ ಮಧ್ಯವಲ್ಲಿ ಮಾತಿಗೆ ಪ್ರಾರಂಭಿಸಿದರು (ಕೂಡಾವ. ೦೩೬). [ಪ್ರಾರಂಭ + – ಇಸು]

**ಪ್ರಾರಂಭೋತ್ಸವ** (ನಾ). (ಸಂಘ, ಸಂಸ್ಥೆ ಮೊದಲಾದುವುಗಳನ್ನು ವಿಧ್ಯುಕ್ತವಾಗಿ) ಆರಂಭಿಸುವಾಗ ನಡೆಸುವ ಸಮಾರಂಭ ; ಆರಂಭೋತ್ಸವ : ದೇವಯ್ಯಗೌಡರ ಮತಾಂತರವನ್ನು . . . ಮೇಗರವಳ್ಳಿಯ ಮಿಷನ್‌ಸ್ಕೂಲಿನ ಪ್ರಾರಂಭೋತ್ಸವ ನಡೆಸಲು ಬಂದಾಗ ತಾವೆ ಖುದ್ದಾಗಿ ನಡೆಸಿಕೊಡುತ್ತಾರೆ (ಮಲೆನ. ೬೨) ; ಸರ್ಕಾರಿಸ್ಕೂಲಿನ ಪ್ರಾರಂಭೋತ್ಸವಕ್ಕೆ ತಾವೇ ದಯಮಾಡಿಸಬೇಕು (ರಂಗಳ. ೨೩೬). [ಸಂ.]

**ಪ್ರಾರಬುದ** (ನಾ). ಹಿಂದೆ ಮಾಡಿದ ಕರ್ಮ : ಸ್ತುತ್ಯನಹುದೆಂದಾಡಿ ಪ್ರಾರಬುದಿದೇನೆನಗೆ ಹತ್ತಿಕೊಂಡುದು ಜೀಯ ವಿವರಿಸು (ಶರಕು. ೦೪-೩೪).
[< ಸಂ. ಪ್ರಾರಬ್ಧ]

**ಪ್ರಾರಬ್ಧ** (ಗು). ೧. ಮೊದಲು ಮಾಡಿದ ; ಆರಂಭಿಸಿದ. (ನಾ). ೨. ಹಿಂದೆ ಮಾಡಿದ ಪಾಪದ ಫಲ ; ಕರ್ಮ ; ವಿಧಿ : ಪ್ರಾರಬ್ಧಪ್ರಯತ್ನಗಳ ತಾರತಮ್ಯವನಿಲ್ಲಿ ಹೇಳಿಹೆ ಕೇಳಿರಯ್ಯಾ ಪ್ರಯತ್ನದ ಹೆಚ್ಚು ಕುಂದಿನಂತೆ ಇಂದಾಗಲಿ ಮುಂದಾಗಲಿ ಪ್ರಾರಬ್ಧವು ಫಲಪದವನೀವುದು (ತತ್ವವ.ಕ. ೪೩-೧೦೬) ; ಊರು ಬಿಟ್ಟು ಬೇಲೂರಿಗೆ ಹೋದರೆ ಪ್ರಾರಬ್ಧವು ಬೇಲೂರಾದೀತೆ (ಪುರಂದ. ೧-೦೩೭-೧) ; ತನ್ನ ಪಿತೃಗಳು ನರಕದಲ್ಲಿರುವುದನ್ನು ತಿಳಿದು ಉದ್ದಾಲಕನು ಪ್ರಾರಬ್ಧವನ್ನು ಬರೆದಂತೆ ವಿಧಿಯನ್ನೇ ಕೇಳುವೆನೆಂದು ಬ್ರಹ್ಮನ ಬಳಿಗೆ ಹೋದನು (ಕರ್ಣಾಕ. ೨೬೩). ೩. (ಅಲಂ) (ಪಾಪದಂತೆ) ಹಿಂಬಾಲಿಸುವ ವ್ಯಕ್ತಿ : ಎಲ್ಲಿಲ್ಲದ ಪ್ರಾರಬ್ಧಗಳು ಎಂದುಕೊಂಡು ಕೊಂಚ ಬೇಗ ಪಾಠ ಮುಗಿಸಿ ಮನೆಗೆ ಹೊರಟು ನಿಂತರು (ಕಾವೇಂ. ೦೦). [ಸಂ.]

**ಪ್ರಾರಬ್ಧಕರ್ಮ** (ನಾ). ಹಿಂದೆ ಮಾಡಿದ ಕರ್ಮ : ಪಂಡಿತನಾಗಲಿ ಮೂರ್ಖನಾಗಲಿ ಸಂಚಿತಕರ್ಮ ಉಂಡಲ್ಲದೆ ಬಿಡದು ಪ್ರಾರಬ್ಧಕರ್ಮ ಭೋಗಿಸಿದಲ್ಲದೆ ಹೋಗದು (ಬಸವ. ೬೬೩) ; ಪ್ರಾರಬ್ಧಕರ್ಮವದುಂಡು ತೀರುವುದು (ಗಗಹಾ. ೨೨-೬೦). [ಸಂ. ಪ್ರಾರಬ್ಧಕರ್ಮನ್]

**ಪ್ರಾರ್ಥನ** (ನಾ). ಬೇಡಿಕೊಳ್ಳುವುದು ; ಮೊರೆಯಿಡುವುದು : 'ಪ್ರಾರ್ಥನಂಗೆಯ್' ಪರಾ. [ಸಂ.]

**ಪ್ರಾರ್ಥನಂಗೆಯ್** (ಕ್ರಿ). ಬೇಡು ; ಮೊರೆಯಿಡು : ಅನಘಂ ತ್ರೈಲೋಕ್ಯಚೂಡಾಮಣಿ ವರಮಹಿಮಂ ಚಿತ್ತವೃತ್ತಿಸ್ಥಿರಾಢ್ಯಂ ಘನವೇದಾಭೇದ್ಯಚೋದ್ಯಪ್ರಭುವಿಭು ಶಿವನಂ ಪ್ರಾರ್ಥನಂಗೆಯ್ಯೆ (ಶಬ್ದಾರ. ೨-೦೭). [ಪ್ರಾರ್ಥನ + ಕೆಯ್$_1$]

**ಪ್ರಾರ್ಥನಾಪತ್ರ** (ನಾ). ಬೇಡಿಕೆಯ ಪತ್ರ ; ಮನವಿ : ಪಂಥಾಭಿಮಾನಿಗಳ ಪ್ರಾರ್ಥನಾಪತ್ರವನ್ನು ಚಕ್ರವರ್ತಿಗೆ ನೇರವಾಗಿ ತಲುಪಿಸುವಂತೆ ನೆಕ್ಕುದೋವ್ ಅವನನ್ನು ಕೇಳಿಕೊಂಡಿದ್ದನು (ಪುನರು. ೩೬೬). [ಸಂ.]

**ಪ್ರಾರ್ಥನೆ** (ನಾ). ೧. ಬೇಡುವುದು ; ಕೋರಿಕೆ : "ಅಧ್ಯೇಷಣಾ . . . ಪ್ರಾರ್ಥನಾ, ಅರ್ಥನಾ — ಈ ೬ ಬೇಡುಹ" (ಹಲಾಯು. ೩೯-೨೦೩) ; ಸಿಂಹವು ಇಲ್ಲಿಯ ಪ್ರಾರ್ಥನೆಯನ್ನು ಕೇಳಿ . . . ಪಂಜರದೊಳಗಿಂದ ಬಿಟ್ಟುಬಿಟ್ಟಿತು (ಪುಂಬಿಯು. ೪-೯೭). ೨. ಆಸೆ ; ಬಯಕೆ ; ಇಚ್ಛೆ. ೩. ದೇವರಲ್ಲಿ ಬೇಡಿಕೊಳ್ಳುವುದು ; ಭಗವಂತನಲ್ಲಿ ಮೊರೆಯಿಡುವುದು : ನಾನಾಭಾಷೆಗಳಲ್ಲಿ ಮನುಷ್ಯರು ಅವನ (ದೇವರ) ಪ್ರಾರ್ಥನೆ ಮಾಡುತ್ತಾರೆ (ಪುಂಬಿಯು. ೪-೦೯೦). ೪. ದೇವರನ್ನು ಕುರಿತ ಸ್ತುತಿಪರವಾದ ಹಾಡು ; ಸ್ತೋತ್ರ : "ಇಲಿಗಳಿಂದ ನಮ್ಮನ್ನು ರಕ್ಷಿಸು" ಎಂಬ ಒಂದು ಪ್ರಾರ್ಥನೆ ವೇದದಲ್ಲಿ ಇದೆಯಂತೆ (ರೀಳಸ್. ೪೬) ; ಸಭೆಯು ವಿನಾಯಕನ ಪ್ರಾರ್ಥನೆಯಿಂದ ಆರಂಭವಾಯಿತು (ಕೂಹ).
[ಸಂ. ಪ್ರಾರ್ಥನಾ]

**ಪ್ರಾರ್ಥಿತ** (ಗು). ೧. ಬೇಡಿದ ; ಯಾಚಿಸಿದ. ೨. ಇಚ್ಛಿಸಿದ ; ಬಯಸಿದ : ಪ್ರಾರ್ಥಿತ ತ್ರಿವಿಧ್ಯಕಭಕ್ತಿ ಸುಖಾರ್ಥಿಗಳನಾ ತ್ರಿವಿಧಭಕ್ತಿ ಸದರ್ಥಸುಖತರಶರಧಿಯಲಿ ನೆಟಿಯುದ್ದಿ ನೆಟಿಯುದ್ದಿ (ಬಸಪು. ೬-೨೬). (ನಾ). ೩. ಬೇಡಿದುದು : ಇದೆ ಸಾರಂ ಸ್ವರ್ಗಲೋಕಕ್ಕಿದೆ ಸುರಸಮಿತಿ ಪ್ರಾರ್ಥಿತಂ (ಶಾಂತಿಪು. ೬-೨೪). [ಸಂ.]

**ಪ್ರಾರ್ಥಿಸು** (ಕ್ರಿ). ಬೇಡು ; ಕೇಳಿಕೊಳ್ಳು ; ಯಾಚಿಸು : ಅಸುರಾಂತಕನುಂ ತಾನುಮೆಂತಾನುಂ ಪ್ರಾರ್ಥಿಸಿದೊಡೊಡಂಬಟ್ಟಜಾತಶತ್ರುಗೆ ಪೊಡೆವಟ್ಟು (ಶಂಕರಾ. ೦೨-೦೩೪ ವ) ; ಈ ಕೋಮಳೆಯಂ ಪ್ರಾರ್ಥಿಸಿದೊಡೆ ನಿಷ್ಫಲಮಾಗದು (ಕಾದಂಪೂ. ೬೬೩) ; ಸುರಕ್ಷಿತವಾಗಿ ತಲುಪಲಿ ಎಂದು ದೇವರಿಗೆ ಪ್ರಾರ್ಥಿಸಿದರೆಂದು ಕಾಣುತ್ತದೆ (ಶಂಗಾಳ್ಕ. ೪೦).
[ಪ್ರಾರ್ಥನ + – ಇಸು]

**ಪ್ರಾಲಂಬ** (ಗು). ೧. ನೇತಾಡುವ ; ಜೋಲಾಡುವ : ಪ್ರಾಲಂಬರಕ್ತಾಪ್ರಗುಚ್ಛಸಂದೋಹದಿಂ . . . ಎಸೆದು ತೋರ್ಪಳಂ . . . ಕಂಡನುರ್ವೀಶ್ವರಂ (ಕಾದಂಉ. ೨೬೦ ರಗಳೆ). (ನಾ). ೨. ಕಂಠದಿಂದ ಎದೆಯವರೆಗೆ ಇಳಿಬಿದ್ದಿರುವ ಉದ್ದವಾದ ಹಾರ : "ಪ್ರಾಲಂಬಂ . . . ಕತ್ತಿನಿಂದ ಎದೆಯ ಮೇಲೆ ನೆಟ್ಟಗೆ ಜೋಲಾಡುವಂತೆ ಹಾಕಿಕೊಂಡ ಹುವ್ವಿನ ಹಾರ ; ಪುಷ್ಪಮಾಲಿಕೆ" (ಸಿದ್ಧಾಂತ. ೨೦೦). [ಸಂ.]

**ಪ್ರಾಲಂಬಕ** (ನಾ). = ಪ್ರಾಲಂಬ ೨ : "ಕೊರಲೊಳಿಕ್ಕಿದ ಹೂವಿನ ಮಾಲೆ ಪ್ರಾಲಂಬಕಮೆಂಬುದು" (ಹಲಾಯು. ೯೦-೪೦೦). [ಸಂ.]

**ಪ್ರಾಲಂಬಿಕೆ** (ನಾ). ಚಿನ್ನದ ಸರ ; ಸುವರ್ಣಹಾರ : "ಪ್ರಾಲಂಬಿಕಾ

. . .ಭಂಗಾರದಿಂದಲೆ ರಚಿಸಲ್ಪಟ್ಟ ಕಂಠಹಾರ, ಕಂಠೀಸರ, ಚಂದ್ರಹಾರ, ಗೋಧಿಸರ ಮುಂತಾದದ್ದು" (ಸಿದ್ಧಾಂತಿ. ೧೯೯). [ಸಂ. ಪ್ರಾಲಂಬಿಕಾ].

**ಪ್ರಾಲೇಯ, ಪ್ರಾಳೇಯ** (ನಾ). ೧. ಹಿಮ; ಮಂಜು: "ಪ್ರಾಲೇಯ ಶಿಶಿರಂ ತುಷಾರಂ ನೀಹಾರ . . . ಹಿಮಮೆನಿಕ್ಕುಂ" (ಶುಂಗಾ. ೨೨೦-೦); ನಿಯತಪ್ರಾಲೇಯದೀಪ್ತಿದ್ಯುಮಣಿಭಗಣದೀಪ್ರೋಜ್ಜ್ವಳಾಕೃತಿವಾತ್ರೋದಯಮುಮಪ್ಪಾಕಾಶಮೆಂಬಾಗಸವಳಿಕನಂತೈಕಸಂಶುದ್ಧಸಿದ್ಧಾಲಯದೊಳ್ ಸಾಮರ್ಥ್ಯದಿಂ ಮುಟ್ಟದೆ ನತಭುವನರ್ಸಿದ್ಧರೇಜಿರ್ದ ಪೀಠತ್ರಯಮೆಂಬಂತಿರ್ಪುದು (ಅರ್ಹಸೀ. ೦-೩೩); ಪ್ರಾಲೇಯಂ ಬಯಲಾಗೆ ದೈತ್ಯಪರಿವ್ರಢನು ಕುಲಶೈಲಗಳೊಳಿಡಲು (ಕೃಕುಪು. ೬-೩೨). ೨. ಪಚ್ಚ ಕರ್ಪೂರ: "ಪ್ರಾಲೇಯಮೆನಲು ಘನಸಾರಮೆನೆ ಪಚ್ಚೆ" (ಶುಂಗಾ. ೯೯-೨೨). **ಪ್ರಾಳೇಯ**: ೧. "ಪ್ರಾಳೇಯಂ . . . ನೀಹಾರಃ_ಈ ೮ ಮಂಜು" (ಹಲಾಯು. ೦೦೭-೨೫). [ಸಂ.]

**ಪ್ರಾಲೇಯಕರ** (ನಾ). ೧. ತಂಪಾದ ಕಿರಣಗಳುಳ್ಳವನು: ಚಂದ್ರ; ಶೀತಕರ: ಎಳೆ ಮೊಲ ಮತ್ತಾಲವೆಂದು ಪ್ರಾಲೇಯಕರನುರದೊಳೊಪ್ಪುವ ಕಳಂಕಕ್ಕೆ ಪೆಸರಿಡುವರು (ರಾಶಶ. ೬-೦೯); ಪೂರ್ಣಪ್ರಾಲೇಯಕರಬಿಂಬಸಮವಕ್ತ್ರಮುಡಲನೀಲಾಲಕಂ (ಶಬವಾಪು. ೦-೬೯). ೨. ಕರ್ಪೂರ. [ಸಂ.]

**ಪ್ರಾಲೇಯಾಂಶು** (ನಾ). ೧. ಚಂದ್ರ: ಪ್ರಾಲೇಯಾಂಶುವಿಭೂಷಿತಂ (ಶಾದಂಪು. ೨೬೩); ಕಾಲಪ್ರಾಲೇಭವಂಚಾನನ . . . ಚಿಂತಾರಹಿತ ಚಿದಮಿತಾನಂದ ನಿರ್ದ್ವಂದ್ವ ಪೂರ್ಣಪ್ರಾಲೇಯಾಂಶುಪ್ರಭಾಪ್ರಸ್ಫುರಿತನುತಯಶೋಭಾಸಿ ಮಾದಾರ್ಯವರ್ಯಾ (ಪ್ರಶವಿ. ೩೨-೫೮). ೨. ಕರ್ಪೂರ. [ಸಂ.]

**ಪ್ರಾಲೇಯಾದ್ರಿ** (ನಾ). ಹಿಮದಿಂದ ಕೂಡಿರುವ ಪರ್ವತ; ಹಿಮಾಚಲ: ಪ್ರಾಲೇಯಾದ್ರಿನವಪ್ರಸೂನಭಿದುರಂ ಗಂಗಾಸರಿಲ್ಲೋಲ . . . ಮಾರುತಂ (ಶಾಬ್ದ್ಯ. ೯೪೬). [ಸಂ.]

**ಪ್ರಾವರಣ** (ನಾ). ಹೊದೆಯುವ ವಸ್ತ್ರ; ಉತ್ತರೀಯ: "ಪ್ರಾವರಣಂ . . . ಉತ್ತರೀಯಂ — ಈ ೪ ಮೇಲುದು" (ಹಲಾಯು. ೯೦-೩೯೨); ಕ್ಷೌಮದುಕೂಲಾದಿ ದಿವ್ಯವಸನವಿವಿಧಪ್ರಾವರಣವಿಶೇಷಂಗಳುಂ (ಆದಿಪು. ೦೫-೩ ವ); ಗಾಂಡೀವಿ ಮುಕ್ತಕಳಂಬಕಂಡಪ್ರಾವರಣದಲಿ ಮುಸುಕಿದನು ಗುರುನಂದನನ ರಥವ (ಕುಭಾ. ೦೫-೦೩). [ಸಂ.]

**ಪ್ರಾವರಣಾಂಶುಕ** (ನಾ). = ಪ್ರಾವರಣ: ಬೈತಿಟ್ಟು ಕಾಪಿಟ್ಟನೋ ನೀಳಪ್ರಾವರಣಾಂಶುಕಾಂತರದೊಳಂಭೋಜೋದ್ಭವಂ ನನ್ನಿಯಂಬಾಳಾಪಕ್ಕೆಡೆಯಾಗಿ ಮೂಜಗಮದೇನೊಪ್ಪಿತ್ತೊ ಪೆರ್ಮರ್ಬಿನಿಂ (ಶಶಿ. ೬-೦೨). [ಸಂ.]

**ಪ್ರಾವಾರ** (ನಾ). = ಪ್ರಾವರಣ: "ಪ್ರಾವಾರಃ . . . ಉತ್ತರೀಯಂ — ೫ ಉತ್ತರೀಯದ ಹೆಸರು. ಮೈ ಮೇಲೆ ಹೊದ್ದಿರುವ ವಸ್ತ್ರ" (ಸಿದ್ಧಾಂತಿ. ೨೦೯). [ಸಂ.]

**ಪ್ರಾವಿಡೆಂಟ್‌ಫಂಡು** (ನಾ). ಭವಿಷ್ಯಕ್ಷೇಮನಿಧಿ; ಭವಿಷ್ಯನಿಧಿ: ವಿಮೆ ಕಂಪನಿಗಳೂ ಪ್ರಾವಿಡೆಂಟ್‌ಫಂಡು ಏರ್ಪಾಡೂ ಹೀಗೆಯೇ ಸರಕಾರಿ ಅಥವಾ ಸಹಕಾರಿ ಆಡಳಿತದಲ್ಲಿರಬಹುದು (ಹಣಶ. ೦೯೬).

[ ← ಇಂ. Provident fund ]

**ಪ್ರಾವಿರ್ಭೂತ** (ನಾ). ಕಾಣಿಸಿಕೊಂಡವನು; ಆವಿರ್ಭೂತನಾದವನು: ದ್ವಾವಿಂಶತಿಪಾರಾವಾರಾವಧಿಗೆಟಿದುಯ್ವ ನಾರಣಾಚ್ಯುತಕಲ್ಪಪ್ರಾವಿರ್ಭೂತರನೆಂದಂದಾವೆಡೆಯುಂ ಜವನ ಧಾಟಿ ಮುಟ್ಟದುದುಂಟೇ (ಪುಳ್ಳಿಪು. ೦೩-೦೦೬). [ಸಂ.]

**ಪ್ರಾವೀಣ್ಯ** (ನಾ). ಜಾಣ್ಮೆ; ಪ್ರವೀಣತೆ: ನೃಪಸೇವನಾಪ್ರಹಸನಪ್ರಾವೀಣ್ಯಮುಮಂ ಬುದ್ಧಿವರ್ಧನಮುಮಂ ಮಾಸರಮುಕ್ಕುಮ್ಮೆಂದವದಶೋಕ್ತಾರೋಹಗೇಹಂಗಳೊಳ್ (ಜಾತಕ. ೯-೨೩); ಆಯಾ ವಿಷಯದಲ್ಲಿ ಪ್ರಾವೀಣ್ಯ ಪಡೆದಿರುವ ಉಪಾಧ್ಯಾಯರು ಮಾರ್ಗದರ್ಶನ ಮಾಡಲು ಕಾದಿರುತ್ತಾರೆ (ಶಿಕ್ಷಣ. ೬೯೪). [ಸಂ.]

**ಪ್ರಾವೀಣ್ಯತೆ** (ನಾ). = ಪ್ರಾವೀಣ್ಯ: ವಧುವಿದ್ಯಾಸಂಪನ್ನರೂ ಲಲಿತಕಲೆಗಳಲ್ಲಿ ಪ್ರಾವೀಣ್ಯತೆ ಪಡೆದವರೂ ಎಂದು ಕೇಳಿರುವ ನಮಗೆ ನಿಮ್ಮಲ್ಲಿ ಒಂದು ಬೇಡಿಕೆಯಿದೆ (ಹೇಮಂತ. ೪೪೪). [ಪ್ರಾವೀಣ್ಯ + — ತೆ]

**ಪ್ರಾವೃಟ** (ನಾ). ಒಂದು ಬಗೆಯ ಸಸ್ಯ: "ಪ್ರಾವೃ(ಷ)ಟಃ_ಕಡವ" (೬ಶಧಿ. ೯೬). [ಸಂ.]

**ಪ್ರಾವೃಟ್ಕಾಲ** (ನಾ). ಮಳೆಗಾಲ; ಕಾರ್ಗಾಲ: ಪ್ರಾವೃಟ್ಕಾಲದೊಳಡಸಿ ಮಹಾವರ್ತದ ಮಟಿಗಳೋಘಮೋಘಂ ಕೊಳೆ (ಅಜಿಪು. ೧೨-೨). [ಸಂ.]

**ಪ್ರಾವೃತ** (ಗು). ೧. ಬಳಸಿದ; ಸುತ್ತುವರಿದ: ಎನಗೆ ವಿದ್ಯಾಕಾಂಕ್ಷೆಯೆತ್ತೊಂದಿದ ಜ್ಞಾನಪ್ರಾವೃತಮಾಯೆಯಿಂದೆ ತಪಮಂ ಕೈಕೊಳ್ಳುವೆತ್ತ (ಸುಕುಮಾ. ೩-೪೨); ಖಿಟ್ಗಿನಿಕಾಯಪ್ರಾವೃತೋದ್ಯನ್ಮಣಿಮಯಶಿಬಿಕಾರೂಢೆ ಮಾದೇವಿಯಲ್ತೆ (ಕಂದ್ರಪು.೬-೯೬). (ನಾ). ೨. ಹೊದೆಯುವ ಬಟ್ಟೆ, — ವಸ್ತ್ರ: "ನಿವೀತಂ, ಪ್ರಾವೃತಂ—ಹೊದಿಯುವ [ಬಟ್ಟೆ, ಅಂಗವಸ್ತ್ರ" (ಸಿದ್ಧಾಂತಿ. ೨೦೩). ೩. [ನಾಟ್ಯ] ದೇಶೀಯ ಆಕಾಶಚಾರಿಗಳಲ್ಲಿ ಒಂದು ಬಗೆ; ᑭ "ಪಾದವನ್ನು ಮುಂದಂಮರಿಸಿ [ಸಂಕಂಚಿಸಿ] ಮನೋಹರವಾಗಿ ಮೇಲಕ್ಕೆ ಎತ್ತುವುದಂ" (ಶಾಸ್ತ್ರರಂ. ೩೨೫ ಗದ್ಯಾಷು ವಾದ); ಮಿಗೆ ಪೇಷ್ಯನಮುದ್ವೇಷ್ಟಂ ನೆಗಳ್ದೆ ಸೆವುತ್ಕ್ಷೇಪಮೊಸೆವ ಪ್ರಷ್ಠೋತ್ಕ್ಷೇಪಂ ಬಗೆವಡೆದ ಸೂಚಿವಿದ್ಧಂ ನಗೆಮೊಗದೊಳೆ ಪ್ರಾವೃತಾಖ್ಯಮುಲ್ಲೋಲಮಿಮ್ಮೆಂ (ಶಾಸ್ತ್ರರಂ. ೬-೦೬). [ಸಂ.]

**ಪ್ರಾವೃಷ** (ನಾ). ೧. ಮಳೆಗಾಲ; ಕಾರ್ಗಾಲ: ಅನುರಾಗಾಂತಂ ವಸಂತಪ್ರಿಯನ ವಿರಹದೊಳ್ ಗ್ರೀಷ್ಮತಾಪಜ್ವರಂ ಮೇದಿನಿಗಾದಂ ಪುಟ್ಟಿ ಮೇಲೆಲ್ಲಂ ತಳೆದುದೊ ಮಟಿಯಂ ಪ್ರಾವೃಷಂ (ಅರ್ಹಸೀ. ೩-೦೦೨). ೨. ಒಂದು ಬಗೆಯ ಮರ; ಅರಳಿ: "ಪ್ರಾವೃಷಃ—ಅರಳಿ" (೬ಶಂ. ೯೭). [ಸಂ.]

**ಪ್ರಾವೃಷೇಣ್ಯ** (ಗು). ಮಳೆಗಾಲಕ್ಕೆ ಸಂಬಂಧಿಸಿದ; ಮಳೆಗಾಲದ: ಚಾಮಿಕಾಕರಕಳಶಮೆ ಕುರುಭೂಮಿಗೆ ತಾಂ ನೇಲೆ ಮಾಡಮಂ ಬಳಸಿ ನಭಶ್ಯಾಮಂ ನಂದನವನಮಭಿರಾಮ ಘನಪ್ರಾವೃಷೇಣ್ಯಪಟಲಮನಿಟಿಕುಂ (ಶಾಂತಿಪು. ೯-೦೯೧.). [ಸಂ.]

**ಪ್ರಾವೃಷ್ಯ** (ನಾ). ೧. ಒಂದು ಬಗೆಯ ಮರ; ಕೊಡಸಿಗೆ. ೨. ಒಂದು ಬಗೆಯ ಮರ; ಕದಂಬವೃಕ್ಷ: "ಪ್ರಾವೃಷ್ಯಃ — ಪಿಟಂಕ, ಕಡವ, ಕೊಡಸಿಗ" (೬ಶಂ. ೯೭). ೩. ಒಂದು ಬಗೆಯ ರತ್ನ; ವೈಡೂರ್ಯ: "ಪ್ರಾವೃಷ್ಯಂ_ವೈಢೂರ್ಯ" (೬ಶಧಿ. ೯೭). [ಸಂ.]

**ಪ್ರಾಶನ** (ನಾ). ೧. ರುಚಿ ನೋಡುವುದು; ಸೇವಿಸುವುದು: ಬಿಸಿದು ನೆತ್ತರ ಕಾಸು ಖಂಡಗಳ ಕೊಯ್ದು ಶೋಧಿಸುತಲಾ ಪ್ರಾಧಾಸನ ಪ್ರಾಶನಗಳ ಮಾಡಿಸು ಪಾರ್ವತಿಗೆ (ವೀಕ್ಕಪು. ೩-೩-೯); ಘಾಟುನೀರನ್ನು ತೀರ್ಥದಂತೆ ಪ್ರಾಶನ ಮಾಡಿದೆ (ಸಂಚಿರು. ೩೮). ೨. ತಿನ್ನುವಂತೆ ಮಾಡುವುದು; ತಿನ್ನಿಸುವುದು: 'ಅನ್ನಪ್ರಾಶನ' ಪರಾ. ೩. ಆಹಾರ. [ಸಂ.]

**ಪ್ರಾಶಸ್ತ್ಯ** (ನಾ). ೧. ಸರ್ವೋತ್ಕೃಷ್ಟವಾಗಿರುವಿಕೆ; ಶ್ರೇಷ್ಠವಾಗಿರುವಿಕೆ; ಪ್ರಾಧಾನ್ಯ: ಅಂತೇ ಶೈಕ್ಷಣಿಕಕ್ಷೇತ್ರಕ್ಕೆ ಇಲ್ಲಿ ಪ್ರಾಶಸ್ತ್ಯವಿದೆ (ಸಮಾಜ. ೦೨ ಪೀಠಿಕೆ); ಸೂರ್ಯನು ಕೃತ್ತಿಕಾನಕ್ಷತ್ರದಲ್ಲಿದ್ದಾಗ ವಸಂತಕಾಲ ಆಗ ಆರಂಭವಾಗುತ್ತಿದ್ದುದರಿಂದ ಕೃತ್ತಿಕಾನಕ್ಷತ್ರಕ್ಕೆ ಅಷ್ಟೊಂದು ಪ್ರಾಶಸ್ತ್ಯ ಬಂದಿತ್ತು (ನಕ್ಷತ್ರ. ೯). ೨. ಕೀರ್ತಿ; ಪ್ರಸಿದ್ಧಿ. [ಸಂ.]

**ಪ್ರಾಶಿತ** (ಗು). ೧. ತಿಂದ ; ಸೇವಿಸಿದ. (ನಾ). ೨. ತಿನ್ನುವಿಕೆ. ೩. ಪಿತೃಗಳಿಗೆ ನೀಡುವ ತರ್ಪಣ, ಪಿಂಡ ಮುಂತಾದುವು. [ಸಂ.]

**ಪ್ರಾಶ್ನಿಕ** (ಗು). ೧. ಪ್ರಶ್ನೆಗಳಿಂದ ಕೂಡಿರುವ. (ನಾ). ೨. ಪ್ರಶ್ನಿಸುವವನು ; ಪರೀಕ್ಷಿಸುವವನು : ಸಭಾಪತಿಯಾಗಿರ್ದ ಮಹಾಬಳನುಮಂ ಪ್ರಾಶ್ನಿಕರಾಗಿರ್ದ ವಿದ್ವಜ್ಜನಮುಮಂ ಸಭಾಜನಮುಮಂ ತಿಳಿಪಿ (ಆದಿಪು. ೨-೦೦ ವ) ; ಆತನುಂ ಪ್ರಾಶ್ನಿಕರಾಗಿರ್ದ ವಿಶ್ವಾವಸು ತುಂಬುರ ನಾರದರ್ಕಳನ್ನರಪ್ಪ ಗಂಧರ್ವನಿಪುಣಾಚಾರ್ಯರೆಲ್ಲಮೊಂದೆ ಸರದೊಳ್ ಪೊಗಟ್ (ಜಿಂಹಂ. ೨-೩೨ ವ). ೩. ನ್ಯಾಯವನ್ನು ನಿರ್ಣಯಿಸುವವನು ; ತೀರ್ಪುಗಾರ. [ಸಂ.]

**ಪ್ರಾಶ್ಯ** (ಗು). ೧. ತಿನ್ನುವ ; ಸೇವಿಸುವ. (ನಾ). ೨. ಆಹಾರ. [ಸಂ.]

**ಪ್ರಾಸ** (ನಾ). ೧. ಎಸೆಯುವುದು ; ಎಸೆತ. ೨. ಒಂದು ಬಗೆಯ ಆಯುಧ ; ಕೊಂತ : "ಪ್ರಾಸಃ, ಕುಂತಃ—ಈ ೨ ಕುಂತಂ" (ಹಲಾಯು. ೬೮-೩೨೦) ; ಉದ್ವೀಚಿಮರುಮರೀಚಿನಿಚಯಚಂಚಲೋದ್ದಾಮಬಲಬಹುಲನಿಷ್ಕವಚಪ್ರಾಸಪಾಣಿ . . . ಅಸಿತಭುಜಗಶಿಶುತರಳತರವಾರಿಖಡ್ಗಖೇಟಕವ್ಯಗ್ರಕರದ್ವಯೋದ್ದಾಮಪದಾತಿಬಹಳಮಿದು ಲಾಟಬಲಂ (ಆದಿಪು. ೦೩-೯೩ ವ) : ಪ್ರಾಸ ಪಟ್ಟಸ ಪರಿಘ ಬಾಣ ಶರಾಸನಾದಿ ಸಮಸಶಸ್ತ್ರವಿಲಾಸ ವಿ ಭ ವ ದ ಲೇ ಜು ದ ನು ರಣವಾದ್ಯರಭಸದಲಿ (ಕೊರಾ. ೬-೨೯-೨೨). ೩. [ಛಂದ] ಪದ್ಯದ ನಿಯತಸ್ಥಳಗಳಲ್ಲಿ ಬರುವ ನಿಯತಾಕ್ಷರ ; ☞ ಪದ್ಯದ ಪ್ರತಿ ಪಾದದ ಆದಿಯಲ್ಲಿ ಮೊದಲ ಎರಡು ಸ್ವರಗಳ ನಡುವೆ ಒಂದೇ ವಿಧವಾದ ವ್ಯಂಜನವಿರುವುದು. ಇದು ಹರಿ, ಕರಿ, ವೃಷಭ, ತುರಗ, ಶರಭ ಮತ್ತು ಅಜ ಎಂದು ಆರು ವಿಧ : ನುತಶಬ್ದಾಲಂಕಾರದೊಳತಿಶಯಮಿಾ ಕನ್ನಡಕ್ಕೆ ಸತತಂ ಪ್ರಾಸಂ (ಕವಿರಾ. ೨-೩೦) ; ಪ್ರಾಸವಿಲ್ಲದ ಪದವ ತಾಸು ಹಾಡಿದರೇನು (ಸರ್ವಜ್ಞ. ೦೨೦೯) ; ಪ್ರಾಸದ ದೃಷ್ಟಿಯಿಂದ ಕನ್ನಡಛಂದಕ್ಕೆ ವೈಶಿಷ್ಟ್ಯ ಉಂಟೇ ಉಂಟು (ಛಂದೋವಿ. ೬೦). 'ಅನುಪ್ರಾಸ' ಪರಾ. [ಸಂ.]

**ಪ್ರಾಸಂಗ** (ನಾ). ಎರಡು ಎತ್ತುಗಳನ್ನು ಆರಿಗೆ ಹೂಡುವ ನೊಗ : "ಪ್ರಾಸಂಗಃ . . . ಕಲಿಯಾರ ನೊಗ" (ಸಿದ್ಧಾಂತಿ. ೨೩೪). [ಸಂ.]

**ಪ್ರಾಸಂಗಿಕ** (ಗು). ೧. ಸನ್ನಿವೇಶಕ್ಕೆ ಸಂಬಂಧಿಸಿದ. (ನಾ). ೨. ಸನ್ನಿವೇಶಕ್ಕೆ ಸಂಬಂಧಿಸಿದುದು ; ಪ್ರಸಂಗಕ್ಕೆ ಹೊಂದಿರುವಂತಹುದು : ಜೀವನದ ಅತ್ಯಂತ ಮೂಲಭೂತವಾದ . . . ವಿಷಯಗಳನ್ನು ತೀರ ಪ್ರಾಸಂಗಿಕವೆನ್ನಬಹುದಾದ ಮಾತುಕತೆಗಳಲ್ಲಿ, ಘಟನೆಗಳಲ್ಲಿ ನಿರೂಪಿಸಲಾಗಿದೆ (ಹೊಸಕ್ಷಿ. ೨೮೮). ೩. [ಕಾವ್ಯಮಿಾ] ನಾಟಕದ ಕಥೆಯಲ್ಲಿರುವ ಎರಡು ವಿಧಗಳಲ್ಲಿ ಒಂದು ; ಸಂದರ್ಭಕ್ಕೆ ಹೊಂದಿಕೊಂಡಂತೆ ಸೇರಿ ಬರುವ ಉಪಕಥೆ : ಪ್ರಾಸಂಗಿಕವೆಂದರೆ, ಮುಖ್ಯಕಥೆಗೆ ಅಂಗವಾಗಿ ಮಧ್ಯೆ ಬರತಕ್ಕ ಕಥೆ (ಕೃವಿಂ. ೨೦೫).

**ಪ್ರಾಸಂಗಿಕವಾಗಿ** = (ಮಾತುಕತೆಯಾಗುತ್ತಿರುವ) ವಿಷಯಕ್ಕೆ ಸಂಬಂಧಿಸಿದಂತೆ ; ಸಾಂದರ್ಭಿಕವಾಗಿ : ಅರ್ಥವ್ಯಂಜಕತ್ವ ಪ್ರಾಸಂಗಿಕವಾಗಿ ಅಲ್ಲಿ ಬರುತ್ತದೆ (ಧ್ವನ್ಯಾಲೋ. ೧೦೬) ; ಪಾಠದಲ್ಲಿ ಕಲಿಯುವ ಅಂಶಗಳನ್ನೇ ಅಲ್ಲದೆ ಕಲಿಯುವ ಉತ್ತಮಕ್ರಮವನ್ನೂ ಪ್ರಾಸಂಗಿಕವಾಗಿ ಮಕ್ಕಳಲ್ಲಿ ಬೆಳಸಬೇಕು (ಶಿಕ್ಷದ. ೪೪೬). [ಸಂ.]

**ಪ್ರಾಸಂಗ್ಯ** (ನಾ). ನೊಗ ಕಟ್ಟಿ ಪಳಗಿಸಬೇಕಾದ ಎತ್ತು : "ಯುಗ್ಯಃ, ಪ್ರಾಸಂಗ್ಯಃ, ಶಾಕಟಃ— ಈ ೩ . . . ನೊಗವನ್ನು ಹೊರುವ ಎತ್ತು" (ಸಿದ್ಧಾಂತಿ. ೨೯೩). [ಸಂ.]

**ಪ್ರಾಸಕ** (ನಾ). ೧. ಈಟಿಯಂತೆ ಚೂಪಾದ ತುದಿಯುಳ್ಳ ಒಂದು ಬಗೆಯ ಸಾಧನ ; ☞ ಮಾಂಸವನ್ನು ಈ ಸಾಧನದಲ್ಲಿ ಚುಚ್ಚಿ ಬೆಂಕಿಯಲ್ಲಿ ಬೇಯಿಸುವ ಕ್ರಮ ಈಗಲೂ ಇದೆ. ೨. ಈಟಿ. ೩. (ಕೆಂಡದ ಮೇಲಿಟ್ಟು) ಬೇಯಿಸಿದುದು : ಪ್ರಾಸ[ಪಾಠಾಂ. ಸು]ಕವ ಮಾಡಿ ಬದನೆಯ ಕಾಯ್ಗಳಂ ಕಿವುಚಿ ಸಾಸುವೆಯನಿಕ್ಕಿ ಸಮತಳಗೊಡುವುದೊಂದು ತೆಱ ಸೂಸಲಂ ತಳಿದು ಪೊಗ್ಗರಣೆಯಂ ಮಾಡುವು[ದ]ದೊಂದು ತೆಱ (ಸೂಶಾ. ೪-೨೬). ೪. ಬೇಯಿಸಿದ ತಿನಿಸು : ಸಂಡಿಗೆ ಸಂಭಾರ ಗಡಲೆ ಪ್ರಾಸಕ ಕುಕ್ಕುಟಾಂಡವನವಲಕ್ಕಿಗಳನು ದುಂಡರಳ್ಗಡಲೆ ಭಕ್ಷ್ಯಗಳ ಬಡ್ಡಿಸಿಕೊಳುತುಂಡರು ನೆಱೆ ಸೊಕ್ಕುವನಕ (ಮೋಹತ. ೦೮-೯೬). [ಸಂ.]

**ಪ್ರಾಸಾಕ್ಷರ** (ನಾ). [ಛಂದ] ಪ್ರಾಸವಾಗಿ ಬರುವ ಅಕ್ಷರ : ಒಂದೇ ಪಾದದಲ್ಲಿಯಾಗಲಿ, ಅನೇಕ ಪಾದಗಳಲ್ಲಿಯಾಗಲಿ ; ಪಾದದ ಆದಿ ಮಧ್ಯಗಳಲ್ಲಿಯಾಗಲಿ, ಮಧ್ಯಾಂತಗಳಲ್ಲಿಯಾಗಲಿ, ಆದ್ಯಂತಗಳಲ್ಲಿಯಾಗಲೀ ; ಪ್ರಾಸಾಕ್ಷರವು ಒಂದೇ ಆಗಲಿ, ಅನೇಕವಾಗಲಿ-ಈ ರೀತಿ ಯಥೇಷ್ಟವಾಗಿರುವುದು (ಕೃವಿಂ. ೯೬) : ಕನ್ನಡಜಾನಪದಕವಿವರನಾದ ಸರ್ವಜ್ಞನು ಪ್ರಾಸಾಕ್ಷರಕ್ಕೆ ಕೊಟ್ಟಿರುವ ಮಹತ್ವವನ್ನು ಈ ತ್ರಿಪದಿಯಲ್ಲಿ ಕಾಣಬಹುದು (ಸಂಶೋಧ. ೦೨೫). [ಸಂ.]

**ಪ್ರಾಸಾದ₁** (ನಾ). [ವೀಶೈ] ಪ್ರಸಾದ : ವಿನಯದಿಂ ಗುರುವಿಗೆ ಸಮರ್ಪಿಸಿ ಘನದ ಲಿಂಗ ಸಮರ್ಥವುಂ ಮತ್ತನಘಜಂಗಮಭಕ್ತಿಯು ಪ್ರಾಸಾದಮಂ ಪಡೆದು (ಬಸಪು. ೩೯-೦೬). [ < ಸಂ. ಪ್ರಸಾದ ]

**ಪ್ರಾಸಾದ₂** (ನಾ). ೧ (ಕಲ್ಲು, ಇಟ್ಟಿಗೆ ಮೊದಲಾದುವುಗಳಿಂದ ಕಟ್ಟಿದ) ಮಹಡಿಯ ಮನೆ, ಕರುಮಾಡ, ಅರಮನೆ, ದೇವಾಲಯ ಮುಂತಾದವು : "ಇಟ್ಟಿಗೆ ಮೊದಲಾದವಱಿಂ ಮಾಡಿದರಮನೆ ದೇಗುಲಂಗಳಂ ಪ್ರಾಸಾದವೆಂಬುದು" (ಹಲಾಯು. ೪೯-೦೩೮) ; ಗೈರಿಕದಿ ಮುಕ್ತಾಫಲದಿ ಸಮೆದ ಕಲಶಂಗಳೊರಣಿಪ ಪ್ರಾಸಾದ ಸೌಧ ಹರ್ಮ್ಯಂಗಳಿಂದೆಸೆದುದಾ ದ್ವಾರಾವತಿ (ಶಕಾಶ. ೨-೩). ೨. ಮೇಲಿನ ಅಂತಸ್ತು ; ಉಪ್ಪರಿಗೆ ; ಮಹಡಿ : ನಿನಗೆ ಮುಕ್ತಿಪ್ರಾಸಾದಮನಡರಲಿವುವೆ ಸೋಪಾನಂಗಳ್ (ಆದಿಪು. ೫-೬೦) ; ಕನ್ಯಾಂತಃಪುರಪ್ರಾಸಾದಮನೇಱಿ (ಕಾದಂಪೂ. ೬೮೮). ೩. [ಜೈನ] ಚೈತ್ಯಾಗಾರ, ಬಸದಿ ಮುಂತಾದುವು; ☞ ಸ್ವರ್ಗದಲ್ಲಿ ವೈರಾಜ, ಪುಷ್ಪಕ, ಕೈಲಾಸ, ಮಣಿಕ, ತ್ರಿವಿಷ್ಟಪಗಳೆಂಬ ಐದು ಮಹಾಪ್ರಾಸಾದಗಳು ಮತ್ತು ಭೂಮಿಯ ಮೇಲೆ ಸ್ವಸ್ತಿಕ, ವರ್ಧಮಾನ, ನಂದ್ಯಾವರ್ತ, ಸರ್ವತೋಭದ್ರ, ವಲಭಿಚ್ಛಂದ ಎಂಬ ಐದು ಪ್ರಾಸಾದಗಳು ಇವೆಯೆಂದು ಜೈನರು ನಂಬುತ್ತಾರೆ : ಪ್ರಾಸಾದಾನ್ತರಮಾನ್ಯಚಿತ್ರಕನಕಪ್ರಜ್ವಲ್ಯದಿವ್ಯಕ್ಕುದಾನ್ಸಾಸಿಪ್ಪರ ಪೂಜೆದನ್ಯಯೆ ಅವಸ್ವರ್ಗಾಗ್ರಪಮಾನೇಱಿದಾರ್ (ಎಕ. II. ೨೬-೨; ಕು. 700) ; ಪ್ರಾಸಾದಾಂತರದಿಂದಮುಯ್ದು ಜಿನಚೈತ್ಯಾಗಾರಮೊಂದಿಂತೆ ವಿನ್ಯಾಸಂ ನಾಡೆ ಬೆಡಂಗುವೆತ್ತಿರೆ . . . ತದ್ಭೂಮಿ ಕಣ್ಗೊಪ್ಪುಗುಂ (ಶಂತ್ರಪು. ೦೫-೨೨). [ಸಂ.]

**ಪ್ರಾಸಾದಿ** (ನಾ). [ವೀಶೈ] ತಾನು ಅನುಭವಿಸುವ ಪ್ರತಿಯೊಂದು ಪದಾರ್ಥವನ್ನು ಮೊದಲು ಲಿಂಗಕ್ಕೆ ಅರ್ಪಿಸಿ, ಅರ್ಪಿತಪದಾರ್ಥವನ್ನು ಭಕ್ತಿಪೂರ್ವಕವಾಗಿ ಪ್ರಸಾದರೂಪದಲ್ಲಿ ಸ್ವೀಕಾರ ಮಾಡುವವನು ; ಷಟ್ಸ್ಥಲಗಳಲ್ಲಿ ಮೂರನೆಯ ಹಂತವಾದ ಪ್ರಸಾದಿಸ್ಥಲವನ್ನು ತಲುಪಿದವನು ; ಪ್ರಸಾದಿ : ಪ್ರಾಸಾದಿಗೆ ಪ್ರಸಾದಸ್ಥಲ (ಶೋಳವಾ. ೪೩-೦೬೮) ; ಲಿಂಗನಿಷ್ಠೆ ಮೊದಲಾದ ಸ್ಥಳಗಳ ಪರಿಜ್ಞಾನದಿಂದ ಆ ಆಚರಣವುಳ್ಳ ಸಮಸ್ತಪಾಪಪರಿಹಾರ ಮಾಡಿಕೊಂಡ ಮಾಹೇಶ್ವರನು ಮನೋನ್ಯೈರ್ಮಲ್ಯಸಂಬಂಧದಿಂದ 'ಪ್ರಾಸಾದಿ' ಎನಿಸುವನು (ಭಾಶತ್ತ. ೩೬೬). [<ಸಂ. ಪ್ರಸಾದಿನ್]

**ಪ್ರಾಸಾದಿಕ** (ಗು). ೧. ಅನುಗ್ರಹಿಸುವ ; ಪ್ರಸನ್ನವಾದ : ಜಗತ್ತಿನಲ್ಲಿ ಇಂದಿನವರೆಗೆ ಶ್ರೇಷ್ಠರಾದ ಕವಿಗಳು 'ಆವೇಶ', 'ಪ್ರಾಸಾದಿಕವಾಣಿ' ಮೊದಲಾದವುಗಳ ಗೊಡವೆಗೆ ಹೋಗದೆ . . . ಅನುಪಮಸೌಂದರ್ಯ ವನ್ನು ನಿರ್ಮಿಸಿರುವರು (ಗೊಕಸ್ತು. ೩೩). ೨. ರಮ್ಯವಾದ; ಸುಂದರ ವಾದ. [ಸಂ.]

**ಪ್ರಾಸಾಭಾಸ** (ನಾ). ಪ್ರಾಸದಂತೆ ತೋರುವುದು ; ಪ್ರಾಸದ ಹಾಗಿರುವುದು : ಪ್ರಾಸಾನುಪ್ರಾಸಾಂತಪ್ರಾಸಂಗಳ್ಪೊಚ್ಚುವತಿಶಯಂಗ ಳ್ಪ್ರಾಸಾಭಾಸಂಗಳಂಟೆಂದ ಮಾಱುಂ (ಕಾಜಿ. ೨-೯೩). [ಸಂ.]

**ಪ್ರಾಸಿಕ** (ನಾ). ಈಟಿಯನ್ನು ಹಿಡಿದಿರುವವನು : "ಪ್ರಾಸಿಕಃ, ಕೌಂತಿಕಃ – ಈ ೨ ಈಟಿಯೇ ಆಯುಧವಾಗಿ ಉಳ್ಳವನು, ಸಬಳಿಗನು" (ಸಿದ್ಧಾಂತಿ. ೨೩೭). [ಸಂ.]

**ಪ್ರಾಸು** (ನಾ). = ಪ್ರಾಸ ೩ : ಸನೇಮ = ಪ್ರಾಸು (ಕಪುರ. ೯. ೧೯ ಟೀಕು) ; ಪದ ತಪ್ಪಿದರೆ ಪ್ರಾಸು ತಪ್ಪೀತೆ ? (ಗಾದೆ). [<ಸಂ. ಪ್ರಾಸ]

**ಪ್ರಾಸುಕ** (ಗು). ೧. ಹುಳಬೀಳದ; ಶುದ್ಧವಾದ : ಕಾಯಿಸಿ ಸೋಸಿದ ಸ್ವಚ್ಛನೀರು (ಪ್ರಾಸುಕ ಜಲ) (ಕೃಶತ. ೬೭). (ನಾ). ೨. ಹುಳು ಬೀಳದುದು ; ಶುದ್ಧವಾದುದು : ಭಟಾರಾ ಪ್ರಾಸುಕಮಪ್ಪ ನೀರಂ ಪೊಟ್ಟದೊಳ್ ಬಂದುದಂ ಕುಡಿದು ನಿಮ್ಮ ಸೇದೆಯನಾಱಿಸಿಂ (ವಡ್ಡಾರಾ. ೧೦೩-೩೦). [<ಪ್ರಾ. ಫಾಸುಅ, ಫಾಸುಗ]

**ಪ್ರಾಸುಕಾಹಾರ** (ನಾ). ಹುಳುಬೀಳದ ಆಹಾರ ; ಶುದ್ಧವಾದ ಆಹಾರ: ಜ್ಞಾನಸಂಯಮತಪೋನಿಮಿತ್ತಮಾಗಿ ಪರಕೃತಪ್ರಶಸ್ತಪ್ರಾಸುಕಾಹಾರಮಂ ರಾಗದ್ವೇಷಮಿಲ್ಲದುಂಬುದುಂ (ಕಸಊಪ್ಮ. ೨೯೩). [ಪ್ರಾಸುಕ + ಆಹಾರ]

**ಪ್ರಾಸ್ತಾವಿಕ** (ಗು). ೧. ಸಾಂದರ್ಭಿಕವಾದ; ಸಮಯಕ್ಕೆ ತಕ್ಕುದಾದ: ಅವನು ಉಚ್ಚಸ್ವರದಿಂದ ಮಿಕ್ಕ ಸಭಿಕರನ್ನು ಕುರಿತು ಪ್ರಾಸ್ತಾವಿಕ ಭಾಷಣ ಮಾಡಿದನು (ಅಂಬಿ. ೧೬೩). (ನಾ). ೨. ಸಮಯೋಚಿತ ವಾದುದು ; ಸಂದರ್ಭೋಚಿತವಾದುದು : ಈಗ ನಡೆಯುತ್ತಿರುವ ನಾಡ ಹಬ್ಬದ . . . ಸಮಾರಂಭದಲ್ಲಿ ಪ್ರಾಸ್ತಾವಿಕವಾದ ನಾಲ್ಕು ಮಾತುಗಳನ್ನು ಹೇಳಬೇಕೆಂದು ನನಗೆ ಕರೆ ಬಂದಾಗ ಮನಸ್ಸಿನಲ್ಲಿ ಮೊದಲು ಮೂಡಿದ ಭಾವಗಳೆಂದರೆ ಆಶ್ಚರ್ಯ ಮತ್ತು ಅಧೈರ್ಯ (ಸಮಾಲೋ. ೦೨೬.) [ಸಂ.]

**ಪ್ರಾಹ್ಣ** (ನಾ). ದಿನದ ಮೊದಲನೆಯ ಭಾಗ; ಬೆಳಗ್ಗೆ ; ಪ್ರಾತಃಕಾಲ. [ಸಂ.]

**ಪ್ರಾಲೇಯ** 'ಪ್ರಾಲೇಯ' ನೋ.

**ಪ್ರಾಲೇಯಾಚಲ**, ಪ್ರಾಲೇಯಾಚಳ (ನಾ). ಹಿಮದಿಂದ ಕೂಡಿದ ಬೆಟ್ಟ; ಹಿಮಗಿರಿ ; ಹಿಮಾಲಯ : ಪ್ರಸ್ಫುರತ್ಪ್ರಾಲೇಯಾಚಲವಿಭಾತನಪ್ಪ ಪೊಳಿಲಾಭೃನ್ನಾಥಂ (ಶಂಕಥಾ. ೦೯-೩೩). ಪ್ರಾಲೇಯಾಚಳ : ಪೋಗ ವೇಟ್ಟು ಪ್ರಸನ್ನಕತಿಪಯಪ್ರಯಾಣಂಗಳಿಂ ಪ್ರಾಲೇಯಾಚಳಮಧ್ಯಮ ಕೂಟಮನೆಯ್ದಿವರ್ಪುದುಂ (ಶಾಂತಿಪು. ೧೦-೩೭ ವ).

[ಸಂ. ಪ್ರಾಲೇಯಾಚಲ]

**ಪ್ರಾಲೇಯಾಚಳ** 'ಪ್ರಾಲೇಯಾಚಲ' ನೋ.

**ಪ್ರಿತುವಿ** 'ಪೃಥುವಿ'ನೋ.

**ಪ್ರಿಥಿವಿಸಾಗರ** (ನಾ). ಒಬ್ಬಾತನ ಹೆಸರು : ಶ್ರೀಪ್ರಿಥಿವಿಸಾಗರನ್ ಪಟ್ಟಂ ಗಟ್ಟಿಸಿ (ಎಕ. IX, ೦೯-೦ ; ಸು. 800).

[ℙ ಇದು 'ಪೃಥ್ವೀಸಾಗರ'ಎಂಬುದರ ಅಪಲಿಖಿತ]

**ಪ್ರಿಥುವಿ** 'ಪೃಥುವಿ' ನೋ.

**ಪ್ರಿನ್ಸಿಪಾಲ್** (ನಾ). ಉನ್ನತಶಿಕ್ಷಣಸಂಸ್ಥೆಯ ಮುಖ್ಯಸ್ಥ : ಪಾಠಶಾಲೆ ಗಳಲ್ಲೂ ವಿದ್ಯಾಶಿಕ್ಷಣಾದಿ . . . ಕೆಲಸಗಳನ್ನು ನೋಡಿಕೊಂಡಿರಲು ಪ್ರಿನ್ಸಿಪಾಲ್ ಎಂದೊಬ್ಬ ಅಧಿಕಾರಿಯನ್ನು ನಿಯಮಿಸಿದ್ದರು (ಶಂಬು. ೩೩).

[←ಇಂ. Principal]

**ಪ್ರಿಯ** (ಗು). ೧. ಅಕ್ಕರೆಯ ; ಪ್ರೀತಿಪಾತ್ರವಾದ ; ನಲ್ಮೆಯ. ೨. ಪದಾರ್ಥಗಳ ವಿಷಯದಲ್ಲಿ ಬೆಲೆ ಅಧಿಕವಾಗಿರುವ; ತುಟ್ಟಿಯ. (ನಾ). ೩. ಅಕ್ಕರೆ ; ಪ್ರೀತಿ; ವಾತ್ಸಲ್ಯ : ಪ್ರಿಯದಿಂದೆ ಮಹಾಕಾಳಾ ಹ್ವಯನೀಶಂ ನೆಲಸೆ ನಗರಿಯೊಂದಧಿಕಖ್ಯಾತಿಯಿನೆಸೆದು ತೋರ್ಪುದು (ಕಾದಂಪು. ೨೧೦) ; ಪಿರಿದುಂ ಪ್ರಿಯದಿಂದವೆ ಮುಂ ಪೆತ್ತವರಿರವಂ ಪೋಲ್ವುದು ಪುಟ್ಟಿದ ಶಿಶು (ಶಬರಾ. ೩-೩೯). ೪. ಹಿತವಾದುದು ; ಇಷ್ಟವಾದುದು : ಪ್ರಿಯಮಪ್ಪುದು ಧರ್ಮಂ ಪೃಥ್ವಿಯ ಸೂನುವಿನಿಂದ ಧರ್ಮಮಂತದು ತಾನಪ್ರಿಯಮಪ್ಪುದು ತನಗೆ (ಪರ್ವಪಾ. ೬-೩೩). ೫. ಒಳ್ಳೆಯದು; ಶುಭವಾದುದು: "ಪ್ರಾಗ್ರ್ಯಂ . . . ಪ್ರಿಯಂ . . . ಪೇಶಲಂ–ಈ ೨೯ ಒಳ್ಳಿತು" (ಹಲಾಯು. ೦೧೯-೯). ೬. ಪ್ರೀತಿಪಾತ್ರನಾದ ವನು ; ನಲ್ಲ : "ವಲ್ಲಭಃ, ದಯಿತಃ, ಪ್ರಿಯಃ – ಈ ೩ ಕೂರ್ಪವಂ" (ಹಲಾಯು. ೬೦-೨೦೨) ; ಆ ಜಯವರ್ಧುಗನಂತವೀರ್ಯಂ ಪ್ರಿಯನಾದೊಂ (ಶಾಂತಿಪು. ೯-೯೭). ೭. ಬೇಕಾದ ವ್ಯಕ್ತಿ ; . ಆಪ್ತ ; ಆತ್ಮೀಯ : ನಿನ್ನವೋಲೆನಗಾರುತನುಂ ಪ್ರಿಯಂ (ಶ್ರೀಣಾಪು. ೩೩-೦೮೦). ೮. ಬೆಲೆ ಯೇರಿಕೆ ; ತುಟ್ಟಿ : ಬಹಳ ಪ್ರಿಯವಾದ ಕಾಲದಲ್ಲಿ ಧಾನ್ಯವ ನ್ನೆಲ್ಲಾ ಮಾರಿ ನಾಲ್ಕಾರು ತಿಂಗಳು ಪೂರ್ತಿ ತಮಗೆ ಬೇಕಾದಷ್ಟು ಇಟ್ಟು ಕೊಂಡಿರುವರು (ಕೃಶಿಕ್ಷ. ೯೩) ; ಎಂಥೆಂಥ ಪ್ರಿಯದ ಮಾಲುಗಳನ್ನು . . . ಕಡಿಮೆ ಬೆಲೆಗೆ ಕೊಂಡ ಸಾಹಸ ಹೇಳಿಯಾಯಿತು (ತುರಾಮ. ೯೨). [ಸಂ.]

**ಪ್ರಿಯಂಕರಿ** (ನಾ). ಒಂದು ಬಗೆಯ ಸಸ್ಯ ; ಹೆಗ್ಗುಳ್ಳ : "ಪ್ರಿಯಂಕರೀ– ಹೆಬ್ಬಾಲೆ, ಬಿಳಿಯ ನೆಲಗುಳ್ಳ" (ಓಷಧಿ. ೯೯). [ಸಂ. ಪ್ರಿಯಂಕರೀ]

**ಪ್ರಿಯಂಗು** (ನಾ). ೧. ಒಂದು ಬಗೆಯ ಸಸ್ಯ ; ನವಣೆ : "ಪ್ರಿಯಂಗುಃ, ಕಂಗುಃ – ಈ ೨ ನವಣೆ" (ಹಲಾಯು. ೯೩-೪೨೪) ; ಅಭಿನವಪ್ರಿಯಂಗು ಶ್ಯಾಮಾಂಗಮರ್ಧಚಂದ್ರಬುದ್ಬುದಪ್ರಾಕೀರ್ಣತ್ರಿಶೂಲಕರಾಲವಿಶಾಲವೇತ್ರ ಖೇಟಕಂ (ಆದಿಪು. ೦೩-೯೩ ವ). ೨. ಒಂದು ಬಗೆಯ ಮರ : ಮಾಡಿದ ವೈವಾಹಕದಿಂ ಪ್ರಿಯಂಗುಫಲಮುಕ್ಕುಂ (ಲೋಕೋಪ. ೬-೪೨) ; ರತಿಪ್ರಿಯನಂ ಪ್ರಿಯಂಗು ತನ್ನಲರ್ಗಣೆಯಿಂ ಜಗತ್ತ್ರಯಮುಮಂ ಗೆಲಿಸಿತ್ತು (ಜಗಂ. ೦೯-೬). ೩. ಒಂದು ಬಗೆಯ ಬಳ್ಳಿ : "ಶ್ಯಾಮಾವಲ್ಲೀ – ಪ್ರಿಯಂಗು" ಓಷಧಿ. ೦೬೯). [ಸಂ. ]

**ಪ್ರಿಯಂನುಡಿ** (ಕ್ರಿ). ಹಿತವಾದುದನ್ನು ಹೇಳು ; ಇಷ್ಟವಾದುದನ್ನು ತಿಳಿಸು: ಸಂಸ್ಕೃತದ ನಿತ್ಯಬಿಂದುಗೆ–ಗುಣಂಗೊಂಡಂ . . . ಪ್ರಿಯಂನುಡಿದಂ, ಧನಂಬಡೆದಂ (ಶಮದ. ೦೬೭ ಪ್ರಯೋ). [ಪ್ರಿಯ + ನುಡಿ₁]

**ಪ್ರಿಯಂಬಡಿಸು** (ಕ್ರಿ). ಹಿತವನ್ನುಂಟುಮಾಡು ; ತೃಪ್ತಿಪಡಿಸು : ಘನತರರೋತ್ಸುಕಚಿತ್ತದಿಂ ಮೇದಿನಿಯೊರಸಲಭಿವಂದಿಸುತ ತಾನನುನ ಯೋಚಿತ ಸತ್ಕ್ರಿಯಾದಿಗಳಿಂ ಪ್ರಿಯಂಬಡಿಸಿ (ಬಸವು. ೨೮-೬).

[ಪ್ರಿಯ + ಪಡಿಸು]

**ಪ್ರಿಯಂವದ** (ನಾ). ೧. ಇಷ್ಟವಾದುದನ್ನು ಹೇಳುವುದು ; ಹಿತ ವಾದುದನ್ನು ನುಡಿಯುವುದು. ೨. ಇಷ್ಟವಾದುದನ್ನು ಹೇಳು ವವನು ; ಹಿತವಾದುದನ್ನು ನುಡಿಯುವವನು : ಶ್ಲಕ್ಷ್ಣಃ, ಪ್ರಿಯಂವದಃ –೨ ಪ್ರಿಯವನ್ನು ನುಡಿಯುವವನ ಪೆಸರುಗಳು" (ಸಿದ್ಧಾಂತಿ. ೩೩೨). [ಸಂ.]

**ಪ್ರಿಯಕ** (ನಾ). ೧. ಮೈಮೇಲೆ ಚುಕ್ಕೆಗಳುಳ್ಳ ಒಂದು ಬಗೆಯ ಜಿಂಕೆ; ಚಿಗರೆ. ೨. ಒಂದು ಬಗೆಯ ಮರ; ಹೊನ್ನೆ: "ಪೀತಸಾಲಕಃ . . . ಪ್ರಿಯಕಃ, ಜೀವಕಃ –೬ ಹೊನ್ನೇಮರದ ಹೆಸರುಗಳು" (ಸಿದ್ಧಾಂತಿ. ೦೨೨) ; ಪ್ರಿಯಾಳ ಪ್ರಿಯಕ ಕುರವಕಾಶೋಕ . . . ಭೂಜಾವಕೀರ್ಣಂ

(ಅರ್ಥಶೇ. ೩-೩೩). ೩. ಒಂದು ಬಗೆಯು ಮರ; ಈಚಲು: "ನೀಪಃ, ಪ್ರಿಯಕಃ, ಕದಂಬಃ, ಹಲಪ್ರಿಯಃ – ೪ ಕಡಹದ ಗಿಡದ ಹೆಸರುಗಳು, ಈಚಲ ಗಿಡದಲ್ಲಿ ಉತ್ತಮಜಾತಿ" (ಸಿದ್ಧಾಂತಿ. ೭೨೦). ೪. ಒಂದು ಬಗೆಯ ಗಿಡ ; ಪ್ರಿಯಂಗು : "ಪ್ರಿಯಕಃ–ಕಡವ, ಹೊನ್ನೆ, ಪ್ರಿಯಂಗು" (೬೫೦. ೯೬). [ಸಂ.]

**ಪ್ರಿಯಕರ** (ಗು). ೧. ಪ್ರೀತಿಯನ್ನುಂಟುಮಾಡುವ ; ಅಕ್ಕರೆಯನ್ನು ತೋರುವ. ೨. ಪ್ರೀತಿಗೆ ಪಾತ್ರವಾದ. (ನಾ). ೩. ಪ್ರೀತಿಯನ್ನುಂಟುಮಾಡುವುದು; ಅಕ್ಕರೆಯುಳ್ಳುದು : ಅವನಿಗೆ ತನ್ನ ತಾಯಿಯ ಜೀವ ನೂರು ಬಲೀಂದ್ರ ಹೋತಗಳ ಜೀವಕ್ಕಿಂತಲೂ ಹೆಚ್ಚು ಪ್ರಿಯಕರವ ಗಿತ್ತು (ಕಾನೂರು. ೫೬೬). ೪. ಪ್ರೀತಿಯನ್ನು ತೋರುವವನು; ಪ್ರೇಮವುಳ್ಳವನು : ವಿಧುವಿಂದಂ ವಿಬುಧೋತ್ಕರಪ್ರಿಯಕರಂ ಶೀವ್ರಾಂಶುವಿಂದಂ ಪ್ರತಾಪಧನಂ ದಳತ್ವದ್ಮದಿಂದಧಿಕಶ್ರೀನಿಳಯಂ ಸುಪುತ್ರನೊಗೆತರ್ಕುಂ (ಪುಷ್ಪಶೆ. ೩-೦೨೨). ೫. ನಲ್ಲ; ಪ್ರೇಮಿ : ಆಕೆ ತನ್ನ ಪ್ರಿಯಕರನಿಗೊಂದು, 'ಕೊನೆಯ ಪತ್ರ' ಬರೆದಿಟ್ಟು 'ಆತ್ಮಹತ್ಯೆ' ಮಾಡಿಕೊಳ್ಳುತ್ತಾಳೆ (ರೂಪಕಾ. ೩೯). [ಸಂ.]

**ಪ್ರಿಯಕಾರಿಣಿ** (ನಾ). ಪ್ರೀತಿಗೆ ಕಾರಣಳಾದವಳು ; ಪ್ರಿಯೆ : ಪ್ರಿಯಕಾರಿಣಿ ಭುವನಜನಪ್ರಿಯಕಾರಿಣಿ ನೆಗಟ್ದೆ (ವರ್ಧಮಾ. ೧೧-೨೩). [ಸಂ. ಪ್ರಿಯಕಾರಿಣೀ]

**ಪ್ರಿಯಕಾವೇರಿ** (ನಾ). ಒಂದು ಬಗೆಯ ಚಿನ್ನದ ನಾಣ್ಯ : ದುರ್ಗವು ಕೈವಶವಾದ ಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದು ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ೧. ಗಬರು, ೧. ಪ್ರಿಯಕಾವೇರಿ (ಐತ್ರಸಾ. ೦೦೩). [?]

**ಪ್ರಿಯಗಳ್ಳ** (ನಾ). ಪ್ರೀತಿಯನ್ನು ಪಡೆದವನು; ಒಂದು ಬಿರುದು : ಅಮ್ಮನ ಗಂಧವಾರಣಂ ಪಡೆಮೆಚ್ಚೆಗಂಡಂ ಪ್ರಿಯಗಳ್ಳಂ[ಶಾಸನ. ಪ್ರಗಳ್ಳಂ] ಗುಣನಿಧಿಗುಣಾರ್ಣವಂ (ಶಂಶಾ. ೦-೦೪೮ ಐ); "ಪ್ರಿಯಳನ್ನು ಅಪಹರಿಸಿದವನು, ಅರ್ಜುನ ಸಂಭದ್ರೆಯನ್ನು ಅಪಹರಿಸಿದಂತೆ" (ಶಂಶಾ. ೩೩). 'ಗುಣಗಳ್ಳ' ಪರಾ. [ಪ್ರಿಯ + ಕಳ್ಳ1]

**ಪ್ರಿಯಜನ** (ನಾ). ಆತ್ಮೀಯಜನ; ಆಪ್ತೇಷ್ಟರು : ಈ ವಿದ್ಯಾಧರಶ್ರೇಣಿಯ ಪರಿಭಾಷೆಗಳ್ ನಿನ್ನವಾಗದೆ ಸಾವಂ ಪ್ರಿಯಜನಪ್ರಯೋಜ್ಯಂ ಅಲ್ಲದೆಡೆಯೊಳುನ್ಮತ್ತವಿಳಸಿತಂ (ಶಾಂತಿಪು. ೩-೯೩ಐ); ಪ್ರಿಯಜನದಿನಲ್ಲದಾಬುಗುಮೆ ಯುವತಿಯು ವಿರಹಶಿಖಿ ಸಮೀಕೃತಶಿಶಿರಕ್ರಿಯೆಯಿಂ (ವರ್ಧಪು. ೪-೬೩). [ಸಂ.]

**ಪ್ರಿಯಜೀವ** (ನಾ). ಒಂದು ಬಗೆಯ ಮರ : "ಪ್ರಿಯಜೀವಃ—ಹೆಮ್ಮರ" (೬೫೦. ೯೯). [ಸಂ.]

**ಪ್ರಿಯತಮ** (ನಾ). ೧. ಅತಿಹಿತವಾದುದಂ ; ಅತ್ಯಂತ ಪ್ರೇಮವುಳ್ಳುದು : ಪ್ರಿಯತಮ[ಮಂ] ತಾಳ್ದಿದರಯನಯಮಯರೇಕಾದಶಾಂಗಮಂ ನಕ್ಷತ್ರ[ರ] ಜಯಪಾಳಮಹಾಮುನಿ ಪಾಂಡುಯತಿ ದ್ರುಮಸೇನಸೂರಿ ಕಂಸಾ[ಚಾ]ರ್ಯರ್ (ವರ್ಧಮಾ. ೦೬-೩೯). ೨. ಪ್ರಿಯನಾದವನು; ನಲ್ಲ : ವಿರಹದಿಂ ಪ್ರಿಯತಮಸಮಾಗಮಪ್ರತ್ಯಾಶೆ ಹೃದಯಮಂ ಬೇಯಿಸಲ್ಕೆ (ಚತ್ರಾಂಗ. ೩೩-೦೫೦೦). ೩. ಅತ್ಯಂತ ಹಿತವಾದವನು; ಆಪ್ತ : ಪ್ರಿಯತಮನೆನಾಗು ರತ್ನತ್ರಯದೊಳೆ ನಿನ್ನಡಿಗೆ ತಡೆಯದೆಬಗಿಸು ಭುವನತ್ರಯಮಂ (ಅಜಪು. ೬-೭೪); ಅನೀತನಂ ಸಕ್ಕ್ರಿಯಾನಲನಿಂ ಸುಟ್ಟೆನುಮಿಲ್ಲ ಮತ್ಪ್ರಿಯತಮಂ ಕರ್ಣಂಗಿದೇಂ ಕೂರ್ತನೋ (ಗದಾಯು. ೩-೩೦). [ಸಂ.]

**ಪ್ರಿಯತಮೆ** (ನಾ). ಪ್ರಿಯಳಾದವಳು; ನಲ್ಲೆ: "ನಲ್ಲಳಿನಿಯಳೋಪಳು ಕಾದಲೆಯೆನಲ್ಕೆ ಮನದನ್ನೆಯೆಂದೊಡಂ ಪ್ರಿಯತಮೆಗೆ ನಾಮಮಕ್ಕುಂ" (ಶಬ್ದಮಂ. ೬೩); ಪ್ರಿಯತಮೆಯನಗಲ್ದ ಶರೀರಿಯ ಜೀವನಮೇವುದೆಂದು ಮರಣಮನಾಂ ನಿಶ್ಚಯಮಂ ಮಾಡುವ ಪದದೊಳ್ (ದಶಕು. ೯-೯೭). [ಸಂ. ಪ್ರಿಯತಮಾ]

**ಪ್ರಿಯಮಿತ್ರ** (ನಾ). ಬಹಳ ಪ್ರಿಯನಾದವನು ; ಪ್ರಾಣಮಿತ್ರ : ಪ್ರಿಯಮಿತ್ರನೆನಗೆ ಕಮಲಪ್ರಿಯನಂದನನವನನ್ನ ಪಕ್ಕದೆ ತೇಜಸ್ವಿಯನಂ ತಾಡಿದನಾ ಕಳಶಯೋನಿ ನೆಗಟ್ದಿಂದ್ರಸುತನಿನೇಗುಂದಿದನೋ (ಗದಾಯು. ೨-೦೯) ; ಪ್ರಿಯಮಿತ್ರ ಚಕ್ರವರ್ತಿಯ ಭಯದಿಂದುಗಿದರಿಕದಂಬದಂ ತಂಬುರುಹಪ್ರಿಯಬಿಂಬಂ ತೇಜದಳುರ್ಕೆಯು ಬಿಸುಪಂ ಬಿಸುಟು ಮಗುಟ್ದು ತೋಱುದುದಾಗಳ್ (ವರ್ಧಮಾ. ೯-೪೦). [ಸಂ.]

**ಪ್ರಿಯವಚ** (ನಾ). ಪ್ರೀತಿಯ ಮಾತು ; ನಲ್ನುಡಿ : ಪ್ರಿಯವಚದಂತೆ ಪುಣ್ಯತತಿಯಂತೆ ಸುಧಾಕರನಂತೆ...ಹಂಪೆಯ ಹರಿದೇವನುನ್ನತಕೃತಿಪ್ರಸರಂ ಭುವನೈಕಭಾಸುರಂ (ಗಿರಿಜ. ೦-೦೬). [ಸಂ.]

**ಪ್ರಿಯವಚನ** (ನಾ). = ಪ್ರಿಯವಚ : "ಚಟು(ಃ), ಚಾಟು(ಃ)—ಪ್ರಿಯವಚನಂ" (ಪಲಾಯು. ೨೪-೦೪೫); ಪ್ರಿಯವಚನಂಗಳಿಂ ಕರೆದು ಕೆಯ್ಯುಗಿದು (ಧರ್ಮನಾ. ೦-೪೦). [ಸಂ.]

**ಪ್ರಿಯವತಿ** (ನಾ). ಒಂದು ಬಗೆಯ ಸಸ್ಯ : "ಪ್ರಿಯವತೀ—ಹೊನಗನ್ನೆ" (೬೫೦. ೯೯). [ಸಂ. ಪ್ರಿಯವತೀ]

**ಪ್ರಿಯವನಿತೆ** (ನಾ). ಪ್ರೀತಿಪಾತ್ರಳಾದ ಸ್ತ್ರೀ ; ನಲ್ಲೆ : ಪ್ರಿಯವನಿತಾಚರನೊಗೆದಂ ಪ್ರಿಯತನಯಂ ಕೇಶವಾಂಕನಾದನಿದೇಂ ವಿಸ್ಮಯಕರಮೊ (ಅಜಪು. ೬-೩); ಪ್ರಿಯವನಿತಾಘನಸ್ತನದಿಟುಂಬಿನೊಳ್ . . . ಒಳಪೊಕ್ಕು ಕಾಮುಕಜನಂ ಬರ್ದುಕಿರ್ದುದು ಬಂದ ಮಾಗಿಯೊಳ್ (ಶಾಂತೀಶ್ವ. ೧೨-೮೭). [ಸಂ. ಪ್ರಿಯವನಿತಾ]

**ಪ್ರಿಯವಲ್ಲಿ** (ನಾ). ಒಂದು ಬಗೆಯ ಸಸ್ಯ : "ಪ್ರಿಯವಲ್ಲೀ—ಪ್ರಿಯಂಗು" (೬೫೦. ೯೯). [ಸಂ. ಪ್ರಿಯವಲ್ಲೀ]

**ಪ್ರಿಯವಾದಿನಿ** (ನಾ). ಹೆಣ್ಣು ಗಿಳಿ : "ಪ್ರಿಯವಾದಿನೀ—ಹೆಣ್ಣು ಗಿಳಿ" (೬೫೦. ೯೯). [ಸಂ. ಪ್ರಿಯವಾದಿನೀ]

**ಪ್ರಿಯವಾರ್ತೆ** (ನಾ). ಸಂತೋಷದ ಸುದ್ದಿ : ಈ ಪ್ರಿಯವಾರ್ತೆಯನ್ನು ನಾವು ತಿಳಿಸಲೇಬೇಕು (ಶಾಕುಂತ. ೦೦೩-೬). [ಸಂ. ಪ್ರಿಯವಾರ್ತಾ]

**ಪ್ರಿಯಶೈಲ** (ನಾ). ಕಲ್ಲಿನ ಮೇಲೆ ಬೆಳೆಯುವ ಪಾಚಿ ; ಕಲ್ಲುಹೂವು : "ಪ್ರಿಯಶೈಲಂ–ಕಲ್ಲ ಹೂ" (೬೫೦. ೯೯). [ಸಂ.]

**ಪ್ರಿಯಸಂಭಾಷಣ** (ನಾ). ಹಿತವಾದ ಸಲ್ಲಾಪ,—ಸಂವಾದ : ಪ್ರಿಯಸಂಭಾಷಣಸಹಿತಂ ಬಯಸಿದುದಂ ಪರಿಜನಕ್ಕೆ ಸಾಲ್ವಿನಮಿತ್ತ ಪ್ರಿಯಮಂ ಪುಟ್ಟಿಸಿದಂ ಸುರಭಿಯೊಳೇನೌದಾರ್ಯನಿಧಿಯೊ ಜನಕನರೇಂದ್ರಂ (ಶಂರಾಮಾ. ೩-೩೦); ಪ್ರಿಯಸಂಭಾಷಣದಿಂದಾತನಂ ಸಂತೋಷಂಬಡಿಸುತ್ತುಂ (ಬಾರಶೆ. ೦೦-೦೯ ಐ). [ಸಂ.]

**ಪ್ರಿಯಸಖ** (ನಾ). ೧. = ಪ್ರಿಯಮಿತ್ರ : ಒರ್ವನೆ ಪೋಗಿ ಕಾಣ್ಕೆಯಿಂ ಭೋಂಕನೆ ಮಾಟ್ಪಿಂ ಪ್ರಿಯಸಖಂಗೆ ಸಂತಸದೊದವಂ (ಕಾದಂಶಾ. ೯೩೩); ಪ್ರಿಯಸಖನಿಂತೆನೆ ಸಲಿಲಾಶಯಕ್ಕೆ ತದ್ರಾಜಹಂಸನೊಯ್ಯನೆ ಮುದಿತಾಶಯನಾಗಳ್ ನಡೆದಂ (ಲೀಲಾವ. ೩-೩೯). ೨. ಖದಿರವೃಕ್ಷ. [ಸಂ.]

**ಪ್ರಿಯಸಖಿ** (ನಾ). ಪ್ರೀತಿಪಾತ್ರಳಾದ ಗೆಳತಿ,—ಸ್ನೇಹಿತೆ : ಮದೀಯಪ್ರಿಯಸಖಿಯ ಕೂರ್ಮೆಯ ತೊಡರ್ಪಂ ಪಱಿದು (ಕಾದಂಶಾ. ೩೪೬) ; ಯಾಮಿನೀಪ್ರಿಯಸಖಿಯೆ, ಹೇ ಸ್ವಪ್ನಕಾಮಿನಿಯೆ, ಲಲನೆಯಾತ್ಮದೊಳಾವ ಕಮನೀಯನಾಕಮಂ ಕಟ್ಟುತಿಹೆ (ಚಿತ್ರಾಂಗ. ೩-೩೩). [ಸಂ. ಪ್ರಿಯಸಖೀ]

**ಪ್ರಿಯಸ್ರಾಹೆ** (ನಾ). ಒಂದು ಬಗೆಯ ನಾಣ್ಯ (?) : ಪರಿವರ್ತನಕ್ಕೆ ಸಲುವ ಪ್ರಿಯಸ್ರಾಹೆ ನಿಜಗಟವರಹ ಗದ್ಯಾಣ ಗ ೩೦ (ಪ್ರಕಂ. ೦೯೩೦, ೦೦-೦೭; 1585). [?]

**ಪ್ರಿಯಾಂಬು** (ನಾ.) ಮಾವಿನ ಮರ : "ಪ್ರಿಯಾಂಬುಃ —ಮಾವು" (೬ತಧಿ. ೯೮). [ಸಂ.]

**ಪ್ರಿಯಾಲ,** ಪ್ರಿಯಾಳ (ನಾ). ಒಂದು ಬಗೆಯ ಸಸ್ಯ : "ರಾಜಾದನಂ, ಪ್ರಿಯಾಲಃ ಸನ್ನಕದ್ರುಃ, ಧನುಃಪಟಃ —ಮೊರಟೀಗಿಡ, ಮೊರಟೇಗಿಡ" (ಸಿದ್ಧಾಂತಿ. ೦೦೯). **ಪ್ರಿಯಾಳ** : "ಪ್ರಿಯಾಳಂ_ಚಾರುಬೀಜ" (೬ತಂ. ೯೮). [ಸಂ.]

**ಪ್ರಿಯಾಳ** 'ಪ್ರಿಯಾಲ' ನೋ.

**ಪ್ರಿಯೆ** (ನಾ). ೧. ಪ್ರೀತಿಪಾತ್ರಳಾದವಳು ; ನಲ್ಲೆ : "ನಲ್ಲಳೆ ನಲ್ಲಂದನುನಯದಿಂ ಪ್ರಿಯೆ" (ಶಬಶಂ. ೦೬೩); ಪ್ರಿಯೆ ತನಗೆಂಬಿದಂ ಬಗೆಯದೆನ್ನನವಂ ಪೆಜಿಗಿಕ್ಕಿ ಪೋಗಿ ಸಂಜೆಯೊಳನುರಕ್ತನಾಗಿ ನೆರೆದಿರ್ದಪಂ (ಮಲ್ಲಪು. ೭-೦೯); ಪ್ರಿಯೆ ಮಿಗೆ ನೋಡಿ ತನ್ನ ಪೊಸವೇಷಮನಕ್ಕಟ ಪೊಳ್ತುಪೋದುದನ್ನೆಯುಮನದೆಂತು ಸೈರಿಪೆಂ . . . ಎನುತ್ತೆ (ವ್ಯಹಪು. ೦೬-೭೪). ೨. ಪ್ರೀತಿ; ವಾತ್ಸಲ್ಯ; ಅಕ್ಕರೆ : ನಿನಗೆ ಪ್ರಿಯೆಯಿಂದಿತ್ತ ಜ್ಞಾನಾಂಜನದ ಬೀಜವನಿನ್ನು ಸದ್ಭಾವನದ ಸಜ್ಜನಭೂಮಿಯಲಿ ನೀ ಬಿತ್ತಿ ಪರಸುಖದ ಘನವೆಳೆಯನನುಗ್ಗೆದು ಜನಪಾವನರಿಗುಣಬಡಿಸು (ಗಗತಾ. ೦೭-೪೬). ೩. ಹೆಂಗಸು ; ಸ್ತ್ರೀ. ೪. ಸಣ್ಣ ಏಲಕ್ಕಿ. ೫. ಸಮಾಚಾರ; ವಾರ್ತೆ. ೬. ಮಾದಕಪಾನೀಯ. ೭. ಒಂದು ಬಗೆಯ ಮಲ್ಲಿಗೆ. [ಸಂ. ಪ್ರಿಯಾ]

**ಪ್ರಿಯೋದ್ಭವ** (ನಾ). [ಜೈನ] ಐವತ್ತುಮೂರಂ ಗರ್ಭಾನ್ವಯಂ ಕ್ರಿಯೆಗಳಲ್ಲಿ ಒಂದು; ಗರ್ಭಿಣಿಯು ಹೆತ್ತ ಮೇಲೆ ಮಾಡಬೇಕಾದ ಕರ್ಮ; ಜಾತಕರ್ಮ : ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ ಬಹಿರ್ಯಾನ . . . ನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆಪು. ೦೫-೦೫ ವ). [ಸಂ.]

**ಪ್ರೀಣನ** (ನಾ). ೧. ಸಂತೋಷಗೊಳಿಸುವಿಕೆ ; ಆನಂದಪಡಿಸುವಿಕೆ : "ತರ್ಪಣಂ, ಪ್ರೀಣನಂ, ಅವನಂ—೩ ತೃಪ್ತಿ ಹೊಂದಿಸುವಿಕೆ" (ಸಿದ್ಧಾಂತಿ. ೪೫೫); ಬುಧಜನಪ್ರೀಣನಾಗ್ರೇಸರಗ್ರಾಮಣಿಯಾದಂ (ಆಪು. ೧೨-೦೫). ೨. ತೃಪ್ತಿಗೊಳಿಸುವಂತಹುದು : ಪ್ರೀಣನಮಾದುದು ಮುನಿಗೀರ್ವಾಣಮುಖಾಂಬುಜಮನದರ್ದಿರಲ್ ಶೈಶವದೊಳ್ ವಾಣೀವಧು ನಿಱಿಸಿದ ನಿಶ್ರೇಣಿಯುವೊಲ್ ಶ್ರುತದ ಶವಣೆಕೋಲ ವಿಳಾಸಂ (ಅನಂಪು. ೩-೫೦). ೩. ಅನ್ನ : "ಪ್ರೀಣನಃ—ಅನ್ನ" (೬ತಧಿ. ೦೦೦). [ಸಂ.]

**ಪ್ರೀಣನಕರ** (ಗು). ೧. ಪ್ರೀತಿಯನ್ನುಂಟುಮಾಡುವ; ಆನಂದಕರವಾದ. (ನಾ). ೨. ಆನಂದಕರವಾದುದಂ : ಪ್ರಾಣಿಹಿತಮಂ ವಿನೇಯಪ್ರೀಣನಕರಮಂ ಆದಿಪುರಾಣಮನಪರಿಮಿತಭಕ್ತಿಯಿಂ ವಿರಚಿಸುವೆಂ (ಆಪು. ೦-೪೨) ; ಜಾಣಿನ ಬೆಡಂಗು ವಿಬುಧಪ್ರೀಣನಕರಮೆನಿಸಿ ನೇರ್ಪು ನೇರ್ಪೂಡೆ ಪೇಟ್ದಂ (ಸುಕುಮಾ. ೦-೪೯). [ಸಂ.]

**ಪ್ರೀಣಿತ** (ಗು). ಸಂತೋಷಗೊಳಿಸಿದ ; ಆನಂದಪಡಿಸಿದ : ಪರಮಂ ಪ್ರೀಣಿತವಸ್ತುಸ್ವರೂಪಮಂ ನವಪದಾರ್ಥಮಂ ನಂಬುಗೆಯಂ ಪರಿಭಾವಿಸಿದಂ ಯೋಗೀಶ್ವರನಾಜ್ಞಾನಿಚಯಮಂ ಶುಭಧ್ಯಾನಪರಂ (ಮಲ್ಲಪು. ೦೯-೬೦). [ಸಂ.]

**ಪ್ರೀತ** (ಗು). ೧. ತೃಪ್ತಿಹೊಂದಿದ; ತಣಿದ. ೨. ಸಂತೋಷಗೊಂಡ; ಹರ್ಷಗೊಂಡ. (ನಾ). ೩. ತೃಪ್ತಿ ಹೊಂದಿದವನು ; ಸಂತುಷ್ಟನಾದವನು : ಈತನೆಮ್ಮಯ ಬಂಧು ಕೃತಮಾಳಸುರನು ವಿನೀತನು ನಿನ್ನ ಸೇವೆಯೊಳು ಪ್ರೀತನು (ಕಕಶ. ೨೯-೦೦೦). ೪. ಸಂತೋಷಗೊಂಡವನು ; ಹರ್ಷಿತನಾದವನು : "ಹೃಷ್ಟಃ . . . ಪ್ರಮುದಿತ, ಪ್ರೀತಃ-೬ ಸಂತೋಷಪಟ್ಟವನು" (ಸಿದ್ಧಾಂತಿ. ೩೩೦); ಭಂಗಿ ಭಾಷಿತದಿನಾತನಂ ಪ್ರೀತನಂ ಮಾಡಿ (ಪುಕ್ಕಪು. ೭-೪೯ ವ). ೫. ಪ್ರಿಯನಾದವನು : ನವಿಲುಗರಿಯ ನವನೀತಚೋರನಾಬಾಲವೃದ್ಧಪ್ರೀತ (ಕಂಠಮು. ೩೯-೪). [ಸಂ.]

**ಪ್ರೀತಿ** (ನಾ). ೧. ಸುಖ ; ಸಂತೋಷ ; ಆನಂದ : "ಪ್ರಮೋದಃ, ಪ್ರಮುದಃ, ಹರ್ಷಃ, ಪ್ರೀತಿಃ . . . ಸುಖಂ—ಈ ೧೩ ಸುಖದ ಪೆಸರ್" (ಕರಾಯು. ೨೦-೦೨೩) ; ಪ್ರೀತಿಮಿಗೆ ಶಂಖಪಟಹವಿಸೂತೋದ್ಧುರ ಸಿಂಹಘಂಟಿಕಾನಿಸ್ವನಸಂಕೇತದೆ . . . ವೈಮಾನಿಕಾಮರರ್ನೆರೆತಂದರ್ (ಸುಕುಮಾ ೬-೬೪). ೨. ಗೆಳೆತನ; ಸ್ನೇಹ: "ಸಖ್ಯಂ . . . ಪ್ರೀತಿಃ . . . ಸಭಾಜನಂ—ಈ ೯ ಕೆಳೆ" (ಕರಾಯು. ೦೦೭-೨೦) ; ರುಕ್ಮಿಣಿಯ ಮುಂದೆ ಕ್ಕೊಂದು ಸೌಭಾಗ್ಯಮಂ ಪರಿಹಾಸಂಗೆಯ್ಯುತಿರ್ಪ ನಾರದನ ಮಾತಂ ಪ್ರೀತಿಯಿಂ ಕೇಳ್ದು (ಜಗಪು. ೦೨-೦೦೩) ; ಜಗನ್ನಾಥನು . . . ಸ್ವಲ್ಪ ಕಾಲದಲ್ಲಿಯೇ ಯಜಮಾನನ ಪ್ರೀತಿಯನ್ನು ಸಂಪಾದಿಸಿದನು (ಪಮುಂಬಯು. ೯-೩೦). ೩. ಅನುರಾಗ ; ಒಲವು ; ಪ್ರೇಮ : ತನ್ನ ಪ್ರೀತಿಯ ಸಮಸ್ಯೆಯನ್ನು ತನ್ನಿಂದ ಸಹ ಬಚ್ಚಿಡಲು ಪ್ರಯತ್ನಿಸುವ ನರಹರಿ ಅದನ್ನು ಪಾಟಣಕರನೆದುರಿಗೆ ಬಿಚ್ಚುವದು ಹೇಗೆ ಸಾಧ್ಯ ? (ಸಮುಕಾ. ೨೩೨). ೪. [ಜ್ಯೋತಿ] ಇಪ್ಪತ್ತೇಳು ಬಗೆಯ ಯೋಗಗಳಲ್ಲಿ ಎರಡನೆಯದು : ಪ್ರೀತಿಯೋಗಕೆ ವೀರ ೨೪ ಗಳಿಗೆ ಮೇಲೆ ತ್ಯಾಜ್ಯ (ಭಾಸ್ಕರ. ೬೦-೫); ವಿಷ್ಕಂಭ ಪ್ರೀತಿ . . . ವೈಧೃತಿಗಳೆಂಬಿಪ್ಪತ್ತೇಳುಯೋಗಂಗಳುಂ (ವಿವೇಕ. ೩೨೦). ೫. [ಜೈನ] ಐವತ್ತುಮೂರಂ ಗರ್ಭಾನ್ವಯಕ್ರಿಯೆಗಳಲ್ಲಿ ಒಂದು ; ಗರ್ಭವತಿಯಾದ ಮೂರನೆಯ ತಿಂಗಳಲ್ಲಿ ಮಾಡುವ ಜಿನಪೂಜೆ: ಆಧಾನ ಪ್ರೀತಿ ಸುಪ್ರೀತಿ . . . ನಿರ್ವೃತಿಯೆಂಬಯ್ವತ್ತುಮೂಱು . . . ಗರ್ಭಾನ್ವಯಕ್ರಿಯೆಗಳುಂ (ಆಪು. ೦೫-೦೫ ವ) ; ಆದಾನಮುಂ ಪ್ರೀತಿಯುಂ . . . ಅಗ್ರನಿವೃತ್ತಿಯುಮೆಂದಾಧಾನಾದಿ ನಿರ್ವಾಣಪರ್ಯಂತಮಪ್ಪಯ್ವತ್ತುಮೂಱು ಗರ್ಭಾನ್ವಯಕ್ರಿಯೆಯೊಳ್ (ಕಾಪುಂಪು. ೨೦೨). [ಸಂ.]

**ಪ್ರೀತಿಂಕರವಿಮಾನ** (ನಾ). [ಜೈನ] ಒಂದು ಸ್ವರ್ಗದ ಹೆಸರು : ಸಿಂಹಚಂದ್ರಚಾರಣರುಂ . . . ಊರ್ಧ್ವಗ್ರೈವೇಯಕದೊಳ್ ಪ್ರೀತಿಂಕರವಿಮಾನದೊಳ್ ಅಹಮಿಂದ್ರನಾದೊಂ (ಕಾಪುಂಪು. ೦೩೪). [ಸಂ.]

**ಪ್ರೀತಿಪಾತ್ರ** (ನಾ). ಪ್ರಿಯವಾದ ವ್ಯಕ್ತಿ : ಜಾತೆ, ಪತಿಗೆ ಪ್ರೀತಿಪಾತ್ರಳಾಗು! (ಕಾಕುಂತ. ೫೦-೦೩) ; ಉದಿಪುರಿ ಪ್ರಧಾನಮಹಿಷಿಯಲ್ಲದಿದ್ದರೂ ಅತ್ಯಂತ ಪ್ರೀತಿಪಾತ್ರಳಾದ ಮಹಿಷಿ (ಬಂಕಿತು. ೨೯೫). [ಸಂ.]

**ಪ್ರೀತಿಬಡು** 'ಪ್ರೀತಿವಡು' ನೋ.

**ಪ್ರೀತಿಭೂಮಿ** (ನಾ). (ಆಲಂ) ಪ್ರೇಮಕ್ಕೆ ಪಾತ್ರಳಾದ ಹೆಂಗಸು ; ಪತ್ನಿ : ಹಿರಣ್ಯಪುರಮನಾಳ್ವ ಗರುಡವೇಗಂಗಂ ತದಿಯ ಪ್ರೀತಿಭೂಮಿ ಪ್ರೀತಿಷೇಣೆಗಂ ಮಕ್ಕಳಿಂದ್ರತಿಲಕನುಂ ನಭಸ್ತಿಲಕನುಂ (ಶಾಂತಿಪು. ೯-೪೯ ವ). [ಸಂ.]

**ಪ್ರೀತಿವಡು,** ಪ್ರೀತಿಬಡು (ಕ್ರಿ). ೧. ಅಕ್ಕರೆಯನ್ನು ತೋರಿಸು; ಪ್ರೀತಿಸು : ಆ ಯತಿನಾಯಕನೊಂದು ಸಾರಮೇಯಶಿಶುವಂ ಕಂಡು ಪ್ರೀತಿವಟ್ಟು (ಶಂತಕಂ. ೨೬೦-೦೯) ; ಅಬ್ಜಕರ್ತನೆನೆ ಪ್ರೀತಿವಟ್ಟಂಗಕ್ಕು ಮಿಸುಪ ನಾಮಂ (ಶಬ್ದಕ್ಕ. ೭೯). **ಪ್ರೀತಿಬಡು** : ೨. ಇಚ್ಛಿಸು; ಬಯಸು: ಅನಂಗಸೌಂದರಿಯಾ ಪದಕದ ಮೇಲೆ ಪ್ರೀತಿಬಟ್ಟು . . . ತಂದೀವುದೆಂದು ಲಲ್ಲೆಗೈದು ಪ್ರಾರ್ಥಿಸುವುದುಂ (ಧರ್ಮಾಮೃ. ೩-೦೦೬). [ಪ್ರೀತಿ + ಪಡು$_1$]

**ಪ್ರೀತಿಸು** (ಕ್ರಿ). ಅಕ್ಕರೆಯನ್ನು ತೋರು : ಅವರುಗಳು ನನ್ನನ್ನು ಪ್ರೀತಿಸುತ್ತಿದ್ದುದಲ್ಲದೆ ಗೌರವದಿಂದಲೂ ವರ್ತಿಸುತ್ತಿದ್ದರು (ಕೆಂಗಾಳ್ಮ. ೪೭); ನನ್ನ ಕಕ್ಕನು ನನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದನು (ಕೃಶಕ್ಕ. ೯೭). [ಪ್ರೀತಿ + — ಇಸು$_1$]

**ಪ್ರೀಯ** (ನಾ). ಅಕ್ಕರೆ; ಪ್ರೀತಿ: ಪ್ರೀಯದೆ ಬಂದು ನಿನ್ನ ಮನವೊಲ್ದಲ

ರೋಳಿಗಳಿಂ ವಿಚಿತ್ರಶೋಭಾಯುತಭೂಷಣಪ್ರಸರವಮಂ ಸಮೆದು (ಶಾಂತೀಶ್ವ. ೧೦-೫೮). [<ಸಂ. ಪ್ರಿಯ]

**ಪ್ರೇಂಖ** (ನಾ). ೧. ಉಯ್ಯಾಲೆ. ೨. ನಾಟ್ಯ; ನೃತ್ಯ: "ಉಯ್ಯಲೊಳು ನೃತ್ಯದೊಳು ಪ್ರೇಂಖಮಕ್ಕುಂ" (ಹುಂಗನಾ. ೦೫೩-೬೬). ೩. ಹೊಳಪು; ಪ್ರಕಾಶ: "ನೃತ್ಯ ಮುಯ್ಯಲುಂ ಪೊಳಪಿವು ಪ್ರೇಂಖ ಶಬ್ದ" (ನಾನಾರ. ೦೩೦). [ಸಂ.]

**ಪ್ರೇಂಖಣ** (ನಾ). ೧. ತೂಗಾಟ; ತೂಗಾಡುವುದು. ೨. ಉಯ್ಯಾಲೆ. ೩. ಒಂದು ಬಗೆಯ ಮರ: ಜಾಯಿಕಾಯಿ, ಪ್ರೇಂಖಣ, ತಾಳೀಸಪತ್ರ . . . ಜೇನುತುಪ್ಪದಲ್ಲಿ ಸೇವಿಸಲು ಅಶ್ಮರೀ, ಮೂತ್ರಕೃಚ್ಛ್ರ, ಗರ್ಭವಾತ ಸಹ ಮಾಣುವುವು (ಸಕವ್ಯ. ಶಂ. ೪೪೮). ೪. [ನಾಟ್ಯ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು; ಸೂತ್ರಧಾರನಿಲ್ಲದ ಏಕಾಂಕ ನಾಟಕ: ನಾಟಿಕಾ . . . ೯ ಪ್ರೇಂಖಣ . . . ೧೮ ಭಾಣಿಕಾ—ಎಂದು ಉಪರೂಪಕಗಳು ಹದಿನೆಂಟು ವಿಧ (ಸಂಭಾಟಿ. ೩.೨). [ಸಂ.]

**ಪ್ರೇಂಖಿತ** (ಗು). ೧. ಅಲ್ಲಾಡುವ; ತೂಗಾಡುವ: ಮಣಿಪ್ರಭಾಪ್ರೇಂಖಿತ ರಥ್ಯಾಮಂಡನಮಂ ಕಂಡಂ (ಕಾದಂಪೂ. ೬೦೦೨); ಪ್ರೇಂಖಿತ ಶಂಖಸಮುದಾಯಮೆ ಬೆಳ್ದಾವರೆಗಳಾಗೆಯುಂ (ಜಗಂ. ೦೯-೯೯ ವ). (ನಾ). ೨. ತೂಗಾಟ; ಅಲ್ಲಾಡುವುದು: "ಪ್ರೇಂಖೋಳಿತಂ, ತರಳಿತಂ, ಪ್ರೇಂಖಿತಂ, ಲುಳಿತಂ—ಈ ೪ ಅಲ್ಲಾಡುವುದು" (ಹಲಾಯು. ೦೨೩-೬೦). ೩. ಉಯ್ಯಾಲೆ. [ಸಂ.]

**ಪ್ರೇಂಖೋಲ** (ನಾ). ೧. ಅಲ್ಲಾಡುವಿಕೆ; ತೂಗಾಟ; ಒಲೆದಾಟ: ಉದ್ವೀಚಿಮರುಮರೀಚಿನಿಚಯಚಂಚಲೋದ್ದಾಮಬಲುಬಹುಲನಿಷ್ಕವಚಪ್ರಾಸಪಾಣಿವಾರಾಶ್ವಿಕಮುಗ್ರಪುಂಖ ಪ್ರೇಂಖೋಲಾನೇಕನೇತ್ರಪಟ್ಟಿಕಾ . . . ಲಾಟಬಲಂ (ಆದಿಪು. ೦೩-೯೩ ವ). ೨. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು: ಸಲೆ ಡೋಲ ಪಾದಚಾರಿಯೆನೊಲವಿಂದಂ ಮಾಡೆ ಪದದೆ ಮತ್ತೊಂದು [ಪದಂ] ಕಲಿದಿಂದೆ ನೆಗೆದು ತಿರುಗಲ್ ಲಲನೇ ಪ್ರೇಂಖೋಲ ಕರಣಮೆಂದೆನಿಸಿರ್ಕುಂ (ಲಾಸ್ಯರಂ. ೪-೦೪೦). [ಸಂ.]

**ಪ್ರೇಂಖೋಲನ, ಪ್ರೇಂಖೋಳನ** (ನಾ). ೧. ಒಲೆತ; ತೂಗಾಟ; ಒಲೆದಾಟ: "ಪ್ರೇಂಖೋಲ[ನಾಹಂ. ೪]ನಂದೋಳಮೆನಲದೊಲಹಿಂಗಕ್ಕು" (ಮುಂಗನಾ. ೦೩೬-೬೯). ೨. ತೂಗುಮಣೆ; ಉಯ್ಯಾಲೆ; ಜೋಕಾಲಿ. **ಪ್ರೇಂಖೋಳನ**: ೧. "ಡೋಳಾ, ಪ್ರೇಂಖೋಳನಂ, ಪ್ರೇಂಖಾ—ಈ ೩ ಅಲ್ಲಾಟಂ" (ಹಲಾಯು. ೦೨೩-೬೮); ಆಗಳ್ ಪ್ರೇಂಖೋಳನವಿಳಾಸದಿಂದಾ ಸರಮಂ ಲೀಲಾಸರಮನುತ್ತರಿಸುವಂತುತ್ತರಿಸಿ (ಶಂಕ್ರಪು. ೩-೯೫ವ). [ಸಂ.]

**ಪ್ರೇಂಖೋಲಿತ, ಪ್ರೇಂಖೋಳಿತ** (ಗು). ೧. ಅಲ್ಲಾಡುವ; ತೂಗಾಡುವ: ಅತಿಪ್ರಚುರಚಲದವನಿಪಾಲ ಸಂಚಲಚ್ಚಾಮರಮರುತ್‌ಪ್ರೇಂಖೋಲಿ[ತಾನಾಂ. ೪]ತಾಭರಣವಿಚಿತ್ರನೇತ್ರವೈಜಯಂತಿಕಾಂಚಲನುಂ . . . ನಡೆಯೆ (ಆದಿಪು. ೦೨-೬೦ ವ). (ನಾ). ೨. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು; "ಒಂದು ಕಾಲಿನಿಂದ ಡೋಲಪಾದಚಾರಿಯನ್ನು ಮಾಡಿ ಇನ್ನೊಂದು ಕಾಲಿನಿಂದ ನೆಗೆದು ಸುತ್ತುವುದು" (ಲಾಸ್ಯರಂ. ೩೦೦ ಗದ್ಯಾನುವಾದ): ಪ್ರೇಂಖೋಲಿತ ಸಲೆ ಡೋಲಪಾದಚಾರಿಯನೊಲವಿಂದಂ ಮಾಡೆ ಪದದೆ ಮತ್ತೊಂದು [ಪದಂ] ಕಲಿದಿಂದೆ ನೆಗೆದು ತಿರುಗಲ್ ಲಲನೇ ಪ್ರೇಂಖೋಲಕರಣಮೆಂದೆನಿಸಿರ್ಕುಂ (ಲಾಸ್ಯರಂ. ೪-೦೪೦). **ಪ್ರೇಂಖೋಳಿತ**: ೩. [ಕಾಮಶಾ] ಸಂಭೋಗದಲ್ಲಿ ಒಂದು ಬಗೆ: ಪಟ್ಟಿ ಹಿನೆಯನ ತಿಗಂ ಮುಟ್ಟೆ ಸತಿ ಮೊಳಕಾಲನಿಟ್ಟೊಮ್ಮೆಯೊಮ್ಮೆ ಕಟಿಯುನೆ ಕಾಲ್ಗಳಿಂ ಮೆಟ್ಟಿ ಕಿಬ್ಬರಿಗಳನೆ ತಟ್ಟಿ ಮರ್ಮಂಗಳಂ ಮುಟ್ಟಿ ರಮಿಸಲ್ಕದೇ ಪ್ರೇಂಖೋಳಿತಂ (ಜನವ. ೦೦-೦೦). [ಸಂ.]

**ಪ್ರೇಂಖೋಳನ** 'ಪ್ರೇಂಖೋಲನ' ನೋ.

**ಪ್ರೇಂಖೋಳಿತ** 'ಪ್ರೇಂಖೋಲಿತ' ನೋ.

**ಪ್ರೇಕ್ಷಕ** (ನಾ). (ನಾಟಕ, ಸಿನಿಮಾ, ನೃತ್ಯ ಮೊದಲಾದುವುಗಳನ್ನು) ನೋಡುವವನು; ನೋಟಕ: ಆಯಾ ಶ್ರೇಣಿಯ ಪ್ರೇಕ್ಷಕರಿಗೆ ತಕ್ಕ ಹಾಗೆ ಬೇರೆ ಬೇರೆಯ ಸ್ಥಲವು ಏರ್ಪಟ್ಟಿತು (ಭೀಕ್ಷ್ಮ. ೬೦). [ಸಂ.]

**ಪ್ರೇಕ್ಷಣ** (ನಾ). ೧. ಕಣ್ಣು. ೨. ನೋಡುವಿಕೆ; ನೋಟ: "ಪ್ರೇಕ್ಷಣಕೆ ಪೆಕ್ಕಣಂ ನೋಟಂ" (ಕಬ್ಬಿಗ. ೫೮); ಪ್ರೇಕ್ಷಣ – ಪೆಕ್ಕಣ (ಶಬ್ದಮ. ೨೬೨ ಪ್ರಯೋ). ೩. ಪ್ರದರ್ಶನ; ದೃಶ್ಯ. ೪. ಒಂದು ಬಗೆಯ ನೃತ್ಯ ಪ್ರದರ್ಶನ: ಪ್ರೇಕ್ಷಣಮಂ ಮುದದಿಂ ಬಂದೀಕ್ಷಿಪ ವಿಟತತಿಯ ಕಣ್ಗೆ ಬಲೆಯೆನಿಸಿದ ಕಂಜಾಕ್ಷಿಯರಿರೆ ಪಲರಲ್ಲಿ ವಿವಕ್ಷಿತನಾ ಚಾರುದತ್ತನಧಿವೀಕ್ಷಿಸಿದಂ (ಜೀವಂಧ. ೪-೯೬). [ಸಂ.]

**ಪ್ರೇಕ್ಷಣೀಯ** (ಗು). ನೋಡಲು ಅರ್ಹವಾದ; ನೋಡಬೇಕಾದ; ರಮ್ಯವಾದ: ಆ ದಿನವನ್ನೆಲ್ಲ . . . ಮುಂಬಯಿಯಲ್ಲಿಯ ಪ್ರೇಕ್ಷಣೀಯ ಸ್ಥಳಗಳನ್ನು ನೋಡುವುದರಲ್ಲಿ ಅವರು ಕಳೆದರು (ಸವಜೀ. ೦೦೫೪). [ಸಂ.]

**ಪ್ರೇಕ್ಷಾಗಾರ** (ನಾ). ನಾಟಕ ಮುಂತಾದುವುಗಳ ಪ್ರದರ್ಶನಸ್ಥಳ: ಅಲ್ಲಿ ಪ್ರೇಕ್ಷಾಗಾರವನ್ನು ಕಟ್ಟಿಸಿ ಅದರಲ್ಲಿ ರಾಜನೂ ಅರಮನೆಯ ಹೆಂಗಸರೂ ಕುಳಿತುಕೊಳ್ಳುವುದಕ್ಕೆ ಮಂಚಗಳನ್ನು ರಚಿಸಿದನು (ವಕಥಾ. ೨೨); ಪ್ರೇಕ್ಷಾಗಾರವು ಚಿತ್ರವಿಚಿತ್ರವಾದ ಶಿಲ್ಪಕಾರ್ಯದಿಂದಲೂ ನಾನಾವರ್ಣದ ಮಣಿಗಳಿಂದಲೂ ಶೋಭಿಸುತ್ತಿದ್ದಿತು (ಭೀಕ್ಷ್ಮ. ೬೦). [ಸಂ.]

**ಪ್ರೇಕ್ಷಾಗೃಹ** (ನಾ). = ಪ್ರೇಕ್ಷಾಗಾರ: ವರ್ಧಮಾನಮಂಬೀಕ್ಷಣಪ್ರಿಯಪ್ರೇಕ್ಷಾಗೃಹಮುಂ (ಆದಿಪು. ೦೫-೩೭); "ಪ್ರೇಕ್ಷಾಗೃಹ" ವನ್ನು ಹೇಗೆ ಕಟ್ಟಬೇಕು? (ಕಾರಶಾ. ೦೫). [ಸಂ.]

**ಪ್ರೇಕ್ಷಾಸದನ** (ನಾ). = ಪ್ರೇಕ್ಷಾಗಾರ: ವರ್ಧಮಾನಾಭಿಧಾನ ಪ್ರೇಕ್ಷಾಸದನಂಗಳಿಂದಂ (ಶಾಂತಿಪು. ೦೦-೬೯ ವ). [ಸಂ.]

**ಪ್ರೇಕ್ಷೆ** (ನಾ). ೧. ನೋಡುವುದು; ನೋಟ; ದರ್ಶನ: ನಕ್ಷತ್ರಮಂಡಲದಿನಾಚೆಯಿಂದೊಂದು ದನಿ ವಕ್ಷೋಗುಹಾಂತರದಿನೊಂದು ದನಿಯಿಂತೀ ಸಾಕ್ಷಿದ್ವಯವು ನಿನ್ನೊಳೊಂದುಗೂಡಿದೊಡದೇ ಪ್ರೇಕ್ಷೆ ಪರಬೊಮ್ಮನದು (ಮಂಕುತಿ. ೬೦). ೨. ಪ್ರದರ್ಶನ; ದೃಶ್ಯ. ೩. ಬುದ್ಧಿ; ಚಾತುರ್ಯ; ಜಾಣ್ಮೆ: "ಪ್ರೇಕ್ಷಾ . . . ಉಪಲಬ್ಧಿಃ—ಈ ೧೩ ಬುದ್ಧಿ" (ಹಲಾಯು. ೫೫-೦೬೯). [ಸಂ. ಪ್ರೇಕ್ಷಾ]

**ಪ್ರೇತ** (ನಾ). ೧. ಜೀವವಿಲ್ಲದ ದೇಹ; ಹೆಣ; ಶವ: "ಪ್ರೇತಃ, ಪರೇತಃ, ಕುಣಪಃ, ಶವಃ—ಈ ೪ ಪೆ(ಹೆ)ಣಂ" (ಹಲಾಯು. ೦೦೪-೩); ಬಿಡದಟಲ್ವ ಬಂಧುಜನದೊಟ್ಟಯಿದ ಕಣ್ಣೀರ ಪೂರಮಾ ಪ್ರೇತಮನೋಗಡಿಸದೆ ಸುಡುವುದು (ಶುಕಸಪ್ತ. ೨-೨೮); ಮಗುವನ್ನು . . . ಸ್ಮಶಾನದವರೆಗೆ ಹೆಂಡತಿಯು ಪ್ರೇತದ ಜೊತೆಗೆ, ಅದನ್ನು ತಾನೇ ಒಯ್ದನು (ಗುಪಮಾಯ. ೨೫೦). ೨. ಪಿಶಾಚಿ; ದೆವ್ವ; ವ್ಯಂತರ: "ಪ್ರೇತಃ . . . ನರಕಯಾತನೆ ಪಡುವ ಪ್ರಾಣಿ, ಸತ್ತು ಹೋಗಿ ಸಂಸ್ಕಾರವಿಲ್ಲದೆಯಿರುವವನು" (ಸಿದ್ಧಾಂತಿ. ೩೪೯); ಬಿಡದೆ ಬಸಿವೇಟಗಳ ರಕುತದ ಕಡಲು ಕಡಲನು ಕಲಕಿ ಕಾಗೆಯ ಗಡಣ ನಾಯ್ನರಿ ಹದ್ದು ಭೂತ ಪ್ರೇತ ಪಿಶಾಚದಣಿಯ (ಕೌಶಿಕಾ. ೩೫-೦೦). ೩. ದೇಹವನ್ನು ಅಗಲಿದ ಜೀವ: ಎಷ್ಟೋ ದಿನಗಳ ಹಿಂದೆಯೇ ಗತಿಸಿ ಹೋದ ಕುಮಾರಿಯ ಪ್ರೇತವು ಇಂದು ನಿನ್ನೊಡನೆ ಮಾತನಾಡುತ್ತಿದೆ (ಅರುಣೋ. ೪೬). ೪. ಪಿತೃದೇವತೆ. [ಸಂ.]

**ಪ್ರೇತಕ** (ಗು). ಹೆಣಕ್ಕೆ ಸಂಬಂಧಿಸಿದ: ಶಿವನ ಪಾದಾಂಬುವಂ ಧರಿಸಿರ್ದ ಮಾನವಂ ತವೆ ಸೂತಕ ಪ್ರೇತಕಾದ್ಯಶೌಚಂಗಳೊಳಗವಿರತಂ ವರ್ತಿಸುತ್ತಿರ್ದೊಡಂ ನೋಡವನೆ ಅಣಿಯರಂ ಶುದ್ಧಂ (ಅರಾತ. ೦-೩-೦೦). [ಸಂ.]

**ಪ್ರೇತಕರ್ಮ** (ನಾ). ಸತ್ತವನ ದೇಹಕ್ಕೆ ಮಾಡುವ ಸಂಸ್ಕಾರ; ಅಂತ್ಯ

ಕ್ರಿಯೆ; ಶವಸಂಸ್ಕಾರ : ಆದೊಡಂ ಪ್ರೇತಕರ್ಮಂಗಳೊಳ್, ಓ ವಾಸು ದೇವಾ—ನಿನ್ನನೆಮ್ಮೊಳ್ ಕೂಡೆ ಅಳ್ಕುವೆನ್ (ಅಶ್ವಶಾ. ೯೬-೯೭೦). [ಸಂ. ಪ್ರೇತಕರ್ಮನ್]

**ಪ್ರೇತಕಳೆ** (ನಾ). ಲವಲವಿಕೆ ಇಲ್ಲದಿರುವ ಸ್ಥಿತಿ ; ತುಂಬ ಮಂಕಾಗಿರುವಿಕೆ : ಮಾಡಿದ ತಪ್ಪಿನಿಂದಾಗಿ ಅವನ ಮುಖದಲ್ಲಿ ಪ್ರೇತಕಳೆ ಹರಿಯುತ್ತಿತ್ತು (ರೂಢಿ). [ಸಂ. ಪ್ರೇತಕಲಾ]

**ಪ್ರೇತಕಾರ್ಯ** (ನಾ). = ಪ್ರೇತಕರ್ಮ : ಧೀರಮತಿ ಪಾರ್ಥಿವಕುಮಾರ. ತಡೆ ಶೋಕಮಂ; ಪ್ರೇತಕಾರ್ಯಮನೆಸಗಿ ಪಿತೃಗೆ, ಕಳುಹಾತನಂ ಲೋಕದುತ್ತಮಗತಿಗೆ (ಶ್ರೀರಾಮಾ. ೧೦೭-೧೩೩). [ಸಂ.]

**ಪ್ರೇತಗಾಹು** (ನಾ). ಹೆಣಗಳನ್ನು ಸುಡುವ ಸ್ಥಳವನ್ನು ಕಾಯುವಿಕೆ; ಸುಡುಗಾಡಿನ ಕಾವಲು : ವರವಾರಣಾಸಿಮಧ್ಯಮೆ ಲಾಳದೇಶವಚ್ಚರಿಯ ಕಾಶೀಪುರವಯೋಧ್ಯೆ ಶ್ಮಶಾನಧರೆಯುರಮನೆ ಪ್ರೇತಗಾಹಿನ ತವಗ ಮಣಿಪೀಠ (ಹಠಕಾ. ೦೦-೯೭). [ಪ್ರೇತ + ಕಾಹು$_1$ (< ಕಾಪು )]

**ಪ್ರೇತತರ್ಪಣ** (ನಾ). ಸತ್ತವರಿಗೆ ಅರ್ಪಿಸುವ ತರ್ಪಣ : "ಪ್ರೇತ ತರ್ಪಣಮೆನೆ ನಿವಾಪಮೆಂದೆನೆ ಕರ್ಮದಾ ತಿಲೋದಕಮಕ್ಕು" (ಮಂಗರಾ. ೦೦೭-೯). [ಸಂ.]

**ಪ್ರೇತನಾಥ** (ನಾ). ಯಮ : ಶ್ವೇತಮುನಿಯಂ ಕಾಯ್ದು ತನ್ನ ನಿಶಾತ ಶೂಲದೊಳಿಟ್ಟನುಗ್ರನು ಪ್ರೇತನಾಥನ ವಕ್ಷಮಂ (ಬಸಪು. ೯೦-೨೬). [ ಸಂ. ]

**ಪ್ರೇತಪತಿ** (ನಾ). = ಪ್ರೇತನಾಥ : "ಶಮನಃ, ಸಮವರ್ತೀ, ಪ್ರೇತಪತಿಃ . . . ಶ್ರಾದ್ಧದೇವಃ— ಈ ೧೬ ಜವನ ಪೆಸರ್" (ಹಲಾಯು. ೦೩-೭೦); ಭೂತಳದೊಳಾ ಗೋವಧಾದೋಷಿಗಳ್ಗೆ ಯಾ ಪಾತಕಂ ನಾನಾ ಪ್ರಕಾರದಿಂ ಬಿಡದೆ ಯಿಾ ಪ್ರೇತಪತಿಯಾಜ್ಞೆಯಿಂ ನರಕದಿಂ ಬೇವುತಿರ್ಪರು ಮಹಾಪ್ರಳಯತನಕಾ (ಏಕೈಕ. ೯-೨-೦೩) ; ಪ್ರೇತಪತಿಯಿದಿರೊಳಂದೀ ಭೂತಳಸುರನಸುವನೊಯ್ದು ತೋಱಲು (ವಪ್ನಶಾ. ೯-೦೦೭). [ಸಂ.]

**ಪ್ರೇತಪೀಡೆ** (ನಾ). ದೆವ್ವದ ಕಾಟ : ನೆಮ್ಮದಿಯಿಂದಿರುವಾಗ ಈ ಪ್ರೇತಪೀಡೆ ಬೇರೆ (ಕದ್ಮಸ. ೦೩೦). [ಸಂ. ಪ್ರೇತ ಪೀಡಾ]

**ಪ್ರೇತಬಲಿ** (ನಾ). ಉತ್ತರಕ್ರಿಯೆ ಮಾಡುವಾಗ ಪ್ರೇತಕ್ಕೆ ಅರ್ಪಿಸುವ ಪಿಂಡ : (ಕ). [ಸಂ.]

**ಪ್ರೇತಭೂಮಿ** (ನಾ). ಸುಡುಗಾಡು ; ಶ್ಮಶಾನ : ಏನು ಗೂಗೆಯ ಕೂಗಿನಿತು ಕರ್ಕಶ, ವಿಕಾರ! ಸುತ್ತಲಿಹ ಪ್ರೇತಭೂಮಿಯ ಮಹಿಮೆಯಿರಬೇಕು! (ಚಂದ್ರಸ. ೦೦೦-೨೭). [ಸಂ.]

**ಪ್ರೇತಯಾತ್ರೆ** (ನಾ). ಶ್ಮಶಾನಯಾತ್ರೆ : ತಾವಿಂದು ಗುರುಮಹಾರಾಜರ ಪ್ರೇತಯಾತ್ರೆಯನ್ನೇ ನೋಡುತ್ತಿರುವದೆಂದು ಅನಿಸಿಬಿಟ್ಟಿತ್ತು ಅವರಿಗೆ (ಸ್ಮೃತಿಚಿ. ೯೩೦). [ ಸಂ. ಪ್ರೇತಯಾತ್ರಾ]

**ಪ್ರೇತವನ** (ನಾ). = ಪ್ರೇತಭೂಮಿ : ಪ್ರೇತವನದೊಳಗೆ ಬೆಳೆದ ಹೂವಾರ ಮುಡಿಹಕ್ಕೆ ಯೋಗ್ಯಂ (ಹಠಕಾ. ೭-೦೮). [ಸಂ.]

**ಪ್ರೇತವಿದ್ಯೆ** (ನಾ). "ಸತ್ತವರೊಂದಿಗೆ ವ್ಯವಹಾರ ನಡೆಸಿ ಭವಿಷ್ಯ ಹೇಳುವ ವಿದ್ಯೆ: ಪ್ರೇತವಿದ್ಯೆ; ಕಣ್ಕಟ್ಟು; ಯಕ್ಷಿಣಿ ; ಇಂದ್ರಜಾಲ" (Necromancy. ಇಂಕನ್ನ). [ ಸಂ. ಪ್ರೇತವಿದ್ಯಾ ]

**ಪ್ರೇತಸಂಸ್ಕಾರ** (ನಾ). = ಪ್ರೇತಕರ್ಮ : ಬೇರೆ ರೀತಿಯ ಸೂಕ್ತಗಳೂ ಕೆಲವು ಋಗ್ವೇದಸಂಹಿತೆಯಲ್ಲಿ ಸೇರಿಕೊಂಡಿವೆ. ಇವುಗಳಲ್ಲಿ . . . ಕೆಲವು ವಿವಾಹಕ್ಕೆ ಮತ್ತು ಪ್ರೇತಸಂಸ್ಕಾರಕ್ಕೆ ಸಂಬಂಧಪಟ್ಟವು (ಭಾರದ. ೨೩); ಹೆಂಡತಿಯ ಹಾಗು ಮಗನ ಪ್ರೇತಸಂಸ್ಕಾರವನ್ನು ರಾಘಪ್ಪ . . . ಮಾಡಿಸಿದನು (ಗಂಹೂಯ. ೨೮೦). [ಸಂ.]

**ಪ್ರೇತಸೂತಕ** (ನಾ). ಐದು ಬಗೆಯ ಸೂತಕಗಳಲ್ಲಿ ಒಂದು ; ಸತ್ತ ವ್ಯಕ್ತಿಯ ಸಂಬಂಧದಿಂದ ಉಂಟಾಗುವ ಸೂತಕ ; ಮರಣ ಸೂತಕ : ಪ್ರೇತಸೂತಕ ಜಾತಿಸೂತಕ ಜಾತಮಿರಹಿತನಾಗಿ ದಿವಿಜವ್ರಾತದೊಳು ತಾನುತ್ತಮಾಂಗಮದಾಯ್ತು ಸರ್ವಾಂಗ (ಬಸಪು. ೧೮-೯೬); ಜಾತಿಸೂತಕ ಪ್ರೇತಸೂತಕ ಜನನಸೂತಕ ಉಚ್ಛಿಷ್ಟಸೂತಕ ರಜಸ್ಸೂತಕವೆಂಬ ಪಂಚಸೂತಕಂಗಳ ಕಳೆದು (ಅಬಂಡೇ. ೮೭-೯೦). [ಸಂ.]

**ಪ್ರೇತಾಂಗಳ** (ನಾ). = ಪ್ರೇತಭೂಮಿ : ಎಳೆಯ ರವಿರಶ್ಮಿಯಲಿ ಪ್ರೇತಾಂಗಳದ ಧೂಮಜ್ವಾಲೆಯಲಿ . . . ಆಯುಷಮಿಳಿದು ಹೋಗದೆ ದಿನದಿನದೊಳು (ಕುವಾ. ಉ. ೩-೩೭). [ಪ್ರೇತ + ಅಂಗಳ$_1$]

**ಪ್ರೇತಾರಾಧನೆ** (ನಾ). ಭೂತಗಳಿಗೆ ಮಾಡುವ ಪೂಜೆ ; ಆರಾಧನೆ : ಕಲೆ, ಮಾಟ , ಪ್ರೇತಾರಾಧನೆ—ಇವು ಇದೇ ಕಾಲದಲ್ಲಿ ಪ್ರಾರಂಭವಾದವು (ಶಿಲ್ಪಾ. ೨೦). [ಸಂ. ಪ್ರೇತಾರಾಧನಾ]

**ಪ್ರೇತಾವಾಸ** (ನಾ). = ಪ್ರೇತಭೂಮಿ: ಭೂತಪತಿಯೊಗೆವುದುಂ ತನ್ನಾತ್ಮವಲಂ ಮಡಿದಳಕ್ಕುಮಲ್ಲದೊಡಾತಂ ಪ್ರೇತಾವಾಸದೊಳಾಡುಪ ಭೂತಂಗಳ ಕೂಡೆ ವಿಹರಣಂಗೆಯ್ದಪನೆ (ವ್ಯಕಪಿ. ೯-೦೦೨). [ಸಂ.]

**ಪ್ರೇತಿ** (ನಾ). ೧. ಸಾವು ; ಮರಣ. ೨. ಬೇರೆಯಾಗುವುದು ; ಅಗಲುವುದು. ೩. ವಿರುದ್ಧವಾದುದು ; ಪ್ರತಿಕೂಲವಾದುದು : ನಾನು ಏತಿ ಅಂದರೆ ಅವರು ಪ್ರೇತಿ (ಮಾರ್ಗದ. ೮೯). 'ಏತಿಪ್ರೇತಿ' ಪರಾ. ☞ 'ಪ್ರೇತಿ'ಯೆಂಬುದು ಏತಿಪ್ರೇತಿ ಎಂಬ ಕೂಡುನುಡಿಯಲ್ಲಿಯೂ ಕೆಲವೊಮ್ಮೆ ಬಿಡಿಯಾಗಿಯೂ ಪ್ರಯೋಗವಾಗುತ್ತದೆ. [ಸಂ.]

**ಪ್ರೇಮ** (ನಾ). ೧. ಒಲವು ; ಪ್ರೀತಿ : ಪ್ರೇಮದೊಳೆ ತನ್ನ ಬೆನ್ನನೆ ಧೂಮಪ್ರಭೆ ನಾರಕತ್ವಮೆಟ್ಟಿಂದವೊಲ್ (ಶಾರ್ಙ್ಗಕ. ೬-೦೦೩). ೨. ಅನುರಾಗ ; ಪ್ರಣಯ : ಪ್ರೇಮರಸಾಮೃತಾಂಬಧಿಯ ಮೇರೆಯೆ ತಾನೆನೆ (ಶಾಂತೀಶ್ವ. ೦೦-೮೭). ೩. ಅಕ್ಕರೆ ; ವಾತ್ಸಲ್ಯ : ಪ್ರೇಮದೆ ಧರ್ಮೋದ್ಭವನಾ ಭೀಮಂಗಾ ಸತಿಯೊಳಂತು ಪರಿಣಯನಮನುದ್ದಾಮಯಶನಂದು ಮಾಡಿ (ಪೇಬುಕು. ೯-೬೩); ಪ್ರೇಮವೆ ನಿಖಿಲಪೂಜೆಯಾಯ್ತು (ಶ್ರೀರಾಮಾ. ೦೭-೯೯೩). ೪. ಸಂತೋಷ ; ಆನಂದ. ೫. [ಛಂದ] ಒಂದೊಂದು ಪಾದದಲ್ಲಿಯೂ ಒಂದು ಭಗಣ, ಒಂದು ಲಘು ಮತ್ತು ಒಂದು ಗುರುವೂ ಇರುವ ವೃತ್ತ : ಸೋಮ ಹರಿಯುಂ ಕಾಮಹರನುಂ ತಾಮಿರೆ ಪೆಸರ್ ಪ್ರೇಮಂ (ಛಂದೋಂಬು. ೨-೬೨). ೬. ಪ್ರತಿಸಾಲಿನಲ್ಲಿಯೂ ನಾಲ್ಕು ಗುರುಗಳುಳ್ಳ ಒಂದು ವೃತ್ತ ; ಪ್ರತಿಷ್ಠಾಛಂದಸ್ಸಿನಲ್ಲಿ ಒಂದು ವೃತ್ತ : ಪ್ರೇಮಂ ಗಗಗ ಗಂ (ಛಂದೋಂಬು. ಕ. ೨-೮೩). [ಸಂ. ಪ್ರೇಮನ್]

**ಪ್ರೇಮಂಗೈ** (ಕ್ರಿ). ಪ್ರೀತಿಸು ; ಒಲವುದೋರು : ಪ್ರೇಮಿ ಪ್ರಿಯಂ ಸಹಚರಂ ಪರಾಯಣನೆನಲ್ ಪ್ರೇಮಂಗೈವ[ಶಾಠಿಂ. ಪ್ರೇಮಗೈವ] ನೆನಿಕ್ಕು (ಮಂಗರಾ. ೬೮-೮). [ಪ್ರೇಮ + ಕೈ$_1$ (< ಕೆಯ್$_1$) ]

**ಪ್ರೇಮಕಥೆ** (ನಾ). ಪ್ರಣಯದ ಕಥೆ : ಶಾಕುಂತಲವು ದುಷ್ಯಂತ ಶಕುಂತಲೆಯರ ಪ್ರೇಮಕಥೆ (ಧರ್ಮಸಾ. ೭೭). [ಸಂ. ಪ್ರೇಮಕಥಾ]

**ಪ್ರೇಮಕಲಹ** (ನಾ). ಪ್ರೀತಿಯ ಹುಸಿಜಗಳ : ಈ ಮಾತಿನಿಂದ ನಮ್ಮಲ್ಲಿ ಸ್ವಲ್ಪ ಪ್ರೇಮಕಲಹವಾಗಿ ಅಕ್ಕಿ ತರಬೇಕೆಂದು ಹೇಳಿ ಅವರನ್ನು ಸಾಗಹಾಕಿದೆ (ಸ್ಮೃತಿಚಿ. ೦೨೪). [ಸಂ.]

**ಪ್ರೇಮಗೀತ** (ನಾ). ಪ್ರೀತಿಯನ್ನು ವಸ್ತುವಾಗಿಟ್ಟುಕೊಂಡಿರುವ ಹಾಡು ; ಪ್ರಣಯಗೀತೆ : ಠಾಕೂರರ ಪ್ರೇಮಗೀತಗಳ ಸಮುಚ್ಚಯ 'ತೋಟಗಾರ' (ಧರ್ಮಸಾ. ೫೯) ; ಬುದ್ಧಿಪ್ರಧಾನತೆಯು ವಿದ್ವತ್ ಪ್ರಚುರವಾಗದೆ ಬರಿ ಜೀವನದೃಷ್ಟಿಯ ಒಂದು ಅಂಗವಾಗಿ ಬರುವುದನ್ನು ವಿಡಂಬನಗೀತಗಳಲ್ಲಿಯೂ ಪ್ರೇಮಗೀತಗಳಲ್ಲಿಯೂ ಬೇರೆ ಭಾವಗೀತಗಳಲ್ಲಿಯೂ ನಾವು ಕಾಣುತ್ತೇವೆ (ನವ್ಯಕಾ. ೩೦). [ಸಂ.]

**ಪ್ರೇಮಪಾತ್ರ** (ನಾ). ಪ್ರೀತಿಗೆ ಪಾತ್ರವಾದ ವ್ಯಕ್ತಿ : ಸೌ. ರಾಧಾದೇವಿಯವರು ಕೃಷ್ಣರಾಯರ ಪ್ರೇಮಪಾತ್ರರಿರುವರೆಂಬ ಸಂಗತಿಯು ನಿಜವೇ ಹೇಗೆ? (ಸ್ವಾ೦ಐ. ೦೪೯). [ಸಂ.]

**ಪ್ರೇಮಭಂಗ** (ನಾ). ಪ್ರಣಯಕ್ಕೆ ಅಡ್ಡಿಯುಂಟಾಗುವುದು : ಪ್ರೇಮಭಂಗವು ಅನೇಕಸಾರಿ ತೆರತೆರನಾದ ಉನ್ಮಾದಗಳಲ್ಲಿ ಪರ್ಯವಸಾನವಾಗುತ್ತದೆ (ಕಾನೂರು. ೨೬೬) ; ಪ್ರೇಮಭಂಗದಿಂದಾದ ಒಂದು ಆತ್ಮಹತ್ಯೆಯ ವಿಷಯವನ್ನು . . . ಚರ್ಚಿಸುತ್ತಿದ್ದಳು (ಜಯಂತ. ೨೬೫). [ಸಂ.]

**ಪ್ರೇಮಲ, ಪ್ರೇಮಳ** (ಗು). ಪ್ರೀತಿಯಿಂದ ಕೂಡಿದ ; ಪ್ರೇಮಪೂರಿತವಾದ : ಕವಿತೆಯಿಂದ ನಾವು ಬಯಸುವುದೇನನ್ನು ? ನಿರ್ಲಿಪ್ತವೂ ಜ್ಞಾದೀಪ್ತವೂ ಪ್ರೇಮಲವೂ ಆದ ಚಿತ್ತದ ಸಂಸರ್ಗವನ್ನು (ಕಾವ್ಯಕು. ೩೩); ಇವನು . . . ಸಾಕಷ್ಟು ಸುಂದರ, ಹಣವಂತ ; ಪ್ರೇಮಲಸ್ವಭಾವದ ವ್ಯಕ್ತಿ (ಹೇಮ್ಸ್‌ಗಂ. ೦೬). **ಪ್ರೇಮಳ** : ನನ್ನಲ್ಲಿ ಏನಾದರೂ ಒಳ್ಳೆಯ ಗುಣ, ಏನಾದರೂ ಪ್ರೇಮಳಸ್ವಭಾವ ಇದ್ದುದಾದರೆ ಅದರ ಶ್ರೇಯಸ್ಸು ಮಾತೃನಿಷ್ಠ ಸಹೋದರನಿಗೂ . . . ಸಲ್ಲುತ್ತದೆ (ಶ್ಯಾಮುಕಾ. ೩೬). [ಸಂ.]

**ಪ್ರೇಮಲೆ** (ನಾ). ಪ್ರೀತಿಪಾತ್ರಳಾದವಳು : ಸ್ವಪ್ನರೋಹಿಣಿ ಪ್ರೇಮಚಂದ್ರಗೆ ಲಕ್ಷರೂಪಿಣಿ ಪ್ರೇಮಲೆ (ಮಾನಸ. ೦೯-೦೨). [ಸಂ. ಪ್ರೇಮಲಾ]

**ಪ್ರೇಮವಿವಾಹ** (ನಾ). ಗಂಡು, ಹೆಣ್ಣು ಪರಸ್ಪರ ಪ್ರೀತಿಯಿಂದ ಒಪ್ಪಿ ಮಾಡಿಕೊಳ್ಳುವ ಮದುವೆ : ತಮ್ಮ ಈ ಪ್ರೇಮವಿವಾಹಕ್ಕೆ ತನ್ನ ತಾಯಿಯೂ ಒಪ್ಪಿದ್ದಾಳೆ ಎಂಬ ಆನಂದದ ಸುದ್ದಿಯನ್ನಷ್ಟೇ ತಿಳಿಸಿದಳು (ಅಹೋಲೀ. ೦೦೦). [ಸಂ.]

**ಪ್ರೇಮಳ** 'ಪ್ರೇಮಲ'ನೋ.

**ಪ್ರೇಮಾನುಬಂಧ** (ನಾ). ಅನುರಾಗಬಂಧನ : ಭವಪಾರ್ಥಿವಪ್ರತಿಮಗ್ನ ಜೀವನಿವಹಂ ಪ್ರೇಮಾನುಬಂಧಂ ಮನೋಭವರಾಗಾಶಯಮಂ ನಿಮಿರ್ಚ ಭವಸಂತಾನಂಗಳೊಳ್ ಕೂರ್ಪ ಕೂಡುವ ತ[ಟ್ಟಿ]ರ್ಪ ಬಯಕ್ಕೆಯುಂ ಬಯಸುಗುಂ (ಶಾಂತಿಪು. ೯-೭). [ಸಂ.]

**ಪ್ರೇಮಾಲೋಕನ** (ನಾ). ಪ್ರೀತಿಯಿಂದ ನೋಡುವುದು ; ಅನುರಾಗದೃಷ್ಟಿ : ಪ್ರೇಮಾಲೋಕನಸುಮನೋದಾಮದೆ ಬರೆತೆಗೆಯೆ ಭೂಭುಜಂ ನಿಜತನುದಿವ್ಯಾಮೋದಂ ಬಳಸೆ ಲತಾಕೋಮಳೆ ಕುಳ್ಳಿರ್ದಳೊಡನೆ ಹೇಮಾಸನದೊಳ್ (ಮಲ್ಲಿಪು. ೯-೭೮). [ಸಂ.]

**ಪ್ರೇಮಿ** (ನಾ). ಪ್ರೀತಿಸುವ ವ್ಯಕ್ತಿ ; ಪ್ರಣಯಿ : "ಪ್ರೇಮಿ ಪ್ರಿಯಂ ಸಹಚರಂ ಪರಾಯಣನೆನಲ್ ಪ್ರೇಮಂಗೈವನೆನಿಕ್ಕು" (ಮಂಗರಾ. ೬೮-೮) ; ಮತ್ತೆ ಮರುದಿನ ಮುಂಜಾನೆ ಭೆಟ್ಟಿಯೆಂದು ಪ್ರೇಮಿಗಳಿಬ್ಬರೂ ಅಗಲಿದರು (ಸವುಜೀ. ೪೦೬). [ಸಂ. ಪ್ರೇಮಿನ್]

**ಪ್ರೇಮಿಸು** (ಕ್ರಿ). ಪ್ರೀತಿಸು ; ಒಲವುದೋರು : ನೀನೆಂದೆಂದಿಗೂ ಪ್ರೇಮಿಸುತ್ತಿರು ಅವಳೆಂದೆಂದಿಗೂ ಸುಂದರಿಯಾಗಿರಲಿ (ಶಾರಜಾ. ೬೭). [ಪ್ರೇಮ + — ಇಸ್ಸು]

**ಪ್ರೇಮೋನ್ಮಾದ** (ನಾ). ಹುಚ್ಚುಪ್ರೀತಿ ; ಪ್ರೇಮದ ಉದ್ವೇಗ : ಪ್ರೇಮೋನ್ಮಾದ, ಪ್ರಣಯಕೋಪ, ವಿರಹತಾಪ. . . ಎಲ್ಲವನ್ನೂ ಕಲಾವಿದ ನಿರೂಪಿಸಿದ (ಭಾರಿದ. ೩೬೦). [ಸಂ.]

**ಪ್ರೇಯ** (ನಾ). ೧. ಸುಖ ; ಕ್ಷೇಮ : ನಿಮ್ಮ ಜೀವನವು ಪ್ರೇಯ ಮೋಹ್ ಶ್ರೇಯಕ್ಕಾಗಿ ! (ಕರುಣ್ಣಾ. ೭೭-೦೪). ೨. [ಕಾವ್ಯಮೀ] ಅಲಂಕಾರಗಳಲ್ಲಿ ಒಂದು ; ಪ್ರೀತಿಪರವಾದ ಮಾತುಗಳಿಂದ ಕೂಡಿದ ಬರಹವೇ ಪ್ರೇಮವೆಂಬ ಅಲಂಕಾರದಿಂದ ಕೂಡಿರುವುದು: ಪ್ರೇಯಂ, ಪ್ರಿಯತರವಚನಾಖ್ಯೇಯಮುಮಹಂಕಾರಿಗರಿಮಮೂರ್ಜಸ್ವಿ ಶುಭಪ್ರಾಯಾರ್ಥಾಶಂಸಾಭಿಪ್ರಾಯಮಲಂಕಾರಮಾಶಿಯೆಂಬರ್ ಕೆಲಬರ್ (ಕಾವ್ಯಾವ. ೭೬೨) ; 'ರಸವತ್', 'ಪ್ರೇಯ', 'ಊರ್ಜಸ್ವಿ', 'ಸಮಾಹಿತ'. —ಈ ಅಲಂಕಾರಗಳಲ್ಲಿ ರಸಾದಿಗಳಿಗೆ ಅಂಗತ್ವವುಂಟು (ಶೃಕ್ಕಾರೋ. ೬೦). [ಸಂ. ಪ್ರೇಯಸ್]

**ಪ್ರೇಯಸಿ** (ನಾ). ಪ್ರೀತಿಪಾತ್ರಳಾದವಳು ; ನಲ್ಲೆ : ಸುದತೀ ಸದ್ರೂಪಮಂ ತಾಳ್ದಿದ ವನಜಭವಪ್ರೇಯಸೀನಾಮಮಂ ತಾಳ್ದಿದ . . . ವಾಕ್ಸುಂದರಿ ಪರಮಮವಚೋವೃದ್ಧಿಯಂ ಮಾಡುಗೆಮ್ಮೊಳ್ (ಸುಕುಮಾ. ೦-೭) ; ಪ್ರೇಯಸಿ ಬಂದು ನಿನ್ನ ಮನಮೊಲ್ದರಲೋಳಿಗಳಿಂ ವಿಚಿತ್ರಶೋಭಾಯತಪ್ರಸರಮಂ ಸಮೆದು (ಕುಸುಮಾ. ೩-೬೩) ; ಆದಿದೇವ 'ರಾಗರಸಿಕ, ಈತನ ರಸಿಕತೆಗೆ ಮೆರುಗು ಕೊಡಲು ಯಶಸ್ವತಿ ಹಾಗೂ ಸುನಂದೆಯರು ಪ್ರೇಯಸಿಯರಾಗಿ ಬಂದರು (ದಾನಚಿಂ. ೦೬). [ಸಂ. ಪ್ರೇಯಸೀ]

**ಪ್ರೇಯಸ್ಸು** (ನಾ). ಸುಖ ; ಕ್ಷೇಮ : ಇದೇ ಶ್ರೇಯಸ್ಸಿನ ದಾರಿ, ಪ್ರೇಯಸ್ಸಿನ ದಾರಿಯೂ ಹೌದು (ರಾಕ್ಷೋರ. ೨೦೫) ; ಅಪಾರಸಂಪತ್ತನ್ನು ಗಳಿಸಿಯೂ ಪ್ರೇಯಸ್ಸಿಗಿಂತ ಶ್ರೇಯಸ್ಸೇ ಮುಖ್ಯವೆಂದು ಭಾರತವು ಸಾರಿತು (ಭಾರಿದ. ೩೬೫). [ಸಂ. ಪ್ರೇಯಸ್]

**ಪ್ರೇರಕ** (ಗು). ೧. ಉತ್ತೇಜನಗೊಳಿಸುವ ; ಪ್ರಚೋದಿಸುವ. (ನಾ). ೨. ಉತ್ತೇಜನಗೊಳಿಸುವುದು ; ಪ್ರಚೋದನೆ : ಭಾರ್ಯರಿಂದೊಡಗೂಡಿ ಕಾರಣಕಾರ್ಯವಸ್ತುಗಳಲ್ಲಿ ಪ್ರೇರಕಪ್ರೇಯರೂಪಗಳಿಂದೆ ಪಟತಂತುಗಳವೊಲಿದ್ದು . . . ಈತನ ವಿಹಾರವು ಗೋಚರಿಪುದೇನೋ (ಹಸಾರ. ೩-೯) : ಹಿಂದೆ ಸೃಷ್ಟಿಕ್ರಿಯೆಗೆ ಪ್ರೇರಕವಾಗಿರುವ ಶಕ್ತಿ ಒಂದು ಯುಗಧರ್ಮ (ಭಾವಗೀ. ೪). ೩. ಕಾರ್ಯದಲ್ಲಿ ತೊಡಗಿಸುವವನು ; ಪ್ರಚೋದಕ : ಪ್ರೇರಕಂ ನೀಂ ಬರಲು ಸಾಕ್ಷಿಯುಂಟೇ ತಂದೆ (ಹಂಪಿರ. ೭-೦೫೩) ; ವ್ಯಾಸಮಹರ್ಷಿ ಭರತಖಂಡದ ಐಕ್ಯ ಮತ್ತು ಸಂಘಟನೆಗೆ ಪ್ರೇರಕನಾದನು (ಪುಣ್ಯಾರ. ೦೦೨ ಹೀಳಿಕೆ). [ಸಂ.]

**ಪ್ರೇರಕಶಕ್ತಿ** (ನಾ). ಉತ್ತೇಜನಗೊಳಿಸುವ ಶಕ್ತಿ ; ಪ್ರಚೋದಿಸುವ ಚೈತನ್ಯ : ಈ ಎರಡು ವಿರುದ್ಧಪಂಥಗಳಿಗೂ ಪ್ರೇರಕಶಕ್ತಿಯೊಂದೇ ಎಂಬುದು ವಿಚಿತ್ರಸಂಗತಿ. ಈ ಪ್ರೇರಕಶಕ್ತಿ ಅರಿಸ್ಟಾಟಲ್ಲನ ಸಿದ್ಧಾಂತ (ಪುಣ್ಯಾರ. ೦೦ ಹೀಳಿಕೆ) ; ಹಿಂದಿನ ಪ್ರೇರಕಶಕ್ತಿಯಾಗಲೀ . . . ಉದಾರ ಮನೋಭಾವವಾಗಲೀ ಈಗ ಉಳಿದಿರಲಿಲ್ಲ (ಕೃಷರು. ೦೯). [ಸಂ.]

**ಪ್ರೇರಣ** (ನಾ). ೧. ಒಂದು ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡುವುದು ; ಕಾರ್ಯಮಗ್ನನಾಗಲು ಪ್ರಚೋದಿಸಂವುದು : ಭಕ್ತಿಪ್ರಿಯಾಪ್ರೇರಣದಿಂ ತದ್ವರ್ಣನೋಪಕ್ರಮದೊಳಿಸಿದೆಂ ಭ್ರಾಂತನಂ (ಚಂದ್ರಕ. ೦-೭೪). ೨. [ವ್ಯಾಕ] "ಪ್ರೇರಣ ಎಂದರೆ ಇನ್ನೊಬ್ಬನಿಂದ ಕೆಲಸ ಮಾಡಿಸಂವುದು ಎಂದು ಅರ್ಥ" (ಕನ್ನಕು. ೦೫೦). [ಸಂ.]

**ಪ್ರೇರಣಾರ್ಥ** (ನಾ).[ವ್ಯಾಕ] ಇನ್ನೊಬ್ಬರಿಂದ ಕೆಲಸ ಮಾಡಿಸುವುದನ್ನು ತಿಳಿಸಂವುದು : ಎಲ್ಲ ಧಾತುಗಳಿಗೂ ಪ್ರೇರಣಾರ್ಥದಲ್ಲಿ — ಇಸು ಪ್ರತ್ಯಯ ಸೇರಿ ಹೊಸ ಧಾತುಗಳಾಗುತ್ತವೆ (ಕನ್ನಕು. ೦೫೦) ; ಪ್ರೇರಣಾರ್ಥದ ಇಸು ಪ್ರತ್ಯಯದ ಮೇಲೆ ಮತ್ತೆ ಪ್ರೇರಣಾರ್ಥದಲ್ಲಿ ಇಸು ಪರವಾದರೆ ಪೂರ್ವದ ಇಸುವಿಗೆ ಲೋಪವಾಗುವುದು (ಕೈಪಿಡಿ. ೪೨). [ಸಂ.]

**ಪ್ರೇರಣಿಸು** (ಕ್ರಿ). ಉತ್ಸಾಹಗೊಳಿಸು ; ಪ್ರಚೋದಿಸು : ಅಣ್ಣಾ ದೋಜೀ ನಿಂದು ಬಣ್ಣಕೆ ನಿನ್ನ ಕಳುಹಿ ಪ್ರೇರಣಿಸುತಿದ್ದನು ಭಾವ ನೋಡ (ಭರತ. ೪೮-೪೦). [ಪ್ರೇರಣ + — ಇಸ್ಸು]

**ಪ್ರೇರಣೆ** (ನಾ). ಒಂದು ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡುವುದು ; ಪ್ರಚೋದನೆ : ಅರಣ್ಯದ ಭೂತ ಭೇತಾಳವಡೆ ಸುತ್ತಿಮುತ್ತಿ ಬೊಬ್ಬಿಟ್ಟು ಝುಂಕಿಸಿದುವಾ ಕೌಶಿಕನ ಪ್ರೇರಣೆಯೊಳು (ಹಪಕಾ. ೯-೪೩); ಅಜೇಯವಾದ ಪ್ರಕೃತಿಗೆ ಎದುರಾಗಿ, ಅದಕ್ಕೆ ಸೋತು,

ದಾಸನಾಗಿ ಅದರ ಪ್ರೇರಣೆಯಂತೆ ವರ್ತಿಸುವುದರ ಬದಲು . . . ಅದರೊಡನೆ ಸಹಕರಿಸುವುದು ಒಳಿತಾದ ಮಾರ್ಗ (ಶಾರದ. ೦೦೩). [ಸಂ. ಪ್ರೇರಣ]

**ಪ್ರೇರಿತ** (ಗು). ೧. ಉತ್ತೇಜನಗೊಂಡ ; ಪ್ರಚೋದನೆಗೊಳಗಾದ : ಪೌರವನಾಂತರಾಳದೊಳಗೊರ್ವ ವಸಂತವಿಲಾಸಕೌತುಕಪ್ರೇರಿತಮಾನಸಂ ತೊಳಗುತಿರ್ದು (ಚಂದ್ರಪು ೩-೬೯). (ನಾ). ೨. ಪ್ರಚೋದಿತವಾದಂದು; ಹುರುಪುಗೊಂಡುದಂ : ಕಾಗದವನ್ನು ಕೈಗಳು ಯಂತ್ರಶಕ್ತಿಯಿಂದ ಪ್ರೇರಿತವಾದಂತೆ ಮಡಚಿ ಮುದ್ದೆ ಮಾಡಿದ್ದವು (ಕುರುಕಾ. ೯೮). ೩. ಪ್ರಚೋದನೆಗೊಂಡ ವ್ಯಕ್ತಿ; ಹುರುಪುಗೊಂಡ ವ್ಯಕ್ತಿ: ತದ್ ಭ್ರೂವಿಕ್ಷೇಪಣಪ್ರೇರಿತಂ ಮೇಘನಾದನಾದರದಿಂ ಬಂದು (ರಾಜಶೇ. ೬-೩೦ ವ) ; ವಾಜಶ್ರವಸರಿಂದ ಪ್ರೇರಿತನಾಗಿ ನಾನು ಇಲ್ಲಿಗೆ ಬಂದಿಲ್ಲ (ಬಿಕಂಬಾ. ೬). ೪. ರಾಯಭಾರಿ. [ಸಂ.]

**ಪ್ರೇರಿಸು** (ಕ್ರಿ). ಪ್ರಚೋದಿಸು ; ಹುರುಪುಗೊಳಿಸು : ಯಾತ್ರೆಗವನೀತಲಪತಿಯಂ ಪ್ರೇರಿಸಿತ್ತು ಪುಗಿಲೊಳ್ ಶರದಂ (ಶಾಂತಿಪು. ೦೦-೦೪೦) ; ಇಸುವೆನ್ನೀ ಮನಮಂ ಪ್ರೇರಿಸುವೀತನನಖಿಳಲೋಕಗುರುವಂ . . . ಇಸುವಸಮಾಸ್ತ್ರರ್ ಜಲಧಿವಸನವಸುಧೆಯೊಳುಂಟೇ (೧೦೪. ೬-೨೯). ಅವರೀರ್ವರೂ ಗಜಾರೋಹಣವಂ ಮಾಡಿ ಗಜವಂ ಪ್ರೇರಿಸಲು ಆ ಗಜವು . . . ತೆರಳುತ್ತ (ಸೌಗಂಂ. ೩೦೨-೨೦). [ಪ್ರೇರಣೆ+—ಇಸ್ತು]

**ಪ್ರೇರೇಪಕ** (ಗು). ಹುರುಪುಗೊಳಿಸುವ : ಪ್ರಚೋದಿಸುವ. [< ಪ್ರೇರಕ]

**ಪ್ರೇರೇಪಣೆ** (ನಾ). = ಪ್ರೇರಣೆ : ಅವಳು ಪ್ರೇರೇಪಣೆ ಮಾಡದಿದ್ದರೆ ಕೈಕೆಗೆ ದುರ್ಬುದ್ಧಿ ಹುಟ್ಟುತ್ತಲೇ ಇರಲಿಲ್ಲ (ಶಾರದ. ೯೨) ; ಇಷ್ಟು ಸುಲಭವಾಗಿ ನಮಗೆ ಅಷ್ಟು ಪುಣ್ಯ ಪ್ರಾಪ್ತಿಯಾಗಬೇಕೆಂದೇ ಈ ಕಡೆ ಬರಲು ಪ್ರೇರೇಪಣೆ ಮಾಡಿದಿ ? (ಬಿಕಂಬಾ. ೩೬). [<ಪ್ರೇರಣೆ]

**ಪ್ರೇರೇಪಿತ** (ನಾ). ಪ್ರಚೋದಿತನಾದವನು ; ಪ್ರೇರಣೆಗೊಂಡವನು : ಸರ್ವಶುಭಾಕಾಂಕ್ಷೆಯಿಂದ ಪ್ರೇರೇಪಿತನಾಗಿ ಆಡುತ್ತಿದ್ದೇನೆ (ಬಿಕಂಬಾ. ೦೩೦). [< ಪ್ರೇರಿತ]

**ಪ್ರೇರೇಪಿಸು** (ಕ್ರಿ). = ಪ್ರೇರಿಸು : ಅವನ ಕಡೆಯವರು ಜನಗಳನ್ನು ಪ್ರೇರೇಪಿಸುತ್ತಿದ್ದಾರೋ ಏನೋ (ಕಂಗಾಳ್ಕ. ೩೬೦) ; ಕೇಶವಣ್ಣನೇ ಈ ಬಣ್ಣದ ಸೀರೆಯನ್ನು ಕೊಂಡುಕೊಳ್ಳಲು ಪ್ರೇರೇಪಿಸಿದ್ದು (ನವಜೀ. ೯). [< ಪ್ರೇರಿಸು]

**ಪ್ರೇಷಕ** (ನಾ). ೧. ಕಳಿಸುವುದು ; ರವಾನಿಸುವುದಂ. ೨. ಕಳುಹಿಸುವ ಸಾಧನ : ಟೆಲಿಫೋನ್ ಪದ್ಧತಿಯಲ್ಲಿ ಎರಡು ಮುಖ್ಯ ಭಾಗಗಳಿವೆ. ಮೊದಲನೆಯದನ್ನು ಪ್ರೇಷಕವೆಂದೂ ಎರಡನೆಯದನ್ನು ಗ್ರಾಹಕವೆಂದೂ ಕರೆಯುತ್ತಾರೆ (ವಿಜ್ಞಾವಿ. ೩೦). [ಸಂ.]

**ಪ್ರೇಷಣ** (ನಾ). ೧. (ದೂತನನ್ನು) ಕಳುಹಿಸುವುದು ; ರವಾನಿಸಂವುದಂ. ೨. ಪ್ರಚೋದಿಸುವುದು. ೩. [ಜೈನ] ದೇಶವ್ರತಾತಿಚಾರದ ಪ್ರೇಕ್ಷಣ, ಶಬ್ದ, ಆನಯನ, ರೂಪಾಭಿವ್ಯಕ್ತಿ, ಪುದ್ಗಲಕ್ಷೇಪಗಳೆಂಬ ಐದು ವಿಧಗಳಲ್ಲಿ ಒಂದು ; P "ಎಲ್ಲೆಯಂ ಹೊರಕ್ಕೆ ಹೋಗಿ ನಿರ್ದಿಷ್ಟಕಾರ್ಯವನ್ನು ಮಾಡಿಕೊಂಡು ಬರುವಂತೆ ಹೇಳುವುದಂ" (ಕೈವಕೋ. ೦೬೨) : ಕಪಟದೊಳೀಂ ಪ್ರೇಷಣಶಬ್ದಪುದ್ಗಲಕ್ಷೇಪಸಮುದಿತಾನಯನಂ ತಾವಪಚಾರಂಗಳ್ ರೂಪಾನುಪಾತಮುಂ ಪ್ರಮಿತ ದೇಶನಿಯಮವ್ರತದೊಳ್ (ಸುಕುಮಾ. ೬-೦೯) : ತನ್ನ ಸೀಮೆಯೊಳಿರ್ದು ದಾಸಿ ದಾಸರನ್ನು ಕಳುಹಿ ಲೇಸಾಗಿ ಕೆಲಸವ ಮಾಡಿಸುತಿರ್ಪುದು ಪ್ರೇಷಣವೆಂಬತಿಚಾರ (ದ್ವಾದಶಾ. ೦೦-೩೦೩). [ಸಂ.]

**ಪ್ರೇಷಿತ** (ಗು). ೧. ಕಳುಹಿಸಿದ ; ರವಾನಿಸಿದ : ಅಜಿತಂಜಯ ಮಹಾರಾಜಂ . . . ಪ್ರೇಷಿತಾಶೇಷಪ್ರಕೃತಿಸಮೇತಸಚಿವಸಂದೋಹಸಂದರ್ಶನಾರ್ಥಂ . . . ಅಖಿಳಪ್ರಧಾನಪರಿವಾರಪರಿಕೃತನುಮಾಗಿರೆ (ಚಂದ್ರಪು. ೫-೨ ವ); ಸೇನಾಪತಿಪ್ರೇಷಿತಪ್ರೇಷ್ಯಜನದೆ ಬಟಾಸಂದು (ಪುಷ್ಪಪು. ೫-೦೦೦ ವ). ೨. ಆಜ್ಞಾಪಿಸಿದ ; ನಿರ್ದೇಶಿಸಿದ. (ನಾ). ೩. ಕಳುಹಿಸಲ್ಪಟ್ಟವನು ; ದೂತ : ಪತಿವ್ರೋಹಿ ಮಂತ್ರಿಪಂ ರಾಜಶೇಖರಪ್ರೇಷಿತನಲ್ಲಿಗೇಳ್ತಂದು ನಿಜವಿನಯದಿಂ ಮೆಚ್ಚಿದು (ರಾಜಶೇ. ೬-೯೬ ವ). [ಸಂ.]

**ಪ್ರೇಷ್ಯ** (ಗು). ೧. ಕಳುಹಿಸಿದ ; ರವಾನಿಸಿದ. (ನಾ). ೨. ಕಳುಹಿಸಲ್ಪಟ್ಟವನು; ದೂತ : ತತ್ಸಮಯದೊಳ್ ಸೇನಾಪತಿಪ್ರೇಷಿತಪ್ರೇಷ್ಯಜನದ ಬಟಾಸಂದು (ಪುಷ್ಪಪು. ೫-೦೦೦ ವ). ೩. ಸೇವಕ; ಜವಾನ. ೪. ಕೂಲಿ ಕೆಲಸ ಮಾಡುವವನು; ಕೂಲಿಗಾರ : "ಪ್ರೇಷ್ಯಃ, ಪ್ರತಿಸ್ಕಂದಃ—ಈ ೨ ಕೂಲಿಕಾಲಟ" (ಹಲಾಯು. ೬೧-೨೦೪). [ಸಂ.]

**ಪ್ರೊಫೆಸರ್** (ನಾ). ಪ್ರಾಧ್ಯಾಪಕ; ಹಿರಿಯ ಅಧ್ಯಾಪಕ: ಹೌದು ಪ್ರೊಫೆಸರ್, ನನ್ನ ಪ್ರಯೋಗದಲ್ಲಿ ನಾನು ಜಾಗರೂಕನಾಗಿಯೇ ಇದ್ದೇನೆ (ಹೂಸಕ್ತಿ. ೦೨). [← ಇಂ. Professor]

**ಪ್ರೋಕ್ತ** (ಗು). ೧. ಹೇಳಿದ ; ಪ್ರಕಟಿಸಿದ ; ತಿಳಿಸಿದ : ಇನ್ನದಕ್ಕೇ ಬಾರದುವೆಲ್ಲಂ ವ್ಯಕ್ತಂ ನ್ಯಾಯವಿರುದ್ಧಂ ಪ್ರೋಕ್ತಮಹಾದೋಷಮಂತು ಪೇಟಲ್ಕೆಂತುಂ (ಕಾವ್ಯಾ. ೦-೦೦೬); ಮಹಾಸ್ಕಾಂದಪುರಾಣಪ್ರೋಕ್ತಕಾಶಿಯೊಳು ಮಣಿಕರ್ಣಿಕೆಯೊಳು ಧನ್ಯರಹರಿಲ್ಲಿಯವಗಾಹನಂ (ಹಠಕಾ. ೫-೬೬). (ನಾ). ೨. ತಿಳಿಸಿದುದು ; ಹೇಳಿಕೆ : ನಿನ್ನ ಸುತನಂ ಪಿಡಿದ ಸಿಂಹಮುಂಟೆ ಅಪ್ರಸಿದ್ಧ ಪ್ರೋಕ್ತವಿದು (ಕೈಮಿಖಾ. ೨೬-೩೬). ೩. ಒಂದಂ ಬಗೆಯಂ ಸಸ್ಯ: "ಪ್ರೋಕ್ತಃ— ಬೆಳುವಾಲಿ" (೬ತಧಿ. ೦೦೩). [ಸಂ.]

**ಪ್ರೋಕ್ತಿ** (ನಾ). ಹೇಳಿಕೆ: ಆವ ನೀತಿಯಿದಾವ ಧರ್ಮವಿದಾವ ಶಾಸ್ತ್ರಪ್ರೋಕ್ತಿ ಭುವನದೊಳಾವ ಭಕ್ತಿಯಿದೆಂತು ಸೈರಿಸಬಹುದು ಹೇಳಯ್ಯ (ಬಸಪು. ೫೫-೩೬). [ಸಂ.]

**ಪ್ರೋಕ್ಷಣ** (ನಾ). ೧. (ನೀರು, ತೀರ್ಥ ಮೊದಲಾದುವುಗಳನ್ನು) ಸಿಂಪಡಿಸಂವಿಕೆ; ಚಿಮುಕಿಸುವಿಕೆ. ೨. ಯಜ್ಞಪಶುವನ್ನು ಪರಿಶುದ್ಧಗೊಳಿಸಲು ತೀರ್ಥವನ್ನು ಚಿಮುಕಿಸಿ ವಧೆಮಾಡುವುದು : "ಪರಂ ಪರಾಕಂ, ಶಪನಂ, ಪ್ರೋಕ್ಷಣಂ . . . ಯಜ್ಞದಲ್ಲಿ ವೇದೋಕ್ತಪ್ರಕಾರವಾಗಿ ಮಾಡುವ ಪಶುವಿಶಸನವೆಂಬ ಶ್ರೌತಪಶುವಧ'' (ಸಿದ್ಧಾಂತಿ. ೨೨೦). ೩. ಊಟ ಮಾಡುವುದಕ್ಕೆ ಮುಂಚೆ ಎಲೆಗೆ ಬಡಿಸಿದ ಭೋಜನ ಪದಾರ್ಥಗಳ ಮೇಲೆ ನೀರನ್ನು ಚಿಮುಕಿಸಿ ಶುದ್ಧಿಗೊಳಿಸುವಿಕೆ. [ಸಂ.]

**ಪ್ರೋಕ್ಷಣೆ** (ನಾ). ೧. = ಪ್ರೋಕ್ಷಣ ೧: ಪ್ರೋಕ್ಷಣೆ ಮಾಡಿದರೆ ಪ್ರಹುಡನಾದಾನೆ? (ಗಾದೆ). ೨. = ಪ್ರೋಕ್ಷಣ ೩ : ಆಚಾರ್ಯರು ಪ್ರೋಕ್ಷಣೆ ಮಾಡಿ ಊಟವನ್ನು ಪ್ರಾರಂಭಿಸಿದರು (ರೂಪ). [ಸಂ. ಪ್ರೋಕ್ಷಣ]

**ಪ್ರೋಕ್ಷಿತ** (ಗು). ೧. ಪ್ರೋಕ್ಷಣೆ ಮಾಡಿ ಶುದ್ಧಗೊಳಿಸಿದ; ನೀರು ಚಿಮುಕಿಸಿ ಶುದ್ಧವಾದ. (ನಾ). ೨. ಯಜ್ಞದ ಬಲಿಪಶು : "ಪ್ರಮಿತಃ, ಉಪಸಂಪನ್ನಃ, ಪ್ರೋಕ್ಷಿತಃ . . . ಯಜ್ಞದಲ್ಲಿ ಕೊಲ್ಲಲ್ಪಡುವ ಪಶು ಮುಂತಾದವುಗಳ ಹೆಸರುಗಳು" (ಸಿದ್ಧಾಂತಿ. ೨೨೦). [ಸಂ.]

**ಪ್ರೋಕ್ಷಿಸು** (ಕ್ರಿ). ಸಿಂಪಡಿಸು; ಚಿಮುಕಿಸಂ: ಕಮಂಡಲೂದಕದಿಂದೆ ಮುನಿವರಂ ಪ್ರೋಕ್ಷಿಸಿದೊಡುರಗತ್ವಲ್ಪದೊಳುಪ್ಪವಡಿಸುವಬ್ಜಾಕ್ಷನೀತಂ ತಪ್ಪದೆಂಬಂತೆ ಕಣ್ದೆರೆದು ವಾಲ್ಮೀಕಿಗಭಿನಮಿಸಲು (ಜೈಮಿಖಾ. ೨೦-೩೦); ಹಿಮಾಲಯನು ಆ ಮುನಿಯನ್ನು ಬಹಳವಾಗಿ ಸನ್ಮಾನಿಸಿ . . . ಪಾದ ಪ್ರಕ್ಷಾಲನ ಮಾಡಿ ಚರಣತೀರ್ಥವನ್ನು ಮನೆ ತುಂಬ ಪ್ರೋಕ್ಷಿಸಿದನು (ತುಳಸೀ. ೨೦). [ಪ್ರೋಕ್ಷಣ +— ಇಸ್ತು]

**ಪ್ರೋಚ್ಚಂಡ** (ಗು). ೧. ಅತಿಭಯಾನಕವಾದ: ವೀರಲಕ್ಷ್ಮೀಸದನ ಪ್ರೋಚ್ಚಂಡ ದೋರ್ದಂಡನಂ . . . ಇರ್ದಂ (ಕೃಷ್ಣಕೃ. ೨-೯೬). ೨. ಅಧಿಕವಾದ ; ಹೆಚ್ಚಾದ. (ನಾ). ೩. ಹೆಚ್ಚು ; ಅಧಿಕ : ನನಗೆ ಪ್ರೋಚ್ಚಂಡವಾದ ಭರತಿ ಬಹುಶಃ ನಸುಕಿನಲ್ಲಿಯೆ ಬರುವುದು (ಗಾಳಿಕ. ೧೬೮). [ಸಂ.]

**ಪ್ರೋಚ್ಚಲಿತ** (ಗು). ಮೇಲಕ್ಕೆ ಚಲಿಸಿದ; ನೆಗೆದ: ಜಿನಜನ್ಮೋತ್ಸವದೊಳ್ ವೇದಿನಿಗಿರಿಸಿದ ಕಾಂಚನಧ್ವಜಸ್ತಂಭಮಿದೆಂಬಿನೆಗಂ ಸೊಗಯಿಸಿದುದು ಮೇರುನಗಂ ಪ್ರೋಚ್ಚಲಿತದುಗ್ಧಪೂರದುಕೂಲಂ (ಚಂದ್ರಪ್ರಪು. ೦೨-೦೩೬). [ಸಂ. ಪ್ರೋಚ್ಚಲಿತ]

**ಪ್ರೋಜ್ವಲ** (ಗು). ೧. ತೀಕ್ಷ್ಣವಾಗಿ ಉರಿಯುವ; ಪ್ರಜ್ವಲಿಸುವ. (ನಾ). ೨. ದೊಡ್ಡ ಬೆಂಕಿ; ಮಹಾಜ್ವಾಲೆ : ಮುಂದೆ ಸಂಭವಿಸಿತ್ತು . . . ಗಾಂಗೇಯದ್ರೋಣಾದಿ ಕರ್ಣದುರ್ಯೋಧನರ ಜೀವಕಾನನ ದಹನಪ್ರೋಜ್ವಲಂ (ಚಿತ್ರಾಂಗ. ೬೯-೦೫೯೭). [ಸಂ.]

**ಪ್ರೋಜ್ವಲಿಸು** (ಕ್ರಿ). ಬಹಳವಾಗಿ ಉರಿ; ಪ್ರಜ್ವಲಿಸು: ಪ್ರೋಜ್ವಲಿಸಿದುದು ಕೋಪವನಜ್ವಾಲೆ ಭೂಮಿಪಗೆ (ಶ್ರೀಪಾಂಡವ. ೨-೯೩೬) ; ರಾಗಾರುಣಜ್ವಾಲೆ ಪ್ರೋಜ್ವಲಿಸುವೋಲ್ ಉಗ್ರದಾವಾಗ್ನಿ ತರುನಿಚಯಮಂ ಕೊಂಡುರಿಯು ವಂತೆ ಪೊತ್ತಿದುದು ಚಿತ್ರಾಂಗಿಯಂ ಪ್ರಣಯಪ್ರಲಯಶಿಖಿ (ಚಿತ್ರಾಂಗ. ೯೦-೦೦೦೦). [ಪ್ರೋಜ್ವಲ + –ಇಸು]

**ಪ್ರೋಜ್ಝಿತ** (ಗು). ಬಿಟ್ಟ; ತ್ಯಜಿಸಿದ: 'ಪ್ರೋಜ್ಝಿತಚಾಪ' ಪರಾ. [ಸಂ.]

**ಪ್ರೋಜ್ಝಿತಚಾಪ** (ನಾ). (ಯುದ್ಧದಲ್ಲಿ) ಬಿಲ್ಲನ್ನು ಬಳಸುವುದನ್ನು ಬಿಟ್ಟವನು; ಧನುಸ್ಸನ್ನು ತ್ಯಜಿಸಿದವನು: ಗುರುವಂ ಪ್ರೋಜ್ಝಿತ ಚಾಪನಂ ಪುಸಿದು ಕೊಂದು (ಗದಾಯು. ೩-೩೩). [ಸಂ.]

**ಪ್ರೋಡ್ಡೀಣ** (ನಾ). ಹಾರುವುದು; ನೆಗೆತ: ಉಡ್ಡೀಣ ಪ್ರೋಡ್ಡೀಣದಿಂದ ಪೊಳೆಪೊಳೆದು (ಜಿನಮು. ೨೨-೯). [<ಸಂ. ಪ್ರೋಡ್ಡೀನ]

**ಪ್ರೊಡ್ಡೀನ** (ಗು). ಹಾರಿದ ; ನೆಗೆದ; ಮೇಲೆದ್ದ : ಉಚ್ಛ್ವಾಸಖಿನ್ನ ಶ್ರಮಮಂ ಪ್ರೊಡ್ಡೀನದೀನಶ್ರಮದೊಳೊಗೆದ ರೋಮಾಂಚಮಂ ಶೀತವಾತಸ್ತಿಮಿತೋಪಸ್ಪರ್ಶರೋಮಾಂಚದೊಳ್ ಬೆರಸಿದಳ್ ಕನ್ನೆಗೇಕಿನ್ನ ಮಂದಂ (ಅರ್ಗಳನೇ. ೩-೨೨) ; ಗಂಭೀರಸ್ಫಾರವೇಳಾಬಹಳಪರಿವೃತೋಲ್ಲೋಲ ಕಲ್ಲೋಲಮಾಲಾರಂಭಪ್ರೋಡ್ಡೀನಫೇನ . . . ಘನಘನಾರಾವರೌದ್ರಂ ಸಮುದ್ರಂ (ಕಾವ್ಯಸಾ. ೭೩). [ಸಂ.]

**ಪ್ರೋತ** (ಗು). ೧. ಹೆಣೆದ ; ಹೊಲಿದ. ೨. ಕೂಡಿಸಿದ ; ಜೋಡಿಸಿದ. ೩. ಕುಂದಣಿಸಿದ ; ಮೆಟ್ಟಿದ : ಶ್ರೀಧರಾಧಿಪ ಭೋಜರಾಜ ಮಕುಟಪ್ರೋತಾಶ್ಮರಶ್ಮಿಚ್ಛಟಾಚ್ಛಾಯಾಕುಂಕುಮಪಂಕಲಿಪ್ತ (ಎಕ. II, ೯೯-೭೨ ; ಕ್ರಿ. 1100). ೪. ಕಟ್ಟಿದ ; ಬಂಧಿಸಿದ. ೫. ಚುಚ್ಚಿದ. ೬. ನೆಯ್ಗೆಯಲ್ಲಿ ಅಡ್ಡಡ್ಡವಾಗಿ ಜೋಡಿಸಿದ. (ನಾ). ೭. ನೆಯ್ದ ಬಟ್ಟೆ : 'ಓತಪ್ರೋತ' ಪರಾ. [ಸಂ.]

**ಪ್ರೋತ್ಕರ** (ನಾ). ಗುಂಪು; ಸಮೂಹ : ಗಿರಿಪತಿಯಂ ಮೇನೆಯು ನಾದರದಿಂ ಬೀಳ್ಕೊಟ್ಟು ಮಕುಟರತ್ನಪ್ರಕರಸ್ಫುರಿತಪ್ರದ್ಯೋತಪ್ರೋತ್ಕರ ವಿಳಸಿತವಳಯದೊಳಗೆ ಶಿವನೆಸೆದಿರ್ದಂ (ಗಿರಿಜಾಕ. ೦೦-೦೦೭). [ಸಂ.]

**ಪ್ರೋತ್ಕಲಿತ** (ಗು). ಮೇಲೆದ್ದ ; ಹಾರಿದ : ನಕ್ರಚಕ್ರಸ್ಫುರದುರ್ವ ತರಯಾದಶ್ಚರಾಧ್ಮಾತಸಿತ ಪ್ರೋತ್ಕಲಿತಾಂಭಃಕುಂಭಿಕುಂಭೋನ್ನಮದರಸ ವಿಲಸತ್ಕ್ಷೋಭರೌದ್ರಂ ಸಮುದ್ರಂ (ಶಂಕರಕಂ. ೦೫೦-೭). [ಸಂ.]

**ಪ್ರೋತ್ತುಂಗ** (ಗು). ಬಹಳ ಎತ್ತರವಾದ ; ಬಹು ಉನ್ನತವಾದ : ವರರತ್ನಕನಕಮಯವಿಸ್ಫುರಿತ ಪ್ರೋತ್ತುಂಗತೋರಣಪ್ರಾಕಾರಂ (ಸುಕುಮಾ. ೯ ೬೩) ; ಆತ್ಮಭವಪ್ರೋತ್ತುಂಗ ಮೂರ್ಧಾಗ್ರದೊಳಿಟಿಪಲೊಡಂ (ಚಂದ್ರಪ್ರ. ೨ ೫೬). [ಸಂ.]

**ಪ್ರೋತ್ಥಾನ** (ಗು). ೧. ಮೇಲಕ್ಕೆ ಎತ್ತುವ ; ಮೇಲೆತ್ತುವ. ೨. ಉದ್ಧರಿಸುವ : ಜಾಪಕಂಗೆ ಸುಯೋಗಿಗಳಿಗೆ ಮಹಾಪೃಥುಲಪುಣ್ಯ ಗಳುಂಟಾ ಜಾಪಕರು ನಿಜನಿರ್ಜರಪ್ರೋತ್ಥಾನಶಕ್ತಿಯಲಿ ದೀಪಿಸುವರು (ತಿಮ್ಮಕಾಂ. ೩-೭೭). [ಸಂ.]

**ಪ್ರೋತ್ಪಾಟನ** (ನಾ). ಉತ್ಪಾಟನ ; ನಾಶ : ತ × × × ತ ಪ್ರೋತ್ಪಾಟನ ಪಟುವೆನಿಪ್ಪ ನಾಚುಗಿಭೂಪ ಜಗವೆಲ್ಲಂ ಕಡುಪಿಂಗೆ ಕಂಟಳಿಪಿನಂ [ಪೆ] × × × (ಸೌಇಇ. XV, ೯೨-೬ ; ಕ್ರಿ. 12ನೆಯ ಶಶ). [ಸಂ.]

**ಪ್ರೋತ್ಪಿಹಿತ** (ಗು). ಚೆನ್ನಾಗಿ ಮುಚ್ಚಿದ,–ಮರೆಮಾಡಿದ : ವಿನಿರ್ಧೂತ ಧಾತ್ರೀರಜಃಪ್ರೋತ್ಪಿಹಿತಾಂಗಂ . . . ಅಂಭೋವಾಹಮಂಭೋದಸಿಂಧುರ ಮಂ ಪಾಯ್ದು ಪಳಂಚಿ ಪೊಯ್ದುದು ರಟಜ್ಝಂರ್ಝಾಮರುತ್ಕುಂಜರಂ (ರಾಜಶೇ. ೬-೦೦೬). [ಸಂ.]

**ಪ್ರೋತ್ಫುಲ್ಲ** (ಗು). ೧. ಚೆನ್ನಾಗಿ ಅರಳಿದ,-ಬಿರಿದ. ೨. ವಿಶಾಲವಾದ ಖೇಚರಕಿನ್ನರಾಮರಯುಗಂ ನಾನಾವಿನೋದಂಗಳಂ ಮದನಾವೇಶಕರಂಗಳಂ ಸಲಿಸುತಂ ಪ್ರೋತ್ಫುಲ್ಲ ಚಂಚಲ್ಲತಾಸ್ಪದದೊಳ್ . . . ತಳ್ತಿರೆ ಕಾಮ ರಾಗಮಯಮಾಯ್ತೇನೀ ನಗಂ ರಮ್ಯಮೋ (ಅಂಕು. ೯-೦೦೬). (ನಾ). ೩. ಚೆನ್ನಾಗಿ ಬಿರಿದುದು,– ಅರಳಿದಂದು : ಓರ್ವಂ ದ್ವಿಜಪ್ರವರಂ ಮೌಕ್ತಿಕಮಾಲಿಕಾವಲಯಮುಂ ಪ್ರೋತ್ಫುಲ್ಲಮಂ ಪುಂಡರೀಕವನಂದಲ್ಲಿ ಮನೋರಮಾಂಕತಳದೊಳ್ ತಂದಿಕ್ಕಿದಂ ಸ್ವಪ್ನದೊಳ್ (ಕಾದಂಪೂ. ೩೭೩). [ಸಂ.]

**ಪ್ರೋತ್ಸಾಹ** (ನಾ). ೧. ಬಹಳವಾದ ಉತ್ಸಾಹ,–ಹುರುಪು. ೨. ಉತ್ತೇಜನ ; ಪ್ರಚೋದನೆ : ರಾಜಮಹಾರಾಜರು ಮತ್ತು ಮಹಾ ಮಂಡಲೀಕರು ಘಟಿಕಾಸ್ಥಾನಗಳಿಗೆ ಹೆಚ್ಚಿನ ಪ್ರೋತ್ಸಾಹವನ್ನು ಕೊಡು ತ್ತಿದ್ದರು (ಪೂಳಂಪ. ೬೭). [ಸಂ.]

**ಪ್ರೋತ್ಸಾಹಕ** (ನಾ). ಹುರಿದುಂಬಿಸುವವನು : ಉತ್ತೇಜನ ಕೊಡುವವನು : ಎಲೋ. ಪ್ರೋತ್ಸಾಹಕನೆ ತೆಗೆ ನಮ್ಮ ಪ್ರಭು ಭೇಟಿ ಯಲ್ಲಿ ವಿಮುಖನಾದನು (ಶಾಕುಂತ. ೨೩-೦). [ಸಂ.]

**ಪ್ರೋತ್ಸಾಹಗೊಳಿಸು** (ಕ್ರಿ). ಹುರಿದುಂಬಿಸು; ಉತ್ತೇಜಿಸು : ತುಂಬಾ ನಿರಾಶೆಗೊಂಡಿದ್ದ ಅವನನ್ನು ಅವನ ಮಾಸ್ತರರು ಪ್ರೋತ್ಸಾಹಗೊಳಿಸಿದರು (ಊಂ). [ಪ್ರೋತ್ಸಾಹ + ಕೊಳ್[1] + – ಇಸು]

**ಪ್ರೋತ್ಸಾಹಗೊಳ್ಳು** (ಕ್ರಿ). ಉತ್ತೇಜನಗೊಳ್ಳು ; ಉತ್ತೇಜನವನ್ನು ಪಡೆ: ಸಾಹಿತ್ಯರಚನೆಗಳನ್ನು ಬೆಳೆಗೆ . . . ಕೊಳ್ಳುವ—ಕೊಡುವ, ಪ್ರೋತ್ಸಾ ಹಿಸುವ – ಪ್ರೋತ್ಸಾಹಗೊಳ್ಳುವ . . . ಈ ಕಾರ್ಯಕ್ಕೆ ಉದಾರಚರಿತರು ನೆರವು ನೀಡಬೇಕಾಗಿ ಪ್ರಾರ್ಥನೆ (ಸಂಶೋಧ. vii ಅಂಕ).

[ ಪ್ರೋತ್ಸಾಹ + ಕೊಳ್ಳು[1] (<ಕೊಳ್[1]) ]

**ಪ್ರೋತ್ಸಾಹಿಸು** (ಕ್ರಿ). ಹುರಿದುಂಬಿಸು ; ಉತ್ತೇಜಿಸು : ಯಾ ಸ್ಥಳ ವನ್ನಾಕ್ರಮಿಸಿ ಪಟ್ಟಣವಂ ಕಟ್ಟಿ ಉಪಾಯದಿಂದ ಪ್ರೋತ್ಸಾಹಿಸುತ ಯದ ರಿಂದ ಬೇಕಾದ ವಸ್ತುಗಳಂ ಪಡದು ಸುಖದಿಂದಿರಬಹುದು (ಸೌಗಂಧ. ೧೦೭-೯) ; ಮನಸ್ಸಿಗೆ ಹಿತವೆನಿಸುವ ಸಾಮೂಹಿಕ ಅಭ್ಯಾಸಗಳನ್ನು ಆಚರಿಸಲು ಪ್ರೋತ್ಸಾಹಿಸಬೇಕು (ಶಿಕ್ಷಕ. ೩೦೦). [ಪ್ರೋತ್ಸಾಹ+ –ಇಸು]

**ಪ್ರೋಥ** (ಗು). ೧. ಪ್ರಸಿದ್ಧವಾದ. ೨. ಇಟ್ಟ ; ಇರಿಸಿದ. (ನಾ). ೩. ಕುದುರೆಯ ಮೂಗಿನ ಹೊಳ್ಳೆ : ಕೆತ್ತುತ್ತಮತ್ಯಂತವಿಸ್ಫುರಿತ ಪ್ರೋಥಮನೋರ್ಮಿಯುಂ . . . ಇರ್ದತ್ತುದಾತ್ತಂ ಹಯಂ (ಮಲ್ಲಿಪು. ೬-೩೫) ; ಆ ಪ್ರಮಾಣಮುತ್ತರಪ್ರೋಥಮದಕ್ಕುಂ ಬಿತ್ತರ ಪ್ರೋಥದರಡುಕೆಲದ ನಾಸಾಪುಟಮುಂ ಪ್ರೋಥದ ಕಣ್ಣಡೆ ಘೋಣಮದು (ಅಶ್ವಶಾ. ೯-೦೩). ೪. ಟೊಂಕ ; ಸೊಂಟ. ೫. ಪ್ರಯಾಣಿಕ ; ಪಯಣಿಗ. [ಸಂ.]

**ಪ್ರೋದ್ಗತ** (ಗು). ೧. ಮುಂದಕ್ಕೆ ಚಾಚಿಕೊಂಡಿರುವ : ಸ್ಫುರದೀಷ

ತ್ಪ್ರೋದ್ಗತೋರೋರುಹವಮುಕುಳೆಯರುನ್ಮತ್ತಹಂಸೀಕ್ವಣನ್ನೂಪುರೆಯರ್ . . . ಪೊಡೆವಟ್ಟೆಯ್ದೆವಂದಿರ್ದರಾಗಳ್ (ಆದಿಪು. ೬-೩೬). ೨. ಹೊರ ಹೊಮ್ಮಿದ : ವೇತ್ರಹಸ್ತಪ್ರತಿಮುಖರ ಪ್ರೋದ್ಗತಾಭೀಳಘೋಷಂ (ಗಂಕ. ೩-೪). [ಸಂ.]

**ಪ್ರೋದ್ಗಮ** (ನಾ). ಉಂಟುಮಾಡುವಂಥದು ; ಒದಗಿಸುವಂಥದು : ಚಂಡಾಂಶುಬಿಂಬಕ್ಕವಮೆಯ ರಜನೀಪ್ರೋದ್ಗಮಂ . . . ತಾನೆಂಬಿನಂ ಬಂದುದು ತಟಿಜ್ಜಾಲವಂಭೋದಕಾಲಂ (ಕಾದಂಬ. ೩೨೯). [ಸಂ.]

**ಪ್ರೋದ್ದಂಡ** (ಗು). ಬಹಳ ಕಠಿಣವಾದ ; ಅತ್ಯುಗ್ರವಾದ : ಮಂಡಿತೋರುಜಟಾಭಟಪ್ರೋದ್ದಂಡಹತಿಯಿಂದಂಬುರುಹಗರ್ಭಾಂಡಕರೂಟಕಟಾಹ ಮೊಡೆಯಲು (ಚಿಪು. ೧೭-೦೯). [ಸಂ.]

**ಪ್ರೋದ್ದಾನ** (ನಾ). ಸುರಿಯುತ್ತಿರುವ ಮದಜಲ ; ಸೂಸುವ ಮದೋದಕ : ಕ್ಷಿತಿಚಕ್ರಂ ಗತಿಚಕ್ರಗಂಧಗಳಿತ ಪ್ರೋದ್ದಾನಜಂಭಾಳ ಶೋಭಿತಂ (ಪುಣ್ಯಾಸ್ರ. ೦-೪೦) ; ಭ್ರಮದ್ಭೃಂಗಸಂಗಪ್ರಥಿತಪ್ರೋದ್ದಾನ ಧಾರಾಘಟಿತಕಟತಟಂ . . . ಘನನಿನದಮದೇಂ ಬಂದುದೋ ದಂತಿಜಾಳಂ (ರಾಜಶೇ. ೦೩-೭೭). [ಸಂ.]

**ಪ್ರೋದ್ದಾಮ** (ಗು). ೧. ಅಪರಿಮಿತವಾದ ; ಹೆಚ್ಚಾದ : ಸಮುದಾನೇಕಪಮಂ ಮಹಾಭಯುದವಂ ಪ್ರೋದ್ದಾಮ ಜಂಬೂಕದಂಬವಮನಭ್ರಂಕಷ ಕೂಟಮಂ . . . ಎಯ್ದಿದಂ ಸಕಲಕಾಕಾನೀಕಲಕ್ಷ್ಮೀಶ್ವರಂ (ಶಂಕಕಂ. ೨೩೯-೦೨) ; ಆ ಮಹಾವಜ್ರಾಯುತ ಪ್ರೋದ್ದಾಮದಾಯಸಭೀಮತನು ನಿರ್ಮಾಮವೆನೆ ನುಗ್ಗಾಗಿ ಬಿದ್ದುದು ನೃಪನ ತಕ್ಕೆಯಲಿ (ಕುವ್ಯಾಗ. ೦೦-೩೯). ೨. ಶ್ರೇಷ್ಠವಾದ ; ಹಿರಿದಾದ ; ಅತಿಶಯವಾದ : ಸಕಲಕ್ಷತ್ರಮಣಿ ಪೂಜ್ಯನಮಳಚರಿತ್ರಂ ಪ್ರೋದ್ದಾಮಸೋಮವಂಶಲಲಾಮಂ (ಶಂಕಕಾ. ೦-೬೦). (ನಾ). ೩. ಶ್ರೇಷ್ಠವಾದುದು : ರಮಣೀಯಂ . . . ವಿಲಸತ್ಕಾವ್ಯಂ ಮಹೀಚಕ್ರದೊಳ್ ಸುಮನೋಮಾಲ್ಯದ ವೋಲ್ ಸುನಾಯಕ ಗುಣಪ್ರೋದ್ದಾಮಮಾಗಿರ್ದಡುತ್ತಮಪುಣ್ಯಾಧಿಕಕಂಠಭೂಷಣಮದಕ್ಕುಂ (ಚಾರಪು. ೦-೪೦). [ಸಂ.]

**ಪ್ರೋದ್ಧೂತ** (ಗು). ಮೇಲೇಳುತ್ತಿರುವ : ಇಂತಿದೆ ತೋಱಿತ್ತು ಮದಾಂಧಸ್ಸೈರಿಭಖುರಪ್ರೋದ್ಧೂತರೇಣುವ್ರಜಂ[ಕಾಕಾಂ. ಮದಾಂಧಸೈರಿಭಕರಪ್ರೋದ್ಯತ್ಕರೇಣುಬ್ರಜಂ] (ಕಾದಂಪೂ. ೦೫೩). [ಸಂ.]

**ಪ್ರೋದ್ಭವ** (ಗು). ೧. ಹುಟ್ಟಿದ ; ಜನ್ಮ ತಾಳಿದ. (ನಾ). ೨. ಹುಟ್ಟಿದವನು ; ಜನ್ಮ ತಾಳಿದವನು : 'ಘಟಪ್ರೋದ್ಭವ' ಪರಾ. [ಸಂ.]

**ಪ್ರೋದ್ಭಾಸಿ** (ಗು). ೧. ವಿಶೇಷವಾಗಿ ಹೊಳೆಯುವ,—ಪ್ರಕಾಶಿಸುವ : ಗೋಪಣನ್ದಿದಿಗಿಭಪ್ರೋದ್ಭಾಸಿಗನ್ಧದ್ವಿಪಂ (ಎಕ. II, ೬೯-೯೭ ; ಸು. 1100) ; ರತ್ನಪ್ರಭಾಪೋಜ್ಜೃಂಭತ್ಪ್ರೋದ್ಭಾಸಿವೀಚೀನಿಚಯಘನಘನಾರಾವರೌದ್ರಂ ಸಮುದ್ರಂ (ಕಾವ್ಯಸಾ. ೬೩). ೨. ವಿಶೇಷವಾಗಿ ಹೊಳೆಯುವಂಥದು : ರತ್ನಮಯಪ್ರಸಿದ್ಧಶಿಖರಾಲಂಕಾರ ಸಿದ್ಧಾಲಯಾಸ್ಪದಮಂ ಖೇಚರ ಚಕ್ರವರ್ತಿವಿಭವಪ್ರೋದ್ಭಾಸಿಯಂ ಮೆಚ್ಚಿ ನೋಡಿದನಾ ಭೂಚರಚಕ್ರವರ್ತಿ (ಆಜಿಪು. ೯-೨೦). [ಸಂ.]

**ಪ್ರೋದ್ಭೂತ** (ಗು). ೧. ಹುಟ್ಟಿದ ; ಆವಿರ್ಭವಿಸಿದ : ಎನ್ನೀ ಕಾವ್ಯಕ್ಕೆ . . . ಭೃಂಗಾವಳೀಸಂಪನ್ನಪ್ರೋದ್ಭೂತಝಂಕಾರಿತರವಮುದಿತಾನಂದವೇಶಂ ಗಣೇಶಂ (ಗಂಕ. ೦-೫). (ನಾ). ೨. ಹುಟ್ಟಿದುದು ; ಮೂಡಿದುದು : ಮಾತೇನುದ್ಭೂತದೋಷಪ್ರಕರರಹಿತನೆನಿಪನಾಪ್ತಂ ತದಾಪ್ತಾನನಪ್ರೋದ್ಭೂತಂ (ಸುಕುಮಾ. ೫-೩೯). [ಸಂ.]

**ಪ್ರೋದ್ಭೇದ** (ಗು). ೧. ಒಡೆದ ; ಮುರಿದ. ೨. ಹೊರಹೊಮ್ಮಿದ ; ಹೊರಬಂದ : ಪುಳಕಪ್ರೋದ್ಭೇದಘರ್ಮೋದಕವಿಸರವಮನೊತ್ತಂಬದಿಂ ತಾಗೆಯುಂ (ಆದಿಪು. ೪-೫೦). (ನಾ). ೨. ಮುರಿಯುವಿಕೆ ; ಮುರಿತ : ಮಾದ್ಯದ್ಗಜಗಂಡಭಿತ್ತಿಕಷಣಪ್ರೋದ್ಭೇದದಿಂ ಸಾರ್ದು ಬಂದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂಬೊನ್ನ ಟಂಕಂಗಳೊಳ್ (ಶಂಕಕಾ. ೪-೨೨). [ಸಂ.]

**ಪ್ರೋದ್ವೃತ್ತ** (ನಾ). ಅತಿಶಯವಾಗಿ ಸೊಕ್ಕಿದವನು ; ಉನ್ಮತ್ತನಾದವನು : ಅಣ್ಣ ತಾಗಿದರಂ ಸೀಳ್ದು ಕೆಲಂಬರಂ ಕೆಲಬರಂ ಪ್ರೋದ್ವೃತ್ತರಂ ದೈತ್ಯರಂ ತುದಿಗಾಲಂ ಪಿಡಿದೆತ್ತಿ ಪೊಯ್ದು ನೆಲದೊಳ್ ಕೊಂದಂ ಮುರುನ್ನಂದನಂ (ಶಂಕಾಪೂ. ೦೦-೦೪೩). [ಸಂ.]

**ಪ್ರೋನೋಟು** (ನಾ). ಸಾಲಗಾರನು ಸಾಲಿಗನಿಗೆ ಬರೆದು ಕೊಟ್ಟ ಕರಾರುಪತ್ರ; ಪ್ರಾಮಿಸರಿನೋಟು : ಪ್ರೋನೋಟಿನ ವಾಯಿದೆ ಮುಗಿಯುತ್ತ ಬಂತಲ್ಲ ಎಂಬ ವಿಚಾರವೂ ಹೊಳೆಯುತ್ತದೆ (ಸ್ವಸ್ಮಹೊ. ೦೯೭) ; ನೀವು . . . ಪ್ರೋನೋಟು ಬರಕೊಟ್ಟು ನಮ್ಮಿಂದ ಪಡಕೊಂಡ ಹಣ . . . ಕೊಟ್ಟಿಲ್ಲ (ಕುರುಕಾ. ೩).

[P ಇದು 'Promissory note' ಎಂಬುದರ ಸಂಕ್ಷಿಪ್ತರೂಪ]

**ಪ್ರೋನ್ನತ** (ಗು). ಬಹಳ ಎತ್ತರವಾದ,—ಉನ್ನತವಾದ : ತನ್ನನೊಲ್ದಾ ತ್ರಿಲೋಕಶ್ರೀಯೆಲ್ಲಂ ಪೊರ್ದಿದಂತೇನೊಸೆದನೊ ಮನದೊಳ್ ಸೂಕ್ತಿಕರ್ಣಾವತಂಸಂ ಶ್ರೇಯಾಂಸಂ ಪ್ರೋನ್ನತಾಂಸಂ (ಆದಿಪು. ೯-೦೩೨) ; ತತ್ಪ್ರಭಾಮಧ್ಯದೊಳ್ ತದ್ವಿದರೆಲ್ಲಂ ಕೀರ್ತಿಸುತ್ತಿರ್ಪುದುಮದನೆ ಮನಂಗೊಂಡು ಚಿತ್ತೋದಿತಾನಂದದಿನಿರ್ದಂ ಪ್ರೋನ್ನತಾಂಸಂ (ಸುಕುಮಾ. ೨-೬೩). [ಸಂ.]

**ಪ್ರೋನ್ನತಿ** (ನಾ). ೧. ಬಹಳ ಎತ್ತರ. ೨. ಹಿರಿಮೆ ; ಶ್ರೇಷ್ಠತೆ : ಇನ್ನಱಿಯಲ್ಕೆ ಬರ್ಪುದೆಲೆ ಧೂರ್ತಕಿರಾತ ಭವತ್ಪರಾಕ್ರಮಪ್ರೋ[ಪಾಕಾಂ. ದು]ನ್ನತಿಯೆಳ್ತರಂ (ಕಬಕಂ. ೪-೦೦೭). [ಸಂ.]

**ಪ್ರೋನ್ಮತ್ತ** (ಗು). ಬಹಳವಾಗಿ ಕೊಬ್ಬಿದ ; ಸೊಕ್ಕಿದ : ಪ್ರೋನ್ಮತ್ತವೈರೀಭಕೇಸರಿಸಿಂಗಂ ಪತಿಯೆಂದೊಡುನ್ನತಿಯನಿನ್ನೇವಣ್ಣಿಪೆಂ. ದುರ್ಗನಾ (ಶಂಕಕಂ. ೦೨-೩) ; ವಿಚಾರಿಪೊಡೆನ್ನವೋಲಿತರನೃಪನಿಂತಾವೊಂ ಪ್ರೋನ್ಮತ್ತವೃತ್ತಿಯಿನಿರ್ದಮಂ (ಶಂಪ್ರಕು. ೨-೪೦). [ಸಂ.]

**ಪ್ರೋನ್ಮಿಳಿತ** (ಗು). ಕೂಡಿರುವ ; ಸೇರಿರುವ : ಪ್ರಬಲಜಲಚರಾನೀಕಗಂಭೀರಭೀಮೋಜ್ಜ್ವಳರಾವಪ್ರೋದ್ಭೂತಪ್ರೋನ್ಮಿಳಿತ ಘುಳುಘುಳುಧ್ವಾನಮಂಭೋನಿಧಾನಂ (ಗಂಕ. ೦-೪೭). [ಸಂ. ಪ್ರೋನ್ಮಿಲಿತ]

**ಪ್ರೋಷಧ** (ನಾ). [ಜೈನ] ಉಪವಾಸದ ಹಿಂದಿನ ದಿನ ಮತ್ತು ಮರುದಿನ ಒಪ್ಪತ್ತು ಮಾತ್ರ ಊಟ ಮಾಡುವ ಒಂದು ಬಗೆಯ ಉಪವಾಸವ್ರತ ; P ಉಪವಾಸವು ಸಾಧ್ಯವಾಗದೆ ಹೋದರೆ ಕೇವಲ ನೀರನ್ನು ಕುಡಿದು ಇರಬಹುದು. ಅದಕ್ಕೂ ಅಸಮರ್ಥರಾದವರು ಒಂದು ಹೊತ್ತು ಶುದ್ಧ ಸಾತ್ವಿಕ ಹಗುರು ಅನ್ನವನ್ನು ಸ್ವೀಕರಿಸಬಹುದು. ಅಷ್ಟಮಿ, ಚತುರ್ದಶಿ ದಿನಗಳಲ್ಲಿ ಉಪವಾಸವನ್ನು ಮಾಡಬೇಕೆನ್ನುವವರು ಮುಂಚಿನ ದಿನ ಮಧ್ಯಾಹ್ನ ಊಟ ಮಾಡಿದೊಡನೆಯೇ ಮರುದಿವಸ ಉಪವಾಸದ ಪ್ರತಿಜ್ಞೆಯನ್ನು ಮಾಡಬೇಕು. ಆಗಿನಿಂದಲೇ ತನ್ನ ಮನೆತನದ ಎಲ್ಲ ಕೆಲಸಗಳನ್ನು ಬಿಟ್ಟು ಏಕಾಂತಸ್ಥಳಕ್ಕೆ ಹೋಗಿ ಧ್ಯಾನ ಸ್ವಾಧ್ಯಾಯಗಳನ್ನು ಮಾಡುವುದರಲ್ಲಿ ತೊಡಗಬೇಕು. ಈ ರೀತಿ ಇರುಳು ಹಾಗೂ ಅಷ್ಟಮಿ, ಚತುರ್ದಶಿಗಳ ಪೂರ್ಣ ಹಗಲು ಮತ್ತು ಇರುಳುಗಳನ್ನು ಕಳೆಯಬೇಕು. ಆಮೇಲೆ ಮರುದಿನ ಮಧ್ಯಾಹ್ನದಲ್ಲಿ ಅತಿಥಿಗೆ ಮೊದಲು ಊಟ ಹಾಕಿ ತಾನು ಅನಾಸಕ್ತವೃತ್ತಿಯಿಂದ ಊಟ ಮುಗಿಸಬೇಕು. ಈ ಉಪವಾಸವು ಕೇವಲ ಹೊಟ್ಟೆಗಾಗಿ ಮಾತ್ರ

ವಲ್ಲ. ಆ ಅವಧಿಯಲ್ಲಿ ಪಂಚೇಂದ್ರಿಯಂಗಳೂ ಉಪವಾಸದಲ್ಲಿರಬೇಕು. ಇಂದ್ರಿಯಂಗಳಂ ಸ್ವಾದಿಷ್ಟಭೋಜನೆ, ಸುಂದರಸ್ತ್ರೀ, ಸುಗಂಧದ್ರವ್ಯ, ಇಂಪಾದ ಸಂಗೀತದ ಕಲ್ಪನೆಯಲ್ಲಿ ಸಹ ಇರಬಾರದು : ಸಂಯಮಿಗಳ್ಗುತ್ಕೃಷ್ಟದಿಂ ದಾನವುನತಿಮುದದಾರ್ಶೀವುದುಂ ಪ್ರೋಷಧಪ್ರಕ್ರಮದಿಂ ಪರ್ವಂಗಳಂ ನೋಂಪುದುಂ . . . ಶಿಕ್ಷಾಬ್ರತಂಗಳ್ (ಸುಕುಮಾ. ೬-೧೦). [ಸಂ.]

**ಪ್ರೋಷಧೋಪವಾಸ** (ನಾ). = ಪ್ರೋಷಧ : ನೋಡದೆ ಪ್ರತಿಲೇಪನೆಯಂ ಮಾಡದೆ ಮಡಗಿಡುವ ಕೊಳ್ವ ಪಾಸುವುದುಂ ಕೊಂಡಾಡದುದುಂ ನೆನೆಯದುದುಂ ಕೇಡಿನಿತಂ ಪ್ರೋಷಧೋಪವಾಸವ್ರತದೊಳ್ (ಸುಕುಮಾ. ೬-೨೩) ; ಪ್ರೋಷಧೋಪವಾಸಕ್ಕೆ ದತಿಚಾರವಿದೋಷವನುಳಿದನವರತ ಲೇಸಾಗಿ ನಡೆವರು ಷೋಡಶಸ್ವರ್ಗನಿವಾಸಿಗಳಹರತಿಮುದದಿಂ (ದ್ವಾದಶಾ. ೧೧-೩೨) ; ಪ್ರತಿಯೊಂದು ಅಷ್ಟಮಿ, ಚತುರ್ದಶಿತಿಥಿಗಳಲ್ಲಿ ಮನ, ವಚನ, ಕಾಯಗಳ ಸ್ಥಿರತ್ವವನ್ನು ಸಾಧಿಸುವುದಕ್ಕಾಗಿ ನಾಲ್ಕೂ ಪ್ರಕಾರದ ಆಹಾರವನ್ನು ತ್ಯಾಗಮಾಡಿ ಉಪವಾಸವನ್ನು ಆಚರಿಸುವುದು (ಜೈನಪ. ೪೬೯). [ಸಂ.]

**ಪ್ರೋಷಧೋಪವಾಸಿ** (ನಾ). [ಜೈನ] ಪ್ರೋಷಧೋಪವಾಸವನ್ನು ಮಾಡುತ್ತಿರುವವನು ; ಪ್ರೋಷಧವ್ರತವನ್ನು ಕೈಗೊಂಡಿರುವವನು: ಪರಮನಿರಂಜನ ನಿಜಪರಮಾತ್ಮನನಱಿದು ಲೇಸಾಗಿ ಧ್ಯಾನಿಸುತ ತಱಿಸಂದಿಂತು ನೆಗಳುತಿಪ್ಪಾತನು ಉಱುವ ಪ್ರೋಷಧೋಪವಾಸಿ (ದ್ವಾದಶಾ. ೦೧-೬೩೩) ; ಪ್ರೋಷಧೋಪವಾಸಿ :— ಅಷ್ಟಮಿ, ಚತುರ್ದಶಿ ತಿಥಿಗಳಲ್ಲಿ ಮನ, ವಚನ, ಕಾಯಗಳ ಸ್ಥಿರತ್ವವನ್ನು ಸಾಧಿಸುವುದಕ್ಕಾಗಿ ಉಪವಾಸವನ್ನು ಮಾಡುವವನು (ಭಾರದ. ೦೬೪). [ಸಂ. ಪ್ರೋಷಧೋಪವಾಸಿನ್]

**ಪ್ರೋಷಿತ** (ಗು). ಪ್ರಯಾಣದಲ್ಲಿರುವ ; ಪ್ರವಾಸದಲ್ಲಿರುವ. [ಸಂ.]

**ಪ್ರೋಷಿತಭರ್ತೃಕೆ** (ನಾ). [ಕಾವ್ಯಮೀ] ಎಂಟು ಜನ ನಾಯಿಕೆಯರಲ್ಲಿ ಒಬ್ಬಳು ; ವಿದೇಶಕ್ಕೆ ಹೋಗಿರುವವನ ಪತ್ನಿ : ಪ್ರೋಷಿತಭರ್ತೃಕೆ ನಾಯಿಕೆಯಾಗಿರುವಾಗ ಪ್ರವಾಸವಿಪ್ರಲಂಭ (ಶೃಪ್ರಾಲೋ. ೬೩). [ಸಂ. ಪ್ರೋಷಿತಭರ್ತೃಕಾ]

**ಪ್ರೋಷ್ಠ** (ನಾ). ೧. ಎತ್ತು ; ವೃಷಭ. ೨. ಕಾಲುಗಳುಳ್ಳ ಮಣೆ. ೩. ಒಂದು ಬಗೆಯ ಮೀನು. ೪. [ಕಾಮಶಾ] ರತಿಬಂಧಗಳಲ್ಲಿ ಒಂದು ಬಗೆ :. ಮೆಲ್ಲನೆ ಮಲಗಿರ್ದವಳು ತನ್ನೆರಡು ಪಾದಂಗಳಂ ಮೇಲಕ್ಕೆಯತ್ತಿ ತೋರಣಕಂಭದಾಕಾರಂಗೆಯ್ದು ತನ್ನ ಕಾಲ್ಗಳಂ ತಿರುವುತ ಕೂಡಿದರೆ ಪ್ರೋಷ್ಠ[ಕಾಶಾಂ. ಷ್ಟ]ಮೆಂಬ ಕರಣಂ (ಕಾಮಶಾ. ೨೩೩). [ಸಂ.]

**ಪ್ರೋಷ್ಠಪದ** (ನಾ). ೧. [ಜ್ಯೋತಿ] ಪೂರ್ವಾಭಾದ್ರಾ, ಉತ್ತರಾಭಾದ್ರಾ ಎಂಬ ಎರಡು ನಕ್ಷತ್ರಗಳು. ೨. ಚಾಂದ್ರಮಾನದಲ್ಲಿನ ಮೂರು ವಂತ್ತು ನಾಲ್ಕನೆಯ ನಕ್ಷತ್ರಗಳಿಗೆ ಸಂಬಂಧಿಸಿದ ತಿಂಗಳು ; ಭಾದ್ರಪದಮಾಸ. [ಸಂ.]

**ಪ್ರೋಷ್ಠಿ** (ನಾ). ಹೆಣ್ಣುಮೀನು : "ಪ್ರೋಷ್ಠಿಯೆನೆ ಶಫರಿಯೆಂದೆನೆ ಹೆಣ್ಣುಮೀನಕ್ಕು" (ಮಂಗರಾ. ೦೨೦-೬). [ಸಂ. ಪ್ರೋಷ್ಠೀ]

**ಪ್ರೋಹ** (ನಾ). ಆನೆಯ ಕಾಲು : ಸುಸಂಚಿತಪ್ರೋಹಫಳೀಹಸ್ತಗಾತ್ರನುಂ ಪರಿಪೂರ್ಣಶ್ಲಿಷ್ಟಪಾರ್ಷ್ಣಿಯುಂ . . . ಅಪ್ಪ ವಿಜಯಪರ್ವತಗಜೇಂದ್ರಂ ಬಂದು (ಆದಿಪು. ೦೨-೩೬ ವ). [ಸಂ.]

**ಪ್ರೌಢ** (ಗು). ೧. ಚೆನ್ನಾಗಿ ಬೆಳೆದ; ವೃದ್ಧಿಯಾದ : ಪ್ರೌಢವಿಲಾಸಿನೀಮನಸಿಜಂ. . . ಶ್ರೀಧರಂ (ಜಾತಿತಿ. ೦-೩). ೨. ಗಾಢವಾದ; ಸಾಂದ್ರ : ೩. ವೇಗವುಳ್ಳ; ರಭಸವಾದ. ೪. ಪಾಂಡಿತ್ಯದಿಂದ ಕೂಡಿದ; ಬುದ್ಧಿವಂತಿಕೆಯ. ೫. ಮದುವೆಯಾದ; ವಿವಾಹ ಮಾಡಿಕೊಂಡ. (ನಾ). ೬. ಪಾಂಡಿತ್ಯದಿಂದ ಕೂಡಿರುವುದು; ವಿದ್ವತ್ಪೂರ್ಣವಾಗಿರುವುದು : ಶಾಸನಗಳ ಭಾಷೆ, ವ್ಯಾಕರಣ, ಛಂದಸ್ಸು ಇವು ಪ್ರೌಢವಾಗಿವೆ (ಶಾಹಿಸ. ೦೩). ೭. ವಯಸ್ಸಿಗೆ ಬಂದವನು ; ಪ್ರಾಯಸ್ಥ : ನೀನು ಇನ್ನೂ ಸಣ್ಣವನು. ಸ್ವತಂತ್ರನಾಗಿ ನಡೆಯತಕ್ಕಷ್ಟು ಪ್ರೌಢನಾಗಿಲ್ಲ (ಮುಂಬಯಿ. ೪-೩೮). ೮. ಪಂಡಿತ; ಪ್ರಗಲ್ಭ : ನಿಮ್ಮಯ ಸಭೆಯೊಳಿಪ್ಪ ಪ್ರೌಢರ ವಿಚಾರಿಸೆ ತಾವೆ ಪೇಳ್ವರು (ಪ್ರೌಢರಾ. ೨-೨೮); ಒರ್ವ ವಿಟನಿದಿರ್ವಂದು ಮತ್ತೇಭಗಾಮಿನಿ ಭೃಂಗಾಲಕುಂತಳೆ ಪನ್ನಗಾಭಸುಂದರವೇಣಿ ಬೆದಱಬೇಡೆನುತೆ ತಕ್ಕೈಸಿದನದೇಂ ಪ್ರೌಢನೋ (ಕೃಮಿಲಾ. ೨೬-೮). [ಸಂ.]

**ಪ್ರೌಢತೆ** (ನಾ). ಜಾಣ್ಮೆ; ನೈಪುಣ್ಯ; ಪ್ರಾವೀಣ್ಯ : ದುರ್ಧರಸಮರಜಯಪ್ರೌಢತಾರೂಢದೋಶ್ಶೌರ್ಯದೆ ಶೂರಾರಾತಿಸಂದೋಹಮನೆಱಗಿಸಿ (ಚಂದ್ರಪು. ೫-೦೩೯) ; ತುಳುಂಕಿದರಂಬುವಂ ನಿಜಪ್ರೌಢತೆಯಿಂದಮೊಲ್ದು ಮಿಸಟಂಬರಿದಾಡಿದರ್. . .ಲಲಿತಾಂಗಿಯರ್ (ಹಮ್ಮಿಕ. ೪-೨೬). [ಸಂ. ಪ್ರೌಢತಾ]

**ಪ್ರೌಢವತ್ಸೆ** (ನಾ). ಅನೇಕ ಕರಂಗಳನ್ನು ಹಾಕಿರುವ ಹಸು : "ಬಷ್ಮಯಣೀ, ಪ್ರೌಢವತ್ಸಾ—ಈ ೨ ಕಡೆಗಂದಿ" (ಹಲಾಯು. ೪೩-೦೦೩). [ಸಂ. ಪ್ರೌಢವತ್ಸಾ]

**ಪ್ರೌಢವಯಸ್ಕ** (ನಾ). ವಯಸ್ಸಿಗೆ ಬಂದವನು : ಪುಲಿಕೇಶಿ ಸಾಯುವಾಗ ಅಂದರೆ ಸುಮಾರು ೬೪೨ರಲ್ಲಿ ವಿಕ್ರಮಾದಿತ್ಯನು ಪ್ರೌಢವಯಸ್ಕನಾಗಿರಬೇಕು (ಕರ್ನಾಕ. ೬೬). [ಸಂ.]

**ಪ್ರೌಢವಿದ್ಯಾಭ್ಯಾಸ** (ನಾ). ೧. ಹೆಚ್ಚಿನ ತಿಳಿವಳಿಕೆಯನ್ನು ನೀಡುವ ಶಿಕ್ಷಣ : ಇದ್ದ ಊರಿನಲ್ಲಿ ಪ್ರೌಢಶಾಲೆಯಿಲ್ಲವಾದ್ದರಿಂದ ಮಗನನ್ನು ಪ್ರೌಢವಿದ್ಯಾಭ್ಯಾಸಕ್ಕಾಗಿ ಬೇರೆ ಊರಿಗೆ ಕಳುಹಿಸಬೇಕಾಯಿತು (ರೂಢಿ). ೨. (ವಿಶ್ವವಿದ್ಯಾನಿಲಯಂದ ಮಟ್ಟದ) ಉನ್ನತಶಿಕ್ಷಣ : ಎಷ್ಟೇ ಕಷ್ಟವಾದರೂ ಸರಿ, ಮಗನಿಗೆ ಪ್ರೌಢವಿದ್ಯಾಭ್ಯಾಸ ಮಾಡಿಸಬೇಕೆಂಬ ಅವನ ಹಟ ಸಾರ್ಥಕವಾಯಿತು (ರೂಢಿ). [ಸಂ.]

**ಪ್ರೌಢವಿವಾಹ** (ನಾ). ವಯಸ್ಸಿಗೆ ಬಂದ ವಧೂವರರ ವಿವಾಹ : ಪ್ರೌಢವಿವಾಹ, ವಿಧವಾವಿವಾಹ . . . ವಿಚಾರವಂತರನ್ನು ಆಕರ್ಷಿಸಿತು (ಧರ್ಮಸಾ. ೬೩). 'ಬಾಲ್ಯವಿವಾಹ' ಪರಾ. [ಸಂ.]

**ಪ್ರೌಢಶಾಲೆ** (ನಾ). ಹೆಚ್ಚಿನ ವಿದ್ಯಾಭ್ಯಾಸವನ್ನು ನೀಡುವ ಶಾಲೆ ; ಹೈಸ್ಕೂಲು : ತೀರ್ಥಹಳ್ಳಿಗೆ ಮುಂದೆ ತಂದೆ ಕರೆತಂದರು ಪ್ರೌಢಶಾಲೆಗೆ ಸೇರಿಸಿದರು (ಇಂಕಾಶ. ೦೪_೩೯) ; ಮಾಧ್ಯಮಿಕಶಾಲೆ ಸೆಕೆಂಡರೀಶಿಕ್ಷಣದ ಒಂದು ಅಂಗ ಮಾತ್ರವಾದ್ದರಿಂದ ಅದು ಪ್ರೌಢಶಾಲೆಯ ಕಡೆ ಕೈ ತೋರಿಸಲೇಬೇಕು (ಶಿಕ್ಷದ. ೦೯೦). 'ಪ್ರಾಥಮಿಕಶಾಲೆ' ಪರಾ. [ಸಂ. ಪ್ರೌಢಶಾಲಾ]

**ಪ್ರೌಢಶಿಕ್ಷಣ** (ನಾ). ೧. = ಪ್ರೌಢವಿದ್ಯಾಭ್ಯಾಸ ೧: ಶಿಕ್ಷಣ ವ್ಯವಸ್ಥೆಯನ್ನು ಕೆಳಗಿನ ನಕ್ಷೆಯ ಮೂಲಕ ವಿವರಿಸಬಹುದು: ಪ್ರಾಥಮಿಕ ಶಿಕ್ಷಣ→ಪ್ರೌಢಶಿಕ್ಷಣ → ವಿಶ್ವವಿದ್ಯಾನಿಲಯದ ಶಿಕ್ಷಣ (ಶಿಕ್ಷದ. ೦೧೨). ೨. = ಪ್ರೌಢವಿದ್ಯಾಭ್ಯಾಸ ೨: ಇದ್ದ ಊರಿನಲ್ಲಿಯೇ ಕಾಲೇಜು ಬಂದುದರಿಂದ ಅವನ ಮಗನ ಪ್ರೌಢಶಿಕ್ಷಣಕ್ಕೆ ಸುಲಭವಾಯಿತು (ರೂಢಿ). [ಸಂ.]

**ಪ್ರೌಢಿ** (ನಾ). ೧. ಬಲಿಯಂವಿಕೆ; ಪಕ್ವವಾಗುವಿಕೆ. ೨. ಚತುರತೆ; ಜಾಣ್ಮೆ; ನಿಪುಣತೆ : "ಪ್ರೌಢಿಃ — ಜಾಣತನಂ" (ನಾಕಕ್ಕ. ೦೬೦); ಆಚಾರ್ಯರ್ಕೆಮ್ಮಂ ನಿಯಮಿಸುಗೆ ನಿಜಾನುಗ್ರಹಪ್ರೌಢಿಯಿಂದಂ (ಪುಷ್ಪಶ್ರೀ. ೦-೩); ಪ್ರೌಢಿಯಲ್ಲಿದು ಕೇಳಿ ಬಲ್ಲೆವು ರೂಢಿಯಲಿ ಸಮಬಲರು ಭೀಮಸಗಾಢದಲಿ ಬಲಭದ್ರ ಕೀಚಕ ಶಲ್ಯರೆಂಬುವರು (ಕುಮಾವ್ಯಾವಿ. ೪-೮). ೩. ಸೊಕ್ಕು; ಗರ್ವ. ೪. ಧೈರ್ಯ; ಎದೆಗಾರಿಕೆ. ೫. ಸಾಹಸ; ಶೌರ್ಯ. ೬. [ಕಾವ್ಯಮೀ] ಅರ್ಥಗುಣಗಳಲ್ಲಿ ಒಂದು ; ದೀರ್ಘ

ಸಮಾಸವನ್ನು ರಚಿಸುವ ಅಥವಾ ಸಮಾಸದ ಅರ್ಥವನ್ನು ಸರಳ ವಾದ ಮತ್ತು ವಿರಳ ಶಬ್ದಗಳಲ್ಲಿ ನಿರೂಪಿಸುವ ಬರಹದ ಗುಣ : ಅರ್ಥಗುಣಗಳಲ್ಲಿ ಓಜಸ್ಸು (ಅಥವಾ ಪ್ರೌಢಿಯು) ಮೊದಲು ನಾಲ್ಕು ಭೇದಗಳು ಕೇವಲ ವೈಚಿತ್ರ್ಯ ಮಾತ್ರ (ಕೃಣಾ. ೨೩೪). [ಸಂ.]

**ಪ್ರೌಢಿಮೆ** (ನಾ). ೧. ಜಾಣ್ಮೆ; ಚಾತುರ್ಯ; ನೈಪುಣ್ಯ : ಯಾವನೋ ನಿಪುಣನಾದ ಕಲಾವಿದನು ವರ್ಷಗಟ್ಟಲೆ ದುಡಿದು ಅದರಲ್ಲಿ ತನ್ನ ಕಲಾ ಪ್ರೌಢಿಮೆಯನ್ನು ಭಟ್ಟಿ ಇಳಿಸಿದ್ದನು (ಕಂಠಸು. ೧). ೨. ಅತಿಶಯ ವಾದ ಕೌಶಲ್ಯ : ಅದು. . . ಗ್ರೀಕರ ರುದ್ರನಾಟಕದ ಪ್ರೌಢಿಮೆ ಯನ್ನೂ ಗಾಂಭೀರ್ಯವನ್ನೂ ಗಳಿಸಿತು (ಕಂಠಾ. ೬೬). [ಪ್ರೌಢಿ+—ಮೆ]

**ಪ್ರೌಢಿವೆಱು** (ಕ್ರಿ). ನೈಪುಣ್ಯವನ್ನು ಹೊಂದು ; ಪ್ರೌಢಿಮೆಯನ್ನು ಪಡೆ : ಸಮಗ್ರತರಶಿಷ್ಯಾನುಗ್ರಹ ಪ್ರೌಢಿವೆತ್ತನವದ್ಯರ್ ದಯೆಗೆಯ್ದು ರಕ್ಕೆ ದಯೆಯಿಂ ಭವ್ಯಾಳಿಗೆ (ಕಂಠಾಸೂ. ೧-೩). [ಪ್ರೌಢಿ + ಪೆಱು]

**ಪ್ರೌಢೆ** (ನಾ). ೧. ತಾರುಣ್ಯಾವಸ್ಥೆಯನ್ನು ಮೀರಿದ ಹೆಂಗಸು; ಮಧ್ಯಮ ವಯಸ್ಸಿನವಳು : ಐದುವರ್ಷಪರ್ಯಂತರ ಕೂಟವಾಗಿ ಮೂವತ್ತುವರ್ಷ ಪರ್ಯಂತ ಪ್ರೌಢೆ ಎನಿಸಿಕೊಂಬಳು (ಸಕಕ್ಕ. ೬೦). ೨. ತಿಳಿದವಳು; ಪ್ರಾಜ್ಞೆ : ಅತಿಪ್ರೌಢೆಯೆನಿಸಿದ ಕಳದಿ (ಜಗಪ್ರ. ೨-೬೪ ಪ); ನಾನು ನಿನಗಿಂತ ಚಿಕ್ಕವಳು. ಹುಡುಗಿಯೂ ಅಲ್ಲ, ಪ್ರೌಢೆ ಮೊದಲೇ ಅಲ್ಲ (ಕಾಂತಲಾ. ೬೬). ೩. [ಕಾವ್ಯವಿದ್ಯಾ] ಬಾಲೆ, ಮುಗ್ಧೆ, ವಿದಗ್ಧೆ ಮತ್ತು ಪ್ರಗಲ್ಭೆಯರೆಂಬ ನಾಯಿಕೆಯರ ನಾಲ್ಕು ಭೇದಗಳಲ್ಲಿ ಮೂರನೆಯ ವರ್ಗಕ್ಕೆ ಸೇರಿದವಳು ; ವಿದಗ್ಧೆ : ವಯಸ್ಸುವಿಭೇದದಿಂ ಬಾಲೆ ಯೌವನೆ ಪ್ರೌಢೆ ಲೋಲೆಯೆಂದಿಂತು ಧರಿತ್ರಿಯೊಳಪ್ಪನಾರ್ಲ್ಪಕಾಂತೆಯರ್ (ಜುದ. ೬-೧). [ಸಂ. ಪ್ರೌಢಾ]

**ಪ್ರೌಢೋಕ್ತಿ** (ನಾ). =ಪ್ರೌಢಿ ೬ : ವರಕಾರ್ಯೋತ್ಕರ್ಷಕ್ಕೆ ತಾಂ ಕಾರಣ ವಾಗದಿರಲೆಯುರೆ ಕಾರಣವಾಗೆ ಪ್ರೌಢೋಕ್ತಿ (ಕುಆಂ. ೬೨೧); ವಿಷಯವು ಇಲ್ಲಿ ಕವಿಯ ಪ್ರೌಢೋಕ್ತಿಯಿಂದ ಅರ್ಥಾಂತರಕ್ಕೆ ವ್ಯಂಜಕವಾಗಿದೆ (ಧ್ವನ್ಯಾಲೋ. ೧೨೨). [ಸಂ.]

**ಪ್ಲಕ್ಷ** (ನಾ). ೧. ಒಂದು ಬಗೆಯ ಮರ : ಬಸರಿ : "ಎತ್ತಗುಂದಿ ಪ್ಲಕ್ಷ ಮುಕ್ಕುಂ" (ಸುಂಗಣಾ. ೩೬-೧೯). ೨. ಅತ್ತಿಮರ. ೩. ಆಲದ ಮರ : ಬರ್ಪಾ ಪಥದೊಳೆಸೆದುದುದ್ದಂಡಶಾಖಾಕದಂಬೋಲ್ಲಸತ್ಪರ್ಣೋದೀರ್ಣ ಶುಂಭತ್ಫಳಕುಳವಿಳಸಚ್ಛಾಯಕಂ ಪ್ಲಕ್ಷವೃಕ್ಷಂ (ಕೃಣಾ. ೨೦-೦೬). ೪. ನೆರಳು ; ಛಾಯೆ : "ಪ್ಲಕ್ಷೆ—ಛಾಯಾಯಾಂ, ನೆಳಲೊಳ್" (ಕಾಶಕ್ಕ. ೦೦೬). ೫. ಭೂಮಿಯ ಸಪ್ತದ್ವೀಪಗಳಲ್ಲಿ ಒಂದರ ಹೆಸರು. [ಸಂ.]

**ಪ್ಲವ** (ಗು). ೧. ತೇಲುವ. ೨. ಹಾರುವ ; ನೆಗೆಯುವ. ೩. ಉತ್ತಮವಾದ ; ಶ್ರೇಷ್ಠವಾದ. (ನಾ). ೪. ತೇಲುವಿಕೆ. ೫. ಹಾರುವಿಕೆ ; ನೆಗೆತ. ೬. ಪ್ರವಾಹ ; ಹರಿವು : ನಿರ್ಝರಪೂರ ವಾಗಿಯುಮುತ್ತಿಸ್ನಿಗ್ಧಾಶ್ರುಧಾರಾಜಲಪ್ಲವಮುಂ ಬಾರಿಸಲೆಂತುಮಾಱದು ವಲಂ ಕಾಲೋರಗಗ್ರಸ್ತನಂ (ಅಭಿಪು. ೩-೬೪) ; ಅವಳಸಿಯ ಬಾಸೆಯೆಂಬೀ ನವಯೌವನವನದ ಲತೆಯ ಲಾವಣ್ಯಜಳಪ್ಲವಮನೊಳಕೊಳ್ಳುದೆಂದಾಳ ವಾಳಮನೆ ನಿಮ್ನನಾಭಿಮಂಡಲಮೆಸೆಗುಂ (ಜಂಪ್ರಪು. ೩-೬೨) ; ವರ ನೊತ್ತಿದ ಘುಸೃಣರಸಂ ಗುರುಕುಚಕನಗಧಾತು ನಿರ್ಝರಪ್ಲವಮಿಳಿವಂತಿರೆ ನಸುಳ್ದೈತರೆ ತಳ್ತೀಂ ಕರಮೆಸೆದುದೊ ಬಾಸವಳ್ಳಿ ತಳಿರೇಟಿದವೋಲ್ (ರಾಜಶೇ. ೦೦-೯೩). ೭. ನೀರಿನ ಮೇಲೆ ತೇಲುವ ಸಾಧನ ; ತೆಪ್ಪ, ದೋಣಿ, ಮೊದಲಾದವು : "ತಳ್ಪಂ. ಉಡುಪಃ, ಪ್ಲವಃ—ಈ ೩ ತೆಪ್ಪಂ" (ಕಣಾಯು. ೦೦೦-೯೪). ೮. ಕಪ್ಪೆ. ೯. ಕೋತಿ. ೧೦. ಚಂಡಾಲ ; ಹೊಲೆಯ. ೧೧. ಒಂದು ಬಗೆಯ ನೀರು ಹಕ್ಕಿ : ಕೃಕರ ಕರೇಟು ಕುಕ್ಕುಟ . . . ಕಂಕವರ್ತಕ ಕುರರೀಪ್ಲವಪ್ರಕರದಿಂದೆ ವಿರಾಜಿ ಕುಮುನ್ನತಂ ವನಂ (ಹಮ್ಮಿರ. ೪-೩೨); ಆಗಳ್ ಸಮುದ್ರಂಗಳೆಯ್ದುತ್ತಿರ್ದ ವೆಂತೆನೆ . . . ನೊರೆಗಳ್ ಸದ್ಬುದ್ಬುದಂಗಳ್ ಗಜ ತುರಗ ನರರ್ ಕುಕ್ಕುಟಂ ಗಳ್ ಪ್ಲವಂಗಳ್ ನೆರೆದೆತ್ತಂ ತುಂಬಿ ಘೋಷಂ ಪೊರೆದೊರೆಯೆ ದಿಶಾಭಾಗಮುಂ ಬಂದವಾಗಳ್ (ಹಾಲಾಸ್ಯ. ೧-೦೦-೩೦). ೧೨. ಅರವತ್ತು ಸಂವತ್ಸರಗಳಲ್ಲಿ ಮೂವತ್ತೈದನೆಯ ಸಂವತ್ಸರ : ಪ್ರಭವ. . . ಶಾರ್ವರಿ ಪ್ಲವ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ಅವೇಕ. ೨೬೩). [ಸಂ.]

**ಪ್ಲವಂಗ** (ನಾ). ೧. ಕೋತಿ ; ಮಂಗ : "ಬಲೀಮುಖಃ, ಮರ್ಕಟಕಃ, ವನೌಕಾಃ, ಪ್ಲವಂಗಮಃ, (ಪ್ಲವಂಗಃ), ಪ್ಲವಗಃ . . . ವಾನರಃ— ಈ ೧೧ ಕೋಡಗಂ" (ಹಣಾಯು. ೩೯-೭೬) ; ನೆತ್ತರ ಹೂರದಲಿ ಹೋಹ ಪ್ಲವಂಗಕ್ಕವಧಿಯಿಲ್ಲ (ಕೊರಾ. ೬-೩೩-೪೪). ೨. ಕಪ್ಪೆ : "ಮಂಡೂಕಃ . . . ಪ್ಲವಂಗಃ—ಈ ೮ ಕಪ್ಪೆ" (ಹಣಾಯು. ೦೦೯-೪೦). ೩. ಒಂದು ಬಗೆಯ ಜಿಂಕೆ. ೪. ಅಂಜೂರ ವೃಕ್ಷ. ೫. ಅರವತ್ತು ಸಂವತ್ಸರ ಗಳಲ್ಲಿ ನಲವತ್ತೈದನೆಯ ಸಂವತ್ಸರ : ಆ ವರ್ಷವೇ ಪ್ರಭವ . . . ಪ್ಲವಂಗ ಕೀಲಕ . . . ಅಕ್ಷಯವೆಂದಱುವತ್ತುತೆಱನಾಗಿಹುದು (ಅವೇಕ. ೨೬೩). ೧. ೫ : ಮನೆ ಸಲೆ ಹೇವಿಳಂಬಿ ಸಹಕಾರಿ ವಿಕಾರಿ . . . ನಿಜ ವಲ್ಲಭೆ ದುರ್ಮುಖಿಯಿಂದೊಡನ್ನ ಪೆಂಪಿನ ವಿಭವಂ ಪ್ಲವಂಗದವೊಲಾದುದು ಮನ್ಮಥಚಿತ್ರಭಾನುವಿಂ (ಸೂಕ್ತಿಸು. ೬-೪೬೬); ಸೌಮ್ಯ ಶ್ರೀಮುಖಂ ಪ್ರಭವ ಶುಕ್ಲಾನಂದನಿವಿನಿರಲ್ಕೆ ಕೃತಕಂ ಪ್ಲವಂಗದುರ್ಮುಖಿಯಂ ವಿಕಾರಿಯಂ ಪ್ರತಿದಿನಂ ಕರೆಯಿಂಬೆಯೆಂದು 'ಸಂವತ್ಸರಮನತಿಶಯಂ ಪೇಳ್ವಂತೆ ರೌದ್ರಿ ರಕ್ತಾಕ್ಷಿ ತಾಯಂ ಮಗಳ್ ಕೋಪಿಸಿದಳು (ಕಾಪ್ರ. ೦೦-೪೦). ೬. ಕುದುರೆ ; ಅಶ್ವ : "ತುರಂಗಂ ಕಪಿ ಭೇಕಂಗಳಿಂತು ಪ್ಲವಂಗಮುಕ್ಕು" (ಹಾಕಾರ. ೪೬). [ಸಂ.]

**ಪ್ಲವಂಗಮ** (ನಾ). ೧. = ಪ್ಲವಂಗ ೧ : "ಬಲೀಮುಖಃ . . . ಪ್ಲವಂಗಮಃ . . . ವಾನರಃ — ಈ ೧೧ ಕೋಡಗಂ" (ಹಣಾಯು. ೩೯-೭೬). ೨. ಕಪ್ಪೆ : "ಮಂಡೂಕಃ . . . ಪ್ಲವಂಗಮಃ , ಪ್ಲವಂಗಃ —ಈ ೮ ಕಪ್ಪೆ" (ಹಣಾಯು. ೦೦೯-೪೦). [ಸಂ.]

**ಪ್ಲವಂಗವಿದ್ಯೆ** (ನಾ). [ಜೈನ] ವಿದ್ಯೆಗಳಲ್ಲಿ ಒಂದು ; ಮರ್ಕಟವೇಷ ವನ್ನು ತಾಳುವ ವಿದ್ಯೆ : ಅಣುವಂ ಪ್ಲವಂಗವಿದ್ಯೆಯಿಂ ಕಪಿಮೂರ್ತಿಯಂ ಕೈಕೊಂಡು ಕಾಪಿನವರ್ಗೆಲ್ಲಂ ಮಹಾನಿದ್ರೆಯಂ ಮಾಡೆ (ಚಾವುಂಪು. ೩೦೬). [ಸಂ. ಪ್ಲವಂಗವಿದ್ಯಾ]

**ಪ್ಲವಕ** (ನಾ). ೧. ತೇಲುವವನು : "ಪ್ಲವಕಃ, ಪ್ಲವಮಾನ.—ಈ ೨ ತೇಲ್ವಂ" (ಕಾಶಕ್ಕ. ೭೮೬). ೨. ಕಪ್ಪೆ. ೩. ಡೊಂಬ. ೪. ಚಂಡಾಲ. ೫. ಕೋತಿ ; ಮಂಗ. [ಸಂ.]

**ಪ್ಲವಗ** (ನಾ). ೧. = ಪ್ಲವಂಗ ೧ : "ಬಲೀಮುಖಃ . . . ಪ್ಲವಗಃ . . . ವಾನರಃ — ಈ ೧೧ ಕೋಡಗಂ" (ಹಣಾಯು. ೩೯-೭೬); ನವರಸ ರಸಿಕಂ ಸುಮನಸ್ತವನೀಯಮೆನಿಪ್ಪ ಕಾವ್ಯದತಿಶಯಮಂ ದುಃಕವಿಯಱಿಯ ನೆಂದು ಜಱಿಯ ಪ್ಲವಗಕ್ಕೇವಾಟ್ಕೆ ಪಾರಿಜಾತಸ್ತಬಕಂ (ರಘುಣಾ. ೧-೩೬). ೨. ಕಪ್ಪೆ ; ಮಂಡೂಕ : '' ಮಂಡೂಕಃ, ಪ್ಲವಗಃ . . . ಪ್ಲವಂಗಃ—ಈ ೮ ಕಪ್ಪೆ" (ಹಣಾಯು. ೦೦೯-೪೦) ; ಪ್ಲವಗಪ್ಲುತದಿಂ ಚಾರಣನಿವಹಂ ಚಾರಣಗಣಂಗಳಂ ತಾಗೆ ಪಯಃಪ್ಲವದೊಳಗೆ ಮುಟ್ಟಿ ಪಾರಿಪ್ಲವನೇತ್ರೆಯರಮರಕಾಂತೆಯರ್ ಸೊಗಯಿಸಿದರ್ (ಅಜಪು. ೪-೬೦). ೩. ಒಂದು ಬಗೆಯ ನೀರು ಹಕ್ಕಿ; ನೀರುಕೋಳಿ. ೪. ಸೂರ್ಯನ ಸಾರಥಿ ; ಅರುಣ. [ಸಂ.]

**ಪ್ಲವಗಕೇತು** (ನಾ). ಕಪಿಯನ್ನು ಧ್ವಜದಲ್ಲಿ ಉಳ್ಳವನು; ಕಪಿಧ್ವಜ:

ಅವಿತಚತುರಂಗಸೇನಾಸಮನ್ವಿತರ್ ಪ್ಲವಗಕೇತುಗಳ್ಮಾರುತಮಾರ್ಗಮ ನೆಳಸಿ ಬಳಸಿ ನಡೆದರ್ (ಶಂರಾಪಾ. ೦೪-೨೬). [ಸಂ.]

**ಪ್ಲವನ** (ನಾ). ೧. ತೇಲುವುದು : "ಪ್ಲವನಂ, ಪ್ಲವನೀಯಂ—ಈ ೨ ತೇಲ್ಕೆ" (ಶಾಶಸ್ತ್ರ. ೦೨೬). ೨. ಮಿಾಹ; ಸ್ನಾನ. ೩. ಕುಪ್ಪಳಿಸುವುದು; ನೆಗೆತ. ೪. ಪ್ರವಾಹ; ನೆರೆ : ಉದ್ಗತನಿರ್ಝರಪ್ಲವನದಿಂ ಗಂಗಾಸರಿತ್ಪೂರಮಂ ನಗುವಂತುನ್ನತಿವೆತ್ತ ಕಲ್ಪತರುಸಾನೂದ್ಯಾನದಿಂ ಮೇರುವಂ ನಗುವಂತೊಪ್ಪುವುದಂ ವಸಂತ ಗಿರಿಯಂ ಕಂಡಂ ಮಹೀಮಂಡನಂ (ಶಂರಾಪಾ. ೨-೦೪). ೫. ಇಳುಕಲು ; ಇಳಿಜಾರು. ೬. ಕುದುರೆಯ ನಡಗೆಗಳಲ್ಲಿ ಒಂದು ಬಗೆ. [ಸಂ.]

**ಪ್ಲವಿಸು** (ಕ್ರಿ). ಹರಿ; ಪ್ರವಹಿಸು : ಪ್ಲವಿಸಿತ್ತಸೀಮರೋದನಮತ್ತಲುಂ! ರಣಂ ಮಿಂದತ್ತು ಕರೆವ ಕಂಬನಿಮಳೆಯ ತೀರ್ಥದಲಿ! (ಶಶ್ರಾಂಗ. ೬೮-೨೪೨೩). [ಪ್ಲವನ+—ಇಸು]

**ಪ್ಲಾಂಟೇಷನ್** (ನಾ). ಹತ್ತಿ, ಹೊಗೆಸೊಪ್ಪು, ಕಾಫಿ, ಟೀ ಮೊದಲಾದ ಗಿಡಗಳ ತೋಟ : ಪಬ್ಲಿಕ್‌ರಸ್ತೆಗಳ ಉದ್ಯಾನ ತೋಟಗಳ ಪ್ಲಾಂಟೇಷನ್‌ಗಳ ನಾಲಾಗಳ . . . ಸ್ವಾಧೀನಗಾರರು (ಗ್ರಾಮಾಶ. ೦೦೬); ಅಲ್ಲಿಯ ಪ್ಲಾಂಟೇಷನ್ ಕೃಷಿಯ ಹೊಲಗಳ ವಿಸ್ತಾರ ಸ್ವಾಭಾವಿಕವಾಗಿ ದೊಡ್ಡದೇ ಇರುತ್ತದೆ (ಏಶಿಸಂ. ೪೮). [← ಇಂ. Plantation]

**ಪ್ಲಾಟಿನಂ** (ನಾ). ಒಂದು ಬಗೆಯ ಲೋಹ; "ಅಸಂಮಿಶ್ರಿತ ಆಮ್ಲಗಳಿಂದ ಕ್ಷಯಿಸದ, ಬಹಳ ತೀವ್ರಶಾಖದಲ್ಲಿ ಮಾತ್ರ ಕರಗುವ, ತಗಡಾಗಿ ಬಡಿಯಲೂ ತಂತಿಯೆಳೆಯಲೂ ಆಗುವ, ಭಾರವಾದ, ಒಂದು ಬಿಳಿಯ ಲೋಹ" (Platinum· ೩೦೬೫) : ಈಗ ನಮಗೆ ಗೊತ್ತಿರುವ ಧಾತುಗಳಲ್ಲಿ ಪ್ಲಾಟಿನಮ್ ಎಂಬ ಧಾತುವಿನ ಹೊರತು ಚಿನ್ನದಷ್ಟು ಭಾರವುಳ್ಳ ಧಾತುವು ಎರಡನೆಯದಿಲ್ಲ (ಮುಂಬಯಿ. ೪-೦೦೨). [← ಇಂ. Platinum]

**ಪ್ಲಾವ** (ನಾ). ೧. ಹರಿಯುವುದು. ೨. ಹಾರಂವಿಕೆ; ನೆಗೆತ. ೩. ಉಕ್ಕಿ ಹರಿಯುವುದು; ದಡ ಮಿಾರಿ ಹರಿಯುವುದು. [ಸಂ.]

**ಪ್ಲಾವಕ** (ಗು). ತೇಲುವ : ಕೃತಿ ವರ್ತಮಾನದಲ್ಲಿ ಜನ್ಮವೆತ್ತಿದರೂ ಅದರ ಸೆಳೆತಕ್ಕೆ ಸಿಕ್ಕಿಕೊಳ್ಳದೆ ಸಂತತ ವರ್ತಮಾನಕ್ಕಿರುತ್ತದೆ, ತನ್ನಲ್ಲಿ ತುಂಬಿಕೊಂಡಿರುವ ನಲವಿನ ಪ್ಲಾವಕಶಕ್ತಿಯಿಂದ (ಕಾವ್ಯಕು. ೦೦). [ಸಂ.]

**ಪ್ಲಾವನ** (ನಾ). ೧. ಮೇರೆ ಮಿಾರಿ ಹರಿಯುವುದು; ದಡ ಮಿಾರಿ ಹರಿಯುವುದು. ೨. ನೆರೆ; ಪ್ರವಾಹ. ೩. ಸ್ನಾನ : ಶೋಷಣ ದಾಹನ ಪ್ಲಾವನಗಳೆಂಬ ಮೂಱುಕ್ರಿಯೆಗಳಂ (ವಿವೇಕ. ೦೦೬). ೪. ತೇಲುವವನು : ಅಲಘುಪ್ರಸಾದಾಮೃತಪ್ಲಾವನರ್ಗೆ ಮತ್ತೊಲವಿನಿಂ ಪ್ಲಾವನಕ್ರಿಯೆಗೆಯ್ಯಲೇಕೆ (ಆರಾಕ. ೦-೦೦-೨೦). [ಸಂ.]

**ಪ್ಲಾವಿತ** (ನಾ). ಆವೃತವಾಗುವಿಕೆ : ಕಾಳಿಯ ಪೂಜಾಸ್ಥಾನವು ನರಮಾಂಸರಕ್ತದಿಂದ ಪ್ಲಾವಿತವಾಗುವುದೆಂಬುದನ್ನು . . . ಅವಳ ಹೃದಯವು ಸಹಿಸಲಾರದಾಗಿದ್ದಿತು (ಕಪಾಕು. ೦೨೪). [ಸಂ.]

**ಪ್ಲಾಸ್ಟಿಕ್ಕು** (ನಾ). ರಬ್ಬರಿನಂತೆ ಮೃದುವಾಗಿರುವ ವಸ್ತು; ಒಂದು ಬಗೆಯ ಮೇಣ : ಪ್ಲಾಸ್ಟಿಕ್ಕು ಗೊಂಬೆಯನಾಟಕ ತಂದಳು (ಚಂದ್ರವೀ. ೬-೩೨). [← ಇಂ. Plastic]

**ಪ್ಲೀಡರು** (ನಾ). ನ್ಯಾಯವಾದಿ; ವಕೀಲ : ಒಬ್ಬ ಅಡ್ವೋಕೇಟ್ ಯಾ ಪ್ಲೀಡರ್ ಖರ್ಚುಗಳನ್ನು ಫಲಾನೆ ಕಾಲದಲ್ಲಿ ಕೊಡುವಂತೆ ಕಂಠೋಕ್ತವಾಗಿ ಯಾವ ಕರಾರೂ ಮಾಡಲ್ಪಟದೆ ಇದ್ದರೆ ಆ ಖರ್ಚಿನ ಬಗ್ಗೆ ಅಡ್ವೋಕೇಟ್ ಯಾ ಪ್ಲೀಡರಿಂದ ಮೂರು ವರ್ಷಗಳು (ಗ್ರಾಮಾಶ. ೦೬೬). [← ಇಂ. Pleader]

**ಪ್ಲೀಹ** (ನಾ). ೧. ಹೊಟ್ಟೆಯ ಎಡಭಾಗದಲ್ಲಿ ಇರುವ ಮಾಂಸಗ್ರಂಥಿ; ಗುಲ್ಮ; ತೊರಳೆ : ಮುಂದೆ ಅವು ಪ್ಲೀಹಕ್ಕೆ ಹೋಗಿ, ಅಲ್ಲಿ ಈ ಸತ್ತ ಕಣಗಳನ್ನು ಒಟ್ಟಿಸಿ ಬರುವುವು (ಶಾಂಶ್ರ. I. ೩೦೬); ಹಾಗಾದರೆ ಈ 'ನಾಗಸೇನ' ಎಂಬುದು ಉಗುರೇ ? ಹಲ್ಲೆ ? . . . ಮೂತ್ರಕೋಶವೆ ? ಪ್ಲೀಹವೇ ? (ಬುದ್ಧಕೃ. ಏಂ೦೦. ೬೪). ೨. ಗುಲ್ಮರೋಗ : ಬಿಸರುಹಸಖನಿರೆ ಮಕರದೊಳಸದ್ಗ್ರಹದ್ವಿತಯಮಿರೆ ನಿಶಾನಾಥಂಗಿರ್ದೆಸೆಯೊಳ್ ಮನುಜಂ ಪ್ಲೀಹ ಶ್ವಸನ ಕ್ಷಯ ಗುಲ್ಮ ವಿದ್ರಧಿವ್ಯಾಧಿಯುತಂ (ಜಾತಕ. ೨೦-೦೬); ತಾಳೀಸಪತ್ರೆ ೧ ತೂಕ . . . ಚೂರ್ಣವಂ ಮಾಡಿ ಸಕ್ಕರೆವೆರಸಿ ಸೇವಿಸೆ . . . ಪ್ಲೀಹ, ಎದೆನೋವು . . . ಮಾಣ್ಗುಂ (ಸಕಪ್ಕ. ೨೦೬). [ಸಂ.]

**ಪ್ಲೀಹಾಪಹೆ** (ನಾ). ಒಂದು ಬಗೆಯ ಮರ : "ಪ್ಲೀಹಾಪಹಾ—ದೇವದಾರು" (ಓಷಧಿ. ೦೦೦). [?]

**ಪ್ಲುತ** (ಗು). ೧. ತೇಲುತ್ತಿರುವ. ೨. ಕುಪ್ಪಳಿಸುವ; ನೆಗೆಯುವ; ಹಾರುವ : ಪ್ಲುತ ಲೀಲಾಮೃಗಜಾಳಮಂ ಶುಕಪಿಕವ್ಯಾಹಾರಸಂಪಾದಿತ ಪ್ರತಿನಾದೋದಯಮಂ . . . ಪೊತ್ತಂ . ಮಹೀವಲ್ಲಭಂ (೬೬ಾವ. ೪-೦೬). ೩. ಮುಳುಗಿದ; ಲೀನವಾದ. (ನಾ). ೪. [ಅಶ್ವಶಾ] ಕುದುರೆಯ ಐದು ಬಗೆಯ ನಡಗೆಗಳಲ್ಲಿ ಒಂದು; ಕುಪ್ಪಳಿಸುತ್ತ ನಡೆಯುವುದು: ಆಸ್ಕಂದಿತ ರೇಚಿತ ಧೌರಿತ ವಲ್ಗಿತ ಪ್ಲುತಮೆಂಬೈದುಂ ತೆಱದ ನಡೆಯಿಂ ಬೆಡಂಗುವಡೆದ ಪಟ್ಟದ ವಾರುವವರ್ಗಂ (ಶಾಂಪು. ೦೬-೨೦೪); ಕುಪ್ಪಳಿಸಿ ಕುಪ್ಪಳಿಸಿ ಹಾರಿ ಓಡುವುದು ಪ್ಲುತವೆನಿಸಿಕೊಂಬುವುದು (ಅಶ್ವಶೀ. ೨೫-೬). ೫. [ಛಂದ] ಉಚ್ಚಾರಣೆಯಲ್ಲಿ ಮೂರು ಮಾತ್ರೆಗಳ ಕಾಲವನ್ನು ತೆಗೆದು ಕೊಳ್ಳುವ ಅಕ್ಷರ; ದೀರ್ಘಕ್ಕಿಂತಲೂ ಸ್ವಲ್ಪ ಕಾಲಾವಕಾಶವನ್ನು ಹೆಚ್ಚಿಗೆ ತೆಗೆದುಕೊಳ್ಳುವ ಅಕ್ಷರ; ತ್ರಿಮಾತ್ರಕ : ಮಾತ್ರಾತ್ರಯ ಪರಿಗತಮಪ್ಪುದೆ ವಲಂ ಪ್ಲುತಂ (ಕಾವ್ಯಾವ. ೦೦); ಹ್ರಸ್ವಮದೇಕಮಾತ್ರಕಂ ದೀರ್ಘಮುಭಯಮಾತ್ರಂ ತ್ರಿಮಾತ್ರಕಂ ಪ್ಲುತಮಕ್ಕುಂ (ಶಮದ. ೦೦); ಪ್ಲುತಕ್ಕೆ ಮಾತ್ರೆ ಮೂರು. ಆದರೆ ಛಂದೋದೃಷ್ಟಿಯಲ್ಲಿ . . . ಪ್ಲುತವನ್ನು ಗುರುವಾಗಿಯೇ ಗುಣಿಸಿದ್ದಾರೆ (ಸಂಛೋಧ. ೦೦೬). ೬. [ಸಂಗೀತ] ತಾಳದ ಆರು ಅಂಗಗಳಲ್ಲಿ ಒಂದು; ಲಘುವಿನ ಮೂರರಷ್ಟು ಅಕ್ಷರಕಾಲವನ್ನು ಹೊಂದಿರುವುದು : ತಾಳಕ್ಕೆ ಬರುವ ಅವಯವಗಳಿಗೆ ಅಂಗಗಳು ಎಂದು ಹೆಸರು. ಅನುದ್ರುತ, ದ್ರುತ, ಲಘು, ಗುರು, ಪ್ಲುತ ಮತ್ತು ಕಾಕಪಾದ ಇವೇ ಷಡಂಗಗಳು . . . ಲಘುವಿನ ಮೂರರಷ್ಟು ಅಕ್ಷರಕಾಲವನ್ನು ಪ್ಲುತವೂ ಲಘುವಿನ ನಾಲ್ಕರಷ್ಟು ಅಕ್ಷರಕಾಲವನ್ನು ಕಾಕಪಾದವೂ ಹೊಂದುತ್ತವೆ (ಸಂಗೀಶಂ. ೩೪). [ಸಂ.]

**ಪ್ಲುಷ್ಟ** (ಗು). ೧. ಸುಟ್ಟ; ಕರಿಕಾದ. (ನಾ). ೨. ಸುಟ್ಟುದು; ಕರಿಕು : ದೀರ್ಘೋಷ್ಣಫೂತ್ಕಾರಂಗೆಯ್ವ ನಾಗರಾಜಚಕ್ರದಿಂ ಪ್ಲುಷ್ಟಮಾದ ಸಪ್ತಸಾಗರಸಲಿಲದೊಳ್ ಮಲಮಲನೆ ಮಱುಗುವ ಜಲಚರಚಕ್ರದಿಂ (ಗದಾಯು. ೬-೨೦). [ಸಂ.]

**ಪ್ಲೇಗು** (ನಾ). ಜ್ವರ, ಬಲಹೀನತೆಗಳುಂಟಾಗಿ ಕೈಕಾಲುಸಂದುಗಳಲ್ಲಿ ಗಡ್ಡೆಯೆದ್ದು ಬಾಧಿಸುವ ಒಂದು ಬಗೆಯ ಅಂಟುರೋಗ; ಮಾರಿರೋಗ : ಪ್ಲೇಗನೆ ಪೋಗಿಸು ಮಾರಿಯೇ (ಪ್ರಸೂವು. ೨-೯೩); ಪ್ಲೇಗು ಮುಖ್ಯವಾಗಿ ಪ್ರಾಣಿಸಂಬಂಧ ರೋಗ (ಕರಿಕೋ. XI, ೩೩೫). [← ಇಂ. Plague]

**ಪ್ಲೇಟು** (ನಾ). ತಟ್ಟೆ; ತಾಟು . ರಾಮಣ್ಣ ಉಪ್ಪಿಟ್ಟಿಗೆ ಮುಹೂರ್ತ ಮಾಡಬೇಕೆಂದು ಪ್ಲೇಟನ್ನು ಮುಂದಕ್ಕೆ ಎಳೆದುಕೊಂಡ (ಮೂರಾಬಿ. ೪೨); ಬೋಂಡಾದ ಪ್ಲೇಟುಗಳನ್ನು ಮೇಜಿನ ಮೇಲಿಡುತ್ತ ವಾಣಿ ಹೇಳಿದನು (ಚಂದುಬಿ. ೪೨). [← ಇಂ. Plate]

**ಪ್ಲೋಷ** (ಗು). ೧. ಸುಡುವ; ದಹಿಸುವ : ಸದ್ಯಸ್ಸಂತಾಪಿತಲೋಹ

ಪುತ್ರಿಕಾಪರಿರಂಭಸಂಭವಪ್ಲೋಷಗಲಜ್ಞಾಂಗಲಗಲ ದ್ರು ಧಿ ರವಿ ಚಲದಸ್ಥಿ ನಿರ್ಯನ್ಮಜ್ಞಾ ಶುಷ್ಮತ್ಕಂಠ . . . ಆಕ್ರಂದತ್ಸ್ವರಪರಿಗತರ್ ಸ್ಮರಿಸ ಲಾಬಿದೆ ತಡದಡಿಸಿ (ಅಂಥ. ೩–೬೭ ಟ). (ನಾ). ೨. ಸುಡುವಿಕೆ; ದಹಿಸುವಿಕೆ. ೩. ನಾಶ; ಧ್ವಂಸ: ದ್ವಿಟ್ಪುರಪ್ಲೋಷ[ಪಾಠಾಂ. ಧ್ವಂಸ] ರತಕ್ರೋಧಂ . . . ರಕ್ಷಿಸುಗೆ (ಜಗಖ. ೦–೩). [ಸಂ.]

**ಫ** (ನಾ). ೧. ಕನ್ನಡವರ್ಣಮಾಲೆಯ ನಲವತ್ತೆರಡನೆಯ ಅಕ್ಷರ. ೨. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ: "ಖಂಫರಮ ದೆರಡಕ್ಕು" (ಕುಂಗಣಾ. ೦೦೪–೦೦).

**ಫಂಜಿಕೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು; ಗಂಟುಭಾರಂಗಿ. 'ಹಂಜಿಕೆ' ಪಠಾ. [ಸಂ. ಫಂಜಿಕಾ]

**ಫಂಟ** 'ಪಂಟು' ನೋ.

**ಫಂಟತನ** (ನಾ). ಮೋಸಗಾರಿಕೆ; ವಂಚಕತನ: ಇದೆಲ್ಲಾ ಫಂಟತನದ ಮಾತು ಬಿಟ್ಟುಬಿಡು (ಗ್ರಾಮಾಯ. ೨೦೨). [ಫಂಟ (<ಫಂಟು) + — ತನ]

**ಫಕತ** 'ಪಕತ್' ನೋ.

**ಫಕಫಕ** (ನಾ). ಒಂದು ಅನುಕರಣ ಶಬ್ದ: 'ರಾತ್ರಿ' ಗಳಲ್ಲಿ ಕರಂಟು ಆಗೀಗ ಫಕಫಕ ಮಾಡುವದು (ಪಲಿಷು. IX ಪಾಂಲ್ಯಕಾಕು).

**ಫಕೀರ್** 'ಪಕೀರ' ನೋ.

**ಫಕೀರ** 'ಪಕೀರ' ನೋ.

**ಫಕ್ಕಡ** 'ಫಾಕಡ' ನೋ.

**ಫಕ್ಕನೆ** (ಅ). ಇದ್ದಕ್ಕಿದ್ದಂತೆ; ಒಮ್ಮೆಲೆ: ಗಂಗೆಯೊಳು ಕೋಣನ ಹಾಗೆ ಮೈಗೆಟ್ಟು ಫಕ್ಕನೇ ಮುಳುಗಿ (ಪಕಣ. I, ೩೩೬); ಫಕ್ಕನೆ ವಸಂತ ದುರುಘರ್ಮದೊಳು ದಾಕ್ಷಿಣ್ಯಮೊಕ್ಕರಿಸಲೆಳೆಗಾಳಿಯುರೆ ಬಿಡದೆ ಸುಳಿವಂತೆ (ಶರಷು. ೬–೫); ಇನಿಯನ ಮುಖ ಅರಳಿತು ಫಕ್ಕನೆ(ಹಿಂದುಟ.೦೬).

[ಫಕ್$_0$ + — ಅನೆ$_1$]

**ಫಕ್ಕಿ** (ನಾ). ರೀತಿ; ರೂಢಿ; ಪದ್ಧತಿ: ಇದು "ಸುರು ಹಚ್ಚು" ಎಂಬ ಉತ್ತರಕರ್ನಾಟಕದ ಫಕ್ಕಿಯನ್ನು ಹೋಲುತ್ತದೆಯಲ್ಲವೆ? (ಕುಸಾಸಾಂ. ೩೯೯); ಮಾತಿನ ಫಕ್ಕಿಯಂತೆಯೇ ಪಂಪನು ಅನೇಕ ನಾಣ್ಣುಡಿಗಳನ್ನು ಜೀವಂತವಾಗಿ ಪ್ರಯೋಗಿಸಿದ್ದಾನೆ (ಸುವರ್ಣ. ೦೦೦).

[ಸಂ. ಫಕ್ಕೀ./ತೆಲು. ಫಕ್ಕಿ]

**ಫಕ್ತ** 'ಪಕತ್' ನೋ.

**ಫಜೀತಿ, ಪಜೀತಿ**(ನಾ). ತೊಂದರೆ; ಇಕ್ಕಟ್ಟು; ಕಷ್ಟ; ಗೋಳು: ಬಂದ ಮೇಲೆ ಅವನ ಫಜೀತಿ ಎಷ್ಟಂತ ಹೇಳಲಿ? (ಮುಂಬಯಿ. ೦೯೯); ನೆಶ್ಯವು ಮೂಗಿನೊಳಕ್ಕೆ ಹೋದುದೇ ತಡ ಬುಳುಬುಳುಗುಟ್ಟಿ ಅಸಾಧ್ಯ ಫಜೀತಿ ಮಾಡಿಬಿಟ್ಟಿತು (ಳಳಹು. ೬೭); ನಾನದನ್ನು ತಂದೆಯವರಿಗೆ ತೋರಿಸುವ ಫಜೀತಿಯೇ ಇರುವುದಿಲ್ಲ (ಕಾರಿಮು. ೯೧). **ಪಜೀತಿ:** ಇದರಿಂದ ಎಷ್ಟೋ ಸಲ ತಿಂಗಳ ಕೊನೆಯ ದಿನಗಳಲ್ಲಿ ಪಜೀತಿಯಾಗುತ್ತಿತ್ತು (ಶಂಕ್ಷ. ೯೬); ಅವನ್ನು ಮುಟ್ಟಿಕೊಂಡು ದಿನಕ್ಕೆರಡು ಸ್ನಾನ ಮಾಡುವ ಪಜೀತಿ ಬೇಡ (ಸ್ವಕ್ಕಹೂ. ೭).

**ಫಜೀತಿ ಪಡು** = ಕಷ್ಟಕ್ಕೆ ಒಳಗಾಗು; ಸಂಕಟದಲ್ಲಿ ಸಿಲುಕಂ: ಫಜೀತಿ ಪಡಲಿ . . . ಅವರದೇ ತಪ್ಪು (ಸಾಖಸ. ೦೮). **ಫಜೀತಿ ಬೀಳು** = ಫಜೀತಿ ಪಡು: ನೀವು ಯಾಕೆ ಕಟ್ಟಿಕೊಂಡು, ಬಿಟ್ಟುಕೊಂಡು, ಕರೆದು ಕಳಿಸಿ ಫಜೀತಿ ಬೀಳಬೇಕು (ಬಾಳಹೂ. ೯). **ಫಜೀತಿ ಮಾಡು** = ಗೋಳಾಡಿಸಂ; ತೊಂದರೆಪಡಿಸಂ; ಪೀಡಿಸಂ: ಅವರನ್ನು ಸುತ್ತುಗಟ್ಟಿ ಫಜೀತಿ ಮಾಡುವದೇ ನನಗೊಂದು ಹಬ್ಬವಾಗಿತ್ತು (ಮೇಂವು. ೩); ಕಳ್ಳರು ವರ್ತಕನ ಮೇಲೆ ಬಿದ್ದು ಹೊಡದು ಫಜೀತಿ ಮಾಡಿ ಹಣದ ಚೀಲ ಕಿತ್ತುಕೊಂಡು ಹೋದರು (ಕಥಾವುಂ. IV, ೦೯).

[←ಅರ .ಹಿಂ. ಫಜೀಹತ್; ಮರಾ. ಫಜೀತೀ]

**ಫಟ್** (ನಾ). ಒಂದು ಅನುಕರಣ ಪದ: ಕಂಚುಕಿ ಫಟ್ಟೆಂದು ಪೊಡೆವೋಲ್ಲಿಗ್ಗಿ ಕೇಳಿದಳ್ (ಜವವು. ೯೭–೩೬); ಒಮ್ಮೆ ಫಟ್ ಎಂದು ಸಿಡಿದು ಬಿಗಿಯಿತೋ, ಆಯಿತು (ದೀಳಪ್ಪ.೯೮).

**ಫಟಕ** 'ಪಟಕ' ನೋ.

**ಫಟಕಿ, ಫಟಾಕಿ, ಫಟಿಕಿ, ಫಟಿಕೆ** (ನಾ). ಬೆತ್ತ ಅಥವಾ ಚರ್ಮದ ಚಾವಟಿಯಿಂದ ಕೊಡುವ ಏಟು, —ಹೊಡೆತ: ಪಹರೇಕರಿಯುವರ ಕಡೆಯಿಂದ ಐವತ್ತು ಫಟಕಿಗಳನ್ನು ಹೊಡಿಸಿದಳು (ಮುಂಜಾಕ.೧೯೦). **ಫಟಾಕಿ:** 'ಫಟಾಕಿಶಿಕ್ಷೆ' ಪಠಾ. **ಫಟಿಕಿ:** ದಂಡ, ಫಟಕಿ, ಹದ್ದುಪಾರು . . . ಇವೇ ಮೊದಲಾದವುಗಳು ಶಿಕ್ಷೆಯ ವಿಧಾನಗಳಾಗಿದ್ದುವು (ಹಿಂದುಇ.೬೨). **ಫಟಿಕೆ:** ಸರಕಾರದವರು ಅವನಿಗೆ ಬೆನ್ನ ಮೇಲೆ ಫಟಕೇ ಹೊಡೆಯುವ ಶಿಕ್ಷೆಯನ್ನು ನಿರ್ಣಯಿಸಿದರು (ಮುಂಬಯಿ.೩–೯೩). [← ಮರಾ. ಫಟಕಾ]

**ಫಟಕಿಶಿಕ್ಷೆ, ಫಟಾಕಿಶಿಕ್ಷೆ** (ನಾ). ಬೆತ್ತ ಅಥವಾ ಚಾವಟಿಯಿಂದ ಹೊಡೆಯುವ ಶಿಕ್ಷೆ: ಕಾಯದೆಯನ್ನು ಧಿಕ್ಕರಿಸಿದ ಸಂ. ಆ ತಪ್ಪಿಗೆ ಫಟಕಿಶಿಕ್ಷೆಯ ಪ್ರಾಯಶ್ಚಿತ್ತವನ್ನುಂಡ (ಎಲಗ್ನೇ.೨೭); ಫಟಕೀಶಿಕ್ಷೆ ಕೊಡಿಸಿದನೇ? . . . ಈ ಸೇಡು ತೀರಿಸಿಕೊಳ್ಳದೆ ಬಿಡುವನೆ? (ಕುಂಬಳ.೯). **ಫಟಾಕಿಶಿಕ್ಷೆ:** ದೇವರು ಕೊಟ್ಟ 'ಫಟಾಕಿ'ಶಿಕ್ಷೆಯ ಬಾರನ್ನು ಮೈಮೇಲೆ ಮೂಡಿಸಿಕೊಂಡಂತೆ ಕೊನ್ನಿನ ವರ್ಧಂತಿ ವರ್ತುಲವನ್ನು ಬೆನ್ನ ಮೇಲೆ ಕಟ್ಟಿಕೊಂಡು ಅವರು ಬಾಳುವದು ಹೇಗೆ? (ಸಹುಜೀ.೩೦೬). [ಫಟಕಿ + ಶಿಕ್ಷೆ]

**ಫಟಾಕಿ** 'ಫಟಕಿ' ನೋ.

**ಫಟಾಕಿಶಿಕ್ಷೆ** 'ಫಟಕಿಶಿಕ್ಷೆ' ನೋ.

**ಫಟಾಕ್ಷಿ** 'ಪಟಾಕಿ' ನೋ.

**ಫಟಿಂಗ, ಪಟಿಂಗ** (ನಾ). ೧. ಪೋಕರಿ; ಉಡಾಳ: ಸಕ್ಕರೆ ಇದ್ದಲ್ಲಿ ಇರುವೆಗಳು ಮುಕ್ಕುರುವವು; ಗಾಂಜಾ ಇದ್ದಲ್ಲಿ ಫಟಿಂಗರು ನೆರೆಯುವರು (ಜಯುಂತ.೦೬೯); ದಡ್ಡನಾಗಿ ಸಂಭಾವಿತನೆಂದೆನಿಸಿಕೊಳ್ಳುವುದಕ್ಕಿಂತ, ಜ್ಞಾನಿಯಾಗಿ ಫಟಿಂಗನಾಗಿ ಉಳಿಯುವುದೇ ಮೇಲು (ವಾತ್ಸಲ್ಯ. ೩೦೩). ೨. ತಂಟೆಕೋರ; ತುಂಟ: ನಾವು ದಿಟದ ಶೀಲವಂತರೆಂದು ನುಡಿದುಕೊಂಬ ಫಟಿಂಗ ಭಂಡರ ವಿಧಿ ಎಂತಾಯಿತ್ತೆಂದರೆ ಹೆಂಡದ ಮಡಕೆಗೆ ವಿಭೂತಿಮಂಡಲವ ಬರೆದಂತಾಯಿತ್ತು (ಅಬಂಶೀ. ೨೯೨–೬೦); ನೀನು ಮಾಡಿದ್ದು ಫಟಿಂಗರ ಕೆಲಸ; ಇದು ಸರಿಯಲ್ಲ (ಅಪಾಥ. ೦೦೯). **ಪಟಿಂಗ:** ೨. ಈ ನಾಸ್ತಿಕ ಪಟಿಂಗ ಎಲ್ಲಿದ್ದಾನೆ (ವಗಹೂ.೨೯೬); ಅವನು ಶುದ್ಧ ಪಟಿಂಗ (ಪಕದಾ. II, ೦೨೬೫); ಮತ್ತೆ ಪಟ್ಟಿಂಗ ಹೊಡಿತಾನೆ ಪಟಿಂಗ, ಬಾಯಿಗೆ ಬಂದ್ಹಾಂಗೆ (ಮರಿಮು.೨೮೯).

[←ಮರಾ. ಫಟಿಂಗ]

**ಫಟಿಂಗತನ, ಪಟಿಂಗತನ** (ನಾ). ತುಂಟತನ; ಚೇಷ್ಟೆ; ತಂಟೆ: ಈಗೆಂಥ ಫಟಿಂಗತನ ಮಾಡಹತ್ತಿದಿರಿ? (ಶರಾವ.೭೩). **ಪಟಿಂಗತನ:** ಈಗ ನಿಮ್ಮ ಮುಂದೆ ತುರುಕರ ಪಟಿಂಗತನ ನಡೆಯುವುದಿಲ್ಲ (ಗುರುದಾ. ೦೭).

[ಫಟಿಂಗ + — ತನ]

**ಫಟಿಂಗಿ** (ನಾ). ತುಂಟಿ; ತಂಟೆಕೋರಿ: ಲೇ ಪದ್ದೀ, ಫಟಿಂಗೀ, ಸುಳ್ಳುಕೋರೀ (ಪಕದಾ. I,೩೦೭). [ಫಟಿಂಗ + — ಇ$_2$]

**ಫಟಿಕಿ** 'ಫಟಕಿ' ನೋ.

**ಫಟಿಕೆ** 'ಫಟಕಿ ನೋ.

**ಫಟೆ** (ನಾ). ನಾಗರಹಾವಿನ ಹೆಡೆ: "ಫಣಃ ಫಣಾ, ಫಟಾ — ಈ ೩ ಹಾವಿನ ಹೆಡೆ" (ಹಲಾಯು ೦೦೩–೦೯). [ಸಂ. ಫಟಾ]

**ಫಡ$_1$, ಪಡ$_5$** (ನಾ). (ಜೋಳ, ಕಬ್ಬು ಮೊದಲಾದುವುಗಳ) ಬೆಳೆದು ನಿಂತ ಪೈರು; ಎತ್ತರವಾದ ಬೆಳೆ: ಅಕ್ಕನ ಊರಾಗ ಮೆಕ್ಕಿಯ ಫಡದಾಗ ಗಕ್ಕನೆ ಬಾರೊ ಮಳೆರಾಜ (ಹಳ್ಳಿಯ. ೦೯೩); ಕಾಯಿಪಲ್ಲೆಗಳ ಮಡಿ

ಗಳಾಗಲಿ . . . ಕಬ್ಬು ಬಾಳಿಗಳ ಫಡಗಳಾಗಲಿ ಅಬಾಧಿತವಾಗಿದ್ದು ಸಸಿ ಬಳ್ಳಿಗಿಡಗಳೆಲ್ಲ ಪ್ರಫುಲ್ಲಿತವಾಗಿ ತೋರಿ ದೇಸಾಯರ ಮನಸ್ಸಿಗೆ ಆನಂದವ ನ್ನಿತ್ತವು (ತೊಳಮು. ೬೩); ತೋಟದಲ್ಲಿಯ ಬಾಳೀ ಫಡವನ್ನೆಲ್ಲ ಒಂದು ರಾತ್ರಿ ಕಡಿದು ಹಾಕಿದರು (ಮನಬಿ. ೩೦). **ಫಡ್ಕ** : ಕಬ್ಬಿನ ಪಡದಲ್ಲಿ ಕಬ್ಬು ಕಡಿದು ರವದೆ ಸವರಿ ಹೊರೆಕಟ್ಟುವ ಕೆಲಸದಲ್ಲಿ ನಿರತನಾಗಿದ್ದ ರಾಮು (ಬೀರಬಿ. ೪೬); ಭೀಮಪ್ಪ . . . ತೋಟದಲ್ಲಿ ನುಗ್ಗಿ ಅಲ್ಲಿದ್ದ ಗೊಂಜಾಳಿನ ಪಡದಲ್ಲಿಯ ತೆನೆ ಕೊಯ್ದುದ್ದಲ್ಲದೆ, ಮೆಣಸಿನ ಕಾಯಿಯನ್ನು ಹರಿದು . . . ಹಾಕಿದ (ಮನಬಿ. ೮). [ ← ಹಿಂ. ಮರಾ. ಫಡ ]

**ಫಡ್ಕ₂** (ಅ). ತಿರಸ್ಕಾರ ಹಾಗೂ ಕೋಪಗಳನ್ನು ಸೂಚಿಸುವ ಒಂದು ಪದ : ಸಾರುಸಾರಭಿಮನ್ಯು ಫಟ ಇನ್ನಾರ ಬಸುಬಿನು ಹೋಗುವೆ (ಕುಮಾದ್ರೋ. ೩-೩೨); ಗಿರಿಜೆ ಕೋಪದಿಂ ಖೂಳ ಫಡ ಹೋಗೆನುತೆ ಶಪಿಸುವನಿತಱೊಳೀಶನೊಲಿದು ನಿಜದಿಂದಿರ್ದನು (ಶಬಶೃ. ೩೬-೯).

**ಫಡಫಡ್ಕ₂** (ದ್ವಿರುಕ್ತಿ) : ಫಡಫಡಾನಿರುತಿರಲು ರಾಯನ ಹಿಡಿವವನ ಹೆಸರೇನು (ಕುಮಾದ್ರೋ. ೨-೩೩); ಫಡಫಡೆಲೊ ದುರ್ಮಾರ್ಗ ಮುನ್ನಿನ ನುಡಿಗಳನು ನುಡಿ (ಅನಂರಾ. ೦-೫-೭೩).

**ಫಡಕು** 'ಪಡಕು'₂ ನೋ.

**ಫಡಗಳ್ಳಿ** (ನಾ). (ಉಕ) ಪಾಪಾಸುಗಳ್ಳಿ; ಮುಳ್ಳುಗಳ್ಳಿ: ಹೋಗಲಿ ಊರೊಳಗಿನ ಫಡಗಳ್ಳಿ ಹೋಯಿತೆಂದು ತಿಳಿಯಿರಿ (ಹೊಂಮು. ೭೩); ದಾರಿಯಲ್ಲಿ ಬಳಸಿ ನಿಂತ ಫಡಗಳ್ಳಿಯನ್ನು ನಾವು ಕಿತ್ತುಹಾಕಿ ಸುಗಮವಾದ ದಾರಿ ಮಾಡಬೇಕು (ಹಮ್ಮಿ. ೬೯). [ ಫಡಂ + ಕಳ್ಳಿ₂ ]

**ಫಡಣೀಸ** 'ಫಡನವೀಸ' ನೋ.

**ಫಡನವೀಸ**, ಫಡಣೀಸ, ಫಡನೀಸ (ನಾ). ಸರಕಾರಿ ಲೆಕ್ಕಪತ್ರಗಳ ಮುಖ್ಯಾಧಿಕಾರಿ; ಮುಖ್ಯದಫ್ತರದಾರ: ಹರಿಮಹಾದೇವಭಾನುವನ್ನು ತನ್ನ ಫಡನವೀಸನನ್ನೂ ಮಾಡಿಕೊಂಡನು (ಕಂಸಂ. ೬೯). **ಫಡಣೀಸ** : ಪೇಂಡಶೆಯುವರ ಕಾಲದ ಒಬ್ಬ ಫಡಣೀಸರು ಫಂಡರಪುರದಲ್ಲಿದ್ದರು (ಸ್ವ.ಕಿ. ೨೪೬). **ಫಡನೀಸ** : ತನ್ನ ಮುಖ್ಯ ಫಡನೀಸನಾದ ಖ್ವಾಜಾಶಹಾ ಮನಸೂರನನ್ನು ತನ್ನ ಸಂಗಡಲೆ ಒಯ್ದನು (ಅಕ್ಕರ. ೬೩). [ ← ಪಾರ. ಫರ್ದನವೀಸ್; ಹಿಂ. ಮರಾ. ಫಡನವೀಸ್, ಫಡನೀಸ್ ]

**ಫಡನೀಸ** 'ಫಡನವೀಸ' ನೋ.

**ಫಡಪೋಶಿ** 'ಪಡಪೋಸಿ' ನೋ.

**ಫಡಪೋಶಿತನ** (ನಾ). ಅಲಕ್ಷ್ಯ; ಅಜಾಗರೂಕತೆ : ರಾಘಪ್ಪ . . . ಫಡಪೋಶಿತನದಿಂದ ಹೇಳಿ ದೇಸಾಯರತ್ತ ನೋಡುತ್ತ ಹುಚ್ಚುನಗೆ ನಕ್ಕು, 'ನಾ ಬರತೇನಿ' ಅನ್ನುತ್ತ ಎದ್ದನು (ಗಂಮಾಯು. ೨೪೨). [ ಫಡಪೋಶಿ (< ಪಡಪೋಸಿ) + – ತನ ]

**ಫಡಪೋಸಿ** 'ಪಡಪೋಸಿ' ನೋ.

**ಫಡಫಡ₁** (ಅ). ಒಂದು ಅನುಕರಣ ಶಬ್ದ: ಫಡಫಡ ಪಾಯಿನೆ [ಯ್ವ] ರ್ದೆ ನಡನಡುಗುವ ತನು . . . ಆದೊಡೆ ಬಿಡೆ ನಂಬುಗೆ ಕೂರ್ತ ಳೆಂದು ಕೂಟದ ಪಥದೊಳ್ (ಮದಶಿ. ೧೧-೫೬).

**ಫಡಫಡ₂** 'ಫಡ್ಕ₂' ಪರಾ.

**ಫಡಫಡಾಟ** (ನಾ). ಫಡಫಡ ಎಂಬ ಸದ್ದು: ದಿನ ಹೋದ ಮನುಷ್ಯರ ಬಿಳಿಯ ಪರದೆಯ ಫಡಫಡಾಟ ಸಾಕು (ಚಂದುಬಿ. ೯೨). [ ಫಡಫಡ₁ + ಆಟ ]

**ಫಡಫಡಿಸು** (ಕ್ರಿ). ಫಡಫಡ ಎಂದು ಸದ್ದು ಮಾಡು: ಹಿನ್ನೆಲೆಗೆ ಕ್ರೌಂಚವು ರೆಕ್ಕೆ ಫಡಫಡಿಸಿ ನರಳುವ ಸದ್ದು (ಕ್ರೌಂಚಧ್ವ. ೩೨-೨೨); ಹಕ್ಕಿಗಳು ಫಡಫಡಿಸುತ್ತ ಹಾರಾಡಿ ಮತ್ತೆ ಕುಳಿತವು (ಬಂಗಾಪ. ೨೬). [ ಫಡಫಡ₁ + – ಇಸು₃ ]

**ಫಡಾಳಿ** 'ಪಡಾಳಿ₂' ನೋ.

**ಫಡಿ** 'ಪಡ್ಡೆ' ನೋ.

**ಫಡಿಕೆ** 'ಪಡಿಕ್ಕೆ' ನೋ.

**ಫಡ್ಚ**, ಪಡಚ, ಪಡಿಚೆ, ಪಡ್ಚ (ನಾ). ೧. ನಿರ್ನಾಮ; ನಾಶ; ಧ್ವಂಸ : ಬೇಲಿ ಮುಟ್ಟಿದರೆ ಶೋಕ್ ಹೊಡೆದು ಆಸಾಮಿಯೇ ಫಡ್ಚ! (ಶಗುಕ. ೦೯೨). **ಪಡಚ** : ೧. ಬಿರುಗಾಳಿ ಬಡೀತದಲ್ಲಾ ಅಂತ ಏಕ್‌ದಂ ನಿಲ್ಲಿಸುವುದಕ್ಕೆ ಹೊರಟರೆ, ನಮ್ಮ ಪ್ರಾಣವೇ ಪಡಚ (ಕೆಂಗೂಂ. ೦೯೨). ೨. ಸಾಲ ಮೊದಲಾದ ವ್ಯವಹಾರಗಳನ್ನು ಮುಗಿಸುವುದು ; ಫೈಸಲಾತಿ : (೬). **ಪಡಿಚ** : ೩. (ಪದಾರ್ಥಗಳನ್ನು) ನಿಶ್ಶೇಷ ವಾಗಿ ಬಳಸುವಿಕೆ,– ಫೈಸಲು ಮಾಡುವಿಕೆ : (೬). **ಪಡ್ಚ** : ೧. ಕನಿಷ್ಠ ಒಂದು ವರ್ಷದ, ಮನೆಯ ಸಾಮಾನು ದಾಸ್ತಾನು ಇರಿಸಿಕೊಳ್ಳ ದಿದ್ದರೆ, ನಾವು ಪಡ್ಚವೇ ಸರಿ (ಮುಗಿಯು. ೩೬೩) ; ಪಡ್ಚ ಆಯಿತು. ನನ್ನ ಅಮ್ಮನ ಹಾಗೆ . . . ನೀವೂ ಹೇಳುತ್ತೀರಲ್ಲಾ ? (ಚಾರುದಾ. ೨೧೦).

ಪಡ್ಚ ಮಾಡು, ಪಡಚಾ ಮಾಡು = ನಾಶಮಾಡು ; ನಿರ್ನಾಮ ಗೊಳಿಸು : ಅದರ ಪ್ರಾಣ ತೆಗೆಯಲಿಕ್ಕೆ ಹೋದರೆ ನಾಳೆ ಊರಿಗೆ ಊರನ್ನೇ ಅದು ತಿಂದು ಪಡ್ಚ ಮಾಡೀತು (ಶರಾಪ. ೩೨) ; ಒಬ್ಬೊಬ್ಬ ಕಾಫರ್‌ನನ್ನೂ ಹಿಡಿದು, ಗಂಟಲನೊತ್ತಿ ಪಡಚಾ ಮಾಡಿಬಿಡುತ್ತಿದ್ದೆ (ಅಶಾಂತಿ. ೧೪೦). [←ಮರಾ. ಫಡಚ್ಯಾ, ಫಡಛ್ಯಾ, ಫಡಶಾ. ತುಳು. ಫಡ್ಚ, ಫಡಿಚ, ಪಡಚ, ಪಡಿಚ, ಪಡಿಚೆ, ಪಡ್ಚ]

**ಫಡ್ಡಳಿ** 'ಪಡ್ಡಳಿ₁' ನೋ.

**ಫಣ₁** 'ಪಣವು₁' ನೋ.

**ಫಣ₂** 'ಬಣ್ಣ' ನೋ.

**ಫಣ₃** (ನಾ). ಹಾವಿನ ಹೆಡೆ : "ಫಣಃ, ಫಣಾ, ಫಟಾ – ಈ ೩ ಹಾವಿನ ಹೆಡೆ" (ಹಲಾಯು. ೦೦೫-೦೯) ; ಫಣಮಯ್ದುಂ ಪಡೆದಂ ತನಗೆಣೆವಡೆದಂ ಶೇಷನುರ್ವಿಯಂ ತಾಳ್ದನೆನಲ್ . . . ಕಣ್ಬೊಣಾರಂ ತಣಿಪಿದುದು ಭುಜಯುಗಂ ರಘುಸುತನಾ (ಕಂರಾಪೂ. ೦೨-೦೪) ; ಫಣವ ಮೆಟ್ಟಿ ಬಾಲವ ಕೈಯಲಿ ಪಿಡಿದು ಘಳಘಳಿಸುತ್ತಾತ ನಾಟ್ಯವನಾಡೆ (ಪುರಂದ. ೨-೦೦೩-೨) ; ಸಹಸ್ರಫಣಗಳುಳ್ಳ ಶೇಷನೇ ವಿಶ್ವದ ಸ್ವಾಮಿಯಾದ ಲಕ್ಷ್ಮಣನಿರುವನು (ತುಳಸೀ. ೦೪೬). [ಸಂ.]

**ಫಣಕಟ್ಟು** 'ಪಣಕಟ್ಟು₂' ನೋ.

**ಫಣಗೆಲಸ** (ನಾ). ಒಂದು ಪಂಗಡಕ್ಕೆ ಸೇರಿದ ಕೆಲಸ ; ಗಾಣದವರ ಕೆಲಸ : ತೇಲಿಗರ ಮಗ ನಾನು ಫಣಗೆಲಸವ ಬಲ್ಲೆಯುಂಬಲಿ ನೀಡಿ ಸಲಹೆನೆ ಸುದ್ದಿ ಕೇಳುತ ಕರದು ತಂದನು ಮನೆಗೆ ಕಲಿಶೆಟ್ಟಿ (ರೇವಣಾ. ೨-೨೫). [ಫಣ₂ (<ಬಣ್ಣ ) + ಕೆಲಸ]

**ಫಣಪರ** (ನಾ). [ಜ್ಯೋತಿ] ಲಗ್ನದಿಂದ ಎರಡು, ಐದು, ಎಂಟು ಮತ್ತು ಹನ್ನೊಂದನೆಯ ಸ್ಥಾನಗಳ ಸಂಜ್ಞೆ, — ಸಂಕೇತ : ಉದಯದಶಾಸ್ತಮಯ ಚತುರ್ಥದೆಡೆಗೆ ಕೇಂದ್ರಂ ಚತುಷ್ಟಯಂ ಕಂಟಕ ಮೆಂಬುದು ಸಂಜ್ಞೆ ತತ್ಪರಂ ತಾನದು ಫಣಪರಮದಱ ಪರಮದಾಪೋ ಕ್ಲೀಬಂ (ಜಾತಕತಿ. ೦-೩೬). [ಸಂ. ?]

**ಫಣಭೃತ್ತು** (ನಾ). ೧. ಹೆಡೆಯುಳ್ಳದು ; ನಾಗರಹಾವು. ೨. ಹಾವು : "ವಿಷಧರಃ . . . ಫಣಭೃತ್ . . . ಭುಜಂಗಮಃ — ಈ ೨೫ ಹಾವಿನ ಪೆಸರ್" (ಹಲಾಯು. ೦೦೫-೦೬). [ಸಂ. ಫಣಭೃತ್]

**ಫಣಮಣಿ** (ನಾ). ಹಾವಿನ ಹೆಡೆಯಲ್ಲಿರುವ ರತ್ನ : ಚೂಡಾಮಣಿಗೆಱಗೆ ಚಕ್ರಿಪದದೊಳ್ ಫಣಮಣಿ ಪುನರುಕ್ತಿ ಪಾಂಡ್ಯಪತಿಗಾಯ್ತಾಗಳ್ (ಶಾಂತಿಪು. ೦೧-೯). [ಸಂ.]

**ಫಣಸ್ತ** (ನಾ). ಗುಂಪು ; ವರ್ಗ : ಪಣಕಟ್ಟು : ಈಯುಭಯಪೇಟೆ ಸೆಟ್ಟಿ ವರ್ತಕರು ವುುಂತಾದ ಸಕಲ ಫಣಸ್ತರಿಂದ ಕುಳ ೧ಕ್ಕೆ × × ಅಡ್ಡ ವಾದೆ×ವೆ ೧ ಕ್ಕೆ ೧ ವಂದು ಹಣ . . . ಕೊಡುವ ಪ್ರಕಾರ ಸರ್ವಜನ ಸಮ್ಮತಿಯಿಂದ ದಾನಪತ್ರ ಬರಸಿಕೊಟ್ಟು (ಎಕ. IX, ಹೊಸಕೋ. ೧೧೩-೧೩ ; 1693). [ಫಣ್ (<ಬಣ್ಣ) + – ಸ್ತ]

**ಫಣಾಧರ** (ನಾ). = ಫಣಭೃತ್ತು ೨ : "ಫಣಾಧರನಕ್ಷಿಕರ್ಣಂ . . . ವ್ಯಾಳನೆನಲು ಸರ್ಪಂಗೆ ನಾಮಂ" (ಚುಂಗಣ. ೧೧೯-೧). [ಸಂ.]

**ಫಣಾಪತಿ** (ನಾ). ಸರ್ಪಗಳ ಒಡೆಯ ; ಆದಿಶೇಷ : ಅದು . . . ಬಹುವಿಷಧರವೆಂದೊದವಿದ ಮಹತ್ವದಿಂದಿಟ್ಟುದು ಧನಪತಿ ದಿವಿಜಪತಿ ಫಣಾಪತಿಪುರವಂ (ಕೃಷ್ಣಕ. ೨-೩೩). [ಸಂ.]

**ಫಣಾಮಣಿ** (ನಾ). = ಫಣಮಣಿ : ಧರೆ ಫಣವೆಂಬೆನೆ ನಾಗೇಂದ್ರನ ಫಣಾಮಣಿಯ ಮೇಲಡಗಿತ್ತು (ಬಸವ. ೬೬೬) ; ಫಣಿಯ ಫಣಾಮಣಿಯುಂ ವಾರಣರದಮುಂ . . . ಅತಿಕೃಪಣನ ಪಣಮುಂ ಬಾಟಲ್ಕೆ ಸಾರವಾರುಮನೆಂದುಂ (ರಾಜಾವ. ೧-೪೯). [ಸಂ.]

**ಫಣಾರತ್ನ** (ನಾ). = ಫಣಮಣಿ : ದೀಪದೊಳ್ ಪನ್ನಗಪತಿಯ ಫಣಾರತ್ನದೀಪಂ ವಿತಾನಾವಳಿಯೊಳ್ ದಿವ್ಯಂ ವಿತಾನಂ ತುಱುಗಿದುವಮರೇಂದ್ರಾರ್ಚನಕ್ಕೆ (ಆದಿಪು. ೧೬-೨) ; ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ (ಗದಾಯು. ೧-೪೪) : ನಾನಾಫಣಾರತ್ನವೊಪ್ಪಿರೆ ಬಂದಂ ಮಱೆಯಂ ನಿವಾರಿಸಲನಂತಂಗುಂದನಂತೋರಗಂ (ಜಗಿ. ೩-೯). [ಸಂ.]

**ಫಣಿ** (ನಾ). ೧. ಹೆಡೆಯುಳ್ಳ ಹಾವು ; ಸರ್ಪ : "ಉರಗಂ ಭೋಗಿ ಸರೀಸೃಪಂ ಫಣಿ ಭುಜಂಗಂ ಚಕ್ರಿ ದರ್ವೀಕರಂ" (ಶಬ್ದಕೋ. ೧೯-೬) ; ಫಣಿ ಗರುಡಾಂಗದ ಪಕ್ಷಿಯ ಮಣಿಯಂ ಕಂಡಂತೆ (ಶಂಗಾಶಾ. ೪-೧೯) ; ಹುತ್ತಿನಿಂ ಫಣಿವೆರಸಿ ಕೆಡೆಯೆ ಕಂಡು (ಹಕಶಾ. ೧೨-೧೧) ; ಗರುಡ ಮೆಟ್ಟಿದ ಫಣಿಯ ಪೋಲ್ . . . ದುರುಳದಾನವ ವಾಸುಕಿ ಚೆಂತಿಸಿ ಮೂಗನಾಗಿರಲು (ಕಾಶಿರಾ. ೩೯-೨). ೨. ಆಶ್ಲೇಷ ನಕ್ಷತ್ರದ ಅಭಿಮಾನಿದೇವತೆ; ನಾಗ : ಸ್ವಾತಿ ಫಣಿ ಭರಣಿ ಶತಭಿಷ ಭೂತೇಶಂ ಜ್ಯೇಷ್ಠೆ ಮುಂಚೆ ಕಱೆದೊಡೆ ಮಱೆ ಧಾತ್ರೀತಳಕೆ ನೆಱೆಯೆ ಕಱೆಯದು (ಅಟ್ಟಮ.೯ ೧೧೬). ೩. ರಾಹು. ೪. (ಆಲಂ) ಬೆನ್ನಿನ ಮೇಲಾಗುವ ಒಂದು ಬಗೆಯ ಕುರು ; ಸರ್ಪಹುಣ್ಣು : ಬೆನ್ನ ಫ'ಳಿ' (ಣಿ)ಗೆ ಎನ್ನ ಕೇಳಬೇಡ ಅಂಗಾಲ ಹುಣ್ಣಿಗೆ ಎನ್ನ ಕೇಳಬೇಡ . . . ಮಿಕ್ಕಾದ ವ್ಯಾಧಿಗೆ ನಾನರಸು (ಸರ್ವಪ. ೦೨೬-೬೪೪). ೫. [ಗಣಿತ] ಮೂವತ್ತುಮೂರು ಅಂಕೆಗಳುಳ್ಳ ಒಂದು ದೊಡ್ಡ ಸಂಖ್ಯೆ : ಎಕ್ಕಂ ದಾಹಂ . . . ಫಣಿ ಮಹಾಫಣಿ ಕ್ರತು ಮಹಾಕ್ರತು ಸಾಗರ ಮಹಾಸಾಗರ ಪರಿಮಿತ ಮಹಾಪರಿಮಿತ — ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೯) ; ಎಕ್ಕಂ ದಾಹಂ . . . ಫಣಿ ಮಹಾಫಣಿ ಕ್ರತುಮಹಾಕ್ರತುವೆಂಬಿವೇ [೪] ಉಗಭುಡಣೆಗಳು (ಬಿವೇಳ. ೭). [ಸಂ. ಫಣಿನ್]

**ಫಣಿ₂** 'ಫಳಿ₂' ನೋ.

**ಫಣಿಕಟಕ** (ನಾ). ಹಾವುಗಳನ್ನೇ ಕಡಗವಾಗಿ ಉಳ್ಳವನು ; ಶಿವ : "ವಿರೂಪಾಕ್ಷಂ ಮೃಡಂ ಧೂರ್ಜಟಿ ಫಣಿಕಟಕಂ ವಾಮದೇವಂ ವೃಷಾಂಕಂ" (ಶಬ್ದಕೋ. ೩-೧೩) ; ಚಣಮರಾಳಕಗಮನೆ ಬಂದಳು ಫಣಿಕಟಕನಲ್ಲಿರ್ದ ಮಣಿಕಂಕಣಕರಾಂಬುಜೆ ಬಂದಳು (ಬಸವು. ೫೦-೧೧) ; ಅಂ ಪೋಗಿ ಫಣಿಕಟಕ ನಂಘ್ರಿಗೆಯೆರಗಲವರು ಮುತ್ತೈದೆಯಾಗೆಂದು ಪರಕೆಯನಿಯ್ಯಲು (ಪಪಮೋ. ೯-೫೭). [ಸಂ.]

**ಫಣಿಕುಂಡಲ** (ನಾ). ಹಾವಿನಿಂದಾದ ಕಿವಿಯ ಆಭರಣ : ಮೂಡಿದನು . . . ಫಣಿಕುಂಡಲದ ಪಂಚಮುಖದ ವಿಶ್ವನಾಥಂ (ಹಕಶಾ. ೧೩-೧೯). [ಸಂ.]

**ಫಣಿಕೇತನ** (ನಾ). ಹಾವಿನ ಚಿಹ್ನೆಯ ಧ್ವಜವುಳ್ಳವನು ; ದುರ್ಯೋಧನ : ಖತಿಯ ಹಿಡಿದನು ಶೌರಿ ಮಣಿಯದ ಮತಗುಡದ ಫಣಿಕೇತನನ ಕಂಡು (ಕುವ್ಯಾಉ. ೯-೩೬). [ಸಂ.]

**ಫಣಿಗೃಹ** (ನಾ). ಹಾವುಗಳ ನೆಲೆ ; ಹುತ್ತ : ಸುಖನಿಧಿ ಕಂಠೀರವವಿಷ್ಟರ ದಿನಧಿಕನವುರಾಲಯದಿಂ ಧೀರಂ ಫಣಿಗೃಹದಿಂದಂ ವೀರಂ (ಶಾಂತಿಪು. ೯-೨೦೦). [ಸಂ.]

**ಫಣಿಗೇಹ** (ನಾ). = ಫಣಿಗೃಹ : ಫಣಿಫಣಾಸ್ಫುರಿತಮಣಿದೀಪಿಕಾವ್ಯೂಹಮಂ ಕ್ವಣಿತಮಣಿಕಿಂಕಿಣೀನಿನದಫಣಿಗೇಹಮಂ . . . ನೋಡಿ (ಆದಿಪು. ೭-೨೭ ರಗಳೆ). [ಸಂ.]

**ಫಣಿಜ್ಝಕ** (ನಾ). ತುಳಸಿ, ಪುದಿನ ಮೊದಲಾದ ಸಸ್ಯಜಾತಿಗೆ ಸೇರಿದ ಗಿಡ ; ಬಿಳಿಮರುಗದ ಗಿಡ : " ಪಣಿಜ್ಝಕ—ಬಿಳೇಮರುಗದ ಗಿಡ " (ಗಂಗಾಮ. ೫). [ಸಂ.]

**ಫಣಿತಲ್ಪ** (ನಾ). ಹಾವನ್ನೇ ಹಾಸುಗೆಯನ್ನಾಗಿ ಮಾಡಿಕೊಂಡವನು ; ವಿಷ್ಣು : ಅಪ್ಪ ಬಾ ಫಣಿತಲ್ಪ ಬಾ . . . ಮಱಿಯಾನೆ ಬಾ ಮಾಣಿಕ್ಯ ಬಾ (ಕಾಶಿರಾ. ೧-೬೩). [ಸಂ.]

**ಫಣಿತಿ** (ನಾ). ಮಾತು ; ವಾಕ್ಕು : ವಿತತಕಲಾತತಿಯೊಳ್ ಪರಿಣತಿಯಂ ಸೂಚಿಸುವ ಸರಸಫಣಿತಿಗಳಂ ಸಂಗತವಾಗೆ ನುಡಿದೊಡಂ ದುರ್ಗತರವು ಕಾನನದ ಜೊನ್ನದಂತಿರೆ ವಿಫಲಂ (ಚೀಚಿಚುಂ. II, ೩೫೬). [ಸಂ.]

**ಫಣಿಧರ** (ನಾ). ಹಾವನ್ನು ಧರಿಸಿದವನು ; ಶಿವ : ಫಣಿಧರನಿಂ ಪಡೆದಂ ಗಡ ಪಣೆಗಣ್ಣಂ (ವೃಷಬಿ. ೧೩-೪೦). [ಸಂ.]

**ಫಣಿನಾಯಕ** (ನಾ). ಸರ್ಪಗಳ ಒಡೆಯ : ದಿವಿಜನೋ ಫಣಿನಾಯಕನೋ ಮನೋಭವನಿವಂ ಕರವೊಪ್ಪಿದಂ (ಕಬಿರಾ. ೧-೧೪೦) ; ನಿಜಾಂಗರುಚಿಯೊಳ್ . . . ಫಣಿನಾಯಕಂ ಕರಂ ಸೊಗಯಿಸಿದಂ (ಆದಿಪು. ೯-೧೧೧). [ಸಂ.]

**ಫಣಿನಿ** (ನಾ). ಹೆಣ್ಣು ಹಾವು ; ನಾಗಕನ್ಯೆ : ಕಾಲು ಸೋಂಕಿದ ಫಣವುಳ್ಳ ಫಣಿನಿಯು ಫಣವನೆತ್ತಿಕೊಂಡು ನಿಲ್ಲುವಂತೆ ಉನ್ಮಾದಿನಿಯಾದಾಯವನಿಯು ಮಸ್ತಕವನ್ನೆತ್ತಿಕೊಂಡು ನಿಂತು ' . . . ನೀನೆನ್ನವನೇ ಆಗಿರುವೆ' ಎಂದಳು (ಕಜಾಕುಂ. ೯೦). [ಸಂ. ಫಣಿನೀ]

**ಫಣಿನಿಲಯ** (ನಾ). = ಫಣಿಗೃಹ : ಫಣಿನಿಲಯಂ ಪರೀಕ್ಷಿಸುವೊಡಾಲದ ಮೂಡಣ ಮೆಯ್ಯೊಳಾಗೆ ತೆಂಕಣದೆಸೆಯುತ್ತಲಯ್ದುಪುರುಷಂಬರೆಗಂ ನೆಱೆ ತೋಡುಗುಪ್ಪುನೀರ್ (ಲೋಕೋಪ. ೫-೩೦). [ಸಂ.]

**ಫಣಿಪ** (ನಾ). ೧. ಹಾವುಗಳ ಒಡೆಯ ; ಆದಿಶೇಷ : ಪೊಡವಿಯಂ ಬಗಿವ ಫಣಿಪನನುಗಿವ ಜಲಧಿಯಂ ಕುಡಿವ . . . ಕಡುಗಲಿಗಳು (ಹಕಶಾ. ೧-೪೭). ೨. ಸರ್ಪಲೋಕದ ಒಡೆಯ : ಧಾತ್ರಿಪ ಫಣಿಪರೆ ಖೇಚರಪ ತ್ರಿದಶಪರೆಯ್ದೆ ವಿಶ್ವಕರ್ಮಂ ಬರೆದಂ ಚಿತ್ರಪಟಮಂ ದಲೆನೆ ಭುವನತ್ರಿತಯ ಕಾಣಲಾದುದಭವನ ಸಭೆಯೊಳ್ (ಶಾಂತಿಪು. ೯-೬೯). [ಸಂ.]

**ಫಣಿಪತಿ** (ನಾ). = ಫಣಿಪ ೧ : ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇೞ್ ಪರಿಕ್ಷಿಪಂಗೆಂಟೆರ್ದೆಯೇ (ಗದಾಯು. ೧-೪೪); ಜನನ ವಿಧಿಗಳ ಕೋಟಲೆಯನೆಣಿಸುವಡೆ ತಾಂ ಫಣಿಪತಿಗೆ ಹವಣಲ್ಲ (ಬಸವು. ೫೦-೬೫) ; ತಲೆವೊಱೆಯ ತೂಕದಲ್ಲಿ ಫಣಿಪತಿ ಬಳುಕತೊಡಗಿದ (ಕುವ್ಯಾಉ. ೧೧-೧೫). [ಸಂ.]

**ಫಣಿಪತಿಕೇತನ** (ನಾ). = ಫಣಿಕೇತನ : ಫಣಿಪತಿಕೇತನಧೂಮಕೇತುವುಂ ಪಾಂಡವಬಾಲಪ್ರದೀಪನುಂ . . . ಎನಿಸಿದ ಭೀಮಸೇನಂ (ಗದಾಯು. ೨-೧೪). [ಸಂ.]

**ಫಣಿಪತಿತಲ್ಪ** (ನಾ). = ಫಣಿತಲ್ಪ : ಪಡೆದ ವೈಭವದೇಳಿಗೆಯಲಿ ಪಾಲ್ಗಡಲ ನಡುವಸೆವ ಫಣಿಪತಿತಲ್ಪನಂ . . . ಮೆಚ್ಚಿಸುವ ಬೆಡಗುವಡಿಪ ಸೋಲಿಸುವ ವೇಶ್ಯಾಂಗನೆಯರೆಸೆದಿರ್ದರು (ಬಿಕ್ಷಾಕ. ೨-೧೬). [ಸಂ.]

**ಫಣಿಪಾಶ** (ನಾ). [ಕಾಮಶಾ] ರತಿಬಂಧಗಳಲ್ಲಿ ಒಂದು ; (ಹಾವುಗಳಂತೆ ಹೆಣೆದುಕೊಳ್ಳುವ) ಒಂದು ಬಗೆಯ ಆಲಿಂಗನ ; ನಾಗಬಂಧ : ಕೃತಬಂಧುರಿತಕ್ರೀಡಾಮತದೆ ತಗುಳ್ದಬಲೆ ತನ್ನ ಜಾನುದ್ವಯ ನಿರ್ಗತ ಹಸ್ತದ್ವಿತಯವ್ಯಾಪೃತೆಯಂ ನೆಗಳ್ದೊಂದೆ ಕಾಂತನೊಳ್ ಫಣಿಪಾಶಂ (ಮತ್ಸ್ಯಪು. ೦೪–೨೪); ಮೆಲ್ಲನೆ ಮಲಗಿರ್ದವಳಂ . . . ತನ್ನೆರಡು ಕೈಗಳಂ ಮೊಳಕಾಲ ಕೆಳಗಿಕ್ಕಿಯಿರಲಾಗಿ ಪುರುಷ ತನ್ನೆರಡು ಕೈಗಳಿಂ ಅವಳ ಕೈಗಳಂ ಮಲಕಿಕ್ಕಿ ಮೊಳಕೈವಳಗಿಕ್ಕಿ ಕೊರಳಂ ತಕ್ಕಿಸಿ ರಮಿಸಲ್ಕೆ ಫಣಿಪಾಶಮೆಂಬ ಕರಣಂ (ಕಾಮಶಾ. ೨೩೬). 'ನಾಗಪಾಶಕರಣ' ಪರಾ. [ಸಂ.]

**ಫಣಿಪೇಂದ್ರ** (ನಾ). = ಫಣಿಪ ೧ : ಮಂದರಗಿರಿಯಾದುದು ಗಡ ಧನು ಫಣಿಪೇಂದ್ರನು ಹೆದೆಯಾದ ಗಡ ಸಂದ ಮುಕುಂದನಾದನು ಬಾಣವೆಂಬುದು ಸಂದೇಹವೇನಲ್ಲದಿಹುದೆ (ಶ್ರೀಕೃಸಾಂ. ೬–೨೭). [ಸಂ.]

**ಫಣಿಭುಕ್ಕು** (ನಾ). ೧. ಸಣ್ಣ ಹಾವುಗಳನ್ನು ತಿಂದು ಬದುಕುವ ಒಂದು ಬಗೆಯ ದೊಡ್ಡ ಹಾವು : "ಫಣಿಭುಗ್ರಾಜಫಣೆಯೆನಲ್ಕರವಾವು" (ಮುಂಗರಾ. ೦೦೩–೩). ೨. ನವಿಲು. ೩. ಗರುಡ. [ಸಂ. ಫಣಿಭುಜ್]

**ಫಣಿಭೋಗ** (ನಾ). ಹಾವಿನ ಸುರುಳಿ, – ಮಂಡಲ : ಅಡವಿಯಲಿ ಫಣಿಭೋಗದಲಿ ಬಿಗಿವಡೆದು ಬಳಲಿದ ಭೀಮಸೇನನ ಬಿಡಿಸಿದನು ಯಮಸೂನು ಧರ್ಮಕಥಾಪ್ರಸಂಗದಲಿ (ಕುವ್ಯಾಕು. ೦೩ ಸೂಚನೆ). [ಸಂ.]

**ಫಣಿಯಾಲ** 'ಪಣಿಯಾಲ' ನೋ.

**ಫಣಿರಾಜ** (ನಾ). = ಫಣಿಪ ೧ : ಫಣಿರಾಜಂ ಬಾರಿಯಿಟ್ಟಿಟ್ಟಿದೊಡನು ದಿನಂ ಬರ್ಪ ಸರ್ಪಂಗಳಂ ಬಲ್ಕಣಿ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಗಿರಿಯೋಳಿರ್ಪಂ (ಕಾವ್ಯಾವ. ೬೦೦) ; ಫಣಿರಾಜನಂ ಶಶಿಚೂಡನಿಕ್ಕಿದನೊಂದು ಬೆರಳಿಗೆ ಮುದ್ರಿಕೆಯು ತೆಜಿದಿ (ಜಕ್ಕಿ. ೩೪–೩೩). [ಸಂ. ಫಣಿರಾಜನ್]

**ಫಣಿರಾಜಕೇತನ** (ನಾ). = ಫಣಿಕೇತನ : ಕಮಲಾಕರದಿಂ ಪೊಜಮಟ್ಟ ನಾಗಳಂ ಭುಜಯುಗತೋರಣಾಯಿತಗದಾಪರಿಘಂ ಫಣಿರಾಜಕೇತನಂ (ಗದಾಯು. ೬–೨೭). [ಸಂ.]

**ಫಣಿರಾಜನಂದನೆ** (ನಾ). ಸರ್ಪರಾಜನ ಮಗಳು; ಆದಿಶೇಷನ ಮಗಳು: ಫಣಿರಾಜನಂದನೆಯುಲೂಪಿ . . . ಮೂರ್ಛಿತರಾಗಿ ಸಮರಧಾರಿಣಿಯೋಳಿಹ ದೊರೆಗಳಂ ತರಿಸಿ ಮಂತ್ರೌಷಧಗಳಿಂದೆ ಪಾಲಿಸುತಿರ್ದಳು (ಕೈಜಿಭಾ. ೨೩–೪). [ಸಂ. ಫಣಿರಾಜನಂದನಾ]

**ಫಣಿರಾಜಶಯನ** (ನಾ). = ಫಣಿತಲ್ಪ: ಸರಸಿರುಹನಯನ ಫಣಿರಾಜಶಯನ . . . ವರಕೌಸ್ತುಭಾಭರಣ ಸಲಹು (ಕೈಜಿಭಾ. ೨–೩೦). [ಸಂ.]

**ಫಣಿರ್ಜಕ** (ನಾ). = ಫಣಿಜ್ಝಕ : "ಫಣಿರ್ಜಕಂ ಮರು ಮರುವಕಂ" (ವಸ್ತುಕೋ. ೩೭–೨೩): "ಮರು ಮರುವಕಂ ಫಣಿರ್ಜಕವಕ್ಕು" (ಮುಂಗರಾ. ೩೪–೨೭). [ಸಂ.]

**ಫಣಿಲೋಕ** (ನಾ). ಸರ್ಪಲೋಕ; ನಾಗಲೋಕ: ಅನಿಮಿಷಲೋಕಮುಂ ವಿಬುಧರಿಂ ಫಣಿಲೋಕಮನುಗ್ರನಾಗಸಾಧನದಿಂ . . . ಅದೇನನುಕರಿಸಿತ್ತೊ ರಾಜಭವನಂ (ಶಾಂತಿಪು. ೩–೦೨); ಗಗನವಿತತನ ನಾಭಿ ದಶದಿಕ್ಕುಗಳು ಕಿವಿ ಫಣಿಲೋಕ ವಿಮಲಾಂಘ್ರಿಗಳು ಧ್ರುವನಿಂ ಮೇಲುಭಾಗ ಮ್ಮುರಾಂತಕನ ಮುಕುಟ (ಕುವ್ಯಾಸ. ೯–೨೩). [ಸಂ.]

**ಫಣಿವೇಣಿ** (ನಾ). ಹಾವಿನಂತೆ ಜಡೆಯುಳ್ಳವಳು ; ನಾಗವೇಣಿ : ರಕ್ಕಸು ವಿನುತ ಗೀರ್ವಾಣಿ ಫಣಿವೇಣಿ ಶರ್ವಾಣಿ ಶಿವನ ರಾಣಿ (ಉದ್ಭರೇ. ೩–೪); ಅಜನ ಪಟ್ಟದ ರಾಣಿ ವರದೆ ಕಲ್ಯಾಣಿ ಫಣಿವೇಣಿ ವಾಣಿ . . . ಸುಮತಿಯು ತಾಯೆನಗೆ (ಕೈಜಿಭಾ. ೦–೪). [ಸಂ. ಫಣಿವೇಣೀ]

**ಫಣಿಶಯನ** (ನಾ). = ಫಣಿತಲ್ಪ : ರಕ್ಷಿಪುದೀ ಕಾಳಿಯ ಫಣೀಂದ್ರನಂ ಫಣಿಶಯನಾ (ಜಗಪ. ೩–೦೦೪). [ಸಂ.]

**ಫಣಿಶಾಯಿ** (ನಾ). = ಫಣಿತಲ್ಪ: ದಯೆ ಮಾಡಿ ಸಲಹಯ್ಯ . . . ಫಣಿಶಾಯಿ ಅವಗುಣವ ನೋಡದೇ ಚರಣಸ್ಮರಣೆಯ ಮಾಡುವಂಥ ಭಕುತಿಯನಿತ್ತು (ಹರಿಂದ. ಶಾ. ೨೦–೬೪–೧). [ಸಂ. ಫಣಿಶಾಯಿನ್]

**ಫಣೀಂದ್ರ** (ನಾ). ೧. ಹಾವು ; ಸರ್ಪ : ಫಣೀಂದ್ರವ್ಯಂದಂ . . . ಒಪ್ಪಿತಾ ಶ್ರೀಹೇತ್ರನುತ್ತುಂಗಸಭಾಂತರಾಳದೊಳ್ (ಉದ್ಭಟ. ೦೨–೦೨೪). ೨. = ಫಣಿಪ ೧ : ಮತ್ತಹಸ್ತಿಗಳ ಮಸ್ತಕದಿಂ ಬಿದಿರಿಂ ಫಣೀಂದ್ರೋತ್ತಮಾಂಗದಿಂ . . . ಒಕ್ಕೆಳವುಮುತ್ತನಾಯುತ್ತುಮಿರ್ಪ ಶಬರಪ್ರಿಯಕಾಮಿನಿಯರ್ಕಳಂ (ಕಾವ್ಯಾವ. ೦೦೪); ಅವಧರಿಸಲೆ ಫಣೀಂದ್ರ ಭೂಮಂಡಲದ ರಾಯರೊಳ್ಪಾಂಡುಸುತ ಕೌರವರ್ಗಾದುದಾಹವಂ (ಕೈಜಿಭಾ. ೨೪–೦೬). [ಸಂ.]

**ಫಣೆ**[1] 'ಪಣೆ' ನೋ.

**ಫಣೆ**[2] (ನಾ). ಹಾವಿನ ಹೆಡೆ; ಫಣ : "ಫಣಃ, ಫಣಾ, ಫಟಾ—ಈ ೩ ಹಾವಿನ ಹೆಡೆ" (ಹಲಾಯು. ೦೦೩–೦೪). [ಸಂ. ಫಣಾ]

**ಫಣೆಕಟ್ಟು** 'ಪಣೆಗಟ್ಟು' ನೋ.

**ಫಣೆಗಣ್ಣು** 'ಪಣೆಗಣ್' ನೋ.

**ಫಣೇರಪೆಟ್ಟಿಗೆ** (ನಾ). ಬಾಚಣಿಗೆ, ಕುಂಕುಮದ ಭರಣಿ, ಕನ್ನಡಿ ಮೊದಲಾದುವನ್ನು ಇಡುವ ಪೆಟ್ಟಿಗೆ : ಅಳಿಯತನದಲ್ಲಿ . . . ಬೇಕಾದರೆ ಒಂದು ಫಣೇರಪೆಟ್ಟಿಗೆಯನ್ನೇ ಬೇಡಲು ನಿನ್ನ ಮಗನಿಗೆ ಹೇಳು (ರಾಹುಚ. ೩೩).
[ಫಣೇರಂ (ಪ್ರ ←ಮರಾ. ಫಣೇರೇ = ಕನ್ನಡಿ, ಬಾಚಣಿಗೆ ಮೊದಲಾದುವನ್ನಿಡುವ ಚೀಲ) + ಪೆಟ್ಟಿಗೆ]

**ಫಣ್ಯಾಕಲ್ಪ** (ನಾ). ಹಾವುಗಳನ್ನೇ ಆಭರಣವಾಗುಳ್ಳವನು ; ಶಿವ : ಲುಪ್ತಾಘನ ಫಣ್ಯಾಕಲ್ಪನ ನತಫಣಿತಲ್ಪನ . . . ಸನ್ನುತಿಪೆಂ (ಉದ್ಭರೇ. ೪–೦). [ಸಂ.]

**ಫತ್ತೆ** (ನಾ). ಗೆಲವು; ವಿಜಯ : ಇಂಗ್ರೇಜಸರಕಾರಕ್ಕೆ ಫತ್ತೆ ಆದ ಸಂತೋಷದ ಬಗ್ಗೆ ಮಡಿಕೇರಿ ಕೋಟೆಯಲ್ಲಿ ಇಪ್ಪತ್ತೊಂದು ಫರಂಗಿ ಹಾರಿಸಿದರು (ರಾಜೇಂದ್ರ. ೦೪೨).
[← ಅರ. ಹಿಂ. ಫತಹ್; ಮರಾ. ಫತೇ, ಫತ್ತೇ]

**ಫತ್ತೆಮಾರಿ**, ಪತ್ತೇಮಾರಿ, ಫತ್ತೇಮಾರಿ (ನಾ). ಒಂದು ಬಗೆಯ ದೊಡ್ಡ ನಾವೆ,—ದೋಣಿ : ಎಲ್ಲಕ್ಕೂ ದೊಡ್ಡನಾವೆಗೆ ಫತ್ತೆಮಾರಿ ಯೆಂದೆನ್ನುವರು (ಕಥಾಗ. ೩೦೭); ಈ ದೇಶದ ವ್ಯಾಪಾರಸ್ಥರು ಫತ್ತೆಮಾರಿಗಳಲ್ಲಿಯೂ ಬಗಲಗಳಲ್ಲಿಯೂ ಸರಕುಗಳನ್ನು ತುಂಬಿಕೊಂಡು . . . ಸಮುದ್ರಪ್ರಯಾಣ ಮಾಡುತ್ತಿದ್ದರು (ಮುಂಜಾಯು. ೩–೦೦೬). **ಫತ್ತೇಮಾರಿ:** ಆ ದಳವಾಯಿಗೂ ಆ ಐದುಸಾವಿರ ಕೊಡಗರಿಗೂ ಪತ್ತೇಮಾರಿ ಮೇಲೆ ಹಾಕಿಸಿ . . . ಕುಂಬಳೆತಾಲ್ಲೂಕಿನಲ್ಲಿ ಇಳಿಸಿಬಿಟ್ಟರು (ರಾಜೇಂದ್ರ. ೦೨). **ಫತ್ತೇಮಾರಿ :** ಫತ್ತೇಮಾರಿಯಲ್ಲಿ ೧೫೦ರಿಂದ ೫೦ ಟನ್ನಿನ ವರೆಗೆ ಮಾಲು ಹೇರುವರು (ಕಥಾಗ. ೩೦೭). [←ಮರಾ. ಫತ್ತೇಮಾರೀ, ಫತೇಮಾರಿ]

**ಫತ್ತೇಮಾರಿ** 'ಫತ್ತೆಮಾರಿ' ನೋ.

**ಫನ** (ನಾ). ಸಂಪೂರ್ಣ ಹಾಳು ; ಸರ್ವನಾಶ : ಅವನ್ನ ಸ್ವಲ್ಪ ನಮ್ಮ ಬಲಿಗ್ಹಾಕ್ಕೊಂಡ್ರೆ? . . . ರಾಮಣ್ಣೋರ ಕಡೆ ಕೇಸ್ನ ಫನ ಮಾಡ್ಬಿಡಬಹುದು (ರಂಚಿಕ. ೨೦); ಮನೆ ಅಥವಾ ಹೋಟೇಲಿನ ಹಿಂಬದಿಯ ಜಗಲಿಯಲ್ಲಿ ಅದರ ಫನಾ ನಡೆಯುತ್ತದೆ (ಕಥಕ. ೦೦೩).
[←ಅರ. ಹಿಂ. ಫನಾ; ಮರಾ. ಫನಾ, ಫನ್ನಾ]

**ಫರ** (ನಾ). ಗುರಾಣಿ; ಢಾಲು. [ಸಂ.]

**ಫರಂಗಿ** 'ಫಿರಂಗಿ' ನೋ.

**ಫರಂಗಿಮಣೆ**, ಪರಂಗಿಮಣೆ (ನಾ). ತಪ್ಪು ಮಾಡಿದವನನ್ನು ಕುರ್ಚಿಯ ಆಕಾರದಲ್ಲಿ ಕೂರಿಸುವ ಒಂದುಬಗೆಯ ಶಿಕ್ಷೆ; ಕುರ್ಚಿ ಕೂರಿಸುವುದು:

ಏತ ಹಾಕುವುದು. ಫರಂಗಿಮಣೆಯಲ್ಲಿ ಕುಳಿತುಕೊಳ್ಳುವುದು ಮೊದಲಾದ ಖಗಳ ಒಂದೊಂದು ಭಯಂಕರಶಿಕ್ಷೆಯನ್ನನುಭವಿಸಿದವರು ಮತ್ತೊಮ್ಮೆ ಓದಿಗೆ ಕಳ್ಳಮನಸ್ಸನ್ನು ಮಾಡುತ್ತಿರಲಿಲ್ಲ (ಕುರುಕ್ಷಾ. ೬೮); ಕೋದಂಡ, ಫರಂಗಿಮಣೆ—ಇವುಗಳ ಶಿಕ್ಷೆಯೊಂದಿಗೆ . . . ಯಕ್ಷಗಾನಗಳನ್ನು ಅಲ್ಲಿ ಹೇಳಿಕೊಡುತ್ತಿದ್ದರು (ಹುತುಜ. ೧೬). **ಪರಂಗಿಮಣೆ :** ಆ ದಿನ ಅವನನ್ನು ಅಧ್ಯಾಪಕರು ಪರಂಗಿಮಣೆ ನಿಲ್ಲಿಸಿದ್ದರು (ಅವಾಳ. ೦೪೪) ; ಪರಂಗಿಮಣೆ, ಉಬ್ಬೆಗಳಿಗಾಗಿ . . . ನಮ್ಮ ಶಾಲೆ ಇತ್ತಂತೆ (ಜೂಜಸಂ. ೫೬).

[← ತುಳು. ಪರಂಗಿಮಣೆ]

**ಫರಕ** 'ಫರಕು' ನೋ.

**ಫರಕು, ಫರಕ** (ನಾ). ಹೆಚ್ಚುಕಡಮೆ; ವ್ಯತ್ಯಾಸ; ಭೇದ ; ಅಂತರ : ಅದಕ್ಕೂ ಭೀಮಸೇನಾಚಾರ್ಯ ಕೊಟ್ಟ ಕುಂಡಲೀಗೂ ತುಸು ಫರಕು ಅದ (ಸವಃಜೀ. ೨೫೪). **ಫರಕ :** ಮೂರುರೂಪಾಯಿಯ ಬದಲಿ ಈಗ ಒಂದು ಒಂದುವರೆ ರೂಪಾಯಿಯ ಫರಕವನ್ನು ತೋರುತ್ತದೆ (ಮುಂಬಹ್ಯಾ. ೨೬೪). [←ಅರ. ಫರ್ಕ್; ಹಿಂ. ಮರಾ. ಫರಕ್]

**ಫರಜು, ಫರ್ಜು** (ನಾ). [ಸಂಗೀತ] ಒಂದು ರಾಗದ ಹೆಸರು : ಚಿಂತಾಮಣಿ . . . ಫರಜು ಮುಂತಾದ ಕಷ್ಟರಾಗಗಳಲ್ಲಿ ಕೃತಿರಚನೆ ಮಾಡಿ ಶಾಸ್ತ್ರಿಗಳು . . . ಮಾರ್ಗದರ್ಶಕರಾಗಿದ್ದಾರೆ (ಸಂಗೀಹಂ. ೨೪೪) ; ಹಿಂದಿನವರು ಹಾಡುತ್ತಿದ್ದ ಧಾಟಿಗಳು—ಫರಜು, ಕಾಪಿ, ಖಮಾಚು, ಮಧ್ಯಮಾವತಿ, ಆನಂದಭೈರವಿಯಂಥ ರಾಗಗಳಿಂದ ಕೂಡಿದ್ದುವು (ಕಾಪಗೀ. ೦೦೬). **ಫರ್ಜು :** ರಾಗ ಫರ್ಜು. ಆದಿತಾಳ (ಹವುಹು. ೦೮).

[←ಹಿಂ. ಪರಜ್, ಫರ್ಜ್; ಮರಾ. ಪರಜ್]

**ಫರದೆ** 'ಪರದೆ' ನೋ.

**ಫರಫರೆ** (ನಾ). ಮಂಟಪ ಮೊದಲಾದುವುಗಳಲ್ಲಿ ಅಲಂಕಾರಕ್ಕಾಗಿ ಕಟ್ಟುವ ತೆಳುವಾದ ಕಾಗದಗಳ ತೋರಣ : ಅವರಿಂದಲೇ ಕಾಗದದ ಫರಫರೆಗಳನ್ನು ದೊರಕಿಸಿದಳು (ಗಂಪಜಾಯ. ೦೩೨). [?]

**ಫರಮಾನಾ** 'ಫರ್ಮಾನು' ನೋ.

**ಫರಮಾನು** 'ಫರ್ಮಾನು' ನೋ.

**ಫರಮಾಯಿಶಿ** 'ಫರಮಾಯಿಷಿ' ನೋ.

**ಫರಮಾಯಿಷಿ, ಪರಮಾಯಿಷಿ, ಪರಮಾಶಿ, ಫರಮಾಯಿಶಿ, ಫರಮಾಶಿ** (ಗು). ೧. ಅಪ್ಪಣೆಯಂತೆ ಸಿದ್ಧಪಡಿಸಿದ ; ಹೇಳಿ ಮಾಡಿಸಿದ. ೨. ಅತ್ಯುತ್ತಮವಾದ ; ಸೊಗಸಾದ ; ಉತ್ಕೃಷ್ಟವಾದ : ಸರ್ಕಾರಕ್ಕೆ ಫರಮಾಯಿಷಿ ಜಿನಿಸಿ ಮುಂತಾದುದನ್ನು ಕಳುಹಿಸತಕ್ಕ ವಿಷಯ (ಮುಹಾಪಂ. II, ೫೮). **ಪರಮಾಯಿಷಿ :** ೨. ಪ್ರಮಿಳೆ . . . ಪರಮಾಯಿಷಿ ಉಪ್ಪಿಟ್ಟಿಗೆ ಬಾಯಲ್ಲಿ ನೀರೂರಿಸಿಕೊಂಡು ಹಾರಿಹೋದಳು (ಮಾಮಚ. ೦೨). (ನಾ). ೩. ಇಷ್ಟವಾದುದು : ಬೈರಾಗಿಗೆ ಅವನ ಸಂಗೀತ ತುಂಬ ಪರಮಾಯಿಷಿ ! (ಮರುಣ. ೬೪). **ಪರಮಾಶಿ :** ೨. ಓಹೋ, ಇದೇಯೊ ನಿನ್ನ ಪರಮಾಶಿ ಮೀನು ? (ಜಗುಬ. ೮೫) ; ನಾಗಪ್ಪಯ್ಯನಿಗೂ ಸುಬ್ಬಣ್ಣವೈದ್ಯರಿಗೂ ಪರಮಾಶಿ ಜೋಡಿಯಂತೆ (ಸ್ವಕ್ಷಹೂ. ೬೬). ೪. ಸೊಗಸಾದುದು ; ಶ್ರೇಷ್ಠವಾದುದು : ನಸ್ಯ ಒಳ್ಳೆಯ ಪರಮಾಶಿಯದು (ಬೈಸರ್ವ. ೯೬). **ಫರಮಾಯಿಶಿ :** ೨. ನಮ್ಮ ಮಾವ ಊರಿನಿಂದ ಫರಮಾಯಿಶಿ ಮಾವಿನ ಹಣ್ಣುಗಳನ್ನು ತಂದಿದ್ದಾರೆ (ಕೂಶಿ). **ಫರಮಾಶಿ :** ೨. ಫರಮಾಶಿ ನೆಂಟುತನ (ಸ್ವಕ್ಷಹೂ. ೨೨೦).

[←ಪಾರ. ಹಿಂ. ಫರ್ಮಾಇಶೀ ; ಮರಾ. ಫರಮಾಶೀ, ಫರಮಾಸೀ, ಫರ್ಮಾಶೀ, ಫರ್ಮಾಸೀ]

**ಫರಮಾಯಿಸು** 'ಫರ್ಮಾಯಿಸು' ನೋ.

**ಫರಮಾಶಿ** 'ಫರಮಾಯಿಷಿ' ನೋ.

**ಫರಮಾನು** (ನಾ). ಒಂದು ಬಗೆಯ ದೀಪ (?) : ಇಲಾಲುಗಳು, ಫರಮಾನುಗಳು, ಅದಕ್ಕೆ ಬತ್ತಿ ಎಣ್ಣೆ ಸಹಾ . . . ಕಳುಹಿಸಬೇಕೆಂದು ಅಪ್ಪಣೆಯಾಯಿತು (ಕೂಹುಣ. ೬೫). [?]

**ಫರವಾನೆ** 'ಪರವಾನೆ' ನೋ.

**ಫರಶಿ** 'ಫರಸಿ' ನೋ.

**ಫರಶಿಕಲ್ಲು** 'ಫರಸುಗಲ್ಲು' ನೋ.

**ಫರಸಿ, ಫರಶಿ, ಫರಸು** (ನಾ). ೧. ಗಾರೆಯಿಂದ ಅಥವಾ ಹಾಸುಗಲ್ಲುಗಳಿಂದ ಸಿದ್ಧಪಡಿಸಿದ ನೆಲ : ನಾನು ಫರಸಿಯ ಮೇಲೆಯೆ ಕಂಬಳಿ ಹಾಸಿಕೊಂಡು ಮಲಗುತ್ತೇನೆ (ಕಾರಕ. ೯೩). ೨. ನೆಲಗಟ್ಟಿಗೆ ಉಪಯೋಗಿಸುವ ಹಾಸಂಗಲ್ಲು : ಕಲ್ಲಿನ ಫರಸಿ ಹಾಕಿ ಸಿದ್ಧಗೊಳಿಸಿದ ದೊಡ್ಡ ಪಡಸಾಲೆ (ಚೀಕಮು. ೦೨). **ಫರಶಿ :** ೨. ೫೩ ಪೊಹರೆಗಳು (ಪಾವರೆಗಳು) ೫೪ ಫರಶಿಗಳು (ಮುಂಬಹ್ಯಾ. ೦೦೨). 'ಫರಶಿಕಲ್ಲು' ಪರಾ. **ಫರಸು :** ೧. ಗೋಡೆಗಳಿಗೆ ಗಿಲಾಯಿ ಮಾಡಿಸುವದು, ಫರಸು ಮಾಡುವದು . . . ಇತ್ಯಾದಿ ಕೆಲಸ ಪ್ರಾರಂಭವಾಯಿತು (ಕಂದುಬ. ೯೩).

[← ಅರ. ಫರ್ಶ್ ; ಮರಾ. ಫರಶೀ]

**ಫರಸು** 'ಫರಸಿ' ನೋ.

**ಫರಸುಗಲ್ಲು, ಪರಸಿಗಲ್ಲು, ಫರಶಿಗಲ್ಲು** (ನಾ). ನೆಲಗಟ್ಟು, ಕಟ್ಟೆ, ಜಗಲಿ ಮೊದಲಾದುವುಗಳಿಗಾಗಿ ಬಳಸುವ ಹಾಸುಗಲ್ಲು : ಫರಸುಗಲ್ಲಿನ ಬೀದಿಯ ಮೇಲೆಲ್ಲ ಮಣಗಟ್ಟಲೆ ಮೀನುಗಳು ಸೂರೆಯಾಗಿದ್ದುವು (ಚಕುಗಾ. ೯). **ಪರಸಿಗಲ್ಲು :** ಅವಳು ಪರಸಿಗಲ್ಲಾಗಿ ತನ್ನ ಮೈಯನ್ನು ಎಂದಿನಂತೆ ಅದಕ್ಕೆ ಮತ್ತೆ ಒಡ್ಡಿದಳು (ಶಿರಾಶ. ೫೩). **ಫರಶಿಕಲ್ಲು :** ಆ ಜಾಗದಾಗ ತುಸಾ ದೂರಾ ನಾಕಾರು ಫರಶಿಕಲ್ಲು ಒಗೆ (ಕಮ್ಮಟ. ೨೮).

[ ಫರಸು (< ಫರಸಿ ) + ಕಲ್ಲು (< ಕಲ್$_3$) ]

**ಫರಮೋಷಿ, ಪರಮೋಶಿ, ಪರಾಮೋಶಿ** (ನಾ). ಅಜಾಗ್ರತೆ ; ಕಣ್ಣು ತಪ್ಪಿ ಆದ ತಪ್ಪು : ಫರಾಮೋಷಿಯಾದರೂ ಪಡಪೋಸಿ ಯಾಗಬಾರದು (ಗಾದೆ). **ಪರಮೋಶಿ :** ಪರಮೋಶಿಯಾಯಿತು. ಬಟ್ಟೆ ಗಿಟ್ಟೆ ಹಾಳಾಗಿಲ್ಲವಷ್ಟೆ (ಕುರುಕ್ಷಾ. ೬). **ಪರಾಮೋಶಿ :** ಹೀಗೊಂದು ಪರಾಮೋಶಿ ಆಯಿತಲ್ಲ (ಕರುಳ. ೪).

[←ಪಾರ. ಹಿಂ. ಮರಾ. ಫರಾಮೋಶೀ]

**ಫರಾರಿ$_1$, ಪರಾರಿ$_2$, ಫರಾರೆ** (ನಾ). ಕಣ್ಣು ತಪ್ಪಿಸಿ ಹೊರಟು ಹೋಗುವಿಕೆ ; ಓಡಿಹೋಗುವಿಕೆ ; ನಾಪತ್ತೆ : ತನ್ನ ಕೆಟ್ಟಬುದ್ಧಿ ಬಿಡದೆ, ಇಲ್ಲಿಂದಾ ಫರಾರಿ ಆಗಿ ಹೋಗಬೇಕು (ರಾಜೇಂದ್ರ. ೨೬೫); ನಿನ್ನೆ ಮಧ್ಯಾನಕ್ಕ ಫರಾರಿ ಆಗಿ ಹೋದವ ಈವತ್ತು ಇಷ್ಟು ತಡ ಆಗಿ ಯಾಕ ಬಂದೊ. (ಧನಂಜ. ೪೩) ; ಹಣ ಸಿಗದಿದ್ದರೆ ಫರಾರಿಯಾಗುವುದೊಂದೇ ಪರಿಹಾರ ವಾಗಿದೆ (ಮುಕ್ತ್ಯರ. ೨೦೪). **ಪರಾರಿ$_2$ :** ಮಕ್ಕಳುಯಿಬ್ಬರು ಪರಾರಿಯಾಗಿ ಕೆಲವು ದಿವಸದ ಮೇಲೆ (ಎಕ. VIII. ಸಾಗರ. ೪೬–೨೦ ; 1646 ?) ; ನನ್ನ ಧಾಂಡಿಗ ದೂತರಂತೂ ಯಾವಾಗಲೋ ಫರಾರಿಯಾಗಿದ್ದಾರೆ (ಹಮ್ಮೊಂದ. ೦೪೬). **ಫರಾರೆ :** ಆಸಾಮಿ ಫರಾರೆಯಾದ (ವರದಾ. II. ೯೫೬).

**ಫರಾರಿ ಮಾಡು** = ಕಣ್ಣಿಗೆ ಬೀಳದಂತೆ ಓಡಿಸಿ ಬಿಡು ; ನಾಪತ್ತೆ ಮಾಡು : ಅವನಿಂದ ಕೈಮರೆ ಮಾಡಿಕೊಂಡು ಅವನನ್ನು ಫರಾರಿ ಮಾಡಿ ಬಿಡುವುದೂ ಉಂಟು (ಕೃತಕ್ಕ. ೦೬೨). [←ಅರ. ಹಿಂ. ಮರಾ. ಫರಾರೀ]

**ಫರಾರಿ$_2$** (ನಾ). ೧. ಹಾರಾಡುವ ಬಟ್ಟೆಯ ತುಂಡು: (ಕ). ೨. ನಾವೆಯ ಹಾಯಿಪಟ : (ಕ). [←ಮರಾ. ಫರಾರಾ]

**ಫರಾರೆ** 'ಫರಾರಿ$_1$' ನೋ.

**ಫರಾಶೀಸ, ಫರಾಷೀಸ, ಫರಾಸಿಸ** (ನಾ). ಫ್ರಾನ್ಸ್‌ದೇಶದವನು : ಕೊಡೆಯಾಲಕ್ಕೆ ಫರಾಶೀಸರ ಕೆಲವು ಮಂದಿ ಬಂದು, ಇಳಿದಿದ್ದರಿಂದ

(ರಾಕೇಂದ್ರ. ೦೦೪). ಫರಾಷೀಸ : ಮೊದಮದಲ್ಲಿಖಾನರು ತಮ್ಮ ಮೇಲೆ ಪುಲಚೇರಿಯಿಂದ ಫರಾಷೀಸತ ಫಳುಜು ಸುದಾ ಚಂದಾಸಾಬರು ಬಂದು ಮುತ್ತಿಗೆ ಹಾಕಲಾಗಿ (ಹೈಚರಿ. ೩೩). ಫರಾಸಿಸ : ನವಾಬನು . . . ತನ್ನ ಕಡೆಯ ಫರಾಸಿಸರ ಸೇನಾಪತಿಯಾದ ಲಾಲಿ ಮೊದಲಾದ ಸರದಾರರನ್ನು ಕರೆಯಿಸಿ (ಹತ್ರಾ. ೯೪).

[←ಪಾರ. ಹಿಂ. ಫರಾಸೀಸ್ ; ಮರಾ. ಫರಾಶೀಸ್, ಫರಾಸೀಸ್]

ಫರಾಷೀಸ 'ಫರಾಶೀಸ' ನೋ.

ಫರಾಸಿಸ 'ಫರಾಶೀಸ' ನೋ.

ಫರಾಳ 'ಫೆಲಾರ' ನೋ.

ಫರುಜು 'ಪರಜು' ನೋ.

ಫರೆ (ನಾ). ಧಾನ್ಯಗಳನ್ನು ಅಳೆಯುವ ಒಂದು ಪ್ರಮಾಣ : ೧೭ ಪಾಯಲಿ ಅಂದರೆ ೧ ಫರಾ ೮ ಫರೆಗಳು ಅಂದರೆ ೧ ಖಂಡಗ (ಮುಂಬವ್ಯಾ. ೦೦೩). [←ಮರಾ. ಫರಾ]

ಫರ್ಜಿ (ನಾ). ಚದುರಂಗದ ಆಟದ ವಜೀರ,—ಮಂತ್ರಿ : ಈಗ ತಮ್ಮ ಆ ಸೋತ ಆಟಕ್ಕೆ ಶ್ರದ್ಧೆಯೇ ಫರ್ಜಿ (ಶ್ರೀಟಾಕ್ರ. ೯೯).

[←ಪಾರ. ಮರಾ. ಫರ್ಜ ; ಹಿಂ. ಫರಜೀ]

ಫರ್ಜು 'ಫರಜು' ನೋ.

ಫರ್ನಾದಿ (ನಾ). ಮಾವಿನ ಹಣ್ಣಿನಲ್ಲಿ ಒಂದು ಬಗೆ : (ಮುಂಬಯು. ೨-೬೨).

[←ಮರಾ. ಫರ್ನಾದೀನ್, ಫರ್ನಾದೀಸ್./ಪೋರ್ಚು. ಫರ್ನಾದೀಜ್]

ಫರ್ಮಾನ್ 'ಫರ್ಮಾನು' ನೋ.

ಫರ್ಮಾನ 'ಫರ್ಮಾನು' ನೋ.

ಫರ್ಮಾನು, ಪರಮಾನು, ಫರಮಾನಾ, ಫರಮಾನು, ಫರ್ಮಾನ್, ಫರ್ಮಾನ (ನಾ). ೧. ಆಜ್ಞೆ ; ಹುಕುಮು : ಬಡಜನರಿಂದ ಹತ್ತು ರೂಪಾಯಿ ವಸೂಲು ಮಾಡಲು ಫರ್ಮಾನು ಹೊರಟಿತು (ಜೀದಾವ. ೬೩) ; ಪುಣೆಯಿಂದ ಕಾಶಾನ ಫರ್ಮಾನು ಬಂದಿತು (ದೀಶಹ. II, ೬). ೨. ಆಜ್ಞಾಪತ್ರ : ಹೆಡ್‌ಮಾಸ್ತರರ ಹಸ್ತಾಂಕಿತವಿದ್ದ ಫರ್ಮಾನು ಅದು (ರಕ್ತರ್ಮ. ೦೩೭). ಪರಮಾನು : ೧. ಅಧಿಕಾರಿಗಳ್ಗೆ ಪರಮಾನು ನಿರೂಪ ಲೇಖನಮಂ ಬರೆಸಿತ್ತು (ಕಳಪ್ತ. ೩-೫೦). ಫರಮಾನಾ : ೧. ಕಂಬಕ್ಕೆ ಬಿಗಿಯಲು 'ಫರಮಾನಾ' ಹೊರಡಿಸಿದರು (ಸತೂರ. ೦೨೯). ಫರಮಾನು : ೨. ಇವರಿಂಗೆ ಫರಮಾನ ತಂದಿತ್ತರಾಕ್ಷಣ ನೋಡಿ (ಶೀಳವಂ. ೦-೦೩೩). ಫರ್ಮಾನ್ : ೨. ಸುಲ್ತಾನರು ತಮ್ಮ ಎರಡು ಆಣೆಗಳನ್ನು ಪ್ರಕಟಿಸಿದರು. ಅವುಗಳನ್ನು ಫರ್ಮಾನ್ ತಯಾರಿಸಿ . . . ಡಂಗೂರ ಹೊಡೆಸಿದರು (ಕೂನಕ್ಕೃ. ೦೨೪) ; ಸಾರ್ವಚಕ್ರವರ್ತಿ ಏನಾದರೂ ಫರ್ಮಾನ್ ಹೊರಡಿಸಿ . . . ರೈತರಿಗೆ ಹಂಚಿ ಬಿಡಬೇಕೆಂದು ಹೇಳಿದರೆ ನೀವೇನು ಮಾಡ್ತೀರಿ? (ಕ್ರಿವರು. ೩೦೩). ಫರ್ಮಾನ : ೨. ಬುಂದೇಲಖಂಡದ ಸ್ವಾತಂತ್ರ್ಯದಾನದ ಫರ್ಮಾನವನ್ನು ಬರೆದನು (ಛಾರ್ಖಕೇ. ೨೨೦). [←ಪಾರ. ಫರ್ಮಾನ್ ; ಹಿಂ. ಫರಮಾನ ; ಮರಾ. ಫರ್ಮಾನ, ಫರ್ಮಾನಾ]

ಫರ್ಮಾಯಿಸು, ಫರಮಾಯಿಸಂ (ಕ್ರಿ). ವಿಧಿಸಂ ; ಅಪ್ಪಣೆ ಮಾಡು ; ಆಜ್ಞೆಮಾಡು : ನಿಮಗೆ ೧೦೦೦ ರೂಪಾಯಿ ದಂಡ ಅಥವಾ ೬ ತಿಂಗಳು ಶಿಕ್ಷೆಯನ್ನು ಫರ್ಮಾಯಿಸಿದ್ದೇನೆ (ಹ್ಮಾಶಲಂ. ೦೭) ; ಕೈದಿಯನ್ನು ಜತೆಯಲ್ಲಿಯೇ ಕರೆದು ತರಬೇಕೆಂದು ಅಪ್ಪಣೆ ಬೇರೆ ಫರ್ಮಾಯಿಸಿದ್ದಾಳೆ (ಐದುಕ. ೦೨೩). ಫರಮಾಯಿಸು : ಇಂಗ್ರೇಜಫೌಜು ಹೊರಡಿಸ ಬೇಕಾದ್ದಕ್ಕೆ ಹುಕುಂ ಫರಮಾಯಿಸಲು . . . ತಿಳಿಸಿ ಇದ್ದೇವೆ (ರಾಕೇಂದ್ರ. ೦೩೪). [<ಫರ್ಮಾನು + — ಇಸ್ತು]

ಫರ್ಲಾಂಗು (ನಾ). ದೂರವನ್ನು ಅಳೆಯುವ ಒಂದು ಪ್ರಮಾಣ; ಒಂದಂ ಮೈಲಿಯಂ ಎಂಟನೆಯ ಒಂದು ಭಾಗ : ಅವರಿಗೂ ಆಕೆಗೂ ಸುಮಾರು ಒಂದರ್ಧ ಫರ್ಲಾಂಗು ಅಂತರವಿತ್ತು (ಕೆಂದುಟಿ. ೩೩).

[←ಇಂ. Furlong]

ಫರ್ಲೋ (ನಾ). ನಿರ್ದಿಷ್ಟವಾದ ನೌಕರಿಯ ಅವಧಿಯ ನಂತರ ನೌಕರದಾರನಿಗೆ ಸಿಕ್ಕುವ ಪೂರ್ಣವೇತನದ ರಜ : ಒಂದು ವರ್ಷ ಫರ್ಲೋ ರಜವನ್ನು ಪಡೆಯುವುದಕ್ಕಾಗಿ . . . ಗವರ್ನರನ್ನು ಭೇಟಿ ಮಾಡಿದರು (ಜಗಹಂ. ೨೩). [←ಇಂ. Furlough]

ಫಲ₁, ಫಳ (ನಾ). ೧. ಹಣ್ಣು : ಫಲಮೂಲಂಗಳನಾಂತು ವಲ್ಕಲದಿ ನೊಪ್ಪಂಬೆತ್ತು . . . ಇರ್ದಪ್ಪುವು ಪಾರ್ಶ್ವದೊಳ್ ನಿಯಮಮಂ ತಾಳ್ದಿರ್ದಪೊಲ್ ಭೂರುಹಂಗಳ್ (ಕಾದಂಪೂ. ೨೬೨); ಚರಿಪಾರಣ್ಯದ ಪಕ್ಷಿಗೊಂದುತರು ಗೊಡ್ಡಾಗಲ್ ಫಲಂ ತೀವಿದಾ ಮರಗಳ್ ಪುಟ್ಟವೆ (ಸೋಮೇಶ. ೨೭); ಫಲಮಿಲ್ಲದ ಮರನುಂ ಮಕ್ಕಳಿಲ್ಲದೊಂದರಸು ಮೊಪ್ಪದು (ಶಂಹಂ. ೬-೦೪). ೨. ಬೆಳೆ ; ಉತ್ಪತ್ತಿ : "ಫಲಂ—೧ ಬೆಳೆದ ಧಾನ್ಯಾದಿ ಫಲ, ಪ್ರಯೋಜನ ೨" (ಸಿದ್ಧಾಂತಿ. ೪೨೦); ಫಲ ನೋಡದೆ ಕೆಟ್ಟಿತು, ಹೊಲ ಹೂಡದೆ ಕೆಟ್ಟಿತು (ಗಾದೆ). ೩. ಲಾಭ ; ಪ್ರಯೋಜನ : ಅಂಧಕನ ಕೈಯಲ್ಲಿ ದರ್ಪಣವಿರ್ದು ಫಲವೇನು (ಬಸವ. ೧೦೬); ಫಲಂ ಸ್ವರ್ಗಭೋಗಭೂಮಿಸಂಭವಂ (ಚಂದ್ರಪ್ರ. ೩-೩೨ ವ); ಬೇವು ಬೆಲ್ಲದೊಳಿಡಲೇನು ಫಲ ಹಾವಿಗೆ ಹಾಲೆರೆದೇನು ಫಲ (ಪುರಂದ. ೦-೬೦ ಕಲ್ಯಾ). ೪. ಕಾರ್ಯದ ಪರಿಣಾಮ; ಫಲಿತಾಂಶ : ದ್ರವ್ಯಮುಂ ಕ್ಷೇತ್ರಮುಂ ಕಾಲಮುಂ ಭಾವಮುಂ ಪ್ರಕೃತಿಯುಂ ತೀರ್ಥಮುಂ ಫಲಮು ಮೆಂದು ಕಥೆಗೆ ಸಪ್ತಾಂಗಮಕ್ಕುಂ . . . ಫಲಮೆಂಬುದು ತತ್ವಜ್ಞಾನಂ (ಶಾಪುಂಪು. ೬); ಏನನೋದಿ ಏನ ಕೇಳಿ ಏನ ಮಾಡಿಯೂ ಫಲವೇನು ನಿಮ್ಮ ಮರೂಲಿಯದನ್ನಕ್ಕ (ಬಸವ. ೨೯೬); ವೇದಪಾರಾಯಣದ ಫಲ ಗಂಗಾದಿ ತೀರ್ಥಸ್ನಾನಫಲ . . . ವಸ್ತ್ರಾದಿ ಕನ್ಯಾದಾನಫಲವಹುದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ (ಕುಮ್ಮಾಆ. ೦-೨೦). 'ಫಲಭೋಗ' ಪರಾ. ೫. ಇಚ್ಛೆ; ಬಯಕೆ: 'ಫಲಸಿದ್ಧಿ' ಪರಾ. ೬. ಮುಟ್ಟು; ರಜೋದರ್ಶನ. ೭. ಕತ್ತಿ, ಚಾಕು ಮೊದಲಾದುವುಗಳ ಅಲಗು,— ಧಾರೆ. ೮. ಹಲಗೆ. ೯. ಗುರಾಣಿ; ಢಾಲು: "ಫಲಕಃ, ಫಲಂ, ಚರ್ಮನ್—೩ ಹಲಿಗೆ . . . ಹರಿಗೆ" (ಸಿದ್ಧಾಂತಿ. ೨೬೩). ೧೦. ಒಂದು ಬಗೆಯ ಚರ್ಮವಾದ್ಯ ; ತಮಟೆ : ಈಶಾನ ಈಶ್ವರಮುಡಿಯಾರ್ಗ್ಗೆ ಕೊಟ್ಟ ತಿವಳೆ ೧ ದಟ್ಟ ೩ ಖಿಣ್ಣಿಕೆ ೩ ಫಲಂ ೬ ಜಯಘಂಟೆ ೧ ಫಲಕಾಳೆ ೩ ಫಲ ೧೫ (ಪ್ಪಕಂ. ೦೯೪೬, ೨೬-೦೫; 1032). ೧೧. ನೇಗಿಲಿನ ಮರ. ೧೨. ನೇಗಿಲಿನ ಕುಳ. ೧೩. ಹಣ್ಣಿನ ಒಳಭಾಗ,— ತಿರುಳು. ೧೪. ಸ್ಥಳದ ಅಳತೆ,—ಆಯ : 'ಕ್ಷೇತ್ರಫಲ', 'ಘನಫಲ' ಪರಾ. ೧೫. [ಗಣಿತ]ಗುಣಿಸುವುದರಿಂದ ಅಥವಾ ಭಾಗಿಸುವುದರಿಂದ ಬರುವ ಲಬ್ಧ; ಗುಣಲಬ್ಧ ಅಥವಾ ಭಾಗಲಬ್ಧ. ೧೬. ತ್ರೈರಾಶಿಕ ದಲ್ಲಿ ಎರಡನೆಯ ರಾಶಿ : ಇಚ್ಛೆ ಫಲಂ ಪ್ರಮಾಣಮೆಂಬವು ನಿಚ್ಚಲು ತಾಂ ಮೂಱುರಾಶಿ ಪೆಸರಿಪ್ಪು ನಿರುತಂ ಯಿಚ್ಛೆಯನು ಪಳದಿ ಗುಣಯಿಸಿ ಬೆಚ್ಚರದಿಂ ಪವಣಿಗೊಳುತ್ತೆ ಮಧ್ಯದ ಫಲಮುಂ (ವ್ಯವಹಾ. ಅವಬಂಧ. I, ೦೦). ೧೭. [ನ್ಯಾಯಶಾ] ಪ್ರಮೇಯದಂದ ಹನ್ನೆರಡು ವಿಭಾಗಗಳಲ್ಲಿ ಒಂದು : ನ್ಯಾಯಶಾಸ್ತ್ರದಲ್ಲಿ ಹೇಗೆಂದರೆ–ಆತ್ಮ ಶರೀರ ಇಂದ್ರಿಯ ಅರ್ಥ ಬುದ್ಧಿ ಮನಸ್ಸು ಪ್ರವೃತ್ತಿ ದೋಷ ಪ್ರೇತ್ಯಭಾವ ಫಲ ದುಃಖ ಅಪವರ್ಗವೆಂದು ಹನ್ನೆರಡು ವಿಧವಾಗಿ ಪ್ರಮೇಯವನ್ನು . . . ವಿಭಾಗ ಮಾಡಿರುವರು . . . ಸುಖದುಃಖಾನುಭವವು ಫಲ (ಹಿಂದಶಾ. ೦೦೩). ೧೮. ಹದಿನಾರು ಪದಾರ್ಥಗಳಲ್ಲಿ ಒಂದು : ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ ಸಿದ್ಧಾಂತ ಅವಯವ ತರ್ಕ ನಿರ್ಣಯವಾದ ಜಲ್ಪ ವಿತಂಡಾ ಹೇತ್ವಾಭಾಸ ಫಲ

ಜಾತಿ ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದಶಾ. ೧೦೨). ೧೯. (ಅಲಂ) ಗರ್ಭ; ಬಸಿರು : ಫಲಮನ ವೇಕ್ಷಿಸದಿರ್ದೊಡೆ ಪಲಾಶತರುಬೀಜಚೂರ್ಣದೊಳ್ ಮಧುಘೃತಮಂ ಕಲಸಿ . . . ಭಗದೊಳಿಟ್ಟೊಡಾಗದು ಗರ್ಭಂ (ಲೋಕೋಪ. ೯-೧೭೮). 'ಫಲಪತಿ' ಪರಾ. **ಫಳ :** ೧. ಫಳದೊಳ್ ದೇವೇಂದ್ರನುದ್ಯಾನದ ವಿವಿಧಫಲಂ ಪೂಗಳೊಳ್ ಕಲ್ಪವೃಕ್ಷಂಗಳ ಪೂಗಳ್ (ಅಜಿತ. ೦೬-೨); ಫಳವೆಂದುಂ ಕಟುವಣ್ಣಳಾಗವಲರೆಂದುಂ ಬೀಯವು (ಜಗಂ. ೨-೦೬). ೧೬. ಬಲದ ಭಾಗ ಆದಿಯಾಗಿ ಯಿಚ್ಚೆಯೆಂಬುದೆ ಪ್ರಥಮರಾಶಿ ಫಳ ಮೆಂಬುದೆ ರಾಶಿ ಪ್ರಮಾಣವೆಂಬುದೆ ಕಡೆಯ ರಾಶಿ (ವ್ಯವಹಾ. ಅನುಬಂಧ I, ೦೦). ೨೦. ಕಪ್ಪುಹಲಗೆ : ಶಿಕ್ಷಕನು ಫಳದ ಮೇಲೆ ಸಣ್ಣ ಬಿಂದು ರೇಖೆ ತೋರಿಸುತ್ತಾನೆ (ಶಾರಸಂ. ೨೨೮).

**ಫಲ** ನಿಲ್ಲು = ಬಸಿರಾಗು; ಗರ್ಭ ಕಟ್ಟು: (೬). **ಫಲವಾಗು** = ೧. ಹಣ್ಣು ಬಿಡು: ಬಾಳೆಗೆ ಫಲವಾಯಿತ್ತ ಕಡೆ...ಮಾಡುವ ಭಕ್ತಂಗೆ ಮನ ಹೀನವಾದರೆ ಅದೇ ಕಡೆ (ಬಸವ. ೬೬೪); ನಿಮ್ಮಿಷ್ಟಸಿದ್ಧಿಯು ಬೆಳಸು ಫಲ ವಾಯ್ತು (ಕುವ್ಯಾದ್ರೌ. ೭-೦೪). ೨. ಪ್ರಯೋಜನವಾಗು : ಅಳಲಿ ಮನೆಯಲಿ ಕಾಳುಗೆಡೆದಡೆ ಫಲವಹುವೆ (ಕುವ್ಯಾದ್ರೌ. ೬-೩೨). ೩. ಸಿದ್ಧಿಸು; ನೆರವೇರು; ಕೈಗೂಡು : ಕಂದನ ರಣಕೆ ನೂಕಿದಿರಿ ಬಗೆಯೊಲವು ಫಲವಾಯ್ತಲಾ (ಕುವ್ಯಾದ್ರೌ. ೭-೦೫). ೪. ಬೆಳೆಯಿಂದ ಕೂಡಿರು; ಫಸಲಿಂ ಸಹಿತವಾಗಿರು: ಫಲವಾದ ಮಣ್ಣೆಯಾಳುವಣಂ (ಶಾಇಇ. IX-೧. ೬೬-೩೬; ೨೨೭). ೫. (ಅಲಂ) ಗರ್ಭ ನಿಲ್ಲು; ಬಸಿರಾಗು : ಫಲ ವಾದೊಡಲಿಗೆ ತವ್ಮೊಳ್ಳಲೆಗಳನುಟೆ ತೂಗುತಿರ್ಪುವೆಂದೆನೆ ಮಂದಾನಿಲನಿಂ ತೂಗಾಡುತ್ತಂ ಸಲೆ ನಿಲೆ ಕಳವೆಗಳ ಗರ್ದೆಗಳ್ ಬಿದಿಸೆಗುಂ (ಕ್ರಿಶ್ಣ. ೨-೩೯). [ಸಂ.]

**ಫಲ₂** (ನಾ). ಒಂದು ಬಗೆಯ ನಾಣ್ಯ : ಹೊನ್ನಿನ ನಾಲ್ಕನೇ ಒಂದು ಪಾಲಿನಷ್ಟು ಒಂದು ಚಿನ್ನದ ನಾಣ್ಯವಿರುತ್ತಿತ್ತು. ಅದಕ್ಕೆ ಹಣವೆಂತಲೂ ಫಲವೆಂತಲೂ ಅನ್ನುವರು (ಕಭಾಗ. ೨೮೦). [← ಮರಾ. ಫಲವ್]

**ಫಲಂಗುಡು**, ಫಲಕೊಡು (ಕ್ರಿ). ೧. ಫಸಲು ಕೊಡು; ಬೆಳೆಯನ್ನು ನೀಡು : ಸಮಯದೊಳೆ ಬಿತ್ತಿ ಬೀಜವನಮಿತಫಲಂಗುಡುವ ಪೊಲನನುಳಿ ಯುವ ತೆರದಿಂ . . . ಧರ್ಮಪತ್ನಿಯನುಳಿದೆಂ (ಶಾಕುಂತ. ೯೯-೦೫೫). **ಫಲ ಕೊಡು** = ೨. ಫಲ ನೀಡು ; ಹಣ್ಣು ಬಿಡು : ಒಂದೆರಡು ಮಾಲ್ಪಾ ಲಿಂಬೆಗಿಡಗಳನ್ನು ನೆಟ್ಟರೆ, ಅದು ಯಾವಾಗಲೂ ಫಲಕೊಡುತ್ತಿರುವುದು (ಅರುಕಾ. ೦೫೦). ೩. ಪ್ರಯೋಜನ ಕೊಡು; ಪರಿಣಾಮವುಂಟು ಮಾಡು: ಅದೃಷ್ಟವು ಫಲಕೊಡಬೇಕಾದರೆ ದೃಷ್ಟವಾಗಿ ಕರ್ಮ ಮಾಡ ಬೇಕು (ವಚನಾ. ೦೦). [ಫಲ₁ + ಕುಡು₁ (< ಕೊಡು₁)]

**ಫಲಂದೋಱು**, ಫಲದೋಱು (ಕ್ರಿ). ೧. ಹಣ್ಣು ಬಿಡು : ಮಾವೆಲ್ಲ ಫಲಂದೋಱುವುದೀ ಕಾಲದೊಳು (ಜಯುಶಾ. ೨-೩೦). **ಫಲದೋಱು**: ೨. ಪರಿಣಾಮವನ್ನು ಬೀರು : ಮದನಮೋಹಿನಿಗಾಗ ಚಿಂತೆ ಮೊಳೆತು . . . ಕಾತುರ ಪರ್ಬಿ ವಿರಹಾಗ್ನಿ ಸಂತತ ಫಲದೋಱಿದುದು (ಕಂಪಪ. ೯-೦೬). [ಫಲ₁ + ತೋಱು]

**ಫಲಕ**, ಫಳಕ (ನಾ). ೧. ಲೋಹ, ಮರ, ಗಾಜು ಮುಂತಾದುವುಗಳ ತೆಳುವಾದ ಹಾಳೆ : "ಹಲಗೆ ಫಲಕಮಕ್ಕು" (ಮಂಗರಾ. ೬೨-೨೦); ಒಂದು ಉಕ್ಕಿನ ಫಲಕದ (Plate) ಮೇಲೆ... ಒತ್ತಿದ ಇನ್ನೊಂದು ಫಲಕವಿದೆ (ಶಿಲ್ಪಶಾ. ೨೦೪); ಪೆಟ್ಟಿಗೆಯಲ್ಲಿ . . . ಛಾಯಗ್ರಾಹಿ ಫಲಕವನ್ನಿಡಲಿಕ್ಕೆ ತಕ್ಕ ವ್ಯವಸ್ಥೆಯಿದೆ (ಜಿಜ್ಞಾ.ಪಿ. ೮). ೨. ಬರೆಯಲು ಅಥವಾ ಕಂಡರಿಸಲು ಸಿದ್ಧಪಡಿಸಿದ ಸಪಾಟಾದ ಮೇಲ್ಭಾಗ : ಅದರ ಸುತ್ತಲೂ ಇರುವ ಫಲಕಗಳಲ್ಲಿ ಪಾರ್ವತಿ ... ಗಾಯಕರು ಮುಂತಾದವುಗಳು ಇವೆ (ವ್ಯಾಪಾಸ್ತು. ೦೦೦). ೩. ಪುಟ; ಪಾನು : ಪತಿ ಪುತ್ರ ಪಿತನೆಂಬ ಮಿತ್ರ ಬಾಂಧವ ನೆಂಬ ಭವವಿತ್ತ ಫಲಕಗಳ ತಿರುವುತ್ತ ನಿಂತು (ಪುಕಿರ. ೩೯-೬). ೪. ಹರಿಗೆ; ಗುರಾಣಿ : "ಫಲಕಃ, ಫಲಂ, ಚರ್ಮನ್—೩ ಹಲಿಗೆ . . . ಹರಿಗೆ" (ಸಿದ್ಧಾಂತಿ. ೨೬೩); ಖಡ್ಗ ಫಲಕ ಚಾಪಬಾಣಂಗಳಾಂತ ವಾಮದಕ್ಷಿಣಕರ ಚತುಷ್ಟಯದಿಂ . . . ಪೃಥಿವ್ಯಾದಿ ಸೂಕ್ಷ್ಮಭೂತವರ್ಗದಲ್ಲಿರ್ಪಂ (ಎಪಿಇ. ೨೪೨); ರಾವುತರ ಅಂಗರಕ್ಷಣೆಗೆ ಹಲವು ಪದರಗಳ ಚರ್ಮದ ಕವಚ; ಮೇಲ್ ಮೈಗೆ ಕಬ್ಬಿಣದ ಫಲಕಗಳು (ಆರ್ಕಿ. ೦೨೩). ೫. ಹಣ್ಣು : ನವಕಳಿ ಕಾಂಕುರಪ್ರಕರಮಂ . . . ನವಫಲಕಂಗಳಂ ಮಿಳಿರ್ವ ಕೊಂಬುಗಳೆಂಬ ಕರಂಗಳಿಂ ಮಧೂತ್ಸವದೊಳೀವಮ್ಮು ತಿದೊಡಮೆಯೆಂದಿದಿರೊಳ್ ಪಿಡಿದಂಗಜಂಗೆ ಲೆಕ್ಕವಣಿಗೆದೋಱುವಂತೆಸೆದು ತೋಱುದುವಂದಿನ ಬಂದ ಮಾವುಗಳ್ (ಅಜಪು. ೬-೨೪). **ಫಳಕ :** ೨. ಆ ಫಣಿಕಾಂತೆಗವುರಿಕಾಂತಾಳಿಕ ಫಳಕತಿಳಕಹರನೆನಿಪರಂಗುಂಗಂ ತನಯನಧಿಕತೇಜೋವಂತಂ (ಶಂಕರಾ. ೯-೦೮). ೩. ಒಂದು ಫಳಕ ಇದ್ದಂತೆ ಇತಿಹಾಸ. ಒಂದು ರಮ್ಯಕಾವ್ಯ ವನ್ನೂ ಬರೆಯಬಹುದು, ಅಥವಾ ಕಿರಾಣಿಸಾಮಾನದ ಲೆಖ್ಖವನ್ನೂ ಬರೆಯಬಹುದು. (ಅಶಪಾ. ೦೨೪). ೪. " ಖೇಟಕಂ, ಫಳಕಂ, ಚರ್ಮ, ಆವರಣಂ— ಈ ೪ ಹರಿಗೆ" (ಚಲಾಯು. ೭೬-೩೦೭); ಕೊಳ್ಳಲೆ ಮಗನೆ ಅಸಿ ಫಳಕವಿದೆ (ಐಶಾರ.ದೀ. ೦೦೬-೨೩). [ಸಂ.]

**ಫಲಕಪಾಣಿ** (ನಾ). ಗುರಾಣಿಯನ್ನು ಹಿಡಿದಿರುವವನು : "ಚರ್ಮಿನ್, ಫಲಕಪಾಣಿ—ಈ ೨ ಕಡಿತಲೆಗಾಱಂ" (ನಾಚರಾ. ೦೩೪). [ಸಂ. ಫಲಕಪಾಣಿನ್]

**ಫಲಕಾರಿ** (ನಾ.) ಪ್ರಯೋಜನವುಳ್ಳುದು; ಫಲಪ್ರದವಾದುದು : ನಮ್ಮ ಅರ್ಜಿಯು ಫಲಕಾರಿಯಾಗದೆ ಇರಲಾರದು (ಕಾವೇಂ. ೦೦೦). [ಸಂ. ಫಲಕಾರಿನ್]

**ಫಲಕಾಳೆ** (ನಾ.) ಒಂದು ಬಗೆಯ ಕಹಳೆ (?) : ಈಶಾನ ಈಶ್ವರ ಮುಡಿಯಾರ್ಗ್ಗೆ ಕೊಟ್ಟ ತಿವಳಿ ೧ ದಟ್ಟ ೩ ಖಣ್ಣಿಕೆ ೩ ಫಲಂ ೬ ಜಯಘಂಟೆ ೧ ಫಲಕಾಳೆ ೩ ಫಲ ೧೫ (ವ್ಯಾಆಂ. ೦೯೪೬, ೨೮-೦೫; 1032). [ಫಲ₁ + ಕಾಳೆ (< ಕಹಳೆ)]

**ಫಲಕೊಡು** 'ಫಲಂಗುಡು' ನೋ.

**ಫಲಚಕ್ರ** (ನಾ). [ಸಂಗೀತ] ನೂರೆಂಟು ತಾಳಗಳಲ್ಲಿ ಒಂದು : ಚಂಚತ್ಪುಟ...ಫಲಚಕ್ರ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ಎಪಿಇ. ೨೪೮). [ಸಂ.]

**ಫಲಜೀವಿ** (ನಾ). ಹಣ್ಣು ಮೊದಲಾದುವನ್ನು ಒದಗಿಸುವ ಜೀವ; ಸಸ್ಯ : ಎಂತು ತಪಸಿಗಳಂತೆ ನಿಂತ ಫಲಜೀವಿಗಳ ಜಂತುವಲ್ಲೆಂದು ಜನ ತಿಂದು ಮತ್ತದನು ಸಂತೆಯೊಳಗಿಡುವ (ಸರ್ವಜ್ಞ. ೦೦೨೬). [ಸಂ.ಫಲಜೀವಿನ್]

**ಫಲಜ್ಞಾನ** (ನಾ). ತತ್ತ್ವದ ತಿಳಿವು; ಪರತತ್ತ್ವದ ಜ್ಞಾನ : ಜ್ಞಾನವೆಂಬ ಪ್ರಮಾಣಕ್ಕೂ ಆ ಪ್ರಮಾಣದಿಂದ ಬ್ರಹ್ಮವನ್ನು ಅರಿತುಕೊಳ್ಳುವುದೆಂಬ ಫಲಜ್ಞಾನಕ್ಕೂ ಇರುವ ತಾರತಮ್ಯವನ್ನು ಇಲ್ಲಿ ತಿಳಿಯಿಸಿದೆ (ಬ್ರಿಹ್ಮಸೂ. ೦೪ ಅಖಿ). [ಸಂ.]

**ಫಲಜ್ಯೋತಿಷ** (ನಾ). [ಜ್ಯೋತಿ]ಗಣಿತಜ್ಯೋತಿಷ, ಪ್ರಶ್ನಜ್ಯೋತಿಷ, ಫಲಜ್ಯೋತಿಷ ಎಂಬ ಜ್ಯೋತಿಷದ ಮೂರು ಅಂಗಗಳಲ್ಲಿ ಒಂದು: ಜಾತಕವನ್ನು ನೋಡಿ ಮುಂದಿನ ಆಗುಹೋಗು ಮೊದಲಾದ ಫಲವನ್ನು ಹೇಳುವ ಜ್ಯೋತಿಷದ ಭಾಗ : ಫಲಜ್ಯೋತಿಷ (astrology)ದಲ್ಲಿ ಬಹಳ ನಂಬಿಕೆ ಮತ್ತು ಜ್ಞಾನ, ತತ್ತ್ವಶಾಸ್ತ್ರದಲ್ಲೂ ಭೌತಶಾಸ್ತ್ರದಲ್ಲೂ ಬಹಳ ಆಸಕ್ತಿ (ಗಣಿತ. ೯೯). [ಸಂ.]

**ಫಲತ್ರಿಕ** (ನಾ). ಅಳಲೆಕಾಯಿ, ತಾರೆಕಾಯಿ ಮತ್ತು ನೆಲ್ಲಿಕಾಯಿ; ತ್ರಿಫಲೆ : "ತ್ರಿಫಲಾ, ಫಲತ್ರಿಕಂ – ಅಳಲೇಕಾಯಿ, ತಾರೇಕಾಯಿ, ನೆಲ್ಲಿಕಾಯಿಗಳೆಂಬ ತ್ರಿಫಲಗಳಿಗೆ ಹೆಸರು" (ಸಿದ್ಧಾಂತಿ. ೩೦೭). [ಸಂ.]

**ಫಲದ** (ಗು). ೧. ಫಲವನ್ನು ಕೊಡುವ. ೨. ಪ್ರಯೋಜನಕಾರಿಯಾದ; ಲಾಭದಾಯಕವಾದ. (ನಾ). ೩. ಫಲವನ್ನು ಕೊಡುವಂತಹುದು; ಫಲದಾಯಿಯಾದುದು : ನಿಲೆ ಪೆಱತಂಶದೊಳುದಯ ಶಶಾಂಕದಲ್ಲಿ ಬಲ್ಲಿತೆ ಫಲದಂ (ಜಾತತಿ. ೨೨-೦೦); ಉದಗ್ರಮನೋಜ್ಞಫಲದಂ . . . ನೀತಿಸುರಮಹೀರುಹಂ (ರಾಜಶೇ. ೦೩-೦೬). ೪. ಮರ; ವೃಕ್ಷ. [ಸಂ.]

**ಫಲದಾನ, ಫಳದಾನ** (ನಾ). ೧. ಹಣ್ಣುಗಳನ್ನು ನೀಡುವುದು,—ಒದಗಿಸುವುದು : ಕುಸುಮಫಲಪರಿಣತಫಲದಾನಂಗಳಪ್ಪ ವನಸ್ಪತಿ ವೃಕ್ಷೌಷಧಿಗುಲ್ಮಂಗಳಪ್ಪನೋಕಹಜಾತಿಗಳಿಂ (ಶಾಂತಿಪು. ೦೨-೦೯ ವ). ೨. ದಾನವಾಗಿ ಅಥವಾ ಪ್ರಸಾದರೂಪವಾಗಿ ಹಣ್ಣು ಇಲ್ಲವೆ ತೆಂಗಿನ ಕಾಯಿ ಕೊಡುವುದು. **ಫಳದಾನ :** ೧. ಫಳದಾನಂಗಳನಿಷ್ಟತುಷ್ಟಿಯು ನನಾಥ ಪ್ರೀತಿಯಂ . . . ವಿನಯದಿಂ ಮಾಡುತ್ತಿರಲ್ ನಾಡೆ ಸಂಗಳಿಕುಂ ಕಾಮಿತಸಿದ್ಧಿ (ಕುಸುಮಾ. ೩-೬೮). [ಸಂ.]

**ಫಲದಾಯಕ** (ನಾ). ೧. ಫಲವನ್ನು ನೀಡುವಂತಹುದು : ಮಾಡು ವನ್ನಕ್ಕ ಫಲದಾಯಕ (ಬಸವ. ೮೬೩). ೨. ಕರ್ಮಕ್ಕೆ ಸರಿಯಾದ ಫಲವನ್ನು ನೀಡುವವನು; ದೇವರು. [ಸಂ.]

**ಫಲದಾಯಿ** (ನಾ). ಪರಿಣಾಮಕಾರಿಯಾದುದು; ಸಫಲವಾದುದು : ಈ ಪೂರ್ವಸಿದ್ಧತೆ . . . ಪ್ರೇಕ್ಷಕರ ಕಡೆಯಿಂದ ಆದಾಗ ಮಾತ್ರ ಆ ಪ್ರದರ್ಶನ ಸಂಪೂರ್ಣ ಫಲದಾಯಿ (ರಾಮಣಾ. ೮೦). [ಸಂ. ಫಲದಾಯಿನ್]

**ಫಲದೋಱು** 'ಫಲಂದೋಱು' ನೋ.

**ಫಲಪೂಜೆ** (ನಾ). ೧. ಶುಭಕಾರ್ಯಗಳಲ್ಲಿ ಭಾಗವಹಿಸಿದ ಎಲ್ಲ ಜನರಿಗೆ ಫಲದಾನ ಕೊಡುವುದಕ್ಕೆ ಮುಂಚಿತವಾಗಿ ಬಾಳೆಹಣ್ಣು, ತೆಂಗಿನಕಾಯಿ ಮುಂತಾದುವುಗಳಿಗೆ ಮಾಡುವ ಪೂಜೆ. ೨. ಹೊಸ ಬೆಳೆಯನ್ನು ಒಕ್ಕುವಾಗ (ಕಣದಲ್ಲಿ) ಮಾಡುವ ಧಾನ್ಯದ ಪೂಜೆ; ರಾಶಿಪೂಜೆ. ೩. ಹೊಸಹಣ್ಣುಗಳನ್ನು ಕಿತ್ತು ತಂದಾಗ ಅವುಗಳಿಗೆ ಮಾಡುವ ಪೂಜೆ : (೬). [ಸಂ. ಫಲಪೂಜಾ]

**ಫಲಪೂರ** (ನಾ). ಮಾದಳದ ಮರ ಮತ್ತು ಅದರ ಹಣ್ಣು : ಫಲಪೂರಂ ಜನ್ಮಸಾಫಲ್ಯಸಂಸ್ಥಿತಿಯಂ ಮಾಡಿದುದೆಂದು ನೋಡಿದಳಲಂಪಿಂ (ಕೃಷ್ಣಪು. ೩-೦೦೬). [ಸಂ.]

**ಫಲಪೂರಕ** (ನಾ). =ಫಲಪೂರ : "ಫಲಪೂರಕಃ, ಬೀಜಪೂರಕಃ, ರುಚಕಃ, ಮಾತುಲುಂಗಕಃ— ಳ ಮಾದೀಗಿಡ, ಮಾದಾಳದ ಗಿಡ" (ಸಿದ್ಧಾಂತಿ. ೦೩೦). [ಸಂ.]

**ಫಲಪ್ರದ** (ನಾ). = ಫಲದಾಯಿ : ಹಾಕತಕ್ಕ ತೆರಿಗೆಯು ಚೆನ್ನಾಗಿ ಫಲಪ್ರದವಾಗಿ ಹಣವನ್ನು ಒದಗಿಸುವಂಥದುದಾಗಿರಬೇಕು (ಶಾರದ. ೩೫೯); ಅವನ ಪ್ರಯತ್ನ ಫಲಪ್ರದವಾಗಲಿಲ್ಲ (ದ್ರಾವಿಬಿ. ೩೨೮). [ಸಂ.]

**ಫಲಪ್ರಾಪ್ತಿ** (ನಾ). ಫಲವು ದೊರಕುವಿಕೆ : ಮಾಟಕೂಟ ಫಲಪ್ರಾಪ್ತಿ ಎಂಬ ಮಾತ ಕೇಳಲಾಗದು (ಬಸವ. ೫೦೯); ಸುಖದ ಫಲಪ್ರಾಪ್ತಿಯನಾಗಿಪ ಕಲ್ಪವೃಕ್ಷಮಲ್ಲದೆ ಧರ್ಮಂ (ಕೃಷ್ಣಪು. ೦೩-೫೫). [ಸಂ.]

**ಫಲಭರ, ಫಳಭರ** (ನಾ). ೧. ಹಣ್ಣುಗಳ ಭಾರ : ಧರ್ಮಾಮೃತ ವರ್ಷದಿಂ . . . ಭವ್ಯಸಸ್ಯಂಗಳನನೇಕಬ್ರತಫಲಭರವಿನತಂಗಳ್ ಮಾಡಿ (ಆದಿಪು. ೦೬-೪೦ ವ); ಫಲಭರದಿಂದೆಱಗುವ ಚೂತಲತಿಕೆಯಂತಿರೆ . . . ಆ ಲಲನೆ ಭೂಪತಿಗೆ ಪೊಡಮಟ್ಟಳ್ (ಕುಸುಮಾ. ೫-೪೮). ೨. ಹಣ್ಣುಗಳ ಭಾರವನ್ನು ಹೊಂದಿದುದು ; ವಿಪುಲವಾದ ಫಲವುಳ್ಳುದು : ಧರಣಿ ಬಿತ್ತದೆ ಬೆಳೆಯಬೇಹುದು ತರುಸಸಿಗಳನವರತ ಫಲಭಾರವಾಗಬೇಕು (ಕೌಶಿರಾ. ೪೪-೩೩). **ಫಳಭರ :** ೧. ಸೆಳೆಗೊಂಬಲ್ಲಾಡುವವೊಲ್ ಫಳಭರದಿಂ . . . ಸೆಳೆದಲ್ಲಾಡಿಯುಮಾಕೆಯ ಸೆಳೆನಡು ನೋಡಿದರ ಮನಮನಲ್ಲಾಡಿ ಸುಗುಂ (ಮಲ್ಲಿಪು. ೩-೬೫); ಫಳಭರನಮ್ರಕಮ್ರಲತೆಯಂ ಲತೆ ತೆಂಬೆಲರಿಂದ ಮುಪ್ಪಿದಂತೆಳಸಿದ ಸೋದರಪ್ರಣಯದಿಂ ಲಲಿತಾಂಗಿಯರಪ್ಪಿ (ಅಸಂಪು. ೨-೪೯). [ಸಂ.]

**ಫಲಭರಿತ** (ಗು). ೧. ಹಣ್ಣುಗಳಿಂದ ತುಂಬಿದ. (ನಾ). ೨. ಫಸಲಿನಿಂದ ತುಂಬಿದುದು : ಫಲಭರಿತಂಗಳನೀ ಕೆಯ್ವೊಲಂಗಳಂ ಕಾವರಿಲ್ಲ (ಕಂಠಾಮಾ. ೭-೩೨). [ಸಂ.]

**ಫಲಭಾಗ** (ನಾ). [ಜ್ಯೋತಿ] ಫಲಜ್ಯೋತಿಷದ ವಿಭಾಗ : ಬೇಬಿಲೋನಿಯನರು ಜ್ಯೋತಿಷ್ಯದ ಫಲಭಾಗವನ್ನು ಬೆಳೆಸಿದರು (ಶಿಲ್ಪ ವಾ ೯೪). [ಸಂ.]

**ಫಲಭಾಗಿ** (ನಾ). ಫಲವನ್ನು ಪಡೆಯುವವನು,—ಅನುಭವಿಸುವವನು: ಸುರೇಜ್ಯನಿರೆ . . . ಕುಂಭದೊಳ್ ಕೂಡೆ ತತ್ಸಮಾನಫಲಭಾಗಿ (ಜಾತತಿ. ೦೭-೨೮); ಪ್ರಜೆಗಳು ಮಾಡುವ ಎಲ್ಲಾ ಒಳ್ಳೆಯ ಮತ್ತು ಕೆಟ್ಟ ಕೆಲಸಗಳಿಗೂ ರಾಜರು ಫಲಭಾಗಿಗಳಾಗಿರುತ್ತಾರೆ (ವಶಭಾ. ೩೬೮). [ಸಂ. ಫಲಭಾಗಿನ್]

**ಫಲಭಾರ, ಫಳಭಾರ** (ನಾ). = ಫಲಭರ ೧: ಫಲಭಾರಾಕ್ರಾಂತ ಸಾರ್ವರ್ತುಕನಿಕಟವನಂ . . . ಕಣ್ಗಂ ಮನಕ್ಕಂ ಪಡೆದುದು ಪದೆಪಂ (ಕಂಠಾಮಾ. ೭-೩೦); ಫಲಭಾರಾನತಭೂರುಹಾವಳಿಗಳಿಂ ನೀರೇಜಷಂಡಂಗಳಿಂ ಬೆಳೆಗೆಯ್ಯಿಂದೆಸೆದುಂ ಕಳಿಂಗವಿಷಯಂ (ಪೇಬಿಪು. ೩-೬೯). **ಫಳಭಾರ :** ಫಳಭಾರಾನಮ್ರಕಮ್ರಾವನಿಜಮಂ . . . ಅನುಪಮಾನಂದದಿಂದೆಯ್ದಿದರ್ . . . ಪಾಂಡವರ್ಕಳ್ (ನೇಬಿಪು. ೯-೦೦೯); ಫಳಭಾರಾನತಮಾಯ್ತು ಮಾವು (ಶಾಂತೀಶ್ವ. ೦೫-೦೦೦). [ಸಂ.]

**ಫಲಭೋಗ** (ನಾ). ಪರಿಣಾಮವನ್ನು ಅನುಭವಿಸುವಿಕೆ : ಏವೇನೇವೆನೆಂದೊಡೆ ಮಾಣದು ಕಾಯದ ಕರ್ಮದ ಫಲಭೋಗವು (ಬಸವ. ೦೯); ನೀನು ನನಗೆ ಒಂದು ಕರ್ಮವನ್ನು ಮಾಡಲು ಹೇಳುವೆ ಮತ್ತು ಅದರ ಫಲಭೋಗವನ್ನು ಮಾತ್ರ ತಪ್ಪಿಸಿಕೊಳ್ಳುವೆ (ಕರಕ. ೦೩೯). [ಸಂ.]

**ಫಲಮಂಜರಿ, ಫಳಮಂಜರಿ** (ನಾ). ೧. ಹಣ್ಣುಗಳ ಗೊಂಚಲು. ೨. [ಸಂಗೀತ] ಒಂದು ರಾಗದ ಹೆಸರು : ಮಧು ಮಾಧವಿ . . . ಫಲ[ಪಾಠಾಂ. ಪಳ]ಮಂಜರಿ ಶಯಸೋದರಿಯೆಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂ ಪುಟ್ಟಿದವು (ವಿವೇಕ. ೨೩೪); ಲಲಿತ ಸಾಳಂಗ ಸಾವೇರಿ ಗುಜ್ಜರಿ ಗೌಳ ಫಲ [ಪಾಠಾಂ. ಪಳ] ಮಂಜರಿಗಳೆಂಬ ರಾಗಂಗಳಿಂ ಬಳಸಿ ಪಾಡಿಸಿದಂ . . . ಕುಶಲವರನು (ಜೈಮಿಭಾ. ೨೦-೫೬). **ಫಳಮಂಜರಿ:** ೧. ಅದು ಮುಕ್ತಿಪುರಕೆ ಗೋಪುರಮದು ನಾಕಾನೋಕಹಕ್ಕೆ ಫಳಮಂಜರಿ (ಚಂದ್ರಪು. ೦೦-೨೯). [ಸಂ. ಫಲಮಂಜರೀ]

**ಫಲಮರಿ** (ನಾ). (ಬಲಿ ಕೊಡುವುದಕ್ಕೆ ತಂದ) ಗಬ್ಬದ ಕುರಿ : ಪಕ್ಕದಲ್ಲೇ ಹಿಡಿದುಕೊಂಡಿರುವ ಫಲಮರಿಗಳನ್ನು ಒಂದೊಂದಾಗಿ ಅವನ ಕೈಗೆ ಕೊಡುತ್ತಾರೆ (ಪಮ್ಮೂರು. ೬೪). [ಫಲ$_1$+ಮರಿ$_2$ (<ಮಱಿ)]

**ಫಲವಂತ** (ನಾ). ೧. ಫಲವತ್ತಾದುದು ; ಫಲಕೊಡುವಂತಹುದು. ೨. [ಜೈನ]ಕರ್ಮಗಳನ್ನು ನಾಶಪಡಿಸುವ ಎಂಟುಧರ್ಮಗಳಲ್ಲಿ ಒಂದು : ಫಲ[ಪಾಠಾಂ. ಳ]ವಂತಮೆಂಬುದು ಜಾತಿಜರಾರೋಗ ಮರಣವಿಚ್ಛೇದದಿಂದಂ ಶಿವಮಜರಮಕ್ಷಯಮವ್ಯಾಬಾಧಮಪ್ಪ ಪರಮ ನಿರ್ವಾಣಮಂ ಪುಟ್ಟಿಸುವ ಧರ್ಮಂ (ಜಾವುಂಪು. ೬). [ಸಂ. ಫಲವತ್]

**ಫಲವತಿ, ಫಳವತಿ** (ನಾ). ೧. ಬಸುರಿ; ಗರ್ಭಿಣಿ : ಪಲಕಾಲಂ ಪುಷ್ಪವತಿಯೆನಾದಪೆನೆಂದುಂ ಫಲವತಿಯಾದಪೆನಿಲ್ಲೆಂದು ಲತಾಲಲಿತಾಂಗಿ ಬಾಡಿ ಪಾಡೞಿದೆಂಗುಂ (ಸುಕುಮಾ. ೯-೯೮); ನೀ ಪುಷ್ಪವತಿಯಾಗಲ್ಲಿ ಫಲವತಿಯಾಗು ನಡೆ ಕುರುರಾಯಭವನದಲಿ (ಕುಮಾವ್ಯಾಸ. ೦೪-೬೫). **ಫಳವತಿ:** ೨. ಹಣ್ಣುಗಳನ್ನು ಬಿಡುವ ಮರ ಅಥವಾ ಬಳ್ಳಿ : ಫಳವತಿಯಪ್ಪ ಕಲ್ಪಲತೆ ಪುಷ್ಪವಿಲಾಸಮನಪ್ಪುಕೆಯ್ವವೊಲ್ (ಮಲ್ಲಿಪು. ೪-೫೨).

[ಸಂ. ಫಲವತೀ]

**ಫಲವತ್ತು** (ನಾ). ೧. ಸಾರವತ್ತಾದುದು; ಒಳ್ಳೆಯ ಫಸಲು ಕೊಡುವಂತಹುದು; ಫಲಪ್ರದವಾದುದು : ಫಲವತ್ತಿಲ್ಲದ ರಾಜ್ಯದಲ್ಲಿ ಪ್ರಭು ದಂಡಕ್ಕಾಸೆಗೆಯ್ವಲ್ಲಿ ಬಲ್ಲರ್ ನಿಲೆ ಸಲ್ಲದ್ಯೆ (ಸೋಮೇಶ. ೦೫); ನೆಲವೋ ಫಲವತ್ತಾದ ಕಪ್ಪುಭೂಮಿ (ಕಳಹು. ೯೨); ತರಕಾರಿಗಳನ್ನು ಬೆಳೆಯಲು ಫಲವತ್ತಾದ ಜಿಗುಟುಮಣ್ಣು ಒಳ್ಳೆಯದು (ಅಡುಗೆ. ೦೨೬). ೨. ಹಣ್ಣುಗಳಿಂದ ತುಂಬಿದುದು; ಫಲಪೂರ್ಣವಾದುದು. [ಸಂ. ಫಲವತ್]

**ಫಲವಳಿಗೆ**, ಫಳವಳಿಗೆ (ನಾ). ಮಂಟಪಕ್ಕೆ ಕಟ್ಟುವ ಎಲೆ, ವಸ್ತ್ರ, ಹಣ್ಣು, ಆಹಾರಪದಾರ್ಥ ಮೊದಲಾದುವು : ಮತ್ತೆ ಮುಖಮಂಟಪಕೆ ಕಟ್ಟ ಫಲವಳಿಗೆಯುಂ ಸುತ್ತಲೊಪ್ಪಿತು ಶಾಲೆ (ತುರಂಗ. ೨೦-೯). **ಫಳವಳಿಗೆ:** ಫ[ಶಾಶಾಂ.ಪ]ಳವಳಿಗೆ ಮೇಲ್ಕಟ್ಟು ಹೊಳೆವ ಭಸಿತಂಗಳೊಳು ... ವಿಭವದಿಂ ಶ್ರೀಗುರು ಪ್ರಭು ಬಂದ ಪುಣ್ಯದಿಂ (ದೀಕ್ಷಾಬೋ. ೫೫-೦೦೩೬); ನವಗ್ರಹಹೋಮಕ್ಕೆ ಸಲಿಗೆವೊಂದು ಫಳವಳಿಗೆಯ ಚಕ್ಕುಲಿಗೆ ಕೊಳಗ ಹನ್ನೊಂದು (ಎಕ. III, ತಿರುಮ. ೯೬-೫೩; 1276); ಮಂಟಪದೊಳು ಸಿಂಹಪೀಠವನಿಕ್ಕಿ . . . ಉತ್ತಮದ ಸಪುರಂಗಳಾ ವಿಸ್ತರದಿನಳವಡಿಸಿ ಫಳವಳಿಗೆಯಂ ಕಟ್ಟಿ (ಅಂಗವು. ೦೫-೯೮). 'ಪಳವಳಿಗೆ' ಪರಾ. [ಫಲ$_1$+?]

**ಫಲಶೋಭನ** (ನಾ). ನಿಷೇಕ; ಪ್ರಸ್ತ : ತಿಂಗಳೊಪ್ಪತ್ತಿನಲ್ಲಿ ಫಲಶೋಭನ ಕಾರ್ಯವನ್ನು ಮುಗಿಸಿಬಿಡಬೇಕೆನ್ನುತ್ತೇನೆ (ಸಮುಜೀ. ೯೬೩). [ಸಂ.]

**ಫಲಶ್ರುತಿ** (ನಾ). ೧. (ಪುರಾಣ ಮೊದಲಾದುವುಗಳ ಕೊನೆಯಲ್ಲಿ ಸತ್ಕಥಾಶ್ರವಣದ) ಫಲವನ್ನು ಹೇಳುವುದು : ಆರನೆಯ ಕಾಂಡದ ಕೊನೆಯಲ್ಲೆ . . . ಫಲಶ್ರುತಿಯೂ ಬಂದಿರುವುದರಿಂದ ಅಲ್ಲಿಗೇ ಕಾವ್ಯವು ಮುಗಿದಿರಬೇಕು (ಭಾರದ. ೮೪); ಆಧ್ಯಾತ್ಮಿಕ ಫಲಶ್ರುತಿಯನ್ನು ಕವಿ ಮತ್ತೆ ಮತ್ತೆ ಹೇಳಿದ್ದಾನೆ (ಶಂಶೀ. ೦೩೩). ೨. ಪರಿಣಾಮ ; ಲಾಭ ; ಪ್ರಯೋಜನ : ಫಲಶ್ರುತಿ—ಇದು ಪೆಂಪಿಂ ನಡೆನೋಡುತಿರ್ಪ ಸುಜನರ್ಗಿಷ್ಟಾರ್ಥಸಂಸಿದ್ಧಿಯಂ . . . ಮಾಳ್ಕುಂ (ಅಸ್ಕಂ. ೦-೨೨) ; ಅದರ ಫಲಶ್ರುತಿಯೇ-ಅವರ ಈ ಹೊಸನೋಟಕ್ಕೆ ಕಾರಣವಾಯಿತು (೬೦ಬದ. ೨೬೪). [ಸಂ.]

**ಫಲಸಂಬಂಧ** (ನಾ). ಯಾಗಾದಿ ಕರ್ಮಗಳಿಗೂ ಅವುಗಳನ್ನು ಆಚರಿಸುವ ವ್ಯಕ್ತಿಗೂ ಇರತಕ್ಕ ಮೂರು ಬಗೆಯ ಸಂಬಂಧಗಳಲ್ಲಿ ಒಂದು : ಕರ್ಮಗಳಿಂದ ಉಂಟಾಗುವ ಪ್ರಯೋಜನದಲ್ಲಿ ಅಪೇಕ್ಷೆಯುಳ್ಳವನಾದರೆ ಅಧಿಕಾರಿಯೆನ್ನಲ್ಪಡುವನು. ಇದೇ ಫಲಸಂಬಂಧ (ಹಿಂದಸಾ. ೨೫೬). [ಸಂ.]

**ಫಲಸಾರಸನ** (ನಾ). ಹಣ್ಣುಗಳ ಸಾಲು_ಮಾಲೆ : ಫಲಸಾರಸನಮವಂತೆತ್ತಲುಮೊದವಿರೆ ಕುಳಿರ್ವ ಪುಟಿಲೊಳ್ದೆರ್ಗೊಳ್ವೆನೆಗಂ ಕಲರುತಿಯಂ ಮಾಡಿದುದುತ್ಪಲಸಾರಸನಂ ಪುಳಿಂದಲಲನಾನಿಕರಂ (ಕಾವ್ಯಾವ. ೫೨೬). [ಸಂ.]

**ಫಲಸಿದ್ಧಿ** (ನಾ). ೧. ಇಷ್ಟಾರ್ಥವು ನೆರವೇರುವಿಕೆ; ಇಷ್ಟವಾದ ಫಲಪ್ರಾಪ್ತಿ : ಒದವಿದ ಸಾಮಗ್ರಿಯೊಳೇಕದೇಶವೈಕಲ್ಯಮಾಗೆಯುಂ ಮತ್ತಂ ತತ್ಸದೃಶಫಲಸಿದ್ಧಿಯಂ ತೋರ್ಪುದದು ವಿಶೇಷೋಕ್ತಿಯೆಂಬಲಂಕೃತಿಯಕ್ಕುಂ (ಕಾವ್ಯಾವ. ೭೫೦) ; ಅಂಗಿ-ಚೊಣ್ಣ-ಟೊಪ್ಪಿಗೆಗಳು ಅಲ್ಲೇ ಬಿದ್ದು ತಾಯಿಯ ಆಜ್ಞೆಯ ಫಲಸಿದ್ಧಿಯನ್ನು ಹೇಳುವಂತೆ ಅಣಕಿಸುತ್ತಿದ್ದವು (ಜಯಂತ. ೪). ೨ ಉತ್ತಮವಾದ ಪರಿಣಾಮ. [ಸಂ.]

**ಫಲಹಾರ** 'ಫಲಾರ' ನೋ.

**ಫಲಾಖ್ಯಾನ** (ನಾ). [ಜೈನ] ಶಲಾಕಾಪುರುಷನಿಗೆ ಮುಂದೆ ಬರಲಿರುವ ಸುಖವನ್ನು ತಿಳಿಸುವುದು: ಫಲಾಖ್ಯಾನವೆಂಬುದು ಆ ತ್ರಿಷಷ್ಟಿಶಲಾಕಾಪುರುಷರ ಪುಣ್ಯಕರ್ಮಪರಿಪಾಕದೊಳ್ಪುಟ್ಟಿದಭ್ಯುದಯಸುಖಮುನಕ್ಕೆ ಕರ್ಮಕ್ಷಯದೊಳ್ಪುಟ್ಟಿದ ನಿಶ್ಶ್ರೇಯಸದ ಸುಖಮುನಕ್ಕೆ ಪೇಳ್ವುದು (ಚಾವುಂಪು. ೦೩) [ಸಂ.]

**ಫಲಾಗಮ** (ನಾ). [ಕಾವ್ಯಮೀ] ನಾಯಕನ ಕಾರ್ಯದೃಷ್ಟಿಯಿಂದ ನಾಟಕದ ವಸ್ತುವಿನಲ್ಲಿರುವ ಐದು ಅವಸ್ಥೆಗಳಲ್ಲಿ ಕೊನೆಯದು ; ಇಷ್ಟಾರ್ಥ ನೆರವೇರುವುದು : ಫಲಾಗಮ—ಕಾರ್ಯ ಕೈಗೂಡುವಿಕೆ (ಸಂಪಾಟಿ. ೦೬). [ಸಂ.]

**ಫಲಾತನ್** (ನಾ). ಗಟ್ಟಿಗ; ಮಹಾಪರಾಕ್ರಮಿ; ಶೂರ: ಇನ್ನೊಂದು ಹತ್ತುದಿನ ಕಳೆದಿದ್ದರೆ. . . . ನಾನಲ್ಲ, ಫಲಾತನ್ ಬಂದಿದ್ದರೂ ಏನೂ ಮಾಡಕ್ಕಾಗ್ತಾ ಇರ್ಲಿಲ್ಲ (ಸರ್ವಮಂ. ೩೫೨). [ ? ]

**ಫಲಾದನ** (ನಾ). ೧. ಹಣ್ಣು ತಿನ್ನುವುದು. ೨. ಹಣ್ಣು ಮಾತ್ರ ಆಹಾರವಾಗಿರುವುದು ; ಫಲಾಹಾರ : ತ್ರಿದಿನಕ್ಕೊರ್ಮೆ ಫಲಾದನಂ ನೆಗಳ್ದದಾತಂಗೊಂದು ತಿಂಗಳ್ (ಶಶಿಶಂ. ೨-೯೯). ೩. ಗಿಳಿ ; ಶುಕ. [ಸಂ.]

**ಫಲಾಧ್ಯಕ್ಷ** (ನಾ). ಒಂದು ಬಗೆಯ ಗಿಡ ; ಹಾಲೆ : "ರಾಜಾವನಂ, ಫಲಾಧ್ಯಕ್ಷಂ, ಕ್ಷೀರಿಕಾ_೩ ಹಾಲೇಗಿಡ, ಹಾಲುಬಳ್ಳಿ ಹೆಸರು" (ಸಿದ್ಧಾಂತಿ. ೦೨೨). [ಸಂ.]

**ಫಲಾನ**, ಪಲಾನಾ, ಪಲಾನೆ, **ಫಲಾನಾ**, **ಫಲಾನೆ** (ಗು). ಈ ಬಗೆಯ; ಇಂತಹ : ಫಲಾನ ಕುಲದ ಹೆಣ್ಣು ಫಲಾನ ಕುಲದ ಗಂಡಿಗೆ ಕೊಟ್ಟಿದೆ (ಎಸಮ್ಮ. XXVII, ೫). **ಪಲಾನಾ** : ಪಲಾನಾ ಊರಿನಲ್ಲಿ ಪಲಾನಾ ಬ್ರಾಹ್ಮಣನಿದ್ದಾನೆ . . . ಆತನನ್ನು ಕರೆಸಿದರೆ ನಾನು ಬಿಟ್ಟು ಹೋಗುವೆ (ಕಥಾಮಂ. IV, ೯೬-೭೬). **ಪಲಾನೆ** : ಪಲಾನೆ ಮನುಷ್ಯ ಕೆಟ್ಟ ನಡತೆಯವನೆಂದು ಗುಮಾನಿಗೆ ಕಾರಣವಿದೆ (ಪಠದಾ. II, ೬೩೬). **ಫಲಾನಾ** : ಪ್ರತಿವಾದಿಯನ್ನು ಫಲಾನಾ ದಿವಸದಲ್ಲಿ . . . ಪ್ರತ್ಯುತ್ತರ ಕೊಡಬೇಕೆಂದು ತಿಳಿಸತಕ್ಕದ್ದು (ಗ್ರಾಪಂಕ. ೨೫). **ಫಲಾನೆ** : (೪). [←ಪಾರ. ಅರ. ಹಿಂ. ಫಲಾನಾ; ಮರಾ. ಫಲಾಣಾ]

**ಫಲಾನಾ** 'ಫಲಾನ' ನೋ.

**ಫಲಾನುಮೇಯ** (ಗು). ೧. ಪರಿಣಾಮದ ಮೂಲಕ ಊಹಿಸಬಹುದಾದ. (ನಾ). ೨. ಪರಿಣಾಮದ ಮೂಲಕ ಊಹಿಸಬಹುದಾದುದು. [ಸಂ.]

**ಫಲಾನೆ** 'ಫಲಾನ' ನೋ.

**ಫಲಾಭಿಸಂಧಿ** (ನಾ). ಫಲ ದೊರೆಯಬೇಕೆಂಬ ಉದ್ದೇಶ; ಫಲಾಪೇಕ್ಷೆ: ಚಿತ್ತಶುದ್ಧಿಯು . . . ಮಾಡಿದ ಕರ್ಮಗಳನ್ನು ಫಲಾಭಿಸಂಧಿ ಇಲ್ಲದೆ ಈಶ್ವರನಲ್ಲಿ ಸಮರ್ಪಿಸುವುದರಿಂದಲೂ ಸಂಭವಿಸುವುದು (ಭಾತತ್ತ್ವ. ೩೩೬). [ಸಂ.]

**ಫಲಾರ**, ಪರಾಳ, ಪಲಹಾರ, ಪಲಾರ, ಪಳಾರ, ಫರಾಳ, ಫಲಹಾರ, ಫಳಾರ (ನಾ). ೧. ಕೇವಲ ಹಣ್ಣುಗಳನ್ನು ಆಹಾರವಾಗಿ ತೆಗೆದುಕೊಳ್ಳುವಿಕೆ ; ಫಲಮಾತ್ರ ಸೇವನೆ: ಪ್ರವೃತ್ತಿಮಾರ್ಗದ ಶೈವಭಿನ್ನಯೋಗಿಯ ವಿಶುದ್ಧಿಚಕ್ರ ಪರಮಾನ್ನ ಪಂಚಕಜ್ಜಾಯ ಫಲಾರಂಗಳಿಗೆ ಮುಖವಾಗಿ ಅರಳಿರ್ಪುದು (ವಚಶಾ. II, ೦೭೮); ತೋರಬಾರದ ಹಣ್ಣಂತೆ ಕಾಣೆ ಫಲಾರಕ್ಕೆ ಆಗಬೇಕಂತೆ ಕಾಣೆ (ಜಾಪದ. ೨೦೮). ೨. ಅಲ್ಪೋಪಹಾರ ; ತಿಂಡಿ ; ತಿನಿಸು : ಅವನ ಫಲಾರವೆಂದರೆ ಲೋಟಾ ನೀರು (ಜಾಣ್ಣುಡಿ.೦೯). **ಪರಾಳ** : ೨.ಅವುಗಳ ಪರಿವಾರವಾದ ಚಹಾ ಪರಾಳದಂಗಡಿಗಳೂ ಬೀಡಿ ದುಕಾನುಗಳೂ . . . ಸೌಖ್ಯ ಸೌಕರ್ಯಗಳನ್ನು ಒದಗಿಸುತ್ತಿವೆ (ಕನಕ. ೦೨). **ಪಲಹಾರ** : ೨. ಪರಲೋಕವೆಂಬುದು ಪಲಹಾರದ ಗುಡ್ಡೆಯೆ ? (ಗಾದೆ) ; ಊಟ ಹಾಗ, ಪಲಹಾರ ಮುಪ್ಪಾಗ (ಗಾದೆ). **ಪಲಾರ** : ೨. ರಜ್ಜಸ್ವಾಮಿಯವರ ಪಾದಕೆ ರಜ್ಜಾಪುರದ ಪರದೇಸಿ ಪಲಾರದ ನಿಗ್ರಿಯೆತ್ತಿ ಭಿಕ್ಷಾವೃತ್ತಿಯಲ್ಲಿ ಮಾಡಿ ಸಮರ್ಪಿಸಿದವ ದೀಪಮಾಲೇ ಕಂಭ (ಎಕ. XII, ತಿಪಟೂ. ೭೪-೫, 1748). **ಪಳಾರ** : ೨. ಟೀಶನ್ನಾಗ

ಪಳಾರ ತಿನಿಸಿ ಚಾ ಕುಡಿಸಿದ್ರೆ ಆತು (ಎಳೆಕ. ೦೮). **ಫರಾಳ :** ೨. ಬ್ರೆಡ್ಡು, ಬಾಳೆಹಣ್ಣು, ಪುರೀ ಭಾಜಿ ಏನೇನೋ ಗುಡ್ಡ ಎತ್ತರ ಫರಾಳ ಕಟ್ಟಿಸಿ . . . ಶೇಷಣ್ಣ ಬಂದ (ವೃ.ಪಿ. ೩) ; ಅನೇಕ ಬಗೆಯ ಫರಾಳದ ವಸ್ತು ಗಳಿದ್ದರೂ ಅದನ್ನೆಲ್ಲ ಬದಿಗೆ ಸರಿಸಿದರು (ಸ್ವ.ತಿಜ. ೨೫) ; ಅಲ್ಲಿಂದ ಚಹಾ ಫರಾಳದ ಗಡಿಬಿಡಿಗೆ ಮೊದಲಾಯ್ತು (ಕನ್ನ. ೨೮). **ಫಲಹಾರ :** ೨. ಮುದ್ರಾಧಾರಣೆಯ ಕೆಲಸವು ತೀರಿದ ತರುವಾಯ ಶ್ರೀಪಾದಂಗಳ ಫಲಹಾರವು ಮುಗಿಯಿತು (ವಾಗ್ಮೀಪಿ. ೫). **ಫಳಾರ :** ೨. ಸುಮಾರು ಎರಡು ತಂಬಿಗೆಯಷ್ಟು ಬಿಸಿನೀರು . . . ಒಂದೂವರೆ ರಾಗಿರೊಟ್ಟಿ – ಇವಿಷ್ಟು ಅವರ ಬೆಳಗಿನ ಹೊಟ್ಟೆ ಗಟ್ಟಿ ಮಾಡುವ ಫಳಾರಗಳು (ಶಂಖವ ೨೪) ; ನಾವು. . . ಏಕಾದಶಿ ದಿನ ಯಾರೂ ಕಾಣದಂತೆ ರಾತ್ರಿ ಫಳಾರ ಮಾಡುತ್ತಿದ್ದಿಲ್ಲವೆ ? ಬ್ರಹ್ಮನು ನಾಲ್ಕು ಬಾಯಿಗಳಿಂದಲೂ ಫಳಾರ ಮಾಡುತ್ತಿದ್ದ ! (ಕೃಣಾಕ. ೬೪). [ < ಫಲಾಹಾರ]

**ಫಲಾವಾಪ್ತಿ** (ನಾ). ೧. ಇಷ್ಟಾರ್ಥವನ್ನು ಪಡೆಯುವಿಕೆ ; ಫಲ ಪ್ರಾಪ್ತಿ. ೨. ಸಂತಾನಪ್ರಾಪ್ತಿ, —ಲಾಭ : ದೇವಿಯರೊಂದಭಿಲಷಿತ ಫಲಾವಾಪ್ತಿಗೆ ದೇವ ನಿಮ್ಮ ದಯೆಗೆಯ್ದು ಫಳಂ ಕೇವಲ ಶುಭಸೂಚಕಂ (ಮಲ್ಲಿಪು. ೯-೩೫). [ಸಂ.]

**ಫಲಾಸಿ** ‘ಪಲಾಸಿ’ ನೋ.

**ಫಲಾಹಾರ** (ನಾ). ೧. ಹಣ್ಣುಗಳನ್ನು ಮಾತ್ರ ಆಹಾರವಾಗಿ ತೆಗೆದು ಕೊಳ್ಳುವುದು, —ಸೇವಿಸುವುದು : ಆ ವರುಷದಲ್ಲಿಯ ಜನರು ಮೂಱು ತಾಳದುದ್ದ ವರಾಗಿಕಲ್ಪವೃಕ್ಷಫಲಾಹಾರದಿಂದಿಪ್ಪತ್ತುಸಾವಿರವರ್ಷದಾಯುಷ್ಯ ವಂತರೆನಿಸಿ . . . ಸದಾನಂದಿಗಳಾಗಿರ್ಪರ್ (ವಿವೇಕ. ೨೦೪); ಫಲಾಹಾರವನು ಮಾಡೊ ಪರಮಪುರುಷ ಭೂಬಲನೆ ಲಕ್ಷ್ಮೀಕಂದರ್ಪರ ಸಹಿತ (ಪುರಂದ. ದಾ. ೦-೦೩೦ ಪಲ್ಲವಿ). ೨. (ಉಪವಾಸ ಮಾಡುವವರು ತೆಗೆದು ಕೊಳ್ಳುವ) ಅಲ್ಪಪ್ರಮಾಣದ ತಿಂಡಿ, – ತಿನಿಸು ; ಅಲ್ಪೋಪ ಹಾರ : ಫಲಾಹಾರಕ್ಕೆ ಉಪ್ಪಿಟ್ಟು ಮಾಡುತ್ತೇನೆ (ಪುಹಾಗ. ೮) ; ರಾತ್ರಿ ಫಲಾಹಾರಕ್ಕೆ ಕಡಬು ಕಾಯಿಹಾಲು ಮಾಡಿತ್ತು (ವಾಗ್ಮೀಪಿ. ೨೦). [ಸಂ.]

**ಫಲಾಹಾರಮಂದಿರ** (ನಾ). ದುಡ್ಡು ತೆಗೆದುಕೊಂಡು ತಿಂಡಿ, ತೀರ್ಥ ಗಳನ್ನು ಒದಗಿಸುವ ಸ್ಥಳ ; ಹೋಟೆಲು : ಆ ಘಾಸಲೆಗೇ ಅದೊಂದು ಒಳ್ಳೆಯ ಫಲಾಹಾರಮಂದಿರವಾಗಿದೆ (ರೂಢಿ). [ಸಂ.]

**ಫಲಿ$_1$** (ಗು). ೧. ಹಣ್ಣು ಬಿಟ್ಟಿರುವ. (ನಾ). ೨. ಹಣ್ಣು ಬಿಟ್ಟಿರುವ ಮರ : “ಫಲವಾನ್, ಫಲಿನಃ ಫಲೀ – ೩ ತತ್ಕಾಲದಲ್ಲಿ ಹಣ್ಣು ಬಿಟ್ಟಿರುವ ಮರದ ಹೆಸರುಗಳು” (ಸಿದ್ಧಾಂತಿ. ೦೦೦). [ಸಂ. ಫಲಿನ್]

**ಫಲಿ$_2$** (ನಾ). ಒಂದು ಬಗೆಯ ಬಳ್ಳಿ ; ಪ್ರಿಯಂಗು : “ಶ್ಯಾಮಾ . . . ಫಲಿನೀ, ಫಲೀ . . . ಪ್ರಿಯಕಃ – ೧೨ ಪ್ರೇಂಖಣಗಿಡದ ಹೆಸರು, ಪ್ರಿಯಂಗು ಪ್ರಸಿದ್ಧವಾದದ್ದು” (ಸಿದ್ಧಾಂತಿ. ೦೨೪). [ಸಂ. ಫಲೀ]

**ಫಲಿತ, ಫಳಿತ** (ಗು). ೧. ಹಣ್ಣುಗಳುಳ್ಳ ; ಫಲಸಹಿತವಾದ : ಅನೇಕ ಪನಸ . . . ಕದಳೀಪ್ರಮುಖಫಲಿತಭೂಜರಾಜಿಗಳ್ (ಪುಷ್ಪಪು. ೫-೬೭ ವ) ; ಕೃತಾಂತನ ಫಲಿತ ಶಾಳೀವನವ ಮುತ್ತಿದ ಗಿಳಿಗಳೋ ಆಚಾರ್ಯನಂಬುಗಳೋ (ಕುಮ್ಮಾದ್ರೋ. ೦೮-೯). (ನಾ). ೨. ಹಣ್ಣು ಗಳನ್ನುಳ್ಳದು : ಶುಕವ್ರಜಮುತ್ಸುಕತ್ವದಿಂ ಸವಿವ ಫಲಂಗಳಿಂ ಫಲಿತಮಾಯ್ತು ಮನೋಜಮನೋರಥದ್ರುಮಂ (ಅಜಿಪು. ೬-೦೦) ; ವಧೂವರರಾಗವಿಷಯವಲ್ಲರಿ ಫಲಿತಮಾದುದು (ಜಗಾ. ೨-೩೦ವ). ೩. ಪರಿ ಣಾಮ ; ಸಿದ್ಧಿ : ಆ ನೀತಿ . . . ಒಂದು ಬುದ್ಧಿಯ ಎಚ್ಚರಿಕೆಯ ಮತ್ತು ಒಂದು ಎದೆಯ ಗಟ್ಟಿತನದ ಸಂಯೋಗದ ಫಲಿತ (ಪಂಹಾಗ. vi ಸ್ನೇಹದ ಮಾತು). ‘ಫಲಿತಾಂಶ’ ಪರಾ. ೪. ಪರಿಣಾಮವಾಗಿ ಬಂದ ಫಲ : ಅನೇಕ ಬಲಗಳಿಗೆ ಸಮಾನವಾದ ಒಂದು ಬಲವನ್ನು ಆ ಬಲಗಳ ಫಲಿತವೆಂದು (Resultant) ಹೇಳುವರು (ಭೌತಪಿ. ೬೪). **ಫಳಿತ:** ೧. ಫಳಿತ ಪನಸಾಮ್ರಪನ್ನಾತುಳಂಗ . . . ಅನೋಕಹಕುಳಂಗಳಿಂದೆಸೆವುವದಱ ಬಹಿ ರುದ್ಯಾನಂ (ವರ್ಧಪು. ೦-೫೩); ಫಳಿತ ಕುಜಂಗಳಿಂದಧಿಕನಂತಿರೆ . . . ದಾಡಿಮ ತರುಮ್ರಜಮಾ ಬನದೊಳ್ ವಿರಾಜಿಕುಂ (ಕುಸುಮಾ. ೦-೬೦). [ಸಂ.]

**ಫಲಿತಾಂಶ** (ನಾ). ೧. ಪರೀಕ್ಷೆಯ ಪರಿಣಾಮ: ಫಲಿತಾಂಶಕ್ಕಾಗಿ ಕಾದ ವಿದ್ಯಾರ್ಥಿಯಂತೆ ವಾಸಂತಿಯ ಮನಸ್ಸಿನ ಸ್ಥಿತಿಯಾಗಿತ್ತು (ಕೇಪೋಕ. ೦೦೩); ನೀವು ಹೇಗೆ ಇಷ್ಟು ಒಳ್ಳೆಯ ಫಲಿತಾಂಶವನ್ನು ಪಡೆದಿರಿ (ಶಾರೆಮ. ೨೨೩). ೨. ಯಾವುದಾದರೊಂದು ಸಂಶೋಧನೆಯಿಂದ ತಿಳಿವಿಗೆ ಬಂದ ವಿಷಯ: ಅವರ ಮಹತ್ತರವಾದ ಸಂಶೋಧನೆಯ ಫಲಿತಾಂಶದಿಂದ ಮಾನವಕುಲಕ್ಕೇ ಉಪಕಾರವಾಯಿತು (ರೂಢಿ). [ಸಂ.]

**ಫಲಿತಾರ್ಥ** (ನಾ). ಪರಿಣಾಮದ ಫಲ : ಆತನಿದಿರೊಳಗಸುವ ಲುಲಿತ ಮೆಂದೆನಿಸಿ ಶಮನಿಲಯಮಂ ಸಾರುವೊಡೆ ಫಲಿತಾರ್ಥಮೆಂದು ತಿಳಿ (ಪಂಚಾರಾ. ೨-೫-೩೨). [ಸಂ.]

**ಫಲಿನ, ಫಳಿನ** (ಗು). ೧. ಫಲವನ್ನು ಕೊಡುವ. ೨. ಫಲ ಸಹಿತವಾದ ; ಸಫಲವಾದ. (ನಾ). ೩. ಹಣ್ಣು ಬಿಟ್ಟಿರುವ ಮರ : “ಫಲ ಹಿಡಿದ ಮರನಂ ಫಲಿನಮೆಂಬುದು ” (ಹಲಾಯು. ೨೯-೨೪) ; “ ಮರ ಗಳೊಳು ಫಲಿನಮೆನೆ ಫಲಮುಳ್ಳವಕ್ಕುಂ ” (ಮಂಗರಾ. ೩೦-೧). ೪. ಹಲಸಿನ ಮರ ; ಪನಸವೃಕ್ಷ. **ಫಳಿನ :** ೩. “ಫಲಮುಳ್ಳದು ಫಳಿನಂ ” (ವಸ್ತುಕೋ. ೩೦-೨). [ಸಂ.]

**ಫಲಿನಿ, ಫಳಿನಿ** (ನಾ). ೧. ಒಂದು ಬಗೆಯ ಬಳ್ಳಿ; ಪ್ರಿಯಂಗು : “ಪ್ರಿಯಂಗುಃ, ಫಲಿನೀ, ಶ್ಯಾಮಾ_ಈ ೩ ಪ್ರಿಯಂಗು” (ಹಲಾಯು. ೩೨-೯೦) ; “ಪ್ರಿಯಂಗು ಶ್ಯಾಮೆ ಫಲಿನಿ” (ಮಂಗರಾ. ೩೯-೯). ೨. ಒಂದು ಬಗೆಯ ಸಸ್ಯ; ಜಾಲಿನಿ : “ ಫಲಿನಿ ಜಾಲಿನಿಯಕ್ಕು” (ಮಂಗರಾ. ೯೪-೯೪). ೩. ಒಂದು ಬಗೆಯ ಸಸ್ಯ; ಅಗ್ನಿಶಿಖೆ : “ ವಿಶಲ್ಯಾ, ಅಗ್ನಿ ಶಿಖಾ, ಅನಂತಾ, ಫಲಿನೀ, ಶಕ್ರಪುಷ್ಪೀ–೫ ಬೆಣ್ಣೆಬಿದುರುಸೊಪ್ಪು, ಅಗ್ನಿಶಿಖೆ” (ಸಿದ್ಧಾಂತಿ. ೦೯೩). **ಫಳಿನಿ :** ೧. “ ಫಳಿನಿ ಶ್ಯಾಮಂ ಪ್ರಿಯಂಗುನಾಮಂ ನೆಗಟ್ಟುಂ” (ವಸ್ತುಕೋ. ೩೩-೯). [ಸಂ. ಫಲಿನೀ]

**ಫಲಿನೀಫಲ** (ನಾ). ಪ್ರಿಯಂಗುಬಳ್ಳಿಯ ಹಣ್ಣು: ಇವು ಜಂಬೂಫಲ ಮಂಜರಿಯಿವು ಫಲಿನೀಫಲದ ಗುಚ್ಛಂ . . . ಎಂದು ತೋಱಿದನವನೀ ಪಾಲಂಗೆ ಲೀಲೆಯಿಂ ವನಪಾಲಂ (ಶಂಪ್ರಪು. ೨-೭೭). [ಸಂ.]

**ಫಲಿಯಿಸು** ‘ಫಲಿಸು’ ನೋ.

**ಫಲಿಸಿಕೆ** (ನಾ). ಹೊಂದಿಕೊಳ್ಳುವಿಕೆ ; ಪ್ರಯೋಜನಕರವಾಗಿರುವಿಕೆ ; ಕೂಡಿಬರುವಿಕೆ : ಈ ಊರಿನಲ್ಲಿ ಫಲಿಸಿಕೆಯಿಲ್ಲವೆಂದು ಅವರು ಊರು ಬಿಟ್ಟು ಬೇರೆ ಊರಿಗೆ ಹೋದರು (ರೂಢಿ). [ಫಲಿಸು + – ಇಕೆ]

**ಫಲಿಸು, ಫಲಿಯಿಸು, ಫಳಿಯಿಸು, ಫಳಿಸು** (ಕ್ರಿ). ೧. ಹಣ್ಣು ಬಿಡು ; ಫಲ ಕೊಡು : ಫಲಿಸಿತರಸಾ ನಿನ್ನ ಭಾಗ್ಯದ ಬೆಳಸು (ಕುಮ್ಮಾದ್ರೋ. ೦೫-೩) ; ರಾಮ ನಿನ್ನಲಿ ಫಲಿಸಿತಗ್ಗದ ಸತ್ಕೃತರು (ತೊರರಾ. ೨-೩-೨೪) ; ಪಲ್ಲಿರಿದುಸಿರುವವೋಲ್ಫಲಿಸಿ ದಾಳಿಂಬದ ಮರಗಳೊಪ್ಪಿಹುವು (ಕಂಸಪಿ. ೫-೮೦); ಬಾಳೀ ಅಗಿಗಳನ್ನು ಹಚ್ಚಿದ ಬಳಿಕ ಮೂರನೇ ವರ್ಷ ಫಲಿಸುತ್ತವೆ (ಕಬಾಗಿ. ೨೬೬). ೨. ಉಂಟಾಗು; ಪ್ರಾಪ್ತವಾಗು; ಒದಗು : ಇನ್ನಿವರಿಂ ದಿವ್ಯ ಫಲಿಕ್ಕೆ (ರವರ್ಣಮ್ಮ. ೪-೯೭); ಸದುಗುರುಭಜನೆಂ ಫಲಿಸುವುದ ದೆಂದೋ (ಬಸಪು. ೪೫-೬೨); ಸುಮಂತ್ರಮುಖದಲಿ ಫಲಿಸುವುದೆ ಸುತಲಾಭ (ತೊರರಾ. ೦-೫-೫); ಕೊನೆಯ ಗಳಿಗೆಯು ಫಲಿಸೆ ಕುಡಿ ಗಾಳಿಪಾಲು (ಬಿಹಾಕ. ೩೦-೦೩). ೩. ಪ್ರಯೋಜನವಾಗು; ಉಪಯೋಗಕ್ಕೆ ಬರು: ಅವನೋಲೆಯಕಾಜಿತನ ಗಾಂಡೀವಿಯಿದಿರಲಿ ಫಲಿಸುವುದು ವೇಣಾವನದ್ಭುತ ಮಂತ್ರಶಕ್ತಿಗೆ ಮಣಿವನಸುರಾರಿ ಕಾವರಿಲ್ಲರ್ಜುನನ ಕೈಯಲಿ ಸಾವವರು

ನಾವಲ್ಲ (ಶುವ್ಯಾದ್ರೋ. ೬-೩೩); ಅವರ ಕೈಯಿಂದಲೇ ಹಿಡಿದು ಕೊಡಬೇಕು ಹಾಗಲ್ಲದಿದ್ದರೆ ಆ ದಾನವು ಫಲಿಸುವುದಿಲ್ಲ (ಶಂಗಾಶ್ಲೈ. ೦೫೬). ೪. ಈಡೇರು; ನೆರವೇರು; ಸಿದ್ಧಿಯಂನ್ನು ಪಡೆ: ನುಡಿದುದು ಫಲಿಸಲರಿಯದು ದೈವ ಗತಿಯಲಿ ಫಲಿಸಿತಾದಡೆ ರಾಜ್ಯಲಕ್ಷ್ಮಿಗೆ ಸೂಳೆತನವಹುದೆ (ಕುವ್ಯಾಕ. ೩-೦೦); ಮಾತಿದು ಫಲಿಸದಿರ್ದರೆ ಪತಿಕರಿಸಬೇಡ (ಕೊರಡಾ. ೬-೧೭-೦೦); ಇನಿಯನೈತರುವ ಅವಧಿಯ ದಿನಂ, ಷಣ್ಮಾಸದ ನಿರೀಕ್ಷಣಂ ಫಲಿಸುವಾ ದಿನಂ (ಶಕ್ರಾಂಗ. ೬೨-೦೬೦೩); ಅರ್ಜುನನು ಮಹಾಸಂಗ್ರಾಮಕ್ಕೆ ಅಣಿಯಾಗುತ್ತಾನೆ. ಹೀಗೆ ಭಗವಂತನ ಕಾರ್ಯ ಫಲಿಸುತ್ತದೆ (ಧರ್ಮಸಾ. ೧೩೮). ೫. ದೊರಕಿಸಿ ಕೊಡು; ಲಾಭವಾಗುವಂತೆ ಮಾಡು: ಗ ೬೦ ವರಹದ ಭುಮಿಯಂನು ಕಂಲು ನೆಟು ಫಲಿಸಿ ಕೊಟದರಿಂದ (ಎಕ. VII, ಶಿವಮೊ. ೦೦೬-೨೨; 1558 ?).

**ಫಲಿಯಿಸು**: ೨. ತೀರ್ಥಕರನಪ್ಪ ಪುಣ್ಯಂ ಬೇಗಂ ಫಲಿಯಿಸಿತು (ಧರ್ಮಾಮೃ. ೪-೬೪); ಫಲಿಯಿಸಿದುದು ಕೆಯ್ಯೊಳ್ ಪರಲಲನಾಪರಿರಂಭವೊಲ್ಲದಿರ್ದೊಡಂ (ಲೀಲಾವ. ೦೪-೦೦೬); ಹುಂ ಎನೆಯುಂ ಅಲ್ತೆಯಲ್ತೆಯೆನೆಯುಂ ಫಲಿಯಿಸುಗುಂ ಪ್ರಶ್ನಾರ್ಥೋಜ್ಜ್ವಲಾನುಮಾನಾರ್ಥಯುಗಳಮವು (ಶಬ್ದಮ. ೨೦೩). **ಫಳಿಯಿಸು**: ೧. ಫಳಿಯಿಸಲಾರ್ತುದೇ ಅಸುಕೆ (ಚಂದ್ರಪ್ರ. ೬-೯೨). **ಫಳಿಸು**: ೧. ಫಳಿಕುಂ ತ್ರಿವರ್ಗಮುಂ ಕೈಗೊಳಿಕುಂ ತತ್ಸಾಧನಂಗಳುಂ (ಜಕವಿ. ೪-೬೪).

[ಫಲ$_1$ + —ಇಸು$_3$]

**ಫಲೀನ** (ನಾ). ೧. ಹಣ್ಣು; ಫಲ. ೨. ಸಜ್ಜನ; ಉತ್ತಮ ಮನುಷ್ಯ. ೩. ಮುನಿ; ಯತಿ. ೪. ಮೋಕ್ಷ; ಮುಕ್ತಿ. ೫. ತಲೆಯ ಕೂದಲು. ೬. ಕೇಸರು: "ಉತ್ತಮನುಂ ಪಂಕ ಶಿರೋರುಹಂ ಮುನಿ ಫಲಂ ಮೋಕ್ಷಂ ಫಲೀನಾಹ್ವಯಂ" (ನಾನಾರ. ೪೬). [ ? ]

**ಫಲುಗುಣ** 'ಪಲುಗುಣ' ನೋ.

**ಫಲೋತ್ತರ** (ನಾ). ಒದಗಲಿರುವ ಫಲ; ಬರಲಿರುವ ಪರಿಣಾಮ: ಧೌಮ್ಯಾದಿ ಋಷಿಗಳು ಹೇಳಿದರು ತಚ್ಛಕುನಸಂಗತಿಗಳ ಫಲೋತ್ತರವ (ಕುವ್ಯಾಆ. ೦೦-೦). [ಸಂ.]

**ಫಲೋತ್ಸುಕ** (ನಾ). ಫಸಲನ್ನು ಬಯುಸುವವನು: ಬೇಸಟಿನಾಳ್ವನೇ ಬೆಳೆವ ಬಿತ್ತಿನ ಸಂಕ್ರಮುದೊಳ್ ಫಲೋತ್ಸುಕಂ (ಪುಷ್ಪದ. ೩-೬೦). [ಸಂ.]

**ಫಲೋದಯ** (ನಾ). ೧. ಫಲವುಂಟಾಗುವುದು; ಫಲಪ್ರಾಪ್ತಿ; ಲಾಭ: ಜೀವವಿವಾದಮೆತ್ತ ಪರಲೋಕಫಲೋದಯಮೆತ್ತ (ಶಾಂತಿಪು. ೬-೦೨೯). ೨. ಫಸಲು ಉಂಟಾಗುವುದು,—ದೊರಕುವುದು: ದುಷ್ಟಪ್ರಸರದೇಳಿಗೆ ಪಾಪಿಯೋಲಗ ಹುಸಿಯ ಬಾಳುವೆ ಹುದುವಿನಾರಂಭದ ಫಲೋದಯವು ನಸಿದು ಹೋಗದೆ (ಕುವ್ಯಾಆ. ೬-೪೬). [ಸಂ.]

**ಫಲ್ಗು** (ಗು). ೧. ಚಿಕ್ಕ; ಕ್ಷುದ್ರ; ಅಲ್ಪವಾದ. ೨. ಸಾರವಿಲ್ಲದ; ನೀರಸವಾದ. (ನಾ). ೩. ಚಿಕ್ಕದು; ಸಣ್ಣದು: ಕೂಸನೆಯಿನ್ನುಂ ಶಾಸ್ತ್ರಾಭ್ಯಾಸಂ ಪಿರಿದಿಲ್ಲ ಫಲ್ಗು ಬಹುವಚನೋಪನ್ಯಾಸದೊಳಮೆಸೆದು ನೀನಿಂತೀ ಸಭೆಯಂ ಪೊಕ್ಕು ಬಾದುಗೆಯ್ಯಲ್ ನೆಱೆವೋ (ವರ್ಧಮಾ. ೦೪-೦೩). ೪. ಸಾರವಿಲ್ಲದುದು: "ರಿಕ್ತಂ, ತುಚ್ಛಂ, ಅಸಾರಂ, ಫಲ್ಗು, ವ್ಯರ್ಥಫಲಂ — ಈ ೫ ತುಚ್ಛಂ" (ಹಲಾಯು. ೦೨೮-೯೨). ೫. ಒಂದು ಬಗೆಯ ಸಸ್ಯ: "ಕಾಕೋದುಂಬರಿಕಾ, ಫಲ್ಗುಃ, ಮಲಪೂಃ, ಜಘನೇ ಫಲಾ—೪ ಕಲ್ಲತ್ತೀಗಿಡದ ಹೆಸರುಗಳು." (ನಿಘಂಟು. ೦೨೩). [ಸಂ.]

**ಫಲ್ಗುಣ** 'ಪಲುಗುಣ' ನೋ.

**ಫಲ್ಗುನ** (ನಾ). ೧. ಫಾಲ್ಗುಣಮಾಸ. ೨. ಅರ್ಜುನ; ಫಲುಗುಣ. ೩. ಇಂದ್ರ. [ಸಂ.]

**ಫಲ್ಗುನಿ** (ನಾ). ಪುಬ್ಬಾ ಮತ್ತು ಉತ್ತರೆ ಎಂಬ ಎರಡು ನಕ್ಷತ್ರಗಳ ಜೋಡಿ. [ಸಂ. ಫಲ್ಗುನೀ]

**ಫವುಚಾಯಿಸು** 'ಪೌಂಚಾಯಿಸು' ನೋ.

**ಫವುಜು** 'ಫೌಜು' ನೋ.

**ಫಶಿ** (ನಾ). ಮೋಸ; ವಂಚನೆ.

**ಫಶಿ ಹಾಕು** = ಮೋಸಮಾಡು: ಗಿರಾಣಿಕರು ಹಳೆಮಾಲಿಗೆ ಹೊಸಾದರ ಧಾರಣೆಯು ಕೊಟ್ಟು ಫಸಾಸುವ ಅಂದರೆ ಫಶಿ ಹಾಕುವ ಅಥವಾ ಠಕ್ಕಿಸುವ ಸಂಭವವಿರುತ್ತದೆ (ಮುಂಬವ್ಯಾ. ೪೦). [←ಮರಾ. ಫಶಿ]

**ಫಸಗಿ** (ನಾ). = ಫಶಿ.

**ಫಸಗಿ ಹಾಕು** = ಮೋಸ ಮಾಡು: ನೀವು ನಮಗೂ ಫಸಗಿ ಹಾಕಿದ್ರೆಲ್ಲಾ (ಬಿಂಜಹು. ೦೭೬); ಕಾಕಾನ್ನ ಹ್ಯಾಂಗ ಫಸಗೀ ಹಾಕಿದೇ ಅಂತ (ದೀಕಹ. II, ೨೦೨). [← ಮರಾ. ಫಸಗತ್]

**ಫಸಫಸಿಸು** (ಕ್ರಿ). ಫಸಫಸ ಎಂಬ ಶಬ್ದವಾಗುವಂತೆ ನೊರೆ ಬಿಡು,— ಬುರುಗೇಳು: ಆಸಿಡ್ ಅಥವಾ ಲಿಂಬೀರಸ ಹಿಂಡಲು ಯಾವ ಜಸದ ಭಸ್ಮವು ಶಾಂತ, ಸ್ಥಿರವಾಗಿ ನಿಲ್ಲುವದೋ, ಫಸಫಸಿಸುವುದಿಲ್ಲವೋ ಅದು . . . ಶರೀರದಲ್ಲಿ ಸೇರಲು ಯೋಗ್ಯವಾಯಿತೆಂದು ತಿಳಿಯಬೇಕು (ಶಿಶಧೀ. ೩೩). [ಫಸಫಸ$_0$ + —ಇಸು$_3$]

**ಫಸಲ್**, ಫಸಲು (ನಾ). ಬೆಳೆ; ಬೆಳಸು: ಮುಂದಿನ ಸಾಲಿಗೆ ಶೀರ್ವೇ ಜಾಸ್ತಿ ಫಸಲ್ ಜಾಸ್ತಿ ಮುಂತಾದವುಗಳನ್ನು ಭರ್ತಿ ಮಾಡಿ ಪಟ್ಟಾ ಕೊಡಲ್ಪಡುವದು (ಗ್ರಾಮಠಾಕ. ೬೪). **ಫಸಲು**: ಬಂಗಾರದಂಥ ಫಸಲು ಬಂದು ಮನೆ ತುಂಬುತ್ತದೆ (ಕಂಡಕೋ. ೦೫೬); ಫಸಲು ಕಣಜಕ್ಕೆ ಬಂದು ಸೇರಿತೆಂದರೆ ಆಗ ಅದನ್ನು ತೂಕ ಮಾಡಿ ಬೆಲೆ ಕಟ್ಟುವುದು ಹದಕ್ಕೆ ಬರುತ್ತದೆ (ಖಿಂಂಧ. II, ೬); ಖರ್ಜೂರದ ಫಸಲು ಇನ್ನೆಷ್ಟು ಬಂದಿದೆ ಮನೆಗೆ (ಕುಟ್ಟಿರ. ೮೩). [← ಅರ. ಫಸ್ಲ್; ಹಿಂ., ಮರಾ. ಫಸಲ್]

**ಫಸಲಿ**, ಫಸ್ಲಿ (ನಾ). ಒಂದು ಮುಸಲ್ಮಾನ ವರ್ಷಗಣನೆ: (೪). **ಫಸ್ಲಿ**: ಹೈದರಾಬಾದಿನ ಜಹಗೀರುಗಳ (ವಿನಿಯಮದ) ಫಸ್ಲಿ ೧೩೫೯ನೆಯ ವರ್ಷದ ವಿನಿಯಮನ (ಫಸ್ಲಿ ೧೩೫೯ನೆಯ ವರ್ಷದ ೨೫ನೆಯ ವಿನಿಯಮನ) (ಭಾರಶಾಸ. ೩೦೭ ಒಂಬತ್ತನೆಯ ಅನುಸೂಚಿ). ❚ ಈ 'ಫಸಲಿ' ಎಂಬ ಗಣನೆಯ ಕ್ರಮವನ್ನು ಅಕ್ಬರ್ ಉತ್ತರಭಾರತದಲ್ಲಿ ೧೫೫೬ರಲ್ಲಿ ಪ್ರಾರಂಭಿಸಿದನು. ಇದನ್ನೇ ಶಹಜಹಾನನು ೧೬೩೬ರಲ್ಲಿ ದಕ್ಷಿಣ ಭಾರತಕ್ಕೂ ಅನ್ವಯಿಸಿದನು.

[←ಪಾರ. ಫಸ್ಲೀ; ಹಿಂ. ಫಸಲೀ; ಮರಾ. ಫಸಲೀ, ಫಸ್ಲೀ]

**ಫಸಲು** 'ಫಸಲ್' ನೋ.

**ಫಸಾದ** (ನಾ). ಬಂಡು; ದಂಗೆ: ಫಸಾದ ಮಾಡಲಿಕ್ಕೆ ನೋಡುವವರನ್ನು ಕೊತ್ವಾಲರಿಂದ ಕೋಳ ಹಾಕಿಸಿ ಬಿಡುತ್ತೇನೆ (ವಾಗ್ಭೂಷ. ೦೦೬).

[←ಅರ. ಹಿಂ. ಮರಾ. ಫಸಾದ್]

**ಫಸಾಯಿಸು**, ಫಸಾಸು (ಕ್ರಿ). ಮೋಸ ಮಾಡು: ನೀವು ಹೀಂಗ ನನ್ನ ಫಸಾಯಿಸಬಾರದಿತ್ತು (ಮೂರಾಬಿ. ೨೪೦); ಈ ವಿಶ್ವನಾಥ . . . ಒಬ್ಬಿಬ್ಬರನ್ನು ಫಸಾಯಿಸಿದ್ದಾನೆಯೆ? (ಮೂರುದಾ. ೬೦). **ಫಸಾಸು**: ಫಸಾಸುವ ಅಂದರೆ ಫಶಿ ಹಾಕುವ ಅಥವಾ ಠಕ್ಕಿಸುವ ಸಂಭವವಿರುತ್ತದೆ (ಮುಂಬವ್ಯಾ. ೪೦); ನಾಳೆ ನೀನ ಅನಬಾರದು ಕಾಕೂ ಫಸಾಸಿದರೂ ಅಂತ (ದೀಕಹ. I, ೦೭೩). [ಫಸಾ$_0$ (❚ ←ಮರಾ. ಫಸವಿಣೇ) + — ಇಸು$_3$]

**ಫಸಾಸು** 'ಫಸಾಯಿಸು' ನೋ.

**ಫಸ್ಲಿ** 'ಫಸಲಿ' ನೋ.

**ಫಳ** 'ಫಲ$_1$' ನೋ.

**ಫಳಕ** 'ಫಲಕ' ನೋ.

**ಫಳಕಾರ** (ನಾ). ಪ್ರಯೋಜನವನ್ನು ಉಂಟುಮಾಡುವವನು; ಉಪಕಾರಿ: ಇಳೆಯೊಳಗೆಲ್ಲ ಸಿಂಹಚೂಡನೆ ಫಳಕಾರಂ ಚಂಡಶಾಸನಂ ಬಗೆವೊಡೆ ಭೂತಳದೊಳ್ಕೃತಘ್ನಂ (ಅನಂತಪು. ೦೦-೩೩). [ಸಂ. ಫಲಕಾರ]

**ಫಳಣೆ** 'ಫಾಳಣೆ' ನೋ.

**ಫಳದಾನ** 'ಫಲದಾನ' ನೋ.

**ಫಳಪಾಕಾಂತತೆ** (ನಾ). ೧. ಫಲ ಬಿಟ್ಟೊಡನೆ ನಾಶವಾಗುವ ವಾರ್ಷಿಕಬೆಳೆಯ ಸ್ವಭಾವ. ೨. ಸಂತಾನಪ್ರಾಪ್ತಿಯಾದೊಡನೆ ತಂದೆ ತಾಯಿಂಗಳು ಸಾಯುಂವಿಕೆ. ೧. ೨ : ಫಳಪಾಕಾಂತತೆಯೋಷಧಿಗಳ ತೆಜದಿಂದೆಯ್ದೆ ಸಮನಿಸಿತ್ತಕ್ಕಟ ಸಂಗಳಿಸದೆ ತನಯುನ ಲೀಲಾವಿಲೋಕನ ಪ್ರಭವಸೌಖ್ಯಮಾ ದಂಪತಿಯೊಳ್ (ಚಂದ್ರಪ್ರ. ೩-೪೦).

[ಸಂ. ಫಲಪಾಕಾಂತತಾ]

**ಫಳಫಳ** (ನಾ). ಒಂದು ಅನುಕರಣಪದ : ಅವಳ ಕಿವಿಯ ಓಲೆಗಳು ದೀಪದ ಬೆಳಕಿನಲ್ಲಿ ಫಳಫಳ ಎಂದು ಹೊಳೆಯುತ್ತಿದ್ದುವು (ರೂ).

**ಫಳಫಳನೆ** (ಅ). ೧. ಪ್ರಕಾಶಮಾನವಾಗಿ : ಜನವಾರವು ರಾತ್ರಿಯು ಮಿಂಚಿನಂತೆ ಫಳಫಳನೆ ಹೊಳೆಯುತ್ತಾ ಇತ್ತು (ಹುಟ್ಟಿಕ. ೬೦). ೨. ವೇಗವಾಗಿ ; ರಭಸವಾಗಿ : ಫಳಫಳನೆ ಅರ್ಭಟಿಸಿ ಭಾಪುರೇ ರಾವಣನ ಬೆಳೆ ಬೆಳೆದ ನಂದನವನವ ಕಿತ್ತೆ (ಜಾಂಬೀ. ೨-೬೩).

[ಫಳಫಳ + — ಅನೆ$_1$]

**ಫಳಫಳಿಸು** (ಕ್ರಿ). ಹೊಳೆ ; ಮಿಂಚು : ನಂದಿಯ ಪತಾಕೆಗಳ್ ಫಳಫಳಿಸೆ ಗಗನದೊಳ್ (ಶೀಲಪು. ೧೦-೨೩); ಫಣವ ಮೆಟ್ಟಿ ಬಾಲವ ಕೈಯಲಿ ಪಿಡಿದು ಫಳಫಳಿಸುತ್ತ ನಾಟ್ಯವನಾಡೆ (ಪುರಂದ ೨-೦೦೩-೨) ; ಬೆಳಕು ಅವನ ಮುಖದ ಮೇಲೆ ಬಿದ್ದು ಫಳಫಳಿಸಿದುದರಿಂದ ಅವನು ಒಳ್ಳೇ ಗೌರವರ್ಣದ ಸುಂದರತರುಣನೆಂದೂ ಹೊಳೆಯಿತು (ಕಾಬರ್ಯೂ. ೩).

[ಫಳಫಳ + — ಇಸು$_3$]

**ಫಳಭರ** 'ಫಲಭರ' ನೋ,

**ಫಳಭಾರ** 'ಫಲಭಾರ' ನೋ.

**ಫಳಮಂಜರಿ** 'ಫಲಮಂಜರಿ' ನೋ.

**ಫಳರಸ** (ನಾ). ಹಣ್ಣಿನ ರಸ : ಫಳರಸದೆ ಬೆಳೆವ ನವಶಾಲೀವನಂಗಳ್ (ಶಿಲಾ. ದೀ. ೨-೧೦) ; ಫಳರಸದಿಂದೆ ಮುಂ ಬಳೆದೆಮೆಬಿದಬ್ಬಿಂ ನವಪುಷ್ಪವಾಟಸಂಕುಳಕಂಸುಮಾಸವಂ ಪೊರೆಯೆ ತತ್ಫಳಮಂ ಮಧುಪಾಳಿ ಮುತ್ತೆ (ಪಾರ್ಶ್ವಪು. ೦೩-೯೯). [ ಸಂ. ಫಲರಸ ]

**ಫಳವತಿ** 'ಫಲವತಿ' ನೋ.

**ಫಳವಳಿಗೆ** 'ಫಲವಳಿಗೆ' ನೋ.

**ಫಳಹೀನತೆ** (ನಾ). ಫಲವಾಗದಿರುಂವಿಕೆ ; ನಿಷ್ಫಲತೆ : ಅತಿರಾಗತೆಯಿಂ ಸ್ತ್ರೀಪದಹತಿಗಂ ದಳವೇಱಿಯಲರ್ದಶೋಕಂ ಫಳಹೀನತೆಗೆಡೆಯಾದುದು (ಚಂದ್ರಪ್ರ. ೭-೯೩). [ಸಂ. ಫಲಹೀನತಾ]

**ಫಳಾರ್** (ನಾ). ಒಂದು ಅನುಕರಣಪದ : ಒಂದು ತಣಿಗೆಯನ್ನು . . . ಉಜ್ಜಿದರು. ಅದು ಫಳಾರ್ ಎಂದು ಮಿಂಚಿತು (ಹುಟ್ಟಿಕ. ೭೯).

**ಫಳಾರ** 'ಫಲಾರ' ನೋ.

**ಫಳಿ$_1$** (ನಾ). ಒಂದು ಬಗೆಯ ಉತ್ತಮವಾದ ಬಟ್ಟೆ : ಫ [ಶಾಕಂ. ಪ]ಳಿಯ ಸೀರೆಯು ಪಟ್ಟೆವಳಕೆಯ ಪೆಣ್ಗಳ ತಂಡವೆಳಸಿದುದಾರಶಿವಿಡಿದು (ಶಬರಶಂ. ೪೦-೭೦) ; ಭೀಮಸೇನಂ ಥಟ್ಟನೆದ್ದನು ಫಳಿಯನುಟ್ಟು ಶೃಂಗರದಿಂದ ತೊಟ್ಟು ಕುಪ್ಪಸಗಳಂ ಹೆಣ್ಣ ರೂಪಂ ತಾಳ್ದು . . . ಪವಡಿಸಿದ (ಕುರಂಗ. ೩೩-೩೦). [ಸಂ. ಫಲಿ]

**ಫಳಿ$_2$, ಫಣ್ಕೆ$_2$** (ನಾ). ೧. ಮರದಿಂದ ಮಾಡಿದ ತೆಳುವಾದ ಉದ್ದನೆಯ ತುಂಡು ; ಹಲಗೆ : ನೆಲಕ್ಕೆ ಕಟ್ಟಿಗೆಯ ಫಳಿಗಳನ್ನು ಜೋಡಿಸಿದ್ದರು (ಶಾರಕ. ೩); ಶೇಷಣ್ಣ ಸಾಮಾನು ಇಡುವ ಫಳಿಯ ಮೇಲೆ ಚಾದರ ಹಾಸಿದ (ವೈಶಿ. ೨) ; ಫಳಿಗಳನ್ನು ಜೋಡಿಸಿ ರಂಗಭೂಮಿಯನ್ನು ರಚಿಸಲಾಗಿತ್ತು (ರಂಗರೋ. ೦೩೮). **ಫಣ್ಕೆ$_2$** : ೨. ಕೋಲು ; ದಂಡ : ಯಾವ ಕ್ಷೇತ್ರದ ಅಳತೆಯು ತಿಳಿಯಬೇಕಾಗಿರುವದೋ ಆ ನಂಬರಿನ ಮೇಲೆ ಈ ಫಣೆಯನ್ನು ಇಡಬೇಕು (ಕ್ಷೇತ್ರ. ೧೯). ೩. ಚೆಣ್ಣಕೋಲಾಟದಲ್ಲಿ ಬಳಸುವ ಕೋಲು ; ದಾಂಡು : ಬಣ್ಣದ ಫಣೆಯು ಉರೀ ಹಚ್ಚುವ ಕಟ್ಟಿಗೆಯಾಯಿತು (ಮುಂಬಯಿ. ೩-೨೬೬). 'ಚೆಣಿಫಣಿ' ಪರಾ.

[←ಮರಾ. ಫಳೀ]

**ಫಳಿತ** 'ಫಲಿತ' ನೋ.

**ಫಳಿದ್ಯ** 'ಪಳಿದ್ಯ' ನೋ.

**ಫಳಿನ** 'ಫಲಿನ' ನೋ.

**ಫಳಿನಿ** 'ಫಲಿನಿ' ನೋ.

**ಫಳಿಯಿಸು** 'ಫಲಿಸು' ನೋ.

**ಫಳಿಸು** 'ಫಲಿಸು' ನೋ.

**ಫಳಿಹತ** 'ಪಱಿಹತ್ತ' ನೋ.

**ಫಳೆಯಕಾಱ** (ನಾ). ಗುರಾಣಿಯನ್ನು ಹಿಡಿದಿರುವವನು ; ಹಲಗೆಕಾರ : ಫಳೆಯಕಾಱಂ, ಫಳಾವುಗಂ (ಕಪುದ. ೦೫ ಪ್ರಯೋ).

[ಫಳೆಯ$_4$ (ಪ್ರೆ← ಪ್ರಾ. ಫಲಅ) + — ಕಾಱ]

**ಫಾಂಟ** (ನಾ). ೧. ಸೋಸುವುದೆ ಮೊದಲಾದ ಕ್ರಿಯೆಗಳಿಂದ ಸುಲಭವಾಗಿ ಸಿದ್ಧಪಡಿಸಿದುದಂ : "ಫಾಂಟಂ ಎಂಬುದು ಸುಗಮಂ" (ಹಲಾಯು. ೦೨೭-೯೯) ; ಆ ಕ್ಷಣದಲ್ಲಿ ಔಷಧಗಳ ನೀರಿನಲ್ಲಿ ನೆನೆಯಿಕ್ಕಿ ಆಗತಾನೆ ಹಿಂಡಿದ ರಸ ಫಾಂಟ—ಕಷಾಯ (ವೈದ್ಯಸಾ. I. ೦೦೫). ೨. ಕಷಾಯ ; ಅರ್ಕ : ಔಷಧದ ಚೂರ್ಣದಲ್ಲಿ ಅದರ ನಾಲ್ಕುಪಟು ಎಸರುನೀರು ಸುರಿವಿ ಸ್ವಚ್ಛವಾದ ಅರಿವೆಯಲ್ಲಿ ಹಾಕಿ ಸೋಸಬೇಕು. ಇದಕ್ಕೆ ಫಾಂಟವೆನ್ನುತ್ತಾರೆ (ಗೃಹವೈ. ೦೦). [ಸಂ.]

**ಫಾಕಡ**, ಪಾಕಡ, ಪಾಕಡಾ, ಫಕ್ಕಡ, ಫಾಕಡಾ (ಗುಂ). ೧. ಚಾಲಾಕಾದ ; ಚತುರತೆಯಿಂದ ಕೂಡಿದ : ಫಾಕಡ ಆಸಾಮಿ ಕಾಣಪ್ಪ (ಐದುಕ್ಕೆ. ೩೫). **ಪಾಕಡ** : ೧. ನೀನು ಪಾಕಡ ಆಸಾಮಿ ಅಂತ ನನಗೆ ಗೊತ್ತು (ಪಟಿಸಾ. ೩೭೯). (ನಾ). ೨. ಬುದ್ಧಿವಂತ ; ಚತುರ : ಈತ ದಕ್ಷ, ಗಟ್ಟಿಗ, ಪಾಕಡ, ಫಾಟಿ (ಪ್ರಕ್ಷ. ೨೨). **ಪಾಕಡಾ** : ೩. ಕಿಲಾಡಿ ; ಪಟಿಂಗ : ನಮ್ಮ ರೈಲಿನಲ್ಲಿ ಒಬ್ಬ ಪಾಕಡಾ ಇದ್ದಾನೆ (ಅಳಿಶಿ. ೨೭೩). **ಫಕ್ಕಡ** : (ಗು).೪. ಸೊಗಸಾದ ; ಅಚ್ಚುಕಟ್ಟಾದ : ಇಂದು ಫಕ್ಕಡ ಮಸರು ಅವಲಕ್ಕಿ ಆಗಿ ಬಿಡಲಿ (ಕಷಿ. ೦೩) ; ಎಂಥ ಫಕ್ಕಡ ಕನ್ನಡ ಮಾತಾಡತಾನಲ್ರೀ (ಹೊಸಂಶಾ. ೦೦೨). **ಫಾಕಡಾ** : ೧. ಫಾಕಡಾ ಆಸಾಮಿ ಧೈರ್ಯಾಟಿಕಮಿಾಪನರು (ವಶಶ್ರೂರು. ೦೬೨).

[←ಹಿಂ. ಮರಾ. ಫಾಕಡಾ]

**ಫಾಕಡಾ** 'ಫಾಕಡ' ನೋ.

**ಫಾಜಿಲ್** (ಗು). ೧. ಆವಶ್ಯಕತೆಗಿಂತ ಅಥವಾ ನಿರೀಕ್ಷೆಗಿಂತ ಹೆಚ್ಚಾದ; ಮಿತಿಮೀರಿದ ; (ಕ). (ನಾ). ೨. ನಿರೀಕ್ಷಿಸಿದುದಕ್ಕಿಂತ ಹೆಚ್ಚಾಗಿ ಬಂದ ; ಉತ್ಪನ್ನ, — ಆದಾಯ : (ಕ).

[←ಅರ. ಹಿಂ. ಫಾಜಿಲ್ ; ಮರಾ. ಫಾಜೀಲ್]

**ಫಾಜೀಲ** (ಗು). ಶಿಷ್ಟವಲ್ಲದ : ಅಶ್ಲೀಲವಾದ : ಈ ಕತೆಯಲ್ಲಿಯ ಅವಳ ಫಾಜೀಲ ಆಸ್ಥೆಯನ್ನು ತಿರಸ್ಕರಿಸುತ್ತ ನುಡಿದಳು ಚಂದ್ರಭಾಗಕ್ಕ (ಮುಾರುವಾ. ೩೬). 'ಫಾಜೀಲತನ' ಪರಾ .

[←ಅರ. ಹಿಂ. ಫಾಜೀರ್ ; ಮರಾ. ಫಾಜೀಲ]

**ಫಾಜೀಲತನ** (ನಾ). ಅಶ್ಲೀಲತೆ ; ಅಸಭ್ಯತೆ : ತುಂಗಕ್ಕ ಬದಿಯ ಹೆಂಗಸಿನತ್ತ ಒಮ್ಮೆ ನೋಡಿ ಕಣ್ಣು ಮಿಟುಕಿಸಿದ ರೀತಿಯು ಫಾಜೀಲತನ ನೋಡಿ (ಮುಾರುವಾ. ೦೯೪). [ಫಾಜೀಲ + — ತನ]

**ಫಾಜೆ**, ಪಾಜ್ಜೆ$_2$ (ನಾ). (ಉಕ) (ಆಟದಲ್ಲಿ) ಮುಟ್ಟಬೇಕಾದ ಸ್ಥಳ.

**ಫಾಜ್ಟೆ :** (ಪಾಶಕೋ. ೧೫).

**ಫಾಜೆಗಟ್ಟ, ಪಾಜೆಗಟ್ಟ, ಫಾಜೆಗಟ್ಟ = ಫಾಜೆ:** ಮತ್ತೆ ನಾವು ಇದೇ ಮಾತಿನ ಫಾಜೆಗಟ್ಟಿಗೆ ಬಂದೆವು (ದೀಹಾ. ೬೦) ; ಅಡಗಿಕೊಂಡ ಚಿಕ್ಕಮಕ್ಕಳು ಕೂಗಾಡುತ್ತ ತಪ್ಪಿಸಿಕೊಂಡು . . . ಪಾಜೆಗಟ್ಟ ಮುಟ್ಟುವರು (ಕನ್ನಹಾ. ೩೬); ಮುಂಬಯಿಯ ಕೊನೆಯ ಫಾಜೆಗಟ್ಟಿಯಾದ ವ್ಹಿ. ಟಿ. ಸ್ಟೇಶನ್ನು ಬಂದಿತು (ಕಾಟುಕ. ೬೨). [←ಮರಾ. ಫಾಂಜ್ = ಅಗಸೆಯ ಕಟ್ಟೆ]

**ಫಾಣಾಫಾಣ,** ಫಾನಾಫಾನ (ನಾ). (ಉಕ) ಅವ್ಯವಸ್ಥಿತವಾಗಿ ಚೆದುರುವುದು ; ದಿಕ್ಕಾಪಾಲು : ಎಲ್ಲರೂ ಫಾಣಾಫಾಣ ಆಗಿ, ಊರು ದಿಕ್ಕದಿವಾಳಿ ಆಗಿ ಹೋತು (ಗ್ರಾಮಾಯ. ೬೦೦). **ಫಾನಾಫಾನ :** ದುಡ್ಡು ಹೋದ ಮ್ಯಾಲ ಎಲ್ಲಾರು ಫಾನಾಫಾನಾ ಆಗೋರು (ಗಂಮಾಯ. ೦೦೦). [←ಮರಾ. ಫಾಣಾಫಾಣ]

**ಫಾಣಿ** (ನಾ). ೧. ಶುದ್ಧಗೊಳಿಸದೆ ಇರುವ ಬೆಲ್ಲದ ರಸ : ಕಾಕಂಬಿ. ೨. ಮೊಸರಿನಲ್ಲಿ ಕಲಸಿದ ಹುರಿಹಿಟ್ಟು ; ಕರಂಭ. [ಸಂ.]

**ಫಾಣಿತ** (ನಾ). ೧. ಬೆಲ್ಲದ ಪಾಕಕ್ಕೆ ಸಂಪೂರ್ಣವಾಗಿ ಬಂದಿರದ ಕಬ್ಬಿನ ರಸ ; ಕಾಕಂಬಿ : “ಗುಡವಿಕಾರಂ ಫಾಣಿತಂ” (ವಸ್ತುಕೋ. ೯೪-೦೨) ; “ಅರ್ಧಪಾಕವಾಗಿ ಕಾಯಿಸಿದ ಕಬ್ಬಿನ ಹಾಲಿಗೆ ಫಾಣಿತವೆಂತಲೂ ಹೆಸರುಗಳು” (ಸಿದ್ಧಾಂತಿ. ೨೮೬). ೨. ಬೆಲ್ಲ : “ಮತ್ಸ್ಯಂಡಿ, ಫಾಣಿತ ಎಂದೊಡೆ ಬೆಲ್ಲದ ಪಾಕ, ಬೆಲ್ಲವೆಂದೂ ಎಂಬರು” (ಪಾಶಾ. ೬). ೩. ಹಾಲಿನಿಂದ ಮಾಡುವ ಒಂದು ಬಗೆಯ ತಿಂಡಿ. [ಸಂ.]

**ಫಾನಾಫಾನ** ‘ಫಾಣಾಫಾಣ’ ನೋ.

**ಫಾಯದೆ** ‘ಫಾಯಿದೆ’ ನೋ.

**ಫಾಯದೆಶೀರ** ‘ಫಾಯಿದೇಶೀರ’ ನೋ.

**ಫಾಯಿದೆ,** ಪಾಯದೆ, ಪಾಯಿದೆ, ಫಾಯದೆ (ನಾ). ಪ್ರಯೋಜನ ; ಲಾಭ ನಫೆ : ತಮ್ಮ ಮಿಲಾಖತಿನ ಫಾಯಿದೆಯಿಂದ ಸಂತೋಷ ಪಡಿಸಬೇಕು (ರಾಜೇಂದ್ರ. ೫೬) ; ಎಲ್ಲೋ ಫಾಯಿದೆ ಮಾಡಲು ಇನ್ನೊಂದೂರಿಗೆ ಹೋಗಿರಬೇಕು (ಮುಗಿಯ. ೩). **ಪಾಯದೆ:** ಇಂಜನೇರು ಕೆಪ್ಟನ್ ರನೆಲ್‌ಸಾಹೇಬ್ ಬಹಾದ್ದುರವರು ನಿಶಾನಿ ನಿಲ್ಲಿಸಿ, ದುರ್ಬೀನಿನಿಂದಾ ನೋಡಿ, ತಮ್ಮ ಸರಕಾರದ ಪಾಯದೆ ಕೆಲಸ ಮಾಡುತ್ತಿದ್ದರು (ರಾಜೇಂದ್ರ. ೨೯೯); ನಮ್ಮನ್ನ ಮೈ ಮುರೀ ದುಡಿಸಿ, ಅದರ ಪಾಯದೇಕ ತಾವು ಮಾಲಕ ರಾಗೂದು (ಬೆಂದಯ. ೯೯). **ಪಾಯಿದೆ :** ಈ ವ್ಯಾಪಾರದಲ್ಲಿ ತುಂಬಾ ಪಾಯಿದೆ ಇದೆ (ರೂಢಿ). **ಫಾಯದೆ :** ನನಗಿದೆಲ್ಲದರಿಂದ ಬಂದ ಫಾಯದೆ ಏನು ಹೇಳು (ಮೂರುದಾ. ೯೨) ; ಅವರ ಆಸ್ಥೆಯ ಫಾಯದೆ ಒಂದಿಲ್ಲೊಂದು ರೀತಿಯಲ್ಲಿ ತೆಗೆದುಕೊಳ್ಳಬಹುದಲ್ಲ (ಕ್ಷಿತಿಜ. ೬೮).
[← ಅರ. ಫಾಯಿದಾ ; ಪಾರ. ಹಿಂ. ಮರಾ. ಫಾಯದಾ]

**ಫಾಯಿದೇಶೀರ,** ಫಾಯದೆಶೀರ (ಅ). ಲಾಭಪ್ರದವಾಗಿ ; ಲಾಭ ಬರುವಂತೆ : ರೋಖ ರಕಮಿನಿಂದ ಖರೀದಿ ಮಾಡುವ ಆಸಾಮಿಗಳಿಗೆ ಮಜೂರಿಯ ಖರ್ಚು ಫಾಯಿದೇಶೀರ ಬೀಳುವ ಸೂಚನೆ (ಮುಂಬವ್ಯಾ. ೪೦ ಪ್ರಸ್ತಾವನೆ). **ಫಾಯದೆಶೀರ :** ಕಿರಕೋಳಕ್ಕೆ ಫಾಯದೆಶೀರ ಬೆಲೆಯು ಸಿಗಲಿಕ್ಕಿಲ್ಲ (ಮುಂಬವ್ಯಾ. ೨೩೦). [← ಮರಾ. ಫಾಯದೇಶೀರ್]

**ಫಾಯಿಷ್** (ನಾ). ಪ್ರಕಟಣೆ ; ಜಾಹಿರಾತು : ಡಿಸ್ಟ್ರೀಕ್ಟ್ ಗೆಜೆಟಿನಲ್ಲಿ ಫಾಯಿಷ್ಮಾಡಬೇಕು (ಗ್ರಾಮಾಕ. ೬೦). [← ಮರಾ. ಫಾಯಶ್]

**ಫಾರಂ** ‘ಫಾರಮ್ಮು’ ನೋ.

**ಫಾರಮ್ಮು,** ಫಾರಂ (ನಾ). ೧. ಮಾಹಿತಿಯನ್ನು ಬರೆಯಲು ನಿಗದಿಯಾದ ರೀತಿಯಲ್ಲಿ ಸಿದ್ಧಪಡಿಸಿದ ಕಾಗದ : ಅವರು ಕೊಟ್ಟ ಫಾರಮ್ಮಿನಲ್ಲಿ ನನ್ನ ವಿವರವನ್ನೆಲ್ಲಾ ತುಂಬಿಸಿದೆ (ರೂಢಿ). ೨. ಶಾಲೆಗಳಲ್ಲಿಯ ತರಗತಿ,—ಇಯತ್ತೆ : ಮನೆಯ ತಾಪತ್ರಯದಿಂದಾಗಿ ಅವಳ ಓದು ಎಂಟನೆಯ ಫಾರಮ್ಮಿಗೇ ನಿಂತುಹೋಯಿತು (ರೂಢಿ). **ಫಾರಂ :** ೧. ನಡೆದ ಸಂಗತಿ ತಿಳಿದ ಕೂಡಲೆ ೩ ರಿಪೋರ್ಟು ಫಾರಂಗಳುಳ್ಳ ಫಾರಂಗಳಲ್ಲಿ ಬರೆದು . . . ರವಾನಿಸಬೇಕು (ಗ್ರಾಮಾಕ. ೫೨). ೨. ನಿಮ್ಮ ಮಗಳು ಎಷ್ಟನೇ ಫಾರಂನಲ್ಲಿ ಓದುತ್ತಿದ್ದಾಳೆ ? (ರೂಢಿ). ೩. ಒಟ್ಟಿಗೆ ಮುದ್ರಿಸಲು ಚೌಕಟ್ಟಿನಲ್ಲಿ ಬಂಧಿಸಿ ಅಣಿಮಾಡಿ ಇಟ್ಟಿರುವ ಮುದ್ರಣದ ಮೊಳೆಗಳ ಜೋಡಣೆ ಮತ್ತು ಇಂತಹ ಜೋಡಣೆಯಿಂದ ಆದ ಪುಟಗಳ ಸಮೂಹ : ಹೀಗೆ ಚೌಕಟ್ಟಿನಲ್ಲಿ ಬಿಗಿ ಮಾಡಿದ ಪುಟಸಮೂಹಕ್ಕೆ ‘ ಫಾರಂ’ ಎಂದು ಹೆಸರು (ಮುದ್ರಕ. ೯೦). [← ಇಂ. Form]

**ಫಾರೀಕತ್ತು,** ಪಾರಿಕತ್ತು, ಪಾರಿಖತ್ತು, ಪಾರೀಕತ್ತು, ಪಾರೀಖತ್ತು (ನಾ). ೧. ಪಾಲು ; ವಿಭಾಗ : ಫಾರೀಕತ್ತು ಅನಬ್ಯಾಡಪಾ. ಅವನ್ಸಂಗ್ತೀಲೆ ಫಾರಿಕತ್ತು ಮಾಡಿಕೊಂಬೋ ಹಾಂಗಿಲ್ಲಾ (ಖಂಜಹು. ೦೦೬). **ಪಾರಿಕತ್ತು :** ೨. (ಜಮೀನು, ಆಸ್ತಿ ಮುಂತಾದುವು) ಬೇರೆ ಬೇರೆಯಾದುದನ್ನು ತಿಳಿಸುವ ಪತ್ರ ; ವಿಭಜನೆಯ ಪತ್ರ : ಮುಂದಿನ ವಾರವೋ ಆ ಮುಂದಿನ ವಾರವೋ “ ಹಿಸ್ಸೆ ಆಗಿ ಪಾರಿಕತ್ತಾಗ್ತದಂತೆ !” (ಕಾಮೂರು. ೩೦೮) ; ಎಲ್ಲಿ ಹುಡುಕಿದರೂ ‘ ಪಾರಿಕತ್ತು’ ಏಕೆ ಸಿಗಲಿಲ್ಲವೆಂಬುದೂ . . . ಕೋರ್ಟಿನಲ್ಲಿ ದತ್ತು ಏಕೆ ಊರ್ಜಿತವಾಗಲಿಲ್ಲವೆಂಬುದೂ ಮುಂತಾದ ಸಾವಿರಾರು ವಿಚಾರಗಳು ನಮ್ಮ ಹಳ್ಳಿಯ ಶ್ಯಾನುಭೋಗನಿಗೆ ಗೊತ್ತು (ಗರುಡಾ. ೮೬). **ಪಾರಿಖತ್ತು :** ೧. ಇಬ್ಬರೂ ಸ್ವಂತ ಹಿಡುವಳಿದಾರರಾಗಿದ್ದರೆ ಹಿಸ್ಸೆಯ ಪಾರಿಖತ್ತು ಪತ್ರ ಛಾಪಾಕಾಗದದ ಮೇಲಾಗಿ ಅದನ್ನು ರಿಜಿಸ್ಟರು ಮಾಡಬೇಕಿತ್ತು (ಗಂಗಾಳ. ೦೩೯). **ಪಾರೀಕತ್ತು:** ೨. ಸಣ್ಣಪ್ಪ ಸತ್ತ ಮೇಲೆ ಅವನ ಮಕ್ಕಳೆಲ್ಲ ವಿಭಾಗವಾಗಿ “ ಪಾರೀಕತ್ತು” ಮಾಡಿಕೊಂಡರೂ . . . ದತ್ತು ಏಕೆ ಊರ್ಜಿತವಾಗಲಿಲ್ಲ (ಗರುಡಾ. ೮೬). **ಪಾರೀಖತ್ತು:** ೧. ಮಾತೆತ್ತಿದರೆ ಪಾಲು ಪಾರೀಖತ್ತು ಎಂದು ಅಪ್ಪ ಮಕ್ಕಳು ಅಣ್ಣತಮ್ಮಂದಿರು ಹಿಸ್ಸೆ ಮಾಡಿಕೊಂಡ ಕಾರಣ ಒಂದು ಸಣ್ಣ ಮನೆ ನಾಲ್ಕಾರು . . . ಮನೆಗಳಾಗಿ ಮಾರ್ಪಟ್ಟಿದೆ (ಪಮ್ಮೊರು. ೩೦೯).
[← ಪಾರ. ಫಾರಿಗಖತೀ ; ಹಿಂ. ಫಾರಖತೀ ; ಮರಾ. ಪಾರಕತ್, ಪಾರಕತೀ, ಪಾರಖತ್, ಪಾರಖತೀ]

**ಫಾಲ** (ನಾ). ೧. ನೇಗಿಲಿನ ಗುಳ. ೨. ಹತ್ತಿ ಬಟ್ಟೆ: “ಫಾಲಂ, ಕಾರ್ಪಾಸಂ, ಬಾದರಂ—೩ ನೂಲುಬಟ್ಟೆ” (ಸಿದ್ಧಾಂತಿ. ೨೦೨). ೩. ಗಂಟಲು ; ಮೂಟೆ. ೪. ಹಣೆ ; ನೊಸಲು : ಸಂತಸಂದಳೆದಾಳಿದನ ಪದಧೂಳಿಗೆಯು ಸಿರಫಾಲವನು ಸಾರ್ಚೆ (ಗಗಹಾ. ೨೨-೦೦೯). [ಸಂ.]

**ಫಾಲದಿವ್ಯ** (ನಾ). ಕಾಯಿಸಿದ ಕಬ್ಬಿಣದ ಗುಳವನ್ನು ಹಿಡಿದು ತಾನು ಸತ್ಯವಂತನೆಂದು ಸಿದ್ಧಪಡಿಸುವ ಒಂದು ದಿವ್ಯ: ದಿವ್ಯಗಳಲ್ಲಿ ಬಹು ಪ್ರಚಲಿತವಿದ್ದುದೆಂದರೆ ‘ ಪಾಳದಿವ್ಯ’ ಅಥವಾ ‘ಫಾಲದಿವ್ಯ’ (ಕಶಾಆ. ೩೯೮) ; [ಸಂ.]

**ಫಾಲ್ಗುಣ** ‘ ಪಾಲುಗುಣ ’ ನೋ.

**ಫಾಲ್ಗುನ** (ನಾ). ಚಾಂದ್ರಮಾನವರ್ಷದ ಹನ್ನೆರಡನೆಯ ತಿಂಗಳು : “ ಫಾಲ್ಗುನಃ, ತಪಸ್ಯಃ, ಫಾಲ್ಗುನಿಕಃ— ೩ ಫಾಲ್ಗುನಮಾಸದ ಹೆಸರುಗಳು” (ಸಿದ್ಧಾಂತಿ. ೯೦) ; ವಿಶ್ವನಾಥನಾದಿಜಿನಂ ಫಾಲ್ಗುನಬಹುಲೈಕಾದಶಿಯೊಳಮನಂತಸುಖನಿಲಯನುತ್ತರಾಷಾಢದೊಳ್ ಧ್ಯಾನಮರೀಚಿಯಿಂ ಬೆದಱಿ (ಆದಿಪು. ೧೦-೧೬). [ಸಂ.]

**ಫಾಲ್ಗುನನಂದೀಶ್ವರ** (ನಾ). [ಜೈನ] ಫಾಲ್ಗುಣಮಾಸದಲ್ಲಿ ಆಚರಿಸುವ ಒಂದು ವ್ರತ ಮತ್ತು ಆ ವ್ರತ ನಡೆಯುವ ದಿನ,—ನೋಂಪಿ: ಅನ್ನೆಗಂ ಫಾಲ್ಗುನ ನಂದೀಶ್ವರಮಾದುದಾಗಳುಭಯಬಲಮುಮುಭಯಘೋಷಣೆಯುಂ ಘೋಷಿಸಿ ಕಾಳೆಗಮುನುಟಿದಿರ್ಪುದುಂ (ಪಂಪಾಭಾ. ೦೯-೬೩ ವ). [ಸಂ.]

**ಫಾಲ್ಗುನಿಕ** (ನಾ). = ಫಾಲ್ಗುನ : "ಫಾಲ್ಗುನಃ, ತಪಸ್ಯಃ, ಫಾಲ್ಗುನಿಕಃ — ಇ ಫಾಲ್ಗುನಮಾಸದ ಹೆಸರುಗಳು" (ಸಿದ್ಧಾಂತಿ. ೯೦). [ಸಂ.]

**ಫಾಶಾ** 'ಫಾಸೆ' ನೋ.

**ಫಾಶಿ** 'ಫಾಸಿ' ನೋ.

**ಫಾಸಲೆ,** ಪಾಸಲೆ, ಫಾಸಿಲೆ (ನಾ). ೧. ದೂರ; ಅಂತರ : ಬೆಂಗಳೂರಿನಿಂದ ಮೈಸೂರಿಗೆ ಬರುವ ದಾರಿಯಲ್ಲಿ ೨೭ ಮೈಲಿ ಫಾಸಲೆಯಲ್ಲಿರುವ ರಾಮಗಿರಿ ಎಂಬ ಊರಿಗೆ ಕ್ಲೋಸ್‌ಪೇಟೆ ಎಂಬ ಹೆಸರು ಉಂಟಾಯಿತು (ಮಹಾಪಂ. II, ೩); ನಂಜರಾಜನ ಶರೀರವು ಬಿದ್ದಿದ್ದ ಸ್ಥಳಕ್ಕೂ ರಾಜಒಡೆಯನಿದ್ದ ಸ್ಥಳಕ್ಕೂ ಅರ್ಧಮೈಲು ಫಾಸಲೆಯಿರಬಹುದು (ಶ್ರೀಣಾಮ. ೨೦೦); ನಾಲ್ಕುಮೈಲಿ ಫಾಸಲೆಯಲ್ಲಿ ಯಾವ ಊರೂ ಇರಬಾರದು (ಅರಿಮ. ೮೮). **ಪಾಸಲೆ :** ೨. ಸುತ್ತಮುತ್ತಲ ಪ್ರದೇಶ,—ಸ್ಥಳ : ಸುಮಾರು ಹತ್ತಿಪ್ಪತ್ತು ಮೈಲು ಪಾಸಲೆಯೊಳಗೆ ಒಂದೇ ಒಂದು ಆಸ್ಪತ್ರೆ ಇಲ್ಲ (ಹಾರುವಾ. ೧೯); ಈ ಪಾಸಲೆಗೆಲ್ಲ ಅವರೇ ಮೊದಲು ಗಾಡಿ ತರಿಸ್ದೋರು (ಮರಳು. ೦೭೬). **ಫಾಸಿಲೆ:** ೧. ಎರಡು ಗ್ರಾಮಗಳ ನಾಲ್ಕು ಮೈಲಿ ಫಾಸಿಲೆಯಲ್ಲಿ ಮೊಕ್ಕಾಂ ಮಾಡಿದರು (ಪಢಾ II, ೯೬೨). [← ಅರ. ಹಿಂ. ಮರಾ. ಫಾಸಲಾ ]

**ಫಾಸಿ,** ಪಾಸಿ$_2$, ಪಾಸ್ಸಿ$_3$, ಫಾಶಿ (ನಾ). ನೇಣು ಹಾಕಿ ಕೊಲ್ಲುವ ಶಿಕ್ಷೆ ; ಗಲ್ಲು : ಆದರೆ ಫಾಸಿಯ ಹಗ್ಗ ಒದಿರಲಿಲ್ಲ (ಬಂಗಾಹ. ೨೫) ; ಅವನಿಗೆ ಸಿಂಗಾಪುರದಲ್ಲಿ ಫಾಸಿಯಾಯಿತು (ಭಾರತಿ. ೮೦). **ಪಾಶಿ$_2$ :** 'ಪಾಶಿ ಸಜಾ' ಪರಾ. **ಪಾಸ್ಸಿ :** ದೀನಜನೋದ್ಧಾರಕನಂತೆ . . . ದೀನ ಜನರ ಕೊರಳಿಗೆ ಪಾಸಿ ಹಾಕುವವ (ತಲು. ೪೫). **ಫಾಶಿ :** ಏನು, ಯಾರಾದರೂ ಫಾಶಿಗೆ ಕೊಡಲಿರುವರೇನು ನನ್ನನ್ನ (ವಾತ್ಸಲ್ಯ. ೨೦೬) ; ಜಹಾಗೀರದಾರರಿಗೆ ಯಾವ ಶಿಕ್ಷೆ ಆಗುವುದೋ ಕೇಳಬೇಕೆಂದು ಎಲ್ಲರೂ ಆತುರರಾಗಿದ್ದಾರೆ. 'ಫಾಶಿ ಇಲ್ಲದಿದ್ದರೆ ಕಾಳಾಪಾಣಿ' ಎಂದು ಎಲ್ಲರೂ ಆಡುತ್ತಾರೆ (ಚನಕೆ. ೪೦) ; ಭೀತಿಯ ಅಪಾಯದ ಹಾಗೂ ಫಾಶಿಯ ಉರುಳಿನ ನೆರಳಲ್ಲೇ ನಾವು ದುಡಿಯಬೇಕು (ಅಕ್ಕಾರ್ಶ. ೦೫೬).

**ಫಾಸಿ ಕೊಡು** = ಗಲ್ಲುಗಂಬಕ್ಕೇರಿಸು ; ನೇಣು ಹಾಕು : ಕಳ್ಳರನ್ನು ಪತ್ತೆ ಮಾಡದಿದ್ದರೆ ನಿನಗೆ ಫಾಸಿ ಕೊಡುವೆನು (ಶಂಕಾವ್ಯ. ೩೬). [← ಹಿಂ. ಫಾಂಸೀ ; ಮರಾ. ಫಾಶೀ, ಫಾಂಶೀ]

**ಫಾಸಿಕಂಬ** (ನಾ). ನೇಣು ಹಾಕುವ ಕಂಬ : ಅವನ ದೃಷ್ಟಿಯೆದುರಿಗೆ ಜೇಲಿನ ದೊಡ್ಡ ದೊಡ್ಡ ಗೋಡೆಗಳು ಬಂದು ನಿಂತಂತಾಯಿತು. ಶಿವಿಗತ್ತಿಯ ಬಂದೂಕು ಹಿಡಿದುಕೊಂಡು ಪಹರೆ ಮಾಡುವ ಪೋಲೀಸರು, ಕಲ್ಲು ಒಡೆಯುವ ಕೈದಿಗಳು, ಫಾಸೀಕಂಬ (ಮಣ್ಣುಹ. ೦೫). [ ಫಾಸಿ + ಕಂಬ$_1$ (< ಕಂಭ)]

**ಫಾಸಿಖಾನೆ** (ನಾ). ಗಲ್ಲಿನ ಶಿಕ್ಷೆಯನ್ನು ಕೊಡುವ ಸ್ಥಳ : ನಿನಗೆ ಈ ಬಂದೀಖಾನೆಯಲ್ಲಿ ಫಾಸಿಖಾನೆಯಿದೆಯೆಂದೂ ಮತ್ತು ನನಗೆ ಫಾಸಿ ಶಿಕ್ಷೆಯನ್ನು ವಿಧಿಸಲು ಅಧಿಕಾರವಿದೆಯೆಂದೂ ತಿಳಿದಿರುವುದೇ ? (ಋಣಾಹಿ. ೦೯೬). [ ಫಾಸಿ + ಖಾನೆ ]

**ಫಾಸಿಲ್** 'ಫಾಸಲೆ' ನೋ.

**ಫಾಸಿಶಿಕ್ಷೆ** (ನಾ). = ಫಾಸಿ : ಮುಖಕ್ಕೆ ಫಾಸಿಶಿಕ್ಷೆ ಅನುಭವಿಸಲು ಹೋಗುವ ಕೈದಿಯ ಕಳೆ ಬರುವುದು (ಯೋಧಳ. ೬೬). [ಫಾಸಿ + ಶಿಕ್ಷೆ]

**ಫಾಸೆ,** ಪಾಸಿ$_4$, ಪಾಸ್ಸೆ$_2$, ಫಾಶಾ (ನಾ). ೧. ಪಗಡೆ, ಲೆತ್ತ ಮೊದಲಾದುವುಗಳಲ್ಲಿ ಬಳಸುವ ದಾಳ : ಬಸಂತಿಯು . . . ಪಗಡಿಗಳನ್ನು ಇಟ್ಟು ಹಸ್ತಿದಂತ ನಿರ್ಮಿತವಾದ ಫಾಸೆಗಳನ್ನು ಕೊಟ್ಟಳು (ಮಂಕಬಳ. ೬೨). **ಪಾಸ್ಸಿ$_4$ :** ೨. ಪಗಡೆಯಾಟದಲ್ಲಿ ದಾಳಗಳಿಂದ ಸೂಚಿತವಾಗುವ ಸಂಖ್ಯೆ ; ಗರ : ಇಂದು ಲೆತ್ತದ ಪಾಸಿಯೇ ತಿರುವುಮುರುವಾಗಿ ಬಿಟ್ಟಿತು (ಕೃಣಾಶ್ರ. ೨೬೦). **ಪಾಸ್ಸೆ$_2$ :** ೨. ದ್ಯೂತವಾಡುವಲ್ಲಿ ನಿಪುಣನಾದವನು ಪಾಸೆಗಳು ಹೇಗೆ ಬಿದ್ದರೂ ಖೇದಪಡುವುದಿಲ್ಲ (ಮಭಾರ. ೯೦). **ಫಾಶಾ :** ೧. ಪರಮಪಾಪಿ ಶಕುನಿ ತಾನು ಫಾಶಾದೊಳಗೆ ಫಕೀರನಾಗಿ ಧರ್ಮರಾಜ ಧರುಣಿ ದ್ರೌಪತಿಗಳ ಸೋತರ (ಪಲ್ಲಗೆ. ೪೪). [ ← ಮರಾ. ಫಾಸಾ ]

**ಫಾಳ,** ಫಾಳು (ನಾ). ತುಂಡು ; ತುಕಡಿ : ಜಂಗಮೋತ್ತಮರಿಗೆಲ್ಲರಿಗು ಆ ಕನಕದ ಫಾಳವನ್ನು ತೋರಿ (ಯುಹೋರ. ೦೫೦). **ಫಾಳು :** ಆ ಚರಮೂರ್ತಿಗಂ ಪೊಂದು ಹೇಮದು ಫಾಳನ್ನು ಕೊಟ್ಟು (ಯುಹೋರ. ೦೫೦). [ ← ಮರಾ. ಫಾಳ]

**ಫಾಳಣಿ,** ಫಳಣಿ (ನಾ). ೧. ವಿಭಾಗಿಸುವಿಕೆ; ಬೇರ್ಪಡಿಸುವಿಕೆ : ರೇಲವೇ ಫೀ, ಜಕಾತ, ಗಾಡಿಬಾಡಿಗೆ ಮುಂತಾದ ಖರ್ಚುಗಳ ಫಾಳಣಿ ಮಾಡಲಿಕ್ಕೆ ಅಡಚಣಿ ಬೀಳುವದು (ಮುಂಬವ್ಯಾ. ೯೦). **ಫಳಣಿ :** ೨. ಜಮೀನಿನ ವಿಭಾಗ,—ತುಂಡು : ಕೆಲವು ಹಳ್ಳಿಗಳಲ್ಲಿ ಫಳಣಿಯೆಂಬ ವಿಭಾಗಗಳಿದ್ದವು. ಒಂದು ಫಳಣಿಯೆಂದರೆ ಸುಮಾರು ೨ ಕೂರಿಗೆ ಆಗುತ್ತಿತ್ತು (ಕಹಾಗ. ೩೬೫). [← ಮರಾ. ಫಾಳಣೀ]

**ಫಾಳಿ** (ನಾ). ತುಂಡು; ತುಕಡಿ (?) : ಈ ಕ್ಷೇತ್ರಮಂ ವಿಷ್ಕಂಭದಿನಪಕರ್ಷಣಭಾಗಹಾರಮಾತ್ರ ಫಾಳಿಗಳಂ ಮಾಡಿಯೇಕಫಾಳಿಯಂ ತೆಗೆವುತ್ತಿರೆ ವಿಶೇಷಕ್ಷೇತ್ರಮಕ್ಕುಂ (ಕ್ಷಗಣ. ೨೦–೨೦). [← ಮರಾ. ಫಾಳೀ]

**ಫಾಳು** 'ಫಾಳ' ನೋ.

**ಫಾಳೆ** 'ಪಾಳ್ಯೆ' ನೋ.

**ಫಿಕೀರು,** ಪಿಕೀರು (ನಾ). ೧. ಆಸ್ಥೆ; ಆಸಕ್ತಿ : ಶಿವರಾತ್ರಿಯ ಹಬ್ಬದ ದಿವಸ ಮಹದೇವಪುರದಲ್ಲಿ ಬಹಳ ಫಿಕೀರಿನಲ್ಲಿ ಖುಷಿಯಿಂದ ಹಬ್ಬ ಮಾಡುತ್ತಾ ಇರುತ್ತಾರೆ (ರಾತೇಂದ್ರ. ೦೦೯). **ಪಿಕೀರು :** ೨. ಚಿಂತೆ ; ಕಾಳಜಿ : ಕೆಂಪಿ ಕೇರೀಲಿರೋದು ಅಕ್ಕಪಕ್ಕದ ಮನೆಯೋರ್ಗೆಲ್ಲಾ ತುಂಬಾ ಪಿಕೀರಾಗಿತ್ತು (ಅನಾಮಿ. ೬೯); ಮಣಿ . . . ಏನಾಗಿ ಹೋಗಿದೆಯೋ ಅವರಿಗೆ ಎಂಬ ಪಿಕೀರಿನಿಂದ ಹೆಡ್‌ಮೇಷ್ಟರ ರೂಮಿನೊಳಕ್ಕೆ ಬಂದ (ಸ್ವಾಮಿಸ್ನೇ. ೦೬೪).
[← ಅರ. ಫಿಕ್ರ್; ಹಿಂ. ಫಿಕಿರ್, ಫಿಕ್ರ್; ಮರಾ. ಫಿಕೀರ್, ಫಿಕರ್]

**ಫಿತೂರಿ,** ಪಿತೂರಿ (ನಾ). ಕುತಂತ್ರ; "ಒಳಸಂಚು; ಸಂಚು" (ಖಾಪಕೋ. ೦೮). **ಪಿತೂರಿ :** ನಿಜಸಂಸ್ಥಾನದೊಳಿರ್ಪ ಕುಹಕಿನಿಯೋಗಿಗಳೊಡರ್ಚಿದ ಪಿತೂರಿ[ಪಾಠಾಂ. ಪಿತುಮೆ]ಯಿಂ ವಿಜಯಪುರವರ್ತಿಯೆನಿಸುವ ಮುಜಬರಖಾನು ತೆರಳ್ಚಿ (ಕೆಳನೃ. ೬–೩೩); ಇದು ಬಂಡವಾಳಗಾರರ ಪಿತೂರಿ (ಅಪ್ಪಾವ. ೦೭) ; ರಾಜಕೀಯಜಾಗೃತಿ ಎರಡು ರೂಪಗಳನ್ನು ತಾಳಿತು; ಒಂದು ಪಿತೂರಿಯದು; ಇನ್ನೊಂದು ಸುಧಾರಣೆಯದು (ರಾಜ್ಯಶಾ. ೦೩).

**ಪಿತೂರಿ ನಡೆ** = ಒಳಸಂಚು ಆಗು ; ತಂತ್ರಕ್ಕೆ ಎಡೆಯಾಗಿರು: ಹೈದರನು ತಕ್ಷಣವೇ ಅನುಮಾನಶಕ್ತಿಯಿಂದ ಪಿತೂರಿ ನಡೆದಿದೆಯೆಂದು ಗ್ರಹಿಸಿದನು (ಒಡೆಳ. ೬೫). **ಪಿತೂರಿ ನಡೆಸು**=ಒಳಸಂಚನ್ನು ಹೂಡು ; ಸಂಚು ಮಾಡು : ಇಬ್ಬರೂ ಸೇರಿ ಪಿತೂರಿ ನಡೆಸಿದರು (ಕೂಪಶೇ. ೨೦೩); ನೀವೆಲ್ಲ ಕೂಡಿ ನನ್ನ ವಿರುದ್ಧ ಒಂದು ಪಿತೂರಿ ನಡೆಸಿದ್ದೀರಿ (ಬಿರುಜ. ೦೫೪). **ಪಿತೂರಿ ಮಾಡು** = ಪಿತೂರಿ ನಡೆಸು: ನಾನು ಎಷ್ಟೋ ಪಿತೂರಿ ಮಾಡಿದೆ. ಆದರೆ ದುಃಖ ಮತ್ತು ಲಜ್ಜೆ ಹೊರತು ಮತ್ತೇನೂ ದೊರೆಯಲಿಲ್ಲ (ಮಲಿನಾ. ೦೦೨). **ಪಿತೂರಿ ಹೂಡು** = ಪಿತೂರಿ ನಡೆಸು: ಎರಡನೆಯ ಬಾಜಿರಾಯ . . . ಬ್ರಿಟೀಷರ ಮೇಲೆ ಬೀಳಲು ಪಿತೂರಿ ಹೂಡಿದನು (ಭಾರದ. ೪೨೬). **ಫಿತೂರಿಯಾಗು** = ಒಳಸಂಚಿನಲ್ಲಿ ಭಾಗಿಯಾಗು : ನೀನು ಫಿತೂರಿಯಾಗಿಲ್ಲವೆಂಬುದನ್ನು ಕಾರ್ಯ ಮಾಡಿ

ತೋರಿಸದಿದ್ದರೆ ನನ್ನ ವತನವನ್ನೇ ಖಲಾಸಾ ಮಾಡಿಸಿ ಬಿಡುವೆನು (ಹುಬ. ೨೭೩).

[← ಅರ. ಫುತುರ್; ಹಿಂ. ಫಿತೂರ್; ಮರಾ. ಫಿತುರೀ, ಫಿತೂರ್]

**ಫಿದವಿ, ಫಿದಿವಿ, ಫಿದ್ವಿ** (ನಾ). ೧. ಸೇವೆ; ಕೈಂಕರ್ಯ : ಗೌರ್ನರ್ ಪದವಿ ಮೇಲೆ, ಕಾರ್ಕೂನ್ ಫಿದವಿ ಕೀಳೆ ? ಎರಡೂ ಒಂದೆ ನನಗೆ (ಕಿರಾಂ. ೨೬-೩). **ಫಿದಿವಿ :** ೨. ಸೇವಕ ; ಆಳು: (?). **ಫಿದ್ವಿ:** ೨. (ಕೈಗ. II. ೩೩೯). [← ಅರ. ಹಿಂ. ಮರಾ. ಫಿದವೀ]

**ಫಿದಿವಿ** 'ಫಿದವಿ' ನೋ.

**ಫಿದ್ವಿ** 'ಫಿದವಿ' ನೋ.

**ಫಿನಾಯಿಲ್** 'ಫಿನೈಲ್' ನೋ.

**ಫಿನೈಲ್, ಫಿನಾಯಿಲ್** (ನಾ). ಕ್ರಿಮಿನಾಶಕವಾದ ಒಂದು ಔಷಧಿ ದ್ರವ ; ಕಾರ್ಬಾಲಿಕ್ ಆಮ್ಲ : ನೊಣಗಳ ವಿಷಯವೂ ಹೀಗೆಯೇ . . . ನಿತ್ಯವೂ ಫಿನೈಲ್ ಹಾಕಿ ನೆಲವನ್ನು ಸಾರಿಸುತ್ತಿದ್ದರೂ ಅವು ಎಲ್ಲೆಲ್ಲೂ ಕಾಣಿಸಿಕೊಳ್ಳುತ್ತವೆ (ಸಂಟಕು. ೯೪). **ಫಿನಾಯಿಲ್:** ಮೊನ್ನೆ ಫಿನಾಯಲ್ ಹಾಕಿದ ಬಕೆಟ್ಟಿನಲ್ಲಿ ಹುಳಿ ತಂದು ಬಡಿಸಿಬಿಟ್ಟರು ಪುಣ್ಯಾತ್ಮರು (ಅಗಸ್ತ್ಯ. ೬೩).

[← ಇಂ. Phenyl, Phenol]

**ಫಿರಂಗಿ, ಪರಂಗ, ಪರಂಗಿ, ಪಿರಂಗಿ, ಫರಂಗಿ** (ನಾ). ೧. ಐರೋಪ್ಯ ಜನಾಂಗಕ್ಕೆ ಸೇರಿದವನು : ಕಾವಲುದಳದ ಸಿಪಾಯಿಗಳು . . . ಫಿರಂಗಿಗಳ ಬಳಿಗೋಡಿದರು (ಪಗಹೂ. ೦೨೬); ಫಿರಂಗಿಗಳನ್ನು ಹಿಂದುಸ್ಥಾನದಿಂದ ಹೊರಗೆ ಅಟ್ಟುವುದನ್ನು ನೋಡುವುದೇ ನನ್ನ ತೀವ್ರ ಇಚ್ಛೆಯಾಗಿದೆ (ಕ್ರಾಂಂಥ. ೩೬). ೨. ತೋಪು ; ದೊಡ್ಡ ತುಬಾಕಿ : ಇಡಿಸಲೆ ನಿನ್ನ ಫಿರಂಗಿ ಬಾಯೊಳು (ಬಿಜ್ಜರಾ. ೩-೬೬); ಪೆಟಲು ಬಾಣ ಫಿರಂಗಿ ಕೋವಿಯ ಭಟರು ಹರಿಗೆಯ ಬಿಲ್ಲಿನಲಿ ಸಂಘಟಿಸಿತಾಕ್ಷಣ (ಶಠಲ. ೩೩೦-೦೩); ಅವರನ್ನು ಫಿರಂಗೀಬಾಯಿಗೆ ಕಟ್ಟಿ ಸಂಹರಿಸುವಂತೆ ಹೇಳು (ಮುದ್ರಾಮಂ. ೦೨೬); ಗುಂಡು ಹಾರಿಸಿದ ಫಿರಂಗಿಯಿಂದ ಹೊರಟಿದ್ದ ಕರಿನೀಲಿಯ ಹೊಗೆ ಬತೇರಿಯನ್ನು ತುಂಬಿತ್ತು (ಕೃಕೃಶೂ. ೨). ೩. ಮೇಹರೋಗ : 'ಫಿರಂಗಿರೋಗ' ಪರಾ. **ಪರಂಗ :** ೧. ಸಮಸ್ತವೀರಪರಿವಾರಾಸಯುವಾಗಿ ಗೋವೆಯ ಪರಂಗದ ಕಪಿತನ ಮೇಲೆ ದಂ[ಡು] × ಟಯೆಲ್ಲಿನ × (ಕಇ. I. ೬೬-೬; ೦೫೨೨); ಪರಂಗದವರ ರಾಜಕಾರ್ಯ್ಯದಲಿ ನಂಮ ಅರಮನೆಯ ಬಾಗಿಲಲ್ಲಿ ನಿಂ[ನ ತಂಮ] ಯೆಕಪ್ಪನಾಯಕನು ಯಿಱಿದು ಯಿ[ಱಿಯಿಸಿಕೊಂಡು] ಬೀಳಲಾಗಿ (ಕಇ. III. ೦೩-೯; 1542). **ಪರಂಗಿ :** ೧. ಹೊಯ್ಸಳ ಕೊಂಗು ಸಿಂಧು ಪರಂಗಿ ಪಾಂಚಾಲಾದಿ ನೃಪರೆಲ್ಲಂದರಲ್ಪಿಯಲಿ (ಮದೀಕು. ೯-೦೩) ; ಕರೆಯುವನಿಗೆ ಬಾಧಕರಾಗಿರುವ ಪರಂಗಿಗಳ ಬಲವನುಡುಗಿಸಿ (ಕೆಳನೃ. ೬-೭) ; ಪರಂಗಿಗಳಿಂದ ಬಂದ ಶಮ್ಮೀಳದ್ರವ್ಯಂಗಳಂ . . . ಉಳಿಯಲ್ವೇಳ್ಕು (ಮಹಾಶಿ. ೧೦-೯೦). ೪. ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಪಪ್ಪಾಯಿ : 'ಪರಂಗಿಗಿಡ' ಪರಾ. ೫. (ಕರಾ) ಪೈನಾಪಲ್ ಗಿಡ ; ಅನಾನಸು : 'ಪರಂಗಿಗಿಡ' ಪರಾ. **ಪಿರಂಗಿ :** ೨. ತರಕಸ ಶಾರ್ಙ್ಗ ಪಿರಂಗಿ ಭಲ್ಲೆಯ ಬಿಟ್ಟ ಬಿಜುಗಣ್ಣು ಭೀಕರಾನನವು . . . ಒಪ್ಪಲ್ಪಪ್ಪ ತುರುಕ ವಜೀರ (ಮದೀಕು. ೨೦-೬೦ ); ಪುರದ ಕೋಟೆಯ ಸುತ್ತಣ ಕೊತ್ತಳಗಳೊಳು ಮೆಱಿದುವು ಬಲು ಪಿರಂಗಿಗಳು (ಕಂಪವಿ. ೬-೦೬) ; ಕೊತ್ತಲಗಳ ಮೇಲೆ ಯೆತ್ತಿ ಪಿರಂಗಿಯ ಹತ್ತು ದಿಕ್ಕಿನೊಳು ಹಾರಿಸಲು (ಸೌಗಂಶ. ೨-೦೬). **ಫರಂಗಿ :** ೧. ಯಾವ ಫರಂಗಿ ಬಂದು ಹೇಳುತ್ತಾನೋ ಹೇಳಲಿ (ಶಿವಪ. ೯೬) ; ಇವನನ್ನು . . . ಫರಂಗಿಯವರು ಹಿಡಿದು ಗಲ್ಲಿಗೆ ಏರಿಸಿದಾಗ ತಾಲ್ಲೂಕು ತಾಲ್ಲೂಕೇ ಅತ್ತಿತಂತೆ (ಪಕಪಾ. II. ೮೫೨); ನಡುವೆ ಫರಂಗಿಗುಂಡು ಸುತ್ತುತ್ ಫರಂಗಿ ದಂಡು (ವಾಕದ. ೦೫೨).

[←ಇಂ. Frank./ ಹಿಂ. ಮರಾ. ಫಿರಂಗೀ. / ಸಂ. ಫಿರಂಗ]

**ಫಿರಂಗಿಉಬ್ಬೆ** (ನಾ). ಫಿರಂಗಿರೋಗದಿಂದ ಬರುವ ಹುಣ್ಣು : ಫಿರಂಗಿಉಬ್ಬೆಗೆ . . . ತಾಳಕ ೧೦ ತೂಕ, ರಸ ೨ ತೂಕ, ಕಪ್ಪಲಿಸತ್ವ ೧ ತೂಕ ನಿಂಬೇಹುಳಿಯಿಂದರೆದು ಮೂಸೆಯಲಿರಿಸಿ ಗುಳಿಗೆಯ ಮಾಡಿ ಮೂಸೆಯಲಿರಿಸಿ ಮೇಲೆ ಮರಳ ತುಂಬಿ ತುಸು ಪುಟಿಸಿಕೊಳ್ಳೆ ಹರವಹುದು (ಏವೈಪಿ. ೦೬೨). [ಫಿರಂಗಿ + ಉಬ್ಬೆ$_1$? ]

**ಫಿರಂಗಿಚೆಕ್ಕೆ, ಪರಂಗಿಚೆಕ್ಕೆ** (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಅದರ ಬೇರು : ಫಿರಂಗಿ ಚೆಕ್ಕೆ ೧ ಸೇರು, ಇದಕ್ಕೆ ಕೊಡುವ ದ್ರವ್ಯ- ಹಿಪ್ಪಲಿ . . . ದೇವದಾರು, ಇವುಗಳು ಪತ್ರ್ಯ ಗ ೨ ತೂಕದ ಚೂರ್ಣವ ಮಾಡಿ ತೆಗೆದುಕೊಳ್ಳುವುದು (ಏವೈಪಿ. ೩೯). **ಪರಂಗಿಚೆಕ್ಕೆ :** (ಮೈಶಿ. ೬೦-೦೯೩೬); ಪರಂಗಿಚೆಕ್ಕೆಯು ಒಣಬೇರುಗಳಿಂದ ಸಾರ್ಸಪರಿಲ ಎಂಬ ವಸ್ತು ಸಿಕ್ಕುತ್ತದೆ (ಕಂಕೋ. X. ೬೯೩).

[ದೇ.॥ ತಮಿ. ಪಱಙ್ಗಿಚ್ಚೆಕ್ಕೈ; ತೆಲು. ಪರಂಗಿಚೆಕ್ಕ]

**ಫಿರಂಗಿರೋಗ, ಪರಂಗಿರೋಗ** (ನಾ). ಒಂದು ಬಗೆಯ ಮೇಹ ರೋಗ ; ಉಪದಂಶ ; ಪರಂಗಿ ಹುಣ್ಣಿನ ರೋಗ : ಉಪದಂಶ ಅಥವಾ ಫಿರಂಗಿರೋಗ (syphilis)ದಲ್ಲಿ ತೀವ್ರವಾದ ಮನೋರೋಗಗಳುಂಟಾಗುವುವು (ಮನೋರೋ. ೨೯). **ಪರಂಗಿರೋಗ :** ಪರಂಗಿ ರೋಗವು ನಮ್ಮ ಇಂಡಿಯಾದೇಶದ ಹಲವು ಭಾಗಗಳಲ್ಲಿರುವ ಕುರುಡುತನಕ್ಕೆ ಕಾರಣವಾಗಿರುತ್ತ (ಶಿಮ್ಮದ್ಯ. ೦೦೩). [ಫಿರಂಗಿ + ರೋಗ]

**ಫಿರಂಗಿಶೂಲೆ** (ನಾ). = ಫಿರಂಗಿಉಬ್ಬೆ : ಫಿರಂಗಿಶೂಲೆಯಾಗಿದ್ದ ಠಾವಿಗೆ ದಿನ ಒಂದಕ್ಕೆ ಮೂಱು ಬಾರಿ ತೊಡೆದು ಮಿಾಯಲು ೫ ದಿನದ ಮೇಲೆ ಕೀವು ಬರುವುದು (ಏವೈಪಿ. ೬೯). [ಫಿರಂಗಿ + ಶೂಲೆ$_1$]

**ಫಿರಂಗಿಹುಣ್ಣು, ಪರಂಗಿಹುಣ್ಣು** (ನಾ). = ಫಿರಂಗಿಉಬ್ಬೆ : ಆ ತೈಲವಂ ಪಾವಡೆಗೆ ತೊಡೆದು ಹುಣ್ಣಿಗೆ ಹಾಕಲು ಎಂಥ ಫಿರಂಗಿಹುಣ್ಣು ಮಾಣ್ಗುಂ (ಏವೈಪಿ. ೬೬). **ಪರಂಗಿಹುಣ್ಣು :** ಉಪದಂಶವೆಂದರೂ . . . ಪರಂಗಿ ಹುಣ್ಣು ಎಂದರೂ ಎಲ್ಲಾ ಒಂದೇ ಜಾತಿ (ವೈದ್ಯಸಾ. II. ೦೬೬).

[ಫಿರಂಗಿ + ಹುಣ್ಣು (<ಪುಣ್)]

**ಫಿರಕ** 'ಫಿರ್ಕಾ' ನೋ.

**ಫಿರತಿ, ಫಿರ್ತಿ** (ನಾ). ಸಂಚಾರ ; ಪರ್ಯಟನ ; ಪ್ರವಾಸ : ಈ ಸಾರೆಯ ಫಿರತಿಯಲ್ಲಿ . . . ರಾಮರಾಯನ ಜೊತೆಗೆ ಕಟ್ಟಿಗೆ ಹೋಗಬೇಕಾಗಿ ಬಂದಿತು. ಅವನ ಫಿರತಿಗಳು ಹೆಸರಾಗಿದ್ದವು (ಗಂಮಾಯಿ. ೦೬೪); ಇವರು ವರ್ಷಕ್ಕೆ ಏಳು ತಿಂಗಳು ಫಿರತೀ ಮಾಡಲೇಬೇಕು (ಕಾರವ. ೬೩); ಇದ್ದೂರಾಗ ಹತ್ತು ರೂಪಾಯಿ ಕಡಿಮಿ ಸಂಬಳ ಸಿಕ್ಕರೂ ಅಡ್ಡಿಯಿಲ್ಲ ಈ ಫಿರತಿ ಕೆಲಸ ಸಿಗಬಾರದು (ಪೂಶಾಕ. ೯೩). **ಫಿರ್ತಿ :** ಆಗಾಗ ಫಿರ್ತಿಯ ಕೆಲಸವೂ ಬೀಳುವುದು (ಸಾವಿಲು. ೦೬೦) ; ಸಾಹೇಬರೊಂದಿಗೆ ಅವರು ಹಳ್ಳಿಯ ಮೇಲೆ ಫಿರ್ತಿಗೆ ಅದೇ ಹೋಗಿದ್ದರು (ಹೇಮಂತ. ೦೬೩).

[← ಮರಾ. ಫಿರತೀ]

**ಫಿರಿಕಟ್ಟು** (ನಾ). ತಡೆ; ಬಂಧನ; ಬಂದೋಬಸ್ತು: ಅವನಿಗೆ ಜಾರುಂದಾಯ ಭೂತ ಹಿಡಿದಿದೆ . . . ಅದಕ್ಕೆ ತಕ್ಕ ಫಿರಿಕಟ್ಟು ಮಾಡದಿದ್ದರೆ ಅದು ಎಲ್ಲರನ್ನೂ ರಕ್ತ ಕಾರಿಸಿ ಕೊಲ್ಲುವ ಮಹಾಭೂತ ! (ಶರಾಪ. ೦೬೯).

[← ತುಳು. ಬಿರಿಕಟ್ಟು]

**ಫಿರಿಯಾದಿ** 'ಫಿರ್ಯಾದಿ' ನೋ.

**ಫಿರಿಯಾದು** 'ಫಿರ್ಯಾದು' ನೋ.

**ಫಿರ್ಕಾ, ಫಿರಕ, ಪಿರ್ಖಾ** (ನಾ). ಶಾನುಭೋಗನ ಅಧಿಕಾರಕ್ಕೆ ಒಳಪಟ್ಟ ಹೋಬಳಿಯ ಒಂದು ವಿಭಾಗ : ಸಿಲೆದಾರಿ ಫಿರ್ಕಾದಲ್ಲಿ

೨೮,೦೦೦ ಕುದುರೆಗಳಿದ್ದುವು (ಮುಕಾವಂ. II. ೦೬); ಎರಡು ಅಥವಾ ಹೆಚ್ಚು ಗ್ರಾಮಗಳನ್ನು ಅಥವಾ ಅವುಗಳ ಭಾಗಗಳನ್ನು ಒಂದು ಫಿರ್ಕಾವಾಗಿ ಏರ್ಪಡಿಸಬಹುದು (ಗ್ರಾಮಪಾಕ. ೬೬); ಅವರ ಫಿರ್ಕಾದಲ್ಲಿ ಕಂದಾಯ ಯಾವಾಗಲೂ ಬಾಕಿಯಾದುದೇ ಇಲ್ಲ (ಚಿತ್ರಕ. ೨೦). **ಫಿರಕ :** (ಕಿ). **ಫಿರ್ಖಾ :** ಒಂದೊಂದು ಫಿರ್ಖಾದಲ್ಲಿ ತಾಲ್ಲೂಕು ಅಮಲ್ದಾರರುಗಳು . . . ಗ್ರಾಮನೌಕರರಿಗೆ ರಜಾ ಮಂಜೂರ್ಮಾಡಲು ಅಧಿಕಾರ ಹೊಂದಿರುವರು (ಗ್ರಾಮಪಾಕ. ೭). [← ಅರ. ಹಿಂ. ಫಿರಕಾ]

**ಫಿರ್ಖಾ** 'ಫಿರ್ಕಾ' ನೋ.

**ಫಿರ್ತಿ** 'ಫಿರತಿ' ನೋ.

**ಫಿರ್ಯಾದಿ** 'ಫಿರ್ಯಾದು' ನೋ.

**ಫಿರ್ಯಾದು, ಪಿರಿಯಾದಿ, ಫಿರಿಯಾದಿ, ಫಿರಿಯಾದು, ಫಿರ್ಯಾದಿ** (ನಾ). ೧. ತಮಗಿರುವ ತೊಂದರೆಯನ್ನು ತಿಳಿಸಿ ಪರಿಹಾರಕ್ಕಾಗಿ ಮಾಡುವ ವಿನಂತಿ; ನ್ಯಾಯಸಂಪಾದನೆಗಾಗಿ ಸಲ್ಲಿಸುವ ಅಹವಾಲು : ಈ ಕೋರ್ಟಿನ ಹಕೀಮರಲ್ಲಿ ಒಬ್ಬರ ತರುವಾಯ ಮತ್ತೊಬ್ಬರು ಅಧಿಕಾರ ವಹಿಸಿ ಹದಿನೈದು ದಿನ ಫಿರ್ಯಾದುಗಳನ್ನು ದಾಖಲ್ಮಾಡಿಕೊಂಡು ಆಮೇಲೆ ಹದಿನೈದು ದಿನ ಅವುಗಳ ವಿಚಾರಣೆ ನಡೆಸುತ್ತಿದ್ದರು (ಮುಕಾವಂ. II. ೪೭); ಡೆಪ್ಯೂಟಿಕಮಿಷನರವರು . . . ತಮ್ಮಲ್ಲಿಗೆ ಫಿರ್ಯಾದು ಬಂದು ವಿಚಾರಣೆ ನಡೆಸಿಯಾಗಲಿ, ಫಿರ್ಯಾದಿಲ್ಲದೆ ತಾವಾಗಿಯೇ ಆಗಲಿ ಜುಲ್ಮಾನೆ ಹಾಕಬಹುದು (ಗ್ರಾಮಪಾಕ. ೮೬). ೨. ದೂರು : ರಷ್ಯಾನ್ನಿಯ ರಾಜ್ಯದ ಮೇಲೆ ಅನೇಕ ಸಾಹುಕಾರರ ಅರ್ಜಿ, ಫಿರ್ಯಾದುಗಳು ಹೆಚ್ಚಿದವು (ರುಜಾಚಿ. ೩); ಯಾವ ಕೋರ್ಟಿಗೆ ಹೋಗಿ . . . ಫಿರ್ಯಾದು ಮಾಡುವುದು? (ಮೂರಾವ. ೦೯೦). **ಪಿರಿಯಾದಿ :** ೩. ದೂರು ಕೊಟ್ಟವನು; ಆಪಾದನೆ ಮಾಡಿ ಅಹವಾಲು ಸಲ್ಲಿಸಿದವನು; ವಾದಿ : ಈ ವಿವರವನ್ನು ಟೀಪುಸುಲ್ತಾನರಿಗೆ ಪಿರಿಯಾದಿಯಾಗಿ ಜಾಹೀರು ಮಾಡಿದರಿಂದ (ರಾಕೇಂದ್ರ. ೩೬). **ಫಿರಿಯಾದಿ:** ೨. ಆಳುಗಳು ಪೋಲೀಸ್ ಸ್ಟೇಷನ್ನಿಗೆ ಫಿರಿಯಾದಿ ಕೊಟ್ಟರು (ಗಂಗಾಕ. ೩೯). **ಫಿರಿಯಾದು :** ೧. ಕುಹಕಿಗಳ್ ರಚಿಸಿದ ಫಿರಿಯಾದಿನಿಂ ನಿತ್ರಸಿಲಪ್ಪುದೆ ಸ್ಥಳದಿಂ ಮುನ್ನಮೆ ತೊಲಗಿ ಪೋಗಿ (ಕಕಪ್ಪ. ೬-೪೩); ಅಮಿಲ ಶಿರಸ್ತೇದಾರರು ಹೋಗಿ ಜನರ ಫಿರಿಯಾದನ್ನು ವಿಚಾರಣೆ ಮಾಡಿ ಬಂದೋಬಸ್ತು ಮಾಡಿಸಬೇಕು (ಮುಕಾವಂ. II. ೬೩). **ಫಿರ್ಯಾದಿ :** ೧. ನ್ಯಾಯಾಧೀಶರ ಸಭೆಯಲ್ಲಿ ಫಿರ್ಯಾದಿಯನ್ನು ಮಾಡಿದರು (ಕೃಷಿಕ್ರ. ೨೦); ಅವರು . . . ನನ್ನಿಂದ ಫಿರ್ಯಾದಿ ಬರೆಯಿಸಿದರು (ಎಡಹ. ೬೭); ನಾಳೆ ದರ್ಬಾರದಲ್ಲಿ ಫಿರ್ಯಾದಿಯನ್ನು ಕೊಡು (ಮುಂಡಾಕ. ೦೯೦). ೨. ನನ್ನ ಮೇಲಿನ ಫಿರ್ಯಾದಿಗಳನ್ನು ಕೇಳಿ ಕೇಳಿ ಬೇಸತ್ತನು (ಮೇಲಿಮು. ೩). ೩. ಫಿರ್ಯಾದಿಯ ವಕೀಲನಿಗೆ ಮೈ ಉರಿಯಿತು (ಕಮಳ. ೦೬೭); ಅದಕ್ಕೆ ನಾನೇ ಪ್ರಮುಖ ಫಿರ್ಯಾದಿ ಆಗಿದ್ದೆ (ಅಪವಾ. ೨); ಫಿರ್ಯಾದಿ, ಅಪರಾಧಿಗಳಿಬ್ಬರೂ ತಮ್ಮ ತಮ್ಮ ಪರವಾಗಿ ವಾದಿಸುವವರನ್ನು ನೇಮಿಸಿಕೊಳ್ಳುವ ಅಧಿಕಾರವಿತ್ತು (ಹುಟ್ಟಿಹ. ೦೬).

**ಫಿರ್ಯಾದಿ ಹೋಗು** = ನ್ಯಾಯಾಲಯಕ್ಕೆ ಅಹವಾಲು ಸಲ್ಲಿಸು : ಅವನು ನ್ಯಾಯಾಧೀಶನ ಬಳಿಗೆ ಫಿರ್ಯಾದಿ ಹೋದನು (ಮುಂಬಯು. ೪೦೭).

[← ಅರ. ಪಾರ. ಫರ್ಯಾದ್, ಫರಿಯಾದ್; ಹಿಂ. ಫರಿಯಾದ್, ಫಿರಿಯಾದ್; ಮರಾ. ಫಿರ್ಯಾದ್]

**ಫಿರ್ಯಾದುಕಛೇರಿ** (ನಾ). ಮೈಸೂರಿನ ಅರಸರು ಏರ್ಪಡಿಸಿದ ಅಠಾರಾ ಕಚೇರಿಗಳಲ್ಲಿ ಒಂದು; ತಕರಾರುಗಳು, ಅಹವಾಲುಗಳನ್ನು ವಿಚಾರಣೆ ಮಾಡುವ ಕಚೇರಿ : ಕಚೇರಿಗಳು ೧. ದಿವಾನ್‌ಕಚೇರಿ . . . ೧೮. ಫಿರ್ಯಾದುಕಛೇರಿ (ಮುಕಾವಂ. II. ೩೯).

[ಫಿರ್ಯಾದು + ಕಛೇರಿ (<ಕಚೇರಿ)]

**ಫಿರ್ಯಾದುದಾರ** (ನಾ). = ಫಿರ್ಯಾದು ೩ : ಫಿರ್ಯಾದುದಾರರು ಮತ್ತು ಸೆಷನ್ಸ್ ನ್ಯಾಯಾಧೀಶರೇ ನಡೆಸಬೇಕಾದ ಕೇಸುಗಳಲ್ಲಿ, ದಾವಾದ ಬಗ್ಗೆ . . . ಆರೋಪ ಹೊರಿಸಬಹುದು (ಕಂಕೋ. I. ೮೬೬).

[ಫಿರ್ಯಾದು + — ದಾರ್₄]

**ಫಿಲಂ** (ನಾ). ೧. ಭಾವಚಿತ್ರ ಅಥವಾ ಚಲನಚಿತ್ರಗಳನ್ನು ಮೂಡಿಸುವುದಕ್ಕಾಗಿ ಉಪಯೋಗಿಸುವ ಸೆಲ್ಯುಲೈಡಿನ ಸುರುಳಿ. ೨. ಚಲನಚಿತ್ರ; ಸಿನಿಮಾ : ಇದನ್ನು 'ಫಿಲಂ' ತೆಗೆಯಬೇಕು (ಹಮ್ಮೊಂದ. ೫ ಪನ್ನ–ಪಿಮ್ಮ ಮಾತು). [← ಇಂ. Film]

**ಫೀ, ಫೀಜು, ಫೀಸಂ** (ನಾ). ಶುಲ್ಕ : ಆ ಬದುಕಿಗೆ ಬಿದ್ದಿರುವ ಫೀಗೆ ಬಡ್ಡಿ ತಕ್ಕೊಳ್ಳಲಾಗದು (ಮುಂಬವ್ಯಾ. ೨೨ ಪ್ರಶ್ನಾವಳಿ); ವಕೀಲರ ಫೀ ಕೊಡಬೇಕಲ್ಲ ಜಿನ್ನಪ್ಪ? (ಗ್ರಾಮಾಯ. ೨೮೩). **ಫೀಜು :** ಉಳಿದ ಒಂದು ಪಾಲು ಕಕ್ಷಿಗಾರರ ಕಡೆಯ ವಕೀಲರಿಗೆ ಫೀಜಾಗಿ ಸಲ್ಲುತ್ತಿತ್ತು (ಮುಕಾವಂ. II. ೪೫); ಹೈಸ್ಕೂಲಿನಲ್ಲಿ ಓದುತ್ತಿದ್ದ ಇಬ್ಬರಿಗೆ ಅರ್ಧ ಫೀಜು ಕಟ್ಟಬೇಕಾಗಿತ್ತು (ಮುಹಾಗ. ೬೩). **ಫೀಸು :** ಈಗ ನಾನು ನಿಮಗೆಷ್ಟು ಫೀಸು ಕೊಡಬೇಕಾಗಿದೆ? (ಪುಪರು. ೨೦೫). ☞ 'ಫೀಜು', 'ಫೀಸು' ಎಂಬ ರೂಪಗಳು ಇಂಗ್ಲಿಷಿನ 'ಫೀ' ಎಂಬುದರ ಬಹುವಚನ ರೂಪಗಳು. [← ಇಂ. Fee]

**ಫೀಜು** 'ಫೀ' ನೋ.

**ಫೀನಿಕ್ಸ್** (ನಾ). ೧. ಐದಾರು ಶತಮಾನಗಳ ಕಾಲ ಅರೇಬಿಯಾ ಮರಳುಗಾಡಿನಲ್ಲಿ ಜೀವಿಸಿದ್ದು, ಬಳಿಕ ತಾನೇ ಬೆಂಕಿಯಲ್ಲಿ ಸುಟ್ಟುಕೊಂಡು ಮತ್ತೆ ಹೊಸ ಹುರುಪಿನೊಂದಿಗೆ ಅದೇ ಬೂದಿಯಿಂದ ಹೊರಬಂದು ಬಹುಕಾಲ ಬದುಕುವುದೆಂದು ನಂಬಲಾದ ಒಂದು ಬಗೆಯ ಪಕ್ಷಿ : ಮುಕ್ಕಿ ಮೊಗೆಯುವೆ ಕಾಲ . . . ಉಗ್ರವ್ಯಾಘ್ರನ ಹರಿತಹಲ್ಲು ಕಿತ್ತಸೆವೆ. ಪುರಾತನ ಪಕ್ಷಿ ಫೀನಿಕ್ಸ್ ತನ್ನ ರಕ್ತದ ಬೂದಿ (ಪಂಪಮು. ೮೦-೯). ೨. ಒಂದು ನಕ್ಷತ್ರರಾಶಿ : ಚಕೋರವು ಪಾಶ್ಚಾತ್ಯರ ಫೀನಿಕ್ಸ್ (ವಕ್ಷತ್ರ. ೨೦). [← ಇಂ. PhoeniX]

**ಫೀಸು** 'ಫೀ' ನೋ.

**ಫುಕ್ಕಟೆ** 'ಪುಕ್ಕಟೆ' ನೋ.

**ಫುಗಡಿ,** ಪುಗಡಿ, ಪುಗುಡಿ (ನಾ). ಪರಸ್ಪರ ಕೈಗಳನ್ನು ಭದ್ರವಾಗಿ ಹಿಡಿದು, ನಿಂತಲ್ಲೇ ಗಿರ್ರನೆ ತಿರುಗುವ ಒಂದು ಬಗೆಯ ಆಟ; ಅಪ್ಪಾಲೆ ತಿಪ್ಪಾಲೆ; ಬಗಟ್ಟಬುಗುರಿ (ಉಕ) : ಇಬ್ಬರೂ ಎದ್ದು ನಿಂತು ಚಿಕ್ಕಮಕ್ಕಳು ಫುಗಡಿಯಾಡುತ್ತಾರಲ್ಲ — ಆ ರೀತಿಯಲ್ಲಿ ಕೈಯಲ್ಲಿ ಕೈಯಿಕ್ಕಿ ರಿಂಗಣಗುಣಿತ ಹಾಕತೊಡಗಿದರು (ಗೀಚುಗ. ೦೩); ಪುಗಡಿಯಾಟ ನಡೆದಿತ್ತು (ಪಾತರ. ೮೦). **ಪುಗಡಿ :** ನಾನೊಮ್ಮೆ ಪುಗಡಿ ಆಡುತ್ತಿದ್ದೆ — ಗೋಯ ಕೂಡ (ಕನಕ. ೯೬); ನಾಳೆ ತಿಳಿಯುವುದು ಬೆಳಗಾದರೆ, ಗಂಡ ಬಂದು ಪುಗಡೀ ಆಡಿಸುವಾಗ ತಲೆ ಹೇಗೆ ತಿರಗುವದೆಂಬುದು (ಕನಕ. ೯೭). **ಪುಗುಡಿ :** "ರಾಸಕ್ರೀಡಾ — ಪುಗುಡಿ" (ಕಾಕಕ್ಕ. ೦೨೦); "ಪುಗುಡಿ — ಮಕ್ಕಳ ಆಟ, ಹೆಣ್ಣು ಮಕ್ಕಳ ದುಂಡಾಟ" (ಜಾನಕೋ. ೦೬).

**ಫುಗಡಿ ಹಾಕು** = ಅಪ್ಪಾಲೆ ತಿಪ್ಪಾಲೆ ಆಡು : ಪಗಡೆಕಾಯಿ ಕುಚಬಾಲೇರೇ ಫುಗಡಿ ಹಾಕೀರನ್ನ ಮುಂದೆ ತೆಗೆದುಕೊಡುವೆ ವಸ್ತುವ ನಿಮಗೆ (ಕನಕ. ೦೦೪-೯). [← ಮರಾ. ಫುಗಡೀ]

**ಫುಟ್‌ಲಾಯರಿ** 'ಫೂಟ್‌ಲಾಯರಿ' ನೋ.

**ಫುಟ್‌ಲಾಯರು,** ಪೂಟುಲಾಯರು (ನಾ). ಕಾನೂನಿನ ಪ್ರಶಸ್ತಿಪತ್ರ ಅಥವಾ ಸನದನ್ನು ಪಡೆಯದೆ ಹಳ್ಳಿಗಳಲ್ಲಿ ಒಬ್ಬ ವಕೀಲನ ಪರವಾಗಿ ವಕೀಲಿವೃತ್ತಿಯನ್ನು ನಡೆಸಿ ಲಾಯರ ಬಳಿಗೆ ಕಕ್ಷಿಗಳನ್ನು ಒದಗಿಸುವವನು : ಹೆಸರಾಂತ ಫುಟ್‌ಲಾಯರು ಚಿಂತಾಮಣಿಯವರ

ಕುವರಿ ಕೇವಲ ನಾಟಕದ ನರಸಿಂಹನ ಕೈಹಿಡಿಯುವುದುಂಟೇ ? (ಮಾಖುಶಿ. ೩೩). **ಫುಟುಲಾಯರು :** ಅವನೊಬ್ಬ ಫುಟುಲಾಯರು (ರೂಶಿ).
[<ಫೂಟು₁ + ಲಾಯರು]

**ಫುಟಾಫುಟಿ** (ನಾ). ೧. ಚೂರುಚೂರು ; ತುಂಡುತುಂಡು. ೨. ಅಸ್ತವ್ಯಸ್ತ ; ಚೆಲ್ಲಾಪಿಲ್ಲಿ : ಈ ಘರಜುಲ್ಲಾಖಾನನ ದಂಡು ಯಾವತ್ತೂ ಮುರಿದು ಫುಟಾಫುಟಿ ಆದ ವರ್ತಮಾನ ನವಾಬಹೈದರಲ್ಲಿ ಖಾನರು ಕೇಳಿ (ರಾಜೇಂದ್ರ. ೨೦). [←ಮರಾ. ಫುಟಾಫುಟ್]

**ಫುಪ್ಪುಸ,** ಪುಪ್ಪುಸ (ನಾ). ಶ್ವಾಸಕೋಶ : ಈ ವಿಷಪದಾರ್ಥಗಳು . . . ಶ್ವಾಸದ ಮಾರ್ಗದಿಂದ ನಮ್ಮ ಫುಪ್ಪುಸಗಳಲ್ಲಿ ಸೇರಿ ಅಪಕಾರ ಮಾಡುತ್ತವೆ (ಮುಂಬಯಿ. ೩-೧೫೦) ; ಆ ನರುಗಂಪನ್ನು ಎರಡು ವರ್ಷಗಳ ವರೆಗೆ ತನ್ನ ಫುಪ್ಪುಸಗಳಲ್ಲಿ ಕಾದಿಡಲು ಪ್ರಮಿಳೆ ಹವಣಿಸಿದಳು (ನವುಜೀ. ೩೫೦) ; ಹೃದಯ, ಫುಪ್ಪುಸ ತಮ್ಮ ಕಾರ್ಯವನ್ನು ರಕ್ತದ ಬೆಂಬಲದಿಂದ ಸಾಗಿಸುತ್ತಿರುವವು (ಕದಂಬ. ೬೩). **ಪುಪ್ಪುಸ :** ಪುಪ್ಪುಸದಲ್ಲಿ ನೋವಿದೆಯೇ? (ದೇದಾಸ. ೦೨೩) ; ರವಮಾಬಾಯಿಗೆ . . . ಪುಪ್ಪುಸವಿಕಾರದ ಬಾಧೆಯಾಗಿತ್ತು (ಶ್ರೀರಂಗ. ೩೦); ಈ ಬಲಪುಪ್ಪುಸದ ಆಪರೇಶನ್ನು ಆದ ನಂತರ ಆತ ಸಂಕಟದಿಂದ ಪಾರಾದ (ಮುಕ್ತಿ. ೯). [<ಸಂ. ಪುಪ್ಪುಸ]

**ಫುರೋಕ್ತು** 'ಪುರೋಖ್ತು' ನೋ.

**ಫುಲ್ಗರ** (ನಾ). ಒಂದು ಬಗೆಯ ಜೋಳ : ಭಗವಂತಫುಲ್ಗರ, ಪಟ್ಟಣಸಾಳಿ, ಗೌರೀಕುಬ, ಬಸವನ ಪಾದ, ಫುಲ್ಗರ . . . ಕೊಡಮೂಕನ ಜೋಳ ಈ ಯೆಂಟು ಜಾತಿಗಳನ್ನು ಮುಖ್ಯ ಪೈರುಗಳಾಗಿ, ಇಲ್ಲವೇ ಬೇರೆ ಮುಂಗಾರೀ ಹಿಂಗಾರೀ ಜಾತಿಗಳ ಪೈರಿನಲ್ಲಿ ನಡುನಡುವೆ ಹಲಕೆಲವು ಸಾಲುಗಳಾಗಿ ಬಿತ್ತುವರು (ಕಥಾಗ. ೨೭೦). [ ? ]

**ಫುಲ್ಲ** (ಗು). ೧. ಅರಳಿದ ; ವಿಕಸಿತವಾದ : "ಫುಲ್ಲಮುದ್ಗಮನಂ ವಿಜೃಂಭಿತಂ" (ಮಂಗರಾ. ೧೨೦-೩) : ತಿಳಿಗೊಳನಂ ಫುಲ್ಲಪಂಕೇಜವಂ ನಿರ್ಮಳತಾರಾಧೀಶನಂ ಪೋಲ್ತೆಸೆಯೆ ನಗೆಮೊಗಂ ಕಾಂತೆ ಕಣ್ಗೊಪ್ಪಿತೋರ್ಕುಂ (ಅಜಿತ. ೦-೧೦) ; ವಿಪಿನಸುಂದರಚೈತ್ರಮಾಸದ ಫುಲ್ಲಪುಷ್ಪಮಯ ಕಿಂಶುಕವೊ (ಶ್ರೀರಾಮಾ. ೩೦೩-೯೯). ೨. ಹೂವು ಬಿಟ್ಟಿರುವ ; ಹೂವುಗಳಿಂದ ತುಂಬಿದ. ೩. (ಕಣ್ಣುಗಳಂತೆ) ಅಗಲವಾಗಿ ತೆರೆದ, – ಹಿಗ್ಗಲಿಸಿದ. (ನಾ). ೪. ಹೂವು ; ಪುಷ್ಪ : 'ಫುಲ್ಲಶರ' ಪರಾ. ೫. [ನಾಟ್ಯ] ಕಪೋಲದ ಆರು ಭೇದಗಳಲ್ಲಿ ಒಂದು ; ೞ ಕೆನ್ನೆಗಳನ್ನು ಸಂತೋಷದಿಂದ ಅರಳಿಸುವುದು. ಸಂತೋಷದಲ್ಲಿ ಇದನ್ನು ವಿನಿಯೋಗಿಸಬೇಕು" (ಅಭಿನಯದ. ಗದ್ಯಾನುವಾದ ೨೬೬): ನುತಿವಡೆದ ಕುಂಚಿತಂ ಕಂಪಿತವೊಪ್ಪುವ ಪೂರ್ಣಮೆಸೆವ ಕ್ಷಾಮಂಫುಲ್ಲಂ ಸತಿ ಕೇಳ್ ಸಮಮಿಂತಾರುಂ ಮತದಿಂ ರಂಜಿಪುದು ಗಲ್ಲಮಂಬುಜವದನೇ (ಅಭಿನಯದ. ೩-೬೯). [ಸಂ.]

**ಫುಲ್ಲಂಬು** (ನಾ). ಹೂವಿನ ಬಾಣ : ಮಲ್ಲಿಗೆಗೋಲ್ಗಳೊ ಮರದ ಮಿಂಟೆಯೊ ಪೇಳು ಫುಲ್ಲಂಬೊ ಲೋಹದಂಬುಗಳೊ (ಭರತೇ. ೫೦-೩೩). [ಫುಲ್ಲ + ಅಂಬು₂]

**ಫುಲ್ಲಕ** (ನಾ). ಹುಳು ; ಕ್ರಿಮಿ : "ಕೃಮಿಃ, ಕೀಟಃ, ನೀಲಂಗುಃ, ಫುಲ್ಲಕಃ– ಈ ೪ ಪು (ಹು)ಬು" (ಹಲಾಯು. ೦೦೫-೦೪) ; "ನೀಲಂಗು ಫುಲ್ಲಕಂ ಕ್ರಿಮಿ ಕೀಟಮುಚ್ಚೆಪುಬುವಕ್ಕುಂ" (ಮಂಗರಾ. ೧೦೭-೩). [ಸಂ.]

**ಫುಲ್ಲನೇತ್ರ** (ನಾ). (ಕಮಲದ) ಹೂವಿನಂತೆ ಕಣ್ಣುಗಳುಳ್ಳವನು ; ವಿಷ್ಣು : ಫುಲ್ಲನೇತ್ರನೊಳರ್ಕನೊಳು ಶಶಿಯೊಳಾತ್ಮನೊಳು . . . ಸರೋಜದೋಳ್ ಪರಿವರ್ತಿಸಿರ್ಕುಂ ಹಂಸಾಭಿಧಾನಂ (ಮಂಗರಾ. ೦೪೬-೪೦). [ಸಂ.]

**ಫುಲ್ಲಶರ** (ನಾ). ೧. ಹೂವಿನ ಬಾಣ ; ಮನ್ಮಥಬಾಣ : ಫುಲ್ಲಶರಂ ಬಸಂತದ ಪುಗಿಲ್ ನೆಟಿದಿಂಗಳ ತಣ್ಪೆಸಿಲ್ . . . ಎಂಬಿನಂ ಬಲ್ಲವರಂ ಮನಂಗೊಳಿಸುಗುಂ ಕೃತಿ (ಮಲ್ಲಿಕಿ. ೦-೪೪). ೨. ಹೂವಿನ ಬಾಣಗಳುಳ್ಳವನು ; ಮನ್ಮಥ : ಫುಲ್ಲಶರಂಗಿಸುವೆಡೆಗಿವೆ ನಲ್ಲಂಬುಗಳ್ (ಅಜಿತ. ೦೦-೦೦೦) ; ಫುಲ್ಲಶರನೆಸಕಮುಂ ಹೃದಯೋಲ್ಲಾಸಮುಮಿಂದ್ರಿಯಂಗಳಿಚ್ಚೆಯ ಸವಿಯುಂ ಸಲ್ಲದೊಡಂ . . . ಅಸಾರಮಿಾ ಸಂಸಾರಂ (ಅರಚರ. ೯-೩೩). [ಸಂ.]

**ಫುಲ್ಲಹೇತಿ** (ನಾ). = ಫುಲ್ಲಶರ ೨ : ಫುಲ್ಲಹೇತಿಯ ಭಲ್ಲೆಹಕೆ ಕಡು ನೊಂದೆ ನನ್ನಯ ನಲ್ಲನಾಗಿಯೆ ಮನ್ಮನೋರಥವೀಯಬೇಕು (ಕೌಶಿರಾ. ೩-೦೬). [ಸಂ.]

**ಫುಲ್ಲಾಬ್ಜಪುತ್ರ** (ನಾ). ಅರಳಿದ ತಾವರೆಯಲ್ಲಿ ಹುಟ್ಟಿದವನು ; ಬ್ರಹ್ಮ : ಆ ತಾರಕಂ . . . ಉಗ್ರತಪವಂ ಮಾಡಲಾತಂಗೆ ಫುಲ್ಲಾಬ್ಜಪುತ್ರನಿಂ ವರವ ಕೊಡಿಸಲ್ಬಂದು ನೆಲಸಿದಂ ಸರ್ವೇಶ್ವರಂ (ಜೀಕೃತ. ೩-೨೦-೪೩). [ಸಂ.]

**ಫುಲ್ಲೈಸು** (ಕ್ರಿ). ಅರಳು ; ವಿಕಾಸವಾಗು : ಫುಲ್ಲೈಪ ಸರಸಸುಮನಃ ಪಲ್ಲವಸಂಗದೆ ಪೊದಟ್ದು ಪೊಂಗುವನಿತಟಿಕೊಳ್ ಮಲ್ಲೀವಲ್ಲಿಮತಲ್ಲಿಗಿದೆಲ್ಲಿಯ ಕಡುಮೆಂಕೆ ಸೋಂಕೆ ಕೂಂಕುವುದಕಟಾ (ಜಕವಿ. ೬-೦೩೬).
[ಫುಲ್ಲ + < – ಇಸು₃]

**ಫುಲ್ಲೋತ್ಪಲ** (ನಾ). ಅರಳಿದ ಕಮಲ : ಫುಲ್ಲೋತ್ಪಲಭಾವನೆಯಿಂ ನಿಲ್ಲದೆ ಕೆಯ್ಕೊಳ್ವುದೆಂದು ಸಾಂಖ್ಯಂ ಮೂಱುಂ ಕಲ್ಲಿಂದಿಡುತುಂ ಗೌರೀವಲ್ಲಭನಂ ನಚ್ಚಿ ಮಚ್ಚಿ ಪೂಜಿಸುತಿರ್ದಂ (ವೃಕಶಿ. ೩೪-೦೨೦). [ಸಂ.]

**ಫುಸಲತ್ತು** 'ಪುಸಲತ್ತು' ನೋ.

**ಫೂಟ್‍ಲಾಯರಿ,** ಫೂಟಲಾಯರಿ, ಫುಟ್‍ಲಾಯರಿ, ಫೂಟಲಾಯರಿ (ನಾ). ೧. ಫೂಟ್‍ಲಾಯರನ ವೃತ್ತಿ,–ಕಾರ್ಯ : ಲಾ ಪಾಯಿಂಟುಗಳನ್ನೆಲ್ಲಾ ಅಷ್ಟಿಷ್ಟು ತಿಳಿದಿದ್ದ ಚನ್ನ ಫೂಟ್‍ಲಾಯರಿ ಕೆಲಸ ಮಾಡಿದ (ನನ್ನೂರು. ೨೦೫). **ಫೂಟಲಾಯರಿ :** ೨. = ಫುಟ್‍ಲಾಯರು : ಹಳ್ಳಿಯಲ್ಲಿ ಹೀಗಾದರೆ ಫೂಟಲಾಯರಿಯು ಮುಂದೆ ಬಂದು (ಮುಖಿಮೂ. ೬೪). **ಫುಟ್‍ಲಾಯರಿ :** ೨. ಇವನು ಕೊಂಡಾಪುರದ ಶಾಂತವೀರಯ್ಯ, ಫುಟ್‍ಲಾಯರಿಯ ಹಾಗೆ ಏನಾದರೂ ಇವನ ತಲೆಯಲ್ಲಿ ಇದ್ದೇ ಇರುತ್ತೆ ವಿಚಾರಗಳು (ಮರಳ. ೫೯). **ಫೂಟಲಾಯರಿ :** ೧. ಫೂಟಲಾಯರಿಯಲ್ಲಿ ಸಂಪಾದಿಸುತ್ತಿದ್ದುದು (ಕಾಮಿಣಾಂ. ೩). [<ಫುಟ್‍ಲಾಯರು]

**ಫೂಟಕೂಲ್‍ಪತ್ರಕ** (ನಾ). ಒಂದೇ ಸರ್ವೆನಂಬರಿನಲ್ಲಿ ಎರಡು ಅಥವಾ ಅದಕ್ಕೂ ಹೆಚ್ಚು ಸಾಗುವಳಿದಾರರನ್ನು ನಮೂದಿಸಿದಾಗ, ಪ್ರತಿಯೊಬ್ಬರ ವಶದಲ್ಲಿರುವ ಭೂಮಿಯ ಕ್ಷೇತ್ರ, ಕಂದಾಯ ಮೊದಲಾದವುಗಳನ್ನು ತಿಳಿಸುವ ಕಾಗದ : (ಕೃಶಗ. II, ೩೫೯).
[ ಫೂಟಕೂಲ್₀ ( ೞ ← ಇಂ, Protocol) + ಪತ್ರಕ ]

**ಫೂಟಮಾಗಣೆ** (ನಾ). ಮಾಗಣೆಯ ಪೋಟುಭಾಗ,–ಹಿಸ್ಸೆ : (ಕೃಶಗ. II, ೩೫೯). [ < ಫೂಟು₁ + ಮಾಗಣೆ₁ ]

**ಫೂಟಲಾಯರಿ** 'ಫೂಟ್‍ಲಾಯರಿ' ನೋ.

**ಫೂಟು₁,** ಫೂಟು (ನಾ). ೧. ಪ್ರತ್ಯೇಕವಾದುದು ; ಪೃಥಕ್ಕಾದುದು : ತಾಲ್ಲೂಕ್ ಅಮಲ್ದಾರರಾಗಲಿ, ಸಬ್‍ತಾಲ್ಲೂಕ್‍ಡೆಪ್ಯುಟಿಅಮಲ್ದಾರರಾಗಲಿ ಫೂಟಾಗಿ ವಿಚಾರಣೆ ಮಾಡಿ ಫೈಸಲ್ ಕೊಡತಕ್ಕದ್ದು (ಗ್ರಾಮಾಕ. ೯೩). (ಗು). ೨. ಚಿಕ್ಕ ; ಸಣ್ಣ ವಿಭಾಗಕ್ಕೆ ಸೇರಿದ : 'ಫೂಟು ದೊರೆ' ಪರಾ. **ಫೂಟು :** ೩. ಸಾರಾಂಶ ; ತಿರುಳು : 'ಫೂಟರ್ಜಿ' ಪರಾ. [ ← ಮರಾ. ಫೂಟ್ ]

**ಫೂಟು₂** (ನಾ). ಒಂದು ಅಳತೆಯ ಪ್ರಮಾಣ ; ಒಂದು ಅಡಿ ; ಹನ್ನೆರಡು ಅಂಗುಲ : ಸಹ್ಯಾದ್ರಿಯ ೧೭೦೦ ಫೂಟು ಯೆತ್ತರವಾದ

ಶಿಖರಗಳು ಸಮುದ್ರತೀರಕ್ಕೆ ಹೊಂದಿರುತ್ತವೆ (ಕಭಾಗ. ೪); ಮರದ ಸುತ್ತಳತೆಯು ಹೆಚ್ಚುಕಡಿಮೆ ಎರಡು ಸಾವಿರ ಫೂಟುವುಂಟು (ಋಂಬಯ. ೨-೨೯); ಒಂಭತ್ತು ಫೂಟು ಅಂದರೆ ಒಂದು ಮಾರು ಆಗುವದು (ಕೃಷಿಶ್ರ. ೯೩).. [←ಇಂ. Foot]

**ಫೂಟುತೀರ್ಮಾನ** (ನಾ). (ನ್ಯಾಯಾಲಯದಲ್ಲಿ ಅನಾವಶ್ಯಕವಾದ ವಿವರಗಳನ್ನು ಗಮನಿಸದೆ) ಆಗಿಂದಾಗ್ಗೆ ಕ್ಷಿಪ್ರವಾಗಿ ಕೊಡುವ ನ್ಯಾಯನಿರ್ಣಯ : ಯಾವುದಾದರೂ ಅಪೀಲನ್ನು . . . ಆ ನ್ಯಾಯಾಲಯದವರಿಗೆ ತೋರಿದ ಸಂದರ್ಭದಲ್ಲಿ ಫೂಟುತೀರ್ಮಾನ ಮಾಡುವುದಕ್ಕೆ ಉಪಬಂಧಗಳನ್ನು ಕಲ್ಪಿಸುವ ನಿಯಮಗಳು (ಕಾಧಾನ. ೬೬).
[ಫೂಟು$_1$ + ತೀರ್ಮಾನ]

**ಫೂಟುದೊರೆ** (ನಾ). ಚಿಕ್ಕರಾಜ್ಯದ ಅರಸು ; ಪಾಳೆಯಗಾರ; ಮಾಂಡಲಿಕ : ಕೆಲವರು. . . ದೇಶೀಯ ಮಹಾರಾಜರನ್ನೂ ಮುಸಲ್ಮಾನ್ ದೊರೆಗಳನ್ನೂ ಅನುಸರಿಸಿಕೊಂಡು ಇದ್ದರು. ಇಂಥಾ ಫೂಟುದೊರೆಗಳು ಜರುಗಿಸುತ್ತಿದ್ದ ಅಧಿಕಾರವು ಅಲ್ಲಲ್ಲಿ ವಿಶೇಷವಾಗಿ ಭಿನ್ನಿಸಿದ್ದಾಗ್ಯೂ ನಮ್ಮ ಭರತಖಂಡದಲ್ಲಿ ಇಂಥವರು ಹೆಚ್ಚಾಗಿದ್ದಂತೆ ತಿಳಿಯಬಂದಿದೆ (ಚಾಳೆಗಾ. ೦೪).
[ಫೂಟು$_1$ + ದೊರೆ$_3$]

**ಫೂತ್ಕರಿಸು** (ಕ್ರಿ). ೧. ಉಗಿ; ಉಗುಳು : ನಾಕನದೀವಾರಿಯನೀಂಟಿ ಫೂತ್ಕರಿಸಿ . . . ಪಾಲ್ಗಡಲೊಳುದ್ಯದ್ವಾಲಲೀಲಾಪ್ರವರ್ತನಮಂ ತಾಳ್ದಿಭವಕ್ತ್ರನೀ ಕೃತಿಗಜಸ್ರಂ ಮಾಳ್ಕೆ ನಿರ್ವಿಘ್ನಮಂ (ಕಬಕಾ. ೦-೬); ಅಭ್ರಮಾತಂಗ ಫೂತ್ಕರಿಸಲ್ಕೆ ಚದರಿ ಪನಿಗಳ್ಗಗನತಳದಿ ಪರಕಲಿಸಿದುವೊಯೆನಲು ನಕ್ಷತ್ರತತಿಯು ಚದುರ ಬೀರಿದವು (ವಂಕಾಶಾ. ೫-೨-೩೫); ಸಗ್ಗಿಗರಾಣ್ಮನ ಘನಕರಿಘಟೆಗಳ್ . . . ತುಂಬಿಕೆಯೊಳಿಂಬುಗೊಂಡ ತುಂಬುನೀರಂ ಫೂತ್ಕರಿಸಿದಪುವೆಂಬಂತಿರೆ ಎಡೆವಿಡದೆ ಬಲ್ಸರಿ ಸುರಿಯೆ (ರಾಮಾಶ್ವ. ೩-೦೦). ೨. ಟಿಸ್ ಎಂದಂ ಸದ್ದು ಮಾಡು : ದೀಪ ನೊಂದುವಾಗ ತುಸು ಫೂತ್ಕರಿಸಿಯೆ ನೊಂದುತ್ತದೆ (ಇಶ್ವ್ಕ. ೦೯೩). ೩. ಹಾವಿನಂತೆ ಬುಸಂಗುಡು; ಬುಸ್ಸೆನ್ನು : ಅಗ್ನಿ . . . ಪ್ರಳಯಕಾಲದ ಮಹಾಸರ್ಪದಂತೆ ಫೂತ್ಕರಿಸಿತು (ಅಕ್ರಮ. ೦೦೪). ೪. (ಆಲಂ) ಸಿಡುಕಿನಿಂದ ಮಾತನಾಡು; ಅಬ್ಬರಿಸಂ : ನೀ ಏನ ಹೇಳುವಿ ಅದನ್ನ ? – ಗಂಗವ್ವ ಫೂತ್ಕರಿಸಿದಳು (ಅಕೋಳ. ೬೩). [ಫೂತ್ಕರಣ$_0$ + —ಇಸು$_3$]

**ಫೂತ್ಕಾರ** (ನಾ). ೧. ಸಶಬ್ದವಾಗಿ ಉಸಿರು ಬಿಡುವಿಕೆ : ಧನ್ವಿಪದಾತಿವ್ರಾತಟಂಕಾರದಿನುರುಕಹಳಾಜಾಲಫೂತ್ಕಾರದಿಂ . . . ವಿಷ್ಟಪಮಂ ಶಬ್ದಾತ್ಮಕಂ ಮಾಡಿದುದುಭಯಮಹೀಭೃಚ್ಚಮೂಚಕ್ರವಾಳಂ (ಶಂಪ್ರಪು. ೧೦-೬೬); ಮದಾಂಧಗಜಫೂತ್ಕಾರಂ ರಥಾಂಗರಥಚೀತ್ಕಾರಂ. . . ಬೆರಸಿ ಬಳೆದಾಗಸಮಂ ಮುಸುಂಕೆ (ಗಂಕ. ೬-೮ ವ). ೨. ಹಾವಿನ ಬುಸುಗುಟ್ಟುವಿಕೆ : ಜಹಾಂಗೀರ ಕೆಣಕಿದ ನಾಗಿನಿಯನ್ನು ತಡೆದು ಫೂತ್ಕಾರವನ್ನು ಸ್ವಾಗತಿಸುವ ಅವಿವೇಕಕ್ಕೆ ಹೋಗಲಿಲ್ಲ (ನೂರಜ. ೨೦). [ಸಂ.]

**ಫೂತ್ಕೃತಿ** (ನಾ). = ಫೂತ್ಕಾರ ೧ : ಭೃಂಗವಧೂಝುಂಕೃತಿ ಶಂಖಫೂತ್ಕೃತಿರುತಂ. . . ಉದ್ಘಕೋಕಿಳರವಂ ಭೇರೀಘನಧ್ವಾನವಾಗೆ ವಸಂತಂ ಋತುಸಾರ್ವಭೌಮವಿಭವಂ ಮೆಯ್ವೆತ್ತದೇಂ ಬಂದುದೋ (ಶಂಪ್ರಪು. ೭-೩೭).
[ಸಂ.]

**ಫೂಲ್‌ಸ್ಕೇಪು, ಫೂಲ್‌ಸ್ಕೇಪ್** (ನಾ). ಹದಿನೈದರಿಂದ ಹದಿನೇಳು ಅಂಗುಲ ಉದ್ದವೂ ಹನ್ನೆರಡರಿಂದ ಹದಿಮೂರರವರೆ ಅಂಗುಲ ಅಗಲವೂ ಇರುವ ಕಾಗದ : ಸಾಮಾನ್ಯವಾಗಿ ಬರೆಯಲು ಉಪಯೋಗಿಸುವ 'ಫೂಲ್‌ಸ್ಕೇಪು' ಕಾಗದಗಳಿಗೆ ಈ ಗುರುತುಗಳಿರುವುವು (ಬಾಂಶ್ರ. II, ೬೪). **ಫೂಲ್‌ಸ್ಕೇಪ್:** ಮುದ್ರಣಕ್ಕೆ ಉಪಯೋಗಿಸುವ ಕಾಗದಗಳು : ೧. ಫೂಲ್‌ಸ್ಕೇಪ್, ೨. ಕ್ರೌನ್ (ಮುದ್ರಕ. ೬೨). [←ಇಂ. Fool's-Cap]

**ಫೂಲ್‌ಸ್ಕೇಪ್** 'ಫೂಲ್‌ಸ್ಕೇಪು' ನೋ.

**ಫೆಳಾವುಗ** (ನಾ). (?) : ಫಳಿಯಕಾಂಚಿ, ಫೆಳಾವುಗಂ, ಫೇಳಿ, ಅಫಳಿಯಂ (ಕವಮಿ. ೦೫ ಕ್ರಿಯೋ). [?]

**ಫೇಡೆ** 'ಪೇಡ' ನೋ.

**ಫೇಣಿ** (ನಾ). ಒಂದು ಬಗೆಯ ಸಿಹಿ ಭಕ್ಷ್ಯ : ಅಜುಬೋನ ಫೇಣಿ ಗಾರಿಗೆ ಇಡ್ಡಲಿಗೆ ಅವುಗು . . . ಹೂರುಂಡೆಯನು ತೆಜಿಹಿಲ್ಲೆನಿಸಿ ಗಡಣಿಸುತ್ತ ಗುಡ್ಡರುಗಳಿಗೆ (ಸಿರ್ಧರಾ. ೯-೬೩); ರಸವೊಸರ್ವ ಸಜ್ಜಿಗೆಯೆಣ್ಣೆವೂರಿಗೆ ಸುಫೇಣಿ ಮುಸುಕೊಡೆ ಬೆಣ್ಣೆದಬಿಗು (ಜೀರವಾ. ೦೦-೨೮); ಜೇನು ಸಕ್ಕರೆ ಕ್ಷೀರ ರಸವಪ್ಪ ಫೇಣಿ ಸುಖೀನುಂಡೆ ವಡೆ ಗಾರಿಗೆಯ. . . ಬಡಿಸಿದರು (ವೋಕಶ. ೩-೫೨). [ಸಂ. ಫೇಣೀ]

**ಫೇನ** (ನಾ). ೧. ನೊರೆ ; ಬುರುಗು : "ಫೇನಃ, ಡಿಂಡೀರಃ—ಈ ೨ ನೊರೆ" (ಹಲಾಯು. ೧೧೦-೪೫); ಸುಲಿಪಲ್ ಮಿಂಚಿನ ಗೊಂಚಲುಟ್ಟದುಗುಲಂ ಗಂಗಾನದೀಫೇನಂ (ಶಂಶಭಾ. ೦-೦೫೬); ಉತ್ಕೀರ್ಣಫೇನಂ. . . ಅಂಭೋನಿಧಾನಂ (ಜಗಪ. ೦-೨೩); ರವಿಹಯಾನನಫೇನಪುಂಜವೋ. . . ಎನೆ ತರಳತಾರಾಳಿ ಕಣ್ಗೆಸೆದುದು (ಹಹಕಾ. ೩-೬೯). ೨. ಕಡಲ ನಾಲಗೆ; ಸಮುದ್ರದ ನೊರೆ : "ಡಿಂಡೀರಃ, ಅಬ್ಧಿಕಫಃ, ಫೇನಃ — ೩ ಸಮುದ್ರದ ನೊರೆ" (ಸಿದ್ಧಾಂತಿ. ೩೮೬). [ಸಂ.]

**ಫೇನಿಲ** (ಗು). ೧. ನೊರೆಯುಳ್ಳ ; ಬುರುಗುಳ್ಳ. (ನಾ). ೨. ಅಂಟುವಾಳದ ಮರ ಮತ್ತು ಅದರ ಕಾಯಿ. ೩. ಒಂದು ಬಗೆಯ ಮರ ; ತಿಲಕವೃಕ್ಷ : "ತಿಲಕಂ ಕ್ಷುರಕಾಖ್ಯಿಂ ಫೇನಿಲಮುಕ್ಕುಮರಿಷ್ಟಶಾಖಿ" (ವಸ್ತುಕೋ. ೩೩-೨) ; "ಕ್ಷುರಕಮೆನೆ ಫೇನಿಲಮೆನಲ್ ತಿಲಕತರು ವಕ್ಕು" (ಮಂಗರಾ. ೩೬-೦೭). [ಸಂ.]

**ಫೇರಂಡ** (ನಾ). ನರಿ ; ಜಂಬುಕ : "ಜಂಬುಕಃ, ಶಿವಾ, ಫೇರಂಡಃ . . . ಮೃಗಧೂರ್ತಕಃ —ಈ ೮ ನರಿ" (ಹಲಾಯು. ೩೯-೬೬). [ಸಂ.]

**ಫೇರಣೆ** 'ಪ್ರೈರಣೆ' ನೋ.

**ಫೇರವ** (ನಾ). ೧. = ಫೇರಂಡ: "ಶಿವೆ ಮೃಗಧೂರ್ತಂ ... ನರಿ ಫೇರವಂ" (ವಸ್ತುಕೋ. ೪೦-೩) ; ಕಾಕಳಿಕಳಿತಮಪ್ಪ ಕಳಕಂಠೀಜನದ ಗೇಯಮೊತ್ತಲೀ ಕಠೋರಫೇರವ ಪೆಕ್ಕಾರಾರಾವಮೊತ್ತಲ್ (ವರ್ಧಮಾ. ೬-೪ ವ) ; ಹರಿಶಂಖಮಹಾಭೈರವರವಮಂದು ಕಿವಿವುಗೆ ಫೇರವರವಮೊದವೆ ರಿಪುಬಲಂ ಕೆಡೆದಿರದೇ (ಜಗಪ. ೯-೦೦೭). ೨. ನೀಚ ; ಅಧಮ. ೩. ಪಿಶಾಚಿ ; ರಾಕ್ಷಸ. [ಸಂ.]

**ಫೇರಿ, ಪೇರಿ$_1$** (ನಾ). ೧.ಪ್ರದಕ್ಷಿಣೆ ; ಸುತ್ತು : ಭೂಮಿಯು ತನ್ನ ಮೈ ಸುತ್ತು ತಿರುಗುತ್ತ ಸೂರ್ಯನ ಸುತ್ತುಮುತ್ತು ವರ್ತುಲಾಕಾರವಾಗಿ ಫೇರಿಯನ್ನು ಹಾಕುತ್ತದೆ (ಮುಂಬಯಿ. ೬-೫೯) ; ಎಂಥಾ ಮೋಜಿನ ಕುದುರಿ ಹತ್ತಿದ ಮ್ಯಾಲ ತಿರುಗುವುದು ಹನ್ನೊಂದು ಫೇರಿ (ಶಂಪ. ೯೬-೨) ; ಮರಿಗುದುರೆ ಫೇರಿ ತಿರುಹುತ ಬರುತಾನೆ ಬರಿಗೊಡದವ್ವ ಬದಿಗಾಗೆ (ಕರ್ನಾಪೂ. ೦೨೯). ೨. ಸುತ್ತಾಟ ; ಸಂಚಾರ ; ಓಡಾಟ : ಕುದುರೆಗಳು ಹಲ್ಲಣಿಸಿ ಫೇರಿ ಮಾಡಲಿಕೆಂದು ಸಂದಣಿಸಿ ನಿಂದಿರುವವು (ಕೃಕ್ವಪಿ. ೨-೫೫) ; ಅಲ್ಲಿ ನಿಂತಿದ್ದುದೂ ಜಾತಿಯಲ್ಲಿ ಕುದುರೆಯಾಗಿದ್ದರೂ . . . ಅಜ್ಜಸಾಬು ಹೇರಿಗೂ ಫೇರಿಗೂ ಬಳಸುತ್ತಿದ್ದ ತಟ್ಟಿಗಿಂತ ತುಸು ಉತ್ತಮವಾಗಿತ್ತು (ಮಲಿಮ. ೪೨೦). ೩. ಸುತ್ತುಗಳನ್ನೆಳ್ಳಿದುದು ; ಸಂಳಿ (?) : ಕಬ್ಬು ಬೆಳೆಯುವ ಸಮಯದಲ್ಲಿ ಒಂದು ಫೇರಿ ಬರುವುದನ್ನು ನೋಡಿ ಆ ಕಬ್ಬಿನ ನಾಲ್ಕೂ ಕಡೆಗೂ ಅದರ ಭಾರದ ತೂಕವನ್ನು ನೋಡಿ ಹತ್ತು ಹದಿನೈದು ಇಪ್ಪತ್ತು ಕಬ್ಬುಗಳನ್ನು ಒಂದುಗೂಡಿಸಿ . . . ಬಿಗಿದು ಕಟ್ಟಿ (ಕೃಷಿಶ್ರ. ೦೬೪). **ಪೇರಿ$_1$** : ೨. ನಾವು ತಿರುಗೋ ಮುಕ್ಕಗಳು, ಆಗಾಗ ಒಂದು ಪೇರಿ ಹೊಡದು ಬಂದು ಬುಡ್ತೀನಿ (ಪಲ್ಲ. ೦೭೫). 'ಪ್ರಭಾತಫೇರಿ' ಪರಾ.

**ಫೇರಿ ಬಿಡು**=ಓಟ ಕೀಳು ; ವೇಗವಾಗಿ ಹೋಗು : ಆ ದಿವಸ ಸೈಕಲು ಹತ್ತಿ ಫೇರಿ ಬಿಟ್ಟರಾಯಿತು (ಹಹಕ. ೬೩) ; ಗಾಡಿ 'ರೋಟು' ಇದ್ದರೆ ನಾನು ಸೈಕಲ್ ಫೇರಿ ಬಿಡುತ್ತೇನೆ (ಸರಕ. ೨೭) ; ಫೇರಿ ಬಿಟ್ಟನೆಂದರೆ ಸುಬ್ಬಯ್ಯಶೆಟ್ಟರ ಜಟ್ಕ ಸುಳ್ಳು (ಶಿದಾಉ. ೭). **ಫೇರಿ ಹೊಡೆ**=ಸಂಚರಿಸು ; ಸುತ್ತು : ಹುಬ್ಬಳ್ಳಿ ಧಾರವಾಡ ಕಡೆ ಒಂದು ಫೇರಿ ಹೊಡದು ಬಂದರ ಬೇಕಾದ್ದಂಗ ಚೈನೀನ ಚೈನಿ (ಶಿಹುಗು. ೩೩). **ಫೇರೀ ಮಾಡು** = ಫೇರಿ ಹೊಡೆ : ಆಕೀ ಏನು ಸಾಂಗಲೀ ಪುಣೇದ ಫೇರೀ ಮಾಡತಿರತಾಳೇನು ? (ರೀಹಹ. II,೦೩). [←ಹಿಂ. ಮರಾ. ಫೇರೀ]

**ಫೇರಿಸ್ತ್** 'ಫೇರಿಸ್ತು' ನೋ.

**ಫೇರಿಸ್ತಾ** 'ಫೇರಿಸ್ತು' ನೋ.

**ಫೇರಿಸ್ತು**, ಫೇರಿಸ್ತ್, ಫೇರಿಸ್ತಾ, ಫೇರೀಸ್ತು (ನಾ). ವಿವರಗಳನ್ನೊಳಗೊಂಡ ಸೂಚಿ ; ಯಾದಿ ; ಪಟ್ಟಿ : (೧). **ಫೇರಿಸ್ತ್** : (ಕೃಕಗ. II, ೫೪೮). **ಫೇರಿಸ್ತಾ** : ಮಲ್ಲಿಕ್‌ಕಾಫರನು, ದಂಡೆತ್ತಿ ಬಂದಾಗ ಬೇಲೂರು ದೇವಾಲಯವೊಂದರಿಂದಲೇ ತೊಂಭತ್ತಾರು ಸಾವಿರ ಮಣ ಭಂಗಾರವನ್ನು ಸುಲಿಗೆ ಮಾಡಿದನೆಂದು ಅಬ್ದುಲ್ ರಜಾಕನ ಫೇರಿಸ್ತಾದಿಂದ ತಿಳಿದು ಬರುತ್ತದೆ (ಕಕಟಿ. ೦೩೨). **ಫೇರೀಸ್ತು** : (೧).
[←ಅರ. ಪಾರ. ಫಿಹರಿಸ್ತ್ ; ಹಿಂ. ಫೇಹರಿಸ್ತ್ ; ಮರಾ. ಫೇರೀಸ್ತ್]

**ಫೇರೀಸ್ತು** 'ಫೇರಿಸ್ತು' ನೋ.

**ಫೇರು** (ನಾ). = ಫೇರಂಡ : "ಜಂಬುಕಃ . . . ಫೇರುಃ, ಕ್ರೋಷ್ಟಾ (ಚ) ಮೃಗಧೂರ್ತಕಃ — ಈ ೮ ನರಿ" (ಹಶಾಡು. ೩೬-೬೬) ; ಶ್ವಾನ ಶಾರ್ದೂಲ ಫೇರು . . . ಮುಂತಾದ ಕ್ರೂರಜೀವಂಗಳು ಸಾಯಲು (ಜ್ಞಾಪಕ. ೨೯-೩೦). [ಸಂ.]

**ಫೇಲ** (ನಾ). ತಿಂದುಂ ಮಿಕ್ಕುದು ; ಎಂಜಲು ; ಉಚ್ಛಿಷ್ಟ. [ಸಂ.]

**ಫೇಲಿ**, ಫೇಳಿ (ನಾ). = ಫೇಲ : "ಭೋಜನಕ್ಕಾಗಿ ಮಿಕ್ಕದು ವಿಘಸ ಮುಕ್ಕುಂಡ ಭಾಜನದೊಳಿರೆ ಫೇಲಿ[ಪಾಠಾ. ಳಿ]ಯುಚ್ಛಿಷ್ಟಮೆನಿಸಿಕ್ಕು" (ಮಂಗರಾ. ೬೩-೭). **ಫೇಳಿ** : ಜಂಗುಳಿ ಪುತ್ತಳಿ ಗೋಳಿ ಫೇಳಿ ಬಿಬಸಂದೇಹಂ (ಕವುದ. ೨೩). [ಸಂ. ಫೇಲೀ]

**ಫೇಲಿಕೆ**. ಫೇಳಿಕೆ (ನಾ). =ಫೇಲ. **ಫೇಳಿಕೆ** : "ಭುಕ್ತೋಚ್ಛಿಷ್ಟಂ, ಫೇಳಿಕಾ- ಈ ೨ ಮಡಗೂಟು" (ಹಶಾಡು. ೫೪-೦೬೦) ; "ಭುಕ್ತೋಚ್ಛಿಷ್ಟಂ ಫೇಳಿಕೆ" (ವಸ್ತುಕೋ. ೯೩-೯). [ಸಂ. ಫೇಲಿಕಾ]

**ಫೇಲಿಪಾತ್ರ** (ನಾ). ಪೀಕದಾನಿ ; ಪಡಿಗ: "ಫೇಲಿ[ಪಾಠಾಂ. ಳಿ]ಪಾತ್ರ ಯೆನೆ ಪಡಿಗಮೆನಿಸಿಕ್ಕು" (ಮಂಗರಾ. ೬೩-೨೩). [<ಸಂ. ಫೇಲೀಪಾತ್ರ]

**ಫೇಲು** (ನಾ). ತೇರ್ಗಡೆಯಾಗದಿರುವಿಕೆ ; ಅನುತ್ತೀರ್ಣತೆ ; ನಾಪಾಸಂ : ಕಳೆದ ಪರೀಕ್ಷೆಯಲ್ಲಿ ಅವನು ಫೇಲಾಗಿದ್ದುದರಿಂದ ಈಗ ಕಷ್ಟಪಟ್ಟು ಓದುತ್ತಿದ್ದಾನೆ (ರೂಢಿ). [ ← ಇಂ. Fail]

**ಫೇಲೆ** (ನಾ). = ಫೇಲ : "ಫೇಲಾ . . . ಉಂಡು ಮಿಕ್ಕ ಎಂಜಲು" (ಸಿದ್ಧಾಂತಿ. ೨೬೦). [ಸಂ. ಫೇಲಾ]

**ಫೇಳಿ** 'ಫೇಲಿ' ನೋ.

**ಫೇಳಿಕೆ** 'ಫೇಲಿಕೆ'ನೋ.

**ಫೈಲು** (ನಾ). ೧. ಬೇಕಾದಾಗ ನೋಡುವುದಕ್ಕೆ ಅನುಕೂಲವಾಗುವಂತೆ ಕಾಗದಪತ್ರಗಳನ್ನು ಜೋಡಿಸಿ ಇಡುವ ಸಾಧನ : ಅದಕ್ಕೆ ಸಂಬಂಧಿಸಿದ ಕಾಗದಗಳನ್ನು ಮೊದಲನೆಯ ಫೈಲಿನಲ್ಲಿ ಇಟ್ಟಿದ್ದೀನಿ (ರೂಢಿ). ೨. ಜೋಡಿಸಿಟ್ಟ ಕಾಗದಪತ್ರಗಳ ಕಟ್ಟು : ಕಾರಕೂನ . . . ಯಾವುದೋ ಫೈಲಿನಲ್ಲಿ ಮಗ್ನನಾದ (ಬೆಸ್ತುಹಿಂ. ೦೨) ; ಎಲ್ಲ ಫೈಲುಗಳನ್ನು ತರಿಸಿ ತಾವೇ ಪರಿಶೀಲಿಸುವುದಾಗಿ ಅಧಿಕಾರಿಗಳು ತಿಳಿಸಿದ್ದಾರೆ (ರೂಢಿ). ೩. ನ್ಯಾಯಾಲಯದಲ್ಲಿಯ ವಿಚಾರಣೆಗಾಗಿ ಜೋಡಿಸಿ ಇಟ್ಟುಕೊಂಡಿರುವ ದಾಖಲೆಗಳ ಕಟ್ಟು : ಸದರಿ ವ್ಯಾಜ್ಯವನ್ನು ಫೈಲಿನಿಂದ ವಜಾ ಮಾಡುತ್ತಾರೆ (ಗ್ರಾಮಾಕ. ೨೯) ; ಮೊಕದ್ದಮೆಯನ್ನು ಪೊಲೀಸಿನವರು ಫೈಲಿಗೆ ತೆಗೆದುಕೊಂಡು ತನಿಖೆ ಪ್ರಾರಂಭವಮಾಡಿದರು (ವರದಾ. II, ೬೩೦). [ ←ಇಂ. File ]

**ಫೈಸಲ್** 'ಫೈಸಲು' ನೋ.

**ಫೈಸಲಾತಿ** (ನಾ). ತೀರ್ಮಾನ ; ನಿರ್ಣಯ : ಅವನ ಪ್ರಾಮಾಣಿಕತನವನ್ನು ಮೆಚ್ಚಿ ಸಾಲಿಗರು ಲೇವಾದೇವಿಯ ಫೈಸಲಾತಿ ಕ್ರಮಂಗಳಿಗೆ ಅವನನ್ನೇ ನೇಮಿಸಿದರು (ದಾದಾಪ. ೪೦); ಕಚೇರಿಯ ಒಂದು ಕಡತವನ್ನು ಫೈಸಲಾತಿ ಬಗ್ಗೆ ತರಬೇಕೆಂದು ಹೇಳಿ ಕಳಿಸುತ್ತೇನೆ (ಮಹಾಗ. ೦೨೩). [ < ಫೈಸಲು ]

**ಫೈಸಲು**, ಫೈಸಲ್ (ನಾ). = ಫೈಸಲಾತಿ : ಕಮ್ಮಿ ಜಾಸ್ತಿಯ ಲೆಖ್ಖವಿದ್ದ ರಹಿತರು ಸಹಿತ ಫೈಸಲಿಗೆ ಬರುವಂತೆ ಕರಣಿಕರಿಗುಸುರು ನೀನು (ಅಕಾರಿ. ೩೦-೩೬); ಈ ಮೊಕದ್ದಮೆಯ ಫೈಸಲನ್ನು ಮಾರನೇ ದಿವಸ ಹೇಳುವುದಾಗಿ ದಂಡನಾಧಿಕಾರಿ ಅಪ್ಪಣೇ ಮಾಡಿದ್ದೂ ಅಲ್ಲದೆ-ಯಾವ ಕೃತ್ಯವೂ ನಡೆಯಲಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ (ಅದೂಟಿ. ೦೪೩). **ಫೈಸಲ್** : ಆಗ ಫೈಸಲ್ ಆಗುವಂತೆ ತೋರಲಿಲ್ಲ (ಕಂಡುಕೃ. ೯); ಯಾವ ಕೋರ್ಟಿನಲ್ಲಾಗಲಿ ಫೈಸಲಾಗದೆ ಬಾಕಿಯಲ್ಲಿರುವ ಇಂಥಾ ಎಲ್ಲಾ ವ್ಯಾಜ್ಯಗಳೂ ಆಯಾ ಕೋರ್ಟಿನವರಿಂದಲೇ ವಿಚಾರಿಸಲ್ಪಟ್ಟು ವ್ಯವಸ್ಥೆ ಮಾಡಲ್ಪಡಬೇಕು (ಗ್ರಾಮಾಕ. ೨೦).
**ಫೈಸಲ್ ಮಾಡು**=ತೀರ್ಮಾನಿಸಂ ; ನಿಕಾಲೆಮಾಡು : ಎಲ್ಲ ಫೈಸಲ್ ಮಾಡಿ ಬಿಡುತ್ತೇನೆ (ದಾಂತ್. ೨೩೦) ; ಆ ಕಾಗದಗಳನ್ನೆಲ್ಲ ನಾನೇ ಫೈಸಲ್ ಮಾಡತ್ತಿದ್ದೆನಲ್ಲ ? (ರಂಗಕ. ೨೦).
[← ಅರ. ಫೈಸ್ಲಾ ; ಹಿಂ. ಮರಾ. ಫೈಸಲ್]

**ಫೊಟ್ಟನೆ** (ಅ). 'ಫೊಟ್' ಎಂಬ ಸದ್ದಿನೊಡನೆ : ಥೊಪ್ಪನೆ, ಧಣಮ್ಮನೆ ಫೊಟ್ಟನೆ, ಫಟಾಲನೆ (ಕಮುದ. ೦೪ ಕ್ರಯೋ). [ಫೊಟ್ + –ಅನೆ$_1$]

**ಫೊಳಲಿನಾಡು** (ನಾ). ಒಂದು ನಾಡಿನ ಹೆಸರು : ಮೊಟಂಬಾಧಿರಾಜರಲ್ಲಿ ಪಡೆದ ಊರು ಫೊಳಲಿನಾಡುಳ್ಪೊಟಿಯೂರು ಬಳಗೂರಂ ಬಿಜಆ ಮಾದೇವಿಯಾಳುತ್ತಿರೆ (ಎಕ. XII, ಶಿರಾ. ೨೯-೩೪; ಕು. ೫೦೦). [?+ನಾಡು]

**ಫೋಟೋ** (ನಾ). ಚಿತ್ರಗ್ರಾಹಕಯಂತ್ರ (ಕೆಮರಾ)ದ ಸಹಾಯದಿಂದ ಮೂಡಿಸುವ ಚಿತ್ರ ; ಛಾಯಾಚಿತ್ರ : ಪತ್ರಿಕೆಯಲ್ಲಿ ೧೨ ವರ್ಷದ ಒಬ್ಬ ಹುಡುಗನ ಫೋಟೋ ಬಂದಿತ್ತು (ಜೀವಾತ್ಮ. ೨೬೨); ಅಕ್ಕನ ಫೋಟೋ ಮೊಗ್ಗಾವಿಯ ಮನೆಯಲ್ಲಿ ಉಳಿದುಬಿಟ್ಟಿದೆ (ಸಮುಕೀ. ೪೬೪).
[← ಇಂ. Photo]

**ಫೋಟೋಗ್ರಫಿ** (ನಾ). ಛಾಯಾಚಿತ್ರ ತೆಗೆಯುವ ವಿದ್ಯೆ : ಫೋಟೋ ತೆಗೆಯಲು ಸ್ಥೂಲಪ್ರಕಾಶ ಬೇಕು. ಸೂಕ್ಷ್ಮಶರೀರವು ಫೋಟೋಗ್ರಫಿ ತತ್ವಕ್ಕೆ ಸಂಬಂಧಪಟ್ಟುದಲ್ಲ (ಜೀವಾತ್ಮ. ೨೩೩). [←ಇಂ. Photography]

**ಫೋಟೋಗ್ರಾಫರ್** (ನಾ). ಛಾಯಾಚಿತ್ರಗಳನ್ನು ತೆಗೆಯುವವನು ; ಫೋಟೋ ತೆಗೆಯುವವನು : ಫೋಟೋಗ್ರಾಫರ್‌ನು ದೊಡ್ಡಚಿತ್ರಗಳನ್ನು ಚಿಕ್ಕದನ್ನಾಗಿಯೂ . . . ಪರಿವರ್ತಿಸಬಲ್ಲ (ಜೀವಾತ್ಮ. ೨೨೩).
[ ← ಇಂ. Photographer ]

**ಫೋಡ್** (ನಾ). ಜಮೀನನ್ನು ವಿಭಾಗಿಸುವಿಕೆ, – ಪೋಟುಭಾಗ ಮಾಡುವಿಕೆ : (ಕೃಕಗ. II, ೩೩೯). 'ಪೋಡು' ಪರಾ.
[←ಹಿಂ. ಫೋಡಾ ; ಮರಾ. ಫೋಡ್]

**ಫೋತಿ** 'ಪೌತಿ' ನೋ.

**ಫೋನ್** 'ಫೋನು' ನೋ.

**ಫೋನು**, ಫೋನ್ (ನಾ). ವಿದ್ಯುಚ್ಛಕ್ತಿಯ ಸಹಾಯದಿಂದ ಧ್ವನಿಯನ್ನು (ಮುಖ್ಯವಾಗಿ ಮಾತುಗಳನ್ನು) ತಂತಿಮಾರ್ಗವಾಗಿ ಸ್ಥಳ

ದಿಂದ ಸ್ಥಳಕ್ಕೆ ಸಾಗಿಸುವ ಸಲಕರಣೆ ; ದೂರವಾಣಿ ; ಟೆಲಿಫೋನು : ನನ್ನ ಫೋನಿನ ಸಂಖ್ಯೆಯನ್ನು ಆತನಿಗೆ ಶ್ರುತಪಡಿಸಿ . . . ಹಸಿದಿದ್ದ ಹೊಟ್ಟೆಯ ಕಡೆಗೆ ಈಗ ಗಮನ ಕೊಟ್ಟೆ (ಸಂಬಿಉ. ೦೦೩). **ಫೋನ್** : ನಮ್ಮ ಮನೆಯಲ್ಲಿ ಫೋನ್ ಇದೆ (ರೂಢಿ).

**ಫೋನುಮಾಡು** = ದೂರವಾಣಿಯ ಮೂಲಕ ಸಂಪರ್ಕ ಬೆಳೆಸು.— ಮಾತನಾಡು : ಅಗತ್ಯವಿದ್ದರೆ ಫೋನು ಮಾಡಿ ತಿಳಿಸಿಬಿಡು (ರೂಢಿ).

[←ಇಂ. Phone]

**ಫೋನೋಗ್ರಾಫು** (ನಾ). ರಬ್ಬರ್ ತಟ್ಟೆಗಳ ಮೇಲೆ ಧ್ವನಿಸಂಗ್ರಹ ಮಾಡಿ, ಅದನ್ನು ಪುನಃ ಧ್ವನಿಯಾಗಿ ಹೊರಡಿಸುವ ಯಂತ್ರ; ಸ್ವರಲೇಖಕಯಂತ್ರ; ಗ್ರಾಮಫೋನು : ಮಹಾರಾಜರು ಅದನ್ನು ಎಡಿಸನ್ನನ ಫೋನೋಗ್ರಾಫಿನಲ್ಲಿ . . . ಧ್ವನಿ ಮುದ್ರಿಸಿಕೊಂಡರು (ಸಂಗೀತ. ೨೦) ; ಫೋನೋಗ್ರಾಫಿನಲ್ಲಿ ನಾಟಕದ ನಟಿಯರ ಹಾಡುಗಳನ್ನು ಕೇಳಿಸಿ, ಅವನು ತನ್ನ ಮಿತ್ರವರ್ಗವನ್ನು ಸಂತೋಷಗೊಳಿಸುವ (ಇತ್ಯ.೩೦೦).

[←ಇಂ. Phonograph]

**ಫೋನೋಗ್ರಾಮ್** (ನಾ). = ಫೋನೋಗ್ರಾಫು : ಅವರ ಮನೆಯ ಹಳೆಯ ಕಾಲದ ಫೋನೋಗ್ರಾಮಿನಿಂದ ಹಾಡು ಕೇಳಿ ಬರುತ್ತಿತ್ತು (ರೂಢಿ).

[←ಇಂ. Phonogram]

**ಫೋರ್ಜರಿ** (ಗು). ೧. ಕೃತಕವಾದ ; ನಕಲಿ : ನಿನ್ನ ಹತ್ತಿರ ಫೋರ್ಜರಿ ನೋಟುಗಳು ಇಲ್ಲವಲ್ಲ (ಕೊಪತ್ಯ. ೦೬). (ನಾ). ೨. ದಸ್ತೈವಜು ಮೊದಲಾದುವುಗಳ ಖೋಟಾ ರಚನೆ ; ಅಸಲಿನಂತೆಯೇ ಇರುವ ಸುಳ್ಳುಪತ್ರ : ಅವನು 'ಫೋರ್ಜರಿ' ತಯಾರಿಸುವುದರಲ್ಲಿ ಹೆಸರುವಾಸಿ (ರೂಢಿ). ೩. ಕಳ್ಳರುಜು.—ಸಹಿ : ಅವನು . . . ಫೋರ್ಜರಿಯ ಆಪಾದನೆಗಾಗಿ ಬಂದಿಯಾಗಿದ್ದ ತನ್ನ ತಮ್ಮನನ್ನು ನೋಡುವ ಸಲುವಾಗಿ ಅವನಲ್ಲಿಗೆ ಬಂದಿದ್ದನು (ಪುನರು. ೦೯೯). [←ಇಂ. Forgery]

**ಫೌಜದಾರ್** 'ಫೌಜುದಾರ' ನೋ.

**ಫೌಜದಾರ** 'ಫೌಜುದಾರ' ನೋ.

**ಫೌಜದಾರಿ** 'ಫೌಜುದಾರಿ' ನೋ.

**ಫೌಜು, ಪವುಜು.** ಪೌಜು. ಫವುಜು (ನಾ). ದಂಡು ; ಸೈನ್ಯ; ಪಡೆ : ಭಾಸ್ಕರ ಬಿಸಿಲ್ಗುದುರೆಯ ಫೌ[ಪಾಠ. ಪೌ]ಜನಟ್ಟಿದನು (ಪೋಹಕ. ೦೯-೯೩); ಪಾರವಿಲ್ಲದ ರತ್ನಕಾಂತಿಯಿಂ ಜ್ವಲಿಪ ಭಂಗಾರದಾಸನದಲ್ಲಿ ಮಂಡಿಸಲ್ಕಿಕ್ಕ ಪರಿವಾರ ನೃಪಸೇವೆಯೊಳ್ ನಿರತರಾಗಿರುತಿರಲು ಸುರುಟಂಗೆ ಫೌಜೊದಗಿತು (ಅರ್ಜುನ. ೨೯-೩೩); ಗಾಜಿ ನೋಡಲು ಬಂದ ಜನರಿಗೂ ವಿನಾಕಾರಣ ಪೆಟ್ಟು ಸಿಕ್ಕಿ ಸರಕಾರದ ಮೇಲೂ ಪೋಲೀಸು ಫೌಜಿನ ಮೇಲೂ ಹಳ್ಳಿಯವರಿಗೆ ಸಿಟ್ಟು ಒಳಗೊಳಗೆ ಕುದಿಯುತ್ತಿತ್ತು (ಕುರುಕಾ. ೦೨೦). **ಪವುಜು** : ಭರದಿಂದಾ ಕಾಲದ ಕಾರ್ಮುಗಿಲೊಳ್ ಪಿರಿದುಂ ಮುಳಿದು ಪಳಂಚುವ ಪಾಂಗಿಂದೆರಡುಂ ಪವುಜಿನ ಪೇರಾನೆಯ ತಟ್ಟೇಱಯಿದಿರ್ಚಿದರು (ಜಯುಕಾ.೬-೩೬) ; ಕರಿಗಳೊ ಕಲ್ಪಾಂತಮೇಘದೊಬ್ಬುಳಿಗಳ ಸರಿಗಳೊ ಕಾಲಾಳ ಪವುಜೊ . . . ಎನೆ ತುರುಕರ ಬಲವೈದಿದುದು (ಕಂಠೀ.೦೪-೯೭). **ಪೌಜು**: "ಒಡ್ಡೆನಲ್ ಪೌಜುವೆಸರ್" (ಕತುಶಿ. ೩೬); ತಾ ತುರಂಗದ ಮೇಲೆ ಪಶುತಮಮೆಂಬ ಖಂಡೆಯವ ಪಿಡಿದು ಚಂಡಿಕಾಕಿರಣದ ಮೇಲೆ ಅಂಗೈಸಿ ಏಟಲಾಗಿ ಪೌಜು ಬೆರೆಯಿತ್ತು (ಸರ್ವವ. ೩೬-೨೯೧); ಕರಿಘಟೆಯೊಂದು ಕರಭ ಪಾಜು ತುರಗ ಸಾವಿರ ಹತ್ತುಸಾವಿರಮುಂದೆ ಇರಲದನೊಂದು ಪೌಜೆಂದು ಪೇಳ್ವರು (ಕುಂಬಾಸಾಂ. ೪೦-೩೩) : ಪೋಳೈಸಿ ನಿಲಿಸಿದಂ ನಿಜಬಲದ ಪೌಜುಗಳ ನರ್ಧಚಂದ್ರಾಕೃತಿಯೊಳು (ಕೃಶಿಭಾ. ೨೩-೦೦). **ಫವುಜು**: ಒಡ್ಡಿದ ಫವುಜನು ದೊಕ್ಕನಂದೊಬ್ಬುಳಿ ಮಾಡಿ (ಅನಂತ.೨೯-೩೦); ಈಗ ನಿಮ್ಮ ಫವುಜು ಕಳುಹಿಸಿ ಕೊಟ್ಟರೆ ಈ ಕೋಟೆ ನಿಮ್ಮ ಕೈವಶ ಮಾಡಿಕೊಡುತ್ತೇವೆ (ರಾಜೇಂದ್ರ.೩).

**ಫೌಜುಫೌಜು, ಪೌಜುಪೌಜು** (ದ್ವಿರುಕ್ತಿ): ವಾಜಿವಾಜಿಗಳ ವೈಹಾಳಿಯಂ ಮಾಡುತ್ತ ಫೌಜುಫೌಜಿಗೆ ಕೂಡಿಕೂಡಿ ಮಿರವುಟರವಕೆ ಮೂಜಗವು ತಲ್ಲಣಿಪ ತೆಱದಿಂದೆ . . . ಹೊಯ್ದಾಡುತಿರಲು (ಶ್ರೀಕೃಕಾ.೦೯-೩೩); ಪೌಜುಪೌಜಾಗಿ ಬೊಬ್ಬಿಱಿದೇಱುವರಿಭಟರೋಜೆಯನೇನ ಬಣ್ಣಿಸುವೆ (ಕಂಠೀ. ೦೯-೯೭). **ಫೌಜನಿಕ್ಕು** = ಸೈನ್ಯವನ್ನು ನಿಲ್ಲಿಸು: ಕಾಳಗದಲ್ಲಿ ಪೌಜನಿಕ್ಕಿದಡೆ ಮಾಱಿದಡೆ ಅರಸೆಂಬರಲ್ಲದೆ ಬಂಟರೆಂಬುದಿಲ್ಲ (ಪೋಲೀಪು.೨-೩); ಶೋಣಿತ ಪುರದ ಪಶ್ಚಿಮದಿಕ್ಕಿನಲ್ಲಿ ಶೂಲಪಾಣಿಯಾ ಪೌಜನಿಕ್ಕಿದನು (ಪೋಹಕ. ೩೭-೫೦). **ಫೌಜಾಗು** = ಗುಂಪಾಗು ; ಪಡೆಯಾಗು : ಅಖಿಲಬಲರಖಿಲ ಧಾತ್ರೀಶರನಿಬರು ಬೇಗ ತಂತಮ್ಮಾ ಬಲವೆರಸಿ ಪೌಜಾಗಿ . . . ನಿಲೆ (ಶಾಕ್ಯಶಾ. ೦೬-೬೬) : ಆತನ ಯಜ್ಞಶಾಲೆಯೊಳ್ ಅಱುಸಾಸಿರಗಂಧರ್ವ ರೇಳುಪೌಜಾಗಿ ಮೇಳಮಂ ಕಟ್ಟಿ ನರ್ತನಮನೆಸಗುತಿರ್ಪರು (ಶಾರಶಾಂ. ೨೯-೨೦೩). [← ಅರ. ಹಿಂ. ಮರಾ. ಫೌಜ್]

**ಫೌಜುದಾರ**, ಪಉಜುದಾರ, ಪೌಜುದಾರ, ಫೌಜದಾರ್, ಫೌಜದಾರ, ಫೌಜ್ದಾರ (ನಾ). ೧. ಸೈನ್ಯದ ನಾಯಕ; ಸೇನಾಧಿಪತಿ : ಯುದ್ಧ ಪ್ರಸಕ್ತಿ ಬಿದ್ದ ಕಾಲದಲ್ಲಿ ಅಂಥಾ ಮುಖಂಡರಿಂದ ದಂಡಿನ ಸಹಾಯವನ್ನು ಹೊಂದುತಿದ್ದರು. ಇಂಥಾ ಮುಖಂಡರಿಗೆ ಫೌಜುದಾರರು ಎಂತಲೂ ಹೆಸರಿತ್ತು (ಶಾಕಗಾ.೦೬); ರಾಜಯು ಹೆಚ್ಚು ಸಿಪಾಯಿಗಳನ್ನು ತರುವಂತೆ ಫೌಜುದಾರನಿಗೆ ಹೇಳಿ ಕಳುಹಿಸಿದನು (ಬಂಕಿಉ. ೩೦೨). ೨. ಪೋಲೀಸು ದಳದ ಕಿರಿಯ ಅಧಿಕಾರಿ : ಏನು ಮಾಡಬೇಕೆಂಬ ಪ್ರಶ್ನಾರ್ಥಕ ದೃಷ್ಟಿಯನ್ನು ಫೌಜುಧಾರನು ಗುಪ್ತಪೋಲೀಸನ ಕಡೆಗೆ ಬೀರಿದನು (ಪೊಕಾಶಾ. ೩೬); ಅವನು ಫೌಜುದಾರರ ಮಗ ಹುಸೇನಿ (ಕಂಗರೂ. ೨೨). **ಪಉಜುದಾರ**: ೧. ಅಮಿನ ಪಉಜುಜುದಾರ ಅಮಿರಬೇಗಸಾಹೇಬರು ಜಮೀನದಾರರು . . . ಬರಸಿ ಕೊಟ್ಟ ತಾಮ್ರದ ಶಾಸನ (ಎಕ. XII, ತಿಪ. ೦೦೨-೩; 1720). **ಪೌಜುದಾರ** : (೩). **ಫೌಜದಾರ್** : ೨. ಹೆಡ್‍ಕ್ವಾರ್ಟರಿನ ಈ ಎಲ್ಲ ಪೋಲೀಸರ ಮೇಲೆ ಒಬ್ಬ ಫೌಜದಾರ್ (ಸಬ್‍ಇನ್‍ಸ್ಪೆಕ್ಟರ್) ಇರುತ್ತಾರೆ (ಪಾಶೋ೦೧.೩೩). **ಫೌಜದಾರ**: ೧. ಅದುವರೆಗೂ ಅಲ್ಲಿ ಫೌಜದಾರ ಮುಂತಾದ ಪ್ರಧಾನರಾದ ರಾಜಕರ್ಮಚಾರಿಗಳು ವಾಸಮಾಡುತ್ತಿದ್ದರು (ಕಪಾಕಂ. ೩೬). ೨. ನೆಲಕ್ಕೆ ಬಿದ್ದ ಫೌಜದಾರರನ್ನು ಉಪಚರಿಸಲು ಕೂಡ ಚಾವಡಿಯಲ್ಲಿ ಯಾರೂ ಉಳಿದಿರಲಿಲ್ಲ (ಗ್ರಾಪಜಿಉ. ೦೬೯); ಮಧ್ಯವಯಸ್ಸಿನ ದಷ್ಟಪುಷ್ಟ ದೇಹದ ಆ ಫೌಜದಾರರು ತಮ್ಮ ತೀಕ್ಷ್ಣದೃಷ್ಟಿಯನ್ನು ನನ್ನ ಮೇಲೆ ಹರಿದಾಡಿಸಿದರು (ಪಾಶೋ೦೧.೩೩); ಫೌಜದಾರರು ಅವರನ್ನು ಬಹು ಟಬರಿನಿಂದ ಆಮಂತ್ರಿಸಿದರು (ಕಶ್ಯ. ೨೯೭). **ಫೌಜ್ದಾರ** : ೨. ಛತ್ರದಲ್ಲಿ ಪ್ರಿಯಪಟ್ಟಣದ ಫೌಜ್ದಾರರು ಬಿಡಾರ ಮಾಡಿಕೊಂಡಿದ್ದರೆ . . . ಅವರ ಒಬ್ಬಳೇ ಮಗಳು ಹತ್ತು ವರ್ಷದ ಹುಡುಗಿಯನ್ನು ಎತ್ತಿಕೊಂಡು ಹೋಗಿ ಬಿಟ್ಟಿಧಾರಂತೆ (ಕಂಗಾಳ್ಯ. ೦೨೦). [ಫೌಜು + –ದಾರ4]

**ಫೌಜುದಾರಿ**, ಪೌಜುದಾರಿ, ಫೌಜದಾರಿ (ನಾ). ೧. ಆಡಳಿತ ಸೌಕರ್ಯಕ್ಕಾಗಿ ಪ್ರತ್ಯೇಕಿಸಿದ ಪ್ರಾಂತ,—ಜಿಲ್ಲೆ : ಅಲ್ಲಿಯ ನಡವಳಿಕೆಗಳನ್ನು ತಿಳಿಯಲು ಆ ಗಡಿಗಳಿಗೆ ಸಮೀಪವಾಗಿರುವಂತೆ ೬ ಫೌಜುದಾರಿ(ತುಕಡಿ)ಗಳೂ ಸ್ಥಾಪಿತವಾದುವು (ಮಹಾಪಂ. II. ೩೬). **ಪೌಜುದಾರಿ** : ೨. ಅಪರಾಧಕ್ಕೆ ತಕ್ಕ ದಂಡನೆಯನ್ನು ವಿಧಿಸುವ ಸ್ಥಳ : ತಕ್ಸೀರು ವಿಚಾರಣೆ ಮಾಡುವ ಕಚೇರಿ,—ನ್ಯಾಯಾಲಯ: (೩). **ಫೌಜದಾರಿ** : ೧. ಪೂರ್ವದಲ್ಲಿ ಡಿಸ್ಟ್ರಿಕ್ಟುಗಳಿಗೆ ಫೌಜದಾರಿ ಎಂದು ಹೆಸರು ಇತ್ತು (ಜಾಸುವಂ. ೩೩೬). ೩. ದೊಂಬಿ ; ಜಗಳ : ರೂಪಚಂದನ ಅಪ್ಪಣೆಯ ಮೇರೆಗೆ ಅವನಿಂದ ಎಷ್ಟೋ ಫೌಜದಾರಿಗಳಾಗಿದ್ದುವು (ಜಬಾಪ್ಪಾ. ೪೦); ಇವರು ಜೀವ ಉಳಿಸಿಕೊಂಡು ಓಡಿಬರದಿದ್ದರೆ ಫೌಜದಾರಿಯಾಗುತ್ತಿತ್ತು (ಕ್ರೀಜೂತ್ರ.೩೩). [←ಹಿಂ. ಮರಾ. ಫೌಜದಾರೀ]

**ಫೌಜ್ದಾರ** 'ಫೌಜುದಾರ' ನೋ.

**ಫ್ಯಾಷನ್** 'ಫ್ಯಾಷನ್ನು' ನೋ.

**ಫ್ಯಾಷನ್ನು, ಫ್ಯಾಷನ್** (ನಾ). ಉಡುಗೆ, ತೊಡುಗೆ ಮೊದಲಾದುವು ಗಳಲ್ಲಿ ಕಾಲಕಾಲಕ್ಕೆ ಬಳಕೆಗೆ ಬರುವ ಸಂಪ್ರದಾಯ,—ರೂಢಿ: ದಿನದಿಂದ ದಿನಕ್ಕೆ ಉಡುಗೆ ತೊಡುಗೆಗಳ ಫ್ಯಾಷನ್ನು ಬದಲಾಗುತ್ತಲೇ ಇರುತ್ತದೆ (ರೂಢಿ). **ಫ್ಯಾಷನ್** : ಅವಳು ಈಗಿನ ಕಾಲದ ಯಾವ ಫ್ಯಾಷನ್ ಅನ್ನೂ ಮಾಡುವುದಿಲ್ಲ (ರೂಢಿ). [ ← ಇಂ. Fashion ]

**ಫ್ರೋಕ್ಷು** 'ಪುರೋಕ್ಷು' ನೋ.

**ಬ$_1$** (ನಾ). ೧. ಕನ್ನಡವರ್ಣಮಾಲೆಯ ನಲವತ್ತುಮೂರನೆಯ ಅಕ್ಷರ ; ಬಕಾರ : ಉತ್ತರಪದದ ಆದಿಯಲ್ಲಿರುವ ಕ, ತ, ಪ ಗಳಿಗೆ ಕ್ರಮವಾಗಿ ಗ, ದ, ಬ ಗಳು ಪ್ರಾಯಶಃ ಆದೇಶವಾಗಿ ಬರುವುವು (ಶಬ್ದಾ.ದ.೯೦). ೨. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : " ಖಡಘರವಾದರಡಕ್ಕು ಗ ಡ ಬ ಲಂ ಮೂಱಕ್ಕು" (ಕುಂಗಣಿ. ೦೦೯-೦೦).

**—ಬ$_2$** (ಪ್ರ). ಗುಣವಾಚಕದೊಂದಿಗೆ ಸೇರಿ ವ್ಯಕ್ತಿವಾಚಕಾರ್ಥವನ್ನು ಕೊಡುವ ಒಂದು ಪ್ರತ್ಯಯ : 'ಪಳಬ', 'ಪೊಸಂಬ' ಪರಾ.

**ಬಂಕ$_1$** 'ಬಂಕೆ$_1$' ನೋ.

**ಬಂಕ$_2$** 'ಪಕ್ಕ' ನೋ.

**ಬಂಕ$_3$** 'ಬಾಂಕು$_2$' ನೋ.

**ಬಂಕಂಗಡಿ** (ನಾ). ಮುಂಭಾಗದ ಎರಡೂಕಡೆಗಳಲ್ಲಿ ಜಗಲಿಗಳಿರುವ ಅಂಗಡಿ : ಅಲ್ಲಿಂದ ಹೊರಟ ವೇಣವನು, ಮೈಲಾಪುರದ ಕಾಳಾದೇವಿ ರಸ್ತೆಯಲ್ಲಿರುವ ಗೋಪಾಲನಾಯರ್ರ ಬಂಕಂಗಡಿಗೆ ಬಂದು ಮುಟ್ಟಿದನು (ಕಾಬಯೂ.೩೩). [ ಬಂಕ$_3$ (< ಬಾಂಕು$_2$) + ಅಂಗಡಿ (< ಅಂಗಾಡಿ) ]

**ಬಂಕಣ** 'ಬೊಕ್ಕಣ$_1$' ನೋ.

**ಬಂಕದೆಱೆ** (ನಾ). ಒಂದು ಬಗೆಯ ತೆರಿಗೆ,—ಸುಂಕ : ಬಂಕದೆಱೆ ಸಿದ್ದಾಯ ಬಿಟ್ಟಿ ಕೊಟ್ಟಣವನುಪಸುಂಕ ಮಲವದಿಕೆ ಸೊಲ್ಲಗೆ ಕವಣ ಕಡ್ಡಾಯ (ಸಿಂಗಿರಾ.೨೨-೨೬). [ ಬಂಕ$_2$ + ತೆಱೆ$^3$ ]

**ಬಂಕಪುರ, ಬಂಕಾಪುರ** (ನಾ). ಒಂದು ಊರಿನ ಹೆಸರು; ಈಗಿನ ಧಾರವಾಡಜಿಲ್ಲೆಯ ಶಿಗ್ಗಾಂವಿತಾಲ್ಲೂಕಿನ ಒಂದು ಊರು: ಬ[ಙ್ಕ]ಪುರದ ಧೋರ ಜಿನಾಲಯದ ಚನ್ದ್ರಪ್ರಭ ಭಟಾರಾರ್ಪ್ಪ ಸುಣ್ಣಯನಭ್ಯನ್ತರಸಿದ್ಧಿಯಾಳುತ್ತಿರೆ (ಕಶಾಇ. XI-i. ೩೯-೭; 925); ಚಕ್ರಗೊಟ್ಟವೃಚ್ಛಂಗಿ ವಿರಾಟನ ಪೊಳಲು ಬನ್ಕಪುರಂ ಬನವಾಸೆ (ಎಕ. XVI, ತಕ್ಕಾ. ೬೨-೯; 1242). **ಬಂಕಾಪುರ:** ಬಙ್ಕಾಪುರದೊಳಜಿತಸೇನಭಟ್ಟಾರಕರ ಶ್ರೀಪಾದಸನ್ನಿಧಿಯೊಳ್ . . . ನೋನ್ತು (ಎಕ. II, ೫೯-೦೦೯; 974); ಬಂಕಾಪುರದ ಮಠಮಠಸ್ಥಾನಮುಂ (ಎಇ. XIII. ೦೭೦-೫೦; 1055); ಬಂಕಾಪುರಕ್ಕೆ ಹೋದರೆ ಡೊಂಕು ಬಿಟ್ಟೀತೇ? (ಗಾದೆ). [ಬಂಕ$_2$ + ಪುರ$_2$]

**ಬಂಕಾಪುರ** 'ಬಂಕಪುರ' ನೋ.

**ಬಂಕಿ** 'ವಂಕಿ' ನೋ.

**ಬಂಕು$_1$** (ಕ್ರಿ). ಬಾಗು; ಡೊಂಕಾಗು; ವಕ್ರವಾಗು: "ಬಂಕು— ಕೌಟಿಲ್ಯೇ (ವಕ್ರವಾಗು)" (ಶಮಧಾ); ಸೊವಡಿಂಗವುಗ್ಗಿಸಿ ತುಂಬಿವೆರಸು ಕೂಂಕಿ ಬಂಕಿ ಬಿಟ್ಟು ಕುವಳಯಾಪೀಡನಂ ಕುವಳಯಾಪೀಡನಂ ಮಾಡಿ (ಅರ್ಜುನ. ೬-೩೩ ವ); ಕೊಂಕುತೆ ಬಂಕುತೆ ಹಾರ್ಯಸುತ್ತಂ . . . ಆಡುವ ಗುಂಡಯ್ಯನ ಹೊಸನೃತ್ಯಂ ನೋಡುವ ಶಿವನಂ ಮುಟ್ಟಿತು ಸತ್ಯಂ (ಕೆಂಬಾಣ. ಪ. ೫೩೩-೨೦). 'ಬಗ್ಗು$_1$' ಪರಾ. [ ದೇ. ॥ ತಮಿ. ವಾಙ್ಕು; ಮಲ. ವಾಙ್ಙು; ತುಳು. ಬಾಂಗು; ಕೊಡ. ಬಾಂಗ್; ತೆಲು. ವಂಗು ; ಕೋಲಾ. ನಾಯ್ಕಿ. ಪರ್ಜಿ. ವಂಗ್ ]

**ಬಂಕು$_2$** 'ವಂಕು' ನೋ.

**ಬಂಕುಡಿ** 'ವಂಕುಡಿ' ನೋ.

**ಬಂಕುಡಿಗಾಲು, ಬಂಕುಳಿಕಾಲು** (ನಾ). ಸೊಟ್ಟಗೆ ತಿರುಗಿಕೊಂಡಿರುವ ಕಾಲು: ಒಡನೊಡಂಬಡದ ಕೆಂಪಡಿದ ತಲೆನವಿರ ಬಂಕುಡಿಗಾಲ ಬೆರಳುಗಳ ದೊಡ್ಡತುಟಿಯ . . . ದೂರ್ತಿನ ಸೊಗಸಡದಿಯಿಡುವವಳೆ ಹಸ್ತಿನಿ (ಅನವ. ೨-೦೬). **ಬಂಕುಳಿಕಾಲು :** ಬಂಕುಳಿಕಾಲು ಜಂಘೆಗಳು ವಳ್ಳಿಹ ಉಗುರ್ಗಳು (ಸೌಗಂ. ೪೪೪-೩).

[ಬಂಕುಡಿ (< ವಂಕುಡಿ) + ಕಾಲು$_1$ (< ಕಾಲ್$_1$)]

**ಬಂಕುರು** (ನಾ). ಒಂದು ಬಗೆಯ ಮೀನು: ಹೆಲ್ಲರಂ ಬಂಕುರಂ . . . ಗಿಱಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತ್ತಿಹ ಬೇಡರಂ ನೋಡಿದಂ ಭೂಪಾಲನು (ಹಕಾಲ. ೫-೯೭). [ ? ]

**ಬಂಕುಳಿಕಾಲು** 'ಬಂಕುಡಿಗಾಲು' ನೋ.

**ಬಂಕೆ$_1$, ಬಂಕ$_1$, ಬೊಂಕ, ಬೊಂಕೆ** (ನಾ). ೧. ಒಂದು ಬಗೆಯ ಅಂಟು,—ಗೋಂದು; ನಿರ್ಯಾಸ: ಬಂಕೆಯಂಟನಂದದಿ ಸ್ನೇಹ (ಕನಮು. ೪೯-೩೪). ೨. ಅಂಟು; ಜಿಗಿ : ತ್ರಿದೋಷದಲ್ಲಿ ಸಾವವನ ನಾಡಿ ಅತಿಶೈತ್ಯವಾಗಿ ತುಪ್ಪದ ತೊಡೆದ ಹಾಗೆ ನಯವಾಗಿ ಬಂಕೆ ಬೆವರಾಡುವದು (ವೈದ್ಯಸಾ. I, ೫). **ಬಂಕ$_1$:** ೧. 'ಬೂರಗಬಂಕ' ಪರಾ. ೩. ಸಿಪ್ಪೆ; ತೊಗಟೆ: ದಾಳಿಂಬದ ಬಂಕವಂ ಚೂರ್ಣಿಸಿ ವಸ್ತ್ರಗಾಳಿತವಂ ಮಾಡಿ . . . ತೆಗೆದುಕೊಳ್ಳಲು ಎಂತಪ್ಪ ಬಹುಮೂತ್ರಮುಂ ಮಾಣ್ಗುಂ (ಸಕವೈ. ೩೩೧). **ಬೊಂಕ :** ೧. "ಕೋಲಕಂ, ತಕ್ಕೋಲಕಂ, ಕೋಶಫಲಂ — ೩ ತಕ್ಕೋಲದ ಗಿಡ, ತಕ್ಕೋಲದ ಬೊಂಕ" (ಸಿದ್ಧಾಂತಿ. ೨೦೬). **ಬೊಂಕೆ :** ೧. " ಪಾಯಸಃ . . . ಸರಳದ್ರುವಃ — ೫ ಸರಳದೇವದಾರುವೃಕ್ಷದ ಬೊಂಕೆ " (ಸಿದ್ಧಾಂತಿ. ೨೦೬). 'ಬೂರಗೆಬಂಕೆ' ಪರಾ.

**ಬಂಕೆಬೆವರು**=ಅಂಟಂಟಾದ ಬೆವರು : ಜ್ವರ ಬಿಟ್ಟು ಮಗುವಿನ ಮೈಯೆಲ್ಲಾ ಬಂಕೆಬೆವರಿನಿಂದ ತೊಯ್ದು ಹೋಗಿದೆ (ರೂಢಿ).

[ದೇ. ॥ ತೆಲು. ಬಂಕ ; ಕೋಲಾ. ಬಙ್ಕ,ಬಕ್ಕ; ನಾಯ್ಕಿ. ಬಕ್ಕ; ಪರ್ಜಿ. ಬಾಕ್ ; ಗೊಂಡಿ. ಬೊಕಿರ್]

**ಬಂಕೆ$_2$** 'ವಂಕು' ನೋ.

**ಬಂಕೆಯರಸ** (ನಾ). ಒಬ್ಬಾತನ ಹೆಸರು : ಬಂಕೆಯರಸರಾಳುತ್ತಿರೆ ಬಂಕೆಯಂನ ಮಗಂ ಕುನ್ದಟ್ಟ (ಎಇ. VII, ೨೦೩-೮; 874); ಮಹಾಸಾಮನ್ತ ಕಱುದೇವಯ್ಯರಾನ್ವಯದೊಳ್ ಬಙ್ಕೆಯರಸರ ಮಗಂ ಶ್ರೀಲೊಕಟಿ ಯರಸರ್ (ಎಕ. VII (S), ಶಿಕಾಂ. ೩೬೮- ೫; 902). [ಬಂಕೆ$_1$ + ಅರಸ$_1$]

**ಬಂಕೋಲು** (ನಾ). ಕೊಕ್ಕೆಕೋಲು; ದೋಟಿ: ಹಣ್ಣ ಬಂಕೋಲ ನುರೆ ಮುಂಗೈಯ್ಯಗ್ಗಳಿಕೆಯಲ್ಲಿ ಹೊಂದಿಸುತ (ದುರಥ. ೬-೦೨).

[ ಬಂಕು$_2$ (< ವಂಕು) + ಕೋಲು$_1$ (< ಕೋಲ್$_1$) ]

**ಬಂಗ** (ನಾ). ೧. ಭಿನ್ನವಾದುದು: ಚೂರು: "ಬಂಗ (ಬಂಗಿ)— ಭಂಗ = ನಾಶ, ಭಿನ್ನ" (ಕದ್ಯಕೋ. ೨೭). ೨. ಕಷ್ಟ; ದುರ್ಗತಿ; ಹೀನಸ್ಥಿತಿ : ಏನೋ ನಿನ್ನ ಅಣವು ವಣವು ಬಂಗ ಬಡತನ ಎಲ್ಲಾ ಕೇಳಿಕೊಂಡು ಬಂದಾಯ್ತು (ಹುಟ್ಟಿದಂ೩೩); ಏನೋ ಅವರ ಬಂಗ ಬಡತನಕ್ಕೆ ಒಂದಿಷ್ಟು ಕಾಯಿ ಕಸಿ ಕಿತ್ತುಕೊಂಡ್ಹೋಗಿ ಹೊಟ್ಟೆ ಹೊರಕತಾರೆ (ಪಪ್ಪೂರು. ೦೬೪) ; ಬಂಗು ಬಂದವನಿಗೆ ಬಂಗ ಬರದಿರದು (ಗಾದೆ). ೩. ಅವಮಾನ; ತೇಜೋಭಂಗ: ಅವರ ಮನೆ ಬಾಗಿಲಿಗೆ ಹೋಗಿ ಅನುಭವಿಸಿದ ಬಂಗ ಎಂದಿಗೂ ಮರೆಯಲಾರೆ (ರೂಢಿ). ೪. (ಅಲಂ) ವೃತ್ತಿ ; ಉದ್ಯೋಗ : ಆಳುಗಳೆಲ್ಲಾ . . . ವ್ಯವಸಾಯಗಳಿಗೂ ಬಂಗಗಳಿಗೂ ಸೇರಿಕೊಂಡರು (ಬಸ್ತ೪. ೪೦). [< ಸಂ. ಭಂಗ]

**ಬಂಗಡ** (ನಾ). ಒಂದು ಬಗೆಯ ಬಳ್ಳಿ : ಬಿಳಿತಿಗಡೆ. ಬಂಗಡಬಳ್ಳಿ (ವೈಶಿಗಿ. ೫೬-೦೦೫೮). [ ? ]

**ಬಂಗಡೆ**, ಬಗ್ಗಡೆ (ನಾ). ಒಂದು ಬಗೆಯ ಕಡಲ ಮೀನು : ಸೀಗುಡಿ ಗೆಂಡೆ ಕುಚ್ಚು ಹಣ್ಣಲು ಬಸಿಗ ಗಿಜಿಲು ಬಂಗಡೆ ಹಾವು . . . ಮೀನ್ಗಳಂ ಗುದಿಗೆಯ್ದರು (ಹಕಶಾ. ೩-೯೩) ; ಈ ಹೊತ್ತು ರಂಪಣಿ ಹಾಕಿದ್ದರೆ ಬಂಗಡೆ ರಾಶಿಗಟ್ಟಲೆ ಬೀಳಬಹುದಿತ್ತು (ಮೂರುದಾ. ೬೫) ; ಸ್ವಾರ್ಲು ಮತ್ತು ಬಂಗಡೆಮೀನಿನ ಗಬ್ಬುವಾಸನೆಯೊಡನೆ ಕುದುರೆಯ . . . ಉಚ್ಚೆಯ ಕಟುದುರ್ವಾಸನೆಯೂ ಕೂಡಿದ್ದುದನ್ನು ನೋಡಿದರೆ (ಮಲೆಮ. ೯೩೦). **ಬಗ್ಗಡೆ** : ಪಂದಿಮೀನ್ಪೆಱೆಮೀನ್ಬಗ್ಗಡೆ ಬಣ್ಣಮೀನೆನಿಪಿವೆಲ್ಲಂ ಬೀಳ್ದುವಾ ತಾಣದೊಳ್ (ರಾಜಶೇ. ೩-೦೦೩).

[ ← ತುಳು. ಬಂಗುಡೆ, ಬೊಂಗುಡೆ. / ಮರಾ. ಬಂಗಡ್ ]

**ಬಂಗಡ್ಡ** (ನಾ). ಒಂದು ಬಗೆಯ ಹುಲ್ಲು: (೬). [ ? ]

**ಬಂಗರ**$_1$ 'ಬಂಗಾರ' ನೋ.

**ಬಂಗರ**$_2$ 'ಬವರಿ' ನೋ.

**ಬಂಗರಳಿ** (ನಾ). ಒಂದು ಬಗೆಯ ಸಸ್ಯ : "ಬಂಗರಳಿಯೆನೆ ಹೀಲವಕ್ಕುಂ" (ಮಂಗರಾ. ೩೬-೦೭) ; ಬಂಗರಳಿಯರಳಿ . . . ಪೇರಿಪ್ಪೆ ತುಪ್ಪೆಗಳೆರ್ಪವು (ಶಂಖವಾ. ೦೦-೨೩). [ ? ]

**ಬಂಗಲೆ**, ಬಂಗ್ಲೆ (ನಾ). ದೊಡ್ಡಮನೆ ; ಮಹಲು : ಕೃಷ್ಣರಾಯರು ವಾಸವಾಡುತ್ತಿದ್ದುದು ಆ ಬಡಾವಣೆಯಲ್ಲಿ ಸ್ವಂತ ಬಂಗಲೆಯಲ್ಲಿ (ಮಹಾಗ. ೦೨) ; ಮಧ್ಯಾಹ್ನ ಹೊಸಬರನ್ನೆಲ್ಲ ಬಂಗಲೆಗೆ ಬರಹೇಳಿ . . . ಹಾಜರು ಪಟ್ಟಿಯಲ್ಲಿ ದಾಖಲು ಮಾಡಿಕೊಂಡರು (ರಕ್ತರೂ. ೬೨). **ಬಂಗ್ಲೆ**: ಈ ಬಂಗ್ಲೆಯಲ್ಲಿ ಎಷ್ಟು ಕೋಣೆಗಳಿವೆ ? (ಶಂದುಬಿ. ೬೬) ; ಊರ ಹೊರಗೆ ದೊಡ್ಡದೊಂದು ಬಂಗ್ಲೆ ಪಾರಾಟಕ್ಕೆ ಬಂದಿದೆ (ಹನ್ನೊಂದ. ೯೩).

[ ← ಇಂ. Bungalow. / ಹಿಂ. ಮರಾ. ಬಂಗಲಾ ]

**ಬಂಗವಾಡಿ** (ನಾ). ಒಂದು ಊರಿನ ಹೆಸರು : ಬಂಗವಾಡಿಯ ಕೆಱೆಗೆ ಬಿತ್ತುವಟ್ಟು ಬಿಟ್ಟುದು (ಎಕ. X, ಕೋಲಾರ. ೧೯೬-೦೯; ಸು. 950).

[ಬಂಗ? + ವಾಡಿ$_2$]

**ಬಂಗಳಿಚ** (ನಾ). ಬಂಗಾಳದೇಶದಲ್ಲಿ ಹುಟ್ಟಿದವನು ; ಬಂಗಾಳಿ : ವರಳಿಚಂ, ಬಂಗಳಿಚಂ (ಶಬ್ದಾನು. ೯೩೦ ವ್ಯಾಖ್ಯಾ). [ಬಂಗಳ$_0$ + –ಇಚ]

**ಬಂಗಾರ**, ಬಂಗರ$_1$, ಬಂಗಾಱ, ಬಿಂಗರ, ಬಿಂಗಾರ, ಬಿಂಗಾರಿ$_2$, ಭಂಗಾರ, ಬಂಗಾಱ (ನಾ). ೧. (ವಿಶೇಷವಾಗಿ ಒಡವೆಗಳನ್ನು ಮಾಡಲು ಉಪಯೋಗಿಸುವ) ಒಂದು ಬಗೆಯ ಹಳದಿಬಣ್ಣದ ಲೋಹ ; ಹೊನ್ನು ; ಚಿನ್ನ : "ಬಂಗಾರ (ಭಂಗಾರ) — ಭೃಂಗಾರ= ಚಿನ್ನ, ಚಿನ್ನದ ಹೂಜಿ" (ತದ್ಭಕೋ. ೨೬) ; ಹಳೆಯ ಬಂಗಾರದಿಂದ ಹೊಸ ಒಡವೆ ಮಾಡುವಂತೆ ಹಳೆಯ ವೈದಿಕಧರ್ಮಕ್ಕೆ ನವ್ಯಚೇತನವನ್ನು . . . ಶ್ರೀಕೃಷ್ಣನು ನೀಡಿದ್ದಾನೆ (ಭಾರದ. ೦೦೯) : ಅತ್ತಿಮಬ್ಬೆ . . . ಲಿಪಿಗಾರರಿಗೆ ಬಂಗಾರದ ಕಂಟವನ್ನು ದಾನವಾಡಿಬಿಡುತ್ತಿದ್ದಳು (ದಾನಚಿಂ. ೦೬೩). ೨. ಚಿನ್ನದಿಂದ ಮಾಡಿದ ಹೂಜಿ : ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. ೩. ಚಿನ್ನದ ಒಡವೆ ; ಸ್ವರ್ಣಾಭರಣ : ಹಣ ಬಂಗಾರ ವಸ್ತ್ರ ಕಪ್ಪಡ ಬಟ್ಟೆಯಲ್ಲಿ ನೆಟ್ಟನೆ ಬಿದ್ದಿರಲು ಕಂಡು ಕಾತರಿಸಿ ಕೈಮುಟ್ಟಿ ಎತ್ತದ ಭಾಷೆ (ಅದವ. ೨೦-೩೨) ; ಬಣ್ಣವ ನುಡರು ಬಂಗಾರಗಳನು ತೊಡರು (ನೇಮಿಜಿಂ. ೬-೯೦) ; ಮೆಯ್ಯ ಬಂಗಾರಗಳ ನುಗಿದು ಮಱೆಮಾಡಿದರ್ (ಚಿಂಕೃ. ೨೯-೨೬). ೪. (ಆಲಂ) ಮಕ್ಕಳನ್ನು ಪ್ರೀತಿಯಿಂದ ಕರೆಯುವಾಗ ಬಳಸುವ ಶಬ್ದ: ನನ್ನ ಬಂಗಾರ ಬಾಪ್ಪಾ ಇಲ್ಲಿ (ಕೂಕಿ). **ಬಂಗರ**$_1$ : ೧. ಮುತ್ತಿನ ಕಂಠಿ ಬಂಗರದ ಕೊಡೆ (ಎಕ. VI, ತರೀಕೆರೆ. ೦೦೯-೩೬; 1717) ; ಬಂಗರವು ಬೆಂಕಿಯೊಳು ಬೀಳಲು ಬಂಗರವು ತಂಡಸದಿ ಹುಡುಕಿಯೆ ಹಿಡಿದ ತೆರನಂತೆ (ಜ್ಞಾಮಸಿಂ. ೦೬-೩೭). Δ **ಬಂಗಾಱ** : ೫. (ಆಲಂ) ಶ್ರೇಷ್ಠನಾದವನು : ಪರಬಳಸೂಱೆಕಾಱಂ ವೈರಿಬಂಗಾಱಂ (ಮುಂಬರಾ. X, ೨೦೯-೯; 981) : ರಿಪುರಾಯ[ಉ]ವರಬಂಗಾಱಂ (ಸೌಇಇ. XI-ii, ೦೬೨-೭; 1112) : ಬಿರುದ ಬಂಗಾಱಂ ಶಾಮಂತ ಗಸಣಿ (ವೃಇಂ. ೦೯೩೭, ೦೭-೨೯; 1196). **ಬಿಂಗರ** : ೩. ಉಂಗುರದ ಕಾಲ ಊರುತ ಜಾರುತ ಬಿಂಗರದ ನಡುವ ಬಳುಕುತ ಲಕ್ಕವ್ವ ಬಂದಳೇ (ನಾಕಪ. ೨೩). **ಬಿಂಗಾರ** : ೧. "ಬಿಂಗಾರ (೦) — ಭೃಂಗಾರ" (ತದ್ಭಕೋ. ೩೦) ; ಋತ್ವಕ್ಕಿತ್ವಂ–ಋಜು–ರಿಜು . . . ಭೃಂಗಾರ–ಬಿಂಗಾರ (ಶಮದ. ೨೬೯ ವೃತ್ತಿ). ೬. ಕಾಗೆಬಂಗಾರ; ಅಭ್ರಕ : ಇದರಲ್ಲಿ ಮುಖ್ಯವಾಗಿರುವ ವಸ್ತುಗಳೆಂದರೆ ನುಣುಪಾದ ಜಿಡ್ಡಿನಂತಿರುವ ಖನಿಜದ ಪುಡಿ, ಬಿಂಗಾರ (ಟಾಲ್ಕ್) (ಕಲಕೋ. I, ೩೩).

**ಬಿಂಗಾರಿ**$_2$ : ೨. (ನಂಜವ್ವೆಗೆ ಕಣ್ದರವಿ ಮಾಡಿ, ಹೊನ್ನ ಬಿಂಗಾರಿಯನ್ನು ತೋರಿ, ಮುಗುಳ್ದು ಕೊಳ್ವನು) (ಜಟ್ಟಿ. ೯೨-೨೩). ೭. ತೂಗು ಬಿಟ್ಟಿರುವ ಚಿನ್ನದ ಅಲಂಕಾರವಸ್ತು; ಗುಳೋಪು ; ರಸಗುಂಡು : ಬಿಗಿದ ಬಿಂಗಾರಿಗಳ ಹಸುರ್ವಂದರವ ಮುಸುಕಿ ನೆಗೆದ ಮೇಲ್ಕಟ್ಟುಗಳ ಸೂಯಾಣ ಪಂಚವರ್ಣದ ಚೂಳಿಕೆಗಳೊಪ್ಪಲು . . . ವಿವಾಹಗೃಹವೆಸೆಯಿತು (ಸಿದ್ಧರಾ. ೯-೩೩); ಬಿಗಿದ ಬಿಂಗಾರಿಗಳ ಮೇಲ್ಕಟ್ಟುಗಳ ಮಣಿಮಯಸೂಸಕದ. . .ಚಪ್ಪರದೆಡೆಯೆಡೆಯ ಚೌಕಿಗೆಯ ಚತುರಂಗದ ವಿಚಿತ್ರದ ರಚನೆ ಚೆಲುವಾಯ್ತು (ಕುವ್ಯಾಸ. ೬-೨೫); ಬಿಗಿದ ಬಿಂಗಾರಿಗಳ . . . ಸುತ್ತಣ ಸಾಲಭಂಜಿಕೆಗಳ ವಿಲಾಸದಲಿ ಸೊಗಸಿತಾ ಮಂಟಪ (ತೊರೆರಾ. ೦-೦೩-೯).

**ಭಂಗಾರ** : ೧. ವರ್ಗಚತುರ್ಥಾಕ್ಷರಂಗಳ್ಗೆ-ಘಟಿಯಿಂ . . . ಭಂಗಾರಂ, ಭಂಡಾರಂ (ಶಮದ. ೦೫ ವೃತ್ತಿ); ತೋರದ ತೋಳುಳ್ಳರ್ ಭಂಗಾರದ ಕಂಭದವೊಲಪ್ಪೊಡಂಬುಳ್ಳವರ್ (ಸೌಂದರ. ೦-೦೯). ೩. ಚಿನ್ನದಿಂದಾದ ಭಂಗಾರ (ಒಡವೆ) ಚಿನ್ನದ ರೂಪಲ್ಲದೆ ಮತ್ತೊಂದು ರೂಪಾಗಬಲ್ಲುದೆ ಹೇಳಾ (ಸಿದ್ಧೇಶ. ೦೯-೩೨). ೮. (ಆಲಂ) ಶ್ರೇಷ್ಠವಾದುದು; ಉತ್ತಮವಾದುದು: ಭಂಗಾರದಂಥಾ ಎತ್ತೊಂದು ಮೊನ್ನೆ ಕೈಯೊಳಗಿಂದ ಹೋಯ್ತು (ಅಕೋಶ. ೯೦). Δ **ಭಂಗಾಱ** : ೫. ಮಣ್ಡಳಿಕ ಬಿರುದ ಭಂಗಾಱಂ (ಸೌಇಇ. XI-i, ೯೭-೭; 1062) ; ರಾಯಜಗದಳವು[ನೋಡ] [ರತಿ]ವಚ್ಚರಿವ ಸವತಿ ಮದ ಭಂಜನೆ ರಾಯಭಂಗಾಱ (ಎಇ. XXVIII, ೫೩-೬೮; 1082); ರಾಯರಾಯ ಪುರಸೂಱೆಕಾಱ ವೈರಿಭಂಗಾಱ (ಎಕ. II, ೦೯೩-೯೦; 1131).

**ಬಂಗಾರದ ನೀರು** = ಚಿನ್ನದ ಬಣ್ಣ ಬರುವಂತೆ ಮೆರುಗನ್ನು ಕೊಡುವ ರಾಸಾಯನಿಕದ್ರವ : ಬೆಳ್ಳಿಒಡವೆಗೆ ಬಂಗಾರದ ನೀರು ಬಿಡಿಸಿದ್ದಾರೆ (ಕೂಕಿ). **ಬಂಗಾರದ ಮುಲಾಮು** = ಚಿನ್ನದ ಮುಲಾಮು, — ಗಿಲೀಟು : ಅವೆಲ್ಲಾ ಬಂಗಾರದ ಮುಲಾಮು ಹಾಕಿದ ಒಡವೆಗಳು (ಕೂಕಿ). **ಬಂಗಾರದವಳು, ಭಂಗಾರದವಳು** = (ರಾಜನ) ಉಪಪತ್ನಿ : ಪಟ್ಟದ ಹೆಂಡತಿಗೆ ಅಚ್ಯುತರಾಯನೆಂಬ ಮಗನಿದ್ದನು. ಬಂಗಾರದವಳಿಗೆ ಕೃಷ್ಣರಾಯನೆಂಬ ಮಗನಿದ್ದನು (ಕೀತಿಶಾಂ. VII, ೨೦) ; ಬಂಗಾರದವಳು. ಬಂಗಾರಕ್ಕಾಗಿ ಹೆಂಡಿರಂತೆ ಬಂದವಳು. ವೇಶ್ಯೆಯಲ್ಲ. ಮದುವೆಯಾದ ಹೆಂಡಿರಲ್ಲ (ನಮ್ಮನು. ೦೩೫) ; ದೊಡ್ಡಮ್ಮ ರಣಧೀರನ ಭಂಗಾರದವಳಾಗಿರಲು ಅಪೇಕ್ಷಿಪಟ್ಟು, ಅರಮನೆಗೆ ತೆರಳುತ್ತಾಳೆ (ಸಂಕಶ. ೦೦೨). **ಭಂಗಾರದ ಸ್ತ್ರೀ** = ಬಂಗಾರದವಳು : "ಭೋಗಿನ್ಯಃ, ಅನ್ಯಾಃ, ನೃಪಸ್ತ್ರೀಯಃ — ಅರಸು ಭೋಗಪಡುವದಕ್ಕೆ ಉಪಯುಕ್ತರಾಗಿ ಪಟ್ಟದ ರಾಣಿಗಿಂತಲೂ ಬೇರೆ ಸ್ತ್ರೀಯರ ಹೆಸರುಗಳು. ಇದು ಭಂಗಾರದ ಸ್ತ್ರೀಯರಿಗೂ ಹೆಸರಾಗುತ್ತೆ " (ಸಿದ್ಧಾಂತಿ. ೦೬೮).

[< ಸಂ. ಭೃಂಗಾರ, ಭೃಂಗಾರೀ. / ತಮಿ. ಪಜ್ಞಾರ, ಪಜ್ಞಾರು ; ತುಳು. ಬಂಗಾರ, ಭಂಗಾರ್, ಭಂಗಾರ; ತೆಲು. ಬಂಗರ, ಬಂಗರು, ಬಂಗಾರ, ಬಂಗಾರು]

**ಬಂಗಾರಕಡ್ಡಿ** (ನಾ). ಚಿನ್ನದ ಕಡ್ಡಿಯಂತೆ ತೆಳುವಾಗಿರುವ ಒಂದು

ಬಗೆಯ ಬತ್ತ: ಈಗ ಬಂಗಾರಕಡ್ಡಿ ಬೆಲೆ ಕ್ವಿಂಟಾಲಿಗೆ ನಾನೂರೈವತ್ತು ರೂಪಾಯಿ ಆಗಿದೆ (ಊ). 'ಬಂಗಾರಸಣ್ಣ' ಪರಾ. [ಬಂಗಾರ + ಕಡ್ಡಿ]

**ಬಂಗಾರಚೌಕಿ** (ನಾ). ಅರಮನೆಯ ಸ್ತ್ರೀಯರು ವಾಸಿಸುವ ಅಂತಃಪುರದ ಒಂದು ಭಾಗ: ಕಂಗೊಳಿಸುವ ದಿವ್ಯಕಾಂತಿಯ ತೀಡುತ ಬಂಗಾರಚೌಕಿಯೊಪ್ಪಿದುದು (ಕಂಷಾ. ೬-೩೪). [ಬಂಗಾರ + ಚೌಕಿ]

**ಬಂಗಾರಸಣ್ಣ** (ನಾ).=ಬಂಗಾರಕಡ್ಡಿ: ಬಂಗಾರಕಡ್ಡಿಯನ್ನೇ ಬಂಗಾರ ಸಣ್ಣ ಎಂದೂ ಕರೆಯುತ್ತಾರೆ (ಕೂ). [ಬಂಗಾರ + ಸಣ್ಣ]

**ಬಂಗಾರಹುಡಿ** (ನಾ). ಚಿನ್ನದ ಪುಡಿ: ಬಂಗಾರಹುಡೀಲೇ ಭಂಡಾರಾನ ಬೆಳಸೇನಂದಾಂವಾ (ಸಜಾಗೀ. ೯೩-೬). [ಬಂಗಾರ + ಹುಡಿ (<ಪುಡಿ)]

**ಬಂಗಾಲ**, ಬಂಗಾಳ (ನಾ). ಒಂದು ದೇಶದ ಹೆಸರು; ವಂಗ: ಬಂಗಾಲದಲ್ಲಿ ಮುತ್ತೈದೆಯರು ಶಂಖದ ಬಳೆ ಹಾಕಿಕೊಳ್ಳುತ್ತಾರೆ (ಇತ್ಯ. ೪); ಬಂಗಾಲ: ಭಾರತಉಪಖಂಡದ ಈಶಾನ್ಯಭಾಗದಲ್ಲಿರುವ ಐತಿಹಾಸಿಕಪ್ರದೇಶ (ಕಂಕೋ. XI, ೬೬೯). **ಬಂಗಾಳ**: ವಂಗ ಕಳಿಂಗ ಬಂಗಾಳ . . . ನೇಪಾಳರ್ ಮೊದಲಾದ ರಾಜಪುತ್ರರ ಪಂಕ್ತಿಗಳೊಳಂ (ಗಿಂ. ೨-೦೦೩ ವ); ಲಾಳ ಚೋಳ ವರಾಳ ಯವ ಬಂಗಾಳ . . . ವಿದರ್ಭಧರಣೀಪಾಲತತಿ ಸಂದಣಿಸಿದುದು (ತೊರಾ. ೧-೭-೦೪); ಅಂಗಾಲಿಗೆ ತ್ರಾಣವಿದ್ದರೆ ಬಂಗಾಳಕ್ಕೆ ಹೋಗಬಹುದು (ಗಾದೆ). [←ಹಿಂ. ಮರಾ. ಬಂಗಾಲ್. / ಸಂ. ವಂಗ]

**ಬಂಗಾಲಿ**, ಬಂಗಾಳಿ (ನಾ). ೧. ಬಂಗಾಳದೇಶಕ್ಕೆ ಸೇರಿದವನು. ೨. ಬಂಗಾಳದೇಶದ ಭಾಷೆ: ಈ ಬಂಗಾಲೀಚಿತ್ರಕ್ಕೆ ಈ ಗೌಡ ಬಂಗಾಲೀ ವಿಮರ್ಶೆ ಹೊಂದಿಕೆಯಾಗುತ್ತದೆ (ಚಿಪಕ. ೩೩). ೩. (ಅಲಂ) ಮೋಸಗಾರಿಕೆ; ಕುಯುಕ್ತಿ: 'ಗೌಡಬಂಗಾಲಿ', 'ಬಾರಾಬಂಗಾಲಿ' ಪರಾ. **ಬಂಗಾಳಿ**: ೨. ಬಂಗಾಳಿಯನ್ನು ಅಭ್ಯಾಸ ಮಾಡಲು ಈ ಭಾಷಾಂತರ ನೆರವಾಗುತ್ತದೆಯೆಂಬುದು ನನ್ನ ನಂಬಿಕೆ (ಚಿಂದ. I. xvi ಮುನ್ನುಡಿ). ೩. ಬಂಗಾಳಕ್ಕೆ ಹೋದರೂ ಗವುಡಬಂಗಾಳಿ ಬಿಡಲಿಲ್ಲ (ಗಾದೆ). ೪. ಒಂದು ಬಗೆಯ ಮರ; ಹೂವರಸಿ: ರಕ್ತವಿಪ್ಪುದು ಬಂಗಾಳಿ ರಸದಂತೆ (ಅರ್ಥೋತ್ರ. ೩-೨೩-೨೦); ಬಂಗಾಳಿಗಿಡದ ಬುಡಕ್ಕೆ ಕುಳಿತ ಮುದುಕಿಯ ಕಡೆಯಿಂದ ನಾಲ್ಕಾಣೆ ಪುಗ್ಗಿ ತಿಂದು ಮುಗಿಸುವಷ್ಟರಲ್ಲಿ ಶಾಲೆ ಬಿಟ್ಟಿತು (ಗಾಳಕ. ೦೬೬). ೫. [ಸಂಗೀತ] ಒಂದು ರಾಗದ ಹೆಸರು: ಸಮಸ್ತರಾಗಂಗಳೊಳಗೆ ರಾಮಕ್ರಿಯೆ . . . ಬಂಗಾಳಿ ಮಧ್ಯಮಾವತಿಯೆಂಬ ಮುವತ್ತಾಱು ರಾಗಂಗಳೇ ಮುಖ್ಯಮಾಗಿ ಬಳಕೆಯಿಂದ . . . ಇರ್ಪವು (ಶಿಪೀಕ. ೨೩೪); ವಾಟ್ಯ ಸಾಳಂಗ ಬಹುಳಿ ಬಂಗಾಳಿ ಈ ನಾಲ್ಕು ರಾಗವಾದಿಯಾದ ಮೂವತ್ತೆರಡುರಾಗವನು . . . ಪಾಡುವರು (ಕೃರಸೂ. I, ೨೨). [← ಹಿಂ. ಮರಾ. ಬಂಗಾಲೀ]

**ಬಂಗಾಲಿತನ** (ನಾ). ಮೋಸ; ವಂಚನೆ; ಠಕ್ಕು: ಬಂಗಾಲಿತನವು ಹೆಚ್ಚಾದ ಕಾಲಕ್ಕೆ ಅನ್ನದ ಕೊರತೆಯನ್ನು ತತ್ವಜ್ಞಾನದ ಬಂಗಾಲಿತನದಿಂದ ಮುಚ್ಚಬೇಕಾಗುತ್ತದೆ (ಚಿಶಾಮು. ೩೪). [ಬಂಗಾಲಿ + — ತನ]

**ಬಂಗಾಳ** 'ಬಂಗಾಲ' ನೋ.

**ಬಂಗಾಳಪಚ್ಚೆ** (ನಾ). ಒಂದು ಬಗೆಯ ಔಷಧದ್ರವ್ಯ: ಬೋಳಾಮುಸ್ತಕಿ, ಬಂಗಾಳಪಚ್ಚೆ, ಪಚ್ಚೆತುತ್ತ . . . ತಾಮ್ರದ ಚೆಂಬಿನಲ್ಲಿ ಮರ್ದಿಸಿ ಹುಳುಕಡ್ಡಿ ರಕ್ತ ಬರುವ ಹಾಗೆ ಕೆರೆದು ತೊಡೆಯೆ ಗುಣ (ಪಿತ್ಯ. ೧೦೪). [← ತಮಿ. ವಙ್ಕಳಪ್ಪಚ್ಚೈ]

**ಬಂಗಾಳವಿದ್ಯ** (ನಾ).=ಬಂಗಾಲಿತನ: ಬಂಗಾಳವಿದ್ಯದಹಮ್ಮಿನಲಿ ಬಸವನಾಡಿಗೊಡೆಯನ ಗೆಲ್ಲ ಹಮ್ಮೊಡಗೂಡಿ ಗೃಹಕೈದಿದನು (ಚಿಸ್ವ. ೬-೧). [ಬಂಗಾಳ (<ಬಂಗಾಲ) + ವಿದ್ಯ]

**ಬಂಗಾಳಿ** 'ಬಂಗಾಲಿ' ನೋ.

**△ಬಂಗಾಱ** 'ಬಂಗಾರ' ನೋ.

**ಬಂಗಿ** 'ಭಂಗಿ₁' ನೋ.

**ಬಂಗಿಮುಕ್ಕ** 'ಭಂಗಿಮುಕ್ಕ' ನೋ.

**ಬಂಗು** (ನಾ). ೧. ಚರ್ಮದ ಮೇಲೆ ಕಪ್ಪುಚುಕ್ಕೆಗಳುಂಟಾಗುವ ಒಂದು ಬಗೆಯ ಚರ್ಮರೋಗ: ಬೀರಗೆ ಸಿದ್ಧಾರ್ಥಂ ಕಾಟ್ಸೀರಗೆ ಕರಿಯೆಳ್ಳೆಂಬಿವಂ ಪೂಸುಗಜಕ್ಷೀರದೊಳರೆದಾನನಪಂಕೇರುಹವಂ ಬಂಗು ಪಿಂಗುಗಂ (ಲೋಕೋಚ. ೯-೮೬); ನರವುಲಿ ಮೊದವಿ ಬಂ[ಜಾಶಾಂ. ಭು, ಪಂ]ಗು ನೆರೆದಾನನದ ಚುಬ್ಬುವೆರಸಿರ್ದ ಲಂಕುಳಿನ ನಿಡಿಯೊಡಲು (ಜಪವ. ೦೦-೦೦); ಪಡವಲದ ಬೀಜವ ಪೂಸೆ ಬಂಗು ತೀರ್ಗುಂ (ಪಿತ್ಯ. ೬೪). ೨. ಬೂಷ್ಟು; ಬೂಜು: ಅವನುಪಕಾರಮನಾಂ ಪೇ[ಟ]ವೇಟ್ಸುವೆ ನಮ್ಮ ತಿರಿದು ತಂದುಣ್ಬಾಶನಕ್ಕವ[ರ]ಣ್ಣೆ ಸೂಜಿವೊನೆಯನಿಸುವೆಣ್ಣೆಯುಂ ಬಂಗುವಾದ ಕಟಿಯುಂ ಪೇಟ್ಸುಂ (ಸುಕುಸೂ. ೨-೬೪). [ದೇ॥ ತಮಿ. ವಙ್ಕು]

**ಬಂಗುರಿಸು** (ಕ್ರಿ). ೧. 'ಬಂ' ಎಂದು ಶಬ್ದ ಮಾಡು: ಇಂಗಡಲ ತಾವರಸದಿ ಬಂಗುರಿವ ತುಂಬಿಗಳ ಗಾವರಂ ಗಾನ ಮಿಗೆ ರಂಗಿಸುತ ಕೇಳುವೆಯ ನಿಟ್ಟಿಪ ಸಮುದ್ರೇಶ (ಅಂಗಚ. ೨-೫೦). ೨. (?): ಬಾಂಬಟ್ಟೆಯೆಡೆಗೆ ಹೋಗಿ ಬೆಳೆದಮೃತಘಟವಂ ಗಣನೆಯಿಲ್ಲೆನಿಸಿ ಬಂಗುರಿಪ ಖಚರವಾನಂಗಳಿಂ ಬಿಡದೆಱೆವ ತಂಗರಗವೊ . . . ಎನಿಸಿ ಶೃಂಗಚೆಂದೆಂಗೆಸೆದವು (ಅಂಗಚ. ೩-೨೬). [? + — ಇಸು₃]

**ಬಂಗ್ಲೆ** 'ಬಂಗಲೆ' ನೋ.

**ಬಂಚ**, ವಂಚ (ನಾ). ೧. ಪೀಳಿಗೆ; ಮನೆತನ; ಕುಲ: "ವಂಶಮಂ ಬಂಚಮೆನಲಕ್ಕು" (ಶಬ್ದಮ. ೫೬); ಈ ಲಲ್ಲಾಡನಬಾದೊಂ ಕೊಜಾಸ್ತ್ಕಾಳರ ಕೊಡುಗೂರರ ಬಣ್ಣಿಪುವತ್ತನ್ನೆ ಅಱುಗೆ (ಎಕ. III(R), ಹಗ್ಗದ. ೩-೦೩; ಸು. ೧೫೮೮ ೫೫); ಶತ್ರಕ್ಕೆ ಚತ್ತಂ . . . ವಂಶ—ಬಂಚ (ಕಮದ. ೨೬೩ ಕ್ರಯೋ). ೨. ಕೊಳಲು: ಎರಡುಂ ಬಂಚಂಗಳಿಂದಿಂಚರಮೊಸರ್ವಿನೆಗಂ ಕಿನ್ನರದ್ವಂದ್ವಮೊತ್ತೃತ್ತಿರೆ . . . ಕೇಳುತ್ತಿರ್ದ ಕಾದಂಬರಿಯುಮವನಿಪಂ ದೂರದೊಳ್ ಕಂಡಂ (ಕಾದಂಸಾ. ೦೬೪); ಮದನನ ಬಿಲ್ಲ ಜೇವೊಡೆ ವಿಪಂಚಿಯ ಬಂಚದ ನುಣ್ಪು ಕರ್ಣಪೂರದ ಪರಮಾಮೃತಾಂಬುವೆನೆ ನೇವುರದಿಂದುಡೆನೂಲ ತೊಂಗಲಿಂ ಮೃದುರವಮುಣ್ಮೆ (ಅಪಂಚ. ೪-೩೦); ಗೋವರ ಪೆಣ್ಗಳ್ ಬಂಚದ ಗಾವರಕುರೆ ಸೋಲ್ತು ಬಳಸಿ ನಿಲೆ (ಕಮಪು. ೪-೦೫೬). **ವಂಚ**: ೧. "ವಂಚಂ=ವಂಶಂ" (ಕಮದ. ೫೦. ೨). ೨. 'ವಂಚಿಗ' ಪರಾ. [<ಸಂ. ವಂಶ]

**ಬಂಚನೆ** (ನಾ). ಮೋಸ; ಕಪಟ: "ಅತಿಬಂಚನೆಯೆನೆ ಮರುಟಕ್ಕು [ಮಱಸದಕ್ಕು]" (ರನ್ನಕಂ. ೫); "ಬಂಚನೆಯೆ ವಂಚನೆ" (ಕರ್ಣಾಶ. ೬೦); ಪುಸಿನಸೆ ಬಣ್ಣನೆ (ಎಕ. VI, ಶೃಂಮು. ೯೪-೦೬; ಸು. 1060 ?). [<ಸಂ. ವಂಚನ]

**ಬಂಚರ** (ನಾ). ೧. ಒಂದು ಬಗೆಯ ತಂತೀವಾದ್ಯ; ತಂಬೂರಿ: ಆ ಬಂಚರವನ್ನೆತ್ತಿ ಮಿಱಾಟಿ ಪರೀಕ್ಷಿಸಿ ಸುತಿ ಮಾಡಿ . . . ರಾಗಮಾಲಿಕೆಯನ್ನು ಸವಿಗರೆಯುವಳು (ಮುಂತ್ರಕ. ೫೬-೧೨). ೨. ವೀಣೆ (?): ಬಾಳ ಬಂಚರ ಮಿಡಿದು ನುಡಿಸು ಬಂಧುರ ಸುಂದರಾ! (ಕಡದಾ. I, ೯೬೦). ೩. (?): ಚಂಚತ್ಪಂಚಶರನ ಬಂಚರದಂತೆ ಮುಂಚಿ ಪಂಚಮದಿಂಚರಂ ಪಂಚಮೆನೆ ನೆಗಳ್ದು ಸಂಗಡಿಸಿದ ಕಂಗಣ್ಣಾಕ್ಕಿಗಳಿಂ (ರಾಜಶೇ. ೨-೬೬ ವ); "ಭಟ್ಟಂಗಿ ಧ್ವನಿ" (ರಾಜಶೇ. ಕೋಶ). [?]

**ಬಂಚರದ್ದಳಿ ?** (ನಾ): ಅಳಿನೀಜ್ಯಾಮೃದುಮಂಜಶಿಂಜಿತ ಸಮಂ ಸಣ್ಣಂಚರಂ ಬಂಚರದ್ದಳಿಯೊಳ್ಳಳ್ಕೊಡನುಣ್ಮೆ ನುಣ್ಚುರದೆ ಮಿಂಚಂ ಸೀಳ್ದ ಪೂಲ್ಗೊಣ್ಮೆ ಕಾಕಳಿಯೊಳ್ಕೂಡಿದ ಸೀಯನಪ್ಪ ರಸಗೇಯಂ ಚಿತ್ರಮಂ ತಾಗೆ (ಲೀಲಾವ. ೩-೩೧). [?]

**ಬಂಚಿಸು** (ಕ್ರಿ) ೧. ಮೋಸ ಮಾಡು ; ವಂಚಿಸು : ಬಂಚಿಸಿ ತನ್ನನುಜೆಯ ಧನವಮಂ ಚಪಲಂ ಕೊಂಡು (ಅರಿಶೃ. ೩-೦೮): ಧರ್ಮ ಬುದ್ಧಿಯಧರ್ಮಬುದ್ಧಿಯಾಗಿ ಧನವಮಂ ಬಂಚಿಸಿ (ಶಂಕಶಂ. ೦೭೭-೨೦). ೨. ತಪ್ಪಿಸು : ಚಾಣಾಕ್ಯನ ದೃಷ್ಟಿಯುಮಂ ಬಂಚಿಸಿ [ಪಾಠಾಂ. ಯಿಂದಂಜಿಸಿ] . . . ತುತ್ತನರಸಂ ವಿಷಮಿಶ್ರಿತವೆಂದಱಿಯದೆ ಕೊಟ್ಟಂ (ವಡ್ಡಾರಾ. ೦೧೦-೨); ಅತ್ತ ಮನುಜಮನೋಜನುಂ ಮದನಪರಿತಾಪಕ್ಕಾಱದುಮ್ಮಳಿಸಿ ಮಧುಮಥನನ ಕಣ್ಣಂ ಬಂಚಿಸಿ . . . ಎಯ್ದೆವಂದು (ಶಂಶಭಾ. ೩-೦೦ ವ); ನೆಣದ ಪಳ್ಳಂಗಳಂ ಪಾಯ್ದುಂ ನೆತ್ತರ ತೊಱೆಗಳಂ ಬಂಚಿ[ಪಾಠಾಂ. ಜಿ] ಸಿಯುಂ . . . ಪೋಗಿಪೋಗಿ (ಶಂಶಭಾ. ೦೩-೩೩ ವ).
[ಬಂಚನೆ + —ಇಸು₃]

**ಬಂಜ** (ನಾ). ನಿರ್ವೀರ್ಯನಾದವನು ; ಷಂಡ : ನಿನ್ನೊಡನಿರ್ದ ಬೊಜಂಗರ್ ನಿನ್ನಂತಿರೆ ಬಂಜರಲ್ಲರದಟರ್ಕಳವರ್ (ಧರ್ಮಾಮೃ. ೨-೦೨೩) ; ಈ ಸಲೆ ಬಂಜನೆಂಬ ಸೊಲ್ಲಾತ್ರಿಯೊಳೆಂತು ಪೋಪುದು (ಉದ್ಭಟ. ೬-೩೮).
[< ಸಂ. ವಂಧ್ಯ. / ಪ್ರಾ. ವಂಝ. ಮರಾ. ವಾಂಝ್]

**ಬಂಜಗ** (ನಾ). = ಬಂಜ : ಬಂಜಗಂ ನೀನರಸ ಮುಟ್ಟದಿರು . . . ದೂರದಲಿ ನಿಲ್ಲು (ಕರಕು. ೩-೨೮). [ಬಂಜ + — ಗ₃]

**ಬಂಜರ** 'ಬಂಜರು' ನೋ.

**ಬಂಜರು**, ಬಂಜರ (ನಾ). ೧. ಏನೂ ಬೆಳೆಯದ ನೆಲ ; ಬೀಳುನೆಲ ; ಪಾಳುಭೂಮಿ : "ಊಷವಾನ್, ಊಷರಃ—೨ ಚವುಳುವುಣ್ಣುಳ್ಳ ಬಂಜರುದಿಣ್ಣೆ ಪೆಸರುಗಳು" (ಸಿದ್ಧಾಂತಿ. ೯೩) ; ಅರಣ್ಯಪ್ರದೇಶವನ್ನೂ ಬಂಜರುಜಮೀನನ್ನೂ ತಾತಾ ಅವರಿಗೆ ವಶಪಡಿಸಬೇಕಾಗಿತ್ತು (ಭಾಗ್ಯಶಿ. ೭೮).

**ಬಂಜರ** : ೩. (ಅಲಂ) ವ್ಯರ್ಥವಾದುದು; ಬರಡು; ಅಪ್ರಯೋಜಕ ವಾದುದು : ಕೀರಂಗಳಾಡದಿಹ ಪಂಜರಂ ಬಂಜರಂ ಸಾರಸಗಳಿಲ್ಲದಿಹ ಕಾಸಾರ ನಿಸ್ಸಾರ (ವೆಂಕಾರಾ. ೦-೩-೭೦).

**ಬಂಜರಾಗು** = (ಅಲಂ) ಬರಿದಾಗು ; ಶೂನ್ಯವಾಗು : ಮನ ಬೀತು ಬಂಜರಾಯ್ತು (ಶಾವಜೀ. ೨-೨೬). **ಬಂಜರು ಬೀಳು** = ಏನೂ ಬೆಳೆಯದಿರು ; ಫಲವಿಲ್ಲದಾಗು : ಅಷ್ಟು ದೊಡ್ಡ ತೋಟ ನೋಡಿ ಕೊಳ್ಳುವವರಿಲ್ಲದೆ ಬಂಜರು ಬಿದ್ದಿದೆ (ರೂ).
[← ಹಿಂ. ಮರಾ. ಬಂಜರ್. / ತುಳು. ಬಂಜರ = ಏನೂ ಬೆಳೆಯದ; ತೆಲು. ಬಂಜರು]

**ಬಂಜರುಗಾಡು** (ನಾ). = ಬಂಜರು ೧ : ಕುಜಗ್ರಹದ ಬಹುಭಾಗ ನೀರಿನಿಂದ ಬತ್ತಿ ಹೋದ ಮರುಭೂಮಿ ; ಬಂಜರುಗಾಡು (ಆಕಾಶ. ೨೦).
[ಬಂಜರು + ಕಾಡು₂]

**ಬಂಜರುಭೂಮಿ** (ನಾ). = ಬಂಜರು ೧ : ದೀಕ್ಷಾಗ್ರಹಣ ಮಾಡದ ಆಗಮಾನುಷ್ಠಾನವು ಬಂಜರುಭೂಮಿಯಲ್ಲಿ ಬಿತ್ತಿದ ಬೆಳೆಯಂತೆ (ಶಾರದ. ೭೩). [ಬಂಜರು + ಭೂಮಿ]

**ಬಂಜಾರ** (ನಾ). ಒಂದು ಅಲೆಮಾರಿ ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ ; ಲಂಬಾಣಿ : (ಎಸಮೃ. XXV, ೦).
[← ಹಿಂ. ಬಂಜಾರಾ ; ಮರಾ. ಬಂಜಾರೀ, ವಣಜಾರಾ, ವಣಜಾರೀ]

**ಬಂಜಾವು** (ನಾ). ಕರು ಹಾಕದ ಹಸು ; ಗೊಡ್ಡಾಕಳು : ಸತ್ಯನಿಧಿ ಕಱೆಸಿದಂ ಬಂಜಾವನು (ಲಕಿಶಂ. ೩೨-೬೦). [ಬಂಜು + ಆವು]

**ಬಂಜು** (ನಾ). ಬಂಜೆತನ ; ಗೊಡ್ಡುತನ : 'ಬಂಜಾವು', 'ಬಂಜು ಗೆಡು' ಪರಾ. [ಬಂಜ + — ಉ₄]

**ಬಂಜುಗೆಡು** (ಕ್ರಿ.) ಬಂಜರಿಲ್ಲದಾಗು ; ಫಲವತ್ತಾಗು : ಮೊದಲ ಮೊಳಗಿಗೇ ಬಂಜುಗೆಟ್ಟಿತೋ ಭೂಮಿ ಅಣಬೆ ತಾಳಿ (ವೀಳಿಯದ. ೩-೦೦).
[ಬಂಜು + ಕೆಡು₁]

**ಬಂಜೆ** (ನಾ). ೧. ಗೊಡ್ಡು ; ಫಲವಿಲ್ಲದುದು : "ಬಂಜೆ—ವಂಧ್ಯಾ(ಧ್ಯ) = ಗೊಡ್ಡು ; ವಿಫಲ" (ಕರ್ಣಕೋ. ೨೮) ; ಬಂಜೆಯ (ಮ)ರನಂ ಅವಕೇಶಿ ಯೆಂಬುದು (ಹಲಾಯು. ೨೯-೨೪). ೨. ವ್ಯರ್ಥ; ಹಾಳು ; ನಿರರ್ಥಕ : ಮಹಾಧ್ವರಕಾಲಂ ಬರ್ಪನ್ನೆವರಂ ದಿವಸಂಗಳಂ ಬಂಜೆಯಿಲ್ಲದುತ್ತುಂಗ ದಾನಂಗಳಂ ಮಾಡುತ್ತುಮದ್ಭಟಕ್ಷತೀಂದ್ರಚಂದ್ರಮನಿರೆಯಿರೆ (ಉದ್ಭಟ. ೯-೩೦ ವ) ; ದಿನವ ಬಂಜೆಯ ಮಾಡದಿಹ ಪರವಿನಯನಹ ವರದೈವಗುರುಪೂಜನೆಯ . . . ಅನುಗೊಳಿಪನಾವನು ಮನುಜರೊಳ ಗುತ್ತಮನು (ಕುಮ್ಮಾ. ೩-೫೦). 'ಬಂಜೆವಡಿಸು' ಪರಾ. ೩. ಮಕ್ಕಳನ್ನು ಹಡೆಯದವಳು ; ಗೊಡ್ಡಿ : "ಬಂಜೆಯೆನೆ ವಂಧ್ಯಾಖ್ಯಂ" (ಕಲಿಕಂ. ೦೫೪) ; ಮಗನಂ ಪಡೆವಂತಿರೆ ಬಂಜೆಗೆ ಮರ್ದಂ ಮಾಟ್ಪೆಂ (ಸಮುಕ. ೦೨-೬೩) ; ಬಂಜೆ ಬೇನೆಯನಱಿಯಳು (ಮಹಾದೇ. ೩. ೦೪೦-೩೦೯) ; ಹೆತ್ತರಿಯದ ಬಂಜೆ ಸೂಲಗಿತ್ತಿಯೆ ಜಗದಿ? (ಗೀತಂ. ೦೦೦-೧). ೪. ಪ್ರಯೋಜನವನ್ನು ಹೊಂದದವಳು ; ಫಲವನ್ನು ಪಡೆಯ ದಿರುವವಳು : ಲಾವಣ್ಯದ ಬಂಜೆ ಭೋಗದ ವಿಯೋಗಿಯೆನಿಸಿರ್ದ ತರುಣಿಯುರ ವಿರಹಾತಿಶಯಮುಮಂ ಗಿರಿರಾಜಂ ಕರುಣಿಸಿ ನೋಡಿ (ಗಿರಿಕ. ೯-೦೦೮ ವ). ೫. ಒಂದು ಬಗೆಯ ಸಸ್ಯ : "ನಾಗಾರಿಃ—ಗರುಡ, ಬಂಜೆ, ಮಡುವಾಗಲು" (ಓಷಧಿ. ೯೫). (ಗು). ೬. ಫಲವಿಲ್ಲದ ; ಗೊಡ್ಡಾದ : ಮೊದಲಿಲ್ಲದ ಭೂಮಿರುಹಕ್ಕೆ ಶಾಖೆಬಂಜೆವನಿತೆ ಗಾತ್ರಜಂ ಮೃತಶರೀರಿಗೆ ಜೀವಕಳಾಪ್ರವೇಶಮೆಂಬಿವು ಪರತೇನು (ಶಶೆ. ೦೫೫-೦೭). ೭. ವ್ಯರ್ಥವಾದ ; ನಿರರ್ಥಕ ; ಹಾಳಾದ : ಈಶನಂ ನೆನೆಯದ ದಿನಂ ಬಂಜೆ ದಿನವಯ್ಯ (ಪಾಗೀರ. ದೇ. ೨೬೫-೦೦).

**ಬಂಜೆ ಮಾಡು** = ಹಾಳು ಮಾಡು ; ನಿಷ್ಫಲಗೊಳಿಸು : ವಿಜಯ ಲಕ್ಷ್ಮಿಪೊಲೀಶನ ತೋಳ ತಟ್ಟಿನೊಳ್ ಪೊಸಯಿಸು ನಲ್ಮೆಯುಂ ದಿವಸ ಲಕ್ಷ್ಮಿಯನೇಕೆಗೆ ಬಂಜೆ ಮಾಡುವೈ (ಶಂಶಾಭು. ೯-೦೬೭). **ಬಂಜೆಯಾಗು** = ೧. ಫಲವಿಲ್ಲದಾಗು ; ನಿಷ್ಫಲವಾಗು : ಅವಂಧ್ಯಃ, ಫಲೇಗ್ರಹಿಃ — ೨. ಬಂಜೆಯಾಗದೇ ಕ್ಲುಪ್ತವಾಗಿ ಫಲ ಬಿಡುವ ಗಿಡದ ಹೆಸರು, ಫಲವೃಕ್ಷ (ಸಿದ್ಧಾಂತಿ. ೦೦೦) ; ಭೂಮಿ ಯಾರೊಬ್ಬರ ಸ್ವಂತ ಆಸ್ತಿ ಆಗದಿರುವ ಪಕ್ಷಕ್ಕೆ ಅದೆಂದೂ ಬಂಜೆಯಾಗಿರುವುದಿಲ್ಲ (ಭುವರು. ೯೨೫). ೨. ಮಕ್ಕಳನ್ನು ಹೆರದಿರು ; ಗೊಡ್ಡಾಗು : ಕಪಿಳೆ ಎಂಬಳು ಮಕ್ಕಳಿಲ್ಲದೆ ಬಂಜೆ ಯಾಗಿರ್ಪುದುಂ (ಭುಜಾಸ್ತ್ರ. ೩-೬೦ ವ) ; ಬಮ್ಮಲದೇವಿ ಬಂಜೆಯಾಗಿಯೇ ಉಳಿದಿರಲಾರಳು (ಸಪಶಿ. viii, ಪ್ರಸ್ತಾವನೆ). ೩. ವ್ಯರ್ಥವಾಗು ; ನಿರರ್ಥಕಗೊಳ್ಳು : ಭಾವರತಿ ಬಲಿದು ಬಂದಂತೆ ಬಗೆದು ಕಣ್ದೆಱೆದು ಕಾಣದೆ ಬಯಲನಪ್ಪಿದ ತೋಳ್ ಬಂಜೆಯಾಗೆ (ಗಿರಿಕ. ೨-೦೦೫ ವ) ; ದಿನ ಬಂಜೆಯಾಗದೆ ಪರಮಪಾತ್ರರತರಾದ ಮುನಿಗಳಿಗನ್ನದಾನವನು ಮನ ಮುಟ್ಟಿ ಮಾಡುವ ಭಾಗ್ಯಮೆಂಬುದನಾವ ಮನುಜ ಪಡೆಯಬಹುದೆಂಬ (ಭರತ. ೩-೯೦); ಬಂಜೆಯಾಗದು ವಿಪ್ರರಂದೆನ್ನೊಳೆಂದ ನುಡಿ (ಕೃಬಿಖಾ. ೨೯-೩೭).
[< ಸಂ. ವಂಧ್ಯಾ. / ಪ್ರಾ. ವಂಝಾ. / ತುಳು. ಬಂಜೆ. / ಹಿಂ. ಬಂಝಾ ; ಮರಾ. ವಾಂಝ್]

**ಬಂಜೆಗೈ** (ಕ್ರಿ). ವ್ಯರ್ಥಗೊಳಿಸು ; ನಿರರ್ಥಕಗೊಳಿಸು : ತನ್ನ ಬಾಣಮಂ ಬಂಜೆಗೈದಪರೆ ಪೊಱಬಿಗರು (ಕೃಬಿಖಾ. ೨೦-೫೯).
[ಬಂಜೆ + ಗೈ (< ಕೆಯ್₁)]

**ಬಂಜೆತನ** (ನಾ). ಫಲವಾಗದಿರುವಿಕೆ ; ಗೊಡ್ಡುತನ : ಎನಗೀ ಜನ್ಮ ಮಿದಿಂತೆ ಬಂಜೆತನದಿಂದಂ ಪೋಕುಮೋ (ಸುಕುಮಾ. ೯-೦೦೯) ; ತನ್ನ ಬಂಜೆತನವಿಂದು ಪೋದುದು (ಕೃಬಿಖಾ. ೨೮-೫೯) ; ನಂಜುಂಡ ಜೀವದ ಬಂಜೆತನವಳಿಯಿತು (ಸಿದ್ಧಕು. ೩-೦೦). [ಬಂಜೆ + — ತನ]

**ಬಂಜೆವಡಿಸು** (ಕ್ರಿ). ವ್ಯರ್ಥಗೊಳಿಸು ; ನಿರರ್ಥಕಗೊಳಿಸು : ಸತ್ಪುರುಷ

ರದೇಕೆ ಬಂಜೆವಡಿವರ್ ಗಡ ದುರ್ಲಭಕಾಲಲಬ್ಧಿಯಿಂ (ಚಂದ್ರಪು. ೨-೫೭) ; ಮದಗಂಧಸಾರಸಪ್ತಚ್ಛದಂಗಳಿಂ ಪುದಿದು ಬೆಳೆದ ತಾಪಿಂಛದ ಪೆರ್ವೊದಱ ಕರಿಶಂಕೆಯಿಂ ಪಾಯ್ಪುದಱೊಳ್ ಪರಿವಿತತಿ ಬಂಜೆವಡಿಪುದು ಮುಳಿಸಂ (ಚಂದ್ರಪು. ೫-೫೦). [ಬಂಜೆ + ಪಡಿಸು]

**ಬಂಜೆವಾಗಲ್**, ಬಂಜೆವಾಗಲ, ಬಂಜೆಹಾಗಲ (ನಾ). ಒಂದಂ ಬಗೆಯ ಮೂಲಿಕೆ : ವಿವಿಧವ್ರಣದೊಳ್ ಸಲೆ ಬಂಜೆವಾಗಲಂ . . . ಪೂಸುಗಾ ವಿಷಂ ಪೋಱಮಡುಗುಂ (ಲೋಕೋಪ. ೧೦-೩೯). **ಬಂಜೆವಾಗಲ** : ಬಂಜೆ ವಾಗಲದ ಗೆಣಸ ನಾಲ್ಕು ವರಹತೂಕವ ನೀರಿನಿಂದಾ ಅರದು ನಸ್ಯಂ ಕುಡಿಯ ಕೊಡಲು ಸರ್ಪಯಿಲಿ ಬೆಕ್ಕು ಚೇಳು ನಾಯಿ ನರಿ ಮೊದಲಾದ ವಿಷಗಳು ಶಮನವಹುದು (ವಿಷವಿ. ೨೩-೬). **ಬಂಜೆಹಾಗಲ :** ಬಂಜೆಹಾಗಲದ ಗೆಡ್ಡೆ, ತುರುಚನ ಬೇರಿನ ತಿಗುಡು ಇವುಗಳನ್ನು ಸಮತೂಕದಲ್ಲಿ ಚೂರ್ಣಿಸಿ (ಸಕಪ್ರ. ೮೬). [ಬಂಜೆ$_1$ + ಪಾಗಲ್$_1$]

**ಬಂಜೆವಾಗಲ** 'ಬಂಜೆವಾಗಲ್' ನೋ.

**ಬಂಜೆವಾತು** (ನಾ). ವ್ಯರ್ಥವಾಗುವ ಮಾತು ; ಫಲ ಕೊಡದ ಮಾತು: ನುಡಿಯಬಹುದೇ ಬಂಜೆವಾತನು (ಕುವ್ಯಾವಿ. ೬-೨೭). [ಬಂಜೆ +ಮಾತು$_1$]

**ಬಂಜೆವೊತ್ತು** (ನಾ). ವ್ಯರ್ಥವಾದ ಕಾಲ ; ಪ್ರಯೋಜನಕ್ಕೆ ಬಾರದಿರುವ ಸಮಯ : ಸದಮಳಪಾತ್ರಕ್ಷೇತ್ರದೊಳಿದು ಬಿತ್ತುವ ಪದದ ಪೊತ್ತು ಗೃಹಮೇಧಿಗದೇವುದೊ ಮಧ್ಯಾಹ್ನದ ಪೊತ್ತಲ್ಲದ ಪೊತ್ತುಂ ಬಂಜೆವೊತ್ತು ತಾನದು ಪೊಱಗೇ (ಅರ್ಥನೇ. ೧-೭೯). [ಬಂಜೆ + ಪೊತ್ತು]

**ಬಂಜೆಹಾಗಲ** 'ಬಂಜೆವಾಗಲ್' ನೋ.

**ಬಂಟ$_1$**, ಬಟ, ಭಂಟ (ನಾ).೧. ವೀರ ; ಶೂರ ; ಪರಾಕ್ರಮಿ : "ಘನವೀರನಪ್ಪವಂ ತುಱಿಲಾಳು ಬಂಟಂ" (ಕಬ್ಬಿಕೈ. ೪೨); ಕನ್ನೆಯ ಬಂಟನ ವೃದ್ಧಸ್ತ್ರೀಯ ಮೂವರ ಚಿತ್ರಕಥೆಗಳಂ ಪಟದೊಳ್ ತೋಱಿ (ಪಡ್ಮಾರಾ. ೧೪-೧೮) ; ಮಹಾಸಾಮನ್ತಂ ಕನ್ನನ ಬಣ್ಟಂ ಕಟಕಪ್ರಾಕಾರಂ ನೆರೆವೊಡೆ ಬಣ್ಟಂ (ಸೌಇಇ. XI-i, ೪೭-೭ ; 993). ೨. ಯೋಧ ; ಸೈನಿಕ : ಕಾಳಗದಲ್ಲಿ ಪೌಜನಿಕ್ಕಿಡಡೆ ಮಾಱಿದಡೆ ಅರಸೆಂಬ ರಲ್ಲದೆ ಬಂಟರೆಂಬುದಿಲ್ಲ (ಮೋಳಿಮೂ. ೨-೫) ; ಬವರಕ್ಕಾಗದ ಬಂಟನೇ (ಸೋಮೇಶ. ೨೨). ೩. ದಾಸ ; ಸೇವಕ : ತೊತ್ತಿಂಗೇಕೆ ಲಕ್ಷಣ ಬಂಟಂಗೇಕೆ ಆಚಾರ (ಬಸವ. ೪೬೬) ; ಬಗೆದೆನಪರಾಧವನು ಕರುಣಾಳುಗಳ ಬಲ್ಲಹ ನೀನು ನಿನ್ನಂಘ್ರಿಗಳಿಗೀ ತಲೆಬಂಟ ನೀನಿದ ಕಾಯಬೇಕು (ಕುವ್ಯಾವಿ. ೧೦-೧೮) ; ನೆಚ್ಚಿನ ಬಂಟಂ ಹನುಮಂತಂ ಕೆಮ್ಮನಿರ್ದನೆ? (ರಾಮಾಶ್ವ. ೩೭-೮) ; ಸಮಯಕ್ಕಾದವನೇ ನಂಟ, ಕೆಲಸಕ್ಕೆ ಒದಗಿದವನೇ ಬಂಟ (ಗಾದೆ). ೪. ದಕ್ಷಿಣಕನ್ನಡದ ಒಕ್ಕಲಿಗರ ಒಂದು ಪಂಗಡ : ವ್ಯವಸಾಯಗಾರರು . . . ಬಂಟ, ದಖ್ನಿ (ತುಳುನಾ. ೧೬೦). **ಬಟ :** ೧. "ಬಟ (ಬಂಟ, ಬಂಟು)_ಭಟ" (ಶದ್ಯಕೋ. ೨೮); ಸಾಂತರಸ . . . ಬೆಸಗೆಯ್ವಲ್ಲಿ ಮರಲಿ ಬಟರಿಂಗೆ ಕೊಟ್ಟಾರ್ (ಎಕ. VI, ಕೊಪ್ಪ. ೩೯-೪ ; ಸು. 700?) ; ಅಚುತರಾಯಮಹಾರಾಯರೂ . . . ವೀರಬಟರಿಗೆ ದರ್ಮವಾಗಿ ಬಿಟ್ಟ (ಎಕ. X (8), ಕೋಲಾರ. ೧೦೪-೫ ; 1535). ೨. ಮತ್ತಿ ಘಡದ ಚಿಕ್ಕನಾಯಕಹಳ್ಳಿಯ ಸುತ್ತಣ ಬಟರೊಂದೆಸೆಯ ಒತ್ತರಿಸಿ . . . ಏಱಿದರು (ಕಂಪವಿ. ೧೪-೩೭). ೩. ನಿತಂಬಿನಿಯರಸಿಯ ಬಾಸೆಗಳಂ ಯಮರಾಜನ ಬ[ಪಾಠಾಂ. ಭ]ಟರೆನ್ನದೆ ಶೋಭಾಕರಮೆಂದೊಡಂ (ಧರ್ಮಾಮೃ. ೭-೦೫೫). **ಭಂಟ :** ೧. ನಾವು ವೃದ್ಧರು ಬಿರುದುಗಿರುದಿನ ಲಾವಣಿಗೆ ನಮಗೇಕೆ ಹೇಳೈ ನೀವಲೈ ಜವ್ವನದ ಭಂಟರು ರಣದ ಧುರ ಧರಕೆ (ಕುವ್ಯಾಭೀ. ೯-೩೦) ; ಪಂಠಿಸಿದರಿಗಳ ತಲೆಯನರಿದು ಕಾಳಕಂಠಗೆ ವನಮಾಲೆಯಿತ್ತು ಭಂಟರಾಗಿಹೆವು (ಕಂಪವಿ. ೮-೪೨) ; ಒಂಟಿ ನೀನೊಳ ಜಗಕೆ ಭಂಟ ಹೊರಜಗಕೆ (ಮಂಕುತ. ೭೩). ೩. ಭಂಟನಹೆ ಬಕುತರಿಗೆ (ಕುವ್ಯಾಉ. ೫-೮) ; ಭಂಟನಲ್ಲವೆ ನಾನು ದೀನರ ನೆಂಟನಲ್ಲವೆ ನೀನು (ಹಂಸಾ. ೭೦). ೫. ಕಾವಲುಗಾರ ; ಕಾಪಿನ ಆಳು : ಸುಡುಗಾಡಿಕ್ಕಗೆ ಭಂಟನಾಗನೆ ಹರಿಶ್ಚಂದ್ರಂ (ಸೋಮೇಶ. ೩೨).

**ಬಂಟರ ಬಾವ, ಬಂಟರ ಭಾವ** = ಪರಾಕ್ರಮಿಗಳನ್ನು ಸೋಲಿಸಿ, ಅವರ ಕಡೆಯಂ ಹೆಣ್ಣನ್ನು ಮದುವೆಯಾಗುವವನು ; ಒಂದು ಬಿರುದು : ಪರಬಲಭಯಂಕರನುಂ ಬಣ್ಟರ ಬಾವನುಂ (ಎಕ. VI, ಕಡೂರು. ೧೫೭-೫೨ ; 1191) ; ಕೊತ್ತಗಾವುಣ್ಡನ್ ತತ್ಪುತ್ರ ಕೋರಾತ್ಯ ಗಾವುಣ್ಡಂ ದುಷ್ಟಸ್ವಮಾಹಕ ಮಱೆವೊಕ್ಕೆ ಕಾಷನ್ತೆ ಬಣ್ಟರ ಭಾವಂ (ಎಕ. III, ನಂಜನ. ೧೨೨-೦೪ ; 266 ? ಕೃಶಾ) ; ಯಾಚಕಜನನಿಧಿನಿಧಾನ[ಂ] ಬಂಟರ ಭಾವಂ ಪರನಾರೀದೂರಂ ಸರಣಾಗತಪ್ರಿಯಂ (ಕಇಆ. ೪೦-೫೯-೦೦ ; 1128) ; ಗೋವನಿಕಲಂಕಮಲ್ಲ ಬಂಟರ ಭಾವ ಪರನಾರೀಸಹೋದರ (ಇಆ. V, ೪೦-೨೭ ; 1586). [< ಸಂ. ಭಟ]

**ಬಂಟ$_2$**, ಬಟ್ಟ$_4$, ಭಟ$_1$ (ನಾ). ೧. ಹೊಗಳುವವನು ; ಸ್ತುತಿಪಾಠಕ : 'ಬಂಟಸಾಮಿ' ಪರಾ. **ಬಟ್ಟ$_4$ :** ೧. 'ಹೊಗಳುಬಟ್ಟ' ಪರಾ. ೨. ವಿದ್ವಾಂಸ ; ಪಂಡಿತ : (ಕ). ೩. ಪೂಜಾರಿ ; ಪುರೋಹಿತ : ಬಟ್ಟರಿಗೆ ಮಂತ್ರಕ್ಕಿಂತ ಉಗುಳೇ ಜಾಸ್ತಿ (ಗಾದೆ). ೪. ಅಡುಗೆಯವನು : ಈವತ್ತು ಬಟ್ಟರು ಬಂದಿಲ್ಲ (ರೂಢಿ). **ಭಟ$_1$ :** ೧: "ಭಟಃ_ಉಗ್ಗಡಿಸುವಂ" (ಕಾಕಕ. ೨೮೩). 'ಭಟಾಂಗ' ಪರಾ. [< ಸಂ. ಭಟ್ಟ]

**ಬಂಟ$_3$** (ನಾ). ಶ್ರೇಷ್ಠ ಜಾತಿಯ ಕುದುರೆ : ದಾಂಟಲ್ಬಾರದ ಕುಱಿಯಂ ಗೆಂಟಱೊಳಂ ಕಂಡು ಪಿರಿದು ಪರಿತಂದು ಮುದಂ ನಾಂಟಿರೆ ಲಂಘಿಸಿ ಪೋದವು ಬಂಟಂಗಳೆನಿಪ್ಪ ಕುದುರೆಗಳ್ ಕೆಲವದಱೊಳ್ (ಚಾರಪು. ೦೦-೪). [ ?./ಮರಾ. ಬಟ್ ]

**ಬಂಟಂಗ** (ನಾ). ಶೌರ್ಯದ ರೀತಿ ; ಪರಾಕ್ರಮದ ಬಗೆ : ಕಂಠೀರವ ರಾಜನಿದಿರಲಿ ಕರಿಗಳ ಬಂಟಂಗ ಮೆಱೆವುದೆ ಸ್ವಾಮಿ (ಕಂನವಿ. ೧೨-೭೨). [ಬಂಟು + ಅಂಗ$_1$]

**ಬಂಟತನ** (ನಾ). ೧. ಪರಾಕ್ರಮ ; ಶೌರ್ಯ : ರಾವಣಗೆಂಟುಮಡಿ ಯಿಂದಾರ್ರಿ ರಣದಲಿ ಬಂಟತನದ ಪರಾಕ್ರಮಂಗಳ ಕಾಣದೇ ಲೋಕ (ಕೌಶಿರಾ. ೩೬-೨೦) ; ಅಕ್ಕಮಹಾದೇವಿಯ ವಚನವು ಅವಳ ಧೈರ್ಯ ಸಾಹಸಗಳ ನಿದರ್ಶನವಾಗಿ ನಮ್ಮಲ್ಲಿ ಬಾಳುವೆಯ ಬಂಟತನವನ್ನು ಪ್ರೇರಿಸುತ್ತದೆ (ಕವನಿ. ೫). [ಬಂಟ$_1$ + — ತನ]

**ಬಂಟವಣ** (ನಾ). ಪರಾಕ್ರಮಿಗಳಿಂ ಸಲ್ಲಿಸಂವ ಹಣ: ಈನ್ತು ನೆಗರ್ತ್ತವೆತ್ತ ಬಂಟಸಾಸಿರ್ವ್ವರುಂ ದೇವಗ್ಗೆ ಬಂಟವಣಮನಾಚಂದ್ರಾರ್ಕ್ಕತಾರಂಬರಂ ಬಿಟ್ಟರ್ (ಸೌಇಇ. XI—ii, ೦೪೫-೬; 1098). [ಬಂಟ$_1$ + ಪಣ$_3$]

**ಬಂಟಸಾಮಿ** (ನಾ). ಹೊಗಳುಭಟ್ಟರಲ್ಲಿ ಮುಖ್ಯನಾದವನು : ಅಚ್ಚಿಗದಿಂ ಕಟ್ಟಿದ ಕೆಟ್ಟ ಕನ್ನಡದ ಕಾಟ್ಗಬ್ಬಗಳಂ ಬಂಟ[ಪಾಠಾಂ. ಬಟ್ಟ]ಸಾಮಿಗಳಂ ಕೇಳಿಸಿ ತಾವೆ ತಮ್ಮ ಮನದೊಳ್ಸರ್ವಜ್ಞರೆಂದಿರ್ಪ ಕಬ್ಬಿಗರುಂ ಕಬ್ಬಿಗರೆಂಬ ಲೆಕ್ಕದೊಳಗೇಂ (ಅರ್ಥನೇ. ೧-೩೫). ☞ ಇದು ಇತರರನ್ನು ದೂಷಣೆ ಮಾಡಿ ಒಡೆಯನನ್ನು ಹೊಗಳುವವನು ಎಂಬರ್ಥದಲ್ಲಿ ಉಪಯೋಗವಾಗಿದೆ. [ಬಂಟ$_2$ + ಸಾಮಿ$_1$]

**ಬಂಟಿಕೆ** (ನಾ). ವಾರ್ತೆ; ದೌತ್ಯ (?) : ಅಂಬರೀಷಾವನಿಪಸುತೆಯ ಬಂಟಿಕೆಯ ಹರಿಗಂಬರೀಷಂ ಮುಳಿಯನೆ (ಪದ್ಮರಾ. ೦೦-೬೫). [ಬಂಟ$_1$ + — ಇಕೆ]

**ಬಂಟು** (ನಾ). ೧. ಪರಾಕ್ರಮ; ಶೌರ್ಯ : ಸಾಸಿರ್ವ್ವರುಂ (ವ)ಅತನ ಬಣ್ಟಂಗೆ ಮೆಚ್ಚಿ (ಎಕ. VIII, ಸೊರಬ. ೮೬-೭; 1150); ಉಂಟಾದ ಬಲೆ ಕಾಲು ಕಣ್ಣ ನಾಯಕ ಕುನ್ನಿ ಬಂಟುಳ್ಳ ನಾಯಿ ಹುಲಿಗಳ ಅಂಟುಸಾಳುವ

ಸೇಣಿ ತಡಿಕೆ ಗಾಣಗಳಿಂದ ಉಂಟಾಗಿ ನಡೆಸೆಂದ ರಾಯ (ಹಂಶಾಂ. ೧-೬೦); ನಂಟುಂ ಬಂಟುಂ ನೆರವಿರ್ಪಿನಂ ಗೆಲ್ವುದುಮೊಲ್ವುದುಂ ನಿಮಗಕ್ಕುಂ (ರಾಮಾಶ್ವ. ೯೬-೦೭). 'ಬಂಟುತನ' ಪರಾ. ೨. ಸೇವೆ; ಕೈಂಕರ್ಯ : 'ಬಂಟುಗೆಯ್' ಪರಾ. ೩. ಪರಿವಾರ; ರಕ್ಷಕದಳ: ಕಲಿ ಮಲಪ್ರಧ್ವಂಸಕಂ ಕೇಶಿರಾಜನ ಬಂಟಂ ನಯ[ಸೇ]ನಸೂರಿಪದಪದ್ಮಾರಾಧನಾರ್ಸ್ತಚಿತ್ತನ್ (ಎಇ. XVI, ೩೩-೦೬; 1053). ೪. ಸೈನ್ಯ: ದಂಡು : ತುರಗಸು ಮೊಂದುಸತ್ತಿಗೆಯುಮೋದಿರೆ ಕಾಪಿನ ಬಂಟು ಸುತ್ತಲುಂ ಬರೆ (ಆದಿಪು.೧೧-೯೬ ಅಧಿಕಪದ್ಯ); ಭೂರಿ ಗೋವೃಂದವನು ಗೋಪಕುಮಾರರನು ಯಾದವರ ಬಂಟಿನ ಮೇರೆಯನು ಮಿಗೆ ಕಾದನಲ್ಲದೆ ತುಱುವ ಕಾದವನೇ (ಸಾಳ್ವಭಾ. ೨೦-೬೮). ೫. ಸೇವಕ ; ಭೃತ್ಯ ; ಊಳಿಗದವನು : ನಮ್ಮ ಬಂಟಂಗೆ [ಪಾಠಾಂ. ಎಮ್ಮ ಭಂಟಂಗೆ]ನಾಮೆ ಬೆಸಕೆಯ್ವನಿತಾಯ್ತು (ಶೀವಸಂ.೨೦೦-೦೭); ಭೂತಗಣ ಬಂಟು ನೃತ್ಯ (ಸಂಕಿವು. ೩೦-೨೪). [ಬಂಟು$_1$ + — ಉ$_4$. /ತುಳು. ಬಂಟು = ವೀರೋಚಿತವಾದ ; ತೆಲು. ಬಂಟು]

**ಬಂಟುಗೆಡು** (ಕ್ರಿ). ಶೌರ್ಯ ಕುಂದು ; ಕೆಚ್ಚಿಲ್ಲದಾಗು : ಕೂರದರ್ ನೆಲಸನೊಟ್ಟಜೆಯಿಂ ಕೊಳೆ ಕೊಟ್ಟು ಬಂಟು[ಪಾಠಾಂ. ಮುಂಡು, ಮುಟ್ಟುಗೆ]ಗೆಟ್ಟನ್ನುಮರಣ್ಯದೊಳ್ ನಮೆದಪಂ ಯಮನಂದನಂ (ಪಂಪಭಾ. ೬-೫೩) ; ಕಂಠಮಂ ಕತ್ತರಿಸಲಾ ಶಿರಂ ತನ್ನೆಡೆಗೆ ಬಂಟುಗಡದ್ಯೆದಿದೊಡೆ (ಜೈಮಿಭಾ. ೦೩-೬೨). [ಬಂಟು + ಕೆಡು$_1$]

**ಬಂಟುಗೆಯ್** (ಕ್ರಿ). ಸೇವೆ ಮಾಡು ; ಊಳಿಗ ಮಾಡು : ದುಷ್ಕುಲಂಗಳೊಳ್ ಪುಟ್ಟಿ ಪೆಱರ್ಗೆ ಕೀೞುವೆಸಂಗೆಯ್ದುಂ ಬಂಟುಗೆಯ್ದುಂ ನಮೆವುತ್ತಂ. . .ದುರ್ಗತಿಗೆ ಸಲುವರ್ (ಪಪಾರ. ೩೭೩). [ಬಂಟು+ಕೆಯ್$_1$]

**ಬಂಟುತನ** (ನಾ). ಪರಾಕ್ರಮ ; ಕೆಚ್ಚು ; ಶೌರ್ಯ : ನೆರೆದು ಪರದಾರವಮಂ ಕಲಿವುದೆ ಚತುರತ್ವಂ ಸೊಕ್ಕುವುದೆ ಬಂಟುತನಂ . . . ಎಂಬರ್ ಧೂರ್ತರ್ (ಕಾದಂಪೂ. ೫೬೭); ಗಜಿ ತೋಱಿ ಗಂಡರೆಂಬವರ ಕಾಣೆ ನಿಜಿ ಸೋಂಕಲು ಮುನಿಯಿಲ್ಲ ನೋಡಯ್ಯಾ ನಂಟುತನವೇನವನ ಬಂಟು[ಪಾಠಾಂ. ಟ]ತನವೇನವನ ಹುಲ್ಲ ಕಿಚ್ಚು ಹೊಲೆಯನ ಮೇಳಾಪ (ಬಸವ. ೪. ೦೦೨); ಜಗಂ ನೋಡೆ ಮಾಡಿದನತ್ಯದ್ಭುತಮಪ್ಪ ಬಂಟುತನವಮಂ ಗೋವಿನ್ದದಣ್ಣಾಧಿಪಂ (ಸೌಇಇ. XX,೯೭-೪೨; ?); ಬಂಟುತನವು ಎದೆಗಾರಿಕೆ ಧೈರ್ಯ ವೀರತ್ವವನ್ನು ತಿಳಿಯಪಡಿಸುತ್ತದೆ (ತುಳುಪಾ. ೬೧). [ಬಂಟು + — ತನ./ತೆಲು. ಬಂಟುತನ]

**ಬಂಟೆದೆ** (ನಾ). ಪರಾಕ್ರಮವುಳ್ಳ ಮನಸ್ಸು : ಇಂದು ಬೆಳಗಿನಿಂದ 'ಹೊಯ್ಸಳ ! ಹೊಯ್ ಸಳ !' ಎಂಬ ಕಡೆಯಿಲ್ಲದ ಕೂಗು ನಿನ್ನ ಬಂಟೆದೆಯ ಮುಟ್ಟಲೆಂದು ನನ್ನ ಕಿವಿಕೊಳವಿಯಲ್ಲಿ ಹೊಕ್ಕಾಡುತಿದೆ (ವಿಜಪಾ. ೪). [ಬಂಟು + ಎದೆ (<ಎರ್ದೆ) ]

**ಬಂಟೇಳು** 'ಬಂಡೇಳು' ನೋ.

**ಬಂಡ$_1$** (ನಾ). ೧. ಪದಾರ್ಥ; ಸಾಮಾನು; ಸರಕು : ಪಲಂಬರ್ ಶಾಕಟಿಕಪರದರುಂಬೆರಸು ಬಂಡಿಗಳೊಳ್ ಪೆಟ್ಟಿಯುಂ ಧಾನ್ಯಮಂ ತೀವಿಕೊಂಡು ಪೊೞಲ್ಗೆ ಮಾಱಲೆಂದು ಪೋಪನ್ನೆಗಂ . . . ಬಂಡಮುಮೆಟ್ಟುಗಳುಂ ಮೊದಲಾಗೆಲ್ಲಮಂ ಕಳ್ಳರ್ ಕೊಂಡು ಪೋದರ್ (ವಡ್ಡಾರಾ. ೬೬-೦೪); ಬಂಡವ ತುಂಬಿದ ಹಸುಬೆ ಕೊಂಡವನ ನುಂಗಿತ್ತು (ವೋಲೀವಚ. ೨೪೩-೬೯೪); ಉರುತರ ಬಂಡವ ತುಂಬಿ ಹಡಗೇಱಿ ಹರದುಗ್ಯೆಯ್ಯಲು (ನೇಮಿಸಂ. ೪-೦೩). ೨. ಮಾನವಿಲ್ಲದವನು ; ನಿರ್ಲಜ್ಜ : "ಬೂತುಗಳೆನೆ ಬಂಡರ್ [ಪಾಠಾಂ. ಬಂಡುಂ]" (ಶಬ್ದಮ. ೨೪) ; ಕಬ್ಬಿಗರ ಜೋಡೆಯ ಬಂಡರ. . . ಬೀಣೆಗಾಱರಾಗರಮನೆ . . . ಎಸೆದಿರ್ಪುವು ಸೂಳೆಗೇರಿಗಳ್ (ಕಬ್ಬಿಕಾ. ೬೩); ಲೋಕದೊಳ್ಬೀಡುವಂ ಬಂ[ಪಾಠಾಂ. ಭಂ]ಡಂ (ಜೈಮಿಭಾ. ೨೬-೬೪) ; ಬಂಡನ ಸ್ನೇಹ ಮಾಡಿ ಇದ್ದ ಬಂಡ ಕಳಕೊಂಡ (ಗಾದೆ). ೩. ವಿದೂಷಕ ಹಾಸ್ಯಗಾರ : ಭಂಡಂ — ಬಂಡಂ (ಶಮಮ. ೬. ೨೩೩ ಪ್ರಯೋ.). ೪. ಹೇರಳ; ಹೆಚ್ಚಳ ; ಆಧಿಕ್ಯ : ದವಸ ಬಂಡವಾಗಿದೆ (ಪಟ್ಟಿಶ. ೨೪೦-೨೦). (ಗು). ೫. ನಾಚಿಕೆಯಿಲ್ಲದ ; ಲಜ್ಜೆಗೇಡಿಯಾದ : ಬಂಡವೈಷ್ಣವನೆ ಕೇಳದಱಿಂದೆ ಹರಿಯುಡಿಯ ಖಂಡಿಸಿದುದೆಂದು ಪದ್ಮಪುರಾಣವೊರೆದುದು (ಸಿದ್ಧೇಶ್ವ. ೬-೫೩).

**ಬಂಡಬಂಡವಾಗಿ** = ಹೆಚ್ಚುಹೆಚ್ಚಾಗಿ; ಅತ್ಯಧಿಕವಾಗಿ : ತೊಲೆಗಳವರೆಗೆ ಬಂಡಬಂಡವಾಗಿ ನೇಲುಬಿದ್ದ ಇಲ್ಲಣ, ಜಾಡಗಳನ್ನು ಸವರಿದರು (ರಕ್ತಧ್ವ. ೨೬೦). [<ಸಂ. ಭಂಡ. / ತಮಿ. ವಣ್ಟ, ವಣ್ಟು; ತುಳು. ಬಂಡ್, ಬಂಡು, ಭಂಡ್, ಭಂಡ, ಭಂಡೆ ; ಕೊಡ. ಬಂಡೇ; ತೆಲು. ಬಂಡ, ಬಂಡು ; ಕೋತ. ಬಂಡ್ಸಾ. / ಮರಾ. ಭಂಡ್, ಭಾಂಡ್]

**ಬಂಡ$_2$** (ಗು). ೧. ಕುಂದುಗಳುಳ್ಳ ; ನ್ಯೂನ. ೨. ಸತ್ತ್ವಗುಂದಿದ ; ನಿರ್ವೀರ್ಯ. (ನಾ). ೩. ಬಾಲವಿಲ್ಲದ ಎತ್ತು : "ಬಂಡ-ಬಾಲ ಮೋಟಾದ ಎತ್ತು" (ಪಾಡಿರಾ. ೬); ಮಾಗಧೀಭಾಷೆಯಲ್ಲಿ ಬಾಲ ಕತ್ತರಿಸಿದ ಗೂಳಿಯನ್ನು 'ಬಂಡ' ಎಂದು ಕರೆಯುತ್ತಾರೆ (ಪಾಡಿಆ. ೦೦). [ಸಂ.]

**ಬಂಡ$_3$**, **ಬಂಡೆ$_3$** (ನಾ). ಕುರಿಯ ತುಪ್ಪಟ ; ಉಣ್ಣೆ : ಬಣ್ಣವೇಱಂಗೆ ಅಯ್ದು ವಿಸ (ಇಆ. VIII, ೨೮೬-೩೪; 782); ಕುರುಬರ ಸಂಗವ ಮಾಡಿ ಕುರಿಗಳ ಮೆಯ್ಯೋದ ಕಲಿತು ಬಂಡ ನೂಲೋದ ಕಲಿತು (ಪಾಶವ. ೦೩೦). 'ಅಡಿಬಂಡ' ಪರಾ. **ಬಂಡೆ$_3$** : "ಊರ್ಣಾ—ಕುರೀಬಂಡೆ ಮುಂತಾದ ಕೂದಲು" (ಸಿದ್ಧಾಂತಿ. ೩೮೭). [?]

**ಬಂಡಣ**, **ಭಂಡಣ** (ನಾ). ಕಾಳಗ; ಯುದ್ಧ : "ಬಂಡಣ = ಕಾಳೆಗಂ" (ಕಮರ. ಪಂ. ೨); ಬಂಡಣದೊಳೆನ್ನನೋಡಿಸಿ ಕೊಂಡುಯ್ದುಂ ನಿನ್ನನಾ ಸರಿತ್ಸುತಂ (ಪಂಪಭಾ. ೦-೬೬) ; ಚಂಡಕೋದಂಡನ ದಂಡು ಬಂಡಣಕ್ಕಿಸಲಂಡುಗೊಂಡು ನಿಂತು (ಹರಿಶ್ಚಂ. ೩-೩೬ ವ); ಪಲಬರರಸರಂ ಬಂಡಣದೊಳ್ ಗೆಲ್ದು (ಪುರಾಕ. ೨-೩೬ ವ). **ಭಂಡಣ** : "ಯುದ್ಧಾಹ್ವಯಂ ಭಂಡಣಂ" (ಕರ್ಣಾಟ. ೨); ಭಂಡಣದೊಳಟ್ಟಿದು ಪೆಂಡಿರ್ ಭಂಡಾರಂ ಪೋದೊಡದು ವಿಧಾತ್ರವಶಂ (ಅನಂತ. ೦೦-೬೦); ಭಂಡಣದೊಳ್ ಜಯಾಪಜಯಮೆಂಬುದು ಸಿದ್ಧಂ (ದಶಕು. ೨-೩೪) ; ಚಂಡಪರಾಕ್ರಮದಷ್ಟಶಶಾಂಕರ್ ಭಂಡಣಮಂ ಪೊಕ್ಕಾ ನೃಪಪಂಚಕದೊಳಗೆ ಪಳಂಚಿದರು (ಜಯುಕಾ. ೬-೫೩). [ <ಸಂ. ಭಂಡನ ]

**ಬಂಡತನ** (ನಾ). ನಾಚಿಕೆಯಿಲ್ಲದಿರುವಿಕೆ; ಅವಮಾನದಿಂದ ಕೂಡಿರುವಿಕೆ; ನಿರ್ಲಜ್ಜೆ : ಆ ಯಮಂ ಬಂಡತನವೇ ಶ್ವೇತ ನಡೆ ನರಕಕುಂಡಕ್ಕೆ ನೀನೆಂದು ಗರ್ಜಿಸಲ್ಕೆ (ಬೆರಿಪು. ೫೦-೨೭); ಪೈಶಾಚರಂತೆ ಹೇಸದೆ ರಕ್ತಪಾನವಮಂ ಮಾಡಿಯೊಡಲ ಪೋಷಿಸಿದೆ ಬಂ[ಪಾಠಾಂ. ಭಂ]ಡತನವಿದು (ಜೈಮಿಭಾ. ೨-೬೦). [ಬಂಡ$_1$ + — ತನ]

**ಬಂಡಬಾಳು** (ನಾ). ಮಾನವಿಲ್ಲದ ಬಾಳು; ಹೀನಬದುಕು : ಬಂಡ ಬಾಳನ್ನು ಬಾಳಿದ ಬಾಣಭಟ್ಟ ಏಕಿಂದು ಪರಾಧೀನನಾಗಿದ್ದಾನೆ ? (ಪಾಡಿಆ. ೦೦೪). [ ಬಂಡ$_1$ + ಬಾಳು$_2$ (<ಬಾಟ್ಕೆ) ]

**ಬಂಡಮಾತು** (ನಾ). ನಾಚಿಕೆಯಿಲ್ಲದ ಮಾತು : ಇನ್ನೊಂದು ಸಲ ಇಂಥ ಬಂಡಮಾತು ಆಡಬೇಡ (ರೂಢಿ). [ಬಂಡ$_1$ + ಮಾತು$_1$]

**ಬಂಡಲು**, **ಬಂಡಲ್ಲು** (ನಾ). ೧. ಗಂಟು ; ಮೂಟೆ : ತನ್ನ ಮೇಲೆ ಹೇರಿದ ಬಂಡಲನ್ನು ಹೊತ್ತುಕೊಂಡು ತಿರುಗುವ ಅಭ್ಯಾಸ ಮಾಡಿಕೊಳ್ಳಬೇಕಾಯಿತು (ಬಂಗಾಹ. ೩೩). ೨. ಕಟ್ಟು; ಪೊಟ್ಟಣ : ಚಹಾ ತುಂಬಿದ ಕಿಟ್ಲಿ, ಬಿಸ್ಕೀಟ ಬಂಡಲುಗಳು ಬಂದವು (ಜೀದಾವ. ೦೭). **ಬಂಡಲ್ಲು** : ೧. ನನಗ ಇರಲೀ ಅಂತ ಒಂದು ದೊಡ್ಡ ಬಂಡಲ್ಲ ತಂದು ಕೊಟ್ಟಾರ ನೋಡ! (ಬಂದಿರು. ೪೪). [←ಇಂ. Bundle]

**ಬಂಡಲ್ಲು** 'ಬಂಡಲು' ನೋ.

**ಬಂಡವಲ** 'ಬಂಡವಾಳ' ನೋ.
**ಬಂಡವಲು** 'ಬಂಡವಾಳ' ನೋ.
**ಬಂಡವಳ** 'ಬಂಡವಾಳ' ನೋ.
**ಬಂಡವಳಗಾರ** 'ಬಂಡವಾಳಗಾರ' ನೋ.
**ಬಂಡವಾಲಶಾಹಿ** 'ಬಂಡವಾಳಶಾಹಿ' ನೋ.

**ಬಂಡವಾಳ,** ಬಂಡವಲ, ಬಂಡವಲು, ಬಂಡವಳ, ಬಂಡವಾಳು, ಬಾಂಡವಲು, ಭಂಡವಲ, ಭಂಡವಲು, ಭಂಡವಾಳ, ಭಂಡವಾಳು, ಭಾಂಡವಲ, ಭಾಂಡವಲು, ಭಾಂಡವಳು (ನಾ). ೧. (ವ್ಯಾಪಾರ ಅಥವಾ ಉದ್ಯೋಗದಲ್ಲಿ ತೊಡಗಿಸುವ) ಮೂಲಧನ; ಅಸಲು: ಇಲ್ಲಿನ ಕೈಗಾರಿಕೆಗಳಿಗೇ ಬಂಡವಾಳವಿಲ್ಲದಿರುವಾಗ. . . ಇಲ್ಲಿ ಏಳಿಗೆ ಹೇಗುಂಟಾಗಬೇಕು ? (ಹಡಕ್ರ. ೧೩೦); ಅರ್ಥಶಾಸ್ತ್ರದಲ್ಲಿ ಬಂಡವಾಳವನ್ನು ಒಂದು ಉತ್ಪಾದನಕಾರಕವಾಗಿ ಪರಿಗಣಿಸುವುದು ರೂಢಿಗೆ ಬಂದಿದೆ (ಕವಿಕೋ. XI, ೭೯೩). ೨. ಬೆಲೆ ; ಮೌಲ್ಯ : ಚಮತ್ಕಾರಗಳ ಚದುರತನಮಂ. . . ಶೃಂಗಾರದ ಬಂಡವಾಳಮಂ ತಿಳಿದವಳು (ಸೌಗಂಧಿ. ೨೨೦-೩). **ಬಂಡವಲ:** ೧. ವ್ಯವಹರಿಸುವಂಗೆ ಬಂಡವಲಮಿ[ರಾಕಾಂ. ಬಂಡಮೊದವಿ]ಲ್ಲದೆಂತು ಪೋದಪ್ಪೆ (ಭಿಡಾಸ್ರ. ೬-೭ ವ). ೩. (ಅಲಂ) ಸತ್ತ್ವ; ತಿರುಳು; ಸಾರ: ತಮ್ಮಲ್ಲಿದ್ದ ಬುದ್ಧಿಯ ಬಂಡವಲವನ್ನು ವ್ಯವಹಾರಕ್ಕೆ ಬಳಸಿ, ವ್ಯವಹಾರನಿಪುಣರಾಗಿದ್ದರು (ಕನಸಿ. ೧೦೯). **ಬಂಡವಲು :** ೧. ಸಂಪತ್ತಿಯನ್ನು ಹುಟ್ಟಿಸಲಿಕ್ಕೆ ಬಂಡವಲಾದರೂ ಬೇಕು (ಮುಂಬಯಿ. ೩-೨೩೦). ೩. ಆತನು ಅದೊಂದು ಕೊಡಲಿಯಿಂದ ಇಡಿಯ ಆಯುಷ್ಯದಲ್ಲಿ ಹೊಟ್ಟೆಯ ಪ್ರಶ್ನೆಯನ್ನು ಬಿಡಿಸಬಲ್ಲನು. ಅದುವೆ ಅವನ ಬಂಡವಲು (ಕಕ್ಕಡಿ. ೩೯); ಸುಖ ಸಿಗಲೊಲ್ಲದೆಂದು. . . ಮಡದಿ ಮಕ್ಕಳಿಂದ ಕಾಣೆಯಾಗುವದಕ್ಕಾಗಲಿ ಬಹಳ ಬಂಡವಲು ಬೇಕಿಲ್ಲ (ಬಾಳಬ. ೩೭). **ಬಂಡವಳ:** ೧. 'ಬಂಡವಳಗಾರ' ಪರಾ. **ಬಂಡವಾಳು:** ೧. ನಿಮ್ಮ ದಯದ ಬಂಡವಾಳೊಂದಧಿಕವಾಗಿರಲಿ (ಶರಕು. ೩-೨೦). **ಬಾಂಡವಲು :** ೧. 'ಬಾಂಡವಲುಶಾಹಿ' ಪರಾ. **ಭಂಡವಲ :** ೧. ಭಂಡವಲ ಹಾಕಿ ಭಂಡವಲ ತಗಿಯೋ ಕೆಲಸ (ಗಂಪೂಯ. ೨೦೬); ಭಂಡವಲ ಕೂಡಾ ಆಗ ಸ್ಥಿರವಾಗಿ ನೆಲೆಯೂರಿತ್ತು (ಜಸುಕ. ೦೯). **ಭಂಡವಲು:** ೧. ಗೋದಿಯ ಒಂದೇ ವ್ಯವಹಾರದಲ್ಲಿ ಭಂಡವಲಿನ ಇಮ್ಮಡಿ ಲಾಭವಾಯಿತು (ಜಯಂತ. ೩೯೬); ಕಲಕತ್ತೆಯ ಪತ್ರಿಕೆಗಳು ಪರದೇಶದ ಭಂಡವಲಿನಿಂದಲೇ ಕೂಡಿದ್ದವು (ಶಕ್ತಿಕಾ. ೨೪). ೩. ಮೂಲ ಭಂಡವಲು ಮುಗಿಯಲಿಲ್ಲ, ನಿಜ, ಬೆಳೆಯಲಿಲ್ಲ ಕೂಡ ಜ್ಞಾನವೆಲ್ಲ ಅಜ್ಞಾನದಂತೆ ಮೊದಲಿದ್ದ ಹಾಗೆ ಮೂಢ (ಅರಳು. ೨೩೯-೬). **ಭಂಡವಾಳ:** ೧. 'ಭಂಡವಾಳಗಾರ' ಪರಾ. **ಭಂಡವಾಳು:** ೧. 'ಭಂಡವಾಳುಗಾರ' ಪರಾ. **ಭಾಂಡವಲ:** ೧. ಮಲ್ಲೇಶ ನೌಕರನಲ್ಲದಿದ್ದರೂ ಗೌಡನ ಭಾಂಡವಲದಲ್ಲಿಯೆ ವ್ಯಾಪಾರ ಮಾಡುವ ಪಾಲುಗಾರನಲ್ಲವೆ? (ಶ್ರಜಕ. ೪೦). **ಭಾಂಡವಲು:** ೧. ಅವನ ಭಾಂಡವಲು ಉಪಯೋಗಿಸಿಕೊಂಡು ಇತ್ತ ಬೇರೆ ವ್ಯವಹಾರ ಸಾಗಿಸಬೇಕಾಯಿತು ! (ಶ್ರಜಕ. ೩೭); ಯಾವನೊಬ್ಬ ಸಾಹಸಿಯೂ ನಾಲ್ಕಾರು ಮಂದಿಯ ಕಡೆಯಿಂದ ಭಾಂಡವಲು ಕೂಡಿಸಿಕೊಂಡು (ಶ್ರಬಂಧ. ೨೭). ೪. ವಸ್ತು ; ಸಾಧನ: ಈಗ ಹಡಗದ ಎಣ್ಣೆ_ಮುಖ್ಯ ಭಾಂಡವಲ—ಶೀರಿತು (ಅಕನಾ. ೨೨೩). **ಭಾಂಡವಳು:** ೩. ಭಾಂಡವಳು ಅವನಲ್ಲಿಲ್ಲ (ಬಂಬಿದ. ೨೭.)

**ಬಂಡವಾಳವಿಲ್ಲದ ಬಡಾಯಿ** = ೧. ಸತ್ತ್ವವಿಲ್ಲದ ಜಂಬ; ಒಣಜಂಬ: ನಾನು ಬಂಡವಾಳವಿಲ್ಲವ ಬಡಾಯಿಯನ್ನು ಕೊಚ್ಚಿದ್ದೆ (ನಡದಾ. II, ೧೦೦೯). ೨. ಒಣಜಂಬದ ವ್ಯಕ್ತಿ: ಅವನಂಥ ಬಂಡವಾಳವಿಲ್ಲದ ಬಡಾಯಿಯನ್ನು ನಾನು ಮತ್ತೆಲ್ಲೂ ನೋಡಿಲ್ಲ (ರೂಢಿ).

[ ← ಮರಾ. ಭಾಂಡವಲ/. ತೆಲು. ಬಂಡವಲ, ಬಂಡಾಲ ]

**ಬಂಡವಾಳಗಾರ,** ಬಂಡವಳಗಾರ, ಭಂಡವಾಳಗಾರ, ಭಂಡವಾಳುಗಾರ (ನಾ). ಹಣವನ್ನು ವ್ಯಾಪಾರದಲ್ಲಿ ತೊಡಗಿಸುವವನು: ಸಾಹುಕಾರ: ಜನರನ್ನು ಹಿಂಸಿಸುತ್ತಿದ್ದ ಬಂಡವಾಳಗಾರರನ್ನು ಓಡಿಸಿದೆವು (ಶಾರಿಮ. ೬೯); ಬಂಡವಾಳಗಾರರಿಗೂ ಕಾರ್ಮಿಕರಿಗೂ ಉಂಟಾಗುತ್ತಿರುವ ಘರ್ಷಣೆಗಳ ಕಾರಣಗಳನ್ನೂ ಕುರಿತು ತರುಣವಿದ್ಯಾರ್ಥಿಗಳು ವಿಚಾರ ಮಾಡುವಂತೆ ಪ್ರಚೋದಿಸುವುದು ಅವಶ್ಯಕ (ಕ್ರಿಯೂಶಿ. ೦೩೦). **ಬಂಡವಳಗಾರ:** ಬಂಡವಾಳಗಾರರ ಮತ್ತು ಕಾರ್ಮಿಕರ, ಶ್ರೀಮಂತರ ಮತ್ತು ಬಡವರ ನಡುವಣ ಕಲಹಗಳಿಗೆ ಕಾರಣವೇ ಇರುವುದಿಲ್ಲ (ತತ್ತ್ವಶ್ರಾ. ೦೩೨). **ಭಂಡವಾಳಗಾರ :** ಚಂಪಾರಣ್ಯಜಿಲ್ಲೆಯ ಒಕ್ಕಲುಜನವನ್ನು ಸಂಘಟಿಸಿ ಆಂಗ್ಲೇಯ ಭಂಡವಾಳಗಾರರ ವಿರುದ್ಧ ಸತ್ಯಾಗ್ರಹವನ್ನು ಹೂಡಬೇಕಾಯಿತು (ರಾಜಜ. ೬). **ಭಂಡವಾಳುಗಾರ :** ಅಜ್ಞಾನದ ಲಾಭ ಪಡೆದು ಅವರನ್ನು ಆಳುತ್ತಿರುವ ರೀತಿ ಭಂಡವಾಳಗಾರರ ದುಡ್ಡಿನ ಸುಲಿಗೆಗಿಂತಲೂ ನೀಚತಮವಾದದ್ದು (ಬಂಬಿದ. ೧೦೦).

[ ಬಂಡವಾಳ + – ಗಾರ (< – ಕಾಱ) ]

**ಬಂಡವಾಳಗಾರಿಕೆ** (ನಾ). ಬಂಡವಾಳವನ್ನು ಹೂಡಿ ಮಾಡುವ ಉದ್ಯೋಗ : ಹೆಚ್ಚಿನ ಹಣವನ್ನು ಉತ್ಪಾದನೆ ಮಾಡುವುದು ಬಂಡವಾಳಗಾರಿಕೆಯಾದ್ದರಿಂದ ಮೂಲದಲ್ಲಿ ಹಣವು ಅವಶ್ಯ (ಮೂವಾದ. ೦೨೩).

[ ಬಂಡವಾಳಗಾರ + – ಇಕೆ ]

**ಬಂಡವಾಳದಾರ,** ಭಾಂಡವಲದಾರ (ನಾ). = ಬಂಡವಾಳಗಾರ : ಆ ಕಂಪೆನಿಯ ಬಂಡವಾಳದಾರರಲ್ಲಿ ಭಿನ್ನಾಭಿಪ್ರಾಯವುಂಟಾಗಿ ವ್ಯಾಪಾರವೆಲ್ಲಾ ಕೆಟ್ಟು ಕಂಪನಿಯನ್ನೇ ಮುಚ್ಚಿ ಬಿಟ್ಟರು (ರೂಢಿ). **ಭಾಂಡವಲದಾರ:** ಭಾಂಡವಲದಾರ ಕೂಲಿಕಾರರ ವಿಷಯಗಳೂ . . . ಸಾಹಿತ್ಯದಲ್ಲಿ ಪ್ರತಿಬಿಂಬಿಸುವುವು (ಶ್ರಬಂಧ. ೦). [ ಬಂಡವಾಳ + – ದಾರ್ಃ ]

**ಬಂಡವಾಳಶಾಹಿ,** ಬಂಡವಾಲಶಾಹಿ, ಬಾಂಡವಲುಶಾಹಿ, ಭಂಡವಾಳಶಾಹಿ, ಭಾಂಡವಲಶಾಹಿ (ಗು). ೧. ಐಶ್ವರ್ಯದ ಮದದಿಂದ ಕೂಡಿದ: ತನ್ನ ಹಂಗಿಗೊಳಗಾಗಲಿಲ್ಲವಲ್ಲ ಎಂದು ಅವರ "ಬಂಡವಾಳಶಾಹಿ" ಬುದ್ಧಿ ಕೆರಳಿತು (ಅವತಂ. ೦೦೦). (ನಾ). ೨. = ಬಂಡವಾಳಗಾರ : ನಮ್ಮ ದೃಷ್ಟಿಯೇನೋ ಬಂಡವಾಳಶಾಹಿಯ ಕಡೆಗೆ. ಒಲವೆಲ್ಲಾ ಅವರ ಕಡೆಗೆ (ಕತಶಿ. ೦೨). **ಬಂಡವಾಲಶಾಹಿ :** ೨. ಬಂಡವಾಲಶಾಹಿಯ ಜತೆ ಸಾಮ್ರಾಜ್ಯಶಾಹಿಯ ಜತೆ_ಬಂಡುಹೂಡಿದ ಸ್ವಾತಂತ್ರ್ಯಪ್ರೇಮಿ (ಹಾಡುಹು. ೨೨). **ಬಾಂಡವಲುಶಾಹಿ:** ೨. ನಾವೇನು ಬಡವರ ರಕ್ತ ಹೀರುವ ಬಾಂಡವಲುಶಾಹಿಗಳೇ? (ಹುಚ್ಚುಹು. ೩೨). **ಭಂಡವಾಳಶಾಹಿ:** ೩. ಬಂಡವಾಳದ ಅಧಿಕಾರ; ಐಶ್ವರ್ಯದ ದೌಲತ್ತು: ಭಂಡವಾಳಶಾಹಿಯು ನಿರ್ನಾಮವಾಗಲಿ, ಕೆಲಸಮಾಡಿದ ಕೈಯ ತುತ್ತು ಕೆಲಸ ಮಾಡಿದವನ ಬಾಯಿಗೇ ಬೀಳಬೇಕು (ಕೈಲಾಕ. ೩೭). **ಭಾಂಡವಲಶಾಹಿ :** ೨. ಭಾಂಡವಲಶಾಹಿಗಳು ಹೊನ್ನ ಹಕ್ಕಿಯನ್ನು ಉಕ್ಕಿನ ಪಂಜರದಲ್ಲಿ ಬಂಧಿಸಿಟ್ಟರು (ದತ್ತವಾ. ೩೬). [ಬಂಡವಾಳ + ಶಾಹಿ./ಮರಾ. ಭಾಂಡವಲಶಾಹೀ ]

**ಬಂಡವಾಳಿಗ,** ಭಂಡವಾಳಿಗ (ನಾ). = ಬಂಡವಾಳಗಾರ: ಅತಿರೇಕದ ಅತಿರಿಕ್ತಮೌಲ್ಯವನ್ನು ಎತ್ತಿಹಾಕುವ ನಡವಳಿಗೆ ಬಂಡವಾಳಿಗ ದಲ್ಲಾಲಿಯಾಗಿ ಮಾರ್ಪಡುವದೇ ಈ ಬೇಸಾಯದ ಬಂಡವಾಳಗಾರಿಕೆಯ ಹೆದ್ದಾಸೆಯ ಹೆದ್ದಾರಿ (ಮೂವಾದ. ೧೪೪). **ಭಂಡವಾಳಿಗ :** ಅವರ ಆಸೆ ಆಕಾಂಕ್ಷೆಗಳೆಲ್ಲ ಭಂಡವಾಳಿಗರ ದರ್ಪದ ತುಳಿತಕ್ಕೆ ಸಿಲುಕಿ ಕಮರಿ ಹೋಗುತ್ತವೆ (ಕಾಂಡಯಾ. ೩೩). [ ಬಂಡವಾಳ + – ಇಗ ]

**ಬಂಡವಾಳು** 'ಬಂಡವಾಳ' ನೋ.

**ಬಂಡಸಾಲೆ** (ನಾ). ೧. ಮಳಿಗೆ; ಕೋಠಿ; ಉಗ್ರಾಣ: ಅವರ ಬಂಡಸಾಲೆಯಲ್ಲಿ ಹಣದ ಪುರವಣೆಯನ್ನು ಮಾತ್ರ ನಾನು ಮಾಡಿಸಿ

ಕೊಟ್ಟಿನು (ಏಂಸ್ಮ. ೦೬೬). ೨. ದೊಡ್ಡ ಕಟ್ಟಡ; ಮಹಲು; ಸೌಧ: ಸಂಪಿಗೆಯ ಊರಲ್ಲೇ ಭಟ್ಟರು ಎಬ್ಬಿಸಿದ 'ಬಂಡಸಾಲೆ' ಸಾಮಾನ್ಯವಾಗಿ 'ವಿಲಾಯತಿ'ಯಲ್ಲೇ ನೋಡ ಸಿಗಬೇಕು (ಶಂತಾ. ೬).

[ ಬಂಡ$_1$ + ಸಾಲೆ$_4$./ತುಳು. ಬಂಡಸಾಲೆ ]

**ಬಂಡಳಿಸು** (ಕ್ರಿ). ಹೇಳಿದುದನ್ನೇ ಪುನಃ ಹೇಳು; ಪುನರಂಕ್ತಿ ಮಾಡು : ಮುಳಿವ ತಿಳಿವ ಗಂಡರ ಪೆಂಡಿರ ನುಡಿಗಳನೆ ಬಂಡಳಿಸುವ [ಪಾಠಾಂ. ಬಂದಣಿಸುವ, ಬಂಡುಳಿಸುವ, ಬಣ್ಣಿಸುವ] ಪುರುಳಿಗಳುಮಂ . . . ಕೊಟ್ಟು (ಅದಿಪು. ೪-೫೪ ವ); ಪೂಗೊಂಬಿನೊಳ್ ಪಾಯ್ದು ಬಂಡಳಿಸು[ಪಾಠಾಂ. ಬಂಡಣಿಸು, ಬಂಡುಳಿಸು, ಬಂದೆಳಸು, ಮಂಡಳಿಸು]ತ್ತಿರ್ಪ ಶುಕಾಳಿ (ಅದಿಪು. ೧೧-೯೬); ಅರಗಿಳಿವಿಂಡು ಬಂಡಳಿಪ ಸಾರಿಕೆ ಚಾವಳಿಪುನ್ನಮಾಳಿ ಗಾವರಿಸುವ ಸೋಗೆ ಕೇಗುವ . . . ವಿಕಾರವಿಲ್ಲದಿರೆಯುಂ ಬನಮೊಪ್ಪಿದುದು (ಪುಷ್ಪಪು. ೦೪-೨೩).

[ಬಂಡಳ್$_0$ (p←ತಮಿ. ವಣ್ಣುಟ್ಟಿ=ಅರ್ಥವಿಲ್ಲದ ಶಬ್ದ) + —ಇಸು$_3$]

**ಬಂಡಾಟ** (ನಾ). ಅವಮಾನ ; ಸಿಗ್ಗು : ಕೂಟಕಪಟದಿಂದ ಕುಂದ ಪೋಜಿಸಿ ಬಂಡಾಟ ಬಾಹಿರನೆಂದೆನಿಸಿ (ಶತಸಾಂ. ೦೦-೫೪). ೨. ಕಷ್ಟಪಡು ವಿಕೆ; ಹೆಣಗಾಟ; ಒದ್ದಾಟ : ಸಮುದ್ರದ ನಂಟಸ್ತನ ಉಪ್ಪಿಗೆ ಬಂಡಾಟ (ಹುಬ್ಬಿಹ. ೬೯); ಅದೇ ಬಂಡಾಟ ಸಾರ್ ಈ ಹಳ್ಳೀಲಿ (ರಂಗಳ. ೬೩); ಬಂಡಿ ಬಂಡಾಟ ಹೇರು ಹೆಟ್ಟಾಟ ತಲೆಮೊಟ್ಟೆ ಪರಮಸುಖ (ಗಾದೆ). [ಬಂಡು$_3$ + ಆಟ]

**ಬಂಡಾಡು$_1$** 'ಬಂಡು$_2$' ಪರಾ.

**ಬಂಡಾಡು$_2$** 'ಬಂಡು$_4$' ಪರಾ.

**ಬಂಡಾಯ** (ನಾ). (ಸರ್ಕಾರ ಮುಂತಾದ) ಆಡಳಿತದ ರೀತಿಗೆ ತಮ್ಮ ಅಸಮ್ಮತಿಯನ್ನು ಸೂಚಿಸಲು ಮಾಡುವ ಪ್ರತಿಭಟನೆ; ಕ್ರಾಂತಿ : ಭಾರತದಲ್ಲಿ ಬಂಡಾಯಕ್ಕಾಗಿ ವೀರ ಉತ್ಸಾಹಿಯೋಧರು ಬೇಕಾಗಿದ್ದಾರೆ (ಅತ್ಮಾರ್ಶ. ೦೩೩); ೧೮೫೭ರ ಬಂಡಾಯದಲ್ಲಿ ನಮ್ಮ ಅಜ್ಜನನ್ನು ಹಿಡಿದೊಯ್ದು ಗಲ್ಲಿಗೇರಿಸಿದರು (ಸ್ಮೃತಿಶ. ೦೩); ಪರದೇಶಿಯರನ್ನು ಬಗ್ಗುಬಡಿಯಲು ನಮ್ಮ ಹಿರಿಯರಾದ ಸೈನಿಕರು ಬಂಡಾಯವನ್ನೇ ಹೂಡಿದ ರೆಂಬುದನ್ನು ಮರೆಯಬೇಡಿರಿ (ಹಬ್ಬಿಬಿ. ೦೯೯). 'ಬಂಡು$_4$' ಪರಾ.

[← ಮರಾ. ಬಂಡಾಈ, ಬಂಡಾಳ, ಬಂಡಾಳೀ./ತುಳು. ಬಂಡಾಯಿ]

**ಬಂಡಾಯಗಾರ** (ನಾ). ದಂಗೆ ಮಾಡುವವನು; ಕ್ರಾಂತಿಕಾರ : ಸರ್ಕಾರಕ್ಕೆ ವಿರೋಧವಾಗಿ ಹೂಡಿದ ಹೋರಾಟದಲ್ಲಿ ಆ ಬಂಡಾಯಗಾರರು ಪ್ರಯೋಗಿಸಿದ . . . ವಿಧಾನಗಳ ಬಗ್ಗೆ ಅವನ ಮನಸ್ಸು ಅಲ್ಲೋಲ ಕಲ್ಲೋಲವಾಯಿತು (ಪುನರು. ೪೪೪).

[ಬಂಡಾಯ + — ಗಾರ (< — ಕಾಱ) ]

**ಬಂಡಾಯಸಾಹಿತಿ** (ನಾ). ಸಾಮಾಜಿಕಶೋಷಣೆಗಳ ವಿರುದ್ಧವಾಗಿ ಸಾಹಿತ್ಯಸೃಷ್ಟಿ ಮಾಡುವವನು : ಬಂಡಾಯಸಾಹಿತಿ ಸಾಮಾಜಿಕ ಸಂಬಂಧಗಳ ಹಿಂದಿರುವ ಮೋಸಗಳನ್ನು ಅವಮಾನವೀಯತೆಯನ್ನು ಗುರುತಿಸಿ ಸಮಾಜವ್ಯವಸ್ಥೆಯ ವಿರುದ್ಧ ಸ್ಫೋಟಿಸುತ್ತಾನೆ (ಕವಿಕೋ. XI, ೭೯೬).

[ಬಂಡಾಯ + ಸಾಹಿತಿ]

**ಬಂಡಾಯಸಾಹಿತ್ಯ** (ನಾ). ಆಧುನಿಕ ಕನ್ನಡಸಾಹಿತ್ಯದ ಒಂದು ಪ್ರಕಾರ; ರಾಜಕೀಯ, ಸಾಮಾಜಿಕ ಘಟನೆಗಳಿಂದ ಬದುಕಿನಲ್ಲಿ ಉಂಟಾದ ಬದಲಾವಣೆಯನ್ನು ಪ್ರತಿಭಟಿಸುವ ಸಲುವಾಗಿ ಸೃಷ್ಟಿಯಾದ ಸಾಹಿತ್ಯ : ಶೋಷಣೆಯ ವಿರುದ್ಧ ಶ್ರಮಜೀವಿಗಳನ್ನು ಬಂಡಾಯಕ್ಕೆ ಅನುಗೊಳಿಸುವುದೇ ಬಂಡಾಯಸಾಹಿತ್ಯದ ಗುರಿಯಾಗಿದೆ (ಕವಿಕೋ. XI, ೭೯೬). [ಬಂಡಾಯ + ಸಾಹಿತ್ಯ]

**ಬಂಡಾರ** 'ಭಂಡಾರ' ನೋ.

**ಬಂಡಾರಿ** 'ಭಂಡಾರಿ' ನೋ.

**ಬಂಡಾರಿಗ** 'ಭಂಡಾರಿಗ' ನೋ.

**ಬಂಡಾರಿಸು** 'ಭಂಡಾರಿಸಂ' ನೋ.

**ಬಂಡಾರೆ** 'ಬಂದಾರಿ' ನೋ.

Δ **ಬಂಡಾಱ** 'ಭಂಡಾರ' ನೋ.

**ಬಂಡಾಱಕಾಱ** (ನಾ). ಖಜಾನೆಯ ಮುಖ್ಯಾಧಿಕಾರಿ; ಖಜಾಂಚಿ : ಆಳಿಕಾಱರುಂ ಬಣ್ಡಾಱಕಾಱರುಂ(ಎಕ VIII, ಸೊರಬ. ೨೬೯-೭೦; ಸು. 1245).

[ಬಂಡಾಱ (<ಭಂಡಾರ) + — ಕಾಱ]

**ಬಂಡಿ$_1$**, ಭಂಡಿ$_1$ (ನಾ). ೧. ಗಾಡಿ ; ಶಕಟ ; ಚಕ್ಕಡಿ : "ಮಾಡಿಯೆನಲ್ ಬಂ[ಪಾಠಾಂ. ಗಾ, ದಂ]ಡಿ" (ಕರ್ಣಾಶ. ೩೯) ; ಶಾಕಟಿಕ ಪರದರುಂಬೆರಸು ಬಂಡಿಗಳೊಳ್ ಪಟ್ಟೆಯುಂ ಧಾನ್ಯಮಂ ತೀವಿಕೊಂಡು ಪೊಟಲ್ಗೆ ಮಾಱಲೆಂದು ಪೋಪನ್ನೆಗಂ (ವಡ್ಡಾರಾ. ೬೬-೦೦); ಅಂತು ತನ್ನ ತಂದ ಬಂಡಿಯ ಕೊಟೆಲ್ಲಮಂ ಪತ್ತೆಂಟು ತುತ್ತಿನೊಳೆ ಸಮೆಯೆ ತುತ್ತುವುದಂ ಕಂಡು (ಶಂಶಲಾ. ೩-೨೪ ವ); ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಬುದೆ ಕಡೆಗೀಲು ಬಂಡಿಗಾಧಾರ (ದೇವಾವ. ೦-೨); ಬಾರಿಸಿದ ಬಲು ಹೊಱೆಯ ಬಂ[ಪಾಠಾಂ. ಭಂ]ಡಿಗಳೋರಣಿಸಿದವು ಪಯಣದಲಿ (ತೊರರಾ. ೦-೬-೩). ೨. ರಥ ; ತೇರು : ಕೀಲ ಕಳೆವರು ರವಿಯ ಬಂಡಿಯ (ಸಂಭಶ. ೭-೦೬) ; ನೀನಾರ ಬಂಡಿಯಂ ಪೊಡೆದಪ್ಪೆ (ಕೃಮಿಚಾ. ೨೪-೫೪). ೩. ಗಾಲಿ ; ಚಕ್ರ : (ಕ). ಭಂಡಿ$_1$ : ೧. ಧನ್ಯನುಂ ಭದ್ರನುಮೆಂಬೊರಿರ್ವರ್ ಕುಡಿಯರರೊರ್ಮೆ ನಡೆವ ಭಂಡಿಗಳ್ ಶ್ರೀನದೀ ತೀರದಿಟ್ಟೆಡೆಯೊಳೊಂದೊಂದಂ ಸೋಂಕಿ ಮುಱಿಯೆ (ಶಾಂತಿಪು. ೯-೪೬ ವ); ತಂಬುಲಿಗರ್ವಿಟ್ಟಾಯಂ ಭಂಡಿಗೆಲೆ ನೂಱುಹೇಱಿಂಗೆ ನೂಱು (ಎಇ. XX, ೦೨-೫೩; 1167). ೩. "ಶಕಟಂ [ರ]ಥಾಂಗ[ಮರ]ಸಂಜ್ಞಕಮಂತದು ಭಂಡಿ ಗಂತ್ರಿ ಕಂಬಳವಾಹ್ಯಂ ಪ್ರಕಟಂ ಕರ್ಣೀರಥನಾಮಕಮಕ್ಕುಂ ಪ್ರವಹಣಂ ರಥಾಂಗಂ ಚಕ್ರಂ" (ವಸ್ತುಕೋ. ೯೬-೨೬); ಭಂಡಿಗಳಂತೆ ಕಱಾವ ಕಡಗಗಳಂ ಧರಿಸಿ (ಶಾಗಂಧ. ೪೯೬-೯).

ಬಂಡಿಯ ಈಚು = ಗಾಡಿಯ ಮೂಕಿಯ ಮರ : "ಈಷಾ = ಬಂಡಿಯ ಈಚು" (ಕಾಶಕ್ಕ. ೫೬) ಬಂಡಿಯ ಗಾಲಿ, ಭಂಡಿಯ ಗಾಲಿ = ೧. ಗಾಡಿಯ ಚಕ್ರ : ಪಾಂಡವಕೌರವಬಲವುಮಱಿದಿರ್ದ ಭೂಮಿಯೊಳ್ ಪಣಮಂ ಬಿತ್ತುವುದುಂ ಬಂ[ಪಾಠಾಂ. ಭಂ]ಡಿಯ ಗಾಲಿಯ ಪಣವಕ್ಕುಂ (ಸಮುಶ. ೦೨-೦೪); ಇದೊಂದು ಭಂಡಿಯ ಗಾಲಿಯಂತುಟನೆರಡು ಕಲಹಂಸೆಗಳ್ ಕರ್ಚಿಕೊಂಡು ಪೋದಪ್ಪುವು (ಶಂಡತಂ. ೦೫೬-೨೦) ; ಅಱೆ ಸಱೆ ತೋರಗಲು ಕವಣೆಗಲು ಕಣೆ ಭುಂಡಿಯ ಗಾಲಿ ಕೆಲ್ಲೆ (ಸೌಇಇ. XX, ೦೨೬-೩ ; 1186). ೨. (ಅಲಂ) ಸೊನ್ನೆ; ಶೂನ್ಯ : ನೀನು ಹೀಗೇ ಕಾಲ ಕಳೀತಿದ್ದರೆ ಪರೀಕ್ಷೇಲಿ ನಿನಗೆ ಬಂಡಿಯ ಗಾಲಿಯೇ ಬರೋದು (ರೂಢಿ). ಬಂಡಿಯ ಬೋಯಿಕೆ = ರಥವನ್ನು ನಡೆಸುವ ಊಳಿಗ, — ಸೇವೆ ; ಸಾರಥ್ಯ: ಕಮಲದಳಾಯತೇಕ್ಷಣನೊಡನೆ ಬಂಡಿಯ ಬೋಯಿಕೆಗೆ ವೀಳೆಯುವ ಹಿಡಿದೆವು (ಕುವ್ಯಾಕ. ೫-೩೬). ಬಂಡಿಯ ಬೋವ, ಭಂಡಿಯ ಬೋವ= ರಥವನ್ನು ನಡೆಸುವವನು ; ಸಾರಥಿ : ಕಿರೀಟಿಯ ಮನೆಯ ಬಂಡಿಯ ಬೋವನಾದನು ವೀರನಾರಯಣ (ಕುವ್ಯಾಉ. ೦-೪೫) ; ಒಬ್ಬ ಮಾವನ ಕೊಂದ ಒಬ್ಬ ಮೈದುನಗೆ ಭುಂಡಿಯ ಬೋವನಾದ (ಪುರಂದ. ೦-೦೦೬-೧). ಬಂಡಿಯ ಬೋವಗುಲ = ರಥವನ್ನು ನಡೆಸುವ ಊಳಿಗ ದವನ ವಂಶ ; ಸಾರಥ್ಯವನ್ನು ಮಾಡುವವನ ಕುಲ : ದೇವಕೀಸುತ ನೇನು ಬಂಡಿಯ ಬೋವಗುಲದಲಿ ಜನಿಸಿದನೆ (ಕುವ್ಯಾಕ. ೫-೩೪). ಬಂಡಿಯ ರ, ಬಂಡಿಯ ಱ = ಗಾಡಿಯ ಗಾಲಿಯ ಆಕಾರದಲ್ಲಿರುವ 'ರ' ; ಶಕಟರೇಫ (ಱ) : ಹೀಗೆ 'ಟ' ಕ್ಕೆ ರಳ ಎಂದೂ 'ಱ' ಕ್ಕೆ ಶಕಟರೇಫ

ಅಥವಾ ಬಂಡಿಯು ರ ಎಂದೂ ಹೆಸರಾಯಿತು (ಕೈಶಿಬಿ. ೪) ; ರಕಾರವನ್ನು ಕೇಶಿರಾಜ ಮತ್ತು ಇತರರು ಶಕಟರೇಫ ಎಂದು ಕರೆದಿದ್ದಾರೆ. ಮತ್ತೆ ಕೆಲವರು ಇದನ್ನು ಬಂಡಿಯು ರ (ಱ) ಎಂದೂ ಉಲ್ಲೇಖಿಸಿದ್ದಾರೆ (ದ್ರಾವಿ. ೩೩೦). **ಬಂಡಿಯ ಹುಲಿ, ಭಂಡಿಯ ಪುಲಿ** = ಬೇಟೆಗಾಗಿ ಬಂಡಿಯಲ್ಲಿ ಸಾಗಿಸುವ ಸಾಕಿ ಪಳಗಿಸಿದ ಹುಲಿ : ಹಿಡಿನಾಯಿಗಳು ಹೆಗಲ ಸಾಳುವಂ ಬಂ[ಪಾಠಾಂ. ಭಂ]ಡಿಯ ಹುಲಿ . . . ಅಡವಿಗಂತಕರಂತೆ ನಡೆವ ಶಬರರ ಕಂಡನು (ಸೋಮಕ. ೩-೪) ; ಭಂಡಿಯ ಪುಲಿಯಂ ಮೆಲ್ಲನೆ ಕೊಂಡಿಳಿಪುತೆ . . . ಮೃಗಮಂಡಲಮುಸದರ್ಕೆ ತೋಱೆ (ಗಿರಿಕ-೧-೯೯). **ಬಂಡೀಕಪ್ಪು** = (ಬೇಗನೆ ಅಳಿಸಿ ಹೋಗದ) ಗಾಡಿಯ ಚಕ್ರದ ಕೀಲೆಣ್ಣೆಯ ಮಸಿ : ಅರ್ಜಿ ಬರೆಸುತ್ತಿದ್ದವರೆಲ್ಲ ಆತುರಾತುರದಲ್ಲಿ ಬರೆಸಿ, ಬಂಡೀಕಪ್ಪಿನ ಹೆಬ್ಬೆಟ್ಟುಗಳನ್ನು ಎಣ್ಣೆ ಸಮೇತ ಒತ್ತಿ ಒಂದೊಂದಾಗಿ ತಂದು ಕೊಟ್ಟರು (ನನ್ನೂರು. ೦೬೦). [ದೇ.॥ ತಮಿ. ಪಣ್ಟಿ, ವಣ್ಟಿ; ಮಲ. ವಣ್ಟಿ; ತುಳು. ಬಂಡಿ, ಭಂಡಿ ; ತೆಲು. ಕೋಲಾ. ಬಂಡಿ ; ಕೋತ. ವಂಡ್ಯ; ತೊದ. ಪೊಡ್ಯ. / ಪ್ರಾ. ಭಂಡೀ, ಭಂಡಿಆ]

**ಬಂಡಿ$_2$** (ನಾ). ಸೊಂಟದ ವರೆಗೆ ಬರುವ ಒಂದು ಬಗೆಯ ಅಂಗಿ ; ಕಸೆಯಂಗಿ : ಕುಬೇರನು ತನ್ನ ಬಂಡಿಯ ಜೇಬಿನೊಳಗಿಂದ ಒಂದು ಅರಿವೆಯ ಚೀಲವನ್ನು ಹೊರಕ್ಕೆ ಎಳೆದನು (ರಕ್ತಾಕ್ಷಿ. ೬). 'ಬಗಲಬಂಡಿ' ಪರಾ. [← ಮರಾ. ಬಂಡೀ]

**ಬಂಡಿಕಾರ** 'ಬಂಡಿಕಾಱ' ನೋ.

**ಬಂಡಿಕಾಱ, ಬಂಡಿಕಾರ, ಭಂಡಿಕಾರ, ಭಂಡಿಕಾಱ** (ನಾ). ೧. ಗಾಡಿ ಹೊಡೆಯುವವನು ; ಗಾಡಿಕಾರ : ಮಿಗೆ ಮಣ್ಗೆಲಸದೊಡ್ಡರು ಬಂಡಿಕಾಱರು ಕಲುಕುಟಿಗರಿದ್ದೆಡೆಯ ಸೊನ್ನಲಪುರಕೆ ಪ್ರಭು ಬಂದ (ಪ್ರಭುಲಿಂ. ೦೩-೪). **ಬಂಡಿಕಾರ :** ೧. ಬಂಡಿಕಾರಣ್ಣನ ಬಂಡಾಟ ನೋಡಿರೊ ಬಾರುಕೋಲವನ ಬಲಗೈಲಿ (ಹಳ್ಳಿಯ. ೧೮) ೨. ದೇವಾಲಯದ ರಥದ ಮೇಲ್ವಿಚಾರಕ : (?). **ಭಂಡಿಕಾರ :** ೧. ಪೊರಮಟ್ಟು ಕಲ್ಲುಕುಟುಕರ ಭಂಡಿಕಾರರಂ ಕರಸಿದನು (ನವಮೋ. ೨೦-೦೩) **ಭಂಡಿಕಾಱ :** ೧. ಕೆಲಸಿಗಳಿಗೆ ಕಲುಕುಟಿಗರಿಗೆ ಭಾಗಿ ೨ ಭಣ್ಡಿಕಾಱಂಗೆ ೧ (ಎಕ. II, ೩೬೦-೩ ; ಸು. 1500). ೨. ಭಂಡಿಕಾಱರ ಜೀವಿತಕ್ಕೆ ವರಹ ಗ ೧ (ಎಕ. XV. ಬೇಲೂರು. ೭೦-೪೩ ; 1485). [ಬಂಡಿ$_1$ + -ಕಾಱ]

**ಬಂಡಿಬಸವ** (ನಾ). ೧. ಹಿಂದಿನ ಕಾಲದಲ್ಲಿ ಮಕ್ಕಳ ಆಟಕ್ಕಾಗಿ ಮಾಡುತ್ತಿದ್ದ ಮರದ ಅಥವಾ ಲೋಹದ ಗಾಲಿಗಳಿರುವ ಬಸವಣ್ಣನ ವಿಗ್ರಹ : ಮಗುವು ಬಂಡಿಬಸವನನ್ನು ಎಳೆದುಕೊಂಡು ಆಡುತ್ತಾ ಇದೆ (ರೂಢಿ). ೨. ಬಸವನ ಹುಳು : ಜಿಗಣೆ, ಜೇಡ, ಚೇಳು . . . ಬಂಡಿಬಸವ, ಜರಿ (ನಮ್ಮಸು. ೨೪೦). [ಬಂಡಿ$_1$ + ಬಸವ$_1$]

**ಬಂಡಿಬೋವ** (ನಾ). ಗಾಡಿಯನ್ನು ನಡೆಸುವವನು ; ಗಾಡಿಕಾರ : ಕಟ್ಟಿಗೆಕಾಱರಿಂಗೆಱೆದು ಬಂಡಿಬೋವರ್ಗೆಱೆದು ನಾಯಕಮಂಡಳೀಕರ್ಗೆ ಱೆದು (ಬಸಪು. ೫೯-೨೭). [ಬಂಡಿ$_1$ + ಬೋವ (< ಬೋಯ)]

**ಬಂಡಿಮಾಳ** (ನಾ). ಗಾಡಿಗಳನ್ನು ನಿಲ್ಲಿಸುವ ಸ್ಥಳ ; ಗಾಡಿಖಾನೆ : ತೋಪು ವಿಶಾಲವಾದ ಬಂಡಿಮಾಳಕ್ಕೆ ನೆರಳನ್ನು ಕೊಡುತ್ತಿದೆ (ಸ್ವಪ್ನಹೂ. ೪೪). [ಬಂಡಿ$_1$ + ಮಾಳ$_3$ (=-ಮಾಲ)]

**ಬಂಡಿವರಿಯಿಸು** (ಕ್ರಿ). ಗಾಡಿಯನ್ನು ಓಡಿಸು : ಗಾಲಿಯಿಲ್ಲದೆ ಬಂಡಿವರಿಯಿಸುವ (ಧರ್ಮಾಮೃ. ೦೨-೨೪). [ಬಂಡಿ$_1$ + ಪರಿಯಿಸು]

**ಬಂಡಿಹೋಕ** (ನಾ). ಗಾಡಿಯಲ್ಲಿ ಪ್ರಯಾಣ ಮಾಡುವವನು : ಪರಸ್ಥಳದ ಬಂಡಿಹೋಕರು ಕಾಯಿಂಪಲ್ಲೆ ಮಾರಾಟಗಾರರು ಇವರನ್ನುಳಿದವರು ಮನೆಯಲ್ಲಿಯೇ ಇದ್ದರು (ರಕ್ತಾಕ್ಷಿ. ೨೦೪). [ಬಂಡಿ$_1$ + ಹೋಕ (< ಪೋಕ)]

**ಬಂಡು$_1$** 'ವಂಡು' ನೋ.

**ಬಂಡು$_2$** (ನಾ). ಜೇನು ; ಮಕರಂದ ; ಮಧು : "ಬಂಡು ಮಕರಂದಂ" (ಕವಿಕಂ. ೯೬) ; ಓಗರವೂಗಳ ಬಂಡನೆಯ್ದೆ ಪೀರುತ್ತೊಡವಂದುವಿಂದ್ರವನದಿಂ ಮಱುದುಂಬಿಗಳ್ (ಶಂಖಬಾ. ೧೧-೬೦) ; ಬಂಡನುಂಡು ನನೆಗೊಂಬುಗಳಂ ಮೊರೆದೇಟ್ಟ ಭೃಂಗರ್ಝುಂಕಾರಮೆ ಮಾಟ್ಟುದಾರ ಬಗೆಂಗವ ಎದನೋತ್ಸವ ಹರ್ಷಭಾರಮಂ (ಶಂಬಾವೂ. ೦-೦೦೬) ; ಹೊಸಕವುಳಕಟ್ಟಲದ . . . ಬಂಡುಂಬ ಕೊಳ್ಗಿಸಜೆಳೆಗೆ ಸಿಲ್ಕಿ ಜಿನುಗುವ ಮಱಿಗೆ ಸೌರಭ್ಯರಸದ ಕುಟುಕಿತ್ತು ಸಾಗಿಸುವ ಬಾಣತಿದುಂಬಿ ಮೆಱೆದುವು (ಹಡಕಾ. ೩-೪೦).

**ಬಂಡಾಡು$_1$** = ಜೇನು ತುಂಬಿ ಸೂಸು ; ಮಕರಂದ ಹೊರ ಹೊಮ್ಮು : ಬಂಡಾಡುವ [ಪಾಠಾಂ. ಡೋಡಿದ] ನವಕರ್ಣಿಕಾರಮತಿಮಧು ರತೆಯೊಳ್ ಕೂಡಿದ ನಿಂಬಾರಾಮಂ ನಾಡೊಳಗೊಳವೆಂಬೊಡಿನ್ನದೇವರ್ಣಿಪುದೋ (ಕಾವ್ಯಾವ. ೪೭೩) ; ಬಂಡಾಡೆ ಮೇಲೆ ಮಧುಕರಮಂಡಳಿಗಳ್ ಬಿಟ್ಟು ಮಿಳಿರ್ವ ಮದದಿಯ ಮುಡಿ ಮಾರ್ಕೊಂಡುದು ಕಾಮುರ್ಗಿಲಡಿಯೊಳ್ ತಾಂಡವಮಂ ಮೆಱೆವ ಸೋಗೆನವಿಲ ಬೆಡಂಗಂ (ವರ್ಧಮಾ. ೫-೫೫).

**ಬಂಡು$_3$** (ನಾ). ೧. ನಾಚಿಕೆಯಿಲ್ಲದಿರುವಿಕೆ ; ನಿರ್ಲಜ್ಜೆ : 'ಬಂಡು ಮಾತು', 'ಬಂಡುವೋಗು' ಪರಾ. ೨. ನಾಚಿಕೆಗೇಡಿನ ನಡುವಳಿಕೆ ; ಭಂಡತನ; ಬಂಡು ಬಕ್ಕುಡಿ ಭಂಗ ಬಂಧನ ಕನಲ್ಕೆ ಕಳಕಳ ಮೆಂಬಿವು . . . ಜನದೊಳಿಲ್ಲ (ಕಬ್ಬಿ. ೬-೪೨). ೩. ಹೆಣಗಾಟ ; ಕಷ್ಟ ; ಬವಣೆ : ಹೆಂತರಿಲ್ಲದ ಮನೆವಾರ್ತೆ ಆವಗಂ ಬಂಡು ಕಾಣಯ್ಯ (ಸರ್ವಜ್ಞ. ೦೬೮೩). ೪. ನಾಚಿಕೆಯಿಲ್ಲದವಳು ; ಮಾನವಿಲ್ಲದವಳು : ಬಂಡು ಹೆಂಡತಿಯಾಗಿ ತುಂಡೊಬ್ಬ ಸೊಸೆಯಾಗಿ ಕಂಡಲ್ಲಿ ಹರಿವ ಮಗನಾದರಾ ಮನೆಗೆ ದಂಡ ತಪ್ಪುವದೆ (ಸರ್ವಜ್ಞ. ೦೬೫೫). (ಗ್ರಾ). ೫. ನಾಚಿಕೆಗೇಡಿಯಾದ ; ಲಜ್ಜಾಸ್ಪದವಾದ : ಬಂಡು ಭೂತಗಳಿಲ್ಲ ಕೊಂಡೆಯರಿಲ್ಲ ವಂಡವಿಲ್ಲಾ ಪುರದೊಳಗೆ (ಜನರಾ. ೦-೪೩).

**ಬಂಡಾಗು** = ೧. ನಾಚಿಕೆಗೇಡಾಗು ; ಅವಮಾನ ಹೊಂದು : ಭೂಮಂಡಲೇಶ್ವರನು ಕೇಳಿದೊಡೆ ದಂಡವನೆಮ್ಮ ಪರೊಳು ಕೊಂಬನದಱಿಂ ಬಂಡಾಗುವುದೆಮ್ಮ ಕಾರ್ಯ (ಪ್ರಭುಲಿಂ. ೩-೯೩); ನನ್ನಿಂದೆ ಬಂಡಾಗಿ ಹೋಗಧ ವೀರರಾರೆಲವೋ (ಮೋಹತ. ೩೮-೦೦); ಕಮಲವದನೆಯರ ಪೀನಸ್ತನಂಗಳ ನೋಡಿ . . . ತಲೆಗೆದರ್ದು ಬಂಡಾದಂತೆ ಪದ್ಮಚಯಮುಲರ್ದೊಪ್ಪಿರೆ (ನವಮೋ. ೦೦-೪೫). ೨. ಹೆಣಗಾಡು ; ಕಷ್ಟಕ್ಕೀಡಾಗು: ಈ ಅಂದಗಾಱ ಅಣ್ಣಗಳ ಕಂಡು ಬಂಡಾದಿರಣ್ಣಾ (ಮೋಳಿಗೆಮಾ. ೦೭-೬೭). **ಬಂಡುಮಾಡು** = ಅವಮಾನ ಮಾಡು ; ನಾಚಿಕೆಗೇಡು ಮಾಡು : ದೇವೇಂದ್ರನಿದಿರಲಿ ಮುನಿಯ ಬಂಡು ಮಾಡುವೆ [ಪಾಠಾಂ. ಭಂಡನಂ ಮಾಳ್ಪೆ] (ಹಡಕಾ. ೩-೮); ಗಂಡನುಳ್ಳ ಹೆಂಡಿರ ಕೊಂಡು ಒಯ್ದು ಅವರ ಬಂ[ಪಾಠಾಂ. ಭಂ]ಡು ಮಾಡುವನೀ ಪುರಂದರವಿಠಲ (ಪುರಂದರ. ೧-೦೦೪-೫); ಧನಸೇನಸೆಟ್ಟಿ . . . ಬಂಡು ಮಾಡಿ ಸತಿಯ ಕೊಲ್ಲದೆ ತನ್ನ ಧನವ ಧರ್ಮಕ್ಕಿತ್ತು ತಾನು ತಪವನಾಚರಿಸುವುದಕ್ಕೆ ಪೋದನು (ಭೈರಸೂ. I, ೩೭೩). [ಬಂಡ$_1$ + -ಉ$_4$]

**ಬಂಡು$_4$** (ನಾ). ೧. ಬಂಡಾಯ ; ದಂಗೆ : ಮುಂದೆ ತೀವ್ರವೇ ಜಂಗಮರ ಬಂಡು ಮುರಿಯಿತು (ಮುಂಬಯಿ. ೯-೬೦). ೨. ಅಡ್ಡಿ ; ತಡೆ : ಉದ್ದಂಡ ಶಿವಮಂತ್ರಮಂ ಸ್ಮರಿಸುತಿರೆ ಮಱೆದೊಮ್ಮೆ ಬಂಡು ಬರೆ ನಾಲಿಗೆಯ ಕೊಯ್ದಿಟ್ಟ (ಪ್ರಭುಪು. ೭-೨೨೭).

**ಬಂಡಾಡು$_2$** = ಬಂಡಾಯ ಹೂಡು ; ದಂಗೆಯೇಳು : ರೂಢಿಯಲಿ ಶುಂಭಾಸುರಗೆ ಬಂಡಾಡಿದನು ಖಳ ಚಂಡನೆಂಬವ (ದೇವೀಮ. ೫-೬೦). **ಬಂಡುಹೂಡು** = ದಂಗೆಯೇಳು ; ಬಂಡಾಯ ಎಬ್ಬಿಸು : ಭಾರತೀಯನೆಂದು ಮರ್ಯಾದಿತವಾಗಿ ಕೆಲವರು ತಿಳಿದುಕೊಂಡ ಸಂಸ್ಕೃತಿಗೆ ಬೌದ್ಧರೂ, ಜೈನರೂ ತಂತಮ್ಮ ರೀತಿಯಲ್ಲಿ ಇದಿರುಬಿದ್ದಂತೆ ವೀರಶೈವರೂ ಸ್ವತಂತ್ರವಾಗಿ ಬಂಡು ಹೂಡಿದರು (ಕವಿಪ. ೦೩); ನೀವೆಲ್ಲರು ಕೂಡಿ ನನ್ನ

ಮೇಲೆ ಬಂಡುಹೂಡಿದರೂ ನಾನು ಈ ಮಾತು ಖಂಡಿತ ಸತ್ಯವೆಂದೇ ಹೇಳುತ್ತೇನೆ (ಗಾಳಗು. ೩೪). [←ಮರಾ. ಬಂಡ್, ಬಂದ್]

**ಬಂಡುಕೋರ**, ಬಂಡುಖೋರ (ನಾ). ೧. (ಸರ್ಕಾರ ಮುಂತಾದ) ಆಡಳಿತಕ್ಕೆ ವಿರೋಧವನ್ನು ವ್ಯಕ್ತಪಡಿಸುವವನು ; ದಂಗೆಯೇಳುವವನು ; ಬಂಡಾಯಗಾರ : ಹಲವಾರು ಬಂಡುಕೋರರು ಒಂದಾಗಿ ಆ ಜಮೀನ್ದಾರನ ಪುಂಡಾಟವನ್ನು ಅಡಗಿಸಿದರು (ಕೂ). **ಬಂಡುಖೋರ** : ೧. ನಾರಣ್ಣನು ಬಂಡುಖೋರರ ಗುಂಪನ್ನು ಸೇರಿದ್ದನ್ನು ಕಂಡು ಅವನಿಗೆ ಸಖೇದ ಆಶ್ಚರ್ಯವಾಗಿತ್ತು (ಸಮಾಜ. ೬೭೦). (ಗು). ೨. ಬಂಡಾಯುಪ್ರವೃತ್ತಿಯು : ಅವರಲ್ಲಿ ನಿಮ್ಮಂತೆ ಉಂಡಾಡಿಗತನವಾಗಲೀ ಬಂಡುಖೋರ ಮನೋವೃತ್ತಿಯಾಗಲೀ ಇರುವುದಿಲ್ಲ (ಮುಕ್ತಿಪ. ೨೦೦). [ಬಂಡು$_4$ + — ಕೋರ್$_3$./ಮರಾ. ಬಂಡ್‌ಖೋರ್]

**ಬಂಡುಖೋರ** 'ಬಂಡುಕೋರ' ನೋ.

**ಬಂಡುಗ** (ನಾ). = ಬಂಡುಕೋರ ೧ : ನೆರೆ ಮುಳ್ಳು ತುಂಟಪೆಸರ ಬಂಡುಗರೆಮ್ಮ ಹೊರೆಯೊಳಗಿರಬೇಡವೆಂದು ಎರವನಪುಷ್ಪಗಳ್ಪೊಱಡಿಸೆ ಬೆಳ್ದಾಳೆಯುರಲೊಪ್ಪಿದುವು ವನತಟದೆ (ಕಂಪಪು. ೩-೯೬). [ಬಂಡು$_4$ + — ಗ$_2$]

**ಬಂಡುಗಟ್ಟು** (ಕ್ರಿ). ದಂಗೆಯೇಳು ; ಬಂಡಾಯ ಮಾಡು : ಕಲ ಬಕ್ರ್ಯಂಕಣಿಗವರ್ಮ್ಮರ್ಮ್ಮಲೆವದಟಿಂ ಬಣ್ಡುಗಟ್ಟಿ (ಎಕ. VIII. ಸೊರಬ. ೦೫೨-೦೭ ; 1380). [ಬಂಡು$_4$ + ಕಟ್ಟು$_{11}$]

**ಬಂಡುಗಾರ** (ನಾ). ೧. = ಬಂಡುಕೋರ ೧ : ಪೂಗಾರಗೊಲಿದ ಬಂಡುಗಾರ ಗೊಲ್ಲ (ಶಿವಾತ್ರ. ೦೫೩-೩) : ಪುಂಡ ಪಾಳೆಯಗಾರಿಕೆಯು ಬಂಡುಗಾರರನ್ನು ಬೆಳೆಯಿಸಿ ಕೊಡುವುದು ಯಾವ ದೃಷ್ಟಿಯಿಂದಲೂ ಹಿತವಲ್ಲ (ಶಿಕಾಪುಂ. ೨೦). ೨. ಬದಲಾವಣೆಯನ್ನು ಬಯಸುವವನು ; ಕ್ರಾಂತಿಕಾರ : ಇಂದಿನ ಸಾಹಿತ್ಯದ ಬಂಡುಗಾರರೇ ನಾಳಿನ ಸಮ್ಮೇಲನದ ಅಧ್ಯಕ್ಷರಾಗುವರು (ಮುಂಗಾರು. ೦೦೭). [ಬಂಡು$_4$ + — ಗಾರ (< — ಕಾಱ)]

**ಬಂಡುಗಾರಿಕೆ** (ನಾ). ದಂಗೆಯೇಳುವ ಪ್ರವೃತ್ತಿ : ಜೀವನದ ಆರಂಭದಲ್ಲಿಯೇ ಅವನು ತನ್ನ ಸ್ವಚ್ಛಂದವೃತ್ತಿಯು, ಸ್ವತಂತ್ರಬುದ್ಧಿಯು, ಉದ್ದಂಡ ಬಂಡುಗಾರಿಕೆಯು, ಮುಂಗುರುಹುಗಳನ್ನು ತೋರಿಸದೇ ಹೋಗಲಿಲ್ಲ (ವಾವಾದ. ೦೯). [ಬಂಡುಗಾರ + — ಇಕೆ]

**ಬಂಡುಗೆಡೆ** (ಕ್ರಿ). ನಾಚಿಕೆಯಿಲ್ಲದ ಮಾತನ್ನಾಡು : ತೊಂಡನಿಕ್ಕಿ ಠವಾಳತನದಲಿ ಬಂಡುಗೆಡೆ[ಪಾಠಾಂ. ಭಂಡುಗೆಲೆ]ವುತ ಮಲುಹಣಿಯು ತಾಯ್ ಮಿಂಡನಂ ಹೊಱಮಡಿಸಿ (ಬಸಪು. ೧೨-೦೯) ; ಕೆಂಡದ ಕೊಂಡವ ಮಂಡೆ ದೊನೆದು ಪೊಕ್ಕು ಬಂಡುಗೆಡೆವುತ ಕಳ್ಗುಡಿದು (ಶಶಸಾಂ. ೦೦-೬೪). [ಬಂಡು$_3$ + ಕೆಡೆ$_2$]

**ಬಂಡುಗೆಯ್** (ಕ್ರಿ). = ಬಂಡುಗಟ್ಟು : ನೀಂ ಕಡುಮಂ ಕಂಡಂತೊರೆದು ಗಂಡನಲೆದು ಬಂಡುಗೆಯ್ದು ಸಬ್ಬವಂಗೊಳವೇಟ್ಪುದು (ಶಶಪ. ೬-೦೩೩ ವ); ಅವನೆಮ್ಮ ನಾಡೊಳ್ ದಾಱಟ್ಟು ತುಱುಸೆಱೆಯೊಡನೆನ್ನಣುಗರಂ ಪಿಡಿದು ಬಂಡುಗೆಯ್ದು (ಶಶಪು. ೦೩-೯). [ಬಂಡು$_4$ + ಕೆಯ್$_1$]

**ಬಂಡುಗೆಲೆ** (ಕ್ರಿ). = ಬಂಡುಗೆಡೆ : ಕೋಡಗನಂತೆ ಕಂಡಕಂಡವರಲ್ಲಿ ಪಿಂಡಿನೊಳಗೆ ಹೊಕ್ಕು ಬಂಡುಗೆಲೆಯಲೇತಕ್ಕೋ (ಪೋಲೀಪದ. ೦೭-೬೬) ; ಪುಂಡರೆಲ್ಲರ ಕೂಡಿಕೊಂಡು ಬಂ[ಪಾಠಾಂ. ಭಂ]ಡುಗೆಲೆವುತೆಮ್ಮ ಪವುಳಿಯ ಹೊಱಗೆ ಮುಂಕೊಂಡಾಡುತಿರ್ದನುಬ್ಬಿನೊಳು (ಶರಾಶಾಂ. ೩೯-೩೦) ; ಮೋಟ ಮೊಂಡರಿಗೆ ಕುರುಡ ಕುಂಟರಿಗೆ ಬಂಡುಗೆಲೆವುದು ಸಹಜ (ಭೃಂಗಸೂ. I, ೯೬). [ಬಂಡು$_3$ + ಕೆಲೆ]

**ಬಂಡುಣ್** (ಕ್ರಿ). ಜೇನನ್ನು ಕುಡಿ ; ಮಕರಂದವನ್ನು ಹೀರು ; ಅಲರಂ ನೋಯಿಸದೊಯ್ಯನೊಯ್ಯನಳಿಗಳ್ ಬಂಡುಣ್ಬುವು (ಕಿಶಶ. ೩-೬೦) ; ಕೊಡುತಿರ್ಪ ರಥಾಂಗಂ ನಲಿದಾಡಿ ನರ್ತಿಪ ನವಿಲ್ ಬಂಡುಂಬ ಪೆಣ್ದುಂಬಿ (ಸುಕುಮಾ. ೦-೬೩) ; ಮಾಳತಿಯೊಳ್ ಬಂಡುಂಡ ಮದಾಳಿಯನಳಿಮಾಲೆ ಎಱಗಿ ಬಂಡುಣ್ಬವೊಲ್ (ಗಿರಿ. ೯-೦೫೨). [ಬಂಡು$_3$ + ಉಣ್]

**ಬಂಡುಣಿ** (ನಾ). ಹೂವಿನ ರಸವನ್ನು ಆಹಾರವಾಗಿ ಉಳ್ಳುದು ; ದುಂಬಿ : "ಅಲರ್ವಕ್ಕಿ, ಬಂಡುಣಿ, ಪಱಮೆ . . . ಮುಯ್ಯೆರಡಡಿ—ಈ ೭ ಭ್ರಮರಂ" (ಶಬ್ದಸಾ. ೩೩-೦೯೮) : ಬಂಡುಣಿಗಳೆಱವ ಮೃಗಂಪು ಸೊಗಸಲೊರ್ಪಳ್ಬಾಲೆ ಕಣ್ಣೆಸೆದಳು (ಸೌಂದಕ್ರ. ೦೭-೩೩) : ರಾರಾಜಿಪ ಲೋಚನ ಕೈರವದೊಳು . . . ನೃಪತಿಯ ಚಾರುನಯನಮಾಶಿಲಗ್ನಂಬಡೆದುವು ಬಂಡುಣಿವೆಱೆಯಂತೆ (ಜಯುಕಾ. ೩-೦೦) ; ಅವಳಾಡಿದ ನಾಲ್ಕಾರು ಇನಿಮಾತುಗಳನ್ನು ಅವನು ಬಂಡುಣಿಯಂತೆ ಅರ್ತಿಯಿಂದ ಹೀರಿದ (ಕುಂಪಾ. ೩೭). [ಬಂಡುಣ್ + — ಇ$_3$]

**ಬಂಡುಣಿಗುರುಳ್** (ನಾ). ತುಂಬಿಯಂತೆ ಕಪ್ಪಾದ ಕೂದಲು ; ಭ್ರಮರಕುಂತಳ : ಹರಿಣಿಗಣ್ಗಳ ಬಂಡುಣಿಗುರುಳ್ಗಳ ವರಪಿಕಾಲಾಪದ . . . ಆ ಲಲನೆಯನೀಕ್ಷಿಸಿದೆನು (ಪ್ರಭುಲಿಂ. ೯-೦೯). [ಬಂಡುಣಿ + ಕುರುಳ್$_1$]

**ಬಂಡುಣಿವೆದೆಯ** (ನಾ). ತುಂಬಿಯನ್ನು ಬಿಲ್ಲಿನ ಹೆದೆಯಾಗಿ ಹೊಂದಿರುವವನು ; ಮನ್ಮಥ : "ಇಂಗೋಲ್ವಿಲ್ಲಂ, ಬಂಡುಣಿವೆದೆಯಂ . . . ಗಿಳಿದೇರಂ— ಇವು ೧೩ ಕಾಮದೇವಂಗೆ ಪೆಸರ್" (ಶಬ್ದಸಾ. ೯೭-೦೩) ; ದಿಂಡುದೊಡೆಯ ಮಿಂಡಿಯರ್ ಬಂಡುಣಿವೆದೆಯನ ದಂಡಾಳ್ಗಳೆನೆ ಪಿಂಡೆಟ್ದಲ್ಲಿಗಲ್ಲಿಗೆ ಸಂಚರಿಸಿ (ರಾಜಶೇಖ. ೦೨೨-೨೬). [ಬಂಡುಣಿ + ಪೆದೆ + — ಅ$_7$]

**ಬಂಡುಣಿಸು** (ನಾ). ಹೂವಿನ ಜೇನಿನ ಸೇವನೆ : ಕೆಂದಾವರೆಯ ಬಂಡುಣಿಸಿಗೆಳಸಿಯೈತಂದಿಹ ಮದಹಂಸೆಯಂತೆ (ಕಂಪಪು. ೯-೨೨). [ಬಂಡು$_3$ + ಉಣಿಸು$_1$]

**ಬಂಡುಬಾಳು** (ನಾ). = ಬಂಡಬಾಳು : ಆತ ತನ್ನ ಬಂಡುಬಾಳನ್ನು ನೆನೆದು ದುಃಖಿಸಿದನು (ಕೂ). [ಬಂಡು$_3$ + ಬಾಳು$_2$ (< ಬಾೞ್$_2$)]

**ಬಂಡುಮಾತು** (ನಾ). ನಾಚಿಕೆಯಿಲ್ಲದ ಮಾತು ; ಲಜ್ಜಾಸ್ಪದವಾದ ನುಡಿ: ಕಂಡ ನಾರಿಗಿಚ್ಛೈಸುವ ಲಂಡಗೆ ಪುರಾಣವೇಕೆ ಬಂ[ಪಾಠಾಂ. ಭಂ]ಡುಮಾತಿನ ಕವಿಯು ಬಹುಪಾಂಡಿತ್ಯವೇತಕೆ (ಪುರಂದ. ೦-೩೦-೩). [ಬಂಡು$_3$ + ಮಾತು$_1$]

**ಬಂಡುವೋಗು** (ಕ್ರಿ). ನಾಚಿಕೆಗೆ ಈಡಾಗು ; ಲಜ್ಜೆಗೊಳಗಾಗು : ಬಿತ್ತಲ್ಲದದು ಫಲದೊಳೆಱಪಿತ್ತೆಂಬ ನಾಣ್ನುಡಿಯಂತೆ ತಪದಿಂದಂ ಗುಣದಿಂದಂ ಪುರದೊಳ್ ಪಲವುದಿವಸಂ ಮೆಚ್ಚಾಗಿರ್ದಲ್ಲಿಯೆ ಬಂಡುವೋದ್ಯೆ (ರಮಾರಮ್ಯ. ೬-೦೨೬). [ಬಂಡು$_3$ + ಪೋಗು$_1$ (< ಪೋ$_1$)]

**ಬಂಡುಸೋನೆ** (ನಾ). ಜೇನಿನ ಮಳೆ : ಕಣ್ಮಲರ್ಗಳಿಂ ಸುರಿಯುವ ಬಂಡುಸೋನೆಗೆಣೆಯೊಂದಿದ ಕಣ್ಬನಿ (ಪ್ರಮೂಪು. ೪-೩೩). [ಬಂಡು$_3$ + ಸೋನೆ$_1$]

**ಬಂಡುಳಿಕೆ ?** (ನಾ). (?) : ಕೌರ್ವಿಲ್ಲ ಪಳಿವ ಪುರ್ಬುಗಳಿಯೆ ಬಂಡುಳಿಕೆಗಳ ನಿಳಿಕೆಗೈವ ಸುಕ್ಕುಗುರುಳುಗಳೆಳದಾಡೆ (ರುಕ್ಮಾಂಗ. ೩-೦೪). [?]

**ಬಂಡೆ$_1$, ಭಂಡೆ$_1$** (ನಾ). ದೊಡ್ಡ ಗಾತ್ರದ ಕಲ್ಲು: ಆ ಕೆಱೆಯವೊಳಗಣ ಬಣ್ಡೆಯ × × × ದ ಕಂಡೇಶ್ವರದೇವರ ಅಮೃತಪಡಿ (ಎಕ. XII. ಮಧುಗಿ. ೦೦೬-೯; 1503) ; ಪ್ರವಾಹದಲ್ಲಿ ಈಜಿ ಶಕ್ತಿಗುಂದಿ ತೇಲಿಹೋಗುತ್ತಿದ್ದೆ. ಈ ದಿನ ಬಂಡೆಯೊಂದು ಸಿಕ್ಕಿತು (ರಾಜೂಜ. ೦೦೦). **ಭಂಡೆ$_1$** : ಬಡಗಲು ಕಲ್ಲ ಭಣ್ಡೆಯ [ಬಟ್ಟೆ]ಯೇ ಮೇರೆ (ಸೌಇಇ. XI–ii, ೦೪೦-೩೦; 1097) ; ಬಡಗ ಯಿಪಾಶಾನ್ನ ಭಂಡೆದ ಗಡಿ (ಎಕ. VII. ಶಿವಮೊ. ೦-೦೦೨; 1513). [ದೇ. ‖ ತೆಲು. ಬಂಡ]

**ಬಂಡ್ಮೆ** (ನಾ). ಶೀಲವಿಲ್ಲದವಳು ; ಕುಲಟೆ : ರಂಡೆಗೆ ಗಂಡನಿಲ್ಲ ಬಂಡೆಗೆ ನೀತಿಯಿಲ್ಲ (ಗಾದೆ). 'ಭಂಡ್ಮೆ' ಪರಾ. [ಸಂ. ಬಂಡಾ./ಪ್ರಾ. ಭಂಡೀ]

**ಬಂಡ್ಮೆ** 'ಬಂಡ್ಮೆ' ನೋ.

**ಬಂಡೆಕಲ್ಲು** 'ಬಂಡೆಗಲ್ಲು' ನೋ.

**ಬಂಡೆಗಲ್ಲು**, ಬಂಡೆಕಲ್ಲು (ನಾ). = ಬಂಡೆ$_1$ : ಕೊಪ್ಪಳದ ಹತ್ತಿರ . . . ಬಂಡೆಗಲ್ಲುಗಳ ಮೇಲೆ ಅಶೋಕನ ಶಾಸನಗಳು ಇರುತ್ತವೆಂದು ಇತ್ತೀಚೆಗೆ ತಿಳಿಯ ಬಂದಿದೆ (ಕರ್ನಾಟ. ೨) ; ಬಂಡೆಗಲ್ಲಿನ ನಿವೇಶನದಲ್ಲಿ ನೀರು ಬೇಗ ಹರಿದುಹೋಗುವುದು (ಗೃಕಲ. ೦೩೩). **ಬಂಡೆಕಲ್ಲು** : ಅಂಗಿ ವಸ್ತ್ರಗಳನ್ನು ನೊರೆಕಾಯಿ ಹಾಕಿ ಬಂಡೆಕಲ್ಲಿನಲ್ಲಿ ಒಗೆದಾಯಿತು (ಕಣ್ಕೊ. ೯೭). [ಬಂಡೆ$_1$ + ಕಲ್ಲು (< ಕಲ್$_3$)]

**ಬಂಡೆಬ್ಬಿಸು** (ಕ್ರಿ). = ಬಂಡುಗಟ್ಟು : ನಿಂದ್ಯವಾದ ಸಂಗತಿಗಳ ವಿರುದ್ಧ ಬಂಡೆಬ್ಬಿಸುವ ಧೈರ್ಯವು ನಮ್ಮ ಜನಕ್ಕೆ ಬರುವವರೆಗೆ ದೇಶದ ಉದ್ಧಾರ ವಾಗಲಾರದು (ಜ್ಯೋಕಿಶಾ. ೨೩) ; ಇಡೀ ದೇಶದ ಭಕ್ತರ ದಳವು ಬಂಡೆಬ್ಬಿಸಬಹುದು (ಕೋಡಕಿ. ೯೯).

[ಬಂಡು$_4$ + ಎಬ್ಬಿಸು (< ಎಟ್ಬಿಸು)]

**ಬಂಡೇಳು**, ಬಂಟೇಳು (ಕ್ರಿ). = ಬಂಡುಗಟ್ಟು : ಬಂಡೆದ್ದು ಗಿರಿಪಟ್ಟ ನೆರೆ ಸೂರೆಹೋದಾವು (ಎಂಕಾ. ೦೨೩-೦). **ಬಂಟೇಳು** : ಎಂಟುಸಾವಿರ ದೈನುಬ್ಬರೆನಗಿಲ್ಲಿ ನಾಂಟಿರುತಿಹ ಪಕ್ಷದವರು ಉಂಟು ನಿಮಗೆ ಲಕ್ಷಪಕ್ಷ ನೀವದಱಿಂದ ಬಂಟೆದ್ದಿರೆಂದನಾ ಚಕ್ರಿ (ಶರಿಕ. ೪೩-೨೨).

[ಬಂಡು$_4$ + ಏಳು$_1$ (< ಏೞ್$_1$)]

**ಬಂತಿ** 'ಪಂತಿ' ನೋ.

**ಬಂತಿಗಟ್ಟು** 'ಪಂತಿಗಟ್ಟು' ನೋ.

**ಬಂತಿದಲೆಯ** (ನಾ). ಸಾಲು ತಲೆಗಳುಳ್ಳವನು ; ದಶಕಂಠ ; ರಾವಣ : ಇಂತು ಬಂತಿದಲೆಯಂ ಚಲ್ಲಣಮನಿಟ್ಟು, ದಟ್ಟಿಯಂ ಬಿಗಿದು . . . ಪೊಱಮಡುವುದುಂ (ಅದ್ಭುಕ. ೪೩-೦೭).

[ಬಂತಿ (< ಪಂತಿ) + ತಲೆ$_1$ + – ಅ$_7$]

**ಬಂತಿದೇರ** 'ಪಂತಿದೇರ' ನೋ.

**ಬಂದ್** 'ಬಂದು$_2$' ನೋ.

**ಬಂದ**$_1$ 'ವರ್' ಪರಾ.

**ಬಂದ**$_2$ 'ಬಂದು$_2$' ನೋ.

**ಬಂದಂಬಿಡು** (ಕ್ರಿ). ಬಂಧನವನ್ನು ತೊರೆ ; ವ್ಯಾಮೋಹವನ್ನು ತ್ಯಜಿಸು : ಮನಸಂ ಸ್ಥಿತಿಟ್ಟು ಬಾಟ್ಟುಚ್ಛ್ವಾಸೆಯಿಂ ಬಂದಂಬಿಟ್ಟು ವಿಮೋಹಮಂ ಬಿಸುಟು ಕಣ್ಣಂ ಮುಚ್ಚಿ (ಧರ್ಮಾಮೃ. ೯-೮೨).

[ಬಂದ$_2$ (<ಬಂದು$_2$) + ಬಿಡು$_1$]

**ಬಂದಗಾವುಂಡ** (ನಾ). ಒಬ್ಬಾತನ ಹೆಸರು: ಇದಕ್ಕೆ ಸಾಕ್ಷಿ . . . ಬಿಜಯಿತಗಾವುಣ್ಡನುಂ ಬನ್ದಗಾವುಣ್ಡನುಂ (ಎಕ. XI. ಹೊಳಲ್ಕೆ. ೩೦-೦೦; 964).

[ಬಂದ$_1$ + ಗಾವುಂಡ (<ಗಾವುಂಡ)]

**ಬಂದಣಿಕೆ**, ಬಂದಣಿಗೆ, ಬಂದನಿಕೆ, ಬಂದನಿಕ್ಕಿ, ಬಂದರಿಕೆ, ಬಂದಲಿಕೆ, ಬಂದಳಿಕೆ, ಬಣತಿಗೆ, ಬತ್ತಣಿಕೆ, ಬದಣಿಕೆ, ಬದನಿಕೆ, ಬಿಂದಣಿಕೆ (ನಾ). ೧. ಬೇರೊಂದು ಸಸ್ಯವನ್ನು ಅವಲಂಬಿಸಿ ಜೀವಿಸುವ ಸಸ್ಯ ; ಪರಾವಲಂಬಿಸಸ್ಯ: ಎಲವದ ಬಂದಣಿಕೆಯನಿಂತಲಸದೆ ಕುಡಿಸಲ್ಕೆ(ಲ್ತೆ) ನಾಯ ವಿಷಮುಟಿಗುಂ (ಕವುದ. ೦೪-೩೩) ; ಅಶ್ವತ್ಥವೂಲವನಾದರೂ ಅದಱ ಬಂದಣಿಕೆಯನಾದರೂ ಶುಭದಿನದಲ್ಲಿ ತಂದು ಹಾಲಲ್ಲರೆದು ಋತುಸ್ನಾತೆಯಾದ ಸ್ತ್ರೀಗೆ ಕುಡಿಯ ಕೊಡಲು ಗರ್ಭ ನಿಲ್ಲುವುದು (ವೃದ್ಧಶಾ. II. ೪೪) ; ತನ್ನಂಥ ನಿಸರ್ಗವಿರೋಧಿವ್ಯಕ್ತಿಯ ಕತ್ತಿಗೆ ಆ ಬಳ್ಳಿಯೇ ಬಂದಣಿಕೆಯಾಗಲೂ ಬಹುದು (ಪಾತ್ಸಲ್ಲಿ. ೩೦೩). ೨. ಒಂದು ಬಗೆಯ ಪರಾವಲಂಬಿಸಸ್ಯ ; ಜೀವಂತಿಕೆ : "ಬಂದಣಿಕೆ, ಜೀವಂತಿಕೆ, ವೃಕ್ಷರುಹೆ, ವಂದೆ, ವೃಕ್ಷಾದನಿ" (ಚಿಕಣ. ೬). ೩. ಒಂದು ಸ್ಥಳದ ಹೆಸರು : ಬನ್ದಣಿಕೆಯು ಸತ್ತಱರ ನಾಗಾರ್ಜ್ಜುನನ ನಾಳ್ಗ್ಗವುಣ್ಡಿಗೆಯೆ (ಎಕ. VIII. ಸೊರಬ. ೨೩೯-೬; ೯೦೦); ಬಂದಿರುಳೊಳ್ಪಾನುವರಂ ತಂದಿಕ್ಕಿದ ಪುಷ್ಪಮಾಲೆ ನಿಮಿರ್ದುದು ಪಾದಕ್ಕೆಂದೊಡೆ ಭುವನಕ್ಕಚ್ಚರಿ ಬಂದಣಿಗೆ[ಪಾಠಾಂ. ಳಿಕೆ]ಯ ಶಾಂತಿನಾಥತೀರ್ಥಾತಿಶಯಂ (ಸಮುಕ. ೨-೩೦).

**ಬಂದಣಿಗೆ** : ೧. ಲೊಕ್ಕಿಯ ಬಂದಣಿಗೆಯುಮಂ ಚಕ್ಕನೆ ಪೂಸಲಿಲ್ಲ ದಿರ್ದೊಡೆರ್ಕೆಯ ಪಾಲಂ ಪೊಕ್ಕಿರಲೆಱೆ ನಿಬಿಡಮೆನಲ್ ಸಿಕ್ಕಿದ ಮುಳ್ಳಲಗು ಪಾದದಿಂ ಪೊಱಮಡುಗುಂ (ಕಮುದ. ೨-೨೦೬). ೨. "ಪರರೋಹಿಣೀ – ಬಂದಣಿಗೆ(ಕೆ)" (ಹಿತಂ. ೯೩). **ಬಂದನಿಕೆ** : ೩. ಬಲ್ಲ ಬನ್ದ ಬನ್ದನಿಕೆಯ ತೀರ್ತ್ಥದೊಳ್ಮೊಱದುದಚ್ಚರಿಯಂ (ಎಕ. VII. ಶಿಕಾರಿ. ೨೦೯-೨೫; 918).

**ಬಂದನಿಕ್ಕಿ**: ೩. ಬನ್ದನಿಕ್ಕಿಯು ನಟ್ಟಮುಣ್ಡರ್ ತಮ್ಮೊಳೆಱೆಯೆ (ಎಕ. VIII. ಸೊರಬ. ೩೩೦-೨; ಸು. ೯೬೦ ?). **ಬಂದರಿಕೆ**: ೨. ಬಂದರೆ; ಬಂಡಾರೆ, ಹಂಗರಿಕೆ, ಬಂದರಿಕೆ (ವೃಕ್ಷಿನಿ. ೩೨-೩೦೪). **ಬಂದಲಿಕೆ** : ೧. ಗಂಡಸು ಗಳಿಸಬೇಕು. ಪೆರಸೈಟ್ (ಬಂದಲಿಕೆ)ನ ಹಾಗೆ ಬದುಕಬಾರದು (ಶಿಮುಕ. ೨೩೦). ೩. × × × ಮಾಸ ಸುದ್ಧ ಗುರು ಈ ದಿನದ ಹುಣ್ಣಿವಗೆ ಬನ್ದಲಿಕೆಯಾಗಿ ಕೊಡಕಣೆಯ ಬಡಗಿ ಸಾದೋಜನ ಕಳ್ಳರು ಶಾಗಿ ತಳಿರ್ದ್ದು ಸುರಲೋಕಪ್ರಾಪ್ತನಾದ (ಎಕ. VIII, ಸೊರಬ; ೦೭-೩; 1371). **ಬಂದಳಿಕೆ** : ೧. ವಿಜಯನಗರದ ಪ್ರೌಢ ದೇವರಾಯನ ಕಾಲದ ನೂರೊಂದು ವಿರಕ್ತರ ತರುವಾಯ ಶರಣಸುರ ಭೂಜವನಕ್ಕೆ ಮತ್ತೆ ಬಂದಳಿಕೆ ಬಂದಿತು (ಶರಿಕ. ೬೦೭); ಮಾನವು ಗೆದ್ದಲು ಒಲವಿನ ವೃಕ್ಷಕೆ ಚಾಡಿಯ ಮಾತು ಬಂದಳಿಕೆ (ಕೊರ್ರಪೀ. ೦೦೨-೯೩). ೨. "ವಂದಾ – ಬಂದಳಿಕೆ" (ಓಷಧಿ. ೦೯೩). ೩. ತತುಸಮಯುಲ್ಲಿ ಬಂದಳಿಕೆಗೆತ್ತಿ ನಡೆದಲ್ಲಿ (ಎಕ. VII. ಶಿಕಾರಿ.೦೬೦-೫; ಸು. 1160). **ಬಣತಿಗೆ** : ೧. ಒಣಗಿದ ಮರ ಎಲೆಯಿಲ್ಲದ ಬಳ್ಳಿ ಬಣತಿಗೆ ಪುಟ್ಟದ ವನದಲ್ಲಿ [ಪಾಠಾಂ. ಒಣಗಿದ ಮರದಲಿ ಇಲ್ಲದ ಬಳ್ಳಿ ಬಣತಿಗೆ ಹುಟ್ಟಿದವನ ತಳ್ಳಿ] (ಶಿರಂದ. ರಾ. ೯-೦೬-೩). **ಬತ್ತಣಿಕೆ** : ೨. "ವಂದಾ, ವೃಕ್ಷಾದನಿ, ವೃಕ್ಷರುಹಾ, ಜೀವಂತಿಕಾ_ಈ ೪ ಬತಣಿಕೆ" (ವಾಕಾರ್ಣ. ೦೦೯). **ಬದಣಿಕೆ** : ೧. ವೀಳೆಯ ದೆಲೆಯ ಬದಣಿಕೆಯು ಭರಣಿನಕ್ಷತ್ರದಲ್ಲಿ ತಂದು ಕೈಗೆ ಕಟ್ಟುವುದು (ಸಕಲ. ೦೨೦). **ಬದನಿಕೆ** : ೧. ಇನ್ನೊಂದು ವರ್ಗದ ಗಿಡಗಳು ಬದನಿಕೆಯಂಥವು (ಜಾಲಶ. I. ೩೦೩); ಗಿಡಕ್ಕಂಟಿದ ಬದನಿಕೆಯಂತೆ ಬೆಳೆಬೆಳೆದು (ಹುಕ್ಕಣ. ೩). ೨. "ಬದನಿಕೆ (ಬಂದಣಿಕೆ) – ವಂದಾಕಾ" (ಕದ್ಯಕೋ. ೨೪) ; "ಕಳುಬಳ್ಳಿ, ಅವುರಬಳ್ಳಿ, ಬದನಿಕೆ . . . ಶಾವಿಗೆಬಳ್ಳಿ" (ಸಸ್ಯಪ. ೪೩); ೪. ಒಂದು ಬಗೆಯ ಗಿಡದ ಬೇರು : ಇಟ್ಟ ಕಣ್ಣಿನ ಬೊಟ್ಟು . . . ಪಸುರಿನ ಬಟ್ಟ ಗುಪ್ಪಸ . . . ಮೊಟ್ಟೆದೆಕ್ಕಡ ತೋಳ ಬದನಿಕೆ ತೊಟ್ಟ ಮಾಂದಳಿರೆಲೆಯ ಚಲ್ಲಣ ದಿಟ್ಟಗಚ್ಚರಿದೋರೆ ಬಂದರು . . . ಶಬರಕೋಟಿಗಳು (ಅವಂರಾ. ೩-೩-೩). **ಬಿಂದಣಿಕೆ** : "ಮಾರತರುಹವ್ಮನಲು ಬಿಂದಣಿಕೆ [ಪಾಠಾಂ. ಮಾರತರುತರುಹವೆನೆ ಬಂದಣಿಕೆ]ಯಕ್ಕು" (ಮಂಗರಾ. ೪೩-೪೦).

[ <ಸಂ. ವಂದಾಕ, ವಂದಾಕಾ, ವಂದಾಕೀ./ತುಳು. ಬಂದಣಿಗೆ, ಬಂದನಿಗೆ; ತೆಲು. ಬದನಿಕ, ವದನಿಕ]

**ಬಂದಣಿಗೆ** 'ಬಂದಣಿಕೆ' ನೋ.

**ಬಂದನಿಕೆ** 'ಬಂದಣಿಕೆ' ನೋ.

**ಬಂದನಿಕ್ಕಿ** 'ಬಂದಣಿಕೆ' ನೋ.

**ಬಂದಮಿಣಿ** (ನಾ). ಕಾಲಿಗೆ ಕಟ್ಟಿಕೊಳ್ಳುವ ಹಗ್ಗ : "ಬಂದಮಿಣಿ– ಈಳಿಗರ ಈಚಲಗಿಡ ಏರುವ ಸರಹಗ್ಗ" (ಜಾನಪಕೋ.೨೦).

[ಬಂದ$_2$(<ಬಂದು$_2$) + ಮಿಣಿ$_2$ (<ಮಿಳಿ$_2$)]

**ಬಂದರಿ** 'ಬಂದಾರಿ' ನೋ.

**ಬಂದರಿಕೆ** 'ಬಂದಣಿಕೆ' ನೋ.

**ಬಂದರು** (ನಾ). ಕರಾವಳಿಯಲ್ಲಿ ಹಡಗಿನಿಂದ ವಸ್ತುಗಳನ್ನು ಇಳಿಸುವ ಹಾಗೂ ಹಡಗಿಗೆ ತುಂಬುವ ಸ್ಥಳ; ಹಡಗುನಿಲ್ದಾಣ; ರೇವು: ಹಡಗುಗಳು ನಿಲ್ಲುವುದಕ್ಕೆ ಬೊಂಬಾಯಿ ಬಳಿಯಲ್ಲಿರುವಷ್ಟು ಅನುಕೂಲವಾದ ಮತ್ತು ವಿಸ್ತಾರವಾದ ಬಂದರು ಇಂಡಿಯಾದಲ್ಲಿ ಎಲ್ಲಿಯೂ ಇಲ್ಲ (ಕೊಗೀಟೀಕ.೭೩); ಪರವೂರುಗಳಿಂದ ಬಂದ ಮಂಜಿಗಳು ಊರ ಬಂದರಿನಲ್ಲಿ ತಂಗುವುದು ಸ್ವಾಭಾವಿಕ (ಜಾಹುಕ.೩೬).
[←ಪಾರ., ಹಿಂ. ಮರಾ. ಬಂದರ್]

**ಬಂದರೆ** 'ಬಂದಾರಿ' ನೋ.

**ಬಂದರಿಕೆ** 'ಬಂದಣಿಕೆ' ನೋ.

**ಬಂದಳ** (ನಾ). ಅಗಲಬಾಯಿಯ ಪಾತ್ರೆ: ಬಂದಳ ಸೋರೆ ಕರಗ ಹರವಿಯ ಮೊಗೆ ಬಿಂದಿಗೆ ಗಡಿಗೆ ಗುಡಾಣ (ಅಪುಚಾ. ೩-೦೩೨).
[←ತೆಲು. ಬಂದಳ, ಬಂದಲ, ಬಂದಡ]

**ಬಂದಳಿಕೆ** 'ಬಂದಣಿಕೆ' ನೋ.

**ಬಂದಾ** (ನಾ). ಚಿಲ್ಲರೆಯಲ್ಲದುದು: ಈ ಚಿಲ್ಲರೆ ಕೊಟ್ಟು ಬಂದಾ ತೆಗೆದುಕೊಂಡು ಬಾ (ರೂ). [←ಪಾರ. ಬಂದ್; ಮರಾ. ಬಂದಾ]

**ಬಂದಾರಿ, ಬಂಡಾರೆ, ಬಂದರಿ, ಬಂದರೆ, ಬಂದುರೆ** (ನಾ). ೧. ಒಂದು ಬಗೆಯ ಮರ: ಬೆಲ್ಲವತ ಬಂದಾರಿ ಸಾವೇರಿಯಿಂ ತಡಸು . . . ತಾಱ ಬೋರೆಗಳೆಸೆದವು (ಪ್ರಬಪು. ೦೩-೦೩). **ಬಂಡಾರೆ:** ೨. ಒಂದು ಬಗೆಯ ಗಿಡ: ಬಂದರೆ, ಬಂಡಾರೆ, ಹಂಗರಿಕೆ, ಬಂದರಿಕೆ (ವೃಶಿಗ. ೩೨-೬೦೬). **ಬಂದರಿ:** ೨. ಅಲ್ಲಿಂದಂ ಮೂಡಲು ಬಂದರಿಗಿಡುವಿನ ಹಿಟ್ಟುಗಲ್ಲು ಬಂಡೆ (ಕಶಾಇ. IX–ii, ೩೩೩–೪೬; 1531). **ಬಂದರೆ:** ೨. 'ಬಂದಾರೆ' ಉಲ್ಲೇಖದ 'ಮೈಶಿಗಿ. ೩೨–೬೦೮' ಪ್ರಯೋಗವನ್ನು ನೋಡಿ. **ಬಂದುರೆ:** ೨. (ವೃಶಿಗ. ೬೦–೦೨೦೩).
[←ತೆಲು. ಬಂದಾರು, ಬಂಡಾರು. / ಮರಾ. ಬಂದಾಟೀ]

**ಬಂದಿ**$_1$ (ನಾ). ೧. ಸೆರೆ; ಬಂಧನ; ಕಟ್ಟು: ಎನಗಿಂದಿಂಗಾಱತಿಂಗಳ್ ಸಮನಿಸಿದಪುದಿಲ್ಲಿಲ್ಲಿಯುಂ ಬಂದಿಮಂಚಲ್ (ಶಾಳಬಪು. ೬-೦೬); ಅಗ್ಗಳದ ಬಾಣದ ಬಂದಿಯಲಿ ಸಿಲುಕಿತ್ತು ರಿಪುಸೇನೆ (ಕುವ್ಯಾದ್ರೋ. ೦೯-೩೫); ರಾಘವಂ . . . ದೇವರ್ಕಳ ಬಂದಿಯಂ ಬಿಡಿಸಿ . . . ಅರಸುಗೆಯ್ವುತಿರ್ದಂ (ರಾಪಚಾಕ. ೦೭-೦೬). ೨. ಸೆರೆಮನೆ; ಬಂದೀಖಾನೆ; ಜೈಲು: ಬಂದಿಯೊಳಗಿದ್ದವರ ಬಂಧನವ ಬಿಡಿಸುವಾ ಬಂದಿಕಾರಾ ಶ್ರಾವಣಾ (ಗಂಗಾಕ. ೩೬-೨). ೩. ಹತೋಟಿ; ಹಿಡಿತ; ಅಂಕೆ: ತಪವ ಮಾಡಿ ವಿಕಾರಿಗಳು ಬ್ರಹ್ಮಂಗೆ ಬಂದಿಯನಿಕ್ಕಿದರು ಬಳಿಕ (ಕುವ್ಯಾಕ. ೬-೦೩); ಮಾಯಾಗುಣವಿಕಾರದ ಬಂದಿಯಲಿ ತಲೆ ಸಿಲುಕಿ ನರಕದಲಾಳುತಿಹರು (ಶಿಭಾಗ. ೪-೪-೨೩). ೪. ಸೆರೆ ಸಿಕ್ಕಿದ ವ್ಯಕ್ತಿ; ಸೆರೆಯಾಳು: ಭೂನಾಯಕಂ ಬಿಡಿಸೆ ಬಿಟ್ಟ ಬಹು ಬಂದಿಯಂ ಕರಮೆ . . . ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಪು.೪-೭ ರಗಳೆ); ಬಂದಿಯ ಹಿಡಿದಾತನ ತಂದೆಯ ತಲೆ ಹೋಹುದೆಂದು ಪಿತರಾಚಾರವೆಂದು ವೃಥಾ ಸಾವನೇ (ಶರಪಶ. ೦೬೩-೭೭೩); ನೀನು ಇಲ್ಲಿ ಬಂದಿ ಎಂಬುದನ್ನು ಅರಿತಿರುವಿಯಾ? (ರೌಂಕ್. ೯೩). ೫. ಸೆರೆಹಿಡಿಯುವವನು: "ಪ್ರಗ್ರಹಃ, ಗ್ರಾಹಕಃ, ವಂದೀ – ಈ ೩ ಬಂದಿ" (ಪಲಾಯು. ೦೨೫-೩೪). ೬. ತಡೆ; ಅಡ್ಡಿ; ಪ್ರತಿಬಂಧ: (ಕ). ೭. ಕೊಳ್ಳೆ; ಲೂಟಿ; ಸೂರೆ: ಅಳಿಗಳ ದಳವುಳಂ ಬಸಂತನ ಬಂದಿ ಬಾಲಚೂತನ ಭಯಂ ಮಳಯಾನಿಳನ ಗಾಸಿ (೧೧೪. ೪-೦೦೬ ವ); ಕಳವು ಹುಸಿ ಹಾದರ ವಿರೋಧ ಸ್ಖಲಿತವಾಜಡಿ ಬಂದಿ ವಳದುಳ ಬೆಳಗುವತೆಯನ್ನಾಯ . . . ಅಡಗಿದವೀ ಯುಧಿಷ್ಠಿರ ನೃಪನ ರಾಜ್ಯದಲಿ (ಕುವ್ಯಾಕ. ೬-೦೦); ಕಿಸುರು ಗಾವಳಿ ಬಂದಿ ಗಳಹತನ ಮಾವಿವೇಕಮುಸಿರಲೇನಾ ಚೆನ್ನಬಸವನಿಹ ರಾಜ್ಯದೊಳ್ ವಿಸುಕಿ ವೇವಣ್ಣಿಸುವೆನು (ಚಬಪು.೬-೪೦). ೮. ತೋಳಿಗೆ ಧರಿಸುವ ಒಂದು ಬಗೆಯ ಆಭರಣ; ವಂಕಿ: ನವರತ್ನದ ರವೆಯುದ ಬಂದಿ ವಿರಾಜಿಸು ತಿರ್ಪುದಪ್ಪಿಯಗಜೆಯ ತೋಳೆಂ (೧೧೪. ೩-೯೩); ಕಡಗ ಕಂಕಣ ಸೂಡಗ ಹೊನ್ನ ಬಳೆ ಬಂದಿ ಖಡೆಯ (ಕುವ್ಯಾಶಾಂ. ೦.೦೦೩); ಇರೋದು ನಾಗರ ಕಂಚ್ಚು, ಈ ಬಂದಿ (ಪುರಬಪು. ೩೮). ೯. ಕತ್ತಿನಲ್ಲಿ ಧರಿಸುವ ಒಂದು ಬಗೆಯ ಸರ: ನಾ ತೂಗಿ ಬಾಗಿ ನೀರು ಮೊಗೆದೆ ಮಾವಯ್ಯ ಕೊಂಡಿಸವೆದು ಬಂದಿ ಬಿತ್ತು ಘಾವಯ್ಯ (ಜಾಪು. ೦೩೪); ಕತ್ತಿನಲ್ಲಿ ಅಡ್ಡಿಕೆ, ಅಸಲಿ, ಬಂದಿ, ಜೋಮಾಲೆ (ಪುಶ್ಯ. ೪೦). [ಸಂ. ಬಂದಿ, ಬಂದೀ]

**ಬಂದಿ**$_2$ (ನಾ). ೧. ಹೊಗಳುಭಟ್ಟ; ಸ್ತುತಿಪಾಠಕ: "ಬಂದಿ–ವಂದಿನ್ = ಸ್ತುತಿಪಾಠಕ" (ಕನ್ನಕೋ. ೨೯). ೨. ಹೊಗಳಿಕೆ; ಕೊಂಡಾಟ: ಅಗ್ಗಳಿಕೆ ಮಿಗಿಸು ಮಿಗಿಲೆ ಮೋಡಿ ಬಂದಿ ಭಾರಣೆ ಬಿಂಕ ಬೆಸೆ ಚಮತ್ಕಾರಂಗಳಿಂದೆ ಸಮವಾಗೆ ಕೈದೋಱಿದಂ ವೃಷಕೇತು ಬಭ್ರುವಾಹನನ ಮೇಲೆ (ಜೈಮಿಭಾ. ೨೩-೦೩). 'ವಂದಿ'$_1$ ಪರಾ.
[ಸಂ. ಬಂದಿನ್, ವಂದಿನ್]

**ಬಂದಿಕಾರ** 'ಬಂದಿಗಾಱ' ನೋ.

**ಬಂದಿಕಾಱ** 'ಬಂದಿಗಾಱ' ನೋ.

**ಬಂದಿಕಾಱತನ** (ನಾ). ಬಂಧನದಲ್ಲಿಡುವ ಗುಣ: ಕೊಂದು ಕಟ್ಟಿದಂಡವ ತಕ್ಕೊಂಬುವಂಗೆ ಅದು ಬಂದಿಕಾಱತನವೊ ಕೃಪೆಯೋ ಇದ ಬಂದವ ತಿಳಿಯಬೇಕು (ಮೋಕ್ಷಪು. ೦೫೩-೫೦೩).
[ಬಂದಿಕಾಱ (<ಬಂದಿಗಾಱ) + – ತನ]

**ಬಂದಿಕೋಲು** 'ಬಂದಿಗೋಲ್' ನೋ.

**ಬಂದಿಖಾನ** 'ಬಂದೀಖಾನೆ' ನೋ.

**ಬಂದಿಖಾನೆ** 'ಬಂದೀಖಾನೆ' ನೋ.

**ಬಂದಿಗಟ್ಟಿಸು** (ಕ್ರಿ). ತಾಳಿಯಿರುವ ಬಂದಿಯನ್ನು ಕೊರಳಿಗೆ ಕಟ್ಟುವಂತೆ ಮಾಡು; ಮದುವೆಮಾಡು: ಇಲ್ಲಿಗಾಪ್ತರನಟ್ಟಿ ಬಂದಿಗಟ್ಟಿಸನು ತನ್ನಲ್ಲಿಗೆ ಬರಲೆಂಬಸವನ್ನು ಇಲ್ಲಿ ತನ್ನಂಗಲವಸಗಿದರದೆ ಸಾಕು ಸಲ್ಲೀಲೆಯೊಳಗೀವೆನೆಂದ (ಚಚಪ. ೩೭-೩೮). [ಬಂದಿ$_1$ + ಕಟ್ಟಿಸು]

**ಬಂದಿಗಟ್ಟು** (ಕ್ರಿ). ೧. ತಾಳಿಯಿರುವ ಬಂದಿಯನ್ನು ಕೊರಳಿಗೆ ಕಟ್ಟು: ಮದುವೆಯಾಗು: ಕರಮೆಸೆವ ಸಾಕೇತನಗರದ ದೊರೆ ಸುರಥನಿಗೆ ವಜ್ರಲೇಖೆಗೆ ನೆಱ ಜನಿಸಿಯ ಸನತ್ಕುಮಾರಗೆ ಬಂದಿಗಟ್ಟಿರ್ದ ತರುಣಿ ತಾನು ಸುನಂದೆ (ಶಪಕು. ೬-೦೩). ೨. ಮದುವೆಯನ್ನು ಮಾಡಿಸು: ಇವಳವನಿಗೆ ತಕ್ಕವಳವನಿವಳಿಗೆ ವಿವರಿಸೆ ತಕ್ಕವನೆಂದು ತವೆ ಪೂಗೆಲ್ಲ ರೊಸೆದು ನಿನಗೆನ್ನನುತ್ಸವದೊಳು ಬಂದಿಗಟ್ಟಿದರು (ಕುವ್ಯಾಶಾಂ. ೨೩-೦೦೩).
[ಬಂದಿ$_1$ + ಕಟ್ಟು$_1$]

**ಬಂದಿಗಾವಲು** (ನಾ). ಸೆರೆಮನೆಯ ಕಾವಲು; ಜೈಲಿನ ಕಾವಲು: ಮುಂದಣ ಮೆಯ್ಗಾಹಿಗೊಂದನ್ನು ಕಯ್ಯುದ್ದವೀಸಿ ಹೊರನಡೆಯಿಸಿ, ಬಂದಿಗಾವಲರಿಗೆ ಕ್ಷೀಣಸ್ವರದಿಂದ ಬೆಸಗುಡುತ್ತಿರುವನು (ಪುಂಕ್ರತ. ೦೨೭-೦೪).
[ಬಂದಿ$_1$ + ಕಾವಲು (< ಕಾವಲ್$_1$)]

**ಬಂದಿಗಾಱ, ಬಂದಿಕಾರ, ಬಂದಿಕಾಱ** (ನಾ). ೧. ಬಂಧಿಸುವವನು; ಸೆರೆಹಿಡಿಯುವವನು: ನೊಂದೆವಾಶಿ ದೇವ ಸುರಕುಲಬಂದಿಗಾ[ಶಾಶಾಂ. ಕಾ]ಱನ ಕೈಯಲಕಟಾ (ಕೊರರಾ. ೦-೯-೩೩); ಅದೇಂ ಬೆಲೆವಡೆದತ್ತೊ ಚಿತ್ರಭವನಂದದ ಬಂದಿಗಾಱನಾ (ಚಕೂ. ೩-೭). ೨. ಸೂರೆ ಮಾಡುವವನು; ಕೊಳ್ಳೆಗಾರ: ಮುಂದುಂ ಪಿಂದುಂ ಸಂಧಿಸಿದ ಬಂದಿಗಾಱರ ಗೊಂದಣಮಂ ನಂದಿಪ (ರಾಪಚಾಕ. ೪೦-೨೯). **ಬಂದಿಕಾರ:** ೩. ಜೈಲಿನ ಮೇಲಧಿಕಾರಿ: ಬಂದಿಯೊಳಗಿದ್ದವರ ಬಂಧನವ ಬಿಡಿಸುವಾ ಬಂದಿಕಾರಾ ಶ್ರಾವಣಾ

(ಗಂಗಾಕ. ೩೭-೨). **ಬಂದಿಕಾಱ:** ೧. ಬಂದಿಕಾಱನಂತೆ ತೆಱಪುವಾರ್ದು ಪಿಡಿವ ಶಾಕಿನಿಯರಿಂ . . . ರಣದೇವತೆಯರಿಂದತಿಭಯಂಕರಾಕಾರಮಪ್ಪುದು (ಶಾವ್ಯಸಾ. ೩೨೯ ಕೊದ್ರಪ್ರ); ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದುಂ (ಶಂಕರಾ. ೬-೬೨ ವ) ; ಬಂದು ಕಂಡರು ಮೇಲವರಾ ಕುದುರೆಯ ಬಂದಿಕಾಱನನು ಬೇಗದೊಳು (ಕುಮಾರಾಂ. ೯-೭೪). ೨. ಸಂದ ಸುಭಟರು ಬನ್ನಿ ಸ್ವರ್ಗದ ಬಂದಿಕಾಱರು ಬನ್ನಿ (ಕುವ್ಯಾಕ. ೯-೩೦). ೩. ಕಳ್ಳ; **ತುಡುಗ:** ಕುತ್ಸಿತ ಕುಮಂತ್ರದ ಬಂದಿಕಾಱನು ಚಾಟು ಚಪಳಿಗನೆಂದು ನಾ ಮುಂದಱಿಯೆ (ಶ್ರಶಂಲೀ. ೬-೫೩). [ಬಂದಿ$_1$ + —ಕಾಱ]

**ಬಂದಿಗೃಹ** (ನಾ). ಸೆರೆಮನೆ ; ಕಾರಾಗೃಹ ; ಜೈಲು : ನನ್ನನ್ನು ಪತ್ತೆ ಹಚ್ಚುವ ಹಂಚಿಕೆ ನಿಮಗೆ ಸಿಗುವಂತಿದ್ದರೆ, ನೀವು ಈ ಪ್ರಕಾರದ ಬಂದಿಗೃಹ ರಕ್ಷಕನ—ಜೇಲರನ ಚಾಕರಿಗೆ ನಿಲ್ಲುತ್ತಿರಲಿಲ್ಲ (ಅಂಬಿಕ. ೨೪). [ಸಂ.]

**ಬಂದಿಗೆ** (ನಾ). ೧. ಆಯುಧದ ಹಿಡಿ : ಕಾವಿಲ್ಲದೆ ಕೊಡವಿಡಿವೆನೆಂಬಂತೆ ಬಂದಿಗೆಯಿಲ್ಲದೆ ಸುರಿಗಿವಿಡಿವೆನೆಂಬಂತೆ . . . ದೆಸೆಗಿಡಲ್ವೇಡ (ರವರ್ಹಮ್ಮ. ೪-೩೦). ೨. ಹಿಡಿಯುಳ್ಳ ಆಯುಧ,– ಕತ್ತಿ: ಮಡಿಸಿದ ಶೇಪನ ಬಂದಿಗೆ ಮಾರಿಯ ಮಂಡೆಯು ನಡುಘಂಟೆಯು ಮೃತ್ಯುವಿನೊಳನರವುರಿ ದೊಂಗಲ್ ಪಿಡಿದೊಣಗಲ್ಗರುಳುಳ್ಳ ಹಿಣಿಲ ಚಮರದ ಹಲಗೆಯು ಕಡುಗಲಿ ಕಣ್ಗೊಪ್ಪಿದನು (ಜಲೀಕ. ೨-೬); ಮುಗಿಲ ಹರಿಗೆಗೆ ಮಾರುತನ ಬಂದಿಗೆಯು ಹೊಯ್ಲೆನೆ ನಕುಳನೆಚ್ಚಂಬುಗಳು ಕಿಡಿ ಸೂಸಿದವು (ಕುವ್ಯಾಕ. ೨೦-೦೪).

[ ? ]

**ಬಂದಿಗೆಕೋಲು** 'ಬಂದುಗೆಗೋಲು' ನೋ.

**ಬಂದಿಗೊಳ್** (ಕ್ರಿ). **ಸೆರೆಹಿಡಿ ; ಬಂಧಿಸಂ** : ಇನಿಯನ ಬಗೆಯ ತಿಳಿದು ಬಂದಿಗೊಂಬ ಸುಗುಣೆಯರಿಹಪರದೊಳು ಸೂಱೆಗೊಂಬರು ಸೊಗದ ಸುಗ್ಗಿಯ (ಹರಿಶ. ೮-೩೦) ; ಹಸುವಂ ಬಂದಿಗೊಂಡ ಪೊಟಲ ತಳವಾಱ ರೊರ್ಮೆಗಂ ಕಟ್ಟೋಲಗದ ರಾಯನೆಡೆಗೆಯ್ದುಂದು (ರಾಮಾಶ್ವ. ೦೪೦-೦೪).

[ಬಂದಿ$_1$ + ಕೊಳ್$^{1}_{1}$]

**ಬಂದಿಗೊಳಿಸು** (ಕ್ರಿ). **ಸೆರೆಹಿಡಿ;** ಬಂಧಿಸು: ಸೌಂದರ್ಯಮನೆರ್ದೆಯೊಳ್ ಬಂದಿಗೊಳಿಸಿ (ಜಕ್ಕರೀ. ೦೪೩-೬). [ಬಂದಿಗೊಳ್ + — ಇಸು$_3$]

**ಬಂದಿಗೋಲ್**, ಬಂದಿಕೋಲು (ನಾ). ಅಂಗಸಾಧಕನು ಉಪಯೋಗಿಸುವ ದಂಡ: ಕಟ್ಟಿದ ದಟ್ಟಿ ಕೈದಳದ ಪೊಂಗಿಱುಗಟ್ಟಿಗೆ ರನ್ನ ಬಂದಿಗೋಲ್ . . . ಮನಂಗೊಳಲ್ (ಜಕಚ. ೪-೦೩೪). **ಬಂದಿಕೋಲು :** ಅಂದುಗೆ ಕಾಲೊಳು ಝಣಝಣರೆನುತಿರೆ ಬಂದಿಕೋಲನು ಕೈಯೊಳಾಂತು (ಜ್ಞಾನಕ. ೨-೩೨). [← ತುಳು. ಬಂದಿಕೋಲು]

**ಬಂದಿಗ್ರಹಣ** (ನಾ). ಕಳ್ಳನನ್ನು ಹಿಡಿಯುವುದು: ಬಂದಿಗ್ರಹಣ, ಬಲ್ಬಂದಿಕಾಱ (ಕಮುದ. ೨೪೮ ಪ್ರಹೋ) ; ವಸುಮತಿಗೆ ಬಲ್ಬಂದಿಕಾಱ ಬಂದಿ ಗ್ರಹಣ (ಕವ್ವಕ್ಕ. ೯೪). [ಸಂ.]

**ಬಂದಿನಿ** (ನಾ). ಸೆರೆಯಲ್ಲಿರುವವಳು ; ಬಂಧಿತಳಾದವಳು : ಅವಳೀಗ ಕೇವಲ ಬಂದಿನಿಯಾಗಿದ್ದಳು (ಅಂಬಿಕ. ೨೯). [ಸಂ. ಬಂದಿನೀ]

**ಬಂದಿವಡು** (ಕ್ರಿ). ಸೆರೆಯರಾಗಂ ; ಬಂಧನಕ್ಕೊಳಗಾಗು : ಸಿರಿಕಂಡದ ಕೋಟೆಕ್ಕೆಸಱೊಳ್ ಕಾಲ್ಮುಸಿದುಂ ಪಾಱುಗೆಯ್ಯಕ್ಕೆ ಬಂದಿವಟ್ಟುಂ (ರಾಮಾಶ್ವ. ೨-೨೩). [ಬಂದಿ$_1$ + ಪಡು$_1$]

**ಬಂದಿವನೆ** (ನಾ) = ಬಂದಿಗೃಹ : ಮಹಿಶೂರನಾಡೊಳ್ ಬಂದಿವನೆ ಯೊಳಿರ್ಪವರ ಸೊಗಮಂ ಕಂಡು (ಅಕ್ರಪ್ರ. ೦೦೬-೮). [ಬಂದಿ$_1$ + ಮನೆ]

**ಬಂದಿವರ್** (ಕ್ರಿ). ಬಂಧನಕ್ಕೊಳಗಾಗು; ಸೆರೆಯಾಗು: ಕೈಬಸದೊಳೊಪ್ಪಿಸಿ ತಪ್ಪದೆ ಬಂದಿವಂದುದೋ (ಜಕಚ. ೩-೦೦೩). [ಬಂದಿ$_1$ + ಪರ್]

**ಬಂದಿವಾನ** 'ಬಂದೀವಾನ' ನೋ.

**ಬಂದಿವಾೞ್** (ಕ್ರಿ). ಸೆರೆಯಲ್ಲಿರು ; ಬಂಧನದಲ್ಲಿ ಬಾಳು : ರಕ್ಕಸನೆೞ್ ಬಂದಿವಾೞ್ದಿನ್ನನೊಪ್ಪುಗೊಂಡನೆಂಬೊಂದು ಲೋಕಾಪ ವಾದದ ದೂಸಱಿಂ . . . ಕಳಿಪಿದನ್ಯೆ (ರಾಮಾಶ್ವ. ೪೦-೨೫).

[ಬಂದಿ$_1$ + ಬಾೞ್$^{1}_{1}$]

**ಬಂದಿವಾೞ್ಕೆ** (ನಾ). ಸೆರೆಯ ಜೀವನ ; ಬಂಧನದ ಬದುಕು : ಪಂಜರ ನೊಂದು ಪಕ್ಕಿ . . . ತನ್ನ ಬಂದಿವಾೞ್ಕೆಯೊಳೆ ದಿನದಿನದ ಪಾಲ್ಪಣ್ಗಳ ನಿನಿದಿನಿದಾಗಿ ಸವಿಯುತುಂ ನಿಶ್ಚಿಂತಮಿರ್ಪಂತಿರೆ (ರಾಮಾಶ್ವ. ೭೪-೩೦).

[ಬಂದಿವಾೞ್ + — ಗೆ]

**ಬಂದಿವಿಡಿ**, ಬಂದಿಹಿಡಿ (ಕ್ರಿ). ೧. **ಸೆರೆಹಿಡಿ ;** ಬಂಧಿಸು : ಮನದಿಂ ಸೆಱೆಗೆಯ್ಗಂ ಲೋಚನದಿಂ ಬಂದಿವಿಡಿಗುಮೆಂದುಂ ವನಿತಾಜನಂ (ಶಾಂತಿಪು. ೩-೦೦) ; ಅಮರ್ದು ಬಸವಣ್ಣನಂ ಬಂದಿವಿಡಿಯಲ್ಕೆಂದು ಬಱು ಮನದ ಹೊಱಮಿಭೂತಿಯನಲ್ಲಿ ಕೀಲಿಟ್ಟು (ಬಸರ. ೯-೪೨) ; ತನ್ನಬಲೆಯ ಬಗೆಯಂ ಬಂದಿವಿಡಿದು ಕೂಡಿದನಾ ಕಾದಲನು (ಜಯುಕಾ. ೯-೪೬). ೨. **ಕೊಳ್ಳೆಹೊಡೆ ;** ಸೂರೆ ಮಾಡು : ಕನ್ನಮನಿಕ್ಕುವ ಬಟ್ಟೆಗೊಳ್ವ ಸಂಚಳಿಸದೆ ಪೊಕ್ಕು ಬಂದಿವಿಡಿವಾಯಿಲಮೊಡ್ಡುವ ನಿನ್ನ ಗೊಡ್ಡಮಂ ತಿಳಿದವಧಾರಿಸು (ವರ್ಧಮಾ. ೬-೩೧) ; ಕಳಹೋದರೆ ಕನ್ನದುಳಿಯ ಹಿಡಿವೆ ಬಂದಿವಿಡಿವರೆ ನಿಮ್ಮಿಂದ ಮುಂದೆ ನಡೆವೆ ಮನಭೀತಿ ಮನಶಂಕೆಗೊಂಡೆ ನಾದರೆ ನಿಮ್ಮಾಣೆ (ಬಸವ. ೬೬೬). **ಬಂದಿಹಿಡಿ :** ೧. ಬಂದ ಹುಳುವ ಬಂದಿ ಹಿಡಿದು ಕೊಂದು ತಿಂಬುದು (ಏಕೀನೀ. ೩೪-೦೬). [ಬಂದಿ$_1$ + ಪಿಡಿ$_1$]

**ಬಂದಿವಿಡಿಹ** (ನಾ). ಸೆರೆಹಿಡಿಯುವಿಕೆ ; ಬಂಧಿಸುವಿಕೆ : "ಗ್ರಾಹಕಂ ಪ್ರಗ್ರಹವೆನಲ್ಬಂದಿವಿಡಿಹವಕ್ಕು" (ಮಂಗರಾ. ೦೩೬-೪೦). [ಬಂದಿ$_1$ + ಪಿಡಿಹ]

**ಬಂದಿಶಾಲೆ** (ನಾ). ಕಾರಾಗೃಹ ; ಸೆರೆಮನೆ : ಬಂದಿಶಾಲೆಯೊಳಕಟ ಶಿವಶಿವವೊಂದು ಕಡೆಯಲಿ ಖಚರ ಕಿನ್ನರರೊಂದು ಕಡೆಯಲಿ ಸಿದ್ಧ ವಿದ್ಯಾಧರ ಮಹೋರಗರು (ಕೌಶಿರಾ. ೦೦-೩೬) ; ಬೆಂಡವಸುರನ ರಾಣಿವಾಸದ ಮಂದಿರಂಗಳು ಹಲವು ದೇವರ ಬಂದಿಶಾಲೆ ವಿಚಿತ್ರ ಕರಣಿಕ ಮಂತ್ರಿ ಕೇರಿಗಳು (ಕೌಶಿರಾ. ೩೨-೯). [ಸಂ. ಬಂದಿಶಾಲಾ]

**ಬಂದಿಸು$_1$** (ಕ್ರಿ). ಅಡ್ಡಬೀಳು ; ನಮಸ್ಕರಿಸು : ಪಿರಿದಪ್ಪ ಪೂಜೆಯಂ ಮಾಡಿಯರ್ಚಿಸಿ ಪೂಜಿಸಿ ಬಂದಿಸಿದೊಡೆ (ವಡ್ಡಾರಾ. ೭೪-೨೬) ; ಜನಚೈತ್ಯ ವ್ರಾತಮಂ ಬಂದಿಸು ಜನಪದಪದ್ಮಂಗಳಂ ದಿವ್ಯಮಪ್ಪರ್ಚನೆಯಿಂದಂ ಭಕ್ತಿ ಯಿಂದರ್ಚಿಸು (ಅಂಪು. ೩-೭) ; ಚಂಡಮಾರಿ ಲೋಚನಗೋಚರತನುವಾಗಿ ಕುವರನಂ ಬಂಡಿಸಿ (ಯಶೋಚ. ೪-೬೨). [< ವಂದಿಸು]

**ಬಂದಿಸು$_2$** (ಕ್ರಿ). ಸೆರೆಹಾಕು ; ಬಂಧಿಸು : ರಾಜದ್ರೋಹದೇವತೆ ಬಂದಿರುಳು ತನ್ನೆದೆಯ ಮೆಟ್ಟಯೆ ಬಂದಿಸುವಳದನೇನ ಪೇಳುವೆನು (ಜೀವಂಧ. ೪-೩೦). [ಬಂದಿ$_1$ + — ಇಸು$_3$]

**ಬಂದಿಹಿಡಿ** 'ಬಂದಿವಿಡಿ' ನೋ.

**ಬಂದಿಹೊಗು** (ಕ್ರಿ). **ಸೆರೆಸಿಕ್ಕು :** ಬಂದಿಯಾಗು : ನಿಂದೆ ಹೊದ್ದದು ನಡೆವಳಿಗಳು . . . ಬಂದಿ ಹೊಗದಾಸಱು ವಿತಾಳಿಸಿ ನಿಂದಿರದು ನೆಲೆಗೊಳ್ಳದಾ ಜನವೃಂದದಲಿ ಕಟ್ಟಾಸೆ ದಶರಥನೃಪನ ರಾಜ್ಯದಲಿ (ತೊರರಾ. ೧-೩-೨೬). [ಬಂದಿ$_1$ + ಹೊಗು (< ಪೊಗು)]

**ಬಂದೀಕರಣ** (ನಾ). ಸೆರೆ ; ಬಂಧನ : ಬಂದೀಕರಣ ಮಾಡಿದ ಯಾವ ವ್ಯಕ್ತಿಯನ್ನೂ ಬಂದೀಕರಣದ ಕಾರಣಗಳನ್ನು ಸಾಧ್ಯವಾದಷ್ಟು ಶೀಘ್ರವಾಗಿ ತಿಳಿಸದೆ ಅಭಿರಕ್ಷೆಯಲ್ಲಿ ಇಡತಕ್ಕುದಲ್ಲ (ಭಾಧಾನ. ೦೨). [ಸಂ.]

**ಬಂದೀಕರಿಸು** (ಕ್ರಿ). ತನ್ನ ವಶಕ್ಕೆ ತೆಗೆದುಕೊಳ್ಳು; ಸೆರೆಹಿಡಿ; ಬಂಧಿಸು; ಕೈದು ಮಾಡು : ಮಂದಹಾಸದ ಭಾಸಮಂ ಕೊಳಲು ಚಂದ್ರಿಕೆಯ ಬಂದೀಕರಿಸಿ ಬಾಣತತಿಯ ಕುಡಿನೋಟಂಗಳಂದಮಂ ಕಂಡು ಮುನಿವೃಂದ ಮಾನಂದಮಂ ಪೊಂದಿದರು (ವೆಂಕಾರಾ. ೧-೦೬-೯).

[ಬಂದೀಕರಣ + — ಇಸು$_3$]

**ಬಂದೀಖಾನೆ**, ಬಂದಿಖಾನ, ಬಂದಿಖಾನೆ (ನಾ). ಸೆರೆಮನೆ; ಕಾರಾಗೃಹ : "ಕಾರಾ, ಬಂಧನಾಲಯಃ – ೨ ಸೆರೆಮನೆ, ಬಂದೀಖಾನೆ" (ಸಿದ್ಧಾಂತಿ. ೨೬೩); ಜಂಗಮಕ್ಕೆ ಸುಖಾಸನವನಿಕ್ಕದೆ ತಾನೆ ಗದ್ದುಗೆಯ ಮೇಲೆ ಕುಳಿತಡೆ ಬಂದೀಖಾನೆ[ಪಾಠಾಂ. ಬಂದಿಖಾನ]ಯಲ್ಲಿ ಕುಳಿತ ಸಮಾನ (ಕನ್ನಪ. ೯-೩); ಅವನನ್ನು ಬಂದೀಖಾನೆಗೆ ಹಾಕಿದ್ದೇವೆ (ಓಲಿಯೋ. ೨೬). **ಬಂದಿಖಾನ** : ಬಿಡದುಪಚರಿಸಿ ನೇಮಿಯು ಕುಂಬಳಕಾಯನೊಡೆದು ಹುಟ್ಟಿದ ರಾಯನನು ತಡೆಹನಿಕ್ಕಿಸಿದನು ಬಂದಿಖಾನದೊಳಾ ಪೊಡವೀಶ್ವರ ಸುರುತಾಳ (ಕುಮಾರಾಂ. ೦೬-೦೦೬). **ಬಂದಿಖಾನೆ** : ಮೋಹದ ಬಂದಿಖಾನೆಗೆ ಸಿಲುಕಿ ಕೆಡಬೇಡ (ಅಪಂಡಾ. ೦-೩-೩೬); ಅವನ ಕಾಲಿಗೆ ಬೇಡಿ ಹಾಕಿಸಿ ಬಂದಿಖಾನೆಯಲ್ಲಿ ಮಡಗಿಸಿ (ರಾಜೇಂದ್ರ. ೦೨೦). [← ಪಾರ. ಬಂದೀಖಾನಹ್; ಹಿಂ. ಮರಾ. ಬಂದೀಖಾನಾ]

**ಬಂದೀವಾನ**, ಬಂದಿವಾನ (ನಾ). ಸೆರೆಯಲ್ಲಿರುವವನು ; ಕೈದಿ : "ಪ್ರಗ್ರಹಃ, ಉಪಗ್ರಹಃ, ಬಂದೀ – ೩ ಸೆರೆಮನೆಯೊಳಗಿರುವವನ ಹೆಸರುಗಳು, ಬಂದೀವಾನ" (ಸಿದ್ಧಾಂತಿ. ೨೬೩). **ಬಂದಿವಾನ** : ನೀನೀ ಸಮಯದಲ್ಲಿ ಬಾರದಿದ್ದಲ್ಲಿ ನಾನೂ ನನ್ನ ಪುತ್ರಿಯೂ ಕಳ್ಳರ ಬಂದಿವಾನರಾಗುತ್ತಿದ್ದೆವು (ಚತುರ್ಥೋ. ೬೮) ; ಸಂಕೋಲೆಗಳನ್ನು . . . ವಧ್ಯರಾದ ಬಂದಿವಾನರೆಲ್ಲರಿಗೂ ಹಾಕುವ ಪದ್ಧತಿಯಿದೆ (ಸೋಲ್ರಮ. ೯೯).

[← ಹಿಂ.ಮರಾ. ಬಂದೀವಾನ್]

**ಬಂದೀವಾಸ** (ನಾ). ಸೆರೆಮನೆ ವಾಸ ; ಜೈಲಿನ ವಾಸ : ಅವನ ಬಂದೀವಾಸದ ಸಮಯದಲ್ಲಿ ಅವನು ತನ್ನೊಬ್ಬ ಗೆಳೆಯನಿಗೆ ಚೀನಾ, ಹಿಂದೂಸ್ಥಾನಗಳ ವಿಚಾರವನ್ನು ಬಣ್ಣಿಸಿದ್ದನು (ಶಾಂಶ್ರ. III,೦೨೯). [ಸಂ.]

**ಬಂದು₁** 'ಪರ್' ಪರಾ.

**ಬಂದು₂**, ಬಂದ್, ಬಂದ್ಮ, ಬಾಂದ್₁, ಬಾಂದು (ನಾ). ೧. ಬಂಧನ ; ಸೆರೆ : (ಕ). ೨. ಬೇಡಿ ; ಸಂಕೋಲೆ. ೩. ಮುಚ್ಚಿದುದು ; ನಿಲ್ಲಿಸಿದುದು ; ಕೊನೆಯಾದುದು : ನಂಬಿಗೆಯು ಇಲ್ಲದಂತಾಗಿ ಖಾತೆಗಳನ್ನು ಬಂದು ಇಡುವ ಪ್ರಸಂಗಗಳು ಬರಹತ್ತಿದವು (ಮುಂಬಿವ್ಯಾ. ೬ ಕ್ರಸ್ತಾವನೆ). ೪. ಹರತಾಳ ; ಸಂಪು ; ಮುಷ್ಕರ : ತಮ್ಮ ಬೇಡಿಕೆಗಳ ಪೂರೈಕೆಗಾಗಿ ಸದಾಕಾಲ ಯಾವುದಾದರೊಂದು ಪಂಗಡದವರು ಪದೇ ಪದೇ ಬಂದು ಆಚರಿಸಲು ಜನತೆಗೆ ಕರೆಯಿತ್ತರೆ ದೇಶದ ಪ್ರಗತಿಯಾದರೂ ಹೇಗೆ ಸಾಧ್ಯ ? (ರೂಢಿ). **ಬಂದ್** : ೩. ಆತು ಹಂಗಾರ. ಭಜನಿ ಬಂದ್ (ಹಾಲಾಂ. ೨೯) ; ಮುಂದಿನ ಕದ ಬಂದ್–ಗಲ್ಲಿ ಕದ ಖುಲ್ಲಾ (ಕಂಗಾ. ೦೩೯). **ಬಂದ್ಮ** : ೫. ಸಂಬಂಧ ; ಕಟ್ಟು ; ಬಾಂಧವ್ಯ : 'ಬಂದಂ ಬಿಡು' ಪರಾ. ೬. ಹೊಂದಿಸಿ ಕಟ್ಟಿದುದು: 'ನೆತ್ತಿಮಂದ' ಪರಾ. **ಬಾಂದ್₁**: ೭. ಜಮೀನಿನ ಎಲ್ಲೆಕಟ್ಟನ್ನು ಖಚಿತಗೊಳಿಸಲು ಹಾಕುವ ಕಟ್ಟೆ; ಒಡ್ಡು : (ಕೃಶಗಿ. II, ೩೯೬); ಬಾಂದ್ಹಾಕೋರು ಬರುತಾರಂತೆ . . . ಬಾಂದು ಎಂಬೋದು ಬಂಧನವಾಗಿದೆ (ನಾಶರ. ೦೯೩). **ಬಾಂದು** : ೭. ಒಂದು ಹೊಲದ ಮಣ್ಣು ಮತ್ತೊಂದು ಹೊಲಕ್ಕೆ ಹೋಗದ ಹಾಗೆ ಹೊಲದ ಬಾಂದಿನ ಹದ್ದು ಹಿಡಿದು . . . ಸುತ್ತಲೂ ಒಡ್ಡು ಹಾಕಿಸುವದು ಅವಶ್ಯವಾಗಿದೆ (ಕೃಷಿಶ್ರ. ೩೨); ಬೇಕಾದರೆ ಬೇರೆ ಬಾಂದು ಹಾಕಿ (ಮುಂಬಿಮಾ. ೦೩೩). ೮. ಗಡಿ; ಮೇರೆ: ಅಂದೇ ನನ್ನ ಕಾರ್ಯಕ್ಷೇತ್ರದ ಬಾಂದುಗಳನ್ನು ಗುರುತಿಸಿಕೊಂಡೆ (ಕಾಂಕ. ೦೯).

**ಪ** ಈ ಪರ್ಯಾಯರೂಪದ ವ್ಯುತ್ಪತ್ತಿ ವಿಚಾರಣೀಯ.

ಬಂದಾಗು = ಮುಚ್ಚು : ಈ ರಸ್ತೆ ಬಂದಾದಂತೆಯೇ (ಅಶೋಲೀ. ೯೯); ಇಂದು ಅಂಗಡಿ ಬಂದಾಗಿದೆ (ರೂಢಿ). ಬಂದು ಮಾಡು=೧. ನಿಲ್ಲಿಸು; ತಡೆಹಾಕು : ನಿನ್ನ ಚಿತ್ರವ್ಯವಸಾಯವನ್ನು ಬಂದು ಮಾಡು ಶ್ಯಾಮಾ (ರಂಗರೋ. ೦೯೬) ; ಈ ಉಪದೇಶವನ್ನು ಬಂದು ಮಾಡಿರಿ ಸಾರ್ (ರಂಗರೋ. ೫೭). ೨. ಮುಚ್ಚು ; ಹಾಕು: ಹೋಗಿ ಬಹಳ ಬೇಗನೇ ಬಂದು ಮಾಡಿ ಬಾ (ಕೋಕಿಲಾ. ೩). ಬಾಂದಿನವರು = ಭೂಮಿಯನ್ನು ಅಳತೆ ಮಾಡುವವರು; ಮೋಜಣಿದಾರರು : ಬಾಂದಿನವರು ಬಂದರು ಕಾಣಣ್ಣಾ ನಾವ್ ಬಾಳೋದ್ ಹೆಂಗಣ್ಣಾ (ನಾಶರ. ೦೩೪); ಈಗ ಬಾಂದಿನವರೊಬ್ಬರು ಆ ಮನೆಯಲ್ಲಿ ಬಾಡಿಗೆದಾರರಾಗಿ . . . ಇರುತ್ತಿದ್ದರು (ಸಮುಜ. ೦೨೩೨).

[← ಪಾರ. ಹಿಂ. ಬಂದ್ ; ಮರಾ. ಬಂದ್, ಬಾಂದೀ. / ಸಂ. ಬಂಧ]

**ಬಂದುಕ**, ಬೊಂದುಕ್ಕ (ನಾ). ೧. ಮೋಸಗಾರ; ವಂಚಕ; ಕಪಟಿ : "ಬಂದುಕನೆಮಲ್ ಚಲ್ಲವತ್ತನುಮೆನಲ್ ನಂಬಿಸಿಯೆ ತಿಂಬಾತನಕ್ಕುಂ" (ಶಬ್ದಮಂ. ೯೬); ಉಕ ಪ್ರತ್ಯಯಕ್ಕೆ – ಕಟ್ಟುಕಂ . . . ಬಂದುಕಂ, ದಿಂಡುಕಂ (ಶಮದ. ೨೦೩ ಕ್ರಯೋ). ೨. ಉಪಾಧ್ಯಾಯಂ ; ಗುರು : "ಬಂದುಕನುಪಾಧ್ಯಾಯನಕ್ಕುಂ" (ಕಕರ. ೬೨). **ಬೊಂದುಕ್ಕ** : ೧. "ಬೊಂದುಕನೆಂದುಂ ಚಲ್ಲವತ್ತನೆಂದುಂ ನಂಬಿಸಿ ತಿಂಬವಂ" (ಕಶಜಾ. ೬೦–೩೩೬) ; "ನಂಬಿಸಿ ತಿಂಬವನಂ ಬುಧರೆಂಬರ್ ಬೊಂದುಕನು ಚಲ್ಲವತ್ತನು ಮೆಂದುಂ" (ಕಶೇಂ. ೦೫೫). [?]

**ಬಂದುಕಟ್ಟು** (ನಾ). ೧. ಅಚ್ಚುಕಟ್ಟು; ಓರಣ : (ಕ). **೨. ಜಾತಿ** ಪದ್ಧತಿ : (ಕ). ೩. ನಿಯಮಕ್ಕೆ ಒಳಪಟ್ಟಿರುವುದು ; ಸಂಪ್ರದಾಯಬದ್ಧವಾದುದು: ಅಚ್ಚುಕಟ್ಟಾದ ಕೆಲಸ ಚೆಂದ, ಬಂದುಕಟ್ಟಾದ ಊಟ ಚೆಂದ (ಗಾದೆ). [ದೇ. ॥ತುಳು. ಬಂದುಕಟ್; ತೆಲು. ಬಂದುಕಟ್ಟು]

**ಬಂದುಗೆ** 'ಬಂದೂಕ₁' ನೋ.

**ಬಂದುಗೆಗೋಲು**, ಬಂದಿಗೆಕೋಲು (ನಾ). ೧. ಅಂಗಸಾಧಕನು ವ್ಯಾಯಾಮಕ್ಕಾಗಿ ಉಪಯೋಗಿಸುವ ಒಂದು ಬಗೆಯ ಸಾಧನ : ಹಡಪಿಗರೂಡುವೆಲೆಯ ಫಳಿಗೆಗಳಾ ಪಾಡಬೇದರೆಗಟ್ಟಿಕೊಳುತ ಬಂದುಗೆಗೋಲ ನೀಡುತ ತಿರುಹುತೆಯ್ದಿದರು (ಭರತ. ೬೩–೦೬). 'ಬಂದಿಗೋಲ್' ಪರಾ. **ಬಂದಿಗೆಕೋಲು** : ೨. = ಬಂದಿಗೆ ೩ : ಹಿಡಿ ಮಾರ್ಕೋಲನೆನ್ನೊಡನೆನುತ ತಿವಿದನು ಭೀಮು ಕುರುಪತಿಯ ಮೇಳವಿಚಿತೆರಡಂಕ ಬಂದಿಗೆಕೋಲ ಹೊಯ್ದಾಟದಲಿ ಬಳಿಕಾ ಕೀಲುಗದೆಗಳ ಹಿಡಿದು ತಬುಬಿದರಧಿಕರೋಷದಲಿ (ಕುಮ್ಯಾಭ. ೭–೩೯).

[ಬಂದುಗ್ಗೆ + ಕೋಲ್₁]

**ಬಂದುಗೆದುಟಿ** (ನಾ). ಬಂದುಗೆಯ ಹೂವಿನಂತೆ ಕೆಂಪಗಿರುವ ತುಟಿ : ಬಂದುಗೆದುಟಿ ತೊಂಡೆವಣ್ದುಟಿಯವರು ಮುಂದಗಮನೆಯೊಳೈದಿದರು (ಜೀವಂಧಾಂ. ೦೦–೪೬) ; ಬಂದುಗೆದುಟಿಯು ಮಿಸುಪ ಬಡನಡುವಿನ . . . ಕುಮಾರಿಯ ರೂಪನದೇನಂ ಬಣ್ಣಿಪೆನು (ಜಯುಕಾ. ೩–೬೨).

[ಬಂದುಗೆ (< ಬಂದೂಕ₁) + ತುಟಿ]

**ಬಂದುಗೆಯರಲ್** 'ಬಂದುಗೆಯಲರ್' ನೋ.

**ಬಂದುಗೆಯಲರ್**, ಬಂದುಗೆಯರಲ್ (ನಾ). ಬಂದೂಕವೃಕ್ಷದ ಹೂವು : ಬಂದುಗೆಯಲರಂ ಸವಿವವೊಲಿಂದಿಂದಿರನಾವ್ರುಫಲವನರಗಿಳಿನಲವಿಂ ಮಾಂದಳಿರಂ ಪಿಕನಿನಿಯಳ ಚೆಂದುಟಿಯಂ ಚುಂಬಿಸಿದನಿಳಾಧಿಪ ನಾಗಳ್ (ಉದ್ಭಟ. ೮–೦೧೨). **ಬಂದುಗೆಯರಲ್** : ಕೋಮಳೆಯ ಕನಕ ಕಾಂಚೀದಾಮದ ಕೆಂಬರಲ ನುಣ್ಗದಿರ್ ತಿಂಬಿರೆ ನಾಭೀಮಂಡಳಮಿಬ್ಬಿಸಿದು ದಭಿರಾಮತೆಯಿಂದುಳ್ಳರಲ್ದ ಬಂದುಗೆಯರಲಂ (ಚಂದ್ರಕೌ. ೦೦–೦೦೯) ; ಬಂದುಗೆಯರಲ ತೊಡರ್ (ಕಬ್ಬಿ . . . ೦೯೨).

[ಬಂದುಗೆ (<ಬಂದೂಕ₁) + ಅಲರ್₂]

**ಬಂದುಗೆವಾಯ್** (ನಾ). ಬಂದುಗೆಹೂವಿನಂತೆ ಕೆಂಪಗಿರುವ ಬಾಯಿ : ಬಲ್ಮೊಲೆಯ ನಳಿತೋಳ ಬಂದುಗೆವಾಯ ತೆಳ್ಗದಂಪಿನ . . . ಗಣಿಕೆಯ ರೆಸೆದರು (ಶಬ್ದಾ. ೬–೯೯) ; ಬಂದುಗೆವಾಯ್ದೆರೆದು ಬಂಧಕಿ ಇಂತೆಂದು ತ್ತರಂಗೊಟ್ಟಳಾಗ (ಶೃಕಂಹ. ೩–೭೩). [ಬಂದುಗೆ (<ಬಂದೂಕ₁)+ಬಾಯ್]

**ಬಂದುಗೆವಾಯ್ದೆಱೆ** (ನಾ). = ಬಂದುಗೆದುಟಿ : ನಿಱಿಗುರುಳಿನ ತುಱುಗೆವೆಯ ಬಂದುಗೆವಾಯ್ದೆಱೆಯ ಎಱುಗುವ ಕದಪಿನ ಪೆಱೆನೊಸಲಿನ ಪೆರ್ಮೊಲೆಯ ಪೆಣ್ಗಳ ತಂಡ (ಕುಮಾಸಾಂ. ೩೪-೦೩).
[ಬಂದುಗೆ (<ಬಂದೂಕ$_1$) + ಬಾಯ್ದೆಱೆ$_2$]

**ಬಂದುರೆ** 'ಬಂದಾರೆ' ನೋ.

**ಬಂದೂಕ$_1$**, ಬಂದುಗೆ (ನಾ). ಕೆಂಪುಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ : ಕಮಲ ಕೈರವ ಮೊಲ್ಲೆ ಬಂದೂಕ ಚಂಪಕಂ ಕಮನೀಯವೆನಿಪ ಮಲ್ಲಿಗೆ (ಬಸೋಶ್ರು. ೩-೨೩). **ಬಂದುಗೆ** : "ಬಂಧೂಕಂ, ಬಂಧುಜೀವಂ—ಈ ೨ ಬಂದುಗೆ" (ಹಲಾಯು. ೩೫-೫೫) ; ಬಂದುಗೆಯ ಕುಸುಮರಸಮಂ . . . ಪೀರ್ವ ಷಟ್ಪದಂ ನೆನೆಯಿಸಿತೆಯ್ದೆಂದು ನಯದಿಂದೆ ಪತಿ ಸಾರ್ತಂದರುಣಾಧರಮನೀಂಟುವುದನಂಗನೆಯಾ (ಪಾರ್ಶ್ವಪು. ೪-೬೪) ; ಕಣಗಿಲೆಯ ಬಂದುಗೆಯ ಕಕ್ಕೆಯ ಸಣಬ ಸರಿಸದ ಕುಸುಮದಲಿ ರಿಪುಗಣಭಯಂಕರನರ್ಚಿಸಿದನಂಧಾಸುರಾಂತಕನ (ಕುಮಾ೯. ೬-೪೩). [< ಸಂ. ಬಂಧೂಕ]

**ಬಂದೂಕ$_2$** 'ಬಂದೂಕು' ನೋ.

**ಬಂದೂಕು**, ಬಂದೂಕ$_2$, ಬಂದೂಖು (ನಾ). ಮದ್ದಿನ ಸಹಾಯದಿಂದ ಗುಂಡು ಹಾರಿಸುವ ಸಾಧನ ; ತುಪಾಕಿ ; ಕೋವಿ : ಬಂದೂಕಿನ ಮುಂದೆ ಯಾವ ಧೈರ್ಯ ನಿಂತೀತು! (ಹವ್ಯಾ. ೦೬೨); ಬಂದೂಕಿನ ತೋಟವನ್ನು ಅಮುಕುತ್ತಲೇ ಗುಂಡು ಹಾರುತ್ತದೆ (ಜೀವಾಕ. ೦೪೬). **ಬಂದೂಕ$_2$** : ಕಲ್ಲಿನ ಏಟಿಗೆ ಸಿಕ್ಕದವರು ಮೇಲಿಂದ ಬಿದ್ದ ಬಂದೂಕದ ಏಟಿಗೆ ಸಿಕ್ಕಿ ಸತ್ತರು (ಬಂಕಿಮು. ೨೨೪); ಈ ಅಂಬಾರಿಗಳಲ್ಲಿ ನಾಲ್ಕು ಜನ ಉದ್ದನೆಯ ಬಂದೂಕಗಳನ್ನು ಹಿಡಿದು ಕುಳಿತಿದ್ದರು (ಕ್ರಪಾಇ. II, ೦೬೭). **ಬಂದೂಖು** : ಅಂತಹ ಸಂದರ್ಭಗಳಲ್ಲಿ ಬಂದೂಖು ವಗೈರೆ ಆಯುಧಗಳನ್ನು ಉಪಯೋಗಿಸುವ ಸಂಭವ ಬಂದರೂ ಸಾಧ್ಯವಾದಷ್ಟು ಮಟ್ಟಿಗೂ ಉಪಯೋಗಿಸಿ (ಗ್ರಾಪೂಳ. ೫೦).
[← ಅರ. ಪಾರ. ಹಿಂ. ಮರಾ. ಬಂದೂಕ್ ]

**ಬಂದೂಖು** 'ಬಂದೂಕು' ನೋ.

**ಬಂದೋಬಸ್ತ್** 'ಬಂದೋಬಸ್ತು' ನೋ.

**ಬಂದೋಬಸ್ತಿ** 'ಬಂದೋಬಸ್ತು' ನೋ.

**ಬಂದೋಬಸ್ತು**, ಬಂದೋಬಸ್ತ್, ಬಂದೋಬಸ್ತಿ (ನಾ). ೧. ಸರಿಯಾದ ವ್ಯವಸ್ಥೆ ; ಅಚ್ಚುಕಟ್ಟಾದ ಏರ್ಪಾಟು : ಬಂದೋಬಸ್ತುಗಳೆಲ್ಲವೂ ಲೀಲಾಜಾಲವಾಗಿ ನಡೆದುಕೊಂಡು ಹೋಗುವುವು (ಘೂರಾಚಿ. ೦೨೨). ೨. ರಕ್ಷಣೆ ; ಭದ್ರತೆ : ಕೆಲವರನ್ನು ಮಾತ್ರ ಒಳಗಡಿಯ ಬಂದೋಬಸ್ತಿಗೋಸ್ಕರ ಅವಶ್ಯಕವಾದ ಸ್ಥಳಗಳಲ್ಲಿ ಇರಿಸಿ (ಮಹಾಪಂ. II, ೦೫); ಅಲ್ಲಲ್ಲಿ ಬೇಕಾದಷ್ಟು ಮಂದಿ ಇಟ್ಟು ಬಂದೋಬಸ್ತು ಮಾಡಿಸಿ (ರಾಜೇಂದ್ರ. ೩): ಅವಳನ್ನು ನೀನು ಗಿಣಿಯಂತೆ ಮನೆಯೊಳಗೇ ಬಂದೋಬಸ್ತಿನಲ್ಲಿ ಇಟ್ಟಿರುವೆಯಾ ? (ರಕ್ತರೂ. ೬೯). **ಬಂದೋಬಸ್ತ್**: ೧. ' ಬಂದೋಬಸ್ತ್ ' ಈ ಪದವು ನನಗೆ ಅತ್ಯಂತಪ್ರಿಯ (ಘೂರಾಚಿ. ೦೨೨). **ಬಂದೋಬಸ್ತಿ** : ೨. ಇದರ ಬಂದೋಬಸ್ತಿಯ ಬಗ್ಗೆ ತಮ್ಮ ಸನ್ನಿಧಿಗೆ ಬಂದಿರುವೆವು (ಕೃಚಿತ್ರ. ೨೦).

**ಬಂದೋಬಸ್ತು ಮಾಡು** = ಭದ್ರಮಾಡು ; ಜೋಪಾನಗೊಳಿಸು : ಒಳಕ್ಕೆ ಬಾರದಂತೆ ಕೋಟೇ ಬಾಗಿಲಲ್ಲಿ ತನ್ನ ಕಡೇ ಜನಗಳನ್ನು ಇಟ್ಟು ಬಂದೋಬಸ್ತುಮಾಡಿ (ಪಾಮಪಂ. ೦೬೦); ತಪ್ಪಿದ್ದವರನ್ನು ಶಿಕ್ಷಿಸಿ ಬಂದೋಬಸ್ತು ಮಾಡುವುದು (ಮೂರಾವ. ೪೬). [←ಪಾರ. ಬಂದುಬಸ್ತ್ ಹಿಂ. ಬಂದೋಬಸ್ತ್ ; ಮರಾ. ಬಂದೋಬಸ್ತ, ಬಂದೋಬಸ್ತೀ]

**ಬಂದ್ರು** (ನಾ). ಒಂದು ಬಗೆಯ ಬಟ್ಟೆ (?) : ಜರತರದ ವಸ್ತ್ರಪಾಗಂಗಿ ಕಿಂಖಾಪು ಮೇಲ್ ಥರಥರದ ಪೈಠಣಿಯ ಚಾದ್ರು ಬೂರಾನ್ನರಿಯ ಪರಿಪರಿಯ ಬಂದ್ರುಗಳ ವಸ್ತ್ರದ ಖಿಲತ್ತುಗಳು (ಕೃಕ್ಷಿ. ೫-೫೬). [?]

**ಬಂಧ** (ನಾ). ೧. ಕಟ್ಟು ; ಬಂಧನ. ೨. ಹಗ್ಗ ; ಪಾಶ : "ಹಗ್ಗವಾ ಬಂಧಂ" (ಶುಂಗರಾ. ೦೦೯-೨). ೩. ಸಂಕೋಲೆ ; ಸರಪಣಿ. ೪. ಗಾಯಂದ ಪಟ್ಟಿ. ೫. ಅಡವು ; ಒತ್ತೆ. ೬. ಸೆರೆ ಹಿಡಿಯುವುದು ; ಬಂಧಿಸುವುದು. ೭. ಸೇರಿಸುವುದು; ಕೂಡಿಸುವುದು. ೮. ಕೂಡುವುದು ; ಸೇರುವಿಕೆ ; ಯೋಗ. ೯. ಕೂಡಿಸಿದುದು ; ಜೋಡಣೆ : ಅಂತು ಸಮುದ್ರಂ ಬಹಿತ್ರಂ ಬೆದಱುವಂದು ಶಿಟ್ಟನೆ ಶಿಱಿದು . . . ಕೂಪಕಂಭಂ ಮುಱಿಯೆ ಬಂಧಂ ಬಿರಿಯೆ . . . ನಾವಿಕಾಜನಮೆರ್ದೆಗೆಟ್ಟು (ಬಂಹಂ. ೪-೦೪೫). ೧೦. ಅಳ್ಳಕವಲ್ಲದುದು ; ಗಟ್ಟಿ ; ಮಂದ : ತುಱುವೆಯ ಬೇರನಿಕ್ಕಿ ತಱುಪೆರ್ಮೆಯ ಪಾಲುಮುಮರ್ಧಮಪ್ಪನಂ ಮಱುಗಿಸಿ ಬಂಧಮಾಗೆ (ಲೋಕೋಪ. ೬-೦೦). ೧೧. (ಕಾವ್ಯ ಮೊದಲಾದುವುಗಳ) ರಚನೆ : ಸಮಮೆಂಬುದು ಬಂಧದೊಳವಿಷಮಂ ಮೃದುಸ್ಫುಟಮಿಮಿಶ್ರವಿನ್ಯಾಸಪದಕ್ರಮದಿಂ ಮೂಱು ತೆಱಂ ಬಂಧಮುಂ ಯಥಾರ್ಥಾನುವೃತ್ತಿಯಿಂ ವರ್ತಿಸುಗುಂ (ಕಾವ್ಯಾವ. ೫೦೦); ಬಂಧದೊಳು ಲಕ್ಷಣದೊಳು ಪದವಿಸರದೊಳು . . . ತಿದ್ದುವುದು (ಹಕಾ. ೦-೨೦); ಗತಿಯು ತನ್ನ ಛಂದದಲ್ಲಿ ಭಾವ ತನ್ನ ಬಂಧದಲ್ಲಿ ಹುವೆನಿಲ್ಲ ಹೊಂದದಲ್ಲಿ (ಅರಲು. ೦೬೪-೦೦). ೧೨. ಅಂಚು; ಗಡಿ. ೧೩. ದೇಹ; ಕಾಯ. ೧೪. ಒಂದು ಬಗೆಯ ಸಸ್ಯ : ಸಿಡಿಗುಲಿಗೆ, ಬಂಧ (ವ್ಯಾಶಿಗ. ೦೪-೨೫೫). ೧೫. [ತತ್ತ್ವಶಾ] ಇಹಲೋಕದ ಬಾಂಧವ್ಯ; ಲೌಕಿಕವ್ಯಾಮೋಹ: ಬಂಧಂ ಬಂಧಕಾರಣಂ ಮೋಕ್ಷಂ ಮೋಕ್ಷಕಾರಣಂ (ವಡ್ಡಾರಾ. ೬-೦೬); ದಯಿತಾಸಂಬಂಧ ಬಂಧಂ ಭವಪರಿಣತಿ ತನ್ಮೂಲಮಿಾ ಜೇವಸಂ ಏಶ್ಚಯ ಮೆಂದಾತಂ ತೊಡರ್ವಂ ಬಿಡಿಸಿ (ಶಾಂತಿಪು. ೯-೦೪); ಧೀರ ಲಾಲಿಸು ಬಂಧ ಮೋಕ್ಷಕೆ ಕಾರಣವು ಮನಮಹುದು (ಗಗಪ. ೦೬-೨೬). ೧೬. [ ಕಾವ್ಯಮಿಾ ] ಚಮತ್ಕಾರಪೂರ್ಣವಾದ ಶಬ್ದವೈಚಿತ್ರ್ಯದಿಂದ ಕೂಡಿದ ವಾಕ್ಯ ; ಚಿತ್ರಕವಿತ್ವ : ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟುಮಾಡುವ ಇತರ ಶಬ್ದವೈಚಿತ್ರ್ಯಕ್ಕೆ ಚಿತ್ರಕವಿತ್ವವೆಂದೂ 'ಬಂಧವೆಂದೂ' ಹೆಸರು (ಕೃಂಡ. ೨೫೪). ೧೭. [ಜೈನ] ನವಪದಾರ್ಥಗಳಲ್ಲಿ ಒಂದು : ಜೀವಮುಂ ಕರ್ಮಮುಂ ಎಂಬೆರಡಱ ಅನ್ಯೋನ್ಯಪ್ರದೇಶಾನುಪ್ರವೇಶಾತ್ಮಕಮಪ್ಪುದು ಬಂಧಂ (ತತ್ತ್ವಸ್ರ. ೮); ಅಜೀವಕರ್ಮಪುದ್ಗಲಗಳೊಡನೆ ಜೀವನು ಏಕೀಭೂತನಾಗುವುದೆ ಬಂಧವು (ಕೈಪರ. ೩). ೧೮. ಸಪ್ತತತ್ತ್ವಗಳಲ್ಲಿ ಒಂದು: ತತ್ತ್ವಗಳು ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರಾ ಮತ್ತು ಮೋಕ್ಷ ಎಂದು ಏಳುವಿಧಗಳನ್ನುಳ್ಳುವೆಂದೂ ಹೇಳಬಹುದು (ಭಾತತ್ತ್ವ. ೨೫೬).

**ಬಂಧದ ಕಾಯಿ** = (ಬಿಡಿಭಾಗಗಳನ್ನು ಜೋಡಿಸಲು ಉಪಯೋಗಿಸುವ) ಅಂಟುಳ್ಳ ಒಂದು ಬಗೆಯ ಕಾಯಿ : ಮುಸಿ ಮೈಬಟ್ಟೆಗಳಿಗೆ ತಗುಲದಂತೆ ಹುಡುಗರಿಂದ ಬಂಧದ ಕಾಯಿ ತರಿಸಿ, ಅದರ ಅಂಟುನೀರು ಚಿಮುಕಿಸಿ ಅರೆಯಬೇಕು (ಬಾಳಗ. ೨೬). [ಸಂ.]

**ಬಂಧಕ** (ಗು). ೧. ಹಿಡಿಯುವ ; ಬಂಧಿಸುವ. ೨. ತಡೆಗಟ್ಟುವ ; ಪ್ರತಿಬಂಧಿಸುವ. (ನಾ). ೩. ಹಿಡಿಯುವುದು ; ಬಂಧಿಸುವುದು : ಉಳಿದ ಕರ್ಮವೆಲ್ಲವೂ ಅವನಿಗೆ ಬಂಧಕವೂ ಮಾರಕವೂ ಆದುದು (ಕತ್ತಿ. ೪೬). ೪. ಕಟ್ಟು ; ಬಂಧನ : ವಿಶ್ವದ ಎಲ್ಲ ಭಾಗಗಳನ್ನೂ ಒಟ್ಟಿಗೆ ಸೇರಿಸುವ ಬಂಧಕವು ಎಲ್ಲಿದೆ ? (ಮಹಾಕ. ೨೬೬). ೫. ಸೆರೆಹಿಡಿಯುವವನು ; ಬಂಧಿಸುವವನು. ೬. ಏರಿ ; ಒಡ್ಡು ; ಅಡ್ಡಗಟ್ಟೆ. ೭. ಕೆರೆ ; ಕಟ್ಟೆ. ೮. ಒತ್ತೆ ; ಅಡವು. [ಸಂ.]

**ಬಂಧಕಿ** (ನಾ). ೧. ಹಾದರಗಿತ್ತಿ ; ಜಾರೆ ; "ಪಾಂಸುಳಾ, ಬಂಧಕೀ . . . ಅಭಿಸಾರಿಕಾ—ಈ ೧೦ ಹಾದರಗಿತ್ತಿ" (ಶಬ್ದಾಯು. ೬೦-೩೪೨) ; ಸತ್ಯವಾದಿಯಂತೆ ಪೊಳೆಯುದೆ ಬಂಧಕಿಯಂತೆ ಮಂದಿಗೇವೈಸದೆ (ಶೃಙ್ಗಾರಸ. ೬-೫೦ ಪ) ; ಈಕೆಗೆ ಅನೇಕ ಭರ್ತೃಗಳಿರುವುದರಿಂದ ಈಕೆ ಬಂಧಕಿ (ಹಂಸೀ. ೧೯೪). ೨. ಬಂಜೆ. ೩. ಹೆಣ್ಣಾನೆ. [ಸಂ. ಬಂಧಕೀ]

**ಬಂಧಗೌರವ** (ನಾ). ಕಾವ್ಯರಚನೆಯ ಹಿರಿಮೆ,—ಪ್ರೌಢಿಮೆ : ಇನಿತು ಮಿರ್ವಿಕೆ ಮತ್ಕೃತಿಯೊಳ್ . . . ಶಾಂತಿವರ್ಮನ ನಯಂ ಗುಣವರ್ಮನ ಬಂಧಗೌರವಂ (ಜಗನ್ನಾ. ೧-೧೦). [ಸಂ.]

**ಬಂಧತಂತ್ರ** (ನಾ). ರಥ, ಆನೆ, ಕುದುರೆ ಮತ್ತು ಪದಾತಿಗಳಿರುವ ಸೈನ್ಯಸಮೂಹ; ಸಂಪೂರ್ಣವಾದ ಸೈನ್ಯ. [ಸಂ.]

**ಬಂಧನ** (ಗು). ೧. ಕಟ್ಟುವ ; ಬಂಧಿಸುವ. ೨. ತಡೆಗಟ್ಟುವ ; ವಿರೋಧಿಸುವ. (ನಾ). ೩. ಕಟ್ಟುವಿಕೆ ; ಜೊತೆಗೂಡಿಸುವಿಕೆ. ೪. ಸೆರೆಮನೆ; ಕಾರಾಗೃಹ : "ಕಾರಂ ಬಂಧನಾಖ್ಯಂ" (ಪಂಗಿಶಾ. ೧೦೬-೦); ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ ನೆನೆವೆನಯ್ಯ (ಮಹಾದೇ. ಪ. ೧೪೯-೩೦೩); ರಾಮಪ್ಪಗೌಡ ಮತ್ತು ತಿಮ್ಮಪ್ಪಗೌಡ ಇಬ್ಬರನ್ನು ಸೆರೆಹಿಡಿದು, ಬಂಧನದಲ್ಲಿರಿಸಿದನು (ನೂರೆಂಟು. ೬೪). ೫. ಕಟ್ಟು ; ಬಂಧ : ಬಂಧನಂ ಕಚದೊಳ್ ವಿರೋಧಂ ಪಂಜರದೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಶಂಪ್ರಪು. ೩-೯ ಪ). ೬. ಹಗ್ಗ ; ಪಾಶ. ೭. ಸರಪಳಿ ; ಸಂಕೋಲೆ : ಬಂಧನಮಂ ಪಱಿಯುತ್ತೆ . . . ಗಂಧಮಹಾಸಿಂಧುರಮಯಿತರ್ಪಂತಿರೆ ಸೈಂಧವನೆಟ್ಟಿಂದು ತಾಗಿದಂ ನರಸುತನೊಳ್ (ಜಂಹಾ. ೧೩-೨೨). ೮. ಸೆರೆ ಹಿಡಿಯುವುದು ; ಬಂಧಿಸುವುದು. ೯. ಪಟ್ಟ. ೧೦. ಸೆರೆ ; ವಶ ; ಅಧೀನ. ೧೧. ನಿಗ್ರಹ ; ಅಂಕೆ ; ಹಿಡಿತ. ೧೨. ರಚನೆ ; ನಿರ್ಮಾಣ. ೧೩. [ತತ್ತ್ವಶಾ] ಐಹಿಕಬಂಧ: 'ಭವಬಂಧನ' ಪರಾ.

**ಬಂಧನ ಹಾಕು** = ಮಂತ್ರಶಕ್ತಿಯಿಂದ ಕಟ್ಟುಹಾಕು,—ದಿಗ್ಬಂಧನ ಮಾಡು : ಪ್ರೇತವನ್ನು ಹಿಡಿದು ಮನೆಗೆ ಬಂಧನ ಹಾಕಿ ಬರಬಾರದೆ ? (ಶದ್ಯಸ. ೨೩೪). [ಸಂ.]

**ಬಂಧನಕಾರಿ** (ನಾ). ಕಟ್ಟಿಗೆ ಒಳಪಡಿಸುವಂತಹುದು ; ಬಂಧಿಸುವುದು : ನಾನು ಮಾಡಿದ ಹದಿನೈದು ವರ್ಗಗಳು ಅಭ್ಯಾಸಕ್ಕೆ ಅನುಕೂಲವಾಗಿವೆ. ಆದರೆ ವಿಭಾಗಗಳು ನಿರ್ದಿಷ್ಟವಾಗಿ ಹೀಗೆಯೇ ಎಂದು ಬಂಧನಕಾರಿಯಾಗಲಾರವು (ಶಾಸಪೂ. ೫೦). [ಸಂ. ಬಂಧನಕಾರಿನ್]

**ಬಂಧನಗೊಳಿಸು** (ಕ್ರಿ). ಬಿಗಿಮಾಡು ; ಸೇರಿಸು : ಬಗೆವೆತ್ತ ಬಾಗಿಲ ಕದ ವಜ್ರ ಲಾಳವಿಂಡಿಗೆಗಳ ಬಂಧನಗೊಳಿಸಿ ಬಿಗೆ ವಿಶ್ವಾಸಿ ಕಠೋರ ರಾಕ್ಷಸಿಯರ ತೆಗೆಯದೆ ಕಾಪನಿಕ್ಕಿದಳು (ಮೋಹತ. ೩೩-೩೭).
[ಬಂಧನ + ಕೊಳ್$_1$ + —ಇಸು$_3$]

**ಬಂಧನಾಗಾರ** (ನಾ). ಸೆರೆಮನೆ ; ಕಾರಾಗೃಹ : ಭಿಕ್ಷುವು ತಾನು ಋಣ, ರೋಗ, ಬಂಧನಾಗಾರ, ದಾಸತ್ವ, ಕಾಂತಾರಗಳಲ್ಲಿ ಇದ್ದಂತೆ ತಿಳಿಯುವನು (ಬುದ್ಧಕ. ೦೧೩). [ಸಂ.]

**ಬಂಧನಿ** (ನಾ). ೧. ಕಟ್ಟು ; ಬಂಧನ. ೨. ಹಗ್ಗ ; ಮಿಳಿ. ೩. ಸರಪಳಿ ; ಸಂಕೋಲೆ : ಕಬ್ಬಿಣದ ಬಂಧನಿಗಳಿಂದ ಬಿಗಿದಿದ್ದ ಕೇಗದ ತೊಲೆಗಳ ಬಲವಾದ ಸಾರುವೆ ಆ ಕಟ್ಟಡವನ್ನು ಸುತ್ತುವರಿದಿತ್ತು (ಕೃಪರು. ೩೦೩). [ಸಂ. ಬಂಧನೀ]

**ಬಂಧಮೋಚನ** (ನಾ). [ಜೈನ] ಬಂಧನದಿಂದ ಬಿಡುಗಡೆ ಹೊಂದುವ ಒಂದು ಬಗೆಯ ವಿದ್ಯೆ : ಅಮಿತತೇಜಂ ಶ್ರೀವಿಜಯಂಗೆ ಯುದ್ಧವೀರ್ಯಮುಂ ಪ್ರಹರಣಾವಾರಣಮುಂ ಬಂಧಮೋಚನಮುಮೆಂಬ ಮೂಱು ವಿದ್ಯೆಗಳಂ ಕೊಟ್ಟು (ಶಾಪುಂಕ. ೯೧೦). [ಸಂ.]

**ಬಂಧಮೋಚನಿ** (ನಾ). = ಬಂಧಮೋಚನ : ಮಹಾಜ್ವಾಳಿನಿ ಯುದ್ಧವೀರ್ಯೆ ಬಂಧಮೋಚನಿ ಪ್ರಹರಣಾವರಣಿ ಭ್ರಾಮರಿ ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಶಾಪುಂಕ. ೧೯೭). [ಸಂ. ಬಂಧಮೋಚನೀ]

**ಬಂಧವಿದ** (ನಾ). (ಆಭರಣಾದಿಗಳನ್ನು) ಮಾಡುವವನು ; ರಚಿಸುವವನು : ದಿಟ್ಟಗೆವರೆ ಬಂಧವಿದಂ ಕಟ್ಟಿದ ಪಲತೆಱದ ಮಣಿಯ ಸೂಸಕದ ನೆಟಲ್ ಕುಟ್ಟಿಮತಲದೊಳ್ ಪೊಳೆದೆಡೆಗಟ್ಟುತ್ತಲ್ಲಿ ಬಣ್ಣವುರವಂ ತೀವಲ್ (ಶಂಪ್ರಪು. ೬-೪೭). [ಸಂ. ಬಂಧವಿದ್]

**ಬಂಧವಿಮೋಚನಿ** (ನಾ). = ಬಂಧಮೋಚನ : ಸೌಜನ್ಯಕಂದಾಂಕುರಂ ಶ್ರೀವಿಜಯಂಗೆ ಹೇತಿವಿದಾರಿಣಿಯುಂ ಬಂಧವಿಮೋಚನಿಯುಮೆಂಬ ವೆರಡುಂ ವಿದ್ಯೆಗಳಂ ಕೊಟ್ಟು (ಶಾಂತಿಪು. ೬-೭೭ ಪ).
[ಸಂ. ಬಂಧವಿಮೋಚನೀ]

**ಬಂಧಸ್ತಂಭ** (ನಾ). ಆನೆಯನ್ನು ಕಟ್ಟುವ ಕಂಬ ; ಆಲಾನಸ್ತಂಭ : "ಆಲಾನಂ, ಬಂಧಸ್ತಂಭಃ—೨ ಆನೆಯನ್ನು ಕಟ್ಟಿಹಾಕುವ ಕಂಭದಂಥಾ ಗೂಟದ ಪೆಸರು" (ಸಿದ್ಧಾಂತಿ. ೨೪೪). [ಸಂ.]

**ಬಂಧಾಬಂಧಿ** (ನಾ). ಮಲ್ಲಯುದ್ಧದ ಒಂದು ವರಸೆ ; ಕೈಕೈಗಳನ್ನು ಹಿಡಿದು ವರಸೆಗಳನ್ನು ಹೂಡಿ, ಕಾದುವ ಯುದ್ಧ : ಒಡನೆ ದಂಡೆಗಳನೊಡ್ಡುತ್ತಲ್ಲಿ ಕೈಗಳಂ ಪಿಡಿದು ಬಂಧಾಬಂಧಿಯರರೆ ಮುಷ್ಟಾಮುಷ್ಟಿ ಬೆಡಗಿನಿಂದೊದಗಿ . . . ತೊಡಕುಗಾಳಗವ ತೊಡಗಿದರು (ಶೀಕೃಪು. ೩-೬-೩೯). [ಸಂ.]

**ಬಂಧಿತ** (ಗು). ೧. ಕಟ್ಟಿಗೆ ಒಳಗಾದ ; ಬಂಧನಕ್ಕೊಳಗಾದ. (ನಾ). ೨. ಕಟ್ಟಿಗೆ ಒಳಗಾದುದು : ಭವ್ಯಪರಂಪರೆಯ ನಾಡು ಪಾರತಂತ್ರ್ಯದ ಸಂಕೋಲೆಯಿಂದ ಬಂಧಿತವಾಯಿತು (ಅಶ್ವಾರ್ಕ. ೨). ೩. ಕಟ್ಟಿಗೆ ಒಳಪಟ್ಟವನು ; ಬಂಧನಕ್ಕೆ ಒಳಗಾದವನು : ಅಜ್ಞಾನದಿಂದ ಆವರಿಸಲ್ಪಟ್ಟವನಾಗಿಯೂ ವಿಷಯಾದಿಗಳಿಂದ ಬಂಧಿತನಾಗಿಯೂ ಬಹಿರ್ಮುಖವಾದ ಮನಸ್ಸುಳ್ಳವನಾಗಿಯೂ ವ್ಯವಹಾರ ಮಾಡುತ್ತಿದ್ದೇನೆ (ಮುಕ್ತಾರ. ೨೬೦). [ಸಂ.]

**ಬಂಧಿಸು** (ಕ್ರಿ). ೧. ಕಟ್ಟಿಹಾಕು; ಬಿಗಿ : ಪುಸಿ ಕೊಲೆ ಕಳವು ಪರಸ್ತ್ರೀವ್ಯಸನಂ ಬಹುವಿಧಪರಿಗ್ರಹಂ ನರರಂ ಬಂಧಿಸಲೀ ಭವಾಬ್ಧಿಯೊಳಗರ್ದಿಸಲಾರ್ಕುಂ ದ್ಯೂತಮದ್ಯಮಾಂಸವ್ಯಸನಂ (ಆತಪು. ೨-೭೭); ನೊಸಲ ಸೀಸಕ ನುಗ್ಗುನುಸಿ ಬಂಧಿಸಿದ ಸರಪಣಿ ಹಿಳಿದವರಿಬಲದೆಸಕ ನಿಂದುದು ಪಾರ್ಥನೆಚ್ಚನು ವೈರಿಮೋಹರವ (ಕುಮಾವ್ಯಾದ್ರೋ. ೦೫-೩) ; ನಳಿತೋಳ ಪಾಶದೊಳಗೆ ತನ್ನನಿಯನ ಬಿಗಿದು ಬಂಧಿಸುತ (ಕಂಪಂ. ೬-೧೭೦) . ೨. ಬೇಡಿ ಹಾಕು; ಕೋಳ ತೊಡಿಸು : ತಸ್ಕರರಂ ಬಾರಿಸಿ ಕಪ್ಪರಂ ಕೆಡಿಸಿ ದಂಡಂಗೊಂಡು ಮಿಂಡರ್ಕಳಂ ಭರದಿಂ ಬಂಧಿಸಿ (ಧರ್ಮಾಮೃ. ೨-೯೪) ; ಹಾಸಿ ಹರಹಿದ ತೋಳನೊಬ್ಬುಳಿ ಮಾಡಿ ಬಂಧಿಸಿದ (ಕೌಶಿಕ. ೨೨-೧೦) ; ಈತನ ಹಿಡಿದು ಬಂಧಿಸಲಾಗಿ ಯದುಕುಲನಾಥನಾರಾಯಣ ಬಹನು (ಮೋಹತ. ೩೫-೬೦). ೩. ಕೂಡಿಸು ; ಜೋಡಿಸು : ಮಿಸುನಿಯಂತ್ರದ ಮಣಿಮಾಲೆಯ ತೋಳ್ಗೆ ಬಂಧಿಸಿದಳತ್ಯಂತಭಕ್ತಿಯಲಿ (ಮೋಹತ. ೯-೭೭). ೪. ನಿರ್ಮಿಸು; ರಚಿಸು : ಶಶಿಕಾಂತಶಿಲೆಯಿಂದೆ ಬಂಧಿಸಿದ ಸೋಪಾನದ ಸುಪಂಕ್ತಿಯಿಂದ . . . ಶೋಭಿಸುತಿರೆ (ಶಬರಶೋ. ೬-೨೯). ೫. ಮುಚ್ಚು : ಮುಂದಕೆ ಅಡಿಯನೊಂದನಿಡೆ ಕಕ್ಕಯ್ಯ ಬಂಧಿಸಲು ತನ್ನ ದ್ವಾರದ ಕವಾಟವನಾಗ (ಚೆನ್ನಶಾ. ೦೯-೩). [ಬಂಧನ + —ಇಸು$_1$]

**ಬಂಧಿಸ್ತ** (ನಾ). ಬಂದೋಬಸ್ತು ; ಜೋಪಾನ : ಅಳಿಯನ ಆಫೀಸಿನಿಂದ ತರಿಸಿದ ಗಟ್ಟಿರಟ್ಟಿನ ಫಾಯಿಲ್‌ಬೋರ್ಡಿನಲ್ಲಿ ಬಂಧಿಸ್ತ ಮಾಡಿಸಿಕೊಂಡರು (ಜೀಶಹ. II, ೦೪). [ ← ಮರಾ. ಬಂದಿಸ್ತ, ಬಂಧಿಸ್ತೀ ಬಂದೀಸ್ತ ]

**ಬಂಧು** (ನಾ). ೧. ಸಂಬಂಧ; ನೆಂಟು. ೨. (ವಿಶೇಷವಾಗಿ ತಾಯಿಯ

ಕಡೆಯು) ಸಂಬಂಧಿಕ : ನೆಂಟ : "ಆತ್ಮೀಯಃ, ಸ್ವಜನಃ, ಬಂಧುಃ, ಆಪ್ತಃ, ಜ್ಞಾತಿಃ, ಬಾಂಧವಃ ಈ ೬ ನೆಂಟರ್" (ಹಲಾಯು. ೬೪-೭೫೫); ಉಂಬಾಗಳಿಲ್ಲೆನ್ನ ಉಡುವಾಗಳಿಲ್ಲೆನ್ನ ಬಂಧುಗಳು ಬಂದಾಗಳಿಲ್ಲೆನ್ನ ಲಿಂಗಕ್ಕೆ ಇಲ್ಲೆಂಬ ಜಂಗಮಕ್ಕೆ ಇಲ್ಲೆಂಬ . . . ಸಾವಾಗ ದೇಹವ ದೇಗುಲಕ್ಕೊಯ್ಯೆಂಬ ದೇವರಿಗೆ ಹೆಣ ಬಿಟ್ಟ ಹೇಳಿತ್ತೆ (ಬಸವ. ೨೨೨); ಕಂಸಂ . . . ಬಂಧುಗಳಬಂಧುರವೆನೆ . . . ಕೈಕೊಳ್ಳದೆ . . . ವಾಸಟಿಯೊಳ್ ಕೂಸೆನಪ್ಪಳಿಸಿ (ಜಗನ್ನಾ. ೨-೫೩ ವ); ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ (ಗಾದೆ). ೩. ಗೆಳೆಯ ; ಸ್ನೇಹಿತ. ೪. ಒಂದು ಬಗೆಯ ಮರ : 'ಬಂಧುಜೀವ' ಪರ್ಯಾ. ೫. [ಜ್ಯೋತಿ] ಲಗ್ನದಿಂದ ನಾಲ್ಕನೆಯ ರಾಶಿ : ವ್ಯವಹರಿಪ ಸಂಜ್ಞೆ ಚತುರಸ್ರವದೆಂದಪ್ಪುವು ಚತುರ್ಥಗೃಹಕೆ ಚತುರ್ಥಕ್ಕೆ ವಲಂ ಮತ್ತಂ ಪಾತಾಳ ವೇಶ್ಮ ಸುಖ ಹಿಬುಕ ಬಂಧುವೆಂದೈದು ಪೆಸರ್ (ಜಾತಕ. ೦-೩೪).

**ಬಂಧುಚಿಂತಾಮಣಿ** = ಬಂಧುಗಳು ಕೇಳಿದುದನ್ನು ಚಿಂತಾಮಣಿಯಂತೆ ಕೊಡುವವನು ; ಒಂದು ಬಿರುದು : ಬಂಧುಚಿನ್ತಾಮಣಿ ಸಮಾಶ್ರಿತಜನಕಲ್ಪವೃಕ್ಷನ್ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಶಾಸಿ. XX. ೪೬-೦೮; 1072). **ಬಂಧುಬಳಗ** = ನೆಂಟರು ಮತ್ತು ಪರಿಜನರು : ಅನಿಮಿತ್ತಬಂಧುವೆ ತಾಯ್ತಂದೆ ಬಂಧುಬಳಗವೆ . . . ಕಾವುದು (ಬಸವ. ೨-೩೪); ತಂದೆ ತಾಯಿಯು ನೀನೆ ಬಂಧು ಬಳಗವು ನೀನೆ (ಪುರಂದ. ೦-೯೩-೦). [ಸಂ.]

**ಬಂಧುಕೃತ್ಯ** (ನಾ). ಒಬ್ಬನು ತನ್ನ ಬಂಧುಗಳಿಗೆ ಮಾಡಬೇಕಾದ ಕಾರ್ಯ,— ಕರ್ತವ್ಯ : ಆಳುಗೆಲಸಕೆ ಕೆಲಬರರಸನ ಖೇಳಮೇಳಕೆ ಕೆಲರು ಕೆಲಬರು ಬಾಲೆಯರ ಕೊಳುಕೊಡೆಯ ಬಳಗದ ಬಂಧುಕೃತ್ಯದಲಿ (ಕುಮಾ. ಅ. ೩-೦೪). [ಸಂ.]

**ಬಂಧುಜನ** (ನಾ). ನೆಂಟರು ; ಬಳಗ : ಕಡಲ ತಡಿಯೆಯ್ದೆ ನೆಲನಂ ಪಡೆವರ್ ಭವದೀಯ ಪುತ್ರರುಳ್ಳಳವಿಗಳೊಳ್ ಪಡೆದುದು ಬಂಧುಜನಂ ನಿಮ್ಮಿಡಿಗಾವೇಂ ಪೋಷ್ಯವರ್ಗದಿಂದಂ ಪೊಜಗೇ (ಅಂಕ. ೯-೯೬). [ಸಂ.]

**ಬಂಧುಜೀವ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು : "ಬಂಧೂಕಂ, ಬಂಧುಜೀವಂ—ಈ ೨ ಬಂದುಗೆ" (ಹಲಾಯು. ೩೫-೫೫). [ಸಂ.]

**ಬಂಧುಜೀವಕ** (ನಾ). =ಬಂಧುಜೀವ. [ಸಂ.]

**ಬಂಧುತನ** (ನಾ). ನೆಂಟಸ್ತಿಕೆ ; ಬಾಂಧವ್ಯ : ಬಳ್ವಳ ಬಳಿನ ಬಂಧುತನವಿನಿತಾಯ್ತೋ (ಸುಕುಮಾ. ೪-೨೫); ನೀವೇಳನೆಯ ಭವದಲಿ ಬಂಧುತನದಲಿ ನಮ್ಮನೈದುವುದು (ತೊರವ. ೦-೯-೨೦); ಉಳಿದು ಕೌರವ ಬಂಧುತ[ಪಾಠಾಂ. ಜ]ನವನು ತೀರ್ಥಯಾತ್ರೆಗೆ ವಿದುರ ಹೊಣವಂಟ (ಪಿಭಾಗ. ೩-೦ ಸೂಚನೆ). [ಬಂಧು + —ತನ]

**ಬಂಧುತೆ** (ನಾ). ೧. ಬಾಂಧವ್ಯ ; ನೆಂಟು. ೨. ನೆಂಟರ ಗುಂಪು ; ಬಳಗ "ಬಂಧುತಾ ಅಂದರೆ ನೆಂಟರ ಗುಂಪು, ನೆಂಟತನಕ್ಕೂ ಹೆಸರು" (ಸಿದ್ಧಾಂತಿ. ೦೭೭). [ಸಂ. ಬಂಧುತಾ]

**ಬಂಧುತ್ವ** (ನಾ). =ಬಂಧುತನ. [ಸಂ.]

**ಬಂಧುರ** (ಗು). ೧. ಸಮತಟ್ಟಿಲ್ಲದ; ಏರುಪೇರಾದ. ೨. ಕೊಂಕಿದ; ವಕ್ರವಾದ. ೩. ಚೆಲುವಾದ ; ಸುಂದರವಾದ. ೪. ನೋವುಂಟು ಮಾಡುವ ; ತೊಂದರೆಯನ್ನು ಕೊಡುವ. (ನಾ). ೫. ಬಾಗಿರುವುದು ; ಮಣಿದುದು : "ನತಂ, ನಮ್ರಂ, ಬಂಧುರಂ—ಈ ೩ ಎಱಗಿರ್ದುದು" (ಹಲಾಯು. ೦೨೫-೬೫). ೬. ಚೆಲುವಾದುದು ; ಸುಂದರವಾದುದು: ಅನ್ಯಗುಣಂಗಳಸಹಾಯಂಗಳ್ ಬೆರಸಿರೆ ಕನ್ನಡದೊಳ್ ಬಂಧುರಮಾಗದು ಕಾವ್ಯರಚನೆ (ಕಬಿರಾ. ೦-೫೩); ಆನಂದವರ್ಧನನ ಜೀವನ ಸರ್ವಾಂಗಸುಂದರವೂ ತತ್ತ್ವಾನುಭವಬಂಧುರವೂ ಭಕ್ತಿನಿರ್ಭರವೂ ಆಗಿತ್ತು (ಧ್ವನ್ಯಾಲೋ. XXVII. ೬೬೦೪). ೭. ಒಂದು ಬಗೆಯ ಪಕ್ಷಿ ; ಬಾತು. ೮. ಬಂಧುಜೀವ. ೯. ರಥದಲ್ಲಿ ಸಾರಥಿಯು ಕುಳಿತುಕೊಳ್ಳುವ ಸ್ಥಳ. [ಸಂ.]

**ಬಂಧುರತೆ** (ನಾ). ಚೆಲುವು ; ಸೌಂದರ್ಯ : ತಳೋದರಿಗೆ ವೃಕೋದರನಾಗಿಪಂ ಕಚಬಂಧಬಂಧುರತೆಯಂ (ಗದಾಯು. ೦-೭೦); ವಿಶ್ವಚೇತನದಾಸ್ಪಂದನವೇ ಸೌಂದರ್ಯವಾದುವೆ ಜೀವನ ಮೂಲಬಂಧುರತೆ ಬೊಮ್ಮನಮು (ಮಂಕಾಕ. ೪೪೬). [ಸಂ.]

**ಬಂಧುರವಡೆ** (ಕ್ರಿ). ಚೆಲುವಾಗು ; ಸುಂದರವಾಗು : ಬಂಧುರವಡೆದ ಮೋಹನಶಾಲೆಯುಂದದಯ್ದುಂದಿರಾಮಂದಿರವಿಹುದು (ಕಂಸವ. ೭-೩೭). [ಬಂಧುರ + ಪಡೆ₁]

**ಬಂಧುರವಿಡಿ** (ಕ್ರಿ). = ಬಂಧುರವಡೆ : ಸ್ಮರಕರಿಕರದಂತೆ ರಂಜಿಸುತಿಹ ಬಂಧುರವಿಡಿದೂರುದ್ವಯದ ಗರುವನಾರುಸಿರು (ಕಂಸವ. ೯-೦೦೭). [ಬಂಧುರ + ಪಿಡಿ₁]

**ಬಂಧುರಿತ** (ಗು). ೧. ಬಾಗಿದ ; ಬಗ್ಗಿದ. ೨. ಕೊಂಕಿದ ; ವಕ್ರವಾದ. (ನಾ). ೩. = ಬಂಧುರಿತಕರಣ : ಮೆಲ್ಲನೆ ಮಲಗಿರ್ದವಳು ತನ್ನ ಎರಡು ಕೈಗಳಿಂ ಕೊರಳಂ ಪಿಡಿದು ರಮಿಸಲ್ಕೆ ಬಂಧುರಿತವೆಂಬ ಕರಣಂ (ಕಾಮಶಾ. ೨೩೭). [ಸಂ.]

**ಬಂಧುರಿತಕರಣ** (ನಾ). [ಕಾಮಶಾ] ರತಿಕೇಳಿಯ ಒಂದು ಭಂಗಿ : ಮಗುಳ್ದೊಱಗಿ ಮೊಳಕಾಲೊಳಗೆ ಕಯ್ಯನೊಯ್ದು ಬಲೆ ಬಗೆಗೊಂಡವನ ಕೊರಳನಪ್ಪಲವನು ಸೊಗಸೊಗೆಯಲವಳೂರುಯುಗಮಾನಮರ್ದಪ್ಪಿ ರತಿವೊಗೆಯಲದೆ ಬಂಧುರಿತಕರಣಂ (ಶಪವ. ೯-೩೩). [ಸಂ.]

**ಬಂಧುರೆ** (ನಾ). ಚೆಲುವೆ ; ಸುಂದರಿ : ಲಾವಣ್ಯಸಿಂಧುವೇಳಾಲೀಲಾಯಮಾನಕೇಕರಾತಿಬಂಧುರೆಯುಂ ಭರತಾಗಮಭವನವಿಹಿತಮಹನೀಯಮತಿಪ್ರದೀಪೆಯುಂ (ಎಕ. V. ಬೇಲೂರು. ೫೮-೬೩; 1117). [ಬಂಧುರ + —ಎ₃]

**ಬಂಧುಲ, ಬಂಧುಳ** (ಗು). ೧. ಬಾಗಿದ ; ಬಗ್ಗಿದ. ೨. ಸುಂದರವಾದ ; ಚೆಲುವಾದ. (ನಾ). ೩. ಗಂಡನಲ್ಲದವನಿಂದ ಹುಟ್ಟಿದವನು : "ಕಟ್ಟವಳತನುಜಂ ಬಂಧುಲ[ಪಾಠಾಂ. ಳ]ನೆನಿಕ್ಕು" (ಮಂಗರಾ. ೯೨-೦೦). ೪. ವೇಶ್ಯಾಮಂದಿರದ ಸೇವಕ. ೫. = ಬಂಧೂಕ : (ಮೃಚ್ಛಿ. ೫೦-೦೦೨೦). ಬಂಧುಳ : ೨. ಬಂಧುಳಃ, ಬಂಧಕೀಪುತ್ರಃ — ಈ ೨ ಕಿಡಿಕಿಯ ಮಗಂ" (ಹಲಾಯು. ೮೨-೩೪೭). [ಸಂ.]

**ಬಂಧುವರ್ಗ** (ನಾ). ನೆಂಟರ ಗುಂಪು ; ಆಪ್ತರ ಸಮೂಹ : ತಿಳಿಹಿದನು ಧೃತರಾಷ್ಟ್ರ ಭೀಷ್ಮರ ಲಲಿತಮತವನು ಬಂಧುವರ್ಗಸ್ಖಲಿತವನು ಸ್ಥೈರಿಸುವುದೆಂದನು ವಿನಯದಲಿ ವಿದುರ (ಕುಮಾ. ಆ. ೧೭-೨೭); ಉರಿಯಲಳಿವುದು ಕಾಯ ಮೋಹದ ತರುಣಿವುಳಿವಳು ಬಂಧುವರ್ಗವು ಸರಿಗು ಹಿಂದಕೆ (ಭಾಕಿರಾ. ೨೩-೦೯). [ಸಂ.]

**ಬಂಧುವಿಯೋಗ** (ನಾ). ನೆಂಟರ ಅಗಲಿಕೆ : ಬಂಧುವಿಯೋಗದಿನೆನಗನು ಬಂಧಿಸಿದ ಮಹೋಪತಾಪಮುದು ನೀಂ ಬರೆ ನಿರ್ಬಂಧದಿನಳಱಿತ್ತದಱಿಂ ಬಂಧುಗಳಿಂ ನೀನೆ ಬಂಧು ಜಗತೀಬಂಧು (ಶಂಪ್ರಕ. ೫-೨೪). [ಸಂ.]

**ಬಂಧುಸ್ಥಾನ** (ನಾ). [ಜ್ಯೋತಿ] "ಲಗ್ನದಿಂದ ನಾಲ್ಕನೆಯ ಸ್ಥಾನ" (ಜಾತಕ. ೪೦೮). [ಸಂ.]

**ಬಂಧುಹನನ** (ನಾ). ನೆಂಟರನ್ನು ಕೊಲ್ಲುವುದು ; ಆಪ್ತರ ಸಂಹಾರ : ಬಂಧುಹನನಕೆ ಮನದರಲು ಭವವಿಂಧ್ಯದಲಿ ಬೆಳ್ಗಾಗಿ ರೌರವಸಿಂಧುವಿನೊಳೋಲಾಡದಿಹನೇ ಪರಮಪಾತಕನು (ಕುಮಾ. ೮. ೩-೩೭). [ಸಂ.]

**ಬಂಧುಳ** 'ಬಂಧುಲ' ನೋ.

**ಬಂಧೂಕ** (ನಾ). ಕೆಂಪುಹೂವುಗಳನ್ನು ಬಿಡುವ ಒಂದು ಬಗೆಯ ಗಿಡ;

ಬಂದುಗೆ : "ಬಂಧೂಕಂ, ಬಂಧುಜೀವಂ—ಈ ಎರಡು ಬಂದುಗೆ" (ಶಬ್ದಮ. ೩೩-೪೩); ಮುದವಮಂ ಜಪಾಪ್ರಸವರಕ್ತಾಶೋಕಬಂಧೂಕಶೋಣ ಮಣಿಜ್ಯೋತಿಗಳಿಕ್ಕೆಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ (ಅಭಿಪು. ೦೬-೩); ಬಂದನು ಸೂರ್ಯನು . . . ಬಂದನು ಉದಯಾದ್ರಿ ಶಿಖರದ ರತ್ನನು ಬಂಧೂಕಸುಮದ ಸನ್ನಿಭನು (ಜಂಶಾಕ. ೦೩೩-೭೦) [ಸಂ.]

**ಬಂಪು₁**, ಬೊಂಪು₁ (ನಾ). ೧. ಸಾಬೂನಿನಂತೆ ಉಪಯೋಗಿಸುವ, ಅಂಟುಅಂಟಾಗಿರುವ ಒಂದು ಬಗೆಯ ವನಸ್ಪತಿ : (*). **ಬೊಂಪು₁** : ೨. ಅಂಟು : ಜಿಗಿ : ಕಣ್ಣುಗಳಲ್ಲಿ ಶ್ಲೇಷ್ಮವೆರಸಿ ನೀರು ಬೊಂಪುಬೋಂಪಾಗಿ ಸುರಿಯಲು ಮೇಪು ಬಟ್ಟು ಜಡನಾಗಿ ನಿಂತಿರಲು (ಅಶ್ವವೈ. ೬೨-೯); ಬಿಳಿದಾಗಿ ನೀಟಾಗಿ ಕೊಂಚ ಬೊಂಪಾಗಿ ಪರಿದು ಬಲ್ಲಿತಾಗಿ ಇದ್ದೊಡೆ ಮದನಜಲಮೆಂಬುದು (ಕಾಮಶಾ. ೨೩೩).

[ದೇ.॥ ತಮಿ. ವಟುಮ್ಪು; ಮಲ. ವಟುಪ್ಪ; ತೆಲು. ಬಂಪು= ಹಲ್ಲಿನ ಮೇಲಿನ ಕೊಳೆ]

**ಬಂಪು₂**, ಬೊಂಪು₂ (ನಾ). ಒಂದು ಬಗೆಯ ಮೀನು : ಸೀಗಡಿ ಕೊರವಂ ಬಂಪು . . . ಹಂದಿಗನಾನೆಮೂಗಮದಲೆಂಬಗಣಿತಶಫರಾಳಿ ಗಳನೆ ತೆಗೆದರ್ ಬೇಡರ್ (ಶ್ರೀಕೃಷ್ಣ. ೨೭-೯೦). **ಬೊಂಪು₂** : ಸಿಸಿಲು ಬೊಂಪು ಸವಿವಾಯು ಗೊದಳೆ ಗಜು ಮೆಚುವ ಕಾಗೆಂಡೆ . . . ಆನೆಮೊಗನೆಂಬ ಮೀನ್ಗಳಂ ಗುದಿಗೆಯ್ದರು (ಹಕಳಾ. ೫-೯೩). [?]

**ಬಂಬಣ** (ಅ). ಹೆಚ್ಚಾಗಿ, ಅಧಿಕವಾಗಿ ಎಂಬ ಅರ್ಥವನ್ನು ಕೊಡುವ ಒಂದು ಅನುಕರಣಾವ್ಯಯ. 'ಬಂಬಲ', 'ಬಂಬಳ' ಪರಾ.

ಬಂಬಣ ಬಾಡಿಸು=ಅಧಿಕವಾಗಿ ಸೊರಗಿಸು,—ಒಣಗಿಸು : ಪಗಲೊ ಳೊರ್ಮೆಯುಂ ತಮ್ಮನಂಡಲೆದು ಬಂಬಣ ಬಾಡಿಸಿ ಬಿಡದೆ ಕಡುಗಾಯ್ದು ಕಣ್ಗೊಳುಳ್ಮವುಷ್ಣಕರನ ಬಿಸುಗದಿರ್ಗಳೆಯ್ದೆ ಮೆಯ್ದೆಗೆದುವೂ (ವರ್ಧಪು. ೬-೨೩ ವ). ಬಂಬಣಂ ಬಾಡು=ಅಧಿಕವಾಗಿ ಒಣಗು,—ಸೊರಗು : ವಿರಹಾಕುಳೆಯುಲರ್ದ ಲತೆಗಳಂ ಪೊರ್ದಲಣ್ಮದೆ ತನ್ನಂತೆ ಬಂಬಣಂ ಬಾಡಿರ್ದ ಜಾದಿಯಂ ನೋಡಿ (ಪಾರ್ಶ್ವಪು. ೯-೬೯ ವ).

**ಬಂಬಲ್₁**, ಬಂಬಲು₁, ಬೊಂಬಲ್ (ನಾ). ೧. ಗುಂಪು ; ಸಮೂಹ : "ಬಂಬಲ್, ತುಱುಗಲ್ . . . ಗುಪ್ಪೆ, ಗೊಂದಣ (ಉಂದಲ್)—ಈ ೪೦ ಸಮೂಹಂ" (ಕಕಶಾ. ೦೦-೩೨೨); ಮದಗಜಗಂಡಸ್ಥಳಂಗಳೊಳೆಱಗಿ ಮೊರೆವ ತುಂಬಿಯ ಬಂಬಲ್ಗಳೆ ವಿಮುಖೀಭೂತಂಗಳಾದುವು (ಪಂಪಭಾ. ೯-೯೯ ವ); ಮಿಳಿರ್ದಾಡುವ ತುಂಬಿಯ ಬಂಬಲಂತೆ . . . ಸೋಲಿಸದೆ ಕಾವನ ಟಬ್ಬಂ (ಕಬ್ಬಿಗಕಾ. ೦೯). **ಬಂಬಲು₁** : ೧. "ಬಂಬಲೆನಲು ಬಳಗಮೆನಲ್ ಶ್ರೇಣಿ" (ಕಕಶ. ೬೪); ಬಂಬಲು ತುಱುಗಲಾಗಿರೆವೊಳಸಿ ಪೊಱಮಡುವ ಕಾಲನವಣಿಗಳೊಳಮೇಂ ನವವಿಧದ ಬಿನ್ನಣಮಂ ನಿನ್ನಾಳ್ದಂಗೆ ಬಿನ್ನವಿಸು (ಅನಂತಪು. ೨-೩೦ ವ). ೨. ಒಟ್ಟಿಲು; ರಾಶಿ : ಬಸಿವ ಬಲುಜಿಗಿಯ ಕರುಳ ಬಂಬಲು (ಕುಮಾವ್ಯಾ. ೨-೫೭). ೩. ಜೊಂಪೆ; ಗೊಂಚಲು : ತಾರಗೆಗಳ ಬಂಬಲಂತೆ ತೋರಮುಡಿಯೊಳಿಳಿಮುತ್ತಿನ ಬಲೆಯ ಶೃಂಗಾರವೊಪ್ಪಿರೆ (ಶಶಿಶ. ೪೦-೫೦). ೪. ರಭಸ; ವೇಗ: 'ಬಂಬಲ್ವರಿ' ಪರಾ. **ಬೊಂಬಲ್** : ೨. ಪಾಲ್ಗಡಲ ತೆರೆಯ ಬೊಂಬಲ್ಗಳಂ ಜೇಂಗೊಡನ ಸಾಲ್ಗಳಂ (ಐಶ್ವ. ೩-೦-೦). [ದೇ.॥ ತುಳು. ಬೊಂಬುಳ]

**ಬಂಬಲ್₂** (ಅ). ಹೆಚ್ಚಾಗಿ, ಬಹುವಾಗಿ ಎಂಬ ಅರ್ಥವನ್ನು ಕೊಡುವ ಒಂದು ಅನುಕರಣಾವ್ಯಯ . 'ಬಂಬಲ', 'ಬಂಬಳ' ಪರಾ.

ಬಂಬಲ್ಬಾಡು=ಅಧಿಕವಾಗಿ ಸೊರಗು,—ಬಾಡು : ಕೊಟ್ಟಡೆಯುದ ನಂತೆ ಬಂಬಲ್ಬಾಡುತ್ತುಂ (ಧರ್ಮಾಮೃ. ೦-೦೯೯).

**ಬಂಬಲ** (ಅ). ಅಧಿಕವಾಗಿ, ಹೆಚ್ಚಾಗಿ ಎಂಬ ಅರ್ಥವನ್ನು ಕೊಡುವ ಒಂದು ಅನುಕರಣಾವ್ಯಯ . 'ಬಂಬಳ' ಪರಾ.

ಬಂಬಲಂ ಬಾಡು, ಬಂಬಲ ಬಾಡು=ಅಧಿಕವಾಗಿ ಸೊರಗು,— ಬಾಡು : ಪದ್ಮೋದರಂ ಪಥಶ್ರಮದಿಂ ಪರಿಶ್ರಾಂತನಾಗಿ ಪಸಿವಳುರೆ ಬಂಬಲಂ ಬಾಡಿ ಬೞಲ್ದುದಂ (ಮಹಾಪುರಾಣ. ೦೬-೯೩); ಪೆಂಡಿರುಂ . . . ಅಡರ್ಪಿಲ್ಲದೆ ಕಲ್ಪವೃಕ್ಷಮಱಿದು ಕೆಡೆಯೆ ಬಂಬಲ ಬಾಡಿದ ವನಲತೆ ಗಳುಮಂ ಪೋಲ್ತು (ಶಂಕರಪು. ೦೯-೯ ವ); ಉಣಲಿಲ್ಲದೆ ಪಸಿವಿಂ ಬಂಬಲ ಬಾಡಿ (ಧರ್ಮಾಮೃ. ೬-೦೬೭).

**ಬಂಬಲಿಸು**, ಬಂಬಳಿಸಂ, ಬೊಂಬಾಳಿಸು (ಕ್ರಿ). ೧. ಗುಂಪಾಗು ; ಸಂದಣಿಸು : ತುಱುಗೆಮೆಯ ತರ್ಕೆಯೊಳ್ ಬಂಬಲಿ [ಪಾಠಾಂ. ೪]ವ ಕಣ್ಬನಿ ಗಳೊಸರೆ (ವರ್ಧಪು. ೪-೬೨ ವ); ಹೂಗಿಡಮಲರಿಹುದೇತಕ್ಕೆ ? ತುಂಬಿಯು ಬಂಬಲಿಸಲಿ ಎಂದು (ಗಣೇಶ. ೬೩-೪). ಬಂಬಳಿಸು : ೧. ಮೇಲಿನ 'ವರ್ಧಪು' ಪ್ರಯೋಗದ ಪಾಠಾಂತರವನ್ನು ನೋಡಿ. **ಬೊಂಬಾಳಿಸು**: ೨. ಹರಡು ; ವ್ಯಾಪಿಸು : ಬಳಲಿದನು ಬೊಂಬಾಳಿಸಿದ ಭಾಸುರದ ರಕ್ತದಲಿ (ತೊರವ. ೩-೦೦-೨೮). [ಬಂಬಲ್₁ + —ಇಸು₁]

**ಬಂಬಲು₁** 'ಬಂಬಲ್₁' ನೋ.

**ಬಂಬಲು₂** (ನಾ). ಎಳನೀರಿನ ತೆಂಗಿನ ಕಾಯಿಯಲ್ಲಿರುವ ತೆಳುವಾದ ತಿರುಳು; ಗಂಜಿ: ಬಂಬಲು ಗೋರಿಕೊಡ್ಲ ಬುದ್ಧಿ! (ವಸ್ತುಕೊ. ೦೬೦). [ ? ]

**ಬಂಬಲುಗರುಳು** 'ಬಂಬಲ್ಗರುಳ್' ನೋ.

**ಬಂಬಲುಗಿಡಿ** (ನಾ). ಕಿಡಿಗಳ ಗುಂಪು,—ರಾಶಿ : ಹೊಸಮಸೆಯ ಬಾಯ್ಧಾರೆಗಳ ಬಂಬಲುಗಿಡಿಯ ಬಾಣಾಳಿಗಳಲೀತನ ಹೂಳಿದನು (ಕುಮಾವ್ಯಾ. ೨೦-೨೩) ; ಕಡಲೋಳಿಡಲೊಡನೆ ಬಂಬಲುಗಿಡಿಯು ಗಡಣದಿಂ ಬಡಬನೊಡ ಗೂಡಿ (ಭಕ್ತಾಕ. ೦-೯). [ಬಂಬಲು₁ (< ಬಂಬಲ್₁) + ಕಿಡಿ]

**ಬಂಬಲುಗುರುಳ್** 'ಬಂಬಲ್ಗುರುಳ್' ನೋ.

**ಬಂಬಲ್ಗಡಿ** (?). (?) : ಬರಿಗಂಡಂ ಪಿಣಿಲೇಱಿ ರೋಮಮುಡಿ ದಿರ್ದಂಷ್ಟ್ರಾಗ್ರ ಮುಂಗಾಲಗಲ್ತರೆ ಬಿಕ್ಕರ್ವ ಮೊಗಂ ಕರಂ ಪೆಗಲ ಬಿಣ್ಪಂ ಜೋಲ್ವ ಬಾಲಂ ಮುಱುಂಕಿರೆ ಬಂಬಲ್ಗಡಿವಂ ಪೊದಟ್ಟಗಸೆವೂಗೊಂಬೊಪ್ಪೆ ಕೋಟ್ಟುಟ್ಟಿ ಪೆರ್ನೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ಕೀಕರಂ ಸೂಕರಂ (ಚಂದ್ರಪ್ರ. ೫-೬೦). [ ? ]

**ಬಂಬಲ್ಗರುಳ್**, ಬಂಬಲುಗರುಳು, ಬಂಬಲ್ಗರುಳು (ನಾ). ಜೊಂಪೆ ಜೊಂಪೆಯಾಗಿ ಹೆಣೆದುಕೊಂಡಿರುವ ಕರುಳು ; ದೊಂಡೆಕರುಳು : ಖಳ ದುಶ್ಶಾಸನನಂ ಪೊರಳ್ಚಿ ಬಸಿಱಂ ಪೋೞ್ದಿಕ್ಕಿ ಬಂಬಲ್ಗರುಳ್ಗಳನಾನಲ್ಕೆ ವಿಳಾಸದಿಂ ಮುಡಿಯಿಪೆಂ ಪಂಕೇಜಪತ್ರೇಕ್ಷಣೇ (ಪಂಪಭಾ. ೬-೦೨). **ಬಂಬಲುಗರುಳು** : ಅರಿದ ಕೊರಳಿನ ಬಸಿವ ಬಂಬಲುಗರುಳ ಜರಿವ ಕಪಾಲದೊಗುನೆತ್ತರ ರಣಾವನಿ ಕೞಿವುತಿರ್ದುದು ರೌದ್ರಮಯರಸವ (ಕುಮಾವ್ಯಾ. ೦೫-೬೪). ಬಂಬಲ್ಗರುಳು : ಒಡಲನೊಚ್ಚತಗೊಂಡ ವಂಬಿನ ಕುಡಿಗೆ ನೆಱೆಯುದು ರಕ್ತಜಲ ಬಳಿವಿಡಿದು ಕವಿವಂಬುಗಳು ಬಂಬಲ್ಗರುಳ ಸೇದಿದವು (ಕುಮಾವ್ಯಾ. ೦೦-೯). [ಬಂಬಲ್₁ + ಕರುಳ್]

**ಬಂಬಲ್ಗರುಳು** 'ಬಂಬಲ್ಗರುಳ್' ನೋ.

**ಬಂಬಲ್ಗುರುಳ್**, ಬಂಬಲುಗುರುಳ್ (ನಾ). ಒತ್ತಾದ ಕೂದಲು ; ದಟ್ಟವಾದ ಕೇಶರಾಶಿ : ಅಮರಾಂಗನೆಯರ ಬೀಸುವ ಚಾಮರದ ಗಾಳಿಯುಲಂಪಿನೊಳಲ್ಲುಗುವ ಬಂಬಲ್ಗುರುಳ್ಗಳ ಬಂಬಲಿಂದಂ ತಳರ್ವ ಚಿನ್ನಪೂಗಳನವಯವದೊಳ್ ಸಯ್ಯು ಮಾಡುವ ಕೆಯ್ತಮುಮಂ (ಅಜಿತ. ೯-೯ ವ) ; ಮಿಳಿರ್ವ ಬಂಬಲ್ಗುರುಳ್ಗಳೆಂಬ ತೊಡಂಕುವಲೆ ಬಸಂತನ ಕೆಳೆಯನೆಂಬೆರಲೆಯುಂ ಸಿಲ್ಕಿಸೆಯುಂ (ಕಬ್ಬಿಗಕಾ. ೬೩). **ಬಂಬಲುಗುರುಳ್** : ದೀರ್ಘನಯನದ ಬಲುಮೊಲೆಯ ಬಾಸೆಗಳ ಬಂಬಲುಗುರುಳ . . . ಪುಳಿನಜಘನಸ್ಥಳದ ದಾನವಸತಿಯರಿರ್ದರ್ (ತೊರವ. ೫-೨-೬೯).

[ಬಂಬಲ್₁ + ಕುರುಳ್₁]

**ಬಂಬಲ್ಗೊಂಬು** (ನಾ). ಎಲೆಯ ಜೊಂಪೆಗಳಿಂದ ತುಂಬಿರುವ ಕೊಂಬೆ : ಎಲೆಗಳಿಂದ ಕೂಡಿ ದಟ್ಟವಾದ ಶಾಖೆ : ನೆಗೆದು ಲಂಬಿಸಿದ ಬಂಬಲ್ಗೊಂಬುಗಳಿನಿಂಬಾದಶೋಕಾನೋಕಹದಿಂಬಿನೊಳೊಂದಿ ಮಂದ ಯಿಸಿ ನೀಳ್ದು ಪರ್ವಿ ಪೆರ್ವೆಪೆತ್ತ ಕರ್ಮುಗಿಲೊಳಗೆ (ನೇಮಿಪು. ೫-೩೨ ವ). [ಬಂಬಲ್$_1$ + ಕೊಂಬು$_1$]

**ಬಂಬಲ್ಗೊಳ್** (ಕ್ರಿ). ಗುಂಪಾಗು ; ಸಾಂದ್ರವಾಗು ; ಮಂದಯಿಸು : ಚೆಂಬಾಯ್ದೆರೆಯಂ ಬಂದುಗೆಯೆಂಬಾಸೆಯಿನೊಸೆದು ಮುಸುಱಿ ಬಂಬಲ್ಗೊಂಬಾ ತುಂಬಿಗಳೆನೆಯೆಳಮಿಸೆಯುದೇಂ ಬಳೆದುದೊ ಚಂದವೊಗದ ಕಱಿಗೆಱಿದೊರೆವೊಲ್ (ಶಕಾ. ೯-೧೩೬). [ಬಂಬಲ್$_1$ + ಕೊಳ್$_1$]

**ಬಂಬಲ್ಜಡೆ, ಬಂಬಲ್ಜೆಡೆ** (ನಾ). ಹೆಣೆದುಕೊಂಡಿರುವ ಕೂದಲು ; ಜಟೆ : ನೀಳ್ದ ಬಂಬಲ್ಜಡೆ ನೆರೆ ಮೆರೆಯಲ್ ಸ್ಥಾಣುವೋಲ್ ನಿಶ್ಚಲತ್ವಂ ಬೆರಸಾದಂ ಸೂರ್ಯಬಿಂಬಕ್ಕಭಿಮುಖನೆನಿಪೀ ಮೌನಿ (ಶಾಕುಂತ. ೧೦೨-೧೬೮). **ಬಂಬಲ್ಜೆಡೆ** : ಎಳಮಿಂಚಂ ಪೋಲ್ವ ಬಂಬಲ್ಜೆಡೆ ಬಳೆದ ಘನಶ್ಮಶ್ರು . . . ಮಿಸುಗೆ ಚರಿಯಿಪರ್ ತಪ್ಪಲೊಳ್ ತಾಪಸೇಂದ್ರರ್ (ರಾಜಶೇ. ೦-೦೩೨). [ಬಂಬಲ್$_1$ + ಜಡೆ$_1$]

**ಬಂಬಲ್ಜೆಡೆ** 'ಬಂಬಲ್ಜಡೆ' ನೋ.

**ಬಂಬಲ್ದಂಬುಲ** (ನಾ). ಕಟ್ಟುವೀಳೆಯ : ಕರಂ ಮೆಯ್ವೆತ್ತು ಮುಯ್ಯಾಗವಮಾಗಡುವಾರ್ಗಂ ಕುಡುತಿರ್ಪ ಕಪ್ಪುರದ ಬಂಬಲ್ದಂಬುಲಂ (ಶಂಪಚಾ. ೯-೦೦೯). [ಬಂಬಲ್$_1$ + ತಂಬುಲ]

**ಬಂಬಲ್ದಗುಳ್** (ಕ್ರಿ). ದಟ್ಟಯಿಸು ; ಸಾಂದ್ರವಾಗು ; ಅಧಿಕವಾಗು : ಹೇಮಂತದೊಳ್ ಮದಮಂ ತಗು[ಳ್ದು] ಶಿಶಿರದೊಳುಱಿದು ಮತ್ತಂ ಬಸಂತದೊಳ್ ಬಂಬಲ್ದಗುಳ್ದ ಮದನವಮದಾನೇಕಪಕ್ಕ ಪಕ್ಕಾದಳೀಕ (ಶಾಂತಿಪು. ೬-೬೬ ವ). [ಬಂಬಲ್$_1$ + ತಗುಳ್$_1$]

**ಬಂಬಲ್ದೆರೆ** (ನಾ). ಒಂದಾದ ಮೇಲೊಂದರಂತೆ ಬರುವ ಅಲೆ ; ತರಂಗಮಾಲೆ : ಎಡೆಗುಡದೆ ನೂಂಕಿ ಮೆಲ್ಲನೆ ತಡಿಯಂ ಸಾರ್ಚಿದ ಪುದಿದಱ ಬಂಬಲ್ದೆರೆಗಳ್ (ಶಂಪಚಾ. ೫-೩೩) ; ಪಾಲ್ದುಂಬಿದ ಸಾಲ್ದೆನೆಗಳ ನೆಲ್ದಱುಗಲನೊಲ್ದು ಸೀಳೆ ಗಿಳಿ ಭಯಭರದಿಂ ಜೋಲ್ದಿಳಿಗೆಗಿಳಿವಂತಿರೆ ಬಂಬಲ್ದೆರೆಯೊಳ್ಪೊಳೆದು ಮಡಿಯ ನೀರೊಳ್ಪೊರ್ಕುಂ (ರಾಜಶೇ. ೨-೦೩). [ಬಂಬಲ್$_1$ + ತೆರೆ$_4$]

**ಬಂಬಲ್ದೊಱೆ** (ನಾ). ತೊರೆಗಳ ಸಮೂಹ : ಅಲರ್ವಂಡಿಂದಾದ ಬಂಬಲ್ದೊಱೆಗಳ ನಲವಿಂ ದಾಂಟ ಪೋಪನ್ನೆಗಂ (ಕಾವ್ಯಸಾ. ೦೦೩). [ಬಂಬಲ್$_1$ + ತೊಱೆ$_2$]

**ಬಂಬಲ್ನಿಱಿ** (ನಾ). ಒತ್ತಾದ ನೆರಿಗೆ ; ದಟ್ಟವಾಗಿರುವ ನಿರಿಗೆ : ಬಂಬಲ್ನಿಱಿ ಮದನನ ನನೆಯಂಬಿನ ಪೊದೆಯೆನಿಸೆ ಕಣೆಯುವಳಿವಟ್ಟಿರೆ ಮುಯ್ಯಂ ಬಳಸಿದ ಮೇಲುದು ಕುಚಮಂ ಬಿಗಿದಿರೆ ಗುರುನಿತಂಬೆ ದುಗುಲವಮನುಟ್ಟಳ್ (ಜಗನ್ನಾ. ೦೦-೦೦೬). [ಬಂಬಲ್$_1$ + ನಿಱಿ$_2$]

**ಬಂಬಲ್ಮಿದುಟ್** (ನಾ). ಒಂದರೊಡನೊಂದು ತೊಡರಿಕೊಂಡಿರುವ ಮಿದುಳಂಗಳ ರಾಶಿ : ಬಂಬಲ್ಮಿದುಟ್ ಪಾಯ್ತುರೆ . . . ಕಾದಿತ್ತು ಖಡ್ಗಪ್ರತಾನಂ (ಜಗನ್ನಾ. ೭-೩೩). [ಬಂಬಲ್$_1$ + ಮಿದುಟ್]

**ಬಂಬಲ್ಮುಡಿ** (ನಾ). = ಬಂಬಲ್ಗುರುಳ್ : ಜೋಲ್ದಿರ್ದ ಬಂಬಲ್ಮುಡಿ ಶಿಥಿಲತವೆತ್ತಿರ್ದ ನೀವೀಭರಂ ಕಣ್ಗೊಳಿಪನ್ನಂ ಲೀಲೆಯಿಂದುಪ್ಪವಡಿಸಿದಳೆ ಹೃದ್ಯಾಂಗಿ ಶಯ್ಯಾಗ್ರದಿಂದಂ (ಜಗನ್ನಾ. ೨-೭೬). [ಬಂಬಲ್$_1$ + ಮುಡಿ$_3$]

**ಬಂಬಲ್ವನಿ** (ನಾ). ಎಡೆಬಿಡದೆ ಸುರಿಯುವ ಹನಿ : ಪನಿತ ಮೊಲೆವಾಲ ಬಂಬಲ್ವನಿಗಳೊ ನಸುನಗೆಯೊ ಮೊಳಗೆಳೋ ಪೊಳೆದಪುವೆಂಬಿನಮೊಗದ ಪಲ್ಲಮೊಪ್ಪುವ ತನಯನ ನಗೆಮೊಗಮನೆಂದು ಪೇಱು ಕಂಡಪೆನೋ (ಆದಿಪು. ೦-೯೯). [ಬಂಬಲ್$_1$ + ಪನಿ$_1$]

**ಬಂಬಲ್ವರಿ** (ಕ್ರಿ.) ರಭಸವಾಗಿ ಓಡು : ಧಾವಿಸು : ನೀಲ್ವ ಪೆಣಕ್ಕೆ ಪರ್ದೆಱಿಗೆ ಪೈರಿಯ ನಾಲ್ಕುಬಲಕ್ಕವೊಂದೆ ಬಂಬಲ್ವರಿಯುತ್ತುಮಿರ್ದುದು ಜಯದ್ವಿರದಂ (ಕಾವ್ಯಾವ. ೬೮) ; ಬಂಬಲ್ವರಿಯುತ್ತುಂ ನೆಗೆದಂಬುದಮಂ ತೇಸವಿಮಿಱಿಯುತುಂ . . . ಅದೇಂ ಬಿನದಮನಮರಪತಿಗೆ ತೋಱಿದುದೊ ಗಜಂ (ಚಂದ್ರಪ್ರ. ೦೨-೮೪) ; ಮಸಗಿದ ಮಿಟ್ಟುವೆ ಮದಗಜದೆಸಕಮನೊಳ ಕೊಂಡುದೆನಿಸಿ ಭೀಮನ ಬಲಮಂ ದೆಸೆಗೆಡಲಱಿಯಟ್ಟುತ್ತುರ್ವಿಸೆ ಬಂಬಲ್ವರಿದು ತೊತ್ತಳಂದುಱಿಯುತ್ತುಂ ಬಂದು (ಮಹಾಸೇ. ೦೨-೦೩೪). [ಬಂಬಲ್$_1$ + ಪರಿ$_2$]

**ಬಂಬಲ್ವರಿಗೊಳ್** (ಕ್ರಿ). ದಟ್ಟವಾಗಿ ವ್ಯಾಪಿಸು ; ಸಾಂದ್ರವಾಗು : ಕಾಲ್ಕಿಡಿದಿರ್ದೊಡಾಂ ಚರಣಪಲ್ಲವದಿಂದೊದೆದೆತ್ತಿ ಸುತ್ತಿ ಬಂಬಲ್ವರಿಗೊಂಡು ನೀಳ್ದ ಕಿಸುಪೇಱಿದ ಕೇಕರಕಾಮಪಾಶದಿಂ ಕೊಲ್ವವೊಲ್ (ಲೀಲಾವ. ೦೯-೩೩). [ಬಂಬಲ್$_1$ + ಪರಿಗೊಳ್]

**ಬಂಬಲ್ವರಿಯಿಸು** (ಕ್ರಿ). ರಭಸವಾಗಿ ಓಡಿಸು ; ವೇಗವಾಗಿ ಧಾವಿಸುವಂತೆ ಮಾಡು : ಎರಡುಂ ಭಾಗಂಗಳೊಳ್ ತನ್ನಣುಗಿನ ಸುತರುನ್ಮತ್ತ ನಾಗಂಗಳಂ ಜೇಂಕರಿಸುತ್ತಿಂಬಾಗಿ ಬಂಬಲ್ವರಿಯಿಸೆ (ಶಾಂತಿಪು. ೫-೩೯) ; ಕರಿಯಂ ಪಾಯ್ದೇಱಿ ಬಂಬಲ್ವರಿಯಿಸಿ ಗಿರಿಯೊಳ್ ಪೋರಿಸುತ್ತುಂ ಸರತ್ಕೇಸರಿ ಕಾಸಾರಕ್ಕೆ ಕೊಂಡುಯ್ವುಪುದಿದು (ಲೀಲಾವ. ೬-೨೪) ; ರಾಕ್ಷಸಧ್ವಜ ಬಲಕ್ಕೆ ತಾರ್ಕ್ಷ್ಯಧ್ವಜರ ಬಲಮುಗಿದು ಸುಗಿವುದುಂ ಬಲದೇವಂ ಕಂಡು ತನ್ನ ಗಂಧಗಜಮಂ ಬಂಬಲ್ವರಿಯಿಸಿ ವಿದ್ವಿಷ್ಟಬಲದ ವೀರರಂ ವಿನಾಶಕ್ಕೆ ತಪ್ಪುದುಂ (ಮಹಾಸೇ. ೬-೮೩ ವ). [ಬಂಬಲ್$_1$ + ಪರಿಯಿಸು]

**ಬಂಬಲ್ವೆಳಗು** (ನಾ). ದಟ್ಟವಾದ ಬೆಳಕು ; ಸಾಂದ್ರವಾದ ಕಾಂತಿ : ಜೋಲ್ವ ಮೇಲುದನಿನಿಸು ಮುಸುಕುತಲರ್ಗಣ್ಣ ಬಂಬಲ್ವೆಳಗುಗಳ ಸೂಸುತೆ (ಶಬ್ದಮ. ೬-೨೦). [ಬಂಬಲ್$_1$ + ಬೆಳಗು$_1$]

**ಬಂಬಲ್ಸರಿ** (ನಾ). ಎಡೆಬಿಡದ ಮಳೆ ; ಜಡಿಮಳೆ : ಮೆಲ್ಸರಿ ಸೂಳ್ಸರಿ ಮುಗಿಲೊಳ್ಗಲ್ಸರಿ ತೆಳ್ಸರಿ ಕರಂ ಪೊನಲ್ವರಿಯಿಪ ಬಂಬಲ್ಸರಿ ಬಲ್ಸರಿ ಕಾಲ್ಸರಿ ಸಾಲ್ಸರಿ ಸಲೆ ಸುರಿದು ಕಱಿದುವಿರುಳುಂ ಪಗಲುಂ (ರಾಜಶೇ. ೬-೦೦೨). [ಬಂಬಲ್$_1$ + ಸರಿ$_6$]

**ಬಂಬಳ** (ಅ). ಹೆಚ್ಚಾಗಿ, ಅಧಿಕವಾಗಿ ಎಂಬರ್ಥವನ್ನು ಕೊಡುವ ಒಂದು ಅನುಕರಣಾವ್ಯಯ : ಕಂಬನಿಯೊಳೋಲಾಡಿ ಬಂಬಳ ಬೊಂಗಬಾಡಿ ನೋವಿಂ ಕರಂ ಬಟಲಲು (ಜಗನ್ನಾ. ೦೩-೦೦೬ ರಗಳೆ). 'ಬಂಬಲ 'ಪರಾ.

**ಬಂಬಳಂ ಬಾಡು, ಬಂಬಳ ಬಾಡು** = ಹೆಚ್ಚಾಗಿ ಒಣಗು ; ಅಧಿಕವಾಗಿ ಸೊರಗು,—ಬತ್ತು : ಪಸಿವಿಂದಂ ತೃಷೆಯಿಂದಂ ಪಥಶ್ರಮದಿಂದಾದಮಾನುಂ ಸೇದೆಗೆಟ್ಟು ಬಂಬಳಂ ಬಾಡಿರ್ಪನ್ನೆಗಂ (ವಡ್ಡಾರಾ. ೦೦೦-೩೩) ; ಕಾಂತೆಯರ್ . . . ನಿಜವಾಸದ ವಿಳಾಸವಿಹಗಂಗಳಂ ನೋಡಿ ಬಂಬಳಂ ಬಾಡಿ (ಕೃಷ್ಣಕು. ೦೩-೯೭ ವ) ; ಆ ಬಾಳೆ ಕಾದ ಪುಡಿಯೊಳ್ ಬಿರ್ದಳವಾಳೆಯಂತೆ ಬಂಬಳ ಬಾಡಿ (ಸುಕುಮಾ. ೦೨-೨೪ ವ) ; ಬಂಬಳ ಬಾಡಿದ ದೇಹ ಕಟ್ಟಳಿದ ತುಱುಂಬು ಕಂದಿದ ಮೊಗದಿಂದ . . . ಪಲುಂಬಿದರು (ಭರತ. ೭೦-೭೯). **ಬಂಬಳನೆ ಬಾಡು** = ಹೆಚ್ಚಾಗಿ ಸೊರಗು,—ಬತ್ತು : ಬಂಬಳ [ಶಾಶಾಂ. ಲ]ನೆ ಬಾಡಿ ಮಂಜಱಿದಂಬುಜಲತೆಯಂತಿರ್ದ ಜಾನಕಿಯಂ ನೀಲಾಂಬರನೀಕ್ಷಿಸಿ (ಶಂರಾಮಾ. ೦೫-೪).

**ಬಂಬಳಿಸು** 'ಬಂಬಲಿಸು' ನೋ.

**ಬಂಬಾಳ, ಬೊಂಬಾಳ$_2$** (ನಾ). ೧. ಕಣ್ಣು ಕೋರೈಸುವಂತಹ ಬೆಳಕು ; ಅತ್ಯಂತ ಪ್ರಕಾಶಮಾನವಾದ ಪ್ರಭೆ : 'ಬಂಬಾಳದೀವಿಗೆ' ಪರಾ. **ಬೊಂಬಾಳ$_2$** : ೧. 'ಬೊಂಬಾಳದೀಪ', 'ಬೊಂಬಾಳ ದೀವಿಗೆ' ಪರಾ. ೨. ಕಣ್ಣು ಕೋರೈಸುವ ಪ್ರಭೆಯುಳ್ಳ ದೀಪ : ಚಂದನದ ತೈಲದಿಂ ದುರಿವ ಬೊಂಬಾಳಂಗಳಿಂದೆ . . . ಇರುಳ್ಕಂಗೊಳಿಸು

ತಿರೆ (ಕೃಬಿಳಾ. ೨೯-೩೬); ಜಾರಚೋರರತ್ತಂಣಂ ಭೀತಿಯಣಂ ನಾಡೊಳಿಲ್ಲೆನೆ ಬಾಗಿಲಂ ಪಡಿದೆಱೆದು ಬೊಂಬಾಳಂಗಳನುರಿಯಿಸಿ ತಾಂ ನಿದ್ದೆವೋದ ಸಜ್ಜನರ ಸಜ್ಜುಗೊಂಡ ಬೀಡುಗಳ ಸಾಲ್ಗಳಿಂ . . . ಕೇರಿಗಳ್ ಸೊಗಯಿಸೆ (ರಾಮಾಶ್ವ. ೩೭-೨೦); ಮುನಿಪ ಕಾಲಂಗೆಯ್ದೆ ನಿನ್ನುರಿವ ಬೊಂಬಾಳ ನಂದುವಂತಿವನ ಚಿತ್ತವಿಮೋಕ್ಷವಾಯ್ತು! (ಕೃಶಾಪ. ೬೯-೬೯).
[ ← ಮರಾ. ಬಂಬಾಳ್, ಬಂಭಾಳ್]

**ಬಂಬಾಳದೀವಿಗೆ, ಬೊಂಬಾಳದೀವಿಗೆ** (ನಾ). ಪ್ರಕಾಶಮಾನವಾಗಿ ಉರಿಯುತ್ತಿರುವ ದೀಪ; ಪ್ರಜ್ವಲಿಸುತ್ತಿರುವ ದೀಪ: ಬಂ [ಪಾಠಾಂ. ಬೊಂ]ಬಾಳದೀವಿಗೆ ಬೆಳಗಿತು ಬಾಲಾರ್ಕಬಿಂಬಗಳೆನೆ (ಕುಮಾರಾಂ. ೦೯-೫೯). **ಬೊಂಬಾಳದೀವಿಗೆ**: ಬೆಳಗಿದವು ಬೊಂಬಾಳದೀವಿಗೆ (ಕುಮಾರವ್ಯಾ. ೬-೯೩); ಬೆಳಗಿದವು ಬೊಂಬಾಳದೀವಿಗೆ ಲಕ್ಷಸಂಖ್ಯೆಯಲಿ (ಕೊರಟಾ. ೫-೬-೫); ಹೂವಿನ ಗೊಂಚಲೆಂಬಂದದೆ ಬೊಂಬಾಳದೀವಿಗೆ ಮಱೆದುವಿಕ್ಕಲದೆ (ಮೋಹತ. ೦೫-೬).
[ ಬಂಬಾಳ + ದೀವಿಗೆ./ಮರಾ. ಬಂಬಾಳ್‌ದೀವಾ, ಬಂಬಾಳ್‌ದಿವಾ]

**ಬಂಬಿಕನೂರ್** (ನಾ). ಒಂದು ಊರಿನ ಹೆಸರು: ಬಂಬಿಕನೂರ ಪೂರ್ವ್ವಗರ ಗೊಲುಕಿಗಾವುಣ್ಣನ ಮಗ (ಎಕ. IX. (S). ಹೊಸಕೋ. ೨೦೬-೩; ೯೬೦). [ ? + ಊರ್ ]

**ಬಂಬು** 'ಬೊಂಬು₁' ನೋ.

**ಬಂಬು₂, ಬೊಂಬು₂** (ನಾ). ೧. ಕೊಳವೆ; ನಳಿಗೆ: ಬಂಬಿನ ಸಹಾಯದಿಂದ ಬಾವಿಯೊಳಗಿನ ನೀರು ಮೇಲೆ ತೆಗೆಯುತ್ತಾರೆ (ಮುಂಜಾ. ೫-೮೦). ೨. ಗಾಳಿಯ ಒತ್ತಡದಿಂದ ಕೂಗುವ ಸಾಧನ; ಸೈರನ್ನು: ಗಿರಣಿಯ ಬಂಬು ಕರೆಯುವುದು ಏಳು! (ಸೂರ್ಯಕಾ. ೫೦-೬); ಕೋಲಾರಲಂಪೂರ ರೇಲ್ವೆವರ್ಕಶಾಪದ ಬಂಬು ಕೂಗಿಕೊಂಡಿತು (ಕವಚಾ. ೦೨೬). ೩. ದೊಡ್ಡಪಾತ್ರೆ; ಹಂಡೆ: ಬಂಬಿನಲ್ಲಿಯ ನೀರು ಆರಿಲ್ಲವಷ್ಟೆ ಎಂದು . . . ಬದಿಗೆ ಇಟ್ಟ ಬಂಬಿಗೆ ಕೈಹಚ್ಚಿ ನೋಡಿದಳು (ತ್ರಿಣ. ೯೬); ಮತ್ತೊಂದು ಮೂಲೆಯಲ್ಲಿ ಝುಗಝುಗಿಸುವ ಬಿಸಿನೀರಿನ ಬಂಬು (ಸಾವಿ. ೨). **ಬೊಂಬು₂**: ೧. "ಬೊಂಬು = ಕೊಳವೆ" (ಶಬ್ದಕೋ. ೨೯). [←ಅರಂ. ಹಿಂ. ಬಂಬಾ; ಮರಾ. ಬಂಬ್]

**ಬಂಬುಚ್ಚು** 'ಬಂಬೂಚು' ನೋ.

**ಬಂಬೂಚು, ಬಂಬುಚ್ಚು** (ನಾ). (ಕರಾ) ತೇವದಿಂದ ವಸ್ತ್ರಗಳ ಮೇಲೆ ಬರುವ ಒಂದು ಬಗೆಯ ಕ್ರಿಮಿ: ಎಲ್ಲಕ್ಕು ಹಣ ತೆತ್ತು ಬಿತ್ತಿದರೂ ಆ ಹಂದಿ ಹರಿಣ ಮೊದಲಾದ ಕಾಡು ಪ್ರಾಣಿಗಳ ಕಾಟ ಬೇರೆ. ಬಂಬೂಚು ರೋಗವೂ ತಪ್ಪಿದ್ದಲ್ಲ (ಜಾಗಿ. ೦೦೯). **ಬಂಬುಚ್ಚು**: ಈ Racket ಕೃಷಿ departmentನವರಿಗೆ ಬಂಬುಚ್ಚು ಹಿಡಿಯಲಿಕ್ಕಾದೀತು (ಮುಣಗಿಯು. ೦೮೦). [< ಬೂಜು₁ ?]

**ಬಂಭರ** (ನಾ). ತುಂಬಿ; ಭ್ರಮರ: ಗಂಡಸ್ಥಳದ ಮದಪರಿಮಳಕೆ ಬಂದೆರಗುತಿಹ ಬಂಭರವ ಪೊಡೆವ ವಿಶಾಲಕರ್ಣಾಂಚಲದ ಮಾರುತನ (ಅನಂತಾ. ೦-೦-೯); ಮೃದುರವದಿಂದಲೆಡಬಲದಿ ನಾದಿಸುವ ಕೋಗಿಲೆ ಶುಕಾಳಿಗಳ ಭೋರ್ಗರೆವ ಬಂಭರಗಳ . . . ನೋಡುತ್ತ (ಕೇಣಾರಾ. ೩-೯-೩೨). [ಸಂ.]

**ಬಂಭ್ರಮಿಸು** (ಕ್ರಿ). ಅತಿಶಯವಾಗಿ ಸುತ್ತು, ತಿರುಗು: ಎಂಭತ್ತು ನಾಲ್ಕುಲಕ್ಷಗುಣಗಳೆಂಬ ಗಂಭೀರದ ನೇಣ ಬಿಗಿದು ಬಂ[ಪಾಠಾಂ. ಸಂ] ಭ್ರಮಿಸದ ಧ್ಯಾನವೆಂಬ ನೊಗವ ಮಾಡಿ ಸಂಭ್ರಮ ಮಿಗೆ ಹೂಡಿದನು (ಪ್ರಭುಸಾಂ. ೦೦-೦೦೯); ಕಂಗಳು ಬಂಭ್ರಮಿಸಿ, ಹಮ್ಮುಕ್ಕಿ ಜಂಗಮಿಸಿ ಎದೆ ಮೊಗ ಕೆಳಗಿಳಿಸಿ ನೋಡುತಿರೆ (ಹರಿಣೀ. ೯೯-೯೦೯).
[ಬಂ₀ (ಭ್ರ ← ಸಂ. ಭ್ರಮ) + ಭ್ರಮಿಸು]

**ಬಂಹಿಮ** (ನಾ). ಹೆಚ್ಚಳ; ಆಧಿಕ್ಯ; ಅತಿಶಯ: ಬಂ [ಪಾಠಾಂ. ಬ್ರಂ] ಹಿಮವಚ್ಚಳಲಕ್ಷ್ಮಿಯ ಸಿಂಹಂಗಳನಂತಬಳನ ಪಾದಾಂತಿಕದೊಳ್ ಸಂಹತಿಗೊಂಡಿರ್ದವುವೆನೆ ಸಿಂಹಾಸನಮೆಸೆದುದಮಳಮಣಿಖಚಿತಂಗಳ್ (ಅನಂತಪು. ೬-೯೬); ಅಸುರಾರಿಯ ಪೊರ್ಕುಳದ ಪದ್ಮಮಂ ಖರದ್ಯೋತಿಯ ಕೆಯ್ಯ ಕಂಜಮುಮನಿದಿಯ್ದೆ ಸುರುಳ್ಗುಗುಮೆಂಬಿನಂ ಜಗತ್ಕೌತುಕಮಾಯ್ತುನುಷ್ಣಮಹಿಮಂ (ಕುಕಪು. ೬-೯೬). [ಸಂ. ಬಂಹಿಮನ್]

**ಬಕ** (ನಾ). ೧. (ಯುಕ್ತಿ, ಮೋಸ ಹಾಗೂ ಜಾಗರೂಕತೆಗಳಿಗೆ ಹೆಸರಾದ) ಕೊಕ್ಕರೆ ಜಾತಿಯ ಒಂದು ಬಗೆಯ ಹಕ್ಕಿ: "ಬಕಃ, ಬಕೋಟಃ — ಈ ೨ ಬಕಂ" (ಹಲಾಯು. ೯೨-೯೬); ಬಕ ಕುರರವಕ್ಷವಿಕ್ಷಿಪ್ತಕಂಜಕಿಂಜಲ್ಕಪುಂಜಪಿಂಜರಿತಾಚ್ಛೋದಕ ಪರಿಪೂರ್ಣತಟಾಕಪ್ರಕರ ಸರೋನಿಕರರಂಜಿತಾಶಾವಲಯಂ (ಅಜಿತ. ೬-೫೬); ಬೆಳುವ ಬೆಂಚಗ ಬೊಕ್ಕ ಬಕ ಮಿಂಚುಲಿಗ ಕೆಂಜರಿಗಣ್ಣ ಶಿಖಿ ಮಡಗೊಳಲೆ ಮುಖ್ಯವಿಹಂಗವಿವೆ (ಕೊರಟಾ. ೬-೦-೩೬). ೨. ಕಪಟಿ; ವಂಚಕ; ಠಕ್ಕ. ೩. ಭೀಮಸೇನನಿಂದ ಹತನಾದ ಒಬ್ಬ ರಾಕ್ಷಸ: ನೇಸಱ್ ಮೂಡಿದುದು ಬಕಂಗೆ ಮಿಟ್ಟು ಮೂಡುವ ತೆಱದಿಂ (ಪಂಪಭಾ. ೩-೩೬); ಬಕನಂ ಹಿಡಿಂಬನಂ . . . ಜರಾಸಂಧನನಿಕ್ಕಿ ಕೊಂದ ಬಲ್ಲಾಳ್ಗಳುತ್ತುತಂ ಕೇವಳನೇ (ಗದಾಯು. ೨-೯೬); ವಿಕಟಭುಜಬಲರೇಖಚಕ್ರದೊಳಕುಟಿಲರು ಭೂಸುರರ ರಕ್ಷಿಸಿ ಬಕನ ಮುಱಿದರು (ಕುಮಾವ್ಯಾ. ೦೦ ಸೂಕತ). ೪. ಕೃಷ್ಣನಿಂದ ಹತನಾದ (ಕೊಕ್ಕರೆಯ ರೂಪದ) ಒಬ್ಬ ರಾಕ್ಷಸ: ಸಂದ ಪೂತನಿ ಬಕರೆನಿಪ್ಪವರಿಂದ ಕಿಱಿಯನುದಾರವಿಕ್ರಮನಿಂದು ಬಾಲಕರಾಟವನು ಮಾಣಿಸುವೆನು (ಜೈಮಿ. ೦೦-೦೨-೦೬). ೫. ಒಂದು ಬಗೆಯ ಗಿಡ: "ಶಿವಮಲ್ಲೀ, ಪಾಶುಪತಃ, ಏಕಾಷ್ಠೀಲಃ, ಬಕಃ, ವಸುಃ – ೫ ಬಕಪುಷ್ಪದ ಹೆಸರು, ಕೊಕ್ಕರೇ ಹುವ್ವಿನ ಗಿಡ" (ಶಬ್ದಾಂಕ. ೦೫೧). ೬. ಖನಿಜಗಳನ್ನು ಸುಡುವ ಅಥವಾ ಘನಭಟ್ಟಿ ಇಳಿಸುವ ಒಂದು ಸಾಧನ: ಲಾವಾವನ್ನು ಬಟ್ಟಿ (ಬಕ)ಗಳಲ್ಲಿ ಕಾಯಿಸಿದರೆ, ಗಂಧಕವು ಕಾದು ಕರಗಿ, ಅನಿಲರೂಪವನ್ನು ತಾಳಿ, ಇನ್ನೊಂದು ಕಡೆಗೆ ಬಂದು, ಗಂಧಕವಾಗಿ ಗಟ್ಟಿಗಟ್ಟುವುದು (ಪಾಂಶ್ರ. II. ೬೨೯). [ ಸಂ. ]

**ಬಕಗ್ರೀವ** (ನಾ). ಬರವಣಿಗೆಯಲ್ಲಿ ಉದ್ಧೃತಭಾಗಗಳನ್ನು ತೋರಿಸಲು ಬಳಸುವ ಚಿಹ್ನೆ; (" "): "ಬಕಗ್ರೀವದಲ್ಲಿ" ಎನ್ನುವುದು "in inverted commas" ಎಂಬುದಕ್ಕೆ ಕನ್ನಡ! ನಮ್ಮಲ್ಲಿ ಹಿಂದಿನಿಂದಲೂ ಇರುವ "ಹಂಸಪಾದ" ಎಂಬುದರ ಮಾದರಿಯ ಮೇಲೆ, ಈ "ಬಕಗ್ರೀವ"ವನ್ನು ಅನುವಾದ ಚಿಹ್ನೆ ಎಂಬ ಅರ್ಥದಲ್ಲಿ . . . ಬಳಕೆಗೆ ತಂದಿದ್ದರು (ಪಂಚಿಟು. ೫೦). [ಸಂ.]

**ಬಕತರ** (ನಾ). ಲೋಹದ ಜಾಲರಿಯಿಂದ ಕೂಡಿದ ಕವಚ: ದಂತದ ಸೂನಗೆ ಸೊಂದಿಲೊಳಾಂತಸಿಮ್ಮೆಗಮರ್ದ ಜಿಲೆಯ ಬಕತರ ಜೂಡಾಲಂ ತೊಳಪಾನೆಯನೇರ್ದಿದಿರಾಂತಂ ಧುರಕಾ ಬರೀದಯಮಾಧೀಶಂ (ಕಕಪ್ಪ. ೨-೩೬); ಭರಿಕೈಗಳೊಳಾಂತಸಿ ಬಕತರ ದಂತಂಗಳೊಳಮರ್ದ ಸೂನಗೆಯೆಸೆಯಲ್ ಕರಪದವೊಗೆದೆಡೆಯಾಡುವ ಗಿರಿಕುಲಮೆನೆ ಕವಿದು ಪಾನೆವಿಂಡೊತ್ತಿಸಯೊಳ್ (ಕಕಪ್ಪ. ೨-೩೬).
[←ಪಾರ. ಹಿಂ. ಬಕ್ತರ್, ಬಖ್ತರ್; ಮರಾ. ಬಕತರ್, ಬಕ್ತರ್, ಬಖತರ್, ಬಖ್ತರ್]

**ಬಕಧ್ಯಾನ** (ನಾ). ಬಕಪಕ್ಷಿಯು ತನ್ನ ಆಹಾರದ ಮೀನಿಗಾಗಿ ನಿಶ್ಚಲವಾಗಿರುವಂತೆ ಮಾಡುವ ಧ್ಯಾನ; ಕಪಟಧ್ಯಾನ: ಗೀರ್ವಾಣಭಾಷೆಯೊಳ್ ಸ್ವಸ್ತಿಯಂ ವಾಚಿಸಿದನೋಂಕಾರವೆರಸಿ, ಬಕಧ್ಯಾನಮಂ ನಿಂದಿಪೊಲಲ್ಲೆ ನಿಂದನು, ಬಗೆಯ ಬಾವಿಯಂ ರೆಪ್ಪೆವುಲ್ಲಿಂದಡಕಿ ಮುಚ್ಚಿ (ಶ್ರೀರಾಮಪ. ೨೯೩-೯೨೩). [ಸಂ.]

**ಬಕಬಂಧನ** (ನಾ). (ಬಕಪಕ್ಷಿಯನ್ನು ಹಿಡಿಯುವ) ವಿಫಲವಾದ ಪ್ರಯತ್ನ : ಹೋದ ದಾರಿಯೆ ಹೋಕೆ ! ಬಕಬಂಧನಕೆ ವೃಥಾ ಯತ್ನಿಸದಿರ್ಕೆ ಗೆಳೆಯ (ಪಕ್ಷಿಕ. ೧೭–೪೩). [ಸಂ.]

**ಬಕಬಂಧನಕೌಶಲ** (ನಾ). (ಅಲಂ)ಸರಳರೀತಿಯಿಂದ ಮಾಡಬಹುದಾದ ಕೆಲಸವನ್ನು ಕಠಿಣಮಾರ್ಗದಿಂದ ಮಾಡುವಿಕೆ ; ವೃಥಾಶ್ರಮ ಪಡುವಿಕೆ : ನಿಮ್ಮ ಮಾತು ಬಕಬಂಧನಕೌಶಲವೇ ಹೊರತು ಬೇರೆಯಲ್ಲ (ಶಿಕ್ಷಕೀ. ೬೦). 'ದ್ರಾವಿಡಪ್ರಾಣಾಯಾಮ' ಹೋ. [ಸಂ.]

**ಬಕರ** 'ಬಕರಾ' ನೋ.

**ಬಕರಾ, ಬಕರ** (ನಾ). ೧. ಗಂಡಾಡು ; ಹೋತ. ೨. (ಅಲಂ) ಏನೂ ತಿಳಿಯದವನು ; ದಡ್ಡ : ಈ ಕೇಶವರಾಯನಿಗೆ. ಅದೆಷ್ಟೂ ಮನಸ್ಸು ಚಲಿಸಲಿಲ್ಲವೆಂದರೆ ನಂಬುವ ಬಕರಾ ಯಾರು ? (ಬೆಂಗಬ. ೩೩) ; ಹತ್ತು ಗಂಟೆಗೆ ಒಬ್ಬ 'ಬಕರಾ'ನನ್ನು ಹಿಡಿಯಬೇಕಾಗಿದೆ. (ಎಡಹ. ೬೩). **ಬಕರ** : ೧. ಜೀವಣ್ಣ ಬೆದರಿದ ಬಕರನಂತೆ ಬೆಚ್ಚಿ ಹಿಮ್ಮೆಟ್ಟಿದ (ಪತಾಮಹ. ೦೦೯). ೨. ಅಂಗಡಿಯವನಿಗೂ ಆ ಬಿದ್ದ ಬಕರನಿಗೂ ಮಾರಾಮಾರಿಯಾಯಿತು (ವೈದ್ಯಶಿ. ೬೯). [← ಹಿಂ. ಬಕರಾ ; ಮರಾ. ಬಕರಾ, ಬಕರೀ, ಬಕರೇ. / ಸಂ. ಬರ್ಕರ]

**ಬಕರೆ** 'ಬಕ್ಕರೆ' ನೋ.

**ಬಕವಿಡಂಬನ** (ನಾ). ಸೋಗು ; ಕಪಟ : ವಿಕಳರಾವಿದನೆತ್ತ ಬಲ್ಲವು ಸಕಲಗುಣಸರ್ವಜ್ಞ ನಿನಗೀ ಬಕವಿಡಂಬನವೇ (ಕುಮಾವ್ಯಾ. ೩೨–೩೦). [ಸಂ.]

**ಬಕವೃತ್ತಿ** (ನಾ). ೧. ಮೋಸಗಾರಿಕೆ ; ಕಪಟ : ಬಕವೃತ್ತಿ ಪಿಸುಣತನ ಪರನಿಂದೆ . . . ದೋಷಾಕರಗಳು (ಜೀವಂಧ. ೩–೯೯) ; ಪರಸ್ತ್ರೀವ್ಯಸನ ವತ್ಸಾಚಾರ ಬಕವೃತ್ತಿ ಕೃತವಿನಾಶನ ಡಂಭ ಹಿಂಸಾರತಿ ನಿಜಾನ್ವಯಧರ್ಮ ಕರ್ಮಚ್ಯುತಿಗಳೆಂಬ ದೋಷಾಂಕುರಂಗಳು (ಕುಮಾವ್ಯಾ. ೦೩–೦೪). ೨. ಮೋಸಗಾರ ; ವಂಚಕ. [ಸಂ.]

**ಬಕವೇಸಿತನ** (ನಾ). ಮೋಸದ ವ್ಯಭಿಚಾರ : ಬಕವೇಸಿತನದಿಂದೊಡಲ ಸೂಡಿಂಗಿರಲಾಜದೆ ಪುಸಿಗೂರ್ವೆಯಿಂದೋಪಳನಪ್ಪಿಕೊಂಡು (ಧರ್ಮಾಮೃ. ೬–೩೩). [ಬಕ + ವೇಸಿ$_1$ (< ವೇಶಿ) + —ತನ]

**ಬಕವೈರಿ** (ನಾ). ೧. ಬಕನ ರೂಪದಲ್ಲಿದ್ದ ರಾಕ್ಷಸನನ್ನು ಕೊಂದವನು; ಕೃಷ್ಣ : (*). ೨. ಬಕಾಸುರನನ್ನು ಕೊಂದವನು ; ಭೀಮಸೇನ : ಶುಕಮುನಿಯಂತೆ ಸ್ತುತಿಸಲಱಿಯೆ ಬಕವೈರಿಯಂತೆ ಧ್ಯಾನವ ಮಾಡಲಱಿಯೆ (ಪುರಂದ. ದಾ. ೧–೮೦–೧) ; ಆ ನೃಪಂ ಬಕವೈರಿಗಿಂತೆಂದನು (ಕೃಷಿಕಾ. ೪–೬೦). [ಸಂ. ಬಕವೈರಿನ್]

**ಬಕವ್ರತಿ** (ನಾ). (ಮೋಸ ಮಾಡುವುದಕ್ಕಾಗಿ) ತಪಸ್ವಿಯಂತೆ ನಟಿಸುವವನು : ಸ್ವಾಮಿಕಾರ್ಯವಿಘಾತಕಂಗತಿಕಾಮುಕಗೆ ಮಿಥ್ಯಾಪವಾದಿಗೆ ಭೂಮಿದೇವದ್ವೇಷಿಗತ್ಯಾಶಿಗೆ ಬಕವ್ರತಿಗೆ . . . ಪರಲೋಕವಿಲ್ಲ (ಕುಮಾವ್ಯಾ. ೪–೨೭). [ಸಂ. ಬಕವ್ರತಿನ್]

**ಬಕಳು** (ನಾ). ಒಂದು ಬಗೆಯ ತೆರಿಗೆ (?) : ಆ ಹಳಿಗಳ ಪೂರ್ಬ್ಬಾಯ ಅಪೂರ್ಬ್ಬಾಯ ತಾಣ ಅಭೋಗ ಬಕಳು ಕತುಪೆ ಬಂಡಿ ಅರವಟ್ಟಿಕೆ ಕುದಿರೆಹದಿಕೆ ಅನೆಹದಿಕೆ (ಎಕ. IX (S). ದೇವನಹ. ೦೬೯–೨ ; 1329). [?]

**ಬಕಾಟ** (ನಾ). ಪುರುಷನ ಜನನೇಂದ್ರಿಯ : ನೀ ಅವಡ ಕಟ್ಟಿ ಹಿಡಿದರ ಕಾಡ ಕ್ಯಾಣಾ ಬಕಾಟ ಕಚ್ಚಿ ಹೋದೀತು ! (ಹೂಸಂಗಾ. ೨೩). [← ಮರಾ. ಬಕಟೀ]

**ಬಕಾರ** (ನಾ). 'ಬ' ಎಂಬ ಅಕ್ಷರ : ಬಕಾರಕ್ಕೆ — ನಾಂಬಂ, ಎಂಬಂ, ತಿಂಬಂ (ಶಮದ. ೨೩೨ ವೃಯೋ.). [ಸಂ.]

**ಬಕಾರಿ** (ನಾ). = ಬಕವೈರಿ ೨ : ಕುರುಕುಲಮಂ ಬಕಾರಿ . . . ತವೆ ಕೊಂದ ಮಾಟಕ್ಕೆಯಿಂದುರುತರ ಬಾಹುವಿಕ್ರಮದೆ ನಾಂ ತವೆ ಕೊಲ್ಲದೆ ಮಾಣೆಂ (ಶಂಕಕಂ. ೨೩೪–೦೩) ; ಧರೆಯೊಳ್ ಬೀರದ ಪೆಂಪಿಂ ನರನಿಂದಿರ್ಮಡಿ ಬಕಾರಿಯಿಂ ಮೂಮಡಿ ಭಾಸ್ಕರಸುತನಿಂ ನಾಲ್ವಡಿ ಶಂಕರನಿಂದಯ್ವಡಿ ನೆಗೆಟ್ಟಿಯುದಟರ ಭೀಮಂ (ಕಾವ್ಯಾವ. ೬೦) ; ಕೀಚಕನಂ ಬಕಾರಿ ಮುಱಿದಂ (ಸೋಮೇಶ. ೩೯).

**ಬಕಾರಿನಂದನ** = ಭೀಮನ ಮಗ ; ಘಟೋತ್ಕಚ : ಆರಿವನು ಹೈಡಿಂಬನೀಚಿಯಲಾರು ಭೀಮಜನಿತ್ತಲಾರು ಬಕಾರಿನಂದನನೆನಲು ಬಲವಿರುಳಸುರಮಯವಾಯ್ತು (ಕುಮಾವ್ಯಾದ್ರೋ. ೦೬–೪೭). [ಸಂ.]

**ಬಕಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಪ್ರಕಾರ : ಮುಖ್ಯವಾದ ಕೆಲವು ಆಸನಗಳು, ಅಷ್ಟವಿನ್ಯಾಸಗಳು — ೧. ಉತ್ತಾನಾಸನ . . . ೧೨. ಬಕಾಸನ (ಶಾರದ. ೦೬೬) ; ಬಕಾಸನ . . . ಬಕ' ವೆಂದರೆ ಕೊಕ್ಕರೆ. ಈ ಭಂಗಿಯಲ್ಲಿರುವಾಗ, ದೇಹವು, ನೀರಿನಲ್ಲಿ ಹಾಯ್ದುಹೋಗುವ ಕೊಕ್ಕರೆಯ ರೂಪವನ್ನು ಹೋಲುತ್ತದಾದುದರಿಂದ ಈ ಆಸನಕ್ಕೆ ಈ ಹೆಸರು (ಯೋಗದ. ೨೨೯). [ಸಂ.]

**ಬಕಾಳ** (ನಾ). ವ್ಯಾಪಾರಿ ; ಉದ್ಯಮಿ : (*). [← ಅರ. ಹಿಂ. ಬಕ್ಕಾಲ್ ; ಮರಾ. ಬಕಾಲ್, ಬಕ್ಕಾಲ್]

**ಬಕಾಳಭಾತು** (ನಾ). (ಅಂಗಡಿಯವನು ಮಾರುವ) ಮೊಸರನ್ನ : ಈವತ್ತು ಅವರ ಮನೆಯಲ್ಲಿ ಪುಳಿಯೋಗರೆ, ಬಕಾಳಭಾತು ಮಾಡಿದ್ದರು (ರೂಢಿ). [ಬಕಾಳ + ಭಾತು]

**ಬಕೀಟು** 'ಬಕೆಟ್ಟು' ನೋ.

**ಬಕುತ, ಬಗುತ** (ನಾ). ಗುರು, ಹಿರಿಯರು, ದೇವರುಗಳಲ್ಲಿ ಭಕ್ತಿಯುಳ್ಳವನು ; ಭಕ್ತ : "ಬಕುತ (ಬಗುತ) — ಭಕ್ತ" (ತದ್ಭಕೋ. ೨೭) ; ಬಡಿಸಿದರುಂಡು ತೇಗುವ ಬಕುತರಿಗೆ ನೂರ್ಮಡಿ ಸತ್ಫಲವನೆಯ್ದಿಸುವೆ (ಸೋಹಕ. ೩೯–೪೭) ; ತ್ರಿಭುವನದೊಳಗಿಹ ಬಕುತರಿಗನುದಿನ ಶುಭಗಳನಿತ್ತು ರಕ್ಷಿಸುತ (ಕಪಿವಿ. ೦–೨). **ಬಗುತ** : ಬಗುತರುಗಳಂ ಚಿವುಟಿದಡೆ ಹಾಲುಗುವವೇ (ಬಸಪು. ೩೭–೬೩) ; ತದ್ದ್ರವ್ಯದೊಳಗೆನಿತು ಬಗುತರ್ ಬಂದೆರೆದೊಡವರ್ ಬೇಡಿದುದನಿಲ್ಲೆನ್ನದೀವಂ ಗಡ (ಶಬ್ದಶಾ. ೯–೭). [< ಸಂ. ಭಕ್ತ]

**ಬಕುತವತ್ಸಲ** (ನಾ). ಭಕ್ತರಲ್ಲಿ ಪ್ರೀತಿಯುಳ್ಳವನು ; ಭಕ್ತವತ್ಸಲ : ಬಕುತವತ್ಸಲ ಶ್ರೀರಂಗೇಶ ಸಾಹಸ್ರಮುಖನ ತಲ್ಪದೊಳೆಸೆದಿಹನು (ಕಂಸವಿ. ೬–೯೩). [< ಸಂ. ಭಕ್ತವತ್ಸಲ]

**ಬಕುತಿ, ಬಗುತಿ** (ನಾ). ಭಕ್ತಿ : "ಬಕುತಿ (ಬಗುತಿ) — ಭಕ್ತಿ" (ತದ್ಭಕೋ. ೨೭); ಸಂಪ್ರೀತಿಯಹ ನವವಿಧದ ಬಕುತಿಗೆ ಸಿಲುಕ (ಕುಮಾವ್ಯಾ. ಓಂ. ೩–೦೩); ಅಲಿಗಳೆರೆಯಲುಂಗದೆ ಬಕುತಿಯಲಿ ತ್ರಿಶೂಲಿಯ ಮೇಲೆ ಕಣ್ಣನವ ಕೀಲಿಸಿದನು (ಸೋಹಕ. ೨೦–೩೩); ಅಕಳಂಕಚರಿತ ಬೆಟ್ಟದ ಚಾಮೇಂದ್ರನ ಬಕುತಿಗೆ ಮನವೊಲಿದಿಹನು (ಕಂಸವಿ. ೪–೪೦). **ಬಗುತಿ** : "ಬಕುತಿ (ಬಗುತಿ) — ಭಕ್ತಿ" (ತದ್ಭಕೋ. ೨೭). [< ಸಂ. ಭಕ್ತಿ]

**ಬಕುರ** (ನಾ). ಒಂದು ಬಗೆಯ ಊದುವ ವಾದ್ಯ ; ಕಹಳೆ : ಆ ವಾದ್ಯಗಳ ಸಮೂಹದಲ್ಲಿ . . . ನಾಡೀ, ತುರವ, ಬಕುರ ಮುಂತಾದ, ಮರು ದ್ವಾದ್ಯಗಳೂ ಹೆಸರಿಸಲ್ಪಟ್ಟಿವೆ (ಸಂಗೀಕಂ. ೦೦೪). [ಸಂ.]

**ಬಕುಶ** (ನಾ). [ಜೈನ]ಮುನಿಗಳ ಐದು ಪ್ರಕಾರಗಳಲ್ಲಿ ಒಂದು ಪಂಗಡ : ಮುನಿಗಳಲ್ಲಿ ಪುಲಾಕ, ಬಕುಶ, ಕುಶೀಲ, ನಿರ್ಗ್ರಂಥ, ಸ್ನಾತಕ ಎಂದು ಅಯ್ದು ಪ್ರಕಾರಗಳು (ಜೈನಶ. ೯೯). [< ಸಂ. ವಕುಶ]

**ಬಕುಳ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು; ನಾಗಕೇಸರ ; P ದೋಹದಕ್ರಿಯೆ ಮಾಡುವಾಗ ಸ್ತ್ರೀಯರು ಮದ್ಯಪಾನ ಮಾಡಿ ಬಕುಳವೃಕ್ಷದ ಮೇಲೆ ಉಗುಳಿದರೆ ಅದರ ಹೂವುಗಳು ಅರಳುವುವೆಂಬುದು ಕವಿಸಮಯಗಳಲ್ಲಿ ಒಂದು : "ವಕುಳದೊಳೆ

ಬಕುಳಂ" (ಕರ್ಣಾಪ. ೩೩) ; ಬಕುಳದ ಪೂವಿನಕ್ಷವಳಯಕ್ಕೆ ದುಕೂಲದ ಚೆಲ್ವನಪ್ಪ ಸಾಳಿಗೆಗೆ ಪಯೋಜಸೂತ್ರನವಮುಂಜೆಗೆ ನೇತ್ರದ ಕೋವ ಣಕ್ಕೆ ವಿಕ್ಕೆಗುರುವ ಬೂದಿಗೊಡ್ಡೆ ತನುವಂ . . . ನಿಂದಳೊರ್ವಳಂ ಕಂಡು (ಶಾಂತಿಪು. ೬-೯೦) ; ಬೇಲ ಬೊಬ್ಬುಲಿ ಬಕುಳ ಶಮಿ ಕುದ್ದಾಳ . . . ಪಿಪ್ಪಲ ಮಾಲೆಯಿಂವ ನೋಡಬಲೆ (ಕೊರಠಾ. ೩-೦-೨೬).

ಬಕುಳದ ಮಡಕೆ = (?) : ಖಡುಗಿ ಹಳಚುವ ಖಳನ ಮಸ್ತಕ ವೊಡೆಯಲೊಡೆದನು ತಿರುಗಿ ಬಕುಳದ ಮಡಕೆವೊಡೆದಂತಾಯ್ತು ಚಿಮ್ಮಿದು ದರುಣಜಲ ನಭಕೆ (ಶಿಭಾಗ. ೭-೭-೪೬) ; ಜರಿದ ಬಕುಳದ ಮಡಕೆಯಂದದಿ ಮೊರೆವ ಹನುಮನು ಸತ್ವಗೆಟ್ಟುದು ಹರಣ ತಳಕೆಳಕಾಗೆ ಧರೆಯೊಳು ಬಿದ್ದನಾ ಹನುಮ (ಮೂಂಠಾ. ೫-೨೭). [ಸಂ. ಬಕುಲ]

ಬಕೆಟ್ಟು, ಬಕೀಟು (ನಾ). ನೀರು ಸೇದಲು, ತುಂಬಿಡಲು ಹಾಗೂ ಒಯ್ಯಲು ಉಪಯೋಗಿಸುವ ಮರದ ಅಥವಾ ಲೋಹದ ಹಿಡಿ ಯುಳ್ಳ ಪಾತ್ರೆ; ಬಾಲ್ದಿ (ಉಕ) : ಮೊನ್ನೆ ಫಿನಾಯಲ್ ಹಾಕಿದ ಬಕೆಟ್ಟಿನಲ್ಲಿ ಹುಳಿ ತಂದು ಬಡಿಸಿಬಿಟ್ಟರು ಪುಣ್ಯಾತ್ಮರು (ಆಗಸ್ಟ್. ೭೫) ; ಟ್ರ್ಯಾಕ್ಟರ್ ಮುನ್ನುಗ್ಗಿದೊಡನೆಯೇ ಬಕೆಟ್ಟು ತುಂಬಿಕೊಳ್ಳುತ್ತದೆ (ಕರಿಕೋ. I. ೦೬೩). ಬಕೀಟು : ಎರಡು ಮೂರು ಬಕೀಟು ನೀರಾದರೂ ಅವನ ಮಡಿವಂತಿಕೆಗೆ ಸಾಕಾಗುತ್ತಿರಲಿಲ್ಲ (ಶಂಕಂ. ೦೭). [← ಇಂ. Bucket]

ಬಕೋಟ (ನಾ). ಒಂದು ಬಗೆಯ ಕೊಕ್ಕರೆ : " ಬಕಃ, ಬಕೋಟಃ— ಈ ೨ ಬಕಂ" (ಶಠಾಯು. ೪೨-೯೭); ಎಳೆಮೀನ್ ಪೊಳೆದೊಡಮೊಳಪುಗ ದಿರ್ದುವು ಜಲಾಶಯಪ್ರಾಂತದೊಳ್ ಬಕೋಟಕುಟುಂಬಂ (ಲೀಲಾವ. ೯-೦೪). [ಸಂ.]

ಬಕ್ಕ$_1$, ಬೊಕ್ಕ (ನಾ). ೧. ಬೋಳು ತಲೆಯವನು; ಬೋಡ : ಆ ಬಕ್ಕನನ್ನು ಮದುವೆಯಾಗುವುದಿಲ್ಲವೆಂದು ಹುಡುಗಿ ನಿರಾಕರಿಸಿದಳು (ಕೂ). ೨. ಏನೂ ಇಲ್ಲದುದು ; ಬೋಳು ; ಬರಿದು : (ಕ). (ಗು). ೩. ಏನೂ ಇಲ್ಲದ ; ಬೋಳಾದ ; ಬರಿದಾದ : ' ಬಕ್ಕದಲೆ ' ಪರಾ. ಬೊಕ್ಕ : ೧. ಬೊಕ್ಕರ್ ಕಲಂಬರದಟಿಂ ಪಕ್ಕನೆ ನಡೆತಂದು ಚಕ್ರದಿಂ ಕೊಡಲಿಗಳಿಂ ಗಕ್ಕನೆ ಕಾರ್ಬೊನ್‌ದಡಿಯಿಂ ಪಿಕ್ಕುತ್ತೆ ನಿಮ್ಮಂ ಕನಲ್ದು ಬಾಧಿಸುತಿರ್ಕುಂ (ಜಾಠಾಸ್ಕ. ೯-೦೫-೨೭). ೩. ' ಬೊಕ್ಕತಲೆ ' ಪರಾ.

—ಬಕ್ಕ$_2$ ' —ಬಾಕ ' ನೋ.

ಬಕ್ಕಂಡಿ (ನಾ). ಹಲ್ಲುಮುಡಿ.

ಬಕ್ಕಂಡಿ ಕಚ್ಚು=ಹಲ್ಲುಮುಡಿ ಕಚ್ಚು ; ಅವುಡುಗಚ್ಚು : ಗೋವರ್ಧನ ರಾಯರು ಬಕ್ಕಂಡಿ ಕಚ್ಚಿಕೊಂಡು ಬಿದ್ದರು (ಕಿಶ್ರ್ರ. ೦೯೨). [← ಮರಾ. ಬಕಂದೀ = ಮುಷ್ಟಿಯ ಹೊಡೆತ]

ಬಕ್ಕಂಬಯಲ್, ಬಕ್ಕಬಯಲ್ (ನಾ). ೧. ತೆರಪಾದ ಜಾಗ; ಬಯಲು ಸ್ಥಳ : ಸಿತಗೆ ಪತಿಗೆ ಮಿಗೆ ಕಾಯ್ವಳ್ ನೋಟಕ್ಕೆ ಕಡುಸೋದಿ ನಾಣಿಲಿ ಬಕ್ಕಂಬಯಲೊಳಮದಾರುವಂ ಬಂಚಿಸುವಳ್ (ಕಾವ್ಯಾವ. ೩೩೩) ; ಬಕ್ಕಂಬಯಲ್, ಕಳ್ಳಂಗಡಲೆ (ಕಮುದ. ೦೭೨ ಕೃಯೋ). ೨. ಬರಿದು; ಶೂನ್ಯ : (ಕ). ಬಕ್ಕಬಯಲ್ : ೧. ಅಗ್ನಿಶಿಖಾಮುಖಕ್ಕೆ ದೂರಮಪ್ಪ ಬಕ್ಕ[ಶಾಠಾಂ. ಬಕ್ಕಟ]ಬಯಲ ತಾಣದೊಳ್ ದೊಮ್ಮಳಿಸಿ ನಿಂದು ಬಹು ಜನಂಗಳುಮ್ಮಳಿಸಿ ತಮ್ಮೊಳಿಂತೆಂದರ್ (ಶಂಠಾಮಾ. ೦೦-೦೫೫ ವ) ; ಕುಟಿ ಯಿದು ತೆಮರಿದು ಬಕ್ಕಬಯಲಿದಾಶ್ರಯಮಿದು ಗೆಂಟಿದು ಸಾರೆಯೆಂಬ ನಿರ್ಣಯಮದಾದುದಿಲ್ಲೊದವಿ ಪುದಿದ ಮರ್ಬಿನೊಳಾರ್ಗಂ (ಕಾವ್ಯಾವ.೭೪೯).

ಬಕ್ಕಂಬಯಲಾಗು, ಬಕ್ಕಬಯಲಾಗು = ೧. (ಅಲಂ) ಏನೂ ಇಲ್ಲ ದಾಗು ; ಕರಗಿ ಹೋಗು ; ಲೀನವಾಗು : ಅಕ್ಕ ನಿಮ್ಮಾತ್ಮಸಂಭವ ಮಗ್ಗುಲೊಳಗಿರ್ದು ಬಕ್ಕಂಬಯಲಾದ ಬಗೆಯ ಬಕ್ಕಣಿಸೆನಗೆಂದು ಸತ್ರಾ ಜಿತಸುತೆ ದುಕ್ಕವನಾಂತು ಕೇಳಿದಳು (ಪಾಂಕಠ. ೯-೮೬). ೨. ನಾಶವಾಗು; ಪಾಳುಬೀಳು ; ಹಾಳಾಗು : ಎಲೆಲೆ ಪಗಲ್ಗಳ್ಳ . . . ನಿನ್ನ ನಾಡು ಬಕ್ಕಂಬಯಲಕ್ಕು (ರಾಪಾಕ್ಯ. ೬೭-೨೩) ; ಆ ತೋಟ ಬಕ್ಕಬಯಲಾಯಿತು (ಕೂ). [ಬಕ್ಕ$_1$ + ಬಯಲ್ (< ವಯಲ್)]

ಬಕ್ಕಟ ' ಬಟುಂಕಟೆ ' ನೋ.

ಬಕ್ಕಟಬಯಲು ' ಬರ್ಕಟಬಯಲ್ ' ನೋ.

ಬಕ್ಕಡ (ನಾ). (?) : ಕರಿಗಳ ಸಂಘಟ್ಟದಿನೊಗೆವುರಿಗಳ ಬಕ್ಕಡಗಳರಿಯ ಬಕ್ಕಡಗಳ್ ಜೋದರ ಬಾಣವಗ್ನಿಬಾಣಂ ಕರಚಕ್ರ ತಮೋರಿಚಕ್ರಮೆನಿಸಿ ದುದೆನಸುಂ (ಗಠಾಯು. ೯-೩೭) [?]

ಬಕ್ಕಣ$_1$ 'ಬೊಕ್ಕಣ$_1$' ನೋ.

ಬಕ್ಕಣ$_2$, ಬೊಕ್ಕಣ$_2$ (ನಾ). ಆಹಾರ ; ತಿನಿಸು : "ಬಕ್ಕಣ – ಭಕ್ಷಣ = ತಿನಿಸು, ತಿಂಡಿ" (ಶದ್ಯಕೋ. ೨೭) ; ಮಯ್ಯಗಲಿಗಳ ಕಂಡದಿಂಡೆಗಳ ಬಕ್ಕಣ ಮಂ, ತವೆ ಮೆಲ್ದು . . . ಕೈವಟಿಯೊಳಾಡುವ ರಕ್ಕಸಿಯರ್ಕಳೊಪ್ಪಿ ದರ್ (ಕಶ್ಮೀಶಾ. ೨೮೫) ; ತಿನೆ ತವುಗುಮೆಂದು ಚಿಂತೆಯಿನಿನಿತುಂ ತಿನಲಾರ ದಾನೆ ಬಕ್ಕಣಮಂ ಬಯ್ಯನುಮಿಂ ಪೆರ್ಗಿಕ್ಕದೆ ದುಮ್ಮನದಿಂ ಪಸುತಿರ್ದು ವರರೆ ಲೋಭಿಮರುಳ್ಗಳ್ (ಚಂದ್ರಕ್ಯು. ೫-೪೫). ಬೊಕ್ಕಣ$_2$: "ಬೊಕ್ಕಣ- ಭಕ್ಷಣ = ಬಕ್ಕಣ" (ಶದ್ಯಕೋ. ೩೨). [< ಸಂ. ಭಕ್ಷಣ]

ಬಕ್ಕಣವಲ್ಕಣೆ (ನಾ). ಒಂದು ಪ್ರದೇಶದ ಹೆಸರು (?) : ಬಟ್ಟ ಗೆಜ್ಜೆಯ ಏರಿ ಉಳಗಾಗೆ ಬನ್ದು ಕಡೆಗೊಡೆ ಕಲ್ಪುಣಾಸೆಯ ಅನ್ತೆ ಬನ್ದು ಸೇರಲವದಾ ಬಕ್ಕಣವಲ್ಕಣೆಯ ಅನ್ತೆ ಬಡಗ ನೋಡಿ ಪರಿದ ಪೇರೂ ಟ್ಟಿಯೆ (ಎಕ. IX (೮), ಬೆಂಗಳೂ. ೦೫೦-೯೦ ; 828). [?]

ಬಕ್ಕತಲೆ 'ಬಕ್ಕದಲೆ' ನೋ.

ಬಕ್ಕದಲೆ, ಬಕ್ಕತಲೆ, ಬೊಕ್ಕತಲೆ, ಬೊಕ್ಕದಲೆ (ನಾ). ೧. ಕೂದಲು ಉದುರಿ ಬೋಳಾದ ತಲೆ : ಬಕ್ಕದಲೆಯ ಆ ಮನುಷ್ಯನನ್ನು ಎಲ್ಲಿಯೋ ನೋಡಿದಂತಿದೆ (ಕೂ). ೨. ಟೋಪಿ, ಪೇಟ ಮೊದಲಾದುವನ್ನು ಧರಿಸದಿರುವ ತಲೆ ; ಬರಿತಲೆ : ಬಳ್ಳಾರಿಯ ವಿದ್ಯಾರ್ಥಿಯೊಬ್ಬನು ನಮ್ಮ ವರ್ಗಕ್ಕೆ ಸೇರಿದನು. ತನ್ನ ಪರಿಪಾಟಿಯಂತೆ ಬಕ್ಕದಲೆಯಿಂದಲೆ ಒಳಗೆ ಬಂದನು (ಗಾಳಿಕ. ೦೩೩). ಬಕ್ಕತಲೆ : ೨. ಬಕ್ಕತಲೆಯಲಿಂತು ನೀನು ಅರಳಿದೊಂದು ಕುಸುಮದೆದುರು ನಿಂತು (ಹಂಕಕ. ೩೭-೪). ಬೊಕ್ಕತಲೆ : ೧. ಇದ್ದಕ್ಕಿದ್ದಂತೆಯೇ ಅವನ ಕಣ್ಣು ತುಂಬಿಕೊಂಡು ನಾಲ್ಕೈದು ಹನಿಗಳು ಮರಿಯಪ್ಪನವರ ಬೊಕ್ಕತಲೆಯ ಮೇಲೆ ಬಿದ್ದುವು (ಶೀಮಕಾ. ೦೯೩). ೨. ಈಗ ಏಕೆ ಕರೆಳಿಸಿರಬಹುದೆಂಬ ತರ್ಕದಲ್ಲಿಯೇ ಕಿಟ್ಟ ಜೋಡು ಮೆಟ್ಟಿಕೊಂಡು ಬೊಕ್ಕತಲೆಯಿಂದ ಹೊರಟನು (ಗಂಹೂಹು. ೯೯). ಬೊಕ್ಕದಲೆ : ೧. (ಮುಂಹಯು. ೬. ೫-೨೯೬). ೨. ಬೊಕ್ಕದಲೆ ಯೊಳು ಬೊಕ್ಕರಿಸುತಂ ಮುಕ್ಕಿರಿಕಿ ನಿಲ್ಲಲು (ದೀಪಪು. ೬-೭೦). [ಬಕ್ಕ$_1$ + ತಲೆ$_1$]

ಬಕ್ಕದಾಸ (ನಾ). ಏನೂ ಗತಿಯಿಲ್ಲದವನು ; ನಿರ್ಗತಿಕ : ದಾನಧರ್ಮ ವಿಲ್ಲದ ಹೀನದಾಸನು ನಾನು. . . ಧ್ಯಾನೆ ಇದ್ದಲ್ಲಿ ಬಡುವ ಬಕ್ಕದಾಸನು ನಾನು (ಪೋಕ್ಷಕೀ. ೨೭-೫) ; ಬಕ್ಕದಾಸನೊ ನಾನು ವಿಜಯವಿಠಲ ನಿನ್ನ ಲೆಖ್ಖಕ್ಕೆ ಮೊದಲು ಎನಿಸುವನೇನಯ್ಯ (ಏಠಾಕ್ಯ. ೨೩೬-೦೫೭). [ಬಕ್ಕ + ದಾಸ$_1$]

ಬಕ್ಕನೆ (ಅ). ಇದ್ದಕ್ಕಿದ್ದಂತೆ ; ಕೂಡಲೆ : ಬೆಕ್ಕು ಹಿಂದೆ ಹೋಗುತಾ, ಶಾನೆ ಹಿಂದೆ ನಿಂತ ಒಂದು ಇಲಿಯನ್ನು ಬಕ್ಕನೆ ಬಾಯಿಗೆ ಹಾಕಿ ಕೊಳ್ಳುತಾ ಬಂತು (ಶೀಕಿಶಂ. iv ೨೭). [ಬಕ್$_0$ + —ಅನೆ$_1$]

ಬಕ್ಕನೆತ್ತಿ, ಬೊಕ್ಕನೆತ್ತಿ (ನಾ). = ಬಕ್ಕದಲೆ ೨: ಒಂದು ಕಾಲದಲ್ಲಿ ಟೊಪ್ಪಿಗೆ ಹಾಕುವುದು ಮಂಗಲಚಿಹ್ನವಾಗಿತ್ತು. ಇಂದು ಬಕ್ಕನೆತ್ತಿ ಯಿಂದ ಅಡ್ಡಾಡುವುದೇ ಐಕ್ಯದ ಕುರುಹು (ಭಾರಕಂ. ೯೭). ಬೊಕ್ಕನೆತ್ತಿ :

ತುಂಬಾ ಹಿಮ ಬೀಳುತ್ತಿದೆ. ಬೊಕ್ಕನೆತ್ತಿಯಲ್ಲಿ ಬರಬೇಡಿ (ರೂಢಿ).
[ಬಕ್ಕ$_1$ + ನೆತ್ತಿ]

**ಬಕ್ಕಬಯಲ್** 'ಬಕ್ಕಂಬಯಲ್' ನೋ.

**ಬಕ್ಕಬಾಗಿಲು** (ನಾ). (?) : ಯಾವತ್ತು ಕಡಂಗ ಕಂಡುಕ ಮುಂತಾಗಿ ತೆಗಸಿ ಆಳ್ವೇರಿ ಬಕ್ಕಬಾಗಿಲು ಮುಂತಾಗಿ ತಯಾರು ಮಾಡಿಸಿ (ರಾಜೇಂದ್ರ.೫). [ಬಕ್ಕ? + ಬಾಗಿಲು (< ಬಾಗಿಲ್)]

**ಬಕ್ಕಬೋರಲು, ಬೊಕ್ಕಬೋರಲು, ಬೊಕ್ಕುಬೋರಲು** (ನಾ). ಬುಡಮೇಲು ; ತಲೆಕೆಳಗು : ಒಂದು ಎಲೆ ತೆಗೆದು ಬಕ್ಕಬೋರಲಾಗಿ ಮಗ್ಗುಲಿಗೆ ಮುಚ್ಚಿ ಇಟ್ಟುಕೊಂಡ (ಗಾಳಿಪ. ೨೩). **ಬೊಕ್ಕಬೋರಲು :** ತಿಂಗಳ ಕಡೆಯಾದ್ದರಿಂದ ಡಬ್ಬಿಗಳನ್ನೆಲ್ಲಾ ಬೊಕ್ಕಬೋರಲು ಮಾಡಿ ಅಡಿಗೆ ಮಾಡಬೇಕಾಯಿತು (ರೂಢಿ). **ಬೊಕ್ಕುಬೋರಲು :** ಅದನ್ನು ಮೆಲ್ಲಗೆ ಕಿಡಿಕಿಯ ಹೊರಗೆ ಎತ್ತಿ ಬೊಕ್ಕುಬೋರಲಾಗಿ ಹಿಡಿದಳು (ಗಂಪಾಪಾಯು. ೯).

**ಬಕ್ಕಬೋರಲು ಬೀಳು, ಬೊಕ್ಕಬೋರಲು ಬೀಳು** = ಹೊಟ್ಟೆ ಅಡಿಯಾಗಿ ಬೀಳು ; ಮಗುಚಿಕೊಳ್ಳು: ಮೆಟ್ಟಲಿನ ಮೇಲೆ ಯಾಯಾನ ಶರೀರ ಬಕ್ಕಬೋರಲು ಬಿದ್ದಿತು (ಜಾಬಾ. ೦೦೩) ; ಎತ್ತರದ ಜಗಲಿಯಿಂದ ಮಗು ಬೊಕ್ಕಬೋರಲು ಬಿದ್ದು ಅಳುತ್ತಿದೆ (ರೂಢಿ). **ಬಕ್ಕಬೋರಲು ಹಾಕು** = ೧. ಮಗುಚಿ ಇಡು : ಡಬ್ಬಿಗಳನ್ನೆಲ್ಲಾ ಚೆನ್ನಾಗಿ ತೊಳೆದು ಬಕ್ಕಬೋರಲು ಹಾಕು (ರೂಢಿ). ೨. (ಅಲಂ) ನಾಶಮಾಡು ; ಹಾಳುಮಾಡು : ಚಿತ್ರಕೇತುರಾಜನ ಮನೆಯನ್ನು ನಾರದನೇ ಬಕ್ಕಬೋರಲು ಹಾಕಿದನು (ಕುಳಸೀ. ೨೫) ; ಎಷ್ಟೋ ವರ್ಷಗಳಿಂದ ಮಾಡಿಕೊಂಡಿದ್ದೆಲ್ಲಾ ಒಂದು ಕ್ಷಣದಲ್ಲಿ ಬಕ್ಕಬೋರಲು ಹಾಕಿದ್ದಾಯ್ತು (ರೂಢಿ). [ಬಕ್ಕ$_1$ + ಬೋರಲು]

**ಬಕ್ಕಬೋಳು** (ನಾ). ಬರಿದು; ಖಾಲಿ; ಶೂನ್ಯ: ಹೂಮುಡಿದು ಕೊಂಡು ಹಿಗ್ಗುವುದು ಹೆಣ್ಣಿಗಷ್ಟೆ ಇರುವ ಸೌಭಾಗ್ಯ. ಗಂಡುಗಾಡಿ ಬಕ್ಕಬೋಳು (ಗಾಳಿಪ. ೦೦೦). [ಬಕ್ಕ$_1$ + ಬೋಳು (< ಬೋಡು)]

**ಬಕ್ಕರಸೆ** (ನಾ). (?): ನಿಯುತದ್ವಿತ್ವಕ್ಕೆ—ಪಪ್ಪುಕಂ . . . ಬಕ್ಕಸೆ, ರಕ್ಕಸಿ, ಕೆಕ್ಕೊರಸು, ಉಕ್ಕೆವಂ, ಬಕ್ಕರಸೆ, ಬಕ್ಕುಡಿದಂ (ಶಮದ. ೩೬ ಪ್ರಯೋ). 'ಬಕ್ಕಸೆ' ಪರಾ. [?]

**ಬಕ್ಕರಿ** 'ಭಕ್ಕರಿ' ನೋ.

**ಬಕ್ಕರಿಸು** (ಕ್ರಿ). ತಿನ್ನು; ಕಬಳಿಸು : ಆತನು ಬಂದ ಕೂಡಲೇ ಆ ನಮ್ಮ ಬಡಪ್ರಾಣಿಯಾದ ಗೋವನ್ನು ಅಬ್ಬರದಿಂದ ಬಕ್ಕರಿಸಿ ಬಿಟ್ಟಾನು (ಉರಾಪ. ೬೯) ; ತಿನ್ನಲು ಬೆಳೆಯದು ತುಸು ಕಡಿಕಾಳು ಬಕ್ಕರಿಸುವುದೋ ಹಂಟೆಯ ಕೂಳು ? (ಗಂ. ೦೦೯–೦೯); ಒಂದು ತಪ್ಪೇಲಿ ಅನ್ನವನ್ನು ಬಕ್ಕರಿಸುತ್ತಾರೆ! (ಪೋಚಿಹಿಪೀ. ೨೬). [<ಭಕ್ಷಿಸು]

**ಬಕ್ಕರೆ, ಬಕರೆ, ಬಗ್ಗರೆ** (ನಾ). ೧. ಮಡಕೆಯ ಚೂರು; ಓಡು; ಬೋಕಿ : "ಪಕ್ಕರೆ ಬಗರಿಗೆ ಎಸೆವ ಬಕ್ಕರೆಯಕ್ಕು" (ಶಬ್ದಮಂ. ೬೩); ಕೈಯೊಳ್ ಬಕ್ಕರೆಯಲ್ಲಿ ಕೆಂಡವಂ ತೆಗೆದುಕೊಂಡು ಬಂದು (ಕುಳಸ. ೦೫); ಅಕ್ಕರೆಯಿಂದ ಕಂದನ ಸಾಕಿ, ಕೈಗೆ ಬಕ್ಕರೆ ಕೊಟ್ಟಾರೆ ? (ಜೀತಿಶಾ. X, ೨೬). 'ಬೋಕಿ' ಪರಾ. ೨. ಮುಚ್ಚಳ ; ಶ್ರಾವೆ : ಫಲ ವಸ್ತ್ರ ತಾಂಬೂಲ ಕಾಣಿಕೆಯಿಮಂ ಹೊಸಬಕ್ಕರೆಯಲ್ಲಿ ಇರಿಸಿ ಮಂತ್ರಸಮನ್ವಿತವಾಗಿ...ನಿವಾಳಿಸಿ (ಜಾಂಶ. ೦೩೯–೦೬). **ಬಕರೆ :** ೧. ಕಾಡುಬೆರಣೆಗಳಲ್ಲಿ ಹೊಸ ಮಣ್ಣು ಹೆಂಚು (ಬಕರೆ) ಹೊಸ ಕೆಮ್ಮಣ್ಣುಗೆಡ್ಡೆಗಳನ್ನಿಟ್ಟು ಪುಟ ಹಾಕಿ (ಸಕಪ್ರ. ಶಂ. ೪೫೫). **ಬಗ್ಗರೆ :** ೧. ಉಡಲಿಲ್ಲುಣಲಿಲ್ಲದಜೀಂದುದರಾಗ್ನಿಯೊಡಲ ಸುಡಲು ಬಗ್ಗರೆಯ ಹಿಡಿದು ಪುರದ ಕೇರಿಗಳೊಳು ಭಿಕ್ಷವ ಕೊಡಿಯೆಂದು ಬೇಡುತಮಿರಲು (ಪೇಬಸಂ. ೬–೬೭); ಇರಿಸಿದನೊಂದು ದೊಡ್ಡ ಹೊಸ ಬಗ್ಗರೆಯಂತದು ತುಂಬುವಂತುಟಂ ಸುರಿದನು ಕೂಳ (ಸನ್ನಕಾ. ೬–೩೦೯).

**ಬಕ್ಕಸೆ** (ನಾ). (?) : ನಿಯತದ್ವಿತ್ವಕ್ಕೆ-ಪಪ್ಪುಕಂ...ಬಕ್ಕಸೆ, ರಕ್ಕಸಿ, ಕೆಕ್ಕೊರಸು, ಉಕ್ಕೆವಂ, ಬಕ್ಕರಸೆ (ಶಮದ. ೩೬ ಪ್ರಯೋ). 'ಬಕ್ಕರಸೆ' ಪರಾ. [?]

**ಬಕ್ಕಳ** (ನಾ). ಹೆಚ್ಚು; ಅಧಿಕ; ತುಂಬ : ಬಾಯಿಯಿಂದ ಲೋಕ ಸುಧಾರಣೆಯ ತತ್ತ್ವ ಹೇಳುವುದು ಬಕ್ಕಳ. ಆದರೆ ಕೈಯಿಂದ ಕಾರ್ಯ ಕೇಳಬಾರದು (ಕಾಳರಾ. ೪೭); ತಮ್ಮ ಬಕ್ಕಣದಲ್ಲಿ ಕಾಸು ಕಪರ್ದಿಯಿಲ್ಲದಿದ್ದರೂ ಬಾಯಲ್ಲಿ ಬಕ್ಕಳ ಮಾತಿದ್ದರೆ ಸಾಕೆಂಬ ಸಂತೋಷದಿಂದ ಜನರು ಕಾಲ ಕಳೆಯುತ್ತಿದ್ದರು (ಶ್ರೀಮಪು. ೬೪). [?]

**ಬಕ್ಕಳೆ** (ನಾ). ಕೊರಳಲ್ಲಿ ಹಾಕಿಕೊಳ್ಳುವ ಹಾರ ಅಥವಾ ಚೀಲ (?) : "ಕಂಠಕಚ್ಚರದೊಳ್ ಬಕ್ಕಳೆ" (ಕರ್ಣಾಪಿ. ೬೪); ಮೆಯ್ಯು ಮಸಿ ಕೊರಲ ಬಕ್ಕಳೆ[ಪಾಠಾಂ. ಬಕ್ಕಂ, ಬಕ್ಕಳಿ] ಪೊಯ್ಯೆ ಪುಗಿಲ್ಗರೆವ ಕಯ್ಯ ಕಂಕರಿಕೆ ಕರಂ ರಯ್ಯಮೆನೆ ಪಾಡುತಿರ್ದಳನೊಯ್ಯನೆ ಕಡೆಗಣ್ಣೊಳಡರೆ ಚಪ್ಪರಿಸುತ್ತುಂ (ಕಾವ್ಯಾವ. ೩೦೯) ; ಜಡೆಯುಂ ಬಕ್ಕಳೆ[ಪಾಠಾಂ. ಲೆ]ಯುಮವನಾಳ್ದು (ಅರ್ಧನೇ. ೩–೪೩) ; ಸತ್ತಿಗೆ ಗಗ್ಗರಂ ಕರುಳ ಬಕ್ಕಳೆ ಮಿಂಟದ ಕಣ್ಗಾಳ್ಕೆಸರಂ ಸುತ್ತಿದ ಬಾಳದುಳ್ಕಿವಿಯ ಸೊಂಟಗೆ ಪಂಚವಲೆಯೊಂದು ಬಾಸಿಗಂ ನೆತ್ತರ ತಳ್ತ ಬಲ್ದಲೆಯ ಬಿಂದಿಗೆ ಪಾವುಗೆ ಪಂಚಮುಷ್ಟನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೫೬೩). [?]

**ಬಕ್ಕಾಯಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಮಾತಂಗಿ ಬಕ್ಕಾಯಿ ಎಲ್ಲ ನಾನಾಕದಾ ಕಳ್ಳದೇವತೆಗಳನಿಲ್ಲದೆ ಒಲಿಸಿದರು ಪೊಳ್ಳಲ್ಲದ ಗತಿ ಇಲ್ಲವೂ ಎಂದಿಗೂ (ಏಕಾಸು. ೫೮-೨). [?]

**ಬಕ್ಕಿ** (ನಾ). ಕಂಕುಳು ; ಬಗಲು : ಸಿಕ್ಕಿರ್ದ ಮರಿಗಳಂ ಬಕ್ಕಿಯೊಳಗವಚುತ್ತ ಮಿಕ್ಕಿರ್ದ ಕುರಿಗಳಂ ಚೈಯ ಚೈಚೈಯೆಂದು ಕರೆಯುತ್ತ . . . ಬೀರಪ್ಪನಂ ನೆನೆದು ಮೆರೆದಿರ್ದನಾ ಮಾಯಿಕಂ (ದುರಕೃ. ೯–೦೩).
[← ಮರಾ. ಬಖ್. ತೆಲು. ಬಗಿ = ಪಕ್ಕ]

**ಬಕ್ಕು** (ನಾ). ಒಂದು ಬಗೆಯ ನೀರುಹಕ್ಕಿ : ಬಕ್ಕುಗಳಂಚೆ ಕೊಂಚೆ ಜಳವಾಯಸಸಂತತಿ . . . ಸಾರಸಪಕ್ಕಿಯೆಂಬ ನೀರ್ವಕ್ಕಿಗಳಿಂ ಮನಂಗೊಳಿಸುತಿರ್ದುದು ಪೂಗೊಳನಂಬುಜಾವಳಂ (ನಳಚಂ. ೦೦೯). [?]

**ಬಕ್ಕುಡಿ$_1$, ಬರ್ಕುಡಿ, ಬಳ್ಕುಡಿ** (ನಾ). ೧. ಬೆರಗು; ಆಶ್ಚರ್ಯ: "ಬಕ್ಕುಡಿ . . . ತಳವೆಳಗು ಮಲ್ಲಟಿಯೆನಲ್ಕೆ ಬೆಱಗಪ್ಪ ಭಾವಂ" (ಕಬ್ಬಿಕೈ. ೪೧). ೨. ಭಯ; ಅಂಜಿಕೆ: ಒತ್ತುವ ಕೋಡ ಕಾಳೆ ಕುಣಿವೋಜೆಗೆ ಬಾಜಿಪ ಬುಂಜೆ ಬೇಂಟೆಯಿಂದೆತ್ತಣೆನಪ್ಪ ಬಕ್ಕುಡಿಯ ಬಲ್ಲುಲಿ (ಸೂಕ್ತಿಸು. ೩–೨೦೦). ೩. ದೈನ್ಯ; ನಮ್ರಭಾವ: ಚುಂಬನಮಪ್ಪು ಚಪ್ಪರಣೆ ಬೇಡುವ ಬಕ್ಕುಡಿ ಕಾಯ್ಪು ಕೂಡುವಟ್ಟುಂಬರಿಯೆಂಬಿವಾಗೆ (ಅರ್ಧನೇ. ೫–೭೦); ಮಕ್ಕಳಾಟಿಕೆಯಾಯ್ತು ಸೌಬಲನ ದೆಸೆಯಿಂದ ಮಿಕ್ಕು ನೀ ಸ್ವೈರಿಸುವುದೆಮ್ಮದು ಬಕ್ಕುಡಿಯ ಬೇಳಂಬ (ಕುಮಾವ್ಯಾಸ. ೦೫–೫೯). ೪. ತಳಮಳ; ಕಾತರ: ಬಂಡು ಬಕ್ಕುಡಿ ಭಂಗ ಬಂಧನ ಕನಲ್ಕೆ ಕಳಕಳಮೆಂಬಿವು . . . ನೋಡಲಾ ನಾಡ ಹಿರಿಯೂರ ಪಟ್ಟಣದ ಪಾಳೆಯದ ಜನದೊಳಿಲ್ಲ (ಕಬಿಕಾ. ೬–೪೨). ೫. ವಿವಾದ; ಚರ್ಚೆ : "ವಿವಾದಃ=ಬಕ್ಕುಡಿಯುಂ" (ಸೀತಿವಾ.೨೨–೬). 'ಬಕ್ಕುಡಿಗುಟ್ಟು' ಪರಾ. **ಬರ್ಕುಡಿ:** ೫. ನಿಮ್ಮೊಳಿದೇಂ ಬರ್ಕುಡಿಯೆಂದಾತನಂ ನಿವಾರಿಸಿ (ನೇಮಿಪು. ೯–೨೬ವ); ಪೊನ್ನೆನಣ್ಪಿನಿಂ ನುಡಿವಂತು ಬರ್ಕು[ಪಾಠಾಂ.ಳ್ಕು]ಡಿಯೆ (ಲೀಲಾವ. ೨–೦೦೩); ಮುಳಿಸೆರ್ಗುಸೊರ್ಕುರ್ ಬರ್ಕುಡಿ ಪುರುಡು . . . ನುಸುಳ್ಗಣಿಕಾಂಗನೆಯೊರ್ಗೆ ಶಾಶ್ವತಂ (ವೃಷಭ. ೨೮–೬೩). **ಬಳ್ಕುಡಿ :** ೨. "ಅಗುರ್ವು ಬಿಗುರ್ ಬೆಗರ್ ಬಳ್ಕುಡಿ ... ಅದಿರ್ಪು— ಈ ೧೦ ಭಯಂ" (ಕರಸಾ. ೫೬–೨೨೩) ; ಎಕ್ಕೆಕ್ಕೆ ಬಾಧಿಸುತ್ತಿದ್ದ ಸಂದೇಗವನು ಬಳ್ಕುಡಿಯನು ಸಂತರಿಸಿಕೊಳ್ಳಲು ನನಗೆ ಅನುವೊಪವಿತ್ತು (ಬಟ್ಬಿ. ೨೦೨–೧೨).

**ಬಕ್ಕುಡಿ₂** (ನಾ). ಒಂದು ಬಗೆಯ ಸಸ್ಯ: ಮಂಗರವಳ್ಳಿ : "ಮಂಗುರ ವಳ್ಳಿ ವಕ್ರಿ ಬಕ್ಕುಡಿಯೆನಿಕ್ಕುಂ" (ಮಂಗರಾ. ೪೩-೦೩). [?]

**ಬಕ್ಕುಡಿಗುಟ್ಟು**, ಬರ್ಕುಡಿಗಂಟ್ಟು (ಕ್ರಿ). ಚರ್ಚಿಸು; ವಾದಮಾಡು : ತನ್ನ ಧರ್ಮದವರೊಡನೆ ಪುಸ್ತಕಾದಿಗಳೊಳು ನಿನಗಿದೆನಗಿದೆಂದು ಬಕ್ಕುಡಿ ಗುಟ್ಟದದುಂ (ಕಸೂಪ್ಮ. ೨೨೭); ಮತಿವಿಕಳ ಚಾರ್ವಾಕ ಬಿಡದೆ ಬಕ್ಕುಡಿ ಗುಟ್ಟುವತಿವಾದಿಪೈ (ಅರಾಕ. ೩-೭-೩): ನಿಮ್ಮ ದೈವಂ ಸ್ವತಂತ್ರನಲ್ಲಾಗಿ ಬಂಧುರತರ ಜಗತ್ಕರ್ತನೆಂತು ಬಕ್ಕುಡಿಗುಟ್ಟಬೇಡವೆಲೆ ದುಷ್ಕೃತಯುತ (ಶಾಸೋಪು. ೯-೧೭೨). **ಬರ್ಕುಡಿಗುಟ್ಟು**: ತರ್ಕದೊಳ್ ಬಾದುಂ ಬರ್ಕುಡಿ ಗುಟ್ಟಿ ಪೊಟ್ಟುವಡೆದಂ (ಸುಕುಮಾ. ೩-೪೩). [ಬಕ್ಕುಡಿ$_1$ + ಕುಟ್ಟು$_1$]

**ಬಕ್ಕುಡಿಗೆಯ್**, ಬರ್ಕುಡಿಗೆಯ್, ಬಳ್ಕುಡಿಗೆಯ್ (ಕ್ರಿ). ೧. = ಬಕ್ಕುಡಿ ಗುಟ್ಟು: ವಟುಗಳೋದನಾಲಿಸಿ ತಪ್ಪಂ ಪಿಡಿವುವುವನ್ಯಾಸದೆ ಬಕ್ಕುಡಿ ಗೆಯ್ವುವು ಮುನಿಗಳೊಡನೆ ಶುಕಶಾರಿಕೆಗಳ್ (ಜಗಂ.೦೭-೩೦); ಕೋಟಿವಜ್ಜಯು ತಾನಾಕೆಯುಂ ಪಾಣಿಗ್ರಹಣಕ್ಕೆ ಕೆಯ್ಯನೊಡ್ಡುವಂತೆ ಕೆಯ್ಯನೊಡ್ಡಿ ಬಗೆದು ಮೊಯ್ಯನೆ ಸೋಲ್ತು ಬಕ್ಕುಡಿಗೆಯ್ದೊಯ್ವಂತೆ ಕೆಯ್ಯ ಪೊಯ್ದೊಡೆ (ಜಂಹಂ. ೯-೭೭ ವ). ೨. ಆಶ್ಚರ್ಯಪಡು : ಕಯ್ವಾರದಿಂದೆ ಬಕ್ಕುಡಿಗೆಯ್ವರ್ಪಿರಿದೊಂದು ಸಮಯಮಂ ಸಮತೆಯಿನಾರಯ್ವರ್ ಜೈನಮುನಾವೆಡೆಗೆಯ್ವಡ ಮತ್ಯಂತಕಲುಷಹೃದಯರದೇನೋ (ಸಮುಚ. ಅನುಬಂಧ. ೩೭೩-೭೦). **ಬರ್ಕುಡಿಗೆಯ್**: ೧. ಜಯಂತನಂ ಜಡಿದು ಬರ್ಕುಡಿಗೆಯ್ದು ಬಸಂತನಂ ಸಮುಜ್ಜ್ವಳಕುಸುಮಾಸ್ತ್ರನಂ ಜಱಿದು (ವೃತಂ. ೦೭-೭). **ಬಳ್ಕುಡಿಗೆಯ್** : ೧. ಜಲಜನ್ಮಕೋರಕದ್ವಯ ಸೊಕ್ಕುಮಿಕ್ಕಾನೆದಲೆ ಗಾಲಿವಕ್ಕಿ ಪೊಂಜೊ ನ್ನಲಿಗೆಗಳ ಚೆಲ್ವನಲೆದು ಮಲೆದೆಕ್ಕತುಳಗೆಡಿಸಿ ಬಳ್ಕುಡಿಗೆಯ್ದು ನೆಲೆವನೆಯ ಮುಂದೆ ನಿಂದ ಬೆಲೆವೆಂಡಿರುಗಳ ನೆಲೆವೊಲೆಗಳ್ . . . ಎಡ್ಡಂಬಡೆದವು (ಉದ್ಭದೇ. ೯-೨೦). [ಬಕ್ಕುಡಿ$_1$ + ಕೆಯ್$_1$]

**ಬಕ್ಕುಡೆಯ**, ಬಗ್ಗಡೆಯ (ನಾ). ವಿತಂಡವಾದ ಮಾಡುವವನು : ಕಡುದುರುಳರಂ ಧೂರ್ತರಂ ಬಕ್ಕುಡೆ [ಪಾಠಾಂ. ಬಗ್ಗಡೆ, ಬಗೆಗೆಡೆ]ಯರಂ ದುರ್ನೀತರಂ ನಾಣ್ಗೆಡಿಕರಂ . . . ಕಾಯ್ಕಾಯೆಮ್ಮವಂ (ಬಸಪು. ೩೯-೭೦). **ಬಗ್ಗಡೆಯ** : ನುಡಿದಹನು ದುರ್ಭಾಷೆಗಳನಡಿಗಡಿಗೆ ಶಿವನಿಂದೆಯನುಸುರ್ವ ಬಗ್ಗಡೆಯನಂ ಕೊಲಲಹುದು (ಬಸಪು. ೩೭-೨೯).

ಬಗ್ಗಡೆಯತನ = ಔಚಿತ್ಯ ಮೀರಿದ ವರ್ತನೆ; ಅಧಿಕಪ್ರಸಂಗ : ಹಿಗ್ಗಿ ಹಿಂದೆಮ್ಮವನು ಹಾವಿನ ಹಗ್ಗದಲಿ ಹೆಡಗುಡಿಯ ಕಟ್ಟಿದ ಬಗ್ಗಡೆಯತನ ಕಿಡಕೊ . . . ಸಾವಿನ ಸುಗ್ಗಿ ನಿನಗೆನುತೆಚ್ಚನಿಂದ್ರಾರಿಯನು ಸೌಮಿತ್ರಿ (ತೊರರಾ. ೭-೪೯-೦೩). [<ಬಕ್ಕುಡಿ$_1$ + — ಅ$_7$]

**ಬಕ್ಕೆ**, ಬರ್ಕೆ (ನಾ). ೧. ಸಿಹಿಯಾದುದು; ಇನಿದು : (ಕ). ೨. ಒಂದು ಬಗೆಯ ಹಲಸು : ಪಥಿಕರ್ಬರ್ಕೆಯಿಂದು ಭೃಂಗಂಗಳಿಂದುಲಿವಂತಿದರ್ದು ಪಣ್ತ ಬಕ್ಕೆ (ಆದಿಪು. ೦೦-೭೭); ಬೇಗ್ಗಳಿಂ ತುಱುಗಿರೆ ಕಾಯ್ತ ಬಕ್ಕೆ (ಎಕ. XI. ದಾವಣ. ೩೩-೩೯; ಸು. 1160); ಹಲಸಿನ ಹಣ್ಣಿನ ಮಹಾ ಗಾತ್ರವನ್ನು ನೋಡಿ ಅಜ್ಜೀಸಾಬು ಕೇಳಿದನು "ಬಿಳುವನೋ ? ಬಕ್ಕೆಯೋ ?" (ಮಲೆಮ. ೪೩೦). 'ಬಕ್ಕೆವಲಸು' ಪರಾ. **Δ ಬರ್ಕೆ** : ೨. ಬರ್ಕೆ[ಪಾಠಾಂ.ಕ್ಕೆ]ವಲಸುಗಳೊಳಸುರರ ತೆರ್ಕೆಯನೆಬ್ಬಿಟ್ಟಿ ಪೊಯ್ವುದುಂ ಕೋಟ್ಕಿದುಟುಂ ಬರ್ಕೆ[ಪಾಠಾಂ.ಕ್ಕೆ]ಯ ತೊಳೆಯುಂ ಸೂಸಿದುವು (ಶಂರಾಮ. ೦೦-೦೨೦). 'ಬರ್ಕೆವಲಸಂ' ಪರಾ.

[ದೇ.॥ ತಮಿ. ವರುಕ್ಕೈ. / ಮರಾ. ಬರಕಾ]

**ಬಕ್ಕೆವಲಸು**, ಬಕ್ಕೆಹಲಸು, ಬರ್ಕೆವಲಸಂ (ನಾ). = ಬಕ್ಕೆ ೨ : "ಸ್ವಾದುಪನಸಕ್ಕೆ ಪೆಸರೊಂದುವುದು ಬಕ್ಕೆವಲಸೆಂದು" (ಶಬ್ದಮಂ. ೨೭); ಅರನೇಱಿಲ ಪೊಂಬಾಳೆಯ ಸುರಯಿಯ ಮಾಮರದ ಬಕ್ಕೆವಲಸಿನ ಪುದುವಿಂ ಪರೆದುರ್ಬಿದ ಕಟ್ಟಿಲೆ ದಿನಕರಾಂಶುಗಳ್ಗಂ ವಿಭೇದಿಸಲ್ಕರಿದು (ಕಾವ್ಯಾವ. ೨೪೮) ; ಬೇರ್ಗಳೊಳಗೆ ಕಾತ ಬಕ್ಕೆವಲಸುಗಳ ಪಣ್ಗೊನೆಗಳಂ... ಮುಕ್ಕಣ್ಣನೆಡೆಗೆ ವನಪಾಲಕಂ ಪೊಱಿಸಿಕೊಂಡ್ಯೆತಂದನು (ಕಂಪು. ೪೩-೨೯) ; ದಾಳಿಂಬಂ ಬಕ್ಕೆವಲಸು . . . ಎಡೆಯೆಡೆಯೊಳ್ ಮನೋಹರಮಾಗಿರ್ಕುಂ (ರಾಮಾಕ್ಮ. ೯-೨೩). **ಬಕ್ಕೆಹಲಸು** : ಬಕ್ಕೆಹಲಸು, ಅರಬಕ್ಕೆಹಲಸು, ಕಾವು ಹಲಸು ಹೀಗೆ ಬಗೆಬಗೆಯ ಹಲಸಿನ ಮರಗಳಿದ್ದವು (ಕ್ಮಾಮುಕಾ. ೦೧); ಒಂದು ಬಕ್ಕೆಹಲಸಿನ ಹಣ್ಣನ್ನು ಕತ್ತರಿಸಿ ಮಕ್ಕಳ ಮುಂದಿಟ್ಟರು (ಶಂಶಕಂ. ೦೩). **Δಬರ್ಕೆವಲಸು** : ಬರ್ಕೆ[ಪಾಠಾಂ.ಕ್ಕೆ]ವಲಸುಗಳೊಳಸುರರ ತೆರ್ಕೆಯನೆಬ್ಬಿಟ್ಟಿ ಪೊಯ್ವುದುಂ ಕೋಟ್ಕಿದುಟುಂ ಬರ್ಕೆ[ಪಾಠಾಂ.ಕ್ಕೆ]ಯ ತೊಳೆಯುಂ ಸೂಸಿದುವು (ಶಂರಾಮ. ೦೦-೦೨೦); ಕಾಯ್ತೊಳೆದೆಂಗು ಪಣ್ತ ಬರ್ಕೆವಲಸು (ವರ್ಧಪು. ೨-೦೭). [ಬಕ್ಕೆ + ಪಲಸು]

**ಬಕ್ಕೆಹಲಸು** 'ಬಕ್ಕೆವಲಸಂ' ನೋ.

**ಬಕ್ರಬರ್** (ಕ್ರಿ). ಅಡ್ಡಿಬರು ; ತೊಡಕಾಗು : ಇ ದವ್ವ್ಯಕ್ಕೆ ಬಕ್ರ ಬಪ್ಪಂ ಬಾರಣಾಸಿಯುಳ್ ಸಾಸಿರ್ವಪಾವ್ವರುಂ ಸಾಸಿರಂ ಕವಿಲೆಯಂ ಕೊನ್ದ ಪಾತಕನಕ್ಕೆ (ಎಕ. ಐ. ೦೯೭೭, ೩೩-೩೪; ಸು. 550).

[ಬಕ್ರ$_0$ (ಪ್ರ ←ಸಂ. ವಕ್ರ) + ಬರ್ (<ವರ್)]

**ಬಕ್ಶೀಸು** 'ಬಕ್ಷೀಸು' ನೋ.

**ಬಕ್ಷಿ**, ಭಕ್ಷಿ (ನಾ). ೧. ಅರಮನೆಯ ಮುಖ್ಯಾಧಿಕಾರಿ : ಮೋದೀಖಾನೀ ಬಕ್ಷೀ ವೀರಭದ್ರೈಯ (ಎಕ. XIV, ಶಾಮರಾ. ೨೦೭-೦; 1868) ; ಇಬ್ಬರು ಬಕ್ಷಿಗಳನ್ನು ಜಡ್ಜಿಗಳಾಗಿ ನೇಮಿಸಿ (ಮಹಾವಂ. II, ೨೭); ಈ ತಳ್ಳಿಯು . . . ವಿಳಂಬವಿಲ್ಲದೆ ಅರಮನೆಯ ಬಕ್ಷಿಯ ಕೈಗೆ ಬಂತು (ಹಾಗ್ಗೆಂ. ೨೨೭). ೨. (ಬಕ್ಷಿಯ ಹೆಸರಿನಲ್ಲಿ ಮುದ್ರಿಸಿದ) ಒಂದು ಬಗೆಯ ನಾಣ್ಯ : 'ಗೋವಿಂದಬಕ್ಷಿ' ಪರಾ. **ಭಕ್ಷಿ** : ೧. ಮುಂದಿನ ನವರಾತ್ರಿಯಲ್ಲಿ ಅವನು ಮಹಾರಾಜರ ಮುಂದೆ ಹಾಡುವುದಕ್ಕೆ ಏರ್ಪಾಡು ಮಾಡುವುದಾಗಿ ವೀಣೆ ಭಕ್ಷಿಗಳು ಅವನಿಗೆ ವಾಗ್ದಾನ ಮಾಡಿದ್ದರು (ಸುಬ್ಬಣ್ಣ. ೯); ಭಕ್ಷಿ ಆನಂದ ರಾಯನಿಗೆ ವರ್ತಮಾನವನ್ನು ಕೂಡಲೇ ಹೇಳಿ ಕಳುಹಿಸಿದನು (ಇಂದು. ೯೯).

[←ಪಾರ. ಬಖ್ಶೀ ; ಹಿಂ. ಬಕ್ಷೀ, ಬಕ್ಶೀ; ಮರಾ. ಬಕ್ಷೀ, ಬಕ್ಶೀ, ಬಖ್ಶಿ, ಬಖ್ಷೀ]

**ಬಕ್ಷೀಸ್** 'ಬಕ್ಷೀಸು' ನೋ.

**ಬಕ್ಷೀಸು**, ಬಕ್ಶೀಸಂ, ಬಕ್ಷೀಸ್, ಭಕ್ಷೀಸ್, ಭಕ್ಷೀಸಂ (ನಾ). (ಮೆಚ್ಚುಗೆಯಿಂದ ಕೊಡುವ) ಬಹುಮಾನ ; ಇನಾಮು : ಆಳು ಗಳಿಗೆ ಹದಿನೈದು ರೂಬಲ್ ಬಕ್ಷೀಸು ಕೊಟ್ಟನು (ಪುವರು. ೬೦) ; ಬಕ್ಷೀಸಿನ ಆಶೆಯಿಂದ ಎಲ್ಲಾದರೂ ಇಂಥ ಕಳವುಗಳ ಪತ್ತೆಯಾಗುವುದುಂಟೇ ? (ಕಳ್ಳಕಾ. ೭). **ಬಕ್ಶೀಸು** : ಸಂಕಣ್ಣನಾಯಕನಂ ಕರಶಿ ಆಲಿಂಗನವಂ ಮಾಡಿ ಕೊಂಡು ಮರೆವಾಚಿದೆಯೆಂದು ಹೇಳಿ ಸದರಿ ಬಕ್ಶೀಸನ್ನು ಕೊಟ್ಟ (ಕಳವಂ. ೨೦-೧೯). **ಬಕ್ಷೀಸ್** : ಅಲ್ಲಿ ಕಾಯುತ್ತಿದ್ದ ದರವಾನನಿಗೆ ಐದು ರೂಪಾಯಿಯ ನೋಟನ್ನು "ಬಕ್ಷೀಸ್" ಇತ್ತು ಬ್ರೊಹೆಯನ್ನು ಹತ್ತಿದನು (ಏಧಿಮ್ಮ. ೩೯). **ಭಕ್ಷೀಸ್** : ಮೇಘದೂತದ ಶ್ಲೋಕಗಳನ್ನು ಹೇಳು ವುದು ಕೇಳಿ ಎಜ್ಯುಕೇಶನಲ್ ಇನ್ಸ್‌ಪೆಕ್ಟರ್ ಕೃಷ್ಣಮೂರ್ತಿಗೆ ಒಂದು ಫೌಂಟನ್ ಪೆನ್ 'ಭಕ್ಷೀಸ್' ಕೊಟ್ಟಿದ್ದರು (ಅಸ್ತಿಕಂ. ೩೪). **ಭಕ್ಷೀಸು** : ನಿಮಗೆ ಇದನ್ನು ಭಕ್ಷೀಸಾಗಿ ಕೊಟ್ಟಿದ್ದೇನೆ (ಕವಮಕ. ೨).

[←ಪಾರ. ಬಖ್ಶೀಸ್ ; ಹಿಂ. ಬಖಶೀಸ್, ಬಖ್ಶೀಸ್ ; ಮರಾ. ಬಕ್ಷೀಸ್, ಬಖ್ಶೀಸ್, ಬಖ್ಷೀಸ್]

**ಬಖರ್** 'ಬಖರು' ನೋ.

**ಬಖರು**, ಬಖರ್, ಬಖೈರು (ನಾ). ದೇಶಭಾಷೆಯಲ್ಲಿ ಗದ್ಯರೂಪ ವಾಗಿ ಬರೆದ ಐತಿಹಾಸಿಕ ವಿವರಗಳನ್ನೊಳಗೊಂಡ ಗ್ರಂಥ : ನವಾಬರು ಸವಣೂರಿಗೆ ರಾಜಕುಟುಂಬವನ್ನೂ . . . ಕರೆದುಕೊಂಡು

ಹೋಗಿ ಮನ್ನಿಸಿದರೆಂದು ಆ ಸಂಸ್ಥಾನದ ಬಖರುಗಳಲ್ಲಿ ಬರೆದಿದೆ (ಸಮಕ. ೫). **ಬಖರ್** : ಇತಿಹಾಸಗ್ರಂಥಗಳು ಬಖರ್ ಎಂದು ಮಹಾರಾಷ್ಟ್ರದಲ್ಲಿ ಪ್ರಸಿದ್ಧವಾಗಿರುವುವು (ಚಶ್ರಿ. ೬೮). **ಬಖೈರು**: ಪುರಾತನ ಕೈಫೀಯತ್ತುಗಳನ್ನೂ ಬಖೈರುಗಳನ್ನೂ ಕಡತಗಳನ್ನೂ ಶಾಸನಗಳನ್ನೂ ತಿಳಿದವರು ಹೊರಕ್ಕೆ ತರಬೇಕು (ಬಿಶ್ವರು. ೧ ಮುನ್ನುಡಿ) ; ಮರಾಟಿಭಾಷೆಯಲ್ಲಿ ಶಿವಾಜಿ ಮೊದಲಾದ ವೀರರ ಕಥೆಗಳೂ ಪುನೆ ಶ್ರೀಮಂತರ ಚರಿತ್ರೆಗಳೂ ಬರೆಯಲ್ಪಟ್ಟಿವೆ. ಇವುಗಳನ್ನು ಬಖೈರು ಎನ್ನುತ್ತಾರೆ (ಮುಕಗ. ೭).
[← ಮರಾ. ಬಖರ್, ಬಖೇರ್]

**ಬಖಾರಿ** (ನಾ). ಧಾನ್ಯ ಮುಂತಾದುವನ್ನು ಬಹಳ ಕಾಲ ರಕ್ಷಿಸಿಡಲು ಮಾಡಿದ ಗೂಡು ; ಪಣತ : ಬಖಾರಿಯಲ್ಲಿ ಗೋಡೆಯ ಹತ್ತರ ಇಲ್ಲವೆ ತಳಕ್ಕೆ ಇರುವ ಚೀಲಗಳೆಲ್ಲ ಹವೆಯಿಂದ ನೀರಿನಿಂದ ತೊಯಿದಂತೆ ಆಗುತ್ತದೆ (ಮುಂಬವ್ಯಾ. ೬೫). 'ವಖಾರ' ಪರಾ,
[ ←ಹಿಂ. ಬಖಾರ್ ; ಮರಾ. ಬಖಾರೀ ]

**ಬಖೇಡಿ** (ನಾ). ೧. ವಾಜ್ಯ ; ಕಲಹ ; ಜಗಳ : (*). ೨. ತೊಂದರೆ ; ಕಿರಿಕಿರಿ : (*). [ ←ಹಿಂ. ಮರಾ. ಬಖೇಡಾ]

**ಬಖೈರು** 'ಬಖರು' ನೋ.

**ಬಗಟು** (ಕ್ರಿ). ೧. ತೊಡೆಗಳನ್ನು ಅಗಲಿಸು : "ಬಗಟು— ಊರುವಿಶ್ಲೇಷೇ (ಕಾಲುಗಳನ್ನು) ಅಗಲಿಸು" (ಕಮಥಾ). ೨. ಪಾಲು ಮಾಡು ; ವಿಭಾಗಿಸು : ಅರಿವುಮ ಮೂಗನಿಕ್ಕುಟಿಕೊಳೆ ಕೀಟ್ಟುದು ಪಲ್ಗಳನೇಟುಬಟ್ಟೆಯಾಗಿರೆ ಕಿಱುದೆಂಟುಸೂಟುಱ್ ಬಗಟ ಕೊಯ್ವುದು ಮುಂಡೆಯುಂ (ಸೂಕ್ತಿಸು. ೯-೩೭೯).
[ದೇ. ‖ ತಮಿ. ಮಲ. ವಕು ; ತುಳು. ಬಗುಟು]

**ಬಗಟೆ** 'ಬಗಡೆ' ನೋ.

**ಬಗಟೆಗೋಳ** (ನಾ). (?) : ಮುದದೆ ವೈಯೆಂಬುದೇ ನಿಶ್ಚಯಂ ಕುಂಠವೆಂಬುದೇ ತತ್ಕ್ರಿಯಾಹಾನಿ ವೈಕುಂಠಯೆನಲಾಗಿ ಮದನಪಿತನೇ ಕಾಲು ಮುಱಿದ ಕುಂಠನೆನಿಪ್ಪ ಪೆಸರು ಲೋಕಪ್ರಸಿದ್ಧಂ ಅದಱಿಂದಲವನ ಪಾದಸ್ತಂಭವಾಗೆ ಮೆಟ್ಟಿದುದು ಮೇಘದಲ್ಲಿ ನೆಲದೊಳಗೊಂದು ಕಾಲಿರಲ್ಕದು ಬಗಟೆಗೋಳ ಮಲ ಹೆಟ್ಟಿದಂತಾಗಿರ್ದನಾ ಹರಿ ನಿರೋಧದಿಂದ (ಪೀಕ್ಕೃ. ೩-೦೮-೨೫). [?]

**ಬಗಡೆ**, ಬಗಟೆ (ನಾ). ೧. ಚೆನ್ನಾಗಿ ತಳಿಸದಿರುವ **ಅಕ್ಕಿ** ; ತೌಡು ಮಿಶ್ರವಾದ ಅಕ್ಕಿ : (*). **ಬಗಟೆ** : ೨. "ಅಕ್ಕಿಯ ಮೇಲಣ ತೌಡು (?) " : (ಶೃಶಬ್ಬ).

**ಬಗಡೆಯಕ್ಕಿ**=ಚೆನ್ನಾಗಿ ತಳಿಸದ, ತೌಡು ಮಿಶ್ರಿತವಾದ ಅಕ್ಕಿ: ಈ ಸಲದ ರೇಷನ್ ಅಕ್ಕಿ ದನಕ್ಕೆ ಹಾಕುವ ಬಗಡೆಯಕ್ಕಿಯ ಹಾಗಿದೆ (ರೂಢಿ).
[← ಮರಾ. ಬಗಡ್]

**ಬಗದತ್ತಿ** (ನಾ). (?) : ಕಟ್ಟಾಳ್ಮಾನುಸಗಣ್ಣ ಮನ್ನವ ಬಣ್ಣಸಂಬೀಟುವೋಂ ಪೆಡೆಯಂ ಬೆಳಪ ಬಿರುದಪ್ಪವರ ಬಿರುದನೊಡ್ಡಟ್ಟಿವೊನ್ ಬಿದ್ಧ ಬಗದತ್ತಿ ಆಣೆ ಗಣ್ಡುಕದ ಗಣ ಪೊಕ್ಕ ಅಪ್ಪಯ ಆಟ್ಟ (ಎಇ. XXIV, ೨೬-೦೦; ಸು. 885). [?]

**ಬಗದಳ** 'ಭಗದಾಳ' ನೋ.

**ಬಗದಾರೆ** (ನಾ). ಒಂದು ಬಗೆಯ ಹಕ್ಕಿ : ತರ್ಕಿಪ ಬಗದಾರೆಯ ಕೂಡೆ ಬಹ ಕೊಳರ್ವಕ್ಕಿಯ ಕೆಲದಾಡಿಸುತ ದಿಕ್ಕಿಗೆ ಪೆಸರಾಂತ ಸಿಪಿಲೆಗೆ ಕವಳವನಿಕ್ಕಿ ಕಾದಿಸುತಿರ್ದ ಮದನ (ವೋಹಚ. ೫-೩೫) ; ಜಾಣ ಮೆಲ್ನುಡಿ ಗೆಲವರೆ ಗಿಳಿ ಬಗದಾದಿ[ರೆ] . . . ಹೊಮ್ಮರಿ ಮಂಚದ ಸುತ್ತ ಠಾಣಯವಿರಲು ನೋಡಿದನು (ವೋಹಚ. ೩೦-೯೯). [?]

**ಬಗದಾಳ** 'ಭಗದಾಳ' ನೋ.

**ಬಗನಿ** 'ಬಯಿನೆ' ನೋ.

**ಬಗನೆ** 'ಬಯಿನೆ' ನೋ.

**ಬಗನೆಕಳ್ಳು** (ನಾ). ಬಗನೆಮರದಿಂದ ತೆಗೆದ ಹೆಂಡ, — ಮದ್ಯ : ಅವನಿಗೆ ಕುಡಿಯುವ ಚಟವಿದ್ದಿದ್ದರೆ ಬಗನೆಕಳ್ಳನ್ನು ಅಥವಾ ಅಕ್ಕಿಯ ಭೋಜವನ್ನು ಕುಡಿಸುತ್ತಿದ್ದರು (ಕಂಜಕಂ. ೯೭).
[ ಬಗನೆ (<ಬಯಿನೆ) + ಕಳ್ಳು (<ಕಳ್$_3$) ]

**ಬಗಬಗ** (ನಾ). ಬೆಂಕಿ, ಗಾಯ ಮೊದಲಾದುವುಗಳು ಉರಿಯುವುದನ್ನು ಹೇಳುವ ಒಂದು ಅನುಕರಣ ಪದ: ಹೊತ್ತಿಸಿದ ಜೆಡೆ ಬೆಂದುದಳ್ಕುರಿ ಹತ್ತಿ ಬಗಬಗ [ಪಾಠಾಂ. ಭಗಭಗ] ಎನುತಲುತ್ತಮನುತ್ತಮಾಂಗಂ ಬೇವುತಿರಲು (ಬಸವ. ೦೬-೨೫); ಗಾಯ ಬಗಬಗ ಎಂದು ಉರಿಯುತ್ತಿದೆ (ರೂಢಿ).

**ಬಗಬಗನೆ** (ಅ). ಬಗಬಗ ಎಂದು : ಬೆಳಗುವನಲಂ ಬಗಬಗನೆ [ಪಾಠಾಂ. ಧಗಧಗನೆ] ಶಕೆ ಬೆಳೆಮರಿವುತಿಹ ಕಬ್ಬುನದ ಕಾವಲಿಯೊಳಗೆ ಕುಳ್ಳಿರ್ದು (ಬಸವ. ೫೩-೫೩). [ಬಗಬಗ + — ಅನೆ$_1$ ]

**ಬಗರ್**, ಬಗರು$_2$ (ಅ). ಇಲ್ಲವೆ ; ಹೊರತಾಗಿ : 'ಬಗರ್ಬಡ್ಡಿ', 'ಬಗರ್ಹುಕುಂ' ಪರಾ. **ಬಗರು$_2$** : 'ಬಗರುಚಿರಾಯಿತು' ಪರಾ.
[←ಅರ. ಹಿಂ. ಬಗ್ಯೆರ್; ಪಾರ. ಬಿಘೈರ್; ಮರಾ. ಬಗರ್, ಬಗ್ಯೆರ್ ]

**ಬಗರಗೆ** (ನಾ). ೧. (ಒಣಗಿದ ನದಿದಂಡೆಯಲ್ಲಿ ನೀರಿಗೋಸ್ಕರ ತಾತ್ಕಾಲಿಕವಾಗಿ) ತೋಡಿದ ಕುಳಿ, — ಗುಣಿ : "ಚುರೀ, ಚುಂಡೀ, ಚೂಚುಕಃ—ಈ ೩ ಬಗರಗೆ" (ಹಲಾಯು. ೦೦೩-೬೨); ಪಥಿಕರಜಲ್ಗೊಂಡು ತೋಡಿದಬುಂಬುನೀರ ಬಗರಗೆಗಳುಮನೊಳಕೆಯ್ದು ಬತ್ತಿದ ಪಳ್ಳಂಗಳೊಳಂ (ಕಾದಂಬ. ೨೬೬); ಬೇಗೆ ಪರ್ವಿದ ಪರ್ವತಂಗಳ ತಾಪಮಂ ಕಳೆವೊಡವಱಿಂಮನ್ನತಂಗಳಪ್ಪ ಜಲಧರಂಗಳೆ ಕಳೆಗುಂ ಕೀೞಿದುವಪ್ಪ ತೋಱೆಯುಂ ಬಾವಿಯುಂ ಬಗರಗೆಯುಂ ಕಳೆಯಲಾಱವು (ಅರ್ಧನೇ. ೬-೨೨ ವ); ಬಗರಗೆಯೊಳ್ ಮಣಲನೆನಿತ್ತಗಟ್ಟಿರ್ ಪಾಸಸರನಿತ್ತು ನೀರೊಸರ್ಗುಂ (ನೀತಿಮಂ. II, ೨೯೬). ೨. ಹೆಂಚಿನ ಚೂರು ; ಓಡು ; ಬಕ್ಕರೆ: "ಪಕ್ಕಳೆಂಮಂ ಬಗರಗೆಯೆಂದುಂ ಬಕ್ಕರೆ" (ಶಶಸಾ. ೬೬-೪೯೦); ಕೈಯೊಳ್ ಪಿಡಿದಾ ಲಾಗುಳದ ಕೋಲೊ ಬಗರ[ಪಾಠಾಂ. ರಿ]ಗೆಯೋ (ಕಬ್ಬಿಕಾ. ೦೮೯); ಬೆಂಗಡರಿದ ಬಸುರ್ಗಳ ಕೆದರ್ದಲೆಗಳ ಕೆಂಗಣ್ಣುಗಳ ಕೋರೆದಾಡೆಯ ಸಂಗಳಿಸಿದ ಬಗರಗೆ ಬಾಳ ಕೈಯ ಭೂತಂಗಳಾ ಹುರದೊಳಿರ್ದವು ಕೇಳ (ಸೂಬಸೋ. ೯-೨೬); ಭುಗಿಭುಗಿಲ್ಭುಗಿಲೆಂದು ಕಬ್ಬೊಗೆ ನೆಗೆಯಲುರಿ ಹೊಡೆವಬುಜಜಾಂಡದ ಬಗರ[ಪಾಠಾಂ. ರೊ]ಗೆಯ ಭೇದಿಸಿತು (ಕುವ್ಯಾಕ. ೯-೪೪) ೩. (?): ಕೆಣಕಿವರೆ ಭುಗಿಲೆಂದುದೀತನ ರಣಪರಾಕ್ರಮ ವಹ್ನಿ ಕರಡದ ಬಣಬೆ ಸಿಕ್ಕಿತು ಕಾಳುಗಿಚ್ಚಿನ ಬಾಯ ಬಗರಗೆಗೆ [ಪಾಠಾಂ. ತುತ್ತಾಗೆ] (ಕುವ್ಯಾಕ. ೩-೮).

**ಬಗರಿ** 'ಬವರಿ' ನೋ.

**ಬಗರು$_1$** (ಕ್ರಿ). (ಉಗುರಿನಿಂದ) ಕೆರೆ; ಗೆಬರು ; ಗೋರು ; ತೋಡು : ಪ್ರತಿಯೊಂದನ್ನೂ ಎರಡು ಮೂರು ಬಾರಿ ಕೇಳಿ, ಕೇಳಿ, ಬಗರಿ, ಬಗರಿ ಬಿಡಿಸುತ್ತಿದ್ದರು (ಸಂಬಿಸಾ. ೬೯) ; ಇದ್ದುದನ್ನು ಬಗರಿ ಕೂಡಿಡಬಹುದು (ಬಾಳ್ವೆಪೆ. ೬೬). [ ದೇ. ‖ ತಮಿ. ಪರುಕ; ತೆಲು. ಬರುಕು ; ಕುಇ. ಪೆರ್ಕ ]

**ಬಗರು$_2$** 'ಬಗರ್' ನೋ.

**ಬಗರುಚಿರಾಯಿತು** (ನಾ). ಸರ್ಕಾರದ ಅಪ್ಪಣೆಯಿಲ್ಲದೆ ಬೇಸಾಯ ಮಾಡುವ ನೆಲ : ಭೂಮಿ ಇಲ್ಲದ ಬಡವನಾದ ಬಗರುಚಿರಾಯಿತು ಕುಳವು ಹೆಗ್ಗಡಿಯಾಗಿ ಬಲವಾಗಿರತಕ್ಕ ಪುರುಷನ ಸಹಾಯವನ್ನು ಪಡೆಯಬೇಕಾಗಿತ್ತು (ಶಾಳಗಾ. ೨೦). [ ಬಗರು$_2$ (<ಬಗರ್) + ಚಿರಾಯಿತು ]

**ಬಗರ್ಬಡ್ಡಿ** (ಅ). ಬಡ್ಡಿ ಇಲ್ಲದೆ : (*). [ ಬಗರ್ + ಬಡ್ಡಿ$_3$ ]

**ಬಗರ್ಬದಲಿ** (ಅ). ಬದಲಿಯಿಲ್ಲದೆ; ವ್ಯತ್ಯಾಸವಿಲ್ಲದೆ : (೬).
[ ಬಗರ್ + ಬದಲಿ$_2$ ]

**ಬಗರ್ರಜ** (ಅ). ರಜವಿಲ್ಲದೆ; ಬಿಡುವಿಲ್ಲದೆ : (೬).
[ ಬಗರ್ + ರಜ್ಯ (< ರಜಾ) ]

**ಬಗರ್ಹುಕುಂ,** ಬಗರ್ಹುಕ್ಕುಂ (ಅ). ಅಪ್ಪಣೆಯಿಲ್ಲದೆ : ರೆವಿನ್ಯೂ ಜಮೀನಿನಲ್ಲಿ ಕನ್‌ವರ್‌ಷನ್ ಆಗದೆ 'ಬಗರ್‌ಹುಕುಂ' ಮನೆ ಕಟ್ಟಿದ್ದು ಸರ್ಕಾರಕ್ಕೆ ಗೊತ್ತಾದರೆ ನಿನ್ನ ಮನೆ ಪಾಯದ ಕಲ್ಲು ಕದಲಿಸಿ ಬಿಟ್ಟಾರು ! (ನಮ್ಮ್ಮ. ೯). **ಬಗರ್ಹುಕ್ಕುಂ:** ಸರ್ಕಾರದ ಜಮೀನನ್ನು ಅಥವಾ ನೀರನ್ನು ಬಗರ್‌ಹುಕ್ಕುಂ ಉಪಯೋಗಿಸಿದ್ದಕ್ಕೆ . . . ವಿಧಿಸುವ ಜುಲ್ಮಾನೆ (ಕಲಪ. ೦೫೫). [ ಬಗರ್ + ಹುಕುಂ ]

**ಬಗರ್ಹುಕ್ಕುಂ** 'ಬಗರ್ಹುಕುಂ' ನೋ.

**ಬಗಲ್** (ನಾ). ತುಂಡು ; ಚೂರು.

**ಬಗಬಗಲ್ಮಾಡು** = ಚೂರುಚೂರು ಮಾಡು : ಯುಗಸಹಸ್ರ ಕ್ಕೊಡೆಯಬಹುದೆ ಬಲದುರ್ಗವಂ ಬಗಬಗಲ್ಮಾಡಿ ಮುರಿವಡದು ರಿಪುಮಸ್ತಕವನೊಗದು ಬಿಸುಡಿದ ಪಾರ್ಥ ಪಾಶುಪತಬಾಣದಿಂ (ತುರಂಗ. ೫೬-೫೩). [ ←ಮರಾ. ಬಖಲ್ ]

**ಬಗಲ** (ನಾ). ವಿಶಿಷ್ಟ ಆಕಾರದ ಒಂದು ಬಗೆಯ ಅರಬ್ಬಿನಾವೆ : ಫತ್ತೆಮಾರಿಗಳಲ್ಲಿಯೂ ಬಗಲಗಳಲ್ಲಿಯೂ ಸರಕುಗಳನ್ನು ತುಂಬಿಕೊಂಡು . . . ಸಮುದ್ರಪ್ರಯಾಣ ಮಾಡುತ್ತಿದ್ದರು (ಮುಂಬಯಿ. ೩-೧೦೨).
[ ← ಮರಾ. ಬಗಲಾ./ತುಳು. ಬಗಲೆ ]

**ಬಗಲಂಗಿ** (ನಾ). ಗಿಡ್ಡತೋಳಿನ ಒಂದು ಬಗೆಯ ಅಂಗಿ : (೬).
[ ಬಗಲು + ಅಂಗಿ$_2$ ]

**ಬಗಲಬಂಡಿ** 'ಬಗಲುಬಂದು' ನೋ.

**ಬಗಲಬಂಡೆ** 'ಬಗಲುಬಂದು' ನೋ.

**ಬಗಲಾಂಟ** (ನಾ). ಸುಳ್ಳು ಅಪಾದನೆ; ಮಿಥ್ಯಾರೋಪ : ಇದೇನು ಹೊಸ 'ಬಗಲಾಂಟ'ದ ಸುದ್ದಿ ತಂದಾನೊ ಎನ್ನುವಂತೆ ಮಾಸ್ತರರನ್ನು ನೋಡಿ . . . ಕೇಳಿದರು (ಮೂರುದಾ. ೩೦).
[ ←ಮರಾ. ಬಂಗಲಾಟ್, ಬಂಗಲಾತ್ ]

**ಬಗಲಿ** (ನಾ). ಕನ್ನ ; ಕಂಡಿ: 'ಬಗಲಿಪದ್ಧತಿ' ಪರಾ.
[←ಮರಾ. ಬಗಲೀ]

**ಬಗಲಿಪದ್ಧತಿ** (ನಾ). ಕನ್ನ ಕೊರೆದು ಕದಿಯುವ ಪದ್ಧತಿ : ಬಾಗಿಲಿನ ಹತ್ತಿರ ಗೋಡೆ ಕೊರೆದು ಒಳಸೇರುವುದಕ್ಕೆ 'ಬಗಲಿ'ಪದ್ಧತಿಯೆಂದೂ . . . ಕರೆಯುವ ರೂಢಿಯಿದೆ (ಬಂಗಾರ. ೦೫೦). [ಬಗಲಿ + ಪದ್ಧತಿ]

**ಬಗಲು** (ನಾ). ೧. ಕಂಕುಳು; ಕಕ್ಷ : ಗಂಡುಗಲಿ ಕೃತುವೀರ್ಯ ಸಂಭವಂ ಬಗಲೊಳಾಂತೊಲಪಿನಿಂ ತಿರುಗಲು (ಶರಸು. ೦೩-೩೭); ಲಲನೆ ಯರ ಮೈ ಕಂಪನಂಬಡೆದು ಬಗಲೊಳಗೆ ಜಲವಿಳಿದು ಬಾಯರತವು (ಮಲ್ಲಿಕ. ೯-೮); ಪಾದರಕ್ಷೆಯನ್ನು ಪಟ್ಟೆಯ ವಸ್ತ್ರದಲ್ಲಿ ಹುದುಗಿಸಿ, ಬಗಲಲ್ಲಿಟ್ಟು ಬಸವಣ್ಣನವರ ಅರಮನೆಗೊಯ್ದನು (ಶರಣ. ೪೫೦-೭ ಪ). ೨. ಮಗ್ಗುಲು ; ಪಕ್ಕ : ಪಡುವಲಾಗಿ ತಿರಿಗಿ ಬಗಲಾಗಿ ತಿರಿಗಿದ ದುರಿಮೊಬಲಾಗಿ ಕರಿಯ ಕಲ್ಲ ಮೇಲೆ ಹಾವು (ಎಕ. III, ತಿರುಮ. ೬೨-೨೦; 1622); ಹಳ್ಳಿಯ ರೈತನೊಬ್ಬ. . . ದಾರಿಯ ಬಗಲಲ್ಲಿ ಗಾಡಿ ಹೊಡದು ಕೊಂಡು ಹೋಗುತ್ತಿದ್ದನು (ಕೈಸರು. ೦೮೨). ೩. ಪಕ್ಷ; ಪಂಗಡ : ಒಬ್ಬೊಬ್ಬ ಸಂಪಾದಕರು ಬಗಲಿಗೆ ಇರಲಿ (ಅರಳು. ೩೪೭-೧೦).

ಬಗಲಿಗೆ ಬೀಳು = ಅಧೀನವಾಗು ; ವಶವಾಗು : ಶ್ಯಾಮಣ್ಣ ಬಗಲಿಗೆ ಬಿದ್ದರೆ (ಲೋಕಕ. ೦೯) ; ಕಾಕಾ ಬಗಲಿಗೆ ಬಿದ್ದರ ಅಂತ ತಿಳೀ (ದೀಪಹ. II, ೨೦೦). [←ಪಾರ. ಬಘಲ್ ; ಹಿಂ. ಮರಾ. ಬಗಲ್]

**ಬಗಲುಕಸೆ** (ನಾ). ಒಂದು ಪಕ್ಕದಲ್ಲಿ ಲಾಡಿಯನ್ನು ಗಂಟುಕಟ್ಟಿ ತೊಡುವ ಅಂಗಿ : ಮೈಯಲ್ಲಿ ಕೊಡೆಯರಿವೆಯ ಬಗಲುಕಸೆಯ ಅಂಗಿ ಯನ್ನು ತೊಟ್ಟಿದ್ದ (ಜನಜೀ. ೨೬). [ಬಗಲು + ಕಸೆ$_2$]

**ಬಗಲುಚೀಲ** (ನಾ). ಹೆಗಲಿಗೆ ನೇತುಹಾಕಿಕೊಳ್ಳುವ ಚೀಲ : ಅವನು ತನ್ನ ಬಗಲುಚೀಲದಿಂದ ಪುಸ್ತಕಗಳನ್ನು ಹೊರದೆಗೆದನು (ರೂಪ).
[ಬಗಲು + ಚೀಲ]

**ಬಗಲುಬಂಡಿ** 'ಬಗಲುಬಂದು' ನೋ.

**ಬಗಲುಬಂದು,** ಬಗಲಬಂಡಿ, ಬಗಲಬಂಡೆ, ಬಗಲುಬಂಡಿ (ನಾ). ಒಂದು ಬಗೆಯ ಅಂಗಿ : ಜಗನ್ನಾಥದಾಸರು ಬಗಲುಬಂದನ್ನು ತೊಟ್ಟು ಕೊಂಡು ಲಪ್ಪಾಟಿಯನ್ನು ಸುತ್ತಿಕೊಂಡು. . . ಮನೆಗೆ ಬಂದರು (ಕಥಾ. ೫೨೩). **ಬಗಲಬಂಡಿ :** ಶರೀಫರು. . . ಬಿಳೀ ಬಗಲಬಂಡಿಯನ್ನು ಅಚ್ಚುಕಟ್ಟಾಗಿ ತೊಡುತ್ತಿದ್ದರು (ಕಂಠ. ೬೦ ಕವಿಕಾವ್ಯಸಂಕಥ); ಚಳಿಯ ಸಲುವಾಗಿ ಅವರು ಒಂದು ಖಾದಿಯ 'ಬಗಲಬಂಡಿ' ಯನ್ನು ಹಾಕುತ್ತಿ ದ್ದರು (ಎಡ್ರುವ. ೦೪೦). **ಬಗಲಬಂಡೆ :** ವೇದವ್ಯಾಸಾಚಾರ್ಯ ಉಟ್ಟಿದ್ದು ಅಂಚಿನ ದೋತರ, ತಲೆಗೆ ಸುತ್ತಿದ್ದು ಕೆಂಪುಬನಾತು, ಮೈಯಲ್ಲಿ ಶುಭ್ರ ವಾದ ಬಗಲಬಂಡೆ (ಉದಮ್ಮ. ೦೭). **ಬಗಲುಬಂಡಿ :** ಹಿಂದಕ್ಕೊಮ್ಮೆ ಬಗಲುಬಂಡಿಗಳನ್ನು ನಮ್ಮ ಪುರಾತನರು ಹಾಕುತ್ತಿದ್ದರು (ಮುಂಗಾರು. ೨೪).
[←ಪಾರ. ಮರಾ. ಬಗಲ್‌ಬಂದ್ ; ಹಿಂ. ಬಗಲ್‌ಬಂದೀ]

**ಬಗಲೆ,** ಬಗಳೆ (ನಾ). ೧. ತಾಂತ್ರಿಕರಿಂ ಪೂಜಿಸುವ ಒಬ್ಬ ದೇವತೆಯ ಹೆಸರು : ಈ ಎಲ್ಲಾ ಕ್ರಮಗಳೂ ಸಚ್ಚಿದಾನಂದರೂಪಿಣಿಯಾಗಿರುವ ತ್ರಿಪುರಾ, ಲಲಿತಾ, ಪರಾ, ಬಗಲಾ — ಮೊದಲಾದ ಸಾವಿರಾರು ಸಂಕೇತ ಗಳಿಂದ ಸೂಚಿಸಲ್ಪಡುವ ಶಕ್ತಿತಾದಾತ್ಮ್ಯವನ್ನು ಉಂಟುಮಾಡುವವು ಗಳಾಗಿವೆ (ಶಾರದ. ೨೨೮). **ಬಗಳೆ :** ೨. ವಗಲಾದೇವತೆಯನ್ನು ಕುರಿತು ಹೇಳುವ ಮಹಾಮಂತ್ರಗಳಲ್ಲಿ ಒಂದು : ಬಗಳಾ . . . ಇತ್ಯಾದಿ ಮಹಾಮಂತ್ರಗಳು (ವಿವೇಕ. ೬೦). [<ಸಂ. ವಗಲಾ]

**ಬಗಸಿಗೆ** (ನಾ). ಬೊಗಸೆ ; ಅಂಜಲಿ : ಕುಂಚಿತಾಂಗುಲಿಗಳನ್ನುಳ್ಳ ಅಂಗೆಯ್ ಪ್ರಸೃತಿಯೆನಿಸುಗು. ಅದು ಕುಡಿತೆ; ಆ ಎರಡೂ ಕೂಡಿದರೆ ಅಂಜಲಿಯೆನಿಸುಗು. ಅದು ಬಗಸಿಗೆ (ನಾಚಿರಾ. ೬). [<ಬಗಸೆ]

**ಬಗಸು$_1$** 'ಬಯಸು$_1$' ನೋ.

**ಬಗಸು$_2$** (ನಾ). ೧. ಆಸೆ; ಹಂಬಲ : ಅಗಸಿಯ ತೆರಿ ನನ್ನ ಬಗಸುಳ್ಳ ತಳವಾರಾ ಬೊಗಸಿ ತುಂಬಡಕಿ ಬಿಳಿಎಲಿಯ ಕೋ(ಪ್ಲಗೆ. ೩೯). ೨. (?) : ಸೊಗಸಿನಿಂ ಬಗಸಿನಿಂ ಮಿಗಿಲಾಗಿ ಲಘುವಾಗಿ (ಜನಮು. ೪೮-೫೦).
[<ಬಗಸು$_1$]

**ಬಗಸೆ,** ಬೊಗಸೆ$_1$ (ನಾ). ೧. ಎರಡು ಅಂಗೈಗಳನ್ನೂ ಕೂಡಿಸಿದುದು ; ಸೇರೆ; ಅಂಜಲಿ : ಕುಡುತೆ ಬಗಸೆ ಮೊಱ ಗೆರಸಿ . . . ಮೊದಲಾದವು ಅವಮಾನಮೆಂಬುದಕ್ಕುಂ (ಶ್ರಾವಕಾ. ೫೮-೦೭); ಒಗೆದೊಗೆದು ಕಾಲ್ದಿರುಹಿ ರಕ್ತಮಂ ಬಗಸೆಯಿಂ ಮೊಗೆಮೊಗೆದು ಕುಡಿವುತಂ (ವಕುಶ. ೩-೭-೬೮); ಹುಡುಗಿಯರು ಗಾಡಿಗಳನ್ನು ನಿಲ್ಲಿಸದೆ ಹಾಗೆಯೇ ಮೇಲೇರಿ ಬಗಸೆ ತುಂಬ ದ್ರಾಕ್ಷಿಗಳನ್ನು ಎತ್ತಿ . . . ಹಾಕುತ್ತಿದ್ದರು (ಮಲೆನಾ. ೦೫೮). ೨. ಒಂದು ಸೇರೆಯಲ್ಲಿ ತುಂಬುವಷ್ಟು : ಯಾರ್ಯಾದರು ಬಂದ ಪುಣ್ಯಾತ್ಮರು ನನ್ನ ತಲೆ ಮ್ಯಾಲೆ ಮಂದು ಬಗಸೆ ನೀರ್ರು ಆಕಬೇಕೆಂದು ಬೇಡುತ್ತೇನೆ (ಮೈಅಂ. ೦೯೨೯, ೯೭-೦೭: 1593 ?). **ಬೊಗಸೆ$_1$ :** ೧. ರಕ್ತವನ್ನು ಬೊಗಸೆಗಳಿಂದ ಹಿಡಿದು ಬಾರಿಬಾರಿಗೂ ಕುಡಿಯುತ (ಕೃವಾಕ. ೦೬೬); ಬೊಗಸೆಯೊಳಿರೆ ಹೂವು ಕೈಗಳನೆರಡನು ಪರಿಮಳಗೊಳಿಸುವುವಲ್ತೆ (ಇಂಚಾಕ. ೬೯-೩೩). ೨. ಆಕೆಯನ್ನು ಮೂರುಲೋಕ ಸುತ್ತಿಸಿ, ಮೂರು ಬೊಗಸೆ ನೀರನ್ನು ಕುಡಿಸದೆ ಬಿಡುವೆನೇ ? (ಲಕ್ಷ್ಮೀಶ್ರ. ೦೭೦).

**ಬಗಸೆಗಣ್**, ಬಗಸೆಗಣು, ಬಗಸೆಗಣ್ಣು, ಬೊಗಸೆಗಣ್, ಬೊಗಸೆಗಣ್ಣು (ನಾ). ಬೊಗಸೆಯಷ್ಟು ಅಗಲವಾದ ಕಣ್ಣು : ಬಗಸೆಗಣ್ಕುಡಿನೋಟವಮಮು ಪೊಸಗಾಡಿಯಂ ತೆಗೆಯೆ (ಶಬ್ದಮ. ೩-೩೦); ಬಗಸೆಗಣ್ಗಳೊಳು ವಿಲಾಸವೆಸೆಯೆ ರಸವೊಗುವಂತೆ ಪಾತ್ರವಾಡಿದಳು (ಶರಕ. ೦೩-೬೮); ಮೊಗಮನಿತುಮಂ ವ್ಯಾಪಿಸಲೆಳಸುವ ಬಗಸೆಗಣ್ಗಳಂ ಮೇರೆಯೊಳ್ ನಿಲಿಸುವೆಲ್ಲೆಗಟ್ಟಿಗಳಂತಿರ್ಪ ಪುರ್ಬುಗಳುಂ . . . ಮನಂಗೊಳೆ (ಪಕಪಂ. ೬೬-೦೯). **ಬಗಸೆಗಣು :** ಸಸಿಯನ್ನ ಮೊಗದೊಳು ಮೊಳೆವ ವಿಸಾಸೆಯು ಚೆನ್ನವಮಾಣಿಕದುಟಿ ಬಗಸೆಗಣು [ಪಾಠಾಂ. ಣ್]ತಿಂಗಳರೆನೊಸಲು (ಸಾಳ್ವಭಾ. ೯-೬). **ಬಗಸೆಗಣ್ಣು :** ಒರ್ವಳಂ ತನ್ನ ಬಗಸೆಗಣ್ಣಂ ಮುರಿದು ನೋಡೆ (ಶಬ್ದಮ. ೮-೯೬);ಬಗಸೆಗಣ್ಣ ಮಲಾಂಗಿಯರ್ಮೈತಂದರು ಬಗಿದ ಪುರ್ಬಿನ ಪೆಣ್ಣನೊಡನೆ (ಶಂಕರಸಾಂ. ೯-೦೪೦). **ಬೊಗಸೆಗಣ್:** ಬೊಗಸೆಗಂಗಳ ಬಾಲೆಯರ ತಂದಾತನ ಶ್ರೀಕೃಷ್ಣ ಎನ್ನಿರೊ (ಕನಕ. ೧೩೦-೩) ; ಭಟ್ಟನಿಯ ಬೊಗಸೆಗಂಗಳಲ್ಲಿ ಕಂಬನಿ ತುಂಬಿ ಬಂದಿತು (ಶಾಕಟ. ೩೭೮). **ಬೊಗಸೆಗಣ್ಣು :** ಬೊಗಸೆಗಣ್ಣಿನ ಮುಗುದೆಯನು ನೋಳ್ಪೆ (ಶಾಕುಂತ. ೧೮ ಅಡಿಶಬ್ದ) ; ಅವಳ ಬೊಗಸೆಗಣ್ಣುಗಳಲ್ಲಿ ತುಂಬುತ್ತಿದ್ದ ನೀರನ್ನು ನೋಡಿದಾಗ ಗಲಿಬಿಲಿಗೊಂಡ (ವಾತ್ಸಲ್ಯ. ೩೭).

[ಬಗಸೆ + ಕಣ್]

**ಬಗಸೆಗಣು** 'ಬಗಸೆಗಣ್' ನೋ.

**ಬಗಸೆಗಣ್ಣು** 'ಬಗಸೆಗಣ್' ನೋ.

**ಬಗಸೆಗೈ** (ನಾ). ಜೋಡಿಸಿದ ಕೈ ; ಸೇರೆಗೈ : ಬಗಸೆಗೈಗಳಲಿ ನೀರ್ವಿಡಿದು ಶ್ರೀರಂಗೇಶ ಸೊಗಸುಗಾತಿಯರ ಮೇಲಿಡಲು (ಕಂಪಪ. ೨೩-೦೨೩).

[ಬಗಸೆ + ಕೈ$_2$ (< ಕೆಯ್$_2$) ]

**ಬಗಳಾಮುಖಿ** (ನಾ). = ಬಗಲೆ ೧ : ಗಿರಿಗಳೊಳು ಸುರಗಿರಿಯು ಭೂಮಿಯ ತರುಗಳೊಳು ಮಂದಾರ ದೈವತದಿರವಿನೊಳು ಬಗಳಾಮುಖಿಯು (ಜ್ಞಾನಸಿಂ. ೧-೦೩). [< ಸಂ. ವಗಲಾಮುಖೀ]

**ಬಗಳಿ** 'ಬೊಗಳಿ' ನೋ.

**ಬಗಳೆ** 'ಬಗಲೆ' ನೋ.

**ಬಗಾಟಬಗರಿ** 'ಬೊಗಾಟಬುಗರಿ' ನೋ.

**ಬಗಿ$_1$** (ಕ್ರಿ). ೧. (ಎರಡು ಭಾಗಗಳಾಗುವಂತೆ) ಸೀಳು ; ಹೋಳು ಮಾಡು : "ಬಗಿ—ವಿಶ್ಲೇಷೇ (ಭಾಗ ಮಾಡು)" (ಕವಿಮಾ); ಅಂಬರಂಬರಂ ಬಗಿದು ನಿಮಿರ್ವ [ಪಾಠಾಂ. ಬಳೆದು ವಿಳಿರ್ವ] ತೆರೆಗಳ್ (ಆದಿಪು. ೦೨-೭೯ ವ) ; ನಿಮ್ಮುದರವ ಬಗಿದಾನು ಹೊಗುವ ಭರವೆನಗೆ (ಬಸವ. ೪೩೭) ; ಈಗಳೆ ನಿಮ್ಮನುಗಿದುಂ ಬಗಿದುಂ ದೆಸೆವಲಿಗುಡುತುಮೆನ್ನ ಚೆನ್ನ ತಮ್ಮನಂ ಕೊಳ್ವೆಂ (ರಾಮಾಶ್ವ. ೦೫೭-೨), ೨. ಕೆದಕು ; ಬೆದಕು : ಪಿರಿದಪ್ಪೆರೆಯುಂ . . . ನಿಷ್ಠುರದಿಕ್ಕಿ ಮೆಟ್ಟಿ ಪುಟಂಗಳ್ ಕರಮೆಲ್ಲೆಡೆ ಪತ್ತಿ ಬಗಿದು ತಿನೆ ಮೆಯ್ಯಡಗಂ (ಧರ್ಮಾಮೃ. ೩-೭೯). 'ಬಗಿಯೇಱು' ಪರಾ. ೩. ಎರಡು ಭಾಗಗಳಾಗುವಂತೆ ತಳ್ಳಿ, ಜಾಗ ಮಾಡಿಕೊಳ್ಳು : ಮೊನೆಯಂಬಿನ ತಂಪಲೊಳರ್ಜುನನಂ ಕರ್ಣನುಮನಿನಿಸು ಕಾಣದಣಂ ಮೆಲ್ಲನೆ ಬಗಿದು ನೋಡಿ ಕುಡುಮಿಂಚಿನಂತೆ ಮೇಗೊಗೆದು ನಾರದಂ ನರ್ತಿಸಿದಂ (ಕಂಶಭಾ. ೦೨-೦೮೯) ; ಸೌಂದರಪೆರುಮಾಳೆಯಿರ್ದ ವನಕ್ಕೆ ಬಂದು ಅಲ್ಲಿ ಮುಂದೆ ನೆರೆದಿರ್ದ ನೆರವಿಯಂ ಬಗಿದು ಎನ್ನ ಭಕ್ತನ ಕೂಡಿ (ಪಂಬಿರ. ೬-೯೩) ; ಬಿಡುಮುಡಿಯ ಕಟ್ಟದೆ ತವಕದಲ್ಲಿ ನೋಳ್ಪೌತ್ಸುಕ್ಯದಿಂ ಮಂದಿಯ ಬಗಿದು ಚೆಲ್ವೆಗಂಗಳೊಳೀಕ್ಷಿಸುತ್ತಿರ್ದಳೊರ್ವಳಾ ಕುವರನ ಮಹೋತ್ಸವವನು (ಪಬಕೃ. ೫-೦೪). ೪. ಆಗೆ ; ತೋಡು : ಬಗಿವು ಪಾತಾಳವುಂ ಮುಟ್ಟುವಗಳುದ್ದದಿಂ . . . ಎಸೆವುದಾ ಪುರವು (ಬಕಾಂರ. ೩. ೨೮೦-೦) ; ಹೊಸಪೊಱಚೆಯಂ ಬಗಿಬಗಿದು ತೋಡಿದಡಲ್ಲದೇ ಕೈಕೊಳ್ಳನು (ಬಸವಪು. ೪೭-೦೦). ೫. ಬೇರೆ ಮಾಡು ; ಬೇರ್ಪಡಿಸು ; ವಿರಳಗೊಳಿಸು (?) : ಬಗಿವಗುಬ್ಚಿಕೊಂದದಂತೆ ತೆಗೆದಾಜಿಸಿದೋಗರದೊಳ್ ಪೊವಳ್ದು ಕಮ್ಮಗೆ ಕೆನೆಗೊಂಡ ಗೆಡ್ಡೆಮೊಸರಂ ಸುರಿವು . . . ಕಲಸಿರ್ದ ತಣ್ಗಳಸುಗೊಬಿನಿಳಾಪತಿಗಿತ್ತಂ (ರೀಲಾವ. ೫-೬೨) ; ನಿಡುಗೇಶವ ( ಗಿ ಬಗಿದು ಕಮ್ಮಿಣ್ಣೆಯನೊಡನೆಚಿದೊರ್ವಳವಳಿಗೆ . . . ಉಗುರ್ಗಳನಾಡಿಸಿದಳು (ಕುಂರಾಶಾಂ. ೨೯-೯೩). ೬. (ಆಲಂ) ನಾಶಮಾಡು ; ಇಲ್ಲವಾಗಿಸು : ಕೌರವನ ತಮ್ಮಂದಿರ ಸುಸನ್ನಾಹವ ವಿಸಂಚಿಸಿ ಬಗಿದು ಸವುಸಪ್ತಕರನೊಡೆಹಾಯ್ಸಿ (ಕುಮ್ವಾಕ. ೦೯-೨೯).

[ದೇ.॥ ತಮಿ. ವಕ್ಕೈ, ವಕು ; ಮಲ. ವಕಯು, ವಕು]

**ಬಗಿ$_2$** (ನಾ). ೧. ಸೀಳುವಿಕೆ ; ಕತ್ತರಿಸುವಿಕೆ : (?). ೨. ಹೋಳು ; ಭಾಗ : 'ಇರ್ಬಗಿ' ಪರಾ. ೩. ಸೀಳು ; ಬಿರುಕು : ಕೊಯ್ಕೆ ಪೊರಳ್ಚಿ ಕುತ್ತೆ ಕೊಱಚಿದಿಕ್ಕಿ ತಡಂಗಡಿದೊಟ್ಟೆ ನೆತ್ತಿಯಂ ಪೊಯ್ಯೆ ಬಬಲ್ದು ವೈತರಣಿಯಂ ಪುಗೆ ಕಾಯ್ದುಱಿ ಲೋಹವಾರಿ ಚುಂಬುಯ್ಯೆನೆ ಸುಟ್ಟು ಹುಣ್ಣಾರಳೆ ಮೆಯ್ಯನಿತುಂ ಬಗಿಯಾಗಿ ಬಾಯ್ಗಳಂ ಪುಯ್ಯಲನಿಕ್ಕುಪಂ ಕೊಳಱಿ ಕೊಳ್ಗುದಿಮುಳ್ಗುದಿಗೊಂಡು ಮುಗ್ಗುವರ್ (ಅಪಂಪು. ೯-೩೨).

[< ಬಗಿ$_1$./ ತೆಲು. ಬಗಿ = ಪಕ್ಕ]

**ಬಗಿ$_3$**, ಬಗ್ಗಿ (ನಾ). (ಉಕ) (ನಾಲ್ಕು ಚಕ್ರಗಳುಳ್ಳ, ಒಂದು ಅಥವಾ ಎರಡು ಕುದುರೆಗಳನ್ನು ಕಟ್ಟುವ) ಒಂದು ಬಗೆಯ ಕುದುರೆಯ ಗಾಡಿ ; ಸಾರೋಟು : ಜಾಗಿರದಾರರ ಮಕ್ಕಳು ವಿರಾಜಮಾನರಾಗಿ ಒಂದು ಬಗಿಯಲ್ಲಿ ಕುಳಿತುಕೊಂಡು ಆ ಶಾಲೆಗೆ ಹೋಗುತ್ತಿದ್ದರು (ಐತಿಹ್ಯ. ೫೦) ; ಜ್ಞಾನಶಂಕರರು . . . ಬಾಡಿಗೆ ಬಗಿಯನ್ನು ಹಿಡಿದು ಮನೆಗೆ ಹೊರಟರು (ಶ್ರೀವಮಕೃ. ೫೯). **ಬಗ್ಗಿ :** ಒಬ್ಬನು ಅಥವಾ ಇಬ್ಬರು ಸವಾರಿ ಮಾಡಬಹುದಾದ ಹಗುರವಾದ ಗಾಡಿ : ಬಗ್ಗಿ (Buggy. ಇಂಕಾ).

[←ಇಂ. Buggy. / ಅರ. ಬೋಗೀ ; ಹಿಂ. ಬಗ್ಗೀ, ಬಘೀ ; ಮರಾ. ಬಗೀ]

**ಬಗಿನಿ** 'ಬಯಿನೆ' ನೋ.

**ಬಗಿಯೇಱು** (ನಾ). ಕೆದಕಿದುದರಿಂದ ಉಂಟಾದ ಗಾಯ : ಅರೆವೆಣನಾದೊಡಂ ಬಿಡದೆ ಮಾಡುವ ದೀವಿಗೆಯಾಸೆಯುಳ್ಳ ಬೀರರ ಬ[ಪಾಠಾಂ. ಬಿ]ಗಿಯೇಱ ಬಾಯುಂಗಿಲು ಸಿಂಕಿಪ ಕಂಡದ ಸತ್ತ ರಾಜಪುತ್ರರ ವನಿತಾಜನಂ ತೊಱೆದು ತೋ[ಕೋ]ಳ್ಗುದಿ ಬಾಳ್ಗುದಿಯಾಗಿ ಬೇವ ದಳ್ಳುರಿಗಳ ಮಾಲೆಗೊಂಡ ಬೆಳಗಿಂ ಬೆಳಗಾಯ್ತರಮುಂ ಬಲಂಗಳೊಳ್ (ಅಪಂಪು. ೦೦-೯೭).

[ ಬಗಿ$_1$ + ಏಱು$_4$ (<ಏಱ್$_4$) ]

**ಬಗಿಸು** (ಕ್ರಿ). ೧. ಸೀಳುವಂತೆ ಮಾಡು; ಸೀಳಿಸು: ಉದ್ರೇಕದಿಂದೀಕೆಯುಂ ದರವುಂ ಬಗಿಸಿದ ಸತಿದ್ರೋಹ ನಾಲ್ಕು (ಚಿಬಪು. ೪-೩೧). ೨. ಅಗೆಯಿಸು; ತೋಡಿಸು: ಹೊಲದ ಮಣ್ಣನ್ನೇ ಬಗಿಸಿ ತೆಗೆದು ಸಾರಿಸಿ ದೊಡ್ಡದೊಂದು ಕಣವನ್ನು ಮಾಡಿಸುತ್ತಿದ್ದರು (ಜೀಭಾ. ೬೩). [ಬಗಿ$_1$ + —ಸು$_1$]

**ಬಗೀಚಾ**, ಬಗೀಚೆ (ನಾ). ಸಣ್ಣ ತೋಟ; ಕೈತೋಟ: ಇದು ಬಂದ ಹೋದವರ ದಶಿಯಿಂದ ಮಾಡಿದ ಬಗೀಚಾ ಅಂತ ತಿಳಿದಿಯೇನು ? (ಬಾಂಡಾಯು. ೦೯). **ಬಗೀಚೆ:** ಹಿಂದೊಮ್ಮೆ ಹೇಳಿದ ಬಗೀಚೆಯೊಳಗಿನ ಬಂಗಲೆಯಲ್ಲಿ ಇಬ್ಬರೂ ಕೂಡಿ ಸುಖವಾಗಿ ಕಾಲವನ್ನು ಕಳೆಯಬಹುದಾಗಿದ್ದಿತು (ಜೆಳಗು. ೫೬).

[← ಪಾರ. ಬಾಗಚಾ; ಹಿಂ. ಬಗೀಚಾ; ಮರಾ. ಬಗಿಚಾ, ಬಗೀಚಾ]

**ಬಗೀಚೆ** 'ಬಗೀಚಾ' ನೋ.

**ಬಗುತ** 'ಬಕುತ' ನೋ.

**ಬಗುತಿ** 'ಬಕುತಿ' ನೋ.

**ಬಗುನಿ** 'ಬಯಿನೆ' ನೋ.

**ಬಗುಲಿ** (ನಾ). ಒಂದು ಬಗೆಯ ಸಸ್ಯ: ಮರಸದ, ಬಗುಲಿ, ಹಂಡರಿಕೆ ಕುಚ್ಚು, ಮರಸುತ್ತುಬಳ್ಳಿ (ಮ್ಯಶಿಗ. ೦೬-೨೯೨). [ ? ]

**ಬಗುಸಾಳೆ** (ನಾ). ಬೊಗಳೆ; ಬಡಾಯಿ: ಒಂದೇ ಪೆಟ್ಟಿನಲ್ಲಿ ಹೊಡೆದು ಹಾಕಿ ಬರುತ್ತೇನೆಂದು ಬಗುಸಾಳೆ ಮಾತು ಕೊಟ್ಟು . . . ಮನೆಯ ದೂಲದ ಮೇಲೆ ಬಂದು ಕೂತುಕೊಂಡಿತು (ಕಥಾಮಂ. IV. ೯೬). [ ? ]

**ಬಗುಳ್₁**, ಬಗುಳು₁, ಬೊಗಳು, ಬೊಗುಳು₁ (ಕ್ರಿ). ೧. ನಾಯಿಯು ಕೂಗಂ,–ಧ್ವನಿ ಮಾಡು: "ಬಗುಳ್—ಕುರ್ಕುರಧ್ವನೌ, ಸಾರಣೇ ಚ (ಆಮಶಂಕೆಯಿಂದ ತೊಂದರೆಪಡು)" (ಶಮಣಿ); ಪೆರ್ಬಡಿಕೆಯ ನಾತ ಮಾನೆಗಳ ಬಲ್ವಿಣನಂ ಬಗುಳುತ್ತೆ ಮುತ್ತಿ ಕೀವುಡುತ ತಗುಳ್ವನಂ ತೆಗೆವ ವಾಯ್ಗಳಗುರ್ವಿಸುತಿರ್ಪ ತೋರ್ಪ ಪೇರಡವಿಯ ಬೇಡವಳ್ಳಿಗಳ ನೀಕ್ಷಿಸುತುಂ (ಅಂಶಾಪ. ೩-೪೫); ಬಾಬ್ಬ ಮನೆಗೊಂದು ಬಗುಳ್ವುದು ಬೇಟ್ಕುಂ (ಅಕಾಪು. ೦-೯೦). ೨. ಗಳಹು; ಅಪಲಾಪ ಮಾಡು; ಹರಟು: ನ್ಯಾಯಮಿದು ಧರೆಗೆ ದುರಭಿಪ್ರಾಯದ ದುರ್ಜನನ ಮೊಚೆಯಂ ಕಂಡೊಡೆ ಥೂ ಚೀಯೆಂಬುದುಜ ಬಗುಳ್ವನ ಬಾಯೊಳಗುಗುಟೆಂಬ ನಾಡ ಗಾದೆಯ ಬಲದಿಂ (ಧರ್ಮಾಪು. ೦-೬೯); ನಾಯಿ ಬಗುಳದೆ ಕೆಲಕೆ ಸಾರು (ಕೊರಂ. ೩-೩-೬). **ಬಗುಳು₁** : ೧. ಮುಳಿದು ಬಗುಳುವ ನಾಯ್ಗೆ ಚಂದ್ರಮನಳುಕುವನೆ (ಕುವ್ಯಾಅ. ೬೦೨. ೦೦-೦೬); ನಾಯಿಯೊಂದು . . . ಬಗುಳಿತು (ಮಹಾಅ. ೧೦೨). ೨. ಬಗುಳುವಿವದಿರು ಹರಿಯ ಬಡಿಹೋರಿಗಳಲಾ (ಕುವ್ಯಾಸ. ೦೦-೯); ಬಾಯ ಬಡಿಕರು ಬಂದ ಬಣ್ಣಿಗೆಯಸಗಿ ಬಗುಳುವರು (ಕೃಷ್ಣಾಅ. ೦೪-೨೯). **ಬೊಗಳು**: ೧. ಆನೆ ಕಂಡು ಶ್ವಾನ ಬೊಗಳಿದ ಹಾಗೆ (ಗಾದೆ). ೨. ಶರಣ ಐಕ್ಯ ಗುರು ಚರ ಪರವೆಂದು ಬೊಗಳುವ ಕುನ್ನಿಗಳ ನೋಡಿ (ಮಹಾದೇ. ೩. ೯೭-೨೨೩); ಹುಸಿಯ ಬೊಗಳುವನೊಬ್ಬ ಹುಚ್ಚ ಹೊಲೆಯ (ಪುರಂದ. ೦-೦೬೪-೪); ಈ ಗಂಡುಹುಡುಗರು ಏನೇನೋ ಬೊಗಳುತ್ತವೆ (ರಂಗರೋ. ೯೬). **ಬೊಗುಳು₁** : ೩. ಒದರು; ಹೇಳು : ಯಾವ ತೋಟ ಲೂಟಿ ಹೊಡೆಯುವುದಕ್ಕೆ ಹೋಗಿದ್ದಿರಿ. ನಿಜ ಬೊಗುಳಿ (ಕಳಹು. ೩೨).

**ಬಗುಳ ಸನ್ನಿ** = ಬಗುಳುಸನ್ನಿ: ಏತರಿಂದಿವಗೀ ಪರಿಯ ಕಡುಮಾತು ಬಂದುದೊ . . . ತನುಜಾತಗಿಕ್ಕಿತು ಬಗುಳ ಸನ್ನಿ ವಿಕಾರವಕಟ (ಕೃಷ್ಣಾಕ. ೦೦-೯). [ದೇ.॥ ತುಳು. ಬಗುಳು, ಬಗಳ್ಳು, ಬಗುಲ್, ಬಗುಲು]

**ಬಗುಳ್₂** (ಕ್ರಿ). ಭೇದಿಯಾಗು; ಆಮಶಂಕೆಯುಂಟಾಗು: "ಬಗುಳ್–ಕುರ್ಕುರಧ್ವನೌ, ಸಾರಣೇ ಚ (ಆಮಶಂಕೆಯಿಂದ ತೊಂದರೆ ಪಡು)" (ಶಮಣಿ). [ ? ]

**ಬಗುಳಾಟ**, ಬೊಗುಳಾಟ (ನಾ). ಕೆಲಸಕ್ಕೆ ಬಾರದ ಮಾತು; ಹರಟೆ: ಬಂಡುಗಲೆ ಬಗುಳಾಟವಾಡುತ ಮಿಂಡರೊಡನೆ ತಿರುಗುವ ತುಂಡುವೇಶ್ಯೆಯ ತುರ್ಗಡುಕುಜಗಕಿತಿ ಭಂಡರಲ್ಲ (ಶರಲೀ. ೩೪೯-೩); ಬಗೆಯದೆ ಪುರುಷನ ಮಾತಾ ನಗೇಡಿತನದಲ್ಲಿ ಬಗುಳಾಟದೊಳಗಿಹ ವಿಗಡೆಯಾದರೆ ನಿನ್ನ ನೆನೆಯೆ (ಕಥಾಸ. ೦೯-೬೩). **ಬೊಗುಳಾಟ** : ಆವ ತೆರದ ಬೊಗುಳಾಟವನ್ನುಳಿದರೀ ಭೂಪಾಲರು (ಕಪಮು. ೩-೦೯). [ಬಗುಳ್₁ + ಆಟ]

**ಬಗುಳಿಸು**, ಬೊಗುಳಿಸು (ಕ್ರಿ). ನಾಯಿಯು ಬಗುಳುವಂತೆ ಮಾಡು: ಆ ಹುಡುಗ ನಾಯಿಯನ್ನು ಛೂ ಬಿಟ್ಟು ಬಗುಳಿಸಿದನು (ರೂಢಿ). **ಬೊಗುಳಿಸು**: ನೀನು ಆ ನಾಯಿಯನ್ನು ಹಿಂಸೆ ಮಾಡಿ ಬೊಗುಳಿಸಬೇಡ (ರೂಢಿ). [ಬಗುಳು₁ (<ಬಗುಳ್₁ ) + –ಇಸು₁]

**ಬಗುಳು₁** 'ಬಗುಳ್₁' ನೋ.

**ಬಗುಳು₂**, ಬಳ್ಳು₂, ಬೊಗುಲ್, ಬೊಗುಳು₂, ಬೊಳ್ಳು (ನಾ). ೧. (ನಾಯಿ,ನರಿ ಮುಂತಾದ) ಪ್ರಾಣಿಗಳು ಕೂಗುವಿಕೆ,–ಅರಚುವಿಕೆ: ರಾತ್ರಿಯೆಲ್ಲಾ ಎದುರುಮನೆಯ ನಾಯಿಯ ಬಗುಳಿನಿಂದ ನಿದ್ರೆ ಮಾಡಲಾಗಲಿಲ್ಲ (ರೂಢಿ). ೨. ಗಳಹುವಿಕೆ; ಬಡಬಡಿಸುವಿಕೆ: 'ಬಗುಳುಸನ್ನಿ' ಪರಾ. **ಬಳ್ಳು₂**: ೧ 'ಬಳ್ಳಿಕ್ಕು', 'ಬಳ್ಳುಗೆಡೆ' ಪರಾ. **ಬೊಗುಲ್** : ೧. "ಭಂಡನಂ, ಭಂಡನೀಯಂ, ಭಂಡ್ಯಂ, ಈ ೩ ಬೊಗುಲ್" (ಕಾಕಸ್ಕ. ೧೦೦). **ಬೊಗುಳು₂**: ೨. 'ಬೊಗುಳುಸನ್ನಿ' ಪರಾ. **ಬೊಳ್ಳು**: ೧. 'ಬೊಳ್ಳಿಡು', 'ಬೊಳ್ಳುಗರೆ' ಪರಾ. [<ಬಗುಳ್₁ . / ತುಳು. ಬಗಳು]

**ಬಗುಳುಸನ್ನಿ**, ಬೊಗುಳುಸನ್ನಿ (ನಾ). ಜ್ವರದ ತಾಪವು ಹೆಚ್ಚಾಗಿ, ಅಸಂಬದ್ಧವಾಗಿ ಮಾತನಾಡುವಂತಹ ಒಂದು ಬಗೆಯ ರೋಗ: "(ಟೈಫಸ್‌ಜ್ವರದಲ್ಲಿಯಂತೆ) ಮಾತಾಡುವ, ಗೊಣಗುಟ್ಟುವ,–ಸನ್ನಿ; ಬಗುಳು ಸನ್ನಿ" (Typhomania. ೩೦೯೩). **ಬೊಗುಳುಸನ್ನಿ** : ಆತ ಬೊಗುಳುಸನ್ನಿಯಿಂದ ರಾತ್ರಿಯೆಲ್ಲಾ ಕೂಗಾಡಿದನು (ರೂಢಿ). [ಬಗುಳು₂ + ಸನ್ನಿ₂]

**ಬಗುಳೆ**, ಬೊಗಳೆ (ನಾ). ೧. ಕೆಲಸಕ್ಕೆ ಬಾರದ ಮಾತು; ಪೊಳ್ಳು ಹರಟೆ: "ಪೊಳ್ಳುಹರಟೆ; ಬುರುಡೆ; ಬಗುಳೆ; ಅವಿವೇಕದ ಮಾತು; ಅವಿವೇಕ" (Bosh. ೩೦೪೬). **ಬೊಗಳೆ**: ೧. ನಿಜವಾದ ವೀರನಿಗೆ ಇಂತಹ ಬೊಗಳೆಯು ಸರಿಯೆನಿಸದು (ಹಿಂಕರು. ೬). ೨. ಸುಳ್ಳು: ಅದೆಲ್ಲ ಬರೀ ಬೊಗಳೆಯಿಂದೇ ನನ್ನ ಅಭಿಪ್ರಾಯ (ಶಾಕುಂಲೀ. ೦೬೬). ೩. ಬಡಾಯಿ: ಅವನು ಬೊಗಳೆ ಕೊಚ್ಚಿಕೊಳ್ಳುವುದರಲ್ಲಿ ಬಲು ಗಟ್ಟಿಗ (ರೂಢಿ). ೪. ಬಡಾಯಿಕೋರ: ಈತ ಎಷ್ಟಿದ್ದರೂ ಬೊಗಳೆ (ಕಲ್ಯಾಕ. ೦೯೩).

**ಬೊಗಳೆ ಬಿಡು** = ಸುಳ್ಳು ಹೇಳು; ಸುಳ್ಳಾಡು: ರುದ್ರನನ್ನು ಹಿಗ್ಗಿಸಲು . . . ಸೋಮಯಾಜರು ಬೊಗಳೆ ಬಿಡುತ್ತಾರೆ (ದೇವಹಂ. ೦೯೦). **ಬೊಗಳೆ ಹೊಡೆ** =ಬೊಗಳೆ ಬಿಡು: ಅವನ ಹಾಗೆ ಬೊಗಳೆ ಹೊಡೆಯುವವನನ್ನು ನಾನು ಬೇರೆಲ್ಲೂ ನೋಡಿಲ್ಲ (ರೂಢಿ). [<ಬಗುಳ್₁]

**ಬಗೆ₁** (ಕ್ರಿ). ೧. ಆಲೋಚನೆ ಮಾಡು; ಯೋಚಿಸು: "ಬಗೆ–ಪರಿಭಾವೇ, ಚಿತ್ತೇ ಚ" (ಶಮಣಿ); ಸಕ್ಕದಮುಂ ಪಾಗದಮುಮುದಕ್ಕಂ ಬಗೆದಂತೆ ಸಮಚ ಪೇಟಲ್ ಮುನ್ನಂ (ಕಂದಾ. ೧-೯೦); ದಿವ್ಯಾಹಾರಮನೆಲ್ಲಾ ಕಾಲಮುಣಲ್ವೆಟಲಕ್ಕುಮೆಂದು ಬಗೆದು (ವಡ್ಡಾರಾ. ೬೬-೩); ಎಂದು ತನ್ನೊಳ್ ಬಗೆಯುತ್ತಿರ್ಪಿನಂ (ಶಂಶಕಾ. ೦೦-೦೪ ವ). ೨. ಎಣಿಸು; ಗಣಿಸು; ಲಕ್ಷಿಸು: ಅಂತು ಬಂದ ಮಾಚಿಗಾಲಮಂ ಬಗೆಯದೆ . . . ಬರ್ಪಿನಂ (ಕಾದಂಅು. ೩೩೩); ಎನ್ನನಣಂ ಬಗೆಯರೆಂಬ ಬಗೆಯನೆ ಬಗೆದಂ (ಸುಕುಮಾ. ೨-೬೦). ೩. ಅರಿ; ತಿಳಿ; ಭಾವಿಸು: ಬಗೆಯೆ ನಿರಹಂಕಾರ ಸುಜ್ಞಾನಿಗಳ ಮೇಳವನೊಲ್ಲದಾ ಪ್ರಭುವಗಲಿ ತಾನಿರಬಲ್ಲನೇ (ಕೃಕುಂಲೀ. ೬-೪೯); ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಸರ್ವಜ್ಞ. ೬೦೩). ೪. ಬಯಸು; ಅಪೇಕ್ಷಿಸು; ಇಚ್ಛಿಸು: ಅಚಿಯಲ್ ಬಗೆವೊಂಗೆ ಬ್ರಹ್ಮತಿಯ ಪಾಪ ಮಕ್ಕುಂ (ಎಪಿ. VII. ೨೦೦-೨೦; 865); ಬಗೆದೆಡೆಯನೆಯ್ದಿ ಬಗೆದ ಬಗೆಯಂ ಬಗೆದಂತೆ ತೀರ್ಚಿ ಪೋಪ ಜೋಡೆಯರಂ ಕಂಡು (ಶಂಶಕಾ. ೪-೫೦ ವ); ಬಗೆದು ದಣಿಯರು ಯೋಗಿಗಳು (ಕುವ್ಯಾಸ. ೯-೩೬); ಅಳಾಗಿ ಅರಸಂಗೆ ಕೇಡು ಬಗೆವವ ಹೊಲೆಯ . . . ಉಂಡ ಮನೆಗೆರಡನ್ನು ಬಗೆವಾತನೇ ಹೊಲೆಯ (ಪುರಂದ. ೦-೦೬೪-೨). [ದೇ. ॥ ತಮಿ. ವಕೈ; ತುಳು. ಬಗೆ; ತೆಲು. ವಗಚು]

**ಬಗೆ₂** (ನಾ). ೧. ಆಲೋಚನೆ; ಯೋಚನೆ: ಬಗೆ ಪೊಸತಪ್ಪುದಾಗಿ ವ್ಯಾದುಬಂಧದೊಳೊಂದುವುದೊಂದಿ ದೇಸಿಯೊಳ್ ಪುಗುವುದು (ಶಂಶಕಾ. ೦-೯); ಇದಂ ಪಿರಿದು ಮಾಡಿ ಪೇಟ್ವೆನೆಂಬ ಬಗೆ ಮನದೊಳ್ ಮಿಗೆ ಮಾಣದ (ಶಂಶಕಾ. ೯೩-೬). ೨. ಅಭಿಪ್ರಾಯ; ಮತ: "ಬಗೆಯೆನಲಭಿಪ್ರಾಯಮಕ್ಕು" (ಕಶಶ. ೬೪); ಮಂದಗಮನೆಯ ಕಂಡರೇ ಏನೆಂದು ನುಡಿದಳು ಸತಿಯ ಬಗೆಯೇನೆಂದು ಕೇಳಲು ನೃಪಗೆ ಬಿಳಿಕಿಂತೆಂದುದಾ ಪಕ್ಷಿ (ನಳಚ. ೨-೪೪). ೩. ಮನಸ್ಸು; ಚಿತ್ತ: "ಬಗೆ – ಪರಿಭಾವೇ.

ಚಿತ್ರೇ ಚ" (ಕವಿರಾ) ; ಕುಟಿಲತಂತ್ರದ ಪೆಱರ ಬಗೆಯಂ ತೆಱದಿರೆ ಪೆಱರ್ಗಱ ಪಲಾರ್ಪವಂ ಮಾತಱವಂ (ಶಬರ. ೦-೦೫) ; ಅಬ್ಬಾ ಇಂದೆಮಗುಣಲ್ಕೆ ಬಗೆಯಿಲ್ಲುಪವಾಸಂಗೆಯ್ದಪ್ಪೆಂ (ವಡ್ಡಾರಾ. ೮೦-೯) ; ವಾಸವ ಕೀರ್ತಿ ಕಲಿ ಹುಗದ ಹೆಸರಿಂಗದೋಜೆ ಕೊರಗದ ವರ್ಷವುಗದ ಬಗೆ ಹುಸಿ ಹುಗದ ನುಡಿ (ಹರಿಶ. ೦-೯೯). ೪. ರೀತಿ ; ಮಾರ್ಗ ; ಕ್ರಮ : ಪಸರಿಸಿದಾ ಬಗೆ ಮನಮಂ ಪೊಸತಾಗೆ ನೆಗಟ್ಟಲಱಿಯನಾ ರಚನೆಯೊಳೀಂ ಬಸನಂ (ಕವಿರಾ. ೦-೦೨) ; ಎನಗನುಕೂಲಮಕ್ಕೆ ಗುಣವರ್ಣನ ಜಾಣ್ನುಡಿ ಪಂಪನಿಂಪು ಪೊನ್ನನ ಬಗೆ (ಅನಂತ. ೦-೩೫) ; ಮಗಳೆ ನೀನಾತನ ಕೈವಿಡಿ ದೆಂದಿನ ಬಗೆಯ ಸುಖಂಗಳನಾಂತು ಮಿಗೆ ಜೀವಿಸು (ಮೋಹತ. ೯-೪೮). ೫. ಆಸೆ ; ಬಯಕೆ ; ಇಚ್ಛೆ : ನೀನಿದರ್ಕೇನುಮಂ ಬಗೆಯಲ್ವೇಡ ನಿನ್ನ ಬಗೆಯಂ ಬಗೆದಂತೆ ತೀರ್ಚುವೆಂ (ಕಂಕಥಾ. ೪-೬೯ ವ) ; ನುಡಿಯೊಳಗೆ ತನ್ನ ಬಗೆಯಿರೆ ಬೇಡಿದ ಪದವಿಯನೀವ ಕೂಡಲಸಂಗಮದೇವ (ಬಸವ. ೬೬೦). ೬. ಕಲ್ಪನೆ ; ಊಹೆ : ತುಂಗಭವದ್ಬೋಧದ ಬೆಳಗಿಂ ಗೊಳಗಪ್ಪನಿತನೆಪ್ಪು ಬಗೆ ಪುಗದು (ಆದಿಪು. ೯-೦೦). ೭. ಉಪಾಯ ; ತಂತ್ರ ; ಹಂಚಿಕೆ : ಆ ನರಿ ಬಗೆಯೊಳ್ ಪಿರಿಯನಪ್ಪುದಱಿಂ ತನ್ನ ಬುದ್ಧಿಗೆ ತಾನೇ ಮೆಚ್ಚಿ (ಕಂಪಕಂ. ೩೯-೬) ; ಆವಗಂ ಕಾಣಲೀಯವು ರಾಮಣೀಯರೋಮಾವಳಿಯನುದ್ವೃತ್ತಪೀನಕುಚಯುಗಳವಿನ್ನಾವು ದಿಂತಿ ದಕೆ ಬಗೆಯೆಂದು ಕೂರ್ತೇಕಾಂತವಾಂ ಕರ್ಣದೊಡನೆ ಮಾಳ್ಪ ಭಾವದಿಂ ಪರಿವೇಷಾಚಿಯ ಲೋಚನಂಗಳಿಂದೀವರದಳಗಳಂತೊಪ್ಪಿದವು (ಶಾಂಡವ. ೬-೩). ೮. ಗತಿ ; ದಿಕ್ಕು : ಪಿಂಡಕ್ಕೆ ಬಗೆ ಇಲ್ಲದವ ದಂಡ ಏನು ಕೊಟ್ಟಾನು ? (ಗಾದೆ). ೯. ಜಾತಿ : ಬಗೆಯ್ದು ತಣಿಯುತಿರೆ ಬಳಗಕೀಂ ಪಾರ್ತಂ (ಶಾಂತೀಶ. ೬೪-೦೩೩) ; ಬಗೆಯೆಂದರೆ ಜಾತಿ ; ಬಗೆಯೆಂದರೆ ರೀತಿ (ವಿಶಾಮಂ. ೩೯).

**ಬಗೆಯೊಳೊಗೆದವ** = ಮನಸ್ಸಿನಲ್ಲಿ ಹುಟ್ಟಿದವನು ; ಮನ್ಮಥ ; ಮನಸಿಜ : "ಬಗೆಯೊಳೊಗೆದವನೆಂದು ಬಂಡುಣಿವೆದೆಯನೆಂದು ಮುಗು ಳ್ಬಣಾಪ್ಯ" (ಶಬರ. ೬೪). **ಬಗೆಯೊಳೊಗೆವ**, **ಬಗೆಯೊಳೊಗೆವವ** = ಮನಸ್ಸಿನಲ್ಲಿ ಹುಟ್ಟುವವನು ; ಕಾಮ : "ಇಂಗೋಲ್ವಿಲ್ಲಂ . . . ಬಗೆಯೊಳೊಗೆವಂ . . . ಗಿಳಿದೇರಂ — ಇವು ೧೩ ಕಾಮದೇವಾಗೆ ಪೆಸರ್" (ಶಬಸಾ. ೪೬-೦೩) ; "ಗಿಳಿದೇರ ಪೂವುಣಿಂಬಂ ಬಗೆಯೊಳೊಗೆವವಂ" (ಶಬಶಂ. ೨೮).

[<ಬಗೆ₁./ ತುಳು. ಬಗೆ ; ತೆಲು. ವಗ. / ಮರಾ. ಬಗಾ]

**ಬಗೆ₃** (ನಾ). ಒಂದು ಬಗೆಯ ಹೂವು ಮತ್ತು ಅದರ ಗಿಡ : ಪ್ರಕಟವಮಂದಾರ ಬಗೆ ನಾಗಸಂಪಗೆಯಾದಿ ಸಕಲಕುಸುಮಂಗಳಂ ತಂದು (ಶಂಕ. ೪೩-೪೩). [<ಸಂ. ಬಕ. / ಪ್ರಾ. ಬಗ]

**ಬಗೆಕಾರ** 'ಬಗೆಗಾಱ' ನೋ.

**ಬಗೆಕಾರ್ತಿ** 'ಬಗೆಗಾರ್ತಿ' ನೋ.

**ಬಗೆಕಾಱ** 'ಬಗೆಗಾಱ' ನೋ.

**ಬಗೆಗ** (ನಾ). ಒಬ್ಬಾತನ ಹೆಸರು : ಮಲ್ಲಿಕಾರ್ಜುನಭಟ್ಟಾರರ್ಗ್ಗೆ ಮಾವಿನೂರೊಳ್ ಬಗೆಗನು ಕೊಟ್ಟಂ . ಸಾಸಿರಬಳ್ಳಿಯ ತೋಣ್ಟ (ಎಇ. XXVI. ೪-೦೯ ; ೯೦೬). [?]

**ಬಗೆಗಲ್** (ಕ್ರಿ). ಮನಸ್ಸನ್ನು ತಿಳಿ, — ಅರಿತುಕೊಳ್ಳು : ಅಬಲೆ ಯಿರ್ದಿರವಂ ಸಖಿ ನೋಡಿ ಮತ್ತಮಾ ಕಮಲದಳಾಯತೇಕ್ಷಣೆಗಿದಂ ನುಡಿದಳ್ ಬಗೆಗಲ್ವ ಬಲ್ಮೆಯಿಂ (ಜಗಪ. ೦೦-೦೦). [ಬಗೆ₂ + ಕಲ್₁]

**ಬಗೆಗಾಣ್**, ಬಗೆಗಾಣು (ಕ್ರಿ). ೧. ಮನಸ್ಸನ್ನು ತಿಳಿ, — ಅರಿ : ಪುದುವಾಟಿಕೈ ಯೊಳಿನ್ನ ಬಳ್ಕಿದಳ್ಕಿದ ಬಗೆಗಂಡಿರೇ (ಕಂಕಥಾ. ೦೦-೩೦). **ಬಗೆಗಾಣು** : ೨. ದಾರಿಗಾಣು ; ಮಾರ್ಗವನ್ನು ಕಂಡುಕೊಳ್ಳು : ಇವನಂ ಜಯಿಸುವ ಬಗೆ ಗಾಣೆನು (ಕೈಬಿಭಾ. ೨೩-೬) : ಸಾಧನಕೆ ಬಗೆಗಾಣೆನೆನ್ನಬಹುದೆ ಸಾದರದಿ ಗುರುಕರುಣ ತಾ ಪಡೆದ ಬಳಿಕ (ವಿದಾಕೃ. ೨೫ ಪಲ್ಲವಿ). [ಬಗೆ₂ + ಕಾಣ್]

**ಬಗೆಗಾಣು** 'ಬಗೆಗಾಣ್' ನೋ.

**ಬಗೆಗಾರ** 'ಬಗೆಗಾಱ' ನೋ.

**ಬಗೆಗಾರ್ತಿ**, ಬಗೆಕಾರ್ತಿ (ನಾ). ಬೇರೆಯವರ ಮನಸ್ಸನ್ನು ತಿಳಿಯುವ ವಳು ; ಇಂಗಿತಜ್ಞೆ : ಪೊಗೆಯ ಗಂಧವನುರ್ದಿಸುತೆ ಪೂವ ಪೊರೆಯಿಸುತೆ ಬಗೆಗಾರ್ತಿಯೊರ್ವಳೆಸೆದಳ್ (ಪದ್ಮರಾ. ೯-೮೯). ; ಪಲ್ವೆಳಗಿನ ಬಗುವಿಂಗೆಯಿಂ ಬಳಯಿಸುತ ಬೆಲ್ದಿಂಗಳ ಬಗೆಗಾರ್ತಿಯುರೆಯ್ದಿದರ್ (ಕುಂದಾಸಾಂ. ೩೬-೦೮). **ಬಗೆಕಾರ್ತಿ** : ನಗೆಕಾರ್ತಿ, ನುಡಿಕಾರ್ತಿ, ಬಗೆಕಾರ್ತಿ (ಶಬ್ದಾನು. ೨೦೦. ವೃಯೋ). [ಬಗೆಗಾಱ + — ತಿ₁ (< — ಇತ್ತಿ)]

**ಬಗೆಗಾಱ**, ಬಗೆಕಾರ, ಬಗೆಕಾಱ, ಬಗೆಗಾರ (ನಾ). ಬೇರೆಯವರ ಮನಸ್ಸನ್ನು ತಿಳಿಯುವವನು ; ಇಂಗಿತಜ್ಞ : ಆ ಬಗೆಯ ರಸಾಬ್ಧಿ ಯಪ್ಪ ಬಗೆಗಾಱರ ಮೊತ್ತದಿನೊಪ್ಪಿತೋಲಗಂ (ಶಾಂತೀಶ್ವ. ೨-೮೦) ; ಬೆಳ್ನುಡಿಯಿಂದ ಬಿಗುಹುಕಾಱರ ಬಲ್ಮೆಯಿಂದ ಬಗೆಗಾಱರನೆಡೆಗೆಡಿಸುವನು (ಕುರುಸಾಂ. ೪-೦೦೫). **ಬಗೆಕಾರ** : ಭಾವುಕ, ರಸಿಕ, ಚದುರ, ಬಗೆಕಾರ, ಜಾಣ, ಅರಿಗ (ಕಂನುಹು. ೮೯). **ಬಗೆಕಾಱ** : ಪಗೆಕಾಱಂ, ಬಗೆಕಾಱಂ, ನಡೆವಳಿಕಾಱಂ (ಶಾಶಾಭೂ. ೦೬೦ ಉದಾ) ; ಕಾಲುರಿಚ ಪೊಳಲಿಚ ದಡಿಗ ಬಗೆಕಾಱ ನಡೆವಣಿಗ . . . ಬಂಚುಗಾಱರ ಕೇರಿ ಮೆಱೆದಿಹವು (ಸಾಕ್ಕಾಶಾ. ೨-೮) ; ಅಱಿಯೆಯಾ ನೀನಿದ ನಗೆಕಾಱ ಬಗೆಕಾಱ ಮಱೆಕಾಱ ಬಲುಟೌಳಿಕಾಱ (ಭರತ. ೯-೨೫). **ಬಗೆಗಾರ** : ನಗೆಯ ಮಾರಿತಂದೆ ತೋರಿಕೆಗೆ ನಗೆಗಾರನಾಗಿದ್ದರೂ ಒಳಗೆ ಅವನೊಬ್ಬ ಬಗೆಗಾರನಾಗಿದ್ದನೆಂದು ತೋರುತ್ತದೆ (ಕರಚ. ೪೮೯) ; ಕಲಾಕುಶಲನು ... ಹಳೆಯ ಮಾತನ್ನು ಹೊಸ ಮಾದರಿಯಲ್ಲಿ ನುಡಿಯುವ ಬಗೆಗಾರನು (ಭಾಚತ್ರ. ೫).

**ಬಗೆಕಾಱಮುಖದರ್ಪಣ** = ಮನಸ್ಸನ್ನು ತಿಳಿಯುವವರಿಗೆ ಕನ್ನಡಿ ಯಂತಿರುವವನು ; ಒಂದು ಬಿರುದು : ವರಪ್ರಸಾದಮಾೃಱ [ರಾ]ಯಾಸ್ಥಾನಚಮತ್ಕಾರ ಬಗೆಕಾಱಮುಖದರ್ಪಣ (ಬೊಂಕಶಾ. ೦೯೩೬, ಸಿಂದಗಿ. ೦೦-೯ ; 978) ; ಮಹಾಲಕ್ಷ್ಮೀಲಬ್ಧವರಪ್ರಸಾದ [ಮಾೃ] ಱ ರಾಯಾಸ್ಥಾನಚಮತ್ಕಾರ ಬಗೆಕಾಱಮುಖದರ್ಪ್ಪಣ ಶರಣಾಗತವಜ್ರ ಪಂಜರಂ (ಸೌಇಇ. XX. ೩೬-೯ ; 1056). [ಬಗೆ₂ + — ಕಾಱ]

**ಬಗೆಗಿಡಿಸು** 'ಬಗೆಗೆಡಿಸು' ನೋ.

**ಬಗೆಗಿಡು** 'ಬಗೆಗೆಡು' ನೋ.

**ಬಗೆಗುಂದು** (ಕ್ರಿ). ಮನಸ್ಸು ಕುಗ್ಗು ; ನಿರಾಶೆಗೊಳ್ಳು ; ಬೇಸರ ಹೊಂದು : ಬಗೆಗುಂದಿ ಚಕ್ರಮಿಥುನಂ ಮಿಗೆ ನೊಂದು (ಗಂಕ. ೪-೬೯) ; ಪಗೆಯ ಕೆಳೆಗೊಂಡ ಪದ್ಮಿನಿ ನಗೆಗುಂದಿದಳೆಪನಡಂಗೆ ಕೋಕಾನೀಕಂ ಬಗೆಗುಂದಿದುದೆಂದಣಿದೆ ನಗುವಂತೆವೊಲಲರ್ದುದುತ್ಪಲಂ (ವೃಷಭ. ೮-೪೪).

[ಬಗೆ₂ + ಕುಂದು₁]

**ಬಗೆಗುಡು** (ಕ್ರಿ). ಮನಸ್ಸು ಕೊಡು ; ಚಿತ್ತವಿಡು : ಕೊಲೆಯೊಳ್ ಪೊರೆಯಿಲ್ಲದ ಪರಲುಲನೆಗೆ ಬಗೆಗುಡದ ಕಳ್ಳದುಱ ಪುಸಿಯದ ಕಾದಲಿಸಿ ವಿಷಯಂಗಳೊಳ್ ಪಂಬಲಿಸದ ಗುಣಮೈದಣಾಪುತ್ರಂ ಜನಮಿತದೊಳ್ (ಶಾಂತಿಪು. ೦-೮೯). [ಬಗೆ₂ + ಕುಡು₁ ( <ಕೊಡು₁ )]

**ಬಗೆಗುದಿ** (ನಾ). ಮನಸ್ಸಿನ ಚಿಂತೆ ; ಮನೋವ್ಯಥೆ : ಮತ್ತಾರು ನೀನೆ ! ಮೂದಲಿಸಿತು ಅವನ ಬಗೆಗುದಿ (ಬಿಸಿಉ. ೦೬೪).

[ಬಗೆ₂ + ಕುದಿ₃]

**ಬಗೆಗುರುಡುತನ** (ನಾ). ಮನಸ್ಸಿಲ್ಲದಿರುವುದು : ಸದರ್ಥಮಂ ಕಾಣದ ಬಗೆಗುರುಡುತನವು ಈಗಿನವರ ಪಾಲಿಗೆ ಬಂದಿರುವುದು ಇನ್ನೊಂದು ದೋಷ (ಸಾಹಿಪ. ೬೦). [ಬಗೆ₂ + ಕುರುಡು + — ತನ]

**ಬಗೆಗೆಡಿಸು**, ಬಗೆಗಿಡಿಸು (ಕ್ರಿ). ಕ್ರಮ ತಪ್ಪಿಸಂ ; ದಾರಿ ತಪ್ಪಿಸು ; ರೀತಿಗೆಡಿಸು : ಬಗೆಗೆಡಿಸಿ ಮರವೆಯುಮಂ . . . ಬ್ರಹ್ಮವನಗಲದೆ ತಾನೆಂದು ಭಾವಿಸಿ ಧನ್ಯನಾಗು (ಗಗಚಾ. ೧೬-೪೦). **ಬಗೆಗಿಡಿಸು** : ಬಗೆಗಿಡಿಸೆ ಮೋಹನೀಯಂ ನಗಧರ ಶವಧಾರಿಯಾಗೆ ಷಣ್ಮಾಸಮದೇಂ ನೆಗಟ್ಟುದೊ ಸಲೆ ಬಲದೇವನ ಪೆಗಲ ಪೆಣಂ ಕುಂದದೆಂಬ ನಾಟ್ಟುಡಿ ಜಗದೊಳ್ (ಶಂಪಾಮೂ. ೧೬-೩೩). [ ಬಗ್೨ + ಕೆಡಿಸು೧ ]

**ಬಗೆಗೆಡು**, ಬಗೆಗಿಡು (ಕ್ರಿ). ೧. ಬುದ್ಧಿಗೆಡು ; ವಿವೇಕವಿಲ್ಲದಾಗು: ಮಗನೆ ನೀಂ ಪಗೆಯುಂ ತಲೆದೊಟ್ಟು ನೆಟ್ಟನೆನ್ನದೆ ಬಗೆಗೆಟ್ಟು ದಾಯಿಗರೊಳಿಂ ಮಾಗುಟ್ಟುಂ ಪುದುವಾಟ್ಟುದೆಂಬರೇ (ಶಂಪಥಾ. ೧೧-೩೦); ಬಗೆಗೆಟ್ಟು ಸಾವ ಬಗೆಯಂ ಮಗಳೆ ಮಹಾಶ್ವೇತೆ ಬಗೆಯದಿರ್ (ಕಾದಂಪೂ. ೯೯೦) ; ಪಗೆವನ ಮನೆಯಂ ಬಗೆಗೆಟ್ಟು ಪೊಕ್ಕಂದು ಸಾವಕ್ಕಂ (ಶಂಪಶಂ. ೨೦೩-೧೧). ೨. ಚಿತ್ತಕ್ಷೋಭೆಯುಂಟಾಗು : ಪಾದರಿಗಂ ನಿಲ್ಲದೆ ಪೋದುದರ್ಕೆ ಬಗೆಗೆಟ್ಟದಾರ್ಕೆ ಕಣ್ಗೊಟ್ಟಿದಳ್ (ಕಬ್ಬಿಗಾ. ೬೯) ; ಬಗೆಗೆಟ್ಟು ಬಾಯ್ಬಿಟ್ಟು ಜನನಿ ಜವದಿನೇಳ್ತಂದಲ್ಲಿಯಪ್ಪುಮಂಬಿಸಿ ಕಾಣದೆ (ರಾಜಶೇ. ೦೩-೧೦೨ ವ) ; ಕಪ್ಪಗಳೆಸ್ಸಿದ್ದರೇನು ಸಭ್ಯರು ಬಗೆಗೆಡದೇಳ್ಗೆ ಪಡೆದಪರಲ್ತೆ (ಶಂಪಾಪ. ೨೨೦-೯೩). **ಬಗೆಗಿಡು** : ೧. ಬಗೆಗಿಡೆ ಮುಪ್ಪು ಚಪ್ಪರಿಸದನ್ನೆಗಂ . . . ಪರಮದೀಕ್ಷೆಗುಪೇಕ್ಷಿಸಿದಂ ವಿವೇಕಿಯೇ (ಶಿಸ್ತಕೃ. ೦೩-೩೯). [ಬಗ್೨ + ಕೆಡು೧]

**ಬಗೆಗೆಲ್** (ಕ್ರಿ). ಮನಸ್ಸನ್ನು ಗೆಲ್ಲು ; ಚಿತ್ತವನ್ನು ಸೆಳೆ : ಬಗೆಗೆಲಲೆಂದು ಕಾಡಿ ಪುಸಿನಿದ್ದೆಯೊಳಾನಿರೆ ಲಲ್ಲೆಗೆಯ್ದು (ಶಂಪಥಾ. ೪-೧೦೭). [ಬಗ್೨ + ಗೆಲ್೧]

**ಬಗೆಗೇಡು** (ನಾ). ದಾರಿ ತಪ್ಪಿಸುವಂತಹುದು; ಮಾರ್ಗ ಕೆಡಿಸುವಂತಹುದು : 'ನಾ ಬಲ್ಲೆ' 'ಗೊತ್ತಿಲ್ಲ' ಎಂಬ ವಾದದ ಹಾದಿ ಬಗೆಗೇಡು ನಗೆಗೇಡು ಹತಮತಿಯು (ಮುಕ್ತಕಂ. ೬-೨). [ಬಗ್೨ + ಕೇಡು]

**ಬಗೆಗೊಳ್**, ಬಗೆಗೊಳು, ಬಗೆಗೊಳ್ಳು (ಕ್ರಿ). ೧. ಮನಸ್ಸಿಗೆ ತಂದುಕೊಳ್ಳು; ಲಕ್ಷ್ಯಕ್ಕೆ ತೆಗೆದುಕೊಳ್ಳು : ಅದರಿಂದ ಚಿತ್ತಮುಳ್ಳದ ಮನಂ ಬಗೆಗೊಳ್ಳದ ಮೋಹಮೆತ್ತಿ ಕಟ್ಟಿದ ಜಡೆ (ಶಂಪಥಾ. ೬-೬೯); ಜಗಜ್ಜನ ಮಧಿಕಾನಂದಂಬೆರಸಿದ್ದು ಕೀರ್ತಿಸುತ್ತಿರೆ ವಿದ್ವದ್ವ್ಯಂದಂ ಬಗೆಗೊಂಡಾ ಗೃಹದೀಂದಂ ಪೇಟಲ್ಕೆವೇಟ್[3] (ಶಂಪಶಂ. ೦೨-೬) ; ಬಗೆಗೊಂಡೋದದ ಕೇಳದಲ್ಲ ಕಳೆಯಂ ಕಾವ್ಯಜ್ಞರಿಂ ಕಲ್ಲದಚ್ಚಿಗದಿಂ ಕಟ್ಟಿದ ಕೆಟ್ಟ ಕನ್ನಡದ ಕಾಟ್ಟಬ್ಬಗಳಂ ಬಂಟಸಾಮಿಗಳಂ ಕೇಳಿಸಿ (ಅರ್ಧಶೇ. ೦-೩೩). ೨. ಎಣಿಸು ; ನಿಶ್ಚಯಿಸು : ಆದಡಂ ಪೋಗಿ ನೋಡುವೆನೆಂದು ಬಗೆಗೊಂಡು (ಬಸರ. ೩-೩) ; ಈತನಲಿಯೊಂದು ವಿನೋದವನು ಮಾಡುವೆನೆನುತ್ತಲ್ಲ ಮನು ಬಗೆಗೊಂಡ (ಪ್ರಭುಲೀ. ೦೧-೬). ೩. ಮನಸ್ಸನ್ನು ಸೆಳೆ,-ಆಕರ್ಷಿಸು : ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ ಬಗೆಗೊಳೆ ಪೇಟಲಾರಿನಿತುಂ (ಕಬ್ಬಿಗಾ. ೦೩). **ಬಗೆಗೊಳು** : ೧. ಈರೇಳು ದ್ವೀಪಗಳಿರಲ್ ದಾಂಟುವೆನವನು ಬಗೆಗೊಳದೆ (ಕೌರರಾ. ೬-೩೬-೯೬). ೩. ಇದ್ದೊಂದು ಒಡವೆಯೆ ಇಬ್ಬಗೆ ಮೂವಗೆ ಬಗೆಬಗೆ ಒಡಮೂಡಿ ಬಗೆಗೊಳಲು (ಮುಕ್ತಕಂ. ೩-೩೬). **ಬಗೆಗೊಳ್ಳು** : ೧. ತ್ರಿಕರಣಶುದ್ಧನು . . . ಕುಲಾದಿ ಮದಂಗಳ ಬಗೆಗೊಳ್ಳ (ಮಹಾದೇ. ೮. ೦೩-೨೦೬) ; ಏತೆಜದಿಂ ಮೃಗಾಕ್ಷಿದಪ್ಪುಯಂತಿಯ ಸಂಗಮದಪ್ಪುದೆಂದು ನಿಶ್ಚೀತನನಾಗಿ ರಾಜ್ಯಸುಖಮಂ ಬಗೆಗೊಳ್ಳದೆ (ನಳಶಂ. ೬೩); ಸುತನಾಶವನು ಬಗೆಗೊಳ್ಳನು (ಕುಮಾರವ್ಯಾ. ೦೬-೬೬). [ಬಗೆ + ಕೊಳ್೧]

**ಬಗೆಗೊಳಿಸು** (ಕ್ರಿ). ೧. ಮನಸ್ಸನ್ನು ಆಕರ್ಷಿಸು ; ಚಿತ್ತವನ್ನು ಸೆಳೆ : ಲಲಿತಮುಖಸೌರಭಕ್ಕೆಚಿಗುಮಲಿಮಾಲೆಯುಂ ಬಗೆಗೊಳಿಸಿ ತಳರ್ದುಗಜಗಮನೆ (ಅದಿಪು. ೬-೨೬ ಕಳ) ; ಸಮುಜ್ವಲಕನಕವರ್ಣೆ ಮಿಗೆ ಬಗೆಗೊಳಿಸಿದಳುದ್ಯಾನಕೇಳಿಲೀಲಾಲಕ್ಷಣದೊಳ್ (ಶಾಂತಿಪು. ೮-೦೬) ; ಬಗೆಗೊಳಿಸ ತೊಡಗಿತ್ತು ಮಿಗೆ ರೂಪು ಲೋಚನಕೆ (ತಂಬರ. ೩-೦೦). ೨. ಮನಸ್ಸಿಗೆ ತಂದುಕೊಳ್ಳು ; ಮೆಚ್ಚು : ರಾಯನುಮರಸಿಯರುಮಾನಂದವಡೆದು ಬಗೆಗೊಳಿಸೆ . . . ಪೇಳಿದೆನು ( ಹರಿಬ. ೦-೩೦). [ಬಗೆಗೊಳ್ + — ಇಸು೩]

**ಬಗೆಗೊಳು** 'ಬಗೆಗೊಳ್' ನೋ.

**ಬಗೆಗೊಳ್ಳು** 'ಬಗೆಗೊಳ್' ನೋ.

**ಬಗೆತ** (ನಾ). ಅಭಿಪ್ರಾಯ ; ಮನೋಗತ : ಬರೆಹ ಮಾತ್ರಕ್ಕೆ ನಾನಲ್ಲದೆ ಬಗೆತಕ್ಕೆ ಆತನೇ (ಮೂರುಉ. ೯. ಎರಡುಮಾತು) ; ನುಡಿತದಲ್ಲಿ ಮಿಂಚೂ ಇದೆ, ಬಗೆತದಲ್ಲಿ ಜೇನೂ ಇದೆ (ಚಿತ್ರಸ್ಕ. ೦ ಮುನ್ನುಡಿ) ; ಈ ಬಗೆತವು ಇಲ್ಲಿ ಬಲು ಚೆನ್ನಾಗಿ ಸಾಧಿಸಲಾಗಿದೆ (ಕಾರಂರ. ೭ ಪರಿಕೆ). [ಬಗ್೨ + — ತ೨]

**ಬಗೆತುಂಬು** 'ಬಗೆದುಂಬು' ನೋ.

**ಬಗೆದಟ್ಟು** (ಕ್ರಿ). ಮನಸ್ಸನ್ನು ತಾಗು ; ಮನವರಿಕೆಯಾಗು : ಬಗಸೆಗಣ್ ಪೊಳೆಯೆ ನಡುವಲೆಯೆ ಕಂಣಮುಲಿಯೆ ಬಗೆದಟ್ಟಿ ಘಟ್ಟಪಳ್ತಿಯರರೆದರಾ ಯಕ್ಷಕರ್ದಮವಾದಿಗಳನೊಲವಿಂ (ಶಬ್ದಮಾ. ೬-೬೯). [ಬಗ್೨ + ತಟ್ಟು೧]

**ಬಗೆದರ್** (ಕ್ರಿ). ಎಣಿಸು ; ನಿಶ್ಚಯಿಸು : ಚಿಂತಾಪಸಮುದ್ರಾಂತರ ಪರಿವೃತನಾಗಿ ಸ್ವೈರಿಸಲಾಱದೆ ಪೊಟಲಂ ತೊಟಲ್ದು ನೋಟ್ಪ ಬಗೆದಂದು ರಾಜಮಂದಿರದಿಂ ಪೊಱಮಟ್ಟು ಬರೆ (ಶಂಪಥಾ. ೪-೬೯ ವ) ; ನೋಡಿಕೊಂಬೆ ನೆನುತ್ತ ನುಡಿದೊಡಂಬಡಿಸಿ ಮನಮಾಡಿ ತಿರುವೆಣ್ಣೆನಲ್ಲೂರ್ಗೆಂದು ಬಗೆದಂದು ವಹಿಲದಿಂ ಪೊಱಮಟ್ಟನು (ಶ್ರೀಂದಪು. ೪-೬೯) ; ಕಲ್ಪದೊಳ್ ಕುಳ್ಳಿರ್ದ ಮಂಚೊಳಗೊಂದಿದ ಮೊಲ್ಲೆಮೂಪನಾರಡಿಮೊಲೆ ಭೋಗಿಸಲ್ಕ ಮುಳಿಯಲ್ಕಮಣಂ ಬಗೆದರ್ಪೊಡಾರೊ ನಾಂ (ಶಾಕುಂತ. ೬೬-೦೦೯). [ಬಗ್೨ + ತರ್]

**ಬಗೆದೀರ್** (ಕ್ರಿ). ಮನಸ್ಸು ತೃಪ್ತಿಯಾಗು ; ತಣಿ : ದಿವ್ಯಮುನಿಪುಂಗ ವರು ಬಗೆದೀರ್ಪಿನಂ ನಿಜಾತ್ಮಂತಪತಿವ್ರತಾಗುಣದಿನರ್ಚಿಸಿ ಮೆಚ್ಚಿಸು ನೀಂ (ಶಂಪಥಾ. ೦-೦೦೬). [ಬಗ್೨ + ತೀರ್]

**ಬಗೆದುಂಬು**, ಬಗೆತುಂಬು (ಕ್ರಿ). (ಸಂತೋಷದಿಂದ) ಹೃದಯ ತುಂಬು,—ಉಬ್ಬು : ಆಂಡಯ್ಯಕವಿ 'ಕನ್ನಡನಾಡನ್ನು' ಬಗೆದುಂಬಿ ಬಣ್ಣಿಸಿದ್ದಾನೆ (ಸಾಸಪಹ. ೨೬). **ಬಗೆತುಂಬು** : ನೀಲಾಂಬಿಕೆ ಲಿಂಗೈಕ್ಯವಾದಂದು ಸೊನ್ನಲಿಗೆಯ ಸಿದ್ಧರಾಮ ಬಗೆತುಂಬಿ ಹೇಳಿದ (ಕರ್ನಾಕ. ೧೨೪). [ ಬಗ್೨ + ತುಂಬು೧ ]

**ಬಗೆದೆರು** (ಕ್ರಿ). ಮನಸ್ಸು ಕೊಡು ; ಚಿತ್ತವಿಡು : ಕಾವನಂ ಬಗೆದೆತ್ತು ಬರೆಯುತಿದೆ ಸುಗ್ಗಿ (ಕಾರಂರ. ೧೨೦-೨೩೨). [ಬಗ್೨ + ತೆರು೧ (< ತೆಱು೧)]

**ಬಗೆದೋಱು** (ಕ್ರಿ). ೧. ಮನಸ್ಸಿನಲ್ಲಿದ್ದುದನ್ನು ಹೇಳು,—ಪ್ರಕಟಿಸು : ಇಂತಿದನೀವೆನೆಂದ[ನ]ಂ ಪುಸಿದೊಡಮಾಸೆದೋಱ[3] ಬಗೆದೋ[ಱ] [ಶಾಕಾಂ.ಱ]ದೊಡಂ ನೆರೆದಿರ್ದೊಡಂ . . . ಮುತ್ತಪ್ಪಾಟಿಸುವುದೆ (ಶಂಪಥಾ. ೪-೬೨) ; ಅಂಗನೆ ನೀಂ ಗರ್ವಿಸಿದಪ್ಪೆಯೆಂದು ಬಗೆದೋಱಿಂ ನಲ್ಲನೇನೊಲ್ಲನೇ (ಅನಂಪು. ೮-೪೦). ೨. ಆಸೆಯನ್ನು ಪ್ರಕಟಿಸು; ಹಂಬಲವನ್ನು ತಿಳಿಸು : ಆ ವೇಳೆಯಲ್ಲಿ ಸಿಂಗರಗೈದು ನಿನ್ನಯ ಭಾವದ ಬಗೆದೋಱಿಯುವನ ಕಾವನಂಬಿಗೆ ಮೆಯ್ಯೊಡ್ಡಿಸಿ ಸೆಳೆದು ಸಂಭಾವಿಸು ಮೋಹರತಿಯೊಳು (ಶಂಪವಿ. ೮-೩೬). [ಬಗ್೨ + ತೋಱು]

**ಬಗೆಪೋಗು** (ಕ್ರಿ). ಮನಸ್ಸಿಗೆ ಹಿತವಾಗು ; ಮನದಟ್ಟಾಗು : ಬಗೆಪೋಯ್ತಿಂತಿದು ನಾಕಲೋಕವಿಭವಂ ಮದ್ವೃತ್ತಕಂ ತಪ್ಪದು (ಅದಿಪು. ೩-೮೮) ; ಬಗೆಪೋಯ್ತಾಗಳಿಲೇ ಇದಲ್ತೆ ತುಹಿನಕ್ಷೋಣಿಧ್ರುಮತ್ತುಂಗಸಾನು

ಗಳೊಳ್ ಭೋರೆನೆ ಬಂದು ಪಾಯ್ವುದದೆ ನೋಡಾಕಾಶಗಂಗಾಜಲಂ (ಜಾಜ್ಞ.ಚ. ೪೮). [ಬಗ್$_2$ + ಪೋಗು$_1$ (< ಪೋ$_1$) ]

**ಬಗೆಬರ್** 'ಬಗೆವರ್' ನೋ.

**ಬಗೆಬಿಚ್ಚು** (ಕ್ರಿ). ಅಂತರಂಗವನ್ನು ವಿವರಿಸು; ಮನಸ್ಸಿನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳು: ಬಂದುದಂ ಬಗೆಬಿಚ್ಚಿ ನುಡಿವ ರೊಮ್ಮೊಮ್ಮೆ (ಅಭಿನವ. ೯೦–೦೬೪). [ಬಗ್$_2$+ಬಿಚ್ಚು$_1$ (< ಬಿರ್ಚು)]

**ಬಗೆಮುಟ್ಟು** (ಕ್ರಿ). ೧. ಮನಸ್ಸನ್ನು ತಟ್ಟು,–ತಾಗು; ಹೃದಯಸ್ಪರ್ಶಿಯಾಗು: ಬೀಣೆಯುಂ ಮಿಡಿವ ಬಂಚವುನೊತ್ತುವ ಡಕ್ಕೆವಾಜಿ ಪಾಡುವ ಬಗೆಮುಟ್ಟಿ ಪಾಡುವವರಗ್ಗದ ದೇವರೆ ತದ್ಗಿರೀಂದ್ರದಾ ದಿವಿಜವಿಮಾನದಂತೆ ಬಳೆಸಿರ್ದ ವಿಶಾಳಜಿನಾಲಯಂಗಳೊಳ್ (ಶಬ್ದಚ. ೦೦–೦೦೨). ೨. ಮನಸ್ಸು ಒಪ್ಪು; ಸಮ್ಮತಿಸು: ನಾವು ಆ ಮಕ್ಕಳಿಗೆ ಬಗೆ ಮುಟ್ಟಿ ಒಪ್ಪಿಸಿಕೊಟ್ಟಿರುವ ಈ ಉಂಬಳಿಗೆಯುನ್ನು . . . ಸಾರ್ಥಕಮಾಡಿಕೊಡಬೇಕು (ಮುಂತ್ರ.ಶ. ೭೬–೨೬). [ಬಗ್$_2$ + ಮುಟ್ಟು$_1$]

**ಬಗೆಯಣುಗ** (ನಾ). ಮನಸ್ಸಿನಿಂದ ಹುಟ್ಟಿದವನು; ಕಾಮ: ಖಗನಾಮವಿಹುದಾವುದು ಬಗೆಯಣುಗನ ಗಜವೇಂ (ಕೃಚ. ೦–೨೬–೩).

[ ಬಗ್$_2$ + ಅಣುಗ (< ಅಣುಂಗ) ]

**ಬಗೆಯಳಲು** 'ಬಗೆಯಟಲ್' ನೋ.

**ಬಗೆಯಱಿ** (ಕ್ರಿ). ಮನಸ್ಸನ್ನು ತಿಳಿ; ಇಂಗಿತವನ್ನು ಅರಿ: ಮುಗಮಗಿವ ಜಾದಿ ಪೂಂಗೆದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ಬಗೆಯಱಿದೋಲಗಿಪುದು ಮಾಲೆಗಾಱಜನಂ ಪೋಲ್ತುದಗ್ರಮಾಲ್ಯಮಹೀಜಂ (ಅಜಿ. ೩–೪೬); ಅರಸಾ ಜೊನ್ನಮನುಣ್ಬ ಪಕ್ಕಿಬಾಗಿಲೊಳ್ ಬಂದಿರ್ಪುದೆಂದು ಬಗೆಯಱಿದು ಬಿನ್ನಪಂಗೆಯ್ದು (ಕಬ್ಬಿಗ. ೦೩೦); ಮಿಕ್ಕ ಧರ್ಮದೊಳು ಬಗೆಯಱಿತೆಸಗಬಲ್ಲವರಿಗೆಂದೆಂದಿಗೂ ಮೊಗದೋಱವು ಮೋಸಗಳು (ಹರಿಭ. ೨–೨೦). [ಬಗ್$_2$ + ಅಱಿ]

**ಬಗೆಯಟಲ್**, ಬಗೆಯಳಲು (ನಾ). ಮನಸ್ಸಿನ ಕ್ಲೇಶ; ಮನೋವ್ಯಥೆ: ಅದರ್ಕೆ ತಕ್ಕುದಂ ನಿಮ್ಮಡಿಗಳೆ ಬಲ್ಲಿರೆಂದು ಬಗೆಯಟಲಾಱೆ ಜೊನ್ನವಕ್ಕಿ ಬಿನ್ನಪಂಗೆಯ್ಯಲ್ (ಕಬ್ಬಿಗ. ೦೩೦). **ಬಗೆಯಳಲು**: ಅಡಿದಳ್ ನನ್ನಿಯಂ ಬಗೆಯಳಲಿನಿಂ ಪಾಲ ನೀಡಿದಳ್ (ಅಭಿನವ. ೦೯೨–೩೦೬).

[ ಬಗ್$_2$ + ಅಟಲ್$_2$ ]

**ಬಗೆಯಾಣ್ಮ** (ನಾ). ಮನೋವಲ್ಲಭ; ನಲ್ಲ: ಒಂದೆಡೆಯೊಳ್ ಮನೆಯಾಣ್ಮನ ಕಣ್ಣೆಮೆಯ ಕಾಂಡಪಟಮಾಗೆಯುಂ ಬಗೆಯಾಣ್ಮನ ಕಣ್ಣೆಮೆಯ ದೂದವಿಯಾಗೆಯುಂ (ಶಂಶಕಾ. ೯–೬೦ ಪ).

[ ಬಗ್$_2$ + ಅಣ್ಮ (< ಆಳ್ಮ) ]

**ಬಗೆಯಿಡು** (ಕ್ರಿ). ಮನಸ್ಸಿಡು; ಆಸಕ್ತನಾಗು: ಬಟ್ಟಮೊಲೆಯ ಬಾಲೆಯ ನೊಸಲೊಳು ಬಗೆಯಿಟ್ಟು ಬಲ್ಲಹನೊಲವಿಂ ಚವುಕದ ಬೊಟ್ಟಂ ಕುಂಕುಮದಿಂದಿಡೆ (ಜಯಸಾ. ೦೯–೬೪). [ಬಗ್$_2$ + ಇಡು$_1$]

**ಬಗೆಯಿಸು** (ಕ್ರಿ). ೧. ಮನಸ್ಸನ್ನು ಸೆಳೆ,–ಆಕರ್ಷಿಸು: ಮನಕಂಪನೊಗೆಯಿಸುವ ಬಗೆಯಿಸುವ ರಾಜೋಪವನಮೆಸೆದುದು (ಕೃಬಾಭಾ.೨೯–೫೬). ೨. ತಿಳಿದಂಕೊಳ್ಳುವಂತೆ ಮಾಡು; ಭಾವಿಸುವಂತೆ ಮಾಡು: ಹಗೆತನವನುಳಿದು ದಯವೆಲ್ಲ ಬೆಳೆದು ತನ್ನಂತೆ ಪರರ ಬಗೆಯಿಸುವುದು ಬಡತನ (ಶೀಲಾಚ. ೬೩). [ಬಗ್$_2$ + –ಇಸು$_2$]

**ಬಗೆಯೆಣಿಕೆ** (ನಾ). ಮನಸ್ಸಿನ ಅಭಿಪ್ರಾಯ,–ಆಶಯ: ಇದು ನಿನಗೆ ಬಗೆಯೆಣಿಕೆ, ಎನಗೆ ಎರ್ದೆಬೆಂಕೆ (ಅಕ್ಕಕಾ. ೩೬–೨೩೯). [ಬಗ್$_2$+ಎಣಿಕೆ]

**ಬಗೆಯೊಡೆಯ** (ನಾ). = ಬಗೆಯಾಣ್ಮ: ಗಡಣದೆ ಮಾದೇವಿಯ ಬಗೆಯೊಡೆಯನ ನೊಸಲೊಳ್ . . . ನಟ್ಟುವು ಕಾವನಂಬುಗಳ್ ತಾವೈದುಂ (ಕಬ್ಬಿಗ. ೩೦೬). [ಬಗ್$_2$ + ಒಡೆಯ]

**ಬಗೆವಡೆ** (ಕ್ರಿ). ತಿಳಿ; ಅರಿತುಕೊಳ್ಳು: ಆ ತೊರೆ ಸಮುದ್ರೋರಿಗಳತ್ತಲೇ ಹರಿದು ಹೋಗುವುದೆಂಬುದನ್ನು ಬಗೆವಡೆದವು (ಪಾಕೋಚ. ೩೩೩).

[ಬಗ್$_2$ + ಪಡೆ$_1$]

**ಬಗೆವರ್**, ಬಗೆಬರ್ (ಕ್ರಿ). ಮನಸ್ಸಿಗೆ ಬರು,–ತೋಚು: ಬಗೆವಂದ ಗೊಡ್ಡಾಟವಮಾಡಲೆಂದು ದುರ್ಜನಪರಿವೃತನಾಗಿ (ಧರ್ಮಾಮೃ. ೨–೨೯). **ಬಗೆಬರ್**: ಸ್ವೈರಿಣಿ ಬಗೆಬಂದಾಗಳೆ ಮಾರಕ್ರೀಡೆಯನೊಡರ್ಚಲೆಂದುಪಪತಿಯಂ ದಾರಕನಂ ಕೊಲವೇಟ್ಟಳ್ (ಶಂಶಸಾಮ. ೮–೫೨); ಹರನ ಭಕ್ತಿಯ ಮಾಡಿದೊಡೆ ಗೋಚರಿಸಿ ತೋಱುವನಲ್ಲವುಪ್ರಭು ಕರುಣದಿಂದಲಿ ನೀನು ಬಳಿಕಾತನಲಿ ಬಗೆಬಂದ ವರವುನೋರಥಸಿದ್ಧಿಯನು ಪಡೆಕರಿಸಿ ಪಡೆವುದು (ಪ್ರಭುಲಿಂ. ೬–೩). [ಬಗ್$_2$ + ವರ್]

**ಬಗೆವಿಡಿ** (ಕ್ರಿ). ಮನಸ್ಸನ್ನು ಸೆಳೆ,–ಆಕರ್ಷಿಸು: ಬಗೆವಿಡಿದಾಹತವಾದಿಗಮಕಂಗಳಿನೊಯ್ಯನೆ ಬೀಣೆ ಬಾಜಿಪನ್ನೆಗಂ (ಶಕಂ. ೪–೦೦೩).

[ಬಗ್$_2$ + ಪಿಡಿ$_1$]

**ಬಗೆವುಗಿಸು** (ಕ್ರಿ). = ಬಗೆವಿಡಿ: ಏಂ ಬಗೆವುಗಿಸಿದುದೋ ಹೇಮಾಂಬುಜದ ಮರಾಳಮಿಥುನಮಂ ತನ್ಮಿಥುನಂ (ಅಜಿತ. ೬–೫೩).

[ಬಗ್$_2$ + ಪುಗಿಸು (< ಪೊಗಿಸು)]

**ಬಗೆವುಗು** 'ಬಗೆವೊಗು' ನೋ.

**ಬಗೆವೆಚ್ಚು** 'ಬಗೆವೆರ್ಚು' ನೋ.

**ಬಗೆವೆರಸು** (ಕ್ರಿ). ಮನಸ್ಸಿಗೆ ಬರು; ಮನವುಟ್ಟು: ಬಗೆವೆರಸಿ ಸಂದಪ್ಪುದಾದಡಟಿಯೆಂ ಪರೋಕ್ತಿಗಳರ್ಥಮಂ (ಪಂಪಭಾ. ೦–೨೮); ಜಗದರಸ ರಾಮಂಗೆ ಕೈಗಳ ಮುಗಿದುಮುಗಿದು ಕೆಲಸಾರುತಿರ್ದುದಂ ಬಗೆವೆರಸಿ ಬಲ[ಪಾಠಾಂ. ಬಗೆಬಗೆಯ ಕಪಿ]ಪತಿಗಳೆಪ್ಪತ್ತೇಳು ಕೋಟಿಯೆನೆ (ತೊರವೆ. ೯–೮–೨). [ಬಗ್$_1$ + ಬೆರಸು$_1$ (< ಬೆರೆಯಿಸು)]

**ಬಗೆವೆರ್ಚು**, ಬಗೆವೆಚ್ಚು (ಕ್ರಿ). ಮನಸ್ಸು ಉಬ್ಬು; ಉತ್ಸಾಹಗೊಳ್ಳು: ಬಗೆವೆರ್ಚಿ ಕೇಳುತಿರ್ದಪೆ ಏಗೆ ಪೇಳ್ದಪೆನೆಲೆಲೆ ಧೂರ್ತವಿಪ್ರನೆ ಕೇಳ್ (ಗಿರಿಜಾ. ೯–೦೦೯). **ಬಗೆವೆಚ್ಚು**: ಪೊಗಂತೆ ಸ್ವೈಗಡೆದೆದ್ದು ಮತ್ತ ಮಯ್ಯಿಕ್ಕುತಂ ಬಗೆವೆಚ್ಚಿ ಪೊಡವಟ್ಟು ನಲಿದೆದ್ದು ನಡೆವುತಂ (ಸಂಶಬ. ೯–೦೨೨). [ ಬಗ್$_2$ + ಪೆರ್ಚು$_1$]

**ಬಗೆವೆಱು** (ಕ್ರಿ). ಮನಸ್ಸಿಗೆ ಬರು; ಮೆಚ್ಚು: ಬಗೆವೆತ್ತು ಅಭವಾದಿಗಳತ್ತ ಪದವಿಗೆ ಹಗೆಗೊಂಡು ಹರಿ ಕೆಡಿಸುವನು (ಮೋಹತ. ೩೦–೦೬).

[ ಬಗ್$_2$ + ಪೆಱು$_1$ ]

**ಬಗೆವೇಳ್** 'ಬಗೆವೇಟ್' ನೋ.

**ಬಗೆವೇಟ್**, ಬಗೆವೇಳ್ (ಕ್ರಿ). ೧. ಮನಸ್ಸನ್ನು ತೆರೆದು ಮಾತನಾಡು; ಹೃದಯವನ್ನು ಬಿಚ್ಚಿ ಹೇಳು: ತನಯರನಟ್ಟು ಸಂತತಿಯೊಳಿಂತೆಮಗಂ ಬಗೆವೇಟದೇಕೆ ಪೋದನೊ (ಆಂತಿ. ೯–೬೬); ಬಗೆವೇಟ್ವೊಡನ್ನ ಮೇಳದ ಕೆಳೆಯರ್ಕಳಿಲ್ಲ (ಶಂಶಕಾ. ೯–೬೯); ಸಮಧಿಕಚಿಂತೆಯಿಂ ನುಡಿಯಬಾರದೆ ಬಗೆವೇಟಲುಮೊಲ್ಲದಾ ಶರತ್ಸಮಯದ ಸೋಗೆಯರ್ಪ ತೆಱದಿಂ ಕಡುಮಿನ್ನನೆ ಮೂಗುವಟ್ಟು ಖೇದವುನೊಳಗೊಂಡು ನಿಂದಬಲೆಯಿರ್ದಿರವಂ ಸಖಿ ನೋಡಿ (ಜಗ. ೦೦–೦೦). **ಬಗೆವೇಳ್**: ೨. ದಾರಿ ತೋರಿಸು: ಶಿವಭಕ್ತಾಪರಾಧದಿಂ ಸಂಭವಿಸಿತಿನಿತು ಪರಿಭವವಿದಕೆ ಬಗೆವೇಳ್ದನೋಡ ಮರ್ದನಯೆಂದು ದೈನ್ಯದಿಂ ಬಿನ್ನೈಸಿ (ಗಿರಿಜಾಕ. ೯–೦೩).

[ ಬಗ್$_2$ + ಪೇಟ್ ]

**ಬಗೆವೊಗು**, ಬಗೆವುಗು (ಕ್ರಿ). ಮನಸ್ಸನ್ನು ಪ್ರವೇಶಿಸು: ನೋಟದೊಳಟ್ಟಜಂಬಡೆದು ಮೆಲ್ನುಡಿಯೊಳ್ ಬಗೆವೊಕ್ಕು . . . ಕೂಟಸುಖಂಗಳಂ ಪಡೆದಂ (ಶಂಶಕಾ. ೩–೬೨). **ಬಗೆವುಗು**: ಎಲ್ಲಮನೊಪ್ಪಿಸಿ ನಿರ್ಣಯಂ ನಯಂ ಬಗೆವುಗೆ ಮಾಡಿದರ್ಕಲುಷವೇಷಮನೊಲ್ಲದನುಪ್ರವೇಶಮಂ

(ಪುಣ್ಯಶ್ರೀ. ೯-೦೫೦) ; ಶ್ರೀಕಂಠರಿಪುವಿನಸ್ತ್ಯಾನೀಕಂ ಬಗೆವುಗಲದೊರ್ಮೆ ಸತ್ರಾಜಿತ್ಕನ್ಯಾಕಾರಂ ಬಗೆವೊಕ್ಕುದು ಲೋಕಜನಸ್ತುತಿಗಳಿಂ ಗರುತ್ಮದ್ಧ್ವಜನಾ (ಜಗಸು. ೦೦-೦); ಗುಣಮಮುರೆ ಶಬ್ದ ವಣಿದರ್ಪಣನಾಮಮನಿಟ್ಟು ನೆಱೆಯೆ ಕರ್ಣಾಟಕಲಕ್ಷಣಶಬ್ದಶಾಸ್ತ್ರಮಂ ಲಾಕ್ಷಣಿಕರ್ವೇಟಿಂದು ಬೆಸಸೆ ಬಗೆವುಗೆ ಪೇಟ್ದಿಂ (ಶಬಧ. ೩). [ ಬಗ್₂ + ಪೊಗು ]

**ಬಗೆಹರಿ** (ಕ್ರಿ). (ಮನಸ್ಸಿನ ಆಲೋಚನೆ, ಉದ್ದೇಶ ಮುಂತಾದುವು ನಿರಾತಂಕವಾಗಿ) ತೀರ್ಮಾನವಾಗು ; ಇತ್ಯರ್ಥಗೊಳ್ಳು ; ನಿರ್ಧಾರವಾಗು: ಕನ್ನಡಸಾಹಿತ್ಯದಲ್ಲಿ ನಾಗವರ್ಮರು ಎಷ್ಟು ಮಂದಿ ಎಂಬ ಪ್ರಶ್ನೆಯೊಂದು ಬಗೆಹರಿಯದ ಸಮಸ್ಯೆಯಾಗಿದೆ (ಶಾಹಿಸ. ೨೯) ; ಈ ದೇಶದ ಶೈಕ್ಷಣಿಕಸಮಸ್ಯೆಗಳು ಖಂಡಿತವಾಗಿಯೂ ಬಗೆಹರಿಯುವುದಿಲ್ಲ (ಸುಶರ್ಪ. ೦೦). [ ಬಗ್₂ + ಹರ್₂ (< ಪರ್₂) ]

**ಬಗೆಹರಿಸು** (ಕ್ರಿ). ೧. ಇತ್ಯರ್ಥಗೊಳಿಸು; ನಿರ್ಣಯಿಸು; ನಿರ್ಧರಿಸು: ತುತ್ತಿನ ಚೀಲದ ಪ್ರಶ್ನೆಯನ್ನು ಐದು ತಲೆಮಾರು ಹಿಂದೆಯೇ ಸಮಾಜ ಬಗೆಹರಿಸಿದ್ದಿತು (ಕಾಂಯೂ. ೯೬); ಅಂತಿಮವಾಗಿ ಈ ಪ್ರಶ್ನೆಯನ್ನು ಬಗೆಹರಿಸಬೇಕು (ಪಂಜಶಹ. ೦೫೦). ೨. ತೀರಿಸು; ಸಂದಾಯ ಮಾಡು : ನೆರೆದಿದ್ದ ಅಷ್ಟು ಜನ ಸಾಹುಕಾರರ ಸಾಲದಲ್ಲಿ ಒಂದನ್ನು ಸಹ ಬಗೆಹರಿಸುವ ಪರಿಸ್ಥಿತಿಯಿರಲಿಲ್ಲ (ಚಳ್ವಿಹೊ. ೩೯). [ ಬಗ್₂ + ಹರಿಸು (< ಪರಿಯಿಸು) ]

**ಬಗ್ಗ₁**, ವಗ್ಗ₁ (ನಾ). ಹುಲಿ; ವ್ಯಾಘ್ರ: "ಬಗ್ಗಂ ವ್ಯಾಘ್ರಾಭಿಧಾನಂ" (ಕಶಾರಶಿ.೯೬); ಸುತ್ತಿದ ರೇಫೆ ದದ್ದಕ್ಕರವಾದುದರ್ಕೆ – ಚಕ್ರಪಕ್ಷಿ – ಚಕ್ಕವಕ್ಕಿ . . . ವ್ಯಾಘ್ರ – ಬಗ್ಗ (ಶಬುಶ. ೨೬೦ ಪ್ರಯೋ); ಗರ್ಜಿಸುತ್ತಿರ್ಪ ಬಗ್ಗದ ಬಲ್ಗಂಡಿಕಗಂಡು . . . ತಿವಿದಂ ತತ್ಕಾಳಮೇಘಾಹ್ವಯಂ (ರಾಜಶೇ. ೩-೯೯); ಇದೆ ಬಗ್ಗನನಿಕ್ಕು ! ಮೇಣಿದೆ ಚಿತ್ರಗನಂ ತುಡು ! (ರಾಮಾಶ್ವ. ೯೪–೦೨). **ವಗ್ಗ₁** : ಶ್ರೀಮದಾಹವಮಲ್ಲದೇವರ ವಗ್ಗ (ಎಶಿ·XVI, ೬೩–೩; 1067). [< ಪ್ರಾ. ವಗ್ಘ. /ಸಂ. ವ್ಯಾಘ್ರ]

**ಬಗ್ಗ₂**, ವಗ್ಗ₂ (ನಾ). ೧. ಗುಂಪು; ನೆರವಿ; ಸಮೂಹ : "ಬಗ್ಗಂ ವರ್ಗಂ" (ಕಶಾರಶಿ.೯೬); ದಿತ್ವಾಗ್ರರೇಫಲೋಪಕ್ಕೆ – ವರ್ಗ – ಬಗ್ಗ (ಶಬುಶ. ೨೬೦ ಪ್ರಯೋ). **ವಗ್ಗ₂** : "ವಗ್ಗ (ಬಗ್ಗ) _ ವರ್ಗ" (ಶದ್ಧಕೋ.೩೮). ೨. ಗ್ರಂಥದ ಪರಿಚ್ಛೇದ, – ಸರ್ಗ: ಅನೇಕ ಶಾಸನಗಳ ಕೊನೆಯಲ್ಲಿ ಕಂಡುಬರುವ ಚಿಹ್ನೆಯೊಂದು ಧಮ್ಮಪದದ ಪ್ರತಿ 'ವಗ್ಗ'ದ ಕೊನೆಯಲ್ಲಿಯೂ ಇದೆ (ಶಾಲಶ.೦೯). [< ಪ್ರಾ. ವಗ್ಗ. /ಸಂ. ವರ್ಗ]

**ಬಗ್ಗ₃** (ನಾ). ಶಿವ; ಈಶ್ವರ : "ಬಗ್ಗನೆನೆ ಮುಕ್ಕಣ್ಣನಕ್ಕು" (ಕಶಶ.೬೩); ಬಿಳಿಯಳ್ ಸರಸತಿ, ಬಿಳಿಯಂ ಬಗ್ಗಂ (ಕಶ್ಯಾ.ಸು.೦೦೨ ವ್ಯಾಖ್ಯಾ); ವೇಗದಿಂ ಬಗ್ಗನಂಘ್ರಿಯೆಡೆಗಂ ನಡೆತಂದದನೆಲ್ಲಮಂ . . . ಪೇಳಲು (ಹಾಲಾಸ್ಯ. ೦-೬-೨೬). [< ಸಂ. ಭರ್ಗ]

**ಬಗ್ಗಂದೊವಲ್**, ಬಗ್ಗದೊವಲ್, ಬಗ್ಗದೊವಲು (ನಾ). ಹುಲಿಯ ಚರ್ಮ; ವ್ಯಾಘ್ರಾಜಿನ: ಬಗ್ಗಂದೊವಲ್, ಬಗ್ಗದೊವಲ್ (ಕಶ್ಯಾ.ಸು.೩೭೯ ಪ್ರಯೋ). **ಬಗ್ಗದೊವಲ್** : ಬಗ್ಗದೊವಲಂ ಅಸವಸದೊಳುಟ್ಟನಂ ದೇವರಾದಿತ್ಯನಂ. . .ನುತಿಸಿದಂ (ಉದ್ಭಟಕಾ.೩-೩೦); ಪಾರ್ವತಿಯಾಣ್ಮಂ . . . ಬಗ್ಗದೊವಲ ಪಾಸುಗೆಯಲ್ಲಿ ಸಲ್ಲೀಲೆಯಿಂ ಮೂರ್ತಿಗೊಂಡಿರೆಯಿರೆ (ವೃಷಪು. ೦೯-೩೦ ವ); ಬಗ್ಗದೊವಲಂ ಕಂಡೊಡಂ ಬೆರ್ಚುವೆರಲೆಗ್ಗಳ್ ಪರಿವ ಪೆರ್ಬುಲಿನೋಟವಮಂ ಸೂಸಲುಂಟೆ (ಶ್ರೀರಾಮು.೦೬-೩೩). **ಬಗ್ಗದೊವಲು** : 'ಬಗ್ಗದೊವಲುಡಿಗೆ' ಪರಾ. [ಬಗ್ಗ₁+ತೊವಲ್₃ (<ತೋಲ್₁)]

**ಬಗ್ಗಡ**, ಬೊಗ್ಗಡ (ನಾ).೧. ಮಣ್ಣು, ಕಸ, ಸೆಗಣಿ ಮುಂತಾದುವು ಕಲಸಿಕೊಂಡಿರುವ ನೀರು; ರಾಡಿ; ಕೊಚ್ಚೆ : ಆನೆ, ಕುದುರೆ, ರಥ, ಪದಾತಿಗಳಿಂದ ಆ ನೀರು ಕಲಕುವುದು, ಕದಡುವುದು, ಬಗ್ಗಡವಾಗುವುದು (ಬಿದ್ಧಶ. ಖಂಡ. ೯೬); ನಾವು ಕೇವಲ ಕೆಸರನ್ನೂ ಸಗಣಿಯ ಬಗ್ಗಡವನ್ನೂ ಬಳಿದಿದ್ದೇವೆ (ಶಾಂ.II.೨೯೩). ೨. ಕೊನೆಯಲ್ಲಿ ಉಳಿದುದು; ಗಸಿ; ಗಪ್ಪು : ಮೇಲಿನ ತಿಳಿ ಖರ್ಚಾಗಿ ಬಗ್ಗಡ ಮಾತ್ರ ಉಳಿದಿದೆ (ಕೂ). **ಬೊಗ್ಗಡ** : ೩. (ಆಲಂ) ಕಳವಳ ; ಕ್ಷೋಭೆ : ಕಿಟ್ಟಣ್ಣನ ಮನಸ್ಸು ಕಲಕಿ ಬೊಗ್ಗಡವಾಗಿ ಹೋಗಿ ಮತ್ತೆ ತಿಳಿಯಾಗಬೇಕಾದರೆ ಎಂಟು ಹತ್ತು ದಿನಗಳು ಬೇಕಾಗುತ್ತಿತ್ತು (ಶ್ರೀಕಶ·೪). [?]

**ಬಗ್ಗಡೆ** 'ಬಂಗಡೆ' ನೋ.

**ಬಗ್ಗಡೆಯ** 'ಬಕ್ಕುಡೆಯ' ನೋ.

**ಬಗ್ಗಣೆ₁** (ನಾ). ೧. ಗದರಿಕೆ ; ಝಂಕಣೆ: ತಂದೆ ಕಡಂಗಿ ಕಲ್ಪಿಸುವ ಕಲ್ಪಿಯನೊಲ್ಲದೆ ತಾಯ್ಮಗುಟ್ದು ನಿರ್ವಂದದಿನೆಯ್ದೆ ಬಗ್ಗಿಸುವ ಬಗ್ಗಣೆಗಳ್ಕದೆ (ಸುಕುಮಾ.೨-೮); ನಿಱಿಸು ನಿಘಾತವಮಂಕೆ ಬಗೆ ಬಗ್ಗಣೆ ವಂಚನೆ ಬಂಧಮೆಂಬಿವಂ ಮೆಱೆವೊವಜರ್ಕಳೇಂ ಕಲಿಸುತಿರ್ಪರೊ ಚಟ್ಟರನಟ್ಟಿಮಟ್ಟರಂ (ಕೃಷ್ಣಕೃ·೨-೬೦). ೨. ಕೂಗಾಟ; ಆರ್ಭಟ: ಹೆಗ್ಗಡಲ ತೆರೆಯಂತೆ ಮೊಳಗುವ ಲಗ್ಗೆಗಳಲೋರಂತೆ ಸುಭಟರ ಬಗ್ಗಣೆಯ ಬಲುಭುಜರ ಘನತರ ಸಿಂಹನಾದದಲಿ ತಗ್ಗಿದುದು ಧರೆ (ಕಥಾಗ. ೦೦-೩೨-೯೪).

**ಬಗ್ಗಣೆ₂**, ಬಗ್ಗಳೆ (ನಾ). ಹಕ್ಕಿಗಳ ಕೂಗು; ಕೂಜನ : ಕಳಕಂಠಿಯ ಬಗ್ಗಣೆಯೇವುವೆಂಬ . . . ಮಧುಮಾಸದ ಗೋಸಣೆಯೇವುವೆಂಬ ಬದ್ದರ ನಱೆಯಟ್ಟೆ (ಅಜಿತ್ರ.೬-೨೩); ಕೋಗಿಲೆಯ ಬಗ್ಗಣೆ ತುಂಬಿಯ ಗೇಯಮೆಂಬಿವಂ ಬಲ್ಲವರುಂ ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ (ಮಲ್ಲಿಪು·೦-೪೪). **ಬಗ್ಗಳೆ**: ಪರಪುಷ್ಟಧ್ವಾನದೊಳ್ ಬಗ್ಗಳೆ ಪುರುಳಿಗೊಳಲ್ ಲಲ್ಲೆ (ಅನಂತಪು. ೦-೪೬). [ಬಗ್ಗ₂ + — ಅಣೆ]

**ಬಗ್ಗದೊವಲ್** 'ಬಗ್ಗಂದೊವಲ್' ನೋ.

**ಬಗ್ಗದೊವಲ** (ನಾ). ಹುಲಿಯ ಚರ್ಮವನ್ನು ಧರಿಸಿದವನು ; ವ್ಯಾಘ್ರಚರ್ಮಾಂಬರ ; ಶಿವ : ಬಗ್ಗದೊವಲಗೆ ಸೊಡರ ಹಚ್ಚಿಸುವ ಹಾಲೆರವೆ (ಹರ್ಶ್ವರ. ೩-೬೦).

[ಬಗ್ಗದೊವಲ್(<ಬಗ್ಗಂದೊವಲ್) + — ಅ₇]

**ಬಗ್ಗದೊವಲು** 'ಬಗ್ಗಂದೊವಲ್' ನೋ.

**ಬಗ್ಗದೊವಲುಡಿಗ** (ನಾ). = ಬಗ್ಗದೊವಲ : ಬಗ್ಗದೊವಲುಡಿಗನೀರೇಳ್ಬುವನದೊಡೆಯನೆಸೆದಂ ರಾಜವಿಭವದಿಂದೆ (ಶಂಕ್ರ. ೨೯-೪೦).

[ಬಗ್ಗದೊವಲುಡೆ + — ಇಗ]

**ಬಗ್ಗದೊವಲುಡಿಗೆ** (ನಾ). ಹುಲಿಯ ಚರ್ಮದ ಉಡುಪು ; ವ್ಯಾಘ್ರಚರ್ಮದ ಉಡುಗೆ : ಬೆಳುಗಾಯ ಕಂಜಡೆಯು ಚನ್ನಾಗಿ ಬಗ್ಗದೊವಲುಡಿಗೆ ವಿಭೂತಿ ರುದ್ರಾಕ್ಷಿಗಳು (ಶಶಮೋ. ೦೩.೦೩).

[ಬಗ್ಗದೊವಲು (<ಬಗ್ಗಂದೊವಲ್) + ಉಡಿಗೆ₁ (<ಉಡುಗೆ)]

**ಬಗ್ಗದೊವಲುಡೆ** (ನಾ).=ಬಗ್ಗದೊವಲುಡಿಗೆ : 'ಬಗ್ಗದೊವಲುಡೆಯ' ಪರಾ. [ಬಗ್ಗದೊವಲ್ (< ಬಗ್ಗಂದೊವಲ್)+ಉಡೆ₁]

**ಬಗ್ಗದೊವಲುಡೆಯ** (ನಾ).=ಬಗ್ಗದೊವಲ : "ಎಣ್ಣಯ್ಯಂ . . . ಸಬ್ಬಂ, ಬಗ್ಗದೊವಲುಡೆಯಂ, ಬಾಣ್ನವಿರಂ . . . ಅಯ್ಯೊಗು — ಈ ೩೩ ಈಶ್ವರಂಗೆ ಪೆಸರ್" (ಕಶಶಾ. ೯೬-೦) ; ವೆಗ್ಗಳಿಪ ಶೀತಕರನೀರೆಂಟುಭಾಗದೊಳ್ ಬಗ್ಗದೊವಲುಡೆಯನೊಂದಂ ತಳೆದು ಚಂದ್ರನಂ ನೋಡಿ ಮತ್ತಿಂತೆಂದನು (ಶಂಕ್ರ. ೨೨-೨೬) ; ಬಗ್ಗದೊವಲುಡೆಯಂಗೆ ಪಟ್ಟಣೆಗೆಯನುಡಿಸಿ (ರಾಮಾಶ್ವ. ೦೩೦-೦೨). [ಬಗ್ಗದೊವಲುಡೆ + — ಅ₇]

**ಬಗ್ಗನೆ** (ಅ). ಕೂಡಲೆ ; ತಕ್ಷಣ : ಬಗ್ಗನಿಲ್ಲಿಂದ್ಯೆದಿ ನಾವು ನಮ್ಮಯ ಗಡಿದುರ್ಗದೊತ್ತಲಿ ನಿಲ್ವೆವು (ಕಂಶಪ. ೦೯-೪೯) ; ಸಗ್ಗದಿನಾಗಳೆ ಚರರಂ ದಿಗ್ಗಜಮಂ ಕರೆತರಲ್ಕೆ ಕಳಿಪಿದೊಡವರ್ಗಳ್ ಬಗ್ಗನೆ ಬಂದುಸಿರಲ್ಕೆ (ಹಾಲಾಸ್ಯ. ೦-೩-೨೬) ; ಸಗ್ಗಿಗರ ಪಿರಿಯನ್ನೆತರೆ ನೋಡಿ ಹರ್ಷದಿಂ ಬಗ್ಗನಿದಿರೆದ್ದು ಸೆಳೆದಪ್ಪಿ (ಶಂಕಾರು. ೨-೩೨-೩೬). [ಬಗ್₂+ — ಅನೆ₁]

**ಬಗ್ಗಬರಿ** 'ಬಱು' ಪರಾ.

**ಬಗ್ಗಬಱಿ** 'ಬಱು' ಪರಾ.

**ಬಗ್ಗಮರಿ** (ನಾ). ಹುಲಿಯ ಮರಿ; ವ್ಯಾಘ್ರಶಿಶು : ಚಳಿಯನುರೆ ಚೆಲ್ಲುವವು ಬಗ್ಗಮರಿಗಳು (ಶಶಶೋ. ೬-೦೦). [ಬಗ್ಗ$_1$+ಮರಿ$_2$ (<ಮಱಿ)]

**ಬಗ್ಗರೆ** 'ಬಕ್ಕರೆ' ನೋ.

**ಬಗ್ಗವಳ್ಳಿ** (ನಾ). ಒಂದು ಬಗೆಯ ಬಳ್ಳಿ (?) : ಬಗ್ಗವಳ್ಳಿಯ ಬಳ್ಳಿ ಗಾವಣದೋಳಿಯಿಂ ಸೊಗಯಿಪ್ಪ ಸಮ್ಯಗ್ಗವಾಕ್ಷದ ವಂಕದಾರದ ಕೇತಕೀಗರ್ಗಯಿನೊಂದಿ ನಿಂದಗ್ಗಳಿಕ್ಕೆಯನೀಟ್ಟು ನೀಳ್ದ ನಿವೇಶದೊಳ್ ಮದನಂ ಮಹಿಳೆಗ್ಗು ಪೊರ್ದದ ರೂಪಿನೊಳ್ ನೆಲಸಿರ್ಪವೋಲ್ ಸುಖಮಿರ್ಪನಂ (ಶಾಂತಿಪು. ೩-೭೯). [ಬಗ್ಗ$_2$ + ಬಳ್ಳಿ]

**ಬಗ್ಗಸಮ್ಮ** (ನಾ). –ಬಗ್ಗಂದೊವಲ್ : ಜಡೆಗಳ ಬಂಬಲೇ ಕಲೆದೇಲ್ ಫಣಿ ಸುತ್ತಿದ ಬಳ್ಳಿ . . . ಬಗ್ಗಸಮ್ಮದೊಳ್ಪಡೆ ಪೊಸಚಲ್ಲಣಂ (ಶಂಶಂ. ೩-೩).

[ಬಗ್ಗ$_1$+ಸ್ವಮ್ಮ$_2$ (<ಚವ್ವ)]

**ಬಗ್ಗಳೆ** 'ಬಗ್ಗಣ್ಕೆ$_2$' ನೋ.

**ಬಗ್ಗಿ** 'ಬಗ್ಗು$_3$' ನೋ.

**ಬಗ್ಗಿಸು$_1$** (ಕ್ರಿ). ೧. ಬಗ್ಗುವಂತೆ ಮಾಡು ; ಬಾಗಿಸು : ತರಣಿಶತಕೋಟಿ ತೇಜದ ರತ್ನದೋಹರಿಯ ಪಿರಿಯ ಸೌಧೋತ್ತರಂಗಳ ಪ್ರಾಂಗಣಾಂಗಳೊಳು ಹರನೋಲಗದ ಸಮಯಮಂ ದ್ವಾರಪಾಲಕರ ಶಿರವ ಬಗ್ಗಿಸಿ ಕೇಳುತ ಕರಗಳಂ ಮುಗಿದು (ಗುಶಿಶ. ೩-೯೦) ; ನೀನು ತಲೆ ಬಗ್ಗಿಸಿಕೊಂಡೇ ಕುಳಿತಿದ್ದೀಯಲ್ಲ (ಕಂಗಾಳ್. ೨೩). ೨. ಚೆಲ್ಲು ; ಸುರಿ : ಬೀರಕ್ಕ . . . ಕಡಾಯಿನ ನೀರನೆಲ್ಲಾ ಬಗ್ಗಿಸಿದ್ದಾಳೆ (ಶಿತಿಶಂ. IX, ೬೨) ; ಮಗ್ಗಲುತೋಟದ ಜನಗಳೆಲ್ಲಾ ಅಲ್ಲಿಗೆ ಬಂದು ನಾನು ನೀರು ಬಗ್ಗಿಸುತ್ತಿದ್ದ ಧಾಟಿಯನ್ನೇ ನೋಡುತ್ತಿದ್ದರು (ಕಂಗಾಳ್. ೬೦೭). ೩. ಸೋಲಿಸು ; ಹಿಮ್ಮೆಟ್ಟಿಸು : ಜಕ್ಕವಕ್ಕಿಯಂ ಪರಿವಡದಿರ್ದ ತೋರಮೊಲೆ ಬಗ್ಗಿಸೆ ನೈದಿಲದಿನೆಯ್ದೆ ಕಣ್ಮಲರ್ ಕೊರಗಿಸೆ ನಾಡೆ . . . ಬನವಣ್ಣನಿವಂದದಿನೊರ್ವಳೊಪ್ಪಿದಳ್ (ಕಬ್ಬಿಗ. ೦೦೨). ೪. ಗದರಿಸು ; ಬೆದರಿಸು; ಝಂಕಿಸು : "ಬಗ್ಗಿಸಿದನೆನಲ್ಕೆ ಝಂಕಿಸಿದನೊಳು ಹೋಬ್ಬುಗಂ" (ಶಬ್ದಾರ. ೯೭) ; ಒಸೆಗೆ ಮೇಣ್ ಮುನಿಗೆ ಮೇಣವ ರೆಲ್ಲರುಮಂತೆ ಬಗ್ಗಿಸುಗೆ ಮತ್ತುಮಱಿಯಲಾಗದು ನೆಟ್ಟನೆ ಪೂಣ್ದುದಂ (ಕಂಪಾ. ೦-೦೩೫) ;ಕಿಱಿಯಂದು ತಂದೆ ಬಗ್ಗಿಸಲಱಿಯನೆ ತಾಯ್ ಜಡಿದು ತಿಳಿಪಲಱಿಯಳೆ (ಸುಕುಸೂ. ೨-೬೨). ೫. ಮೂದಲಿಸು ; ಹೀಯಾಳಿಸು ; ಹಂಗಿಸು : ನಾಗಂಗಳ್ ಪೆಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತುಂ ಬಂದೊಡೆ ನೀಮೊದಱಿಯವಂ ಬಗ್ಗಿಸಿದೊಡದೃಶ್ಯಂಗಳಾಗಿ ಪೋಕುಂ (ಚಕ್ರಾ. ೦೦೦-೪) ; ಮುನಿಕುಮಾರರೋದುವ ವೇದವೇದಾಂಗಂಗಳಂ ತಪ್ಪಿವಿಡಿದು ಜಡಿದು ಬಗ್ಗಿಸುವ ಪದುಮರಾಗದ ಬಣ್ಣದರಗಿಳಿಗಳುಮಂ (ಹಂಕಾಶ. ೦-೦೦೩ ಪ) ; ಕಟಲೆ ನುಡಿದಟಲೆ ಬಗ್ಗಿಸಿ ಘಟಿಲೆನೆ ನಡೆಯೆಂದು ಜಡಿದು ಸಾರಥಿಯಂ ಪಾಂಗುಱದು ನಿಲಲೀಯದಲ್ಲಿಂದೆಟೆದುಯ್ವಂತುಯ್ದು ಶಾತ್ರವರುಮಂ ನರನಂ (ಶಾಕ್ಯಾಪ. ೨೬). 'ಬಾಗಿಸು$_1$' ಪರಾ.

[ಬಗ್ಗು$_1$ + — ಇಸು$_3$]

**ಬಗ್ಗಿಸು$_2$** (ಕ್ರಿ). (ಕೋಗಿಲೆ ಮೊದಲಾದ ಪಕ್ಷಿಗಳು) ಕೂಗು ; ಉಲಿ : ಕಾವ್ಯಬಂಧಮೊಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊಱೆಯಿಂ ಬಟಲ್ದು ತುಂಬಿಗಳಿನೆ ತುಂಬಿ ಕೋಗಿಲೆಯಿಂ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್ (ಶಂಶಶಾ. ೦-೬) ;. ಪಿರಿದುನ್ನದಾಳೆ ಬಗ್ಗಿಸುವ ಪಿಕಾಳಿ ಪುಷ್ಪಿತ ಲತಾಳಿ (ಎಕ. VIII, ಸಾಗರ. ೦೦೬-೨೬; 1042) ; ಪಾಡುವ ತುಂಬಿ ಬಗ್ಗಿಸುವ ಕೋಗಿಲೆ ನರ್ತಿಪ ನೀಲಕಂಠ (ಕಮಪಾ. ೩-೦೯೯).

[ಬಗ್ಗು$_2$ + — ಇಸು$_3$ ]

**ಬಗ್ಗು$_1$** (ಕ್ರಿ). ೧. ಕೆಳಮುಖವಾಗು ; ಬಾಗು : ಬಗ್ಗಿ ಕವಿವಂಬುಗಳ ಗಱೆಗಳ ಲಗ್ಗೆಗರಿನಾಯಕರ ಕವಿಗಳು ನೆಗ್ಗಿದವು ಮುಗ್ಗಿದವು ಮನ ಮಾಱಿಕಂಕದತಿರಥರ (ಕುಭಾ. ೫. ೨೦-೮) ; ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ ? (ಗಾದೆ). ೨. ಡೊಂಕಾಗು ; ವಕ್ರವಾಗು : ಆ ಕಿಟಕಿಯ ಸರಳುಗಳೆಲ್ಲ ಹಳೆಯವಾಗಿ ಬಗ್ಗಿವೆ (ಕುಶಿ). ೩. ಓರೆಯಾಗು ; ಓಲು : ಬಿನ್ನಣದೆ ಗೋಪುರದ ಮುಂಟಪದ ಪೃಥುವೊಗಳು ಚೆನ್ನಾಗಿ ನಿಗುರುತಂ ಬಗ್ಗುತ್ತ. . .ನೋಡಿ (ಚಕುಶ. ೨-೩-೬೬). ೪. ವಿನಯವನ್ನು ಹೊಂದು ; ವಿನೀತವಾಗು : ಭೋಗ್ಗಿನೊಂದೇ ದಿನದೊಳು ಕೋಟಿ ಸಾತ್ಮನು ಬಗ್ಗಿದಾಗ್ ಬಾಗಿಲಹುದೇ (ಚಶಿ. ೨-೬೬) ; ಬಗ್ಗಿದವನಿಗೆ ಒಂದು ಗುದ್ದು ಹೆಚ್ಚು (ಗಾದೆ). ೫. ಮಣಿ ; ಸಗ್ಗು ; ತಗ್ಗು : ಅತಿಕಾಂಕ್ಷೆಯನಾವಂ ಮಾಳ್ಪನವಂ ಸತತಂ ಹಿಂಸೆಗೆ ಬಗ್ಗುವನಲ್ಲಂ (ಜಯುಕಾ. ೦೦-೦೩) ; ಗ್ರಾಮದ ಮುಖಂಡರು ಇಷ್ಟು ಪ್ರಯತ್ನಪಟ್ಟರೂ ಬಗ್ಗದ ಹಟವಾದಿಯು . . . ಗ್ರಾಮಸ್ಥರನ್ನು ಅಕರಾಧಿಗಳನ್ನಾಗಿ ಮಾಡುತ್ತಿದ್ದನು (ಜಪ್ಪಶ. ೦೭). ೬. ಗದರು ; ಝಂಕಿಸು : 'ಬಗ್ಗಣ್ಕೆ$_1$', 'ಬಗ್ಗಿಸು$_1$' ಪರಾ. 'ಬಾಗು$_1$' ಹೋ.

[ದೇ. ॥ ತುಳು. ಬಗ್ಗು ; ಕೊಡ. ಬಗ್ಗ್]

**ಬಗ್ಗು$_2$** (ಕ್ರಿ). (ಪಕ್ಷಿಗಳು) ಕೂಗು ; ಉಲಿ : 'ಬಗ್ಗಿಸು$_2$' ಪರಾ.

**ಬಗ್ಗು$_3$** (ನಾ). ಬೆದರಿಸುವಿಕೆ ; ಗದರಿಸುವಿಕೆ ; ಝಂಕಣೆ : "ಬಗ್ಗು, ಬಿಪ್ಪಂಡಂ, ಬೆಪ್ಪ, ಚಪ್ಪರಣೆ–ಈ ೪ ಜಂಕಣೆ" (ಶಶಾ. ೩೭-೨೫೬).

[ <ಬಗ್ಗು$_1$ ].

**ಬಗ್ಗು$_4$** (ನಾ). ಪಕ್ಷಿಗಳ ಕೂಗು ; ಹಕ್ಕಿಗಳ ಧ್ವನಿ : "ಬಗ್ಗನಲ್ಕದು ಪಕ್ಷಿಗಳ ದನಿಗೆ" (ಚಶ. ೦೨೭). [<ಬಗ್ಗು$_2$]

**ಬಗ್ಗು$_5$** (ನಾ). ಐಶ್ವರ್ಯ ; ಸಂಪತ್ತು : "ಬಗ್ಗು (ಬಗ್ಗ, ಬಾಗ)–ಭಾಗ್ಯ" (ಶಬ್ದಕೋ. ೨೭) ; ಕೃತಿಯಿದು ಚದುರಕರ್ಣಾಟಕಕಲೆಯಱಿವನ ಬಗ್ಗಿನ ಬೆಳೆ (ಸೂಲಶೋ. ೦-೨೨) ; ಮೂಱವರಲಳಿತೆಯ ಲಲನೆಯ ನೊಸಲದು ಬಗ್ಗಿನ ನೆಲೆವನೆ (ಹಾಲಾಸ್ಯ. ೦-೦೩-೦೭) ; ಪುಣ್ಯದ ರಾಶಿಯಂತೆ ಬಗ್ಗಿನ ನೆಲೆಯಂತೆ ಮೈಮೆವೆತ್ತು ಚೆಲ್ವಾದ ಪರ್ವತಂ ತೋಱೆವಂದುದು (ರಾಜಾಶ್ವ. ೯೨-೦೦). [<ಪ್ರಾ. ಬಗ್ಗ./ಸಂ. ಭಾಗ್ಯ]

**ಬಗ್ಗುಬಡಿ** (ಕ್ರಿ). (ಅಲಂ) ಬಾಯಿ ಮುಚ್ಚಿಸು : ಅಡಗಿಸು ; ಸಂಪನ್ನನಾಗಿಸು : ಸಂನ್ಯಾಸಿಗಳನ್ನು ಬಗ್ಗುಬಡಿದೆವೆಂದು ಹಂಸಡಿಂಭರ ಅವಿನಯವು ಮತ್ತಷ್ಟು ಉಬ್ಬಿ ಹರಿಯಿತು (ಹೀಗಟ್ಟಿ. ೦೯೦) ; ತಾಯಿಯನ್ನು ಬಗ್ಗುಬಡಿದಂತೆ ಈ ಬಾರಿಯೂ ಮಾಡಬೇಕೆಂದು ನೆನೆಸಿ ಇದರ ಬಗ್ಗೆ ಮನೆಯಲ್ಲಿ ಚಕಾರಶಬ್ದ ತೆಗೆಯಲಿಲ್ಲ (ಗಂಪಾಯ. ೩೩).

[ ಬಗ್ಗು$_1$ + ಬಡಿ$_1$ ]

**ಬಗ್ಗುರಿ$_1$** (ನಾ). ಎದೆಗೂಡಿನ ಮೂಳೆ : ಕಟಕಟಾಯಿಸಿ ಮತ್ಸ್ಯವಿಲ್ಲಿರಲ್ ಜಗಕೆ ಸಂಕಟಮಪ್ಪುದಚ್ಚರಿಯೆ ನೋಡೆಂದು ಕೂಡೆ ಲಟಕಟಿಸಿ ಕಡಲೊಳ್ ಪೊಕ್ಕು ಗುಡಿಗುಡಿಪ ವಿಮಾನ ಬಗ್ಗುರಿಯನೊದೆದಾಂಕಿ (ಕಂಪು. ೨೦-೬) : ಉಡಿದರಾಂತವರ ಬಗ್ಗುರಿಗಳಂ ದಾನವರ್ ಕುಡಿದರ ರುಣಾಂಬುವಂ ಶಾಕಿನಿಯರ್ (ಕಂಪು. ೨೯. ೨೨).

[ ದೇ. ॥ ಕೊಡ. ಬಗ್ಗರೆ = ಬೆನ್ನೆಲುಬು ]

**ಬಗ್ಗುರಿ$_2$** (ನಾ). ಜಿಂಕೆ ಮೊದಲಾದ ಪ್ರಾಣಿಗಳನ್ನು ಹಿಡಿಯುವವನು; ಬೇಡ : ಜಗದ ಪ್ರಾಣಿಗಳುಲಿದುಲಿದು ಮರಳಿ ಮತ್ತಲ್ಲಿಯೇ ಬೀಳಲು ಬಲೆಯ ನೇಣು ಬಗ್ಗುರಿಯ ಕೈಯಲಿರಲು ಬಲೆಯ ನೇಣ ಕಣ್ಣಿಯ ಕಳಚಿ ಶರಣನು ಶರಣೆನುತ್ತವೆ ನಿಂದು (ಅವಶಂ. ೯೩-೩೭೭). [< ಸಂ. ವಾಗುರಿಕ]

**ಬಗ್ಗುವೆಣ್** (ನಾ). ಸಂಪತ್ತಿನ ದೇವತೆ ; ಭಾಗ್ಯಲಕ್ಷ್ಮಿ : ಬಗ್ಗದೊವಲು ಡೆಯೊಳುಳ್ಳುಡೆ ವಿರಾಜಿಸುತಿರಲ್ ಬಗ್ಗುವೆಣ್ಣಿನಿಯನಚ್ಚಿಯ ಚೆಲ್ವಗಾಲ ಸಲಹಗ್ಗಳದ ಭೋಗವಮ್ಮಲ್ಲ (ಕೀರಪು. ೭-೭೯). [ಬಗ್ಗು$_5$ + ವೆಣ್]

**ಬಗ್ರಿಹಗ್ಗ** (ನಾ). ಎರಡು ಕೊನೆಗಳಲ್ಲೂ ಹಿಡಿದುಕೊಳ್ಳಲು ಅನುಕೂಲವಾದ ಲೋಹದ ಬಳೆಗಳನ್ನು ಹೊಂದಿರುವ ಹಗ್ಗ ; ಈ ಇದಕ್ಕೆ 'ಡಗ್ರಿಹಗ್ಗ'ವೆಂದೂ ಹೇಳುತ್ತಾರೆ : ಅವರು ಬಲೆಗಳನ್ನೆಲ್ಲಾ ಒಂದರೊಂದಿಗೆ ಒಂದನ್ನು ಗಂಟುಹಾಕಿ ಅದರ ಎರಡೂ ತುದಿಗಳಿಗೂ 'ಆಣಿ' (ಬಿದಿರಿನ ದೊಣ್ಣೆ)ಯನ್ನು ಹಾಕಿ 'ಬಗ್ರಿ' ಹಗ್ಗವನ್ನು ಕಟ್ಟಿ ಆಚೆ ಈಚೆ ಗಿಡಗಳಿಗೆ ಬಿಗಿದರು (ಕೃಸರ್ವೇ. ೦೦೩) ; ಬಲೆಯ ಕೆಳಗಡೆ ಅಂಚು. ಆ ಅಂಚುಗಳ ತುದಿಯಲ್ಲಿ ಕಟ್ಟಿರುವ ಬಗ್ರಿಹಗ್ಗವನ್ನು ಹತ್ತಹತ್ತು ಮಾರು ದೂರಕ್ಕೆ ಎಳೆದು ಬಂಡೆಗಳಿಗೂ ಕುರುಚಲುಗಿಡದ ಬುಡಗಳಿಗೂ ಕಟ್ಟಿದರು (ಹುಬ್ಬ. ೦೯). [ಬಗ್ರಿ$_1$ + ಹಗ್ಗ (< ಪಗ್ಗ) ]

**ಬಚಕಾನಿ** 'ಬಚ್ಚಕಾನೆ' ನೋ.

**ಬಚನಾಗ** (ನಾ). ಒಂದು ಬಗೆಯ ವಿಷಯುಕ್ತವಾದ ಔಷಧಿ ಬೇರು : ಬಚನಾಗ (ಕಡಗೋಲಮಂಡೀ ಬೇರು), ಸುಂಬಳಕಾರ ಮೊದಲಾದ ಪ್ರಸಿದ್ಧ ವಿಷಗಳು. ಇವುಗಳಿಗೆ ಯೋಗವಾಹಿ ಎಂದೂ ಹೇಳುವರು ; ಅಂದರೆ ಬೇರೆ ಔಷಧಗಳ ಕೂಡ ಬೆರಸಿದರೂ ಇವು ತಮ್ಮ ಪರಾಕ್ರಮವನ್ನು ತೋರಿಸತಕ್ಕವೆಂಬ ಅರ್ಥವು (ಗೃಹವೈ. ೬) ; ಜೀವಸಗಳು ೧. ಅಕ್ಕಲಖಾರ . . . ೧೫. ಬಚನಾಗ (ಮುಂಬವ್ಯಾ. ೦೨೨).
[← ಹಿಂ. ಬಛನಾಗ್ ; ಮರಾ. ಬಚನಾಗ್. / ಸಂ. ವತ್ಸನಾಭ ]

**ಬಚಲು** 'ಬಚ್ಚಲ್' ನೋ.

**ಬಚಾಯಿಸು** (ಕ್ರಿ). ೧. ಉಳಿಸು ; ಪಾರುಮಾಡು; ರಕ್ಷಿಸು : ಏನು ತಪ್ಪುಮಾಡಿದ್ದರೂ ಅವರನ್ನು ಬಚಾಯಿಸುತ್ತೇನೆ (ಕಂಠ. ೨೯೩) ; ಅವಳನ್ನು ಬಚಾಯಿಸುವ ಜವಾಬ್ದಾರಿ ನಿಮ್ಮದು (ಜಾರುದಾ. ೬೨) ; ನಿಮ್ಮನ್ನು ಬಚಾಯಿಸುವ ಮನಸ್ಸಿದೆ (ದೇವಹು. ೦೫೦). ೨. ನಿಭಾಯಿಸು ; ನಿರ್ವಹಿಸು : ಅವನು ಯಾವ ಕೆಲಸವನ್ನಾದರೂ ಬಚಾಯಿಸುತ್ತಾನೆಂಬ ವಿಶ್ವಾಸ ನನಗಿದೆ (ರೂಢಿ).

**ಬಚಾಯಿಸಿಕೊಳ್ಳು** = ಉಳಿದುಕೊಳ್ಳು; ಪಾರಾಗು; ರಕ್ಷಿಸಿಕೊಳ್ಳು: ನಿಮ್ಮಲ್ಲಿ ಬಚಾಯಿಸಿಕೊಂಡೋರು ಯಾರು ? (ರಂಗವ. ೯೫) ; ಅವನಿಂದ ಬಚಾಯಿಸಿಕೊಂಡು ಹೋದರೆ ಸಾಕಪ್ಪ ಅಂತಿದ್ದೆ (ಪುವರು. ೨೦೨).
[< ಬಚಾವು + – ಇಸು$_3$]

**ಬಚಾವ್** 'ಬಚಾವು' ನೋ.

**ಬಚಾವು**, ಬಚಾವ್ (ನಾ). ಉಳಿವು ; ಪಾರಾಗುವಿಕೆ ; ರಕ್ಷಣೆ : ಮುಂದೆ ನಡೆದ ಕೇಸಿನಲ್ಲಿ ಕಾಳೇಗೌಡನ ಬಚಾವು (ಕಂಠ. ೨೮೫) ; ಸಂಜೆಯ ಮುಂದೆ ಈ ದೃಶ್ಯದ ರಂಗತಾಲೀಮನ್ನು ಇಡುವುದರಿಂದ ಸಾರ್ವಜನಿಕರ ಕುಳ್ಳು ಕಟ್ಟಿಗೆಗಳು ಬಚಾವು ಆಗುತ್ತದೆ (ಕಂಗರೋ. ೦೨೦). **ಬಚಾವ್** : "ಬಚಾವ್ ಆದೆನಪ್ಪ" ಎನ್ನುತ್ತ ಪಾಗಾರವನ್ನಿಳಿದ ಮಾಸ್ತರರ ಮನಸ್ಸು ಬಹಳ ಕದಡಿಹೋಗಿತ್ತು (ಮೂರುದಾ. ೬೯) ; ಈಗಿನ ದಿವಸದಲ್ಲಿ ಮಕ್ಕಳು ಕಲಿತು ಬುದ್ಧಿವಂತರಾಗದಿದ್ದರೆ ಬಚಾವೇ ಇಲ್ಲ (ಸ್ವಕೃಹೂ. ೩೭).

**ಬಚಾವಾಗು** = ಉಳಿದುಕೊಳ್ಳು; ರಕ್ಷಿಸಿಕೊಳ್ಳು; ಪಾರಾಗು : ನಿಮ್ಮ ಮಾತಿನಂತೆ ಇವತ್ತು ಬಚಾವಾದರೆ ಸಾಕು (ಪುರೆ. ೦೫೨). **ಬಚಾವು ಮಾಡು** = ಉಳಿಸು ; ಪಾರುಮಾಡು ; ರಕ್ಷಿಸು : ನಿನ್ನನ್ನು ಹೇಗೋ ಬಚಾವು ಮಾಡಿದರಂತೆ (ಮಧುಪ. ೨೦೦). [ ← ಹಿಂ. ಮರಾ. ಬಚಾವ್]

**ಬಚ್ಚ$_1$**, **ವಚ್ಚ$_1$** (ನಾ). ೧. ಮಗು ; ಬಾಲಕ ; ಹಸುಳೆ : "ಬಚ್ಚ—ವತ್ಸ = ಮಗು, ವೈಶ್ಯ" (ಕರ್ಣಕೋ. ೨೯) ; ಬಚ್ಚರ ಬಯಲ ನುಡಿಗೆ ಬಗೆಯಿತ್ತೊಡೆ ಮೆಚ್ಚಿ ಮಿಗಿಲನೀಯದನೇಳಿಸಿದೊಡೆ . . . ಪುಚ್ಚಣೆಯಹುದು (ಜಯಾಶಾ. ೦೯-೫೦). ೨. ಹಸುವಿನ ಕರು : (ಶ). **ವಚ್ಚ$_2$** : ೨. ಪಶು . . . ವಚ್ಚ ಸಹಿತ ಬಂದಿರೆ (ಮೋಹಕ. ೨೨-೩೮). [< ಪ್ರಾ. ಬಚ್ಚ, ವಚ್ಚ, ವಚ್ಛ. / ಸಂ ವತ್ಸ. / ಪಾರ. ಹಿಂ. ಮರಾ. ಬಚ್ಚಾ]

**ಬಚ್ಚ$_2$** (ನಾ). ವ್ಯಾಪಾರ ಮಾಡುವವನು ; ಹರದ ; ವೈಶ್ಯ: ಬಚ್ಚರ ದೂಸಿಗರ ನಿಯೋಗಿಗಳಗ್ಗಳವಪ್ಪ ಸೂಳೆಯರ ಸಾಮಂತರ ಕಸವರಂಗಳೆಲ್ಲಮಂ ಕಳ್ದು (ವಡ್ಡಾರಾ. ೦೨೩-೯) ; ಧನದಭವನಮೆನಿಪ ಸಿರಿಯ ಬಚ್ಚರಾಪಣಂಗಳಿಂ ಪೊದಟ್ದ [ಕಾವ]ಣಂಗಳಿಂ . . . ಸಮಸ್ತವಸ್ತುವಿಸ್ತಾರಹಾರಮಾಗಿರ್ದ ಹಸ್ತಿನಪುರವೆ ನಿಜವಂಶಾವಳಂಬಮಾಗೆ (ಕಂಕಥಾ. ೦-೫೭ ರಗಳೆ) ; ಬಚ್ಚರ್ ಕಿರ್ಚು ಮುಟ್ಟಿದ ತುಪ್ಪದಂತೆ ಬಲ್ಪುಗಿಡೆ (ಧರ್ಮಾಮೃ. ೨-೬೯).
[<ಸಂ. ವೈಶ್ಯ./ ತೆಲು. ಬಚ್ಚು]

**ಬಚ್ಚ$_3$** (ನಾ). ಮಕ್ಕಳು ಆಟಕ್ಕಾಗಿ ಬಳಸುವ ಕಲ್ಲು ಅಥವಾ ಬಿಕ್ಕರೆಯ ಚಪ್ಪಟೆಯಾದ ಸಣ್ಣ ಬಿಲ್ಲೆ,—ಹಲಪೆ ; ಚಾಪು : ಹುಡುಗಿಯರು ಬಚ್ಚ ಇಟ್ಟುಕೊಂಡು ಕುಂಟೆಬಿಲ್ಲೆಯಾಟ ಆಡುತ್ತಿದ್ದಾರೆ (ರೂಢಿ).
[← ಮರಾ. ಬಚ್ಚಾ]

**ಬಚ್ಚಕಾನೆ**, ಬಚಕಾನಿ, ಬಚ್ಚಖಾನೆ, ಬಚ್ಚಗಾನಿ (ನಾ). ೧. ಹುಡುಗರ ಬಟ್ಟೆ,—ಉಡುಪು : (ಶ). **ಬಚಕಾನಿ** : ೧. ಹುಡುಗರ ಸಲುವಾಗಿ ನೆಯ್ದ ರೇಶ್ಮೆಯ ಅಂಚಿನ ಸಣ್ಣದೋತರ ಜೋಡುಗಳಿಗೆ ಬಚಕಾನಿಯೆನ್ನುತ್ತಾರೆ (ಮುಂಬಯಿ. ೩-೯೯). ೨. ಬಟ್ಟೆ; ವಸ್ತ್ರ: ಅವರ ಕಣ್ಣಿಗೆ ಅಷ್ಟೊಂದು ಜರಿಪೇಟಗಳೂ ಬಣ್ಣದ ಬಟ್ಟೆಗಳೂ ಬಚಕಾನಿಗಳೂ . . . ಸೇರಿದ ಹಾಗಿತ್ತು (ಶಾವೂರು. ೩೩೦). **ಬಚ್ಚಖಾನೆ** : ೨. ಮೈತುಂಬ ಬಚ್ಚಖಾನೆಗಳನ್ನು, ಸೀರೆ, ಕಣಗಳನ್ನು ಮದುವಣಗಿಗೆ ಹೊರಿಸಿದರು (ಮರಕು. ೦೦೩). **ಬಚ್ಚಗಾನಿ** : ೧. ಬಚ್ಚಗಾನಿ ಉಟ್ಕಂಡು ಚಿನ್ನದ ರುದ್ರಾಕ್ಷೀನ ಕೊರಳಿಗೆ ಹಾಕಿಕೊಂಡಿದ್ನಲ್ಲಾ ? (ಮರಿಮ. ೫೦೯). [← ಮರಾ. ಬಚಕಣೀ]

**ಬಚ್ಚಖಾನೆ** 'ಬಚ್ಚಕಾನೆ' ನೋ.

**ಬಚ್ಚಗಾನಿ** 'ಬಚ್ಚಕಾನೆ' ನೋ.

**ಬಚ್ಚಣಿಸು** (ಕ್ರಿ). ೧. ಬಣ್ಣವನ್ನು ಹಚ್ಚು,—ಬಳಿ ; ರಂಗನ್ನು ಲೇಪಿಸು : ಬರೆದು ಬಚ್ಚಣಿಸಿದಂತೆನ್ನೆದೆಯೊಳಗಿರು ಗುರುವೆ (ಶಕ. ೯-೦೨೩) ; ಮಣ್ಣಿನಿಂದ ಹೊಸದಾಗಿ ಒಂದು ದೊಡ್ಡ ಕುದುರೆಯನ್ನು ಮಾಡಿ ಬಚ್ಚಣಿಸಿ ನಿಲ್ಲಿಸಿದ್ದರು (ವಗಗ. ೯೫). ೨. ಬಳಿ ; ಲೇಪಿಸು : ಸುಣ್ಣವ ಮೂಗಿನಲಿ ಬಚ್ಚಣಿಸಿ ಕಳುಹುವನವರ ಮನೆಗಳಿಗೆ (ಕೃಶಾಶಾ. ೬-೩೩).
[ಬಚ್ಚಣೆ$_1$ + – ಇಸು$_3$]

**ಬಚ್ಚಣೆ$_1$**, ಬಚ್ಚರಣೆ, ಬರ್ಚಣೆ (ನಾ). ೧. ಬಣ್ಣವನ್ನು ಬಳಿದು ಚಿತ್ರಿಸುವಿಕೆ ; ಬಣ್ಣದ ಕೆಲಸ : ಕಣ್ಣಿಲ್ಲದವಂಗೆ ಬಣ್ಣ ಬಚ್ಚಣೆ ಯಾಕೆ (ಮೋಳಿಮಾ. ೯೨-೬೬೬) ; ತೋಳ ದರ್ಪದಲುಬ್ಬಿ ವಾಲಿಯ ಬಾಲಕನ ಬಚ್ಚಣೆಯ ತೊಟ್ಟಿಲ[ಪಾಠಾಂ. ಬಚ್ಚರಣೆದೊಟ್ಟಿಲ]ಕಾಲ ದೆಸೆಯಲಿ ಕಟ್ಟಿ ಪಡೆದವನೀತನಲ್ಲವಲೆ (ಕೊರಾ. ೬-೦೦-೫೦). ೨. ಶೃಂಗಾರ; ಅಲಂಕಾರ: ಬಣ್ಣ ಬಚ್ಚಣೆಯ ರಂಜನೆಯ ವೇಷವನೊಂದಿದಣ್ಣಗಳು ಸಹಜಸುಜ್ಞಾನಿಗಳೆನಿಪ್ಪ ಮುಕ್ಕಣ್ಣನ ಶರಣಜನಕೆ ಸರಿಯೆ (ಸಿದ್ಧೇಶ. ೨೨-೦೬೫). ೩. ಬಣ್ಣ ಹಾಕಿದ ಆಕೃತಿ ; ಚಿತ್ರ: ಪೊಳೆವ ಬಚ್ಚಣೆಯ ಹರಿಗೆ ಬಿಚ್ಚುಗತ್ತಿಯ . . . ಬಲಗಳ ಮಧ್ಯದೆ ಸರ್ವಸಂಭ್ರಮದೊಳು ಮಲೆಯಾಳದೇಶದವನೀಶ ಬಂದ (ಕಂವಿ. ೨೦-೬೫). ೪. (ಅಲಂ) ವೇಷ ; ಸೋಗು : ಬನ್ನಿರೆ ಅಕ್ಕಗಳು ಹೋಗಿರೆ ಅಲದ ಮರಕ್ಕೆ ಕಚ್ಚುವುವೆ ನಿಮ್ಮ ಚಿಪ್ಪಿನ ಹಲ್ಲುಗಳು ಬೆಚ್ಚಿಸುವುವೆ ನಿಮ್ಮ ಬಚ್ಚಣೆಯ ರೂಹುಗಳು (ಬಸವ. ೫೬೨) ; ತೊಲಗದ ಕಂಭದ ಹುಲಿಯ ಬಚ್ಚಣೆಯ ಗಜಮುಖದ ಭುಜಬಳಗರುಡನ . . . ಹರಿಗೆಕಾಜಿರ ಪರಿವೀಧಿಯೊಳಂ (ಗಂಳೆ. ೬-೫೫ ವ). **ಬಚ್ಚರಣೆ** : ೩. ಅಂತು ಬರಹದ ಬಚ್ಚರಣೆಯ ಪೆಣ್ಣು ಕಣ್ಣೊಳ್ ತೊಟಲೆ ಧೈರ್ಯಂಗೆಟ್ಟು ಬಾಯ್ವಿಟ್ಟು ಕನ್ಯಾರತ್ನಂ ತನಗೆಂತು ಸಾಧ್ಯಮಪ್ಪುದೆಂದು ವಿಚಾರಿಸಿ (ಕುಮಾರ. ೩-೯೨ ವ) ; ಶರಭಭೇರುಂಡರೂಪಾಂಚಿತ ವಿಚಿತ್ರದ ಬಚ್ಚರಣೆಯ ಹರಿಗೆಯ . . . ಹರಿಗೆಕಾಜಿರ ಮೊತ್ತದೊತ್ತಿನುಭಯಪಾರ್ಶ್ವದೊಳು (ಹಮ್ಮಿರ.

೩-೩೩ ಪ). ೫. ಬಣ್ಣ ಬಳಿಯುವ ಕಸಬು ; ಬಣ್ಣಗಾರಿಕೆ : ಕಳಕಳಿಕೆ ಕೋಳಾಹಳಿಸೆ ಕದ್ದಳಿಗ ದೂಸಿಗ ಬೂಸ ಗಂಧಿಗ ಕೊಲಪ ಚಿಪ್ಪಿಗ ಬಚ್ಚರಣೆ ಬಳೆಗಾಱ ಬೋಗಾಱ . . . ಜಂಗುಳಿಗಗೇರಿಗಳೊಳಗೆ ರ್‍ಘಾಡಿಸಿದನು ಶಿಖಾಳಿಗಳ (ಶೂರಂ. ೩-೬-೩೩). ೬. (ಅಲಂ) ಮಾಯೆ: ಬಚ್ಚರಣೆಯ ಸಂಸಾರದ ಹಚ್ಚಣೆಯ ಕಂಡು ದಿಟವೆನುತಿರ್ಪ್ ಕುಚ್ಚಿತಮನದಾಮಿಸಮಂ ಬೆಚ್ಚಿಸುವಡಿದೋನ್ನಮಶಿವಾ (ಶರಶಂ. ೨೯). **ಬರ್ಚಣೆ** : ೩. ಕೋಡ ಮೊನೆಯೊಳ್ ತಗುಳ್ಚಿದ ಸೂನಗಿಗತ್ತಿಯ ಕೊನೆಗೊಡಂಕೆಯೊಳ್ ತೂನೆವ ಬಿಳಿಯ ಚಾಮರದ ಬಿದುವೊಳ್ಪರೆದು ಬರ್ಚಿಸಿದ ಸಿಂಧೂರದ ಬರ್ಚಣೆಯ . . . ವಿಳಾಸಮಳವಡೆ (ಶಾಶಕೇ. ೬-೧೦ ಪ).

**ಬಚ್ಚಣೆಯ ಮಾತು** = ಬಣ್ಣದ ನುಡಿ; ಗಿಲೀಟಿನ ಮಾತು : ಬಣ್ಣ ಬಚ್ಚಣೆಯ ಮಾತು ಕಲಿತು ಹೊನ್ನು ಹೆಣ್ಣು ಮಣ್ಣಿಗಾಗಿ ಅನ್ಯವ ನಿಕ್ಕುವರ ಪ್ರಸಂಗವ ಹಡೆಯಬಂದ ಗನ್ನಗಾಱಂಗೇಕೆ ಅಱುವು (ವೋಶವಾ. ೩೯-೩೩೯).

[< ಪಚ್ಚು₃ + – ಅಣ್₄. / ತೆಲು. ಬಚ್ಚೆನ. / ಸಂ. ಪ್ರಚ್ಛನ್ನ]

**ಬಚ್ಚಣೆ₂** 'ಬಚ್ಚಳೆ' ನೋ.

**ಬಚ್ಚಣೆವಾತು** (ನಾ). ಬಣ್ಣದ ಮಾತು ; ಗಿಲೀಟಿನ ನುಡಿ : ಬಚ್ಚರ ಬಯಲ ನುಡಿಗೆ ಬಗೆಯಿತ್ತೊಡೆ ಮೆಚ್ಚಿ ಮಿಗಿಲನೀಯದನೇಳಿಸಿದೊಡೆ ಬಚ್ಚಣೆವಾತಿನ ಬದಗರ್ಗೊಲಿದೊಡೆ . . . ಪುಚ್ಚಣೆಯಹುದು (ಶಯುಶಾ. ೦೯-೩೦) ; ಈ ನಿಮ್ಮ ಬಚ್ಚಣೆವಾ[ಶಾಶಂ. ಮಾ]ತಿಗಿರದೆ ನಾನೊಡ ಬಡುವುದಿಲ್ಲ (ಸಪ್ಪು. ೩-೬೯). [ಬಚ್ಚಣೆ₁ + ಮಾತು₁]

**ಬಚ್ಚಣೆವೆಱು** (ಕ್ರಿ). ಬಣ್ಣದ ಕೆಲಸದಿಂದ ಕೂಡಿರು ; ಚಿತ್ತಾರ ವನ್ನು ಪಡೆ : ಪರಿಗೆಗಳಲ್ಲಿ ಕೀಲಿಸಿದ ಗೆಜ್ಜೆಯ ಬಚ್ಚಣೆವೆತ್ತ ಬಿಲ್ಗಳ್ (ಶಬ್ದಶಾ. ೨೬೩). [ಬಚ್ಚಣೆ₁ + ಪೆಱು₁]

**ಬಚ್ಚನಾಲಗೆ** (ನಾ.) (ಅಲಂ) ವ್ಯರ್ಥವಾದ ನಾಲಗೆ: ಅಚ್ಚ ಪಳದಿಯ ಕಾಯ ಜೋಡ ಮೇಲೊತ್ತದೊಡೆ ನಚ್ಚಿರ್ದ ಕೈಯ ಕರಿದಿನ ಹಿಂಡ ಹಿಡಿಯದೊಡೆ ಮೆಚ್ಚಿನಾಟಕೆ ಮಿಱಿ ಬಂದ ಕೆಂಪಿನ ಹಣ್ಣನಂಡ ಲೆದು ಬಿಡದಿರ್ದೊಡೆ ಬಚ್ಚನಾಲಗೆಯೆ ಬೀಳೆಂದು ಹಾಸಂಗಿಯಂ ಪಚ್ಚೆಯ ವಿದೂಷಕನುರುಳ್ಚಿದಂ ಬಾಲಿಯರ ಮಚ್ಚಿಸುವ ಕಟಕಿವಾತುಗಳ ಜಾಣ್ಕೆ ಗಳಿಂದೆ ಪಗಡೆಯಾಡುವ ನೆವದೊಳು (ಕೃಬಿಶಾ. ೬-೩೦). **P** ಇಲ್ಲಿಯ ಶ್ಲೇಷಾರ್ಥದಲ್ಲಿ ಸಂದೇಹವಿದೆ. [< ಬಚ್ಚ₁? + ನಾಲಗೆ]

**ಬಚ್ಚನೆ** (ಅ). ಇದ್ದಕ್ಕಿದ್ದಂತೆ : ತಟ್ಟನೆ; ಕೂಡಲೆ : ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಟ್ದ ನಾಣ ಪೆಂಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ ನಮಿತಾನನಾಬ್ಜೆ ಬಚ್ಚನೆ ಬಸಿಯುತ್ತುಂ (ಶಾಷ್ಟಾಶ. ೬೮೩). [ಬಚ್₉ + – ಅನೆ₁]

**ಬಚ್ಚಬಯಲ್** 'ಪಯಲ್' ಪರಾ.

**ಬಚ್ಚಬಯಲು** 'ಪಯಲ್' ಪರಾ.

**ಬಚ್ಚಬರಿದು** 'ಬಱಿದು' ಪರಾ.

**ಬಚ್ಚಬರಿಯ** 'ಬಱು'₂ ಪರಾ.

**ಬಚ್ಚಬಱಿದಾಗು** 'ಬಱಿದು' ಪರಾ.

**ಬಚ್ಚಬಱಿಯ** 'ಬಱು'₂ ಪರಾ.

**ಬಚ್ಚರ** (ನಾ). ಒಂದು ಬಗೆಯ ರೋಗ (?) : ನೆಲದಾಳಕಲ್ಪಮಂ ಪೇಳ್ವೆ . . . ಅಕ್ಕಿಗಚ್ಚಿನಲ್ಲಿ ಕುಡಿಯೆ ಬಚ್ಚರಂ ಪೋಕು (ಏಪ್ಪಿ.ಪಿ. ೩). [?]

**ಬಚ್ಚರಣೆ** 'ಬಚ್ಚಣೆ'₁ ನೋ.

**ಬಚ್ಚರೆ ?** (ನಾ). ದೇವತೆಗಳ ವಾಸಸ್ಥಾನ ; ಸ್ವರ್ಗ : "ಬಚ್ಚರೆ ಬರ್ದಿಲ್ ಸಗ್ಗಮೆನಲಮರಲೋಕಂ" (ಶಬ್ದಕೈ. ೦೦೦). [ ? ]

**ಬಚ್ಚಲ್**, ಬಚಲು, ಬಚ್ಚಲು₁, ಬರ್ಚಲ್ (ನಾ). ೧. ಹೊಲಸು ನೀರು ಹರಿದುಹೋಗಲು ಮಾಡಿರುವ) ಚರಂಡಿ : ಗಟಾರ ; ಮೋರಿ: "ಕಸಱಿಗೆಯೆಂದು ಬಚ್ಚಲ್" (ಶಶಶಾ. ೬೩-೩೩೩) ; ನಿಚ್ಚಂ ನಿರ್ಮಲಜಲಮಿರೆ ಬಚ್ಚಲ ನೀರ್ಗೆಱೆವ ಕೀಟಕಂಬೊಲ್ಮನ್ನಂ ನಚ್ಚಿದ ಸತಿಯಿರೆ ಬೆಲೆವೆಣ್ಗೆಚ್ಚಿಸುವುದು ನೀತಿಯೇ (ಉದ್ಭಟ. ೧೦-೭೬). ೨. (ವ್ಯವಸಾಯ ಮುಂತಾದುವಕ್ಕೆ ನೀರನ್ನು ಒದಗಿಸಲು ತೋಡಿದ) ನಾಲೆ: ಬಚ್ಚಲ್ಗಳಂ ತಿರ್ದಿಸಲವಿರಳಘರ್ಮಾರ್ದ್ರಕಾಂತಾಜನ ಕ್ಕಾದರದಿಂ ನೀರ್‍ಪಟಮಾಡಲ್ ನೆಱಿಗುವೆಸೆ ಪೊದಟ್ದತ್ತು ಚಂದ್ರಾಂಶು ಜಾಲಂ (ಕಾದಂಸಾ. ೪೨೨); ಬೆಲಗಸೆ ತೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತಿರ್ದಿ ಬಚ್ಚಲನೆಲೆದೋಂಟದೊಳ್ ಪರಿಯಿಸಲ್ ಪಱು ಗೋಲ್ಗಳನಿಕ್ಕಿ ಪಾಯಿಸಲ್ . . . ಬಗೆದುದಂದು ಜನಂ ಘನಚಂದ್ರಿಕಾಂ ಬುವಂ (ಅಶಪು. ೬-೯೩) ; ವಾಪೀಕೂಪದೀರ್ಘಿಕಾಘಟೀಯಂತ್ರಪ್ರವಾಹಂ ಪುಗುವ ಬಚ್ಚಲ್ಗಳ ಪೊಱಮಾಡುವ ತೂಂಬುಗಳ ಬೆಡಂಗು ಕಣ್ಗೆ ನಿರವಿಸೆ (ಅಪಂಪು. ೬-೨೮ ಪ). **ಬಚಲು:** ೨. ಮುರಿದು ಬಂದ ಬಚಲ ಹೆಬ್ಬದುವಿನ ನಟ್ಟ ಕಲ್ಲು (ಬೊಂಶಶಾ. ೦೯೯೯, ಬಂಕಾಪುರ. ೬-೩೯ ; 1258); ನಾರಣಸೆಟ್ಟಿಯ ಬಚಲಿಂದ ತೆಂಕಲು (ಸೌಇಇ. ೦೯೩೦, ಮಂಗಳೂರು. ೩೩೯-೦೨ ; 1278) ; ಪಡುವಲು ಹರಿದ ಬಚಲಿಂದ ಮೂಡಲು (ಸೌಇಇ. ೦೯೩೨, ಉಡುಪಿ. ೩೨೩-೦೩; 1364). **ಬಚ್ಚಲು₁** : ೧. ಬಚ್ಚಲ ನೀರು ತಿಳಿದಲ್ಲಿ ಫಲವೇನು (ಶಿಸಪ. ೦೨೦); ಬಚ್ಚಲುದಕಂ ತಿಳಿದೊಡಾರ ಮಾಹಕ್ಕೆ ಯೋಗ್ಯಂ (ಪಶಶಾ., ೬-೦೩); ತನ್ನ ಕಾಲಂ ತೊಳೆದುಕೊಳಲ್ ಬಚ್ಚಲಿಗೆಳವಡುವುದೆಂದು ಪಿರಿದಪ್ಪಟ್ಟೆಗೆಯ ನೊಂದನೊಯ್ದು ನಿಚ್ಚಲುಂ ನೀರಿಂ ಕಾಲ್ಗಚ್ಚುವ ಸಮಯದಲ್ಲಿ ಮಿಸುನಿ ಯಾಗಿರ್ದುದಂ ಕಂಡು ತುಷ್ಟನಾಗಿ (ಪುಣ್ಯಾಸ್ರ. ೯-೩೨ ಪ) ; ಸಜ್ಜನರ ಸಂಗವದು ಹೆಜ್ಜೇನುಕೊಡದಂತೆ ದುರ್ಜನರ ಸಂಗದೊಡನಾಟ ಬಚ್ಚಲಿನ ರೊಜ್ಜಿನಂತಿಹುದು (ಸರ್ವಜ್ಞ. ೩೦೯). ೩. (ಮನೆಯಲ್ಲಿ) ನೀರು ಹರಿದು ಹೋಗಲು ಅನುಕೂಲವಾದ ಮೋರಿಯಿರುವ ಸ್ನಾನ ಮಾಡುವ ಕೋಣೆ; ಸ್ನಾನಗೃಹ : ನಮ್ಮ ರಾಮೂ ನಿಮ್ಮನೇ ಬಚ್ಚಲಲ್ಲೇ ಸ್ನಾನ ಮಾಡ್ತೀನಿ ಅಂತ ಹಟ ಹಿಡಿದಿದ್ದಾನೆ (ಶಾಶಸಂ. ೦೪) ; ಬಚ್ಚಲಿಗೆ ಬಗೆಯಿಲ್ಲದವ ಮಾಳಿಗೆ ಕಟ್ಟ್ಯಾನೇ ? (ಗಾದೆ). ೪. (ಮನೆಯಲ್ಲಿ) ನೀರು ಹರಿದು ಹೋಗಲು ಅನುಕೂಲವಾದ ಮೋರಿ ಮತ್ತು ಕಟ್ಟೆಗಳಿರುವ (ಸ್ನಾನ ಮಾಡುವ) ನಿರ್ದಿಷ್ಟಸ್ಥಳ: ಬಚ್ಚಲಿನ ಜಗಲಿಯ ಮೇಲೆ ತಾಮ್ರದ ಬೋಸಿ (ಶಾಳಕೂ. ೦೦೩): ಅವರು ಸ್ನಾನ ಮಾಡಲು ಬಚ್ಚಲಿಗಿಳಿದಿದ್ದಾರೆ (ರೂಢಿ). **Δ ಬರ್ಚಲ್:** ೨. ಮೂಡಣ ಕಂಚಿ ವಡ್ಡದಿಂ ಬಡಗಲುಂ ಕೆಱಿಯ ಬರ್ಚಲಿಂದ ಮೂಡಲುಂ (ಎಕ. VII, ಶಿಕಾರಿ. ೦೩೦-೬೦; 1047).

**ಬಚ್ಚಲ ಮನೆ**=ಬಚ್ಚಲು ಕೋಣೆ : ಶ್ರೀಧರನು ಆದಷ್ಟು ಬೇಗ ಬಚ್ಚಲ ಮನೆಗಾಗಿ ಹೊರಟನು (ಶಾಳಕೂ. ೦೦೯).

**ಬಚ್ಚಲು₁** 'ಬಚ್ಚಲ್' ನೋ.

**ಬಚ್ಚಲು₂** 'ಬಸಲೆ' ನೋ.

**ಬಚ್ಚಲುಕೋಣೆ** (ನಾ). ಸ್ನಾನ ಮಾಡಿದ ನೀರು ಹೊರಕ್ಕೆ ಹರಿದು ಹೋಗಲು ಅನುಕೂಲವಾದ ಬಚ್ಚಲಿರುವ ಕೊಠಡಿ; ಸ್ನಾನಗೃಹ : ಅವರ ಮನೆಯ ಬಚ್ಚಲುಕೋಣೆಯಲ್ಲಿ ದೊಡ್ಡ ಹಂಡೆಯಿದೆ (ರೂಢಿ).

[ಬಚ್ಚಲು₁ (<ಬಚ್ಚಲ್) + ಕೋಣೆ₂ (<ಕೋಣ್)]

**ಬಚ್ಚಲುಮನೆ** (ನಾ). = ಬಚ್ಚಲುಕೋಣೆ : ಬಚ್ಚಲುಮನೆ ಕಟ್ಟುವವನು ಅದರಲ್ಲಿ ತೂಬು, ಒಲೆ, ಗೂಡು ಇತ್ಯಾದಿಗಳನ್ನು ತನ್ನ ಅಭಿರುಚಿಗೆ ತಕ್ಕಂತೆ ನಿರ್ಮಿಸುತ್ತಾನೆ (ಜೀವಾತ್ಮ. ೦೬೨).

[ಬಚ್ಚಲು₁ (<ಬಚ್ಚಲ್) + ಮನೆ]

**ಬಚ್ಚಲೆ₁** 'ಬಸಲೆ₁' ನೋ.

**ಬಚ್ಚವಸರ** (ನಾ). ವೈಶ್ಯರ ಅಂಗಡಿಗಳ ಸಾಲು: ಬಾಗಿಲ್ವಾಡದ ಮುಂದಣ ಭಾಗಂಗಳ ಬಚ್ಚವಸರಮರ್ಥಿಗೆ ಕುಡುವುದೋ್ಗದ ಪಸರಮೆ ವಿತ್ರಸಮಾಗಮದಿಂ ಗೆಯ್ಯೊನಿಲ್ಲ ಪರದಂ ಪರದಂ (ಶಾಂತಿಪು. ೩-೦೫). [ಬಚ್ಚ$_2$ + ಪಸರ]

**ಬಚ್ಚಳೆ, ಬಚ್ಚಣೆ$_2$** (ನಾ). ೧. ಕರುವಿನ ಮೇಲೆ ಪ್ರೀತಿಯುಳ್ಳ ಹಸಂ; ವತ್ಸಲೆ: ತಕಾರಕ್ಕೆ ಚತ್ವಂ . . . ವತ್ಸಳಾ–ಬಚ್ಚಳೆ, ಬಚ್ಚಣೆ (ಶಮದ. ೨೬೩ ಪ್ರಯೋ); ಹೊಗರೊಗುವ ಬಚ್ಚಳೆಯು ನಂದಿಯ ಮೊಗದ ಮಾಳ್ಕೆಯೊಳಿಹ ಮುಖಾಡವ ನಗುತ ಶಂಕರದಾಸಿಮಯ್ಯನ ಮುಖಕೆ ಸೇರಿಸಿದ (ಶಂಕದಾ. ೬–೫). ೨. ಪ್ರೀತಿಪಾತ್ರಳಾದ ಯುವತಿ: ಎನ್ನ ಪೊನ್ನ ಪದಗದ ರನ್ನದಾರದ ಬಚ್ಚಳೆ, ನೀಟ! (ರಾಜಶೇಖ. ೦೦೪-೦೦). **ಬಚ್ಚಣೆ$_2$**: ೧. ತಕಾರಕ್ಕೆ ಚತ್ವಂ . . . ವತ್ಸಳಾ–ಬಚ್ಚಳೆ, ಬಚ್ಚಣೆ (ಶಮದ. ೨೬೨ ಪ್ರಯೋ). [< ಸಂ. ವತ್ಸಲಾ]

**ಬಚ್ಚಾಳಿ, ಬಚ್ಚಾಲಿ** (ನಾ). ಕೆಡುಕ; ಕಿಡಿಗೇಡಿ: ಕೆಳಗಡೆಯ ಕೋಣೆಗಳಲ್ಲಿ ಯಾರೋ ಕೆಲವು ಬಚ್ಚಾಳೀ ತರುಣರಂಥವರು ಬಾಡಿಗೆ ಗಿದ್ದರು (ಶಾ. ೩೪). **ಬಚ್ಚಾಲಿ**: ವಾಚು ಮಾರಿಯಾಗಿತ್ತು . . . ಯಾರೋ ಒಬ್ಬ ಬಚ್ಚಾಲಿಗೆ ಹದಿನೈದು ರೂಪಾಯಿಗೆ ಅದನ್ನು ಕೊಟ್ಟಿದ್ದೆ (ಮುಂಗಾರು. ೨೦). [?]

**ಬಚ್ಚಿಸು$_1$** (ಕ್ರಿ). ಬಚ್ಚಿಡು; ರಹಸ್ಯವಾಗಿಡು: ಬಿಚ್ಚಿ ಬಿಸುಡುತ ಮಾಯೆಯ ಬಚ್ಚಿಸುತಲಗದು ಹೂಳಿಸುತ ಸಂಸಾರವಂ ಕೊಚ್ಚಿಸುತ . . . ರಂಜಿಸಿದರಚ್ಚರಿಯ ಶಿವಗಣಗಳು (ಲಿಂಗಪು. ೩೦–೦೦). [ಬಚ್ಚು$_1$ (<ಬಯ್ಚು) + — ಇಸು$_3$]

**ಬಚ್ಚಿಸು$_2$, ಬರ್ಚಿಸಂ** (ಕ್ರಿ). ೧. ಬಣ್ಣ ಹಾಕು; ಚಿತ್ರಿಸು: ವರ್ಣ ವಿನ್ಯಾಸ ಮಾಡು: ಬರೆಯಲ್ಬಾರದು ಬಚ್ಚಿಸಲ್ಕರಿದು (ಅನಂಪು. ೦–೦೦೪); ಚಿತ್ರಿಯೊಳಂದಂಬಡೆವಂತು ಬಚ್ಚಿಸಿದ ಬಣ್ಣಂಗಳಂ ಬೇಟವೇಟ ನೋಡಿ ಮೆಚ್ಚುತಿರ್ಪಾಗಳ್ (ಕಬ್ಬಿಗ. ೬೩). ೨. ಬಳಿ; ಲೇಪಿಸು; ಲೇಪನಮಾಡು: ಪಚ್ಚೆಗಪ್ಪುರವನೆಚ್ಚುವನು ಗಂಧವ ಮೈಗೆ ಬಚ್ಚಿಸುವನು ಚಕ್ರನಾಥ (ಶರಶ. ೦೯–೧೩೩). Δ**ಬರ್ಚಿಸು**: ೧. ವಿಶ್ವಕರ್ಮನೆಣೆಯಾಗಿರೆ ಕಂಡರಿಸಲ್ವಿಳಾಸದಿಂ ಕರುವನೊಡರ್ಚಿ ಬರ್ಚಿಸುವ ಬಲ್ಮೆಗೆ ಬೀಗುವ ಚೀರಫಟ್ಟಿ ತಾಂ ಸರಿಯೆನಿಪಂದದಿಂ ಕರು ವಿಡಲ್ ನೆಟಿಯಂ ದ್ವಿಜರಾಜಕನ್ನೆಯಂ (ಸುಕುಮಾ. ೫–೩೬); ಬರೆದು ಬರ್ಚಿಸಿದಂತೆವೊಲಾಗೆ . . . ಎಸೆದುದುನ್ನಮಿತೋತ್ಸವಕೇತನಂ ಶುಭಾ ನಂದಿತಲೋಕಚೇತನಮತೀವವಿನೂತನವಾ ನಿಕೇತನಂ (ಜಗಂ. ೦೦–೯೩); ಮಸೆದಸಮಾಸ್ತ್ರನುನ್ಮದನಬಾಣಶಲಾಕೆ ವಿಳಾಸದಿಂದಮೋಟಿಸಿದಲರ್ವಿಲ್ಲ ನೈಕ್ಷವ ಧನುರ್ಲತೆ ಬರ್ಚಿಸಿ ಮೀನಕೇತುವೆತ್ತಿಸಿದ ಸಮುಲ್ಲಸಜ್ಝಷಪತಾಕೆ ಯೆನಿಪ್ಪವೊಲಾಂತಳಾಕೆಯಾ ಪಸದನದೊಳ್ ಜಗತ್ತ್ರಿತಯಚಿತ್ರವಿಮೋಹನ ಶಕ್ತಿಯೇಟಿಗ್ಗಿಯಂ (ಚಂದ್ರಪ್ರ. ೬–೬೬). ೨. ಪಲ್ಲವಪ್ರಸರದೊಳೆಯ್ದೆ ಕಣ್ಗೆ ಪಸರಂಬಡೆದೊಪ್ಪುವ ಕೆಂಪು ತುಂಬಿಯೊಳ್ ಮಿಸುಗುವ ಕರ್ಪು ಬರ್ಚಿಸಿದವೊಲ್ ಬಗೆಗೊಳ್ವಿನೆಗಂ ಬಸಂತದೊಳ್ ಬಸದಿಯ ಬಾಗಿಲಂ ತೆಟಿದ ಮಾಟ್ಕೆಯೊಳಿರ್ದುವು ಬಂದ ಮಾವುಗಳ್ (ಆದಿಪು. ೦–೬೬); ಅವಿರಳಮಾದುವಾ ಪುರದೊಳ್ . . . ತೀವುವ ಕಲಶಂಗಳರ್ಚಿಸುವ ಕನ್ನಡಿ ಬರ್ಚಿಸಿಕೊಳ್ವ ಪೆಂಡಿರಾಡುವ ರಸಲಾಸ್ಯಂ (ಅನಂಪು. ೫–೪). [<ಬಚ್ಚಣೆ$_1$ + — ಇಸು$_3$]

**ಬಚ್ಚು$_1$** 'ಬಯ್ಚು' ನೋ.

**ಬಚ್ಚು$_2$, ಬರ್ಚು, ಬೊಚ್ಚು$_2$** (ಕ್ರಿ). ೧. ಒಣಗಂ; ಬತ್ತು; ಬಾಡು: ಬೂದಿಯಲ್ಲಿ ಹೊರಳುವ ಕತ್ತೆಯಂತೆ ಕಿಚ್ಚ ಹಾಯಿ[ಯು]ವವಳ್ತೆ ಬಚ್ಚಿ ಹೊತ್ತಿನ ಭೋಗಕ್ಕೆ ಮಚ್ಚಿ ಹುಚ್ಚಾದಿರಲ್ಲಾ (ಸಿದ್ಧೇಶ. ೦೩೫–೪೦೦) ಬೆಚ್ಚು ಹಾಕಿದ ಗಡಗಿ ಮುಚ್ಚಿಟ್ಟ ಬನಹುಲುಸು ಬಚ್ಚಾದ ಬೆಳೆಯ ಕಣವುಕ್ಕಿ ಗುಂಡಯ್ಯ ಹೆಚ್ಚಾಯ್ತು ನಿನ್ನ ಶಿವಭಕ್ತಿ (ಕಷ್ಣಜಾ. ೩೦೪). ೨. ಕೃಶವಾಗಂ; ಸೊರಗು: ತಿಂಗಳೊಂದಾಯಿತು ನನ್ನ ಗಂಡು ಬಚ್ಚಿ, ಒಣಗಿ, ಕಡ್ಡಿಯಾಗಿ ಕಂಗಾಲು (ಶಾರುದಾ. ೦೨೩); ಹೊತ್ತಿಗೆ ಒಂದೊಂದು ತಂಬಿಗೆ ಕೊಡುತ್ತಿದ್ದಳು ಭಾಗೀರಥಿ. ಈಗ ಬಚ್ಚಿದೆ. ಅದಾದರೂ ಏನು ಕೊಟ್ಟೀತು! (ಶಾಳಗ. ೨೦). ೩. ಬರಿದಾಗು; ಬೋಳಾಗು: 'ಬಚ್ಚು ಬಾಯಿ' ಪರಾ. Δ **ಬರ್ಚು**: ೪. ಕಡವೆಂಯಾಗು; ಕುಗ್ಗು: ಪೆರ್ಚು ವುದು ಪುಳ್ಳಿಯಿಂದಂ ಬರ್ಚುವುದದು ಕುಂದೆ ಕಿರ್ಚು ಮೋಹಾಗ್ನಿ ಕರಂ ಪೆರ್ಚುವುದರ್ಥಂ ಬರೆಯುಂ ಪೆರ್ಚುವುದದು ಬಾರದಿರೆಯುಂ (ಜೀವಸಂ. ೬೪–೦೯). ೫. (ಅಲಂ) ನಾಶಮಾಡು; ನಿಸ್ಸತ್ತ್ವಗೊಳಿಸಂ: ಜವನ ಮುಳಿಸವನ ಮುಳಿಸನೆ ಜವನೇ ಬರ್ಚಿದವೊಲಿಂತು ಕುಟುದಟುದಟುದಂ (ಗದಾಯು. ೩–೦೭); ಪಾಂಡವಪತಾಕಿನಿಗೆ ಜವಂ ನೆಟ ಬರ್ಚಿದಂತೆ ಭೋರನೆ ಬಂದು . . . ಬಾಂದೊಟಿಯ ಸುತನೊಡ್ಡಿ ನಿಲೆ (ಜೇಮಿ. ೦೨–೬೪ ವ). **ಬೊಚ್ಚು$_2$**: ೩. 'ಬೊಚ್ಚು ಬಾಯಿ' ಪರಾ.

**ಬಚ್ಚಿ ಬರು**=ಸೊರಗು; ಕೃಶವಾಗು: ಹೆತ್ತವರು ಒಂದು ವರ್ಷ ದೊಳಗಾಗಿ ಸತ್ತುಹೋದರೆಂಬ ವ್ಯಥೆಯಿಂದ ವಾಗ್ದೇವಿಯು ಬಚ್ಚಿ ಬಂದಳು (ವಾಗ್ದೇವಿ. ೦೪೦). 'ಬತ್ತು$_1$' ಪರಾ. [ದೇ. ‖ ತುಳು. ಬಚ್ಚು]

**ಬಚ್ಚು$_3$** (ನಾ). (ಮರ, ಗಿಡ ಮುಂತಾದುವು) ಬತ್ತಿ ಹೋಗಿರುವುದು; ಒಣಗಿರುವುದು: ಒಂದು ಈಚಲು ಬಚ್ಚು ತೇಲಿಕೊಂಡು ಹೋಗುತ್ತಿತ್ತು (ಪಮ್ಮಕು. ೦೪೦). [< ಬಚ್ಚು$_2$]

**ಬಚ್ಚು$_4$** (ನಾ). ಕೋಟೆಕಾಳಗದಲ್ಲಿ ಬಳಸುವ ಒಂದು ಬಗೆಯ ಯಂತ್ರವಿಶೇಷ (?): ವಿಚಿತ್ರವಾದ ಕೊತ್ತಲಗಳುಳ್ಳ ಕೋಟೆಗಳು ಫಿರಂಗಿಗಳು ಬಚ್ಚುಗಳು ಜವರುಜಂಗಿಗಳು . . . ಮೊದಲಾದ ಯಂತ್ರ ವಿಶೇಷಗಳು (ಕೃಶಾಶ. ೦೬೪). [?]

**ಬಚ್ಚುಬಾಯಿ, ಬೊಚ್ಚುಬಾಯಿ** (ನಾ). ಹಲ್ಲಿಲ್ಲದೆ ಬರಿದಾದ ಬಾಯಿ; ಬೋಡುಬಾಯಿ: ಕುಂಟುಕಾಲು, ಬಚ್ಚುಬಾಯಿ (ಕಂಸೋ. ೬೦-೭). **ಬೊಚ್ಚುಬಾಯಿ**: ಆಕೆಯ ಬೊಚ್ಚುಬಾಯಿ ಏನನ್ನೋ ಹೇಳಲು ವ್ಯಾಕುಲಿತವಾಗಿದ್ದಿತು (ಚಾಣಕ. ೫): ಬೊಚ್ಚುಬಾಯಿ ಆದವನು ಕಬ್ಬು ಬಯಸಿದ ಹಾಗೆ (ಗಾದೆ). [ಬಚ್ಚು$_2$ + ಬಾಯಿ$_1$ (< ಬಾಯ್)]

**ಬಚ್ಚಿ$_1$, ಪಚ್ಚಿ$_3$** (ಗು). ೧. ಬರಡಾದ; ಗೊಡ್ಡಾದ: 'ಬಚ್ಚಿವೆಣ್' ಪರಾ. (ನಾ). ೨. ವ್ಯರ್ಥವಾದುದು; ಹಾಳಾದುದು: "ಬಚ್ಚಿ ಯೆನಲ್ ಕೆಟ್ಟುದು" (ಕಕುಶಿ. ೫೨). **ಪಚ್ಚಿ$_3$**: ೧. 'ಪಚ್ಚಿವೆಣ್' ಪರಾ. ೩. ಮಕ್ಕಳಾಗದವಳಂ; ಬಂಜೆ: "ಪಚ್ಚಿ ಬಂಜೆಯೆನೆ ವಂಧ್ಯಾಖಂ" (ಕಬಿಶಂ. ೦೫೮).

**ಬಚ್ಚಿಬಟುಗ** = ಅಪ್ರಯೋಜಕ; ನಿರುಪಯೋಗಿ: ಸಾಸಿರಾಬ್ಬ[ಬ್ದ]ದ ಬಚ್ಚಿಬಟುಗನೊ ಪನ್ನೆರಳ್ವರುಷದ ಸುಧೀಮಣನೊ (ಸುಜೀಪು. ೩-೭). **ಬಚ್ಚಿಯಾಗು** = ಇಲ್ಲವಾಗಂ; ಹಾಳಾಗು; ನಾಶವಾಗು: ಮನೆಯೊಳಿಲ್ಲಂ ಮನೆಯೊಳುಂ ಮಾಯವಾಗುತಿರೆ ನೆನೆದುದೆಲ್ಲಂ ನೆನಹಿನೊಳ್ ಬಚ್ಚಿಯಾಗುತಿರೆ (ಶಂಕರ. ಹ. ೧೩೭–೪); ಎರಡಟ ಮನೋ ಮಲಿನ ಹೋಯಿತ್ತು ಕರಿಗೊಂಡು ಹುರುಡು ಮುರುಟಿತ್ತು ಮುನಿಸನು ಗೆಟ್ಟುದುಗ್ರಮತ್ಸರ ಬಚ್ಚಿಯಾಯ್ತು (ಹಕಶಾ. ೦೪–೧೮); ಮದನವಿಕಾರ ಮೊಮ್ಮೊದಲೆ ಸಾರ್ಚಿ ಶಕುಂತಳೆಗಿಚ್ಚಿ ಬಚ್ಚಿಯಾದುದು (ಸೂತ್ರಸು.೦೫–೩೩). [< ಬಂಜೆ]

**ಬಚ್ಚಿ$_2$** (ನಾ). ಒಂದು ನಾಡಿನ ಹೆಸರು: ಕಾವ್ಯಕ್ಕೆ ಶಾನಿತ್ತಂ ಶಾಸನ ದಗ್ರಹಾರಂ ಸಾರಮೆಂಬಿನಂ ಪೆಸರಿಟ್ಟು ಕಾನೀಯೆ ಹರಿಗನ ಧರ್ಮ ಭಂಡಾರದಂತೆ ಸಾರವಮಾದುದು ಬಚ್ಚಗ್ರಹಾರವಮಾ ಬಚ್ಚೆ[ಶಾಶಾಂ.

**ಬಡಗು**, ಬಡಕ್ಕು, ಬಡಗ್ಗ, ವಡಗಂ (ನಾ). ಉತ್ತರದಿಕ್ಕು; ಬಡಗಣ ದೆಸೆ : ಅಬ್ದುದಿಲ್ಲಿಳ್ ತೇಂಕಿರ್ದುದು ಭಾರದಿಂ ಬಡಗನೆಲ್ ಪೆಂಪಾರ್ಗ ಗಸ್ತ್ಯಂಬರಂ (ಶಂಕಚಾ. ೯-೨೦) ; ಅವರ ಆಳ್ವಿಕೆ ಬಡಗಿನಲ್ಲಿ ಕೃಷ್ಣಾನದಿಯಿಂದ ಹಿಡಿದು ತೆಂಕಲದಲ್ಲಿ ಭವಾನಿನದಿಯ ತನಕ ಪಸರಿಸಿತ್ತು (ಹಾಹುತ್ತ. ೩) ; ತೆಂಕು, ಬಡಗು, ಪಡು ದಿಕ್ಕುಗಳಲ್ಲಿಯೂ ಬೆಳಕು ಹರಡುವುದನ್ನು ಕಂಡಿದ್ದೇವೆ (ಬಿಅಂಠ. I, ೪೯೯). **ಬಡಕ್ಕು** : ಪುಳಿಯಿ[೦] ಬಡಕ್ಕು ಪೋದ ಪೇರೊ[ಂಗೆ] (ಎಇ. X, ೬೭-೬೩; ೩೨೩). **ಬಡಗ್ಗ** : ಬಡಗ ಗಾವುಣ್ದುಗಳ ಪಸುಗೆಯು ಪೊಲನ್ (ಇಇ. XVIII, ೩೯-೨೯; ೨೨೨). **ವಡಗು**.

**ಬಡಗಣ್** = ಉತ್ತರ ದಿಕ್ಕು : ಮೇರು ಪಡುವಣ್ಗೆ ಸೀತಾತೀರಂ ತೆಂಕಣ್ಗೆ ನೀಲಗಿರಿ ಬಡಗಣ್ಗಾ ತಾರು ದ್ರಾವಣರಣವಕ್ಷಾರಂ ಮೂಡಣ್ಗೆ ತನಗೆ ಸೀಮೆಯೆನಿಕ್ಕುಂ (ಪುಳ್ಳಿ. ೨-೦೨) ; ಪಡುವಣ್ಗೆ, ಬಡಗಣ್ಗೆ (ಛಾಹಾಚೂ. ೫೭ ಪ್ರಯೋ) ; ಬಡಗಣಿನೊಗೆದತ್ತದೊಂದು ದೀಪ್ತಪ್ರಸರಂ (ವರ್ಧಪು. ೦೦-೨೨). ಬಡಗಣ, ವಡಗಣ = ಉತ್ತರದಿಕ್ಕಿನ : ಎಳ ಗೊವನೂರ ಬಡಗಣ ಸಿ(ಸೀ)ಮೆಯುಳ್ ಕು(ಕೂ)ಡಿ (ಇಇ. XVIII, ೩೬೬-೨೩ ; ೮ನೆಯ ಶತ) ; ಜಂಬೂದ್ವೀಪದ ಮೇರುವಿನ ಮೂಡಣ ವಿದೇಹದ ಸೀತಾನದಿಯ ಬಡಗಣ ತಡಿಯೊಳ್ (ಆಂಪು. ೩-೬ ಪ) ; ತೆಜ್ಕಣ್ಣಾ ಸೀಮೆ ನೆಯ್ದಿಲ್ಗೆಱೆಯಾ ಏಱ ಮೂಡಣ್ಣಾ ಸೀಮೆ ಇಡೆವೆಟ್ಟದಾ ವಡಗಣ್ಣಾ ನೀರಿಱಗ (ಎಇ. XXI, ೨೯-೦೨ ; ಸು. ೮ನೆಯ ಶತ). **ಬಡಗಣಂ** = ಉತ್ತರ ದಿಕ್ಕಿನವನು : ಅಕಾರಕ್ಕೆ — ಮೂಡಣಂ, ತೆಂಕಣಂ, ಬಡಗಣಂ (ಕವಿರಾ. ೦೦೦ ಪ್ರಯೋ) ; ಪಡುವಣಂ, ಬಡಗಣಂ (ಶಬ್ದಾನು. ೪೨೦ ಪ್ರಯೋ). **ಬಡಗಲ್**, **ಬಡಗಲು** = ಉತ್ತರ ದಿಕ್ಕು; ಬಡಗು : ತದ್ದವಾಡಿಗೆ ತೆಂಕಲ್ ತೋಱಗಲೆಗೆ ಬಡಗಲಿರ್ದುದು ನೆಱೆಯೆ ಸುಖೋದ್ದೀಪಮೆನಿಸಿ ಬೆಳುಗಲಿದೇಶಂ (ಅಜಿಪು. ೦೨-೯೬) ; ನೈರಿತಿಯೊಳ್ಬರವುಲಿಗೆಱೆಯ ತೆಂಕಣ ಕೊಡಿಯಿಂ ಬಡಗಲ್ಬರೆಯೆರದ ಕೊಳನಂ ಬೂದಿವಾಳುಂ (ಸೌಇಇ XI-i, ೩೨-೩೭; 1007); ಸುರರೆಲ್ಲಂ ಬಡಗಲು ನೆರೆದಿರೆಯಾ ದೆಸೆ ಕುಸಿದು ತೆಂಕ ನೆಗೆದೊಡೆ (ಶಮಪ. ೦೦-೦೦೪); ಬಡಗಲುತ್ತರಕುರುನರೇಂದ್ರರ ನಡುಗಿಸಿದರು (ಕುಮ್ಮಾ.ಸ. ೦೯-೩೯).

[ದೇ.೩ ತಮಿ. ಮಲ. ವಟಕ್ಕು; ಕೊಡ. ಬಡಕ್; ತೆಲು. ವಡಕು]

**ಬಡಗುದುರೆ** (ನಾ). ಸೊರಗಿದ ಕುದುರೆ; ಕೃಶವಾದ ಅಶ್ವ : ಏನನೆಂ ಬೆನು ಬಸವ ನೀನೀವಾನೆಮಱಗಳು ಬಡಗುದುರೆಗಳನೂನಸತಿಯರು ವರುಣ ಮೃತ್ತಿಕೆ ಕೆಂಪಿನೆಱುವೆಗಳು (ಬಸಪು. ೨೨-೩೫); ಲಶುನಮುಮೋವು ಮನುಪ್ಪಂ ಮೊಸರುಮನೊಡಗೂಡಿಕೊಂಡು ಬಡಗುದುರೆಗೆ ಸಂಕಿಸದೊಂದು ಪಕ್ಷಮಿಕ್ಕುಗೆ ವಿಶೇಷದಿಂ ಫಲಮನೀವುದದು ನಿಶ್ಚಯದಿಂ (ಅಶ್ವಶಾ. ೬-೫೦).

[ಬಡ (< ಬಡವು) + ಕುದುರೆ]

**ಬಡಗೂಂಟು** (ನಾ) = ಬಡಗುದುರೆ : ಉಡಿದೈ ಬಂಡಿಯನೇನಗುರ್ವೊ ಮಗುಟ್ದುಂ ವಿಕ್ರಾಂತದಿಂ ಕಾಗೆಯಂ ಪಿಡಿದೈ ಸಂಕಿಸದಿರ್ದು ಕತ್ತೆ ಬಡಗೂಂಟೆಂದಿಂತಿವಂ ನೋಪಿನಿಂ ಬಡಿದೈ . . . ಇದೇನಾಶ್ಚರ್ಯಮೊ ಸಾಹಸಂ (ಬಿಂಹು. ೬-೬೩). [ಬಡ (< ಬಡವು) + ಗೂಂಟು]

**ಬಡಗೆಲಸ** (ನಾ). ಸಣ್ಣ ಪುಟ್ಟ ಕೆಲಸ; ಚಿಲ್ಲರೆ ಕೆಲಸ: ಬೆಸನುತಂ ತವೆ ಬಟ್ಟೆಯಂ ಮಾಡಿಸಿಕೊಳುತ ಬಡಗೆಲಸವಂ ಸಂತಸದಿ ಮಾಡಿಸಿ ಮಾಡಿ ಬದುಕುವೆವು (ಬಸಪು. ೫೩-೦೯). [ಬಡ (<ಬಡವು) + ಕೆಲಸ]

**ಬಡಗ್ಗೆ** 'ಬಡಗಾಯ್' ನೋ.

**ಬಡಗೊಂಡಿ** (ನಾ). ಕೃಶವಾದ ಕೊಂಡಿ; ಸವೆದ ಸರಪಳಿಯ ತುದಿ : ಬಣಜಿಗನ ಬಳಕೆಯಂತೆ ಕೊತ್ತಳಂ ಬಱದಾಗಿ ಬಟಲ್ದ ಬಡಗೊಂಡಿಯಂತೆ ರಾಳ್ವೇರಿಯಱದು ಕಡುಗೊಯ್ಯಾಲಾದ ಕಯ್ಯಂತೆ ತೆನೆ ಮುಱದು (ಅಸಂಪು. ೦೦-೬೩ ಪ). [ಬಡ (<ಬಡವು) + ಕೊಂಡಿ]

**ಬಡತನ** (ನಾ). ೧. ಸೊರಗಿರುವಿಕೆ ; ಸಣ್ಣಾಗಿರುವಿಕೆ ; ಕೃಶತೆ : ಸರಳತೆಯುಂ ಬಡತನಮುಮಂಬಳಾಮಧ್ಯದೊಳ್ (ಎಕ. XIII, ೩೩೨-೪೨; ೨೨೦); ಬಡತನಮಂ ಬಡುತಿರ್ಪುದು ನಡು (ಕಾದಂಪೂ. ೪೦೩); ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನ ಉಂಟೆ (ಕೂಕ್ಕಸಂ.೨೨೬-೬). ೨. ದರಿದ್ರತೆ; ದಾರಿದ್ರ್ಯ; ನಿರ್ಗತಿಕತನ : ಜಗದ ಬಡತನಮನೊರ್ವೆಯೆ ಬಗೆದಂತಿರೆ ಕಿಡಿಪ ಚಕ್ರಿ ತನ್ನಿರ್ದೆಡೆಯೊಳ್ ನೆಗಟ್ದ ಬಡತನಮನದನೇಕೆ ಗಡಂ ಸ್ಮರಿಸುವನೆನೆ ಪೊದಟ್ದುದು ಮಧ್ಯಂ (ಆದಿಪು. ೯-೩೦); ಎಂತಾನುಂ ಪಡೆದ ಧನಮನಸದ್ವ್ಯಯಂಗೆಯ್ವೊಡೆ ಬಡತನಮಕ್ಕುಂ (ಶಂತಕಂ. ೩೦೦-೨); ನಿನ್ನಯ ಸಿರಿಯೆ ಸಿರಿ ಬಡತನವೆ ಬಡತನ (ಕುಮ್ಮಾ.ಅ. ೦೯-೨೦). ೩. ಕೊರತೆ; ಅಭಾವ : ಒಂದಿದಹ ನರಕಹಂಸೆಗಳನಡಸಿ ಸ್ವರ್ಗವನೀವ ಕರ್ಮದ ಕಡುವಿಸಂಪದದಿಂದೆ ಜ್ಞಾನದ ಬಡತನವೆ ವಿಗೆ ಲೇಸು (ಗಗಹಾ. ೦೬-೯೬); ದುಡಿಯದೆ ನಮ್ಮ ದೇಶದಲ್ಲಿ ಆಹಾರಕ್ಕೆ ಬಡತನ ಬಂದಿದೆ (ರೂಪ).

[ಬಡ (<ಬಡವು) + -ತನ]

**ಬಡತರ್ಫ್** 'ಬರೆತರಪು' ನೋ.

**ಬಡತಾವು** (ನಾ). ಏನೂ ಇಲ್ಲದ ಜಾಗ; ನಿರ್ಗತಿಕ ಸ್ಥಳ; ಕುಗ್ರಾಮ : ದೊಡ್ಡೊಡೆಯ ತನ್ನಯ ಮಂತ್ರಿಸುರಿಣಾ ಬಡತಾವಿಗಟ್ಟಿನಟ್ಟಿದರೇನು ನಮ್ಮ ಚಿಕ್ಕೊಡೆಯನಲ್ಲಿಗೆ ಬಂದೆವು (ಛಕ. ೯೯-೯೬).

[ಬಡ (<ಬಡವು) + ತಾವು]

**ಬಡತಿ**, **ಬಡ್ತಿ** (ನಾ). (ಸಂಬಳ, ಹುದ್ದೆ ಮೊದಲಾದುವುಗಳಲ್ಲಿ) ಏರಿಕೆ; ಹೆಚ್ಚಳ : ಸರಕಾರೀನೌಕರಿಯ ಬಗ್ಗೆ ಸಂಬಳ, ಬಡತಿ, ಭತ್ತೆ, ಪಿಂಚಣಿ, ಪದವಿ ಇವೇ ಆ ವರ್ಗದ ಪಂಚಪ್ರಾಣಗಳಾದವು (ಕೂವಾದ. ೯೩); ಬಹು ಮಾನದ ಜೊತೆಗೆ ಕೆಲಸದಲ್ಲಿ ಬಡತಿ ದೊರೆಯುತ್ತದೆ (ಪಗಹೂ. ೦೬೨); ನಿಮ್ಮ ಉತ್ತಮಕೆಲಸದ ಸಲುವಾಗಿ ನಿಮಗೆ ಯೋಗ್ಯವಾದ ಬಡತಿ ಸಿಗುವ ವೇಳೆ ಇದೇ ಅಲ್ಲವೇ ? (ಕಶ್ಯಾ. ೫೨). **ಬಡ್ತಿ** : ಕಚೇರಿಯ ಮಾತು, ಮೇಲಿನ ಅಧಿಕಾರಿಗಳ ವಿಶ್ವಾಸಸಂಪಾದನೆ, ಮುಂದಿನ ಬಡ್ತಿ ಯಾವಾಗ ಬರುತ್ತದೆ? —ಈ ಮಾತುಗಳೆಲ್ಲ ನಡೆದುವು (ಸುಹಾಡ. ೦೯); ನನಗೆ ಒಟ್ಟಿಗೆ ಇಪ್ಪತ್ತು ರೂಪಾಯಿ ಬಡ್ತಿ ಸಿಕ್ಕಿದೆ (ಶಂಕ್ಷ. ೫೦).

**ಬಡ್ತಿ ನೀಡು** = ಮೇಲಿನ ಹುದ್ದೆಗೆ ಏರಿಸು: ಮೇಲಿನ ಅಧಿಕಾರಿಗಳು ಅವರಿಗೆ ಮೊದಲ ದರ್ಜೆಯ ಗುಮಾಸ್ತರಾಗಿ ಬಡ್ತಿ ನೀಡಿದರು (ರೂಪ). **ಬಡ್ತಿ ಹೊಂದು** = ಮುಂದಿನ ಹುದ್ದೆಗೆ ಏರು: ಕಾಲಕ್ರಮದಲ್ಲಿ ಬಡ್ತಿ ಹೊಂದಿ ಮೇಲಕ್ಕೆ ಬರಬಹುದು (ಜಗಸಂ. ೦೯). [←ಹಿಂ. ಮರಾ. ಬಢತೀ]

**ಬಡತಿಗೆ** (ನಾ). ಕೋಲು; ದೊಣ್ಣೆ; ಬಡಿಗೆ : ಆಗ ಶಂಭಯ್ಯನವರ ತಲೆಗೆ ಬಡತಿಗೆಯಿಂದ ಹೊಡೆದಂತಾಯಿತು (ಸಂಬಿವಾ. ೬); ಎಸೆದ ಬಡತಿಗೆಯಷ್ಟು ಉದ್ದವಾದ ಮಾವಿನ ಕೊಂಬೆ ಉರಿಯುತ್ತಿತ್ತು (ಕೃಕ್ಕ. ೬೩). 'ಬಡಿತ' ಪರಾ. [<ಬಡಿಗೆ]

**ಬಡನಡು** (ನಾ). ಸಣ್ಣಗಿರುವ ನಡು; ಕೃಶವಾದ ಸೊಂಟ : ಪಾಲ್ಗಡಲೊಳಮುಮರ್ದಿನೊಳಂ ಪುಟ್ಟಿದ ಕಳ್ಪಸೊರ್ಕಿನೊಳಮುಂತೆ ನಡುಗುವ ಬಡನಡುಗಳ್ಗೆ ನಡುಕಮುಮಂ . . . ಕೆಯ್ಗೆಯ್ದು (ಶಂಕಚಾ. ೬-೦೬ ಪ); ನೆಲೆಮೊಲೆಯ ಬಿಣ್ಪಿಂಗೆ ಬಡನಡು ಬಳ್ಕೆ (ಗಂಳ. ೨-೦೦೩ ಪ); ಕರಿಕುಂಭ ಜಘನ ಬಡನಡು ಬಟ್ಟಬಲ್ಮೊಲೆ ಕಂಬುಕಂಧರವುದುರಾಜಮುಖವು ಪದ್ಮಿನಿಗೆ (ಶೋಹತ. ೦೬-೩೪). [ಬಡ (<ಬಡವು) + ನಡು]

**ಬಡನುಡಿ** (ನಾ). ದುರ್ಬಲವಾದ ಮಾತು ; ಸತ್ತ್ವವಿಲ್ಲದ ನುಡಿ : ಮನದೊಳಿದ್ದುದನೆಹಗೆ ಹೇಳದೆಯೆನುತ ಪಡೆವಾ ದೊಡ್ಡಹೊಟ್ಟೆಯನೆನುತ ಬಡನುಡಿಯಂ ನುಡಿವರೇ ಭಕ್ತರೊಳಗೆನುತ (ಬಸಪು. ೫೯-೦೯); ಜಲಬಿಂದು ಶುಕ್ತಿಕೆಯೊಳು ಬೀಳೆ ಮುತ್ತಾಗಿ ಬೆಲೆವಡೆವಂತೆನ್ನ ಬಡನುಡಿ ಬೆಲೆವಡೆಯದೆ ಮಾಣ್ಬುದೆ (ತ್ರಿಕುಹ. ೦-೦೯); ಬಡನುಡಿ ಬಲ್ನುಡಿ ಬಡದೈವಕಲ್ಲದೆ ಬಡಕಬ್ಬ

ನಿನ್ನ ಪೊಂದುವದೆ (ಕಹಾಂ. ೬೨-೬೩). [ಬಡ (<ಬಡವು) + ನುಡಿ₁]

**ಬಡಹ**, ಬಡಹ (ನಾ). ಎಡಬಿಡದೆ ಸುರಿಯುತ್ತಿರುವ ಮಳೆ; ಜಡಿಮಳೆ: ಕಿತ್ತುಂಬಿನ ಬಡಹವಿದೆನಿಸಿ ಪಾಂಡ್ಯನಂಬಂ ಕಜಿದು (ಕಂಕಹಾ. ೫೨-೯೦) ; ತಂದಲ್ವೊಳೆನೆ ನಟ್ಟ ಬಡಹಮನಲ್ಸುರಿದುವು ಬಿಡದೆ ಮಟ್ಗಳೆರುಳುಂ ಪಗಲುಂ (ಜಗಿ. ೪-೩೨); ಬಡಹಂ ಬೆಂಬತ್ತ ಮೇಪಂ ವಾಜಿದು ಬಿಡದೊಡಲ್ ಕೋಡ . . . ನಿಂದಿರ್ದುದೋರೊಂದೆಡೆಯೊಳ್ ಹಾಜಲ್ಗಳೊತ್ತಬಿಡಿದು ವೃಗವ್ಯಗೀವ್ರಂದಮೋರಂದದಿಂದಂ (ಕಂದ್ರಪ್ರ. ೪-೪೭). ಬಡಹ : ಪೋದುದಾಗಳಂತಡೆವಿಡದಿರ್ದ ಶಕ್ರಧನುವಾ ಬಡಹಂ ಬರೆ ಮೇಘಕಾಲದೊಳ್ (ಕುಸುಚಾ. ೬-೩೪); ಬಡಹಂ ಕೈಕೊಂಡು ದುರ್ವಿನೀತಳಮದು ನೆಜ್ ಜೌಗೆಲ್ದು . . . ಕಂಪಲ್ಕುಸಗೆ (ಕಾಂತೀಕ್ಕ. ೧೨-೩೬); ಮುಗಿಲೇಜ್ ಸುರಿದುದು ಬಡಹವಾ ಜೀವಂಜಸೆಯು ಕಣ್ಣುನೀರೊಗುವ ತೆಜದಿ (ಶಾಕ್ಯಶಾ. ೩೦-೬). [<ಪ್ರಾ. ವದ್ದಲ]

**ಬಡಹಟ್ಟು** 'ಬಡಪೆಟ್ಟು' ನೋ.

**ಬಡಹಡು** 'ಬಡವಡು' ನೋ.

**ಬಡಹತ್ತು** (ನಾ). =ಬಡತನ ೨ : ನಾನೂ ಬಡವನೇ : ಬಡಹತ್ತಿನಲ್ಲಿ ಹುಟ್ಟಿ ಬೆಳೆದವನು, ವಾರಾನ್ನದಿಂದ ಪರೀಕ್ಷೆ ಪಾಸು ಮಾಡಿದವನು (ಹಿಜ್ರು. ೦೦೦). [←ತುಳು. ಬಡವತ್ತ್]

**ಬಡಹಶು** (ನಾ). ಅಸಹಾಯಕಸ್ಥಿತಿಯಲ್ಲಿರುವ ಪಶು ; ದುಃಸ್ಥಿತಿಯಲ್ಲಿರುವ ಪ್ರಾಣಿ : ಕೆಸಜಲ್ಲಿ ಬಿದ್ದ ಬಡಹಶುವಿನಂತೆ ಆನು ದೆಸೆದೆಸೆಗೆ ಬಾಯಿ ಬಿಡುತ್ತಿದ್ದೆನಯಹ್ಯ (ಚಸವ. ೪. ೩೨). [ಬಡ (< ಬಡವು) + ಪಶು]

**ಬಡಹಾಯಿ** (ನಾ). ೧. ದುರ್ಬಲ ; ಅಸಮರ್ಥ ; ಅಶಕ್ತ: ನಮ್ಮಂತಹ ಬಡಹಾಯಿಗಳು ಇಂತಹ ಕೆಲಸಕ್ಕಿಳಿದರೆ ಕಾರ್ಯ ಸಫಲವಾಗಬಹುದೆನ್ನುವ ನಂಬಿಕೆ ಇಲ್ಲ (ಕುರುಳಾ. ೬೪); ಬಡಪಾಯಿಗಳು ಹೋರಾಡುತ್ತಿರುವ ಸಾಮ್ಯವಾದಿ ಸಮಾಜರಚನೆಯೇ ಇದು (ರಘುನಾ. ೧೨) ; ಈ ನೆಲವೆಲ್ಲವು ಕಾಗದವಾದರೆ ಜಲವೆಲ್ಲವಾದರೆಶಾಯಿ ಮರ ಗಿಡವೆಲ್ಲವು ಲೆಕ್ಕಣಿಯಾದರೆ ಬಡಪಾಯಿ ಸಾಕು ಬಡಾಯಿ (ಜಂಕಾತ. ೦೫೬-೭೦). ೨. ನಿರ್ಗತಿಕ; ದರಿದ್ರ : ಅಯ್ಯೋ ತಾನು ಬಡಪಾಯಿ ಹೇಗೆ ಅಂಥ ಸುಖ ಸಿಕ್ಕೀತು ? (ಜೀವರಂ. ೬೨); ನನ್ನಂಥ ಬಡಪಾಯಿಯನ್ನು ಯಾರೂ ಕೇಳುವುದೇ ಇಲ್ಲ (ಕೇಪೋಕ. ೩೬); ಆ ಬಡಪಾಯಿಯ ಅಂತರಂಗದಲ್ಲಿ ಏನೇನು ಅಡಗಿದೆಯೋ ದೇವರೇ ಬಲ್ಲ ! (ಜೀರಯೋ. ೮೬). (ಗು). ೩. ಸೊರಗಿದ; ಕೃಶವಾದ; ಒಣಗಿದ : ಆ ಬಡಪಾಯಿ ಪ್ರಾಣಿ ಬಾಯಾರಿಕೆಯಿಂದ ಈ ಅಮೃತಸರೋವರಕ್ಕೆ ಬಂದಿತ್ತು (ಪಾಶೀ. ೩೦); ಬಡಪಾಯಿ ಕೇಟಬಿಯ ದೇಹದಲ್ಲಿ ಉಳಿದಿದ್ದ ಚಟುವಟಿಕೆಯೂ ತೀರಿ ಹೋಯಿತು (ರತ್ನಗೋ. ೩೩). [ಬಡ (<ಬಡವು) + ಪಾಯ್ಯಿ]

**ಬಡಹಾರ್ವ**, ಬಡಹಾರುವ (ನಾ). ದರಿದ್ರನಾದ ಬ್ರಾಹ್ಮಣ; ನಿರ್ಗತಿಕನಾದ ಬ್ರಾಹ್ಮಣ : ಎಮ್ಮಂ ಬಡಪಾರ್ವರನರಸರೆ ನೀವಿಗಾಗಳಜು ವಿರಜಿಯಿರೊ ಪೇಟಿಂ (ಕಂಕಹಾ. ೨-೬೩); ಈ ಕುಲಾಂಗನೆಯರೀ ಬಡಪಾರ್ವನ ನುಟಿರಾಗರೇ (ಚಕಪ್ರ. ೦೦-೫೨); ಬಡಪಾರ್ವರೊಳ್ ಬೆರೆದು ಬಾಯ್ ಬಡಿವುದನ್ ಕಲ್ತೆ (ಅಕ್ಕಣ್ಣ. ೪೬-೬೪೪). ಬಡಹಾರುವ : ಈ ಋಷಿಗಳೇ ಬಣಗುಗಳು ಬಡಹಾರುವರು (ಕುವ್ಯಾಸ. ೯-೩೩). [ಬಡ (<ಬಡವು) + ಪಾರ್ವ]

**ಬಡಪೆಟ್ಟು**, ಬಡಪಟ್ಟು (ನಾ). ಬಡಿಯ ಏಟು; ದೊಣ್ಣೆಯ ಹೊಡೆತ. ಬಡಪಟ್ಟು.

ಬಡಪೆಟ್ಟಿಗೆ, ಬಡಪಟ್ಟಿಗೆ=(ಆಲಂ) ಸುಲಭವಾಗಿ; ಸರಾಗವಾಗಿ; ತೊಡಕಿಲ್ಲದೆ : ಆಫೀಸ್ ಕೆಲಸ ಬಡಪೆಟ್ಟಿಗೆ ಆಗೋಲ್ಲ (ಕುಸುಸಂ. ೨೦೬); ಅರಮನೆಯ ಜನ,ಗುರುಜನ,ಬಡಪೆಟ್ಟಿಗೆ ಅಂಥದಕ್ಕೆ ಒಪ್ಪಿಗೆ ಕೊಡುತ್ತಿರಲಿಲ್ಲ (ಜಹಿ.೬೩); ರಂಗಣ್ಣ ಬಡಪಟ್ಟಿಗೆ ಮನೆಯಿಂದ ಹೊರಡುತ್ತಿರಲಿಲ್ಲ(ಪತ್ನಿಮು. ೨೩೦) ; ಆನಂದ ವಸಂತರ ನಡುವೆ ಚರ್ಚೆ ಪ್ರಾರಂಭವಾದರೆ . . . ಬಡಪಟ್ಟಿಗೆ ಮುಗಿಯುತ್ತಿರಲಿಲ್ಲ (ದೂರಸ. ೨೪). [< ಬಡಿ₁ + ಪೆಟ್ಟು₂]

**ಬಡಬ** (ನಾ). ೧. ಸಮುದ್ರದ ಒಳಗಿರುವ ಬೆಂಕಿ ; ವಡಬಾಗ್ನಿ; ಕಡಲ್ಗಿಚ್ಚು : ಕಡಲೊಳಿಡಲೊಡನೆ ಬಂಬಲುಗಿಡಿಯ ಗಡಣದಿಂ ಬಡಬನೊಡಗೂಡಿತು (ಅಜ್ಞಾ. ೦-೬); ಕಣ್ಗೊಪ್ಪ ಬಂದತ್ತಿಭೇಂದ್ರಂ . . . ಬಡಬ ನಳುರ್ಕೆಯೊ ಭೈರವನಡರ್ಪೊ ಮಿಳ್ತುವಿನ ದರ್ಪವೋ . . . ಎಂದೆನೆ ಕಜುತ್ತು ತಾಗಿತ್ತಾಗಳ್ (ಶಾಂತೀ. ೬-೮೨). ೨. [ಕಾಮಶಾ] ಸ್ತ್ರೀಯರಲ್ಲಿ ಒಂದು ಗುಂಪು : ಬಡಬಜಾತಿ ಸ್ತ್ರೀಯಾಗಲಿ ಹರಿಣಜಾತಿ ಸ್ತ್ರೀಯಾಗಲಿ . . . ಕಾಮೋತ್ಸವಕ್ಕೆ ಪ್ರಿಯಳು (ಕಾಮಶಾ. ೨೦೬). [ಸಂ.]

**ಬಡಬಜ್ವಾಲೆ** (ನಾ). = ಬಡಬ ೧ : ಬಡಬಜ್ವಾಲೆಯ ವಿಸ್ಫುಲಿಂಗತತಿಯೆಂಬಂತಿರ್ದ ಕಣ್ ಚಕ್ರದಿರ್ಕಡೆಯಂ ಬಾಯೊಳಿಜುಂಕಿದಂತೆ ಪೊಳೆಪಿಂ ಕೊಂಕಿರ್ದ ಕೂರ್ದಾಡೆ (ಕಜಕಂ. ೪-೪). [ಸಂ. ಬಡಬಜ್ವಾಲಾ]

**ಬಡಬಡ₁** (ನಾ). ತ್ವರಿತ, ಶೀಘ್ರತೆ, ನಿರರ್ಥಕತೆ ಇತ್ಯಾದಿಗಳನ್ನು ತಿಳಿಸುವ ಒಂದು ಅನುಕರಣಶಬ್ದ : ವರಲು ಪರಿವಾರ ಬಡಬಡನಲು ಮುಗುಳುನಲಿ ನಗುತ್ತ (ಎಕ. VIII. ಶಾಗಸ. ೦೦೯-೦೦; 1250 ?).

**ಬಡಬಡ₂** (ಅ). ಬೇಗನೆ, ಶೀಘ್ರವಾಗಿ ಎಂಬ ಅರ್ಥದ ಒಂದು ಅನುಕರಣಾವ್ಯಯ : ಎಪ್ಪನೆಯ ಪಾಠ ಅಂತ ಹೇಳಿಬಿಡಿರಿ. ಬಡಬಡ ಅಂದುಬಿಡುವೆ (ಅಜ್ಞಸೀ. ೯); ಹೋಗಿ ಬಡಬಡ ಬೇರ್ಮನೆ (ವರನಿರುವ ಮನೆ) ಯಿಂದ ಮದಲಿಂಗನನ್ನು ಕರೆಕೊಂಬರ್‍ರಿ (ಸುವಸಂ. ೫೨).

**ಬಡಬಡಕ** (ನಾ). ಬಡಬಡ ಎಂದು ಮಾತನಾಡುವವನು : ಬಡಬಡಕರನು ಹೇಳದಿರು ಮನ ನಡುಗುತಿರ್ದುದು ಮದನಹರನೆದೆ ಮಿಡುಕುತಿರ್ದುದು (ಕೊರಂ. ೬-೯೬-೯೦). [ಬಡಬಡ$_1$ + — ಕ$_3$]

**ಬಡಬಡಕನೆ** 'ಬಡಕು' ಪರಾ.

**ಬಡಬಡಗುಟ್ಟು** (ಕ್ರಿ). ವ್ಯರ್ಥವಾದ ಮಾತನ್ನಾಡು ; ವಟಗುಟ್ಟು ; ಗಳಹು : ಬಡಬಡಗುಟ್ಟಿ ಬಾಯಾಜಿ ಬಹಳ ಕಾಲ ಗೊಡೆಗುಟ್ಟಿ ಶಾಸ್ತ್ರಿಗಳಹರ ನಡೆಯ ನಗುತ ಕ್ಷಣದೊಳು ಶಾಸ್ತ್ರವಾರ್ಥಿಯ ಕಡೆಗಂಡ ಕುಶಲನೆಯ್ದಿದನು (ಶರಕ. ೬೨-೬೨). [ಬಡಬಡ$_1$ + ಕುಟ್ಟು$_1$]

**ಬಡಬಡನೆ** (ಅ). ಜಾಗ್ರತೆಯಾಗಿ ; ತ್ವರಿತವಾಗಿ : ಹತ್ತೇ ರೂಬಲ್ ಸಾಕು ಎಂದವಳು ಬಡಬಡನೆ ನುಡಿದಳು (ಪ್ರವರು. ೦೯೪). [ಬಡಬಡ$_1$ + — ಅನೆ$_1$]

**ಬಡಬಡಾಗು** 'ಬಡ' ಪರಾ.

**ಬಡಬಡಿಕೆ** (ನಾ). ಗಳಹುವಿಕೆ ; ಹರಟುವಿಕೆ ; ವ್ಯರ್ಥಾಲಾಪ : ಬಿಡುಗಡೆಯು ಬಂದಿತೆಂಬ ಬಡಬಡಿಕೆ ನಿಲಿಸೊ ಹುಂಬ (ಶಿಂಕ್ಷೆ. ೯೪) ; ಬಾದಷಹನ ಬಡಬಡಿಕೆಗೆ ಶಿವಾಜಿಯು ಬೆದರಿ ಬೆಂಡಾಗತಕ್ಕವನಲ್ಲ (ಹಿಂಕರು. ೪೦). [ಬಡಬಡ$_1$ + — ಇಕೆ]

**ಬಡಬಡಿಸು** (ಕ್ರಿ). = ಬಡಬಡಗುಟ್ಟು : ನುಡಿಯಲೇನುಳಿದವರನೆಣಿಕೆಯೊಳಿಡುವನೇ ಲೋಕತ್ರಯವನೆಂದೊಡನೊಡನೆ ಬಡಬಡಿಸಿ ಮೀಸೆಯ ಮುರಿದನಸುರೇಂದ್ರ (ಅಸಂಕಾ. ೧-೫-೩) ; ಮುದುಕಿ ಬಸುವನನ್ನು ಮುಂದೆ ನಿಲ್ಲಿಸಿಕೊಂಡು ಅದೇನನ್ನೋ ಬಡಬಡಿಸುತ್ತಿದ್ದಳು (ಬಶಸಿ. ೩೫). [ಬಡಬಡ$_1$ + — ಇಸು$_2$]

**ಬಡಬಶಿಖಿ** (ನಾ). = ಬಡಬ ೧ : ಬಡಬಶಿಖಿಯನು ಕರದಿ ನಂದಿಪ . . . ರಕ್ಕಸಪಡೆಯ ಕೊಡಿದು ರಣಕೆ ಸಿಂಗರಗೈದು ಹೊಜವಂಟ (ಳಶಿಕಾ. ೩೫-೩) ; ಬಡಬಶಿಖಿಯಲ್ಲಿ ಪರ್ಬುವ ಪೊದರ್ಪನೊಳಕೊಂಡು ಮೇಲೆ ಮೇಲೆ ತರ್ಪನ್ನೊಡಲುರಿಯನವಧರಿಸು (ರಾಜಶೇ. ೦೩-೦೪೬). [ಸಂ. ಬಡಬಶಿಖಿನ್]

**ಬಡಬಾಗ್ನಿ** (ನಾ). = ಬಡಬ ೧ : "ಕಡಲ್ಗಿಚ್ಚು ಬಡಬಾಗ್ನಿಯಕ್ಕು" (ಅಭಿಧಾ. ೧೩) ; ಜಿನಭಾವನೆಯೆಂಬ ಬಡಬಾಗ್ನಿಯಿಂ ವಿಷಯಸಾಗರಮಂ ಹೀರದೆ . . . ಶಾಶ್ವತಸುಖಂ ದೊರೆಕೊಳ್ಳದು (ಧರ್ಮಾಮೃ. ೬-೯೭) ; ಬಡಬಾಗ್ನಿ ನೊರಜಿನ ದಾಳಿಗಳುಕುವುದುಂಟೆ (ಕುಮಾ.ದ್ರೋ. ೨-೬೯).
[ಸಂ.]

**ಬಡಬಾನಲ**, ಬಡಬಾನಳ (ನಾ). ೧. = ಬಡಬ ೧ : ಬಡಬಾನಲಂಗೆ ಸೆಡೆದಿಂಗಡಲೆ ಸರಸ್ಕೊಳ್ಳುಕುದಮರಶೈಲಮಂ (ಕಂಠಾಪೂ. ೧-೧೦೩). ೨. ಒಂದು ಬಗೆಯ ಮಂತ್ರಾಸ್ತ್ರ ; ಆಗ್ನೇಯಾಸ್ತ್ರ : ಹರಿ ಬಡಬಾನಲವ ತೊಡೆ ದನುಜ ಕೈದುವ ಬಿಸುಟು ನಿಂದನು ತನಗೆ ಬಂದುದು ಮರಣ ವೆಂದೆನುತಾಗ ಕೈಮುಗಿದು (ಶೌರಿಶ. ೩೩-೬೩). **ಬಡಬಾನಳ** : ೧. ಅಗುರ್ವುರಿವರಿಯುತ್ತುಮಿರ್ಪಣೆ ಬೃಹದ್ವಡಬಾನಳನಂತೆ ತೋರ್ಜಿ (ಹಂಪಭಾ. ೬-೯೯) ; ಬಡಬಾನಳನ ಶಿಖಾವಳಿ ಕುಡಿಯಿಟ್ಟುದು (ಶಾಂತೀಶ. ೧೪-೧೧) ; ಮಳೆಗೆ ಮೊಗದಿರುಹುವುದೆ ಬಡಬಾನಳನು (ಕುಮಾ.ದ್ರೋ. ೩-೩೭).
[ಸಂ.]

**ಬಡಬಾನಳ** 'ಬಡಬಾನಲ' ನೋ.

**ಬಡಬಿಜ್ಜೆ** (ನಾ). ಕಡಮೆಯಾದ ವಿದ್ಯೆ ; ಅಲ್ಪವಿದ್ಯೆ : ಮಗನೆ ಕಡು ಗುದುರೆಯುಂ ಬಡಬಿಜ್ಜೆಯುಂ ಸಮಂ ಮಗನೆ ನಾಣ್ನುಡಿ ತಪ್ಪದೆಂಬು ದಿಂತೀ ಕ್ರಮಂ (ಶಂಪರ. ೧೯-೧೦೯). [ಬಡ (< ಬಡವು) + ಬಿಜ್ಜೆ]

**ಬಡಬೆ** (ನಾ). ೧. ಹೆಣ್ಣುಕುದುರೆ : ಬಡಬೆಯು ಬೆನ್ನೊಳ್ ನರನಟು ದೊಡಮಂತಾ ಬಡವೆ[ಬೆ] ಸಮರದೊಳ್ ಶರಹತಿಯಿಂ ಮಡಿವೊಡವೆಂತುಂ ಸ್ವರ್ಗಂಬಡೆಗುಮೆ ತತ್‌ಕ್ಷಣದಿನವನಧೋಗತಿಗಿಟುವಂ (ಅಶ್ವಶಾ. ೨-೩೨). ೨. = ಬಡಬ ೨ : ಬಿಡದೆ ಮೃಗಿಯು ವೃಷನು ಬೆರಸೆ ಬಡಬೆ ಹಯನು ಬೆರಸೆ ಈ ಎರಡು ನಿಧಾನಿಸುವೊಡೆ ಉಚ್ಚತರವು (ಜಸವ. ೯-೨೩) ; ಹರಿಣಿ ಬಡಬಾ ಕರಿಣೀ ಯಿಾ ಮೂರು ಪ್ರಕಾರ ಸ್ತ್ರೀಜಾತಿಯಿಹುದು (ಕೌಗೊಂ. ೯೯೩-೯).
[ಸಂ. ಬಡಬಾ]

**ಬಡಮತಿ** (ನಾ). ಅಲ್ಪವಾದ ತಿಳಿವಳಿಕೆ : ಇನಿತು ಬಡಮತಿಯಿಂ ಬಸವ ರಾಜನ ಕೃತಿಯ ನಾನೆಂತು ರಚಿಸುವೆನು (ಬಸಪು. ೧-೧೪).
[ಬಡ (< ಬಡವು) + ಮತಿ]

**ಬಡಮದುವೆ** (ನಾ). ಕಡಮೆ ವೆಚ್ಚದಲ್ಲಿ ಮಾಡುವ ಮದುವೆ : ಬಡತನದ ಲಗ್ನ : ಈ ಸುತಂಗೊಂದು ಬಡಮದುವೆಯಂ ಮಾಳ್ಪೆ (ಶಬ್ದಾಡ. ೦೩-೩). [ಬಡ (< ಬಡವು) + ಮದುವೆ]

**ಬಡಮನ** (ನಾ). ೧. ಹುರುಳಿಲ್ಲದ ಮನಸ್ಸು; ಅಲ್ಪಮನಸ್ಸು : ಇಲ್ಲವೆಯು ಮೇಲೆ ಕಂಚೊಡೆದಂತೆ ಬಡಮನವೆನ್ನ ಕಾಡಿತ್ತಯ್ಯಾ (ಬಸವ. ೨೫೬) ; ಮಱುಗಿ ಮನದೊಳ್ ಮುನಿದು ಕೆಲದ ಕಡುನೀಱರನಡರೆ ನೋಟ್ಪ ಬಡ ಮನದ ಮಂಡಳಿಕಮಂಡಳಿ (ವರ್ಧಕೃ. ೯-೧೩ ಪ); ಈ ಬಡಮನದ ವಿಪ್ರನದೇನ ಬೇಡಿದ (ಸಂಭಶ. ೧೧-೨೦). ೨. ಹೇಡಿ ; ಧೈರ್ಯಗೇಡಿ : ಡಮರುಗ ಹಸ್ತ ಭಸ್ಮಾಸುರಗಳ್ಕಿ ಬಡಮನನಾಗಿ ನಡನಡುಗಿ ಡಮರುಗವಾತವೆತ್ತನ ನೋವಿದ ಚಂಡಮಹಿಮಗಾನೆಱುವೆನು (ಶಶಕಾಂ. ೬೦-೩೩).
[ಬಡ (< ಬಡವು) + ಮನ]

**ಬಡಮಲ್ಲ** (ನಾ). ಅಸಮರ್ಥನಾದ ಮಲ್ಲ : ಬಡಮಲ್ಲರನೆಲ್ಲರುಮಂ ಪಡಲಿಟ್ಟೈ ಕಂಸನುಱಿದ ಮಱ್ದಿರ್ದೆಡೆಯೊಳ್ ಮಡಿಪಿದೆಯದಿನ್ನು ನಡೆ ಯದು ಕಡಲೆಗಳಂ ತಿಂಬ ಮೊಗ್ಗು ಕಲ್ಗಳೊಳುಂಟೇ (ನೇಮಿಪು. ೧೦-೯೪).
[ಬಡ (< ಬಡವು) + ಮಲ್ಲ]

**ಬಡಮಾತು** (ನಾ). = ಬಡನುಡಿ : ಬಡಮಾತನಾಡಿದೆ ತವ ಪಂಚಬಾಣಕ್ಕೆ ಮೃಡ ವಿಧಿ ವಿಷ್ಣು ದೇವೇಂದ್ರ ಒಡಲೊಳು ಪೆಣ್ಮುದ್ರೆವೆತ್ತರು (ಮೋಹತ. ೩-೪೮). [ಬಡ (< ಬಡವು) + ಮಾತು$_1$]

**ಬಡರು** (ಕ್ರಿ). ಗಾಬರಿಯಿಂದ ಬೆದರು.– ಬೆಚ್ಚು.
ಬಡರು ಬೀಳು, ಬಡರಿ ಬೀಳು = ಗಾಬರಿಯಿಂದ ಬೆದರಿ ಬೀಳು.– ಬೆಚ್ಚಿಬೀಳು : ನಿದ್ರಿಸುತ್ತಿದ್ದ ಹೀಂಚಲು ಏನೋ ದುಃಸ್ವಪ್ನದಿಂದ ಎಚ್ಚರುವಂತೆ ಬಡರು ಬಿದ್ದೆದ್ದಳು (ಪುಲಿಕಾ. ೨೬೩) ; ತತ್ತರಿಸಿದ್ದ ಸಲಗ ಮತ್ತೆ ಬಡರಿ ಬಿದ್ದು ಎದ್ದು ಓಡಲು ಪ್ರಯತ್ನಿಸುತ್ತಿದ್ದಂತೆಯೇ . . . ಅದನ್ನು ಹೊತ್ತುಕೊಂಡು ಮನೆಯ ಕಡೆಗೆ ಇಳಿದರು (ಪುಲಿಕಾ. ೦೨೩) ; ಕಲ್ಲು ತಗೆದುಕೊಳ್ಳುವಂತೆ ನೆಲಕ್ಕೆ ಕೈಯಿಟ್ಟು ಬಾಗಲು, ನಾಯಿಗಳು ಬಡರಿ ಬಿದ್ದು ಹಿಂದಕ್ಕೋಡಿದವು (ಕಾಪೂರು. ೪೬೨). [< ಬೆದು$_1$]

**ಬಡವ** (ನಾ). ೧. ಕೃಶನಾದವನು ; ಸೊರಗಿದವನು : "ಬಡವನೆನಲ್ ಕೃಶಂ" (ಕರ್ಣಾಶ. ೬೬) ; ಕಾಮಸಂತಾಪದೆ ಬೆಂದವಂಗೆ ಬಡವಂಗದವಂಗತಿದುಃಖಿತಂಗೆ ಧಾತ್ರೀಪತಿಕೋಪದೊಳ್ನೊಂದರ್ದವಂಗೆ ಶರಣ್ಪೆಱತಿಲ್ಲ (ಸಮುಕ. ೧-೧೯೨) ; ಬಡಿವೆತ್ತ [ಬಡವ]ನಂತೆ ಶಕ್ತಿ ಗೆಟ್ಟು (ಧರ್ಮಾಮೃ. ೦-೦೩೬). ೨. ಯಾವ ಆಧಾರವೂ ಇಲ್ಲದವನು ; ನಿರ್ಗತಿಕ; ದರಿದ್ರ : "ಕ್ಷುದ್ರಃ, ದರಿದ್ರಃ . . . ದುರ್ಗತಃ – ಈ ೬ ಬಡವಂ" (ಹಲಾಯು. ೩೬-೧೯೩) ; ನೀಚಜಾತಿಗಳುಂ ಬಡವರುಂ ಸದ್ಧರ್ಮಮಂ ಕೈಕೊಂಡು ನೆಗೞ್ವರ್ (ವಡ್ಡಾರಾ. ೯೭-೩) ; ಪಸಿದುಣ ವೇಡಿದಂ ಬಡವನಾನುಣಲಿತ್ತೆಂ (ಹಂಪಭಾ. ೩-೬೨) ; ದೈವದೊಲ್ಮೆ ಯಿರಲಾ ಕಾಲಾನುಕಾಲಕ್ಕೆ ತಾಂ ಬಡವಂ ಬಲ್ಲಿದನಾಗನೇ (ಸೋಮೇಶ. ೩೩); ಬಡವನ ಕೋಪ ದವಡೆಗೆ ಮೂಲ (ಗಾದೆ).
ಬಡವ ಬಗ್ಗುಗಳು = ಅತ್ಯಂತ ದರಿದ್ರರು : ಬಡವ ಬಗ್ಗುಗಳೂರ ನಾಡನು ಗ್ರಾಮಕಾರ್ಯದಲಿ ಕೆಡಿಸಿದತಿಪಾಪಿಷ್ಠ (ಕೃಷ್ಣಾಕ. ೯-೯೭). ಬಡವರು ಬಗ್ಗರು, ಬಡಬಗ್ಗರು = ಬಡವಬಗ್ಗುಗಳು : ಬಡವರು ಬಗ್ಗರನ್ನು ಕಂಡರೆ ಕರುಣೆಯಿಂದ ವರ್ತಿಸಬೇಕು (ರೂಢಿ) ; ಚಂದ್ರಶೇಖರನು ಬಟ್ಟೆ ಬರೆ ಪಾತ್ರೆ ಪರಟಿಗಳನ್ನು ಬಡಬಗ್ಗರಿಗೆ ದಾನಮಾಡಿದನು (ಹಂಕಿಮು. ೦೯೩); ಗಾಂಧೀಜಯಂತಿಯಂದು ಅವರು ಬಡಬಗ್ಗರಿಗೆ ವಸ್ತ್ರದಾನ ಮಾಡಿದರು (ರೂಢಿ). [ಬಡವು + – ಅ$_7$]

**ಬಡವಡು**.- ಬಡಪಡಂ (ಕ್ರಿ) ೧. ಕೃಶವಾಗು; ಸೊರಗು; ಬಡವಾಗು: ತನ್ನೊಳಾದ ಬೇಟದೊಳ್ ಬಡವಟ್ಟುಮೋಟ್ಗೆವಾಡಿವದ ಸಸಿಯಂತೆ ಸೊಗಯಿಸುವಪಸಿಯುಳಂ ಕಂಡು (ಹಂಪಭಾ. ೩-೦೩ ಪ); ತಪದಿಂದಂ ಬಡವ[ಪಾಠಾಂ. ಪ]ಟ್ಟ ನಿಟ್ಟೊಡಲನಂ . . . ವಸು ಕೂರ್ಗೋಡಿಂದೆ ಕೋರೆದೆತ್ತ (ವರ್ಧಪು. ೩-೬) ; ನೋಂತ ಬಡವ[ಪಾಠಾಂ. ಪ]ಟ್ಟೊಡಲಂ ಸಲ್ಲೇಖನದಿಂದಿಟುಪದೊಡಲ್ಲದುದೇಂ ದೇವನಾಗಲೆನಗಂ ನಿನಗಂ (ಅನಂಪು. ೯-೬). ೨. ಬಡತನವನ್ನು ಹೊಂದು ; ನಿರ್ಗತಿಕನಾಗು ; ದರಿದ್ರನಾಗು: ಬಡವಟ್ಟಂಗೆ ಮಹಾನಿಧಿದ್ವಯಮೆ ಕೈಸಾರ್ದಂತೆ . . . ಉತ್ಸಾಹವಿರ್ಮಡಿಸುತ್ತಿರ್ಪಿನಮಿರ್ಪನೀಕ್ಷಿಸುತುಮಾ ಭೂಪೋತ್ತಮಂ ಪುತ್ರರಂ (ಶಾಂತೀಶ. ೬-೬೩). **ಬಡಪಡು** : ೧. ನೀವಿಂತೇಕೆ ಕರಂ ಬಡಪಟ್ಟಿರ್ದಿರಿ (ವಡ್ಡಾರಾ. ೦೦೬-೯) ; ಬಡಪಟ್ಟು ಬೆಟ್ಟದೊಳ್ ಪೋಗಿ ತೊಟಲ್ದು ನಾರ್ಗಳನುಡಲ್ ತರುತಿರ್ದಲೆ ಮಾಡಲಾರ್ತ ನಿಲ್ಲಾಗಳೆ ಕೋಪಮಂ ನಿನಗೆ ಸಂಚಿತಶೌರ್ಯಧನಂ ಧನಂಜಯಂ (ಹಂಪಭಾ. ೭-೯೭) ; ನಾಯ್ ಬಡಪಟ್ಟು ದುಃಖದೊದವಿಂ ಜಾಯ್ದಿಟ್ಟು ಪೋಱುಟ್ಟು . . . ಸತ್ತಿತ್ತಂತೆ ಕಾಲಾಂತದೊಳ್ (ಸುಕುಮಾ. ೩-೨೦). ೨. ಬಡಪಟ್ಟು ಬೇಡಿದವರ್ಗ್ಗೀವಡೆ ಜಂಗಮಕಲ್ಪವೃಕ್ಷಮೆಂಬುದು (ಎಇ. XVI. ೩೩-೧೬; 1102) ; ಒಂದುದಿವಸಂ ನಾಭಿರಾಜನೆಲ್ಲಾ ಪ್ರಜೆಗೂಡಿ ಬಂದು ಬಡಪ[ಪಾಠಾಂ. ಪ]ಟ್ಟರಿವರ್ಗೆ ಗ್ರಾಸವಿಲ್ಲೆಂದೀಶಂಗೆ ತೋಱಿದೊಡೆ (ಕೃಷ್ಣಾಸ್ತ್ರ. ೦೦-೧೭ ಪ).
[ಬಡ (< ಬಡವು) + ಪಡು$_1$]

**ಬಡವಾನಲ** (ನಾ). = ಬಡಬಾನಲ : ಒಳಗಿರ್ದ ವೈರಿಗಳ್ ಮೊಕ್ಕಳ ವಿಸಾಯರ್ ಪೆರ್ಚಲಧಿಕವಿಭವರ್ಕಳುಮಂ ತಳರದೊಡನಿರ್ದು ಬಡವಾ [ಹಾಕಾಂ.ಬಾ] ನಳನೆಂದುಂ ಪೆರ್ಚಲೀಯದುದಾತಂಬುಧಿಯುಃ (ಕಿವಿಾ. ೩-೦೯೯).
[ಸಂ. ಬಡವಾನಲ]

**ಬಡವಿ** (ನಾ). ಯಾವ ಆಧಾರವೂ ಇಲ್ಲದವಳು; ನಿರ್ಗತಿಕಳಾದವಳು; ದರಿದ್ರೆ: ನಾನು ಬಡವಿ ಆತ ಬಡವ ಒಲವೆ ನಮ್ಮ ಬದುಕು ಬಳಸಿ ಕೊಂಡೆವದನೆ ನಾವು ಅದಕು ಇದಕು ಎದಕು (ಹಾಡೊಲೀ. ೩೯-೦); ನನ್ನ ಹತ್ತರ ಅಷ್ಟು ರೂಪಾಯಿ ಎಲ್ಲಿಂದ ಬರಬೇಕ್ರಿ ? ನಾ ಬಡವಿ (ಪಾಪೋಲೀ. ೩೦೩).
[ಬಡವ + — ಇ₃]

**ಬಡವು** (ನಾ). ೧. ಕೃಶವಾಗಿರುವಿಕೆ ; ಸೊರಗಿರುವಿಕೆ : (೩). ೨. ಸೊರಗಿದುದಂ ; ಕೃಶವಾದುದಂ ; ತೆಳುವಾದುದಂ : ನಭದೊಳಿರ್ದಪೆಯುವು ದಱಿಂದೆ ನಿನ್ನನಾನನುವಿಪೆನೆನ್ನ ಮೆಯ್ಯ್ ಬಡವೂ ನಲ್ಲನ ಮೆಯ್ಯ್ ಬಡವೋ ನಿಶಾಕರಾ (ಅಂಪು. ೧೨-೪೦). ೩. ಏನೂ ಇಲ್ಲದಿರುವಿಕೆ ; ನಿರ್ಗತಿಕತನ ; ದಾರಿದ್ರ್ಯ : (೩). ೪. ಕಿರಿದುಂ ; ಚಿಕ್ಕದುಂ ; ಅಲ್ಪವಾದುದುಂ : ನಿರ್ಜರಪತಿ ವಿಷ್ಣು ಬಾಗಿಲ ಕಾದಿರ್ಪ ಸಜ್ಜನಸಂಪತ್ತು ಬಡವೆ (ಸೋಹಕ. ೩೦-೦೩). ೫. ಅಶಕ್ತನಾದವನು ; ಅಸಮರ್ಥನಾದವನು ; ದುರ್ಬಲ : ಬೇಡ ಓಂಸಿಸಬೇತ, ಆ ಬಡವು ಗೋಪನನ್ (ಅಕ್ಕಕ್ಕಾ. ೬-೯೬) ; ನಿನ್ನುಂಬೆಯುಂ ಕೊಲ್ಲಿಸಿದ ತವಸಿಯುಂ, ಮೇಣ್ ಕೊಂದ ಆ ಬಡವು ಬಡಗನುಂ ತವಿಯುದೊಳರಿನ್ನುಂ (ಶ್ರೀರಾಪಟ್ಟಾ. ೨೦೯-೨೨೪).

**ಬಡವಾಗು** = ೧. ಕೃಶವಾಗು ; ಸಣ್ಣನಾಗು ; ಸೊರಗು : ಆತನ ಮಹಾದೇವಿ ಮಂದಿಯೆಂಬೊಳಾಕೆಗೆ ಗರ್ಭಮಾಗಿ ಚಂದ್ರನಂ ನುಂಗುವ ಬಯಕೆಯಾಗಿ ಬಡವಾದೊಡೆ (ವಡ್ಡಾರಾ. ೦೪೬-೦೦) : ಬಡವಪ್ಪೊಡೆ ಮೇಯದೆ ನೀರ್ಗುಡಿಯದೆ ಮಲ್ಕಿಱಿಯದಿರ್ಪೊಡೋರಂತಿರೆ ಕೊಡುವುದು ಬೇವಿನ ಕಷಾಯಮಂ (ಗೋವೈದ್ಯ. ೯-೨೦೬). ೨. ನಿರ್ಗತಿಕನಾಗು ; ದಾರಿದ್ರ್ಯವನ್ನು ಹೊಂದು : ಧನ ಸವೆದು ಬಡವಾದರೆ ಆ ಭಕ್ತನು ಆ ಲಿಂಗಕ್ಕೆ ಪೂಜೆಯುಹನು (ಬಸವ. ೦೫೦) ; ಬಡವಾದಿರರಸ ಕಾಲೊಳ್ ನಡೆದಖಿರೊಡನಾರುಮಿಲ್ಲ ಕಡಲೆಗಳೇ ನಿಮ್ಮುಡಿಯೊಳಗೆ ಪಡುವ ದೇಗುಲ ದೆಡೆಯಾವುದು ಕುಡದ ನಿಮಗಮಿಾಯೆಡಱಾಯ್ತೇ (ಕಮರ. ೦೦೨ ಕೃಹೋ); ಕಾಣೆಯ ಬೀಯದಲಿ ಬಡವಹುದೆ ಕನಕಾಚಲ (ಕುಮಾರರಾ. ೦-೦೬).

**ಬಡವುಗಳ್** = ಅಸಹಾಯಕವಾದ ಪ್ರಾಣಿ ಮುಂತಾದುವು : ಕರಿ ಕಳಭಂಗಳ ಶಿಶುಕೀಸರಿಗಳ ಬಟಿಯುಂ ತಗುಳ್ದು ಬಡವುಗಳನದಂ ತಿರಿಪಿ ಓಡಿಯುತ್ತುಮರಿಗಂ ಪರಿದಾಡುವ ಸವುವಯ[ಸ್ಕರೊ]ಳ್ ಸೊಗಯಿಸಿದಂ (ಹಂಕರಾ. ೨-೦೦): ಅಧಿಕಾರಿಗಳೆನೆ ಸ್ವೈರಿಸವಧಿಕಾರಿಗಳಾಗಿ ಬಾಟ್ಚಿಗ್ ಬಡವು ಗಳವಗಾರ್ಯುಧಭಾರಮೇಕೆ (ಗದಾಯು. ೩-೩೩). **ಬಡವು ಬಗ್ಗುಗಳ್** = ಬಡಬಗ್ಗರು : ಬಡವುಬಗ್ಗುಗಳ ಕರೆಕರೆದು ಕೈಹಾರದಲಿ ಮನವರಿಸಿ ಸೂಱೆಯ ಬಿಟ್ಟು ತೆಱಗೆಯು ಬರಹಗಳ ನೆಱೆ ತೊಡಿಸಿ ಸಂತಸವಡಿಸಿದನು ಜನವ (ಕೋರಿಕಾ. ೬-೯೬-೨೬).

**ಬಡವೆ** (ನಾ). = ಬಡವಿ : ಕುಡುವ ಬೊಜಂಗನಂ ಪಡೆದ ಕುಂಟಣಿಯಂತೆ ಸಿರಿವಂತನ ಕಯ್ಯಂ ಪಿಡಿದ ಬಡವೆಯಂತೆ (ರಪರ್ಾಪ್ಪ. ೩-೦೨೩) ; ನಾನು ಬಡವೆ, ತಿರಕೊಂಡು ತಿಂಬೋಳು (ಹುಬ್ಬ್ಳಿಕ. ೦೬೬). [ಬಡವ + — ಎ₂]

**ಬಡವೆಣ್** (ನಾ). ಹೆಚ್ಚು ತಿಳಿಯದ ಹೆಂಗಸು ; ಮುಗ್ಧಸ್ತ್ರೀ : ಕಡು ನಾಣ್ಚೆಯುಂಜಿ ಕಣ್ಮುಚ್ಚಿ ಕಂಪನಗೊಂಬ ಬಡವೆಣ್ಣಳೀ [ ಹಾಕಾಂ. ಎಡವೆಣ್ಣಳೀ, ಮಡದಿಯರೀ] ಕೃತಿಗೇಳೆ ಎಡಬಲದವರೇಳಿಸದಂತೆ ಮನ ದನ್ನರೊಡವೆ ಬಾಳುವರಡೆಸೊಳು (ಹರಿ. ೦-೩೩).
[ಬಡ (< ಬಡವು) + ಪೆಣ್]

**ಬಡವೆಱೆ**[3], ಬಡಹೆಱೆ[3] (ನಾ). ಚಿಕ್ಕದಾಗಿರುವ ಚಂದ್ರ; ಬಾಲಚಂದ್ರ: ಭಾಳದೊಳಿಕ್ಕಿದ ಬಡವೆಱೆವೊಟ್ಟಿಂ ಸ್ಥೂಲವಯೋಧರಕಿಕ್ಕಿದ ತಾರಾ ಮಾಲೆಗಳಿಂ ಬಾಲೆಯುತರೆಬರೆಸಿದರ್ (ಜಯುಕಾ. ೦೨-೦೦). **ಬಡಹೆಱೆ**[3] : ಹರನ ಜಡೆಯ ಬಡಹೆಱೆಯುಂ ವಾಣೀವರನ ಬೆರಲ ಕಂಠವನಂಬುರು ಹೋದರನ ಕರದ ಕಂಬುವನು . . . ತರಿಸಿ (ಜಯುಕಾ. ೦-೬೪).
[ಬಡ (< ಬಡವು) + ಪೆಱೆ[3]]

**ಬಡವೊಡಲ್**, ಬಡವೊಡಲು (ನಾ). ಕೃಶವಾದ ಶರೀರ ; ಸೊರಗಿದ ಮೈ : ಬಡವೊಡಲಂತೆ ಜೋಲ್ದು ಏರ್ವಡೆದ ಪಂದೆಯಂತೆ ತಲ್ಲಣಸಿ (ರಪರ್ಾಪ್ಪ. ೧-೦೬೬) ; ನೀರಂತೆವೋಲ್, ತುಂತುರಾಗದೇವಿ ನನ್ನ ಬಡವೊಡಲ್ ? (ಶ್ರೀರಾಪಾ. ೩೦೩-೬೩). **ಬಡವೊಡಲು** : ಬಡವೊಡಲು ನಾನಿದಱ ಬಿಗುಹಂ ಸಡಲಿದಡೆ ನೀ ಮಾತ್ರ ಮುಂದಕ್ಕಡಿಯನಿಡಬಾರದೆ ನಿಲುವೆ (ಬಸಪು. ೪೪-೯). [ಬಡ (< ಬಡವು) + ಒಡಲ್]

**ಬಡವೊಡಲು** 'ಬಡವೊಡಲ್' ನೋ.

**ಬಡಹ** 'ಬಡಪ' ನೋ.

**ಬಡಹಾರುವ** 'ಬಡಪಾರ್ವ' ನೋ.

**ಬಡಹುರಿ** (ನಾ). ಕೃಶವಾದ ಹಗ್ಗ ; ತೆಳುವಾದ ಹುರಿ : ಹಿಡಿದು ಕಱುಗಳನೆಳೆವವೋಲವಗಡಿಸಿ ಕಟ್ಟಿದನೇಳನೊಂದೇ ಬಡಹುರಿಯ ನೇಣನಲಿ (ತಿರಾಗ. ೦೦-೬೮-೩೨). [ಬಡ (< ಬಡವು) + ಹುರಿ₃ (< ಪುರಿ₃)]

**ಬಡಹೆಱೆ**[3] 'ಬಡವೆಱೆ[3]' ನೋ.

**ಬಡಾ** (ಗು). ೧. ದೊಡ್ಡ ; ಹಿರಿಯ : ಇಂಥಾ ದುರ್ಘಟಸಮಯದಲ್ಲಿ ಬಡಾಫಕೀರರಿಲ್ಲವೇ ಎಂಬುದು ಎಲ್ಲರಿಗೂ ಆಶಂಕೆ (ದೌಂಕ್. ೯೦). (ನಾ). ೨. ವಿಸ್ತಾರವಾದುದಂ : 'ಬಡಾಯಿಸು', 'ಬಡಾವಣೆ' ಪರಾ.
[← ಹಿಂ. ಬಡಾ]

**ಬಡಾಯಿ**₁ 'ಬಡಗಿ' ನೋ.

**ಬಡಾಯಿ**₂ (ನಾ). ದೊಡ್ಡಸ್ತಿಕೆ ; ಒಣಜಂಬ; ಹೆಮ್ಮೆ : ಅವಳ ತಾಯಿ ತಂದೆ ಇದ್ದಿದ್ದರೆ ಎಷ್ಟು ಸಂತೋಷಪಡುತ್ತಿದ್ದರೋ? ಸ್ವಲ್ಪವೂ ಜಂಬ, ಬಡಾಯಿ ಇಲ್ಲ (ದೂರಸ. ೦೦೩); ಒಣಸಾಹಸದ ಬಡಾಯಿಯಲ್ಲ; ಅವನು ಬಹುಶ್ರುತನಾಗಿದ್ದನು (ಶಂಕಪು. ೪೪೨).
[← ಹಿಂ. ಮರಾ. ಬಡಾಈ, ಬಢಾಈ. / ತುಳು. ತೆಲು. ಬಡಾಯಿ]

**ಬಡಾಯಿಕೊಚ್ಚು** (ಕ್ರಿ). ಜಂಬ ಹೊಡೆ : ನಾನದನ್ನು ಬಲ್ಲೆ, ಬಲ್ಲೆ ಎಂದು ಯಾರು ಬೇಕಾದರೂ ಬಡಾಯಿಕೊಚ್ಚಬಹುದು (ಕಕಂಪಾ. ೦೪೬); ಕೃಷ್ಣಭಟ್ಟರು ಬಡಾಯಿಕೊಚ್ಚಿಕೊಳ್ಳುತ್ತಿದ್ದರು (ಕ್ರಾಂತಿಸು. ೦೬).
[ಬಡಾಯಿ₂ + ಕೊಚ್ಚು₁]

**ಬಡಾಯಿಗಾರ** (ನಾ). ಒಣಜಂಬದವನು : ಅವನು ಚಮತ್ಕಾರಶೂನ್ಯವಾದ ಬಡಾಯಿಗಾರ ಮಾತ್ರವಲ್ಲ . . . ಆಡಂಬರವ್ಯಕ್ತಿಯೆಂದು ಆಗ ಪ್ರತಿಯೊಬ್ಬರಿಗೂ ಮನದಟ್ಟಾಯಿತು (ಪುಕರು. ೩೩೩).
[ಬಡಾಯಿ₂ + — ಕಾರ₁ (< — ಕಾಱ)]

**ಬಡಾಯಿಸು** (ಕ್ರಿ). ೧. ದೊಡ್ಡದಾಗು ; ಹೆಚ್ಚು ; ಅಧಿಕವಾಗು: ಮೈಸೂರವರು ಬಡಾಯಿಸಿ ಕೊಡಗಿನ ಶೀಮೆ ವಳನುಗ್ಗಿ ಬಂದರು (ರಾಕೇಂದ್ರ. ೩). ೨. ವಿಸ್ತರಿಸು; ಹೆಚ್ಚಿಸು; ಅಧಿಕಗೊಳಿಸು : ಈ ಬಾರಿನ ಸಂಖ್ಯೆಯನ್ನು ೮,೦೦೦ಕ್ಕೆ ಬಡಾಯಿಸಿದರು (ಮುಹಾಶಂ. ೧೧. ೦೯); ನಾಲೆಯನ್ನು ಮೈಸೂರವರೆಗೂ ಬಡಾಯಿಸಿ ಭಾರಿಯಾಗಿ ಕಾಲುವೆ ಮಾಡಿಸಿದರು (ಮುಸುಗ. ೪೪); ಹುಡುಗ ವ್ಯಾಪಾರ ಮಾಡಿಕೊಂಡು ಹೋಟೆಲ್ ಬಡಾಯಿಸಿದ (ಕಪಂ. ೦೪೮). [ಬಡಾ + — ಇಸು₂ / ತೆಲು. ಬಡಾಯಿಂಚು]

**ಬಡಾಯಿಹೊಡೆ** (ಕ್ರಿ). = ಬಡಾಯಿಕೊಚ್ಚು : ನಾನಾಸಾಹೇಬ ನಕ್ಕು "ನಾನು ಅಷ್ಟು ಹೆಡ್ಡನೇ. ಅಷ್ಟು ಯೋಚಿಸುವ ಸಾಮರ್ಥ್ಯವುಂಟು

ನನ್ನಲ್ಲಿ" ಬಡಾಯಿಹೊಡೆಯುವವನಂತೆ ನನ್ನ ಹತ್ತಿರ ಹೇಳಿದ (ಐದುಃ. ೦೬೩). [ಬಡಾಯಿ$_2$ + ಹೊಡ$_1$ (< ಪೊಡೆ$_1$)]

**ಬಡಾವಣೆ** (ನಾ). ೧. ಕಟ್ಟಡ, ನಗರ ಮೊದಲಾದುವುಗಳನ್ನು ವಿಸ್ತರಿಸುವಿಕೆ.–ವಿಶಾಲಗೊಳಿಸುವಿಕೆ: ಹತ್ತಿಪ್ಪತ್ತು ವರ್ಷಗಳ ಹಿಂದೆ ಬೆಂಗಳೂರಿನ ಸುತ್ತಲೂ ತರಕಾರಿ ತೋಟಗಳಿದ್ದವು. ಅವುಗಳನ್ನು ನಗರ ಬಡಾವಣೆಗಾಗಿ ಆಕ್ರಮಿಸಿಕೊಳ್ಳಲಾಗಿದೆ (ಹರಿ. ೬೩); ದೊಡ್ಡಿಗಳ ಕಟ್ಟಡವನ್ನು ಕಟ್ಟಿಸುವದಕ್ಕೂ ಕಟ್ಟಡವನ್ನು ರಿಪೇರಿ ಬಡಾವಣೆ ಮಾಡುವುದಕ್ಕೂ ಹೀಗೆ ಖರ್ಚಾಗಿ ಉಳಿದ ಹಣವನ್ನು . . . ಕೊಡಲ್ಪಡತಕ್ಕದ್ದು (ಗ್ರಾ ಪಂ. ೦೦೦). ೨. ಕಟ್ಟಡ, ನಗರ ಮೊದಲಾದುವುಗಳ ವಿಸ್ತರಿಸಿದ ಭಾಗ,–ವಿಸ್ತರಣ: ನಮ್ಮ ಮನೆಯಿರುವುದು ಬೆಂಗಳೂರುನಗರದ ಜನಭರಿತ ಬಡಾವಣೆಯೊಂದರಲ್ಲಿ (ನಾಡಗೀ. ೦೯೯). [ಬಡಾ+–ಅಣೆ$_4$]

**ಬಡಿ$_1$** (ಕ್ರಿ). ೧. ಹೊಡೆ; ಏಟುಹಾಕು; ತಾಡಿಸು: "ಬಡಿ– ತಾಡನೇ, ಸ್ವಲ್ಪದಂಡೇ ಚ" (ಶಮಂ); ಮೊಗಮಂ ಸುಡು ಬಡಿ ಬಡಿ ನಿಮಿರ್ದಿಜಿ ಬಯಲ್ ಕಡಂಗಿ ನುಂಗೆಂದು ಮುಸುಜಿ ನಾರಕರಾಗಳ್ . . . ಕುತ್ತುವುದುಂ (ಪಮ್ಪಾ. ರಾ. ೦೨೬–೯); ಕರಿಘಟೆಗಳನಾರ್ದುಡಿಯೆ ಬಡಿದಾನೆವೆರಸಾಗಡೆ ಕೊಂದಂ ಕ್ಷೇಮಧೂರ್ತಿಯಂ ಪವನಸುತಂ (ಕಂಪಭಾ. ೦೨–೭೪); ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ (ಬಸವ. ೦೦೭); ತಾಯೆ ಬಾರೌ ತಂಗಿ . . . ಸಾಯಲವದಿರ ಬಡಿದು ತಾ (ಕುಮ್ಮಾ ೪. ೯–೦೦). ೨. (ಕಬ್ಬಿಣ ಮೊದಲಾದುವುಗಳನ್ನು ಕಾಯಿಸಿ) ಚಚ್ಚಿ ಉದ್ದ ಮಾಡು; ಸಾಗುಹಾಕು: ಕಮ್ಮಾಜನಂತೆ ಕಾಸಿ ಬಡಿವರ್ ಪೇಧದನಂತೆ ಸೀಳ್ವರ್ (ಧರ್ಮಾಮೃ. ೩–೭೩); ಕಾದಿರುವಾಗ ತಾನೆ ಕಬ್ಬಿಣವನ್ನು ಬಡಿಯಬೇಕಾಗುವುದು (ಕನ್ನಡ. ೯೯). ೩. (ಕೈ ಮೊದಲಾದುವುಗಳನ್ನು) ತಟ್ಟು: ಬರೆದ ಬರೆಹವಿದೆಂದು ಕಯ್ ನೊಸಲ ಬಡಿದಂ (ಕಾರೂರ. ೦೩೩–೨೯೯); ಎರಡೂ ಕೈಗಳನ್ನು ಬಡಿದು ಧೂಳನ್ನು ಜಾಡಿಸಿ (ಕಮ್ಮಟ. ೨). ೪. (ರಭಸವಾಗಿ) ತಾಗು; ತಗಲು: ನನ್ನ ಕಾಲು ಕುರ್ಚಿಗೆ ಬಡಿದು ಬೆರಳಿನಲ್ಲಿ ರಕ್ತ ಬರುತ್ತಿದೆ (ರೂಢಿ). ೫. ಅವಯವಗಳನ್ನೇ (ಅಸಹಾಯಕವಾಗಿ) ಅಲುಗಾಡಿಸು; ಒದರು; ಚಲಿಸುವಂತೆ ಮಾಡು: ಮುಸುಕಂಗುಂದಿದ ಮೆಯ್ಯ್ ವಲಂ ಬಡಿವ ಕಾಲ್ (ಕಂಪಭಾ. ೦೨–೦೫೦); ಬಲೆಯೊಳ್ ಕಪೋತಂಗಳಸಂಘಾತಂ ಸಿಲ್ಕಿ ತಲೆಯುಮನೊಡಲುಮಂ ಬಡಿಬಡಿದು ಬಟಲುತಿರ್ಪುದುಂ (ಕಂಪಕಂ. ೨೯೯–೦೯); ಉಡು ಮೊಲ ನರಿ ಹುಲ್ಲೆ ಮರೆ ಸಾರಗಗಳ ಕಂಗಿಡಿಸುವ ಜಂಘಾಲಿಗಳು ನಡುವಿನ ರತ್ನಮೇಖಲೆಯಾಂತು ಬಾಲವ ಬಡಿಯುತೆ ನಡೆದುವೊಗ್ಗಿನಲಿ (ಪೋಪಕ. ೧೯–೦೨). ೬. (ಹರೆ, ನಗಾರಿ, ತಮಟೆ ಮೊದಲಾದ ಚರ್ಮವಾದ್ಯಗಳನ್ನು) ಬಾರಿಸು; ನುಡಿಸು: ಕೂಟಿಲ್ಲದೆ ಮದ್ದಳೆಯುಂ ಬಡಿವ (ಧರ್ಮಾಮೃ. ೦೨–೨೪); ಸಿಡಿಲ ಕಡುಹಿನಿಂದೆ ಬ್ರಹ್ಮಾಂಡಭೇರಿಯು ಬಡಿವವೊಲಾನೆಯ ಮೇಲೆ ಹೊಡೆವ ಡಮಾಮಿಗಳಬ್ಬರ ಗಗನವ ತುಡುಕಿತು (ಕಂಪಾ. ೦೦–೨೩); ಸುಡುವರೆ ಪಂಜಿಹುದು ಬಡಿಯೆ ಭೇರಿಯು ಇಹುದು (ಸರ್ವಜ್ಞ. ೨೪೭). ೭. (ಸಿಡಿಲು ಮೊದಲಾದುವುಗಳು) ಎರಗು; ಹೊಡೆ; ಅಪ್ಪಳಿಸು: ತೆಜಿಹು ಗೊಟ್ಟೊಳಹೊಗಿಸಿ ತದೆದನು ಬಜಿಸಿಡಿಲು ಬಡಿವಂತೆ (ಶಶಕ. ೯–೩೦). ೮. ಗ್ರಹ, ದೃಷ್ಟಿ, ರೋಗ ಮೊದಲಾದುವು ತಾಗು,–ಹಿಡಿ,–ಆವರಿಸು: ಅಚ್ಚರಿಗೊಂಡುಗ್ರಬಾಹು ಕಂಡು ಬೆಚ್ಚಿಬಿದ್ದನು ತನಗೆ ಬಡಿಯಬು ರಾಹು (ಶ್ರೀಗಂಧಿ. ೬೪–೫); ದೃಷ್ಟಿ ಬಡಿದಿದೆ, ಅದಕ್ಕೆ ಮದ್ದು ಮಾಡಿ ನೋಡ್ತೀನಿ (ಮಹೋಸಂ. ೩೩೫). 'ಗರಬಡಿ' ಪರಾ. ೯. (ಕೆಟ್ಟವಾಸನೆ ಮುಂತಾದುವು) ಬರು,–ಉಂಟಾಗು: ಹೋತದಲ್ಲಿ ಅದರಲ್ಲೂ ಬೆದೆಹತ್ತುವ ಕಾಲವಲ್ಲಿ ತಡೆಯಲಾಗದ ಹೊಲಸುನಾತ ಬಡಿಯುವುದು (ಕಂಕೋ. I. ೭೩೬); ಕಾಕಾ ಅವರಿಂದ ಕಾಗದ ಬಂದ ವಾಸನಿ ಅವಂಗ ಬಡಿದದ (ದೀಕಪ. 11. ೦೦೫). ೧೦. [ಗಣಿತ] ಗುಣಿಸು; ಗುಣಾಕಾರ ಮಾಡು: ತಿಪಿ ಪೊಯ್ ಚರ್ಚಿಸು . . . ಅಣೆ ಬಡಿ ಪೋದು . . . ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೦೦).

**ಬಡಿದಾಟ**=ಹೊಡೆದಾಟ; ಘರ್ಷಣೆ; ಹೋರಾಟ: ಕೋಮುವಾರು ಘರ್ಷಣೆಗಳಾಗುವ ಸೂಚನೆ ಕಾಣಿಸಿತು . . . ಆದರೆ ಬಡಿದಾಟಕ್ಕೊಂದು ಕುಂಟುನೆಪ ಬೇಕಲ್ಲ? (ಐವ್ಯ.ಕ. ೦೬೪); ಸಹಸ್ರಾರು ಜನರು ತಮ್ಮ ಉದ್ದೇಶಸಾಧನೆಗಳಿಗಾಗಿ ಬಡಿದಾಟ ನಡಿಸುವರು (ಮಹಾತ್ಮ. ೬೯). **ಬಡಿದಾಡು**=ಹೊಡೆದಾಡು; ಹೋರಾಡು: ಕಡಿದಾಡಿದರ್ ಕತ್ತಿ ಕೈದುವಿಂ ಗದೆಗಳಿಂ ಬಡಿದಾಡಿದರ್ (ಕಂಕ್ಕ. ೨೯–೬); ಪಶುಗಳನ್ನು ಸಾಕಿದವರು . . . ಹೆಚ್ಚಿನ ಬೆಳೆಯ ಪಾಲಿಗೆ ಪಾತ್ರರೆಂದು ಬಡಿದಾಡಹತ್ತಿದರು (ಪಾಪಾದ. ೭೨). **ಬಡಿದುಕೊಳ್ಳು**=೧. ಹೊಡೆದುಕೊಳ್ಳು; ತಾಟಿಸಿಕೊಳ್ಳು: ತಲೆಯಂ ಕಾಲ್ಗಳಂ ಪಾಷಾಣವೃಕ್ಷಂಗಳೊಳ್ ಶತಚೂರ್ಣಮಾಗೆ ಬಡಿದುಕೊಂಡು . . . ಪ್ರಳಾಪಂಗೆಯ್ದು (ಪಮ್ಪಾ. ರಾ. ೯೯–೨೯). ೨. ಆವರಿಸು; ಹಿಡಿದುಕೊಳ್ಳು: ಪ್ರಾಚೀನಕಾಲದಲ್ಲಿ ದೇವತೆಗಳಿಗೆ ಅಲ್ಲದಿದ್ದರೆ ರಾಕ್ಷಸರಿಗಾದರೂ ನೆಗಡಿ ಬಡಿದುಕೊಳ್ಳುತ್ತ ಇದ್ದಿರಬೇಕು (ದೀಕಕ್ಕ. ೦೭); ಇವನ ಅಜ್ಜನಿಗೋ ಅಜ್ಜಿಗೋ ಇದ್ದಿತಂತೆ ಈ ದಮ್ಮಿನ ರೋಗ. ಆದರೆ ಇವನಿಗೆ ಹನ್ನೆರಡನೆಯ ವರ್ಷಕ್ಕೇ ಬಡಿದುಕೊಳ್ಳಬೇಕೇ? (ಮೂರುದಾ. ೬೩).

☞ ಈ ಧಾತುವು ಹಲವು ಶಬ್ದಗಳ ಜೊತೆಗೆ ಸೇರಿ ವಿಶಿಷ್ಟವಾದ ಧಾತುವಾಗಿ ವಿವಿಧವಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾ: ಕಾಲ್ಬಡಿ, ಗರಬಡಿ, ಬಾಯ್ಬಡಿ, ಸಿಡಿಲ್ಬಡಿ ಇತ್ಯಾದಿ.

[ದೇ.॥ ಮಲ. ವಟ; ತುಳು. ಕೊಡ. ಬಡಿ]

**ಬಡಿ$_2$** 'ಬಟ್$_1$' ನೋ.

**ಬಡಿ$_3$** (ನಾ). ೧. ಹೊಡೆಯುವುದು: (✶). ೨. ಪೆಟ್ಟು; ಏಟು: (✶). ೩. (ಹೊಡೆಯಲು ಉಪಯೋಗಿಸುವ) ಕೋಲು; ದೊಣ್ಣೆ; ಬಡಿಗೆ: "ಸ್ವಲ್ಪದಂಡ ತಾಡನಗಳೊಳ್ ಬಡಿಯೆನಿಕ್ಕುಂ" (ಕ್ಕಶಂ. ೯೩); ಮಿಡಮಿಡಮಿಡುಕುವಿನಂ ಬಡಿಯೊಳೊಡೆಯೆ ಪೊಡೆ ಪಡತಲೆಯಂ (ಪಮ್ಪಾ. ರಾ. ೦೨೬–೬); ಜೂದಿನ ಗೆಲ್ಲದೊಳಾದೀ ಮೇದಿನಿಯಂ ಕಂಡು ಕಜ್ಜಮಂ ಕಾಣದೆ ದುರ್ಯೋಧನನದೇನದೇಂ ಮರುಳಾದನೊ ಬಡಿಗಂಡನಿಲ್ಲ ಪಾಲನೆ ಕಂಡಂ (ಕಂಪಭಾ. ೭–೦೯); ಬೆಕ್ಕು ಪಾಲನಲ್ಲದೆ ಮೇಲಣ ಬಡಿಯಂ ಕಾಣದು (ಧರ್ಮಾಮೃ. ೭–೦೨೬).

[<ಬಡಿ$_1$/ತಮಿ. ಮಲ. ವಟ; ತುಳು. ಬಡು; ತೆಲು. ಬಡೆ; ಕೋಲಾ. ಬಡ್ಡ]

**ಬಡಿಕ$_1$** (ನಾ). (ವಾದ್ಯ ಮೊದಲಾದುವುಗಳನ್ನು) ಬಡಿಯುವವನು,–ಬಾರಿಸುವವನು: ಮದ್ದಳೆಯ ಬಡಿಕರ ಬಿಂಕ ಮೇಳವವಿಲ್ಲಲಾ ನಿನಗೆ (ಕುಮ್ಮಾ ೪. ೩–೨೨). [ಬಡಿ$_1$ + —ಕ$_2$]

**–ಬಡಿಕ$_2$**, **–ಬಡಕ$_2$**, **–ಬಡುಕ** (ಪ್ರ). ಲಂಚ, ಮಾತಂಗಾರಿಕೆ, ಆಹಾರಸೇವನೆ ಮುಂತಾದುವುಗಳಲ್ಲಿ ಅತಿಯಾದ ಪ್ರವೃತ್ತಿಯುಳ್ಳವನು ಎಂಬರ್ಥದಲ್ಲಿ ಬರುವ ಪ್ರತ್ಯಯ: 'ಕೂಟ್ಬಡಿಕ', 'ಬಾಯ್ಬಡಿಕ' ಪರಾ. -**ಬಡಕ$_2$**: 'ಬಾಯಿಬಡಕ', 'ಲಂಚಬಡಕ' ಪರಾ. – **ಬಡುಕ**: 'ಬಾಯಿಂಬಡುಕ' ಪರಾ. [<ಬಡಿ$_1$]

**ಬಡಿಕೆ** 'ಬಡಿಗೆ$_1$' ನೋ.

**ಬಡಿಕೊಳ್** 'ಬಡಿಗೊಳ್' ನೋ.

**ಬಡಿಕೋಲ್** 'ಬಡಿಗೋಲ್' ನೋ.

**ಬಡಿಕೋಲು** 'ಬಡಿಗೋಲ್' ನೋ.

**ಬಡಿಗ** 'ಬಡಗಿ' ನೋ.

**ಬಡಿಗಲ್ಲು** (ನಾ). ೧. ಹೊಡೆಯಲು ಉಪಯೋಗಿಸುವ ಕಲ್ಲು;

**ಇಡುಗಲ್ಲು :** ನಿಡುಗಲ್ಲು ನಿಶಿತ ಹಾಸಱೆಗಲ್ಲು ಚೌಕದ ಬಡಿಗಲ್ಲು ಬಟ್ಟುಗಲ್ಲು ಬೀಳೆ (ಶೋಚಿಕ. ೧೧-೬೪). ೨. (ಕಬ್ಬಿಣ ಮೊದಲಾದುವುಗಳನ್ನು ಬಡಿಯಲು ಆಧಾರವಾಗಿ ಇರಿಸಿಕೊಳ್ಳುವ) ಅಡಿಗಲ್ಲು; **ಅಡೆಗಲ್ಲು :** ಮೇಳವದಿ ನೃಪರೊಗ್ಗಿನಿಂದಾ ಸ್ಥೂಳಚಾಪವ ತುಡುಕಲಾಧನು ಮೇಲೆ ಬಡಿಗಲ್ಲುರುಳಿದಂತಿರಲು (ಜೈಮಿಣಿ. ೧೫-೨೬); ಕುಂಭೀನಸಿಯು ಇದನ್ನೇ ಯೋಚಿಸುತ್ತ ಬಡಿಗಲ್ಲ ಮೇಲೆ ಕುಳಿತಿದ್ದಳು (ಶ್ರೀರಾಪ. ೮೦). ೩. ಆಕರ್ಷಣೆಗಾಗಿ ಇಟ್ಟಿರುವ ತಿಂಡಿಯನ್ನು ಇಲಿಯು ಮುಟ್ಟಿದ ಕೂಡಲೆ ದಪ್ಪಕಲ್ಲು ಮೇಲೆ ಬೀಳುವಂತೆ ಅಳವಡಿಸಿರುವ, ಇಲಿ, ಹೆಗ್ಗಣಗಳನ್ನು ಹಿಡಿಯಲು ಉಪಯೋಗಿಸುವ ಒಂದು ಬಗೆಯ ಸಾಧನ; **ಬೋನು :** ಒಡಲ ಕಿಚ್ಚಿಗೆ ಪೋಗಿ ಬಡಿಗಲ್ಲು ಕೆಡಹಿಕೊಂಡ ಡಗಿದ ಮೂಷಕನಂತಾದೆ (ಕುಶಲ. ೧-೧೦೪-೨); ಬಡಿಗಲ್ಲಿನಲಿ ಹೆಗ್ಗಣ ಮಿಡುಕುವಂದದಿ ಮದನಶರವಾಯಾಪ್ತುಬಂಧದಲಿ ತೊಡರಿ . . . ಅಡಿಯಿಡಲಾಱದವನು (ಅಮೃತ. ೨-೬೨). ೪. (ಆಲಂ) ಕಷ್ಟ; ತೊಂದರೆ ; **ತಾಪತ್ರಯ :** ಏನು ಮಾಡುವುದು ! ತಾನು ಹೋಗುವುದು ಒತ್ತಟ್ಟಿಗಿರಲಿ, ನಿಮಗೆ ಬಡಿಗಲ್ಲು ತಂದನು ! (ತಿ.ನಂ.ಶ್ರೀ. ೦೬೬). [ ಬಡಿ$_1$ + ಕಲ್ಲು (< ಕಲ್$_3$) ]

**ಬಡಿಗುಂಡು** (ನಾ). ಹೊಡೆಯಲು ಉಪಯೋಗಿಸುವ ಕಲ್ಲು; **ಇಡುಗುಂಡು :** ಪಿಡಿಗುಂಡು ಬಡಿಗುಂಡು ಜಡಿದು ಪೊಯಿವ ಗುಂಡು ಒಡನೆತ್ತಿ ಹಾಕುವ ಗುಂಡು ಗಡಣಿಸಿ ಕೊತ್ತಳದಪ್ಪದೆ ತನೆಗಳಿಂದೆಡೆಯೊಳ್ದವು ಗುಂಡುಗಳು (ಅನಂತ. ೦೬-೯೬). [ಬಡಿ$_1$ + ಗುಂಡು$_1$]

**ಬಡಿಗೆ$_1$**, ಬಡಿಕೆ (ನಾ). ಬಡಿಯುವ ಸಾಧನ; ಕೋಲು; **ದೊಣ್ಣೆ :** ಬಡಿವ ಬಡಿಗೆಗಳ ಕೋಲ್ಗಳ್ ತೊಡೆಯದು ಸಲೆ ಪೊಟ್ಟುಗೊಡದು ಕಡಿವಡೆದೆತ್ತಂ (ಸುಕುಮಾ. ೫-೦೫) ; ಹೊಡೆಸಿದ ಮರಳೆ ವಿಶ್ವಾಮಿತ್ರನಾಕಳ ಹಸಿಯ ಬಡಿಗೆಯಲಿ (ಸಂಶಕ. ೨೪-೬೮); ಬಡಿಗೆಯಲಿ ಹುತ್ತ ಹೊಡೆಯಲಡಗಿಹ ಸರ್ಪ ಮಡಿದಿಹುದೆ (ಸರ್ವಜ್ಞ. ೫೬೫). **ಬಡಿಕೆ :** ಹಾಳುಮುಂಡೇದಕ್ಕೆ ದೊಣ್ಣೇನೆ ಸೈ ಅಂತಾ, ಒಂದು ಬಡಿಕೆ ತಗೊಂಡು ಜಪ್ಪಿದೆ (ಮಲೆಮ. ೫೬); ನಾಲ್ವತ್ತರ ಮೇಲೆ ನಡಿಕೆ, ಎಂಭತ್ತರ ಮೇಲೆ ಬಡಿಕೆ (ಗಾದೆ). [ಬಡಿ$_1$ + — ಗೆ]

**ಬಡಿಗೆ$_2$** 'ಬಡಗಿ' ನೋ.

**ಬಡಿಗೆಕಾಱ** (ನಾ). ಕೋಲು ಹಿಡಿದಿರುವವನು; **ಕೋಲುಕಾರ :** ಮುಂತಣ ಮಾವಂತರ ಪಿಂತಣ ಬಡಿಗೆಕಾಱರ ನಡುವಣ ವೀರ ಜೋದರ . . . ಕೋಳಾಹಳದಬ್ಬರಮುಬ್ಬರವಾಗೆ (ಗಿರಿಜಾ. ೬-೫೫ ವ). [ಬಡಿಗೆ$_1$ + — ಕಾಱ]

**ಬಡಿಗೆಕೊಳ್** 'ಬಡಿಗೆಗೊಳ್' ನೋ.

**ಬಡಿಗೆಗೊಳ್**, ಬಡಿಗೆಕೊಳ್ (ಕ್ರಿ). ೧. (ಹೆದರಿಸಿ ಓಡಿಸಲು) ದೊಣ್ಣೆಯನ್ನು ಹಿಡಿ ; **ಕೋಲನ್ನು ಹಿಡಿದುಕೊಳ್ಳು :** ಮರ್ಕಟಂಗಳ ಪಡೆಯನಟ್ಟಿದ ಹಿಂಡು ದನವಿಗೆ ಬಡಿಗೆಗೊಂಡಂತೆ (ತೊರವೆರಾ. ೪೫-೦೪). **ಬಡಿಗೆಕೊಳ್ :** ೨. ದೊಣ್ಣೆಯಿಂದ **ಹೊಡೆ :** ನೆಲ್ಲಿಯ ಕಾಯ್ಗಳಂ ಬಡಿಗೆಕೊಂಡವೊಲೆತ್ತಿದ ತೋರಹತ್ತದಿಂ ಜಲ್ಲನೆ ತುಂಬಿಗಳ್ ಕೆದಱಿ ಬಂದುವು ಬಿಂಕದಿನಂಕದಾನೆಗಳ್ (ಶಬ್ದಮ. ೨೦೩). [ಬಡಿಗೆ$_1$ + ಕೊಳ್$_1$]

**ಬಡಿಗೆಗೋಲು** (ನಾ). = ಬಡಿಗೆ$_1$ : ಕೈಗಳ ಸಕಲದನುಜರು ಹಿಡಿದು ಜೋಲಲು ನೆಗೆದು ಹಾಱುತ ಕೊಡಹಿ ಬಡಿದನು ಬಾಲದಿಂದವ ಬಡಿಗೆಗೋಲಂತೆ (ತೊರವೆರಾ. ೦೬-೫೨). [ಬಡಿಗೆ$_1$ + ಕೋಲು$_1$ (< ಕೋಲ್$_1$)]

**ಬಡಿಗೆವಲೆ** (ನಾ). ಒಂದು ಬಗೆಯ ಬಲೆ : ಹಾಱುವಲೆ ಜಾಱುವಲೆ ಬಡಿಗವಲೆ . . . ಮುಂದಸಿನವಲೆಯ ಹೊಟಿಗಳ ಬೇಡವಡೆ ನೆರೆದುದು (ಹಕಾ. ೫-೬). 'ಬಡಿವಲೆ' ಪರಾ. [ ಬಡಿಗೆ$_1$ + ಬಲೆ$_1$ ]

**ಬಡಿಗೊಳ್**, ಬಡಿಕೊಳ್ (ಕ್ರಿ). ೧. ದೊಣ್ಣೆಯನ್ನು ಹಿಡಿ; **ಕೋಲನ್ನು ತೆಗೆದುಕೊಳ್ಳು :** ಬಡಿಗೊಂಡು ಗೋಣಿಪಣ್ಣಂ ಬಡಿವಂತಿರೆ ಪವನಸೂನು . . . ಬಡಿದನನಿಬರಂ ಕೌರವರಂ (ಗದಾಯು. ೬-೧೦) ; ನರನ ಬಿಲುಗೊಂಡೊಂದುದೆಸೆಯಲಿ ಮರುತಿ ಬಡಿಗೊಂಡೊಂದುಕಡೆಯಲಿ . . . ಎರಡುಮುಖಬಡಿಯಿಪುತ ನಿಂದರು (ಶಾಕ್ಮಾ. ೩೦-೬೨). ೨. **ಬಡಿಗೆಯಿಂದ ಬಡಿ, —ಹೊಡೆ :** ಬಡಿಗೊಳೆ ಬಿದು ಬಿಬ್ಬರಬಿಂದೊಡನುಗೆ ಪೊಸಮುತ್ತು (ಶಂಕರ. ೧೧-೧೧೪); ಬಡಿಯಿಂ ಬಹ್ವಾಮಲಕದ ಫಳವುಂ ಬಡಿಗೊಳಲುದಿರ್ವಂದದಿ ಬೀಳ್ತಹ ಬಲ್ವಡೆ (ಜಗನ್ನಾ. ೬-೫೨). ೩. **ಬಡಿಗೆಯ ಏಟು ತಿನ್ನು, —ಪೆಟ್ಟುತಿನ್ನು :** ಕೆಲರ್ . . . ಸೌಜನ್ಯಕಂದಾಂಕುರನ ಶರಕ್ಕಳ್ಕಿ ಬೆ[ ಳ್ಕ ] ತೋಳೆಯುಂ . . . ಬಡಿಗೊಂಡ ವೊಲದಂತೆಯುಂ ತಲೆಕೆಟಗಾಗಿ ಬಿಟ್ಟರ್ (ಶಾಂತಿಪು. ೯-೩೦ ವ); ಬಡಿಗೊಂಡು ಪಣ್ ಪಱಿದು ಬೀಟ (ಜೀವಪು. ೧-೬೬). **ಬಡಿಕೊಳ್ :** ೨. ಬಡಿಕೊಳೆ ಕಾಯುಂ ಪಣ್ಣುಂ ತೊಡಂಬೆ ಪಱಿದುದಿರ್ವ ಮಾಟ್ಕೆಯಿಂ ಕಿಱಿಪಿರಿಯರ್ ಮಡಿವರನ ಕ್ರಮದಿಂ (ಸಂಗತ್ಯಾ. ೦-೬೪). ೩. ರಿಪುಸೇನೆ ಬಿಱಲ್ದು ನಿದ್ರೆಯಿಂ ಬಡಿಕೊಂಡ ನೆಲ್ಲಿಯಂತೆ ನೆಲಕ್ಕೆ ಬೀಟ್ಟುದುಂ (ಧರ್ಮಾಮೃ. ೦೩-೧೨೯); ಬಡಿಕೊಂ[ಪಾಠಾಂ. ಗೊಂ]ಡ ನೆಲ್ಲಿಯ ಕಾಯಂತಾ ಬಲವೊಡನೆ ಚೆಲ್ಲಿತು ಕಂಡ ಕಡೆಗೆ (ಕುಮಾರಾಮ. ೯೦-೪೫). [ ಬಡಿ$_2$ + ಕೊಳ್$_1$ ]

**ಬಡಿಗೋಲ್**, ಬಡಿಕೋಲ್, ಬಡಿಕೋಲು, ಬಡಿಗೋಲು (ನಾ). ಬಡಿಯಲು ಉಪಯೋಗಿಸುವ ಕೋಲು, **—ಲಾಠಿ :** "ದಂಗೆಯೆ ಬಡಿಗೋಲ ಪೆಸರ್" (ಕಬಸಂ. ೬೩); ಏಱಿನ ಮೇಲೆ ಬಡಿಗೋಲ್ ಕೋಲೆಯ ಮೇಲೆ ಕವರ್ತಯೆಂಬಂತೆ ಸಂತಾಪದ ಮೇಲೆ ಸಂತಾಪಮಂ ಮಾಟ್ಟಿ ನಿನ್ನ ನೋಂಪಿಯೆಂಬ ಗರಗಸಕ್ಕೆನ್ನಮೆಯ್ಯನೊಡ್ಡಲಾಱೆಂ (ಧರ್ಮಾಮೃ. ೦-೦೬೨). ಓಡಿವ ಖಗಂಗಳ ಬಿಡದಿರೆ ಬಾಯೊಳು ಬಡಿಗೋಲ್ಗಳನಿಕ್ಕಿ ಕವಿಯ ಒಡೆಮುಱಿಹಿದೊಡೊದಱುವ ಶಬ್ದವಿಪಿನದೊಳೆಡೆಗೊಂಡುದು (ಶೋಚಿಕ. ೦೫-೨೦). **ಬಡಿಕೋಲ್ :** ನುಲಿ ನೇಣ್ ಬಡಿಕೋಲ್ ಬಲೆ . . . ಇದಿರೊಳ್ ಬರ ಕಾಣಲುಮಾಗದು (ಕೋಕೋಪ. ೦೨-೧೧); ಬಡಿಕೋಲಂ ಸಮವಮಾಡಲಕ್ಕುಂ . . . ಕಡುಮುಱುರ್ವಿಂ ಹಿತ ಕೇಳ್ವನೇ (ಸೋಮೇಶ. ೯೯); ತಿರುಗೆ ತಿರುಗುತ್ತುಂ ಸಂಗಡಿಸಿ ಪರಿದುಬುಬುಬೆನುತ್ತುಂ ಬಡಿಕೋಲಿಂದಿಟ್ಟನಧಿಕಬಲನಾ ಮೊಲನಂ (ಗಿರಿ. ೦-೮೬). **ಬಡಿಕೋಲು :** ಚಾಳಿಸಿದ ಹದವಿಲ್ಲುಗಳ ಬಡಿಕೋಲುಗಳ ಬೇಟೆಗಾಱರು ಬಳಸಿದರು ಶಿವನ (ಕುಮಾರ್ಮ. ೫-೪೩) ; ಭ್ರೂಲತೆಯ ಹದವಿಲ್ಲುಗಳ ಹೊಳೆವಾಲಿಗಳ ಹೊದೆಗೋಲುಗಳ ನಳಿತೋಳ ಬಡಿಕೋ[ ಪಾಠಾಂ. ಗೋ]ಲುಗಳ . . . ಬೇಟೆಕಾತಿಯರ್ಕೈದಿದರು ವನವ (ಕೊರಾ. ೦-೫-೩೯); ಓಡಿ, ತಡೆಗಟ್ಟಿ; ಬಡಿಕೋಲನಿಡಿ! (ಚಂದ್ರಕ. ೨೯-೩). **ಬಡಿಗೋಲು :** ಮನಸಿಜನ ಬಡಿಗೋ[ ಪಾಠಾಂ. ಕೋ]ಲೋ ಶಿವನು ಸೂಡಿರ್ದ ಚಂದ್ರನ ಭಾಗವೋ . . . ಎನಲರ್ಧಚಂದ್ರಾಸಂ ಬಣ್ಣಿಸುವೊಡರಿದು ಶಾವ್ಯಂಗಳೊಳಗೆ (ಹಕಾ. ೩-೬೨); ಗುಪ್ತಿಯವರೂ, ಬಡಿಗೋಲಿನವರೂ, ಹಣೆಮಟ್ಟದ ದೊಣ್ಣೆಯವರೂ, ಸಿದ್ಧವಾಗಲಿ (ಶೇಟೆಮಾ. ೩). [ ಬಡಿ$_1$ + ಕೋಲ್$_1$ ]

**ಬಡಿಗೋಲು** 'ಬಡಿಗೋಲ್' ನೋ.

**ಬಡಿಣ** 'ಬಡಿನ' ನೋ.

**ಬಡಿತ** (ನಾ). **ಹೊಡೆಯುವಿಕೆ; ಏಟು; ಪೆಟ್ಟು :** ಬಿಸಿವ ನೆತ್ತರ ಬಾಳ್ವೆಯೊಳ್ ಬಡಿತ ಕಡಿತಗಳನೆಸಗಿದವನಲ್ಲ (ಕಾಂಚಿ. ೦೬೨-೩೩೯); ಅವರ ತಲೆ ತಬಲೆಯ ಬಡಿತಕ್ಕೆ ಸರಿಯಾಗಿ ತೂಗುತ್ತಿತ್ತು (ಅಬೋಲ. ೦೬೬). 'ಬಡಿತಂಗಾಸಂ' ಪರಾ. [ ಬಡಿ$_1$ + — ತ$_2$ ]

**ಬಡಿತಂಗಾಸು** (ಕ್ರಿ). (ಲೋಹವನ್ನು) ಬಡಿಯುವುದಕ್ಕೆ ಹದವಾಗುವಂತೆ ಕಾಯಿಸು, **—ಬಿಸಿಮಾಡು :** ಬಾಟಿವಾಟ ತಿದಿಯುಗಿವರುಂ

ಮಿಡುಮಿಡುಕಿ ಬಡಿತಂಗಾಸುವರುಂ [ ಪಾಠಾಂ. ಬಡಿತಂಗೊಂಡು ಕಾಸಿ ಸುಡುವರುಂ] ನೋಡೆನೋಡೆ ಕಣ್ಗಳಂ ಮಿಂಟುವರುಂ (ಆದಿಪು. ೫-೬೫ವ); ಸುಜ್ಜಸುಜ್ಜನೆ ಬಡಿತಂಗಾಸುವುದುಂ ಕರ್ಕಶಕ್ಷಾರವಾರಿಯಿಂ ತಂದು ಸಜ್ಜಸಜ್ಜನೆ ಪೂಸುವುದುಂ (ಸುಕುಮಾ. ೧೦-೪೬ ವ). [ಬಡಿತ + ಕಾಸು₁]

**ಬಡಿತಂಗೊಳ್** (ಕ್ರಿ). ಪೆಟ್ಟುಹಾಕು ; ಏಟುಹೊಡೆ: ಬಾಟಿವಾಟಿ ತಿದಿಯುಂಗಿವರುಂ ಮಿಡುಮಿಡುಕಿ ಬಡಿತಂಗೊಂಡು ಕಾಸಿ ಸುಡುವರುಂ [ ಪಾಠಾಂ. ಬಡಿತಂಗಾಸುವರುಂ ] (ಆದಿಪು. ೫-೬೫ ವ). [ಬಡಿತ + ಕೊಳ್₁]

**ಬಡಿದಂಟು** (ನಾ). ಕೋಲಿನಂತಿರುವ ಕಾಂಡ ; (ಗರಿಗಳಿಲ್ಲದೆ) ಬರಿದಾಗಿರುವ ಕಡ್ಡಿ : ಗೊಡ್ಡೆಮ್ಮೆಯ ಮುಂದೆ ಬಡಿದಂಟು ಒಗೆದಂತೆ ಗಿರಾಕಿಗಳ ಮುಂದೆ ಒಂದೆರಡು ಪತ್ರಿಕೆಗಳನ್ನು ಅವರು ಒಗೆದಿರುತ್ತಾರೆ (ಗಾಳಿಕ. ೩೩). [ ಬಡಿ₃ + ದಂಟು ]

**ಬಡಿನ, ಬಡಿಣ** (ನಾ). ಬಡಿಸಿದುದು; ಆಹಾರ; ಎಡೆ: ಬಳಾರಿಗಿತ್ತ ಬಡಿನಂ ಹಾರ್ದಿದ ಹರ್ದಿಂಗೆ ಬಿರ್ದುರ್ವ ವೈಕಕ್ಕಿತ್ತಿದ ಬುತ್ತಿಯೆಂಯೊಡ ಹಿತರ್ ಮೆಯ್ದೋಟಿ ಮಾಪಿಣಾಂಪರೇ (ಮುಂಶಾಸ. X, ೨೨೩-೪೦ ; 1205); ಅವಯವುದಿನೆಯ್ದಿ ಬಲಮಂ ಜವಂಗೆ ಬಡ್ಡಿಸಿದ ಬಡಿನಮೆನೆ ಶರಹತಿಯಿಂ ತವೆ ತಟಿವುತ್ತಿರ್ಪುದುಮಾ ಕುವರಂ ಶತಖಂಡಮಾಯ್ತು ತನ್ನ ವಸ್ಯನ್ಯಂ (ಸುಕಾಸೇ. ೧೨-೧೦೬). **ಬಡಿಣ:** ಬಡಿಣಮನೊಲ್ಲದಂತಿರಿಸಿ ಭಿಕ್ಷಕೆ ಪೋಪ ವನಂತ ಕೂಡೆ ಕೂಡೊಡನಿರುತಿರ್ಪ ಮುಕ್ತಿಸುಖಭೋಗಮನೊಲ್ಲದೆ . . . ಕೋಟಲೆಗೊಳುತ್ತಿಹರಾ ಮರುಳರ್ (ಚಕಕ. ೯೬).
[ < ಬಡ್ಡಿಸು. / ತಮಿ. ವಟ್ಟವ್; ತೆಲು. ವಡ್ಡನ, ವಡ್ಡನ ]

**ಬಡಿಮಣೆ** (ನಾ). (ನೆಲ ಮೊದಲಾದುವುಗಳನ್ನು) ಬಡಿದು ಸಮ ಮಾಡುವ ಸಾಧನ ; ದಮ್ಮಸು : ಬಡಿಮಣೆಯಿಂದ ಬಡಿದು ಸಮ ಮಾಡಿ (ಮುಂಶಾಯು. ೯-೧೦೭). [ಬಡಿ₁ + ಮಣೆ]

**ಬಡಿವಡೆ, ಬಡಿಹಡೆ** (ಕ್ರಿ). ಹೊಡೆತವನ್ನು ಪಡೆ ; ಏಟು ತಿನ್ನು : ಊರ ಸೀರೆಗೆ ಅಸಗ ಬಡಿವಡೆದಂತೆ [ಪಾಠಾಂ. ತಡಬಡಗೊಂಬು, ತಡಬಡಿಹಡೆ, ಬಡಿಹಡೆದಂತೆ] ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದೆಂದು ಮರುಳಾದೆ (ಬಸವ. ೩೦೯ ; ಗಣಸಾ. ೯೨-೬ ನೋ); ಮನವಿಲ್ಲದವ ಮುಟ್ಟಿ ಬಡಿವಡೆದ ತೆಱನೆನಗೆ (ಕನ್ನರ. ಹ. ೯೯-೩) ; ವೀರವಾನರನ ಲಾಂಗೂಲದಿಂ ಬಡಿವಡೆದು ರಕ್ಕಸರ ನೆರವಿ ಹೇರಾಳದಿಂ ಪುಡಿವಡೆದು ಬಯಲಾಗೆ (ಶೈವಸಿಹಾ. ೦೬-೪೨). **ಬಡಿಹಡೆ** : ಲೋಹಸಂಗದಿ ಕಿಚ್ಚು ಬಡಿಹಡೆದುದೆಂಬಂತೆ . . . ಬೇಹುದೊಂದಳವಟ್ಟ ಬಳಿಕ ಬಿಡಲಾಗದು (ಸಿದ್ಧರಾ. ೯-೪೦).
[ಬಡಿ₃ + ಪಡೆ₁]

**ಬಡಿವರ** 'ಬಡಿವಾರ' ನೋ.

**ಬಡಿವಲೆ** (ನಾ). ಒಂದು ಬಗೆಯ ಬಲೆ : ಪಿಡಿವಲೆ . . . ಬಡಿವಲೆ ಬಲುವಲೆಗಾಜಿರು ಕೂಗಿ ಬೊಬ್ಬಿಡುತ್ತಲೈದಿದರು ಮುಂಗಡೆಯ (ಸೋಹಕ. ೦೯-೦೬); ಪಿಡಿವಲೆಯ ಕಾಲ್ಗಣ್ಣಿಗಂಪಿಲ ಬಡಿವಲೆಯ . . . ಕಿ[ಪಿ]ಡಿದು ಕಾಮುರ್ಗಿಲಂತೆ ಕವಿದುದು ಶಬರಸಂದೋಹ (ಅನಂರಾ. ೩-೩-೫). 'ಬಡಿಗೆವಲೆ' ಪರಾ. [ಬಡಿ₁ + ಬಲೆ₁]

**ಬಡಿವಾರ, ಬಡಿವರ** (ನಾ). ಒಣಜಂಬ ; ಬಡಾಯಿ ; ಡಂಭ : ಬಿಡದಹಂಕಾರ ಬಲುಬಡಿವಾರದಲ್ಲಿ ಸುಖಬಡಿವೆನು ದುರುಳನಡತೆಗಳಾಚರಿಸಿ (ಸೋಕ್ಷರಾ. ೦೬-೧) ; ಬಿಡದೆ ಮಡಿಮಡಿಯೆಂದು ಬಡಿವಾರಮಂ ಮಾಡಿ (ಮಲ್ಲಿಕ. ೨-೨೨) ; ಅಟ್ಟಕ್ಕೆ ಹಾರದ ಬೆಕ್ಕು ಬೆಟ್ಟಕ್ಕೆ ಹಾರುವೆನೆಂದು ಬಡಿವಾರ ಕೊಚ್ಚಿಕೊಂಡಂತಾಗುತ್ತದೆ (ಕಕಕ. ೨೩೯). **ಬಡಿವರ** : ಎನ್ನೊಡನೆ ಬಂದೊಡೀಗಳ ಕನ್ನೆಗೆ ಪೊಕ್ಕುವನನೊಲ್ದು ತೋಱಿದಪೆಂ ನೀವೆನ್ನಂ ಬಿಡಿ ಪರಸೇವೆಯೊಳೆನ್ನರುಮೇನಾಗರೆನ್ನ ಬಡಿವರಮೇನೋ (ದಾಕು. ೯-೯೯). [← ಪಾರ. ಮರಾ. ಬಡಿವಾರ್]

**ಬಡಿವೆಱು** (ಕ್ರಿ). = ಬಡಿವಡೆ : ಬಡಿವೆತ್ತ [ಬಡವ]ನಂತೆ ಶಕ್ತಿಗೆಟ್ಟು (ರರ್ಮಾಪು. ೧-೦೬೬) ; ಊರ ಸೀರೆಗಗಸಂ ಬಡಿವೆತ್ತನೆನಿಪ್ಪ ಜನದ ನಾಟ್ನುಡಿ ನಿನಗೆ (ಜಗು. ೬-೬). [ಬಡಿ₃ + ಪೆಱು₁]

**ಬಡಿವೋರಿ, ಬಡಿಹೋರಿ** (ನಾ). ಹೊಡೆತ ತಿಂದಂ ಕೆಲಸಮಾಡುವ ಎತ್ತು : ಎಂದಿನ ಕೊಂಗರೈಸೆ ಬಡಿವೋರಿಗಳೇ ಪಟಗೂಟಿ ಪಂದೆಗಳ್ (ಜಕಪ. ೫-೪೫). **ಬಡಿಹೋರಿ** : ಒಡೆಯ ಬಂಟನಿಗೆ ಬಡಿಹೋರಿಯಾದ (ವಗಪು. ೪. ೯೭೬-೫೭) ; ಬಗುಳುವಿವದಿರು ಹರಿಯ ಬಡಿಹೋರಿಗಳೆಲಾ ಜಗವಱಿಯದೇ (ಕುವ್ಯಾಸ. ೦೦-೯) ; ಕೊಡಗು ಕೊಂಕಣ ಕೊಂಗ ಮಲೆಯಾಳ ರಾಜ್ಯದ ಬಡಿಹೋರಿಗಳು ಮನನಡುಗಿ ಒಡನೆ ಕಾಣಿಕೆಯ ನಿತ್ತಾನೆಯ ಸಜ್ಜಾರ ನಡುಕೇರಿಯೊಳಗೊಪ್ಪುತಿಹುದು (ಕಂಠೀ. ೬-೩೨).
[ಬಡಿ₁ + ಪೋರಿ₂]

**ಬಡಿಶ** (ನಾ). (ಮೀನು ಮೊದಲಾದುವುಗಳನ್ನು ಹಿಡಿಯಲು ಉಪಯೋಗಿಸುವ) ಗಾಳ ; ಕೊಕ್ಕೆ : "ಬಡಿಶವೆಂಬುದು ಮೀನ ಗಾಳಂ" (ಶಲಾಯು. ೧೨೬-೭೯) ; ಝಷನಿಚಯಂ ಆಮಿಷಲೋಭದಿಂ ಬಡಿಶಮಾಂಸವನಾಸ್ವಾದಿಸಿ ಸಿಲ್ಕಿ ಸಾವನೆಯ್ದುಗುಂ (ಕಕ್ಷ್ಯಶೃ. ೩೩೦) ; ಕರಮ ಭುಕ್ತಾಶೆಯಿಂ ಬಡಿಶಂಗಳೊಳ್ಕಿಡವ ಪಿರಿಯ ಮೀನ್ಗಳ ತೆಱದೆ . . . ರಾಜಸುಮಿಂದ್ರಿಯಂಗಳಿಂದಂ ಶಿವಧ್ಯಾನತತ್ಪರರೆಯ್ದೆ ರಂಜಿಸಿದರು (ಅರಾಕ. ೫-೫-೨೫) ; ಬಡಿಶಗತಝಷ ಮತ್ಸ್ಯದಂದದಿ ಕೆಡೆದು . . . ಱಕ್ಕೆಯ ಕಡಿದ ಪಕ್ಷಿಯ ತೆಱದೊಳಡಿಯಿಡಲಾಱನವನು (ಅಮೃತ. ೨-೬೨).
[ಸಂ.]

**ಬಡಿಸ** (ನಾ). = ಬಡಿಶ : "ಬಡಿಶಂ ಮತ್ಸ್ಯಬಂಧನಂ . . . ಅದು ಕಿಱಿದಾದಡೆ ಬಡಿಸವೆಂಬುದು" (ಪಾಶಠಾ. ೧೧೧) ; ಜಲದೊಳಗಣ ನಿಮಿಷಾವಳಿ ಬಲೆಗಾಱಿನ ಬಡಿಸದಲಿ [ಪಾಠಾಂ. ಸರಳ್ಗೆ] ಸಿಕ್ಕಿಹ ಮಾಂಸಕ್ಕೆಳಸಿ ತನುವಳಿವ ತೆಱದಿಂ ಲಲನೆಯರ್ಗಂ ಹೇಮಭೂಮಿಗೆಳಸಲ್ ಕೆಡುವರ್ (ವನ್ನಪಾ. ೩-೬೮)₂ [< ಸಂ. ಬಡಿಶ]

**ಬಡಿಸು₁** (ಕ್ರಿ). ಹೊಡೆಯಿಸಂ ; ಏಟು ಕೊಡಿಸಂ : ಸೊಕ್ಕಿರ್ದರ ಮದಮಿಂತಲ್ಲದುಡುಗದೆಂದು ಸಾಯೆ ಬಡಿಸುವಂ (ಧರ್ಮಾಪು. ೨-೬೩) ; ಹೊಟ್ಟೆಯನು ಕಟ್ಟುವುದು ಬಟ್ಟೆಯಲಿ ಬಡಿಸುವದು ಕಟ್ಟಾಳ ಭಂಗಪಡಿಸು ವದು ಗೇಣುದ್ದ ಹೊಟ್ಟೆ ಕಾಣಯ್ಯ (ಸರ್ವಜ್ಞ. ೦೯೮೫). [ಬಡಿ₁ + — ಇಸು₁]

**ಬಡಿಸು₂** 'ಬಡ್ಡಿಸು' ನೋ.

**ಬಡಿಹ** (ನಾ). ಹೊಡೆತ ; ಪೆಟ್ಟು ; ಪ್ರಹಾರ : ಬಡಿಹದ ಮಾಕ್ಕಳಂತೆ ಅಟಲ್ವೆಯೊಳಂ ನೀರ್ ಮುಟ್ಟಿದ ಕೆಂಡದಂತುಪಶಮದೊಳಂ . . . ನೆರೆದಿರ್ಪುದುಂ (ಧರ್ಮಾಪು. ೫-೦೨೫) ; ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಓಡೆಯಾಣಿಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು (ಬಸವ. ೨೫೦) ; ಮರ್ಕಟಂಗಳ ಬಡಿಹ ಮಾಣಿಸು ದೇವ (ಕೌಶಿರಾ. ೦೫-೮). [ಬಡಿ₁ + — ಹ₂ (< — ಪ₃)]

**ಬಡಿಹಡೆ** 'ಬಡಿವಡೆ' ನೋ.

**ಬಡಿಹೋರಿ** 'ಬಡಿವೋರಿ' ನೋ.

**ಬಡು₁** (ನಾ). ಪ್ರಾಣಿಗಳ ಹೆಣ, — ಶವ : ಜಾಕಿ, ಓಬಯ್ಯ ಇಬ್ಬರನ್ನು ಜೊತೆಗೆ ಕರೆದುಕೊಂಡು ಕೋವಿಗಳೊಡನೆ 'ಬಡು' (ದನದ ಹೆಣ) ಬಿದ್ದಲ್ಲಿಗೆ ಹೊರಟನು (ಕಾಸೂರು. ೨೬೯) ; ದನವನ್ನು ಹುಲಿ ಹಿಡಿದು... ಬಡುವನ್ನು ಕಾಡಿಗೆ ಎಳೆದುಕೊಂಡು ಹೋಗಿ . . . ಹಳುವಿನಲ್ಲಿ ಮುಚ್ಚಿಟ್ಟಿತ್ತು (ಮಲೆಮ. ೦೯೧). [ದೇ.॥ ತೆಲು. ಬಡುಗು]

**ಬಡು₂** (ನಾ). (ಸಾಮಾನುಗಳನ್ನು ಇಡಲು) ಗೋಡೆಯಲ್ಲಿ ಮಂಚದಂತೆ ಕೊಂಡಿರುವಂತೆ ಉದ್ದವಾಗಿ ಕಟ್ಟಿರುವ ಕಲ್ಲು, ಸಿಮೆಂಟು, ಮರ ಮುಂತಾದುವುಗಳ ಕಟ್ಟೆ: ಸಾಮಾನು ಇಡುವ ಮೇಜು (ಅಂತಮ್ಮ

ಗಳುಳ್ಳ) ನಿಲುವು, ಬಡು, ಅಡ್ಡಣಿಗೆ (Stand. ೫೦೪೩) ; ಅಡಿಗೆಮನೆಯ ಒಂದು ಬಡುವಿನ ಮೇಲೆ ಕಂಚಿನ ಗೌರಿಯ ಪ್ರತಿಮೆಯೊಂದಿತ್ತು (ಹೂಕಣ್ಣು. ೭೦).

**—ಬಡುಕ** '—ಬಡಿಕ೨' ನೋ.

**ಬಡುಗುಲಿ** (ನಾ). (?) : ಪಾತಕಜೀವಂಗಳ್ ಎಳ್ಳಿನಂತೆ ಗಾಣಕ್ಕೆ ವಂದು . . . ಮಱುಯ್ಯಲ್ಲದೊಳ್ಕಲಂತೆ ಬಡುಗುಲಿಗೆ ವಂದು . . . ತಿಱ್ಱನೆ ತಿಂಪವು (ಧರ್ಮಾಮೃ. ೩–೭೬). [?]

**ಬಡೇಜಾವು** (ನಾ). (ಉಕ) ಒಣಜಂಬ ; ಡೌಲು ; ಬಡಾಯಿ : ಆತನ ಶಾಸನ ಮಾಡುವುದು ಒತ್ತಟ್ಟಿಗೆ ಉಳಿದು, ಆತನ ಬಡೇಜಾವು ನಡೆದದೆ ! (ಛತ್ರಪ. ೦೩೬) ; ಆ ಸಣ್ಣ ಹುಡುಗನ ಮುಂದೆ ಯಾಕ ನಿನ್ನ ಬಡೇಜಾವ (ನಜಪ. ೩೧). [← ಮರಾ. ಬಡೇಜಾವ್, ಬಡೀಜಾವ್]

**ಬಡೇಸೋಪು** (ನಾ). ಜೀರಿಗೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ ಮತ್ತು ಅದರ ಬೀಜ : ಗೊರಟೀಬೇರು, ಹಸರಾಣಿ, ಬಡೇ ಸೋಪು ಇವು ಯಾವಾಗಲೂ ಹಸಿಯವೇ ಉಪಯೋಗಿಸಲ್ಪಡಬೇಕು (ಗೃಹವ್ಯ. ೨). [←ಹಿಂ. ಬಡೀಶೋಫ್; ಮರಾ. ಬಡೀಶೇಪ್, ಬಡೀಶೋಪ್]

**ಬಡ್ಡ** (ನಾ). ತಿಳಿಗೇಡಿ ; ದಡ್ಡ ; ಮಂದಮತಿ : ದುಡ್ಡು ಕೊಟ್ಟಣ್ಣನು ಬಡ್ಡನಾಗುವನಯ್ಯ ಬಡ್ಡಿಗೆ ಬಡ್ಡಿ ಗಂಟಿಕ್ಕಿದಾ ಹಣವು ದೊಡ್ಡರಾಯನ ಪಾಲು (ಕಾಲಜ್ಞಾ. ೬೪–೬೦) ; ಅಡ್ಡೇಟು ತಗಲಿದರೆ ಬಡ್ಡನಾದರೂ ಗೆದ್ದಾನು (ಗಾದೆ). [ಬಡ್ಡು + —ಅ೪. / ತುಳು. ಬಡ್ಡ]

**ಬಡ್ಡಗಿ** 'ಬಡಗಿ' ನೋ.

**ಬಡ್ಡಗಿವಾಳ** (ನಾ). ಮರಗೆಲಸವನ್ನು ಮಾಡುವವನು ; ಬಡಗಿ : ಮಾಚಿಗಾವುಣ್ದ ಜಕ್ಕೋಜಗೆ ಕಮ್ಮಟವಾಳ ಕೊಟ್ಟ ಕಯಿ ಮತ್ತ ೫ ಬಡ್ಡಗಿವಾಳ ಬಿಕ್ಕೋಜಗೆ ಕೊಟ್ಟ ಮತ್ತ ೫ (ಕ್ರಾಶಾ. IX–1, ೦೨೩–೨೬ ; 1059). [ಬಡ್ಡಗಿ (< ಬಡಗಿ) + —ವಾಳ೨ ( <—ವಲು]

**ಬಡ್ಡಿ೧** 'ಪೊಡ್ಡಿ' ನೋ.

**ಬಡ್ಡಿ೨, ವಡ್ಡಿ, ವಿದ್ದಿ** (ನಾ). ೧. ಹೆಚ್ಚಳ; ಆಧಿಕ್ಯ: ವಿಖ್ಯಾತಿಯು ಬಡ್ಡಿಗಿನ್ನಕ ಬದುಕಿದೆನು (ಕುವ್ಯಾಸ. ೦೨–೯೩). 'ಬಡ್ಡಿವಡೆ' ಪರಾ. ೨. ಸಾಲವಾಗಿ ಕೊಡುವ ಅಥವಾ ಪಡೆಯುವ ಹಣದ ಮೇಲೆ, ಪಡೆಯುವ ಅಥವಾ ತೆರುವ ಹೆಚ್ಚಿನ ಹಣ ; ವೃದ್ಧಿ : ಕಡನುಂ ಬಡ್ಡಿಯುಮೆಂದವಳೊಡಮೆ ಯನವಳೀಯೆ ಕೊಳ್ಗೆ ವುಸಿಸಾಲಕ್ಕಂ (ಸುಕು. ೦೦–೬೩) ; ಕಾಸಿಗೆ ವೀಸವ ಬಡ್ಡಿ ಗಳಿಸಿಕೊಂಡು ಶೇಷಗಿರಿಯ ಮೇಲೆ ವಾಸವಾಗಿದ್ದೇನೆ (ಕುಂದ. ೨–೩೨–೦) ; ಇವೊತ್ತು ನಿನ್ನ ಸಾಲವನ್ನೆಲ್ಲಾ ಬಡ್ಡಿಸಹಿತವಾಗಿ ತೀರಿಸಿಬಿಡುತ್ತೇನೆ (ಪತಾ. ೨೯೭). ವಡ್ಡಿ : ೨. ನೀನೂ ತೆಱುವ ಸಿದ್ಧಾಯ ಎರಡು ಹಣ ಬಿಱಿ ಪುಣ್ಯಗಳ ಬೆವ್ವಳಿಯ ವಡ್ಡಿ × × × ಗವುಡ ಸುಂಕ ಮಗ್ಗ...ಸರ್ವಮಾನ್ಯವಾಗಿ (ಎಕ. X, ಮುಳಬಾ. ೨೦–೨ ; 1468) ವಿದ್ದಿ : ೧. "ವಿದ್ದಿ (ವದ್ದಿ), ವೃದ್ಧಿ=ಏಳಿಗೆ ; ಹೆಚ್ಚಳ" (ಕಮ್ಮಕೋ. ४೦); ಮತ್ತು ಕೃತ್ಯಂ—ಋಜು—ರಿಜು...ವೃದ್ಧಿ—ವಿದ್ದಿ, ಶೃಂಗಾರ—ಸಿಂಗಾರ (ಕಸುದ. ೨೬೯ ಪ್ರಯೋ).

[< ಪ್ರಾ. ವುಡ್ಢಿ. /ಸಂ. ವೃದ್ಧಿ. /ತಮಿ. ಮಲ. ವಟ್ಟಿ ; ತುಳು. ಬಡ್ಡಿ ; ತೆಲು. ವಡ್ಡಿ]

**ಬಡ್ಡಿಕಾಱ** (ನಾ). ಬಡ್ಡಿ ವ್ಯವಹಾರವನ್ನು ಮಾಡುವವನು : ಬಡ್ಡಿ ಕಾಱನಂತೆ ಒಂದು ಕೊಟ್ಟು ಎರಡು ಪಡೆವ ಜಡಜೀವಿಗಳ ಭಕ್ತರೆನ ಬಹುದೇನಯ್ಯ (ಅಂದೇ. ೬೩–೬೯). [ಬಡ್ಡಿ೨ +— ಕಾಱ]

**ಬಡ್ಡಿಗುಡು** 'ಬಡ್ಡಿಗೊಡು' ನೋ.

**ಬಡ್ಡಿಗೊಡು, ಬಡ್ಡಿಗುಡು** (ಕ್ರಿ). ೧. ವೃದ್ಧಿಯಾಗು ; ಬೆಳೆ : ಒಡ್ಡಿದನು ಕರತಳವನಗಲಕೆ ಬಡ್ಡಿಗೊಡುವ ವಿಷಾನಲಾಗ್ರುವನಡ್ಡವಿಸಿ ಘಡ ಹೋಗದಿರು ಹೋಗದಿರು ನಿಲ್ಲೆನುತ ಖಡ್ಡಿಸುತ (ಕರ್ಣಾಗ. ೮–೭–೪೪). ೨. ಬಡ್ಡಿಯನ್ನು ಸಲ್ಲಿಸಬೇಕೆಂಬ ಕರಾರಿನಿಂದ ಸಾಲ ಕೊಡು; ಬಡ್ಡಿವ್ಯವಹಾರ ಮಾಡು : ತನ್ದೆ ನಡಯಿಸಿದ ಬಳಿಕಿನ್ನಿದುವರ ಬಡ್ಡಿಗೊಟ್ಟು ಪೆರ್ಚ್ಚಿಸಿ ಪೊನ್ನಂ . . . ಶ್ರೀಸಾನ್ತಿಸೆಟ್ಟಿ ಪರಿರಕ್ಷಿಸಿದಂ (ಕ್ರಾಶಾ. XX, ೫೩–೩೨ ; 1082); ಹರದನ ಬಡ್ಡಿಗೊಟ್ಟೊಡವೆ ರಾಜಕುವರಾರನ ತೇಜದೇಟ್ಗೆ ನಾಣ್ಚರುದಿನ ಚಿತ್ರವಿದ್ಯೆ (ಅಸಂಕೃ. ೮–೪೮) ; ಆ ಕುಸೀದಕನು . . . ವೃದ್ಧ್ಯಾಜೀವನೆನೆ ಬಡ್ಡಿ ಗೊಡುವನಕ್ಕುಂ (ಶುಂಗಾ. ೦೦೨–೦). ೩. ತೆಗೆದುಕೊಂಡ ಸಾಲದ ಹಣಕ್ಕೆ ಬಡ್ಡಿಯನ್ನು ತೆರು. ಬಡ್ಡಿಗುಡು : ೨. ದ್ವೈಗುಣಿಕಃ . . . ಕುಸೀದಕಃ – ಈ ೪ ಬಡ್ಡಿಗುಡುವವಂ (ಹಲಾಯು. ४೩–४०६) ; ಹತ್ತೆಂಟು ಪಣವಮಂ ಕಡಂಗೊಟ್ಟು ಬಡ್ಡಿಗುಡುಗುಂ (ಶಾಸ್ತ್ರಪೀ. ४೪–೬). [ಬಡ್ಡಿ೨ + ಕೊಡು೧]

**ಬಡ್ಡಿಗೊಳ್** (ಕ್ರಿ). ಬಡ್ಡಿಯ ಹಣವನ್ನು ಪಡೆ : ಸಾಲವಿಯಯದೆ ಬಡ್ಡಿಗೊಳ್ವೆನೆಂಬ [ಪಾಠಾಂ. ಸಾಲಿಸದೆ ಬಡ್ಡಿವೇಟ್ಕೆಂಬ]. . . ಮರುಳನಂತೆ (ಧರ್ಮಾಮೃ. ೦೨–೨೪) ; ಕಡಗೊಂಡನೊ ಬಡ್ಡಿಗೊಂಡನೊ (ಕಮುದ. ೦೬೭ ಪ್ರಯೋ). [ಬಡ್ಡಿ೨ + ಕೊಳ್೧]

**ಬಡ್ಡಿಮಗ** 'ಪೊಡ್ಡಿ' ಪರಾ.

**ಬಡ್ಡಿಯಿಕ್ಕು** (ಕ್ರಿ). ಬಡ್ಡಿಯನ್ನು ಕೊಡು : ಬಡ್ಡಿಯಿಕ್ಕುವಂ ಮೊದಲಂ ಕೊಟ್ಟು ಪತ್ರಮಂ ಸೀಳಿಸುವಂತೆ (ಧರ್ಮಾಮೃ. ०४–೦೦४). [ಬಡ್ಡಿ೨+ಇಕ್ಕು]

**ಬಡ್ಡಿಯುಣ್** (ಕ್ರಿ). ಬಡ್ಡಿವ್ಯವಹಾರದಿಂದ ಜೀವಿಸು : ಕುಸೀದನೆನೆ ಬಡ್ಡಿಯುಂಬಂ (ಶುಂಗಾ. ೦೦೨–೦). [ಬಡ್ಡಿ೨ + ಉಣ್]

**ಬಡ್ಡಿವಡೆ** (ಕ್ರಿ). ಹೆಚ್ಚಾಗು; ಅಧಿಕಗೊಳ್ಳು: ಆ ಧಾತುವಿನ ಮೂಲಾರ್ಥವೇನೆಂಬುದನ್ನರಿತರೆ, ಬಡ್ಡಿವಡೆಯುತ್ತಾ ಬಂದ ಮತ್ತಿನ ಪದಗಳ ಹೊಲಬು ತಾನಾಗಿ ಕಂಗೊಳಿಸಬಹುದು (ಪಾಡೋಜ. ३३೬). [ಬಡ್ಡಿ೨+ಪಡೆ೧]

**ಬಡ್ಡಿವೇಡು** (ಕ್ರಿ). ಬಡ್ಡಿಯನ್ನು ಅಪೇಕ್ಷಿಸು,–ಬಯಸು : ತನ್ನಂ ತಪದಿಂ ನೋಯಿಸದುನ್ನತಿಯಂ ದಿವ್ಯಭೋಗವಂ ಬಯಸುವ ಗಾಂಪಂ ನೆಱೆ ಪೋಲ್ಕುಂ ಸಾಲಿಸದಿನ್ನಳಿಪಿಂ ಬಡ್ಡಿವೇಡಿ ಮಱುಗುವ ಮರುಳಂ (ಧರ್ಮಾಮೃ. ೬–೦೫೬). [ಬಡ್ಡಿ೨ + ಬೇಡು೧]

**ಬಡ್ಡಿಸು, ಬಡಿಸು೨** (ಕ್ರಿ). ಊಟಕ್ಕೆ ನೀಡು,—ಹಾಕು; ಉಣಬಡಿಸು: ಈತಂಗೆ ನೀಂ ಬಸಿಱ್ ತೀವೆ ಬಡ್ಡಿಸದಿರ್ (ಪಪ್ರಾ. ೭೭–೬); ಮಾಳತಿಕೆಯುಂ ಬಡ್ಡಿಸಲುಮುತ್ಪಳಿಕೆಯುಂ ಕೈಘಟ್ಟಿ ನೀಡಲುಂ . . . ಪೇಟ್ವಾಗಳ್ (ಅಪು. ೬–೨೦ ವ) ; ಬಡ್ಡಿಸಿದಿಡ್ಡಲಿಗೆಯ ಮುಂದೆ ಕುಳ್ಳಿರ್ದು . . . ಉಂಬುವ ಕಾರ್ಯವ ಬಿಟ್ಟು ದೊಡ್ಡಕಾರ್ಯವನೆಣಿಸಿದಿರಿ (ಪೇಬಸ. ೨೩–೨೭೩). ಬಡಿಸು೨: "ಬಡಿಸು – ಓಲಗಕ್ರಿಯಾಯಾಂ (ಊಟಕ್ಕೆ ಬಡಿಸು)" (ಕರ್ಣಾಟ) ; ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನವನಟ್ಟು ಬಡಿಸು ನಾಮುಱಾಯದೆನಸುಂ ಸವಿಯಂ (ಕಪಿಲ. ೨–೦೪೭); ಅನಂತಕಾಲ ಮಾಡುವ ಲಿಂಗಪೂಜೆಯು ಒಂದು ದಿನ ಬಡಿಸಿದ ಜಂಗಮತೃಪ್ತಿಗೆ ಸರಿಯಲ್ಲ (ಪಪ್ಪಪ. ४. ೫೩೦–೦೦४೨) ; ಘಡ ತೊಲಗು ಪವಮಾನಸುತ ನಿನ್ನೊಡಲನೀ ಶಾಕಿನಿಯ ಬಳಗಕೆ ಬಡಿಸುವೆನು (ಕುವ್ಯಾದ್ರೋ. ೦೩–೩೨).

[ದೇ.॥ ತಮಿ. ವಟ್ಟು ; ತುಳು. ಬಳಸು ; ತೆಲು. ವಡ್ಡಿಂಚು]

**ಬಡ್ಡು, ಬೊಡ್ಡು** (ನಾ). ೧. ಮೊಂಡು ; ಹರಿತವಿಲ್ಲದುದು ; ತೀಕ್ಷ್ಣತೆಯನ್ನು ಕಳೆದುಕೊಂಡಿರುವುದು : 'ಬಡ್ಡುಗಟ್ಟು' ಪರಾ. ೨. ಮಸಂಕಾಗಿರುವಿಕೆ ; ಕಾಂತಿಹೀನತೆ : 'ಬಡ್ಡುಹಿಡಿ' ಪರಾ. ೩. ತಿಳಿಗೇಡಿ ; ಬುದ್ಧಿಯಿಲ್ಲದ ವ್ಯಕ್ತಿ : ಮಱೆಯೊಳಗೆ ಮೈಗರೆದ ವೀರರಂ ಸಂಹರಿಸುತ ಬಡ್ಡು ಬಣಗುಗಳನೋಡಿಸಿ . . . ಪುರವನೊಳ ಪೊಗುತ್ತಿದ್ದರು (ಜಪತ್ರ. ४೨–೨೮) ; ಕಲಿಯಲಿಕ್ಕೆ ಸ್ವಲ್ಪ ಬಡ್ಡು. ಅವಳು ಶಾಲೆ ಬಿಟ್ಟು ಎರಡು ವರ್ಷವಾಯಿತು (ಗೋಪಾಲು. ೬४.) (ಗ್ರಾಂ). ४.

ಮೊಂಡಾದ; ಹರಿತವಿಲ್ಲದ: 'ಬಡ್ಡುಗತ್ತಿ' ಪರಾ. ೫. ಮಸುಕಾದ; ಮಂಕಾದ ; ಕಾಂತಿಹೀನವಾದ : ಮೊಳಕಾಲಿನವರೆಗಿನ ಕೊಳಕುಮಂಚೆ, ತಲೆಗೆ ಸುತ್ತಿದ್ದ ಬಡ್ಡು ಕೆಂಬರು ವಸ್ತ್ರ (ಮರೆಮ. ೯೮). ೬. ತಿಳಿಗೇಡಿಯಾದ ; ದಡ್ಡತನದಿಂದ ಕೂಡಿದ : ಅವನೊಬ್ಬ ಬಡ್ಡು ಮನುಷ್ಯ. ಅವನಿಗೆ ಯಾರ ಮಾತೂ ಪಥ್ಯವಾಗುವುದಿಲ್ಲ (ರೂಢಿ). **ಬೊಡ್ಡು** : ೧. ಚಕ್ರವು ತೀರ ಬೊಡ್ಡಾದುದರಿಂದ ನೀರಿನ ಶಕ್ತಿಯು ಎಷ್ಟೋ ವ್ಯರ್ಥವಾಗುತ್ತಿತ್ತು (ಶಾಂಕೃ. I. ೯೦); ಬಾಕಿ ಯಾವುದರಲ್ಲಿ ಬೊಡ್ಡಾದರೇನು. ಇಂತಹ ವಿಷಯಗಳಲ್ಲಿ ಮಾತ್ರ ನಮ್ಮ ಜನರ ಕಲ್ಪನಾಶಕ್ತಿ ಹರಿತ ಅಲ್ಲವೆ ! (ಮೂರುದಾ. ೦೯೦); ಹಾರೆ ಮೋಟು, ಗುದ್ದಲಿ ಬೊಡ್ಡು, ಗೈಯುವವನಿಗೆ ಒಕ್ಕೈ (ಗಾದೆ). ೭. ಒರಟು ; ನಾಜೂಕಿಲ್ಲದುದು : ಅವರ ಕೆಲಸಗಳೆಲ್ಲ ಬೊಡ್ಡು (ಶಾಂಕೃ. II. ೬೦೦). ೮. ಒರಟಾದ : ನಾಜೂಕಿಲ್ಲದ : ಉಳುವುದನ್ನಾಗಲಿ, ನೇಯುವುದನ್ನಾಗಲಿ, ಬಲು ದೊಡ್ಡ ಉಪಕರಣಗಳಿಂದ ಪೂರೈಸುವರು (ಶಾಂಕೃ. II. ೬೦೦).

[ದೇ. ॥ ತುಳು. ಬಡ್ಡ್]

**ಬಡ್ಡುಕುದುರೆ** (ನಾ). ಚುರುಕಿಲ್ಲದ ಕುದುರೆ : ಬಡ್ಡುಕುದುರೆಗೆ ಬಡಿತವೇ ಮದ್ದು (ಗಾದೆ). [ಬಡ್ಡು + ಕುದುರೆ]

**ಬಡ್ಡುಗಟ್ಟು** (ಕ್ರಿ). ಮೊಂಡಾಗು ; ತೀಕ್ಷ್ಣತೆಯನ್ನು ಕಳೆದುಕೊಳ್ಳು: ತನ್ನ ರಾಜನೀತಿಯ ಭೇದೋಪಾಯದ ಕನ್ನದ ಮೊನೆ, ಬಡ್ಡುಗಟ್ಟುತ್ತಾ ಬರುವುದು ಅವನಿಗೆ ಗೊತ್ತಾಗದಿರಲಿಲ್ಲ (ಕಾಕೀಸು. ೦೦೨).

[ಬಡ್ಡು + ಕಟ್ಟು$_1$]

**ಬಡ್ಡುಗತ್ತಿ, ಬೊಡ್ಡುಕತ್ತಿ** (ನಾ). ಮೊಂಡುಕತ್ತಿ ; ಹರಿತವಿಲ್ಲದ ಕತ್ತಿ : ಬಡ್ಡುಗತ್ತಿಯಲಿ ಹುಡುಗರ ತಲೆಯ ನೀನಡ್ಡಾದಿಡ್ಡಿಯಲಿ ಕೆರೆವೆ (ಜ್ಞಾ ವಚ. ೦೩-೦೩). **ಬೊಡ್ಡುಕತ್ತಿ** : ಎಳಚಿತ್ತಾಯರು . . . ತುರಿಸುತ್ತಿದ್ದ ಕಾಲಿನ ಮಿಾನಕಾಂಡಗಳನ್ನು ಕೈಯ ಬೊಡ್ಡುಕತ್ತಿಯಿಂದ ಹೆರೆದುಕೊಂಡರು (ಜಗುಳ. ೬೩). [ಬಡ್ಡು +ಕತ್ತಿ]

**ಬಡ್ಡುಹಿಡಿ** (ಕ್ರಿ). ನಯವಿಲ್ಲದೆ ಕಾಂತಿಯನ್ನು ಕಳೆದುಕೊಳ್ಳು,— ಮಂಕಾಗು: ಬಡ್ಡುಹಿಡಿದು ಕೆದರಿದ್ದ ಕೂದಲನ್ನು ಬಿಾಯಿಸಿ ಎಣ್ಣೆ ಕಾಣಿಸಿ ಬಾಚಿ ಸರಿಮಾಡಿದ್ದಳು (ಮರೆಮ. ೯೦).

[ಬಡ್ಡು + ಹಿಡಿ$_1$ (< ಪಿಡಿ$_1$)]

**ಬಡ್ತಿ** 'ಬಡತಿ' ನೋ.

**ಬಣ$_1$** (ನಾ). ಶೂನ್ಯತೆಯನ್ನು ಕುರಿತಂತೆ ಬಳಸುವ ಅನುಕರಣಶಬ್ದ: 'ಬಣಗುಟ್ಟು' ಪರಾ.

ಬಣಬಣ (ದ್ವಿರುಕ್ತಿ) : ಮದುವೆಗೆ ಬಂದ ನೆಂಟರೆಲ್ಲಾ ಹೊರಟು ಹೋದಮೇಲೆ ಮನೆ ಬಣಬಣ ಎನಿಸುತ್ತಿದೆ (ರೂಢಿ).

**ಬಣ$_2$** 'ಬಣ್ಣ' ನೋ.

**ಬಣ$_3$** (ನಾ). ಒಂದು ದೇಶದ ಹೆಸರು : ಸೇನ್ದ್ರಕಬಣೋಭಯದೇಶದಾ ವೀರಾಪುರುಷ ಸಮಕ್ಷದೆ ಕೇಕಯ ಪಲ್ಲವರಂ ಕಾದೆಱಿದು ಪೆತ್ತಜಯನಾ ವಿಜಅರಸನ್ಗೆ . . . ಕೊಟ್ಟಾರ್ (ಮೈಆ. ೦೯೩೬. ೨೩-೦೦; ಸು. 450). [?]

**ಬಣಂಜ** 'ಬಣಜ' ನೋ.

**ಬಣಂಜಿಗ** 'ಬಣಜಿಗ' ನೋ.

**ಬಣಂಜಿಸು** 'ಬಣಜಿಸು' ನೋ.

**ಬಣಂಜು** 'ಬಣಜು' ನೋ.

**ಬಣಂಜುಧರ್ಮ** (ನಾ). ೧. ವರ್ತಕರ ಧರ್ಮ : ಬಣಂಜುಧರ್ಮವನೆ ಪಾಳಿಸಿ ಭೀತರನೆಯ್ದೆ ಕಾದು ನಿರ್ಮ್ಮಳತರಕೀರ್ತಿಯಂ ಪಡೆದಲಾರ್ಪ್ಪರಿಡಿವೆಣ್ಣಾಲ ಸೆಟ್ಟಿಕವ್ವೆಯೊಳ್ (ಕಇ. IV, ೦-೩೯ ; 1204). ೨. ವರ್ತಕರ ಧರ್ಮವನ್ನು ಪಾಲಿಸುವವನು : ಉದಗ್ರಪುಣ್ಯರಾದರಿತವಿಶಿಷ್ಟರೆಂಬುದಿದು ಸಂಸ್ತುತಿಯಲ್ತು ಬಣಂಜುಧರ್ಮ್ಮರ (ಎಕ. VII. ಶಿಕಾ. ೦೦೯-೬೫ ; 1181). [ಬಣಂಜು (<ಬಣಜು) + ಧರ್ಮ]

**ಬಣಂಜುಪಟ್ಟಣ** (ನಾ). ವ್ಯಾಪಾರ ನಡೆಯುವ ನಗರ ; ವ್ಯಾಪಾರ ಕೇಂದ್ರ : ಮಲ್ಲಿಸೆಟ್ಟಿಯರು ಮುಂನಂ ಶ್ರೀಮದನಾದಿಯ ಬಣಂಜುಪಟ್ಟಣಂ ಕುಱುಪ್ಪೆಟ್ಟದಲು . . . ಸಮಸ್ತಶಾಸನಿಗರ ಮುಂದಿಟ್ಟುಕೊಂಡು (ಎಇ. XIX, ೨೫-೯೯ ; 1245) ; ಕರಮೆಸೆದಿಪ್ಪ ತದ್ದವಡಿಸಾಸಿರದಾ [ಬ]ಣಂಜುಪಟ್ಟಣಂ ಸಿರಿಗೆ ನಿವಾಸ ದೇಸಿಯ ತವರ್ಮನೆ (ಕೊಲ್ಹಾಶಾ. ೨೦-೫ ; 1265). [ಬಣಂಜು (<ಬಣಜು) + ಪಟ್ಟಣ]

**ಬಣಂಜುಸಮಯ** (ನಾ). = ಬಣಂಜುಧರ್ಮ ೧ : ಧರೆಗೆಸೆ[ವೀ]ಬಣಂಜುಸಮಯಪ್ರತಿಪಾಳನವರ್ತ್ತಿಯಿಂದೆ ದುರ್ದ್ದರತರ ಮಪ್ಪ ಚಂಡಿಕೆಯ ಪೆಂಣ್ನಾಲೆ ನಾರಿಯನಿಪ್ಪ ನಾಮಮಂ ಧರಿಯ್ಸಿ(ಯಿಸಿ) (ಕಇ. IV, ೦-೫೫ ; 1204). [ಬಣಂಜು (<ಬಣಜು) + ಸಮಯ]

**ಬಣಂಬೆ**, ಪಣಂಬೆ, ಬಣಬೆ, ಬಣವೆ, ಬಣೆವೆ, ಬಳಂಬೆ (ನಾ). ೧. (ಹುಲ್ಲು, ಮೇವು ಮುಂತಾದುವುಗಳ) **ಮೆದೆ, —ರಾಶಿ, —ಒಟ್ಟಿಲು**: "ಕುತ್ತಱ ಬಣಂಬೆ" (ಶಂಗಣ. ೦೦೯-೨) ; ಕರುಳ ಮೆದೆಯಂ ಪಿಕ್ಕಿ ಪರಪಿ ನೋಡಿಯುಂ ಪಲ್ಗಳ ಬಣಂಬೆಗಳೊಳ್ ಪರವಸಂಗೊಂಡು ಮೆಟ್ಟಿಯುಂ . . . ಎಲ್ಲಿಯುಂ ದುರ್ಯೋಧನನನಱಸಿ ಕಾಣದೆ (ಗದಾಯು. ೬-೨೯ ವ) ; ಪೆಣದ ಬಣಂಬೆಗಳುಂ ಕೋಟ್ಲ್ಮಿದುಟಿ ಕೋಟ್ಲ್ಕಿ ಸೆಱುಮಂಗುರ್ವುಪಡೆಯೆ (ಶಂರಾಮಾ. ೦೩-೫೯ ವ); ಪೆಣನ ಬಣಂಬೆಯನಡರ್ದು ಬಿಸುನೆತ್ತರ ಕಾಲನೀಱಿದು . . . ನಲಿವ ಕಾಗೆಗೂಗೆಗಳುಂ (ರಾಮಾಕ್ಯ.-೯೭–೦೫). ೨. ಹುಲ್ಲು, ಮೆದೆ ಮೊದಲಾದುವನ್ನು ಒಟ್ಟುವ ಸ್ಥಳ : ಮನೆಯಗೇರಿಯುಮಂ ಬಣಂಬೆಯುಮನೊಂದು ತೋಂಟಮುಮಂ . . . ಧಾರಾಪೂರ್ವಕಂ ಮಾಡಿ ಬಿಟ್ಟರು (ಕಇ. II. ೦೯-೬೫ ; 1123) ; ಪನ್ನೆರಡು ಕೆಯ್ಯು ಬಣಂಬೆ (ಬೊಂಕಶಾ. ೦೯೪೩, ಹುಕ್ಕೇರಿ. ೯-೦೦ ; 1195).

Δ **ಪಣಂಬೆ** : ೧. ಒಡಲಿದಱಿಂದಮಂ ಬಗೆದು ನೋಟ್ಪೊಡೆ ಪೇಲಪಣಂಬೆ ಕುತ್ತವಿರ್ಪ್ಪಡೆ (ಧರ್ಮಾಮೃ. ೬-೬೬). **ಬಣಬೆ** : ೧. ಪೆಣನ ಬಣ[ಪಾಠಾಂ. ಣಂ]ಬೆ [ಪಾಠಾಂ. ಪಳ್ಪಂ]ಗಳೊಳ್ ಕೈದುಗುತ್ತಿ ನೋಡಿಯುಂ (ಗದಾಯು. ೬-೨೯ ವ) ; ಮಡಿದು ಕೆಡೆವ ವೀರರ ಪೆಣದ ಬಣ[ಪಾಠಾಂ. ಣಂ] ಬೆಯಂ ಮೆಟ್ಟಿ . . . ಪೊಱಮಡುವಾಗಳ್ (ಜಗ. ೬-೯೬ ವ) ; ದ್ರುಪದನಂದನೆಯಳಲ ಶಿಖಿಗಿಂಧನವಲೇ ಕುರುಕುಲದ ಕರಡದ ಬಣಬೆ ಕಾದುಱುಹುವುದು (ಕುಮ್ಯಾಕೆ. ೨-೬೨). **ಬಣವೆ** : ೧. ಕೊಟ್ಟದ್ದು ಬರಲಿಲ್ಲ ತಂದದ್ದು ಬಿಡಲಿಲ್ಲವೊಟ್ಟಿರ್ದ ಬಣವೆಗಳುಮೊಂದಿಲ್ಲ (ಹುಲ್ಲುಕ. ೬-೯) ; ಯಂತ್ರದ ಮುನ್ನಡೆಗೋಸ್ಕರ ಯುದ್ಧ ಬೇಕೆನ್ನುವುದು ಅರಳಿಗಾಗಿ ಭತ್ತದ ಬಣವೆಯನ್ನು ಸುಟ್ಟ ಹಾಗೆ (ತಿಲ್ಪಾಪಾ. ೦೬೩). **ಬಣೆವೆ** : ೧. ಬಣೆವೆಗಳ ದಹನವು ಎಲ್ಲರಿಗಿಂತ ಅರ್ಧ ತಾಸು ಮುಂಚಿತವಾಗಿ ರಾಘಪ್ಪನಿಗೆ ಗೊತ್ತಿರುತ್ತಿತ್ತು (ಗಂಧಮಾಯ. ೫೫). **ಬಳಂಬೆ** : ೧. ಬಳಂಬೆಯ ತೆಱಿ ತಳಸಾರಿಗೆ ಕಾಣಿಕೆ ಕವಣಾಯ ದಣ್ಣಾದಾಯವಿನ್ತಿ ನಿತಾಮಂ . . . ಕೊಟ್ಟರ್ (ಸೌಇಇ. IX-1, ೦೬೨-೦೫; 1100) ; ಪಳ್ಳಯೊಳಗಣ ಬಳಂಬೆಯಂತೆ ದ್ರೋಹನ ನಿತ್ರಣೆಯಂತೆ . . . ಲೇಸಲ್ಲದ ಸುಖಕ್ಕೆ ಪಾಯಿಸಿ ನೋಯಿಸುವಿಂದ್ರಿಯಂಗಳುಮಂ (ಧರ್ಮಾಮೃ. ೯-೨೩) ; ಪೆರ್ಬಿಣದ ಬಳಂಬೆ ಪೆರ್ಗ್ಗರುಳ ತಿಂತಿಣಿ ನೆತ್ತರ ಪೆರ್ಬೊನಲು (ಎಕ. VIII. ಸೊರ. ೦೨-೭; 1155 ?). ೨. ಬಳಂಬೆ ನಿವೇಸಣಂ ಮೂಡಣ ಬೆಳದೊಳಗಳೆಯೊಳಗಲಂ (ಇಇ. XIX, ೨೬೩-೩೯ ; 1054); ಒನ್ದು ಮನೆಯೊನ್ದು ಬಳಂಬೆ (ಎಇ. XIII, ೩೨೦-೨೩ ; 1126). [ದೇ. ॥ ತುಳು. ಬಣಬೆ]

**ಬಣಕಮೆಂಡಿಗವುಂಡ** (ನಾ). ಒಬ್ಬಾತನ ಹೆಸರು (?) : **ಕಿಸುಕಾಡ** ಬಣಕಮೆಣ್ಡಿಗವುಣ್ಡ ಕಱುಗಳ್ಗೆಳ್ದಿ ಮಂದು ಎನಿಳವುಟ್ಟ ಕದಿ ಸತ್ತು ಸ್ವರ್ಗ್ಗಿ

ಯದಂ (ಪ್ರು೬೦. ೧೯೯೦, ೬೪–೦೦; 951). [?+ಗವುಂಡ (<ಗಾವುುಂಡ)]

**ಬಣ್ಣಕಾರ** 'ಬಣ್ಣಗಾಱ' ನೋ.

**ಬಣಗ₁** 'ಬಳಗ₁' ನೋ.

**ಬಣಗ₂** (ನಾ). ಅಲ್ಪವ್ಯಕ್ತಿ; ಕ್ಷುದ್ರ; ಹೀನ: ಬಣಗರಂದದಲೆನ್ನನೆಂದರೆ ಹಣೆಯ ಕಣ್ಣಿನ ಕಿಡಿಯ ಕೆದಱುವೆನು (ಕ್ರಕುಂ. ೦೩–೨೬); ಬಣಗರ ತೊಲಗ ಹೇಳೆನುತೆ ಮುಮ್ಮಡಿರಾವಣನಂತೆ ನಿಂದು ಗರ್ಜಿಸಿದ (ಮೋಹತ. ೦೨–೯೪). [ಬಣಗು₂ + — ಅ₇]

**ಬಣಗಾರ** 'ಬಣ್ಣಗಾಱ' ನೋ.

**ಬಣಗು₁** (ಕ್ರಿ). ಹರಟು; ಗಳಹು (?): ಕಲ್ಲುಗೊಳ್ಳುವ ಕೆಲರು ಹಲ್ಲು ಕಿಸಿಯುವ ಕೆಲರು ಬಲ್ಲವರು ಬಲ್ಲಂತೆ ಬಣಗುತಿಹರು (ಪವಲ್ಲ. ೬–೬). [<ಬಣಗು₂ ?]

**ಬಣಗು₂** (ನಾ). ೧. ಅಲ್ಪವ್ಯಕ್ತಿ; ಕ್ಷುದ್ರ; ಹೀನ: ಬಣಗಿನಂತೆ ನೇರಿತಲ್ಲದು ಬಗೆವಂದೀ ಶರೀರಂ ಕಷ್ಟಂ (ಧರ್ಮಾಮೃ. ೪–೦೬೩); ನಿಮ್ಮ ತಂದೆ ಕೀರ್ತಿಧರಮಹಾರಾಜಮುನೀಂದ್ರನಂ ನಿಮ್ಮ ತಾಯಿ ಬಣಗೆಂದು ಪೊಱಮಡಿಸಿದುದಕ್ಕೆ ಎನಗತಿದುಃಖಮಾದುದು (ಪುಣ್ಯಾಸ್ರ. ೬–೬೦ ಪ); ಬಣಗುಗಳ್ಗೆ ಭೀಮಾರ್ಜುನರು ಕಾರಣಿಕ ನೀ ನಡುವಾಯಿ (ಕುಮ್ಮಾಗ. ೯–೩೯). ೨. ತಿಳಿಗೇಡಿ; ಮಂದಮತಿ: ಬಣಗು ನೀನಟಕಟ ಭೀಮನ ಕೆಣಕಿ ಬದುಕಿದೆ (ಕುಮ್ಮಾಕ. ೨–೨೦); ಬಣಗೆ ಬೆಱತಿರದೇಳು . . . ಮಣಿದು ಬದುಕುವುದುಚಿತ (ಕೌಶಿಪು. ೯–೭); ಉಣ ಬಂದ ಜಂಗಮಕೆ ಉಣಬಡಿಸಲೊಲ್ಲದಲೆ ಉಣದಿಪ್ಪ ಲಿಂಗಕುಣಬಡಿಸಿ ಕೈಮುಗಿವ ಬಣಗುಗಳ ನೋಡ (ಸರ್ವಜ್ಞ. ೨೦೦). ೩. ಬಡವ; ದೀನ; ದರಿದ್ರ: ಬಱದ ನಾಡಿಂದ ಬಂದ ಬಣಗುಗಳಂತೆ ಮತ್ತಿಕ್ಕುವರೋ ಇಕ್ಕರೋ ಎಂದು ಒಟ್ಟಿಸಿಕೊಂಡು ತಿಂದು ಮಿಕ್ಕುದ ಬಿಸುಡುವ ಕುನ್ನಿಗಳ ಮೆಚ್ಚುವನೆ ನಮ್ಮ ಕೂಡಲಚೆನ್ನಸಂಗಮದೇವ (ಕನ್ನರ. ೪. ೩೩೪–೭೯೯); ಪಣವಿಲ್ಲದೆಯುಟಮಟಸುವ ಬಣಗುಗಳಂ ನೆವವನಿಟ್ಟು ಬಿಟ್ಟು . . . ಪಣವಂ ಸಾಧಿಸುವಳಾವಳವಳೇ ಪೆಲೆವೆಣ್ (ಉದ್ಭಟ. ೦೦–೩೩). ೪. ಪಿಶಾಚಿ; ಭೂತ: ಬಣಗುಗಳೊರ್ವ ಋಷಿಯ ಪೊಟ್ಟೆಯಂ ವಿದಾರಿಸಿ ಬಸುಱಿಂತೊಳಗಿರ್ದ ಶಿಶುವಂ ತೋಡಿ ತಿನುತಿರ್ಪುದುಂ (ಪುಣ್ಯಾಸ್ರ. ೯–೦೯ ಪ). (ಗು). ೫. ಕೀಳಾದ; ನಿಕೃಷ್ಟವಾದ: ಬಲವು ಬಲವೇ ನಿನ್ನ ಬಲವಲ್ಲದೆ ಮಿಕ್ಕ ಬಲಗಳುಂಟೆ ಬಣಗುಗ್ರಹಗಳಿಂದ (ಪುರಂದ. ೨–೬ ಪಲ್ಲವಿ); ಗುಣವೆ ಭೂಷಣವಭಿಮಾನವೆ ವಸ್ತ್ರವೆಂದೆಣಿಸಿ ಕೈವಿಡಿದಿಹೆವೆಮಗೆ ಬಣಗುದೊಡಿಗೆಯಾಸೆದೋಱಬೇಡ (ಚಿಕ. ೦೯–೩೦). ೬. ಕೆಲಸಕ್ಕೆ ಬಾರದ; ಅಪ್ರಯೋಜಕನಾದ: ಧನು ತನಗೆ ನೆಗಹಲ್ಕೆ ಕೃಷ್ಣಾಜಿನವೊ . . . ಬಣಗುವಿಪ್ರನ ನೆನಹ ನೋಡಿರೆ (ಕುಮ್ಮಾಆ. ೦೩–೦೭); ಭೂಂಭುವನದ ಬಹಳ ಭುಜಬಲಭಾರಕರು ನಾವೀ ನೆಲೆಗೆ ನವಗಾರು ಸರಿ ನಾವಂಜಲೇಕೀ ಬಣಗುಭೂಪತಿಗೆ (ಕೊರಂ. ೬–೦–೩೦). 'ಬಿನಂಗು₁' ಪರಾ. [ದೇ.ಶ. / ಮರಾ. ಭಣಗ, ಭಣಂಗ]

**ಬಣಗುಕವಿ** 'ಬಣಗುಗವಿ' ನೋ.

**ಬಣಗುಗವಿ, ಬಣಗುಕವಿ** (ನಾ). ಅಸಮರ್ಥನಾದ ಕವಿ; ಕುಕವಿ: ಭಂಡಗವಿ ಬಣಗುಗವಿಗಳ ಕೊಂಡುಂ ಕೊನೆದೂಳ್ತಿರ್ಪ ಕುಕವಿಗಳಂ ತಾಂ ತೊಂಡರನೆ ಸರಿಯೆನಿಪ್ಪನೆ ಚಂಡಾಲರ ನೋಡಿ ನಗುವ ಕವೀಂದ್ರಂ (ಶಂಕರೋಂ. ೦–೨೯ ಅಂತ). **ಬಣಗುಕವಿ:** ಬಣಗುಕವಿಗಳ ಲೆಕ್ಕಿಪನೆ . . . ಕವಿ ಕುಮಾರವ್ಯಾಸ (ಕುಮ್ಮಾಆ. ೦–೦೭) [ಬಣಗು₂+ಕವಿ₁]

**ಬಣಗುಟ್ಟು** (ಕ್ರಿ). ಬರಿದಾಗಿ ಕಾಣು; ಶೂನ್ಯವಾಗಿ ತೋರು: ಒಂದಾನೊಂದು ದಿನ ತಿರುಗಾಟವನ್ನು ನಿಲ್ಲಿಸಿದರೆ, ಆ ದಿನವೆಲ್ಲ ಹಕ್ಕಿಯು ಸಪ್ಪಪ್ಪು ಕರೆದಂತಾಗಿ ಮನವು ಬಣಗುಟ್ಟುತ್ತಿತ್ತು (ಶಿಂಊ. ೬೦). [ಬಣ್₁ + ಕುಟ್ಟು₁]

**ಬಣಜ, ಬಣಂಜ, ಬಳಂಜ** (ನಾ). ೧. ವರ್ತಕ; ಹರದ; ವ್ಯಾಪಾರಿ: 'ಬಣಜು' ಪರಾ. ೨. ವರ್ತಕರ ಗುಂಪು,–ಸಮೂಹ: ಬಣಜಮುಂ ನಾನಾದೇಸಿಯುಂ ಬಿಟ್ಟಿಯ × × × (ಪ್ರು೬೦. ೦೯೩೩, ೩–೦೫; 1160). ೩. (ವ್ಯಾಪಾರಿಯ) ಸರಕು; ಸಾಮಗ್ರಿ: ಜಾತ್ರೆಗರೂ, ಕಡುಬೆಬ್ಬಳದ ಆತುರತೆಯಿಂದ ತಂತಮ್ಮ ಬಣಜಗಳನ್ನು ಸಂವರಿಸಿಕೊಂಡ ಬೇಹಾರಿಗರೂ ಇತರರೂ . . . ಗುಡಿಯೊಳಗೆ ಸೇರಿಕೊಳ್ವರು (ಬರಿಗಂ. ೦೨–೦೭). **ಬಣಂಜ:** ೩. ದೇಗುಲದುಪಕರಣಂಗಳೊಳಂ ಪರದರ ಬಣಂಜದೊಳಂ ಮತ್ತಮೇಂ ದಂಡದೊಳಂ ಕವರ್ತೆಯೊಳಂ ತೀರದೆ ದಂದುಗಂಗೊಂಬುದೆನಿತಾನುಮುಂಟು (ಶಕಪಂ. ೪೩–೦೪). **ಬಳಂಜ:** ೨. ಗುಗವಾಡಿ ತೊಮ್ಬತ್ತಱುಸಾಸಿರವುಂ ಬಾಣರವಾಡಿ ಪನ್ನಿರ್ಚಾಸಿರದ ಬಳಂಜಮೆಲ್ಲ ನೆರದು (ಎಕ. X (S), ಮುಳಬಾ ೩೦೩–೩; ಸು. 950). [< ಸಂ. ವಣಜ]

**ಬಣಜಿಗ, ಬಣಂಜಿಗ, ಬಳಂಜಿಗ** (ನಾ). ೧. ವ್ಯಾಪಾರಿ; ವರ್ತಕ: ತಳದ ಬಣಜಿಗರೊಳಗಾಗಿ ಭತ್ತಮುಂ . . . ಕೊಟ್ಟರು (ಸೌಇಇ. XVII, ೨೯೩–೯೮; 1162); ಬಣಜಿಗನ ಬಟಿಕೆಯಂತೆ ಕೊತ್ತಳಂ ಬಱದಾಗಿ ಬಟಲ್ದ ಬಡಗೊಂಡಿಯಂತಿರಾಳ್ವೇರಿಯುಟಿದು (ಅಪಂಪು. ೧೦–೯೩ ಪ); ಬಳ್ಳಮಾನದ ಬಣಜಿಗರ ಪುತ್ರಿಯರೆ ನಾವೆಲ್ಲ ಶೂದ್ರತಿಯು ಸುತೆಯರೆ ಸಲ್ಲದೆಂಬೆವೆ ಪಟ್ಟ (ಭಶ. ೩೩–೦೨೦). ೩. [ವೀಶೈ] ವೀರಶೈವರಲ್ಲಿ ಒಂದು ಒಳಪಂಗಡ: ಬಣಜಿಗನೇಸು ಭಕ್ತನಾದರೆಯೂ ಒಟ್ಟಿಲ ಬೆಸಕನ ಹಂಗ ಬಿಡ (ಶಸಪ. ೯೩೦); ಹಗಲು ಹಾರುವನಾಗಿ ಇರುಳು ಬಣಜಿಗನಾಗಿ ಅರಸಾರ ಮಗನಾಗಿ ತಿರುಗಿ ನಿದ್ದೆಗೆಡಬೇಡ (ಹಳ್ಳಿಪಾ. ೬೯). **ಬಣಂಜಿಗ:** ೧. ಇಂತೀ ಧರ್ಮ್ಮಮಂ ನಗರಮಹಾಜನಂ ಪಂಚಮಠಮಲ್ಲಿಯ ತಳದ ಬಣಂಜಿಗರುಮೆರಸುಂ ಪ್ರತಿಪಾಳಿಸುವರು (ಸೌಇಇ. XX, ೬೩–೨೩; 1123); [ನೆರೆದು ಬ]ಣಂಜಿಗಮ್ಮ್ಗದದೆ ಕಟ್ಟಿದೊಡ[ಂತರ] ಪಟ್ಟವರ್ತ್ಥಿಯಿಂದವರ ಬ[ಬಾ]ಷ್ಪವೆಂದನೆ (ಸೌಇಇ. XV, ೨೩೩–೩೦; 1216); ಬೇರದವಸರದಿಂ ಮೆಯ್ದುಗೆದು ಬಣಂಜಿಗರ ನೆರವಿ ತಮತಮಗೆ ಪೊಸವರದಿನೆಣಿಕೆಯೊಳಿರೆಯುಂ (ರಾಮಾಶ್ವ. ೨೨–೦೯). ೨. ಸಂಗರರಂಗದೊಳ್ ವೆಲಮ ಕಮ್ಮೆ ತೆಲುಂಗ ಬಣಂಜಿಗರ್ ಕರಂ ಭಂಗದೆ ಬೆಂಗುಡರ್ (ಶಕಪ. ೩–೩೦). **ಬಳಂಜಿಗ:** ೧. ಕರಮುಂದ್ವ್ಯತ್ತೆಯಿಂ ಬಳಂಜಿಗರ ಪೊಂಗು ಮಯ್ಮೆಗಂ (ಶಬ್ದಮಣಿ. ೦೯೩೩, ಕಾಪೀಂ. ೦೨೯–೨೨; 941); ಇ ಧರ್ಮ್ಮಮಂ ದಯಸಿಂಗಸೆಟ್ಟಿಯುಂ ವಲ್ಲಿಯ ತಳದ ಬಳಂಜಿಗರು ನಡೆಯಿಸುವರ್ (ಸೌಇಇ. XX, ೬೦–೨೬; 1088); ಸೊಂಟಿಗೆಯಕ್ಕಿ ಮತ್ತಂ ತಳದ ಬಳಂಜಿಗರುಂ ನಾನಾದೇಶಿಗಳು ಮಿಟ್ಟು ಕೊಟ್ಟರ್ (ಸೌಇಇ. IX–i, ೦೭೨–೦; 1106). [ಬಣಜು + — ಇಗ / ಸಂ. ವಣಿಜಕ]

**ಬಣಜಿಗವಾಗ** (ನಾ). ವರ್ತಕರಿಗೆ ಸೇರಿದ ಭಾಗ (?): ಅಂತಾ ಮತ್ತರಾಜಿಕ್ಕಂ ಸೀಮಾಸಂಮ[ಬ]ಂಧವಾಪುದೆಂದಡೆ . . . ಮೂಲಸ್ಥಾನದೇವರ ಕೆಯಿಂ ತೆಂಕಲು ಬಣಜಿಗವಾಗದಿಂ ಮೂಡಲು ಬಾಚಗಾವುಂಡನ ಹಾಗದಿಂ ಪಡುವಲು (ಕೊಲ್ಹಾಶಾ. ೦೩ ೭೭; 1186). [ಬಣಜಿಗ+ಬಾಗ]

**ಬಣಜಿಗಿತಿ** 'ಬಣಜಿಗಿತ್ತಿ' ನೋ.

**ಬಣಜಿಗಿತ್ತಿ, ಬಣಜಿಗಿತಿ** (ನಾ). ವರ್ತಕರ ಹೆಂಗಸು: ನೋಡೂವ್ಮ್ಮೆ ಬಣಜಿಗಿತ್ತಿಯು ಕಾಲು ಕೀಲಸಿಮ್ಮಾಡಿ ಕೆಡಿಸಲದೇಕೆ (ಸಮ್ಮಕೌ. ೩–೨೩). **ಬಣಜಿಗಿತಿ:** ನಮ್ಮ ಗೆಣೆಕಾತಿ ಹೊಸ್ನೂರ ಬಣಜಿಗಿತಿ . . . ನಮ್ಮ ಹಂಬಲವ ಮರತಳೆ (ನಾಪಕ. ೬೯). [ಬಣಜಿಗ+ — ಇತ್ತಿ]

**ಬಣಜಿಸು, ಬಣಂಜಿಸು** (ಕ್ರಿ). ವ್ಯಾಪಾರ ಮಾಡು; ಕ್ರಯವಿಕ್ರಯ ಮಾಡು: ಆಂ ತೆಂಕನಾಡತ್ತ ಬಣಜಿಸಿ ಧನಂಬಡೆದು ಬಂದಪೆನೆಂದು ಪೆತ್ತತಾಯ್ತಂದೆಗಳಿಗೆ . . . ಬಿನ್ನೈಸಲು (ಕೋಟಿಃ. ೦–೯೩); ಭಕ್ತನೋರ್ವ

ನೂರೂರ್ಗಳೊಳ್ ಬಣಜಿಸಿರುಳಾಗ್ರೆಯಾತಂ ಬಂದಾ ಪುರವ ಪೊಕ್ಕು ನೋಡಲೆಲ್ಲಿಯ ಜನನ ಮಂದಿರವೆ ಘನವಾಗಿ (ಸಿದ್ಧೇಶ್ವ. ೭-೬೪). **ಬಣಂಜಿಸು :** ಬಣಂಜಿಸುವವಂ ವಿಪಣಿಕಂ ನೈಗಮಂ ವಣಿಜನಕ್ಕು (ಮಂಗರಾ. ೦೦೨-೦). [ಬಣಜು + — ಇಸ್ಸು$_3$]

**ಬಣಜು, ಬಣಂಜು, ಬಳಂಜು, ಬಟಿಂಜು** (ನಾ). ವ್ಯಾಪಾರ; ಮಾರಾಟ; ಕ್ರಯ ವಿಕ್ರಯ : ಬಣಂಜು - ಬಣಜು (ಶಬ್ದಾ.ಸು. ೮೦ ಕ್ರಿಯೋ); ಬಣಜಿತವುಗೆ ಸಾಜವುಪ್ಪ ಕಜ್ಜವೆಂದೆಣಿಸಿ . . . ಮಾರಾಟದ ಬೇಹಾರಮಂ ನಡೆಯಿಸುವ ಕಡುಜಾಣೆಯರ್ (ಮಲಾಕ. ೦೯೭-೦೭). **ಬಣಂಜು:** ಬೇಹಾರಂಗೆಯ್ವ ಪಡುಗುಪರದರ ಕಲಕಲದಿಂ ತೀವಿದ ಬಣಂಜಿನ ಘಟ್ಟಮುಮಂ ನಿಟ್ಟಿಸಿ (ಮಲಾಕ. ೦೯೭-೨೬). 'ಬಣಂಜುಧರ್ಮ' ಪರಾ. **ಬಳಂಜು :** 'ವೀರಬಳಂಜು' ಪರಾ. Δ **ಬಟಿಂಜು :** 'ವೀರಬಟಿಂಜು' ಪರಾ. [ಬಣಜ + — ಉ$_4$]

**ಬಣತ** 'ಪಣತ' ನೋ.

**ಬಣತಿಗೆ** 'ಬಂದಣಿಕೆ' ನೋ.

**ಬಣದುರ್ಗಿ** (ನಾ). ಒಂದು ಬಗೆಯ ಮರ : ಬಣದುರ್ಗಿ —ಧಾರವಾಡ ಜಿಲ್ಲೆಯಲ್ಲಿ ಅತಿ ಸಾಧಾರಣವಾದದ್ದು. ಇದರ ಎಲೆಯ ಮೇಲೆ ಹಳದೀಬಣ್ಣದ ಅಂಟು ಮೆತ್ತಿಗಿರುತ್ತದೆ (ಕಭಾಗಿ. ೪೪). [?]

**ಬಣಬಣ** 'ಬಣ್ಣ$_1$' ಪರಾ.

**ಬಣಬೆ** 'ಬಣಂಬೆ' ನೋ.

**ಬಣವೆ** 'ಬಣಂಬೆ' ನೋ.

**ಬಣಿತೆ** (ನಾ). ೧. ಮಾತು; ಉಕ್ತಿ; ವಚನ: "ಬಣಿತೆ—ಭಣಿತ (ತಿ) = ಮಾತು" (ಶಬ್ದಕೋ. ೨೮); ಆನು ಪೇಳಿದ ಕಾರ್ಯದ ಬಣಿತೆಗಿನ್ನಾವುದುತ್ತರ (ಸೌಂದಪು. ೪-೭೬); ನೆನಹು ಮಾತ್ರದಿಂದೆ ಜಗವ ಸೃಷ್ಟಿಸಿದೆನೆಂಬ ಭಾವ ಬಣಿತೆಯವನಲ್ಲ (ಸಿದ್ಧೇವ. ೯-೨೩). ೨. ಚಾತುರ್ಯದಿಂದ ಕೂಡಿದ ಮಾತು; ಜಾಣ್ನುಡಿ; ಚತುರೋಕ್ತಿ: ಬಾಣದೊಳ್ಬಣಿತೆಯೊಳ್ . . . ಪರಾಕ್ರಮದ ಪಂಥದೊಳ್ಕಾಣೆನವರ್ವರ್ಗೆ ಸಮರಾದ ಕಲಿಗಳಂ (ಜೈಮಿಭಾ. ೨೨-೦೨). ೩. ಹೇಳಿದುದು; ಉಕ್ತವಾದುದು : ಎಣಿಸಲಿವು ತತ್ಸಮವೆನಿಪ್ಪ ಶಬ್ದಂಗಳಿವನಣಿಯರಂ ಲಾಕ್ಷಣಿಕ ಕವಿಮಾರ್ಗದೊಳೆ ತಂದು ಬಣಿತೆಯಾಗಿರ್ಪುದಾಹರಣಂಗಳಿಂ ತಿಳಿದುಕೊಳ್ವುದು (ಶಬ್ದಮಂ. ೭೮); ಕರಣಿಕೆಯನಿತ್ತು ಸಿಸ್ತಿನ ಬರಹಗಳಿಂದಾಯಬೀಯುಮಂ ಬಣಿತೆಗೆ ತಂದುರುದುರ್ವ್ಯಯಂಗಳಂ ತಾಂ ವಿರಚಿಸದಾರ್ಜಿಸಿದನೊಪ್ಪವಗಣಿತಧನಮಂ (ಕೆಳನೃ. ೭-೩೩). ೪. ಮೊದಲಿಕೆ: ಶಬರನಸುಗೊಂಡು ಪೋಪೆಯೊ ನಿಲ್ಲುನಿಲ್ಲೆನುತ ಕರುಚಿಟ್ಟೆಯಂ ಬಣಿತೆಯಿಂ ಬಾಯೊಳಿಡೆ ತಲೆಯೊಳದು ಛಟ್ಟೆಗಿಯೆ (ಚತುಪು. ೨-೦-೨೭); ಪೊಣರಿ ಚೀಳೀಳೆಂದು ಮುಡುಹ ತಟ್ಟುತ ತೊಡೆಯ ಬಣಿತೆಯಿಂ ಚಪ್ಪರಿಸಿ ಪುರ್ಬುಗಳ ಗಂಟಿಕ್ಕುತೆನೆಕೆಗೊಳ್ಳುತ ವಿಾಸೆಯಂ ತಿರ್ದಿ ಕಣ್ಣ ಕೆಂಚಲೆ ಮಾಡಿ ಕುಬುಬಿರಿಯಲು (ಚತುಪು.೩-೭-೩೪). ೫. ಚತುರತೆ; ಜಾಣ್ಮೆ: ಗುಣದೊಳಗೆ ಶೀಲದಲಿ ಮಾತಿನ ಬ[ಪಾಠಾಂ. ಭ]ಣಿತೆಯಲಿ . . . ಶರ್ವಾಣಿ ರತಿಯರಿಗೆಣೆಯೆನಿಪ ಸುಂದರಿಗೆ ಮಿಕ್ಕಿನ ಬಣಗುಸತಿಯರು ಸರಿಯೆ (ನಳಚ. ೧-೩೪); ಬಣಿತೆಯಿಂ ರುದ್ರಾಕ್ಷಿ ಪವಳ ಮೌಕ್ತಿಕದ ಕೇವಣಿಸಿರ್ದ ಕಂತೆ (ಸಿದ್ಧೇಶ್ವ. ೦೬-೪೮). ೬. (ಅಲಂ) ಆಕರ್ಷಣೆ; ಅಂದ; ಚೆಲುವು (?): ಕುಣಿಸುವತಿಸದ್ಗುರುನಿತಂಬದ ಮಣಿಯ ಶ್ರುತಿ ಕುಂಡಲದ ಕಾಂತಿಯ ಬಣಿತೆಯೊಳು ಜಗಜಗಿಸಿ ರಂಜಿಸಿತಾ ಮಹಾಶಕ್ತಿ (ಅಂಬಿಕಾ. ೦೯-೬೦); ಸತ್ಪದ್ಮಪೀಠವದು ಬಣಿತೆಯಾಗಿರ್ದುದಾ ಸಿಂಹಾಸನಾಗ್ರದುರುಮಧ್ಯದೊಳನಂತಸೊಬಗಿಂ (ಕುಶಪು. ೦-೫೭). ೭. [ಸಂಗೀತ] ಹಾಡಿನ ಸೊಗಸು (?): ಒಂದು ಪೊಸ ಕೊಳಲಂ ಕೊಳುತ್ತಂದು. . ಬಣಿತೆ ಗಮಕವುನುಗುಳೆ ಗಮಕವರಿದಂತೊಡರೆ ಅಣಕ ನಯದೊಳ್ಕೊಳೆಯೆ . . . ಪಂಚಮುಖದೊಳಗೆಲ್ಲ ಕೊಳಲ ದನಿ ತೊಳಗುತಿರೆ (ಅನಾರ. ಹ. ೦೩೦-೨೩); ಇಂಪು ಸೊಂಪು ಬಣಿತೆ ಬೆಡಂಗು. . .ಕಾಲವಘನಸ್ಥಾನವಿಧಿಯೊದವೆ ಬಾಲೆಯರ್ ಕೇಳಿಸಿದರಾರ್ಯನಂ ರಸವೊಸರ್ವವೋಲ್ ಬೆರಲೆರಡಜಂ (ಶಬ್ದರಾ. ೯-೬೦); ಧಾತು ನಯ ನೇವಣಿ ಬಜಾವಣೆಯ ಬಣಿತೆಯಿಂ . . . ಭೂತೇಶನಂ ಮೆಚ್ಚಿಸಿದನಮಲ ತುಂಬುರಂ (ಲಿಂಗಪು. ೩-೪೭). [<ಸಂ. ಭಣಿತ]

**ಬಣಿತೆಗಾಜಿಕೆ** (ನಾ). ಮಾತಿನ ಚಾತುರ್ಯ : ಬಣಿತೆಗಾಜಿಕೆಯೊಳಂ ಮರುಳ ವೇಷವ ತೊಟ್ಟು . . . ಪ್ರಭುದೇವ ಬರಲು (ಪ್ರಭುಪು. ೯-೩೪). [ಬಣಿತೆ + — ಕಾಜಿ + — ಇಕೆ]

**ಬಣೆವೆ** 'ಬಣಂಬೆ' ನೋ.

**ಬಣ್ಣ, ಪಣ್ಣ$_2$, ಫಣ್ಣ$_2$, ಬಣ್ಣ$_2$, ವಣ್ಣ** (ನಾ). ೧. ರಂಗು; ವರ್ಣ: "ಸಲೆ ಬಣ್ಣಂ ವರ್ಣದೊಳೆ" (ಕರ್ಣಾ. ೪೪); ಶುಭಲಕ್ಷಣಾಂಕಿತವಾಗಿ ಕೆಂದಾವರೆಯ ಬಣ್ಣದಂತಪ್ಪ ತಳಮುಮಂ ಕಂಡು (ವಡ್ಡಾರಾ. ೦೪೯-೦೯); ಬಣ್ಣಂ ಪೊನ್ನ ಬಣ್ಣಕ್ಕೆಣೆಯೆನೆ ಗರುಡಂ ವಾಹವಾಗಿರ್ಪ ಚಕ್ರೇಶ್ವರಿ ಭಾಸ್ವದ್ಧರ್ಮಚಕ್ರಾಕ್ರಮಿಗಳನಲೆದಾಟಿಕ್ಕೆ ವಿಕ್ರಾಂತದಿಂದಂ (ಆದಿಪು. ೦-೭); ಸುಣ್ಣದ ತುಯ್ಕಲ ಬಣ್ಣವೊಂದೆ ಎಂದರೆ ನಂಟತನಕ್ಕೆ ಉಣ್ಣಬಹುದೆ (ಬಿಸಪ. ೦೨೦). ೨. ಕೆಂಪುಬಣ್ಣ; ಕೆಂಬಣ್ಣ 'ಬಣ್ಣದುಟಿ' ಪರಾ. ೩. ಚಿತ್ರ, ಗೋಡೆ ಮುಂತಾದುವಕ್ಕೆ ಹಚ್ಚಲು ಬಳಸುವ, ಬೇರೆ ಬೇರೆ ವರ್ಣಗಳಲ್ಲಿರುವ ದ್ರವಪದಾರ್ಥ: ವಸ್ತುಗಳ ಮೇಲ್ಮೈಗೆ ಸಾಪೇಕ್ಷವಾಗಿ ತೆಳುಪೊರೆಯಲ್ಲಿ ಹಚ್ಚಬಹುದಾದ . . . ಆರ್ದ್ರ ದ್ರವ ಪದಾರ್ಥವೇ ಬಣ್ಣ (ಪೇಂಟ್) (ಕವಿಕೋ. IX. ೬೨೦). ೪. ಬೇರೆ ಬೇರೆ ಬಣ್ಣಗಳಿಂದ ಕೂಡಿದ ಚಿತ್ರ; ವರ್ಣಚಿತ್ರ: ಬಿತ್ತಿಯೊಳಂದಂಬಡೆವಂತು ಬಚ್ಚಿಸಿದ ಬಣ್ಣಂಗಳಂ ಬೇಟಿವೇಟಿ ನೋಡಿ ಮೆಚ್ಚುತಿರ್ಪಾಗಳ್ (ಕಬ್ಬಿಗಕಾ. ೬೩); ಬಣ್ಣವನು ಬರೆವ ಸತಿ ಹೊಲ್ಲ (ಸರ್ವಜ್ಞ. ೦೭೪೦). ೫. ರಂಗು ರಂಗಾದ ವಸ್ತ್ರ, ಸೀರೆ ಮುಂತಾದುವು: ಕಕ್ಕರವಟ್ಟೆಯಿಗೆಯ ಚಿತ್ರಾವಟ್ಟೆಯ ಪಟ್ಟೆವೆಡೆಯ ತುಟ್ಟೆವೆಡೆಯ ನೇಟಲಪಾಣಿಯ ಬಣ್ಣದ ಕಣದ ಬಣ್ಣವಣ್ಣಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪-೩೪ ವ); ಬಣ್ಣವನುಡರು ಬಂಗಾರಗಳನು ತೊಡರುಣ್ಣರಂಗವನೋಸರಿಸರು ಕಣ್ಣ ಸವಿಗೆಯಾತನ ರೂಪ ನೋಡಿದ ಹೆಣ್ಣೆಲ್ಲರಾ ಪುರದೊಳಗೆ (ನೇಮಿಸಂ. ೯-೪೦); ಬಣ್ಣವಿಲ್ಲದ ಮದುವೆ ಹೆಣ್ಣಿಲ್ಲದವನ ಸಂಸಾರ ಮಳಲೊಳಗೆ ಎಣ್ಣೆ ಹೊಯ್ದಂತೆ (ಸರ್ವಜ್ಞ. ೦೬೮೪). ೬. ರಂಗುರಂಗಾದ ಹೂವು, —ಪುಷ್ಪ: 'ಬಣ್ಣಗೋಲ್', 'ಬಣ್ಣಗೋಲ' ಪರಾ. ೭. ಬಗೆ; ವಿಧ; ಪ್ರಕಾರ: ಇಂಬಾಗಿರೆ ಮುದದಿಂ ಪಲವುಂ ಬಣ್ಣದ ಭಕ್ಷ್ಯರಾಶಿವೆರಸಾಕಂಠೋಷ್ಮಂಬರಮುಂಡು (ಶಂಕಚ. ೦೮೫ ೨೩). ೮. ಸ್ವರೂಪ; ನಿಜರೂಪ: ಪಾಪಪುಣ್ಯಮೆಂಬೆರಡಱ ಬಣ್ಣವಾವುದು ಅವಂ ಬಲ್ಲವರಾರ್ (ಧರ್ಮಚ. ೩-೦೫ ವ); ಆಕೆಯ ಬಣ್ಣ ಬೆಳಗಲು ತಾಯಿಮಹಿಮೆಯನು ನೋಡಿರೆಂದೆಲ್ಲಾ ಬಣ್ಣಿಸಲು (ಬಿಜ್ಜಪು. ೭-೦೫); ದುರಾಸೆಗೆ ಬಿದ್ದವರ ಬಣ್ಣ ಅವರು ಗುರುತಿಸಿದ್ದು ಈಗಲೇ (ಹೊಸಕೈ. ೨೭). ೯. ಅಂದ; ಚೆಂದ; ಚೆಲುವು: ಕಿಸುಗಾಡ ನೆಲಗಳೆಳದಳಿರ ಬಣ್ಣಮಂ ಕೆಯ್ಕೊಂಡು ವಿರಹಿಗಳ ಮನವನೂನಲಿಸುವಂತೆ ಜಲಜಲನೆ ಪರಿವ ಜರಿವೊನಲ್ಗಳುಮಂ ಕಂಡು (ಶಂಪಭಾ. ೭-೨೫ ವ); ಬಾಲೆಯರ ಬಣ್ಣಕ್ಕೆ ಸೋಲದೆ ಕಾಳುಶರೀರವೆಂಬ ಒತ್ತರಂಗೊಳ್ಳದೆ. . .ಮಲ್ಲಿಕಾರ್ಜುನನಲ್ಲಿ ಸರ್ವಾಂಗದಲ್ಲಿ ನಿರ್ಲೇಪವಾದುದೇ ಶರಣಸ್ಥಲ (ಬೋಳಬಸ. ೦೦೦-೩೪೭). ೧೦. ಹೊಳಪು; ಕಾಂತಿ: ಪೊನ್ನಂ ಬೆಳಗುವವೋಲ್ ಕರ್ಬೊನ್ನಂ ಬೆಳಗಿದೊಡೆ ಬಣ್ಣವೇನೆಸಗುಮೆ (ಸಮಚ. ೦೪-೬೨); ದ್ವಿಗುಣಿಸೆ ಬಣ್ಣವಿಂದುಮಣಿಮಂಡಪಕಾಂತಿಗಳಿಂ

ಮುಗುಳ್ತ ಮಲ್ಲಿಗೆಗೆ (ಪುಷ್ಪವೃ. ೨-೬೦). 'ಬಣ್ಣಂಗೆಡು' ಪರಾ. ೧೧. ತೋರಿಕೆ; ಸೋಗು; ನಟನೆ: 'ಬಣ್ಣಗಾಱ', 'ಬಣ್ಣಗಾಱಿಕೆ' ಪರಾ. ೧೨. ತೋರಿಕೆಯ ಮಾತು; ಬೂಟಾಟಿಕೆಯ ನುಡಿ; ಬಣ್ಣಾಚಾರ : ಚಕ್ರ ಕಳುಹೆ ಬಂದು ಬಣ್ಣವ ನುಡಿಯುವ್ವೆ ವಕ್ರವನಱಿದೆ ಹೋಗು (ಶಠಕ. ೪೬-೩೦). ೧೩. ಗುಣಗಾನ; ಸ್ತುತಿರೂಪವಾದ ಹಾಡು; ಬಣ್ಣವಾಡು : ಕಿನ್ನರಿಯರ್ ಪಾಡುಗೆ ನಿನ್ನದೊಂದು ಪಲವುಂ ಬಣ್ಣಂಗಳಂ (ಶಂಕಶಾ. ೦೪-೩೬). ೧೪. ಯೋಗ್ಯತೆ; ಸತ್ತ್ವ : ನಾನು ಚೌಡಿಯ ಮಂತ್ರವನ್ನು ಜಪಿಸದಿದ್ದರೆ ಆಗ ಕಾಣುತ್ತಿತ್ತು ನಿಮ್ಮ ಧೈರ್ಯಸಾಹಸದ ಬಣ್ಣವೆಷ್ಟೆಂಬುದು (ಅಂಬಿಕ. ೯). 'ಬಣ್ಣಗಾಣ್' ಪರಾ. ೧೫. ಮೇಲು ಮಟ್ಟಕ್ಕೆ ಸೇರಿದವನು; ಮಿಗಿಲಾದ ವ್ಯಕ್ತಿ : ಬಿಗಿಪುಗಿಡದಮರ್ದು ಬಗೆಗೆಸೆವ ಗದ್ಯವಿರಚನೆಗೆ ಬಾಣನಿ[ಂ]ದಂ ಬಣ್ಣಂ...ನಾಗವರ್ಮಕವೀಂದ್ರಂ (ವರ್ಧಮಾ. ೧-೨೬). ೧೬. ಚಿನ್ನ, ವಜ್ರ ಮುಂತಾದುವುಗಳಲ್ಲಿರುವ ಶುದ್ಧತೆಯ ಪರಿಮಾಣ; ಕ್ಯಾರೆಟ್ಟು : ಕಟ್ಟಣೆಯೊಳಗಣ ಕಾಂಸ್ಯದಂತೆ . . . ಚಿನ್ನದೊಳಗಣ ಬಣ್ಣದಂತೆ . . . ಎನ್ನಲ್ಲಿ ಭಿನ್ನವಿಲ್ಲದೆ ಇರ್ದೆಯಲ್ಲಾ ಸೌರಾಷ್ಟ್ರಸೋಮೇಶ್ವರಾ (ಆದಯ. ೨-೯); ಪದಿನೇಱು ತೂಕದ ಗಟ್ಟಿ ಹತ್ತುವರೆ ಬಣ್ಣಂ ಹತ್ತು ಗದ್ಯಾಣ ತೂಕದೆಂಟುಂ ನೆಱೆ ಹಾಗ ಬಣ್ಣದ ಪತ್ತೊಂಭತ್ತುಂ ಪೊನ್ನು ತೂಕ ಮತ್ತದು ಮತ್ತಂ ಪದಿಮೂಱು ಬಣ್ಣವನೆ ತಾನಾಗಿರ್ದುದು ಪೊನ್ನೆಲ್ಲಮಂ ಪದುಳಂಗೂಡಿ ಸಮಂತದಂ ತರಂಸಲು ಬಣ್ಣಮಂ ಪೇೞ್ದಂ (ವ್ಯವಹಾ. ೬೨-೨೪); ಒರೆಗೆ ಬಣ್ಣಕ್ಕೆ ಬೆರಸಿ ವೇದೋಚ್ಚರಿತ ಧರ್ಮವನಱುಹಿದನು ಭೂಸುರಗೆ ಧರ್ಮವ್ಯಾಧನೆಂಬನ ಕಥೆಯ ಕೇಳು (ಕುಮಾವ್ಯಾ. ೦೪-೯೬). ೧೭. ಯೋಗ್ಯವಾದುದು; ಉಚಿತವಾದುದು ; ತಕ್ಕುದು : ನೀನೇಕೆ ಮರುಳಪ್ಪುದಣ್ಣ ಈಗ ಜಾನಕಿಯನು ಬಿಟ್ಟುಕೊಡುವುದೇ ಬಣ್ಣ (ಪಾರ್ತಿಸು. ೮೬). ೧೮. ಜಾತಿ; ವರ್ಣ : ಮಿಕ್ಕಾದ ಮೂಱುಂ ಬಣ್ಣದವರಂ ಚೆನ್ನಾಗಿ ದಂಡನೆಗೆಯ್ದು ರಾಜ್ಯಮಂ ಪರಿಪಾಲನೆಯನೆಸಗಬೇಕು (ಚಾರಶಾಂ. ೬೫-೦೪); ನಾವು ಅಕಸಾಲೆಗಳು ಕೋಮಟಿಗರು ಮುನ್ನಾದ ಹದಿನೆಣ್ಬುಬಣ್ಣದಲ್ಲೂ ಯಲು ವಾಲಗ ಮಾಡಿದಾಗ (ಎಕ. XIV, ಶ್ರೀರಂಗ. ೧೪೦-೦೫; 1801). ೧೯. [ಸಂಗೀತ] ಇಂಪು : ಭಣಿತ ಬೆಡಂಗು . . . ನೇವಣೆ ಕಣೆ ಬಣ್ಣದೊಡ್ಡವಣೆ . . . ಕಳೆಯೆಂಬವಂ ಪೊಱೆದು ಬಾಜಿಸಿದಂ ಮುರವೈರಿ ವಾಸಮಂ (ಜಗವಿ. ೫-೩). ಪಣ್ಣ: ೧೮. ತಿರುಮಲರಸರಾದ ಮದ್ದ ಹೆಗ್ಗಡೆಯವರು ಅವರ ನಾಳಿನವರು ಗಣ ಪಣ ಸಾವಸ್ತರು ಕಾಪಿನ ರಾಜ್ಯವನು ಪ್ರತಿಪಾಳಿಸುತ್ತಿರ್ದ್ದ ಕಾಲದಲು (ಎಕ. XX, ೬-೨೬; 1556) ; ನಮ್ಮ ದೇಶದಲ್ಲಿರುವ ಪಣಗಳು — ಹದಿನೆಂಟುಪಣ, ಒಂಬತ್ತು ಪಣಗಳು —ತಮ್ಮಲ್ಲಿ ದೇಶದ ಪ್ರಜೆಯ ಬಹುಭಾಗವನ್ನು ಒಳಕೊಂಡಿವೆ . . . ಇವುಗಳನ್ನು ಬಟ್ಟು ಮಿಕ್ಕವೆಲ್ಲ ಈ ಪಣದ ವ್ಯವಸ್ಥೆಗೆ ಒಳಪಟ್ಟವೆ (ಕರ್ನಾಟಸಂ. ೯). 'ಪಣಕಟ್ಟು' ಪರಾ. ಫಣ್ಣ : ೧೮. 'ಫಣಕಟ್ಟು', 'ಫಣಸ್ತ' ಪರಾ. ಬಣ್ಣ : ೧೮. ಬ್ರಾಹ್ಮಣ ಬ್ರಾಹ್ಮಣೇತರ . . . ಎಂದು ಮುಂತಾದ ಬಣ ಬಣಗಳೊಳಗಿನ ಸಂಘರ್ಷಣೆಗಳು ಬ್ರಿಟಿಶರ ಪ್ರೇರಣೆಯಿಂದ ಮೆಲ್ಲಗೆ ತಲೆಯೆತ್ತಿದುವು (ಮಜ್ಜಿಕೃ. ೨೦). ೨೦. ಪಕ್ಷ; ಪಂಗಡ; ತಂಡ : ಸ್ವಾರ್ಥಪರಾಯಣರ್ ಬಣಗಳಂ ಮಾಡಿ ಬಿಡದೆ ಕೆಡಿಸುವರೂರನು (ಮಹಾಂತೇ. ೦೦_೬); ಹಗೆಗಳ ಬಣದವರು ಕೈಯೊಳಗೆ ಸಿಕ್ಕರೆ ಅವರನ್ನು ಸಂರಕ್ಷಿಸಬೇಕು (ಮುಂಬಯು. ೫-೦೨೨); ಇಕ್ಕಡಿಯ ಬಣದವರೂ . . . ಜೀವದ ಪರಿವೆಯಿಲ್ಲದೆ ಕಾದಿದೆವು (ಕವಂ. ೯). ವಣ್ಣ : ೧. ಪ್ರಿಯಸೇನೆಯುಂ ಕೆಂದಾವರೆಯ ವಣ್ಣದೊಳೋರಂತಪ್ಪ ಮೆಯ್ಯನೊಡೆಯ ಪದ್ಮಾವತಿಯೆಂಬ ಪಿಡಿಯಾಗಿ ಪುಟ್ಟಿದಳ್ (ವಡ್ಡಾರಾ. ೩೬-೩); ಮಿಸುನಿಯ ವಣ್ಣಕೆ ನಾನಾಬಗೆ ವಟಕ ಸುಭ್ರಿಪಜ್ಜಿಕೆ ನರರ ರಸನೆಯು ಸವಿಗೆ ನಾವೆಂದಾಗ ಫಲಸಹಿತೆಸೆವ ಜಂಬೀರಗಳಿಹುವು (ಕಂಸವಿ. ೫-೮೪).

ಬಣ್ಣವಣ್ಣ, ಬಣ್ಣಬಣ್ಣ (ದ್ವಿರುಕ್ತಿ) : ಸ್ತ್ರೀಕುಚಕುಂಭಕುಂಕುಮರಜಃಕಲ್ಲೋಲದಿಂ ಬಣ್ಣವಣ್ಣದ ಚೆಲ್ವಂ ಗೆಡೆಗೊಂಡು ಚಿತ್ರಿತಪತಾಕಾಲೀಲೆಯಂ ತಾಳ್ದಿ ನಿಂದುದು ಗಂಗಾನದಿ (ಆದಿಪು. ೧೧-೦೫೦) ; ಬಣ್ಣಬಣ್ಣದ ಪೂಗೊಯ್ದು ಹೊಂಬಾಳೆಯ ವರ್ಣದ ಪೊಟ್ಟಣಗಟ್ಟಿ . . . ಕಾಂತೆಯರೊಡತಿಗೆ ಬಿನ್ನಣಗಯ್ದು ತೋಱಿದರು (ಮೋಹತ. ೨೪-೬೬); ಬಣ್ಣಬಣ್ಣದ ಬಟ್ಟೆಯ ಚೂರುಗಳನ್ನು ನೇರವಾಗಿ ಕತ್ತರಿಸಿ ಸೇರಿಸಿ ಹೊಲಿದ ದಟ್ಟಿಗಳನ್ನು ನೆಲದ ಮೇಲೆ ಎಲ್ಲೆಲ್ಲೂ ಹಾಸಿದಂತೆ ಕಾಣಿಸುವ ಹೊಲಗದ್ದೆಗಳು (ವಂಟಿರು. ೦೩೦). **ಬಣ್ಣದ ಕೋಲು** = (ಕೋಲಾಟವಾಡಲು ಬಳಸುವ) ಬಣ್ಣ ಬಳಿದ ಕೋಲು : ನಾಯಿ ಬಡೀಲಿಕ್ಕ ಬಣ್ಣದ ಕೋಲೇ ? (ಗಾದೆ). **ಬಣ್ಣದ ಬೀಸಣಿಗೆ** = ೧. ರಂಗು ಹಚ್ಚಿದ ಬೀಸಣಿಗೆ : ಆ ಅಂಗಡಿಯಲ್ಲಿದ್ದ ಬಣ್ಣದ ಬೀಸಣಿಗೆಗಳೆಲ್ಲಾ ಒಂದೇ ದಿನದಲ್ಲಿ ಮಾರಾಟವಾಗಿ ಹೋದವು (ರೂಢಿ). ೨. (ಅಲಂ) ಒಯ್ಯಾರಿ; ಒನಪುಗಾತಿ : ಬಣ್ಣದ ಬೀಸಣಿಗ್ಯಂತೆ ಹೆಣ್ಣು ತಿರುಗೋದು ಕಂಡು ಕಣ್ಣುಸನ್ನೆಯ ಮಾಡಿ ಕಣ್ಣಲಿ ಕೆಂಡವಾ ಚೆಲಿಕೊಂಬೆ ಮನವೆ (ಶಿಶುಂದ. ೪-೫೨-೧). **ಬಣ್ಣದ ಮಾತು** = ತೋರಿಕೆಯ ನುಡಿ ; ಬೂಟಾಟಿಕೆಯ ಮಾತು : ಕಣ್ಣು ಕಾಣದ ಹಕ್ಕಿ ಹಣ್ಣು ಮೆಲಬಂದಡೆ ಹಣ್ಣು ಹಕ್ಕಿಯ ನುಂಗಿ ಉಗುಳದಿನ್ನೆಂತೋ ಸಣ್ಣ ಬಣ್ಣದ ಮಾತಿನ ಅಣ್ಣಗಳೆತ್ತ ಬಲ್ಲರು (ಸರ್ವಜ್ಞ. ೨೯-೦೩೦): ಪತಿಗೆ ಬಣ್ಣದ ಮಾತನಾಡ್ಯಾಳೊ ಅವಳು ಮಿತಿಯಿಲ್ಲದೆ ವೆಚ್ಚ ಮಾಡ್ಯಾಳೊ (ಪುರಂದ. ೧-೦೬೨_೧). **ಬಣ್ಣದ ಸೀರೆ** = ಚಿತ್ರ ಬರೆಯಲು ಉಪಯೋಗಿಸುವ ವಸ್ತ್ರ : ಬಣ್ಣದ ಸೀರೆ ಮೇಘವಣ್ಣಗೆಯ ರ್ಝುಳಂಬಮೆಂಬಿವಳಪಟ್ಟಿರೆ ಭೂಭುಜನಿರ್ದ ಚಿತ್ರಶಾಲೆಗೆ ನಡೆತಂದನಂದು ನವಯೌವನಸೊರ್ವನಪೂರ್ವಚಿತ್ರಿಕಂ (ಮಲ್ಲಿಪು. ೫-೯೯). **ಬಣ್ಣಬಚ್ಚಣೆಯ ಮಾತು** = ತೋರಿಕೆಯ ಮಾತು ; ಸೋಗಿನ ನುಡಿ : ಬಣ್ಣಬಚ್ಚಣೆಯ ಮಾತು ಕಲಿತು ಹೊನ್ನು ಹೆಣ್ಣು ಮಣ್ಣಿಗಾಗಿ ಅನ್ಯವನಿಕ್ಕುಪರ ಪ್ರಸಂಗವ ಹಡೆಯುಬಂದ ಗನ್ನಗಾಱಂಗೇಕೆ ಅಱುವು (ಮೋಳಿಗಮಾ. ೯೯-೩೩೪). **ಬಣ್ಣ ಬದಲಾಯಿಸು** = ೧. ರಂಗನ್ನು ಬೇರೆ ಮಾಡು ; ವರ್ಣವನ್ನು ವ್ಯತ್ಯಾಸಗೊಳಿಸು : ಗೋಸುಂಬೆಯು ತನಗೆ ಬೇಕಾದಾಗ ತನ್ನ ಬಣ್ಣ ಬದಲಾಯಿಸಿಕೊಳ್ಳುತ್ತದೆ (ರೂಢಿ). ೨. (ಅಲಂ) (ಸ್ವಾರ್ಥದಿಂದ ವ್ಯವಹಾರ, ನಡವಳಿಕೆಗಳಲ್ಲಿ ಇದ್ದಕ್ಕಿದ್ದಂತೆ) ನೇರಮಾರ್ಗವನ್ನು ಬಿಡು ; ಧೋರಣೆಯನ್ನು ವ್ಯತ್ಯಾಸ ಮಾಡಿಕೊಳ್ಳು : ಸಂಬಾರದ ವಸ್ತುಗಳನ್ನು ತುಂಬಿಕೊಂಡ ನಂತರ ಗಾಮಾ ತನ್ನ ಬಣ್ಣ ಬದಲಾಯಿಸಿದ (ಕ್ರವಾಇ. II, ೨೩೩). **ಬಣ್ಣ ಬಯಲಾಗು** = ನಿಜಸ್ವರೂಪವು ಪ್ರಕಟವಾಗು; ಮೋಸ ಹೊರಬೀಳು : ಅವನು ಮಾಡಿದ ಉಪಾಯದಿಂದ ಆ ಮೋಸಗಾರನ ಬಣ್ಣ ಬಯಲಾಯಿತು (ರೂಢಿ). **ಬಣ್ಣ ಬಿಡು** = ಬಣ್ಣವನ್ನು ಬಿಟ್ಟುಕೊಡು ; ರಂಗನ್ನು ಕಳೆದುಕೊಳ್ಳು ; ಮಾಸಲಾಗು : ರೇಯಾನ್, ಉಣ್ಣೆ ಬಟ್ಟೆಗಳು ಬಣ್ಣ ಬಿಡುವುದಾದರೆ, ಕಡೇ ಸಲ ಜಾಲಾಡುವ ನೀರಿಗೆ ಸ್ವಲ್ಪ ವಿನೆಗರ್ ಹಾಕುತ್ತಾರೆ (ಗೃಹವಿ. ೯೪). **ಬಣ್ಣಮಾಗು, ಬಣ್ಣವಾಗು** = ೧. ರಂಗನ್ನು ಹೊಂದು : ಬಣ್ಣವನ್ನು ತಳೆ : ಪಚ್ಚೋತಿಯಂತೆ ಪಲವುಂ ಬಣ್ಣಮಾಗಿ...ತೇಜಃಸಂತೆಲ್ಲಾ ಪಟಗವೊಳಗಾದ್ಯ (ಧರ್ಮಾಮ್ನ. ೨-೦೦೫). ೨. ಕೆಂಪಾಗು : ಹಣ್ಣು ಬಲಿದು ಬಣ್ಣವಪುದಕ್ಕೆ ಮೊದಲೆ ಕೊಂಬು ಮುಱಿಯಿತ್ತು (ಮೋಳಿಗಮಾ. ೯. ೬೦೪-೨೧೧೧). **ಬಣ್ಣ ಹಚ್ಚಿ ಹೇಳು** = (ಅಲಂ) ಇರುವ ಸ್ವಲ್ಪ ವಿಚಾರವನ್ನು ಅತಿಶಯವಾಗಿ ವರ್ಣಿಸಿ ಹೇಳು :

ಉತ್ಪ್ರೇಕ್ಷೆ ಮಾಡಿ ಹೇಳು : ಬಹಳ ಮಟ್ಟಿಗೆ ಅದನ್ನು ಕಾಣದಿದ್ದವರು ಬಣ್ಣ ಹಚ್ಚಿ ಹೇಳುವ ಮಾತುಗಳಿಂದಲೇ ನಮ್ಮಲ್ಲಿ ಭಯ ಹುಟ್ಟುವುದು (ಮೂಕಜ್ಜ. ೬೩). **ಬಣ್ಣ ಹಾಕು** = ಚಿತ್ರ. ಬಟ್ಟೆ ಮುಂತಾದುವಕ್ಕೆ ಬಣ್ಣವನ್ನು ತುಂಬು.– ರಂಗನ್ನು ಕೊಡು : ಬಣ್ಣಗಾರರು ನೂಲಿಗೆ ಬಣ್ಣ ಹಾಕುವ ಕಾಯಕ ನಡೆಯಿಸುತ್ತಾರೆ (ಕಕಪ್ರ. ೬–೦೨); ದಾರಕ್ಕೆ ಬಣ್ಣ ಹಾಕುವವರು. ಕೊಂಡ ದಾರದಿಂದ ಬಟ್ಟೆ ನೇಯುವವರು ಎಲ್ಲರೂ ಶ್ರಮಪಡಬೇಕು (ಹಪತ್ರ. ೯). [<ಸಂ. ವರ್ಣ ]

**ಬಣ್ಣಂಗುಂದು**, ಬಣ್ಣಗುಂದು (ಕ್ರಿ). ೧. ಕಾಂತಿಹೀನವಾಗು ; **ಕಳೆ** ಗುಂದು : ಮಂಕಾಗು : ಏಂ ಕೇಳ್ದಱಿಯೆವೆ ದಾನವರುಮಟಳಕೆ ಬಣ್ಣಂಗುಂದಿ ಬಾರ್ತೆಗೆಟ್ಟು ದೂಱಿದ ಬರ್ದಿಲರ್ಗೆ ನಾರಾಯಣಂ . . . ಸ್ಮೃತಿಟ್ಟು ಮರಲ್ಚಿದ ತೆಱನಂ? (ರಾಮಾಶ್ವ. ೦೯-೬). **ಬಣ್ಣಗುಂದು** : ೧. ಬಣ್ಣಗುಂದಿದ ದೇಹದೊಳಗೆಳವೆಣ್ಣುಗಳ ಸೌಖ್ಯವನು ತೋಱಿದಳು ಮದನನೆಸುಗೆಯಲಿ (ಶಕಶ. ೧–೩೮); ಜೀವಿತೇಶ್ವರನ ವಿರಹದೊಳು ಸೆಜ್ಜೆಯ ಭಾವಿಸಿ ಬಣ್ಣಗುಂದುವಳು (ಹರಿಚ. ೬-೬). ೨. **ಕಳೆಗೆಡು** ; ತೇಜೋವರ್ಧೆಯಾಗು : ಕಣ್ಣು **ಕೆಟ್ಟವೋಲೆ** ಕಡುರೂಪ ಚಲ್ವಿಕೆಯೆ ಬಣ್ಣಗುಂದಿದ ವೋಲೆ ಬಹುಮಾನವೆ (ಕವಕ. ೩೬–೧). [ಬಣ್ಣ + ಕುಂದು$_1$]

**ಬಣ್ಣಂಗೆಡು**, ಬಣ್ಣಗಡು (ಕ್ರಿ). ೧. = ಬಣ್ಣಂಗುಂದು ೧ : ಬಂದು ನಿಂದುದು ಮುಂದೆ . . . ಮಹಾಬೃಹನ್ ಮೇಷಿ! ಮಿಂಚಾಶಿರೆ ಪೊನ್ನುಣ್ಣೆ ಸುತ್ತಣದಗ್ನಿ ಬಣ್ಣಂಗೆಡಲ್. ಯೋಜನದೀರ್ಘ ಕಾಲಾಯಸದ ಖಡುಗದಿನದಂ ತುಂಡರಿಸಿದನು (ಶ್ರೀರಾಮಾ. ೭೦೬-೨೦೭). **ಬಣ್ಣಗೆಡು** : ೧. ಕಾಯೊ ಕರುಣಾಕರನೆ ಕಡುಪಾಪಿ ನಾನು . . . ಬಣ್ಣಗೆಟ್ಟಡವಿಯಲಿ ತಪಸು ಮಾಡಿದವನಲ್ಲ (ಕವಕ. ೦೩೩-೦); ತಿಣ್ಣವಡೆದ ಖಾಸನ ಸುದ್ದಿ ಜಪವಾಗಿ ಬಣ್ಣಗೆಟ್ಟುದು ಲೋಕವಲ್ಲ (ಕಂಸವಿ. ೦೦-೩೯); ಬೆಟ್ಟದ ಅರಸು:– (ಬಣ್ಣಗೆಟ್ಟು, ಅಧೋಮುಖನಾಗುವನು) (ಪಟ್ಟಿತ. ೩೩-೦೨). ೨. ರಂಗು ಹಾಳಾಗು ; ವರ್ಣವಿಲ್ಲದಾಗು : ಎಂದೆಂದಿಗೂ ಬಣ್ಣಗೆಡದ **ಕೃತಕ** ಪುಷ್ಪಹಾರವೊಂದು ನೇತಾಡುತ್ತಿತ್ತು (ಕುಸರು. ೦೯೦). ೩. ದಾರಿ ತಪ್ಪು: ಕಣ್ಣಿಲ್ದ ಕುಪಥನವೊಲು ಮನ ಬಣ್ಣಗೆ[ಪಾಠಾಂ. ಬಿ]ಡುತಿದೆ (**ಕೂರರಾ.** ೩೯-೦೩). [ಬಣ್ಣ + ಕೆಡು$_1$]

**ಬಣ್ಣಂಬಡಿಸು** (ಕ್ರಿ). ಬಣ್ಣವನ್ನು ಲೇಪಿಸು ; ರಂಗನ್ನು ಹಚ್ಚು : ಶಿಲಿನೀಸರ್ಸಿರಿಯೊಳ್ಕೊಂಡ ಸೀತಾದೇವಿಯ ಸಿರಿಯೊಡಲ ಕುಂಕುಮದಿಂ **ಪೊಂಬಣ್ಣಮಾದ** ಧನುಷ್ಕೋಟಿತೀರ್ಥೋದಕದಿಂ ಸಿರಿರಾಣಿಗರಿಸಿನದಣ್ಬಂ ಬಣ್ಣಂಬಡಿವುದೆಂದುಂ (ಕಕಮಂ. ೧೧೯-೯). [<ಬಣ್ಣಂಬಡೆ+—ಇಸು]

**ಬಣ್ಣಂಬಡೆ**, ಬಣ್ಣವಡೆ (ಕ್ರಿ). ೧. (ಆಕರ್ಷಕವಾದ) ಬಣ್ಣವನ್ನು ಹೊಂದು : ಪಡೆದೊಡೆ ಕಂಪಂ ಬಣ್ಣಂಬಡೆಯುವು ಬಣ್ಣಮನೆ ಪಡೆದು ವಪ್ಪೊಡೆ ಕಂಪಂ ಪಡೆಯುವುಟಿದಲರ್ಗಳೆರಡುಮನೊಡೆವೆಳೆದೀ ಚಂಪಕಕ್ಕೆ **ಪೂಗಳ್** ದೊರೆಯೇ (ಅಂಪು. ೦೦-೦೦೯); ಅರನೇಱಿಲ್ವಣ್ಣ ಬಣ್ಣಂಬಡೆದ ತನು ಪೃಥುಶ್ರೋಣಿ ನೀಲಾಳಕಂ . . . ಕೊಂಕಾಂತ ಪುರ್ಬೊಂದಿರೆ ನಾನಾಶಕ್ತಿಯರ್ ಬೇಡಿತಿಯರೆಸಕಮಂ ತಾಳ್ದು ಕಣ್ಗೆಡ್ಡಮಾದರ್ (ಕಠಂಕಂ. ೩-೭). ೨. **ಶೋಭಿಸು**; ಮೆರೆ : ತಿರುಮಲೆಯಾರ್ಯನುಮುವನ ಪಡಿನೆಟಲಂತೆ ಎಲ್ಲಾ ವಿದ್ಯೆಗಳೊಳಂ ಏಱಿಸಂದು ಬಣ್ಣಂಬಡೆದಂ (ಕಕವಂ. ೦೩೬-೨೦); ಮೊದಲೊಳ್ ಹರಿಹರ ಬುಕ್ಕರ್ ಮೊದಲೆನಿಸಿದರರಸು ಗೆಯ್ದು ಪಸರಿಸಿ ಜಸಮಂ ಪದಪಿಂ ಕುಱುಂಬರಾಯರ್ ಪದಿಮೂವರ್ ಬರ್ದಿಲವೇಱಿ ಬಣ್ಣಂಬಡೆದರ್ (ಕಕವಿ. ೨-೦೩). **ಬಣ್ಣವಡೆ** : ೨. ಅಣ್ಣ ನಿರ್ದನು . . . ಬಣ್ಣವಡೆವ ಗದ್ದುಗೆಯೊಳು (ಶರತ. ೩೯-೦೦). ೩. **ಅರ್ಹ** ವಾಗು ; ಯೋಗ್ಯವಾಗು : ಬಿಳುವಕ್ಕಿಯ ಬೀಳಗೆಡಪಿದ ಬಿಂಕವೀ ಬಳಿಯೊಳು ಬಣ್ಣವಡೆಯದು (ಹರಿಚ. ೨-೯೨). [ಬಣ್ಣ + ಪಡೆ$_1$]

**ಬಣ್ಣಕ** (ನಾ). ತೋರಿಕೆಯ ಮಾತನ್ನಾಡುವವನು : ಬೂಟಾಟಿಕೆಯ ವ್ಯಕ್ತಿ : ಅನ್ಯಸಂಗಂಗಳಿಗೆ ಎಳಸಿ ಬಳಸಿ ಬಣ್ಣಕರಪ್ಪರೆ ಶರಣರು (ಉಂಶಿ. ೦೯೯-೨೦೬); ಬಣ್ಣಕರು ಬಣ್ಣದೊಳಗಾಳುವದನೆ ಕಂಡು ಅಣ್ಣ ನಗುತಿರ್ದನಯ್ಯಾ ಯೋಗಿನಾಥಾ (೦ಂಗಲೀ. ೬೨-೦೦).

[ ಬಣ್ಣ + —ಕ$_3$. / ಸಂ. ವರ್ಣಕ ]

**ಬಣ್ಣಕಟ್ಟು** 'ಬಣ್ಣಗಟ್ಟು' ನೋ.

**ಬಣ್ಣಗಂಬಿ** (ನಾ). (ಬಣ್ಣ ಬಳಿದ) ಬರೆಯುವ ಕಡ್ಡಿ ; **ಲೆಕ್ಕಣಿಕೆ** : ಚೌಪದಿಗವಿತೆ ಬಣ್ಣಗಂಬಿಯ ಪುಸ್ತಕಲಿಖಿತಜ್ಞರು ಕನ್ನಡಕವ ತಾಳ್ದಿಹರು (ಮೋಹಕಶ. ೩-೯೦). [ ಬಣ್ಣ + ಕಂಬಿ$_1$ ]

**ಬಣ್ಣಗಟ್ಟು**, ಬಣ್ಣಕಟ್ಟು (ಕ್ರಿ). ೧. ಕಾಂತಿಗೂಡು ; ನಳನಳಿಸು : 'ಸಾದಾ' ಮೇವು ತಿಂದು, ಜೊತೆಗೆ ಬಿಟ್ಟಿ ದೊರೆಯುವ ಸರಾಯಿ ಕುಡಿದರೆ ಸಾಕು. ಹೋರಿ ಬಣ್ಣಗಟ್ಟುತ್ತವೆ (ಶಿಳುಮ. ೦೬೭). **ಬಣ್ಣಕಟ್ಟು** : ೨. ರಂಗುಹಾಕು : ಆ ಹುಡುಗಿ . . . ನೇಯ್ಗೆಯವನು . . . ಬಟ್ಟೆ ನೇಯ್ದು. ಬಣ್ಣಕಟ್ಟಿ ಹಿಗ್ಗುವಂತೆ, ತನ್ನ ಮುಂದಿನ ರಾಜ್ಯವನ್ನು ಕಲ್ಪಿಸಿಕೊಂಡು ಹಿಗ್ಗುತ್ತಿದ್ದಳು (ಚಾಗಿವ. ೩). ೩. **ಸುಗಂಧದ್ರವ್ಯ** ಗಳನ್ನು ಸೇರಿಸು; ವಾಸನೆ ಕಟ್ಟು.

ಬಣ್ಣಕಟ್ಟಿದ **ಅಡಕೆ** = ಏಲಕ್ಕಿ, ಲವಂಗ, ಸಕ್ಕರೆ, ಕೊಬ್ಬರಿ ಮುಂತಾದುವುಗಳೊಂದಿಗೆ ಮಿಶ್ರಮಾಡಿದ ಪುಡಿಅಡಕೆ : ಬಣ್ಣಕಟ್ಟಿದ ಅಡಕೆ. ಮೈಸೂರು ವೀಳ್ಯದೆಲೆ ಇದ್ದರೆ ತಾಂಬೂಲ ಹಾಕಿಕೊಳ್ಳಲು ಚೆನ್ನ (ರೂತಿ). **ಬಣ್ಣಕಟ್ಟಿ ಹೇಳು** = ಅತಿಶಯವಾಗಿ ಹೇಳು ; ಉತ್ಪ್ರೇಕ್ಷೆ ಮಾಡಿ ವರ್ಣಿಸು : ನೀನು **ಈ** ಕನಸನ್ನು ಸತ್ಯಾ ಅಂತ ಬಣ್ಣಕಟ್ಟಿ ಹೇಳೋದೂ ಅಲ್ಲ; ನಾನು ನಿಜಾ ಅಂತ ನಂಬಿ ಕೇಳೋದೂ **ಅಲ್ಲ!** (ಹೇಮುಕೂ. ೩). [ಬಣ್ಣ + ಕಟ್ಟು$_1$]

**ಬಣ್ಣಗತೆ** (ನಾ). ಸ್ವಾರಸ್ಯವಾದ ವರ್ಣನೆಯಿಂದ ತುಂಬಿದ **ಕತೆ** : ಶ್ರೀರಾಜಒಡೆಯ ಮಹಾಸ್ವಾಮಿಯವರಿಗೆ ಸವನಿಸಿದ ಆ ಪ್ರಕರಣದ ವಿಷಯವಾಗಿ . . . ನೂರಾರು ಬಣ್ಣಗತೆಗಳು ಮಸಗುತ್ತಿರುವುವು (ಮಂತ್ರಕ. ೦೬೭-೦೯). [ ಬಣ್ಣ + ಕತೆ ]

**ಬಣ್ಣಗನಸು** (ನಾ). ಸುಂದರವಾದ ಸ್ವಪ್ನ: ಸವಿಗನಸು : ನಿನ್ನ ಪ್ರತಿಮೆಯೊಂದು ನನ್ನ ಜೀವನದಿಂದೆ ರೂಪುಗೊಳಿಸೆ. ನನ್ನ ಮಣ್ಣನು. ಮನೋರಥಗಳನು ಮತ್ತೆಲ್ಲ ಬಣ್ಣಗನಸನು ಭ್ರಾಂತಿಗಳನು ತಂದೆ (ನಲಮು. ೯೦-೯). [ ಬಣ್ಣ + ಕನಸು ]

**ಬಣ್ಣಗಬ್ಬ** (ನಾ). ವರ್ಣನೆಗಳಿಂದ **ಕೂಡಿದ ಕಾವ್ಯ**: ನವರಸದ ತನಿರಸ ಮೊರೆವ ಬಣ್ಣಗಬ್ಬಮಂ ಪೊಳ್ಕೆಂದೊರೆವ ನಿನಗಮೇಂ ನಿರಹಂಕೃತಿಯೊ ನಿನ್ನಾ ಚಾತ್ಮೆಯೊಳ್ (ರಾಮಾಶ್ವ. ೦೬೯-೭). 'ಬಣ್ಣಗಬ್ಬಿಗ', 'ಬಣ್ಣ ಮಾಡು' ಪರಾ. [ಬಣ್ಣ + ಕಬ್ಬ$_1$]

**ಬಣ್ಣಗಬ್ಬಿಗ** (ನಾ). (ವಿಸ್ತಾರವಾಗಿ) **ವರ್ಣಿಸುವ ಕವಿ** : ನೀನೋ ವರ್ಣನಪೂರ್ವಂ ಬಣ್ಣಗಬ್ಬಿಗರ ಬಲ್ಲಹಂ ಗಡ (ರಾಮಾಶ್ವ. ೭೦-೩೯).

[ ಬಣ್ಣಗಬ್ಬ + — ಇಗ ]

**ಬಣ್ಣಗರಡಿಗೆ** (ನಾ). **ಕೆಂಬಣ್ಣದ ಭರಣಿ**. – **ಸಂಪುಟ** : ಬಿರಿದ ಪೆರ್ಗಾಯಿಪಡೆದಿರ್ಪುದಱಿಂ ಶೌಂಗಲಂಕರಿಸಲ್ಕೆ ಬಣ್ಣಗರಡಿಗೆಯಂ ಮುಚ್ಚುಳ್ದೆಗೆದು ರನ್ನಸರವಮಂ ನೆಗಟ್ಟುವ ಭಂಡಾಂಗಿಗರಂತೆ ಬಗೆವಡೆದ ದಾಡಿಮಂಗಳುಂ . . . ಮನಂಗೊಳೆ (ಕಕವಂ. ೦೦೨-೨೦).

[ ಬಣ್ಣ + ಕರಡಿಗೆ (<ಕರಂಡಿಗೆ) ]

**ಬಣ್ಣಗಲ್ಲು** (ನಾ). ಬಣ್ಣದ ಹರಳು ; **ರತ್ನ** : **ಸಂತತ ಬಣ್ಣಗಲ್ಲು** ಗಳ ಕೇವಣಸಿರ್ದ ಚಂತಾಕ ಬಲುಹನಿಕ್ಕಿದರು (ಮೋಹತಕ. ೩೩-೩೯).

[ ಬಣ್ಣ + ಕಲ್ಲು (<ಕಲ್$_3$) ]

**ಬಣ್ಣಗಳ** (ನಾ). ಚೆಲುವಾದ ಕುತ್ತಿಗೆ ; ಅಂದವಾದ ಕೊರಳು : ಸಣ್ಣಗಳ ನುಣ್ಗೊರಳು ಸವಿಗಳ ಬಣ್ಣಗಳವೋ ಕಂಬುಕಂಠವೊ ಬೆಣ್ಣೆಗಳವೋ (ಶಬಸಾ. ೦೬೨-೩೦). [ಬಣ್ಣ+ಗಳ್ತ (= ಗಲ)]

**ಬಣ್ಣಗಾಣ್** (ಕ್ರಿ). ಸತ್ತ್ವವನ್ನು ತಿಳಿ ; ಯೋಗ್ಯತೆಯನ್ನು ಅರಿ : ಅರೆವನಯ್ಯಾ ಸಣ್ಣವಹನ್ನಕ್ಕ ಒರೆವನಯ್ಯಾ ಬಣ್ಣಗಾಣ್ಬನ್ನಕ್ಕ (ಬಸವ. ೬೮೬). [ಬಣ್ಣ+ಕಾಣ್]

**ಬಣ್ಣಗಾರ** 'ಬಣ್ಣಗಾಱ' ನೋ.

**ಬಣ್ಣಗಾರಿಕೆ** 'ಬಣ್ಣಗಾಱಿಕೆ' ನೋ.

**ಬಣ್ಣಗಾಱ**, ಬಣಕಾರ, ಬಣಗಾರ, ಬಣ್ಣಗಾರ (ನಾ). ೧. ಬೂಟಾಟಿಕೆ ಮಾಡುವವನು ; ಸೋಗುಗಾರ : 'ಬಣ್ಣಗಾಱಿಕೆ' ಪರಾ. **ಬಣಕಾರ** : ೨. (ಮರದ ಸಾಮಾನು, ಬಟ್ಟೆ ಮುಂತಾದುವಕ್ಕೆ) ರಂಗು ಹಚ್ಚುವ ಜನಾಂಗಕ್ಕೆ ಸೇರಿದವನು ; ರಂಗಾರಿ : ಬಣಕಾರ ಫಕೀರಪ್ಪನಲ್ಲಿ . . . ವಿವರಗಳನ್ನು ಚರ್ಚಿಸಿ ಆಯಿತು (ಗಂಪೂಯು. ೨೦೬) ; ಬಣಕಾರರು . . . ಕೊಟ್ಟವನ್ನೂ ತಂಬಾಕಿನ ಕಡ್ಡಿಪುಡಿಯನ್ನೂ ಅಣಿ ಮಾಡಿದರು (ಸುಕಸಂ. ೩೦). **ಬಣಗಾರ** : ೩. (ಚಿತ್ರ ಬರೆದು) ಬಣ್ಣ ಹಚ್ಚುವವನು : ಆನಿ ಮ್ಯಾಗಿರುವ ಶಿವದಾರ ಮೊಗ್ಗಿಯ ಯಾವ ಬಣಗಾರ ಬರೆದಾನ (ಲೋಕಗೀ. ೬೨). **ಬಣ್ಣಗಾರ** : ೨. ಹೊಸಮನೆಯ ಗೋಡೆಗಳಿಗೆ ಬಣ್ಣ ಹಚ್ಚಲು ಅವರು ನಾಲ್ಕು ಜನ ಬಣ್ಣಗಾರರನ್ನು ಕರೆಸಿದ್ದರು (ಆಡು). [ಬಣ್ಣ+ –ಗಾಱ (< –ಕಾಱ)]

**ಬಣ್ಣಗಾಱಿಕೆ**, ಬಣ್ಣಗಾರಿಕೆ (ನಾ). ೧. ಬೂಟಾಟಿಕೆಯ ನಡವಳಿಕೆ ; ಬಣ್ಣಾಚಾರ ; ತೋರಿಕೆಯ ವರ್ತನೆ : ನಾ ತಪ್ಪಿ ನುಡಿದಡೆ ಒಪ್ಪವಿಟ್ಟುಕೊಳ್ಳಿರಣ್ಣಾ ಕಣ್ಣನಲ್ಲಿ ಕಸ ಹೊಕ್ಕರೆ ಕೈ ಹಗೆಯೆ ಅಯ್ಯಾ ಇದು ಬಣ್ಣಗಾಱಿಕೆಯಲ್ಲ ಸನ್ನದ್ಧರಿರವು (ಮೋಳಿಪು. ೩೩-೦೪೬) ; ಜಡಪಾತ್ರವೆಂದು ನಮ್ಮತ್ತ ನೋಡದೆ ತನ್ನ ಹಡಪವೆಂಗಳ ನೋಡುತಿದ್ದ ಕಡೆಗೀಗ ಬಣ್ಣಗಾಱಿಕೆಗೆ ಕರೆಸಲಾತನೆಡೆಗೆ ನಾವೆಂತೆಯ್ದುಬಹುದು (ಶರಕ. ೦೪-೩೮). **ಬಣ್ಣಗಾರಿಕೆ** : ೧. ಕಣ್ಣಿಗೆ ಇಚ್ಚೆಯಾಗದ ನಮ್ಮನ್ನು ಈಗ ಬರಿಯ ಬಣ್ಣಗಾರಿಕೆಗೆ ಕರೆವುದು ಏಕೆ ? (ಮಾಮುಲ್ಲ. ೦೦೨). ೩. ಬಣ್ಣ ಹಚ್ಚುವಿಕೆ ; ರಂಗು ಬಳಿಯುವಿಕೆ : ವರ್ಣಕ್ರಿಯಾವಿಸ್ತಾರಗುಣವಚನೇಷು, ಬಣ್ಣಗಾರಿಕೆಯೊಳಂ, ಬಿತ್ತರದೊಳಂ, ಕೊಂಡಾಟದೊಳಂ (ಶಾಶಕ್ತ. ೨೯೦). [ಬಣ್ಣಗಾಱ + – ಇಕೆ]

**ಬಣ್ಣಗುಂದು** 'ಬಣ್ಣಂಗುಂದು' ನೋ.

**ಬಣ್ಣಗುದುರೆ** (ನಾ). ಮುಖವೂ ಕಾಲೂ ಬೆಳ್ಳಗಿದ್ದು, ಮಿಕ್ಕ ಭಾಗವು ಬೇರೆ ರಂಗುಗಳಿಂದ ಕೂಡಿದ ಕುದುರೆ ; ಪಂಚಕಲ್ಯಾಣಿ : ಇಂತು ಮುಂಬಿ ಬಂದ ಶರತ್ಕಾಲದೊಳ್ ರಾಘವನ ಜನ್ನದ ಬಣ್ಣಗುದುರೆ ತೆಂಕಲ್ಗೆ ಮೊಗಮಿಕ್ಕಿ ನಡೆಯುತುಮಿರ್ಪುದುಂ (ರಾಮಾಶ್ವ. ೮೩-೦೮) ; ಏವೂರ ನಿಗಳದೊಂದು ಬಣ್ಣಗುದುರೆ (ರಾಮಾಶ್ವ. ೮೪-೨೩). [ಬಣ್ಣ+ಕುದುರೆ]

**ಬಣ್ಣಗುರುಡ** (ನಾ). ಬೇರೆ ಬೇರೆ ಬಣ್ಣಗಳನ್ನು ಕಂಡುಹಿಡಿಯಲಾಗದ ದೃಷ್ಟಿದೋಷವುಳ್ಳವನು : ಬಣ್ಣಗುರುಡರಲ್ಲಿ ಕೆಲವಟ್ಟಿಗಾದರೂ ಕೆಲವು ಬಣ್ಣಗಳನ್ನು ಗುರುತಿಸುವಷ್ಟು ಸಾಮರ್ಥ್ಯ ಇದ್ದೇ ಇರುತ್ತವೆ (ಕವಿಕೋ. XI, ೮೩೩). [ಬಣ್ಣಗುರುಡು + – ಅ$_7$]

**ಬಣ್ಣಗುರುಡು** (ನಾ). ಬೇರೆ ಬೇರೆ ಬಣ್ಣಗಳನ್ನು ಕಂಡು ಹಿಡಿಯಲಾಗದಿರುವ ಒಂದು ಬಗೆಯ ಕಣ್ಣಿನ ದೋಷ : ತಂಬಾಕು ಮತ್ತು ರಾಸಾಯನಿಕವಸ್ತುಗಳ ಸೇವನೆಯಿಂದ ದೃಷ್ಟಿಪಟಲದ ನರಕಣಗಳು ಶಿಥಿಲಗೊಂಡು ಬಣ್ಣಗುರುಡನ್ನುಂಟುಮಾಡಬಲ್ಲವು (ಕವಿಕೋ. XI, ೮೩೩). [ಬಣ್ಣ + ಕುರುಡು]

**ಬಣ್ಣಗುರುಡುತನ** (ನಾ). = ಬಣ್ಣಗುರುಡು: ಬಣ್ಣಗುರುಡುತನದಲ್ಲಿ ಎರಡುಬಗೆಯುಂಟು (ಕವಿಕೋ. XI, ೮೩೩). [ಬಣ್ಣ+ಕುರುಡುತನ]

**ಬಣ್ಣಗೂಡು** (ಕ್ರಿ). ರಂಗೇರು ; ಹೊಳಪುಂಟಾಗು : ಆ ಬೆಳವಲ ಗಿಡಕ್ಕೆ ಹೊಸ ಚಿಗುರೆಲೆ ಮೂಡಿ ಬಣ್ಣಗೂಡಿ ಮಿರಿಮಿರಿ ಮಿಂಚಹತ್ತಿದ ದಿನ ತಿಳಿಯುತ್ತಿದ್ದೆ . . . ವಸಂತಾಗಮನ ಆಗಿದೆ ಎಂದು (ಇಕ್ಕಿ. ೪೩೬). [ಬಣ್ಣ+ಕೂಡು$_1$]

**ಬಣ್ಣಗೂಳ್**, ಬಣ್ಣಗೂಳು (ನಾ). (ದೃಷ್ಟಿದೋಷ ಮುಂತಾದುವುಗಳ ನಿವಾರಣೆಗಾಗಿ ಚೆಲ್ಲುವ) ಅರಿಸಿನ, ಕುಂಕುಮ ಮುಂತಾದುವುಗಳನ್ನು ಬೆರಸಿದ ಅನ್ನ ; ಬಣ್ಣದ ಅನ್ನ : ಭೂತಸಂತುಷ್ಟಿಯಪ್ಪಂತೆ ಕುಱಿಕೋಣಂಗಳಂ ಪೊಯ್ಸಿ ಬಣ್ಣಗೂಳಂ ಪಸರಿಸಿ (ಕೈಬಿಶಾ. ೩-೬೨) ; ಚರಿಗೆ ಚರಿಗೆಯಲಿ ಚರುಬೆಟ್ಟವಿಳ್ದುದು ಬಣ್ಣಗೂಳ್ (ಶ್ರೀರಾಮಾ. ೬೩೮-೨೦೦). **ಬಣ್ಣಗೂಳು** : ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು ಬೆಳ್ಳಿ ಪೊಂಬರಿವಾಣಗಳ ತುಂಬಿ ಸುಳಿಹೆತ್ತಿ ಚೆಲ್ಲಿಸಿದಳು ದೆಸೆದೆಸೆಗೆ (ಮೋಹಕ. ೩೦-೩೬) ; ಧರ್ಮರಾಯ . . . ಭೂತಸಂತುಷ್ಟಿ ಆಗುವ ಹಾಗೆ ಕುರಿ – ಕೋಣಗಳನ್ನು ಹೊಯ್ಸಿ ಬಣ್ಣಗೂಳನ್ನು ಚೆಲ್ಲಿಸಿದ (ಶಿವಚರಿ. ೨೩). [ಬಣ್ಣ+ ಕೂಳ್ (<ಕೂಱು$_1$)]

**ಬಣ್ಣಗೂಳು** 'ಬಣ್ಣಗೂಳ್' ನೋ.

**ಬಣ್ಣಗೆಡಿಸು** (ಕ್ರಿ). (ಭಯದಿಂದ) ಸತ್ತ್ವಹೀನವಾಗುವಂತೆ ಮಾಡು; ದುರ್ಬಲಗೊಳಿಸು : ಪೆರ್ಬುಲಿ . . . ಕೊಳ್ಳಿವಣ್ಣನ ಬಣ್ಣಗೆಡಿಸಿದುದು (ಶಾಸ್ತ್ರಶಾ. ೩-೩೩). [ಬಣ್ಣಗೆಡು (<ಬಣ್ಣಂಗೆಡು) + – ಇಸು$_2$]

**ಬಣ್ಣಗೆಡು** 'ಬಣ್ಣಂಗೆಡು' ನೋ.

**ಬಣ್ಣಗೇಡು** (ನಾ). ಮಾನಗೇಡು ; ಮಾನಹಾನಿ : ಬಾಯಿ ಬಿಟ್ಟರೆ ಬಣ್ಣಗೇಡು (ಗಾದೆ). [ಬಣ್ಣ +ಕೇಡು]

**ಬಣ್ಣಗೊರಲ್** (ನಾ). ಸೊಗಸಾದ ಕಂಠ; ಇಂಪಾದ ಧ್ವನಿ : ಬಣ್ಣಗೊರಲ್ಪೆಡೆಯರ್ ಸೋಬನವಾಡಂ ಪಾಡುಗೆ (ಕಳವಂ. ೦೪೮-೮). [ಬಣ್ಣ +ಕೊರಲ್]

**ಬಣ್ಣಗೊಳ್** (ಕ್ರಿ). ಸ್ವಾರಸ್ಯದಿಂದ ಕೂಡಿರು ; ರಸವತ್ತಾಗಿರು : ಬಾಲ್ಯ, ಮದುವೆ, ವನವಾಸವು, ವಿರಹ, ಚಿಂತೆ, ವಿಧಿ, ರೋಷವು ಬಣ್ಣಗೊಂಡು ನಲಿದಿವೆ (ಸ್ವರ್ಣಚಿ. ೩೪). [ಬಣ್ಣ + ಕೊಳ್$_1$]

**ಬಣ್ಣಗೊಳಿಸು** (ಕ್ರಿ). ರಂಗಾಗುವಂತೆ ಮಾಡು; ವರ್ಣಮಯವಾಗಿಸು : ಕೆರೆ ಕೆರೆಯ ಹರಹಿನೊಳು ಜಲಹಾಸವನು ಮೆರಸಿ ಶಿರೆ ಬಣ್ಣಗೊಳಿಸುವೀ ಬಿಸಿಲ ನಲವು (ಮುರಳೀ. ೦೮-೪). [ಬಣ್ಣಗೊಳ್ + – ಇಸು$_2$]

**ಬಣ್ಣಗೋಗಿಲೆ** (ನಾ). ಚೆಲುವಾದ ಕೋಗಿಲೆ : ಅರಸಂಚೆ ಸೋಗೆನವಿಲು ಬಣ್ಣಗೋಗಿಲೆ ಹರಿರಥಾಂಗದ ಪ್ರತಿಮೆಗಳು ಮೆಱೆದುವು ಚೌದೆಸೆಯುಪ್ಪರಿಗೆಗಳೊಳು (ಕಂಪರಾ. ೬-೨೮). [ಬಣ್ಣ+ ಕೋಗಿಲೆ]

**ಬಣ್ಣಗೋರಟೆ** (ನಾ). ಒಂದು ಬಗೆಯ ಸ್ಫಟಿಕದ ಗಿಡ ಮತ್ತು ಅದರ ಹೂವು : "ರಾಜಶರ್ಯಕಃ – ಬಣ್ಣಗೋರಟೆ" (ಓಷಧಿ. ೧೩೮). [ಬಣ್ಣ + ಗೋರಟೆ (< ಗೋರಂಟೆ)]

**ಬಣ್ಣಗೋಲ್** (ನಾ). ೧. (ಕೋಲಾಟವಾಡುವಾಗ ಬಳಸುವ) ಬಣ್ಣ ಬಳಿದ ಕೋಲು : ಜಡೆಕೋಲಾಟದ ಸುನ್ದರಿಯನ್ನು ಒಡ್ಡಿಸಿ . . . ಗೆಜ್ಜೆಯ ಬಣ್ಣಗೋಲ್ಗಳನ್ನು ಹಂಚಿಸುತ್ತಿರುವಳು (ಶಬ್ದ೮. ೦೬೯-೦೯). ೨. ರಂಗುರಂಗಿನ ಹೂವುಗಳಿಂದಾದ ಬಾಣ : 'ಬಣ್ಣಗೋಲ' ಪರಾ. [ಬಣ್ಣ + ಕೋಲ್$_1$]

**ಬಣ್ಣಗೋಲ** (ನಾ). ರಂಗುರಂಗಿನ ಹೂವುಗಳಿಂದಾದ ಬಾಣವನ್ನುಳ್ಳವನು; ಮನ್ಮಥ : ಬಣ್ಣಗೋಲನ ತೋಳ ಸಾವಿನ ನುಣ್ಣಗಂಭವೊ

ಗಾನಕಲಾಯುತ ಸಣ್ಣ ಕೋಮಲ ಸೀತೆಗಳವಹುದೆಂದಳಿಂದುಮುಖಿ (ಜಗಜ. ೦೬೨-೫೦). [ಬಣ್ಣಗೋಲ್ + – ಅ೭]

**ಬಣ್ಣಟಿ ?** (ನಾ). (?) : ಮಂಜೂಡಣ ಹೆಗ್ಗಡ್ಡೆ ಅದಱ ವೇಗಣ ಕೊಡಂಗೆ ಎರಡಱಲ್ಲಿಯೂ ಮೂಡೆ ೨ ಬಂಣಟಿ ಮೂಡೆ ೨ (ಎಇ. XXVII. ೦೬೨-೪೯; 1266) [?]

**ಬಣ್ಣದಳೆ** (ಕ್ರಿ). ರಂಗನ್ನು ಪಡೆ; ರಂಗೇರಂ : ಬಣ್ಣದಳೆದ ರನ್ನವಾವಗೆ ಎಡಿದೆಳಗ್ಗಣ್ಣವಳಿರ್ದಲೊತ್ತಿನಲಿ (ಸೋಕಹ. ೪-೦೩). [ಬಣ್ಣ + ತಳೆ೧]

**ಬಣ್ಣದುಟಿ** (ನಾ). ಕೆಂಪಾದ ತುಟಿ; ಚೆಂದುಟಿ : ಆ ರಸಭರಿತ ವಿಚಿತ್ರದ ಚಿತ್ರದ ನಾರಿಯ ಬಣ್ಣದುಟಿಯು ಬಂದುಗೆಯೊಳು . . . ನೃಪತಿಯು ಚಾರುನಯನವಮಿಲಗ್ನಂಬಡೆದುವು ಬಂಡುಣಿವಱಿಯಂತೆ (ಪದುಚ. ೩-೦೦) ಎಣ್ಣೆಗಂಟುಗಳ ತಡಹುತ ಬಣ್ಣದುಟಿಯು ಭಾವವ ಬೀಱುತ ಮುಂದ್ದು ವೆಣ್ಣುಗಳ್ವೆತಂದರಾಗ (ಕಂಪಹ. ೨೦-೭೪). [ಬಣ್ಣ + ತುಟಿ]

**ಬಣ್ಣದೋರು** 'ಬಣ್ಣದೋಱು' ನೋ.

**ಬಣ್ಣದೋಱು, ಬಣ್ಣದೋರಂ** (ಕ್ರಿ). ೧. ಬೆಡಗು ಮಾಡು; ಥಳಕು ತೋರಿಸು : ಕಣ್ಣ ಮೊದಲಲ್ಲಿ ಕುಳ್ಳಿರ್ದು ಬಣ್ಣದೋಱುವ ಪರಿಯ ನೋಡಾ ಬಣ್ಣವಿಲ್ಲದ ಬಣ್ಣವನುಟ್ಟು ಸುಳಿದ ಅಜಗಣ್ಣನ ಯೋಗಕ್ಕೆ ಬೆಱಗಾದೆನು (ಶೂನ್ಯಸಂ. ೨೬-೦೪). **ಬಣ್ಣದೋರು** : ೨. ಯೋಗ್ಯತೆಯನ್ನು ವ್ಯಕ್ತಪಡಿಸು : ಇನ್ನಾಳಿದುದು ಸಹೃದಯಹೃದಯನಿಕಷದಲ್ಲಿ ಬಣ್ಣದೋರಬೇಕು (ಮೂರ್ತಿಕಾ. ೩-೦೯). [ಬಣ್ಣ + ತೋಱು]

**ಬಣ್ಣನಿದಿಗೆ?** (ನಾ). (?) : ಕುದುರೆಯ ಕೊಟ್ಟಲ್ಲಿ ಪಣ ೧ ಕೊಂಡಲಿ ಪಣ ಬಂಣನಿದಿಗೆಗೆ ಸೊ ೨ ಕಂಚಿಗನ ನಾಯಕಟಿಱಿಯಲಿ ಗದೆ ೩ ೩ ಕಯಿ ೩ (ಎಇ. IX (8). ದೊಡ್ಡಬ. ೩೦-೩೯ ; ಸು. 1260). [?]

**ಬಣ್ಣನೆ, ಬನ್ನಣೆ** (ನಾ). ೧. ವರ್ಣಿಸುವುದು ; ವರ್ಣನೆ : "ಬಣ್ಣನೆ—ವರ್ಣನಾ (ಶಬ್ದಕೋ. ೨೬); ಅಣ್ಣಕೇ ಕೀತಗಳ ಮಾತಿನ ಬಣ್ಣನೆಗಳಂತಿರಲಿ ಭೂಮಿಯ ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ (ಕೊಕರಾ. ೬ ೨-೨೦); ಬಣ್ಣನೆಯ ನುಡಿಜಾಣ್ಮೆಗವಸರವಲ್ಲು (ಜಾಜಾತ್ಕ. ೨೯-೬). ೨. ಸ್ತುತಿ; ಹೊಗಳಿಕೆ : 'ಬಣ್ಣಿಸಂ' ಪರಾ. ೩. ತೋರಿಕೆ; ಸೋಗು ; ನಟನೆ : ಬಣ್ಣನೆ [ನೆ]ಯ ಕುಸುರಿ ಮಾತುಗಳಣ್ಣಂದಿರ ತೆಱದ[ದಿ]ನನ್ನದಿನ್ನದೆನುತ್ತಾಂ ಬಣ್ಣಿಸಲಱಿಯೆಂ (ರಜೀಪಾ. ೦-೬೦). **ಬನ್ನಣೆ** : ೧. ರಾಯನೊಡವೆಯ ಸವಿಸವಿದು ಶುಂಠಾಯತ್ತಿಕೆ ನಿನಗಹುದು ಸಭೆಯಲಿ ಬಾಯ ಬನ್ನಣೆಯಧಿಕ ವೀರಾಳಾಪ ನಿನಗಹುದು (ಕುಮಾರ್ರಾ. ಹ. ೨೪೪); ವೀರಾಳಾಪದ ವಿಪುಳ ಪ್ರತಾಪದ ಬನ್ನಣೆಯ ಬಿನ್ನಣದ . . . ಹರಿಗೆಕಾಱರ ಮೊತ್ತದೊತ್ತಿನ ಭಯವಾರ್ತ್ಯದೊಳಿಂಬುಗೊಂಡು (ಹರ್ಷಿ. ೩-೩೩ ವ). 'ಬನ್ನಣಿಗಾಱ' ಪರಾ. ೩. ಪುರುಷರನು ಬೆಗಡುಗೊಳಿಸುವ ಬನ್ನಣೆಯ ನುಡಿಯ ಭಾವೆಯರು ಬರುತಿದ್ದರು (ಪಶಪೋ. ೨೪-೦೩). ೪. ಚೆಲುವು; ಸೌಂದರ್ಯ : 'ಬನ್ನಣೆಗಾರ್ತಿ' ಪರಾ. ೫. ವರ್ಣಲೇಪನ : ತನ್ನ ಚಿಂತೆಯದೊಂದು ದೈವದ ಗನ್ನಗತಕವದೆರಡು ಭಾವದ ಬನ್ನಣೆಯ ಬಗೆ ಮೂಱು ದೈವದ ಭಿನ್ನಿಮುಖ ನಾಲ್ಕು (ಕುಮಾ೯. ೩-೩); ಬಯಲ ಬನ್ನಣೆ ಸಂಸಾರಾಯುದ ಭಾವಿಸಿ ನೋಡಲು ಘೋರ (ಕಕೃಕ. ೩೬-೨). ೬. ಅಲಂಕಾರ; ಶೋಭೆ : ನನ್ನಿಯಿಂ ಭೂಕಾಂತೆಯೆನುತ ಲೋಷಧಿಯರಸ ಮನ್ನಿಸುತ ಪಸುರುಡಿಗೆಗೊಟ್ಟನೋಯೆನೆ ಕಳವ ಬನ್ನಣೆಯೊಳಾ ಪುರವ ಬಳಸಿರ್ದುದೇನೆಂಬೆ ಸಂಭ್ರಮ ವಿಜೃಂಭಣೆಯನು (ವೆಂಕಾಽ. ೦-೩-೩೯). [<ಸಂ. ವರ್ಣನ]

**ಬಣ್ಣನೆಗಾರ, ಬನ್ನಣೆಗಾಱ** (ನಾ). ವರ್ಣಿಸುವವನು; ಬಣ್ಣನೆ ಮಾಡುವವನು : 'ಬಣ್ಣನೆಗಾರ್ತಿ' ಪರಾ. **ಬನ್ನಣೆಗಾಱ** : ಬನ್ನಣೆಗಾಱರೊಳ್ಳುಂಚರಕ್ಕರಿಗರ್ ಕೆಳೆವಾರ್ವ ಮಕ್ಕಳುಂ ತನ್ನೊಡನಾಡೆ ನಾಡೆ ನಲಿಗುಂ ಚಿಕದೇವನೃಪಂ (ಚಳಿಪ. ೩-೦೦೦).

[ಬಣ್ಣನೆ + – ಗಾರ (< – ಕಾಱ) ]

**ಬಣ್ಣನೆಗಾರ್ತಿ, ಬನ್ನಣೆಗಾರ್ತಿ** (ನಾ). ೧. ಬಣ್ಣಿಸುವವಳು: "ವರ್ಣನೆ ಮಾಡುವವಳು" (ಶ್ರಿಶಿಣ). **ಬನ್ನಣೆಗಾರ್ತಿ** : ೨. ಚೆಲುವೆ; ಸುಂದರಿ : ಚೆನ್ನಾಗಿ ಲಾಲಿಸು ಚೆಲ್ವಡರಿದ ನಿನ್ನ ಕರ್ಣಾಂತರದಲಿ ಮೆಱೆವ ಹೊನ್ನ ಹೂವಿಗೆ ಪರಿಮಳ ಬರೆ ಪೇಳುವೆ ಬನ್ನಣೆಗಾರ್ತಿ ಚಿತ್ತೈಸು (ಕೋಜಕ. ೨೪-೨). [ಬಣ್ಣನೆಗಾರ + – ತಿ೧ (< – ಇತ್ತಿ)]

**ಬಣ್ಣನೆನುಡಿ, ಬನ್ನಣೆನುಡಿ** (ನಾ). ಹೊಗಳಿಕೆಯ ಮಾತು; "ವರ್ಣನೋಕ್ತಿ, ಸ್ತುತಿವಚನ" (ಶ್ರಿಶಿಣ). **ಬನ್ನಣೆನುಡಿ** : ಅಲ್ಲಿ ನೆರೆದಿರ್ದ ಪಾರ್ಥಿವರೆದೆ ತಳವೆಳಗಾಗೆ ರಾಯನ ಕುವರಿ ಬಳಿಸಲ್ವ ದಾದಿಯ ಬನ್ನಣೆ ನುಡಿಗೆ ಪೆರ್ಚಳಿಸುತ್ತಿದಿದಳಾ ಸಭೆಗೆ (ಕಚಿಕೃ. ೩-೦೨); ಪ್ರಾರ್ಥನೆಗಳಿಂಗ ರಾಯ್ಗಂ ರೂಢಿಗೆ ಬರ್ಪಂತುಟುಸಿರ್ದ ಬನ್ನಣೆನುಡಿಯೊಳ್ ಪ್ರೌಢಿಗೆ ಪಿಟ್ಟುತ್ತರಸಂ ಗಾಢೋತ್ಸುಕನಾದನಾತ್ಮಜಾಲೋಕನದೊಳ್ (ಚಳಿಪ. ೪-೫೪). [ಬಣ್ಣನೆ + ನುಡಿ೨]

**ಬಣ್ಣನೆಮಾತು, ಬನ್ನಣೆಮಾತು** (ನಾ). ಹೊಗಳಿಕೆಯ ಮಾತು ; ಕೊಂಡಾಟದ ನುಡಿ : [ಬಣ್ಣನೆ] [ಪಾಠಾಂ. ಬನ್ನಣೆ]ಮಾತಾಡುವ ಪರಿಹಾಸಗೈವ ಗಾಡಿಕಾತಿಯರು ಗಣನೆಯಿಲ್ಲದೆ ಜೋಡುಗೂಡಿರುವರು ಕೂರ್ಮೆಯೊಳು (ಹರಿ. ೦-೦೭). **ಬನ್ನಣೆಮಾತು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಬಣ್ಣನೆ + ಮಾತು೧]

**ಬಣ್ಣನೆವೆಱು** (ಕ್ರಿ). ಕೊಂಡಾಟವನ್ನು ಪಡೆ ; ಹೊಗಳಿಸಿಕೊಳ್ಳು : ಪತಿಪಾದಭಕ್ತೆಯರೆನಿಸಿ [ಬಣ್ಣನೆ]ವೆತ್ತ ಸತಿಯರೊಳಿದು ಸಮನಿಸುವ ಪತಿಶುಶ್ರೂಷೆಯ ಬಗೆಯನಱಿತು ಸಂಗತಿಗೈದದನು ಬಣ್ಣವೆನು (ಹರಿ. ೩-೩). [ಬಣ್ಣನೆ + ಪೆಱು೧]

**ಬಣ್ಣಬಂಟ ?** (ನಾ). (?) : ಅತ್ತಿಗೆಯೊಬ್ಬಳ ಕೂಡ್ಯಾಡಿ ಬಾಹೋದು ಕಂಡೆ ಸತ್ಯವ ಮಾಡುವೆ ಸಾರನೆಂಟ ಬಣ್ಣಬಂಟ ನೂಱೆಂಟ ಬಿಡು ಎನ್ನ ಗಂಟ (ಕವಕ. ೩೩-೨). [?]

**ಬಣ್ಣಬಣ್ಣಿಗೆ** 'ಬಣ್ಣವಣ್ಣಿಗೆ' ನೋ.

**ಬಣ್ಣಬಾಸಿಗ** 'ಬಣ್ಣವಾಸಿಗ' ನೋ.

**ಬಣ್ಣಮೀನ್** (ನಾ). ಒಂದು ಬಗೆಯ ಬಣ್ಣದ ಮೀನು : ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂಬುಗದ ಬರ್ಚಿ ಬೀಸಿದಾಗಳ್ . . . ಪಂದಿಮೀನ್ ಪೆಱಿಮೀನ್ ಬಗ್ಗಡೆ ಬಣ್ಣಮೀನೆನಿಪವೆಲ್ಲಂ ಬೀಳ್ದುವಾ ತಾಣದೊಳ್ (ರಾಜಶೇ. ೩-೦೦೩). [ಬಣ್ಣ + ಮೀನ್೧]

**ಬಣ್ಣವಟ್ಟಿಗೆ** (ನಾ). (ಕದಕ್ಕೆ ಹಾಕುವ) ಕೆತ್ತನೆ ಕೆಲಸ ಮಾಡಿದ ಅಡ್ಡಪಟ್ಟಿ : ಮಣಿಸತ್ತಿಗೆಯು ಮೊಗಮಂಟಪದ ಬಣ್ಣವಟ್ಟಿಗೆಯ ಅವಳಿಗುಟಿಯು . . . ಸಿಂಗರದೊಂದು ದೇಗುಲಂ ಕಣ್ಗೆಡ್ಡಮಾಗಿ ರಂಜಿಸಿಂ (ರಾಜಶೇ. ೩೪-೨೪). [ದೇ. ? ತುಳು. ಬಣ್ಣಾಟಿಗೆ, ಬಣ್ಣಾಟಿಗ]

**ಬಣ್ಣವಡೆ** 'ಬಣ್ಣಂಬಡೆ' ನೋ.

**ಬಣ್ಣವಣ್ಣಿಗೆ, ಬಣ್ಣಬಣ್ಣಿಗೆ, ಬಣ್ಣಾಬಣ್ಣಿಕೆ, ಬಣ್ಣಾವಣ್ಣಿಗೆ** (ನಾ). ೧. ಬಣ್ಣ ಬಣ್ಣಗಳಿಂದ ಕೂಡಿದುದು; ನಾನಾವರ್ಣಗಳಿಂದ ಕೂಡಿದುದು : ಸೂಱಸೂಱದೇಂ ಸವಿದುವೊ ಬಣ್ಣವಣ್ಣಿಗೆಯ ಪೂಗಳ ಸೌರಭಮಂ ಮದಾಳಿಗಳ್ (ಅಧ್ಯ. ೦೦-೦೨೬); ಬಣ್ಣವುರಂ ತೀವಿದಂತೆ ಬೆಡಂಗುವಡೆದ ಬಣ್ಣವಣ್ಣಿಗೆಯ ನೀರ್ವೂಗಳ ರಜಂಗಳುಮನೊಳ ದೊಂಡಿನ ಪಾಲ್ಗಳುಮಂ ಪೀರ್ದು (ಕಾದಂಬ. ೩೩೬); ಗಗನತಳಂಗಳೊಳ್ ಖಚಿತರತ್ನಕದಂಬದ ಕಾಂತಿ ಬಣ್ಣವಣ್ಣಿಗೆಯ ಮುಗಿಲ್ಗಳಂ ಕೆದಱೆ (ಅಸಂಕ. ೯-೬೩). ೨. ಬಣ್ಣ ಬಳಿಯುವುದು; ಚಿತ್ರಣಕಾರ್ಯ: ಪಳಿಕಿನ

ಪಲಗೆಯುಂಮಂ ಬಣ್ಣವಣ್ಣಿಗೆಯು ಬಟ್ಟಗೆಗಳಂ ತಾನೆ ತಂದು ಕೊಟ್ಟು (೬೦ಣಕ. ೬-೮೪ ಪ): ಅವನ ಬಣ್ಣವಣ್ಣಿಗೆಯು ಸ್ಪರ್ಶ ಸ್ಪರ್ಶಕ್ಕೊ ಚಿತ್ರದ ರೂಪು ಕಣ್ದೆರೆಯುವಂತಿತ್ತು (೩೦ಣಕ. ೨೪). ೩. ಅನೇಕ ವಿಧವಾದುದು ; ಬಗೆಬಗೆಯಾದುದು : ಬೆಣ್ಣೆಗಳ್ಳನ ನಟ್ಟಿ ಹಣ್ಣ ಶಿವವಿರಹಿತಂ ಬಣ್ಣವಣ್ಣಿಗೆಯು ದೈವವೆ ನೆರಪಲು (ಶಾಪಂಕ. ೨-೬೬). ೪. ಹೊಗಳಿಕೆ ; ಸ್ತುತಿ : ಕೊಂಡಾಟ : ಪರಿಪರಿಯ ಬಣ್ಣವಣ್ಣಿಗೆಗಳಿಂ ಜಪಿಸುತುತ್ತರದಿಙ್ಮುಖಿಕೆ ನಡೆವುತೆ (ಶಬ್ದರಾ. ೬-೩೪). ೫. ಸೊಗಸು ; ಅಂದ : ಬಣ್ಣಸರವ ಪಸರವನಿಕ್ಕಿ ದಂತೆಲ್ಲ ಬಣ್ಣವಣ್ಣಿಗೆಯಲ್ಲಿ ಕುಳಿತು ಸಣ್ಣದನಿಯೆಸೆಯೆ ಬಸದಿ ತುಂಬಿರೆ ಕೂರ್ತು ಬಣ್ಣಿಸಿದರು ಪುರುಜನಸ (ಭರತ. ೦೮-೬೨). ೬. ಬೆಡಗಿನ ವರ್ತನೆ ; ಬಣ್ಣಾಚಾರ ; ಬಿನ್ನಾಣದ ನಡವಳಿಕೆ : ಹೆಚ್ಚಿದುದು ನಿನ್ನ ರಾಣುವೆಯುದಱನವರೊಳಗೆ ಮಚ್ಚರವ ಮಾಡಬೇಡೆಂಬುದನೆ ಬಿಟ್ಟು ನಿನ್ನಿಚ್ಚೆಗತನದಿ ಬಣ್ಣವಣ್ಣಿಗೆಯು ಮಾತನಾಡುವುದು ನನಗಾದುದಿಲ್ಲ (ಸದ್ಭಕ್ತ ೦-೯೩). **ಬಣ್ಣಬಣ್ಣಿಗೆ** : ೧. ಕಣ್ಣಪ್ಪನಂ ತಂದು ಗಣಪದವಿಯಂ ಕೊಟ್ಟು ಬಣ್ಣಬಣ್ಣಿಗೆಯು ಪೊಸಬೀಳುಡೆಗಳಂ ಕೊಟ್ಟು (ಕಣ್ಣಕ. ಹೀ. ೦೩೦-೦೪). **ಬಣ್ಣಾಬಣ್ಣಿಕೆ** : ೩. ಹಕ್ಕಿ ಪುಕ್ಕಗಳಿಂದ ನಿರ್ಮಿತವಾದ ಬಣ್ಣಾಬಣ್ಣಿಕೆಯಾದ ಅವರ ವೇಷ . . . ಅವರ ಆನಂದವನ್ನು ಸೂಚಿಸುತ್ತವೆ (ಶಾರದ. ೩೬೪). **ಬಣ್ಣಾವಣ್ಣಿಗೆ** : ೧. ಬಣ್ಣಾವಣ್ಣಿಗೆಯು ದುಃಖವನೆಯ್ದಿ ಕುದಿದೇದು . . . ಭವರೋಗಶರಧಿಯಂ ದಾಂಟ ನೀಗುವೆವೆಂದು ನೆನೆವುತಿರಲು (ಶಾಪಂಕ. ೪-೬೨ ರಗಳೆ). [ಬಣ್ಣ + ಬಣ್ಣಿಗೆ$_1$]

**ಬಣ್ಣವಳಿ** (ಕ್ರಿ). ಸೊಗಸಂ ಕೆಡು ; ಅಂದಗೆಡು : ಪಣ್ಣ ಬಾಯಿನವಂ ಬಣ್ಣವಳಿಯದೆ ಕೊಟ್ಟು ಚೂತವಲ್ಲಭನೆಂಬ ಪೆಸರಿಟ್ಟು (೧೧ಳ. ೨-೬೦ ಪ). [ಬಣ್ಣ + ಅಳಿ$_1$ (< ಅೞ್$_1$)]

**ಬಣ್ಣವಳ್ಗು** (ಕ್ರಿ). ಕಾಂತಿಗುಂದು ; ಕಳಾಹೀನವಾಗು : ಮುದ್ದಾ ಜಮ್ಮಣ್ಣ :— (ಬಣ್ಣವಳ್ಗಿ, ತುಟಿಗಚ್ಚಿ . . . ಕೀಲ್ಗದವನ್ನೆಳೆದು ಕಿರುಗಂಡಿಗೆ ನಿಲಿಸಿಕೊಳ್ಳುವಳು). (ಬಟ್ಟಿಕ. ೬೬-೦೦). [ಬಣ್ಣ + ಅಳ್ಗು (<ಅಟ್ಟು)]

**ಬಣ್ಣಪಾಡು** (ನಾ). ವರ್ಣನೆಯಿಂದ ಕೂಡಿದ ಸ್ತುತಿರೂಪವಾದ ಹಾಡು : ವೀಣೆದಳೆದು ಬಣ್ಣಪಾಡುಗಳಂ ಬಾಜಿಪೋಜೆಯೊಳೊರ್ಮೆ ನುಣ್ಣುರವೆತ್ತಿ ಪಾಡುವ ಬಿಡಯುದೊಳೊರ್ವ . . . ಬರ್ದಿಲನಾಡೊಳ್ ಬಾಡ್ದಂ (ಶಕಟಂ. ೩೩-೨೦) ; ದೊಡ್ಡಮ್ಮ . . . ಬಣ್ಣಪಾಡಿನ ರಸಗೇಯದ ರಾಗಮಾಲಿಕೆಯನ್ನು ಸವಿಗರೆಯುವಳು (ಪುಂಕ್ತಸ. ೩೬-೧೪). 'ಬಣ್ಣಗಬ್ಬ' ಪರಾ. [ಬಣ್ಣ + ಪಾಡು$_2$]

**ಬಣ್ಣಪಾಡುಗೆಯ್** (ಕ್ರಿ.) ವರ್ಣನೆಯಿಂದ ಕೂಡಿದ ಸ್ತುತಿರೂಪವಾದ ಹಾಡನ್ನು ರಚಿಸು : ಆ ವಾದ್ಯವಿದ್ಯಾಧಿಕರ್ . . . ಕಾಮತಂತ್ರದ ವೈಶಿಕಪ್ರಕರಣಮಂ ಬಣ್ಣಪಾಡುಗೆಯ್ದು ಪಾಡಿದರ್ (ಶಕಟ. ೬-೦೩೪ ಪ). [ಬಣ್ಣಪಾಡು + ಕೆಯ್$_1$]

**ಬಣ್ಣಮಾತು** (ನಾ). ತೋರಿಕೆಯ ನುಡಿ ; ಬಣ್ಣಾಚಾರ ; ಸೋಗಿನ ಮಾತು : ಕಣ್ಣೊಳು ನೋಡಿ ಮನದೊಳು ಮಚ್ಚರವನು ಹಣ್ಣುವ ರಾಯರ ಗಂಡ ಬಣ್ಣಮಾತಲ್ಲ ನಿನ್ನಾಣೆ ಮೂಲೋಕದ ಕಣ್ಣುದಯಿಸಿದೆ ನೋಡೇಳು (ಕುರಾಸಾಂ. ೨೪-೩೩) ; ನಿನ್ನಾ ಬಣ್ಣಮಾತಿಗೆ ಮಾಱುಪೋದೆಂ (ರಾಸೂತ್ರ. ೦೬೩-೨). [ಬಣ್ಣ + ಮಾತು$_1$]

**ಬಣ್ಣಪಾವುಗೆ** (ನಾ). ಬಣ್ಣದ ಹಾವುಗೆ ; ವರ್ಣಮಯವಾದ ಪಾದರಕ್ಷೆ : ಆ ವೇಳೆಯೊಳ್ ಮೆಟ್ಟಿದ ಬಣ್ಣಪಾವುಗೆಯ . . . ಬೆಡಂಗಿನ ಬಾಲೆಯೊರ್ವಳ್ . . . ಪೊಂಬಟ್ಟಲನೆತ್ತಿ ಬರುತುಮಿರ್ದಳ್ (ರಾಪಾಸೂತ್ರ. ೪೪-೦೩). [ಬಣ್ಣ + ಪಾವುಗೆ]

**ಬಣ್ಣಬಾಸಿಗ, ಬಣ್ಣಬಾಸಿಗೆ** (ನಾ). ೧. ಬಣ್ಣಬಣ್ಣದ ಹೂವುಗಳ ದಂಡೆ, —ಮಾಲೆ : ನಮೇರು ಮಂದಾರ ಪಾರಿಜಾತದ ಬಣ್ಣಬಾಸಿಗಂಗಳುಂ . . . ಬಿಡುಮುತ್ತಿನ ಸೇಸೆಗಳುಂ ಬೆರಸು ಮಹತ್ತರದೇವಿಯರ್ ಬಂದು ಪೊಡೆವಟ್ಟು (ಆಪು. ೨-೬೬ ಪ) ; ಆದಿಮೂರ್ತಿಯ ವಕುಲದ . . . ಕುಂದದ ಬಣ್ಣಬಾಸಿಗಂಗಳನುದಾತ್ತಮಾಲ್ಯಾಂಗಮಹಿರುಹಂ ಕುಡುತಿರ್ಕುಂ (ಶಾಂತಿಪು. ೬-೦೦೨); ಸುರಚಾಪಂಗಳನಿಂದ್ರಂ ಮುರಿದಿಟ್ಟಂತಭ್ರಪಥದೊಳೆಳಗಳ ಬಳಗಂ ಬೆರಸೆಸೆವ ಬಣ್ಣಬಾಸಿಗವೆರಡಂ ಚಲದಮಲಕಮಳಲೋಚನೆ ಕಂಡಳ್ (ಸುಕುಮಾ. ೬-೩೯). **ಬಣ್ಣಬಾಸಿಗೆ** : ೨. ಮದುಮಕ್ಕಳ ಹಣೆಗೆ ಕಟ್ಟುವ (ಬಣ್ಣದ ಕಾಗದ, ಬೆಂಡು ಮುಂತಾದುವುಗಳಿಂದ ಮಾಡಿದ) ಒಂದು ಬಗೆಯ ಅಲಂಕಾರ : ಕರುಳ ತೊಂಡಲು ಖಂಡದ ಬಣ್ಣಬಾಸಿಗ ನರದ ಹಂಜರ ಚಪ್ಪರದಲಿ ನೆರೆದು ಶಾಕಿನಿಯರು ಮದುವೆಯ ಮಾಡುತ ಮೆಱೆದರು (ಕಂಸಾ. ೦೩-೬೩). [ಬಣ್ಣ + ಬಾಸಿಗ]

**ಬಣ್ಣವಿಕ್ಕು** (ಕ್ರಿ). ಬೂಟಾಟಿಕೆಯ ಮಾತನ್ನಾಡು : ಅಣ್ಣನಲ್ಲೆ ಮಂಗಾತ ನೊಡೆಯನ್ನೆ ನೀನಿಂತು ಬಣ್ಣವಿಕ್ಕದಿರು ಸಾಕು (ಭರತ. ೪೯-೨೩). [ಬಣ್ಣ + ಇಕ್ಕು]

**ಬಣ್ಣವಿಡು** (ಕ್ರಿ). ೧. ಬಣ್ಣವನ್ನು ಲೇಪಿಸು ; ರಂಗು ಹಚ್ಚು : ಕರುವಿಟ್ಟಂ ಕಾಮದೇವಂ ರತಿಯತಿಶಯದಿಂ ಬಣ್ಣವಿಟ್ಟಳ್ . . . ಎನಲ್ಕಾಂತೆ ಕಣ್ಗೆಡ್ಡಮಾದಳ್ (೬೦ಣಕ. ೩-೯೬) ; ತದ್ವಸಂತಂ ಪದೆಪಿಂದಂ ಬಣ್ಣವಿಟ್ಟಾಂಗಜನೃಪತಿಯ ಗೂಡಾರಮೋ ಶಾನಿದೆಂಬಂದದೆ . . . ಇರ್ದತ್ತು ಚೂತಂ (ಕುಸುಮಾ. ೯-೯೩). ೨. ಚಿತ್ರವನ್ನು ರಚಿಸು : ದೊಡ್ಡಮ್ಮ :—(ಬಣ್ಣವಿಡುತ್ತ ಮೆಲ್ಲಮೆಲ್ಲಗೆ ಹಾಡಿಕೊಳ್ಳಲಾರಂಭಿಸುವಳು) (ಪುಂಕ್ತಸ. ೩೦-೦೩). ೩. ಹೊಗಳು ; ಪ್ರಶಂಸಿಸು : ಮರುಳೆ ನೀ ಬಲು ಬಣ್ಣವಿಡೆ ಖದ್ಯೋತ ರವಿಯಹುದೆ (ಕೌಶಿರಾ. ೨೦-೨೦). ೪. ಮೆರುಗು ಕೊಡು ; ಒಪ್ಪವಿಡು ; ಅಂದಗೊಳಿಸು : ಭಾವದ ಬಯಲಿಂಗೆ ಬಣ್ಣವಿಟ್ಟನೆಮ್ಮ ಬಸವಯ್ಯನು (ಶೀಲವ. ಕ. ೪-೪) ; ಕೌರವನು . . . ನೆನೆದ ಮತವನು . . . ಅನುಜಮತದಲಿ ವಿಸ್ತರಿಸಿ ಮೈದುನನ ನುಡಿಯಲಿ ಬಣ್ಣವಿಟ್ಟನು ಜನಪನಪಕೀರ್ತ್ಯಂಗನೆಗೆ ತೊಡಿಸಿದನು ಭೂಷಣವ (ಕುವ್ಯಾಉ. ೨-೨೨); ಅಗಣಿತಮತಿಗಳಾದವರೀ ಕೃತಿಯನು ಮಿಗೆ ತಿರ್ದಿ ಬಣ್ಣವಿಡುವುದು (೬೦ಜಕ. ೦-೦೦೬). [ಬಣ್ಣ + ಇಡು$_1$]

**ಬಣ್ಣವಿಳಿ** (ಕ್ರಿ). ಕಾಂತಿಹೀನವಾಗು; ಕಳೆಗುಂದು : ಕರುವಿಯನ್ :— (ಬಣ್ಣವಿಳಿದು, ತುಟಿಗಚ್ಚಿಕೊಂಡು, ಹೊರಡುವನು) (ಪುಂಕ್ತಸ. ೨೪-೦೬). [ಬಣ್ಣ + ಇಳಿ$_1$ (< ಇೞಿ)]

**ಬಣ್ಣವುರ** (ನಾ). ೧. ವಿಧವಿಧವಾದ ಬಣ್ಣಗಳಿಂದ ಕೂಡಿದ ವಸ್ತ್ರ, ಚಿತ್ರ ಮುಂತಾದುವು : "ಬಣ್ಣವುರಮೆಂದು ವರ್ಣಪೂರಂ" (ಕಶಪ. ೬೩-೪೦೬); ಬಣ್ಣವುರಂ ತೀವಿದಂತೆ ಬೆಡಂಗುವಡೆವ ಬಣ್ಣವಣ್ಣಿಗೆಯ ನೀರ್ವೂಗಳ ರಜಂಗಳುಮನೊಳದೊಂ[ದಿಂ]ದಿನ ಪಾಲ್ಗಳುಮಂ ಪೀರ್ದು (ಕಾದಂಬ. ೩೨೬); ಅಲಂಕೃತವಾದ ಬಣ್ಣವುರದ ಗೋಡೆಗಳನ್ನೂ . . . ತುಂಗರಾಯನು ಪರೀಕ್ಷಿಸುತ್ತಿರುವನು (ಚಟ್ಟಿಕ. ೪೯-೩). ೨. ಸಿಂಧೂರ, ಬುಕ್ಕಿಟ್ಟು ಮುಂತಾದ ಬಣ್ಣದ ಹಾಗೂ ಸುಗಂಧದ ಪುಡಿ : ಸಿರಿಗನ್ನಡಿ ಬಣ್ಣವುರು ಕರಿ[ಯೆ]ಳ್ ಬಳಿಯರಳೆ [ಮ]ಧು ಮೊಸರ್ ನೆ[ಲ್ಲಾ]ಜೋತ್ಕರಮೆಂದಶೇಷಮಂಗಳಪರಿಕರಮೆಸೆದುದು ವಿವಾಹವೇದಿಯ ಕೆಲದೊಳ್ (ವರ್ಧಮಾ. ೩-೮೩); ಗೋರೋಚನಂ ಲಾಜೆ ಬಣ್ಣವುರಂ . . . ಕಾಶ್ಮೀರಮೆಂಬಿವಱಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುವು (ಜಗಂ. ೦೦-೪೬); ಲಾಜೆಯಂ ಸಮೆದ ಬಣ್ಣವುರಂಗಳನೊಪ್ಪೆ ಮಾಡ್ದಿ ನಾನಾವಿಧಮಂಗಳಾಚರಣದಕ್ಷೆಯರಿಂ . . . ತೀವಿ (ವರ್ಧಪು. ೬-೩). ೩. ಬಣ್ಣವನ್ನು ತುಂಬುವುದು ; ರಂಗು ಹಾಕುವುದು : ಕವಿ

ಸುಟ್ಟುಂಬೆಯಿಂದೆ ಸತ್ಕಂ ತೋರ್ಪನಾ ಅವಸರಕೆ ಸೌನ್ದರ್ಯತತ್ತ್ವಮವ ತರಿಸಿಕೊಳ್ವವನೊಲ್ಲಾರ್ಪ ರೂಪಾರಂ ಮೆಯ್ಸಿರಿ ಬಣ್ಣವುರಂ ಬಾಳ್ಕೆಗಳ ನೊಪ್ಪಿಸಿಯುದಂ ಕಾಣ್ಕೆ ಮಾಳ್ಕುಂ (ಸಂಸಕ. ೧೦-೬೯). ೪. ರಂಗವಲ್ಲಿ; ಹಸೆ : ಭವಲಾಲಾಟವಿಲೋಚನಾಗ್ನಿಶಿಖೆಯಿಂ ಬೆಂದಲ್ಕಿ ಮತ್ತಂ ಮನೋಭವನೆಟ್ಟುತ್ತೊಡೆ ಕಾಮಕಾಂತೆ ಬಟಿಯಂ ತನ್ನಿಚ್ಚೆಯಿಂ ಮೆಚ್ಚಿ ಬಣ್ಣವುರಂ ತೀವಿದ ಮಾಟ್ಕೆಯಾಯ್ತು ನವಿಲಿಂ ಕುಂದಂಗಳಿಂದಿಂದ್ರಗೋಪವಿಳಾಸಂಗಳಿ ನಾಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ (ಕಂಕಥಾ. ೬-೨೪); ☞ "ಬಣ್ಣವುರಂ ತೀವಿದ = ವರ್ಣಪೂರ ಎಂಬ ವಸ್ತ್ರದಿಂದ ಮುಚ್ಚಿದ . . . ಬಣ್ಣವುರ < (ಸಂ) ವರ್ಣಪೂರ ಎನ್ನುತ್ತಾನೆ ಕೇಶಿರಾಜ; ಅರ್ಥ ಅನಿರ್ದಿಷ್ಟ; ಬಣ್ಣಬಣ್ಣದ ಜಮಖಾನೆ, ನೆಲಕ್ಕೆ ಹಾಸುವ ಬಟ್ಟೆ ಎಂಬರ್ಥವಿರಬಹುದು" (ಕಂಕಥಾ. ೨೪೬); ಬಳಭಿಚ್ಛಾಪಲತಾವಳಿ ಬಳಸಿದ ಬೆಳ್ಮುಗಿಲ ಮುಟಿಯಿಂದೆನೆ ಬಣ್ಣವುರಂ ಬಳಸಿರ್ದೊಡೆ ಸೊಗಯಿಸಿದುದು ವಳಿಕಿನ ಪಟ್ಟವಣೆ ವೇದಿಕಾಧಿತ್ಯಕದೊಳ್ (ಚಂದ್ರಪ್ರ. ೬-೩೨); ಪೊಸಮುತ್ತಿನ ಬಣ್ಣವುರಂ ಮನೆಮನೆದಪ್ಪದೆ ಶೋಭಿಸಿತು (ಜಯುಕಾ. ೨-೩೯).

[ < ಸಂ. ವರ್ಣಪೂರ ]

**ಬಣ್ಣವೆರು** (ಕ್ರಿ). (ನಾಚಿಕೆಯಿಂದ) ಕೆಂಪಾಗು : ತಿಮ್ಮಾಜಮ್ಮಣ್ಣಿ :— (ಬಣ್ಣವೆತ್ತು, ಹಿಂದಣ್ಗೆ ಹುದುಗುವಳು) (ಪಟ್ಟಿಅ. ೦೦೦-೦೦).

[ ಬಣ್ಣ+ಪೆರು₁ ( < ಪೆಱು₁) ]

**ಬಣ್ಣವೆರ್ಚು** (ಕ್ರಿ). ಕಾಂತಿಯುಂ ಹೆಚ್ಚಾಗು; ಥಳಥಳಿಸು : ಪಾಂಡ್ಯನಾರಿಯರ ಮೆಯ್ಯ ಪಚ್ಚದ ಪೊಸವೊಗರಿಂ ಬಣ್ಣವೆರ್ಚಿ ಮಿಱುಗುವ ಸೌಧಂಗಳಿಂ ರಂಜಿಸಿ . . . ತೋರ್ಪ ಕಾಂಚೀಪುರಮುಂಟು (ರಾಜಾಕ. ೬೯-೦೪). [ಬಣ್ಣ + ಪೆರ್ಚು₁]

**ಬಣ್ಣವೇರು** 'ಬಣ್ಣವೇಱು' ನೋ.

**ಬಣ್ಣವೇಱಿಸು** (ಕ್ರಿ). ಶೋಭಿಸುವಂತೆ ಮಾಡು; ಕಳೆಯೇರುವಂತೆ ಮಾಡು : ಬಣ್ಣವೇಱಿಪುಕ್ಕವದ ಪೆರ್ಕಳಮಂ ನಿಟ್ಟಿಸಾ (ಚಿಕ್ಕಗೋ. ೮-೨೦).

[ ಬಣ್ಣವೇಱು + – ಇಸು₃ ]

**ಬಣ್ಣವೇಱು**, ಬಣ್ಣವೇರು (ಕ್ರಿ). ೧. ರಂಗೇರು; ಬಣ್ಣಬರು. ೨. ಶೋಭಿಸು; ಸೊಗಸಾಗು : ಭಸಿತಕ್ಕೆ ಬಣ್ಣವೇಱುವಂತೆ ರುದ್ರಾಕ್ಷಿಗೆ ಸೌಂದರ್ಯಂ ಸಾರುವಂತೆ . . . ಬಾಲ್ಯವಿಮೋಚನವಾಗಿ ಯೌವನ ವಾಲಿಂಗಿಸೆ (ಬಸವ. ೨-೦೦); ಮಿಗೆ ಬಾಸೆ ಬಣ್ಣವೇಱಿತು ಸೊಗಯಿಸಿದುದು ಮೊಗರಸಂ . . . ಮೇನಕೆಯಾ (ಗಂಗಿ. ೩-೩೯). ೩. (ಅಲಂ) ಸಡಗರದಿಂದ ಕೂಡಿರು; ಸಂಭ್ರಮಿಸು : ಕೆಲದೊಳಿರ್ಪಳು ಗೆಲ್ಲಗೊಂಬಳು ನೇಹವ ಬಲಿವಳು ಬಣ್ಣವೇಱುವಳು (ಹರಿಶ. ೬-೯೬). ೪. ಹೆಚ್ಚಾಗು; ಅಧಿಕಗೊಳ್ಳು : ಸತಿಯರೀ ಕೃತಿಯನಾಲಿಸಿದೊಡಂದಂದಿಗೆ ಪತಿಭಕ್ತಿ ಬಣ್ಣವೇಱುವುದು (ಹರಿಬ. ೦-೩೨). ಬಣ್ಣವೇರು : ೧. ಆ ಮಾತನ್ನು ಕೇಳಿದ ಕೂಡಲೆ ಅವನ ಮುಖ ಬಣ್ಣವೇರಿತು (ರೂಢಿ).

[ ಬಣ್ಣ + ಏಱು₁ (< ಏಱ್₁) ]

**ಬಣ್ಣವೋಡು** (ಕ್ರಿ). ಕಳೆಗುಂದು; ಕಾಂತಿಯನ್ನು ಕಳೆದುಕೊಳ್ಳು : ನೇಸಱುರಿವೂರಿಯಿಂದೆ ಸುಟ್ಟು ಕರಿಮುರಿಯೋಗಿ ಚೆನ್ನಮಯರ್ದೊಗಲ್ ನಿನತು ಬಣ್ಣವೋಡುವುದು (ಜಗನ್ನಾ. ೨-೨೬). [ಬಣ್ಣ+ಓಡು₁]

**ಬಣ್ಣಸರ₁** (ನಾ). ೧. ಬಣ್ಣಬಣ್ಣದ ಮಣಿ, ಹೂವು ಮುಂತಾದುವುಗಳ ಮಾಲೆ, – ಹಾರ : "ಬಣ್ಣಸರ—ವರ್ಣಸರ = ಬಣ್ಣದ ಮಾಲೆ" (ಶಬ್ದಕೋ. ೨೮); ಅಂದುಗೆ ಕಂಕಣಂ ಸರಿಗೆ ಬಣ್ಣಸರಂ ಕಟಿಸೂತ್ರಮೆಂದಿವೊಂದೊಂದಱೊಳೊಂದ[ವಿಂ]ದೆಯೆನೆ ತೊಟ್ಟು (ಪರ್ವಪು. ೩-೬೮); ಸುಗುಮಬಂಧದ ಬಣ್ಣಸರದೋಳಿಗಳ ಕಂಬದ ವಜ್ರಮಯಧಾರೆಗಳಲೆಸೆದುದು ಭದ್ರಮಂಟಪವಮಲವರ್ಣಮಯದ (ಲಿಬ್ಬಾಕ. ೦೨-೦೨); ಸಣ್ಣಪವಳ ಕೈಕಟ್ಟಿನ ಪವಳಗಳ್ ಬಣ್ಣಸರದ ಜಾತಿಪವಳ ತಿಣ್ಣವಡೆದ ಪವಳದ ಪಸರಗಳಾಗ ಕಣ್ಣ ಕೊರ್ಕರಿಸುತೊಪ್ಪಿದುವು (ಕಂಪು. ೬-೬೬). ೨. ರಂಗಿನ ಬಾಣ, — ಸರಳು : ವರ್ಣಶರ—ಬಣ್ಣಸರ (ಕಮುದ. ೨೪೯ ಕೃಯೋ). ☞ ಸಂಸ್ಕೃತದ 'ಶರ' ಮತ್ತು 'ಸರ' ಎಂಬ ಎರಡು ಶಬ್ದಗಳಿಗೂ 'ಬಾಣ' ಎಂಬರ್ಥವಿದೆ.

[< ಸಂ. ವರ್ಣಸರ. / ತೆಲು. ಬಣ್ಣಸರ, ಬನ್ನಸರ, ಬನ್ನಸರಿ]

**ಬಣ್ಣಸರ₂** (ನಾ). ೧. [ಸಂಗೀತ] ರಂಜನೆಯಿಂದ ಕೂಡಿದ ಹಾಡು; ಸುಶ್ರಾವ್ಯವಾದ ಗೀತ : ಬಾಯ್ದೆಱೆಯದೆ ಬಣ್ಣಸರಮನುಚ್ಚರಿಸುವ ನೆಱೆವೆಱೆವೊಗದಬಳೆಯ ನುಣ್ಗೊರಲತಿರಂಜನೆವಡೆಯಿತ್ತು (ಜಯುಕಾ. ೬-೩೦); ದೇಗುಲಗಳೊಳಗೆ ಮೊಳಗುವ ಸಮಸ್ತವಾದ್ಯಧ್ವನಿಯಕಾರವಂಗಳವುವ ಸಂಗೀತಕಾಱರ ಬಣ್ಣಸರಗಳಾ ಪೊಳಲೊಳೆಡೆವಿಡದೆ ಘೂರ್ಣಿಸಿದುವು (ಸಮ್ಯಕ್ತ್ವ. ೦೨-೪). ೨. [ನಾಟ್ಯ] ವರ್ಣದ ಸ್ವರಗಳ ಲಯಕ್ಕನುಗುಣವಾದ ನರ್ತನ (?) : ಪೆಸರಱಿಯದಮರತೂರ್ಯಪ್ರಸರಂಗಳ ಜತಿಗೆ ತೊಡರದಿನಿಸಱಲದೆ ಬಣ್ಣಸರಂಗೊಂಡಂತಿರೆ ಬಣ್ಣಸರಂ ಸೊಗಯಿಸಿದುದೇನವಳ ಪರಿಣತೆಯೋ (ಅಂಪು. ೯-೪೦); ಎಸಟ ಮೊನೆ ಕೊರಿತಡಿಗೆಂಬ ಸಂಕೆಯಿಂ ಮೆಟ್ಟದಂತೆ ಮುಟ್ಟದೆ ಕುಣಿದಾಗಸಮೆಂಬ ರಂಗದೊಳ್ ಬಣ್ಣಸರಮನಾಡಿದರನೇಕರಮರಾಂಗನೆಯರ್ (ಶಾಂತಿಪು. ೦೦-೦೬); ಮೈ ಪೊಳೆವ ಮಿಂಚಂ ಪೋಲೆ ಚೆಲ್ವಾಗಿ ಬಣ್ಣಸರಂ ಕಾಟ್ಟುರಮೇಱಿ ಕಾಕಳಿ ನಭೋರಂಗಾಗ್ರದೊಳ್ ನಿಚ್ಚಲಾಡುಸುವಂ ಪಾಡಿಸುವಂ ವಿಯಚ್ಚರಿಯರಂ ವಾಗ್ಗೇಯವಿದ್ಯಾಧರಂ (ಅರ್ಥಸಂ. ೨-೯೬). 'ಜತಿಸ್ವರ' ಪರಾ.

[<ಸಂ. ವರ್ಣಸ್ವರ]

**ಬಣ್ಣಸರಂಗೊಳ್** (ಕ್ರಿ). ಬಣ್ಣದ ಮಣಿಸರವನ್ನು ತೆಗೆದುಕೊಳ್ಳು : ಪೆಸರಱಿಯದಮರತೂರ್ಯಪ್ರಸರಂಗಳ ಜತಿಗೆ ತೊಡರದಿನಿಸಱಲದೆ ಬಣ್ಣಸರಂಗೊಂಡಂತಿರೆ ಬಣ್ಣಸರಂ ಸೊಗಯಿಸಿದುದೇನವಳ ಪರಿಣತೆಯೋ (ಅಂಪು. ೯-೪೦). [ಬಣ್ಣಸರ₁+ಕೊಳ್₁]

**ಬಣ್ಣಾಂತರ** (ನಾ). [ಗಣಿತ] ಹದಿನೆಂಟು ಬಗೆಯ ಗುಣಿಸುವ ಲೆಕ್ಕಗಳಲ್ಲಿ ಒಂದು : ಅಡಿಕೆ ಸೂತ್ರಾ ಬಣ್ಣಾಂತರಾ ಇವು ಮೊದಲಾದ ಲೆಕ್ಕಾಚಾರಗಳು ಗುಣಿಸಿ ಭಾಗಿಸುವ ವಿವರ (ಭಾಸ್ಕರ. ೦-೪); ಮುಗ್ಗಿಗಣಿತ . . . ಕ್ಷೇತ್ರಗಣಿತಮಂಗುಳಿಅಳತೆ ರಾಜನೀತಿ ಬಣ್ಣಾಂತರ ಪದ್ಮನಾಭ . . . ಉತ್ಕಳಿತಗುಣಿತವುಂ ಅಷ್ಟಾದಶಗುಣಿತಂಗಳು (ಕ್ಷೇತ್ರಗ. ೨-೪).

[?. / ತಮಿ.ವಣ್ಣಮ್ = ಗುಣಿಸುವ ಸಂಖ್ಯೆ]

**ಬಣ್ಣಾಚಾರ** (ನಾ). ಸೋಗಿನ ನಡೆವಳಿಕೆ; ತೋರಿಕೆಯ ವ್ಯವಹಾರ : ಪರಿಚಿತರು ಯಾರೂ ಅವನ ಬಣ್ಣಾಚಾರಕ್ಕೆ ಮರುಳಾಗುವುದಿಲ್ಲ (ರೂಢಿ).

[ಬಣ್ಣ+ಆಚಾರ]

**ಬಣ್ಣಾಬಣ್ಣಿಕೆ** 'ಬಣ್ಣವಣ್ಣಿಗೆ' ನೋ.

**ಬಣ್ಣಾವಣ್ಣಿಗೆ** 'ಬಣ್ಣವಣ್ಣಿಗೆ' ನೋ.

**ಬಣ್ಣಿಕೆ** 'ಬಣ್ಣಿಗೆ₁' ನೋ.

**ಬಣ್ಣಿಗ** (ನಾ). ಕಾಂತಿಯುಳ್ಳವನು; ಶೋಭಾಯಮಾನನಾದವನು : ನಳನಳಿಪ ಲಾವಣ್ಯದಿಂದೆಸೆವ ಬಣ್ಣಿಗಂ . . . ತಾನಾಗಿ ಬಾಲಲೀಲೆಯ ಬಸವನೊಪ್ಪಿದಂ ಬಳೆದೋಳ ಭಾಗ್ಯನಿಧಿ ಹುಲಿಯುಗುರ ಸುಲಭಗಂ (ಬಸವ. ೦-೧೩೨). [ಬಣ್ಣ+—ಇಗ]

**ಬಣ್ಣಿಗೆ₁**, ಬಣ್ಣಿಕೆ (ನಾ). ೧. ರಂಗು; ವರ್ಣ; ಬಣ್ಣ : ಐಮಱಿ ಅಕ್ಕಿಯುಂ ಐದು ಬಣ್ಣ[ಕಾಣಂ. ಣ]ಗೆಯ ಪುಷ್ಪಂಗಳಿಂದೈದುಪರಿಯಾಣದೊಳ್ಪೈದುಪರಿಯ ಭಕ್ಷ್ಯಂಗಳಂ ಚರುವಿಟ್ಟು (ಪುಣ್ಯಾಸ್ರ. ೬-೪೦ ಪ); ಎಸೆವಪರಂಜಿಯ ತಗಡ ಬಣ್ಣಿಗೆಯನು . . . ಅಸಿಯಳಂಗಕೆ ಹೋಲಿಸುವೆನು (ಶಬರಸಂ. ೨೩-೨೦೬); ರತ್ನಮಯಪೀಠಗಳ ನಾನಾಬಣ್ಣಿಗೆಯ ಲೋಡುಗಳು

ರಂಜಿಪವು (ಆಹಂಣಾ. ೧-೩-೨೯). ೨. ಕೆಂಪುಬಣ್ಣ; ಅರುಣವರ್ಣ: 'ಬಣ್ಣಿಗೆದುಟಿ' ಪರಾ. ೩. ಬಗೆಬಗೆಯ ಬಣ್ಣಗಳಿಂದ ಕೂಡಿದುದು; ವರ್ಣಮಯವಾದುದು: ನೆಜಿ ವಣ್ಣ ಮೆದ್ದುದರದಿ ಜಗಂಗಳ ಬಣ್ಣಿಗೆಯ ಚಿತ್ರವನು ತಾಯಿಗೆ ಬಾಯೊಳಗೆ ತೋರ್ದ (ಜಭಾಗ. ೧೦-೩೨-೨೮); ಬಣ್ಣಿಗೆಯ ಚಿತ್ರಾನ್ನ ಪಾಯಸಂಗಳಂ (ಹರಿಹ. ೨೨-೦೮). ೪. ಬಣ್ಣ ಬಳಿಯುವಿಕೆ; ಲೇಪನ: 'ಬಣ್ಣಿಗೆವಡೆ' ಪರಾ. ೫. (ಚಿತ್ರಕ್ಕೆ ಬಣ್ಣ ತುಂಬಲು ಬಳಸುವ) ಕುಂಚ: ವಿನೋದಾಸ್ಪದವಾದ ಈ ಚಿತ್ರವು ಅರ್ಧ ಬರೆಯಲ್ಪಟ್ಟಿದೆ...ಬಣ್ಣಿಗೆಯನ್ನು ತೆಗೆದುಕೊಂಡು ಬಾ (ಶಾಕುಂತ. ೬೬-೭). ೬. ಚಿತ್ರ ಮುಂತಾದುವನ್ನು ಬರೆಯಲು ಬಳಸುವ ಬಣ್ಣ; "ಮಸಿ" (ಶ್ರಕಣ್ಣ). ೭. ವಿವರಣೆ; ವರ್ಣನೆ: ಬಾಂಧವನೆಂದು ಮುರಹರನ ಕಣ್ಣು ಕಂಡಜಿಯದಡೆ ಹಿರಿಯರ ಬಣ್ಣಿಗೆಯ ಲಜಿತವೆ (ಜಭಾಗ. ೧-೧೧-೩೦). ೮. ಹೊಗಳಿಕೆ; ಸ್ತುತಿ; ಸ್ತೋತ್ರ: ಯದುಕುಲಪರಂಪರೆಯಿಂ ಪೂಜೆಗೊಂಡ ಶ್ರೀಮನ್ನಾರಾಯಣನಂ ಪೂಜಿಸುವ ವಸುದೇವನೋ. . . ಎಂದಿಂತು ಪೊಣ್ಮುವ ಬಣ್ಣಿಗೆಗಳಿಂದಳವಟುವ ಹೃದಯಮಂ ಪದುಳಂಗೊಳಿಸಿ (ಚಿಕದ. ೬೦-೦೨). ೯. ಸೋಗು; ತೋರಿಕೆ: ಗೊಹೇಶ್ವರಲಿಂಗದಲ್ಲಿ ಈ ಬಣ್ಣಿಗೆಯ ಮಾತು ಸಲ್ಲದು ಕೇಳಾ (ಅವಚಂ. ೨೨೩-೦೦೦೯); ಪಾಂಡುಪುತ್ರರು ದಾಯಿಗರು ನಗುವಂದವಾದುದು ಬಾಯ ಬಡಿಕರು ಬಂದ ಬಣ್ಣಿಗೆಯೆಸಗಿ ಬಗುಳುವರು (ಕೃಷ್ಣಾಕಾ. ೦೭-೨೯). ೧೦. ರೂಪ; ಆಕಾರ; ಸ್ವರೂಪ: ಬಣ್ಣಿಗೆಯ ನೋಡಿದರೆ ಮಾದಲ ಹಣ್ಣನಾಕೃತಿ ಛಾಯವಿಡಿದಿಹುದು (ಕೃಷ್ಣಾಕಾ. ೯-೩೭). ೧೧. ಸೊಗಸು; ಅಂದ: ಬಣ್ಣತೇನೆಮಗೆ ನಿಮಗೆ ಬಂಧುತನದೊಂದು ಬಣ್ಣಿಗೆಯಿರಲಿ (ಚರಕ. ೩೩-೯೬). ೧೨. ಅಲಂಕಾರ; ಶೃಂಗಾರ: ಆವ ಪರಿಯ ದೇಸಿಯಾಣ್ಮಗೆ ಬಗೆವರ್ಪುದಾ ವಿಧಗಳನಾರೈದು ಭಾವಿಸಿ ತೀಡುಟ್ಟು ತೊಟ್ಟು ಬಣ್ಣಿಗೆಯಿಂದ ಭಾವವ ಬಂದಿಗೊಳುವುದು (ಹಂಪ. ೩-೦೬). ೧೩. ಬಣ್ಣಬಣ್ಣದ ಗೌಸಿನ ಬಟ್ಟೆ (?): ಛತ್ರವಂ ತವನಿಧಿಗೆ ಕವಿಲೆಯಂ ಕಜಿವೆಡೆಗೆ ಎತ್ತುಗಳ ಬಣ್ಣಿಗೆಯ ಹಿಂಡಿಗೊಂಡವಿಳ ನೃಪರೋಲೈಸೆ (ಸಿದ್ಧರಾ. ೯-೯೩). ಬಣ್ಣಿಕೆ: ೧೧. ವೃಷವಾಹನಂ. . . ಈಶ್ವರನ ರೂಪಂ ವಿಗುರ್ವಿಸಿ ಬಂದಿರ್ಪುದುಂ ಪುರದವರೆಲ್ಲಂ. . . ಬಣ್ಣಿಕೆಯ ಪೂಜೆಗಳಂ ಮಾಡಿ ಪೊಡೆವಡುತಿರ್ಪನ್ನೆಗಂ (ಧರ್ಮಾಮೃ. ೩-೨೨೮). [<ಸಂ. ವರ್ಣಿಕಾ]

**ಬಣ್ಣಿಗೆ₂** (ನಾ). ಒಂದು ಬಗೆಯ ತೆರಿಗೆ: ಊರಲೊಕ್ಕಲಲೊನ್ದು ಪೊಜಿಯುಂ ಪತ್ತುಕೊಳಗಭತ್ತಮುಂ ಒನ್ದು ಕಂತೆಯು ಬಣ್ಣಿಗೆ ಮೂಗುಳಮಂ ಕಪ್ಪಡಕ್ಕೆ ಪಟ್ಟಿಯುಂ ಬ್ರಹ್ಮಲಿಂಗಿಬಟರ್ಗೆ ಕೊಟ್ಟುದು (ಎಪಿ.ಕ. ೦೯೪೮, ೨೯-೨೮; 1032); ದೇವರ ಗಾಣಕ್ಕೆ [ತೆ] ಜ ಬಣ್ಣಿಗೆ ಡೊಂಕ ಬೀರವಣ ಸರ್ವ್ವಬಾಧಪರಿಹಾರವಾಗಿ ಬಿಟ್ಟರು (ಕೌಇಇ. XI-ii, ೦೫೬-೨೮; 1109); ನಿಧಿನಿಕ್ಷೇಪ ಜಳ ಪಾಶಾಣ ತರುಮಾಳಾಸಮನ್ವಿತ [ಸುಂ] ಕ ಸಾದ ಬಣ್ಣಿಗೆ (ಕೌಇಇ. XV, ೦೫೫-೩೮; 1206). [?]

**ಬಣ್ಣಿಗೆಯ್ದು** (ನಾ). ಬೇರೆ ಬೇರೆ ಆಕಾರದ ಆಯುಧ: ಓರ್ವ ರೋರ್ವರಂ ಬಣ್ಣಿಗೆಯ್ದುವಂ ಪಿಡಿದು ನಾಶಕರೋಪದೆ ಕುತ್ತಿ ಕೊಯ್ದೊಡಂ. . . ತನು ಮುನ್ನಿನ ಮಾಟ್ಕೆಯಕ್ಕುಂ (ಪಾರ್ಶ್ವಪು. ೬-೯೩). [ಬಣ್ಣಿಗೆ + ಕಯ್ದು (<ಕೈದು)]

**ಬಣ್ಣಿಗೆಗಾಲು** (ನಾ). ಬಣ್ಣ (ಅಲಕ್ತಕ) ಬಳಿದ ಕಾಲು: ಬಾಳೆದೊಡೆಯ ಬಣ್ಣಿಗೆಗಾಲಾ...ಮನೋಹರರೂಪದ ನೀಜಿಯ ನವಲಾವಣ್ಯದ ಸಿರಿಯನ ದೇನಂ ಬಣ್ಣಿಪೆನು (ಜಯನೃ. ೩-೩೩); ಬಡನಡುವಿನ ಬಣ್ಣದೊಡೆಯ ಬಣ್ಣಿಗೆಗಾ[ಪಾಠಾಂ. ಕಾ]ಲ ನಿಡಿದೋಳಿನರವೆಜಿನೊಸಲ . . . ಬೆಡಗಿನ ಪೆಣ್ಗಳಲ್ಲಿಹರು (ಶಂಕ್ರಶಾಂ. ೦-೨೦೦). [ಬಣ್ಣಿಗೆ₁+ಕಾಲು₁ (<ಕಾಲ್₁)]

**ಬಣ್ಣಿಗೆಗೊಳ್, ಬಣ್ಣಿಗೆಗೊಳು** (ಕ್ರಿ). ಹೊಳೆ; ಶೋಭಿಸು: 'ಬಣ್ಣಿಗೆಗೊಳಿಸಂ' ಪರಾ. ಬಣ್ಣಿಗೆಗೊಳು: ಬಣ್ಣಿಗೆಗೊಳುವ ಬಗೆಯ ಪೊಸವರೆಯುದ ಪೆಣ್ಣನೊಲುಮೆಯು ಪೆರ್ಚುವುದು (ಹಂಪ. ೩-೨೦).
[ಬಣ್ಣಿಗೆ₁ + ಕೊಳ್₁]

**ಬಣ್ಣಿಗೆಗೊಳಿಸು** (ಕ್ರಿ). ಶೋಭಿಸುವಂತೆ ಮಾಡು; ಹೊಳಪುಂಟು ಮಾಡು: ಪೊನ್ನದೊಳ್ತಪ್ಪುಗೊಳಿಸಿ ಚೆಂಬೊನ್ನ ಕರ್ವಣಿಯ ಪೊರ್ಗರ್ಗಳಿಂ ಬಣ್ಣಿಗೆಗೊಳಿಸಿರಿವಚ್ಚದ ಪಚ್ಚವಣಿಗಳ ಬೆಳಗಿನೊಳ್ಪೆರಸಿ (ಚಿಕದ. ೧೨೩-೦೮).
[ಬಣ್ಣಿಗೆಗೊಳ್ + –ಇಸು₃]

**ಬಣ್ಣಿಗೆಗೊಳು** 'ಬಣ್ಣಿಗೆಗೊಳ್' ನೋ.

**ಬಣ್ಣಿಗೆದಪ್ಪು** (ಕ್ರಿ). (ಆಲಂ) ಗೌರವಕ್ಕೆ ಕೆಡುಕುಂಟುಮಾಡು; ಹಿರಿಮೆಗೆ ಹಾನಿತರು: ಹೆಣ್ಣು ಬೇಕಾದರೆ ಬರಬೇಕು ನಾವೆಮ್ಮ ಬಣ್ಣಿಗೆದಪ್ಪಿ ಕೊಡುವೆವೆ (ಚರಕ. ೩೭-೯೬). [ಬಣ್ಣಿಗೆ₁ + ತಪ್ಪು₁]

**ಬಣ್ಣಿಗೆದುಟಿ** (ನಾ). ಕೆಂಪಾದ ತುಟಿ; ಚೆಂದುಟಿ: ಬಾಲಪಲ್ಲವವನೇಳಿಪ ಬಣ್ಣಿಗೆದುಟಿಯ (ಶ್ರೀಭಾಂಪ. ೯-೦೯); ಬಡನಡುವಿನಬಲೆ ಬಣ್ಣಿಗೆದುಟಿಯ ಚೆನ್ನೆ (ಸಮ್ಯಕೌ. ೩-೫). [ಬಣ್ಣಿಗೆ₁ + ತುಟಿ]

**ಬಣ್ಣಿಗೆಬವಣ್** (ನಾ). ೧. ಅಲಂಕಾರದ ಪ್ರಮಾಣ. ೨. ವರ್ಣನೆಯ ಪ್ರಮಾಣ. ೧, ೨: ಕೊನಬುಗಾರ್ತಿಯ ಸೊಗಸಂ ಪಡೆಗುಂ ಕೃತಿಯುಂ ಪದಪಿಂದೆಡೆಯೆಡೆಯೊಳ್ಕೃತಕ್ಕ ಬಣ್ಣಿಗೆಬವಣಂ (ಚಿಕಪ. ೦-೦೮).
[ಬಣ್ಣಿಗೆ₁ + ಪವಣ್]

**ಬಣ್ಣಿಗೆವಡಿಸು** (ಕ್ರಿ). ಬಣ್ಣ ಬಳಿ; ಒಳ್ಳೆಯದಾಗಿರುವಂತೆ ಚಿತ್ರಿಸು: ಬನ್ನಣಿಗೆಯ್ದು ಬಜಿದೆ ಬಣ್ಣಿಗೆವಡಿಸದಿರು (೧೧ಕಗೂ. ೨೫-೯೯).
[ಬಣ್ಣಿಗೆ₁ + ಪಡಿಸು]

**ಬಣ್ಣಿಗೆವಡೆ** (ಕ್ರಿ). ೧. ಬಣ್ಣ ಹೊಂದು; ರಂಗೇರು: ಬಾಲಾತಪದಿಂದ ಬಣ್ಣಿಗೆವಡೆದಿಂದ್ರನೀಲಾದ್ರಿಯನೀಗೆಯ್ವ ನೀಲನೀರದ ನಿಭಕಾಯಗೆ . . . ಆನೆಜಿಗುವೆನು (ಕರ್ಣಪ್ಕ. ೦-೨೮); ಬಳ್ಳಿಮಿಂಚುಗೆಯಿಂದ ಬಣ್ಣಿಗೆವಡೆದಿರ್ದ ಕಾರ್ಮುಗಿಲ ಮೋಹರದಂತೆ (ಕಾರಣಾಂ. ೩೯೯-೩೦). ೨. ಕೊಂಡಾಟಕ್ಕೆ ಒಳಗಾಗು; ಹೊಗಳಿಸಿಕೊಳ್ಳು: ಪೊಡವಿಯ ಬಲ್ಲೊಜಿಯನಿಜಿತಿ ಬಣ್ಣಿಗೆವಡೆವರ್ (ಅಕ್ರಪ. ೨-೦೮). [ಬಣ್ಣಿಗೆ₁ + ಪಡೆ₁]

**ಬಣ್ಣಿಗೆವೆಳಗು** (ನಾ). ಥಳಥಳಿಸುವ ಕಾಂತಿ; ಸೊಗಸಾದ ಹೊಳಪು: ಪೊಗರೇಜುವ ಮೊಗಸಿರಿಯುಂ ಬಗೆಗೊಳಿಸುವ ಬಗಸೆಗಣ್ಣ ಬಣ್ಣಿಗೆವೆಳಗುಂ ಮಿಗೆಯೊಸಗೆವೇಟಲೀಪರಿ ನೆಗಟ್ದಿಯ್ದುದ ತನ್ನ ಭಾಗ್ಯದೇವತೆಗೆತ್ತಂ (ಚಿಕಪ. ೯-೩೯). [ಬಣ್ಣಿಗೆ₁ + ಬೆಳಗು₂]

**ಬಣ್ಣಿಗೆವೆಜು** (ಕ್ರಿ). ೧. ವರ್ಣನೆಯನ್ನು ಹೊಂದು,–ಪಡೆ: ಭೇದಿಸಿ ಕಾಣ್ಬ ತತ್ತ್ವದಿರವುಣ್ಮಪ ಬಣ್ಣಿಗೆವೆತ್ತ ಬಿನ್ನಣಂ (ಚಿಕಪ. ೩-೦೨೨). ೨. =ಬಣ್ಣಿಗೆವಡೆ ೧: ಸುಳಿವ ಮಿಂಚಿನ ಬಣ್ಣಿಗೆವೆತ್ತ ಕಣ್ಮಲರ್ ಮಾರ್ಮಲೆದಾರ್ಪಿನಂ (ಕಮಲಾ. ೨-೦೯೩). [ಬಣ್ಣಿಗೆ₁ + ಪೆಜು₁]

**ಬಣ್ಣಿಸು, ವಣ್ಣಿಸು** (ಕ್ರಿ). ೧. ಬಣ್ಣ ಹಾಕು; ರಂಗೇರುವಂತೆ ಮಾಡು; ಬಣ್ಣ ಕಟ್ಟು: ಅರಿಸಿನವ ಬೆರಸಿ . . . ಎಣ್ಣೆಯೊಳು ಮೊದಲು ಕಲಸಿದ ಬೋನದೊಳಗಿಕ್ಕಿ ಬಣ್ಣಿಸಿಯದಂ ಕಲಸಿ ಬಿಳಿಯುಪ್ಪ ನಿಕ್ಕಲದು ಸಾಸಂಬೆಯ ಕಟ್ಟೋಗರ (ಸೂಪಶಾ. ೩-೨೦). ೨. ಹೊಳೆಯುವಂತೆ ಮಾಡು; ಮೆರುಗು ಕೊಡು: ಪೊಸವಿಸಲ ಪೊಳಪಿನಿಂ ನುಣ್ಣನುಜ್ಜಳಿಪ ರನ್ನದೆಳವೆಳಗಿನ ಬಳಗದಿ ಬಣ್ಣಿಸಿ ಸುರಶರಾಸನಂಗಳ ನೆಟಲಿಕ್ಕಿದಂತೆ ನಿರ್ಮಿರ್ಪ ನಿರ್ಝರಂಗಳುಮಂ (ಕಾದಂಬ. ೫೩೬); ಬಣ್ಣಿಸಿ ನುಣ್ಣಿಸಿದ ಕರ್ಮಣೆಗಲ್ಲ ಕೈಗನ್ನಡಿಯಂತಂತು ತಳತಳಿಪ ಗಂಡಮಂಡಲಂ (ರಾಮಚ. ೦೯೩-೨೯). ೩. ಅಲಂಕರಿಸು; ಶೃಂಗಾರ ಮಾಡು: ಕಣ್ಣಿಗೆ ಕಜ್ಜಳವೆಚ್ಚಿ ಬಣ್ಣಿಸಿ ಸೊಡರ್ವೆಟ್ಟನಿಟ್ಟು

ಪಾಲೆಱೆದೋವಿ ಚೆಣ್ಣನ ಪಕ್ಕೆಗೈದಿದಳು (ಪೋಜಹ. ೪-೬೪). ೪. ವಿಸ್ತಾರವಾಗಿ ಹೇಳು ; ವಿವರಿಸು ; ವರ್ಣಿಸು : ಸೌಧರ್ಮೇಂದ್ರಂ ನಿಮ್ಮ ರೂಪನಾದವಾನಂ ನಚ್ಚಿ ಬಣ್ಣಿಸಿದೊಡಿಂದ್ರನ ಮಾತಂ ನಂಬದೆ ನಿಮ್ಮಂ ನೋಡಲ್ ಬಂದೆಂ (ವಡ್ಡಾರಾ. ೬೭-೮) ; ಎಸೆಬಂ ಮುಟ್ಟಲೊಡಂ ತನ್ನ ಸೌರಭಂಗೆಟ್ಟು ನೆಗಟ್ದ ಕಸ್ತೂರಿ ಮಣ್ಣಂ ಮಸಗಮೆಣೆಯುಪ್ಪುದೆನೆ ಬಣ್ಣಿಸುವಂ ಕೇದಗೆಯ ಕಂಪನೇವಣ್ಣಿಸುವಂ (ಅದಿಪು. ೧೧-೧೦೭) ; ಅರಸ ಬಣ್ಣಿಸಲಳವೆ ನರನ ಮಹಾಸ್ತ್ರನಾಟಕವ (ಕುಮ್ಯಾಭಾ. ೦೩-೬). ೫. ಹೊಗಳು ; ಕೊಂಡಾಡು ; ಸ್ತುತಿಸು : ದೇವರ್ಕಳೆಲ್ಲವಮಾತನ ಶೀಲ ಪ್ರಭಾವಮಂ ಬಣ್ಣಿಸೆ (ಜಾವುಂತಿ. ೬೦) ; ಬಣ್ಣಿಪುದಿಳಾವಳೆಯಂ ಸಲೆ ಕಂಚಿಕಬ್ಬೆಯಂ (ಶಾಇಇ. XI—1, ೬೩-೪೦ ; 1028) ; ಭೀಷ್ಮಂಗೆ ಸಮರ ಸಮಾನಭಟನಿನ್ನಾವನೆಂದು . . . ಕೌರವರಾಯ ಬಣ್ಣಿಸಿದ (ಕುವ್ಯಾಭೀ. ೦-೩೩). **ವಣ್ಣಿಸು:** ೧. ಗಳ್ಳಿಕ್ಕುತ ಮುಸುಕಿ ಮುಂಬರಿವ ಶುನಿಗಳು ಎಸೆದುವಾ ದಂಡಿನೆಚ್ಚಱಿಕೆಯ ಕಾವಲೊಂದೆಸಕವಸೇನ ವಣ್ಣಿಸುವೆ (ಕಂಸವಿ. ೦೯-೨೪). ೫. ಪಿರಿದನೀವ ನೆಗಟ್ತೆಯ ದಾನಿಯೆನ್ದು ನಾನಾ ವಿಧದಿನ್ದೆ ವಣ್ಣಿಪುದಿಳಾವಳಯಂ ಜಗದೇಕದಾನಿಯಂ (ಎಕ. VII, ಶಿಕಾಂ. ೦೫೦-೨೫ ; 1047). [ಬಣ್ಣನೆ+ —ಇಸು₃]

**ಬತ₁** 'ಬ್ರತ' ನೋ.

**ಬತ₂** (ನಾ). [ಗಣಿತ] ಸಂಕಲನ ಮಾಡುವಿಕೆ ; ಕೂಡುವಿಕೆ : " ಯುತಂ, ಯುಕ್ತಂ . . . ಕೂಡು, ಬತಂ ಇಂತಿನಿತುಂ ಕೂಡೂದಕ್ಕೆ ಹೆಸರು " (ವ್ಯವಗಾ. ೦೦-೨೦). [?]

**ಬತಗೆಡಿಸು** (ಕ್ರಿ.) ವ್ರತದಿಂದ ಭ್ರಷ್ಟನಾಗುವಂತೆ ಮಾಡು ; ವ್ರತ ಗೆಡಿಸು : ವ್ರತವುಳ್ಳವರ ಬತಗೆಡಿಸಿತ್ತು ನೋಡಾ ಮನವು (ಅಬಂಡೇ. ೨೫೭-೦೦೯). [ಬತಗೆಡು + — ಇಸು₃]

**ಬತಗೆಡು** (ಕ್ರಿ). ವ್ರತಭ್ರಷ್ಟನಾಗು : ಗುಡಿ ತನಕ ಹೋಗಿ ಬರ್ತೇನೆ ಅಂದಿತ್ತಂತೆ ಒಂದು ಬತಗೆಟ್ಟ ಮುಂಕ! (ಬೆಳಿಮ. ೪೫); ಹೆಣ್ಣು ಕಾಣದೆ ಬತಗೆಟ್ಟಿರುವನೇನು ? (ಕಾಗೆಳ. ೭೮). [ಬತ₁ (<ಬ್ರತ) + ಕೆಡು₁]

**ಬತಗೇಡಿ** 'ಬ್ರತಗೇಡಿ' ನೋ.

**ಬತಣಿಕೆ** 'ಬಂದಣಿಕೆ' ನೋ.

**ಬತಾರೀಕು** (ನಾ). ಆ ದಿನಾಂಕ ; ಆ ತೇದಿ : ಪೂಜೆ ಪಡಿತರ ದೀಪಾರಾಧನೆ ವಗೈರೇ ಬಗ್ಗೆ ಬತಾರೀಕು ಯಿನಾಮು . . . ನಡಸಿಕೊಣ್ಣು ಬರುವದು (ಎಕ. VI, ಕೊಪ್ಪ. ೪೮-೬೬; 1811). [←ಪಾರ. ಮರಾ. ಬತಾರೀಖ್]

**ಬತಾಸು** 'ಬತ್ತಾಸು' ನೋ.

**ಬತೇರಿ,** ಬತ್ತೇರಿ (ನಾ). ಕೋಟೆಯ ಗೋಡೆಗಳನ್ನು ಎತ್ತರಿಸಿ ತುಪಾಕಿಗಳನ್ನಿಟ್ಟು ಶತ್ರು ಸೈನ್ಯಗಳಿಗೆ ಸಾವು ನೋವುಗಳನ್ನುಂಟು ಮಾಡುವಂತೆ ಏರ್ಪಡಿಸಿರುವ ದುಂಡನೆಯ ಪ್ರದೇಶ ; ಕೋಟೆಯ ಮೇಲಿನ ತೋಫ್‌ಖಾನೆ : ಹೆಡವಳಿ ಮಾರ್ಗದಿಂದ ಆ ಬೆಟ್ಟ ಕೋಟೆ ನುಗ್ಗಿ, ಮೂರು ನಾಲ್ಕು ಬತ್ತೇರಿಯನ್ನು ಆಕ್ರಮಿಸಿಕೊಂಡು (ರಾಜೇಂದ್ರ. ೫೦) ; ಬಲವಾದ ಬತೇರಿಗಳನ್ನು ಬಹು ಚಮತ್ಕಾರವಾಗಿ ಸುತ್ತಲೂ ಕಟ್ಟಿದಾರೆ (ಶಾಳಗಾ. ೪೮) ; ಅವರ ಸ್ಥೂಲಕಾಯ . . . ದಪ ನಾದ ಕೋಲು—ಒಂದೊಂದೂ ಬೆಟ್ಟದ ಮೇಲೆ ನಿಂತ ಬುರುಜು, ಬತೇರಿಗಳಂತೆ ಚಿತ್ರದುರ್ಗದ ಜನಕ್ಕೆ ಪ್ರೀತಿಪಾತ್ರವಾಗಿವೆ (ಹಂಗೀತ. ೫). **ಬತ್ತೇರಿ :** ಪಟ್ಟಣದ ಕೋಟೆ ಮುಂದೆ ಯೆರಡು ಹೊಳೆ ಮಧ್ಯ ಬತ್ತೇರಿಗಳ ತಯಾರು ಮಾಡಿಸಿ ಆ ಬತ್ತೇರಿಗಳ ವಳಗೆ ತಮ್ಮ ಫೌಜನ್ನು ನಿಲ್ಲಿಸಿ (ರಾಜೇಂದ್ರ. ೨೮) ; ಕುಂತ್ತರಿಗೆ ಬೆಂಕಿ ಹತ್ತಲು ಬತ್ತೇರಿಗೆ ಓಡಿದರ ನಂದೀತ ? (ಗಾದ). 'ಬುರುಜು', 'ಬ್ಯಾಟರಿ' ನೋ. [ ←ಇಂ. Battery ]

**ಬತ್ತ,** ಭತ್ತ₁, ವತ್ತ (ನಾ). ಒಂದು ಬಗೆಯ ಧಾನ್ಯ ; ನೆಲ್ಲು : ಜಗದ್ಗೃಹನೆಂಬೊಂ ತನ್ನ ಬತ್ತಮಂ ಚಂಪಾನಗರಕ್ಕೆ ಮಾಱಲೆಂದು ಕೊಂಡು ಪೋಗಿ ಬತ್ತದುನಳೆವಲ್ಲಿಯಾ ಮೂವರ ದೋಷಂಗಳುಂ ಪ್ರಕಟ ಮಾಗಿ (ವಡ್ಡಾರಾ. ೨೦-೦೮) ; ಅಗ್ಗಳದ ಬತ್ತದ ಪೆರ್ಮೆಳಸಿಂದೆ . . . ದೊರೆವೆತ್ತುದು ವೆಂಗಿಮಂಡಲಂ (ಅಕಪು. ೦-೨೨) ; ಗಂಧಶಾಲಿಯ ಬತ್ತದೊಳಗಿರ್ದ ಕಳೆಯ ಕೀಳ್ವಂದದೆ ಖಳರ ಶೀರ್ಕಣಿಸಿ (ಪೋಜಹ. ೪೨-೬೩). **ಭತ್ತ :** ಭತ್ತಮುಮವರ್ ಕವಿಲೆಯ ಪಾಲು ಎಟ್ಟುಂ (ಎಕ. VI, ಕೊಪ್ಪ. ೩೭-೨; ಸು. 675 ?) ; ವಿಂಕ್ಕ ದೇವರ ಮನೆಯ ಭತ್ತಮಂ ಕೊಟ್ಟಣಕ್ಕಿಕ್ಕ ಬರುತಿರೆ (ಸಿದ್ಧರಾ. ೭-೦೨) ; ಕನಸಿನ ಭತ್ತಕ್ಕೆ ಗೋಣಿ ಯಹಾಂಪ್ಯೆ ನೃಪತೀ (ಕಾವ್ಯಸಾ. ೫೮೦) ; ಒಂದು ಪಡಿ ಭತ್ತಕೆ ಬಾಯ ಬಿಡಿಸ್ಯಾಳಣ್ಣ (ಪುರಂದ. ೦-೦೮೨-೨). **ವತ್ತ₁** : ಇಪ್ಪತ್ತಯ್ಗಣ್ಡುಗಂ ವತ್ತ ತೆಱುವೊದು (ಎಕ. XIV, ತಿರುಮ. ೨೫೩-೬ ; ಸು. ೮00).

**ಭತ್ತದರಳು**=ನೆಲ್ಲನ್ನು ಹುರಿದು ಮಾಡಿದ ಅರಳು ; ಲಾಜೆ : ಕನ್ನೈದಿಲೆಗೆಡ್ಡೆ, ಖರ್ಜೂರ ಇವುಗಳನ್ನೆಲ್ಲಾ ಕಷಾಯಮಿಟ್ಟು . . . ಭತ್ತದರಳಿನ ಚೂರ್ಣವನ್ನು ಹಾಕಿ ತೆಗೆದುಕೊಳ್ಳಲು . . . ಕಾಮಾಲೆ ಸಹ ಗುಣವಾಗುವುವು (ಸಕವೈ. ೪೩).

[<ಪ್ರಾ. ಭತ್ತ=ಅನ್ನ./ಸಂ. ಭಕ್ತ=ಅನ್ನ./ತಮಿ. ವತ್ತ=ಅನ್ನ ; ಮಲ. ವತ್ತ; ತುಳು. ಬತ್ತ್=ಅನ್ನ]

**ಬತ್ತಂಗುಟ್ಟು,** ಬತ್ತಕುಟ್ಟು, ಬತ್ತಗುಟ್ಟು (ಕ್ರಿ). ೧. ಅಕ್ಕಿ, ಅವಲಕ್ಕಿ ಮುಂತಾದುವನ್ನು ಮಾಡಲು ಒರಳಿನಲ್ಲಿ ನೆಲ್ಲನ್ನು ಹಾಕಿ ಕುಟ್ಟು,-ಕೊಟ್ಟಣಕ್ಕೆ ಹಾಕು : ಬತ್ತಂಗುಟ್ಟುವರಂತೆ . . . ದರ್ಶನಮುಂ ನಿಶ್ಶಂಕೆಯುಮೆಂಬೆರಡುಮಂ ಲೇಸು ಮಾಡುವುದು (ಧರ್ಮಾಮೃ. ೨-೪). **ಬತ್ತಕುಟ್ಟು :** ೧. ಹಿಂದಿನ ಕಾಲದಲ್ಲಿ ಮನೆಯಲ್ಲೇ ಬತ್ತ ಕುಟ್ಟಿ ಅಕ್ಕಿ ಮಾಡಿ ಬಳಸುತ್ತಿದ್ದರು (ರೂಢಿ). ೨. (ಆಲಂ) (ಭಯ, ಆತಂಕ ಮೊದಲಾದುವುಗಳಿಂದ ಹೊಟ್ಟೆಯಲ್ಲಿ) ತಳಮಳವಾಗು : ಪರೀಕ್ಷೆ ಹತ್ತಿರ ಬಂದಂತೆಲ್ಲಾ ನನ್ನ ಹೊಟ್ಟೆಯಲ್ಲಿ ಬತ್ತ ಕುಟ್ಟಲು ಮೊದಲಾಯಿತು (ರೂಢಿ). **ಬತ್ತಗುಟ್ಟು :** ೧. ಮೃತ್ಯು ಮಾರಿಯರೆನ್ನ ಮನೆಯಲಿ ಬತ್ತಗುಟ್ಟುವರು (ಕೌಶಿರಾ. ೧೦-೬೦). [ಬತ್ತ + ಕುಟ್ಟು₁]

**ಬತ್ತಕುಟ್ಟು** 'ಬತ್ತಂಗುಟ್ಟು' ನೋ.

**ಬತ್ತಗುಟ್ಟು** 'ಬತ್ತಂಗುಟ್ಟು' ನೋ.

**ಬತ್ತಲಿಕೆ** 'ಪತ್ತಲಿಕೆ₁' ನೋ.

**ಬತ್ತಲಿಗ,** ಬೆತ್ತಲಿಗ (ನಾ). ೧. ಬಟ್ಟೆಯನ್ನು ಧರಿಸದಿರುವವನು; ನಗ್ನ; ದಿಗಂಬರ : ಆ ನಿರ್ಲಜ್ಜಂ ಬತ್ತಲಿಗನಪ್ಪ ಸವಣನಲ್ಲಿಗೆ ಪೋಗಿ ಕಂಡು ನುಡಿದು ಕಾಡಿ ಬರ್ಪಂ ಬಾ ಮಗಳೆ (ವಡ್ಡಾರಾ. ೨೨-೨೨). ೨. ಜೈನಸಂನ್ಯಾಸಿ : ಬತ್ತಲಿಗರ ಮಾತಂ ಕೇಳ್ದು ತ್ತಮಮೆನಿಸಿರ್ದ ಕುಲ ಮನಟಿದ್ಯೆ (ಧರ್ಮಾಮೃ. ೮-೪೩). **ಬೆತ್ತಲಿಗ :** ೨. ಬೆತ್ತಲಿಗರ ನುಡಿ ಗೇಳಿ ರಾಜ್ಯಸಂಪತ್ತ ತೋರದೀಡಾಡೆ (ಅದಿಪ. ೧೦-೫). [ಬತ್ತಲೆ₁+—ಇಗ]

**ಬತ್ತಲಿರ್,** ಬತ್ತಲಿರು, ಬತ್ತಲೆಯಿರ್ (ಕ್ರಿ). ಮೈಮೇಲೆ ಬಟ್ಟೆಯಿಲ್ಲದಿರು; ನಗ್ನವಾಗಿರು ; ವಿವಸ್ತ್ರವಾಗಿರು : ಕೃತ್ತಿವುಡೆಯನ್ನಿತ್ತಮೆ ನೀಂ ಬತ್ತಲಿರಲೇಕೆ (ಬಸಪು. ೦೮-೦೪). **ಬತ್ತಲಿರು :** ಬತ್ತಲಿದ್ದವಗೆ ಭಯವಿಲ್ಲ (ಸರ್ವಜ್ಞ. ೫೫೦). **ಬತ್ತಲೆಯಿರ್ :** ಬತ್ತಲೆಯಿರ್ಪುದರಿದೋ ಸೀರೆಯುಟ್ಟಿರ್ಪುದರಿದೋ (ಧರ್ಮಾಮೃ. ೭-೬೦); ಬತ್ತಲೆ ಪೂಜ್ಯಮಲ್ಲದೊಡೆ ಬತ್ತಲೆಯಪ್ಪ ದಿನೇಶಬಿಂಬಮಂ ಬತ್ತಲೆಯಿರ್ಪ ಮಕ್ಕಳುಗಳಂ . . . ಕಂಡು ಮಾನಿಸರ್ ಸತ್ತವರಾರೊ (ಧರ್ಮಾಮೃ. ೯-೬೬).

[ಬತ್ತಲೆ₁+ಇರು₁ (<ಇರ್₁) ]

**ಬತ್ತಲಿರು** 'ಬತ್ತಲಿರ್' ನೋ.

**ಬತ್ತಲಿಸು** (ಕ್ರಿ). ಬರಿದಾಗಿರು ; ಬೋಳಾಗಿರು : ಎಲೆಗಳಿದು ಬತ್ತಲಿಸಿ ನಿಂದ ತರುಕುಲದಂತೆ (ವಾಗೀಶ. ದೇ. ೨೩೯–೦೬); ಅಜ್ಞಾನವೇ ಸುತ್ತ ಬತ್ತಲಿಸಿದೆ (ಗಂಗಾತ. ೩೨–೦೬).

[ಬತ್ತಲು$_2$ (<ಬತ್ತಲೆ$_1$) + — ಇಸು$_1$]

**ಬತ್ತಲು$_1$** (ನಾ). ಒಣಗಿದ ತರಕಾರಿ, ಹಣ್ಣು ಮುಂತಾದುವು ; ತಳಲು : ಮಾವಿನ ಬತ್ತಲು ಹುಣಸೆಯ ಹಣ್ಣು . . . ತದುಕಿನ ತಿರುಳು ಇವು ಸಂಭಾರವಸ್ತುಗಳು (ಸೂಪಶಾ. ೯–೦ ಅಡಿಟಿ).

[ಬತ್ತು$_1$ + —ಅಲು ( <—ಅಲ್$_2$ ) ./ ತಮಿ.ವಟ್ಟಲ್]

**ಬತ್ತಲು$_2$** 'ಬತ್ತಲೆ$_1$' ನೋ.

**ಬತ್ತಲೆ$_1$**, ಬತ್ತಲು$_2$, ಬೆತ್ತಲೆ$_1$ (ನಾ). ೧. ಮೈಮೇಲೆ ಬಟ್ಟೆ ಮೊದಲಾದುವುಗಳ ಹೊದಿಕೆಯಿಲ್ಲದಿರುವುದು; ನಗ್ನತೆ : ಬತ್ತಲೆ ಪೂಜ್ಯಮಲ್ಲದೊಡೆ . . . ಬತ್ತಲೆಯಿರ್ಪ ಮಕ್ಕಳುಗಳಂ . . . ಕಂಡು ಮಾನಿಸರ್ ಸತ್ಯವರಾರೊ (ಧರ್ಮಾಮೃ. ೯–೭೬); ಬತ್ತಲೆಯ ಬಾಳ್ವಣಂಗಳು ಸುತ್ತ ಮುತ್ತಿರಲು (ವಾಗೀಶ. ದೇ. ೨೩೩–೦); ಎಲೆ ಮಗಳೆ ನಿಮ್ಮ ಸವಣರ್ ಸತ್ತು ದೇವಲೋಕದೊಳು ಬತ್ತಲೆಯ ಸವಣರಾಗಿ ಪುಟ್ಟುವರ್ (ಪುಣ್ಯಾಸ್ರ. ೩–೯೬ ವ). ೨. ಬರಿದಾದುದು; ಶೂನ್ಯವಾದುದು; ರಿಕ್ತವಾದುದು : ಹೊತ್ತು ಮುಣುಗುತ ಬಂತು ಬತ್ತಲೆಯ ಜಗಕೆಲ್ಲ (ಕನ್ನಶಾ. ೨೯೯). ೩. ದಿಗಂಬರಸಂನ್ಯಾಸಿ; ಜೈನಭಿಕ್ಷು : ಪುತ್ತುಂ ಬತ್ತಲೆಯುಂ ಬಱುದಿಲ್ಲೆಂಬೀ ನಾಣ್ಣುಡಿಯುಂಟಪ್ಪುದು (ಧರ್ಮಾಮೃ. ೮–೬೦); ಎಲೆ ದೇವರೆ ಪುತ್ತುಂ ಬತ್ತಲೆಯುಂ ಬಱುದಿಲ್ಲದೆಂಬರ್ (ಹುಕೋಶ. ೯–೦೩). (ಗು). ೪. ನಗ್ನವಾದ ; ಬರಿಮೈಯಿಂದಿರುವ : ತದಾಪ್ರುವನ ದೊಳೊರ್ವಂ . . . ಬ[ಪಾಠಾಂ. ಬೆ]ತ್ತಲೆ ಮರುಳಂತೆ ತನ್ನೊಳೆ ಮಿನು ಕುತ್ತುಂ ಮೋನದೊಳಿರ್ಪಂ (ಧರ್ಮಾಮೃ. ೮–೨೬); ಎತ್ತಿದ ಕಯ್ಯ ಕತ್ತಿಗೆ ಭಯಂಗೊಳ್ . . . ಬಪ್ಪ ಬತ್ತಲೆ ಮರುಳ್ಗಳ್ ತಂಡದಿನೇಂ ಮಹೋಗ್ರಮೋ (ಬಂಹು. ೨–೦೭). **ಬತ್ತಲು$_2$** : ೨. 'ಬತ್ತಲಿಸು' ಪರಾ. **ಬೆತ್ತಲೆ$_1$** : ೫. ಮುಚ್ಚುಮರೆಯಿಲ್ಲದುದು; ನಿಚ್ಚಳವಾದುದು : ಇದೂ ನಾಟಕವಲ್ಲ . . . ಕೇವಲ ನಿಜ. ಬೆತ್ತಲೆಯ ಸತ್ಯ (ರಂಗಶಾ. ೦೬೨). ೬. ಮುಚ್ಚುಮರೆಯಿಲ್ಲದ; ನಿಚ್ಚಳವಾದ : ಬೆತ್ತಲೆ ಬದುಕ ಸುತ್ತಿ ತೋರಿಸುತ್ತಿದೆ ಡೌಲು (ಪಲಮು. ೩೦–೦).

**ಬತ್ತಲೆಗುದುರೆ**=ಜೀನು ಹಾಕಿರದ ಕುದುರೆ: ಗಂಡ ಮಾದೇವರಾಯ ಹತ್ತಿದ ಬತ್ತಲೆಗುದುರಿ ಹತ್ತಿದ ಬತ್ತಲೆಗುದುರಿ ಹೊಂಟಾನತ್ತೆಯ ಮನೆಗೆ (ಕನ್ನಶಾ. ೬೨–೦೪).

[ದೇ.೩ ತುಳು. ಬತ್ತಲೆ, ಬೇತಲ್. ಬೇತಾಳ್; ತೆಲು. ಬತ್ತಲ]

**ಬತ್ತಲೆ$_2$**, ಬೆತ್ತಲೆ$_2$ (ಅ). ಮೈಮೇಲೆ ಬಟ್ಟೆಯಿಲ್ಲದೆ ; ನಗ್ನವಾಗಿ ; ವಿವಸ್ತ್ರವಾಗಿ : ಬೇಡಿದ ಭೂಷಣಂಗಳಂ ಬತ್ತಲೆ [ಪಾಠಾಂ. ಳೆ] ಬಾಂಗಿ ತಾಂಗುವಳೆ (ಮಲ್ಲಿಕ. ೭–೮೦); ಒರ್ವಳ್ ನೀಱಿ ಪ್ಪುಯೊಡ್ಡಿ ಬತ್ತಲೆ ನಿಂದಿರ್ದಳೆರಲ್ಗೆ ತೀರ್ದ ರತಖೇದಶ್ರಾಂತಿಯಿಂ ಬಿಚ್ಚತಂ (ಸೂಕ್ತಿಸು. ೦೪–೬೯); ಬತ್ತಲೆ ತಿರುಗುವ ಜನರಿರುವೆಡೆಯೊಳು ಅಗಸನು ಮಾಡುವುದೇನು (ಇಂಶಾಶ. ೦೩೬–೬೬). **ಬೆತ್ತಲೆ$_2$** : ಎಲೆ ಯತಿ ಮುಕ್ತಭಾವ ನೀನೇಕೆ ಬೆತ್ತಲೆ ಬಂದೆ (ಪ್ರಭುಶಂ. ೦೯–೦೩) ; ಹುತ್ತವನೇಱಿದವರು ಹುಲ್ಲುಗಳ ಕಚ್ಚಿ ಬೆತ್ತಲೆ ನೀರ ಹೊಕ್ಕವರು ಕತ್ತಿ ಕಠಾರಿಯ ಬಿಸುಟ ಕಾಲಾಳಿನ ಮೊತ್ತವನೇನ ಬಣ್ಣಿಸುವೆ (ಕಂಪಹ. ೦೩–೯೭). [<ಬತ್ತಲೆ$_1$]

**ಬತ್ತಲೆಗ**, ಬೆತ್ತಲೆಗ (ನಾ). ೧. ದಿಗಂಬರಸಂನ್ಯಾಸಿ ; ಜೈನಭಿಕ್ಷು: ಈ ನಿನ್ನರ್ಧಗಪ್ಪಡದ ಯತಿಯರ ಧರ್ಮಮೊಳ್ಪಿತಲ್ಪಿವರುಟ್ಟರು ಮಲ್ಲರ್ ಬತ್ತ[ಪಾಠಾಂ. ಬೆ]ಲೆಗರುಮಲ್ಲರ್ (ಪದ್ಮಾರಾ. ೯೩–೦೨) ; ತಲೆವಱುದುಟ್ಟುದಿಕ್ಕಿ ಸುರಲೋಕಸುಖಂಗಳನುಣ್ಬೆವೆಂಬ ಬತ್ತಲೆಗರ ಮಾತುಗೇಳದಿರು (ಅಂಕು. ೨–೯) ; ಸತ್ತು ಸಗ್ಗದ ಸತಿಯರನು ಕೊಡುವೆನೆಂಬ ಬತ್ತಲೆಗರ ಮಾತು ಕೇಳಿ ಉತ್ತಮ ರೂಪವತಿಯರ ಭೋಗಂಗಳ ನೊತ್ತರಿಸುವೆನೆನಬಹುದೆ (ಪ್ರಭುಶಂ. ೩೯–೩೪). **ಬೆತ್ತಲೆಗ** : ೨. ಬೆತ್ತಲೆಯಾಗಿರುವವನು ; ನಗ್ನ : ಉಡಿಗೆ ತೊಡಿಗೆ ಇಟ್ಟವರು ವೇಸಿಯಂ ಸೋಂಕಲೊಡನೆ ಬೆತ್ತಲೆ[ಪಾಠಾಂ. ಲಿ]ಗರಾಗಿಹರು (ಗೂಪ್ರುಕ. ೨–೦೦೦).

[ಬತ್ತಲೆ$_1$ + — ಗ$_2$]

**ಬತ್ತಲೆಗಣ್ಣು**, ಬೆತ್ತಲೆಗಣ್ಣು (ನಾ). ೧. (ಅಲಂ) ಜ್ಞಾನದ ಪ್ರಭಾವವಿರದ ಕಣ್ಣು : ಕತ್ತಲೆಯು ಗವಿಯಯ್ಯ ಕವಿಹೃದಯುದಾ ಗುಹ್ಯ; ಬಯಲು ಬತ್ತಲೆಗಣ್ಣಿಗದು ಅಸಹ್ಯ (ಅಡಿಕೇ. ೨–೦೨). **ಬೆತ್ತಲೆಗಣ್ಣು** : ೨. ಕನ್ನಡಕದ ಸಹಾಯವನ್ನು ಹೊಂದದ ಕಣ್ಣು ; ಬರಿಗಣ್ಣು : ಆ ಮಹಾರತ್ನದ ಪ್ರಭೆ ಅವನ ಬೆತ್ತಲೆಗಣ್ಣಿನ ಮೇಲೆ ಬಿದ್ದೊಡನೆಯೇ ಅವನು ಕುರುಡನಾದನು. (ಯೋರಕ್ಕು. ೬೮). [ಬತ್ತಲೆ$_1$+ಕಣ್ಣು(<ಕಣ್)]

**ಬತ್ತಲೆಯಿರ್** 'ಬತ್ತಲಿರು' ನೋ.

**ಬತ್ತಳಿಕೆ** 'ಪತ್ತಳಿಕೆ$_1$' ನೋ.

**ಬತ್ತಳಿಗೆ** 'ಪತ್ತಳಿಕೆ$_1$' ನೋ.

**ಬತ್ತಾಯ**, ಭತ್ತ$_2$, ಭತ್ತಾಯ, ಭತ್ತೆ, ಭತ್ಯ (ನಾ). ೧. ಬತ್ತದ ಬೆಳೆಯಿಂದ ಬರುವ ಉತ್ಪನ್ನ,–ವರಮಾನ : ಕಾಡರಂಬ ನೀರಾರಂಬಕೆ ಸಲುವ ಕೆಱೆ ಕುಂಟೆ ಕೊಣನು ಅಬೆ ಅಚುಕಟುದರೆ ನೆಡಳೆ ಸಕಳಾ ಬತ್ತಾಯ (ಎಕ. X (S), ಕೋಲಾರ. ೩೦೯–೦೫ ; 17ನೆಯ ಶ). ೨. ಜೀವನ ನಿರ್ವಹಣೆಗಾಗಿ ಕೊಡುವ ಹಣ ; ಜೀವನಾಂಶ : "ಬತ್ತಾಯ–ಭೃತ್ಯಾ=ಅಶನಾರ್ಥ" (ಶಬ್ದಕೋ. ೨೬) ; ಆಂ ಬಂದ ದಿನವೊದಲಿಂದು ತನಕೆನ್ನ ಹಿಂದುಳಿದ ಬತ್ತಾಯ ಬಂದುದು (ಹಕಶಾ. ೦೦–೬). **ಭತ್ತ$_2$** : ೩. "ಸರ್ಕಾರಿ ನೌಕರರಿಗೆ ನೀಡುವ ಹೆಚ್ಚುವರಿ ಸಂಬಳ ; ನ್ಯಾಯಾಲಯವು ಸಮನ್ಸುಗಳನ್ನು ಜಾರಿ ಮಾಡುವಾಗ ತಾತ್ಕಾಲಿಕ ನೌಕರರಿಗೆ ಕೊಡುವ ಹಣ, ಕಚೇರಿ ಕೆಲಸದ ಮೇಲೆ ಮಾಡುವ ಪ್ರಯಾಣದ ಖರ್ಚಿಗಾಗಿ ಸಿಬ್ಬಂದಿಗೆ ಕೊಡುವ ಹಣ ಮುಂತಾದುವು" (ಕೃಸಗ. ೩೪೪). **ಭತ್ತಾಯ** : ೧. ಆ ದೇವರ್ಗ್ಗೆ ಬಯ್ಗಿನ ನಿವೇದ್ಯಕೆ ಭತ್ತಾಯ ಹೇರ್ಗೆ (ಎಕ. VII, ಶಿಕಾ. ೨೩೭–೩ ; 1147): ಅರಸರ ಸಿದ್ದಾಯ ಭತ್ತಾಯದೊಳ × × ವದಲು . . . ನಿ[ವೇ] ದ್ಯದ ತುಪ್ಪಕ್ಕೆ ಕೊಟ್ಟರು (ಸೌಇಇ. XI — ii, ೨೦೭–೦೨ ; ? ). **ಭತ್ತೆ** : ೩. ಸಂಬಳ, ಬಡತಿ, ಭತ್ತೆ ಪಿಂಚಣಿ, ಪದವಿ ಇವೇ ಈ ವರ್ಗದ ಪಂಚಪ್ರಾಣಗಳಾದವು (ಪೂವಾದ. ೯೩) ; ಮಾರಾಟದ ಉತ್ಪನ್ನದ ಮೇಲೆ ಭತ್ತೆ . . . ಪ್ರವಾಸದ ಸೌಕರ್ಯ ಇವೆಲ್ಲ ಇದ್ದುವು (ವಾತ್ಸಲ್ಯ. ೩೩). **ಭತ್ಯ** : ೩. ಇಲಾಖೆಯಲ್ಲಿದ್ದಾಗ ನೂರೆಪ್ಪತ್ತೈದು ರೂಪಾಯಿಗಳ ಸಂಬಳ ಬರುತ್ತಿತ್ತು. ಮೇಲೆ ಭತ್ಯ ಬರುತ್ತಿತ್ತು (ರಂಗಳ. ೩) ; ಸುಲ್ತಾನನ ರಾಜ್ಯದಲ್ಲಿ ಹೋದ ಕಡೆಯಲ್ಲೆಲ್ಲಾ ನಮಗೆ ಬೇಕಾದ ಭತ್ಯವನ್ನೂ ಒದಗಿಸಿ ಕೊಡಬೇಕೆಂದು ಅಪ್ಪಣೆಯಾಗಿತ್ತು (ಕ್ರಪಾಇ. II, ೬೭). 'ಭತ್ತಾದಾಯ' ಪರಾ. [ಬತ್ತ$_1$ +ಆಯ$_7$ ./ ಹಿಂ. ಭಾತ್; ಮರಾ. ಭತ್ತಾ. / ಸಂ. ಭೃತ್ಯಾ. / ಲ್ಯಾಟಿನ್ . ಬಸ್ತುಪರ್. / ಇಂ. Batta]

**ಬತ್ತಾಸ** 'ಬತ್ತಾಸು' ನೋ.

**ಬತ್ತಾಸು**, ಬತಾಸು, ಬತ್ತಾಸ (ನಾ). ಸಕ್ಕರೆಯ ಪಾಕದಿಂದ ಮಾಡುವ ಬಗೆಬಗೆಯಾಕಾರದ ಬಗೆಬಗೆಯ ಬಣ್ಣದ ಒಂದು ಸಿಹಿ ತಿಂಡಿ : ಆ ರೊಕ್ಕ ಕೊಟ್ಟು ಬೆಂಡು, ಬತ್ತಾಸು ತಕ್ಕೊಂಡು ತಿನ್ನುವ (ಮುಂಬಯಿ. ೪–೪೪) ; ಅವರು ಮಂಡಕ್ಕಿ, ಹುರಿಕಡಲೆ, ಬೆಂಡು, ಬತ್ತಾಸು ಕೊಂಡುಕೊಂಡರು (ಕಕಕು. ೩–೨೩). **ಬತಾಸು** : ಗೋದುವೆ ತಂಡುಲಾದಿ ಬಹುಚೂರ್ಣಂಗಳೊಡೆವೆರಸಿ ಸಕ್ಕರೆಯಂ ಪರಿಪಾಕದಡಿಗೆಯಿಂ ಘೃತದೊಡನೆ

ಗೈದ ಲಡ್ಡಿಗೆ ಬತಾಸು . . . ಕೊಡುತ (ಶಶಪೋ. ೦೭-೬೦); ಗಂಡು ಹಣ್ಣಿನ ಮೇಲೆ . . . ಕಾಳು, ಬತಾಸು ಮುಂತಾದ ಸಿಹಿತಿಂಡಿಗಳನ್ನು ಎಸೆಯುತ್ತಾರೆ (ಕೃಜಾಇ. II. ೪೪೭). **ಬತ್ತಾಸ** : ಸಕ್ಕರೆಯ ಬೆಂಡು ಬತ್ತಾಸಗಳ ಪರ್ವತವೇ ಬಿದ್ದಿತು (ಹಬ್ಬಿ. ೬೦) ; ಬಂದ ಮುತ್ತೈದೆಯರಿಗೆ, ಕುಮಾರಿಯರಿಗೆ . . . ಪೇಢೆ, ಬತ್ತಾಸಗಳನ್ನು ಹಂಚುತ್ತಾರೆ (ಜಾಹಬ್ಬ. ೬೨). [←ಹಿಂ. ಬತಾಸಾ, ಬತಾಶಾ; ಮರಾ. ಬತ್ತಾಸಾ, ಬತಾಸಾ]

**ಬತ್ತಿ** (ನಾ). ೧. (ದೀಪಕ್ಕೆ ಹಾಕುವ) ಹುರಿ ಮಾಡಿದ ಹತ್ತಿಯ ಎಳೆ, —ತಿರಿ; ವರ್ತಿ : ಸೊಡರೊಳ್ ಬತ್ತಿಯುಮೆಣ್ಣೆಯುಮೊಡನಳಿವ ಪೊಲಾಯುಮಂ ಶರೀರಮು[ಮ]ಮಳಂತೊಡದವೆ ನೋಂತಂ ಮುನಿ ಮುನ್ನೊಡವುಟ್ಟಿದು ಪೊಡನೆ ತವುವುದೌಚಿತ್ಯಮೆನಲ್ (ಶಾಂತಿಪು. ೪-೧೦೮); ಪಣಿತೆಯೂ ಇದೆ ಬತ್ತಿಯೂ ಇದೆ ಜ್ಯೋತಿಯ ಬೆಳಗುವಡೆ ತೈಲವಿಲ್ಲದೆ ಪ್ರಭೆ ತಾನೆಲ್ಲಿಯದೋ (ಅವಶಂ. ೦೪-೭೮) ; ಬತ್ತಿ ಹೆತ್ತುಪ್ಪವನ್ನು ಹೊತ್ತಿಸಿದ ಫಲವೇನು ಮತ್ತೊಂದು ದೈವಕೆಱಗುವನ ಶಿವಪೂಜೆ ಹತ್ತಿಗೇಡು (ಸರ್ವಜ್ಞ. ೦೬೨). ೨. ಸಿಡಿಮದ್ದನ್ನು ಹತ್ತಿಸಲು ಬಳಸುವ ಒಂದು ಬಗೆಯ ಸಾಧನ : ದಾದಲ್ಯಾ. . .ಖಂಡಿಯ ಬಾಯಿಗೆ ಮದ್ದು ಜಡಿದು, ಬತ್ತಿ ಸೇರಿಸುವ ಸನ್ನಾಹ ಮಾಡತೊಡಗಿದ (ದೀಶಹ. II. ೦೬೭); ಬತ್ತಿ ನೂಕಲಾರದ ಬಂಟ ದಳ ನಡಿಸ್ಯಾನೇ ? (ಗಾದೆ). 'ಜಾವಿಗೆಬತ್ತಿ' ಪರಾ. ೩. ಕಂದೀಲು; ಮೋಂಬತ್ತಿ: (ಈ). ೪. ವಿರೇಚನಚಿಕಿತ್ಸೆಗಾಗಿ ಔಷಧದಲ್ಲಿ ಅದ್ದಿ ಗುದದಲ್ಲಿ ಇಡುವ ವೈದ್ಯಕೀಯ ಸಾಧನ ; ಔಷಧಿಯಲ್ಲಿ ಅದ್ದಿ ತೆಗೆದ ಹತ್ತಿಯ ತಿರಿ : ಸುರದಾರು ಸೊರೆಯ ಬೀಜಂ ಸುರವಾರುಣಿ ಬೆಲ್ಲಮೆಂಬಿವಿನಿತುಮನೊಂದಾಗಿರೆ ಮಿದಿದು ಮಾಡಿ ಬತ್ತಿಯನಿರಿಸುಗೆ ಗುದದೊಳಗೆ ಕಳೆಗುಮರಿಸೆಯ ಮೊಳೆಗಳ್ (ಲೋಕೋಪ. ೪-೦೪೪) ; ಪುಣಸೆಯ ಪಣ್ಣ ಬತ್ತಿಯೊಳ್ ಸೈಂಧವಮಂ ಬೆರಸಿ ಗುದಮುಖದೊಳಿಡೆ ಬಾಹಿರಮುಕ್ಕುಂ ಕಠಿನಮಾಗಿ ಬಿಗಿದಿದ್ದ ಮಲಂ (ಅಶ್ವಶಾ. ೦೦-೨೭). ೫. ಸುಗಂಧವನ್ನು ಲೇಪಿಸಿರುವ ಕಡ್ಡಿ : 'ಅಗರುಬತ್ತಿ', 'ಊದುಬತ್ತಿ' ಪರಾ. ೬. ಹೊಗೆಸೊಪ್ಪು ಸೇದಲು ಎಲೆಯನ್ನು ಸುತ್ತಿ ಮಾಡಿದ ಸುರುಳಿ ; ಬೀಡಿ, ಚುಟ್ಟಾ ಮುಂತಾದುವು : ಬದುವಿನ ಮೇಲೆ ನಾಗಣ್ಣ ಬತ್ತೀ ಸೇದುತ್ತ ಕುಳಿತಿದ್ದ (ಪೀಠಮ. ೫) ; ಮಂದೀ ನಗಿಯೊಳಗ ಬತ್ತೀ ಕಮರಿನ ಹೋಗೀ ಎತ್ತ್ಯ. ಇದೇನು ಖಾಟ ನಮ್ಮವ್ವಾ ! (ಹೊಸಂಜಾ. ೮೪). ೭. (ಆಲಂ) ಎಳೆಯ ಮಗು ; ಹಸುಳೆ ; ಹಸಂಗೂಸಂ : "ಕುಡ—ಬಾಲ್ಯೇ, ಹಸುಳೆತನದೊಳ್ . . . ಕುಡು=ಬತ್ತಿ" (ಶಾಶಕ್ಕ. ೨೨೯) ; ತನ್ನ ತೊಡೆಯ ಮೇಲೆ ಮಗನನ್ನು ಕೂಡಿಸಿಕೊಂಡು ಹತ್ತು ತಿಂಗಳ ಬತ್ತಿಗೆ ಉಣ್ಣಿಸುವಂತೆ ಉಣ್ಣಿಸುವಳು (ವ್ಯಕಿ. ೦೯೦). ೮. (ಹತ್ತಿಯ) ಚೂರಂ ; ತುಂಡು : ದೇವಾರ್ಚನೆಗಳಾದ ವಿಧಾನದೊಳು[ಳ] ಗಾಚರಿತರಾಗಿಹರಲ್ಲದುಣಾವಾಗ ಪೀನಘಂಟೆಗಳುಳಿದು ಬತ್ತಿಗಳಾನಿಸುತ ಕರ್ನದಲಿ (ಬಿಜ್ಜಳ. ೬-೨೪) ; ಕಿವಿಯ ಕುಳಿಗಳಲ್ಲಿ ಪಚ್ಚೆಕಪ್ಪುರದ ಬತ್ತಿಗಳನಿತ್ತು (ಸೌಗಂಧಿ. ೫೦೬-೦).

**ಬತ್ತಿಕೊಡು** = (ಆಲಂ) ಮೋಸ ಮಾಡು ; ದಗಾ ಹಾಕು : ಈ ಹಾಳು ಸುಳಾವಲಿ ಇವೊತ್ತು ಬತ್ತಿ ಕೊಟ್ಟ (ಬೆಳುವ. ೦೬೬) ; ನನ್ನ ದೋಸ್ತಿಗಳೇ ನನ್ನ ಬುಡಕ್ಕೆ ಬತ್ತಿ ಕೊಟ್ಟರು (ಕಂಗೂಬಿ. ೯೫). **ಬತ್ತಿಯಿಡು** =ಕೆಡಕು ಮಾಡುವುದಕ್ಕಾಗಿ ಚಾಡಿಹೇಳು: ಹೊಟ್ಟೆಕಿಚ್ಚಿನಿಂದ ಕೆಲವರು ಬತ್ತಿಯಿಟ್ಟು ಅವರ ಸಂಸಾರವನ್ನೇ ಹಾಳು ಮಾಡಿದರು (ರೂಢಿ). **ಬತ್ತಿ ಹಚ್ಚು** = ಆಸ್ಫೋಟನೆಯನ್ನುಂಟುಮಾಡು : ನಾಲ್ಕಾರು ಜನರ ಮಧ್ಯ ಓಡಾಡಿ ಬತ್ತಿ ಹಚ್ಚುವುದೇ ಅವನ ಸ್ವಭಾವ (ರೂಢಿ).

[← ಹಿಂ. ಬತ್ತೀ. / ಸಂ. ವರ್ತಿ]

**ಬತ್ತಿಕೋವಿ** (ನಾ). ಹತ್ತಿಯಿಂದ ಬೆಂಕಿ ಹಚ್ಚುವ ಸಿಡಿಮದ್ದಿನ ಬಂದೂಕ : ಬತ್ತಿಕೋವಿ, ಭರ್ಜಿ, ಈಟಿ, ಉದ್ದಗತ್ತಿ, ಬಿಲ್ಲುಬಾಣಗಳ ಸಾಹಸಿಗಳೂ ಅಲ್ಪ ಸ್ವಲ್ಪ ಇರುತ್ತಿದ್ದರು (ಕುಲಕಮ. ೬೫).

[ಬತ್ತಿ + ಕೋವಿ₁]

**ಬತ್ತಿಗೆ** (ನಾ). ನೀರು ಮುಂತಾದ ದ್ರವಪದಾರ್ಥಗಳನ್ನು ತುಂಬಿಡಲು ಹಾಗೂ ಸಾಗಿಸಲು ಬಳಸುವ ಚರ್ಮದ ಚೀಲ; ತಿತ್ತಿ: ನಾನಾವಿಧ ಪಾನಕದ ತುಂತುರುಗಳಿಂದ ಕೆಂಪಾಗಿರುವ ಗೋಚರ್ಮದ ಬತ್ತಿಗೆಯಂ ಪಿಡಿದು (ಕೃಪಾಂ. ೫). [< ಸಂ. ಭಸ್ತ್ರಿಕಾ]

**ಬತ್ತಿಸು** (ಕ್ರಿ). ೧. ನೀರಿಲ್ಲದಂತೆ ಮಾಡು ; ಒಣಗಿಸಂ ; ಇಂಗಿಸಂ : ಬತ್ತಿಸಿದನಂದಹಿತಸುಭಟರ ವೀರಶರನಿಧಿಯ (ಕುಮಾರವ್ಯಾ. ೨-೨೮) ; ಉಗ್ರನೇಱುವ ಮಹಾವಾಹನದ . . . ನಾಲ್ಕುಪಾದಾಗ್ರಹತಿಗೇಳ್ಕೆಂಧೂಳ್ ಬತ್ತಿಸಿತು ಗಗನಗಂಗಾನದೀಜಲವನು (ಕಬ್ಬಿ. ೪೪-೦೦) ; ಈ ಖಳಬಲಸಾಗರವನು ಕುಂಭಜನ ಆಗಮದಂದದೆ ಬತ್ತಿಪೆ (ಕಂಪರಾ. ೦೨-೪೬). ೨. (ಬೆಂಕಿ, ದೀಪ ಮುಂತಾದುವನ್ನು) ಆರಿಸು ; ನಂದಿಸು : ಬಡಬಾಗ್ನಿಯ ಬಾಯನೆಯ್ದೆ ಬತ್ತಿಸುವುದು ತೇಜಂ (ಎಕ. VII, ಶಿಶಪೂ. ೪-೯೩ ; 1122) ; ಬತ್ತಿಯು ಬತ್ತಿಸಗೊಡದಲೆ, ಸುಡುತಿರಲು ಬೆಳಕಿನ ಕುಡಿಯಾಗಿ ಮೆರೆಯುವದು (ಹೊಂಗಿ. ೩೯-೪೮೭). ೩. ದ್ರವಪದಾರ್ಥವನ್ನು ಕುದಿಸಿ ಇಂಗಿಸು ; ಅಟ್ಟಿಸು : ಕಷಾಯವನ್ನು ಬತ್ತಿಸುವುದರಲ್ಲಿ ತುಸು ಹೆಚ್ಚು ಕಡಿಮೆಯಾದರೆ ಗಾಬರಿಯಿಲ್ಲ (ಮನೆಮ. ೨). ೪. ಅಡಗಿಸಂ; ಇಲ್ಲವಾಗಿಸು ; ನಾಶಮಾಡು : ಬತ್ತಿಸಿ ನೃಪಾಲರಾಟೋಪಮಂ ಕೋಪದಿಂ (ಜಕ್ಕಾಂಗ. ೬೨-೦೪೬೪). [ಬತ್ತು₁ + — ಇಸು₂]

**ಬತ್ತೀಸ** (ನಾ). ಒಂದಂ ಸಂಖ್ಯೆ ; ಮೂವತ್ತೆರಡು : ಕಂಬಳಿಯ ಹಱಕಿನಲ್ಲಿ ಬತ್ತೀಸಕೋಟಿ ದೇವರ್ಕಳೆಲ್ಲರು ಸಿಕ್ಕಿ ಅಳಲುತ್ತ ಬಳಲುತ್ತಲೈದಾರೆ (ಮೋಳಿಗೆ. ೯-೨೪) ; ಮಾದಿರಾಜಂ ಮತ್ತೆ ಬತ್ತೀಸಾದಿ ರಾಗಂಗಳ ಗನಿತು ದಂಡಿಗೆಗಳಂ ರಚಿಸಿ ವೇದಿಸಲು (ಬಸವ. ೦೪-೬) ; ಈ ವಚನಗಳು . . . ಅಂದು ಬಳಕೆಯಲ್ಲಿದ್ದ 'ಬತ್ತೀಸ' ಎಂದರೆ ೩೨ ರಾಗಗಳಲ್ಲಿ ಹಾಡಲ್ಪಡುತ್ತಿದ್ದವು (ಸಂಗೀತಂ. ೭೪).

[< ಪ್ರಾ. ಬತ್ತೀಸ. / ಹಿಂ. ಮರಾ. ಬತ್ತೀಸ್. / ಸಂ. ದ್ವಾತ್ರಿಂಶತ್]

**ಬತ್ತೀಸಕಡಿ** (ನಾ). (?) : ಬತ್ತೀಸಕಡಿಯು ಬಾಹರಪುಟದ ಗುಳವದ ಕಣಂಗಳ ಕುಳಿಶದಳಂ (ಅವಂತಿ. ೦೪-೬ ಪ). 'ಬತ್ತೀಸಾಯುಧ' ಪರಾ.

[ಬತ್ತೀಸ + ಕಡಿ₁]

**ಬತ್ತೀಸಕಲೆ** (ನಾ). [ವೀಶೈ] ಮೂವತ್ತೆರಡು ಕಲೆಗಳು ; "ಮೂವತ್ತೆರಡು (ಬತ್ತೀಸ) ಕಳೆಗಳು : ಸದಾಚಾರ, ಸದ್ಭಕ್ತಿ, ಸಮ್ಯಕ್‌ಜ್ಞಾನ, ಸತ್ಕ್ರಿಯೆಂ, ಸದ್ವರ್ತನೆ, ಸಗುಣ, ನಿರ್ಗುಣ, ನಿಜಗುಣ, ಸಚ್ಚರಿತ, ಸದ್ಭಾವ, ಅಕ್ರೋಧ, ಸತ್ಯವಚನ, ಕ್ಷಮೆ, ದಮೆ, ಭವಿಭಕ್ತಭೇದ, ಸತ್ಪಾತ್ರದ್ರವ್ಯಾರ್ಪಣ, ಗೌರವಬುದ್ಧಿ, ಲಿಂಗಲೀಯ, ಜಂಗಮಾನುಭಾವ, ದಶವಿಧಪಾದೋದಕ, ಏಕಾದಶಪ್ರಸಾದ, ಷೋಡಶಭಕ್ತಿನಿರ್ವಾಹ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಚನೆ, ತ್ರಿವಿಧ ಷಡ್ವಿಧ ನವವಿಧ ಜಪ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಪಿತ, ಚಿದ್ಭೂತಿ ಸ್ನಾನ ಧೂಳನಧಾರಣ, ಸರ್ವಾಂಗದಲ್ಲಿ ಚಿದ್ರುದ್ರಾಕ್ಷಧಾರಣ, ತಾ ಮಾಡುವ ಸತ್ಯಶುದ್ಧ ಕಾಯಕ, ತಾ ಬೇಡುವ ಸದ್ಭಕ್ತಿ ಭಿಕ್ಷೆ, ತಾ ಕೊಟ್ಟು ಕೊಂಬುವ ಭೇದ, ತಾನಾಚರಿಸುವ ಸತ್ಯ ನಡೆನುಡಿ, ತಾ ನಿಂದ ನಿರ್ವಾಣಪದ—ಇಂತಿವು ೩೨ ಕಲೆಗಳು" (ಶಸ್ಪತ. ೪. ೪೦೬೬) : ಷೋಡಶಭಕ್ತಿಯ ಮಾರ್ಗವ ತಿಳುಹಿ ಬತ್ತೀಸಕಲೆಯ ನೆಲೆಯನಱುಹಿ . . . ನಿರೂಪವ ಕೊಡಲು (ಶಸ್ಪತ. ೪. ೩೫೩-೭೩೪). [ಬತ್ತೀಸ + ಕಲೆ₂]

**ಬತ್ತೀಸಪುತ್ಥಳಿ** (ನಾ). ಮೂವತ್ತೆರಡು ಗೊಂಬೆಗಳು,—ವಿಗ್ರಹಗಳು. **ಬತ್ತೀಸಪುತ್ಥಳಿಕಥೆ, ಬತ್ತೀಸಪುತ್ಥಳಿಕತೆ** = ವಿಕ್ರಮಾದಿತ್ಯರಾಜನ ಸಿಂಹಾಸನದ ಎರಡು ಬದಿಗಳಲ್ಲೂ ಅಳವಡಿಸಿದ್ದ ಮೂವತ್ತೆರಡು ಗೊಂಬೆಗಳು ಸಜೀವವಾಗಿ, ಭೋಜರಾಜನಿಗೆ ಹೇಳಿದುವೆಂದು ಭಾವಿಸಲಾದ ಮೂವತ್ತೆರಡು ಕಥೆಗಳು: ವಿಚಿತ್ರವಸ್ತುಗಳನ್ನು ಕೇಳುವುದೆಂದರೆ ಮಕ್ಕಳಿಗೆ ಆನಂದ . . . ಬತ್ತೀಸಪುತ್ಥಳಿಕಥೆಗಳು ಈ ಮಾದರಿಯವು (ಬಾಂಕೃ. I, ೨೦೯); ಓದುವಾಗ . . . ಅದು ಬತ್ತೀಸ ಪುತ್ಥಳಿಕತೆಯಾದರೂ ಸರಿಯೆ; ಯವನಯಾಮಿನಿಕಥೆಗಳಾದರೂ ಸರಿಯೆ ಮನಸ್ಸಿಗೆ ಸಂತೋಷವಾಗುತ್ತದೆ (ಮೂಕಕ್ಕ. ೩). [ಬತ್ತೀಸ + ಪುತ್ಥಳಿ]

**ಬತ್ತೀಸರಾಗ** (ನಾ). [ಸಂಗೀತ] ಪ್ರಸಿದ್ಧವಾದ ಮೂವತ್ತೆರಡು ಬಗೆಯ ರಾಗಗಳು; ☞ "ರಾಗಗಳು — ೮ ಪುರುಷರಾಗಗಳು: ಭೈರವಿ, ಭೂಪತಿ (ಭೂಪಾಲ), ಶ್ರೀರಾಗ, ರಾಗಪಂಜರ, ವಸಂತ, ಮಾಲವ, ಬಂಗಾಲ, ನಾಟಕ (ನಟ್ಟ); ೨೪ ಸ್ತ್ರೀರಾಗಗಳು: ಭೈರವಿಗೆ: ದೇವಕ್ರಿಯಾ, ಮೇಘರಂಜೀ, ಕುರಂಜೀ; ಭೂಪಾಲಕ್ಕೆ: ಬೇಲಾವುಲೀ, ಮಲಹರಿ, ಭೌಲೀ; ಶ್ರೀರಾಗಕ್ಕೆ: ಅಂಧಾಲೀ, ಭಲಾತೀ, ಮಾಹುರೀ; ರಾಗಪಂಜರಕ್ಕೆ: ದೇಶೀ, ಲಲಿತಾ, ತೋಡೀ; ವಸಂತಕ್ಕೆ: ರಾಮಕ್ರಿಯಾ, ವರಾಲೀ, ಕೌಶೀ; ಮಾಲವಕ್ಕೆ: ಗುಂಡಕ್ರಿಯಾ, ಘೂರ್ಜರೀ, ಗೌಲೀ; ಬಂಗಾಲಕ್ಕೆ: ಕರ್ಣಾಟ ಗೌಲಿಕಾ, ಧನ್ಯಾಸಿಕಾ, ಕಾಂಭೋಜೀ; ನಟ್ಟವಿಗೆ: ದೇಶಾಕ್ಷೀ, ಆಹರೀ, ನಾರಾಯಣೀ (ಅಭಸಂ. ೧೦೧೪-೧೦೨೪)" (ಶ್ರೀತತ್ವ. ೬೭೩): ಎನ್ನ ಕಾಯುವ ದಂಡಿಗೆಯ ಮಾಡಯ್ಯಾ . . . ಬತ್ತೀ[ಕಾಕಾಂ. ಕ್ರಿ]ಸರಾಗವ ಹಾಡಯ್ಯಾ (ಬಸವ. ೩೦೦); ಶಿವನ ಮೂರ್ತಿಯನೊಲಿದು ಪಾಡುತಂ ಬತ್ತೀಸರಾಗಂಗಳಿಂದೆ (ರಾಶಶ. ೨-೦೯). [ಬತ್ತೀಸ + ರಾಗ]

**ಬತ್ತೀಸಲಕ್ಷಣ** (ನಾ). ಮೂವತ್ತೆರಡು ಬಗೆಯ ಗುರುತುಗಳು,—ಚಿಹ್ನೆಗಳು; ☞ "(ಅ) ಲಕ್ಷಣ — ೩೨ (ಅ) ಮಹಾಪುರುಷಲಕ್ಷಣ (ಬತ್ತೀಸಶುಭಲಕ್ಷಣ) — ೩೨: ಪಂಚಸೂಕ್ಷ್ಮಗಳು: ತ್ವಕ್, ಕೇಶ, ಅಂಗುಲಿ, ದಂತ, ಅಂಗುಲಿಪರ್ವ; ಪಂಚದೀರ್ಘಗಳು: ಭುಜ, ನೇತ್ರ, ಹನು, ಜಂಘೆ, ನಾಸಿಕ; ಸಪ್ತರಕ್ತಗಳಂ—ಹಸ್ತ ತಲ, ಪಾದತಲ, ಅಧರೋಷ್ಠ, ನೇತ್ರ, ತಾಲು, ನಾಲಗೆ, ಉಗುರು; ಷಡುನ್ನತಗಳು—ವಕ್ಷಃಸ್ಥಲ, ಕುಕ್ಷಿ, ಕೇಶ, ಸ್ಕಂದ, ಹಸ್ತ, ಬಾಯಿ; ಪೃಥುತ್ರಯಗಳಂ—ವಕ್ಷಸ್ಥಲ, ಕಟಿ, ಲಲಾಟ; ಲಘುತ್ರಯಗಳು—ಗ್ರೀವಾ, ಜಂಘಾ, ಶಿಶ್ನ; ಗಂಭೀರತ್ರಯಗಳು —ಸ್ವರ, ಕರ್ಣ, ನಾಭಿ (ಬೌದ್ಧಧರ್ಮಾನಂಸಾರಸಂಗ್ರಹ — ಸಂ. ೨೨೪–೫). (ಆ) ಸಾಮುದ್ರಿಕಲಕ್ಷಣ — ೩೨: ಛತ್ರ, ಕಮಲ, ಮನುಷ್ಯ, ರಥ, ವಜ್ರ, ಕಚ್ಛಪ, ಅಂಕುಶ, ವಾಪಿ, ಸ್ವಸ್ತಿಕ, ತೋರಣ, ಚಾಮರ, ಸಿಂಹ, ವೃಕ್ಷ, ಚಕ್ರ, ಶಂಖ, ಹಸ್ತಿ, ಸಮುದ್ರ, ಕಲಶ, ಪ್ರಾಸಾದ, ಮತ್ಸ್ಯ, ಯವ, ಸ್ತಂಭ, ಸೂರ್ಯ, ಕಮಂಡಲ, ಪರ್ವತ, ಚವರೀ, ದರ್ಪಣ, ವೃಷ, ಪತಾಕಾ, ಲಕ್ಷ್ಮೀ, ಪುಷ್ಪಮಾಲಾ, ಮಯೂರ (ಹಸ್ತಸಾಮುದ್ರಿಕ ಶಾಸ್ತ್ರ — ಸಂ. ೨೨೫–೨೨೬). ಸ್ವಶರೀರ, ಕುಲಿಶ, ದ್ವೀಪ, ಸಮುದ್ರ, ಭವನ, ವಿಮಾನ, ಬಾಣ, ಗೋಪುರ, ಇಂದ್ರಕೇತು, ಶಂಕ, ಪತಾಕ, ಮುಸಲ, ಹಯ, ರವಿ, ಶಶಿ, ಸ್ವಸ್ತಿಕ, ದಾರು, ಕೂರ್ಮ, ಅಂಕುಶ, ಸಿಂಹ, ಗಜ, ವೃಷಭ, ಮತ್ಸ್ಯ, ಛತ್ರ, ಶಯ್ಯಾ, ಆಸನ, ವರ್ಧಮಾನ, ಶ್ರೀವತ್ಸ, ಚಕ್ರ, ಅನಲ, ಕುಂಭ (?) (ಶಾಸ್ತ್ರಸಾರಸಮುಚ್ಚಯ)" (ಶ್ರೀತತ್ವ. ೩೬೦). [ಬತ್ತೀಸ+ಲಕ್ಷಣ]

**ಬತ್ತೀಸಶಸ್ತ್ರ** (ನಾ). = ಬತ್ತೀಸಾಯುಧ: ಕಲಿಗೆ ಮುಖದರ್ಪಣ ಬತ್ತೀಸಶಸ್ತ್ರಶಾಸ್ತ್ರಪ್ರವೀಣ (ಕೊರ್ಕ್ಶಾ. ೯-೩೭; 1171); ಬತ್ತೀಸಶಸ್ತ್ರ ಗಳಲಿಟ್ಟು ಬೊಬ್ಬೆಯನಿಟ್ಟು . . . ಬತ್ತರದ ಪರಿಘಂ ಪೊಡೆಯೆ (ವಂಕಾರಾ. ೩-೦೩-೭). [ಬತ್ತೀಸ + ಶಸ್ತ್ರ]

**ಬತ್ತೀಸಾಯುಧ** (ನಾ). ಮೂವತ್ತೆರಡು ಬಗೆಯ ಅಸ್ತ್ರಗಳು; ☞ ಈ ಆಯುಧಗಳ ವಿವರದ ಬಗ್ಗೆ ಬೇರೆ ಬೇರೆ ಗ್ರಂಥಗಳಲ್ಲಿ ವ್ಯತ್ಯಾಸ ಗಳಿವೆ. "ಆಯುಧ—೩೨ (ಬತ್ತೀಸಾಯುಧ): ಚಕ್ರ, ಭಿಂಡಿ ವಾಳ, ಭೃಶುಂಡಿ, ದೃಘಣ, ದಂಶಕಂಟಕ, ಇಳಾಹಸ್ತ, ಇಷು, ಮುಸಲ, ಮೌಷ್ಟಿಕ, ಮಯೂಖ, ಲಗುಡ, ಲವಿತ್ರ, ಪರಿಘ, ಪ್ರಾಸ, ಪಾಶ, ಶಕ್ತಿ, ಶತಘ್ನಿ, ಸೀರ, ಸ್ಥೂಣ, ತೋಮರ, ಗದಾ, ಗೋಶೀರ್ಷ, ಅಮುಕ್ತವಜ್ರ, ಅಸ್ತರ, ಅಸಿಧೇನುಕ, ಪಟ್ಟಸ, ಮುದ್ಗರ, ಪಿನಾಕ, ಕುಂತ, ಕಾಳರಾತ್ರಿ, ಯಾಪನ, ನಳಿಕಾ (ನೀತಿ ಪ್ರಕಾಶಿಕಾಸಂಖ್ಯಾರತ್ನಮಾಲಾ. ಪು. ೨೯೦); ಖಡ್ಗ, ಕರಾಚೂರಿ, ಕಕ್ಕಡ, ಕಡುಗತ್ತಿ, ಸಣೆಗತ್ತಿ, ಸಬಳ, ಈಟಿ, ಇದುರುಗತ್ತಿ, ಉಬ್ಬಣ, ಕಬ್ಬಿ(ಣ)ಕೋಲು, ಚಕ್ರ, ಚಂಡು, ವೋತಿ, ಚಲ್ಲೆಹ, ಬಲ್ಲಿಹ, ಬಂಕು, ಬಾಣ, ನೆದೆ, ನರಾದಿ, ಶೂಲ, ಶಿರಾದಿ, ಚೂರಿ, ಚಿಕ್ಕತಾರಿ, ಕಿರಸೆ, ಪರಶು, ಪಾಶ, ಪಟ್ಟೆಯ, ಮುಟ್ಟ, ಅಂಕುಶ, ವಂಕಿ, ಲೌಡಿ, ಜವದಾಡೆ (?) (ವಿಚಂ. ೧೬೩-೨೬೩. ೬-೪೩೪): ಬಾಣ, ಖಡ್ಗ, ತೋಮರ, ಸ್ತೋಮ, ಸೃಗ, ಚೇರಿ, ಶಕ್ತಿ, ಯಷ್ಟಿ, ಭಿಂಡಿವಾಲ, ಪರಿಘ, ಪರಶು, ಗದೆ, ಪ್ರಾಸ, ಮುದ್ಗರ, ಮುಸಲ, ಶೂಲ, ಪಾಶ, ಚಕ್ರ, ಮುಸಂಡಿ, ವಜ್ರ, ದಂಡ, ಹಲ, ಅಶನಿ, ಕುಂತ, ಅರಿಷ್ಟ, ಕ್ರಕಚ, ಪರಶು, ಶಂಕು, ತೋತ್ರ, ವೇಣು, ತ್ರಿಶೂಲ, ಕುಸೂಲ (ವಿದ್ಯಾಕ. ೧೩)" (ಶ್ರೀತತ್ವ. ೩೩): ಬತ್ತೀಸಾಯುಧದಲ್ಲಿ ಅಭ್ಯಾಸವ ಮಾಡಿದರೇನು ಹಗೆಯ ಕೊಲುವರೆ ಒಂದಲಗು ಸಾಲದೆ (ಬಸವ. ೬೭೯); ಬತ್ತೀಸಾಯುಧಂಗಳು ಮೆರೆವ ಕರಗಳಲಿ ತೊನೆವ ಶ್ರೀಮೂರ್ತಿಯನು ನರಹರಿ ದನುಜಗಾಗಳೆ ತೋರುತಿರಲು (ಸಂಶತ. ೬-೯೯); ಜಡಿವ ಬತ್ತೀಸಾಯುಧಂಗಳ ಸುಭಟರ ಬೆಡಗಿನ ನಿಕರವೊಪ್ಪಿಹುವು (ಕಂವಿ. ೬-೩೯). [ಬತ್ತೀಸ + ಆಯುಧ]

**ಬತ್ತು₁** (ಕ್ರಿ). ೧. ಒಣಗು; ಆರು; ಇಂಗು: "ಬತ್ತು—ನಿರ್ದ್ರವೇ" (ಕವಿರಾ); ಕೆಮ್ಮುಂ . . . ಬಾಯ್ ಬತ್ತುವುದುಂ (ಕಷ್ಕ್ಕರಾ. ೩೩-೩); ಒಡಲುರಿಗುಂ ಮನಂ ಮಱುಗುಗುಂ . . . ಬಾಯ್ಬಿಡದೆ ಬತ್ತುಗುಂ (ಅಂಪು. ೦೨-೯೦); ಕುರುಪತಿ ನಿನ್ನ ಪೊಕ್ಕ ತೊಱೆಗಳ್ಗೊದಲಾಗಿರೆ ಬತ್ತಿ ದಪ್ಪುವು (ಗದಾಯು. ೬-೦೨); ಸಾಗರ ಬತ್ತಲೆಡೆಯಲಿ ನಿಂದ ನೀರ ಪೊಲಾಯ್ತು ಕುರುಸೇನೆ (ಕುವ್ಯಾ.ಶ. ೨-೭). ೨. ಬರಿದಾಗು; ಶೂನ್ಯವಾಗು; ಖಾಲಿಯಾಗು: (ಕ). ೩. ಗೊಡ್ಡಾಗು; ಬರಡಾಗು: ಹತ್ತುಮತ್ತರದ ಭೂಮಿ ಬತ್ತುವ ಹಯನು ನಂದಾದೀವಿಗೆಯ ನಡೆಸಿಹೆವೆಂಬವರ ಮುಖವ ನೋಡಲಾಗದು (ಬಸವ. ೨೨೩). ೪. ಸೊರಗು; ಜೋಲು; ಕುಗ್ಗು: ತಾಪತ್ರಯದೊಳಿ ಕುದಿದೆಂ ಬತ್ತಿದೆಂ ಬಾಡಿದೆಂ ಯಾತನೆಗೊಂಡೆಂ (ರಕ್ಷಾಶ. ೯-೨೨); ತೊಗಲು ಸಡಿಲಿದ ಗಲ್ಲ ಬತ್ತಿದ ಹೆಗಲು ನಱುಕಿದ ನರೆತ ಮೀಸೆಯು. . . ಮುಪ್ಪಿನ ಮುಗುದನೀತನ ಕಾದ ಹೇಳಿದು ನಗೆಯ ಸುರಿದೈ (ಕುವ್ಯಾಭೀ. ೦-೩೩); ಬತ್ತಿರ್ದ ಮೊಲೆಯ ಕುಪ್ಪುಸದೊಳಱುಮೆಯ ಚೆಂಡನೊತ್ತಿ ಬಿಗಿದುಂ . . . ಹಣ್ಣುಮುದುಕಿಸೂಳೆಯರೆಸೆದರು (ಚಂಪು. ೦೦-೬೬). ೫. ಮಂಕಾಗು; ಕಂದು; ಕಾಂತಿಯಿಲ್ಲದಿರು: ಬತ್ತಿರ್ದ ವಕ್ತ್ರಾಂಬುರುಹಂ ಮಿಂಚಾ ಗಲಿರ್ಪಂ ತೊಡೆದು (ರಕಕು. ೬-೦೯೭); ಬಾಗಿದೊಡಲಿನ ಬತ್ತಿದಾನನದ. . . ಶಬರಿಯ ಸುಪ್ರಸಿದ್ಧೆಯ ಸಾರ್ದರೊಲವಿನಲಿ (ತೊರರಾ. ೩-೦೨-೨೯). ೬. (ಧ್ವನಿಯು) ಕುಗ್ಗು: ಕಡಮೆಯಾಗು: ಚೀಱದೆ ಬತ್ತದೆ ಜತಿ

ಜಾತಿ ಕಟ್ಟಣೆ ಜಾಜದೆ . . . ಸವಿದೋಱ ಹಾಡಿದರು ಗಾಯಕರು (ಅಜಿ. ೬-೬೨). ೭. ದ್ರವಪದಾರ್ಥವು ಕುದಿದು ದ್ರವಾಂಶವು ಕಡಮೆಯಾಗಿ ಗಟ್ಟಿಯಾಗು : ಅಟ್ಟು : ಕಾಯ ಬತ್ತಿದ ಹಾಲು ಚಿಲುವಾಲನಿಕ್ಕು (ಮುಗರಾ. ೬೯-೨); ಎಳೆಯ ಹಲಸಿನ ಕಾಯ ಕುದಿಸಿ ಮತ್ತೊಮ್ಮೆ ಹಾಲೊಳಗುಪ್ಪನಿಕ್ಕಿಯದ ಬತ್ತುವಂದದಿಯಟ್ಟು (ಸೂಶಾ. ೯-೯೬). ೮. ಇಲ್ಲವಾಗು ; ಮಾಯವಾಗು : ಕುಮುದಂಗಳ ನಗೆ ಬತ್ತಿದುವು ಪಾಯ್ವು ನೇಸಱನಾಗಳ್ (ಲೀಲಾವ. ೩-೫). 'ಬಚ್ಚು₃' ಪರಾ.

[ದೇ. ‖ ತಮಿ. ಮಲ. ವಱ; ತುಳು. ಬತ್ತು; ಕೊಡ. ಬತ್; ತೆಲು. ವತ್ತು, ವರುಟು; ಕೋಲಾ. ವತ್ ; ಪರ್ಜಿ. ವೆತ್, ವೆಟ್; ಗಡಬ. ವಟ್; ಗೊಂಡಿ. ವತ್ತಾನಾ; ಕುರುಖ್. ಬತ್ತಾನಾ]

**ಬತ್ತು₂** (ನಾ). ಒಣಗಿದುದು; ಒಣಕಲು; ಶುಷ್ಕವಾದುದು. ಬತ್ತಾಗು = ಒಣಕಲಾಗು ; ಬಾಡು : ಬಿತ್ತು ಮರ ಪಲ್ಲವಿಸಿ ಫಲವಾಯ್ತು ತಳಿತ ಮರ ಬತ್ತಾಯ್ತು . . . ಬತ್ತಿದುವು ಕೆರೆ ಭಾವಿ ಹರಿ ಚಕ್ರವಂ ತುಡುಕಲು (ಕುಹಂಗ. ೨೨-೪೦). [< ಬತ್ತು₁]

**ಬತ್ತುಂಬಯ** 'ಬತ್ತುಂಬಯಂನ್' ನೋ.

**ಬತ್ತುಂಬಯನ್**, ಬತ್ತುಂಬಯ (ನಾ). ಹಾಲು ಕೊಡುವುದನ್ನು ನಿಲ್ಲಿಸಿದ ಹಸು; ಗೊಡ್ಡಾಕಳು: ಬತ್ತುವುದು ಪಯನ್, ಬತ್ತುಂಬಯನ್ (ಶಬ್ದಾಸು. ೩೩೩). ಬತ್ತುಂಬಯ : ಬಕಾರಕ್ಕೆ_ಬತ್ತುಂಬಯಂ, ಬತ್ತುಂಬಟ್ (ಕಮುದ. ೦೬೦ ಕ್ರಯೋ). [ಬತ್ತು₁ + ಪಯನ್]

**ಬತ್ತುಂಬಟ್** (ನಾ). ಒಣಗಿದ ಬಟ್ಟೆ; ಆರಿದ ಅರಿವೆ : ಬಕಾರಕ್ಕೆ — ಬತ್ತುಂಬಯಂ, ಬತ್ತುಂಬಟು, ಅಟ್ಟುಂಬರಿ (ಕಮುದ. ೦೬೦ ಕ್ರಯೋ). [ಬತ್ತು₁ + ಪಟ್₁]

**ಬತ್ತುಗೆ** (ನಾ). ತೇವವನ್ನು ಕಳೆದುಕೊಳ್ಳುವಿಕೆ; ಒಣಗುವಿಕೆ : ಸುರಿವ ಬಾಷ್ಪಜಳಂ ಕರುಣಾರ್ದ್ರಹಾರವಂ ಬಳಿಯಿಸೆ ಬಾಯ ಬತ್ತುಗೆಯ ನಿಂತರ್ದೆಗೆಟ್ಟಿಱುತುಂ . . . ಬಿಟ್ಟಿಳಂದಜಿತಸೇನೆ (ಶಂಕ್ರಪು. ೫-೧೦). [ಬತ್ತು₁ + — ಗೆ]

**ಬತ್ತುವಸುರು** (ನಾ). ತೆಳ್ಳಗಿರುವ ಹೊಟ್ಟೆ; ಒಳಸೇರಿದ ಹೊಟ್ಟೆ : ಲೀನಾಖ್ಯ ಲೀನವೆಂಬ ಪೆಸರ್ವಡೆದ ಗರ್ಭದಲ್ಲಿ—ಬತ್ತುವಸುರಿನಲ್ಲಿ (ಪಾಶಹಾ. ೨-೨-೨೦ ವ). [ ಬತ್ತು₁ + ಬಸುರು (<ಬಸಿಱು) ]

**ಬತ್ತುವಾಲ್** (ನಾ). ಕುದಿಸಿ ಇಂಗಿಸಿದ ಗಟ್ಟಿಯಾದ ಹಾಲು; ಕೆನೆಹಾಲು : ನವಿರಕ್ಕಿಯೋಗರಂ ಕೂಡಿದ ಬತ್ತುವಾಲ್ ವಿಸುಪ ಗಲ್ಲೆವೊಸರ್ ಮೊದಲಾದವೆಲ್ಲಮುಂ ಜೋಡಿಸಿ (ಹಾಶಾಸ್ತ್ರ. ೦-೬-೫). [ಬತ್ತು₁ + ಪಾಲ್₁]

**ಬತ್ತೆ** (ನಾ). (ಔಷಧಿ, ಅಡಕೆ ಮುಂತಾದುವನ್ನು) ಅರೆಯಲು ಅಥವಾ ಕುಟ್ಟಲು ಬಳಸುವ ಕಲ್ಲಿನ ಅಥವಾ ಲೋಹದ ಒರಳು ಮತ್ತು ಗುಂಡು : ಕಬ್ಬಿಣದ ತರತರದ ಜಿನಸಗಳು_೧. ಅಡಕೊತ ಗಳು . . . ೫೭. ಬತ್ತೆಗಳು (ಖಲಬತ್ತೆ) (ಮುಂಬಿದ್ಯಾ. ೧೦೨). 'ಕಲಬತ್ತು' ಪರಾ. [← ಹಾರ. ಬತ್ತಾ; ಮರಾ. ಬತ್ತಾ, ಬತ್ತಾ₂]

**ಬತ್ತೆಮ್ಮೆ** (ನಾ). ಹಾಲು ಕೊಡದಿರುವ ಎಮ್ಮೆ; ಗೊಡ್ಡೆಮ್ಮೆ : ತಂದ ಬತ್ತೆಮ್ಮೆಗಳು ಕರು ಹಾಕಿದುವು. ಹಾಲು ಮಾರಿದನು (ಜಗುಜ. ೯೬). [ ಬತ್ತು₁ + ಎಮ್ಮೆ (<ಎರ್ಮೆ) ]

**ಬತ್ತೇರಿ** 'ಬತೇರಿ' ನೋ.

**ಬತ್ವ** (ನಾ). 'ಬ' ಎಂಬ ಅಕ್ಷರ; ಬಕಾರ : ಸವನಿಸುಗುಂ ಬತ್ವ ಕೊರ್ಮೆ ವತ್ವಮುಂ ವತ್ವದೆಡೆಗೆ ಬತ್ವಂ ಬಹುಳಂ (ಕಮುದ. ೨೫೬). [ಸಂ.]

**ಬದಂಗ** 'ಬದಗ' ನೋ.

**ಬದಗ**, ಬದಂಗ, ಬದೆಗ (ನಾ). ೧. ವಿಟ ; ಜಾರ; ವ್ಯಭಿಚಾರಿ : ಜಾತಿಸೂಳೆಗೆ ರಣಭೀತನ ಪುಸಿನುಡಿವಾತನ ಖಳನ ಕಳೆಯನ ಬದಗನ ಬೂತಿನ ಮಾತು ದಿಟಮಲ್ತು (ಲೀಲಾವ. ೨-೩೯) ; ಬಚ್ಚಣೆವಾತಿನ ಬದಗ ಗೊರಲಿದೊಡೆ. . . ವೃಚ್ಚಣಯಹುದೆನುತೊರ್ವಳ್ ಮುಗ್ಧೆಗೆಯುಸಿರಿ ದಳು ವಿದಗ್ಧೆ (ಜಯುಜಾ. ೦೯-೫೦); ಒದವಿಸಿಯಾ ವಿಷಯಂಗಳ ಜೀವರ ಬದಗರ ಮಾಡುವಹಳೀ ಮಾಯೆ (ಶಕ್ತ್ಯ. ೧೩೦-೪). ೨. ಕೆಳದರ್ಜೆಯ ಸೇವಕ ; ಕೀಳಾಳಂ ; ಊಳಿಗದವನು : "ಬದಗನೆಂದು ಕೀಟಾಲ್" (ಶಶಾ. ೬೦-೩೩೩); ಬಡಿಕೋಲಂ ಪಿಡಿದು ಪರಿವ ಬದಗರುಮಂ ಬಿಟ್ಟರ ನಾಂತು ಪರಿಪೂಟ್ಟಿಜೆಕಾಜಿರುವಂ . . . ಕಂಡು (ಲೀಲಾವ. ೫-೧೦೯ ವ) ; ಬಿದ್ದಿನರ ವೀಳಯದ ಬದಗರು ಭಟರ ವೋಡಿಯಲಿ ಹೊದ್ದಿದೊಡೆ ಹುರುಳಹರೆ (ಕುಮ್ಮಾ. ೦೯-೨೫); ದನವ ಕಾಯ್ವುಸ್ತ್ರಿರ್ಪ ಬದಗನೇಂ ಕಱದಂ ಕುಡಿದನೊ (ಸಿಶ್ಲೇಪು. ೯-೩೭). ೩. ದಡ್ಡ; ಮೂರ್ಖ; ತಿಳಿಗೇಡಿ : ಜಾಣ ಜಾಣೆಯರಾಟವೆಂಬುದು ಚದುರಂಗದಾಟದಂತಿಹುದು ಬದಗರ ಲೀಲೆಯಹುದು ಟೊಳ್ಳಿಗವಡೆಯ ಕಿದರ್ವ ಸೋಗಳೆಯಾಟದಂತೆ (ಶಶ. ೦೦-೦೯). **ಬದಂಗ** : ೧. ಜಡಿದೊಡೆ ಪೊಂಗಿ ಪಂದೊವಲ ಪೊರ್ಲೊಱಯೇಱುವ . . . ಪೊಕ್ಕಳಂಬಡುವ ಬದಂಗನಂ ಬೆಸ[ಜಾಶಾ. ಬದಂಗಿ ದುರ್ಬೆಸ]ನಿಯಲ್ಲದಳಾತನನೊಟ್ಟೆ ಸುಟ್ಟಪಳ್ (ಲೀಲಾವ. ೨-೩೩). **ಬದೆಗ** : ೩. ಬದೆಗರಂದದಿ ಹೋರಲೇತಕೆ ಗೆಲವು ನಿನ್ನದು ಸೋಲವೆನಗೆ ಹೋಗು (ಶಶ. ೫೦-೬೩). ೪. ಅಲ್ಪವ್ಯಕ್ತಿ; ಕ್ಷುದ್ರ; ನೀಚ : ಇದು ತನಗೆ ಪರಿಣಾಮವಾಯ್ತೆಲೆ ಬದೆಗ ಹುಸಿವವರರಸ (ಕಹಾಗ. ೫-೭-೦೫); ಬದೆಗ ದಶಮುಖನೊರಜು ಬಾಡಬನುದರವರಿವುದೆ (ಅಶ್ವ. ೨೩-೦೯).

[ಬದಗು + — ಅ₁. / ತಮಿ. ಪತಕ. / ಸಂ. ಪಾತಕ — ಪಾಪ ]

**ಬದಗಿ** (ನಾ). ೧. ಊಳಿಗದವಳು ; ಸೇವಕಿ ; ದಾಸಿ : ಏಕೆ ಕೆಣಕಿದೆ ಕರ್ಣ ಬೂತಿನ ಬೀಕಲಿನ ಬದಗಿಯನು (ಕುಮ್ಮಾಸ. ೦೫-೦೯); ಕರ್ಣ. ಈ ಬದಗಿಯನ್ನೇಕೆ ಕೆಣಕಿದೆ ? ಯುದ್ಧದಲ್ಲಿ ಈಕೆಯ ಭೀಮನು ನನ್ನನ್ನು ಮುರಿಯುತ್ತಾನಲ್ಲವೆ? (ದಾಕಸೂ. ೦೦೩). ೨. ಏನೂ ತಿಳಿಯದವಳು; ಮುಗ್ಧೆ : ನೋಡುವುದೆನ್ನೆರ್ದೆಯೋ ಕಣ್ಣೋ . . . ತಾ ಸೊಕಗಳ ಗೀಡಹುದಾತ್ಮನೊ ಪರಮನೊಯೆಂದಳ್ ಬದಗಿಯುಪೊಲ್ ಚದುರೆ (ಅದ್ಭರೀ. ೯-೨೭). [ಬದಗ + — ಇ₂./ತಮಿ. ಪತಕಿ]

**ಬದಗಿಗ** (ನಾ). ನೀಚ ; ಕೀಳುಮನಷ್ಯ : ಈಕೆಗೆ ಭೂತಚೇಷ್ಟೆಯೊ . . . ಬದಗಿಗರು ಸ್ಪರಿಸದೆ ಶೂನ್ಯಗಳನೆಸಗಿದರೊ (ಪ್ರಭುಪು. ೫-೪೦); ಮುಟ್ಟದಿರು . . . ಪಾತ್ಲೋಲೆಗೊಡಂಬಡುವ ಬದಗಿಗು[ಗ]ಯೆಂದು ಯದೆಯೋಳನಿತುಂ ದಯಂಗೊಡದೆ ಕಳಕಳಿಸುವಳ ನೋಡುತಿರಲು (ಪ್ರಭುಪು. ೯-೦೩೯). [ಬದಗು + — ಇಗ]

**ಬದಗು** (ನಾ). ೧. ಹಾದರ; ವ್ಯಭಿಚಾರ : ಎತ್ತಿದ ಬರ್ದೊ ವೇಣ್ ಬದಗೊ[ಜಾಶಾ. ಬೆಜಗೊ] ಪೇಟವಿದೀಕೆಯ ಕೂರ್ಪೊ ಮೆಲ್ಪೊ (ಲೀಲಾವ. ೨-೬೮); ಎನ್ನ ಮಾಟ್ಟ ಬದಗೇಂ ಪೆಱತಾದುದೆ ಬೇಡ ಕೆಮ್ಮಗಂ ಮನೆಗುಸುಟೇಕೆ ತನ್ನ ಸುಖಕಲ್ಲದೆ ಕೇಳಿಕೆ ಯಾರ ಬಿಟ್ಟಯೋ (ಲೀಲಾವ. ೨-೦೦೯). ೨. ತೊತ್ತುಗೆಲಸ; ಊಳಿಗ; ಸೇವೆ : 'ಬದಗುಗೆಯ್' ಪರಾ. ೩. ಮೋಸ; ವಂಚನೆ; ಠಕ್ಕು : "ಬದಸು, ಬದಗು— ಕೌಟಿಲ್ಯಂ " (ಕಮುದ. ೫೦. ೨). ೪. ದಡ್ಡತನ; ಮೂರ್ಖತನ : ಲಿಂಗಾಂಗದ ಪುರುಳಱಯದ ಮರುಳೇ ತಿಳಿವಿನಿಸಿಲ್ಲದ ಬದಗಿನ ತಿರುಳೇ ಕೇಳು (ಅದ್ಭರೀ. ೩-೬೯). ೫. ವ್ಯಭಿಚಾರಿ ಎಂಬರ್ಥದ ಒಂದು ಬಯ್ಗುಳ: ಬಿದರುಪುಲ್ಲೆಯ ತೆರದೊಳವಳು ಕೆಟ್ಟೋಡಿ ನಡಗುತ್ತ

ಗುಡಿಯ ಕದಗಳಂ ಗಳಗಳನೆ ಮುಚ್ಚಿಯುಗುಳಿಯ ಜಡಿಯೆ ಎದೆಗುಂದಿ ಭೂತಂಗಳೋಡೆ ಸಿದ್ಧರ್ ನೋಡೆ ಬದಗು ಹೊಲೆಮಾಲೆ ನೀನೊಳ ಪೊಗಲ್ಪಿಡುವೆನೆ ಭಲರೆ ಎಂದಾರ್ದನೊಲಿದು (ಶತುಕ. ೩-೦-೨೨).

**ಬದಗುಗೆಯ್** (ಕ್ರಿ). ತೊತ್ತುಗೆಲಸ ಮಾಡು; ಊಳಿಗ ಮಾಡು : ಅರಸರ ದೆಸೆಯಿಂ ಮನೆಯುಂ ಕವರ್ತೆಪೋಪುದುಂ ಪೆಱರ್ ಕೀೞಲೊ ಳೆಮ್ಮಬ್ಬೆಯುಮಂ ಮುತ್ತಬ್ಬೆಯುಮಂ ಸಾರ್ದು ಬದಗುಗೆಯ್ವುದಕೆ (ಆದಿಪು. ೩-೩೯ ವ); ಪೆಱರ ಕೀೞಲಂ ಸಾರ್ದೆಮ್ಮಬ್ಬೆಯುಮಂ ಮುತ್ತಬ್ಬೆಯುಮಂ ಬದಗುಗೆಯ್ದುಣುತಿರ್ಪಿನಂ (ಕಾವ್ಯಾಂಶ. ೦೮). [ಬದಗು + ಕೆಯ್$_1$]

**ಬದಗುಳಿಗ** (ನಾ). ಊಳಿಗ ಮಾಡಿ ಜೀವಿಸುವವನು ; ತೊತ್ತು : ಬದಗುಳಿಗನ ತೋಳ್ಮುಟ್ಟಿದ ಸುದತಿಯೊಳಿಂಬಾಗದಂತೆ ಕೆಟ್ಟುದು ಪುೞು ಮುಟ್ಟಿದ ದುಗ್ಧದಂತೆ . . . ಪತಿಗೆ ಶಯ್ಯಾತಳದೊಳ್ (ಪುಕೋಚ. ೨-೩೬). [ಬದಗು + — ಉಳಿಗ$_2$]

**ಬದಜಾತ** (ನಾ). ಕ್ಷುದ್ರವ್ಯಕ್ತಿ; ಅಲ್ಪ; ನೀಚ : ಈ ಬದಜಾತನನ್ನು ಹೊಡದು ಓಡಿಸೋ! (ಶಂಕರಮ. ೪೬೯). [← ಪಾರ. ಹಿಂ. ಬದ್‌ಜಾತ್]

**ಬದಣ** 'ಬದನೆ' ನೋ.

**ಬದಣಿಕೆ** 'ಬಂದಣಿಕೆ' ನೋ.

**ಬದಣೆ** 'ಬದನೆ' ನೋ.

**ಬದಣೆಗಾಯಿ** 'ಬದನೆಕಾಯ್' ನೋ.

**ಬದಣೆಗುಪ್ಪೆ, ವದಣೆಗುಪ್ಪೆ** (ನಾ). ಒಂದು ಸ್ಥಳದ ಹೆಸರು : ಬದಣೆ ಗುಪ್ಪೆ ನಾಮ ಅವಿನೀತಮಹಾಧಿರಾಜೇನ ದತ್ತೇನ ಪಡಿಯೇಱಟಿಯೊಳಂ ಊರೊಳ್ಪನ್ನಿರ್ಕ್ಕಣ್ಡುಗಜ್ಗ್ಗಿಯ್ದು (ಎಕ. I. ೦-೦೯; ೪೬೦). **ವದಣೆಗುಪ್ಪೆ** : ಪುನ್ನಾಡುಎಡೆನಾಡುವಿಷಯ ವದಣೆಗುಪ್ಪೆ ನಾಮ ಗ್ರಾಮಃ (ಎಕ. III (B), ಸಂಚಿತ. ೨೮೬-೩೩; 808). [ಬದಣೆ (< ಬದನೆ) + ಕುಪ್ಪೆ$_1$]

**ಬದನಾಮಿ** 'ಬದ್ನಾಮಿ' ನೋ.

**ಬದನಿಕೆ** 'ಬಂದಣಿಕೆ' ನೋ.

**ಬದನಿದಿ** (ನಾ). ಒಂದು ಸ್ಥಳದ ಹೆಸರು : ಮೂಡನ ಸೀಮೆ ಕಳ್ಳಿವೆಟ್ಟನ ಮೂಡಣ ಪೊರೆಯೆ ಮೂಱುಬೆಟ್ಟು ಒಳಗು ಮೂಡಣ ಬಡಗಣ ಕೊನ್ನೆಡು ಬಿದನಿದಿಯ ಬಡಗಣ ಒಳ್ವೆ (ಮೈಆ. ೦೯೨೭. ೦೨೨-೩೩; 800). [?]

**ಬದನೆ, ಬದಣೆ, ಬದಣೆ** (ನಾ). ೧. ಒಂದು ಬಗೆಯ ತರಕಾರಿ ಗಿಡ ಮತ್ತು ಅದರ ಕಾಯಿ : ಬದನೆಯ ಪೊಸ ಬಿತ್ತಂ ತೋಡಿ ಬಯ್ತುಟ್ಟು ಕೂಷ್ಮಾಂಡದ ಫಲದೊಳದಂ ಮಧ್ವಾಜ್ಯದಿಂ ಮುಚ್ಚಿಸಲ್ ಪಣ್ತೊದವಿ ದಱಲೊಳೆ ಬಿತ್ತಂ ಕೊಂಡು ಬಿತ್ತಲ್ ವಿಚಿತ್ರಂ ಬದನೆಯ ಫಲಮಕ್ಕುಂ ಬಳ್ಳಿ ಕೂಷ್ಮಾಂಡಮಕ್ಕುಂ (ಲೋಕೋಪ. ೬-೩೩); ಕೂಷ್ಮಾಂಡವವರೆ ಬದನೆಗಳಿಂ ಲೇಸಾಗಿರೆ ಮಾಡಿದ ಸವಿಮೇಲೋಗರಮಂ ತಂದು ಬಡಿಸಿದರ್ ಕಾಂತೆಯರ್ (ರಮಣಿಶ. ೨-೩೩). ೨. (ಆಲಂ) ಹುರುಳಿಲ್ಲದುದು; ಪ್ರಯೋಜನಕ್ಕೆ ಬಾರದುದು: ಪಂಪ ಹುಟ್ಟಿ ಭಾರತವ ಕಟ್ಟಿ ಹಿರಿ ಸಿದ್ಧಪದವ ಮುಟ್ಟಿ ನಿರ್ಜರೆಯ ಪಡೆದ . . . ತೀಡಿದರು ಅದನೆ ಅದನೆ ಯಾರಾರೊ ಎಂದು ರಸವಾರಿ ಹೋಗಿ ಪುಸ್ತಕವೆ ಆಯ್ತು ಬದನೆ (ಮುಳ್ಳುಕಿಂ. ೨೯-೦೨). **ಬದಣೆ** : ೧. "ಬದಣೆ—ವಾರ್ತಾಕಿ, ಭಂಡಾಕಿ, ಹಿಂಗುಲಿ, ಸಿಂಹಿ, ದುಷ್ಪ್ರಧರ್ಷಣಿ"(ಪಾಶಬ್ದಾ. ೬); ಆ ಕ್ಷೇತ್ರದವೊಳಗಾದ ಅಡಕೆ . . . ಬದಣೆ ಕಬ್ಬು ಕಾರೆಗೆಣಸುಯೇನುಂಟಾದುದನು ಆ ಕ್ಷೇತ್ರಕ್ಕೆ ಸಲುವ ನಿವೇಸನ ೧೫ ಅರೆ X (ಎಕ. III (B), ಸಂಚಿತ. ೨೯೨-೦೩; 1527). **ಬದಣೆ** : ೧. "ವಾರ್ತಾಕವೆಂಬುದು ಬದಣೆ" (ಶಬ್ದಾಮು. ೨೭-೮೦); ಇಂತು ಬದಣೆಯ ಕಾಯಿ ಲಿಂಗವಾಗುತ್ತಮಿರೆ (ಬಸರ. ೯-೬೯); ಸತಿ ಕದ್ದಳೊಂದು ಬದಣೆಯ ಕಾಯನು (ಸಿದ್ದೇಪು. ೦೯-೭).

[ದೇ. II ತಮಿ. ವಟುತುಣೈ, ವಟುತಲೈ; ಮಲ. ವಟುತಿನ, ವಟುತಿನಿ; ತುಳು. ಬದನೆ; ತೆಲು. ವಂಗ; ಕೋಲಾ. ವಂಗೆ; ಮಾಲ್ತೊ. ಬಟಂಗೊ. / ಹಿಂ. ಬೈಂಗನ್, ಬೈಂಗನೀ; ಮರಾ. ಬೈಂಗಣ್, ಬೈಂಗನ್. / ಸಂ. ವೃಂತಾಕ ].

**ಬದನೆಕಾಯ್**, ಬದಣೆಗಾಯಿ, ಬದನೆಕಾಯಿ (ನಾ). ಒಂದು ಬಗೆಯ ಕಾಯಿಪಲ್ಲೆ; ವೃಂತಾಕ : 'ತುಳಂಪುಬದನೆಕಾಯ್' ಪರಾ. **ಬದಣೆಗಾಯಿ** : ಬದಣೆಗಾಯಂ ಸಹಜಲಿಂಗಮಂ ಮಾಡಿದಂ ಬಸವಂ (ಕಂಪು. ೩೭-೮೦). **ಬದನೆಕಾಯಿ** : ಬದನೆಕಾಯಿ ಬೀಜವನ್ನು ಡಿಸೆಂಬರ್ ನಿಂದ . . . ಮೇ ತಿಂಗಳವರೆವಿಗೂ ಸಸಿ ಮಾಡಿ ನೆಡಬಹುದಾಗಿದೆ (ಕರಶ. ೨೦); ಪುರಾಣ ಹೇಳೋದು, ಬದನೆಕಾಯಿ ತಿನ್ನೋದು (ಗಾದೆ). [ಬದನೆ + ಕಾಯ್$_4$]

**ಬದನೆಕಾಯಿ** 'ಬದನೆಕಾಯ್' ನೋ.

**ಬದನೆಕುತ್ತಿ** (ನಾ). ಬದನೆಗಿಡದಲ್ಲಿ ಮೊದಲ ಸಲ ಬೆಳೆ ತೆಗೆದ ಮೇಲೆ ಉಳಿಯುವ ಬುಡ; ಗುತ್ತಿ: ಬೆಳಗಿನ ಜಾವ ಎದ್ದೊಡನೆ, ಹೊಗೆಸೊಪ್ಪಿನ ಹಿತ್ತಲಿನಲ್ಲಿ ಉಳಿದ ಹರಿವೆ, ಬದನೆಕುತ್ತಿಗಳಿಗೆ ನೀರೆರೆಯುವ ಸಂಭ್ರಮವಾಯಿತು (ಮರಳು. ೩೬೯). [ಬದನೆ+ಕುತ್ತಿ$_1$]

**ಬದಮಾಷ್** 'ಬದ್ಮಾಶ್' ನೋ.

**ಬದರ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು; ಬೋರೆ; ಎಲಚಿ : ತ್ರಿದ್ವ್ಯೇಕದಿನಾಂತರಿತ ಬದರಾಕ್ಷಾಮಲಕಪ್ರಮಾಣಾ ಹಾರಂಗಳುಮಪ್ಪ ಮಿಥುನಂಗಳ್ಗೆ ಸಂಭೋಗ್ಯಮಾಗಿ ಸಲೆ ಜಘನ್ಯಭೋಗ ಭೂಮಿಯ ಕಡೆಯ ಪಲಿತೋಪಮದೊಟನೆಯ ಭಾಗಮುಱದುದು (ಆದಿಪು. ೬-೯೮ ವ); ಆತತಪರಿಖಾವಳಯಂ ಸುತ್ತಲುಮನುಪಮ ಬದರಾಶೋಕ ಮಹೀಜಂ (ಸುಕುಮಾ. ೦೦-೩೭ ರಗಳೆ); ಮಂಗುವಿನ ಮೊಳೆವಲ್ಗಳೊಂದ ಬದರವನನಿಯನಿಗೀವಳು ಕಾಂತೆ (ಗಾಹಾಸ. ೩೦-೦೦೦). [ಸಂ.]

**ಬದರಿ** (ನಾ). ೧. = ಬದರ: "ಬದರೀ, ಕುವಲೀ, ಕರ್ಕಂಧೂಃ— ಈ ಮೂಱುಂ ಬೋರೆಗಿಡದ ಪೆಸರ್" (ಹಲಾಯು. ೬೨-೯೦); ಬದರಿಯ ವೃಕ್ಷದ ಮೂಲದೊಳುದಕಂ ಮಧು ಮಧುಕವೆಳ್ಗೇಲಿಬಿವನರೆದಿಕ್ಕಿದೊಡದು . . . ಮಧುರಫಲನೆಱಗುಗುಮಧಿಕಂ (ಲೋಕೋಪ. ೬-೩೭); ತೆಂಗು ತಾಟ್ ಬದರಿ ದಾಡಿಮ (ಪರ್ವಪು. ೨-೩). ೨. ಹತ್ತಿಗಿಡ. ೩. ಹಿಮಾಲಯದ ಉತ್ತರದಲ್ಲಿ ಅಲಕನಂದಾ ನದಿಯ ದಡದಲ್ಲಿರುವ ಒಂದು ಪುಣ್ಯ ಕ್ಷೇತ್ರ: ಧರೆಯೊಳಗೆ ಶ್ರೀಪುರಂದರವಿಠಲರೇಯನ ಪರಮಭಾಗವತರ ಉದರ ಬದರಿ (ಪುರಂದ. ೨-೩೭-೩); ಅರ್ಭಕತನದೊಳೈದಿ ಬದರಿಯಲಿ ಮಧ್ವಮುನಿ ನಿರ್ಭಯದಿ ಸಕಲಶಾಸ್ತ್ರವ ಪಠಿಸಿದ (ಕಳಶ. ೩೯). [ಸಂ. ಬದರೀ ]

**ಬದರಿಕಾಶ್ರಮ** (ನಾ). =ಬದರಿ ೩: ಮುನ್ನೆ ಬದರಿಕಾಶ್ರಮದೊಳ್ ಆ ಯತಿಯಿಂದಂ ನರ ನಾರಾಯಣರೆನೆ ನೆಗಟ್ದಿಪರಿಗ ನಾವಿರ್ವರುಂ(ಶಂಕಶಾ. ೩೯-೯೯ ವ); ಬದರಿಕಾಶ್ರಮದಿ . . . ಮಹಾನುಭಾವರ ಪಿತನು ನಡೆತಂದ (ಸಂಭಶ. ೩-೦); ಬದರಿಕಾಶ್ರಮಕೆ ಪುನರಪಿಯೈದಿ ವ್ಯಾಸಮುನಿಪದಕೆರಗಿ . . . ಬ್ರಹ್ಮತ್ವವೈದಿದ ಮಧ್ವಮುನಿರಾಯಗಭಿವಂದಿಪೆ (ಕಳಶ. ೩೩). [ಸಂ.]

**ಬದರಿಕೆ** (ನಾ). ೧. ರಕ್ಷಕ; ಕಾವಲುಗಾರ; ಪಹರೆಯವನು : (೬). ೨. ರಕ್ಷಣೆ; ಕಾಪಾಡುವಿಕೆ: ಗ್ರಾಮನೌಕರಿಗಳನ್ನು ನೋಡುವವರು ಇಡುವ ಲೆಕ್ಕಗಳ ಮತ್ತು ಇತರ ಕಾಗದಪತ್ರಗಳ ಬದರಿಕೆ, ಅವುಗಳನ್ನು ಹಾಜರ್ ಮಾಡೋಣ ಮತ್ತು ವರ್ಗಾಯಿಸೋಣ (ಗ್ರಾಮಾಚ. ೦೦೦). [ ←ಪಾರ. ಮರಾ. ಬದರಕಾ, ಬದ್ರುಕಾ ]

**ಬದಲಾಯಿಸು** 'ಬದಲಿಸು' ನೋ.

**ಬದಲಾವಣೆ** (ನಾ). ಮಾರ್ಪಾಡು; ವ್ಯತ್ಯಾಸ: ಚಿಕ್ಕಪ್ಪನ ಮುಖದಲ್ಲಾದ ಗಮನಾರ್ಹ ಬದಲಾವಣೆಯನ್ನು ಗುರುತಿಸಿ ಯಶೋದೆ ಹೇಳಿದಳು (ವಾತ್ಸಲ್ಯ. ೩೭); ಸರಿಯಾದ ಲೆಕ್ಕವಿದ್ದರೆ ನಿಮ್ಮ ಅವಶ್ಯಕತೆಗಳಿಗೆ ಸರಿಯಾಗಿ ಅಂದಾಜು ಪತ್ರದಲ್ಲಿ ತಕ್ಕ ಬದಲಾವಣೆಗಳನ್ನು ಮಾಡಲು ಸುಲಭವಾಗುವುದು (ಆಡುಶಾ. ೦೨೩). [ಬದಲಾಯಿಸು (<ಬದಲಿಸು) + — ಅಣೆ₄]

**ಬದಲಿ₁** (ಗು). ೧. ಬದಲಾದ; ಬೇರೆಯಾದ: ನಾನು ಕಾಲಕಾಲಕ್ಕೆ ಕೊಂಡ ಹಲವಾರು ಕೊಡೆಗಳು ಹೀಗೆ ಒಂದೊಂದು "ಬದಲಿ ಇಸಮು" ಇಟ್ಟು ಓಡಿಹೋದುದರಿಂದ ನನಗೀಗ ಒಂದು ಹಳೆ ಕೊಡೆಗಳ ಅಂಗಡಿ ಇಟ್ಟರೆ ಹೇಗೆ ಎಂಬ ವಿಚಾರ ಬರತೊಡಗಿದೆ (ರೀಕನ್ನ. ೬೨). (ನಾ). ೨. ಒಂದು ವಸ್ತುವಿಗೆ ಪ್ರತಿಯಾಗಿ ಬರುವ ಮತ್ತೊಂದು ವಸ್ತು ಅಥವಾ ಒಬ್ಬ ವ್ಯಕ್ತಿಗೆ ಪ್ರತಿಯಾಗಿ ಬರುವ ಮತ್ತೊಬ್ಬ ವ್ಯಕ್ತಿ: ನೀನು ಕೊಟ್ಟ ಪುಸ್ತಕಕ್ಕೆ ಬದಲಿಯಾಗಿ ಈ ಪುಸ್ತಕವನ್ನು ಇಟ್ಟುಕೊಂಡಿರು (ರೂಢಿ). [← ಹಿಂ. ಮರಾ. ಬದಲೀ]

**ಬದಲಿ₂** (ಅ). ಪ್ರತಿಯಾಗಿ; ಬದಲಾಗಿ: ರಶೀದಿಗಳನ್ನು ಕೊಡದೆ ಇದ್ದರೆ ಆ ಶೇಕದಾರ ಶ್ಯಾನುಭಾಗರಿಗೆ ನಶಿಹತ್ತು ಮಾಡಿ ಅವರಿಗೆ ಬದಲಿಯಿತಬಾರಿ ಶೇಕದಾರ ಶ್ಯಾನಭಾಗರನ್ನ ಮೊಕರರ್ಮಾಡಿಟ್ಟು . . . ನಡೆದುಕೊಳ್ಳುವದು (ಮಹಾಸಂ. II, ೬೬). [< ಬದಲ್₁]

**ಬದಲಿನೇಮಕ** (ನಾ). ಒಬ್ಬ ವ್ಯಕ್ತಿಗೆ ಬದಲಾಗಿ ಮತ್ತೊಬ್ಬ ವ್ಯಕ್ತಿಯನ್ನು ಗೊತ್ತುಮಾಡುವಿಕೆ,—ನಿಯಮಿಸುವಿಕೆ: ಕಾರ್ಯನಿರ್ವಾಹಕನೇಮಕ, ಬದಲಿನೇಮಕ (Acting appointment. ಶಕ್ರಿಶಿ. ೨). [ಬದಲಿ₂ + ನೇಮಕ]

**ಬದಲಿಭತ್ಯ** (ನಾ). (ಬದಲಿ ಕೆಲಸಕ್ಕಾಗಿ ಕೊಡುವ) ಹೆಚ್ಚಿನ ಹಣ: ಬದಲಿಭತ್ಯ, ಕಾರ್ಯನಿರ್ವಾಹಕ ಸಂಭಾವನೆ (Acting allowance. ಶಕ್ರಿಶಿ. ೨). [ಬದಲಿ₂ + ಭತ್ಯ (<ಬತ್ತಾಯ)]

**ಬದಲಿರಜೆ** (ನಾ). ರಜಾದಿನವೊಂದರಲ್ಲಿ ಕೆಲಸ ಮಾಡಿದ ಪ್ರಯುಕ್ತ ಅದರ ಬದಲಿಗೆ ಬೇರೊಂದು ದಿನ ಸಿಗುವ ರಜೆ: ನಿನ್ನೆ ಬದಲಿರಜೆ ಹಾಕಿದ್ದೆ (ರೂಢಿ). [ಬದಲಿ₂+ರಜೆ (<ರಜಾ)]

**ಬದಲಿಸು**, ಬದಲಾಯಿಸು (ಕ್ರಿ). ೧. ವ್ಯತ್ಯಾಸಗೊಳ್ಳು; ಮಾರ್ಪಾಡು ಹೊಂದು; ಬದಲಾಗು: ಈ ತಾರೆಗಳ ಸ್ಥಾನಗಳು ಯಾವಾಗಲೂ ಬದಲಿಸುತ್ತವೆಂದು ಅವನಿಗೆ ತಿಳಿಯಿತು (ಮುಂಬಯಿ. ೩-೦೬೪); ಸುಂದರಿಯ ಮನಸ್ಸಿನ ಸ್ಥಿತಿಯೇ ಬದಲಿಸಿತು (ಹಳ್ಳಿಹಾ. ೦೦೯). ೨. ವ್ಯತ್ಯಾಸಗೊಳಿಸು; ಬದಲಾಗುವಂತೆ ಮಾಡು; ಮಾರ್ಪಡಿಸು: ಕೇವಲ ಪ್ರೇಮ ಹಾಗೂ ಮರಣಗಳು ಮಾತ್ರ ಸಕಲವನ್ನೂ ಬದಲಿಸಬಲ್ಲವು (ಕ್ರಾಂತಿಕೋ. ೫೪); ತನ್ನಭಿಮತವನು ಬದಲಿಸದಾತನು ಹೊಂಡದ ನೀರಿನಂತಹನು (ಇಂಶಾಕ. ೦೪೬-೨೦). **ಬದಲಾಯಿಸು**: ೧. ಆ ಹತ್ತು ವರ್ಷಗಳು ಹರವಲ್ಲಭನ ಸಂಸಾರವು ಬದಲಾಯಿಸಿ ಬಹಳ ಹೀನಸ್ಥಿತಿಗೆ ಬಂದಿದ್ದಿತು (ಶೀಲಕಾ. ೬೦); ಹುಡುಗರು ಎಷ್ಟು ಬೇಗ ಬದಲಾಯಿಸುತ್ತಾರೆ ಅನ್ನುವುದೇ ವಿಚಿತ್ರ (ಶಾರಿವ. ೦೦೦). ೨. ಶ್ರೀಪುರಂದರದಾಸರು . . . ಪ್ರಚಾರದಲ್ಲಿದ್ದ ಪಾಠಪದ್ಧತಿಯನ್ನು ಬದಲಾಯಿಸಿ . . . ಪಿಳ್ಳಾರಿಗೀತವನ್ನು ಸೃಷ್ಟಿಸಿದರು (ಕಗದಾ. ೬೩); ಮಾತು ಬದಲಾಯಿಸಲು ಸಂಗಾಯಿ ನುಡಿದಳು (ವಕಿದಾ. II, ೯೬೬). ೩. ಒಂದು ವಸ್ತುವಿಗೆ ಪ್ರತಿಯಾಗಿ ಬೇರೊಂದು ವಸ್ತುವನ್ನು ಕೊಡು; ವಿನಿಮಯ ಮಾಡು: ಎಣ್ಣೆಯು ಸೋರ ಹತ್ತಲು . . . ವ್ಯಾಪಾರಿ ಜನರು ಬದಲಾಯಿಸಿ ಕೊಡುವದಿಲ್ಲ (ಮುಂಬಪ್ರಾ. ೩೯ ಕ್ರಿಸ್ತಾಪತ). [ಬದಲು₂ + — ಇಸು₁]

**ಬದಲು₁** (ಕ್ರಿ). ವ್ಯತ್ಯಾಸಗೊಳ್ಳು; ಬದಲಾಯಿಸು; ಬೇರೆಯಾಗು: ಬೋಳನ ಆಲೋಚನೆಯ ಆಕಾಶದ ಬಣ್ಣವು ಬದಲುತ್ತಾ ಇದ್ದಂತೆ ನೋಯುತ್ತಾ ತನ್ನ ಮನೆಗೆ ಹೋದನು (ಕಾಂಬಿರ. ೦೨ ಕತಾಸಾರ). [←ಅರ.ಪಾರ. ಹಿಂ. ಮರಾ. ಬದಲ್]

**ಬದಲು₂** (ನಾ). ೧. ಬದಲಾವಣೆ; ಮಾರ್ಪಾಡು; ಪರಿವರ್ತನೆ. ೨. ಪ್ರತಿಯಾದುದು; ಒಂದಕ್ಕೆ ಬದಲಾಗಿ ಮತ್ತೊಂದು ಇರುವುದು: ಗ ೩ನೂ ಅರಮನೆಗೆ ವಪಿಸಿಕೊಂಡು ಆ ಬದಲಿಗೆ ಗ ೩ . . . ತೆಗೆದುಕೊಂಡು (ಎಕ. VII, ಶಿವಮೊ. ೨೯-೨೬ ; 1712); ಕ್ರತುವೀರ್ಯಸಂಭವನ ಕೀರ್ತಿಯುಳಿದಿನ್ನೊಂದು ಬದಲಿಲ್ಲವೆಲೆ ಮಗಳೆ (ಶರಕು. ೬-೨೨); ಈ ರೂಪಿಗೆ ಬದಲಿಲ್ಲ (ಪಕಶಾ.೩೬). ೩. ಪ್ರತಿಯಾಗಿ ಹೇಳುವ ಮಾತು; ಮಾರ್ನುಡಿ; ಪ್ರತ್ಯುತ್ತರ: ನಿನ್ನಭರ್ಥಕಂ . . . ವಿದಿತೋಪಚಾರದಿಂದುರೆ ತೃಪ್ತಿಗೊಳಿಸಿಹಂ ಬದಲುಂಟೆ ಸಾಕೆನುತ ಪರಸೆ (ಶರಕು. ೪-೯೩); ಸುವೇಳೆಯ್ಯೆ ಧರ್ಮಜನೆ ಬದಲನು ಪೇಳಬೇಡ (ಜವಡಾ. ೦೪-೪೫); ಈ ಬದಲನ್ನು ಧೈರ್ಯವಾಗಿಯೆ ಹೇಳಿಬಿಟ್ಟರಾದರೂ ಒಳಗೊಳಗೆ ಹೆದರಿಕೆ (ಹಸುಹೂ. ೬೩). ೪. ವಿನಿಮಯಂ; ಅದಲುಬದಲು: ಪಟ್ಟಣಗಳಲ್ಲಿಯೂ ಅನೇಕ ಸಣ್ಣಸಣ್ಣ ಪದಾರ್ಥಗಳನ್ನು ಪದಾರ್ಥದ ಬದಲಿಗೆ (Barter) ಬೆಲೆಕೊಳ್ಳುವ ಪಾಡಿಕೆಯುಂಟು (ಹಾಣಶ್ರ. ೦೪). ೫. (ಕೆಲಸ ಮುಂತಾದುವಕ್ಕೆ) ಒಬ್ಬನಿಗೆ ಪ್ರತಿಯಾಗಿ ಬರುವ ಮತ್ತೊಬ್ಬ ವ್ಯಕ್ತಿ: ಎಬ್ಬಿಸಲು ಕೋಪಮಂ ಧರಿಸುವನೊ . . . ಏಳಿಸಲ್ಕೊಬ್ಬರಂ ನಾ ಕಾಣೆ ಬದಲನೆಂದಳಳಿದಳು (ಕುರಂಗ. ೩-೩೩). 'ಬದಲಿ₁' ಪರಾ.

**ಬದಬದಲು** (ದ್ವಿರುಕ್ತಿ): ಬೆಚ್ಚು ಬಿಲ್ಗಡದೆ ಬದಬದಲು ಧನುವಿಡಿಯಲದನೊಡನೊಡನೆ ಪಿಡಿಗೊಡದಲ (ಶಶಮು. ೨೬-೩೬). **ಬದಲಾಗಿ** = ಪ್ರತಿಯಾಗಿ: ಒಂದು ಬಗೇ ಜಿನುಸು ಕೊಟ್ಟು ಅದಕ್ಕೆ ಬದಲಾಗಿ ಮತ್ತೊಂದು ಬಗೇ ತೆಗೆದುಕೊಳ್ಳುವಿಕೆ (ಸಿದ್ಧಾಂತಿ. ೨೪೬); ಗೋಚರ ಮಾಯ್ಯು ಸಮರವೀವ ಸುಭಟರ ಮೋಹರಕೆ ಬದಲಾಗಿ . . . ಮದುವೆ ದಿಬ್ಬಣದೊಸಗೆ ಮೆರವಣಿಗೆ! (ಕಶ್ಯಾಂಗ. ೬೬-೨೦೦೬). **ಬದಲಾಗು** = ವ್ಯತ್ಯಾಸಗೊಳ್ಳು; ಪರಿವರ್ತನೆಯಾಗು: ಬನಸಿರಿ ತೊಟ್ಟ ಪೊಂದೊಡವಿಂಗೆ ಬದಲಾಯ್ತು (ಶ್ರೀರಾಕ. ೯೦ ೬೮೪); ನನ್ನಿಂದಲೆ ಲೋಕ ಉಳಿಯುವುದು; ನನ್ನಿಂದಲೆ ಯುಗ ಬದಲಾಗುವುದು (ಅಕ್ಷಮೇ. ೩೪). **ಬದಲು ಹೇಳು** = ಉತ್ತರಕೊಡು; ಪ್ರತ್ಯುತ್ತರ ಹೇಳು: ನಾನು ಏನು ಹೇಳಿದರೂ ಏನು ಮಾಡಿದರೂ ಬದಲು ಹೇಳೊಲ್ಲ (ದೂಪಟ್ಟ. ೦೨೦). [<ಬದಲು₁]

**ಬದಲು₃** (ಅ). ಪ್ರತಿಯಾಗಿ; ಬದಲಾಗಿ: ನಾನು ನಿನ್ನನ್ನು ಪ್ರೀತಿಸುವುದನ್ನು ನಿಲ್ಲಿಸಿಬಿಟ್ಟದ್ದೇನೆ. ಅದರ ಬದಲು ಇದೀಗ ನಾನು ನಿನ್ನನ್ನು ತಿರಸ್ಕರಿಸುತ್ತೇನೆ (ಅಕ್ರಪು. ೨೪); ದಿನ ದಾಟಿ ದಿನ ಬಂದರೂ ಬರಬೇಕಾದ ದಿವಸಗಳು ಬರಲೊಲ್ಲವು. ಬದಲು ನದಿ . . . ಬಾವಿಗಳ ನೀರು ಅದೆಲ್ಲಿ ಮಾಯವಾಗುತ್ತಿದೆಯೋ ತಿಳಿಯದು (ಶಾಂತ. ೦). [<ಬದಲು₁]

**ಬದಲುಗೈ** (ಕ್ರಿ). ಅದಲುಬದಲು ಮಾಡು; ಬದಲಾಯಿಸು: ವನವಾಸಮೆನಗೆ ನಿಯಮಿತಮಾದುದುರೆ ಧರ್ಮದಿಂದಿಳೆಯ ನೀಂ ಪೊರೆಯ ವೇಳ್ಕುಮಂತಿರಲೀರ್ವಗಾದ ಬದಲುಗೈದೊಡಾ ತಂದೆ ಬಾನೆಡೆಯಿಂದೆ ಬೀಳ್ಗನಲ್ತೆ (ಭರಭ. ೫-೨೭). [ಬದಲು₂ + ಗೈ (<ಕೆಯ್₁)]

**ಬದಲುಜವಾಬು** (ನಾ). ಎದುರುತ್ತರ; ಮಾರ್ನುಡಿ: ಅವರೇನಾದರೂ ಕೋಪಿಸಿಕೊಂಡರೆ ಬದಲುಜವಾಬು ಕೊಡಬೇಡ (ಮಹಾಪ. ೦೩೪). [ಬದಲು₂ + ಜವಾಬು]

**ಬದಲುತ್ತರ** (ನಾ). = ಬದಲುಜವಾಬು: ರಾಜಸತಿಗಾನಂದ ಮಿಗೆ . . . ಸಾರ್ಥಕಕೆ ಮನದಂದನಧಿಪತಿಯೆನಲು ಬದಲುತ್ತರವನುಸುರಿದಳು (ಅಸಂಗಾ. ೨-೦-೨೦). [ಬದಲು₂ + ಉತ್ತರ]

**ಬದಲುಮಾತು** (ನಾ). = ಬದಲುಜವಾಬು : ಬದಲುಮಾತದು ಮಾಣು ! (ನರಿದಾ. 1, ೯೦೬); ಬದಲುಮಾತಾಡುವವನು ಬೆದರಿಸಿದರೆ ಬಿಟ್ಟಾನೆ ? (ಗಾದೆ). [ಬದಲು₂ + ಮಾತು₁]

**ಬದವು** 'ಬದುವು' ನೋ.

**ಬದಸಾಟ** (ನಾ). ಮೋಸ; ವಂಚನೆ; ಕುಯುಕ್ತಿ: ಆಃ ಪತಙಿಗೊಂದು ಬದಿಯ ಬದಸಾ[ಪಾಠಾಂ. ಗಾ]ಟಮೊ ! ತನಗಯ್ಯನೆಂದಱಿದನಪ್ಪೊಡೆ ಕುಶಂ ವಿಶಿಖಮನಿಸುವನೆ ? (ರಾಮಾಶ್ವ. ೦೬೦-೦೫). [ಬದಸು + ಆಟ]

**ಬದಸು** (ನಾ). ಮೋಸ; ಕುಟಿಲತೆ: "ಬದಸು, ಬದಗು – ಕೌಟಿಲ್ಯಂ" (ಶಮಣ. ಶಂ. ೨). 'ಬದಗು', 'ಬದಸಾಟ ಪರಾ. [?]

**ಬದಸ್ಕೂರ್** 'ಬದಸ್ತೂರು' ನೋ.

**ಬದಸ್ತೂರು**, ಬದಸ್ತೂರ್ (ಅ). ಹೇಗೆ ಇದೆಯೋ ಹಾಗೆ; ಯಥಾವತ್ತಾಗಿ : ಆನೆಗೆ ಅಲಂಕಾರಕ್ಕೆ . . . ೩ ಆನೆಗೆ ಹಳದೀ ಬನಾತಿನ ಬಬ್ರೀ ಜೂಲು ರೇಶ್ಮೆ ಜಾಲರು ಸಹ ೧ ಬದಸ್ತೂರು ಲೋಕಸಿದಿ ೧ ಕತ್ತಿಗೆ ಕಟ್ಟುವ ಪಟ್ಟಿ ಬದಸ್ತೂರು ೧ ಸಹ (ಎಕ. XIV. ಪಂಜಪ. ೨೯೨-ಶುಟಿ ೧೪೨ ; 1847); ತಾವೂ ಕೋಟೆ ವಳಗೆ ಹೋಗಿ ಬದಸ್ತೂರು ಆನೆಕಲ್ಲನು ಬಲ ಕಾಯಿಸಿ (ಕೈದಿ. ೪೬); ಬದಸ್ತೂರು ಒಂದೊಂದು ಹೋಬಳಿ ಶೇಕದಾರನು . . . ಶ್ಯಾನುಭಾಗನ ರುಜು ಸಹ ಮಾಡಿ ರಶೀದಿ ಕೊಡುತ್ತಾ ಬರುವದು (ಮಹಾಪಂ. II, ೬೬). **ಬದಸ್ತೂರ್:** ಡಿಕ್ರಿಯ ಅಮಲ್ದಾರಿಯ ಬಗ್ಗೆ ನಡೆಯುವ ಹರಾಜಿನೊಳಗೆ . . . ಕ್ರಯದಾರನಿಂದ ತರಲ್ಪಡುವ ಬದಸ್ತೂರ್ ದಾವೆ (ನ್ಯಾಮೂಕ. ೦೬೨). [←ಪಾರಂ. ಹಿಂ. ಬದಸ್ತೂರ್]

**ಬದಹು** 'ಬದುವು' ನೋ.

**ಬದಾಮಿ** 'ಬಾದಾಮಿ' ನೋ.

**ಬದಾಮು** 'ಬಾದಾಮಿ' ನೋ.

**ಬದಿ₁** (ನಾ). ೧. ಪಕ್ಕ; ಮಗ್ಗಲು; ಪಾರ್ಶ್ವ: "ಬದಿಯೆನೆ ಪಾರ್ಶ್ವ" (ಕಕರ. ೬೫); ಕಾಳ್ಗಿವಿಗಳೆರಡು ಬದಿ ಗಗನಭುವನವೇ ಗೃಹವು (ಶಿವಾನ. ೦೬೦-೯೯೭) ; ಬಲದ ಬದಿ ವೇದಾಂತಿಗಳ ಭಾಗ ಎಡದ ಬದಿ ಪಂಡಿತರ ಭಾಗಂ (ಬಸವು. ೫೫-೦೬); ಬಲದ ಬದಿಯಲ್ಲಿ ಭವಹರನೆಂಬ ಗಣೇಶ್ವರನೆನಿಸಿರ್ಪರಿ ಅಯ್ಯ (ಸಿದ್ಧೇಶ.೬೪-೦೬೮). ೨. ಪಕ್ಕೆ; ಅಳ್ಳೆ; ಬರಿ: "ಬದಿಯೆ ಪಕ್ಕೆಯೆನಿಕ್ಕು" (ಕಬ್ಬಿಕೈ. ೩೦); ಹೆಡೆ ಬೇವ ಸರ್ಪ ಬದಿ[ಪಾಠಾಂ.ರಿ] ಬೇವ ಸಾರಂಗ . . . ದೆಸೆಗೆಟ್ಟು ಕವಿದವು ಹರಿಶ್ಚಂದ್ರಭೂಪತಿಯ ಮೇಲೆ (ಹಕಕಾ. ೦೦-೯); ಕುಣಿದವಿಬ್ಬರ ಮುಷ್ಟಿಯಿಬ್ಬರ ಹಣೆಯಲಿ . . . ಕಂದದಲಿ ಶಿರದಲಿ ಬದಿಯಲುದರದಲಿ (ಕುವ್ಯಾಸ. ೨-೦೦೬); ತುಱಿಸಿಕೊಳುತಿದ್ದೆಸೆಯ ಬಗೆಗಳ ಹೊಱಗನಾಲಿಸುತ . . . ಹರಿಬದಾಜಿಯ ಹೊೞಿಗೆ ವಾಳರ ಬರವ ಬಯಸುತ್ತಿರ್ದನಾ ಹನುಮ (ತೊರರಾ. ೫-೫-೨). ೩. ಹತ್ತಿರ ; ಸನಿಹ; ಸಾಮೀಪ್ಯ: ಇದನು ಪಠಿಸೆ ಸದಾ ಭಾಗ್ಯವಕ್ಕು . . . ಬದರನಿವಾಸ ವಿಜಯವಿಠ್ಠಲ ಬದಿಯಲ್ಲೆ ಬಂದೊದಗುವ (ವಿದಾಕೃ. ೯೩-೯); ಇದೆ ರಾಮನೆನುತ ಬಯಲಲಪ್ಪಲೊರ್ವೆ . . . ಬದಿಯೊಳಿಹನೆಂದರಿ ತಕ್ಕೈಸಲೊರ್ವೆ ... ವಿಶ್ವರೂಪಾಂತು ಸುದತಿಯರ ಕಂಗಳಿಗೆ ತೋರಲಿಡೆಯಾಡಿದರು (ವೆಂಕಾರಾ. ೨-೨೦-೦೦); ಮಾದಯ್ಯನು . . . ಅವಳ ತಲೆಯ ಬದಿಯಲ್ಲಿ ನಿರ್ವಿಣ್ಣನಾಗಿ ಕುಳಿತಿದ್ದನು (ಶ್ರೀರಾಯು. ೦೦೦).

**ಬದಿಬದಿ** (ದ್ವಿರುಕ್ತಿ): ಬೀದಿಯ ಬದಿಬದಿಗೆ ಚದುರಂಗವುದುರ್ಯಾವು (ಜೂಪಾದಿ. ೯೯-೦). **ಬದಿಗಾಗು**=ಪಕ್ಕಕ್ಕೆ ಜರುಗು; ಅರುಗಾಗು; ಕೆಲಸಾರು: ನೀರಾಗೆ ನಿಂತಿರುವ ನೀಲೀಪಾವುಡದಣ್ಣ ನೀರು ಕಟ್ಟಾವು; ಬದಿಗಾಗೊ (ಜಹುಜ. ೨೦). **ಬದಿಗಿಡು** = ೧. ಪಕ್ಕಕ್ಕೆ ಸರಿಸು; ಪಕ್ಕದಲ್ಲಿ ಇಡು: ಈ ಪಾತ್ರೆಯನ್ನು ಆ ಬದಿಗಿಡು (ರೂಢಿ). ೨. (ಆಲಂ) ಗಮನಿಸದಿರು ; ಗಣನೆಗೆ ತೆಗೆದುಕೊಳ್ಳದಿರು ; ಅಲಕ್ಷಿಸು : ಅವಳ ಮನಸ್ಸನ್ನು ನೋಯಿಸಬಾರದೆಂದು ತಮ್ಮ ಎಲ್ಲ ಅನಾನುಕೂಲತೆಗಳನ್ನೂ ಬದಿಗಿಟ್ಟು . . . ಶಿಕ್ಷಣ ಕೊಡಿಸಿದ್ದರು (ಕುಂಕುಮ. ೫೯) ; ಪಾದ್ರಿಯೂ ಮೊದಲಿನ ಸಂಕೋಚ ಬದಿಗಿಟ್ಟು ಬಹುಗಂಭೀರರೀತಿಯಲ್ಲಿ ಹೇಳಿದರು (ಅಬೋಲ. ೨೭). **ಬದಿಗಿರಿಸು** = ೧. ಪಕ್ಕದಲ್ಲಿಡು : ಅದನ್ನು ಅವನ ತಟ್ಟೆಯ ಬದಿಗಿರಿಸಿ ತಾನು ಅವನ ಎದುರು ಕುಳಿತುಕೊಂಡಳು (ಮಹಾತ್ಮಾ. ೦೬). ೨.= ಬದಿಗಿಡು ೨: ತಮ್ಮ ವೈಯಕ್ತಿಕ ಆಶೋತ್ತರಗಳನ್ನೂ ಮನೋಧರ್ಮವನ್ನೂ ಬದಿಗಿರಿಸಿ, ಮಕ್ಕಳ ಬೆಳವಣಿಗೆಗೆ ಸೂಕ್ತವೆನಿಸುವಂತೆ ವರ್ತಿಸುವರು (ಶಿಕ್ಷಣ. ೯೯೯) ; ನಿನ್ನ ಸಮಾಧಾನಕ್ಕಾಗಿ ನನ್ನ ದುಃಖವನ್ನು ಬದಿಗಿರಿಸಿ ಬರೆಯಲು ಕುಳಿತಿದ್ದೇನೆ (ಕುಂಕುಮ. ೬೨). **ಬದಿಗೊತ್ತು** = ಬದಿಗಿಡು ೨ : ಬಪ್ಪ ಕರ್ಮಗಳ ಬದಿಗೊತ್ತಿ ಬೊಮ್ಮನೊಳಗಿಪ್ಪವನೆ ಯೋಗಿ (ಸರ್ವಜ್ಞ. ೫೦೨); ಈ ಗ್ರಂಥಗಳಲ್ಲಿ . . . ಜಾತಿ ಕುಲ ಗೋತ್ರಗಳನ್ನು ಬದಿಗೊತ್ತಿ ಭಕ್ತಿಗೆ ಕೊಟ್ಟ ಪಾರಮ್ಯ, ಅತಿಶಯ ಬೆಲೆಯುಳ್ಳದ್ದು (ಶಾರದ. ೩೯೮). 'ಬರಿ'₁ ಪರಾ.

[ದೇ. ॥ ತುಳು. ಬದಿ]

**ಬದಿ₂** (ನಾ). ಕೆಸರು ; ಪಂಕ ; ರಾಡಿ : "ಪಕ್ಕೆ ಕೆಸಱುಗಳೊಳಂ ಬದಿ" (ಕಬ್ಬಿಮಂ. ೯೯) ; ಬದಿಗಳೊಳಗೆ ಬಿದ್ದು ಹೊರಳಿದವರು ನೆಱೆ ಕೆದಱಿದ ತಲೆಯಿಂದಲಾಗ ಗದಗಾವುಗೊಳುತ ಹೋಗಲು ದೆಸೆ ಕಾಣದೆ ಸದೆಯಿಸಿಕೊಂಡರೇನೆಂಬೆ (ಕಂಪರಾ. ೦೬-೮೩) ; ಗದ್ದೇ ಬದೀಲಿ ಬಿದ್ದು ಮಂಡೀಯ ನೊಂದವು ಮುಂಗ್ಯೆ ಕಿತ್ತೂ (ಹುಟ್ಟಿಹ. ೪೨) ; ನದೀ ದಾಟಿ ಬದೀಲಿ ಬಿದ್ದ ಹಾಗೆ (ಗಾದೆ). [ದೇ. ॥ ತಮಿ. ವತಿ ; ತೆಲು. ಬಾಡಿ, ಬಾಡೆ]

**ಬದಿಕೆಱೆ** (ನಾ). ಒಂದು ಕೆರೆಯ ಹೆಸರು : ಬದಿಕೆಱೆಯ ಕೀೞ್ಕೇರಿಯ ಬೇರುಂಗಾಲುಂ ಒಕ್ಕಲೊಳೊನ್ದು ಪೊಱೆಯುಂ . . . ಬಳಿವತ್ತಮುಂ ಸಲ್ವದು (ಎಕ. III (R), ಪಂಜಪ. ೨೯೪-೦೦ ; 977). [ಬದಿ₂+ಕೆಱೆ]

**ಬದಿಪಾರು** (ಕ್ರಿ). ಅಕ್ಕಪಕ್ಕ ನೋಡು : ಪೊಸಗಪಲಿದೆತ್ತಣದಿದೆಂದು ಬದಿಪಾರಲು (ಇಂದ್ರಕೀ. ೫೦). [ಬದಿ₁ + ಪಾರು₁ (< ಪಾರ್₁)]

**ಬದಿಯೆಲು** (ನಾ). ಪಕ್ಕೆಯ ಮೂಳೆ : ತಿವಿದನು ತಿರುಗಿ ಬದಿಯೆಲು ನುಗ್ಗುನುಸಿಯಾಗೆ (ಕುವ್ಯಾಕ. ೧೦-೩೬); ನಿಳಿನಿಳಿಲುನಿಟಿಲೆಂದು ಬದಿಯೆಲು ಕಳಚೆ (ತೊರರಾ. ೫-೦-೨೦). [ಬದಿ₁+ಎಲು(<ಎಲ್ಬು)]

**ಬದಿರಿ** (ನಾ). ಒಂದು ವಂಶದ ಹೆಸರು (?) : ಸಾಕ್ಷಿ ಕೊಡಲೂರ್ ಪೊಙ್ಗಲರು ಎಳ್ಳಡಿಯರು ಬದಿರಿಯರುಮ್ ಮದುಗರುಮ್ (ಪ್ಮಕಂ. ೦೯೧೬, ೦೩-೯ ; 726). [?]

**ಬದಿಶೂಲೆ** (ನಾ). ಪಕ್ಕೆನೋವು ; ಅಳ್ಳೆನೋವು : ತಲೆನೋವು ನಾಯ್ಗೆಮ್ಮು, ಬದಿಶೂಲೆ, ಕಾಲೊಡಕ, ವಾತಪಿತ್ತಗಳೆಲ್ಲ ಭೈರವನ ಸೆರೆಗ್ಯೆದು ಪೀಡಿಸುಗೆ! (ಜಗಾಳ. ೯೭-೬). [ಬದಿ₁ + ಶೂಲೆ₁]

**ಬದಿಹುಲ್ಲು**, ಬದೆಹುಲ್ಲು (ನಾ). ಒಂದು ಬಗೆಯ ಹುಲ್ಲು : ಬದಿಹುಲ್ಲು, ಕಂಡಬತ್ತದ ಹುಲ್ಲು, ಪರಿಹುಲ್ಲು (ವ್ಯಕಿಗಿ. ೩೦-೫೮೦); **ಬದೆಹುಲ್ಲು :** ಬದೆಹುಲ್ಲು . . . ಕರಡ, ಅಂಜಿಹುಲ್ಲು (ವ್ಯಕಿಗಿ. ೨೭-೫೦೪).

[ಬದಿ₁ + ಹುಲ್ಲು (<ಪುಲ್)]

**ಬದು** 'ಬದುವು' ನೋ.

**ಬದುಂಕು** 'ಬರ್ದುಂಕು' ನೋ.

**ಬದುಕಿಸು** 'ಬರ್ದುಂಕಿಸು' ನೋ.

**ಬದುಕು₁** 'ಬರ್ದುಂಕು' ನೋ.

**ಬದುಕು₂** 'ಬರ್ದುಕ್ಕು₂' ನೋ.

**ಬದುಕುವಂತ** (ನಾ). ಕೆಲಸವಂತ ; ಕಷ್ಟಜೀವಿ : ಸಣ್ಣಸಾವ್ಕಾರ್ರು ಒಳ್ಳೆ ಬದುಕುವಂತರು (ಬೆಲುಮು. ೦೩೬).

[ಬದುಕು₂ (<ಬರ್ದುಕ್ಕು₂) + – ವಂತ]

**ಬದುಬೆ** 'ಬಾದುಬ್ಬೆ' ನೋ.

**ಬದುವು, ಬದವು,** ಬದಹು, ಬದು, ಬದುಹು (ನಾ). ೧. ಎಲ್ಲೆ; ಮೇರೆ; ಗಡಿ; ಸೀಮೆ: ಪಡುವಂ ಶಂಖದ ಬಸದಿಯ ಪೊಲದ ಮೇರೆ ವಾಯುಬ್ಯದಲು ಪಳ್ಳದ ಪಡುವಣ [ಬ]ದುವಿನ ಕೊತ್ತುರೊಳಗಣ ಉಳಿಮುಖದ ಕಿಂನರಿಗಲ್ಲು (ಶಾಇ. XX. ೬೯–೩೩; 1112). ೨. (ಹೊಲ, ಗದ್ದೆಗಳಲ್ಲಿ ನೀರು ನಿಲ್ಲುವುದಕ್ಕಾಗಿ ಹಾಕುವ) ಮಣ್ಣಿನ ಎತ್ತರವಾದ ಕಟ್ಟೆ,–ದಂಡೆ; (ಹೊಲ, ಗದ್ದೆಗಳ ಅಂಚಿನಲ್ಲಿ ರಚಿಸಿದ) ಮಣ್ಣಿನ ಒಡ್ಡು: ಹೊಲಗಳ ಗುಂಟ ಬೈಲುದಾರಿ ಹಿಡಿದು ಗದ್ದೆಯ ಬದುವುಗಳ ಮೇಲೆ ಹಾಯ್ದು . . . ಒಕ್ಕಲ ಮಕ್ಕಳು ಗ್ರಾಮಗ್ರಾಮಾಂತರಗಳಿಗೆ ಹೊರಟಿದ್ದಾರೆ (ಅಕ್ಕಳ. ೩೩೨); ರೈತರ ಹೆಂಗಸರು ಕೆರೆಯಿಂದ ನೀರ ತಂದು ಸಗಣಿಯನ್ನು ಕಲಸಿ ಹೊಲಗಳ ಬದುವಿನಲ್ಲಿ ಬೆರಣಿ ತಟ್ಟುತ್ತಿದ್ದರು (ಭೃಸರ್ಜ. ೦೩); ಒಂದು ಹೋರಿಯು . . . ಬದುವಿನಲ್ಲಿ ಮೇಯುತ್ತ ನಿಂತಿದ್ದ ಆಕಳನ್ನು ನಿಟ್ಟಿಸುತ್ತಿತ್ತು (ಚಾಬಂ. ೩೯). **ಬದವು**: ೩. (?): ಪಾರಿಸ್ವಸೆಟ್ಟಿಯರಿಂಗೆ ಕೊಟ್ಟ ಸಿಲಾಸಾಸನದ ಕ್ರಮವೆಂತೆಂದಡೆ ಪಟ್ಟಣದ ಬೇಹಾರಿಗಳಿಂಗೆ ಮನೆವಣವು × ಯಕ್ಕೆ ಪ ೫ ಯದಿಮಕ್ಕೆ ಪ ೫ ಬದವಿಂಗೆ ಪ ೩ (ಎಕ. XI (8), ಚಾಶಚಾ. ೬೯–೦೩; 1319). **ಬದಹು**: ೪. (ಕೆರೆ, ಕುಂಟೆ ಮುಂತಾದಂವುಗಳ) ಏರಿ: ಚಿಕ್ಕ ಕುಂಟೆಯ ಒತ್ತಿರಣ ಬದಹು (ಎಕ. VII. ಶಿಪಪೊ. ೨೬–೨೫೨; 1524). **ಬದು**: ೧. ಬೆಟ್ಟದ ತಪ್ಪಲುಗಳೂ, ಗೋಮಾಳಗಳೂ, ಹೊಲದ ಬದುಗಳೂ ಹೇರಳವಾಗಿದ್ದವು (ಹುಟ್ಟಿ.ಹ. ೬೯); ತಾಕುಗಳ ಸುತ್ತಲೂ ಬದುಗಳನ್ನು ಹಾಕಬೇಕು (ವ್ಯವಪು. ೬೦). ೩. ಈ ಹಿತ್ತಿಲನೂ ಅ ಳ ಮುಡಿ ಗದೆಯನೂ ಬದು ೧೨ ಮುಡಿ ಅಕ್ಕಿಯನೂ ೧ ನಂದಾದೀವಿಗೆಯನೂ ನಡಸಿ . . . ಬಾಳುವರು (ಶಾಇ. IX-ii. ೪೪೪–೨೫; 1433). ೪. ಉದ್ದಕ್ಕೂ ನಾಲೆ ಏರಿಯ (ಬದು) ಮೇಲೆಯೇ ಗಾಡಿಯ ರಸ್ತೆ (ಗರುಡಾ. ೨೨). **ಬದುಹು**: ೧. ಶ್ರೀರಾಮನಾಥದೇವರ ತೋಟದ ಮೂಡಣ ಬದುಹಿನ ಬಡಗಣ ಕಲ್ಲು (ಎಕ. VI. ತರೀಕೆ. ೬೩–೩೦; 1230 ?); ಅರಳಿಯ ಕೊಳದ ಮೂಡಣ ಬದುಹು ಅಲ್ಲಿಂ ಬಡಗಲು ಹಾದಿಯ ದಾರಿ (ಎಕ. XII. ತಿಪಟೂ. ೯೦–೩೬; 1286). ೨. "ಬದುಹು ಪಾಳಿ" (ಮಂಗಳಾ. ೦೦೯–೨); ಮೂಡಲು ಎರೆಯ ಕೆಯ್ಯ ದೊಡ ಬದುಹು (ಎಕ. XI, ಹೊಳಲ್ಕೆ. ೫೬–೭೫; 1220). ೪. ಚಿಂಚಗಟ್ಟ ನಾಯಕರ ಗುಯ್ಯಲ ಹಳುಗಿನ ಹಳ್ಳದ ಮೂಡಣ ಬದುಹಿನ ನಟ್ಟ ಕಲು ಮೇರೆ (ಶಾಇ. IX-i. ೪೯೩–೩೬; 1226). 'ಬರುಹಂ' ಪಠಾ.

**ಬದುಹು** 'ಬದುವು' ನೋ.

**ಬದೆಗ** 'ಬದಗ' ನೋ.

**ಬದೆಹುಲ್ಲು** 'ಬದಿಹುಲ್ಲು' ನೋ.

**ಬದ್ದ** (ನಾ). ೧. ಗಾಢವಾದಂದುಂ; ದೃಢವಾದುದು: "ಬದ್ಧಂ=ಗಾಢಂ" (ಶಬ್ದ. ಶಂ. ೨). ೨. ಸತ್ಯ; ದಿಟ; ನಿಜ: "ಕೆಸರೊಳಡಿದ ಹೆಜ್ಜೆಯೊಳು ನಿಶ್ಚಯದೊಳುಂ ಬದ್ದಮೆನಿಕುಂ'' (ಕಶಾ. ೭೩); ಕದ್ದ ಕಳ್ಳನ ಮಾತು ಬದ್ದವಾದರೆಯೇನು (ಜಾಪದ. ೩೯); ನನ್ನ ಹತ್ರ ಸುಳ್ಳು ಹೇಳ್ತಿಯಲ್ಲಾ! ಸುಳ್ಳೋ ಬದ್ದೋ? ಹೇಳು! (ಮಲೆಮ. ೨೦). [<ಸಂ. ಬದ್ಧ]

**ಬದ್ದಗಿ** 'ಬಡಗಿ' ನೋ.

**ಬದ್ದಣ** 'ಬದ್ದವಣ$_1$' ನೋ.

**ಬದ್ದನೆ** (ನಾ). ನಿಯಮಿತವಾಗಿ ಒಂದು ಕಾರ್ಯವನ್ನು ನಡೆಸಿಕೊಂಡು ಹೋಗುವುದು; ವರ್ತನೆ: ಯಿಾ ಹುಳಿಯಾರ ಸುಂಕದಲ್ಲಿ ನಾನಾದಿನಸಿನ ನಡಗಳಿಗೆ ಬದ್ದನೆ ಪ್ರಕಾರಾ ಲೆಕ್ಕಾ ಹಕಿಕೊಳುತ್ತಯಿದ್ದಾರೊ ಅದೆ ಪ್ರಕಾರಕ್ಕೆ ಬದ್ದನೆ ನಿಂತ್ರ ನಡೆ ೧ಕ್ಕೆ ಕಣ್ಣರಾಯಿ ೮೦೦೦೦ (ಎಕ. XVI. ಚಿಕ್ಕನಾ. ೯೦–೦೬; 1802). [<ಸಂ. ವರ್ತನ]

**ಬದ್ದಬದಸು** (ನಾ). ಅತಿಶಯವಾದ ಮೋಸ; ಅಧಿಕವಾದ ವಂಚನೆ: ಅಂತು ಮಱುವೊಕ್ಕು ಬಂದ ರಾಯನಂ . . . ಅಡಿಗಡಿಗೆ ಬದ್ದಬದಸಿಂ ಪಗೆದು (ರಾಮಾಕ್ಕ. ೬೨–೦೦). [ಬದ್ದ + ಬದಸು]

**ಬದ್ದರ**, ಬದ್ದ್ರರ (ನಾ). ೧. ಶುಭವಾದುದುಂ; ಮಂಗಳಕರವಾದುದು. ೨. ಗಟ್ಟಿಯಾದುದುಂ; ಬಿಗಿಯಾದುದು; ಭದ್ರವಾದುದು: ಬಿಗಿದ ದಡ್ಡಿಯ ಬದ್ದರದ ಬೀಯಗದ ರಾಣೀವಾಸದಂದಣ ತೆಗೆದು ನಡೆದುದು ಮುಂದೆ ಸಂತೋಷದಲಿ ಯದುಸೇನೆ (ಕುವ್ಯಾಶಿ. ೦೦–೬೩). ೩. ಒಂದು ಬಗೆಯ ಆನೆ,–ಗಜ: (?). ೪. ಎತ್ತು; ವೃಷಭ. ೫. (ಕೋಟೆ ಕಾಳಗದಲ್ಲಿ) ಆತ್ಮರಕ್ಷಣಾರ್ಥವಾಗಿ ಬಳುಸುತ್ತಿದ್ದ ಒಂದು ಬಗೆಯ ಸಾಧನ,–ಉಪಕರಣ: ಪಾಯ್ವ ಕೂರ್ಗಣೆಗೆ ಬದ್ದರವೊಡ್ಡುವ ಕೋಂಟೆ ಗಾವಗಂ ಕೆಡವುವ ಗಗ್ಗೆ ವಂಕದರದಿಂ ಪೊಱಮಟ್ಟಱಿವಾಳ್ಗಮಾಂಕೆಯಾಳ್ ಗಡಣಿಸೆ ಕಾದುತಿರ್ದುದು ಮಹೇಂದ್ರಪದಾತಿನಿ ಮುತ್ತಿ ಸುತ್ತಲುಂ (ಶಂಪ್ರಕ್ಕೆ. ೫–೦೦೬); ದುರ್ಗಕ್ಕೆ ನಿಚ್ಚಣಿ ಸಾರ್ಚುಂದೊಲೆ ವೀರಸೇತು ನಡೆಸಾರಂ ಬದ್ದರಂ . . . ಪಡಿಗೋಂಟೆಯೆಂಬ ಬಹುಕೋಟಾಯಂತ್ರ ಸಾಮಗ್ರಿ ತಿಂತಿಣಿಗೊಂಡಾಂತಿರೆ ಲಗ್ಗೆಗಾರ್ದು ವಸುಷೇಣಂ ಸಾರ್ದು ಸೂಳೈಸಿದಂ (ಅಶಂಪು. ೦೦–೬೩); ಬಲದ ಬದ್ದರದೊಟ್ಟದಂಬಿನ ಹೊಳೆವ ಹೊದೆಗಳ ಸೂತರುರವಣೆಗಳ ಸುರೇಖೆಯ ಗತಿಯ ವಾಜಿಯ ರಥವ ನೋಡಿದರು (ಕುವ್ಯಾಉ. ೦೦–೦೭). **ಬದ್ದರ**: ೧. ಒಸಗೆ ಬದ್ದರವಾಗೆ ಶಿಶುವೇಷದಿಂದ ರಂಜಿಸಿದ ಕಾರಣಿಕನು (ಭೃರಹೂ. ೦೬೩). ೫. ಜೋಡನೊಡೆ ಹಾಯ್ದಂಬು ಧರಣಿಯೊಳಾಡಿದವು . . . ಬದ್ದರಂಗಳ ಬಾದಣವ ಕೊಱೆದು ಈಡಿಱಿದವು (ಕುವ್ಯಾಕ. ೬–೪೭); ಉರುಶತಘ್ನಿಯ ರಾಯ ಚಿಮ್ಮುವ ಭರದ ಭೈರವ ಬದ್ದರದ ನಡೆಸರದ ಡಬ್ಬುಕ ಡೆಂಕಣಿಗಳನು ತೂಱಿದರು ನಭಕೆ (ಕೊರಶಾ. ೬–೦೦–೦೯).

ಬದ್ದರದ ಬಂಡಿ, ಬದ್ದರದ ಬಂಡಿ = ಬದ್ದರವೆಂಬ ಸಾಧನವನ್ನು ಹೊಂದಿರುವ ರಥ: ತವಕದಲಿ ಬದ್ದರದ ಬಂಡಿಗಳವುಚಿದವು (ಕುವ್ಯಾದ್ರೋ. ೨–೨೫); ಒಗ್ಗಿನಿಂ ಬದ್ದರದ ಬಂಡಿವಿಡ್ಕೈದಿದುವು (ಚಾತ್ರಿ. ೯೫–೨೯); ಕೋಲ ಕೋಲಾಹಳಕೆ ಸೈರಿಸದಾಳ ನಾಯಕವಾಡಿ ಹರಿಗೆಯ ಚಾಚಿದರು ಬಲು ಬದ್ದರದ ಬಂಡಿಗಳ (ಕುವ್ಯಾಕ. ೬–೪೪). [<ಸಂ. ಭದ್ರ]

**ಬದ್ದವಣ$_1$**, ಬದ್ದಣ (ನಾ). ೧. ಶುಭಸಮಾರಂಭದಲ್ಲಿ ಬಾರಿಸುವ ವಾದ್ಯ; ಮಂಗಳವಾದ್ಯ: "ಬದ್ದವಣಮೆಂದೊಸಗೆವಱೆ" (ಶಶಾ. ೬೩–೯೦೩); ವಸಂತಕನದೇಂ ಗುಡಿತೋರಣ ಶೋಭೆ ಪೊಯ್ಯ ಬದ್ದವಣ ಮಳುಂಬಮಾದುದೊ ನಿಕೇತನದಲ್ಲಿ ಮನೋಜರಾಜನಾ (ಅದಿಪು. ೦೦–೦೦೪); ಆ ಪುರದೊಳ್ ಗುಡಿಗಳಂ ಕಟ್ಟಿ ಬದ್ದವಣಂಗಳಂ ಬಾಜಿಸಿ ಪಿರಿದಾಗಿರ್ದೊಸಗೆಯಂ ಕೊಂಡಾಡುತ್ತುಮಿರಲ್ (ಚಾಶಪು. ೯–೩೬ ಪ); ಕೊಂಬು, ಕಾಳೆ, ಜೀಗಟೆ, ಮದ್ದಳೆ ಮುಂತಪ್ಪ ಬದ್ದವಣಂಗಳ ಬಿರುಸರಂ ಎಲ್ಲೆಡೆಯೊಳಂ . . . ಮಾರ್ದನಿಗುಟ್ಟಿದುದು (ಅದ್ಭುತ. ೬೨–೦೦). ೨. (?): ಅತ್ತಿಗೆ ಕೇಳ್ ಪೇಟರೆ ನೈಮಿತ್ತಕರೆನವೇಡ ಪೇಟೆಃವಿವಾ ಬದ್ದವಣಕ್ಕಿತ್ತಿದ ಕಯ್ಯನೆ ಬಸಿಱಿಂಗೆತ್ತುವೆಯಿದು ಕೊಡದಂದು ಕಾಡೆಲೆ ಕುಲಟೇ (ಅರ್ಧಣ. ೬–೪). **ಬದ್ದಣ**: ೧. "ಬದ್ದಣಮೆನಲೊಸಗೆಯ ಪಱೆ" (ಶಬ್ದ. ೪೬); ಎತ್ತಲುಂ ಬದ್ದಣದ ದನಿ (ಶ್ರೀಣಾಕ. ೯೦–೩೬); ಬದ್ದಣಂ ಮೊಳಗಿತ್ತಾಗಳ್ ಬಾನೊಳ್ ಸುರರ ಕೇಳಪೊಲ್ (ಶಾಚಂದ. ೨–೩೯).

ಬದ್ದವಣರ್=ಶುಭಸಮಾರಂಭದಲ್ಲಿ ಮಂಗಳವಾದ್ಯವನ್ನು ಬಾರಿಸುವವರು: ಬಾಜಿಸಲಿರ್ದ ಬದ್ದವಣರಿಂ ಘಳಿಗೆವಟ್ಟರಿಲಂ ಪರಿವೇಷ್ಟಿಸಿರ್ದ ನಕ್ಷತ್ರಪಾಠಕರಿಂ ಕಿಕ್ಕಿಱಿಗಿಱಿದ ವಿವಾಹಮಂಟಪಮುಂ . . . ನೋಡುತುಂ (ಶಂಖರ. ೬–೩೬).

[< ಸಂ. ಭದ್ರವಣವ]

**ಬದ್ದವಣ್ಣ** (ನಾ). ೧. ಬೆಳೆಯುವಿಕೆ; ಉತ್ಕರ್ಷ : ವರ್ಧಮಾನ—ಬದ್ದವಣ (ಶಬ್ದ. ೨೯೬ ಪ್ರಯೋ). ೨. ಒಂದು ಬಗೆಯ ಗಿಡ ಮತ್ತು ಅದರ ಕಾಯಿ; ತರಳು; ಔದಲ: “ಬದ್ದವಣ (ಬದ್ದಣ)—ವರ್ಧಮಾನ—ಮಂಗಳವಾದ್ಯ, ಒಂದು ಗಿಡ” (ಕರ್ನಾಕೋ. ೨೯). ೩. (?) : ಇದಿದಿರೆ ಪೂತ ಮರದುರುಮದಿದುವುಗಳೊಳ್ ಬದ್ದವಣದ ಪುಡಿವೊಲ್ ಬೆನ್ನೊಳ್ ಬಿಡದಲುಗೆ ಕುಸುಮಕುಲರಜಮುಡರ್ದುದು ಸುರಗಿರಿಯನಿಂದ್ರರುಂದ್ರ ಗಜೇಂದ್ರಂ (ಆದಿಪು. ೭-೭೩). [<ಸಂ. ವರ್ಧಮಾನ]

**ಬದ್ದವಣಂಬೊಯ್** (ಕ್ರಿ). ಮಂಗಳವಾದ್ಯವನ್ನು ಬಾರಿಸು: ಮುನೀಶನಾದೇಶಂಗೆಯ್ದು ಪೋಗೆಂದು ಕಳುಪಿದೊಸಗೆಗೆ ಮನದೊಳಿ ಗುಡಿಗಟ್ಟಿ ಬಗೆಯೊಳ್ ಬದ್ದವಣಂಬೊಯ್ದು . . . ಬನಮಂ ಪೊಕ್ಕು (ಜಗಂ. ೧೦-೨೯ ವ). [ಬದ್ದವಣ್ಣ + ಪೊಯ್$_1$]

**ಬದ್ದವಣಂಬೊಯಿಸು** (ಕ್ರಿ). ಮಂಗಳವಾದ್ಯವನ್ನು ಬಾರಿಸುವಂತೆ ಮಾಡು : ಅಂತಸ್ತಮಯಮಾಗೆ ಸ್ಯಂಧವನುಂ . . . ಪೊಚ್ಚ ಬದ್ದವಣಂ ಬೊಯಿಸಿದಂ (ಜೀವಂಧ. ೧೨-೩೨ ವ). [ಬದ್ದವಣ್ಣ$_1$ + ಪೊಯಿಸು]

**ಬದ್ದಿ** ‘ಬಡಗಿ’ ನೋ.

**ಬದ್ದಿಗೆ** ‘ಬದ್ದುಗೆ’ ನೋ.

**ಬದ್ದು$_1$** ‘ಬಾಟು$_1$’ ಪರಾ.

**ಬದ್ದು$_2$** ‘ಬರ್ದು$_4$’ ನೋ.

**ಬದ್ದು$_3$** (ನಾ). ೧. ಹಳ್ಳ; ಗುಣಿ : ಕಿಕ್ಕಿರಿವ ಬಾಣಗಳು ತೆನೆತೆನೆಗಿಕ್ಕಿ ಕಟ್ಟಿದ ತೊಲೆಗಳಗಣಿತ ಕಕ್ಕುದರಿ ಬದ್ದುಗಳಲೊಪ್ಪುವ ತಳ್ಳುವಲಗೆಗಳು ಮಿಕ್ಕಿರುವ ಕೈದುಗಳು . . . ದಿಕ್ಕುದಿಕ್ಕಿಲಿ ತಿಂತಿಣಿಸೆ ರಚಿಸಿದನು ಪಟ್ಟಣವ (ಕೃಷ್ಣಾ. ೪-೩೮). ೨. ಚಿಣ್ಣಿಕೋಲು, ಗೋಲಿ ಮುಂತಾದ ಆಟಗಳನ್ನಾಡುವಾಗ ನೆಲದಲ್ಲಿ ತೋಡುವ ಗುಳಿ, ‑ಕುಣಿ : ಗೋಲಿಯನ್ನು ಬದ್ದಿಗೆ ಸರಿಯಾಗಿ ಬೀಳುವಂತೆ ತೀಕು (ಕೊಡ). [?]

**ಬದ್ದುಗೆ, ಬದ್ದಿಗೆ** (ನಾ). ೧. (ಸೀರೆ, ಪಂಚೆ ಮೊದಲಾದುವುಗಳ) ಸೆರಗಿನ ತುದಿಯಲ್ಲಿ ನೇಯದೆ ಬಿಟ್ಟ ವಸ್ತ್ರದ ಎಳೆ; ಕರೆ; “ಸೀರೆಯ ಸೆರಗಿನ ದಡಿ” (ಜಾತಕೋ. ೨೦). ೨. ಸೊಂಟಕ್ಕೆ ಕಟ್ಟಿಕೊಳ್ಳುವ ಪಟ್ಟಿ; ನಡುಕಟ್ಟು : ಉಡಿಯ ಬದ್ದುಗೆಯ ಕಠಾರ ಹಿಡಿದ ಹಂಗೆಯೆಕ್ಕ ತುಳದ ತುಳುವರೊಗ್ಗು ನಡೆತಂದುದರಸನೋಲೈಸಿ (ಶ್ರೀಶಾಂ. ೦೩-೭೪); ಕಡೆಯ ಪೆಂಡೆಯ ಗೆಜ್ಜೆ ಕಣಕಾಲ ಬಾಸಿಂಗಮುಡೆಯ ಬದ್ದುಗೆಯ ಕಿಗ್ಗಟ್ಟು ಬಿಡೆಯವಿಲ್ಲದೆ ಪೋಲಗಟ್ಟಿನ ಬಿಲ್ಲಾಳ ಪಡೆ ನಡೆಯಿತು ಬಾಣನೊಡನೆ (ಪೋಜಕ. ೪೦-೦೪). **ಬದ್ದಿಗೆ :** ೧. ಜವಳಿಯೆಳೆಗಳ ಬದ್ದಿಗೆಯ ಸೇಲೆಯಾ ಸೆಜಗು ಸುವಿರಾಜಿಸುತ್ತಿರ್ದುದು (ಗುರುಚಾ. ೧೪-೩೩). ೨. ಕಟ್ಟಿದ ಕಠಾರದ ಬದ್ದಿಗೆಯ ತೊಂಗಲ್ದೆಗದು ಬಿಗಿದೆಲ್ಲ ಬಾಲಗಚ್ಚೆಯ ವಿಳಸದ ಸೆಜಗಂ ಸೆಳೆದಳ್ಳಿಜಿಯೆಯುಂ (ಅಶಂಕಿ. ೧೧-೮೩ ವ). ‘ಬದುವು’ ಹೋ. [ದೇ.॥ ತೆಲು. ಬದ್ದ]

**ಬದ್ದುಗೆದಾರ** (ನಾ). ನಡುಪಟ್ಟಿಯ ದಾರ: ಉಟ್ಟ ಪಟ್ಟಾವಳಿಯ ಮೇಲಳವಟ್ಟ ಬದ್ದುಗೆದಾರದೊಂಗಲ ಕಟ್ಟ ಮೆಚಿವ ಕಠಾರಿಗಳ ಹೊಂಗಟ್ಟುಗಳು (ಅಶಕ್ರ. ೬೦-೨೬); ವೈರಿಬಾಹುದ್ವಯವ ಬದ್ದುಗೆ ದಾರದಲಿ ಕಟ್ಟಿದನು (ಕುಮಾ್ರ. ೨೨-೩೬); ಆಳವಡಿಕೆಯಲಿ ಪೀತಪಟ ಸಮ್ಮಿಳಿತ ಬದ್ದುಗೆದಾರವನು ಬಲಿದಲೆವ ಜಡೆಗಳನೊಬ್ಬುಳಿಸಿ ಬಿಗುಹಿಕ್ಕಿ (ಕೂಡಾ. ೬-೨೬-೦೬). [ಬದ್ದುಗೆ + ದಾರ$_1$]

**ಬದ್ದೆ$_1$** ‘ಬರ್ದೆ’ ನೋ.

**ಬದ್ದೆ$_2$** (ನಾ). ಕೆಳಹೊಟ್ಟೆ; ಕಿಬ್ಬೊಟ್ಟೆ : ತುಸುವೆ ಉಬ್ಬಿದಂತಿದ್ದ ತನ್ನ ಬದ್ದೆಯ ಭಾಗವನ್ನು ನೋಡಿಕೊಂಡು ಮುಗುಳುನಗುತ್ತಾ ಏನನ್ನೋ ಸವಿಯುವಂತೆ ಕ್ಷಣಕಾಲ ನಿಂತಳು (ಮರಳು. ೩೬೯). [?]

**ಬದ್ದೆಗ** ‘ಬರ್ದೆಗ’ ನೋ.

**ಬದ್ದೆದಲ್ಲಟ** (ನಾ). ಪ್ರೌಢೆಯರನ್ನು ತನ್ನ ಸೌಂದರ್ಯಾದಿಗಳಿಂದ ಸೋಲಿಸಬಲ್ಲವನು ; ಪ್ರೌಢಸ್ತ್ರೀಯರಿಗೆ ತವಕವನ್ನುಂಟುಮಾಡುವವನು : ನೋಟದೊಳಟ್ಟುಜಂಬಡೆದು . . . ಕೂಟದೊಳುಣ್ಣಿದ ಚೆಚ್ಚ ತಟಕ್ಕಿಯೊಳ್ ಕೂಟಸುಖಂಗಳಂ ಪಡೆದನೇಂ ಚದುರಂ ಗಳ ಬದ್ದೆದಲ್ಲಟಂ (ಶಂಕಪು. ೩-೮೨). [ಬದ್ದೆ$_1$ ( < ಬರ್ದೆ) + ತಲ್ಲಟ]

**ಬದ್ದೆವಜ್ಜೆ** (ನಾ). “ಪ್ರೌಢಿಮೆಯುಳ್ಳ ಹೆಜ್ಜೆ ಗುರುತು” (ಶಂಕಪು. ೦೯೬) : ಪದಮುಮನಿಂಬುಮನಣಮುಚಿಯದದೇವುದು ಬದ್ದೆ ಬೆಳ್ಳಿಗಂ ಪಜ್ಜೆ ದಲೆಂಬುದನೆರಡುಮನಜಿವಾತನೆ ಚದುರಂ ಚದುರಂಗೆ ಬದ್ದೆವಜ್ಜೆಗಳೊಳವೇ (ಶಂಕಪು. ೩-೯೩). ☞ ಇದು ‘ಬದ್ದೆ’ ಮತ್ತು ‘ಪಜ್ಜೆ’ಗಳೆಂಬ ಭಿನ್ನಶಬ್ದಗಳಿರಬಹುದು. [ಬದ್ದೆ$_1$ ( < ಬರ್ದೆ) + ಪಜ್ಜೆ]

**ಬದ್ದೆವೆಣ್** (ನಾ). ಚತುರೆ ; ಪ್ರೌಢಸ್ತ್ರೀ : ನುಡಿಯೊಳು ನಗಿಸುವ ಸರಸಕಾತಿಯರು ಮೇಲುಡಿಸಿ ತೊಡಿಸುವ ನೀಟಿಯರು ಮಿಡಿದು ವೀಣೆಗಳ ಬಾಜಿಪ ಬದ್ದೆವೆಂಡಿರು ಕಡುಹಗೆಯಾದರವಳಿಗೆ (ಪರ್ವತ. ೩-೦೨). [ಬದ್ದೆ$_1$ (<ಬರ್ದೆ) + ಪೆಣ್]

**ಬದ್ಧ** (ಗು). ೧. ಕಟ್ಟಿದ ; ಬಿಗಿದ. ೨. ಬಂಧನಕ್ಕೊಳಗಾದ; ಅಧೀನವಾದ. ೩. ಕ್ರಮಕ್ಕೆ ಅನುಗುಣವಾದ; ವಿಧಿವತ್ತಾದ; ನಿಯಮಾನುಸಾರವಾದ. ೪. ಹೆಣೆದ : ಕೂಡಿಕೊಂಡ ; ಸೇರಿದ : ‘ಬದ್ಧಭ್ರುಕುಟಿ’, ‘ಬದ್ಧಾಂಜಲಿ’ ಪರಾ. ೫. ಆವರಿಸಿದ ; ಸಂತೃಪ್ತವರಿದ : ಸಕಲ ಬದ್ಧಾಶ್ರವನಿರೋಧದಿನಯೋಗಿಕೇವಲಿಗುಣಸ್ಥಾನಮಂ ಪೊರ್ದಿ ಸಮುಚ್ಛಿನ್ನಪ್ರಾಣಾಪಾನಪ್ರಚಾರಂ ಸಮುಚ್ಛಿನ್ನಕ್ರಿಯಾವೃತ್ತಿಧ್ಯಾನಪ್ರವರ್ತನಾಪರನಾಗಿ ( ಶಂಶಾಪು. ೦೬ – ೭೯ ವ ); ಬದ್ಧಾಷ್ಟಕರ್ಮಮಂ ನಿಜಬುದ್ಧಿಯ ಬಲದಿಂದನಂತಚಾತುಷ್ಟಯದಿಂದುದ ತರಿಪುಗಳನುರಿಸಿದ ಸಿದ್ಧರ್ ಲೋಕಪ್ರಸಿದ್ಧರೀಗೆಮಗೊಳ್ಪಂ (ಆಟ್ಟಿಮ. ೧-೨). ೬. ತಡೆದ ; ಹೊರಬರದ ; ಕಟ್ಟಿಕೊಂಡ : ‘ಬದ್ಧಮಲ’ ಪರಾ. ೭. ಹತ್ತಿಕ್ಕಿದ ; ಹತೋಟಿಯಲ್ಲಿಟ್ಟುಕೊಂಡ : ‘ಬದ್ಧೇಂದ್ರಿಯ’ ಪರಾ. ೮. ಗಾಢವಾದ ; ದೃಢವಾದ ; ತೀವ್ರವಾದ : ‘ಬದ್ಧದ್ವೇಷ’, ‘ಬದ್ಧವೈರ’ ಪರಾ. ೯. ಕುಂದಣಿಸಿದ ; ಕೆಚ್ಚಿದ. ೧೦. ರಚಿಸಿದ ; ಕಟ್ಟಿದ. ೧೧. ತೊಟ್ಟ ; ಧರಿಸಿದ : ಇನ್ನೆನ್ನುಮನೊಲ್ಲುವೊಲ್ಲಳಿವಳೆಂಬಾಶಂಕೆ ಪುಟ್ಟಿತ್ತು ಚಿತ್ತದೊಳಾವೇಗದೊಳುರ್ವರಾಸ್ತಿಲಕಂಗತ್ಯುನ್ನತಂ ದಕ್ಷಿಣಾಂಸದ ಬದ್ಧ ಶ್ಲಥಬಾಹುಕೀರ್ತಿ ಕಳೆದತ್ತಂದಾದ ಸಂದೇಹಮಂ (ಶಾಂತಿಪು. ೩-೦೯೬). ೧೨. (ನಾ). ಕಟ್ಟು ; ಪಾಶ ; ಬಂಧನ : ಮುಕ್ತಿ ಬದ್ಧಗಳೆರಡು ತಾವತಿಪ್ರಕಟವಾಗಿಯೆ ಸತ್ಯವೆಂಬರ ಮುಕುತಿಯಲ್ಲೊಬ್ಬಾತಗೆರಡು ಸಂಗ ದೊರಕುವದೆ (ಶಿಶಾಗ. ೧೧-೦೬-೭); ಬದ್ಧವೆಂಬುದು ಮುಕ್ತವೆಂಬುದು ಬುದ್ಧಿಗೇ ಸರಿಯಾತ್ಮಕಿಲ್ಲೆಲೆ (ಅಮೃತ. ೬-೦೪೦). ೧೩. ಕಟ್ಟಿ ಹಾಕಿದುದು ; ಬಂಧಿಸಿದುದು : “ಬದ್ಧಂ, ಪಿನದ್ಧಂ, ಅಮುಕ್ತಂ, ಅಪಿನದ್ಧಂ—ಈ ೪ ಕಟ್ಟಲ್ಪಟ್ಟುದು” (ಕಣಾಯು. ೦೩೩-೬೨). ೧೪. ಹಿಡಿತ ; ಹತೋಟಿ; ನಿಯಂತ್ರಣ : ‘ಬದ್ಧಗೊಳಿಸು’ ಪರಾ. ೧೫. ಸತ್ಯ ; ದಿಟ; ನಿಜ : ನೀನು ಹೇಳುವಂಥಾದ್ದು ಸಟೆಯೋ ? ದಿಟವೋ ?. . . ಬದ್ಧವೇ ಸರಿ. ಪರೀಕ್ಷೆ ಮಾಡಬೇಕು (ರಾಕೇಂದ್ರ. ೧೦೬). ೧೬. ಕಟ್ಟಳೆ ; ನಿಯಮ : ‘ಬದ್ಧಭೋಜನ’ ಪರಾ. ೧೭. ಯಾವುದಾದರೊಂದು ಕಟ್ಟಿಗೆ ಒಳಪಟ್ಟವನು : “ಬದ್ಧಃ, ನದ್ಧಃ, ಸಂಯತಃ — ಈ ೩ ಕಟ್ಟುಪಟ್ಟವಂ” (ಕಣಾಯು. ೩೬-೦೬೩) ; ಬದ್ಧನಲ್ಲ ಮುಕ್ತನಲ್ಲ ಎರಡಿಲ್ಲವಾಗಿ ಸಹಜಭರಿತನಯ್ಯಾ (ಅದವ. ೪. ೦೪೭-೨೭೭). ೧೮. [ವಿಶಿಷ್ಟಾ]

ನಿತ್ಯ, ಮುಕ್ತ, ಬದ್ಧರೆಂಬ ಮೂರುಂ ಬಗೆಯಂ ಜೀವಾತ್ಮರಲ್ಲಿ ಒಂದು ಬಗೆ ; ಸಂಸಾರಿ : ಈ ಜೀವಾತ್ಮತತ್ತ್ವವು ನಿತ್ಯ, ಮುಕ್ತ, ಬದ್ಧ ಎಂದು ಮೂರು ವಿಧ . . . ಈಗ ಪ್ರಕೃತಿಸಂಬಂಧದಲ್ಲಿರುವವರು ಬದ್ಧರು (ಹಿಂದಸಾ. ೨೪೭). ೧೯. [ಸಂಗೀತ] ತಾನದಲ್ಲಿ ಒಂದು ಪ್ರಕಾರ : ಪ್ರಾಚೀನಸಂಗೀತದಲ್ಲಿ ತಾನ, 'ಬದ್ಧ' ವೆಂದೂ 'ಅಬದ್ಧ' ವೆಂದೂ ಎರಡು ರೀತಿಯಲ್ಲಿತ್ತು (ಸಂಗೀಶಂ. ೯೮). 'ಬದ್ಧತಾನ' ಪರಾ. ೨೦. [ನಾಟ್ಯ] ನರ್ತನದಲ್ಲಿ ಒಂದು ಪ್ರಕಾರ ; ನೃತ್ಯದಲ್ಲಿ ಹೆಜ್ಜೆ ಹಾಕುತ್ತ ಮುಂದಕ್ಕೆ ಚಲಿಸುವ ಒಂದು ಬಗೆಯ ಗತಿ : ಒದವಿದಪ ಸ್ಯಂದಿತಮಗ್ಗದ ಬದ್ಧಂ ಜನಿತಮುಮೆಸೆವೂರೂದ್ವೃತ್ತಂ ಸುದತಿ ಪದಿ ನಾಟು ಭ್ರಾಮಂ ವುದಿದೆಸೆವೀ ಚಾರಿಯೆಂಬ ಪೆಸರಸೆದಿರ್ಕುಂ (ಅಕ್ಕರಂ. ೬-೪). [ಸಂ.]

**ಬದ್ಧಕ** (ನಾ). ಬಂಧನಕ್ಕೆ ಸಿಲುಕಿದವನು : ಆ ಜಂಗಮ ಹೆಣ್ಣ ಬೇಡಿದರೆ ಸಂಸಾರಿ ಎಂದು ಹೊನ್ನ ಬೇಡಿದರೆ ಆಶಕನೆಂದು ಮಣ್ಣ ಬೇಡಿದರೆ ಬದ್ಧಕನೆಂದು ಇಷ್ಟಕ್ಕೆ ನೊಂದ ಮತ್ತೆ ಭಕ್ತಿವಾಸಿಗೆ ಹೋರಲೇಕೆ (ಪ್ರೋಳವಚ. ೩೬-೨೦೬). [ಸಂ.]

**ಬದ್ಧಕಂಕಣ** (ನಾ). ತನ್ನ ಗುರಿಯನ್ನು ನೆರವೇರಿಸಲು ಸಂಕಲ್ಪ ಮಾಡಿದವನು ; ಕಂಕಣಬದ್ಧ : ಬಲದೇವನು . . . ವರ್ಣಚಿತ್ರಕಲೆ (oil Painting) ಯನ್ನು ಮುಂದಕ್ಕೆ ತರಬೇಕೆಂದು ಬದ್ಧಕಂಕಣನಾದನು (ಕಲಾಸಾ. ೩೩). [ಸಂ.]

**ಬದ್ಧಕತನ** (ನಾ). ಬಂಧನಕ್ಕೊಳಗಾಗಿರುವಿಕೆ : ಕಾಯದೊಳ ಗುಂಟೆಂದರೆ ಕರ್ಮಕಾಂಡಿಯಲ್ಲ ಜೀವದೊಳಗುಂಟೆಂದರೆ ನಾನಾಯೋನಿ ಯವನಲ್ಲ . . . ಅದು ಇದ್ದಿಲು ಶುಭ್ರವಾದ ತೆಱನುತೆ ಹೊದ್ದದಾಗಿ ಬದ್ಧಕತನವಿಲ್ಲವೆಂದೆ ನಿಃಕಳಂಕಮಲ್ಲಿಕಾರ್ಜುನಾ (ಪ್ರೋಳವಚ. ೩-೮).

[ಬದ್ಧಕ + — ತನ]

**ಬದ್ಧಕೋಣಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ ; P "ಬದ್ಧವೆಂದರೆ ಕಟ್ಟಲ್ಪಟ್ಟ, ತಡೆಯನ್ನು ಹೊಂದಿದ ಎಂದರ್ಥ. 'ಕೋಣ' ವೆಂದರೆ ಮೂಲೆ. ಈ ಭಂಗಿಯಲ್ಲಿ, ನೆಲದ ಮೇಲೆ ಕುಳಿತು, ಹಿಮ್ಮಡಿಗಳನ್ನು ಗುದ ಗುಹ್ಯಸ್ಥಾನಗಳ ನಡುತಾಣಕ್ಕೆ (perineum) ಅಳವಡಿಸಿ ಪಾದಗಳನ್ನು ಹಿಡಿದು, ಮಂಡಿಯ ಭಾಗಗಳು ಎರಡು ಕಡೆಗಳಲ್ಲಿಯೂ ನೆಲ ಮುಟ್ಟುವವರೆಗೂ ತೊಡೆ ಗಳನ್ನಗಲಿಸಬೇಕಾಗಿದೆ" (ಯೋಗದೀ. ೦೦೨) : ಅಷ್ಟವಿನ್ಯಾಸಗಳು ೧. ಉತ್ತಾನಾಸನ ೨. ಚತುರಂಗದಂಡಾಸನ . . . ೩೨. ಟಿಟ್ಟಿಭಾಸನ ೩೩. ಬದ್ಧಕೋಣಾಸನ (ಭಾರದ. ೦೬೭). [ಸಂ.]

**ಬದ್ಧಗೊಳಿಸು** (ಕ್ರಿ). ಹಿಡಿತಕ್ಕೆ ತರು ; ಹತೋಟಿಯಲ್ಲಿಡು ; ನಿಯಂತ್ರಣಗೊಳಿಸು : ಹಾದಿಯಿಲ್ಲದೆ ಹರಿವ ಮರುಳು ಮನವನು ನಿನ್ನ ಬುದ್ಧಿಬಲದಿಂದಲೇ ಬದ್ಧಗೊಳಿಸಿ (ಪಸಲ್ಲಿ. ೯೭-೪).

[ಬದ್ಧ + ಕೊಳ್$_1$ + — ಇಸು$_3$]

**ಬದ್ಧತಾನ** (ನಾ). = ಬದ್ಧ ೧೯ : ಬದ್ಧತಾನ ತಾಳಗತಿಯನ್ನು ಅನುಸರಿಸಿ, ಅಬದ್ಧತಾನ, ತಾಳಗತಿಯನ್ನನುಸರಿಸದೆ ಹಾಡಲ್ಪಡುತ್ತವೆ. ಬದ್ಧತಾನ ಈಗ ಬಳಕೆಯಲ್ಲಿಲ್ಲ (ಸಂಗೀಶಂ. ೯೮). [ಸಂ.]

**ಬದ್ಧತೆ** (ನಾ). ೧. ಕಟ್ಟಳೆ ; ನಿಯಮ : ಯಾವನೊಬ್ಬ ನಾಗರಿಕನೂ . . .ಸರ್ವಜನರು ಸೇರುವ ಸ್ಥಾನಗಳನ್ನು ಉಪಯೋಗಿಸುವ ಸಂಬಂಧದಲ್ಲಿ ಯಾವುದೊಂದು ನಿರ್ಯೋಗ್ಯತೆ, ಬದ್ಧತೆ, ನಿರ್ಬಂಧ ಅಥವಾ ಷರತ್ತಿಗೆ ಒಳಪಟ್ಟಿರತಕ್ಕುದಲ್ಲ (ಭಾಧಾಸ. ೯). ೨. (ಮಲವು) ಹೊರಬರದೆ ಕಟ್ಟಿಕೊಳ್ಳುವಿಕೆ : 'ಮಲಬದ್ಧತೆ' ಪರಾ. [ಸಂ. ಬದ್ಧತಾ]

**ಬದ್ಧದ್ವೇಷ** (ನಾ). ಕಡು ಹಗೆ ; ಗಾಢ ವೈರ : ಅರಸ ಕೇಳಾಯುಷ್ಯ ಭಾಗ್ಯಗಳೆರಡು ಕೆಡುವವು ತಪ್ಪದವನೀಸುರರ ಬದ್ಧದ್ವೇಷ ಲೇಸಲ್ಲೆಂದನಾ ವಿದುರ (ಕುಭಾ,ಉ. ೩-೦೮) ; ವೀರೇಂದ್ರಸಿಂಹನಿಗೂ ಮಾನಸಿಂಹನಿಗೂ ಬದ್ಧದ್ವೇಷ (ಬಂಕಿಮ. ೦೪೭). [ಸಂ.]

**ಬದ್ಧಪದ್ಮಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ ; P "ಬದ್ಧಪದ್ಮಾಸನ . . . 'ಬದ್ಧ' ವೆಂದರೆ ಕಟ್ಟಲ್ಪಟ್ಟ ಅಥವಾ ಬಿಗಿತಕ್ಕೆ ಒಳಗಾದ. ಈ ಭಂಗಿಯಲ್ಲಿ ಕೈಗಳನ್ನು ಬೆನ್ನ ಹಿಂದೆ ಎದುರುಬದುರು ದಿಕ್ಕಿನಲ್ಲಿ ಅಡ್ಡಗಿಸಿ, ಅವುಗಳಿಂದ ಕಾಲಿನಂಗುಟ (ಹೆಬ್ಬೆರಳು)ಗಳನ್ನು ಹಿಂಗಡೆಯಿಂದ ಬಿಗಿಹಿಡಿಯುವುದು. ಮುಂಗಡೆ ಅಡ್ಡಗಿಸಿದ ಕಾಲುಗಳೂ ಮುಂಗಡೆಯಲ್ಲಿ ಅದೇ ಬಗೆ ಯಲ್ಲಿ ಕೈಗಳೂ ಈ ಮಧ್ಯೆ ದೇಹವು ಇವುಗಳ ಹಿಡಿತಕ್ಕೆ ಒಳಪಟ್ಟಿ ರುವುದರಿಂದ, ಈ ಭಂಗಿಗೆ ಈ ಹೆಸರು " (ಯೋಗದೀ. ೦೦೭): ಮುಖ್ಯವಾದ ಕೆಲವು ಆಸನಗಳು . . . ೧೪. ಬದ್ಧಪದ್ಮಾಸನ ೧೫. ಯೋಗಮುದ್ರಾಸನ (ಭಾರದ. ೦೬೭) ; ಮುಕ್ತಪದ್ಮಾಸನ, ಬದ್ಧಪದ್ಮಾಸನ ಇವು ಧ್ಯಾನಕ್ಕೆ ಅನುಕೂಲವೆಂದೂ . . . ಹೇಳಲ್ಪಟ್ಟಿದೆ (ಮನೋಸಂ. ೩೦೩). [ಸಂ.]

**ಬದ್ಧಭೂಮಿಕ** (ನಾ). ಸಮಮಾಡಿ ಸಿದ್ಧಗೊಳಿಸಿದ ವೇದಿಕೆ, — ನೆಲಗಟ್ಟು : " ಕುಟ್ಟಿಮಂ, ಬದ್ಧಭೂಮಿಕಂ — ಈ ೨ ನೆಲಗಟ್ಟು " (ಹಲಾಯು. ೪೯-೦೩೯). [ಸಂ.]

**ಬದ್ಧಭೋಜನ** (ನಾ). (ದೇವಸ್ಥಾನದಲ್ಲಿ) ಕಟ್ಟಳೆಯ ಪ್ರಕಾರ ಹಾಕುವ ಊಟ,—ಭೋಜನ : ದನಿಯರು ತಮ್ಮ ಬದ್ಧಭೋಜನ ನಡವಂತಾಗಿ ಯಿಕ್ಕಿಕೊಂಡು (ಶಾಇಇ. IX-ii, ೪೦೯-೨೬ ; 1365). [ಸಂ.]

**ಬದ್ಧಭ್ರುಕುಟಿ** (ನಾ). ೧. ಗಂಟಿಕ್ಕಿದ ಹುಬ್ಬು ; ಹುಬ್ಬುಗಂಟು : ಕಾಱಿದವು ಕುಡಿಮಿಸೆ ಕಾದುದು ಮೋಱಿ ಬದ್ಧಭ್ರುಕುಟಿಯಲಿ ಹುರಿ ಯೇಱಿತಧಿಕ ಕ್ರೋಧತಾಮಸ ನಿಮ್ಮ ದಳಪತಿಯ (ಕುಭಾ,ಕ. ೨೫-೩) ; ದಾಶರಥಿ . . . ಸಿಗ್ಗಿಂದೆ ಬದ್ಧಭ್ರುಕುಟಿಯಿಂದೆ ನೋಡುತಿರ್ದನ್ ಬಿಲ್ಲು ವೆರಗಾಗಿ (ಶ್ರೀರಾಮಚ. ೩೦೩-೦೨೩). ೨. ಹುಬ್ಬುಗಂಟಿಕ್ಕಿದವನು : ಭೀಮಸೇನನುದ್ದಾಮಕೋಪಾಟೋಪಚಿತ್ತದಿಂ ಬದ್ಧಭ್ರುಕುಟಿಯಾಗಿ (ಗದಾಯು. ೭-೯ ವ) ; ಬದ್ಧಭ್ರುಕುಟಿ ಸೆರೆ ಬಿಗಿಯುವೋಲೌಡುಗಚ್ಚಿ, ನಿದ್ದೆಯನೊದ್ದು, ಸೀಳ್ದು ದುಃಸ್ವಪ್ನಮಂ, ಕುಳಿತೆದ್ದನಬ್ಬರಿಸಿ (ಶ್ರೀರಾಮಚ. ೨೭೩-೨೭೮). [ಸಂ.]

**ಬದ್ಧಮಲ** (ನಾ). ಕಟ್ಟಿಕೊಂಡಿರುವ ಮಲ ; ಹೊರಬರದಿರುವ ಮಲ: ಸಂವತ್ಸರಲವಣ, ಇಂಗು, ಶುಂಠಿ ಎಂಬೀ ಔಷಧಿಗಳನ್ನು ಶುಂಠಿಯ ಕಷಾಯದ ಬಿಸಿನೀರಿಂ ಕುಡಿಯೆ . . . ಬದ್ಧಮಲ ಬಿಡುವುದು (ಬಸ್ಸಿಶಿ. ೨೦). [ಸಂ.]

**ಬದ್ಧಮೂಲ** (ನಾ). ೧. ಬಲವಾಗಿ ಬೇರೂರಿದುದು ; ಗಾಢವಾಗಿ ನೆಲಸಿದುದು : ಒಂದು ಸಾರಿ ಪ್ರಣಯವು ಹುಟ್ಟಿ ಬದ್ಧಮೂಲವಾದರೆ— ಆಮೇಲೆ ರೂಪವಿರಲಿ ಹೋಗಲಿ ಪ್ರಣಯವು ನಡೆದುಕೊಂಡು ಹೋಗು ವುದು (ಬಂಕಿಮ. ೬೦). ೨. ಗಟ್ಟಿಯಾಗಿ ನೆಲಸಿದವನು ; ಸ್ಥಿರವಾಗಿ ನಿಂತವನು : ಆ ಸುಖದಲ್ಲಿ ನಾವೆಲ್ಲರೂ ಇಹಸಂಸಾರದಲ್ಲಿ ಬದ್ಧಮೂಲ ರಾಗಿ, ಎಂದರೆ, ಬಲವಾದ ಬೇರನ್ನು ಬಿಟ್ಟುಕೊಂಡವರಾಗಿದ್ದೇವೆ (ಕಥಾಕುಂ. ೦೨೩). [ಸಂ.]

**ಬದ್ಧರ** 'ಬದ್ದರ' ನೋ.

**ಬದ್ಧರಸ** (ನಾ). ೧. ಸ್ನೇಹಭಾವದಿಂದ ಕೂಡಿದವನು. ೨. ಪಾರಜ ವನ್ನು ಲೋಹದಲ್ಲಿ ಬೆರಸಿದವನು. ೧, ೨ : ಬಿನ್ನಪಂಗೆಯ್ಯಲೊಡಂ ಬದ್ಧರಸನುಂ ಸಿದ್ಧರಸವೇದನುಮಾದ ರಸವಾದಿಯಂತೆ ಜ್ವಳನಜಟಿ ರಾಗಿಸಿ (ಶಾಂತಿಪು. ೩-೩೭ ವ). [ಸಂ.]

**ಬದ್ಧರೂಪ** (ನಾ). [ಭಾಷಾಶಾ] ಬೇರೊಂದಕ್ಕೆ ಹೊಂದಿಕೊಂಡಿರು ವಂಥ ಶಬ್ದರೂಪ : ಪ್ರತ್ಯಯಗಳು ಯಾವಾಗಲೂ ಪ್ರಕೃತಿಗಳೊಡನೆ ಕೂಡಿಕೊಂಡೇ ತೋರಿ ಬರುವುದರಿಂದ . . . ಪ್ರತ್ಯಯಗಳನ್ನು ಬದ್ಧರೂಪ ಗಳೆಂದೂ (ಬಾಂಡ್‌ಫಾರಂ) ಕರೆಯುವುದುಂಟು (ಕಂಕೋ. I. ೬೩). [ಸಂ.]

**ಬದ್ಧವಿಘಾತಿ** (ನಾ). ಕೆಡುಕಿಗೆ ಸಂಬಂಧಿಸಿದುದು ; (ಖಂಡಿತವಾಗಿ) ಕೇಡನ್ನುಂಟು ಮಾಡುವುದು : ದೇವಿ ನೇಮಿಸಲಱಿಯೆನೆಂದೊಡಿದಾವ ಧರ್ಮವು ಶಿವಶಿವೀ ಹದ ಸಾವನವರಿಗೆ ತಹುದು ಬದ್ಧವಿಘಾತಿಯಿದು ಬಲುಹು (ಕುವ್ಯಾಭಿ. ೩-೯). [ಸಂ.]

**ಬದ್ಧವಿರೋಧ** (ನಾ). ತೀವ್ರವಾದ ದ್ವೇಷ ; ಕಡುಹಗೆ : ಮೊದಲೊಳ್ ಬದ್ಧವಿರೋಧದಿಂ ನೆಗಟ್ದ ಕುಂತೀಪುತ್ರರೊಳ್ ಭೀಮನಂಕದ ಗಾಂಧಾರಿಯ ಪುತ್ರರೊಳ್ಮೊದಲಿಗಂ ದುರ್ಯೋಧನಂ ಧರ್ಮಯುದ್ಧದೊಳಂತಾತನನಿಕ್ಕಿ ಕೊಂದಂ (ಗದಾಯು. ೧-೩೩). [ಸಂ.]

**ಬದ್ಧವೈರ** (ನಾ). ಅತಿಯಾದ ದ್ವೇಷ ; ಕಡುಹಗೆ ; ಬದ್ಧವಿರೋಧ : ಆ ಬದ್ಧವೈರದಿನಿನಿತು ಕಱುಪ್ಪಂ ಕಾಯ್ಪುಂ ನಿನಗಾದುದು (ಶಾಂತಿಪು. ೯-೯೧ ವ) ; ಆ ಮರ್ಕಟಂಗಳೆರಡರ್ಕಂ ಏಕದ್ರವ್ಯಾಭಿಲಾಷೆಯಿಂ ಬದ್ಧವೈರಂ ಬಳೆದು (ಶಂಚತಂ. ೨೭೭-೬) ; ಓರೋರ್ವರ ನೆಱಂಗಳುಮನನ್ಯೋನ್ಯಬದ್ಧ ವೈರಕಾರಣಂಗಳುಮಂ ಮೂದಲಿಸುತ್ತುಂ (ಸುಕುಮಾ. ೧೧-೯೨ ವ). [ಸಂ.]

**ಬದ್ಧಾಂಜಲಿ** (ನಾ). (ನಮಸ್ಕಾರ ಮಾಡಲು) ಜೋಡಿಸಿದ ಕೈ ; ಮುಗಿದ ಕೈ : ನೀಂ ಪೋಗಿ ಕಾದಂಬರೀದೇವಿಗೆ ಬದ್ಧಾಂಜಲಿಯಾಗಿ ಪ್ರಣಾಮಪುರಸ್ಸರಮಪ್ಪೆನ್ನ ಬಿನ್ನಪಮಂ ಪೇೞ್ವುದು (ಕಾದಂಬ. ೩೯೯) ; ಉದ್ಧರಿಸಿದನಶ್ರಮದಿಂ ಸಿದ್ಧಶಿಲೋಚ್ಚಯಮನೊಂದೆ ಕರತಲದಿಂ ದರ್ಘೋರ್ಕೀದ್ಧರಣಸಹಿತಮಮರರ್ ಬದ್ಧಾಂಜಲಿಯಪ್ಪಿನಂ ಸುಮಿತ್ರಾ ಪುತ್ರಂ (ಶಂಚಪು. ೧೧-೩೦) ; ಆ ನೀತಿಭೂಷಣಮಂತ್ರಿಪಂ . . . ರಾಜಶೇಖರ ರಾಜೇಂದ್ರಂಗೆ ಮಣಿಮಕುಟಮಂ ಮಣಿದು ಬದ್ಧಾಂಜಲಿಯಾಗಿ ನಿಂದಿ ರ್ಪುದುಂ (ರಾಜಶೇ. ೬-೦೩೨ ವ). [ಸಂ.]

**ಬದ್ಧಿಸು** (ಕ್ರಿ). ನಿಯಮಿಸು ; ನಿಶ್ಚಯಿಸು : ಉದ್ಯೋಗಿಸಿದರಾಗಮನ ದಲ್ಲಿ ಹವನವ ತಿಸ್ರುತೆ ದಾನದಕ್ಷಿಣೆಯ ಶುದ್ಧಿಯ ಮಾಡಿದು ಮನೆಯ ಸುಲಗ್ನದಿ ಬದ್ಧಿಸಿದರು ಮಹೌಹೂರ್ತಿಕರು (ಮೋಹತ. ೦೭-೪೨). [ಬದ್ಧ + — ಇಸು₂]

**ಬದ್ಧೇಂದ್ರಿಯ** (ನಾ). ಇಂದ್ರಿಯಂಗಳನ್ನು ನಿಗ್ರಹಿಸಿದವನು,-ಹತೋಟಿ ಯಲ್ಲಿಟ್ಟುಕೊಂಡಿರುವವನು ; ಜಿತೇಂದ್ರಿಯ : ಶುದ್ಧವಾಗಿರ್ದಧ್ವ ದೋಳ್ ಶಿವಂಪತಿಯಾಗಿ ಬದ್ಧೇಂದ್ರಿಯಂ ತಾನನಂತೇಶ್ವರಂ (ಏಕ್ಕ್ರಪು. ೬-೨-೯೨). [ಸಂ.]

**ಬದ್ನಾಮಿ**, ಬದನಾಮಿ (ನಾ). ಕೆಟ್ಟ ಹೆಸರು ; ಅಪಯಶಸ್ಸು ; ಅಪಖ್ಯಾತಿ : ಹಾಗೆ ಮಾಡಿದ್ರೇ ಆದರೆ ನಮ್ಮೂರಿಗೇ ಪುಂಡುಕೋಪೆ ಯೆಂಬ ಬದ್ನಾಮಿ ಬರುತ್ತೆ (ಕಲಶ. ೨೦೦). **ಬದನಾಮಿ** : ಅದ ಕಾಣ ದಾದಭವ ಮದನನಂ ಕೊಂಡು ತಾಂ ಮೊದಲೆ ಮನಮಂ ಕೊಲ್ಲದೆಮಗೆ ತಂದ ಬದನಾಮಿ ಸಾಕು (ಮನೋಬಿ. ೦-೨೦) ; "ಕೋಟಲೆ" (ಮನೋಬಿ. ೩೬೪). [←ಪಾರ. ಹಿಂ. ಮರಾ. ಬದನಾಮಿ]

**ಬದ್ಮಾಶ್**, ಬದಮಾಷ್, ಬದ್ಮಾಷ್ (ಗು). ೧. ಕೀಳಾದ; ಕೀಳುಮಟ್ಟದ. (ನಾ). ೨. ನೀಚ ; ಕೀಳುಮನುಷ್ಯ : ಬದ್‌ಮಾಶ್ ನನ್ನ ಕೈ ಹಿಡಿಯಲು ಪ್ರಯತ್ನಿಸುತ್ತಿದ್ದ (ಕಲಶ. ೧೦೦). **ಬದಮಾಷ್** : ೨. ಬ್ಲಾಟೋ ದುಂಡು ಕುಡುಕ, ಲಫಂಗ, ಬದಮಾಷ್ (ಕುಂಹಿಂ. ೦೨೦) ; ಬಂಗಾರದಂಥ ಕಾಯಿಗಳನ್ನು ಹಾಳುಮಾಡಿದಿ ಬದಮಾಷ್ (ರಂಗರೋ. ೪೦). **ಬದ್ಮಾಷ್** : ೧. ಅವಳು . . . ಯಾರೋ ಬದ್ಮಾಷ್ ಜನರ ಗುಂಪಿನವರೊಳಗಿನವಳಿರು ವಂತೆ ತೋರುತ್ತದೆ (ಕೃಕಕ್ಕ. ೩೦). ೨. ಬದ್ಮಾಷ್, ನಿನ್ನ ಬಾಪ್ತಿಸ್ಮಾ ಹೇಗಾಗುವದೋ ನೋಡುತ್ತೇನೆ (ಸ್ವ್ಯಕಿತ. ೩೩೩) ; ಕೆಲಸ ಮಾಡಾಕ ಬಂದಿ ದ್ದಿಯೋ, ತುಡುಗು ಮಾಡಾಕ ಬಂದಿದ್ದಿಯೋ ಬದ್ಮಾಷ್ (ಜಾಪೋಲೀ. ೦೨೦). [← ಅರ. ಪಾರ. ಹಿಂ. ಮರಾ. ಬದಮಾಶ್]

**ಬದ್ಮಾಷ್** 'ಬದ್ಮಾಶ್' ನೋ.

**ಬಧಿರ** (ನಾ). ಕಿವಿ ಕೇಳಿಸದವನು ; ಕಿವುಡ ; ಕೆಪ್ಪ : "ಬಧಿರನೇಡಂ ಕಿವುಡನೆನಿಸಿಕ್ಕು" (ಶಂಗರಾ. ೦೦೯-೩) ; ಕುಬ್ಜ ವಾಮನ ಬಧಿರ ಮೂಕ ಕಿರಾ ತೋನ್ಮತ್ತ ಜಡಜನಂಗಳುಮಂ . . . ಕೊಟ್ಟು (ಆದಿಪು. ೪-೩೪ ವ) ; ಕರುಣ ವಿಲ್ಲದನ ಕಾಪುರುಷನ ವಿಕಾರಿಯ ಬಧಿರನ ಪೆಂಡಿರು ಪರರ ಪೆಂಡಿರಲ್ತೆ (ಜನವ. ೧೨-೪೯) ; ನಮೆವ ದೀನಾಂಧಬಧಿರರಂ ದಾನಧರ್ಮಂಗಳಿಂ ಪಾಲಿ ಸುತ್ತುಂ (ರಾಮಾಶ್ವ. ೧೩-೦೯). [ಸಂ.]

**ಬಧಿರತೆ** (ನಾ). ಕಿವಿ ಕೇಳಿಸದಿರುವಿಕೆ ; ಕಿವುಡು : ಘೋಷಘಂಟಾರವಂ ದಿಗ್ಗದನೀಶ್ರೋತ್ರಕ್ಕೆ ಸಂಪಾದಿಸೆ ಬಧಿರತೆಯುಂ . . . ಬಂದುದಂದನ್ನಚಕ್ರ ಕ್ಕಿದು ಕಲ್ಪಾಂತಾಭ್ರಮೆಂಬಂತುದಿತರಿಪು ಮನೋದೈನ್ಯಮುಗ್ರೇಭಸೈನ್ಯಂ (ಪುಷ್ಪಪು. ೫-೯) ; ಕಟಿತಟಕಾಂಚಿ ಪದನೂಪುರಾಳಿಸ್ವನಂ ದಿಗ್ಗಜಂಗಳ್ಗೆ ಬಧಿರತೆಯನೋಲೈಸೆ ಬರುತಿರ್ದುದಾ ಭವಾನಿಯ ಸಖೀನಿವಹಂ (ಶಬಪು. ೩೭-೩೩). [ಸಂ. ಬಧಿರತಾ]

**ಬಧಿರತ್ವ** (ನಾ). = ಬಧಿರತೆ : ಪರರ ಪಟುತನವಾದದಲಿ ಮೂಗರಪೊಲಿಹ ಪರವಚನದುತ್ಕಟಪೊರಗೆ ಬಧಿರತ್ವವನು ವರಗುಣದೋಷದರುಶನವು ದೊರಕಿದೊಡೆ ಜಾತ್ಯಂಧನೆನಿಸುವ ಪುರುಷನಾವವನವನು ಸಾಕ್ಷಾತ್ಪರಮ ಪುರುಷೋತ್ತಮನಲೇ (ಕುವ್ಯಾಉ. ೪-೭೦). [ಸಂ.]

**ಬಧಿರಿತ** (ಗು). ಕೇಳಿಸದಂತೆ ಮಾಡಿದ ; ಕಿವುಡುಗೊಳಿಸಿದ : ಅನ್ನೆಗಂ ಗಂಭೀರತರತುರಗಹೇಷಾರವಬಧಿರಿತಸಕಲಭುವನವಿವರನುಂ . . . ಆಗಿ (ಆದಿಪು. ೩-೯೧ ವ) ; ಚಂಚಚ್ಚಾಪವರಾರ್ವೀರವಬಧಿರಿತದಿಕ್ಚಕ್ರಮಂ . . . ನಿರ್ಜನವನಮನಿದಂ ಬಂದು ನೀನೆಂತು ಪೊಕ್ಕೈ (ಶಂಚತಂ. ೩೭-೨). [ಸಂ.]

**ಬನ₁**, ಬನವು (ನಾ). ೧. ಕಾಡು; ಅಡವಿ; ಅರಣ್ಯ: "ಬನಮೆಂದು ವನಂ" (ಶಶಸ. ೩೪-೦೭೦) ; ಮುನಿ ವೀತರಾಗನೆಂದುಂ ಬ[ಪಾಠಾಂ. ಜ]ನಮಂ ಸಾರ್ತಕ್ಕುಂ (ಶಬಿರಾ. ೦-೭೯) ; ಬನಕಂ ಪೊಲಕಂ ನಡೆಯಲ್ಕಿನಿಸಾಱದೆ ಮಱುಗುವಾರ್ಯರಂ ಕಂಡು ಮನೋಜನಿತದಯಂ ಕರಿ ಹರಿ ವಾಹನಂ ಗಳಂ ಪಡೆದು ವಿಮಲವಾಹನನಾದಂ (ಆದಿಪು. ೬-೩೬) ; ನವಿಲ್ ಕಾರ್ಗಾಲಮಂ ಹಂಸೆ ಸರೋವರಮಂ ಮದ್ದಾನೆ ಬನಮಂ . . . ನೆನೆವಂತು ಜನಪದಾಂ ಭೋಜಂಗಳಂ ನೆನೆಯುತ್ತುಂ (ಧರ್ಮಾಮೃ. ೩-೦೯೦). ೨. ತೋಟ ; ಉದ್ಯಾನ ; ನಂದನ : "ಬನಮೆಂದೆನಲ್ಕುದ್ಯಾನಮಕ್ಕು" (ಕಶಶ. ೬೨) ; ಬನದ ತಳಿರ್ ಕಳಿಕೆ ಮುಗುಳ್ ನನೆ ಬಿರಿಮುಗುಳಲರ ಗೊಂಚಲೆಂಬಿವು ವನಜಾನನೆಯರ ಪೂದುಡುಗೆಗೆ ಮಟ್ಟನಾದುವೇಂ ಪೆಂಪೊ ಭರತನಂತಃ ಪುರದಾ (ಆದಿಪು. ೧೦-೦೨೩) ; ಚಂಪಕ ಪಾಲತಿ ಮುಡಿವಾಳಗಳಿಂ ಬನವೆಸೆ ದುದು (ತ್ರಿಪುಶ. ೨-೨೦) ; ಮಲ್ಲಿಗೆಯ ವನಸಂಪಗೆಯ ಬನವೆಲ್ಲ . . . ವೃಥಾ ನೆಲನಿಲ್ಲ ನಳನ ರಾಜ್ಯದಲಿ (ನಳಚ. ೪-೦೫). ೩. ಮರಗಳ ಗುಂಪು,— ಸಮೂಹ ; ತೋಪು : "ತೋಪು-ಬನಂ" (ಕಾಶಕ್ಕ. ೨೯) ; ಅಲರ್ದ ಪೊಂದಾವರೆಯ ಹಂತಿಯೊ ತಳಿತ ಮಾವಿನ ಬನವೊ (ಕುವ್ಯಾಅ. ೬-೦೨). **ಬನವು** : ೧. ತೆರಳಿದರು ಶೃಂಗಾರನಿಧಿಗಳು . . . ಕಳಾವಿದೆಯರುಗಳಾ ಮುಸಿಯಿಪ್ಪ ಬನವಿಗೆ (ಕೌಶಿರಾ. ೦-೪೩).

ಬನದ ಊಟ, ಬನದೂಟ = ಹುಣ್ಣಿಮೆದಿನಗಳಲ್ಲಿ ವಿಹಾರಾರ್ಥ ವಾಗಿ ತೋಟದಲ್ಲಿ ಮಾಡುವ ಊಟ ; ವನಭೋಜನ : ಚಿಕ್ಕ ದೊಡ್ಡ ಹೆಣ್ಣುಮಕ್ಕಳು ಬನದ ಊಟಮಾಡುವರು (ಕನ್ನಸಾ. ೦೯೨) ಹೆಣ್ಣು

ಮಕ್ಕಳು ಬನದೂಟವನ್ನು ಸೌರಿಸುವರು (ಕನ್ನಜಾ. ೦೬೭). ಬನದಂಬಿಕೆ = ಪಾರ್ವತಿಯ ಒಂದು ಅವತಾರ : ಬನಶಂಕರಿ : ವನದೇವಿ : ಭಕ್ತಜನಪ್ರಸನ್ನೆ ವಿಸ್ತಾರವಿಚಿತ್ರಮೂರ್ತಿ ಬನದಂಬಿಕೆ ಮಾಜ್ಕಿಮಗಿಪ್ಪ ಸಿದ್ಧಿಯುಂ (ಶಶಿಕಂ. ೪). ಬನದಬ್ಬೆ = ಬನದಂಬಿಕೆ : ನೆಲನೆಲ್ಲಂ ಕೊಂಡಾಡುವೆಕ್ಕಲವಿರಿಯುಂ ಬನದಬ್ಬೆಯುಂ ಮಹಾಲಕ್ಷ್ಮಿಯುಂ . . . ಪೊಲೆಯರ ದನಿಯಪ್ಪೊಡಂ ಕೇಳದಂತು ಕಂಚುವಜಿವೆರಸು ಲೇಸುನುಡಿ ಲೇಸುನುಡಿಯೆಂಬ ಮಹಿಮೆಯಿಂದುಣ್ಬರ್ (ಧರ್ಮಾಮೃ. ೯-೧೦೦); ಬನದಬ್ಬೆ ಬಳರಿ ಬಾದು...ಮನೆದೈವವೆಂಬಿವೆಲ್ಲಂ ಜಿನಭಕ್ತಂಗೆಡದ ಕಾಲ ಕಟ್ಟಂ ಕಷ್ಟಂ (ಕಶಾರ. ೪೬೯). ಬನದ ಶಂಕರಿ = ಬನದಂಬಿಕೆ : ದಿನಪಸುತನ ದೂತರು ಬಂದು ಎಳೆವಾಗ ಬನದ ಶಂಕರಿ ಎತ್ತ ಹೋದಳೆ ಮೂಳಿ (ಪುರಂದ. ಧಾ. ೩-೦೨೭-೭). ಬನದ ಹುಣ್ಣಿವೆ = ಪುಷ್ಯಮಾಸದ ಹುಣ್ಣಿಮೆ : ಬನದ ಹುಣ್ಣಿವೆ ದಿನ ಬಾಗಿಲ ತೋರಣವನು ಕಟ್ಟಿ ಬಡಿದೆ ಪಲ್ಲೆಯುವ ಬೀಜ (ಪುರಂದ. ಧಾ. ೩-೦೨೭-೭) ; ಪೌಷ್ಯಮಾಸದ ೧೫ನೆಯ ತಿಥಿ ಬನದ ಹುಣ್ಣಿವೆ . . . ಬನಶಂಕರಿಯೇ ಈ ಹಬ್ಬದ ಅಧಿದೇವತೆ (ಜಾಹಬ್ಬ. ೦೬೯).

[< ಸಂ. ವನ]

**ಬನ$_2$** (ನಾ). ಒಂದು ಬಗೆಯ ಬೆಲೆ ಬಾಳುವ ಬಟ್ಟೆ.—ಉತ್ತಮವಾದ ವಸ್ತ್ರ : ಮಣಿಕನಕಭಾಜನಂಗಳೊಳ್ ಪಟ್ಟಸೂತ್ರದ ನೇತ್ರದ ಬನದ ಮಹಾ ಚೀನದ ದೇವಾಂಗದ ಮಂಗಳಜವಳಿಗಳನಾಂತು ಬರ್ಪ ಕಾಂತೆಯರ್ ಚಿತ್ರ ಪಟಚಿಹ್ನಾವಳಂಬಿತ ವಿಜಯಕೇತನಂಗಳಾಗೆಯುಂ (ವರ್ಧಪು. ೭-೨ ವ).

[ ? ]

**ಬನಂಬಿಡಿ** (ಕ್ರಿ). ವನವನ್ನು ಆಶ್ರಯಿಸು : ಒಳ್ಳರ ಕೈಪೊಡೆ ಕರ್ಬಿನ ಬಿಲ್ ತವಗ್ರದೊಳ್ ಮಿಳಿರ್ವ ತಮಾಳಪಲ್ಲವದ ಚಾಮರದುಪ್ಪರವಟ್ಟ ಮೊಪ್ಪೆ ಬಂದಲೆದಿಸುವೊಂ ಬನಂಬಿಡಿದು ಪಾಂಥರನಾ ಪರಿಪಂಥಿಮನ್ಮಥಂ (ಕಂದ್ರಪು. ೦-೧೦೦).

[ ಬನ$_1$ + ಪಿಡಿ$_1$ ]

**ಬನಕಾಜಿ** (ನಾ). (ಮರದ ಸಾಮಾನು. ಬಟ್ಟೆ ಮುಂತಾದುವಕ್ಕೆ) ಬಣ್ಣ ಹಚ್ಚುವವನು : ಬಣ್ಣಗಾರ : ಪಲವುಂ ಮರನನಿಟ್ಟು ಲೇಸಾಗಿ ಮಾಳ್ಪನ್ನಾಗಿ ಬನಕಾಜಿ ಚವುಂಡೆಯಂಗೆ ಸರ್ವ್ವನಮಸ್ಯವಾಗಿ ಬಿಟ್ಟ ಮಾಣಿಕೇಶ್ವರದ ಕೋಲ ಮತ್ತರು ಪನ್ನೆರಡು ಪಂಸಿಕಯ್ಯ ನಿವೇಶನ . . . ಬನಕಾಜಿ ನನ್ನಿಯಂಗೆ ಮತ್ತಜಾ ಆಱುಗೆಯ್ಯ ನಿವೇಶನ (ಸೌಇಇ. XX. ೦೬೩-೩೭ ; 1190).

[P ಇದು 'ಬಣ್ಣಗಾಜಿ' ಎಂಬುದರ ಅಪಲಿಖಿತವಿರಬಹುದು]

**ಬನಗತ್ತಲೆ** 'ಬನಗಳ್ತಲೆ' ನೋ.

**ಬನಗಳ್ತಲೆ**. ಬನಗತ್ತಲೆ (ನಾ). ದಟ್ಟವಾದ ಕತ್ತಲೆ: ಕಗ್ಗತ್ತಲೆ : ಗಾಢಾಂಧಕಾರ : ಪಸುರಲೆದುಱುಗಿದ ಬನಗಳ್ತಲೆಯೊಳಗೆಸವ ವಸಂತಂ ... ಆ ಕಂಗಣ್ಣಕ್ಕಿಯ ಸರಮುಂಬ ಪೊಸ ಗಂಟೆಯನಲುಗಿಸೆ (ಜಯಕಾ. ೦-೩೦): ಬನಗಳ್ತಲೆಯುಂ ಕಮಳಾಪ್ತನ ಕದಿರುಂ ಕಾದಿ ಮಡಿವುತಳೆಯುಂ ಚಾಂಪೇಯ ನಿಕಾಯಮಾದುವಲ್ಲದೊಡೆನುಸುಂ ತದ್ವಯಕೆ ಪಗೆತನಂ ಸಮನಿಪುದೇ (ರಾಜಶೇ. ೨-೩೪). ಬನಗತ್ತಲೆ : ನಿಬಿಡನೀರವಕಾನನಾಂತರಂ ಸಪ್ತಮವಗಲ ಮಾರ್ತಾಂಡನುರವಣಿಯನಡಗಿಸುತೆ ತಂಪು ಬನಗತ್ತಲೆಯು ಭೀಷ್ಮಸಮ್ಮೋಹನದ ಮೆರೆದತ್ತು ಚಿತ್ರಗತವಾದಂತೆವೋಲ್ ನಿಶ್ಚಲಂ (ಶಶ್ಯಾಂಗ. ೩-೩೭).

[ ಬನ$_1$ + ಕಳ್ತಲೆ (< ಕಱ್ತಲೆ) ]

**ಬನಗಾಹು** (ನಾ). ತೋಟದ ಕಾವಲು, ರಕ್ಷಣೆ.

ಬನಗಾಹಿನವರು = ತೋಟವನ್ನು ಕಾಯುವವರು ; ತೋಟದ ಕಾವಲುಗಾರರು : ವನಿತ ಸತ್ಯೆಯು ಮೋಹದಾ ನಂದನವ ಹೊಗದಿರು ಮುಂದು ಬನಗಾಹಿನವರಾಡಲು (ಸಾಳ್ವಭಾ. ೩೦-೩೦).

[ ಬನ$_1$ + ಕಾಹು$_1$ (< ಕಾಪು) ]

**ಬನಗಾಳಿ** (ನಾ). ಕಾಡಿನಲ್ಲಿ ಬೀಸುವ ಗಾಳಿ : ಓ! ಓ! ಬನಗಾಳಿ ಇದೇನೀ ತೆಱದೂಱಿಗಂ! (ರಾಷ್ಟ್ರಾಕ್ಷ. ೯-೪).

[ಬನ$_1$ + ಗಾಳಿ$_1$]

**ಬನಗುತ್ತಿಗೆ** (ನಾ). ತೋಟದ ಗುತ್ತಿಗೆದಾರನಿಂದ ಬರುವ ಹಣ.—ವರಮಾನ : ಆ ಪೂಜಾರಿ ದ್ಯಾವಣ್ಣ ಚಿಕ್ಕಜಂಬ್ಬಕಲ್ಲಿಗಳಿಗೆ ಕೊಟ್ಟ ಶಿಲಾಶಾಸನದ ಕ್ರಮವೆಂತೆಂದಡೆ ಮಣಲಿಗೆ ನಾಡೊಳಗಣ . . .ತೋಟ ಮನೆ ಕಡಿಗುತ್ತಿಗೆ ಆಱುವಣವನೂ ಬನಗುತ್ತಿಗೆ. . . ಆಗುವಮಾಡಿಕೊಂಬದು (ಮೈಆಆ. ೦೯೪೨. ೩೭-೩೯ ; 1360).

[ ಬನ$_1$+ಗುತ್ತಿಗೆ (<ಗುತ್ತಗೆ) ]

**ಬನದುರ್ಗ** (ನಾ). (ಶತ್ರುಗಳು ಪ್ರವೇಶಿಸಲು ಸಾಧ್ಯವಾಗದಂತೆ) ದಟ್ಟವಾದ ಕಾಡಿನ ನಡುವೆ ಕಟ್ಟಿದ ಕೋಟೆ; ವನದುರ್ಗ : ಗುಡಿಯ ಗುಂಟಗಳಗೆ ಬನದುರ್ಗ ಮೇಲವರಡಿಗೆಯ ಗುಂಡಿಗೆ ದುರ್ಗ ಕುಡಿವ ನೀರಿಗೆ ಜಲದುರ್ಗ ಪಾಳಾದುವಾ ಪಡೆಗೆ ಪಗೆಗಳಿದಿರುಂಟೆ (ವರ್ಧಕ. ೩-೩೪). 'ಜಲದುರ್ಗ' ಪಠಾ.

[ ಬನ$_1$ + ದುರ್ಗ ]

**ಬನಪಶ್ಯ** (ನಾ). ಔಷಧಿಯಾಗಿ ಉಪಯೋಗಿಸುವ ಒಂದು ಬಗೆಯ ವನಸ್ಪತಿ : ೩೨೨ ಬಾದಾಮಹಲವ, ೩೨೩ ಬನಪಶ್ಯ (ಮುಂಬವ್ಯಾ.೦೬೭).

[← ಪಾರ. ಬನಫ್‌ಶಹ್ : ಹಿಂ. ಬನಫ್‌ಶಾ, ಬನಫಶಾ]

**ಬನಪು** (ನಾ). ಒಂದು ಬಗೆಯ ದೊಡ್ಡ ಜಾತಿಯ ತೇಗದ ಮರ: (೬).

[←ತುಳು. ಬನಂಪು. ಬರಾಂಪು. ಬಣಪು, ಬಣ್ಪು]

**ಬನವಂದಿ** (ನಾ). ಕಾಡುಹಂದಿ : ಇಭಂ ಬನವಂ [ಜಾತಿಕಾಂ·ಪಂ]ದಿ ತರಕ್ಷು ಖಡ್ಗಿ . . . ಮರವಾಪುಗಳೆಂಬಿವಾಗಳುಂ ಕರಮೊಸೆದಿರ್ಪನಂ ಮೆಱೆದುದಾ ವಿಪಿನಂ (ಶಬಶಂ. ೩-೩೪).

[ ಬನ$_1$ + ಪಂದಿ ]

**ಬನವಕ್ಕಿ** (ನಾ). ಕಾಡಿನಲ್ಲಿರುವ ಪಕ್ಷಿ : ಕಾಡುಹಕ್ಕಿ : ಎಚ್ಚಱಿಸಿ ಪೋಯ್ತುನಿತಜಿಳು ಕೊಳರ್ವಕ್ಕಿ ಬನವಕ್ಕಿಗಳು ಸರಗೆಯ್ಯೆ (ಶಾಳ್ಯಶಾ. ೦೬-೩೯).

[ ಬನ$_1$ + ಪಕ್ಕಿ ]

**ಬನವಟ್ಟೆ** (ನಾ). ಕಾಡಂದಾರಿ : ಅರಣ್ಯಮಾರ್ಗ : ನಾಡೊಳಗಣ ಚೋರರ ಪರಿಯಲ್ಕಾ ಬೀಡಿನ ಬನವಟ್ಟೆಯ ಪೊಯ್ತುಂ (ಅಧ್ಯಕೇ. ೨-೨೭); ಅರಣ್ಯ ಗೋಚರರೋರೆಯ ಪಣ್ವಲಂ ಪೂಗಳ್ಗೆ ತಾಂ ದಿನದಿನಂ ನಡೆದು ಸಮದ ಬನವಟ್ಟೆಯುಂ (ಶ್ರೀರಾಮಪ. ೦೬೯-೯೨).

[ಬನ$_1$ + ಬಟ್ಟೆ$_1$]

**ಬನವತಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಬನವತಿ ಮಾರೆಮ್ಮನ ನಂಬಿದ ಹಾಗೆ (ಗಾದೆ).

[ ? ]

**ಬನವಸೆ** 'ಬನವಾಸಿ' ನೋ.

**ಬನವಳಿಗ** (ನಾ). ತೋಟದ ಕಾವಲುಗಾರ ; ವನಪಾಲಕ : ಮದನ ಮಂತ್ರಿ ಬನವುಂ ಮುತ್ತಿದಂ . . . ತರಹರಿಸಲಿರಿದು ದರಹಸಿತಾಸ್ಯ ಗಾಳಿಧಾಳಿಯ ಬಂದವೇದು ಬನವಳಿಗನರಸಗೆ ದೂಱಿದಂ (ಶೇರಪು. ೭-೪).

[ಬನ$_1$ + — ವಳಿಗ$_2$]

**ಬನವಾಶಿ** 'ಬನವಾಸಿ' ನೋ.

**ಬನವಾಸಿ**. ಬನವಸೆ, ಬನವಾಶಿ, ಬನವಾಸೆ (ನಾ). ೧. ಒಂದು ದೇಶದ ಹೆಸರು : ನಲ್ಲರೊಳ್ಮೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರ ನೋಟಕ್ಕೊಡಾವ ಬೆಟ್ಟುಗಳೊಳವಾವ ನಂದನವನಂ ಗಳೊಳಂ ಬನವಾಸಿದೇಶದೊಳ್ (ಪಂಪಭಾ. ೪-೨೮); ಶ್ರೀವಿಷ್ಣುಪದಸೇಕರಂ ಬನವಾಸಿವಿಷಯಾಧೀಶ್ವರಂ ಮಹೇಶ್ವರಭಕ್ತಂ (ಎಕ. III (R). ಹೆಗ್ಗಡ. ೦೨೩-೦೨; 1079); ಬನವಾಸಿಗೆ ಹೋದರೂ ಬರಗಾಲ ತಪ್ಪಲಿಲ್ಲ (ಗಾದೆ). ೨. ಒಂದು ನಾಡು ಅಥವಾ ಪಟ್ಟಣದ ಹೆಸರು. ೩. ಒಂದು ಬಗೆಯ ನಾಣ್ಯ: ಬ್ರಿಟಿಶ ಸರಕಾರದ ಅಮಲಿನ ಆರಂಭದಲ್ಲಿ . . . ೧೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡಿಯುತ್ತಿದ್ದವು . . . ೧೦. ನವಲಗುಂದೀ, ೧೧. ಬನವಾಸೀ, ೧೨. ಶಮಶೇರಿ (ಕಣಾಗ. ೨೮೦).

**ಬನವಸೆ :** ೨. ಬನವಸೆ ಹಾನುಂಗಲುಗೊಂಡ ಭುಜಬಳವೀರಗಂಗ

ಪ್ರತಾಪಚಕ್ರವರ್ತಿ ಹೊಯ್ಸಳಬಲ್ಲಾಳದೇವರು . . . ರಾಜ್ಯಂಗೆಯುತ್ತಿರೆ (ಎಕ. II (R). ೩೬೩-೨೬ ; 1173) : ಸಕಲಸೌರಂಭದಲಿ ಸೊಗಸಿತುದದಲ್ಲಿ ಬನವಸೆಯೆಂಬ ಪಟ್ಟಣವು (ಶ್ರಕುಂ. ೩ ೨). **ಬನವಾಶಿ. ಬನವಾಸೆ :** ೨. ರಾಜಧಾನಿ ಬನವಾಸೆಪುರದ ಜಯಂತೀ ಮಧುಕೇಶ್ವರದ ಮೊಗಸಾಲೆಯುಮಂ . . . ಮಾಡಿಸಿ (ಸೌಇಇ. XI-i, ೧೦೩-೨೪; 1068 ?): ಬಂಕಪುರಂ ಬನವಾಸೆ ಕೊಯತುತುರ್ಗಂಗಪರಾಕ್ರಮಂ ವಿಜಯವರ್ಧನನೀ ಕಲಿ (ವಿ) ವಿಷ್ಣುವರ್ಧನಂ (ಎಕ. XVI, ಶಕ್ಕಾ. ೬೨-೯; 1242).

**ಬನವಸೆ ಪನ್ನಿಚ್ಛಾಸಿರ, ಬನವಾಶಿ ಪನ್ನಿಚ್ಛಾಸಿರ, ಬನವಾಸಿ ಪನ್ನಿಚ್ಛಾಸಿರ** = ಹನ್ನೆರಡುಸಾವಿರ ಗ್ರಾಮಗಳಿಂದ ಕೂಡಿದ ಬನವಸೆಯೆಂಬ ನಾಡು : ಬನವಸೆ ಪನ್ನಿಚ್ಛಾಸಿರಮುಂ ಬೆಳ್ವೊಲ ಮೂನೂಱುಂ . . . ಬಾಗಿನಾಡೆಪ್ಪತ್ತುಮಂ ಬೂತುಗಂಗೆ ಕನ್ನರದೇವಂ ಮೆಚ್ಚುಗೊಟ್ಟಂ (ಎಕ. III, ಮಂಡ್ಯ. ೪೦-೨೦; 950); ಶ್ರೀಕನ್ನರದೇವಂ ಪೃಥ್ವೀರಾಜ್ಯಂಗೆಯ್ಯೆ ಬಪ್ಪುವ್ವಂ ಬನವಾಶಿ ಪನ್ನಿಚ್ಛಾಸಿರದ ಪಟ್ಟವುನಾಳೆ (ಪ್ಕಅಂ. ೧೯೨೯, ೬೮-೯; 964); ಚಾ[ವು]ಣ್ಡರಾಯರಸರ್ ಬನವಾಸಿ ಪನ್ನಿಚ್ಛಾಸಿರಮನಾಳುತ್ತಿವಿರಲ್ (ಇಎ. IV, ೦೬೯-೧೦; 1048). [< ಸಂ. ವನವಾಸೀ]

**ಬನವಾಸೆ** 'ಬನವಾಸಿ' ನೋ.

**ಬನವು** 'ಬನ$_1$' ನೋ.

**ಬನವೆಂಕಿ** 'ಬನವೆಂಕೆ' ನೋ.

**ಬನವೆಂಕೆ,** ಬನವೆಂಕಿ (ನಾ). ಕಾಳ್ಗಿಚ್ಚು; ಕಾಡಿನ ಬೆಂಕಿ; ದಾವಾನಲ: "ಬನವೆಂಕೆಯೆಂದು ದಾವಾಗ್ನಿ" (ಕಕಶಾ. ೩೦-೬೨). **ಬನವೆಂಕಿ :** "ಬನವೆಂಕಿಯೆ ದಾವಾನಲಂ" (ಕಬಿಕಂ. ೩೮). [ಬನ$_1$ + ಬೆಂಕೆ]

**ಬನವೆಣ್ಣು** (ನಾ). ಕಾಡಿನಲ್ಲಿ ವಾಸಿಸುವವಳು ; ಕಾಡಿನ ಹೆಣ್ಣು ; ಅನಾಗರಿಕಸ್ತ್ರೀ : ನಿಷ್ಕರುಣಿ ಎನ್ನದಿರ್, ಬನವೆಣ್ಣೆ (ಶಶಾಂಗ. ೨೯-೬೬೨). [ಬನ$_1$ + ಪೆಣ್ಣು (< ಪೆಣ್)]

**ಬನಶಂಕರಿ** (ನಾ). ಕಾಡಿನ ಅಧಿದೇವತೆ; ಪಾರ್ವತಿಯ ಹೆಸರುಗಳಲ್ಲಿ ಒಂದು : ಬನಶಂಕರಿಯೇ ಈ ಹಬ್ಬದ ಅಧಿದೇವತೆ. ಈ ದೇವತೆ ಪಾರ್ವತೀದೇವಿಯ ಒಂಬತ್ತು ಅವತಾರಗಳಲ್ಲಿ ಆರನೆಯವಳು . . . ಈಕೆ ವನಶಂಕರಿ, ವನದೇವತೆ ಎಂದು ಸ್ಪಷ್ಟವಾಗುವಂತಿದೆ (ಕಾಹಬ್ಬ. ೦೬೯); ಕಾಡಿನ ಕವಿಗಳೆ ಓ ಕಲೆಗಾರರೆ . . . ಬನಶಂಕರಿಯನು ಕೀರ್ತಿಸಿರಿ ! (ಕರುಶ್ರಾ. ೬೯-೯). [ಬನ$_1$ + ಶಂಕರಿ]

**ಬನಶಿ** 'ಬನಸಿ' ನೋ.

**ಬನಶಿಗೋದಿ** 'ಬನಸಿಗೋದಿ' ನೋ.

**ಬನಸಂಪಗೆ** (ನಾ). ಕಾಡುಸಂಪಗೆ ಮರ ಮತ್ತು ಅದರ ಹೂವು : ಪಚ್ಚೆಯ ಬೆಟ್ಟುಗಳೊಳ್ ಮೆಯ್ವೆಚ್ಚಿದ ವೈಡೂರ್ಯಮಣಿಕದಂಬಮೊ ತಾನೆನೆ ಬೆಚ್ಚಳಿಸಿದ ಬನಸಂಪಗೆಯುಚ್ಚಳಿಯದ ಮಲರ್ಗಳಿಂದ ಸೊಗಯಿಕು ಮನಿಶಂ (ಹಾಲಾಸ್ಯ. ೦-೯-೪೮). [ಬನ$_1$ + ಸಂಪಗೆ]

**ಬನಸಿ, ಬನಶಿ, ಬನ್ಸಿ** (ನಾ). ದಪ್ಪವಾಗಿಯೂ ನಸುಹಳದಿಬಣ್ಣದಿಂದ ಕೂಡಿಯೂ ಇರುವ ಒಂದು ಬಗೆಯ ಗೋದಿ : 'ಬನಸಿಗೋದಿ' ಪರಾ. **ಬನಶಿ :** 'ಬನಶಿಗೋಧಿ' ಪರಾ. **ಬನ್ಸಿ :** 'ಬನ್ಸಿರವೆ' ಪರಾ. [ ← ಮರಾ. ಬನಸೀ, ಬನಶೀ, ಬನ್ಸೀ ]

**ಬನಸಿಗೋದಿ,** ಬನಶಿಗೋದಿ, ಬನ್ಸಿಗೋಧಿ (ನಾ). = ಬನಸಿ : ತೊಗರಿ, ಕಡ್ಲಿ, ಬನಸೀಗೋದಿ, ಸಾಸವಿ (ಮುಂಬವ್ಯಾ. ೨೮). **ಬನಶಿಗೋದಿ :** ಬನಶೀಗೋದಿಯು ಕಾಳು ದೊಡ್ಡದಿದ್ದು ಮತ್ತು ಬಣ್ಣದಿಂದ ದಪ್ಪ ಅರುಷಣವಂತೆ ಇರಬೇಕು (ಮುಂಬವ್ಯಾ. ೩೧). **ಬನ್ಸಿಗೋಧಿ :** ಬನ್ಸಿಗೋಧಿಯಿಂದ ತಯಾರಿಸಿದ ರವೆಯು ತುಂಬ ಚೆನ್ನಾಗಿರುತ್ತದೆ (ಊಶಿ). [ ಬನಸಿ + ಗೋದಿ$_1$ ( < ಗೋದುಮೆ) ]

**ಬನಸಿರಿ** (ನಾ). ೧. ಕಾಡಿನ ಸಿರಿ ; ಅರಣ್ಯಸಂಪತ್ತು : ಕಾಡಿನಲ್ಲಿ ಮರ ಕಡಿಯಬೇಕಾದರೆ, ಬನಸಿರಿಯನ್ನು ಉಪಯೋಗ ಮಾಡಿಕೊಳ್ಳಬೇಕಾದರೆ ಸರ್ಕಾರದ ಸನ್ನದು ಆವಶ್ಯಕ (ಹಸುಹೂ. ೨೩೦). ೨. ವನದೇವತೆ ; ವನಲಕ್ಷ್ಮಿ : ಬನಸಿರಿ ಸುರವರಲೋಕದ ಬನಸಿರಿಗುಚಿತ ತೋರಣಲೆಂದು ನಿಜವಿಭವಮನಂದನುನಯದಿಂ ಕಟ್ಟಿದ ಕಾಂಚನತೋರಣಮೆನಿಸಿ ಕರ್ಣಿಕಾರಂ ಮೆರೆಗುಂ (ರಾಜಶೇ. ೯-೬೬). [ಬನ$_1$+ಸಿರಿ]

**ಬನಹಿಪ್ಪಲಿ** (ನಾ). ಹಿಪ್ಪಲಿಯಲ್ಲಿ ಒಂದು ಬಗೆ ; ಕಾಡುಹಿಪ್ಪಲಿ : ತಗರ ಕೋಡು, ಬನಹಿಪ್ಪಲಿ, ತಲೆನವಿರು, ಕಾಲುಗುರು, ಬಜೆಯುಮಂ ಧೂಪವಿಕ್ಕುವುದು (ಬಾಲಚಿ. ೦೨೬-೨೦). [ಬನ$_1$+ಹಿಪ್ಪಲಿ]

**ಬನಾತ** 'ಬನಾತು' ನೋ.

**ಬನಾತು,** ಬನಾತ (ನಾ). ಬಣ್ಣಬಣ್ಣದ ಉಣ್ಣೆಯ ಬಟ್ಟೆ ; ಸಕಲಾತಿ : ದಮಾಸಿನ ವೃಷಭಧ್ವಜಗಳೂ × × × ಬನಾತಿನ ತೆರೆಗಳೂ (ಎಕ. XIV, ಪಂಜಪ. ೨೯೨-೦೪೨ ಪುಟ; 1847) ; ಒಂದು ಬಾರಿ ರೋಮನ್ ಚಕ್ರವರ್ತಿಯು ಬಹಳ ಹಸನಾದ ಬನಾತಿನ ಅಂಗಿಯನ್ನು . . . ಕಳುಹಿಸಿದನು (ಶ್ಕಗಂಬ. ೦೨೩) ; ಅಂಗಳದ ಮಧ್ಯದಲ್ಲಿ ಬನಾತಿನ ನಡೆಮುಡಿಯು ಹಾಸಲ್ಪಟ್ಟಿದ್ದಿತು (ಶ್ರೀರಾಯ. ೪೪). **ಬನಾತ :** ವಾರಿನ ಮೇಲೆ ಕಿಮ್ಮತ್ತು ಆಗತಕ್ಕ ಕಪಡಾ ಜೀನಸಗಳು. ೧. ಬನಾತ, ೨. ಕಾಸ್ಮೀರಿ (ಮುಂಬವ್ಯಾ. ೦೪೦). [ ← ಹಿಂ. ಮರಾ. ಬನಾತ್]

**ಬನಾವಟ್** 'ಬನಾವಟಿ' ನೋ.

**ಬನಾವಟ** 'ಬನಾವಟಿ' ನೋ.

**ಬನಾವಟಿ,** ಬನಾವಟ್, ಬನಾವಟ (ಗಂ). ೧. ಕೃತ್ರಿಮವಾದ ; ನಿಜವಲ್ಲದ : ಬನಾವಟಿ ಪತ್ರಗಳನ್ನು ಕಳುಹಿಸಿ ನಿಮಗೆ ಮೋಸಗೊಳಿಸಿರುವ ಆರೋಪದ ಮೇಲೆ ನನ್ನನ್ನು ಈಗಲಾದರೂ 'ಮಾವನ ಮನೆ'ಗೆ ಕಳುಹಿಸಬೇಕೆಂಬ ನಿಮ್ಮ ಬಯಕೆಯು ಈಡೇರುವಂತಿಲ್ಲ (ಕಿಂಸಾ. ೯೩). (ನಾ). ೨. ಕೃತ್ರಿಮವಾದುದು ; ನಕಲಿಯಾದುದು : ಇಲ್ಲೆ ಬನಾವಟಿಯ ಮಾಲವನ್ನು ತಯಾರ ಮಾಡುತ್ತಾರೆ. ಅದಕ್ಕೆ ಇಲ್ಲೆ ಸುಮಾರ ಮಾಲೆಂದೆನ್ನುತ್ತಾರೆ (ಮುಂಬವ್ಯಾ. ೬೮). **ಬನಾವಟ್ :** ೧. ಹಾಗೆ ಕಲಾಸೃಷ್ಟಿಯಾಗುವಂತಿದ್ದರೆ ಅದು ಕೃತಕವಸ್ತು. ಅಂಥವು ಅನುಕರಣೆಗಳು, ಬನಾವಟ್ ಮ್ಯಾಲುಗಳು ! (ಕರಿದ. ೦೦೬). **ಬನಾವಟ :** ೧. ಈ ಬನಾವಟ ಮುತ್ತಿನ ಹಾರ ಅಲ್ಲಿರಿಸಿ ಅದನ್ನು ತಂದುಕೊಡಿರಿ (ಗರ್ಭಗು. ೯೮). ೨. ಅಚ್ಚಖರೆ, ಖರೆ ಮತ್ತು ಸುಳ್ಳ ಇವುಗಳ ಮಿಶ್ರಣದಿಂದ ತಯಾರಾಗಿದ್ದದ್ದು ಹಾಂಗು ಕೃತ್ರಿಮ ಅಂದರೆ ಬನಾವಟ ಈ ಪ್ರಕಾರ ಮೂರು ತರದು ಇರುತ್ತವೆ (ಮುಂಬವ್ಯಾ. ೩೨ ಪ್ರಸ್ತಾವನೆ). [←ಹಿಂ. ಬನಾವಟ್, ಬನಾವಟೀ; ಮರಾ. ಬನಾವಟ್, ಬನೋಟ್]

**ಬನಾವಣೆ** (ನಾ). ೧. ಕೃತಕವಾಗಿ ತಯಾರುಮಾಡುವುದು ; ಅನಧಿಕೃತವಾಗಿ ಸಿದ್ಧಪಡಿಸುವುದು : ನಾಣ್ಯವನ್ನು ಬನಾವಣೆ ಮಾಡೋಣ ೭ ಸಂವತ್ಸರಗಳು (ಗ್ರಾಮಾಕ. ೦೮೩). ೨. ಪರಸ್ಪರ ಹೊಂದಾಣಿಕೆ—ಸಾಮರಸ್ಯ : ದೇಹಕ್ಕೂ ಮನಸ್ಸಿಗೂ ಬನಾವಣೆಯಿಲ್ಲ ಎನ್ನಿಸಿತು (ಬಿಬಂಧ. II, ೦೯೪). ೩. ಕಲ್ಪನೆ; ಊಹೆ : ಆವರ ಕಕ್ಷಿಗಾರರ ಬಚಾವು ಈ ಕೇಸು ಕೇವಲ ಪೋಲೀಸಿನವರ ಬನಾವಣೆಯೆಂದು (ಕಲಿನ. ೩೬೨). ೪. ಕೃತಕವಾದುದು ; ಕೃತ್ರಿಮವಾದುದು ; ಖೋಟಾ : ಬನಾವಣೆಯಾದದ್ದು ಎಂದು ತಿಳಿದು ಮತ್ತೊಬ್ಬನಿಗೆ ಕೊಟ್ಟರೂ ಇಟ್ಟುಕೊಂಡರೂ ೫ ಸಂವತ್ಸರಗಳ ಪರ್ಯಂತ (ಗ್ರಾಮಾಕ. ೦೮೬). 'ಬನಾವಟಿ' ಪರಾ. [←ಮರಾ. ಬನಾವಣೀ]

**ಬನಿ$_1$** (ನಾ). ೧. ಸಾರ ; ಸತ್ತ್ವ ; ತಿರುಳು : ಇವುಗಳಲ್ಲಿ ಜನಪದ ಸಾಹಿತ್ಯದ ಬನಿ ಅಷ್ಟಾಗಿ ಕಂಡುಬರುವುದಿಲ್ಲ (ಕಜಕಾ. ೨೮ ಪ್ರಸ್ತಾವನೆ).

೨. (ಹಾಲು, ಮೊಸರು, ಕಲಸಿದ ಹಿಟ್ಟು ಮುಂತಾದುವುಗಳಲ್ಲಿರುವ) ಜಿಗುಟು ; ಅಂಟು ; ಸೊಗಡು : ಅವರು ಪರೀಕ್ಷಿಸಿದ ಯಾವ ಹಸುವೂ ಅವರಿಗೆ ತೃಪ್ತಿಯನ್ನುಂಟುಮಾಡಲಿಲ್ಲ. . . ಐದನೆಯದರ ಹಾಲು ನೀರು, ಅದರಲ್ಲಿ ಬನಿಯಿಲ್ಲ (ಶಿಷ್ಯ. ೧೩); ಹಸುವಿನ ಬೆಣ್ಣೆಯಲ್ಲಿ ನಶ್ಯವನ್ನು ವಿದಿಯುತ್ತಿದ್ದರು. ಹಾಗೆ ವಿದ್ದರೆ ಅದಕ್ಕೆ 'ಬನಿ' ಬರುತ್ತದೆ (ಪಪ್ಪು ರು. ೧೬೨). ೩. ಕಳೆ ; ತೇಜಸ್ಸು ; ಹೆಣ್ಣುಡುಗೆಯುಟ್ಟ ಹರೆಯದ ಹೆಣ್ಣು ಚಾಮರಿ ಹೆಣ್ಣುತನದ ಆ ಬನಿಯನ್ನು, ಚೆಲುವನ್ನು ತಳೆಯತ್ತಿದ್ದಳು (ಸಪತಿ. ೫೬).

ಬನಿ₂, ಬನ್ನಿ₂ (ನಾ). ೧. ಒಂದು ಬಗೆಯ : ತೆರಿಗೆ ಶ್ರೀಮತ್ತು ರಗವೆಡೆಂಗಂ ಕಾಳೆಗಕೆ ನಡವುತ್ತು ರೋಣದ ಮಹಾಜನಕೆ ಬನಿಯಂ ಬಿಟ್ಟಾರ್ (ಎಇ. XIII, ೧೯೭-೬; ಕ್ರಿ. 875) ; ಸೋಮೇಶ್ವರಪಂಡಿತ ದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಬನಿಯಂ ಬಿಟ್ಟನು (ಶಾಇಇ. XX, ೦೫೬-೭ ; 1174). ಬನ್ನಿ₂: ೧. 'ಹುಲ್ಲುಬನ್ನಿ' ಪರಾ. ೨. (ಹೊಲ, ಗದ್ದೆಗಳಲ್ಲಿ) ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಕೂಲಿಯಾಳಿಗೆ ಕೊಡುವ ಬೆಳೆದ ಧಾನ್ಯದ ಒಂದು ಭಾಗ : (*).

[ ದೇ. ಶಿ. ತುಳು. ಬಣಿ./ಹಿಂ. ಬನಿ, ಬನ್ನೀ ]

**ಬನಿಗೊಳ್ಳು** (ಕ್ರಿ). ಸತ್ತ್ವಯುತವಾಗು ; ಸಾರವತ್ತಾಗು : ಜೀವಂತವಾದ, ದಿನದಿನವೂ ಬೆಳೆಯುತ್ತಿರುವ, ಬನಿಗೊಳ್ಳುತ್ತಿರುವ, —ಬನಿಗೊಳ್ಳಬೇಕಾಗಿರುವ—ಈಗಿನ ಭಾಷೆಯ ಗತಿಗೆ ತಡೆಯಾಗಿ ತಂದೊಡ್ಡದೆ ಕವಿತೆಯಲ್ಲಿ ಕೇವಲ ಸಂಪ್ರದಾಯಬದ್ಧವಾದ ಶಬ್ದರೂಪಕ್ಕೂ, ಸಂಧಿ ನಿಯಮಗಳಿಗೂ, ಕಡೆಗೆ ನಿರ್ದುಷ್ಟತೆಗೂ ಮೀರಿದ ಗುಣವೊಂದಿದೆ (ಬಿಸೀಗೀ. V ಮುನ್ನುಡಿ). [ಬನಿ₁+ಕೊಳ್ಳು₁ (<ಕೊಳ್₁)]

**ಬನಿಯ**, **ಬನಿಯಾ** (ನಾ). ವ್ಯಾಪಾರ ಮಾಡುವವನು ; ವರ್ತಕ ; ವೈಶ್ಯ : ವ್ಯಾಪಾರಸ್ಥರು . . . ಬಣಜಿಗ, ಬನಿಯ (ಕುಳುವಾ. ೦೭೨) ; **ಬನಿಯಾ**: ಚಂದ್ರಗುಪ್ತ ದಾಸೀಪುತ್ರ; ಗಾಂಧೀಜಿ ಬನಿಯಾ (ಯಕ್ಷಕ್ರ. ೦೩೮).

[←ಹಿಂ. ಮರಾ. ಗುಜ. ಬನಿಯಾ. ಪ್ರಾ. ವಣಿಅ. / ಸಂ. ವಣಿಜ]

**ಬನಿಯನ್ನು** 'ಬನೀನು' ನೋ.

**ಬನಿಯಾ** 'ಬನಿಯ' ನೋ.

**ಬನೀನು**, ಬನಿಯನ್ನು (ನಾ). ಅರ್ಧತೋಳಿನ ಒಳಅಂಗಿ ; ℗ ಇಂಡಿಯಾದೇಶಕ್ಕೆ ಬಂದ ಆಂಗ್ಲರು ಗುಜರಾತಿನಲ್ಲಿ ವರ್ತಕರು ಉಪಯೋಗಿಸುತ್ತಿದ್ದ ಅರ್ಧತೋಳಿನ ಅಂಗಿಯನ್ನು ಮೆಚ್ಚಿಕೊಂಡರು. ಆದುದರಿಂದ ಗುಜರಾತಿನ 'ವಾನಿಯ=ಬನಿಯ' ಎಂಬುದು ಇಂಗ್ಲಿಷಿನಲ್ಲಿ ಗುಣವಾಚಕವಾಗಿ ಬನಿಯನ್ ಎಂದಾಯಿತು. ಆ ಬಳಿಕ ಇದು ನಾಮಪದದ ಅರ್ಥವನ್ನು ಪಡೆಯಿತು. ಸಂಸ್ಕೃತದ 'ವಣಿಜ' ಎಂಬುದು ಇದರ ಮೂಲವೆಂಬುದು ಸ್ವಾರಸ್ಯಕರವಾಗಿದೆ : ರಾಯರು ಒಳ್ಳೆಯ ಒಂದು ಬಿಳೀಪಂಚೆಯನ್ನುಟ್ಟು, ಉದ್ದವಾದ ಬನೀನನ್ನು ತೊಟ್ಟು . . . ನಿಂತಿದ್ದರು (ರಾಯುಕ. ೬೦); ಈ ಹುಡುಗನ ಮೈ ಮೇಲಿದ್ದ ಬಟ್ಟೆಯೆಂದರೆ ತುಂಡು ಬನೀನೊಂದು (ಪುಪರು. ೦೪೦). **ಬನಿಯನ್ನು**: ಪಾಯಿಜಾಮಾದ ಮೇಲೆ ಬನಿಯನ್ನು ಹಾಕಿದ್ದಾನೆ (ನಡಿದಾ I. ೩೬೩); ಹೊಲಸು ವಸ್ತ್ರವನ್ನು ಬದಲಿಸಿ ಚೊಕ್ಕವಾದ ಚಡ್ಡಿ, ಬನಿಯನ್ನು ತೊಟ್ಟುಕೊಂಡ (ದೇವಹೊ. ೬೩).

[← ಇಂ. Banian. ಹಿಂ. ಬನಿಯಾಇನ್ : ಮರಾ. ಬನಿಯನ್, ಬನ್ಯಾನ್ ; ಗುಜ. ಬನಿಯಾ=ವೈಶ್ಯ./ಸಂ. ವಣಿಜ=ವೈಶ್ಯ]

**ಬನೂರ್** 'ಬನ್ನೂರ್' ನೋ.

**ಬನ್ನ** (ನಾ). ೧. ಅವಮಾನ; ಅಪಮಾನ; ಭಂಗ : "ಬನ್ನಮೆಂದು ಭಂಗಂ" (ಕಶಸಾ. ೬೫-೪೬೨) ; ಪೆಜಿರಾ [ನಾ] ವಂ ಧರಾಚಕ್ರಕ್ಕೆ ಚೀಯಂ ಕೆಳೆಯಪ್ಪವಂ ನೆಟಿ ಯಾರೆಣೆಯೆಂಬನ್ನಂ ಕಾಣಿತಬ್ಬಿಗೆ ಬನ್ನವಂ (ಕಪಾ. ೨-೦೫೬); ನಿನ್ನ ಪಡೆಗೆಯ್ಯ[ಟ್ಟಂ] ಶರದಿಂ ಬಿಡಿಸಿದನಲ್ಲನೆ ಸರಿತ್ಸುತಂ ಬನ್ನವಿನ್ನವೆಂಬುವು ಮೊಳವೇ (ಪಂಕಥಾ. ೬-೫೩); ಅನುಜನ ನೆತ್ತರವೀಂಟಿದವನ ನೆತ್ತರ ಜೀವಸಹಿತ ವಿೞಂಟದೆ ದುರ್ಯೋಧನನೆಂಬ ಪೆಸರ್ಗೆ ಮುಯ್ಯಾಂಪೆನೆ ದುಶ್ಶಾಸನನ ಬನ್ನವಂ ನೀಗುವೆನೇ (ಗದಾಯು. ೫-೮). ೨. ಸೋಲು; ಪರಾಜಯ; ಪರಾಭವ : ತನ್ನೊಳಗಣ ಪನ್ನಗನಂ ಮುನ್ನೀಂ ಓಡಿದೊಗೆಯೆ ಕಾಯಲಾಱದೆ ಓರಿದಂ ಬನ್ನದ ಕರ್ಪಿಸೆದುದು ತೊಱಗಿನ್ನುಂ ಹರಗಳ ತಮಾಳನೀಳಚ್ಛವಿಯಿಂ (ಪಂಕಥಾ. ೫-೫೪); ಬನ್ನದಿಂದಂ ಮಹಾನಾಭನುಱುಬೆಗೆ ಮುರಿದು ಬೆನ್ನ ಹಿಂದಡಗಿದ ಸಮಸ್ತದಿಕ್ಪಾಲರಂ . . . ಕಂಡೊಡನೆ ಪನ್ನೆರಳ್ನಯನದಿಂ ಕಿಡಿ ಸುರಿಯೆ ಕಲ್ಪಾಂತಹರನಂತೆ ಗುಹನೆಸೆದನು (ಕಿಂಪು. ೩೪-೦೮); ಎಸು ಸಲ ತಪವಗ್ಗಿದೇಸು ಬನ್ನವನಾಂತು ಕೌಶಿಕಂ ಬ್ರಹ್ಮರ್ಷಿಪದಕರ್ಹನಾದನ್ ? (ಪುಂಕುಕ. ೬೪೪). ೩. ನಾಶ; ಅಳಿವು : ಉನ್ನತಬಲಗೂಡಿ ಬಂದಾಗ ತುರುಕರ ಬನ್ನಕ್ಕೆ ತುದುದೇನೆಂಬೆ (ಕೆಂಪಾ. ೦೪-೫೪). ೪. ಕಷ್ಟ; ಬಾಧೆ ; ಸಂಕಟ ; ತೊಂದರೆ : ಪರಿಭವದೊಂದು ತುತ್ತತುದಿ ಕೃಷ್ಣೆಯ ಬನ್ನದೊಳಾಗೆ ಜೂದಿನೊಳ್ ಪೊರಸಟ್ಟಿವಂತೆ ತಪ್ಪುರಸುಗೆಟ್ಟು ಕಟಲ್ದೆರ್ದೆಗೆಟ್ಟರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರಿಂ ಮಗುಟ್ದುಂ . . . ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೇ (ಪಂಕಥಾ. ೯-೬೫); ವರ್ಣಧರ್ಮದ ರಕ್ಷೆಗವನಿಯ ಬನ್ನವನು ಬಿಡಿಸಲಿಕೆ ತಾನುತ್ಪನ್ನನಾದನು ಯದುಕುಲದಲಿಲೆ ಭೂಪ (ಶಿಭಾಗ. ೦೦-೫೨-೦೮) ; ಎನಗೇತಕೆಯೋ ಮದುವೆಯ ಬನ್ನ ! (ಗಹೀಕ. ೫-೦೦೮). ೫. ದುಃಖ ; ಅಳಲು : ನಿನ್ನೆ ಮೊದಲು ನಿನ್ನಾಣೆ ನಿನ್ನನು ಕಾಣದನ್ನಪಾನಂಗಳೊಳಿಯದೆ ಬನ್ನದೊಳಾಳಿದೆ ನಾನು (ಕೆಂಪಿ. ೨-೦೦೪). ೬. ಕೊರತೆ ; ಚ್ಯುತಿ ; ಕುಂದು : ಮುಂ ಪೂಣ್ದಂ ನನ್ನಿಗೆ ಬನ್ನಂ ಬರಲೀಯದಾರ್ತಸಗಿದೀ ವಿಖ್ಯಾತಿಯುಂ ಕೀರ್ತಿಯುಂ ಮುಗಿಲಂ ಮುಟ್ಟಿದುದಲ್ತೆ (ಪಂಕಥಾ. ೦-೮೦). ೭. ಅಡ್ಡಿ; ತಡೆ; ವಿಘ್ನ : ಕನ್ಯೆದಿಲಡ್ಡಮೋಱಿಯೊಳಿರುವುದಱಿಂದ ಬನ್ನವೂಂಟೆ ಪ್ರಭಾಕರಗೆ (ಛಂಕ. ೨೦-೦೦೭); ಬೞಿದನ್ನ ತಪಸಿಗೆ ಬನ್ನ ಮೆಸಗದೆ ಎಹಗೆ ಬಂದ್ಯೆ ಅಹಗೆ ಓಂದಿರುಗೈ (ಅಧ್ಯಾ. ೬-೦೦) ; ಗಣಪತಿಯೆಂದರೆ ಬನ್ನಗಳನ್ನು ಪರಿಹರಿಸುವ ದೇವನು (ರೂಪಾಲು. ೬೬). ೮. ಮುರಿಯುವಿಕೆ; ಸೀಳುವಿಕೆ : (*).

ಬನ್ನದ **ಕೂಟ್**=ಕಷ್ಟದಿಂದ ಪಡೆದ ಆಹಾರ; ಭಂಗದ ಕೂಳು : ಪನ್ನೆರಡುಬರಿಸಮುಲಸದೆ ಬನ್ನದ ಕೂಟುಂಡು ಬರ್ದಟಲ್ಪಿಂಗಲೊಡಂ ತನ್ನಿಂ ಕಾಳಿಕೆ ಓಂಗಿದ ಪೊನ್ನಿನ ತೆಱನಂತೆ ಕಾಂತೆ ಕರಮೆಸೆದಿರ್ದಳ್ (ಗದಾಯು. ೯-೬೧); ನೀಂ ನಿನ್ನ ನನ್ನಿಯನೆ ಕಾದು ನಿನ್ನನುಜರ್ ಬನ್ನದ ಕೂಟುಸುಂಡರ್ (ಪಂಕಪಂ. ೨೦೮-೦೩). [<ಸಂ. ಭಗ್ನ./℗ 'ಬನ್ನ' ಶಬ್ದಕ್ಕೆ ಇರುವ ಅರ್ಥಗಳು ಸಂಸ್ಕೃತದ 'ಭಂಗ' ಶಬ್ದಕ್ಕೂ ಇದ್ದು ಈ ಶಬ್ದದ ಉಪಯೋಗದಲ್ಲಿ ಸಂಸ್ಕೃತದ 'ಭಂಗ', 'ಭಗ್ನ' ಎಂಬೆರಡೂ ಶಬ್ದಗಳ ಪ್ರಭಾವವು ಇರಬಹುದೆಂದು ಕಾಣುತ್ತದೆ ]

**ಬನ್ನಂಗ** (ನಾ). ಕಷ್ಟ; ಬವಣೆ ; ಸಂಕಟ : ಮುಂಗಾರುಮಳೆ ಆರಂಭವಾಯಿತು . . . ಕಾರಿಗೆ ಮುಂಚೆ ಹೊರಟ ಪಡೆ ದಾರಿಯಲ್ಲಿ ನೀರಿಗಾಗಿ ಬನ್ನಂಗ ಪಡಬಾರದು ಎಂದು ಅವನ ಇಷ್ಟ (ಸಪತಿ. ೦೪೫). [< ಬನ್ನ./℗ 'ಬನ್ನ' ಮತ್ತು 'ಬಂಗ' ಎಂಬ ಎರಡು ಪದಗಳ ನಡುವಣ ಉಚ್ಚಾರಣಾಸಂಬಂಧದಿಂದ ಈ ಶಬ್ದದ ಉಪಯೋಗವಾಗಿರಬಹುದು]

**ಬನ್ನಂಗಾಯಿ** (ನಾ). (ಕರಾ) ಅರ್ಧ ಬಲಿತ ತೆಂಗಿನಕಾಯಿ : ಒಂದು ಅರ್ಧ ಮುಡಿ ಅವಲಕ್ಕಿ, ಇಪ್ಪತ್ತು ಬನ್ನಂಗಾಯಿ, ನೂರು ಬಾಳೇಹಣ್ಣು ಇವಿಷ್ಟು ತಯಾರಾಗಲಿ ! (ಪೊಮುಗು. ೦೦).

[←ತುಳು. ಬನ್ನಂಗಾಯಿ. ಬಣಂಗಾಯಿ, ಬಣ್ಣಂಗಾಯಿ]

**ಬನ್ನಂಬಡಿಸು**, ಬನ್ನಪಡಿಸಂ, ಬನ್ನಬಡಿಸು, ಬನ್ನವಡಿಸಂ (ಕ್ರಿ). ೧. **ಅವಮಾನಗೊಳಿಸು; ತೇಜೋವಧೆ ಮಾಡು** ; **ಭಂಗಪಡಿಸು** : ಅಂತು ಮುನ್ನಂ ತನ್ನಂ ಬನ್ನಂಬಡಿಸಿದುನ್ನತತೇಜನಂ ವಿಶ್ವನಂದಿಯುವ ರಾಜನಂ . . . ಮೂದಲಿಸಿದಂ (ವರ್ಧಪು. ೩–೦೯ ವ) : ನಿನ್ನ ಪದಭೃತ್ಯ ಪೌಸಿರ್ದನ್ನಂ ಗೆಲ್ದಂ ಕಿರಾತನೀತನನೀಗಳ್ ಬನ್ನಂಬಡಿ[ಜಾತಂ. ಬಡಿ]ಸುತ ಸೋಲಿಪ ಪನ್ನತಿಕೆಯನಿತ್ತು ಪೊರೆ ಕೃಪಾಳುಗಳರಸಾ (ಜಾತಂ. ೯–೦೦೯). ೨. **ಹಿಂಸೆಪಡಿಸು** ; **ಬಾಧೆಗೊಳಗುಮಾಡು** ; **ಸಂಕಟವನ್ನುಂಟುಮಾಡು** : ಪಿಶಾಚಂ ತೊಡರ್ದುದು ಭೂತಂ ಬನ್ನಂಬಡಿಸಿದುದೆನೆ ಸಿರಿಯೊಳರಸುಗಳ್ ಮೆಯ್ಮರೆಯರ್ (ಕಾದಂಪೂ. ೩೬೩). **ಬನ್ನಪಡಿಸು** : ೨. ದೇವರು ಅನೇಕಾನೇಕವಿಧದಲ್ಲಿ ಭಕ್ತರನ್ನು ಬನ್ನಪಡಿಸಿ ದೃಢತೆಯನ್ನು ಪರೀಕ್ಷಿಸಿ ಒಲಿಯುವಂತೆ ನನಗೀಗ ನೀವೊಲಿದಿರಿ (ಕಿರುಕಾ. ೦೦೩). **ಬನ್ನಬಡಿಸು**: ೧. ಮಗನೆ ಹೋಗದಿರು ಮೂಳಿದು ವಿಶ್ವಾಮಿತ್ರನಾಶ್ರಮಕ್ಕೆ . . . ಮುನಿ ಬನ್ನಬಡಿಸಿಯೆ ಕಾಡಿದಪನರಿದಿರು (ಹರಿಕಾ. ೫–೬೩) ; ಅಂಜನಾಸುತನು ಮುದದಿ ಪನ್ನಗಾರಿಧ್ವಜನ ಪವನಶಿಖಿರುತಿಗಳ ಬನ್ನಬಡಿಸಿದ ಬಿರುದನುಪ್ಪುಡಿಸಿ ಬಾಲರಂ ಚೆನ್ನಾಗಿ ಶಿಕ್ಷಿಸುವ ಮಾಗಧರ ಕೇರಿಯಂ ಕಂಡು ವಿಸ್ಮಿತನಾದನು (ಪಂಕಾದಾ. ೫–೩–೨೫) ; ನನ್ನ ಜನ ನಿಮ್ಮ ಬನ್ನಬಡಿಸಿದೊಡೆ, ಆಗ ಇಂತೆ ಮೊರೆದು ಹೇಳುವನು (ತಲುತ್ತು. ೨೧–೦). ೨. ನಿರಪರಾಧಿಯನು ಬನ್ನಬಡಿಸುವುದುಚಿತವೇ (ಜಿಪತ್ತು. ೩೮–೬೦) ; ಮಾಯೆ ಬನ್ನಬಡಿಸಿದಳಿಂತು ಜಗವನು (ಶಿಭಾಗ. ೨–೦–೦೦) ; ಕಣ್ಣು ಕಾಣದ ಅರಣ್ಯದಲಿ ಬಿದ್ದಂತಿಹೆ ಬನ್ನಬಡಿಸುವುದು ನಿನ್ನ ಧರ್ಮವಲ್ಲ (ಜಿಡಾಕ್ಕ. ೫–೬). **ಬನ್ನವಡಿಸು** : ೨. ಎನ್ನ ರಾಘವ ಸತ್ಯನಾದೊಡೆ ಬನ್ನವಡಿಸಿದ ನಾಯ ಹರಣವ ತಿನ್ನು ತಿನ್ನೆನುತಾರಿ ಬಾಣವ ಬಿಟ್ಟ ಸೌಮಿತ್ರಿ (ಕೌತಿರಾ. ೩೬–೭೩).

[ಬನ್ನಂಬಡು + – ಇಸು₁]

**ಬನ್ನಂಬಡು**, ಬನ್ನಪಡು, ಬನ್ನಬಡು, ಬನ್ನವಡು (ಕ್ರಿ). ೧. **ಅಗೌರವಕ್ಕೆ ಈಡಾಗು** ; **ಅವಮಾನಕ್ಕೊಳಗಾಗು** ; **ಭಂಗಹೊಂದು** : ನಿನ್ನ ಗುರು ವರ್ಧಮಾನಂ ಬನ್ನಂಬಡುವಂತೆ ಮಾಡುವೆಂ ನಡೆ ಪೋಪಂ (ವರ್ಧಪು. ೦೬–೦೯). ೨. **ಕಷ್ಟಕ್ಕೆ ಗುರಿಯಾಗು** ; **ತೊಂದರೆಗೆ ಈಡಾಗು** ; **ಬಾಧೆಗೊಳಗಾಗು** : ಮುನ್ನಿನ ಭವದೊಳ್ ಗೊರವನಾಗಿ ಕಾಂಚೀಪುರದೊಳ್ ತಿರಿದು ಪಲವುಕಾಲಂ ಬನ್ನಂಬಟ್ಟು ಪೊನ್ನಂ ಪಡೆದು (ಪಂಚತಂ. ೩೦೦–೨೦) ; ಎನ್ನೊಡೆಯನ ಬಲ್ಪಂ ನೀವಿನ್ನುಂ ಕಂಡರಿದುದಿಲ್ಲ ಬದಿಯೆಂಬಣ್ಣಂ ಬನ್ನಂಬಟ್ಟುದನರಿಯನೆ (ಕನ್ನಿಕಾ. ೦೩೬). ೩. **ಸೋಲು** ; **ಪರಾಭವ ಹೊಂದು**; ಹಿಮ್ಮೆಟ್ಟು: ಬನ್ನಂಬಟ್ಟೆನ್ನ ಮುನ್ನಿನ ಬನ್ನಮುಂ ಪಿರಿದದೆ ನೆವಂಗೊಂಡಾನಿಂದಿಲ್ಲಿ ನೀಗದೆ ಮಾಣ್ಬನೇ (ಪಂಚಕಾ. ೦೨–೦೯); ತನ್ನೊಳ್ ಪನೆ ಪೆರ್ಚಿ ಮಹಿಶೂರಾಣ್ಮಂ ಪೊಣರ್ವನ್ನೆಗಂ ಬನ್ನಂಬಟ್ಟೆವು ಬಣ್ಣಗೆಟ್ಟೆವು (ಜಕಾ. ೨–೩೬). ೪. **ದುಃಖಪಡು** ; **ಖೇದಗೊಳ್ಳು** ; **ಸಂಕಟಪಡು** : ಕ್ಲೇಶನ್, ಕ್ಲೇಶಕಃ, ಈ ೨ ಬನ್ನಂಬಡುವಂ (ಕಾಶಕ್ಕ. ೨೫೯). **ಬನ್ನಪಡು** : ೨. ಆಸ್ತಿ ಉಳಿಯುವಂತಾದರೆ ನಿನ್ನ ಮಗಳೂ ಮೊಮ್ಮಕ್ಕಳೂ ಹೊಟ್ಟೆಗಿಲ್ಲದೆ ಮುಂದೆ ಬನ್ನಪಡುವುದನ್ನು ತಡೆದಂತಾಗುವುದು (ತ್ಯಾಗಸು. ೬೯). **ಬನ್ನಬಡು** : ೨. ಎನ್ನದಾನೆಂಬೆರಡರಿಂದವೆ ಬನ್ನಬಡುವನು ಜೀವನು (ಕುವ್ಯಾಕ್ರೋ. ೭–೨೬) ; ಮುನ್ನ ಭೂಸುರ ಶಾಪದಿಂದೆ ಪಲರಳಿದುಳಿದು ಬನ್ನಬಟ್ಟವರುಂಟು (ಕೃಮಂಕಾ. ೫–೪೦) ; ಅಧಿಕಾರಿಗಳ ಕಟ್ಟಳೆ ಕಾನೂನುಗಳಿಂದ ಪ್ರಜೆಗಳು ಬನ್ನಬಡುತಿದ್ದರು (ಜಾತುಕ್ಕ. ೬೯). ೪. ಚಿನ್ನ ಕರುವಿಗೆ ಬನ್ನ ಬಡುವೆನು, ಕಣ್ಣ ನೀರನು ಮಿಡಿವೆನು (ಕಿರುತ್ತು. ೦೮–೬). ೫. **ನಾಶವಾಗು** ; **ಅಳಿದು ಹೋಗು** : ತನ್ನ ಸಹಾಯದಿಂದಸುರಾಧೀಶ್ವರನೆನ್ನ ಮೊಮ್ಮನನು ಬಂಧಿಸಿದ ಮುನ್ನ ಹಿರಣ್ಯಕ ಮೊದಲಾದ ದೈತ್ಯರು ಬನ್ನಬಟ್ಟುದ ಬಲ್ಲರಿಲ್ಲ (ಜೋಹಕ. ೩೭–೦೩).

**ಬನ್ನವಡು** : ೨. ನಿನ್ನ ಕೊಂದವ ನಾನು ಮಾತಿನ ಭಿನ್ನಭಾವ ವನರಿಯದಕಟಾ ಬನ್ನವಟ್ಟೆ ತಂದೆ (ಕೌತಿರಾ. ೩೬–೬೦) : ಕನಕಲತೆಯೆಂಬವಳ್ . . . ವಿರಹದಿಂದೆನಸುಂ ಬನ್ನವಡುವ ಭೂಮಿಶ್ವರ ತನುಜೆಯ ನೋವಂ ಪಿಂಗಿಸಿ (ಜಡುಕಾ. ೯–೯೩). ೫. ಬನ್ನವಟ್ಟಿಹ ಕಪಿಕುಲಂಗಳ ಮುನ್ನ ಸತ್ರಾಣಿಸುವೆ . . . ಎನುತ ಸಂತೈಸಿದನು ನೊಂದವರ (ಕೌತಿರಾ. ೨೫–೨೭).

[ಬನ್ನ + ಪಡು₁]

**ಬನ್ನಂಬಡೆ** (ಕ್ರಿ). ೧. **ಅವಮಾನ ಹೊಂದು** ; **ಭಂಗಕ್ಕೊಳಗಾಗು** : ಈಶ್ವರಂ . . . ಅನಿಟ್ಟು ಪುಲ್ಲನೆತ್ತಿದನೆ ದನುಜರ ಗೆಲ್ದವಂ ಎನುತೊಂದು ಪುಲ್ಲನಿಡೆ . . . ಉಳಿದ ಸುರರುಂ ಆ ಪ್ರಕಾರದಿನಾತ್ಮಶಕ್ತಿಗಳಿನೆತ್ತಿ ಮೇಣ್ ಕ್ಷಿಪ್ರದಿಂ ಬನ್ನಂಬಡೆದರ್ (ಶದ್ಮರಾ. ೦೦–೨೫೦) ; ಎನ್ನಂ ಸೆಟೆಯಂ ಬಡಿಸಿದೆ ಬನ್ನಂಬಡೆದುಳಿದೆನೆಂದು . . . ಶ್ರುತಿಕನ್ನಿಕೆ ಮಾಧವನ ಹರ್ಷದಿಂ ನುತಿಯಿಸಿದಳ್ (ದಆವ. ೨–೨೯). ೨. **ಸೋಲು** ; **ಪರಾಭವಗೊಳ್ಳು** : ಪೆಣನಾಡಿರೆಯಂ ನಿನ್ನ ಕೈಯೊಳ್ ಬನ್ನಂಬಡೆದು ಕಿನ್ನನಾಗೆ (ಕಬ್ಬಿಗಾ. ೯೯).

[ಬನ್ನ + ಪಡೆ₁]

**ಬನ್ನಂಬೆಱು** (ಕ್ರಿ). ೧. = ಬನ್ನಂಬಡೆ ೧: ಹರಿಯಿಂದಂ ಮುಂದರಂ ಮುಂದರಮಥನದಿನಂಭೋಧಿಯಂಭೋಧಿಯಿಂದಂ ಧರೆ ಬನ್ನಂಬೆತ್ತುವು (ಎಕ. VII. ಶಿಕಾ. ೦೦೯–೨೨; 1069); ಮುನ್ನಮಿರೆ ಬನ್ನಂಬೆತ್ತನಂ ಪುಷ್ಕಲಪುರದ ಹಯಗ್ರೀವನಂ ಕರ್ಮದಿಂದಂ ಮುಱಿದಾಂ ಮೆಯ್ಸಿಟ್ಟು ನಿದಾನಸುಖದಿನಬಲೆ ಬಂದು . . . ಎನ್ನೋಪಳಂ ಕೊಂಡು ಪೋದಂ (ಭಸ್ತಿತು. ೬–೩). ೨. **ದುಃಖವನ್ನು ಹೊಂದು** ; **ಕಳವಳಪಡು** : ಬನ್ನಂಬೆತ್ತನ್ನಯ ಬಿನ್ನಪಮಂ ಮನ್ನಿಸು (ಉದ್ಭರೀ. ೩–೨೯). [ಬನ್ನ + ಪೆಱು₁]

**ಬನ್ನಂಬೊಂದು** (ಕ್ರಿ). = ಬನ್ನಂಬಡೆ ೧: ನಿಲ್ಲೆಲಗೇ ಎನುತ್ತೆ ಗುರುಶಿಷ್ಯಂ ಕೋಪದಿಂ ಗರ್ಜಿಸಲ್ ಬನ್ನಂಬೊಂದುತೆ (ಶಾಕುಂತ. ೩೫–೦೯೦).

[ಬನ್ನ + ಪೊಂದು₁ (< ಪೊರ್ದು)]

**ಬನ್ನಗೆಡು** (ಕ್ರಿ). **ಕಷ್ಟಪಡು; ತೊಂದರೆಗೀಡಾಗು** : ತನ್ನ ಗಾತ್ರದೊಳು ಮೋಣನ್ನರಂಗದೊಳಕಟ ಬನ್ನಗೆಟ್ಟಾ ಚಕ್ರದಿಂದೆ ಸುಡಲು ನನ್ನಿ ನರಕಕ್ಕೆ ವನೆನ್ನನಾದೊಡಮೆಂದ ಧನ್ಯವಪ್ಪಾ ಸೂತಸಂಹಿತೆಯದಂ (ಶಾಸಂತ. ೨–೦೫೨).

[ಬನ್ನ + ಕೆಡು₁]

**ಬನ್ನಣೆ** 'ಬಣ್ಣನೆ' ನೋ.

**ಬನ್ನಣೆಗಾರ್ತಿ** 'ಬಣ್ಣನೆಗಾರ್ತಿ' ನೋ.

**ಬನ್ನಣೆಗಾಱ** 'ಬಣ್ಣನೆಗಾರ' ನೋ.

**ಬನ್ನಣೆಗೆಯ್**, ಬನ್ನಣೆಗೈ (ಕ್ರಿ). ೧. **ವರ್ಣಿಸು; ವಿವರಿಸು** : ಬನ್ನಣೆಗೆಯ್ದು ಬಱಿದೆ ಬಣ್ಣಿಗೆವಡಿಸದಿರು (ಗಿತಗೋ. ೨೫–೨). **ಬನ್ನಣೆಗೈ** : ೨. **ಅಲಂಕರಿಸು** : **ಶೃಂಗಾರಮಾಡು** : ಪನ್ನೀರೆರೆದಂಗಿಯನಿಕ್ಕಿ ಕಸ್ತೂರಿಯಿಟ್ಟು ರನ್ನದ ತೊಡವನು ತೊಡಿಸಿ ಬನ್ನಣೆಗೈದಳು ಪರನಂದಿನಿಯು (ಕಡಾಕ. ೨೨೦).

[ಬನ್ನಣೆ (< ಬಣ್ಣನೆ) + ಕೆಯ್₁]

**ಬನ್ನಣೆಗೈ** 'ಬನ್ನಣೆಗೆಯ್' ನೋ.

**ಬನ್ನಣೆನುಡಿ** 'ಬಣ್ಣನೆನುಡಿ' ನೋ.

**ಬನ್ನಣೆವಾತು** 'ಬಣ್ಣನೆವಾತು' ನೋ.

**ಬನ್ನಪಡಿಸು** 'ಬನ್ನಂಬಡಿಸು' ನೋ.

**ಬನ್ನಪಡು** 'ಬನ್ನಂಬಡು' ನೋ.

**ಬನ್ನಬಡಿಸು** 'ಬನ್ನಂಬಡಿಸು' ನೋ.

**ಬನ್ನಬಡು** 'ಬನ್ನಂಬಡು' ನೋ.

**ಬನ್ನವಂತ** (ನಾ). **(ರೋಗದ) ಬಾಧೆಯನ್ನು ಹೊಂದಿರುವವನು** ; **ರೋಗಿ**; **ವ್ಯಾಧಿಗ್ರಸ್ತ** : "ರೋಜನ್, ರೋಜಕಃ, ರುಪ್ನಃ, ರುಷ್ನವಾನ್, ರೋಗೀ, ಈ ೫ ಬನ್ನವಂತಂ" (ಕಾಶಕ್ಕ. ೨೨೨). [ಬನ್ನ + – ವಂತ]

ಬನ್ನವಡಿಸು 'ಬನ್ನಂಬಡಿಸು' **ನೋ.**
ಬನ್ನವಡು 'ಬನ್ನಂಬಡು' **ನೋ.**

**ಬನ್ನಿ₁** (ನಾ). ಸಣ್ಣ ಸಣ್ಣ ಎಲೆಗಳು ಹಾಗೂ ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಮರ; ಶಮೀವೃಕ್ಷ ; ಹಿಂದೂಗಳು ಈ ಮರವನ್ನು ಪೂಜ್ಯವೆಂದು ಭಾವಿಸಿದ್ದಾರೆ. ನವರಾತ್ರಿಯಲ್ಲಿ ವಿಜಯದಶಮಿಯಂದು ಬನ್ನಿಯ ಮರವನ್ನು ಪೂಜಿಸಿ, ಅದರ ಎಲೆಗಳನ್ನು ಪರಸ್ಪರ ವಿನಿಮಯ ಮಾಡಿಕೊಂಡು ಶುಭಾಶಯಗಳನ್ನು ನುಡಿಯುತ್ತಾರೆ : "ಶಮಿಯೆನೆ ಬನ್ನಿಯಕ್ಕು" (ಮಂಗರಾ. ೩೫-೦೩) ; ಮುಳ್ಳಿಲ್ಲದ ಬನ್ನಿಯ ಮರನುಳ್ಳೆಡೆಯೊಳಂ . . . ಒಂದು ಪುರುಷದೊಳ್ ನೀರಕ್ಕುಂ (ಲೋಕೋಪ. ೫-೦೦); ಅನಿಬರು . . . ಅಖಿಳಕ್ಕೆದುವನೊಂದು ಹೆಣನಾಕಾರದಲಿ ಬಿಗಿದೊಂದು ಬನ್ನಿಯ ಮರನ ತುದಿಯಲಿ ಕಟ್ಟಲೇಱಿದರು (ಕುಮ್ಯಾ.ವಿ. ೦-೦೨); ಆಲ ಮುಳ್ಳುತ್ತುಗ ಕೊಡಸಿಗೆ ಬನ್ನಿಗಳ್ಳೀಲಕಡರಿ ಮುಸುಕಿಹುವು (ಕಂಪಂ. ೦೬-೩೬).

**ಬನ್ನಿಮಂಟಪ**=ಶಮೀವೃಕ್ಷದ ಸುತ್ತಲೂ ಕಟ್ಟೆಹಾಕಿ, ಕಟ್ಟಿರುವ ಮಂಟಪ : ಹಿಂದೆ ವಿಜಯದಶಮಿಯಂದು ಮೈಸೂರು ಮಹಾರಾಜರು ಮೆರವಣಿಗೆಯಲ್ಲಿ ಬನ್ನಿಮಂಟಪಕ್ಕೆ ಹೋಗಿ ಪೂಜೆ ಸಲ್ಲಿಸುತ್ತಿದ್ದರು (ರೂಢಿ).
**ಬನ್ನಿಮಹಾಕಾಳಿ**=ಬನ್ನಿಯ ಮರದ ಬಳಿಯ ದುರ್ಗೆ : ವಂಶಾವಳಿಯ ಕರಣಿಕನು ಬನ್ನಿಮಹಾಕಾಳಿಯ ಆಶೀರ್ವಾದದ ಪಟ್ಟೆಯನ್ನೋದಿ ಒಪ್ಪಿಸಲು . . . ವಸ್ತ್ರಾಭರಣಗಳಂ ಕೊಡಿಸಿ (ಮಹಾಪಂ. I, ೩೯).
**ಬನ್ನಿಯ ಕಟ್ಟೆ**=ಬನ್ನಿಮಂಟಪ : ಬನ್ನಿಯ ಕಟ್ಟೆಯ ಸಾರ್ದನಾ ರಾಯ (ಜಕ. ೨೨-೬); **ಬನ್ನಿಯ ಬೆನಕ** = ಬನ್ನಿಯ ಕಟ್ಟೆಯ ಮೇಲೆ ಪ್ರತಿಷ್ಠೆ ಮಾಡಿರುವ ಗಣಪನ ವಿಗ್ರಹ : ಗುಂಡದೇವಪೆದ್ದಿ ಬನ್ನಿಯ ಬೆನಕನಲ್ಲಿ ಶ್ರೀಧರದೇವರ ಕೆಯ್ಯಿಂ ಬಡಗ ನಾಕಟಿ ಹಸುಗೆಯಲು ಕೊಟ್ಟ ಮತ್ತರು ನಾಲ್ಕು (ಸೌಇಇ. IX—i, ೩೩೩-೪೯; 1216); ಇನ್ನೀ ಚತುಸ್ಸೀಮೆಯಲು ನಾಡು ನಟ್ಟು ಕೊಟ್ಟ ಕಲ್ಲುಗಳಿಂದೊಳಗಣ ಕ್ಷೇತ್ರವನೂ ಹೊನ್ನ ಹುಣಿಸೆಯಿಂದವೂ ಬಡಗಲು ಬನ್ನಿಯ ಬೆನಕನಿಂದಲೂ (ಎಕ. IX, ಹೊಸ್ಕೋಟೆ. ೦೨-೨೦ ; 1286). **ಬನ್ನಿಯ ಮರದ ಮಂಟಪ** = ಬನ್ನಿಮಂಟಪ : ಇನ್ನು ಕೆಲವು ಆಯುಧಗಳನ್ನೂ ಸಂಗಡ ಇರಿಸಿ ಉತ್ತರದಿಕ್ಕಿನ ಬನ್ನಿಯ ಮರದ ಮಂಟಪಕ್ಕೆ ಪಟ್ಟದಾನೆ ಕುದುರೆಗಳ ಸಹಿತವಾಗಿ . . . ಕಳುಹಿಸಿಕೊಟ್ಟರು (ಮಹಾಪಂ. I, ೩೯). [ದೇ॥. ತಮಿ. ಮಲ. ವನ್ನಿ]

**ಬನ್ನಿ₂** 'ಬನಿ₂' ನೋ.

**ಬನ್ನು** (ನಾ). ಮೃದುವಾದ ಒಂದು ಬಗೆಯ ರೊಟ್ಟಿ : ಆ ಮೂಲೆಯಂಗಡಿಯಲ್ಲಿ ಬ್ರೆಡ್ಡು, ಬನ್ನು ಸಿಕ್ಕುತ್ತವೆ (ರೂಢಿ). [←ಇಂ. Bun]

**ಬನ್ನೂರ್,** ಬನೂರ್ (ನಾ). ಒಂದು ಸ್ಥಳದ ಹೆಸರು : ಬನ್ನೂರ್ವರಿಯ ಮಗ ಪಾಲ ಬಲ್ಲದ ತುಱುಗೊಳೊ ಕಾದಿ ತುಱುವನಿಕ್ಕಿಸಿ ಸ್ವರ್ಗ್ಗಿಯಾದ (ಎಕ. X, ಮುಳಬಾ. ೯೯-೪ ; ಸು. 970). **ಬನೂರ್** : ತೈಲಪದೇವಂ ರಾಜ್ಯಂಗೆಯೆ ಬನವಾಸಿ ಅರಸುಗೆಯೆ ಬನೂರಯ್ಯ ಮಾಡಿಸಿದ ಕಂಭ (ಎಕ. VIII, ಸೊರಬ. ೩೨೯-೬ ; 985). [ಬನ್ನಿ₁+ಊರ್]

ಬನ್ಸಿ 'ಬನಸಿ' ನೋ.
ಬನ್ಸಿಗೋಧಿ 'ಬನಸಿಗೋದಿ' ನೋ.

ಬನ್ಸಿರವೆ (ನಾ). ಬನಸಿಗೋದಿಯಿಂದ ಮಾಡಿದ ರವೆ : ಬನ್ಸಿರವೆಯಿಂದ ಉಪ್ಪಿಟ್ಟು, ಸಜ್ಜಿಗೆ ಮಾಡಿದರೆ ಉದುರುದುರಾಗಿಯೂ ಮೃದುವಾಗಿಯೂ ಇರುತ್ತದೆ (ರೂಢಿ). [ಬನ್ಸಿ( <ಬನಸಿ) + ರವೆ]

ಬಪ್ಪ₁ 'ಪರ್' ಪರಾ.

**ಬಪ್ಪ₂,** ಬೊಪ್ಪ (ನಾ). ೧. ತಂದೆ : ನ್ಯಾಯಂ ಮಂತ್ರಿಗಳುಕ್ತಿ ಬಪ್ಪನ ಮತಂ ಕಾಲೋಚಿತಂ ನಿಮ್ಮಭಿಪ್ರಾಯಂ ನೆಟ್ಟನಲಂಘ್ಯಂ (ಅಪಂತಿ.೦೩-೬೨) ; ಎಲೆ ಮಗನೆ ಬಪ್ಪನನ್ನೊಡಗೊಂಡು ಬಪ್ಪೆ ನಾಂ ಪರಿಣಯಕೆ (ಜಜು. ೬-೦೩). **ಬೊಪ್ಪ :** ೧. ಅಂತು ತನೂಭವಂ ಜನಿಸಿಯಾಕ್ಷಣದೊಳ್ಸಿರಿದೆಯ್ದೆ ಬೊಪ್ಪ ನಾನೆಂತು ಬರ್ದುಂಕುವೆಂ ಬೆಸಸಿಮೆಂದೊಡೆ (ಧರ್ಮಾಕ. ೬-೨೫) ; ಆ ಶಿಶುತ್ವದಲೆಮ್ಮ ಬೊಪ್ಪನು ವಾಸವನ ಪುರಕ್ಕೆದಿದನು (ಕುಮ್ಯಾದ್ರೋ. ೯-೪೯) ; ಬೊಪ್ಪ ಕಳುಹಿದ ವಸ್ತುಗಳನೆಲ್ಲವ ರಾಮನೊಪ್ಪಿಸಿಕೊಂಡು ದುರ್ಗವನು ವೊಪ್ಪವಿಟ್ಟನು ಸವುರಣೆಯಿಂದ (ಕುಠಾಂ. ೯೨-೩೯). ೨. ತಾತ ; ಪಿತಾಮಹ : "ಬೊಪ್ಪಂ ತಾತನೊಳಂ" (ಕರ್ಣಾಶ.೩) ; ಅಪ್ಪನು ನಮ್ಮ ಮಾದರ ಚೆನ್ನಯ್ಯ ಬೊಪ್ಪನು ನಮ್ಮ ಡೋಹರ ಕಕ್ಕಯ್ಯ (ಬಸವ. ೩೯೬). ೩. ಮಕ್ಕಳನ್ನು ಪ್ರೀತಿಯಿಂದ ಸಂಬೋಧಿಸುವಾಗ ಹೇಳುವ ಮಾತು : ಕವಡಿಕೆ ಭಾಳದಂಡದೊಳೊಡಂಬಡೆ ದಾದಿಯರಿಕ್ಕೆಲಂಗಳೊಳ್ ಸವಡಿಸಿ ಸಾರ್ಚೆ ದಟ್ಟಡಿಯೊಳೆಟ್ಟಿರುತಿರ್ದನನಾರ ಬೊಪ್ಪನೀ ಕವಡೆಯ ಬೊಪ್ಪನೆಂದು ನಡೆ ನೋಡಿದರ್ (ಸೂಕ್ತಿಸು. ೬-೩೩); ಬಾರೆನ್ನ ಬೊಪ್ಪಯೆಂದಡಿಗಡಿಗೆ ಮುದ್ದಿಸುತ್ತ ಕೇರಳನ ಹರುಷದಿಂ ಲಾಲಿಸುತ್ತ (ಕೇರಳ. ೦೦-೬೪) ; ಬಾರಣ್ಣ ಬಾರೋ ಕಾರುಣ್ಯಮೂರ್ತಿ ಬೊಪ್ಪ ಬಾರೊ (ಕಲುಪು. ೨೫). ೪. ಒಬ್ಬಾತನ ಹೆಸರು : ಕಲಿಗಂಗನಗ್ರುತನಯಂ ಶ್ರೀಬೊಪ್ಪದಂಡಾಧಿಪಂ (ಎಕ. II, ೩೯೯-೩೩ ; 1135). ೫. (ಅಲಂ) ಪ್ರಪಂಚಕ್ಕೇ ತಂದೆಯಾದವನು ; ಪರಮಾತ್ಮ ; ಕೃಷ್ಣ : ಈ ಬೊಪ್ಪಂ ದೇವಕಿಗಾದಾ ಬೊಪ್ಪಂ ತಪ್ಪದಪ್ಪನೞಿದಂ (ಜಾತಕಮಂ. ೦೬೫-೯೩೭ ; 1181).

**ಬಪ್ಪನಂಕಕಾಱ** = ಒಂದು ಬಿರುದು : ರಿಪುರಾಯಕುವರಬಂಗಾರಂ ಬಪ್ಪನಂಕಕಾಱಂ [ಕುಮಾರ]ಂಕಭೀಮಂ (ಸೌಇಇ. XX, ೬೦-೯ ; 1109). **ಬಪ್ಪನ ಗಂಧವಾರಣ, ಬೊಪ್ಪನ ಗಂಧವಾರಣ** = ಒಂದು ಬಿರುದು : ಈ ನರಸಿಂಹಭೂಭುಜಂ ಪರಿಚಿತಭದ್ರಲಕ್ಷಣದಿನೊಪ್ಪುವ ಬಪ್ಪನ ಗಂಧವಾರಣಂ (ಎಕ. V, ಬೇಲೂರು. ೦೯೩— ; 1161 ; ಜಾತಕಮಂ. ೩೩೬ ನೋ); ಗಡಿಯಂಕಮಲ್ಲ ಬೊಪ್ಪನ ಗಂಧವಾರಣ ಕಲಿದೇವ ಗೋಪಾಳದೇವರ ದಿಬ್ಯಶ್ರೀಪಾದಪದ್ಮಾರಾಧಕರುಂ (ಎಕ. VIII, ತೀರ್ಥಹ. ೨೫-೪ ; 1260).
[<ಪ್ರಾ. ಬಪ್ಪ./ಸಂ. ವಪ್ತೃ. ಹಿಂ./ಬಪ್ಪಾ, ಬಾಪ್ ; ಮರಾ. ಬಾಪ್]

**ಬಪ್ಪ₃** (ನಾ). ೧. ಬೆಟ್ಟದ ಮಗ್ಗುಲು ; ಸಾನು ; ತಪ್ಪಲು. ೨. ದಡ ; ತೀರ ; ತಟ : "ಬಪ್ಪ—ವಪ್ರ=ತಪ್ಪಲು, ದಡ" (ಶಬ್ದಕೋಶ.೨೬); ವಪ್ಪ, ಬಪ್ಪ (ಶಬ್ದಾನು. ೦೫೯ ಕ್ರಿಯೋ) ; ಪತ್ರಿಕೆ – ಹತ್ತಿಗೆ, ವಪ್ರ – ಬಪ್ಪ (ಹೊಸಗ. ೦೦೬). ೩. "ಅಗುಸೇ ಬಾಗಿಲು" (ಕೃಕಾ).
[ <ಪ್ರಾ. ವಪ್ಪ./ಸಂ. ವಪ್ರ]

ಬಪ್ಪಣ (ನಾ). ಮಕ್ಕಳನ್ನು ತೊಟ್ಟಿಲಲ್ಲಿ ಮಲಗಿಸಿ ಆಡಿಸುವ ಒಂದು ರೀತಿ, — ಬಗೆ : ರೂಢಿಯ ಕೈಯಾಗ ಆರೂಢ ಸಿಕ್ಕಿಹನು ಜೋಡಾಗಿ ಬಪ್ಪಣ ಆಡಿಸುತ ಕಂದನ ಸಡಗರದಿ ತೂಗಿರೆ (ಸಿದ್ಧಕೃ. ೩-೩೩). [?]

ಬಪ್ಪವ್ವ (ನಾ). ಒಬ್ಬಾಕೆಯ ಹೆಸರು : ಬಪ್ಪವ್ವಂ ಬನವಾಶಿ ಪನ್ನಿರ್ಛಾಸಿರದ ಪಟ್ಟಮನಾಳೆ (ಮ್ಯಆ. ೦೯೨೯, ೭೬-೪ ; 964).
[ಬಪ್ಪ₂ + ಅವ್ವ₁ (< ಅವ್ವೆ)]

ಬಪ್ಪಸೆಟ್ಟಿ (ನಾ). ಒಬ್ಬಾತನ ಹೆಸರು : ಬಪ್ಪಸೆಟ್ಟಿಯ ಮಗಂ××ಮಂ ಅಮ್ಮಣಸೆಟ್ಟಿ(ಎಕ. III (R), ಗುಂಡ್ಲುಪೇ. ೩೬-೦ ; ೯ನೆಯ ಶತ).
[ಬಪ್ಪ₂ + ಸೆಟ್ಟಿ]

ಬಬಿಯಮ್ಮ (ನಾ). ಒಬ್ಬಾತನ ಹೆಸರು : ನೀತಿಮಾರ್ಗ್ಗ ಪೆರ್ಮ್ಮಾನಡಿಗಳ್ ಸ್ವರ್ಗ್ಗಮೇಱಿದನ್ದು ಮಱವೂರ ಬಬಿಯಮ್ಮಂ ಕಿಚ್ಚುವೊಕ್ಕಂ (ಎಕ. V, ಅರಕ. ೨೬-೧೨ ; ಸು. 915). [? + ಅಮ್ಮ₁]

ಬಬ್ಬರ, ಬೊಬ್ಬರ (ನಾ). ಸುಸಂಸ್ಕೃತನಲ್ಲದವನು ; ಅನಾಗರಿಕ : "ಬಬ್ಬರಂ ಬರ್ಬರಾರ್ಥಂ" (ಕರ್ಣಾಶ. ೩೨). ೨. ಒಂದು ದೇಶದ

ಹೆಸರು; ಬರ್ಬರ : "ಬಬ್ಬರ—ಬರ್ಬರ—ಪಾಮರ, ದೇಶಭೇದ" (ಶಬ್ದಕೋ. ೨೪). **ಬೊಬ್ಬರ :** ೨. ಮಲಯ ಬೊಬ್ಬರ ಮತ್ತೆ ಮಗಧ ಬಂಗಾಳವು (ದೇವಾಂಕು. ೩-೯೦). [< ಸಂ. ಬರ್ಬರ]

**ಬಬ್ಬರಿ** (ನಾ). ಒಂದು ಬಗೆಯ ಮದ್ಯ, — ಹೆಂಡ : ಸಿರಿಸಿಂಬಿ ತಂಪುಗಂ ಬಬ್ಬರಿ ಗಂಗಾಸಾಗರಂ ಸುರಾಳಂ ಸೋಮಂ . . . ಎಂಬ ಕೆಲವು ಪೆಸರಿನ ಕಳ್ಳಂ ತುಂಬಿರ್ದನೇಕಘಟನಿಕುರುಂಬಮನನುರಾಗದಿಂದೆ ತಂದಿ ಟ್ಟಿಪಿದೊಡೆ (ಚಾರಿತ್ರ. ೧೧-೦೨೬). [?]

**ಬಬ್ಬರಿಗ** (ನಾ). ಒಂದು ದೇಶದ ಹೆಸರು : ಪಾಂಡ್ಯ ಲಾಳ ನೇಪಾಳ ತುರುಷ್ಕ ಬಬ್ಬರಿಗ ಕೇರಳ ಪಲ್ಲವಮಂಗ ವೆಂಗಿ ಪಾಂಚಾಳ ಕಳಿಂಗ ಸಿಂಧು ವಿಷಯಾಧಿಪರಾಳ್ವೆಸಗೆಯ್ಯೆ (ಕಇ. I, ೩೦-೦೭; 1222). [< ಬಬ್ಬರ]

**ಬಬ್ಬಾಗಿಲ್** (ನಾ). ಒಂದು ಸ್ಥಳದ ಹೆಸರು (?) : ಮುರಿದು ಕಿಡಿವ ಗುಣ್ಡಿಯ ಬಬ್ಬಾಗಿಲ ದ್ವಿಸನ್ಧಿಯ (ಎಕ. III (B). ಶಂಕನ. ೨೬೨-೨೪; 969). [?]

**ಬಬ್ಬಾಟ** 'ಬೊಬ್ಬಾಟ' ನೋ.

**ಬಬ್ಬುಲಿ, ಬಬ್ಬುಳಿ, ಬೊಬ್ಬುಲಿ, ಬೊಬ್ಬುಳಿ$_{1}$** (ನಾ). ಒಂದು ಬಗೆಯ ಮುಳ್ಳುಗಿಡ; ಜಾಲಿ; ಗೊಬ್ಬುಳಿ : ಪಲಸಾಲಂ ತಡಸಾಸು ತೇಗು ತದುಕಿಂಚಿಲ್ಪೊನ್ನೆ ಚೆನ್ನಂಗಿ ಬ[ಪಾಠಾಂ. ಬೊ]ಬ್ಬುಲಿ . . . ಎಂಬೀ ಮರದುಱುಗಲಿಱುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ (ಪಾರ್ಶ್ವಪು. ೦೨-೩೬); ವನಜವನದಲಿ ತುಱುಚಿ ಕಬ್ಬಿನ ಬನದಿ ಕಡಸಿಗೆ ಚೂತಮಯ ಕಾನನದಿ ಬ[ಪಾಠಾಂ. ಬೊ]ಬ್ಬುಲಿ ಭೀಮಸೇನನಯಿರವು ತಮ್ಮೊಳಗೆ (ಕುವ್ಯಾಅ. ೬-೩); ಈಗ ಊರು ಇದ್ದ ಸ್ಥಳದಲ್ಲಿ ಮೊದಲು ಬಬ್ಬುಲಿ (ಜಾಲಿ)ಯ ಬನವಿದ್ದು ತುಡುಗರಿಗೆ ಆಶ್ರಯವಾಗಿತ್ತು (ಐಪಾವ. ೦೨). **ಬಬ್ಬುಳಿ :** ಬಬ್ಬುಳಿಯ ಮುಳ್ಳ ಮೆಳೆಯಲಿ ನಿಲ್ಲೆ (ಗಿಅಂ. ೭೩-೪). **ಬೊಬ್ಬುಲಿ :** ಬೊಬ್ಬುಲಿಯ ವನಕ್ಕೆನಿಸು ಕೂರ್ಮೆಯಿಂ . . . ನೀರ ನೆಱೆದೊಡಂ ಮಾವಿನ ವನದಂತೆ ಫಲಮಾಗಲಾರ್ಕುಮೆ (ಧರ್ಮಾಮೃ. ೭-೭೭); ಚಂದನದ ಸನ್ನಿಧಿಯಲಿ ಪರಿಮಳ ತಾಗಿ ಬೇವು ಬೊಬ್ಬುಲಿ[ಪಾಠಾಂ. ಬಬ್ಬುಲಿ, ಬೊಬ್ಬುಳಿ] ತಱಿಯ ಗಂಧಂಗಳಾಗವೆ (ಬಸವ. ೦೪೦) ; ಹಿರಿಯ ಬೊಬ್ಬುಲಿಮರದ ನೆಳಲಿದು (ಬಸಪು. ೨೦-೦೦). **ಬೊಬ್ಬುಳಿ$_{1}$ :** ವನಜದಲರನುಳಿದಾಱಡಿಗೆ ಬೊಬ್ಬುಳಿಯ ಪೂವಿನೊಳ್ಮಧುವುಂಟೆ (ಕೃಬಿಶಾ. ೦೪-೦೨) ; ಹಾವಸೆ, ಬೊಬ್ಬುಳಿಮರದ ತಿಗುಡು ಇವೆರಡನು ಕುಟ್ಟಿ . . . ಸಕ್ಕರೆವೆರಸಿ ತೆಗೆದುಕೊಳ್ಳೆ ದಾಹಂ ಮಾಣ್ಗುಂ (ಸಳವ್ಯ. ೨೬೨). [< ಸಂ. ಬಬ್ಬುಲ, ಬಬ್ಬೂಲ]

**ಬಬ್ಬುಳಿ** 'ಬಬ್ಬುಲಿ' ನೋ.

**ಬಬ್ರಿ** (ಗು). (?) : ಆನೆಗೆ ಹಳದೀ ಬನಾತಿನ ಬಬ್ರೀಜೂಲು ರೇಶ್ಮೆ ಜಾಲರು ಸಹ ೧ (ಎಕ. XIV, ಶಂಕನ. ೨೪೨-೦೪೨ ಪುಟ; 1847). [?]

**ಬಭ್ರು** (ಗು). ೧. ಕಂದುಬಣ್ಣದಿಂದ ಕೂಡಿದ. (ನಾ). ೨. ಕಂದು ಬಣ್ಣ; ಪಿಂಗಳವರ್ಣ : "ಪಿಂಗಂ ಕಪಿಳಂ ಬಭ್ರು ಪಿಶಂಗಂ . . . ಹರಿತಂ" (ಚತುಕೋ. ೦೦೪-೩೩); ಭ್ರುಕುಟಿಕುಟಿಲಭ್ರೂಲತಾಬಭ್ರುರೋಚಿಯಿಂ ರುಚಿರತಾಂಬೂಲಾರುಣಾಧರಮರೀಚಿಯಿಂ . . . ರೌದ್ರಭಾವಂ ನೆಲಸಿ ನಿಲೆ (ಕಾದಂಅ. ೨೭೦) ; ಅರಣ್ಯಂ . . . ಮದವತ್ಕುಂಜರಗಾತ್ರದಂತೆ ವಿಳಸದ್ಬಭ್ರೂಪ್ರಭಾವಿಭ್ರಮಂ (ಕುಶ್ಪಕು. ೩-೬೮). ೩. ಮುಂಗುಸಿ; ಮುಂಗುಲಿ : "ಮುಂಗುರಿಯಲ್ಲಿಯುಂ ಬಭ್ರುವೆಂಬುದು" (ಹಲಾಯು. ೦೩೭-೩೦); ಹರಿ ಕರಿಗಳೊಂದಾಗಿ ಬೆರೆದು ಬಭ್ರೂರಗವನೆರಳೆ ಪುಲಿಯೊಂದೆನಿಸಿ ಮರೆದು ನಿಜವೈರಗಳ ವರಮುನಿಯ ದಿವ್ಯಪ್ರಭಾವದಿಂದೊಪ್ಪಿರ್ಪವಾ ತಪೋಧನನೆಡೆಯೊಳು (ವೆಂಕಾರಾ. ೧-೬-೮). ೪. ಅಗ್ನಿ : ಬಭ್ರುಸದ್ದ್ಯುಷ್ಟ ಚಿತ್ರಭ್ರಾಂತಿಕೃಲ್ಲುಠತ್ ಪ್ರಭ್ರಾಜಿತೋದ್ವೃತ್ ಕಕುಭ್‌ಭ್ರಮಿತ ಘೃಣಿಚಯಾದಭ್ರಸ್ಫುಲಿಂಗವಮಿವಿಭ್ರಮವಿಭೃತ್ ಖಡ್ಗ ಶುಭ್ರದಕ್ಷಕರಕ್ಷತಾ (ಶದ್ಮರಾ. ೦-೭). ೫. ವಿಷ್ಣು : "ವಿಷ್ಣುಃ, ಕೃಷ್ಣಃ . . . ಬಭ್ರುಃ, ಹರಿಃ . . . ವನಮಾಲೀ, ಗದಾಧರಃ — ಈ ೪೫ ನಾರಾಯಣನ ಪೆಸರ್" (ಹಲಾಯು. ೩-೨೪). ೬. ಶಿವ. ೭. ಕುದುರೆಯ ಹುಬ್ಬು : ಅಕ್ಷಿಕೂಟದಿಂ ಪೊಱಗಣ ಪುರ್ಬುಗಳ್ಗೆ ಬಭ್ರುವೆಂಬ ಪೆಸರಕ್ಕುಂ (ಅಶ್ವಶಾ. ೮೭-೨೩). [ಸಂ.]

**ಬಮರ** 'ಬವರ$_{2}$' ನೋ.

**ಬಮರಿ** 'ಬವರಿ' ನೋ.

**ಬಮೆಗೊಳ್** 'ಬೆಮೆಗೊಳ್' ನೋ.

**ಬಮೋಜೀಬ್** (ಅ). ಅದಕ್ಕನುಗುಣವಾಗಿ ; ಅದಕ್ಕನುಸಾರವಾಗಿ : ಅದರ ತರುವಾಯ ನಡೆಯುವ ಆಪಾದನೆಗೆ ಅಯಿವತ್ತು ರೂಪಾಯಿಗೆ ವಿಾರದ ಜುಮಾರ್ನೆಗೂ ಗುರಿಯಾಗತಕ್ಕದ್ದು ಬಮೋಜೀಬ್ ಹುಕ್ಕುಂ (ಗ್ರಾಮಾಕ. ೪ ಟೀಕೆ). [← ಪಾರ. ಬಮೂಜಬ್ ; ಹಿಂ. ಬಮೂಜಬ್, ಬಮೂಜಿಬ್ ; ಮರಾ. ಬಮುಜಿಬ್, ಬಮೂಜಿಬ್, ಬಮೊಜಿಬ್, ಬಮೋಜೀಬ್]

**ಬಮ್ಮ** 'ಬೊಮ್ಮ' ನೋ.

**ಬಮ್ಮಡಿ** 'ಬೊಮ್ಮಡಿ' ನೋ.

**ಬಮ್ಮಯ್ಯ** 'ಬೊಮ್ಮಯ' ನೋ.

**ಬಮ್ಮೇತಿ** 'ಬೊಮ್ಮಹತಿ' ನೋ.

**ಬಯ್$_{1}$, ಬೈ** (ಕ್ರಿ). ಬಯ್ತ್ತ, ಬೈತ (ಭೂತಕೃ). ಬಯ್ತು, ಬೈತು (ಭೂತನ್ಯೂ). ೧. ಅಡಗಿಸು ; ನಿಕ್ಷೇಪಿಸು ; ಮುಚ್ಚಿಡು ; ಬಚ್ಚಿಡು : "ಬಯ್-ನಿಕ್ಷೇಪೇ (ಬಚ್ಚಿಡು)" (ಕಮಧಾ) ; ದಂಡಕನೃಪಂ ಲೋಭಾಭಿಭೂತಂ ವಿಷಾವಿಲದಂಷ್ಟ್ರಂ ಶ್ವಯುಮಾಗಿ ಪುಟ್ಟಿ ಸುಱಿಗುಂ ಮುಂ ಬಯ್ತ್ತ ಭಂಡಾರದೊಳ್ (ಆದಿಪು. ೨-೦೨) ; ಕಮಲಜನಿಲ್ಲಿ ಬಯ್ತ್ತ ನೊಲವಿಂ ಕುಮುದೇಕ್ಷಣ ವಜ್ರದಂತವಿದ್ರುಮರದನಚ್ಛದಂಗಳಿನಮರ್ಚಿದ ಜಂಗಮನೀಲಪುತ್ರಿಕಾಸಮಿತಿಯನೆಂಬಿನಂ . . .ಪುಳಿಂದಿಯರಿರ್ದರದೊಂದು ತಾಣದೊಳ್ (ಜಗಪಿ. ೦೭-೦೭) ; ಬರೆದಂತೆ ಪೊಲ್ತಂತೆ ಬಯ್ತಂತೆ ಬೆಚ್ಚಂತೆ ಇರಿಸಿದಂ ಶಿವಮೂರ್ತಿಯಂ ಚಿತ್ತದೊಳಗಿಂತೆ (ಸೋದರ. ದೇ. ೬೬-೨೫). **ಬೈ$_{1}$ :** ೧. ಎರ್ದೆಯೊಳ್ ಬೈತಿಚ್ಚೆಯೊಳ್ ಕೂರ್ಮೆ ತಳ್ತಿರವಿಂ ಮುಚ್ಚುಗೆವೆತ್ತ ಪತ್ತುಗೆಯಿನಂತಾ ನಾಲ್ವರಂದಿರ್ವರಿರ್ವರೆ ಯುಗ್ಮದ್ವಯಮಾದರೇಂ ಸಫಲಮೋ ಸತ್ಪಾತ್ರದಾನೋದಯಂ (ಶಾಂತಿಪು. ೬-೦೨೩) ; ಓವಿ ಫಳತರುಗೆ ನೀರ್ಗಳನೀವುದುಮಂ ಬೈತು ಬಿತ್ತನೊಲವಿಂ ಬೆಳೆಗೈಗೇವುದುಮಂ ಸತ್ಪಾತ್ರಕ್ಕೀವುದುಮಂ ದಾನಮೆಂಬ ನಾಣ್ಣೆಕೆಯುಂಟೇ (ಅರ್ಥನೀ. ೪-೪೮) ; ಆಭರಣಗಳೆಲ್ಲಮಂ ಬೈತು ತಾಂ ಬೇಗದಿಂ ವರಸಖಿಂ ಬೆರಸು ಖೇಚರಚಕ್ರವರ್ತಿ ಬೇಡರ ರೂಪನಾಂತು (ಧರ್ಮಪ. ೩-೨). ೨. ಪ್ರತಿಷ್ಠೆಮಾಡು : ಬರೆದರೊ ಬೈತರೊ ಪೊಲ್ದರೊ ಪೊರೆದರೊ . . . ಕಡೆದರೋ ಎನೆ ಗಿರಿರಾಜತನೂಜೆ ಪೂಜೆಯೊಳ್ ರಾಜಿಸುವಳ್ (ಗಂಕ. ೩-೦೦೨). ೩. ಸೇರಿಕೊಳ್ಳು : ಹಂಸತೂಲಸ್ಥಲದೊಳ್ ತಾಂ ಬೈತೊಡಂ ಮುಳ್ಗಳ ಹೊಸ ಹಸೆಯೊಳ್ ಬೈ[ಪಾಠಾಂ. ಸೈ]ತೊಡಂ ಸ್ನೇಹದಿಂದಂ ನಲವಿಂದಂ ಸ್ತೋತ್ರಮಂ ಮಾಡಿದೊಡೆ ಪಳಿದೊಡಂ ಸರ್ವಮೊಂದಂದಮೆಂದಾಂ ಸಲೆ ಕಾಣ್ಬಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೭೫). ೪. ಬಂಧಿಸಿ ಇಡು ; ಅಲುಗಾಡದಂತೆ ಇರಿಸು : ಬೇಸಗೆಕಾಲಮೆಂಬಬಳೆ ಬೆಟ್ಟುಗಳೆಂಬೊಲೆಗಲ್ಗಳಲ್ಲಿ ಬೈತೀ ಸಕಳೋರ್ವಿಯೆಂಬ ಪೊಸಗಾವಲಿಯುಂ ರವಿವಹ್ನಿಯಿಂದೆ ತೋಯಾಶಯಮೆಂಬ ಸಂಪಣಮನರ್ಪಿಸಿ ತಳ್ತುರಿಯಲ್ಕೆ ಕಾಷ್ಠಗಳ್ ದೋಸೆಯನಟ್ಟವೋಲ್ ಮಳಲರಾಶಿಗಳೊಪ್ಪಮನಾಳ್ದವಾಕ್ಷಣಂ (ಜಾರಪು. ೪-೭೮).

[ದೇ.॥ ತಮಿ. ವೈ ; ಮಲ. ವೆಕ್ಕ ; ಕೊಡ. ಬೆಯರ್ ; ತೆಲು. ವೇಯು; ಕೋತ. ವಯ್ ; ತೊದ. ಪೊಯ್]

ಬಯ್₃, ಬಯ್ಯು, ಬೈ₃, ಬೈಯು (ಕ್ರಿ). ೧. ಕೆಟ್ಟ ಮಾತನ್ನಾಡು ; ಕಠಿಣವಾಗಿ ನುಡಿ : ಅದನಾತಂ ಬಯ್ದೊಡನಲ್ಲ ನಾಂ ಬಯ್ದಂ (ಪಚ್ಚಾ.ರಾ. ೬-೩) ; ಕಿಱಿಯವನಱಿಯದೆ ಕೆಡೆನುಡಿದನಪ್ಪೊಡಂ ನೂಱುವರಂ ನೆಱೆ ಸಲಿಸುವುದೆಂದುದನಾಂ ಮಱೆವೆನೆ ಬಯ್ ಬಯ್ಕೆ ಸಲಿಸುವೆಂ ನೂಱುವರಂ (ಪಂಪಭಾ. ೬-೬೦) ; ಪಡುವಲೀಯದ ರವಿಯ ಬಯ್ವುತ ನಡೆದನಾ ಕುರುರಾಯನು (ಕುಮಾ.ವ್ಯಾ.ಗ. ೦೪-೪೫). ೨. ಮೊಱೆದಲಿಸು ; ಹೀಗಳೆ: ಪೊಯ್ವ ನಿಸ್ಸಾಳ ತಮ್ಮಟದ ಭೇರಿಗಳಲ್ಲಿ ಬಯ್ವ ಬಿರುದಿನ ಕಹಳೆ ತಿತ್ತಿರಿಗಳಲ್ಲಲ್ಲಿ (ಜಿಹರ. ದೇ. ೩೭-೨೨) ; ಪೊಱವೊಱಲ ಬನದ ಕಟ್ಟಿರಲೆ ಮಱಿದುಂಬಿಗಳಿಂದೆ ಬಯ್ದು ಪಾಡಿಸಿ ಸಾರ್ತಂದುಱದೊಡ್ಡಿ ದರ್ಕಬಿಂಬದ ತುಱುಗಲದೆನಿಸುವುದು ಕಾಂಚನಪ್ರಾಕಾರಂ (ಕುಸ್ತಪು. ೨-೬೩); ಕಿದಱಿದವು ನಿಸ್ಸಾಳ ಬಱಸಿಡಿಲದುಭುತಧ್ವನಿಯಲಿ ನಿರಂತರವೊದಱೆ ಬಯ್ದುವು ಕಹಳೆ ಬಿರುದಾವಳಿಯಲತಿರಥರ (ಕುಮಾ.ವ್ಯಾ.ಗ. ೪-೦೩). ಬಯ್ಯು: ೧. ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ ಒಡೆಯ ನಿಮ್ಮ ಬಯ್ಯದಂತೆ ಮಾಡು (ಜಿಶಪ. ೩೩) ; ಬಯ್ಯಲೞಿವೆ ದುರುಕ್ತಿ ಶರದಲಿ ಮೆಯ್ಯನೆಸುವೆಯೊ ಮೇಣು ಮಾರ್ಗಣ ಕಯ್ಯಲುಂಟೇ ನಿನಗೆ ಸಂಬಳವೇನು ಸಮರದಲಿ (ಕುಮಾ.ವ್ಯಾ. ೦೫-೩೩). ಬೈ₃: ೧. ಜಯಾವತಿ . . . ಸಿದ್ಧಾರ್ಥರಿಷಿಯರ ಮೇಗೆ ಕ್ರೋಧಮಂ ಭಾವಿಸಿ . . . ದಯೆಯಿಲ್ಲದೊಂ ನಿಷ್ಕರುಣಿ ಎಂದು ಬೈದ[ಪಾಠಾಂ. ಬಯ್ದು]ಳ್ (ಪಚ್ಚಾ.ರಾ. ೪೫-೦೨) ; ನನೆಯಂಬಂ ತಗೆದೆಚ್ಚನಂಗಜನ ತಪ್ಪೇನಾನುಮಂ ತೋಱೆ ಕಾಣ್ಬನಿತಂ ಮಾಡದೆ ಪದ್ಮಜಂ ಮದನನಂ ಬೈದಂತುಟೇ ಬೇಡವಿಮಾಬಿನದಂ (ಪಂಪಭಾ. ೪-೬೪) ; ಕನಲಿ ವಿಧಿಯನು ಬೈವಳೋ ಕಂಬನಿಯ ಸುರಿವಳೊ ಶೋಕದಲಿ ನಿಜತನುವ ಬಿಡುವಳೊ ಕಾಂತೆಯೆಂತಿಹಳೆನುತ ನಡೆತಂದ (ಜಿಶಪ. ೬-೨). ೨. ಬೈದವು ಬಹುಮೊಗದೊಳು ಕಹಳೆಗಳೀರ್ಬೈದುಮೊಗದನ ಸೈನ್ಯದೊಳು (ಅಹಿಜ. ೦೨-೬೦). ಬೈಯು : ೧. ಚಾಪಳೆಯರಾಲೋಚಿಸುತ ಕಡುಪಾಪಿಯಂಗಜನೆಂದು ಬೈಯಾ [ಪಾಠಾಂ. ಬಯ್ಯು]ತ ತೋಪಿನೆಡೆಗಿರದೈದಿ ತಂದರು ಸತಿಯ ಸಂತೈಸಿ (ಜಿಶಪ. ೦-೪೦); ಯಾರೂ ಹುಡುಗರನ್ನು ಹೊಡೆಯಲಿಲ್ಲ ಬೈಯಲಿಲ್ಲ (ಕಳಕು. ೩೩).

ಬೈಬೈ (ದ್ವಿರುಕ್ತಿ) : ಅಗಿದು ಮೈದೆಗೆದು ಸಿಗ್ಗಾಗಿ ತಮ್ಮಿಂ ತಾವೆ ತೆಗಳಿ ಬೈಬೈದು ಬಾಯಳಿದು ಶೋಕಿಸಿ ತಾವೆ (ಜಾಸಂಕ. ೪-೨೫೬); ಸಾಲ ಹೆಗ್ಗಹಳೆಗಳು ರಿಪುಭೂಪಾಲಕರ ಬೈಬೈದು ಗಜಱಿದವಾಳುತನದಾಳಾಪ ಬೀಱಿತು ಬೆಱಗನಹಿತರಿಗೆ (ಕುಮಾ.ವ್ಯಾ.ಗ. ೪-೩೨). ಬೈದಾಟ=ಒಬ್ಬರನ್ನೊಬ್ಬರು ಬಯ್ಯುವಿಕೆ,—ತೆಗಳುವಿಕೆ : ನುಡಿ ನೋಟ ಬಾಯೂಟ ಬೈದಾಟ ಕಲಹ ಕಾಲ್ವಿಡಿತವಿಲ್ಲದ ಕಾಂತೆಯರಿಗೆ ಕಡುರಸಿಕರು ಲೇಸು ಮಾಡರೆಂದೊರ್ವಳು ನುಡಿದಳೆಳೆಯಳಿಗೊರ್ವಳಿಗೆ (ಕುರಾಪಾಂ. ೨೬-೪೨); ಪಾರಿವಗಳ ದನಿ ಕೊಳರ್ವಕ್ಕಿಯ ಲಲ್ಲೆ ಕೀರವಱಿಗಳ ಬೈದಾಟ (ಕಂಪಶ. ೦೦-೪೩). ಬೈದಾಡು = ಮೊಱೆದಲಿಸು ; ಹೀಗಳೆ : ಸೆಣಸು ಮಿಗಲೊಳಗೊಳಗೆ ಖತಿಯಲಿ ಕೆಣಕಿ ಬೈದಾಡಿದರು ಸಮರಾಂಗಣಭಯಂಕರ ಶಲ್ಯ ಭಾಸ್ಕರಸುತರು ರಥದೊಳಗೆ (ಕುಮಾ.ಕ. ೯ ಸೂಚನೆ).

[ದೇ.॥ ತಮಿ. ವೈ ; ಕೊಡ. ಬಯ್ₐ]

ಬಯ್₃, ಬೈ₃, ಬೈಯು (ನಾ). ಸಂಜೆ; ಬೈಗು:(೧). ಬೈ₃: ಉಪಾಯವಿಲ್ಲದೆ ಹೊತ್ತು ಬೈಯಾಗುವಾಗ . . . ಹೊರಟೆ (ಕುಂಗಿಡು. ೪). ಬೈಯು : ಕೈಯಡಿಗಳ್ ಕಂಗಳ್ಕಡೆಯೊಯ್ಯನೆಯುಗುರ್ದಾಡೆ ಜಿಹ್ವೆ ಕೀಳ್ದುಟಿ ವೇಳಂ ಬೈಯುದ ಕೆಂಪುಗಳಾಗಿರಲಯ್ಯಂ ತಾನೀವನತುಳಸುಖಸಂಪದಮಂ (ಜಾತಾಸ್ತ. ೦-೦೨-೩೪). 'ಬಯ್ಗು' ಪರಾ.

ಬಯ್ಪನಕ=ಸಂಜೆಯವರೆಗೂ; ಸಾಯಂಕಾಲದ ತನಕ : (೧). [ದೇ.॥ ತುಳು. ಬಯ್ಯ, ಬೈಯ, ಬೈಯ್ಯ]

ಬಯ (ನಾ). ಹೆದರಿಕೆ; ಭಯ ; ದಿಗಿಲು : "ಬಯಮೆನಲು ಭಯದೊಳಗಕ್ಕು" (ಕಶಕ. ೭೩); ಭೋಗಿ, ಬೋಗಿ, ಭಯ, ಬಯ (ಶಬ್ದಾ.ಕು. ೦೪೩ ಕ್ರ.ಹೋ). 'ಬಯಂಗೊಳ್', 'ಬಯಂಬಡಿಸು' ಪರಾ. [<ಸಂ. ಭಯ]

ಬಯಂಗೊಳ್ (ಕ್ರಿ). ಹೆದರು ; ಭಯಪಡು ; ದಿಗಿಲುಗೊಳ್ಳು : ಇಂದ್ರಿಯಂಗಳ ದೆಸೆಗೆ ನಾಡೆಯುಂ ಬಯಂಗೊಂಡು (ಧರ್ಮಾಕು. ೩-೨೬). [ಬಯ+ಕೊಳ್₁]

ಬಯಂಬಡಿಸು (ಕ್ರಿ). ಹೆದರುವಂತೆ ಮಾಡು ; ಭಯಪಡಿಸು ; ದಿಗಿಲುಗೊಳಿಸು : ತಿಬ್ಬವೊಗಂ ಬಯಂಬಡಿಪ ತೇಜಮನುಳ್ಳ ದೃಢಾಂಗ ಮಾಯತಂ ಗಬ್ಬಿಗರಿಂ ನಿರೀಕ್ಷಿಸಲಗಮ್ಯಮದಾದುದದೊಂದುಮಾಯುಧಂ ನಿಬ್ಬರವಾದ ಚಂಡಮೆನಿಕುಂ ಧರೆಯೊಳ್ (ಜಾತಾಸ್ತ. ೦-೦೩-೪೬). [ಬಯ + ಪಡಿಸು]

ಬಯಕಾಱ (ನಾ). ೧. ಸಂಗೀತಗಾರ : ಮಧ್ಯಮಪಾಂಡ್ಯವರಾಯ ಶಸ್ತ್ರಶಾಸ್ತ್ರಪ್ರವೀಣ ಬಯಕಾಱಜಿತಾಮುಹ . . . ಶ್ರೀ ವೀರ ಅರಗದ ಹರಿಯಪ್ಪಒಡೆಯರು ಸುಖಸಂಕಥಾವಿನೋದದಲು ರಾಜ್ಯಂಗೆಯುತಿರ್ಪಲ್ಲಿ (ಎಕ. VI. ಮೂಡಗೆ. ೩೬-೦೩; ಸು. 1380?); ಅಚ್ಯುತದೇವರಾಯ ಮಹಾರಾಯರ ಮನೆಯ ಬಯಕಾಱ ರಾಮಪ್ಪಯ್ಯನವರು ಬೂದಿಹಾಳ ಸೀಮೆಯ ಮದುವೆಯ ಸುಂಕವನು ಬಿಟ್ಟು ಕೊಟ್ಟು ಧರ್ಮ್ಮಶಾಸನದ ಕ್ರಮವೆಂತೆನ್ದರೆ (ಎಕ. XII. ಚಳ್ಳಕೆ. ೩-೬; 1535); ವರವೈಣಿಕ ಬಯಕಾಱರು ಹರುಷದೆ ಕೊರಳ ಬೆರಸನೊಂದುಗೂಡಿ . . . ಪಿರಿದಾಗಿ ಪಾಡುತೊಪ್ಪಿದರು (ಕಂಪಶ. ೬-೩೪). ೨. ವೈಣಿಕ : ತುಱುಗಿ ನಡೆವಾಗಳ್ ಸೋಲಿವಡೆದಪುದೆಂಬ ಭೀತಿಯಿಂ ಪೆಗಲಿಂ ತೆಗೆದು ಬೀಣೆಯಂ ದೃಢಮುಷ್ಟಿಯಿಂ ನೆಗಪಿ ಪಿಡಿದಡಿಗೊಳ್ವ ಬಯಕಾಱರ ತೆರಳ್ಕೆಯಿಂ (ಜಾಜಿಕೀ. ೦೨-೦೦೬ ಪ); ಹರಿಸಂ ಮಿಗೆ ಚಿಕದೇವಂ ಸರಸಾಗ್ರಣಿ ವೀಣೆ ಬಾಜಿ ಪೋಜೆಗಳಂ ಮುಂಬರಿದು ಕುಡೆ ದೇವರಾಯನ ಚರಣಕೆ ಬಯಕಾಱರಂದು ಬಣ್ಣಿಸೆ ನೆಗಟ್ದರ್ (ಚಿಕಾ. ೪-೦೦೦). [←ತೆಲು. ಬಯಕಾಂಡು, ಬಯಕಾರಿ]

ಬಯಕೆ₁ 'ಬಯ್ಕೆ₁' ನೋ.

ಬಯಕೆ₂, ಬಯಕ್ಕೆ, ಬಯ್ಕೆ₂, ಬವಕೆ (ನಾ). ೧. ಇಚ್ಛೆ; ಆಸೆ; ಅಪೇಕ್ಷೆ: "ಇಚ್ಛೆ ಕಾಂಕ್ಷೆ ಸ್ಪೃಹೆಯು ಆಶಂಸಾ ರುಚಿ ಕಾಮ ವಾಂಛೆ ಈಪ್ಸಿತಮೆನಲು ಬಯಕೆ" (ಚುಂಗಿರಾ. ೦೨೬-೦೧) ; ನಿಯಮಿತಾಕ್ಷರದಿಂದುಪಮಾಪ್ರತಿಜ್ಞೆಯನೆತಿರ್ದುವುದಟ್ಟಿಯನಿರ್ದುಮಾ ಬಯಕೆ ತೀರದ ಕಾರಣದಿಂ ವಿಪರ್ಯಯ ಮಿದಭ್ಯುಪಮೋಕ್ತ್ಯುಪದೂಷಣಂ (ಕಶರಾ. ೦-೦೪೩) ; ಆತನಂ ಸಾಮದಿಂದಮುಳವಡಿಸಿ ನೋಡುವೆಂ ಸಾಮದೊಳಂ ಪದವಡದೊಡೆ ಬಟ್ಟಿರ್ದಪ್ಪುದಲ್ತೆ ಪದವಡಿಸಲೆನ್ನ ಬಯಕೆಯ ದಂಡಂ (ಅಂತು. ೦೪-೪೩); ಅಂತೆ ನಿನ್ನಾದೊಡಂ ಜಾತಿಜೋಗಿನಿಯಲ್ತು: ಬಗೆಯೊಂದು ಬಯಕೆಯಂ ಪಡೆಯೆ ನೋಂತಿಹೆನಿಂತು (ಕಶ್ಯಾಂಗ. ೩೬-೬೩). ೨. ಬಸಿರಿಯರಿಗೆ ಉಂಟಾಗುವ ಆಸೆ,—ಹಂಬಲ : ನೀನುಂ ಮನೆಯಿಂದಂ ಪೊಱಮಟ್ಟು ಪೋಗಿ . . . ಕೆಲವುದಿವಸದಿಂ ಸತ್ಯ ಶ್ರೀಮತಿಯ ಗರ್ಭದೊಳ್ ನೆಲಸಿರೆಯಾಕೆಗೆಲ್ಲಾ ಜೀವಂಗಳಂ ದಯೆಗೆಯ್ವ ಬಯಕೆಯಾದುದು (ಪಚ್ಚಾ.ರಾ. ೦೩೦-೦೩); ಗರ್ಭಿಣಿಗಳಪ್ಪ ಕಾಮಿನಿಯರ್ ಬಯಸುವ ಬಯಕೆ ದೋಹಲಂ ದೌಹೃದಮುಂ (ಪಶ್ಚಕೋ. ೩೪-೦೪); ಬಳಿಕ ಬಯಕೆ ಪೆರ್ಚಿದುದು . . . ನಳಿನದಳಾಕ್ಷ ನರಸಿಂಹನ ಮೂರುತಿ ಬಳೆಯಲಂಗನೆಯ ಗರ್ಭದಲಿ (ಕಂಪಶ. ೪-೬೦). ೩. (ಅಲಂ) ಸ್ತ್ರೀಯರಿಗೆ ಸೀಮಂತ, ಬಾಣಂತನ ಮುಂತಾದ ಸಂದರ್ಭಗಳಲ್ಲಿ ವಿಶೇಷವಾಗಿ ಕಣ್ಣಿಗೆ ಹಚ್ಚುವ ಕಾಡಿಗೆ,—ಕಪ್ಪು : "ಅಂಜನವೆ ಬಯಕೆ" (ಕಚಂ. ೦೩೩).

**ಬಯಕ್ಕೆ** : ೧. ನಿನ್ನ ಕೊಟ್ಟುದನೆ ಪಸಾದಮೆಂದು ಪೊಡೆವಟ್ಟು ಮನೋಮುದದಿಂದೆ ಕೊಂಡು ಬಾಳ್ವುದುವೆ ಬಯಕ್ಕೆ ಮುಂ ನಿನಗದಂ ಕಿಡಿಪಂದಿಲೆ ಕರ್ಣ ಕೇಳುವಾದುದು ನಿನಗಾ ವೃಕೋದರನ ಕಾಯ್ಪುನೆ ಪೊತ್ತಿಸಿದೆನ್ನ ಕಾಳೆಗಂ (ಪಂಪಭಾ. ೧೪-೬); ಭವವಾರ್ಧಿ ಪ್ರತಿಮಗ್ನ ಜೀವನಿವಹಂ . . . ಭವಸಂತಾನಂಗಳೊಳ್ ಕೂರ್ಪ ಕೂಡುವ ತಟ್ಟಿರ್ಪ ಬಯಕ್ಕೆಯೇ ಬಯಸುಗುಂ (ಶಾಂತಿಪು. ೯-೭). ೨. ಜಿನಮಜ್ಜನಂಗಳಂ ಮಾಟ್ಟ ಜಿನೇಂದ್ರಪೂಜೆಯನೆ ಮಾಟ್ಟ . . . ಚತುರ್ವಿಧಮಪ್ಪ ದಾನಮಂ ಮಾಟ್ಟ ಬಯಕ್ಕೆ[ಪಾಠಾಂ. ಯಂಕೆ]ಯಾಯ್ತು ಜಿನದತ್ತೆಗೆ ಭವ್ಯನ ಮೇರು ಗರ್ಭದೊಳ್ (ಅರ್ಹತ್ಪ. ೨-೨೩); ℙ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು. **ಬಯ್ಕೆ₂** : ೧. ಚದುರರ ಮೆಚ್ಚು ಭಾವುಕರ ಕೈಪಿಡಿ ಜಾಣರ ಬಯ್ಕೆ ಸತ್ಕಲಾವಿದರ ವಿಲಾಸಮುಕ್ಕುರಿಗರಾಭರಣ . . . ತಾನೆನಿಪ್ಪ ಸಮುದ್ರದೊಳೆ ಬಣ್ಣಿಕುಂ ಧರಣಿ ಸತ್ಕವಿಮಲ್ಲನ ಕಾವ್ಯ ಸಾರಮಂ (ಸೂಕ್ತಿಸು. ೦-೨೩) ; ಕೇಳದಿರು ; ತಿಳಿಯುವೇಟ್ಕಿಂಬ ಬಯ್ಕೆಯುಂ ಬೇಡ (ಬಸ್ವಪು. ೨೬-೩೬೬). ೨. ಠಯ್ಯೋಳರ ಹಾದಿ ಗಳೊಂದೆಸೆಯೊಳು ಬಯ್ಕೆಯ ಸತಿಯರ ಸಾಲೊಂದೆಸೆಯೊಳು (ತಿರುಪಾ. ದೀ. ೨೨೨-೨೦). **ಬಯಕೆ** : ೨. ಒಡಲೊಳ್ ಶಿಶುವುದಯಿಸಿ ಬಳೆಯುತ್ತಿರಲೊಡವಾವುದ ಪಣ್ಣಾಪ್ಟ ಬಯಕೆ[ಪಾಠಾಂ. ಸ] ತನಗಡಸಿತು (ಶಬರಾ. ೨-೬೦).

ಬಯಕೆ ಮಾಡು = (ಬೊಟ್ಟಲುಬಸಿರಿಗೆ) ಸೀಮಂತವನ್ನು ಮಾಡು; ಬಯಕೆಯನ್ನು ಪೂರೈಸು : ನಿನಗೆ ಮದುವೆ ಮಾಡಿದೆವು, ಅವಳಿಗೆ ಬಯಕೆ (ಸೀಮಂತ) ಮಾಡಿದೆವು (ಸೋಲು. ೦೦). **ಬೈಕೆಗಪ್ಪು** = ಸ್ತ್ರೀಯರಿಗೆ ಸೀಮಂತ, ಬಾಣಂತನ ಮುಂತಾದ ಸಂದರ್ಭಗಳಲ್ಲಿ ವಿಶೇಷವಾಗಿ ಕಣ್ಣಿಗೆ ಹಚ್ಚುವ ಕಾಡಿಗೆ,—ಕಪ್ಪು : "ಅಂಜನಮನೆ ಬೈಕೆಗಪ್ಪು" (ಶಕುತಿ. ೬೪).

[< ಬಯಸು₁ + –ಕೆ. / ತಮಿ. ವಯುವ್, ವಯಾವು ; ತುಳು. ಬಯಕೆ, ಬೈಕೆ; ತೆಲು. ಬಯಂಕ, ಬಯ್ಯಂಕ]

**ಬಯಕೆಗವಿ** (ನಾ). ಮಹತ್ವಾಕಾಂಕ್ಷೆಯನ್ನು ಹೊಂದಿರುವ ಕವಿ : ಅಹಂಕಾರದೊಳ್ ಬಾತು ಬಲ್ಪಿಗೆ ಹಾರೈಸುವರೇಕೆ ಬಯಕೆಗವಿಗಳ್ ಕೆಲಬರ್ (ಅಭಿನವ. ೦-೨೪). [ಬಯಕ್ಕೆ₂ + ಕವಿ]

**ಬಯಕೆವಟ್ಟಲ್** (ನಾ). ಬಯಸಿದುದನ್ನು ಕೊಡುವ ಬಟ್ಟಲು ; ಅಕ್ಷಯಪಾತ್ರೆ : ಪೊಡವಿ ಬಯಕೆವಟ್ಟಲ್ ; ಮಾರಿಯು ಕೋಟಿವಲ್ಲಂ ಮುಜುವ, ಭೈರವನ ನಿಡುಜಡೆಯುಂ ಪಿಡಿವ, ಕಾಳರಕ್ಕಸಿಯ ಕೂರ್ವಾಳಂ ಸೆಳೆವ ಪಡೆವಳರೊಳರ್ . . . ಮೇಣೇತಟ ಚಿಂತೆ (ರಾಮಾಶ್ವ. ೦೨-೩). [ಬಯಕ್ಕೆ₂ + ಬಟ್ಟಲ್]

**ಬಯಕೆವೆಣ್** (ನಾ). ಬಯಕೆಯುಂಟಾದ ಗರ್ಭಿಣಿಹೆಂಗಸು : ಕಂಡಕಂಡರೆಲ್ಲಂ . . . ಬಯಕೆವೆಂಡಿರಂತಾಗುಟುತ್ತುಂ . . . ಮಗರಣಮಂ ನೋಡುವರಂತೆ ನಗುತ್ತುಮಿಂತೆಂದರ್ (ಧರ್ಮಾಮೃ. ೯-೬೬).

[ ಬಯಕ್ಕೆ₂ + ವೆಣ್ ]

**ಬಯಕ್ಕೆ** 'ಬಯಕ್ಕೆ₂' ನೋ.

**ಬಯಗು** (ಕ್ರಿ). = ಬಯಸು (?) : ಶ್ರೀಕೇಸಿಗ × × × ತಲೆನೆಟಿಯಲು ಕಟ್ಟಿಸ್ ಕಟ್ಟುವುದರ್ಕ್ಕೆ ಕೊಟ್ಟ ಸ್ಥಿತಿಕ್ರಮವೆನ್ತೆಪೆನ್ದೊಡೆ ಒನ್ದರಣೆಯ ನೀರ ಬಯಗಿದ ವರಿಸ ಪೆತ್ತೊನ್ದಿ ಎರಡನೆಯ ವರಿಷಮೆಟಳವಿ ಮೂಱನೆಯ ವರಿಷದನ್ದಗೆ ಅಯ್ದಾಳವಿ ಎಲ್ಲಾ ಕಾಲಕ್ಕಂ ಎಲ್ಲಿಟ್ಟುಟಲು ಸಲ್ಗುಂ (ಎಕ. III, ಶ್ರೀರಂಗ. ೦೪೯-೦೬ ; 904 ? ).

[ℙ ಇದು 'ಬಯಸು' ಎಂಬುದರ ಅಪಲಿಖಿತವೆ ? / ತುಳು. ಬಯಕು]

ಬಯನಿ 'ಬಯಿನೆ' ನೋ.

**ಬಯಲ್** 'ವಯಲ್' ನೋ.

**ಬಯಲಾಟ**, ಬೈಲಾಟ (ನಾ). ಮೈದಾನದಲ್ಲಿ ಅಟ್ಟಣೆ ಹಾಕಿ ಆಡುವ, ಯಕ್ಷಗಾನದ ಒಂದು ಪ್ರಕಾರ ; ಜಾನಪದ ನಾಟಕ ಪ್ರಕಾರಗಳಲ್ಲಿ ಒಂದು ಬಗೆ : ಈ ನಾಟಕದಲ್ಲಿ ಅಂಗಗಳ ವಿಭಾಗವಿಲ್ಲ . . . ಆಕಾಶದ ಕೆಳಗೆ ಬಯಲಾಟ (ಕಟಪಾ. ೦೬೪) ; ಬಯಲಾಟದ ವೇಷ ಕುಣಿದು ಬೆಳಗು ಬರಲು ದಣಿದೆವು (ಶಂಬಾಜು. ೨೪-೨೩). **ಬೈಲಾಟ** : ಹಾವಭಾವ ತುಂಬಿದ ನಮ್ಮ ಹಳ್ಳಿಗರ ಕುಣಿತಗಳು ಭರತಮುನಿಯ ನೃತ್ಯಗಳನ್ನು ಅನೇಕ ಸಂದರ್ಭಗಳಲ್ಲಿ ಹೋಲಬಹುದು . . . ಉತ್ತರ ಕರ್ನಾಟಕದಲ್ಲಿ 'ಮೂಡಲಪಾಯ' ಬೈಲಾಟಗಳಲ್ಲಿಯ ಕುಣಿತಗಳೇ ಇದಕ್ಕೆ ಬಲವಾದ ಸಾಕ್ಷಿ (ಕನ್ನಾಜ. ೩೪) ; ಬೈಲಾಟದಾಗಿನ ಸೋಗು ಮಾತಾಡಿ ದಾಂಗ ಮಾತಾಡತೀಯಲ್ಲೋ ಮಾವಾ ! (ಮುಖ್ಯ.ಹ. ೯೩).

[ಬಯಲು (<ವಯಲ್) + ಆಟ]

**ಬಯಲಿಗ** (ನಾ). ಶೂನ್ಯದಲ್ಲಿ ಒಂದಾಗುವವನು, — ಐಕ್ಯ ಹೊಂದುವವನು : ಸಚ್ಚಿದಾನಂದ ನಿತ್ಯಪರಿಪೂರ್ಣವಪ್ಪ ನಿಃಕಲಲಿಂಗವು ಧ್ಯಾನಪೂಜೆಗಳಿಲ್ಲದೆ ನಿರವಯದಲ್ಲಿ ಬಯಲಿಗನಾಗಿ (ಶೂನ್ಯಸಂ. ೦-೨೨) ; ಬನ್ನಬಡದನ ಬಯಲಿಗನನೆ ಮಿಾರ್ವರ್ಗೆಯುಂ ಕೆನ್ನಮಿಕ್ಕದನ ಸತತಂ . . . ನೋಡಿಯಾಡಿಸುತವಗೆ ಚಿನ್ನ ನವರನ್ನದೊಡಿಗೆಯನಿಕ್ಕಿ ಕಣ್ದಾಂಬಿ ನೋಡ ಬೇಕೆಲೆ ಪ್ರಿಯನೆ (ಶ್ರೀಕೃಷ್ಣ. ೩-೦೨೬).

[ಬಯಲ್ (<ವಯಲ್) + –ಇಗ]

**ಬಯಲು** 'ವಯಲ್' ನೋ.

**ಬಯಲುಗ** (ನಾ). [ಬೌದ್ಧ] ಶೂನ್ಯವಾದಿ : ತಮ್ಮ ಯೋಗಗ್ರಂಥಾರಂಭದ ಗುರುವಜಿಯದ ಮೂಢಂ ಬಯಲುಗನಪ್ಪ ಸನತ್ಕುಮಾರಂ ಶೂನ್ಯಹೃದಯಾಂಧಂ (ಪಾಶಂಕ. ೨೩ ಪ. ಕಥಾಗರ್ಭ ಸಂ೦); ಕೇಬದಿರು ಚಾರ್ವಾಕ . . . ಮಿಾಱದಿರು ಪ್ರಭಾಕರಿಗ ಮುಖದೋಱದಿರು ವೇದಾಂತಿ ಬಯಲುಗ ಹೋರದಿರು (ಪಾಶಂಕ. ೯-೦೦೯).

[ ಬಯಲು (<ವಯಲ್) + –ಗ₂ ]

**ಬಯಲುಗೈ** (ಕ್ರಿ). ಪ್ರಕಟಗೊಳಿಸು; ಹೊರಗೆಡಹು : ಸಿಡಿಲ ಪಳಗಿಸು ವರಿವು ರವಿಯ ಸರಿಹಿಡಿವರಿವು . . . ಬಾನ ಜಾಲಾಡುತ್ತ ತಾರೆಗಳನಳೆವರಿವು ಸೂಕ್ಷ್ಮಾತಿಸೂಕ್ಷ್ಮವನು ಬಯಲುಗೈವರಿವು (ಮುಕಿರ. ೪೬-೯).

[ಬಯಲು (<ವಯಲ್) + ಗೈ (<ಕೆಯ್₁)]

**ಬಯಲುಗೊಳಿಸು** 'ಬಯಲ್ಗೊಳಿಸು' ನೋ.

**ಬಯಲುದೊರೆ** 'ಬಯಲ್ದೊಱೆ' ನೋ.

**ಬಯಲುದೊಱೆ** 'ಬಯಲ್ದೊಱೆ' ನೋ.

**ಬಯಲುನಾಡು** 'ಬಯಲ್ನಾಡು' ನೋ.

**ಬಯಲುಬಂಡಿ** (ನಾ). ಕಮಾನಿಲ್ಲದ ಬಂಡಿ; ಕೊಲ್ಲಾರಿಯಿಲ್ಲದ ಚಕ್ಕಡಿ: ಏಳುಹರದಾರಿ ದೂರ ದಿಬ್ಬಣವೆಲ್ಲ ಎತ್ತಿನ ಬಂಡಿಯಲ್ಲೇ ಹೊರಟಿತ್ತು. ಕೆಲವು ಸವಾರಿ ಬಂಡಿಗಳು, ಇನ್ನು ಕೆಲವು ಬಯಲುಬಂಡಿಗಳು (ಸ್ವ.ಕಿತ. ೨೨೬). [ಬಯಲು (<ವಯಲ್) + ಬಂಡಿ₁]

**ಬಯಲುರಂಗಭೂಮಿ** (ನಾ). ಮೈದಾನದ ಆವರಣದಲ್ಲಿ ಚಾವಣಿ ಯಿಲ್ಲದ, ರಂಗವು ಮಧ್ಯದಲ್ಲಿಯೂ ಪೀಠಪಂಕ್ತಿಗಳು ಸುತ್ತಲೂ ಇರುವಂಥ ರಂಗಭೂಮಿ; ℙ "ಇಂತಹ ವೃತ್ತಾಕಾರವಾದ ರಂಗ ಭೂಮಿಗಳು ಗ್ರೀಸ್ ಮತ್ತು ಇಟಲಿ ದೇಶಗಳಲ್ಲಿ ಅನೇಕ ಕಡೆಗಳಲ್ಲಿ ಇದ್ದುವು. ಈಗ ನಮ್ಮ ದೇಶದಲ್ಲಿ ಪಂದ್ಯಪ್ರದರ್ಶನಗಳನ್ನು ನಡೆಸಲು ಕಟ್ಟಿಸುವ ಸ್ಟೇಡಿಯಂಗಳನ್ನು ಇದೇ ಮಾದರಿಯಲ್ಲಿ ಕಟ್ಟಿಸುತ್ತಾರೆ" : ಊರಿನ ಒಂದು ಮೂಲೆಯಲ್ಲಿ ಬಯಲುರಂಗಭೂಮಿ ಇತ್ತು (ಕಶಕ್ಕು. ೩-೦೯೯). [ಬಯಲು (<ವಯಲ್) + ರಂಗಭೂಮಿ]

**ಬಯಲುಸೀಮೆ** (ನಾ). ಮೈದಾನದಿಂದ ಕೂಡಿದ ಪ್ರದೇಶ: ಬಯಲು ಪ್ರದೇಶ : ಕಳಸಾಪುರದ ಮಲೆನಾಡು ಬಯಲುಸೀಮೆ ಸಂಧಿಸುವ ಜಾಗ ದಲ್ಲಿದೆ (ಕಳಹು. ೯೨): ಬಯಲುಸೀಮೆಯವರಾದ ನಮಗೆ ರೊಟ್ಟಿಯಿಲ್ಲ ದಿದ್ದರೆ ಹೊಟ್ಟೆಯೇ ತುಂಬದು (ಬಂಗಾರ. ೯೦). 'ಗಿಡಸೀಮೆ' ಪರಾ. [ಬಯಲು (<ವಯಲ್) + ಸೀಮೆ]

**ಬಯಲೊಲ್ಮೆ** (ನಾ). ಕಪಟಪ್ರೇಮ; ಸೋಗಿನ ಪ್ರೀತಿ : ಕೊಱಚಾಟ ಹೋರಟೆ ಕಲಹ ಬಱಗಾತ್ರ ಬಯಲೊಲ್ಮೆಗಳ ಮಾಡೆ ಬೆಲೆವೆಣ್ಗೆ ತೆಱುವರೆ ಧನವ ಬಲ್ಲವರು (ಕುಮಾಸಾಂ. ೨೮-೬೯). [ಬಯಲ್ (<ವಯಲ್) + ಒಲ್ಮೆ]

**ಬಯಲ್ಕಡೆ, ಬೈಲುಕಡೆ** (ನಾ). (ಆಲಂ) ಶೌಚ ಮುಂತಾದ ಪ್ರಾತರ್ವಿಧಿ; ಮಲವಿಸರ್ಜನೆ; ಬಹಿರ್ದೇಶ: ಮೊಲ ಬರುವಾಗ ನಾಯಿ ಬಯಲ್ಕಡೆಗೆ ಕೂತುಕೊಂಡಿತು (ಗಾದೆ). **ಬೈಲುಕಡೆ** : ಬೈಲುಕಡೆ ಹೋಗೋದು ಹಿಡ ಕೊಂಡು ಹೆಂಡರು ಮಕ್ಕಳು ಮನೀಮಾರು ಎಲ್ಲಾ ಆ ಕನಕದಾಸರು ಹೇಳಿ ಧಾಂಗ ಒಂದು ಗೇಣು ಹೊಟ್ಟೆ ದಶಿಂದ ನೋಡಪಾ (ಕಿಡುಗು. ೪೦). [ಬಯಲ್ (< ವಯಲ್) + ಕಡೆ$_3$]

**ಬಯಲ್ಗಾಳಿ** (ನಾ). (ಮೈದಾನದ ಕಡೆಯಿಂದ) ತಡೆಯಿಲ್ಲದೆ ಬೀಸುವ ಗಾಳಿ : ಇಂದವನ್, ನಾಳೆ ನಾನ್ ಏನ್ ಮಾಡೊ ಅಳ ಬಾಱುವ್; ಬೀಸುವ ಬಯಲ್‌ಗಾಳಿ, ಪರಿದಡಗುವ ನೆಱಲ್ (ಅಶ್ವತ್ಥಾ. ೬-೧೧೦). [ಬಯಲ್ (<ವಯಲ್) + ಗಾಳಿ$_1$]

**ಬಯಲ್ಗೆಡೆ** (ಕ್ರಿ). (ಆಲಂ) ವ್ಯರ್ಥವಾದುದೆಂದು ಹೀನಾಯವಾಗಿ ನುಡಿ, — ಅವಮಾನಿಸು : ಪರತತ್ತ್ವಮೆಂದೇಕ ವರರುದ್ರನೆಂದೊರೆದ ಮೊರೆದಥರ್ವದ ಶಿರದ ಸತ್ಯಾರ್ಥಮಂ ಬಱೆ ಬಯಲ್ಗೆಡೆದು ನೆಱೆ ಉಱೆ ಮೂಳ್ವ ಬೌದ್ಧವ್ಯಾಧರದೆತ್ತಲಱಿಗು ಶೂನ್ಯಾತ್ಮರಯ್ಯೋ (ಸಾವಂಶ. ೨-೧೬೮). [ಬಯಲ್ (<ವಯಲ್) + ಕೆಡೆ$_2$]

**ಬಯಲ್ಗೊಳಿಸು, ಬಯಲುಗೊಳಿಸು** (ಕ್ರಿ). ಸಾವಿಗೆ ಒಳಗು ಮಾಡು, — ಗುರಿಮಾಡು; ಸಾವಿಗೀಡುಮಾಡು : ದಕ್ಷಯಾಗದಿ ವಪುವ ಬಯಲ್ಗೊಳಿಸಿ ಮೇನಕೆಯ ಕುಕ್ಷಿಯಿಂ ಸಂಜನಿಸಿ ಬೆಳೆಯೆ (ನವಮೋ. ೬-೧೮). **ಬಯಲುಗೊಳಿಸು** : ತ್ರಿಜಗದಾಂಬೆ ಗೌರಾಂಬಿಕೆಯು ದಕ್ಷಯಾಗದಿ ತನುವಂ ಬಯಲುಗೊಳಿಸಲು (ನವಮೋ. ೬-೧೭). [ಬಯಲ್ (<ವಯಲ್) + ಕೊಳ್$_1$ + —ಇಸು$_3$]

**ಬಯಲ್ಚು** (ಕ್ರಿ). ಪ್ರಕಟಮಾಡು ; ತೋರಿಸು ; ಹೊರಗೆಡಹು : ರಾಘ ವಾಸ್ತ್ರಜ್ಯೋತಿ ತನ್ನ ಪಕ್ಷಕೆ ತಾನೆ ವಿದ್ರೋಹಿಯಾಮದೆನೆ ವಾನರವ್ಯೂಹ ಸ್ಥಿತಿಯನಂತೆ ದಶರಥನ ಸುತಸಿರ್ಕದಾಣಮಂ ತೋರ್ದುದು ಬಯಲ್ಚಿ ಆ ತಾರಾಕ್ಷಿವಲ್ಲಭಗೆ (ಶ್ರೀರಾಮಾ. ೬೩೭-೧೪೮). [ಬಯಲ್ (<ವಯಲ್) + —ಚು$_1$]

**ಬಯಲ್ದಾವರೆ** (ನಾ). ನೀರಿನ ಆಶ್ರಯವಿಲ್ಲದೆ ಬೆಳೆಯುವ ತಾವರೆ; ನೆಲದಾವರೆ : ಕಿರಣಂಗಳೆ ಕಾಪುಗಳೆನೆ ಹರಿವಸ್ಥಂ ಗಳೆ ಪಸುರ್ತ ಪಸುರೆಲೆಯೆನೆ ತೋರ್ಪರುಣದಿನಮಣಿ ಬಯಲ್ದಾವರೆಯನೆ ಪೊಲ್ತಿರ್ದನಪರಗಿರಿಪರಶಿರದೊಳ್ (ಕಾವ್ಯಸಾ. ೮೮೦ ಉದ್ಧೃತ): ಅರ ದುಱುಗಿರ್ದ ಬಯಲ್ದಾವರೆಯೆಲೆಗೊಡೆಯಿಡುವಿನಲ್ಲಿ ಸುಖದಿಂ ಕಣ್ಗೆಯ್ದಿರೆ ಹಂಸಮಿಥುನಮಂ ನಿಜಚರಣಾಬ್ಜದೆ ನೂಂಕಿ ನೃಪಸುತಂ ಕುಳ್ಳಿರ್ದಂ (ಕಾದಂಬ. ೨೮೨): ಅರಮನೆಯೊಳೆತ್ತಲಿತ್ತಂ ಚರಿಯಿಪ ದೇವಿಯರ ಪದತಳಾಂಶು ಬಯಲ್ದಾವರೆಯೆಸಱೆಸಗಿದುವು ನೂಪುರತತಿ ಬೀಱಿದುವು ಮಂದಮಧುಪವಿರುತಿಯಂ (ಕುಸುಮ. ೯-೬೨). [ಬಯಲ್ (<ವಯಲ್) + ತಾವರೆ (<ತಾಮರೆ)]

**ಬಯಲ್ದೊರೆ** 'ಬಯಲ್ದೊಱೆ' ನೋ.

**ಬಯಲ್ದೊಱೆ, ಬಯಲುದೊರೆ, ಬಯಲುದೊಱೆ, ಬಯಲ್ದೊರೆ**(ನಾ). ೧. ಮೈದಾನದಲ್ಲಿ ಹರಿಯುವ ನದಿ, — ಹೊಳೆ : ಕಣ್ಣನೀರ್ಗಳ ಪೊನಲ್ ಕರೆಗಣ್ಮಿ ಕಪೋಲದೊಳ್ ಬಯಲ್ದೊಱೆಯನೊಡರ್ಚೆ ಚಂದ್ರನಖಿ ಶೋಕ ರಸಾಕುಳಚಿತ್ತೆಯಾಗಿ ಮೆಯ್ಯಱಿಯಳೆ ಚಿತ್ರಮಲ್ತು (ಶಂರಾಮಾ. ೯-೩೦): ವಸುದೇವನೆಂತಾನುಮಾ ರಾಕ್ಷಸರಕ್ಷಿತಪ್ರಸೂತಿಕಾನಿಳಯದಿಂ ತಳರ್ದು ... ಮಧುರಾಪುರಮಂ ಪೊಱಮಟ್ಟು ಬಯಲ್ದೊಱೆವರಿವ ಬಟ್ಟೆ ಯೊಳುದ್ದೇಶಕ್ಕೆ ಬರ್ಪಲ್ಲಿ (ಜಗಂ. ೩-೮೪): ಮಿಱುಮಿಱನಾದ ಮೈ ಹೊಳಹಿಂದ ತೆರೆಗಟ್ಟಿ ನಿಱುದೇಳ್ವ ಹೊಂಗಾಸೆಯಿಂದ ಕುಱುಕುಱುಮೆಟ್ಟು ರಂಗದೊಳು ತಂಪಿನ ಬಯಲ್ದೊಱೆ ಹೊಳೆವಂತೆ ಹೊಳೆವರು (ಹೊಸ. ೧೩-೧೧೧). ೨. ಬಿಸಿಲಿನಲ್ಲಿ, ನೀರಿಲ್ಲದಿದ್ದರೂ ನೀರಿರುವಂತೆ ಕಾಣುವ ಭ್ರಮೆಯ ನೋಟ ; ಬಿಸಿಲುಗಂದುರೆ ; ಮರೀಚಿಕಾಜಲ : " ಬಯ ಲ್ದೊಱೆ ಬಿಸಿಲ್ಗುದುರೆಯೆನಲುಂ ಗಡ ಮರೀಚಿಕಾಜಳ " (ಕನ್ನಕೈ. ೧೧) ; ಸಿರಿ ಸುರಚಾಪದಂತೆ ಪೊಸಜವ್ವನವಿದ್ದಿಲ ಬೂದಿಯಂತೆ ... ಪೆಂಡಿರ ಸುಖಮುಣ್ಮಿ ಪೊಣ್ಮುವ ಬಯಲ್ದೊಱೆಯಂತೆ ... ಕಿಡಲಲ್ಲದೆ ತಾಂ ಸ್ಥಿರಮಾಗಲಾರ್ಕುಮೇ (ಧರ್ಮಾಮೃ. ೫-೧೮); ದೇವಾ ಬಯಲ್ದೊಱೆಯ ನೀಸುತಿರ್ದಂ ಗುರುವೆ ದೇವಾ ಕನಿಷ್ಠರೊಡನೊದಱುತಿರ್ದಂ ಪ್ರಭುವೆ (ವಾಗೀರ. ದೇ. ೨೬೦-೨೦) : ವನಜಂತುಗಳ್ ಬಯಲ್ದೊಱೆಗೆ ಮರುಳ್ಗೊಂಡುವು (ರಾಮಾಶ್ವ. ೫೨-೪). **ಬಯಲುದೊರೆ** : ೨. ಪ್ರೇಮಸಾಗರದಮೃತ ಬಯಲುದೊರೆಯಾಯ್ತೆ ? (ಇಂಗೀತ. ೬೩-೨೦). **ಬಯಲುದೊಱೆ** : ೨. ಕಯ್ಯ ನೀರಂ ಚೆಲ್ಲಿ ಬಯಲುದೊಱೆಗೆ ಸಲೆ ಪರಿವನೆಂತಂತೆ ಹುಲುಮೃಗದ ಸತ್ತ್ವದಿಂ ಬಲುಸಿಂಹದೊಳ್ ಕದನಮಂ ಮಾಡಿಕೊಂಡವನ ನೆಲೆ ನಿನ್ನೊಳಾದುದು (ಲಕಿಜಂ. ೧೮-೭). **ಬಯಲ್ದೊರೆ**: " ಬಯಲ್ದೊರೆಯೆನಲ್ ಮರು ಮರೀಚಿಕೆಯನಾಮಂ " (ಕಳಹ. ೬೩). [ಬಯಲ್ (< ವಯಲ್) + ತೊಱೆ$_1$]

**ಬಯಲ್ನಾಡು, ಬಯಲುನಾಡು** (ನಾ). ಗುಡ್ಡ, ಬೆಟ್ಟ ಮುಂತಾದುವು ಗಳಿಲ್ಲದೆ, ಮೈದಾನಗಳಿಂದ ಕೂಡಿದ ನಾಡು ; ಬಯಲುಸೀಮೆ : ಬಯಲ್ನಾಡಿನೊಳ್ವಿಗ್ರಹಮಾದ ದಿವಸಂ ಬಯಲ್ನಾಡಂ ಬನ್ದು ಕೊತ್ತ ಮಙ್ಗಲಮನಿಱಿದು ತುಱುವಂ ಕೊಣ್ಡು ಪೋಗುತ್ತಿರೆ (ಎಕ. IV. ಹೆಗ್ಗಡ. ೧೦೩-೬ : ಸು. 910). **ಬಯಲುನಾಡು** : ನೀಳಗಿರಿ ಹದಿಯ ಘಟ್ಟಂ ಯೇಳುಂ ಮಲೆ ಕಂಚಿ ತುಳುವ ರಾಜೇಂದ್ರಪುರಂ ಕೋಳಾಲ ಬಯಲುನಾಡುಮನಾಳಾಪದೆ ಕೊಂಡ ವಿಷ್ಣುವರ್ಧನದೇವಂ (ಎಕ. VII. ಶಿವಮೊ. ೪೦-೫೨ ; 1181). [ಬಯಲ್ (<ವಯಲ್) + ನಾಡು]

**ಬಯಲ್ನುಡಿ** (ನಾ). ಸಂಳ್ಳುನುಡಿ ; ವ್ಯರ್ಥಾಲಾಪ : ಅದೊಡೆ ಬಯಲ್ನುಡಿಯೆಂದಾನಿದನಿನ್ನೊರೆಯೆಂ (ಅದ್ಭುತ. ೪೦-೦೨). [ಬಯಲ್ (<ವಯಲ್) + ನುಡಿ$_1$]

**ಬಯಲ್ಪಡಿಸು** (ಕ್ರಿ). ಪ್ರಕಟಗೊಳಿಸು, ಹೊರಗೆಡಹು : ಅಮ್ಮ ಅಪಕಾರವನ್ನು ಮಾಡಿದರೂ ಅದನ್ನು ಬಯಲ್ಪಡಿಸಿದರೆ ಕೆಟ್ಟ ಹೆಸರು ಬಾರದಿರದೆಂದೆಣಿಸಿ ಬಿಟ್ಟಿಟ್ಟೆನು (ಲಕ್ಷ್ಮೀಶ್ರ ೧೧೭). [ಬಯಲ್ (< ವಯಲ್) + ಪಡಿಸು]

**ಬಯಲ್ಬೀೞ್** (ಕ್ರಿ). ನೆಲವು ಗೋಚರಿಸು ; ತಳ ಕಾಣು : ಆ ಕುಮಾರಂ ಬಿಟ್ಟ ಭರದಿಂದೆ ವಾರಿಯೆರಟ್ದಸೆಗಂ ಪಚ್ಚು ಸೂಸೆ ಕೊಳ ದೊಳಗೆ ಬಯಲ್ಬಿೞ್ದುದು ತದ್ರುಭಸಕುರ್ಚಿಟ್ಟು ಕಡಂಗಿದುವು ಜಳಚರಪ್ರಕರಂ ಗಳ್ (ಚಂದ್ರಪ್ರ. ೫-೪೩). [ಬಯಲ್ (< ವಯಲ್) + ಬೀೞ್]

**ಬಯಲ್ವುಗು** (ಕ್ರಿ) ಕಾಣದಾಗು ; ಇಲ್ಲವಾಗು : ಇಂತಾಕೆವಾಳರ ಬೀರಮಂಱಿಯ್ಕಡೆ, ಸೋರ್ಕುವ ಸೋರೆ, ಅಳವೊಳವಾಱೆ, ಚಲಂ ನೆಲೆಗಿಡೆ, ಬಲಂ ಬಯಲ್ವುಗೆ, ಕೊಂಚೆಗೋಂಟೆ ದೂಳಿಗೋಂಟೆಯಪ್ಪುದುಂ (ರಾಮಾಶ್ವ. ೯೭-೨೦). [ಬಯಲ್ (< ವಯಲ್) + ಪುಗು (< ಪೊಗು)]

**ಬಯಲ್ಪೊನಲ್** (ನಾ). = ಬಯಲ್ಪೊಟ್ಟಿ ೨ : ಬಯಲ್ಪೊನಲಂತೆ ಕಿಡುವಂತಪ್ಪ ಪರಿವಂಬಿನಂತೆ ಕಡಿವಪ್ಪ . . . ಸಂಸಾರವಂ ನಂಬಿ ದರ್ಶನಮುಮಂ ವ್ರತಮುಮಂ ಕಿಡಿಸುವುದೆಗ್ಗೆಕೆಯೆಂದು ವ್ರತ ಪರಿರಕ್ಷಣೋಪಾಯಮಂ ಚಿಂತಿಸುತ್ತಿರ್ದರ್ (ಧರ್ಮಾಮೃ. ೩-೧೪೬). [ಬಯಲ್ ( < ವಯಲ್) + ಪೊನಲ್]

**ಬಯಸಿಕೆ** (ನಾ). ಇಚ್ಛಿಸುವಿಕೆ ; ಬಯಸುವಿಕೆ : ಬಯಕೆಯೊಳೇ ಬಾಳ್ ಕಳೆವುದು ಬಯಕೆಯು ದೊರೆತ ಚಣ ಬಯಸಿಕೆಯನೆ ಬಯಸುವ ತೆರವೇಕಹುದೆನ್ನ ಮನ (ಗೋಕುಹ. ೨೪-೩). [ಬಯಸು$_1$ + — ಇಕೆ]

**ಬಯಸು$_1$** (ಕ್ರಿ). ೧. ಹಂಬಲಿಸು ; ಇಚ್ಛಿಸು ; ಅಪೇಕ್ಷಿಸು : ಕದಪಿನ ಕಣ್ಣ ಸಾರ್ಕೆಯನಳಂಕೃತಮಪ್ಪ ಗಳಪ್ರದೇಶಮಂ . . . ಮೃದುರದನಾಗ್ರಮಂ ಬಯಸಿ ಚುಂಬಿಸಿದರ್ (ಕಾವ್ಯಸಾ. ೬೭೬ ಕುದ್ರಳ); ನಿನ್ನ ಪ್ರಾಣವಲ್ಲಭೆ ನಿನ್ನನೆಯಱಿಸಿ ಬಯಸುತಿರ್ಪಳ್ (ಶಬ್ದಾಸಾ. ೪೦-೨) ; ರಾಜಹಂಸಿ ಮಾನಸಸರೋವರವನಲ್ಲದೆ ಪೆಱತನೇಕೆ ಬಯಸುಗುಂ (ಜಂಬೂ. ೯-೬೮ ವ) ; ಪ್ರೇಮಲತೆ ಬಾಯಾರಿ ಕಾತರಿಸಿತಾವುದನೊ ತಾನರಿಯದುದ ಬಯಸಿ (ಕಿನ್ನಾಂಗ. ೭-೧೬). ೨. ಕೋರು; ಹಾರೈಸು : ಪರರ ಕೇಡು ಬಯಸಿ ಗುರುಹಿರಿಯರನ್ನು ನಿಂದಿಸುತ್ತ . . . ಪರಮನಿಷ್ಠಮೌನಿಯಂತೆ ಧರೆಯ ಮೇಲೆ ಡಂಭ ತೋಱು ಹರಿವ ನೀರಿನ ತೀರದಿ ಕುಳಿತರೇನು ಬಕಧ್ಯಾನದಿ (ಶುಕಸಂ. ೧-೧೪೦-೨) ; ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲು ಅನ್ನ (ಗಾದೆ). [ದೇ. ‖ ತುಳು. ಬಯಸು, ಬಯಕು]

**ಬಯಸು$_2$** 'ಬಯಿಸಂ' ನೋ.

**ಬಯಸುಹ** (ನಾ). = ಬಯಸಿಕೆ : ತನ್ನೊಳು ಮೋಕ್ಷನಂ ಬಯಸುಹವದೇ ಕೇಳ್ ಪಾರಮಾರ್ಥಿಕ ಜೀವನನುಮತವು (ಸದ್ಗುರು. ೪-೧೭). [ಬಯಸು$_1$ + — ಹ$_2$ ( < — ಪ$_2$)]

**ಬಯಸ್ಕೋಪು, ಬಯಾಸ್ಕೋಪು** (ನಾ). ಚಲನಚಿತ್ರ; ಸಿನಿಮಾ : ಇಂಗ್ಲಿಷ್‌ಇತಿಹಾಸಕ್ಕೆ ಸಂಬಂಧಿಸಿದ ಕೆಲವು ಕತೆಗಳು ಸ್ಟೆಂಡರ್ಡ್ ಬಯಸ್ಕೋಪುಮಂದಿರಕ್ಕೆ ಬರಲಿವೆಯೆಂದು ಗೊತ್ತಾಯಿತು (ಸ್ವಕೃಹೊ. ೧೬೪). **ಬಯಾಸ್ಕೋಪು** : ಬಯಾಸ್ಕೋಪಿಗೆ ಹೋಗಿದ್ದವರೆಲ್ಲರು ಬಂದರು (ಕುಮಾರು. ೧೧೭). [← ಇಂ. Bioscope]

**ಬಯಾನು** (ನಾ). ತಿಳಿಯಪಡಿಸುವುದು ; ವಿವರಣೆ : ಅವರ ವರ್ಗದ ಅರ್ಜಿಯಲ್ಲಿ ನನಗೆ ಅವರ ಮೇಲೆ ಕ್ರೋಧವಿರುವುದಾಗಿಯೂ . . . ನನ್ನ ಕೋರ್ಟಿನಲ್ಲಿ ಅವರಿಗೆ ನ್ಯಾಯ ದೊರೆಯುವುದಿಲ್ಲವೆಂತಲೂ ಬಯಾನು ಮಾಡಿದ್ದರು (ಕಂಠ. ೨೨೨). [← ಪಾರ. ಹಿಂ. ಬಯಾನ್ ; ಅರ. ಬೈಆನಾ; ಮರಾ. ಬಯಾಣ, ಬಯಾಣಾ]

**ಬಯಾಸ್ಕೋಪು** 'ಬಯಸ್ಕೋಪು' ನೋ.

**ಬಯಿನೆ, ಪೈನೆ, ಬಗನಿ, ಬಗನೆ, ಬಗಿನಿ, ಬಗುನಿ, ಬಯನಿ, ಬೈನಿ, ಬೈನೆ** (ನಾ). ೧. ತಾಳೆಜಾತಿಗೆ ಸೇರಿದ ಒಂದು ಬಗೆಯ ಮರ : ಊರ ತರುಣನೊಬ್ಬ . . . ತೆಂಗಿನ ನಾರಿನ ಹಗ್ಗ, ಬೆತ್ತದ ತೋಳುಕಟ್ಟು, ಬಯಿನೆಹಲಗೆ—ಇವನ್ನು ಜೋಡಿಸಿ ಮನೆಯ ಸಾವಿರ ಬಟ್ಟೆ ಹೊಲವನ್ನು ಸೇರುತ್ತಾನೆ (ಜಾಪಗೀ. ೪೦). **ಪೈನೆ** : ೧. ಬಗನಿ, ಪೈನೆ, ಬೈನೆ, ಬೈರಿ (ಕೃ ಶಿಗ. ೧೬-೩೨೭). **ಬಗನಿ** : ೧. ಹೆಂಗಸರು ಗೆಣಸು ಹರಡುವುದೂ, ಗಂಡಸರು ಬಗನಿಹೆಂಡವನ್ನು ಇಳಿಸುವುದೂ, ಹಸಿವಾದಾಗ ಬಗನಿಯ ಕಬ್ಬನ್ನೇ ಆಹಾರವನ್ನಾಗಿ ಸಿಗಿದು ಆಯಾಸ ಪರಿಹಾರ ಮಾಡಿಕೊಳ್ಳುವುದೂ ಈ ಜನರ ಅಭ್ಯಾಸ (ಅಪಶ. ೪೬); ಎತ್ತರವಾಗಿ ಬೆಳೆದಿದ್ದ ಆ ಬಗನಿಯ ಮರದ ನೆತ್ತಿಯಲ್ಲಿ ಅದರ ಹೂವಿಗೆ ಕಟ್ಟಿದ್ದ ಕಳ್ಳಿನ ಮಡಕೆಯ ಕರಿಯ ಗೋಳವು ನೇತಾಡುತ್ತಿತ್ತು (ಶಾಶೂಕು. ೪೬). **ಬಗನೆ** : ೧. ಅವನು ಕೈಯಲ್ಲಿ ಕರಿಯ ಬಣ್ಣದ ಬಗನೆಯ ಕೋಲನ್ನು ಹಿಡಿದಿದ್ದನು (ಶಂಶಶಂ. ೨೬). **ಬಗಿನಿ** : ೧. ಸುರೆ ಬಗಿನಿಯಿಚಲೋಲೆಯ ಮರಗಳಾದಿ ಮಾತ್ತಿರದೆಸೆವ ಗಂಗಸಾಗರ ಮುಖ್ಯ ರಕ್ಕಸರ ಪರಿಪರಿಯ ಭೋಜನದ್ರವ್ಯಂಗಳಿಡಿದ ಭಂಡಿಗಳೈದೆ ಬರುತಿರ್ದುವು (ಜಜ. ೪೬-೪೫). ೨. ಒಂದುಂ ಬಗೆಯ ಬಳ್ಳಿ : ಸೌದೆಯ ಹೊರೆಯನ್ನು ಕಟ್ಟಲು ಬಗಿನಿಯ ಬಳ್ಳಿ ಬಿಗಿಯಾಗಿರುತ್ತದೆ (ಜೂ). **ಬಗುನಿ** : ೧. ಬೇಲ ಬಗುನಿಯು ತದುಕು ತಪಸಿ ಕವಳೆಯು . . . ಕಿಕ್ಕಿರಿದ ಕಾನನದೊಳು (ಶವಕೋ. ೬-೪); ಸೊಗಸು ಚಂದನ ಸೊಂಪು ಚಂಪಕ ಅಗರು ಅಂಬಟೆ ಅತ್ತಿ ಮತ್ತಿಯು ಬಗುನಿ ಬೆಳದಿಹ ತೆಂಗು ದಾಡಿಮ ಬಾಳೆ ರಸಬಾಳೆ (ಕರೀ. ೧೬-೩). **ಬಯನಿ** : ೧. ಪ್ರಳಯಗಾಳಿಯ ತೆಱದಿ ತೆಂಗನು ಹಲಸು ಖದಿರವು ಬಯನಿ ಮರಗಳನೆಳೆಯ ನೇಱಳು ನುಗ್ಗೆ ಮಾವನು ಕೋಪದಿಂದುಡಿದ (ಳಾಶಿಕಾ. ೧೧.೧೬); ಆತ ಆ ಬಯನಿಮರದ ಎತ್ತರದಿಂದ ನಾಲ್ಕು ಸುತ್ತಲೂ ನೋಡಿ . . . ಅಲ್ಲಿಂದ ಕೆಳಕ್ಕೆ ಇಳಿದ (ಮೂಕಜ್ಜ. ೫೪). **ಬೈನಿ** : ೧. ಬೈನಿ (ಬೆರ್ಲಿ).—ಕಟ್ಟಿಗೆ ನಾರುಳ್ಳದ್ದು, ಬಿರುಸು, ಗಳಿಯ ಕೆಲಸಕ್ಕೆ ಬರುತ್ತದೆ . . . ರಸದಿಂದ ಆರ್ಕ ತೆಗೆದು ಸರಾಯ ಮಾಡುವರು (ಕಡಾಗ. ೪೬); ಪ್ರಿಯದಿಂ ನಿಮ್ಮಂಘ್ರಿಯಂ ಪೂಜಿಸದ ನರನ ಕೈ ಭಾವಿಸಲ್ ಭಾವುರೆ ಬೈನಿಯ ಕೈ (ಶಂಕಶ. ಶಿ೬೪. XVII). **ಬೈನೆ** : ೧. ಬಗನಿ, ಪೈನೆ, ಬೈನೆ, ಬೈರಿ (ಕೃ ಶಿಗ. ೧೬-೩೨೭). [ದೇ. ‖ ತಮಿ. ಪಯಿನಿ ತುಳು. ಬಯಿನೆ, ಬೈನ, ಬೈನಿ]

**ಬಯಿಲ** 'ಬೈಲ' ನೋ.

**ಬಯಿಸಣಿಗೆ, ಬೈಶಣಗೆ, ಬೈಸಣಿಗೆ$_2$, ಬೈಸನಿಗೆ, ಭಸಣಗೆ, ವೈಸಣಗೆ** (ನಾ). ೧. (ವೃತ್ತಿಸಂಘದವರು ಒಟ್ಟಾಗಿ ಕುಳಿತು ನಡೆಸುವ) ಸಭೆ : ಸಮಸ್ತ ನಖರಂಗಳುಂ ಹಿರಿಸಿಂಗಿಯಲು ಶ್ರೀಮತು ಹಬ್ಬೇಶ್ವರ ದೇವರ ದೇವಾಯತದೊಳಶೇಶ ಬಯಿಸಣಿಗೆಯಾಗಿರ್ದ್ದ ಯಾ ಹಬ್ಬೇಶ್ವರ ದೇವರ ದೇವಕಾರ್ಯ್ಯಾರ್ತ್ಥವಾಗಿ . . . ಬಿಟ್ಟ ಎತ್ತುಱುವತ್ತಯ್ದು (ಕೊಲ್ಹಾ. ೦೫-೯೬ ; 1186). ೧. **ಬೈಶಣಗೆ** : ನಾಗರಸರ ಮಗ ಬೊಂಮ ರಸ × × × ಗಳು ಸಮಸ್ತ [ಪಾ]ತ್ರಿಗರು ನೆರೆದ ಬೈಶಣಗೆಯ ಲಾ × × × (ಶಾಇಇ. XV, ೦೫೬-೦೪ ; 1207). **ಬೈಸಣಿಗೆ$_2$** : ೨. ಖಡ್ಗಯುದ್ಧದಲ್ಲಿ ಕುಳಿತುಕೊಳ್ಳುವ ಒಂದುಂ ವರಸೆ,—ಪಟ್ಟು : ಸಮ ಪಾದದಿಂದ ನೀಟಂ ಹಾರಿ ಮುಂದುಗಡೆಯಲ್ಲಿ ಕುಳ್ಳಿರುವದು ಯಾವದುಂಟು ಅದು ಬೈಸಣಿಗೆಯೆಂದು ಖಡ್ಗಶಾಸ್ತ್ರವ ಬಲ್ಲವರಿಂದ ನುಡಿಯಲ್ಪಡುವದು (ಖಡ್ಗಲ. ೪-೫೨). **ಬೈಸನಿಗೆ** : ೩. ಪೀಠ: ಆಸನ: 'ವಜ್ರಬೈಸನಿಗೆ' ಪರಾ. **ಭಸಣಗೆ** : ೩. 'ವಜ್ರಭಸಣಗೆ' ಪರಾ. **ವೈಸಣಗೆ** : ೩. 'ವಜ್ರವೈಸಣಗೆ' ಪರಾ.

**ಬೈಸಣಿಗೆಯಿಕ್ಕು**=ಸಭೆ ಸೇರು : ಸಾದಲಿಯ ನಾಡ ರಾಮೇಶ್ವರದ ಗ್ರಾಮದಲು ಯಿಕ್ಕಿಸಿದ ಸನ್ನೆ . . . ಆ ಬೈಪಿಸಟ್ಟವೊಳಗಾದ ಸಾಲು ಮೂಲೆಯ ಸಮಸ್ತ ಹಲರುಗಳು ಬೈಸಣಿಗೆಯಿಕ್ಕಿ ಮಾಡಿದನಾ ಸನ್ನೆಯ ಹೊಕನ್ಥ ಭಣ್ಡಕ್ಕೆ ವರುಷ ಪರಿಯಂತರ ಸಬ್ಬ್ಯಮಾನ್ಯ (ಎಕ. X. ಶಿಡ್ಲ. ೧೧೨-೩೪ ;1378). [ ←ಮರಾ. ಬೈಸಣಾ = ಕುಳಿತುಕೊಳ್ಳುವಿಕೆ, ಬೈಸಣೀ = ಕುಳಿತುಕೊಳ್ಳುವ ಪೀಠ ; ಹಿಂ. ಬೈಸನಾ=ಕುಳಿತುಕೊಳ್ಳು]

**ಬಯಿಸಿಕೆ, ಬಯಿಸಿಗೆ** (ನಾ). (?): ಪಟಲಿರಪಿ ಕಿನ್ನರಂ ಕಿಂಪುರುಷ ಮಹೋರಗ ಗಂಧರ್ವ ಯಕ್ಷರಾಕ್ಷಸ ಭೂತ ಪಿಶಾಚರೆಂಬ ಅಷ್ಟವಿಧವ್ಯಂತರ ಪರಿಶೋಭಿತಂಗಳಪ್ಪ ಎಂಟು ಬಯಿಸಿಕೆವಡಲಿಗೆಗಳುಮಂ (ಶ್ರ ಶಿಲೆ. ೨೦-೬). **ಬಯಿಸಿಗೆ** : ಅಸುರನಾಗ ವಿದ್ಯುತ್ಸುಪರ್ಣ ಅಗ್ನಿವಾತ ಸನ್ನಿತೋದಧಿ ದ್ವಿಪದ್ದಿಕ್ಕುಮಾರರೆಂಬ ದಶವಿಧಭವನವಾಸಿಗವಿರಾಜಿತಂಗಳಪ್ಪ ಪಸ್ತುಂ ಬಯಿಸಿಗೆಯ ಶ್ರಾವೆಗಳುಮಂ (ಶ್ರ ಶಿಲೆ. ೨೦-೬). [ ? ]

**ಬಯಿಸಿಗೆ** 'ಬಯಿಸಿಕೆ' ನೋ.

**ಬಯಿಸು, ಬಯುಸು₁** (ಕ್ರಿ). ೧. ಮುಚ್ಚಿಡು ; ಅಡಗಿಸು; ಬಚ್ಚಿಡು: ಕೂಡಲಸಂಗಮದೇವಾ ಆನು ಮಾಡಿದುದಲ್ಲದೆ ಬಯಿಸಿದ ಬಯಕೆ ಸಲುವುದೆ ಅಯ್ಯಾ (ಬಸವ. ೬೨೨). **ಬಯುಸು₂** : ೨. ಅದ್ದು ; ಹುದುಗಿಸು ; ಮುಳುಗಿಸು : ನೇಜಾಲ ಪಣ್ಣಂ ತಿಳಿಯೆಣ್ಣೆಯೊಳ್ ಬಯುಸಿ ತೊಯ್ದಂತಪ್ಪ ನುಣ್ಣಿರ್ಪು ಪೆರ್ವೊಲೆ ಚೆಲ್ವಾಗಿರೆ ನಿಂದ ಬೇಡಿತಿಯುರಂ ಕಂಡಂ ಮಹೀವಲ್ಲಭಂ (ಕಾವ್ಯಾವ. ೨೦೬). 'ಬಯ್ಯು' ಪರಾ. [ಬಯ್$_1$ + — ಇಸು$_3$]

**ಬಯ್ಕನೆ** (ಅ). ಬೇಗನೆ, ಶೀಘ್ರವಾಗಿ ಎಂಬರ್ಥದ ಒಂದು ಅನುಕರಣಾವ್ಯಯ : ಭೋಂಕನೆ, ಚೆಕ್ಕನೆ, ಭೋರನೆ, ಪಯ್ಕನೆ, ಬಯ್ಕನೆ (ಶಬ್ದಾನು. ೨೦ ವೃತ್ತಿ). [? + — ಅನೆ$_1$]

**ಬಯ್ಕೆ$_1$**, ಬಯಕೆ$_1$, ಬೈಕೆ (ನಾ). ೧. ಬಚ್ಚಿಟ್ಟುದು ; ನಿಧಿ ; ನಿಕ್ಷೇಪ : "ಕಡವರಮೆ ಬಯ್ಕೆಯೆಂಬರ್ ಕವಿಗಳ್" (ಕವಿಕಂ. ೨೩೩) ; ತನ್ನ ಮುನ್ನಿನ ಬಯ್ಕೆಯು ಕಿಲದೊಳ್ಪುಲಿಯಾಗಿ ಪುಟ್ಟಿದಂ (ಪಾಪುಂಪು. ೨೫) ; ಬುದ್ಧಿವಂತನಪ್ಪ ಮಗಂಗೆ ಬಯ್ಕೆಯುಂ ತೋಱುವಂತೆ (ಧರ್ಮಾಮೃ. ೦೦-೫). ೨. ಗುಟ್ಟು ; ರಹಸ್ಯ : ಬಗೆಯ ಬಯ್ಕೆಯ ನೊಪ್ಪಿಸುವಾಗಳ್ ನೀನೆ ವಲಂ ದೊರೆ ಪೇಟ್ದಪೆಂ ಬಗೆದು ಕೇಳ್ (ಆದಿಪು. ೩-೬೩); ಬಗೆಯ ಬಯ್ಕೆ[ಪಾಠಾಂ. ಬೈಕೆ]ಗೆ ನಾಲಗೆ ಪಿಸುಣನೆಂಬಂತೆ (ಲೀಲಾವ. ೪-೬೩ ವ) ; ಭಾವಕರ ಬಗೆಯ ಬಯ್ಕೆಯನಗೆಯೆತ್ತಿ ಸೂಱಿಗೊಳ್ವ ಕಳಕಳಾಪ್ರೌಢಿಯೊಳಂ (ಅನಂತಪು. ೦೦-೨೭ವ). **ಬಯಕೆ$_1$** : ೧. ಕವರಲ್ಬಂದಂಗೆ ಬಯಕೆಯಂ ತೋಱಿದರೆಂಬಂತೆ ಕಳಲ್ಬಂದಂಗೆ ಕೈಯೆಡೆಗೊಟ್ಟರೆಂಬಂತೆ (ಧರ್ಮಾಮೃ. ೨-೦೪೯) ; ಸತ್ತ ಹೆಣ ಕೂಗಿದುದುಂಟು ಬೈಚಿಟ್ಟ ಬಯಕೆ ಕರೆದುದುಂಟು (ಪಂಪಾದೇ. ಬ. ೦೦೨-೨೪೯). **ಬೈಕೆ** : ೧. ಮದನನ ಬೈಕೆಯಿಂದು ಪೊಱಪೊಣ್ಮಿತೊ ಕಾಮನ ಬಾಣಸಂಕುಳಂ ಸುದತಿಯುರಾಗಿ ಪುಟ್ಟಿದುದೊ . . . ತಿಳಿಯಲ್ಕಗೋಚರ ಮೆನಲ್ ನಡೆದತ್ತಬಳಾಕದಂಬಕಂ (ವಳಕಂ. ೦೨೮) ; ಬಾಯ ಭಂಡಾರದಲಿ ಸರ್ವವ ಕಾಯದೇ ಭಂಜಿಸುಗು ಬೈಕೆಯ ಬೀಯವನು ಸಂಗ್ರಹವ ಮಾಡದು . . . ರಾಯ ಕೇಳಗ್ನಿಯ ಗುಣಂಗಳಿಂದಿವರಲಱಿದುದನು (ಪಾಗ. ೦೦-೦೩ ೦೩೯). [ಬಯ$_1$ + —ಕೆ]

**ಬಯ್ಕೆ$_2$** 'ಬಯಕೆ$_2$' ನೋ.

**ಬಯ್ಗಳು** 'ಬಯ್ಗುಳ್' ನೋ.

**ಬಯ್ಗಿರುಳ್** (ನಾ). ರಾತ್ರಿಯ ಕೊನೆಯ ಸಮಯ ; ಬೆಳಗಿನ ಜಾವ: ಬಯ್ಗಿರುಳಿನ ಮನೋಹರಿಯೆಂಬ ಜಾವದಾಗಳ್ ಬಿಳಿದಪ್ಪ ಕಾಡಾನೆಯುಂ ಕಾಣ್ಬುದುಂ (ಪದ್ಮಾರಾ. ೦೩೭-೦೫) ; ಇಂದಿನ ಬಯ್ಗಿರುಳಿನ [ಪಾಠಾಂ. ಬೆಳಗಪ್ಪ] ಜಾವದೊಳ್ ಪದಿನಾಱು ಕನಸುಗಳಂ ಕಂಡೆಂ (ಆದಿಪು. ೦೫-೨೩ವ); ಬಟ್ಟೆವಿಡಿದು ಮುನ್ನಿನಂತೆ ಊರ್ವನೆ ನಡೆದು ನೇಸಱು ಪಟ್ಟಲ್ಲಿಯೆ ವಿಶ್ರಮಿಸಿ ಬಯ್ಗಿರುಳೆಟ್ದು ಪಯಣಃಬೋಪಾತಂ (ಶಬರಸಂ. ೩೭-೩೫ವ). [ಬಯ್ಗು + ಇರುಳ್]

**ಬಯ್ಗು**, ಬಯ್ಗೆ, ಬೈಗು, ಬೈಗ್$_1$ (ನಾ). ೧. ಇಳಿಹೊತ್ತು ; ಸಾಯಂಕಾಲ ; ಸಂಜೆ : ಇಲ್ಲಿರಿಸಿ ಪೋಗು ಕಳ್ಳಂ ಮೆಲ್ಲನೆ ಬಯ್ಗಿಂಗೆ ಕುಡಿವಂ (ಧರ್ಮಾಮೃ. ೦೩-೦೯೫) ; ಬಯ್ಗಾದ ಪೊತ್ತು ನಾಲ್ಕಾನೆಯುಂ ತಂದು ಸೂಳೆಗೇರಿಯ ಬೀದಿಯ ಕಡೆಯೊಳಾರುವಂ ಪೋಗಲೀಯದಂತಪ್ಪಂ ನಿಲಿಸಿ (ಬಂಪಂ. ೩-೬೪ ವ); ಹೊತ್ತಾಱಿ ಬಯ್ಗಿಂಗೆ ಮತ್ತೆ ಬಾ ಎಂದೆನುತ ಹೊತ್ತನೆ ಕೊಂದು ಹುಸಿಯುವನಿಗಿಂದಲು ಸತ್ಯಾತ ಲೇಸು (ಸರ್ವಜ್ಞ. ೬೬೨). ೨. ಬೆಳಗು ; ನಸುಕು ; ಅರುಣೋದಯ : 'ಬಯ್ಗಿರುಳ್' ಪರಾ. **ಬಯ್ಗೆ** : ೧. ಪೇಟೀಗೆಳೊ ಬಯ್ಗೆಯೋ ಪೊಗಸೊ ನಾಳೆಯೊ ನಾಡಿದೊ ನಿನ್ನ ಜೀವಿತಂ (ಆದಿಪು. ೩-೬೩) ; ಮಗಮಗಿಪ ಪುಷ್ಪವಾಟಾಳಿಗಳಳಿಗಳ್ವೆರಸು ಪೀಠದೊಳ್ ನಿಲೆ ಪೊಗಸುಂ ಪಗಲುಂ ಬಯ್ಗೆಯುಂ ದೊರಲಲ್ಲಂಗೆ ಸೊಗಯಿಪನಲ್ಪ ಕಲ್ಪತರುಗಣೆಯಾದಂ (ಶಾಂತಿಪು. ೦೦-೦೦೦) ; ನಿಯುತಂ ಬೇಸಗೆಯೊಳ್ ಬಯ್ಗೆಯುಮಾ ಪಗಲುಮೊಂದು ದವಸಮಂತರಿಸದೆ ಮಾಗಿಯೊಳಬ್ದಕಾಲದೊಳ್ ಭೂಮಿಯೊಳಂ ಪದನಱಿತು ನೀರನೆತ್ತುಗೆ ಬಲ್ಲರ್ (ಲೋಕೋಪ. ೬-೮). **ಬೈಗು**: ೧. ಇಂದು ಬೈಗಿಂದೊಳಗೆ ರಾಸಿ ಹೊನ್ನಂ ಕೊಡುವೆನೆಂದು ಭಾಷೆಯನಿತ್ತನು (ಹಕಕಾ. ೦೦-೬) ; ಶಿರಪನರಿವೆಷು ನಾಳೆ ಬೈಗಿಂದೊಳಗೆ ಸೈಂಧವನ (ಕುಮಾವ್ಯದ್ರೋ. ೮-೩೬) ; ನಸುಕು ಬೈಗು ಬೆಳಕು ಮಬ್ಬು ಕಲೆತು ಬೆರೆತು ಆಡುತ ಎತ್ತೊ ಹೊತ್ತಿನತ್ತ ನುಗ್ಗುತಿಹವು ಯುಗವ ದೂಡುತ (ಅರಳು. ೪೪-೦೩). ೨. ಬೈಗಿನ ಪೊಟ್ಟುಱೊಳ್ ದೇವರ್ಕಳ್ ಬಂದು ಸುಕುಮಾರಸ್ವಾಮಿಯಂ... ಪೊಗಟ್ವ ಕಳಕಳಧ್ವನಿಯುಮಂ ದೇವದುಂದುಭಿಯ ರವಮುಮಂ ಯಶೋಭದ್ರೆ ನೋಡಿ (ವಡ್ಡಾರಾ. ೨೪-೨೦) ; ಬೈಗಿನ ನೈವೇದ್ಯಕ್ಕಂ ಬೈಗಿನ ಪೂಜೆಗಂ . . . ಚತುಸ್ಸೀಮೆಸಹಿತಂ ಧಾರಾಪೂರ್ವಕ ಮಾಡಿ ಬಿಟ್ಟರು (ಸೌಇಇ. IX-ii, ೨೦೨-೦೭; 1126). **ಬೈಗ್$_1$** : ೧. ಹೊತ್ತಾಱಿ ಪೂಜಿಸಲು ಬೇಡ ಕಂಡಾ ಬೈಗೆ ಪೂಜಿಸಲು ಬೇಡ ಕಂಡಾ (ಅವಕಂ. ೪೬-೨೦೩); ಶಿವಲಿಂಗಪೂಜೆಯಂ ಮಾಡಿ ಹರುಷಂ ಮಿಕ್ಕು ಆಡಿ ಹಾಡುತ್ತಲ್ಲಿ ಬೈಗೆವರವಿರುತಿರ್ದು (ಚನ್ನರ. ೮೨-೦೪). 'ಬಯ್$_1$' ಪರಾ.

**ಬೈಗಾಗು** = ಸಂಜೆಯಾಗಂ ಸಾಯಂಕಾಲವಾಗು; ಹೊತ್ತು ಮುಳುಗಂ : ಬೈಗಾಗಿ ಗೋವಲ್ಲವಂ ಕೂಡಿ ಹೊಡೆತಂದು (ಅಪಾರ. ದೇ. ೦೬೩-೦೦); ತರುಣಿಭಿಕ್ಷಾಂದೇಹಿ ನಾವೀ ಬರುತ ಬೈಗಾಯ್ತಲ್ಲಿ ಬಂದೆವು ತಾಯಿ ನೀಡು (ಕೌಶಿರಾ.೬-೪೦).

[ದೇ.೩ ತಮಿ. ವೈಕಲ್]

**ಬಯ್ಗುಂಬೊಳ್ತು** 'ಬಯ್ಗುಂಬೊಟ್ತು' ನೋ.

**ಬಯ್ಗುಂಬೊಟ್ತು**, ಬಯ್ಗುಂಬೊಳ್ತು, ಬಯ್ಗುಪೊಟ್ತು ಬೈಗುಂಬೊಟ್ತು, ಬೈಗಂಪೊಳ್ತು (ನಾ). ಸೂರ್ಯನು ಮುಳುಗುವ ಹೊತ್ತು; ಸಂಜೆಯ ಸಮಯ; ಸಾಯಂಕಾಲ : ಅಂತು ನೇಸಱ್ ಪಡಲೊಡಂ ಬಯ್ಗುಂಬೊಟ್ತರಸಂ ನೀರ್ಜೊಂಪದಿಂ ಪೊಱಮಟ್ಟು (ಕಾದಂಬ. ೯೬೨). **ಬಯ್ಗುಂಬೊಳ್ತು** : ಪೋದ ಬಯ್ಗುಂಬೊಳ್ತು ಕೆಡೆದ ಉಳ್ಕೆಯ ಅಶುಭಮಂ ಪರಿಹರಿಸಲೆಂದು ಪರಮೇಶನಂ ಪ್ರಾರ್ಥಿಸಲ್ ಬಂದೆನಯ್ (ಶ್ರೀರಾಮಾ. ೯೬೬-೬೦೩). **ಬಯ್ಗುಪೊಟ್ತು** : ರವಿ ಬಯ್ಗು [ಪಾಠಾಂ. ಯ್ಗ] ಪೊಟ್ತಲಂಪಿಕ್ಕುವ ಕುಂಕುಮರಜದ ಪೊಟ್ಟಳಕೊತ್ತಿದನೆಂಬ ಪೊಲರಗಿನ ಮುದ್ರೆಯನೆಸೆದುವು ಮಧುಯಂತಮುಕುಳಿತಾಂಬುಜಂಗಳೊಳೆಳೆಗಳ್ (ವರ್ಧಪು. ೬-೨೫). **ಬೈಗುಂಬೊಟ್ತು** : ನಿಜಜನನೀಗೃಹದೊಳ್ ಮಜ್ಜನ ಭೋಜನಾದಿಗಳಂ ಮನವಲ್ಲದ ಮನದೊಳಗೆ ಮಾಡಿ ಬೈಗುಂಬೊಟ್ತಪ್ಪುದುಂ ನಿಜಭವನಕ್ಕೆ ಬಂದು (ಕಾದಂಅ. ೨೭೫); ಸಂಪ್ರಾಪ್ತಮಾದ ವರ್ಷಾಕಾಲದೊಳೊಂದುದಿವಸಂ ಬೈಗುಂಬೊಟ್ತನೊಳೆಂದಿನಂತಿರೋಲಗಂ ಪರಿಯ (ರಾಮಾಶ್ವ. ೪-೬). **ಬೈಗುಪೊಳ್ತು** : ಸೂಚಿತಪಥಂಬಿಡಿದು . . . ಬೈಗುಪೊಳ್ತಿನ ಕಡೆಗೆ ಸಾರ್ತಂದರಾಶ್ರಮಕೆ ಶರಭಂಗನಾ (ಶ್ರೀರಾಮಾ. ೦೬೩-೦೬೮).

[ ಬಯ್ಗು + ಪೊಟ್ತು ]

**ಬಯ್ಗುಗೆಂಪು**, ಬೈಗುಗೆಂಪು (ನಾ). ಸೂರ್ಯನು ಮುಳುಗುವ ಹೊತ್ತಿನಲ್ಲಿ ಅಥವಾ ಸಾಯಂಕಾಲದ ಸಮಯದಲ್ಲಿ ಆಕಾಶದಲ್ಲಿ ಉಂಟಾಗುವ ಕೆಂಪು ಬಣ್ಣ ; ಸಾಯಂಕಾಲದ ಕೆಂಪುಕಾಂತಿ ; ಸಂಜೆಗೆಂಪು : ಅಂಜನೇಭದ ಸಿಂದುರವೊ . . . ಸಂಜೆವೆಣ್ಣುಟ್ಟ ರಕ್ತಾಂಬರವೊ ಪೇಳೆನಲ್ಕಾ ಬಯ್ಗುಗೆಂಪೆ[ಪಾಠಾಂ. ಬೈಗುಗೆಂಪೆ]ಸೆದುದು (ಕೃಷಿಚಾ. ೬-೪೬). **ಬೈಗುಗೆಂಪು** : ಅಗ ತಾನೆ ಸೂರ್ಯನು

ಬೈಗುಗೆಂಪನ್ನು ಚೆಲ್ಲಿ ಪಡುಗಡಲ ತೆರೆಯಲ್ಲಿ ಇಳಿದಿಳಿದು ಮಾಯ ವಾದನು (ಸಳಸ್ಪ. VIII. ಕೃಷ್ಣಾಪತಿ) ; ಬೈಗುಗೆಂಪುರಿಯಲ್ಲಿ ಸುಡಲಿ ಸಂಶಯವಲ್ಲಿ ! ಹುಣ್ಣಿಮೆಯ ರಾತ್ರಿಯಲಿ ಹೊರಗೆ ಬಾ ನೋಡು ! (ಜಿಜ್ಞಾಸ. ೫೦-೬). [ಬಯ್ಗು + ಕೆಂಪು$_1$]

**ಬಯ್ಗುವೊಟ್ಟು** 'ಬಯ್ಗುಂಬೊಟ್ಟು' ನೋ.

**ಬಯ್ಗುಳ್,** ಬಯ್ಗುಳು, ಬಯ್ಗುಳ, ಬಯ್ಗುಳು, ಬೈಗಳು, ಬೈಗುಳ್, ಬೈಗುಳ, ಬೈಗುಳು (ನಾ). ೧. ಜರಿಯುವಿಕೆ ; ತೆಗಳಿಕೆ : "ಶಾಪಃ, ಆಕ್ರೋಶಃ, ಆಕ್ಷೇಪಃ, ಕ್ಷಾರಣಾ, ವಿರೂಕ್ಷಣಾ — ಈ ೫ ಬಯ್ಗುಳ್" (ಶಬ್ದಾರು. ೩೯-೦೯೬); ನಿನ್ನ ತಮ್ಮನಪ್ಪ ವಾಯುಭೂತಿಯು ಜೀವಂ ಅಭಿಮಾನಂ ಕಾರಣ ಮಾಗೆಮ್ಮನುಜಡೆ ಪರಿಭವಿಸಿ ಬಾಯ್ಗೆ ವಂದುದನೆ ಪೊಲ್ಲಮೆಯ ಬಯ್ಗುಳಂ ಬಯ್ದಂ (ವಡ್ಡಾರಾ. ೧೩-೨); ಪರಮಾರ್ಥಂ ನಿಜಜನಕರ್ ಪರಸಿದ ಪರಕೆಗಳು ಬಯ್ದ ಬಯ್ಗುಳ್ ಮಕ್ಕಳ್ಗಿರದೆಯ್ದುಗುಂ (ಕಾದಂಬ. ೯೬೭) ; ಸತ್ಪೂಜಾಭಂಗಮೆಂಬ ಬಯ್ಗುಳಿಂ ಸದ್ದರ್ಶನಾಲಸ್ಯಮೆಂಬ ಕೊಂತಂಗಳಿಂ . . . ಬೀಟಿ ಮೋದುತ್ತುಂ ದಂಡಣೆಯಂ ಮಾಡುತ್ತುಂ (ಧರ್ಮಾಮೃ. ೦೦-೯೭ ಅವತಾರ). **ಬಯ್ಗುಳು :** ೧. ಕೊತವಾಲನ ಬಾಯಿಂದ ಹೊರಟ ಬಯ್ಗುಳನ್ನು ನಿಚ್ಚಳವಾಗಿ ಕೇಳಿದರು (ಕೊಕೊಶಾ. ೬೮). **ಬಯ್ಗುಳ :** ೧. ದಾಂಡಿಗ ಬಂಡಿಗಾರ ಯಜ ಮಾನನ ಅನ್ಯಾಯದ ಬಯ್ಗುಳಕ್ಕಾಗಿ ಕೋಪದಿಂದ ಹುಬ್ಬುಗಂಟಿಕ್ಕಿದನು (ಕೃಷಿರು. ೯೯೦). **ಬಯ್ಗುಳು:** ೧. ಹರಿಯ ಬಯ್ಗುಳು ಬೆದಱಿಸಲು . . . ತರತರದ ಕೈದುಗಳ ಸುಭಟರ ಕಂಡುದಮಳಾಸ್ತ್ರ (ಕುಮಾವ್ಯಾ. ದ್ರೋ. ೦೯-೪೦). **ಬೈಗಳು :** ೧. "ಬೈಗಳಿನೆ ಪರಿಕಿಸಲ್ ನಿಂದೆಯುದು" (ಕಶರ. ೦೨೬); ಕೊಟ್ಟವರು ಬಂದೆನ್ನ ನಿಷ್ಠುರಂಗಳನಾಡಿ ಕೆಟ್ಟ ಬೈಗಳ ಬೈದು ಪುನದಣೆಯುಲು ದಿಟ್ಟತನವನು ಬಿಟ್ಟು ಕಳೆಗುಂದಿದೆನಯ್ಯ (ಕೃಶೆಂದ. ೦-೦೨೬-೦) ; ನಾ ಹುಟ್ಟಿ ಆಯ್ತೆರಡು ಮಾಸಂ ಬಯಸಿ ಬೈಗಳು ಬಾರವೆನ್ನೊಳೇಂ ದೋಷಂ? (ಕಂಶ. ೧೩-೬). **ಬೈಗುಳ್ :** ೧. "ಶಾಪಮಾ ಕ್ರೋಶಂ ವಿರೂಕ್ಷಣಂ ಕ್ಷಾರಣಾಕ್ಷೇಪಮೆನೆ ಬೈಗುಳೆನಿಸಿಕ್ಕು" (ಮಂಗರಾ. ೨೬-೫); ಆ ವೈಶಂಪಾಯನಂ ತಂದೆಯ ಮುನಿಸಿನ ಬೈಗುಳ್ಗಳಿಂದಂ . . . ಗಿಳಿಯ ಬಸುಱೋಳೆಯಂದದಿಂ ಬಂದನಲ್ತೆ (ಕಾದಂಬ. ೬೯೯) ; ಪೆಱರ ಬೈಗುಳಂ ಸೈರಿಸುವುದರಿದೋ ಪೆಱರೊಡನೆ ಬಾಯಂ ಬಡಿವುದರಿದೋ (ಧರ್ಮಾಮೃ. ೭-೯೦). **ಬೈಗುಳ :** ೧. ಕೆಲವರು ಇತರ ಮಕ್ಕಳೊಡನೆ ಕಿತ್ತಾಟ, ಜಗಳ, ಹೊಡೆದಾಟ, ಬೈಗುಳ, ಇತ್ಯಾದಿಗಳಲ್ಲಿ ಮನಃತೃಪ್ತಿ ಪಡೆಯುವರು (ಶಿಕ್ಷದ. ೯೯೯) ; ಯಾವು ದಾದರೂ ಉಪಾಯದಿಂದ ಬೈಗುಳ ತಪ್ಪಿಸಿಕೊಳ್ಳುತ್ತಿದ್ದ (ಕಾರೆಮ. ೫೦). **ಬೈಗುಳು :** ೧. ನಾಯಕರ ಕಡೆನುಡಿವ ಬೈಗುಳ ಬಾಯ ಬೊಬ್ಬೆಯ ಕೈಯ ಹೊಯ್ಗುಳ ದಾಯಿಗರಲೇ ಎನುತ ಮೂದಲಿಸಿದನು ತಮ್ಮೊಳಗೆ (ಕುಮಾವ್ಯಾ. ಕ. ೨-೦೩). ೨. ಮೂದಲಿಕೆ; ಹೀಗಳೆಯುವುದು : ನಡೆದುದುರು ಸನ್ನಾಹದಲಿ ಸೂಳಡಸಿ ಮೊಱೆವ ಗಭೀರಭೇರಿಯ ಕಡುರವದ ರಿಪುಭಟರ ಬೈಗುಳ ಗೌರುಗಹಳೆಗಳ . . . ಕಳಕಳವಾಯ್ತು ರಣ ದೊಳಗೆ (ಕುಮಾವ್ಯಾ. ದ್ರೋ. ೯-೦೨). [ಬಯ್$_2$+–ಗುಳ್$_2$. /ಕೊಡ. ಬಯ್ಗುಳ]

**ಬಯ್ಗುಳ** 'ಬಯ್ಗುಳ್' ನೋ.

**ಬಯ್ಗುಳು** 'ಬಯ್ಗುಳ್' ನೋ.

**ಬಯ್ಗೆ** 'ಬಯ್ಗು' ನೋ.

**ಬಯ್ಚು,** ಬಚ್ಚು$_1$ (ಕ್ರಿ). ಮುಚ್ಚಿಡು ; ನಿಧಿಯಾಗಿರಿಸು ; ನಿಕ್ಷೇಪ ಮಾಡು : "ಮುಚ್ಚು, ಮುತ್ತು, ಬಯ್ಚು (ಬಚ್ಚು) . . . ಹುದುಗಿಸು, ಅಡಗಿಸು" (ಕಂಪುಟು. ೯೦) **ಬಚ್ಚು$_1$:** ಕಿಚ್ಚಿನಂತುಜ್ವಲಿಸೆ ತೇರಿನೊಳ್ಗನು ಶರವ ಬಚ್ಚಿದಂ ಮಿಕ್ಕಿದಂ ಧಾರುಣಿಗೆ ಒಡಿದಸಿಯ ಕೊಚ್ಚಿದಂ ಸವರಿದಂ ಪರಿಪರಿದು ಕುರುಬಲಂ ನಡುನಡುಗಿ ತಲ್ಲಣಿಸಲು (ತುರಂಗ. ೬೩-೦೨) ; ದೌಲತ್ತನ್ನು ಬಚ್ಚಿ—ಬಂಧನದಲ್ಲಿಟ್ಟು ಬೇಡದ ನಗರವನ್ನು ಬಿಟ್ಟುಕೊಟ್ಟಿದ್ದಾನೆ (ದೌಲತ್. ೮೨).

**ಬಯ್ಚಿಡು,** ಬಚ್ಚಿಡು, ಬೈಚಿಡು = ೧. ಅಡಗಿಸಿ ಇಡು ; ನಿಧಿಯಾಗಿರಿಸು ; ನಿಕ್ಷೇಪಿಸು : ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು (ಬಸವ. ೦); ಬೇವು ಫಲವಾಗಲದು ಸೇವಿಸಲು ಯೋಗ್ಯವೇ ಧನವು ಘನವಾಗಿ ಬಯ್ಚಿಟ್ಟ ಠಾವಿಲೇ ಪೋಕು (ಸರ್ವಜ್ಞ. ೬೩೯) ; ಅಯ್ಯ ನಿಮ್ಮ ಶರಣ ಬಸವಣ್ಣನಿಂದ ಲಿಂಗವ ಕಂಡು ಒಳಗೆ ಬಚ್ಚಿಟ್ಟುಕೊಂಡೆನಯ್ಯ (ಕೂನ್ಯಸಂ. ೨೨೦-೫೨) ; ಕೊಳ್ಳೆ ಹೊಡೆದುಕೊಂಡು ಬಂದ ಸ್ವತ್ತುಗಳನ್ನು ಅಲ್ಲೇ ಒಂದು ಮೂಲೆಯಲ್ಲಿ ಇಟ್ಟುಬಿಟ್ಟು ಮತ್ತೊಂದು ಕಡೆ ಅವರು ಬಚ್ಚಿಟ್ಟುಕೊಂಡರು (ವ್ಯಾಸಪಿ. ೩೭) ; ಜಾಲಗಾಱನ ದೋಣಿಯಂತೆ ಬಳಸುವ ಹುಟ್ಟಿನಂತೆ ಬೈಚಿಟ್ಟ ನೆಲೆಯಂತೆ ಇದ್ದಡೇನು ಭೋಗಿಸಲರಿಯೆ ವಾಗಿ (ಮೋಳಿಗೆಮಾ. ೪೦-೧೨೪) ; ಕೊಟ್ಟಿದ್ದು ತನಗೆ ಬೈಚಿಟ್ಟದ್ದು ಪರರಿಂಗೆ ಕೊಟ್ಟದ್ದು ಕೆಟ್ಟತೆನಬೇಡ ಮುಂದಕ್ಕೆ ಕಟ್ಟಿಹುದು ಬುತ್ತಿ (ಸರ್ವಜ್ಞ. ೬೦೭). ೨. ಗುಟ್ಟಾಗಿಡು ; ರಹಸ್ಯವಾಗಿರಿಸು : ಸುಳ್ಳನ್ನು ಬಚ್ಚಿಟ್ಟು ಕೊಳ್ಳುವುದು ಮಹಾ ಅಪರಾಧ (ರಂಗರೂ. ೯) ; ಸಾವಿತ್ರಮ್ಮ . . . ಯಾವ ವಿಚಾರವನ್ನೂ ಬಚ್ಚಿಡಲಿಲ್ಲ (ಕೂಪಶೀ. ೨೦೬) ; ಲಲಿತಸುಖೆ . . . ವಿಟನೊಲಿದೊಡೊಲಿಯುಳು ಬೆರಸಿ ಬೆರಸದೆ ಮನವ ಬೈಚಿಡುತ ನಳಿನಮುಖಿ ಬೇಟದೊಳು ಬೇಗೆಯ ಬಳೆಯಿಪಳು (ಕುಮಾವ್ಯಾಆ. ೬೦೨. ೮-೫೭).

[ಬಯ್$_1$ + –ಚು$_1$. / ತೆಲು. ವಯಿಚು, ವೈಚು]

**ಬಯ್ತು** 'ಬಯ್$_1$' ಪರಾ.

**ಬಯ್ತಲೆ,** ಬೈತಲೆ (ನಾ). ತಲೆಯ ಮೇಲ್ಭಾಗದಲ್ಲಿ ಕೂದಲನ್ನು ಎರಡುಕಡೆಗೂ ಬಾಚಿದಾಗ ಮಧ್ಯೆ ಗೆರೆಯಂತೆ ಕಾಣುವ ನೇರವಾದ ಸ್ಥಳ,—ಜಾಗ : "ಸೀಮಂತಮೆಂಬುದು ಬಯ್ತಲೆ" (ಶಬ್ದಾರು. ೬೭-೩೭೫) ; ಮೊದಲೊಳ್ ಕಟ್ಟಿದ ಮಂಡೆಯುಂಟುಬ್ಬಿಡಿಗೆ . . . ತಿರ್ದಿದ ನುಣ್ಬಯ್ತಲೆ ಲೀಲೆಯಿಂ ಸವಿದ ತಾಂಬೂಲಂ ಜಲಂ ವಿಂದುದಲ್ಲದೆ ಮತ್ತೇನುಮನೊಲ್ಲದಿರ್ದಬಲೆ ಚಿತ್ರಾಕಾರದಿಂ ತೋಱಿದಳ್ (ವಳಸಂ. ೬೩೯); ಗಗನಮಣಿ ಪಶ್ಚಿಮಾಂಗನೆಯ ಬಯ್ತಲೆ[ಪಾಠಾಂ. ಬೈತಲೆ]ಯ ರಂಗು ಮಾಣಿಕದಂತೆ ಕಣ್ಗೆ ಕಾಣಿಸುತಿರ್ದುದಸ್ತಗಿರಿಮಸ್ತಕದೊಳು (ಕೃಷ್ಣಭಾ. ೮-೪೫). **ಬೈತಲೆ :** "ನೀಳ್ದ ಬೈತಲೆ ಸೀಮಂತ ಸಮಾಹ್ವಯಂ" (ವಸ್ತುಕೋ. ೭೦-೨೦); ಕರಮಿಂಬಾಗಿರೆ ತಿರ್ದಿ ಬೈತಲೆಯಂ ... ಬರ್ಬರವೆಂ ಪೂಸಿ ತೊಟಲ್ವರ್ (ಸಮಸ. ೬-೩೭) ; ನಿಮಿರ್ದ ವೇಣಿ ಬೈತಲೆಗಳವಟ್ಟ ಸಿಂದುರವುಳಂಕಯೊಳೆಚ್ಚಿದ ಕಜ್ಜಳಂ . . . ಚಲನಯುನಂಗಳೊಪ್ಪೆ ನಟನಗೆಯೆ ಒಂದನೆ ಬಂದನಾಕ್ಷಣಂ (ಧಶಕು. ೬-೦೦೦); ಪರಿಗೆ ಕೇಪಿನ ರಥಂಗೆ ಸುರಾಂಗನೆಯರಿಗೆ ಸುಭಟವ್ರಜಕೆ ಕುಂಟಣಿ ವರದಿಗಂಗನೆಯರಿಗೆ ಬೈತಲೆ ಗೆಸೆವ ಸಿಂಧೂರ . . . ಎನಲುರವಣಿಸಿ ಕೆಂದೂಳಿ ನಭಸ್ಸುಪ್ಪರಿಸೆ ಹೊಯ್ದಾಡಿದರುಭಯಚತುರಂಗಬಲ ಹಳಚಿ (ಕುಮಾವ್ಯಾಭೀ. ೯-೭).

**ಬಯ್ತಲೆಯ** ಸೌಭಾಗ್ಯ = ಮುತ್ತೈದೆತನ : ಮಱೆಯ ಮಾಯಾಶಿರವಿದೀಗಿದು ಮಱುಗಬೇಡೆಲೆ ತಾಯೆ ನಿನ್ನಯ ನೊಸಲಲಿಹ ಬಯ್ತಲೆ [ಪಾಠಾಂ. ಬೈತಲೆ] ಯ ಸೌಭಾಗ್ಯಕಳಿವುಂಟೆ (ತೊರವೆ. ೬-೦೨-೩೯).

[ ದೇಶ. ತುಳು. ಬಕ್ತಲೆ, ಬಗುತಲೆ, ಬಗ್ತಲೆ; ಕೊಡ. ಬವ್ತಲೆ]

**ಬಯ್ತಲೆದೆಗೆ,** ಬೈತಲೆದೆಗೆ (ಕ್ರಿ). ಕೂದಲನ್ನು ಬಾಚಿ ಇಬ್ಭಾಗ ಮಾಡು : ಇಂಬಾದಿದಱಿರ್ದಡಿಯ ಬಸಂ ಬಯ್ತಲೆದೆಗೆದ ಕೇಶವನವೆನಿಸೆ ಪರಾಗಂಬೊರೆದ ಸಿಂಧು ಸೀಮಂತಂಬೊಲಿಳಾಕಾಂತೆಗಧಿಪ ಮಿಗೆ ಸೊಗಯಿ ಸುಗುಂ (ಪಾರ್ಶ್ವ. ೯-೬). **ಬೈತಲೆದೆಗೆ :** ಕಿಱುವೆರಲುಗುರಿಂದೆ ಬೈತಲೆ

ದೆಗೆದಾಗ ಮುಱಿದುಂಬಿಗುರುಳ ಮಾನಿನಿಗೆ ತುಱುಬನಿಕ್ಕಿದರು (ಕೋಚಕ. ೫೬-೨೪). [ಬಯ್ತಲೆ + ತೆಗ್ಳ]

**ಬಯ್ತಲೆವಣಿ,** ಬೈತಲೆವಣಿ (ನಾ). ೧. ಬೈತಲೆಯಲ್ಲಿ ಧರಿಸುವ ಆಭರಣ : (ಕಪ್ಪುರೆಗುಟ್ಟುತಿದ್ದು, ಬೆರಲ್ವೆಣೆದುಕೊಂಡು, ಬಯ್ತಲೆವಣಿಗತ್ತಿ ಊರ್ಧ್ವಮುಖಿಯಾಗಿ ಗದ್ಗದಸ್ವರದಿಂದ) . . . (ಘೊಳ್ಳೆಂದು ನಕ್ಕು ಲಲಿತಾಟ್ಟಹಾಸವನ್ನಾಲಾಪಿಸುತ್ತಿರುವಳು (ಶುಂಕೃಕ. ೨೯-೨೨). **ಬೈತಲೆವಣಿ:** ೧. ಮುತ್ತಿನ ಭುಜಕೀರ್ತಿ ಹರಳೋಲೆ ಮೂಗುತಿ . . . ಉತ್ತಮವಜ್ರದ ಬೈತಲೆವಣಿಗಳನಿತ್ತನವಳಿಗಸುರೇಂದ್ರ (ಕುಮಾಸಾಂ. ೯೦-೩೬); ಕೆಲಿಗಂಟು ಕೆಲವರಿಗೆ ಜಡೆ ಕೆಲವರಿಗೆ ಮತ್ತೆ ಕೆಲರಲ್ಲಿ ತುಱುಬನಿಕ್ಕಿದರು ಅವರು ಚವಲಿ ಬೈತಲೆವಣಿ ಮುತ್ತಿನ ಬಲಿಯಿಲ್ಲ ಬಂದರೊಪ್ಪದೊಳು (ಕಕಕ. ೦೬-೨೫). ೨. (ಅಲಂ) ಆಭರಣಪ್ರಾಯವಾದ ವ್ಯಕ್ತಿ; ಶ್ರೇಷ್ಠವ್ಯಕ್ತಿ : ದ್ಯೂತಕೇಳಿಯೊಳಜ್ಞಾತವಾಸದೊಳಂದು ಧಾತುಗುಂದದೆ ಪಾಂಚಾಲಿ ಓತು ಪಾಂಡವರನೊಲಿಸಿ ಹದಿಬದೆಯರ ಬೈತಲೆವಣಿಯೆನಿಸಿದಳು (ಹರಿಐ. ೩-೪೮). [ಬಯ್ತಲೆ + ಮಣಿ]

**ಬಯ್ತು** 'ಬಯ್$_1$' ಪರಾ.

**ಬಯ್ತುಗ** (ನಾ). (?) : ಲಲನಾಮುಖೇಂದು ಲಾವಣ್ಯಲೀಲೆಯಿಂ ಪಡೆವ ಬಣ್ಣದಿಂ ಕಂಪಿಂದೇನಲೆದುದೊ ಬಯ್ತುಗ [ಪಾಠಾಂ. ಪೈತಿಕ, ಪೈತಿಗ, ಬೈತುಗ] ದಂತಿರೆ ತಲೆಗೇಱುವ ಕುಸುಮನಿಚಯಮಂ ಕಾಶ್ಮೀರಂ (ಅಂಖ. ೦-೨೨೪). [?]

**ಬಯ್ದುಕೂರ್** (ನಾ). ಒಂದು ಊರಿನ ಹೆಸರು : ಮದಿರೆಗೊಣ್ಣ ಕೊಪ್ಪರಗೇಶರಿವರ್ಮ್ಮಂಗೆ ವರಿಷಮಿಪ್ಪತ್ತೊಮ್ಬತ್ತಱೊಳ್ಬಯ್ದುಕೂರ ರಾವಿನಾಡ ಮಾರ್ಮ್ಮಮ್ಮ ಮಮ್ಮ ಗಣಪ ರಾಮ ತುಱುವನಿಕ್ಕಿಸಿ ಅಟ್ಟು ಸತ್ತರ್ (ಎಕ. X. ಮುಳಬಾ. ೨೦೩-೨೨ ; ೯೩೪). [? + ಊರ್]

**ಬಯ್ದುಂಬು** (ನಾ). ಒಂದು ಊರಿನ ಹೆಸರು (?) : ಸ್ವಸ್ತ್ಯನೇಕ ಸಮರಾಸಂಘಟ್ಟಣೋಪಲಬ್ಧ ಜಯಲಕ್ಷ್ಮೀಸಮಾಲಿಂಗಿತವಕ್ಷಸ್ಥಲ ಗಂಡ ತ್ರಿಣೇತ್ರ ಶ್ರೀ ಬಯ್ದುಂಬ ಮಹಾರಾಜರ್ ಪೃಥಿವೀರಾಜ್ಯಂಗೆಯೆ (ಎಇ. XXIV. ೨೬-೩ ; ಸು. ೮೮೯). [? + ತುಂಬು$_2$ (<ತೂಂಬು)]

**ಬಯ್ಯ** (ನಾ). ಒಂದು ಜಾತಿಯ ಹೆಸರು (?): ಅನ್ನಿಯ ಸುಗ್ಗಯ್ಯನು ಬಿಡಿ ಪೊನ್ನಯ್ಯನುಂ ಅಲ್ಲಮ್ಮನುಂ ಬಯ್ಯರ ಜೋಗನುಂ ಇನ್ನಿನಿಬರುಂ ಸಾಕ್ಷಿಯಾಗೆ ಕೊಟ್ಟರ್ (ಎಕ. XI. ಹೊಳಲ್ಕೆ. ೩೦-೦೩ ; ೯೬೪). [?]

**ಬಯ್ಕೆ** (ನಾ). (?) : ಕೈಯಣ ಗಿಂಡಿಯು ಕೊಂಕುಳ ಪೆಟ್ಟಿಗೆ ಕಲ್ಲಿಯುಹದು ತಲಕಟ್ಟು ಬಯ್ಯಿಗಳೆಂಬವು ಪರಿಪರಿ ನೋಡಲು ಕೋಳಿ ಹಾರಿಕೆ ಅಳವಟ್ಟು (ಕದಾಕೋ. ೭೨-೩). [?]

**ಬಯ್ಯಿಸು,** ಬಯಿಸ್ಸು, ಬೈಸು$_1$ (ಕ್ರಿ). ಬಯ್ಯುವಂತೆ ಮಾಡು : ಜರೆಯುವಂತೆ ಮಾಡು ; ದೂಷಣೆಗೊಳಗಾಗಿಸು : ನೀನು ಒಪ್ಪುವುದಾದರೆ ನಾನು ನಿಮ್ಮ ಮನೆಗೆ ಬರುತ್ತೇನೆ. ನೀನೂ ಬಯ್ಯಿಸಿಕೊಳ್ಳುವ ಹಾಗಿಲ್ಲ (ಶಾಕಿಮು. ೩೩); ನಾನು ಯಾರಿಂದಲೂ ಹಾಗೆ ಬಯ್ಯಿಸಿಕೊಂಡವನಲ್ಲ (ಹಂಗಾರ. ೨೯೩). **ಬಯ್ಸು :** ಭಟ್ಟಾರಾ ನಿಮ್ಮಂ ಪಂಚಮಹಾಪಾತಕನ ಮನೆಗೊಡಗೊಂಡು ಪೋಗಿ ಬಯ್ಸಿದೆಂ (ವಡ್ಡಾರಾ. ೬-೩). **ಬೈಸು$_1$ :** ಅಪ್ಪನ ಕಡೆ ಬೈಸಿಕೊಳ್ಳೋದು ತಪ್ಪಿತು (ಅಕವಾ. ೬೯); ಬಯಕೆ ಕೊಟ್ಟರೂ ಬೈಸಿಕೊಂಬುದು ತಪ್ಪಲಿಲ್ಲ (ಗಾದೆ). [< ಬಯ್$_2$ + — ಇಸು$_3$]

**ಬಯ್ಯು** 'ಬಯ್$_2$' ನೋ.

**ಬಯ್ರಬತ್ತ** (ನಾ). ಕೆಳತರಗತಿಯ ಒಂದು ಬಗೆಯ ಬತ್ತ : (೬). [ದೇ.॥ ತುಳು. ಬೈತರಿ, ಬಯಿಂತ್ರಿ]

**ಬಯ್ಸಿಕೆ** 'ಬೈಸಿಕೆ' ನೋ.

**ಬಯ್ಸು** 'ಬಯ್ಯಿಸು' ನೋ.

**ಬರ್** 'ವರ್' ನೋ.

**ಬರ$_1$** 'ಬಱ' ನೋ.

**ಬರ$_2$** 'ವರ$_1$' ನೋ.

**ಬರ$_3$** (ನಾ). ಅನುಗ್ರಹ ; ವರ : "ಬರ—ವರ = ಅನುಗ್ರಹ" (ಕನ್ನಕೋ. ೨೯); ನಾಲ್ಕು ಲಾವಗೆಗಳಗ್ನಿಸೂಕ್ತಂಗಳನೋದುತ್ತುಮದಿರದಿದಿರಂ ಬಕೆ ಮೆಚ್ಚಿ ಬರವನಗ್ನಿದೇವಂ ಬೇಡಿಕೊಳ್ಳೆಮೆಂದೊಡೆಮ್ಮನ್ವಯಕ್ಕೆ ನೀನೆ ಪಣ್ಣಿದೆಯಾಗೆಂದು ಬೇಡುವುದುಂ (ಹಂಕಚಾ. ೫-೦೦೦ ವ) ; ಮೃಡನಿಂ ಬರಂಗಳಂ ಪಡೆದನೆಂಬರ್ ಕಣಾ! (ಶ್ರೀಪಾಪಪು. ೩೦-೫೦). [< ಸಂ. ವರ]

**—ಬರ$_4$** '—ವರಂ' ನೋ.

**—ಬರಂ** '—ವರಂ' ನೋ.

**ಬರಂಗಿ** (ನಾ). (?) : ಅಂತು ಖಂ ೭೪ ರೊಕ್ಕ ಗ ೧೧೬ ಭೂಮಿ ಬರಂಗಿ ಖಂ ೨೮ ಮಾರ × × × ರುಹ ಗ ೬ ಅಡಕೇ ಸುಂಕ ಗ ೧ ಉಪಾಧಿಗೆ ಮಾವಿನ ಕೊಡಗಿ ಖಂ ೨೬ ಮೊರಹ × × × (ಎಕ. VIII. ತೀರ್ಥಹ. ೦೯-೬೨ ; 1578). [?]

**ಬರಂಪಿಡಿ** (ಕ್ರಿ). ವರವನ್ನು ಸ್ವೀಕರಿಸು, —ಹೊಂದು : ವಿರೋಧಿಗಂಟಿರ್ದಯ ಮಾಱುವ ವೈರಿಗೆ ಮಾರೂಂಕಂಣೆ ಮಾನ್ಯರ್ಗಡಿವವನೇಂ ಚತುಬ್ಬರ್ಗಜನೆ ಮಚ್ಚರಿಪಂಣಲೆಬಮ್ಮರ್ಗನೊಳ್ ಬರಂಪಿಡಿದನೆ ಮಾಱ್ ಬಾಳ್ವಡವನೇಂ ಜವನೇ ಕಡಿಕೆಯಿದು ಕಾದಲೆಂದೊಡರಿಸುವಾತನೇಂ ಭುಜಗಮರ್ದ್ದನನೇ ಕಲಿಗೋಣಭೂಪನೊಳ್ (ಎಕ. VIII. ಸಾಗರ. ೦೦೯-೩೬ ; 1042). [ಬರ$_3$ + ಪಿಡಿ$_1$]

**ಬರಂಬಡೆ** (ಕ್ರಿ). ವರವನ್ನು ಹೊಂದು ; ಅನುಗ್ರಹವನ್ನು ಪಡೆ : ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ನೂರ್ವರ್ ಮಕ್ಕಳಂ ಪಡೆವಂತು ಪರಾಶರಮುನೀಂದ್ರನೊಳ್ ಬರಂಬಡೆದಳ್ (ಹಂಚಕಾ. ೦-೦೦೬ ವ) ; ನಡುನಡಪಿತ್ತು ತನ್ನನೆನೆ ಮೆಯ್ ಬಡವಾದುದು . . . ತೋಳ್ಗಳೊಳ್ ಬರಂಬಡೆದವೊಲೆಯ್ದೆ ಸುಯ್ ಸರಳವಾದುದು (ಹಂಕೃಕ. ೫-೦೨೪) ; ಬರಂಬಡೆವನ್ನವಾರಾಧಿಸಿದಂ (ಕಮುರ.ಪ. ೨೫೫ ಶ್ರಯೋ). [ಬರ$_3$ + ಪಡೆ$_1$]

**ಬರಕ$_1$** 'ಬರ್ಕ' ನೋ.

**ಬರಕ$_2$** (ನಾ). ಹೊರೆ (?) : ಪೆಜ್ಜುಂಕಕ್ಕೆ ದ್ರಮ್ಮ ೧ ಆ ಬಳಿಯ ಅಡಕೆ ೨೫ ಕತ್ತಿಯ ಬರಿಕಕ್ಕೆ ಪೊಂಗೆ ಅಡಕೆ ೨೦ ಸೀರೆಯ ಸುಂಕ ಪೊದಕೆಗೆ ಪಾಗ ೨ ಸೀರೆಗೆ ಪಾಗ ೧ . . . ಅನ್ತಿಲ್ಲಿಯ ಎಣ್ಣರಾಯಿಗರುಂ ನಾಗೇಶ್ವರದೇವರ್ಗ್ಗೆ ೫೦ ಮತ್ತರಲು ತಂತಮ್ಮಾಯಮಂ ಬಿಟ್ಟರು (ಶಾಂಕೀಶ್. ೩-೨೨ವ; 1047) ; ಅರಮನಸ್ಸಿನಿಂದಲೇ ಅಪ್ಪಯ್ಯನ ಹಿತ್ತಲಿಗೆ ಹೋದಳು. ಅಪ್ಪಯ್ಯ ಆ ವೇಳೆಗೆ ಹುಲ್ಲು ಕಿತ್ತಾಗಿತ್ತು, 'ಬರಕ'ದಲ್ಲಿ ಕಟ್ಟುತ್ತಿದ್ದ (ಕೀರು. ೭೬). [ದೇ.॥ ತೆಲು. ಬರಕ=ಹತ್ತಿಯ ಹೇರು]

**ಬರಕಂದಾಜ** (ನಾ). ಬಂದೂಕು ಅಥವಾ ತುಪಾಕಿಯನ್ನು ಹಿಡಿದಿರುವ ಸೈನಿಕ,—ಸಿಪಾಯಿ: ಇಂಗ್ಲಿಷ್ ಸೇನೆ ಅಂದು ದೇವಿಯ ಹಡಗಿಗೆ ಮುತ್ತಿಗೆ ಹಾಕುವ ಸಂಗತಿ ಅವರಿಗೆ ತಿಳಿದು ಅವರಿಬ್ಬರೂ ಬರಕಂದಾಜ ಸೇನೆಯನ್ನು ತೆಗೆದುಕೊಂಡು ಬಂದಿದ್ದರು (ಹಂಕಿಮು. ೨೬೯). [←ಪಾರ. ಹಿಂ. ಬರಕಂದಾಜ್, ಬರ್ಕಂದಾಜ್ ; ಮರಾ. ಬರಕಂದಾಜ್, ಬರ್ಕಂದಾಜ್]

**ಬರಕತ್ತು,** ಬರಖತ್ತು, ಬರ್ಕತ್ತು, ಭರಕತ್ತು (ನಾ). ಏಳಿಗೆ; ಅಭಿವೃದ್ಧಿ: ಆ ಮೂರುಮುಕ್ಕಾಲಿನ ಮಾಸ್ತರುಗಳು ಕ್ಲಬ್ಬಿನಲ್ಲಿ ತುಂಬಿರುವಷ್ಟು ದಿವಸ ಕ್ಲಬ್ಬು ಬರಕತ್ತಿಗೆ ಬರಲಾರದಯ್ಯ (ಶುಂಗಮು. ೨೦೬); ಯಾವ ಯಾವ ಒಕ್ಕಲುಗಳನ್ನು ತಂದು ಹಾಕಿ ನೋಡಿದೆ; ಬರಕತ್ತಿಗೆ ಬರಲಿಲ್ಲ (ಚಟ್ಟಿಜೀ. ೦೮). **ಬರಖತ್ತು :** ನೀಯತ್ತಿದ್ದವರಿಗೇ ಬರಖತ್ತು ಎಂದು ತುರುಕರು ಹೇಳುವುದು ನಿಜ (ಕಪಿಸಂ. ೦೯೬). **ಬರ್ಕತ್ತು :** ಬಡವರಿಗೆ ಯಾವಾಗಲೂ

ಬರ್ಕತ್ರಿಲ್ಲ (ಜಾಗಿ. ೦೩); ಆಕೆಗೆ ಈ ಮದುವೆಯಿಂದ ಬರ್ಕತ್ತಿಲ್ಲ ಎಂದು ಅನಿಸಿತ್ತಂತೆ (ಕೃಷಾಂಸ. ೬). **ಭರಕತ್ತು** : ಹಿರಿಯರಾದವರು "ಇದು ಹಿಂದುಗಳ ಜಾಗ, ಇಲ್ಲಿ ನಮಗೆ ಭರಕತ್ತು ಇಲ್ಲ" ಎನ್ನುತ್ತಾರೆ (ಗಕುಜಾ. ೦೬೩). [←ಅರ. ಬರಕತ್; ಹಿಂ. ಬರಕತ್, ಬರ್ಕತ್; ಮರಾ. ಬರಕತ್, ಬರಖತ್, ಬರ್ಕತ್]

**ಬರಕಾಸ್ತು** 'ಬರಖಾಸ್ತು' ನೋ.

**ಬರಖತ್ತು** 'ಬರಕತ್ತು' ನೋ.

**ಬರಖಾಸ್ತ** 'ಬರಖಾಸ್ತು' ನೋ.

**ಬರಖಾಸ್ತು**, ಬರಕಾಸ್ತು, ಬರಖಾಸ್ತ, ಭರಕಾಸ್ತು, ಭರಖಾಸ್ತು (ನಾ). ೧. ಕೊನೆ ; ಮಂಕ್ತಾಯಂ : ಸಾವಿರ ಬಗೆಯ ಭಯದ ಕಲ್ಪನೆಯ ಮೂಲಕ ಬುದ್ಧಿಯನ್ನು ಆರಂಭದಲ್ಲಿಯೇ ಬರಖಾಸ್ತು ಮಾಡಿ ಕುಳಿತಿದ್ದೇವೆ (ಹಿಂದಿ. I, ೪೬೬). ೨. ಓಲಗ, ಸಭೆ ಮುಂತಾದುವುಗಳನ್ನು ಸಮಾಪ್ತಿಗೊಳಿಸುವುದು: ವೆಂಕಣ್ಣ ಸಭೆಯನ್ನು ಬರಖಾಸ್ತು ಮಾಡಿದ (ಸಾಹಿಣ. ೪೦). ೩. ಕಚೇರಿ ಮುಂತಾದುವುಗಳನ್ನು ಮುಚ್ಚುವುದು : ನ್ಯಾಯಾಧಿಕಾರಿಯು ಕೋರ್ಟು ಬರಖಾಸ್ತೆಂದು ಹುಕುಂ ಮಾಡಿದನು (ಕಥಾಕುಂ. IV, ೮೫). **ಬರಕಾಸ್ತು** : ೨. ಸಭೆ ಬರಕಾಸ್ತಾಯಿತು (ಅಣ್ಣ. ೩೮) ; ದರಬಾರ ಬರಕಾಸ್ತು ಮಾಡಿ ಹುಕುಂ ಆದ್ದು ಬೆಳಿಗ್ಗೆ ದರಬಾರು ಆಗುತ್ತೆ (ಮುಕಕ. ೫-೪). **ಬರಖಾಸ್ತ** : ೨. ಪಾನ-ಸುಪಾರಿಯ ವೇಶ್ಯಾಯ ದರಬಾರ ನಡೆದು ಬರಖಾಸ್ತ ಆಯಿತು (ಐಕಹ. II, ೩೩೫). **ಭರಕಾಸ್ತು** : ೨. ಸಭೆ ಭರಕಾಸ್ತಾಯಿತು (ಮೂಮುಜ. ೬೬); ಸಭೆ ಚರುವು ಖಾಲಿ ಎಂದು ತಿಳಿದಾಗಲೇ ಭರಕಾಸ್ತಾಗಿ ಬಂದಾಗಿತ್ತು (ವೃದ್ಧಕ. ೦೦೦). **ಭರಖಾಸ್ತು** : ೨. ಸಭೆಯು ಭರಖಾಸ್ತಾಯಿತು (ಶ್ರೀರಾಮ. ೨೫೪) ; ಈ ದರಬಾರು ಭರಖಾಸ್ತಾಗಲಿ (ಬಾಂಕ್. ೩೪೩). [← ಪಾರ. ಬರ್‌ಖಾಸ್ತ್, ಬರಖಿವಾಸ್ತ್ ; ಹಿಂ. ಮರಾ. ಬರಖಾಸ್ತ್, ಬರ್ಖಾಸ್ತ್]

**ಬರಗ** 'ಬರಗು' ನೋ.

**ಬರಗರಗ** 'ಬರಗರುಗ' ನೋ.

**ಬರಗರುಗ**, ಬರಗರಗ (ನಾ). ಒಂದು ಬಗೆಯ ಸಸ್ಯ; ಗರುಗದಲ್ಲಿ ಒಂದು ಬಗೆ : ಅಲಿಲೆಕಾಯಿ ತಾರೆಕಾಯಿ . . . ಅಮರದ ವಳ್ಳಿ, ಬರಗರುಗ ಇವಂ ಕಷಾಯವಿಟ್ಟು ಸೇವಿಸೆ ಶ್ಲೇಷ್ಮಜ್ವರಂ ತೀರ್ಗುಂ (ಸಕವ್ಯ. ೯೯). **ಬರಗರಗ**: ಹಿತ್ತಾಳೆ ಶುದ್ಧಿ : ಹೊನ್ನುಗೊನ್ನೆ ಸೊಪ್ಪು ಬರಗರ [ಬರಗರಗ] ಸೊಪ್ಪು ತುಂಬೆ ಯಾ ೩ ರಸಗಳನ್ನು ಸಮ ಮಾಡಿ ೭ ದಿನ ಇದರಲ್ಲಿ ಉನೇ ಹಾಕಿ ತೊಳೆದು . . . ಸ್ವಲ್ಪ ರಸ ಹಾಕಿ ಕರಗಿಸಲು ಬಣ್ಣ ಬರುವುದು (ಗಂರತ್ನ. ೦೬-೫). [ಬರ್$_1$ (<ಬಱ) + ಗರುಗ]

**ಬರಗಲೆ** (ನಾ). ಒಂದು ಬಗೆಯ ಆಭರಣ : ಸಂಗೆಗಿವು ಲಂಬಣಕ್ಕಿವು ಬರಗಲೆಗಿವು [ಪಾಠಾಂ. ಬರಗಲ್ಲಿಗಿವು] ಮುಂಗುಳ್ಗಳಿವ್ಮ ಮೇಖಲೆಗಿವು ನೂಪುರ ರಚನೆಗಿವೆಂದವನಾದರದಿಂದಂ ಕೊಯ್ದುರಾಯ್ದು ದಿವಿಜಾಂಗನೆಯರ್ (ಆದಿಪು. ೬-೬೯) ; ಬರಗಲೆಯುಂ ಕೊಪ್ಪುಂ ನೂಪುರಮುಂ ಲಂಬಳಮುಮಲ್ಲಿ ಮಲ್ಲಿಗೆಯ ಮುಗುಳ್ ಬಿರಿಮುಗುಳೆಂಬಿವು ತನಗಾಗಿರೆ ದೇಸೆಯ ಮಾಸ ರಿಕ್ಕೆಯುಂ ಪೊಸಯಿಸಿದಳ್ (ಶಾಂತಿಪು. ೬-೩೨). [?]

**ಬರಗಾಡು** (ನಾ). ನಿಸ್ಸಾರವಾದ ಕಾಡು–ಅಡವಿ ; ಬಂಜರುಭೂಮಿ: ಭೂಮಿ ಬರಗಾಡು ನಿಸ್ಸಾರ (ಭೂಪಿವ. ೪೦೪). [ಬರ್$_1$ (<ಬಱ)+ಕಾಡು$_2$]

**ಬರಗಾಲ** 'ಬಱಗಾಲ' ನೋ.

**ಬರಗಿ** 'ವರಗಿ' ನೋ.

**ಬರಗಿನಹುಲ್ಲು** (ನಾ). ಒಂದು ಬಗೆಯ ಹುಲ್ಲು; ಬರಗು: "ಕೋದ್ರಹರಿ– ಬರಗಿನ ಹುಲ್ಲು" (ಓಷಧಿ. ೪೦). [<ಬರಗು$_1$+ಹುಲ್ಲು (<ಪುಲ್)]

**ಬರಗು** (ಕ್ರಿ). ಬಾಚು ; ಗೋರು : ಬಯಲಿಂಗೆ ಕೈ ಚಾಚಿ ಬರಗುತ ಭೀಮ ಬಾ ಸಹಸ ಬಳಲಿದೆಯಲಾಯೆಂದು ಮೋಹದಿಂದ ಕಿಚ್ಚುಗೆದರುತ ಮನದಿ ಕರೆಯಲ್ಪಕಾರಿಯಂ ಅಚ್ಯುತನು ಹಿಂದಿರಿಸಿ . . . ಉಕ್ಕಿನೋಳ್ಮಾಡ್ದ ಭೀಮನಂ ನಿಲಿಸಿದರು ತಂದು ಮುಂದೆ (ಕುಹಂಗ. ೬೬-೨೨); ಕಾವ್ಯವೆಂದರೆ ನಮ್ಮಂಥ ಜೀವಿಯೇ ಅಲ್ಲದಿರುವಲ್ಲಿ ಅದರೊಳಗೆ ಆತ್ಮವನ್ನು ತುಂಬಿಸುವುದೆಂದರೆ . . . ಬಾನನ್ನು ಬರಗುವಂತೆಯೇ ಸರಿ (ಜಾತಿಏಕ. ೩೩೪).

**ಬರಗು**$_2$, ಬರಗ (ನಾ). ೧. ಒಂದು ಬಗೆಯ ಧಾನ್ಯ ; ಹಾರಕ : "ಸ್ಯಾಮಕಾಷ್ಠ ಬರಗುವದಕ್ಕುವಂತಾ ಪ್ರಿಯಂಗು ಕಂಗು ಸಮಾಖ್ಯಂ" (ಶಸ್ಯಕೋ. ೪೪-೦೬); ನೀವಿಕ್ಕುವ ಕೀರೆಗಂ ಬರಗಿನೋಗರಕ್ಕಂ ಪುಟ್ಟಿದವನಲ್ಲ (ಪಂಪಭಾ. ೨-೬೩); ಆದರದೆ ಜ್ಯೇಷ್ಠದಪರದ ಬೂದಿಯ ಮೃಗಶಿರದೆ (ರಾದಿ) ಕೊಂಡ ಮಟಿಯಿಂ ಬೆಳೆಗುಂ ಮೇದಿನಿ ಪೊಜಿಗಣ(ವರ) ನಾಲ್ಕು ಚಿ೦ಳಾದಡೆ ಪಾರಕ್ಕು ಬರ(ಅ)ಗು ಬೆಳೆಗುಂ ಸ್ವಲ್ಪಂ (ಅಭಿತು. ೯-೦೩೬). ೨. ಬೆಟ್ಟಗಳಲ್ಲಿ ಬೆಳೆಯುವ, ಬರೆಯುವ ಲೇಖನಿಯನ್ನು ತಯಾರಿಸಲು ಉಪಯೋಗಿಸುವ ಒಂದು ಬಗೆಯ ಕಡ್ಡಿಯಾಗುವ ಹುಲ್ಲು : 'ಬರಗಂಕಡ್ಡಿ' ಪರಾ. **ಬರಗ** : ೧. ಬರಗದ ಅನ್ನ ತಿನ್ನುವವ ಹೂರಿಗೆ ಬಯಸಿದ ಹಾಗೆ (ಗಾದೆ).

[ದೇ.॥ ತಮಿ. ವರಕು; ಮಲ. ವರಗು; ತೆಲು. ವರಗ, ವರಿಗೆ. / ಸಂ. ವರಕ, ವರುಕ./ಮರಾ. ಬರಗ]

**ಬರಗುಕಡ್ಡಿ** (ನಾ). ೧.=ಬರಗು$_2$ ೨ : ಕತೃಣಂ, ಪೌರಂ, ಸೌಗಂಧಿಕಂ, ಧ್ಯಾಮಂ . . . ರೌಹಿಷಂ – ೬ ಕಾಚೀಹುಲ್ಲು. ಕಾಚೀಕಡ್ಡಿ, ಹಂಚೀಕಡ್ಡಿ, ಬರಗುಕಡ್ಡಿ ಇವುಗಳೆಲ್ಲಕ್ಕೂ ಪೆಸರುಗಳು (ನಿಘಂಟು. ೦೫೦). ೨. ಬರಗಿನ ಹುಲ್ಲಿನ ಕಡ್ಡಿಯಿಂದ ಮಾಡಿದ ಲೇಖನಿ : (*).

[ಬರಗು$_2$ + ಕಡ್ಡಿ]

**ಬರಗೂರ್** (ನಾ). ಒಂದು ಊರಿನ ಹೆಸರು; ॥ ಬಳ್ಳಾರಿ ಜಿಲ್ಲೆಯ ಈಗಿನ ಬರಗೂರು : ಶ್ರೀ ಮಹೇನ್ದ್ರಾಧಿರಾಜನಾತಂ ಚೋರ ಮೊದಲಾದ ಶೇಷಾದಾಯಿಗರ ನಿಮ್ಮೂರ್ಲಂ ಕಿಡಿಪಿ ಪೃಥ್ವೀರಾಜ್ಯಂಗೆಯ್ಯುತ್ತ ಬರಗೂರೊಳ್ಬೀಡಂ ಬಿಟ್ಟು (ಎಕ. XII, ಶಿರಾ. ೨೪-೨; ಸು. ೯೦೦); ಶ್ರೀ ಪ್ರಿತುವೀವಲ್ಲವ ಪಲ್ಲವಕೊಲತಿಲಕ ಶ್ರೀಮನ್ನಯ್ಯದ್ದುಮ್ಮರಸಟ್ಟಿ [ಹ]ತುವೀರಾಜ್ಯಂಗೆಯ್ಯುದ್ದು ಬರಗೂರೊಳಿರೆ (ಶಾಇಶಾ. IX-i, ೪೦-೫; ೯೭೭).

[ಬರಗು$_1$ + ಊರ್]

**ಬರಗೆಡು** (ಕ್ರಿ). ಏನೂ ಇಲ್ಲದಂತೆ ಆಗಿ ಕಂಗೆಡು; ಗತಿಗೆಡು : ಆ ಬರಗೆಟ್ಟ ಬಡ ಹುಡುಗರು ಉಣ್ಣುವ ಸಂಭ್ರಮ ನೋಡಿ ಆ ಧಾರ್ಮಿಕ ವೈದ್ಯನಿಗೆ ಪರಮಸಂತೋಷವಾಯಿತು (ಮುಂಜಿಯು. ೪-೭೬); ಈ ನಂಜೇಲಿಂಗಭಟ್ಟನು ಬರಗೆಟ್ಟು ಅಲ್ಲಿದ್ದ ತಿಂಡಿಗಳನ್ನು ತಿಂದನು (ಶೀತಿಶಾ. II, ೬).

[ಬರ್$_1$ ( < ಬಱ) + ಕೆಡು$_1$]

**ಬರಟು** (ನಾ). (ಉಕ) ಹೂವು, ಕಾಯಿಗಳು ಆಗದಂಥ ತೊಗರಿಯ ಹಸಿಯ ಗಿಡ : ಬರಟಿನಿಂದ ಕಣದ ಕಸ ಹೊಡೆದು ತೆಗೆ (ಊಕ). 'ಬಱಲು' ಪರಾ. [?]

**ಬರಡಕೆಱೆ** 'ಬರಡಗೆಱೆ' ನೋ.

**ಬರಡಗೆಱೆ**, ಬರಡಕೆಱೆ (ನಾ). ಒಂದು ಕೆರೆಯ ಹೆಸರು (?) : ಅನ್ತ ಬನ್ದು . . . ಇಶಸ್ಯದಿಶಿ ಒಳಿಗೆಱೆಯ ಬರಡಗೆಱೆಯೊಳ್ಕುಡಿತ್ತು (ಎಕ. XVI, ತಿಪಟೂ. ೦೪೦-೬೩; ಸು. ೯೦೦). **ಬರಡಕೆಱೆ** : ಕೆಡಸೂರ್ ಪೂರ್ಬ್ಬಸ್ಯಾನ್‌ದಿಶಿ ಬರಡಕೆಱೆಯ ಮೂಡ ಕಡೆ ಗೋಡೆಬಳ್ಳವಗೆಱೆಯ (ವೃಕಂ. ೦೪೦೯, ೦೦-೬೪; ೯೦೦). [ಬರಡ ? + ಕೆಱೆ]

**ಬರಡಾ**, ಬರಡೀ, ಭರಡಾ (ನಾ). ಒಂದು ಬಗೆಯ ಅಡಕೆ ; ಹಣ್ಣು ಅಡಕೆ : ಬರಡಾಅಡಕೆ–ಬಹಳ ದೊಡ್ಡದಾಗಿ ಹಾಂಗೂ ಸಣ್ಣದಾಗಿರ

ಬಾರದು, ಮಧ್ಯಮ ಇರತಕ್ಕದ್ದು . . . ಇಂಥಾ ಮಾಲವೂ ಒಂದನೇ ನಂಬರದ ಬರಡಾಅಡಿಕೆ ಎಂದೆನಿಸಲ್ಪಡುತ್ತದೆ (ಮುಂಶಿಪ್ಪ್ರಾ. ೯೯). **ಬರಡೀ:** ಅಡಿಕೇಕಾಯಿ ಹಣ್ಣಾಗುವವರೆಗೆ ಬಿಟ್ಟರೆ ಅದರೊಳಗೆ ಮೇಲಾದ ಬರಡೀ ಅಡಿಕೆ ಹೊರಡುತ್ತದೆ; ಯೆಳಕಿನ ಕಾಯಿಯಲ್ಲಿ ಚಿಕಣೀಅಡಿಕೆ ಹೊರಡುತ್ತದೆ (ಕಭಾಗ. ೨೬೯). **ಭರಡಾ:** ಅವಳು . . . ಭರಡಾಅಡಿಕೆಯನ್ನು . . . ಮುಂದೆ ಹಿಡಿದಳು (ರಕ್ತರ್ಶ. ೨೧೬). [ ← ಮರಾ. ಬರಡಾ, ಬರಡೀ ]

**ಬರಡಿ** 'ಬಱಡಿ' ನೋ.

**ಬರಡೀ** 'ಬರಡಾ' ನೋ.

**ಬರಡು** 'ಬಱಡು' ನೋ.

**ಬರಡುಗಾಲ** (ನಾ). ಕ್ಷಾಮದ ಕಾಲ: ವಚನಸಾಹಿತ್ಯದ ದೃಷ್ಟಿಯಿಂದ ಹದಿಮೂರು ಹದಿನಾಲ್ಕನೇ ಶತಮಾನಗಳು ಬರಡುಗಾಲವೆಂದೇ ಹೇಳಬೇಕು (ಶೂನ್ಯಸಂ. ೦೯). [ಬರಡು (<ಬಱಡು) + ಕಾಲ]

**ಬರಡುಗೊಳಿಸು** (ಕ್ರಿ). ವ್ಯರ್ಥಗೊಳಿಸು ; ನಿಷ್ಪ್ರಯೋಜಕವನ್ನಾಗಿ ಮಾಡು : ಕಣ್ಣು ಗುಡ್ಡಿಯೆ ಆಗಿ ಕುರುಡುಗೊಳಿಸುವೆಯಾ ? ನೆರಳು ನೀಡುತ ಸಸಿಯ ಬರಡುಗೊಳಿಸುವೆಯಾ? (ಪಕ್ಷ್ಯರ್ಶ. ೬-೦೩). [ಬರಡು (<ಬಱಡು) + ಕೊಳ್$_1$ +— ಇಸು$_1$]

**ಬರಡುತನ** (ನಾ). ಮಕ್ಕಳಾಗದಿರುವಿಕೆ; ಬಂಜೆತನ : ಕೆಲವೊಮ್ಮೆ 'ಇ' ಜೀವಾತಿನ ಅಭಾವದಿಂದ ಹೆಣ್ಣುಮಕ್ಕಳಲ್ಲಿ ಮತ್ತು ಗಂಡಸರಲ್ಲಿ ಕೂಡ, ಬರಡುತನ ಬರಬಹುದು (ಆಹುಶಾ. ೬೬). [ಬರಡು (<ಬಱಡು)+— ತನ]

**ಬರಡುಭೂಮಿ** (ನಾ). ಬಂಜೆನೆಲ ; ಪಾಳುಭೂಮಿ ; ಬಂಜರು : ಬರಡುಭೂಮಿ ಬಂಗಾರದ ಭೂಮಿಯಾಗುತ್ತದೆ (ನವಜಿ. ೩೦). [ಬರಡು (<ಬಱಡು) + ಭೂಮಿ]

**ಬರಡುಮರ** (ನಾ). ಫಲ ಬಿಡದ ಮರ : ಎಲ್ಲಿಂದಲೋ ಸುಳಿಗಾಳಿ ತಾಕಿ ಬರಡುಮರದ ಒಂದೆರಡು ಎಲೆಗಳೂ ಉಲಿಯುವಂತೆ, ಅವಳ ತಲೆಯಲ್ಲಿ ಒಂದೆರಡು ವಿಚಾರಗಳು ಗುಜುಗುಜು ಮಾಡಹತ್ತಿದ್ದವು ((ಕಿರಾಳ. ೩೦). [ಬರಡು(<ಬಱಡು) + ಮರ$_1$]

**ಬರಡುಮಾತು** (ನಾ). ವ್ಯರ್ಥವಾದ ಮಾತು : ಸುಮ್ಮನೆ ಬರಡು ಮಾತಿನಿಂದೇನು ಲಾಭ ? (ರೂಢಿ). [ಬರಡು (<ಬಱಡು) + ಮಾತು$_1$]

**ಬರಡೆ** 'ಬಱಡೆ' ನೋ.

**ಬರಣ** (ನಾ). (?) : ಕೇಶವ ದೇವರಿಗೆ ಒನ್ದು ವರಹ ಕುಳದ ದಾಸರಿ ಬರಣ ತಿಪ್ಪ ಒನ್ದು ಬರಣ ತೋಟವನೂ ದೇವಸ್ವವಾಗಿ ಧಾರೆಯನೆಱದು ಕೊಟ್ಟೆವಾಗಿ (ಎಕ. VIII. ಸೊರಬ. ೩೨೯-೦೦ ; 1515). [ ? ]

**ಬರಣಿ** (ನಾ). ಕರಡಿಗೆ ; ಕರಂಡಕ : ಏಂ ಬಱದೆ ಪರಪುವ್ವೆ ಪಲವುಂ ಬರಣಿಯನಿರಿಸು ಕೆಲಕೆ ನೆಲವೆಲೆ ಪೇಟಾ ಪೊಂಬರಣಿಗೆಳೆರ್ದರ್ಕಂ ಚೆಂಬರಣಿ ಗವಿನಿತಱಂದೆ ತಣಿದಪವೀಗಳ್ (ಶಕಪ. ೬-೩೦) ; ಅರಣಿ ಕಡಿದರೆ ಬರಣೀ ಮದ್ದು ಸಾಲದು (ಗಾದೆ).

[<ಸಂ. ಭರಣೀ./ತಮಿ. ಮಲ. ಪರಣಿ ; ತುಳು. ಬರಣಿ, ಬರಣಿ ; ಕೊಡ. ಬರಣಿ ; ತೆಲು. ಬರಣಿ, ಬರಿಣಿ]

**ಬರತ$_1$** 'ಭರತಿ' ನೋ.

**ಬರತ$_2$** (ನಾ). ಒಂದು ಬಗೆಯ ವ್ಯಂಜನಪದಾರ್ಥ ; ಬಜ್ಜಿ : ಶಿಳ್ಳನ್ನ ಎಂಟುಹತ್ತು ರೊಟ್ಟಿಯ ಮಾಡಿ ಬದನೀಕಾಯಿಯ ಸುಟ್ಟು ಬರತವ ಬಡಿ ಅಲ ಮಾಗಣಿಬೇರು ಹುಣ್ಣಿಗಂಟಿಯ ಕಾಯಿ ಸಲಸಂದರೊಂದ್ಹತ್ತು ಸಲಸಿದೆನೊ ಶಿವನೆ (ಲೋಕಗೀ. ೯೩). [ ? ].

**ಬರತರಪು** 'ಬರತರಫು' ನೋ.

**ಬರತರಫ್** 'ಬರತರಫು' ನೋ.

**ಬರತರಫು**, ಬಡತರ್ಫ್, ಬರತರಪು, ಬರತರಫ್, ಬರತರ್ಫು, ಬರತರ್ಫು, ಬರ್ತರಫ್, ಬರ್ತರ್ಫ್, ಭರತರ್ಫು (ನಾ). ಉಚ್ಚಾಟನೆ ; ರದ್ದತಿ; ವಜಾ; ಕೆಲಸದಿಂದ ತೆಗೆದುಹಾಕುವಿಕೆ : ಪಾರ್ಲಿಮೆಂಟಿನವರು ಅರಸನಿಗೆ ಹಣ ಕೊಟ್ಟು ಬಕಿಂಗ್‌ಹಮನನ್ನು ಬರತರಪು ಮಾಡಬೇಕೆಂದು ಮತ್ತೆ ಹೇಳಿದರು (ಇಂಗ್ಲಂಡ. ೦೯೦); ೪೦೦೦ ಕುದುರೆ ಬರತರಪು ಮಾಡಿಸಿ (ಹೈದರ. ೩೯). **ಬಡತರ್ಫ್** : ಕೆಲವು ದಿವಸಗಳ ಕೆಳಗೆ ನಾನು ನಮ್ಮ ಬಡತರ್ಫ್ (dismiss) ಮಾಡಿದ ಆಳುಮಗನಿಗೂ ಒಂದು ತುಣುಕು ಮಾನಪತ್ರವನ್ನು ಕೊಟ್ಟೆನು (ಕಿರಾಳ. ೦೯೭). **ಬರತರಪು** : ಅವನು ಆ ಮಣೆಗಾರನನ್ನು ಬರತರಪು ಮಾಡಿಸಿದನು (ಕಥಾಮಂ. IV, ೩೦). **ಬರತರಫ್** : ಮೊದಲು ಹೈದರನು ನಾಲ್ಕು ಸಾವಿರ ಕುದುರೆಯ ವರನ್ನು ಈ ರೀತಿ ತೊಲಗಿಸಿ ಅವರ ಸೈನ್ಯವನ್ನು ಬರತರಫ್ ಮಾಡಿಸಿದನು (ಒಡೆಕ. ೬೨) ; ಇನ್ಸ್‌ಪೆಕ್ಟರು . . . ನನ್ನನ್ನು ಬರತರಫ್ ಮಾಡಿಬಿಟ್ಟರು (ಕ್ರೀಕಥ. ೭೬). **ಬರತರ್ಫು** : ಸಸ್ಪೆಂಡು, ಬರತರ್ಫು ಎಂದ ಕೂಡಲೆ 'ದಮ್ಮಯ್ಯ ಮಾಫಿ ಮಾಡಿ' ಎಂದು ವಿಧೇಯತೆಯನ್ನು ತೋರಿಸುವುದು (ಗರುಡಾ. ೯೩): **ಬರತರ್ಫು** : ಅಂಥಾ ನೌಕರನನ್ನು ಸಸ್ಪೆಂಡ್ ಮಾಡಬಹುದು, ಬರತರ್ಫು ಮಾಡಬಹುದು (ಗ್ರಾಮೂಕ. ೯೮). **ಬರ್ತರಫ್** : (ಕೃಸಗ. II, ೩೯೩). **ಬರ್ತರ್ಫ್** : ಜ್ವರ ನಿಂತರೆ ಬರ್ತಫ್ ಮಾಡುತ್ತಾರಲ್ಲಾ ಜ್ವರಾನೂ ಉಳಿಸಿಕೊಂಡು ಬಿದ್ದು ಕೋಡೇ ಇರೋಣ, ಅಂತ ಅನ್ನಿಸುತ್ತದೆ (ಹಂಗೂಂ. ೦೦೦) ; ಸೋಮು ಪ್ಯಾಸ್ ಆಗಲಿಲ್ಲ. ಆದುದರಿಂದ ತಂಡದಿಂದ ಅವನಿಗೆ ಬರ್ತರ್ಫ್ ಆಯಿತು (ಸ್ವಾಮಿಸ್ನೇ. ೦೨೯). **ಭರತರ್ಫು** : ಪರಾರತ್ತು ಮಾಡಿದವರು ಭರತರ್ಫಾಗಿ ಹೋಗುವಲ್ಲಿ ಮಾರ್ಗದಲ್ಲಿ ಅವರನ್ನೆಲ್ಲಾ ಲೂಟೀ ಮಾಡಿ (ಹೈದರ. ೩೯). [←ಹಿಂ. ಬರತರಫ್ ; ಮರಾ. ಬರತರಫ್, ಬರತರ್ಫ್, ಬರ್ತರ್ಫ್]

**ಬರತರ್ಫು** 'ಬರತರಫು' ನೋ.

**ಬರತರ್ಫು** 'ಬರತರಫು' ನೋ.

**ಬರದೆ** (ನಾ). ಒಂದು ನದಿಯ ಹೆಸರು ; ವರದಾನದಿ : ಮೂಡಲು ತಮ್ಮುಗೆಯ ಕಳ್ಳವೊಳೆ ಮೊದಲಾಗಿ ಬರದೆಯಿಂ ತೆಂಕ ಪೋಪ ಭಣ್ಣಕ್ಕೆ (ಎಇ. XIX, ೦೬೩-೦೬ ; 1075). [<ಸಂ. ವರದಾ]

**ಬರನು** 'ಬಱ' ನೋ.

**ಬರಪ** 'ಬರೆಪ' ನೋ.

**ಬರಬತ್ತ** (ನಾ). ಖುಷ್ಕಿ ನೆಲದಲ್ಲಿ ಬೆಳೆಯುವ ಬತ್ತ : ಪುಣಜಿ ಬತ್ತ : ನೀರಾವರಿ ಇಲ್ಲದ ಕಡೆ ಹೊಲಗಳಲ್ಲೇ ಬರಬತ್ತ ಬೆಳೆಯುತ್ತಾರೆ (ರೂಢಿ). [ಬರ್$_1$ (<ಬಱ) + ಬತ್ತ]

**ಬರಬಿಸಿಲು** (ನಾ). (ಹಸಿಯನ್ನು) ಒಣಗಿಸುವಂತಹ ಬಿಸಿಲು ; ಅತಿ ತಾಪದ ಬಿಸಿಲು : ಬರಬಿಸಿಲಿಂದ, ಹೊದೆಯದ ಅವನ ಮೈ ಬಾಡಿ ಬೆಂಡಾಗಿತ್ತು (ಹೇಮಕೂ. ೩೯). [ ಬರ್$_1$ (<ಬಱ)+ಬಿಸಿಲು (<ಬಿಸಿಲ್)]

**ಬರಬು** ' ಬರಂಹು ' ನೋ.

**ಬರಮ** 'ಬೊಮ್ಮ' ನೋ.

**ಬರಮಪ್ಪ** (ನಾ). ಬೊಮ್ಮ ; ಬ್ರಹ್ಮ : ಡೋಳಿನ ಮ್ಯಾಲ್ ಕೈ ಬರಮಪ್ಪ ಹಾಕ್ಯಾನು ತಾಳವ ಶಿವನಪ್ಪ ತಟ್ಯಾನ್ಯಾ , ಒಳ್ಳೊಳ್ಳೆ ಪದ ಗಳು ಹನುಮಪ್ಪ ಹಾಡ್ಯಾನು ಚೆಲುವ ಕನಕಪ್ಪ ಕುಣಿದಾನ್ಯಾ (ಕವಕ. ೦೨೦-೦೨). [ಬರಮ ( <ಬೊಮ್ಮ) + ಅಪ್ಪ$_1$]

**ಬರಮೋಡ** (ನಾ). ಅಕಾಲದ ಮೋಡ ; ನೀರಿಲ್ಲದ ಮೋಡ : ವಸಂತಪೂರ್ಣಿಮೆಯು ಭೃಗುವಾರದಾ ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳುವಿಲ್ಲ ; ನೋಡೊಂದೆ ಬರಮೋಡ ಬಾನಗಲ ಚಾಚಿ ನೋಹನ ಕಾಲದಾ ಪ್ರಲಯಮೇಘವೆನೆ ಮುಚ್ಚಿಹುದು (ಗೂಳ್ಳೊಕಾ. ೦೦-೨೬೩). [ಬರ್$_1$ (<ಬಱ)+ ಮೋಡ]

**ಬರಲು** 'ಬಱಲು' ನೋ.

**ಬರಲುಕಡ್ಡಿ** (ನಾ). ಪೊರಕೆಯನ್ನು ಕಟ್ಟಲು ಉಪಯೋಗವಾಗುವ ಗಿಡಗಳ ಒಣಗಿದ ಕಡ್ಡಿ : (ಪ್ರ್ಯಾಕಿ. ೦-೪).
[ಬರಲು (<ಬಱಲು) + ಕಡ್ಡಿ]

**ಬರಲುಕೊಂಬೆ** (ನಾ). ಎಲೆಗಳು ಉದುರಿ ಬೋಳಾದ ಕೊಂಬೆ : ಕಿಟಕಿಗೆದುರುಬದುರಾಗಿ ಉದ್ದವಾದೊಂದು ಮರದ ನೆರಳು ಬಿದ್ದಿತ್ತು. ಅದರ ಬರಲುಕೊಂಬೆಗಳ ಜಟಿಲಪ್ರತಿರೂಪ . . . ನುಣ್ಣುಗಲ್ಲು ನೆಲದ ಮೇಲೆ ಸ್ಪಷ್ಟವಾಗಿ ಮೂಡಿತ್ತು (ತ್ರಿಸರು. ೦೩೩).
[ಬರಲು (< ಬಱಲು) + ಕೊಂಬೆ$_1$]

**ಬರಲುಗಿಡ** (ನಾ). ಎಲೆಗಳು ಉದುರಿ ಒಣಗಿದ ಗಿಡ : ಒಂದು ಕವಲ ತುದಿಗೆ ಒಂದು ಗಿಡವು ಶೋಭಾಯಮಾನವಾಗಿ ಬೆಳೆದಿದ್ದು . . . ಇನ್ನೊಂದು ಕವಲಿನ ಮೇಲೆ ಒಂದು ಬರಲು ಗಿಡವು ಬೆಳೆದಿತ್ತು (ರಕ್ತರ್ಕ್ಷ. ೦೬೨). [ಬರಲು (<ಬಱಲು) + ಗಿಡ (<ಗಿಡು)]

**ಬರಲುವೋಗು** (ಕ್ರಿ). ಎಲೆಗಳು ಉದುರಿ ಬೋಳಾಗಿರು : ಮಾಗಿಗೆ ಬರಲುವೋದ ಬೂರುಗಮರಂ ಕೋಡುಕ್ಕೋಡಿನ ಕವಲ್ಗಳಗಳಿಂ ಮಲೆ ತಲೆಗೆ ಕೋಡು ಮೂಡಿದ ಕೆರನ ತೋರ್ಪಂತೆ (ಶ್ರೀರಾಮಾ. ೨೩೦-೮೯).
[ಬರಲು (< ಬಱಲು) + ಪೋಗು$_1$ (<ಪೋ$_1$)]

**ಬರವಣ** (ನಾ). "ಬರವಣಿಗೆ" (ಗಿರಿಬಿಂ. ಕೋಶ) : ಹಸುರು ಮಸಿಯಿಂ ಬರೆದುದಿದರ ಬಿನ್ನಣಮೇಂ ? ನಿನ್ನ ಕವನಕೆ ಕಾಲನಿಟ್ಟ ಟಿಪ್ಪಣಮೇಂ ? ಮುನ್ನನಿಂದಿಗೆ ಸಾಲವಿತ್ತ ಬರವಣವೊ ? ನಿಚ್ಚತೆಗೆ ನಮ್ಮ ನೋಲಯಿಸುವವುತಣವೊ ? (ಗಿರಿಬಿಂ. ೨೭-೨೩).
[ಬರೆ$_1$ + – ಅಣ]

**ಬರವಣಿಗ** (ನಾ). ಬರೆಯುವವನು; ಲಿಪಿಕಾರ : ಬಿರುದರು ಬರವಣಿಗರುಂ ಗವಟಿಗಳುಂ ಗಾತ್ರಿಗರುಮಯ್ವತ್ತೊಕ್ಕಲುಂ ಸಮಸ್ತ ನುರಂಗಳುಂ . . . ಪಾಮಶಕ್ತಿದೇವರಿಗೆ ಧಾರಾಪೂರ್ಬ್ಬಕಂ ಮಾಡಿ (ಕೊಲ್ಹಾ.ಶಾ. ೦೩-೬೬; 1186). [ಬರೆ$_1$ + – ವಣಿಗ$_2$ (< – ವಳಿಗ$_2$)]

**ಬರವಣಿಗೆ, ಬರವಣಿಗೆ**(ನಾ). ೧. (ಬರೆದ) ಅಕ್ಷರ ; ಲಿಪಿ : "ಲಿಪಿಃ, ಲಿಬಿಃ – ೨ . . . ಬರೆಯಲ್ಪಟ್ಟ ಅಕ್ಷರಗಳ ಆಕಾರಸ್ಥಿತಿಗೆ ಹೆಸರು ಶಾಸನದ ಲಿಪಿ ಮುಂತಾದ್ದು, ಬರವಣಿಗೆಗೂ ಹೆಸರುಗಳು" (ಸಿದ್ಧಾಂತಿ. ೨೩೯). ೨. ಬರೆಯುವಿಕೆ : ಇಗೊರ್ ಅಲೆಕ್ಸಾಂಡ್ರೊವಿಚ್ ಬರವಣಿಗೆ ಮುಗಿಸಿ ಕನ್ನಡಕವನ್ನು ತೆಗೆದಿಟ್ಟು "ಕುಳಿತುಕೊಳ್ಳಿ, ಕುಳಿತುಕೊಳ್ಳಿ" ಎಂದರು (ಶಾಲೆಮು. ೦೬೩). **ಬರವಣಿಗೆ :** ೩. ಬರೆದುದು ; ಬರಹ ; ಲೇಖನ : ಪಂಡಿತರ ಬರವಣಿಗೆಗಳಲ್ಲಿ ಸಂಸ್ಕೃತಪ್ರಚುರವಾದ ಭಾಷೆಯಿತ್ತು (ಕಸಾಇ. ೫೦).
[ಬರೆ$_1$ + – ವಣಿಗೆ]

**ಬರವಸ** 'ಭರವಸ' ನೋ.

**ಬರವಸಿಗ** 'ಭರವಸಿಗ' ನೋ.

**ಬರವಿಗ** (ನಾ). ಬರುವವನು ; ಆಗಮಿಸುವವನು : ಅನತಿ ದೂರದೊಳೊರ್ವಳ್ ಕೂರಿಸಿದ ಬರವಿಗನ ಬರವಿಂಗೆ ಶಯ್ಯಾಸನಮಂ ರಯ್ಯಂ ಮಾಡಿರಿಸೆ ಪೀಠಮರ್ದಕಂ ಸಾರ್ದು ನೋಡಿ (ಶಂಧ್ರುಪು. ೬೫-೬೦೫). [ಬರವು (<ವರ$_1$) + – ಇಗ)]

**ಬರವು** 'ವರ$_1$' ನೋ.

**ಬರವೂಲಿಕ** (ನಾ). ಒಂದು ಸ್ಥಳದ ಹೆಸರು : ಪೂರ್ವ್ವಸ್ಯಾಂ ದಿಶಿ ಬರವೂಲಿಕ ಸೀಮೆ (ಇಅ. VII, ೨೦೪-೪೪; ಸು. 10ನೆಯ ಶತ). [?]

**ಬರಷಣ** 'ಭರಷಣ' ನೋ.

**ಬರಸಿಡಿಲು** 'ಬಱಸಿಡಿಲ್' ನೋ.

**ಬರಸು$_1$** 'ವರಿಸು$_1$' ನೋ.

**ಬರಸು$_2$** 'ಬರೆಯಿಸಂ' ನೋ.

**ಬರಸು$_3$** (ನಾ). ಬರೆಯುವಂತೆ ಮಾಡುವಿಕೆ ; ಬರೆಸುವಿಕೆ : ಮನೆಯು ಸಾಲೆಯಾಗಬೇಕಾದರೆ ಈ ಬರಸುಗಳ ಅಗತ್ಯವೇನು ? (ರಂಗರೋ. ೦೨೬).
[ಬರೆ$_1$ + – ಸು$_3$]

**ಬರಹ** 'ಬರೆಪ' ನೋ.

**ಬರಹಗಾತಿ** (ನಾ). ಬರೆಯುವವಳು ; ಲೇಖಿಕಿ : ಬರಹಗಾತಿಯರ ಲೆಕ್ಕಣಿಕೆಗೆ ಇರುವ ಬಂಧನ ಇದೀಗ ಇಲ್ಲದಾಗಿದೆ (ಕನ್ನಕು. ೦೯೩೪-೩೯ ; ೦-೬೦). [ಬರಹ (<ಬರೆಪ) + – ಕಾತಿ$_1$]

**ಬರಹಗಾರ** 'ಬರೆಪಕಾಱ' ನೋ.

**ಬರಹಗಾರ್ತಿ** (ನಾ). = ಬರಹಗಾತಿ : ಮಹಿಳಾಬರಹಗಾರರು ; ಅರ್ಥಾತ್ 'ಬರಹಗಾರ್ತಿ'ಯರು (ರೂಪಸಂ. ೪೩).
[ಬರಹಗಾರ (< ಬರೆಪಕಾಱ) + – ತಿ$_1$ (<– ಇತ್ತಿ)]

**ಬರಹು$_1$** 'ಬರೆಪು' ನೋ.

**ಬರಹು$_2$** 'ಬರುಹು' ನೋ.

**ಬರಾಕು** (ನಾ). ತ್ವರೆ ; ಜೋರು; ರಭಸ : ರಾಮನ ಕಾಲುಗಳು ತಿರುಗಿ ಆಲಸ್ಯ ಗೊಳ್ಳಲಿಲ್ಲ. ಅವು 'ಬರಾಕಿ'ನಿಂದ ಮನೆಯ ಕಡೆಗೆ ಸರಿದುವು (ಮರಮ. ೪೬೨) ; ವೆಂಕಮ್ಮ . . . ಬರಾಕಿನಿಂದ ಗುಡಿಯತ್ತ ನಡೆದರು (ಕದ್ಮಸ. ೨೨೮). [← ಮರಾ. ಭರಾಕಾ]

**ಬರಾತ$_1$** 'ಪರಾತ' ನೋ.

**ಬರಾತ$_2$** 'ವರಾತ$_1$' ನೋ.

**ಬರಾಬರಿ$_1$**, ಬರಾಬ್ಬರಿ, ಬರೋಬರಿ$_1$, ಬರೋಬ್ಬರ, ಬರೋಬ್ಬರಿ, ಭರಾಭರಿ (ನಾ). ೧. ಸಮನಾದುದು; ಸರಿಯಾದುದು; ಉಚಿತವಾದುದು: ಈಗ ಬರಾಬರಿ ಆಯ್ತು ನೋಡು (ಶಂದುಬಿ ೫೨); ನೀನನ್ನೋದೂ ಒಂದು ರೀತಿಯಿಂದ ಬರಾಬರಿ (ಧರ್ಮಕಿ. ೬೬). ೨. ಸುವ್ಯವಸ್ಥೆ; ಓರಣ; ಅಚ್ಚುಕಟ್ಟು : ಬಿಡಿಸುತಲಾಗ ಬರಾಬರಿಯನು ಸರ್ವರೊಡಗೂಡಿ ನಿಂದು ಕೊಂಡಿರಲು (ಕ್ಷ್ಯಾಶಕ. ೪೦-೩೪); ರಕ್ಕಸೇಶ್ವರ ಬರಲ್ಕೆಲಬಲದಿ ಕರಕ ಕರದೀಪಿಕೆಗಳು . . . ಆಭರಣಂಗಳಾರವಂಗಳು ಬರಾಬರಿಯ ಬಿಡಿಸುತ ಮುಂದೆ ಧೋರಣೆಯೊಳ್ಳೆತರುತಮಿರ್ದುದು (ನಂಕಾರಾ. ೫-೬-೨೬). **ಬರಾಬ್ಬರಿ :** ೧. ಬರಾಬ್ಬರಿ ಏನೇ ಆದರೂ ಮದವಿ ಇದೇ ಊರಾಗ ಮಾಡೂದು (ತಿರುಗು. ೫೪). **ಬರೋಬರಿ$_1$ :** ೧. "ಬರೋಬರಿ" ವ್ಯೆಲುದ್ದ ಹೆಸರಿನ ಸೋಮಯಾಜಿಗಳು ಉತ್ತರಿಸಿದರು (ನಡಿದಾ. II ೯೦೦); ಅಂತೂ ನನ್ನ ಮಾತು ನಿನಗೆ ಬರೋಬರಿ ಅನಿಸಿತಲ್ಲ (ಕಾಗೆ. ೬೯). **ಬರೋಬ್ಬರ :** ೧. ಬರೋಬ್ಬರ ಆತು (ಥಲಸಂ. ೬೦). **ಬರೋಬ್ಬರಿ :** ೧. ನಮ್ಮ ಡಾಕ್ಟರ ಹುಣಸೀಕಟ್ಟಿಯವರಲ್ಲಿ ಹೋದರ ಎಲ್ಲಾ ಬರೋಬ್ಬರಿ ಆಗತದ (ಅಪಪಾ. ೦೨೪); ನಿಮ್ಮ ಪ್ರೊಸೀಜರ ಬರೋಬ್ಬರಿ ಇರಬೇಕು (ಗಂಮೂಬು. ೪೨). **ಭರಾಭರಿ :** ೨. ತತ್ಸಭೆಯೊಳಾ ನಂದಿಯುಮ್ಮಹಾಕಾಳರ್ ಭರಾಭರಿಗಳಂ ಮಾಡುತಿರ್ದರತಿಭಕ್ತಿಯಿಂದೆ (ಕಣಪು. ೨-೨೬). 'ಭರಾಭರಿಗೊಡು' ಪರಾ.
[← ಹಿಂ. ಬರಾಬರ್, ಬರಾಬರೀ, ಬರೋಬರ್ ; ಮರಾ. ಬರಾಬರ್, ಬರಾಬರೀ, ಬರೋಬರ್, ಬರೋಬರೀ]

**ಬರಾಬರಿ$_2$**, ಬರೋಬರಿ$_2$, ಬರೋಬ್ಬರ್ (ಅ). ಸರಿಯಾಗಿ ; ಸಮನಾಗಿ; ತಕ್ಕುದಾಗಿ : ಈಗ ನನ್ನ ಮನಸ್ಸು ಬರಾಬರಿ ಇಲ್ಲ (ಸಮಜೀ. ೦೨೬); ನನ್ನ ಖೋಲಿ ಕಸ ಉಡಗಿ ಟೇಬಲ್ಲೊರಸಿ ಎಲ್ಲಾ ಸಾಮಾನು ಬರಾಬರಿ ಇಟ್ಟು ಬಾ (ಧನಂಜ. ೫). **ಬರೋಬರಿ$_2$ :** ಹಾಗಾದರೆ ಉತ್ತರ ಹೇಗೆ ಬರೋಬರಿ ಬಂತು? (ಶಿರಾಥ. ೬೬) : ದಾದಲ್ಲಾ ಬರೋಬರಿ ಹೇಳಿದ ನೋಡ ಶಕೀ (ದೀಶಹ. 11, ೩೦). **ಬರೋಬ್ಬರ್ :** ಸೀಪು

ಬರೋಬ್ಬರ್ ಕುಲಕರ್ಣಿ ಅನ್ರಪ್ಪ ಸಾಕು (ವೃದ್ಧಪಿ. ೯೦). [< ಬರಾಬರಿ$_1$]

**ಬರಾಬರಿಗೆಯ್,** ಬರಾಬರಿಗೈ (ಕ್ರಿ). ೧. ವ್ಯವಸ್ಥೆಗೊಳಿಸು ; ಸರಿಗೊಳಿಸು : ಗಲಭೆ ಬೇಡ . . . ವಿಸುಕದಿರಿ ಎಂದು ಸಲೆ ವೇತ್ರಕರ್ ಬರಾಬರಿಗೆಯ್ಯುತ್ತಿರ್ದರಾ ಭಾಳನೇತ್ರನ ಸಭೆಯೊಳು (ಪಂಪಶಾ. ೩-೩೬). **ಬರಾಬರಿಗೈ :** ೨. (ಅಲಂ) ಇಲ್ಲವಾಗಿಸು : ಮೇರು ಮಂದರಗಳೆನೆ ಬರುವ ಪೆರ್ದೆರೆಗಳನ್ನೂರುವೇಗದಿ ಬರಾಬರಿಗೈದು ನೀರಧಿಯ ಪೀರುವವೊಲ್ಬೈತಪ್ಪ ಮಾರುತಿಯ ನಿಟ್ಟಿಸುತ (ಪಂಕಾರಾ. ೩-೦-೨೬). [ಬರಾಬರಿ$_1$+ಗೈ (<ಕೆಯ್$_1$)]

**ಬರಾಬರಿಗೈ** 'ಬರಾಬರಿಗೆಯ್' ನೋ.

**ಬರಾಬರಿಗೊಳಿಸು** (ಕ್ರಿ). ಸರಿಮಾಡು ; ನೇರಗೊಳಿಸು ; ವ್ಯವಸ್ಥೆಗೊಳಿಸಂ : ದನುಜವನಚರರ ನೆರವಿಯು ಬರಾಬರಿಗೊಳಿಸಿ ರುಜುಪಥಂಗೈದರಾಗ (ಪಂಕಾರಾ. ೬-೩೩-೦೯). [ಬರಾಬರಿ$_1$+ಕೊಳ್$_1$+ – ಇಸು$_3$]

**ಬರಾಬ್ಬರಿ** 'ಬರಾಬರಿ' ನೋ.

**ಬರಾಯಿಸು** 'ಭರಾಯಿಸಂ' ನೋ.

**ಬರಾರ** (ನಾ). ಒಂದು ಬಗೆಯ ತೆರಿಗೆ : ಚಾಂದಬೀಬಿಯು ಬಹು ಶೌರ್ಯದಿಂದ ಅದನ್ನು ರಕ್ಷಿಸಿದಳು ; ಬರಾರವನ್ನು ಕೊಟ್ಟು ಅಕಬರನ ಕೂಡ ಒಪ್ಪಂದ ಮಾಡಿಕೊಂಡಳು (ಹಿಂದುಇ. ೦೩೯). [← ಪಾರ. ಹಿಂ. ಬರಾರ್]

**ಬರಾವರ್ದು**(ನಾ). ೧. ಗಣನೆ; ಲೆಕ್ಕಾಚಾರ. ೨. ವಂಶಪಾರಂಪರ್ಯವಾದ ಹಕ್ಕನ್ನು ನಮೂದಿಸುವ ಸರ್ಕಾರಿ ಲೆಕ್ಕ : ಆಗ ಗೌಡರ ಬರಾವರ್ದು ಉಳಿಸಲಿಕ್ಕೆ ಮತ್ತು 'ಸಸ್ಪೆಸಿ' ಡಿಸ್ಮಿಸಿ ತಪ್ಪಿಸುವುದಕ್ಕೆ ಗೌಡರ ರುಜುವನ್ನು ಶಾನುಭೋಗರು ಫೋರ್ಜರಿ ಮಾಡಿದ್ದುಂಟು (ಪಪ್ಪೂರು. ೦೫೪); ಛತ್ರ, ದೇವಸ್ಥಾನ, ಮಠ . . . ಇವು ಮೊದಲಾದ ಮುಜರಾಯಿ ಬಾಬುಗಳನ್ನು ಖಾವಂದರವರು ವಿಚಾರಿಸಿ ಅಭಿವೃದ್ಧಿಪಡಿಸಿ ಇದರ ಸಂಬಂಧವಾದ ಬರಾವರ್ದುಗಳನ್ನೆಲ್ಲ ಆಯಾ ಫೌಜುದಾರರು ತರಿಸಿಕೊಂಡು ತನಿಖೆ ಮಾಡಿ . . . ನೋಡಿಕೊಳ್ಳಬೇಕೆಂತಲೂ ಸನ್ ೧೮೨೬ರಲ್ಲಿ ಹುಕುಂನಾಮ ಸಾದರ್ಮಾಡಿದರು (ಮಹಾಪಂ. II, ೩೩). [← ಹಿಂ. ಬರಾವರ್ದ್; ಮರಾ. ಬರಾವರ್ದ್, ಬರಾವರ್ದೀ]

**ಬರಾವರ್ದುದಾರ** (ನಾ). ಬರಾವರ್ದಿನ ಪಟ್ಟಿಯಲ್ಲಿ ಹೆಸರಂ ನಮೂದಾಗಿರುವ ವ್ಯಕ್ತಿ : ಆಖೈರ್ ಬರಾವರ್ದುದಾರರ ಅಥವಾ ಅವರ ಕುಟುಂಬದವರ ಪೈಕಿ ಯಾರಿಗೆ ಹೆಚ್ಚು ಯೋಗ್ಯತೆಯುಂಟೆಂದು ಡೆಪ್ಯುಟಿ ಕಮಿಷನರವರಿಗೆ . . . ತೋರುತ್ತದೆಯೋ ಅಂಥಾವರನ್ನು . . . ಚುನಾಯಿಸತಕ್ಕದ್ದು (ಗ್ರಾಪಾಶ. ೯೭); ಬರಾವರ್ದುದಾರ ಶ್ಯಾನುಭೋಗ ವಸೂಲಾದ ಕಂದಾಯದ ಹಣವನ್ನು ದಸು. (ದುರುಪಯೋಗ) ಮಾಡಿದ್ದಾನೆಂದು, ಅವನನ್ನು ಸಸ್ಪೆಂಡ್ ಮಾಡಿ ನಂಜಪ್ಪನೆಂಬುವನನ್ನು . . . ನೇಮಿಸಿದ್ದರು (೯೦೫. ೦೩೩). [ಬರಾವರ್ದು + – ದಾರ$_4$]

**ಬರಿ$_1$** (ನಾ). ೧. ಪಕ್ಕ; ಬದಿ; ಪಂಗ್ಗುಲು : 'ಕುನ್' (ಗುಡ್ಡ)+ಬರ (ಪಕ್ಕ) ಎಂದರೆ 'ಗುಡ್ಡದ ತಪ್ಪಲು' ಎಂಬುದಾಗಿ ಸಾರ್ಥಕತೆಯೊಡನೆ ಆ 'ಕುಮ್ಮರಿ' ಪದವು ರೂಪುಗೊಂಡಿರಬೇಕು (ಪಾಡೋಕ. ೨೯೬). ೨. ಪಕ್ಕೆ; ಅಳ್ಳೆ : "ಬರಿ ಪಕ್ಕಮುದಕ್ಕು" (ಶಪಕಂ. ೦೯೦); ಪಱಿದವು ಬರಿ ಮುಱಿದ × × ನಿಟ್ಟೆಲ್ವೆರಡು ತೆಱಿದವು (ಎಕ. IV, ಹಗ್ಗಡ. ೦೦೬-೦೯; ಸು. ೫೩೦); ಅಂತು ಚಾತುರ್ದಂತವೊಂದೊಂದಱೊಳ್ ತಾಗಿ ಕಳ್ಪಱುವಲ್ಲಿ ತಲೆಗಳ್ ಪಱಿಯೆ ಬರಿಗಳ್ ಮುಱಿಯೆ ತೊಡೆಗಳುಡಿಯೆ (ಹಂತಪಾ. ೦೯-೫೩ ವ); ಧರಣಿಪಾಲನ ತೆಗೆದು ಭೀಮನ ಬರಿಯನೆಚ್ಚನು. . . ಜವಗೆಡಿಸಿದನು ನಿನ್ನಾತನನಿಲಜನ (ಕುಪ್ಪಾಕ. ೦೯-೨). 'ಬದಿ'$_2$ ಪರಾ. [ ದೇ. ॥ ತುಳು. ಕೊಡ. ತೆಲು. ಬರಿ ]

**ಬರಿ$_2$** 'ಬಱು$_2$' ನೋ.

**ಬರಿಕೆಯ್** 'ಭರಿಕೆಯ್' ನೋ.

**ಬರಿಕ್ಕೆ$_1$** 'ಬಱುಗೆಯ್$_2$' ನೋ.

**ಬರಿಕ್ಕೆ$_2$** 'ಭರಿಕೆಯ್' ನೋ.

**ಬರಿಕೋಲು** (ನಾ). ರಸ ಹೀರಿದ ಕಬ್ಬು; ರಸವಿಲ್ಲದ ಕಬ್ಬು : ಆಲೆಗವ್ವಿಕ್ಷುದಂಡವನಿಕ್ಕಿ ತಿರುಹಿ ಮರುಕೋಲುಗಳನಿಕ್ಕಿ ಬರಿಕೋಲುಗಳ ಬಿಸುಟವೋಲ್ಪತ್ತಳುವಿನೋಳ್ಬಳದ ಫಲಜಾಲವನ್ನಿಳುಪಿದಂ (ಕುರಂಗ. ೯೦-೬). [ ಬರಿ$_2$ (<ಬಱಿದು)+ಕೋಲು$_1$ (<ಕೋಲ್$_1$) ]

**ಬರಿಗಂಡ** (ನಾ). ಪಕ್ಕೆಯ ಮಾಂಸಖಂಡ : ಬರಿಗಂಡಂ ಪಿಣಿಲೇಱಿ ರೋಮಮುಡಿದಿರ್ಪನ್ನಾಗೆ ಮುಂಗಾಲಗಲ್ಕುರೆ ಬಿರ್ಪುರ್ವೆ . . . ಕೋಟ್ಳುಟ್ಟೆ ಪೆರ್ನೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ಕ್ರೋಕರಂ ಸೂಕರಂ (ಕಂದ್ರಪ. ೩-೬೦). [ಬರಿ$_1$ + ಕಂಡ$_1$]

**ಬರಿಗಡಗ** (ನಾ). ಕುದುರೆಯ ಪಕ್ಕೆಗಳ ಸುತ್ತ ಹಾಕುವ ತಂಗು,— ಚರ್ಮದ ಸುತ್ತುಪಟ್ಟಿ : ಬರಿಗಡಗ ಕೀಳ್ಕಂಬಿ ದುಕ್ಕುಡಿಯುರುಗು ಗಡಿಯಣ ಮೊಗವಡಂಗಳು ತುರಗವದನದಲೊಪ್ಪಿರಲು ತಾ ಪಕೆಯುನಳವಡಿಸಿ. . . ಪರಿಪರಿಯ ಹಕ್ಕರಿಕೆಯಲಿ ಬೀಸಿದರು ಚೌರಿಗಳ (ಕುಪ್ಪಾಶ. ೯-೯೮) [ಬರಿ$_1$ + ಕಡಗ$_1$]

**ಬರಿಗಾಲು** 'ಬಱಿಗಾಲು' ನೋ.

**ಬರಿಗೆರೆ** 'ಬಱುಗೆಱೆ' ನೋ.

**ಬರಿಗೈ$_1$** 'ಬಱುಗೆಯ್$_1$' ನೋ.

**ಬರಿಗೈ$_2$** 'ಬಱುಗೆಯ್$_2$' ನೋ.

**ಬರಿಚು** (ನಾ). ಬರ್ಚಿ; ಬರ್ಜಿ; ಈಟಿ : ಮುಂದಿಟ್ಟ ಬರಿಚಿನಿಂ ವ್ಯತ್ಯುವಿನ ಸುರುಚಿಯಿಂ ರಚಿಸಿದೊಲು ರಂಜಿಸಿತು ರಣಮಂಡಲ (ಕರಕಂ. ೨೬-೨೮). [< ಬರ್ಚಿ]

**ಬರಿದಲೆ** 'ಬಱುದಲೆ' ನೋ.

**ಬರಿದು** 'ಬಱಿದು' ನೋ.

**ಬರಿದೆ** 'ಬಱಿದೆ' ನೋ.

**ಬರಿಮನ** 'ಬಱುಮನ' ನೋ.

**ಬರಿಮಾತು** ' ಬಱುಮಾತು ' ನೋ.

**ಬರಿಮೈ** ' ಬಱಿಮೆಯ್ ' ನೋ.

**ಬರಿಯ$_1$** (ನಾ). ದೇವಸ್ಥಾನದ ಸೇವಕ : ದೇವಸ್ಥಾನದ ಸೇವಕರು (Temple Servants) ಅಂಬಲವಾಸಿ, ಬರಿಯ, ದೇವಡಿಗ, ದೇವಾಳಿ . . . ಸ್ಥಾನಿಕ, ವಾರಿಯಹ್ (ಕುಳುಪಾ. ೦೬೨). [?]

**ಬರಿಯ$_2$** ' ಬಱಿದು ' ಪರಾ.

**ಬರಿಯಾಟ** ' ಬಱಿಯಾಟ ' ನೋ.

**ಬರಿಯಿಸು** ' ವರಿಸು$_1$ ' ನೋ.

**ಬರಿಯೂರ್** (ನಾ). ಒಂದು ಊರಿನ ಹೆಸರು : ಮಾದೆಯೂರ ಸಾನ್ನಿಪಮ್ಮಂ ಬರಿಯೂರನಿಱಿಯೆ ಬಳಗಾಱರ ಕೋಕರಂ ಪನುವಲವಳ್ಳಿಯುಳಿಟ್ಟು ಪುಯ್ಯಲಂ ಪರಿದು ಮಾರ್ಬ್ಬಲಮಂ ಕಳ್ತಱಿದು ಸ್ವರ್ಗಾಲಯಕ್ಕೆ ಸನ್ದಂ (ಎಕ. VIII, ಸೊರಬ. ೩೩-೩; ೯೭೪). [ಬರಿ$_1$ + ಊರ್]

**ಬರಿಯೆಲ್** ' ಬರಿಯೆಲ್ವು ' ನೋ.

**ಬರಿಯೆಲುವು** ' ಬರಿಯೆಲ್ವು ' ನೋ.

**ಬರಿಯೆಲ್ವು,** ಬರಿಯೆಲ್, ಬರಿಯೆಲುವು (ನಾ). ಪಕ್ಕೆಯ ಎಲುಬು ; ಪಕ್ಕೆಯ ಮೂಳೆ : ವನಿತೆಯ ಕೇಶಮಂ ಸಭೆಯೊಳೆನ್ನನುಜಂ ತೆಗೆವಲ್ಲಿ ಗಂಡನಾಗನೆ ಭಗದತ್ತನಾವೆ ಬರಿಯೆಲ್ವುಡಿವನ್ನೆಗಮೊತ್ತೆ ಗಂಡನಾಗನೆ (ಗದಾಯು. ೩-೨೬) ; ಮುನಿಪತಿಯ ತೋರ್ಪ ಬರಿಯೆಲ್ವಿನ

ಪುದುವಿಂ ಬೞಿದಿವಾಱುತಿರ್ಪಿರಪಿಂ ಕಾಪಿನ ಸುಟ್ಟ ಕಾಡಿವೆಸೆ ಕರ್ಗನೆ ಕಸಿತುದು ಮಲದ ಮುಱಿಯ ಮುಸಕದನಂಗಂ (ಅರ್ಜನೀ. ೧ ೮೬). **ಬಱಿಯೆಲ್** : ಮೂಱಿಯ ಕಂಭಮಿಲ್ಲ ಸಿಡುಯೆಲ್ವಿನ ಬೆಮ್ಮರನೀಕಿ ಪತ್ತಿ ಕೊಂಡೋಳಿಯಿ ಸೀಳ್ದು ಸಂದ ಬಱಿಯೆಲ್ . . . ಅಮೇಧ್ಯಪೂರ್ಣ ದೇಹಾಳಯಮಿಂತಶುದ್ಧಂ (ಚೀವಸಂ. ೧೪೦-೨೨). **ಬಱಿಯೆಲುವು** : ಉರದ ಬಱಿಯಲುವನೇಣಪಂತಿರಲಲರಿಂ ನಡುಗುತಂ ತಪಸ್ವಿಯ ಕೊರಲೊಳ್ ಕರಮೆಸೆದು ತೋಱಿದುದು ತಾವರೆದಂಟನ ಮಿಸುಪ ನೂಲ ಪೊಸ ಜನಿವಾರಂ (ಕಾದಂಪೂ. ೨೦೭); ಖರ ನಕರಸಿಕರದಿಂ ಬಱಿಯೆಲುವ ನುಗ್ಗೊತ್ತಿ ಕರುಳ ಮಾಲೆಯ ಸೀಳಿ ತೆಗೆವ ಪುಲಿಯಿಂ (ತ್ರಾ ವಸಂ. ೯-೭೪).

[ಬಱಿ₁ + ಎಲ್ವು]

**ಬಱಿವದಣೆ** ' ಬಱಿವದನೆ ' ನೋ.

**ಬಱಿವದನೆ**, ಬಱಿವದಣೆ, ಬಱುವದಣೆ, ಬಲಿವದನೆ (ನಾ). ಒಂದು ಬಗೆಯ ಔಷಧೀಸಸ್ಯ, —ಮೂಲಿಕೆ ; " ನೆಲಗುಳ್ಳ " (ಲೋಕೋಪ. ೯-೨೦ ಟೀಕ) : ಬಱಿವದನೆಯುಮ್ಮುತಲತೆ ನಾಗರಮೆಂಬಿವಿನಿತಱ ಕಷಾಯಮುಂ . . . ಕುಡಿಯಿಸುಗೆ (ಲೋಕೋಪ. ೯-೨೦); ಸುಂಟಿಯುಮ ಮದುರ್ಪಳ್ಳಿಯುಂ ಪುಷ್ಕರಮೂಲಮುಂ ಬಱಿವದನೆಯುಂ ಜ್ವರದ ಕೇಡು (ರಟ್ಟಮ. ೯-೧೦೬). **ಬಱಿವದಣೆ** : ಒದವಿದರೆ ಬಿಳಿದೆನಿಪ ಬಱಿವದಣೆಯ ಕಿಱುದೆಂಗು ನೆಲ್ಲಿಯೆಂಬನಿತಱ ಮೂಲದನಿರ್ಕೆಯ್ಯೆಡೆಯೊಳ್ ತೆಂಕದೆಸೆಯೊಳಱ . . . ನೀರಕ್ಕುಂ (ಲೋಕೋಪ. ೫-೦೭); ಬಱಿವದಣೆ ಲೊಕ್ಕ . . . ವಿಷನಾಗರ ಲಶುನಂಗಳೊಳುಪ್ಪಂ ಬೆರಸುಗೆ ಪವಣಱಿಗೆ ಪಿಂಡ ಮಾರೋಗ್ಯಕರಂ (ಅಶ್ವಶಾ. ೭-೩೩). **ಬಱುವದಣೆ** : ಬಱುವದಣೆ ತುಱುಚಿಯೂಸಡಿಯೆರನ ಫಲಂ . . . ಕಣ್ಗೆಸಲ್ ವಿಷಮಱಿಗುಂ (ಖಸುದ. ೬-೨೬). **ಬಲಿವದನೆ** : ನೆಗ್ಗಿಲು, ಬಲಿವದನೆ, ಪುಷ್ಕರಮೂಲ—ಇವು ಪ್ರತ್ಯೇಕ . . . ನಾಗಳ ನೀರಿನಲ್ಲಿ ಹಾಕಿ . . . ಕಾಸಿ (ಸಕವೈ. ೨೫೮).

[? + ಬದನೆ]

**ಬಱಿವೊನಲ್**, ಬಱಿವೊನಲು (ನಾ). ದಡ ಸೂಸಿ ಹರಿಯುವ ಪ್ರವಾಹ; ದಡವನ್ನು ಮೀರಿ ಹರಿಯುವ ಪ್ರವಾಹ : ಕಿಱುಮಱಲ ದಿಣ್ಣೆಯೊಳ್ ಪಱಿವ ಬಱಿವೊನಲೆಸೆದುವೋರೊಂದು ತಾಣದೊಳ್ (ಅವಂಪು. ೯-೦೭ ರಗಳೆ). **ಬಱಿವೊನಲು** : ಕಲ್ಪಮೇಘದ ತಡೆಯ ಬಿಟ್ಟಂತೆ ಬಱಿವೊನಲು ಪಱಿವುತೆಯ್ದುದು (ಸೌಂದಪು. ೨-೭೫). ' ಪರಿವೊನಲ್ ' ಪಾ.

[ಬಱಿ₁ + ಪೊನಲ್]

**ಬಱಿವೊನಲು** 'ಬಱಿವೊನಲ್' ನೋ.

**ಬಱಿವೊಯ್ಲು** (ನಾ). ಪಕ್ಕೆಯ ಮಿಡಿಯುವಿಕೆ; ಪಕ್ಕೆಯ ಮಿಡಿತ : ಪೆತ್ತ ಜೀರ್ಕೊಳವಿವೋಲ್ ಮೂಗೊತ್ತೆ ರಕ್ತಾಂಬುವಂ ಬಱಿವೊಯ್ಲುವೆರ್ನಿಱಿರ್ಚೆ ಬಿಕ್ಕುಳಿಕೆ (ರಗರ. ೪-೦೯೦).

[ಬಱಿ₁ + ಪೊಯ್ಲು (< ಪೊಯಲ್) ]

**ಬಱಿಸ**, **ವರಿಶ**, ವರಿಷ, ವರಿಸ, ವರುಶ, ವರುಷ, ವಾರಿಷ (ನಾ). ೧. ಸಂವತ್ಸರ ; ವರ್ಷ : "ಬಱಿಸಮೆಂದು ವರ್ಷಂ" (ಕಶಶಾ. ೫೭-೨೪೭); ಸ್ಮರಿಯಿಪನಿರ್ಪತ್ತಿಬ್ಬಾಸಿರಬಱಿಸ [ಶಾಕಾಂ. ವರ್ಷ]ಕೊರ್ಮೆ ಮನದೊಳುಣಿಸಂ (ಆದಿಪು.೬-೦೬); ಬಱಿಸ ಪನ್ನೆರಡಾದ ಬಳಿಕಾರೊಳಮೊಂದುಮೆರಸದೆ ಪೆಱದೆಗೆದಿಹುದು (ಹರಿಬ. ೪-೩೪); ತಱಗೆಲೆಯುಂಡು ಮೂಱು ಬಱಿಸಂ . . . ಗಾಳಿಯನುಂಡು ಮೂಱು ಬಱಿಸಂ, ನಿರಾಹಾರಂ ಮೂಱು ಬಱಿಸಂ. ಕಟ್ಟುಗ್ರಂ ತಪಂಗೈವಂ (ರಾಮಾಶ್ವ. ೫೫-೦೪). ೨. ಮಳೆ ; ವೃಷ್ಟಿ : "ಬಱಿಸಮೆನೆ ವೃಷ್ಟಿಯೊಳ್ ವರ್ಷದೊಳ್ ಸಲೆ ಬರ್ಕುಂ" (ಕಶರ. ೬೦). **ವರಿಶ**: ೧. ಸ್ವಸ್ತಿ ಸತ್ಯವಾಕ್ಯನ ಪೆರ್ಮಾನಡಿಗಳ ಪಟ್ಟಂಗಟ್ಟಿದ ಪದಿನಯ್ದು ವರಿಶದನ್ದು ಮಱಿಯರ ಬೂವಯ್ಯನ ಮಗಂ ಬದಿಯಾಯ್ತು ತುಱುವಸಿಕ್ಕಿಸಿ ಕಾದು ಸತ್ತು (ಎಕ. II, ೩೯೪-೭ ; ೫೫೪ ?). **ವರಿಷ** : ೧. ದುರ್ಮ್ಮತಿ ಎಮ್ಬ ವರಿಷಂ ಪ್ರವರ್ತಿಸೆ (ಬೊಂಕಶಾ. ೧೯೩೪, ಬಂಕಾಪುರ. ೦೭ ೫;೫೭೩); ಶಕ ನೃಪಕಾಲಾತೀತ ಸಂವತ್ಸರಙ್ಗಳೆಱ್ನೂಱ ಎಣ್ಬತ್ತೆಱನ್ದು ವರಿಷದನ್ದು ಸಿಂಘರಗಣದ ನಾಗನಾಣ್ಯಬಾಜ್ಯರ್ಪ್ಪಡೆದೋರತ್ತಿಗೇರಿಯ ಬಱ ಇದಕ್ಕೆ ಸಾಕ್ಷಿ (ಕಇ. II, ೫-೧೦; ೮೫೪). **ವರಿಸ** : ೧. ಸ್ವಸ್ತಿ ಸಕ ನ್ರಿಪಕಾಲಮೆಣ್ನೂಱ ಪನ್ನೊನ್ದನೆಯ ವರಿಸಮಾಗೆ (ಎಕ. VI, ತರೀಕೆ. ೬೭-೩ ; ೮೮೮) ; ನಿಜಾಯುರವಧಿ ಪದಿನಾಲ್ಕು ವರಿಸಮುಮೇೞುತಿಂಗಳುಮಯ್ದು ದಿವಸಮುಂಟೆಸಲ್ (ಸುಕುಮಾ. ೯-೧೦ ವ); ಒಂದೆರಡು ವರಿಸಂ ನಳನಳಿಸಿ ಬೆಳವುತಿಪ್ಪ ಅರಳೆಲೆಯುರಸಂ (ಬಸರ. ೧೦-೧೦೪). **ವರುಶ** : ೧. ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಶ ೧೪೦೪ ಸಂದು ವರ್ತಮಾನ ಶುಭಕೃತು ಸಂವತ್ಸರದ ಕಾರ್ತಿಕ ಶು ೧೨ಲು . . . ಕೊಟ ಮುತ್ತಗಾನೆಯ ಗ್ರಾಮ (ಪ್ಯಆ. ೦೯೩೪. ೪-೩; 1482). **ವರುಷ**: ೧. ಈ ನಾಡೊಳ್ ಪನ್ನೆರಡುವರುಷಂಬರೆಗಮನಾವೃಷ್ಟಿಯಾಗಿ ದುರ್ಭಿಕ್ಷಮಾದಪ್ಪುದು (ವಡ್ಡಾರಾ. ೮೫-೨೦); ಇಂತು ತೊಂಬತ್ತೈದು ವರುಷದೊಳು ಹರನಾಣೆಯುಂ ತಾಳ್ದು ಬಾಳ್ದಿಪ್ಪ ಸಮಯದೊಳು (ತಿರುರ. ದೀ. ೧೦-೫); ಪುರವ ವಿರಚಿಸಿ ದಿವ್ಯ ಸಾಸಿರ ವರುಷ ಕೈಗೂಡಿದರೆ ಒಂದೇ ಸರಳಲಾವವನೆಚ್ಚಡಾಗಳೆ ನಿಮಗೆ ಕಡೆಗಾಲ (ಕುವ್ಯಾಕ. ೬-೮). ೨. ಸರಳ ಮಳೆಯಲಿ ನನೆದು ಕರಿಘಟೆಯುರುಳಿದವು ಕಲ್ಪಾಂತವರುಷದೊಳುರುಳು ವದ್ರಿಗಳಂತೆಯೆಸೆದವು ವೈರಿದಂತಿಗಳು (ಕುವ್ಯಾಕ. ೨-೨೦); ತುರುಕಾಣ್ಯದೊಳಗನಾವೃಷ್ಟಿದೋಷ ಬಂದು ಪಸರಿಸೆ ಪವಾಡದಿಂದೆ ವರುಷವಂ ಸುರಿಸಿ . . . ಮಳೆಯ ಮಲ್ಲೇಶನೆಂದೆಂಬ ನಾಮವನಾಂತನು (ಚಬಪು. ೧-೦೯). **ವಾರಿಷ** : ೧. ಏಱ್ನೂಱ ಪತನೆ ವಾರಿಷಂ ಪ್ರವಾತ್ತಿಸುತಿರೆ (ಎಕ. XVI, ಸಿರಾ. ೦೨೩-೪; 788). [ <ಸಂ. ವರ್ಷ ]

**ಬಱಿಸದೆಱೆ** (ನಾ). ವಾರ್ಷಿಕ ತೆರಿಗೆ, — ಸುಂಕ: ಬೇಱೆವೇಱೆ ಬಱಿಸದೆಱೆ ಹಿರಿಯ ಹಾಗವೊಂದು (ಎಇ. XIII, ೨೦-೫೩: 1294). [ಬಱಿಸ + ತೆಱೆ₃]

**ಬಱಿಸವಳ** (ಅ). ಪ್ರತಿವರುಷ; ವರುಷಂಪ್ರತಿ : ಅನ್ತನಿಬರು ಸುಂಕಿಗರು ಬಿಟ್ಟು ಇ(ಈ) ಕಂಗೆಱೆಗೆ ಬಱಿಸವಳ ಆಱು ಪೇಱ ಸುಂಕವಂ ಬಿಡುವರು (ಎಇ. XVI, ೬೯-೪೦; 1037). [ಬಱಿಸ + ? ]

**ಬಱಿಸು** 'ವರಿಸಂ₁' ನೋ.

**ಬಱಿಹ** 'ಬಱುಹ₁' ನೋ.

**ಬಱು** 'ವರ್' ನೋ.

**ಬಱು₂** 'ಬಱು₂' ನೋ.

**ಬಱು₃** (ನಾ). ಒಂದು ಬಗೆಯ ಹುಲ್ಲು : ಚಿನಾಯಿ ಜೀನಸು, ಕಾಗದ ಬೆಳ್ಳಿಯ ಭಂಗಾರ ಪರ್ಣದ್ದು, ಕಾಚ, ಕೊಳಾಂಜನ, ಛತ್ರಿ, ಪಚ್ಚಕರ್ಪೂರ ಬಱು, ಮೇಣ, ಸಕ್ಕರಿ (ಮುಂಬವ್ಯಾ. ೦೫೭).

[ ←ಮರಾ. ಬರೂ, ಬೊರೂ./ಪ್ರಾ. ಬರುಅ ]

**ಬಱುಕ್ಕೆ** (ನಾ). "ಹದವಿಲ್ಲದಿದ್ದರೂ ಒಣಗಿದ ಭೂಮಿಯನ್ನು ಗಿಡ ಗಂಟೆ ಹೋಗುವುದಕ್ಕಾಗಿ ಉಳುವ ಉಕ್ಕೆ" (ವನ್ನೂರು. ಕೋಶ) : "ಹಳೇ ತೋಟಕ್ಕೆ ಬಱುಕ್ಕೆಗೆ ಆರು ಕಟ್ಟಬೇಕು" ಎಂದು ಕೊಟ್ಟಿಗೆಗೆ ಹೋದ (ವನ್ನೂರು. ೩೦೨). [ಬಱ₁ (<ಬಱ) + ಉಕ್ಕೆ (<ಉೞ್ಕೆ) ]

**ಬಱುಗನಸು** (ನಾ). ವ್ಯರ್ಥವಾದ ಕನಸು; ನಿಷ್ಪ್ರಯೋಜಕವಾದ ಕನಸು : ಕಲ್ಪನೆ ಮಾತ್ರವಿದ್ದರೆ ಲಘುವಾಗುತ್ತದೆ; ಭಾವ ಮಾತ್ರವಿದ್ದರೆ ಬಱುಗನಸಾಗುತ್ತದೆ (ಭಾವಗೀ. ೩೦); ನಂಬಿ ಬಱುಗನಸೊಂದನಾ ಮೇಲೆ ಕೋಳು ಹೋಗದಿರು (ಚಿತ್ರಾಂಗ. ೩೭-೯೯೨).

[ ಬಱು₂ (< ಬಱಿದು) + ಕನಸು ]

**ಬಱುಗಯ್** 'ಬಱುಗೆಯ್' ನೋ.

**ಬರುಗಲ್ಲು** 'ಬಱುಗಲ್ಲು' ನೋ.

**ಬರುಗಾಲು** 'ಬಱುಂಗಾಲು' ನೋ.

**ಬರುಗೆ** (ನಾ). ಕೆನ್ನೆ ಮತ್ತು ಕಿವಿ ಸೇರುವ ಭಾಗ; ಕೆಪರು: ಇನ್ನೊಂದು ಕಲ್ಲಿನಿಂದ ಅವರ ಎಡದ ಕಿವಿಯ ಬರುಗೆಗೆ ಗುರಿಯಿಟ್ಟು ಹೊಡೆದೆ (ತಂಗಾಳ್. ೩೩೪). [ ? ]

**ಬರುದಲೆ** 'ಬಱುದಲೆ' ನೋ.

**ಬರುಬು** 'ಬರಂಪು' ನೋ.

**ಬರುಮ** 'ಬೊಮ್ಮ' ನೋ.

**ಬರುಮರುಕ** (ನಾ). ತೋರಿಕೆಯ ಕನಿಕರ; ಸೋಗಿನ ದಯೆ: ಈ ಮೇಳದ ಮಸಕವು ಸರ್ವನಾಶದ ಬರುಮರುಕವಾಗಿ, ಕಣ್ಣಿಂದ ನೆತ್ತರನ್ನು ಹಿಂಡುತ್ತ ಬಾಯಿಳಿಯಿಸುವ ಆಗ-ನನ್ನ ಮಾತಿನ ಬೆಲೆಯು ನಿಮಗೆ ಅರ್ಥವಾಗುವುದು! (ಮಂತ್ರಶ. ೭೪-೦೪).

[ ಬರು₂ (<ಬಱಿದು) + ಮರುಕ (<ಮಱುಕ)]

**ಬರುವದಣಿ** 'ಬರಿವದನೆ' ನೋ.

**ಬರುವಳಿ** (ನಾ). ನಿಷ್ಪತ್ತಿ; ಮೂಲ: ಕನ್ನಡಮಾತುಗಳ ಬರುವಳಿ (ಕನ್ನಸಾ. I, ೨೩೪; ೦೯ ೩೬). 'ಹುಟ್ಟುವಳಿ' ಹೋ.

[ ಬರು₁ (<ವರ್) + – ವಳಿ₃]

**ಬರುವೆ** (ನಾ). ಒಂದು ಬಗೆಯ ಪಕ್ಷಿ: ಶುಕ ಮಯೂರ ಮರಾಳ ವಾಯಸಂ ಬಕಪಕ್ಷಿ . . . ವೃಕ ಬರುವೆ ಸಾಳುವಂ ಮರಗೊರಲೆ ಕಾಬು ರಲೆ ವಿಹಗನು ಗವುಜಗ ಗುಬ್ಬಿ ಚಿಲಿಮಿಲಿಗ ಕೆಂಬೂತ ಶಿಚುಕ ಮರಕುಟಕ ಕಬ್ಬಕ್ಕಿಗಳು ಮುಂತಾದ ಪ್ರಾಣಿಗಳನುರಿದಗ್ನಿ ದಹಿಸಿತು (ತುರಂಗ. ೦೬-೩೭).

**ಬರುಹ₁** (ನಾ). ಬರುವಿಕೆ: ನಾಯ ಬಾಲಮಂ ಕಾಸಿ ತಿರ್ದುಹವುಂ ಸಾಳುಮಣ್ಣನಲ್ಲಿ ಮಱಿಬರುಹವುಂ . . . ಮೂರ್ಖನಂ ಬುದ್ಧಿವಂತ ನೋಳ್ಪೆಸುಹವುಂ ಇವಱಿಳೋಪಾದಿ (ಶಂಕರಂ. ೦೫೬-೦೦); ಕಿವಿಗಳನೊತ್ತಲ್ ರಕ್ತಂ ಬರುಹ ಕಣ್ಗಳ್ ಚೆನ್ನಾಗಿ ತೋಱುಹ . . . ಸಸಿನಮಾಗಿ ಹಿಂಭಾಗ ಮುಂಭಾಗಂಗಳ್ ಅಗಲಮಾಗಿರುಹ ಈ ಲಕ್ಷಣಂಗಳನುಳ್ಳ ಕುದಿರೆ ಸಂಪೂರ್ಣ ಮಪ್ಪಾಯುಷ್ಯಮನುಳ್ಳುದೆಂದು ಪೇಱಿಸಿಕೊಳ್ವುದು (ಲೋಕೋಪ. ೦೦-೬೩ ೩೬೪). [ಬರು₁ (< ವರ್) + – ಹ₂ (< –ಪ್ಪ₂)]

**ಬರುಹ₂** (ನಾ). ನವಿಲಿನ ಪುಕ್ಕ,—ಗರಿ; ಬರ್ಹ: ಅರ್ಹಂ, ಅರುಹಂ; ಬರ್ಹಂ, ಬರುಹಂ; ಗಾರ್ಹಪತ್ಯಂ, ಗಾರುಹಪತ್ಯಂ (ಭಾಷಾಭೂ. ೦೨೩ ಪ್ರಯೋ). [<ಸಂ. ಬರ್ಹ]

**ಬರುಹಿ₁**, ಬರಿಹಿ (ನಾ). ನವಿಲು; ಮಯೂರ: ಸೂಕರನ ತುಂಬಿಯು ಮರಾಳನ ಭೇಕಪ್ಪೈರಿಯು ಕಾರುರಗ ಕಪಿ ಕೋಕಿಲನ ಬರುಹಿ [ಶಾತಂ. ಬರ್ಹಿ] ಯು ಸುಧಾಕಿರಣನ ದಿನಾಧಿಪನ . . . ರತ್ನಾಕರನಲ್ಲೊಂದೊಂ . . . ಣ ವಿರಬೇಕು(ಕುಮ್ಯಾಸ.೦-೬೪); ಕಂಗೊಳಿಸುವ ಗವಾಕ್ಷಾವಳಿಯಲಾಡುವ ಬರುಹಿ ಪಾರಾವತ ಮೃದುಸ್ವನದ . . . ಪುರಗಳ ತಿಂಥಿಣಿಯ ಶೀತಳತರುಚ್ಛಾಯೆ ಯಲಿ ಮೆಱೆವಾ ಪುರವರವ ಕಂಡ (ಶಿಭಾಗ. ೦೦-೩೬-೩೦) ; ಬರುಹಿ ಕಂಕ ಶಶಾದ . . . ಭರದ್ವಾಜಾದಿ ಖಗವಿರೆ ಕಂಡನಸುರೇಂದ್ರ (ಉರರಾ. ೯-೪). **ಬರಿಹಿ:** ಹರನಂತೆ ಗಂಗಾಧರತ್ವದಿಂದಂ ಮತ್ತೆ ಹರಿಯ ಧೈರ್ಯತೆಯಂತೆ ಕರಿಯ ರೇಖೆಗಳಿಂ . . . ಇಂದ್ರನುಂದದೆ ಪಾಱುವ ಬರಿಹಿಗಳ ಪಿಂಭಾಂಗ ದಿಂ . . . ಆ ಮಹಾಗಿರಿ ಮೆಱದುದ್ದೈ (ವೀಶೈಪು. ೩-೯-೬).

[< ಸಂ. ಬರ್ಹಿನ್]

**ಬರುಹಿ₂** (ನಾ). ೧. ಒಂದು ಬಗೆಯ ಹುಲ್ಲು; ಕುಶ: ಚರು ತಿಲದ ರಾಶಿಗಳ ಸ್ರುಕ್ ಸ್ರುವ ಬರುಹಿಗಳ ಬಲುಹೊಱಿಗಳಾಜ್ಯೋತ್ಕರದ ಪತ್ರಾವಳಿಯ ನಿರ್ಮಳಸಾರ ಸಮಿಧೆಗಳ . . . ವಿವಿಧದ್ರವ್ಯಮಯ ಬಂಧುರದಲೆಸೆದಂದು ಯಜ್ಞವಾಟಿಕೆ ರಾಜಸೂಯದಲಿ (ಕುಮ್ಯಾಸ. ೭-೩೦); ಬರುಹಿಯಿಧ್ಮಸವಿತ್ತ್ರಣೀತಾವರಣೆ ಘೃತಪಾತ್ರಾದಿ ಮುಖಪರಿಕರವ ಮೇಳೈಸಿದರು ತತ್ಕ್ರತುಕುಂಡವಳಯದಲಿ (ಕೂರರಾ. ೦-೬-೩೪). ೨. ಬೆಂಕಿ; ಅಗ್ನಿ: ಧರಣಿ ರೇಣುವದಾಗೆ . . . ಸಾಗರಗಳೇ ತುಂತುರ್ವನಿಗಳಾಗಲು ಮಹಾಪ್ರಳಯಬರುಹಿ ಕಿಱಿಗಿಡಿಯಾಗಲಚ್ಯುತ ಸರಸಿಜೋದ್ಭವರಣುವೆನಿಸಿ ಭಾಸ್ಫುರಣಜ್ಯೋತಿರ್ಲಿಂಗವಮಾದೀಶಂಗೆ ವಂದಿಸುವೆ (ಶಂಕರಾ. ೩-೦). [< ಸಂ. ಬರ್ಹಿ]

**ಬರುಹು**, ಬರಬು, ಬರಹು₂, ಬರಬು (ನಾ). ೧. (ಹೊಲ, ಗದ್ದೆ ಗಳಲ್ಲಿ ನೀರು ನಿಲ್ಲುವುದಕ್ಕಾಗಿ) ಅಂಚಿನಲ್ಲಿ ಹಾಕುವ ಮಣ್ಣಿನ ದಂಡೆ; ಕಟ್ಟೆ; ಬದುವು: ನಾಲ್ಕುಸೀಮೆಯೆಂತೆಂದಡೆ ಮೂಡಣಸೀಮೆ ಹುಪ್ಪವಳ್ಳಿಯ ಸೀಮೆ . . . ತೆಂಕಣ ಸೀಮೆ ಅರಳಿಯ ಗದ್ದೆಯ ಬಡಗಣ ಬರುಹು ಮೇರೆ (ಶಾಇಇ. XV, ೨೩೩-೬೦; 1216). ೨. ಎತ್ತರವಾದ ಪ್ರದೇಶ; ದಿಬ್ಬ; ದಿಣ್ಣೆ: ಪಡುವಣ ಸೀಮೆ ಕರಿಯ ರಾಮಣನ ಹಕ್ಕಲ ಬರುಹು ಬಡಗಲು ಮಲ್ಲನಹಳ್ಳಿಯ ಹೊಲನ ಸೀಮೆ ಮೇರೆ (ಕಇ. V, ೩೨-೬೬; 1216). **ಬರಬು:** ೨. ಆ ಯಲಟಿಯ ಕುಣ್ಟೆಯ ಮೂಡಣಕೋಡಿಯ ಅರಳಿಯ ಮರ ಮೇರೆಯಾಗಿ ಹೊಲದ ಬರಬಿನ ಮೇಲೆ ದರ ಹುಣಿಸೆಯ ಸರಿತದಲು (ಎಕ. X, ಮುಳಬಾ. ೭-೬; 1416); ತೆಂಕಣ ಕೋಡಿ ಸ್ಥಳದಲೂ ಮೂಡಲಿಗೆ ಕಂಭದ ಮಾನ್ಯದ ಹೊಲ ಮೇರೆ ತೆಂಕಲಿಗೆ ದಶಕಸ್ಥಳದ ದೊಡ್ಡ ಬರಬು ಮೇರೆ (ಎಕ. IX (S), ಬೆಂಗಳೂ. ೩೦-೯; 1532); ಬರಬುಗಳನ್ನು ನೆಲಮಟ್ಟದಿಂದ ಸ್ವಲ್ಪ ಎತ್ತರವಾಗಿರುವಂತೆ ಕಟ್ಟಿ, ಗಟ್ಟಿಯಾಗಲು ಚೆನ್ನಾಗಿ ತೊಯಿಸಿ ತುಳಿಯಬೇಕು (ತರಬ. ೬೬). **ಬರಹು₂:** ೨. ತೊಪ್ಪೇನ ಘಟ್ಟದ ಬಲ್ಲವತ್ತದ ಕಟ್ಟೆಯ ಬಿತ್ತಿರಿಣ ಹಕ್ಕಲ ಬರಹು (ಎಕ. VII, ಶಿವಮೊ. ೨೬-೨೩೪; 1524). **ಬರುಬು :** ೩. ಕೆರೆ, ಕುಂಟೆ ಮುಂತಾದುವುಗಳ ಏರಿ: ಕಾಲುವೆಗಳ ಮೇಲೂ ಬರುಬುಗಳ ಮೇಲೂ ತಿರುತಿರುಗಿ (ಕಥಾಮಂ. IV, ೦೩೦). 'ಬದುವು' ಪರಾ.

[ ದೇ.॥ ತಮಿ. ವರಪ್ಪು, ವರಮ್ಪು, ವರೈಪ್ಪು; ಮಲ. ವರಮ್ಪು; ತುಳು. ಬರಬು; ತೆಲು. ವರುಜು]

**ಬರೆ₁**, ವರೆ₁ (ಕ್ರಿ). ೧. ಲೇಖಿಸು; ಅಕ್ಷರದಲ್ಲಿರಿಸು: ಕೈಲಾಸಪಣ್ಡಿತಬ್ಬರೆದ ಈ ಮಣ್ಣನಳಿದೋಂ (ಎಕ. IX, ಬೆಂಗಳೂ. ೪೦-೦೩; ಸು. 820); ಗುಣ ಸೌಂದರಿಯೊಂಬೊಳ್ . . . ಒಂದೋಲೆಯನಿಂತೆಂದು ಬರೆದಳ್ (ವಡ್ಡಾರಾ. ೦೬೩-೯); ವಿಷಯೆ ಮೋಹಿಸುವಂತೆ ಕೊಡುವುದೆಂಬೀ ಲೇಖವಿಷಯವಿದು ವಿಧಿಕೃತವೊ ತನ್ನ ಮೋಸವೊ ಬರೆದವನ ಮಱಿಹೊ (ಕೈಮಿಂಭಾ. ೩೦-೩೬). ೨. (ಬರೆದುದರ ಮೇಲೆ ಅಭ್ಯಾಸಕ್ಕಾಗಿ) ತಿದ್ದು; ತೀಡು: ಬರೆಯದೆ ಬಂದ ಸುದ್ದಗೆಯ ಸೂತ್ರವನೊಂದೆ ಮುಹೂರ್ತಮಾತ್ರದಿಂ ಬರಿಸಿದುದು (ಶಂಶಭಾ. ೬-೩೪). ೩. ಕಾವ್ಯರಚನೆ ಮಾಡು: ತರಲಾಪಾಂಗ ವಿಲಾಸಸ್ಫುರಿತಮೆ ಲೆಕ್ಕಣಿಕೆಯಾಗೆ ನಲ್ಲಳ್ ಮುನ್ನಂ ಬರೆದತನುಚರಿತಮಿಗಳ್ ಬರೆದಂತಿರ್ದಪುದು ಮನ್ಮನಃಪುಸ್ತಕದೊಳ್ (ಆದಿಪು. ೪-೦೪); ವಿಪರೀತಂ ಬರೆಯುತ್ತುಮೊಂದನಲೆವುತ್ತುಂ ಗದ್ಯಮಂ ಮಾಡೆ (ಛಂದೋಂಬು. ೦-೩೦ ಅವತರ); ಬರೆದಾಹ ಬರೆದೆ ಭಾಪುರೆ ಬರೆದಕ್ಕಟ ಬರೆದೆ ಲೇಸು ಬರೆದೆ ಯೆನುತ್ತುಂ ಬಱಿದೆ ತಲೆತೂಗುವುದಱಿಂ ಬಱಿದಪ್ಪುದು ಕಾವ್ಯಮಱಿಯು ದರ ಜಾಣಿಂದಂ (ಗಿಂಕ. ೦-೨೯). ೪. ಚಿತ್ರಿಸು; ರೇಖಿಸು: ಇಂತು ಬರೆಯಲ್ ಬ್ರಹ್ಮಂಗಮೇಂ ಬರ್ಕುಮೇ ಎಂದು ಮುನ್ನಂ ವಿಚಿತ್ರಚಿತ್ರ ವಿದ್ಯಾಕೌಶಲಮನತಿಕುತೂಹಲೋತ್ತಾರಿತಲೋಚನನಾಗಿ ನೀಡುಂ ಭಾವಿಸಿ ನೋಡಿ (ಆದಿಪು. ೯-೪); ಬರೆದ ಬನಮಿರ್ಕೆ ನೋಡೀ ಕರುಮಾಡದ ಕೆಲದೆ ಬೆಳೆದ ಪೂದೋಂಟಮಂ (ಕಬ್ಬಿಗಕಾ. ೬೪); ನೆನೆದು ಬರೆದಳು ನಳನ ರೂಪ ವನನುನಯದಿ ಚಿತ್ರದಲಿ (ನಳಚ. ೦-೩೬). ೫. ಗೆರೆಯನ್ನು ಎಳೆ; ಗೀಟು ಹಾಕಂ; ಗೀರು: ಗಿಳಿಯಂ ಸಾಕ್ಷಿಮಾಡಿ ಇರ್ವರುಂ ಚದುರಂಗ

ಮಾಡುತ್ತಿರೆ ಅರಸಿಯರಸನಂ ಗೆಲ್ದೊಡೆ ಗಿಳಿ ನೆಲದೊಳೆರಡು ಬರೆಯಂ ಬರೆಗುಮರಸನರಸಿಯಂ ಗೆಲ್ದೊಡೆ ಒಂದೆ ಬರೆಯಂ ಬರೆಗುಂ (ವಡ್ಡಾರಾ. ೧೦೬-೨೭); ತನ್ನ ಮುನ್ನಿನ ಜನ್ಮಂಗಳನಿಂತೆಂದು ಬರೆದು ತೋರ್ಪಂತೆ ನೆಲನಂ ಬರೆಯುತ್ತಮುಪಗತಮುಖಮುದ್ರೆಯಾಗಿ (ಆದಿಪು. ೩-೩೨ ಪ); ಸುರನರನಾಗಲೋಕದಿಂ ನಿರ್ಕಿಸುವ ಸೌಂದರವೆಣ್ಣು ಬಾಣನಂದನೆಯು ಸರಿಯಿಲ್ಲವೆಂದು ಮೂವೆರಲಿಂದೆ ರತಿರಾಜ ಬರೆದಂತೆ ತಿವಳಿ ರಾಜಿಸಿತು (ಸೋಹಕ. ೨೩-೨೦). ೬. ಕಾದ ಲೋಹದಿಂದ ದೇಹದ ಮೇಲೆ ಗೆರೆಯನ್ನು ಎಳೆ; ಬರೆಹಾಕು ; ಬರೆಎಳೆ : ಮೃದುನಾಭಿಯ ನಿಟ್ಟೆಲುವಿನ ಹೃದಯದ ಮೇಲಡಸಿ ಬರೆಯಲಾಗದು ವಿಧ್ವಾವಿದರೆತ್ತಾನುಂ ಬರೆದಂದದು ಮಾಟ್ಕುಮುಪಾಯಮಂ ಮನಸ್ತಾಪಮುಮಂ (ಅಶ್ವಶಾ. ೧೦-೨೬); ಏತರವೊ ದಂಡೆಗಳು ಕೊರಳಲಿ ಭೂತಬರೆಗಳಿದೇನು ಮೆಯ್ಯಲಿ ವಾತರೋಗಕೆ ಬರೆದ ಬರೆಯೇನೆರಡುಮುಡುಹಿನಲಿ . . . ಎಂದು ದಾನವನಾಥ ಜರೆದೀಡಾಡುತಿರಲು (ಕೃಷ್ಣಾಕ. ೦೩-೯೪). ೭. ದಾಖಲೆಯಾಗು : ಮಲ್ಲ, ನಿನ್ನ ಶೌರ್ಯ ಸಾಹಸಗಳು ಬರೆದು ಹೋಗಿವೆ. ನಿನಗೆ ಗೌರವ ಸಿಗುವುದು ನಿಶ್ಚಯ (ಮೇಜಿಡು. ೦೯೭). ವರೆ$_1$ : ೧. ಕುಮ್ಮಿ ಊರನ್ ವರೆದನ್ (ಎಕ. X, ಕಂಡಾಮ. ೦೨೬ ಪ-೭; ಸು. 800); ಮರಮ್ಮ ವರೆದ ಲಿಕಿತಂ (ಎಕ. VIII, ಸೊರಂ. ೨೨-೦೦; ಸು. 800); ಬೋನರಿ ವರದೋಮ್ (ಮೈಎಂ. ೦೯೬೭, ೯೨-೦೩ ; ೪).

ಬರೆದ ಬರೆಹ=(ಹಣೆಯ) ಬರೆಹ; (ಅದೃಷ್ಟದ) ಲಿಖಿತ: ಕೊರಗನರಿದಂ ತನ್ನ ಮನೆಗೆ ಮಾರಬಿದ್ದಂತೆ ಬರೆದ ಬರೆಹಮಿದೆಂದು ಕಯ್ ಮೊಸಲ ಬಡಿದಂ (ಕಾಂಪೂರ. ೦೩೩-೨೯೯). ಬರೆದಿಟ್ಟುಕೊಳ್ಳು = ೧. ಗುರುತು ಹಾಕು ; ಗುರುತಿಸು : ನಿಮ್ಮ ಹಣದ ಪೆಟ್ಟಿಗೆಯಲಿ ಎಷ್ಟು ಹಣವಿದೆಯೆಂದು ಬರೆದಿಟ್ಟುಕೊಳ್ಳಿ (ಅಡುಜ್ಞಾ. ೦೨೫); ನಾನು ಓದಿದ ಭಾಗದಲ್ಲಿ ಅಗತ್ಯವೆಂದು ತೋರಿದ ಮುಖ್ಯವಿಷಯಗಳನ್ನು ಸೂಕ್ಷ್ಮವಾಗಿ ಬರೆದಿಡುತ್ತಿದ್ದೆ (ಮುಂಗಾರುಮು. ೦೯). ೨. (ಅಲಂ) ನಿರ್ಧಾರವಾಗಿ ತಿಳಿ : ನೀನು ಪಾರಾಗಲಾರೆ. ಇದನ್ನು ಬರೆದಿಟ್ಟುಕೊ (ರೂಢಿ). ಬರೆದುಂಡಿಗೆ = ಬರೆದು ಮುದ್ರಿಸಿದುದು ; ಗೊತ್ತುಮಾಡಿದುದು : ಬರೆದುಂಡಿಗೆಯ ಚೆಲ್ವೆ ಹೂವೀಡಿನಿಂ ಕರೆಯೆ ತೆರೆದೆಗೆಯಲರಿಂದಂ ಬೇಡೆಂಬ ಬಗೆಗೆ (ಕಾಂಪೂರ. ೦೬೬-೪೨೪). ಬರೆದು ಕೊಡು = ೧. (ಆಸ್ತಿ ಮೊದಲಾದುವುಗಳನ್ನು) ದಾಖಲೆಯ ಸಹಿತ ಕೊಡು; ದಾಖಲೆ ಮಾಡಿ ಕೊಡು : ಅರರೆ! ಬಿರುಮನೆ! ಮರೆಯದಿರು ಮನೆ, ಮರಿಯ ಮಕ್ಕಳ ಮಡದಿಯಾ . . . ಬರೆದುಕೊಡುವೆನು ಸ್ಥಿರ ಚರಾಸ್ತಿಯ ಉಂಬಳಿ (ಕುಪು. ೨೦-೯೦). ೨. (ಅಲಂ) ನಿರ್ಧಾರವಾಗಿ ತಿಳಿಸು: ಸುಡುಸುಟ್ಟು ಚಿಟಿಚಿಟಿಸುತ್ತಿದೆಯೆಡೆಯನೊಡಗೊಂಡು ಬಿಡುಸಾಲಗೆಯೊಳೇನೊ ತಿಳಿಯಹುದ ಬರೆದುಕೊಡುವ ನೆಲದೆಡೆಗೆ ಬಾನ್ ಬಿಡದೆ ಬೀಸುವ ಗಾಳಿ (ಕಾಂಪೂರ. ೦೬೯-೧೦೬). ಬರೆದುಕೊಳ್ = ೧. ಬರೆದಿಟ್ಟುಕೊಂಡಿರು : ಪೊಲದ ಸೀಮೆಯೆಲ್ಲಮಂ ಓಲೆಯೊಳ್ ಬರೆನ್ದು × × ಕಲ್ಲುಸಾಸನಮಾಗೆ ಬರೆದುಕೊಣ್ಡಮು (ಎಕ. III, ನಂಜನ. ೦೩೯-೩೦; 915 ?). ೨. (ನಾಮದ) ಗೆರೆಯನ್ನು ಎಳೆ. ೩. ಕಾದ ಲೋಹದಿಂದ ದೇಹದ ಮೇಲೆ ಬರೆಯನ್ನು ಎಳೆದುಕೊಳ್ಳು,— ಹಾಕಿಕೊಳ್ಳು. ೨, ೩. ನೆಚ್ಚನಯ್ಯ ಹರಿ ಮೆಚ್ಚನಯ್ಯ . . . ತೊಗಲಿನ ದೇಹಕೆ ಗೋಪಿ ಗಂಧ ತೇದುಕೊಂಡು ರೋಗ ಬಂದೆಮ್ಮೆಯ ಹಾಗೆ ಬರೆದುಕೊಂಬ ಮನುಜನಿಗೆ (ಪುರಂದ. ೨-೬೯-೨)

[ದೇ.॥ ತಮಿ. ವರಿ, ವರ್ರೈ; ಮಲ. ವರಿ, ವರೆ; ತುಳು. ಬರಿ, ಬರ್; ತೆಲು. ವ್ರಾಯು, ರಾಯು]

ಬರ್ಕೆ (ನಾ). ೧. ಗೆರೆ; ಎಳೆ; ರೇಖೆ: ಗಿಳಿಯಂ ಸಾಕ್ಷಿ ಮಾಡಿ ಇರ್ವರುಂ ಚದುರಂಗಮಾಡುತ್ತಿರೆ ಅರಸಿಯರಸನಂ ಗೆಲ್ದೊಡೆ ಗಿಳಿ ನೆಲದೊಳೆರಡು ಬರೆಯಂ ಬರೆಗುಂ (ವಡ್ಡಾರಾ.೦೦೬-೨೭); ಕಿಱುಕುಣಿಕೆಯ ಬೆರಲಿಂದೆಡೆವಱಿಯದೆ ಸುಟ್ಟುಂಬೆವರೆಗಮೆಯ್ದಿದ ಬರೆಯಿಂ ನೆಱೆ ನೂಱು ವರ್ಷಂ (ಲೋಕೋಪ. ೦೦-೦೭). ೨. ಎಲ್ಲೆಯ ಗುರುತು; ಸೀಮಾರೇಖೆ : ಕೋಟದಧಿವಾಸದಿಯಿಕ್ಕಿದ ಕಲ್ಲಿಂದಂ ಎತ್ತಿದ ಬರೆಯಿಂದ ತೆಂಕಲಿಯಿಂತೀ ಚತುಸ್ಸೀಮೆಯವೊಳಗುಳ್ಳ ಬಾಳು ಬೆಟ್ಟು . . . ಯಿಂತಿಷ್ಟನೂ ಮೂಲಕ್ರಯಕೆ ಸಲುವ ಅರ್ಥವನು ಕೊಂಡು (ಸೌಇಇ. IX — ii, ೪೬೦-೨೭; 1406). ೩. ಕಾದ ಕುಳದಿಂದ ಮೈಮೇಲೆ ಎಳೆದ ರೇಖೆ,— ಗೆರೆ : ತುಪ್ಪಮನಾ ಬರೆಯೊಳ್ ಪೂಸುವುದು ಬರೆದ (ಯ) ಪುಣ್ ತೀವುವಿನಂ (ಅಶ್ವಶಾ. ೦೦-೨೭); ಅಭಕ್ಷಣೆ ವತ್ಸರಹಿತೆ ರುಜೆ ಸಲೆ ಶಕ್ತಿಹೀನೆ ವಿಕಟಾಂಗಿ ಬಹುಭಕ್ಷೆ ಬರೆಗೊಳಗಾದುದತ್ಯಂಗಹೀನೆ ನಿರ್ವೀರ್ಯೆ ಮಧ್ಯಾದ್ಯ ಲಕ್ಷಣಪಶುಗಳಂ ಕಳೆದು (ಚಂಪು. ೬೦-೯); ನಾನು ಮರೆತರೂ ಹೊಟ್ಟೆಯ ಮೇಲಿನ ಬರೆಯಂತೂ ನೆನಪು ಕೊಡಲು ಇದ್ದೇ ಇದೆಯಲ್ಲ (ಹುಚ್ಚುಹು. ೪೮) ೪. (?) : ಕುವರಿಯ ಪರಮಸೌಂದರಸಿಂಧುವಾ ಬರೆಹವಣಲ್ಲ ನರಗಿರರಿಂಗೆ (ಸೋಹಕ. ೨೯-೨೭).

ಬರೆ ಕೊಡು = ಕಾದ ಕುಳದಿಂದ ಮೈಮೇಲೆ ಗೆರೆ ಎಳೆ,— ಸುಡು : ಅವರಲ್ಲೊಬ್ಬನು ರೊಚ್ಚಿನಿಂದ ಬರೆ ಕೊಟ್ಟು ಈತನ ಎರಡೂ ಕಣ್ಣುಗಳನ್ನು ಕಳೆದನು (ಮಂದಾಕಿ. ೦೫೬); ಅವನ ಒಂದೊಂದು ಮಾತೂ ಒಳಗೆಲ್ಲೋ ಬರೆ ಕೊಡುತ್ತಿದ್ದಂತೆನಿಸಿ ಕುಳಿತಲ್ಲೇ ಚಡಪಡಿಸಿದ (ಮೂರುದಾ. ೦೬೧). ಬರೆ ಹಾಕು = ಬರೆ ಕೊಡು : ಸರಕಾರವು ಬರೆಖಾತೆಯನ್ನು ಕೂಡಲೇ ನೇಮಿಸಿ ವ್ಯಾಕ್ಸಿನೇಶನ್ ವೈಲಿಗಳನ್ನು ಹಾಕಿಸಿದಂತೆ ಎಲ್ಲರಿಗೂ ಮನೆಮನೆಗೆ ಬಂದು ಬರೆ ಹಾಕುವ ಏರ್ಪಾಟು ಮಾಡಲೇಬೇಕು(ಹುಚ್ಚುಹು. ೫೦); ಗುಳ ಕಾಸಿ ಬೇಗ ಬರೆ ಹಾಕಿದರೆ ಬದುಕುತ್ತಾನೆ (ಕಥಾಮಂ. IV. ೦೦); ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ ಹಾಕಿದರಂತೆ (ಗಾದೆ). [<ಬರ್$_1$]

ಬರ್ಕೆ (ನಾ). ಕಡಿದಾದ ಬೆಟ್ಟ,— ಗುಡ್ಡ : ಎಲ್ಲಿ ನೋಡಲು ಸರಿ ಜರಿ ಹಳ್ಳ ಬರೆಗಳು . . . ಮುಳ್ಳುಮರದ ಬೇರೆಡಹುಗಲ್ಲುಗಳಿಂದ ನಿಲ್ಲದೊಪ್ಪಿದುದು ಕಾಂತಾರ (ಕಂವಪಿ. ೦೮-೪೩); ಆ ದಾರಿಯಿಂದಲೇ ಬರೆಯನ್ನು ಹತ್ತಿ ಕಾಳೂರಿಗೆ ಹೋಗಬೇಕು (ಶರ್ಮಸ. ೨೩). [ದೇ.॥ ತುಳು. ಬರೆ]

ಬರೆಕೋಲು ' ಬರೆಗೋಲು ' ನೋ.

ಬರೆಗುಡುಹು (ನಾ). = ಬರೆಗುಳ : ಕುಱುಬನುಱೆ ಮುಳುಗತ್ತಿಯಿಂ ತಿರಿಯಲಱಿವೆಗಳಂ ಬರೆಗುಡುಹುಮಡಗಿದ ಕುಱಿದೊವಲ ತಿದಿಯೆಸೆಯೆ . . . ಕೆಲವಾಡುಗಳನಾ ಬೊಬ್ಬುಲಿಯ ಮರನಿಪ್ಪ ನೆಪ್ಪಿಗಾತನು ಹೊಡೆದು (ಚಕೃ. ೨೦-೧೨). [ಬರ್$_1$ + ಕುಡುಹು (<ಕುಡುಪು)]

ಬರೆಗುಳ (ನಾ). (ದನಕರುಗಳ ರೋಗನಿವಾರಣೆಗಾಗಿ) ಬರೆಯನ್ನು ಹಾಕುವ ಕಬ್ಬಿಣದ ಸಲಾಕೆ : ಬರೆಗುಳವನ್ನು ಚೆನ್ನಾಗಿ ಕಾಯಿಸಿ ಎತ್ತಿಗೆ ಬರೆಹಾಕಿದರು (ರೂಢಿ). [ಬರ್$_1$+ಕುಳ$_1$ (<ಕುಱು)]

ಬರೆಗೊಳ್ (ಕ್ರಿ). ೧. ಬರೆಯನ್ನು ಹೊಂದು; ಸುಡಿಸಿಕೊಳ್ಳು. ೨. (ಅಲಂ) ಏಟುತಿನ್ನು; ಘಾಸಿಹೊಂದು; ಕಷ್ಟವನ್ನು ಅನುಭವಿಸು : ಏಱಿ ಬರೆಗೊಂಡ ಜೂದುಂಗಾಱನಪೊಲ್ ಲಗ್ಗೆ ಮಾಡಲೊಲ್ಲದೆ ಪಡೆಯುಂ ಸಾಱಿಸಿ ಮುಂದಂ ಪಿಂಗುವ ನೀಱೆಯೆವೊಲ್ ತೆಗೆಯುವೆಟ್ದನಾ ವಸುಷೇಣಂ (ಅವಂಪು. ೦೨-೨೭). [ಬರ್$_1$+ಕೊಳ್$_1$]

ಬರೆಗೋಲು, ಬರೆಕೋಲು (ನಾ). = ಬರೆಗುಳ : (ಕ). ಬರೆಕೋಲು: ಲೆಕ್ಕಣಿಕೆ ಕೋಲಹುದು, ಕಾಗದವು ಹಗೆಗಳೆದೆ, ಬರಹವೇ ಬರೆಕೋಲ ಗಾಯಗಳಾಗುವುವು (ಪಡಿದಾ. I. ೯೩೪); ನನ್ನ ತಾಯಿ ಆರಿದ ಬರೆಕೋಲನ್ನು ಹಿಡಿದುಕೊಂಡು ಪ್ರವೇಶಿಸಿ ಅದನ್ನು ಕೆಂಡದಲ್ಲಿಟ್ಟಳು (ಮುಂಗಾರು. ೯೯). [ಬರ್$_1$+ಕೋಲು$_1$ (<ಕೋಲ್$_1$)]

**ಬರೆಪ**, ಬರಪ, ಬರಹ, ಬರೆಹ (ನಾ). ೧. ಬರೆದುದು; ಬರವಣಿಗೆ; ಲೇಖನ: ಶ್ರೀಮತ್ ಜಕ್ಕಿಮಯ್ಯನ ಮರ್ಮಂ ಮಹಾದೇವಯ್ಯನ ಬರೆಪಂ (ಕ್ವಾಇ. IX-i. ೬೪-೯೦; 1049); ಹೊಸಪುರ ಮೊರಕೇಸ್ವರ ದೇವರ ಓಜನ ಮಗ ಸಿಂಗೋಜನ ಪುತ್ರ ಗಣದೋಜನ ಬರೆಪಂ (ಕ್ವಾಇ. XI-i. ೩೦-೩೯; 1138); ಕೊರಲೊಳೆಸೆವ ಕೂಜಿತದ ಸುಮಂತ್ರದಿ ಬೆರಲ ಕೊನೆಯ ಬರೆಪದ ಬಾಸುಳ ಬಂಧುರಯಂತ್ರದಿ . . . ತರುಣಿಯ ಮೆಯ್ಯಾಲಸ್ಯದ ರುಚಿಯುಂ ಪಿರಿದುಂ ಪಿಂಗಿಸಿದಂ (ಜಗನ್ನಾ. ೮-೫೬). ೨. ಚಿತ್ರಣ; ಚಿತ್ರ: ಬರೆಪದ ಕನ್ನೆ ಭವಾಂತರಪರಿಚಯದಿಂ ಮೋಹ-ಮೂರ್ಛೆಯಂ ಪುಟ್ಟಿಸಿದಳ್ (ಶಂರಾಪ್ರ. ೪-೯೩); ಬರೆಪದ ಪೆಣ್ಣಂ ಭೂಪ ಕುಸುಮಕಾಂಡಂ ಕಂಡಂ (ಕುಸುಮಾ. ೬-೬೪); ಬರೆಪದೆ ಬಣ್ಣವು ಪರೆಯೆ ಕಪೋಲದಿಂದುರುಳಿದ ಕಂಬನಿ ಗುರುಕಿದೊ (ಶಾಕುಂತ. ೬೪ ಅಂಕ). ೩. ಕಾವ್ಯಾದಿಗಳ ರಚನೆ: ಬರೆಪದ ಬಲ್ಮೆ ಬಾಜನಿಯ ಬಿನ್ನಣಂ (ಎಕ. VII. ಶಿಕಾ. ೧೨೪-೨೯; 1077); ಬರೆಪಂ ಬಾಜನೆ ಗಂಡಯುಕ್ತಿ ಗಣಿತಂ . . . ಎಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪ. ೪-೫೯). **ಬರಪ**: ೧. ವಾಸ್ತುವಿಧ್ಯಾ(ದ್ಯಾ)ಧರಂ ಕಾವೋಜನ ಬರಪ (ಇಕ. XIII, ೯೩-೪೦; 1084); ಜಕ್ಕಣನ ಬರಪ ಮರುಳೋಜ ಮಾದೋಜನ ಕಂಡರಣೆ (ಇಕ. IV, ೧೧-೭೦; 1121). **ಬರಹ**: ೧. ಶ್ರೀಮತು ಕನಕನಂದಿತ್ರೈವಿದ್ಯದೇವರ ಗುಡ್ಡಂ ಸೇನಬೋವ ಭೋಗದೇವನ ಬರಹ (ಎಕ. VII. ಶಿವಮೊ. ೯೪-೩೯; 1111); ಎರಡರಸನಾನದು ಧರಣಿಯೊಬ್ಬನ ಶಿರದ ಬರಹವ ತೊಡೆವೆನಿದೆಯೆಂದೆನುತ ತೆಗೆದೆಚ್ಚ (ಕುಮ್ಯಾಕ. ೦೩-೪೨); ಅದರ ಮೇಲಿದ್ದ ಬರಹ ಸ್ಪಷ್ಟವಾಗಿ ಗೋಚರಿಸುತ್ತಿರಲಿಲ್ಲ (ಹಾಹುತ್ತ. ೦೦೩). ೨. ಅಂತು ಬರಹದ ಬಚ್ಚರಣೆಯ ಪೆಣ್ಣ ಕಣ್ಣೊಳ್ ತೊಳಲೆ . . . ಮನದೊಳ್ ಚಿಂತಿಸುತ್ತಮಿರಲ್ (ಪುಣ್ಯಾಸ್ರ. ೩-೪೨ ಪ); ಎಸೆವ ಬೊಂಬೆಯ ಬರಹದ ಪಟ್ಟೆಪೀತಾಂಬರ ಪೊಸ ಚಂದ್ರಗಾವಿ ಪೊಪ್ಪಳಿಯ . . . ದಿವ್ಯದುಗುಲದ ನಿರಿಗಳ . . . ಶಶಿಮುಖಿಯರು ರಂಜಿಸಿದರು (ಕಂಸವ. ೨೪-೪೪). **ಬರೆಹ**: ೧. ಮಱುಗಲಿನ್ನೇಕರಸ ಬಿಡು ವಿಧಿ ಬರೆದ ಬರೆಹವ ತಪ್ಪಿಸಲು ಹರಿಹರವಿರಿಂಚಾದಿಗಳಿಗಳವೇ ನಮ್ಮ ಪಾಡೇನು (ನಳಚ. ೩-೩); ಈ ಶಾಸನಗಳು ದೊಡ್ಡವಲ್ಲ, ಎಲ್ಲ ಪುಟ್ಟ ಪುಟ್ಟ ಕಲ್ಲಿನ ಬರೆಹಗಳು (ದ್ರಾಶಶಿ. ೩೬). [ಬರ್$_1$+—ಪ್ಪ$_2$]

**ಬರೆಪಂಬೊಗು** (ಕ್ರಿ). ಬರಹಕ್ಕೆ ಸಾಧ್ಯವಾಗು; ಬರವಣಿಗೆಗೆ ಶಕ್ಯವಾಗು: ಅಕ್ಕರಮುಂ ವರ್ಣಮುಮೆಂದಕ್ಕಂ ಶುದ್ಧಾಕ್ಷರಕ್ಕ ನಾಮಂ ಬರೆಪಂಬೊಕ್ಕುಚ್ಚರಿಸಲ್ ಬಾರದುವಕ್ಕರಮಲ್ತು (ಶಮದ. ೨).
[ಬರೆಪ+ಪೊಗು]

**ಬರೆಪಕಾಱ**, ಬರಹಗಾರ (ನಾ). ಬರೆಯುವವನು; ಲೇಖಕ: ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ ಪೂಣ್ದು ಪೇಟ್ದ ಬೆಳ್ಳಳ ಕೃತಿಬಂಧಮುಂ ಬರೆಪಕಾಱರ ಕೈಗಳ ಕೇಡು (ಶಂಶಿಅ. ೦-೦೨). **ಬರಹಗಾರ**: ತನ್ನ ಲೇಖಗಳನ್ನು ಪ್ರಕಟಿಸಿ ಪ್ರಭಾವಿ ಬರಹಗಾರ ಎಂದು ಎನಿಸಿಕೊಂಡಿದ್ದು ರಂಗಣ್ಣನವರಿಗೆ ಧೈರ್ಯ ತಂದುಕೊಟ್ಟಿತು (ಅಕನಾ. ೦೦); ಮುಂದಕ್ಕೆ ಬರುವಷ್ಟರಲ್ಲಿ ಆ ನನ್ನ ಬರಹಗಾರ ಗೆಳೆಯನೇ ಆವನು ಆಗಿದ್ದ! (ಗಾಳಿಗು. ೦೩). [ಬರೆಪ+—ಕಾಱ]

**ಬರೆಪು**, ಬರಹು$_1$ (ನಾ). ಬರವಣಿಗೆ; ಬರಹ: ಕೃಷ್ಣ — ವಿಲೇಖನೇ, ಉಳ್ಕಿಯೊಳ್; ಕರ್ಷತಿ = ಉಳ್ವುದು . . . ಕಾರ್ಷ್ಯಂ—ಬರೆಪು (ಶಾಶಕ್ಕ. ೩೮). **ಬರಹು**$_1$: ಅಂದವ ಆತಪಂಸುಹಕೆ ಬರಕೊಟ್ಟ ಬರಹು (ಎಕ. VII. ಶಿವಮೊ. ೦೦೮-೪೨ : 1558 ?); ಸೇನಭವರಮವ ಬರದ ಬರಹು (ಎಕ. VII. ಶಿವಮೊ. ೯೩-೩೯; ?). [ಬರ್$_1$ + — ಪ್ಪ$_2$]

**ಬರೆಯಿಡು** (ಕ್ರಿ). ಕಾದ ಲೋಹದಿಂದ ಮೈಮೇಲೆ ಗೆರೆಯನ್ನು ಎಳೆ; **ಬರೆಯೆಳೆ**; ಬರೆಹಾಕು : ಬರೆಯಿಡುವೊಡೆ ಪೆಱಪೆಡೆಯೊಳ್ ಖರಕಿರಣಜ ಸಚ್ಚಿಶಾಂಕರೇಖಾಕೃತಿಯಿಂ ಬರೆಯಿಡುವುದು (ಅಶ್ವಶಾ. ೦೦-೨೮); ಅತ್ತೆ ಬರೆಯಿಟ್ಟಾಗಲೂ ಗೋಳಿಡಲಿ (ಹೊಸಕ್ಷಿ. ೨೨). [ಬರ್$_1$ + ಇಡು$_1$]

**ಬರೆಯಿಸು**, ಬರಸ್ಸು$_1$, ಬರೆಸು (ಕ್ರಿ). ೧. ಬರೆಯುವಂತೆ ಮಾಡು; ಲಿಖಿತಗೊಳಿಸು : ಗರ್ವದೆ ಬರೆಯಿಸಿದಂ ಪೆಸರನಖಿಳದಿಗ್ಭಿತ್ತಿಗಳೊಳ್ (ಶಂಶಅ. ೦-೨೦); ತನಗೆ ಪರಮವಿಶ್ವಾಸಮುಳ್ಳ ಲೇಖಕನಿಂ ಸೂರ್ಯ ಮಿತ್ರಂಗೆ ವಿನಯಪತ್ರಮಂ ಬರೆಯಿಸಿ (ಸುಕುಮಾ. ೨-೧೩ ವ); ಏನೋ ಕಾಗದ ಬರೆಯಿಸಿ ಕೊಟ್ಟರು ಎಂದೂ ಹೇಳಿದ (ಕಂಗಾಳ್. ೪೬೦). ೨. ಕಾವ್ಯ ರಚನೆ ಮಾಡಿಸು; ಕೃತಿಯನ್ನು ರಚಿಸುವಂತೆ ಮಾಡು : ಶಾಂತಿ ಪುರಾಣಮನಿದನೋರಂತಿರೆ ಬರೆಯಿಸುವ ಕೂಡೆ ಪರೆಯಿಸುವ ಜನಕ್ಕಿಂತಾರ್ ನೋಂತರ್ (ಶಾಂತಿಪು. ೦-೩೯); ಪೊನ್ನಿಗನಿಂ ಬರೆಯಿಸಿದರ್ ಸಕಳೋರ್ವಿಗೆ ಪರೆಯಿಸಿದರ್ ಸಲೆ ಪುರಾಣಚೂಡಾಮಣಿಯಂ (ಅಜಪು. ೦-೩೪); ಕಾವ್ಯಗಳನ್ನು ಬರೆಯಿಸುವ ಮನೋಧರ್ಮ ಅತ್ತಿಮಬ್ಬೆಗೆ ತಂದೆಯ ಮನೆ ಯಿಂದಲೇ ಬಂದಿತೇನೋ (ಸಹಾಹೂ. ೦೩೬). ೩. (ಅಧಿಕಾರಕ್ಕೆ) ನೇಮಿಸು; ನೇಮಕಮಾಡು : ಎನ್ನ ಭಂಡಾರಕ್ಕೆ ಬರೆಯಿಸುವೆನೀತನಂ (ಬಸವ. ೩-೦೦೧). **ಬರಸ್ಸು**$_1$: ೧. ಆಚಂದ್ರಾರ್ಕತಾರಂಬರಂ ಬರಸಿ × × × ಕೊಟ್ಟ ಧರ್ಮ್ಮ (ಎಕ. VII. ಶಿವಮೊ. ೭೨-೦೯; 1292); ಬರಸಿದವು ಬಳಿಕೋಲೆ ಮಣಿಹಾಱರಿಗೆ ಹೇಳಿಕೆಯಾಯ್ತು ಶಿಷ್ಯರ ಪರುಟವಿಸಿ ಕಳುಹಿದನು ಪುರಗಳಿಗೆ (ಕೊಹರಾ. ೦-೭-೯). ೪. **ಹೇಳಿಕೊಡು**; **ಬೋಧಿಸು** : ದ್ರೋಣ ಬರಸಿದ ಭಾಷೆಯೆಂದೇ ಕ್ಷೋಣಿಪತಿ ಬಗೆಯದಿರು (ಕುಮ್ಯಾಕ. ೦೩-೩೬). **ಬರೆಸು** : ೧. ಓಲಗಕೆ ನಡೆತಂದು ಬರೆ[ಹಾಕಿಸಿ]ಸಿದನೋಲೆಗಳ ಕಳುಹಿದನು ಧರಣೀಪಾಲಕರ ಬರಹೇಳೆನುತ ಹೊಯಿಸಿದನು ಡಂಗುರವ (ನಳಚ. ೩-೪). ೨. ಒಳ್ಳೆಯ ಸರಸರೂಪಕಗಳನ್ನು ಬರೆದು, ಬರೆಸಿ, ಆಡಿ, ಆಡಿಸಿ, ಪ್ರಚುರಪಡಿಸಬೇಕು (ಶಾಹಿಪ. ೭೮).
[ಬರ್$_1$ + — ಇಸು$_2$]

**ಬರೆಯೆಳೆ** (ಕ್ರಿ). =ಬರೆಯಿಡು : ನಾಗಣ್ಣನ ಕರುಳಿಗೆ ಒಮ್ಮೆಲೆ ಬರೆಯೆಳೆದಂತಾಯಿತು (ಜನಪ. ೯೮); ಭುಸುಗುಡುತ್ತ ಆಕಾಶಕ್ಕೆ ಬೆಂಕಿಯ ಬರೆಯೆಳೆದು ಕಣ್ಮರೆಯಾಗುವ 'ಸುರುಸುರ್' ಬಾಣ (ಮೂರುದಾ. ೨೦೬).
[ಬರೆ$_2$ + ಎಳೆ$_1$ (< ಎಟ$^3_1$)]

**ಬರೆವಣಿಗೆ** 'ಬರವಣಿಗೆ' ನೋ.

**ಬರೆಸು** 'ಬರೆಯಿಸು' ನೋ.

**ಬರೆಹ** 'ಬರೆಪ' ನೋ.

**ಬರೋಬರಿ**$_1$ 'ಬರಾಬರಿ$_1$' ನೋ.

**ಬರೋಬರಿ**$_2$ 'ಬರಾಬರಿ$_2$' ನೋ.

**ಬರೋಬ್ಬರ್** 'ಬರಾಬರಿ$_2$' ನೋ.

**ಬರೋಬ್ಬರ** 'ಬರಾಬರಿ$_1$' ನೋ.

**ಬರೋಬ್ಬರಿ** 'ಬರಾಬರಿ$_1$' ನೋ.

**ಬರ್ಕ**, ಬರಕ$_1$ (ನಾ). (ಕರಾ) ಒಂದು ಬಗೆಯ ಕಾಡುಪ್ರಾಣಿ : ಹಿಂದೆ ಬರ್ಕ, ಕೆಮ್ಮ, ಕಡವೆ ಯಾವಾಗಲೂ ಕಾಣಲಿಕ್ಕೆ ಸಿಗುತ್ತಿತ್ತು (ಮೂಕಜ್ಜ. ೩೦); ದನ, ಎತ್ತು . . . ಕುರ್ಕ, ಬರ್ಕ, ಮೊಲ, ಮುಂಗುಸಿ, ನವಿಲು, ಹೊರಸಲು, ಕಾಜಾಣ ಪಿಕಳಾರ, ಕಾಡುಕೋಳಿ, ಕಣೆಹಂದಿ ಮೊದಲಾದ ಜಂತುಗಳಂತೆ ಸ್ಥಳೀಯವಾಗಿರಲಿಲ್ಲ (ಮರಳಿ. ೪೩೦). **ಬರಕ**$_1$ : ಕಾಡುಕುರಿ, ಕಾಡುಹಂದಿ . . . ಬರಕ, ಮೊಲ, ಮುಸಿಯ, ಹುಲಿ, ಕರಡಿ, ಕುರ್ಕ ಮುಂತಾದ ಇತರ ಪ್ರಾಣಿವರ್ಗಕ್ಕೆ ಕಾಡಿನಲ್ಲಿ ವಿಂತಿಯೇ ಇರಲಿಲ್ಲ (ಶಂಜಶಂ. ೨).
[?./ ತುಳು. ಬರಿಂಕ = ಒಂದು ಬಗೆಯ ಸಣ್ಣಗಾತ್ರದ ಜಿಂಕೆ]

**ಬರ್ಕಟ** 'ಬಟುಕಟೆ' ನೋ.

**ಬರ್ಕಟಬಯಲ್**, ಬಕ್ಕಟಬಯಲು (ನಾ). ೧. ಏನೂ ಇಲ್ಲದುದು ; ಶೂನ್ಯ ; ಬರಿದಾದುದು: ತವಮಾಗಳ್ ಬರ್ಕಟಬಯಲಾದುದರ್ಕನು ದಯಿಸುವಾಗಳ್ (ಗಂಠ. ೩-೩). **ಬಕ್ಕಟಬಯಲು** : ೧. ನೀನೆತ್ತ ನಾನೆತ್ತ ಲೆಂದು ಬೊಮ್ಮ ಬಕ್ಕಟಬಯಲು (ಆಠಕಂ. ೩೬೦-೧೦೧೧) ; ಬಯಲ ಪುರುಷ ಬಯಲಾಕಾರ ಬಕ್ಕಟಬಯಲರೂಪನೆ (ಭಠತ. ೬೭-೧). ೨. (ಆಲಂ) ಹಾಳು ; ನಾಶ : ಅಕ್ಕಟಕ್ಕಟ ದೊರಕಿದ ನಿಧಿಯಿಂದಿನೊಳ್ ಬಕ್ಕಟಬಯಲಾಯಿತಿಂತು (ಅಂಜಿತ. ೩-೧೪೪).

[ಬರ್ಕಟ (< ಬಟುಕಟೆ) + ಬಯಲ್ (< ವಯಲ್)]

**ಬರ್ಕತ್ತು** 'ಬರಕತ್ತು' ನೋ.

**ಬರ್ಕರ** (ನಾ). ಪ್ರಾಣಿಗಳ ಮರಿ : "ಎಲ್ಲಾ ಪಶುಗಳ ಮರಿ ಬರ್ಕರ ವೆಂಬುದು" (ಶಠಾಯು. ೪೬-೧೨೩). [ಸಂ.]

**ಬರ್ಕುಡಿ** 'ಬಕ್ಕುಡಿ₁' ನೋ.

**ಬರ್ಕುಡಿಗುಟ್ಟು** 'ಬಕ್ಕುಡಿಗಂಟ್ಟು' ನೋ.

**ಬರ್ಕುಡಿಗೆಯ್** 'ಬಕ್ಕುಡಿಗೆಯ್' ನೋ.

**ಬರ್ಕೆ₁** (ನಾ). (ಕರಾ) ಕಡವೆ ಅಂತಸ್ತಿನ ಮನೆತನ : ಗುತ್ತು ಬರ್ಕೆಗಳ ಯಜಮಾನರನ್ನೂ ಆಮಂತ್ರಿಸಿ ಚೆನ್ನಾಗಿ ಸತ್ಕರಿಸಿದ್ದರು (ಬಿತ್ತಿಜ. ೩೦). 'ಗುತ್ತು₄' ಪರಾ.

[← ತುಳು. ಬರ್ಕೆ = ಬಂಟರ ಒಂದು ಬಿರುದು]

Δ **ಬರ್ಕೆ₂** 'ಬಕ್ಕೆ' ನೋ.

Δ **ಬರ್ಕೆವಲಸು** 'ಬಕ್ಕೆವಲಸು' ನೋ.

Δ **ಬರ್ಚಣೆ** 'ಬಚ್ಚಣೆ' ನೋ.

Δ **ಬರ್ಚಲ್** 'ಬಚ್ಚಲ್' ನೋ.

**ಬರ್ಚಿ**, ಬರ್ಜಿ, ಭರ್ಚಿ, ಭರ್ಜಿ (ನಾ). ಒಂದು ಬಗೆಯ ಆಯುಧ ; ಈಟಿ ; ಸಬಳ : ಕೋಳುಗುಳದಿ ಮದವೇರಿ ರೋಷದಿಂದುಭಯಬಲ ಹಳಚಿದುದು ಬರ್ಚಿಯಿಂ ಶೂಲದಿಂ ಶಕ್ತಿಯಿಂದಲೆ ಕೃಪಾಣಂಗಳಿಂದರ ಡೊಡ್ಡಿನೋಳ್ಕಾದಿತುಭಯತರ ಬಲ ಮಡಿದುದು (ತುರಂಗ. ೩೮-೬) ; ತನ್ನ ಶಕ್ತಿಯಲಿ ನಿನ್ನ ಸುತ್ತಿರುವುದಾವ ಬೆಂಕಿಉರಿಯು? ಪಾಲಿಸುತ್ತಿರೆಯು ಬರ್ಚಿನಾಲಗೆಯು ಚಾಚಿ ಕಾಯುತಿರೆಯು (ಅರಳು. ೧೪೭-೧೧) ; **ದೊಣ್ಣೆ**, ಕೋಲು, ಬರ್ಚಿ ಮುಂತಾದ ಸಮಯಕ್ಕೆ ಸಿಕ್ಕ ಆಯುಧಗಳನ್ನು **ತೆಗೆದು** ಕೊಂಡು, ಮುಸಲ್ಮಾನರು ಹಿಂದೂಜನರ ಮನೆಗಳನ್ನು **ಮುಗ್ಗಿ**ದರು (ಹಂಪಾಕಿ. ೭೯). **ಬರ್ಜಿ** : ಬರ್ಜಿಯಿಂದ ಸಂದಿಯಲ್ಲಿ **ತಿವಿದಾಗ** **ಹಾವು** ಹೊರಬಂತು (ಊ). **ಭರ್ಚಿ : ಕೆಲವು ಸಮಾಜಗಳಲ್ಲಿ** ಭರ್ಚಿಯನ್ನು ಗುರಿಯಿಟ್ಟು ದೂರದಿಂದ ಎಸೆದು ಪ್ರಾಣಿಗಳನ್ನು ಕೊಲ್ಲುತ್ತಿದ್ದರು (ಶಿಲ್ಪಶಾ. ೨೦). **ಭರ್ಜಿ** : ಗಂಡುಕೊಡಲಿ, ಭರ್ಜಿ, ಗುರಾಣಿ ಎಲ್ಲವನ್ನೂ ಧರಿಸಿದ್ದ (ಆರ್ಯುಕ. ೩೨) ; **ಶಾಸಕ್** ಸಿಪಾಯಿಯೊಬ್ಬನು ತನ್ನ ಬಂದೂಕ ವನ್ನೂ ಭರ್ಜಿಯನ್ನೂ ಕೈಯಲಿ ಹಿಡಿದುಕೊಂಡು ಕೆಲವು ಸಮಯದಲ್ಲಿ ಆ ಬಾಗಿಲನ್ನು ಕಾಯುತ್ತಾ ನಿಂತಿರುತ್ತಾನೆ (ಪುಲಿಪಾ. ೨೩).

[← ಹಿಂ. ಬರಛಾ, ಬರಛೀ ; ಮರಾ. ಬರಚೀ, ಬರಛೀ, ಬರಶೀ]

**ಬರ್ಚಿಗಾರ** (ನಾ). ಈಟಿಯನ್ನು ಹಿಡಿದಿರುವವನು ; ಬರ್ಜಿಯಿಂದ ಹೋರಾಟ ನಡೆಸುವ ಸೈನಿಕ : ಬರ್ಚಿಗಾರರ ಬಲವೆ ಬೀಡಾರ ಬಿಟ್ಟಂತೆ ಒಟ್ಟಿಲದಲಿ ಜೋಳದ ಸೆಲುವು (ಸಂಠಗ. ೨೨-೩).

[ಬರ್ಚಿ + – ಗಾರ (< – ಕಾಱ)]

Δ **ಬರ್ಚಿಸು** 'ಬಚ್ಚಿಸು₃' ನೋ.

Δ **ಬರ್ಚು** 'ಬಚ್ಚು₂' ನೋ.

**ಬರ್ಜಿ** 'ಬರ್ಚಿ' ನೋ.

**ಬರ್ತರಫ್** 'ಬರತರಫು' ನೋ.

**ಬರ್ತರ್ಫ್** 'ಬರತರಫು' ನೋ.

**ಬರ್ದ** (ನಾ). ಜಾಣ್ಮೆಯುಳ್ಳವನು ; ಬುದ್ಧಿವಂತ : ರತಿಪತಿಯ ರಾಜಧಾನಿಯು ಚತುರೆಯರೊಳ್ ಸುಖಿಪ ಬರ್ದನೀ ಗ್ರಾಮ್ಯೆಯನೇಂ ಕ್ಷಿತಿಪಾಲ ನೆನೆಗುಮೋ ಮಾಳತಿಗೆರಗಿದ ತುಂಬಿ ನೆನೆಗುಮೋ ಮಿಕ್ಕಲರಂ (ಬಿಲ್ಹಣ. ೦೦-೧೪). [ಬರ್ದು₄ + – ಅ₇]

**ಬರ್ದಂಡು** 'ಭರದಂಡು' ನೋ.

**ಬರ್ದಿಲ** (ನಾ). ೧. ಸಾವಿಲ್ಲದವನು; ಅಮರ ; ದೇವತೆ : "ಅಗಸ ವಟ್ಟೆಗರು ಸಗ್ಗಿಗರು ಬರ್ದಿಲ [ಪಾಠಾಂ. ದುರ್ಗ]ರ್ಪೆದೆ ಯಾ ಪೆಸರು ಸಲ್ವುದು ಸುರರ್ಗೆ" (ಶಬ್ದಮಂ. ೦೦) ; ಸಗ್ಗಮಂ ಸಾರ್ದು ಮುಗಿಲ್ದೇರ ನನಟ್ಟಿ ಬರ್ದಿಲರಂ ಸೋಲಿಸಿ, ಕನ್ನವೆಣ್ಗಳಂ ಸೆಱೆವಿಡಿವಂ (ಅದ್ಭುತ. ೨೪-೦೪) ; ಬಲುಂಗಬ್ಬಿಗನೊಬ್ಬನೆ ಬಾಳ್ವ ಬರ್ದಿಲಂ (ಗಿಠಿಂ. ೦೦೬-೬). ೨. ದೇವತೆಗಳ ಲೋಕ ; ಸುರಲೋಕ ; ಸ್ವರ್ಗ : "ಬರ್ದಿಲಂ, ಸಗ್ಗಂ –ಈ ೨ ಸ್ವರ್ಗದ ಪೆಸರ್" (ಕಠಿಶಾ. ೪೮-೦೭) ; ಬರ್ದಿಲಂ ಸಗ್ಗಕ್ಕೆ ಪೆಸರ್ (ಶಮುದ. ೪೩) ; ಶ್ರೀರಂಗರಾಜಂ ಅಪುತ್ರನಾಗಿ ಬರ್ದಿಲಮನೈದ ಲೊಡಂ (ಚಿಕದಂ. ೨-೦೩).

**ಬರ್ದಿಲರ ಬಡಗಿ** = ದೇವತೆಗಳ ಬಡಗಿ ; ವಿಶ್ವಕರ್ಮ : ಪೆಸರ್ ನಳಂ. ಬರ್ದಿಲರ ಬಡಗಿಗೆನಗೆ ಪುಟ್ಟಿದಾತಂ (ಶ್ರೀ ರಾಮಾ. ೩೬೭-೯೩).

[ಬರ್ದು₃ + – ಇಲ]

**ಬರ್ದಿಲನಾಡು** (ನಾ). = ಬರ್ದಿಲ ೨: ಪಗೆದೊರೆಗಳುಮೊಂದಿದರಾ ಬರ್ದಿಲನಾಡ ಬಾಟೆತ್ತಿಯ ಸಿರಿಯಂ (ಅಶ್ವಿತ. ೦೬-೪೪) ; ಕರ್ವೆಟ್ಟುಗಳೀಗಳ್ ಪೂರ್ವವೈರಮಂ ಬಗೆದು ಬರ್ದಿಲನಾಡಿಂಗೆ ದಾಟೆಡಲ್ಕೆ ದಂಡೆತ್ತಿ ಪೋಪು ವಕ್ಕುಂ (ರಾಮಾಶ್ವ. ೩-೩). [ಬರ್ದಿಲ + ನಾಡು]

**ಬರ್ದಿಲವಟ್ಟೆ** (ನಾ). ಸ್ವರ್ಗದ ದಾರಿ ; ದೇವಲೋಕದ ಮಾರ್ಗ ; ಆಕಾಶ : ಬರ್ದಿಲವಟ್ಟೆಯೊಳೈತರುತಲಿರ್ದ ಹನುಮನಂ . . . ತಿಳಿದಳಾ ಸಿಂಹಿಕೆ (ಶ್ರೀರಾಮಾ. ೪೦೦-೨೦೪). [ಬರ್ದಿಲ + ಬಟ್ಟೆ₁]

**ಬರ್ದಿಲಾಣ್ಮ** 'ಬರ್ದಿಲಾಳ್ಮ' ನೋ.

**ಬರ್ದಿಲಾಳ್ಮ**, ಬರ್ದಿಲಾಣ್ಮ (ನಾ). ದೇವಲೋಕದ ಒಡೆಯ ; ಸ್ವರ್ಗದ ರಾಜ : "ಬರ್ದಿಲಾಳ್ಮ[ಪಾಠಾಂ. ಣ್ಮ] ಸಗ್ಗಿಗರೆಱೆಯ . . . ಸುರಪತಿಯ ನಾಮಮಕ್ಕುಂ" (ಶಬ್ದಮಂ. ೦೦). **ಬರ್ದಿಲಾಣ್ಮ** : ಬರ್ದಿಲಾಣ್ಮನಾಗಿರ್ದೊಡಲ್ಲದೆಯೆ ಓರೊರ್ವನುಂ ಬೇಗುದಿಯಳೊಂದೆ ಬಗೆ ತೊಟಲ್ವಪನ್ (ಐದ್ಯ.ಶ್ರ. ೩-೩೬). [ಬರ್ದಿಲ + ಆಳ್ಮ]

**ಬರ್ದಿಸು** (ಕ್ರಿ). ತಾಳಿಸಂ ; ಬಾಡಿಸು ; ಹುರಿ : ತತ್ತಟಗುದಿದು ಕಾಯ್ದು ಕಾಯ್ದೊಂಡದೆಣ್ಣೆಯೊಳರ್ದಿ ಬರ್ದಿಸುತ್ತುಮಾಪಾದಮಸ್ತಕಂ ಬರಂ ವ್ಯತ್ತಿಸಿ ಪತ್ತಿತಿದಿಯುಂಗಿಯುತ್ತೆ (ಅಜಿತ. ೧೧-೦೦ ವ).

[ಬರ್ದು₁ + – ಇಸು₃]

**ಬರ್ದು₁** (ಕ್ರಿ). ೧. ಸಾಯು ; ಮರಣವನ್ನು ಹೊಂದು : "ಬರ್ದು — ಮರಣೇ" (ಶಮುಧಾ) ; ಶೂದ್ರುಕನ ಪೊಳೆವ ಸುರಿಗೆಯ ಮೊನೆಯೊಳ್ ಪೊಂಗಿ ಸೊಡರ್ಗುಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಕಾವ್ಯಸಾ. ೦೦೦೪ ಶೂದ್ರುಕ) ; ಅತಿ ಶೋಕಾಗ್ನಿಯೊಳರ್ದು ಬರ್ದು [ಪಾಠಾಂ. ಬ್ದು] ಪುದಿದಾತ್ಮಧ್ಯಾನದಿಂ . . . ದುರಂತದುಃಖಿಮನುಣಲ್ಪೇಡ (ಆದಿಪು. ೩-೩೬). ೨. ನವೆ ; ಬಾಡು ; ಸೊರಗು : ಪರವಮಿತ್ರಾ ಇಂತೇಕೆ ಬರ್ದಿ[ಪಾಠಾಂ. ಬಿಟ್ದು] ಬಂಬಳಂ ಬಾಡಿ ಪಾಡಟಾದುಬ್ಬೆಗಂಬಟ್ಟಿರ್ದೆ (ವಡ್ಡಾರಾ. ೬೯-೩).

[ದೇ. ‖ ತಮಿ. ವರುನ್ದು]

**ಬರ್ದು₂** 'ಬಾಟು₁' ಪರಾ.

**ಬರ್ದು₃** (ನಾ). ೧. ಸಾವು ; ಮರಣ : "ಬರ್ದನಲ್ ಸಾವು" (ಶಬ್ದಮಂ. ೯೫) ; ಎನ್ನೊಳ್ ಕೂರ್ತಿರಪ್ಪೊಡೆ ಬರ್ದಿನ ಪೂರ್ದಿನ ಮುನ್ನಮೆ ಶ್ರೀರಘುನಾಯಕಂ ಕಣ್ಣಾರೆ ಕಂಡು ಧನ್ಯನಪ್ಪಂತು ವರವಮಂ ಕರುಣಿಪುದು (ರಾಮಾಶ್ವ. ೧೧೦-೧೧). ೨. ಸಾವು ಇಲ್ಲದ ಸ್ಥಳ ; ಸ್ವರ್ಗ : "ಬರ್ದನೆ ಸ್ವರ್ಗಮೆಂದೆನಿಪುದುಂ" (ಕಶರ. ೬೨). [<ಬರ್ದು₁]

**ಬರ್ದು₄, ಬದ್ದು₂** (ನಾ). ಜಾಣ್ಮೆ ; ಪ್ರೌಢಿಮೆ ; ಕೌಶಲ : "ಬರ್ದನೆ ಪ್ರೌಢಿಯೊಳಕ್ಕುಂ" (ಕಶಾಅ. ೧೬) ; ಉಪರಿಚರಮಹಾರಾಜನಿಂದಗ್ಗಳಂ ಪೆಱರಾರುಮಿಲ್ಲಮಿಾ ಸಂಸಾರದೊಳ್ ಬರ್ದ ಬಾಟನೀತನೆ ಬರ್ದನೆಂದು ಪೊಗೞ್ವೊಡೆ (ವಡ್ಡಾರಾ. ೧೪೭-೨೦) ; ಮಸೆದ ಮದನನ ಪೊಳೆವಲರ್ಗಣೆಗಳಂತೆ ಕಣ್ಣೊಳ್ ಬೆಳೆದೆಳಸಿ ಬಂದಿರ್ದ ಪಾಟದಾಟದ ಮುದ್ದಿನ ಬರ್ದಿನ ಪರಿವಾರದೇವಿಯರುಮಂ . . . ಕಂಡು (ಅಂಪು. ೨-೬೫ ವ) ; ಆ ಸರಸತಿ ಕೂರ್ಮೆಯಿಂದೊಸೆದು ಮಾಡುಗೆ ಕಬ್ಬದ ಬರ್ದಿನೇೞ್ಗೆಯಂ (ಕಬ್ಬಿಕಾ. ೩) ; ಅಧರಾಮೃತಮಂ ನಿಚ್ಚಂ ತಣ್ಣನೆ ಸವಿವ ಬರ್ದುಳ್ಳರ್ಗೆ ಬರ್ದಿಲರೇಂ ಪಾಸಟಿಯೆ ? (ರಾಮಾಶ್ವ. ೬೦-೦೮). 'ಬರ್ದುಗ' ಪರಾ. **ಬದ್ದು₂** : ಆತನಂ ಕಾಣಲೊಡಂ ಕರಂ ಬಯಸಿ ತಾಮೆೞೆದಟ್ಟುವರಟ್ಟಿ ಕೂಡೆಯುಂ ನಾ[ಣ]ಲಿವನ್ನರಾದರೆನುತೊಂದು ವಿದಗ್ಧತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ ಬಾಳಕಿಯೆಯೆಂತುಗೆ ಕೂಡುತೆ ಗೆಲ್ದೆಯಾತನಂ (ಬಂಹಂ. ೩-೬೦). [ ? ]

**ಬರ್ದುಂಕಿಸು, ಬದುಕಿಸು, ಬರ್ದುಕಿಸು** (ಕ್ರಿ). ೧. ಕಾಪಾಡು ; ರಕ್ಷಿಸು : ನಿನ್ನೊಳಗೀಕೆ ತಾನೆಯೊಲವೆತ್ತಾ ಪಾಂಗುಮಂ ಪೆಂಡಿರೊಳ್ ಸರಿಗಂಡೀಕೆಯ ನೀಂ ಬರ್ದುಂಕಿಪುದು (ಶಾಕುಂತ. ೩೬-೯೫). ೨. ಮುಕ್ತಗೊಳಿಸು ; ಬಿಡುಗಡೆ ಮಾಡು : ವಿಜಯನೆಂಬ ಕುಮಾರನುಂ ಓರಿದು ತಂತ್ರಂಬೆರಸು ಪೋಗಿ ಏನಾನುಮೊಂದುಪಾಯದಿಂದೊದ್ದಾಯನನ ಸೆಱೆಯಂ[ಯಿಂ] ಬರ್ದುಂಕಿಸಿ ರಾಜಗೃಹಕ್ಕೊಡಗೊಂಡು ಪೋದೊಡೆ (ವಡ್ಡಾರಾ. ೧೪೩-೦೬). **ಬದುಕಿಸು** : ೧. ಸದ್ಭಾವನೆಯೆ ಪ್ರಸನ್ನವಾಗಿ ಚಿದ್ಬಿಂದುವಿನೊಳು ಪ್ರತಿಬಿಂಬಿಸುತ್ತಿಪ್ಪ ಚಿದ್ಬ್ರಹ್ಮವನೊಳಕೊಂಡ ಮಹಾಶರಣರ ತೋಱಿ ಬದುಕಿಸಾ ಎನ್ನ (ಅದಪ. ೦೬-೯೨) ; ಶಿವಾಚಾರ ಶಿವಭಕ್ತಿ . . . ಶಿವಶರಣರ ಸಂಗ ಇವನೆ ಕರುಣಿಸಿ ಬದುಕಿಸಯ್ಯಾ ಎನ್ನ (ಅಖಂಡೇ. ೧೯೯-೦೯೩) ; ಬದುಕಿಸು ನನ್ನೊಡೆಯನ ದಮ್ಮಯ್ಯ (ಕೋಗಿಳೆ. ೫೦-೫). ೩. ಬದುಕುವಂತೆ ಮಾಡು ; ಜೀವವುಳಿಸು : ಅಂದು ಮೃತಸಂಜೀವಿಯೌಷಧಿಯಿಂದ ಬದುಕಿಸಿ ಮನೆಗೆ ತಂದನು (ಸಂಕಶ. ೫೦. ೨-೦೫) ; ಅಮ್ಮಯ್ಯನಿಗೆ ಮರಣಸಂಭವವಾದರೆ ಮಾರ್ಕಂಡೇಯನಂತೆ ಈಶ್ವರನನ್ನು ಮೆಚ್ಚಿಸಿ ಬದುಕಿಸಿಕೊಳ್ಳುವೆನೆಂಬ ಭರವಸೆ (ಕಂಗಾಳ್ವ. ೩೨). **ಬರ್ದುಕಿಸು** : ೧. ಅವರೆಸ್ನಂಘ್ರಿದ್ವಯದೊಳೆಱಗಿ ಬರ್ದುಕಿಪುದೆಂದರ್ (ವಶಕಾ. ೬-೦೯೫). [ಬರ್ದುಂಕು + – ಇಸು₁]

**ಬರ್ದುಂಕು, ಬದುಂಕು, ಬದುಕು₁, ಬರ್ದುಕು₁, ಬಟ್ಟುಂಕು** (ಕ್ರಿ). ೧. ಜೀವಧಾರಣೆ ಮಾಡು; ಪ್ರಾಣವನ್ನುಳಿಸಿಕೊಳ್ಳು; ಜೀವಿಸು : ಕರ್ವಕ್ಕೋಡಿ ಬರ್ದುಂಕಲ್ಕುಮಾಱವರಾರ್ ಭೂತಳದೊಳ್ (ಕಂರಾ. ೧-೬೨): ಪಗೆವರೊಕ್ಕಲೊಳೋವೆನಲೊರ್ವರಿಲ್ಲದಂತಿರೆ ತವೆ ಕೊಲ್ಲುಮಂತುಮರಿ ಕೇಸರಿಗಾಂತು ಬರ್ದುಂಕಲಕ್ಕುಮೋ (ಶಂಕಭಾ. ೯-೩೬); ನಲ್ಲರ ಕೂಡು ವಾಸೆಯೆ ಬರ್ದುಂಕುವುದರ್ಕೆ ನಿಮಿತ್ತಮಾಗದೇ (ಕಾದಂಬ. ೩೨೮). ೨. ಜೀವನವನ್ನು ನಡಸು; ಬಾಳನ್ನು ಸಾಗಿಸು ; ಹೊಟ್ಟೆಹೊರೆ : ಸೇವಕಂ ಮೊದಲೊಳರಸಂಗಂ ತದನಂತರಂ ಪ್ರಧಾನರ್ಗಂ . . . ಭೀತನಾಗಿರಲ್ವೇಟ್ಕುಂ. . . ಇಂತು ಲಘುತರಪುಪ್ಪ ಸೇವೆಯಿಂ ತನ್ನಿಚ್ಚೆಯೊಳ್ ಬರ್ದುಂಕುವ ಶುನಕಂ ಲೇಸು (ಶಂತಶಂ. ೫೨-೨೦); ಹರಹರ ಕರ್ಮದೊಳ್ ಬಳಲದಿಂತು ಬರ್ದುಂಕಿದೆನ್ನೆ ಸದಾಶಿವಾ ನರಪರ ಸೇವೆಯೊಳ್ ಕುದಿಯದಿಂತು ಬರ್ದುಂಕಿದೆನ್ನೆ (ಶಂಶಾಕ. ೨೩). ೩. ಬಿಡುಗಡೆಯನ್ನು ಹೊಂದು; ಮುಕ್ತವಾಗು : ಆಕೆ ಮದನನ ಕೆಯ್ಯಿಂ ಬರ್ದುಂಕಿದರಲಂಬು ಬರ್ಪಂತೆ ಬಂದು (ಶಂಶಭಾ. ೩-೦೯ ವ); ಬಂದುದು ಮದನನ ತಿರುವಿಾ ಬರ್ದುಂಕಿದಲರಂಬಿನವೋಲ್ (ಸುಕುಮಾ. ೯-೦೦೬); ಸೆಱೆಯಿಂ ಬರ್ದುಂಕಿದಂ (ರಾಜಾಕೂ. ೯೦ ಉದ್ಧಾ). ೪. ಸಾರ್ಥಕತೆಯನ್ನು ಹೊಂದು ; ಕೃತಾರ್ಥವಾಗು ; ಧನ್ಯತೆಯನ್ನು ಪಡೆ : ಬಂದ ಭವಂಗತಿಸುಖಮುಖದಿಂದಂ ಮೆಯ್ಯಿಕ್ಕಿ ಹರ ಬರ್ದುಂಕಿದೆವೆನುತಂ (ಗಿರಿಕ. ೦೦-೦೯). ೫. ಜಾರು ; ನುಸುಳು; ತಪ್ಪಿಸಿಕೊಳ್ಳು : ಆದಂ ತರ್ಪರಗೀಳಿಯನೊಂದು ಗಿಡುಗನೆಡೆಗೊಂಡು ಜಗುನೆಯಂ ಪಾಯ್ವಾಗಳುಗಿಬಗಿಮಾಡಿದಾಗಳದಱ ಕೈಯಿಂ ಬರ್ದುಂಕಿ ತೊಱೆಯೊಳಗೆ ಬಿೞ್ವೊಡೆ (ಶಂಶಭಾ. ೦-೬೯ ವ) ; ತತ್ಫಲಂಗಳ ಸಮೃತೋಪಮಂಗಳನಾರೋಗಿಸುತ್ತುಂ ಸುಖದಿನಿರ್ದೊಂದುದಿವಸಂ ತನ್ನ ಕೈಯಿಂದಂ ಬರ್ದುಂಕಿದ [ಶಾಕಾಂ. ಬಿದಿರ್ದ] ಪಣ್ಣಂಬೋಧಿಮಧ್ಯದೊಳ್ ಬೀೞ್ವುದುಂ (ಶಂತಶಂ. ೨೭೭-೦೭). **ಬದುಂಕು** : ೧. ಈ ನೃಪನಂ ಕಾವವನಾವ ಅಚನೃಪನಮೆನಿಯಿಸೆ ಬದುಂಕುವನ್ನರುಮೊಳರೇ (ಶಾಇ. XI-೧. ೬೯-೦೦; 1033); ನಿನ್ನೊಳಂ ತೊಡರ್ದು ಕಾದಿ ಬದುಂಕುವನೇಂ ತ್ರಿಣೇತ್ರನೋ (ಎಕ. VI. ಕಡೂರು. ೦೯೯-೯೭; 1205). ೪. ರುದ್ರರಿರ ನಾನಾವ ಕಾಲದೊಳದ್ರಿಜೇಶನ ಪದಯುಗವನುದ್ಧೃತಿಯೊಳರ್ಚಿಸಿ ಬದುಂಕುವ ಪುಣ್ಯವಾದವುದೊ (ಬಸಪು. ೯೫-೯೭). **ಬದುಕು₁** : ೧. ತಳವಱ ಕಳ್ಳರ ಬಾರಿಯೊಳೊಳಗಾಗದೆ ನಿನ್ನ ಬದು[ಶಾಕಾಂ. ರ್ದು]ಕಿ ಬಂದಂದ ಮಿದಾರಳಪೀಗಳುಂಬಂ (ಸುಕುಮಾ. ೭-೨೪); ಸೂನು ಬದುಕಿದೊಡಿಂದು ನಿನ್ನಂ ನೋಣಸುವೆವು (ಬಸಪು. ೯೮-೦೯); ವಿಷದ ಹುಟ್ಟಿಯೊಳೆಱಗಿ ನೊಣ ಜೀವಿಸುವುದೇ ಶಿವಶಿವ ಕುಮಾರನ ಮುಸುಡ ಮುಂದಕೆ ಬಿದ್ದು ಬದುಕುವುದುಂಟೆ ಭಟನೀರ (ಕುಮಾರ್ಗ್ರೆ. ೬-೪೦). ೨. ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟು ಸುರಕ್ಷಿತವ ಮಾಡುವ ಭರವ ನೋಡಾ . . . ಸಂಗಮದೇವನ ಪೂಜಿಸಿ ಬದುಕುವೋ ಕಾಯವ ನಿಶ್ಚಯಿಸದೆ (ಬಸವ. ೧೬೨); ತೊತ್ತಿರೊಳೀ ತಳೋದರಿ ಬೆರೆಸಿ ಬದುಕಲಿ ಕರ್ಣ ಕಳುಹಿವಳ (ಕುಮ್ಮಾಸ. ೦೫-೮). ೪. ನೀನೊಲಿದ ವಿಭೂತಿಯ ನಾನು ಧರಿಸಿ ಬದುಕಿದೆನು ಕಾಣಾ (ಅದಪ. ೦೬-೪೪); ನೀವೆನ್ನ ಮಂದಿರದೊಳಾರೋಗಿಸಿದೊಡಾನಿಂದು ಬದುಕುವೆನು (ಬಸಪು. ೬೦-೨) ; ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು (ಕಶಕ. ೮೩-೯೭ ಪಲ್ಲವಿ). **ಬರ್ದುಕು₁** : ೧. ನೀನ್ನುಡಿದು ಬರ್ದುಕಿದ್ದೆ ಪೆಱರೆನ್ನದಿರೊಳ್ ನುಡಿದು ಕರ್ಣನಂ ಬರ್ದುಕುವರೇ (ಶಂಶಭಾ. ೦೭-೨೭); ಓರಿದಪ್ಪಾಪತ್ತೆಲ್ಲಮಂ . . . ಬದಿರ ಗಂಟಂ ಕಡಿವಂತಿರೆ ಕಡಿದು ಬರ್ದುಕಿ ಬಂದೈ (ರಶಾಕಸ್ಕ. ೩-೨೯೭ ; ಈತು ಲರ್ವಿಜ್ಞಣಗೆಯನಿನಿತಾಯಾಸದೆ ಬೀಸಲೀಕೆ . . . ಈಯೆಲರಿಂ ಬರ್ದುಕಲೆಂತುಮಾನಾರ್ತಪೆನೇ (ಚಂದ್ರಪು. ೮-೯೦). ೨. ಜನಪತಿಗಳ್ ನುಡಿಯಲ್ ಪಾರ್ದನಿಯಂತಸುನುಪದಿಸಿ ಬರ್ದುಕಲೊಲ್ಲದೆ ಮಾರ್ಕೊಂಡನುಚಿತಮಿದೆಂದು ಮಾಣಿಪ ಮನುಜೋತ್ತಮರೆಲ್ಲಿಯಾನುಮಿರ್ಪರ್ ಜಗದೊಳ್ (ಕಾದಂಪೂ. ೫೯೨) ; ಖಳನಂ ಗುಣಗಣದಾಮಾನಳನಂ . . . ಸಮಗ್ರದೋಷಾವಿಳನಂ ಪೆಸರ್ಗೊಂಡು ಬರ್ದುಕುವನ್ನನದಾವಂ (ಧರ್ಮಪು. ೦-೩೨). ೩. ನೀಲಾಂಜನೆ ಕರ್ಬಿನ ಬಿಲ್ಲಿಂ ಮಸೆದ ಮದನನಲರ್ಗಣೆ ಬರ್ದುಕಿತ್ತೆನಿಸುತ್ತೊಳಪೊಕ್ಕಳ್ (ಆದಿಪು. ೯-೦೯); ಸಲ್ಲಲಿತಗಾತ್ರೆಯೊರ್ವಳ್ . . . ಮನೋಜನ ಬಿಲ್ಲಿಂ ಬರ್ದುಕಿದ ಶರಾಳಿಯಂತಿರೆ ಬಂದಳ್ (ರಶಾಕಸ್ಕ. ೭-೧೯೯). ೪. ನೆಲಲಾದುದು ಧಮ್ಮಿಲ್ಲಂ . . . ಶೀತಳತರ ಜಳಮಾದುದು ಕೋಮಳೆಯಧರಮರೀಚಿ ಪಾಂಥನೇಂ ಬರ್ದುಕಿದನೋ (ಗಿರಿಕ. ೨-೨೦); ಪರಮಗುರುವವನಡಿವಿಡಿದು ಬರ್ದುಕಿಂ (ಶಬ್ದಮ. ೮-೬೩); ಅಧಿಕಪರವಸ್ತುವಂ ಕಂಡವರಡಿವಿಡಿದು ಬರ್ದುಕು (ಶಾಶಂ. ೩-೨೮). ೫. ಬೀಸುವ ಚಾಮರಾಳಿ

ಸುಂದರಿಯರ ಕೆಯ್ಗಳಿಂ ಬರ್ದುಕಿ ಬಿಟ್ಟಾವು (ಶಂಕಥಾ ೬-೨೯). ೬. ಸಂರಕ್ಷಿತವಾಗಿರು; ನೆಮ್ಮದಿಯಿಂದಿರು : ಪ್ರಿಯವನಿತಾಘನಸ್ತನದಿ ಉಬ್ಬಿನೊಳು . . . ವಿಸುಪಾ ಗಭೀರನಾಭಿಯೊಳೊಳಪೊಕ್ಕು ಕಾಮುಕ ಜನಂ ಬರ್ದುಕಿರ್ದುದು ಬಂದ ಮಾಗೆಯೊಳ್ (ಕುಸುಮಾ. ೬-೨೨); ವಾರಿಜ ಭವ ಶಕ್ರಾದಿ ದೇವತೆಗಳು ನಾರಿಯ ಕುಚಮಂಡಲವ ಸೇರಿ ಬರ್ದುಕಲೆಂದು ಮದನನ ಮುಂಗಡೆ ಮೋರ ಹೆಗ್ಗಾಳೆ ಸಾಱುದುದು (ಕೋಹಕ. ೬-೦೬).

Δ ಬಟ್ದುಂಕು : ೧. "ಬಟ್ದುಂಕಿದಂ = ಜೀವಿಸಿದಂ; ಬಿಡಲ್ಪಟ್ಟಂ" (ಕರ್ಮಡ. ಕಂ. ೧).

[ದೇ.॥ ತುಳು. ಬದ್ಕ್, ಬದುಕು; ಕೊಡ. ಬದೀಕ್; ತೆಲು. ಬತುಕು, ಬದುಕು, ಬ್ರತುಕು, ಬ್ರದುಕು; ಕೋತ. ವದ್ಕ್; ಕುವಿ. ಬತ್ಕ್; ಕೋಲಾ.ಪರ್ಜಿ. ಬದ್ಕ್]

**ಬರ್ದುಕಾಡು** (ಕ್ರಿ). ತಪ್ಪಿಸಿಕೊಳ್ಳು; ಪಾರಾಗು : ನಲ್ಲಳ ಮುಖಾಂಬುಜಮಂ ನಡೆ ನೋಡಿ ನೋಡಿ ಸಾಯದೆ ಬರ್ದುಕಾಡಿದಂ ಜವನ ಬಾರಿಯೊಳಿಂ ಬರ್ದುಕಾಡದಿರ್ಕುಮೇ (ಅಂಕೃ. ೧೨-೨೫); ಅಟ್ಟಿದ ನಿಮ್ಮ ವೆರ್ಗಡೆ ಬರ್ದುಂಕಿದನೆಂಬುದನಿಂದ್ರಜಾಲಮಂ ತೊಟ್ಟನೆ ತೋಱಿ ಬಂದು ಬರ್ದುಕಾಡಿದಂ (ಶಂಕಥಾ. ೯-೩೯).

[ಬರ್ದುಕು₁ (< ಬರ್ದುಂಕು) + ಆಡು₁]

**ಬರ್ದುಕಿಸು** 'ಬರ್ದುಂಕಿಸು' ನೋ.

**ಬರ್ದುಕು₁** 'ಬರ್ದುಂಕು' ನೋ.

**ಬರ್ದುಕು₂**, ಬದುಕು₂ (ನಾ). ೧. ಬಾಳು; ಜೀವನ : ಕಟುದವರ್ಗಟ್ಟುದ ಟ್ಟೊಡವರೇಟ್ಟೊಡಮಂತವರಿಂ ಬಟ್ಟೆಕ್ಕೆ ಕಾಮುಟುಪೊಡಮೋಟರಂತ ವರಣಂ ತಮಗಂ ಬರ್ದುಕಿಲ್ಲ (ಶಂಕಥಾ. ೨-೨೬); ಕಡೆಗಿಪನ ಬರ್ದುಕು ನೀರೊಳ್ ನೆರೆಯದಿರದೆಂದು ಪೊಡವಿಯಾಡುವ ಮಾಕಿಗೆಡೆಯಾಗಿ ರವಿ ಪಡುವಕಡಲೊಳಾಹಾ ಬಿಳ್ದನು (ಭಾಪಕಂ. ೩-೯೭). ೨. ಆಸ್ತಿ; ಸಂಪತ್ತು : ಗುರು ಸುಂದರನಂ ಸಲೆ ಕೀರ್ತಿವರ್ಗೆ ಬಂಧುರತರ ವಸ್ತು ರಾಜಿಗಳನೀವುತ . . . ಬರ್ದುಕದೆಲ್ಲಮುಮಂತೆ ಸಮಾಪ್ತಿಯಾಗಲ್ (ಜಾಜಾಕ್ಕ. ೩-೦೦-೩). ಬದುಕು₂ : ೧. ಗಣಿಸುವೊಡೆ ಎಮ್ಮಿರವು ಬದುಕು ಹರಣವು ನಿಮ್ಮ ಕರುಣವಲಾ (ಬಸಪು. ೩೦-೨೯); ಹಸನಾಗಿ ಇದೆ ಬದುಕು ಸಾಯಲಾಱೆನು ಎನಲು ಕುಸುರಿದಱಿಯದೆ ಬಿಡರು ಮಾಮುನವರು ಆಗ (ಪುರಂದ. ೨-೬೦-೩); ಹಳೆಯ ಭಾವನೆಗಳನ್ನು ಬೇರು ಸಹಿತ ಕಿತ್ತೆಸೆದು ಬದುಕನ್ನು ಹೊಸದೃಷ್ಟಿಯಿಂದ ನೋಡುವುದನ್ನು ಕಲಿ (ಜೂಟಿಟ್ಟ ೦೬೯). ೨. ಆತನು ಹಿರಿಯ ಮಗನಿಗೆ ತನ್ನ ಬದುಕು ಎಲ್ಲ ಕೊಟ್ಟು ಚಿಕ್ಕವನಿಗೆ ಚನ್ನಾಗಿ ವಿದ್ಯೆ ಕಲಿಸಿದನು. (ಹಿರಿಯ ಮಗನು) ಕೆಲವು ದಿವಸಗಳಲ್ಲಿ ಆ ಬದುಕೆಲ್ಲ ಹಾಳುಮಾಡಿ, ಬಡವನಾದನು (ಮುಂಜಾಯ. ೦-೬); ಗಳಿಸಿದ ಬದುಕು ಧರ್ಮಕಾರ್ಯದಲ್ಲಿ ವ್ಯಯಗೊಳಿಸದಿದ್ದರೆ, ಅದು ಬೆಂಕಿಯಿಂದಾಗಲಿ, ಕಳ್ಳರಿಂದಾಗಲಿ, ರಾಜನಿಂದಾಗಲಿ ಅಪಹರಿಸಲ್ಪಡುತ್ತದಂತೆ ! (ಚಟ್ಟಹೂ. ೩೩). ೩. ಸರಕು; ಸಾಮಗ್ರಿ; ವಸ್ತು : ಅವರ ಅರಮನೆಯಲ್ಲಿ ಇರುವಂಥಾ ಬದುಕು ಸರ್ವಸ್ವವನ್ನು ಲೂಟಿ ಮಾಡಿಕೊಂಡು ಬಾ (ರಾಜೇಂದ್ರ. ೧೯); ಕೆಲವರು ಕಳ್ಳರು ಕೂಡಿ ಒಂದು ರಾತ್ರಿ ಒಬ್ಬ ಸಾವುಕಾರನ ಮನೆಯ ಕನ್ನ ಕೊರೆದು ಸಿಕ್ಕ ಬದುಕು ತಕ್ಕೊಂಡು ಹೋಗಿ (ಮುಂಜಾಯ. ೩-೧೧). ೪. ಕೆಲಸ; ಕಾರ್ಯ : ರಮಾವಲ್ಲಭನ ದರ್ಶನಕೆ ಪಾತೆಯಿಂ ಕರೆಯಲವಳೊಲ್ಲೆ ನಾನಿಲ್ಲಿರದೊಡೀ ಬದುಕ ಸಾಗಿಸುವರಾರೆಂದು ಚಂಡಿಗೊಳಲು (ಕೃಬಿಥಾ. ೯-೬೯); ಎರಡು ಆಳಿನ ಬದುಕನ್ನು ಒಬ್ಬನೆ ಮಾಡಿ ಸ್ವಲ್ಪಮಟ್ಟಿಗೆ ಸಣ್ಣಿಸಿದ್ದಾನೆ (ಚಕುಮು. ೧೦); ಈ ಹೊಲದ ಬದುಕು ಹದಗೊಳಿಸೋಣ ರಂಟೆಕುಂಟೆಯ ಹಿಡಿದು ಬೆವರು ಹರಿಸಿ (ಕಂಪಬು. ೦೯-೨೦). ೫. ಕಸುಬು; ಉದ್ಯೋಗ; ವೃತ್ತಿ : ಇರುವೆ ಜೀವನವೀ ಕುಟುಂಬಕ್ಕಿದು ಉಪಾರ್ಜನೆ ಬದುಕಿದೆಂದೆನ್ನದೆ ಮೃಡನ ಕಲ್ಪಿತದಿನಹ ಬಡಕಾಯಕದೊಳಿಂತು ಒದಗಿ ಪಡಿಯಂ ಕೊಡುತಿರಲು (ಬಸಪು. ೯೭-೩).

[<ಬರ್ದುಂಕು./ತಮಿ. ವತುಕ್ಕು; ತುಳು. ಬದ್ಕ್; ತೆಲು. ಬ್ರತುಕು; ಕೊಡ. ಬದೀಕೀ; ಕೋತ. ವದ್ಕ್]

**ಬರ್ದುಕುಗೆಯ್** (ಕ್ರಿ). ಜೀವನವನ್ನು ಸಾಗಿಸು ; ಬಾಳು: ಆಮಿನ್ನಟ್ಟುಂಡು ಬರ್ದುಕುಗೆಯ್ವುದು ದಿಟಮೇ (ಕಬ್ಬಿಸು. ೨೦೫ ಪ್ರಾಪ್ರ).

[ಬರ್ದುಕು₂ + ಕೆಯ್₁]

**ಬರ್ದುಗ** (ನಾ). ಜಾಣ; ನಿಪುಣ; ಪ್ರೌಢ : "ಬಿತ್ತಿಗನೆಂದುಂ, ಬರ್ದುಗನೆಂದುಂ ಪ್ರೌಢಂ" (ಕಶಶಾ. ೬೦-೩೩೬); ಪಗೆ ಕೆಳೆಯೊಳ್ ಕೆಳೆ ಪಗೆಯೊಳ್ . . . ನಂಬುಗೆ ಚಲ್ಲವತ್ತರೊಳ್ ಬರ್ದುಗರೊಳ್ ಜಬಾರ್ಗಮುಂಟು ಮಾಡವೆ ಕೇಡಂ (ಶಾಶಿಪುಂ. I, ೦೦೫). [ಬರ್ದ್₄ + — ಗ್ಗ]

**ಬರ್ದುಗಾರ್ತಿ** (ನಾ). ಜಾಣೆ; ನಿಪುಣೆ; ಪ್ರೌಢೆ : ಬರ್ದುಗಾರ್ತಿಯರ ಬಹಿರಂಗಣಂಗಳೊಳ್ ಅಳವಟ್ಟ ಕಂಭಂಗಳಲ್ಲಿ ನೆಗಟ್ಟಿಗೆತ್ತಿ ತೆತ್ತಿಸಿದ ಸೌಭಾಗ್ಯಘಂಟೆಗಳೊಳಂ (ಪುಷ್ಪಪು. ೨-೬೬ ಪ).

[ಬರ್ದ್₄ + < —ಕಾಱ + — ತಿ₁ (< — ಇತ್ತಿ)]

**ಬರ್ದುಗೆ** (ನಾ). ಸಾವು; ಮರಣ : "ಬರ್ದುಗೆಯೆನೆ ಸಾವು" (ಕೇಶಾರ. ೦೩); ಎಳಮಾವೇ ತಳಿರುಯ್ಯಲೇ ಕೊಳೆ ತಗುಳ್ದಿಂದೋಳಮೇ . . . ಕರಂ ಬರ್ದಿದೆಂಗಳ ನಿಮ್ಮೆಲ್ಲರುಮೊನ್ನ ಬರ್ದುಗೆಯನಾ ನಲ್ಲಂಗೆ ಪೇಟುಂ (ಕಾಬ್ಬಾವ. ೦೨೯); ಜನಪಂಗೆ ತತ್ಬೌದ್ಧಮುನಿಯ ಬರ್ದುಗೆ ಸುದ್ದಿವೇಳೆ (ಆರಾಕ. ೯-೨-೨) ; ಆತನ ಬರ್ದುಗೆಯ ಶಾಂತಿಗೆಂದಾತಗೆ ಮಾಳಯುಮೆನೆ ನೀಂ ಮಾಟ್ಟ ಜನ್ನದ ಹಸುವಂ ಓಡಿದ್ದೊಡೆ ನಿಮಗೆ ಮುನಿಸಾಯ್ತೆ ! (ರಾಮಾಕ್ಕ. ೦೧೩-೬). [ಬರ್ದ್₃+ — ಗೆ]

**ಬರ್ದುಗೆಡು** (ಕ್ರಿ). ಪ್ರೌಢಿಮೆಯಿಲ್ಲದಿರು : ಮನದಳಿಪಿಂ ತಮಾಲಲತಿಕಾಂಗಿಯರಾಟಿಸೆ ಬರ್ದುಗೆಟ್ಟು ಕಾಂಚನಲತಿಕಾಂಗಿಯರ್ ಬಯಸೆ. . . ಸಂದ ನಿನ್ನ ಮುನ್ನಿನ ಚರಿತಂಗಳಂ ನೆನೆಯದಿರ್ (ಅಂಕೃ. ೨-೯೬).

[ಬರ್ದ್₄ + ಕೆಡು₁]

**ಬರ್ದುನುಡಿ** (ನಾ). ಜಾಣ್ಮೆಯಿಂದ ಕೂಡಿದ ಮಾತು; ಪ್ರೌಢೋಕ್ತಿ : ಒಪ್ಪಂಬೆತ್ತಿನಿದಾದ ಬರ್ದುನುಡಿಯುಂ ತಳ್ಪೋಜೆಯುಂ ನಿಲ್ವಿನಂ. . . ಪಲರೆಲ್ಲರ್ ತಿರ್ದಿದಿ ಕಬ್ಬಮೆಂತಪ್ಪಂಗಂ ಪೊಸಮುತ್ತಿನೆಕ್ಕಸರದಂತೆಂದುಂ ಕೊರಲೊಳ್ಗೊಳ್ಳದೇ (ಕಾವ್ಯಕಾ. ೫). [ಬರ್ದ್₄ + ನುಡಿ₁]

**ಬರ್ದುವೆಣ್** (ನಾ). = ಬರ್ದುಗಾರ್ತಿ : ಅಲರ್ಗಳನಾಂತ ಪಾದರಿಗಳೊಳ್ ತರದಿಂದೆಱಗಿರ್ದ ತುಂಬಿಗಳ್ ಪಲವು ಬಸಂತನೊಲ್ದೊಲಿಸಿ ಕಾಡುವ ರೂಢಿಯ ಬರ್ದುವೆಂಡಿರಂ ನಿರೆ ಸೆಱೆಗೆಯ್ವೆನೆಂದು ಪಲವಾಗಿರೆ ಮಾಡಿದ ತನ್ನ ಬಳ್ಳಿಸಂಕಲೆಗಳವೆಂಬಿನಂ ಬಗೆಯನಿರ್ಕುಳಿಗೊಂಡುವು (ಕಾವ್ಯಕಾ. ೫೩).

[ಬರ್ದ್₄ + ಪೆಣ್]

**ಬರ್ದೆ**, ಬದ್ದೆ₁ (ನಾ). ೧. ಪ್ರೌಢೆ; ಜಾಣೆ ; ನಿಪುಣೆ : ವ್ಯಾಳಗಜಂಗಳು ಮನಂಕದ ಬರ್ದೆಯರುಮನುಗಿಬಗಿವಾಡಿದ ಸಂತೋಷದೊಳ್ ಬಳ್ಳಬಳೆದ ವಿಕ್ರಾಂತತುಂಗನ ನಿಡುದೋಳ್ಗಳ್ ಗಣಿಕಾಜನಕ್ಕೆ ಕಾಮಪಾಶಂಗಳುಮರಾತಿ ಜನಕ್ಕೆ ಯಮಪಾಶಂಗಳುಮಾದುವು (ಶಂಕಥಾ. ೨-೩೯ ಪ) ; ಬಯಸಲ್ ತಕ್ಕಂದದ ಬರ್ದೆಯರೊಲವಿಂ ಬಯಸಿ ಬಂದೊಡಂ ಬಗೆಯದ ಬಲ್ಮೆಯ ನುಳ್ಳ ಸುಭಗನ್ನೆ (ಅಜಿಪು. ೯-೩೬) ; ಸಸಿಯುಂ ಮೆಯ್ಸೋಳಗಿಂದೆ. . . ಮೆಯ್ಗಣ್ಣನಂ ಪೊಸತಪ್ಪಗ್ಗದ ಗಾಡಿಯಿಂದೆ ಪಿರಿದುಂ ಬೆಳ್ಮಾಡಿ ಬೇಟ್ಟಂತುಟುಬ್ಬಸಮಂ ಮಾಡುವ ಬರ್ದೆಯರ್ ಪಲಬರುಂ ಕಣ್ಗೆಂ ಬೆಡಂಗಾದರೋ (ಕಾವ್ಯಕಾ. ೦೬೯); ದಾದಿಯರುಂ ಬರ್ದೆಯರುಂ ಬೀದಿಯ ಮನೆಯೊಳ್ ಪೊಗಟ್ಟೆವೆತ್ತೊಪ್ಪುವ ಮುತ್ತೈದೆಯರುಮಂತುಪುರದೊಳ್

. . . ಸಂದಣಿಸಿರ್ಪರ್ (ಶಶಿಪು. ೪-೨೩). ೨. ಮಧ್ಯವಯಸ್ಸಿನವಳು; ನಡುಪ್ರಾಯದವಳು; ಪ್ರಬುದ್ಧೆ: ಕೆಳದಿಯರಂದು ಪಿಂದೆಗೆದು ಮೋನದೊಳೊಂದಿರೆ ಬಟ್ಟ ಬರ್ದೆಯರ್ಕಳನುವಿನಿಂದೊಡಂಬಡಿಸೆಯುಂ ಬಗೆಗೊಳ್ಳದೆ. . . . ಬೇವಸಂಗೊಳುತಿರೆ (ಶಶಿಪು. ೩-೨೮). ೩. ವಯಸ್ಸಾದವಳು; ವೃದ್ಧೆ; ಮುದುಕಿ: ರಸಭಾವಂ ಪಿಂಗೆ ಶೈಥಿಲ್ಯಮಾದವಯವದೊಳ್ಪೀವೆ . . . ಶಯ್ಯೆಗಿಂಬಾಗಿ ರಾರಾಜಿಸದಾದಂ ಬರ್ದೆಯಂ ಪೋಲ್ತು ಧಮಕೃತಿ ರಸಜ್ಞರ್ಗನಾದೇಯಮಲ್ತೇ (ವೃತ್ತ. ೦-೪೬); ತಡಿಗೆಳೊಡೆಯರ್ಕಳಾಗಳೆ ಬಿಡದೊಡನೆಯ್ತಂದು ಬರ್ದೆಯಂ ಪೀಡಿಸೆ . . . ಸುಂದರೇಶನ ಗುಡಿಗೆಯ್ದುತ್ತೆ ಶೋಕದಿಂದ ಪೊಡೆಗೆಡೆದುಸಿರ್ದಳ್ (ಹಾಲಾಸ್ಯ. ೪-೦೩-೨೨). ೪. ಸೂಳೆ; ಗಣಿಕಾಸ್ತ್ರೀ; ವೇಶ್ಯೆ: ಅದರ್ದ ಕುಚದ್ವಯಂ ದಯಿತೆ ಬಿರ್ದುವಿದೇಕೆನೆ ಬರ್ದೆಯೆಂದಳಿಂತಡಿಗಡಿಗೋಪ ನೀಂ ಸರಸಕಾಮ ನಿವಾಸದೊಳಿಟ್ಟು ಕಯ್ಗಳಿಂ ಪಿಡಿದಿರೆ ತನ್ಮೊಳಿಟ್ಟು ಸವಿದೋಱದ ದೂಸಱನೊಂದಹರ್ನಿಶಂ ಕೆಡೆದಪುವು (ಕಲಾವ. ೨-೦೦೯). ೫. ತಲೆಹಿಡುಕಿ; ಕುಂಟಣಗಿತ್ತಿ: ಪೊಸನಾರಂ ಕಲ್ಲೊಳೆತ್ತಲ್ ತಿಱಿಯಲರಲನಾಕಾಶದೊಳ್ ಗಾಳಿಯಂ ಖಂಡಿಸಲ್ . . . ಆ ಬರ್ದೆಬಲ್ಲಳ್ (ವೃತ್ತ. ೨೯-೪). ಬದ್ದೆ$_1$: ೧. ಬೇಟಕಾರ್ತಿಯರಿವರೀಕೆಗಳ್ ಬಸನಿಗಳ್ ಕಡುಬದ್ದೆಯರೆಂದುಮಿಮಲತಾಂಗಿಯರೆನಿಸಿರ್ದರಂ.ನಯದೆ ನೋಡಿದನಪ್ರತಿವೇಶ್ಯಸಂಭವಂ (ಶಂತ. ೩-೪೮); ಬದ್ದೆಯರುಡಿಸಿದೊಡುಡಕಲ್ತ ಕೊಮರನಭಿನವಮದನಂ (ಅಪಂಕ. ೦-೩೮). ೪. ಕೋಳ್ಗಗ್ಗಳವಾದ ಮನೆಗಂ ತೋಳ್ಗಗ್ಗಳವಾದ ಬದ್ದೆಗಂ ಬೇಸತ್ತು (ಶಾಂತಿಪು. ೬-೬೮ ವ); ಮತ್ತಿನ ಗಂಡರ್ಮೊಱೆಯಲ್ಲರೆಂದು ಮನದೋಳ್ಗೆ ಬಱೀಸಿರ್ಗಾಡಿದ ಬದ್ದೆಯರೀ ಭವಮಿಂತೆ ಪೋದುದು ಮುಱುಭವದೊಳಾದೊಡಮಿಂತನೊಳೆ ಬೇಟಮಕ್ಕೆಂದು ಪಱಸಿ ಪರಿಚ್ಛೇದಿಸಿ ಕಾಮಾಗ್ನಿಯಂ ಪುಗೆಯುಂ (ಅರ್ಕಕೀ. ೩-೨ ವ).

ಬದ್ದೆಮನೋಹರ = ಚತುರೆಯರನ್ನು ಆಕರ್ಷಿಸುವವನು; P ರಾಷ್ಟ್ರಕೂಟಚಕ್ರವರ್ತಿ ನೃಪತುಂಗನ ಒಂದು ಬಿರುದು: ವೈರಿಭಯಂಕರಂ ಬದ್ದೆ(ಡ್ಡೆ?)ಮನೋಹರಂ ಅಭಿಮಾನಮನ್ದಿರಂ (ಇಅ. XII. ೨೦೪-೦೨; 814); ಅವೋಘರಾಮಂ ಬದ್ದೆಮನೋಹರಂ (ಎಇ. VII. ೨೦೬-೦೨; 866). [ಬದ್ದು$_4$ + —ಎ$_2$]

ಬರ್ದೆಗ, ಬದ್ದೆಗ (ನಾ). ಒಬ್ಬಾತನ ಹೆಸರು: ಬರ್ದೆಗಂ ಕದಂಬಳಿಗೆ ಸಾಯಿರಮುಮನಾಳುತ್ತಿರೆ (ಎಕ. XI. ದಾವಣ. ೦೦೪-೩;930). ಬದ್ದೆಗ: ಶ್ರೀಮಾನ್ನುಧಿಬ್ಬದ್ದೆಗ ಭೂಮಿಭರ್ತ್ರುಸ್ತಂನ್ತ್ರಾಧಿ ಪಾಲೋಜನಿ ನಾಗವಮಾರ್ಯ್ಯಃ (ಕಇಅ. ೨೩-೮-೯೬; ೯ನೆಯ ಶತ); ಅವಾರ್ಯವೀರ್ಯಂಗೆ ಬದ್ದೆಗಂ ಪಿರಿಯ ಮಗಂ (ಕಂಕಶಾ. ೦-೨೩). [< ಭದ್ರ + —ಗ$_2$]

ಬರ್ದೆಗೆಯ್ತ (ನಾ). ಪ್ರೌಢಿಮೆಯುಳ್ಳವಳು ಮಾಡುವ ಕೆಲಸ: ಬಿರುದರ ಬಿಂಕಮಂ ಪೊಗಟ್ಟ ಕೂಟಣಿತೋಳ್ಗಳಿಸಿರ್ಪ ಸೂಳೆಮೆಂಡಿರ ಸೊಬಗಿಂಗೆ ಮೈಮಱದು ಮೆಚ್ಚುವ ಬಿಂಕದ ಬರ್ದೆಗೆಯ್ತದೊಳ್ ಬೆರಸಿದೊಡಂದೆ ಬರ್ದೆನೆನುತಿರ್ಪ ಭುಜಂಗನ ತೋಳೊಳೆರ್ಕೆ (ಕಲಾವ. ೨-೬೨). [ಬರ್ದೆ + ಕೆಯ್ತ]

ಬರ್ನರು (ನಾ). ಉರಿಯುವ ಅನಿಲದ ಅಥವಾ ಸೀಮೆಯೆಣ್ಣೆಯ ದೀಪಗಳಲ್ಲಿ ದೀಪದ ಜ್ವಾಲೆಗೆ ಆಕಾರವನ್ನು ಕೊಡುವಂಥ ಭಾಗ; ಜ್ವಾಲಕ: ಒಮ್ಮೆ ಹೊಗೆಗಟ್ಟುವುದೊಮ್ಮೆ ಭುಗ್ಗೆನುವುದು 'ಬರ್ನರು ಕೆಟ್ಟ ಲಾಟೀನು (ಇಂಚಾತ. ೨೦೩-೬೩). [← ಇಂ. Burner]

ಬರ್ಫ 'ಬರ್ಫಿ' ನೋ.

ಬರ್ಫು 'ಬರ್ಫು' ನೋ.

ಬರ್ಫಿ, ಬರ್ಫೆ, ಬರ್ಫೆ (ನಾ). ಒಂದು ಬಗೆಯ ಸಿಹಿತಿಂಡಿ; ಮಿಠಾಯಿ: ಬರ್ಫಿ: ಪದಾರ್ಥಗಳು: ಒಂದು ರಾತಲು ಹಾಲಿನ ಹುಡಿ: ೧/೪ ರಾತಲು ಸಕ್ಕರೆ . . . ಗೇರುಬೀಜದ ಚೂರುಗಳು (ಅಡುಗೆ. ೦೦೦). ಬರ್ಫೆ: ವೇಡೇ ಬರ್ಫೆ ತಕ್ಕೊಂಡು (ಮುಂಬಯಿ. ೩-೯೮); ಚೊಕ್ಕಟವಾದಂತ ಬೆಂಡುಬೆನಕ ಬರ್ಫೆ ತುಕ್ಕಡಿ ಕಲ್ಯಾಣಿಶಾವಿಗಳು (ಜನಗ. ೯೬). ಬರ್ಫೆ: ಮಸಾಲೆ ಮಿಶ್ರಿತ ಕೇಶರಬರ್ಫಿ ಪೇಡೆ ಮೊದಲಾದ ಖಾದ್ಯಪದಾರ್ಥಗಳನ್ನು ಇಟ್ಟಿದ್ದರು (ಮುಂಬಳ. ೨೦).
[← ಪಾರ. ಬರ್ಫೀ, ಬರಫ್; ಹಿಂ. ಮರಾ. ಬರ್ಫೀ, ಬರಫೀ]

ಬರ್ಫು, ಬರ್ಫ (ನಾ). ಮಂಜಿನ ಗಡ್ಡೆ; ಹಿಮ: ನಗುವಾಗ್ಗೆ ಆಕೆಯ ತುಟಿಗಳೆರಡೂ ತೆರೆದು ಹಲ್ಲುಗಳು ಚಮಕಿಸಿದವು. ಅವು ಬರ್ಫಿನ ತುಂಡುಗಳಂತೆ ಶುಭ್ರವಾಗಿದ್ದವು (ಕಂದುಬ. ೯೩): ಈ ಭಾಗದಲ್ಲಿ ಯಾವಾಗಲೂ ಬರ್ಫು ಇದ್ದು ಚಳಿಯು ಬಹಳದ್ದುದರಿಂದ ಬತ್ತಿ ಬೆಳೆಯಲನುಕೂಲವಿಲ್ಲ (ಕೃಷಿಶ. ೨೦). ಬರ್ಫ: ಉಗಿಯು ಪುನಃ ಘನವಾಗಿ ಮಳೆ, ಬರ್ಫಗಳ ರೂಪದಿಂದ ಕೆಳಗೆ ಬೀಳುತ್ತದೆ (ಮುಂಬಯಿ. ೬-೦೬೪); ನಿಂತಲ್ಲಿಯೇ ಅವರ ಕೈಕಾಲು ನೀರಿನಲ್ಲಿ ಬರ್ಫಕ್ಕಿಂತ ತಣ್ಣಗಾದವು (ಸಹಜ. ೪೪೩).
[← ಪಾರ. ಬರ್ಫ್; ಹಿಂ. ಮರಾ. ಬರಫ್, ಬರ್ಫ್]

ಬರ್ಫೆ 'ಬರ್ಫಿ' ನೋ.

ಬರ್ಬರ (ನಾ). ೧. ಸುಸಂಸ್ಕೃತನಲ್ಲದವನು; ಅನಾಗರಿಕ: "ಪಾಮರಂ ಪ್ರಾಕೃತಂ ಬರ್ಬರಂ" (ಪಂಗಣ. ೬೬-೮); ಒಂದಾನೊಂದು ಕಾಲದಲ್ಲಿ ಸಂಯಮಹೀನ ಬರ್ಬರರಾಗಿದ್ದವರು ಇಂದು ಮಾನವರಾಗಿದ್ದಾರೆ (ಶಂಗ. II. ೨೬೩); ಸೌಂದರ್ಯಪೂರ ಪ್ರಳಯಕ್ಕೆ ದೂರ ಬರ್ಬರನು ಕೈಯ ಚಳ್ಳಿ ಮಣ್ಣಾಗಿ ಹೋದ; ಸಂಹಾರಕಾಲ ಕಲ್ಲಾಗಿ ನಿಂತಿಲ್ಲಿ (ಸೌಂದರ್ಯಶಾ. ೩೩-೩). ೨. ಸುಸಂಸ್ಕೃತವಲ್ಲದದ್ದು: ಯಾರೂ ಬಂಗಾಳಿಯನ್ನು ಸಡ್ಡೆ ಮಾಡುತ್ತಿರಲಿಲ್ಲ. ಸಂಸ್ಕೃತಪಂಡಿತರಿಗೆ ಅದು ಗ್ರಾಮ್ಯ, ಇಂಗ್ಲಿಷ್ ತಿಳಿದವರಿಗೆ ಬರ್ಬರ (ಬಂಕಿಮ. X. ಮುನ್ನುಡಿ). ೩. ನೇರವಾಗಿ ಅರ್ಥವಾಗದುದು; ಅಸ್ಪಷ್ಟವಾದುದು: ನಷ್ಟ ಪಟಿಪೀಠದೊಳ್ ಕುಳ್ಳಿರಲ್ ಕೇಳ್ದೆ ನಾನ್ ಪಕ್ಕಿಗಳ್ ಕರಳ್ಚುಱುಬಿ ಪುರ್ಚಿಂದೆ ಬೀಱುವ ಬರ್ಬರದ ಮಱೆನುಡಿಯನ್ (ಅಂತಿಗೂ. ೯೩-೬೨೮). ೪. ಹಳದಿಬಣ್ಣದ ಶ್ರೀಗಂಧ: "ಹರಿಚಂದನಂ ಮತ್ತೆ ಬರ್ಬರ ಮಕ್ಕು" (ಕುಂಗಣ. ೪೪-೨೦). ೫. ಒಂದು ಬಗೆಯ ಗಂಧಕದ್ರವ್ಯ; ಗೋರೋಚನ: "ಪೂತಿಗಂಧಃ — ಗಂಧಕ, ಬರ್ಬರ" (ಓಷ. ೦೦೦). ೬. ಒಂದು ಬಗೆಯ ಗಿಡ; ಅಜಗಂಧಿಕೆ; ನಾರುಂಬೇಳೆ: "ಬರ್ಬರಾ . . . ಅಜಗಂಧಿಕಾ — ೫ ನಾರಂಬ್ಯಾಳೇಗಿಡದ ಹೆಸರುಗಳು" (ಸಿದ್ಧಾಂತ. ೦೪೪). ೭. ಮುಳ್ಳಿನಿಂದ ಕೂಡಿದ ಒಂದು ಬಗೆಯ ವೃಕ್ಷ; ಬೊಬ್ಬುಲಿ; ಜಾಲಿ: ಬರ್ಬರಂ — ಬಬ್ಬರಂ, ಬಬ್ಬರವೆಂದು ನಾಱುವ ಬೇಳೆಯುಂ, ಬೊಬ್ಬುಲಿಯುಮೆಂದು ದೇಶಮುಮಕ್ಕುಂ (ಕಮದ. ೬. ೨೬೦ ವೃತ್ತಿ). ೮. ಆರ್ಯರಲ್ಲದವರಿಗೆ ಸೇರಿದ ಒಂದು ದೇಶ ಮತ್ತು ಅಲ್ಲಿಯ ಜನಾಂಗ: ಬರ್ಬರ ಪಾರಸೀಕ ಪಾರಿಯಾತ್ರ ಹಮ್ಮೀರ ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕ ರಸಮುಂ . . . ನೆಗಟುತ್ತುಮಿರೆ (ಜಗಪ. ೨-೩೪ ವ); ತುರುಕ ಬರ್ಬರ ಪಾರಸೀಕರ ತುರಗವೈಸಾವಿರ ಸಹಿತ ಮೋಹರಿಸಿ ನಿಂದನು ಶಕುನಿ (ಕುಮಾ.ಗ. ೦-೪); ನಡೆದುದು ಆರಿಬಲ . . . ಬರ್ಬರದ ದೂಹಾರಿ ಜೋನಗ ವಿಂಧ್ಯ ಬೋಟಕ ಪಾರಶಿಕ ಸಾಂಬ್ರಾಣಿ ಹುರುಮಂಜಿಗಳ ಬಳಿವಿಡಿದು (ಕೂಕರ. ೪-೯-೪). ೯. ನೀಚ; ಪಾಮರ. ೧೦. ದಡ್ಡ; ತಿಳಿಗೇಡಿ. [ಸಂ.]

ಬರ್ಬರತೆ (ನಾ). ಒರಟುತನ; ಕ್ರೌರ್ಯ: ಮರದ ಪಟ್ಟಿಗಳಂಥ ಸ್ವಲ್ಪವೂ ಮಾತಿಲ್ಲದ ಅಚಲವಸ್ತುಗಳನ್ನು ಬಿಟ್ಟು ಮತ್ತಾವುದರ ಮೇಲೂ

ಆ ಬರ್ಬರತೆಗಳನ್ನೆಲ್ಲಾ ಪ್ರಯೋಗಿಸುವ ಅವಕಾಶ ಆ ದುರ್ಬಲ ವಯಸ್ಸಿನಲ್ಲಿ ನನ್ನ ಸ್ವಾಧೀನದಲ್ಲಿರಲಿಲ್ಲ (ಕಿರಂಥ. II, ೩೦). [ಸಂ. ಬರ್ಬರತಾ]

**ಬರ್ಬುರ** (ನಾ). ಒಂದು ಬಗೆಯ ಮುಳ್ಳಿನ ಮರ ; ಜಾಲಿ ; ಬೊಬ್ಬುಳಿ : ಮಾಕಂದಶಾಲಿ ಶುಕಶಿಶುವೀ ಕಂದಿದ ಬರ್ಬುರವನು ಸೇರ್ವುದೆ (ಶಂಕಕ. ೬-೨೪). [ಸಂ.]

**ಬರ್ಬೂರ** (ನಾ). ಜಾಲಿಮರ ; ಬೊಬ್ಬುಳಿ : ದೀರ್ಘಕ್ಕೆ ಹ್ರಸ್ವಂ — . . . ಬರ್ಬೂರ, ಬರ್ಬೂಲ — ಬೊಬ್ಬುಲಿ, ಬಬ್ಬುಲಿ (ಕವಿಪದ. ೨೬೩ ಕೃಹೋ) ; ಗುರುವೆ ನಿಮ್ಮಂಘ್ರಿಯುಂ ಬಿಡಲಾಟಿನೆಂದೊಡಿಲುತಿರೆಯಂತೆ ಗೆಯ್ಕೊಂದು ತಂದೊಂದು ಬರ್ಬೂರಧರಣೀಜದಡಿಯೊಳಗಿರಿಸಿ (ಪದ್ಮರಾ. ೨-೨೩). [< ಸಂ. ಬರ್ಬುರ]

**ಬರ್ಮ** 'ಬೊಮ್ಮ' ನೋ.

**ಬರ್ಲು** 'ಬಱಲು' ನೋ.

**ಬರ್ಷಣ** 'ಭರಷಣ' ನೋ.

**ಬರ್ಹ** (ನಾ). ೧. ನವಿಲು ಮುಂತಾದ ಪಕ್ಷಿಗಳ ಗರಿ,–ಸೋಗೆ : "ಕಳಾಪಃ, ಬರ್ಹಃ — ಈ ೨ ಸೋಗೆ" (ಹಲಾಯು. ೪೦-೯೯) ; ಮದನನ ಪಂಚರತ್ನಮಯಖೇಟಕದಂತಿರೆ ಬರ್ಹಿ ಬರ್ಹಮಂ ಪದೆದು ನವಿಲ್ಗಳಾಡೆ (ಜಗನ್. ೯-೩೦). ೨. ಎಲೆ ; ಪರ್ಣ ; ಪತ್ರ : "ಬರ್ಹಂ, ಪರ್ಣಂ, ದಳಂ, ಪತ್ರಂ, ಪಲಾಶಂ, ಛದನಂ, ಛದಃ — ಈ ೭ ಮರದ ಎಲೆ" (ಹಲಾಯು. ೩೧-೩೦) ; ಬರ್ಹಂಗಳಿಂದಂ ಪೊರೆದಾಶಾಭಿತ್ತಿಯುಂ ತನ್ನಯ ಪಸುರ್ವೆಳಗಿಂ ಪೂಸುತಿರ್ಪಂತೆ ಚೆಲ್ವಾಗಿರೆ ಮುಂದೊಂದಂ ಲತಾಮಂಟಪ ವನವನಿವೃಂದಾರಕಂ ಕಂಡಂ (ಕಾದಂಬ. ೪೪೦). ೩. ಪರಿಜನ ; ಪರಿವಾರ. ೪. ಒಂದು ಬಗೆಯ ಸುಗಂಧದ್ರವ್ಯ : "ಗ್ರಂಥಿಪರ್ಣಂ, ಶುಕಂ, ಬರ್ಹಂ . . . ಕುಕ್ಕುರಂ — ೬ ಸ್ಥಾಣೇಯಕವೆಂಬ ಗ್ರಂಥದ್ರವ್ಯದ ಹೆಸರುಗಳು" (ಸಿದ್ಧಾಂತಿ. ೧೪೨). [ಸಂ.]

**ಬರ್ಹಿ$_1$** (ನಾ). ೧. ಬೆಂಕಿ ; ಅಗ್ನಿ. ೨. ಯಜ್ಞ, ಯಾಗಾದಿಗಳಲ್ಲಿ ಬಳಸುವ ಒಂದು ಬಗೆಯ ಮೊನಚಾದ ಹುಲ್ಲು ; ಕುಶ : "ಬರ್ಹಿಃ ಕುಶಂ . . . ದರ್ಭೆಯದು" (ಶಬ್ದಗರಾ. ೩೪-೯) ; ಬರ್ಹಿಗಳ ಹೊಱೆಗಳಿಂ ಸ್ರುಕ್ಸ್ರುವಾದಿಗಳ ಸಂದೋಹದಿಂದೆ . . . ದಕ್ಷನಧ್ವರಶಾಲೆ ಕಣ್ಗೆಸೆದುದು (ಶಪು. ೩೦-೨೪). [ಸಂ. ಬರ್ಹಿಸ್]

**ಬರ್ಹಿ$_2$** (ನಾ). ನವಿಲು ; ಮಯೂರ : ಗಿರಿಯ ತೊಱೆದು ಬರ್ಹಿ ಪುಲ್ಲ ಮೊರಡಿಗಳಸಬುಹುದೆ (ಜುಡಾದೇ. ಖ. ೦೫೨-೩೪೦) ; ಕೀರುರಗ ಕಪಿ ಕೋಕಿಲನ ಬರ್ಹಿಯ ಸುಧಾಕಿರಣನ . . . ರತ್ನಾಕರನಲೊಂದೊಂದು ಗುಣವಿರಬೇಕು ನೃಪರಿಗೆ (ಅಣ್ಣಾಸ. ೦-೫೪). [ಸಂ. ಬರ್ಹಿನ್]

**ಬರ್ಹಿಣ** (ನಾ). = ಬರ್ಹಿ$_2$ : "ಕೇಕೀ, ಶಿಖೀ . . . ಬರ್ಹಿಣಃ, ಕಳಾಪೀ, ಸರ್ಪಾಶನಃ, ಮಯೂರಃ, ಶಿಖಾವಳಃ, ಶ್ಯಾಮಕಂಠಃ — ಈ ೧೧ ನವಿಲ್" (ಹಲಾಯು. ೪೦-೯೮) ; ಜಗತ್ಪ್ರಣೂತ ಭೂತಲಾಧಿನಾಥನರ್ಥಿಸಂಘಾತನವ ಬರ್ಹಿಣಾನಂದಕರಣಪ್ರತ್ಯಗ್ರಜಲಧರಾಗವಮಂ (ಸುಕುಮಾ. ೦-೬೯ ವ) ; ಎಳಸುತಿರ್ಪಂ . . . ಉದ್ಯಾನಂಗಳೊಳ್ ಬರ್ಹಿಣಕಚಭರೆಯರ್ಕೇಳಿ ಮೋಳಕ್ಕೆ ನಿಚ್ಚಂ (ಅರ್ಹಕೇ. ೦-೬೩). [ಸಂ.]

**ಬರ್ಹಿಣವಾಹನ** (ನಾ). ನವಿಲನ್ನು ವಾಹನವಾಗಿ ಉಳ್ಳವನು ; ಷಣ್ಮುಖ : "ಗೌರೀಪುತ್ರಃ, ಷಣ್ಮುಖಃ . . . ಬರ್ಹಿಣವಾಹನಃ, ಮಹಾಸೇನಃ, ಮಹಾತೇಜಾಃ, ಶರಜನ್ಮಾ (ಚ ಕಥ್ಯತೇ) — ಈ ೨೦ ಕಾರ್ತಿಕೇಯನ ಪೆಸರ್" (ಹಲಾಯು. ೩-೩೦). [ಸಂ.]

**ಬರ್ಹಿಣಿ** (ನಾ). ಹೆಣ್ಣುನವಿಲು : ತಾನಾ ಪುರುಷಕೇಕಿ ಬರ್ಹಿಣಿಯ ಸಮ್ಮುಖದಿ ಬಿರ್ಚುತಿ ಕಲಾಪಮೋಚಕಸಹಸ್ರಂಗಳಂ (ಕಥ್ಯಾಂಗ. ೩೪-೧೪೬೩). [ಬರ್ಹಿಣ + — ಇ$_2$]

**ಬರ್ಹಿರ್ಧ್ವಜ** (ನಾ). ೧. ನವಿಲನ್ನು ಪತಾಕೆಯಲ್ಲಿ ಉಳ್ಳವನು ; ಷಣ್ಮುಖ. ೨. ಒಬ್ಬ ರಾಜನ ಹೆಸರು ; ಮಯೂರಧ್ವಜ : ಇವಂ ಬರ್ಹಿರ್ಧ್ವಜನ ತನುಜಜನನಸೂಯಕಂ ಧೀರನು (ಜೈಮಿಭಾ. ೨೩-೦೩). [ಸಂ.]

**ಬರ್ಹಿರ್ಮುಖ** (ನಾ). ಅಗ್ನಿಯ ಮೂಲಕ ಹವಿಸ್ಸನ್ನು ಸೇವಿಸುವವನು ; ದೇವತೆ : ಹವಿರ್ಭೋಜನದ ಬರ್ಹಿರ್ಮುಖರು ನೆರದುದು ನೀರದಾಧ್ವದಲಿ (ತೊರವೆರಾ. ೦-೬-೪೦). [ಸಂ.]

**ಬರ್ಹಿಷ್ಕೇಶ** (ನಾ). ಬೆಂಕಿಯ ಅಧಿದೇವತೆ ; ಅಗ್ನಿ [ಸಂ.]

**ಬರ್ಹಿಷ್ಠ** (ಗು). ೧. ದೊಡ್ಡದಾದ ; ಬೃಹತ್ತಾದ. ೨. ದೃಢವಾದ ; ಬಲವಾದ. (ನಾ). ೩. ಒಂದು ಬಗೆಯ ಸುಗಂಧದ್ರವ್ಯ ; ಮುಡಿವಾಳ : "ಬಾಲಂ, ಹ್ರೀಬೇರಂ, ಬರ್ಹಿಷ್ಠಂ, ಉದೀಚ್ಯಂ, ಕೇಶಾಂಬುನಾಮ — ೫ ಮುಡುವಾಳದ ಹೆಸರುಗಳು" (ಸಿದ್ಧಾಂತಿ. ೦೧೦). ೪. ಒಂದು ಬಗೆಯ ಸಸ್ಯ ; ಶೈಲಪರ್ಣಿ ; "ಉಶೀರಾವೀರಣ" (ಶಂಕಶ. ೨೩೦). [ಸಂ.]

**ಬಲ್$_1$**, **ಬಲಿ$_1$** (ಕ್ರಿ). ಬಲ್ತು, ಬಲಿತ, ಬಲಿದ (ಭೂತಕೃ). ಬಲ್ತು, ಬಲಿತು, ಬಲಿದು (ಭೂತನ್ಯೂ). ೧. ದೈಹಿಕವಾಗಿ ಸಾಮರ್ಥ್ಯವನ್ನು ಪಡೆದಿರು ; ಸಮರ್ಥವಾಗಿರು ; ಬಲಿಷ್ಠವಾಗು : ಗೋಮೂತ್ರಮಂಡಲ ಮುಮಾಕಾಶಂ ವೇಜವಿತಿಯುಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲಂ (ಶಾಂತಿಪು. ೩-೨೩ ವ) ; ಕೊಳನ ತಡಿಯಲ್ಲೊಂದು ಹೊಱಸು ಕುಳ್ಳಿರ್ದರೇನು ಕಳಹಂಸಿಯಾಗಬಲ್ಲುದೆ (ಬಸವ. ೯೬) ; ಡೊಂಬನ ಬಿನುಗುನುಡಿಯಂತಿರಲಿ ಬಲ್ಲಡೆ ಮೊನೆಗಣೆಯಲೇ ಮಾತನಾಡು (ಕುಮಾವ್ಯಾ. ೬-೦೫). ೨. ತಿಳಿ ; ಅರಿ : ಬವರದೊಳೇಂ ಬಲ್ಲಂ ಕರಮೊಪಜುಗೆಯಲ್ (ಶಂಕಕ. ೦೨-೩) ; ಸಾವ ಪೊತ್ತನಾವಂ ಬಲ್ಲಂ (ಧರ್ಮಾಮೃ. ೦-೨೦೯) ; ಬ್ರಹ್ಮ ವಿಷ್ಣು ರುದ್ರರಿವರೆಲ್ಲ ಒಂದು ಬ್ರಹ್ಮಾಂಡದೊಳಗಣ ಬಾಲಕರು ಇವರೆತ್ತ ಬಲ್ಲರು ಲಿಂಗದ ನಿಜವ (ಅಪ್ರ. ೨-೪). ೩. ವೃದ್ಧಿಯಾಗು ; ಹೆಚ್ಚಾಗು ; ಅಧಿಕಗೊಳ್ಳು : ಚದುರಿಲ್ಲಿಂದಮ ಪರ್ವಿತಲ್ಲ ಜಗತಂ ಜಾಣ್ಪೊಂಗಿದತ್ತಿತ್ತಣಿಂ ಪದುರೀ ತಾಣದೆ ಬಲ್ತುದು (ಕಿರ. ೬-೬೩). ಬಲಿ$_1$ : ೧. ನೀಮುಮಿವಾಗಳ್ ವನಸಿಂಹನ್ಯಾಯದಿಂ ದುರ್ಗದೊಳೆ ಬಲಿದು ನಿಂದಲ್ಲಿ ಬಂದೊತ್ತಿ ಚಕ್ರೇಶನ ತಂತ್ರಂ ನಿಲ್ಕುಂ (ಆದಿಪು. ೦೬-೫೬) ; ಗಱಿ ಪಾಱಲ್ಕಿಲ್ಲ ಕಾಲಲುಂ ಬಲಿಯವು (ಕಾದಂಬ. ೧೧೦) ; ಬೀದಿವೀದಿಗಳೊಳಾರು ಮಂ ಸುಟ್ಟಿಯಲೀಯದೆ ಬಗ್ಗಿಸುತ್ತೆ ಬಲಿದು ಕಾಪುಗೊಂಡು ಬಳಸಿದ ತಳಾಱನಾಯಕರುಮಂ . . . ಈಕ್ಷಿಸುತ್ತುಂ (ಪರ್ವಪು. ೯-೫೬ ವ) ; ಕುಲಗಿರಿಗಳೆಲ್ಲವನೊಂದುನಿಮಿಷದಿ ಹೊಳಕಿಹೊಳಕಿ ಬಿಡುವೆನ್ನ ಕುಲಿಶದಂಡವ ಓಡಿದೀ ಸಗ್ಗಿಗರ ಜಂಗುಳಿ ಸಹಿತವೆ ಬಲಿದೊತ್ತೆ (ಕ್ರೀಕಾಂ. ೬-೫). ೩. ಬಲದ ಬಲಿದ ಕಳಕಳವಂ ಕೇಳ್ದು (ಶಾಂತಿಪು. ೦೦-೬೩) ; ಭವಪೂಜೆ ಬಲಿದು ಪುರುಷಾಕಾರವಾದಂತೆ (ಬಸವ. ೩-೦೫೨) ; ಬಲಿದ ತಱೆಡಿಕೆಗಳ . . . ರ್ಥೊವ್ಮಿನ ಬಲೆಗೆ ಸಿಲುಕಿದ ಬಲವನರ್ಜುನದೇವನೀಕ್ಷಿಸಿದ (ಕುಮಾವ್ಯಾ. ೦೬-೪). ೪. ಹಣ್ಣು, ಸಸ್ಯ ಮುಂತಾದವು ಪೂರ್ಣವಾಗಿ ಬೆಳೆ : ಒಂದು ವೃಕ್ಷದಲ್ಲಿ ಹುಟ್ಟಿದ ಫಲ ಮೊದಲೇ ಎಳೆಯದಾಗಿ ತದನಂತರದಿಂ ಮಿಱಿ ಬಲಿದಲ್ಲದೆ ಬೀಜಕಂಕುರವಿಲ್ಲ (ಸರ್ವಜ. ೦೦೩-೫೩೦) ; ಮೊಳೆಯಲೇ ಮುರುಡಿಸಲು ಬೇಕುದು ಬಲಿದ ಬಳಿಕದು ನಿನ್ನ ಹವಣೇ (ಕುಮಾವ್ಯಾ. ೯-೦೩) ; ಹತ್ತಿಯ ಕಾಯಿಗಳು ಬಲಿತು ಹಣ್ಣಾಗಲಿಕ್ಕೆ ಹೆಚ್ಚು ಕಡಿಮೆ ಎರಡುತಿಂಗಳು ಬೇಕಾಗುತ್ತವೆ (ಮುಂಬಯಿ. ೪-೨೬). ೫. ದಪ್ಪವಾಗು ; ದೊಡ್ಡದಾಗು : ಲತಾಂಗಿಯ ಜಠರವದು ದಿನದಿನಕೆ ನುಣಪ್ಪಿಂ ಪೆಂಪುಮಿಂಪುಂ ಕೊನರ್ದು ಬಲಿದೊಂಬತ್ತುತಿಂಗಳು ತುಂಬಿ ಸಂದೀಶ . . . ಬೆಳೆದನು (ಬಸಪು. ೩-೪). ೬. ಹೆಪ್ಪುಗಟ್ಟು ; ಘನರೂಪವನ್ನು ಪಡೆ : ನೀರು ತಾ ಅನಿಲನಿಂದಲಿ ಬಲಿದು ವಾರಿಕಲ್ಲೆಂದೆನಿಸಿತು (ಶಿವಗೀ. ೩೨-೦೪೪) ; ವಾರಿ ಬಲಿದು ವಾರಿಕಲ್ಲಾದಂತೆ ಶೂನ್ಯವೇ ಸ್ವಯಂಭುವಾಯಿತ್ತು (ಅಪ್ರಕಾ.

೦೬೫-೬೨೬) ; ಒಂದೊಂದು ರಜ್ಜುವಿಂ ಕಿಟಗೊಂದೊಂದಿರ್ದಪುವು ನಾರಕರ ಪಾಪರಜಂ ಮುಂದಯ್ಯು ಬಲಿದು ನೆಲನಾದಂದದೆ ದುಸ್ಸ್ಪರ್ಶವಿಷಮನರಕಾವನಿಗಳ್ (ಧರ್ಮಪು.೦೦-೨). ೭. ಒರಟಾಗು; ಬಿರುಸಾಗು : ಮೆಲ್ಪುಗೆಟ್ಟು ಬಲಿದಿರೆ ಮೆಯ್ ಕಣ್ ಪತ್ತೆ ಕರಿದಾಗೆ ನಾಲಗೆ ಸತ್ತುಪುದಾ ವಾಜಿ (ಅಶ್ವಶಾ. ೭-೯೦) ; ಕರ ನಡುಗೆವ್ಯೆ ಬಲಿಯೆ ಹುಬ್ಬುಗಳುಜಿ ಬಿಗಿಯೆ . . . ವೀರಾವೇಶದಲಿ ಮಸಗಿದನು ಕಲಿಭೀಮ (ಕುಮಾ.ಭಾ. ೦೨-೦೦). ೮. ಮಲೆ ; ಸೊಕ್ಕು ; ಗರ್ವಿಸು : ಮದೋದಯದೊಳ್ ದೇವ ಬಾಹುಬಲಿ ಬಲಿದಿರ್ದಂ (ಆದಿಪು. ೧೯-೧೩) ; ಆಳ್ವಲಮುಳ್ಳಡಶ್ವಬಲಮಿಲ್ಲ ಭಟಾಶ್ವಬಲಂಗಳುಳ್ಳಡಂ ತೋಳ್ವಲಮಿಲ್ಲ ಭೃತ್ಯಹಯದೋರ್ಬ್ಬಲಮುಳ್ಳಡ ಮೇರ್ವ್ವಲಗಳಿಲ್ಲಿಳ್ಳೆಸಗೆಯ್ಯದೇಕೆ ಬಲಿವರ್ಮ್ಮಲೆಪರ್ (ಎಕ. VII, ಶಿಕಾ. ೦೩೬-೨೬ ; 1068). ೯. ನಿಲ್ಲು ; ಸ್ಥಿರವಾಗು ; ನೆಲೆಗೊಳ್ಳು : [ನಿಡು] ಜಾಗರದೊಳ್ ತೂಡರ್ದೇಕಪಾದದೊಳ್ ಬಲಿದುಪವಾಸದೊಳ್ ನವೆದು ನೋಂಪಿಗಳೊಳ್ ನಿಯಮಕ್ರಮಂಗಳಂ ಸಲಿಸಿದರಂತು ನೋನದೆ ಗುಣಾರ್ಣವನಂ ಪಡೆಯಲ್ಕೆ ತೀರ್ಗುಮೇ (ಕಂಕಣಾ. ೦-೦೩೬) ; ಇದು ಕಲಿಭೀತಿಯಿಂ ಕೃತಯುಗಂ ಬಲಿದಿರ್ದಪುದೆಂಬ ಸಚ್ಚರಿತ್ರದಿನೆಸೆದು . . . ಪೆರ್ಮೆಯಿಂ ವಿದಿಸೆಯೆಂಬುದು ಸಚ್ಚನ ರಾಜಧಾನಿಯಾದುದು (ಕಾದಂಪೂ. ೦೫); ಗುರು ಕರುಣದಿಂದೊದಗಿದ ಇಷ್ಟಲಿಂಗದಲ್ಲಿ ವಿಶ್ವಾಸ ಬಲಿದಲ್ಲಿ (ಚೆನ್ನಸಂ. ೦೭-೫೬). ೧೦. ದೃಢಮನಸ್ಕನಾಗು ; ಹಟ ಹಿಡಿ : ಆರು ನುಡಿಯಲು ಸರ್ವಥಾ ಖಳನಾರಿಯನು ಕೈಕೊಳ್ಳೆನೆಂದೇ ವೀರ ಬಲಿದನು (ಕುಮಾ.ಭಾ. ೯-೨೩). ೧೧. ರಚಿತವಾಗು ; ನಿರ್ಮಾಣವಾಗು : ಬಲಿದುದನಿತಕೆ ಕೋಟಿ ಪರಿಖಾವಳಿಯರಚನೆಯಲಾಳುವೇರಿಯ ಹುಲಿಮುಖದ ಮುಗಿಲಟ್ಟಳೆಯ ಸಾಲುಗಳ ಸೊಗಸಿನಲಿ (ತೊರರಾ. ೦-೦೩-೨). ೧೨. ಪ್ರಕಟಗೊಳ್ಳು ; ವ್ಯಕ್ತವಾಗು : ಪಂಚಮುದ್ರಾನ್ವಿತಂ ಪಂಚಾಕ್ಷರೀಪ್ರಿಯಂಪಂಚವರ್ಣಂ ಒಗೆವೊಡೀ ಬಸಿಱ ಶಿಶುವೆಂದು ಪಂಚಿಸದೆ ಪೇಳ್ವಂತೆಯುಯ್ಯಂತಿಂಗಳಲಿ ನವಮಾಸಚಿಹ್ನಂ ಬಲಿದುದು (ಸಿದ್ಧರಾ. ೦-೫೦) . ೧೩. ಆಕಾರವನ್ನು ಹೊಂದು ; ರೂಪವನ್ನು ತಾಳು : ನೀತಿ ಬಲಿದುದೊ ಶಾಂತಿ ರೂಪಾಯ್ತೊ ಸದ್ಗುಣವ್ರಾತವೇ ಮುನಿಯಾಯ್ತೊ (ಹಕಶಾ. ೫-೬೭) ; ಇಂದುರುಚಿ ಬಲಿದುದೋ ಹರಸ್ಮೇರ ದಿವ್ಯಿಯೊಳಾಕಾರವಾಯ್ತೊ . . . ಎನೆ ರಜತಾದ್ರಿ ರಂಜಿಪ್ಪುದು (ಬಸವಪು. ೦-೩೬). ೧೪. ತುಂಬು ; ಹರಡು ; ವ್ಯಾಪಿಸು : ಹಸನದೀಧಿತಿ ಮಿಗೆ ರಜತಗಿರಿ ವಸುಗಳಭಿನವವಾಯಿ ತೆನಲಾಗಸದೊಳೆಲ್ಲೆಡೆಯೊಳು ಬಲಿದು ಬೆಳದಿಂಗಳಗ್ಗಳಿಸೆ (ಬಸವಪು. ೦೨-೩೭) ; ಅಂಬರದೊಳೊಮ್ಮೆ ಕಾದುವರ್ ಧರೆಗಿಳಿವುತುಂ ಬಿಡದೆ ಸೆಣಸುವರ್ ಧರೆಯೊಳೊರ್ವರೊರ್ ಗಗನವಮಂ ಬಲಿವರೊರ್ವರಿರದೆಚ್ಚಾಡುವರ್ (ಕಬಿಪು. ೨೫-೨೨) ; ಹೊಲೆ ಬಲಿದ ತನುವಿನೊಳಗಿರ್ದುಮದಱೊಳಗೆ ಕುಲವನ ಱಸುವರೆ (ಸರ್ವಜ್ಞ. ೨೦). ೧೫. ನಿಯಮಕ್ಕೆ ಒಳಪಡು,— ಒಳಗಾಗಂ : ದೇಗುಲಕೆ ಸಾರದೆ ಹೆಗಲ ಕಂಬಿಯನಿಳುಹದೆಲ್ಲಿಯುನಿಲ್ಲದಡಿ ಯಿಡದಾರದಿಂತಪ್ಪ ಬಲಿದವಸ್ಥೆಯೊಳಿಯ್ದೆ ಸಂಕಟಗೊಳಲದೇತಕೆ (ಬಸವಪು. ೪-೦೩). ೧೬. ಕ್ಲಿಷ್ಟವಾಗು ; ದುಸ್ಸಾಧ್ಯವಾಗು : ಬಲಿದು ದಾಹವ ಮತ್ತೆ ಚಾತುರ್ಬಲ ಭಡಾಳಿಸಿ ಕಾದುತಿರ್ದುದು ಮುಳಿದು ಶಲ್ಯನ ಕೂಡೆ ಪಂಚದ್ರೌಪದೀಸುತರು (ಕುಮಾ.ಭಾ. ೩-೩೦). ೧೭. ಮುಚ್ಚು ; ಬಂಧಿಸು : ಕಟ್ಟಿನಕಟಾ ಎಂದು ಮನದೊಳಗೆ ಮಱುಗುತ್ತ . . . ಎದ್ದು ತಾ ಕವಾಟವ ಬಲಿಯೆ (ಪ್ರಭುಲಿಂಗ. ೨-೩೪). ೧೮. ಚುಚ್ಚು ; ನಾಟು : ಆ ಕರಸ್ಥಲವೆಂಬ ರಥಕ್ಕೆ . . . ದಶವಾಯುಗಳೆಂಬ ಪಾಶಮಂ ಬಂಧಿಸಿ ಷಡಂಗಗಳೆಂಬ ಮೊಳೆಗಳಂ ಬಲಿದು (ಅವಸಂ. ೨೬೦-೦೦೬೬) ; ಲಲನೆಯರುಪ ಚಾರದ ನುಡಿ ಕಿವಿಯೊಳು ಬಲಿದ ಬಲ್ಲೆಹವಾಯಿತಾಗ (ಕಂಸಪ. ೯-೦೬೩). ೧೯. ಹೆಚ್ಚಿಸು ; ವೃದ್ಧಿಗೊಳಿಸು : ರಕ್ಕಿಯಾಳ್ಗಳೇಲೆಕ್ಕಿಸಿ ನೋಡಿ ಕಿಲಂಬರೆಂಬುದನಱಿದು ನಾಡೆಯುಂ ನೆಲಿದು ಮೆಲ್ಲ ಮೆಲ್ಲನೆ ತನ್ನ ಬಲಮಂ ಬಲಿದು (ಧರ್ಮಾಮೃ. ೨-೩೯ ವ) ; ಪೊಳಲ ಪೆರ್ಬಾಗಿಲ್ಗಳಿಕ್ಕಿದವು ಕೋಟೆಕೊತ್ತಳದ ಕಾವಲ್ಗಳಂ ಬಲಿದರಲ್ಲಲ್ಲಿ ಗಜಬಜವಾಯ್ತು ನಗರದೊಳಗೆ (ಕೃಷ್ಣರಾ. ೯-೦೬) ; ಬಳಸಿಹ ರಿಪುನೃಪಮನ್ನೆಯರಿವರಗ್ಗಳಕೆಗೆ ಕಂಗೆಟ್ಟಾಗ ಇಳೆಯಾಳ್ವ ತಿರುಮಲರಾಜನ ಮುಱಿ ಹೊಕ್ಕು ಮುಳಿಸ ಬಲಿದರಾತನಿಗೆ (ಕಂಠೀರ. ೩-೦೬). ೨೦. ಬಿಗಿಗೊಳಿಸು ; ಬಿಗಿಯಾಗಿ ಜೋಡಿಸು : ತನ್ನ ಕಯ್ಯ ಕಳಶಮಂ ಬಳ್ಳಿಯೊಳ್ ೞಟ್ಟಿ ನೀರಂ ತೆಗೆವಾಗಳದಂ ಪುಲಿ ಪಿಡಿದು ನೇಲ್ವುದುಮದು ಕಯ್ಗೆ ಬಿಣ್ಣಿತ್ತಾದೊಡದು ನೋೞ್ಪೆನೆಂದು ಬಲಿದು ಪಿಡಿದು ಮೆಲ್ಲನೆ ತೆಗೆಯೆ (ಕಂಕಕಂ. ೦೦೯-೫) ; ಸೂತ್ರದ ಕೀಲ್ಗಳಂ ಬಲಿದು ಕ್ರಮದಿನಾಡಿಪ ಬಡಗಿ ತಾನೇ (ಬಸವಪು. ೨೦-೨೯); ತಡಿಯ ಬಲಿಸುವ ಗುಳನ ಜಂಚಿಯ ಗಡಣಿಸುವ ಹಕ್ಕರಿಕೆಗಳನಾಯ್ದಡಸಿ ಹೊಲಿಸುವ ಕಬ್ಬಿಗಳ ಕೊಂಡಿಗಳ ಮಿಗೆ ಬಲಿವ. . . ಬೆಟ್ಟದ ಗಾಲಿಗಚ್ಚನು ತೊಡಿಸುತಿರಲು (ಕುಮಾ.ಭಾ. ೫-೩೭) ; ಬಲಿದು ಮಕುಟಾವಳಿಯ ಶೋಣಿತ ಪಳಿಯ ರಕ್ತಸದೇಶಿಯಲಿ ಬಿಗಿದೆಳೆವ ಹಾಹೆಯನೋಱಗೊಳಿಸಿಕ್ಕಲಿಸಿ ಪದಯುಗವ (ತೊರರಾ. ೧-೦೩-೦೯). ೨೧. ಗಟ್ಟಿಗೊಳಿಸು : ತನ್ನ ಕೆಳದಿಗೆ ಪೇೞ್ದು ಮನಮಂ ಬಲಿದು ತನ್ನಂ ತಾನೆ ಸಂತಯಿಸಿದಳ್ (ಶಾಂತಿಪು. ೯-೦೦೭ ವ) ; ಧನುವನೊದಱಿಸಿ ಸಕಲಸುಭಟರು ಮನವ ಬಲಿದೊಗ್ಗಿ ಸರಳಿನ ಜಿನುಗುವಳೆಯಲಿ ನಾದಿದರು ನಾರಾಯಣಾರ್ಜುನರ (ಕುಮಾ.ದ್ರೋ. ೦೯-೩೦). ೨೨. ಭದ್ರಪಡಿಸು ; ಸುರಕ್ಷಿತಗೊಳಿಸು : ಉಗ್ರಸೇನನೆಂಬ ದಂಡಾಧಿಪಂ ಕೋಂಟೆಯಂ ಬಲಿದು ಕಾದುವ ಸಮ ಕಟ್ಟಂದಿರ್ಪುದುಂ (ರವಮಾಣ್ಯ. ೪-೨೯೦) ; ಅಂದು ಚಕ್ರವ್ಯೂಹವನು ನಲವಿಂದ ಬಲಿದನು (ಕುಮಾ.ದ್ರೋ. ೯-೦೯) ; ಜಲಧಿ ಮೇರೆಯ ಮಿಱಿ ಕಟ್ಟೆಯ ಬಲಿದು ತಡವವರಾರು (ಉತ್ತರಾ. ೭-೫೯). ೨೩. ನೆಲೆಗೊಳಿಸಂ; ಸ್ಥಾಪಿಸು : ಪಶ್ಚಿಮಪದ್ಮಾಸನದಲ್ಲಿ ಕುಳ್ಳಿರ್ದು ನಿಟ್ಟೆಲುವ ನೆಟ್ಟನೆ ಮಾಡಿ ಅಧೋಮುಖಕಮಲವ ಬಲಿದು ಊರ್ಧ್ವಮುಖವ ಮಾಡಿ (ಚನ್ನಬ. ೪. ೪೨೩-೬೯೯) ; ಮನಕಲಿತ ಪ್ರಾಣಮಂ ಹೃದ್ದೇಶದೊಳು ಬಲಿದಾ ವನಜ ಬಾಂಧವ ಪ್ರತೀಕಾಶವದನದೆ ವೀರವನು ತುಳುಕೆ ತನುವನೊನೆದಡೆ ಶೈಲ ಸೆಳೆಮಂಚದಂತಾದುದು (ಬಂಕಾರಾ. ೫-೧-೦೦). ೨೪. ನಿಗ್ರಹಿಸು ; ಸಂಯಮಿಸು ; ತಡೆ : ಬಿಂದುವನು ಬಲಿದಾತ ವಂದ್ಯನಹ ಜಗಕೆಲ್ಲ (ಸರ್ವಜ್ಞ. ೪೦೨). ೨೫. ಪ್ರವೇಶವಿಲ್ಲದಂತಾಗು ; ಮುಚ್ಚಿಹೋಗಿರು : ಆ ಕಡೆಗೆ ಹೋಗುತಿರೆ ಗೋಪುರದಾ ಕದವು ಕಡುಬಲಿದಿರಲು ನಿರ್ವ್ಯಾಕುಲ ರಿಗಾಕುಲತೆ ತೋಱಿದುದು (ಶಾಸ್ತ್ರಶಾ. ೨೦-೦೩). ೨೬. ನೆರವೇರಿಸು ; ಪೂರ್ಣಗೊಳಿಸು : ಕಳದುದೊಂದಮೃತ್ಯುವೆನೆ ನೃಪತಿಲಕ ನುಡಿದನು ನಿನ್ನ ಭಾಷೆಯು ಬಲಿದೆ ನಿನ್ನಯ ಬಿರುದ ಸಲಿಸಿದೆ ನವುಗಿದೇನೆಂದ (ಕುಮಾ.ದ್ರೋ. ೦೫-೩). ೨೭. ಪ್ರಚೋದಿಸು ; ಉತ್ತೇಜಿಸು : ಏಳು ತಾಯೆ ಸರೋಜಮುಖಿ . . . ನಿನ್ನ ವರಾಳಿಗೊಂಡಂದವನು ಬಲ್ಲೆನು ನಿನ್ನ ಹರಿಬದಲಿ ಕಾಳೆಗವನೇ ಬಲಿದು ತಹೆನು (ಕುಮಾ.ಶಾ. ೭-೦೨).

ಬಲ್ಲ$_1$ = ತಿಳಿದವನು ; ಚತುರ ; ಜಾಣ : ತಡೆಯದೆ ಮಹಾಧ್ವ ಕೃತಿಗಳನೊಡರಿಸಲಾರ್ಪಾತನೆಲ್ಲರಿಂದಂ ಬಲ್ಲಂ (ಕಂಠಾ. ೦-೦೬) ; ಬಲ್ಲರಿಂದಾನು ಕೇಳಿದುದಕೆ ಪೆರ್ಚು ಕುಂದಿಲ್ಲದಂತೆಚ್ಚಱುಗೂಡಿ . . . ಸೊಲ್ಲಿಸುವೆನು (ಹರಿಶ. ೦-೪೪). ಬಲ್ಲಂತಿಕೆ = ತಿಳಿವಳಿಕೆ ; ಅರಿವು : ಬೇಡಿ ದಿಷ್ಟವ ಕೊಟ್ಟಾತನು ಭೂತಪೋ ಆತ್ಮನೋ ಬಲ್ಲರೆ ನೀವು ಹೇಳಿರಣ್ಣಾ ನಿಮ್ಮ ಜ್ಞಾನದ ಮುಸುಕ ತೆಱದು ನಿಮ್ಮ ಬಲ್ಲಂತಿಕೆಯ ಕಾಣಬಹುದು (ಸರ್ವಪ. ೬೯-೯೬೪). ಬಲ್ಲತನ = ೧. ಶಕ್ತಿ ; ಸಾಮರ್ಥ್ಯ : ತನ್ನ ಮುನ್ನಿನ ನಲ್ಲರೂಪನೆ ತಾಳ್ದು ನಿನ್ನೊಳು ಬಲ್ಲತನಮಂ ನೋಡಲೆಂದಿಂತಾದೆ ನಾನು (ಬಸವಪು. ೨೦-೫). ೨. ತಿಳಿವಳಿಕೆ ; ಜ್ಞಾನ : ಕಲ್ಲು ಮಣ್ಣು

ಮರದಲ್ಲಿ ದೇವನಿದ್ದಹನೆಂದು ಎಲ್ಲಿಯೂ ತೊಳಲುತಿಪ್ಪ ಅಣ್ಣಗಳು ಕೇಳಿರೊ ಅದನಲ್ಲಲ್ಲಿಟ್ಟು ಬಲ್ಲತನದ ಕುಜುಹಲ್ಲದೆ ಸೊಲ್ಲಿಂಗತೀತನಜೀಯ (ಪ್ರಭುಲಿಂಗಲೀ. ೨೩-೯೨) ; ಇದೇಂ ಬಲ್ಲತನವೇ ಪೆಂಪೆ ಗರುವಿಕೆಯು ಗಂಭೀರ ವೃತ್ತಿಯೋ (ಶಬ್ದಮ. ೩-೩೦): ಬಲ್ಲರ ಬಲ್ಲಹ = ಶೂರರಲ್ಲಿ ಶೂರ ನಾದವನು : ಅಂಗಡಿವೀಧಿಯೊಳಿಸೆದೆಯ್ವಂದಂ ತನ್ನೊಡನೆಯ್ವರೆ ಪರಿಮಿತಮಿತ್ರಾವಳಿ ಬಲ್ಲರ ಬಲ್ಲಹನು (ಜಗನ್ನಾ. ೧೯-೨೦). ಬಲ್ಲರಿಕೆ = ತಿಳಿದಿರುವ ವಿಷಯ : ಶಿರವನೆತ್ತದ ರೀತಿಯೊಳು ಪೇರುರಿಕೆ ತಿವಿತಿವಿದೌಂಕುವದು ಬಲ್ಲರಿಕೆ ಪ್ರಾಜ್ಞರಿಗರಿಯದೀಗವರಲ್ಲಿ ಕದನವನು ನೆರೆವೆನೆಂಬುದ ಮರೆ (ಜನಕ. ೩೬-೪೩). ಬಲ್ಲರೊಳ್ ಬಲ್ಲಹ = ಬಲ್ಲರ ಬಲ್ಲಹ : ಬಿರುದೆಂತೆಂಬರ ಗಂಡನಪ್ರತಿಮವೀರಂ ಬಲ್ಲರೊಳ್ಬಲ್ಲಹಂ (ಅಪ್ರತಿ. ೦೩-೪). ಬಲ್ಲವ₁ = ತಿಳಿದವನು; ಜಾಣ: "ಚತುರಃ ಕ್ಷೇತ್ರಜ್ಞಃ . . . ಪ್ರವೀಣಃ - ಈ ೧೧ ಬಲ್ಲವಂ "(ಕರ್ಣಾಟ. ೩೩-೧೬೦); ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಂ ಕೇಳುತಂ . . . ಸರ್ವಜ್ಞನಪ್ಪಂ ನರಂ (ಸೂಕ್ತಿಸು. ೦): ಬಲ್ಲವನೇ ಬಲ್ಲ ಬೆಲ್ಲದ ಸವಿಯ (ಗಾದೆ). ಬಲ್ಲವಿಕೆ = ಬಲ್ಲತನ : ನೀವೆಮಗೆ ಹಿರಿದು ಬಲ್ಲವಿಕೆಯಲಿ ವಾಕ್ಯಾತುರಿಯವನು ರಚಿಸಿದೊಡೆ ನಂಬುಗೆ ದೊರಕುವುದೆ ನಮಗೆ (ಪ್ರಭು. ೧೨-೧೭); ಭಾವಾಜಿ ನಿನ್ನ ಚಿತ್ತವ ನಾವು ನೋಯಿಪುದಾವ ಬಲ್ಲವಿಕೆ (ಭೀಮ. ೩೩-೯೬). ಬಲ್ಲವಿಕೆತನ = ಬುದ್ಧಿವಂತಿಕೆ ; ಜಾಣ್ಮೆ : ಇವಳ್ಬಲ್ಲ ಗರ್ವವ ಮುಜೀಯದಿರ್ದಡೆ ಸಲ್ಲದೆನಗೀ ಪೆಸರೆನುತ್ತಲಿ ನಿಲ್ಲಿಸಲು ಗಜವ ಬಲ್ಲವಿಕೆತನವಲ್ಲವರಸಿನವುಲ್ಲಸದ ವನಕೇಳಿಗೆಡರಹುದಲ್ಲ ನಮಗಿದು ನೀತಿಯಿಂದಳದೊರ್ವ ನೆಚಿ ಜಾಣೆ (ನಾಗಚ. ೯-೨೨).

[ದೇ.॥ ತಮಿ. ವಲಿ, ವಲ್ಲು ; ಮಲ. ವಲ್ಲುಕ; ತುಳು. ಬಲಾಟಿನಿ; ತೆಲು. ಬಲಿಯು]

**ಬಲ್₂.** ಬಲು (ಸಪೂರೂ). 'ಬಲ್ಲಿತು' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ. ೧. ಬಲಯುಕ್ತ; ಶಕ್ತಿಯುತ: 'ಬಲ್ಗೆಯ್' ಪರಾ. ೨. ದೊಡ್ಡ; ದಪ್ಪ : 'ಬಲ್ದಲೆಯ' ಪರಾ. ೩. ಬಹಳ; ಅಧಿಕ; ಅತಿಶಯ: 'ಬಲ್ಗಣ್ಣೆ', 'ಬಲಿರ್ಪುದು' ಪರಾ. ೪. ವಿಶಾಲವಾದ: ವಿಸ್ತಾರವಾದ: 'ಬಲ್ದೊಟಿ' ಪರಾ. ೫. ಗಾಢವಾದ; ದಟ್ಟವಾದ; 'ಬಲ್ಗತ್ತಲೆ', 'ಬಲ್ಲಡವಿ' ಪರಾ. ೬. ಜೋರಾದ; ಅಬ್ಬರದ: 'ಬಲ್ದನಿ', 'ಬಲ್ಸರ' ಪರಾ. ೭. ಒತ್ತಾಯದಿಂದ ಕೂಡಿದ ; ಬಲಾತ್ಕಾರದ: 'ಬಲ್ಮೆ' ಪರಾ. ೮. ಬಿರುಸಾದ : ಒರಟಾದ ; 'ಬಲ್ನುಡಿ' ಪರಾ. ೯. ಬಿಗಿಯಾದ; ದೃಢವಾದ : 'ಬಲ್ಗಣ್ಣು' ಪರಾ. ೧೦. ಕೊಬ್ಬಿದ; ಬಲಿಷ್ಠವಾದ: 'ಬಲ್ಗುಟಿ', 'ಬಲ್ಗೂಳಿ' ಪರಾ. ೧೧. ಸಮರ್ಥನಾದ; ದಕ್ಷನಾದ : 'ಬಲ್ಮಂತ್ರಿ', 'ಬಲ್ಲಾವಂತ' ಪರಾ. ೧೨. ಗಡುಸಾದ; ಗಂಭೀರವಾದ : 'ಬಲ್ಗೊಗ' ಪರಾ. ೧೩. ಗಟ್ಟಿಯಾದ; ಸಾಂದ್ರವಾದ : 'ಬಲ್ಮೊಸರ್' ಪರಾ. ೧೪. ಶ್ರೇಷ್ಠವಾದ; ಉತ್ತಮವಾದ : 'ಬಲ್ಲಡಗು' ಪರಾ. ಬಲು : ೧. 'ಬಲುಗಣೆ' ಪರಾ. ೨. 'ಬಲುಗುಂಡು' ಪರಾ. ೩. ಹಣ ಮುಳ್ಳಂ ಹೆಣನಾದೊಡಂ ಮಮತೆಯಿಂ ತಾನಾವಗಂ ಬಿಟ್ಟಿರಳ್ ಕ್ಷಣ ಮಾತ್ರಂ ಬಲುಬೂಟಕಂ ಗಟಪಿ (ಸೋಮೇಶ. ೬೨): ಹುಲಿಮುಖ ಬಲು ಭಯಹೊಂಕುರವ ಬೀಜುವ್ಪವು (ಕಂಸವ. ೨-೬೯). ೪. 'ಬಲುಗಡಲು' ಪರಾ. ೫. 'ಬಲುಗತ್ತಲೆ', 'ಬಲುಗೆಂಪು' ಪರಾ. ೮. 'ಬಲುಬಿದಿರು' ಪರಾ. ೧೪. ಪರದೇವತೆಯೆಂದು ಭಕ್ತಿಗೈವುದು ಬಲುದೊರೆಯೆಂದುವ ಚಿಂಸುವುದು (ಹರಿಬ. ೩-೯೦). ೧೫. ಉಗ್ರವಾದ : 'ಬಲುಬೇಸಗೆ' ಪರಾ. [< ಬಲ್ಲಿತ್ತು₁]

**ಬಲ₁ (ನಾ).** ಎಡಭಾಗವಲ್ಲದುದು; ದಕ್ಷಿಣ ಪಾರ್ಶ್ವ: "ಅಪಸವ್ಯಂ, ದಕ್ಷಿಣಂ - ಈ ೨ ಬಲಂ" (ಕರ್ಣಾಟ. ೦೨೯-೬೧); ಬಲದ ಕಯ್ಯೊಳ್ ಭೈಕ್ಷದ ಭಾಜನಮಂ ಪಿಡಿದು ತೊಟಲ್ದು ಭೈಕ್ಷಮಂ ಬೇಡಿ ಮಡಗಿಟ್ಟು ಪಗಲುಣ್ಗಂ (ವಡ್ಡಾರಾ. ೯೨-೦೭); ಬೇಡಿದೊಡೆ ಬಲದ ಬರಿಯುವ ನೀಡಾಡುಗುಮುಗಿದು ಕರ್ಣಂ (ಕಂಸಕಾ. ೦-೦೦೦); ಇದಿರೊಳಾನಿಹೆ ಶಲ್ಯ ನೆಡವಂಕದಲಿ ಬಲದಲಿ ಕೃಪನಪರಭಾಗದಲಿ ನೀ ಬಂದೆಸು ಕುಮಾರನ ಕರದ ಕಾರ್ಮುಕವ (ಕುಮಾರವ್ಯಾ. ೬-೨೩); ಅಳುವವನ ಎಡಕ್ಕಿರಬೇಡ, ಹೊಲಿಯುವವನ ಬಲಕ್ಕಿರಬೇಡ (ಗಾದೆ).

ಬಲಗೊಡತಿ = (ಮದುವೆಯಲ್ಲಿ) ಹೆಣ್ಣಿನ ಬಲಭಾಗದಲ್ಲಿ ಜೊತೆಯಾಗಿರುವವಳು. ಬಲಗೊಡೆಯ = (ಮದುವೆಯಲ್ಲಿ) ಗಂಡಿನ ಬಲಭಾಗದಲ್ಲಿ ಜೊತೆಯಾಗಿರುವವನು : ಹಾಳುನಾಯಿ . . . ಇದೊಂದು ಯಾವಾಗಲೂ ನನ್ನ ಬಲಗೊಡೆಯ, ಬಸವನ ಹಿಂದೆ ಬಾಲ ಬಂದ್ಹಂಗೆ (ಮಲೆಮ. ೩೬೨). ಬಲದಂ = ದಕ್ಷಿಣ ಪಾರ್ಶ್ವದಲ್ಲಿರುವವನು : ಬಲಮಗ್ಗುಲಲ್ಲಿರುವ ವ್ಯಕ್ತಿ : ದಕಾರಕ್ಕೆ ಕೆಲದಂ, ಬಲದಂ, ಅಲ್ಲಿದಂ, ಇಲ್ಲಿದಂ, ಎಲ್ಲಿದಂ (ಶಮದ. ೦೦೦) ಪ್ರಯೋ. ಬಲದ ಕಯ್ = ಬಲಗಡೆ; ಬಲಭಾಗ; ಬಲಪಕ್ಕ : ಎರಡುಂ ಬಲದ ವೀರಭಟರ್ಕಳೊಟ್ಟು ಪೊಣಮಟ್ಟು ಬಿಲ್ವಿಲ್ಲಳ್ ಕುದುರೆ ಕುದುರೆಯೊಳ್ ಕಿಟ್ಟಿ ಅತಿತುಮುಲಕಾಳಗ ಪೆಟ್ಟಿ ಬಲದ ಕಯ್ಯಂ ಚಿತ್ರವಾಹನನೊತ್ತಿ ಪುಗುತ್ತನ್ನು ಕಾದಿಸೆ ಕಣ್ಣು ಕುಲಮುದ್ದ ನೀನೀ ಕಯ್ಯ ಪೊಕ್ಕು ಕಾದೆಸ್ಡು ಬೆಸಸೆ (ಎಕ. VIII, ಸೊರಬ. ೦೦-೬; ಸು. ೪೦೦). ಬಲದ ಕಯ್ಯ ಭಂಡಾರ = ಬಲಗೈ ನೀಡಿದೊಡನೆಯೇ ಹಸ್ತಗತವಾಗುವ ಐಶ್ವರ್ಯ ; ಒಂದು ಬಿರುದು : ಬಸವಯ್ಯ ದಂಣಾಯ್ಕರು ರಾಜ್ಯವ ಪ್ರತಿಪಾಲಿಸುವ ಕಾಲದಲು ಅವರ ಬಲದ ಕಯ್ಯ ಭಂಡಾರವೆನಿಪ ಗಣಪತಿಮ ವಿಷ್ಣುವರ್ದ್ಧನಪ್ರತಾಪಹೊಯಸಳ ಭುಜಬಳ ದೇಶದೊಳಗೆ ಕಾವೇರಿಯ ದಕ್ಷಿಣಭಾಗದ ಅಧಿಕಾರವ ಮಾಡುವ ಕಾಲದೊಳು (ಎಕ. IV(R), ಕಾಮನಾ. ೨೬೦-೬ ; 1368) ; ಶ್ರೀಮನ್ಮಹಾಪ್ರಧಾನಂ ಮಗಪ್ಪದಣ್ಣಾಯಕರ ಬಲದ ಕಯ್ಯ ಭಂಡಾರವೆನಿಪ ಅಚಂಣ ವೊಡೆಯರು ಹೊಣಸಳದೇಶವನಾಳುತಿವ್ದಲ್ಲಿ (ಎಕ. IV(R), ಕಾಮನಾ. ೨೬೦-೯; 1397). ಬಲವಾಗು = ಬಲಭಾಗಕ್ಕೆ ಬರು ; ಬಲಕ್ಕೆ ತಿರುಗು : (ಕ);

[ದೇ.॥ ತಮಿ. ಮಲ. ವಲವ್ ; ತುಳು. ಬಲತ್ ; ತೆಲು. ವಲ, ವಲನು ; ಕೋತ. ವಲ್ ; ಪರ್ಜಿ. ವೆಲ]

**ಬಲ₂** 'ಮಲ₁' ನೋ.

**ಬಲ₃ .** ಬಳ₂ (ನಾ). ೧. ಪರಾಕ್ರಮ; ಕಸುವು ; ಶಕ್ತಿ ; ಸಾಮರ್ಥ್ಯ : "ಪ್ರಾಣಃ, ಸ್ಥಾಮ, ಬಲಂ . . . ತರಃ, ಸಹಃ - ಈ ೮ ಬಲ್ಪು (ಬಲುಹು)" (ಕರ್ಣಾಟ. ೦೨೦-೩೮) ; ತ್ರಿದಶ ನರಾಸುರೋರಗಗಣ ಪ್ರಭು ನಿಶ್ಚಿತ ತತ್ತ್ವಯೋಗಿ ಯೋಗದ ಬಲಮುಣ್ಮಿ ಪೊಣ್ಮೆ ನಿಲೆ (ಕಂಸಕಾ. ೦-೬೩) ; ಬಲದಿ ಕುತ್ಸಿತದಾನದ ಫಲದಿಂದೆತ್ತಾನುಮೊರ್ವ ಸಿರಿ ಸಮನಿಸುಗುಂ (ಧರ್ಮಾಮೃ. ೦೦-೬೦). ೨. ಸೈನ್ಯ ; ದಳ ; ಪಡೆ : "ಸೇನೆ ಧ್ವಜಿನಿ ವರಪತಾಕಿನಿ . . . ಬಲಂ ಚಮುವೆಸಲು ಪಡೆಗೆ ನಾಮಂ" (ಮಂಗರಾ. ೬೬-೨೯) ; ಅಗ್ಗಳಾಲಿರಸರಾ ಬೆಸಸಿದೊಡೆ ಬೆಸನ ಪೆತ್ತುರ್ಬಿ ಬಲವಾನಾಳ್ದ ಎಜಿದು ಬಿಟ್ಟಿರ್ (ಎಕ. X (R), ಶ್ರೀನಿಂಗ್. ೬೬-೬ ; ಸು. ೩೨೦) ; ಅಜುಂಬಲೀ ಗಳ್ವಿರಸೊದವಿದ ಸಂಗ್ರಾಮಸಂರಂಭದಿಂದಂ ಬಗೆಯಿಂ ಪ್ರಾಣಪ್ರಿಯಸ್ತ್ರೀ ಜನತನಯ ಧನವ್ರಾತದೊಳ್ ಮಾಡದಾರ್ಶಾಜಿಗೆ ಬಂದೊಡ್ಡಲ್ಕೆ (ಅಜಿತ. ೦೯-೬೨) ; ಆ ಮೋಹರದ ಜೋಕೆಯ ಹಿಂದೆ ಲಕ್ಷಕಳಿಂಗಘಟಿಗಳು ಸಂದಣಿಸಿದವು ದ್ರೋಣ ನಿಂದನು ಬಲದ ಕಾಹಿನಲಿ (ಕುಮಾರವ್ಯಾ. ೨-೨೨). ೩. ಪ್ರಭಾವ ; ವರ್ಚಸ್ಸು : ನಿನ್ನ ದಯೆಯಿಂದಮರಿನೃಪರನ್ನೆಚಿ ಕೊಂದೆಮಗೆ ಸಕಳರಾಜ್ಯಶ್ರೀಯುಂ ನಿನ್ನ ಬಲದಿಂದೆ ಸಾರ್ದುದು (ಕಂಸಕಾ. ೦೯-೩೬) ; ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯಾನ

ಜ್ಯೋತಿಯು ಬಲದಿಂದ ತಮಂಧದ ಕೇಡ ನೋಡಯ್ಯಾ, ಸತ್ಯದ ಬಲದಿಂದ ಅಸತ್ಯದ ಕೇಡ ನೋಡಯ್ಯಾ (ಬಸವ. ೪೯೦). ೪. ನೆರವು ; ಸಹಾಯ : ಕೋಪದಲು ರೇಣುಕೆಯು ಭೂಪನ ಕೋಪವನು ನೆಟ್ಟಿ ಕಂಡು ಬೇಗದಿ ಪೂಪತಿಗೆ ಬಲವಾಗಿ ಬಂದಳು ರಾಮನಿದ್ದೆಡೆಗೆ (ಸಂಭಕ. ೨೨–೨೬). 'ಜನಬಲ' ಪರಾ. ೫. ಕೃಷ್ಣನ ಅಣ್ಣನಾದ ಬಲರಾಮ ; ಬಲಭದ್ರ : "ಬಲನೇಕಕುಂಡಲಂ . . . ಕಾಮಪಾಳಂ ರಾಮಂ" (ವಸ್ತುಕೋ. ೩–೨೩) ; ಪಲವುಂ ಪ್ರಕಾರದಿಂದಂ ಪ್ರಲಾಪಿಸುತ್ತುಂ ಗುಣಂಗಳಂ ಗಣಿಯಿಸುತಂ ಬಲನನುಜಸ್ನೇಹದೆ ವಿಹ್ವಲತೆಯನೆಯ್ದಿರ್ದ ನವನಿಯೊಳ್ ಬಿಟ್ಟಾಗಳ್ (ಶಾಂತೀಶ್ವ. ೯–೬೬) ; ದಾಡೆಗಳಿಂದ ಕಂಠೀರವ ಮದದಂತಿ ಕೋಡುಗಳಿಂದಲೆಂತಂತೆ ಕೂಡಿದ ಬಲ ನಾರಾಯಣರಿಂದಲಿ ನಾಡೊಡೆಯನು ರಂಜಿಸಿದನು (ಪರ್ವಕ. ೯–೩೧). ೬. ಆಕಾರ ; ಆಕೃತಿ ; ರೂಪು. ೭. ಇಂದ್ರಿಯ ; ವೀರ್ಯ ; ರೇತಸ್ಸು : "ಶುಕ್ಲಂ, ವೀರ್ಯಂ, ಬಲಂ, ಬೀಜಂ, ಇಂದ್ರಿಯಂ, ರೇತಃ – ಈ ೬ ಇಂದ್ರಿಯಂ" (ಕರ್ಣಾಯು. ೦೦೩–೦೬). ೮. ಕಾಗೆ : "ಕಾಗೆ ಯಲ್ಲಿಯುಂ ಬಲನೆಂಬುದು" (ಕರ್ಣಾಯು. ೦೩೩–೨೩). ೯. ಇಂದ್ರನಿಂದ ಹತನಾದ ಒಬ್ಬ ರಾಕ್ಷಸನ ಹೆಸರು : 'ಬಲದಲನ' ಪರಾ. ೧೦. ಭದ್ರ ; ಬಿಗಿ ; ಗಟ್ಟಿ : ಅವನು ಓಡಿಹೋಗದಂತೆ ಬಲವಾಗಿ ಹಿಡಿದುಕೊಂಡರು (ರೂಢಿ). ೧೧. ಒಬ್ಬ ನಿಘಂಟುಕಾರನ ಹೆಸರು : ನಿಜಗೋಪಾಲ ಧನಂಜಯ . . . ಅಮರ ಶಬ್ದಮಂಜರಿ ಬಲಾದ್ಯುಕ್ತಾಭಿ ಧಾನಾರ್ಥಮಂ ದ್ವಿಜವಂಶಾರ್ಣವಪೂರ್ಣಚಂದ್ರನೆನಿಪೀ ದೇವೋತ್ತಮಂ ಪೇಳೆ ಸೂರಿಜನಂ ಮೆಚ್ಚಲು ಸೇವ್ಯಮಾಯ್ತು ಜಗದೊಳ್ನಾನಾರ್ಥರತ್ನಾ ಕರಂ (ನಾನಾರ. ೩). ೧೨. ಬಲಿಷ್ಠವಾದುದಂ ; ಬಲಶಾಲಿ ಯಾದುದು : ಶೇಷನಿಂ ಬಲವಿಲ್ಲ ಮೋಸದಿಂ ಕಳವಿಲ್ಲ ನೇಸರಿಂ ಜಗಕೆ ಹಿತರಿಲ್ಲ ಪರದೈವ ಈಶನಿಂದಿಲ್ಲ (ಸರ್ವಜ್ಞ. ೨೨೮) ; ಸರಕಾರ ಬಹಳ ಬಲ ಅಲ್ಲವೇ ? (ಹುಚ್ಚುರಾ. ೨೪). ೧೩. ಯುದ್ಧ. ೧೪. ಆಹುತಿ ; ಬಲಿ : "ರಕ್ಕಸನೊಳಾಹುತಿಯೊಳಿಂದ್ರಿಯದೊಳಾಜಿಯೊಳು ನೀರ್ಕಾಗೆ ಯೊಳು ಶಕ್ತಿಯೊಳು ಮುಸಲಿಯೊಳು ಬಲವೆನಿಕ್ಕು" (ಹುಂಗರಾ. ೦೯೬–೩೯). ೧೫. ಆಕಾಶ, ಗಗನ. ೧೬. ನೀರು. ೧೭. ಕಪ್ಪು : "ಅಸಿತ ಸಹಾಯಮಿಂದ್ರಿಯ ರಣಾಹುತಿ ದಕ್ಷಿಣ ಸೈನ್ಯ ಶಕ್ತಿವಾಯಸಮುಸಿತಾಂಬರಂ ದನುಜ ರೂಪು ವಿಹಾಯಸ ವಾರಿ ದೊಡ್ಡಿತೆಂಬಿವರೋಳ್ ಬಲಾಖ್ಯ" (ನಾನಾರ. ೦೩). ೧೮. [ಜ್ಯೋತಿ] ಗ್ರಹಗಳು ಜಾತಕನಿಗೆ ನೀಡುವ ಬೆಂಬಲ,– ಸಹಾಯ : 'ಕಂಕಣಬಲ' ಪರಾ. ೧೯. [ವಿಶಿಷ್ಟಾ] ಪರಮಾತ್ಮನ ಆರು ಗುಣಗಳಲ್ಲಿ ಒಂದಂ : ಶುದ್ಧಸತ್ತ್ವವೆಂಬುದು... ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸೆಂಬ ಭಗವಂತನ ಆರುಗುಣಗಳಿಗೂ ಪ್ರಕಾಶಕವಾಗಿರುವುದರಿಂದ ಷಾಡ್ಗುಣ್ಯಮಯವು (ಹಿಂದಕಾ. ೨೩೪). ೨೦. [ದ್ವೈತ] ನಲುವತ್ತು ವಿಧವಾದ ಗುಣಗಳಲ್ಲಿ ಒಂದು : ರೂಪ, ರಸ, ಗಂಧ, ಸ್ಪರ್ಶ . . . ಭಯ, ಬಲ, ಲಜ್ಜೆ . . . ಶೌರ್ಯ, ಸೌಭಾಗ್ಯವೆಂದು, ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಕಾ. ೨೬೬). ಬಲ₄ : ೧. ಅಂತು ವಸುಷೇಣನಾ ಲೋಕಾಂತಂಬರಮಳವಿ ಬಳೆಯೆ ಬಳದೆಸಕಮದೋರಂತೆ ಜನ[ಂಗಳ] ಕರ್ಣೋಪಾಂತದೊಳೊಗೆದೆಸೆಯೆ ಕರ್ಣನೆಂಬನುಮಾದಂ (ಹಿಂಶಕಾ. ೦–೯೬) ; ಸಕಷಾಯಕುಜಂಗಳ ದಂತಕಾಷ್ಠದೊಳ್ ಬೋಟ ಕೌಂಗುವಾದ್ಯ(ಚ್ಯ) ಲವಂಗೋದಕ ಚೂರ್ಣಮೆಂಬಿವಂ ತೊಯ್ದುಕೊಂಡು ಪಲ್ಲುಲಿಯ ದಂತ ಬಳಮಂ ಪಡೆಗುಂ (ಕೋಕಿಲಕ. ೬–೩) ; ಭರತಂ ಷಟ್ಖಂಡವಸುಂಧರೆಯುಮನೊರ್ವೊದಲೆ ಬಿಟ್ಟು ಜಿನಸದ್ರೂಪಂ ಧರಿಯಿಸಿ ದನೆಂದೊಡಚಿದರ ಸಿರಿಯುಂ ಸಂಪತ್ಕ್ಯಮಳವು ಬಳವುಂ ಬಿಂದೇ (ರಮೂಕಥ್ಯ. ೬–೦೩೩) . ೨. "ಬಳಮೆನೆ ಸೈನ್ಯಮಕ್ಕು" (ಕಶರ. ೬೪) ; ಬಳ ಮೆರಡುಂ ತನ್ನನೆ ಮಿಳಮಿಳ ನೋಡೆ ನರೇಂದ್ರನೊಂದೆ ರಥದಿಂದ ಸುಹೃದ್ಬಳಮನಿರದೆಯ್ದಿ ಭೀಷ್ಮರ ಚರಣಯುಗಕ್ಕೆರಗಿ ನಿನಗೆ ಜಯಮ ಕ್ಕೆಂದಂ (ಶಂಶರಾ. ೦೦–೬೦) ; ಬಳೆದುದೊ ಭೂತಳಂ ಸುರಿದುದೋ ನಭಮಿಾಂದುದೊ ದಿಕ್ತಟಂ ಬಳಂಗಳನೆನೆ ಪರ್ವಿದಾ ಪಡೆಯ ತೊಟ್ಟುಟೆಯಿಂ ಗಿಡುಬಳ್ಳಿ ಭೂರುಹಾವಳಿ ಪೊದ್ದುಳ್ಳ ಬಲ್ಲಡವಿ ಪರ್ವತಯಲಾಯ್ತು (ಕೃಷ್ಣಕು. ೩–೯೬) ; ತೊಳದ ಬೆಳ್ಳುಗಿಲ ಪೊಗ್ಗರದಂತೆ ಸಾಲುಗೊಂಡಳ ವಟ್ಟು ಪುರದಿಂದಲ್ಲೆದಿ ಸಲಿಲವನೀಂಟಿ ಮರಳಿ ಪೋಪ ತೇಜಿಯ ಬಳ ಪೊಪ್ಪಿದುವು (ಕಂಸವ. ೨–೩೩). ೩. ಮಳೆಗಚಿವುದು ಬೆಳೆ ಪೆರ್ಚುವುದಿಳೆ ತಳಕಿಳಿದು ಪೋಗದೆ ತಡೆದಿಹುದು ಪಳಿವಿಲ್ಲದ ಪತಿವ್ರತೆಯರ ನಡತೆಯ ಬಳದೊಳೆಂಬರು ಬಲ್ಲವರು (ಹಂಬಿ. ೨–೯). ೫. ಬಳನಂ ನಚ್ಚುವೊಡೀ ಕೃಷೀ ವಳನುಮಿಾ ಜೂದಾಳಿಯುಂ ಗಾಳಿಗಾದಟಿಯಾಳೀ ಬಳೆದೊಟ್ಟು ನಟ್ಟುವ ನುಮಿಾ ಗೋಪಾಳರಪ್ಪೀ ಯಮಳ್ಗಳೆ ದಲ್ ಚಂಡಭುಜರ್ (ಪೇಋಕೃ. ೦೦–೧೦೦) ; ಎನಿತೊಂದು ಪದೆಪು ಮೋಹಂ ವನಜಾಕ್ಷನೊಳನಿತು ಪದೆಪು ಮೋಹಂ ಬಳನೊಳ್ ತನಗಾಗೆ ನಂದವಧು ತತ್ತನಯದ್ವಯಕೀಳಿಯಿಂದೆ ಸುಖಮಂ ಪಡೆದಳ್ (ಜಗಂ. ೩–೯೪) . [ಸಂ./ ತಮಿ. ವಲವನ್, ವಲ್ಲವನ್, ವಲ್ಲಮೈ, ವಲ್ಲೈ ; ಮಲ. ವಲವನ್ ; ತುಳು ಬಲ ; ತೆಲು. ವಲಮು, ವಲಮು ; ಕೋತ. ವಲ್]

**ಬಲಋದ್ಧಿ, ಬಳಋದ್ಧಿ** (ಸಾ). [ಜೈನ] ಎಂಟು ಬಗೆಯ ಋದ್ಧಿಗಳಲ್ಲಿ ಒಂದು; "ತಪಃಶಕ್ತಿಯಿಂದ ಅಪರಿಮಿತವಾದ ಮನೋವಾಕ್ ಕಾಯ ಬಲಗಳುಂಟಾಗುವುದು" (ಕೃಪಕೋ. ೦೪೯) : ಭಾವನೆಯೊಳಾದ ಬುದ್ಧಿ ತಪೋವಿಕ್ರಿಯೌಷಧಿರಸಬಲಾಕ್ಷೀಣಾಭಿಧಾನಸಪ್ತರ್ಧಿಗಳೊಳಂ ನೆಟಿದು (ಅಂಕೃ. ೬–೩ ವ) ; ಬುದ್ಧಿಕ್ರಿಯಾವಿಕ್ರಿಯತಪೋಬಲೌಷಧರಸಕ್ಷೇತ್ರ ಭೇದದಿಂ ಋದ್ಧಿಪ್ರಾಪ್ತಾರ್ಯರಷ್ಟವಿಧಂ (ತತ್ತ್ವಸ್ತ್ರ. ೦೬೩) ; ಮನ ವಚನ ಕಾಯ ಭೇದದಿಂ ಬಲಋದ್ಧಿ ಮೂಱು ತೆಱಂ (ಕನಾರ. ೩೯೯). **ಬಳಋದ್ಧಿ :** ಮನೋಬಳಂ ವಾಗ್ಬಳಂ ಕಾಯಬಳಮೆಂದು ಮೂಱುಂ ತೆಱನಾದ ಬಳ ಋದ್ಧಿಯೊಳಂ . . . ನೆಟಿದು (ಹಂಪ್ರಕೃ. ೦೯–೩೦ ವ): 'ಬುದ್ಧಿಋದ್ಧಿ' ಪರಾ. [ಸಂ.]

**ಬಲಂಗೆಡು** (ಕ್ರಿ). ಶಕ್ತಿಗುಂದು ; ಬಲಹೀನವಾಗು : ಆರಣ್ಯದಾ ಭೀಳತೆಗಂ ಕೋಡದೆ ಕೊಂಕದೆ . . . ಬೆಚ್ಚದೆ ಬೆದಱದೆ ಬಲಂಗೆಡದೆ ಮನಂಗುಂದದೆ ಕೆಲನಂ ಸಾರದೆ ಸಹಾಯಮಂ ಪಾರದೆ ಮಹಾವಟವೃಕ್ಷದ ಕೆಳಗೆ ವಿಪುಳತಪದಿಂದಪರ್ಣಯೊಪ್ಪುತ್ತುಮಿರೆಯಿರೆ (ಗಂಳ. ೯–೩೬ ವ).

[ ಬಲ₃ + ಕೆಡು₁ ]

**ಬಲಂಗೊಳ್, ಬಲಗೊಳ್, ಬಲಗೊಳ್ಳು** (ಕ್ರಿ). ಬಲಭಾಗದಿಂದ ಸುತ್ತು ಹಾಕು ; ಪ್ರದಕ್ಷಿಣೆ ಮಾಡು : ತನ್ನ ನಾಲ್ವರ್ ತಮ್ಮಂದಿರೊಡನೆ ಮಂಗಳವಸದನಂಗೊಂಡು ಮಂಗಳಪ್ರಧಾನೋಚಿತವಿಜಯಗಜಮನೇಱ ವಿದ್ಯೋತಮಾಗಿ ದಕ್ಷಿಣಾವರ್ತಮಪ್ಪ ಹೋಮಾಗ್ನಿಯುಂ ಬಲಂಗೊಂಡು (ಹಂಶಕಾ. ೯–೯೩ ವ) ; ಶಬಳಂ ರತ್ನದ ಶೇಜಮುನ್ನುಮಧಿದೆಯ್ದೆಂ ಶಂಕಿದೀ ಯುರ್ಗ್ಗ ಚಂದ್ರಬಳಂ ಬ್ರಹ್ಮಜನೇಂದ್ರಗೇಹಮೆನುತಂ ಬಂದತ್ತಿ್ರಯಿಂ ಸೇಸೆಗೊಣ್ಡು ಬಲಂಗೊಣ್ಡು ಸಮನ್ತು ಪೋದನೆಸವೀ ಗ್ರಾಮಾಧಿಪಂ... ಮೂಱು ಪವ್ವಂಗಳೊಳ್ (ಶಾಶ್ವ. XI–i, ೫೨–೬೩ ; 1007) ; ತ್ರಿಲೋಕ ಸ್ವಾಮಿಯಿರ್ದ ಗಂಧಕುಟಿಯಂ ವಾಸುದೇವವರ್ಮೊದಲಾದ ಯಾದವರೆಲ್ಲರುಂ ಮೂಮೆ ಬಲಂಗೊಂಡು ರೋಮಾಂಚಕಂಚುಕಿತಶರೀರರಾಗಿ ನಿರ್ವಾಣ ಸೀಮಂತಿನೀಪ್ರಿಯಂಗೆ ಸರ್ವಾಂಗಪ್ರಣತರಾಗಿ (ಕೇಋಪ್ಪು. ೦೩–೯೯ ವ). **ಬಲಗೊಳ್ :** ಭಟ್ಟಾರರ್ ಬಸದಿಯಂ ಬಲಗೊಂಡು ಕಾಲಂ ಕರ್ಚೊಳಗಂ ಪೊಕ್ಕು (ವಡ್ಡಾರಾ. ೬೯–೦); ಶ್ರೀಮಜ್ಜಿನಭವನಮಮಸಳಿಲಾಮರವರಋಚಿರಚಕ್ರ

ವರ್ತಿಸ್ಸುತ್ತಮಂ ಮೂಮೆ ಬಲಗೊಂಡು ಭವ್ಯಶಿಖಾಮಣಿಯೆನಿಸಿದ ಸರಸ್ವತೀ ಮಣಿಹಾರಂ (ಆಂಪು. ೯-೧); ಉದ್ಭಟಯ್ಯನ ಮಯೂರನ ಕಾಳಿದಾಸನ . . . ಭಲ್ಲಟನ ಭಾರವಿಯ ಪದವ ನೆನೆದು ಬಲಗೊಂಡು ತೊಡಗಿದೆನೀ ಮಹಾಕೃತಿಯಂ (ಹರಿಶ. ೧-೦೯); ಚಕ್ರಿ . . . ಬಲಗೊಂಡಸುಜಿ ಮೂಱು ಬಾರಿ ತನ್ನೊಳು ತಾನು ಗೆಲವೇಱ ಮುನಿಗಳಿರ್ವರಿಗೆ (ಶರಶ. ೩-೬೦). **ಬಲಗೊಳ್ಳು:** ಹಾಡಿನಲ್ಲಿ ಅಕ್ಕಮಹಾದೇವಿ, ಕೆರೂರ ರಾಚಯ್ಯಾ, ದ್ರೌಪದಿ, ಸುಭದ್ರೆ, ದೇವಕಿ ಇವರನ್ನೆಲ್ಲ ಕವಯಿತ್ರಿ ಬಲ ಗೊಳ್ಳುತ್ತಾಳೆ (ಕರ್ನಾಕ. ೩೯೩); ತುತ್ತು ಮುತ್ತನು ನೀಡು ಸರಸತಿ ಲಕುಮಿ ಕಾಳಿಕೆ ಅಂಬೆ ಪಾದಪದ್ಮಂಗಳಿಗೆ ಜೀವದ ಹಂಸನಾ ಬಲಗೊಂಬೆ (ಅರಳು. ೦೩-೦೨). [ಬಲ$_1$ + ಕೊಳ್$_1$]

**ಬಲಂಬೆರಸು** (ಅ). ಸೈನ್ಯವನ್ನು ಕೂಡಿಕೊಂಡು; ಸೇನಾಸಮೇತವಾಗಿ: ದ್ರೌಪದಿಯ ಕೊಟ್ಟ ನಣ್ಪುಮಂ ದ್ರೋಣನೊಳಾದ ಪರಿಭವಮುಮಂ ನೆನೆದೊಂದಕ್ಷೋಹಿಣೀಬಲಂಬೆರಸು ದ್ರುಪದಂ . . . ನೆಲಂ ಮೂಱಿ ವಿಟ್ಟಂತೆ ಬಲವಕ್ಕದೊಳ್ ನಡೆಯೆ (ಪಂಪಭಾ. ೯-೯೩ ವ); ಕೆಲವು ದಿವಸದ ಮೇಲೆ ವಿಶ್ವಾನುಲೋಮನುಂ ತಾನುಂ ತಂತಮ್ಮ ಬಲಂಬೆರಸು ಪರದೇಶಕ್ಕೆ ಪೋಗಿ ಕಳ್ದು ಬಹುದ್ರವ್ಯಂ ಬಸಮಾದುದಱಿಂ ಪೆರ್ಚೆ (ಧರ್ಮಾಮೃ. ೨-೦೮೩). [ಬಲ$_3$ + ಬೆರಸು$_3$]

**ಬಲಂಬೆಱು** (ಕ್ರಿ). ಶಕ್ತಿಯನ್ನು ಪಡೆ; ಸಾಮರ್ಥ್ಯವನ್ನು ಹೊಂದು; ಬಲಿಷ್ಠವಾಗು: ಮದೀಯಪಾಗ್ವಿಭವವಿನ್ಯಾಸಂ ಬಲಂಬೆಸ್ತುದಿನ್ನಿರು ಬಲ್ಲಿತ್ತಱ ಕೋಡು ಕೂರಿತದನಂತಿಂತಂತೆನಲ್ಬರ್ಕುಮೋ (ಆಂಪು. ೦-೨೩); ಬಲಂಬೆತ್ತೊಡಾ ದಿವಿಜೇಜ್ಯಂ ಸ್ವಗೃಹಂಗಳೊಳ್ ನಿಲೆ ಸುವರ್ಣಂ ಪೂರ್ಣಮಾ ಗೇಹದೊಳ್ (ಜಾತಕತಿ. ೪-೦೩). [ಬಲ$_3$ + ಪೆಱು$_1$]

**ಬಲಂಬೊಯ್** (ಕ್ರಿ). ಶಕ್ತಿಯನ್ನು ಕೊಡು; ಸಾಮರ್ಥ್ಯವನ್ನು ಎರೆ,—ನೀಡು: ಲೋಕಜ್ಞರು ಸೇವಾವಿಚಕ್ಷಣರುಮಪ್ಪುದಱಿಂದಮಾ ಕುಕ್ಕುಟಯುದ್ಧನಿರೀಕ್ಷಣರಸಕ್ಕೆ ಭಂಗಂಮಾಡದೆ ವಿದ್ಯಾಸಾಮರ್ಥ್ಯದಿನಿಪರ್ಕೆ ಬಲಂಬೊಯ್ದು ತಾಮುಮಾ ನೆರವಿಯೊಳದೃಶ್ಯರಾಗಿ ನೋಡುತ್ತು ಮಿರ್ದರ್ (ಶಾಂತಿಪು. ೯-೩೩ ವ). [ಬಲ$_3$ + ಪೊಯ್$_2$]

**ಬಲಕನಾಡು** (ನಾ). ಒಂದು ಪ್ರದೇಶದ ಹೆಸರು: ಶ್ರೀಸಾಮಿಯಬ್ಬೆ . . . ಬಲಕನಾಡ ಸುಳ್ಳಿಗೋಡವಟ್ ದೇವಾರಕ್ಕೆ × × ಭಟಾರಗ್ಗೆ ಬಟೀಯಂ ನಟ್ಟಿ ಬಸದಿಗಂ ದೇವಾರ ಕೊಟ್ಟಳ್ (ಎಕ. VIII, ನಗರ. ೪೩-೦೦; ಸು. ೬೫೦). [ಬಲಕ$_0$ + ನಾಡು]

**ಬಲಕಾಯಿಸು** (ಕ್ರಿ). ೧. ಶಕ್ತಿಯನ್ನು ಪಡೆ; ಬಲವಾಗು: ವೆಲೂರಿಗೆ ಓಡಿ ಹೋಗಿ ಕಿಲ್ಲೆ ಬಲಕಾಯಿಸಿಕೊಂಡದ್ದರಿಂದ ಆರ್ಕಾಡ ದವಲತ್ತು ಅನಾಯಕವಾದ ವರ್ತಮಾನ . . . ತಿಳಿದು (ಕೈಫಿಯ. ೨೯). ೨. ಬಲ ಪಡಿಸು; ಸುಭದ್ರಗೊಳಿಸು: ಆ ಕೋಟೆಯನ್ನು ಮೈಸೂರವರು ತೆಗೆದುಕೊಂಡು ತಮ್ಮ ಮಂದಿ ಠಾಣ್ಯ ಯಿಟ್ಟು ಬಲಕಾಯಿಸಿಕೊಂಡರು (ರಾಜೇಂದ್ರ. ೪). ೩. ಏರು; ತೀವ್ರವಾಗು: ಒಳಗೊಳಗೆ ಮಾತು ಬಲಕಾಯಿಸಿತು (ಪುರುಷಾ. ೦೨೪). ೪. ಕಳೆಗಟ್ಟು; ವಿಜೃಂಭಿಸು: ಇದರಲ್ಲಿ ಸಾಧಾರಣವಾಗಿ ಒಕ್ಕಲಿಗರೇ ಗೆಲ್ಲುವವರಾದುದರಿಂದ ಈ ಉತ್ಸವ ಬಹಳ ಬಲಕಾಯಿಸುತ್ತದೆ (ಗರುಡಾ. ೦೬೦).
[ಬಲಕ್ಯಾ (ಫ ← ಹಿಂ. ಬಲಕನಾ, ಬಲಕಾನಾ) + — ಇಸು$_3$./ತುಳು. ಬಲಕ್ರಾಯಿಸ್, ಬಲಕಾಯಿಸು]

**ಬಲಕುಟಿಕೆ** 'ಬಲುಗುಣಿಕೆ' ನೋ.

**ಬಲಕೆಯ್** 'ಬಲಗೆಯ್' ನೋ.

**ಬಲಖರ್ವೀಕೃತ** (ನಾ). (ದೈವಬಲದ) ಶಕ್ತಿಗುಂದಿದವನು; ಬಲಹೀನ: ಶ್ರೀಕೃಷ್ಣಂ ಕಂಸಪುರಾಲೋಕನಕೌತುಕರಸೋದಯಂ ವೀರರಸೋದ್ರೇಕ ಕೈಡೆಗುಡೆ ಬಲಖರ್ವೀಕೃತನಾ ದೈತ್ಯ ಖಳನ ಪೊಟಲ್ಗೆಯ್ತಂದಂ (ಜಗಂ. ೬-೧). [ಸಂ.]

**ಬಲಗಟ್ಟು** (ಕ್ರಿ). ಎಡಗಡೆಯಿಂದ ಬಲಗಡೆಗೆ ಅಡ್ಡಲಾಗಿ ಹೋಗು: (ಶ). [ ಬಲ$_1$ + ಕಟ್ಟು$_1$ ]

**ಬಲಗಡೆ** (ನಾ). ಎಡಭಾಗವಲ್ಲದ ಕಡೆ; ಬಲಪಕ್ಕ; ದಕ್ಷಿಣಪಾರ್ಶ್ವ: ಬಲಗಡೆಯಲ್ಲಿ ಬಸಂತನೊಲವಿನಿಂ ಕುಳ್ಳಿರೆ ತನ್ನೆಡದೆಸೆಯೊಳ್ ಸೊಬಗಿ ಯರಿರೆ ಕಡುಚೆಲ್ವಂ ಪಡೆದನಾವಗಂ ನನೆಗಣೆಯಂ (ಕಬ್ಬಿಕಾ. ೧೪೬); ಬಲಗಡೆಗಾಗಿ ಬಾಗಿ ಬಿಗಿವಟ್ಟುಱ ಬಟ್ಟಿತೆಂಬಿನಂ ಮುಲರ ಸರಂಗಳೊತ್ತರಿಸೆ (ಶಶಿಪ. ೩-೬). [ಬಲ$_1$ + ಕಡೆ$_3$]

**ಬಲಗಯ್** 'ಬಲಗೆಯ್' ನೋ.

**ಬಲಗರ್ವ** (ನಾ). ಸಾಮರ್ಥ್ಯದ ಬಗೆಗಿರುವ ಸೊಕ್ಕು,—ಮದ: ಆ ಶಿಶುಪಾಲನಳವದೆಂತೆಂದೊಡೆ ಬಲದ ಬಲಗರ್ವದಿಂ ತೋಳ್ವಲದ ಕರಂ ಚಲದಳುರ್ಕೆ[ಯಿಂ] ಸುರರೊಳ್ ಮಾರ್ವಲೆವಂ (ಜಿಂಹಂ. ೬-೩೪); ಬಲರಿಪು ತನ್ನದೊಂದು ಬಲಗರ್ವದಗುರ್ವಿನೊಳಿಪ್ಪುದಱಿಂಕೆಯಂ ಕುಲಿಶದಿ ನೊರ್ವೆ ಖಂಡಿಸಿದಂ (ಕಾವ್ಯಸಾ. ೯೬೪). [ಸಂ.]

**ಬಲಗರ್ವಿತ** (ಗುಂ). ಸಾಮರ್ಥ್ಯದ ದರ್ಪವುಳ್ಳವನು: ಬಲಗರ್ವಿತ ಪ್ರತಾಪಿಗಳಲಂಘ್ಯರಪ್ರತಿಮರಖಿಳಭೂಭೃತ್ಪ್ರಭುಗಳ್ ಬಲದೇವ ವಾಸು ದೇವರ್ ನೆಲೆಗೆಟ್ಟೇಕಾಕಿಯಾದರುಱಿದವರಳವೇ (ಜಿಂಹು. ೦೯-೨೯); ದುರುಳನವ ಭಗದತ್ತ ಬಾಹ್ಲಿಕ ನರಕ ವೃದ್ಧಕ್ಷತ್ರ ಮೊದಲಾದರಸುಗಳು ಬಲಗರ್ವಿತರಸಂಖ್ಯಾತರಹರು (ಕುವ್ಯಾಸ. ೨-೩೦). [ಸಂ.]

**ಬಲಗಾಲ್**, ಬಲಗಾಲು (ನಾ). ಬಲಗಡೆಯ ಕಾಲು; ದಕ್ಷಿಣ ಪಾದ: ಬಲಗಾಲ್ ಸೈತೊಪ್ಪೆ ವಾಮಂ ಕೆಲಕೆ ತೊಲಗೆ. . . ಲೀಲಾಲಲಿತಾಸ್ಯ ಕ್ರಾಂತದಿಂ ನಿಂದಮರನರಸಭಾಚಿತ್ತದೊಳ್ ಕಾಂತೆ ನಿಂದಳ್ (ಲೀಲಾವ. ೯-೦೩೩); ಬಲಗಾಲ್ಪಿಂದೆಸೆಗಾಗೆ ವಾಮಪದಮಂ ಮುಂದಿಟ್ಟು . . . ಕೋಮಲೆ ನಿಂದು (ರಾಜಶೇ. ೩-೯೮). **ಬಲಗಾಲು:** ಆವ ಬಿಂಕವೊ ಎಡಗಾಲ ಗದ್ದುಗೆಯ ಮೇಲೋವಿ ಮಡಿದು ಮತ್ತೆ ಕೆಳಗೆ ಹಾವುಗೆಯೊಳು ಪೆಂಡೆಯುದ ಬಲಗಾಲೂಱಿ ಉಲಿವಿಯೊಳೆಸೆದನಾ ರಾಯ (ಶರಶ. ೦-೬೦).
**ಬಲಗಾಲು ಮುಂತಾಗಿ ಹೊಗು**=(ಶುಭಲಕ್ಷಣವಾಗಿ) ಬಲಗಾಲನ್ನು ಮುಂದಿಟ್ಟು ಪ್ರವೇಶಿಸು: ನಾನವನ ಮನೆಯುಮಂ ಬಲಗಾಲು ಮುಂತಾಗಿ ಹೊಕ್ಕ ದಿನದಿಂದ ಬಲುಗೆಲಸವಲ್ಲದೆ ಯಿನಿಸು ತಲೆಯು ತುಱಿಸುವೊಡೆ ಹೊತ್ತಂ ಕನಸಿನಲ್ಲಿ ಕಾಣೆ (ಸಪ್ತುಕೌ. ೩-೦೯).
[ಬಲ$_1$ + ಕಾಲ್$_1$]

**ಬಲಗಾಲು** 'ಬಲಗಾಲ್' ನೋ.

**ಬಲಗಿ** 'ಬಲಿಗೆ' ನೋ.

**ಬಲಗುಂದು** (ಕ್ರಿ). ೧. ಶಕ್ತಿಯು ಕಡಮೆಯಾಗು; ಸಾಮರ್ಥ್ಯವು ಕುಗ್ಗು. ೨. ಶಕ್ತಿಯನ್ನು ಕಳೆದುಕೊಳ್ಳು; ಬಲಹೀನವಾಗು: ಅವನು ವಯೋಧರ್ಮದಿಂದ ಬಲಗುಂದಿದ್ದಾನೆ (ರೂಢಿ).
[ ಬಲ$_3$ + ಕುಂದು$_1$ ]

**ಬಲಗುಡು** (ಕ್ರಿ). (ಪೂಜಾವಿಧಿಯಲ್ಲಿ) ಬಲಭಾಗದಿಂದ ಸುತ್ತು; ಪ್ರದಕ್ಷಿಣೆ ಹಾಕು: ಸಡಗರದಲಿ ಕಂತುಸುತಸಂಪಾವಧು ಬಲಗುಡುತೆ ಕುಂಭಾಂಡಜೆ ಸಹಿತ ಪೊಡಮಟ್ಟರು ರುಕ್ಮಿಣಿ ಸತ್ಯಭಾಮೆ ಪೆಣ್ಗಡಣಕ್ಕೆ ರತಿದೇವಿಯರಿಗೆ (ವೋಹಕ. ೪೨-೬೩). [ಬಲ$_1$ + ಕುಡು$_1$ (<ಕೊಡು$_1$)]

**ಬಲಗುಣಿಕೆ** 'ಬಲುಗುಣಿಕೆ' ನೋ.

**ಬಲಗೂಡು** (ಕ್ರಿ). ಸೈನ್ಯದೊಂದಿಗೆ ಇರು; ಸೇನಾಸಮೇತವಾಗಿರು: ತೋರಿಯ ಮಣಿಪೀಠದಲಿ ಮಂಡಿಸಿ ರಾಯಭಾರಿಗಳ್ಕೈಯಿಂದೆ ಕರೆಸಿ ವಾರಿಜದಳನೇತ್ರ ಬಲಗೂಡಿ ಪುಸ್ಥಾನಭೇರಿಯ ದನಿಮಾಡಿಸಿದ (ವೋಹಕ.

೩೬-೨೬); ಶಿವಭಕ್ತಜನವ್ರಜಂ ವಿಜೃಂಭಿಸಿ ನೆಲಸಿರ್ದ ಪಟ್ಟಣಮಿದಿಂತಿ ದಱಿಕೆಯೊಳ್ ಬಲ [ಪಾಠಾಂ. ಳ]ಗೂಡಿ ಗಾಡಿ ರಂಜಿಸೆ ಪೊಸವಾಜಿಯೇಱಿ ವಿಹರಿಪ್ಪುದು ಬಲ್ಲತನಕ್ಕೆ ತಕ್ಕುದೇ. (ರಾಜಶೇ. ೦೩-೪). [ಬಲ$_3$ + ಕೂಡು$_1$]

**ಬಲಗೆಯ್**, ಬಲಕೆಯ್, ಬಲಗಯ್, ಬಲಗೈ (ನಾ). ೧. ಬಲಭಾಗದ ಕೈ; ದಕ್ಷಿಣ ಹಸ್ತ : ಬಲದ ಸುಟಿಪೆರಸಿದರ್ಚಿಯ ವಿಳಾಸದಿಂದಗ್ನಿರಾಜಿ ನೀರಾಜನದೊಳ್ ಬಲಗೆಯ್ಯೊಳ್ ಚಕ್ರಿಗೆ ದೋರ್ವಲವಿಜಯಮನೀವ ತೆಱದಿನೇಂ ಸೊಗಯಿಸಿತೋ (ಶಾಂತಿಪು. ೧೦-೪೨); ಇನಿರಸವಾಂತ ಕರ್ವಿಲ್ಲಿಗೆ ಭ್ರಮರ ಸಿಂಜಿನಿಗೈದೆಡದ ಹಸ್ತದಲಿ ದನಿಗೆಯ್ಯುತಿರೆ ಬಲಗೆಯ್ಯ ಪೂಸರ ದೊರ್ವ ವನಿತೆ ನಿಂದಿರ್ದಳುತ್ಸವದಿ (ಪೋಹಶ. ೫-೩೭). ೨. ಬಲವಾದ ಸಹಾಯ,-ನೆರವು : ಪಡಲಿಟ್ಟಂತೆಪೊಲಾಯ್ತು ಕೀಚಕಬಲಂ. . . ಪೆಱ ವೇಣ್ಗೊಲ್ದಂಗಮೇನಾಗದಿಂದುಡಿದತ್ತಾಗದೆ ಮತ್ಸ್ಯನೊಂದು ಬಲಗೆಯ್ಯೆಂದ ಕ್ಕಟಾ ಎಂಬುದಂ ನುಡಿಯಲ್ಕಾರ್ತರುಮಿಲ್ಲ ಪಾರದರದೊಳ್ ಸತ್ರಂಗ ಬಲ್ವನ್ನರಾರ್ (ಪಂಪಭಾ. ೯-೬೦). **ಬಲಕೆಯ್** : (೯). **ಬಲಗಯ್** : ೧. ಅಕ್ಕರಮಂ ಬಲಗಯ್ಯೊಳು[ಪಾಠಾಂ. ಗೈಯೊಳ್] ಲೆಕ್ಕಮನೆಡ ಗಯ್ಯೊಳಭವನನುಲೋಮವಿಲೋಮಕ್ಕೆ ನೆಲೆಯಾಗಿ ಮಾಡಿ ಜಗಕ್ಕಱಿಪಿದ ನೋಜೆಯಿಂದಮಾದಿಬ್ರಹ್ಮಂ (ಸಮಪು. ೨-೧೪). ಬಲಗೈ : ೧. ವಿವಿಧವಿಧ ನವನಾಟಕಮಹೋತ್ಸವಸಮುಚ್ಚಯವೆಸೆಯೆ ಏಕಾಂತವಿಭು ಬಲಗೈಯಲ ಗೆಡದ ಕರದಲಿ ಶಿರಂ ಮೆಱೆಯೆ (ಬಸವು. ೫೨-೪೦); ಬಲಗೈ ಬೆರಳನೊರ್ವ ನಿಗಿತ್ತ ಮೊಣ್ಣೆಯೊಂದುಲಿದು ಭಂಗಿಸರೆ ಕಂಡವರು (ಕಂಪವಿ. ೬-೦೮೪). ೨. ಭಕ್ತಿಯ ಬಲಗೈಯತುಳವಿರಕ್ತಿಯ ಮನೆ . . . ಎನಲಾ ಪರಶಕ್ತಿಯ ಮಣಿಭವನಮೆಸೆದುದು (ಉದ್ಭಟ. ೬-೯೩); ರಾಯರ ಬಲಗೈ ನಾನು . . . ಅವರು ಯಾವ ಕೆಲಸಕ್ಕೆಂದರೂ ಅದಕ್ಕೆ ತಯಾರಾಗಿರುತ್ತಿದ್ದೆ (ರಾಯಕ. ೬); ಆಚಾರ್ಯರು ಮಾಲವೀಯರ ಬಲಗೈಯಾಗಿದ್ದರು (ನನ್ನಜೊ. ೪೨).

ಬಲಗೈಯವನು=ಹೊಲೆಯರಲ್ಲಿ ಉತ್ತಮಜಾತಿಯವನು : ಊರ ಹೊರಗೆ ಬಲಗೈಯವನಳಿದರೆ ಹಾರುವನಿಂಗೂರೊಳಗಿಹಗೇತಕೆ ಮೀರಿದ ಸೂತಕ (ಭಕ್ತಿಸ. IV. ೦೦-೩). 'ಎಡಗೆಯ್' ಪರಾ. [ಬಲ$_1$ + ಕೆಯ್$_2$]

**ಬಲಗೆಲ** (ನಾ).= ಬಲಗಡೆ : ಬಲಗೆಲದೆಡೆಯೊಳು ಗರ್ಭಂ ನಿಲೆ ಪುರುಷಂ ವಾಮಭಾಗದಿಂ ಸ್ತ್ರೀಯೆರಡುಂ ಕೆಲದೊಳವಳ್ಗಳು ನಡುವಣ ನೆಲೆಯಿಂದಂ ಷಂಡರಾಗಿ ಪುಟ್ಟುವರೆಂದುಂ (ಮದಾತಿ. ೦-೬೪) ; ಆ ಶಚಿ ಮಾಯಾನಿದ್ರೆಯನಾ ಶಶಧರವದನೆಗಿತ್ತು ಬಲಗೆಲದೊಳ್ ಮಾಯಾಶಿಶುವ ನಿರಿಸಿ ಪಾಣಿಕುಶೇಶಯಯುಗದಿಂದೆ ನೆಗಪಿದಳ್ ಜಿನಶಿಶುವಂ (ವರ್ಧಪು. ೦೩-೯೩). [ಬಲ$_1$ + ಕೆಲ$_1$]

**ಬಲಗೈ** 'ಬಲಗೆಯ್' ನೋ.

**ಬಲಗೈಬಂಟ** (ನಾ). ತುಂಬ ಸಹಾಯವನ್ನು ನೀಡುವವನು ; ಅತ್ಯಂತ ಆಪ್ತನಾದವನು : ತಾನು ಚಕ್ರವರ್ತಿಯ ಬಲಗೈಬಂಟ ನೆಂದು ಸುಖಾರುವಿಗೆ ಹೆಮ್ಮೆ (ಪಂಚೀಸ. ೫೨) ; ವಿಲಿಂಗ್ಡನ್ನರು . . . ಕಾಂಗ್ರೆಸ್ಸಿನೊಡನೆ ಒಪ್ಪಂದಮಾಡಿ ಜನತೆಯ ಕೇಳಿಕೆಯನ್ನು ಮನ್ನಿಸಿ ದುದು ಬಲಗೈಬಂಟರಾದ ಹಲವಾರು ಸರಕಾರಿ ನೌಕರರಿಗೆ ಒಳಗಿಂದೊಳಗೆ ಚೇಳು ಕುಟುಕಿದಂತಾಗಿತ್ತು (ಕುರುಕಾ. ೦೩೨).

[ಬಲಗೈ (<ಬಲಗೆಯ್) + ಬಂಟ$_1$]

**ಬಲಗೊಳ್** 'ಬಲಂಗೊಳ್' ನೋ.

**ಬಲಗೊಳಿಸು$_1$** (ಕ್ರಿ). ಬಲಗಡೆಯಿಂದ ಸಂತ್ತು ಬರಂವಂತೆ ಮಾಡು ; ಪ್ರದಕ್ಷಿಣೆ ಹಾಕಿಸು : ಪೂಜೆ ಪೂರಿತವಾಗೆ ವಾದ್ಯಾಳಿ ನಿಂದುದಾ ರಾಜ ನಂಬಿಕೆಯ ಮುಂದಿಟ್ಟು ಓಜೆಯಿಂದರುಹನ ಬಲಗೊಳಿಸಿದನು ತನೂಜರ ತಾನೊಡನೆಯ್ದಿ (ಶಠಶ. ೩೯-೨೩).

[ಬಲಗೊಳ್ (<ಬಲಂಗೊಳ್) + – ಇಸು$_3$]

**ಬಲಗೊಳಿಸು$_2$** (ಕ್ರಿ). ಶಕ್ತಿಶಾಲಿಯಾಗುವಂತೆ ಮಾಡು ; ಪುಷ್ಟಿಗೊಳಿಸು : ವ್ಯಾಯಾಮವು ದೇಹವನ್ನು ಬಲಗೊಳಿಸುತ್ತದೆ (ರೂಢಿ).

[ಬಲ$_3$ + ಕೊಳ್$_1$ + – ಇಸು$_3$]

**ಬಲಗೊಳ್ಳು** 'ಬಲಂಗೊಳ್' ನೋ.

**ಬಲಗೋಲು**, ಬಲಗೋಲು (ನಾ). ೧. (ನೊಗ ಅಥವಾ ಗಾಡಿಯ) ಬಲಭಾಗ ; ದಕ್ಷಿಣಪಾರ್ಶ್ವ : ಜ್ಞಾನಚಕ್ಷುವೆಂಬ ನೊಗದ ಉಭಯದ ಕೊನೆಯಲ್ಲಿ ಎಡಗೋಲಿನಲ್ಲಿ ಕಾರಿಯ ಹೂಡಿ ಬಲಗೋಲಿನಲ್ಲಿ ಬೆಳ್ಳಿಯ ಹೂಡಿ ಅಡಿ ಕಿತ್ತುವಂತೆ ಥಾಯೆಂದು ಹೊಡೆಯಲಾಗಿ (ಸಕವ. III. ೯೮-೯೬); ಇನ್ನೊಂದು ಗಳಿಗೆ ಇನ್ನಾರ ನೆನೆಯಾಲಿ ಬಲಗೋಲಲ್ಲಿರುವ ಬಸವಣ್ಣನ ನೆನೆದಾರೆ ಬಂದಷ್ಟು ಪಾಪ ಪರಿಯಾರ (ಕಜಾಕಾ. ೫). ೨. (ನೊಗ ಅಥವಾ ಗಾಡಿಯ) ಬಲಭಾಗಕ್ಕೆ ಹೂಡುವ ಎತ್ತು : ಈ ಎತ್ತು ಬಲಗೋಲು (ರೂಢಿ). 'ಎಡಗೋಲು' ಪರಾ. **ಬಲಗೋಳು**: ೧. ಒಮ್ಮನದೊಳದ್ದಿದುವು ಹುಟ್ಟುಗಳು, ಉಪ್ಪುನೀರ್ ತುಳ್ಕಿ ತಳ್ಪೊಯ್ಯೆ, ಬಲಗೋಳು ಮುಂದಾಗಿ ನೂಂಕಿದುದು ನಾವೆ ಬಲಮೆಲ್ಲ, ಒಗ್ಗಿನಲಿ (ಶಾರಸಿ. ೦೬-೩೫೯). [ಬಲ$_1$ + ಕೋಲು$_1$ (<ಕೋಲ್$_1$)]

**ಬಲಗೋಳು** 'ಬಲಗೋಲು' ನೋ.

**ಬಲಘಟ್ಟನ** (ನಾ). ಸೇನೆಯ ತುಳಿತ,-ಪದಾಘಾತ : ಬಲಘಟ್ಟನದಿಂ ಪುಟ್ಟಿದ ಖಳಧೂಳಿಯಿನಾಗಸಂ ಮಲೀಮಸಮಾಗಲ್ ಸಲೆ ರಜನೀ ಶಂಕೆಯಿನುಜ್ಜ್ವಳಕರಮಂ ಕೆದಱಿತಿಲ್ಲ ರವಿ ದಿಕ್ಕುಳದೊಳ್ (ಪಾರ್ಶ್ವಪು.೦೦-೫೦). [ಸಂ.]

**ಬಲಚೋರಿ** (ನಾ). ಬಲಭಾಗದ ಎತ್ತು: ನೊಗದ ಬಲಗಡೆಗೆ ಕಟ್ಟುವ ಎತ್ತನ್ನು ಬಲಚೋರಿ ಎಂದೂ ಹೇಳುತ್ತಾರೆ (ರೂಢಿ). 'ಎಡಚೋರಿ' ಪರಾ. [ಬಲ$_1$ + ಚೋರಿ ?]

**ಬಲಜ**, ಬಳಜ (ನಾ). ೧. ಪಟ್ಟಣದ ಬಾಗಿಲು ; ಪುರದ್ವಾರ. ೨. ಹೊಲ ; ಕ್ಷೇತ್ರ. ೩. ಸುಂದರವಾದ ಆಕೃತಿ. **ಬಳಜ** : ೪. ಬಾಗಿಲು ; ದ್ವಾರ : ತಿಪುರಿ ಗುಡಿ ಗೂಡಾರಂ ಝಂಪಾಳಿ ಚೌಕಿಗೆ ಜಂಪೆ ಮಂಡವಿಗೆ ಬಳಜಂ ಬಾಗಿಲ್ವಾಡಂ ಬನಂ ಮೊಗಸಾಲೆಯೆಂಬಿವಱ ಪಸುರಿಂ ಕರ್ಪಿಂ ಕೆಂಪಿಂ ಬಸಂತನ ಬೀಡಿನಿಂತವಱ ಪೊಱವೀಡೆತ್ತಂ ಮಾಡಿತ್ತು ಕಣ್ಗನುರಾಗಮಂ (ಅನಂತಪು. ೦೩-೬೩). [ಸಂ.]

**ಬಲಜೆ** (ನಾ). ೧. ಚೆಲುವೆ ; ಸುಂದರಿ. ೨. ಭೂಮಿ. ೩. ಒಂದು ಜಾತಿಯ ಮಲ್ಲಿಗೆ. [ಸಂ. ಬಲಜಾ]

**ಬಲಜ್ಯಾಯ** (ನಾ). ೧. ಬಲಶಾಲಿಯಾದವನು ; ಬಲಿಷ್ಠ. ೨. ಬಲರಾಮನನ್ನು ಅಣ್ಣನನ್ನಾಗಿ ಉಳ್ಳವನು ; ಕೃಷ್ಣ. ೧, ೨ : ಶ್ರೀಯ ಮನಃಪ್ರಿಯಂ ಜನಿತಕಾಮನಿಳಾಪ್ರಿಯನಬ್ಜಶಂಖ ಲಕ್ಷ್ಮಾಯತಹಸ್ತನಾತ್ತವಿಜಯಂ ದ್ವಿಜರಾಜಸುಸೇವಿತಂ ಬಲಜ್ಯಾಯನ ಭೇದ್ಯಮನ್ತ್ರಕುಶಲಂ ಬಲಿಬನ್ಧನನನ್ತೆ ರಾಯನಾರಾಯಣನೆಪ್ಪುದುರ್ವ್ವಿ ನರಸಿಂಹ ನರೇನ್ದ್ರನ ಮನ್ತ್ರಿ ಬೂಚನ (ಎಕ. V. ಅರಸೀ. ೦೭೨-೨೮; 1163).

[ಸಂ. ಬಲಜ್ಯಾಯಸ್]

**ಬಲತಂಗಿ** 'ಮಲತಂಗಿ' ನೋ.

**ಬಲತಮ್ಮ** 'ಮಲತಮ್ಮ' ನೋ.

**ಬಲತಾಯಿ** 'ಮಲದಾಯ್' ನೋ.

**ಬಲದಲನ** (ನಾ). ೧. ಸಾಮರ್ಥ್ಯವನ್ನು ನಾಶಮಾಡಿದವನು. ೨. ಬಲನೆಂಬ ರಾಕ್ಷಸನನ್ನು ಕೊಂದವನು ; ಬಲಧ್ವಂಸಿ ; ಇಂದ್ರ. ೧, ೨ : ಕುಲಗೋತ್ರವೈರಿಯುಂ ಬಲದಲನನುಮೆಂದಮರಪತಿಯನೊಲ್ಲದೆ ಪೋದರ್ ಕುಲಗೋತ್ರವೀರಭಟರುಂ ಬಲನಾಥರುಮುಂತುಮಮರರೇ ನೋಡುವರೇ (ಜಗಪಿ. ೦೩-೭೯). [ಸಂ.]

**ಬಲದಾಯಿ** 'ಮಲದಾಯ್' ನೋ.

**ಬಲದೃಪ್ತ** (ನಾ). ಶೌರ್ಯದಿಂದ ಸೊಕ್ಕಿದವನು ; ಪರಾಕ್ರಮ ದಿಂದ ಅಹಂಕಾರವನ್ನು ಹೊಂದಿದವನು : ಬಲದೃಪ್ತರಾದ ಕ್ಷತ್ರಿಯರು ಒಬ್ಬೊಬ್ಬರಾಗಿ ಹತೋದ್ಯಮರೂ ಹತಾಶರೂ ಆದ ಬಳಿಕ . . . ಅರ್ಜುನನು . . . ಹೋಗುತ್ತಿರುವುದನ್ನು ನೋಡಿ ಎಲ್ಲರೂ ಗುಲ್ಲೆಬ್ಬಿಸಿದರು (ಛಿಕ್ಕಸೂ. ೬೦). [ಸಂ.]

**ಬಲದೇವ**, ಬಳದೇವ (ನಾ). ೧. ಕೃಷ್ಣನ ಅಣ್ಣ ; ಬಲರಾಮ : "ಬಲದೇವಃ, ಬಲಭದ್ರಃ . . . ಕಾಮಪಾಲಃ, ಹಲಾಯುಧಃ – ಈ ೧೮ ಬಲದೇವನ ಪೆಸರ್" (ಹಲಾಯು. ೬–೨೯). ೨. ಒಬ್ಬಾತನ ಹೆಸರು : ಬಲದೇವಾಚಾರ್ಯರ ಪಾಉಗ್ಗವಣ (ಎಕ. II (R). ೯೨; ಶಿವಯು ೬೪) ; ಚಲದಿಂ ತೇಜದಿನೊಳ್ಪಿನಿಂ . . . ಗಾಂಭೀರ್ಯ್ಯದಿಂ ಸೌರ್ಯ್ಯದಿಂ ಬಲದೇವಂಗೆ ಸಮಾನಮಪ್ಪರೊಳರೇ ಮತ್ತನ್ಯದಂಡಾಧಿಪರು (ಎಕ. II (R), ೦೭೪–೨೭ ; 1139). ೩. [ಜೈನ] ಅರುವತ್ತುಮೂರು ಶಲಾಕಾಪುರುಷರಲ್ಲಿ ಒಂದು ಗುಂಪು ; ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ ಮತ್ತು ಪದ್ಮ ಎಂದು ಒಂಬತ್ತು ಮಂದಿ ಬಲದೇವರು : ಬಲದೇವ ನಂತೆ ಪೆಣನಂ ಪೊತ್ತು ತೊಟಲ್ವ ಕ್ಷೇತ್ರಪಾಲರಿಂ . . . ಸೋಂಬಸಂ ಮೆಚ್ಚಿ ಬೇಟರ್ಗೆ ಪೋದ ಸೂಳೆಯಂತುಯ್ಯಲಾಡುವ ರಣದೇವತೆಯರಿಂ ದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೯ ಶೂದ್ರಕ) ; ಶ್ರೀವರ್ಮನುಂ ವಿಭೀಷಣನುಮೆಂಬ ಪೆಸರೊಳ್ ಬಲದೇವ ವಾಸುದೇವರೆನಿಸಿ ಬಳೆಯೆ (ಆದಿಪು. ೩–೩೦ ವ) ; ಬಲದೇವಂ ದುಃಖಾಗ್ರುಜ್ವಲನಾಹತನಾಗಿ ಪೊತ್ತು ತಮ್ಮನ ಪೆಣನಂ ಪಲವಾಡುತ್ತ ತೊಟಲ್ದಪೊನಲುಷ್ಯತರಗಹನದಲ್ಲಿ ಯೆಂಬುದನಱಿದಂ (ಬಂಹಂ. ೦೪–೯೮). **ಬಳದೇವ : ೨. ಬಳ** [ಹಾಕಾಂ. ಲ] ದೇವಂ ಭೀಮನ ಭುಜಬಳದೇವಂ ಮನವಮನಲೆಯೆ ಕುರುಪತಿಯಂ ಮಾರ್ಕೊಳೆ ಪರಿಭವಿಸಿದನೆಂದೆಂ. . ಲ್ಲದೆ ಮುಳಿದು ಕೆಳರ್ದು ಕಿರ್ಚಿರ್ದಾರ್ಗಳ್ (ಗದಾಯು. ೮–೪೬). ೩. ಬಳದೇವವಾಸುದೇವರನಿಱಿಪುದು ಗುಣದೊಳ್ಪು ರಾಮಲಕ್ಷ್ಮಣರಂ ಪೆಂಪಿಱಿಪುದು ಭೀಮಾರ್ಜುನರುಮನಿಱಿಪುದು ಮಲ್ಲಪನ ಪೊನ್ನಮಯ್ಯನ ಚರಿತಂ (ಅಜಿಪು. ೦–೩೩). [ಸಂ.]

**ಬಲದೊಡ್ಡಿ**, ಬಲಲೊಡ್ಡಿ (ನಾ). ಒಂದು ಬಗೆಯ ಸಸ್ಯ : (ಸಸ್ಯಕೋ. ೦೨೪). ಬಲಲೊಡ್ಡಿ : ಬಲಲೊಡ್ಡಿ, ಬುಡಿಗಾನೆ, ಲೊಡ್ಡುಗಿನ ಮರ (ವೈದ್ಯಕಿಂ. ೭೩–೦೪೯೦). [?]

**ಬಲದೋಳ್ತಲೆ** (ನಾ). ಬಲಭುಜ ; ಬಲಹೆಗಲು : ನನೆಯಂಬನೆಯ್ದೆ ನೆಲನಂ ಬಲದೋಳ್ತಲೆಯಲ್ಲಿ ತಾಳ್ದಿದಂ (ಕಬ್ಬಿಕಾ. ೪೬).

**ಬಲದೋಳ್ತಲೆಯಾಳ್** =ಬಲಭುಜದಂತಿರುವವನು ; ಆಪ್ತನಾದ ಬಂಟ : ಒಡನವನೊಡೆಯಂ ಬಲದೋಳ್ತಲೆಯಾಳಱಿದುದರ್ಕೆ ಸುರ್ಕಿ ಚಾಮುನೃಪಾಲನೊಳಿಂಪೆವೆರೆದಾಮುಟಿಯುಳ್ವೇಟ್ಬದೆಂದು ನಿರವಿಸಿ ಮುದಿಯಂ ಸೀಮೆಯುಟಿಯೆ ತಂದಿತ್ತಂ ರಾಮಯ ಲಿಂಗಾಖ್ಯಗಜ ಮನಶ್ವಪ್ರಜಮಂ (ಶಕವಿ. ೨–೮೨). [ಬಲ$_1$ + ತೋಳ್ + ತಲೆ$_1$]

**ಬಲಧ್ವಂಸಿ** (ನಾ). ಬಲನೆಂಬ ರಾಕ್ಷಸನನ್ನು ಸಂಹಾರಮಾಡಿದವನು ; ಇಂದ್ರ : ಸುರಸತಿಯು ಸಂತೈಸಿ . . . ಅರಮನೆಗೆ ಬಂದನು ಬಲಧ್ವಂಸಿ (ಕುಮ್ಮಾರ. ೮–೯೯). [ಸಂ. ಬಲಧ್ವಂಸಿನ್]

**ಬಲಪಕ್ಕ** 'ಬಲವಕ್ಕ' ನೋ.

**ಬಲಪಡಿಸು** (ಕ್ರಿ). ಹೆಚ್ಚು ಮಾಡು ; ವೃದ್ಧಿಗೊಳಿಸು : 'ಬಿಲ್ಹಾನ್' ಎಂಬ ಪೂರ್ವದ ಹಳಗನ್ನಡದ ಛಾಯೆಯುಳ್ಳ ರೂಪವೂ . . . ಕುತೂಹಲವನ್ನು ಬಲಪಡಿಸುತ್ತವೆ (ನಮೂಲೋ. ೦೫೯) ; ಅಪಥ್ಯವು ರೋಗ ವನ್ನು ಬಲಪಡಿಸುತ್ತದೆ (ರೂಢಿ). [ಬಲ$_3$ + ಪಡಿಸು]

**ಬಲಪ್ರದರ್ಶನ** (ನಾ). ಶಕ್ತಿಯನ್ನು ತೋರ್ಪಡಿಸುವಿಕೆ : ಸಾಮರ್ಥ್ಯ ವನ್ನು ಪ್ರದರ್ಶಿಸುವಿಕೆ : ಇಂದು ಅವರ ಸಂಘದಲ್ಲಿ ಬಲಪ್ರದರ್ಶನದ ಸ್ಪರ್ಧೆಯನ್ನು ಏರ್ಪಡಿಸಿದ್ದಾರೆ (ರೂಢಿ). [ಸಂ.]

**ಬಲಪ್ರಯೋಗ** (ನಾ). ೧. ಒತ್ತಾಯ ; ನಿರ್ಬಂಧ : ಒಂಟಿಕೋಣೆಗೆ ಹೋಗುವುದಿಲ್ಲವೆಂದು ವಾಸಿಲ್ಕೇವ್ ಹಠಮಾಡಿದನು. ಕಾವಲುಗಾರರು ಬಲಪ್ರಯೋಗ ಮಾಡಬೇಕಾಯಿತು (ತ್ರಿಪರು. ೨೦೬). ೨. ಒತ್ತಡ ; ಒತ್ತರ : ವಿದ್ಯುತ್ಪ್ರವಾಹವು ಕಾಂತದ ಮೇಲೆ ಬಲಪ್ರಯೋಗ ಮಾಡುವುದನ್ನು ನೋಡಿದರೆ ಆ ಪ್ರವಾಹಕ್ಕೆ ಸಂಬಂಧಿಸಿದ ಕಾಂತಕ್ಷೇತ್ರವಿದೆಯೆಂದು ಕಂಡು ಬರುವುದು (ಭೌತಶಾ. ೩೩೦). [ಸಂ.]

**ಬಲಬವರಿ** (ನಾ). ಬಲಭಾಗಕ್ಕೆ ತಿರುಗುವ ಒಂದು ಪಟ್ಟು : ತಿವಿದನಣ ಸಿನಲೂಱಿ ಮೊನೆಯುಲಿ ಸವಡಿಯಾನೆಯನೆತ್ತಿದನು ಬಲಬವರಿಯೆಡಬವರಿ ಯಲಿ ತಡೆಗಾಲ್ವೊಯ್ದನಾ ಭೀಮ (ಕುಮ್ಮಾಗ. ೦–೩೬). [ಬಲ$_1$+ಬವರಿ]

**ಬಲಭಂಜನ** (ನಾ). =ಬಲಧ್ವಂಸಿ : 'ಬಲಭಂಜನಾರಿ' ಪರಾ. [ಸಂ.]

**ಬಲಭಂಜನಾರಿ** (ನಾ). ಇಂದ್ರನ ವೈರಿ ; ಇಂದ್ರಜಿತು : ಬಲಭಂಜನಾರಿ [ಹಾಕಾಂ. ಜಂಬಾರಿಜಿತು, ಜಂಭನಾರಿ] ಮಹೀಲತಾಂಗಿಯ ಮಗಳ ರೂಪಿನ ಕಪಟಕಾಮಿನಿಯ ಬಾಳಿನಲಿ ಬಱಿಕೈದು ಬವರಕೆ ತಾಳಲಾಱದೆ ಹನುಮನಲಿ ಸೇನಾಳಿ ಸಹಿತೋಸರಿಸಿ ನಿಂದನು ಪುರದ ಬಾಹೆಯಲಿ (ತೊರರಾ. ೬–೪೨–೦). [ಸಂ.]

**ಬಲಭದ್ರಿಕೆ** (ನಾ). ಒಂದು ಬಗೆಯ ಔಷಧೀಸಸ್ಯ : "ವಾರ್ಷಿಕಂ, ತ್ರಾಯಮಾಣಾ, ತಾಯಂತ್ರೀ, ಬಲಭದ್ರಿಕಾ – ೪ ನೀರಾಮೆಬಳ್ಳಿ" (ಸಿದ್ಧಾಂತಿ. ೦೪೬). [ಸಂ. ಬಲಭದ್ರಿಕಾ]

**ಬಲಭರ** (ನಾ). ೧. ಸೈನ್ಯದ ಹೆಚ್ಚಳ ; ಸೇನೆಯ ಆಧಿಕ್ಯ : ಬಲಭರ ಸಂಕ್ಷೋಭಭಯಂದಳೆದಂಬರಕೊಗೆದ ನದಿಗಳೆನೆ ನಿಖಿಲದಿಶಾಕುಲಮಂ ಬಾಸಣಿಸುಗುಮುತ್ಪಲಬಾಂಧವವಧವಳಮೆನಿಸಿದೀ ಧ್ವಜಪಟಲಂ (ಕಾದಂಪೂ. ೬೦೦). ೨. ಸೈನ್ಯದ ಭಾರ : ಬಲಭರದಿಂ ನೆಲಂ ಕುಸಿಯೆ ಶೇಷನ ಪೆರ್ವೆಡೆ ತರ್ಗಿ ಕಂಠಕಂಧರದೊಳಗಟ್ಟಡಂಗಿದುದು (ಪುಷ್ಪಪು. ೫–೩೬). [ಸಂ.]

**ಬಲಭೇದಿ** (ಗು). ೧. ನಿಶ್ಶಕ್ತಿಗೆ ಕಾರಣವಾದ. (ನಾ). ೨.=ಬಲಧ್ವಂಸಿ. ೧, ೨ : ಉಳಿ ಗಳೆ ವಿಷಾದವನುಸಿರ ವೇಗವನಂತೆ, ಮೇಲೆ ಮುಂಬರಿವುದದು ಬೇಡವಿನ್ನು ಗುರುಕಂಪ ನಿನಗೇಕೆ ; ಬಲಭೇದಿ ಜೃಂಭಿತವು ? ಇಲ್ಲಿ ಬಾರಾ ವತ್ಸ ! ನನ್ನ ಜತೆಗೆ (ಧನ್ವಾಲೋ. ೯೯). [ಸಂ. ಬಲಭೇದಿನ್]

**ಬಲಮತ್ತ** (ಗು). ೧. ಪರಾಕ್ರಮದಿಂದ ಕೊಬ್ಬಿದ ; ಸಾಮರ್ಥ್ಯ ದಿಂದ ಸೊಕ್ಕಿದ : ಬಲಮತ್ತ ವ್ಯಕ್ತಿ ಏನು ಮಾಡಲೂ ಹೇಸುವುದಿಲ್ಲ (ರೂಢಿ). (ನಾ). ೨. ಪರಾಕ್ರಮದಿಂದ ಕೊಬ್ಬಿದ ವ್ಯಕ್ತಿ ; ಸಾಮರ್ಥ್ಯದಿಂದ ಸೊಕ್ಕಿದ ವ್ಯಕ್ತಿ : ಅವನು ಕಾಮರೂಪಿ ಯಾಗಿ ಆಕಾಶದಲ್ಲಿ ಸಂಚರಿಸುತ್ತ ಬಲಮತ್ತನಾಗಿ ದೈತ್ಯರನ್ನೂ ದೇವತೆ ಗಳನ್ನೂ ಮುತ್ತಿ ಅವರ ರತ್ನಾದಿ ಐಶ್ವರ್ಯಗಳನ್ನು ಹೊತ್ತು ತರುತ್ತಿದ್ದನು (ವಚಭಾ. ೪೦೪). [ಸಂ.]

**ಬಲಮಥನ** (ನಾ). = ಬಲಧ್ವಂಸಿ : ಬಲಮಥನ ಹೊಗಳಲು ಹರುಷದುಬ್ಬಿನಲನುಜನೊಡಗೂಡಿ ಪೃಥುಳಬಲ ತೊರವೆಯ ಹಿರಣ್ಯಕ ಮಥನ ತಿರುಗಿದನಿತ್ತಲಧಿಕಪ್ರಥಿತ ವಿಜಯಾಭ್ಯುದಯದೇಳಿಗೆಯಿಂದ ಪಾಳಯಕೆ (ತೊರರಾ. ೬–೩೪–೬೦). [ಸಂ.]

**ಬಲಮರ್ದು**, ಬಳಮದ್ದು, ಬಳಮರ್ದು (ನಾ). ೧. ಶ್ರೇಷ್ಠವಾದ ಮದ್ದು ; ಉತ್ತಮವಾದ ಔಷಧ : "ಬಲಮರ್ದನಲಂಕದೌಷಧಂ [ಹಾಕಾಂ. ಬಲಮದಮರ್ದನಲಂಕದೌಷಧಂ] ತಾನಕ್ಕುಂ" (ರನ್ನಕಂ. ೪) ;

"ಬಳಮರ್ದು, ಬಲಮರ್ದು – ಅಂಕದೌಷಧ" (ಶಮದ. ಶಂ. ೨).

**ಬಳಮದ್ದು** : ೧. "ಬಳಮದ್ದೆನಲ್ಕಂಕ[ಪಾಠಾಂ. ಅಮರ್ದನಲಂಕ, ಬಳಮರ್ದನಲಂಕ, ಬಳವರ್ದನಲಂಕ] ದೌಷಧಂ" (ಶಬ್ದಕೈ. ೮೩). ಬಳಮರ್ದು : ೧. "ಬಳಮರ್ದನಲ್ಕಂಕದೌಷಧಮೆಂದೆನಿಕು ಸಂತತಂ" (ಶಬ್ದಮಂ. ೪೦). ೨. ಅತಿಯಾದ ಮತ್ತನ್ನು ಬರಿಸುವಂಥ ದ್ರವ್ಯ; ಉಗ್ರವಾದ ಮಾದಕದ್ರವ್ಯ : ಪರಿಮಳಲೋಭದಿಂ ಮುಸುಱಿ ಮುತ್ತುವ ತುಂಬಿಗಳೊಳ್ಗುರುಳ್ಗಳೊಳ್ ಬೆರಸುವಿನಂ ಮಗುಳ್ಚುವ ದಳಂಗಳೊಳಂ ನಱುಸುಯ್ಯ ಕೆಂಪುಗಳ್ ಬೆರಸುವಿನಂ ಕದಕ್ಕದಿಸಿ ಪೆರ್ಮೊಲೆಗಳ್ ಬಳಮರ್ದನಂಗಜಂಗರೆವವೊಲೀಳೆ ಸಾಂದರೆವರಿಂಬಳವಟ್ಟಿರೆ ಘಟ್ಟಿವಳ್ತಿಯರ್ (ಮಲ್ಲಿಪು. ೨–೬೦) ; ಕಡೆಗಣ್ಣೊಂಟಣಿವಾತು ದೂದವಿ . . . ತನ್ನ ಬರ್ದುಬಳಮರ್ದೊಪ್ಪಾಯಿಲಂ ಕೂರ್ಪೆ (ಲೀಲಾವ. ೨–೯೬). 'ಬಳಮರ್ದಿಕ್ಕು', 'ಬಳಮರ್ದುಕಾಱ' ಪರಾ. [ಬಲ$_3$ + ಮರ್ದು]

**ಬಲಮಾಪಕ** (ನಾ). [ಭೌತವಿ] (ಪ್ರಾಣಿ, ಯಂತ್ರ, ಯಾಂತ್ರಿಕಬಲ ಮೊದಲಾದುವುಗಳಿಂದ ವೆಚ್ಚವಾದ) ಶಕ್ತಿಯನ್ನು ಅಳೆಯುವ ಒಂದು ಸಲಕರಣೆ ; ಶಕ್ತಿಮಾಪಕ : (D— -meter· ಪಾಂಡಿ. ೩೩). [ಸಂ.]

**ಬಲಮುರಿ** (ನಾ). ೧. ಬಲಭಾಗಕ್ಕೆ ತಿರುಗಿದುದು ; ಬಲಕ್ಕೆ ಹೊರಳಿದುದು ; ಬಲಸುತ್ತು : ಗರುವರ ಚಿತ್ರವನೊಲಿಸಿಕೊಂಬ ಬಲೆಯ ವರಗೃಹವಾ ಬಲಮುರಿಯು ಸುರುಚಿರಶಂಖವ ಹೂಳಿದ ಭೂಮಿಯ ಸರಿ ಕೇಳು (ವೀಬಸಂ. ೦೦–೬೦) ; ಒಬ್ಬರೊಬ್ಬರು ಬಲಮುರಿಯೆಡಮುರಿಯಾಗಿ ಸಬ್ಬವದೊಳು ಚಾರಿವರಿದು ಇಬ್ಬರ್ರು ಸುಳಿದಾಡಿ ನಿಂದಳೊಬ್ಬಳು ಹಿಂದೆವೊಬ್ಬಳಾಡಿದಳು ರಂಗದೊಳು (ಭರತ. ೦೨–೬೪). ೨. ಬಲಗಡೆಗೆ ಬರುವಂತೆ ಬಿಟ್ಟ (ಸೊಂಟಪಟ್ಟಿಯ) ಚುಂಗು : ವರನಿಭಾರಿಯ ಬಳವಿನಲಿ ಬಲಮುರಿಯ ಬಿಗಿದನು ಪದಮುಖಕೆ ಮುಂಜೆಱಗ ಬಿಟ್ಟನು ಬಿಗಿದ ಬದ್ದುಗೆದಾರಗೊಂಡೆಯವ (ಕುವ್ಯಾಕ. ೮–೦೭). ೩. ನದಿಯ ಬಲಗಡೆಗೆ ಬಾಗಿರುವ ಸ್ಥಳ ; ♦ ಕೊಡಗಿನ ವಿರಾಜಪೇಟೆತಾಲ್ಲೂಕಿನಲ್ಲಿರುವ ಒಂದು ಪವಿತ್ರಕ್ಷೇತ್ರ : ಕಾವೇರಿ . . . ಕನಕೆಯೊಂಬಾ ನದಿಯಿದಿರಾಗಿಯೆ ಬಂದು ವಿನಯದೆ ಭಾಗಮಂಡಲದೆ ಘನಸಂತೋಷದೆ ಸಂಗತೆಯಾಗೆ ಕಾನನದೆ ಬಂದಳು ಬಲಮುರಿಗೆ (ಕಂಪವಿ. ೩–೪೦). ೪. ಒಂದು ಬಗೆಯ ಸಸ್ಯ ಮತ್ತು ಬಲಕ್ಕೆ ತಿರುಗಿಕೊಂಡಿರುವಂತೆ ಬಿಡುವ ಅದರ ಕಾಯಿ : "ಪಾನೀಯವಲ್ಲೀ — ಬಲಮುರಿ, ಚಿತ್ರಮೂಲ" (ಓಷಂ. ೯೬) ; ಕಾಡರಿಸಿನ, ಮುಸುಕುಜೋಳದ ಬೇರು, ಬಲಮುರಿಯ ಕಾಯಿ . . . ಹುಳಿ, ಎಣ್ಣೆ ಕೂಡಿ ಭರಣಿಯೊಳಗೆ ಹಾಕಿಸಿ ಎಲಚಿಸೌದೆಯಿಂದ ಅಡುವುದು (ಶಿಪ್ಪಿ. ೯೮) ; ಕಾಯಿ ಐದುಮುರಿಯಾಗಿ ಬಲಕ್ಕೆ ಸುತ್ತಿರುತ್ತದೆ, ಇದರಿಂದಲೇ ಬಲಮುರಿ ಎಂಬ ಹೆಸರು . . . ಸಂಸ್ಕೃತದಲ್ಲಿ ಮೃಗಶೃಂಗ ಎನ್ನುತ್ತಾರೆ (ಹಸುಹೂ. ೩೯).

**ಬಲಮುರಿಯ ಶಂಖ** = ಬಲಮುರಿಶಂಖ : ಬಲಮುರಿಯ ಶಂಖಗಳ ಗಂಧದ ಬಲುಹೊಱೆಯ . . . ಹೇಮಘಟಸಂತತಿಯನೊಟ್ಟಿದರು (ಕುವ್ಯಾಸ. ೩–೪೭). [ಬಲ$_1$ + ಮುರಿ$_3$ (<ಮುರಿವು)]

**ಬಲಮುರಿಪೊಕ್ಕುೞ್** (ನಾ). ಬಲಸುಳಿಯಿರುವ ಹೊಕ್ಕುಳು,–ನಾಭಿ: ಈ ಬಲಮುರಿಪೊಕ್ಕುೞ್ಗೊಳನೆನೆಸೆ ತನ್ನೊಳ್ಪೆಳೆದ ತಾವರೆಯಿಂ ನಾಲ್ಗೊಗನಂ ನಿರ್ಮಿಸಿ ಜಗತ್ಕಾರಣತ್ವಮಂ ನೆಲೆಗೆಯ್ವುದು (ಚಕವಂ. ೦೨೭–೦). [ಬಲಮುರಿ + ಪೊಕ್ಕುೞ್]

**ಬಲಮುರಿಶಂಖ** (ನಾ). ಬಲಭಾಗಕ್ಕೆ ತಿರುಗಿದಂತಿರುವ ಸುಳಿಗಳುಳ್ಳ ಶಂಖ; ♦ ಅಪೂರ್ವವಾಗಿ ದೊರೆಯುವ ಇಂಥ ಶಂಖದಿಂದ ಅದೃಷ್ಟ ಉಂಟಾಗುವುದೆಂಬ ನಂಬಿಕೆಯಿದೆ : ಬಲಮುರಿಶಂಖ [ಪಾಠಾಂ. ಮುರಿಯ ಶಂಖ] ಧಿಗಿಲುಭುಗಿಲೆಂದು ಝುಂಕರಿಸಿತೇದು ಕಿಱಿಯೊಳಗಣ ಗುಳ್ಳೆ ಕೀಚುಕೀಚೆಂದಂತೆ (ಶಸವ. ೩೩–೨೩). [ಬಲಮುರಿ + ಶಂಖ]

**ಬಲಮುರಿಸಂಕು** (ನಾ). = ಬಲಮುರಿಶಂಖ: ಬೆಳ್ದಿಂಗಳಂತೆ ಪಸರಿಪ ನಗೆಯುಂ ಬಲಮುರಿಸಂಕಿನಂತೆ ಗುಜ್ಜುಗೊಂಡು ರಂಜಿಪ ಕೊರಲುಂ . . . ಅಟ್ಟಜಮಂ ಪುಟ್ಟಿಪವು (ಅದ್ಭುತ. ೮–೦೮). [ಬಲಮುರಿ + ಸಂಕು$_1$ (<ಸಂ.ಶ$_1$)]

**ಬಲಮೆಂಡಿಗಮುಂಡ** (ನಾ). ಒಬ್ಬಾತನ ಹೆಸರು: ಬಲಮೆಣ್ಡಿಗಮುಣ್ಡನ್ ಅಱಿಗೊಳೆ (ಪ್ರಾಲಿಂ. ೧೯೨೭, ೯೯–೭ ; 10 ನೆಯ ಶತ). [ಬಲಮೆಂಡಿ$_?$ + ಗಮುಂಡ$_9$ (<ಗಾವುಂಡ)]

**ಬಲಯುತ, ಬಳಯುತ** (ಗು). ೧. ಶಕ್ತಿಶಾಲಿಯಾದ; ಸಮರ್ಥನಾದ: ಅತಿರಥನಾತಂ ಗಡ ಬಲಯುತ ಸಮರಥನೆನ್ನೊಳಧಿಕಬಲವಂತಂ ಮಾರುತಿ ಗಡ ಮಹಾರಥಂ ಮಾರುತಿಯುಂ ತದ್ರಥದ ಗಾಲಿಗಳ್ಗೊಡ್ಡಿದುವೇ (ಗದಾಯು. ೩–೩೩); ಬಲಯುತ ಶ್ರೀಕಾಂತನಾಜ್ಞೆಯು ನಿಲೆ ನಿಖಿಲಭೂಪರ ಮುಕುಟದಲಿ . . . ತನ್ನೊಂದು ಚೆಲುವಿಕೆ ನಿಲೆ ವಧೂಹೃದಯದೊಳು ನಿಂದನು ಚಕ್ರಿ ರಾಜ್ಯದಲಿ (ಸಾಳ್ವಭಾ. ೩೭–೩೨). (ನಾ). ೨. ಶಕ್ತಿಶಾಲಿಯಾದವನು; ಸಮರ್ಥ : ಬಲಯುತನಾದ ಪಗೆವಂ ಕೊಲಿಸಾಱಂ ಕಾಳಿಯಂ ಗಡಿನ್ನಾರ್ಪವರಾರ್ ಸಲೆ ಕೊಲಬಾರದ ಪಗೆಯಂ ಗೆಲಬಾರದದೆಂದು ಮೆಂತುಮೆಂಬದು ಪದನೇ (ಅರ್ಜನೇ. ೮–೫೨). ೩. ಬಲರಾಮನನ್ನು ಕೂಡಿಕೊಂಡಿರುವವನು ; ಬಲಭದ್ರಸಹಿತನಾದವನು. ೨, ೩: ಹರಿಯಂತೆ ಬಲಯುತಂ ಶಿವನಂತೆ ರಾಜಶೇಖರಂ ... ಅಮೃತಾರ್ಚಿಯಂತೆ ವಿಸ್ತರಿತಕುವಲಯನೆಂದು ಧರ್ಮಜನ ಧರೆ ಪೊಗಳುತಿರೆ (ಕೃಪಿಭಾ. ೨–೦೩). **ಬಳಯುತ** : ೨. ಚಟ್ಟಸಾಮಂತಮಲ್ಲಂಗನುಜಂ ತಾಂ ಗೋವಿದೇವನಧಿಕ ಬಳಯುತಂ ವಿಷ್ಣುಲೋಕೈಕನಾಥಂ ತನಯಂ ತಾನಾಗೆ ಚೆಲುವಂ ಪಡದುದು ವಿಭವಂ ಮಂಗಳ ಶ್ರೀವಿಳಾಸಂ (ಎಕ. XVI. ಶಕ್ಕಪಾ. ೬೨–೩೩; 1242); ಬಳಯುತನಪ್ಪ ಚೇರಮನೃಪಾಳನ ನಿರ್ಮಳಕೀರ್ತಿ ಲೋಕಮಂ ಬಳಸಿ ದಿಶಾಗಜಂಗಳನಿತಂ ಬಿಳಿದಾಗಿರೆ ಕಂಡು (ಕ್ರಿಪುರಿ. ೩–೮) [ಸಂ.]

**ಬಲರಕ್ಕಸಿ** 'ಬಲರಾಕ್ಷಸಿ' ನೋ.

**ಬಲರಾಕ್ಷಸ** 'ಬಲರಾಕ್ಷಸಿ' ನೋ.

**ಬಲರಾಕ್ಷಸಿ**, ಬಲರಕ್ಕಸಿ, ಬಲರಾಕ್ಷಸ, ಬಲರಾಕ್ಷಿ, ಬಲಾರಾಕ್ಷಸಿ, ಬಲಾರಾಕ್ಷಿ, ಬಲ್ಲರಕ್ಕಸಿ, ಬಾಲರಾಕ್ಷಸ, ಬಾಲರಾಕ್ಷಸಿ, ಬಾಳರಾಕ್ಷ (ನಾ). ಒಂದು ಬಗೆಯ ಸುವಾಸನೆಯ ಗಡ್ಡೆಗಳನ್ನು ಬಿಡುವ ಕುರುಚಲು ಗಿಡ : "ರಾಕ್ಷಸೀ . . . ಗಣಹಾಸಕಃ— ೬ ಕರೀಕಚೋರ, ರಾಕ್ಷಸೀ ಗಡ್ಡೆ" (ಸಿದ್ಧಾಂಶಿ./ ೦೪೦). **ಬಲರಕ್ಕಸಿ** : ಬಲರಕ್ಕ ಪರಮುಟಿಬೇರು (ಪ್ರಾಶಿಗ. ೬೦–೦೨೦೪). **ಬಲರಾಕ್ಷಸ**: ಬಲರಾಕ್ಷಸಗಡ್ಡೆ, ಕಳ್ಳಂಗಡಲೆ . . . ನಾವಲಗೆಡ್ಡೆ ಇವಿಷ್ಟು ಪ್ರತ್ಯೇಕವಾಗಿ ಹತ್ತು ಪಲಂಗಳು . . . ತೂಕ ಸೇರಿಸಿ (ಸಕವೈ. ೭೨). **ಬಲರಾಕ್ಷಿ** : (ಸಸ್ಯಶಿ. ೯). **ಬಲಾರಾಕ್ಷಸಿ** : (೬). **ಬಲಾರಾಕ್ಷಿ** : (ಪ್ರಾಶಿಗ. ೩–೭೯). **ಬಲ್ಲರಕ್ಕಸಿ** : ತಿಲವಿಷ್ಣು . . . ಕರಿಬೇವು, ಬಲ್ಲರಕ್ಕಸಿಗಡ್ಡೆ, ರಾಸ್ನೆ . . . ಇವೆಲ್ಲವಂ ಚೂರ್ಣವಂ ಮಾಡಿ (ಸಕವೈ. ೨೩೩). **ಬಾಲರಾಕ್ಷಸ** : ಅಂಟುತೊಗರಿ, ಬಾಲರಾಕ್ಷಸ (ಸಸ್ಯಶಿ. ೦೦೨). **ಬಾಲರಾಕ್ಷಸಿ**: ಬಲರಕ್ಕಸಿ . . . ಬಾಲರಾಕ್ಷಸಿ (ಸಸ್ಯಶಿ. ೦೦೨). **ಬಾಳರಾಕ್ಷ**: ಮಾನಕ, ಕರಿಮುಣಸುಂಗಿ, ಬಲರಕ್ಕಸಿ, ಬಾಳರಾಕ್ಷ (ಸಸ್ಯಶಿ. ೬).

[?. / ತೆಲು. ಬಲುರಕ್ಕಸಿ, ಬಲುರಕ್ಕಸ. ♦ ಇದು 'ಬಾಳ = ಲಾಮಂಚ' ಎಂಬುದಕ್ಕೆ ಸಂಬಂಧಪಟ್ಟಿರಬಹುದು]

**ಬಲರಾಕ್ಷಿ** 'ಬಲರಾಕ್ಷಸಿ' ನೋ.

**ಬಲರಾಸಿ** (ನಾ). ಸೇನಾಸಮೂಹ; ಸೇನೆಯ ಗುಂಪು: ಪಱದುದೀ

ಬಲರಾಶಿ ಗಾಳಿಯ ಹೊರಳಿಗೊಡ್ಡಿದ ಹೊಟ್ಟು ಹಾಱುವುದರಿಂದೆ (ಕುವ್ಯಾದ್ರೋ. ೧೪-೨೭). [<ಸಂ. ಬಲರಾಶಿ]

**ಬಲರಿಪು** (ನಾ). ಬಲನೆಂಬ ರಾಕ್ಷಸನಿಗೆ ಶತ್ರುವಾದವನು; ಇಂದ್ರ: ಬಲರಿಪು ಪೊಗಳುತ್ತಿರೆ ಚಿಱುವುಲಿಯೊಂದಂಗವುರವಿನುತ ಗಣಪದವಂ ಕೊಟ್ಟು (ತ್ರಿಶೂ. ೩೩-೧) ; ಬಲರಿಪು ತನ್ನದೊಂದು ಬಲಗರ್ವದಗುರ್ವಿನೊಳೆಮ್ಮೆಱಂಕೆಯಂ ಕುಲಿಶದಿನೊರ್ಮೆ ಖಂಡಿಸಿದಂ (ಕಾವ್ಯಸಾ. ೯೭೪).

[ಸಂ.]

**ಬಲರೇಖೆ** (ನಾ). [ಭೌತವಿ] "ಬಲಪ್ರಯೋಗದ ದಿಕ್ಕನ್ನು ತೋರಿಸುವ ರೇಖೆ" (Line of force. ಇಂಕಪ): ಒಂದು ಏಕಧ್ರುವವನ್ನು ಕಾಂತದ ಉತ್ತರಧ್ರುವದ ಬಳಿ ಬಿಟ್ಟರೆ ಅದು ಕಾಂತದ ಬಲವನ್ನನುಸರಿಸಿ ಚಲಿಸುತ್ತಾ ದಕ್ಷಿಣಧ್ರುವವನ್ನು ಬಂದು ಸೇರುವುದು. ಹಾಗೆ ಬರುವಾಗ ಅದು ಅನುಸರಿಸುವ ಮಾರ್ಗಕ್ಕೆ ಬಲರೇಖೆ (Line of force) ಎಂದು ಹೆಸರು (ಭೌತವಿ. ೩೦೩). [ಸಂ. ಬಲರೇಖಾ]

**ಬಲಲೊಡ್ಡಿ** 'ಬಲದೊಡ್ಡಿ' ನೋ.

**ಬಲವಂಕ** 'ಬಲವಕ್ಕ' ನೋ.

**ಬಲವಂತ,** ಬಳವಂತ (ಗು). ೧. ಶಕ್ತಿಶಾಲಿಯಾದ; ಬಲಿಷ್ಠ: ಬಲವಂತ ಪುತ್ರನಂದಿಯ ತಲೆಯಂ ರಿಪುಬಲಮನೆಯ್ದೆ ತಱಿದಿಕ್ಕಿ ಮಹೀವಳಯ ಮನುಱೆ ಬೆಳಗುತೆ ಶಿವನಿಳಯದೊಳಂ ಪೊಕ್ಕು ಚಕ್ರವಡಗಿತ್ತಾಗಳ್ (ತ್ರಿಶೂ. ೩೨-೭೪); ಘಳಿಲನಲಗಂ ಕಿತ್ತು ಪುಟನೆಗೆದು ಲಾಗಿಸುತ ಪುಲಿಯ ಬೆಂಗಡೆಗೆಯ್ದಿ ಇಱಿದು ಕೆಡಪಿದನೋರ್ವ ಬಲವಂತ ಬೇಡನಾಗಳು (ರಾಘಕ. ೦೭-೭೩). (ನಾ). ೨. ಶಕ್ತಿಶಾಲಿಯಾದವನು ; ಸಮರ್ಥನಾದವನು : "ಬಲ್ಲಿದಂ ಬಲವಂತನಂ ಸಳನೆನಿಕ್ಕು" (ಮಂಗರಾ. ೭೦-೧೯); ಅತಿರಥನಾತಂ ಗಡ ಬಲಯುತ ಸಮರಥನೆನ್ನೊಳಧಿಕಬಲವಂತಂ ಮಾರುತಿ ಗಡ ಮಹಾರಥಂ ಮಾರುತಿಯುಂ ತದ್ರಥದ ಗಾಲಿಗಳ್ದೊಡ್ಡಿದುವೇ (ಗದಾಯು. ೩-೫೫); ಬಲವಂತನ ಪಗೆವಂ ಮೇಲೆತ್ತಿ ಬರೆ ವಸ್ತುವಾಹನಂಗಳನಿತ್ತಾತನಂ ಸಂತೈಸುವುದು ಸಂಧಾನಮೆಂಬುದಕ್ಕುಂ (ಶಂಕಶಂ. ೨೧೯-೦೨); ಎಂಥಾ ಬಲವಂತನೋ ಕುಂತಿಯ ಸಂಜಾತನೋ (ಕುರಂಡ. ೦-೨೦೩ ಪಲ್ಲವಿ). ೩. ಐಶ್ವರ್ಯವಂತ ; ಶ್ರೀಮಂತ : ನೆಲ ಬಲವಂತನಿಗೆ, ಕುಲ ನೇಮವಂತನಿಗೆ (ಗಾದೆ). ೪. ಶಕ್ತಿಶಾಲಿಯಾದುದು; ಬಲಿಷ್ಠವಾದುದು : ಶಾಂತಿಕಗುರು ಪಾದಾಂಬುರುಹಾಂತಿಕದೊಳ್ ಜಾತರೂಪಧರರಾಗಿ ಶಮಸ್ವಾಂತಕ್ಕೆ ಘಾತಿಗಳ್ ಬಲವಂತಗಳ್ ಕಿಡೆ ಜಿನತ್ವಮುಮಂ ಗಾಯ್ತಿಗಳ್ (ಶಾಂತಿಪು. ೯-೭೦) ; ಬಲವಂತನಪ್ಪುದೊಂದು ಸಿಂಹಮಂ ಮೊಲಂ ಕೊಂದುದು (ಶಂಕಶಂ. ೯೭-೯). ೫. ಬಲಾತ್ಕಾರ ; ಒತ್ತಾಯ ; ನಿರ್ಬಂಧ : ನೀನು . . . ಸಕಲಕಲೆಗಳು ಒಂದೇ ಬಳಿಯಲ್ಲಿ ಸೇರಿದೆಯೆಂಬುದನು ತಿಳಿದಿರಬೇಕೆಂದು ಬಲವಂತದಿಂದ ಕರತಂದೆನು (ವಚಕಾ. ೩೭) ; ಭೂಮಿಪ ಸೈಂಧವನು ಬಾಗಿಲೊಳ್ನಿಂದಿರ್ದಾ ಭಾಮೆಯನೀಕ್ಷಿಸಿ . . . ಬಲವಂತದಿಂದೆ ಪಿಡಿದಾ ಲಲನೆಯ ರಥಮೇರಿಸುತ್ತೆ ನಡೆದಂ ಜವದಿಂ (ಜಾಂಭಾ. ೯-೪೦). **ಬಳವಂತ :** ೨. "ಬಳವಂತ— ಬಲವತ್=ಬಲಿಷ್ಠ" (ಶಬ್ದಕೋ. ೨೯) ; ಬಳವಂತನಾದೊಡಂ ತಾನಿಱಿಕೆಯ್ಯಲ್ವೇಡ ರಿಪುವನಾತನಭೀಷ್ಟಂಗಳನೀವುದು ನಯಮಂ ನೆಱೆ ಬಳೆಯಿಸುವುದು ಬಗೆಯೊಳಿಂತು ಗೆಲ್ವುದು ಪಗೆಯಂ (ಶಾಂತೀಶ್ವ. ೭-೧೩೦).

**ಬಲವಂತವಾಘುಸ್ನಾನ**=(ಆಲಂ) ಇಷ್ಟವಿಲ್ಲದಿದ್ದರೂ ಬಲಾತ್ಕಾರದಿಂದ ಮಾಡಿಸುವ ಕೆಲಸ ; ನಿರ್ಬಂಧದಿಂದ ಮಾಡಿಸುವ ಕಾರ್ಯ : ಅಂಥವರಿಗೆ ಪಾಠ ಓದಿ ಜ್ಞಾನಾರ್ಜನೆ ಮಾಡಿರೆಂದು ಮೂಲೆಯಲ್ಲಿ ಕೂರಿಸುವುದು ಬಲವಂತವಾಘುಸ್ನಾನದಂತಾಗುತ್ತದೆ (ಶಿಕ್ಷರ. ೦೩೦).

[ಸಂ. ಬಲವತ್]

**ಬಲವಂತತನ** (ನಾ). ೧. ಶೌರ್ಯ ; ಸಾಮರ್ಥ್ಯ ; ಪರಾಕ್ರಮ : ನೆಲೆಯಾವದು ನಿನ್ನ ಬಲವಂತತನಕ್ಕೆ ಕುಲದೇವ ಕಪಾಲೀಶ ವಿಜಯ ವಿಠ್ಠಲರೇಯ (ವೋಕ್ಷಿದಾ. ೩೩-೭). ೨. ಬಲಾತ್ಕಾರ ; ಒತ್ತಾಯ : ಹುಲಿ ಹುತ್ತ ಕಳ್ಳರ ಹಾದಿ ಬಲುಗೈಯರ ತೆಕ್ಕೆ ಇದು ಬಲವಂತತನದಿಂದ ಆಗದು ಅವರವರ ಬಲವರದಿಂದಲ್ಲದೆ (ಕುಂಕಶಂ. ೫. ೬೩೦-೦೬೯೬).

[ಬಲವಂತ + —ತನ]

**ಬಲವಕ್ಕ,** ಬಲಪಕ್ಕ, ಬಲವಂಕ (ನಾ). ಬಲಬದಿ ; ದಕ್ಷಿಣಪಾರ್ಶ್ವ : ಒಂದಕ್ಷೋಹಿಣೀ ಬಲಂಬೆರಸು ದ್ರುಪದಂ ಧೃಷ್ಟದ್ಯುಮ್ನ . . . ವಿಚಿತ್ರಾದಿಗಳಪ್ಪ ತನ್ನ ಮಕ್ಕಳ್ವೆರಸು ನೆಲಂ ಮೂಱಿವಿಟ್ಟಂತೆ ಬಲವಕ್ಕದೊಳ್ ನಡೆಯೆ (ಶಂಪಭಾ. ೯-೯೫ ವ); ಓಳಿಗೊಂಡು ಮುಂದಯ್ಸಿ ನಿಂದ ಬಲವಕ್ಕ ದೆಡವಕ್ಕದಂಗರಕ್ಕರ ನೆರವಿಯುಮನೀಕ್ಷಿಸುತ್ತುಂ (ವರ್ಧಪು. ೯-೫೬ ವ): ಬಂದು ನೆಟ್ಟಗೆ ಬಲವಕ್ಕದೊಳ್ ನೆಲಸಿ ಕಣ್ಗೆಸೆದಂ ಬಿದಿ ನಿಂದು ನೋಟ್ಟರಾ (ಕಬ್ಬಿಕಾ. ೦೭೪). 'ಎಡವಕ್ಕ' ಪರಾ. **ಬಲಪಕ್ಕ :** ಹೊಲಿಯುವವರ ಬಲಪಕ್ಕದಲ್ಲಿರಬಾರದು, ಅಳುವವರ ಎಡಪಕ್ಕದಲ್ಲಿರಬಾರದು (ಗಾದೆ). **ಬಲವಂಕ :** ಎಡವಂಕಂ ಬಲವಂಕ [ಶಾಕಾಂ. ವಕ್ಕ] ಮುಂಬೆಡೆಗಳೊಳ್ ನಾಕಿವ್ರಜಂ ಬರ್ಪುದೆಂದೊಡನೇಕಾದಶರುದ್ರರಷ್ಟವಸುಗಳ್ ಪನ್ನಿರ್ವರಾದಿತ್ಯರುಂ ನಡೆವರ್ ಸಂಗರಕೇಳಿಗೆಂಬೆಸಕದಿಂದುದ್ವೃತ್ತನಾ ವೃತ್ರಹಂ (ಜಗವಿ. ೦೩-೨೭); ಧರಣಿಪನ ಬಲವಂಕದಲಿ ಮೋಹರಿಸಿ ಪಾಂಚಾಲಕರು ಚೂಣಿಯೊಳುರವಣಿಸಿದರು ನಕುಲ ಸಾತ್ಯಕಿ ಭೀಮನಂದನರು (ಕುವ್ಯಾದ್ರೋ. ೯-೩೦); ಕಾಲಿನ ಮೇಲೆ ಕಾಲಿಕ್ಕಿ ಗೌತಮಂ ಸಿಂಹಶಯ್ಯೆಯಲಿ ಬಲವಂಕದಲಿ ಮಲಗಲು (ವೈಶಾಖ. ೭೫-೨೪೮). 'ಎಡವಂಕ', 'ತೆಂಕವಂಕ' ಪರಾ.

[ಬಲು + ಪಕ್ಕ]

**ಬಲವತ್ತಿಕೆ** (ನಾ). ಶಕ್ತಿ; ಸಾಮರ್ಥ್ಯ : ಕಾಲಮೃತ್ಯುವಂ ಕೆಣಕಿದನೆ ಸೈಂಧವನು ತನ್ನ ಬಲವತ್ತಿಕೆಯ ಸಮ್ಮೊಡನೆ ತೋರಿದನೆ ಘಡಘಡ (ತುರಂಗ. ೩೩-೪೦). [<ಬಲವಂತ + —ಇಕೆ]

**ಬಲವತ್ಸೈನ್ಯ,** ಬಳವತ್ಸೈನ್ಯ (ನಾ). ಬಲಿಷ್ಠವಾದ ಸೇನೆ ; ಸಮರ್ಥವಾದ ದಂಡು,—ಸೈನ್ಯ: ಬಲ[ಶಾಕಾಂ.ಳ]ವತ್ಸೈನ್ಯಪದೋತ್ಥಪಾಂಸುಚಯದಿಂ ಸೇನಾಮಹಾಭಾರದಿಂ ಬಳಕೋಳಾಹಳದಿಂ ವಿಯಚ್ಚರಗಣಂ ಶೇಷಂ ದಿಶಾಪಾಲಕರ್ ಪೊಲಗೆಟ್ಟೋಡೆ (ಜಗವಿ. ೭-೪೦). **ಬಳವತ್ಸೈನ್ಯ :** ಬಳವತ್ಸೈನ್ಯಮನವನೀತಳಪತಿ ಬಿಸುಟಂ (ಶಾಂತಿಪು. ೧೧-೧೪). [ಸಂ.]

**ಬಲವದ್ವಿರೋಧ** (ನಾ). ಶಕ್ತಿವಂತರಾದವರ ವೈರ,— ಹಗೆ ; ಸಮರ್ಥರಾದವರ ಶತ್ರುತ್ವ : ಎಮಗೆ ಬಲವದ್ವಿರೋಧದ ತೊಳಸು ಬಿದ್ದುದು ತೋಟಿಗಾಱಿದೆ ಜಲಧಿಮಧ್ಯದಲೂರ ಕಟ್ಟಿದೆವು (ಕುವ್ಯಾಸ. ೨-೦೬). [ಸಂ.]

**ಬಲವದ್ವೈರಿ,** ಬಳವದ್ವೈರಿ (ನಾ). ಪ್ರಬಲವಾದ ಶತ್ರು , ಶಕ್ತಿಶಾಲಿಯಾದ ಹಗೆ : ಬಲವದ್ವೈರಿತಮೋಹರಾತಿಪಟುಗಳ್ ಪದ್ಮಾಸನಸ್ಪರ್ಶಸಲ್ಲಲಿತಂಗಳ್. . .ಆನತಜನಕ್ಕಾನಂದಮಂ ಮಾೞ್ಕೆ ಮಂಗಳಮುಚ್ಚಂಡಕರಂ ಮಹೀವಳಯದೊಳ್ಚಾಳುಕ್ಯಮಾರ್ತಂಡನಾ (ಗದಾಯು. ೧-೪). **ಬಳವದ್ವೈರಿ :** ಬಳವದ್ವೈರಿಕ್ಷಮಾಪಾಲರನಧಿಕಭುಜಾಗರ್ವದಿಂ ಗೆಲ್ದು ಲಕ್ಷ್ಮೀನಿಳಯಂ . . . ಮಂಗಳಗೀತಂ ಪೊಣ್ಮೆ ಪೊಕ್ಕಂ ನಿಜಶಿಬಿರಮಂ (ಶಂಕಶಂ. ೨೬೬-೦೩). [ಸಂ. ಬಲವದ್ವೈರಿನ್]

**ಬಲವರ್,** ಬಲವರು (ಕ್ರಿ). ಬಲಗಡೆಯಿಂದ ಸುತ್ತು,—ತಿರುಗು : ಪ್ರದಕ್ಷಿಣೆ ಹಾಕು : ನಿಜರಥಮಂ ರಥಾಂಗಧರನಂ ಮುನ್ನಮೇಱಿಲ್ವೇಟ್ದು ಮೂಱುಸೂಟ್ಬರ್ ಬಲವಂದು ಪೊಡೆಮಟ್ಟು ರಥಮನೇಱಿ . . . ಗಾಂಡೀವಮನೇಱಿಸಿ ನೀವಿ ಜೇವೊಡೆದಾಗಳ್ (ಶಂಪಭಾ. ೧೧-೦೩೨ ವ) ; ಕಾಂಭೋಜಾವಳಿಗಳ ತುರುಷ್ಕತುರಂಗಮಂಗಳಡಿಯೊಳಡಂಗಿದನೆ ಗೆತ್ತು

ಕೈಗುಶ್ತಿ ನೋಡಿಯುಂ ಬಲವಂದು ನೋಡಿಯುಂ (ಗದಾಯು. ೬-೨೬೪) ; ಇದೇನಾನುವೊಂದು ಕೃತ್ರಿಮಮಾಗಲವೇಲ್ಕುಮೆಂದಾ ಮಾರನಂ ಬಲವಂದು ನೋಡಿ (ಶಂಕಶಂ. ೦೬೬-೩) ; ಶರಣರಂ ಬಲವಂದನುಜ್ಞೆಯಂ ಕೈಕೊಂಡು ಕರುಣಮಂ ತೋಱುತೆ ಕುಮಾರನಂ ಬೀಳ್ಕೊಂಡು (ಜಗರ. ೦-೯೦).

**ಬಲವರು** : ಬಲವರುತ್ತಿಪ್ಪುದಲ್ಲದೆ ಬೇಱೆ ನಡೆಯಲ್ಲ ನಲಿದು ತುತಿಯಿಸುವುದಲ್ಲದೆ ಬೇಱೆ ನುಡಿಯಿಲ್ಲ (ಬಸವ. ದೇ. ೭೦-೫) ; ಹರಿಯ ಬಲವಂದಣ್ಣನಂಘ್ರಿಗೆ ಶಿರವ ಚಾಚಿ ನಿಜಾಯುಧವ ವಿಸ್ತರಿಸಿ ಪವನಜಪಾರ್ಥಮಾದ್ರೀಸುತರು ರಥವೇಱಿ ಧುರಕೆ ನಡೆದರು (ಕುಮ್ಯಾಭಾ. ೦-೬೬) ; ಪರಮ ಪತಿವ್ರತೆಯರ ಪಾದದರ್ಶನ ದೊರೆಕೊಂಡುದೆ ಪುಣ್ಯದಿವಸ ಪರಿದಿವರನು ಬಲವರೆ ಭೂಪ್ರದಕ್ಷಿಣದಿರವನಿನ್ನೇವಣ್ಣಿಪೆನು (ಹರಿಶ. ೨-೦೦).

[ಬಲ್$_1$ + ವರ್]

**ಬಲವರು** 'ಬಲವರ್' ನೋ.

**ಬಲವರ್ಧಕ** (ನಾ). ಶಕ್ತಿಯನ್ನು ಹೆಚ್ಚಿಸುವ ಔಷಧ ಮುಂತಾದುವು : ಅಶಕ್ತವಾಗಿದ್ದ ನಿನ್ನ ದೇಹಕ್ಕೋಸ್ಕರ ಸೀಸೆಗಟ್ಟಲೆ ಬಲವರ್ಧಕಗಳನ್ನು ತಂದು ಕುಡಿಸಿ ಮೈಗೂಡಿಸಿದೆ (ಚಕಾ. ೨೫೭). [ಸಂ.]

**ಬಲವರ್ಧನ** (ನಾ). ಶಕ್ತಿಯ ಹೆಚ್ಚಳ ; ಪುಷ್ಟಿ : ಬಲವರ್ಧನಕ್ಕೆ :— ನೆಗ್ಗಿಲ ಬೇರು, ನೆಲ್ಲಿಯ ಚಟ್ಟು, ಅಮರದಬಳ್ಳಿ — ಇವಂ ಚೂರ್ಣಂಮಾಡಿ ತುಪ್ಪ, ಜೇನುತುಪ್ಪವಂ ಸಮಾನಂಗೊಂಡು ಲೇಹ್ಯಂ ಮಾಡುಗೆ (ಚಿಕ್ಕಿ. ೨೦೪). [ಸಂ.]

**ಬಲವಿನ್ಯಾಸ** (ನಾ). (ಯುದ್ಧದಲ್ಲಿ) ಸೈನ್ಯವನ್ನು ನಿಲ್ಲಿಸುವ ಕ್ರಮ : "ವ್ಯೂಹಃ, ಬಲವಿನ್ಯಾಸಃ — ೨ ಕಾಳಗಕ್ಕೆ ಚತುರಂಗದಳವನ್ನೂ ಸ್ಥಲದ ಸಂದುಹಟ್ಟಿಗೆ ಶಕ್ಯ ಹಾಗೆಯೇರ್ಪಡಿಸಿ ಗುಂಪುಗುಂಪುಗಳಾಗಿಯೂ ಸಾಲಾಗಿಯೂ ಯುದ್ಧಶಾಸ್ತ್ರರೀತ್ಯಾ ನಾನಾಕಾರಗಳಾಗಿ ನಿಲ್ಲಿಸುವಿಕೆ" (ಸಿದ್ಧಾಂತಿ. ೨೬೦). [ಸಂ.]

**ಬಲವಿರೋಧಿ** (ನಾ). = ಬಲರಿಪು : ಸವಣಂ ಬಳಪಂಗೊಳೆ ಗಾಂಡಿವಿ ಬಿಲ್ಗೊಳೆ ಬಲವಿರೋಧಿ ವಜ್ರಂಗೊಳೆ . . . ಪೊಣರ್ಕೆಗಾವಂ ನಿಲ್ವಂ (ಕಮದ. ೦೬೬ ಪ್ರಯೋ) ; ದೂಱುಾಯ್ತುಮಳ ದೆಸೆಯಿಂದ ಬಲವಿರೋಧಿಗೆ ಕೇಳಿದ್ಯೆ (ಕೊರಡಾ. ೦-೦೦-೦೦) ; ಆ ಮರುತ್ತನೃಪತಂದ ಬಲವಿರೋಧಿಗೆ ನಮಿಸಿ . . . ಎನ್ನೊಳು ಬಲಿದು ಬಲುಮುನಿಸನೆಲ್ಲವ ಕಳೆದು ಸಲಹೆಂದೆನುತ ಸಂಪ್ರಾರ್ಥನೆಯ ಮಾಡಿದನು (ಜೈಮ್ನಿ. ೦-೦೦೯).

[ಸಂ. ಬಲವಿರೋಧಿನ್]

**ಬಲವಿಹೀನ** (ನಾ). ಶಕ್ತಿಯಿಲ್ಲದ ವ್ಯಕ್ತಿ ; ದುರ್ಬಲವ್ಯಕ್ತಿ : ಸಭೆಯಲಿ ಬಲವಿಹೀನರಿಗಾಪ್ತರಿಲ್ಲೆಂದಬಲೆಯೊಱಲಿದಳು (ಕುಮ್ಯಾಭಾ. ೩-೯೦).

[ಸಂ.]

**ಬಲವು** (ನಾ). ಶಕ್ತಿ ; ಸಾಮರ್ಥ್ಯ ; ಪರಾಕ್ರಮ : ವ್ಯಂಜನದ ಮೇಲಣತ್ವಕ್ಕೆ — ನಿಲವು, ಒಲವು, ಬಲವು (ಶಮದ. ೨೦೦ ಪ್ರಯೋ). ☞ ಈ ಶಬ್ದದ ಪ್ರಯೋಗ ಅಪರೂಪ. [< ಬಲ್$_1$ + — ವು]

**ಬಲವೈರಿ, ಬಳವೈರಿ** (ನಾ). = ಬಲರಿಪು : "ಪಲಗಣ್ಣನುಂ ಮುಗಿಲ್ದೇರ ನಿಂದಿರನೆನಲ್ ಬಲವೈರಿ" (ಕಬ್ಬಿಗ. ೦೦) ; ಬಲವೈರಿಸ್ಫಾರವಜ್ರಾಧಿಕ ಭಯಚಕಿತೋದ್ಭೂತ ಮೈನಾಕ ಗೋತ್ರಾಚಲಪಕ್ಷತ್ರಾಯಿಯಿಂದುಃಪ್ರಿಯತಮಂ . . . ಸಮುದ್ರಂ (ಶಂಕಶಂ. ೦೫೦-೫) ; ಜಲನಿಧಿವೊಲ್ ಗಂಭೀರಂ ಬಲವೈರಿಯವೊಲ್ ಸಮಗ್ರವಿಭವಸನಾಥಂ (ಕಾವ್ಯಾವ. ೬೬೭). **ಬಳವೈರಿ** : ಬಳವೈರಿಯೆಂಬ ಸಾಧಕನಿಳೆಯುಂ ಪೊಸಮುಂಸಮಾಡಿ ಶಶಿಮಂಡಲಮಂ ಗುಳಿಗೆಗಿಱಿಡೆ ತಿಮಿರಕಾಳಿಕೆ ಕಳಿದಂತೆ ಜಲಕ್ಕನಾಯ್ತು ಪೊಸವೆಳ್ದಿಂಗಳ್ (ಅನಂಪು. ೬-೬೩). [ಸಂ. ಬಲವೈರಿನ್]

**ಬಲಶಾಲಿ** (ನಾ). ಶಕ್ತಿಶಾಲಿ ; ಪರಾಕ್ರಮವುಳ್ಳವನು : ಆ ಹುಡುಗರಿಗೆಲ್ಲ ಸೀತಾರಾಮು ಎಂಬ ಹುಡುಗನು ಮುಖಂಡ . . . ಬಲಶಾಲಿ ಮತ್ತು ತುಂಟ (ಕಳಹು. ೭) ; ತನ್ನ ಆಳು ಬಹಳ ಉಣ್ಣಬೇಕು ಮತ್ತು ಅವರು ಬಲಶಾಲಿಗಳಾಗಿರಬೇಕೆಂದು ಅವನ ಇಚ್ಛೆ ಇತ್ತು (ಬಂಗಾಹ. ೦೩).

[ಸಂ. ಬಲಶಾಲಿನ್]

**ಬಲಸಂಕು** (ನಾ). = ಬಲಮುರಿಶಂಖ : ಏಕಮುಖದ ರುದ್ರಾಕ್ಷಿ ಪನ್ನಗ ವೇತ್ರ ಕಾಕಮೃತ್ತಿಕೆ ಬಲಸಂಕು ಬೇಕಾದ ದಿವ್ಯೌಷಧಗಳ ಮುನಿವರರಾ ಕುವರನಿಗೆ ನೀಡಿದರು (ಕೋಹಕ$_2$ ೦೯-೬೦).

[ ಬಲ$_1$ + ಸಂಕು$_1$ (< ಸಂಕ$_1$) ]

**ಬಲಸಂಘಟ್ಟನ** (ನಾ). ಸೈನ್ಯದ ತುಳಿತ : ಬಲಸಂಘಟ್ಟನದಿಂ ಮಹೀವನ ವಶೇಷಂ ಪೋಗೆ . . . ಬೀಡುವಿಡುತ್ತ ನಿಚ್ಚವಯಣಂಬಂದಂ ಮುರಧ್ವಂಸಕಂ (ಜಗಾ. ೦೬-೬೬). [ಸಂ.]

**ಬಲಸನ್ನೆ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ ; ಬಲಭಾಗದಿಂದ ಕತ್ತಿಯನ್ನು ಬೀಸುವ ಒಂದು ಕ್ರಮ : ತಳಸಂಚು ಮೇಲ್ಸಂಚು ಹಿಂಕತೋರೆ ಮುಂಕತೋರೆ ಬಲಸನ್ನೆಯೆಡದ ಸನ್ನೆಯೊಳು ಅಲಗ ನೀಡಿದರಲಗಿನೊಳಾಂತು ನೆಗೆದು ಮೈಹೊಳೆದು ತಪ್ಪಿಸಿದನೆಲ್ಲವನು (ಕಕಕ. ೬೬-೨೬). [ಬಲ$_1$ + ಸನ್ನೆ$_1$]

**ಬಲಸು** (ನಾ). ಒಂದು ಬಗೆಯ ಮರ : ಎಣ್ಣೆ ಎರಡೂವರೆ ಸೇರು . . . ಬಲಸುಬೇರಿನ ಚಕ್ಕೆ . . . ಭಂಗೀಸೊಪ್ಪಿನ ಪುಡಿ ಎಲ್ಲವನ್ನೂ ಚೂರ್ಣ ಮಾಡಿ (ಸಕಚಿ. ಹು. ೯೬೦) ; ಕಾರೆ, ಗಂಡುಕಕೋಲ್, ಬಲಸು (ವೃಕಿಗ. ೬೦-೪೦೩). [← ತೆಲು. ಬಲುಸು]

**ಬಲಸುತ್ತು** (ನಾ). ಬಲಭಾಗಕ್ಕೆ ಸುತ್ತಿಕೊಂಡಿರುವುದು ; ಬಲಪಕ್ಕಕ್ಕೆ ತಿರುಗಿಕೊಂಡಿರುವುದು : ಎದುರುಬದುರು ಸುತ್ತುಗಳುಳ್ಳ ಕೊಳವೆಗಳನ್ನಾಗಲಿ ದಂಡಗಳನ್ನಾಗಲಿ ಒಟ್ಟಿಗೆ ಸೇರಿಸಲು ಎಳೆಯುವ, ಒಂದು ಕೊನೆಯಲ್ಲಿ ಎಡಸುತ್ತುಗಳೂ ಮತ್ತೊಂದು ಕೊನೆಯಲ್ಲಿ ಬಲಸುತ್ತುಗಳೂ ಒಂದರಲ್ಲೇ ಇರುವ ಉದ್ದತಿರುಪುಗಟ್ಟು (sleeve - nut. ತಂಕೋ). 'ಎಡಸುತ್ತು' ಪರಾ. [ಬಲ$_1$ + ಸುತ್ತು$_2$]

**ಬಲಸೂದನ** (ನಾ). = ಬಲಧ್ವಂಸಿ : "ಇಂದ್ರಃ, ದುಶ್ಚ್ಯವನಃ . . . ಬಲಸೂದನಃ, ಶತಮುಖಃ . . . ಮೇಘವಾಹನಃ — ಈ ೩೯ ದೇವೇಂದ್ರನ ಪೆಸರ್" (ಕರಾಯು. ೦೦-೩೩) ; ಬಲಸೂದನ ಗೌತಮಮುನಿಲಲನೆಗೆ ಮನ ಮಿಕ್ಕಲಾತನುರುಶಾಪದೆ ನೀಂ ಸಲೆ ಯಾವವಸ್ಥೆವಡೆದೆಯೊಯಲೆ ಸುರಪತಿ (ಯಾದಕಂ. ೦೪-೯೬). [ಸಂ.]

**ಬಲಸ್ಥ** (ನಾ). ಬಲಿಷ್ಠನಾದವನಂ ; ಶಕ್ತಿಶಾಲಿ ; ಸಮರ್ಥ : ಕುಲದ ಛಲದಾಯ ದಳವಿನ ಕಲಿತನದುನ್ನತಿಯನಲಸದೀ ಸುರಸಭೆಯೊಳ್ ಪಲವಾಡುವೆನ್ನ ನಾಲಗೆ ಬಲಸ್ಥನೊರ್ವಂಗೆ ಜೀಯ ದೇವೆಂದವುದೇ (ಅದಿಪು. ೦೩-೦೦೦) ; ಶುಂಭದ್ವಿಪುಲಾಲಾನಸ್ತಂಭಂ ಲಕ್ಷ್ಮೀವಶೀಕರಣಾಂಗನಿಸಿದುದು ಭುಜಸ್ತಂಭಂ ಲಕ್ಷ್ಮೀಪ್ರಾಕಾರು ಭುವನಕ್ಕೆಂ ಬಲಸ್ಥನೋ ಬಲದೇವಂ (ಶಾಂತಿಪು. ೨-೯). [ಸಂ.]

**ಬಲಹಂಸ** (ನಾ). [ಸಂಗೀತ] ಒಂದು ರಾಗದ ಹೆಸರು : ಬಲಹಂಸವೆಂಬ ರಾಗವು (೧) ಆರೋಹದಲ್ಲಿ ನಿ-ಯನ್ನು ಬಿಟ್ಟಿದೆ (ಕಕುಶ್ರ. ೦೩೯) ; ಬಲಹಂಸ — ೨೮ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ (ಸಂಗೀಕಂ. ೦೩೪). [ಸಂ.]

**ಬಲಹರ** (ನಾ). = ಬಲಧ್ವಂಸಿ : ಬಲುಹುಮಾಡಿಕೊಳಲ್ಕೆ ಹರಿಯಜ ಬಲಹರರ ಪವಣಲ್ಲ (ಚಕ್ರಪು. ೩೬-೩೭). [ಸಂ.]

**ಬಲಹೀನ** (ಗು). ೧. ಶಕ್ತಿಯಿಲ್ಲದ ; ನಿಶ್ಶಕ್ತವಾದ ; ನಿರ್ಬಲವಾದ : 'ಬಲಹೀನಜಾನು' ಪರಾ. (ನಾ). ೨. ಶಕ್ತಿಯಿಲ್ಲದವನಂ; ಅಶಕ್ತ ; ಅಸಮರ್ಥ : ಬಲಹೀನ ನೀನಾ ಖಳನ ಕೊಲುವುದೆಂತು

(ಜಾವಂಸಾಂ. ೦೩–೪೬); ವೈಜಯಂತಿಯಲ್ಲಿ ಆಳುತ್ತಿದ್ದ ಕದಂಬರು ಓನೆಯ ಶತಮಾನದಲ್ಲಿ ಬಲಹೀನರಾಗಿದ್ದರೆಂದು ತಿಳಿಸಿದ್ದೇವೆ (ಕಜಾಇ. ೪೩.) [ಸಂ.]

**ಬಲಹೀನಜಾನು** (ನಾ). ೧. ದುರ್ಬಲವಾದ ಮೊಳಕಾಲು; ನಿಶ್ಶಕ್ತವಾದ ಜಾನು. ೨. ದುರ್ಬಲವಾದ ಮೊಳಕಾಲುಗಳನ್ನುಳ್ಳವನು: ಚಲವಿತ್ತಂ ಬಲಹೀನಜಾನು ಚಪಲಂ ಕಾಂತಾಪ್ರಿಯಂ . . . ಭ್ರಮಣಾರ್ಥಿ ಬೇಗಮೊಸೆವಂ ಮಾನಾನ್ವಿತಂ ಮೇಷಜಂ (ಜಾತಿ. ೦೬–೧). [ಸಂ.]

**ಬಲಹೀನತೆ** (ನಾ). ಶಕ್ತಿಯಿಲ್ಲದಿರುವಿಕೆ; ದುರ್ಬಲತೆ: ಅವರಿಗೆ ವಯೋಧರ್ಮದಿಂದ ಬಲಹೀನತೆಯುಂಟಾಗಿದೆ (ರೂಢಿ). [ಸಂ. ಬಲಹೀನತಾ]

**ಬಲಾಂತಕ** (ನಾ). = ಬಲಧ್ವಂಸಿ: ಅನೇಕವೃಂದಾರಕಾನಂದದುಂದುಭಿಗಭೀರಸ್ವರಂಗಳುಮಶೇಷಾನಿಮಿಷಜಯಜಯವಿಶೇಷಘೋಷಂಗಳುಂ ನೆಗಟೆ ತಳರ್ವಘಬಲಾಂತಕಂಗೆ ಬಲಾಂತಕಂ ಕೆಯ್ಗೊಟ್ಟೊಳಯಿಂಕೆ ಬಿಜಯಂಗೆಯ್ಸಿ (ಶ್ರೀಪುಪು. ೦೩–೦೦೪ ವ). [ಸಂ.]

**ಬಲಾಕ**, ಬಳಾಕ (ನಾ). ಒಂದು ಬಗೆಯ ಜಲಚರಪಕ್ಷಿ; ಬೆಳ್ಳಕ್ಕಿ: ಬಕಕಲಹಂಸಬಲಾಕಪ್ರಕರ ಮೃದುಕ್ವಣಿತರವಮ್ಮಿದಿರೊಳ್ ತೋಱುತ್ತಿತ್ತು ಕೊಳಂ (ಶಂಕಪು. ೮–೩೬); ಕೋಕನದಕುಮುದಕಲ್ಹಾರಬಕಬಲಾಕಮರಾಳಾನೀಕದಿಂ ಚೆಲ್ವುವೆತ್ತ . . . ಸರೋವರಕೆ ಬಂದು (ಶ್ರೀಕೃಷ್ಣಸ್ತ. ೦–೪೪ ವ); ಮೈದೋಱಿದುದು ಮುಂಗಾರು . . . ಹರುಷಿಸಿದವು ಬಲಾಕ ಚಾತಕಿ (ಕೊರಾ. ೪–೬–೨). **ಬಳಾಕ**: "ಬಿಸಕಂಠಂ ಬಳಾಕಮೆನೆ ಬೆಳ್ಳಕ್ಕಿ" (ಮಂಗರಾ. ೫೦–೬); ಕಾಕೋಳೂಕಸೃಗಾಳಬಳಾಕೋಷ್ಟ್ರಚಮೂರುಖರಮುಖಂಗಳವೊಲ್ ನಾನಾಕುತ್ಸಿತಬೀಭತ್ಸತರಾಕಾರದಲಿರ್ಪುವಲ್ಲಿ ಯೋನಿಮುಖಂಗಳ್ (ಮಲ್ಲಿಪು. ೦೩–೧೩೩); ಇದುವೆಳೆವೆಣ್ಣಳ ಕಣ್ಣಳೆಮಿನ್ನಳ ಬೆದಱಿಸ ಬಂದ ಬಳಾಕ (ನಾಗಕು. ೩–೦೮). [ಸಂ.]

**ಬಲಾಕೆ**, ಬಳಾಕೆ (ನಾ). = ಬಲಾಕ: "ಬಲಾಕಾ, ಬಿಸಕಂಠಿಕಾ – ಈ ೨ ಬೆಳ್ಳಕ್ಕಿ" (ಹಲಾಯು. ೬೨–೯೬); ಅಲ್ಲಲ್ಲಿಗೆ ಪಳಂಕಿನ ಬಲಾಕೆಗಳೊಳಂ ಬರೆದ ಸುರಶರಾಸನಂಗಳೊಳಂ . . . ಪೆಱವಂ ಪಲತೆಱದ ಶಿಶಿರೋಪಚಾರಂಗಳಂ ಮಾಟ್ಟ ಪರಿಜನಂಗಳುಮಂ ನೋಡುತ್ತಂ ಪೋಗೆವೋಗೆ (ಕಾದಂಉ. ೨೦೬). **ಬಳಾಕೆ**: ಕಾಚಮೇಚಕಚಯಚ್ಛಾಯಾಂಬುವಿಂ ಗುಣ್ಪಿನಿಂ ಪುದಿದಿರ್ದತ್ತು ಸರೋವರಂ ಬಕಬಳಾಕಾನೀಕರಾವಾಕುಳಂ (ಶಂಕಪು. ೦೩–೬೨); ಘಟಿಲನೆ ಬಳಾಕೆಯಾಕೃತಿ ಮಟಿಗಾಲದೊಳಿರದದೃಶ್ಯಮಪ್ಪಂದದಿನಿತ್ತುಟಿಯದೆ ಕಡೆಗಾಲದೊಳೆಳವಟಿಯೆ ಶರೀರಂ ಮಾಯಮಾಯ್ತು ದಿವಿಜನ ದೇಹಂ (ಚಂದ್ರಪ್ರ. ೪–೭೯). [ಸಂ. ಬಲಾಕಾ]

**ಬಲಾಚಾರ** (ನಾ). ಒಳ್ಳೆಯ ಗ್ರಹಗತಿ; ಸುಯೋಗ; ಅದೃಷ್ಟ; ಆ ದಿನ ಗಣೇಶನನ್ನು ಬಾವಿಗೆ ಕಳಿಸಿ, ಅವನ ಸ್ಥಾನದಲ್ಲಿ ಈ ಗ್ರಂಥವನ್ನಿರಿಸಿದ್ದೆ. ಆದರೆ ಆ ವಿದ್ಯಾಪತಿಯಿಂದ ನನ್ನ ಗ್ರಂಥಕ್ಕೇನೂ ಬಲಾಚಾರ ಒದಗಿ ಬರಲಿಲ್ಲ (ಮುಂಗಾಪು. ೦೩). [☞ ಇದು 'ಗ್ರಹಚಾರ' ಎಂಬ ಶಬ್ದ ಸಾಮ್ಯದಿಂದ ಮಾಡಿಕೊಂಡ ರೂಪ]

**ಬಲಾಢ್ಯ**, ಬಳಾಢ್ಯ (ಗು). ೧. ಬಲಶಾಲಿಯಾದ; ಶಕ್ತಿಯುತವಾದ; ಸಮರ್ಥವಾದ: ಭಾರತವನ್ನು ನಿಯಂತ್ರಿಸಲು ಬೇಕಾಗುವ ಬಲಾಢ್ಯ ಸೈನ್ಯವನ್ನು ಹೊಂದಲು ಬ್ರಿಟನ್ನಿಗೆ ಸಾಮರ್ಥ್ಯವಿಲ್ಲ ಎಂಬುದನ್ನು ಆಳುವವರು ಮನಗಂಡರು (ಆತ್ಮಾರ್ಕ. ೧೪೦). (ನಾ). ೨. ಬಲಶಾಲಿಯಾದವನು; ಶಕ್ತಿಶಾಲಿ; ಸಮರ್ಥ: ಗಿರಿಯಂತೆ ಬಿಣ್ಣದು ಸುರಕರಿಯಂತೆ ಬಲಾಢ್ಯನಬ್ಧಿಯಂತೆ ಗಭೀರಂ (ಶಮದ. ೨೦೪ ಪ್ರಯೋ); ಸಹಸ್ರಕಂಠಂ ಜಗದೇಕವೀರಂ ರಾಕ್ಷಸಾಧಿಪಂ ಇನ್ನೆನಿತು ಪರಾಕ್ರಮಿಯೊ, ಎನಿತು ಬಲಾಢ್ಯನೊ, ಮೇಣೆನಿತು ಕ್ರೂರನೊ, ಆರಱಿವರ್! (ಅದ್ಭುತ. ೪೦–೧೭). **ಬಳಾಢ್ಯ**: ೨. ಜನ್ನಸ್ವಾಮಿ ಬಳಾಢ್ಯನಾಗಿ ನಿಲೆ ಸೌಮ್ಯರ್ ನೋಡೆ ಕೂಸಂ ಸುಧಾಜನ್ಮಂ ರಕ್ಷಿಸುವಂ ಸ್ವಕೀಯಶಿಶುವಂ ತಾಯರ್ ರಕ್ಷಿಪ್ಪೊಂದಂದದಿಂ (ಜಾತಿ. ೬–೩). [ಸಂ.]

**ಬಲಾತೈಲ** (ನಾ). ಒಂದು ಬಗೆಯ ಔಷಧೀಸಸ್ಯದಿಂದ ತಯಾರಿಸಿದ ಎಣ್ಣೆ: ಎದೆನೋವುಳ್ಳಾತನು ಬಲಾತೈಲವನ್ನಾದರೂ ಸುಕುಮಾರ ತೈಲವನ್ನಾದರೂ ತೆಗೆದುಕೊಂಬುದು (ವೈದ್ಯಸಾ. I, ೦೮೪). [ಸಂ.]

**ಬಲಾತ್ಕರಿಸು** (ಕ್ರಿ). ೧. ಒತ್ತಾಯಮಾಡು; ಬಲವಂತಮಾಡು; ನಿರ್ಬಂಧಪಡಿಸು: ಆತನು ಬಲಾತ್ಕರಿಸಿದರೂ ಕೂಡ ಮನುವು ನಾನಾವನ್ನು ತನ್ನ ಕುದುರೆಯ ಮೇಲೆಯೇ ಕುಳ್ಳಿರಿಸಿಕೊಂಡು ಕರೆತಂದಳು (ಘೂರಾಣಿ. ೦೪); ನಾಲ್ಕಾರುದಿನ ಅಲ್ಲಿಯೇ ಇದ್ದು ಬರಬೇಕೆಂದು ಎಲ್ಲರೂ ಬಲಾತ್ಕರಿಸಿದರು (ಕೃಪಾಕ. ೦೦೩). ೨. ಬಲಪ್ರಯೋಗಮಾಡು; ಶಕ್ತಿಯನ್ನು ಪ್ರಯೋಗಿಸು: ಮಡುವಿನೊಳು ಮಡವಿಡಿದ ನೆಗಳಂ ಬಲಾತ್ಕರಿಸಿ ಬಿಡಿಸಿಕೊಂಡೊಡಮುರಿದು ತಡಿಗಡರಿ (ಕೈಬಿಖಾ. ೦೩–೩೨). [< ಬಲಾತ್ಕಾರ + – ಇಸು]

**ಬಲಾತ್ಕಾರ** (ನಾ). ೧. ಒತ್ತಾಯ; ಬಲವಂತ: "ಪ್ರಸಭಂ, ಬಲಾತ್ಕಾರಃ ಹಠಃ – ೩ ಬಲಾತ್ಕಾರದ ಪೆಸರು, ಬಲವಂತಮಾಡುವಿಕೆ, ನಿರ್ಬಂಧಗೊಳಿಸುವಿಕೆ" (ಸಿದ್ಧಾಂತಿ. ೨೮೦); ಬೆದರಿಕೆ ಹಾಕುವುದರಿಂದಲೂ ಬಲಾತ್ಕಾರದಿಂದಲೂ ಬಹಳ ಹಾನಿಯಾಗುವುದು (ಮುಂಬಯಿ. ೪–೬೩); ನನ್ನ ಆಭರಣಗಳನ್ನು ಈ ಪಾಪಿಗಳು ಬಲಾತ್ಕಾರವಾಗಿ ಕಿತ್ತುಕೊಂಡರು (ಕೃಪಾಕ. ೬೦). ೨. [ಜೈನ] ಮುನಿಗಳ ಒಂದು ಗುಂಪು: ಬಲಾತ್ಕಾರದ ಗಣದ ನೇಮಿಚಂದ್ರದೇವರ ಶಿಷ್ಯರು ಪಾರಿಶ್ವದೇವರು ತಂಮ ಹೆಸರ ಹಾಲ ಧಾರಗೆ ಬಿಟ್ಟ ಬಾಳು (ಕಇ. III–i. ೦೦–೪; 1542); ಗಣಗಳು: ದೇವ, ಸೇನ, ಬಲಾತ್ಕಾರ, ಬಳಗಾರ (ಕಜಾಇ. ೯೭). [ಸಂ.]

**ಬಲಾಧಿಕ** (ನಾ). ಅತಿಶಯವಾದ ಬಲವುಳ್ಳವನು: ಬಲಾಧಿಕರಸಮಸೈನಿಕರ್ . . . ಲಂಕೆಯಂ ಪುಗುತಂದರ್ (ಶಂರಾಮಾ. ೦೪–೮೬). [ಸಂ.]

**ಬಲಾಧಿಕೃತ** (ನಾ). ಸೇನಾಧಿಪತಿ; ದಳಪತಿ: ನಿಜನಂದನನಪ್ಪ ಚಂದ್ರಾಪೀಡನಂ ತಾರಾಪೀಡನರೇಂದ್ರಂ ಬರಿಸಲೆಂದು ಬಲಾಧಿಕೃತನಪ್ಪ ಬಲಾಹಕನೆಂಬನಂ ಬೆಸಸೆ (ಕಾದಂಪೂ. ೪೪೭). [ಸಂ.]

**ಬಲಾಧಿಪ** (ನಾ). = ಬಲಾಧಿಕೃತ: ಇವರಂ ಸ್ವದೇಶಕನಂತವೈಭವದಿಂದೆ ನೀಂ ತತಸುವಾಕ್ಯಮನಾಡಿ ಬೀಳ್ಕೊಡೆನಲ್ ಬಲಾಧಿಪನಾಗಳೇ ನುತಬಲಂಗಳನೆಯ್ದಿಸಲ್ ಬಯಲಾದವದ್ಭುತಮೆಂಬಿನಂ (ಹಾರಾಸ್ವ. ೨–೦೪–೩೨). [ಸಂ.]

**ಬಲಾಧ್ಯಕ್ಷ**, ಬಳಾಧ್ಯಕ್ಷ (ನಾ). = ಬಲಾಧಿಕೃತ: ಪುಂಡರೀಕಿಣಿಗೆ ಪಯಣಂಬೋಗಲ್ ನಿಶ್ಚೈಸಿದಂ ಧರಣೀಶ್ವರಂ ಅಂತತಿತ್ವರಿತಗಮನನಿಶ್ಚಿತಮಾನನಾಗಿ ಬಲಾಧ್ಯಕ್ಷನಂ ಬರಿಸಿ (ಆದಿಪು. ೪–೮೦ ವ). **ಬಳಾಧ್ಯಕ್ಷ**: ಭೂಪತಿ ಮೆಚ್ಚಿ . . . ಪಡೆಯಂ ಪಣ್ಣಿ ಬರವೇಟೆಂದು ಬಳಾಧ್ಯಕ್ಷಂಗೆ ಬೆಸಸುವುದುಂ (ಮಲ್ಲಿಪು. ೮–೧೩೦). [ಸಂ.]

**ಬಲಾನ್ವಿತ** (ಗು). ೧. ಶಕ್ತಿಶಾಲಿಯಾದ; ಬಲಿಷ್ಠವಾದ. (ನಾ). ೨. ಶಕ್ತಿಶಾಲಿಯಾದವನು; ಬಲಾಢ್ಯ. [ಸಂ.]

**ಬಲಾರಾಕ್ಷಸಿ** 'ಬಲರಾಕ್ಷಸಿ' ನೋ.

**ಬಲಾರಾಕ್ಷಿ** 'ಬಲರಾಕ್ಷಸಿ' ನೋ.

**ಬಲಾರಾತಿ** (ನಾ). = ಬಲರಿಪು: "ಇಂದ್ರಃ, ಮರುತ್ವಾನ್ . . . ಸುರಪತಿಃ, ಬಲಾರಾತಿಃ, ಶಚೀಪತಿಃ . . . ಸಹಸ್ರಾಕ್ಷಃ, ಋಭುಕ್ಷಾ – ೩೫ ದೇವೇಂದ್ರನ ಹೆಸರುಗಳು" (ಸಿದ್ಧಾಂತಿ. ೨೦). [ಸಂ.]

**ಬಲಾರಿ₁** 'ಭಟಾರಿ' ನೋ.

**ಬಲಾರಿ₂** (ನಾ). = ಬಲರಿಪು: ಮೊಱೆಯಿಡೆ ಕೇಳ್ದು ಚಕ್ರಧರನುಂ ಜಳಜೋದ್ಭವನುಂ ಬಲಾರಿಯುಂ ಮುಱುಗಿ . . . ಇದಾವನಿಂದಲರ್ದು

ದಾವನಿನೊತ್ತರಿಸಿತ್ತು ಕೌತುಕಂ ಎಂದೆಂದು ನುಡಿಯುತಿರ್ಪನಂ (ಗಿರಿಜಾ. ೬-೭); ಇತ್ತನೋಲಗವನು ಬಲಾರಿಗೆ ಹತ್ತುವಡಿ ತೇಜದಲಿ ಖಳನೆಂಬತ್ತು ಕೋಟಿಕಿರೀಟವರ್ಧನರುಗಳ ಗಡಣದಲಿ (ಕೌರವ. ೬-೮-೦). 'ಬಲಾರಿಚಾಪ' ಪರಾ. [ಸಂ.]

**ಬಲಾರಿಚಾಪ** (ನಾ). ಕಾಮನ ಬಿಲ್ಲು; ಇಂದ್ರಚಾಪ : ಮೇರುವಿನ ತಪ್ಪಲಲಿ ಬೆಳೆದ ಬಲಾರಿಚಾಪವೊ . . . ಜಂಭಾರಿಭವನವನಳ್ಳಿಱಿಯೆ ತ್ರಿಪುರಾರಿಯೊಡ್ಡಿನ ಹೊಳಹಿನಲಿ ಹೊಳೆಹೊಳೆದನಾ ಹನುಮ (ತುವಾ್ಯ. ೧೧-೩೭). [ಸಂ.]

**ಬಲಾವಲೇಪ** (ನಾ). ಶಕ್ತಿಯಿಂದ ಉಂಟಾದ ದರ್ಪ, —ಅಹಂಕಾರ : ಸಹಜಾತ ಬಂಹಿಮದ್ಬಲಾವಲೇಪಕ್ಕಂ ಸಮುಚಿತಶಾಸ್ತ್ರವೃತ್ತವರ್ತನಕ್ಕಂ . . . ತಾನೊರ್ವನೆ ನಿರುಪಮಜನ್ಮಭೂಮಿಯಾಗಿ . . . ಒಡ್ಡೋಲಗಂಗೊಟ್ಟಿರ್ದ ದವಿತಾರಿಯ ಮುಂದೆ ಕೃತಕಗಾಯಿಕೆಯರ್ ನಿಲೆ (ಶಾಂತಿ. ೩-೪೯ ವ) ; ಅದನಾಳ್ವಂ . . . ನಿಜಭುಜಬಲಾವಲೇಪಪ್ರತಾಪಾಟೋಪನಿರ್ಜಿತಾನೇಕಶತ್ರುಪಂಬರಸಂ (ಅಜಿತ. ೨-೨೩ ವ). [ಸಂ.]

**ಬಲಾಸ** (ನಾ). ವಾತ, ಶ್ಲೇಷ್ಮಗಳಿಂದ ಕೊರಳಲ್ಲಿ ಉಂಟಾಗುವ ಒಂದು ಬಗೆಯ ಗಡ್ಡೆ, —ಗಂಟು : ವಾತಶ್ಲೇಷ್ಮಗಳು ಕೊರಳಲ್ಲಿ ಗಾತ್ರವಾಗಿ ಉನ್ನತವಾಗಿ ಇದ್ದ ಗ್ರಂಥಿಯನು ಉಂಟುಮಾಡುವವು. ಆ ಗ್ರಂಥಿ ಬಲಾಸವೆನಿಸಿಕೊಂಬುದು (ವೈದ್ಯಸಾ. II, ೦೦೬). [ಸಂ.]

**ಬಲಾಹ** (ನಾ). ಒಂದು ಬಗೆಯ ವಿಷ : ಪಂಚವಿಂಶತಿಸ್ಥಾವರ ವಿಷನಾಮಂಗಳ್ ಸಲೆ ಮುಸ್ತೆ ವತ್ಸನಾಭಂ ಬಲಾಹ[ಪಾಠಾಂ. ಬಲುಹುಂ] . . . ಏಕವೀರಂ (ಖಗೇಂದ್ರ. ೨-೩) ; ಬಲಾಹವೆಂದು, ವತ್ಸನಾಭವೆಂದು, ಮುಸ್ತಕವೆಂದು . . . ರೋಹಿಣವೆಂದು, ಮುದ್ಗರವೆಂದು, ಹೀಗೆ ಸ್ಥಾವರವಿಷ ಇಪ್ಪತ್ತೈದುಭೇದಂಗಳಿಂದ ಭಿನ್ನವಾಗಿ ಇಹುದು (ವೈದ್ಯಸಾ. II, ೦೭೭). [ಸಂ. ?]

**ಬಲಾಹಕ, ಬಳಾಹಕ** (ನಾ). ೧. ಮೋಡ ; ಮುಗಿಲು ; ಮೇಘ : "ಅಭ್ರಂ, ಅಬ್ದಃ, ಘನಃ . . . ಜೀಮೂತಃ, ಬಲಾಹಕಃ — ಈ ೧೦ ಮುಗಿಲ ಪೆಸರ್" (ಹಲಾಯು. ೦೧-೫೬); ಬಲಾಹಕಪುಂಜಕಾಂತಿಯು ಪಿಂಗತರ ಮುಖ ಕೇಶದುನ್ನತಿಯು ಕಂಜನಾಭನ ಮೂರ್ತಿ ಶೋಭಾರಂಜಿತನು (ತುವಾ್ಯ. ೩-೪). ೨. ಅತಿಶಯವಾಗಿ ಮಳೆ ಸುರಿಸುವುದೆಂದು ಭಾವಿಸಲಾದ ಪ್ರಳಯಕಾಲದ ಏಳುಮೇಘಗಳಲ್ಲಿ ಒಂದು : ಅಮರಸಮಿತಿಯ ತಂದ ಪಾಲ್ಗಡಲ ಪಾಲಂ ಪುಷ್ಕಲಾವರ್ತ ಬಲಾಹಕಾಂಬುದಂಗಳ್ ಕನಕಾಚಳಚೂಳಿಕೆಯೊಳ್ ಸುರಿವುತಿರ್ಪಂತಿಂದ್ರರುಂ ಭಗವದುತ್ಸೇಪದೊಳ್ ಸು[ರಿ]ಯೆ (ಶಾಂತಿ. ೦೦-೪೫ ವ); ಕರಿಯ ಬಲಾಹಕದೊಳು ಹರಿದಾಡುವ ಕರ ಸೊಗಯಿಪ ಮಿಂಚಿನಂತೆ (ಜ್ಞಾನಸಿ. ೦೬-೦೯). ೩. ಒಂದು ಬಗೆಯ ಪಕ್ಷಿ; ಬೆಳ್ಳಕ್ಕಿ : ಶುಕಪಿಕಬಕಬಲಾಹಕಟಿಟ್ಟಿಭಕಾದಿ ಪಕ್ಷಿಗಳ ಕೋಲಾಹಲಕಲಕಲಧ್ವನಿಗಳಿಂದಲೂ . . . ಪ್ರಕಾಶಿಸುತ್ತಿದ್ದವು (ಭುಜಬ. ೪೭). ೪. ವಿಷ್ಣುವಿನ ನಾಲ್ಕು ಕುದುರೆಗಳಲ್ಲಿ ಒಂದು. ೫. ಒಂದು ಬಗೆಯ ಹಾವು. **ಬಳಾಹಕ** : ೧. ವರಯುವತಿ ಬಂದಳು . . . ನವಬಳಾ [ಪಾಠಾಂ. ವಲಾ] ಹಕದೊಳಗೆ ಮಿಂಚಿನ ಗಮಿಸಹಿತ ಮಣಿಮೇಘವಾವಿರ್ಭವಿಸಿತೆನೆ ದಂಡಿಗೆಯನಿಳಿದಳು ಹೊಕ್ಕಳೋಲಗವ (ತುವಾ್ಯ ಉ. ೬-೦೬). [ಸಂ.]

**ಬಲಿ$_1$** 'ಬಲ್'$_1$ ನೋ.

**ಬಲಿ$_2$** (ಗು). ೧. ಶಕ್ತಿಶಾಲಿಯಾದ : ಬಲಿಸೌಮಿತ್ರಿಸಮೇತರಾಮನ ನಿಳಾಸಂಜಾತೆಯುಂ ಮತ್ತೆ ದೋರ್ಬಲಶತ್ರುಘ್ನಪುರಸ್ಥನಾದ ಭರತಕ್ಷ್ಮಾಪಾಲನಂ ಕಂಡು . . . ನಮಸ್ಕಾರಂಗಳಂ ಮಾಡಿದಂ (ಜಗದಕ. ೦೧-೩೭). (ನಾ). ೨. ಗಟ್ಟಿ; ದೃಢ: 'ಬಲಿಕೆಯ್', 'ಬಲಿವಿಡಿ' ಪರಾ. ೩. ಬಲಿಷ್ಠನಾದವನು ; ಶಕ್ತಿಶಾಲಿ : ಶ್ರೀಯುವತೀಪ್ರಿಯಂ ಬಲಯುತಂ ಬಲಿದರ್ಪಹರಂ . . . ಆದಿಪುರುಷಂ ಪುರುಷೋತ್ತಮನೀ ಚಳುಕ್ಯನಾರಾಯಣದೇವನೀಗೆಮಗೆ ಮಂಗಳಕಾರಣಮುತ್ಸವಂಗಳಂ (ಗದಾಯು. ೦-೦) ; ಶ್ರೀಯು ಮನಃಪ್ರಿಯಂ . . . ಬಲಜಾ್ಯಯನಭೇದ್ಯಮನ್ತ್ರಕುಶಲಂ ಬಲಿಬನ್ಧನನನ್ತ ರಾಯನಾರಾಯಣನೆಮ್ಬುದುರ್ವ್ವಿನರಸಿಂಹನರೇನ್ದ್ರನ ಮನ್ತ್ರಿ ಬೂಚನ (ಎಕ. V, ಅರಸೀ. ೦೬೨-೨೯; 1168); ಆ ಬಲಿಯುಂ ದೈತ್ಯಕದಂಬಕ್ಕೆಬಲಿಯುಂ ಯತ್ನೀಕೃತಶ್ಮಶ್ರುಭೃದ್ಬಲಿಯುಂ ಮೆಟ್ಟಿ ರಸಾತಳಕ್ಕಿಟ್ಟಿದ್ಯೆ ನೀಂ ವಾಮನಾಕಾರದಿಂ (ಜಗಂ. ೦-೫೯). ☞ ಈ ಮೂರು ಪ್ರಯೋಗಗಳಲ್ಲಿ ಬಳಸಿರುವ 'ಬಲಿ' ಶಬ್ದಕ್ಕೆ 'ಬಲಿಚಕ್ರವರ್ತಿ' ಎಂಬುದಾಗಿ ಶ್ಲೇಷಾರ್ಥವನ್ನೂ ಕೊಡಬಹುದು. ೪. ಯೋಧ ; ಸೈನಿಕ. ೫. ಬಲರಾಮ. ೬. ಒಂದು ಬಗೆಯ ಗಿಡ. ೭. ಹಂದಿ. ೮. ಎಮ್ಮೆ. ೯. ಒಂಟೆ. [ಸಂ. ಬಲಿನ್]

**ಬಲಿ$_3$, ಬಳಿ$_3$** (ನಾ). ೧. (ಹಿಂದೆ ರಾಜರಿಗೆ ಸಲ್ಲಿಸುತ್ತಿದ್ದ) ತೆರಿಗೆ : ಸುಂಕ ; ಕಂದಾಯ : "ಬಲಿ ಕರಾಹ್ವಯಂ ಸಿದ್ಧಾಯಂ" (ವಸ್ತುಕೋ. ೬೨-೬೦); "ಭಾಗಧೇಯಃ, ಕರಃ, ಬಲಿಃ — ೩ ಅರಸಿಗೆ ಕೊಡತಕ್ಕ ಕಾಣಿಕೆ, ಕಪ್ಪ, ಕಂದಾಯ, ಕವಳಿಗೆ, ತೆರಿಗೆ, ಮುಂತಾದುವುಗಳ ಪೆಸರುಗಳು" (ಸಿದ್ಧಾಂತಿ. ೨೪೩). ೨. ಕಾಣಿಕೆ ; ಕೊಡುಗೆ : 'ಬಲಿಗೊಳ್' ಪರಾ. ೩. ಪೂಜೆ ; ಆರಾಧನೆ : "ಅರ್ಚಾ, ಪೂಜಾ, ಸಪರ್ಯಾ, ಉಪಹಾರಃ, ಬಲಿಃ — ಈ ೫ ಪೂಜೆ" (ಹಲಾಯು. ೨೦-೦೨೬) ; ಉತ್ಸವ, ಸ್ನಾಪನ, ಬಲಿಗಾಗಿ ಬೇಕಾದ ಮೂರ್ತಿಗಳು ಮಾತ್ರ ಲೋಹದಿಂದ ನಿರ್ಮಿತವಾಗುವುವು (ಶಾಕದ. ೫೦೬). ೪. ದೇವತೆಗಳ ಪ್ರೀತ್ಯರ್ಥವಾಗಿ ಗೃಹಸ್ಥನು ಪ್ರತಿದಿನವೂ ನಡೆಸಬೇಕಾದ ಪಂಚಯಜ್ಞಗಳಲ್ಲಿ ಒಂದು ; ತನ್ನ ದಿನದ ಆಹಾರದಲ್ಲಿ ಒಂದು ಭಾಗವನ್ನು ಪ್ರಾಣಿ, ಪಕ್ಷಿ ಮುಂತಾದುವುಗಳಿಗೆ ಕೊಡುವ ಧಾರ್ಮಿಕ ಕ್ರಿಯೆ ; ಭೂತಯಜ್ಞ. ೫. ಆಹುತಿಯಾಗಿ ಅರ್ಪಿಸುವ ಅನ್ನ, ದ್ರವ್ಯ, ಪ್ರಾಣಿ, ಮನುಷ್ಯ ಮುಂತಾದುವು : ಬಲಿಭುಗ್ವ್ರಜಕ್ಕೆ ಬಲಿಯಂ ತಾನಿಕ್ಕುವಳ್ (ಕಾದಂಪೂ. ೩೭೭); ಪಟಿದ ಪೂಮಾಲೆಗಳ ಬಣ್ಣಗೂಳ್ಗಳ ಬಲಿಯ ಮೊಱಿದ ಪಳೆಗೊಳ್ಳಿಗಳ . . . ಸುಡುಗಾಡೊಳಾ ಮಂತ್ರಿ ಚಂಡಿಕಾಲಯದೆಡೆಗೆ ನಡೆತಂದನು (ಕೃಮಹಾ. ೩೦-೫೫); ದೇವತೆಯ ಬಲಿಪೀಠಗಳನ್ನು ಗುಡಿಸುವವರಿಲ್ಲದೆ ಒಪ್ಪಿಸಿದ ಹಿಂದಿನ ಬಲಿಗಳು ಕೊಳೆತು ನಾರುತ್ತಿದ್ದುವು (ಕಳಿಕಾ. ೦೬). 'ನರಬಲಿ', 'ಬಲಿಪಶು' ಪರಾ. ೬. ಆಹಾರವನ್ನು ಸೇವಿಸಿದ ಮೇಲೆ ಉಳಿಯುವ ಭಾಗ ; ಎಂಜಲು ; ಉಚ್ಛಿಷ್ಟ. ೭. ಆಹಾರ ; ಅನ್ನ : "ಕೂರಮನ್ನಂ ಭಕ್ತಮೋದನಂ ಭಿಸ್ಸಮಾಹಾರಮಶನಂ ಬಲಿಯೆನಲ್ಕೆಮೋಗರ ಮಕ್ಕು" (ಶಬ್ದಗಮ. ೬೩-೦). ೮. ಹಬ್ಬ ; ಉತ್ಸವ : ಬಲಿ ಚಾಯನಂಗಳುಂ ಮಂಗಲತೂರ್ಯಮುಮೆಸೆಯೆ ಗೇಯರವಮುಂ ಪೊಂದೊಟ್ಟಿಲ ಪೊಳೆಪುಂ ರಂಜಿಸುತಿರೆ ಕಲನಾದದ ಗೋಪಕಾಂತೆಯರ್ ನೆರೆದು (ಜಗಂ. ೩-೨೬). 'ಬಲಿಮೂರ್ತಿ' ಪರಾ. ೯. ಒಬ್ಬ ಪುರಾಣಪ್ರಸಿದ್ಧನಾದ ದೈತ್ಯಚಕ್ರವರ್ತಿಯ ಹೆಸರು ; ಪ್ರಹ್ಲಾದನ ಮಗನಾದ ವಿರೋಚನನ ಮಗ ; ಬಾಣಾಸುರನ ತಂದೆ ; ☞ ಈತನನ್ನು ವಿಷ್ಣುವು ವಾಮನಾವತಾರದಲ್ಲಿ ಮೂರಡಿಯಷ್ಟು ಭೂಮಿಯನ್ನು ಬೇಡಿ ತ್ರಿವಿಕ್ರಮನಾಗಿ ಬೆಳೆದು ಪಾತಾಳಕ್ಕೆ ಮೆಟ್ಟಿದನೆಂಬ ನಂಬಿಕೆಯಿದೆ : ಬಲಿಯಂ ವಾಮನರೂಪದಿಂದಮೆ ವಲ್ಮ ಮುಂ ಬೇಡಿದೆಂ ಭೂರಿಭೂತಲಮಂ (ಶಂಕಪ. ೯-೨೦); ಸಿರಿಯೊಳಾ ಬಲಿ ಭೋಗದೆಡೆಯಲಿ ಸುರಪ ರೂಪದಿ ಮದನ ಹಗೆಗಳ ಹರಣದಲಿ ಕಾಲಾಗ್ನಿ

ರುದ್ರನು ಭೂಪ ದಶರಥನು (ಕಾಶಿಖ. ೧-೨೪); ಬಲಿಯು ದಾನವ ಗೃದ ಚರಿತೆಯನು ಹಿಂತೆ ಕಲಿಯಲಿಲ್ಲವೆ ನೀವು? (ಕುಷ್ಠ. ೧೬-೧). 'ಬಲಿಂದವು' ಪರಾ. ೧೦. ಚಾಮರದ ಹಿಡಿ, – ಹಿಡಿಕೆ. ೧೧. ನೆರಿಗೆ; ಮಡಿಕೆ; ಸುಕ್ಕು: 'ಬಲಿಮುಖ' ಪರಾ. ೧೨. [ಜೈನ] ಒಂಬತ್ತುಮಂದಿ ಪ್ರತಿನಾರಾಯಣರಲ್ಲಿ ಒಬ್ಬ: 'ಬಲಿಸ್ತವನ, 'ಬಲಿಸ್ನಪನ' ಪರಾ. ೧೩. ಕಾಗೆ; ವಾಯಸ: "ಕಾಗೆಯಲ್ಲಿ ಬಲಿಯೆಂಬುದಕ್ಕು" (ಮಂಗರಾ. ೦೪೦-೦೨). ೧೪. ಗಂಧಕ. ೧೫. ಸ್ವಭಾವ; ಪ್ರಕೃತಿ: "ಸುಜನೋತ್ಸಹ ದೃಢದಳಪತಿ ರಜಕ ಬಲೀಂದ್ರಂ ಸುಕೀರ್ತಿಸಾಂದ್ರಂ ಕಾಕವ್ರಜ ಪ್ರಕೃತಿ ಬಲಿಕೊಡುವದು ನಿಜದಿಂ ಪನ್ನೊಂದುನಾಮ ಬಲಿಶಬ್ದಂಗಳ್" (ನಾನಾಕಂ. ೪೬); "ಸುಜನ ಬಲೋತ್ಸವಂ ಪ್ರಕೃತಿ ಗಂಧಕ ಕೀರ್ತಿಚಮೂಪ ವಾಯಸಂ ರಜಕ ಬಲೀಂದ್ರಪರ್ವತಗಳುಂ ಬಲಿಯಕ್ಕು" (ನಾನಾಕ. ೦೬). ಬಳಿ₃: ೧. ಬಳಿಯನೆಲ್ಲವ ತೆತ್ತು ಹೇಟಿನೆತ್ತಿ ಹೊಳೆಯ ಹೊನ್ನೂರು ತಾವರೆಗೆಱೆಯ ಲಿಂಗದಲಿ ತಿಳಿಯೆ ಕ್ರೀಭಾಂಡ ವಿಕ್ರಯ ಸುಜ್ಞಾನ (ಶಿವಗೀ. ೦೪೦-೯೬೬); ಅಳಿವ ಅನ್ಯಾಯ ಕಿಱುಕುಳ ತಪ್ಪು ತೌಡಿಪೊಳಗಾದ ಸಮಸ್ತ ಬಳಿಸಹಿತ ಆಗಿ . . . ಪುತ್ರಪೌತ್ರಾದಿಗಳ್ಗೆ ಸಲ್ವುದು (ಎಕ. XVI, ಶಿಕಾ. ೬೮-೨೪; 1318); ಆ ಗ್ರಾಮದ ಚತುಸ್ಸೀಮೆಯ ಒಳಗುಳ ನಿಧಿ ನಿಕ್ಷೇಪ . . . ಸರ್ವ್ವಪ್ರಾಪ್ತಿ ಸರ್ವಸ್ವ ಬಳಿಸಹಿತವಾಗಿ ಆಚಂದ್ರಾರ್ಕ್ಕಸ್ಥಾಯಿ ಆಗಿ ಸುಖದಿಂ ಭೋಗಿಸೂದ ಎಂದು . . . ಕೊಟ ಗ್ರಾಮ (ಮೈಅಂ. ೦೪೪೩. ೧೮-೨೬; 1488). ೯. ಶ್ರೀಕಾನ್ತಾಪತಿ ವಿಕ್ರಮೋರ್ಜ್ಜಿತ ಬಳಿಕ್ಷೋಣೀತಳಂ ವಿಶ್ವಲೋಕೈಕಸ್ತುತ್ಯದಶಾವತಾರಯುತಸುದ್ಯಚ್ಛಂಖಚಕ್ರಾಬ್ಜಲಕ್ಷ್ಮಾ ಕೀರ್ಣ್ನಾತ್ಮಕರಾಗ್ರನೆನ್ನಪೊಲಿವಂ ತಾನೆನ್ದು ಸಾನನ್ದದಿಂದಾ ಕಲ್ಪಾಯುವನೀಗೆ ಕೇಶವಚಮೂಪಂಗಾಗಳುಂ ಕೇಶವಂ (ಎಕ. VII, ಶಿಕಾ. ೦೨೩-೨; 1159). ☞ ಇಲ್ಲಿರುವ 'ಬಳಿ' ಶಬ್ದಕ್ಕೆ (ಶಕ್ತಿಶಾಲಿ, ಬಲಿ ಚಕ್ರವರ್ತಿ ಎಂಬ) ಶ್ಲೇಷಾರ್ಥಯುತವಾದ ಚಮತ್ಕಾರವಿದೆ. ಬಲಿ ಬೀಳು = ತುತ್ತಾಗು: ಈಡಾಗು: ರಾಯರು ದುರಾಶೆಗೆ ಬಲಿ ಬಿದ್ದು ಸೊಸೈಟಿಯ ಹಣದ ಋಣ ಬೆಳೆಸುತ್ತಾ ಬರುತ್ತಿದ್ದುದರಿಂದ ಮುಂದೆ ಏನಾಗಬಹುದೆಂದು ಊಹಿಸುವುದು ಕಷ್ಟವಾಗಿತ್ತು (ಮರೀ. ೦೬೩). **ಬಲಿಯಾಗು** = ೧. ಆಹುತಿಯಾಗು; ಮರಣವನ್ನು ಹೊಂದು: ಮೂವರು ಬಾಲಕರು ಬಂದು, ಕಟುಕರಿಗೆ ಹಣವಿತ್ತು, ಕುಮಾರರಾಮನನ್ನು ಬಿಡಿಸಿಕೊಳ್ಳುತ್ತಾರೆ. ಚೆನ್ನಿಗರಾಮ ಬಲಿಯಾಗುತ್ತಾನೆ (ಕುಮಾರಾಸಾಂ. ೨೨೯); ಖಾಸಗಿ ಸಾಹುಕಾರರ ಲಾಭಕ್ಕಾಗಿ ಸರ್ವಸಾಧಾರಣರ ಬದುಕು ಬಲಿಯಾಗದಂತೆ ಏರ್ಪಡಿಸಬೇಕು (ಹಣಪ್ರ. ೦೧೦). ೨. ಈಡಾಗು; ಗುರಿಯಾಗು: ಕಾಲಚಕ್ರದ ಸುಖದುಃಖಗಳಿಗೆ ಸಾಮಾನ್ಯಜೀವಿ ಬಲಿಯಾದಷ್ಟು ಈತ ಬಲಿಯಾಗುವುದಿಲ್ಲ (ರಮೇಶಾ. ೯೯). **ಬಲಿಹಾಕು** = ೧. ದುಷ್ಟಶಕ್ತಿಗೆ ಪ್ರಾಣಿ ಅಥವಾ ಆಹಾರವನ್ನು ಬಲಿಯಾಗಿ ಅರ್ಪಿಸು; ಆಹುತಿಕೊಡು: (೬). ೨. ಬಲಿಯನ್ನು ಅರ್ಪಿಸಿ ಮಂತ್ರ ಹಾಕುವುದರ ಮೂಲಕ ದುಷ್ಟಶಕ್ತಿಯನ್ನು ಓಡಿಸು: (೬). ೩. ಆಹುತಿಯಾಗಿ ತೆಗೆದುಕೊಳ್ಳು: ರಾಜಸೂಯ ಯಾಗಕ್ಕೆ ಮುಂಚೆ ಭೀಮನು ಜರಾಸಂಧನನ್ನು ಹೇಗೆ ಬಲಿ ಹಾಕಿಬಿಟ್ಟ ನೋಡು! (ವಚನಾ. ೦೦೩). ೪. (ಆಲಂ) ಶಾಸ್ತಿಮಾಡು; ಶಿಕ್ಷಿಸು: ಡಾಕ್ಟರರನ್ನು ಕರೆಯಲು ಹೋದರೆ ನಿನ್ನನ್ನೇ ಬಲಿಹಾಕಿಯೇನು (ವಾತ್ಸಲ್ಯ. ೨೬೩). [ಸಂ.]

**ಬಲಿಂದಮ** (ನಾ). ಬಲಿಯನ್ನು ದಮನಮಾಡಿದವನು; ವಾಮನ; ವಿಷ್ಣು: ಮುಂದಣ ಮಿಗಮುಂ ಕಟೀಪದೆ ಸಂದಿಸಿ ಬೞಿಗೊಳ್ವ ಮಿಗಮುಮಂ ಕಟೀಪದೆ ತಾನೊಂದಳವಿದಪ್ಪದೆಚ್ಚು ಬಲಿಂದಮನಿಂ ಬಿಲ್ಲಬಲ್ಮೆಯಂ ಪೊಗೞಿಸಿದಂ (ಶಂಕಖಾ. ೩-೪೮). [ಸಂ.]

**ಬಲಿಕರ್ಮ** (ನಾ). ಪೂಜಾಕಾರ್ಯ; ಅರ್ಚನೆ; ಆರಾಧನೆ: "ಉಪಹಾರಂ ಬಲಿಕರ್ಮಂ ಸಪರ್ಯೆ ಪೂಜಾಭಿಧಾನಮರ್ಚನೆಯಕ್ಕುಂ" (ಚತುಕೋ. ೨೦-೦೪); ಸೌಮಿತ್ರಿ . . . ನದಿಗೆ ನಡೆದೊಡನೆ ಮಜ್ಜನಗೈದು ಕಮಲಕುಮುದಂಗಳಂ ಪಿಡಿದು ಬಂದೆಲೆವನೆಗೆ ಬಲಿಕರ್ಮಗಳ ರಚಿಸಿ ಬಿನ್ನಪಂಗೈದನೊಲಿದು (ಪಂಚಾರಾ. ೩-೬-೦೪). [ಸಂ. ಬಲಿಕರ್ಮನ್]

**ಬಲಿಕಲ್ಲು** 'ಬಲಿಗಲ್ಲು' ನೋ.

**ಬಲಿಕಾರ್ಯ** (ನಾ). (ಪಿತೃಗಳಿಗೆ) ಬಲಿಯನ್ನು ಅರ್ಪಿಸುವ ಕ್ರಿಯೆ; ಪಿಂಡಪ್ರದಾನ: ಇಂದು ಕೊಲೆಯಿಂ ಸತ್ತ ಹರಿಗೆ ಬಲಿಕಾರ್ಯಕೆ ಧನಂ ದೊರಕದಿರೆ ಫಲ್ಗುನಂ ಕಂದಮೂಲಫಲವ್ಯಂದದಿಂದ ಬಲಿಗೊಟ್ಟು ಸಗ್ಗಕೆಯ್ದಿದಂ (ಶಬ್ದರಾ. ೦೦-೦೩೪). [ಸಂ.]

**ಬಲಿಕೆ** 'ಬಲ್ತೆ' ನೋ.

**ಬಲಿಕೆಅನ್ನ** (ನಾ). (ಕರಾ) ಸರಿಯಾಗಿ ಬೇಯದೆ ಇರುವ ಅನ್ನ; ಬಿರುಸಾದ ಅನ್ನ. [ಬಲಿಕೆ (<ಬಲ್ಕೆ) + ಅನ್ನ₁]

**ಬಲಿಕೆಯ್** (ಕ್ರಿ). ದೃಢಗೊಳಿಸು; ಗಟ್ಟಿಗೊಳಿಸು: ಮನಮಂ ಬಲಿಕೆಯ್ದು ಶುಕನಾಸನನಿಂತೆಂದಂ (ಕಾದಂಬ. ೯೯೩). [ಬಲ್₂+ಕೆಯ್₁]

**ಬಲಿಕೆವಂತ** (ನಾ). ತಿಳಿದವನು; ವಿಚಾರಜ್ಞ: ಲಿಂಗಕ್ಕೊಂದು ತನಗೊಂದೆಂಬಾಗ ಆ ಅಂಗ ಲಿಂಗವಿರೋಧಿಯೇ ಆ ಇಷ್ಟಲಿಂಗವ ಆತ್ಮನ ನೆಲೆಯಲ್ಲಿ ಅಱಿದಿಹೆನೆಂಬುದು ಇಂಬಲ್ಲವೆ ಕುಲ ಛಲ ವಾಗ್ವಾದದ ಮಾತಲ್ಲದೆ ಬಲಿಕೆವಂತರ ನೀತಿಯಲ್ಲ (ಸೋಲಿಗವ. ೦೨೬-೯೬೨). [ಬಲಿಕೆ (<ಬಲ್ಕೆ) + –ವಂತ]

**ಬಲಿಕೊಡು** 'ಬಲಿಗೊಡು' ನೋ.

**ಬಲಿಗಂಬ** (ನಾ). ಆಹುತಿಯಾಗಿ ಕೊಡುವ ಪ್ರಾಣಿಗಳನ್ನು ಕಟ್ಟುವ ಕಂಬ: ಬಲಿಗಂಬಕ್ಕೆ ಬಚ್ಚಪ್ಪನ ಮಗ ದೇವಿಗೆ ಬಲಿಯಾಗಲು ಕೊಡಲ್ಪಟ್ಟಿದ್ದ ಕೋಣವನ್ನು ಕಟ್ಟಿದ್ದ (ಊರುಸ. ೬). [ಬಲಿ₃ + ಕಂಬ₁ (<ಕಂಭ)]

**ಬಲಿಗಟ್ಟು** (ಕ್ರಿ). ಬಲಿಯಾಗಿ ಕೊಡು; ಆಹುತಿಯಾಗಿ ಅರ್ಪಿಸು: ಎಲೆ ಸುಕುಮಾರ ನಿನ್ನ ಸುಕುಮಾರಶರೀರಮನಯ್ಯೊ ಪೆತ್ತರಿಂದಲಸದೆ ಬಂದ ರಾಕ್ಷಸತಪಸ್ವಿಗೆ ಕೇಳ್ಬಲಿಗಟ್ಟಿ ಮಾಂಸಮಂ ಸುಲಿದುಣಲಿಕ್ಕಲಿರ್ದಪರ್ (ಪ್ರಕಶ. ೦೪-೬೯). [ಬಲಿ₃+ಕಟ್ಟು₁₁]

**ಬಲಿಗಲ್ಲು, ಬಲಿಕಲ್ಲು** (ನಾ). ಬಲಿಯನ್ನು ಇಡುವ ಕಲ್ಲು: ಎಷ್ಟೋ ಸಲ ಹಸಿವೆ ತಡೆಯಲಾಗದೆ . . . ಬಲಿಗಲ್ಲಿನ ಮೇಲೆ ಸುರಿದಿದ್ದ ಅಗಳುಗಳನ್ನು ಹೆಕ್ಕಿ ತಿಂದಿದ್ದೇನೆ (ಕೂಮುಮ. ೩೩). ಬಲಿಕಲ್ಲು: ಗುಡಿಯ ಸುತ್ತಲೂ ಪೌಳಿ–ಸಂತ್ರಿನ ನಡುವಿನಲ್ಲಿ ಅಲ್ಲಲ್ಲಿ ಬಲಿಕಲ್ಲುಗಳು_ನಾಲ್ಕು ದಿಕ್ಕಿನಲ್ಲೂ ಭಕ್ತರು ಕುಳಿತುಕೊಳ್ಳಲು ಅನುಕೂಲವಾಗುವಂತೆ ಚಾವಡಿಗಳು (ದೇಪಹಂ. ೩೦). [ಬಲಿ₃+ಕಲ್ಲು (<ಕಲ್₃)]

**ಬಲಿಗಿ** 'ಬಲಿಗೆ' ನೋ.

**ಬಲಿಗುಡು** 'ಬಲಿಗೊಡು' ನೋ.

**ಬಲಿಗೂಟ್** (ನಾ). ಬಲಿಯಾಗಿ ಅರ್ಪಿಸುವ ಆಹಾರ; ಆಹುತಿಯಾಗಿ ಕೊಡುವ ಅನ್ನ: ಅಗ್ಗಿಗೊಂಡದೊಳ್ ಪೊತ್ತುವ ನಱುನೆಯ್ಯು ನೆಲ್ಲರಳ ಬಲಿಗೂಟಿ, ಸಿರಿಕಂಡಸೆಕ್ಕೆಯ ಸವುದೆಯ ಕಮಱು ಪೊರೆದೆಲ್ಲೆಡೆಯೊಳೆತ್ತಂ ಪಳಂಚಲೆವೆಲರಿಂ . . . ತಪೋವನಮೊಂದು ಕಣ್ಗೊಳಿಸಲೊಡಂ (ರಾಮಾಶ್ವ. ೬೪-೪). [ಬಲಿ₃+ಕೂಟ್₁]

**ಬಲಿಗೆ,** ಬಲಗಿ, ಬಲಿಗಿ, ಬಲ್ಲಗ, ಬಲ್ಲಗಿ, ಬಿಲಿಗಿ (ನಾ). ಒಂದು ಬಗೆಯ ಮರ: ಕೆಲವು ಕಡೆಗಳಲ್ಲಿ ತೇಗ, ನಂದಿ, ಹೆಬ್ಬಲಸು, ಬಲಿಗೆ . . . ಮುಂತಾದ ಗಗನಚುಂಬಿತವೃಕ್ಷಗಳಿದ್ದರೆ ಕೆಲವು ಕಡೆಗಳಲ್ಲಿ . . . ಗಿಡಬಳ್ಳಿ ಪೊದೆಗಳಿದ್ದವು (ಕಂಜಕಂ. ೨). ಬಲಗಿ: ಸಹ್ಯಾದ್ರಿಗಾಗುಂಬೆಯಿಂಟ

ಯೊಳ್ ಬಲಗಿಯ ಬೃಹತ್ತರುಶ್ರೇಣಿ ಕಿಕ್ಕಿರಿವವೋಲ್ ಪಂಕ್ತಿಪಂಕ್ತಿ ಸ್ತಂಭಗಳ್ . . . ಇರ್ದುವಗಣಿತಂ (ಶ್ರೀರಾಮಪ. ೪೩೪-೨೩೩); ಬಲಗಿಯ ಮರದಂತೆ ತಲೆಯೆತ್ತಿ ನೇರಾಗಿ ನೋಡು ನೀಲಾಕಾಶದತ್ತ (ಇಂಹಾಪ. ೦೩೬-೬೪). **ಬಲಿಗಿ:** ಬಲ್ಲಗಿ, ಬಲಿಗಿ, ಕಿರ್ಬಲ್ಲಿ (ವೃಶಿಗಿ. ೬೩-೦೨೬೪). **ಬಲ್ಲಗ :** "ಬಲಿಗೆ, ಬಲಿಗಿ, ಕಿಬ್ಬಲ್ಲಿ, ಬಲ್ಲಗಿ, ಬಲ್ಲಗ " (ಸಸ್ಯಶಿ. ೦೦೮). **ಬಲ್ಲಗಿ :** ನಾಗಸಂಪಿಗೆ, ಬಲ್ಲಗಿ, ಬಂದಿಗೆ . . . ಜಂಡು, ಬಿದಿರು (ಪಮ್ಯಸು. ೨೩೮). **ಬಲಿಗಿ :** "ಬಲಿಗೆ, ಬಲಿಗಿ . . . ಬಲ್ಲಗ" (ಸಸ್ಯಶಿ. ೧೦೮). [ ದೇ. ॥ ತುಳು. ಬಲಿಗೆ ]

**ಬಲಿಗೆದಱ್,** ಬಲಿಗೆದಱು (ಕ್ರಿ). ಆಹುತಿಗಾಗಿ ಬಣ್ಣದ ಅನ್ನ ಮುಂತಾದುವನ್ನು ಎರಚು: ನಿನ್ನನೈನೂರ್ತುಂಡುಗೆಯ್ದು ಬಲಿಗೆದರ್ಪೆಂ (ಶಬಕೃ. ೪೯-೪೧); ಅಂತೈತಂದು ಮಣಿಮುಕುಟಕಿರಣಮರುಣಕುಸುಮಮಂ ಪದಪೀಠದೊಳ್ ಬಲಿಗೆದರ್ದಂತಾಗೆ ಬಾಗಿ ಪೊಡಮೊಟ್ಟು (ರಾಜಶೇ. ೦೪-೩ ವ). **ಬಲಿಗೆದಱು:** ಪಸಿಯ ನೇತ್ರಮಂ ಪಚ್ಚವಡಿಸಿದಂತೆ ಪಸುರ್ಪುವಡೆದ ನೆಲದೊಳ್ ಪಚ್ಚೆಯ ಪದ್ಮರಾಗದ ಪರಲ್ಗಳಂ ಬಲಿಗೆದಱಿದಂತೆ ಪಸುರ್ಪೆಸೆವ ನೆಲದೊಳು ಉಪಾಶ್ರಯಂಬಡೆದಳಂಕರಿಸುವಿಂದ್ರಗೋಪಂಗಳುಮಂ ಕಿಸುಗಾಡ ನೆಲಂಗಳೆಳದಳಿರ ಬಣ್ಣಮಂ ಕೆಯ್ಕೊಂಡು (ಶಂಪಭಾ. ೬-೨೩ ವ); ಒಡನೆ ಗಜಱುವ ವಾದ್ಯದಲಿ ಕೆಂಪಡರಿದೋಗರಸಹಿತ ಭೂತಕೆ ಬಡಿಸಿದರು ಮಾಂತ್ರಿಕರು ಬಲಿಗೆದಱಿದರು ದೆಸೆದೆಸೆಗೆ (ಕುವ್ಯಾದ್ರೋ. ೯-೩).

[ ಬಲಿ$_{3}$+ಕೆದಱ್$_{1}$ ]

**ಬಲಿಗೆದಱು** 'ಬಲಿಗೆದಱ್' ನೋ.

**ಬಲಿಗೆಯ್** (ಕ್ರಿ). ಆಹುತಿಯಾಗಿ ಅರ್ಪಿಸು; ಬಲಿಕೊಡು: ದುಶ್ಶಾಸನ ರಕ್ತಪಾನದೊಳೆ ಸೊರ್ಕಿದ ಪಾತಕನಂ ಪೊರಳ್ಚಿ ಕೊಂದೀ ಸಮರಾವನೀತಳದೊಳು ಬಲಿಗೆಯ್ವನಮೊಲ್ಲೆನಲ್ತೆ (ಶಂಗಭಾ. ೦೩-೦೪); ಕುತ್ತು ಕುತ್ತು ಬಲಿಗೆಯ್ ಬಲಿಗೆಯ್ ಪೆಱುವೆಣ್ಗೆ ಸೋಲ್ವ . . . ಕಳ್ವ ಕಳ್ಳರೊಳ್ ನುಡಿವಟಿಯಾದನೆಂದು ನವನಾರಕರಂ ಪಱಿದೆಯ್ದೆ ನಾರಕರ್ (ಅಪಪು. ೧೦-೧೦). [ ಬಲಿ$_{3}$ + ಕೆಯ್$_{1}$ ]

**ಬಲಿಗೊಡು,** ಬಲಿಕೊಡು, ಬಲಿಗುಡು (ಕ್ರಿ). ೧. =ಬಲಿಗೆಯ್: ಅಂದು ಕೊಲೆಯಿಂ ಸತ್ತ ಹರಿಗೆ ಬಲಿಕಾರ್ಯಕೆ ಧನಂ ದೊರಕದಿರೆ ಫಲ್ಗುನಂ ಕಂದಮೂಲಫಲವೃಂದದಿಂ ಬಲಿಗೊಟ್ಟು ಸಗ್ಗಕೆಯ್ದಿದಂ (ಶದ್ಯಶಾ. ೧೦-೦೩೪; ಆ ದೈತ್ಯನನು ತನ್ನಾಯುಧಕೆ ಬಲಿಗೊಟ್ಟು ಬಳಿಕ ಸ್ಥಾಯಿಧರ್ಮವ ಬಲಿದು ಕೊಟ್ಟನು ದುಂದುಮಾರನೃಪ (ಕುವ್ಯಾಆ. ೧೪-೩೯); ಅಷ್ಟದಿಕ್ಪಾಲರ್ಗೆ ಪೂಜೆಯಂ ಮಾಡಿ ಚೌಷಷ್ಟಿಯೋಗಿನಿಯರ್ಗೆ ಬಲಿಗೊಟ್ಟು (ಕೃಒಭಾ. ೫-೬೨). **ಬಲಿಕೊಡು :** ೧. ಒಂದು ದ್ವೀಪದಲ್ಲಿ ಹಿಂದೂಸ್ತ್ರೀಯರು ಗಂಗಾನದಿಗೆ ಪ್ರೀತಿಯಾಗಿ ತಮ್ಮ ಚಿಕ್ಕ ಮಕ್ಕಳನ್ನು ಬಲಿಕೊಡುತ್ತಿದ್ದರು (ಭೂಗೋಳ. ೩೩). ೨. (ಆಲಂ) ಕಷ್ಟಕ್ಕೆ ಸಿಕ್ಕಿಸಂ; ತೊಂದರೆಗೊಳಗುಮಾಡು : ಸಾಲ ಏರಿದ ಹೊತ್ತಿನಲ್ಲಿ ಆಶ್ರಯವಿತ್ತು ಸಾಕಿದ ಆನಂದನನ್ನೇ ಬಲಿಕೊಡಲೂ ಅವರು ಹೇಸಲಿಲ್ಲ (ಹುರಳ. ೦೬೩); ಇದಕ್ಕಾಗಿ ಪ್ರಸಂಗ ಬಂದರೆ ಕರ್ತವ್ಯ ದಕ್ಷರಾದ ನಿಮ್ಮನ್ನು ಬಲಿಕೊಡಬೇಕಾಗುವದು (ಕುಂಕುಮ. ೪೪). **ಬಲಿಗುಡು :** ೧. ಇಱಿವ ಬಲಿಗುಡುವ ಖೈರಂದಱಿವುದಂ ಸೀಳ್ವ ಪೋಟ್ವ ಪರಪುವ ಗೊಟ್ಟಂಗೊಱಿವಗುಟ್ದು ನಟ್ಟು ಪರೆಪುವ ಪೆಱುವುಮ ಗುರ್ವಪ್ಪ ಚಿತ್ರವಿಧವಧೆಯಿಂದಂ . . . ಪುಟ್ಟುಗುಂ ವಿಭಂಗಜ್ಞಾನಂ (ಶಾಂತಿಕೃ. ೬-೯೦). [ಬಲಿ$_{3}$+ಕೊಡು$_{1}$]

**ಬಲಿಗೊರಡು** (ನಾ). ಬಲಿಯನ್ನು ಕೊಡಲು ಉಪಯೋಗಿಸುವ ಕೊರಡು,—ಮರದ ದಿಮ್ಮಿ : ತೋಂಡಾಂಗುಟ್ಟಿ . . . ಕೆಂಗಲ್ವಣ್ಣದ ಬಲಿಗೊರಡನ್ನೆಳೆದುಯ್ದು ನರಶರಭನ ದೃಷ್ಟಿಗಸ್ವಯಿಸಿ ಎತ್ತಿ ನಿಲ್ಲಿಸಿ (ಮಂಶ್ರತ. ೦೦೯-೦೩). [ಬಲಿ$_{3}$ + ಕೊರಡು$_{1}$ (<ಕೊಱಂಡು)]

**ಬಲಿಗೊಲಿಸು** (ಕ್ರಿ). ಬಲಿಯಾಗಿ ಕೊಲ್ಲಿಸು; ಆಹುತಿ ಕೊಡು: ಸಾಯಿಸು : ಈ ತನ್ನಯ ಮೂರ್ಖತೆಯ ದುರ್ನಯದಿಂದ ಆವಿರ್ಭವಿಸಿ ವಿಜೃಂಭಿಸುತ್ತಿರುವ ವಿಷಮಸೃಷ್ಟಿಯ ಕಣ್ಮಕರನ್ನಳ್ಳಾಡಿಸುವುದಕ್ಕೆಂದು ಲೆಕ್ಕವಿಲ್ಲದ ಮಹಾಸೈನ್ಯಗಳನ್ನೆತ್ತಿಯೆತ್ತಿ ಬಲಿಗೊಲಿಸುತ್ತ. . . ಕೋಳ್ದಿರುತ್ತಿರುವನು (ಮಂತ್ರಕ. ೬೯-೩). [ಬಲಿ$_{3}$ + ಕೊಲಿಸು]

**ಬಲಿಗೊಳ್,** ಬಲಿಗೊಳ್ಳು (ಕ್ರಿ). ೧. ಆಹುತಿಯಾಗಿ ತೆಗೆದುಕೊಳ್ಳು; ನಾಶಮಾಡು : ಎಲೆ ಎಲೆ ಪಂದಿಪಂದಿ ಮಿಗೆ ಬಂದುದು ಬಂದುದು ಭಿಲ್ಲರೆಲ್ಲರಂ ಬಲಿಗೊಳಲೆಂದು ವ್ಯತ್ಯು ಕಿಟಿರೂಪಮನಾಳ್ದವೊಲ್ (ಕಬಕಂ. ೪-೬). ೨. ಕಾಣಿಕೆಯಾಗಿ ತೆಗೆದುಕೊಳ್ಳು ; ದಾನವಾಗಿ ಪಡೆ : ಆಱಡಿಗೊಂಡು ಮೂಱಡಿಯನಾ ಬಲಿಯಿಂ ಬಲಿಗೊಂಡು ಭೂಮಿಯಂ ಮೂಱಡಿಯಾಂತು ಮೂಱು ಬಳೆದಿತ್ತನನಿಕ್ಕಿ ರಸಾತಳಕ್ಕೆ ನಿಂದಾಱಡಿವಣ್ಣದಾಗಸಕೆ ಕಾಲಿಡೆ (ರಾಜಶೇ. ೩-೧೦೦). **ಬಲಿಗೊಳ್ಳು :** ೧. ಅರಸನೆಲ್ಲಿ ತನ್ನ ಹೆಂಡತಿಯನ್ನು ಬಲಿಗೊಳ್ಳುವನೋ ಎಂದು ಅವನು ಹೆದರಿ ಹಿಪ್ಪೆಕಾಯಿ ಆಗಿಹೋಗಿದ್ದನು (ಶಂಹಾವ್ಯ. ೮೪).

[ಬಲಿ$_{3}$ + ಕೊಳ್$_{1}$]

**ಬಲಿಗೊಳ್ಳು** 'ಬಲಿಗೊಳ್' ನೋ.

**ಬಲಿದಾನ** (ನಾ). ೧. ಬಲಿಯಾಗಿ ಅರ್ಪಿಸುವಿಕೆ; ಆಹುತಿ : ತ್ಯಾಗ, ಬಲಿದಾನಗಳಿಂದ ಕೂಡಿದ ಧರ್ಮವೇ ನಿಜವಾದ ಧರ್ಮ (ಧರ್ಮಸಾ. ೬); ಮೇ ತಿಂಗಳಲ್ಲಿ ಮತ್ತೊಂದು ತಿಕ್ಕಾಟ ನಡೆದು ನಾಲ್ಕು ಮಂದಿಯ ಬಲಿದಾನವಾಯಿತು (ಆತ್ಮಾರ್ಪ. ೦೪೩). [ಸಂ.]

**ಬಲಿಧ್ವಂಸಿ** (ನಾ). ಬಲಿಚಕ್ರವರ್ತಿಯನ್ನು ನಾಶಮಾಡಿದವನು ; ತ್ರಿವಿಕ್ರಮ ; ವಿಷ್ಣು : "ವಿಷ್ಣುಃ, ನಾರಾಯಣಃ, ಕೃಷ್ಣಃ . . . ವನಮಾಲೀ, ಬಲಿಧ್ವಂಸೀ . . . ಶ್ರೀವತ್ಸಲಾಂಛನಃ ಇತಿ ವಿಷ್ಣುದೇವರ ಹೆಸರುಗಳು" (ಸಿದ್ಧಾಂತಿ. ೦೬). [ಸಂ. ಬಲಿಧ್ವಂಸಿನ್]

**ಬಲಿನಿಕೇತನ** (ನಾ). ಬಲಿಚಕ್ರವರ್ತಿಯ ವಾಸಸ್ಥಾನ ; ಪಾತಾಳ: "ಪಾತಾಳಮೆನಲು ವಡಬಾಮುಖಮೆನಲು ಬಲಿನಿಕೇತನಮೆನಲು . . . ಅಧೋಭುವನಮೆಂದೆನಲು ಪಾತಾಳಲೋಕಕ್ಕೆ ನಾಮಂ" (ಮಂಗರಾ. ೦೨೬-೦). [ಸಂ.]

**ಬಲಿಪ** 'ಬಲಿಪ್ಪ' ನೋ.

**ಬಲಿಪಶು** (ನಾ). ಆಹುತಿಯಾಗಿ ಅರ್ಪಿಸುವ ಪ್ರಾಣಿ : ಹೆಸಾಯ್ಡನ ನಿರೂಪಣೆಯಲ್ಲಿ ಬರುವ ಯಜ್ಞದಲ್ಲಿ ಬಲಿಪಶುವಿನ ಪಾಲು ಹಂಚಿಕೆಯ ಕ್ಷುದ್ರವಿರಸಸಂದರ್ಭವನ್ನು . . . ಈಸ್ಕಿಲಸ್ ಕೈಬಿಟ್ಟಿದ್ದಾನೆ (ಐವೃಶ್ರ. VI, ೩೬೩೪). [ಸಂ.]

**ಬಲಿಪಾಡ್ಯ** (ನಾ). ಕಾರ್ತಿಕಮಾಸದ ಮೊದಲನೆಯ ದಿನ ; ಕಾರ್ತಿಕ ಶುದ್ಧಪ್ರತಿಪದೆ ಮತ್ತು ಅಂದು ಆಚರಿಸುವ ಹಬ್ಬ; ಈ ದಿವಸ ವಿಷ್ಣುವು ವಾಮನಾವತಾರದಿಂದ ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ಮೆಟ್ಟಿದನೆಂಬ ಪೌರಾಣಿಕಕಥೆ ಸುಪ್ರಸಿದ್ಧವಾಗಿದೆ : ಬಲಿಪಾಡ್ಯದಾ ದಿನವು ಬಂದಿಹುದು ನೋಡಿ. ಒಲಿದಿತ್ತು ನಿಮ್ಮ —— ಬಾಲಕರ ಕಾಪಾಡಿ. (ಕುಅಕೃ. ೦೬-೩); ದಕ್ಷಿಣಭಾರತದವರು . . . ಅಮಾವಾಸ್ಯೆ, ಬಲಿಪಾಡ್ಯಗಳ ದಿವಸ ತಾತ್ಪೂರ್ತಿಕವಾಗಿ, ಆದರೂ ಬೆಡಗಿನಿಂದ ಅಂಗಡಿಪೂಜೆ ಮಾಡುವುದುಂಟು (ಭಾಹಬ್ಬ. ೦೪೬).

[ಬಲಿ$_{3}$ + ಪಾಡ್ಯ (< ಪಾಡಿವ)]

**ಬಲಿಪಾಡ್ಯಮಿ** (ನಾ). = ಬಲಿಪಾಡ್ಯ : ಕಾರ್ತಿಕಶುದ್ಧಪ್ರತಿಪದೆಯನ್ನು 'ಬಲಿಪಾಡ್ಯಮಿ' ಎಂದು ಕರೆದು, ಹಬ್ಬವನ್ನು ಆಚರಿಸುತ್ತೇವೆ (ಕೂಶಿ).

[ಬಲಿ$_{3}$ + ಪಾಡ್ಯಮಿ]

**ಬಲಿಪೀಠ** (ನಾ). (ದೇವಾಲಯಗಳ ಬಳಿಯಿರುವ, ಸಾಮಾನ್ಯ

ವಾಗಿ ಕಲ್ಲಿನಿಂದ ನಿರ್ಮಿಸಿದ ; ಬಲಿಯನ್ನು ಅರ್ಪಿಸುವ ಜಗಲಿ ; ಆಹುತಿಯಾಗಿ ಕೊಡುವ ದ್ರವ್ಯಗಳನ್ನು ಇಡುವ ಸ್ಥಾನ : ಬಲಿಪೀಠದಶನವಮಂ ಕೊಳೆ ನೆಲನಂ ಸೋಂಕುತ್ತ ಬರಲು ಪದ್ದಿನ ಪಕ್ಕದಿ ನೆಲಸಿರ್ದ ಗಾಳಿಯಿಂದಂ ಚಲಿಸಿತು ರಜವದುವೆ ಪಕ್ಷಿಗಧಿಪತಿಯಾದುದು (ಪನ್ನಜಾ. ೬-೬೬); ದೇವತೆಯ ಬಲಿಪೀಠಗಳನ್ನು ಗುಡಿಸುವವರಿಲ್ಲದೆ ಒಪ್ಪಿಸಿದ ಹಿಂದಿನ ಬಲಿಗಳು ಕೊಳೆತು ನಾರುತ್ತಿದ್ದುವು (ಕಳ್ಳಿಕಾ. ೦೮). [ಸಂ.]

**ಬಲಿಪುಷ್ಟ** (ನಾ). ಬಲಿಯಾಗಿ ಅರ್ಪಿಸಿದ ಆಹಾರಪದಾರ್ಥಗಳಿಂದ ಪುಷ್ಟವಾದುದು ; ಕಾಗೆ : "ಅರಿಷ್ಟಃ, ಕರಟಃ, ಕಾಕಃ, ಬಲಿಪುಷ್ಟಃ, . . . ವಾಯಸಃ —ಈ ೧೦ ಕಾಗೆ" (ಹಲಾಯು. ೪೦-೯೨). [ಸಂ.]

**ಬಲಿಪೂಜೆ** (ನಾ). ೧. ಆಹುತಿಯನ್ನು ಅರ್ಪಿಸಿ ಮಾಡುವ ಪೂಜೆ : ಬಲಿಪೂಜೆ ಆಗುವಾಗ ಅವರ ಕೈ ಏಕೋ ನಡುಗುತ್ತಿತ್ತು (ದೇಪಹಂ. ೨೪). ೨. ಕಾರ್ತೀಕಶುದ್ಧ ಪ್ರತಿಪದೆಯಂದು ಆಚರಿಸುವ ಬಲಿಚಕ್ರವರ್ತಿಯ ಹಬ್ಬ : ಬಲಿಪೂಜೆಯಂದು ವಿಜೃಂಭಣೆಯಿಂದ ಲಕ್ಷ್ಮಿಯನ್ನು ಪೂಜಿಸುತ್ತಾರೆ (ಲೂಕಿ). [ಸಂ. ಬಲಿಪೂಜಾ]

**ಬಲಿಪ್ಪ, ಬಲಿಪ** (ನಾ). ಒಂದು ಬಗೆಯ ಶ್ರೇಷ್ಠಜಾತಿಯ ಹುಲಿ : 'ಅಡ್ಡಬಲಿಪ್ಪ' ಪರಾ. ಬಲಿಪ : ಅದು ಬಹುಶಃ ಬಲಿಪ ಇರಬೇಕು. ನಿಮ್ಮ ಈ ಚಿಲ್ಲರೆ ಆಯುಧಗಳಿಂದ ಅದರ ಪ್ರಾಣ ತೆಗೆಯಲಿಕ್ಕೆ ಹೋದರೆ ನಾಳೆ ಊರಿಗೆ ಊರನ್ನೇ ಅದು ತಿಂದು ಪಥ್ಯ ಮಾಡೀತು (ಕರಾವ. ೫೨). [←ತುಳು. ಬಲಿಪ್ಪೆ, ಬಲಿಪೆ]

**ಬಲಿಪ್ರತಿಪದೆ** (ನಾ). =ಬಲಿಪಾಡ್ಯ : ಕಾರ್ತೀಕಶುದ್ಧ ೧ನೆಯ ತಿಥಿ ಬಲಿಪ್ರತಿಪದೆ (ಜಾಹಪ್ಪ. ೦೪೬) ; ದೀಪಾವಳಿಯಲ್ಲಿ ಬಲಿಪ್ರತಿಪದೆಯಿದೆ (ಜಾಜಾಶಾ. ೭೩). [ಸಂ. ಬಲಿಪ್ರತಿಪದಾ]

**ಬಲಿಬಂಧಕ** (ನಾ). =ಬಲಿಧ್ವಂಸಿ : ವಿಕಳಬಲನಿವನೇನು ಬಾಳಾಂಬಕನೊ ಬಲಿಬಂಧಕನೋ ಸುರಪಾಲಕನೋ ಫಡಫಡ (ಕುಪ್ಪಾ. ೪. ೦೨-೫). [ಸಂ.]

**ಬಲಿಬಂಧನ** (ನಾ). = ಬಲಿಧ್ವಂಸಿ : ದುರ್ಯೋಧನನನುವಾಗಳೆ ಬಂದು ಬಲಿಬಂಧನನ ತಲೆದೆಸೆಯೊಳ್ ಕುಳ್ಳಿರೆ (ಹಂಪಹಾ. ೯-೦೦ ಪ); ನಾರಾಯಣ ತೇ ನಮೋ ನಮೋ . . . ಬಲಿಬಂಧನ ಗೋವರ್ಧನೋದ್ಧಾರ ನಳಿನೋದರ ತೇ ನಮೋ ನಮೋ (ಪುರಂದ. ೩-೪೦-೨). [ಸಂ.]

**ಬಲಿಬಂಧಾಕ್ಷಿ** (ನಾ). ಒಂದು ಬಗೆಯ ಸಸ್ಯ ; ಹಾವುಮೆಕ್ಕೆ : "ವಾರುಣಿ ಬಲಿಬಂಧಾಕ್ಷಿ [ಜಾಹಾಂ. ಬಲಿಬದ್ಧಾಕ್ಷಿ, ಬಲಿಬುರ್ಧ್ವಾಕ್ಷಿ] ಹಾವುಮೆಕ್ಕೆ ಹಿಡಿಹಿಡಿಕೆ ತ್ರಿಪತ್ರಿಣಿಯೆಂದೆನಿಕ್ಕುಂ" (ಪುಂಗಣ. ೪೯-೯೪). [ ? ]

**ಬಲಿಭುಕ್ಕು, ಬಳಿಭುಕ್ಕು** (ನಾ). = ಬಲಿಪುಷ್ಟ : "ಕಾಕಂ ಚಿರಾಯು ಬಲಿಭುಗ್ವಾಯಸಂ . . . ಕರಟಮೆನೆ ಕಾಗೆ" (ಪುಂಗಣ. ೫೦-೪); ಬಲಿಬುಗ್ವ್ರಜಕ್ಕೆ ಬಲಿಯಂ ತಾನಿಕ್ಕುವಳ್ (ಕಾದಂಪೂ. ೩೬೬); ಆ ಮಹಾ ಕಾಳಿಯೆನಿಪ್ಪ ದೇವಿ ಬಲಿಭುಕ್ಕಗರೂಪಿನೊಳೆಯ್ದೆವಂದು ತದ್ಭಾಲನ ಕಣ್ಗಳಂ ನಿಶ್ಚಿತಚಂಚುವಿನಿಂದಿಟಿಯಲ್ಕೆ ಸಾರ್ವುದುಂ (ಪುಜಾಶೀ. ೬-೦೨). ಬಳಿಭುಕ್ಕು: "ಅರಿಷ್ಟಃ, ಕರಟಃ . . . , ಬಳಿಭುಕ್, ಧ್ವಾಂಕ್ಷಃ, ಚಿರಜೀವೀ, ವಾಯಸಃ — ಈ ೧೦ ಕಾಗೆ" (ಹಲಾಯು. ೪೦-೯೨) ; ಬಳಿಭುಗ್ಗೃಧ್ರ ಕದಂಬಮಂಬರದೊಳುಗ್ರಶ್ವಾಪದಶ್ರೇಣಿ ಭೂತಳದೊಳ್ ನರ್ತಿಸೆ . . . ಪಿಂಗಳಕಂ ಗವಾಧಿಪತಿಯಂ ಕೊಂದಂ ಭುಜಾದಂಡದಿಂ (ಪಂಚತಂ. ೦೬೬-೦೬). [ಸಂ. ಬಲಿಭುಜ್]

**ಬಲಿಭೋಜನ** (ನಾ). = ಬಲಿಪುಷ್ಟ : ತೀವಿದ ತಾರಗೆದುತ್ತುಗಳ್ಗೆ ಮೇಲುರವಣಿಸುತ್ತೆ ಬರ್ಪ ಬಲಿಭೋಜನಜಾಲಮೊ ಮರ್ಬಿನೇಳ್ಗೆಯೋ (ಶಾಕೀ. ೦೦-೨೧). [ಸಂ.]

**ಬಲಿಭೋಜಿ** (ನಾ). =ಬಲಿಪುಷ್ಟ : ಪೋದರಂದನಿಬರುಮೊಂದೆ ಬಿಲ್ಗಗಿದು ತತ್ಪಚರರ್ ಬಲಿಭೋಜಿರಾಜಿವೋಲ್ (ನೇಮಿಪು. ೦೦-೯೬). [ಸಂ. ಬಲಿಭೋಜಿನ್]

**ಬಲಿಮಥನ** (ನಾ). = ಬಲಿಧ್ವಂಸಿ : ಬಲಿಮಥನ ಫಲುಗುಣರು ಸಹಿತಗ್ಗಳಿಯನೇಕಾಂತದಲಿ . . . ಸೀಳಿದು ಬಿಸುಟನಾ ಭೀಮ (ಕುಪ್ಪಾ. ಸ. ೨ ಸೂಚನೆ). [ಸಂ.]

**ಬಲಿಮಿಂಡ** (ನಾ). ಬಲಿಷ್ಠನಾದ ವೀರ ; ಅತಿಪರಾಕ್ರಮಿ : ಸ್ವಸ್ತಿ ಶ್ರೀನೊಳಂಬಾದಿಯರಸ ಪೃಥುವೀರಾಜ್ಯಂಗೆಯೆ ಪುತ್ತೂರ ತೊಱು ಕೊಳುಳ್ ಪೆತ್ತೂಂ ಬಲಿಮಿಣ್ಡನಾ ಶೆಟ್ಟಿಯರ ಮಗನರಪಟ್ಟಂಗಟ್ಟಿ (ಎಕ. X, ಕೋಲಾರ. ೨೩೩-೪ ; ಸು. 815). [ಬಲ್‌₂+ಮಿಂಡ]

**ಬಲಿಮುಖ, ಬಳಿಮುಖ** (ನಾ). ಮುಖದ ಮೇಲೆ ನೆರಿಗೆಗಳುಳ್ಳ ಪ್ರಾಣಿ ; ಕಪಿ ; ಕೋತಿ : "ಪ್ಲವಗಂ ಕಪಿ ಮರ್ಕಟಕಂ ಪ್ಲವಂಗಮಂ ಬಲಿಮುಖಾಹ್ವಯಂ ವಾನರಂ" (ಪಸ್ತುಕೋ. ೪೦-೬) ; ಸಕಲಕಪಿಸಮಿತಿವೆರಸಹಿತಕುಲಾಚಲಚಕ್ರ ಜಾರದಂಭೋಳಿ ಜಗತ್ಪ್ರಕಟೋದ್ಯನ್ನಹಿಮನೆನಿಸುವ ಕಕುದ್ಬಲಿಯೆನಿಪ ಪೆಸರ ಬಲಿಮುಖನಿರ್ಪಂ (ಪಂಪರಾ. ೨೬೬-೬) ; ಬಹುಕಾನನಂಗಳಲಿ ಬಲಿಮುಖರ ರೂಪುಗಳನವರುಚಿ ತಳೆದರಾಳ್ದನ ನೇಮದಲಿ (ತೊರರಾ. ೦-೯-೭೦). ಬಳಿಮುಖ : ಬಳಿಮುಖಧರ್ಮಬಹಿರ್ಮುಖ ಚಳಪತಿ ನೀಂ ರೌದ್ರಭಾವಮಂ ತಳೆದಿಂತೇಕೊಳಪುಗುವೆ ಘೋರ ದುರ್ಗತಿಗಳೊಳ್ (ನೇಮಿಪು. ೩-೭೫). [ಸಂ.]

**ಬಲಿಮುಖಕೇತನ** (ನಾ). ೧. ಕಪಿಧ್ವಜ. ೨. ಕಪಿಗಳಲ್ಲಿ ಶ್ರೇಷ್ಠನಾದವನು ; ಸುಗ್ರೀವ : ಬ[ಪಾಠಾಂ. ವ]ಲಿಮುಖಕೇತನನಂ ಚಕಿತಲೋಚನಂ ರತ್ನಜಟಿ ನಿಜಪ್ರಾಣಭಯಾಕುಲಚಿತ್ತಂ ಪೌಲಸ್ತ್ಯಂ ಕೊಲಲಟ್ಟಿದ ತೀಕ್ಷ್ಣಪುರುಷನೆಂದೀಕ್ಷಿಸಿದಂ (ಪಂಪರಾಮಾ. ೦೦-೫೦). ೩. ಕಪಿಧ್ವಜವುಳ್ಳವನು ; ಅರ್ಜುನ. [ಸಂ.]

**ಬಲಿಮುದ್ರೆ** (ನಾ). ಬಲಿ ಕೊಡುವ ಪ್ರಾಣಿಯ ಮೈಮೇಲೆ ಹಾಕುವ ಮುದ್ರೆ,—ಗುರುತು : ಬಲಿಮುದ್ರೆ ಕೊಟ್ಟರೂ ಸುಲಿಗೆ ತಪ್ಪಲಿಲ್ಲ (ಗಾದೆ). [ಸಂ. ಬಲಿಮುದ್ರಾ]

**ಬಲಿಮೂರ್ತಿ** (ನಾ). (ಕರಾ) ಉತ್ಸವಮೂರ್ತಿ; ಉತ್ಸವದೇವರು. [ಸಂ.]

**ಬಲಿಯ** (ನಾ). ಬಲಿಷ್ಠನಾದವನು ; ಶಕ್ತಿಶಾಲಿಯಾದವನು.

**ಬಲಿಯರ ಭೀಮ**=ಬಲಿಷ್ಠರಿಗೆ ಭಯಂಕರನಾದವನು ; ಅತಿಪರಾಕ್ರಮಿ ; ಒಂದು ಬಿರುದು : ಶ್ರೀಮನುಮಹಾಮಣ್ಡಳೇಸ್ವರ ತ್ರಿಪುರಾಧೀಸ್ವರ . . . ವೈರಿಗಜಕೇಸರಿ ಬಲಿಯರ ಭೀಮ ಸಂಗ್ರಾಮರಾಮ ಮಲೆಪರ ನಂದನವನಂ (ಎಕ. I, ೬೨-೦೦; 1095). ☞ ಇಲ್ಲಿ 'ಬಲಿಯರ' ಎಂಬುದಕ್ಕಿಂತ 'ಬಲಿವರ' (=ಎದುರುಬೀಳುವವರ) ಎಂಬುದು ಸೂಕ್ತವಾದುದೇ ? [ಬಲಿ₁ (<ಬಲ್‌₁)+ —ಅ₇]

**ಬಲಿಯಿಕ್ಕು** (ಕ್ರಿ). =ಬಲಿಗೆಯ್ : ದಳಪತಿಯಾ ಕಾರ್ಯದಿರವ ನಿನ್ನಯ ಪಾದನಳಿನಕ್ಕೆ ಬಿನ್ನೈಸಂದು ಬಳಿಕೆನ್ನ ಕಳುಹಿದ ಚಿತ್ತೈಸಿ ರಿಪುಪಾಯದಳವ ಭೂತಕೆ ಬಲಿಯಿಕ್ಕು (ಕಂಸವ. ೦೦-೦೨೨). [ಬಲ್‌₃+ಇಕ್ಕು]

**ಬಲಿಯಿಸು, ಬಲಿಸು** (ಕ್ರಿ). ೧. ಬಲಪಡಿಸು ; ಬಿಗಿಗೊಳಿಸು ; ಭದ್ರಪಡಿಸು : ಕುಮ್ಮಟವನು ಬಲಿಯಿಸು ಹೊಸಮಲೆಗದು ನಮ್ಮಗೆ ನೇಮಿಯ ಗೆಲ್ದ ಹಮ್ಮ ಬಿಡಿನ್ನು ತುರುಕರು ಬಂದರೆ ನಿನಗುಮ್ಮಳವನು ಪಾಡದಿಹರೆ (ಕುಂರಾಕಾಂ. ೩೦-೩೦). ೨. ಸ್ಥಿರಪಡಿಸು ; ಸ್ಥಾಪಿಸು ; ನೆಲೆಗೊಳಿಸು : ಮಲೆತಿದಿರಾಂತು ನಿಲ್ವ ಚಿಕದೇವನ ಚಿಲ್ವಿಕೆಗೊಂಡ ತಾಣಕಂ ಕಲೆದಳೆದೊಳ್ಳೊಗಂ ಕದುಬದೆಬ್ಬಿಜಿಸೊಳೊಚ್ಚತವಿರ್ಪ ದಿಟ್ಟ

ಪೊಂಬಲಗೆಯ ಸಾರ್ಚಿದೀತಿಪೊಲಿರ್ದಿರ್ಚಿದ ಪೇರೆರ್ದೆಯಂ ನಿರೂಪಕರ್ ಬಲಿಯಿಸಿ ಚಿತ್ರದೊಳ್ ನೆನೆವರಾ ಮಧುರಾಪುರಮಲ್ಲಲೀಲೆಯಂ (ಜಗಂ. ೪೯-೦೩೬). ೩. ದ್ರವಪದಾರ್ಥವನ್ನು ಚೆನ್ನಾಗಿ ಕಾಯಿಸಿ ಗಟ್ಟಿಯಾಗು ವಂತೆ ಮಾಡು; ಅಟ್ಟಿಸು : ಹಿರಿದಾಗಿ ಬಲಿದ ಬಾಳೆಯ ಕಾಯ ಸುಟ್ಟದಱ ತಿರುಳುಮಂ ತೆಗೆದು ಚಿಕ್ಕಡಕೆಯಂದದೊಳು ಕತ್ತರಿಸಿ ಬಲಿಯಿಸಿದ ಹಾಲು ಮತ್ತದಱ ತೆಱದಿ ಕುಯ್ದು ಬಾಳೆಯ ಕಾಯನು ಬೆರಸಿ (ಸೂಪಶಾ. ೪-೪೪); ನೀರ ಬಲಿಯಿಸ ಬಲ್ಲ, ಹಿಮರುಚಿಯ ಉರಿಸ ಬಲ್ಲ, ಉರಿಯ ಕೋಡಿಸ ಬಲ್ಲ ಸಾಮರ್ಥ್ಯವುಳ್ಳ ಕುಂಟಣಿತನದ ವಿದ್ಯಾಪರಿಣತಿ ಸಂಗಾಯ (ಸಂಜಾಂಠ. ೬೬). ೪. ವೃದ್ಧಿಗೊಳಿಸು; ಬೆಳೆಸು; ಹೆಚ್ಚಿಸು: ರಸದಿಂದ ಪುಟ್ಟಿಸಿ ಭಾವದಿಂ ಬಲಿಯಿಸಿ ಪೊಸಬಗೆವೆತ್ತಲಂಕೃತಿಯ ಎಸಕದಿಂ ಬಳೆಯಿಸಿ ಕೃತಿಯೆನಿಸುವೆನಿದ ರಸಿಕರು ಮೆಚ್ಚುವಂದದಲಿ (ಕುರಾಶಾಂ. ೦-೪೦); ಸಂಸಾರಕ್ಕೆ ಸಂತಾನವೇ ಸೂರ್ಯ, ಅವರಿಂದಲೇ ಎಲ್ಲ ಆನಂದಕ್ಕೂ ಜೀವ ಎಂಬುದು ಅರಿವಾಗಿ, ಆ ಅರಿವು, ಆಕೆಯ ಕೊರಗನ್ನು ಮತ್ತಷ್ಟು ಬಲಿಯಿಸಿತು (ಶಕುಂಪಾ. ೦೩). ೫. ಹಾಳಾದುದನ್ನು ಸರಿಮಾಡಿಸು,— ದುರಸ್ತುಗೊಳಿಸು : ಈ ಜೀರ್ಣವಾದ ಮಠವೆಸನನು ಬಲಿಯಿಸೆಂದು ಹೇಳಿದಲ್ಲಿ ಅವರ ಬೆಸದಿಂದ ಅಧಿಕಾರಿ ರಂಗಂಣನವರು ಆ ಸಿಖರದ ಮಠ ವೆಸನಂ ಜೀರ್ಣವಾಯಿತೆಲ್ಲವನೂ ಬಲಿಯಿಸಿ ಬಿದ್ದ ಇಟ್ಟಿಗೆ ಎಲ್ಲವನೂ ಹಿಡಿಸಿದರು (ಎಕ. v. ಬೇಲೂರು. ೨೪ ೩; 1298). **ಬಲಿಸು** : ೧. ಒಳಗೆ ನೀ ಕಾದುವೊಡೆ ದುರ್ಗವ ಬಲಿಸು ಬವರಕೆ ಹಿಂದುಗಳೆಯದೆ ನಿಲುವ ಮನ ನಿನಗಿಗಲುಂಟೇ (ಕುಮ್ಯಾಭಿ. ೩-೦೨); ಬಲಿಸು [ಹಾಕಾಂ. ಬಲಿಯಿಸು] ದುರ್ಗವ ಬೇಗ ಬರಿಸು ಸಂವರಣೆಯ ಸಲಿಸು ಸಖರ ಸಲುಗೆಯನು (ಕುರಾಸಾಂ. ೩೦-೬೩). ೨. ದಡಿಯ ಬಲಿಸುವ ಗುಳವ ಜಿಂಚಿಯ ಗಡಣಿಸುವ ಬಲುಗಿ:ಲ ಗಾಲಿಯ ತೊಡಿಸುವುತ್ಸಹವಾಯ್ತುವರ ಪಾಂಡವರ ಬೀಡಿನಲಿ (ಕುಮ್ಯಾಉ. ೦೦-೦೨). ೪. ಗಂಟು ಕಟ್ಟಲಿಕ್ಕೆ ಕಲಿಸೋದು ರೊಕ್ಕ ತುಂಟತನಗಳ ಬಲಿಸೋದು ರೊಕ್ಕ (ತ್ರಿಕಂದ. ೨-೪೩-೨); ಕಾಟಿ ಗಂಟಿಕ್ಕಿ ಸಂಧಿಗಳನೆಸಗುವ ಮುಳಿಯ ಮೋಟಿಗೊರ್ವನನೆಚಿಸಿ ಸೊಗಸು ಬಲಿಸುವ ಚಾರುಚೇಟಿಯರ್ಚಲಿಸುವರನಂಗಶಬರನ ಬೇಂಟೆದೋಹಿನ ಮೃಗಂಗಳಂತೆ (ಕೃಪಂಶಾ. ೬-೩೭); ವೈರವ ಬಲಿಸದ ಬಚ್ಚಿದ ಪಳಿಯದ ಕೊಲೆ ಬೈಗಳಿಂದ ಕೋಟಲೆಗೊಳಿಸದ ಸತ್ಕುಲಕೀವುದು ಕುವರಿಯನು (ಹರಿಶ. ೩-೦೬).

[ಬಲಿ$_1$ (<ಬಲ್$^{\prime}_1$)+—ಇಸು$_1$]

**ಬಲಿರಿಪು, ಬಳಿರಿಪು** (ನಾ). ಬಲಿಚಕ್ರವರ್ತಿಯ ವೈರಿ; ಕೃಷ್ಣ : ಬಲಿರಿಪು ಬಾಣಾವಳಿಯಂ ಬಲವೈರಿಯ ಬಲದ ಮೇಲೆ ಕಟಿದಂ (ಜಗಂ. ೦೩-೬೬). **ಬಳಿರಿಪು** : ಬಳಿರಿಪುವಿನ್ನೀಕೆಯ ಮದತಳಸಂಗದ ಸುಖ ಮನವಳ ಮುಖಸಂಗದೊಳೇಂ ತಳೆಗುಮೆ ಎಕ್ಕಣಿಯುಂಗುಟದೊಳುಳ್ಳ ಸೊಬಗುಂಟೆ ಸತ್ಯಭಾಮೆಯ ನೊಸಲೊಳ್ (ಜಗಂ. ೦೨-೬೨). [ಸಂ.]

**ಬಲಿವಡೆ** (ಕ್ರಿ). (ಅಲಂ) ಶಿಕ್ಷೆಗೊಳಗಾಗು; ಹೊಡೆತ ತಿನ್ನು : ವನಜ ವದನೆಯ ಬಯಸಿಡೊಡೆ ಬಿಲ್ಲಿನಲಿ ಬಲಿವಡೆದುದನು ಕೌರವಜನಪ ಮಱೆ ದಿರಲಾಗದು (ಕುಮ್ಯಾಉ. ೩-೯). [ಬಲ್$_3$+ಪಡೆ$_1$]

**ಬಲಿವದನೆ** 'ಬರಿವದನೆ' ನೋ.

**ಬಲಿವಿಡಿ** (ಕ್ರಿ). ದೃಢಗೊಳಿಸು; ಹಿಡಿತಕ್ಕೆ ತಂದುಕೊಳ್ಳು : ಇಂತು ನುಡಿದ ರಾಣಿಯ ನುಡಿಗೇಳಿಯೊರಂತೆ ಚಿತ್ತವ ಬಲಿವಿಡಿದು ಸಂತಸ ಮಿಗೆ ಸಭೆಯೊಳು ರಾಯಗೆ ಮಾಱಾಂತು ಬಿನ್ನವಿಸಿದೆನಿಂತು (ಹರಿಶ. ೦-೩೦).

[ಬಲ್$_3$+ಪಿಡಿ$_1$]

**ಬಲಿಷ್ಠ** (ಗು). ೧. ಅತ್ಯಂತ ಶಕ್ತಿಶಾಲಿಯಾದ: ಅವನ ಬಲಿಷ್ಠ ಬಾಹುಗಳು ಯಾವ ಕಾರ್ಯಕ್ಕೂ ಜಗ್ಗುವುದಿಲ್ಲ (ರೂಢಿ). (ನಾ). ೨. ತುಂಬ ಬಲವಾದುದು : ಘೋರಕಾಂತಾರಕ್ಕೆ ಹೋಗಿ ಕುಠಾರದಿಂ ಕಟ್ಟಿಗೆಗಳಂ ಕೈಯಾರೆ ಕಡಿಕಡಿದೊಟ್ಟಿ ಕಟ್ಟಿ ಬಲಿಷ್ಠವಾಗಿರ್ದ ಹೊರೆ ಹೊಱೆಯಂ ಹೊತ್ತುಕೊಂಡು (ಬಸಪು. ೩೦-೪). ೩. ಬಲಶಾಲಿ; ಶಕ್ತಿವಂತ : ಆ ಸಮಯದೊಳರಿಬಲಸಂತ್ರಾಸಿ ಬಲಿಷ್ಠಂ ತ್ರಿಪೃಷ್ಠನಶ್ವಗ್ರೀವೋದ್ಧಾಸಿ ಪ್ರದೀಪವಮಂ ಕಿಡೆ ಬೀಸುವವೋಲನುವರಕ್ಕೆ ಕೆಯ್ವಾಸುವುದುಂ (ಶಾಂತಿಪು. ೩-೩೨); ಈ ಕೀಚಕನು ವಿಶೇಷ ಬಲಿಷ್ಠನಾಗಿಯೂ ಪರಾಕ್ರಮಶಾಲಿ ಯಾಗಿಯೂ ಇದ್ದ ಕಾರಣ ಈ ರಾಜ್ಯದ ಮೇಲೆ ಬರುವುದಕ್ಕೆ ಪರರಾಜರು ಹೆದರುತ್ತಿದ್ದರು (ಜೀತಿಶಂ. IX, ೬). [ಸಂ.]

**ಬಲಿಷ್ಠಗೊಳಿಸು** (ಕ್ರಿ). ಪ್ರಬಲಗೊಳಿಸು; ಶಕ್ತಿಯುತವಾಗುವಂತೆ ಮಾಡು : ಅನುಭವ ಅವರ ಸ್ವಭಾವಧರ್ಮವನ್ನು ಸಾಂದ್ರಗೊಳಿಸಿತು, ಬಲಿಷ್ಠಗೊಳಿಸಿತು (ಧರ್ಮಶಾ. ೬೬). [ಬಲಿಷ್ಠ + ಕೊಳ್$^{\prime}_1$ + ಇಸು$_1$]

**ಬಲಿಸದ್ಮ** (ನಾ). = ಬಲಿನಿಕೇತನ : "ಅಧೋಭುವನಂ, ಪಾತಾಳಂ, ಬಲಿಸದ್ಮಂ, ರಸಾತಲಂ, ನಾಗಲೋಕಃ — ಇ ಪಾತಾಳಲೋಕದ ಹೆಸರು ಗಳು" (ಸಿದ್ಧಾಂತ. ೭೦). [ಸಂ. ಬಲಿಸದ್ಮನ್]

**ಬಲಿಸು** 'ಬಲಿಯಿಸು' ನೋ.

**ಬಲಿಸುತ** (ನಾ). ಬಲಿಚಕ್ರವರ್ತಿಯ ಮಗ; ಬಾಣಾಸುರ : ಉಡಿ ವಂತೆ ವಿಜಯವಲ್ಲರಿಯಡರ್ಪ ತದ್ಧ್ವನಿ ಪಳಂಚೆ ಕೇಕಿಧ್ವಜವಂದುಡಿದುದು ಸಹಸ್ರಭುಜವನದುಡಿವಕ್ಕಿದು ಸಂಚಕರವೆನರ್ ಬಲಿಸುತನಾ (ಜಗಂ. ೦೬-೬); ಇನಿತೆಲ್ಲ ವಾರ್ತೆಯನು ಖಳನೋರ್ವನುಳಿದೋಡಿ ಪೊಗಿ ಬಲಿಸುತಗೆ ಪೇಳೆ (ಪ್ರಾಶಠ. ೦೦-೩೯). [ಸಂ.]

**ಬಲಿಸೂರ್ಯ** (ನಾ). ಗೋಸುಂಬೆ; ಊಸರವಳ್ಳಿ : "ಶಯಾನಕಂ ಬಲಿ[ಹಾಕಾಂ. ೪]ಸೂರ್ಯಮೆನಲು ಗೋಸುಂಬೆ" (ಮುಂಗರಾ. ೪೯-೦೨). ' ಪ್ರತಿಸೂರ್ಯ' ಪಠಾ.

[p ಪ್ರಾಸಕ್ಕಾಗಿ ಮಾಡಿಕೊಂಡ ಈ ರೂಪ ಸ್ಪಷ್ಟವಾಗಿಲ್ಲ]

**ಬಲಿಸ್ತವನ** (ನಾ). [ಜೈನ] ತ್ರಿಸಂಧ್ಯೆಯಲ್ಲಿ ಮಾಡುವ ಜಿನಪೂಜೆ : ಜಗತ್ತ್ರಯಸ್ವಾಮಿಗೆ ಸಂಧ್ಯಾತ್ರಯದೊಳ್ಪೂಜಾಭಿಷೇಕಂಗಳಂ ವಿಧಿ ಸಮೇತದಿಂ ಮಾಡುವ ಪೂಜೆ ಬಲಿಸ್ತವನಂ (ಪ್ರಾಶಠ. ೦೬೧-೦೦). [ಸಂ.]

**ಬಲಿಸ್ನಪನ** (ನಾ). [ಜೈನ] ಜಿನನಿಗೆ ಮಾಡುವ ಅಭಿಷೇಕ : ಬಲಿ ಸ್ನಪನಮೆಂಬುದು ಮೂಱುಂ ಸಂಜೆಯೊಳ್ ಮಾಳ್ಪ ಜಿನಾಭಿಷೇಕಂ (ಆಆಪು. ೦೨-೦ ಟ). [ಸಂ.]

**ಬಲಿಹರ, ಬಳಿಹರ** (ನಾ). =ಬಲಿಧ್ವಂಸಿ : ಬಲಿಹರನ ಚರಣದಂಡದ ತಲೆಯೊಳ್ ಕಱಗೊಂಡಟಲ್ವ ಬಾಂದೊಱೆಯೆಲರಿಂದೊಲೆದುದು ವಿಷ್ಣು ಕುಮಾರನ ಗೆಲವಂ ಕಂಡಮರರೊಸೆದು ಕಟ್ಟಿದ ಗುಡಿವೋಲ್ (ಅಜಿಪು. ೬-೩೯). **ಬಳಿಹರ** : ಎಳೆ ರಸೆಯೊಳಟ್ಟುದಂ ಭುಜಬಳದಿಂ ಮುನ್ನೆತ್ತಿ ದಂತೆ ವಿಷಯಾಂಬುಧಿಯೊಳ್ ಮುಱುಗಿರ್ದಮ್ಮಯ್ಯರುಮಂ ಬಳಿಹರ ಪಿಡಿದೆತ್ತಲೆಂದು ಬಂದೈ ಬರವಂ (ಶಂಶಠ. ೯-೦೩). [ಸಂ.]

**ಬಲಿಹರಣ** (ನಾ.) ೧. ಭೂತಪ್ರೇತಗಳಿಗಾಗಿ ಅರ್ಪಿಸುವ ಬಲಿ; ಆಹುತಿ : ಹರಿಯ ಬಾಣವು . . . ಖರನ ತಲೆಗಳ ಬೇಳಿದುದು ಬಲಿಹರಣ ವಿಕ್ಕಿತು ಕನಕಮೃಗವನು (ಕೌಶಿಠ. ೦೬-೩೩). ೨. ಪೂಜೆಯ ಕಡೆಯಲ್ಲಿ ದೇವತೆಗಳಿಗೆ ಅಥವಾ ಪಿತೃಗಳಿಗೆ ಅರ್ಪಿಸುವ ನೈವೇದ್ಯದ ಭಾಗ : ವೈಶ್ವದೇವ, ಬಲಿಹರಣರೂಪವಾದ ಎರಡು ಅನ್ನಗಳು ದೇವತೆಗಳಿಗೆ, ಉಪಲಕ್ಷಣ ಯಾ ಪಿತೃಗಳಿಗೂ ಸೇರುವುದು. ಸಪ್ತಾನ್ನಗಳಲ್ಲಿ ವೈಶ್ವದೇವ, ಬಲಿಹರಣರೂಪವಾದ ಎರಡು ಅನ್ನಗಳಿಗೆ ದೇವತೆಗಳನ್ನೂ ಪಿತೃಗಳನ್ನೂ ಭಾಗಿಗಳನ್ನಾಗಿ ಮಾಡಿದರೆಂದರ್ಥ (ಹಶಾರ. ೦೪-೦೪ ತಾತ್ಪರ್ಯ).

**ಬಲಿಹರಣ ಮಾಡು** = ಆಹುತಿ ಕೊಡು; ಕೊಲ್ಲು : ನಲಿದು ದೈತ್ಯರ ಪಡೆಯನೆಲ್ಲವ ಬಲಿಹರಣ ಮಾಡುತಲು (ಸಂಠಶ. ೯-೦೦೦). [ಸಂ.]

**ಬಲಿಹರಣಂಗೆಯ್** (ಕ್ರಿ). ಭೂತ ಪ್ರೇತಗಳಿಗಾಗಿ ಬಲಿಯನ್ನು

ಆರ್ಷಿಸು : ಒರ್ವ ಶಬರಂ ಕಂಡುವಮಾ ವಿಹಂಗಚಯಮಮಾಡುವೆಡೆ ಯೊಳೆಲ್ಲಿಯುಂ ಬಲೆಯಂ ಪಾಸಿ ಬಲಿಹರಣಂಗೆಯ್ವಂತೆ ಕೂಟಂ ಸೂಸಿ ಪೋಪುದುಂ (ಹಂಚಕಂ. ೨೬೬-೧೪). [ಬಲಿಹರಣ + ಕೆಯ್‌$_1$]

**ಬಲೀಂದ್ರಪೂಜೆ** (ನಾ). ಬಲಿಪಾಡ್ಯಮಿಯ ದಿನ (ಕಾರ್ತಿಕ ಶುದ್ಧ ಪ್ರತಿಪದೆ)ದಂದು ಮಾಡುವ ಬಲಿಚಕ್ರವರ್ತಿಯ ಪೂಜೆ : ಬಲೀಂದ್ರ ಪೂಜೆಯಂದು ಮನೆಯವರೆಲ್ಲಾ ಸಂಭ್ರಮದಿಂದ ಹಬ್ಬವನ್ನು ಆಚರಿಸಿದರು (ರೂಢಿ). [ಸಂ. ಬಲೀಂದ್ರಪೂಜಾ]

**ಬಲೀಮುಖ** (ನಾ). =ಬಲಿಮುಖ : "ಬಲೀಮುಖಃ, ಮರ್ಕಟಕಃ . . . ಶಾಖಾಮೃಗಃ, ವಾನರಃ — ಈ ೧೧ ಕೋಡಗಂ" (ಹಲಾಯು. ೩೯-೬೬); ಆ ಬಲೀಮುಖಂ ಕಾಲಮುಖಮನೆಯ್ದಿತ್ತು (ಪಂಚತಂ. ೩೦-೯); ಬರಿಯ ಬೆಚಂಟುತೇಡಿಸಿ ನಗಿಸಿತು ಭೂಪರನ ಬಲೀಮುಖನೊಂದು (ಶ್ರೀಚಾಂ. ೬-೨೩). [ಸಂ.]

**ಬಲೀಮುಖಿ** (ನಾ). ಹೆಣ್ಣುಕೋತಿ: ಬಿರಿಕಿನೊಳೊಯ್ಯನೊಯ್ಯನೆರೆ ದೋಱುವ ಬಿತ್ತುಗಳಿಂ ವಿಳಾಸಮಮಾಮರಿಸಿದ ದಾಡಿಮಿಫಳಮನೊಯ್ಯನೆ ಚುಂಬಿಸಿ ಒರ್ವ ಕಾಂತನಂತರುಚಿರಳಾಂತೆ ಕಂಡು ಪುರುಡಿಂ ಬಡಿಯಲ್ ಪಡಿಗೊಂಡು ದೀಟ್ದು ಬಲ್ಪರಿದು ಬಲೀಮುಖೀಮುಖಮನೀಬೆನೆ ಚುಂಬಿಸೆ ತೇಂಕಿ ಕೋಪಮಂ (ಪುಶ್ರ‍ಪು. ೩-೪೬).

[ಸಂ. ಬಲೀಮುಖೀ (ಬಲಿ + ಮುಖ + —)]

**ಬಲೀವರ್ದ** (ನಾ). ಎತ್ತು; ವೃಷಭ : "ವೃಷ ಸೌರಭೇಯ ಗೋಪತಿ ಋಷಭ ಬಲೀವರ್ದ ಶಾಕ್ವರೋಕ್ಷ ಕಕುದ್ಮದ್ವೃಷಭಾಖ್ಯಮನಡ್ವಾಹಂ" (ಬಸ್ತುಕೋ. ೮೯-೦); ಶೃಂಗಾರದಿಂ ಭಂಗಿವಡೆದು ವೃಷಬಲೀವರ್ದಧ್ವಾನಮುಂ ಗೋವತ್ಸಕದಂಬಹಂಭಾರವಮುಂ ವಿಜೃಂಭಿಸೆ (ಜಗಪು. ೪-೩೦ ವ); ವೃಷಭನ ಅನಿಮಿತ್ತರೋಷಾವೇಶವಿಷಮತಿಗಮಾ ಜರಾದುರ್ಬಲ ಬಲೀವರ್ದದುರ್ದರ್ಶಮರಣಾಯಾಸಪರಿಣತಿಗಂ ವಿಸ್ಮಯಂಬಟ್ಟು (ಕಂಪ್ರಪು. ೨-೩೦). [ಸಂ.]

**ಬಲು** 'ಬಲ್$_2$' ನೋ.

**ಬಲುಕಜ್ಜ** 'ಬಲ್ಗಜ್ಜ' ನೋ.

**ಬಲುಕಣ** 'ಬಲ್ಕಣ್$_1$' ನೋ.

**ಬಲುಕರಿಸು** (ಕ್ರಿ). ಬಲವಂತ ಮಾಡು; ಒತ್ತಾಯಂಪಡಿಸು : ಬಲುಕರಿಸಿ ಕೊಲುವುದು ನೇಮವೇ ತತ್ತರುಣಗೀ ಕುಜಿಯಲ್ಲದಿಳಿಯದೆ ಗಂಟಲಲಿ (ಜಸಪು. ೨೬-೧೨); ಬಲುಕರಿಸಿ ಭೂಮಿಯೊಳಗೊಂದಂಗುಲವನೊತ್ತಿದವಂಗೆ . . . ನರಕದೊಳಿಳಿವುದಲ್ಲದೆ ಬೇಱೆ ಗತಿಯಿಲ್ಲ (ಕುಮ್ಯಾಉ. ೪-೦೦೪); ಎಲೆ ವಸಂತನೆ ಚಂದ್ರಮನೆ . . . ಕಲುಷರಹಿತೆಯ ಖಳಕುಲಾಧಮ ಬಲುಕರಿಸಿ ಕೊಂಡೊಯ್ದನೆಂದುಸುರುವುದು ರಾಮಂಗೆ (ತೊರರಾ. ೩-೦೦-೬). 'ಬಲಾತ್ಕರಿಸು' ಪರಾ. ◘ 'ನಿರಾಕರಿಸು', 'ಪತಿಕರಿಸು' ಮೊದಲಾದ ಶಬ್ದಸಾಮ್ಯದಿಂದ ಮಾಡಿಕೊಂಡ ರೂಪ.

[< ಬಲಾಕರಣ$_0$ + — ಇಸು$_3$]

**ಬಲುಕುಣಿಕೆ** 'ಬಲುಗುಣಿಕೆ' ನೋ.

**ಬಲುಕುಣಿಯ** (ನಾ). ಒಂದು ಬಗೆಯ ಮರ : ಬಲುಕುಣಿಯ ಹುಡುಮೆ ವಕುಳಂ ಸಿಂಧುವಾರ . . . ಒಪ್ಪಿದುದು (ರುಕ್ಮಾಂಗ. ೦೦-೨). 'ಬಲುಗುಣಿಕೆ' ಪರಾ. [ ? ]

**ಬಲುಗಂಡ** 'ಬಲ್ಗಂಡ' ನೋ.

**ಬಲುಗಜ್ಜ** 'ಬಲ್ಗಜ್ಜ' ನೋ.

**ಬಲುಗಡಲು** 'ಬಲ್ಗಡಲ್' ನೋ.

**ಬಲುಗಡಿ$_1$** (ನಾ). ಅತಿಶಯವಾದ ಸಾಮರ್ಥ್ಯ,—ಪರಾಕ್ರಮ : ಎಲವೊ ಕೀಚಕ ಹೋಗದಿರು ನಿಲ್ಲೆಲವೊ ಹುಲುಮಂಡಳಿಕ ನಿನ್ನಯ ಬಲುಗಡಿಯ ತೋಱುವುದು ನಿನ್ನಂತರದ ರಾಯರಲಿ (ಕುಮ್ಯಾಉ. ೬೦೩.೨೩-೮); ನಮ್ಮ ಹಗೆ . . . ಬಲುಗಡಿಯ ರಕ್ಕಸರನೊಬ್ಬರನುಳಿಯಲೀಯದೆ ಕೊಂದ ನಾವಿನ್ನುಳಿವುಪಾಯಮದೆಂತು (ಅಕ್ರೂಕ. ೨-೪). 'ಬಲಗಡಿಯ' ಪರಾ.

[ ಬಲು ( < ಬಲ್ಲಿತು$_1$ ) + ಕಡಿ$_4$ ( < ಕಡಿದು ) ]

**ಬಲುಗಡಿ$_2$** (ನಾ). ಬಲವಾದ ಕೋಟೆ,— ದುರ್ಗ : ಇಂತೆಂದು ಬಿನ್ನವಿಸಿದನಾ ನೇಮಿ ಪೊಡವಿಪತಿಗೆ ದಾನವಗೆ ಬಿಡಬಾರದು ಪೌಜುಮಾಡಬಾರದು ಬಲುಗಡಿ[ಪಾಠಾಂ. ಗಡಿಯ]ಕುಮ್ಮಟದುರ್ಗವಿಳೆಗೆ (ಕುರಾಸಾಂ. ೨೦-೯೩).

[ ಬಲು ( < ಬಲ್ಲಿತು$_1$ ) + ಗಡಿ$_3$ ]

**ಬಲುಗಡಿಯ** (ನಾ). ಅತ್ಯಂತ ಸಮರ್ಥನಾದವನು; ಮಹಾಪರಾಕ್ರಮಿ: ಎಲೆಲೆ ಪಾತಕಿ ಹೆಣನ ಹೊಯ್ದರೆ ಬಲುಗಡಿಯ ನೀನೆಂಬರೆ (ಕುಮ್ಯಾದ್ರೋ. ೦೯-೩); ಕಡೆಗಾಲದ ರುದ್ರನಿಟ್ಟಾಭರಣದ ಕಡಿಕನಪ್ಪಾ ವಿಷೋರಗನು ಕಡುಮುನಿಸಿಂ ಬರ್ಪವೊಲು ಬಂದಾ ಬಲುಗಡಿಯನ ಮೇಲ್ವಾಯ್ದುದಾಗ (ಪೀಲುಸಂ. ೦೯-೦೨೦). 'ಬಲುಗಡಿಯತನ' ಪರಾ.

[ ಬಲುಗಡಿ$_1$ + — ಅ$_7$ ]

**ಬಲುಗಡಿಯತನ** (ನಾ). = ಬಲುಗಡಿ$_1$ : ಫಡ ಜಯದ್ರಥ ಹೋಗು . . . ತುಡುಕಿದರೆ ಕೈ ಬೇವುದೀ ಬಲುಗಡಿಯಾತನ ಬಯಲಹುದು (ಕುಮ್ಯಾದ್ರೋ. ೪-೬೦). [ ಬಲುಗಡಿಯ + — ತನ ]

**ಬಲುಗಣೆ** 'ಬಲ್ಗಣೆ' ನೋ.

**ಬಲುಗತ್ತಲೆ** 'ಬಲ್ಗತ್ತಲೆ' ನೋ.

**ಬಲುಗತ್ತಿ** 'ಬಲ್ಗತ್ತಿ' ನೋ.

**ಬಲುಗಯ್** 'ಬಲ್ಗಯ್' ನೋ.

**ಬಲುಗಯ್ಯ** 'ಬಲ್ಗಯ್ಯ' ನೋ.

**ಬಲುಗರ$_1$** (ನಾ). ಅನೇಕ ಕೈಗಳು : ಜ್ವಲನನೇಂ ಶಿಹಭಕ್ತರಿಂದಗ್ಗಳವೆ ಯಾತನ ನಾಲಗೆಗಳಂ ಬಲುಗರಂಗಳನರಿದು ಕಳೆಯನೆ ವೀರಗಣನೊಬ್ಬ (ಬಸಪು. ೪೯-೪೩); ಎಲವೊ ಪಾವಕ . . . ವೀರಗಣೇಶ್ವರನು ನಿನ್ನ ಬಲುಗರಂಗಳನೇಳುನಾಲಗೆಗಳನರಿದು ಹಾಯ್ಕಿದನಲಾ (ಬಸಪು. ೩೦-೨೪).

[ ಬಲು ( < ಬಲ್ಲಿತು$_1$ ) + ಕರ$_4$ ]

**ಬಲುಗರ$_2$** 'ಬಲ್ಗರ' ನೋ.

**ಬಲುಗರುಳು** 'ಬಲ್ಗರುಳ್' ನೋ.

**ಬಲುಗವಣೆ** 'ಬಲ್ಗವಣೆ' ನೋ.

**ಬಲುಗಳವು** (ನಾ). ೧. ಅತಿಯಾದ ಕಳವು ; ಹೆಚ್ಚಿನ ಕಳ್ಳತನ. ೨. ದಪ್ಪವಾದ ಕೊರಳು. ೧, ೨ : ಅಳಿಯಾಸೆ ಪೂವಿನ ಜೊಂಪದೊಳಗೆ ಬಲುಗಳವು ತುರಂಗಸಂಕುಳದಿ ಎಳೆ ಕಣ್ಣು ದೆಸೆಸುತ್ತು ವಾಚಕ ಮೊದಲೊಳು ತಿಳಿಯಲಾ ದೇಶಕಿವಿಲ್ಲ (ಪರ್ಣಕ. ೦-೩೦).

[ಬಲು ( <ಬಲ್ಲಿತು$_1$) + ಕಳವು ; ಬಲು(<ಬಲ್ಲಿತು$_1$) + ಗಳವು$_2$ (◘←ಸಂ. ಗಲ)]

**ಬಲುಗಾಹು$_1$** 'ಬಲ್ಗಾಪು' ನೋ.

**ಬಲುಗಾಹು$_2$** (ನಾ). ಬಲವಾದ ಮೋಸ ; ಅತಿಯಾದ ಠಕ್ಕು ,— ವಂಚನೆ : ಆಹತಾಂದೋಳಿತ ಮೊದಲಾದ ಗಮಕಸಮೂಹಗಳಿಂದ ಕೇಳ್ವರನು ಆಹಾಯೆನಿಸಿದಳಂತರಂಗದ ಬಲುಗಾಹು ಬೇಱಾಗಿರಲವಳು (ಕುರಾಸಾಂ. ೨೩-೦೭). [ಬಲು (<ಬಲ್ಲಿತು$_1$) +ಗಾಹು$_2$]

**ಬಲುಗಾಳಿಗ** 'ಬಲ್ಗಾಳಿಗ' ನೋ.

**ಬಲುಗಿಚ್ಚು** 'ಬಲ್ಗಿಚ್ಚು' ನೋ.

**ಬಲುಗುಂಡು** 'ಬಲ್ಗುಂಡು' ನೋ.

**ಬಲುಗುಣಿಕೆ, ಬಲಕುಟಿಕೆ, ಬಲಗುಣಿಕೆ, ಬಲುಕುಣಿಕೆ** (ನಾ). ೧. ಒಂದು ಬಗೆಯ ಸಸ್ಯ : "ತಲಪೋಟಃ — ಚೊಕ್ಕಣಿಕೆ, ಅವರೆ, ಬಲುಗುಣಿಕೆ,

ಎಲಚಿ, ನೆಲದಾಳು" (೬೫೦. ೬೩). **ಬಲಕುಟಿಕೆ :** ೧. "ತಲಪೋಟಿಕಾ— ಬಲಕುಟಿಕೆ" (೬೫೦. ೬೬). **ಬಲಗುಣಿಕೆ :** ೧. "ಪೊ:ಟತಲಃ— ಬಲುಗುಣಿಕೆ" (೬೫೧. ೨೦೪). **ಬಲುಕುಣಿಕೆ :** ೧. "ಶಾಟಿಕಾ—ಬಲುಕುಣಿಕೆ" (೬೫೦. ೧೬೩). ೨. ಒಂದು ಬಗೆಯ ಮರ : ಬಲುಕುಣಿಕೆ ಪಾದರಿ ಹಾಲೆ ತೇಗುಗಳ ವಿಸರ ನಾನಾವೃಕ್ಷಜಾತಿಯಿಂದೆಸೆವ ಘೋರಾರಣ್ಯ ಕಣ್ಗೆಸೆದುದು (ಸಿಂಗಿರಾ. ೩೦-೯). [ಬಲು₂ + ಕುಣಿಕೆ₂]

**ಬಲುಗುದಿ** (ನಾ). ಅತಿಯಾದ ಕುದಿತ : ಕದಡಿ ಹರಿವರುಣಾಂಬುವಿನ ಬಲುಗುದಿಯೊಳಗೆ ನಾದಿದವು ಬಲವನು ಕದನದಲಿ ಗಣನಿಕರ ಕೊಂದವು ಕೋಟಿದಾನವರಾ (ದೇಬೀಪು. ೩-೩೬). [ಬಲು (<ಬಲ್ಲಿತು₁)+ಕುದಿ₃]

**ಬಲುಗುದುರೆ** 'ಬಲ್ಗುದುರೆ' ನೋ.

**ಬಲುಗುಮ್ಮ** (ನಾ). ಭಾರಿಯಾದ ಭೂತ ; ದೊಡ್ಡ ದೆವ್ವ : ತಮ್ಮ ಬಾ ಬಲ ಬೆದಱುತದೆ ಬಲುಗುಮ್ಮನಿವನನು ಕಂಡು (ತೊರರಾ. ೬-೨೬-೧೪). [ಬಲು (<ಬಲ್ಲಿತು₁) + ಗುಮ್ಮ₁]

**ಬಲುಗೂಳಿ** 'ಬಲ್ಗೂಳಿ' ನೋ.

**ಬಲುಗೆಂಪು** (ನಾ). ದಟ್ಟವಾದ ಕೆಂಪು ; ಕಡುಗೆಂಪು : ಸುಳಿದಾಡುವಬ್ಜ ನೇತ್ರೆಯರ ಪಾದಾಂಗುಳಿಗಳವಟ್ಟ ನುಡುಲತಗೆಯ ಬಲುಗೆಂಪು ನೆಲದೊಳೊಪ್ಪಿತು ಭೂದೇವತೆ ತಳೆದ ಕುಂಕುಮಗಂಧದಂತೆ (ಕಂಸಪ. ೨೯-೦೨). [ಬಲು (<ಬಲ್ಲಿತು₁) + ಕೆಂಪು₁]

**ಬಲುಗೆಯ್** 'ಬಲ್ಗೆಯ್' ನೋ.

**ಬಲುಗೆಯ್ಯ** 'ಬಲ್ಗೆಯ್ಯ' ನೋ.

**ಬಲುಗೆಲಸ** (ನಾ). ಅತಿಶಯವಾದ ಕೆಲಸ ; ದೊಡ್ಡಕಾರ್ಯ : ಹಲವು ಮಾತೇನಖಿಳಭುವನಾವಳಿಯ ಸೃಷ್ಟಿವಿಧಾನದಿಂ ಬಲುಗೆಲಸ ವೆನಗಾಯಿತು (ಏಕಾಗಿ. ೩-೨-೯೦). [ಬಲು (<ಬಲ್ಲಿತು₁) + ಕೆಲಸ]

**ಬಲುಗೆಲಸಿ** (ನಾ). ಬಹಳ ಕೆಲಸ ಮಾಡುವ ವ್ಯಕ್ತಿ ; ಒಳ್ಳೆಯ ಕೆಲಸಗಾರ : "ಕರ್ಮಠಂ ಕರ್ಮಶೂರನೆನೆ ಬಲುಗೆಲಸಿಯುಕ್ಕು" (ಸಂಗರಾ. ೬೦-೦೩). [ಬಲಗೆಲಸ + — ಇ₃]

**ಬಲುಗೆಸಱು** (ನಾ). ಹೆಚ್ಚಾದ ಕೆಸರು ; ಅತಿಯಾದ ರಾಡಿ : ರುಧಿರದ ಬಿಱುವೊನಲ ಬಲುಗೆಸಱ ನೆಣವಸೆಯುಱಿಲ ನೆಲದಲಿ ಧೂಳಿ ಯೆದ್ದುದು ದಳದ ಪದಹತಿಗೆ (ಕುವ್ಯಾಕ. ೦೨-೬). [ಬಲು (<ಬಲ್ಲಿತು₁) + ಕೆಸಱು (<ಕೆಸಱ್)]

**ಬಲುಗೇಱ** 'ಬಲ್ಗೇಱ' ನೋ.

**ಬಲುಗೈ** 'ಬಲ್ಗೆಯ್' ನೋ.

**ಬಲುಗೈತನ** (ನಾ). ಶೌರ್ಯ ; ಪರಾಕ್ರಮ : ನರನ ಬಲುಗೈತನವನೀ ಮೋಹರದಳ ಹೆಂಗುಸುತನವ ನೀವವಧರಿಸಿದಿರೆ ಜಗಭಂಡರಿವರಿಗೆ ಮತ್ತೆ ಬಿರುದುಗಳೆ (ಕುವ್ಯಾದ್ರೋ. ೦೦-೪೩) ; ಕಂಡನವರ ಬಲುಗೈತನವನು ಮೇಲೆ ಕೊಂಡೆಚ್ಚು ವಜ್ರಶರದಲಿ ಖಂಡಿಸಿ ಬಿಟ್ಟ ಸರಳ ಮೊದಲಿಸ ಲುದ್ದಂಡ ತ್ರಿಪಿಷ್ಟಕುಮಾರ (ವರ್ಧಕ. ೬-೦೮). [ಬಲುಗೈ (<ಬಲ್ಗೆಯ್) + —ತನ]

**ಬಲುಗೈದು** 'ಬಲ್ಗೆಯ್ದು' ನೋ.

**ಬಲುಗೈಬಂಟ** (ನಾ). ಪರಾಕ್ರಮಿಯಾದ ಸೈನಿಕ,—ಯೋಧ : ಈತ ಬಲುಗೈಬಂಟನು (ಕುವ್ಯಾಸ. ೨-೬೬). [ಬಲುಗೈ (<ಬಲ್ಗೆಯ್)+ಬಂಟ₁]

**ಬಲುಗೈಯ** 'ಬಲ್ಗೆಯ್ಯ' ನೋ.

**ಬಲುಗೊಱತೆ** (ನಾ). ದೊಡ್ಡ ನಷ್ಟ,—ಕೊರತೆ : ಸಾಯಬೇಕವನಲ್ಲ ದೊಡಾನು ಬಿಡಬೇಕು ಕಾಯುವರ್ನಿರ್ವಡುಳಿವುದು ನ್ಯಾಯವಲ್ಲಿದು ಬಲುಗೊಱತೆ ನಿನಗೆ ಕಂಪರಾಯ (ಕುರಾಶಾಂ. ೩೯-೦೫೦). [ಬಲು (< ಬಲ್ಲಿತು₁) + ಕೊಱತೆ (< ಕೊಱಂತೆ)]

**ಬಲುಗೋಲು** 'ಬಲ್ಗೋಲ್' ನೋ.

**ಬಲುಚರ** 'ಬಲ್ಚರ' ನೋ.

**ಬಲುತವಕ** 'ಬಲುದವಕ' ನೋ.

**ಬಲುತೆರೆ** 'ಬಲ್ದೆರೆ' ನೋ.

**ಬಲುದಂಡಿ** (ನಾ). ಹೆಚ್ಚಿನ ಶಕ್ತಿ ; ಅಧಿಕವಾದ ಪರಾಕ್ರಮ : ಕಂಡು ಕಾಟಣ್ಣನ ರಾವುತಿಕೆಯ ಬಲುದಂಡಿಯನಾ ರಾಮನಾಥ ಕೊಂಡಾಡಿದನು (ಕುರಾಶಾಂ. ೯೨-೭೯). [ಬಲು (<ಬಲ್ಲಿತು₁)+ದಂಡಿ₁]

**ಬಲುದಗಹು** (ನಾ). ಅಧಿಕವಾದ ನಿರ್ಬಂಧ,—ಅಡ್ಡಿ : ಬೆಗಡು ಬೀತುದು ಬೇಸಱಿನ ಬಲುದಗಹು ಸೋತುದು (ಕುವ್ಯಾಕ. ೬-೩೨). [ಬಲು (<ಬಲ್ಲಿತು₁) + ತಗಹು₂ (<ತಗೆಪು)]

**ಬಲುದಡಿ** (ನಾ). ಬಲವಾದ ಕೋಲು,—ದಂಡ : ಬಿಲ್ಲು ಬಲುದಡಿ ಪಿಡಿಚಕ್ರದಲಿ ಕಳಬಂಟ ಕಂಠವಿಚ್ಛೇದ ವಿನೋದದ ತಳವಱರೂರ ಕಾದಿಹರು (ಮೋಹತ. ೦೮-೦೦೩). [ಬಲು (<ಬಲ್ಲಿತು₁) + ದಡಿ₁.]

**ಬಲುದಡಿಗ** 'ಬಲ್ದಡಿಗ' ನೋ.

**ಬಲುದವಕ, ಬಲುತವಕ** (ನಾ). ೧. ಬಹಳವಾದ ಆತುರ : 'ಬಲುದವಕಿ' ಪರಾ. **ಬಲುತವಕ :** ೨. ಅತಿಯಾದ ಉತ್ಕಂಠತೆ,— ಕಳವಳ : ಇಂತೊಪ್ಪುತಿರೆ ಶಶಿ ಮದನಮೋಹಿನಿಗಾಗ ಚಿಂತೆ ಮೊಳೆತು ಬಲುತವಕ ಮುಂತಲೆದೋಱ ಕಾತುರ ಪರ್ಬಿ ವಿರಹಾಗ್ನಿ ಸಂತತ ಫಲದೋಱದುದು (ಕಂಸಪ. ೯-೦೬೦). [ಬಲು (<ಬಲ್ಲಿತು₁) + ತವಕ₁]

**ಬಲುದವಕಿ** (ನಾ). ಬಹಳ ಆತುರವುಳ್ಳವನು : ಅವೆರಡಬಲದೊಳು ರಾವುತರನು ಮತ್ತವರ ಹಿಂಗಡೆಯೊಳಾನೆಗಳ ಅವರ ಮುಂಗಡೆಯೊಳೊಲಿದು ಚೂಣಿಯ ಬಲುದವಕಿಗಳನು ನಿಲಿಸಿದನು (ಕುರಾಶಾಂ. ೨೦-೪). [ಬಲುದವಕ + — ಇ₃]

**ಬಲುದವಕಿಗ** (ನಾ). = ಬಲುದವಕಿ : ಇವರು ಕಳುಹಿದರುಚಿತದಲಿ ನಿನ್ನವರು ಮಸಗಿದ ಕಡಲವೊಲು ಬಲುದವಕಿಗರು ಕೋಲುಳವಿಗೊಂಡರು ಕೋಡಕೈಗಳಲಿ (ಕುವ್ಯಾಕ. ೦೫-೦೬). [ಬಲುದವಕ + — ಇಗ]

**ಬಲುದಸಿ** 'ಬಲ್ದಸಿ' ನೋ.

**ಬಲುದುಗುಡ** (ನಾ). ಅತಿಯಾದ ದುಃಖ ; ಬಹಳವಾದ ವ್ಯಸನ : ಬಲುದುಗುಡ ಸಹದೇವನಲಿ ನಂಗಳಸಿತೇ ದ್ರೌಪದಿ ಸುಭದ್ರಾಲಲನೆಯರಿ ಗನುಚಿತವು ಘಟಿಸಿತೆ (ಕುವ್ಯಾದ್ರೋ. ೬-೨೨). [ಬಲು (<ಬಲ್ಲಿತು₁)+ದುಗುಡ]

**ಬಲುದುತ್ತು** (ನಾ). ದೊಡ್ಡ ತುತ್ತು : ಎರಡು ಕೈಯನು ಬಲಿದು ಮುಷ್ಟಿಯೊಳೆಱಗಿದನು ಖಳ ಬೆನ್ನನೇನಂದಱಯಸಿತ್ರಲು ಭೀಮ ಬಲುದುತ್ತುಗಳ ತೋಟಿಯಲಿ (ಕುವ್ಯಾಅ. ೦೦-೩೩) ; ಎಲವೊ ನಿನ್ನಯ ಬಾಯ ಹವಣಿಂಗಳವಡದ ಬಲುದುತ್ತನಂಗೈಗಳಲಿ ಧರಿಸಿದೆ (ತೊರರಾ. ೩-೮-೬). [ಬಲು (<ಬಲ್ಲಿತು₁) + ತುತ್ತು₂]

**ಬಲುದೆಪ್ಪ** (ನಾ). ದೊಡ್ಡ ತೆಪ್ಪ,—ದೋಣಿ : ಹೆದ್ದೊಱೆಯನುಱ ತರಿಗೆ ದಾಂಟಿಸುವ ತೋರವಹ ಬಲುದೆಪ್ಪವಿರೆ ಮನ ಹಾಱ ಸೋರೆಯೋಡಂ ಹಿಡಿದು ತಾಂ ಪಾರವೆಯ್ದುವೆನೆಂಬವನವೊಲು . . . ಕೆಟ್ಟುಹೋದೆಯೆಲಾ (ಬಸವು. ೦೦-೯೬). [ಬಲು (<ಬಲ್ಲಿತು₁) + ತೆಪ್ಪ]

**ಬಲುದೋಂಟಿ** (ನಾ). ದೊಡ್ಡ ಕದನ ; ಮಹಾಯುದ್ಧ : ಬಲುದೋಂಟಿ ಯೆಂದರೆಡೆಯೊಳು ನಲಿವ ಸುಭಟರಿಹರು (ಕುರಾಶಾಂ. ೫-೪೦). [ಬಲು (<ಬಲ್ಲಿತು₁) + ತೋಂಟಿ₁ (<ತೋಟಿ₁)]

**ಬಲುಪು** 'ಬಲ್ಪು' ನೋ.

**ಬಲುಬಿದಿರು** (ನಾ). ಬಿರುಸಾದ ಬಿದಿರು : ಬಲುಬಿದಿರನುಚ್ಚಳಿಸುವಳಿ ಮುಖಿಕೆಳೆಯು ಕಟ್ಟಾನುವುದೆ (ಕುವ್ಯಾಕ. ೫-೨೮). [ಬಲು₁ (<ಬಲ್ಲಿತು₁) + ಬಿದಿರು₂ (<ಬಿದಿರ್₂)]

**ಬಲುಬಿಲ್ಲು** (ನಾ). ದೊಡ್ಡ ಧನುಸ್ಸು ; ಮಹಾಧನುಸ್ಸು : ಸಲ್ಲು ನಿಲ್ಲಾದರೆಯೆನುತ ಬಲುಬಿಲ್ಲನಗುಳಿಸಿದನು ಶರೌಘವಸೆಲ್ಲಿ ನಭ ದೆಸೆಯತ್ತ ಲೆನೆ ಘಾಡಿಸಿದವಂಬುಗಳು (ಕುಮಾರವ್ಯಾ. ೩-೪೬) ; ಸಿಂಜಿನಿಗೆಯ್ದು ಬಲುಬಿಲ್ಲ ಕರದೊಳಗಾಂತು ಜೇವೊಡೆದ (ಪೋಶತ. ೧೯-೩೨).
[ ಬಲು (<ಬಲ್ಲಿತು$_1$) + ಬಿಲ್ಲು$_1$ (<ಬಿಲ್$_2$) ]

**ಬಲುಬಿಸಿಲು** 'ಬಲ್ವಿಸಿಲ್' ನೋ.

**ಬಲುಬೆಟ್ಟ** 'ಬಲ್ವೆಟ್ಟ' ನೋ.

**ಬಲುಬೆಡಗು** 'ಬಲ್ವೆಡಗು' ನೋ.

**ಬಲುಬೆಳಸು** (ನಾ). ಅಧಿಕವಾದ ಏಳಿಗೆ ; ಹೆಚ್ಚಾದ ಅಭಿವೃದ್ಧಿ : ಪೊನ್ನ ನಿಳಯಂಗಳತಿಸೊಬಗಿನಲಿ ತೊಳಗಿಹುವರಸನ ಸೌಭಾಗ್ಯದ ಬಲುಬೆಳಸ ನದೇನ ಬಣ್ಣಿಸುವೆ (ಕಂಪಣ. ೬-೪೬).
[ ಬಲು (<ಬಲ್ಲಿತು$_1$) + ಬೆಳಸು$_2$ ]

**ಬಲುಬೇಗೆ** (ನಾ). ಬಹಳವಾದ ತಾಪ : ಬಲುಬೇಗೆಯೊಳಗೊಳಗೆ ಬಲುಹು ಹೊಱಗೆ ಪರಾಭವದ ಕಂದೊಳಗೆ ಕಡುಹಿನ ಕಲಿತನದ ಹಳಹಳಿಕೆ ಹೊಱಗೆ ಮಹೀಶ ಹದನಿದು ನಿನ್ನ ನಂದನನ (ಕುಮಾ.ಶ. ೨-೦).
[ ಬಲು (<ಬಲ್ಲಿತು$_1$) + ಬೇಗೆ ]

**ಬಲುಬೇನೆ** (ನಾ). ಅತಿಯಾದ ನೋವು ; ಅಧಿಕವಾದ ವೇದನೆ : ಬಸಿಱಿಳಿವ ಸಂಕಟದ ಬಲುಬೇನೆ ಭ್ರಾಂತಿನಿಂ ಮೈಮಱೆದು ಕಂಡ ಕನಸ್ಸೈಸೆ (ಸಿದ್ಧರಾ. ೨-೬). [ಬಲು (<ಬಲ್ಲಿತು$_1$) +ಬೇನೆ$_1$ ]

**ಬಲುಬೇಸಗೆ** (ನಾ). ಉಗ್ರವಾದ ಸೆಕೆಗಾಲ : ಮಂಜಿನ ಮೇಲುಗಾಳಿಗ ವುಂಟೆ ಬಲುಬೇಸಗೆಯ ಬಿಸಿಲೊಳಗೆ (ಕುಮಾರವ್ಯಾ. ೪-೪೦).
[ಬಲು (<ಬಲ್ಲಿತು$_1$) +ಬೇಸಗೆ$_1$]

**ಬಲುಬೊಬ್ಬೆ** 'ಬಲ್ವೊಬ್ಬೆ' ನೋ.

**ಬಲುಭಟ** (ನಾ). ಸಮರ್ಥನಾದ ಸೈನಿಕ : ಒಳಗೊಳಗೆ ಹೊಯಿದಾಡಿ ಹೊರಳುವ ಬಲುಭಟರನಗಿದೊಗುವ ಬಲುಗತ್ತಲೆಯ ಕೋಳಾಹಳವನು . . . ಅರ್ಜುನದೇವನೀಕ್ಷಿಸಿದ (ಕುಮಾರವ್ಯಾ. ೦೬-೪); ಹೊಳೆವ ಖಡ್ಗ ಕಠಾರಿ ಮೊದಲಾದಖಿಳಕೈದುಗಳ ಬಲುಭಟರು . . . ಸಂದಣಿಸಿ ಮೆಱೆದುದು ಪುರದ ಬಾಹೆಯಲಿ (ನಳಚ. ೨-೦೦). [ಬಲು (<ಬಲ್ಲಿತು$_1$) + ಭಟ$_2$]

**ಬಲುಭಾರ** 'ಬಲ್ಭಾರ' ನೋ.

**ಬಲುಮಟ್ಟು** (ನಾ). ಅಧಿಕ ಪ್ರಮಾಣ : ಆ ನಂಬಿಕೆಗೆ ಬಲುಮಟ್ಟಿನ ಸಮರ್ಥನೆ 'ಇಂಗ್ಲಿಷ್‌ಗೀತಗಳ'ಲ್ಲಿ ದೊರೆಯುತ್ತದೆ (ಸಮಾಲೋ. ೦೬).
[ಬಲು (<ಬಲ್ಲಿತು$_1$)+ಮಟ್ಟು$_2$ (<ಮಟ್ಟು$_1$)]

**ಬಲುಮನುಷ್ಯ** (ನಾ). ಪರಾಕ್ರಮಿಯಾದ ಸೇವಕ : ಶ್ರೀವೀರಬಲ್ಲಾಳ ದೇವರಸರ ಮನೆಯ ಪ್ರಧಾನ ಬೀರೆಯ ದಂಣಾಯಕರ ಬಲುಮನುಷ್ಯ ಚಿಣ್ಣಯನಾಯಕನು (ಮೈ.ಆ. ೦೯೪೩,೬-೩;1292). 'ಬಲುವಾನಿಸ' ಪರಾ.
[ಬಲು (<ಬಲ್ಲಿತು$_1$) +ಮನುಷ್ಯ]

**ಬಲುಮನುಸ್ಯ** 'ಬಲ್ಮನುಶ್ಯ' ನೋ.

**ಬಲುಮರ** 'ಬಲ್ಮರ' ನೋ.

**ಬಲುಮಳೆ** 'ಬಲ್ಮಳೆ' ನೋ.

**ಬಲುಮಿಣಿ** 'ಬಲ್ಮಿಣಿ' ನೋ.

**ಬಲುಮುಗಿಲು** (ನಾ). ದಟ್ಟವಾದ ಮೋಡ : ಸುಗ್ಗಿಯ ಸಿರಿಯ ಹೊಸ ಬೆಳುದಿಂಗಳನು ಬಲುಮುಗಿಲು ಕವಿವಂತೆ ಚರನ ಬಿನ್ನಹಕರಸಿ ಮೊದ ಲಾಗಿರೆ ಸಮಸ್ತಸಖೀಜನದ ಮುಖಸರಸಿರುಹ ಬಾಡಿದವು (ಕುಮಾ.ಶ. ೦೪-೩೦). [ಬಲು (<ಬಲ್ಲಿತು$_1$)+ಮುಗಿಲು (<ಮುಗಿಲ್)]

**ಬಲುಮುಡಿ** 'ಬಲ್ಮುಡಿ' ನೋ.

**ಬಲುಮುನಿಸು** 'ಬಲ್ಮುನಿಸು' ನೋ.

**ಬಲುಮೆ** 'ಬಲ್ಮೆ' ನೋ.

**ಬಲುಮೆಕಾಱ** 'ಬಲ್ಮೆಗಾಱ' ನೋ.

**ಬಲುಮೆಗಾಱ** 'ಬಲ್ಮೆಗಾಱ' ನೋ.

**ಬಲುಮೆವಿಡಿ** (ಕ್ರಿ). ಬೆಂಬಲವನ್ನು ಪಡೆ; ಒತ್ತಾಸೆಯನ್ನು ಹೊಂದು : ಆ ನರಸಿಂಹಪುರವನಾಳುವ ಭೂಪೋತ್ತಮ ಕಪ್ಪವ ಕೊಡದೆ ಮತ್ತಾಗ ತುರುಕರ ಬಲುಮೆವಿಡಿದು ಚಲವೆತ್ತಿರ್ದನು (ಕಂಪಣ. ೦೪-೨).
[ಬಲುಮೆ (< ಬಲ್ಮೆ ) + ಪಿಡಿ$_1$ ]

**ಬಲುಮೆಳೆ** 'ಬಲ್ಮೆಳೆ' ನೋ.

**ಬಲುಮೊಲೆ** 'ಬಲ್ಮೊಲೆ' ನೋ.

**ಬಲುವಗೆ** 'ಬಲ್ವಗೆ$_1$' ನೋ.

**ಬಲುವರದ** (ನಾ). ದೊಡ್ಡ ವ್ಯಾಪಾರಿ,–ವರ್ತಕ : ತುರಗಬಹಿತ್ರವನಡರಿ ತುರುಕಬಲಶರಧಿಯ ಪೊಕ್ಕು ಬಡಗಣ ವರವಾಜಿಗಳ ತಂದೊಪ್ಪಿಸಿಹನು ಬಲುವರದನಂತಾ ಕಾಟಣ್ಣ (ಕುಂಆರಾಂ. ೪೨-೮೦).
[ಬಲು (<ಬಲ್ಲಿತು$_1$)+ಪರದ$_1$]

**ಬಲುವಲಗೆ** (ನಾ). ದೊಡ್ಡ ಹಲಗೆ, –ಗುರಾಣಿ : ಮಲೆತ ಹಗೆವನ ಪಡಿ ಮುಖದ ಬಲುವಲಗೆಯಲಿ ಗದೆಯಿಂದ ರಾಯನ ಬಲುಹ ಬಿರುದಾವಳಿಯ ಬರೆವೆನು ಕೃಷ್ಣ (ಕುಮಾ.ಗ. ೩-೩೨). [ಬಲು (<ಬಲ್ಲಿತು$_1$)+ಪಲಗೆ]

**ಬಲುವಸರ** (ನಾ). ದೊಡ್ಡ ಅಂಗಡಿ : ಒಂದೊಂದು ಸರಳಿನ ಸಸಿನದಲಿ ಶತಸಾವಿರದ ಲಕ್ಷೋಪಲಕ್ಷಗಳ ವಿಷಮವಾನರಭಟರ ಕೊರಳಿನ ಬೆಸುಗೆ ಬಿಟ್ಟವು ಬಿಡುದಲೆಯ ಬಲುವಸರವಾದವು ಲಯಕೃತಾಂತನ ಸಂತೆಯಂದ ದಲಿ (ತೊರರಾ. ೬-೨೦-೨೪). [ಬಲು (<ಬಲ್ಲಿತು$_1$)+ಪಸರ]

**ಬಲುವಾತು** (ನಾ). ಅತಿಯಾದ ಮಾತು : ಮಡದಿ ಮೋಹದ ಬಲುವಾತಲಿ ಚದುರಂಗದಡಿಯ ಮೇಲ್ಡಾಯ ಪೇಳಿದಳು (ಕಂಪಣ. ೬-೦೦೯). [ಬಲು (<ಬಲ್ಲಿತು$_1$)+ಮಾತು$_1$]

**ಬಲುವಾನಿಸ** (ನಾ).=ಬಲುಮನುಷ್ಯ : ಸ್ವಸ್ತಿ ಶ್ರೀಮತು ಕೆಳಲಾದಿರಾಯ ಜಗದೊಬ್ಬಗಂಡ ಹೊಯ್ಸಣದೇವನ ಬಲುವಾನಿಸ ಸ್ವಸ್ತಿ ಶ್ರೀಮತು ಸಿತಗರ ಗಂಡ ಸ್ವಾಮಿದ್ರೋಹರ ಗಂಡ ಜಗದೊಬ್ಬ ಗಂಡ (ಎಕ. IX (8), ಕನ್ನಕ. ೨೮೬-೩; 1272)); ಬದ್ಧರದ ಬಲುವಾನಿಸರು [ಪಾಠಾಂ. ಮಾನಿಸರು, ವಾನಿಸದ] ಬಂಡಿಗಳನೊಡ್ಡಿದರಾ ನಿರಂತರ ಶರವ ತಡೆದರು ತಕ್ಕೆವರಿಗೆಯಲಿ (ಕುಮಾ.ಶ. ೦೦-೩೦). [ಬಲು (<ಬಲ್ಲಿತು$_1$)+ಮಾನಿಸ$_1$(<ಮಾನುಸ$_1$)]

**ಬಲುವಾಸಿ** (ನಾ). ಅಪಾರವಾದ ಕೀರ್ತಿ : ಮಿಾಸೆ ಸೀದವು ಭಟರ ಸುಯ್ಲಿನಲಾಸೆ ಬೀತುದು ದೇಹದಲಿ ಬಲುವಾಸಿಯಲಿ ಮನ ಮುಳುಗಿತೆನಿ ಬರಿಗೇಕಮುಖವಾಗಿ (ಕುಮಾ.ಶ. ೦೩-೬). [ಬಲು (<ಬಲ್ಲಿತು$_1$)+ಪಾಸಿ$_1$]

**ಬಲುವಿಡಿ$_1$** 'ಬಲ್ವಿಡಿ' ನೋ.

**ಬಲುವಿಡಿ$_2$** 'ಬಲ್ವಿಡಿ$_2$' ನೋ.

**ಬಲುವೆಸ** (ನಾ). ಶ್ರೇಷ್ಠವಾದ ಕೆಲಸ ; ಉತ್ತಮವಾದ ಕೆಲಸಗಾರಿಕೆ : ಎಸೆವ ಸಭಾಮಂಟಪಮ್ ವಸುಧೆಗೆ ಕಡುಚೋದ್ಯವೆನೆ ಜಗಂ ಬಣ್ಣಿಸೆ ಚೆಲ್ವೆಸೆದಿರೆ ಕರಮೊಪ್ಪುವ ಬಲುವೆಸದಿಂ ಮಾಡಿಸಿದನೆಸೆವಿನಂ ಮೂರ್ತ್ಯ(ಂ)ಣ್ಣಂ (ಸೌಇಇ. IX-i, ೦೪೬-೩೬ ; 1113).
[ಬಲು (<ಬಲ್ಲಿತು$_1$) +ಬೆಸ$_1$]

**ಬಲುವೊನಲು** 'ಬಲ್ವೊನಲ್'ನೋ.

**ಬಲುವೊರಜೆ** (ನಾ). (ಆನೆಗೆ ಬಿಗಿಯುವ) ದಪ್ಪವಾದ ಹಗ್ಗ : ತುಳುಕಿ ನುಗ್ಗಡಣೆಗಳ ಹಿಣಿಲಿನ ಬಲುವೊರಜೆಗಳ ಬಾರ ಸಂಕಲೆಗಳನು ಬಿಗಿದರು ಜೋಡಿಸಿದರುಬ್ಬರದ ಮದಗಜವ (ಕುಮಾರವ್ಯಾ. ೩-೨).
[ಬಲು$_1$(<ಬಲ್ಲಿತು$_1$) + ಪೊರಜೆ]

**ಬಲುಸನ್ನೆ** (ನಾ). ಬಲವಾದ ಸನ್ನೆಕೋಲು ; ಬಲಿಷ್ಠವಾದ ಎತ್ತುವ

ಸಾಧನ : ಸರಿಗ ರಕ್ಕಸ ಕಿಂಕರರು ಬೊಬ್ಬಿಱಿದು ಬಲುಸನ್ನೆಗಳಲುಕ್ಕಿನ ತುಱುಬುಗಳಲೆತ್ತಿದರು ತೇರಿಗೆ ತಗ್ಗಲವನಿತಳ (ಕೊರರಾ. ೫-೬-೬).
[ಬಲು (<ಬಲ್ಲಿತ್ತು$_1$) + ಸನ್ನೆ$_1$]

**ಬಲುಸರಳು** (ನಾ). ಅಧಿಕಸಂಖ್ಯೆಯ ಬಾಣ : ಮಳೆಗೆ ತೆರಳದೆ ಕೋಡ ಬಾಗಿಸಿ ಕಲಿವೃಷಭ ಹೊಗುವಂತೆ ದ್ರೋಣನ ಬಲುಸರಳ ಸರಿವಳೆಗೆ ದಂಡೆಯನೊಡ್ಡಿ ದಳವುಳಿಸಿ . . . ಕಟ್ಟಳವಿಯಲಿ ಹೊಕ್ಕನು ಭೀಮ ಬೊಬ್ಬಿಱಿದು (ಕುಮ್ಮಾದ್ರೋ. ೦೩-೦೨).
[ಬಲು (<ಬಲ್ಲಿತ್ತು$_1$) + ಸರಳು$_1$ (<ಸರಲ್$_1$)]

**ಬಲುಸರಿ** 'ಬಲ್ಸರಿ' ನೋ.

**ಬಲುಸಾಸಿಗ** (ನಾ). ಬಹಳ ಶೂರ ; ಮಹಾಸಾಹಸಿ : ಹೊಯ್ಸಿದನು ಡಂಗುರವ . . . ಈಶದತ್ತ ಮಹೋಗ್ರತರ ಬಾಣಾಸನವ ತೆಗೆದೇಱಿಸುವ ಬಲುಸಾಸಿಗರು[ಶಿಕಾಂ. ಳು]ಬಹುದೆಂದು ಸೂರ್ಯಾಸ್ತಮಯ ಸಮಯದಲಿ (ಕೊರರಾ. ೦-೦೩-೦೨). [ಬಲು$_1$ (<ಬಲ್ಲಿತ್ತು$_1$) + ಸಾಸಿಗ]

**ಬಲುಸೂಱು** 'ಬಲ್ಸೂಱು'ನೋ.

**ಬಲುಸೆಱು** 'ಬಲ್ಸೆಱು' ನೋ.

**ಬಲುಹಳಿ** 'ಬಲ್ಪಳಿ'ನೋ.

**ಬಲುಹು** 'ಬಲ್ಪು'ನೋ.

**ಬಲುಹುಗುಂದು** (ಕ್ರಿ). ಬಲಗುಂದು ; ಶಕ್ತಿಗುಂದು : ನಲಿದು ದೈತ್ಯರ ಪಡೆಯನೆಲ್ಲವ ಬಲಿಹರಣ ಮಾಡುತಲು ನೋಡುತ ಬಲಹುಗುಂದದ ರಿಪು ಹಿರಣ್ಯಕಶಿಪುವ ನರಹರಿಯು . . . ನೋಡಾಯೆನುತಲಗಲಕೆ ಚರಣಹತಿ ಮಾಡೆ (ಸಂಶಿಕ. ೬-೦೦೦). [ಬಲುಹು (<ಬಲ್ಪು) + ಕುಂದು$_1$]

**ಬಲುಹುರಿ** (ನಾ). ಬಹಳವಾಗಿ ಹುರಿಗೊಳಿಸಿದುದು ; ಬಹಳ ಬಿಗಿಯಾದುದು : ಹರುಷ ಮಿಗೆ ಹರಿತಂದು ಬಂಡಿಯ ಶಿರದ ಹಲಗೆಯ ನಡರಿದನು ಬಲುಹುರಿಯ ಹಗ್ಗವ ಹಿಡಿದು ಜಡಿದನು ಹೂಡಿದೆತ್ತುಗಳ (ಕುಮ್ಮಾಅ. ೦೦-೨೬). [ಬಲು (<ಬಲ್ಲಿತ್ತು$_1$) + ಹುರಿ$_3$ <ಪುರಿ$_3$)]

**ಬಲುಹೊಱು** 'ಬಲ್ಪೊಱು' ನೋ.

**ಬಲೂತಿ** (ನಾ). ವಂಶಪಾರಂಪರ್ಯವಾಗಿ ಗ್ರಾಮಕ್ಕೆ ಸೇವೆ ಸಲ್ಲಿಸುವ ಕಸುಬು : ಹಳ್ಳಿಗಳ ಬಲೂತಿದಾರರಲ್ಲಿ ಒಬ್ಬ ಕುಂಬಾರನಿಗೆ ಬಲೂತಿ ಇರುತ್ತದೆ (ಕಹಗಿ. ೦೯೮). 'ಬಾರಾಬಲೂತಿ'ಪರಾ.
[← ಮರಾ. ಬಲುತೇ, ಬಲೋಂತೇ]

**ಬಲೂತಿದಾರ** (ನಾ). ಹಳ್ಳಿಯಲ್ಲಿ ವಂಶಪಾರಂಪರ್ಯವಾಗಿ ಬಂದ ಕಸುಬನ್ನು ನಡೆಸಿ ದವಸ ಇತ್ಯಾದಿ ವರಮಾನಗಳನ್ನು ಪಡೆಯುವ ಹಕ್ಕನ್ನು ಹೊಂದಿರುವವನು ; ಇವರಲ್ಲಿ ಹನ್ನೆರಡು ಬಗೆ. 'ಬಾರಾಬಲೂತಿ' ಪರಾ : ಹಳ್ಳಿಗಳ ಬಲೂತಿದಾರರಲ್ಲಿ ಒಬ್ಬ ಕುಂಬಾರನಿಗೆ ಬಲೂತಿ ಇರುತ್ತದೆ (ಕಹಗಿ. ೦೯೮) ; ಜೋಯಿಸ, ಸೊನ್ನೆಗಾರ, ನಾದಿಗ, ಅಗಸ, ಮುಂತಾದ ಬಲೂತಿದಾರರು ಊರತನದ ಕೆಲಸಕ್ಕೆ ಪೂರ್ವದಲ್ಲಿ ಸಹಾಯ ಮಾಡುತ್ತಿದ್ದರು (ಕಜಾಕೂ. ೩೩).
[ಬಲೂತಿ + — ದಾರ್$_4$/ಮರಾ. ಬಲುತೇದಾರ, ಬಲೋತೇದಾರ]

**ಬಲೂನು**, ಬೆಲೂನು (ನಾ). ೧. "ಸರಿಸುಮಾರು ಗುಂಡಾಗಿರುವ, ಗಾಳಿತೂರದ ಪಟ್ಟೆಯ ಚೀಲದಲ್ಲಿ ವಾಯುವಿಗಿಂತಲೂ ಹಗುರವಾದ ಅನಿಲವನ್ನು ತುಂಬಿ, ತಾನಾಗಿ ಮೇಲಕ್ಕೇರುವಂತೆ ಮಾಡಿರುವ ಸಾಧನ : ಆಕಾಶಬುಟ್ಟಿ" (Balloon. ಇಂಕಶ). ೨. ಮಕ್ಕಳು ಬಾಯಿಂದ ಊದಿ, ಗಾಳಿಯನ್ನು ತುಂಬಿ ಆಡಲು ಬಳಸುವ ಬಣ್ಣಬಣ್ಣದ ತೆಳುವಾದ ರಬ್ಬರಿನ ಚೀಲ : ಉಸುರುಬುರುಡೆ : ಮಗು ಬಲೂನು ಊದಲು ಬಾರದೆ ಅಳುತ್ತಿದೆ (ಲೂ). **ಬೆಲೂನು** : ೨. ನಾವು ಸೂರ್ಯನಷ್ಟು ಗಾತ್ರದಬೆಲೂನನ್ನು ಮಾಡಿದರೆ ಅದರಲ್ಲಿ ಒಂದು ಮಿಲಿಯ ಭೂಮಿಗಳನ್ನು ಹಿಡಿಸಬಹುದು (ಅಗಾಕ. ೯).
[← ಇಂ. Balloon]

**ಬಲೆ$_1$** (ನಾ). ೧. ಪ್ರಾಣಿ, ಪಕ್ಷಿ ಮೊದಲಾದುವನ್ನು ಹಿಡಿಯಲು ಬಳಸುವ, ನೂಲು ಅಥವಾ ಹುರಿಯಿಂದ ಮಾಡಿದ ಸಣ್ಣಸಣ್ಣ ಕಂಡಿಗಳುಳ್ಳ ಹೆಣಿಕೆಯ ಸಾಧನ ; ಜಾಲ : "ಅನಾಯಃ, ಜಾಳಃ, ಕುವೇಣೀ, ಮತ್ಸ್ಯಬಂಧಿನೀ — ಈ ೪ ಬಲೆ" (ಹಲಾಯು. ೯೬-೪೪೦) ; ಎಮ್ಮ ಪಾಸಿದ ಚಿತ್ರಪಟಮೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಳಿಗುಗಳಾಗಳೆ ತೊಡರ್ಗುಂ (ಅಂಕ್ಷಿ. ೩-೩೯೭) ; ಜಗದಗಲದ ಬಲೆಯನಗಲ ಬಲ್ಲವರ ಕಾಣೆ ಮುಗಿಲುದ್ದಂಬರವನುಗಿಯ ಬಲ್ಲವರ ಕಾಣೆ (ಅದವ. ೦೯-೩೦) ; ಬಿಡು ನಾಯಂ ಪೊಸಪುಲ್ಲಗೊಡ್ಡು ಬಲೆಯಂ. . . ಎಂದು ಬೊಬ್ಬೆಗುಡುತುಂ ಬಂದರ್ ಪಲರ್ ಧೀವರರ್ (ಶಾದ್ವವಿ. ೨-೩೦). ೨. ಕೇಶಾಲಂಕಾರಕ್ಕಾಗಿ ಉಪಯೋಗಿಸುವ ಬಲೆಯಂತಹ ಒಂದು ಅಲಂಕಾರಸಾಧನ : ಮುಡಿಯ ಮುತ್ತಿನ ಬಲೆ ಮುಂಗುರುಳೊಳು ಬಿಗಿವಡೆದಿಹ ಮಣಿಯ ಕುಚ್ಚುಗಳ . . . ಕಡುಚೆಲುವೆಯರೆಸೆದಿಹರು (ಕಂಪಪ. ೬-೦೦೯). ೩. (ಅಲಂ) ಮೋಸ; ವಂಚನೆ; ಕಪಟ : ಈ ಪುಲಿಯುಮುತ್ಯಾಚಾರಮಾಗಿರ್ದುದು ಇದಱ ಬಲೆಯೊಳ್ ಸಿಲ್ಕುವೇಡ (ಪಂಚತಂ. ೨೩೬-೬) ; ಈಗಳೀ ದಾನವನ ಬಲೆಯಲಿ ತಾಗಿ ಸಿಲುಕಿತು ನಮ್ಮ ಮೋಹರ (ಕುಮ್ಮಾದ್ರೋ. ೦೬-೨೯) ; ನೆರೆದಿಳಾಮಂಡಲದ ರಾಯರು ಬೈದು ಭಂಗಿಸುತಾ ವಿದೇಹಜನ ಬಲೆಯನೊಡ್ಡಿದನಿವನು ಲುಬ್ಧಕತಿಲಕನೋ ನೃಪರುಹಿಯೊ ಸಾಕಿವನೊಳಗೆ ಮಾತೇಕೆನುತ ಮಿಗೆ ಮೊಱೆದೆದ್ದರಲ್ಲಲ್ಲಿ (ಕೊರರಾ. ೦-೦೩-೨೯).

**ಬಲೆಗೆ ಬೀಳು**=೧. ಬೇಟೆಗಾಗಿ ಹರಡಿದ ಬಲೆಯಲ್ಲಿ ಸಿಕ್ಕಿಕೊಳ್ಳು : ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾದೆನೈ (ಕುಮ್ಮಾಸ. ೦೯-೦೨೨) ; ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾಗೆ ನಳನೃಪತಿಲಕನೆಂದನು ಮನದ ದುಗುಡದಿ ತನ್ನ ನಿಜಸತಿಗೆ (ನಳಚ. ೪-೩೬). ೨. ಪ್ರಭಾವಕ್ಕೆ ಒಳಗಾಗು : ದ್ರೋಹಿಗಳ ರಹಸ್ಯವನ್ನೆಲ್ಲ ತಿಳಿದ ಮೊನೆಗಾರ, ಗುಂಡಪ್ಪನಿಗೆ ನಂಬಿಕೆಯುಂಟಾಗುವಂತೆ . . . ಮಾತನಾಡಿದಾಗ, ಗುಂಡಪ್ಪನು ಆ ಬಲೆಗೆ ಬಿದ್ದು, ತನ್ನ ಪಕ್ಷದವರ ಮಂತ್ರತಂತ್ರಗಳನ್ನೆಲ್ಲ ಮೊನೆಗಾರನ ಕಿವಿಗಳಿಗೆ ಪ್ರಕಟಮಾಡುವನು (ಸಂಕಳ. ೦೦೦) ; ನಿಪುಣಿಕೆ ಈ ಜನಗಳ ಬಲೆಗೆ ಬಿದ್ದಿರಬಹುದೆಂದು ನನಗೆ ಸಂದೇಹವಾಗಿತ್ತು (ಬಾಣಕ. ೦೩೨). **ಬಲೆಯ ಬೀಸು**=ವಶಪಡಿಸಿಕೊಳ್ಳಲು ಪ್ರಯತ್ನಿಸು: ಸ್ವಾಧೀನಕ್ಕೆ ತಂದುಕೊಳ್ಳಲು ಹಂಚಿಕೆ ಹೂಡು : ನುಡಿದವಧಿ ಹದಿಮೂಱು ವರುಷದ ಹೆಡತಲೆಯನೊದೆದೆದ್ದು ನಮ್ಮಾ ಪೊಡವಿಯರ್ಧಕೆ ಬಲೆಯ ಬೀಸದೆ ಬಿಡುವರೇ ಬಳಿಕ (ಕುಮ್ಮಾಅ. ೨೦-೨೩). **ಬಲೆಯಲ್ಲಿ ಬೀಳು**= ೧. ಬೇಟೆಗಾಗಿ ಹರಡಿದ ಬಲೆಯಲ್ಲಿ ಸಿಕ್ಕಿಕೊಳ್ಳು : ಬಹಳ ಮೀನುಗಳು ಬಲೆಯಲ್ಲಿ ಬಿದ್ದಿವೆ (ಲೂ). ೨. ಜಾಲದಲ್ಲಿ ಸಿಕ್ಕಿಕೊಳ್ಳು : ಮುಗ್ಧನಾದ ಬಾಲಕ ವಂಚಕರ ಬಲೆಯಲ್ಲಿ ಬಿದ್ದನು (ಲೂ).

[ದ್ರಾ.॥ ತಮಿ. ವಲೈ; ಮಲ. ತೆಲು. ವಲ; ಕೋತ. ವಲ್; ತೊದ. ಪಲ್ ; ಕೊಡ. ತುಳು. ಬಲೆ ; ಗದಬ. ವಲ್ಲ ; ಗೊಂಡಿ. ಒಲ್ಲ]

**ಬಲೆ$_2$**, ಬಳೆ$_3$ (ನಾ). ಒಂದು ಬಗೆಯ ಸಸ್ಯ; ಕಳ್ಳಂಗಡಲೆ: "ವಾರಾಹೀ-ಬಲೆ" (೬ಕಾ. ೦೯೯) ; "ಹೆತ್ತುತ್ತಿ, ಹೆತ್ತುಟ್ಟಿ, ಕಿಸಂಗಿ, ವಿಷಗುಂಬಳ, ಬಲೆ, ಬಟ್ಟರಳು, ಬೆಣ್ಣೆಗರಗ, ಭೇದ" (ಸಸ್ಯಕಿ. ೦೨೦). **ಬಳೆ$_3$** : ಬಳೆಯಂ ಬಜೆಯುಮನೊಂದಿರೆ ತಿಳಿತ್ಕಲದೊಳಟ್ಟು ಪೂಸಿ ತಿಮಿರ್ವುದು ಬಜೆಯಂ ಬಱಿಯಂ ವಿಸಿಸುವುದಂತಾ ಬಳೆಯ ಕಷಾಯಮನೆ ಬಾಲಕಂಗೀಜೆ ಮಾಣ್ಬುಂ (ಕೋಕೋಕ. ೯-೦೫೮). [ ಸಂ. ಬಲಾ ]

**ಬಲೆಗಣ್** (ನಾ). ಬಲೆಯಲ್ಲಿರುವ ಕಣ್ಣು; ಜಾಲದ ರಂಧ್ರ : ಪಲ

ವಾಳಾಪದೊಳೇನೊ ಬೆಲ್ವಣುಗನಂ ಕಟ್ಟಳ್ಕಱಿಂದೆತ್ತಿ ಪೆಂಪಲರ್ವನ್ನಂ ಬಿಗಿದವ್ವದಿರ್ದ ನಳಿತೋಳ್ನಾಂ ಬಂಚಿದೋಳ್ಕೋಡದಿರ್ಪಲರ್ಗಣ್ನಾಂ ಬಲೆಗಣ್ (ವ್ಯ.ಕಪಿ. ೨-೩೨). [ಬಲೆ₁ + ಕಣ್]

**ಬಲೆಗಾರ** 'ಬಲೆಗಾಱ' ನೋ.

**ಬಲೆಗಾಱ**, ಬಲೆಗಾರ (ನಾ). ೧. ಜಾಲವನ್ನು ಬಳಸುವವನು; ಬೆಸ್ತ: "ಜಾಲಿಕ, ವಾಗುರಿಕ_ಬಲೆಗಾಱ" (ನಾಚಿರಾ. ೬); ವರ ಕಮಠ ಮತ್ಸ್ಯಂಗಳಂ ನಿಜಕರದಿನೇಕೋದರದೊಳೊಡರಿಚಿ ಪಿರಿಯ ಗಾಳವನಿಕ್ಕುವಾ ಬಲೆಗಾಱನುಂ ತಾನೆ (ಚಕಪು. ೨೦-೨೮); ಸಮ್ಮುಗಾಱರ ಬಲೆಗಾಱರ ಪರದರ ಕ್ಷತ್ರಿಯರ ಪಾರ್ವರ ನಾಡಿಗರೊಂದು ಜಂಗುಳಿ (ರಾಚತಾತ್ಮ. ೬೬-೧೪). **ಬಲೆಗಾರ** : ೧. "ಕೈವರ್ತಃ,ದಾಶಃ,ಧೀವರಃ__ಮೀನುಗಳನ್ನು ಹಿಡಿಯುವ ಬೆಸ್ತರವರ ಹೆಸರು, ಮೀನಿನ ಬಲೆಗಾರರು ಅಂದರೆ ಪಾಶವಾರ" (ಸಿದ್ಧಾಂತಿ. ೬೦). ೨. ಬಲೆಯಿಂದ ಮೃಗ, ಪಕ್ಷಿಗಳನ್ನು ಬೇಟೆಯಾಡುವವನು ; ಬೇಡ : "ವಾಗುರಿಕಃ, ಜಾಲಿಕಃ . . . ೨ ಮೃಗದ ಬಲೆಗಾರನ ಪೆಸರು" (ಸಿದ್ಧಾಂತಿ. ೩೦೨). [ಬಲೆ₁ +_ಕಾಱ]

**ಬಲೆಗ್ರಾಮ** (ನಾ). ಒಂದು ಊರಿನ ಹೆಸರು : ಗೋಪರಾಷ್ಟ್ರ ವಿಷಯಾನ್ತ[ಃ] ಪಾತಿ ಬಲೆಗ್ರಾಮಃ ಸೋದ್ರಙ್ಗಃ (ಇಇ. IX, ೧೨೪-೦೮; 7ನೆಯ ಶತ). [ಬಲೆ? + ಗ್ರಾಮ]

**ಬಲೆದೊಡಕು** (ನಾ). ಜಾಲದಿಂದ ಸಿಕ್ಕಿ ಬೀಳಿಸುವ ಬಂಧನ : ಸಂಯೋಗದ ಸುಖ ಮೈಯುಂಡವಂಗೆ ಲೋಕದ ನಚ್ಚುಮಚ್ಚಿನ ಬಲೆದೊಡಕು ತಪ್ಪದು (ಮದೀವ. ೨೬೭-೬೮). [ಬಲೆ₁+ತೊಡಕು₃(<ತೊಡಂಕು₃)]

**ಬಲೆಬೆತ್ತ** (ನಾ). ಒಂದು ಬಗೆಯ ಬೆತ್ತ : "ನಾಯಿಬೆತ್ತ, ಬಲೆಬೆತ್ತ" (ಸಸ್ಯಕ. ೨೮); ಬಲೆಬೆತ್ತ, ನಾಯಿಬೆತ್ತ (ಮೃಚಿಗಿ. ೦೩-೨೬೦). [ಬಲೆ₂ + ಬೆತ್ತ]

**ಬಲೆಮಣಿ** (ನಾ). ತುರುಬಿನ ಬಲೆಯಲ್ಲಿ ಪೋಣಿಸಿರುವ ಅಲಂಕಾರದ ಮಣಿ : ವೀರಮುದ್ರಿಕೆ ನೂಪುರ ಕಾಂಚಿಯು ದಾಮ ಹಾರ ಪದಕ ಹತ್ತ ಕಟ್ಟು ತೋರಮುತ್ತಿನ ಬೊಟ್ಟು ತುಱುಬಿನ ಬಲೆಮಣಿ ಸೇರಿ ಕಣ್ಗೆಸೆದು ಮೆರೆಗೆ (ಕುರುಸಾಂ. ೩೭-೦೫೭). [ಬಲೆ₁ + ಮಣಿ₂]

**ಬಲೆವಱಿ** (ಕ್ರಿ). ಬಲೆಯನ್ನು ಕತ್ತರಿಸು; ಜಾಲವನ್ನು ಹರಿದು ಹಾಕು: ದ್ರವ್ಯಲಿಂಗಿಯಾಗಿರ್ದ ಪುಷ್ಪದಾಡನೆಡೆವೆತ್ತು ರಾಗಿಸಿ ಬಲೆವಱಿದ ಕೊಂಕನಂತೆ ಮನೆಯ ಗುಱಿಯಾಗಿರ್ಪುದುಂ (ಧರ್ಮಾಮೃ. ೬-೦೬೮). [ಬಲೆ₁ + ಪಱಿ₁]

**ಬಲೆವೀಸು** (ಕ್ರಿ). (ಮೀನು, ಪ್ರಾಣಿ, ಪಕ್ಷಿ ಮೊದಲಾದುವನ್ನು ಹಿಡಿಯಲು) ಬಲೆಯನ್ನು ಹರಡು ; ಜಾಲವನ್ನು ಒಡ್ಡು : ಬಲೆವೀಸಿ ಪುಲ್ಲೆಯಂ ಕಿಡಪು ಕಡಂಗಿ ಪೊಯ್ಗ್ ಪುಲಿಯಂ . . . ಎಂಬ ರವಂ ಪಿರಿದಾಯ್ತುರಣ್ಯದೊಳ್ (ರಾಚಕೀ.೩-೮೪); ಸಂಚಿವರೆಗು ನೀರುಳ್ಳ ತಾಣಂಗಳೊಳ್ ಬಲೆವೀಸುತ್ತ ನವೀನಮೀನವುನದೆಂತುಂ ಕಾಣದೆ . . . ಪುರಪೂರ್ವಾಶಾನದೀವಾರಿಯೊಳ್ ಜಾಲಮನಿಕ್ಕುತುಂ ಸೆಳೆಯೆ (ವ್ಯ.ಕಪಿ. ೦೬-೯೨). [ಬಲೆ₁+ ಬೀಸು₁]

**ಬಲೆಹುಲ್ಲು** (ನಾ). ಒಂದು ಬಗೆಯ ಹುಲ್ಲು : "ಬಲೆಹುಲ್ಲು, ಮರಹಾಸ್ತಿ" (ಸಸ್ಯಕ. ೦೫೭). [ಬಲೆ₂+ ಹುಲ್ಲು (<ಪುಲ್)]

**ಬಲೋದ್ಧತೆ** (ನಾ). ಬಲದಿಂದ ಉಂಟಾದ ಗರ್ವ: ಪರಾಕ್ರಮದಿಂದ ಉಂಟಾದ ಸೊಕ್ಕು : ತಾಯೆ ನೀನವಧರಿಸು ಪೇಳ್ದ ನುಡಿ ಪುಸಿಯಲ್ಲ ವಮಾಯೆ ಎನ್ನಾಧೀನ ಮದ್ಬಲೋದ್ಧತೆಯಿಂದೆ ಪ್ರಿಯಮುಪ್ಪಂತೆಸಗಿ ಮೋಹಿಸುವುದಿದು ತಥ್ಯ ಮತ್ತೆಪೆರಗೆಯ ಮೀರದೆ (ವೆಂಗಾರಾ. ೨-೩೪-೩೭). [ಸಂ. ಬಲೋದ್ಧತಾ]

**ಬಲೋದ್ಬಂದಿ** (ನಾ). ಹಿಂಸೆ : ತೊಂದರೆ : ಮಹಾಕೋಪೋದ್ರೇಕದಿಂದ ಬಲೋದ್ಬಂದಿ ಜುಲುಂ ಮಾಡೋಣ ೩ ತಿಂಗಳ ಪರ್ಯಂತರ ಅಥವಾ ೫೦೦ ರೂಪಾಯಿ ಜುಮ್ಮಾನೆ (ಗ್ರಾಪಪ್ರಕ. ೦೧೩). [←ಮರಾ. ?]

**ಬಲೋನ್ಮತ್ತ**, ಬಳೋನ್ಮತ್ತ (ನಾ). ಪರಾಕ್ರಮದಿಂದ ಗರ್ವಿಷ್ಠನಾದವನು ; ಸಾಮರ್ಥ್ಯದಿಂದ ಸೊಕ್ಕಿದವನು : 'ಬಲೋನ್ಮತ್ತತೆ' ಪರಾ. **ಬಳೋನ್ಮತ್ತ** : ಬಳಾವರ್ತರ್ . . . ತಿಳಿನೀರಂತಪರಜರ್ ಬಳಾವಷ್ಟಂಭಂಗೆಟ್ಟಡಿಗೆಡಿಗಿ ಕಂಡರ್ ಪಿರಿಯನೊಳ್ ಬಳೋನ್ಮತ್ತಂ ದಲ್ ದುರ್ಬಳವಿಭಹಯಾನೂನರಬಳಂ (ಶಾಂತಿಪು. ೧೦-೫೫). [ಸಂ.]

**ಬಲೋನ್ಮತ್ತತೆ** (ನಾ).=ಬಲೋದ್ಧತೆ : ಭೀಮನ ಈ ಬಲೋನ್ಮತ್ತತೆಯನ್ನೂ ಬಾಹುಗರ್ವವನ್ನೂ ನೋಡಿ ಹನುಮಂತನು ಮನಸ್ಸಿನಲ್ಲಿಯೇ ನಕ್ಕು . . . ಎಂದನು (ವಕಭಾ. ೦೫೨). [ಸಂ. ಬಲೋನ್ಮತ್ತತಾ]

**ಬಲೌಘ** (ನಾ). ಸೈನ್ಯದ ಗುಂಪು ; ಸೇನೆಯ ಸಮೂಹ : ಕಾಲಾಗ್ನಿಯಂತೆ ಇಟ್ಟಣಿಸುತ್ತಿದುವ ಸಂವೇಗನ ಬಲೌಘಕದಿರಿಟ್ಟು ನಿಂದಂ ಭೀಮನುತ್ಸಾಹದಿಂದೆ (ಕೃಬಭಾ. ೯-೨೯); ಕುಶಂ ಬಳಿಕ ನಿಜ ಹಸ್ತಲಾಘವದೊಳಲ್ಲಿರ್ದರಂ ಸದೆದು ಲವನಂ ಬಲೌಘಮೊತ್ತಾಯದಿಂ ಮುತ್ತಿ ಕೊಂಡಿರ್ದ ಕೋಲಾಹಲವನಾಲಿಸಿದನು (ಕೃಬಭಾ. ೨೦-೬೦). [ಬಲ₃+ ಓಘ]

**ಬಲ್ಕಣೆ₁**, ಬಲುಕಣೆ (ನಾ). ೧. ಬಹಳ ಶೂರನಾದವನು ; ಮಹಾಪರಾಕ್ರಮಿ: ಬಲಿಷ್ಠ : ಸಮರ್ಥ : ಕಣೆಯಂ ಶೌರ್ಯಾಭಿಮಾನಕ್ಕಿಡಱದ ರಿಪುಸೈನ್ಯಕ್ಕೆ ಸಂಗ್ರಾಮದೊಳ್ ಬಲ್ಕಣೆಯಂ . . . ಸಾಮಂತಚೂಡಾಮಣಿಯುನಿಣೆಯರಂ ಬಂದು ಕಂಡಂ ಸುರೇಂದ್ರಂ (ಕಂಪಕಾ. ೬-೯೩); ಗುಣನಿಧಿ ನಂದಿವರ್ಧನನ ನಾಡುವನಾಳ್ವಿಸಕೆಯ್ದು ವಿಶ್ವಧಾರಿಣಿಯುವಜ್ಞೆಗೆಯ್ದುದೆನಗಂ ಬೆಸಕೆಯ್ವೊಡೆ ಪಾಳಿಸಾಂತ ಬಲ್ಕಣೆಯುನಘಾರಿಯಂ ತವಿಪ ಕಾಲಮದಿನ್ನನಗೆ (ಶಾಂತಿಪು. ೯-೦೦೪); ಫಣಿರಾಜಂ ಬಾರಿಯಿಟ್ಟಟ್ಟಿದೊಡನು ದಿನದಿಂ ಬರ್ಪ ಸರ್ಪಂಗಳಂ ಬಲ್ಕಣೆ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಗಿರಿಯೊಳಿರ್ಪಂ (ಕಾವ್ಯಾವ. ೯೦೦). ೨. ನಿಪುಣ ; ನಿಷ್ಣಾತ ; ಪರಿಣತ : ನಾಲ್ಕುಮುಂಪಾಯದ ನುಡಿಗಳ ಸಿಲ್ಕಾಸಿಲ್ಕಿಗಳನೆಯ್ದೆ ನುಡಿದೈ ಕ್ರಮದಿಂ ಬಲ್ಕಣೆಯ್ಯ ನಯದೊಳ್ನುಡಿಯಲ್ಕೊಂಕಂ ಕಲ್ವುದಲ್ತೆ ನಿನ್ನೊಂದಿಗರೊಳ್ (ಶಾಂತಿಪು. ೩-೯೦); ನಾಲ್ಕೆಂಬ ವೀಥಿಯೆಡೆಯೊಳ್ ನಾಲ್ಕಱ ಮಾಱ ಱೊಳೆ ಮಾಱಱಿಂದಂ ಕೊಳ್ ನೀಂ ಸಿಲ್ಕಿಲ್ಲದೆ ಕೂಡಯ್ದಂ ಬಲ್ಕಣೆ ನೀನಯ್ದುಗೆಯ್ದು ಕಳೆ ಪಡೆದನಿತಂ (ಅಬ್ಬಸು. ೦೨-೫೦). ೩. ಬಲಿಷ್ಠವಾದುದು; ಸಮರ್ಥವಾದುದು; ಪ್ರಬಲವಾದುದು : ಗುಣವಂತಂ ಸತ್ವಗುಣಾಗಣಿತಂ ನಿರ್ಮಳಿನದಶನನಾಯುಷ್ಯಂ ಬಲ್ಕಣೆಯಿರ್ಪತ್ತಯ್ದಬ್ದದೆ ಕ್ಷಣಮಾತ್ರಕ್ಕಟಿಪುವು (ಅಕ್ಷಿಕಾ. ೬-೨೫). ೪. ಪವಿತ್ರವಾದ ಸ್ಥಳ: ಆಣಿವಿಣಿಗೆಯ್ದಾ ಧರ್ಮಮನಣಿಯರಮಳಿನೊಂಗೆ ಪೆಱಱುಗತಿಯಿಲ್ಲಾ ಬಲ್ಕಣೆ ವಾರಣಾಶಿಯೊಳ್ಪಸುವುಂ ಬ್ರಾಹ್ಮಣರನಳಿದನಜಿಗುಜಿಗಿಳಿದ (ಕ್ರೌಇಇ. XX, ೦೯-೫೭; 1015); ಪೆಱತು ಗತಿಯಿಲ್ಲಾ ಬಲ್ಕಣೆ ವಾರಣಾಸಿಯಲ್ ಬ್ರಾಹ್ಮಣರುಂ ಪಸುಗಳ್ನಳಿದನಜಗುಜಿಗಿಳಿದಂ (ಎಕ. VII, ಶಿಕಾ೦. ೦೫೩-೩೫; 1039). ೫. ಪರಾಕ್ರಮ; ಸಾಮರ್ಥ್ಯ : ನೀನಿನಿಸಾನುಂ ಬಲ್ಕಣೆಯ ಗಂಡನೆ (ಬಂಹಂ. ೬-೫೦ ಪ). ೬. (?) : ನಿನ್ನಂ ಕೊಟಿದ ದಕ್ಕ ಬಲ್ಕಣೆಯುನೊತ್ತಿದಂತೆ ನುರ್ಗು ಮಾಡಮಂ ಬಾಯೆನೆ (ಬಂಹಂ. ೬-೫೦ ಪ). **ಬಲುಕಣೆ** : ೨. ಬಲುಕಣೆಗಳಿವದಿರನು ಕರಿ ಮುಂಕೊಳಿಸಿ ಕೆಡಹಿತು (ಕುವ್ಯಾದ್ರೋ. ೩-೨೪); ಫಣಿವಿಭೂಷಾಂಧಾಸುರರ ಬಲುಕ[ಣಾಂ. ಗ]ಣೆಯ ಬವರವನಸುರಕುಲಭೀಷಣ ಹಿರಣ್ಯಕರದಟು ಮಿಕ್ಕುದು (ಕೊರಂ. ೬-೦೭-೫೯). ೭. ಆಶ್ರಯವಾಗಿರುವವನು ; ನೆಲೆಯಾದವನು: ಗುಣಜಳನಿಧಿ ತೇಜದ ಬಲುಕಣೆ . . . ಸಾಮಾಸಿಗವಂಶಾಗ್ರಣಿಯೆನೆ ವಿಭುಮಲ್ಲಿಕಾರ್ಜುನಂ ರಂಜಿಸುವಂ (ಕ್ರೌಇಇ.

XX, ೨೪೬-೨೩; 1228).

[ಬಲ್$_2$(<ಬಲ್ಲಿತು$_1$)+ಕಣ್$_6$./ತುಳು. ಬಲ್ಕಡಿ, ಬಲ್ಗಡಿ]

**ಬಲ್ಕಣಿ$_2$** (ನಾ). ಒಂದು ಬಗೆಯ ಮರ (?) : ಪುನದಕ್ಷಿಣಸ್ಯ ದಿಸಿ ಬಹುಶ್ಮಹಿಯೆ ಬಲ್ಕಣಿ ವೃಕ್ಷವೆ ಪುನಪಶ್ಚಿಮ ಮುಖದೆ ಸನ್ದ ಬಹು ಮೂಲಿಕಪೆನ್ತಿಯು . . . ಕೂಡಿತ್ತು ಸೀಮಾನ್ತರಂ (ಎಕ. I, ೦-೨೪ ; 466). [?]

**ಬಲ್ಕಣಿತನ** (ನಾ). ೧. ಶೌರ್ಯ ; ಪರಾಕ್ರಮಂ : ಅಣೆದಾರ್ದು ತೋಱಿ ಬಿಡೆ ಬಲ್ಕಣಿತನದಿಂದಭಿನಿಷಾದಿಗಳ್ ಜವದಿಂದಂ ಪಣೆಗಳೞಿಂಕೆಗಳಾಗಿರೆ ರಣಾಗ್ರದೊಳ್ ಪಿಡಿದು ಮನ್ಮನದ್ವಿರದಂಗಳ್ (ವರ್ಧಮಾ. ೪-೭೨). ೨. ರಭಸ ; ಜೋರು : ಕಣಿಕವುನಾಜ್ಯದಿಂ ತೊಡೆದು ಮೋದಿಸಿ ದಿದ್ದಮು ಮಾಗೆ ಪೊಯ್ದು ಬಲ್ಕಣಿತನದಿಂದಮೊತ್ತಿ ಮಿದಿದು (ಲೋಕೋಪ. ೬-೦೩). ೩. ಧೈರ್ಯ : ತತ್ಕುಮಾರತಾಪಸರ್ ತಾಪುಮೊಳಗೞಿಯದೆ ತೞಿಸಂದು ನಿಂದು ನಿರವಧಿಧೈರ್ಯನಿಧಿಯಪ್ಪ ನಾಭಿನಂದನನ ನಿಯಮದವಸಾನಮಂ ಬಲ್ಕಣಿತನದಿಂ ಕೆಲವು ದೆವಸಂಬರಂ ಪಾರ್ದು ತೀರ್ವುದುಂ (ವರ್ಧಕ. ೦೦-೪೦ ವ). [ಬಲ್ಕಣಿ$_1$ +— ತನ]

**ಬಲ್ಕೆ, ಬಲಿಕೆ** (ನಾ). ೧. ಜೋರು ; ರಭಸ : ಭೂರಮಣ . . . ಹತ್ತಿರಕೆ ಬಂದು ತಾಗಿದ ಸರಳ ಬಲ್ಕೆಯಿಂ ಕಿತ್ತು ಸಗ್ಗಳೆಯುದಕದಿಂದ ಜೋರಿಡುತಿರ್ದ ನೆತ್ತರಂ ತೊಳದೊರಸಿ ಮೃಗವಹರೆ ಮಾನಿಸರು ಕ್ರೀಡೆಯಿಂ ನೊಂದಿರೇದಂ (ತುರಂಗ. ೦೦-೧೯). ೨. ದೊಡ್ಡದಾದುದು ; ಹಿರಿದಾದಂದು : 'ಬಲ್ಕೆವೆೞು' ಪರಾ. **ಬಲಿಕೆ :** ೩. ಹೆಚ್ಚಳ ; ಆಧಿಕ್ಯ : "ಬೃಂಹಸ್, ಬೃಂಹಿಃ, ಬೃಂಹುಃ, ಬೃಂಹಣಂ, ಬೃಂಹಿತಂ, ಈ ೫ ಬಲಿಕೆ" (ಕಾಶಕ್ಯ. ೬೭) ; ಮಲಂ ಪಿಂಗಿದಂಗದೊಳು ಸತಿ ಮೂಲಮಲಮಿಹುದು ಮೇಣ್ಮಲ ತೊಲಗಲಾ ದೇಹದ ಹಂಗು ಮತ್ತೇಕ ಮಲಬಲಿಕೆಯಿಂ ರಾಜಿಸಿರ್ಪಂಗಕ್ಕೆ ಲಿಂಗಸಮವಾದ ರುದ್ರಾಕ್ಷಿ ಭಸಿತಂಗಳಂ ಧರಿಸಿಯಾ ದೇಹ ಸಹ ನೀವು ತಲ್ಲಿಂಗವ ಪಿಡಿಯಲಕ್ಕುಮೆ (ಜಕೋಪು. ೭-೬೩). ೪. ಬೆಳವಣಿಗೆ ; ಅಭಿವೃದ್ಧಿ ; ಏಳಿಗೆ : ಇಕ್ಷುದಂಡ ಬಲಿವುದಕ್ಕೆ ಮೊದಲೆ ತನಿರಸ ಬಹುದೇ ನಾನು ನೀನೆಂಬುದಕ್ಕೆ ಸ್ಥಾಣುಪಹುವಕ್ಕೆ ಭಾವದ ಬಲಿಕೆ ಇನ್ನಾವುದೋ (ಮೋಳಮಾ. ೩೨-೨೦೩) ; ಶಿಲೆಯ ಪ್ರತಿಷ್ಠೆಯ ಮಾಡಿ ತನ್ನ ಒಲವರ ವಿಶ್ವಾಸದಿಂದ ಬಲಿಕೆಯನಱಿವುದು ಶಿಲೆಯೊ ಮನವೊ (ಅಂಬವ. ೪೦೦-೧೩೦೩) ; ಬೆಳೆದೆ ನೀನಾ ಸೂತಕವ ಹೊತ್ತು ಉದರದೊಳು ಬಳಿಕ ಹೊಲೆ ಮಾದುದಾಕೆಗೆ ನಿನ್ನ ಬಲಿಕೆಯೊಳು (ದೀಕ್ಷಾಬೋ. ೪೨-೨೦). ೫. ಬಲಿತಿರುವಿಕೆ; ಗಟ್ಟಿಯಾಗಿರುವಿಕೆ ; ಬಿರುಸಾಗಿರುವಿಕೆ : ಬಲಿಕೆಗೆ ಮೊದಲು ಅಡಕೆ ಮೆದುವಾಗಿರುತ್ತದೆ (ರೂಢಿ). 'ಬಲಿಕೆಅನ್ನ' ಪರಾ. ೬. ಪರಿಣತಿ; ಪ್ರೌಢಿಮೆ: ನಲಿದಾಡುತೆಯ್ತಂದು ಸಖಿರಾಜನೆಂಬುದೊಂದೆ ಳೆಗೂಸು ಕೈಯೊಳು ಪಿಡಿದು ಗಿಲಿಕೆಯ ಕೋಲನಿತ್ತಯ್ಯಗೆಱಗಿತಿದು ಬಲಿಕೆಯ ಮೆಚ್ಚಲೈಯೆಂದ (ಭರತ. ೪೭-೦೨೭) ; ಪರರಂ ಜಯಿಸ ಬೇಕೆಂದೇ ಕಲಿತಿರಲ್ಲದೆ ನೀವು ಮುಕ್ತಿಗೆ ಕಲಿತುದಿಲ್ಲಂ ನಿಮಗೆ ಶಾಸ್ತ್ರದ ಬಲಿಕೆಯುಳ್ಳವರೆನಿಸಿಕೊಂಬುದೆ ಮುಕ್ತಿಯೆಂದಿಹಿರಿ (ಶಂಕದಾ. ೦೨-೬). 'ಬಲಿಕೆವಂತ' ಪರಾ. ೭. ರಚನೆ ; ಮಾಟ; ನಿರ್ಮಾಣ : ಅದು ತೃಣದ ಲೆಪ್ಪದ ಬಲಿಕೆಯೊ ತನ್ನ ಚಿತ್ತದ ಬಲಿಕೆಯೊ (ಬಲೀಕ್ಷ. ೦೭೪); ದಳವಾಡಸಹಿತ ಬೈಚಪ್ಪ ದುರ್ಗವ ಹೊಕ್ಕು ತಳುವದದೞಿ ಬಲಿಕೆಯನು [ಪಾಠಾಂ. ಬಳಿಕಿನ್ನು] ಬಳಸಿ ಬಳಸಿ ನೋಡಿ ದುರ್ಗಸೌರಣೆಯನಂದಲಸದೆ ಮಿಗೆ ಮಾಡಿಸಿದನು (ಕುಠಾಸಾಂ. ೩೭-೩೦).

ಬಲಿಕೆಯಾಗು = ೧. ಗಟ್ಟಿಯಾಗು ; ಬಲಿ ; ಬಿರುಸಾಗು : ಬಲಿಕೆಯಾಗದ ಅಡಕೆ ಬಣ್ಣ ಕಟ್ಟಲು ಚೆನ್ನಾಗಿರುತ್ತದೆ (ರೂಢಿ). ೨. ಬಿಗಿಯಾಗು ; ಬಲವಾಗು ; ಭದ್ರವಾಗು: ಕ್ಷಣದೊಳಗೆ ಪಾವೊಂದ ನರರೆ ತೆಗೆದಲ್ಲಿ ನೆೞಿ ಬಿರಿದ ಕುಕ್ಷಿಯು ಸಸಿನೆ ಮಾಡಾತ ಕಟ್ಟಿದಂ ಬಲಿಕೆ ಯಪ್ಪಂದದೆ (ಬೀಕೃಪು. ೩-೪-೨೭).

[ಬಲ್$_2$ (<ಬಲ್ಲಿತು$_1$)+ — ಕೆ./ ತುಳು. ಬಲಿಕೆ]

**ಬಲ್ಕೆಲೆ** (ಕ್ರಿ). ಬಹಳ ಮಾತನಾಡು : ಲೋಚನಯುಗ್ಮದಿಂದೆಡಬಲಂಗಳ ನೀಕ್ಷಿಸಿ ತನ್ನ ನಲ್ಲನಂ ಸೂಚನೆಗೈದು ಕೂಡೆ ಕರೆದೊಯ್ಯನೆ ಬಲ್ಕೆಲೆಯುತ್ತು ಮಾತನೊಳ್ (ಉದ್ಭಟ. ೨-೪೦). [ಬಲ್$_2$ (<ಬಲ್ಲಿತು$_1$) + ಕೆಲೆ]

**ಬಲ್ಕೆವೆೞು** (ಕ್ರಿ). ಹಿರಿದಾಗು ; ದೊಡ್ಡದಾಗು : ನಿಲ್ಕಡೆವೆತ್ತಂದಿ ನಾಯುಷ್ಯಮೆಂಭತ್ತನಾಲ್ಕು ಲಕ್ಷಾಂಕಪೂರ್ವಗಳು ಬಲ್ಕೆವೆತ್ತಾ ಪೂರ್ವ ಯೆಂದರೆಷ್ಟೆಂಬುದ ಸಿಲ್ಕಾಗದಂತೆ ಪೇಳುವೆನು (ಭರತ. ೭೭-೭).

[ಬಲ್ಕೆ + ಪೆೞು$_1$]

**ಬಲ್ಕೇಡಿಗ** (ನಾ). ಬಹಳ ಕೇಡಾಳಿಯಾದವನು ; ಅತಿ ದುಷ್ಟಸ್ವಭಾವ ದವನು : ಕೇಡಿಗರೊಳವನೋರ್ವನೇ ಬಲ್ಕೇಡಿಗನು (ಜರಾಪಮಾ. ೫೩೦-೪೩).

[ ಬಲ್$_2$ (<ಬಲ್ಲಿತು$_1$) + ಕೇಡಿಗ ]

**ಬಲ್ಗಂಡ, ಬಲುಗಂಡ** (ನಾ). ಬಹಳ ಶೂರನಾದವನು ; ಅತ್ಯಂತ ಪರಾಕ್ರಮಿಯಾದವನು : ಪರಾಂಗನಾಪುತ್ರಂ ಮಲೆಗೆ ಮಾರ್ತಾಂಡಂ ಗಜಕೆ ಬಲ್ಗಂಡಂ ಹಯವತ್ಸರಾಜಂ (ಎಕ. VII, ಶಿಕಾ. ೩೭-೧೧ ; 1027) ; ಚೋಳಕುಳಕಾಳದಣ್ಡಂ ಸಬರೆ ಬಲ್ಗಣ್ಡಂ ಕಲಿಗಳಾರಾಧ್ಯನಾಗ್ಗ ಮಸಾಧ್ಯಂ (ಸೌಇಇ. XI-i, ೯೭-೯; 1062); ಉದಾರಮಹೇಶ್ವರಂ ಚಲಕೆ ಬಲ್ಗಣ್ಡಂ ಶೌರ್ಯ್ಯಮಾರ್ತ್ತಣ್ಡಂ . . . ಶ್ರೀಮನ್ಮಹಾಮಣ್ಡಳೇಶ್ವರಂ ಲಕ್ಷ್ಮರಸರ್ (ಸೌಇಇ. XX. ೪೭-೭ ; 1074) **ಬಲುಗಂಡ :** ಯಾದವ ಕುಳಾಮ್ಬರದ್ಯುಮಣಿ ಸಮ್ಯಕ್ತ್ವಚೂಡಾಮಣಿ ಮಲಪರೊಳ್ಗಣ್ಡ ಚಲಕೆ ಬಲುಗಣ್ಡ . . . ತಳಕಾಡುಗೊಣ್ಡ (ಎಕ. II, ೦೪೩-೨೦ ; 1131).

[ಬಲ್$_2$ (<ಬಲ್ಲಿತು$_1$) + ಗಂಡ$_1$]

**ಬಲ್ಗಂಡಿಕೆ** (ನಾ). ಬಹಳ ಶೂರತನ ; ಅತ್ಯಂತ ಪರಾಕ್ರಮ : ಒಳಕೆ ಯ್ದೊಳಿರ್ದು ಪಲ್ಗಿರಿದೊಳವಾಲಂಗೊಂಡು ಮೊರೆವ ಭಷಕನ ತೆಱದಿಂದೊಳ ಪೊಕ್ಕು ದುರ್ಗಮಂ ಸಂಚಳಚಿತ್ತಂ ನುಡಿಗುಮೆಮಗೆ ಬಲ್ಗಂಡಿಕೆಯಂ (ಕಾವ್ಯಾವ. ೨೪೪) ; ಈತನಲ್ತೆ ಮುಳಿದೆನ್ನನಿಲ್ಲಿ ಪೊದೞಿೞ್ ಬಲ್ಗಂಡಿಕೆ ಯಿನಾಳೆಮೆಟ್ಟಿದೊನೆಂದೊಡರ್ಜುನನಾ ಬಂದಾತನನಿಂತೆಂದಂ (ಜಂಹಂ. ೦೦-೩೦ ವ). [ಬಲ್$_2$ (< ಬಲ್ಲಿತು$_1$) + ಗಂಡಿಕೆ$_1$]

**ಬಲ್ಗಂಡಿಕೆಗಾಣ್** (ಕ್ರಿ). ಅತಿಶಯವಾದ ಶೌರ್ಯವನ್ನು ಕಾಣು ; ಅತ್ಯಂತ ಪರಾಕ್ರಮವನ್ನು ತಿಳಿ : ಪೊದೞಿಂದಂ ಪೊೞಮಟ್ಟು ಕಟ್ಟಿದಿ ರೊಳಾರ್ಪಿಂ ಗರ್ಜಿಸುತ್ತಿರ್ಪ ಬಗ್ಗದ ಬಲ್ಗಂಡಿಕೆಗಾಡು ಗಂಡುಗಲಿ ಬೇಡಂ ಖಡ್ಗದೆ ಬೆನ್ನೊಳ್ ಮೊನೆದೋಱಿಮಿಱಿ ತಿವಿದಂ ತತ್ಕಾಳ ಮೋಘಾಹ್ವಯಂ (ರಾಜಶೇ. ೩ ೯೯). 'ಗಂಡಿಕೆಗಾಣ್' ಪರಾ.

[ಬಲ್ಗಂಡಿಕೆ + ಕಾಣ್]

**ಬಲ್ಗಂಡು** (ನಾ). = ಬಲ್ಗಂಡಿಕೆ : ಗಂಡುಡೆಯುಟ್ಟು ಕೈದುವಿಡಿದುವ್ವಾ ಳಮಂ ನಿನಗುಂಟುಮಪ್ಪಾಟ್ಟು ಬಲ್ಗಂಡಿನ ದೇವ ಮಾನವ ವಿಯಚ್ಚರ ರೊರ್ವರುಮಿಲ್ಲ (ಶಂರಾಮಾ. ೯-೧೩೮). [ಬಲ್$_2$ (< ಬಲ್ಲಿತು$_1$) + ಗಂಡು]

**ಬಲ್ಗಂದ** (ನಾ). ಬಹಳವಾದ ಪರಿಮಳ ; ಅತಿಶಯವಾದ ಸುವಾಸನೆ : ಹಯತತಿಗೆ ಮೊಗರಂಬ ಕಡಿಯಣಂಗಳನಿಟ್ಟು ಪಲ್ಲಣದ ಬಿಗುಹುಗಳ ತಾಪಣೆಯ ಲೇವೆಗಳನಳವಡಿಸಿ ಬಲ್ಗಂದವಿಡಿದು ನಮಿಸಿ ನೆಗೆದಡರಿ. . . ಕಾದುತ್ತಲಿರ್ದರಿರ್ಬಲದ ಘೋಟಾರೂಢರಾಹವದೊಳು (ಕವಿಪ್ರ. ೪೬-೩೦).

[ಬಲ್$_2$ (< ಬಲ್ಲಿತು$_1$) + ಗಂದ]

**ಬಲ್ಗಂಬ** (ನಾ). ಬಲವಾದ ಕಂಬ ; ಬಲಿಷ್ಠವಾದ ಸ್ತಂಭ : ರಾಜಾಂಗಣದ ಬಯಲ ಬಲ್ಗಂ[ಪಾಠಾಂ. ಬಾಳ್ಗಂ]ಬಂಗಳೊಳ್ ಸೆಱಗೆ ಯ್ದಿರ್ದ ಜಾಪದಾನೆಗಳ ಮೇಲೆಡೆಗೆಡೆದು ಮೂವಳಸಾಗಿ ಮುಸುಂಕಿ

ತದ್ಗಜಂಗಳ್ಗೆ ಪಾಲ್ಗಡಲ ನಡುವಣ್ಯೈರಾವತದ ಲೀಲೆಯನೋಲಗಿಸಿಯುಂ (ಚಂದ್ರಪು. ೬-೪೪ ವ) ; ಸಪ್ತಮದಾವಸ್ಥೆಯಿಂ ಮುಂದುಗಾಣದೆ ಬಲ್ಗಂಬ [ಪಾಠಾಂ. ಭ]ಮಂ ಮುಱಿದು ಸಿಗಳಮಂ ಪಱಿದು ಸಿಟ್ಟೋಟದಿಂ ಬೀದಿವರಿದು (ರಾಜಶೇ. ೬-೧೧ ವ).

[ಬಲ್$_2$ (< ಬಲ್ಲಿತು$_1$) + ಕಂಬ$_1$ (< ಕಂಭ)]

**ಬಲ್ಗಜ್ಜ**, ಬಲುಕಜ್ಜ, ಬಲುಗಜ್ಜ (ನಾ). ಬಹಳವಾದ ಕಾರ್ಯ; ವಿಶೇಷವಾದ ಕೆಲಸ: ಮತ್ತಾಕ್ಷಾಧೀಶಂ ತಾಮ್ಕೊದಲುಜ್ಜುಗಿಸಿದ ಬಲ್ಗಜ್ಜಮೆ ನೇಮಮೆ ತನಗೆನುತಮೆ ತನುವಿನದೊಂದಾಸೆಗೆ ಬಗೆಗುಡದೆ ಸಾಮಜಗಮನೆ ಸುಲೋಚನೆಯಾವುದ್ದಾಮ ನದಿಯ ಪೆಮ್ಮಡುವಂ ಪೊಕ್ಕಳ್ (ಜಯಕಾ. ೬-೨೮). **ಬಲುಕಜ್ಜ** : ಉಲುಪೆಯೇನಧಿಕಪ್ಯೆ ಪರತನು ಮುಂದಿನ್ನು ಬಲುಕಜ್ಜವುಂಟವಱಿಂದ ತೊಲಗದೆಮ್ಮೊತ್ತಿನೊಳಿರು (ಭರತ. ೨೬-೨). **ಬಲುಗಜ್ಜ** : ಹಲವು ಕೋಶಕೆ ಕಡಿಮೆಯಿಲ್ಲವಿಾ ಚತುರಂಗಬಲದೊಳೆರ ಡಿಲ್ಲವಿಂದೆನ್ನೆಡೆಗೆ ನೀಂ ಬರ್ಪ ಬಲುಗಜ್ಜಮಾವುದುಂಟೆನೆ (ನೇಪು. ೯-೨೦).

[ಬಲ್$_2$ (< ಬಲ್ಲಿತು$_1$) + ಕಜ್ಜ]

**ಬಲ್ಗಟ್ಟೆ** (ನಾ). ದೊಡ್ಡ ಅಣೆಕಟ್ಟು : ಬುಳ್ಳರಾಜಂ ಹರಿದ್ರಾನದಿಯುಂ ಬಲ್ಗಟ್ಟೆಯುಂ ಕಟ್ಟಿಸಿ . . . ಅಖಿಲಜನಕೆ ಸಂಜೀವನೋಪಾಯಮುಮಂ ಮಾಡಿದಂ (ಎಕ. XI. ದಾವಣ. ೨೮-೬, 1424)

[ಬಲ್$_2$ (< ಬಲ್ಲಿತು$_1$) + ಕಟ್ಟೆ$_1$]

**ಬಲ್ಗಡಣೆ** (ನಾ). ದೊಡ್ಡ ಸಮೂಹ, – ರಾಶಿ : ಕಡಲ ಮುನ್ನಱಿಯದ ಪೆಂಗಳಚ್ಚರಿವಟ್ಟು ನಿಡುಬೆರಳಿಟ್ಟು ನಾಸಿಕಕೆ ಮುಡಿಯೊಲೆದೊಲೆದು ನೋಡಿದರದಱೊಂದು ಬಲ್ಗಡಣೆಗೆ ಬಗೆಯೊಳು ಮೆಚ್ಚಿ (ಭರತ. ೨೩-೯೩).

[ಬಲ್ (< ಬಲ್ಲಿತು$_1$) + ಗಡಣ$_1$ (< ಗಡಣ)]

**ಬಲ್ಗಡಲ್**, ಬಲುಗಡಲು (ನಾ). ದೊಡ್ಡ ಸಮುದ್ರ; ವಿಶಾಲವಾದ ಸಾಗರ: ಅಡಿಗಡಿಗಾನಂದವೆಂಬ ಸಾಗರವನೊಕ್ಕುಡಿತೆಯ ಮಾಡಿ ಸೇವಿಪನು ಒಡನೊಡನೀಂಟದಪ್ಪಕೆ ಹೆಚ್ಚಿ ಕಡಲು ಬಲ್ಗಡಲಾಗುತಿಹುದು (ಭರತ. ೦೬-೬೦). **ಬಲುಗಡಲು** : ಬಗೆವುದೇ ಬಲುಗಡಲು ಮಂಜಿನ ಮುಗಿಲವಳಿಯನು (ಕುಮ್ಮಾಕ. ೦೦-೧೦). [ಬಲ್$_2$ (< ಬಲ್ಲಿತು$_1$) + ಕಡಲ್$_2$]

**ಬಲ್ಗಣೆ**, ಬಲುಗಣೆ (ನಾ). ಬಲವಾದ ಬಾಣ; ಶಕ್ತಿಯುತವಾದ ಬಾಣ : ಕೋಲ್ಗಾರೊಳ್ ಸುರಿವಾಲಿವರಲ್ಗಳವೊಲ್ ನೆತ್ತಿಯೊಡೆಯ ಮುತ್ತುಗಳೆತ್ತಂ ಗಲ್ಗಲನೆ ಸುರಿಯೆ ಜೋದರ್ ಬಲ್ಗಣೆಯಿಂದೆಚ್ಚರದಟ ನಿಂದಾನೆಗಳಂ (ಕಬ್ಬಿಗ. ೨೪೨) ; ಬಲ್ಗಿಚ್ಚ ಪಳಿವ ಲಿಂಗಂ ಮೂಡ ಕಣ್ಗೆಟ್ಟು ಕಾಲ್ಗಾಣದಾವನಾ ಕಾಳ್ಗೆಯ್ಯುಕಳ್ಕುತೆ ತುಳಿಲ್ಗುಂದಿ ನಾಲ್ಮೊಗಂ ತಲೆಗಂಡನೇ ಶಿವನ ಬಲ್ಗಣೆಯ ಪೋಲ್ಗಾವನು (ಶಾವಪಂ. ೩-೨೬). **ಬಲುಗಣೆ** : ಅಣದಣದು ಹೋಹವನ ಗಗನಾಂಗಣದ ಮಾರ್ಗಿಯ ಮಾಡದಿರೆ ಬಲುಗ[ಪಾಠಾಂ. ಕ]ಣೆಯ ಭಟನೇ ತಾನೆನುತ ಹೊಱವಂಟ ನಾಹವಕೆ (ತೊರವೆ. ೪-೩-೪). [ಬಲ್$_2$ (< ಬಲ್ಲಿತು$_1$) + ಕಣೆ$_1$]

**ಬಲ್ಗಣ್ಣಿ** (ನಾ). ಬಿಗಿಯಾದ ಹಗ್ಗ : ಮರೆಗೀಂತೊಡ್ಡೊಡ್ಡು ಬಲ್ಗಣ್ಣಿಯ ಬಲೆಗಳನಂತೊತ್ತುಗೊಳ್ಕೊತ್ತುಗೊಳ್ಳೀ ಸರದಿಂ. . . ಎಂದೆನುತ್ತಾತುರ ದಿಂದೋರೊರ್ಬರೊಳ್ ಸಾಱುವ ಶಬರರ ತೀವ್ರಸ್ವನಂ ಪರ್ಬಿತಾಗಳ್ (ಕುಸುಮಾ. ೦೪-೨೮) ; ಅಣ್ಣಾದೇವನೊಳಿಡಿದ ವಾತ್ಸಲ್ಯಮೆಂಬ ಬಲ್ಗಣ್ಣಿ ಯೊಳ್ಕಟ್ಟುವಡೆದಲ್ಲೆನಲಱಿಯದೆ ನಿರ್ವಿಣ್ಣಭಾವದೊಳಂದು ಲಕ್ಷ್ಮಣಂ. . . ಇಂತೆಂದನು (ಕೃಖಿಭಾ. ೦೮-೬೦). [ಬಲ್$_2$ (< ಬಲ್ಲಿತು$_1$) + ಕಣ್ಣಿ]

**ಬಲ್ಗತ್ತಲೆ**, ಬಲುಗತ್ತಲೆ (ನಾ). ದಟ್ಟವಾದ ಕತ್ತಲೆ; ಕಗ್ಗತ್ತಲೆ : ಕಾದಿ ಕಾದಿ ಶತಮಾಯನುಱೆ ಬೇಸತ್ತಡರ್ದಂಬರಾಂಗಣದೊಳಿರ್ದು **ಬಲ್ಗತ್ತಲೆಯನೊತ್ತಿ** ಕವಿಸಿ ಮೋಸದೊಳ್ ಬಲ್ಲಂಬುಗಳ ಸದ್ದು ಪುಟ್ಟ ದಂತೋಸರಿಸದೆಸುತಿರ್ದಂ (ಶಬಪು. ೯೯-೩೪) ; ಕೆತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ ಪೊತ್ತುಮೆಳಗಂ ಬೇಱೆ ತೋರ್ಪರಾರ್ (ಕೃಖಿಭಾ. ೨-೦೬). **ಬಲುಗತ್ತಲೆ**: ಲೇಸೆನಿಪ ಕೈದೀವಿಗೆಗಳ ವಿಭಾಸದಿಂ ಮಿಗೆ ಪಿಡಿದುಕೊಂಡು ಲ್ಲಾಸವೆತ್ತಾಳ್ವರಿಯ ಮೇಲಿಂತಿರುಳು ತಿರುಗುತಿರೆ ಆ ಸರವಿಗಳು ಸವೆಯ ಪರಿತಂದಾಸುರದಿ ಬಲುಗತ್ತಲೆಯ ಮಱೆಯಾಸೆಯಲಿ ಹಗೆಯಂತು ಹೊಗುವರೊ: (ಬಸಪು. ೦೬-೨೩); ಬಿಲಮುಖದೊಳುತ್ತರಿಸಿ ಬಲುಗತ್ತಲೆ ಯೊಳಡವಿಯ ಮಾರ್ಗದಲಿ ಕಲುಮುಳುಗಳೊಳು ಕಾವಥಕೆ ಕೋಮಳ ಚರಣಗಳ ಕೊಡುತ ತೊಳಲಿದರು (ಕುಮ್ಮಾಆ. ೬-೯೩).

[ಬಲ್$_2$ (< ಬಲ್ಲಿತು$_1$) + ಕತ್ತಲೆ$_1$ (< ಕಟ್ಕಲೆ)]

**ಬಲ್ಗತ್ತಿ**, ಬಲುಗತ್ತಿ (ನಾ). ಬಲವಾದ ಕತ್ತಿ; ಬಲಿಷ್ಠವಾದ ಖಡ್ಗ: ಎತ್ತಿ ಬಹ ಸತ್ತಿಗೆಯ ಮೊತ್ತಂಗಳೆತ್ತಲುಂ ಕತ್ತಲಿಸೆ ಪೊತ್ತ ಮಸೆವೆತ್ತ ಬಲ್ಗತ್ತಿಗಳ ಕಿತ್ತು ಭಟರೆತ್ತಿ ಜಡಿಯುತ್ತಿರಲ್ಕೆ (ಕೃಖಿಭಾ. ೪-೦೯). **ಬಲುಗತ್ತಿ** : ತತ್ತನೂಜನ ಗಂಟಲಲಿ ಬಲುಗತ್ತಿಯಂ ಪಿತನೊತ್ತ ವಾಗಳೆ ಕೃತ್ತಿವಾಸಂ ಜಾಣನಾದಡೆ ಮೆಚ್ಚಿ ಕೊಡಬೇಡಾ (ಬಸಪು. ೨೩-೨೩).

[ಬಲ್$_2$ (< ಬಲ್ಲಿತು$_1$) + ಕತ್ತಿ]

**ಬಲ್ಗನ್ನ** (ನಾ). ಬಹಳವಾದ ಮೋಸ; ಅತಿಯಾದ ವಂಚನೆ : ಸಾಂಬನಂ ಜಾಂಬವತಿಯಣುಗನಂ ಸ್ತ್ರೀವೊಲ್ ತೆಱಂಬೊಳೆಯೆ ಸಿಂಗರಿಸಿ ತನ್ಮುನಿ ಗಳೆಡೆಗೆ ತಂದೇಂ ಬಣ್ಣಿಪೆಂ ನಮಿಸಿ ಭಾವಿಕಾರ್ಯಂಗೇಳ್ವೆವೆನುತೆ ಬಲ್ಗನ್ನ ದಿಂದೆ ಡಂಬಕರ್ ಕೇಳ್ದರೀ ಪುತ್ರಕಾಮಿಯ ಬಭ್ರುವೆಂಬವನ ಪೆಂಡಿರವ ಳೀಸಂ ಪೆಱುವಳೆಂಬುದಂ (ಕರ್ಣ್ಯಾ. ೧೦-೦೯೬).

[ಬಲ್$_2$ (< ಬಲ್ಲಿತು$_1$) + ಗನ್ನ$_1$]

**ಬಲ್ಗಯ್** ‘ಬಲ್ಗೆಯ್’ ನೋ.

**ಬಲ್ಗಯ್ಯ** ‘ಬಲ್ಗೆಯ್ಯ’ ನೋ.

**ಬಲ್ಗರ**, ಬಲುಗರ$_2$ (ನಾ). ೧. ಬಲವಾದ ಗ್ರಹ: ಅರಸುಮಕ್ಕಳೆಲ್ಲಮಾ ಬಿಲ್ಲುಂ ಕಂಡು ಬಲ್ಗರಂ ಪೊಡೆದಂತೆ ಪೆಡಂ ಮಗುಳೆ (ಶಂರಾಪಾ. ೩-೬೨ ವ); ನುಡಿದಪೆಯಿಲ್ಲ ನೀಂ ಪಾಗಳೆ ನಿನ್ನನಿದೇಂ ಪೊಡೆದತ್ತೊ ಬಲ್ಗರಂ ಪಿಡಿದುದೊ (ಲೀಲಾವ. ೨-೦೦೬); ಬಯಲುಗನಪ್ಪ ಸನತ್ಕುಮಾರಂ ಶೂನ್ಯ ಹೃದಯಾಂಧಂ ಕಣ್ಮುಚ್ಚಿ ಗೋಣಂ ನಿಮಿರ್ಚಿ ಬಲ್ಗರಂ ಪೊಡೆದಂತೆ ಬೆಬ್ಬನೆ ಬೆಱತಿರೆ (ಸಾನಂಕ. ಕಥಾಗರ್ಭಸಂಧಿ. ೨೩ ವ). **ಬಲುಗರ$_2$** : ೧. ಪಾರ್ಥ ಬಲುಗರವವಚಿದಂತಿರೆ ಮೂಕನಾದನು ಬೆರಳ ಮೂಗಿನಲಿ (ಕುಮ್ಮಾಭೀ. ೬-೩೬). ೨. ಗ್ರಹಚಾರ: ಬಲುಗರವಿದೆತ್ತಣದೊ ಕಾರುಣ್ಯನಿಧಿಗೆನುತ ನಡನಡುಗಿ (ಕೃಖಿಭಾ. ೦೮-೫೦). [ಬಲ್$_2$ (< ಬಲ್ಲಿತು$_1$) + ಗರ$_2$]

**ಬಲ್ಗರು** (ನಾ). ಎರಕದ ದೊಡ್ಡ ಬೊಂಬೆ : ತಿಳಿಜೊನ್ನದೆಱಕದ ಪುರುಷರೊ ಬೆಳ್ಳಿಯ ಥಳಥಳಿಸುವ ಬಲ್ಗರುಗಳ ಪೊಳಪೊಯೆಂದೆನೆ ಧವಳಾಂಬರದಿಂ ಖಾಸರೆಳಸಿದರೇನ ಬಣ್ಣಿಪೆನು (ಕುಂರಾಸಾಂ. ೦೪-೩೫).

[ಬಲ್$_2$ (< ಬಲ್ಲಿತು$_1$) + ಕರು$_2$]

**ಬಲ್ಗರುಳ್**, ಬಲುಗರುಳು (ನಾ). ದೊಡ್ಡದಾದ ಕರುಳು,– ಅಂತ್ರ: ದಂತದಂಡಹತಿಯಿಂ ಬಿಸುನೆತ್ತರ ಧಾರೆಗಳ್ ಭುಗಿಲ್ಭುಗಿಲೆನೆ ಪಾಯ್ದು ಪೊಣ್ಮಿದುವು ಕೋಟ್ಕಿಮಿದುಳೊಕ್ಕುವು ಬಲ್ಗರುಳ್ಗಳ್ (ಶಂರಾಪಾ. ೦೩-೮೦). **ಬಲುಗರುಳು** : ಅವನ ನೂಱುಂಬುಗಳ ಕಡಿದವನವಯವವ ಕೀಲಿಸಿದಡಾ ಕ್ಷಣವವನಿಯಲಿ ಬಲುಗರುಳು ಬಿದ್ದವು ಭಟನ ಕಿಬ್ಬರಿಯ (ಕುಮ್ಮಾದ್ರೋ. ೫-೪೬). [ಬಲ್$_2$ (< ಬಲ್ಲಿತು$_1$) + ಕರುಳ್]

**ಬಲ್ಗಲಿ** (ನಾ). ಮಹಾಶೂರ; ಪರಾಕ್ರಮಿ : ಆಳವನಱಿದು ಬೇಗಿಱಿವ ಬಲ್ಗಲಿಗಳುಮಂ . . . ಮತ್ತಮಣ್ಕೆ ನಡೆದಿಱಿವ ನಡೆಗಲಿಗಳುಮಂ ನೋಡಿ ರುದ್ರಾವತಾರಂ . . . ಹಿಮವತ್ಪರ್ವತಕ್ಕೆ ಪೋಪುದುಂ (ಗದಾಯು. ೯-೩೪ ವ). [ಬಲ್$_2$ (< ಬಲ್ಲಿತು$_1$) + ಕಲಿ$_2$]

**ಬಲ್ಗವಣೆ**, ಬಲುಗವಣೆ (ನಾ). ಕಲ್ಲನ್ನು ಬೀಸಿ ಎಸೆಯಲು ಮಾಡಿರುವ

ದೊಡ್ಡದಾದ ಜಾಳಿಗೆಯ ಸಾಧನ ; ದೊಡ್ಡ ಕವಣೆ : ಸೂಸಿದರ್ ಕೆಂಡಮಂ ಬಲ್ಗವಣೆಕಲ್ಗಳಂ ಬೀಸಿದರ್ (ಶಬಶ. ೯೨-೩೭). **ಬಲುಗವಣೆ :** ಶ್ರವಣ ಮನನದ ಬೀಸುವಲೆ ಶಾಂಭವ ಸುವೇದಾದೀಕ್ಷೆಗಳ ಬಲುಗವಣೆಗಳ . . . ನವವಿಧಾಮಲ ಭಕ್ತಿಗಳ ರಣತವಕ ದೀಹದ ಹುಲ್ಲೆಗಳ ಮೃಗ ಭವವಿದಾರಣ ಸುಭಟರ್ಯೆದಿತು ಶಿವನ ನೇಮವಲಿ (ಕುವ್ಯಾಶಿ. ೩-೩೩).

[ಬಲ್$^{\text{ೌ}}_{2}$ (< ಬಲ್ಲಿತು$_1$) + ಕವಣೆ$_1$]

**ಬಲ್ಗಱಿ** (ನಾ). ೧. ದೊಡ್ಡ ರೆಕ್ಕೆ : ಮುಂಚುವೆಱಂಕೆಯಾಗೆ ನಿಡಿದೋಳ್ಗಳ್ . . . ನಖರಾವಳಿ ಬಲ್ಗಱಿಯಾಗೆ ನಾಸಿಕಂ ಚುಂಚುವ ದಾಗಲಾಗಳೆ ಸರ್ರುಕೃತಿ ಗಕ್ಕನೆ ಪೋಗಿ ರಾಜಕೀರಾಂಚಿತಜನ್ಮವೆನ್ನಮರ್ದಪ್ಪಿ ದುದು (ಉದ್ಭಟಿ. ೩ ೧೦೩). ೨. ದೊಡ್ಡದಾದ ಬಾಣದ ಗರಿ,– ಪುಕ್ಕ: ಒದೆದೆಡೆಗೊಂಡ ಬಿಲ್ಲ ತಿರುವಂ ಮೊಱೆದೆಳ್ತರದಿಂ ಪಳಂಚಿ ವೇಗದೊಳಿದಿ ರಾಂತು ಬಲ್ಗಱಿಯ ಗಾಢಮೊಡಂಬಡೆ . . . ಪಿಂಗದೆ ಪೊಗರಾಂತ ಕೂರ್ಗಣೆಗಳೇಂ ಪರಿತಂದುವೊ ಪಾಂಡುಪುತ್ರನಾ (ಕಬಶಂ. ೯-೯೨).

[ಬಲ್$_2$ (< ಬಲ್ಲಿತು$_1$) + ಗಱಿ]

**ಬಲ್ಗಾಡಿ** (ನಾ). ವಿಶೇಷವಾದ ಸೊಗಸು ; ಅತಿಶಯವಾದ ಸೌಂದರ್ಯ : ತಾವರೆಗೊಳಂ ತಣ್ಗೊಳಂ ಮೆಱೆದುವೆಂತೆನಲ್ ಭೂಮಿವನದ ಬಲ್ಗಾಡಿಯಂ ನೋಡಲೆಂದೆಳಸಿ ಪಲಗಣ್ ಮರಲ್ಗಳಂ ಪಡೆದೀಕ್ಷಿಪನುವೊ ಬಳಿಕೆ ಕಮ್ಮರಲ್ಗಯ್ದುಗಾಱನೆಂದೆಂಬ ಪಟುಭಟನ ಕಣೆಗಳ ಡೊಣೆಗಳೋಯೆಂಬಿನಂ (ಶವ್ಯರಾ. ೮-೩೬).

[ಬಲ್$_2$ (< ಬಲ್ಲಿತು$_1$) + ಗಾಡಿ$_1$]

**ಬಲ್ಗಾಡು** (ನಾ). ದೊಡ್ಡದಾದ ಕಾಡು ; ದಟ್ಟವಾದ ಅರಣ್ಯ : ಶಶಿಯಂತೆ ಶಶಪಟ ವಲ್ಮೀಕಾಶ್ರಯ ವಸುಧಾಧಿಪಬಲದಂತೆ ಮುಸುಗಿದ ಖಡ್ಗ ಕರೀಂದ್ರಗಳಿಂ ಕಣ್ಗೆಸೆದಿಹುದಾ ಬಲ್ಗಾಡು (ಶ್ರೀಪಾಲ. ೭-೦೨).

[ಬಲ್$_2$ (< ಬಲ್ಲಿತು$_1$) + ಕಾಡು$_1$]

**ಬಲ್ಗಾಪು**, ಬಲುಗಾಹು$_1$ (ನಾ). ಬಲವಾದ ಕಾವಲು ; ಭದ್ರವಾದ ಪಹರೆ: ಅಂತಂತರ್ಘ್ಯಮುಪ್ಪ ದರ್ಶನರತ್ನಮಂ ಸಂಶಯಚೋರರ್ ಪುಗದಂತು ನುಬುಗೆಯೆಂಬ ಬಲ್ಗಾಪನಿಕ್ಕಿ ಮನಮೆಂಬ ವಜ್ರದೋವರಿಯೊಳಿರಿಸಿ (ಧರ್ಮಾಮೃ. ೨-೨). **ಬಲುಗಾಹು$_1$** : ಅಕ್ಕಱಿಂದಲ್ಲ ನೀನೋಡಿ ಹೋದಹೆಯೆಂಬ ಕಕ್ಕುಲಿತೆಗೇಱಿಂದೆನ್ನೆಸೆಯೆನೆ ಬಲುಗಾಹನಿಕ್ಕಯ್ಯ ಎನೆ . . . ನಡೆದಂ (ಹಕಶಾ. ೬-೬೮). [ಬಲ್$_2$ (<ಬಲ್ಲಿತು$_1$)+ಕಾಪು]

**ಬಲ್ಗರ** (ನಾ). ೧. ಅರ್ಭಟ ; ಗರ್ಜನೆ : ಕೇಸರಿಯ ಬಲ್ಗರ ಕಂಜ ವಿಶೇಷಗಜವ್ಯೆತಂದು ಶಬರರ ವಾಸವನು ಕಂಡಲ್ಲಿ ಮರೆಗೊಂಡಿರಲು (ಕನಭಾ. ೪೦-೩೦). ೨. ಉದ್ಘೋಷ ; ಬಲವಾದ ಧ್ವನಿ : 'ಬಲ್ಗಾರಿಕೆ' ಪರಾ. 'ಉದ್ಗಾರ' ಹೋ. [ಬಲ್$_2$ (<ಬಲ್ಲಿತು$_1$)+ ?]

**ಬಲ್ಗಾರಿಕೆ** (ನಾ). = ಬಲ್ಗಾರ ೨: ಆಱು ಖಂಡದ ಪ್ರಜೆಗಳಿಗೆ ನಿನ್ನಯ ರೂಪ ತೋಱಿ ಕೃತಾರ್ಥರ ಮಾಡಿ ಮೂಱು ಚೋಟೆಂದಾಱು ಖಂಡವ ಕಂಡು ಬಲ್ಗಾರಿಕೆಯೊಳು ಬಹವೇಳು (ಭರತ. ೨೦-೦೩) ; ಆಱು ಖಂಡವ ತನ್ನ ವಶವಮಾಡಿಕೊಂಡೊಡನಾರಂಗಸೇನೆಯೋಲೈಸೆ ಮೂಱು ಲೋಕವ ದಾಂಟಿ ಕೀರ್ತಿಯನಟ್ಟಿ ಬಲ್ಗಾರಿಕೆಯೊಳು ಬರುತಿರ್ದ (ಭರತ. ೪೯-೩೬).

[ಬಲ್ಗಾರ + – ಇಕೆ]

**ಬಲ್ಗಾಳೆಗ**, ಬಲುಗಾಳೆಗ (ನಾ). ಬಲವಾದ ಕದನ : ಅಂತು ಬಲ್ಗಾಳೆಗವೆನಿಪ ಬಲ್ಗಾಳೆಗವಮಂ ನೀಡುಂ ಕಾದುವನ್ನೆಗಂ (ಶಾಂತಿಪು. ೪-೩೩ ವ). **ಬಲುಗಾಳೆಗ** : ಬಲುಗಾಳೆಗವ ಭೀಮಂಗೆ ಸೇರಿಸಿ ಪಾಳೆ ಯಕೆ ತಿರುಗಿದರು ಕೃಷ್ಣಾರ್ಜುನರು ದುಗುಡದಲಿ (ಕುವ್ಯಾಕ. ೦೬-೦).

[ಬಲ್$_2$ (<ಬಲ್ಲಿತು$_1$) + ಕಾಳೆಗ]

**ಬಲ್ಗಿಚ್ಚು**, ಬಲುಗಿಚ್ಚು, ಬಲ್ಗಿರ್ಚು (ನಾ). ದೊಡ್ಡ ಉರಿ; ಅಧಿಕವಾದ ಬೆಂಕಿ : ಮಿಱುಪ ಮಿಂಚುಗಳ ಬಂಬಲ್ಗಳಗ್ಗಳ ಮೊಗಳಮರ್ದುಗ್ಗೆಯ ವರ ನೇಸಱ ಪಲವ ಜಗಜಗಿಸುವ ಬಲ್ಗಿಚ್ಚ ಪಳಿವ ಲಿಂಗಂ ಮೂಡೆ (ಭಾವಶಂ. ೩-೨೭) ; ಪೆರ್ಚಿದ ಕಂಬನಿಯ ಕಡಲೊಳಗೆ ಡಾವರಿಪ ಬಡಬಶಿಖಿಯೆಂಬಿನಂ ಕಾಣಿಸುವ ಬ[ಶಾಕಾಂ. ಳ]ಲ್ಗಿಚ್ಚಿಗಪನೊಡಲ ನಿಂಬುಗೊಟ್ಟಂ (ಕೈವಿಭಾ. ೦೩-೩೯). **ಬಲುಗಿಚ್ಚು** : ಉತ್ತಮದ ತಱುಪಿನೆಮ್ಮೆಯ ಹಾಲನೊಲೆಯ ಮೇಲೆತ್ತಿ ಸೋದಿಸಿಕೊಂಡು ಬಲುಗಿಚ್ಚ ನೆಳಿಸದೆ ಹೊತ್ತದಂದದೊಳು . . . ಕಾಸಿ (ಸೂಶಶಾ. ೨-೧) ; ಸುರಂಗ ಗಳೊಳಗೆ ಕರಿಯಮದ್ದನು ತುಂಬಿ ಹತ್ತಿಸೆ ಬಲುಗಿಚ್ಚು ತರಣಿಮಂಡಲವ ಮುಟ್ಟಿದುದು (ಕಂಸವಿ. ೧೮-೦೩೩). **ಬಲ್ಗಿರ್ಚು** : ಹಿಂದಣ ಹಿತತನ ದಿಂದೀ ವಿರಹದೊಳೊಂದಿದ ಬಲ್ಗಿರ್ಚಿಗೆ ವೇದನೆಯಂ ತಂದೆನ್ನಂ ಭಸ್ಮೀಕರಿ ಸದೆ ತಾಂ ನಿರ್ನೆರಮಿಹುದಲ್ಲ ಎಂದಾವೊಡುಲೊಳಗಣವಾಯುವನಲ್ಲಿಂದವೆ ಪೊಱಮಡಿಸಿದ ಮಾಳ್ಕೆಯೊಳರವಿಂದವಿಶಾಲವಿಲೋಚನೆಯಾ ನಿಡುಸು ಯ್ಯರಮೊಪ್ಪಿದುದು (ಜಯನೃಕಾ. ೯-೩೦). [ಬಲ್$_2$ (<ಬಲ್ಲಿತು$_1$) + ಕಿಚ್ಚು]

**ಬಲ್ಗಿರ್ಚು** 'ಬಲ್ಗಿಚ್ಚು' ನೋ.

**ಬಲ್ಗುಂಡು**, ಬಲುಗುಂಡು (ನಾ). ೧. ದೊಡ್ಡ ಗುಂಡು ; ಭಾರಿಯಾದ ಕಲ್ಲು,–ಬಂಡೆ : ಎತ್ತುಗಲ್ ಪಿರಿಯ ಡೆಂಕಣಿ . . . ಬಲ್ಗುಂಡು ಪೆರ್ದೂಲೆ . . . ಇಡುಗಲ್ಲ ಮೊತ್ತವಾಪುರದೊಳಿಲ್ಲ (ಶವ್ಯರಾ. ೩-೨೦). **ಬಲುಗುಂಡು** : ೧. ಬಿಲ್ಲಂಬ ಬಿಸುಟನು ಸುಗತಿದಾಣಮನಿಂಬಱಿದ್ದು ತಾನೇಱುವಂತೇಱಿದನು ಬಲುಗುಂಡ (ಶಾಳ್ವಭಾ. ೩-೪೧). ೨. ತುಪಾಕಿ ಯಲ್ಲಿ ಹಾರಿಸುವ ದೊಡ್ಡದಾದ ಗುಂಡು ; ಫಿರಂಗಿಗೆ ಹಾಕಂವ ದೊಡ್ಡ ಗೋಲಿ : ನಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ತೋಱಿದೆಡೆಗೆ ಸಿಡಿವ ಡೆಂಕಣಿ ರಾಯಡೆಂಕಣೆಗಳ ಸಾಲು ಬಿಡದೊಪ್ಪಿದವು ದುರ್ಗದೊಳು (ಕುಮಾರಸಾಂ. ೪೨-೩೯).

[ಬಲ್$_2$ (<ಬಲ್ಲಿತು$_1$) + ಗುಂಡು]

**ಬಲ್ಗುದುರೆ**, ಬಲುಗುದುರೆ (ನಾ). ಶಕ್ತಿಯುತವಾದ ಕುದುರೆ ; ಬಲಿಷ್ಠವಾದ ಕುದುರೆ : ಬಲ್ಗುದುರೆಯೊಳ್ ಕೂಡಿ ಮಂಱುಗೋಡಿಂದು ಕವಣೆಯಿಂ ಬಲದಿಂದಶ್ವಾಧಾರಿಯೊಪ್ಪುವಂತೆ . . . ಸುವ್ರತಂಗಳಿಂ ಭವ್ಯರುಮೊಪ್ಪುವೆರಸಿರ್ಪುದು (ಧರ್ಮಾಮೃ. ೦೨-೩). **ಬಲುಗುದುರೆ** : ಅಳಿದುದೈನೂಱರಸುಗಳು ಮುಮ್ಮಳಿತವಾಯ್ತೈವತ್ತುಸಾವಿರ ಬಲು ಗುದುರೆ ನುಗ್ಗಾದುದೊಂಭೈನೂಱು ಭದ್ರಗಜ (ಕುವ್ಯಾದ್ರೋ. ೦೦-೨೦) ; ಮುಸುಕಿ ದೆಸೆಯ ಖುರಪುಟಧೂಳಿ ಬಿಡದೆ ಮಾಮುಸುಕಿ ವಾಹಕರೇಱಲಂದು ಬಿಸಿಲ ಕುದುರೆಯಂತುಭಯಬಲದೊಳು ಕಣ್ಗೆಸೆದವು ಬಲುಗುದುರೆಗಳು (ಕುಮಾರಸಾಂ. ೦೨-೯೦). [ಬಲ್$_1$ (<ಬಲ್ಲಿತು$_1$) + ಕುದುರೆ]

**ಬಲ್ಗುರುಜು** (ನಾ). ದೊಡ್ಡದಾದ ಮಂಟಪ,—ಅಟ್ಟಳೆ : ನಿಳಯ ನಿಳಯದ ಮುಂದೆ ಬಲ್ಗುರುಜುಗಳ್ ನಡುವೆ ತೊಳಪ ಮಣಿಗುಡಿ ತೋರಣಂಗಳಿಂ ಪನ್ನೀರ ಚಳೆಯದಿಂದಗರುಧೂಪದ ಹೊಗೆಗಳಿಂ ಬೀದಿ ಬೀದಿಗಳ್ ಚೆಲ್ವಾದುವು (ಕಬಸು. ೩-೨).

[ಬಲ್$_2$ (<ಬಲ್ಲಿತು$_1$) + ಕುರುಜು]

**ಬಲ್ಗುಱಿ** (ನಾ). ಬಲಿಷ್ಠವಾದ ಕುರಿ ; ಕೊಬ್ಬಿದ ಮೇಷ : ದೈವಮಾ ಕುಱಿಯಿದೊರ್ಂದೆಡೆಗೆಯ್ದಿ ಒಂದೆರಡು ಮೂಱುಮಂ ನಾಲ್ಕುಮಯ್ದಾಱು ಬಲ್ಗುಱಿಯು ತಿಂದೊಡೆ ಕಾಪಿನಾಳ್ಬಡಿಗುಮೋ ನಾಯ್ಮಿಂಗುಮೋ (ಕಸಾರ. ೯೬೭). [ಬಲ್$_2$ (<ಬಲ್ಲಿತು$_1$) + ಕುಱಿ$_3$]

**ಬಲ್ಗೂದಲ್** (ನಾ). ಹೇರಳವಾದ ಕೂದಲು ; ಕೇಶರಾಶಿ : ಕೆನ್ನವಿರ್ ಮುಡಿ ಕೆದರಿತಾ ರಾಕ್ಷಸಗೆ, ದೆಸೆದೆಸೆಗೆ ಜಡೆಜಡೆಯ ಬಲ್ಗೂದಲಂ ಕೊಡಹಿ (ಶ್ರೀರಾಮಾ. ೬೮೭-೨೩೯).

[ಬಲ್$_2$(<ಬಲ್ಲಿತು$_1$) + ಕೂದಲ್ (< ಕೂಂದಲ್)]

**ಬಲ್ಗೂಳಿ**, ಬಲುಗೂಳಿ (ನಾ). ಬಲಿಷ್ಠವಾದ ಎತ್ತು ; ಕೊಬ್ಬಿದ ವೃಷಭ : ಅದೆಯುಂ ಕೋದೆತ್ತುತುಂ ಮಾರ್ದನಿಗೆ ಮಸಗುತುಂ . . . ಪಾಯ್ದು ಪಿಂಡಂ ಕಲಕಿ ಕೆಲೆಯುತುಂ ಬೆರ್ಚಿ ಬಲ್ಗೂಳಿಗಳ್ಪಿಂಗುಡೆ ಗಂಡಂ ಸೂಳುತುಂ ಬಂದುದು ಮದವಿದಳತ್ಪಿಂಗಳಾಕ್ಷಂ ಮಹೋಕ್ಷಂ (ಲೀಲಾವ. ೫-೯೭). **ಬಲುಗೂಳಿ** : ರಕ್ಕಸರೇಳಿಗೆಗೆ ಕಡುಭಂಗವೊದವಿತು ಕೀಳುತ್ತರದಾ ಹುಲುನರರು ಬಲುಗೂಳಿಯಾದರಲಾ (ರಾಮಾಸಂ. ೩-೩-೨೬).

[ ಬಲ್$_2$ (< ಬಲ್ಲಿತು$_1$) + ಗೂಳಿ$_1$ ]

**ಬಲ್ಗೆಂಡ** (ನಾ). ದೊಡ್ಡದಾದ ಕೆಂಡ ; ಪ್ರಖರವಾದ ಇಂಗಳ : ಬಲ್ಗೆಂಡಂಗಳನಾಯ್ದು ತಂದು ಪುಟವಪ್ಪಂತೂದಿ . . . ಧೂಪಮಂ ನಲ್ಗಂಪುಣ್ಮಿರಲಾಗಳರ್ಪಿಸಿದನಾ ಗಂಗಾಧರಂಗಟ್ಟಿಯಿಂ (ಉದ್ಭಟ. ೧೧-೭೯).

[ ಬಲ್$_2$ (< ಬಲ್ಲಿತು$_1$) + ಕೆಂಡ ]

**ಬಲ್ಗೆಯ್**, ಬಲುಗಯ್, ಬಲುಗೆಯ್, ಬಲುಗೈ, ಬಲ್ಗಯ್, ಬಲ್ಗೈ (ನಾ). ೧. ಶಕ್ತಿ ; ಬಲ ; ಪರಾಕ್ರಮ : 'ಬಲ್ಗೆಯ್ಯ' ಪರಾ. **ಬಲುಗಯ್** : ೧. ವೀರ ವಿದ್ಯುನ್ಮಾಲಿಯೊಡನೆ ಐರ್ವ ಕಲಿಮಹಾನಾಭ . . . ಜಂಭ ಮುಂತಾದ ಬಲುಗಯ್ಯ ರಕ್ಕಸರ್ ಕೋಂಟೆಯಂ ಪತ್ತಿರ್ದ ದಿವಿಜರಂ ಸದೆಬಡಿದರು (ಶಂಕ್ರ. ೯೩-೨) **ಬಲುಗೆಯ್**: ೨. ಬಲಿಷ್ಠವಾದ ಕೈಗಳನ್ನುಳ್ಳವನು ; ಶೂರ ; ಪರಾಕ್ರಮಿ : ಅಭಿಮನ್ಯುವರ್ಜುನನ ಕುವರನಿವ ಮಗುವಲ್ಲ ಬಲುಗೆಯ್ಯವನ ಮೋಹರದೊತ್ತಿನಲಿ ನಿಂದವರು ಸಾತ್ಯಕಿ ಚೇಕಿತಾನ ಪ್ರಮುಖ ನಾಯಕರು (ಕುಮಾ.ಭೀ. ೨-೧೯). **ಬಲುಗೈ** : ೨. ಎಲೆ ಧನಂಜಯ ಸೀನೆ ಬಲಗೈಯುಳಿದವರು ರಣಖೇಡರೇ (ಕುಮಾ.ಕ. ೦೯-೪೦). ೩. ಶಕ್ತಿಯುತವಾಹ ಹಸ್ತ : ಜಗವ ಹೂಡುವ ಹೊರವ ಬಲುಗೈಯುಗಧರಂಗೀ ನೃಪರ ಕುಱಿವಿಂಡುಗಳ ಕುಮ್ಮರಿಗಡಿತಕಾವುದು ಬೇಕು ಭುಜಸತ್ವ (ಕುಮಾ.ಸ. ೦೦-೦೦). ೪. (ಆಲಂ) ಬೆಂಬಲ ನಾದವನು : ಸರ್ವರಿಗೆ ಬಲುಗೈ ಸಮೃದ್ಧ ಚತುರ್ವರ್ಲಾನ್ವಿತನುರು ಕೃಪಾನಿಧಿ ಶರ್ವನನು ಭಜಿಸಿದನು ಕಾಮಿಸಿ ಯಾದವರ ಜಯವ (ಜಿನಾಗ. ೦೦-೬೦-೦೪). **ಬಲ್ಗಯ್** : ೧. ಬಲ್ಗಯ್ಯ ನೃಪರಂಜಿ ತಡೆಯದ ರಘೂದ್ವಹನ ಸೊಲ್ಗೂಳಿ ನಮಿಸಲಿಳಿಯೊಳ್ಪರಿಸುತಧ್ವರದ ನಲ್ಗುದುರೆ ಬಂದು . . . ಪೊಕ್ಕೊಡೆ (ತೃಖಿಚಾ. ೨೦-೫). **ಬಲ್ಗೈ** : ೧. 'ಬಲ್ಗೈಗಲಿ' ಪರಾ.

**ಬಲುಗಯ್ಯತನ** = ಶೌರ್ಯ ; ಪರಾಕ್ರಮ : ಬಲುರಾವುತರ ಮೈಯೊಳಗೆ ಬಲ್ಲೆಹವನು ಬಲಿದನು ಸೆಲದ ರಾವುತರ ಸೆಲವನಿಕ್ಕಿದನಂತಕನ ವೋಲ ರಾಮನ ಬಲುಗಯ್ಯತನವನೇನೆಂಬೆ (ಕುರಾಸಾಂ. ೦೬-೯೨).

[ ಬಲ್$_2$ ( <ಬಲ್ಲಿತು$_1$) + ಕೆಯ್$_2$ ]

**ಬಲ್ಗೆಯ್ತ** (ನಾ). ೧. ಬಹಳ ಕಾರ್ಯ ; ಅನೇಕ ಕೆಲಸ : ಮನಮಂ ಬೆಟ್ಟಿತು ಮಾಡಲೆಂದೆ ಬಿಡುವಳ್ ಬಲ್ದೋಂಟಿಯಿಂ ಬೇಂಟದೊಳ್ ಮನಮಂ ಬೇಂಟಮನಾಗಳಂತೆ ಬಳೆವಳ್ ಬಲ್ಗೆಯ್ತದಿಂದೊತ್ತೆಯಾಣ್ಮನೊಳಂ ಮೆಯ್ಮನೆ ಮಾಱುವಾಕೆ ಭವಮಂ ಪೇಟ್ವಾಱಳೇ (ಲೀಲಾವ. ೨-೧೦೩). ೨. ಬಲ್ಗೆಯ ಕೆಲಸ : ಕಾಲ್ಗಾಪಿನ ಬಲ್ಲಣಿಯೊಳ್ಬಲ್ಗೆಯ್ತದಿ ನಿಱಿದು ಮಡಿಯೆ ನೆತ್ತರ ತೊಱೆಗಳ್ಗಲ್ಗಲನೆ ಪರಿಯೆ ಕರುಳ ಪಿನಲ್ಗಳ ತೆಪ್ಪಂಗಳಾಗೆ ತೇಂಕಿದರರೆಬರ್ (ಶಂರಾಪಾ. ೦೩-೭೯).

[ ಬಲ್$_2$ (< ಬಲ್ಲಿತು$_1$) + ಕೆಯ್ತ$_1$ ]

**ಬಲ್ಗೆಯ್ದು**, ಬಲುಗೈದು, ಬಲ್ಗೈದು (ನಾ). ಬಲವಾದ ಆಯುಧ ; ಬಲಿಷ್ಠವಾದ ಶಸ್ತ್ರ : ಪುಸಿವಾತಿಗೆ ಬಾಯ್ದೆಗೆಯದ ವೈರಿಗಳಿಱಿತದ ಬಲ್ಗೆಯ್ದಿಗೆ ಸುಗಿಯದ ಯತಿಕುಲತಿಲಕನನವನೀಪತಿ ಕಂಡಂ (ಜಯಾಕಾ. ೯-೪೩). **ಬಲುಗೈದು** : ಕೈದುವೇಕೆ ಪೃಳಿಂದ ನಮ್ಮೊಡನೈದಿಸಾ ಭುಜಯುದ್ಧದಲಿ ಬಲುಗೈದುವಿದೆಲಾ ಮುಷ್ಟಿ (ಕುಮಾ.ಆ. ೬-೨೩) ; ತೋರ್ಪಿರ್ಗೈದು ತಲೆಗಳ ಬೈತಿರಿಸಿ ಬಲುಗೈದುಗಳ ಬಿಸುಟಡಗಿಸೀ ರಾಕ್ಷಸಕಳೇವರವ ಐದು ತಾಪಸವೇಷವನು (ಕೊರವಾ. ೩-೯-೦೩). **ಬಲ್ಗೈದು** : ಬಲುಸಲ್ವ ಕರ್ಮರಿಪುವಂ ಗೆಲ್ವೊಂದು ಬಲ್ಗೈದುವಾವುದೊ ಸದ್ದರ್ಶನದೀಕ್ಷೆ (ಶಿವಾಂಕು. ೯-೪೧) ; ಬಲ್ಗೈದುಗಳ್ಚಲಚರಂಗಳಂತಿರೆ ಭಟರ ಬೊಬ್ಬೆಯುಬ್ಬರವಾಗೆ ಪಡಗುಗಳ ಪರಿಜನಾಂತಿರೆ ಪತಾಕಾನ್ವಿತ ರಥಂಗಳಾಪಡೆ ನೋಡೆ ಕಡಲೆನಿಸಿತು (ಕೇಶರಾ. ೦೦-೦೨).

[ಬಲ್$_2$ (< ಬಲ್ಲಿತು$_1$) + ಕೆಯ್ದು]

**ಬಲ್ಗೆಯ್ಯ**, ಬಲುಗಯ್ಯ, ಬಲುಗೆಯ್ಯ, ಬಲುಗೈಯ, ಬಲ್ಗಯ್ಯ (ನಾ). ೧. ವಿಶೇಷವಾದ ತೋಳ್ಬಲವನ್ನುಳ್ಳವನು ; ಮಹಾ ಪರಾಕ್ರಮಿ ; ಸಮರ್ಥ : "ಪರಾಕ್ರಮಂ ಪ್ರಥಿತಂ ಬಲ್ಗೆ[ಪಾಠಾಂ. ಲ್ಗೈ]ಯ್ಯಂ " (ಕಕಾಸ. ೦೦೫-೫೦) ; ಮೆಯ್ಯ ದಂಡಿಸಿದನೆ ಛಿಕ್ಷೆಗೆಂದೊರ್ವರ್ಗೆ ಕೆಯ್ಯೊಡ್ಡಿದನೆ ಚಕ್ರಧರನು ಉಯ್ಯಲ ತೂಗಿದಂತಮ್ಮುತಕೆ ಸಂದ ಬಲ್ಗೆಯ್ಯನಲ್ಲವೆ (ಶರಶ. ೭೮-೫೪). **ಬಲುಗಯ್ಯ** : ೧. ಎಲಗೆ ನಾ ಬೇಡಲೀಯದೆ ನಿನ್ನ ನಿಮ್ಮಣ್ಣ ತಲೆಗೊಟ್ಟನಿನ್ನು ನಿನ್ನುವ ಕಾವ ಬಲುಗಯ್ಯ [ಪಾಠಾಂ. ಗೈಯ] ನಾರು ಹೇಳು (ಸೂಬಸೋ. ೬-೫೭) ; ಚಲದಂಕ ಕಾಟ ಕಬ್ಬಿಲ ನಾಗ ಬುಕ್ಕಣ್ಣ ಬಲುಗಯ್ಯ ತಿಮ್ಮಣ್ಣ ವರದ ಕೊಲೆಗೇಡಿ ಮಾದಿಗ ಹಂಪನೆಂದೆಂಬೀ ಬಲುತರದವ ರೆಯ್ದಿದರು (ಕುರಾಸಾಂ. ೦೯-೯೦). ೨. ಶ್ರೇಷ್ಠನಾದವನು ; ಜ್ಞಾನಿ : ಬಲ್ಲೆನೆಂಬ ಬಲುಗಯ್ಯ [ಪಾಠಾಂ. ಗೈಯ]ರ ನುಂಗಿತ್ತು ಮಾಯೆ ಅಱಿಯೆನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ (ಮಹಾದೇ. ಏ. ೦೭-೨೫) ; (ವಚಸಂ. ೫೯-೨೦ ನೋ). **ಬಲುಗೆಯ್ಯ** : ೧. ಮೆಯ್ಯ ದಂಡಿಸದೆ ಚಿತ್ತವನೆ ದಂಡಿಸಿ ತನ್ನೊಳೊಯ್ಯನೆ ನಿಂದು ಕರ್ಮಗಳಾ ಉಯ್ಯ ನುಗ್ಗೊತ್ತು ವಂತೊತ್ತಿಬಿಟ್ಟಾ ಬಲುಗೆಯ್ಯನೆದ್ದನು ತನ್ನ ಪುರಕೆ (ಶರಶ. ೬೨-೭೦). **ಬಲುಗೈಯ** : ೧. ಬಲುಗೈಯ[ಪಾಠಾಂ. ಗಯ್ಯ]ನೊಡನೆ ಹಗೆವಡೆದು ಕೊಲೆಗಂಜಲೇಕೆ (ಮೋಳಿಮಾ. ೪೦-೦೭೬) ; ಜರೆಯೆನಿಪುದಭಿಧಾನವೆನ್ನದು ವರ ಜರಾಸಂಧಕನಿವನು ಸುರನರರೊಳಗೆ ಬಲುಗೈಯ [ಪಾಠಾಂ. ಯ್ಯ] ನಹನೆಂದಿತ್ತಳರ್ಭಕನ (ಕುಮಾ.ಸ. ೨-೪೩). **ಬಲ್ಗಯ್ಯ** : ೧. ಬಲ್ಗಯ್ಯಂ, ಮೆಲ್ಗಯ್ಯಂ (ಶಬ್ದಾಮ. ೩೩೦ ಕ್ರ.ಯೋ). [ಬಲ್ಗೆಯ್ + — ಅ$_7$]

**ಬಲ್ಗೆರ್ಚು** (ನಾ). (ಮರದ) ವಿಶೇಷವಾದ ಕೆಚ್ಚು,—ಸತ್ತ್ವ ; ಹೇರಳವಾದ ಸಾರ: ಮಂದರದೊಳಂದಂಬಿಡೆದು ನಿಂದ ಬಲ್ಗೆರ್ಚ[ಪಾಠಾಂ. ಚ್ಚಿ]ನ ಮುಂಡಿಗೆಯಂ ಮುಱಿದು ಪಿಂಗಾಲ್ಗೆ ತೊಡರ್ಚಿದಗ್ಗದಗ್ಗರಣೆಯಂ ಛಟಛಟನೆ ಕೀಳ್ವು (ರಾಜಶೇ. ೬-೧೧ ವ). [ಬಲ್$_2$ (<ಬಲ್ಲಿತು$_1$) + ಕೆರ್ಚು]

**ಬಲ್ಗೆಱೆ**, ಬಲುಗೆಱೆ (ನಾ). ದೊಡ್ಡದಾದ ಕೆರೆ : ಕಡಲುಗಳಾ ನಾಡ ಸಿರಿಯ ಮೊಗವ ನೋಡೆ ಬಿಡದೆಯ್ದುಂದು ವೆಂಬಂತೆ ಕಡೆಗೋಡಿಗಳಿಂದ ಮೆಱೆವ ಬಲ್ಗೆಱೆಗಳಾ ಪೊಡವಿಯೊಳೆಸೆದಿರುತಿಹವು (ಕುರಾಸಾಂ. ೨-೩೪). **ಬಲುಗೆಱೆ** : ಬಲುಗೆಱೆಗಳು ಬಱಿತವು ಪೊಕ್ಕ ತೊಱೆಗಳು ತೊಲಗಿಸಿದವು ಜೀವನವನು ಶಿಲೆಗಳೊಟ್ಟಿಲು ಪುಡಿಪುಡಿವೊದವೆನಲಾ ಬಲದ ಬಹಳವ ನೇನೆಂಬೆ (ಕುರಾಸಾಂ. ೪೦-೭೮). [ಬಲ್$_2$ (<ಬಲ್ಲಿತು$_1$) + ಕೆಱೆ]

**ಬಲ್ಗೇಣ್** (ನಾ). ಬಲಿಷ್ಠವಾದ ಸಣ್ಣ ಕತ್ತಿ : ಬಾಣ ಸವೆಯೆ ಬಾಣಾಸನ ಮುಱಿಯೆ ಬಲ್ಗೇಣಿಂದ ಪೊಕ್ಕಿಱಿದಾಡಿ ಪ್ರಾಣವನುಳಿದು ಬಿಲ್ವಡೆ ಸಗ್ಗದೊಳು ಪೋಗಿ ಕಾಣಿಸಿಕೊಂಡರೆಂದೊಸೆದು (ಕುರಾಸಾಂ. ೦೨-೭೦).

[ಬಲ್$_2$ ( < ಬಲ್ಲಿತು$_1$) + ಗೇಣ್]

**ಬಲ್ಗೈ** 'ಬಲ್ಗೆಯ್' ನೋ.

**ಬಲ್ಗೈಗಲಿ** (ನಾ). ಕರಕೌಶಲವುಳ್ಳ ವೀರ ; ಬಹಳ ಪರಾಕ್ರಮಿ : ಬಿಲ್ಗಾಱಿಕೆಯೊಳ್ ಬಲ್ಗೈಗಲಿಗಳನೆಸಗಿ. ಪಾಟವಮಾಟಮುಪ್ಪಂತು ಕಲಿಸಲೊಡಂ . . . ಕಳಿಳಿಲಿಂ ಬೆಳಗಿದರ್ ಯಮಳರ್ (ರಾಮಾಶ್ವ. ೦೫೦-೦೬).

[ಬಲ್ಗೈ (< ಬಲ್ಗೆಯ್) + ಕಲಿ$_3$]

**ಬಲ್ಗೈದು** 'ಬಲ್ಗೆಯ್ದು' ನೋ.

**ಬಲ್ಗೊಲೆ** (ನಾ). ಭೀಕರವಾದ ಕೊಲೆ,—ಹತ್ಯೆ : ಸೂಸಿದರ್ ಕೆಂಡಮಂ . . . ಮಾಸಿದರ್ ಕಾರ್ಬೊಗೆಯ ಪರ್ಬಿನಿಂ ಬಲ್ಗೊಲೆಗೆ ಹೇಸಿದರ್ (ಶಬರ. ೧೨-೩೬); ನೆಗೆವತ್ತು ಕಯ್ಗೆ ಬಾಳ್ ಬಲ್ಗೊಲೆಗಳ್, ಬಾಳ್ಗಳೆಡೆವೊಕ್ಕು ಸಂತೈಸದಿರೆ ಕೃಷ್ಣನ್ ಎಲ್ಲಿ ಅಶ್ವತ್ಥಾಮನ್ ? ಒರೆವು ದೊಂದಿರ್ಕುಂ (ಅಶ್ವತ್ಥಾ. ೩೦-೩೮೦). [ಬಲ್$_2$ (<ಬಲ್ಲಿತು$_1$)+ಕೊಲೆ$_2$]

**ಬಲ್ಗೋಂಟೆ** (ನಾ). ಬಲವಾದ ಕೋಟೆ ; ಭದ್ರವಾದ ದುರ್ಗ : ತಂತ್ರ ಪಾಲನಂತೆ ಗುಣಪಾಲನುಂ ಬಲ್ಗೋಂಟೆಯಂತೆ ವಿಧ್ಯಾತ್ವಕ್ಕಭೇದ್ಯನುಂ ಮುತ್ತಿನ ಸತ್ತಿಗೆಯಂತೆಲ್ಲಾ ದೆಸೆಯೊಳ್ ಸೇವ್ಯನುಂ . . . ರಾಜಸೇವಕ ನಂತದಕವಂತನುಮಪ್ಪುದು (ಧರ್ಮಾಮೃ. ೩-೯೯); ಆವ ಪೆರ್ಗಡಲ್ ಅಗಳು, ಆವ ಮಲೆ ಬಲ್ಗೋಂಟೆ, ಅದರ ಮುಂಬಾಯ್ವರಿವು ಮೊಗಗಟ್ಟು ನಿಲಲು ? (ಶಾರಸಿ. ೬-೦೨೬). [ಬಲ್$_2$ (< ಬಲ್ಲಿತು$_1$) + ಕೋಂಟೆ]

**ಬಲ್ಗೋಲ್**, ಬಲುಗೋಲು (ನಾ). ಶಕ್ತಿಯುತವಾದ ಬಾಣ : ಕೋಶಿ ವಡೆಯುಮಾಳ್ಬಲಮುಂ . . . ಬಿಬೀಚಣಾ ಮುಂತಪ್ಪ ಬೀರರ ಕೂಟಮುಂ, ಬಲ್ಗೋಲ ರಭಸಮಂ ತಡೆಯಲಾಱದೆ . . . ಮುನ್ನಂ ಪೊಱಮಟ್ಟ ತಂತಮ್ಮೆಡೆಯಂ ಸಾರ್ದುದು (ಅದ್ಭುತ. ೯೬-೦೩). **ಬಲು ಗೋಲು** : ಬೀಳಲವನೀಪತಿಗಳತಿಹೀಹಾಳಿಯಲಿ ಸಾತ್ಯಕಿ ಮುಳಿದು ಬಲುಗೋಲಿನಲಿ ಗಂಗಾಕುಮಾರನ ಸಾರಥಿಯನೆಸಲು (ಕುಮಾ.ಭಾ. ೬-೭). [ಬಲ್$_2$ ( < ಬಲ್ಲಿತು$_1$) + ಕೋಲ್$_1$ ]

**ಬಲ್ಸರ** 'ಬಲ್ಸರ' ನೋ.

**ಬಲ್ದಗರ್** (ನಾ). ಬಲಿಷ್ಠವಾದ ಟಗರು ; ಕೊಬ್ಬಿದ ಟಗರು : ಆತನ ಕಲದೊಳ್ ಚಂಡವ್ರಾತಂ ಸಿಡಿಲೇಳ್ಗೆಯೇಳ್ವ ಬಲ್ದಗ[ಪಾಠಾಂ. ಬಲುದಗ] ರೇಱ್ದಾತಂ ಸಕಳಜಗದ್ವಿಖ್ಯಾತಂ ಹುತವಹನೆನಿಪ್ಪನು (೧೦೪. ೬-೩೮). [ಬಲ್$_2$ (< ಬಲ್ಲಿತು$_1$) + ತಗರ್$_2$]

**ಬಲ್ದಡಿಗ**, ಬಲುದಡಿಗ (ನಾ). ೧. ಅತಿಬಲಿಷ್ಠನಾದವನು; ಮಹಾಬಲ ಶಾಲಿ; ಪತ್ತೆಂಟುಸಾಸಿರಮಾನೆಯುಂ ಪಡಲ್ವಡಿಸಿಯುಂ ಸೈರಿಸಲಾಱದೆ . . . ಬಲ್ದಡಿಗಂ ಬೀಸಿಯುಮೊಂದುಕೋಟಿವರೆಗಂ ಕೊಂದಂ ಮದೇಭಗಳಂ (ಶಂಕಳಾ. - ೦೦-೦೮೯). ೨. ಬಹಳಗಾತ್ರವಾದ ಶರೀರವುಳ್ಳವನು : ನಿಡಿಯರ್ ಬಲ್ಲಾಳರಾದ ಬಲ್ದಡಿಗರ್ ಪಂದಿರ್ದರಯ್ವರಾಲದ ಕೆಟಗಿಂ ತೊಡರ್ದರ್ ನಮ್ಮಯ ಭಕ್ಷದೊಳಡು ಪಣ್ಣಡು ಪೋಗು ನೀನುಮಾನುಂ ತಿಂಬಂ (ಶಂಕಳಾ. ೩-೦೨); ತಡೆಯ್ಯನೆ ಮೇಲೆತ್ತಲ್ ಬಲ್ದಡಿಗರ್ ಬಲದಿಂದೆ ಕೆಡೆಯೆ ನೂಂಕಲುಮೆಂತುಂ ಗಡ ಬಾರದೆನಿಪ ಬೆಟ್ಟಂಗಡಹಡಿಸದೆ ನೋಡಿ (ಧರ್ಮಾಮೃ. ೦೯-೨೯). (ಗು). ೩. ಅತಿಬಲಿಷ್ಠವಾದ ; ಅತ್ಯಂತ ಬಲ ವುಳ್ಳ : ಮನಂಗೆಡಿಪ ಪುಲಿಯಿಂ ರೌದ್ರಾಕಾರಂಗಳಿಂ ಬಿಡೆ ಪಾಯ್ವ ಬಲ್ದಡಿಗ ಮರುಳಿಂ . . . ಇವು ಮೊದಲಾದನೇಕೋಪಸರ್ಗಂಗಳು ಮಾಡಿಯುಂ (ಧರ್ಮಾಮೃ. ೨-೨೨೯). ೪. ತುಂಬಿದಪ್ಪವಾದ : ಪೆರ್ಮರದ ದಿಮ್ಮಿಗಳ್, ಬಲ್ದಡಿಗ ವೇಣುಗಳ್ . . . ನುಣ್ಮಳಲ್ವೆಟ್ಟುಗಳ್ ಮೆರೆದಿರ್ದು ವಲ್ಲಲ್ಲಿ (ಶ್ರೀರಾಮಾ. ೯೩೩-೨೬೯). **ಬಲುದಡಿಗ** : ೨. ತಲೆಯಂ ಬಲುದಡಿ ಗರ್ಕಟಿ ನಿಲಲಾಱದೆ ಸುಂಟಿದಿಂದ ಕೋಡಗದಂತುಮ್ಮಳಿಸಿ ಕಳವಳಿಸಿ . . . ಕಡಮೆ ಮಱುಗಿ ತಳವೆಳಗಾದಂ (ಧರ್ಮಾಮೃ. ೦-೧೯೦). [ಬಲ್$_2$ (< ಬಲ್ಲಿತು$_1$) + ದಡಿಗ]

**ಬಲ್ದನಿ** (ನಾ). ಜೋರಾದ ಸ್ವರ ; ಗಟ್ಟಿಯಾದ ಧ್ವನಿ : ಪಾಮರಿ ಚರಿಸುತ್ತಾ ವನಕೆ ಸಾಲ್ದೆಸೆಯಿನೊಸೆದು ಬಂದೆಱಪ ಗಿಳಿವಳಗಂ ಕಯ್ಮೆತ್ತಿ ರಯ್ಯುಮಾಗಿ ಬಲ್ದನಿವೆರಸು ಸೋವೆ (ಪದ್ಮರಾ. ೬-೦೬) ; ಬಲ್ದನಿಯ ಚಪ್ಪಳಿ ಗಳುಣ್ಮಿಪೊಲಪ್ಪಳಿಸಿ ತೋಳ್ಗಳಂ (ಶ್ರೀರಾಮಾ. ೩೯೨-೨೨೭). [ಬಲ್$_2$ (<ಬಲ್ಲಿತು$_1$) + ದನಿ$_1$ ]

**ಬಲ್ದಲೆ** (ನಾ). ದೊಡ್ಡ ತಲೆ ; ದಪ್ಪ ತಲೆ : ಸತ್ತಿಗೆ ಗಗ್ಗರಂ ಕರುಳ ಬಕ್ಕಳೆ . . . ನೆತ್ತರ ತಳ್ತ ಬಲ್ದಲೆಯ ಬಿಂದಿಗೆ ಪಾವುಗೆ ಪಂಚಮಸ್ವನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೩೩೩). 'ಬಲ್ದಲೆಯ' ಪಠಾ. [ಬಲ್$_2$ ( < ಬಲ್ಲಿತು) + ತಲೆ$_1$]

**ಬಲ್ದಲೆಯ** (ನಾ). ೧. ದೊಡ್ಡ ತಲೆಯನ್ನುಳ್ಳವನು : ಬಲ್ದಲೆಯಂ ತೋಳ್ನೀಳ್ವನಗಲ್ದುರದಂ ಬಟ್ಟದೊಡೆಯವಂ ಕೆಂಗಣ್ಣಂ ನೇಲ್ದ ಕಿವಿಯಾತ ನೆನಿಸುವನೊಲ್ದೊಲಿಸುಗುಮೆಸೆವ ಬೀರಸಿರಿಯಿಂ ಧುರದೊಳ್ (ಕಾವ್ಯಾವ. ೨೫೬); ಅತ್ತಕ್ಕೆ—ಅಲರ್ಗಣ್ಣಂ . . . ಬಲ್ದಲೆಯಂ, ಅಗಲ್ದುರದಂ (ಕಮಠ. ೦೮೬ ಪ್ರಯೋ). ೨. ಸಮರ್ಥನಾದವನು; ಬಲಿಷ್ಠನಾದವನು; ಪರಾಕ್ರಮಿ : ಗೆಲ್ದಾರೆ ಜನಕಸೇನೆ ಸಡಿಲ್ದಗಿಯೆ ಕಿರಾತಸೇನೆ ದಶರಥ ರಾಮಂ ಬಿಲ್ದೆಗೆದಿಸೆ ಮಾರ್ಪಡೆಯೊಳ್ ಬಲ್ದಲೆಯರ್ ಶಬರನಾಯಕರ್ ಪಡಲಿಟ್ಟರ್ (ಶಂಕಾಪಾ. ೯-೬೯). [ಬಲ್ದಲೆ + — ಅ$_7$]

**ಬಲ್ದಸಿ**, ಬಲುದಸಿ (ನಾ). ಮರ ಅಥವಾ ಲೋಹದ ಚೂಪಾದ ದೊಡ್ಡ ಗೂಟ,— ಶೂಲ : ಬಡುವುರಿಯೆಣ್ಣೆ ಸೂಸುವ ಕನಲ್ಗಿಡಿ. . . ಕಡೆಸಿರಗಯ್ದು ನೂಂಕುದಳಿಯಿಕ್ಕುವ ಬಲ್ದಸಿ ಭೀತಿಯಂ ಮನಕ್ಕೊಡರಿಸೆ (ಶಂಪ್ರಕೃ. ೩-೦೦೩); ಹುರಿವ ಮಳಲಿನ ಕಾಸುವಂಬಲಿಯ . . . ಮರುಳ ಕೈಗಳ ನೆಟ್ಟ ಬಲ್ದಸಿಗಳ ಪರಿಪರಿಯ ಗುಂಡುಗೋವಿಯ. . . ಪಂದಿವಲೆಯ ಮೊತ್ತಂಗಳಾಳ್ವೇರಿಯೊ ಳ್ ಪಸರಿಸಿದುವು (ಶಬರ. ೧೨-೦೦). **ಬಲುದಸಿ** : ಎಸೆವ ಕೋಂಟೆಯ ತೆನೆಗಳಲಿ ಕಟ್ಟಿಸಿ ಪತಾಕೆಗಳಂ ಬಸಿದ ಬಲುದಸಿಗಳಂ ಮಲಗಿಸಿ ಮಾರಂಗಳನಿರಿಸಿ ಎಡೆಗೆಡೆಗೆ . . . ಪೊಸದುರ್ಗವಂ ಪಾಟಿಸಿ ಪಿರಿಯ ನಡಬಾವಿಗಳನಗುಳಿಸಿದನದಱೊಳಗೆ (ಬಸವು. ೦೬-೦೦); ಬಲೆ ಕಾಲ್ಕಣ್ಣಿ ಗುನ್ನಲುಗೂಡಿಡಿಸಲು ಬಲುದಸಿಯುರುಳುಳಿಯಿಂದ ನೆಲಗಪ್ಪುಗಳಿಂದ ಮೃಗಗಳ ಹರಣವ ತೊಲಗಿಸುವರು ಬೇಡರಲ್ಲಿ (ರಾಮಾಭಿ. ೦೩-೬೯). [ ಬಲ್$_2$ (<ಬಲ್ಲಿತು$_1$) + ದಸಿ ]

**ಬಲ್ದೆರೆ**, ಬಲುತೆರೆ (ನಾ). ದೊಡ್ಡದಾದ ಅಲೆ,—ತರಂಗ : ಕುದುರೆಯ ತಟ್ಟುಗಳ್ ನೆರೆದ ಬಲ್ದೆರೆಯಂ ಪಿಡಿದಿರ್ದ ಬಾಳ್ಗಳುಣ್ಮಿದ ನಿಡು ವಾಳೆಯಂ . . . ಪೊಸತೇರ್ ಪಡಗಂ ನೆಗೆಟ್ಟಿ ಪರ್ಚಿದ ಕಡಲೆಂಬಿನಂ ಮಸಗಿ ಬಂದುದು ಪೆರ್ಬಡೆ ಕರ್ಬುವಿಲ್ಲನಾ (ಕಬ್ಬಿಗ. ೨೦೬); ತುಂಬಿದ ಸಂಗೀತ ರಸದ ಬಲ್ದೆರೆಯೊಂದು ತುಂಬನುಚ್ಚಿದರೋ ಎಂಬಂತೆ ತುಂಬುರುವೀಣೆ ಯೊಳೊಲ್ದು ಪಾಡಿದರೆಂದು ತುಂಬುಜವ್ವನೆಯರು (ಭರತ. ೩-೬೨); ವಾರ್ಧಿಗಳ ಬಲ್ದೆರೆಗಳೊಂದೊಂದನಣವಂತೆ ದುರ್ಧರದ ರಾವ್ತರಿಱ ದಾಡಿದರ್ (ಶಬರ. ೨೯-೯). **ಬಲುತೆರೆ** : ಜಲಪಾನಕ್ಕೈದುವ ಕುದುರೆಯ ಸಾಲುಗಳ್ ಬಲುತೆರೆ ಬೆಳುಗೊಡೆ ನೊರೆಯು ಕೊಳಿಪ ಚಾಮರ ಫಥು ಗಳಾಗಲಾ ಪುರ ಜಲರಾಶಿಯಂತೆ ರಾಜಿಸಿತು (ಕಂಸವ. ೬-೩೩). [ ಬಲ್$_2$ (<ಬಲ್ಲಿತು$_1$) + ತೆರ್$_4$ ]

**ಬಲ್ದೊಱೆ** (ನಾ). ವಿಶಾಲವಾದ ತೊರೆ : ನಿತ್ತರಿಸದೆ ಬಲ್ದೊಱೆ ಯೊಳ್ ಮತ್ತೆನಿಸದೆ ಬಿರ್ದೊಡಣ್ಣ ಸಹವಾಸಿಯೆ ಬಂದೆತ್ತುವುದುಳಿದವ ರಱಿಸಿಯುಮೆತ್ತಲ್ ಕೇಳಾಗದೆಂಬ ನಿಯಮಮುಮುಂಟೇ (ಧರ್ಮಾಮೃ. ೦-೧೨೩); ಉತ್ತುಂಗಶಿಲೆಗಳಿಂ ಭರದಿಂ ಬಿಳ್ದು ಪರಿವ ಬಲ್ದೊಱೆಯಾತಿ ಬಂಧುರವಡೆಯಿತ್ತು (ಜಯುಕಾ. ೯-೦೦). [ ಬಲ್$_2$ (<ಬಲ್ಲಿತು$_1$) + ತೊಱೆ$_2$ ]

**ಬಲ್ನಗೆ** (ನಾ). ಅತಿಯಾದ ನಗು; ದೊಡ್ಡನಗೆ : ಆ ಸಮಯದೆ ದೇವಿಯುವಗೆ ಮೋಹದ ರತಿಯಾಸೆಯ ಪುಟ್ಟಿಸಲಾಗ ಸೂಸುತ ರೂಪ ಜಯಂತ ಬಲ್ನಗೆಯ ವಿಲಾಸದೆ ಸುರಿರೊಳಿಂತೆಂದ (ಕಂಸವ. ೦೦-೯). [ ಬಲ್$_2$ (<ಬಲ್ಲಿತು$_1$) + ನಗೆ ]

**ಬಲ್ನನೆ** (ನಾ). ದಪ್ಪವಾಗಿರುವ ಮೊಗ್ಗು : ನನೆಯಂ ಮುಂಡಾಡುತೆ

ಬಲ್‌ನನೆಯಂ ಬಲವಂದು ಮುಗುಳನಾಲಿಂಗಿಸಿ ಕಂಪಿನ ಬಿರಿಮುಗುಳಂ ಚುಂಬಿಸಿಯುನುನಯದಿಂದಲರನಲೆದು ತೀವಿದುವಳಿಗಳ್ (ಗಂಕ. ೨-೬೬); ಮಿಳಿದರ್ಾಡುವ ನುಣ್ದಳಿರೆಲ್ಲಿಯುಲ್ಲಿ ಬಲ್ನನೆಗಳವೆಲ್ಲಿಯುಲ್ಲಿ ... ಪಣ್ಗೊನೆ ಗಳವೆಲ್ಲಿಯುಲ್ಲಿಯೆನೆ ಸೋಲಿಸುಗುಂ ಬಿಡದಾವನಂ ಬನಂ (ಕಬ್ಬಿಕಾ. ೩೨).

[ ಬಲ್$_{2}$ (<ಬಲ್ಲಿತು$_{1}$) + ನನೆ$_{3}$ ]

**ಬಲ್ನಿಡಿದು** (ನಾ). ಬಹಳ ದೊಡ್ಡದಾದುದು; ಅತಿ ವಿಶಾಲವಾದುದು. **ಬಲ್ನಿಡಿಯುವು** (ಬಹುವ) : = ವೈಡೂರ್ಯಮಯುಮುಂ ಕಾಂಚನ ಮಯುಮುಂ ಸ್ವರ್ಣರತ್ನಮಯುಮುಮಾಗಿ ಯಥಾಕ್ರಮದಿನೆಂಟುಂ ನಾಲ್ಕುಂ ನಾಲ್ಕುಂ ಬಲ್ನಿಡಿಯುವಪ್ಪ ಮೂಱುಂ ಪೀಠಂಗಳ ಮೇಗೆ ... ನೆರೆದು (ಆಪು. ೬-೦೨೦ ವ). [ಬಲ್$_{2}$ (<ಬಲ್ಲಿತು$_{1}$) + ನಿಡಿದು$_{1}$]

**ಬಲ್ನಿಱಿ** (ನಾ). ಹೆಚ್ಚಿನ ಸೆರಿಗೆ ; ತುಂಬ ನಿರಿ : ಎಲೆ ಸುಕುಮಾರ . . . ಗೆಜ್ಜೆ ಮೆಲ್ಲುಲಿಗುಡೆ ಬಂದು ಬಲ್ನಿಱಿಯುನಪ್ಪದೆ ತಳ್ವಿದೆಯ್ಯೆ ತನೂಭವಾ (ರಾಜಶೇ. ೦೩-೦೦೨) ; ತಮಾಲದೊಳ್ದಳಿರುಡೆ ತಳ್ತ ಪೀಲಿಯ ತರಂಗದ ಬಲ್ನಿಱಿಗಟ್ಟು ... ಪಸಿರ್ಪುವೆತ್ತ ಪಟ್ಟಳಿಯ ನಿಱೋಳಮೊಪ್ಪಿರೆ ಪುಳಿಂದಿಯರಾದರಮರ್ತ್ಯಕಾಂತೆಯರ್ (ಶಬಶಂ. ೩-೯).

[ ಬಲ್$_{2}$ (<ಬಲ್ಲಿತು$_{1}$) + ನಿಱಿ$_{2}$ ]

**ಬಲ್ನುಡಿ** (ನಾ). ಬಿರುಸಾದ ನುಡಿ; ಒರಟಾದ ಮಾತು : ಬಡಿಹೋರಿ ಬಲ್ಪುಟನೆಂಬ ಬಡನುಡಿ ಬಲ್ನುಡಿ ಬಡಧೈರ್ವಲ್ಲದೆ ಬಡಶಬ್ದ ನಿನ್ನ ಪೊಂದುವದೆ (ಶಶಾಂ. ೬೨-೬೫); ಕೊಡೆದಳೆಯುಂ ಮಾನವನುಂ ಪಿಡಿವಂ ಮಳೆ ಬಿಸಿಲ ದೆಸೆಗೆಯುದಱಿಂತೀಗಳ್ ಬಡದೊರೆಗಳ್ ಚಂಡನ ಬಲ್ನುಡಿಗೊಳ ಗಾಗಿಂತು ಕಟ್ಟಿತನಮುಂ ನೆಗಳ್ದರ್ (ಹರಿಶ್ಚ. ೩-೨೨).

[ ಬಲ್$_{2}$ (<ಬಲ್ಲಿತು$_{1}$ ) + ನುಡಿ$_{2}$ ]

**ಬಲ್ನೆಣ** (ನಾ). ಹೆಚ್ಚಾದ ಕೊಬ್ಬು; ಅತಿಯಾದ ಮೇದಸ್ಸು : ಕಾದ ಪಂದಿಗಳ ಬಲ್ನೆಣದಿಂ ಪೊಲಸಟ್ಟಿ ನಾರ್ವ ಜೇವಡೆಗಳ ಪುಣ್ಗಳಿಂ ತೊರೆವ ನೆತ್ತರ ಕೆಯ್ ನಡುಗಲ್ಕೆ ನೀಡಿ ಕೀಟೀಜ್ಞೆಯಿಡೆ ಗಂಟಲೀ ಮುಱಿದ ನೊರ್ಪುಯ ನಿರ್ಘೃಣನೆನ್ನ ತಂದೆಯುಂ (ಕಾದಂಪೂ. ೦೬೪).

[ ಬಲ್$_{2}$ (<ಬಲ್ಲಿತು$_{1}$) + ನೆಣ ]

**ಬಲ್ನೆಲೆ** (ನಾ). ಬಲವಾದ ನೆಲೆ ; ಸ್ಥಿರವಾದ ಆಶ್ರಯ : ನಿತ್ಯ ಯೋಗ ನಿಷ್ಕಂಪಮುವಂಗೆ ಶಾಂತಮುನುತಾಪಮುನಾಱಿಸಿ ತಂ[ದುದಂ]ದು ಬಿರ್ದಿಂ ಪರೆದಿರ್ದಪೋಲ್ ಮುನಿಗೆ ಕಲ್ನೆಲೆ ಬಲ್ನೆಲೆಯಂ ನಿದಾಘದೊಳ್ (ಶಾಂತಿಪು. ೯-೦೦೬). [ ಬಲ್$_{2}$ (<ಬಲ್ಲಿತು$_{1}$)+ನೆಲೆ$_{1}$ ]

**ಬಲ್ಪಂಥ** (ನಾ). ಅತಿಶಯವಾದ ಹಟ ; ಬಹಳವಾದ ಛಲ : ಸ್ವಲ್ಪ ದಿನವುಳಿಯಿತು ಒಂದು ಸಾಧನ ಕಾಣೆ ಕಲ್ಪಾಯು: ನಿನಗಿಲ್ಲವಲ್ಲೊ ಬಲ್ಪಂಥ ಗಳ ಮಾಡಿ ಭೋಗಪಡದಿರು (ವಿದಾಳ್ಮೆ. ೪೮-೯).

[ ಬಲ್$_{2}$ (<ಬಲ್ಲಿತು$_{1}$) +ಪಂಥ$_{1}$ (<ಪಂತ$_{1}$) ]

**ಬಲ್ಪಳಿ, ಬಲುಹಳಿ** (ಕ್ರಿ). ಬಲಗುಂದು ; ಶಕ್ತಿಹೀನವಾಗು : ಬಿಕ್ಕುತುಂ ಬೀಗುತುಂ ಬಲ್ಪಳಿದು ಬಾಡುತುಂ ತಕ್ಕಳಿದು ತಡವಾಗಿ ಹೊರೆಯೇಱಿ ನೋಡುತುಂ (ಸಂಬಿಲ. ೬-೦೨೯) ; ದೆಸೆದೆಸೆಗೆ ಕರೆಕರೆದು ಬಾಯಾಱಿ ಬಲ್ಪಳಿದು ನಿಂದಿರ ಲಾಱದೆ ಕಾಲ್ ಕುಪ್ಪಳಿಸಿ ಭೋಂಕನೆ ಕುಳ್ಳಿರ್ದು (ಗಂಕ. ೮-೬೬ವ); ನೋಡಿ ಮರೀಚಿಕಾಜಲಮನಂಬುವಿದೆಂದೆಳಸುತ್ತ ಬಂದು ಕೈನೀಡಿ ಕಲಂಕಿ ಪೊಕ್ಕು ತೆಗೆದಿಕ್ಕುತೆ ಪುಷ್ಕರಮಂ ನಿಜಾಸ್ಯದೊಳ್ ಬಾಡಿ ಬಳಲ್ದು ಬಲ್ಪಳಿದು . . . ಬೀಳ್ದುದರ್ಕಕರಕಲ್ಪಿತಸಂಜ್ವರನೊಂದು ಕುಂಜರಂ (ರಾಜಶೇ. ೩-೩೯). **ಬಲುಹಳಿ** : ಮಂಗಳ ಮಂಗಳ . . . ಕುಲವಳಿದು ಛಲವಳಿದು ಬಲುಹಳಿದು ನಿಲಲು ಸೂತ್ರದ ಜಂತ್ರ ದವಳಿಯೊಲು ಫಲಸಿದ್ಧಿ ಎನಿಸಿ ನಿಷ್ಪಲಸಿದ್ಧಿಯನೆ ಬಿಟ್ಟು ಭಕ್ತ್ಯಂಗನೆಯ ಮರ್ತ್ಯಕ್ಕೆ ತಂದಿತ್ತವಂಗೆ (ಅವಶಂ. ೨೯೯-೦೩೦೦) ; ಎನ್ನನ್ನೇಕೆ ಕಾಡುವಿರಿ ಎಲೆ ತಂದೆಗಳಿರಾ ಬಲುಹಳಿದು ಭವಗೆಟ್ಟು ಛಲವಳಿದು ಭಕ್ತೆಯಾಗಿ ಚೆನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ (ಶುಹಾದೇ ೩. ೦೩೦-೨೯೪).

[ ಬಲ್ಪು+ಅಳಿ$_{1}$ (<ಅಱಿ$_{1}$) ]

**ಬಲ್ಪಾವು** (ನಾ). ದೊಡ್ಡಹಾವು : ಅವನಮರಪದವಿಯುಂತ್ಯದೊಳ ವನಿಗೆ ಬಲ್ಪಾವದಾಗಿ ಬೀಳ್ವನಂ (ಜಾಲಾಸ್ಯ. ೦-೨-೩೯).

[ ಬಲ್$_{2}$ (< ಬಲ್ಲಿತು$_{1}$) + ಪಾವು$_{1}$ ]

**ಬಲ್ಪಿಡಿ$_{1}$** 'ಬಲ್ವಿಡಿ$_{1}$' ನೋ.

**ಬಲ್ಪಿಡಿ$_{2}$** 'ಬಲ್ವಿಡಿ$_{2}$' ನೋ.

**ಬಲ್ಪಿಲಿ** (ನಾ). ಬಲವಿಲ್ಲದುದು ; ನಿರ್ಬಲವಾದುದು : ಒಡಲಿದು ಬಲ್ಪಿಲಿಯುಕ್ಕುಂ (ಸೌವಂಧ. ೯-೦೦). [ಬಲ್ಪು + —ಇಲಿ$_{3}$]

**ಬಲ್ಪು, ಬಲುಪು, ಬಲುಹು** (ನಾ). ೧. ಬಲ; ಶಕ್ತಿ; ಸಾಮರ್ಥ್ಯ; ಪರಾಕ್ರಮ : "ಪ್ರಾಣಃ ... ತರಃ ಸಹಃ—ಈ ೮ ಬಲ್ಪು (ಬಲುಹು)" (ಹಲಾಯು. ೦೨೦-೩೮) ; ಬಲ್ಪಿಂ ಕೂರ್ಪುಮಾರ್ಪುಂ ನಿರಂತರಮೊಪ್ಪಲ್ (ಎಪಿ. XIII, ೩೨೯-೫; 929) ; ಮಾಣಿಕಂ ಸೂಸೆ ಬಲ್ಪಿಂದೊದೆದಂ ಸಾರ್ತಂದು ದುರ್ಯೋಧನನ ಮಕುಟಮಂ ಕೋಪದಿಂ ಭೀಮಸೇನಂ (ಸಂಶಭಾ. ೦೩-೯೮); ಕೆಡೆದಿರ್ದ ಶಬರಂ ಕಕ್ಕಡಪಂದಿಯನೀಕ್ಷಿಸುತ್ತೆ ಶಬರ ಸಮೂಹಂ ಬಿಡೆ ಕೊಂಡುಕೊನೆದು ಬಲ್ಪಂ ನುಡಿಯುತ್ತಿರ್ಪನ್ನಂ (ಗಂಕ. ೦-೦೦೦). ೨. ಬೆಳೆಯುವಿಕೆ; ಬಲಿಯುವಿಕೆ : ಎಳವಾಳೆ ಬಲ್ಪಿಗೆ ಬಂದರೆ ಸೀಗೆಯು ಮೆಳೆಯೊಳು ಮಥನವೆ (ಮೋಹತ. ೩೪-೨೪). ೩. ದೃಢತೆ; ಸ್ಥಿರತೆ : ಪಿಡಿದೀ ವ್ರತಮಂ ನಾಂ ಸಾವೊಡೆ ಸಾವೆಂ ಬಿಡುವೆವಲ್ಲವೆಂದೊಡೆ ಮೂರ್ಖಿಂ ಮಡಿಪದೆ ಮಾಣಂ ಬಲ್ಪಿಂ ಪಿಡಿವೆಂ ಜಿನಪದಮುನಿದುವೆ ಕಜ್ಜಂ ಪೆಱತೇಂ (ಧರ್ಮಾಮೃ. ೩-೦೦೦): ಪಿಂಗಿದ ನೀಱಿರ ಬಲ್ಪು ಪಾಱಿ ಪಾದರಿಗರ ನಾಣ್ಗಳುರ್ಕುಗಿಡೆ . . . ಜೇವೊಡೆಯ ಬಲ್ಲುಲಿ ನೀಳ್ದುದು ಕರ್ವುವಿಲ್ಲನಾ (ಕಬ್ಬಿಕಾ. ೩೦೦) ; ವಿರಚಿಸಿದಂ . . . ಲಕ್ಷ್ಮೀಶನೆಂಬೊರ್ವನು ಹೃದ್ವನಜ ದೊಳ್ದೇವಪುರದ ಲಕ್ಷ್ಮೀಶನ ಪದದ್ವಯುವನಾವಗಂ ಧ್ಯಾನಿಸುವರಡಿಗಳಂ ಸದ್ವಿನಯದಿಂ ಭಜಿಪ ಬಲ್ಪಿಂದೆ ವಿಮಲ ಜೈಮಿನಿಭಾರತದ ಕಥೆಯನು (ಜೈಮಿಭಾ. ೦-೦೦). ೪. ಗಾಢತೆ; ಬಿಗುಹು; ಬಿಗಿ: ಕಲ್ಪಲತೆಗಳೆಡಬಲ ದಲ್ಲಿ ಹಬ್ಬಿದ ಕಲ್ಪವೃಕ್ಷವೊಯೆಂಬ ಸೊಬಗ ಕಲ್ಪಿಸುತ್ತಿದ್ದನಾ ರಾಯನಾ ಪೆಣ್ಗಳ ಬಲ್ಪಿನೊಳಮರ್ದಪ್ಪಿದಾಗ (ಭರತ. ೮-೩೩). ೫. ಬಲಾತ್ಕಾರ; ಬಲವಂತ ; ಒತ್ತಾಯ : ಸಮಸುಖದುಃಖಮಂ ತಳೆವ ರೋಹಿಣಿ . . . ಎನ್ನಯ ಮೋಹದೆ ಮರ್ತ್ಯರೂಪದಿಂದವೆ ಬಱಿಸಂದಳೊಲ್ದು ಮಗುಟ್ದುಂ ಬರೆ ಪಿಂತೆಯೆ ಮತ್ತೆ ಬಲ್ಪಿನಿಂಗಮೆ ನಿಲಿಸಿಟ್ಟನೆಯ್ದೆ ನಿಜಲೋಕದೊಳಾಕೆ ಯುಸಲ್ಲಿ ಕಂಡಪ್ಯೆ (ಕಾದಂಉ. ೬೦೪) ; ಕೆಲಬರ್ ಸಿಂಗಮನೊತ್ತಿ ಪಲ್ಲಣಿಸಿ ಬಲ್ಪಿಂದೇಱುತುಂ ಬೇಗದಿಂ . . . ನಡೆದರೆತ್ತಂ ಬೀರರಾ ಪಾಡಿಯೊಳ್ (ಕಬ್ಬಿಕಾ. ೨೫೩) ; ಕಂತೆ ಕಟ್ಟಿಗೆ ಕಪ್ಪರಂಗಳನಿಭಾಸುರನ ವಿಷ್ಣುವಿಧಿಗಳ ಸದೆದು ಬಲ್ಪಿನಿಂ ಸೆಳೆದುಕೊಂಡ್ಯೆ (ಭಾವಚಿಂ. ೯-೦). **ಬಲುಪು** : ೧. ಬಲುಪಿನೊಳಂ ತೇಜದೊಳಂ . . . ರೂಪಿನೊಳಂ ಸಲ್ಲಲಿತವಪ್ಪಱಿತ ದೊಳಂ ಗೆಲುವವನ್ನಗ್ರ್ಗಣಿ ರೇವಗೌಂಡಂಗಳೆಯೊಲ್ (ಸೌಇಇ. IX-i, ೨೪೯-೫೭; 1147); ಕಲಿತನದ ಬಲುಪಿನಾಪ್ಪಿಂ ಕೂಪ್ಪಿಂ ಧರೆಗೆಸೆವ ಪಂಚಲಿಂಗನ ಚರಣಾಬ್ಜ ವರಪ್ರಸಾದ ತೋಟಿಗರಿತ್ರ್ಯವರ್ಷಂಪ್ರತಿ ಕಂಡಗೆಯುಂ . . . ರಂಗಭೋಗಕ್ಕೆಂದುಂ (ಕಇ. I, ೩೦-೩೫; 1222); ಮೆಲುಪು ಬಲುಪಿನ ಶಕುತಿಗಳುಡುಗಲಿ ನೆನಪು ಮರಳದೆ ತೊಡೆದು ಹೋಗಲಿ (ಏಸೀಗೀ. ೦೦೪-೯). ೫. ಹೆಡಗುಡಿಯು ಕಟ್ಟಿಮುಖಯುವ ನಡೆ ಯಲಿ ಹಱಗೋಲೆನಲ್ಕೆಯುಂಬಿಗನಾಗಂ ಪಿಡಿದು ಕೋಡಗವ ದ್ವಿಜನಂ ಕಡು ಬಲುಪಿಂ ಪಿಂತೆ ತೆಗೆದು ಕಟ್ಟಿದ ಕರಮುಂ (ವದ್ದಾಶಾ. ೨-೦೪೪). **ಬಲುಹು** : ೧. "ಪ್ರಾಣಃ, ಸ್ಥಾಮನ್, ಬಲಂ . . . ಸಹಃ—ಈ ೮ ಬಲ್ಪು (ಬಲುಹು")

(ಹರಿಹರ. ೦೨೦-೩೬); ಜನನಮರಣಕ್ಕೊಳಗಾಗದನ ಬಲುಹನೇನ ಬಣ್ಣಿಪೆನಪ್ಪ (ಹರಿಹರ. ಬಿ. ೦೦-೬): ಕುಬೇರನ ಗರ್ವಭೂರುಹವ ಬೇರುಳಿಯದೆ ಕಿತ್ತು ಬಿಸಾಡುವೆನೀಶನ ಭಾರಿಯ ಬಲುಹ ಮುಱಿವೆನು (ಕೃಕೃಶಾಂ. ೦೦-೧೨೭); ಎಲೆ ಕುಮಾರಕ ಹರಕುಮಾರಂಗಳವಿಯಲಿ ನಿಲಲರಿದು ಕೊರಳಿನ ಬಲುಹನಱಿಯದೆ ಗಿರಿಯ ಹೊಡೆಯಲಂಘೈಸುವರೆ ಭಟರು (ಕುಮಾ.ದ್ರೋ. ೪-೩೪). ೩. ಬೇಂಟೆಗೆಯ್ದುಂದ ಭೂಪಾಲಕನನೆಳೆತಟಂ ಮಾಡಿ ತೆಗೆದೆನ್ನಾಶ್ರಮಕ್ಕೊಯ್ದು ಬಳಿಕ ನೋಡುವೆನವನ ಸತ್ವಗಿತ್ವದ ಬಲುಹನೆಂದ ವಿಶ್ವಾಮಿತ್ರನು (ಹಕಶಾ. ೩-೦೦); ಅನಘನಪ್ಪಾ ಮಾದಿರಾಜನ ಮನದ ಬಲುಹಂ ನೋಡಿದಪೆ ನಾನು (ಬಸವ. ೦೯-೬೩). ೪. ವಸ್ತುವ ಬಹಳವಾಗಿ ಧರಿಸು ಸಜ್ಜೆಯ ಬಲುಹಾಗಿ ಕಟ್ಟು ಶಿವದಾರವ ಬಲುಹಿನಲಿ ಸುತ್ತೆಂದು ಹೇಳುವುದು ಉಪದೇಶವೇ ಬೇಱೆ ಕಟ್ಟುವ ಠಾವುಂಟಾಗಿ (ಚನ್ನಬ. ೮. ೩೨೯-೦೦೩೩); ಆಗಳತಿಸಾಕಾರರೂಪವದಾಗೆ ನಡನಡುಗುತ್ತ ಹತ್ತಿರೆಗಾಗ ಕೈಸನ್ನೆಯಲಿ ಕರವುತ್ತೊಡೆಯ ನಂಬಿಯನು ಆಗ ತನ್ನುಡೆಗಚ್ಚೆಯನು ಬಲುಹಾಗಿ ಪಿಡಿಸುತ್ತಾತನಂ ತಲೆವಾಗಿಸುತ್ತಂ ಭಯದ ಬಿತ್ತಂ ಬಿತ್ತಿ ಚಿತ್ತದಲಿ (ಬಸವ. ೨೬-೨೩). ೫. "ಹಠಃ, ಪ್ರಸಭಂ — ಈ ೨ ಬಲುಹು (ಬಲ್ಪು)" (ಹಲಾಯು. ೦೨೩-೬೪); ಕಂಗಳಲಿ ಕಟ್ಟಿದ್ದ ಮುಸುಕ ನಭಂಗನಾಗ ತೆಗೆದು ಬಿಸುಟು ನಮನಂಗಳಂ ಬಲುಹಿಂದ ತೆಱೆದುಱಿ ನೋಡಲು (ಬಸವ. ೫೦-೬೦); ಕಂಚೀದೇವಿ . . . ಬಲುಹಿನಲಿ ಭೂಸುರನ ಚಿತ್ತವ ಶಿಳುಹಿ ಬಂದಳು ಮನೆಗೆ (ಕುಮಾ.ಆ. ೦೦-೨೦); ಆನೆಯನುಣಿಸುವಂತಾ ಕಾಂತೆ ಬಲುಹಿಂದ ತಾನುಣಿಸಿದಳಾತ್ಮಪತಿಯ (ಶರಚ. ೧೦-೫೭). ೬. ಬಲವುಳ್ಳದು; ಬಲಿಷ್ಠವಾದುದು; ಸಮರ್ಥವಾದುದು : ತಲೆ ಇಲ್ಲದ ಕಾಗೆ ನೆಲದಲ್ಲಿ ನಡೆಯಿತ್ತು . . . ಬಲುಹೆನಿಸಿದ ಕರಡಿ ಹಾಡಿ ಹರಸಿ ಬೆಳೆಯಿತ್ತು (ಅದವ. ೩೬-೦೦೩); ದೇವಿ ನೇಮಿಸಲಱಿಯೆನೆಂದೊಡಿದಾವ ಧರ್ಮವು ಶಿವಶಿವೀ ಹದ ಸಾವನವರಿಗೆ ತಹುದು ಬದ್ಧವಿಘಾತಿಯಿದು ಬಲುಹು (ಕುಮಾ.ವಿ. ೩-೪). ೭. ಬಲವುಳ್ಳವನು; ಬಲಿಷ್ಠನಾದವನು; ಸಮರ್ಥ : ಬಲಿವನಿತನಾರೋಗಿಸಿದಪೆಂ ನಿಲಿಸಲಾಪ್ಪೆ ಎನ್ನನೆನುತಂ ಬಲುಹಲಾ ನೀನಿದಕೆ ನಾನೇನಱಿಯೆನೇ ಎನುತ (ಬಸವ. ೫೯-೦೩); ಈತ ಧನುವಿನಲೀತ ಖಡ್ಗದಲೀತ ಪರಿಘದಲೀತ ಕುಂತದಲೀತ ಬಲುಹೆಂದಂಥ ಭೂಪತಿಗಱುಹಿದನು ವಿದುರ (ಕುಮಾ.ಆ. ೭-೨೪). ೮. ಅಧಿಕನಾದವನು; ಮಿಗಿಲಾದವನು; ಉತ್ತಮ : ಬಲುಹದಾರ್ಯ್ಯೆ ತಾಟಕಿಗೆ ವೆಗ್ಗಳರದಾರು ಸುಬಾಹುವಿಗೆ (ತೊರರಾ. ೩-೭-೯೨). ೯. ಹೆಚ್ಚಾದುದು; ಅಧಿಕವಾದುದು : ಭಟನುಱುಬೆ ಬಲುಹೋದಿಟ್ಟನಿವ ಕೌರವರ ಥಟ್ಟಿನಲಿ (ಕುಮಾ.ಕ. ೨೦-೦೭); ನೆಲಹುಗಳಾ ಮೊಸರ ನುಂಡನು ನಿನ್ನ ಕಂದನ ಗಸಣೆ ಬಲುಹು ಯಶೋದೆ (ಸಾಳ್ವಭಾ. ೨೦-೯೯). ೧೦. ಬೆಂಬಲ; ಒತ್ತಾಸೆ : ನರನ ನುಡಿ ಹೊಳ್ಳುಗದಾ ಪುರಹರನ ಬಲುಹುಳ್ಳನ್ನಬರ (ಕುಮಾ.ದ್ರೋ. ೯-೭೩); ಜನರ ಪರಿಪರಿ ದೂಷ್ಯ ಭೂಷ್ಯವ ನೆನೆವೆನೇ ತಮ್ಮಡಿಯ ಸಂಭಾಷಣದ ಬಲುಹಿರಲಾವ ಭಯ ಮೇಕೆಂದು ಕೈಮುಗಿದ (ಗದಜಾ. ೦೭-೬೪). ೧೧. ಕಟ್ಟು; ಆನಿಕೆ : ಕಾಂತಾಬಚಭಾರದಿಂದೆ ನುಣ್ಣೊರಲು ಮುಂದೆಂತಹುದೆಂದು ಸಂದೆಗದೆ ಸಂತತ ಬಣ್ಣಗಲ್ಲುಗಳ ಕೀವಣಿಸಿರ್ದ ಚೆಂತಾಕ ಬಲುಹನಿಕ್ಕಿದರು (ಚೋಹಕ. ೨೩-೩೦). ೧೨. ಕಠಿಣವಾದುದು; ಕಷ್ಟಕರವಾದುದು : ದೇವ ಕಾಳಿಗ ಬಲುಹು ಬಿಸಿಲಿನ ಡಾವರಕೆ ರಥತುರಗವತಿಸಿರ್ಜೀವಿಯಾದವು (ಕುಮಾ.ದ್ರೋ. ೦೦-೨೭); ಬಲಹೀನ ಸೀನಾ ಖಿಳನ ಕೊಲುವುದೆಂತೆನೆ ಕೋಪಿತನಾಗಿ ತನಗಿದು ಬಲುಹೆಯೊಂದವನುಸುರಿದನು (ಜೈಮಂಸಾಂ. ೦೩-೯೭): ವರಕಾಮವೃಷ್ಟಿಯೆಸೆವ ಗೃಹಪತಿರತ್ನ ಪರಿಪರಿ ಗೃಹವಸ್ತುಗಳನು ನೆರಪುವುದನೊಂದು ವಿಭವವ ಮಾಳ್ಪೆನೆಂದರೆ ತಡಬಡಮುಂಟೆ ಬಲುಹೆ (ಶರಚ. ೦೬-೦೦೩). ೧೩. ಮಹಿಮೆ; ಪ್ರಭಾವ : ಎನಲು ತಾ ನರವರವಸಿಷ್ಠಂಗನಿತು ಸತ್ವವಿದೇನದೆಂದರೆ ಘನವನಜಾಯಲು ಪಾರ್ಥ ರುಷಿಗಳ ತಪದ ಬಲುಹುಗಳ ತನತನಗೆ ಮುನಿವರರು ದೇವರ ಜನವ ಶಾಪಿಸಲೊಬ್ಬರೊಬ್ಬರಿಗನುಸರಿಸಿ ಗಜಜಿಸಿತು ತತ್‌ಕ್ಷಣ ಪಾರ್ಥ ಕೇಳೆಂದ (ಸಂಭಶ. ೨೪-೫೭). ೧೪. ಹಿರಿಮೆ; ಘನತೆ; ಪ್ರೌಢಿಮೆ : ವಿದ್ಯದ ಬಲುಹನೆ ತೋಱಿ ಬುದ್ಧಿಯ ಪೆಱಿಪವನಲ್ಲ ನಿರ್ಧರ್ಮಿ ಜನ್ಮ ನಿಜಗುಣಯೋಗಿ ಕಂಡಯ್ಯ (ಶಿವಗೀ. ೧೨೯-೬೪೨). ೧೫. ಬಿರುಸು ಮಾತು : ಕೆಲಸ ಮಾಡಲು ನಿಮ್ಮ ಭವನದ ನಳಿನಮುಖಿಯರ ಕಳುಹು ಸುರಪತಿ ಬಲುಹ ನುಡಿದರೆ ನಿನ್ನ ಕತನದ ಕೆಡುಪುದಾ ಲೋಕ (ಸಂಭಶ. ೨೦-೩೩). (ಗು). ೧೬. (ಆಲಂ) ಹೊರಗೆ ಮಾತ್ರ ಬಲವಾಗಿರುವಂತೆ ಕಾಣುವ; ಅಶಾಶ್ವತವಾದ : ನಂಬದಿರು ಈ ದೇಹ ನಿತ್ಯವಲ್ಲ . . . ಒಳಗೆ ಮಲ ಮೂತ್ರಾದಿ ಕ್ರಿಮಿಗಳಿರವು ಹಲವು ವ್ಯಾಧಿಯ ಬೀಡು ಪಂಚಭೂತದ ನಾಡು ಬಲುಹು ದೇಹವ ನೆಚ್ಚಿ ಕೆಡಬೇಡ ಮನುಜ (ತ್ರಿಂಂದ. ೦-೨೬-೦).

**ಬಲುಹು ಮಾಡು** = ೧. ಬಲಪ್ರಯೋಗ ಮಾಡು; ಶಕ್ತಿಯನ್ನು ಉಪಯೋಗಿಸು : ಬಲುಹು ಮಾಡಿಕೊಳಲ್ಕೆ ಹರಿಯಜ ಬಲಹರರ ಪವಣಲ್ಲ ಎಂದಡೆ ಅಳವಿಯೇ ನಿಮಗೆವ್ವೊಡನೆ ಮಾಜಿಸಾಂಕು ಕೆಡಬೇಡ (ಬಸವ. ೫೯-೩೭). ೨. ಒತ್ತಾಯ ಮಾಡು; ಬಲಾತ್ಕಾರ ಮಾಡು : ಮನೆವೆಂಡಿತಿಯೊ ನಾನೊತ್ತೆಸೂಳೆಯೊ ನಿನಗೆ ಸೋದರವತ್ತಿಗೆಯೊ . . . ನಿನ್ನವರ ಒತ್ತಿ ನೀನೆನ್ನಂ ಬಲುಹು ಮಾಡುತ್ತ ಕಾಡಲದೆಂತು ಬಹುದು (ಬಸವ. ೪೦-೪೭).

**ಬಲ್ಪಾಗು, ಬಲುಪಾಗು, ಬಲುಹಾಗು** = ೧. ಹೆಚ್ಚಾಗು; ಅಧಿಕವಾಗು; ಬಹಳವಾಗು : ಮುಪ್ಪು ಬಲ್ಪಾಗೆ ಶಿಥಿಲನಕ್ಕುಂ (ಮಂಗರಾ. ೯೦-೦೦); ಭರ್ತ್ರುರವಣೆ ಪಿರಿದಾಯಿತ್ತು ಭಕ್ತರ ತೇಜಂ ಬಲುಹಾಯಿತ್ತು (ಬಸರ. ೬-೯೦); ವೇಡತನ ಬಲುಹಾಯ್ತು ನಿಮ್ಮನು ಕಾಡುವವರಾರು (ಸಂಭಶ. ೭-೩೦); ಅಜೆವು ತಲೆಕೆಳಗಾಯ್ತು . . . ಮಜವೆ ಗಱಿಗಟ್ಟಿತು ಮನೋಭವ ನಿಱಿಗೆಲಸ ಬಲುಹಾಯ್ತು (ಕುಮಾ.ವಿ. ೨-೦೨). ೨. ಬಲ ಬರು; ಸಾಮರ್ಥ್ಯ ವುಂಟಾಗು : ಬಡವಂಗೆ ಹಣ ದೊರಕಿದಂತೆ ಕತ್ತಲೆಗೆ ಬಲುವಾದಂತೆ ಗಿರಿಗೆ ನಡೆ ದೊರಕಿದಂತೆ ಬಣಗುರಕ್ಕಸರಿಗೀಶ್ವರನಿರೂಪಿತದಿಂ ದ್ರುಹಿಣ ಕೊಟ್ಟ ವರದ ಬಲದಿಂ ಲೋಕಗಳನೆಲ್ಲ ಹಣೆದವಾಡಲ್ಕಮರರೆರ್ದೆಗುಂದಿತು (ಅಚಶಂ. ೦೭-೯). ೩. ಬಲವುಳ್ಳದಾಗು; ಬಲಿಷ್ಠವಾಗು : ಕುಂಬಳಕಾಯಿಗೆ ಕಬ್ಬುನದ ಕಟ್ಟ ಕೊಟ್ಟರೆ ಕೊಳೆವುದಲ್ಲದೆ ಬಲುಹಾಗ ಬಲ್ಲುದೇ (ಬಸವ. ೯೨). ೪. ಬಲಿಷ್ಠನಾಗು; ಸಮರ್ಥನಾಗು: ಆದಡಿದ ಕೊಳ್ಳೆನುತ ಸಾತ್ಯಕಿ ಕೋದನಭ್ರವನಂಬಿನಲಿ ಬಲುಹಾದನೈ ಮಝು ಎನುತ ಕಡಿದನು ಸೋಮದತ್ತಸುತ (ಕುಮಾ.ದ್ರೋ. ೦೯-೪). ೫. ಉಗ್ರವಾಗು; ಪ್ರಚಂಡವಾಗು : ನಡುಹಗಲು ಪರಿಯಂತ ಕಾಳಗ ಬಿಡದೆ ಬಲುಹಾಯ್ತುಭಿಳವೇಗದ ಕಡುಗುದುರೆ ಬಳಲಿದವು (ಕುಮಾ.ದ್ರೋ. ೦೦-೨೨).

[ಬಲ್$_2$ (< ಬಲ್ಲಿತ್ತು$_1$) + —ಪು$_2$]

**ಬಲ್ಪುಗಿಡು** 'ಬಲ್ಪುಗೆಡು' ನೋ.

**ಬಲ್ಪುಗುಳ್** (ನಾ). ದಪ್ಪವಾದ ಗುಳ್ಳೆ; ಭಾರಿಯಾದ ಬೊಬ್ಬೆ: ಪುಷ್ಪ ಕೋಮಲಲಿಂಗಾಂಗದೊಳಾಯ್ತು ಬಲ್ಪುಗುಳಿದೆನ್ನಿಂ ಮುನ್ನಮೇಗೈವೆನೆಂದು ಲಸತ್‌ಚಿತ್ತದೆ ತನ್ನ ಗೋಣ್ಗೊಱಿಯೆ (ವೃಷಂ. ೯-೬೩).

[ಬಲ್$_2$ (< ಬಲ್ಲಿತ್ತು$_1$) + ಪುಗುಳ್$_2$]

**ಬಲ್ಪುಗೆಡು, ಬಲ್ಪುಗಿಡು** (ಕ್ರಿ). ಬಲವನ್ನು ಕಳೆದುಕೊಳ್ಳು; ಸಾಮರ್ಥ್ಯವನ್ನು ಕಳೆದುಕೊಳ್ಳು; ಶಕ್ತಿಗುಂದು : ಕಡವಗಲೊಳ್ ನಿಜಾಂಗಮಂತಿರಕ್ತದೊಳೊಪ್ಪಿರೆ ಬಲ್ಪುಗೆಟ್ಟು ತೇರ್ ಪೊಡೆಗೆಡೆಯಲ್ . . .

ಇನನೆಯ್ದಿದನಸ್ತಶೈಲಮಂ (ದಶಕು. ೨-೩೯). **ಬಲ್ಪುಗಿಡು :** ಎಂತು ಪೆಱಗಿಕ್ಕಿ ನಳನಂ ನೀಂ ತಱಿಸುದಂತೆ ಬಲ್ಪುಗಿಡದಣ್ಮಿ ಕ್ಕೆಂದಂತಕನೆ ಮಸಗಿ ಮೇಲೆಟ್ಟಿಂತೆವೊಲಿರ್ದಂ ಪ್ರಹಸ್ತನಪ್ರತಿಮಬಲಂ (ಶಂರಾಪಾ. ೧೩-೮೮); ದೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಪರಿಯೆ ಬಚ್ಚರ್ ಕಿರ್ಚು ಮುಟ್ಟಿದ ತುಪ್ಪದಂತೆ ಬಲ್ಪುಗಿಡೆ (ಧರ್ಮಾಮೃ. ೨-೬೯).

[ಬಲ್ಪು+ಕೆಡು$_1$]

**ಬಲ್ಪುಚ್ಚು** (ನಾ). ಬಲವಾದ ಹುಚ್ಚು; ಅತಿಯಾದ ಬುದ್ಧಿಭ್ರಮಣೆ : ಬಲ್ಪುಚ್ಚಾದಂ ಪೆರ್ಚಿದವೊಲ್ಪೊಳೆಯಿಸುತಂದು ರಾತ್ರಿ ದರ್ಪಕಶಿಖಿ ಪೊಂಗಲ್ಪದ್ಮಾವತಿ ಜುಣುಗಿರೆ ನಲ್ಪೊಂಬಾಗಿಲ್ಗೆ ಬಂದನಾ ಕವಿರಾಜಂ (ಉದ್ಭಟ. ೧೨-೫೫). [ಬಲ್$_2$ (< ಬಲ್ಲಿತು$_1$) + ಪುಚ್ಚು$_1$ (< ಪುರ್ಚು)]

**ಬಲ್ಪುದೋಱು** 'ಬಲ್ಪುದೋಱು' ನೋ.

**ಬಲ್ಪುದೋಱಿಸು** (ಕ್ರಿ). ಶಕ್ತಿಯನ್ನು ತೋರಿಸು; ಸಾಮರ್ಥ್ಯವನ್ನು ಪ್ರದರ್ಶಿಸು : ಮತ್ತಂ ಮಲೆತು ನಿಂದು ಅಖ್ಖಡದೊಳ್ ಪೊಕ್ಕು ಬಾಹಪ್ಪಳಿಸಿ ಬಲ್ಪುದೋಱಿಸಿದ ಮಲ್ಲನನುರ್ಬುತ್ತೊಯ್ಯನೊಳಪೊಕ್ಕು ಮಿಕ್ಕು ಪಱಿದಿಕ್ಕಿ ಮುರಿವ . . . ಮಲ್ಲರ ನೆರವಿಗಳೊಳಂ (ಗಿಂಕ. ೨-೧೦೫ ಪ). [ಬಲ್ಪುದೋಱು +— ಇಸು$_3$]

**ಬಲ್ಪುದೋಱು,** ಬಲ್ಪುದೋಱ್ (ಕ್ರಿ). = ಬಲ್ಪುದೋಱಿಸು: ಏಱನೆ ಸೂಱಿಗೊಂಡು ನುಡಿವೀ ನುಡಿಯಲ್ಲದೆ ಮತ್ತಮಾಸನುದ್ದೋಱುವ ಬಲ್ಪುದೋಱುವೆರ್ದೆದೋಱುವ ಕಯ್ಪುಸರಂಗಳೆಮ್ಮನುಂತೇಱಿವು (ಪಂಪಭಾ. ೬-೨೦). **ಬಲ್ಪುದೋಱ್ :** ಪಗಲಿರುಳೆನ್ನದೆನ್ನೊಳೆ ಕಡಂಗುವನೆನ್ನೊಳೆ ಬಲ್ಪುದೋರ್ಪಂ . . . ಕರಂ ಮುಳಿಸಿಲ್ಲ ಕಾಯ್ದು ಕೆಮ್ಮಗೆ ಬಳಿಸಂದು ಕೊಂದಪನಕಾರಣದಿಂ ಮೊಱೆಯೋ ಮನೋಭವಾ (ಆದಿಪು. ೧೨-೩೯).

[ಬಲ್ಪು + ತೋಱು]

**ಬಲ್ಪೊಂಬಳೆ** (ನಾ). ಅಡಕೆ, ತೆಂಗು ಮುಂತಾದ ಮರಗಳಲ್ಲಿ ಬಿಡುವ ದೊಡ್ಡ ಹೊಂಬಾಳೆ,-ಹೂಗೊಂಚಲು: ಬಲ್ಪೊಂಬಳೆಯಿಂ ಬಳ್ಕಿತ್ತು ಕೌಂಗು . . . ಕಂಜಕಿಂಜಲ್ಕದಿಂ ಕಣ್ಗೊಳಿಸಿತ್ತಬ್ಜಾಕರಂ ತಂಪಲೆವ ಮಲಯಮಂದಾನಿಲಾಂದೋಳದಿಂದಂ (ಕಾದಂಬ. ೬೬೮).

[ಬಲ್$_2$ (< ಬಲ್ಲಿತು$_1$) + ಪೊಂಬಳೆ (< ಪೊಂಬಾಳೆ$_1$)]

**ಬಲ್ಪೊಱೆ,** ಬಲುಹೊಱೆ (ನಾ). ಬಹಳವಾದ ಹೊರೆ ; ಅಧಿಕವಾದ ಭಾರ: ಪೊಡವಿಯ ಪೊತ್ತ ಬಲ್ಪೊಱೆಯನೊಲ್ದಿೞಿಪಲ್ ಸಬಲಂ ಖಳರ್ಕಳಂ ಕಡಿಕಡಿದೊಟ್ಟಿ ಮೆಟ್ಟಿ ಜಿಂಹಗನಂ ವಿಜಯಾಂಶುವೃದ್ಧಿ ದಾಂಗುಡಿಯಿಡೆ (ಶಕಪು. ೨-೧೧); ಬಡಗಣ ಗಡಿಗಾಱನವರ್ ಗುಡುಗಾಡಿಸಿ ಗೋಲಕೊಂಡ ವಿಜಯಾಪುರವುಂ ಕಡಿದು ಮರಾಟರ ಪಡೆಯುಂ ಪೊಡವಿಯ ಬಲ್ಪೊಱೆ ಯನಿೞಿಪಿ ಬಣ್ಣಿಗೆವಡೆವರ್ (ಅಶ್ವಶಿ. ೨-೧೮). **ಬಲುಹೊಱೆ:** ತೋಳ ಬಲುಹೊಱೆಗಲಸಿ ಕೆಲಬರು ಮೇಲೆ ನಮ್ಮಯ ಹಗೆಗೆ ಕೆಲಬರು ಕಾಳಗದ ಕಾಮುರ್ಕನೃಪಾಲರ ನೆರವಿಯುದೆಯೆಂದ (ಕುಮಾ.ಈ. ೩-೧೪); ಬಾರಿಸಿದ ಬಲುಹೊಱೆಯ ಬಂಡಿಗಳೋರಣಿಸಿದವು ಪಯಣದಲಿ ಕರ್ಪೂರ ಕಸ್ತೂರಿ ಕುಂಕುಮದ ಪೆಟ್ಟಿಗೆಯ ಸಾಲಿನಲಿ (ತೊರೆರಾ. ೧-೬-೩).

[ಬಲ್$_2$ (< ಬಲ್ಲಿತು$_1$) + ಪೊಱೆ]

**ಬಲ್ಪೊಟ್ತು** (ನಾ). ಬಹಳ ಕಾಲ; ಹೆಚ್ಚು ಸಮಯ : ಒಂದು ಮಾತಾಡದೆಯೆ ಕುಳ್ಳನ್ ಬಲ್ಪೊಟ್ತು (ಅಶ್ವಶಾ. ೧೩-೨೬೬).

[ಬಲ್$_2$ (< ಬಲ್ಲಿತು$_1$) + ಪೊಟ್ತು]

**ಬಲ್ಬಂಟ** (ನಾ). ಮಹಾ ಪರಾಕ್ರಮಿ,--ಯೋಧ: "ಉರ್ಕಾಳ್, ಕೂರಾಳ್, ತುೞಿಲಾಳ್, ಬಲ್ಲಾಳ್, ಬಲ್ಬಂಟಂ-ಈ ಶಿ ಪರಾಕ್ರಮಮುಳ್ಳಂ" (ಕಶಸಾ. ೫೮-೨೬೪) ; ಪುಣ್ಯದಿಂ ದೊರೆಕೊಂಡ ಜೈನಧರ್ಮಮನೊಲ್ಲದೆ ಬಿಟ್ಟೊಡೆ . . . ಪುಲ್ಬಂಟನಂ ನಂಬಿ ಬಲ್ಬಂಟನಂ ಬಿಡುವ ಪಗೆಗಾಱನುಮಂ . . . ಪೋಲ್ವೆನೆಂದು ಪರಿಚ್ಛೇದಿಸಿ (ಧರ್ಮಾಮೃ. ೮-೫೦); ಬಡಿಹೋರಿ ಬಲ್ಬಂಟನೆಂಬ ಬಡನುಡಿ ಬಲ್ನುಡಿ ಬಡದೈವಕಲ್ಲದೆ ಬಡಶಬ್ದ ನಿನ್ನ ಪೊಂದುವವೆ (ಶಶಸಾಂ. ೬೨-೬೫); ಬೂತುಗ ಮತ್ತು ಅವನ ಮಗ ಮಾರಸಿಂಹರಂತಹ ನಚ್ಚಿನವ ರಾದ ಬಲ್ಬಂಟರು ಆ ಸಾಮ್ರಾಜ್ಯವನ್ನು ಎತ್ತಿ ಹಿಡಿಯಲು ಪ್ರಯತ್ನ ಮಾಡಿದುದರಿಂದ ರಾಷ್ಟ್ರಕೂಟರ ಪಟ್ಟವು ಮುಂದೆ ಕೆಲವು ವರುಷ ಜೀವ ಹಿಡಿದುಕೊಂಡಿತು (ಕಪಶ. ೨೯). [ಬಲ್$_2$ (< ಬಲ್ಲಿತು$_1$) + ಬಂಟ$_1$]

**ಬಲ್ಬಂಡಿ** (ನಾ). ದೊಡ್ಡ ಗಾಡಿ : ಬಡಿಕೋಲ್ ಕಿಗ್ಗಟ್ಟು . . . ಸಾಳುವಂ ಕೂಳಿ ಗಾಳಂ ಗಿಡುಗಂ ಬಲ್ಬಂ [ಪಾಂಠಾ. ಲ್ವಿಂ]ಡಿಯೊಳ್ ದೀಹದ ಪುಲಿ ನಿಶಿತಾಸ್ತ್ರಂಗಳುಗ್ರತ್ವಮಂ ಸಂಗಡಿಸುತ್ತಿರ್ದೊಪ್ಪೆ ವಿಂಧ್ಯಾಟವಿಗೆ ನಡೆದು ದುದ್ಯತ್ಕಿರಾತಪ್ರಜಾತಂ (ಗಿಂಕ. ೧-೬೯).

[ಬಲ್$_2$ (< ಬಲ್ಲಿತು$_1$) + ಬಂಡಿ$_1$]

**ಬಲ್ಬಂದಿ** ' ಬಲ್ವಂದಿ$_2$ ' ನೋ.

**ಬಲ್ಬಂದಿಕಾಱಿ** ' ಬಲ್ವಂದಿಕಾಱಿ ' ನೋ.

**ಬಲ್ಬಗೆ** ' ಬಲ್ವಗೆ$_2$ ' ನೋ.

**ಬಲ್ಬಜ** (ನಾ). ೧. ದನಗಳಂ ತಿನ್ನದ ಒಂದು ಬಗೆಯ ಒರಟುಹುಲ್ಲು : " ಹೆಚ್ಚುಲಿಹುಲ್ಲು, ಬಲ್ಬಜ, ಗಂಜಳದ ಹೂ " (ಸಸ್ಯಶಿ. ೫೪); ನೊದೆ ನಾಣಲ್ಪತ್ತ ಬಲ್ಬಜ ಧನ್ವಂಗಳುಂ ಮಿಗಿಲಾಗಿ ಸಂಗ್ರಹಂಗೆಯ್ಯಬೇಕು (ಭಾರಶಾಂ. ೫೭೮-೮೮). ೨. (ಆಲಂ) ಕೆಲಸಕ್ಕೆ ಬಾರದುದು : ನಿರಂಪಯುಂಕ್ತವಾದುದು : ಈ ಬಲ್ಬಜಕ್ಕೆ ಮನಸ್ಸಿನ ಶಾಂತಿ ಕಳೆದು ಕೊಳ್ಳಬಾರದು (ರೂಢಿ). [ಸಂ.]

**ಬಲ್ಬಜಿ** (ನಾ). (?) : ಕುಜನಸಂಗದಿ ಕೇಡು ಸುಜನರ್ಗೆಂಬಾ ನೀತಿ ತ್ರಿಜಗವಱಿಯೆ ಕಾಣಲಾಯ್ತು ಮರುಳು ಪ್ರಾಣಘ್ರಾಣದೊಳ್ನಿಜವಿದೆ ಇದಕೆ ಬಲ್ಬಜಿಯೇಕೆ (ಭೈರವೇ. ೧-೨೨೪); ಹೊರಳಿ ಬಲ್ಬಜಿಯಿಂದ ತನ್ನಯ ಬಿರಿದ ಬಿಡಿಸುವೆನೆನುತ ಭೋಂಕನೆ ಪರಿದು ಬಂದರು ಭಾಳನೇತ್ರರ ಮಹಿಮನಿದ್ದೆಡೆಗೆ (ಶಂಕರಾ. ೦೪-೩). [?]

**ಬಲ್ಬಯಕೆ** (ನಾ). ಅತಿಯಾದ ಅಪೇಕ್ಷೆ; ಬಹಳವಾದ ಆಸೆ; ಹೆಬ್ಬಯಕೆ : ದಣಾಯಕರೆ, (ಬಲ್ಬಯಕೆಯಿಂದ) ಮತ್ತೆ ನನ್ನ ಶ್ರೀವಿರೂಪಾಕ್ಷನ ಪಂಪಾಪುರಕ್ಕೆ ಹೋಗಬೇಕೆಂಬ ತುಡಿತ ದಿನದಿನಕ್ಕೂ ಬಲಿಯುತ್ತಿದೆ (ಕುಂಗಭ. ೦೩); ಬಹುದಿನದ ಬಲ್ಬಯಕೆ ಈಡೇರಿತು (ಬೆಳುಮು. ೨೨೦).

[ಬಲ್$_2$ (< ಬಲ್ಲಿತು$_1$) + ಬಯಕೆ$_2$]

**ಬಲ್ಬಱ** (ನಾ). ಭೀಕರವಾದ ಬರಗಾಲ ; ಬಹಳವಾದ ಕ್ಷಾಮ ; ದುರ್ಭಿಕ್ಷ : ಬಹುಧನಧಾನ್ಯಾವಳಿಯನೊಪ್ಪಿಸನೆ ಬಲ್ಬಱದೊಳ್ ಘನಶರಣತತಿಗೆ (ವೃಷಪು. ೬-೩೬). [ಬಲ್$_2$(< ಬಲ್ಲಿತು$_1$) + ಬಱ]

**ಬಲ್ಬಟಲ್** (ಕ್ರಿ). ಅತಿಯಾದ ಆಯಾಸವನ್ನು ಹೊಂದು ; ಬಹಳ ದಣಿ: ಸಪ್ತಾಶ್ವಂ ನಿಚ್ಚವಯಣದೊಳ್ ಬಲ್ಬಟಲ್ದಶ್ವಸಪ್ತಕಮಂ ಕಡಲೊಳ್ ಮುಯ್ಗರ್ಚಿ ನೀರ್ಗುಡಿಸಲ್ಕೆಂದು ಸಾರಥಿಯ ನೇರ್ಪಡಿಸಿ ತಾಂ ತೇರಿನಿೞಿ ದನೆನೆ ಪಡುವಟ್ಟನೆಡೆಯೊಳ್ ಮೆಲ್ಲನೆ ಮೆಯ್ಗರೆಯಲೊಡಂ (ರಾಜಶೇಖ ೨೨-೩). [ಬಲ್$_2$ (< ಬಲ್ಲಿತು$_1$) + ಬಟಲ್$_1$]

**ಬಲ್ಬಿಗುರ್** (ನಾ). ಅತಿಯಾದ ಭಯ ; ಬಹಳವಾದ ಅಂಜಿಕೆ : ಬಲ್ಬಿ ಗುರೊ ಎನ್ನೆರ್ದೆಯನಿಱುಗುಂ (ಬಿದ್ಯಶ್ರ. ೦೦-೨೨೨); ಬಲ್ಬಿಗುರಿಂದಂ ಮತಿಗೆಟ್ಟವಳನ್ ಕಾಡಿಪುದು ? (ಬಿದ್ಯಶ್ರ. ೩೦-೬೫೩).

[ಬಲ್$_2$(< ಬಲ್ಲಿತು$_1$) + ಬಿಗುರ್$_2$]

**ಬಲ್ಬಿರುದು** (ನಾ). ದೊಡ್ಡ ಬಿರುದು ; ಪ್ರಸಿದ್ಧವಾದ ಹೆಸರು : ಸುರರ ಸೂಳೆಯರನೆಲ್ಲರಂ ಸೆಱೆವಿಡಿದು ತನಗೆ ಸರಿಯಿಲ್ಲೆಂದು ಬಲ್ಬಿರುದಿನ ಕಾಳೆಯಂ ಪಿಡಿಸಿ ಬಲದಿಂ ಚತುಸ್ಸಾಗರದ ವೇಳೆಯ ಧರಾಮಂಡಲಂಗಳಂ ಸಂತಸದೊಳಾಳೆಯಿಂಧಾಸುರಂ (ಶಿಬಿಪು. ೪೭-೦೨); ಪುರದ ಲಗ್ಗೆಗೆ ಬಿಟ್ಟ

ತುರುಕರನಿಱಿದು ಬಲ್ಬಿರುದ ಮೆಱೆದ ನರಸೇಂದ್ರ (ಕಂನಪ. ೦೯ ಸೂಕ್ತಿ).

[ಬಲ್$_2$(<ಬಲ್ಲಿತು$_1$)+ಬಿರುದು]

**ಬಲ್ಬಿಸಿಲ್** 'ಬಲ್ವಿಸಿಲ್' ನೋ.

**ಬಲ್ಬಿಸಿಲು** ' ಬಲ್ವಿಸಿಲ್ ' ನೋ.

**ಬಲ್ಬು** (ನಾ). ವಿದ್ಯುತ್ತನ್ನು ಬೆಳಕನ್ನಾಗಿ ಮಾರ್ಪಡಿಸಿ ಹೊರಚೆಲ್ಲುವ ಗಾಜಿನ ಬುರುಡೆ ; ವಿದ್ಯುದ್ದೀಪದ ಬುರುಡೆ : ಈ ತಾವ್ರದ ತಂತಿಗಳ ತುದಿಗಳು ಬಲ್ಬಿನ ಹೊರಗೆ ಇರುವ ಎರಡು ಸೀಸದ ಬೊಟ್ಟುಗಳಿಗೆ ಸಂಬಂಧಿಸಿವೆ (ಭೌತಶಾ. ೩೯೫); ಬೆಳಕು ಬೆಳಕನು ಕೂಡಿ ಆಡುತಿರೆ ಬಲ್ಬು ಹೊರೆ ; ಈಗ ಬಲ್ಬಿಗೆ ಬಲ್ಬು ಕಾತರಿಸಿತು (ನವಿಲು. ೮೨-೦೫).

[<-ಇಂ. Bulb]

**ಬಲ್ಬೆಟ್ಟ**, ಬಲುಬೆಟ್ಟ (ನಾ). ದೊಡ್ಡ ಬೆಟ್ಟ ; ಅಗಾಧವಾದ ಪರ್ವತ : ಮರಳಿ ಕವಿದುದು ಸೇನೆ ಮಂಜು ಬಲ್ಬೆಟ್ಟಮಂ ಪರಿವೇಷ್ಟಿ ಪಂದದಿಂ (ಕಬಪು. ೨೯-೨೫). **ಬಲುಬೆಟ್ಟ** : ಮತ್ತಿದೇನಂಬುಧಿಯೊಳಗೆ ತಲೆಯೆತ್ತುತ್ತಿದೆ ಬಲುಬೆಟ್ಟವಿದು ತಾ ಕೃತ್ರಿಮವೊ ಸಹಜವೊ (ತೊರರಾ. ೫-೦-೮); ಒಡನೆ ಕಪಿ ಬಲುಬೆಟ್ಟವನು ಸಿಡಿಲೆಱಗುವವೊಲೆಱಗಿದನು ರಕ್ಕಸನ (ತೊರರಾ. ೬-೨೨-೦೬). [ಬಲ್$_2$(<ಬಲ್ಲಿತು$_1$)+ಬೆಟ್ಟ$_1$]

**ಬಲ್ಬೆಡಗು**, ಬಲುಬೆಡಗು (ನಾ). ವಿಶೇಷವಾದ ಅಂದ ; ಅತಿಯಾದ ಸೊಗಸು : ಪ್ರಾಕೃತಿಕಗಳ ಮುಡಿವಲೆ ಮೆಱೆವ ಬಾವುಲಿಯ ನಿಡು ಗುರುಳಿನ ಮುತ್ತಿನ ಕುಚ್ಚಿನಿಂದ ಬಲ್ಬೆಡಗಾಗಿ ಮೆಱೆದರರ್ತಿಯಲಿ (ಕಂನಪ. ೨೯-೯೨). **ಬಲುಬೆಡಗು** : ನಾನಾ ಬಗೆ ಷಡುರಸಾನ್ನಗಳ ಪಾಕಗಳ ಕಡುಚೆಲ್ವ ಗೃಹಗಳಂದರಮನೆಯೊಳು ಬಲುಬೆಡಗ ಬೀಱಿದುವರ್ತಿಯಲಿ (ಕಂನಪ. ೭-೯೭). [ಬಲ್$_2$(<ಬಲ್ಲಿತು$_1$) +ಬೆಡಗು$_1$ (<ಬೆಡಂಗು)]

**ಬಲ್ಬೆದೆ** (ನಾ). ಅತಿಯಾದ ಕಾಮಾತುರ ; ಬಹಳವಾದ ಕಾಮೋದ್ರೇಕ : ಇತ್ತ ಸೆಳೆದೊಯ್ಯುವುದು, ಹತ್ತಿರಕೆ ' ಬಾ ' ಎಂದು ಚಿತ್ತವನು ಬಲ್ಬೆದೆಯ ತೆರೆ ಅದೊಂದು (ಪಾದರೀ. ೦೨-೬). [ಬಲ್$_2$ (<ಬಲ್ಲಿತು$_1$)+ಬೆದೆ]

**ಬಲ್ಬೆಱಗು** (ನಾ). ಬಹಳವಾದ ಆಶ್ಚರ್ಯ ; ಅತಿಶಯವಾದ ಸೋಜಿಗ : ದಿಟವೊರೆವೆ ಬಲ್‌ಬೆಱಗನೊಂದನ್ (ಅಂತಿಗೂ. ೦೦-೨೨೪).

[ಬಲ್$_2$ (<ಬಲ್ಲಿತು$_1$) + ಬೆಱಗು$_1$]

**ಬಲ್ಬೊಬ್ಬೆ**, ಬಲುಬೊಬ್ಬೆ (ನಾ). ಬಹಳವಾದ ಗದ್ದಲ ; ಅತಿಯಾದ ಚೀರಾಟ,—ಕೋಲಾಹಲ : ನಿಬ್ಬರದೆ ಬರ್ಪ ಹಯಬಲದಬ್ಬರಣೆಗೆ ಕೊರ್ಬುಗಳಿದುರ್ದಿರ್ಕೆರಿಗೆ ಬಲ್ಬೊಬ್ಬೆಗೆ ಸೀರೆಯ ಮುಂ ತವೆ ತಬ್ಬಿಬ್ಬಂ ಶಾಲ್ದಿ ತೂಟ್ವಿತಾಳ್ದನ ಸಿರಿಯಂ (ಜಕಪ. ೨-೯೭). **ಬಲುಬೊಬ್ಬೆ** : ಬಲುಬೊಬ್ಬೆಯಲಿ ನೆಲನದಿರೆ ನಡೆದುದು ಸೇನೆ ಕಲಶೋದ್ಭವನ ನೇಮದಲಿ (ಕುವ್ಯಾದ್ರೋ. ೪-೦೫) ; ಬಲುಬೊಬ್ಬೆ ಸಿಡಿಲು ಖಡ್ಗಗಳ ತೊಳಪು ಮಿಂಚು ಸಲೆ ತುರಗದ ದನಿ ಗುಡುಗು (ಕಂನಪ. ೦೮-೦೦೦).

[ಬಲ್$_2$ (<ಬಲ್ಲಿತು$_1$) + ಬೊಬ್ಬೆ$_2$]

**ಬಲ್ಭಾರ**, ಬಲುಭಾರ (ನಾ.) ಹೆಚ್ಚಾದ ಭಾರ ; ಅತಿಯಾದ ತೂಕ : ಹೆಮ್ಮರನಿರ್ದೇನದಱಿಂದಲೆತ್ತಬಹುದೇ ಬಲ್ಭಾರಮಂ ಸನ್ನೆ ಸಾವಿರ ಕಾಲಾಳಿನ ಸತ್ವಪ್ಪೈ (ಸೋಮೇಶ. ೭೭). **ಬಲುಭಾರ** : "ಭಾರಣೆಯೆನೆ ಬಲುಭಾರಂ" (ಛಾರ. ೩೯). [ಬಲ್$_2$ (<ಬಲ್ಲಿತು$_1$) + ಭಾರ]

**ಬಲ್ಭುಜ** (ನಾ). (ಅಲಂ) ಹಿರಿಮೆ; ಔನ್ನತ್ಯ: ಭುಜಬಲಿಯೋಗೀಂದ್ರ ನೆಂತಿರ್ದನೆಂದನು ರಜತಗಿರಿಯ ಬಿಟ್ಟು ಬೇಱೆ ಗಜವಿಪಿನದೊಳಿರ್ದ ನಾತನ ತಪದ ಬಲ್ಭುಜವ ಚಿತ್ತೈಸೆಂದರವರು (ಶರಚ. ೩೯-೯).

[ಬಲ್$_2$ (<ಬಲ್ಲಿತು$_1$) + ಭುಜ]

**ಬಲ್ಮಂತ್ರಿ** (ನಾ). **ಸಮರ್ಥನಾದ** ಮಂತ್ರಿ : **ದೂರದರ್ಶಿಯಂತೆ** ಮೇಲನಱಿವನುಂ **ಬಲ್ಮಂತ್ರಿಯಂತೆ** ಪ್ರಮಾದರಹಿತನುಂ . . . **ರಾಜ** ಸೇವಕನಂತ್ತಡಕವಂತನುಮಪ್ಪುದು (ಧರ್ಮಾಮೃ. ೫-೯೯).

[ಬಲ್$_2$ (<ಬಲ್ಲಿತು$_1$) + ಮಂತ್ರಿ]

**ಬಲ್ಮತ್ತಿ** (ನಾ). ಒಂದು ಬಗೆಯ ಮತ್ತಿಮರ : ಪಾದರಿ ತಾಱೆ ತಂಡಸು ಚಿಳಿಲ್ ಬಲ್ಮತ್ತಿ [ಪಾಠಾಂ. ಬಿಳಿಲ್ಬಲ್ಮತ್ತಿ] ಬೇವತ್ತಿ . . . ಕಕ್ಕಿಮ್ಮರಂ ಎಂಬೀ ಮರದುಱುಗಲಿಱುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ (ಪಾರ್ಶ್ವಪು. ೦೨-೩೮). 'ಬಿಳಿಮತ್ತಿ' ಪರಾ.

[ ? + ಮತ್ತಿ$_1$ (<ಮಱು)]

**ಬಲ್ಮನುಶ್ಯ**, ಬಲುಮನುಸ್ಯ (ನಾ). = ಬಲುಂಮಾನಿಸ : ಬೆ(ಂ)ಣ್ಣೆಯೂರ್ಪ್ಪ(ಂ)ನ್ನೆರಡಱ ಬಳಿಯ ಬಾಡಂ ಹಱುಹೆಯಿಂ ಬಡಗಲು ಪಾಂಡ್ಯ ದೇವನ ಬಲ್ಮನುಶ್ಯರು ಬೆ(ಂ)ಣ್ಣೆಯೂರ ಚಂದುಗಿದೇವನುಂ ಕಾಳಗೌಡನುಂ (ಸೌಇಇ. IX-i, ೩೩೭-೪ ; 1220). **ಬಲುಮನುಸ್ಯ** : ಆ ರಾಯನ ಮನೆಯ ಸಂಧಿವಿಗ್ರಹಿ ಲಖಣ್ಣನವರ ಬಲುಮನುಸ್ಯ ದೇವಪ್ಪ ಹರಿಯಪ್ಪನವರು ಹಡವಳಿಕ ನಾಡಿಂಗೆ ಸರ್ವ್ವಾಧಿಕಾರಿಗಳಾಗಿದಲ್ಲಿ (ಎಕ. VII, ಶಿವಮೊ. ೦೯-೯ ; 1309). [ಬಲ್$_2$ (<ಬಲ್ಲಿತು$_1$) + <ಮನುಷ್ಯ ]

**ಬಲ್ಮನೆ** (ನಾ). ದೊಡ್ಡದಾದ ಮನೆ ; ಮಹಾಸೌಧ : ಚೆಂದಳಿರಾಂತಶೋಕೆ ಮಣಿಮಂಟಪಂ . . . ಎಳೆಮೊಗ್ಗೆಗಳೊಪ್ಪುವ ಮಲ್ಲಿಕಾ ತಾವ್ಯಂದಮೆ ಮುತ್ತು ತೆತ್ತಿಸಿದ ಬಲ್ಮನೆ ಕೇತಕಿ ಸುತ್ತುವೇಲಿ ಕಕ್ಕುಂದರಿಯಾಂತ ಕೋಟೆ ಮದನಂಗೆನೆ ಕಂಗೊಳಿಸಿರ್ದುದಾ ವನಂ (ನೃಶಪ. ೪-೩೪).

[ಬಲ್$_2$ (<ಬಲ್ಲಿತು$_1$) + ಮನೆ]

**ಬಲ್ಮನ್ನೆಯ** (ನಾ). ಹೆಚ್ಚು ಮನ್ನಣೆಯನ್ನು ಪಡೆದ ವ್ಯಕ್ತಿ ; ದೊಡ್ಡ ಮುಖಂಡ : ಸಲೆ ಪೋಪ ಬರ್ಪ ಬಲ್ಮನ್ನೆಯರ ಕನ್ನೆಯರ ಸುಳಿಸುಳಿದು ಕಣ್ಗೊಪ್ಪುವಂದಣದ ಗೊಂದಣದ ಕಳಕಳದ ವಾದ್ಯರವದಬ್ಬರದ ನಿಬ್ಬರ ದಳಾ ಪುರಂ ರಂಜಿಸಿದುದು (ಶಬಳು. ೦೦-೩೫).

[ಬಲ್$_2$ (<ಬಲ್ಲಿತು$_1$) + ಮನ್ನೆಯ]

**ಬಲ್ಮರ**, ಬಲುಮರ (ನಾ). ದೊಡ್ಡದಾದ ಮರ ; ಮಹಾವೃಕ್ಷ : ದಾಡೆಯಂ ಮಸೆದು . . . ಮಿಸಾಂಟುತ್ತೆ ಕಂದಂಗಳಂ ಕೆಡಪುತ್ತಂಗದೊಳಾರ್ದಿ ಬಲ್ಮರಗಳಂ ಬಂದತ್ತದೊಂದೆಕ್ಕಲಂ (ರಾಜಶೇ. ೫-೯೯). **ಬಲುಮರ** : ಸಿಡಿದು ಹಾಱಿದ ಹಸ್ತದುಱುಬೆಗೆ ಬುಡಸಹಿತ ಬಲುಮರ ಧರಾತಳಕುಡಿದು ಬಿದ್ದವು (ತೊರರಾ. ೦-೦೦-೦೪).

[ಬಲ್$_2$ (<ಬಲ್ಲಿತು$_1$) + ಮರ$_1$]

**ಬಲ್ಮಳೆ**, ಬಲುಮಳೆ (ನಾ). ದೊಡ್ಡಮಳೆ ; ಭಾರಿ ಮಳೆ : ಎಱಂಕವನಿ ಬಲ್ಮಳೆಯವೊಲೊಪ್ಪುವುದು (ಎಇ. XIII, ೩೩೦-೩೦ ; 929) ; ಮಹಾರಥ ತುರುಗ ಕಾಲಾಳಿಂದ ಶಸ್ತ್ರಾಸ್ತ್ರಗಳ ಬಲ್ಮಳೆಯು ಸುರುಯಿತಿದೆ (ದೇಶೀಪು. ೩-೦೩). **ಬಲುಮಳೆ** : ಕೋಲ ಬಲುಮ[ಪಾಠಾಂ. ವ]ಳೆಗೊಡ್ಡಿ ಹರಿಗೆಯ ಮೇಳಯವ ಮಱೆಗೊಂಡು ಖೇಚರರಾಳು ನಿಂದೆಚ್ಚತ್ತು ನಿಹಾರದಲರ್ಜುನನ ರಥವ (ಕುವ್ಯಾಕ. ೨೦-೨೩) ; ಬಲುಬೊಬ್ಬೆ ಸಿಡಿಲು . . . ಸಲೆ ತುರಗದ ದನಿ ಗುಡುಗು ಖಳರವಯುವ ಕಾಲಮೇಘವಂಬಿನ ಬಲುಮಳೆಗಳ ಕರೆದುವು (ಕಂನಪ. ೦೮-೦೦೦).

[ಬಲ್$_2$ (<ಬಲ್ಲಿತು$_1$) + ಮಳೆ (<ಮಱೆ) ]

**ಬಲ್ಮಾವಂತ** (ನಾ). ದಕ್ಷನಾದ ಮಾವುತ : ತೊಟ್ಟನೆ ಪೊಂದಿದ ಕುದುರೆಯ ತಟ್ಟಂ ಕಂಡಣೆದು ನೂಂಕಿ ಬಲ್ಮಾವಂತರ್ ಬಿಟ್ಟಕ್ಕಿದರಾನೆಗಳಂ (ಕಬ್ಬಿಗಕಾ. ೨೮೧). [ಬಲ್$_2$ (<ಬಲ್ಲಿತು$_1$) + ಮಾವಂತ]

**ಬಲ್ಮಿಂಚು** (ನಾ). ೧. ಹೆಚ್ಚಿನ ಪ್ರಕಾಶ. ೨. (ಅಲಂ) ತುಂಬ ಕಾಂತಿಯಿಂದ ಕೂಡಿದ ವ್ಯಕ್ತಿ : ವಂಚಿಸಿ ಬಲೆಯೊಳ್ ಪ್ರಪಂಚವೆಲ್ಲ ಸೆಳೆದು ಕಂಚಿಪಟ್ಟಣದಿ ಬಲ್‌ಮಿಂಚಾಗಿದ್ದನೆ (ಪುರಂದ. ೨-೩೨-೨).

[ ಬಲ್$_2$ (<ಬಲ್ಲಿತು$_1$) + ಮಿಂಚು$_2$ ]

**ಬಲ್ಮಿಡಿ** (ನಾ). ದೊಡ್ಡದಾದ ಮಿಡಿ : ತುಱುಗಿರ್ದ ಬಲ್ಮಿಡಿಯ ತೂಗುಂಗೊಂಬಿನೊಳ್ ಪಾಯ್ದು ಬಂಡಳಿಸುತ್ತಿರ್ಪ ಶುಕಾಳಿ ತಮ್ಮ ಬೆಸದೊಳ್ ತಂತಮ್ಮ ಠಾಣಾಂತರಂಗಳೊಳಿರ್ದಂಗಜತಂತ್ರದಂತೆಸೆವಿನಂ ಚೆಲ್ವಾದು ವಿಮ್ಮಾವುಗಳ್ (ಅಂಕು. ೧೧-೯೯) ; ಆಲರಸೆವೆಳದಳರೆಲೆಯರಲಿಲೆ ಬಲ್ಮಿಡಿ ಮಿಸುಪ ಪಚ್ಚೆಗೊಂಡಲವುಳಿ ಕಜ್ಜಲತಿಲಕಮೊಗೆ ತೋರ್ಪುದು ಸಲೆ ಸೊಗಯಿಸಿ ಬಾಲನಂದದಿಂ ಮಾಕಂದಂ (ಕುಸುಮಾ. ೫-೩೬).

[ಬಲ್$_2$ (<ಬಲ್ಲಿತು$_1$) + ಮಿಡಿ$_4$]

**ಬಲ್ಮಿಣೆ** 'ಬಲ್ಮಳಿ' ನೋ.

**ಬಲ್ಮಿಳಿ**, ಬಲುಮಿಣಿ, ಬಲ್ಮಿಣಿ (ನಾ). ದೊಡ್ಡದಾದ ಮಿಣಿ ; ಬಲವಾದ ಹಗ್ಗ : ಅಳವಟ್ಟಿಯದೆ ಕೋಟೆಯ ತನೆಗಳೊಳೆತ್ತಂ ಸುತ್ತಿ ನೇಲ್ವ ಬಿರುದರ ಕರುಳಂ ತಳದಿಂ ಪಿಡಿದದರ್ದರ್ ಬಲ್ಮಿಳಿ [ಪಾಠಾಂ. ಲ್ಮಿಳಿ] ಯಂ ಪಿಡಿವಡರ್ವ ಮಾಟಕ್ಕಿಯಿಂ ಮೆಯ್ಗಲಿಗಳ್ (ಪಾರ್ಶ್ವ. ೩-೧೫೦). **ಬಲುಮಿಣಿ :** ಈಸ ಬಲಿ ಬಲುಮಿಣಿಯ ಬಿಗಿಯೆನುತ ಮೇಲೆ ಮೇಲಬ್ಬರದ ಘೋಳಾಘೋಳಿ ಘಲ್ಲಿಸೆ ದೆಸೆಯುಲತಿರಥಹಾಲ ಕವಿದುದು ಕದನಕೌತೂಹಲರ ಕೇರಿಯಲಿ (ಕುಮಾ.ಕ. ೫-೦೨) ; ಎತ್ತದಿರಿ ಬಲುಮಿಣಿ[ಪಾಠಾಂ. ಳಿ]ಯಲಿವನನು ಸುತ್ತಿ ಸಿಂಧುರಘಟೆಗಳಿಂದೆಳೆಸುತ್ತ ಕೊಂಡೊಯ್ಕೆನಲು ಹಮ್ಮಿದರಾನೆಯುಲಿ ಕಪಿಯ (ತೊರವೆ. ೫-೬-೩). **ಬಲ್ಮಿಣಿ :** ಬಹಳ ಪಾಶಗಳಂ ಬೀಸಿ ತೊಡಗಿ ಕೆಡಪಲ್‌ವೇಳ್ಕುಮೆಂದು ಬಲ್ಮಿಣಿಗಳಂ ತಮತಮಗೆ ಕೆಯ್ಕೊಳಾಂತು . . . ಕೋಳಾಹಳದೊಳುಱು ಬದರ್ ವ್ಯವಪತಿಯನು (ಶಬ್ದ. ೪೪-೦೩).

[ಬಲ್$_2$ (<ಬಲ್ಲಿತು$_1$) + ಮಿಳಿ$_2$]

**ಬಲ್ಮುಗುಳ್** (ನಾ). ದೊಡ್ಡದಾದ ಮೊಗ್ಗು ; ದಪ್ಪವಾದ ಕುಟ್ಮಲ : ನೆಗಟ್ಟುದು ದೇವಮಂದುಭಿರವಂ ಸುರನಂದನದಿಂ ಪೊದಟ್ಟು ಬಲ್ಮುಗುಳ್ಗಳ ತಂದಲಂದು ಕವಿತಂದುದು (ಶಾಂತಿಪು. ೦೪-೦೯) ; ಅಸುಗೆಯ ನಾಗಕೇಸರದ ಬಲ್ಮುಗುಳಂ ಬಿಱಯೊತ್ತಿ ತುಂಬಿ ಚುಂಬಿಸೆ (ಶಾಂತಿಪು. ೬-೫೩) ; ನೆಗೆದುದು ಜಾಲದಂತೆ ಪೊಸಮಲ್ಲಿಯ ಬಲ್ಮುಗುಳೊಪ್ಪೆ . . . ವಾರ್ಧಿ ಪೆರ್ಚುಗೆಯ ನವಚ್ಚ ತಾಳ್ದನುದಿತೋದಯಮಂ ಹಿಮಕಾಲಚಂದ್ರಮಂ (ಶಾಂತೀಶ. ೯-೪).

[ಬಲ್$_2$ (<ಬಲ್ಲಿತು$_1$) + ಮುಗುಳ್$_2$]

**ಬಲ್ಮುಡಿ**, ಬಲುಮುಡಿ (ನಾ). ೧. ಕೂದಲಿನ ದೊಡ್ಡ ಗಂಟು ; ದೊಡ್ಡ ತುರುಬು : ಸಾರ್ದೆಳಸಿ ಪಗಿಲ್ವ ಕೇಕಿಯೆನೆ ಬಲ್ಮುಡಿ ತೋಱೆ (ಶಬಶಂ. ೩-೧೫) ; ಬಳಲುಮುಡಿ ಬಲ್ಮುಡಿಯು ಸೋಲ್ಮುಡಿಯು (ಶಬಶೋ. ೨೪-೧೯). ೨. ದೊಡ್ಡದಾದ ಜಟೆ ; ದಟ್ಟವಾದ ಕೂದಲು : ಬಾಂಬೊಳೆ ತಳ್ತ ಕೆಂಜಡೆಯ ಬಲ್ಮುಡಿ ತಾಳ್ದ ಶಶಾಂಕಲೇಖೆ . . . ಬಗೆಗೊಳ್ವ ಸುಣ್ಣಗೆ ವರಾಭಯಶೂಲಮೃಗಾಂಕಪಾಣಿಯುಂಕಂ ಬಿಡದೊಪ್ಪುವದ್ರಿಜೆ ವಿರಾಜಿಸೆ ರಂಜಿಸಿದಂ ಮಹೇಶ್ವರಂ (ಶಬಶಂ. ೧-೬೪). **ಬಲುಮುಡಿ :** ೧. ನಿಱಿಗುರುಳ್ ನಿವಿರ್ದ ಕಣ್ಬಲುಮುಡಿ . . . ಸಳಿತೋಳಸಿಯ ನಡು ಮೆಱೆಯೆ ಮೆಱೆವಳಾ ನೀಱೆ (ಕುಂದಮಾಂ. ೨೯-೦೦೭).

[ಬಲ್$_2$ (<ಬಲ್ಲಿತು$_1$) + ಮುಡಿ$_3$]

**ಬಲ್ಮುತ್ತು** (ನಾ). ದೊಡ್ಡದಾದ ಮುತ್ತು ; ದಪ್ಪವಾದ ಮೌಕ್ತಿಕ : ಬಲ್ಮುತ್ತಿನ ಬಳಗಮಣಂ ಮೆಲ್ಮುಗುಳಾದಂತೆ ಪೊಳೆವ ಬೆಳ್ಪೆಸೆವಲರ್ಗೊಂಚಲ್ಮಸುಕಿ ಪರಿಮಳದ ಗೊಂಚಲ್ಮಸುಕಿದುದಲ್ತೆ ಮಾಧವಿಯ ಪಾದಪದೊಳ್ (ಶಾಂತೀಶ್ವ. ೫-೦೦೦). [ಬಲ್$_2$ (<ಬಲ್ಲಿತು$_1$) + ಮುತ್ತು$_3$]

**ಬಲ್ಮುನಿಸು**, ಬಲುಮುನಿಸು (ನಾ). ಅತಿಯಾದ ಕೋಪ ; ಬಹಳವಾದ ಸಿಟ್ಟು : ಮತ್ತಿನ ಮಾನ್ಯರೊರೆದ ಕೃತಿಯಾ ಸಲ್ಲಲಿತಮನೇನೆನ್ನದೆ ತಮ್ಮಯ ಬಲ್ಲತನವನೇ ಮೆಱೆವಣ್ಣಂಗಳ ಬಲ್ಲತನದ ಬಾಯೊಳು ಬಳಹಂ ಬಲ್ಮುನಿಸುದಳೆದು ಹೊಗಲಿ (ಚತುಶಾ. ೦-೦೩). **ಬಲುಮುನಿಸು :** ಹಲವು ಪರಿಯಿಂದಿಂತು ನವಿಸುವನಲಸುವಂ ಪ್ರಾರ್ಥಿಸುವಂ . . . ಬಲುಮುನಿಸು ನಿಮ್ಮಿಂದವಲ್ಲದೆ ತಿಳಿಯದೆನುತಂ ಬಾಲಲಿಂಗನವಸ್ಥೆಗೊಳುತಿರಲು (ಬಸವ. ೪೬-೪೬) ; ಎನ್ನೊಳು ಬಲಿದ ಬಲುಮುನಿಸನೆಲ್ಲವ ಕಳೆದು ಸಲಹೆಂದೆನುತ ಸಂಪ್ರಾರ್ಥನೆಯ ಮಾಡಿದನು (ತಿಮ್ಮ. ೦-೦೦೯). 'ಬಲ್ಮುಳಿಸು' ಪಠಾ.

[ಬಲ್$_2$ (<ಬಲ್ಲಿತು$_1$) + ಮುನಿಸು$_1$]

**ಬಲ್ಮುಸು** (ನಾ). ಒಂದು ಬಗೆಯ ದೊಡ್ಡ ಆಕಾರದ ಕಪಿ,–ಮುಸಂ : ತಳಿರ್ವತ್ತ್ರಿಗೆ ಕವಲ್ಗೊಂಬು ಧವಣೆಕೋಲಳಿ ಶುಕ ಪಟುತತಿಯಾಗಿ ಬಳಸಿರಲೊಂದು ಬಲ್ಮುಸು ನರೆಗಡ್ಡವ ತಳೆದ ದೀಕ್ಷಿತನಂತಾಯ್ತು (ಪ್ರಭು. ೬-೨೪).

[ಬಲ್$_2$ (<ಬಲ್ಲಿತು$_1$) + ಮುಸು$_2$]

**ಬಲ್ಮುಸುಡು** (ನಾ). ದೊಡ್ಡದಾದ ಮೂತಿ ; ಹಿರಿದಾದ ಮುಖ : ಕುಸಿದ ಸಿರಂ ಕೆಲಕ್ಕೊಲೆದ ಬಲ್ಮುಸುಡುರ್ಬಿದ ಮೆಯ್ಯ ರೋಮಂ . . . ತಳ್ತಗುರ್ವಿಸೆ ಮುಲೆದುರ್ಕಿ ಗರ್ಜಿಸಿ ಕರಂ ಪರಿತಂದುದು ಪಂದಿ ಕಾಯ್ಪಿನಿಂ (ಶಬಶಂ. ೪-೯).

[ಬಲ್$_2$ (<ಬಲ್ಲಿತು$_1$) + ಮುಸುಡು]

**ಬಲ್ಮುಳಿಸು** (ನಾ). = ಬಲ್ಮುನಿಸು : ಪಗೆ ಕಯ್ಗಿವಂದು ಬರ್ದುಕಾಡಿದ ಬಲ್ಮುಳಿಸಿಂ ವೃಕೋದರಂ ಅಂತು ಕಳಿಂಗರಾಜ ಮತ್ತಮಾತಂಗಘಟೆಗಳ ಮೇಲೆ ಮುಳಿಸಂ ಕಳೆವೆನೆಂದು ಸಿಂಹನಾದದಿನಾರ್ದು . . . ದಿಗ್ಗಜಮಂ ಪೋಲ್ವ ಗಜಂಗಳಂ ಪಲವುಮಂ ಕೊಂದಂ ಮಱುನ್ನಂದದನಂ (ಕುಂತಳ. ೦೦-೦೦೦) ; ಇನ್ನೆಮಗಗಮ್ಯ ನಲಕ್ಷ್ಯನದೃಶ್ಯನಾಗಿ ನಿ ನೆನಸುಮುಗಲ್ದ ಬಲ್ಮುಳಿಸು ನಲ್ಲನೆ ಕಾಲ್ವಿಡಿಯಲ್ಕೆ ಮಾಣ್ಗುಮೇ (ಜಗಂ. ೬-೦೦೭) ; ಬರಯಿಗಳಂಜೆ ಕೂಡದರ ಕಲ್ಲೆರ್ದೆ ಪವ್ವನೆ ಸೀಟೆ . . . ಬಲ್ಮುಳಿಸಿಂದಮುಗಲ್ಕೆವೆತ್ತ ನಲ್ಲರ ಬಗೆ ಬಳ್ಕೆ ಜೇವೊಡೆಯ ಬಲ್ಲುಲಿ ನೀಳ್ದುದು ಕರ್ಪುವಿಲ್ಲನಾ (ಶಕ್ಕಾ. ೩೦೦).

[ಬಲ್$_2$ (<ಬಲ್ಲಿತು$_1$) + ಮುಳಿಸು$_1$]

**ಬಲ್ಮುಱು** (ನಾ). ಬಹಳ ಚೂರು ; ಅನೇಕ ಚೂರು : ಬಾಳ ಬಲ್ಮುಱಯುಂ ನೆತ್ತರ ಪೂರಮುಂ ನೆಗೆದು ಕಣ್ಗಿಂಬಾಯ್ತು ಬಾನೆಂಬ ಕೆಂಗೆಱೆ ಬೆಂಡೆರ್ದು ಕಲಂಕೆ ಮಿಮ್ಮಿಡುಕುಮಂತತ್ಯುಗ್ರಸಂಗ್ರಾಮದೊಳ್ (ಶಸಂಪು. ೦೪-೯).

[ಬಲ್$_2$ (<ಬಲ್ಲಿತು$_1$) + ಮುಱು$_2$]

**ಬಲ್ಮೆ**, ಬಲುಮೆ (ನಾ). ೧. ಬಲ ; ಶಕ್ತಿ ; ಸಾಮರ್ಥ್ಯ ; ಪರಾಕ್ರಮ : ಇನಿತೊಂದು ನುಡಿದ ಬಲ್ಮೆಯೆ ನಿನಗಿಲ್ಲದೊಡ್ಡೆಕೆ ನಿನ್ನನಾಳ್ದಂ ನಿನ್ನಂ ಮನವೊಲ್ದು ನಟ್ಟಿಯಟ್ಟಿದನನಾಳಂ ದೂತನಿಂತು ನುಡಿಯಲ್ವೇಟ್ಕುಂ (ಅಂಕು. ೦೪-೬೩) ; ಜೀವಮದೊಂದೆ ದೇಹಮೆರಡಿಂತಿವರ್ಗೆಂಬಭಿಶಂಕೆಯಂ ಧರಿತ್ರೀವಳಯಕ್ಕೆ ಮಾಡುವುದು ತಮ್ಮೊಳಿವಂದಿರ ನಲ್ಮೆ ಬಲ್ಮೆ ಶೋಭಾವಹ ಮೂರ್ತಿ ಕೀರ್ತಿ . . . ಸದೃಶಸ್ವರೂಪದಿಂ (ಶರ್ಧಿಪು. ೩-೩೩) ; ಮೊಱೆಗೆಳ ಮಥನನು ಸಂಗ್ರಾಮದೊಳಿಂದು ತಱಿದು ಬೀಡರ ಬಲ್ಮೆಯನು ಮುಱಿವೆ ವೀಳೆಯವ ತಾರೆಂದವನರಸನ ನೆಱೆ ಧೀರನಾಗಿ ಬೇಡಿದನು (ಚೆನ್ನಬಸವ. ೯-೨೫). ೨. ಪರಿಣತಿ ; ನೈಪುಣ್ಯ ; ಪ್ರಗಲ್ಭತೆ : ಈ ಬರೆದ ಶ್ಲೋಕಮಂ ಚಾಣಾಕ್ಯನೊಂದು ದಿವಸಂ ಕಂಡಿದು ನೀತಿಶಾಸ್ತ್ರದ ಬಲ್ಮೆಯಲ್ತೆಂದವಂ ಸೀಂಟಿ ತಾನಿಂತೆಂದು ಬರೆದಾ (ಶಮ್ಮಾರಾ. ೦೬೪-೦೩) ; ತಪ್ಪದೀ ಲಲನೆ ತತ್ಸ್ವಯಂಪ್ರಭೆಯ ನೋಟಿಪ್ಪೊಡೀ ಚಿತ್ರಮಿಂತಿದಾಕೆಯದೆ ಬಲ್ಮೆ ವೇಟ್ಪ್ ಪೆಱರ್ಗಮಿಂತುಟೊಂದಕ್ಕುಮೇ (ಅಂಕು. ೯-೬) ; ಕವಿಮಾರ್ಗದೊಳಂ ಪೊಸ ದೇಸೆಯ ನುಡಿಗಳೊಳಂ ಪೊಸೆಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ (ಗದಾಯು. ೦-೪೯). ೩. ಶ್ರೇಷ್ಠತೆ ; ಉತ್ತಮಿಕೆ : ಪೊಸದೇಸೆಯೊಳೊಂದಿದ ಮಾರ್ಗಮೊಳ್ಪುವೆತ್ತೆಸೆದಿರೆ ವೇಟ್ಪು ರಂಜಿಸದೆ ಕೆಮ್ಮನೆ ಬಲ್ಮೆ [ಪಾಠಾಂ. ಲ್ಮೆ]ಗೆ ಮುಯ್ಯನಾಂಪುದೇ (ಸುಕುಮಾ. ೦-೧೯). ೪. ಹಿರಿಮೆ ; ಮಹಿಮೆ : ಪತಿತರ ಪಾವನವೆನಿಸುವ ಬಲ್ಮೆಯೊಳತಿಶಯಮಡೆದ ತೀರ್ಥಗಳು ಸತಿಯರ ಪಾದಸಂಸ್ಪರ್ಶದಿಂ ತಮ್ಮ ದುಷ್ಕೃತವ ಕಳೆಯಲೆಳಸುವುವು (ಕಮಾ. ೨-೬). ೫. ಏಳಿಗೆ ; ಉನ್ನತಿ ;

**ಅಭಿವೃದ್ಧಿ** : ಅನುದಿನವು ತನ್ನ ದೇಶದ ಬಲ್ಮೆಗಾಗಿ ತನು ಮನ ಧನಗಳನು ಅರ್ಪಿಸುತ ಭಕ್ತಿಯಿಂದ (ಕಂಕು. ೧೫-೩). ೬. **ಶ್ರೇಷ್ಠವಾದುದು; ಉತ್ತಮವಾದುದು; ಮೇಲಾದುದು** : ಕವಿಯೇ ಸರ್ವರೊಳುತ್ತಮಂ . . . ರಸಗಳೊಳ್ ಶೃಂಗಾರವೇ ಬಲ್ಮೆ (ಕೋಟೀಶ. ೪). ೭. **ಬಲಾತ್ಕಾರ; ಒತ್ತಾಯ** ; ಬಲುಮೆ : ಸುಖಾಸನಾರೂಢ ತನ್ನಿನಿಯನ ಬಲ್ಮೆಯಲ್ಲದ ನಲ್ಮೆಯ ಪರಮಪದಮನೋರೊರ್ವರೊಳ್ ನುಡಿವ ಕೆಳದಿಯರ ನುಡಿಯ ನಾಲಿಸುತ್ತುಂ ನಿಜನಿವಾಸಕ್ಕೆ ಬಿಜಯಂಗೆಯ್ದು (ಮಲ್ಲಿಕು. ೪-೯೭); ನಿಷ್ಠುರ ಕೋಪಂ ಪಿಡಿದೊತ್ತಿ ಸೂಳೆಯರೊಳುಗ್ರಾಟೋಪದಿಂ ಬಲ್ಮೆಯಿಂ ನೆರೆವಂ ಭೂಭುಜನಂದನಂ (ರಸರತ್ನ. ೨-೩೬). ೮. **ಬೆಂಬಲ; ಒತ್ತಾಸೆ** : ಗಂಡನ ಬಲ್ಮೆಯೊಳತ್ತಮಾವಂದಿರ ಗಂಡನನವರ ಬಲ್ಮೆಯೊಳು ಅಂಡಲೆಯುದೆಯನಿಬರನನುಸರಿಸುವ ಪೆಂಡಿರ ಜಸ ಪೆರ್ಚುವುದು (ಹದಿಬ. ೪-೩). ೯. (ಅಲಂ) **ಔಚಿತ್ಯ; ಯೋಗ್ಯವಾಗಿರುವಿಕೆ** : ಕನ್ನೈದಿಲಲರ್ಗೆ ಯಾಱಿಡಿಗೆ ಶಶಿಬಿಂಬಕ್ಕೆ ರನ್ನಕ್ಕೆ ಪೊನ್ನ ಕಳಸಕ್ಕೆ ತಿಳಿಗೊಳಕೆ ಮಿಗೆ ಚೆನ್ನೆಸವ ಬಗಸೆಗಣ್ಣಳಕವಮಾನನಮಧರಕುಚಯುಗ್ಮಮೆಸೆವ ನಾಭಿ ಮುನ್ನಮೇ ಸರಿಯೆಂಬ ಬಲ್ಮೆ ಪೊಱಮಾಱಿಧಿಕವೆನ್ನಲುಚಿತಂ ತಥ್ಯವೆನಲೆಸೆದಳಾ ಚೆಲ್ವ ಕನ್ನೆ (ಶಾಬಕು. ೩-೯೬). **ಬಲುಮೆ** : ೧. ಬಲುಮೆ ಮಿಗೆ ಜನಬಸದಿಗಳ ಮೇಲಳವಡಿಪ ಶಿಖರಂಗಳಂ ಭೂತಳಕಳಿಯ ನೂಕಿಸುತಿವೆಲ್ಲಂ ನುಚ್ಚುನುಱಿ ಮಾಡಿ (ಬಸವು. ೩೦-೬೨) ; ಬಲುಮೆಯಿಂ ನೂಂಕಿ ದಟ್ಟಿಪೆವೆಂದೊಡೆವ್ಮಿಂದ ಬಲವಂತರಿಲ್ಲ (ಗೌರಂದವು. ೪-೬೦) ; ಬಲುಮೆಯುಳ್ಳಡೆ ಕಾದು ನಿನ್ನಂ ಕೊಲದೆ ಬಿಡೆನು (ಅವಂರಾ. ೦-೪-೨೩). ೨. ರಾಯ ನಿನಗಾವಿಂದು ದಿಟ ಸಿದ್ಧಾಯವನು ನಾವ್ಮೆತ್ತವಲ್ಲದೆ ವಾಯುಜನ ಫಲುಗುಣನ ಬಲ್ಲಿನ ಬಲುಮೆ ಗಂಜಿದೆವೆ (ಕುಮ್ಯಾಸ. ೮-೩೦) ; ತಿಳುಹು ಧರ್ಮಜ ಸಕಲಧರ್ಮಾವಳಿಯ ಸಾರವನೆನಲು ಯಕ್ಷನ ಬಲುಮೆಗವನೀಪಾಲನತಿಪರಿತೋಷದಲಿ ನುಡಿದ (ಕುಮ್ಯಾಅ. ೨೩-೩೯). ೩. ಜಲಮಣಿಯ ಬೆಡಗನಿಕ್ಕಬಹುದೆ ಬಯಲ ಬಂಧಿಸಬಹುದೇ ಒಲುಮೆಯ ರಸಿಕಕ್ಕೆ ಸಲೆ ನಿಲಯ ಉಂಟೇ ಇದು ಸಲ್ಲಲಿತ ಇದಱ ಬಲುಮೆಯ ಹೇಳಾ (ಪೋಳವಚ. ೦೬-೪೬೪) ; ಗಿರಿಜೆಯರ ಸಂಗಱಿಯುಬಾರದ ಪರಮಮಾಹೇಶ್ವರರ ವಿಸ್ಮಯಚರಿತವಂ ವರ್ಣಿಸುವ ದಾನೇತಱವನಂತಾಗಿ ಸರಸದಿಂ ಕೀರ್ತಿಸಿದೆನಾ ಭಕ್ತರನೆ ಮತ್ತನ್ಯತವನಱಿಯೆನು ನಿರುತದಿಂದೀವೊಂದು ಬಲುಮೆಯೊಳಾದ ಪೆಂಪಿಂದ (ಬಸವು. ೩೦-೭೭). ೭. ಜಲದೊಳಾಡುತ್ತಿರಲು ಕಂಡನು ನಳಿನವದನೆಯನಾ ಗುಹಾಸುರ ಬಲುಮೆಯಲಿ ರಮಿಸಿದನು (ಸಂಕರ. ೨೬-೦೦೩) ; ಎಲ್ಲವನು ಅಱಿದಿಹರೆ ಬಲ್ಲೆನೆಂದೆನಬೇಕು ಅಲ್ಲಲ್ಲಿಗೊಂದನಱಿದುಲಿಯ ಬಲುಮೆಗೆ ಕಲ್ಲು ಹೊತ್ತಂತೆ (ಸರ್ವಜ್ಞ. ೪೫೨). ೮. ಎನ್ನ ದೇಹದಲಿ ಒಲಿದು ನೀನಿರೆ ನಿನ್ನ ಸಲುಗೆಯ ಬಲುಮೆಯಲಿ ಬರಸೆಳೆವೆ ಮುಕ್ತಿಯ ಲಲನೆಯನು ತಳುವಿಲ್ಲ (ಹಂಸಾ. ೫೯). 'ಬಲುಮೆವಿಡಿ' ಪರಾ.

**ಬಲ್ಮೆ ಮಾಡು, ಬಲುಮೆ ಮಾಡು** = ೧. **ಭದ್ರಗೊಳಿಸು; ಬಿಗಿಗೊಳಿಸು; ಬಲಪಡಿಸು** : ಪುರದುರ್ಗಂಗಳ ಬಲ್ಮೆ ಮಾಡದೆ ಪ್ರಜಾಕ್ಷೋಭಂಗಳಂ ನೋಡದೆ . . . ಮದನಂಗಾಳಾಗಿಹಂ ಲೋಕದೊಳ್ ದೊರೆಯೇ ಸೊಕ್ಕಿದ ಕೋಣನೈ (ಕೋಟೀಶ. ೩೩). ೨. **ಬಲಾತ್ಕಾರ ಮಾಡು; ಒತ್ತಾಯ ಮಾಡು** : ನಮ್ಮ ಮೇಲೆಯೇ ಇಷ್ಟು ಬಲುಮೆ ಮಾಡಲಿಕ್ಕೆ ನಾವೇನು ಅಂಥಾದ್ದು ಆತನಿಗೆ ಮಾಡಿದ್ದೇವು (ಮುಂಬಯು. ೪. ೨-೪೩). [ಬಲ್$_2$ (<ಬಲ್ಲಿತು$_1$) + — ಮೆ$_1$]

**ಬಲ್ಮೆಕಾಱ** 'ಬಲ್ಮೆಗಾಱ' ನೋ.

**ಬಲ್ಮೆಗಾರ** 'ಬಲ್ಮೆಗಾಱ' ನೋ.

**ಬಲ್ಮೆಗಾಱ, ಬಲುಮೆಕಾಱ, ಬಲುಮೆಗಾಱ, ಬಲ್ಮೆಕಾಱ, ಬಲ್ಮೆಗಾರ** (ನಾ). ೧. **ಬಲವುಳ್ಳವನು; ಪರಾಕ್ರಮಿ** : ಇರ್ಮಡಿ ಬಲ್ಮೆಗಾಱರುಂ ಕಟ್ಪಿದು ಕೀಟ್ಗಿಯುದ್ದದಱಿಂ ಹೊಂತಕಾಱಿಗಳನಿಬರುಂ ಪಿಂದೆಗೆಯೆ (ಶಶಪಂ. ೦೬೪-೭). **ಬಲುಮೆಕಾಱ** : ೧. ಅಳುಕಿದರು ಮನುಮಥನ ಗರುಡಿಯ ಬಲುಮೆಕಾ[ಪಾಠಾಂ. ವೆಗಾ]ಱರು ಬಂದಳಗ್ಗದ ನಳಿನಮುಖಿ ಬಹುಜನದ ಮನಕಚ್ಚರಿಯನೊದವಿಸುತ (ಕುಮ್ಯಾವಿ. ೦-೨೬); ತೊಲೆಗಳೊಳಗೆ ದಸಿಗಳ ಪೆಟ್ಟಿ ಲಂಘಿಪ ಬಲುಮೆಕಾಱರ ಮೇಲೆ ನೂಕೆ ತಲೆಮೈ ಕೈ ಕಾಲೊಳು ಗೂಟಗಳು ಮೂಡಿ ಸಲೆ ತೊಱೆದರು ಜೀವಗಳನು (ಕಂಕಾ. ೧೪-೬೦). **ಬಲುಮೆಗಾಱ** : ೧. ಎಲೆ ಧರ್ಮಸುತ ಕೇಳಿಂತೊರ್ವನೆ ರಾಜಬಲವನೆಲ್ಲವ ಬಱಿಕೆಯ್ಯೆ ಬಲುಮೆಗಾಱರ ಬಲ್ಲಹನು ಜರಾಸಂಧನೊಲಿದು ಕರ್ಣನ ಕರೆಸಿದನು (ಕರ್ಣಪ. ೬-೧). **ಬಲ್ಮೆಕಾಱ** : ೨. **ಶ್ರೇಷ್ಠನಾದವನು; ಮಹಿಮಾವಂತ** : ತೋಱಿದ ಚಿಂತೆಯ ನಿಮಿಷಮಾತ್ರದಿ ಕಡೆಗಾಱಿಸುವತಿಶಯರೂಪಾ ಜಾಱಿದೆ ನನ್ನಂತರಂಗದೊಳಿರು ಬಲ್ಮೆಕಾಱಾ ಚಿದಂಬರಪುರುಷಾ (ಭರತ. ೫೬-೦೦೭). ೩. **ಚತುರನಾದವನು; ಜಾಣ** : ಶಾಂಬೂಲವಸ್ತ್ರಭೂಷಣವಿತ್ತು ನಮಿರಾಜ ತುಂಬಿದ್ದ ಜನವ ಬೀಳ್ಕೊಟ್ಟು ಮುಂಬಾಗಿಲೆಡೆ ಮುಟ್ಟ ಹೋಗಿ ತಿರುಗಿ ಬಂದನೇಂ ಬಲ್ಮೆಕಾಱನೊ ಮಂತ್ರಿ (ಭರತ. ೩೮-೮೮). **ಬಲ್ಮೆಗಾರ** : ೩. ನಿನಗಿನ್ನೂ ಸಿದ್ಧಿ ಸದಿರುವುದು — ಬಲ್ಲ ಬಲ್ಮೆಗಾರನ ಉತ್ಕಟೋಪಭೋಗದ ಪ್ರಥಮಸಮಾಗಮ (ಮಂತ್ರಶ. ೨೯-೦೦). [ಬಲ್ಮೆ + — ಗಾಱ (< — ಕಾಱ)]

**ಬಲ್ಮೆಗೈ** (ಕ್ರಿ). **ಒತ್ತಾಯ ಮಾಡು; ಬಲವಂತ ಮಾಡು** : ಅಂಜಲೇತಕೆಲೆ ಬಸವಣ್ಣ ನೀಂ ಕೊಟ್ಟ ಘನಲಿಂಗಮಂ ಕೊಂಡಡಂಗಿದನಿಮಿಷನಂದ ಮೆನಗಿಲ್ಲ ಬಲ್ಮೆಗೈವವನಲ್ಲವಿಾ ಲಿಂಗಲಕ್ಷಣಂಗಳನಾದೊಡೆ ಎನಗೆ ತಿಳಿಪು (ಕಿರಾಪು. ೬-೭). [ಬಲ್ಮೆ + ಗೈ (< ಕೆಯ್$_1$)]

**ಬಲ್ಮೆದೆ** (ನಾ). **ದೊಡ್ಡ ಮೆದೆ** : ನೆಲ್ಲ ರಾಶಿಗಳಷ್ಟು ಹೊನ್ನ ರಾಶಿಗಳುಂಟು ಹುಲ್ಲ ಹೆಬ್ಬಣಬೆಗಳಷ್ಟು ಜಲ್ಲಿಪಟ್ಟೆಗಳ ಬಲ್ಮೆದೆಯಿದ್ದುವವನೊಂದು ಹುಲ್ಲಿಗೆ ಕಡೆಗಂಡು ಬಿಟ್ಟ (ಭರತ. ೫೦-೦೨).

[ಬಲ್$_2$ (< ಬಲ್ಲಿತು$_1$) + ಮೆದೆ$_1$]

**ಬಲ್ಮೆಯ್** (ನಾ). **ದೊಡ್ಡ ದೇಹ; ನಿಡಿದಾದ ಶರೀರ** : ಬಱಿದೋಱಿದ್ದೆಯ ಬಳ್ವಳಬಳೆದಾ ಬಲ್ಮೆಯ್ಯ ಕೂಡೆ ಪೆರ್ಚಿದ ಕೈಯಂ ಒಳವುಗಿಸಲೆನ್ನ ಕಂತ್ತೆರ್ದೆಗೊಳಗಕ್ಕಿಮು ಖರ್ವತನುವ ಕರುಣಾಹಸ್ತಂ (ವಸ್ತುಕಂ. ೩೦). [ಬಲ್$_2$ (<ಬಲ್ಲಿತು$_1$) + ಮೆಯ್$_1$]

**ಬಲ್ಮೆವಂತ** (ನಾ). ೧. **ಶಕ್ತಿವಂತ; ಬಲಶಾಲಿ; ಸಮರ್ಥ** : "ಶಕನ್, ಶಕಾನಃ, ಶಕ್ತಃ, ಶಕ್ತವಾನ್, ಈ ೪ ಬಲ್ಮೆವಂತಂ" (ಕಾಶಕ್ಕ. ೨೦೯). ೨. **ಚತುರ; ನಿಷ್ಣಾತ; ಜಾಣ** : ಬಲ್ಮೆವನ್ನನ ಮುದ್ದುನುಡಿಗಳ ಕಟ್ಟಳಸಿನ ತುಮುಲಕೋಲಾಹಲದ ವಿಕಾರಾಭಾಸವನ್ನು ಸೋಲಿಕ್ಯುತ್ತಿದು (ಮಂತ್ರಶ. ೦೯೦-೪). [ಬಲ್ಮೆ + — ವಂತ]

**ಬಲ್ಮೆಳೆ, ಬಲುಮೆಳೆ** (ನಾ). **ಗಿಡಬಳ್ಳಿಗಳ ದಟ್ಟವಾದ ಪೊದೆ; ಒತ್ತಾಗಿ ಬೆಳೆದ ಗಿಡ ಮರಗಳ ಗುಂಪು** — ಪೊದರು : ನೆವವಿಟ್ಟು ಮೊಲೆವಣಗಳಂ ತವಕದಿನಂದಱಿಸುವಂತೆ ಬಲ್ಮೆಳೆಗೊಲ್ದುತ್ಸವದಿಂ ಮೆಲ್ಲನೆ ಪೋದಂ ಯುವತಿಯನೊಡಗೊಂಡು ಶಬರಕಾಮುಕನೊರ್ವಂ (ಉದ್ಭಟ. ೨-೭೮). **ಬಲುಮೆಳೆ** : ಸುಮುಹಾರಥರ ಹೊದಱಲಿ ಹೊಕ್ಕನುರಿ ಬಲುಮೆಳೆಯ ಹೊಕ್ಕಂತೆ (ಕುಮ್ಯಾದ್ರೋ. ೨-೩೦). [ಬಲ್$_2$ (<ಬಲ್ಲಿತು$_1$) + ಮೆಳೆ]

**ಬಲ್ಮೊಗ** (ನಾ). **ಗಡುಸಾದ ಮುಖ; ಗಂಭೀರವಾದ ಮುಖ** : ಅತಿಬಳಮಹಾರಾಜಂ . . . ಪೆಱರ ಮಾರ್ಗದೊಳಿರ್ದಪಲ್ಲದೆ ತಱಿಸಂದು ನೆಗಟರೆಂದು ಮೇಲ್ಮೆಗೆಯ್ಯದೆ ಬಲ್ಮೊಗಂ[ಪಾಠಾಂ. ಬಲುಮೊಗಂ] ಮಾಡಿ ತನ್ನಳಿಯಂದಿರ ಮೊಗಮಂ ನೋಡಿ . . . ಎಂಬುದುಂ (ಶುಕುಪು. ೨-೫೩ ವ). [ಬಲ್$_2$ (< ಬಲ್ಲಿತು$_1$) + ಮೊಗ]

**ಬಲ್ಮೊರಡಿ** (ನಾ). **ದೊಡ್ಡ ಪರ್ವತ; ಭಾರಿ ಬೆಟ್ಟ**.

**ಬಲ್ಮೊರಡಿಯ ಕನ್ನೆ** = ಪರ್ವತರಾಜನ ಮಗಳು ; ಗಿರಿಜೆ; ಪಾರ್ವತಿ : ಮುನ್ನೀರಣುಗಿ ಮುರಾರಿ ಬಲ್ಮೊರಡಿಯ ಕನ್ನೆ ಕಪರ್ದಿ ವಾಗ್ದೇವಿಸ ನ್ನುತಬಿದಿಗಳೊಪ್ಪಿದವೋಲೊಪ್ಪಿದರತ್ಯನ್ನತಿಕೆಯೊಳಾ ಪ್ರಿಯರು (ಶ್ರೀಪಾಂ. ೧೧-೩೭). [ಬಲ್$_2$ (<ಬಲ್ಲಿತು$_1$) + ಮೊರಡಿ$_1$]

**ಬಲ್ಮೊರೆ** (ಕ್ರಿ). ಜೋರಾದ ಝೇಂಕಾರವನ್ನು ಮಾಡು : ಮಿಸು ಪಲರಂಬುಗಳುರ್ಕಿಂ ಬೆಸಕೆಯ್ಯುಡೆ ಮಲೆವ ಬೀರರಂ ಪರಿದೆಂಟುಂದೆಸೆ ಗಳೊಳಂ ಕಾಣೆವೆನಿಪ್ಪ ಸರದೆ ಬಲ್ಮೊರೆವುವೀಗಳಾಜಿಡಿ ನೆವದಿಂ (ಕಬ್ಬಿಗಕಾ. ೦೭೩). [ಬಲ್$_2$ (< ಬಲ್ಲಿತು$_1$) + ಮೊರೆ$_1$]

**ಬಲ್ಮೊಲೆ, ಬಲುಮೊಲೆ** (ನಾ). ತುಂಬಿದ ಸ್ತನ ; ತೋರವಾದ ಕುಚ : ನೆಟ್ಟನೆ ಮೊಗ ನೋಡಿ ಮುದ್ದಿಪ ತರಳನ ಪುಟ್ಟ ಕೈಗಳ ತಂದು ತನ್ನ ಬಟ್ಟ ಬಲ್ಮೊಲೆಗಡರ್ಚುವಳು (ಸೋಮಶತ. ೦೦-೩೭); ಅಡರ್ದ ಬಾಸೆಯ ಬಲ್ಮೊಲೆ ಗಳ ಥಳಥಳಿಪ ನುಣ್ಗೊರಲ . . . ತುಂಬಿಗಳ ಪೋಲ್ವ ಸುಳಿಗುರುಳ್ಗಳ ಪೆಣ್ಗಳಿರ್ದರಂದರಸಿನೊಡ್ಡೋಲಗದೊಳು (ಕಾವ್ಯಪು. ೬-೦೨). **ಬಲುಮೊಲೆ** : ಬಲುಮೊಲೆಯು ಸೋಂಕಿಸಲಿ ಶಾಂತರ ತಲೆಕೆಳಕ ಮಾಡುವೆವು ಕಡೆಗಣ್ಣಿನ ಲ ಗಿನಲಿ ಕೊಯ್ದುತ್ತುವೆವು ವಿಜಿತೇಂದ್ರಿಯರ ಮನವ (ಕುಮಾರಾ. ೦೮-೦೯); ಬಲುಮೊಲೆಯ ಬಾಸೆಗಳ . . . ಪುಳಿನ ಜಘನಸ್ಥಳದ ದಾನವಸತಿಯರಿರ್ದರ ದೊಂದು ತಾಣದಲಿ (ಕೊರವಂ. ೩-೨-೬೯); ನಳಿತೋಳ ಸೆಳೆನಡು ಬಲು ಮೊಲೆಯು . . . ಮುತ್ತುದೊಡವಿನ ಚೆಲುವೆ ವಾಗುರಿ ಮಡದಿಯಾ ವಿಂಧ್ಯಕಗೆ (ಸಾಳ್ವಭಾ. ೩-೦೦). [ಬಲ್$_2$ (< ಬಲ್ಲಿತು$_1$) + ಮೊಲೆ$_1$]

**ಬಲ್ಮೊಸರ್** (ನಾ). ಗಟ್ಟಿಯಾದ ಮೊಸರು : ಅಜ್ಜಯುಂತಮುಪ್ಪುವಂ ಮೆಲ್ಲು ತೊಟೆಯೊಳ್ ಪೋಪವಂಗೆ ತೆಪ್ಪವನಿಕ್ಕಿದಂತಿಕ್ಕಿದ ಗಟ್ಟಿಗೊಂಡ ಬಲ್ಮೊಸರಂ ಕೊಂಡು ಪುದುಳಿಸಿ ನಿಂದ ಬಟಿಕ್ಕಂ (ರವಚ್ಛತ್ಸು. ೦-೦೯೬). [ಬಲ್$_2$ (< ಬಲ್ಲಿತು$_1$) + ಮೊಸರ್]

**ಬಲ್ಮೊಳಗು** (ನಾ). ಜೋರಾದ ಗುಡುಗು : ಪೊಳೆವ ಮಿಂಚುಗಳ್ವೆಸೆ ಕೇಜಿಗಳೆಪಲ್ಲ ಬಲ್ಮೊಳಗುಗಳಿವ್ಯೆಸೆ ರಥಚಕ್ರಧ್ವನಿಗಳಲ್ಲ . . . ಕಂಗೊಳಿಪ ಕಾರ್ಮುಗಿಲ್ಗಳೆ ಕೃಷ್ಣನಲ್ಲಂಬವೋಲ್ಮೊಳುಗುಂಟಕೆ ಮ್ಯೆದೋಚೆ ಕಂಡು ಕಲಿಸಿಂಹದಂತಿದಿರಾದನನುಸಾಲ್ವನು (ಕೃಷ್ಣಾಭ್ಯು. ೬-೩೦). [ಬಲ್$_2$ (< ಬಲ್ಲಿತು$_1$) + ಮೊಳಗು$_3$ (< ಮೊಳಗು$_2$) ]

**ಬಲ್ಯುಪಹಾರ** (ನಾ). ಬಲಿಯಾಗಿ ಅರ್ಪಿಸುವ ನೈವೇದ್ಯ : ಈ ಚತು ಸ್ಸೀಮೆಯೊಳಗಾಗೆ ಒಡೆಯ ದೊಡ್ಡವಾಡಿಯ ಕಿಟ್ಟ ಬಾಳೆಚಿತ್ರಿ ಭಟಾರಿಗೆ ಬಲ್ಯುಪಹಾರಕ್ಕೆ ದೇವಭೋಗವಾಗೆ ಕೊಟ್ಟುದು (ಎಕ. IX (8), ಕಂಗಳೂ. ೦೩೦-೩೧; 828). [ ಸಂ. ]

**ಬಲ್ಲ$_1$** 'ಬಲ್$_1$' ಪರಾ.

**ಬಲ್ಲ$_2$** 'ಬಲ್ಲೆಯು' ನೋ.

**ಬಲ್ಲ$_3$** (ನಾ). ಒಂದು ಊರಿನ ಹೆಸರು ; ಈಗಿನ ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕಿನಲ್ಲಿದೆ : ಸ್ವಸ್ತಿಶ್ರೀ ಇರಿವ ನೊಳಂಬ ಪೃಥಿವೀರಾಜ್ಯಂಗೆಯ್ಯುತ್ತಿರೆ ಬಲ್ಲದ ತುಱುಗೊಣ್ಡೋಡೆ ಕೊಟ್ಟೆಯಯ್ಯರಿದುಂ ಬಲಿವಯಂ ತುಱುವನಿಕ್ಕಿ (ಎಕ X, ಮುಳಬಾ. ೩೨-೨ ; ಸು. 950); ಬಲ್ಲದ ಲೆಂಕ ಮನೆಮುದ್ದಮಲ್ಲಯಂ . . . ತುಱುವಂ ಕಟ್ಟಿ ಕಾದು ಸತ್ತು ಸಗ್ಗಿಯಾದಂ (ಮೈಕಿಆ. ೦೯೨೬, ೯೬-೩; 10ನೆಯ ಶತ). [?]

**ಬಲ್ಲಂಕ** (ನಾ). ದೊಡ್ಡ ಯುದ್ಧ : ತಳಿಯಾಗಲೆ ಹೊಡಿ ಬಲ್ಲಂಕವಾದುದು ಬಲುಹಾದುದು ಪಿಳ್ಳೆಗೋಂಟೆ ಎಲುವಿನ ಕಟ್ಟಿನ ಸೊಡರು ತಿಂಥಿಣಿಯಾಗಿ ತಳಿತವು ತೆನೆತೆನೆಗಳಲಿ (ನಾಗಕು. ೦೬-೩). [ಬಲ್$_2$ (<ಬಲ್ಲಿತು$_1$) + ಅಂಕ$_2$]

**ಬಲ್ಲಂಗಿ** (ನಾ). ಒಂದು ಬಗೆಯ ಸಸ್ಯ : (ವೃಕ್ಷಶಿ. ೬೩-೦೨೬೦); (ಸಸ್ಯಕೋ. ೦೦೬). 'ಬಲ್ಲಗಿ' ಪರಾ. [?]

**ಬಲ್ಲಂತಿಕೆ** 'ಬಲ್$_1$' ಪರಾ.

**ಬಲ್ಲಕುಂದ, ಬಲ್ಲಕುಂದೆ** (ನಾ). ಒಂದು ನಾಡಿನ ಹೆಸರು : ಶ್ರೀಮತ್ತ್ರೈ ಲೋಕ್ಯಮಲ್ಲ ನನ್ನಿನೊಳಂಬ ಪಲ್ಲವಪೆರ್ಮಾನಡಿದೇವರು ಕೊಂಗಳಿಯ ಯ್ಯೂಱುಂ ಕದಂಬಳಿಗೆಸಾಸಿರವುಂ ಬಲ್ಲಕುನ್ದ ಮೂನೂಱುಂ . . . ಸುಖಸಂಕಥಾವಿನೋದದಿನಾಳುತ್ತುಮಿರೆ (ಎಕ. XI, ದಾವಣ. ೨೦-೯; 1045). **ಬಲ್ಲಕುಂದೆ** : ಶ್ರೀಮದಿಱಿವ ನೊಳಂಬಾಧಿರಾಜಂ ನೊಳಂಬವಾಡಿ ಮೂವತ್ತಿರ್ಚ್ಛಾಸಿರವುಮುಂ ಕೆಂಗಟಿಯೈನೂಱುಂ ಬಲ್ಲಕುನ್ದೆಮೂನೂಱುಂ . . . ಸುಖದಿನಾಳುತ್ತುಮಿರೆ (ಎಇ. XVI, ೨೯-೦೨; 1010). [ ? + ಕುಂದ$_3$ ]

**ಬಲ್ಲಕುಂದೆ** 'ಬಲ್ಲಕುಂದ' ನೋ.

**ಬಲ್ಲಗ** 'ಬಲಿಗೆ' ನೋ.

**ಬಲ್ಲಗಿ** 'ಬಲಿಗೆ' ನೋ.

**ಬಲ್ಲಡಗು** (ನಾ). ಉತ್ತಮವಾದ ಅಡಗು ; ಶ್ರೇಷ್ಠವಾದ ಮಾಂಸ : ಬಲ್ಲಡಗಿಲ್ಲದೊಡುಣಸಣಮಿಲ್ಲೀ ಪ್ರಭುಗೆನುತಾಮವನ ತೊಡೆಯೊಡಗನೆ ತಳ್ವಿಲ್ಲದವಂಗಿಕ್ಕುವರೇಂ ಪೊಲ್ಲದುದೋ ಮಾಂಸಸೇವನಪ್ರತಿಪಾಪಂ (ಶಾಂತಿಪು. ೬-೯೬). [ಬಲ್$_2$ (<ಬಲ್ಲಿತು$_1$) + ಅಡಗು$_3$]

**ಬಲ್ಲಡವಿ** (ನಾ). ಗಹನವಾದ ಅರಣ್ಯ; ದಟ್ಟಡವಿ: ಬೀಡಿಂಗೆ ಬೀಡುವಿಡಲ್ ನೆಲನುಮೊಲೆಗಲ್ಗಳ್ಗೆ ಬೆಟ್ಟುಗಳುಂ ಗುಡಿಯ ಗೂಂಟಕ್ಕೆ ಬಲ್ಲಡವಿಗಳುಂ . . . ಆ ಪಡೆಗೆ ನೆಚಿಯುವೆನಿಸಿ . . . ಬಂದು (ಪಂಪಭಾ. ೯-೦೦೯ ವ); ತಾಂಗಿಮುದು ಗಾಳಿಯುಂ ದೆಸೆಯುಂ ಗವಸಣಿಸಿದ ದು ಮೇಗೆ ಮೊಗೆದಾ ಗಸಮುಂ ನುಂಗಿದುದೆನೆ ಕಟ್ತಲಿಸಿ ಕಱಂಗಿದ ಬಲ್ಲಡವಿ ಕಣ್ಗೆ ಪಡೆದು ದಗುರ್ವಂ (ಶಾಂತಿಪು. ೬-೦೧೯). [ಬಲ್$_2$ (<ಬಲ್ಲಿತು$_1$) + ಅಡವಿ]

**ಬಲ್ಲಣಿ** (ನಾ). ದೊಡ್ಡ ಸೈನ್ಯ; ಭಾರಿ ದಂಡು : ತುರಗದಟಂಗಳ ನೊಡ್ಡಿದ ಕರಿಘಟೆಯುಂ ಪಿರಿಯ ನೆರ[ವಿ]ಯುಂ ಬಲ್ಲಣಿಯುಂ ಧುರದೆಡೆಯೊ [ಳ]ಱಿದು ಗೆಲ್ದಂ (ಎಇ. X, ೧೩೦-೧೧ ; 915); ಪಸರಿಸಿ ಪೊಕ್ಕು ಕೊಕೆಱಿದು ಕಾದುವ ಬಲ್ಲಣಿಗಳ್ ಪಳಂಚಿ ಪಾಯಿಸುವ ದಟಕ್ಕಗುರ್ವೆಸೆಯೆ ನೂಂಕಿದ ಬಲ್ಲಣಿಗೆತ್ತಮೆಯ್ದೆ . . . ತುಱುಗಾಱಿರಂದಿನಿಸು ಬಲ್ಲಲಾ ದೀದದೊಂದು ಕಾಳಗಂ (ಪಂಪಭಾ. ೯-೯೩); ಕಾಲ್ಗಾಪಿನ ಬಲ್ಲಣಿಯೊಳ್ ಬಲ್ಗಿಯ್ತುದಿನಿಱಿದು ಮಡಿಯೆ ನೆತ್ತರ ತೊಱೆಗಳ್ ಗಲ್ಗಲನೆ ಪರಿಯೆ (ಶಾಂತಿಪು. ೧೩-೬೯). [ಬಲ್$_2$ (<ಬಲ್ಲಿತು$_1$) + ಅಣಿ$_3$]

**ಬಲ್ಲತನ** 'ಬಲ್$_1$' ಪರಾ.

**ಬಲ್ಲಪ** (ನಾ). ಒಬ್ಬಾತನ ಹೆಸರು : ಶ್ರೀಧರಯ್ಯ ಬರೆದ ಪೇಣಿಗಳಂ . . . ಮೋಣಿಗಳಂ ಪೋಗಿ ಪೊಗಟಿಕೆಲ್ಲಂಗೆಚಿಯೊಳ್ ತಾಜ್ಞಡಕೊಲ್ವೊನೆಸ್ದು ಬಲಗವ್ವದೆ ಬಲ್ಲಪನಲ್ಲಿಗೋಗಿ ಕಾಯ್ವೊಱಿಗ್ಗೆಡೆಯಾಗದನ್ತು ನುಡಿದಾಪ್ಪನ ಮೆಚಿಸಿಕೊಣ್ಡಾರ್ (ಎಕ. V, ಬೇಲೂರು. ೦೨೩-೩೦; 952); ಸ್ವಸ್ತಿಶ್ರೀ ಸಕ ನೃಪ ಕಾಲಾತೀತ ಸಂವತ್ಸರಂಗ ೯೦೮ ನೆಯ ವರ್ಷದ ವ್ಯಯಸಂವತ್ಸರ ಪ್ರವರ್ತಿಸೆ ಬಲ್ಲಪಂ ಗಂಗವಾಡಿಗೆ ಬನ್ದ ಕಾಲದೊಳಗೆಯುರಿಂ ರಾಜ್ಯಂಗೆಯೆ (ಎಕ. III, ಮಳವ. ೨೫-೩; 986). [ ? + ಅಪ (<ಅಪ್ಪ$_1$) ]

**ಬಲ್ಲಭ** 'ಬಲ್ಲಹ$_1$' ನೋ.

**ಬಲ್ಲಯ್ಯ** (ನಾ). ಒಬ್ಬಾತನ ಹೆಸರು : ಸುಜ್ಜದ ಬಲ್ಲಯ್ಯಂ ದೇಗುಲಕ್ಕೆ ಕೊಟ್ಟ ಪನ್ನೆರಡು ಮತ್ತರು ಕೆಯ್ಯುವ . . . ಕೊಟ್ಟು ಬಿಡಿಸಿದೋಂ (ಸಾಇಇ. XI-i, ೯೨-೨೦; 971); ಬಲ್ಲಯ್ಯ ಅಮ್ಮಯ್ಯ ರಾ ಯ್ಯ ಕೇಸವ ಸಾಹಣಿಯ ಸಿರಿಯಣ್ಣ (ಎಕ. VII, ಶನ್ನಗಿ. ೩೨-೫೫; ಸು. 1050?). [ ? + ಅಯ್ಯ$_{61}$ ]

**ಬಲ್ಲರಕ್ಕಸಿ** 'ಬಲರಾಕ್ಷಸಿ' ನೋ.

**ಬಲ್ಲರಿಕೆ** 'ಬಲ್$_1$' ಪರಾ.

**ಬಲ್ಲಲಮರ** (ನಾ). ಒಂದು ಬಗೆಯ ಮರ : ಕೆಂಪುಂಣುಪೋಣಿಯೆ

ಪೊಳಗೆ ಬಲ್ಲಲವುರನ ಅಡಿಯುಲು (ಎಕ. VIII. ತೀರ್ಥಹ. ೨೦೮-೨೭. 1415).
[? + ವುರ$_1$]

**ಬಲ್ಲವ$_1$** 'ಬಲ್$^1$' ಪರಾ.

**ಬಲ್ಲವ$_2$** (ನಾ). ೧. ಅಡಿಗೆಯವನು. ೨. ಅಜ್ಞಾತವಾಸದ ಕಾಲದಲ್ಲಿ ಭೀಮನು ವಿರಾಟನಗರದಲ್ಲಿ ಅಡುಗೆಯವನಾಗಿದ್ದಾಗ ಹೊಂದಿದ್ದ ಹೆಸರು : ಭೀಮನು ನಾನು 'ಬಲ್ಲವ' ನೆಂಬ ಹೆಸರಿಟ್ಟುಕೊಂಡು ವಿರಾಟನ ಹತ್ತಿರವಿರೋಣವೆಂದಿದ್ದೇನೆ . . . ಎಂದನು (ವಕಭಾ. ೦೮೪). [ಸಂ.]

**ಬಲ್ಲವತಿ** (ನಾ). ಒಂದು ಊರಿನ ಹೆಸರು (?) : ತೈಲಪನ ಪ × × × ನ ಕಳಿಗದಲ್ ಬಲ್ಲವತಿಯ ಬ್ರಹ್ಮನೊಡನೆ ಕ × × × ಪಂಚಲ ದೇವನ್ ಸಾಲ್ಲಿ ಬ್ರಹ್ಮನಂ ಕಟುಪಿ (ವ್ಯಕಿಂ. ೦೪೫೨; ೨-೪; 973). [?]

**ಬಲ್ಲವರಸ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀಪುರುಷಮಹಾರಾಜರ್ ಪೃಥುವೀರಾಜ್ಯಂಕೆಯೆ ಬಲ್ಲವರಸರ ಬಾಳದುಳ್ ಸೀಯ × × × ರಣಾಧ್ವರ × ಸಳಿನಾಡಾ ಬಾಗೆಯವೆಱಿದು ವಿಟ್ಟಾನ್ (ಎಕ. XVI, ತುಮಕೂ. ೯೩-೬; ಸು. 780) ; ಬಲ್ಲವರಸರ್ ರೋಣದ ಮಹಾಜನಕೆ (ಎಇ. XIII, ೦೮೩-೭; 874). 'ವಲ್ಲವರಸ' ಪರಾ. [<ವಲ್ಲಭ + ಅರಸ$_1$]

**ಬಲ್ಲವಿಕೆ** 'ಬಲ್$^1$' ಪರಾ.

**ಬಲ್ಲವಿಕೆತನ** 'ಬಲ್$^1$' ಪರಾ.

**ಬಲ್ಲಸಿ** (ನಾ). ಬಲವಾದ ಕತ್ತಿ : ಖಾರವುರಂ ಮೂಜೂರ ಮುಕ್ಕೂಡಲಲ್ಲಿ ಪೊಲಸೀಮೆ ಕೂಡಿತ್ತುಂ ಕಡೆಕೊಳಂದ ಮಣ್ಣಗಪ್ಪೊಂಜ್ಜುಲಂ ಕೊಡಲಿಯುಂ ಬಲ್ಲಸಿಯ ಕಮ್ಮಟಂ ಮುಟ್ಟಗೆರಿಯೊಡೆಯೊಂ ಓದಲ ಪೊಲೆಯುಂ ಮಜ್ಜಳಂ (ವ್ಯಕಿಂ. ೦೪೩೪, ೩೮-೨೨; 11ನೆಯ ಶತ).
[ಬಲ್$_2$ (<ಬಲ್ಲಿತ್ತು$_1$) + ಅಸಿ$_8$]

**ಬಲ್ಲಹ$_1$, ಬಲ್ಲಭ, ವಲ್ಲಹ** (ನಾ). ೧. ಒಡೆಯ ; ಯಜಮಾನ : "ಆಣ್ಮಂ, ಎಱೆಯಂ, ಬಲ್ಲಹಂ— ಈ ೩ ಅಧಿಪತಿಗೆ ಪೆಸರ್" (ಶಶಸಾ. ೬೦-೩೨೦) ; ಕೊಡುವ ಬಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಗಂ ಲೆಕ್ಕಮಿಲ್ಲೆನಿಸಿ ರಾಗಂಗಿಡದೆ ಕೊಂಡಾಡಿದಂ ಬಲ್ಲಹನಱಿಯೆ ಗುಣಾರ್ಣವಂ ಕವಿತಾಗುಣಾರ್ಣವನಂ (ಶಂಶಭಾ.೦೪-೩೩) ; ತೂತ್ತಿಂಗೆ ಬಲ್ಲಹನೆಂಗಿರರೆ ಪದವಿಯ ಮಾಡದೆ ಮಾಣ್ಬನೆ (ಶಶಕ. ೯೭೪). ೨. ರಾಜ ; ದೊರೆ : ಬಲ್ಲಹನ ಬೆಸದೊಳೊಱಟರ ಮಲ್ಲಂ ದಲ್ಲನ ತನೂಭವಂ ಕರಹಟದಿಂ ಮಲ್ಲಪಮನು ಬೆನ್ನಟ್ಟಿದ ಬಲ್ಲಾಳ್ತನದಿಂ ನಿಜೇಶನಂ ಮೆಚ್ಚಿಸಿದಂ (ಅಜಪು. ೦-೪೩) ; ಬಲ್ಲಹನುಂ ಸಾಮಂತರುಮೆಲ್ಲಾ ಪ್ರಜೆಯುಂ ಶಿವಂಗೆ ಭಕ್ತರೆ ಜೈನಂ ಪೊಲ್ಲಪ್ಪ ಕತದೆ ಕೈಕೊಳಲೊಲ್ಲ ನಾರ್ಡವರ್ಗಳದಱಿನೆಂಬಮರ್ಹುರ್ಖರ್ (ಸಮಶ. ೦೩-೦೩) ; ಹಲಸಿಗೆ ನಾಡು ನಾಡುಗಳು ಬಲ್ಲಹನುತ್ತ್ರಮವಸ್ತುವಿಸ್ತ್ರತಂ (ಎಇ. XIII, ೩೦೭-೮೩; 1125). ೩. ಪರಾಕ್ರಮಿ ; ಸಾಹಸಿ ; ವೀರ ; ಶೂರ : ಪರಮ ಸುಖಾರ್ದ್ರಲೋಚನದಿನೀಕ್ಷಿಸಿ ನಂದನನಂ . . . ಉದಾರರಸನಿದಾರ ಬಲ್ಲಹ ನಿದಾರ ಕರೀಂದ್ರನಿದಾರ ಸಿಂಹವೆಂದಿರದಮರ್ದಪ್ಪಿದಳ್ (ಜಗಪು. ೩-೪೯). ೪. ಗಂಡ ; ಪತಿ : ಬರುತಾ ಬಲ್ಲಹನೇಱಿದ ಗಾಲಿಯ ಸರದ ಶಕುನಿಮಂಚದ ಮೇಲೆ . . . ಒಪ್ಪಂಬಡೆದಿರ್ಪ ಅರಸಂಚೆಯ ಕಿಱುದುಪ್ಪುಳುವಾಸಂ ಹರಿಸದಿನೇಱಿದಳಂಗೋದ್ಭವನರ್ದರಗಿಳಿ ಹೂಡಿದ ಹೂದೇರೇಱುವ ರತಿಯೆಂಬಂದದೊಳು (ಜಯುಕಾ. ೨-೩೩) ; ಜಲನಿಧಿಯೆಂದು ಸಂದ ಪೊಟಿವೆಣ್ಗಳ ಬಲ್ಲಹನೆಂದುಮೇಟಿಗ್ಗಿಯಂ ತಳೆದಿರೆ (ಶಿಕವಿ. ೦-೩೭). ೫. ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬಲ್ಲಹಂ ಪ್ರಿಥುವಿರಾಜ್ಯಙ್ಗೆಯ್ಯೆ (ಎಇ. VI, ೦೬೬-೦ ; 793) ; ಸ್ವಸ್ತಿಶ್ರೀ ಕನ್ನರ ಬಲ್ಲಹ ದಳಿಗವಟಿಗೆಯನಾನೆ (ಎಕ. X (S), ಮುಳಬಾ. ೦೪೭-೨ ; ಸು. 850) ; ನೆಲದ ನೇಸಱ ಉಳ್ಳನೆಗ ಬಿಟ್ಟ ಇದು ಬಲ್ಲಹನ ದತ್ತಿ (ಸೌಇಇ. IX-I, ೩೪-೭ ; ಸು. ೮ನೆಯ ಶತ) . ಬಲ್ಲಭ : ೫. ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದಂ ಪದಡಕ್ಕೆ ದಳಧ್ವಜ ಸಾಮ್ರಾ × × × ಮಹಾಮಹಾ ಸಾಮನ್ತಾಧಿಪತಿ ಶ್ರೀ ಬಲ್ಲಭ × × × ಹಾ ರಾಜಾಧಿರಾಜ (ಎಕ. II, ೩೩-೨ ; ಸು. 800). ವಲ್ಲಹ : ೫. ಸ್ವಸ್ತಿಶ್ರೀ ಶ್ರೀಪುರುಷ ರಾಜಂಕೆಯೆ ಸಿಯಗೆಲ್ಲರಾ ಮನೆವಂಗತ್ತಿನ್ ಬಲ್ಲಹನಾ ಬೆಸಸಿ ಗಂಗರ ವಲ್ಲಹ × × ಮಾನಿಱಿದು ಸತ್ತ (ಎಕ. XVI, ತುಮಕೂ. ೬೮-೬ ; ಸು. 775) ; ಶ್ರೀ ಶಿವಮಾರ ಸೀಯಗೆಲ್ಲಕ್ಕಾರ್ಗಿವೊಗೆ ಊರೊಳ್ ವಲ್ಲಹನಂ ಬಾಳದುಳ್ ತಮ್ಮುತುರ್ವರಾಂ × × ಎಱಿದು ವಿಟ್ಟೊನ್ (ಎಕ. XVI, ತುಮಕೂ. ೮೯-೨; ಸು. 780). ಬಲ್ಲಹರ ಬಲ್ಲಹ = ಒಡೆಯರಿಗೆ ಒಡೆಯನಾದವನು ; ಮಹಾಪ್ರಭು : ಬಲ್ಲಹರ ಬಲ್ಲಹನವಿರ ತೋತ್ಪಲ್ಲವಮುಖಕಮಳಂ (ಬಸಪು. ೬-೧) ; ಬಲ್ಲಹರ ಬಲ್ಲಹನೆ ನೀನೇ ಬಲ್ಲೆ ಕರುಣಿಪುದೆವಗೆ ಲಕ್ಷ್ಮೀವಲ್ಲಭನ ಲೀಲಾವತಾರಕಥಾಪ್ರಸಂಗವನ್ನು (ಶಿಭಾಗ. ೦೦-೦೪). [<ಪ್ರಾ. ವಲ್ಲಹ. / ಸಂ. ವಲ್ಲಭ]

**ಬಲ್ಲಹ$_2$** (ನಾ). (?) : ಒಂದು ಕಲ್ಲಿನ ಗವಿಯಿಂದ ಬಲ್ಲಹವಾದೀತು ದಿವ್ಮಿಸಾಲೆ ಪಟ್ಟದ ಬಿದುನೂರು ಹೊಟ್ಟಾಗಿ ಹೋದೀತು ದಿವ್ಮಿಸಾಲೆ ಮುಂದೆ ಪಟ್ಟಕ್ಕೆ ವೀರವಸಂತನು ಬರುತಾನೆ ದಿವ್ಮಿಸಾಲೆ (ಕಾಲಸಂ. ೬೦-೨೦). [ ? ]

**ಬಲ್ಲಳತಟ್ಟೆ** 'ಬಲ್ಲಾಳದಟ್ಟೆ' ನೋ.

**ಬಲ್ಲಳದಟ್ಟೆ** (ನಾ.) ಒಂದು ಬಗೆಯ ಬಟ್ಟೆ : ಕಟ್ಟುವಣ್ಣದ ಪಟ್ಟೆ ಬಲ್ಲಳದಟ್ಟೆ [ಪಾಠಾಂ. ವಟ್ಟೆ] ಭೂಸಲೆ ಮೇಘವಣ್ಣದ ಪಟ್ಟೆ . . . ಇವು ಮೊದಲು ಥರಥರದೊಳಂದೆಮ್ಮವರುಗಳು ಪಡೆದೊದವಿಸಿದಯಾ ವಿವಿಧ ಪಟ್ಟಾವಳಿಗಳುಂಟು (ಬಸಪು. ೦೦-೨೭). [ಬಲ್ಲಳ ? + ದಟ್ಟೆ$_1$]

**ಬಲ್ಲಾಣಿಕಾಱ** (ನಾ). ಶ್ರೇಷ್ಠನಾದ ರತ್ನಪರೀಕ್ಷಕ : ವಾಣಿ ವಹಿಯಂ ಬರೆವಳ್ . . . ಕ್ಷೋಣಿ ವಿಶ್ವಾಸಿಯಾಗಿಹಳ್ ವ್ಯೋಮದೊಳಗೆ ಬಲ್ಲಾಣಿಕಾಱ ಧನಂಜಯ ಜಯಕ್ಕೀಶಾನ್ಯ ಹೂಣಿಗನೆನಲ್ಕದುಕ್ರಾಸ್ಮಿಕತನ ಗೃಹಾಂತರದಿ ನಡೆವನ್ನರ್ಡಿವರುನ್ನತ (ಸಿಂಗಿರಾ. ೪-೦೬).
[ಬಲ್$_2$ ( < ಬಲ್ಲಿತ್ತು$_1$) + ಆಣಿಕಾಱ]

**ಬಲ್ಲಾಣೆಪೊಟಲ್** (ನಾ). ಒಂದು ಊರಿನ ಹೆಸರು : ಬಲ್ಲಾಣೆಪೊಟಲ ಪೊಲ ನಡದ ಪುರುಷರ್ ಕೞಿಗೋಡ ರಣವಿಕ್ರಮಗಾಮುಣ್ಡರುಂ . . . ಬಿರದರುಂ ಇ ಪೊಲನಂ ನಡಯುಸಿದೋರ್ (ಎಕ. XVI, ಗುಬ್ಬಿ. ೭೩-೩೪; 733). [ಬಲ್ಲಾಣೆ ? + ಪೊಟಲ್$_2$]

**ಬಲ್ಲಾತ** (ನಾ). ಒಂದು ಬಗೆಯ ಮರ ; ಗೇರುಮರ : ನೀ ಬಲ್ಲಾತ ನಾದೊಡರಣ್ಯದೊಳಗೆ ಕುಜಾತನಾಗಿರದಿಲ್ಲಿಗೇತಕೆ ಬಂದೆ ಪೇಳೆನಲು (ಶಂಕದಾ. ೦೦-೨೦). ☞ ಇಲ್ಲಿ 'ಬಲ್ಲ + ಆತ' ಎಂಬರ್ಥದ ಶ್ಲೇಷೆಯಿದೆ. [<ಸಂ. ಭಲ್ಲಾತ]

**ಬಲ್ಲಾನೆ** (ನಾ). ಬಲಿಷ್ಠವಾದ ಆನೆ; ಭಾರಿ ಆನೆ : ಬಲ್ಲಾನೆಯ ಮೆಟ್ಟನಡಿಯು ತೆಂಗಿನಕಾಯಂತೆ ರಥಂಗಳ್ ಜಜ್ಜರಿಪೋದುವು ಪಡಿದಟ ದೊಳ್ (ರಾಮಾಶ್ವ. ೧೩೦-೦೭). [ಬಲ್$_2$ (<ಬಲ್ಲಿತ್ತು$_1$) + ಆನೆ$_1$]

**ಬಲ್ಲಾಯ** (ನಾ). ಮಿಗಿಲಾದ ಪರಾಕ್ರಮ ; ಹೆಚ್ಚಾದ ಸಾಮರ್ಥ್ಯ : ನಿಡಿಯರ್ ಬಲ್ಲಾಯದ ಬಲ್ಲಡಿಗರ್ ವಂದಿರ್ದರಯ್ವರಾಱದ ಕೆಟಿಗಿಂತೊಡರ್ದರ್ ನಮ್ಮಯ ಭಕ್ಷದೊಳಡು ಪಣ್ಣಿಡು ಪೋಗು ನೀನುಮಾನುಂ ತಿಂಬಂ (ಶಂಶಭಾ. ೩-೦೨). [ಬಲ್$_2$(<ಬಲ್ಲಿತ್ತು$_1$) + ಆಯ್ಯ$_3$]

**ಬಲ್ಲಾಳ್** (ನಾ). ಬಲಿಷ್ಠನಾದವನು ; ಶೂರ ; ಪರಾಕ್ರಮಿ : "ಉಕರ್ಗಳ್ . . . ಬಲ್ಲಾಳ್, ಬಲ್ಪಂಟಂ — ಈ ೫ ಪರಾಕ್ರಮ ಮುಳ್ಳಂ" (ಶಶಸಾ. ೩೮-೨೬೪); ಈ ಗಿರಿದುರ್ಗಮಂ ದಾಂಟಿ ಬಂದ ಬಲ್ಲಾಳ್ದಿವ್ಯನಕ್ಕೆ ದಿವ್ಯಪ್ರಭಾವನಕ್ಕುಮಮೋಘನಕ್ಕುಮದಱ್ನೀತನೊಳ್

ದೀರ್ಘ ಕಾದುವ ಮರುಳ್ತನಂ ಬೇಡ (ಅಬಿಪು. ೧೪-೩೬ ವ): ಚಾವಡಿಯ ಬಾವುಲಿಯ ಬಲ್ಲಾಳ್ಗಳ ಮುಂದೆತ್ತಿದ ಪರಿಪರಿಯ ಪತಾಕಾವಳಿಯ ಸೂಳಬಿಯದು . . . ಭೂಮಿ ಬೆಸಲಾದಂತೆ ಭೂಚಕ್ರಮಂ ತೆಕ್ಕನೆ ತೀವಿದ ಪದಾತಿಬಲದೊಳಂ (ಗಂಳ. ೬-೩೩ ವ): ಊರಾಳ ಬಲ್ಲಾಳ ಪೆರ್ಗಡೆ ಮಾಸಾವಂತ ಮನ್ನೆಯ ರಾಯರ್ ಮುಂತಪ್ಪ ನಾಡೊಡೆಯರ್ . . . ತಾಮುಂ ಪಡೆವೆರಸಿ ಕುದುರೆಯ ಕಾವಲ್ಗೊಂದವಿ ಪೋದರ್ (ರಾಜಶೇಖ. ೫೦-೦೩). [ಬಲ್₂ (<ಬಲ್ಲಿತು₁)+ಆಳ್₁]

**ಬಲ್ಲಾಳ** (ನಾ). ಅರಸನ ಕೈ ಕೆಳಗಿನ ಒಬ್ಬ ಅಧಿಕಾರಿ : ಈಗ ಹಳ್ಳಿ ಹಳ್ಳಿಗಳಲ್ಲಿ ಪಟೇಲರು ಇರುವ ಹಾಗೆ ಆ ಕಾಲದಲ್ಲಿ ಗ್ರಾಮಕ್ಕೊಬ್ಬ ಗುರಿಕಾರನಿದ್ದನು. ಇಂಥ ನಾಲ್ಕಾರು ಮಂದಿ ಗ್ರಾಮ ಗುರಿಕಾರರ ಮೇಲೆ ಮತ್ತೊಬ್ಬ ಅಧಿಕಾರಿ ಇದ್ದನು, ಇವನಿಗೆ ಬಲ್ಲಾಳ ಎಂದು ಹೆಸರು (ಕೋಟಿಚ. ೦); ಪಂಜುರ್ಲಿಭೂತ . . . ಒಂದು ದಿನ ಸಂಜೆಯಾಗುವ ತನಕ ಕಾದು ಕುಳಿತಿತು, ಆ ಊರಿನ ಬಲ್ಲಾಳರ (ಜೈನ ಶ್ರೀಮಂತರು) ಮನೆಗೆ ಸಂಜೆಯ ವೇಳೆ ದನ ಕರುಗಳನ್ನು ಅಟ್ಟಿಕೊಂಡು ಹೋಗುವ ಸಮಯವನ್ನು ಹೊಂಚುಹಾಕಿತು (ಪಾಡ್ದನ. ೬೨). [< ಬಲ್ಲಾಳ್]

**ಬಲ್ಲಾಳಗಿತ್ತಿ** (ನಾ). ಗಟ್ಟಿಗಿತ್ತಿ ; ಗಡುಸುಗಾರ್ತಿ : ಗಂಡನಿಕ್ಕಿದ ಪಡಿಯನೊಲ್ಲದೆ ಬೆಲ್ಲಗೂಳಿಗಾಸೆ ಮಾಡಿ ನೆರೆಮನೆಗೆ ಹೋಗುವ ಬಲ್ಲಾಳಗಿತ್ತಿಗೆ ಪತಿಭಕ್ತಿ ಅಳವಡುವುದೆ ಅಯ್ಯ (ಶಿವಶ. ೨೦-೦೫). [<ಬಲ್ಲಾಳ್ + — ಗಿತ್ತಿ]

**ಬಲ್ಲಾಳದಟ್ಟಿ**, ಬಲ್ಲಳತಟ್ಟಿ, ಬಲ್ಲಾಳದಡ್ಡಿ, ಬಲ್ಲಾಳ್ದಟ್ಟಿ (ನಾ). ೧. ಒಂದು ಬಗೆಯ ತೆರೆ,—ಪರದೆ ; ₽ ಹೊಯ್ಸಳಸಂತತಿಯ ಬಲ್ಲಾಳರಾಜರ ಕಾಲದಲ್ಲಿ ಪ್ರಸಿದ್ಧವಾಗಿದ್ದ ಒಂದು ಬಗೆಯ ತೆರೆಯಿರಬಹುದು: ಅಂತು ಬಂದು ಈರ್ವರುಂ ಬಲ್ಲಾಳದ[ಪಾಠಾಂ. ತ]ಟ್ಟಿಯ ದ್ವಾರವಟ್ಟದೊಳ್ ನಿಂದಿರ್ದು ದೌವಾರಿಕಂಗೆ ದಾರನುಂ ಶಿವನುಂ ಎಂಬ ಬೇಡರ್ ಬಂದಿರ್ದಪರೆಂದರಸಂಗಱಿಪೆನಲ್ (ಪುಣ್ಯಾಸ್ರ. ೬-೬೯ವ); ಲಾಮಂಚ ಬಲ್ಲಾಳದಟ್ಟಿಯಿಂ ವಿರಚಿಸಿದ ಪಾನೀಯಶಾಲೆ (ಶೀಶಪ. ೯-೦೨). **ಬಲ್ಲಳತಟ್ಟಿ** : ಸೌಂದರಗೆ ಕೈಗೊಟ್ಟು ತುಂಬುರ ಮಹಾಮಂತ್ರಿ ಸಂದಣಿಯ ತೊಲಗಿಸುತ ತದ್ಗೃಹದ ಮಾಂದಳಿರ ಪಂದಲಂ ಪೊಕ್ಕು ಲಾಮಂಚದ ಬಲ್ಲಳತಟ್ಟಿ[ಟ್ಟಿ]ಯಾ ಮಱಿಯೊಳುಱಿ ಬೆವರುತ ನಿಂದಿರ್ದ ಪರವೆಯಂ ಕಾಣಿಸಲು (ಸೌಂದಪು. ೬-೯೮). **ಬಲ್ಲಾಳದಡ್ಡಿ** : ಮೇಲುಕಟ್ಟಿನ ದಿವ್ಯಚಿತ್ರದುಕೂಲನಿಚಯದ ಲಾಮಚದ ಬಲ್ಲಾಳದಡ್ಡಿಗಳೆಡೆಗೆಡೆಗೆ ರಂಜಿಸುವ ಪಟ್ಟಿಗಳ ಮೇಲುಹೊದಕೆಯ ಕರ್ಪುರದ ಹೊಂಬಾಳೆಗಳ ಮಲಯಜದ ಕಂಬದ ಸಾಲುಗಳಲೊಪ್ಪಿದುದು ಚಪ್ಪರವೆರಡು ಯೋಜನದ (ಕುಮಾ.ಳ.೦೨-೦೦); ಮಂಟಪದ ಛಾಮೂಲೆಯಗಲದ ಲಾಮಚದ ಬಲ್ಲಾಳದಡ್ಡಿಯ ಬಹಳರತ್ನವಿತಾನದುಬ್ಬರದ ಮೇಲುಕಟ್ಟಿನ ಮಲಯಜ ಸ್ತಂಭಾಳಿಗಳ ಮಣಿಪುತ್ರಿಕೆಯ ಸಮಪಾಳಿಯಲಿ ಸೊಗಸಿದುದು ಚಪ್ಪರವೆರಡುಯೋಜನದ (ಕೊರಠಾ. ೦೩-೦೬). **ಬಲ್ಲಾಳ್ದಟ್ಟಿ** : ಚೆಲ್ವಿಂಗಡರ್ಪಾದ ಪಾದರಿಯೊಳ್ ಕೋದು ಬಳೆದ ಪೊಂಗೇದಗೆಯ ಬಲ್ಲಾಳ್ದಟ್ಟಿಯಿಂದೊಳಗೆ . . . ಅಶೋಕಭೂಜರಾಜಿಯಂ ರಾಜವಿದ್ಯಾಧರನಲಂಕರಿಸುವುದುಂ (ಶಾಕ್ಯಕೌ. ೯-೨೯ ವ). ₽ ತಟ್ಟಿ ಮತ್ತು ದಡ್ಡಿ ಎಂಬ ಶಬ್ದಗಳು ಒಟ್ಟಾಗಿಯೇ ಬರಬೇಕಾಗಿದ್ದರೂ ಬೇರೆ ಬೇರೆಯಾಗಿ ಉಲ್ಲೇಖಿತವಾಗಿವೆ. ಅವುಗಳ ಜ್ಞಾತಿಶಬ್ದಗಳಂ ಒಂದೇ ಆಗಿರುವುದರಿಂದ ಇಲ್ಲಿ ಈ ಶಬ್ದಗಳನ್ನು ಒಟ್ಟಾಗಿಯೇ ಕೊಡಲಾಗಿದೆ. [ಬಲ್ಲಾಳ್+ತಟ್ಟಿ₁]

**ಬಲ್ಲಾಳದಡ್ಡಿ** 'ಬಲ್ಲಾಳದಟ್ಟಿ' ನೋ.

**ಬಲ್ಲಾಳಿಕೆ, ಬಲ್ಲಾಳ್ಕೆ** (ನಾ). ೧. ಶೌರ್ಯ ; ಸಾಮರ್ಥ್ಯ; ಪರಾಕ್ರಮ: ಕೆಡುವಂತಿದ್ದೀತೇ ಕೌರವನ ರಾಜ್ಯ ಮುಡಿವಂತಿದ್ದೀತೆ ರಾವಣನ ಬಲ್ಲಾಳಿಕೆ ಪರಸ್ತ್ರೀ ಲಕ್ಷ್ಮೀದೇವಿಗೊಲಿದು ಒಂದು ನಿಮಿಷದಲ್ಲಿ ಮಡಿದ (ಸಶಶಪ. ೯-೦೩); ಕಲಿತನದಿಂ ಕಡೆದಂತೆ ಗರುವಿಕೆಯಿಂ ಕರುವಿಟ್ಟಂತೆ ಗಂಡಗರ್ವದಿಂ ಕಂಡರಿಸಿದಂತೆ ಬಲ್ಲಾಳಿಕೆಯಿಂ ಬಣ್ಣವಿಟ್ಟಂತೆ ತಿಣ್ಣವಾದೊಡ್ಡುಂ (ಅಶಂಚ. ೨-೫೮). ೨. ಬಲವಂತ; ಒತ್ತಾಯ : ಬಲಾತ್ಕೃತಂ—ಬಲ್ಲಾಳ್ಕೆ (ಳಿಕೆ) ಯಿಂ ಮಾಡಲ್ಪಟ್ಟುದುಂ (ಕೀತಿಶಾ. ೨೬-೦೦); ಕೊಲುವುದಾವಿಷವುಂಡವರನೇ ಕೊಲುವುದಿದು ನಿರನುಜ್ಞೆಯಲಿ . . . ಬಲುಹು ಬಲ್ಲಾಳಿಕೆಯುಲುಂಡಡೆ ಕೊಲುವುದಿಪ್ಪತ್ತೊಂದು ಕುಲವನು (ಶಿಶಾಗ. ೦೦-೯೩-೯೬). **ಬಲ್ಲಾಳ್ಕೆ** : ೨. ಬಲಾತ್ಕಾರಸ್ವಭಾವಃ — ಬಲ್ಲಾಳ್ಕೆಯುಂ ಮಾಳ್ಪ ಸ್ವಭಾವಂ (ಕೀತಿಶಾ. ೬-೩೪). [ಬಲ್ಲಾಳ್ + — ಇಕೆ]

**ಬಲ್ಲಾಳ್ಕೆ** 'ಬಲ್ಲಾಳಿಕೆ' ನೋ.

**ಬಲ್ಲಾಳ್ತನ** (ನಾ). ೧. ಶೌರ್ಯ ; ಪರಾಕ್ರಮ ; ಸಾಮರ್ಥ್ಯ : ಮೇಗಿಲ್ಲದ ಬಲ್ಲಾಳ್ತನದಾಗರಮೆನೆ ನೆಗೞ್ದ ತತ್ಪೃಥಾನಂದನರುದ್ಯೋಗದ ಚಾಗದ ಯಾಗದ ಭೋಗದ ಮೈಮೆಗೆ ಸುಯೋಧನಂ ಬೆಱಗಾದಂ (ಪಂಪಭಾ. ೬-೬೬); ಮಲ್ಲಾಮಲ್ಲಿಯೊಳಾನ್ತರಿಮಲ್ಲರನಾಹವದೊಳೊತ್ತಿ ಗೋಳ್ಕರಿಗೊಳ್ವ ಬಲ್ಲಾಳ್ತನದಿನ್ನಾಹವಮಲ್ಲನ ಭುಜಾದಣ್ಣಮೆನಿಸಿ ಧ(ಂ)ಲ್ಲಂ ನೆಗೞ್ದಂ (ಶಾಶಾ. XI-i, ೩೨-೮; 1007); ಕಾಣಿರೆ ತನ್ನ ಬಲ್ಲಾಳ್ತನಮಂ (ರಾಮಾಶ್ವ. ೩೬-೮). ೨. ಬಲಾತ್ಕಾರ; ಬಲಪ್ರಯೋಗ; ಒತ್ತಾಯ: ಸುಬಾಹುವೆಂಬ ತನ್ನ ಪಿರಿಯ ಮಗಂ ತನ್ನೊಡನೆ ತೊಱೆಯಲ್ ಬಗೆದಿರ್ದೊನಂ ಬಾರಿಸಿ ಬಲ್ಲಾಳ್ತನದಿಂ ರಾಜ್ಯಪಟ್ಟಂಗಟ್ಟಿ (ಪಞ್ಚಾ. ೧೯೯-೨೨); ಬಲ್ಲಾಳ್ತನದೊಳೆನ್ನನನುಭವಿಸಲ್ ಬಂದೊಂ ನೀನುಂ ವರ್ಣಾಶ್ರಮಗುರುವಯ್ ಎನ್ನಂ ಕಾವುದೆಂದೆನಲೊಡಂ (ಶಾಂತಿಪು. ೬-೬೫ವ); ನಿಷ್ಕರುಣೆಯಾಗಿ ಪೋಪೆನೆಂಬ ಬಗೆಯುಳ್ಳೊಡನಿಬರುಮಂ ಕೊಂದು ಪೋಗೆಂದು ಮರದಾನೆಯುಂ ಕಂಬಕ್ಕೆ ತರ್ಪಂತೆ ಲಲ್ಲೆಗೆಯ್ದು ಬಲ್ಲಾಳ್ತನದಿಂ ಪಟ್ಟಮಂ ಕಟ್ಟಿ (ಧರ್ಮಾಮೃ. ೦೦-೦೩೩). [ಬಲ್ಲಾಳ್+ — ತನ]

**ಬಲ್ಲಾಳ್ತನಂಗೆಯ್** (ಕ್ರಿ). ಬಲಾತ್ಕಾರ ಮಾಡು ; ಒತ್ತಾಯಮಾಡು : ಎನಗಾರ್ಬಲ್ಲಿದರೆಂದು ಗಂಡುಗೆಡದೊರ್ವಂ ದೇವ ಠಕ್ಕಿಕ್ಕಿ ಸಾಧನಸಮ್ಮೋಹನದಿಂದಮೆನ್ನ ಮಗಳಂ ಬಲ್ಲಾಳ್ತನಂಗೆಯ್ದು ನಿನ್ನ ನರಾಧೀಶ್ವರನಕ್ಕೆ ಬರ್ಕೆ ಕುಡೆನೆಂದೊಟ್ಟೈಸಿ ಕೈಕೊಂಡು ನಿಂದು (ಸುಕುಮಾ. ೬-೯೨). [ಬಲ್ಲಾಳ್ತನ + ಕೆಯ್₁]

**ಬಲ್ಲಾಳ್ದಟ್ಟಿ** 'ಬಲ್ಲಾಳದಟ್ಟಿ' ನೋ.

**ಬಲ್ಲಿಗೆ** (ನಾ). ಸಂಕೋಲೆ (?) : ತೊಡರೆಡಗಾಲೊಳೊಪ್ಪುವುದು ಬಲ್ಲಿಗೆಯುಂ ಮದಧನ್ವಿಗಿಕ್ಕೆ ಬಲ್ಪೊಡರಿಸುವೊಂದು ಭಂಗಿಯೊಳೆ ಪೊದೊಡರೊಳ್ ತೊಡರ್ದಿರ್ದ ಪಾಪಿಗಳ್ ತೊಡರ ತೊಡರ್ಪಿನೊಳ್ ತೊಡರಲ್ಕಾದ ಭಾಷೆಯಮಾತ್ಮಕಲಂಜಿ ಕಾಲ್ವಿಡಿದವೊಲಿರ್ಪ್ಪುದೇಂ ಕುವರಲಕ್ಷ್ಮಚಮೂಪತಿ ಗಿಂತಿದೊಪ್ಪದೇ (ಎಕ. V, ಬೇಲೂರು. ೦೦೨-೬೦ ; ಸು. 1220 ?); ಮೇಲೆ ಸಾಱುವ ಡೌಡೆಯ ದನಿಗಂ ಕೆಳಗೆಸೆಯೆ ತೆಮಳ್ದು ಕುಪ್ಪಳಿಸುವ ಮದುಗೆಯ ತೊಡರ ಬಲ್ಲಿಗೆ ಬಲ್ಲುಲಿಗಂ . . . ರಾಜಾಂಗಣದೊಳ್ ಪಣ್ಣಿ ಬಂದು, ನಿಂದ ಯಾಮಸಾಮಂತಸ್ತೋಮಮನಿತುಂ ಬಾಯ್ವಿಟ್ಟು ಬೆದಱಿ ಬೆಸಗೆಟ್ಟೋಡೆಯುಂ (ಅಜಿತಪು. ೨-೨೯ ವ).

[ ?. /ತಮಿ. ವಲ್ಲಿಕ್ಕೈ = ೧. ಒಂದು ಬಗೆಯ ಕಿವಿಯ ಆಭರಣ. ೨. ಕುದುರೆಯನ್ನು ಕಟ್ಟುವ ಹಗ್ಗ]

**ಬಲ್ಲಿತು₁**, ಬಲ್ಲಿತ್ತು₁ (ನಾ). ೧. ಗಟ್ಟಿಮುಟ್ಟಾದುದು ; ಬಲಿಷ್ಠವಾದುದು ; ಪ್ರಬಲವಾದುದು : ಕಲಹಂಸೆಗಳ್ ಬಲ್ಲಿತಪ್ಪುದೊಂದು

ದಕ್ಕಂ ತಂದದಟರಿಡು ಕಡೆಯುಂ ತಾವಡಕ್ಕೆ ಕರ್ಚಿ . . . ಬರುತ್ತು (ಶಂಕಕಂ. ೦೫೭–೦೫) ; ತಲೆ ಬಲ್ಲಿತೆಂದು ಕಲ್ಲನೆ ಹಾಯು ಬೇಡ ಹೋಗೆಲೊ ವಾಹಿ ಮನ್ಮಥ ಮನೆಗೆ(ಮೋಹತ. ೬–೨೩); ತಲೆ ಬಲ್ಲಿತೆಂದು ಕಲ್ಲಂ ಹಾಯ್ವೊಲಾ ಕಲಿಯಾಗಿ ಸಮರದೊಳ್ಕಾದಿದೊಡೆ ನಿನಗಿಲ್ಲಿ ಗೆಲವಹುದೆ (ಕೈಪಿಭಾ. ೪–೦೯) ; ೨.ದೃಢವಾದುದು ; ಸ್ಥಿರವಾದುದು : ಅದೃಢಂ ಮಾರ್ತಂಡನಿಂ ನಿಪ್ಪೊಸತು ಹಿಮಗುಮಿಂ . . . ಬೆಂದುದಂಗಾರನಿಂ ಚಿತ್ರದ ಮಾಟಂ ಸೌಮ್ಯನಿಂ ಬಲ್ಲಿತು ಸುರಗುರುವಿಂ ಸುಂದರಂ ಶುಕ್ರನಿಂ ತಟ್ಟಿದುದಕ್ಕಂ ಮಂದನಿಂ (ಜಾತಕ. ೪–೦೨). ೩. ಶ್ರೇಷ್ಠವಾದಂದು ; ಉತ್ತಮ ವಾದುದು ; ಒಳ್ಳೆಯಂದು : ಪಿರಿಯರ ನುಡಿಯಂ ಬಲ್ಲಿತೆನೆ ನಂಬಿ ಬೇಂಟೆಯನೊಲ್ಲದೆ ಬಿಟ್ಟರ್ದ ಬಿಯದರೊಪ್ಪಿದರ್ (ಕಬ್ಬಿಗ. ೨೨೩). ೪. ಸಾಂದ್ರವಾದುದಂ ; ದಟ್ಟವಾದುದಂ ; ನಿಬಿಡವಾದುದು : ಬಲ್ಲಿತಪ್ಪಡವಿಯೊಳು ಸೀಳ್ನಾಯಿ ಕೊಲ್ಲಲಾರ್ಯನಸ್ಮರಣೆಯಿಂದಿರೆ ಮಲ್ಲಿಕಾರ್ಜುನ ಕಾಯ್ದೊಯ್ದನು ಮಹಾಕೂಟಪುರವರಕೆ (ಮಂದೇಶು. ೬–೮). ೫. ಕಠಿಣವಾದಂದಂ ; ಕಷ್ಟಕರವಾದುದು : ಕೆರಳಿ ಕರಿ ಕೈಕೊಂಡುದರೆಯಟ್ಟಿತು ಮಹಾರಥರ ಚೆಲ್ಲಿತಿದು ದೆಸೆದೆಸೆಗೆ ಚೌಪಟಮಲ್ಲಗಿಲ್ಲರ ಪಾಡೆ ನಮ್ಮದು ಬಲ್ಲಿತಹುದುಸುರಿಲ್ಲದೊಡಲಿನ ಚೆಲುವು ಫಲವೇನು (ಕುಮಾರವ್ಯಾ. ೩–೨೩). ಬಲ್ಲಿತ್ತು₁ : ೧. ಪಡೆದಂ ಬ್ರಹ್ಮೇಂದ್ರುತೆಯಂ ಗಡಮಾತಂ ಬಗೆದು ನೋಡೆ ನಾರಕನೆತ್ತಲ್ ಗಡ ದೇವನೆತ್ತ ಕರ್ಮವೆ ಕಡು ಬಲ್ಲಿತ್ತದಟ ತಿರಿವದೇಂ ಬಹು ವಿಧವೋ (ಅಂಪು. ೩–೯೭); ಹಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯೇ ಎಂದೆಂದೂ ಅಳಿಯನೆಂದು ಗುಡಿಗಟ್ಟದೆಯಲ್ಲಾ (ಬಸವ. ೦೬೩); ಜಳಸಂಭೂತದೊಳೆಂತು ಹಸ್ತಿಮಕರಂ ಬಲ್ಲಿತ್ತಿಳಾಭಾಗದೊಳು ಸ್ಥಳ ಸಂಭೂತದೊಳಂತೆ ಕೋಟಿಭಟಸತ್ತ್ವೋದುಭಾಸಿ ಭೇರುಂಡನಿಂದಿಳೆ ಭೇರುಂಡನಿನಗ್ಗಿಕುಂ (ಕ್ಷ. I. ೨೫–೯೩; 1186). (ಗು). ೬. ಬಲಿಷ್ಠ ವಾದ ; ಶಕ್ತಿಶಾಲಿಯಾದ ; ಬಲವುಳ್ಳ : ತುಕಾರ ದುಃಕಾರಂಗಳೆ ಕಡೆಯಾಗಿ ಪಲವು ಗುಣವಚನಂಗಳೊಳವು ಅವಟೊಳ್ ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ದೊಡ್ಡಿತ್ತು ; ಬಲ್ಲಿತ್ತು — ಎಂಬಂತೆ ನೋಡಿಕೊಳ್ವುದು (ಶಮದ. ೬೬ ಪ್ರಯೋ) ; ಒಳ್ಳಿತ್ತ ಕೆಯ್ಯೊರಾಪ್ಪೊರ್ಕಿಲ್ಲದುವುದಟನ್ನ ಬಲ್ಲಿತ್ತು ಕಲಿಗೆ [ವ] ವಿಪರೀತಾ ಪುರಾಕೃತ ಮಿಲ್ಲಿ ಸನ್ನಿಕ್ಕುಮದು ಬನ್ನ (ಇಆ. X. ೬೦–೬ ; ಸು. 7ನೆಯ ಶ೫).

ಬಲ್ಲಿತಾಗಿ = ಚೆನ್ನಾಗಿ; ಉತ್ತಮವಾಗಿ ; ಶ್ರೇಷ್ಠವಾಗಿ : ವಿಪುಲ ವಿದ್ಯಮಂ ಬಲ್ಲಿತಾಗಿಯೆ ಶಿಕ್ಷಿಪಾತ ಬಂದುಕನೆನಲ್ (ಕಬ್ಬಿಸುಂ. ೪೭) . ಬಲ್ಲಿತ್ತಟ ಕೋಡು ಕೂರಿತು, ಬಲ್ಲಿತ್ತಟ ಕೋಡುಂ ಕೂರಿತು = (ಎತ್ತು) ಬಲಿಷ್ಠವಾದಂದರ ಕೊಂಬು ಚೂಪಾಗಿರುವುದಂ,—ಮೊನಚಾಗಿರಂ ವುದಂ; ಬಲಿಷ್ಠರಾದವರಂ ಹೇಗೆ ನಡೆದುಕೊಂಡರೂ ಅದನ್ನು ಪ್ರಶ್ನಿಸುವಂತಿಲ್ಲ ಎಂಬ ಭಾವ : ಗುರು ದೇವೇಂದ್ರ ಮುನೀಂದ್ರ ನಿಂದ್ರನಮಿತಂ ದೇವಂ ಕಥಾನಾಯಕಂ ಪುರುದೇವಂ ಕಥೆಯುಂ ತದಾದಿ ಪುರುಷಪ್ರಸ್ತುತ್ಯಜನ್ಮಾಳಿ ಬಂಧುರಮೆಂದಂದೆ ಮದೀಯ ವಾಗ್ವಿಭವವಿನ್ಯಾಸಂ ಬಲಂಬೆತ್ತುದಿನ್ನಿರು ಬಲ್ಲಿತ್ತಟ ಕೋಡು ಕೂರಿತದನಂತಿಂತುಂತೆನಲ್ಪ ರ್ಕುಮೋ (ಆದಿಪು. ೦–೨೫) ; ತಟಸಂದು ಚಕ್ರವರ್ತಿಗೆ ನೆಟದಾಂತಂ ವಾಸುದೇವನುಜದಿರು ಬಲ್ಲಿತ್ತಟ ಕೋಡು ಕೂರಿತಾರಿದಟಿಯದರಾರಳ ವನಂತವೀರ್ಘನ ಶೌರ್ಯಂ (ಶಾಂತಿಪು. ೪–೯೫) ; ಉಬದಿ ಮರನಾಂತು ತಟಸಂದಿಟಮರುವಿಲ್ಲಿವರು ಪೊಯ್ವ ವಸ್ತುವುಮದು ತಾಂ ಪೆಬರದಣ ಮಲ್ಲ ಬಲಿತ್ತಟ ಕೋಡುಂ ಕೂರಿತದಟನದನಾರ್ ಓಡಿವರ್ (ಶೀಲಿಪು. ೦೦–೦೦೫ ). ಬಲ್ಲಿತ್ತು ಮಾಡು = ೧. ಬಲಪಡಿಸು; ಬಲಿಷ್ಠಗೊಳಿಸು; ಶಕ್ತಿಶಾಲಿಯಾಗಿ ಮಾಡು : ಬಡಕಪ್ಪಡಿ ತನ್ನಿಪ್ಪ ಗುಡಿಸಂ ಬಲ್ಲಿತ್ತು ಮಾಟ್ಟನೆಲ್ಲಂದದಿನೆಂದೊಡೆ ದೇವನಗಲದಿಪ್ಪಾ ಪಶುವಂ ಕೆಡೆಯಲ್ಕಣ ವಿನಾಯದಂತು ರಕ್ಷಿಸವೇಡಾ (ಸಮುಶ. ೯–೬೨). ೨. ದೃಢಗೊಳಿಸಂ; ಸ್ಥಿರಪಡಿಸಿಕೊಳ್ಳು; ಗಟ್ಟಿಮಾಡಿಕೊಳ್ಳು: ಬಳಸಂಪನ್ನರನಾಸೆಗೆಯ್ಗೆ ಚತುರಂಗಾನೀಕಮಂ ಕೂಡಿ ಕೊಳ್ಗುಳಮಂ ಗಂಡುಮನಪ್ಪ ಕೆಯ್ಗೆ ಮನಮಂ ಬಲ್ಲಿತ್ತು ಮಾಟ್ಕಿಂದುಮಾನೆಳೆಯಂ ಕಾದಿದೊಡಲ್ಲದೀಯನಟಿದರ್ಕ(ಶಂಪಲಾ. ೯–೯೦). ಬಲ್ಲಿದ = ೧. ಬಲಿಷ್ಠನಾದವನಂ; ಪರಾಕ್ರಮಿ : "ಬಲವಾನ್" ಅಂಸಳಃ —ಈ ೨ ಬಲ್ಲಿದಂ" (ಹಲಾಯು. ೩೬–೨೨೩) ; ನಿಮ್ಮಂ ಕರಂ ನಚ್ಚಿ ಸಂಗರಮಂ ಬಲ್ಲಿದರೊಳ್ ಪೊಣರ್ಚಿದಂ (ಶಂಕಲಾ. ೦೦–೯); ಬಲ್ಲಿದರೊಡನೆ ಬವರವಾದರೆ ಗೆಲಲುಂಟು ಸೋಲಲುಂಟು (ಬಸವ. ೦೫೦); ಹೇಳಲಟಿಯೆನು ನಿನ್ನವನ ಕಟ್ಟಾಳುತನವನು ದೇವ ದೈತ್ಯರ ಕಾಳೆಗದಲಿವನಂತೆ ಬಲ್ಲಿದರಿಲ್ಲ ಬಲ್ಲಿನಲಿ (ಕುಮಾರ. ೦೩–೦೯೦). ೨. ಧನವುಳ್ಳವನು; ಶ್ರೀಮಂತ; ಧನಿಕ : ಸ್ವಾಮಿ ಭೃತ್ಯಸಂಬಂಧದ ದೆಸೆಯುಂ ಬಡವರ್ ಬಲ್ಲಿದರೆಂಬ ದೇಶಭಾಷೆಯುಂ . . . ಅಪಮೃತ್ಯುವಿನ ಸತ್ವಭಾಧೆಯ ಗಂಧಾಗಂಧಮು ಮಿಲ್ಲ (ಶಾಂತಿಪು. ೬–೦೦೨ ವ); ಬಲ್ಲಿದನ ಹಗೆಹ ತೆಗೆವನ್ನಬರ ಬಡವನ ಹರಣ ಹೋದ ತೆಱನಂತಾಯಿತ್ತು (ಮಹಾದೇ. ಬಿ. ೩೩–೬೦) ; ದೈವದೊಲ್ಮೆ ಯಿರಲಾ ಕಾಲಾನುಕಾಲಕ್ಕೆ ತಾಂ ಬಡವಂ ಬಲ್ಲಿದನಾಗನೇ (ಸೋಮೇಶ. ೩೫) ೩. ತಿಳಿದವನು; ಜ್ಞಾನಿ : ವರಾಂಗರಸನಾ ವೃಷಣೇಕ್ಷಣ ಶುಕ್ಲಸತ್ತ್ವ ಮಾಧ್ಯಂತರಮಾವ ಲಕ್ಷಣಮುಮಿಂತಿವೆ ಬಲ್ಲಿದನೋದಿನಿಷ್ಟದೊಳ್ (ಶೋಕೋಶ. ೦೦–೬೩); ಬಲ್ಲಿದರೆಂಬ ಅಟುಹಿರಿಯರೆಲ್ಲ ತಾಮಸಕ್ಕೊಳಗಾಗಿ ಮಾನಕೇತನನ ಬಲೆಗೆ ಸಿಲುಕಿ ಮಾಯೆಯ ಬಾಯ ತುತ್ತಾದರಲ್ಲಾ (ಅಪಕಂ. ೦೬೩–೭೯೬); ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ ಬಲ್ಲಿದರು ಇದ್ದು ಬಲವಿಲ್ಲ (ಸರ್ವಜ್ಞ. ೨೯). ೪. ಶ್ರೇಷ್ಠನಾದವನು; ಉತ್ತಮನಾದ ವನು; ಮಹಾತ್ಮ : "ಅಗ್ಗಳೆಯನೆನಲ್ ಬಲ್ಲಿದಂ" (ಶಾಕಾ. ೦೭) ; ಪೊಲ್ಲದುಗೆಯ್ದನೆಂದು ನಹುಷಾಜಗರಂ ಪಿರಿದಪ್ಪ ದೈನ್ಯದಿಂ ಬಲ್ಲಿದನಪ್ಪಗಸ್ತ್ಯ ಮುನಿಯೊಳ್ ದಯೆಯಂ ಪಡೆಯಲ್ಕೆ ಬಂದವೋಲ್ . . . ಎಲ್ಲರ ಚಿತ್ತದೊಳ್ ಪಿರಿದುಮೊಂದಭಿಶಂಕೆಯನುಂಟುಮಾಡುಗುಂ (ಕಾದಂಪು. ೦೦೩) ; ನೀನು ಜಗಕ್ಕೆ ಬಲ್ಲಿದನು ಆನು ನಿನಗೆ ಬಲ್ಲಿದನು ಕಂಡಯ್ಯಾ (ಬಸವ. ೯೦೩); ಅಲ್ಲಿಗಧಿಪತಿ ಭೀಮನೃಪ ಗುಣದಲ್ಲಿ ನಯದಲಿ ವೀರ್ಯ ವಿತರಣದಲ್ಲಿ ಚಾತುರ್ಯದಲಿ ಸೌಭಾಗ್ಯದಲಿ ಧೈರ್ಯದಲಿ ಬಲ್ಲಿದನು ತಾನಾಗಿ (ನಳಚ. ೦–೨೮). (ಗು). ೫. ಬಲಿಷ್ಠವಾದ; ಶಕ್ತಿಶಾಲಿಯಾದ : ಭಲ್ಲರ ರಭಸಕೆ ನಿಲ್ಲದೆ ಬಲ್ಲಿದ ಕಲಿಪಂದಿಯೊಂದು ಕಟ್ಟುಬಟ್ಟೆಯಿಂ ಮೆಲ್ಲನೆ ಪೊಱಮಡುತ್ತಿರೆ (ಹಮ್ಮಾರ. ೪–೪೪). ೬. ಉತ್ತಮವಾದ; ಶ್ರೇಷ್ಠವಾದ; ಒಳ್ಳೆಯಂದಾದ : ಬಲ್ಲಿದಾಹಾರ ಭಯ ಶಾಸ್ತ್ರನ್ನಲ್ಲಿ ಭೇಷಜವೆಂಬವಿವು ಎಲ್ಲಕಾದಿಯ ದಾನಮಾರ್ಗ (ಜಿಜ್ಞಾಪು. ೬೭–೩೩). ೭. ಉತ್ತಮನಾದ; ಶ್ರೇಷ್ಠನಾದ : ನಲಿದು ಮುಂದೆ ಬಂದತಿರಥನಪ್ಪ ನಂಬಿಯಣ್ಣನಂ ನಡುವೆ ಕುಳ್ಳಿರಿಸಿ ನೀನರಸು ನಾವೆಲ್ಲಂ ಪರಿವಾರವೆಂದಲ್ಲಿಯ ಬಲ್ಲಿದ ಬೆವಹಾರಿಗಳ ಮಕ್ಕಳೆಲ್ಲಂ ನೆರೆದು . . . ಪುರದ ತಿರುವೀಥಿಯೊಳು ನಡೆತಪ್ಪಾಗಳು (ಶಂಬರ. ೨–೦೯). ಬಲ್ಲಿದೆ = ತಿಳಿದವಳಂ; ಪಂಡಿತೆ; ಜ್ಞಾನಿ : ಘಟಿಕಾಶತ (ಒಂದು ಗಂಟೆಗೆ ನೂರು) ಶ್ಲೋಕಗಳನ್ನು ರಚಿಸುವಲ್ಲಿಯೂ ಅವರು ಬಲ್ಲಿದೆಯರಾಗಿದ್ದರು (ಕಶಾಳಕ.೪–೦).

[ < ಬಲ್$_1$ ]

ಬಲ್ಲಿತು₂, ಬಲ್ಲಿತ್ತು₂ (ಅ). ೧. ಬಲವಾಗಿ; ಹೆಚ್ಚಾಗಿ; ಅತಿಶಯ ವಾಗಿ : ಒಲ್ಲೆವೆಂದರು ಬೇಡವೆಂದರವರು ನೀನು ಬಲ್ಲಿತು ಮಿಗೆ ೞರೆವಾಗ ವಲ್ಲಭಗದಿರುತ್ತರವ ಕೊಡಲಾಗದೆಂದೆಲ್ಲರೆಱಗಿದರು ನೃಪತಿ (ಜಕಚ. ೯–೨೩). ಬಲ್ಲಿತ್ತು₂ : ೨. ಬಿಗಿಯಾಗಿ; ಭದ್ರವಾಗಿ : ಆ ಮಹಾತ್ಮರ್ಂ . . . ವಿಚಿತ್ರವಸ್ತ್ರಂಗಳಂ ತೆಗೆದುಕೊಂಡು . . . ಕಂಬದೊಳೆ ಬಲ್ಲಿತ್ತುಗಟ್ಟಿ

ಬಱಿಯುಮುವನಾ ಮಾಡವ ಪೆಱಗಸ್ಸೆಱಿಯಲಿಕ್ಕಿ (ಸುಕುಮಾ. ೧೧-೯೩ ವ).
[ < ಬಲ್ಲಿತು$_1$ ]

**ಬಲ್ಲಿತುದೋಱು** (ಕ್ರಿ). ಶೌರ್ಯವನ್ನು ತೋರು : ಸಾಮರ್ಥ್ಯವನ್ನು ಪ್ರದರ್ಶಿಸು : ಎಲ್ಲರು ತಪಸಿಗೆಯ್ದಿದರು ನೀನೊಬ್ಬ ನಮ್ಮೆಲ್ಲರರ್ತಿಯ ಸಲಿಸಣ್ಣಾ ಬಲ್ಲಿತುದೋಱಿದಿರಣ್ಣನಿಗೆಱಗೆಂದು ಗಲ್ಲವ ಪಿಡಿದಲುಗಿದಳು (ಭರತೇ. ೫೦-೧೭). [ಬಲ್ಲಿತು$_1$ + ತೋಱು ]

**ಬಲ್ಲಿತ್ತು$_1$** 'ಬಲ್ಲಿತು$_1$' ನೋ.

**ಬಲ್ಲಿತ್ತು$_2$** 'ಬಲ್ಲಿತು$_2$' ನೋ.

**ಬಲ್ಲಿದ** 'ಬಲ್ಲಿತು$_1$' ಪರಾ.

**ಬಲ್ಲಿದೆ** 'ಬಲ್ಲಿತು$_1$' ಪರಾ.

**ಬಲ್ಲುಗ** (ನಾ). ೧. ಒಬ್ಬಾತನ ಹೆಸರು : ಸಾಹಸಮೇನನೂನಮೋ ಬಸದಿ ಯೋಜರ್ ಹೆಲಯಾಮ್ಮೋಜರಾ ಮಗಂ ಬಲ್ಲುಗಂ ಮಾಡಿದಂ (ಎಕ. V, ಬೇಲೂರು. ೦೨೩-೯೯; 952); ಕಾಮಲೆನಾರಿ ಸಕಳಕಳಾವಹಿತೆಗೆ ನೆಗಳ್ದ × ರಗಂ ಬಲ್ಲುಗನೆಂಬೀ × × × ಧೈರ್ಯ್ಯಕರಖಿಳದಿಶಾಮಂಚಳದತ್ತ ಕೀರ್ತ್ತಿಗಳ್ ನುತರಾದರ್ (ಎಕ. VII, ಶಿವಮೊ. ೫೩-೬೭; 1167). ೨. ಒಂದು ಸ್ಥಳದ ಹೆಸರು (?) : ಸಾನ್ತಳಿಗೆಯ ಬೀರ ಸಾನ್ತರನ ಮೇಲೆ ನಡೆವಯ್ವತ್ತು ನಾಡೊಳಗಣ ಬಲ್ಲುಗದೊಳ್ಬಿಟ್ಟಿದ್ದನ್ದು ಗೆದೆಯ ಪನ್ನೆರಡಱ ನಾಟ್ಬಾಗುಣ್ಡ ಸೀಬಳ್ಳಿಯಱಿಹಯ್ಯನ ಜೇಷ್ಠಪುತ್ರ ನಂಗಮ್ಮನ ಮಗ ಜೋಗಯ್ಯಂಗೆ ದಯುಗೆಯ್ದು ಕೊಟ್ಟ ಸ್ಥಿತಿ ಯಾವುದೆನ್ದಡೆ (ಎಕ. VIII, ಸೊರಬ. ೪೭೭-೦೭; 991). [<ಬಲ್$^1_1$]

**ಬಲ್ಲುಜ್ಜುಗ** (ನಾ). "ಮಹೋದ್ಯೋಗ, ದೊಡ್ಡ ಕಾರ್ಯ"(ಕೃಶಬ್ದ). 'ಬಲ್ಲುಜ್ಜುಗಿ' ಪರಾ. [ಬಲ್$^1_2$(<ಬಲ್ಲಿತು$_1$)+ಉಜ್ಜುಗ]

**ಬಲ್ಲುಜ್ಜುಗಿ** (ನಾ). ದೊಡ್ಡ ಕಾರ್ಯವನ್ನು ಮಾಡುವವನು ; ದೊಡ್ಡ ಕೆಲಸವನ್ನು ಮಾಡುವವನು : ಕಡುಚಾಗಿ, ಕಡುಗೆಲಸಿ, ಪುಸಿಬಾದಿ, ಬಲ್ಲುಜ್ಜುಗಿ (ಶಬ್ದಾ.ಸಾ. ೩೯೯ ಪ್ರಯೋ). [ಬಲ್ಲುಜ್ಜುಗ+ —ಇ$_3$]

**ಬಲ್ಲುಲಿ** (ನಾ). ೧. ಬಲವಾದ ಧ್ವನಿ; ಜೋರಾದ ಶಬ್ದ : ಕೋಗಿಲೆಗಳ್ ಪೊಸಮಾಮರಂಗಳೊಳ್ ಬಲ್ಲುಲಿಯಿಂದೆ ಬಗ್ಗಿಸುತುಮಿಂತಿದೆ ಬಂದುದು ಸುಗ್ಗಿ(ಕಬ್ಬಿಗ. ೬೩); ಬಱಸಿಡಿಲ ಬಲ್ಲುಲಿಯವೊಲು ಬೊಬ್ಬಿಱಿದು ಬಿಡುಬಿಡು . . . ಆಯುಧವಿಲ್ಲದೆನ್ನೊಡನೊಱಗಿದನ ಒದ್ದೊಯ್ವುದಧಟೇ ಯೆಂದು ತಾಗಿದಳು (ಸಾಳ್ವಭಾ. ೦೬-೩೫); ಘುಘೂಘೂ ಎಂದು ಪೂರಯಿಪ ಶಂಖದ ಧಟಂ ಧಟಂ ಧಟಮೆಂದು ಮೊಱಗುವ ಭೇರಿಯ ತುತ್ತುತ್ತುರೆಂದು ಸೂಳಯಿಪ ಪೆಗ್ಗಾಳೆಯ ಬಲ್ಲುಲಿಯೊಳ್ ಮಾಪೂಜೆ ಸಮಸಂದುದು (ರಾಮಾಶ್ವ. ೬೬-೬). ೨. ಪ್ರಸಿದ್ಧವಾದ ಮಾತು ; ಹೊಗಳಿಕೆಯ ಮಾತು : ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾಱನಾ ನೆಲನಂ ಮತ್ತಿನ ಮಾನಿಸರ್ ಪೊಗಟಲೇನಂ ಬಲ್ಲರೆಂಬೊಂದು ಬಲ್ಲುಲಿಯಂ ನೆಟ್ಟನೆ ತಾಳ್ದು ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು (ಕಬ್ಬಿಗ. ೦೯).
[ಬಲ್$^1_2$(<ಬಲ್ಲಿತು$_1$)+ಉಲಿ$_2$]

**ಬಲ್ಲೆ$_1$** (ನಾ). ದಟ್ಟವಾದ ಮೆಳೆ,—ಪೊದೆ : ಬಿಗಿದು ಪುಗಲ್ಕರಿದೆಲ್ಲಿಯು ಮೊಗೆದ ಮರಂ ಪೊದಱು ಬಳ್ಳಿ ಗಿಡುಮೆಂಬಿವಱಿಂ ಮಿಗಿಲೆನಿಪ ಬಲ್ಲೆ ನಗ ಸಾನುಗಳೊಳದಂತಾವ ಮೆಯ್ಯೊಳಂ ಪುದಿದಿರ್ದುಂ (ಕಾವ್ಯಾವ. ೯೭); ಆ ಮರಗಳನ್ನು ಸುತ್ತಿ, ತಾವೂ ಗಗನಕ್ಕೇರಿ, ಎಲೆಗಳನ್ನು ಬಿಡಿಸಲು ಯತ್ನಿಸು ತ್ತಿರುವ ಬೀಳಲುಗಳಿಂದ, ಕಾಡು ಒಂದು ದೊಡ್ಡ ಬಲ್ಲೆಯಾಗಿ ಕಾಣು ವುದು (ಚಾಂಚ್ರ. I, ೬೦); ಒಂದೆಡೆ ಎದುರಿಗೆ ಬಲೆಯಂತಹ ಸೀಗೆಯ ಬಲ್ಲೆ, ಇನ್ನೊಂದೆಡೆ ಕೊಡೆ ಆಕಾರದ ಬಳ್ಳಿಗಳು (ಚಾಳಗಿ. ೬೩).
**[ದೇ.; ತಮಿ. ವಲ್ಲೈ; ತುಳು. ಬಲ್ಲೆ]**

**ಬಲ್ಲೆ$_3$** 'ಬಲ್ಲೆಯ' ನೋ.

**ಬಲ್ಲೆ$_3$** (ಅ). ಬಳಿಕ; ಮತ್ತೆ; ಅನಂತರ : ಮತ್ತೆಂಬರ್ಥದೊಳುಸಿರ್ವರ್ ಬಿತ್ತಗರಾ ಬಲ್ಲೆ ಬಱಿಗಳಂ (ಶಮದ. ೩೦೯). [?]

**ಬಲ್ಲೆತ್ತು**(ನಾ). ಬಲಿಷ್ಠವಾದ ಎತ್ತು; ಬಲವಾದ ವೃಷಭ: "ಮಹೋಕ್ಷಃ, ಉಕ್ಷತರಃ—ಈ ೨ ಬಲ್ಲೆತ್ತು" (ಹಲಾಯು. ೪೪-೧೦); ಎಲ್ಲರ ಸುಂಕ ಯೆತ್ತು ತೊತ್ತು ಭಂಡಿ ಬಲ್ಲೆತ್ತು ಎನ್ನ ಸುಂಕ ಎಲ್ಲರ ಪರಿಯಲ್ಲ (ಸುಂಕಬಂ. ೪. ೬೪೯-೦೬೪೫) ; ಬಲವದುಕ್ಷೇಶ್ವರನ ರೂಪಗ್ಗಳಿಪ ಬಲ್ಲೆತ್ತುಗಳನೇ ಹೆಗಲ್ಗೊಳಿಸಿ ಬಂಡಿಯೊಳಗ್ರದಲಿ ಕೇಳಿಕೆಗಳೊಡಗೂಡಿ (ಬಸವು. ೫೬-೬).
[ಬಲ್$^1_2$(<ಬಲ್ಲಿತು$_1$) +ಎತ್ತು$_2$ (<ಎಱ್ತು$_1$)]

**ಬಲ್ಲೆಯ$_1$**, ಬಲ್ಲ$_2$, ಬಲ್ಲೆ$_2$, ಬಲ್ಲೆಹ, ಭಲ್ಲೆಯ, ಭಲ್ಲೆಹ(ನಾ). ಒಂದು ಬಗೆಯ ಆಯುಧ ; ಈಟಿ ; ಭಲ್ಲೆ : ಮೂದಲಿಸಿ ಬಂದ ಮನ್ನೆಯ ರಾವುತರಂ ಬಲ್ಲೆಯ ಪಟ್ಟಸದೊಳುಂಡಿಗೆಯೊತ್ತಿಬಿಟ್ಟು ನಿಚ್ಚಟದ ರಾವುತರು ಲಚ್ಚಣಂದೆಗೆದು ಮುಂಗುಡಿಯ ರಾವುತರಂ ಭಂಗಿಸಿ ತಿವಿದು (ಮಳಕ.ಹ ೨೨೬-೦೯); ತೂಗುತ್ತಿಹ ತೋಮರಂ ಜಡಿವ ಕಕ್ಕಡೆ ಸಲ್ಲೆಹ ಬಲ್ಲೆಯಂ[ಪಾಠಾಂ. ಸಲ್ಲಿಪ ಬಲ್ಲೆಹಂ]ಗಳತ್ಯುತ್ಕಟಮಾಗೆ ಬಂದು ಸಮರಾಂಗಣದೊಳ್ ತಲೆ ಮುಟ್ಟುದಂದು ಮೂವತ್ತೆರಡಾಯುಧಂಬೆರಸು ವಾರಣವಾಹನ ವೀರ ಸಾಧನಂ (ಪುಣ್ಯಾಸ್ರ. ೨-೫೬); ಕರದ ಬಲ್ಲೆಯ [ಪಾಠಾಂ. ಹ]ದಿಂದ ವಾಲಿಯ ವರಕುಮಾರನ ತಿವಿಯೆ ಹಲಕಿನ ಸರಿಸದಲ್ಲಿ ಮೊನೆದೋಱಿತುಗುಳುವ ರಕುತ ಧಾರೆಯಲಿ (ತೊರರಾ. ೬-೫೦-೩೦). **ಬಲ್ಲ$_2$** : ಇವನಿನ್ನುಂ ನೆರೆದಪ್ಪನೆನ್ನಿದಿ ರೊಳಾತ್ಮಶ್ರೀಯನೆಂದಾರ್ಪಿನಿಂದಮೆರೆಬ್ಬಲ್ಲದಿನಬ್ಜನಾಭನಿಸೆ (ಜಗವಿ. ೦೮-೧೦೦). **ಬಲ್ಲೆ$_2$** : ಹೂಡಿದ ತೇರು ಕೂಡಿದ ಆನೆ ಕುದುರೆಯು ಗಾಢದ ರಾಯ ರಾವುತರು ನೀಡಿದ ಹರಿಗೆ ಕರದ ಬಿಲ್ಲು ಈಟಿಯ ಜೋಡಿಸಿ ತೊಟ್ಟ ಬಲ್ಲೆಗಳು (ಹಂಸಾಂ. ೧-೬೫). **ಬಲ್ಲೆಹ** : ಓಡ ಕುದುರೆಯ ಮೇಲೆ . . . ದೆಸೆವರಿವ ಅಸುರಾವುತ ಚೊಲ್ಲೆಹದ ಬಲ್ಲೆಹವ ಹಿಡಿದು ಮುಗುಳುನಗೆ ಯುವಳಲ್ಲಿ ಎಱೆ ತಿವಿಯೆ ಚೊಲ್ಲೆಹದ ಬಲ್ಲೆಹ ಮುಱಿದು . . . ಅವಳ ಕಿಸಲಯುರಸಕ್ಕೊಳಗಾದ (ಕೋಲಶಾಂ. ೨೮-೧೦); ನಿಲ್ಲೆಲೆಗೆ ಸೈರಂಧ್ರಿ ಕಾಮನ ಬಲ್ಲೆಹದ ಬಲುಗಾಯ ತಾಗಿತು ಬಲ್ಲೆ ನೀನೌಷಧಿಯ ರಕ್ಷಿಸಿಕೊಂಬು ದೆನ್ನೊಡಲ (ಕುವ್ಯಾಭಿ. ೨-೦೯); ಲಲನೆಯುರುಪಚಾರದ ನುಡಿ ಕಿವಿಯೊಳು ಬಲಿದ ಬಲ್ಲೆಹವಾಯಿತಾಗ (ಕಂಸವ. ೯-೦೭೩). **ಭಲ್ಲೆಯ** : ವರ್ಗ ಚತುರ್ಥಾಕ್ಷರಂಗಳ್ಗೆ ಘಟಿಯಿಂ . . . ಭಲ್ಲೆಯಂ, ಭಾವಂ (ಶಮದ. ೦೫ ಪ್ರಯೋ); ಅಲಗಿನೊರಸೊರಸಿಲ್ಲ ಕೈಮೈಗಳಲ್ಲಿ ಮುಳುಗಿದ ಬಾಣವಿಲ್ಲಗ್ಗಳಿಸಿ ನೊಸಲಲಿ ಮುಱಿದ ಭಲ್ಲೆಯವಿಲ್ಲ . . . ನೀ ಮುನ್ನಳುಕಿ ಕೈದುವ ಹಾಯ್ಕಿದೈ ಸರಿಯಲ್ಲ ನಿನಗೆಂದ (ಕುವ್ಯಾಶಿ. ೩-೩೫); ಬಲ್ಲವರ್ ಹರಿಗೆ ಪಟ್ಟಿಯ ಶೂಲ ಶಲ್ಲೆಹ ಭಲ್ಲೆಯ ಬಲವಂತೆಯರ ಎಲ್ಲರ ತಱುಬಿ ಹರ್ವ್ವಿವ ಹತ್ತಿ ಹೇಳ್ದಳು ಪುಲ್ಲಶರಾತ್ಮಸಂಭವಗೆ (ಮೋಹತ. ೩೩-೩೯). **ಭಲ್ಲೆಹ** : ಅಂತರಾಂತರದ ಬಾಗಿಲ ಚಾವಡಿಯೊಳು ತಿಂತಿಣಿಸುವ ಪಟುಭಟರು ಕುಂತ ಕಠಾರಿ ಭಲ್ಲೆಹ ಖಡುಗವನಾಂತು ಸಂತಸದಲಿ ಕಾದಿಹರು (ಕಂಸವ. ೨-೬೭) ; ಕುಂತ ತೋಮರ ಖಡ್ಗ ಸುರಗಿ ಭಲ್ಲೆಹಗಳ ಕಾಂತಿ ಮುಸುಕಿ ಚೌದೆಸೆಯ ಹೊಂತಕಾಱಗಳಾಗ ರಾಯ ಮೋಹರದಲ್ಲಿ ಪಂತದೊಳೆಸೆದರುಬ್ಬಿನಲಿ (ಕಂಸವ. ೦೫-೨೦).
[<ಸಂ. ಭಲ್ಲ./ ತಮಿ. ವಲಯ, ವಲ್ಲೈಯ್ಯ ; ತೆಲು. ತುಳು. ಬಲ್ಲೆ]

**ಬಲ್ಲೆಹ** 'ಬಲ್ಲೆಯ' ನೋ.

**ಬಲ್ಲೆಹಕಾಱ** (ನಾ). ಮಾತಿನ ಯುದ್ಧ ಹೂಡುವವನು ; ವಿತಂಡ ವಾದಿ : ಸೊಲ್ಲಿನ ಮಾತಿಗೆ ಬಲ್ಲೆನೆಂದು ಹೋರುವ ಬಲ್ಲೆಹಕಾಱ ರಿಗೆಲ್ಲಿಯದೋ ಮುಕ್ತಿ (ಮೋಳಿಗಮಾ. ೦೦೩-೪೦೨).
[ಬಲ್ಲೆಹ (< ಬಲ್ಲೆಯ) + — ಕಾಱ]

**ಬಲ್ಲೆಳೆ** (ನಾ). ಗಟ್ಟಿಯಾದ ಎಳೆ ; ಬಿಗಿಯಾದ ದಾರ : ಮಾತೆಸಹಿತಂ

ಬೆಚ್ಚುನೀರೆಱೆದೋತು ಲಿಂಗವ ಧರಿಸಿ ಶಿಶುವಿಗೆ ಮಾತೆಯಿಂ ಬಳ್ಳಿಯನು ಒಡಿಯಿಸಿ ಸೂತಕೃತ್ಯೆಯದನು ಬಲ್ಲೆಳೆಯೊಳೆಳೆಯದೊಲು ಬಂಧಿಸಿ . . . ಚೂರ್ಣವ ಕಲಸಿ ಕುಡಿಸಿದಳು (ಮದೀಶ. ೦೩-೦೯).

[ಬಲ್$_2$ (<ಬಲ್ಲಿತು$_1$) + ಎಳ್ಳೆ$_2$ (<ಎಟ್ಟಿ$_2$)]

**ಬಲ್ಲೇರಿ** (ನಾ). ಕೆರೆಗೆ ಅಡ್ಡವಾಗಿ ಕಟ್ಟಿರುವ ದೊಡ್ಡದಾದ ಏರಿ,— ಕಟ್ಟೆ : ನೂರ್ಮ್ಮಡಿ ಅಯ್ಯಹರಸಂ ಬಮ್ಮಿಸೆಟ್ಟಿಗೆಗೊಟ್ಟ ಶಾಸನದ ಪೊಲದ ಸೀಮೆ . . . ಅನ್ತೆ ಬರೆ ಒಡಿಲ ಗೆಱೆಗೆ ಬನ್ದಬಾಗೆ ಆ ಕೆಱೆಯೊಳಗಣ ಬಲ್ಲೇರಿಯೆ ಆ ಕೆಱೆಯ ತೆಂಕಣ ಕೋಡಿಯೆ (ಎಕ. XI. ದಾವಣ. ೦೯-೦೭ ; 1043).

[ಬಲ್$_2$ (<ಬಲ್ಲಿತು$_1$) + ಏರಿ$_1$]

**ಬಲ್ಲೇಱು** (ನಾ). ಬಲವಾದ ಪೆಟ್ಟು ; ಜೋರಾದ ಹೊಡೆತ : ಅಸಮಾಸ್ತ್ರಂ ತೆಗೆದೆಚ್ಚ ಕೂರ್ಗಣೆಯು ಬಲ್ಲೇಱಿಂಗೆ ಸಕ್ಷಾರನೇಕಸಮಾನಂ ಕಡುಕೆಯ್ದು ಕಾದಲರ ಮಾತು (ಅನಂಪು. ೬-೯೩).

[ಬಲ್$_2$ (<ಬಲ್ಲಿತು$_1$) + ಏಱು$_4$]

**ಬಲ್ವಂದಿ$_1$** (ನಾ). ಬಲಿಷ್ಠವಾದ ಹಂದಿ ; ಬಲಶಾಲಿಯಾದ ವರಾಹ : ಮುನಿಸಿಂ ಬೊಬ್ಬಿಱಿದುಬ್ಬಿಯುಬ್ಬರಿಸಿ . . . ಬಲ್ವಂದಿ ಬಲ್ವಂದಿಕಾಱನ ಪೋಲ್ ಪಿಂಡೊಡೆದೊಂದೆ ಪೋಯ್ಯು ಮಲೆದಂತಿಂತಿಕ್ಕಿಲಕ್ಕಿಕ್ಕಲಂ (ಸೂಕ್ತಿಸು. ೩-೦೩೩).

[ಬಲ್$_2$ (<ಬಲ್ಲಿತು$_1$)+ಪಂದಿ]

**ಬಲ್ವಂದಿ$_2$**, ಬಲ್ಬಂದಿ (ನಾ). ಬಲವಾದ ಸೆರೆ ; ಬಲಿಷ್ಠವಾದ ಬಂಧನ : 'ಬಲ್ವಂದಿಗೊಳ್' ಪರಾ. ಬಲ್ಬಂದಿ : 'ಬಲ್ಬಂದಿಕಾಱ' ಪರಾ.

[ಬಲ್$_2$ (<ಬಲ್ಲಿತು$_1$)+ಬಂದಿ$_1$]

**ಬಲ್ವಂದಿಕಾಱ**, ಬಲ್ಬಂದಿಕಾಱ (ನಾ). ಕೈತಪ್ಪಿ ಹೋಗದಂತೆ ಸೆರೆ ಹಿಡಿಯುವವನು; ಪರಾಕ್ರಮಿ: ಮುನಿಸಿಂ ಬೊಬ್ಬಿಱಿದುಬ್ಬಿಯುಬ್ಬರಿಸಿ... ಬಲ್ವಂದಿ ಬಲ್ವಂದಿಕಾಱನ ಪೋಲ್ ಪಿಂಡೊಡೆದೊಂದೆ ಪೋಯ್ಯು ಮಲೆದಂತಿಂತಿಕ್ಕಿಲಕ್ಕಿಕ್ಕಲಂ (ಸೂಕ್ತಿಸು. ೩-೦೩೩); ಬಂದಿಗೆ–ಬಂದಿಗ್ರಹಣ,ಬಲ್ವಂದಿಕಾಱ (ಶಮದ. ೨೯೬ ಪ್ರಯೋ). ಬಲ್ಬಂದಿಕಾಱ: ೧. "ವಸುಮತಿಗೆ ಬಲ್ಬಂ[ಪಾಠಾಂ. ಲ್ವಂ]ದಿಕಾಱ ಬಂದಿಗ್ರಹಣ" (ಕಲ್ಯಕ. ೯೬).

[ಬಲ್$_2$ (<ಬಲ್ಲಿತು$_1$) + ಬಂದಿಕಾಱ (<ಬಂದಿಗಾಱ)]

**ಬಲ್ವಂದಿಗೊಳ್** (ಕ್ರಿ). ಬಲವಾದ ಸೆರೆಯನ್ನು ಹಿಡಿ ; ಬಲಿಷ್ಠನಾದವನನ್ನು ಬಂಧಿಸು : ಯುದ್ಧಮಲಿನರಾಗಿರುವ — ಲಿಂಗರಾಜನ, ಕರುಮಿಯನ್ ಚೋಳಿವೇಂಕಯ್ಯಂದಿರನ್ನು ಬಲ್ವಂದಿಗೊಂಡೆಳೆತರುವ ಸೈನಿಕರ, ಪ್ರವೇಶ (ಮುಂತ್ರಕ. ೨೧-೨೨).

[ಬಲ್ವಂದಿ$_2$+ಕೊಳ್$_1$]

**ಬಲ್ವಗೆ$_1$**, ಬಲುವಗೆ (ನಾ). ೧. ಬಲಿಷ್ಠನಾದ ಹಗೆ ; ಬಲಶಾಲಿಯಾದ ಶತ್ರು : ದಾಳಿಯಂ ಕಂಡರಂತೆ ಮುಗುಟ್ಟೋಡುತ್ತುಂ ಬಲ್ವಗೆಯಂ ಕಂಡಂತೆ ಮೊಗುಂದಿರಿಪುತ್ತುಂ (ಧರ್ಮಾಮೃ. ೯-೭೭). ೨. ಅಧಿಕವಾದ ಅಸೂಯೆ ; ಬಲವಾದ ದ್ವೇಷ : ನಿಗಡಂ ಸೊಕ್ಕಾನೆಯೊಳ್ . . . ಕಂಟಕಂ ಹರ್ಷದೊಳ್ ಬಲ್ವ[ಪಾಠಾಂ. ಲ್ಪ]ಗೆ ಕಾವ್ಯಪ್ರೌಢರೊಳ್ ತಳ್ತಿಱುವುದೆಮೆಯೊಳುಂಟಲ್ಲಿ ಬೇಱಿಲ್ಲ ನಾಡೊಳ್ (ಅನಂಪು. ೦-೯೩). ಬಲುವಗೆ : ೧. ಹಗೆಗಳೇ ಕೌರವರು ತೆಗೆ ಬಲುವಗೆ ಕಣಾ ಕಾಮಾದಿರಿಪುಗಳು (ಕುಮ್ಯಾಕ. ೦೩-೩೭). ೨. ಅದೇಕೆ ಬಲುವಗೆ ಬರಲು ಶಂಕಿಸೆ (ತಿಮ್ಮಕಾ. ೬-೪೬).

[ಬಲ್$_2$ (<ಬಲ್ಲಿತು$_1$)+ಪಗೆ$_2$]

**ಬಲ್ವಗೆ$_2$**, ಬಲ್ಪಗೆ (ನಾ). ಅನೇಕ ರೀತಿ ; ಬಹಳ ವಿಧ : ಇಂತು ಬಲ್ವಗೆಯಿಂ ಪೊಗಟ್ವ ರಾಮನಂ ನೋಡುತ ಸೀತೆಯಿಂತೆಂದಳ್ ! (ಅದ್ಭುಕ. ೩೪-೦೨). ಬಲ್ಪಗೆ : ಇಂತು ಕೆಯ್ಯೋಡಿಸುತ ಬಲ್ಪಗೆಯಿಂ ಬೇಡಿಕೊಳ್ವ ಮುನಿಯ ಕಿಟ್ಟಿಗೆಗೆ ನಕ್ಕು, ದೇವ . . . ಮನ್ನಿಸಿ ಕಳುಪಿದಂ (ಅದ್ಭುಕ. ೦೦-೦).

[ಬಲ್$_2$ (<ಬಲ್ಲಿತು$_1$) +ಬಗೆ$_2$]

**ಬಲ್ವಜ** (ನಾ). ಒಂದು ಬಗೆಯ ಹುಲ್ಲು ; ಗಂಜಳದ ಹುಲ್ಲು :"ಉಲಪಃ, ಬಲ್ವಜಃ— ಈ ೨ ಗಂಜಳದ ಪುಲ್" (ಶಠಾಯು. ೩೨-೩೭). [ಸಂ.]

**ಬಲ್ವಡಿ** (ನಾ). ಬಲವಾದ ಕದ ; ಭದ್ರವಾದ ಬಾಗಿಲು : ನಡೆನಡೆ ಕೇರ್ಗಳಂ ಕೆಡವು ಬಲ್ವಡಿ [ಪಾಠಾಂ. ಡೆ]ಯಂ ಮುಱಿಪೊಕ್ಕು ಗೇಹದೊಳ್ಪು ಡುಕು . . . ಎನುತುರ್ಬಿ ಬೊಬ್ಬಿಱಿದು ಮುತ್ತಿದರಾ ಗೃಹಮಂ ದ್ವಿಜಾಧಮರ್ (ವೃಷಭ. ೩೯-೬).

[ಬಲ್$_2$ (<ಬಲ್ಲಿತು$_1$)+ಪಡಿ$_2$]

**ಬಲ್ವಡೆ** (ನಾ). ಬಲವಾದ ಸೈನ್ಯ ; ದೊಡ್ಡ ದಂಡು : ಕಳಕುಳವಾಗೆ ಪಂಚಲನ ಬಲ್ವ[ಪಾಠಾಂ. ಲ್ಪ]ಡೆ ಪಂಚಲನಶ್ವಸಂಕುಲಂ ಕಳಕುಳವಾಗೆ (ಅಜಪು. ೦-೪೪) ; ಬಡಿಯಿಂ ಬಹ್ವಾಮಲಕದ ಘಳಮಂ ಬಡಿಗೊಳಲು ದಿರ್ವಂದದಿ ಬೀಳ್ತಹ ಬಲ್ವಡೆಯಂ ಕಾಣುತ್ತುಂ (ಜಯುಕಾ. ೬-೫೨) ; ನಾಲ್ವತ್ತು ಸಾಸಿರಂ ಕಡುಗಾಲ್ವೆತ್ತೊಳ್ವಾರುವಂಗಳಾಳ್ಕೂಲಕ್ಕಂ ಸಲ್ವಾನೆ ಸಾಸಿರಂ ಬರೆ ಬಲ್ವಡೆಯಂ ತಂದನಮಮ ಕೆಂಗೆಯ ಹನುಮಂ (ಕಶಿಂ. ೨-೯೩).

**ಬಲ್ವಡೆ ಸುದ್ರುಕನ್** = ಬಲವಾದ ಸೈನ್ಯವನ್ನು ಎದುರಿಸುವುದರಲ್ಲಿ ಶೂದ್ರಕನಂತಿರುವವನಂ ; ಬಹಳ ಪರಾಕ್ರಮಿ ; ಒಂದು ಬಿರುದು : ಉರ್ಬ್ಬಿಯೊಳ್ಕಲದೊಳೊರ್ಬ್ಬನೆ ಗಣ್ಡ ಶ್ರೀಚನ್ನಮನೆನ ಮೊಳ್ಪಡೆಯನ್ ಗೊನ್ತಿಸುತರಂ ಪರಾಕ್ರಮನ್ ಬಲ್ವಡೆ ಸುದ್ರುಕನ್ ಪ್ರಳಯಧನಿ ಮುತ್ತಿ ಆಣೆಯೆಂ ಅಬ್ಬುವಂಗಂ ಕುಡಲಪೊಂಗಂ ಒಬ್ಬನೊ ಆಚಾರ್ಯ್ಯಂ (ಎಇ. XXIV. ೨೩-೭; ಸು. 886).

[ಬಲ್$_2$ (<ಬಲ್ಲಿತು$_1$) + ಪಡೆ$_2$]

**ಬಲ್ವನಿ** (ನಾ). ದೊಡ್ಡದಾದ ಹನಿ ; ದಪ್ಪವಾದ ಬಿಂದು : ಸ್ವಾತಿ ಬಲ್ವನಿ ಬಿಂದು ಶುಕ್ತಿಗರ್ಭದಿ ಬಿದ್ದ ಮಾತ್ರದೊಳ್ಕನ್ನ ಪೂರ್ವದ ಗುಣವನುಳಿದಮಳಜ್ಯೋತಿ ಮುತ್ತಾದಂತೆ (ನವಮೋ. ೬-೪).

[ಬಲ್$_2$ ( <ಬಲ್ಲಿತು$_1$ ) + ಪನಿ$_2$]

**ಬಲ್ವರವಿ** (ನಾ). ದೊಡ್ಡದಾದ ಹರವಿ; ದಪ್ಪದಾದ ಗಡಿಗೆ,—ಮಡಕೆ : ಕೆಲಕೊಱಗಿರ್ದ ಬಲ್ವರವಿಯಂ ಬಲಗೈ ಜಡಿದೊಪ್ಪಿ ತೂಗೆ. . . ಒಪ್ಪಿದರ್ ಕೆಲಬಲದೂರ್ಗೆ ಪೋಗಿಯಳೆ ಮಾಱಿ ಮಗುಟ್ಟರುತಿರ್ಪ ಗೋಪಿಯರ್ (ಲೀಲಾವ. ೫-೦೦೦).

[ಬಲ್$_2$ (<ಬಲ್ಲಿತು$_1$)+ ಪರವಿ]

**ಬಲ್ವರಿಕೆ** (ನಾ). ದೊಡ್ಡ ಧಾಳಿ : ಬಲ್ವರಿಕೆಯೊಳರಿನೃಪರ ಪಡಲ್ವಡೆ ತಳ್ತಿಱಿದು ರಣದೊಳಾ ವಿಕ್ರಮಮಂ ಸೊಲ್ವಿನಮಾವರ್ಜಿಸಿದಂ ನಾಲ್ವತ್ತೆರಡಱಿಕೆಗಾಳೆಗಂಗಳೊಳೀತಂ (ಶಂಶಖಾ.೦-೨೩).

[ಬಲ್$_2$ (<ಬಲ್ಲಿತು$_1$) + ಪರಿಕೆ$_1$]

**ಬಲ್ವಲ** (ನಾ). ೧. ಬಲಿಷ್ಠವಾದ ಸೈನ್ಯ; ಗೆಲ್ಲಲು ಅಸಾಧ್ಯವಾದ ಸೈನ್ಯ : ಪಸರಿಸಿ ಪೊಕ್ಕು ಕೂಕಿಱಿದು ಕಾದುವ ಬಲ್ಲಣಿಗಳ್ ಪಳಂಚಿ. . . ಚೋದಿಸುವ ರಥಕ್ಕೆ ಪೆಪ್ಪಳಿಸದೊರ್ವರಿನೊರ್ವರೆ ಮಿಕ್ಕು ಪಾರ್ದು ಸಾರ್ದಿಸೆ ತುಱುಗಾಱರಂದಿನಿಸು ಬಲ್ವಲನಾದುದದೊಂದು ಕಾಳೆಗಂ (ಶಂಶಖಾ. ೯-೯೩); ಗೆಲಲೆನಗೆ ರಿಪುಬಲಂ ಬಲ್ವಲಮಾದೊಡೆ ಸಿಂಹನಾದಮಂ ಮಾಳ್ಪಿಂ ಬೆಂಬಲವಾಗಿ ಬರ್ಪುದೆಂದೀ ಬಲದೇವಂಗಱಿಪಿ ವಾಸುದೇವಂ ಪೋದಂ (ಶಂಶಖಾ. ೯-೯೩). ೨. ಅತಿಶಯವಾದುದು; ಶ್ರೇಷ್ಠವಾದುದು : ಬಲ್ವಿಡಿದಿವನಂ ಧರೆಯೊಳ್ ಗೆಲ್ದನ್ನರ್ ಚಾಪಕುಶಲರಿಲ್ಲೆನೆ ಕಂಸಂ ಬಲ್ವಲ[ಪಾಠಾಂ. ಬಲುಮಲ]ನಾದಭ್ಯಾಸದೆ ಸಲ್ವಿನಂ(ಶೀಖಂತ. ೫-೬೩). ೩. ಬಹಳ ರಭಸದಿಂದ ಕೂಡಿದುದು; ಅತಿ ವೇಗವನ್ನುಳ್ಳುದು; ಮಹಾಬಲಶಾಲಿಯಾದುದು: ಬಲ್ವಲನಲ್ಲದೀಯಲೆಯುತಿರ್ದುದು ತೆಂಕಣ ಗಾಳಿ ಕಾಮನೀ ಕೊಲ್ವನೆ ಚಂದ್ರನೀ ಕೋಱಿಯ ತಿಂಬನೆ ನಿನ್ನೊಡ ಗೂಡ ವೇಟ್ದಾ ನೀನೊಲ್ವುದು ಮೊಗ್ಗೆ ಕಾಡುವುದು ಕಾವುದನಾಥೆಯನೆನ್ನಂ (ಲೀಲಾವ. ೦೦-೩೩).

**ಬಲ್ವಲಾಗು** = ಅಧಿಕವಾಗು : ಜಾಗದ ಬಲ್ವಲಾದ ಪೊಸಲಿಂ

ಬಳೆದೊಪ್ಪುವ. ನಾಳಿಕೇರದಿಂ ಪೂಗವನಂಗಳಿಂದಲೆಯು ಬಳ್ಳಿಗಳಿಂ... ನಿರಂತರಂ ಸೊಗಯಿಸಿರ್ಪುವು ಪೆರ್ಗಿಡಿಗಳ್ನಿರಂತರಂ (ಮಲ್ಲಿ. ೨-೪೫); ಪಾವುಗೆತ್ತು ಪತ್ತುವ ಮುಂಗುಲಿಗಳಂತೆ ಬಾಲಮಂ ಬಿದಿರುತ್ತೆ ಮಣಿಕು ವರೆದಡರ್ವ ತುದಿಗೋಬುಗಳ ಕೊನೆಯೊಳ್ ಕವಲ್ತು ಪಾಲ್ಮಿಡಿಯು ಬಲ್ವಲಾದ ಕಿಡಿಗೊಂಬುಗಳೊಳಂ (ಅಂಜನಾ. ೬-೪೦ ವ).

[ಬಲ್$_2$ (<ಬಲ್ಲಿತು$_1$) + ಬಲ್$_3$]

**ಬಲ್ವಲಿಕೆ** (ನಾ). ಬಹಳವಾದ ಸಾಮರ್ಥ್ಯ; ಅತ್ಯಂತ ಪರಾಕ್ರಮ : ಬಲ್ವಲಿಕೆಯಿಂದಿದಿರ್ಚಿದ ಬಿಲ್ವಡೆ ತನ್ನೆಚ್ಚ ನಿಶಿತಶರಸಂಹತಿಯಿಂದೆಲ್ವಡ ಗಾಯ್ತು (ಕಾವ್ಯಾವ. ೩೮). [ಬಲ್$_2$ (<ಬಲ್ಲಿತು$_1$) + ಬಲಿಕೆ (<ಬಲ್ಕೆ)]

**ಬಲ್ವಿಡಿ$_1$**, ಬಲುವಿಡಿ$_1$, ಬಲ್ಪಿಡಿ$_1$ (ಕ್ರಿ). ಬಲವಾಗಿ ಹಿಡಿ; ದೃಢವಾಗಿ ತಿಳಿದಂಕೊಳ್ಳು : ಬಲ್ವಿಡಿದಾಳಿಯುಂ ಸಖಿಯರೆಂದುದುಗೇಳದೆ ಗೆಂಟು ಮಾಟು್ಪುದುಂ (ಮಲ್ಲಿಪು. ೭-೭೩) ; ಕರ್ಮೇಂಧನಂಗಳಂ ಸುಡಲುಂ ಜಿನ ಚರಣಮಂ ಬಲ್ವಿಡಿಯಲುಂ ಸನ್ಮಾರ್ಗಮಂ ಪೊರ್ದಲುಂ ಮನಂದಂದು (ರಾಮಾಶ್ವ. ೭-೨೩೩); ಏಳೇಳಲಿಬ್ಬರ ಕೈವಿಡಿದಳು ಕುಳಿತೇಳದೆ ಕೈಗಳ ನೀಡೆ ಚಾಳಿಸಿ ಪೋಪೆವೆಂದತ್ತಿತ್ತಲೊಲೆದರು ಬಾಲೆ ಬಲ್ವಿಡಿದು ತೆಗೆದಳು (ಭರತ. ೪೦-೯೪). **ಬಲುವಿಡಿ$_1$** : ಕೋಟಲೆಗಳೀಯೆರಡರೊಳಗವ ಬೇಟವನೆ ಬಲುವಿಡಿದು ಹೂಡಿದ ಘೋಟಕದ ಹೊಂದೇರಿನಲಿ ಹೊಚವಂಟನರ ಮನೆಯ (ಕೊರಣಾ. ೩-೭-೨೨); ವಸುದೇವನಂದನನಂಘ್ರಿಯನು ದೃಢಭಾವದಲಿ ಬಲು[ಪಾಠಾಂ. ಲ]ವಿಡಿದು ದಾಂಟು ಭವಾಂಬುಧಿಯ (ತಿಳಾಗ. ೪-೦೫-೨೪). **ಬಲ್ಪಿಡಿ$_1$** : ಈ ಕಮನೀಯಕಾವ್ಯಮಂ...ಒಲ್ದುಸಿರ್ದೆಂ ಬುಧರ್ಕಳಾವಲ್ಲಭರ್ಕೈದೆ ಕೇಳ್ದು ಗುಣಮೊಂದನೆ ಬಲ್ವಿಡಿದಿರ್ಪುದಾವಗಂ (ಉದ್ಭಟ. ೧೨-೧೪೪); ಪವನವೇಗವ ಕೀಟ್ಪಡಿಸಿ ದುಮಾಳಿಪ ಜವಗಾತಿಯು ಬೆನ್ನೊಳಿರ್ದು ಕುವರ ಕಂಗೆಟ್ಟು ಬಿದ್ದಪೆನೆಂದು ತಕ್ಕೆಗೊಂಡವಳ ನುಣ್ಮೊಲೆಯು ಬಲ್ಪಿಡಿದ (ಸೋಮಶ. ೩೦-೨೩). [ಬಲ್$_2$ (<ಬಲ್ಲಿತು$_1$) + ಪಿಡಿ$_1$]

**ಬಲ್ವಿಡಿ$_2$**, ಬಲುವಿಡಿ, ಬಲ್ಪಿಡಿ$_2$ (ನಾ). ೧. ಬಲವಾದ ಹಿಡಿತ; ದೃಢವಾದ ಹಿಡಿತ : ಬಲ್ವಿಡಿವಿಡಿದು ಶರಣ್ಬುಗು ಜಿನೇಂದ್ರಪದಸರಸಿಜಮಂ (ಅಜಿತ. ೨-೫೬); ಒಡಲುಂ ಪ್ರಾಣಮುಮೆಂಬಿವು ಕಿಡಲಾದುವು ಜಸಮದೊಂದೆ ಕಿಡದದನಾಂ ಬಲ್ವಿಡಿವಿಡಿದು ನೆಗಟ್ದೆಂ (ಶಂಕರಾ. ೧೨-೦೮೦). **ಬಲುವಿಡಿ$_2$** : ೧. ಬಲುವಿಡಿಯ ಬಿಲು ವಾಮದಲಿ ಬೆರಳೊಳಗೆ ಸವಡಿಸಿ ಸನಡಿಸಿ ತೆಗೆವ ತಿರುವಿನ ಹಿಳುಕು ನಿವಿರಿದ ತೋಳ ತೋಟಿಕೆ ಬಲದ ಭಾಗದಲಿ (ಕುಮಾ.ಳ ೨೭-೨೩). **ಬಲ್ಪಿಡಿ$_2$** : ೧. ಬಲ್ಪಿಡಿಪಿಡಿದಿರ್ದುದಂಗಜನ ಕಯ್ಪಿಡಿಯಂ ಪಿಡಿಯಂ ಮತಂಗಜಂ (ಪುಷ್ಪ. ೫-೮೦). ೨. ಬಲಿಷ್ಠವಾದ ಮುಷ್ಟಿ; ಬಿಗಿಮುಷ್ಟಿ : ಕಡೆಯೊಳ್ ಪ್ರತಾಪಾಗ್ರ್ಯಂ ದಮನನ ಬಲ್ಪಿಡಿ ಗುರ್ದಿಂಗೆ ನಿದ್ದವೋದಂ (ರಾಜಾಶ್ವ. ೮೨-೯).

[ಬಲ್$_2$ (<ಬಲ್ಲಿತು$_1$) + ಪಿಡಿ$_2$]

**ಬಲ್ಪಿಣಲ್$_1$** (ನಾ). ಹೇರಳವಾಗಿದ್ದು ತೆಕ್ಕೆಗೊಂಡ ಕೇಶರಾಶಿ : ಗುಡಚಲವುನಕ್ಕೆ ಮೇಣ್ ಮಾರುಡಫಲದೊಳ್ ತಿರುಳನಕ್ಕೆ ತಲೆವೂಸಲೊಡಂ ಜಡೆಗೊಂಡ ತಲೆಯ ಬಲ್ಪಿಣಲೊಡೆದು ಮೃದುಸ್ನಿಗ್ಧಸರಳತರಮಾಗಿರ್ಕುಂ (ಸೂಪಶಾಸ್ತ. ೯-೫೩). [ಬಲ್$_2$ (<ಬಲ್ಲಿತು$_1$) + ಪಿಣಲ್$_2$]

**ಬಲ್ಪಿಣಲ್$_2$** (ನಾ). (ಕೆಲವು ಪ್ರಾಣಿಗಳ ಬೆನ್ನಿನ ಮೇಲಿರುವ) ದೊಡ್ಡದಾದ ಡುಬ್ಬ,—ಎತ್ತರವಾದ ಭಾಗ : ಮಾನವಲೋಕಾಧೀಶ್ವರನಾ ಹೇರಾನೆಯ ಬಲ್ಪಿಣಲೇಟ ಸಾನುರಾಗದಿ ಬಂದನಾ ಪುಂಡರೀಕಿಣಿಗಾ ನರಪತಿಬಲಸಹಿತ (ಶ್ರೀಪಾಂ. ೧೩-೨೪). [ಬಲ್$_2$ (<ಬಲ್ಲಿತು$_1$) + ಪಿಣಲ್$_3$]

**ಬಲ್ವೇಕ** (ನಾ). ಉತ್ತಮವಾದ ತಿಳಿವಳಿಕೆ,— ಯುಕ್ತಾಯುಕ್ತ ಪರಿಜ್ಞಾನ : ಗೆಲ್ವವೆಂಬುದು ಬಲ್ಲಿವಂಕಸನ್ನದ್ಧದಿ ನಿಲ್ವುದುತ್ತಮವೆಂದೆ ಪೊಡೆಯ ಬಲ್ವೇಕಕೆ ಗುರು ನೀನೇನ ಕಂಡುದ ಚೆಲ್ವೆಂದು ಪೊಗಳುತೆಯಿದ್ದರು (ಭರತ. ೫೦-೫೦). [ಬಲ್$_2$ (<ಬಲ್ಲಿತು$_1$) + ವಿವೇಕ]

**ಬಲ್ವಿಸಿಲ್**, ಬಲುಬಿಸಿಲು, ಬಲ್ಬಿಸಿಲ್, ಬಲ್ಬಿಸಿಲು (ನಾ). ಬಹಳವಾದ ಬಿಸಿಲು ; ಅತಿಯಾದ ಸೂರ್ಯನ ತಾಪ : ಬಂದ ಬಸಂತ ಬನಕೆ ಬಲ್ವಿಸಿಲೊಳ್ (ಜಯುಕಾ. ೧೧-೩೪). **ಬಲುಬಿಸಿಲು**: ಬಲುಬಿಸಿಲು ಬಾಯ್ದ್ಯಾಂತ ಚಂದ್ರಿಕೆವೆಳಗೆನಲು ಘನರೋಷವಹ್ನಿಯ ಬೆಳಗು ಬೀತುದು ಚಕಿತ ಚಂದ್ರಮನಾದ ದೂರ್ವಾಸ (ಕುಮಾ.ಅ. ೦೭-೨೮) : ಗಾಳಿ ಘರ್ಮಾಂಬು ಪೊತ್ತುದು ಭೂಮಿ ಬಿಕ್ಕನೆ ಸೀಳಿತು ಕೂರ್ಮನ ಬೆನ್ನು ಹೋಳಿಗೆವಡದುದು ಬಲುಬಿಸಿಲೊಂದು ಚಡಾಳಿಕೆ ಜಗವ ಭಂಗಿಸಿತು (ಸೋಮಶ. ೦೯-೯೩). **ಬಲ್ಬಿಸಿಲ್** : ಇದು ಮಟಿಯಿದು ಚಳಿ ಬಲ್ಬಿಸಿಲಿದು ಕಟ್ಟಲೆಯೆಂದು ನೋಡದೋಹಿಲನಗರಂ ಮುದದಿಂ ತಂದಾ ಸೌರಾಷ್ಟ್ರದ ಸೋಮೇಶಂಗೆ ನಿಚ್ಚಮರ್ಪಿಸುತಿರ್ದಂ (ಉದ್ಭಟ. ೦೦-೯೩). **ಬಲ್ಬಿಸಿಲು** : ಕ್ಷೋಣಿಯೊಳೀ ಬಲ್ಬಿಸಿಲಿಂದೆ ಕಡುಗಾದ ಬಾಣಲಿಯೆಣ್ಣೆಯೊಳಬುದಿ ಹೂಣಿಸಿ ಕುದಿಗೊಂಡು ಮರಳ್ವುದು ವನಚರಶ್ರೇಣಿ ಬೆಂಡೆದ್ದು ತೇಲಿದುವು (ಸೋಮಶ. ೦೯-೪೫).

[ಬಲ್$_2$ (< ಬಲ್ಲಿತು$_1$) + ಬಿಸಿಲ್]

**ಬಲ್ವಿಸುಪು** (ನಾ). ಬಹಳವಾದ ಶಾಖ ; ಅತಿಯಾದ ತಾಪ, — ಉಷ್ಣ : ಒಡಲಾಂತ ತನುವೀತನ ನೆವದಿಂದೆಂದು ಕಡುಗಳಲ್ದಾಕಾಶವೆಂಬ ಮೃಢ ನುರಿಗಣ್ಣ ತೆಡಿದವೊಲು ನಡುನೇಸಱಡಸಿದಂದು ಬಲ್ವಿ[ಪಾಠಾಂ. ಲ್ಬಿ]ಸುಪ (ಶ್ರೀಪಾಂ. ೪-೫೪). [ಬಲ್$_2$ (< ಬಲ್ಲಿತು$_1$) +ಬಿಸುಪು (<ಬಿಸುರ್ಪು)]

**ಬಲ್ವೆಣ** (ನಾ). ದೊಡ್ಡದಾದ ಹೆಣ ; ಭಾರಿ ಶವ : ಪೆಣದಿನಿಗಳ ತಂಡಂ ಬಲ್ವೆಣಗಳನಱಸುತ್ತುಮಲ್ಲಿ ಬರೆವರೆ (ಗದಾಯು. ೪-೦೫) ; ಬಲ್ವೆಣನುರ್ಚಿ ಕೋಡೊಳಿರೆ ನೆತ್ತರುರೋಮಣಿಯಿಂ ನೆಲಕ್ಕೆ ಬಾನಲ್ವರಿವನ್ನೆಗಂ ಪ್ರಹತದಿಂದಿಡಿದತ್ತಿದೊಡೆ (ಕಾವ್ಯಾವ. ೩೮) ; ಆನೆಯೊಂದನ್ ತಟ್ಟಿ, ಭೀಮಸೇನಂಗೆತ್ತು . . . ಎಲ್ಲಿ ತೋಱಿಂದದರ ಕಾಲ್ಮುಱಿದು, ಬಲ್ವೆಣನನೊದೆದೊದೆದು, ಬಿಸುಟನ್ (ಅಶ್ವಶಾ. ೪-೫೩).

[ಬಲ್$_2$ (< ಬಲ್ಲಿತು$_1$) + ಪೆಣ]

**ಬಲ್ವೆಣಸು** (ನಾ). ಅಧಿಕವಾದ ಪ್ರಯತ್ನ: ತಾಂ ಮೊಗಂಗುಡೆ ಪದವೆತ್ತು ಚುಂಬಿಸಿ ಭಯಂಗೆಯ ಬಲ್ವೆ[ಪಾಠಾಂ. ಲ್ಪೆ]ಣಸಂ ಪೊದಟ್ಟು ನಾಣ್ಗಡೆ ನೆರೆದೂಢೆಯ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ (ಕಂದ್ರ. ೩-೬೨). [ಬಲ್$_2$ (< ಬಲ್ಲಿತು$_1$) + ಪೆಣಸು$_2$]

**ಬಲ್ವೆಱ** (ನಾ). ಪೂರ್ಣಚಂದ್ರ : ಬರುತಿದೆ ಬಲ್ವೆಱ ಬಂಡುಣಿ ವಸುಳೆಯ ತಿರುವಿಲ್ಲಾಱಿಸ ಪಳವಿಗೆಯೊಳವಿಾನೆರಡಂ ಕೊಂಡಲೆ ಸಖಿಯೆವ ಗುಳ್ಳವ ಹೊಡೆನೂಂಕೆನುತ ತರುಣಿವಿಕಲವಚನವನಾಡಿದಳ್ ವಿರಹದ ವೇದನೆಯೊಳ್ (ಜಯುಕಾ. ೪-೩೪). [ಬಲ್$_2$ (< ಬಲ್ಲಿತು$_1$) + ಪೆಱ]

**ಬಲ್ವೇಟ** (ನಾ). ಅತಿಯಾದ ಶೃಂಗಾರ ; ಬಹಳವಾದ ಪ್ರಣಯ : ಒಡಸುಟ್ಟ ಪಟ್ಟೆಯ ಚಲ್ಲಣ ಮೋಹನವಡೆದ ಪದಕ ಪೈಠಣಿಯ ಕಡು ಸೊಬಗಿನ ಬಲ್ವೇಟದ ಸುಕುಮಾರ ನಡೆದನು ಸಖರ ಮೇಳದಲಿ (ಕಂಸವ. ೦೦-೨೦). [ಬಲ್$_2$ (< ಬಲ್ಲಿತು$_1$) + ಬೇಟ$_1$ (<ಬೇಂಟ)]

**ಬಲ್ವೊನಲ್**, ಬಲುವೊನಲು (ನಾ). ಹೆಚ್ಚಾದ ಹೊನಲು ; ಅತಿಶಯವಾದ ಪ್ರವಾಹ : ಪುರಮಂ ಪೊಕ್ಕು ಪುರಂಧ್ರಿನಿಕಾಯದ ತರಳ ಕಟಾಕ್ಷರುಚಿಯ ಬಲ್ವೊನಲೊಳಗುರುಮುದದಿಂ ತೇಂಕಾಡಿ ನಡೆದು ರಾಜಾಗಾರಮನೆಯ್ದಿ (ಜಯುಕಾ. ೯-೦೯). **ಬಲುವೊನಲು** : ವ್ರಣದ ಬಲುವೊನಲೊಳಗೆ ತಲೆಗಳು ಕುಣಿದವರ್ಜುನನಂಬಿನುಱುಬೆಗೆ ಹೆಣನ ದಾವಣಿ ಹಾಸಿದವು ಸೂಸಿದವು ದೊಂಡೆಗಳು (ಕುಮಾ.ದ್ರೋ. ೦೦-೫).

[ಬಲ್$_2$ (<ಬಲ್ಲಿತು$_1$) + ಪೊನಲ್]

**ಬಲ್ವೊಯಿಲ್** (ನಾ). ಬಲವಾದ ಹೊಡೆತ ; ಜೋರಾದ ಏಟು : ಬಲ್ಸರಿಗಳ ಸಂಭ್ರಮಕ್ಕಂ ಬಿಱುವಳೆಯ ಬಲ್ವೊಯಿಲ್ಗಂ ಪೆರ್ಮಳೆಯ

ಧಾರೆಗಂ . . . ಬೆಚ್ಚದೆ ಬೆದಱದೆ ಬಲಂಗೆಡದೆ . . . ಮಹಾವಟವೃಕ್ಷದ ಕೆಳಗೆ ವಿಪುಳಶಪದಿಂದವರ್ಣಯೊಪ್ಪುತ್ತುಮಿರೆಯುರೆ (ಗಂಳ. ೯-೫೮ ಶ). [ಬಲ್$_2$ (< ಬಲ್ಲಿತು$_1$) + ಕೊಯಿಲ್]

**ಬಲ್ಸರ**, ಬಲುಚರ, ಬಲ್ಚರ (ನಾ). ಗಟ್ಟಿಯಾದ ಸ್ವರ; ಜೋರಾದ ಧ್ವನಿ: ಕಡೆಯುಬೇಡಿನ್ನೆನ್ನನೆಂದು ಬೊಮ್ಮಗೆ ಮೊಱೆಯಿಡುವ ಬಲ್ಸರ ಏದೆಬಂತೆ ಕಡು ಸೊಗಯಿಪ ಘುಳುಘುಳುರವದಿಂದಾ ಕಡಲು ಕಣ್ಗೆಸೆದಿರುತಿಹುದು (ಕುಣಾಸಾಂ. ೨-೩). **ಬಲುಚರ** : ಆಗಸದ ಬಲುಚರಂ ಮೃತ್ತಿಸ್ವರವ ಪತ್ತಿಸೆನಲಂತುಗೆಯ್ಕಲು ಬಂದುದಸುವು (ಗಾಶಕ. ೩-೨೦). **ಬಲ್ಚರ** : ಬಲ್ಚರದಿನವಳ ಸದ್ಗುಣಗಳಂ ಕೊಂಡಾಡಿ . . . ಶೋಕಂ ದಳೆದರಾ ಸಖಿಯರು (ಗಾಶಕ. ೭-೦೦೭). [ಬಲ್$_2$ (< ಬಲ್ಲಿತು$_1$) + ಸರ$_2$]

**ಬಲ್ಸರಿ**, ಬಲುಸರಿ (ನಾ). ಭಾರಿಯಾದ ಮಳೆ; ಅತಿಯಾದ ವೃಷ್ಟಿ: ಅತ್ತ ಕಱೆವಂಬಿನ ಬಲ್ಸರಿಯಿಂದಮಾ ದಿಶಾವಳಿ ಮಸುಳ್ದಂತು ನೀಳ್ದಪುದು (ಕುಶಕಾ. ೦೦-೦೦): ಅವುರ್ದಿನ ಬಲ್ಸರಿ ಸುರಿದಪುದೆನಲವನೀಶ್ವರಂಗಿರುಳ್ ತನ್ನ ಕಂಡ ಕನಸಂ ಪೇೞ್ದಳ್ (ಕಂಗಾಮಾ. ೬-೯೦); ತುಂಬಿಕೆಯೊಳಿಂಬುಗೊಂಡ ತುಂಬುನೀರಂ ಪೂತ್ಕರಿಸಿದಪುವೆಂಬಂತಿರೆ ಎಡೆವಿಡದೆ ಬಲ್ಸರಿ ಸುರಿಯೆ ಮೞೆಗಾಲಂ ಚೆಲ್ವಾಯ್ತು (ಗಾವಾಶ್ಯ. ೩-೦೨). **ಬಲುಸರಿ** : ಮಿಗೆ ಹೊಳೆಹೊಳೆವ ಮಹಿಪರ ಮಕುಟರತ್ನದ ಬಳ್ಳಿ ಮಿಂಚುಗಳ ಬಲುಸರಿಯ ನಾರಾಚಜಾಳದ ಮಳೆಯ ನೆತ್ತರ ಹೊನಲುಗಳ ರೌಕುಳದ ಮಳೆಗಾಲದಲಿ ಹೆಚ್ಚಿತು ಭಟರ ಶೌರ್ಯಶಿಖಿ (ಕುವ್ಯಾದ್ರೋ. ೦೫-೨೯). [ಬಲ್$_2$ (< ಬಲ್ಲಿತು$_1$) + ಸರಿ$_1$]

**ಬಲ್ಸಾಸಿ** (ನಾ). ಮಹಾ ಸಾಹಸಿ; ಅತ್ಯಂತ ಶೌರ್ಯಶಾಲಿ: ಇವರ್ಗೆ ಬಾಲಮೊಂದಿರ್ಕುಂ ಪೆರ್ವಡೆವೆರಸು ಬಂದಿರ್ಪರ್ ಬಲ್ಸಾಸಿಗಳ್ ಕಣಾ! (ಅದ್ಭುತ. ೪೨-೨೩). [ಬಲ್$_2$ (< ಬಲ್ಲಿತು$_1$) + ಸಾಸಿ]

**ಬಲ್ಸಿಡಿಲ್** (ನಾ). ಬಲವಾದ ಸಿಡಿಲು : ಬಲ್ಸಿಡಿಲೆಂತಂತಿರೆ ಗರ್ಜಿಸುತ್ತಡರ್ದ ತತ್ಕುಂಭಮಂ ಸೀಳ್ದು (ಶಬಶಂ. ೩-೬೦). [ಬಲ್$_2$ (< ಬಲ್ಲಿತು$_1$) + ಸಿಡಿಲ್$_2$]

**ಬಲ್ಸಿರ** (ನಾ). ದೊಡ್ಡದಾದ ತಲೆ : ತುರಗಗಳನು ಬೀಳಲಿಱಿದು ರಾವುತರ ಬಲ್ಸಿರಗಳ ಮೆಟ್ಟಿ ಮುಗರಿದ ದ ರಗಲಿಗಳ ಕಡು ಭಾಪು ಶಾಬಾಸೆಂದು ತುರುಕರು ಕೊಂಡಾಡಿದರು (ಕಂವಶಿ. ೦೮-೦೦೩) [ಬಲ್$_2$ (<ಬಲ್ಲಿತು$_1$) + ಸಿರ$_2$]

**ಬಲ್ಸುಕ** (ನಾ). ಬಹಳವಾದ ಸುಖ ; ಅತಿಶಯವಾದ ನೆಮ್ಮದಿ : ಸಕಲ ವಜೀರರು ಸಹಿತ ಚಕಿತ ಪರಾಕ್ರಮಿ ರಣಧೂಳಿಖಾನ ಬಲ್ಸುಕದೊಳಗಿರ್ದನು (ಕಂವಶಿ. ೦೬-೫೩). [ಬಲ್$_2$(<ಬಲ್ಲಿತು$_1$) + ಸುಕ$_1$ (<ಸೊಗ)]

**ಬಲ್ಸೂಱೆ**, ಬಲುಸೂಱೆ (ನಾ). ಬಹಳವಾದ ಸೂರೆ ; ಅಧಿಕವಾದ ಕೊಳ್ಳೆ, – ಲೂಟಿ : "ದಟದುಟಂ (ದಟವುಟಂ) – ಬಲ್ಸೂಱೆ" (ಶಮದ. ಶಂ. ೦) ; ನೆರೆದ ಮಹಾನರನಾಯಕಸಭೆಯೊಳಗರೆಬರ ಬುದ್ಧಿಯನೆಳಕುಳಿಯಾಡುತ್ತರೆಬರಹಂಕಾರವನೋವದೆ ಬಲ್ಸೂಱೆಗೊಳುತ (ಜಯಕಾ. ೫-೫೦). **ಬಲುಸೂಱೆ** : ಮೇರೆಯಿಲ್ಲದ ತೈಲ ಘೃತ ಬಳಿಕೂರ ಹರದರ ಹಾರುವರ ಬೇಹಾರಿಗಳ ಬಲುಸೂಱೆಯಾದುದು ಕೇರಿಕೇರಿಯಲಿ (ಕೊರಾ. ೫-೬-೯). [ಬಲ್$_2$ (<ಬಲ್ಲಿತು$_1$) + ಸೂಱೆ]

**ಬಲ್ಸೆರೆ** (ನಾ). ದೊಡ್ಡದಾದ ನರ, – ರಕ್ತನಾಳ : ಬತ್ತಿದ ಬಡ ಪೊಱವಾಱ ಬಲ್ಸೆರೆ ಸುತ್ತಿ ಹತ್ತಿದ ಹಿಳ್ಳಿಗಾಲುಗಳ ಕೊತ್ತಿಗಣ್ಗಳ ಕೋತಿ ಮುಸುಡಿನ . . . ನಳ್ಳಿಮೂಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ನೇಮಿಸಂ. ೭-೦೦೪). [ಬಲ್$_2$ (<ಬಲ್ಲಿತು$_1$) + ಸೆರೆ$_4$]

**ಬಲ್ಸೆಱೆ**, ಬಲುಸೆಱೆ (ನಾ). ಬಲವಾದ ಸೆರೆ ; ಬಿಗಿಯಾದ ಬಂಧನ : ಆಂ ಮೆಯ್ಮಱೆದಿರ್ದನಪ್ಪೊಡಿವನುಂ ತಮ್ಮಯ್ಯನಂ ಪೋಲುತ್ತು ಬಲ್ಸೆಱೆಯಿಂ ಪಿಂಗಿದುದೊಂದು ಗಂಧಗಜದಂತಾದಾಗಳೇಗೆಯ್ವನೋ (ಸಾಕುವಾ. ೦೦-೪೨). **ಬಲುಸೆಱೆ** : ಕಡುಹುವಗ್ಗದ ಕಾಲಕೇಯರ ಗಡಣವಡಗಿತು ಸುರರ ಬಲುಸೆಱೆ ಬಿಡಿಸಿದೆವು ಬಳಿಕಾಯ್ತು ಕಡುಸುಮ್ಮಾನ ಸುರಕುಲಕೆ (ಕುವ್ಯಾಅ. ೦೨-೫೩). [ಬಲ್$_2$ (<ಬಲ್ಲಿತು$_1$) + ಸೆಱೆ$_2$]

**ಬಲ್ಸೆಱೆಗೆಯ್** (ಕ್ರಿ). ೧. ಬಲವಾಗಿ ಬಂಧಿಸು, – ಸೆರೆಹಿಡಿ. ೨. (ಅಲಂ) ಬಲವಾಗಿ ಸೆಳೆ ; ಆಕರ್ಷಿಸು : ನಗೆಗಣ್ ಸೂಸೆ ವಿಳಾಸಮಂ . . . ಸ್ಮರಮಂತ್ರದೇವತೆಯುಮೋಲ್ ಬಾಹಾಲತಾಂದೋಳನಂ ಬಗೆಯಂ ಬಲ್ಸೆಱೆಗೆಯ್ಕೆ ಬಾಲೆ ಮೆಱೆದಳ್ ಲೀಲಾಪದನ್ಯಾಸಮಂ (ಕಂಗಾಮಾ. ೫-೪೨); ನಗವಾಯಿಂ . . . ಘಣ್ಪೆಯಿಂ ಬಗೆಯಂ ಬಲ್ಸೆಱೆಗೆಯ್ವ ಪುತ್ತಳಿಗಳಿಂ ರಂಗಸ್ಥಳೀಸ್ತಬ್ಧಮಾವಗಮೊಪ್ಪುತ್ತಿರೆ ರಂಜಿಕುಂ ಹರಿಹರಶ್ರೀ ದೇವತಾಮನ್ದಿರದ (ಎಕ. XI, ದಾವಣ. ೨೫-೭೭ ; 1224 ). [ಬಲ್ಸೆಱೆ + ಕೆಯ್$_1$]

**ಬಲ್ಸೆಱೆವಿಡಿ** (ಕ್ರಿ). (ಅಲಂ) ಆಕರ್ಷಿಸು : ಎಳನೀರಿಂ ನಾಳಿಕೇರಂ ಬಳಯಿಸೆ ಕದಳೀಷಂಡಮಂ ತುಂಬಿಯುಂ ಪೂಗೊಳದಿಂ ಪೂಗದ್ರುಮಂ ಬಲ್ಸೆಱೆವಿಡಿಯೆ . . . ಸೊಗಯಿಕುಂ ತತ್ಪುರೋದ್ಯಾನಷಂಡಂ (ಮಲ್ಲಿಕ. ೨-೩೪) ; ಕಾಲ್ಸಮನಿಸೆ ಪೊಸ ಬಂಡಿನ ಮೆಲ್ಸರಿಯಂ ಸುರಿಯುತಿರ್ಪ ಸಂಪಗೆವೂಗಳ್ ಬಲ್ಸೆಱೆವಿಡಿವಂತಿರ್ದುವು ಮೆಲ್ಸರದಿಂ ಪಾಡುತಿರ್ಪ ಪೆಣ್ದುಂಬಿಗಳಂ (ಕಬ್ಬಿಗ. ೬೦). [ಬಲ್ಸೆಱೆ + ಪಿಡಿ$_1$]

**ಬವ$_1$** (ನಾ). ಹುಟ್ಟು ; ಜನ್ಮ : 'ಬವಿಸಂ' ಪರಾ. [<ಸಂ. ಭವ]

**ಬವ$_2$** (ನಾ). [ಜ್ಯೋತಿ] ಪ್ರಸಿದ್ಧವಾದ ಏಳು ಬಗೆಯ ಚರಕರಣಗಳಲ್ಲಿ ಮೊದಲನೆಯದು ; ☞ "ಚರ ಮತ್ತು ಸ್ಥಿರ ಎಂದು ಕರಣ ಎರಡು ವಿಧ. ಬವ ಬಾಲವ ಕೌಲವ ತೈತುಲೆ ಗರಜೆ ವಣಿಜೆ ಭದ್ರೆ ಈ ಏಳು ಚರಕರಣಗಳು. ಶುಕ್ಲಪಕ್ಷದ ಪ್ರಥಮಾತಿಥಿಯ ಉತ್ತರಾರ್ಧದಿಂದ ಕೃಷ್ಣಪಕ್ಷದ ಚತುರ್ದಶಿತಿಥಿಯ ಪೂರ್ವಾರ್ಧ ಪೂರ್ತಿ ಈ ಚರಕರಣಗಳು ಕ್ರಮವಾಗಿ ಒಂದು ತಿಂಗಳಿನಲ್ಲಿ ಎಂಟು ಸಲ ಬರುತ್ತವೆ" (ಜಾತಕ. ಶಂ. ೦. ೩೭೯ ಅಡಿ): ಬವ ಬಾಲವ ಕೌಲವ ತೈತುಲ ಗರಜ ವಣಿಜ ಭದ್ರಗಳೆಂಬವೇಳು ಚರಕರಣಂಗಳುಂ (ವಿವೇಕ. ೨೬೨). [ಸಂ.]

**ಬವಕರಣ** (ನಾ). = ಬವ$_2$: ಭ[ಬ]ವಕರಣಕ್ಕೆ ತಿರಂ ೨೬ಗಳಿಗೆ ಮೇಲೆ ತ್ಯಾಜ್ಯ (ಭಾಸ್ಕರ. ೭೦-೪). [ಸಂ.]

**ಬವಕೆ** 'ಬಯಕ್ಕೆ' ನೋ.

**ಬವಣಿ** 'ಬವಣೆ' ನೋ.

**ಬವಣಿಗ** (ನಾ). (ಸಂಸಾರದ) ಬವಣೆಗೆ ಒಳಗಾದವನು ; ಕಷ್ಟಕ್ಕೆ ಸಿಲುಕಿದವನು ; ತೊಂದರೆಗೆ ಗುರಿಯಾದವನು : ಮಾನಸರೆಂತಂತು ಬಸಿಱೊಳ್ ಪುಟ್ಟಿಯುಂ, ಬವಣಿಗರೆಂತಂತು ಕಾಡಂ ತೊಟಲ್ದುಂ . . . ಬಾಟ್ಟ ರಾಮಂ ದೇವನೆ ! (ರಾಪಾಶ್ಯ. ೦೦೦-೮೨). [ಬವಣೆ +—ಇಗ]

**ಬವಣಿಗೆ**, ಬವಳಿಕೆ (ನಾ). ೧. ಸಂತ್ರಾಟ ; ಸಂಚಾರ : ಇಂತಪ್ಪ ನೆಗಟ್ತಿಯ ಪೊಗಟ್ತಿಯುಮಂ ಪ್ರತ್ಯಕ್ಷಂ ಮಾಡುವೆನೆಂದೊಂದು ದಿವಸಂ . . . ವಂದಿಮಾಗಧರ್ಕಳ್ ಪೊಗೞೆ ಪೊಟಲ ಜೇಂಕಾರದ ವಾದ್ಯಂಗಳ್ ನೆಗೞೆ ಬವಣಿಗೆಗೆ ಪೊಱಮಟ್ಟು (ಬಂಹಂ. ೦-೩೯ ವ) ; ಬ[ಕಾಶಂ ಭ]ವಣಿಗೆಯ ಬಂದಡವಿಯಲಿ ಪಾಂಡವರು ನವೆದರು (ಕುವ್ಯಾಅ. ೮೦-೯೦). ೨. ಸುತ್ತುವುದು ; ಪ್ರದಕ್ಷಿಣೆ : ಬವಣಿಗೆ ಜಿನೇಂದ್ರಪೂಜೋತ್ಸವದೊಳಮೊಡ್ಡೋಲಗಂ ಜಿನಾಸ್ಥಾನದೊಳಾ ದಿವಿಜೇಂದ್ರಂಗಾದುದು ಗೀತಿ ವಾದ್ಯ ನೃತ್ಯಪ್ರಸಂಗಮಜಿತನ ಕೆಲದೊಳ್ (ಅಜಿತ. ೫-೪೩). ೩. ಕಷ್ಟ ; ತೊಂದರೆ ; ಪರಿಶ್ರಮ : ಬವಣಿಗೆಯ ಕಳೆಯಲಾಱದೆಯಾಯಾಸಂ ಬಟ್ಟಪಂ ದೈವಮೆಂತಪ್ಪನು (ಶಾಸೋಕ. ೯-೦೦೨); ಈಸು ಪರಿಯಲಿ ಪಟ್ಟ ಬವಣಿಗೆಯನು ನೀ ಮರದು ಮೈಸಿರಿಗೆ ಬೆರತೆಯಲ್ಲೋ ಆತ್ಮ (ತತ್ವಪ. ೨೯-೩). ೪. ತೊಳಲಾಟ ; ಹೊಯ್ದಾಟ : ಅವನಿಪತಿ ದುಗುಡದಲಿ

ಮೋಜೆಯುಲವುಚಿದನು ಕರತಳವ ಚಿತ್ತದ ಬವಣೆಗೆಯು ಭಾರಣೆಯು ಕಡು ಶೋಕದಲಿ ಮೈಮಲಿಚಿದ (ಕುಮಾ.ದ್ರೋ. ೧-೯). **ಬವಳಿಕೆ :** ೫. ತಲೆ ತಿರುಗುವಿಕೆ ; ತಲೆಸುತ್ತು ; ಬವಳಿ ಬರುವುದು : ಆ ಜನರ ಹೆಸರಿಲ್ಲದ ಮುಖ . . . ಶಾಂತರೀತಿಯಿಂದ ಕೆಲಸ ತೆಗೆದುಕೊಳ್ಳುತ್ತಿರುವ ಆ ಹಳ್ಳಿಯ ಗೌಡನ ಧೈರ್ಯಪೂರ್ವಕವಾದ ಓಡಾಟ, ಇಷ್ಟು ನೋಡಿದ ಕಣ್ಣುಗಳು ಬವಳಿಕೆಯು ಬೇನೆಗೀಡಾಗಬೇಕು ! (ಮರುಜ. ೧೯) ; ಕಾರಗತ್ತಲೆಯೊ ಬವಳಿಕೆಯೋ ಮನ ತುಂಬಿ ತೋರದಲೆ ಹೋಯ್ತು ಕಣ್ಮುಂದೆ (ಕನ್ನಜಾ. ೨೬೬). [< ಸಂ. ಭ್ರಮಣಿಕಾ]

**ಬವಣೆಗೊಳ್** 'ಬವಣೆಗೊಳುಂ' ನೋ.

**ಬವಣೆಗೊಳಿಸು** (ಕ್ರಿ). ಸಂತ್ರಿಸಂ ; ತಿರುಗಿಸು : ಬಟಿವಿಡಿದು ತಣುಬಿದೊಡಮವಳ ಕೈಗೆ ಸಿಲ್ಕದಂಗಳದೊಳ್ ಬಳಬಳಸಿ ಬವಣೆಗೊಳಿಸಿ ಬಳಲಿಸುವ ಬಲ್ಪಂ . . . ನಿರವಿಸಿ ರಾಯಂ (ಜಕವಿ. ೯-೬೯).

[ಬವಣೆಗೊಳ್ (< ಬವಣೆಗೊಳು) + — ಇಸು$_2$]

**ಬವಣೆಗೊಳು** 'ಬವಣೆಗೊಳುಂ' ನೋ.

**ಬವಣೆಗೊಳ್ಳು** ' ಬವಣೆಗೊಳು ' ನೋ.

**ಬವಣೆಬಡು** ' ಬವಣೆಬಡು ' ನೋ.

**ಬವಣೆಯೇಱು** (ಕ್ರಿ). ತಲೆಸುತ್ತು ಉಂಟಾಗು ; ತಲೆತಿರುಗು ; ಕಣ್ಣು ಕತ್ತಲಿಡು : ಖಂಡಪರಶುಗಳಿಲ್ಲದ ತಾಂಡವದಿಂ ಬವಣೆಯುಱೆಯೊಡನ ದನಿಟಿಪಲ್ ಪಿಂಡುವ ನಿಂಬೆಯ ಪಣ್ ವಿಧುಮಂಡಲವುಳಜೊನ್ನಮೆಱೆವ ನೀರ್ವೊನಲೆನಿಕುಂ (ಜಕವಿ. ೬-೨೩).

[ ಬವಣಿ (< ಬವಣೆ) + ಏಱು$_1$ (<ಏಱ್$_1$) ]

**ಬವಣೆ,** ಬವಣ, ಬವಳಿ (ನಾ). ೧. ಸುತ್ತಾಟ ; ಸಂಚಾರ ; ಅಲೆತ : ಗವಿಯೊಳಿಳಿಯೆಲರುಂಬ ಭುಜಗಸಂದೋಹಕಂದವಿರಳದ ನಿಶ್ವಾಸ ಮರುತನ ಬಲಾಹಾರ ಬವಣೆಯಿಂದಮಜೀರ್ಣವಾಗಿ ವಮನಂಗೆಯ್ಯೆ (ವಂಕಾರಾ. ೩-೦-೧೨) ; ಪ್ರಚಂಡಮಾರುತನ ಬವಣೆಗೆ ಸಮೀಪದ ಊರಿನ ಮನೆ ಹೆಂಚುಗಳು ಗಾಳಿಗೆದ್ದು ಹಾರಾಡಿದವು (ಸಿಡಿಲು. ೬೩). ೨. ಕೋಟಲೆ ; ಕಷ್ಟ ; ತೊಂದರೆ : ಸ್ವಸ್ತಿ ಶ್ರೀಮನ್ಮಹಾ ಪ್ರಚಂಡದಂಡನಾಯಕ ಬಾಹತ್ತರನಿಯೋಗಾಧಿಪತಿ ಪರಮವಿಶ್ವಾಸಿ ಬಲವೊಳದಣ್ನಾಯಕರ ಬವಣೆಯಲು ಕೊಮಾರನ ಬೀಡಿನ ಕೊಟ್ಟಿಗೆಯ ಮಾರೆಯನಾಯಕನ ಮಗ ದೇಪಮಯ್ಯನಾಯಕನು ಬಯನಾಡ ಬವರದಲು ಕಾದಿ ಹಲರಂ ಕೊಂದು ಸುರಲೋಕಕ್ಕೆ ಸಂದ (ಮೈಆಂ. ೦೯೩೬, ೯೦-೬; 1223); ಒರ್ವ ಪಾರ್ವಂ . . . ಭಿಕ್ಷಾನ್ನಕ್ಕೆ ಪಡಿಯಾಗಿ ಕೈಯೊಗರಮಂ ತಾನೆ ತಂದೀವಂ ಇಂತಾಗೆ ಬಡಪಾರ್ವನ ಕೌಶಿಕನ ಬವಣೆ ನಿಲ್ಲುದು (ಅದ್ಭುತ. ೦೬-೨೨); ಅವಳು ಸೀತೆ ಅನುಭವಿಸಿದ ಬವಣೆಗಳನ್ನು ತನ್ನವೆಂದು ಭಾವಿಸಿ ಕಣ್ಣೀರು ಸುರಿಸಿದಳು (ಹಾಹುತ್ತ. ೬೩). **ಬವಣೆ :** ೧. " ಬವಣಿ(ಳಿ)—ಭ್ರಮಣಿ = ಸುತ್ತಾಟ ; ತಲೆತಿರುಕ" (ತದ್ಭಕೋ. ೨೯); ನಳಿನಭವ ನಳಿನಾಕ್ಷರಿರ್ವರುಂ ಕೈಗಳಂ ಸಲೆ ತೋಱು ತೋಱುತೆ ಕುಲಾಲಚಕ್ರದ ಬವಣೆಯೊಲುವೊಂದುಯಾಮಮಾತ್ರಂ ತಿರುಗಿದರೆ ದಿಶಾಮಂಡಲ ತಿರುಗುತಿರಲು (ಜಬಿಪು. ೦೬-೩೬); ಬೇಸಱದೆ ಬಾಂದಳದೊಳಾವಗಂ ನಡೆವ ಬ[ಪಾಠಾಂ. ಭ]ವಣಿ ಸಾಕೆಂದು ನಿದ್ರೆಗೈದನೊ ಸೋಮನೆನೆ . . . ಮಲಗಿಹ ಚಂದ್ರಹಾಸನಂ ಕಂಡು ವಿಸ್ಮಿತೆಯಾದಳು (ಜೈಮಿಭಾ. ೩೦-೨೦) ; ಅಂಬರದ ಬವಣೆ ಪ್ರತಿದಿನ ಬಿಡದು . . . ಎಂದು ರವಿ ವೇಗದಿಂ ಸಂಭ್ರಮದೊಳೈದಿ ಪಶ್ಚಿಮಗಿರಿಯ ಸಾರುವವ ದೆಂಬಂತೆ ತವಕದಿಂ ಮೆಲ್ಲಮೆಲ್ಲನೆ ನಭವನಿಳಿದನಾ ಗಿರಿಯು ತಟಕೆ (ವಂಕಾರಾ. ೩-೩-೦೬). ೨. ಏನು ಮತ್ಸ್ಯಕುಮಾರ ಬ[ಪಾಠಾಂ. ಭ]ವಣಿಯಿಂದೇನು ನಿನಗೆ (ಕುಮಾ.ಬಿ. ೬-೬೩); ಕಂಡುದಿಲ್ಲವೆ ನಿನ್ನ ಗಂಡನಾಟವ ನಮ್ಮ ಭಂಡು ಮಾಡುವ ಬವಣೆಯುನು (ಕೆರಹ. ೯.೬೩) ; ಸಾಕಿದಱ ಬವಣೆಯೇತಕೆ ನಮಗೆ ಕಾದುವೆಯೊ ತುರಗಮಂ ಬಿಟ್ಟಪೆಯೊ ಪೇಳೆಂದನು (ಜೈಮಿಭಾ. ೨೩-೩೨); ಈ ಎಂಟು ವರ್ಷ ಗಂಗವ್ವ ಸೋಸಿದ ಬವಣೆ ಅವಳಿಗೇ ಗೊತ್ತು (ಗಂಪಮಾದು. ೦). ೩. ತಲೆ ಸುತ್ತುವಿಕೆ ; ಕಣ್ಣು ಕತ್ತಲಿಡುವಿಕೆ ; ತಲೆ ತಿರುಗುವಿಕೆ : ಬವಣೆ ತಲೆಬೇನೆಗಳ್ ಸ್ವೇದವೃದ್ಧಿ ಮುಖರೋಗಮಕ್ಷಿರೋಗಂ ಕಫವಾತ ವಿಕಾರಂ ಪಿಂಗುಗುಪ್ಪಾದವೆ ನಸ್ಯಂಗೆಯ್ಯೆ ಶುಂಠಿಯಂ ಬೆಲ್ಲಮುಮಂ (ಲೋಕೋಪ. ೯-೦೫); ಅವನಿಪನ . . . ತಲೆಯ ಪಿತ್ತದ ಬವಣಿ [ಪಾಠಾಂ. ಭವಳಿ, ಬವಳಿ] ಬಲಿದುದು (ತೊರರಾ. ೨-೬-೦೨). **ಬವಳಿ :** ೩. ಮನಂ ಮಿಗುವತಿಸಾರಂ ಬವಳಿಯುಂಪೊಗೆದಿರ್ಕುಂ ವಾತಪಿತ್ತಜನಿತಜ್ವರದೊಳ್ (ಕಲ್ಯಾಕಾ. III, ೦೦) ; ಬೇನೆಯಿಂದ ಕ್ಷೀಣಕಾಯನಾಗಿದ್ದ ಅವನಿಗೆ ಆ ದುಃಖಾವೇಗವು ಸಹನವಾಗದೆ, ಸ್ವಲ್ಪ ವೇಳೆ ಬವಳಿಯೂ ಬಂತು (ಸ್ವೋಲಿಮಿ. ೦೫೫).

ಬವಣೆ ಬರು, ಬವಳಿ ಬರು= ೧. ತಿರುಗು ; ಸುತ್ತು ; ಅಲೆ : ಭವವೆಂಬ ಬಲುಬಿಂಜದೊಳು ಬಹುದಿನದಿಂ ಬವಣೆ ಬಪ್ಪ ಬೇಸಱನು ತವಿಸುವೆನೆಂದು (ಶ್ರೀಭಂಜ. ೦-೦೬); ಇರುಳು ಹಗಲುಮೆನ್ನದೆಯಳ್ಳಿಕಾಱರು ವೆರಸಿ ಬವಣೆ ಬರುತಿರಲು ಪುರವನಿತೆಯರೆಲ್ಲ ಕೈಗೆಲಸವ ಬಿಟ್ಟು ಪರಿದು ಬಂದವನ ನೋಡುವರು (ವೇದಿಮಸಂ. ೮-೬೦). ೨. ಕಣ್ಣು ಕತ್ತಲಿಡು ; ಮೂರ್ಛೆಯುಂಟಾಗಂ : ಧೃತರಾಷ್ಟ್ರನು . . . ಎರಡು ಮಾತನಾಡಿದ್ದರಿಂದಲೇ ಆಯಾಸವಾಗಿ ಬವಳಿ ಬಂದಿತು (ವಚಭಾ. ೩೬೯) ; ನಾಲ್ಕು ಹೆಜ್ಜೆ ನಡೆದು ಹೋಗುವುದರೊಳಗೆ ಬವಳಿ ಬಂದಂತಾಗಿ ಕುಳಿತುಬಿಟ್ಟನಂತೆ (ಅಶೋಲೀ. ೬೮). [<ಸಂ. ಭ್ರಮಣ, ಭ್ರಮಣೀ]

**ಬವಣೆಗೊಳು,** ಬವಣೆಗೊಳ್, ಬವಣೆಗೊಳು,, ಬವಣೆಗೊಳ್ಳು, ಬವಣೆಗೊಳ್ಳು, ಬವಳಿಗೊಳ್ಳು (ಕ್ರಿ). ೧. ಕಷ್ಟಪಡು; ತೊಂದರೆಗೊಳಗಾಗು : ಅವಳು ಆ ಕಟ್ಟುಗ್ರಶಿಕ್ಷೆಯಲಿ ಬವಣೆಗೊಳುತಿಹಳಯ್ಯೊ ಗೋಳಿಟ್ಟು! (ನಡಿದಾ. I. ೯೩೯); ನಿಂತಿಹೆನು ನಾ ನಿನ್ನ ಬಾಗಿಲೆಡೆ ನವ್ವುನಾಗಿ ನುಡಿ ತುಯ್ದು ಬವಣೆಗೊಳೆ ಭಾವಗಳ ಭಾರದಿಂ ತಲೆಯ ಬಾಗಿ (ಮಲೆದೇ. ೯-೦೦). **ಬವಣೆಗೊಳ್ :** ೧. ಧರ್ಮರಾಯಾ ಏನು ಕಾರಣವಾಗಿ ನೀನೀ ರೀತಿಯಲ್ಲಿ ವೇದಮನೋದಿ ವೇದಾರ್ಥಮಂ ತಿಳಿಯದಿರ್ಪ ಜಡಮತಿಯಾದ ಪಾರ್ವನಂತೆ ಬಱಿದೆ ಬವಣೆಗೊಂಡು ಪಂಬಲಿಸುತಿರ್ಪೆ (ಕಾರಶಾಂ. ೦೦-೪೯); ಗಾಂಪನಿಗೆ ಬಡತನದೊಳು ಬಲು ಬವಣೆಗೊಂಬವನಿಗೆ ಕೊಡಲಾಗದು ಕುವರಿಯನು (ಹರಿಬಿ. ೩-೦೮). ೩. ಸುತ್ತುತ್ತಿರುಗು ; ಚಲಿಸು : ಕಡುಗಿ ಖಾತಿಯೊಳೀತನೊಂದು ಸರಳಂ ಪೂಡಿ ಬಿಡಲೂರ್ಮಿಳಾವಲ್ಲಭನ ತೇರೆರಡು ಗಳಿಗೆ ಬಿಡದೆ ತಿರುಗಿತು ಬವಣೆಗೊಂಡು ರಥವಾಜಿಗಳ್ಪೊಡೆ ಗೆಡೆದುವು (ಜೈಮಿಭಾ. ೨೦-೩೩); ನೇಸರ್ವೆಱೆಗಳಿರಾ ನೀಮಿಾಸು ದಿನಂ ಬವಣೆಗೊಂಡಿರಿಂ ಪದುಳಮಿರಿಂ (ಅಶ್ರತಿ. ೯೦-೦೬). **ಬವಣೆಗೊಳು :** ೨. ತವಕವಾಡುವ ತತ್ತರಿಪ ತಲ್ಲಣಿಸುವ ಬವಣೆಗೊಳುವ ಬಂಬಲಿಡುವ ಕವಿವ ಕಾತರಿಪ ಕರಗುವ ಕಾಲೂಱುವ ಸವಿನೋಟಗಳ ಸಮನಿಪ್ಪುದು (ಜಕವಿ. ೬-೦೩೬ ಸಾಂಗತ್ಯ). **ಬವಣೆಗೊಳ್ಳು :** ೨. ರುದ್ರಂಗೀಲ್ದಂದುಪದ್ರವ ಪರಿಹರಿಸೆ ಕಾಮೋದ್ರೇಕದಿಂ ಹಾಸ್ಯವೆತ್ತು ತದ್ರತಿಯುಂ ಬವಣೆಗೊಳ್ಳುತ್ತಿರೆ ಕಾಯಿದದ್ರಿಧರನೆ ರಂಗ ಶರಣು (ಕಕಸಾಂ. ೬-೩೪). **ಬವಣೆಗೊಳ್ಳು :** ೧. ಹಗಲಿನಂದಿನ ರೂಪು ತಂದಿತು ಬಗೆಗೆ ಸಾವಿನ ಚಿಂತೆಗಳನು ನಗೆಯನಣಕಿಸಿ ಸೊಗವ ಜರೆಯುತ ಬವಣೆಗೊಳ್ಳುವ ಭಾವವ (ಪಾಂಚ. ೨೯-೨೦). **ಬವಳಿಗೊಳ್ಳು :** ೧. ದಿಕ್ಕುಗೇಡಿಯ ಹಾಗೆ ಏನೊಂದು ತೋಚದೆ ಬವಳಿಗೊಂಡಳು ನಲ್ಲೆ ಬರಿದೆ (ಇಂಚಾಹ. ೫೨-೯೬). ೩. ಮೈಮೇಲಿನ ಎಚ್ಚರ ತಪ್ಪು ; ಅರಿವು ತಪ್ಪು; ಮೂರ್ಛೆಹೋಗು : ಆ ವೇಳೆಗೆ ತಲೆಯ ಮೇಲೆ ಬಿದ್ದ ಪೆಟ್ಟಿನಿಂದ

ಬವಳಿಗೊಂಡಿದ್ದ ಇನ್ನೊಬ್ಬ ರಾಜಪುತ್ರನು ಮೆಲ್ಲಗೆ ಚೇತರಿಸಿಕೊಂಡು. . . ಕೆಳಗೆ ಬಿದ್ದಿದ್ದ ತನ್ನ ಜೊತೆಗಾರನಿಗೆ ಸಹಾಯ ಮಾಡಲು ಹೋದನು (ಹಾರಹೀ. ೦). [ಬವಣೆ + ಕೊಳು (< ಕೊಳ್$_1$)]

**ಬವಣೆಗೊಳ್ಳು** 'ಬವಣೆಗೊಳು' ನೋ.

**ಬವಣೆಪಡು** 'ಬವಣೆಬಡು' ನೋ.

**ಬವಣೆಬಡು,** ಬವಣಿಬಡು, ಬವಣೆಪಡು (ಕ್ರಿ). ಕಷ್ಟಪಡು ; ತೊಂದರೆಪಡು : ದನುಜಮನುಜರ್ಗೆ ಭವಜಲಧಿಯೊಳಗಾಳುತೇಳುತ ಬವಣೆ [ಪಾಠಾಂ. ಣಿ]ಬಡುತಿಹರೀಶ್ವರನ ಕೃಪೆ ಸವನಿಸುವ ಪರಿಯಂತ ಗತಿಯನು ಕಾಣರವರೆಂದ (ಅಮೃತ. ೨-೧೭). **ಬವಣಿಬಡು** : ನಾವೆಲ್ಲರೂ ಇಷ್ಟೆಲ್ಲ ಬವಣಿಬಡುವುದು ಏತಕ್ಕಾಗಿ ? ನಮ್ಮ ದಿವ್ಯಧ್ಯೇಯವಾದ ಪ್ರೇಮವು ಮಾಗಲೆಂದು (ನಮಷೀ. ೩೬೬). **ಬವಣೆಪಡು** : ಆ ಸ್ತಂಭವು, ಬವಣೆಪಡುತ್ತಿರುವ ಇವರ ಕಡೆಗೆ ಬೆನ್ನುಮಾಡಿ ರಾಕ್ಷಸನಂತೆ ನಿಂತಿತ್ತು (ಶುಹಾಕ್ಕಾ. ೦೧೧); ಮುಖ್ಯೋಪಾಧ್ಯಾಯರಾದ ಮಾಧವರಾಯರು ಜೀವನದಲ್ಲಿ ಸಾಕಷ್ಟು ಬವಣೆಪಟ್ಟವರಾದುದರಿಂದ ಅವರ ಒಲವು ಬಡಪಾಯಿಗಳ ಮೇಲೆ ವಿಶೇಷವಾಗಿತ್ತು (ಕುರುಕಾ. ೬೩). [ಬವಣೆ + ಪಡು$_1$]

**ಬವನ** (ನಾ). ವಾಂತಿ; ವಮನ : ಸುತ್ತುಂ ಪಿಶುನಂ ಪೆಱರ್ಗಾಪತ್ತಂ ಮಾಡದಿರನೆಂದು ಮಱುಗಿದಪುದು ಮಚ್ಚಿತ್ತಂ ಮೃತವಮಾಪಮುಖಂ ಮತ್ತನಿಸದೆ ಬವನಮಯ್ದೆ ಪವೊಲುಂಬವನಂ (ಅಲಾಪ. ೦-೩೭). [< ಸಂ. ವಮನ]

**ಬವನಾಶಿ,** ಬವನಾಸಿ, ಬೋನಾಶಿ, ಬೋನಾಸಿ, ಭವನಾಸಿ (ನಾ). (ಸಾಮಾನ್ಯವಾಗಿ ದಾಸರು ಉಪಯೋಗಿಸುವ) ಒಂದು ಬಗೆಯ ಭಿಕ್ಷಾಪಾತ್ರೆ : ಮಗ್ಗುಲಲ್ಲಿ ಅವಳಿಂದ ಹೊರಲಾರದಷ್ಟು ದೊಡ್ಡದಾದ ಜೋಳಿಗೆ ಬಿದ್ದಿದೆ . . . ಹಿತ್ತಾಳಿಯ ಒಂದು ಬವನಾಶಿಯಿದೆ (ಅಕಾ. ೩೩). **ಬವನಾಸಿ** : ಬ್ರಾಹ್ಮಣನು ಬವನಾಸಿಯನ್ನು ಹಿಡಿದು ಜೀವಿಸುವವನು (ಹೀಶ್ಮಕ. ೦೬೦); ದಾಸಯ್ಯನು ಒಂದು ತುತ್ತೂರಿ ಊದಿ. ಬವನಾಸಿ ತುಂಬಾ ಭತ್ತ ತುಂಬಿಕೊಂಡು ಹೋಗುತ್ತಿದ್ದನು (ಹುಬ್ಬಿಹ. ೬೩). **ಬೋನಾಶಿ** : "ಬವನಾಸಿ (ಬೋನಾಶಿ) ಭಿಕ್ಷಾಪಾತ್ರೆ, ಸಾರು ಬಡಿಸುವ ಮೂತಿಯುಳ್ಳ ಪಾತ್ರೆ" (ಸಿಂಕೋ. ೩೭೨). **ಬೋನಾಸಿ** : ಹಿಂದೆ ದಾಸರಿಗೆ ಬೋನಾಸಿ ತುಂಬಾ ಭಿಕ್ಷೆ ಹಾಕುತ್ತಿದ್ದರು (ರೂಹಿ). **ಭವನಾಶಿ** : ತಂಬೂರಿ, ಭವನಾಶಿಗಳು ವಂಶೀಕರ ಪೂಜ್ಯ ಪದಾರ್ಥಗಳಾಗಿವೆ (ಕರಶಿ. ೩೩೦); ದಾಸಯ್ಯನ ಜಾಗಟೆ, ಭವನಾಶಿ . . . ಅವರು ನಡೆಸುವ ಆಚರಣೆಯ ಸಾಧನ ಸಲಕರಣೆಗಳು (ಕರಜೋ. I. ೦೧). [<ಬೋನ + ?]

**ಬವನಾಸಿ** 'ಬವನಾಶಿ' ನೋ.

**ಬವರ$_1$** (ನಾ). ೧. ಯುದ್ಧ ; ಕಾಳಗ ; ಸಂಗ್ರಾಮ : "ಬವರಮೆನಲ್ ಸಂಗ್ರಾಮಂ" (ಕಕುಶಿ. ೧೬೦); ಕಾವೇರೀ ಬವರದೊಳೀಗಳಾನಿವನನೆಂದು ನೃಪಂ ದಯೆಯಿಂದಮ್ಮಾ ಯುಯುತ್ಸುವನೊಡಗೊಂಡು ಬಿಧಿದಂ (ಶಂಕಶಿ. ೦೦-೬೩); ಬವರ ಮುಱಿದುದು ವಿಜಯಲಕ್ಷ್ಮಿಯ ಸವತಿ ಸೇರಿತು ಸುಭಟರಿಗೆ ಬಳಿಕವನಿಪತಿಯೇ ತಱುಬಿ ನಿಂದನು ಭಾನುನಂದನನ (ಕುಪ್ಪಾಕ. ೦೦-೧೦); ಕಕ್ಕಸದಿಂದೊಂದು ಬವರ ಬಂದಡಸಿತು ಒಕ್ಕಣಿಸಲು ಬಂದೆ ನಿನಗೆ (ಮೋಹಕ. ೦೦-೭). ೨. ಜಗಳ; ಕಲಹ; ವಾದ : ಧರ್ಮಾಧಿಕರಣರ್ ನಡೆಯಿಂ ನಿಮ್ಮಿರ್ವರ ಬವರಮಂ ತಿರ್ದುವಮೆಂದು ವಟವೃಕ್ಷದ ಸಮಿಪಕ್ಕೆ ವಂದು (ಸಂಕಕಂ. ೦೭೬-೨); ಬಲ್ಲಿದರೊಡನೆ ಬವರವಾದರೆ ಗೆಲಲುಂಟು ಸೋಲಲುಂಟು (ಶಿಶಪ. ೦೫೦); ಆ ನಾರಿ ಅವಿರಳಕೋಪವ ತಾಳಿ ಮರ್ಮವ ಪೇಳಿ ಬವರವನೆಸಗಿದಳಾಗ (ಕಂಪಶಿ. ೩-೦೩೧). ೩. ಸ್ಪರ್ಧೆ; ಹುರುಡು; ಪೈಪೋಟಿ: ಅಂತೂ ನಾಗೋಲಿಯ ದಿವಸದ ಹಾಡಿನ ಬವರಕ್ಕೆ ಅನ್ನಪೂರ್ಣೆ ಹಾಜರಾದಳು (ಪಾಪಿಸ. ೩೩). ೪. ಕಷ್ಟ ; ತೊಂದರೆ ; ಸಂಕಟ : ಎನಗೆ ಬಂದ ಬವರಕೇಕೆ ನಿಮಗೆ ಬಂಧನ (ಪುಹಾಧರೀ. ಬ. ೦೫೩-೩೪೨); ಬವಗದಲಿ ಸಿಲುಕಿದುದ ಹವಣರಿದು ತೋಳ ನೆವನವರಿಯುತ ಹೇಳ್ದ ನಿಶ್ಲೆಲವೊ ! ಖೂಳ ! ಅವಸರದಿ ನಿನ್ನಪ್ಪನೆಂಬುದನೆ ಮರೆದೆ (ಕಂತಿ. ೦೩-೭).

**ಬವರದಲ್ಲಣ**=ಯುದ್ಧದಲ್ಲಿ ಶತ್ರುವಿಗೆ ತಲ್ಲಣವನ್ನುಂಟುಮಾಡುವವನು ; ಒಂದು ಬಿರುದಂ : ಬಾವನ್ನವೀರ ಬವರದಲ್ಲಣ ಮಾಯಿದೇವ ರಾವುತನೆಯ್ದಿದನು (ಶಂಗಸಾಂ. ೦೦-೬೨). [ದೇ. ಗೆ ತೆಲು. ಬವರ]

**ಬವರ$_2$,** ಬಮುರ (ನಾ). ಕಪ್ಪುಬಣ್ಣದ ದೊಡ್ಡ ದುಂಬಿ ; ಭ್ರಮರ : "ಅಲರ್ವಕ್ಕಿ, ಬಂಡುಣಿ, ಪಱಮೆ, ಮಲ್ಲಟಿ, ಮೊಳಂಬಂ, ಬವರಂ, ಮುಯ್ಯೆರಡಡಿ___ಈ ೭ ಭ್ರಮರಂ" (ಕಕಸಾ. ೩೩-೦೯೬) ; ಪರಿವೃತರೇಫಲೋಪಕ್ಕೆ – ಕ್ರೇಣಿ – ಕೇಣಿ . . . . ಭ್ರಮರ – ಬವರ (ಕಪುಂದ. ೨೬೦ ಪ್ರಯೋ) ; ಸುರವರದುಂದುಭಿಧ್ವನಿ ವಿರಾಜಿಸೆ ಬಾಂದಳದೊಳ್ ಮರಲ್ ಸರಿ ಪ್ರರುಚಿರವಾಗಿ ಸೂಸೆ ಬವರಂಗಳ ಝೇಂಕೃತಿಯುತ್ತಲುಣ್ಮಿರಲ್ . . . ಪರತರ ಸುಂದರೇಶ ಘನತೇಜದೊಳೊಂದಿದನೂರ್ಜಿತಪ್ರಭಂ (ಹಾಲಾಸ್ಯ. ೩-೭-೧೫). **ಬಮುರ** : "ಬಮುರಂ ಭ್ರಮರಮಕ್ಕುಂ" (ಕಕಶ. ೭೩). [ <ಸಂ. ಭ್ರಮರ ]

**ಬವರಂಗೆಯ್** (ಕ್ರಿ). ಯುದ್ಧಮಾಡು ; ಕಾಳಗ ಮಾಡು ; ಹೋರಾಡು : ಬವರಂಗೆಯ್ವಮ[ಪಾಠಾಂ. ಯ್ವುದ]ವೋಘಮೆಂಬ ಬಗೆಯಿಂ ನೀಮೆಲ್ಲಮಾದಂ ರಣೋತ್ಸವದಿಂ ನಿನ್ನೆಯ ಪೋದ ಗೋಗ್ರಹಣದಂದೇನಾದಿರ್ (ಶಂಕಶಾ. ೯-೩೬) ; ನೀವಿರ್ವರುಮಿಲ್ಲಿರ್ದು ಬವರಂಗೆಯಲ್ವೇಡ ತಕ್ಕರ ಸಮಿಪಕ್ಕೆ ಪೋಗಿ ವಿಚಾರಂಗೆಯ್ದು ಅವರ್ ಪೇಟ್ದಂತೆ ಕೇಳಿಮೆನೆ (ಶಂಕಕಂ. ೨೨೭-೬) ; ಮಾಹಿಷ್ಮತೀವಲ್ಲಭಂ ಬವರಂಗೆಯ್ದು ದಶಾನನಂಗೆ ರಣದೊಳ್ ಸೋಲ್ತೀವದಿಂ . . . ಜಿನದೀಕ್ಷೆಗೊಂಡು (ಶಂರಾಪಶಾ. ೨-೬೩). [ ಬವರ$_1$ + ಕೆಯ್$_1$ ]

**ಬವರಂಗೊಳ್** (ಕ್ರಿ). = ಬವರಂಗೆಯ್ : ರಾಯುಮನ್ನೆಯರ್ ವಿಧವಱಿಯಲ್ಕೆ ಸಾಲದವರುಂ ಬವರಂಗೊಳಲಿರ್ದಪರ್ (ಶಕಶಿ. ೩-೧೦). [ ಬವರ$_1$ + ಕೊಳ್$_1$ ]

**ಬವರಗಂಡ** (ನಾ). ಕಾಳಗದ ಕಲಿ ; ರಣವೀರ : ಚಿಕ್ಕಕಾಟಯ್ಯ ಸರ್ಗಸ್ಥನಾಗೆ ಬಳನೆತಲಾಗ ಜಯಿಸಿ ಸತ್ತ ಮುನವೆಳೆ ಕಳಿಹಿ ಬವರಗಣ್ಣಾ ತಟಿಬಿಮಕಯ್ಯ ಕಲ್ಲ ನಿಲ್ಲಿಸಿದ ಮುಯ್ದುನ ಪಲ್ಲಯ್ಯ (ಎಕ. V, ಶುಂಜಿಶಾ. ೫೦-೩ ; 1034). [ ಬವರ$_1$ + ಗಂಡ$_1$ ]

**ಬವರಗಲಿ** (ನಾ). ರಣವೀರ ; ಶೂರ : ಬವರಗಲಿ ನಾಟ್ಯಮಹಿತಂದಿವೆರಸು ದಿವ್ಯಾನಕಂಗಳುಲಿವುತ್ತಿರೆ ದಿವ್ಯವಿಮಾನಂ ಬೆಳಗುತ್ತುತ್ಸವದಿಂದಂ ರಜತಗಿರಿಗೆ ಬಂದತ್ತಾಗಳ್ (ತ್ರಿಪುಶಿ. ೫೦-೦೧) ; ಬವರಗಲಿ ಬಂದೆಯು ಸಮಿರನ ಕುವರ ಮುಖ್ಯಪ್ರಾಣ ಬಾರೈ ಭುವನಪಾವನಚರಿತ ಬಾರೆಂದಪ್ಪಿದನು ರಾಮ (ಕಾಂಪಿಃ. ೫೨). [ ಬವರ$_1$ + ಕಲಿ$_2$ ]

**ಬವರಗಾರ** (ನಾ). ಯುದ್ಧ ಮಾಡುವವನು ; ಸೈನಿಕ; ಯೋಧ : ಬವರಗಾರರ ದೇವನೆನಬಹುದು . . . ಎಂದು ನೃಪ ಪೊಗಳೆ (ಕಹಾಕಾ. ೦೧). [ ಬವರ$_1$ + – ಗಾರ (< _ಕಾಱ) ]

**ಬವರಮುಖ** (ನಾ). ಯುದ್ಧರಂಗ ; ರಣಮುಖ : ಅಂಬುಜಾನನೆ ದನುಜಿ ಕಾಡಿದೆಡೆ ನೋಡಿತ್ತಲುಂಬಿಂ ಸಹೋದರಂ ಮಾನಗಳೆದಿರ್ಪ ತಾಣಂ ಬವರಮುಖದಿ ಖಳರಟ್ಟಿದ ನೆಲೆ (ತ್ರೀರಾಮು. ೩-೧೦). [ಬವರ$_1$ + ಮುಖ]

**ಬವರಿ,** ಬಂಗರ್ಯ, ಬಗರಿ, ಬಮುರಿ, ಬುಗರಿ, ಬುಗುರಿ, ಬೊಗರಿ, ಬೊಗರೆ, ಬೊಹರಿ, ಭಗರಿ (ನಾ). ೧. ಕಪ್ಪು ಬಣ್ಣದ ದುಂಬಿ ; "ಬವರಿಯೆನಲ್ ಭ್ರಮರಿ" (ಕಾಅಕ. ೧೨) ; ತಣ್ಣೀರೊಳಟ್ಟಿದ ತನಿ

ಗೆಂಡಕ್ಕೆ ದೊರೆವರ್ವ ಬವರಿಗಳ ಗಾವರಕ್ಕೆಟ್ಟತ್ತು ಗೂಡನುಟಿದು . . . ನಲಿವ ಪಕ್ಕಿಗಳ್ಗೆ (ರಾಜಶೇ. ೦೦೦-೦೩). ೨. ತಿರುಗುವಿಕೆ; ಸುತ್ತುವಿಕೆ; ಭ್ರಮಣ: 'ಬವರಿಗೊಳು' ಪರಾ. ೩. (ಯುದ್ಧದಲ್ಲಿ) ಹೊಡೆತವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ವರ್ತುಲಾಕಾರವಾಗಿ ತಿರುಗುವ ಒಂದು ಬಗೆಯ ಪಟ್ಟು,—ವರಸೆ: "ಬವರಿ ಕರ್ತರಿಯುಕ್ಕು" (ಮಂಗರಾ. ೬೩-೨೩); ಅಡಸಿ ಹೊಯ್ದೊಡೆ ಬವರಿಯಲಿ ಟೊಣದೌಕಿದೊಡೆ ಪಡಮುಟಿಯದೊಳಹೊಕ್ಕು ಸವಡಿಮಂದರದಂತೆ ಕೀಚಕ ಪವನಸುತರೊಪ್ಪಿದರು (ಕುಮಾವ್ಯಾ. ೩-೯೯); ಚಾರಿಯನುಚಾರಿಗಳ ಪಯಗತಿಯೋರೆಪೋರೆಯ ಬವರಿಗಳ ಸಂಚಾರಣೆಯಲಬ್ಬರಿಸಿ ತಿವಿದನು ರಾಘವೇಶ್ವರನ (ತೊರವೆ. ೬-೨೮-೪೮). ೪. ದಾರವನ್ನು ಸುತ್ತಿ ಆಡಿಸುವ ಗುಂಡನೆಯ ಆಟಿಕೆ; ಭ್ರಮರಕ: ಕುಂಭಾಜನ ಚಕ್ರದಂತೆ ಮಕ್ಕಳಿಟ್ಟ ಬವರಿಯಂತೆ[ಪಾಠಾಂ. ಹರಿಯಟ್ಟಿಯ ನೂಲಿನಂತೆ]ಜೂಟಣದ ಮೊಗವೆಯಂತೆ . . . ಅಳಿವುವಂತಕ್ಕುಮೆಂದು ಕಳಕಳಿಸಿ ನಕ್ಕು (ಧರ್ಮಾಮೃ. ೯-೨೩). ೫. ವರ್ತುಲಾಕಾರವಾದ ಒಂದು ಬಗೆಯ ಕರ್ಣಾಭರಣ: ಉಡೆಸುತ್ತಿನ ದಿವ್ಯಾಂಬರ ಶಿರದೊಳು ಕಡಗ ಕುಂಡಲ ಯಜ್ಞಸೂತ್ರ ಎಡನರೆ ಬವರಿ ಮುತ್ತಿನ ಚಿಂತಿ ಕುಲ್ಲಾವಿ ಬೆಡಗುಗಾಣಿಸುತಿರಲು (ಹಾಗಳು. ೨೯-೫). ೬. ಕೆನ್ನೆಯ ಮೇಲಿನ ಗುಂಗುರುಕೂದಲು; ಪನ್ನೆ: ವಿಟವೇಷದಿಂ ಬಂದಂ . . . ಮೊಳೆವ ತುಪ್ಪುಳುಮೀಸೆ ತೊಳಪ ಬ[ಪಾಠಾಂ. ಭ]ವರಿಗಳಿಂದ ಬೆಳಗುತಣ್ಣೆಸಗಳಿಗೆ ಪರಿವ ಕಣ್ಬೆಳಗಿಂದೆ (ಶಿವಸಂ. ೦೬೯-೪೩); ಮುಗುಳ್ನಗೆ ಮೇಳವಿಸುವ ಮುಖಪ್ರಸನ್ನತೆ ಪೀಳ ಬವರಿಯ ಗಡ್ಡವೊಪ್ಪುತ್ತಿರೆ ಜಗತ್ರಯವ ಪಾಲಿಸುವ ಮುನಿವಲ್ಲಭಂ . . . ಇಂತೆಂದಂ (ಭಗವ. ೩-೨೬); ಉಬ್ಬಿ ಬೆಳೆದು ಬಾಗಿತಿಲ್ಲ ರೇಖೆಗೆ ಬಂದು ಹುಬ್ಬಿನಂತೆಸೆವಳಿ ಮೀಸೆ ಹುಬ್ಬು ಮೀಸೆಯ ನೋಡಿ ನಲಿವ ಬವರಿ ಕಣ್ಣ ಹುಬ ವ ಮೂಳ್ಪ ನೆಲ್ಲರಿಗೆ (ಧರ್ಮ. ೧-೪೦); ಕೆಲವಾತಗಳ ಮುಖಗಳಿಗೆ ಗಡ್ಡ ಬವರಿ ಮೀಸೆ ಜುಲ್ಪಿ ಹಣೆಯ ಉಂಗುರುಗುರುಳು — ಇವುಗಳಲ್ಲಿ ಒಂದೋ ಕೆಲವೋ ಅನಿತುವೋ ಇದ್ದರೆಯೇ ಸಲಕ್ಷಣಸೌನ್ದರ್ಯ (ಶುಂಕ್ರ.೩.೯೦-೨). ೭. ಕುದುರೆಯ ನಡುಗೆಯ ಗತಿಗಳಲ್ಲಿ ಒಂದು ಬಗೆ; ಮಂಡಲಾಕಾರವಾದ ನಡಗೆ: ಭ[ಬ]ವರಿ ಭಂಜನೆ ಅಳಿಲುಳಿತ ವರ ತರಹಮೆಂಬ ನವೀನಗತಿಗಳೊಳು ತನ್ನ ಮನಮೆ ಹಯದ ತನುಗತಿಗಳಾದಂತೆ ವಾಹಕವಿನ್ನಾಣಂಗಳಂ ತೋಱುತ (ಕುಮಾಸ್ರ. ೬-೫೦ ಪ). ೮. (?): x x x ಬಾಣಗಾವುಣ್ಡನ ಕೆಱಿಯ ಬವರಿಯುಂ ಬಾಳುವಲಿ(?)ರಾಜು ಅರುವತ್ತೈದು ಊರ್ಗಂ (ಮ್ಯೆಕಂ. ೦೯೨೫.೯೨-೪; ?). ಬಂಗರ೧: ೪. ಇಷ್ಟೆಲ್ಲ ಮಾತು ನಡೆಯುತ್ತಿರುವಲ್ಲಿ ಚೋಮನ ಬುದ್ಧಿ ಬಂಗರದಂತೆ 'ಓಡುತ್ತಿತ್ತು (ಚೋಮ. ೩೪೮). ಬಗರಿ: ೪. ನಾ ಬಗರಿ ಆಡಿ ಬಂದು ತಿಂತೇನಿ (ಮೋಲಮ. ೨೯). ಬಮರಿ: ೧. ಕುಳಿರ್ವೆಟ್ಟಿಱಿಯುನ ಕುವರಿಯನ್ನೆಮೊಗನೊಲವೆನಿಪಂಬುಜಕೆಱಗುವ ಬಮರಿಯುಂ (ಕವಿ. II, ೦೦೯ ಉಮಾಸ್ತೋತ್ರ ಷಟ್ಪದ). ಬುಗರಿ: ೪. ನಿನ್ನ ಎದಿ ಮ್ಯಾಲ ಕುಚಾಗಳು ಬುಗರಿ ನಿಂತವು ನಿಗುರಿ (ಮುಡ್ಪುಹ. ೪೩). ೯. ಒಂದು ಬಗೆಯ ಮರ ಮತ್ತು ಅದರ ಹಣ್ಣು; ಎಲಚಿ: ಬುಗುರಿ ಈಯಿ ಶಬರಿ ಕಾಯಿ ರಾಮನಿಲ್ಲಿ ಬಂದನೆ? (೧೯ಶಿಂ. ೮೦-೦೫). ೧೦. ಭ್ರಮರಕದ ಆಕಾರದ ಕಾಯಿಗಳನ್ನು ಬಿಡುವ ಒಂದು ಬಗೆಯ ಮರ: ಲಾಲ್‌ಬಾಗಿನಲ್ಲಿ ಬುಗರಿ ಮರಗಳು ಬೇಕಾದಷ್ಟಿವೆ (ಕಿಂಕಿ). ೧೧. ಒಂದು ಬಗೆಯ ಗಿಡ: "ಅಸ್ಕಂಧಮನಲಾ ಬುಗ[ಪಾಠಾಂ. ಗು]ರಿ" (ಮಂಗರಾ. ೩೫-೦೫). ಬುಗುರಿ: ೪. ತಿಗುರಿಯುಂ ಬುಗುರಿಯುಂ ಜಾತಿಯುಂ ಭೀತಿಯುಂ ಆಗೆ ಪರಿವಾಗಳ್ (ರಸೋನ್ನತ್ಯ. ೬-೦೦೯); ಯಾದವ ನೀ ಬಾ . . . ಚೆಂಡು ಬುಗುರಿಯನಾಡುತ ಸಣ್ಣ ಸಣ್ಣ ಗೋವಳರೊಡಗೂಡಿ (ಪುರಂದ. ೦-೦೩-೨); ಸೂರ್ಯನಿಗೆ ಒಂದು ಬಾರಿ ಬುಗುರಿಯಂತೆ ಒಂದು ಸುತ್ತು ಸುತ್ತುವುದಕ್ಕೆ ೨೫ ದಿವಸಗಳು ಬೇಕಾಗುವುದು (ಅಕಾಶ. ೦೦). ೧೦. ಹೂವಂಸಿ, ಜೋಗಿಯರಳೆ, ಬುಗುರಿ (ಮೈಶಿಂ. ೬೪-೦೫೨೦). ೧೧. ಮೇಲಿನ 'ಬುಗರಿ' ಉಲ್ಲೇಖದ 'ಮಂಗರಾ. ೩೫-೧೫' ಪ್ರಯೋಗದ ಪಾಠಾಂತರವನ್ನು ನೋಡಿ. ಬೊಗರಿ: ೪. ಮದನನ ಕೈಯೊಳಗಾಡುವ ಪೊಸ ಚಿನ್ನದ ಬೊಗರಿಯನಿನಿವಿರಿದುಂ ನಗುವಂದದೆ ಹೊಗರಿಸುವ ಮುಕುಳ್ಕೊಲೆಯೊಪ್ಪಿದುವಾ ನೃಪನಂದನೆಗೆ (ಜಯಶಾ. ೦೩-೦೨): ಕೇತಕಿಯೆಸಳ ಜಱಿವ ಬೆಳ್ಳುಗುರಿಂದ ಶಾತಕುಂಭದ ಬೊಗರಿಗಳ ರೀತಿಯ ಬಲ್ಮೊಲೆಗಳ ಮೇಲೆ ನಿನ್ನಯ ನೂತನನಖರೇಖೆ ದೋಱಿಕೊ (ಕಂಸವ. ೯-೦೯೩); ಕಲ್ಪನೆಯ ಬೊಗರಿ ತುದಿಬೆರಳ ತಿಗರಿ ಓಡುತ್ತಿತ್ತು ನಿದ್ದೆ (ಅರಳು. ೪೦೦-೪). ೯. ಶಬರಿ ಇತ್ತೆಳೆಬೆಯುಂ ರಾಮನಿದೊಮೆಲ್ಲಲಿಲ್ಲಾ? ನಮ್ಮ ತಿನಿಸೊ ಶಬರಿಯ ಬೊಗರಿ! (ಹಕ್ಕಿರ. ೩೯-೨೨೫). ಬೊಗರೆ: ೪. ಗಂಡುಮಕ್ಕಳು ಚೆಂಡು, ಗುಂಡು, ಬೊಗರೆ ಮೊದಲಾದ ಗುರಿ ಕಲಿಸುವ ಆಟಗಳನ್ನು ಆಡುತ್ತಾರೆ (ಕಸ್ತೂರಾ. ೪೬); ಅತ್ತ ಚೆಂಡಿದು ಇತ್ತ ಬೊಗರೆಯು (ಗರಿ. ೪೯-೨); ಭೂಮಿಯು ಒಂದೇ ನಿಟ್ಟಿಗೆ ಒರಗಿದ ಬೊಗರೆಯಂತೆ ದೊಂಕಾಗಿ ನಿಂತು ತಿರುಗುತ್ತದೆ (ಕ್ರೋಢೀಕಾ. ೫೬). ಬೊಹರಿ: ೪. ಸೆಂಡು ಜಿಗಿಹಲ್ಲಿ ಬೊಹರಿಗಳಾಟದಲ್ಲಿ ಮನಗೊಂಡಾಡಿ ಬೆಳೆದು ಜವ್ವನನಾಗಿ ಬಾಳ್ವೆಯಿಲ್ಲದೆ ಕೆಟ್ಟು ಹೋದೆಯಲ್ಲಾ (ಸಮ್ಮೇಳ. ೦೦-೯). ಭಗರಿ: ೪. ಕುಣಿಯೋಣು ಬಾರ . . . ಚಿಗರ್ಯಾಗಿ ತಿಗರ್ಯಾಗಿ ನಿದ್ದಿಯ ಭಗರ್ಯಾಗಿ ಗಾಳೀಗು ಹಗುರಾಗಿ (ಗರಿ. ೦೨೪-೬). ೧೨. (ಆಲಂ) ವೃಷಣ: ಪುಣ್ಯಕ್ಕೆ ಹೆಣ್ಣುಮಕ್ಕಳಿಗೆ ಗೋವಿಂದಭಟ್ಟನ ಭಗರಿಯ ಅರ್ಥವಾಗಲಿಲ್ಲ (ದೀಶಹ. II. ೩೬೬). 'ಭ್ರಮರಿ' ಪರಾ.

ಬೊಗರೆಜಲ=ಸುಳಿಯಿರುವ ನೀರು; ಜಲಾವರ್ತ: ಒಗರುಫಲ ತಿನಹೊಲ್ಲ ಬೊಗರೆಜಲ ಹೊಗಹೊಲ್ಲ ಬೊಗಳುವ ನಾಯ ನೆರೆ ಹೊಲ್ಲ ಮನೆಯಲಿ ಜಗಳವೇ ಹೊಲ್ಲ (ಸರ್ವಜ್ಞ. ೦೦೬೦).

[<ಸಂ. ಭ್ರಮರಿ./ತಮಿ. ಪಮ್ರಿ; ತುಳು. ಬುಗುರಿ, ಬೊಗರಿ, ಬೊಗೊರಿ; ತೆಲು. ಬವರ, ಬವಿರಿ, ಬವಿರೆ, ಬೊಂಗರ, ಬೊಮ್ಮರ./ಮರಾ. ಭೋವರಾ, ಭೋಂವರಾ]

**ಬವರಿಗ** (ನಾ). ಭಟ; ಸೈನಿಕ; ಯೋಧ: ಬವರಿಗರು ನೀವೆ ವಿಪ್ರವೇಷದ ಜವನಿಕೆಯ ಜಾಣಾಯ್ಲತನದಿಂದವಗಡಿಸಿ ಹೊಕ್ಕಿರಿಯುಪದ್ವಾರದಲಿ ನೃಪಸಭೆಯ (ಕುಮಾವ್ಯಾಸ. ೨-೬೯); ಗಱಿಯ ಗಾಳಿಯ ಬೊಬ್ಬೆ ಬವರಿಗರ ಬಲುರಭಸ . . . ಕಿವಿ ಕಿವುಡುಗೊಂಡುದಜಾಂಡಮಂಡಲದ (ತೊರವೆ. ೬-೪೦-೩೪); ಜವದಾಡೆ ಜಲ್ಲಿಯ ಬಿಲ್ಲು ಕೈಗತ್ತಿಯ ಬವರಿಗರತಿ ಹರುಷದಲಿ. . . ಒಪ್ಪಿಹರು (ಕಂನಶಿ. ೦೦-೦೦೬); ಬವರಿಗರಾದ ನೀವು ಬಹಳ ಜಾಣತನದಿಂದ ವಿಪ್ರವೇಷವನ್ನು ಧರಿಸಿದ್ದೀರಿ (ರಾಜಸೂ. ೦೯).

[ಬವರ೧+-ಇಗ]

**ಬವರಿಗಡ್ಡ, ಬೊಗರಿಗಡ್ಡ** (ನಾ). ಮುಖಕ್ಕೆ ಶೋಭಿಸುವಂತೆ ಕತ್ತರಿಸಿರುವ ಗಡ್ಡ: ರಂಜಿಸಿತು ಯವ್ವನದಿರವು ನಿಮ್ಮಯ್ಯಂದಿರಿಗೆ ಕುಡಿವರಿವ ಮೀಸೆಯ ಕಪ್ಪುದೋಱುವ ಬವರಿಗಡ್ಡಗಳ. . . ಹೊಗರಿನಲಿ ಸದರಿಂದುದಿನೇಶರಂದದಲಿ (ತೊರವೆ. ೪-೦-೦); ಭಂಡಿಯಲಿ ಕುಳಿತಿರುವ ಕಪಿಯನುಗೊಂಡ ರೂಪಿಗು ಬವರಿಗಡ್ಡದ ಚಂಡಿಕೆಗು ವಾಲ್ಮೀಕಿ ಜನ್ಮದಿಂದಲಿ ಬೀಸಿಕೊಳುತಿರಲು (ಜರಾಸಂ. ೩೬೯-೦೪); ಗುಜ್ಜುರೂಪನು ಬೊಜ್ಜೆ ಹೊಟ್ಟೆಯ ತನಿಗೆ ಮೋಟಾದ ಕೈಗಳು ಮಾಟದ ಮೀಸೆ ಬವರಿಗಡ್ಡವು ತನಗೆ (ಹುಸೇಳ. ೦೩೦). **ಬೊಗರಿಗಡ್ಡ**: ದ್ರೋಣನದ ದಿಟ್ಟಸುತ ಬೊಗರಿ ಗಡ್ಡವನೆಳೆದು ಭಟರಿಗಂ ನೇಮಿಸಿದ (ಕುಶಂಗ. ೫೬-೪).

[ಬವರಿ+ಗಡ್ಡ೧./ತೆಲು. ಬವರಿಗಡ್ಡ, ಬವಿರಿಗಡ್ಡ]

**ಬವರಿಗೊಡು** (ಕ್ರಿ). (ಬುಗುರಿಯಂತೆ) ವೇಗವಾಗಿ ಸುತ್ತು,—ತಿರುಗು:

ಲೋಲಭ್ರುವುರಂ ಭ್ರುವುರೀಮಾಲೆ ತೆಱಂದಿಱಿಯೆ ತಾಂ ತೆಱಂದಿಱಿವ ವೊಲುನ್ಮೀಲಿತಮನನಮರೀಸಮುಲೀಲಂ ಹರಿ ಬವರಿಗೊಟ್ಟನಾಟ್ದು ಬೆಡಂಗಿಂ (ಶಾಂತಿಪು. ೦೦-೬೩); ಒಬ್ಬರ ನೋಡುವಾಗ ಅಱುವತ್ತು ಮನುಷ್ಯರ ನೋಡುವ ಹಾಗೆ ಆಗುತ್ತಿದೆ ಶೂನ್ಯಸಿಂಹಾಸನ ಬವರಿಗೊಡುತ್ತಿದೆ ಪ್ರಾಣ ಹೆಡತಲೆಯಲ್ಲಿ ಹೋಗುತ್ತಿದೆ (ಅವಶಂ. ೨೪೬-೦೦೩೬). [ಬವರಿ+ಕೊಡು$_1$]

**ಬವರಿಗೊಳು** (ಕ್ರಿ). ಸುತ್ತಿಸು; ತಿರುಗುವಂತೆ ಮಾಡು : ವೃಕೌಘಮಂ ಬಡಿದು . . . ಪುಲ್ಲೆಯಂ ಬವರಿಗೊಳುತ್ತೆ ಬೇಡವಡೆಯಾಡಿದುದಗ್ಗದ ಬೇಂಟೆಯಂ (ರಾಜಶೇ. ೩-೦೦೬). [ಬವರಿ+ಕೊಳು (<ಕೊಳ್$_1$)]

**ಬವರಿದಿರುಗು, ಬೊಗರಿದಿರುಗು** (ಕ್ರಿ). ಗಿಂಡಗೆ ಸುತ್ತು; ತಿರುಗು : ನಾಯ್ಗಳುವೆರಸಿ ಮುಕ್ಕುಱಿಕ್ಕಲು ಮೆಲ್ಲನೊಲೆದುಬ್ಬಿ ಪುಟನೆಗೆದು ಗಜಱಿ ಗರ್ಜಿಸಿ ಪುಳಿಂದರ ಮೇಲೆ ಬವರಿದಿರುಗಿ . . . ಎಲ್ಲರೊಡಲ ಕಳವಳಿಗೆಯ್ದು ಬೀದಿವರಿದೊಕ್ಕಲಿಕ್ಕಿತ್ತು ರಕ್ತಸಮಿಗಿಂ ಕಾಡೊದಱಲು (ಹಕಶಾ. ೬-೬); ಬವರಿದಿರುಗುವ ತಿರುಗಿ ನಡೆವ ನಡೆದೊಡಲುಬ್ಬಿ ಧವರಿಸುವ . . . ಕರಿನಿವಹ ವಕ್ಕಾಡಂಬರಂ ಮಿಕ್ಕು ಹಣ್ಣಿ ನಿಂದವು ಬಲದ ನಟ್ಟನಡುವೆ (ಸೋಕುಶ. ೩-೨೯). **ಬೊಗರಿದಿರುಗು** : ಬಿರುದಿನಂಕದ ಭಟರು ಭೋರೆಂದು ಬೊಬ್ಬೆಗೈದು . . . ಬೊಗರಿದಿರುಗಿ ಮುತ್ತಿ ಕಾದುವಲ್ಲಿ (ದಕಾಪ. ೩-೦೯೬ ಪ).
[ಬವರಿ + ತಿರುಗು$_1$]

**ಬವರಿರೇಖೆ** (ನಾ). ವರ್ತುಲಾಕಾರದ ಅಲಂಕಾರದ ರೇಖೆ : ಇಂದುವಿನ ಪರಿವೇಶದಂದಕೆ ಕುಂದನೆಣಿಸುವ ಬವರಿರೇಖೆಯ ಹೊಂದಿಕೆಯ ಶಿಂಗಾಡಿಯನೆ ಹುರಿಕೊಂಡ ಮೀಸೆಗಳ ಚಂದದಿಂ ಲಾವಣ್ಯಮೂರ್ತಿಗಳೆಂದೆನಿಸಿ ಚಾಪಾಸ್ತ್ರಹಸ್ತಗಳಿಂದ ರಾಜಸದೊಡನೆ ಕುಳ್ಳಿರ್ದರು ಸತೇಜದಲಿ (ಅಶಂರಾ. ೩-೬-೩೬). [ಬವರಿ + ರೇಖೆ]

**ಬವರಿವರಿ** (ಕ್ರಿ). ವೇಗವಾಗಿ ಸುತ್ತು,–ತಿರುಗು : ತಿವಿವ ತಿರುಗುವ ಲಾಗಿಸುವ ಚಿಮ್ಮುವ ನಿಬಂಧದಲಡರಿ ಮುಂಡಿಸಿ . . . ಬವರಿವರಿದುಪ್ಪರಿಸಿ ಲಂಘಿಸಿ ನಿವಡಿಸಾರದಲೆಱಗಿ ಜಾಱುವ ಜವಳಿಬಿನ್ನಾಣದಲಿ ಕಾದಿದರೊಬ್ಬರೊಬ್ಬರಲಿ (ಅಕ್ರೂಚ. ೬-೬೩); ದುಂಡಿಪ ದಿಂಡುವಾಯ್ದು ಬವರಿವರಿವ ಚಿಮ್ಮುಟಿಗೆಗೆ ಚಳಿಯದ ಕಡಿಯಾಣವಂ ಕೈಕೊಳದ ಬಗೆಯಂ ಬಗೆಯದಂತೆ ಕಂಡು (ರಾಜಶೇ. ೬-೦೦೫); ಆಗಳೆಚ್ಚಂಬಂ ಬಗೆಗೊಳದೆ ಕನಲ್ಕೆಯಿಂ ಬಳಿಸಂದು ಬವರಿವರಿದು ತುಱುಗಿ ತುಡುಂಕುವ ಜಾಯಿಲಂಗಳಂ ಲೆಕ್ಕಿಸದೆ (ಶಬಶಂ. ೪-೦೬ವ). [ಬವರಿ + ಪರ್ಿ$_2$]

**ಬವರಿವಿಂಡು** (ನಾ). ತುಂಬಿಗಳ ಸಮೂಹ, –ಗುಂಪು: ತಂಡತಂಡದಿಂ ತೇಂಕುತ್ತೆತಂದು ಮುಂದ್ಯೆಸಿದಲರ್ಜೊಂಪಮಂ ಕಂಡು ಪಿಂಡೆಱಗಿ ಪೊಸ ಜೇನನುಂಡು ಱಕ್ಕೆಯಂ ಬದಿರ್ಚಿ ಮೊರೆದೆಟ್ದು ಮೇಣಾಂ ಮುಂಬರಿವ ಬವರಿವಿಂಡಿಂ . . . ಬನಂ ಮನಂಗೊಂಡುದು (ರಾಮಾಶ್ವ. ೫೯-೫). [ಬವರಿ+ಪಿಂಡು$_2$]

**ಬವರಿಸು$_1$** (ಕ್ರಿ). ೧. ಯುದ್ಧಮಾಡು; ಹೋರಾಡು : ಚಿಮ್ಮಿದು ದರುಣಜಲ ನಭಕೆ ಒಡಲು ಬಾಂದಣಗೊರದು ನೆತ್ತರ ಕಡಲು ಕರುಳು ಗಳೆಣಗಲು ಬಗೆಯದೆ ಬಿಡನೆ ಬವರಿಸಿದನು ಬಲಾಧಿಕನಾ ನೃಸಿಂಹನಲಿ (ಶಿತಾಗ. ೬-೬-೯೬). ೨. ಸ್ಪರ್ಧಿಸು; ಹುರುಡಿಸು : ಅಂಗುರುಹ ಕೇಶ ವಾಲಚಯಂಗಳೆ ನಿಡಿಯವು ಕಷಾಯವರ್ಣಂಗಳ್ ದಂತಂಗಳ್ಗೆ ಬವರಿಸುವ ದಂತಂಗಳೆ ಮಲಿನಂಗಳಾಗೆ ವರ್ಧದ್ವಿತಯಂ (ಆಕ್ಕಶಾ. ೩-೦೬).
[ಬವರ$_1$ + — ಇಸು$_1$]

**ಬವರಿಸು$_2$** (ಕ್ರಿ). ಅಲೆದಾಡು ; ತಿರುಗು : ಇವು ಪಱದೀಡಾಡಲ್ಕಮ್ಮವೆ ತುಂಬಿಯ ಬಂಬಲೆಂಬ ಪಂಬಲನಾರ್ಗಂ ಬವರಿಸುವ ನೃಪನ ಕುಂತಳ ನಿವಹಂಗಳೆ ಬಹಳ ಮೃಗಮದಾಮೋದಂಗಳ್ (ಸುಕುಚ. ೦೦-೩೪).
[ಬವರಿ + — ಸು$_1$]

**ಬವರಿಸು$_3$** (ಕ್ರಿ). ೧. ಸವರಿ ತೆಗೆ : ನವವಧುವ ಶಂಕೆಯಂ ಕಳೆವ ವಿದಗ್ಧ ವಿಟಂಬೊಲಲೆವ ತೆರೆಗಳ್ ಮೆಲ್ಲಂ ಬ[ಶಾಕಾಂ.ಬೆ]ವರಿಸಿ ಸೋಂಕುತ್ತುಂ ಕಳೆದುವು ಘನಕುಚಕಳಶಕುಂಕುಮಸ್ಥಾಸಕವಂ (ಅನಂಪು.೦೦-೦೪೦) : "ಸುತ್ತುಗಟ್ಟು" (ಅನಂಪು. ಕೋಶ) ; ಪವನ ಪ್ರಕ್ಷೋಭಾಂಬುಧಿರವಮನೆ ಪಟುಪಟಹಶಂಖಭೇರೀರವದೊಳ್ ಬವರಿಸಿ ಗಗನಮನಂತಾ ರವಮಾವರಿಸಿತ್ತು ದಶದಿಶಾವಧಿವರೆಗಂ (ಮಹಾಪು. ೦೩-೦೦೬); "ಸುತ್ತುವಂತೆ ಮಾಡಂ; ತಿರುಗಿಸು" (ಮಹಾಪು. ಕೋಶ). [ಬವರು + — ಇಸು$_1$]

**ಬವರಿಸು$_4$** (ಕ್ರಿ). ಉಂಟಾಗು; ಪ್ರವರ್ತಿಸು : ಮತ್ತಮದು ವಿಪರ್ಯಯ ವೃತ್ತಿಯೆ ಬವರಿಸುಗುಮುದೀಚ್ಯಮಾರ್ಗದೊಳ್ ಪ್ರಚುರತೆಯಿಂ (ಕಾವ್ಯಾಪ. ೩೨೦); ವೀರರಸ ಬವರಿಸುಗುಮುದಾರೋತ್ಸಾಹಪ್ರವೃತ್ತಿಕಾರಣಕಾರ್ಯಂ ದಾರುಣರೋಷಾವೇಶವಿಕಾರಭವಂ ರೌದ್ರಮೆಂಬ ರಸಮದು ನೆಗಟ್ಗುಂ (ಕಾವ್ಯಾಪ. ೪೦೬); ಭುವನನುತಶ್ರುತದೇವಿಯನಪಯುವದಿಂದೊಲಿಸಿ ಮತ್ತೆ ಮೊಟೆಗಿಡರಿವರೆಂಬ ವಿಶುದ್ಧಕೀರ್ತಿ ಬವರಿಪ ಕವಿಪರಮೇಷ್ಠಿಗಳ ಕರುಣ ಮಮುಗಾಭರಣಂ (ಧರ್ಮಾಪ.೦-೨೪) ; ವಿವಿಧ ಬುದ್ಬುದನಿಕರವೇಕಾರ್ಣವದ ಕಡೆಯಲಿ ತೋಱಿ ತಮ್ಮೊಳು ಬವರಿಸಿದಡಳಿದಡೆ ಮಹಾರ್ಣವವಳಿಯದಂತಂತೆ . . . ಇರ್ದನವಧೂತ (ಶಿಭಾಗ. ೩-೪-೦೬). [? + — ಇಸು$_1$]

**ಬವರು** (ಕ್ರಿ). ಸವರಿ ತೆಗೆ : ಮುತ್ತೀನ ಗುದ್ಲೀಲಿ ಅಗೆಸ್ಯಾರು ಅರಸಣವ ಬೆಳ್ಳಿ ಮಂಕ್ರೀಗೇ ಬವರ್ಯಾರು ಅರಸಣವ ತುಂಡು ತುಂಡಾಗಿ ಕಡಿಸ್ಯಾರು (ಜುಟ್ಟಪ. ೦೬೩).

**ಬವಸ** 'ಬೆವಸಾಯ' ನೋ.

**ಬವಸಿಗ** (ನಾ). ವ್ಯವಸಾಯ ಮಾಡುವವನು; ಬೇಸಾಯಗಾರ : ಆ ಗದ್ದೆಗೆ ಹಿರಿಯ ದೇವಧರ ಫ್ಯಸಾಸರು ಕೊಟ್ಟ ಗದ್ಯಾಣ ೧ . . . ಬವಸಿಗ ಕಲ್ಲಿಸೆಟ್ಟಿ ಕೊಟ್ಟ ಗದ್ಯಾಣ ೧ ಸೇನಬೋವ ಬಲದೇವಂ ಕೊಟ್ಟ ಗದ್ಯಾಣ ೧ (ಸೌಇಇ. XX,೬೨—೨೬; 1122). [ಬವಸು (<ಬೆವಸಾಯ) + — ಇಗ]

**ಬವಸು** 'ಬೆವಸಾಯ' ನೋ.

**ಬವಸೆ** 'ಬೆವಸಾಯ' ನೋ.

**ಬವಸೆ$_2$** (ನಾ). ಬಯಕೆ ; ಅಪೇಕ್ಷೆ ; ಇಚ್ಛೆ ; ಆಸಕ್ತಿ : ಜಿನದತ್ತಾದೇವಿ ದಾನಂಗುಡುವ ಬ[ಶಾಕಾಂ. ಬೆ]ವಸೆಯೊಳ್ಗಾಲವಿಷಾ ಕಾಲಮಾರ್ರಂ ಮನೆಯೊಳ್ ಸೂನಂಗಳಂ ಸಂಧಿಸದಿರಿವಿರಿಮಾಚಾರದಿಂದೆಂದು ಪೃಥ್ವೀಜನಕೆಲ್ಲಂ ಸಾಱುವಂತೇನೊಗೆದುದೋ ಮಿಗೆ ಮಧ್ಯಾಹ್ನ ಶಂಖಪ್ರಣಾದಂ (ಅರ್ಥಶಾ. ೦-೬೬); ಭಾರತೀದೇವಿ ತನ್ನಾದರದಿಂದಂ ಪ್ರೀತಿಯಂ ಪುಟ್ಟಿಸುವ ಬೆ[ಬ]ವಸೆಯಿಂದೆಯ್ದೆ ಮಾತಾಡಿದಳ್ (ಜಾರಪು. ೬-೫೦). [<ಬಯಸು$_1$]

**ಬವಸೆಗಾಣ್** (ಕ್ರಿ). ಇಷ್ಟಪಡು ; ಇಚ್ಛಿಸು ; ಬಯಸು : ಎನ್ನಯ ಚಿತ್ತದೊಳಿನ್ನುಮಾಕೆಯಲ್ಲದೆ ಪೆಱತಾವುದುಂ ಪುಗದು ಮಾಣ್ದಿರ್ದಯಂ ಗುಱಿಮಾಡಿ ಲೇಸನಲ್ಲದೆ ಪೆಱತಾವುದಂ ಬವಸೆಗಾಣವು ಕಾಮನ ಹಸ್ತಶಾಖೆಗಳ್ (ಅಜಶಾ. ೩-೬೬). [ಬವಸೆ$_2$ + ಕಾಣ್]

**ಬವಸೆಗೆಯ್** 'ಬೆವಸಾಯಂಗೆಯ್' ನೋ.

**ಬವಳಿ** 'ಬವಣೆ' ನೋ.

**ಬವಳಿಕೆ** 'ಬವಣಿಗೆ' ನೋ.

**ಬವಳಿಗೊಳ್ಳು** 'ಬವಣೆಗೊಳು' ನೋ.

**ಬವಳಿವರಿ** (ಕ್ರಿ). ವರ್ತುಲಾಕಾರವಾಗಿ ಸುತ್ತು ; ತಿರುಗು : ತಾನುಂ ಹಿಡಿಂಬೆಯುಮವನ ಬರಿಯ ನರವಿನಡಗಿನಿಡುವಿನೆಡೆಯ ಕೆನ್ನೆತ್ತರೊಳೊವರ್ಗರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ ಬವಳಿವರಿದುಂ ಬಾನಂ ಗುಟಿಗೆವಱಿದುಂ ಸೂಟ್ವರಿದುಮಾಡುವಾಗಳುಭಯಬಲಂಗಳ್ ಬೆಕ್ಕಸಂಬಟ್ಟು ನೋಡಿ (ಪಂಪಭಾ. ೦೨-೦೫೯ ವ). [ಬವಳಿ (<ಬವಣೆ)+ ಪರ್ಿ$_2$]

**ಬವಿ** (ನಾ). ಹುಟ್ಟು ಸಾವುಗಳಲ್ಲಿ ತೊಳಲುವವನು ; ಭವಿ :

"ಬವಿ – ಭವಿ = ನರಕಜೀವಿ" (ಕರ್ನಾಕೋ. ೨೯) ; ಭಕಾರಕ್ಕೆ ಬಕಾರಂ – ಆರಂಭ – ಆರಂಬ, ಭವಿ – ಬವಿ, ಭಂಡ – ಬಂಡ (ಶಮದ. ೨೩೩ ಕ್ರಯೋ).
[<ಸಂ. ಭವಿನ್]

**ಬವಿಸು** (ಕ್ರಿ). ಹುಟ್ಟು ; ಜನ್ಮತಾಳು : ಶಿವನೆ ಬಳಿಕ್ಕಿಂತಿದಕ್ಕೆಂತೆನು ತಲನಸೂಯೆ ವಿವರಿಸಲು ದೇವಪೂಜೆಗೆ ತಂದ ದೂರ್ವೆಯೊಳು ಬವಿಸುವೆನೆನುತ್ತೊಡಂಬಟ್ಟು ದೂರ್ವಾಸನಾದನು ಪದ್ಮಸಂಜಾತನು (ಸೌಂದಕಥೆ. ೯–೩೦). [ಬವ$_1$ + – ಇಸು$_3$]

**ಬವ್ವ**, ಬವ್ವು, ಬವ್ವುತ (ನಾ). (ಮಕ್ಕಳ ಮಾತಿನಲ್ಲಿ) ಗುಮ್ಮ ; ಗೊಗ ಯ್ಯ (?) : ಯೌವನವೊದಗಿದಾಗ ಏನೆಂದರು ಅಪ್ಪ ಅವ್ವಣ್ಣನೆಂದು ನಸುನಗುತ ಗವ್ವಳಿಕೆ ವೃದ್ಧಾಪ್ಯ ಬಂದೊದಗಲು ಇವನ ಬವ್ವನ ತೆರದಲಾಡಿಪರೋ ಪ್ರಾಣಿ (ವಿದಾಕ್ಸ. ೯೮–೩). **ಬವ್ವು** : ಬವ್ವು ಬಂದಿತ್ತಲ್ಲ ರಂಗಯ್ಯ ಬವ್ವು ಬಂದಿತಲ್ಲ (ಪುರಂದ. ೯–೧೩೩ ಶಲ್ಲಿ). **ಬವ್ವುತ**: ಹಾವು ಕೊರಳಲಿಟ್ಟು ಹುಲಿಯ ಚರ್ಮವ ಹೊದ್ದು ಸುತ್ತಲಿ ಬರುಬರುತಿದೆ ಬವ್ವುತನ ದಂಡು (ಪುರಂದ. ೪–೧೩೩–೨). [ ? ]

**ಬವ್ವು** 'ಬವ್ವ' ನೋ.

**ಬವ್ವುತ** 'ಬವ್ವ' ನೋ.

**ಬಷ್ಕಯಣಿ** (ನಾ). ಬಹುಕಾಲದ ಮೇಲೆ ಕರು ಹಾಕಿದ ಹಸು : "ಬಷ್ಕಯಣೀ, ಪ್ರೌಢವತ್ಸಾ – ಈ ೨ ಕಡೆಗಂದಿ" (ಹಲಾಯು. ೯೩–೧೦೯); "ಚಿರಸೂತಾ – ಬಷ್ಕಯಣೀ – ೨ ಬಹುಕಾಲಕ್ಕೆ ಈಯುಲಾದ ಆಕಳಿಗೂ ಈಯುಲಾದರೂ ಬಹುಕಾಲ ಹೆರಿಗೆ ಇಲ್ಲದೇ ನಿಂತ ಆಕಳಿಗೂ, ಬಹುಕಾಲಕ್ಕೆ ೧ ಸಾರಿ ಯಿಯ್ಯುವ ಆಕಳಿಗೂ ಹೆಸರುಗಳು, ಕಡೆಗಂದಿನ ಆಕಳು" (ಸಿದ್ಧಾಂತಿ. ೨೯೩). [ಸಂ. ಬಷ್ಕಯಣೀ]

**ಬಷ್ಪಿಗೆ** 'ಭಾಷ್ಪಿಗೆ' ನೋ.

**ಬಸ$_1$** (ನಾ). ೧. ವಶ ; ಅಂಕೆ ; ಸ್ವಾಧೀನ : "ಬಸಂ ವಶದೊಳಂ" (ಕರ್ಣಾಟ. ೮೨) ; ಆನೆಯಂ ಸೇದೆಗೆಡಿಸಿ ತನ್ನ ಬಸಕ್ಕೆ ಮಾಡಿಯೇಱುಯಂಕುಸಮಂ ಪೊಳೆಯಿಸುತ್ತಮರಸಿಯುಲ್ಲಿಗೆ ವಂದು (ವಡ್ಡಾರಾ. ೩೯–೧೭) ; ಆಂ ನಡೆ ನೋಡೆ ನೋಡೆ ನೀಂ ಕರಗಿದೆಯೆಂತುಮೆನ್ನ ಸುಶರೀರದೊಳಿರ್ದುದು ಜೀವವಿಶಾಯೊಡಲ್ ಕರಗಿದುದಿಲ್ಲದೆನ್ನ ಬಸಮಲ್ಲೊಡಲಿಂದೆಮ ಶೋಕದೊಳ್ ಮನಂ ಕರಗಿದುದೆಯ್ದೆ ಮಾರದಿರಯಿರ್ದೆಡೆಯಿಂ ಲಲಿತಾಂಗವಲ್ಲಭಾ (ಆದಿಪು. ೩–೦೯) ; ತನು ಬಸಮಲ್ತು ಮತ್ತಖಿಗೆ ಮನ್ಮಥನನ್ನನೆನಿಪ್ಪ ತನ್ನುಮಂ ನೆನೆದಪಳೊರ್ಮೆ (ಕಾದಂಉ. ೦೯೩). ೨. ಸಾಧ್ಯತೆ ; ಶಕ್ಯತೆ : ನೋಟಕ್ಕೊಡಿಂತೀ ಪೊಚ್ಚಮುಂಗುದುರೆಯನೊಳಕೊಂಡ ಕಡಲ ಗುಣ್ಪೆಂದೆಸೆಗುಂ, ಪುಗಲೆಮಗಂ ಬಸಮಲ್ತು (ರಾಮಾಶ್ವ. ೦೨೦–೨). ೩. ತಲ್ಲೀನವಾಗಿರುವಿಕೆ ; ಪರವಶತೆ : ಮಿಸುಗುವ ಪೊಸವಸೆಯೊಳಸದಳಮೆಸೆಯೆ ಬಯಸಿ ಪೊಸಯಿಸಿದ ಪೊಸಸುಸಿಲ ಮಸಕದ ಬಸದೊಳ್ ಬ[ಶಾಶಾಂ. ಪ]ಸದ್ರಾಗಿಯುಮಸಿಯಳೆನಗಸವಸದೊಳೆ ಬೆಸೆದು ಪೋಗಿ (ಆದಿಪು. ೪–೦೨ ಪ). ೪. ಪ್ರಭಾವ ; ಶಕ್ತಿ ; ಬಲ : ಕೊಳದ ತಡಿವಿಡಿದು ಬೆಳೆದೆಳದಳಿರ್ಗಳಶೋಕೆಗಳ ಲತೆಯ ಮನೆಗಳೊಳೆ ತೆಱಂಬೊಳೆವಲರ ಬಸದೆ ಸುಟಾವಳಿಗಳ ಬಳಗದ ದನಿಗೆ ಕಿನಿಸಿ ಕಿಂಕಿಱುವೋದಳ್ (ಶಂಶಖಾ. ೩–೯) ; ಕುಸುಮಾಸ್ತ್ರಗಜಂ ಬೆಂಕೊಳೆ ಬಿಸುಟಂ ಕಡಿಕೆಯ್ಯೆ ತಪಮನೊಳಕೊಂಡಿರ್ದಿರ್ದೆಸೆಯೊಳಡಂಗದೆ ಬಸನದ ಬಸದಿಂ ತಲೆದೋಱಿ ತೋಱಿದಿರ್ಕುಮೆ ಕೊಲೆಯುಂ (ಆಜಿತಪು. ೨–೯೭) ; ಸಸಿಯಿರ್ದಪನಮಮಾಸೆಯು ಬಸದಿಂ ಕಾಣಲ್ಕೆ ಬಾರದಂತಿರೆ ಜನೆರಂ ವಸುಧೆಯೊಳಿರ್ದಪರಿರ್ದುಂ ಮಿಸುಕುವ ಕಲಿಗಾಲ ದೆಸಕದಿಂ ತಲೆದೋಱಿರ್ (ಧರ್ಮಾಮೃ. ೩–೦೯೯). ೫. ಅಧೀನದಲ್ಲಿರುವವನು (?) : ಶ್ರೀಮನೆನೆಗಂ ಕ್ರಿಯದ ದೇವ ಬಸದ (ಎಕ. II, ೯೭೦–೩ ; ಕ್ರಿ. 1000).

**ಬಸಂ ಮಾಡು** = ವಶ ಮಾಡಿಕೊಳ್ಳು : ಅಧೀನದಲ್ಲಿಟ್ಟುಕೊಳ್ಳು : ಮನಮಂ ನುಡಿಯಂ ಮೆಯ್ಯಂ ತನಗೆ ಬಸಂ[ಶಾಶಾಂ. ವಶಂ] ಮಾಡಿ ಗುಪ್ತಿಗುಪ್ತಂ ಮುನಿಯೆಂಬಿನೆಗಂ ನೆಗಟ್ದಂ (ಆದಿಪು. ೬–೨೯); ಎಲ್ಲೆಡೆಗಳುಮಂ ತನ್ನಟ್ಟಿದೋಲಗಮಿಟ್ಟುಂಡಿಗೆಗಂ ಬಸಂ ಮಾಡಿದ ನನೆವಿಲ್ಲ ಬಲ್ಲಹಂ ನಿಮ್ಮಾಡಿಗಳ ಪೆಸರಂ ಪಲಂಬರಿಂ ಕೇಳ್ದು ಕೆಳೆತನಮಂ ಬಳೆಯಿಸುವಿಚ್ಛೆಯಿಂದೆನ್ನಂ ಕಳಿಪಿದಂ (ಶಬ್ದಕಾ. ೧೩೯). 'ಬಶ' ಪರಾ. [<ಸಂ. ವಶ]

**ಬಸ$_2$** (ನಾ). ವೃಷಭ; ಎತ್ತು : "ಬಸ–ವೃಷ=ಎತ್ತು" (ಕರ್ನಾಕೋ. ೨೯); ವಸುಧೆಗೆ ಯುಗಭಾರವಾಂಪರೆ ಪೆಱತಿಲ್ಲ ಬಸುಱ ಮಗನೆ ದಿಟವೆಂದು ಉಸುರುವಂದದಿ ಕೆಲವುತಲಿರ್ದ ಬೆಳ್ಪಿನ ಬಸದ ಕನಸುಗುಂಡಳಬಲೆ (ವರ್ಧಮ. ೦೦–೯೬). [<ಸಂ. ವೃಷ]

**ಬಸಂಗೆಡು**, ಬಸಗಿಡು, ಬಸಗೆಡು (ಕ್ರಿ). ೧. ಶಕ್ತಿಗುಂದು ; ಬಲಹೀನವಾಗು : ಬೇಟದ ಸೂಡಿಂ ಬಾಡಿ ಬಸಂಗೆಟ್ಟುದನಿಂದು ನಿಂದು ಕಾಂತಂ ಗೆಱಪಿ ಬಱಿಯುಟ್ಟುವೆವನಿತೊಂದು ಪೊಟ್ಟು ಸೈತಿರ್ಪುದೆಂದು ಸಂತಯಿಸಿ ದೂದುಪೋಪವೆನೆ ಮುಯ್ಯಿರಡಿಗಳೋಡೆ (ರಾಮಾಶ್ವ. ೨೨–೦೦). **ಬಸಗಿಡು** : ೧. 'ಬಸಗಿಡಿಸು' ಪರಾ. **ಬಸಗೆಡು** : ೨. ಚಿಂತೆಗೆ ಒಳಗಾಗು : ತನ್ನ ಜೊತೆಗೆ ಇರಬೇಕೆಂಬಾಸೆಗೆ ಧರ್ಮದ ಹೆಸರಿಟ್ಟು ಸತಿ ಪಡುತಿಹ ಹಿರಿಯಾಯಸ ನೋಡಿದ ರಾಘವ ಬಸಗೆಟ್ಟು (ರಾಮಾಸ. ೬–೦೨).
[ಬಸ$_1$+ಕೆಡು$_1$]

**ಬಸಂಗೆಯ್** (ಕ್ರಿ). ವಶಪಡಿಸಿಕೊಳ್ಳು ; ಸ್ವಾಧೀನಪಡಿಸಿಕೊಳ್ಳು : ಕೈಯು ಕೈದುಗಳ ನೀಟ್ದಾನೆ ಕುದುರೆಗಳಂ ಬಸಂಗೆಯ್ದು ಅವರೊಳ್ಕಟ್ಟರಸುಗಳಂ ಕೈಸೆಱೆಗೊಳಲು (ಚಿತವ. ೯೦). [ಬಸ$_1$+ಕೆಯ್$_1$]

**ಬಸಂಗೊಳಿಸು** (ಕ್ರಿ). = ಬಸಂಗೆಯ್ : ಪಾಳೆಯಗಾರರಂ ಕಾಳಗದೊಳ್ಗೆಲ್ದು ನರಸಿಂಹಪುರಂ ಮೊದಲಪ್ಪವರವರ ರಾಜ್ಯಂಗಳಂ ಬಸಂಗೊಳಿಸಿ ಪಲವುಂ ಬಿರುದುಗಳಂ ಪಡೆದು (ಮುರಾಕ. ೨–೯ ಪ).
[ಬಸ$_1$+ಕೊಳ್$_1$+—ಇಸು$_3$]

**ಬಸಂತ**, ಬಸವಂತ, ವಸವಂತ (ನಾ). ೧. ಚೈತ್ರ ಮತ್ತು ವೈಶಾಖ ಮಾಸಗಳಲ್ಲಿ ಅಂದರೆ ಮಾರ್ಚಿ ತಿಂಗಳ ಮಧ್ಯದಿಂದ ಮೇ ತಿಂಗಳವರೆಗೆ ಬರುವ ಒಂದು ಋತುವಿನ ಹೆಸರು ; ವಸಂತಮಾಸ : " ಬಸಂತಂ, ಸುಗ್ಗಿ, ಹೂವಿನ ಹಬ್ಬಂ_ಈ ೩ ವಸಂತಂ " (ಕರಶಾ. ೩೯–೦೬೨) ; ಪೊಸತಲರ್ದ ಕೊಸಗು . . . ತಳಿರಿಂ ಮುಸುಕಿದ ನನೆಯಂಪೇಱಿದ ಪೊಸಮಾವುಗಳಿಂ ಬಸಂತಮೆಸೆದಪುದಿದಱೊಳ್ (ಆದಿಪು. ೧೦–೮೩) ; ವಿಯೋಗಿಜನಮಾರಣಯಜ್ಞಮನೊಲ್ದೊಡರ್ಚಿದಾ ಮದನನ ವಿಪ್ರನಂತೆಸೆದುದಿಂತು ಬಸಂತದ ಬಂದ ಮಾಮರಂ (ಕುಸುಮಾ. ೩–೩೬). ೨.(ಆಲಂ) ಸಂತೋಷಭರಿತವಾದುದು : ಆನಂದದಾಯಕವಾದುದು: ಧರೆ ನಿರ್ದಾಯಾದ್ಯಮೆಂದಾ ಸುಯೋಧನನಾಳುತ್ತಿರೆ ಸಂದ ಹಸ್ತಿನಪುರಂ ಸಂತಂ ಬಸಂತಂ ಕರಂ (ಶಂಶಖಾ. ೩–೩೨); ಕೆಲ್ಲಂಗೆಱೆಯಂದಮಿಂದು ನಮರಾವತಿಯನ್ನೆ ಬಸನ್ತಮಾಗಳುಂ (ಎಕ. V. ಅರಸೀ. ೦೦೬–೩೦ ; 1161); ಸನ್ದ ಮಾಧವಪುರಂ ಸನ್ತಂ ಬಸನ್ತಂ ಕರಂ (ಎಕ. VI. ಕಡೂರು. ೦೨೬–೯೯ ; 1218). **ಬಸವಂತ** : ೩. ಓಕುಳಿ : 'ಬಸವಂತಗೊಳಿಸು' ಪರಾ. **ವಸವಂತ** : ೧. ವಸವಂತನೈತರಲು ವನಗೊರಡು ಚಿಗುರ್ದಪವು (ವವಮೋ. ೬–೩೪). ೩. ಕಸವನ ಕಣುಮೆಯಲ್ಲಿ . . . ನೆತ್ತರದ ವಸವಂತನಾಡ್ಯಾರು (ಕಾಲಿಸಂ. ೦೯೦–೩೬). ೪. [ಸಂಗೀತ] ಒಂದು ರಾಗದ ಹೆಸರು : ರಾಗ. ವಸವಂತ–ಉದಾ: ಭಯ ಭಕ್ತಿ ಕರುಣ ಕಿಂಕುರ್ವಾಣ ದಾಸೋಹ ನಯ ಭೃತ್ಯಭಾವ ಸಜ್ಜನ ಸತ್ಯ ಸಮತೆ ಸದ್ವಿನೆಯ ಗುಣನಿಷ್ಠೆ ಸಾಹಿತ್ಯ (ಶರಗೋ. ೦೩–೬೨). [<ಸಂ. ವಸಂತ]

**ಬಸಂತಕುಮರ** (ನಾ). ಒಬ್ಬಾತನ ಹೆಸರು : ಬನವಾಸಿಯಾ

ಆವಿಸೆಟ್ಟಿಯು ಅಳಿಯ ಬಸನ್ತಕುಮರ ಎಡೆವೊಟಲ್ನಾಡ ಸಲವುಗೆಯು ಕೊಟ್ಟ ಶಾಸನವು ಪಡೆದು (ಎಕ. VIII, ಸೊರಬ. ೩೬೦-೨೬; 698).
[ಬಸಂತ+ಕುಮರ$_1$ (<ಕುವರ$_2$)]

**ಬಸಂತಮಾಸ** (ನಾ). ವಸಂತಋತುವಿನ ಕಾಲ; ಮಧುಮಾಸ; ಚೈತ್ರ : ಕುಕಿಲ್ವ ಕೋಗಿಲೆ ನನೆದೋಱ ನುಣ್ಪೆಸೆವ ಮಾಮರನೊರ್ಮೊದಲಲ್ಲ ದುಣ್ಮುವುಯ್ಯಲ ಪೊಸಗಾವರಂ ಪುಗಿಲೊಳೇನೆಸೆದತ್ತೊ ಬಸಂತಮಾಸ ದೊಳ್ (ಶಂಕರಾ. ೨-೦೨). [ಬಸಂತ + ಮಾಸ$_1$]

**ಬಸಂತಸಮಯ** (ನಾ). = ಬಸಂತಮಾಸ: ವನಸಾಯಂತನ ಮಲ್ಲಿಕಾ ಮುಕುಳಕೋಟ್ಯಗ್ರಂಗಳೊಳ್ ಕೂಡೆ ನೂತನ ಸದ್ಗಂಧಿಗಳೊಳ್ ಮದಾಂಧ ಮಧುಪಂ ಪ್ರತ್ಯೇಕಮಳ್ಪಾಱುವಾಱ ನವಾರ್ದ್ರಧ್ವನಿ ಪಾಯ್ದು ಪಾಯ್ದೊಣೆಸುವಂತಾಯ್ತಾತ್ಮಸೌರಭ್ಯಭಾಜನಸರ್ವಸ್ವಮನೇಂ ಬಸಂತ ಸಮಯಂ ಸೌಖ್ಯೈಕಸರ್ವಸ್ವಮೋ (ಶಾಂತಿಪು. ೬-೦೨೬).
[ಬಸಂತ + ಸಮಯ$_1$]

**ಬಸಕ್ಕನೆ** (ಅ). ತಕ್ಷಣ ; ಕೂಡಲೆ : ನರ್ಸಿ ಬಸಕ್ಕನೆ ಅತ್ತುಬಿಟ್ಟಳು (ಬಿ.ಅ. ೩೦). [ಬಸಕ್$_0$ + — ಅನೆ$_1$]

**ಬಸಗಡಿ** (ಕ್ರಿ). ಅಂಕೆ ತಪ್ಪಿಸು ; ಹತೋಟಿ ತಪ್ಪಿಸು : ಬೇವಸಕೆ ಮರುಳ್ಪನಕ್ಕೆ ಕಳವಿಂಗೆ ಕನಲ್ಕೆಗೆ ಠಕ್ಕು ತೌಳಿಗಂ ಬಸಗಡಿದೀವ್ವ ಕಾಟ್ಬಿಸನ ದಟ್ಟುಳಿಗಂ ಪುಗದಂತಿರೆಲ್ಲರಂ ಪೊಸಯಿಸಿ ಕಾರ್ತವೀರ್ಯನೆಸಕಬಡದಂ ದೊಡದೇವಭೂಪರಂ (ಚಿಕ. ೩-೦೫). [ಬಸ$_1$ + ಕಡಿ$_2$]

**ಬಸಗಿಡಿಸು** (ಕ್ರಿ). ಶಕ್ತಿಗುಂದಿಸು ; ಬಲಹೀನವಾಗಿ ಮಾಡು : ಗುಡುಗುಸೆದು ಕಿವಿಯೊಡೆವ ಗುಡುಗಾಟದಾರ್ಭಟಂ, ಕಣ್‌ಗೆಡಿಸಿ ಎರ್ದೆಗಿಡಿಸಿ ಬಸಗಿಡಿವ ಮುನ್ನಂ, ಈಗಳಿನ್ನಿರದೆ ನೀವ್ ಅಡಿಯೆತ್ತಿ ಮೇಟಂ (ಶರ.ಪ್ರ. ೩೬-೦೨೩೦). [ಬಸಗಿಡು (< ಬಸಂಗೆಡು) + — ಇಸು$_3$]

**ಬಸಗಿಡು** 'ಬಸಂಗೆಡು' ನೋ.

**ಬಸಗೆಡು** 'ಬಸಂಗೆಡು' ನೋ.

**ಬಸಗೈ** (ಕ್ರಿ). ವಶಮಾಡಿಕೊಳ್ಳು ; ಸ್ವಾಧೀನಪಡಿಸಿಕೊಳ್ಳು : ಮುನಿದಿನಿಯನ ಕಡುಮೊನೆವಾತಿಗೆ ನೊಂದು ಕನಲದೆ ಗಾರುವಡೆಯದೆ ತನುಮನಗಳ ತನ್ನ ಬಸಗೈದು ದೈನ್ಯವ ಕೊನರಿಸಿ ತಂಪುಗೊಳಿಪುದು (ಹರಿ. ೩-೨೩) ; ಉಸುರ್ಗಂಪಿಗೆರಗುವ ದುಂಬಿಯ ಗಾನವು ಪೊಸವೇದ ಪಾರಾಯಣವು ಹುಸಿದು ನೀನಾಡುವ ಸವಿಯೊಗುವಿನಿವಾತು ಬಸಗೈವ ಬೀಜಾಕ್ಷರವು (ಕರ್ನಾಕ. ೨೨೦). [ಬಸ$_1$ + ಗೈ (< ಕೆಯ್$_1$)]

**ಬಸತಿ** 'ಬಸದಿ' ನೋ.

**ಬಸದನ** (ನಾ). (?) : ಸುರಯಿಯು ಮುಗುಳ್ಗಳೊಳುರುವಳಿದಳಿಪತಿ ಬರಯಿಸೆ ಬೆರಸುವ ಬಸದನ ಬೆಸನಿರ ಸುರತ ಸುರಭಿರಸ ಪರಿಮಳಮಿಟಾತರ ಬೆರಸಿದನರವುಗನರಸಿಯೊಳೆಸದಿರೆ (ಕರ್ಣಕ. ೬-೬). [?]

**ಬಸದಿ,** ಬಸತಿ, ಬಸ್ತಿ$_1$, ವಸದಿ, ವಸ್ತಿ$_2$ (ನಾ). [ಜೈನ] ಜೈನ ದೇವಾಲಯ ; ಜಿನಗೃಹ ; ಚೈತ್ಯಾಲಯ : "ವಸತಿಃ, ಜಿನಾಶ್ರಯಃ—ಈ ೨ ಬಸದಿಯ ಹೆಸರು" (ನಾಚಿರಾ. ೦೦೩) ; ಸಿವಮಾರನ ಬಸದಿ (ಎಕ. II, ೪೦೩-೨ ; ಸು. 810) ; ಅರಸನುಮಂ ಮಹಾದೇವಿಯುಮಂ ಕರ್ಮಕ್ಷಯಮುಮುಕ್ಷಯದಾನಮುಮಕ್ಕೆಂದು ಪರಸಿ ಪೋಪುಮಟ್ಟು ಬಸದಿಗೆ ಪೋಪಾಗಳ್ (ವಡ್ಡಾರಾ. ೬೬-೨೬) ; ವಸುಧೆಗೊಡೆಯನಪ್ಪ ರಾಮಚಂದ್ರನ ಕತೆಯಂ ಪೇಟ್ವೆನೆ ಬಸದಿಗೊಡೆಯರಪ್ಪ ಸುರೇಂದ್ರರ ಚರಿತೆಯಂ ಪೇಟ್ವುದೇಂ ? (ರಾಮಾಶ್ವ. ೬-೨). **ಬಸತಿ** : ದೇಗುಲಂ ಬಸತಿಯೆ ಜಿನನೆ ತಾಂ ಮೇಗೆ ದೈವವು (ಅನಂತ. ೪೯-೦೨) ; ಶಾರದೆ ನಿನ್ನೊಳು ವಿದ್ಯಾಕಲೆಗಳಿಂ ಹೋರಿ ಸೋತಂಜಿ **ಬಸತಿ** [ಜಾಣ. ದಿ]ಯ ಸಾರಿದಳೆನೆ ನಿನ್ನ ಜಾಣ್ಮೆಗೆ ಸೋಲದರಾರವನಿಯೊಳು (ಶೃಂಗಾರ. ೨೪-೬೬).

**ಬಸ್ತಿ$_1$** : ತೆಂಕಲೂ ಹರಿದ ಅವಳೆ ಗಡಿ ಪಡು ಬಸ್ತಿ ಗಡಿ . . . ಯಿಂತೀ ನಾಲ್ಕುಗಡಿಯಿಂದ ಒಳಗುಳ್ಳ ಮೂವತ್ತು ಹಾನೆ ಗದ್ದೆಯನೂ ಪಾರ್ಶ್ವ ದೇವರ ಪಡಿಗೆ . . . ಬಿಟ್ಟದು (ಕಇ. I, ೪೦-೪೦; 1417) ; ಬಸ್ತಿಗಳ ನೊಡೆದು ಲಿಂಗಾಗಾರಮೆನಿಸಿ ನತಮಸ್ತಕರ ಬೌದ್ಧರಂ ಭಕ್ತರಂ ಮಾಳ್ದ ವರ ಮಸ್ತಕದೊಳಭಯವಿತ್ತೆಸೆದನೇಕಾಂತರಾಮಯ್ಯ (ಪುರಾತ. ೨೩-೫) ; ಮೇಲಣ ಬಸ್ತಿಯೊಂದು ನೋಡಲು ಉಳಿದುದರಿಂದ ಎಲ್ಲರು ಅಲ್ಲಿಗೆ ನಡೆದೆವು (ಕಠಕು. ೬-೩೨). **ವಸದಿ** : ಇವರ್ಗಳ್ ಜೀವಸಸನವಾಗೆ ನಾಗೂಳ ವಸದಿಗೆ ಕೊಟ್ಟ ಮ [ಣ್ಣು] (ಕೆ. II, ೫-೦೬ ; 859). **ವಸ್ತಿ$_2$**: ನರಸಿಂಹಸರಸ್ವತಿಗಳ ಜನ್ಮಸ್ಥಳವಾದ ಕಾರಂಜಾದಲ್ಲಿಯೂ ಜೈನರ ವಸ್ತಿ ಇದೆ (ಮುಕುಹಿ. ೨೨).

**ಬಸದಿಯಣುಗಿ** = (?) : ಅಸವಾಸ್ತ್ರನನಾ ಶುಭದಿನದೊಳಗಾ ಬಸದಿ ಯಣುಗಿಯೊಲವಿಂ ಪಡೆವಂದದಿ ಶಿಶುವಂ ಶಶಿಮಂಡಲಲಲಿತಾನನೆಯರು ಮುದದಿಂ ಪೆತ್ತ ಬಸಗೆಗಳಾ ಪುರದೊಳಗೆಳ್ದುವು ಪಲ ಪಸುರ್ದೋರಣ ಪಳಿ ಗುಡಿ ಸಂತಸವಟ್ ಪೊಸಮುತ್ತಿನ ಬಣ್ಣವುರಂ ಮನೆಮನೆದಪ್ಪದೆ ಶೋಭಿಸಿತು (ಜಯಚಿಕಾ. ೨-೩೪). [< ಸಂ. ವಸತಿ./ಪ್ರಾ. ವಸಹಿ]

**ಬಸದು** (ನಾ). ವಶ; ಅಂಕೆ ; ಸ್ವಾಧೀನ : ಪೊಸಸ.ಸಿಲ ಮಸಕದ ಬಸದೊಳ್ ಬಸದಾಗಿಯುಮುಸಿಯಳೆನಗಸವಸದೊಳೆ ಬೆಸೆದು ಪೋಗಿ (ಅದಿಪು. ೪-೦೨ ವ) ; ನಸುಸೋಂಕಿಂ ಬಾಲೆಯೆರಂ ಬಸದಾಗಿಸಿ ನೆನೆದು ಸೀತೆಯಂ ರಾಮಂ ದೂರಿಸಿದಂ ಚಂದ್ರಿಕೆಯಂ ಸೇವಿಸಿದ ಚಕೋರಕ್ಕೆ ಬಾಟ್ತಿಯೇ ತುಹಿನಕಣಂ (ಶಂರಾಮಾ. ೦೦-೪೦) ; ಅಂತು ಸಹಸ್ರಲೋಚನ ನುಮಂ ಬಸದಾಗಿಪ ರಂಭೆಯಾಟಮುಂ . . . ಕುಮಾರನ ಮನಂಬುಗ ಲಾಱವೆ (ಲೀಲಾವ. ೪-೦೩೬). [<ಬಸ$_1$]

**ಬಸನ** 'ಬೆಸನ$_2$' ನೋ.

**ಬಸನಗಾಱ** (ನಾ). ದುಶ್ಚಟಗಳಿಗೆ ಒಳಗಾದವನು : ಜೂಜುಗಾಱಗೆ ಠೌಳಿಗಾಱಗೆ ಬಸನಗಾಱಗೆ ಮೋಹಿಸಿದ ಅಸಿಯಳಿಗಿನ್ನು ಬೇಱುಂಟೆ ಸಾವು (ಶಂಶ್ರ.ಸಾಂ. ೦೬-೦೩೪).
[ಬಸನ (< ಬೆಸನ$_2$) + — ಗಾಱ (< —ಕಾಱ)]

**ಬಸನಿ** 'ಬೆಸನಿ' ನೋ.

**ಬಸನಿಗ** 'ಬೆಸನಿಗ' ನೋ.

**ಬಸನಿಗತನ** (ನಾ). ದುಶ್ಚಟದ ಸ್ವಭಾವವನ್ನು ಹೊಂದಿರುವಿಕೆ; ಕೆಟ್ಟ ನಡವಳಿಕೆಯನ್ನು ಹೊಂದಿರುವಿಕೆ : 'ನಾಯ್ಬಸನಿಗತನ' ಪರಾ.
[ಬಸನಿಗ (< ಬೆಸನಿಗ) + — ತನ]

**ಬಸನಿಗೆ** (ನಾ). ಇನಿಯಂನನ್ನು ಕಾಣಲು ಆತುರವುಳ್ಳವಳು; ವಿರಹಾ ತುರೆ : ಬಸನಿಗೆಯರೊಸಗೆ ಮುತ್ತಿನ ಹಸಿತಂ ಬೆಳ್ವಳಗಿನುರುಳಿ ಬೆಳ್ದಿಂಗಳ ಬೆಳ್ಪಸದನಮೆನಲೇಂ ಬಿರಿದುದೊ ಪೊಸಮಲ್ಲಿಗೆ ಜಸದ ಬಿಟ್ಟು ಕುಸುಮಾ ಯುಧನಾ (ಲೀಲಾವ. ೪-೦೪೪). [ಬಸನಿಗ (<ಬೆಸನಿಗ) + —ಎ$_2$]

**ಬಸಬಸ** (ನಾ). ಒಂದು ಅನುಕರಣ ಶಬ್ದ: 'ಬಸಬಸನೆ' ಪರಾ.

**ಬಸಬಸನೆ** (ಅ). ಬಸಬಸ ಎಂಬ ಶಬ್ದದೊಡನೆ : ಸೋಮ ಮಾತಾಡ ಲಾರದೆ ಅಡ್ಡ ಬಿದ್ದು ಹೂವಯ್ಯನ ಕಾಲು ಹಿಡಿದುಕೊಂಡು ಬಸಬಸ ಬಸನೆ ಅಳತೊಡಗಿದನು (ಕಾನೂರು. ೩೪೦). [ಬಸಬಸ + — ಅನೆ$_1$]

**ಬಸಬಸಾವಣೆ** (ನಾ). ಬಸಬಸ ಎಂಬ ಶಬ್ದ : ಆ ಗಾಳಿಯ ಬಸಬಸಾವಣೆ ಮಾತ್ರ ಆ ಶಾಂತತೆಗೆ ಅಷ್ಟಿಷ್ಟು ಭಂಗ ಮಾಡುತ್ತಿತ್ತು (ಹನಂ. ೩೯).
[< ಬಸಬಸ]

**ಬಸಮಟಿ,** ಬಸವಳಿ, ಬಸವಟಿ (ಕ್ರಿ). ೧. ಶಕ್ತಿಗುಂದು; ಬಲಹೀನ ವಾಗು : ಒರ್ವರ್ ಋಷಿಯರ್ ನೀರಟಕ್ಕೆಯಿಂದಂ ಕರಂ ಸೇದೆಗೆಟ್ಟು ಬಸಮಟಿದಿರ್ದೋರಂ ಕಂಡು (ವಡ್ಡಾರಾ. ೦೦೪-೪); ಅಂತೆರಡುಂ ಬಲದ

ದೆಟಂಗಳ್ . . . ಕಾದಿ ಬಸವುಟೆದು ಪೆಱಱಂಗಿ ನಿಂದಾಗಳ್ (ಕಂಕಣಾ. ೧೦-೮೦ ವ). ೨. ಎಚ್ಚರ ತಪ್ಪು; ಮೂರ್ಛೆಹೋಗು ಇಱಿದು ಬಸವುಟೆ[ಯದೆ] ಬೀಟ್ಕೊಳ್ವರನ್ ತೆಱೆ(ಱ)[ನ] ವೆಚ್ಚದೊಂ (ಎಪಿ. XXIV. ೦೯೩-೦೨; ಸು. 886); ಬಸವುಟೆವಿನೆಗಂ ಮನಸಿಜನಿಸೆ ನಿನ್ನ ಕೆಲಕ್ಕೆ ವಂದೊಡೆನ್ನಂ ಬಿಡೆ ಬಗ್ಗಿಸೆ ಮಧುವಿಕಾರಿ ಕೋಗಿಲೆ ಕಿಸುಗಣ್ಣುವೆ ನೀಂ (ಪುಲ್ಲಿಕು. ೩-೪೯). ಬಸವಳಿ : ೧. ಪೊಱವಡುವ ಭೂಪಾಲನಂ ಕಂಡು ಕಂಗೆಟ್ಟು ಮಱುಗಿ ಬಸುಱಂ ಹೊಸೆದು ಬಸವಳಿದು . . . ವಿಡುವಿಡನೆ ವಿಂಡುಕಿತ್ತು ಪೌರಜನವು (ಹಕಾ. ೯-೩): ಬಸವಳಿದಾಳುಗಳ ದೇವನು ಮಹಾಹವದೊಳಗೆ ಪವಡಿಸಿದ (ಕುಮಾವ್ಯಾ. ೬-೬೦). ೨. ತಲೆ ತಿರುಗಿ ತುಟಿಯೊಣಗಿ ಕಂಗಳ ಬಳೆ ಮರಳಿ ಬಸವಳಿಯೆ ಸಾರಥಿ ತೊಲಗಿಸಿದನಾ ರಥವನು (ಕುಮಾವ್ಯಾ. ೩-೩೬): ಅಸವಸದಿ ಕಣ್ದೆಱೆದು ರಮಣನಿನ್ನೆಲ್ಲಿ ಪೋದನೊಯೆನುತ ಬಸವಳಿದಳು (ಸೌಂದಪು. ೮-೨೮). ೩. ಕುಗ್ಗು; ಕಂಸಿ : ಕುಸುಮಕುಲಕ್ಕೆ ಬಸವಳಿದು ಮಂದಾನಿಲಂಗೆ ಮದವುಡುಗಿ ಕಾಮನ ಕಾರಾಗಾರದೊಳಿರ್ಪಂತೆ ಕೇಳೀವನದೊಳಿರ್ಪ ಬಾಲಕಿಗೆ ಚಂದ್ರನ ದಾಳಿ . . . ಅಖಂಡಿತವಾಗೆ (ಗಿರಿ. ೯-೦೦೬ ವ); ಪರಶಿವಪದಧ್ಯಾನದನುಸಂಧಾನವೆಡವರಿದ ಶಿವಯೋಗಿಯಂತೆ ಸೌಂದರನ ಕಾಣದೆ ಹರವೆ ಬಸವಳಿದಳು (ಸೌಂದಪು. ೦೩-೮೯). ೪. ಕಷ್ಟಪಡು; ಶ್ರಮಪಡು; ಆಯಾಸಪಡು : ಮುಪ್ಪಿನ ತಂದೆಯ ಬಸವಳಿದ ಬಾಳಿಗೆ ಮತ್ತೊಂದು ಉಪಸರ್ಗ ಬಂದು ಸೇರಿಕೊಂಡಿತು (ಬಾಹ. ೦೯); ಬಲು ಬಳಲಿ ಬಸವಳಿದು ಬಂದೆ, ಬಾ! (ಕದೊ. ೬೦-೦೬). ೫. ಸಾಯು; ಮರಣ ಹೊಂದು : ಜವನುಂಡು ಕಾಱುದಂದದಿನ ವಂದಿರ ಕೊಂದು ಬಿನವ ತಾಂ ಬಸವಳಿಯಲುಕವನಂ ವಿಮಾನದಲು ವಾಸವನ ಪುರಕೆಪೊಯಿದರಮರಗಣಿಕೆಯರೊಲವಿಂ (ಎಕ. VIII. ಸೊಕಬ. ೨೨೯-೦೨; 1319). ಬಸವಟೆ : ೧. ಕಾದಿ ಬಸವಟೆದ ಸಾತ್ಯಕಿಯಂ ಭೂರಿಶ್ರವಸನ್ನಮದೊಳ್ ನೆಲಕಿಕ್ಕಿ ಗಂಟಲಂ ಮೆಟ್ಟಿ ತಲೆಯನರಿವಾಗಳ್ (ಕಂಕಣಾ. ೧೧-೦೯೦ ವ); ಸಗ್ಗಿಗರಾಣ್ಮನ ಘನಕರಿಘಟೆಗಳ್ ಬೇಸಗೆಯ ಬಿಸರಕ್ಕೆ ಬಸವಟೆದು, ಬಾಯಾಱಿ, ಮುನ್ನೀರ ನೀರಂ ಕಂಡು, ಪಿಂಡುಗೂಂಡು ಬಂದು (ಶಾಶಾಕ. ೩-೬); ಬಸವಟೆದನೇ ಮರುಳ್ದು ನಮ್ಮ ಕಲಿ! (ಅಕ್ಕಕಾ. ೦೯-೨೨೩). ೨. ಇದಿರಾಂತು ಕಾದಿ ಸತ್ತ ವಾಯುಸವೀರನಿಕಾಯು ಮುಮನಲ್ಲಿಯೆ ನೊಂದು ಬಸವಟೆದಿರ್ದ ಬಲಿಭುಗ್ಬಲಪ್ರಧಾನರಂ ಕಂಡು (ಕಂಕಕಂ. ೨೦೩-೦೯); ಅಂತು ಬಸವಟೆದು ಬೀೞ್ ಪೊಯ್ದುದುಂ ಮೂರ್ಛೆವೋದನಂ ಗತಪ್ರಾಣನೆ ಗೆತ್ತು ಮಾಯಾವಿ ಮಗುೞ್ ಪೋಪುದುಂ (ಕಂಡಾಕಪಾ. ೧೦-೩೬ ವ). ೪. ಬಱಿಯ ವಿಷಯದ ಸವಿಗೆ ಬಸವಟೆದು ಸೊರ್ಕಿ ಮಯ್ಮಱೆತು ಬೆಱ್ಱನೆ ಬೆಱೆತು ಮತಿಗಿಡುವನೆನೊಮ್ಮೆ (ಗೀತಗೋ. ೬೩-೨). [ಬಸ್ಸು + ಅಟ್ಟು]

**ಬಸಮುಱು** (ಕ್ರಿ). ಸ್ವಾಧೀನ ತಪ್ಪು : ಕಾಲಡಿಯಿಂ ಕೊರಲ್ವರೆಗವಿಂದಗಿ ಯೆಚ್ಚ ಫಣೀಂದ್ರಸಾಯಕಂ ಕೀಲಿಸಿದಂತವೋಲ್ ಬಗಿಯ ಸುತ್ತುವುದುಂ ಬಸಮುತ್ತು ಮುಚ್ಚಿ ಕಣ್ಣಾಲಿಗಳೆಚ್ಚಗೆಟ್ಟು ಕಪಿಕೇತನನಾಗಳೆ ಮುಚ್ಚೆವೋಗೆ (ಕಂಡಾಕಪಾ. ೦೩-೦೯೯). [ಬಸ್ಸು + ಉಱು]

**ಬಸಯಿಸು** (ಕ್ರಿ). ವಶಪಡಿಸಿಕೊಳ್ಳು; ಹಿಡಿತದಲ್ಲಿಟ್ಟುಕೊಳ್ಳು : ಬಸಯಿಸಲಿಂಬುಕಯಲೊಳ ಪೊಯ್ಸಲೊಡಯಬಿಡಿಸಲ್ ಪ್ರ ಮೋ ದ ಮ ೦ ಪೊಸಯಿಸಲಾಱಿಸಲ್ ನೆರೆದುಮೊಲ್ಲದ ಚಿತ್ತಮುಂದಾತ್ತಚಿತ್ತೆಯಾ (ಶಾಂತಿಪು. ೬-೦೦೩). [ಬಸ್ಸು + — ಇಸು]

**ಬಸರಾಯಿ** (ನಾ). ಒಂದು ಬಗೆಯ ಬಾಳೆ : ಉತ್ತಮಜಾತಿಯ ಈ ಹಣ್ಣುಗಳಲ್ಲಿ 'ಬಸರಾಯಿ' ಎಂಬುದನ್ನು ಪಾವು ಮರೆಯಲುಂಟೆ ? (ಹಣ್ಣುಮು. ೬೦). [← ಮರಾ. ಬಸರಾಈ]

**ಬಸರಿ**, ಬಸಿರ್ಗಿ, ಬಸುರ್ಗಿ (ನಾ). ೧. ಒಂದು ಬಗೆಯ ಮರ : "ಬಸರಿ ಪರ್ಕಟೀ ಪ್ಲಕ್ಷವೃಕ್ಷಃ" . . . (ಶಬ್ದಮಕೋ. ೩೩-೨); ಅತ್ತಿಯ ಬಸರಿಯ ಗೋಳಿಯ ಮತ್ತರಳಿಯ ವಟದ ಪಣ್ಣನಡಗಂ ಜೇನಂ ಬಿತ್ತರ ಮಧ್ಯಮನಾಗೆಂಬುತ್ತಮ ಸಂಸೇವ್ಯ ಮೂಲಗುಣಮಾಯೆಂಬುದುಂ (ರತ್ನಾಕಶ್ರಾ. ೩-೦೩೨); ಬಸರಿಯಿನಶ್ವಕೋಟಿಕದಳೀ(ದು)ಮದಿಂ ಕುಱಿ ಹಸ್ತಿ ಕರ್ಣ ದಿಂದೆಸಗುವ ದಂತಿ (ಅಭಿಪು. ೯-೦೫). ಬಸಿರ್ಗಿ : ೧. ಸಂಪಗೆ ಬಸಿರಿ ನೇರಿಲೆ ಲವಂ ಕೌಂಗು ಸುರಹೊನ್ನೆ ಹೊನ್ನೆಯಿಂದಾ ಬನಂ ಕಣ್ಗೆಸೆದುದು (ಕಂಡಿಪಾ. ೩-೦೮). ಬಸುರ್ಗಿ : ೧. "ಪರ್ಪಟಿಕನಲು ಬಸುರಿಯಕಣ್ಣು" (ಕಂಗಕಾ. ೩೬-೨೦): ಇನವಾರದಂದು ಬಸುರಿಯ ಕೊನೆಯಂ ಕೊಂಡೆಡದೆ ಬಟೆದು(ಳಸಿ) ಕೆಸಱಿಸೊಳದಂ ಪೊಟ್ಟನಿತಟೆೞಾ ನರವುಲಿಯೆನಿತನಿತು ಮವಿರ್ದೆಡೆಯನಱಿಯುದಂತಿರೆ ಪೋಕುಂ (ಲೋಕೋಪ. ೯-೦೩೦); ಅರಳಿ; ಬಸುರಿಯ ಪಾಲೇಟೆದ ಕೊಂಬನುಡಿದು ಮಧುವಿಶ್ರಿತದಿಂದಾಲೋಚಿಸ ದಿಕ್ಕುವುದಾ(ದೀ)ರೇಟು ದಿನಂಬರ ಹಯಕೆ ಶ್ವಾಸವಿನಾಶಂ (ಅಶ್ವಶಾ. ೧೦-೩೨). 'ಕಬ್ಬಸಂಗಿ' ಪರಾ. ೨. ಜಟಿ ಎಂಬ ವೃಕ್ಷಗಳು ಬೆಳೆದಿರುವ ಭೂಮಿ : ತನ್ನಾಳ್ವ ಮುಳ್ಳಿನಾಡ ಕೋಡೂರಲ್ಲಿ ಊರ ಮೂಡಣ ಬಸುರಿಯಂ ರಾಜಗೋವಿಂದನು ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಸೌಇಇ. IX-i. ೨೬೩-೦೬; 1182); ಸೆಟ್ಟಿಯ ಕೆಱೆಯ ಮೊದಲೇರಿಯಂ ಮೂಡಲು ಬಸುರಿಯ ನಟ್ಟ ಕಲ್ಲು ಗಡಿಯಾಗಿಯಾ ಗಡಿ ಬಡಲು ಗದ್ದೆ ಕಂಬ ೧೫೦ (ಎಕ. XI. ಹೊಳಲ್ಕೆ. ೦೨೯-೬೦; 1208 ?).

**ಬಸಲ್ಕೆ**, ಬಚ್ಚಲ್ಲು, ಬಚ್ಚಲೆ, ಬಸಳೆ (ನಾ). ೧. (ತರಕಾರಿಯಾಗಿ ಬಳಸುವ) ಒಂದು ಬಗೆಯ ಸಸ್ಯ : "ಕಂಬಿ, ಮಹೋದಕಾ ಇದು ಬಸಲೆ" (ಶಾಕಾ. ೧೦೨); ಒಡ ಕುದುರೆಯ ಮೇಲೆ ಮಸಿಯ ಹಲ್ಲಣವ ಹಾಕಿ ಬಸಲೆಯ ಹಂಬ ಬಾಯಿಗೆ ಕಟ್ಟಿ (ಕೋಲಶಾಂ. ೨೯-೦೦); ಕುಂಬಳ ಸೋರೆ ಬಸಲೆ ನುಗ್ಗೆ ಉಯಿಕೀರೆ ನಱುವಲು ಹಱುಹೆ ಮೊದಲಾದ ಹಸುರು ಸೊಪ್ಪು . . . ಬೇಱೆಬೇಱೆ ಕಡುವಿರಿದು ಹಸನಾಗಿ ಕೊಣಬಂ ಕಾಸಿ ತಾಳಿಸಿ ಬದನೆಗಾಯಿಗಳನಿಡುವುದು (ಸೂಶಾ. ೯-೩೬). ೨. ಬಾಯಿಯಲ್ಲಿ ಏಳುವ ಬೊಕ್ಕೆ-ಗುಳ್ಳೆ; ಬಾಯಿಹುಣ್ಣು : ಕ್ರಿಮಿಕುಲಮುರ್ಬುಗು ಮೇಱಿನೊಳಮೋಘ[ಮನೆ] ಬಾಯ ಬಸಲೆಯುಂ ಸಂಭವಿಕುಂ (ಖಖಮ. ೦೩-೯೬); ಹೊಮ್ಮುಗಳು :—ಇದಂ ನಿಂಬೇಹುಳಿಯಲ್ಲಿ ತೇದು ತೊಡೆಯಲು ಬಾಯ ಬಸಲೆ(?) ಮಾಣ್ಗುಂ (ಅಕ್ಕಿಪ. ೯). ಬಚ್ಚಲ್ಲು : ೧. 'ಕಾವುಬಚ್ಚಲು' ಪರಾ. ಬಚ್ಚಲೆ : ೧. 'ಕಾವುಬಚ್ಚಲೆ' ಪರಾ. ಬಸಳೆ : ೧. ಉಪೋದಿಕೆ (ಬಸಳೆ)ಯು ಮದನಾಶಕವು (ಶಾಸ್ವಾಂಗ. ೦೩೬-೮೨); ಬಸಳೆಸಪ್ಪು ಮೆಣಸಿಗೆಸಪ್ಪು ತೊಗರಿಬೇಳೆ ಕಡಲೆಬೇಳೆ . . . ಇವಿಪ್ಪು ಶೋಣಿತವಾತಕ್ಕೆ ಶಮನ (ಧ್ರುವಾಕೂ. ೩-೩); ಬಸಳೆಯ ಚಪ್ಪರ ನಿಜವಾಗಿಯೂ ದೊಡ್ಡದಿತ್ತು, ಅತ್ತಿತ್ತ ಬಸಳೆಯ ಬುಡಿಗಳು ನೇತಾಡಿಕೊಂಡಿದ್ದುವು (ಹಿಪಿಪ. ೦೯೬). ೨. ಬಿದ್ದು ನಾಲಗೆ ಬಾಯ ಬಸಳೆಗಳೆದ್ದು ನಡೆನುಡಿಯುಡುಗಿ . . . ಹಲುಗಡಿದೆದ್ದು ಕಣ್ಣುಗಳುಸುರು ಭೋರಿಟ್ಟುದ ಕೇಳುತಲಿಹನು ನರನೀ ಪರಿಯ ಮರಣದಲಿ (ಕೃಪಾಕ. ೯-೬೩).

ಬಸಲೆಯ ಬಾಡು = ಬಸಲೆಯ ಸೊಪ್ಪಿನಿಂದ ತಯಾರಿಸಿದ ವ್ಯಂಜನ ಪದಾರ್ಥ : ಮಸಣದ ಬೂದಿಯಂ ತಳಿದರೋ ತಲೆಸೆಸಗೆ ಮಿಂಡರೊತ್ತೆಯೋಂ ಬಸಲೆಯ ಬಾಡೊ (ಸೂಕ್ತಿಸು. ೯-೯೫೦).

[ದೇ.॥ ತಮಿ. ಪಚಲೈ, ಪಚಿರ, ಪಯುರಿ, ವಚಲೈ, ವಚಳೈ, ವಯಲೈ; ಮಲ. ಪಚಳ, ಪಸಳ, ವಸಳ, ವಯಲ; ತುಳು. ಬಸಲೆ, ಬಚ್ಚಲೆ, ಬಚ್ಚಳೆ; ತೆಲು. ಬಚ್ಚಲಿ]

**ಬಸಲ್ಕೆ** (ನಾ). (?) : ಕೊಂಡೆಗಿತ್ತಿಯರು ಎಕ್ಕಸೆಕ್ಕಿಯರವರವರುಗಳ

ನಕ್ಕು ಬಸಲೆಯರುಗಿದು ತಿಂಬಾ ರಕ್ಕಸಿಯರಾಶಾಪಿಶಾಚಿಯರಿಚ್ಚೆಗಾತಿಯರು (ಬಸಪು. ೪೦-೩೨). [?]

**ಬಸವ** (ನಾ). ೧. ಗೂಳಿ; ಹೋರಿ : "ಉಕ್ಷಾ, ಭದ್ರಃ . . . ಸೌರಭೇಯಃ , ಗೌಃ—೯ ಎತ್ತುಗಳ ಹೆಸರು, ಬಸವನಿಗೂ ಹೆಸರು, ವೃಷಭ " (ಸಿದ್ಧಾಂತಿ. ೨೯೨); ಬಸವಂ ಸತ್ತಿರ್ದಡೆ ಸಂತಸದಿಂದಂ ಮಿಾಸಿ ಪೂಜಿಸುತೆ ಭಂಡಿಯೊಳೇಱಿಸಿ ಸುತ್ತಿ ಪೂಗಳಂ ಪಾಡಿಸುತೆ ಕೊಂಡೊಯ್ದು ಪೂಟ್ದುವಿಾವಮೂರ್ಧರ್ (ಸಮಕ. ಅನುಬಂಧ ೩೫೦); ಕೊಳನಂ ತಾವರೆಯಂ ಕಳಿರ್ತ ವನಮಂ . . . ಬಸವನಂ ಬೆಳ್ಳಕ್ಕಿಯಂ . . . ದೇವರ್ಕಳಂ ತುಂಬಿಯಂ ತಿಳಿಯಲ್ ಸ್ವಪ್ನದಿ ಲೇಸು (ಸೋಪಾಚೀಕ. ೬೯); ಬಸವನ ಹಿಂದೆ ಬಾಲ (ಗಾದೆ). ೨. ಶಿವನ ವಾಹನವಾದ ನಂದಿ; ವೃಷಭ : "ಬಸವನೆನೆ ಗೊಂದೆಯೆನೆ ಚಾರುತರ ವೃಷಭನೊಳ್ವೆಸರಕ್ಕು" (ಶಬ್ದಮಂ. ೬). ೩. ದೇವತೆಗಳ ಪ್ರೀತ್ಯರ್ಥವಾಗಿ ದೇವಸ್ಥಾನಗಳಿಗೆ ಮಿಾಸಲು ಬಿಟ್ಟ ಗೂಳಿ,—ಹೋರಿ : ಬೀದಿಯ ಬಸವಂಗೆ ದೇಗುಲದ ಪಶುವಿಂಗೆ ಹುಟ್ಟಿದ ಕಱು ಹೋರಿಗಳು ಬಸವಗಳಪ್ಪವೆ ಲಿಂಗಮುದ್ರೆಯನೊತ್ತದನ್ನಕ್ಕರ (ಚನ್ನವ. ಕ. ೧೯೨-೯೨೪); ದೇವರ ಹೆಸರಿನ ಮೇಲೆ ಬಿಟ್ಟ ಬಸವ, ಬಸವಿಗಳು ಕಾಲಗತಿಯನ್ನು ಹೊಂದಿದರೆ ಅವುಗಳನ್ನು ಕೊಂಬು ತಮಟೆ ವಾದ್ಯ ಸಮೇತ ತೆಗೆದುಕೊಂಡು ಹೋಗಿ ಸಮಾಧಿ ಮಾಡಿ ಅದರ ಮೇಲೆ ಗಿಡವನ್ನು ನೆಡುತ್ತಿದ್ದರು (ಹುಟ್ಟಿಹ. ೬೦). ೪. ಶಿವನ ಪ್ರಮಥಗಣದಲ್ಲಿ ಒಬ್ಬ : ಆ ಪ್ರಣವಸ್ವರೂಪರಾದ ಬಸವಾದಿ ಅಸಂಖ್ಯಾತ ಪ್ರಮಥಗಣಂಗಳು . . . ನಮಸ್ಕಾರವ ಮಾಡಿ (ಶಿವವ. ೩೨-೪೩). ೫. ವೀರಶೈವಧರ್ಮಪ್ರವರ್ತಕ ಮತ್ತು ಪ್ರಸಿದ್ಧ ವಚನಕಾರನಾದ ಒಬ್ಬಾತನ ಹೆಸರು ; ಬಸವಣ್ಣ: ಬಸವನಿರವ ನಿಱಿದು . . . ಬಸವನ ಬಯಲ ವಿಚಾರವ ತಿಳಿದು ಭ್ರಮೆಯನಳಿದು ಆನು ಬದುಕಿದೆನಯ್ಯಾ (ಶೀಲವ. ಕ. ೨೩-೬೯); ದೇವ ಮಮಗುರು ಲಿಂಗ ಜಂಗಮದೇವಯೆನುತಂ ಬಸವನಾ ಪ್ರಭುದೇವರ ಶ್ರೀಪಾದಪದ್ಮಕ್ಕರ್ಚನೆಯ ಮಾಡಿ (ಬಸಪು. ೮-೦೩). ೬. (ಅಲಂ) ಗೂಳಿಯಂತೆ ತಿರುಗಾಡುವವನು; ಗುರಿಯಿಲ್ಲದೆ ಸಂತ್ರ್ಯವನು : (೬).

**ಬಸವತೃಣ** = ದೂರ್ವೆ ; ದರ್ಭೆ (?) : ಹಸುಮಕ್ಕಳಾಗಿ ಕುಳ್ಳಿರ್ದ ಹರ ಹರಿಯಜರಿಗೆ . . . ಮೂವರನ್ನ ಸುತರಾಗಿಯೆನೆ ಶಶಿಧರಂ ಯಜ್ಞಕರ ದೂರ್ವಿಜಂ ದೂರ್ವಾಸವೆಸರಾದವೊಲು ಬಸವತೃಣಕೆ ಪೆಸರಿಟ್ಟವನ ಚರಣಾಂಬುಜಕ್ಕೆ ಶರಣು (ಬಿಶಿಹಿಂ. ೩೩-೩೩). **ಬಸವನ ಕಣ್ಣು** = ಕಣ್ಣಿನ ಅಂತರ್ದ್ರವವನ್ನು ಶೋಧಿಸುವ ಜರಡಿಯಲ್ಲಿ ಉಂಟಾಗುವ ದೋಷ; ಕಣ್ಣಿನ ಒಂದು ಬಗೆಯ ರೋಗ : ಬಸವನ ಕಣ್ಣುಗಳು ಈಗಲೂ ಒಂದು ಕಠಿನ ಸಮಸ್ಯೆಯಾಗಿಯೇ ಉಳಿದಿದೆ (ಶಿವ್ಯನ್ನ. ೬೩). **ಬಸವನ ಕೊಂಬಿನ ಹುಳ**=ತಲೆಯ ಮೇಲೆ ಕೊಂಬಿನ ಆಕಾರದ ರಚನೆಯಿರುವ ಒಂದು ಬಗೆಯ ಹುಳು; ಶಂಬುಕ : (೬). **ಬಸವನ ಕೋಡಿನ ಹುಳ**=ಬಸವನ ಕೊಂಬಿನ ಹುಳ : (೬). **ಬಸವನ ನೋಂಪಿ** = ನಂದಿಯನ್ನು ಕುರಿತು ಆಚರಿಸುವ ವ್ರತ,—ನೇಮ : ಬಸವನ ನೋಂಪಿಯನ್ನೋಂತು ಧೈರ್ಯದಿಂದೆ ಚಿತ್ರಚಾರಿಯನೊಲಿಸಿ ಗಂಡನಸುವಂ ಪಡೆದು (ಚಿಬಿಪು. ೩೩-೪೩). **ಬಸವನ ಪೂಜೆ** = ಬಸವನ ನೋಂಪಿ : ಹಸುಮಗಳು ಚನ್ನವ್ವ ಬಸವನ ಪೂಜೆಯ ಮಾಡಿ ಬಸವಂತಿ ಎಂಬ ಮನೆ ಮಾಡಿ . . . ನಿನ್ನಯ ಪ್ರಾಣ ಪಡೆದವಳು (ಜಗೀತೆ. ೦೨೦). **ಬಸವನ ಬಿಡು, ಬಸವ ಬಿಡು** = ದೇವರ ಹೆಸರಿನಲ್ಲಿ ಹೋರಿ, ಕುದುರೆ, ಕುರಿ ಮೊದಲಾದುವುಗಳನ್ನು ಮಿಾಸಲಾಗಿ ಬಿಡು : ಆ ಕುದುರೆಯನ್ನು ಗೊಂಡೇನಹಳ್ಳಿಯ ಶನಿ ಮಹಾತ್ಮನ ದೇವಸ್ಥಾನಕ್ಕೆ ಬಸವನ ಬಿಟ್ಟಿದ್ದರು (ಪಪ್ಪಣ್ಣರು. ೬೦೨); ನಮ್ಮ ದೇಶದಲ್ಲಿ ದೇವಸ್ಥಾನಗಳಿಗೆ ಗಂಡೆತ್ತನ್ನು 'ಬಸವ' ಬಿಡುತ್ತಾರೆ (ಚಾಲಿತ್ರ. II, ೬೭೪). **ಬಸವನ ಮುದ್ರೆ** = ದೇವಸ್ಥಾನಗಳಿಗೆ ಮಿಾಸಲು ಬಿಡುವ ಮೊದಲು ಹಾಕುವ ಮುದ್ರೆ,—ಠಸ್ಸೆ : ಹೊದ್ದಿ ಮೆಲ್ಲನೆ ಸನ್ನೆ ಮಾಡಿ ಕರೆವ ಈ ಬುದ್ಧಿಯು ಒಳ್ಳೇದೇನೆ ಗೋಪಿ ಮುದ್ದು ಮಾಡಿ ಸಾಕಿ ಮಗನಿಗೆ ಬಸವನ ಮುದ್ರೆಯ ಒತ್ತಿದ್ಯೇನೆ (ಪುರಂದ. ೩-೨೦೬-೩). **ಬಸವನ ಮುದ್ರೆ ವರಹ** = (ಬಸವನ ಮುದ್ರೆಯನ್ನು ಹೊಂದಿರುವ) ಐದು ರೂಪಾಯಿ ಬೆಲೆ ಬಾಳುವ ಒಂದು ಚಿನ್ನದ ನಾಣ್ಯ : (೬). **ಬಸವನ ಹುಳು** = ಬಸವನ ಕೊಂಬಿನ ಹುಳು : ಎವರ್‌ಗ್ಲೈಡ್ ಹದ್ದುಗಳು ಬಸವನ ಹುಳುಗಳನ್ನು ಮಾತ್ರ ತಿನ್ನುತ್ತವೆ (ಪಕ್ಷಿ. ೩೨); ಅವಳು ಹೋದ ಜನ್ಮದಲ್ಲಿ ಬಸವನ ಹುಳು ಆಗಿದ್ದಿರಬೇಕು ! (ಶಾಂತಲಾ. ೨೪೪). [< ಸಂ. ವೃಷಭ. / ತೆಲು. ಬಸವ]

**ಬಸವಂತ** 'ಬಸಂತ' ನೋ.

**ಬಸವಂತಕಲ್ಲು** (ನಾ). ಬಸವನ ಗುರುತಿರುವ ಕಲ್ಲು (?) : ಅಲ್ಲಿ ಬಹ ವರ್ತ್ತನೆಯನು ತುಳುವೇಶ್ವರದೇವರಿಗೆ ನಡೆಸಿ ಬಹುದು ದೇವರ ಬಸವಂತ ಕಲ್ಲ ಮುಂದೆ ನಾಲ್ವರು ನಾಲ್ವಾಡರು . . . ನಡಸುವಂಥಾ ಸೀಮೆ ಸ್ವಾಮ್ಯಲು (ಸೌಇಇ. IX-ii, ೪೩೬-೦೪; 1456). [ಬಸವಂತ, (< ಬಸವ) + ಕಲ್ಲು (<ಕಲ್$_3$)]

**ಬಸವಂತಗೊಳಿಸು** (ಕ್ರಿ). ಓಕುಳಿ ಎರಚು : ಜೋಡು ಜರಿದು ಬಿತ್ತರಿಸಿದುವಂಬುಗಳು ಮೆಯ್ಯೊಳು ಬಿಸಿನೆತ್ತರ ಬಸವಂತಗೊಳಿಸಿ (ಮೋಹತ. ೩೮-೩೨). [ಬಸವಂತ (<ಬಸಂತ) + ಕೊಳ್$_1$+ —ಇಸು$_3$]

**ಬಸವಂತಿ** (ನಾ). ೧. ಬಸವಿ; ಸೂಳೆ : ನೀನು ಬಸವಂತಿ ಇರುವೆ. ಯಾರಿಂದ ಆಯಿತು ಹೇಳು . . .ಎಂದು ಬೆದರಿಕೆ ಹಾಕಿದರು (ಹೋಲಪು. ೬೦). ೨. (?) : ಹಸುಮಗಳು ಚನ್ನವ್ವ ಬಸವನ ಪೂಜೆಯ ಮಾಡಿ ಬಸವಂತಿ ಎಂಬ ಮನೆ ಮಾಡಿ . . . ಚನ್ನವ್ವ ನಿನ್ನಯ ಪ್ರಾಣ ಪಡೆದವಳು (ಜಗೀತೆ. ೦೨೦). [< ಬಸವಿ ?]

**ಬಸವಡು** (ಕ್ರಿ). ವಶವಾಗು ; ಅಧೀನವಾಗು : ಬಸವಟ್ಟುದು ಚೆನ್ನಪಟ್ಟಣಂ ಪೊಸತಾಂಧ್ರುಂಗೆ ಪೊದಟ್ಟುದಿಟ್ಟಣಂ ಅಸಿದಾದುದವಂಗೆ ಮಂಗಲಂ ಬೆಸದಿಂ ಪಿಂಗಿತು ನಾಗಮಂಗಲಂ (ಜಕಶಿ. ೨-೬೬). [ಬಸ್$_1$+ಪಡು$_1$]

**ಬಸವಡೆ** (ಕ್ರಿ). = ಬಸವಡು : ತುರುಕರ ಬಸವಡೆದಾ ದುರ್ಗವಿಟ್ಟೊಡೆ ಪಿರಿದಾಯಸ ಮುಂದಕಹುದು (ಶಂಕಪಿ. ೦೬-೩೩). [ಬಸ್$_1$+ಪಡೆ$_1$]

**ಬಸವಣ** 'ಬಸವಣ್ಣ' ನೋ.

**ಬಸವಣ್ಣ, ಬಸವಣ** (ನಾ). ೧. ಎತ್ತು; ಹೋರಿ: ಬಸವಣ್ಣ ಭೂಮಿ ಉಳುತ್ತಾನೆ, ಭೂಮಿತಾಯಿ ಬೆಳೆ ಕೊಡುತ್ತಾಳೆ (ಜಪಪು. ೨-೬೨); ನಮ್ಮೂರಿನ ರೈತರ ಮೇಲೆ ಬೀಳುವುದಕ್ಕಿದ್ದ ಅನೇಕ ವಿಧವಾದ ಕತ್ತಿಯ ಪೆಟ್ಟುಗಳಿಗೆ ಕಾಲುನಡೆಯು ಬಲ್ಲವಾದ ಗುರಾಣಿಯಾಗಿದ್ದಿತು. ಆದ್ದರಿಂದಲೇ ಕೆಟ್ಟರೂ ಬಸವಣ್ಣನಿಂದ, ಬದುಕಿದರೂ ಬಸವಣ್ಣನಿಂದ ಎಂದು ಅನ್ನುತ್ತಿದ್ದರು (ಹುಟ್ಟಿಹ. ೬೦). ೨. ಶಿವನ ವಾಹನ ; ನಂದಿ : ನಮ್ಮ ಮನೆಯ ಹತ್ತಿರ ಬಸವಣ್ಣನ ದೊಡ್ಡ ಗುಡಿ ಇದೆ (ರೂ). ೩. ವೀರಶೈವಧರ್ಮಪ್ರವರ್ತಕನೂ ಪ್ರಸಿದ್ಧ ವಚನಕಾರನೂ ಆದ ಒಬ್ಬಾತನ ಹೆಸರು : ಬಸವಣ್ಣನ ಮನೆಯ ಮಗಳಾಗಿ ಬದುಕಿದೆನಾಗಿ ತನ್ನ ಕರುಣಭಕ್ತಿ ಪ್ರಸಾದವ ಕೊಟ್ಟನು (ಶುಚಾದೇ. ೬. ೩೬-೦೯೬); ಎನ್ನುವಂ ಪದುಳದೊಳಿರಿಸಿ ಪೊರೆ . . . ಕಲಿಯುಗದೆರಡನೆಯ ಮುಕ್ಕಣ್ಣ ಬಸವಣ್ಣಾ (ಬಸಪು. ೦-೬). **ಬಸವಣ** : ೩. ಸೊಕ್ಕಿ ಬಸವಣನೆನ್ನ ಮೂಗಿಗೆ[ಶಾಶಿಂ. ಮಾತಿಗೆ] ಸಿಕ್ಕಿದನಲಾ ಎನುತ (ಬಸಪು. ೩೦-೦೩). [ಬಸವ+ಅಣ್ಣ$_1$]

**ಬಸವನ ಗಿಡ** (ನಾ). ಒಂದು ಬಗೆಯ ಮರ ; ನಂದಿ : "ತುನ್ನಃ

. . . ನಂದಿವೃಕ್ಷಃ– ೬ ನಂದಿ ಎಂಬುವ ಮರದ ಹೆಸರು, ಬಸವನ ಗಿಡ" (ನಿಘಂ೦ಶಿ. ೧೯೦). [< ಬಸವ+ಗಿಡ ( < ಗಿಡು)]

**ಬಸವನ ಪತ್ರೆ** (ನಾ). ಗರಿಕೆ, ಬಿಲ್ವ ಮುಂತಾದ ಎಲೆ; ಎಸಳು: ಕಣದಲ್ಲಿ 'ಶಂಕರಗಂಡ'ನ ರಾಶಿಯ ಸತ್ತಲೂ . . . ಬಸವನ ಪತ್ರೆಯ ಬಣವೆಗಳ ಕೋಟೆಕಾವಲು (ಬೆಳಸು. ೨೪೬). [< ಬಸವ + ಪತ್ರೆ]

**ಬಸವನ ಪಾದ** (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ಹೂವು: ಬಸವನ ಪಾದ, ಕುಳಿಆಚಲು (ವೃ.ಶಿ. ೦೨–೨೦೯); ಬಸವನ ಪಾದ ಗಂಟೆಹೂ, ತುಂಬೆ ಮತ್ತು ಚೆಂಡುಹೂಗಳನ್ನು ಅಂದವಾಗಿ ಜೋಡಿಸಿದ್ದರು (ಕಕಥ. IV, ೩೬). ೨. ಒಂದು ಬಗೆಯ ಮರ: ಬಸವನ ಪಾದ, ವಿಸ್ತಾರವಾಗಿ ಬೆಳೆಯುತ್ತದೆ, ಕಟ್ಟಿಗೆಯು ಕೆಲಸಕ್ಕೆ ಬರುವುದಿಲ್ಲ (ಕಭಾಗ. ೯೪). ೩. ಒಂದು ಬಗೆಯ ಜೋಳ: ಬಸವನ ಪಾದ, ಫುಲ್ಗರ . . . ಕೊಡಮೂಕನ ಜೋಳ ಈ ಯೆಂಟು ಜಾತಿ (ಜೋಳ)ಗಳನ್ನು . . . ಬಿತ್ತುವರು (ಕಭಾಗ. ೨೬೦). [< ಬಸವ+ಪಾದ]

**ಬಸವನ ಸುಳಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು: ಇರುವಂತಿಗೆ ಬಸವನ ಸುಳಿ ಪರಿಮಳಿಸುವ ಪಚ್ಚೆದವನ . . . ಬಂದುಗೆ ಪರಿಪರಿಯ ಸುಗಂಧಕುಸುಮದಳಕುಳವಿಕರ್ಬುಂ (ಹರಿಶ್ಚಂ. ೬–೯೬). [< ಬಸವ + ಸುಳಿ$_2$ (< ಸುಟ್ಟಿ)]

**ಬಸವನ ಹಳ್ಳಿ** (ನಾ). ಒಂದು ಊರಿನ ಹೆಸರು: ಮಣ್ಣಂ ಬಳಸಿದ ಪ್ರಭುಗಳ್ ಪೆರ್ಮ್ಮಾಡಿಗಾಮುಣ್ಣ ಮುಗುಳಿಯ ನಾಗಯ್ಯ ಬಸವನ ಹಳ್ಳಿಯ ಬಸವಯ್ಯ (ಎಕ.XV, ಬೇಲೂರು. ೩೦೮–೦೦; 971). ☞ ಇದು 'ಬಸವನ ಪಳ್ಳಿ' ಎಂಬುದರ ಅಪಲಿಖಿತವಿರಬಹುದೆ? [< ಬಸವ+ಹಳ್ಳಿ (< ಪಳ್ಳಿ$_1$)]

**ಬಸವಯ್ಯ** (ನಾ). ಒಬ್ಬಾತನ ಹೆಸರು: ಪೊಙ್ಕುನ್ದದ ಬಾರಾನ್ದರವಯ್ಯ ತಗಡೂರ ಕೆಳೆಯ ಕಾಳೆಗದೊಳೆ ಬಸವಯ್ಯನ ಮುನ್ದೆ ಕಾದಿ ಸತ್ತು ಸಗ್ಗೆಯದ (ಎಕ. X, ಬಂಗಾರಪೇ. ೯೯–೬; ಸು. 950); ಮಣ್ಣಂ ಬಳಸಿದ ಪ್ರಭುಗಳ್ ಪೆರ್ಮ್ಮಾಡಿಗಾಮುಣ್ಡ ಮುಗುಳಿಯ ನಾಗಯ್ಯ ಬಸವನ ಹಳ್ಳಿಯ ಬಸವಯ್ಯ (ಎಕ. XV, ಬೇಲೂರು. ೩೦೮–೦೦; 971). [ಬಸವ + ಅಯ್ಯ$_{61}$]

**ಬಸವಸೆಟ್ಟಿ** (ನಾ). ಒಬ್ಬಾತನ ಹೆಸರು: ಬಸವಸೆಟ್ಟಿಯ ಮಗಂ ಚಬ್ಬಿಸೆಟ್ಟಿ (ಎಕ. IX, ದೊಡ್ಡಬ. ೯–೬; 918); ನಲ್ಲಮುರುಗಸೆಟ್ಟಿಯ ದೊಗ್ಗಬ್ಬೆಯ ಮಗಂ ಸುಪುತ್ರಂ ಪುಟ್ಟಿದ ಬಸವಸೆಟ್ಟಿ (ಎಕ. III (R), ಹೆಗ್ಗ.ದ. ೫೬–೯; 1020). [ಬಸವ + ಸೆಟ್ಟಿ]

**ಬಸವಳಿ** 'ಬಸವುಟಿ' ನೋ.

**ಬಸವಳಿಸು** (ಕ್ರಿ). ಆಯಾಸಗೊಳ್ಳುವಂತೆ ಮಾಡು; ಬಳಲಿಸು; ದಣಿಸು: ಬಸವಳಿಸದೆ . . . ಹಸಗೆಡಿಸದೆ ಹುದುಗಿಸದೆ ಬಸಿಟಿಯೊಳು ಬಂದ ಪೆಣ್ಮಕ್ಕಳ ಮಜಿಕವ ಸೊಸೆಯರೆಡೆಯೊಳಿಸಗುವುದು (ಹರಿಬ. ೯–೨೫); ವಿಚಾರ ತರಂಗಗಳು ಮುತ್ತಿ ಬಸವಳಿಸಿದವು (ಪಂಡಶಾ. ೯೩). [ಬಸವಳಿ (< ಬಸವುಟಿ) + –ಸು$_1$]

**ಬಸವುಟಿ** 'ಬಸವುಟಿ' ನೋ.

**ಬಸವಿ** (ನಾ). ೧. ದೇವರ ಹೆಸರಿನಲ್ಲಿ ದೇವಾಲಯದ ಸೇವೆಗಾಗಿ ಮೀಸಲು ಬಿಟ್ಟ ಹುಡುಗಿ; ☞ ತಂದೆತಾಯಿಗಳು ತಮಗೆ ಒದಗಿದ ಯಾವುದೋ ದುರ್ಭರಸಂದರ್ಭದಲ್ಲಿ ತಮ್ಮ ಮಗಳನ್ನು ದೇವರಿಗೆ ಅರ್ಪಿಸುವುದಾಗಿ ಹರಕೆ ಹೊತ್ತು ಚಿಕ್ಕಂದಿನಲ್ಲಿಯೇ ಮೀಸಲು ಬಿಡುತ್ತಾರೆ. ಈ ದೇವದಾಸಿ ಸಂಪ್ರದಾಯವು ಪ್ರಾಚೀನವಾದುದು. ಕೆಲವು ಕಡೆ ಇಂತಹವರನ್ನು 'ದೇವದಾಸಿ'ಯರೆಂದೂ 'ಜೋಗಿತಿ'ಯರೆಂದೂ ಕರೆಯುತ್ತಾರೆ. ಇಂದು ಈ ಪದ್ಧತಿಯು ಶಿಥಿಲಗೊಂಡು ತನ್ನ ಗೌರವವನ್ನು ಕಳೆದುಕೊಂಡು ಹೀನಾಯದ ಸ್ಥಿತಿಗೆ ಇಳಿದಿರುವುದನ್ನು ಕಾಣಬಹುದು: ಹಾಡುವ ಮಹಾದೇವಿ ತಾಳದ ಮಾಕಜ್ಜ ದೇವರ ಬಸವಿಯರು (ಎಕ. XII, ಗುಬ್ಬಿ. ೨೯–೪೬; 1470); ಬಸವಿಯರೊಳು ಪಾತಕಿನಿಯರೊಳು ಮತ್ತಸತಿಯರೊಳು ಕೆಳೆಗೊಳದೆ ಪೊಸತಿಲ ಪೊಱಗಡಿಯಿಡದೊಳ್ಪೆಂಡಿರ ಜಸವಳ್ಳಿ ಜಗವ ಪರ್ಬುವುದು (ಹರಿಬ. ೯–೯೩). ೨. ಸೂಳೆ; ವೇಶ್ಯೆ: ಇದ್ದೊಬ್ಬ ಮಗಳು ಊರ ಬಸವಿಯಾದಳು (ಸಣಕಥಾ. II, ೯೩೬); ನಾಕೇ ನಾಕು ದಿವಸದಾಗೆ ಈ ಕಾಸಿಂಬೀನು ಬಸವಿ ಆಗಿ, ಬಿಕಾರಿ ಆಗಿ ರೋಗದಿಂದ ಸಾಯ್ತ್ಯಾಳಲ್ಲ ಅಂತ ಎದೆ ಮಿಡುಕಿತು (ಬಂಗಾ. ೦೬೯). 'ಊರುಬಸವಿ', 'ಬೀದಿಬಸವಿ' ಪರಾ. ೩. ದೇವರ ಹೆಸರಿನಲ್ಲಿ ಮೀಸಲು ಬಿಟ್ಟ ಹಸು: ಬಸವಿ ಬಸವನ ಕೊಂದ ಪಾಪಕೆ ಹೋಹರು ಯಂದು ಬರದ ಸಾಸನ (ಎಕ. IX, ಕನ್ನಿಕ. ೬೬–೨೯; 1661); ದೇವರ ಹೆಸರಿನ ಮೇಲೆ ಬಿಟ್ಟ ಬಸವ, ಬಸವಿಗಳು ಕಾಲಗತಿಯನ್ನು ಹೊಂದಿದರೆ ಅವುಗಳನ್ನು ಕೊಂಬು ತಮಟೆ ವಾದ್ಯಸಮೇತ ತೆಗೆದುಕೊಂಡು ಹೋಗಿ ಸಮಾಧಿ ಮಾಡಿ ಅದರ ಮೇಲೆ ಗಿಡವನ್ನು ನೆಡುತ್ತಿದ್ದರು (ಹುಬ್ಬಹ. ೬೦).

**ಬಸವಿ ಬಿಡು** = ಅವಿವಾಹಿತತರುಣಿಯನ್ನು ದೇವರ ಸೇವೆಗಾಗಿ ಮೀಸಲಾಗಿಡು; ದೇವದಾಸಿಯನ್ನಾಗಿ ಮಾಡು: ನಿನ್ನನ್ನು ಬಸವಿ ಬಿಡುವುದಾಗಿ ಹೇಳಿದ್ದೇನೆ (ದೇವಹಂ. ೦೦೬).

[ಬಸವ + –ಇ$_2$./ ತಮಿ. ವಚವಿ; ತೆಲು. ಬಸಿವಿ]

**ಬಸವಿತ್ತಿ** (ನಾ). = ಬಸವಿ ೧: ಆ ಮಠವ ಬೋಹರಿಸುವ ಬಸವಿತ್ತಿಯ ಜನ ಒಂದಕ್ಕಂ ವರಿಸ ಒ[ಂದ]ಕ್ಕಂ ಅಕ್ಕಿ ಮೂಡೆ ಎರಡೂ ಹಾನೆ ಹತ್ತು (ಸೌಇಇ. IX–ii, ೪೦೬–೩೬; 1378). [ಬಸವ + – ಇತ್ತಿ]

**ಬಸವೆ** (ನಾ). = ಬಸವಿ ೧: ಇವಳು ಬೈತಲೆ ಕಲಕದಂತೆ ತಿದ್ದಿಕೊಳುತ್ತ ಮಿವಳು ಹಗಲೆಲ್ಲ ತೊಳೆವುತ ತೀಡಿಕೊಳ್ಳುವಳು ಸೂಳೆ ಬಸವೆಯು ತೆರದೆ (ಮಲ್ಲಿಶ. ೨–೨೦); ಈ ಹನುಮಂತದೇವರಿಗೂ ಅನೇಕ ಕಸಬೆಯರೂ, ಬಸವೆಯರೂ ತಾಳಿಯನ್ನು ಕಟ್ಟಿಕೊಳ್ಳುತ್ತಾರೆ (ಕನ್ನಜಾ. ೯೦); ಬೀದಿಬೀದಿಗೆ ಬಸವೇರಲ್ಲ ಕಸಬೇರೋ ಅವರು ನಾಯಿಪಾಡಿನ ನರಕದ ಕಿಂಡಿ ಅವರ ತವರೂರು (ಅರಳು. ೨೬೮–೧೯). [ಬಸವ + –ಎ$_2$]

**ಬಸವೇಱು** (ಕ್ರಿ). ಪರವಶತೆಯು ಅಧಿಕವಾಗು: ಎಟ್ಟು ನಿಂದೆಣೆಗೊಂಡು ಪೊರ್ದಿ ಕೈಲಾಗಿತ್ತು ತೋಳ್ತೋಳ್ಗಳ ತೊಡಕಿನೊಳಂ ಬಾಟ್ದಿ ಸೊಗಕೆ ಮೆಯ್ಬಸವೇಱಿದಂತೆ ಪೊದಟ್ದು ಕದುಬುದಾಳ್ದುವುದು (ಶಶಿಪ. ೬–೦೫೬ ಸಾಂಗತ್ಯ). [ಬಸ$_1$ + ಏಱು$_1$ (< ಏಱ್$_1$)]

**ಬಸಳೆ** 'ಬಸಲೆ$_1$' ನೋ.

**ಬಸಿ$_1$** (ಕ್ರಿ). ಬಸಿದು$_1$ (ಭೂತಕೃ). ೧. ಒಸರು; ಸ್ರವಿಸು; ಜಿನುಗು: ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಟ್ದು ನಾಣ ಪೆಂಪಿನೊಳೊಗೆತರ್ಪ ಘರ್ಮಜಲಬಿಂದುಗಳಂ ನಮಿತಾನನಾಬ್ಜೆ ಬೆಟ್ಟನೆ ಬಸಿವಿಂದುಕಾಂತಕರಸಂಕುಳಮೊಯ್ಯನೆ ಸೋಂಕೆ (ಆದಿಪು. ೯–೯೯). ಬಸಿಯೆ ಜಳಬಿಂದು ಕೇಶಪ್ರಸರಮನೆಡಗೆಯ್ಯೊಳಡಸಿ ಪಿಡಿದೆಸೆದುದು ಕಾಱಿಸುವಪೊಲಂಗಜನಸಿಯುಬ್ಬಿಸಮಾಗಿರೆ ಪೀರ್ದ ವಿರಹಿಜನಜೀವನಮಂ (ಲೀಲಾವ. ೧೪–೬); ಆ ಘರ್ಮದಿಂ ಬಸಿವಂಗು ಪಣೆಗೊಂಡು ಪತ್ತಿದಳಕಾನೀಕಂ . . . ಚೆಲ್ವಂ ಬೀಱಿ (ಶಂಸುವಾ. ೧೧–೦೫೦); ೨. ಪಾತ್ರೆಯನ್ನು ನಿಧಾನವಾಗಿ ಬಗ್ಗಿಸಿ ಅದರಲ್ಲಿರುವ ಬೆಂದ ಅನ್ನ, ತೊಳೆದ ಅಕ್ಕಿ ಹಾಗೂ ತರಕಾರಿ ಮುಂತಾದುವುಗಳು ತಳದಲ್ಲೇ ನಿಂತು ಮೇಲಿನ ಗಂಜಿ, ನೀರು ಮುಂತಾದುವನ್ನು ಸೋರಿ ಹೋಗುವಂತೆ ಮಾಡು: "ಬಸಿ–ಗಲನೇ (ಬಸಿಯು), ಶಾತ, (ಹರಿತ ಮಾಡು), ದಂಡಮಧ್ಯಜೋಃ(ದಂಡಿಗೆಯ ಮಧ್ಯಭಾಗ)" (ಶಮುಧಾ); ಬಳಸಿ ರಾಜಾನ್ನದಕ್ಕಿಯನು . . . ಅಕ್ಕಿಗಚ್ಚಂ ಬಸಿದು (ಸೂಪಶಾ. ೩–೨);

ಪಾತ್ರೆ ತುಂಬ ನೀರಿಟ್ಟು ಅಕ್ಕಿ ಹಾಕಿ ಬೆಂದ ಅನಂತರ ನೀರನ್ನೆಲ್ಲ ಬಸಿದು ತೆಗೆಯುವುದು ಸಾಮಾನ್ಯವಾಗಿ ಅನ್ನ ತಯಾರಿಸುವ ವಿಧಾನವಾಗಿದೆ (ಅಡುಗೆ. ೬೪). ೩. ಧಾರೆಯಾಗಿ ಬೀಳು ; ಸುರಿ : ಪೆರ್ಗೆಸಱ್ಱಾಗಿರ್ಪುದು ಬಟ್ಟೆ ಪೋದವಿದಱ್ತೊಳ್ ಪೆರ್ಬುಂದಿಗಳ್ ನೆತ್ತರುಂ ಬಸಿವುತ್ತಿರ್ಪುದು ಪೋದ ವಿಕ್ಕಿ ಮಾಱುಯುಂ ಪುಲ್ಲಟ್ಟೆಯೊಳ್ ಪುಲ್ಲೆಗಳ್ (ಕಾದಂಪೂ. ೦೩೬); ಬಸಿವ ಸೊರ್ಕಿಂದಾನೆಗಳ ವಾಜಿವದನದಿಂದೊಸರ್ವ ಲಾಲಾಜಲದಿಂದ ಬೆಸವುಕ್ಕ ಳೊಗುವ ವೈಬೆವುರಿಂದಾ ಬೀದಿ ಕೆಸರ್ವಡೆದಿಹುದನವರತ (ಕುರಾಸಾಂ. ೯-೦೦೬). ೪. ಬೆವರು ಸುರಿ : ರಿಪುಬಂದಿಕಾಱನೊಳೇಱ ಸೂಱ್ಗೆ ಬಂದು ಬಸಿವುತ ಹೋದರನಿಬರು ಬೈದು ರವಿಸುತನ (ಕುವ್ಯಾದ್ರೋ. ೬-೩೦); ಭೂಸುರರು ಮಧ್ಯಾಹ್ನಕಾಲದಲಿ ಹಸಿದು ಬಸಿದು ಬಂದರೆ ಮನೆಗೆ ಬೇಸತ್ತು ನಮಗೆ ಗತಿಯಿಲ್ಲ ಹೋಗೆಂದು ಹಸನಾಗಿ ಉಂಬುವುದು ಅದು ಮಡಿಯೊ (ಪುರಂದ.ರಾ. ೩-೬೨-೯). ೫. ಸುರಿಸು : ಈ ಬಾಳ ಮೇಲ್ ಬಿಟ್ಟು ನೆತ್ತರನ್ ಬಸಿವನನ್, ಬಂದು ಮೊದಲೆತ್ತಲ್ ಏಕಲವ್ಯಂಗಱಿವೆ ಅಟ್ಟು ಆರಾನುಮನ್ (ಅಶ್ವತ್ಥಾ. ೩೩-೬೯೬). ೬. ತೊಡೆ ; ಒರೆಸು: ಎಮೆದುಱುಗಲಿನಿೞುವ ತೋರ ಕಣ್ಬನಿಗಳಂ ಬಸಿಯುತ್ತುಮನ್ನನಿಂತೆಂದಂ (ಕಾದಂಪೂ. ೮೯೬). ೭. (ಅಲಂ) ಕುಗ್ಗು; ಕಡಮೆಯಾಗು : ವೈರಾಗ್ಯದೇಟಿಗ್ಗಿಯಂತೆಯುಂ ಶ್ರೀವೈಷ್ಣವರ ಭಾಗ್ಯದಂತೆಯುಂ ತೋರ್ಪ ಶ್ರೀರಾಮಾನುಜರಡಿಗೆಱಗಿ ನೇಸಱ ತೇಜದೊಳ್ಬಸಿಯದ ತಣ್ಪಂ ಬೆರಸಿದಂತಿರ್ಪ ಮೆಯ್ವೊಗರುಂ . . . ಆಗಿ (ಚಿಕಪಂ. ೦೦೯-೦೦). ೮. ಇಲ್ಲದಂತೆ ಮಾಡು; ನಾಶವಾಗಿಸು : ಅದಱಿಂದೆ ಎಂದಿಂಗಮೆಡೆವಱಿಯದೀ ನೋವು ಎರ್ದೆಗೊಱ್ದು ಬಸಿದವುದು ಬಲ್ಮೆಯನ್ (ಬಿದ್ಯಕ್ರ. ೨-೩೨).

ಬಸಿದುಕೊಳ್ಳು = ೧. ಪಾತ್ರೆಯ ಬಂಡದಲ್ಲಿರುವ ಗಟ್ಟಿಯಾದ ಪದಾರ್ಥಗಳ ಮೇಲೆ ನಿಂತ ನೀರು, ಎಣ್ಣೆ ಮೊದಲಾದ ದ್ರವ ಪದಾರ್ಥಗಳನ್ನು, ನಿಧಾನವಾಗಿ ಪಾತ್ರೆಯನ್ನು ಓರೆ ಮಾಡಿ ಸುರಿ: ಬೇವಾಗ ಗಂಜಿಯ ಬಸಿದುಕೊಂಡು . . . ಮೃದುವಾಗಿ ಮಾಡಿದುದು ತಾ ಶುದ್ಧಮಪ್ಪೋದನಂ (ಸೂಶಾ. ೩-೨) ; ಪುತ್ರಜೀವಿಶಿರುಳನ್ನು ಚೆನ್ನಾಗಿ ಕುಟ್ಟಿ . . . ಇದರೆಂಟು ಮಡಿ ನೀರು ಹುಯ್ದು . . . ಹದವ ನೋಡಿ ಬಸಿದುಕೊಂಡು (ಸಕವೈ. ೬೦). ೨. ದ್ರವಪದಾರ್ಥವನ್ನು ಕುಡಿ : ಹಣಮಂತ . . . ಹೊಟ್ಟೆಗೆ ಏನೂ ಬಸಿದುಕೊಳ್ಳಲಿಲ್ಲ (ಕಂಕಂ.೦೯); ಬಂದ ತಪ್ಪಿಗೆ ಒಂದಿಷ್ಟು ಕಾಫಿಯನ್ನಾದರೂ ಬಸಿದುಕೊಂಡು ಹೋಗೋಣವೆಂದ್ರು ಕೊಂಡು ಕುಳಿತುಕೊಳ್ಳಲು ಸ್ಥಳ ಹುಡುಕಿದೆ (ಅಂಹೂ. ೨೯). ಬಸಿದು ಬೀೞ್, ಬಸಿದು ಬೀಳು = ೧. (ರಕ್ತ ಸುರಿದು) ನಿಶ್ಶಕ್ತಿಯಿಂದ ಕುಸಿದು ಬೀೞು : ಪರಾಂಗನೆಯೆಂದೊಡೆ ಸಾವ್ಯುಮಲ್ಲಮೆಂದೊಡೆ ತಲೆ ಹೋಗಿಯುಂ ಬಸಿದು ಬೀೞದೆ ಸ್ವೈರಿಸರಲ್ತೆ ಕಾಮುಕರ್ (ಅಪಂಪು. ೦೦-೩೩); ಬಸಿದು ಬೀಳ್ವ ಕಬಂಧದಲಿ ಹೆಣವಸರೂದುದು ನೆಲನಿದೆಲ್ಲಿಯ ವಿಷಮ ವೀರರೂ ಮರ್ಚುಯಿಸುತ ಮಾರೀಚ ಬೆಱಗಾದ (ತೊರರಾ. ೦-೦೧-೧೯). ೨. ಉಕ್ಕಿ ಹರಿ : ಒಸೆದು ನಿನ್ನವರೆಂದು ಬಗೆವರೆ ಬಸಿದು ಬೀಳುವ ಕೃಪೆಯ ನೀ ತೋಱಿಸಯಿದೇನ್ನೆ ಕೃಷ್ಣಯೆಂದೊಱಲಿದಳು ನಳಿನಾಕ್ಷಿ (ಕುವ್ಯಾಸ. ೧೯-೧೨೬). ೩. ಕಳಚಿ ಬೀೞು : ಒಡಲು ಬೀಳಲಿ ಮೇಣು ತಮ್ಮದಿರಡವಿಯಲಿ ಹಾಯಿಕ್ಕಿ ಹೋಗಲಿ ಮಡದಿ ಮುನಿಯಲಿ ಬಸಿದು ಬೀಳಲಿ ಧರಣಿ ಕುರುಪತಿಗೆ (ಕುವ್ಯಾಅ. ೯-೦೨). ಬಸ್ತ ಎಸರು = ಬೇಳೆ ಅಥವಾ ಕಾಳಿನೊಂದಿಗೆ ತರಕಾರಿ, ಸೊಪ್ಪು ಮುಂತಾದುವನ್ನು ಬೇಯಿಸಿ, ಅದರ ಸಾರವನ್ನು ಬಸಿದುಕೊಂಡು ಮಾಡುವ ಸಾರು : ಹಸಿ ಅವರೆಕಾಳು, ಸೊಪ್ಪು ಸೇರಿಸಿ ಮಾಡಿದ್ದ ಬಸ್ತ ಎಸರು ಮುದ್ದೆಗೆ ಬಹಳ ರುಚಿಯಾಗಿತ್ತು (ರೂ). ಬಸ್ತ ಸಾರು = ಬಸ್ತ ಎಸರು : ರಾಗಿ ಮುದ್ದೆ, ಅವರೆಕಾಳು ಬಸ್ತಸಾರು ಮಾಡಿದ್ದೀನಿ (ರೂ).

[ದೇ.॥ ತಮಿ. ವಡಿ, ವಟಿ, ವೞಿ; ತುಳು. ಬಸಿ, ಬಚ್ಚು; ತೆಲು. ವಡಿಯು]

ಬಸಿ$_2$ (ಕ್ರಿ). ೧. ಹರಿತಗೊಳಿಸು; ಚೂಪು ಮಾಡು ; ಮಸೆ : "ಬಸಿ-ಗಲನೇ (ಬಸಿಯು) ಶಾತ, (ಹರಿತ ಮಾಡು) ದಂಡಮಧ್ಯಯೋಃ (ದಂಡಿಗೆಯ ಮಧ್ಯಭಾಗ)" (ಕಮಧಾ); ಆತನಂ ಶ್ಮಶಾನಕ್ಕೆಱ್ದುಕೊಂಡು ಪೋಗಿ ದರ್ಕಂ ಬಸಿದು ಸೂಲದೊಳಿಕ್ಕುವಾಗಳ್ (ವಡ್ಡಾರಾ. ೧೨೯-೨೯); ಬೆತ್ತಗಣ್ಣವಲೆಯುಂ ಸಮುಕಟ್ಟುವ ಬೆಟ್ಟುಗೂಂಟಮುಂ ಬಸಿವ ಪುಳಿಂದಸಂಕುಳದ ಪೆರ್ಗಣದಿಂದೆಸೆದತ್ತು ಪಕ್ಕಣಂ (ಚಂದ್ರಪ್ರಪು. ೩-೩೯). ೨. ಚೂಪಾಗಿರು; ಹರಿತವಾಗಿರು : ಒಡಲುರಿವನ್ನೆಗಂ ಬಸಿದ ಶೂಲದೊಳಿಕ್ಕಿ (ಧರ್ಮಾಮೃ. ೦೨-೨೩೬); ಬಸಿದಸಿಯ ದಸಿಯನನುಕರಿಪ ಸೂಜಿಗೊಂಬುರ್ಚಿ ಸೀಳ್ದ ಬಸುಱಿಂ ನಿಸದಂ ಬಿಸುನೆತ್ತರ ಪೊನಲುಂ ಕರುಳ ಸೋಗೆಯುಂ ಕವಿದುವವನಿಗಾ ಯತಿಪತಿಯಾ (ವರ್ಧಪು. ೩-೬); ಬಸಿದ ಕೋಡಿನ ಸಲಗನೆಸೆವ ಕೋಣಂಗಳಿಂ ಮಸಗಿ ವಿಸಟಂಬರಿದು ಕರ್ಚುವುಷ್ಟ್ರಂಗಳಿಂ (ಸಾಪಂಶ. ೯-೦೩೯ ರಗಳೆ).

ಬಸಿ$_3$ (ನಾ). ೧. (ಮರ, ಲೋಹ ಮೊದಲಾದುವುಗಳಿಂದಾದ) ಗೂಟ, ಶೂಲ ಮುಂತಾದ ಹರಿತವಾದ ಸಾಧನ : ಪೊಱಿಸಿದ ಗಾಲಿಯೊಳಂ ನಿಱಿಸಿದ ಬಸಿಯೊಳಂ ಪೂಸಿದ ಡೆಂಕಣೆಯೊಳಂ . . . ಕೈಗೆಯ್ದು (ಅಪಂಪು. ೦೦-೫೨ ವ). ೨. ಮುಳ್ಳು; ಕಂಟಕ : ಪರಮಂಗೆ ಗುಗ್ಗುಳದ ಕಂಬಿಯುಂ ತರುತಿರಲು ಚರಣಮುಂ ಬಸಿ ತಾಗಲು ಹರ ಶಬರವೇಷದಿಂ ಬಂದು ಬಸಿಯುಂ ಕೀಳೆ (ರಾಶಶ. ೯-೩೪ ವ). ೩. ತಕ್ಕಡಿಯಲ್ಲಿರುವ ದಂಡಿಗೆಯ ಮಧ್ಯಭಾಗ : "ಬಸಿ-ಗಲನೇ (ಬಸಿಯು) ಶಾತ, (ಹರಿತ ಮಾಡು) ದಂಡಮಧ್ಯಯೋಃ (ದಂಡಿಗೆಯ ಮಧ್ಯಭಾಗ)" (ಕಮಧಾ). [<ಬಸಿ$_2$./ತಮಿ. ವಚಿ, ವಯ್; ತೆಲು. ವಸಿ ; ಕೊತ. ವಚ್; ಗೊಂಡಿ. ವಾಯ]

ಬಸಿ$_4$ (ನಾ). ಬಟ್ಟಲಿನಲ್ಲಿರುವ ದ್ರವವು ಕೆಳಗೆ ಚೆಲ್ಲದಂತೆ ಬಟ್ಟಲಿನ ಅಡಿಯಲ್ಲಿ ಇಡುವ ಸಣ್ಣ ತಟ್ಟೆ ; ಸಾಸರು : ವಿಠು ಬರಿದಾದ ಕಪ್ಪು ಬಸಿಗಳನ್ನು ತಕ್ಕೊಂಡು ಒಳಗೆ ಹೋದನು (ಕಂದುಬಿ. ೯೬ ); ಅಮೇರಿಕದಲ್ಲಿ . . . ಮಕ್ಕಳು ಹೋಟೇಲಿನಲ್ಲಿ ಕಪ್ಪು, ಬಸಿ ತೊಳೆದು ಹಣ ಸಂಪಾದಿಸಿ, ಅದರಿಂದ ಓದುತ್ತಾರಂತೆ (ಸ್ವಸ್ವಹೂ. ೦೬೪).

[← ಮರಾ. ಬಸೀ, ಬಶೀ./ಪೋರ್ಚು. ಬಸಿಯಾ]

ಬಸಿಗಲ್ಲು (ನಾ). ಚಂದ್ರನ ಪ್ರಕಾಶದಿಂದ ಕರಗಿ ನೀರು ಬಿಡುವುದೆಂದು ನಂಬಲಾದ ಕಲ್ಲು; ಚಂದ್ರಕಾಂತಶಿಲೆ : ಬೆಳುದಿಂಗಳಲ್ಲಿ ಬಸಿಗಲ್ಲ ನೀಡಿ ತಿಂಗಳನು ತಣಿಸಬಹುದೆ ? (ಮುಕ್ತಕಂ. ೦೮-೦೯).

[ ಬಸಿ$_1$ + ಕಲ್ಲು (< ಕಲ್$_3$) ]

ಬಸಿಗಳ್ (ನಾ). ಒಂದು ಬಗೆಯ ಮದ್ಯ ; ತಿಳಿಹೆಂಡ : ರಸವಣಿಯ ನುಂಡ ಗೊರವಿತಿ ಪೊಸತಾಶೀರ್ವಾದವುಳ್ಳದೊಂದೆಂದಾಗಳ್ ಬಸಿಗಳ್ಳಂಗೆ ಮಹೇಶರ ಪಸಾದ ಸುರುಕವಡೆ ಕವಡೆ ಹರಿವೋ ಎಂದಳ್ (ಸೂಕ್ತಿಸು. ೦೩-೨೦). [ಬಸಿ$_1$ + ಕಳ್$_3$]

ಬಸಿಗೆ 'ಬೈಸಿಕೆ' ನೋ.

ಬಸಿತ (ನಾ). (ರಕ್ತವು) ಧಾರೆಯಾಗಿ ಇಳಿಯುವಿಕೆ : ಕಂದ ನೆತ್ತರ ಬಸಿತ ಹಿಂಚಿಹುದೆ ? ಉಸಿರೆ ಏತಕೊ ? (ಹಬ್ಬರ. ೪೦-೦೩೩).

[ಬಸಿ$_1$ + – ತ$_2$]

ಬಸಿದಲೆ (ನಾ). ನೆತ್ತರು ಸುರಿಯುತ್ತಿರುವ ತಲೆ : ಅಲ್ಲೊಬ್ಬ ತರುಣಿ ವಕ್ಕೆಯ್ಯ ಕತ್ತಿ ಬಸಿದಲೆಯೊಂದು ಕರದಿಂ ಬೀಳೆ ಬತ್ತಲಿರಲು (ತೋರಬಂ. ೬-೨೯). [ ಬಸಿ$_1$ + ತಲೆ$_1$ ]

ಬಸಿದು$_1$ 'ಬಸಿ$_1$' ಪರಾ.

ಬಸಿದು$_2$ (ನಾ). ೧. ಹರಿತವಾದುದು ; ತೀಕ್ಷ್ಣವಾದುದು : "ಬಸಿದೆಂದು ಕೂರಿತಕ್ಕುಂ" (ಶಬ್ದಮಂ. ೩೦). ೨. (ಅಲಂ) ತೀಕ್ಷ್ಣವಾದ

ನಡೆವಳಿಕೆ : ಬ[ಪಾಠಾಂ. ಬಿ]ಸಿದುಮಸಿದುವುಂ ತೋಱಿ ನುಡಿದೊಡಂ ಬಡಸಿದಲ್ (ಅಜಿತ. ೨-೧೦೯ ಕ).

ಬಸಿಯಂ = ಉಗ್ರನಾದ ವ್ಯಕ್ತಿ ; ಕ್ರೂರಿ: ಅಸಿಯಂ, ಬಸಿಯಂ, ಕರಿಯಂ (ಕವಿಪ. ೧೫೨ ಕ್ರ.ಹೋ.). [<ಬಸಿ₂]

**ಬಸಿಮೂಗ** (ನಾ). ಯಾವಾಗಲೂ ನೀರು ಸೋರುತ್ತಿರುವ ಮೂಗುಳ್ಳವನು : ಬಸಿ[ಪಾಠಾಂ. ಸಿ]ಮೂಗಂ ಪಿತ್ರವಿತ್ತಭೋಗಿ ಕುನಖಂ ಮೆಲ್ಪಿಂದೆ ಬಲ್ಪಿಂದೆ ಸಾಧಿಪ ಸಾಧ್ಯಂ ನಿಪುಣಂ ಮಹೋದ್ಯಮಿ ನಿಗೂಢಾಂಸಂ ಧನುರ್ಗೇಹಜಂ (ಜಾತತಿ. ೦೩-೯).

[ಬಸಿ₁+ಮೂಗು + — ಅ₇]

**ಬಸಿರಾಣು** 'ಬಸಿಱಾಣ್' ನೋ.

**ಬಸಿರಿ₁** 'ಬಸಿಱ್' ನೋ.

**ಬಸಿರಿ₂** 'ಬಸರಿ' ನೋ.

**ಬಸಿರು** 'ಬಸಿಱ್' ನೋ.

**ಬಸಿರ್ಗುತ್ತು**, ಬಸಂಗುತ್ತ (ನಾ). ಅತಿಯಾಗಿ ಭೇದಿಯಾಗುವ ಒಂದು ಬಗೆಯ ರೋಗ ; ಅತಿಸಾರ : "ಬಸಿರ್ಗು[ಪಾಠಾಂ. ಬಸುರ್ಗು]ತ್ತ ಮತಿಸಾರವಕ್ಯಾ" (ಶಬ್ದಮ. ೦೦೯-೩) ; ಅತಿಸಾರಕಿಯೆಂ(ಬವನಂ) ಬಾದು ಬಸಿರ್ಗುತ್ತವುಳ್ಳವಂ (ಹರಿಯು. ೯೭-೯೩೨). **ಬಸುಗುತ್ತ** : ಕೋಣನ ಹೇಱಿಂಗೆ ಕುನ್ನಿ ಬಸುಗುತ್ತಬಡವಂತೆ ತಾವು ನಂಬರು ನಂಬುವ ವಡ ನಂಬಲೀಯರು (ಬಸವ. ೬೬೩) ; ನಿನ್ನೆ ಕಮ್ಮಾರ ಚಂದನ ಮನೆಯೊಳ್ಳು ಸೂಕರವುದ್ದವವನುಂಡ ಬಳಿಕ ಬಸುಗುತ್ತದಿಂದಣೆಯರಂ ಬಳಲುತಿಹೆ. ಬಸಿವು ನೋನೋಯುಂತಿದೆ (ಕೃಜಾಪ. ೬೩-೬). [ಬಸಿಱ್ + ಕುತ್ತ]

**ಬಸಿರ್ಪೂಸು** (ಕ್ರಿ). ಮಗಂವು ಗರ್ಭದಲ್ಲಿರುವಾಗಲೇ ಹೊಟ್ಟೆಯನ್ನು ಸವರುತ್ತ ಇಂತಹವರಿಗೇ ಮದುವೆ ಮಾಡಿಕೊಡುವುದಾಗಿ ಮಾತು ಕೊಡು : ಏನಂಗೋದ್ಭೂತ ಮಾತಾಪಿತೃಗಳೆ ನಿನಗೆನ್ನಂ ಬಸಿರ್ಪೂಸಿ ಪೆತ್ತರ್ (ಶಬರಿಪ್ರ. ೦೯-೩೯) ; ಅಳಿಯಂ ನಿನಗೆ ಬಸಿರ್ಪೂಸಿ ಪೆತ್ತು ನಿನ್ನಂ ಆಪಣದೀಗಳ್ ನಿಮ್ಮಮ್ಮನ ಪಿರಿಯರುಸಿ ಸತ್ಯಭಾವೆಯೆಂಬಳಾಕೆಯ ಮಗಂ ಭಾನುಕುಮಾರಂಗೆ ಕೆಂಡಲೆಂದು ಮಹಾವಿಭೂತಿಯಿಂದೊಯ್ದಪ್ಪುರ್ (ಹಂಪ. ೯-೩ ಪ) ; ಓವೋವೆನ್ನಂ ಕುರುಂನ್ನಪದೇವಿ ಬಸಿರ್ಪೂಸಿ ಪೆತ್ತೊಡಾ ತಂಗೇನುದ್ಯಾಪೋಗ್ರದುರಿತಫಲದಿಂದಾ ವಿಭು ಗೆಂಟಾದೊಡಾಗೆ ಮಱುಗು ತ್ತಿರ್ದೆಂ (ಹಂಪ. ೯-೯) ; ಎಡೆಯೊಳ್ ಕೂಡಿದ ನಣ್ಪೆ ಮುನ್ನಮೆ ಬಸಿಱ್ಪೂಸಿರ್ದು ಕಾ[ಪಿಂದವಿಂ]ತ್ತೊಡೆ (ಹಂಪ. ೦೯-೬).

[ಬಸಿಱ್ + ಪೂಸು₁]

**ಬಸಿರ್ಪೆಂಡತಿ** (ನಾ). ಗರ್ಭಿಣಿಯಾದ ಹೆಂಗಸು ; ಬಸಿರಿ : ಒರ್ವಳ್ ಪೊಸಪ್ರಾವಿಕ ಬಸಿರ್ಪೆಂಡತಿ ವೇಳಾಸ್ವಾಮಿನಿಯೆಂಬೊಳ್ ಆರ್ದಿಂಗಳಿರುಳೊಳ್ ಕಟ್ಟಲೆಯೊಳ್ ನಿರ್ಗ್ರಂಥವುಪ್ಪ ರೂಪಂ ಕಂಡು ಬೆರ್ಚಿದೊಡಾಕೆಗೆ ಬಸಿಱ್ಟದತ್ತು (ವಡ್ಡಾರಾ. ೯೩-೮೦).

**ಬಸಿರ್ಪೆಂಡಿರ್** (ಬಹುವ) : ಇದನಱಿದೊಂ . . . ಸಾಸಿರ್ವರ್ಬಸಿ ರ್ಪೆಂಡಿರುಮ ಸಾಯಿರಕೆಱೆಯುಮನಱಿದೊನ ಲೋಕಕ್ಕೆ ಸಲ್ಗು (ಕ್ಕೆಇ. IX-I, ೪೦-೦೯ ; 977). [ ಬಸಿಱ್ + ಪೆಂಡತಿ (< ಪೆಂಡಿತಿ) ]

**ಬಸಿವನಿ** (ನಾ). ಸೋರುವ ಹನಿ, — ತೊಟ್ಟು : ಬಟ್ಟ ಜಡೆಕೇಶದಿಂ ತೊಟ್ಟಿಡುವ ಬಸಿವನಿಯ ನಟ್ಟನೆ ಸ್ವಾತಿ ನೀಲ್ಮೇಘದಿಂ ಸುರಿವುತಿಹ ಬಟ್ಟವ ಶೌಕ್ತಿಕಗಳ ಬಲ್ಪಿಂದುಗಳೆಸೆಯೆಸಲಂಯಿಳಿವುತಿರಲ್ಕೆತರುತ್ತ (ಶಶಿಪೋ. ೦೩-೪೪). [ಬಸಿ₁ + ಪನಿ₂]

**ಬಸಿವಾಯ್** (ನಾ). (ರಕ್ತ, ಜೊಲ್ಲು ಇತ್ಯಾದಿ) ದ್ರವ ಒಸರುತ್ತಿರುವ ಬಾಯಿ : ಹಾಯಿದವು ನರಿ ನಾಯಿಗಳು ಕಟವಾಯಲೆಲಲುವ ಕರುಳಿನಲಿ ಬಸಿವಾಯ ರಕುತದಲೋಡಿದವು ರಣಭೂತ ದೆಸೆದೆಸೆಗೆ (ಕುಮಾ.ದ್ರೋ. ೦-೨೦). 'ಬಸಿವಾಯ' ಪರಾ. [ ಬಸಿ₁ + ಬಾಯ್ ]

**ಬಸಿವಾಯ** (ನಾ). ಯಾವಾಗಲೂ ಜೊಲ್ಲು ಸುರಿಯುತ್ತಿರುವ ಬಾಯುಳ್ಳವನು : ಬಸಿ[ಪಾಠಾಂ. ಸ್ರ]ವಾಯಂ ಕವಿ ವಾಗ್ಮಿ ದೀರ್ಘ ಮುಖಕಂಠಂ ಧಾರ್ಮಿಕಂ . . . ಧನುರ್ಗೇಹಜಂ (ಜಾತತಿ. ೦೩-೯).

[ಬಸಿವಾಯ್ + — ಅ₇]

**ಬಸಿಱ್**, ಬಸಿರು, ಬಸಿಱು, ಬಸುರು, ಬಸುಱ್, ಬಸುಱು (ನಾ). ೧. ಹೊಟ್ಟೆ ; ಉದರ ; ಜಠರ : "ಬಸಿಱುದರಂ ಜಠರಂ ಕುಕ್ಷಿ ಸಮಾಹ್ವಂ" (ಚನ್ನುಕೋ. ೬೬-೬); ಈತಂಗೆ ನೀಂ ಬಸಿಱ್ ತೀವೆ ಬದ್ದಿಸದಿರ್ (ಪಂಪಾರಾ. ೬೬-೫) ; ಬಸಿಱ ತೆಳ್ಪಳಿದತ್ತು ಮೊಗಂ ಬೆಳ್ಪೇಱದುದೇ ಕುಚಚೂಚುಕಂ ಮಸುಳ್ದುವೇ (ಆದಿಪು. ೬-೪೦); ದುಷ್ಟಬುದ್ಧಿ . . . ಕಟ್ಟೆನೆಂದು ಬಾಯುಂ ಬಸಿಱುಂ ಪೊಯ್ದುಕೊಂಡು . . . ನುಡಿಯೆ (ಶಂಕರಂ. ೦೬೦-೬). ೨. ಭ್ರೂಣವನ್ನು ಒಳಗೊಳ್ಳುವ ಕೋಶ ; ಗರ್ಭ : ಖಳನಿಲ್ಲೀ ಮಸುಮತಿಯೊಳ್ಗಾಂಧಾರಿಯ ಬಸಿಱಂ ಮೇಣ್ಗುಟಿ ಪೋಗಿ ಪೊಕ್ಕಿರ್ದಪನೋ (ಗದಾಯು. ೬-೨೦); ಆ ತಪಸ್ವಿ ಕಂಡು ಮುಂಳದನಗೆ ಪಶುವಿನ ಬಸಿಱೊಳ್ ಬರ್ಪುದೆಂದು ಶಾಪವುನೀಯೆ (ಶಂಕರಂ. ೬೦-೦೩); ಬಸಿರ್ವೊಕ್ಕು ಬಣ್ಣವೇಱುವ ಬಿಸಜಾಕ್ಷನಿನಮೃತಮಾಂಬೆ ಪೆಂಪಿಡಿದಸೆದಲ್ (ಅಜಿತ. ೯-೫). ೩. ಗರ್ಭವನ್ನು ಧರಿಸಿರುವ ಸ್ಥಿತಿ: ಗರ್ಭಿಣಿಯಾಗಿರುವಿಕೆ : ಪಾಯದಿರೊತ್ತಿ ಮೂಱುತಿಂಗಳ ಬಸಿಱೀಕೆ ಪಾಯ್ಗೆಯನಗಿರ್ವಣವೋಡಿದುದಿಂದು ನೋಡ ಬಾಯಟಿದುದು ಹಾರದಿರ್ ಮೊಗಮನಿತ್ತನುತಂ ಬೆಱಗಾಗೆ ಕೂಡಿದಲ್ (ಕಾವ್ಯಸಾ. ೯೯೯ ಹೂಕ್ತ್ರ) ; ಇನಿತುಂ ಪೊಟ್ಟುಂ ಬಸಿಱೊಳಪ್ಪ ಬಯಕೆಗಳ್ಗವೆ ಕಾರಣಂಗಳೆನಿಸಲ್ಕೆ ಬಯಕೆಗಳಂ ಬಯಸುತಿರ್ದಳ್ (ಪುಕ್ಷ್ಪು.೩-೫೯ ಪ). ೪. ಅಂತರ್ಯ ; ಅಂತರಂಗ ; ಒಳಗು: ಬಸಿಱೊಳ್ ಜಗತೀತ್ರಯಮುಮನೊಸದಿಟ್ಟೋರಂತೆ ಕಾದ ಪೆಂಪಿನ ನಿಮ್ಮಾ ಬಸಿಱಂ ಪೊಕ್ಕಿಮ್ಮಯ್ಯರನಸುರಕುಳಾಂತಕ ಕಡಂಗಿ ಕಾವುದು ಪಿರಿದೇ (ಹಂಪಾ. ೯-೦೩). ಬಸಿರು : ೨. ಕೊಲೆಗೀಡುಮಾಡಬೇಕಾದ ಮಕ್ಕಳನ್ನು ಹೆರುವ ಬಸಿರು ಬೇಡ (ಜಾನಪ. ೩೯). ೪. ನಿರಾಶೆಯ ಬಸಿರಿನಲ್ಲಿಯೇ ಆಶೆಯ ಬೀಜವಿದೆ – ಬಿತ್ತಿ ನೋಡು ! (ಕಲ್ಕೋ೪೦. ೯೨-೬); ಪಡುವಲ ಕಡಲಿನ ಮಿಂಚನು ಗುಡುಗನು ನುಂಗಿ ಬಸಿರಿನಲಿ, ಮುಡಿಗೆದರಿ ಮುಂಗಾರಸುರಿಯು ರಕ್ಕಸವಕ್ಷ್ಮಗಳಕ್ಕುತ ಬಂದಳು ಬಲುಗದರಿ ! (ಕಕ್ಷಿಶಾ. ೩೩-೦). **ಬಸಿಱು** : ೨. ದಾಕ್ಷಾಯಣಿ ತನ್ನ ಬಸಿಱೊಳ್ ಬರ್ಪ ವರಮಂ ಬಯಸಿ ಮೇನೆ ತಪದೊಳಿರಲ್ (೧೦೪. ೦ ಇಶಾಗರ್ಗ) ; ಬಸಿಱೊಳಗೆ ಶಿಶುವನು ಆದಾರು ಸಲಹಿದವರು (ಪ್ರಶಂಡ. ೨-೯೬ ೩). ೪. ಸಿಸುವಾಗಿ ಕಾನಾಲದೆಲೆಯೊಳೊರಗಿ ತನ್ನ ಬಸಿಱೊಳೀರೇಳುಲೋಕಗಳ ಪಸರವ ತೋಱಿ ಬಲ್ಲರ ಬಗೆಗೊಳಿಸುವ ಪೊಸಬಜ್ಜವಳಗೆಱುಗುವೆನು (ಕರ್ಣಕ್ಕ. ೬-೮೦). ೫. ವಂಶ; ಮನೆತನ : ಧರೆಯ ಕುಡಿಯರ ಕುಲ ಶಿರೋಮಣಿಗಳೆನಿಪ ಗೌಡರ ಬಸಿಱೊಳೊಗೆ[ದ] ಸುಮುಹೂರ್ತದೊಳು (ಸಿದ್ಧರಾ. ೦-೩೨). **ಬಸುರು** : ೨. ಬಸುರಿನಿಂ ಪಡೆಯಲಾರದೆ ವ್ಯಥೆಯೊಳಿಪ್ಪ ವಧುಗೆಳೆವ ಸುತನಂ ನಿಜಪದೋದರದಿವಿಹಾವುತಂ (ಶುಜಾಶ. ೬-೦ ಸೂಕಕ). ೩. ಬಸುರು ಬಂದಾಕ್ಷಣ ಹುಸುರುಶಾಲೆ ಸಿಕ್ಕೀತೇ? (ಗಾದೆ). ೬. ಭ್ರೂಣ ; ಪಿಂಡ : "ಗರ್ಭ ೩, ಭ್ರೂಣ ೩ – ೨ ಗರ್ಭದ ಪೆಸರು, ಬಸುರು" (ಸಿದ್ಧಾಂತಿ. ೦೩೯). 'ಬಸುರಿಳಿ' ಪರಾ. **ಬಸುಱ್** : ೧. ಮನುಷ್ಯರ ಪಿಡಿದು ಪೀಡಿಸಿ ತಮ್ಮ ಬಸುರ್ಗೆ ಕಾಣದೆ ಈಡಾಡದ ಕೊಳಂಬಲಿಯನಾಯ್ದು ಕಱುಕುವ ಹೇಸಿದೈವಂಗಳ ಬೆ.ಡಬೇಡಿ ನಿರರ್ಥ ಕೆಡಬೇಡ (ಬಸವ. ೩೩೬). ೨. ಪುಟ್ಟಿದ ತಾಣಕ್ಕಟವಂ ಪುಟ್ಟಿಸಲೊಡರಿಸುವ ಕಿಚ್ಚು ತೀಟಿ ಕ್ರಿಮಿ ಕುತ್ತಂ ಪುಟ್ಟುವವೊಲ್ ದುಷ್ಕೃತದಿಂ ಪುಟ್ಟಿದವೀ ಪಾಪಕರ್ಮನೆನ್ನಯ ಬಸುಱಂ (ಕಾದಂಬ. ೯೩೨).**ಬಸುಱು** :

೧. ಬಸುಱ ಬಗಿ ಕರುಳನುಗಿ . . . ಮೂಳೆಯಂ ಮುಱಿಯೆನುತ್ತ ಹೆಗ್ಗಿನ್ನಿಗಳ ತಲೆದಡವಿ ಹಾಸವಂ ತಿವಿದು ಕವಿದರು ಬೇಡರೆಣ್ದೆಸೆಯೊಳು (ಹರಿಶ. ೬-೨೪); ಉಗುಳುಗುಳು ದುಶ್ಶಾಸನನ ನೀನುಗುಳು ಮುಗುಳಿನ್ನಾರ ಬಸುಱನು ಹೊಗುವೆ (ಕುಮಾ.ಭ. ೨೦-೨೩); ಅಸುರರುರು ಬಲ್ಲಹದ ಶಿವಿಗುಳ ಬಸುಱ ಬಾಧಣದುರ್ಬುಗರುಳಿನ . . . ಕೋಡಗವ ಸರಗಳ ಸಂದಣಿಯ ಸಂಭ್ರಮವೆಸೆದುದೈ (ಕೊರಣ. ೬-೩೦-೦೬). ೪. ಬಸು[ಪಾಠಾಂ. ಸಿ]ಱೊಳಗೆ ಬ್ರಹ್ಮಾಂಡಕೋಟಿಯ ಪಸರಿಸಿದ ಪರಮಾತ್ಮ ನೀನೆಂದುಸುರುತಿವೆ ವೇದಗಳು (ಹಂಶಾ. ೨೩).

ಬಸಿರಿರು = ಗರ್ಭವನ್ನು ತಾಳು: ವಿದ್ಯಾನಂದನನ್ನು ಆಗ ಬಸಿರಿದ್ದೆ. ಆಗ ನನಗೆ ಏಳನೆಯ ತಿಂಗಳು (ಸ್ವ.ಕಿಶ. ೬೯). ಬಸಿಱಂ ಪೊಸೆ, ಬಸುಱಂ ಹೊಸೆ = (ಹೊಟ್ಟೆಕಿಚ್ಚು, ಸಂಕಟ, ತಿರಸ್ಕಾರ ಮೊದಲಾದ ಭಾವಗಳಿಂದ) ಹೊಟ್ಟೆಯನ್ನು ಹಿಚುಕಿಕೊಳ್ಳು: ಸಂತತಿಗೆ ಹಿರಿಯ ಮಕ್ಕಳ ನಾಂ ತಡೆಯದೆ ಪಡೆವೆನೆಂದೊಡೆನ್ನಿಂ ಮುನ್ನಂ ಕುಂತಿಯೆ ಪಡೆದಳ್ ಗರ್ಭದ ಚಿಂತೆಯದಿನ್ನೇವುದೆಂದು ಬಸಿಱಂ ಪೊಸೆದಳ್ (ಪಂಪಭಾ. ೧-೦೨೯); ಅಜ್ಞಾನಿಗಳಪ್ಪರ ತಪದೊಳ್ ಫಲವಿಲ್ಲೆಂದು ಬಸಿಱಂ ಪೊಸೆದು ನಕ್ಕು (ಧರ್ಮಾಮೃ. ೨-೨೨೮); ಧಗಿಲು ಭುಗಿಲೆನುತೆ ಮಾಮುಸಕದಿಂ ಮುಸಗಿ ತೊನೆವು ಬಸುಱಂ ಹೊಸೆದು ಹೊಯ್ದು ನೆಲನಂ ತಿರುಗಿ (ತಿರುಕ. ದೇ. ೧೮-೯). ಬಸಿಱ ಕುತ್ತ = ಅತಿಯಾಗಿ ಭೇದಿಯಾಗುವ ಒಂದು ಬಗೆಯ ರೋಗ; ಅತಿಸಾರ: ಗ್ರಹದಂತೆ ಪೀಡೆಯಂ ಮಾಳ್ಪುದು ಬಸಿಱ ಕುತ್ತದಂತೆ ನವೆಯಿಸುವುದು (ಧರ್ಮಾಮೃ. ೯-೦೬೫). ಬಸಿಱಾರೆ = ಹೊಟ್ಟೆ ತುಂಬುವಂತೆ: ಪಾಯ್ವರಾತಿಯ ಮೆಯ್ಯ ನೆತ್ತರಂ ಕಂಡು ಸೂಱೆಸಿನೋಳವನ ನೆತ್ತರೊಕ್ಕೊಡಂ ತನಗೆ ಬಸಿಱಾರೆ ಕುಡಿಯಲುಂ ದ್ರೌಪದಿಯ ಕೇಶಪಾಶಮಂ ತೊಯ್ದು ಮುಡಿಯಲುಂ ನೆಱೆಯದು (ಕುಶಭಾ. ೧೨-೦೯೬ ಬ). ಬಸಿಱೊಡೆ, ಬಸುಱೊಡೆ = ೧. ಮೈಯಿೞಿ; ಗರ್ಭಪಾತವಾಗು: [ಎಲೆಯಡಿಕೆ ಸುಣ್ಣದಿಂ ಪಲ್ ಕಱೆಯುಪ್ಪುದು] ಅಣಲೆ ತಿಗಡೆಯಿಂ ಬಸಿಱೊಡೆವುದು (ಧರ್ಮಾಮೃ. ೯-೦೦೮). ೨. ಹೊಟ್ಟೆಯನ್ನು ಸೀಳು,—ಭೇದಿಸು: ವಿಷ್ಣುವ ಅಕ್ಷಿಯಲ್ಲಿ ಧರಿಸಿದೆ ಬ್ರಹ್ಮನ ಬಾಯಲ್ಲಿ ಧರಿಸಿದೆ . . . ಬಾಯಲ್ಲಿದ್ದವನ ಬಸುಱೊಡೆಯ ಹೊಯ್ದೆ (ಶೂನ್ಯಸಂ. ೦೯೬-೬೨೯). ಬಸುರು ನಿಲ್ಲು = ಗರ್ಭವು ಉಳಿ; ಮೈಯಿಳಿಯದಿರು: ಮದುವೆಯಾಗಿ ಹತ್ತಾರು ವರ್ಷಗಳ ನಂತರ ಅವಳಿಗೆ ಮೊದಲ ಸಲ ಬಸುರು ನಿಂತಿತು (ರೂಢಿ). ಬಸುಱ ಕಿಚ್ಚು = ಹೊಟ್ಟೆಕಿಚ್ಚು; ಅಸೂಯೆ: ಬಸುಱ ಕಿಚ್ಚ [ಪಾಠಾಂ. ಬಸುಱಕಿಚ್ಚ]ನು ಬೆಳೆಯಿಸುವ ನುಡಿಯುಸುರಲೇಕವರು (ಜೈಭಾ. ೨೦-೦೩). ಬಸುಱ ಹೊಯ್ಲು = ಹೊಟ್ಟೆಯನ್ನು ಬಡಿದುಕೊಳ್ಳುವಿಕೆ: ಕಂಡರೆಡೆಯುಲಿ ಖರಸ ನಗರದ ಹೆಂಡಿರುಗಳಕ್ಕಗಳ ತಳುಕಿನ ಮಂಡೆಗಳ ತೋಳುಗಳ ಪಾಪ್ಪಳ ಬಸುಱ ಹೊಯ್ಲುಗಳ (ಕೊರಣ. ೩-೮-೨). ಬಸುಱಾಗು, ಬಸುರಾಗು = ಗರ್ಭ ನಿಲ್ಲು; ಗರ್ಭವನ್ನು ಧರಿಸು: ಜೇಳಿಂಗೆ ಬಸುಱಾಯಿತ್ತು ಕಡೆ ಬಾಳೆಗೆ ಫಲವಾಯಿತ್ತು ಕಡೆ (ಬಸವ. ೬೬೯); ಆ ಕಾಂತೆಗೆ ಬಸುಱಾಗಿ ತೀವಿ ನವಮಾಸಂ ನಿಶ್ಚಿಂತಂ ಬೆಸಲಾಗಲ್ ಪ್ರೀಕಾಂತಂ ತನ್ನಾಲಯಕ್ಕೆ ಕರಸಿದನಾಗಳ್ (ಧರ್ಮಪ. ೬-೦೩); ಬಸುಱಾಗದವಳ ಬಾಳುವೆಯು ಬೇಸಿಗೆಯ ಬಿಸಿಲು ಕಾದಂತೆ (ಸರ್ವಜ್ಞ. ೧೬೮೮); ದಾಕ್ಷಿಣ್ಯಕ್ಕೆ ಬಸುರಾಗಿ ಹೆರುವುದಕ್ಕೆ ತಾವಿಲ್ಲ (ಗಾದೆ). ಬಸುಱು ಉರಿ = ಹೊಟ್ಟೆ ಉರಿ: ಪಿಸುಣತ್ವದಲಿ ನಿಂದೆಗೈದ ಪಾತಕದಿಂದ ಬಸುಱು ಉರಿಯುತ್ತೊ ಶಿಪನೆ (ಅಭ್ಯಂಪ. ೨-೦೯). ಬಸುಱು ಮಾಡು = ಗರ್ಭ ಧರಿಸುವಂತೆ ಮಾಡು: ಹಸನಾದ ಹೆಣ್ಣ ಮೇಲೆ ಕುಸುಮವ ತಂದಿಕ್ಕಿ ಶಶಿಮುಖಿಯರಿಗೆಲ್ಲ ಬಸು[ಪಾಠಾಂ. ಸಿ]ಱು ಮಾಡಿದನೀತ (ಕೃಕಂದ. ೦-೯೦-೨).

[ದೇ.॥ ತಮಿ. ಮಲ. ವಯಿಱು; ತುಳು. ಬಸುರಿ, ಬಸುರು]

**ಬಸಿಱಾನ್**, ಬಸಿರಾನು (ಕ್ರಿ). ಗರ್ಭವನ್ನು ಧರಿಸು; ಬಸುರಾಗು; ಗರ್ಭಧಾರಣೆ ಮಾಡು: ರತಿದೇವಿ ಬಸಿಱಾಂತು ಪಡೆದ ದುಕ್ಕವ ಸುತವತಿಯಾಗಿ ನೋಳ್ಪ ಸಂತಸವ ವಿಂತಿಗೆಯ್ದಪೆನು (ಸೋಹಶ. ೦೬-೫೯). ಬಸಿರಾನು: ಅವುವು ಬಸಿರಾಂತ ಮತ್ಕುಲಸಮೃದ್ಧಿಕಾರಣೆಯ ಧರ್ಮಪತ್ನಿಯನುಳಿದಂ (ಶಾಕುಂತ. ೯೪-೦೫೫). [ಬಸಿಱು (<ಬಸಿಱ್) + ಆನ್$_1$]

**ಬಸಿಱಿ**, ಬಸಿರಿ$_1$, ಬಸುರಿ$_1$, ಬಸುಱಿ (ನಾ). ಗರ್ಭಿಣಿ; ಗರ್ಭವತಿ: ಬಸಿಱಿ ಹೆಂಡತಿ ಮಗನ ಮದುವೆ ನಾಳೆ . . . ಸಾಯಲಾಱೆನು (ಕೃಕಂದ. ೨-೬೦-೩); ಈ ಬಸಿಱಿಯರೊಳ್ಪನಿಂ ಬಯಸುವರ್ ಬಸಿಱೊಳ್ ನೆಲೆಗೊಂಡ ಬಾಲನೊಂದೆಸಕದ ಪಾಂಗಿನಿಂದಿಳೆಯೊಳೆಂಬರ ನಾಱ್ಮಡಿಯಕ್ಕೆ ನಿಕ್ಕುವಂ (ಜಕಪ. ೯-೯). ಬಸಿರಿ$_1$: ಸರೋಜ ಮನೆಗೆ ಬಂದು ಎರಡು ವರ್ಷವಾದ ಮೇಲೆ ಬಸಿರಿಯಾದಳು (ಶುಹಾಗ. ೪); ಬಸಿರೀ ಆಗದಿದ್ದರೆ ಹೆಣ್ಣಿಗೆ ಉಮ್ಮತ್ತಿಕಾಯಿಯ ರಸವನ್ನು ಕುಡಿಸುತ್ತಿದ್ದರು (ಹುಬ್ಬಹ. ೦೩). ಬಸುರಿ$_1$: ಕಾಯ್ದಾ ಬಸುರಿ ರೋಷದುಃಖದ್ವಂದ್ವದಲಿ ಬೆಂದು ಮಣಿಪುರಕೆ ಏಂತಿರುಗಿ ಬಂದಳತಿಭೀಷಣಮನಃಸ್ಥಿತಿಯಲಿ! (ಶತ್ರುಂಗ. ೬೯-೦೬೫೫); ಗೌರಿಯು . . . ಈಗ ಐದನೆಯ ಬಾರಿ ಬಸುರಿಯಾಗಿದ್ದಳು (ತುಂಗಾತು. ೨೫). ಬಸುಱಿ: ಹಸುಗೂಸು ಬಸುಱಿ ಬಾಣತಿ ಕುಮಾರಿ ಕೊಡಗೂಸೆಂಬವರ ಹಿಡಿದು ತಿಂಬ ತಿರಿದುಂಬ ಮಾರಯ್ಯ . . . ಕೇತಯ್ಯಗಳೆಂಬ ನೂಱುಮಡಕೆಗೆ ನಮ್ಮ ಕೂಡಲಸಂಗಮದೇವ ಶರಣೆಂಬುದೊಂದು ದಡಿ ಸಾಲದೆ (ಬಸವ. ೫೫೬); ಎಲ್ಲಿಯುಂ ಕೇಳ್ದಱಿಯೆವಿಂತಹ ದುರ್ಲಭದ ಬಸುಱಿಯರನು (ಬಸವೃ. ೫-೦೬).

[ ಬಸಿಱ್ + — ಇ$_2$ / ಮಲ. ವಯಱಿ; ತುಳು. ಬಸುರಿ ]

**ಬಸಿಱಿೞಿ** ' ಬಸಿಱಿೞಿ ' ನೋ.

**ಬಸಿಱಿೞಿ**, ಬಸಿಱಿಳಿ, ಬಸುರಿಳಿ (ಕ್ರಿ). ಮೈಯಿಳಿ; ಗರ್ಭಪಾತವಾಗು: ಒರ್ವಳ್ ಪೊಸಶ್ರಾವಕಿ ಬಸಿರ್ವೆಂಡತಿ ವೇಳಾಸ್ವಾಮಿನಿಯೆಂಬೊಳ್ ಕರ್ದಿಂಗಳಿರುಳೊಳ್ ಕಟ್ಟಿಲೆಯೊಳ್ ನಿರ್ಗ್ರಂಥಮಪ್ಪ ರೂಪಂ ಕಂಡು ಬೆರ್ಚಿದೊಡಾಕೆಗೆ ಬಸಿಱಿೞಿದತ್ತು (ವಡ್ಡಾರಾ. ೯೨-೦೩); ಮತ್ತೊಂದು ಶಿಶುವೆಂಬುದಂ ಬಸಿಱಿೞಿದುದೆಂಬಂತೆ ಗರ್ಭದಿಂ ತೆಗೆದುಯ್ದು ರೋಹಿಣಿಯ ಗರ್ಭದೊಳ್ ನಿಲಿಸಿದಂ (ಜಗಪು. ೩-೫ ವ). ಬಸಿಱಿಳಿ: ಬಸಿಱಿಳಿವ ಸಂಕಟದ ಬಲುಬೇನೆಯ ಭ್ರಾಂತಿನಿಂ ಮೈಮಱೆದು ಕಂಡ ಕನಸ್ಸಿಸಿ (ಸಿದ್ಧರಾ. ೨-೬); ಬಸಿಱಿಳಿದು ತದ್ದುಃಖಮಂ ನೀಗಿ ಜೀವಿಸಿದರಸು ರಾರಿಮುಖ್ಯಸುರರದಱಿನಜರಾಮರರೆನಿಸಿದರ್ (ಸಿದ್ಧರಾ. ೧೦-೨೨೬). ಬಸುರುಳಿ: ನಾಲ್ಕುದಿನಗಳ ಹಿಂದೆ ಬಸುರಿಳಿದು ಹೋದದ್ದರಿಂದ ಅವಳಿಗೆ ವಿಶ್ರಾಂತಿ ಬೇಕಾಗಿದೆ (ರೂಢಿ). [ಬಸಿಱ್ + ಇೞಿ]

**ಬಸಿಱು** ' ಬಸಿಱ್ ' ನೋ.

**ಬಸಿಱುಬೇನೆ** (ನಾ). ಹೊಟ್ಟೆಯ ನೋವು; ಉದರಶೂಲೆ: ಸುಗಂಧಿಯ ಬೇರು, ಗುರುಗುಂಜಿಯ ಬೇರು, ಅಳಲೇಕಾಯ ಚೂರ್ಣ ಇವು ಎಲ್ಲವನ್ನೂ ಸಮಾನಂಗೊಂಡು ಬೆಲ್ಲದಲ್ಲಿ ಇಕ್ಕಿ ಮೆಲ್ಲಲು ಗರ್ಭಿಣಿಯ ಬಸಿಱುಬೇನೆ ಮಾಣ್ಗುಂ (ವೈದ್ಯಾ. ೧೦೬).

[ಬಸಿಱು (<ಬಸಿಱ್) + ಬೇನೆ$_1$]

**ಬಸು** (ನಾ). ಆಪ, ಧ್ರುವ, ಸೋಮಂ, ಧರ್ಮ, ಅನಿಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ ಎಂಬ ಎಂಟು ಮಂದಿ ವಸುಗಳಲ್ಲಿ ಒಬ್ಬ ವಸು; ▸ ಈ ಹೆಸರುಗಳು ಕಲ್ಪಭೇದದಿಂದ ವ್ಯತ್ಯಾಸ ಹೊಂದಂತ್ತವೆ: "ಬಸುಗಳ್ದೇವರೊಳ್" (ಕರ್ಣಾಪ. ೯೧).

[<ಸಂ. ವಸು]

**ಬಸುಗುತ್ತ** 'ಬಸಿಕುತ್ತ' ನೋ.

**ಬಸುದೇವ** (ನಾ). ಒಬ್ಬಾತನ ಹೆಸರು : ಶ್ರೀ ಚಿಕುರಾಪರವಿಯ ಗುರುವರ ಸಿಷ್ಯರ್ ಸರ್ಬಣನ್ದಿ ಅವನ್ ಶ್ರೀಬಸುದೇವನ್ (ಎಕ. II, ೩೬; ಸು. 750). [ಬಸು + ದೇವ]

**ಬಸುಮ** (ನಾ). ಬೂದಿ ; ಭಸ್ಮ: "ಬಸುಮ — ಭಸ್ಮ(ನ್)" (ಶಬ್ದಕೋ. ೨೯) ; ಬಸುಮದ ಸಿರಿಯೊಡಲ ಪೆರೆಯುಗಿದ ಪಾವಿನ ತೊಡರ ಸಿಂಗರದ . . . ಪರಮಶಿವನಿರುತಿರ್ದನನುಪಮರತ್ನಪೀಠದಲಿ (ಅನಂರಾ. ೦-೨-೦೩) ; ಗಳರವದ ಮಂತ್ರಗಳ ಬಗೆಬಗೆಯೊಳುಚ್ಚರಿಸು ತಡಿಗಡಿಗೆ ನಸುನಗೆಯ ಬಸುಮವಮಂ ತೂಪಿರುವುತೆ ಮಿಗೆ ಹಸ್ತತಾಡನಗಳಿತ್ತು ಸ್ಮರಭೂತಮಂ ನಗಿಸಿ ನುಡಿಸುತ (ವಂಕಾರಾ. ೩-೬-೩೩). [<ಸಂ. ಭಸ್ಮನ್]

**ಬಸುರಿ₁** 'ಬಸಿಱು' ನೋ.

**ಬಸುರಿ₂** 'ಬಸರಿ' ನೋ.

**ಬಸುರಿಕೋಡು** (ನಾ). ಒಂದು ಊರಿನ ಹೆಸರು : ದಕ್ಷಿಣತಃ ಬಸುರಿಕೋಡುನಾಮಗ್ರಾಮಃ (ಮೈಅಂ. ೦೯೩೩, ೯೦-೬೯; 951). [ಬಸುರ್ಇ₂ (<ಬಸರಿ) + ಕೋಡ್ಉ₃]

**ಬಸುರಿಳಿ** 'ಬಸಿಱೞಿ' ನೋ.

**ಬಸುರು** 'ಬಸಿಱು' ನೋ.

**ಬಸುಱ್** 'ಬಸಿಱ್' ನೋ.

**ಬಸುಱು** 'ಬಸಿಱು' ನೋ.

**ಬಸುಱಿೞಿಸು** (ಕ್ರಿ). ಪ್ಯಾಯಿಳಿಸು; ಗರ್ಭಪಾತವಾಗುವಂತೆ ಮಾಡು : ಬಸುಱಿೞಿಪ ಪುತ್ರವಧೆಗೆಯ್ದ ಸತಿಗೆ ದುರ್ಗತಿಗೆ ಕರ್ಮಚಾಂಡಾಳಿಗೆ ರಕ್ಕಸಿಗೆ ನೆಲೆಯುಕ್ಕುಮುಚ್ಚಿಸುವಸಿಪತ್ರವನಪ್ರವೇಶದುರ್ಗತಿದುಃಖಂ (ಕಸಾರ. ೩೦೦). [ಬಸುಱ್ (<ಬಸಿಱ್) + ಇೞಿಸು]

**ಬಸುಱು** 'ಬಸಿಱು' ನೋ.

**ಬಸುಱುಚ್ಚು** (ನಾ). ಹೊಟ್ಟೆಯಿಂದ ಜಾರಿ ಬಿದ್ದ ಮಾಂಸಖಂಡ ಮೊದಲಾದುವು : ಇಕ್ಕಡಿಯ ಬಸುಱುಚ್ಚುಗಳ ನರಸೊಕ್ಕು ಡೊಳ್ಳಾಸದ ಮಹಾಭಯವೆಕ್ಕಸರದಲಿ ಕಾಣಲಾದುದು ವೈರಿಬಲದೊಳಗೆ (ಕುವ್ಯಾದ್ರೋ. ೦೬-೨೬) ; ಇಕ್ಕಡಿಯ ಬಸುಱುಚ್ಚುಗಳ ನರಸುಕ್ಕುಗಳ ನಾಟಕದವೊಲು ಕೈಯಿಕ್ಕಿದಾನೆಯ ಹಿಂಡು ಮುಱಿದುದು ನಿಮಿಷಮಾತ್ರದಲಿ (ಕುವ್ಯಾಗ. ೨-೨೯). ಈ 'ಉರ್ಚು' ಎಂಬಂದಕ್ಕೆ ನಾಮಾರ್ಥದಲ್ಲಿ ಪ್ರಯೋಗಗಳು ದೊರೆತಿಲ್ಲ. [ಬಸುಱು (< ಬಸಿಱ್) + ಉಚ್ಚು₁ (< ಉರ್ಚು)]

**ಬಸುಱುದುಂಬು** (ಕ್ರಿ). ಹೊಟ್ಟೆ ತುಂಬು ; ತೃಪ್ತಿಗೊಳ್ಳು ; ತಣಿ : ಬಸುಱುದುಂ[ಪಾಠಾಂ. ತುಂ]ಬದಿರಲ್ಕೆ ನಂಬಿಯ ಬೆಸನದಿಂದೆಡೆಯಾಡಿ ಯಾತನ ದೆಸೆಯೊಳುಣಲಿಲ್ಲದೆ . . . ಹಸಿದು ಬಂದಾ ಚೀರಮಂ (ಬಸಪು. ೦೩-೨೩). [ಬಸುಱು (< ಬಸಿಱ್) + ತುಂಬು₁]

**ಬಸುಱುಶೂಲೆ** (ನಾ). = ಬಸಿಱುಬೇನೆ : ಯಷ್ಟಿಮಧುಕ, ದ್ರಾಕ್ಷೆ ಹಣ್ಣು, ಇವಂ ಹಸುವಿನ ಹಾಲು ಬಿಟ್ಟು ಅರೆದು ಹಾಲಲ್ಲಿ ಕಾಸಿ ಹಸುವಿನ ತುಪ್ಪದಲ್ಲಿ ಕುಡಿಯೆ ಹೃದಯಶೂಲೆ, ಯೋನಿಶೂಲೆ, ಬಸುಱುಶೂಲೆ, ಜ್ವರ, ವಾತಗುಲ್ಮ, ಬಾಣಂತಿಯರ ಎಲ್ಲಾ ರೋಗಗಳೂ ಮಾಣುವುವು (ವೈವಿ. ೦೦೬). [ಬಸುಱು (< ಬಸಿಱ್) + ಶೂಲೆ₁]

**ಬಸೆ₁**, ವಶಿ (ನಾ). ೧. ಹೆಣ್ಣಾನೆ; ಪಿಡಿ: "ಬಸೆ ಪೆಣ್ಣಾನೆಯು" (ಕರ್ಣಾನಿ. ೨); ಕಾಲೊಳ್ ತೊಡರ್ದುರ್ತ್ಪಲದಳಮಾಲೆಗಳುಲಿ ಗೆಜ್ಜೆಯೆನಿಸೆ ಮಾಂಗಾಯೆನೆ ಕರ್ಣಾಲಂಬಿ ಕಮಳಮುಕುಳಂ ಬಾಲೇಭಂ ಬಸೆ[ಪಾಠಾಂ. ಸೆಳೆ]ಯ ಪೆಱಗೆ ಬಂದುದು ಕೊಳದಿಂ (ಲೀಲಾವ. ೮-೦೬) ; ಓಪನ ಪಡಿಮೊಗದೊಳ್ ತುಂತುಱಂ ತೂಱಿ . . . ಬಾಷ್ಪಪ್ಲುತಾಲೋಕೆ ಶೋಕಾತುರೆ ದುಃಖೋದ್ರೇಕದಿಂದಂ ಬಸೆ ಪರವಸೆ ಬೀಸಿತ್ತು ಕರ್ಣಾಗ್ರದಿಂದಂ (ಲೀಲಾವ. ೮-೨೦ ; ಸೂಕ್ತಿಸು. ೩-೩೬ ನೋ). ೨. ಗೊಡ್ಡಾಕಳು ; ಬರಡುದನ : ಬಸೆ = ನೆಣ, ಹೆಣ್ಣಾನೆ, ಗೊಡ್ಡಾಕಳು (ಕಮುದ. ೨೩೯ ಅಡಿಟಿ). ವಶಿ : ೧. ಕಾಡಿನ ಕರಿಯು ವಶಿಗಳ ಕೂಡ ನೀರೊಳು ವಿಹಾರಿಸುವಂದದಲಿ (ರಘುವಂ. ೦೬-೬೮). [< ಸಂ. ವಶಾ]

**ಬಸೆ₂** (ನಾ). ಕೊಬ್ಬು ; ನೆಣ : "ಬಸೆ — ವಸಾ = ಕೊಬ್ಬು" (ಶಬ್ದಕೋ. ೨೯) ; ಅಲ್ಲಿ . . . ಬಸೆಯೆ ತುಪ್ಪಂ ನಾಯ್ಗಳೆ ಪರಿವಾರಂ ಮದ್ಯಮೆ ಪುರುಷಾರ್ಥಂ (ಕಾದಂಅಂ. ೬೯೩); ನೆಣನ ಬಸೆಸಹಿತಡಗು ಸುರಿದವು ಕದಡಿ ಹರಿದುದು ರಕುತದರೆವೊನಲು (ಕುವ್ಯಾಗ. ೮-೩); ಬೇಡರ್ ಸವಿಯುಡಗಂ ಬಸೆಯುಂ ನೆತ್ತರಂ . . . ಮತ್ತಂ ಚವುರಿಯಂ ಪೊತ್ತು ನಗರಿಗೆ ಮರಲ್ದುವರ್ಪಾ ನಡುವಟ್ಟೆಯೊಳ್ (ರಾಮಾಶ್ವ. ೯೪-೨೦). [< ಸಂ. ವಸಾ]

**ಬಸೆಗ** (ನಾ). ಒಂದು ಬಗೆಯ ವಿಮಾನ : ಹಣ್ಣಲಂ ಬಸೆ [ಪಾಠಾಂ. ಸಿ]ಗಗಿಱಿಲ, ಬಂಗಡೆ . . . ಅನೆಮೊಗನೆಂಬ ಪರಿಪರಿಯ ವಿಮಾನ್ಗಳಂ ಗುದಿಗೆಯ್ದರು (ಹರಕಾ. ೩-೪೩). [?. / ಹಿಂ. ಬಸಾ]

**ಬಸೆನಡೆ** (ನಾ). ಹೆಣ್ಣಾನೆಯ ನಡಗೆ : ಬಲವಮುರಿಸಂಕುಗೊರಲ ಬಸೆ ನಡೆಯ ಬೆಳ್ದಳಿರ್ಗ್ಯೆಯ . . . ಬಾಲೆಯೊರ್ವಳ್ . . . ಪೊಂಬಟ್ಟಲನೆತ್ತಿ ಬರುತುಮಿರ್ದಳ್ (ರಾಮಾಶ್ವ. ೪೮-೨೪). [ಬಸ್ಎ₁ + ನಡ್ಎ₂]

**ಬಸ್ಕಿ** 'ಬೈಸಿಕೆ' ನೋ.

**ಬಸ್ಕಿಹೊಡೆ** 'ಬೈಸ್ಕೆಹೊಡೆ' ನೋ.

**ಬಸ್ತ** (ನಾ). ಗಂಡಾಡು; ಹೋತ: "ಅಜಃ, ಸ್ತಬಃ, ಬಸ್ತಃ, ಛಾಗಃ, ಛಗಳಕಃ, ಛಗಃ — ಈ ೬ ಹೋತು" (ಹಲಾಯು. ೪೬-೦೨೨) ; ದುಸ್ತರಮೆಂದೇವೈಸದೆ ಹಸ್ತಗತಂ ಮಾಡಿ ಮೌಲ್ಯಮಂ ಕೊಂಡರವರ್ ವಿಸ್ತರ ಕಾಯಿಯದವೇಱುಂ ಬಸ್ತಂಗಳನಲ್ಲಿ ಬಸ್ತಪಾಲನ ಕೆಯ್ಯೊಳ್ (ಮಹಾಪೇ. ೪-೦೨೮); ದಕ್ಷನ ಬೆಂದ ಮುಖ ಬಸ್ತಾಸ್ಯವಾಗಲಿ (ಶಿಭಾಗ. ೪-೩-೩೩). [ಸಂ.]

**ಬಸ್ತಕ** (ನಾ). ೧.= ಬಸ್ತ : ಬೆದೆಯಾದ ತಾಯನೇಱಿದುದದು ಸೊರ್ಕಿದ ಗೂಳಿ ತಾಯನೇಱುತ್ತೆಂಬಂದದೆ ಮತ್ತಮೊಂದು ಬಸ್ತಕಮದನಿಱಿಯಲ್ ಸತ್ತು ಪೊಕ್ಕುದಜೆಯೊಳ್ಜೀವಂ (ಧುಶೋಚ. ೩-೩೪). ೨. ಒಂದು ಬಗೆಯ ಉಪ್ಪು : "ರೌಮಕ, ಬಸ್ತಕಂ — ೨ ಸೌಭರಿ ದೇಶದಲ್ಲಿ (ರುಮ)ಎಂಬ ಗಣಿಯೊಳಗೆ ಹುಟ್ಟುವ ಉಪ್ಪು, ಚೌಳುಪ್ಪಿಗೆ ಹೆಸರುಗಳೆಂದು ಕೆಲವರನ್ನುವರು" (ಸಿದ್ಧಾಂತಿ. ೨೯೩). [ಸಂ.]

**ಬಸ್ತಪಾಲ** (ನಾ). ಆಡುಗಳನ್ನು ಕಾಯುವವನು, — ಮೇಯಿಸುವವನು : ದುಸ್ತರವೆಂದೇವೈಸದೆ ಹಸ್ತಗತಂ ಮಾಡಿ ಮೌಲ್ಯಮಂ ಕೊಂಡರವರ್ ವಿಸ್ತರಕಾಯದವೇಱುಂ ಬಸ್ತಂಗಳನಲ್ಲಿ ಬಸ್ತಪಾಲನ ಕೆಯ್ಯೊಳ್ (ಮಹಾಪೇ. ೪-೦೨೮). [ಸಂ.]

**ಬಸ್ತಾನ** (ನಾ). ಠಿಕಾಣಿ ಹೂಡುವುದು ; ಜೀವನವ್ಯವಸ್ಥೆಯನ್ನು ಮಾಡುವುದು : ಮುಂದೆ ಏಳೆಂಟು ವರ್ಷಗಳಲ್ಲಿ ನಮ್ಮ ಬಸ್ತಾನ ಸರಿಯಾಗಿ ಕುಳಿತು ಅವ್ವನ ಕಣ್ಣ ಮುಂದೆಯೆ ನಮ್ಮ ಸ್ವಂತದ ಮನೆಯಾಯಿತು (ಕೃ.ತಿಪ. ೪೮೪); ಅಂತೂ ನಮ್ಮ ಬಸ್ತಾನ ಕೂತಂಗಾಯಿತು (ಶತಶೋ. ೦೩). [← ಪಾರ. ಬಸ್ತನ್ = ಕಟ್ಟು ; ಮರಾ. ಬಸ್ತಾನ್, ಬಸ್ತನ್]

**ಬಸ್ತಿ₁** 'ಬಸದಿ' ನೋ.

**ಬಸ್ತಿ₂** (ನಾ). ೧. ಪಿಚಕಾರಿ. ೨. ಪಿಚಕಾರಿಯ ಸಹಾಯದಿಂದ ದ್ರವ ಅಥವಾ ಅನಿಲವನ್ನು ಮಲನಾಳದ ಒಳಹೊಗಿಸಿ ಮಲವಿಸರ್ಜನೆ ಮಾಡಿಸುವುದು ; ಎನೀಮಾ ಕೊಡುವುದು : ಕೋಷ್ಠಶುದ್ಧಿಯು ಸಲುವಾಗಿ ಬಸ್ತಿಯನ್ನು ಕೊಡಬೇಕೆಂದು ಮಾಡಿದರು . . . ಅರ್ಥಾತ್ ಈ ಪ್ರಯೋಗವು ನೀರಿನಲ್ಲಿ ಸಬಕಾರ ಮತ್ತು ಉಪ್ಪು ಹಾಕಿ ಕೊಡುವದರಲ್ಲಿ ಬಂದಿತು (ಭ್ರಕೃಜೀ. ೦೪೩). ೩. ಹೊಕ್ಕುಳಿನ ಕೆಳಭಾಗ. [ಸಂ. / ಹಿಂ. ವಸ್ತಿ ; ಮರಾ. ಬಸ್ತಿ, ಬಸ್ತೀ]

**ಬಸ್ತಿಕ** (ನಾ). [ಯೋಗ]ಹಠಯೋಗದ ಆರು ಬಗೆಯ ಅಂಗಗಳಲ್ಲಿ ಒಂದು : ಆಧಾರಕುಂಚನದಿಂದಾದಂ ಪೊಡವೊಕ್ಕ ನೀರನೆ ಕುಲಕಿಯನುವಿಂ ಶ್ರೀದಂ ನೌಳಿಕದಿಂದಂ ಬಾಧವಡೆಯದಂತೊಡರಿಪನಾ ಬಸ್ತಿಕಮಂ (ಪ್ರಕೃಸೂಪು. ೩-೦೯೩).

[ಸಂ. ಬಸ್ತಿಕ = (ಹೊರಕ್ಕೆ ಜಗ್ಗಿದಾಗ ಮೊನೆಯು ದೇಹದಲ್ಲೇ ಉಳಿಯುವ) ಒಂದು ಬಗೆಯ ಬಾಣ]

**ಬಸ್ತಿಗೆ** (ನಾ). = ಬಸ್ತಿಕ : ಧೌತಿಯುಮಾ ಬಸ್ತಿಗೆಯುಂ ನೇತಿ ತ್ರಾಟಕ ಕಪಾಲಭಾತಿಯುಮಿಳೆಯೊಳ್ ನೂತನನೌಳಿಕಮೆಂಬಾ ಪೂತಮುನಿಗಳೊರೆದಱುವಗೆ ಕಮ್ಮಂ ಪೊಳೆಗುಂ (ಪ್ರಕೃಸೂಪು. ೩-೦೯೦).

[ < ಬಸ್ತಿಕ ]

**ಬಸ್ತು** (ನಾ). ೧. ಸಾಮಾನುಗಳ ಗಂಟು, – ಮೂಟೆ: (೬). ೨. (ವ್ಯವಸ್ಥಿತವಾದ) ಕಾಗದ ಪತ್ರಗಳ ಕಟ್ಟು ; ದಫ್ತರು : (ಪ್ರಗತಿ. IV. ೬೬೪).

**ಬಸ್ತು ಕಟ್ಟು** = ಬೇರೆ ಕಡೆಗೆ ರವಾನಿಸಲು ಅನುಕೂಲವಾಗುವಂತೆ ವಸ್ತುಗಳನ್ನು ಜೋಡಿಸಿ ಕಟ್ಟು : ರೇಷ್ಮೆಯನ್ನು . . . ವ್ಯಾಪಾರಸ್ಥಳಗಳಿಗೆ ಕಳುಹಿಸುವುದಕ್ಕೆ ಯೋಗ್ಯವಾದ ರೀತಿಯಲ್ಲಿ ಬಸ್ತು ಕಟ್ಟುವುದು ಮುಂತಾದ ವಿಚಾರಗಳಲ್ಲಿ ಇಂಡಿಯಾದೇಶದವರಿಗೆ ಶಿಕ್ಷಣ ಕೊಡಲು ಒಂದು ಪ್ರಯೋಗಕ್ಷೇತ್ರವನ್ನು . . . ಸ್ಥಾಪಿಸಿದರು (ಛಾಗ್ರಕಿ. ೬೪).

[ ← ಪಾರ. ಹಿಂ. ಮರಾ. ಬಸ್ತಾ]

**ಬಸ್ಸು** (ನಾ). ನಿಗದಿಯಾದ ವೇಳೆ ಹಾಗೂ ಸ್ಥಳಗಳಲ್ಲಿ ಸಂಚರಿಸುವ, ಅನೇಕಜನರು ಕೂಡಬಹುದಾದ, ಪೆಟ್ರೋಲ್ ಮುಂತಾದ ಇಂಧನಗಳಿಂದ ಚಲಿಸುವ ವಾಹನ ; ಮೋಟಾರುಬಂಡಿ : ಉಫ್ಫೆಂದು ಹೊಗೆ ಸೂಸಿ ಇನ್ನು ಬಸ್ಸೋ ಕಾರೊ ಏನಾದರೂ ಸರಿಯೆ, ಓಡತಲ್ಲಿಯೆ ಬುದ್ಧಿ (ಅರಕು. ೦೪೭-೩) ; ನೋಡು, ಮೋಡದ ಬಸ್ಸು ಭರಭರ ತುಂಬಿಕೊಂಡೇ ಸಾಗಿವೆ ಯಾವ ಗಿರಿಶಿಖರದಲಿ ಜಾತ್ರೆಯೋ (ಕಲಪು. ೦೦-೯).

[←ಇಂ. Bus]

**ಬಸ್ಸುನಿಲ್ದಾಣ** (ನಾ). ಪ್ರಯಾಣಿಕರು ಹತ್ತಲು, ಇಳಿಯಲು ಅನುಕೂಲವಾಗುವಂತೆ ಸಾರಿಗೆ ಬಸ್ಸುಗಳು ನಿಲ್ಲಲು ಗೊತ್ತುಪಡಿಸಿರುವ ಸ್ಥಳ : ಮನೆಯಿಂದ ಹೊರಟ ಗಣಪತಿ ಸೀದಾಬಸ್ಸು ನಿಲ್ದಾಣಕ್ಕೆ ಬಂದ (ಪರ್ವ್ನ. ೨೦೬). [ಬಸ್ಸು + ನಿಲ್ದಾಣ]

**ಬಹ** 'ವರ್' ಪರಾ.

**ಬಹತ್ತರನಿಯೋಗ** 'ಬಾಹತ್ತರನಿಯೋಗ' ಪರಾ.

**ಬಹದರ್** 'ಬಹಾದುರ್' ನೋ.

**ಬಹದರ** 'ಬಹಾದುರ್' ನೋ.

**ಬಹದರಿ** 'ಬಹಾದುರೀ' ನೋ.

**ಬಹದರಿವರಹ** 'ಬಹಾದ್ದುರಿವರಹ' ನೋ.

**ಬಹದರು** 'ಬಹಾದುರ್' ನೋ.

**ಬಹದ್ದರ** 'ಬಹಾದುರ್' ನೋ.

**ಬಹದ್ದುರಿ** 'ಬಹಾದುರೀ' ನೋ.

**ಬಹದ್ದೂರ್** 'ಬಹಾದುರ್' ನೋ.

**ಬಹದ್ದೂರ** 'ಬಹಾದುರ್' ನೋ.

**ಬಹದ್ದೂರಿ** 'ಬಹಾದುರೀ' ನೋ.

**ಬಹರಿ** (ನಾ). ದಂಡನಾಯಕ (?) : ಮಸಣಿತಮ್ಮ ನಮಗ ವೀರ ಮಸಣನು ಹೊಯಿದು ಹೊಯಿಕುಟ್ಟಾಡಿ ಉಭಯ ಬಿಲ್ಲಣ ಬಹರಿಯ ಯೇಱಿದ ಕುದುರೆಯನುಮಿಱಿದ ಕಾಲಾಳನು ತಿವಿದು ಸುರಲೋಕಪ್ರಾಪ್ತನಾದನು (ಎಕ. VI, ಕಶ್ಕತು. ೩೩-೦೦ ; 1292). [?]

**ಬಹರಿಚ** (ನಾ). = ಬಹರಿ (?) : ರಾಜಾಧಿರಾಜ ರಾಜಪರಮೇಶ್ವರ ಕೃಷ್ಣರಾಯ ಮಹಾರಾಯನ ಮನೆಯ ಕುದುರೆ ಬಹರಿಚನ ಮಲಿಸಟರ ಮಗ ಚಂನನಸಟರು (ಎಕ. IX(8), ಶಂಕುಂ. ೭೯-೭ ; 1528).

[ < ಬಹರಿ ?]

**ಬಹಲ, ಬಹಳ** (ಗು). ೧. ಅಧಿಕವಾದ ; ಅಪಾರವಾದ ; ಹೇರಳವಾದ. ೨. ದಟ್ಟವಾದ ; ಸಾಂದ್ರವಾದ. ೩. ಗಟ್ಟಿಯಾದ ; ದೃಢವಾದ. ೪. ವಿಸ್ತಾರವಾದ ; ಅಗಲವಾದ. ೫. (ಬಣ್ಣದಂತೆ) ಕಡುವಾದ ; ಗಾಢವಾದ. ೬. (ಧ್ವನಿಯಂತೆ) ಕಠೋರವಾದ ; ಬಿರುಸಾದ. ೭. (ಬಾಲದಂತೆ) ಪೊದೆಯಾಗಿರುವ. **ಬಹಳ** : ೧. ಅತಿಬಹಳದಹ್ಯಮಾನಕಾಳಾಗುರುಧೂಪಧೂಮಯಷ್ಟಿಘಟಿತಘನಶ್ಯಾಮಲವ್ಯೋಮತಲಧೂಪಂಗಳಿಂದಂ . . . ಅರ್ಚಿಸಿ (ಆದಿಪು. ೨-೩೨ ವ); ತುಂಬುರಂ . . . ಕೋಟಿಮಕುಟವರ್ಧನರಿಂ ಬಹಳ ಗೊಂದಣಾಸ್ಥಾನನಾಗಿರ್ದ ನರಸಿಂಗಮೊನೆಯರ್ಗೆ ಸಾದರದಿಂ ಮಯ್ಯಿಕ್ಕಿ ಕಯ್ಯಂ ಮುಗಿದು (ಶಂಕಕ. ೪-೭೬) ; ಹೇಳಲೇನದ ಬಹಳ ದುಗುಡದ ಪಾಳೆಯವೊ ನಿನ್ನಾತನೋಲಗಶಾಲೆಯೋ ನಾವಱಿಯೆವು (ಕುವ್ಯಾಕ. ೦-೦೯). ೨. ಕೇಸರಿಯ ಲೀಲಾಳಾಪವಿಲ್ಲದ ಬಹಳ ಕಾನನವೋ . . . ಪಾಳಯವೆನುತ ಬರುತಿರ್ದ (ಕುವ್ಯಾದ್ರೋ. ೬-೬). (ನಾ). ೮. ಹೆಚ್ಚು ; ಅಧಿಕ : ಮನೆಯಲ್ಲಿ ಮಂದಿ ಬಹಳ ಹೊನ್ನಿನ ವೆಚ್ಚ ಘನವು (ಕಂಪಾಂ. ೬-೦೯೬) ; ಬಂಗಾಲ, ಮಲಯಾಳ, ಮೈಸೂರು ಮುಂತಾದ ಪ್ರಾಂತಗಳಲ್ಲಿ ಹುಲಿಗಳು ಬಹಳ (ಮುಂಬಯಿ. ೪-೩೩). ೯. ಒಂದು ಬಗೆಯ ಕಬ್ಬು.

**ಬಹಳ ಮಾಡಿ** = ೧. ಹೆಚ್ಚಾಗಿ ; ಬಹುಮಟ್ಟಿಗೆ : ಸೋಲಾಪುರದಲ್ಲಿ . . . ನಾವು ಯಾವಾಗಲು ಬಹಳ ಮಾಡಿ ಇರುವ ಸ್ಥಳವು ಇದೆ (ಮುಂಬಯಿ. ೨೮). ೨. ಬಹುಶಃ ; ಬಹುತೇಕ : ಆಗ ಬಹಳ ಮಾಡಿ ಬೆಳಗಿನ ಎಂಟು ಗಂಟೆಯಾಗಿರಬೇಕು (ಇಶ್ಯಕ. ೩೭). ೩. ವಿಶೇಷವಾಗಿ ; ಮುಖ್ಯವಾಗಿ : ಇದು ಬಹಳ ಮಾಡಿ ಪ್ರಾಣಿಗಳ ಮನೋಧರ್ಮವೇ (ಉಪಾಕ. ೦೩೬). **ಬಹಳಷ್ಟು** = ಬಹುಮಟ್ಟಿಗೆ ; ಅದಷ್ಟು : ಹೀಗೆ ಅನಿಸುವುದರಿಂದಲೇ ಸಂಸಾರದೊಳಗೆ ಬಹಳಷ್ಟು ಪ್ರುಪೃನ್ನವಾದ ನಿರಾಶೆಯು ಹತ್ತಿಕ್ಕಿದಂತಾಗಿ ಹದುಗಿಕೊಂಡಿದೆ (ಕ್ರಬಂರ. ೩೯) ; ಮಾಸ್ತರರ ಮನಸ್ಸು ಈಗ ಬಹಳಷ್ಟು ಹಗುರವಾಗಿತ್ತು (ಮಾಉರುದಾ. ೭೨). [ಸಂ.]

**ಬಹಲಿ** 'ಬಹಾಲ್' ನೋ.

**ಬಹಲಿಕೆ, ಬಹಳಿಕೆ** (ನಾ). ಅತಿಶಯತೆ ; ಆಧಿಕ್ಯ : ಮೆಳಸಿನನಿಲಿರಿದು ಗಿರಿಗೆಯನಳೆದೊಗ್ಗಣಿಕ್ಕೋಲೊಳೊಳಗೆ ಪೊಜಗಿಣೆ ಮೆಱೆವೊಳ್ಪಳವಡೆ ಚಾರಿಪ ಬಹಲಿಕೆಯುಳವಿದು ಕೇವಳಮೆ ಕೀರ್ತಿನಾರಾಯಣನ (ಎಕ. II, ೦೩೩-೯೬ ; 982). **ಬಹಳಿಕೆ** : ವಿಹಗಕುಳಂಗಳಂ ನೆರಪಿ ಕೂಜನದೇಟಗ್ ಮನೋಜರಾಜ್ಯಮಂ ಬಹಳಿಕೆಯಿಂದೆ ಮಾಡಿಸಿ . . . ಆತ್ಮಮನ್ಮಥಗ್ರಹಮನದೇಂ ಕಟಲ್ಚುವರೊ ಯವ್ವನಮತ್ತೆಯರಲ್ಲಿ ನಲ್ಲರೊಳ್ (ಕುಶ್ಕೃ. ೨-೯೨) ; ಗಜದಳದ ಬೃಂಹಿತದ ಬಹಳಿಕೆ . . . ಭಡಾಳಿಸಲೊಡ್ಡಿದರು ಮುಂಡಳಿಸಿ ಮೋಹರವ (ಕುವ್ಯಾಆ. ೬-೦೪). [ಬಹಲ + – ಇಕೆ]

**ಬಹಲು** 'ಬಹಾಲ್' ನೋ.

**ಬಹಳ** 'ಬಹಲ' ನೋ.

**ಬಹಳಿಕೆ** 'ಬಹಲಿಕೆ' ನೋ.

**ಬಹಳಿತ** (ಗು). ೧. ವಿಶೇಷವಾದ ; ಅತಿಶಯವಾದ : ನಿಜವರೂಥದಲಂದು ಕೌರವವಿಜಯಮಾರುತಿ ಹೊಕ್ಕು ರಿಪುಭೂಭುಜರನರೆಯಟ್ಟಿದನು ಬಹಳಿತ ಸಿಂಹನಾದದಲಿ (ಕುವ್ಯಾದ್ರೋ. ೦೩-೦೭) ; ರಘುಪ್ರಭವ . . . ಸೂತಮಾಗಧವಂದಿಸಂದೋಹ ಬಿರುದನುಚ್ಚಾರಿಸಲು ಮಾರುತಿ ಧಿರುರೆ

ಪಾಯಮಧಾರೆನಲು ಬಂಧುರದ ಬಹಳಿತ ಸೇತುವಿದ್ದೆಡೆಗಾಗಿ ನಡೆತಂದ (ಕೊಶಿಶಾ. ೬-೬-೩). ೨. ದಟ್ಟವಾದ ; ಸಾಂದ್ರವಾದ. ೩. ಪ್ರಬಲವಾದ ; ಬಿರುಸಾದ. [ಸಂ. ಬಹಳಿತ]

**ಬಹಳಿಸು** (ಕ್ರಿ). ಹೆಚ್ಚಾಗು ; ಅಧಿಕವಾಗು : ಸಿಹಿ ಪಿರಿದಾದಲ್ಲಿ ಹುಳಿಗೊಡುವಳು ಹುಳಿ ಬಹಳಿಸಲುಪ್ಪುದೋಱುವಳು (ಛಂಕ. ೦೦-೩೦). [ಬಹಳ ( = ಬಹುಲ) + — ಇಸ್ಸು]

**ಬಹಾದರ್** 'ಬಹಾದುರ್' ನೋ.

**ಬಹಾದರಿ** 'ಬಹಾದುರೀ' ನೋ.

**ಬಹಾದರೀವರಹ** 'ಬಹಾದ್ದುರಿವರಹ' ನೋ.

**ಬಹಾದುರ್**, ಬಹದರ್, ಬಹದರ, ಬಹದರಂ, ಬಹದ್ದರ, ಬಹದ್ದೂರ್, ಬಹದ್ದೂರ, ಬಹಾದರ್, ಬಹಾದ್ದರ್, ಬಹಾದ್ದರ, ಬಹಾದ್ದುರ, ಬಹಾದ್ದೂರ್, ಬಹಾದ್ದೂರ, ಬಾದರ್, ಬಾದುರ, ಬಾಧುರ, ಭಾಹದರು (ನಾ). ೧. ವೀರ ; ಶೂರ ; ಸಾಹಸಿ : (೬). ೨. ಯೋಧ ; ಸೈನಿಕ : (೬). ೩. ಮೊಗಲ್‌ರಾಜರು ಗಣ್ಯವ್ಯಕ್ತಿಗಳಿಗೆ ಕೊಡುತ್ತಿದ್ದ ಒಂದು ಬಿರುದು : ಶ್ರೀಮನ್‌ಮಹಾರಾಜರಾಜಾ ಸಾಹೇಬ್ಬಹಾದುರವರು, ಇದರಡಿ ಕಂಡಂತೆ ಕಾನೂನನ್ನು ಏರ್ಪಡಿಸಿರುತ್ತಾರೆ (ಗ್ರಾಮೂಕ. ೦೪). **ಬಹದರ್** : ೩. ಹೈದರಲ್ಲಿಖಾನ್‌ಬಹದರವರು ಕೊಟ್ಟ ದರ್ಮಕ್ಕೆ ಮಾಗನೂರ ಗ್ರಾಮಶಾಸನ (ಎಕ. XI, ಚನ್ನಕ. ೦೬೬-೬ ; 1761) ; ಮುದ್ದುಕೃಷ್ಣಾಜಮ್ಮಣ್ಣೀಯವರು ನಂಜರಾಜಬಹದರವರು (ಎಕ. X[illegible], ಚಿಕಮಗ. ೨೧೦-೬ ; ಸು. 1828). **ಬಹದರ** : ೩. ಹೈದರಲ್ಲಿ ಬಹದರನು (ಸೌಇಂ. ೦೬೩೪, ಸೇಂ೦. ೦೩೩-೦೬ ; 1759). **ಬಹದರು** : ೩. ಯಾ ಹೈದರಲ್ಲಿಖಾನರ ಹಿರೇರು ಪೂರ್ವದಲ್ಲಿ ಅರಬ್ಬದೇಶದಿಂದ . . . ಬಿಜಾಪುರದ ಸಂಸ್ಥಾನಕ್ಕೆ ಬಂದು ಅಲ್ಲಿನ ಬಹದರಲ್ಲಿ ನೌಕರೀ ನಿಂತು (ಹೈದರ. ೨೦). **ಬಹದ್ದರ** : ೧. ಕಲ್ಲ್ಯಾನ ಬಿಡಿಸಿಗೊಂಡು ಹೋಗೂ ಬಿಹದ್ದರ ಅವರ ಹಿಂಡಿನ್ಯಾಗ ಯಾವನೂ ಇಲ್ಲ (ಗ್ರಾಮೂಹು. ೨೧೪) ; ಭಾರಿ ಜಮೀನುದಾರರು ಕೂಡ ಈಗ ಅನ್ನಾನ್ನಗತಿಯಾಗಿ ಕೇವಲ ಅಡ್ಡಹೆಸರಿನ ಬಹದ್ದರರಾಗಿ ಆತ್ಮವಂಚನೆಯನ್ನೇ ಮಾಡಿಕೊಳ್ಳುತ್ತಿರುವರು (ಕಮ. ೦೪೬). **ಬಹದ್ದೂರ್** : ೧. ನೀವು ದೊಡ್ಡ ಬಹದ್ದೂರರು ಅಕ್ಷಯಬಾಬು ! (ಕೀಪ್ರಕ. ೨೦೩). ೩. ಶ್ರೀಮುಮ್ಮಡಿಕೃಷ್ಣರಾಜ ಒಡೆಯರ್ ಬಹದ್ದೂರ್ ಜಿ. ಸಿಯುಎಮ್ಮಯವರ ಪಿತೃಗಳಾದ ಮಹಾರಾಜರು ಖಾಸ ಚಾಮರಾಜಒಡೆಯರವರ ಜ್ಞಾಪಕಾರ್ಥ ಇದು ಸ್ಥಾಪಿತವಾಗಿದೆ (ಎಕ. VI (R), ಶ್ರೀರಂಗ. ೩೬-೦ ; 1868 ?) ; ಟೀಪು ಸುಲ್ತಾನ ಬಹದ್ದೂರ್‌ರವರು ತಮ್ಮ ಕಡೆಯಿಂದ ಒಂದು ಕಾಗದ, ಮಿರಸಾದಕನ ಕಡೆಯಿಂದ ಒಂದು ಕಾಗದ . . . ದೋಸ್ತಿ ಮಾಡುವ ಬಗ್ಗೆ ನಂಬಿಗೆ ಭಾಷೆ ಹಾಕಿ ಬರಿಸಿ (ರಾಕೇಂಪ್ರ. ೬೪). **ಬಹದ್ದೂರ** : ೧. ಕಂಚಿನ ತಂಬಿಗೆ, ಮಸಿಬುಡ್ಡಿ . . . ಪುಸ್ತಕ ಇತ್ಯಾದಿ, ಇತ್ಯಾದಿ—ಹೆಂಡತಿಯು ಮೈ ಮುಖಕ್ಕೆ ಗುರಿಯಿಟ್ಟು ಬೀಸಿ ಎಸೆಯುವ ಬಹದ್ದೂರರೂ ಇದ್ದಾರೆ (ಹುಕ್ಕುಹು. ೦೨). (ಗು). ೪. ಸಮರ್ಥವಾದ; ಪ್ರಬಲವಾದ : ಮಹಾದೇವನು ನಮಗೆ ಕೊಟ್ಟು ಇರುವಂಥಾ ಒಂದು ನಾಲಿಗೆಯನ್ನು ಇಂಗ್ರೇಜ ಬಹದ್ದೂರ ಸರಕಾರದ ಸ್ನೇಹ-ಮಾಡುವಾಗ್ಯೆ, ಅವರಿಗೆ ಕೊಟ್ಟು ಇದ್ದೇವೆ (ರಾಕೇಂಪ್ರ. ೭೬). **ಬಹಾದರ್** : (೬). **ಬಹಾದ್ದರ್** : ೩. ಜನರಲ್ ಮೆಂಡೂಸ್‌ಸಾಹೇಬ್‌ಬಹಾದ್ದರವರು . . . ಬಂಗಾಳದ ಲಾರ್ಡ್‌ಕಾರನ್ವಾಲೀಸ್‌ಸಾಹೇಬ್‌ಬಹಾದ್ದರವರ ಫೌಜಿನ ಸಂಗಡ ಕೂಡಿ, ಒಟ್ಟಾಗಿ ಗಟ್ಟ ಹತ್ತಿ ಬಂದು, ಬೆಂಗಳೂರ ಮೊಕ್ಕಾಮಿನಲ್ಲಿ ಇಳುಕೊಂಡರು (ರಾಕೇಂಪ್ರ. ೬೦). **ಬಹಾದ್ದರ** : ೧. ಹೆಸರಿಗೆ ತಕ್ಕಂತೆ, ಅವನು ಬಹಾದ್ದರನೇ ಆಗಿರುವನು (ಕಳ್ಳಕಾ. ೩). ೪. ಮೊದಲು ಕೊಡಗಿನ ಮಹಾರಾಜರ ಕಡೆಯಿಂದ ಮಿತ್ರತ್ವವಾಂಛಲ್ಯವಿಟ್ಟು ಶಾಶ್ವತವಾಗಿ ನಡದು ಬರಬೇಕು ಎಂಬುದಾಗಿ, ಭಾಷಾಪತ್ರಿಕೆ ಬರೆಸಿ, ಇಂಗ್ರೇಜಬಹಾದ್ದರಕಂಪನಿ ಸರಕಾರದಲ್ಲಿ ಮಡಗಿ ಇದೆ (ರಾಕೇಂಪ್ರ. ೮೪). **ಬಹಾದ್ದುರ** : ೪. ಹತ್ತು ಪಾಲು ಹೆಚ್ಚಾಗಿ ಇನ್ನೂ ಇಂಗ್ರೇಜಬಹಾದ್ದುರಕುಂಪನಿ ಸರಕಾರಕ್ಕೆ ಸಹಾಯ ಮಾಡಬೇಕು ಎಂಬುದಾಗಿ, ನಾವು ನಿಶ್ಚೈಸಿ ಇದ್ದೇವೆ (ರಾಕೇಂಪ್ರ. ೦೨೬). **ಬಹಾದ್ದೂರ್** : ೧. "ಬಹಾದ್ದೂರ್ = ಶೂರ" (ಜಾನಕೋ. ೨೦). **ಬಹಾದ್ದೂರ** : ೪. ಈ ಪೂರ್ವೋತ್ತರವೆಲ್ಲಾ ಇಂಗ್ರೇಜಬಹಾದ್ದೂರ ಸರಕಾರಕ್ಕೆ ಬರದು ಕಳುಹುತ್ತೇವೆ (ರಾಕೇಂಪ್ರ. ೯೩). **ಬಾದರ್** : ೩. ನವಾಬುಹೈದರಲಿಖಾನ್‌ಬಾದರವರು ಪೃಥ್ವೀಸಾಮ್ರಾಜ್ಯಂಗೆಯುತ್ತಿರಲು (ಎಕ. IX, ಚನ್ನಕ. ೦೬-೬; 1767). **ಬಾದುರ** : ೩. ವುಭಯದಳ ಪೂಜ್ಯಲಿಂಗವೊಡೆದಳವಿಭಾಡ ಬಾದುರಮಲುಕ ಸಪ್ತಾಂಗಹರಣಯೇನು ಮುಲಮಂದ ಪಾರ್ಥಿಕಮಲ್ಲ . . . ಮುಂಮ್ಮಡಿಹೊಟ್ಟಂಣನಾಯಕರ್ಯೆಯನವರು ಮಾಡಿಸಿದಂತಾ ಶಾಸನಾ (ಮೈಆರ. ೦೯೩೬, ೯೪-೦೬; 1700). **ಬಾಧುರ** : ೨. ಹಸ್ತಿಗಳ ಸಾಲಿಂದ ಸಾಲ್ಗಳನೆತ್ತಿಸಿದ ಬಾಧುರರ ರಣದೊಳು ವಿಸ್ತರಿಸಲಸದಳಗಳಾದವು ರಾಯಬಲವೆಲ್ಲ (ಮುರಾಮ್ಯಾಶಾ. ೭-೨೪). **ಭಾಹದರು** : ೩. ಮಹಾರಾಜರಾಜಕೃಷ್ಣರಾಜವೊಡೇರಭಾಹದರು . . . ಬರಸಿ ಕಳುಹಿಸ್ತ ನಿರೂಪ (ಎಕ. VI, ಕೊಪ್ಪ. ೯೯-೦೯; 1811).

[←ಪಾರ. ಬಹಾದುರ್; ಹಿಂ. ಬಹಾದುರ್, ಬಹಾದರ್; ಮರಾ. ಬಹಾದೂರ್, ಬಹಾದರ್, ಬಹಾದ್ದರ್]

**ಬಹಾದುರೀ**, ಬಹದರಿ, ಬಹದ್ದುರಿ, ಬಹದ್ದೂರಿ, ಬಹಾದರಿ, ಬಹಾದ್ದರಿ, ಬಹಾದ್ದೂರಿ (ನಾ). ೧. ಬಹದ್ದೂರ್ ಹೈದರನ ಕಾಲದಲ್ಲಿ ಟಂಕಿಸುತ್ತಿದ್ದ ಒಂದು ಬಗೆಯ ಚಿನ್ನದ ನಾಣ್ಯ : ಬ್ರಿಟಿಶಸರಕಾರದ ಅಮಲಿನ ಆರಂಭದಲ್ಲಿ . . . ೧೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡಿಯುತ್ತಿದ್ದವು. ಅವುಗಳ ವಿವರ—೧ ಗಜಪತಿ (ವಿಜಯನಗರದ ಅರಸರದು)... ೨ ಬಹಾದುರೀ (ಹೈದರನದು) ರೂ. ೪, ಆ. ೮ (ಕಥಾಗ. ೨೮೦). **ಬಹದರಿ** : (ಗು). ೨. ಬಹದ್ದೂರನಿಗೆ ಸಂಬಂಧಿಸಿದ; ಮೊಗಲ್‌ದೊರೆಗೆ ಸೇರಿದ : 'ಬಹದರಿವರಹ' ಪರಾ. **ಬಹದ್ದುರಿ** : ೩. ಭಾರಿಯಾದ; ಮಹತ್ವದ : ಅದು ಬೇವಾರಸು ಬಹದ್ದುರೀ ಸುದ್ದಿಯಾದದ್ದರಿಂದ ತಾವು ಅದನ್ನು ವಹಿಸಿಕ್ಕೊಂಡು ವರ್ಧಮಾನಕ್ಕೆ ತಂದರೆಂದು, ನನ್ನ ಊಹೆ (ಕಂಶ. ೩೬೪). **ಬಹದ್ದೂರಿ** : ೪. ಯೋಗ್ಯವಾದ; ಸಮರ್ಥವಾದ : ಅವನ ಎತ್ತೂ ಹಾಗೆಯೇ ಬಹದ್ದೂರಿ (ಹಳ್ಳಿಚಾ. ೪೦). **ಬಹಾದರಿ** : ೨. 'ಬಹಾದರೀವರಹ' ಪರಾ. **ಬಹಾದ್ದರಿ** : ೪. 'ಬಹಾದ್ದರಿತನ' ಪರಾ. **ಬಹಾದ್ದೂರಿ** : ೫. **ಅಧಿಕಾರ** : ಮನಸ್ಸು ಋತುವ್ಯತ್ಯಾಸವನ್ನು ಗೆದ್ದು ಅದನ್ನು ನಿಶ್ಚೀತನವಾಗಿ ಮಾಡಿ ಒಂದು ಬಹಾದ್ದೂರಿ ನಡಸುವಂತಿದೆ (ಖಂಡ. II, ೪೦೩).

[←ಪಾರ. ಹಿಂ. ಬಹಾದುರೀ ; ಮರಾ. ಬಹಾದರೀ, ಬಹಾದ್ದರೀ, ಬಹಾದೂರೀ]

**ಬಹಾದ್ದರ್** 'ಬಹಾದುರ್' ನೋ.

**ಬಹಾದ್ದರ** 'ಬಹಾದುರ್' ನೋ.

**ಬಹಾದ್ದರಿ** 'ಬಹಾದುರೀ' ನೋ.

**ಬಹಾದ್ದರಿತನ** (ನಾ). ದಕ್ಷತೆ ; ಸಾಮರ್ಥ್ಯ : ಬೆಳ್ಳಾರೆಕೋಟೆ, ಮೂಡ ಕೊಡೆಯಾಲದ **ಕೋಟೆ ಸಮಾಚಾರ** ಬರಸಿದ್ದು ಕೇಳಲಿಲ್ಲ. ಬಲುಚಾತುರ್ಯ, ಧೈರ್ಯ, ಬಹಾದ್ದರಿತನ ಸಹಾ ತೋರಪಟ್ಟಿತು (ರಾಕೇಂಪ್ರ. ೦೯೦). [ಬಹಾದ್ದರಿ (<ಬಹಾದುರೀ) + — ತನ]

**ಬಹಾದ್ದುರ** 'ಬಹಾದುರ್' ನೋ.

**ಬಹಾದ್ದೂರಿವರಹ,** ಬಹದರಿವರಹ, ಬಹಾದರೀವರಹ (ನಾ). ಬಹದ್ದೂರ್ ಹೈದರನ ಕಾಲದಲ್ಲಿ ಟಂಕಿಸಲಾಗುತ್ತಿದ್ದ, ಅಂದಿನ ನಾಲ್ಕು ಅಥವಾ ಐದು ರೂಪಾಯಿಗಳಿಗೆ ಸಮಾನವಾದ ಒಂದು ಬಗೆಯ ಚಿನ್ನದ ನಾಣ್ಯ : ಮರುಕ್ಷಣದಲ್ಲಿ ಐದನೂರುಬಹಾದ್ದೂರಿ ವರಹಗಳ ಥೈಲಿ ಝಣ್ಣೆಂದು ಬಿತ್ತು, ಜೋಯಿಸರ ಬೊಗಸೆಗೆ (ಕೃಕ್ಷಊ. ೩೬). **ಬಹದರಿವರಹ :** ಇಂಗ್ಲಿಷ್ ಸರ್ಕಾರಕ್ಕೆ ಸಲ್ಲಬೇಕಾದ ಪಗದಿಯ ವಿಷಯದಲ್ಲಿ ಈ ರಾಜ್ಯವು ತತ್ಕಾಲಕ್ಕೆ ಕ್ಷೀಣದಶೆಯಲ್ಲಿದ್ದ ಕಾರಣ ಮೊದಲನೆಯ ವರ್ಷದಲ್ಲಿ ೭ ಲಕ್ಷ ಬಹದರಿವರಹಕ್ಕೆ ಬದಲಾಗಿ ೭ ಲಕ್ಷ ಕಂಠೀರಾಯಿವರಹವನ್ನು ಅಂಗೀಕರಿಸಲಾಗುವುದು (ಮಹಾಶಂ. II, ೦೦). **ಬಹಾದರೀವರಹ :** (?). [ಬಹಾದ್ದೂರಿ (<ಬಹಾದುರೀ) + ವರಹ]

**ಬಹಾದ್ದೂರ್** 'ಬಹಾದುರ್' ನೋ.

**ಬಹಾದ್ದೂರ** 'ಬಹಾದುರ್' ನೋ.

**ಬಹಾದ್ದೂರಗಡಿ** (ನಾ). ಸಮರ್ಥನಾದ ವ್ಯಕ್ತಿ; ದಕ್ಷ: ವಕೀಲರು ಬಹಾದ್ದೂರಗಡಿ ; ಸರದಾರ ಮನಸ್ಸು (ರಕ್ತರ. ೧೯೬).
[ಬಹಾದ್ದೂರ (<ಬಹಾದುರ್)+ಗಡಿ(? ← ಮರಾ. ಗಡಿ=ಮನುಷ್ಯ)]

**ಬಹಾದ್ದೂರಿ** 'ಬಹಾದುರೀ' ನೋ.

**ಬಹಾರ್** (ನಾ). ೧. ಮೋಜು; ತಮಾಷೆ; ಗಮ್ಮತ್ತು : ಚದುರಂಗದ ಆಟವು ಎಂಥಾ ಬಹಾರ್ ನಡೆದಿರುತ್ತದೆ ! (ಮೋಹಿಸೀ. ೬೦). ೨. [ಸಂಗೀತ] ಒಂದು ರಾಗದ ಹೆಸರು: ಬಹಾರ್, ಬಾಗೇಶ್ವರಿ, ಪೂರಿಯಾ, ದರ್ಬಾರಿ, ಕಮಾಚ್‌ರಾಗಗಳು ಉನ್ಮಾದವನ್ನೂ . . . ಗುಣಪಡಿಸುವುದೆಂಬ ಭಾವನೆ ಉತ್ತರಭಾರತದಲ್ಲಿದೆ (ಶಾರದ. ೩೪೪).
[ ← ಪಾರ. ಹಿಂ. ಬಹಾರ್ ; ಮರಾ. ಬಹಾರ್, ಬಹರ್ ]

**ಬಹಾಲ್,** ಬಹಲಿ, ಬಹಲು (ನಾ). ೧. ಪೂರ್ವಸ್ಥಿತಿಗೆ ತರುವಿಕೆ ; ಯಥಾಸ್ಥಿತಿಗೆ ತರುವಿಕೆ : ಇನಾಂಜಮೀನಗಳು ಬಹಾಲ್ ಆಗುವಾಗ್ಗೆ ಸರಕಾರದಲ್ಲಿ ಈಗ್ಯೂ ಮೂಲಸನದುಗಳು ಫೈಲಿನಲ್ಲಿ ಅವೆ (ಊಯ. ೨೩೪). **ಬಹಲಿ :** ೨. ಸಂಸ್ಥೆ, ಸ್ಥಾನ, ಕಚೇರಿ ಮೊದಲಾದುವುಗಳಲ್ಲಿನ ವ್ಯವಸ್ಥೆ : (?). **ಬಹಲು:** ೩. ಇನಾಮು ; ಭಕ್ಷೀಸು.

**ಬಹಲ್ ಮಾಡು, ಬಹಲು ಮಾಡು**=೧. ಪೂರ್ವಸ್ಥಿತಿಗೆ ತರು; ಯಥಾಸ್ಥಿತಿಗೆ ತರು : ಹಿಂದೆ ಸರ್ಕಾರಕ್ಕೆ ದಾಖಲಾಗಿದ್ದ ಅನೇಕ ದೇವಾದಾಯ ಬ್ರಹ್ಮಾದಾಯ ಭಟಮಾನ್ಯಗಳನ್ನು ಬಹಲ್ ಮಾಡಿ ಪ್ರಯಾಣಿಕರ ಅನುಕೂಲ್ಯಕ್ಕೋಸ್ಕರ ಅಲ್ಲಲ್ಲಿ ಕೆಲವೆಡೆ ಅನ್ನಸತ್ರಗಳನ್ನು ಏರ್ಪಡಿಸಿದರು (ಮಹಾವಂ. II. ೩೩). ೨. ಭಕ್ಷೀಸು ಕೊಡು ; ಇನಾಮು ಕೊಡು : ನಮ್ಮ ದೌಲತ್ತನ್ನು ಬಹಲು ಮಾಡುವುದಕ್ಕೆ ಅದನ್ನು ನಮಗೆ ಯಾರೂ ಕೊಟ್ಟಿಲ್ಲ. ಅದನ್ನು ನಮಗೆ ಕೊಟ್ಟ ಈಶ್ವರ ದೊಡ್ಡವನು (ಶತ್ರಪಾ. ೫೪). **ಬಹಲಿಯಿಡು**=ಬಹಲ್‌ಮಾಡು ೧ : ಅನಂತರ ಆಳಿದ ಅವರ ಪುತ್ರರು ಕಂಠೀರವಮಹಾರಾಜರು ಪಟೇಲರ ಇನಾಮನ್ನು ಜಪ್ತಿ ಮಾಡಿ ಇತರ ಗ್ರಾಮನೌಕರರ ಇನಾಮನ್ನು ಬಹಲಿಯಿಟ್ಟರು (ಮಹಾಶಂ. II, ೨೪).
[ ←ಪಾರ. ಮರಾ. ಬಹಾಲ್; ಹಿಂ. ಬಹಾಲ್, ಬಹಾಲೀ ]

**ಬಹಿ** (ನಾ). ಹೊರಗು : ಕಾಯದಲ್ಪಸುಖಕ್ಕೆ ಘನನಿಶ್ರೇಯಸಕೆ ಬಹಿಯಾಗಬೇಡ (ಶಿವಂಶ. ೦೨-೩೩). [ <ಸಂ. ಬಹಿರ್ ]

**ಬಹಿಃಕರಣ** (ನಾ). ಪ್ರಕಟವಾಗುವುದು; ಅಭಿವ್ಯಕ್ತಿ: ನಾವು ಕಲಾಕೃತಿ ಎಂದು ಯಾವುದನ್ನು ಕರೆಯುತ್ತೇವೆಯೋ, ಆ ಚಿತ್ರವೋ, ಗೀತವೋ, ಶಿಲ್ಪವೋ—ಅದು ಏನಿದ್ದರೂ ಪ್ರತಿಭಾನದ ಬಹಿಃಕರಣದ ರೂಪವಾದುದು (ಸೌಂದಸ. ೬೯). [ಸಂ.]

**ಬಹಿಃಕರಿಸು** (ಕ್ರಿ). ೧. ಅಭಿವ್ಯಕ್ತಪಡಿಸು; ತೋರ್ಪಡಿಸು: ತರುಣಕಳಂಕಮನಂತಃಕರಣದೊಳಾಂತಮಾಳವೃತ್ತಿಯಿಂ ಕೂಡೆ ಬಹಿಃಕರಿಪಂತೆ ಮಹಾರಜನಾಂಬರಮಂ ಕಳೆದೇಕೆ ಧವಳಪಟಮಂ ಪೊದೆದಾ (ಜಗಂ. ೦೨-೯೦). ೨. ಹೊರಹಾಕು ; ಹೊರದೂಡು : ಇರಿಸಿ ತಮೋಗುಣಮಂ ಮಿಕ್ಕ ರಜಸ್ಸತ್ವಂಗಳಂ ಬಹಿಃಕರಿಸುವವೊಲ್ ಅರುಣಾಧರಪಾಂಡುರದಶನರುಚಿಗಳಾನನದಿನೊಗೆಯೆ ಲಾಂಗಲಿ ನುಡಿದಂ (ಜಗಂ. ೦೩-೯೦).
[ ಬಹಿಃಕರಣ + –ಇಸು ]

**ಬಹಿಃಕ್ಷೇತ್ರ** (ನಾ). ಹೊರಭಾಗ; ಹೊರವಲಯಂ : ಆ ಯಜ್ಞದ ಸೂತ್ರಪ್ರಕಾರದಿಂ ಮುಖಶಾಲೆಯಂ ಬಹಿಃಕ್ಷೇತ್ರದೊಳ್ಸಲೆ ರಚಿಸಿ (ಕೈಏಚಾ. ೯-೭). [ಸಂ.]

**ಬಹಿಃಪುರ** (ನಾ). ಊರಿನ ಹೊರಭಾಗ ; ಹೊರವಲಯ: ವನಜವನರಾಜಿಕೂಜದ್ವನವಿಹಗವಿರಾಜ ಪುರಬಹಿಃಪುರಕೇಳೀವನದೊಡವು ರತಿಯು ಪೊಸಜೌವನದೊಡವೆನೆ ನೆಱೆಯೆ ಪೊಗಟಲಾವಂ ನೆಱೆವಂ (ಶಂರಾಚಿ. ೦-೧೦೦). [ ಸಂ. ]

**ಬಹಿಃಪುಷ್ಕರ** (ನಾ). ಹೊರಭಾಗಕ್ಕೆ ಚಾಚಿಕೊಂಡಿರುವ ಸೊಂಡಿಲುಳ್ಳುದು : ಅಗಾಧಸ್ರವಂತೀಹ್ರದಾಂತರ್ಜಲದೊಳ್ ನಿಷ್ಕಂಪಿತಾಂಗಂ ಮುಟಾಗಿದುದು ಬಹಿಃಪುಷ್ಕರಂ ಹಸ್ತಿಯೂಥಂ (ಚಂದ್ರಕ. ೪-೬೪). [ ಸಂ. ]

**ಬಹಿಕರಿಸು** (ಕ್ರಿ). ದೂರಮಾಡು; ಬಹಿಷ್ಕರಿಸು: ಯಶೋರವನಾಚಿ ತಲೆಗೊಡಹಿ ಬಹಿಕರಿಸದಿಹಳೇ . . . ವಿಚಾರವ ವಹಿಸದಳಿವರೆ ಸತಿಯನು (ಕೊರಚ. ೩-೩-೩೯). [ <ಬಹಿಷ್ಕರಿಸು ]

**ಬಹಿತ್ರ,** ಬಾಹಿತ್ರ, ಬೈತ್ರ, ಭೈತ್ರ(ನಾ). ತೆಪ್ಪ; ಹರಿಗೋಲು: "ತರಣಿ ಬಹಿತ್ರಮುಂ" (ಶಬ್ದಕೋ. ೦೨೦-೧೭) ; ಗಗನತಲಜಲಧಿಯೊಳ್ ಬಹಿತ್ರದಂತೆ ಪರಿವ ಸೂರ್ಯಪ್ರಭನೆಂಬ ದೇವನ ವಿಮಾನಮಂ ನೋಡಿ (ಆದಿಪು. ೩-೪೩ ವ) ; ಏನೊಪ್ಪಿರ್ಪವೊ ಪೋಲ್ತು ದಿವ್ಯಜನಚೈತ್ಯಂಗಳ್ ಬಹಿತ್ರಂಗಳಂ (ಪುಷ್ಪ. ೨-೬೪). **ಬಾಹಿತ್ರ :** ಪುತ್ರರೇ ದುಃಖಾರ್ಣವಕೆ ಬಾಹಿತ್ರ ಸತ್ಕುಲನಾದನಕ್ಕಾ ಚೈತ್ರಮಾಸಂ (ಶಂಕರಾ. ೦೬-೦೭). ? ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಬೈತ್ರ:** ಬಡಿಗೊಂಡು ಮುಸಗಿ ಬೈತ್ರಮನೊಡೆವ ಮಹಾಮಕರದಂತೆ ಕರಿಘಟೆಗಳನಾದರ್ಪಡಿಯೆ ಬಡಿದಾನವರಸಾಗಡೆ ಕೊಂದಂ ಕ್ಷೇಮಧೂರ್ತಿಯಂ ಪವನಸುತಂ (ಪಂಪಭಾ. ೦೨-೬೮); ಜ್ವಲಿಪ ಪೊಂದೇರ್ಗಳೇ ಬೈತ್ರಂಗಳ್. . . ಎಸೆವ ಮದದಂತಿಗಳೆ ಶೈಲಜಾಲವೆನೆ ಜಲನಿಧಿಯೊಲೊಪ್ಪಿದುದು ರಣರಂಗ (ಸೌಂದಪು. ೦೬-೨೦); ಗುಂಡುಗಳು ಭಾರ ಬೈತ್ರಕ್ಕೆ ಲೋಕಕ್ಕೆ ಕೊಂಡೆಯನೆ ಭಾರ (ಸರ್ವಜ್ಞ. ೦೯೩೦). **ಭೈತ್ರ:** "ಪೋತಃ, ಪ್ರವಹಣಃ—ಈ ೨ ಭೈತ್ರಂ" (ಹಲಾಯು. ೦೦೮-೩೩); ಆ ಭುವನತ್ರಯವಿಜಯಿಯುಪ್ಪ ರೂಪಾತಿಶಯದೊಡನಮಳ್ಳೆದಂತೆ ಬಳೆದ ನಿಸರ್ಗಶೌಚಾದಿಗುಣಂಗಳಿಂ ಬಿಣ್ಣಂಡಿಕ್ಕಿದ ಭೈತ್ರಮುಮಂ . . . ಪೋಲ್ತು (ಶಾಂತಿಪು. ೦೦-೯೨ ವ); ತಲ್ಲಿಂಗಕೋರಂತೆ ನಮಿಸಿ ಬೀಳ್ಕೊಂಡು ಭೈತ್ರವನೇಱಿ . . . ಆ ನಾವಿಕಂ ಪಡಂಗಂ ತಡಿಯನುಱೆ ಸೇರಿಸಿ (ಪದ್ಮರಾ. ೦೦-೦೮೧). [ < ಸಂ. ವಹಿತ್ರ ]

**ಬಹಿರ,** ಬಹಿರು (ನಾ). ೧. ಹೊರಗು; ಬಹಿರಂಗ : ಹೆಜ್ಜೆಹೆಜ್ಜೆಗೆ ಕೃಷ್ಣ ಕೃಷ್ಣ ಅಬ್ಜನಾಭ ನಾರಾಯಣ ಮೂಜಗತ್ಪತಿಯೆಂದು ಸ್ತೋತ್ರ ನಿರ್ಲಜ್ಜವಾಗಿ ಪಠಿಸುತ ರಜ್ಜುಪಾಣಿಯು ಬಹಿರದಿಂದ ನಿವಾರ್ಹ್ಯಜಭಕುತಿಲಿ ನೋಡಿದೆ (ಕೀರ್ತಸು. ೫೨); ಅನ್ಯರ ಕಣ್ಣಿಗೆ ಬಲುರಮ್ಯವಾಗಿ ಪಾವನನೆನಿಸಿಕೊಂಡೆ ಬಹಿರದಲ್ಲಿ ಬಣ್ಣವಲ್ಲದೆ ಲೇಶ ಅಂತರಶುಚಿ ಇಲ್ಲಾ (ಪಿಶ್ಯಸು. ೬೬-೩). **ಬಹಿರು :** ೨. ಬಯಲಂ ಪ್ರದೇಶ : ಹೇಹದೊಳಗಿರ್ದರಿಗೆ ತದ್ವಿಧಿಗ್ರಾಹಗೊಳಿಸೈತರಲು ಬಹಿರಿಗೆ ಮೋಹರಿಸೆ ಬತ್ತೀಸ ಅಕ್ಷೋಹಿಣಿಯು ನಿಜಸೇನೆ (ಜಸರಾ. ೪೩೨-೪೬); ಪುರದ ವರಬಹಿರಿನೊಳು ದೂಸನು ವಿರಚಿಸಲು (ಜಸರಾ. ೬೪-೬೦). [<ಸಂ. ಬಹಿಸ್

**ಬಹಿರಂಗ** (ನಾ). ೧. ಹೊರಗಿನ ಅವಯವ,—ಅಂಗ : ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ . . . ಇದೆ ಅಂತರಂಗಶುದ್ಧಿ ಇದೆ ಬಹಿರಂಗಶುದ್ಧಿ (ಬಸವ. ೨೪೩). ೨. ಹೊರಗಿನದು ; ಹೊರ ಭಾಗಕ್ಕೆ ಸೇರಿದುದು : ಆ ವಿಭುಗಾದುದಂದು ವಿಶದಂ ಬಹಿರಂಗಮುಂ ಮಂತರಂಗಮುಂ (ಶಾಂತಿಪು. ೯-೩೩). ೩. ಹೊರಗಡೆ ; ಹೊರಭಾಗ : ಅಂತರಂಗದಲ್ಲಿ ಜ್ಞಾನ ಬಹಿರಂಗದಲ್ಲಿ ಕ್ರಿಯೋಪಚಾರ ಇರುತಿರಲಿಕ್ಕಾಗಿ ಏಕ ಭಾವವೆನಿಸಿಕೊಂಬುದಯ್ಯಾ (ಸಿದ್ಧೇಶ. ೬೨-೩೪); ಎನ್ನೊರ್ವಗದೆ ಬಹಿರಂಗದಿಂ ತೆರಳ್ವುದು ನೀತಿಯಲ್ಲ(ಕೃಷ್ಣರಾಜ. ೯-೬೫). ೪. ಹೊರಗಿನ ಪ್ರದೇಶ,—ಎಡೆ : ಅಯ್ಯೋ ಆ ಬಟ್ಟಬಯಲಿನ ಹಾಳು ಬಹಿರಂಗದಲ್ಲಿ, ಕೋಗಿಲೆಯ ದೊಂದು ಕರುಗೆ ಹನುಗಿ ಕೂತಿತ್ತು(ಕೋಗಿಲೆ. ೩-೬೯). ೫. ಇಂದ್ರಿಯ ಗೋಚರವಾದುದು : ಪ್ರತ್ಯಕ್ಷ : ಬಹಿರಂಗದಲ್ಲಾದರೋ ಕೋಟಿ ಸೂರ್ಯಪ್ರಕಾಶಮಾನವಾದ ಪಾಂಡುರಂಗನ ಪ್ರತ್ಯಕ್ಷದರ್ಶನವಾಯಿತು (ಕಥಾ. ೯೯೯). ೬. ಮುಚ್ಚುಮರೆಯಿಲ್ಲದ ಸ್ಥಿತಿ; ಎಲ್ಲರಿಗೂ ತಿಳಿದಿರುವಂತಹುದು ; ಸರ್ವವಿದಿತ : ಬಹಿರಂಗವಾಗಿ ಕಣಕುವಷ್ಟು ಧೈರ್ಯಗೊಂಡ ಕಡುಮೂರ್ಖರನ್ನು ತಾಮಸವಿಲ್ಲದೆ ಶಿಕ್ಷಿಸಿದನಕ ಭಿಕ್ಷೆ ತಕ್ಕೊಳ್ಳಲಾರೆನೆಂದು ಚಂಚಲನೇತ್ರರು ಹಟಹಿಡಿದರು (ವಾಗ್ದೇ.ಪಿ. ೩೪); ಈ ವಿಷಯ ಬಹಿರಂಗಕ್ಕೆ ಬರಲು ಹೆಚ್ಚು ಸಮಯವೇನೂ ಬೇಕಾಗಿಲ್ಲ (ರೂಢಿ).

**ಬಹಿರಂಗಭಕ್ತಿ**=(ಅಂತರಂಗದಲ್ಲಿ ಇಲ್ಲದೆ) ಹೊರಗಡೆಯಲ್ಲಿ ಮಾತ್ರ ತೋರಿಸುವ ಭಕ್ತಿ; ಬೂಟಾಟಿಕೆಯ ಭಕ್ತಿ : ತೋರಿದನು ಬಹಿರಂಗಭಕ್ತಿಯ ಕ್ರೂರಕಪಟಿಯು (ಜೈಮಿನಿ. ೬೦-೩೩). **ಬಹಿರಂಗ ಮಾಡು** =ಹೊರಗೆಡಹು ; ಪ್ರಕಟಿಸು : ಯಾವುದೇ ಗುಟ್ಟಿನ ವಿಷಯವನ್ನು ಬಹಿರಂಗ ಮಾಡಬಾರದು (ರೂಢಿ). **ಬಹಿರಂಗವಾಗು**=ಎಲ್ಲರಿಗೂ ತಿಳಿಯು ವಂತಾಗು : ಪ್ರಚಾರಗೊಳ್ಳು : ಗುಟ್ಟು ಬಹಿರಂಗವಾದ ಮೇಲೆ ಬಹಿಷ್ಕಾರವಾದರೇನು ? ಪ್ರಾಯಶ್ಚಿತ್ತವಾದರೇನು ? (ಗಾದೆ). **ಬಹಿರಂಗ ವಿಚಾರಣೆ**=ಎಲ್ಲರ ಸಮಕ್ಷಮದಲ್ಲಿ ನಡೆಸುವ ವಿಚಾರಣೆ ; ಸಾರ್ವಜನಿಕವಿಚಾರಣೆ : ಹಲವಾರು ಮಂದಿ ಸೇರಿ ನಡೆಸಿದ ಬಹಿರಂಗ ವಿಚಾರಣೆಯಲ್ಲಿ ಆತನ ಮೇಲಿನ ಆಪಾದನೆಯು ಸಾಕ್ಷ್ಯಾಧಾರಗಳಿಲ್ಲದೆ ಬಿದ್ದು ಹೋಯಿತು (ರೂಢಿ). [ಸಂ.]

**ಬಹಿರಂಗಪಡಿಸು** (ಕ್ರಿ). ಪ್ರಕಟಿಪಡಿಸು : ಹೊರಗೆಡಹು : ಆ ಗಂಡ ಹೆಂಡಿರು ತಮ್ಮ ಬಡತನಕ್ಕೋಸುಗ ಸರ್ವಾಭರಣಸಹಿತವಾಗಿ ದೊರೆತ ಮಗುವಿನ ವಿಷಯವನ್ನು ಬಹಿರಂಗಪಡಿಸಲಾರದಿದ್ದರು (ಕಥಾ. ೯). ಮದ್ರಾಸಿನ ಸಭೆಯೊಂದರಲ್ಲಿ ಸ್ವಾಮಿಗಳು ತಾವು ಚಿಕ್ಯಾಗೋದ ಸರ್ವ ಧರ್ಮಸಮ್ಮೇಳನಕ್ಕೆ ಹೋಗುವುದಾಗಿ ಬಹಿರಂಗಪಡಿಸಿದರು(ಧರ್ಮಸಾ. ೯೬). [ಬಹಿರಂಗ+ಪಡಿಸು]

**ಬಹಿರಕರ್ಮ** (ನಾ). ಪ್ರಾಕೃತಿಕವಾದ ಮಲಮೂತ್ರ ವಿಸರ್ಜನೆ ಮುಂತಾದ ಕ್ರಿಯೆ ; ಪ್ರಾತರ್ವಿಧಿ : ತ್ವರಿತದಿಂ ಬಹಿರಕರ್ಮವ ತೀರ್ಚಿ (ನವಮೋ. ೦೬-೩); ಬಹಿರಕರ್ಮವ ತೀರ್ಚಿ ತವಕದಿಂ ಲೀಲೆಯಿಂದಂಗ ಮಜ್ಜನಗೈದು (ನವಮೋ. ೨೩-೭೧). [ಬಹಿರ+ಕರ್ಮ]

**ಬಹಿರರ್ಥಸಿದ್ಧಿ** (ನಾ). ಹೊರಗಿನ ಉದ್ದೇಶದ ಸಾಧನೆ : ವಿಜ್ಞಾನಂ ವಿಜ್ಞಾನಾಂತರಗ್ರಾಹಕಮಕ್ಕುಮಪ್ಪೊಡಾವ ಮಾಟ್ಕಿಯೊಳ್ ವಿಜ್ಞಾನಾಂತರ ಮಪ್ಪುದಾ ಮಾಟ್ಕಿಯೊಳೆ ಬಹಿರರ್ಥಸಿದ್ಧಿಯಾಗಿ ಸರ್ವಪ್ರತ್ಯಯುನಿರಾ ಲಂಬನವಾದಂ ಕಿಡುಗುಂ(ಆದಿಪು. ೨-೦೦ ವ). [ಸಂ.]

**ಬಹಿರಾತ್ಮ** (ನಾ). ೧. ಹೊರಗಿನ ಆತ್ಮ,—ಜೀವ; ಶರೀರ : ತತ್ತ್ವಯಾ ಯತ್ತಂ ಬಹಿರಾತ್ಮಂ ಕಾಯಂ ಪ್ರತ್ಯುಪ್ರಸಪ್ತಧಾತುನಿಬದ್ಧಂ (ವಸ್ತು ಕೋ. ೬೧-೩೬). ೨. [ಜೈನ] ಅಂತರಾತ್ಮ, ಬಹಿರಾತ್ಮ ಮತ್ತು ಪರಮಾತ್ಮ ಎಂಬ ಮೂರು ಬಗೆಯ ಆತ್ಮಭೇದಗಳಲ್ಲಿ ಒಂದು ; "ಇಂದ್ರಿಯ ಸುಖದಲ್ಲೇ ಆಸಕ್ತ ಮತ್ತು ಶರೀರಾದಿಗಳೇ ತಾನು ಎಂದು ತಿಳಿಯುವವ" (ಕೃಷಕೋ. ೦೮೪) : "ಕೋಮಲವಾದ ಸ್ತ್ರೀಯು, ಮಕ್ಕಳು ಮೊದಲಾದ ಕ್ಷಣಿಕವಿಷಯಗಳಲ್ಲಿಯೇ ಆತುರಗೊಂಡು ಮಗ್ನ ನಾಗಿರುವ ಜೀವವು, ತನ್ನದು ಪರರದು ಎಂಬ ಭೇದಭಾವವನ್ನು ಕಲ್ಪಿಸುತ್ತ ಹೋಗುವುದು" ಇದು ಬಹಿರಾತ್ಮನ ಲಕ್ಷಣವು (ಕೃಷಕ. ೩೯೭). [ಸಂ. ಬಹಿರಾತ್ಮನ್]

**ಬಹಿರಾವರಣ** (ನಾ). ಹೊರಗಿನ ಆವರಣ,—ಆಚ್ಛಾದನೆ,—ಮುಸುಕು : ಆತ ನಿರ್ಲೋಭನೂ ವಿಚಿತ್ರನೂ ಆದ ವ್ಯಕ್ತಿ. ಆತನ ಬಹಿರಾವರಣ ಕಳಚಿ ಹೋದಂತಿತ್ತು (ಪಿಂಗ II, ೮೯); ಈ ಪ್ರೇಮಕ್ಕೆ ಬಹಿರಾವರಣಗಳ ಆಣೆಯಿಲ್ಲ (ರಾಷ್ಟ್ರಾಸ. ೦೦೩). [ಸಂ.]

**ಬಹಿರಿಂದ್ರಿಯ** (ನಾ). ಕಿವಿ, ಕಣ್ಣು, ಚರ್ಮ, ನಾಲಗೆ ಮತ್ತು ಮೂಗು ಎಂಬ ಐದು ಹೊರಗಿನ ಇಂದ್ರಿಯಗಳು; ಬಾಹ್ಯೇಂದ್ರಿಯ : ತರಣ ಮಂಡಲದಲ್ಲಿ ದೃಷ್ಟಿಯನಿರಿಸಿ ಬಹಿರಿಂದ್ರಿಯದ ಬಳಕೆಯ ಮುರಿದು ವೇದಾಂತದ ರಹಸ್ಯದ ವಸ್ತು ತಾನಾಗಿ ಇರಲು (ಕುವೆಂಪುದ್ರೌ. ೦೪-೨೨). [ಸಂ.]

**ಬಹಿರಿಗೆ** (ನಾ). ಊರಿನ ಹೊರಗಿನ ಪ್ರದೇಶ,—ಬಯಲುಪ್ರದೇಶ : ತನ್ನ ಭರದಾರಸಹಿತಂ ಸ್ತ್ರೀಯರ್ಕಳುಮೆರಸು ಗಾಂಧರ್ವದತ್ತೆಯುಂ ಮುಂ ಶಾ[ನುವಿನಾ] ವಿಮಾನಂಗಳನೇಱಿ . . . ಪಯಣಂಬಂದು ಚಂಪಾಪುರ ಮನೆಯ್ದಿ ಪುರಬಹಿರಿಗೆಯೊಳ್ ಬೀಡಂ ಬಿಟ್ಟರ್ದ (ಜೀಹಂ. ೯-೪೦) ; ಪುರ ಬಹಿರಿಗೆಯೊಳ್ ಬಿಟ್ಟರ್ದ ಪಿರಿಯ ಬೀಡಂ ಕಂಡು (ಜೀಹಂ. ೯-೫ ವ) [☞ ಈ ಶಬ್ದವನ್ನು ಸಂಸ್ಕೃತ ವ್ಯಾಕರಣಸೂತ್ರದ ಮೂಲಕ ಸಾಧಿಸುವುದು ಕಷ್ಟ]

**ಬಹಿರು** 'ಬಹಿರ'ನೋ.

**ಬಹಿರುದ್ಯಾನ** (ನಾ). ಊರ ಹೊರಗಿನ ಉದ್ಯಾನ : ಬಹಿರುದ್ಯಾನಾಂತರ ದೊಳ್ ಸಹಸೋದಿತಮತ್ತಕೋಕಿಲೋಚ್ಚೈರ್ಧ್ವಾನಂ ಮುಹುರಾರ್ಣಿಸೆ ಪಡೆದತ್ತಹರ್ನಿಶಂ ಪೆರ್ಚನಂತರಂಗಕ್ಕನ್ನಾ (ಕಬಿಕಾ. ೦-೫೭); ಬಹಿರುದ್ಯಾನದ ಕೆಲದೊಳ್ . . . ಮಾಡಿಸಿದಂ ಗೃಹಮಹತ್ತರಂ ನಿಮಿಷದಿಂ ಸ್ವಯಂವರ ಗೃಹಮಂ (ಶಂರಾಪಾ. ೪-೩೪). [ಸಂ.]

**ಬಹಿರ್ಗತ** (ಗು). ೧. ಹೊರಹೊಮ್ಮಿದ ; ಪ್ರಕಟಗೊಂಡ. (ನಾ). ೨. [ನಾಟ್ಯ] ಆವರ್ತಿತ, ನತ, ಉತ್ಕ್ಷಿಪ್ತ, ಉದ್ವಾಹಿತ, ಪರಿವರ್ತಿತ, ನಿಸ್ಸೃತ, ಪರಾವೃತ್ತ, ತಿರಶ್ಚೀನ, ಬಹಿರ್ಗತ ಮತ್ತು ಕಂಪಿತ ಎಂಬ ಕಣಕಾಲುಗಳ ಹತ್ತು ಬಗೆಯ ಚಲನೆಗಳಲ್ಲಿ ಒಂದು : "ಜಂಘೆಯನ್ನು ಪಕ್ಕಕ್ಕೆ ನೀಡುವುದು" (ಅಭಿನಯ. ಗದ್ಯಾನುವಾದ. ೨೬೪) ; ಮಿಗೆ ಪಾರ್ಶ್ವಕ್ಕಂ ನೀಡುತ್ತೊಗೆದಿರೆ ಪಸರಿಸೆ ಬಹಿರ್ಗತಾಖ್ಯಂ (ಅಭಿನಯ. ೨-೦೯೬). ೩. ಹಿಮ್ಮಡಿಗಳ ಎಂಟು ವಿಧವಾದ ಚಲನೆಗಳಲ್ಲಿ ಒಂದು : ಉತ್ಕ್ಷಿಪ್ತ, ಪತಿತ, ಉತ್ಕ್ಷಿಪ್ತಪತಿತ, ಅಂತರ್ಗತ, ಬಹಿರ್ಗತ, ಮಿಥೋಯುಕ್ತ, ವಿಯುಕ್ತ, ಅಂಗುಲಿಸಂಗತ—ಈ ಎಂಟು ಪಾರ್ಷ್ಣಿಯ ಭೇದಂಗಳ್ (ಅಭಿನಯ. ೩-೦೦೦ ವ). ೪. ಐದು ವಿಧವಾದ ಹರಡಿನ ನ್ಯಾಸಗಳಲ್ಲಿ ಒಂದು ವಿಧ : ಅಂಗುಷ್ಠಸಂಶ್ಲಿಷ್ಟ, ಅಂತರ್ಯಾತ, ಬಹಿರ್ಗತ, ಮಿಥೋಯುಕ್ತ, ವಿಯುತ—ಈ ಐದು ಹರಡಿನ ಭೇದಂಗಳ್ (ಅಭಿನಯ. ೩-೧೦೦ ವ). [ಸಂ.]

**ಬಹಿರ್ದಾಹಿನಿ** (ನಾ). (ಹೊರಮೈಯನ್ನು ಸುಡುವ) ಒಂದು ಬಗೆಯ ಆಯುಧ : ಬಿಲ್ಲು ತೀರು ಹದೆ . . . ಅಂತರ್ದಾಹಿನಿ ಬಹಿರ್ದಾಹಿನಿ ಆಕಾಶಗಾಮಿನಿ . . . ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾಧಿಸಾಧನ ವಿಶೇಷಂಗಳಿಂದಲೂ (ವಿವೇಕ. ೨೬೩). [ಸಂ. ಬಹಿರ್ದಾಹಿನೀ]

**ಬಹಿರ್ದೃಷ್ಟಿ** (ನಾ). ೧. ಹೊರನೋಟ,—ದೃಷ್ಟಿ. ೨. ಹೊರಗಿನದನ್ನು

ಪರೀಕ್ಷಿಸಿ ನೋಡುವ ದೃಷ್ಟಿಯುಳ್ಳವನು ; ಹೊರನೋಟವುಳ್ಳವನು : ಅಂತರ್ದೃಷ್ಟಿಗಳು, ಬಹಿರ್ದೃಷ್ಟಿಗಳು, ಆವತಾರದೃಷ್ಟಿಗಳು. ಸರ್ವದೃಷ್ಟಿಗಳು ಎಂದು ಭಗವದ್ರೂಪದರ್ಶನವಿಭಾಗದಿಂದ ಮನುಷ್ಯರು ಬಹಿರ್ದೃಷ್ಟಿಗಳು (ಹಿಂದಿಕಾ. ೨೯೦). [ಸಂ.]

**ಬಹಿರ್ದೆಸೆ** (ನಾ). ಶೌಚಕ್ರಿಯೆ : ಬಹಿರ್ದೆಸೆಗೆ ಹೋಗಿರುವವರು ಇನ್ನೂ ಬಂದಿಲ್ಲ (ರೂಢಿ). [< ಸಂ. ಬಹಿರ್ದಿಶಾ]

**ಬಹಿರ್ದೇಶ** (ನಾ). ೧. ಹೊರಭಾಗ ; ಹೊರವಲಯ : ರಾಜಶೇಖರ ರಾಜೇಂದ್ರಂ ರಾಜವೀಥಿಯುಂ ದಾಂಟಿ ಪುರಬಹಿರ್ದೇಶದ ವೈಹಾಳಿಯ ಬಯಲ್ಗೆ ಸಸಂಭ್ರಮಂ ಬರೆ (ರಾಜಶೇ. ೦೩-೮೨ ವ). ೨. ಬೇರೆಯ ದೇಶ : ಹೊರನಾಡು. ೩. ಹಳ್ಳಿ, ಊರುಗಳಿಲ್ಲದ ಸ್ಥಳ. ೪. ಮಲಮೂತ್ರವಿಸರ್ಜನೆ ; ಶೌಚಕ್ರಿಯೆ : ಪೀರಾಲಿಯು . . . ಬಹಿರ್ದೇಶಕ್ಕೆ ಹೋಗಿ ಬಂದ ನಂತರ ಹಾಜರಾಗುವೆನು ಎಂದು ಹೇಳಿದನು (ರುಸ್ತಾಕ. ೩೯೬) ; ಅವಳ ಮಾತನ್ನು ಅಲ್ಲಿ ಬಹಿರ್ದೇಶಕ್ಕೆಂದು ಹೋಗಿದ್ದ ಪ್ರಫುಲ್ಲಚಂದ್ರನ ತಂದೆ ಕೇಳಿಕೊಂಡು ಮನೆಗೆ ಬಂದು ಹೆಂಡತಿಗೆ ಹೇಳಿದರು (ಶಾಂತ. ೭೩). [ಸಂ.]

**ಬಹಿರ್ದ್ವಾರ** (ನಾ). ೧. ಹೊರಬಾಗಿಲು ; ಮುಂದಿನ ಬಾಗಿಲು. ೨. ಬಾಗಿಲಿನ ಹೊರಗಿರುವ ಪ್ರದೇಶ ; ಹೊರಅಂಗಳ. [ಸಂ.]

**ಬಹಿರ್ಭಾಗ** (ನಾ). ಹೊರಭಾಗ ; ಹೊರಗಡೆ : ಎಯ್ದೆ ಬಹಿರ್ಭಾಗದೊಳ್ ನಿಂದು ವಿಶ್ವಸೇನಮಹಾರಾಜಂಗೆ ಪೊಱಲಂ ಬೇಗಸಪ್ಪ ಶೋಭೆಯುಂ ಗೆಯ್ಮಲ್ವೇಟ್ಟಟ್ಟುವುದುಂ (ಶಾಂತಿಪು. ೧೦-೬೭ ವ) ; ಆ ಹಯಂ ಬಳಿಕ ದಕ್ಷಿಣದಿಶಾಮುಖಮಾಗಿ ಮಾಹಿಷ್ಮತೀಪಟ್ಟಣದ ಬಹಿರ್ಭಾಗದುಪವನದೆಡೆಗೆ ನಡೆತಂದುದು (ಕೈಮಿಭಾ. ೯-೦೪). [ಸಂ.]

**ಬಹಿರ್ಮಂಡಲ** (ನಾ). ಒಬ್ಬ ರಾಜನ ಸ್ವಂತ ಅಧಿಕಾರಕ್ಕೆ ಹೊರತಾದ ರಾಜ್ಯ ; ಶತ್ರುರಾಜ್ಯ : ನಿನಗರಸ ಬಹಿರ್ಮಂಡಲ [ಶಾಕಾಂ. ೪] ಮನೆ ಸಮಜಿಲ್ಕಿನಿತು ಬರಿಸಮುಂ ಪೋದವು ಕೇಳಿಸಿಸಂತರ್ಮಂಡಲಸಾಧನ ಮುಂಟೆಂದಱಿಪಿದುದುಮಾ ನಿನ್ನಱಿಪುವವೇ (ಆದಿಪು. ೦೪-೦೩). [ಸಂ.]

**ಬಹಿರ್ಮುಖ** (ಗು). ೧. ಮನಸ್ಸು ಹೊರಮುಖವಾಗಿರುವ ; ಬಾಹ್ಯ ವಿಚಾರದಲ್ಲಿ ಆಸಕ್ತಿಯಿಂದ ಕೂಡಿದ. ೨. ಮುಖವನ್ನು ಬೇರೆಡೆಗೆ ತಿರುಗಿಸಿ ಕೊಂಡಿರುವ; ವಿಮುಖವಾದ. (ನಾ). ೩. ಬಾಹ್ಯ ವಿಷಯಗಳಲ್ಲಿ ಅನುರಕ್ತವಾದ ಸ್ಥಿತಿ : ಅಜ್ಞಾನದಿಂದ ಆವರಿಸಲ್ಪಟ್ಟವನಾಗಿಯೂ ವಿಷಯಾದಿಗಳಿಂದ ಬಂಧಿತನಾಗಿಯೂ ಬಹಿರ್ಮುಖವಾದ ಮನಸ್ಸುಳ್ಳವನಾಗಿಯೂ ವ್ಯವಹಾರ ಮಾಡುತ್ತಿದ್ದೇನೆ (ಪುಣ್ಯರ. ೨೬೦). ೪. ವಿಮುಖನಾದವನು : ತಾಂ ಚಿತ್ರವಿತ್ತಮದೋನ್ಮತ್ತನಾಗಿ ಧರ್ಮದೊಳ್ ಬಹಿರ್ಮುಖನುಂ ಅರ್ಥದೊಳನ್ಯಾಯೋಪಾರ್ಜಿತಾರ್ಥನುಂ . . . ಆಗಿ (ಶಂಕರಕಂ. ೨೬-೩). [ಸಂ.]

**ಬಹಿರ್ಯಾನ** (ನಾ). ೧. ಹೊರಹೋಗುವುದು. ೨. [ಜೈನ] ಐವತ್ತು ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಎಂಟನೆಯ ಕ್ರಿಯೆ ; ℙ ಮಗು ಹುಟ್ಟಿದ ಎರಡು, ಮೂರು ಅಥವಾ ನಾಲ್ಕನೆಯ ತಿಂಗಳಲ್ಲಿ ಅನುಕೂಲವಾದ ಶುಭದಿವಸದಂದು ಮಗುವನ್ನು ಪ್ರಸೂತಿಗೃಹದಿಂದ ಹೊರಕ್ಕೆ ಕರೆದುಕೊಂಡು ಹೋಗುವುದು ; ಉಪನಿಷ್ಕ್ರಮಣ : ದ್ವಾದಶಾಂಗದೊಳ್ ಪೇಟ್ದಾದಾನ ಪ್ರೀತಿ ಸುಪ್ರೀತಿ ಧೃತಿ ಮೋದಪ್ರಿಯೋದ್ಭವ ನಾಮಕರ್ಮ ಬಹಿರ್ಯಾನ . . . ತ್ಯಾಗ ನಿವೃತ್ತಿಯೆಂಬಯ್ವತ್ತು ಮೂಱು ಗರ್ಭಾದಿನಿರ್ವಾಣಪರ್ಯಂತಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೦೩-೦೫ವ) ; ಆದಾನಮುಂ . . . ಬಹಿರ್ಯಾನಮುಂ ನಿಷದ್ಯೆಯುಂ . . . ಅಗ್ರನಿವೃತ್ತಿಯುಮೆಂದಾದಾನಾದಿ ನಿರ್ವಾಣಪರ್ಯಂತಮಪ್ಪ ಯ್ವತ್ತುಮೂಱುಗರ್ಭಾನ್ವಯಕ್ರಿಯೆಯೊಳ್ (ಜಾಪುಂಕ. ೨೦೨). [ಸಂ.]

**ಬಹಿರ್ಲಾಪಿ** (ನಾ). ಒಂದು ಬಗೆಯ ಪದ್ಯಬಂಧ ; ಪ್ರಶ್ನೆ ಅಥವಾ ಶ್ಲೋಕಗಳಲ್ಲಿರುವ ಶಬ್ದಗಳಿಂದ ಬೇರೆಯಾವ ಕಡೆ ಉತ್ತರವನ್ನು ಹುಡುಕಿ ಹೇಳುವುದು ; ℙ ಇದು ಅಂತರ್ಲಾಪಿಗೆ ವಿರುದ್ಧವಾದುದು : ಒಂದು ಸಜ್ಜೆವನೆಯೊಳೊರ್ವಕ್ಕರಿಗಬೊಜಂಗಂ ಸೊರ್ಕ ಜವ್ವನೆಗೆ ಸಕ್ಕದದ ಬಹಿರ್ಲಾಪಿಯುಂ ಪೇಳ್ದಂ (ರಾಜಶೇ. ೦೧-೦೭೦ ವ). [ಸಂ. ಬಹಿರ್ಲಾಪಿನ್]

**ಬಹಿರ್ಲೇಪ** (ನಾ). ಹೊರಗಿನ ವಿಷಯದಲ್ಲಿ ಮನಸ್ಸು ಆಸಕ್ತವಾಗಿರುವುದು : ಅನುರಾಗಮುಂ ವಿರಾಗಮುಮುಳ್ಳ ವಿಷಯಂಗಳು ಯೆನಿಪ ವಿಷಯಂಗಳಂ ಪಿಡಿವಲ್ಲಿ ಬಿಡುವಲ್ಲಿ ಮನದೊಳಿನಿಸಂ ಬಹಿರ್ಲೇಪ ವಂತರ್ಲೇಪವೆಂಬುಭಯಮುಸಮುಭಾವದಿಂದನವರತ ಪರಶಿವಾದ್ವೈತನಿಷ್ಠೆಯೊಳು ನಿಂದ (ಬಸವ. ೩೪-೯೨). [ಸಂ.]

**ಬಹಿರ್ವಣ** (ನಾ). ಊರ ಹೊರಗಿನ ಉದ್ಯಾನ, ತೋಟ : ಅಣಿಯರಮುಬರ್ದೆಸೆವಂತರ್ವಣದ ಬಹಿರ್ವಣದ ಕಂಪು ಪೊಂಪುಳಿವಡೆ ಪಟ್ಟಣವಿರ್ಪುದು ಮದಿಲೊಳ್ಪಂತಿಣಿಯೆನೆ ಪರಿಮಳದ ಬಳಿಶಮಂ ಕಟ್ಟಿದವೋಲ್ (ಅನಂತಪು. ೦-೯೭). ℙ ಇದು ಪ್ರಾಸಕ್ಕಾಗಿ ಮಾಡಿಕೊಂಡ ರೂಪ. [<ಸಂ. ಬಹಿರ್ವನ]

**ಬಹಿರ್ವನ** (ನಾ). = ಬಹಿರ್ವಣ : ಗಿರಿರಾಜಂ . . . ಬಹಿರ್ವನದೊಳ್ ಗಣ ಬಾಲಚೂತಾಂಕುರಮಂ ಬಲವಂದು (ಗಿರಿಜಾ. ೩-೦೦೩ ವ). [ಸಂ.]

**ಬಹಿರ್ವರ್ತನೆ** (ನಾ). ಹೊರಗಿನ ನಡವಳಿಕೆ ; ಬಾಹ್ಯ ವ್ಯವಹಾರ : ಬಹಿರ್ವರ್ತನೆಯಲ್ಲಿ ಕಾಣುವ ಅಂಶಗಳನ್ನೇ ತೆಗೆದುಕೊಂಡು ತನ್ನ ನೂತನವಾದವನ್ನು ರೂಪಿಸಿದನು (ಶಿಕ್ಷಣ. ೪೨೯). [ಸಂ. ಬಹಿರ್ವರ್ತನ]

**ಬಹಿರ್ವಳಿಯ** (ನಾ). ಮೂಲವ್ಯಾಧಿಯಲ್ಲಿ ಒಂದು ಬಗೆ ; ಗೂದೆ ಹೊರಬರುವ ರೋಗ : ವಿಷಮಾಸನದಿಂದ . . . ಮೇಲೆ ಮೇಲೆ ಭೋಜನವ ಮಾಡುವುದರಿಂದ ಮೂಲವ್ಯಾಧಿಯಕ್ಕುಂ. ಅದರ ಪ್ರಕಾರ ಇರುದೆಸೆ, ಬಿಸಿಯ ರಕ್ತ ಅಪಾನಕ್ಕಿಳಿದು ಬಂಧವಾಗಿ ಸಂಗ್ರಹಿಸಿ ಅಂತರ್ವಳಿಯ, ಬಹಿರ್ವಳಿಯ ಎಂದು ಎರಡು ಪ್ರಕಾರಮಕ್ಕು. ಅದು ರಕ್ತ ಒಡೆಯದೆ ಗುದದೊಳು, ಗಂಟಾಗಿಯಿಕ್ಕುಂ, ಅಂತರ್ವಳಿಯ ಉಪವಾಸದಿಂದಂ, ಕಠಿನಾಸನದಿಂದಂ ಮಲ ಶುಷ್ಕವಾಗಿ ಪೊಕ್ಕು ರಕ್ತ ಒಡೆಯದೇ ಮೊಳೆಗಳು ತೋರ್ಕು. ಗೂದೆ ಹೊಱಪಟ್ಟು ಬಹಿರ್ವಳಿಯ ಮಕ್ಕು (ವೈದ್ಯಸಾ. ೦೯೦). [ ? ]

**ಬಹಿರ್ವಾಸ** (ನಾ). (ಹೆಗಲ) ಮೇಲೆ ಹಾಕಿಕೊಳ್ಳುವ ವಸ್ತ್ರ : ಕಂಗೊಳಿಸುವ ಧವಳಬಹಿರ್ವಾಸಮಂ ತೊಟ್ಟು ಕಣ್ಗಳೊಳು ಕರುಣಾಮೃತರಸವ ತುಂಬಿ ಸರ್ವರಂ ಸಲಹುವ ಯತೀಶನಾರೆ (ಸಿದ್ಧೇಪು. ೦೩-೩೩) ; ದಂಡಂ ಭಸಿತಾಧಾರಂ ಬಹಿರ್ವಾಸಮುಮುದ್ರಿರ ಲಿಂಗಾಂಗಸಂಯುಕ್ತ ಯೋಗಿಪ್ರಸರಂ ಬಂದಿರ್ದುದು (ವೃಷಭ. ೩-೪೪). [ಸಂ. ಬಹಿರ್ವಾಸಸ್]

**ಬಹಿರ್ವೇದಿ** (ನಾ). ಯಜ್ಞಶಾಲೆಯ ಹೊರ ಜಗಲಿ : ನೆರೆದುದವನೀಪಾಲಜನಸಾಗರ ಬಹಿರ್ವೇದಿಯ ಮಹಾಚಪ್ಪರದೊಳಗೆ ತಂತಮ್ಮ ಸಿಂಹಾಸನಸಗಾಢದಲಿ (ಕುಮಾ್ಯಸ. ೬-೨೯) ; ಬಹಿರ್ ಸಮಿಧಾಜ್ಯ ತಿಲ ವ್ರೀಹಿ ಚರುವಾದಿಯಾದ ಯಜ್ಞಸಂಭಾರಮನಿರಿಸಿ ಅಂತರ್ವೇದಿ ಬಹಿರ್ವೇದಿ ಆಹವನೀಯಗಾರ್ಹಪತ್ಯದಕ್ಷಿಣಾಗ್ನಿಯ ರಚಿಸಿ (ದಶಾವ. ೮-೩೪ ವ). [ಸಂ.]

**ಬಹಿರ್ಶಂಕೆ** (ನಾ). = ಬಹಿರ್ದೇಶ ೪ : ಒಬ್ಬ ಹೆದ್ದನು ಅಡಕೆಯ ಬಾಯೊಳಿಟ್ಟು ಎಲೆಯ ಕೈಯೊಳ್ಪಿಡಿದು . . . ಬಹಿರ್ಶಂಕೆಗೆ ಪೋಪಲ್ಲಿ ಎಡಹಿ ಬಿದ್ದು ಎಲೆ ಅಶುಚಿಯೊಳು ಬೀಳೆ ತಾನು ಬಿದ್ದು ಆ ಪಟ್ಟಣವ ಬೈವುತ್ತಿರಲು (ಕೈರಸೂ. I, ೨೬೨). [<ಸಂ. ಬಹಿಶ್ಶಂಕಾ]

**ಬಹಿಷ್ಕರಿಸು** (ಕ್ರಿ). ೧. ಬಹಿರಂಗಪಡಿಸು ; ಪ್ರಕಟಿಸು : ಮೆಲ್ಲ

ಮೆಲ್ಲನೆ ಮಾತುದೆಗೆದನಂತಃಕರಣದಲ್ಲಿರ್ದುದಂ ಬಹಿಷ್ಕರಿಸಬೇಕೆಂದೆನುತ ಬಲ್ಲರಿಗೆ ಬಲ್ಲಹಂ ಚೆನ್ನಬಸವೇಶ್ವರಂ ವಿನಯಸಂಪ್ರೀತಿವೆರೆದ ಸೊಲ್ಲಿನಿಂದ . . . ಇಂತೆಂದನು (ಚಂಪು. ೬-೨೬). ೨. ಪ್ರಕಟಿಸಿ ಕೊಳ್ಳು ; ಗೋಚರಿಸು : ಅಖಂಡಪರಿಪೂರ್ಣಜ್ಯೋತಿಯೋ ಪ್ಪದಾಳ ನಿಃಕಳಂಕ ಮಲ್ಲೇಶ್ವರನಾಗಿ ಬಹಿಷ್ಕರಿಸಿ ರುದ್ರಪ್ರಮಥಗಣಂಗಳೊಡಗೂಡಿ ಪ್ರಕಟವಾದ ಮಾಹಾತ್ಮ್ಯದ ಪರಮಾನಂದ ಮೇರೆಗಳೆದ ಮಹಾಸಾಗರದಂತೆ ಹರಿಯಿತು (ಪೋಲವಸ. ೬೪ ಕೃಸ್ತಾವನೆ). ೩. (ಯಾವುದಾದರೂ ಧಾರ್ಮಿಕದೃಷ್ಟಿಯಿಂದ ತಪ್ಪುಮಾಡಿದ ವ್ಯಕ್ತಿಯನ್ನು ಜಾತಿ, ದೇಶ ಮೊದಲಾದುವುಗಳಿಂದ) ಹೊರಹಾಕು : ಧಾರ್ಮಿಕವಾಗಿ ಸಮಾಜದಿಂದ ದೂರಮಾಡು : ಇವಳ ಮನೆಗೆ ಹೋಗಬಾರದು. ತಾವು ಮೀರಿ ಹೋಗುವಿರಾದರೆ ಜನರು ತಮ್ಮನ್ನೂ ಬಹಿಷ್ಕರಿಸುವರು (ಕಥಾ. ೧೦೯). ೪. ಹೊರದೂಡು ; ತಿರಸ್ಕರಿಸು : ಪಶುಪಕ್ಷಿಗಳನ್ನು ಸಂರಕ್ಷಿಸುವ ನೀವು ಮಾನವಪ್ರಾಣಿಗಳನ್ನು ಬಹಿಷ್ಕರಿಸುತ್ತೀರಿ (ರಮೇಗಾ. ೩೬). [<ಬಹಿಷ್ಕಾರ + — ಇಸು₃]

**ಬಹಿಷ್ಕಾರ** (ನಾ). ೧. ಹೊರದೂಡುವಿಕೆ ; ಹೊರಹಾಕುವಿಕೆ . ೨. (ಯಾವುದಾದರೂ ಧಾರ್ಮಿಕದೃಷ್ಟಿಯಿಂದ ತಪ್ಪು ಮಾಡಿದ ವ್ಯಕ್ತಿಯನ್ನು ಜಾತಿ, ದೇಶ ಮುಂತಾದುವುಗಳಿಂದ) ಬಹಿಷ್ಕರಿಸುವಿಕೆ: ಊರಿನವರು . . . ದಾಸರಿಗೆ ಬಹಿಷ್ಕಾರಪತ್ರವನ್ನು ತರಿಸಿ ಶುಭಸ್ವೀಕಾರದ ದಿವಸ ಅದನ್ನು ಓದಿಸಿದರು (ಕಥಾ. ೧೦೩) ; ವಿಠಲಪಂತ್ ಸಂಸಾರಿಯಾದದ್ದು ಎಂದರೆ ಸಮಾಜದ ಬಹಿಷ್ಕಾರಕ್ಕೆ ತುತ್ತಾದದ್ದು ಎಂದು (ಶಾರದ. ೨೯೨).

**ಬಹಿಷ್ಕಾರ ಕೊಡು** = ಸಮಾಜದಿಂದ ಹೊರಗೆ ಹಾಕು : ಮುಸಲ್ಮಾನನಾದನೆಂದು ಆತ್ಮೀಯರೆಲ್ಲರೂ ಅವನಿಗೆ ಬಹಿಷ್ಕಾರ ಕೊಟ್ಟು ಶುದ್ಧವಾಗಿ ತ್ಯಜಿಸಿಬಿಟ್ಟರು (ಕಪಾಕಂ. ೩೪). **ಬಹಿಷ್ಕಾರ ಹಾಕು** = ಬಹಿಷ್ಕಾರ ಕೊಡು : ನನ್ನ ದಾಸನಿಗೆ ಬಹಿಷ್ಕಾರ ಹಾಕಿದರೆ ನಿನ್ನ ಬಳಿ ನಾನಿರುವೆನೆ ? (ಕಥಾ. ೧೦೩) ; ಶೃಂಗೇರಿಯ ಗುರುಗಳಿಗೆ ಈ ಸುದ್ದಿ ತಲುಪಿ ಇಡಿಯ ಅಗ್ರಹಾರಕ್ಕೇ ಬಹಿಷ್ಕಾರ ಹಾಕಿದರೆಂದೂ ಪ್ರತೀತಿ (ಸಂಸ್ಕಾರ. ೦೩). [ಸಂ.]

**ಬಹಿಷ್ಕಾರಿ** (ನಾ). ಹೊರಹಾಕಲ್ಪಟ್ಟವನು ; ಬಹಿಷ್ಕೃತನಾದವನು : ಚೋರನನು . . . ಸಮಯವಿಕಾರಭೇದಿಯನಿಂತಜುವರನು ಕಂಡು ಮನ್ನಿಸದೆ ದೂರದಲಿ ವರ್ಜಿಸುವುದು ಬಹಿಷ್ಕಾರಿಗಳು ಸರ್ವಕ್ಕವರುಗಳು (ಶಿವಾಲು. ೯-೯೭). ₱ ಸಂಸ್ಕೃತದಲ್ಲಿ ಇದಕ್ಕೆ ಕರ್ತೃ ಅರ್ಥ ಮಾತ್ರ ಇದೆ. [ಸಂ. ಬಹಿಷ್ಕಾರಿನ್]

**ಬಹಿಷ್ಕೃತ** (ಗು). ೧. ಬಹಿಷ್ಕಾರಕ್ಕೊಳಗಾದ; ಹೊರದೂಡಲ್ಪಟ್ಟ: ನುತವಶೀಕೃತ ಭರ್ಗ ನಿತ್ಯಾಶ್ರಿತ ಮಹೇಶ್ವರ ಭಕ್ತವರ್ಗ ಸುಹಿತ ಘನಪ್ರತಿವೀರಮಾರ್ಗ ಬಹಿಷ್ಕೃತ ಸ್ವರ್ಗ (ಬಸವು. ೩೬-೬೮). (ನಾ). ೨. ಸಮಾಜದಿಂದ ಹೊರಹಾಕಲ್ಪಟ್ಟವನು ; ಬಹಿಷ್ಕಾರಕ್ಕೆ ಒಳಗಾದವನು. [ಸಂ.]

**ಬಹಿಷ್ಕೃತೆ** (ನಾ). ಹೊರಕ್ಕೆ ದೂಡಲ್ಪಟ್ಟವಳು; ಬಹಿಷ್ಕಾರಕ್ಕೊಳಗಾದವಳು : ತನ್ನದೆಂದು ಕರೆಯಬೇಕಾಗಿದ್ದ ಮನೆಯಲ್ಲೇ ಬಹಿಷ್ಕೃತೆಯಾಗಿ (ವಾತ್ಸಲ್ಯ. ೨೮೯). [ಸಂ. ಬಹಿಷ್ಕೃತಾ]

**ಬಹಿಷ್ಠೆ** (ನಾ). ಹೊರಗಾದವಳು ; ಮುಟ್ಟಾದವಳು ; ರಜಸ್ವಲೆ : ನಾನು ಬಹಿಷ್ಠೆಯಾಗಿದ್ದೇನೆ. ಒಂದೇ ಬಟ್ಟೆಯಲ್ಲಿದ್ದೇನೆ (ವಕಭಾ . ೬೬) ; ಬಹಿಷ್ಠೆಯಾಗಿದ್ದ ದ್ರೌಪದಿಯನ್ನು . . . ಸೆಳೆದುಕೊಂಡು ಬಂದು ಸಭಿಕರ ಮುಂದೆ ನಿಲ್ಲಿಸಿದನು (ಭೀಕೃಕ. ೦೦೬). [ಸಂ. ಬಹಿಷ್ಠಾ]

**ಬಹಿಷ್ಪ್ರಜ್ಞ** (ನಾ). ಹೊರಪ್ರಪಂಚದ ಅರಿವುಳ್ಳವನು; ಬಾಹ್ಯಜ್ಞಾನವುಳ್ಳವನು : ಜಾಗ್ರತಾವಸ್ಥೆಯೋ ಮೊದಲನೆಯದು. ಇದಕ್ಕೆ ಸಂಬಂಧಪಟ್ಟಂತೆ ಐದುವಿಷಯಗಳನ್ನು ಹೇಳಿದೆ: —೧. ಬಹಿಷ್ಪ್ರಜ್ಞ—ಬಾಹ್ಯಜ್ಞಾನವುಳ್ಳವನು (ಜೀವಾತ್ಮ. ೦೨೬). [ಸಂ.]

**ಬಹಿಸ್ತಟ** (ನಾ). ಹೊರಗಡೆಯ ದಡ : ಹೊರದಂಡೆ : ಪೂಗವನಂಗಳಿಂದೆಲೆಯ ಬಳ್ಳಿಗಳಿಂ ತೆಂಗಿಲ್ಲನಲ್ಲೆಡಂಗಾಗೆ ಬಹಿಸ್ತಟಂ ಪುದಿದ ತಾವರೆವಳ್ಳಿಯ ತಳ್ಪಿನಿಂ ಪಸುರ್ಪಾಗೆ (ಮಲ್ಲಿಪು. ೨-೯೩). [ಸಂ.]

**ಬಹಿಸ್ಥ** (ನಾ). [ಜ್ಯೋತಿ] (ರಾಹುಚಕ್ರದ) ಹೊರಭಾಗ : ಉರಗನಿಂದೆ ತಾರೆ ಮುಖದೊಳ್ ನಿಲೆ ಮೂಜುಸಿರಕ್ಕೆ . . . ಬಹಿಸ್ಥವಾಜು ತಳ್ತಿರೆ ತೆನೆ ನಂಜು ಕಾಡಿಗೆ ವಿಶೇಷಫಲಂ ಕಡುಸಣ್ಣಮಕ್ಕಂ (ಅಟ್ಟಮ. ೯-೨). [ಸಂ.]

**ಬಹು** (ಗು). ೧. ಹೆಚ್ಚು ; ಅಧಿಕ ; ಬಹಳ. ೨. ದೊಡ್ಡದಾದ ; ಹಿರಿಯ. (ನಾ). ೩. ಅಧಿಕವಾದುದು : "ಪ್ರಭೂತಂ . . . ಬಹುಳಂ, ಬಹು . . . ಭೂರಿ— ೧೨ ಅಧಿಕವಾದದ್ದರ ಹೆಸರುಗಳು" (ಸಿದ್ಧಾಂತ. ೩೪೦).

**ಬಹುಮಟ್ಟಿಗೆ**=ಬಹಳವಾಗಿ ; ಬಹುತೇಕ : ಹೀಗೆ ಬಹುಮಟ್ಟಿಗೆ ಎಲ್ಲ ಸಾರಜನಕವೂ ಸೂರ್ಯನ ಸುತ್ತಲಿನ ಮೋಡದಲ್ಲೇ ಉಳಿಯಿತು (ಭೂಹುಟ್ಟು. ೬೦) ; ಅಪರ ಅನುಭವ ಪಾಂಡಿತ್ಯಗಳನ್ನು ಒಳಗೊಂಡ ಈ ಗ್ರಂಥ ಬಹುಮಟ್ಟಿಗೆ ನಿರ್ದುಷ್ಟವಾಗಿದೆ (ಗ್ರಹಂ. IV ಮುನ್ನು). **ಬಹುಮಟ್ಟು**=ಬಹುಮಟ್ಟಿಗೆ : ಇಬ್ಬರಲ್ಲೂ ಬಹುಮಟ್ಟಿನ ಸಾಮ್ಯವೂ ಇದೆ (ಜಗದಾ. ೦೦೬). [ಸಂ.]

**ಬಹುಕಳಿ** (ನಾ). ಮಲ್ಲಯುದ್ಧದ ಒಂದು ಪಟ್ಟು,—ವರಸೆ: ರಂಗಮಂ ಪೊಕ್ಕು ಭುಜಾಸ್ಫಾಳನಂ ಗೆಯ್ದಿಬ್ಬಿದೊಡೆ . . . ಪೊಕ್ಕಮರ್ದು ಸಮಲತಾ ಬಹುಕಳಿ ಕತ್ತರಿಗಳಿಂ ಗಾಯಮುಜಿದೊತ್ತಿ ನೋಡಿ (ಬಂಹಂ. ೬-೫೦ ವ). [ ? ]

**ಬಹುಕುಟುಂಬಿ** (ನಾ). ದೊಡ್ಡಸಂಸಾರವುಳ್ಳವನು : ಮನೆ ತುಂಬ ಮಕ್ಕಳು ಮೊಮ್ಮಕ್ಕಳನ್ನು ಪಡೆದ ಬಹುಕುಟುಂಬಿಯವನು (ಸಂಚುಂಡ. ೯೨). [ಸಂ. ಬಹುಕುಟುಂಬಿನ್]

**ಬಹುಕುಳ** (ಗು). ಅನೇಕ : ಅಧಿಕವಾದ : ಅಳವಜಿಯದ ಭಾಷೆ ಬಹುಕುಳವಾದ ನುಡಿ ಇಂತೆರಡಜಿ ನುಡಿ ಹುಸಿಯಯ್ತು (ಅಪಶಂ. ೩೦-೦೩೦). [ಬಹು + ಕುಳ್ಕ]

**ಬಹುಗ್ರಾಹಿ** (ನಾ). [ವೈದ್ಯಶಾ] ಅನೇಕ ರೋಗಗಳನ್ನು ವಾಸಿಮಾಡುವಂತಹುದು ; ಬಹುರೋಗನಾಶಕ : ಮದನಕಾಮೇಶ್ವರೀ ಗುಳಿಗೆ . . . ಹಸುವಿನ ತುಪ್ಪದಲ್ಲಿ ವಾತಹರ. ಕಬ್ಬಿನ ಹಾಲಲ್ಲಿ ತ್ರಿದೋಷಹರ. ಲವಂಗದ ಪುಡಿಯಲ್ಲಿ ಬಹುಗ್ರಾಹಿ (ಏಪ್ಪಂ. ೯೦). [ಸಂ. ಬಹುಗ್ರಾಹಿನ್]

**ಬಹುಚಾರಿ** (ನಾ). ಅತಿಶಯವಾಗಿ ಚಲಿಸುವಿಕೆ, — ತಿರುಗುವಿಕೆ : ಕ್ರೂರನೆನಿಸಿ ಶಾಂತನೆನಿಸಿ ಪುತ್ತೊಮ್ಮೊಮ್ಮೆ ವೀರನೆನಿಸಿ ಹೇಡಿಯೆನಿಸಿ ನಾರಿಯೆನಿಸಿ ನಲ್ಲನೆನಿಸಿ ಹಂಸನ ಬಹುಚಾರಿಯಾಡುವುವು ಕರ್ಮಗಳು (ಭರತ. ೬೬-೦೦೦). [ಸಂ. ಬಹುಚಾರಿನ್]

**ಬಹುಚಾಳಿ** (ನಾ). [ನಾಟ್ಯ] ನೃತ್ಯದ ಒಂದು ಪ್ರಕಾರ : ಪೊಜೆವಂಗ ಪ್ರತ್ಯಂಗೋಪಾಂಗ ಬಹುಚಾಳಿ ಪರದೇಶಿಕೋಲಚಾರಿಗಳ ಪಿರಿದಂಗಹಾರ ಮಂಡಲ ರಕ್ಷೇತ್ರ ಬಿರುದಿನ ನಾಟ್ಯಮಾಡಿದರು (ಕಂಸವಿ. ೮-೬೩). [ಬಹು + <ಚಾಲಿ₁]

**ಬಹುತೆ** (ನಾ). ೧. ಒಂದಕ್ಕಿಂತ ಹೆಚ್ಚು ಸಂಖ್ಯೆಯಿಂದ ಕೂಡಿದುದು : ಮುನ್ನಿನ ಎಲ್ಲ ಕಬ್ಬ ಎಂದು ಬಹುತೆಯನ್ನು ಸೂಚಿಸುವಾಗ ಪಂಪನು 'ಕವಿರಾಜಮಾರ್ಗ'ಕ್ಕಿಂತ ಹಿಂದಿನ ಕಾವ್ಯಗ್ರಂಥಗಳನ್ನು

ಮನದಲ್ಲಿ ಇಟ್ಟಿರಬಹುದು (ಕಹಾಶ. ೨೬). ೨. [ವ್ಯಾಕ] ಬಹುವಚನ : ಏಕತೆಯೆ ತನಗೆ ಬಹುತೆಯನಾಕರಿಸದು ಜಾತಿ ತಾಂ (ಕಪುದ; ೦೩೯). [ಸಂ. ಬಹುತಾ]

**ಬಹುತೇಕ** (ಅ). ೧. ಅನೇಕ; ಹೆಚ್ಚಾದ : ಭಾರತದ ಬಹುತೇಕ ಜನರು ಗ್ರಾಮಾಂತರಪ್ರದೇಶದಲ್ಲಿ ವಾಸಿಸುತ್ತಾರೆ (ಶಿಕ್ಷರ. ೬೦೭); ಬಹುತೇಕ ನದಿಗಳು ಅನಂತಕಾಲದಿಂದ ಹರಿಯುತ್ತಿವೆ (ಪಪಂ. ೨). ೨. ಪ್ರಾಯಶಃ ; ಬಹುಶಃ : ಮಧ್ಯಾಹ್ನ ಬಹುತೇಕ ನಿಮ್ಮನ್ನು ಹೆದರಿಸಿ ಬಂದದ್ದೇ . . . ಇವರ ಮುಂದೆ 'ಶಿಪ್ಪಾರಸು' ಹೊಡೆಯುತ್ತಿದ್ದ (ಕುಚಿಟಾ. ೬೪); ಕನ್ನಡದಲ್ಲಿ ಇಂದು ಬಹುತೇಕ ಎರಡನೆಯ ಹಾದಿಯ ಮೇಲೆ ಪ್ರಯತ್ನಗಳು ನಡೆದಿವೆ (ಜನಪಾ. ೨೧). [←ಮರಾ. ಬಹುತೇಕ್]

**ಬಹುತ್ವ** (ನಾ). [ವ್ಯಾಕ] ಬಹುವಚನ : ಜಾತಿವಿಭಾಗವುಂ ಬಗೆದು ವೇಟಿ ಬಹುತ್ವಮನೇಕವಾಕ್ಯಸಂಜಾತಗುಣಂ ತದೇಕವಚನಂಗಳೊಳಂ ದೊರೆವೆತ್ತು ಕೂಡುಗುಂ (ಕವಿರಾ. ೦-೦೦೯); ಅವಱೊಳ್ ದ್ವಿತ್ವಬಹುತ್ವಂ ಬವರಿಸೆ ತಕ್ಕಿರ್ಕುಮಲ್ಲಿ ಗಳ್ ಶಬ್ದಂ (ಶಾಭ್ಯಾ.ಪ. ೯೭); ಏಕ ದ್ವಿತ್ವ ಬಹುತ್ವಮನೇಕ ದ್ವಿಬಹುತ್ವವಸ್ತುಗಳೊಳಾಚರಿಪರ್ (ಕಪುದ. ೯೪). [ಸಂ.]

**ಬಹುದು** 'ವರ್' ಪರಾ.

**ಬಹುದುಃಖ** (ನಾ). ೧. ಅತಿಶಯವಾದ ಅಳಲು,– ಸಂಕಟ: ಅವರು ಬಹುದುಃಖದಿಂದ ಆ ಮಾತನ್ನು ಹೇಳಿದರು(ಲೋ). ೨. ಒಂದು ನರಕದ ಹೆಸರು: ಬಹುದುಃಖ . . . ಮಹಾದುಃಖವೆಂಬೈದು ಮಂತ್ರಿನರಕಂಗಳಿಂ (ವಿವೇಳ. ೦೫೦). [ಸಂ.]

**ಬಹುದ್ವಿಷ** (ನಾ). ಅನೇಕ ಶತ್ರುಗಳನ್ನುಳ್ಳವನು ; ಬಹುಜನದ್ವೇಷಿ: ಸುರಗುರುದ್ವಿಜವೈರಿ ಬಹುದ್ವಿಷಂ ಭಯೋಪೇತನಧಾರ್ಮಿಕಂ ವಿಕಳ ತಂತ್ರನನಿಶ್ಚಿತಮಂತ್ರನಾಗಳುಂ ಭೀತಪರಿಗ್ರಹಂ (ಕಂಕಕಂ. ೩೨೦-೯). [ಸಂ.]

**ಬಹುಧಾನ್ಯ** (ನಾ). ೧. ಸಮೃದ್ಧವಾದ ಧಾನ್ಯ,–ಕಾಳು: ಹಂಬಿನೊಳಗಳ ಬಹುಧಾನ್ಯದ ತೆನೆ (ಮಪುಗುಂ. ೪. ೨೬೩-೯೫). ೨. ಅರುವತ್ತು ಸಂವತ್ಸರಗಳಲ್ಲಿ ಹನ್ನೆರಡನೆಯದು : ಅಭಿನವ ನಿಘಂಟನಭಿನವಮುಂಗ ನಿರ್ಮಿಸಿದನಂಬರಾಂಬಕವಹ್ನಿಯೇಕೈಕಶಕದ ಬಹುಧಾನ್ಯದಲ್ಲಿ (ಪಂಗಣಾ. ೦೫೬-೬೬); ಆ ವರ್ಷವೇ ಪ್ರಭವ . . . ಬಹುಧಾನ್ಯ . . . ಅಕ್ಷಯ ವೆಂದಱುವತ್ತು ತೆಱನಾಗಿಹುದು (ವಿವೇಳ. ೩೨೦). [ಸಂ.]

**ಬಹುನಾಯಕತ್ವ** (ನಾ). ಹಲವರಿಂದ ನಡೆಸುವ ಆಧಿಪತ್ಯ : ಇದೆಲ್ಲ ಬಹುನಾಯಕತ್ವದ ಫಲ. ಆದ್ದರಿಂದ ನಿಮ್ಮಲ್ಲಿ ಒಬ್ಬನನ್ನು ನಾಯಕನನ್ನಾಗಿ ಮಾಡಿಕೊಳ್ಳಿರಿ (ಕಕಥ. ೬-೩೬). [ಸಂ.]

**ಬಹುನೂತ್ನ** (ಗು). ಹೆಚ್ಚು ನವೀನವಾದ ; ಅತ್ಯಂತ ಹೊಸದಾದ,– ನೂತನವಾದ : ಬಹುನೂತ್ನಕೇತನಟ್ಟಾಯನಿವಾರಿತೋಷ್ಣಮನನಿಂದಿತ ಸುಂದರರಾಜಮಾರ್ಗಮುಂ . . . ಪುಗೆ ನೃಪೇಶ್ವರಕನ್ನಕೆಯುಂ ಕುಮಾರನುಂ (ಶಾಂತಿಪು. ೬-೯). [ಬಹು + ನೂತ್ನ]

**ಬಹುಪತಿತ್ವ** (ನಾ). ಒಬ್ಬನಿಗಿಂತ ಹೆಚ್ಚು ಗಂಡಂದಿರನ್ನು ಹೊಂದಿರುವಿಕೆ : ವಿವಾಹವಿಚ್ಛೇದ, ವಿಧವಾವಿವಾಹ, ವಿಧುರವಿವಾಹ ಬಹುಪತ್ನೀತ್ವ ಮತ್ತು ಬಹುಪತಿತ್ವಗಳಲ್ಲಿ ಕೆಲವಕ್ಕಾದರೂ ಅವಕಾಶ ಕೊಡಬೇಕು (ಪಿಠಾ. ೨೩೯). [ಸಂ.]

**ಬಹುಪತ್ನೀತ್ವ** (ನಾ). ಒಬ್ಬಳಿಗಿಂತ ಹೆಚ್ಚು ಪತ್ನಿಯರನ್ನು ಹೊಂದಿರುವಿಕೆ : ಬಹುಪತ್ನೀತ್ವವು ಅಂದಿನ ರಾಜತ್ವಕ್ಕೆ ಸಾಮಾನ್ಯ ರೂಢಿ ಮಾತ್ರವಲ್ಲ, ಅದೊಂದು ಹಿರಿಮೆ (ಕಾರದ. ೯೫೦). [ಸಂ.]

**ಬಹುಪಾದಿ** (ನಾ). ಅನೇಕ ಕಾಲುಗಳನ್ನುಳ್ಳ ಪ್ರಾಣಿ : ಬಹುಪಾದಿಗಳು (MynaPada) ಈ ವರ್ಗದ ಪ್ರಾಣಿಗಳಲ್ಲಿ ೯–೧೫೦ ಜೊತೆ ಉಪಾಂಗಗಳಿರುತ್ತವೆ (ಪ್ರಾಕಣ. ೨೨೦); ಪಾಲಿಪೊಡ (ಬಹುಪಾದಿ) . . . ಹೊಟ್ಟೆಯ ಹುಸಿಕಾಲುಗಳಿವೆ (ಕೀಟಕ. ೦೨೮). [ಸಂ. ಬಹುಪಾದಿನ್]

**ಬಹುಪುಷ್ಪ** (ನಾ). ೧. ಪಾರಿಜಾತದ ಗಿಡ. ೨. ಹವಳದ ಗಿಡ. [ಸಂ.]

**ಬಹುಪುಷ್ಪಿ** (ನಾ). ಒಂದು ಬಗೆಯ ಸಸ್ಯ ; ಅವರಿಕೆಯ ಗಿಡ : "ಬಹು [ಶಾಶಂ. ರಜ]ಪುಷ್ಪಿ ಅವರವೆನಲ್ಕಾವರಯೆನಿಕ್ಕು" (ಪಂಗಣಾ. ೪೦-೫೦). [ಸಂ. ಬಹುಪುಷ್ಪೀ]

**ಬಹುಪ್ರಜ** (ನಾ). ೧. ಅನೇಕ ಮಕ್ಕಳಿರುವವನು: ಇರೆ ಲಗ್ನಕ್ಕೆ ಚತುರ್ಥದೊಳ್ ಹಿಮಕರಂ ಸತ್ಪುತ್ರವಿತ್ತಾಢ್ಯನೊಂದಿರೆ ತತ್ಪಂಚಮದೊಳ್ ಬಹುಪ್ರಜನರಾತಿಸ್ಥಾನದೊಳ್ ಕೂಡೆ ನಿಷ್ಠುರಂ (ಜಾತಕ. ೦೯-೭). ೨. ಹಂದಿ. ೩. ಮುಂಜಹುಲ್ಲು. [ಸಂ.]

**ಬಹುಭಾರ್ಯ** (ನಾ). ಅನೇಕ ಹೆಂಡತಿಯರನ್ನು ಪಡೆದವನು : ಇನಜ . . . ವೃಷರಾಶಿಯೊಳ್ ನೆಲಸೆ ವರ್ಜ್ಯಂ ಸ್ವಲ್ಪವಿತ್ತಂ ವಧೂಜನಮಿತ್ರಂ ಬಹುಭಾರ್ಯಂ (ಜಾತಕ. ೦೭-೩೨). [ಸಂ.]

**ಬಹುಭಾರ್ಯಾಯೋಗ** (ನಾ). [ಜ್ಯೋತಿ] ಹಲವು ನಕ್ಷತ್ರಗಳ ನಿರ್ದಿಷ್ಟ ಸ್ಥಾನಬಲದಿಂದ ಜಾತಕನಿಗೆ ಉಂಟಾಗುವ ಬಹುಪತ್ನೀತ್ವ : ಜೋಯಿಸರು ಮಗುವಿನ ಜಾತಕವನ್ನು ನೋಡಿ ಈ ಮಗುವಿಗೆ ಬಹುಭಾರ್ಯಾಯೋಗವಿದೆಯೆಂದು ಹೇಳಿದರು (ಲೋ). [ಸಂ.]

**ಬಹುಭಾಷಣ** (ನಾ). ಅತಿಯಾಗಿ ಮಾತನಾಡುವಿಕೆ ; ವಾಚಾಳತನ : ಶೇಷವಾಸುಗಿ ಬಹಳಕುತುಬಹುಭಾಷಣಂಗಳನತಿಗಳೆದೆಸೆದಶೇಷಮಹಿಮಾಮೂರ್ತಿ ಕಂಡೆನು ನಿಮ್ಮ ಪದಯುಗವ (ಬಸಪು. ೫೦-೭೦). [ಸಂ.]

**ಬಹುಭಾಷಿ** (ನಾ). ಹೆಚ್ಚು ಮಾತನಾಡುವವನು ; ವಾಚಾಳಿ : ನೀನ ಪ್ಪೊಡೆ ಬಹುಭಾಷಿ (ಕಂಕಕಂ. ೦೫೦-೦೯); ಸಭೆಯೊಳು ಮೇಲೆದ್ದು ಕುಣಿವನು ಬಹುಭಾಷಿ ಹಿಂದುಳಿವನು ಮಿತಭಾಷಿ (ಇಂಕಾಪ. ೨೦೩-೩೩). [ಸಂ. ಬಹುಭಾಷಿನ್]

**ಬಹುಭೂಮಿಕ** (ನಾ). ೧. ಅನೇಕ ಅಂತಸ್ತುಗಳನ್ನು ಪಡೆದಿರುವುದು; ಹಲವು ಮಹಡಿಗಳನ್ನುಳ್ಳದು. ೨. ಹೆಚ್ಚು ಭೂಮಿಯನ್ನು ಹೊಂದಿರುವವನು; ದೊಡ್ಡ ಜಮೀನುದಾರ. ೧, ೨ : ಬಗೆಯೆ ಬಹುಭೂಮಿಕಂ ಮಾನಗುಣೋನ್ನತಿಸಂಯುತಂ ಮಹಾಭೋಗ ತನ್ನಗೇಜನಾವಳಿಯಿಯುಂ ಹರ್ಮ್ಯಗೃಹಾಳಿಯುಮೊಂದೊಡೊಳ್ಪನೇವಣ್ಣಿಪುದೋ (ಶಂಪ್ರಪು. ೩-೦೯). [ಸಂ.]

**ಬಹುಮಂಜರಿ** (ನಾ). ಒಂದು ಬಗೆಯ ಸಸ್ಯ; ಕೃಷ್ಣತುಳಸಿ : "ತುಳಸಿಯೆಂದು ಸುರಸಿ ಬಹುಮಂಜರಿಯೆನಿಕ್ಕು ಕಪ್ಪಾಗಿರಲು "(ಪಂಗಣಾ. ೩೯-೨೭). [ಸಂ. ಬಹುಮಂಜರೀ]

**ಬಹುಮತ** (ಗು). ೧. ಗೌರವಕ್ಕೆ ಪಾತ್ರವಾದ. ೨. ಅನೇಕ ಬಗೆಯ ಅಭಿಪ್ರಾಯಗಳನ್ನು ಹೊಂದಿರುವ. (ನಾ). ೩. ಅಧಿಕಸಂಖ್ಯೆಯ ವ್ಯಕ್ತಿಗಳ ಅಭಿಪ್ರಾಯ : ಅವರ ಪಕ್ಷದ ಬಹುಮತವು ಕಡಿಮೆಯಾಗುತ್ತ ಬಂದಿತ್ತು (ಹಳ್ಳಿಹಾ. ೯೨); ಒಟ್ಟು ಸದಸ್ಯರಲ್ಲಿ ಮೂರನೆಯ ಎರಡು ಭಾಗಕ್ಕೆ ಕಡಿಮೆಯಿಲ್ಲದಷ್ಟು ಜನಗಳ ಬಹುಮತದಿಂದ ಆ ಸಂಕಲ್ಪವು ತೀರ್ಮಾನವಾಗಿಲ್ಲದ ಪಕ್ಷದಲ್ಲಿ (ಶಾರಾಪ. ೩೦). [ಸಂ.]

**ಬಹುಮತಿ** (ನಾ). ಅತಿಶಯವಾದ ಗೌರವ: ಮನೆಯಾತ ಅವನಿಗೆ ನಾಲ್ಕು ಸಾವಿರ ಹೊನ್ನು ಕೊಟ್ಟು ಹುಲುವಾರುರಥಗಳನ್ನೂ ಬಹುಮತಿಯಾಗಿ ಕೊಟ್ಟನು (ಕಥಾಪು. ೬೦೬); ಪ್ರಪಂಚದಲ್ಲೆಲ್ಲ ಸಾಹಿತ್ಯದಲ್ಲಿ ಪ್ರಮುಖರಾದ ಒಬ್ಬೊಬ್ಬರಿಗೆ ದೊರೆಯುವ 'Nobel Prize' ಎಂಬ ಬಹುಮತಿಯ ಶುಲ್ಕ ದೊರೆಯಿತು (ಕರ್ಣಾಟಾ. ೯೨). [ಸಂ.]

**ಬಹುಮತಿಸು** (ಕ್ರಿ). ಗೌರವಿಸು: ಮನ್ನಿಸು : ನೀಂ ಮುಟ್ಟಿದ ನಂದನೆಯಂ ಬಹುಮತಿಸುತೆ ನಿನ್ನನೆ ಪಾತ್ರೀಕರಿಸಿ ಬಿಟ್ಟ ಮುನಿಯ ವಿಮಾನ್ಯಂ (ಶಾಕುಂತ. ೬೮-೦೨೦) [ಬಹುಮತ + – ಇಸು]

**ಬಹುಮತೆ** (ನಾ). ಗೌರವಾರ್ಹಳಾದ ಹೆಂಗಸು ; ಮಾನ್ಯೆ : ಎಲೆ ಪೆಣ್ಗಳಿ, ಪತಿಗೆ ಬಹುಮತೆಯಾಗಿ ಬಾಳು (ಶಾಕುಂತ. ೧೦೨-೨೭). [ ಸಂ. ಬಹುಮತಾ ]

**ಬಹುಮಾನ** (ನಾ). ೧. ಅತಿಶಯವಾದ ಗೌರವ ; ವಿಶೇಷವಾದ ಮರ್ಯಾದೆ : ಕಣ್ಣು ಕಟ್ಟು ಮೇಲೆ ಕಡುರೂಪ ಚೆಲ್ವಿಕೆಯ ಬಣ್ಣ ಗುಂದಿದ ಮೇಲೆ ಬಹುಮಾನವೆ (ಕನಕ. ೩೬-೧) ; ಮಗಳೇ, ಪತಿಯ ಬಹುಮಾನಸೂಚಕವಾದ ಮಹಾದೇವೀಶಬ್ದವನ್ನು ಹೊಂದು! (ಶಾಕುಂತ. ೫೦-೧೧). ೨. ಪಾರಿತೋಷಕ ; ಇನಾಮು ; ಉಡುಗೊರೆ : ದೊಡ್ಡವರು ಬಡವರಿಗೆ ಉಚಿತವಾಗಿ ಕೊಡುವುದನ್ನು ಬಹುಮಾನ ಎನ್ನುತ್ತಾರೆ, ಬಡವರು ದೊಡ್ಡವರಿಗೆ ಉಚಿತವಾಗಿ ಕೊಡುವುದನ್ನು ಮರ್ಯಾದೆ ಎನ್ನುತ್ತಾರೆ (ಕಂಜಕಂ. ೧೧); ತಮ್ಮ ರತ್ನಹಾರವನ್ನು ಬಹುಮಾನವಾಗಿ ಕೊಡುವೆವೆಂದು ಮಹಾರಾಜರು ಘೋಷಿಸಿದ್ದಾರೆ (ಬಾಣಳ. ೩೭). [ ಸಂ. ]

**ಬಹುಮುಖ** (ನಾ). ೧. ಏಕಮುಖವಾಗಿಲ್ಲದಿರುವುದು; ಚಂಚಲವಾಗಿರುವುದು : ಹೀನಮುಖ ಬಹುಮುಖ ಪರಾಙ್ಮುಖ ದೀನಮುಖ ವಾಚಾಲಮುಖವಜ್ಞಾನಮುಖವಂತರ್ಮುಖ ಬಹಿರ್ಮುಖದ ಕಾರ್ಯದಲಿ ಆ ನರೇಂದ್ರನ ವರ್ತನಕೆ ದುಸ್ಥಾನವಾಗದೆ ಬಿಡದು (ಕುಮಾ.ಅ. ೬-೩೭). ೨. ಅನೇಕ ಬಗೆ ; ರೀತಿ : ಅವನ ಬಹುಮುಖವಾದ ಜ್ಞಾನದಾಹವನ್ನೂ ತೀಕ್ಷ್ಣವಾದ ಗ್ರಹಣಶಕ್ತಿಯನ್ನೂ ನೋಡಿ ಅವಳು ದಿಗ್ಭ್ರಮೆಗೊಂಡಿದ್ದಳು (ಪುನರು. ೫೨೭). [ ಸಂ. ]

**ಬಹುಮುಖಿ** (ನಾ). ಏಕಚಿತ್ತವಿಲ್ಲದವನು; ಚಂಚಲಮನಸ್ಸಿನವನು : ಗುಹೇಶ್ವರನೆಂಬ ಲಿಂಗಸಾರಾಯ ಬಹುಮುಖಿಗಳಿಗೆ ತೋರದು (ಅವಚಂ. ೫೪-೨೪೦) ; ಮಾನ್ಯರ ಮನದ ಮನ್ನಣೆಯನರಿದಿಪ್ಪುದೇ ವ್ರತ . . . ಇಂತಲ್ಲದೆ ಜಗವ ಸಿಕ್ಕಿಸುವ ಬಹುಮುಖಿಗಳಿಗೆಲ್ಲಿಯದೋ ಮುಕ್ತಿ (ಮೋಳಿಗೆ. ೩೩-೦೩೬). [ ಸಂ. ಬಹುಮುಖೀ ]

**ಬಹುಮೂತ್ರ** (ನಾ). ಅತಿಯಾಗಿ ಮೂತ್ರವಿಸರ್ಜನೆಯಾಗುವ ಒಂದು ಬಗೆಯ ರೋಗ : ಅವರಿಕೆ :—ಈ ಚಿಗುರು ಅರೆದು . . . ಎಮ್ಮೆ ಮೊಸರಲ್ಲಿ ತೆಗೆದುಕೊಳ್ಳೆ, ಬಹುಮೂತ್ರ ಗುಣ(ವಿವ್ಯ. ೨); ಬಹಳವಾದ ಆಯಾಸಪಡುವುದರಿಂದಲೂ . . . ಮಲಮೂತ್ರಾದಿಗಳ ವೇಗವ ತಡೆಯುವುದರಿಂದಲೂ ಈ ೮ ಪ್ರಕಾರದಿಂದ ಬಹುಮೂತ್ರರೋಗವುಂಟಾಗುತ್ತಿಹುದು (ಸಕವೈ. ೩೭೯). [ ಸಂ. ]

**ಬಹುರೂಪ** (ಗು). ೧. ಅನೇಕ ರೂಪಗಳುಳ್ಳ. (ನಾ). ೨. ಅನೇಕರೂಪ ; ಹಲವು ಆಕಾರ : ಇಂದ್ರಜಾಲಿಗನಂತೆ ವಿಯದವನೀದಿಗ್ಭಾ[ಗ]ದೊಳ್ ತನ್ನ ರೂಪೆ ರೂಪಾಗಿ ಬಹುರೂಪದಿಂ ಕಾದುತ್ತಿರ್ದ ಸುರಂ . . . ಪೆಜಿತೆಗೆದು ಪೋಗಿ (ಶಾಂತಿಪು. ೬-೩೬ ವ) ; ಉಪಮಾನಕಥನವೊಂದರಿನುಪಮೇಯಮನಱಿವುದದು ಸಮಾಸೋಕ್ತಿ ನಿಷೇಧಪರಂ ತಾನೆಂಬಂತಾಗೆ ಪೇಟ್ವುದಾಪೇಕ್ಷಮುಕ್ಕುಮದು ಬಹುರೂಪಂ (ಕಾವ್ಯಾವ. ೬೪೭). ೩. ಅನೇಕ ವೇಷಗಳನ್ನು ಧರಿಸಿ ಆಡುವ ಒಂದು ಬಗೆಯ ನಾಟಕ ಪ್ರದರ್ಶನ : ಅಪ್ಪಾ ಬೊಪ್ಪಾ ಚಿಕ್ಕ ಚೋಹವುಂ ತೊಟ್ಟು . . . ತಪ್ಪಿ ಹಜ್ಜೆಯನಿಕ್ಕಿ ಆಡುತ್ತಿದ್ದ ರೇಕಣ್ಣಪ್ರಿಯನಾಗಿನಾಥನಲ್ಲಿ ಹೊತ್ತು ಹೋಗದ ಬಹುರೂಪವ (ಸಕವ. II; ೩೩೫-೩) ; ಈತ, ಚಿತ್ರವಿಚಿತ್ರವಾದ ಬಹುರೂಪಗಳನ್ನಾಡಿ ಭಕ್ತರನ್ನು ತಣಿಸುವ . . . ಕಾಯಕವನ್ನು ಕೈಗೊಂಡ (ಕವಿಕೋ. XI, ೯೯೨). ೪. ಅನೇಕ ರೂಪಗಳನ್ನು ಧರಿಸುವವನು ; ಬಹುವೇಷಧಾರಿ : ಕಂದರ್ಪನ ಕೊಂದು ನಿಂದು ನಾಟ್ಯವನಾಡಿದಂದಂದಿನ ಬಹುರೂಪನಾಹೋ (ಶಿವಗೀ. ೦೩೯-೯೬೩). ೫. ಓತಿಕೇತ ; ಗೋಸುಂಬೆ. ೬. ಸೂರ್ಯ. ೭. ಒಂದು ಬಗೆಯ ಮರದ ಅಂಟು ; ಸಜ್ಜರಸ : "ಯಕ್ಷಧೂಪಃ . . . ಬಹುರೂಪಃ—೫ ಸಜ್ಜರಸದ ಹೆಸರುಗಳು" (ಸಿದ್ಧಾಂತಿ. ೨೦೭). ೮. ಶಿವ. ೯. ಬ್ರಹ್ಮ. ೧೦. ವಿಷ್ಣು. ೧೧. ಮನ್ಮಥ. ೧೨. ಕೂದಲು. [ಸಂ.]

**ಬಹುರೂಪಿ** (ನಾ). ೧. ಹಲವು ರೂಪಗಳಿಂದ ಕೂಡಿದುದು : ದೇಹ ಬಹುರೂಪಿ—ಶೈವಲದಂತೆ (ಹಸುಹೂ. ೦೩೯). ೨. ಹಲವು ರೂಪಗಳಿಂದ ಕೂಡಿದವನು ; ಬಗೆಬಗೆಯ ಸೋಗು ಹಾಕುವವನು : ಕಣೆಯಲಾಜದೆ ಸೋತಾಕ್ಷಣದೊಳು ಬಹುರೂಪಿ ಕಜುಗಾಯಿಸಿದನು (ಭೈರಸೂ. I. ೨೨೨). [ ಸಂ. ಬಹುರೂಪಿನ್ ]

**ಬಹುರೂಪಿಣಿ** (ನಾ). ೧. ವಿಧವಿಧವಾದ ವೇಷವನ್ನು ಧರಿಸುವವಳು; ನಟಿ. ೨. ದೊಂಬರವಳು : "ಬಹುರೂಪಿಣಿ ಕೊಲ್ಲಟಗಿತ್ತಿಯು" (ಚತುಃ. ೯೩). ೩. [ಜೈನ] ಒಂದು ಬಗೆಯ ಮಾಯಾವಿದ್ಯೆ ; ತಾನು ಬಯಸಿದ ರೂಪವನ್ನು ಧರಿಸಬಹುದಾದ ವಿದ್ಯೆ : ಸುತಾರಾರೂಪಧಾರಿಣಿಯಾಗಿ . . . ಪಟ್ಟಿರ್ದ ಬಹುರೂಪಿಣಿಯೆಂಬ ಅಶನಿಘೋಷನ ಘೋಷಣವಿದ್ಯೆಯುಮನದಂ ಸುತಾರೆಗೆತ್ತು (ಶಾಂತಿಪು. ೬-೩೪ ವ); ಸಾಧಿಸಿ ಬಹುರೂಪಿಣಿಯುಂ ಸಾಧಿಸುವೆಂ ಪಗೆಯಂ (ಶಂರಾಮಾ. ೦೯-೬೨). [ < ಸಂ. ಬಹುರೂಪಿನೀ ]

**ಬಹುರೂಪೆ** (ನಾ). ಅಗ್ನಿಯ ಏಳು ನಾಲಗೆಗಳಲ್ಲಿ ಒಂದು ; "ಯಾಗಕರ್ಮದಲ್ಲಿ (ಸಾತ್ವಿಕ): ಹಿರಣ್ಯಾ, ಕನಕಾ, ರಕ್ತಾ, ಕೃಷ್ಣಾ ಸುಪ್ರಭಾ, ಬಹುರೂಪಾ, ಅತಿರಕ್ತಾ (ತಂತ್ರಸಾರ ಶಕದ್ರು, VI, ೨೬೦–೨೬೧ ; ಅಭಿರ. ೧೩–೬೮)" (ಶ್ರೀವಕ್ಕ. ೦೬೬) : "ಬಹುರೂಪಮತಿರಕ್ತಮುಸಿತರಕ್ತಂ ಸದಂಶುಹಿರಣ್ಯಮಾ ಕನಕವರ್ಚಿಯೆಸಲಗ್ನಿಯಲ್ಲಿಹವೇಟುನಾಲಗೆಗಳಕ್ಕು" (ಮಂಗರಾ. ೦೯-೭). [ಸಂ. ಬಹುರೂಪಾ]

**ಬಹುಲ, ಬಹುಳ** (ಗು). ೧. ಅನೇಕ ; ಯಥೇಷ್ಟ : ಬಹುಲರೋಗಂಗಳಿಂ ನವವಮ ಭೃತ್ಯರಂ ನೋಯಿಸುತ ಹಿಡಿದ ಚಲವಂ ಬಿಡದವಂ (ಜೀಕ್ಕೃಪು. ೪-೨೨-೩೭) ; ಕವಚ ಶೀರ್ಷಕ ಠಣಾರವಂ, ಬಹುಲನಾನಾರವಂ ಕೀಲಿಸಿತು ಕಿವಿಗತಿಕಠೋರವಂ ! (ಜಕ್ಕಾಂಗ. ೬೨-೨೨೩೭). ೨. ಹೆಚ್ಚಾದ ; ಅಧಿಕವಾದ : ಬಹುಲಕರುಣಾಸಮುದ್ರ ಹಲಗೆಯ ಗುರುವೆ (ಜೀಕ್ಕೃಪು. ೨-೧೧-೩). ೩. ದಟ್ಟವಾದ ; ನಿಬಿಡವಾದ ; ಸಾಂದ್ರ. ೪. ದಪ್ಪವಾದ ; ಸ್ಥೂಲವಾದ : (೬). ೫. ಕರಿಯ ಬಣ್ಣದ ; ಕಪ್ಪಾದ. (ನಾ). ೬. ಚಾಂದ್ರಮಾನ ತಿಂಗಳಿನ ಎರಡನೆಯ ಅರ್ಧ ಭಾಗ ; ಕೃಷ್ಣ ಪಕ್ಷ : ವಿತತಾಷಾಢದ ಬಹುಲ[ಶಾಕಾಂ. ೪] ಪ್ರತಿಪದ್ದಿನದಂದು ಕೀರ್ತಿ ನೆಗಟ್ದಿರೆ (ಆದಿಪು. ೬-೬೬). ೭. ದಪ್ಪಗಿರುವವನು : "ಪೀವರನೆನಲ್ ಸ್ಥೂಲನೆನೆ ಬಹುಲನೆನೆ (ಪೀನನೆನೆ) ದೊಡ್ಡಿತಪ್ಪವನೆನಿಕ್ಕುಂ" (ಮಂಗರಾ. ೬೯-೦೧). ೮. [ಜ್ಯೋತಿ] ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಮೂರನೆಯದು; ಕೃತ್ತಿಕೆ. ಬಹುಳ: ೧. ಅಗಟು ವಾರ್ಧಿಯಂ ಕಿಟ್ಟಿಡಿಕುಂ ನಾನಾಮರಾಳೀಬಹುಳಕಳಕಳ ಧ್ವಾನಸಂತಾನದಿಂದಂ (ಜಗನ್ನಾ. ೨-೦೬). ೬. ದಿವಸನಾಥಾದಿ ಗ್ರಹಶ್ರೇಣಿ ಸೌಮ್ಯಗಣಂ ಜೊನ್ನದೊಳನ್ಯರುಂ ಬಹುಳದೊಳ್ ನಿರ್ವ್ಯಾಜದಿಂ ಬಲ್ಲಿದರ್ (ಜಾತಕ. ೨-೧೧). ೮. "ಕೃತ್ತಿಕೆ ಬಹುಳಮೆನಿಕು" (ಮಂಗರಾ. ೦೨-೭). ೯. ಆಧಿಕ್ಯ; ವಿಪುಲವಾಗಿರುವುದು : "ಪ್ರಭೂತಂ. . . ಬಹುಳಂ, ಬಹು. . . ಭೂರಿ–೧೨ ಅಧಿಕವಾದದ್ದರ ಹೆಸರುಗಳು" (ಸಿದ್ಧಾಂತಿ. ೩೧೦) ; ಹೀಗೆ ಪಾಮರ ಬಹುಳವಾದ 'ಸಕಲಾಪನೀತಳಜನವೇ' ಅಂಕಿತ ಸರಿಯನ್ನು ಕುರಿತು ಪ್ರಾರ್ಥಿಸಿಕೊಂಡಿತು (ನಾಡೋಜ. ೦೯೩). [ಸಂ.]

**ಬಹುಲತೆ, ಬಹುಳತೆ** (ನಾ). ೧. ವಿಪುಲವಾಗಿರುವಿಕೆ; ಆಧಿಕ್ಯ ;

ಹೆಚ್ಚಳ. **ಬಹುಳತೆ:** **೨.** ವಿಶೇಷತೆ ; ಅತಿಶಯತೆ: ಮುತ್ತಿನ ಮಕುಟ ಮಿದೆನಿಸಲಾರ್ತುದತಿಬಹುಳತೆಯಿಂ (ಆಪು. ೪-೩೯). **೩.** [ವ್ಯಾಕ] ಎರಡು ರೀತಿಗಳಲ್ಲಿ ವಿಶೇಷವಾದ ಅರ್ಥವುಳ್ಳುದು : ಬಹುಳತೆ ಯತ್ವ ವತ್ವ ದೊಳ್ ಸಂಸ್ಕೃತಕ್ಕೆ ತಾನಿಲ್ಲೆಂದುಂ (ಶಮದ. ೫೫). [ಸಂ. ಬಹುಲತಾ]

**ಬಹುಲತ್ವ**, ಬಹುಳತ್ವ (ನಾ). **೧.** =ಬಹುಲತೆ ೧. **ಬಹುಳತ್ವ** : **೨.** = ಬಹುಲತೆ ೩ : ಸಂಸ್ಕೃತದೊಳ್ ಯತ್ವ ವತ್ವಂಗಳ್ಗೆ ಬಹುಳತ್ವ ಮಿಲ್ಲ, ನಿತ್ಯಂ (ಶಮದ. ೫೫ ವೃತ್ತಿ). [ಸಂ.]

**ಬಹುಲವೆಳ್ಳಂಗ** (ನಾ). ಒಬ್ಬಾತನ ಹೆಸರು : ಶ್ರೀಇಮ್ಮಡಿಪೆರ್ಮ್ಮಾಡಿ ಯಾಚಾರಿ ಬಹುಲವೆಳ್ಳಂಗನ ಶೀಘ್ರಲಿಖಿತಂ (ಎಕ. III, ತಂ೫೫. ೧೮೩-೦೫;977). [?]

**ಬಹುಲಾಯಿ** (ನಾ). [ಸಂಗೀತ] ಶಾರೀರಕ್ಕೆಂದು ವರ್ಣಿಸಲಾಗುವ, ವಿಶಿಷ್ಟರೀತಿಯ ಪಲುಕನ್ನು ಹೊಂದಿರುವ ಠಾಯ (?) : ಗೀತಿ ಜತಿ ಜೋಕೆ ನಯಂ ಬಹುಲಾಯಿ ದೇಸೆ ಪೆಲ್ಲಣೆ ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸವಂ (ಜಗ. ೫-೩). [?]

**ಬಹುಲಿಮ** (ಗು). ಹೇರಳವಾದ ; ಸಮೃದ್ಧವಾದ : ಚಿತ್ರಕ್ಕೆ ಮಾಡಿ ತ್ತೊಲವಂ ತಾರುಣ್ಯಮಾಸಾಧಿತಬಹುಲಿ[ಪಾಠಾಂ. ಹಳಿ]ಮಲಾವಣ್ಯಶೋಭಾ ವರೇಣ್ಯಂ (ಕಂದ್ರಕೌ. ೪-೬). [ಸಂ.]

**ಬಹುಲೆ**, ಬಹುಳೆ (ನಾ). **೧.** ಹಸು; ಗೋವು. **೨.** ದೊಡ್ಡ ಏಲಕ್ಕಿ ಗಿಡ : "ಪೃಥ್ವೀಕಾ, ಚಂದ್ರಬಾಲಾ, ಐಲಾ, ನಿಷ್ಕುಟೀ, ಬಹುಲಾ– ೫ ದೊಡ್ಡ ಏಲಕ್ಕೀ ಹೆಸರುಗಳು" (ಸಿದ್ಧಾಂತಿ. ೦೪೦). **೩.** ನೀಲಿಗಿಡ. **೪.** ಆರು ತಾರೆಗಳುಳ್ಳ ಒಂದು ನಕ್ಷತ್ರಪುಂಜ; ಕೃತ್ತಿಕಾನಕ್ಷತ್ರ : "ಕೃತ್ತಿಕಾಃ, ಬಹುಲಾಃ — ಈ ೨ ಕೃತ್ತಿಕೆ" (ಹಲಾಯು. ೯-೩೦) **ಬಹುಳೆ** : **೪.** "ಬಹುಳಾಃ — ಕೃತ್ತಿಕಾನಕ್ಷತ್ರ, ಗೋವುಗಳು" (ಸಿದ್ಧಾಂತಿ. ೪೦೯).
[ಸಂ. ಬಹುಲಾ]

**ಬಹುವಚ** (ನಾ). ಅತಿಯಾಗಿ ಮಾತನಾಡುವವನು ; ವಾಚಾಳಿ : "ಬಹುವಚಂ ಗಟಿಹುವವನಕ್ಕು" (ವಂಗರಾ. ೬೨-೨೦). [ಸಂ.]

**ಬಹುವಚನ** (ನಾ). **೧.** ಒಂದಕ್ಕಿಂತ ಹೆಚ್ಚು ಸಂಖ್ಯೆಯುಳ್ಳುದು. **೨.** [ವ್ಯಾಕ] ಒಂದಕ್ಕಿಂತ ಹೆಚ್ಚಿನ ಸಂಖ್ಯೆಯನ್ನು ಸೂಚಿಸುವ ಪದ: ಏಕವಚನಕ್ಕೆ — ಲವನೇನ್, ಅವಳೇನ್, ಅದೇನ್, ಬಹುವಚನಾರ್ಥಕ್ಕೆ– ತತ್ಪರಿಜನಾಲಾಪಂಗಳೇನ್ (ಶಮದ. ೬೯ ಪ್ರಯೋ); ಒಂದಕ್ಕಿಂತ ಹೆಚ್ಚು ವಸ್ತುಗಳನ್ನು ಹೇಳುವುದು ಬಹುವಚನ (ಕೃಬಿಂ. ೩೩). [ಸಂ.]

**ಬಹುವಾರಕ** (ನಾ). ಒಂದು ಬಗೆಯ ಸಸ್ಯ ; ಚಳ್ಳೆ : "ಶೇಲುಃ ..., ಬಹುವಾರಕಃ — ೫ ಚಳ್ಳೆಮರ" (ಸಿದ್ಧಾಂತಿ. ೦೦೩); ಬಹುವಾರಕ ಗಾಯತ್ರಿಯು ವಿಹಿತಾರಿಷ್ಟಾಮೃತಾಗ್ನಿಮುಖಿಗಳ್ಕೆಱೆಗುಂ (ಹರಿಶ್ಚಂ. ೪-೭೦). [ಸಂ.]

**ಬಹುವಾರ್ಷಿಕ** (ನಾ). ಅನೇಕ ವರ್ಷಗಳು ಇರುವಂತಹುದು : ಅಕ್ಕಿಲೇ ಜಿಯು; ಆಕರ್ಷಣೀಯವಾದ ಹೂ ಬಿಡುವ ಅಲಂಕಾರಸಸ್ಯ. . . ಇವು ಬಹುವಾರ್ಷಿಕಗಳಾದ್ದರಿಂದ ಫಲವತ್ತಾದ ಮಣ್ಣು ಅಗತ್ಯ (ಕವಿಕೋ. I, ೦೪೦). [ಸಂ.]

**ಬಹುವಿಕೆ** (ನಾ). ಹೆಚ್ಚಳ; ಅತಿಶಯತೆ : ಬಿಂಕಂ ಲುಳಿವಡೆಯೆ ಲುಳಿ ನವಣಿವಡೆಯೆ ನವಣಿ ಬಹುವಿಕೆವಡೆಯೆ (ಅನಂತ. ೨-೨೫೮).
[ಬಹು + — ಇಕೆ]

**ಬಹುವಿತ್ತ** (ನಾ). **೧.** ಅಧಿಕವಾದ ಸಂಪತ್ತು. **೨.** ಧನಿಕ; ಶ್ರೀಮಂತ : ಬಹುತನಯಂ ಬಹುವಿತ್ತಂ. . . ಮಹಿತನಯಂ ನೆಲಸಿರೆ ಮೃಗಗೃಹ ದೊಳ್ ತನ್ಮನುಜನೆನಿಸುಗುಂ (ಜಾತತಿ. ೦೭-೨). [ಸಂ.]

**ಬಹುವ್ರೀಹಿ** (ನಾ). **೧.** ಹೆಚ್ಚು ಬತ್ತವನ್ನು ಹೊಂದಿರುವುದು. **೨.** [ವ್ಯಾಕ]ಸಮಾಸಗಳಲ್ಲಿ ಒಂದು; ಸಮಾಸದಲ್ಲಿ ಸೇರಿರುವ ಎರಡು ಪದಗಳ ಅರ್ಥವೂ ಮುಖ್ಯವಾಗದೆ ಬೇರೊಂದು ವಸ್ತುವನ್ನು ಹೇಳು ವುದೇ ಸಮಾಸದ ಅರ್ಥವಾದಾಗ ಆಗುವ ಸಮಾಸ : ದ್ವಿಪದಂ ಮೇಣ್ ಬಹುಪದಮನ್ಯಪದಾರ್ಥದೊಳೊಂದಿ ನಿಲೆ ಬಹುವ್ರೀಹಿ (ಕಾವ್ಯಾವ. ೨೦೮); ಎರಡುಂ ಪದಂ ಮೇಣ್ ಪಲವುಂ ಪದಂ ಅನ್ಯಪದಾರ್ಥಮಂ ಬಯಸುತ್ತಿರೆ ಬಹುವ್ರೀಹಿಯಕ್ಕುಂ (ಶಮದ. ೦೬೫ ವೃತ್ತಿ); ಅನ್ಯಪದವು ವಿಶೇಷ್ಯವಾಗಿ ಅನೇಕ ಪದಗಳಿಗೆ ಆಗುವ ಸಮಾಸವು ಬಹುವ್ರೀಹಿ (ಕೃಬಿಂ. ೨೨). [ಸಂ.]

**ಬಹುಶಃ** (ಅ). ಬಹಳ ಮಾಡಿ; ಬಹುಮಟ್ಟಿಗೆ : ದ್ವಾರದ ಮೇಲಿರುವ ಶಾಸನಗಳಿಂದ ಬಹುಶಃ ಕ್ರಿ.ಶ. ೯೫೦ರಲ್ಲಿ ಕಟ್ಟಿರಬಹುದೆಂದು ಹೇಳಬಹುದು (ಹೊಯ್ಸಳಾ.೨೦೮); ಬಹುಶಃ ದೇವದಾಸಿಯರ ವೃತ್ತಿಯು ಒಂದು ರೀತಿಯಲ್ಲಿ ತಲೆಯಿಂದ ತಲೆಗೆ ಹರಿದುಕೊಂಡು ಬರುತ್ತದೆ (ಕಶಾಲಿ. ೦೬೫).
[ಸಂ. ಬಹುಶಸ್]

**ಬಹುಶಿಲ್ಪಿ** (ನಾ). ಅನೇಕಕಲೆಗಳನ್ನು ಬಲ್ಲವನು : ಧಾರ್ಮಿಕಂ ತ್ಯಾಗಿ ವೀರ್ಯಸಮೇತಂ ಬಹುಶಿಲ್ಪಿ. . . ಧನುರ್ಗೇಹಜಂ (ಜಾತತಿ. ೦೭-೯).
[ಸಂ. ಬಹುಶಿಲ್ಪಿನ್]

**ಬಹುಶ್ರುತ** (ನಾ). **೧.** ಅನೇಕ ಶಾಸ್ತ್ರಗಳನ್ನು ಕೇಳಿ ಅರಿತವನು; ವಿದ್ವಾಂಸ ; ಪಂಡಿತ : ಅತಿಗಂಭೀರಮೃದೂಕ್ತಿ ವಕ್ತ್ರದೊಳೊಡಂ ಬಟ್ಟೊಪ್ಪೆ ಕೇಳ್ದಂ ಬಹುಶ್ರುತನಲ್ಪಶ್ರುತನೆನ್ನದಾರ ಕಿವಿಗಂ ನುಣ್ಪಿಂಪಿ ನೊಳ್ ಕೂಡೆ ಪೇೞಲ್ (ಶಾಂತಿಪು. ೦-೮); ಪರಿಮೃತನಾವನೆ ವಿಶ್ರುತ ಬಹುಶ್ರುತೋದಾತ್ತಯಶಂ (ಸುಕುಮಾ. ೨-೦೨). **೨.** ವೇದಗಳನ್ನು ಚೆನ್ನಾಗಿ ಬಲ್ಲವನು; ವೇದಪಾರಂಗತ. [ಸಂ.]

**ಬಹುಸುತ** (ನಾ). ಅನೇಕ ಮಕ್ಕಳುಳ್ಳವನು: ಬಹುಸುತನುಪಚಿತತನು ಸಂಗ್ರಹಶೀಲಂ ಮಜ್ಜೆಸಾರನಕ್ಕುಂ (ಲೋಕೋಪ. ೦೦-೩೭). [ಸಂ.]

**ಬಹುಸೂತಿ** (ನಾ). **೧.** ಹಲವು ಮಕ್ಕಳನ್ನು ಹಡೆದ ಹೆಂಗಸು. **೨.** ಹಲವು ಬಾರಿ ಕರು ಹಾಕಿದ ಹಸು: "ಬಹುಸೂತಿಃ, ಪರೇಷ್ಟುಕಾ — ೨ ಅನೇಕ ಹೆರಿಗೆಗಳನ್ನು ಈದ ಆಕಳು" (ಸಿದ್ಧಾಂತಿ. ೨೯೫). [ಸಂ.]

**ಬಹುಳ** 'ಬಹುಲ' ನೋ.

**ಬಹುಳಗ್ರಹಣ** (ನಾ). ವಿಸ್ತಾರವಾದ ಅರ್ಥವನ್ನು ತಿಳಿದು ಕೊಳ್ಳುವುದು : ಅದಮೆಂಬ ಬಹುಳಗ್ರಹಣದಿಂದಾಕಾರಾಂತಮಲ್ಲದ ಕಾರಾಂತಮುಂ ಹ್ರಸ್ವಮಪ್ಪೇತ್ವಮಂ ಪಡೆದೊಡಂ ಲಿಂಗಮಕ್ಕುಂ (ಶಮದ. ೩೮ ವೃತ್ತಿ). [ಸಂ. ಬಹುಲಗ್ರಹಣ]

**ಬಹುಳತೆ** 'ಬಹುಲತೆ' ನೋ.

**ಬಹುಳತ್ವ** 'ಬಹುಲತ್ವ' ನೋ.

**ಬಹುಳಪಕ್ಷ** (ನಾ). ಕೃಷ್ಣ ಪಕ್ಷ: ಸೌಮ್ಯವತ್ಸರದ ಶ್ರಾವಣಬಹುಪಕ್ಷದಶಮಿಾ ಜೀವವಾರದೊಳಾದಿವೃಷಭೇಂದ್ರಾವತಾರದ ಬಸವಚರಿತೆ ಸಮಾಪ್ತ ವಾಯಿತ್ತು (ಬಸವು. ೬೦-೯೨). [ಸಂ. ಬಹುಲಪಕ್ಷ]

**ಬಹುಳವೃತ್ತಿ** (ನಾ). = ಬಹುಲತೆ ೩ : ವಿದಿತಸ್ವರದಿನನಾದೇಶದ ಸಹಜ ವ್ಯಂಜನಂಗಳಿಂ ಪರದ ಪವರ್ಗದ ನೆಲೆಗಕ್ಕುಂ ವತ್ವಂ ಪದವಿಧಿಯೊಳ್ ಬಹುಳವೃತ್ತಿಯಿಂ ವಾಕ್ಯದೊಳಂ (ಶಮದ. ೬೬). [ಸಂ. ಬಹುಲವೃತ್ತಿ]

**ಬಹುಳಸ್ಥಿತಿ** (ನಾ). = ಬಹುಲತೆ ೩: ಇರೆ ವರ್ಗಪ್ರಥಮಂಗಳ್ ಪರದೊಳ್ ಚಟವರ್ಗಮುಳಿಯೆ ತಮ್ಮ ತೃತೀಯಾಕ್ಷರಮಕ್ಕುಂ ಪದವಿಧಿಯೊಳ್ ಪರಿಹರಿಸಲ್ಬಾರದಲ್ಲಿ ಬಹುಳಸ್ಥಿತಿಯುಂ (ಶಮದ. ೬೫).
[ಸಂ. ಬಹುಲಸ್ಥಿತಿ]

**ಬಹುಳೆ** 'ಬಹುಲೆ' ನೋ.

**ಬಹೂಕ್ತಿ** (ನಾ). = ಬಹುವಚನ **೨** : ಸೊಗಯಿಪುವುಗೆಕೆಗಳನ್ನೋಕ್ತಿಗೆ ವಿಧ್ಯರ್ಥಕ್ಕೆ ಮಧ್ಯಮೋತ್ತಮಪುರುಷಪ್ರಗತಬಹೂಕ್ತಿಯೊಳಮಮೆಂದೊಗೆ ತರ್ಕುಂ ಯುಗಪದುಕ್ತಿಯೊಳ್ ಕ್ರಮದಿಂದಂ (ಶಮದ. ೨೨೯). [ಸಂ.]

**ಬಹೂದಕ** (ನಾ). ಹಂಸ, ಪರಮಹಂಸ, ಕುಟೀಚಕ ಮತ್ತು ಬಹೂದಕ ಎಂಬ ಸಂನ್ಯಾಸಿಗಳ ನಾಲ್ಕು ಗುಂಪುಗಳಲ್ಲಿ ಒಂದು ಗುಂಪಿಗೆ ಸೇರಿದವನಂ; ತೀರ್ಥಯಾತ್ರಾಕ್ಷೇತ್ರಗಳಿಗೆ ಪ್ರವಾಸ ಮಾಡುವ ಸಂನ್ಯಾಸಿ; ಪರಿವ್ರಾಜಕ: ಈಶ್ವರಧ್ಯಾನತತ್ಪರನಾಗಿ ಏಕಾನ್ನವನೊಲ್ಲದೆ ಬಂಧುಪುತ್ರಾದಿ ಗೃಹಮಂ ಪುಗದೆ ಬೇಱೆ ಏಳುಮನೆಯಲ್ಲಿಯು ಭಿಕ್ಷಾನ್ನಮಂ ತಂದನು ಭವಿಸುತ್ತೆ ಸಹಜಮಯನಾಗಿರ್ಪಾತನೇ ಬಹೂದಕನಪ್ಪಂ (ಜಿಶೀಸ. ೦೨೬). [ಸಂ.]

**ಬಹೂಪಮಾನ** (ನಾ). [ಕಾವ್ಯಮೀ] ಒಂದಕ್ಕಿಂತ ಹೆಚ್ಚು ಉಪಮಾನಗಳನ್ನು ಕೊಡುವ ಒಂದು ಅಲಂಕಾರ: ಮಲಯರುಹ ಶಿಶಿರಕರ ಶೀತಲಿಕಾಕರಕೇಂದುಕಾಂತಜಲಶೀತಳಮೀ ಲಲನಾಲಿಂಗನಸುಖಕರವಿಲಾಸವೆಂಬುದು ಬಹೂಪಮಾನವಿಕಲ್ಪಂ (ಕವಿಮಾ. ೩-೯೦). [ಸಂ.]

**ಬಹೂಪಮೆ** (ನಾ). =ಬಹೂಪಮಾನ: ಬಹೂಪಮೆಗೆ—ಶರದಂಬುದಮುಂ ಗಂಗಾತರಂಗಮುಂ ಸಿಂಧುವಾರಕುಸುಮಶ್ರೀಯುಂ ಹರಹಾಸವಿಳಾಸಮನನುಕರಿಸುವುದತಿವಿಶದಕೀರ್ತಿ ತೋಳ್ಗೊಪ್ಪುವನಾ (ಕಾವ್ಯಾಸ. ೬೬೩). [ಸಂ. ಬಹೂಪಮಾ]

**ಬಹ್ವಾರಂಭಪರಿಗ್ರಹ** (ನಾ). [ಜೈನ]ಪಂಚಮಹಾಪಾತಕಗಳಲ್ಲಿ ಒಂದು; ಬಹಳ ಪ್ರಯತ್ನದಿಂದ ಧನವನ್ನು ಸಂಗ್ರಹಿಸುವುದು : ಬಹ್ವಾರಂಭಪರಿಗ್ರಹವಿಹ್ವಲನಿಂದ್ರಿಯಸುಖಾರ್ಥಿ ಸಂಸಾರಗುಹಾಗಹ್ವರದೊಳಗಿರುಳಿನ ಚಕ್ರಾಹ್ವದವೊಲ್ ಮಱುಗದೇಂ ಸುಖಂಬಡೆದಪನೇ (ಆದಿಪು. ೩-೬೮). [ಸಂ.]

**ಬಹ್ವಾರಂಭಪಾರಿಗ್ರಹ** (ನಾ). = ಬಹ್ವಾರಂಭಪರಿಗ್ರಹ : ಆ ಜೀವಘಾತಾನೃತವಚನ ಪರಾರ್ಥಾ ಪಹಾರಾನ್ಯನಾರೀಗಮಬಹ್ವಾರಂಭಪಾರಿಗ್ರಹವೆನಿಸುವವಯ್ದುಂ ಮಹಾಪಾತಕಂಗಳ್ಗೆ ಮನಂದಂದೊಂಗೆ ಸಂಸ್ಕೃತ್ಯದಧಿತಟಮದ್ಧಾಸನ್ನಂ (ಸುಕುಮಾ. ೫-೯೩). [ಸಂ.]

**ಬಹ್ವಾಶಿ** (ನಾ). ೧. ಅತಿಯಾಗಿ ತಿನ್ನುವವನು; ಹೊಟ್ಟೆಬಾಕ: (ಕ.) ೨. ಅತಿಯಾಗಿ ತಿನ್ನುವಂತಹುದು: ಬಹ್ವಾಶಿಯಪ್ಪ ತುರಗಂ ವಿಹ್ವಲನಾಗಿರ್ದು ಮೇಯದಿರ್ದೊಡಂ . . . ಮರಣಭಯಂ (ಅಶ್ವಶಾ. ೬-೯೨). [ಸಂ. ಬಹ್ವಾಶಿನ್]

**ಬಳ₁** 'ಬಳ್ಳ' ನೋ.

**ಬಳ₂** 'ಬಲ'₃ ನೋ.

**ಬಳ₃** (ನಾ). ಒಂದು ಬಗೆಯ ಕೊಡುಗೆಯ ಭೂಮಿ (?) : ಬಮ್ಮಗಾವುಣ್ಡನ ಬಳದಿಂ ಬಡಗ (ಸೌಇಇ. XI–ii. ೦೦೯-೫೦; 948); ಮೂನೂಱಯ್ವತ್ತು ಮತ್ತರ್ಕ್ಕಿಸುಕಾಡುಮನ್ನು ಬಳಕ್ಕೆ ಸಾಯಿರದ ನೂಱುಮತ್ತರಾಗಿ (ಸೌಇಇ. IX–i. ೬೬-೧೮; 992); ಅದಱ ಹತ್ತಸಿನ ತನ್ನ ಬಳದೊಳಗೆ ಬಮ್ಮರ್ಯ್ಯಂ ವಿದ್ಯಾದಾನಕ್ಕೆ ಕೊಟ್ಟ ಮತ್ತರ್ಪ್ಪನ್ನೆರಡು (ಸೌಇಇ. IX–i. ೦೦೯-೦೯; 1046); ಗುರುಗಳ ಮನೆಯು ಸ್ತಳ ಬಿಯಾಳ ಕೇಶಿಸೆಟ್ಟಿಯ ಬಳದಲು ಮನೆ ಎಡು ಮುದ್ದಯ್ಯನ ಬಳ್ಳದಲು ಮನೆ (ಎಕ. XI. ಹೊಳಲ್ಕೆ. ೫೬.೬೮; 1220). [?]

**ಬಳಖುದ್ದಿ** 'ಬಲಖುದ್ದಿ' ನೋ.

**ಬಳಂಜ** 'ಬಣಜ' ನೋ.

**ಬಳಂಜಿಗ** 'ಬಣಜಿಗ' ನೋ.

**ಬಳಂಜು** 'ಬಣಜು' ನೋ.

**ಬಳಂಬೆ** 'ಬಣಂಬೆ' ನೋ.

**ಬಳಕೆ** 'ಬಟಕೆ' ನೋ.

**ಬಳಕೆಗಾರ** 'ಬಳಕೆಗಾಱ' ನೋ.

**ಬಳಕೆಗಾಱ**, ಬಳಕೆಗಾರ (ನಾ). ೧. ಹೆಚ್ಚು ವ್ಯವಹಾರದಲ್ಲಿರುವವನು; ನಾಡಾಡಿ; ಸಾಮಾನ್ಯಮನುಷ್ಯ : ಆ ಕ್ಷತ್ರಿಯಕುಲರತ್ನಗಾಹಾರವುಂಟು ಮಲವಿಲ್ಲ ಮೂತ್ರವಿಲ್ಲೆಂದರೀ ಲೋಕದ ಬಳಕೆಗಾಱರ ಪೇಳ್ವ ತೆಱನೆ (ಚರಸ. ೧-೨೩); ಅವನ ನೆಲೆ ಮೋಕ್ಷಗಾಮಿಗೆ ಗಮ್ಯವಲ್ಲದೆ ನಾಡ ಬಳಕೆಗಾಱಂಗೆ ಗೋಚರವೆ (ಚರಸ. ೯೧-೦೬). **ಬಳಕೆಗಾರ** : ೨. ಪದಾರ್ಥಗಳನ್ನು ಕೊಂಡುಕೊಳ್ಳುವವನು; ಗ್ರಾಹಕ : ಬಳಕೆಗಾರರ ಅನುಕೂಲಕ್ಕಾಗಿ ರಜಾದಿನಗಳಲ್ಲೂ ಆ ಅಂಗಡಿಯನ್ನು ತೆರೆದಿರುತ್ತಾರೆ (ರೂಢಿ).

[ಬಳಕೆ (< ಬಟಕೆ) + –ಕಾಱ]

**ಬಳಕೆಮಾತು** 'ಬಳಕೆವಾತು' ನೋ.

**ಬಳಕೆವಾತು**, ಬಳಕೆಮಾತು (ನಾ). ೧. ಆಡುಮಾತು ; ರೂಢಿಯ ಮಾತು: ಆಂಡಯ್ಯನ ಭಾಷೆ ಕನ್ನಡಜಿಲ್ಲೆಗಳ ಬಳಕೆವಾತಿಗೆ ಸಂಬಂಧಪಟ್ಟುದು (ತವಾ. ೦೨೯); ಈ ರೀತಿ ಬಳಕೆವಾತಿನಲ್ಲಿ ತ್ರಿಪದಿನ ತುತ್ತತುದಿಯನ್ನು ಮುಟ್ಟಿದ ಈ ವಚನಕಾರರ ವಾಗ್ವಿಲಾಸ ಕನ್ನಡಕ್ಕೆ ವಿಶಿಷ್ಟವಾದ ಕಾಣಿಕೆಯೋ ಸರಿ (ಸುವರ್ಣ. ೧೦೫). ೨. ಪರಿಚಯದ ಮಾತು,-ನುಡಿ ; ಸಲುಗೆಯ ಮಾತು : ನಂಟನ ಬಳಕೆವಾತಿನ [ಪಾಠಾಂ. ನಂಜಿನ ಬಳಗವೀತನ]ಬಂಧುಕೃತ್ಯದ ಬಳವಿಗೆಯೊಳೀ ನಿನ್ನ ಮಗನನು ಬೇಡಿಕೊಳಲೇಕೆ (ಕುಮಾವ್ಯಾ. ಓಂ೩. ೦೦-೦೬). **ಬಳಕೆಮಾತು** : ೧. ಬಳಕೆಮಾತಿನಲ್ಲಿರುವ ಎಷ್ಟೋ ಶಬ್ದಗಳು ನಿಘಂಟಿನಲ್ಲಿ ಸೇರಿಸಲಾಗದೆ ಕಾಲಕ್ರಮೇಣ ಅವುಗಳು ಮರೆಯಾಗಿ ಬಿಡುತ್ತವೆ (ರೂಢಿ).

[ಬಳಕೆ (<ಬಟಕೆ) + ಮಾತು₁]

**ಬಳಕೆವೆರು** (ಕ್ರಿ). ರೂಢಿಯಾಗು ; ಅಭ್ಯಾಸವಾಗು : ನೋಡೆ ರಹಸ್ಯದೊಳ್ ಬಳಕೆವೆತ್ತೀ ಚಿತ್ರದಭ್ಯಾಸದಿಂ ದಹನಾಕ್ರಾಂತಮೆನಿಪ್ಪ ಮಂದಿರದವೋಲ್ ಕಾಣ್ಬಂ ಜನಾಕೀರ್ಣಮಂ (ಶಾಕುಂತ. ೬೯-೦೦೦).

[ ಬಳಕೆ (<ಬಟಕೆ) + ಪೆರು₁ (<ಪೆಱು₁) ]

**ಬಳಗ₁**, ಬಣಗ₁ (ನಾ). ೧. ಗುಂಪು; ಸಮೂಹ: " ಬಂಬಲ್. . . ಬಳಗಂ . . . ಗೊಂದಣ (ಉಂದಲ್) ಈ ೧೪ ಸಮೂಹಂ " (ಶಬ್ದಸಾ. ೫೬-೨೨೨); ಆಱಿದಱ್ಗಿದ ಕರಿಘಟೆಗಳ ಬಳಗದಿನುಚ್ಚಳಿಸಿ ಮೊರೆವ ನೆತ್ತರ ತೆರೆಗಳ್ (ಶಂಖಶಾ. ೧೧-೩೬); ಕರುಳನಣಲೊಳಗಡಸಿ ನಲಿದುದು ಮರುಳ ಬಳಗ (ಕುಮಾವ್ಯಾಶೀ. ೫-೩೨). ೨. ರಾಶಿ; ಒಟ್ಟಿಲು : ಎಳದಳಿರ ಬಳಗದೊಳ್ ಪೊರಳ್ದು ಪೊರಳ್ದು (೧೦೯. ೩-೦೦೩ ವ). ೩. ಒಂದು ಮನೆ ಅಥವಾ ಒಂದು ವಂಶಕ್ಕೆ ಸೇರಿದವರು ; ನೆಂಟರಿಷ್ಟರು; ಪರಿಜನ : ದೇವದೇವ ಅನಾಥನಾಥ ಅನಿಮಿತ್ತಬಂಧುವೆ ತಾಯ್ತಂದೆ ಬಂಧು ಬಳಗವೆ (ಬಸರ. ೨-೫೪); ಜ್ವಳನಕೊಂಡವನಿಕ್ಕಿಕೊಂಡೀ ಬಳಗವೆಲ್ಲಂ ಒಂದು ಪೇರುರಿಯೊಳಗೆ ಬೀಳುವೆವು (ಬಸಪು. ೫೮-೨೮) ; ಕಾಗೆಯಗುಳನು ಕಂಡು ಕೂಗುವದು ಬಳಗವನು (ಸರ್ವಜ್ಞ. ೬೬೬೬); ಮದುವೆಗೆಂದು ಪರಊರಿನ ನಮ್ಮ ಸಮೀಪದ ಬಳಗದವರೆಲ್ಲ ಬರಹತ್ತಿದರು (ಆಚೋಲಿ. ೯೦). ೪. ದಟ್ಟಣೆ; ಸಾಂದ್ರತೆ : ಕಾದಲರ ಪುರುಡಿನೆಸಕದೊಡನೆ ಇರುಳ ಬಳಗು ಬಡಬಡಾಗೆಯುಂ (ಚಂದ್ರಪ್ರ. ೬-೬೨ ವ). ಬಣಗ₁: ೧. ಮಿಗೆ ಮನೋಹರಮಾದ ಬೆಳ್ಳಕ್ಕಿಗಳ ಬಣಗಮೋಯೆನಲು ತೋರಿತ್ತಗಣಿತಾಮಲತಾರಕಾಸಂದೋಹವಂಬರದಿ (ಕೃಕರ್ಣಾ. ೯-೫೩). [ದೇ.॥ ತಮಿ. ವಲಜ್ಞ=ದೊಡ್ಡ ಕುಟುಂಬ ; ತುಳು. ಬಳಗ ; ತೆಲು. ಬಲಗ]

**ಬಳಗ₂** (ನಾ). ನೊಗದಿಂದ ಎತ್ತು ನುಣುಚಿಕೊಳ್ಳುವಿಕೆ; ತಪ್ಪಿಸಿಕೊಳ್ಳುವಿಕೆ : ' ಬಳಗವಿಕ್ಕು ' ಪರಾ.

**ಬಳಗ ಹಾಕು**=ನೊಗದಿಂದ ಎತ್ತು ತಪ್ಪಿಸಿಕೊಳ್ಳು : ಎತ್ತು ಬಳಗ ಹಾಕಿ ನಿಂತು ಬಿಟ್ಟಿತು (ರೂಢಿ). ಬಳಗಾ ತೆಗೆ=ಬಳಗ ಹಾಕು ; " ಹೆಗಲು ಕೊಡದಿರು " (ಜಾನಕೋ. ೨೧).

[ ದೇ.॥ ತಮಿ. ವಟುಕ್ಕು ]

**ಬಳಗಜವಳಿ** (ನಾ). ನಂಟರಿಷ್ಟರಿಗೆ ಕೊಡುವ ಬಟ್ಟೆಯ ಉಡುಗೊರೆ: ಬಳಗಜವಳಿಗೆಂದು ಬಂದ ಚೀನದುಕೂಲದ ಹಾರಾವಳಿಯ ಪಲವು ದಿಂಡುಗಳುಮಂ (ಧರ್ಮನಾ. ೩-೨೫೨). [ಬಳಗ$_1$+ಜವಳಿ$_1$]

**ಬಳಗದೊತ್ತು** (ನಾ). [ವೀಶೈ] ಶರಣಸಮೂಹಕ್ಕೆ ದಾಸನಾದವನು: ಬಳಿದೊತ್ತು ಬಳಗದೊತ್ತು ವಂಶದೊತ್ತು ನಾನಯ್ಯಾ (ಬಸವ. ೩೫೩). [ಬಳಗ$_1$+ತೊತ್ತು (<ತೊಟು)]

**ಬಳಗಧಾರೆ** (ನಾ). ಒಂದು ಬಗೆಯ ವಿವಾಹವಿಧಿ ; ಮದುವೆಯಲ್ಲಿ ಕನ್ಯಾದಾನ ಮಾಡುವಾಗ ನಂಟರಿಷ್ಟರೆಲ್ಲ ಸೇರಿ ಎರೆಯುವ ನೀರಿನ ಧಾರೆ : ಒಕ್ಕಲಿಗರಲ್ಲಿ ಬಳಗಧಾರೆಯ ಪದ್ಧತಿಯುಂಟು (ರೂಢಿ). [ಬಳಗ$_1$+ಧಾರೆ]

**ಬಳಗವಿಕ್ಕು, ಬಳಗವಿಕ್ಕು** (ಕ್ರಿ). ನೊಗದಿಂದ ಎತ್ತು ತಪ್ಪಿಸಿಕೊಳ್ಳು : ಆ ಧೂರ್ತನೆಟ್ಟಿನಂದವುನೆ ಮಾಡಿ ಮರ್ಯಾದೆಯೊಳೊರ್ವೆಯೊಡಂಬಟ್ಟುಂ ಒಮ್ಮೆಯೊಡಂಬಡದೆಯುಂ ಬಳಗವಿಕ್ಕಿ ಕಾಡಿದೊಡೆ (ಶಂಕರಂ. ೫೫-೦೨). **ಬಳಗವಿಕ್ಕು :** ನಡವೆಟ್ಟುಗಳ್ ಬಳಗವಿಕ್ಕಿರೆ ಕಳ್ಳರಿನಕ್ಕುಮಚ್ಚಿಗಂ (ಅಭ್ಯಪು.೯-೩೦). [ಬಳಗ$_2$+ ಇಕ್ಕು]

**ಬಳಗವಿಕ್ಕು** 'ಬಳಗವಿಂಕ್ಕು' ನೋ.

**ಬಳಗಾರ** 'ಬಳೆಗಾಱ' ನೋ.

**ಬಳಗಾಱ** 'ಬಳೆಗಾಱ' ನೋ.

**ಬಳಗಾಱಗಣ** (ನಾ). [ಜೈನ]ಶ್ರವಣರ ಪಂಗಡಗಳಲ್ಲಿ ಒಂದು : ಬಳಗಾಱಗಣದ ಮೋಹನನ್ದಿಭಟ್ಟಾರಕರ ಶಿಷ್ಯರಪ್ಪ ಕೇಶವನನ್ದಿ ಅಷ್ಟೋಪವಾಸಿ ಭಳಾರರ ಬಸದಿಗೆ . . . ಕೊಟ್ಟ ಗಟ್ಟಿ ಮತ್ತರಯ್ದು (ಇಇ. IV, ೦೬೦-೦೩; 1048). [ಬಳಗಾಱ (<ಬಳೆಗಾಱ)+ಗಣ]

**ಬಳಚು** 'ಬಟ್ಟು' ನೋ.

**ಬಳಜ** 'ಬಲಜ' ನೋ.

**ಬಳತ** 'ಪಣತ' ನೋ.

**ಬಳದಡಿ** (ನಾ). ಒಂದು ಬಗೆಯ ಆಯುಧ ; ದೊಡ್ಡಬಡಿಗೆ : ಹೇಱುವ ಬಿಱುಗಲ್ಲು ಬಳದಡಿ ವರಶಕ್ತಿ ಪಾಱುಂಬಳೆ ಶೂಲದಿಂದೆ ಏಱುಗಾಣಿಸಿ . . . ಗಾಱುಮಾಡಿದರು ರಕ್ಕಸರು (ಪೋಹಕ. ೩೯-೨೩); ಬಿಲ್ಲಂಬು ಬಾಕು ಬಳದಡಿ ಕೊಡಲಿ ಮುಂಗತ್ತಿ (ಗುರುಚಾ. ೩-೩೦). [ಬಳ್$_2$(=ಬಲ್$_3$)+ದಡಿ$_1$]

**ಬಳದೇವ** 'ಬಲದೇವ' ನೋ.

**ಬಳಪ, ಬಳಹ** (ನಾ). ೧. ವಿಗ್ರಹ ಪಾತ್ರೆ ಮುಂತಾದುವುಗಳನ್ನು ಮಾಡಲು ಬಳಸುವ ಒಂದು ಬಗೆಯ ಮೃದುವಾದ ಬಿಳಿ ಕಲ್ಲು: "ಬಳಪವದು ಶುಭ್ರೋಪಲಂ" (ಶಂಗರಾ. ೦೦೬-೦೫) ; ತಂಬುಲದ ಸೊರ್ಕಿ ದೊರೆಕೊಳೆ ತಿಂಬುದು ಬಳಪವುಂ (ಲೋಕೋಪ. ೦೦-೯೯) ; ಬೆಳ್ಳಿವಿರ್ ತುಱುಗಿ ನಿರಂತರಂ ಬಳಪವುಂ ತೊಡೆದಂತಿರೆ (ಸೂಕ್ತಿಸು. ೩-೩೭). ೨. ಕಪ್ಪುಹಲಗೆಯ ಮೇಲೆ ಬರೆಯಲು ಮೃದುವಾದ ಬಿಳಿಯ ಕಲ್ಲಿನಿಂದ ತಯಾರಿಸುವ ಲೇಖನಸಾಧನ : ಪಡದ ಧನಕ್ಕೆ ಲೆಕ್ಕಮಿಡಲಿಂದ್ರನಗಂ ಬಳಪಂ ಧರಾತಳಂ ಕಡಿತಮಹೇಶ್ವರಂ ತಗುಳೆ ಬಾಚಿಸುವೊಂ (ಶಾಂತಿಪು. ೯-೦೯೭) ; ನಿರ್ಮಳಫಳಕಂ ನೇರಿರ್ದೊಡಂತದು ತೆಗೆದದಱಿೊಳ್ ಬಳಪದಿನಾಗಳ್ ಬರೆದಂ ಲಳನೆಯ ರೂಪಾತಿಶಯಮುಮಂ (ದಶಕು. ೬-೩೦೦); ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ (ಕುಮಾ.ಆ. ೦-೦೫). **ಬಳಹ :** ೧. "ಶ್ವೇತಧಾತುಃ—ಬಳಹ" (ಓಶಂ. ೦೩೦) ; ಕಾಕಿಣೀ ಹಿರಣ್ಯಯೋರ್ವಾ = ಬಳಹಮುಂ ಪೊನ್ನುಮೆಂಬವಱ ಮುಟ್ಟುಹಂಸೂರುಳ್ (ನೀತಿವಾ. ೨೭-೪೨). ೨. ಸ್ಮರತಾಪದಿಂ ಬೆದಱಿ . . . ಧಾತ್ರಿಯೊಳ್ಬಳಹದಿಂ ಬರೆದಂ ಸತಿರೂಪನೊಪ್ಪುವಂತಿರೆ (ಧರ್ಮಪ. ೬-೨೨).

ಬಳಪದ ಕಲ್ಲು = ಬರೆಯುವ ಸಾಧನ, ಒಡವೆ, ಮರಿಗೆ ಮುಂತಾದುವುಗಳನ್ನು ಮಾಡಲು ಉಪಯೋಗಿಸುವ ಮೃದುವಾದ ಬಿಳಿಕಲ್ಲು : ನೀಲಗಿರಿಯಿಂದ ತರಿಸಿದ ಹಸರುಕಲ್ಲು, ಅಮೃತಶಿಲೆ, ಬಳಪದ ಕಲ್ಲು . . . ಬ್ರೆಕ್ಕಿಯ ಇತ್ಯಾದಿ ಶಿಲೆಗಳಿಂದ ಆಭರಣಗಳನ್ನು ತಯಾರಿಸುತ್ತಿದ್ದರು (ಭಾರದ. ೦೯) ; ಈ ಬಳಪದ ಕಲ್ಲಿನ ಮುಚ್ಚಳದ ಮೇಲಿನ . . . ಲಿಪಿಯಿಂದ ಹೊರಡುವ ಅರ್ಥದ ವಿಚಾರದಲ್ಲೂ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ (ದ್ರಾವಿ. ೫೦). ಬಳಪದೋಲೆ, ಬಳಹದ ಓಲೆ, ಬಳಹದೋಲೆ = ಬಳಪದ ಕಲ್ಲಿನಿಂದ ಮಾಡಿದ ಕರ್ಣಾಭರಣ : ಜಾದಿಯಂ ಮುಡಿದು ಮುತ್ತಂ ತೊಟ್ಟು ಬೆಳ್ಮಡಿಯನುಟ್ಟು ಬಳಪದೋಲೆಯನಿಟ್ಟು . . . ಕೈಗೈಯೆ (ಲೀಲಾವ. ೭-೫೩ ವ); ಬೆತ್ತದ ಕಂಕಣಂ ಬಳಪದೋಲೆ ಕುರುಳ್ಗಳವಟ್ಟ ಕಾಡ ಹೂ. . .ಮನಂಗೊಳೆ ಪುಳಿಂದಿಯರೊಪ್ಪುವರಾ ಮಹಾದ್ರಿಯೊಳ್ (ದಶಕು. ೯-೨೭) ; ಹಳದಿಯ ಸೀರೆಯನುಟ್ಟು ಬಳಹದ ಓಲೆ ಕಿವಿಯಲ್ಲಿ ಇಕ್ಕಿ (ಸರ್ವಪ. ೬೭-೯೬೪); ಕಿವಿಯಲಿಕ್ಕಿದ ಬಳಹದೋಲೆ ಹಳದಿಯ ಉಡುಗೆ (ಬಸರ. ೯-೧೦೦).

[ದೇ.॥ ತಮಿ. ಪಲಪ್ಪಮ್, ವಲಪ್ಪಮ್; ಮಲ. ವಲಪ್ಪಮ್ ; ತುಳು. ಬಳಪು, ಬಲವು; ತೆಲು. ಬಲಪ, ಬಲ್ಪ]

**ಬಳಪಂಗೊಳ್** (ಕ್ರಿ). ಲೇಖನದ ಸಾಧನವನ್ನು ಹಿಡಿದು ಕಾವ್ಯ ಮುಂತಾದುವನ್ನು ರಚಿಸು : ಸವಣಂ ಬಳಪಂಗೊಳೆ ಗಾಂಡಿವಿ ಬಿಲ್ಗೊಳೆ . . . ಕೌರವಾರಿ ಗದೆಗೊಳೆ ಪೊಣರ್ಕೆಗಾವಂ ನಿಲ್ವಂ (ಶಬ್ದರ. ೦೬೭ ಪ್ರಯೋ). [ಬಳಪ + ಕೊಳ್$_1$]

**ಬಳಪಂದೊಡೆ** (ಕ್ರಿ). ಬಳಪದ ಕಲ್ಲಿನಿಂದ ಬಿಳಿಯ ಬಣ್ಣವನ್ನು ಲೇಪಿಸು : ಕತ್ತರಿಸಿದ ಗಡ್ಡಮಿಟ್ಟ ತಿಲಕಂ ಬಳಪಂದೊಡೆದೋಲೆ ದೇಸೆಯಂತಿರೆ ಸುಲಿಪಲ್ ತಳತ್ತಳಿಸಿ ತಂಬುಲವುಂ ಪೊಳಕುತ್ತೆ (ಅರ್ಧನೇ. ೫-೩೦). [ಬಳಪ + ತೊಡೆ$_1$]

**ಬಳಬಳ$_1$** (ನಾ). (ದ್ರವಪದಾರ್ಥವು ಮೇಲಿನಿಂದ ಕೆಳಕ್ಕೆ ಬೀಳುವುದನ್ನು ಸೂಚಿಸುವ) ಒಂದು ಅನುಕರಣಶಬ್ದ : 'ಬಳಬಳನೆ' ಪರಾ.

**ಬಳಬಳ$_2$** (ಅ). ಅಧಿಕವಾಗಿ; ಅತಿಶಯವಾಗಿ : ಪರಿಪಕ್ವಫಳಪ್ರಚಾರದಿಂ ಬಳಬಳ ಬಳ್ಕುವಾಂಬ್ರವನದಿನ್ದೆ . . . ಈಕ್ಷಿಪರ್ಗ್ಗತಿಮನೋಹರವಲ್ತೆ (ಸೌಇಇ. IX-i, ೨೯೭-೦೫; 1177).

**ಬಳಬಳನೆ** (ಅ). ಒಂದು ಅನುಕರಣಾವ್ಯಯ: ಸಂದುಕಳಾಸಂಗಳು ತಪ್ಪಿ ಅಸ್ಥಿಗಳು ಬಳಬಳನುದುರಲು (ಕನ್ನಪ. ಕ. ೯೯-೦೯೦); ನೃಪನರಮನೆಗೆ ಬಳಬಳನಾಗಳೆ ಸ್ವರ್ಗಲೋಕದ ಹೂಮಳೆಗಱೆದುದು ಚೆಲ್ಲಿದಂತೆ (ಭರತ. ೩-೦೦೬). [ಬಳಬಳ$_1$ + — ಅನ್$_1$]

**ಬಳಬಳಿಕೆ, ಬಳಬಳಿಕ್ಕೆ** (ನಾ). [ನಾಟ್ಯ] ಒಂದು ಬಗೆಯ ನೃತ್ಯಭಂಗಿ : ಆ ನಿಲವಿನ ನಿರ್ವಾಹಮುಂ ಗತಿಯ ಗಾರವಮುಂ ಚಾರಿಗಳ ಚೆಂದಮುಂ . . . ಬಳಬಳಿಕೆಯ ಚಂಚುರತೆಯುಂ . . . ತೋಱುತ್ತುಮಿರೆ (ಕುಸುಮಾ. ೭-೭೩ ವ). **ಬಳಬಳಿಕ್ಕೆ :** ಚಾಳೆಯದೋಜೆಗಳ್ ಬಳಬಳಿಕ್ಕೆಗಳಾಂತಿರೆ. . . ಸಂದುದು ರಂಭೆಯ ಲಾಸ್ಯವಿಭ್ರಮಂ (ಅನಂಪು. ೪-೯೦). [?]

**ಬಳಬಳಿಕ್ಕೆ** 'ಬಳಬಳಿಕೆ' ನೋ.

**ಬಳಮದ್ದು** 'ಬಲವಂದುರ್' ನೋ.

**ಬಳಮದಿರ್ಕು** (ಕ್ರಿ). ಉಗ್ರವಾದ ಮಾದಕದ್ರವ್ಯವನ್ನು ಕುಡಿಸು : ತದ್ದಮಿತಾರಿಯ ಬಲದ ತೋಳ್ಪೆಱಿದು ಬೀ[ಟ್ವಂ]ತಾತಂ ಬೀ[ಟ್ವು]ದುಮುಂಬರಚರಶ್ರೀಕಾಂತೆಗೆ ಬಳಮದಿರ್ಕುವಂತಾತನಿಕ್ಕುವುದಂ ಕಂಡು (ಶಾಂತಿಪು. ೪-೨೩ ವ). [ಬಳಮದುರ್ (< ಬಲಮದುರ್) + ಇಕ್ಕು]

**ಬಳಮದುರ್** 'ಬಲಮದುರ್' ನೋ.

**ಬಳಮರ್ದುಕಾಱ** (ನಾ). ಉಗ್ರವಾದ ಮಾದಕದ್ರವ್ಯವನ್ನು ತಯಾರಿಸುವವನು: ಕಾಮದೇವನೆಂಬ ಬಳಮರ್ದುಕಾಱನ ಮಾಡಿದ ಮರ್ದಿನಂತೆ ಬಳಿದು ಪಳಂಬಡೆದು (ಪಂಶಲಾ. ೯-೯೭ ವ). [ಬಳಮರ್ದು (< ಬಲವಮರ್ದು) + – ಕಾಱ]

**ಬಳಯಿಸು** 'ಬಳೆಯಿಸು' ನೋ.

**ಬಳಯುತ** 'ಬಲಯಂತ' ನೋ.

**ಬಳರಿ** 'ಭಟಾರಿ' ನೋ.

**ಬಳಲ್** 'ಬಟಿಲ್' ನೋ.

**ಬಳಲಕೊಪ್ಪ** (ನಾ). ಒಂದು ಊರಿನ ಹೆಸರು: ಸಂನಕೊಪ್ಪದ ಬಸ್ತಿಯಿನ್ದಾ ಬಡಗಲು ಬಳಲಕೊಪ್ಪದ ಕೆಱೆ × × ಕಲು ಸರುಹ ಸಹ ಬಿಟ್ಟರು (ಎಕ. VII, ಶಿವಮೊ. ೦೦೯-೪೦; 950 ?). [? + ಕೊಪ್ಪ]

**ಬಳಲಿಕೆ** 'ಬಟಿಲ್ಕೆ' ನೋ.

**ಬಳಲಿಸು** 'ಬಟಿಲಿಸು' ನೋ.

**ಬಳಲು** 'ಬಟಿಲ್' ನೋ.

**ಬಳಲುಗಚ್ಚೆ** (ನಾ). ಜೋತಾಡುವಂತೆ ಕಟ್ಟಿದ ಕಚ್ಚೆ: ಉಟ್ಟ ಬಾಸರ ಬಳಲುಗಚ್ಚೆಯನಟ್ಟಹಾಸದ ಜನದ ನಗೆಗಳ ನಟ್ಟವಿಗನೋಸರಿಸಿ ಸಭೆಯಲಿ ಮೆಲ್ಲನೈತಂದ (ಕುಮ್ಯಾ.ಆ. ೦೩-೦೫); ಉಟ್ಟ ಧೋತ್ರದ ಬಳಲುಗಚ್ಚೆಯ [ಪಾಠಾಂ. ತಳರುಗಾಸೆಯ] ಸೃಷ್ಟಿಗಚ್ಚರಿರೂಪಿನಲಿ . . . ಬಂದನಾ ಋತುಪರ್ಣನೋಲಗಕೆ (ಜಕಕ. ೯-೨೯). [ಬಳಲು (< ಬಟಿಲ್) + ಕಚ್ಚೆ]

**ಬಳಲುಗೈ** (ನಾ). ತೂಗಾಡುವ ಕೈ: ಮಣಿಮಯಭದ್ರಭವನಾವಳಿಗಳ ನಿಲಜನ ಬಳಲುಗೈಸೋಂಕಿನಲಿ ನೆಲಕಪ್ಪಳಿಸಿ ಬಿದ್ದವು (ಕೊರಚಾ. ೩-೭-೦೭). [ಬಳಲು (< ಬಟಿಲ್) + ಕೈ₂ (< ಕೆಯ್₂)]

**ಬಳಲುಗೊರಳು** (ನಾ). ಜೋತುಬಿದ್ದ ಕೊರಳು, – ಕುತ್ತಿಗೆ: ಬಳಲುಗೊರಳಲಿ ಬೀಳುತಿರ್ದವು ಬೆಳುವ ಗಿಳಿ ಕಬ್ಬಕ್ಕಿ . . . ಕೊಂಚೆಗಳವನಿಯಾಗಲದಲಿ (ಕೊರಚಾ. ೩-೩-೦೬). [ಬಳಲು (< ಬಟಿಲ್) + ಕೊರಳು (< ಕೊರಲ್)]

**ಬಳಲುಡಿಗೆ** (ನಾ). ಜೋಲುವ ಉಡಿಗೆ; ನೇತಾಡುವ ಬಟ್ಟೆ: ಆ ಸಮಯದಲಿ ಬಂದನೊಬ್ಬನು ಭೂಸುರನು . . . ಬಾಸರದ ಬಳಲುಡಿಗೆ ವಟ್ಟೆಯ ಧೂಸರದ ಮೈದೊಡಿಗೆ ಮೆಱೆಯೆ (ಕುಮ್ಯಾ.ಆ. ೨೦-೦೩). [ಬಳಲು (< ಬಟಿಲ್) + ಉಡಿಗೆ (< ಉಡುಗೆ)]

**ಬಳಲುನೋಟ** (ನಾ). ದಣಿದ ದೃಷ್ಟಿ; ಆಯಾಸಗೊಂಡ ನೋಟ: ಬಳಲುನೋಟಗಳೋರೆನೋಟವಾಗವೆಂದೊಳುನೋಟವರಸಿ ಪಾಡಿದಳು (ಶರಷ. ೦೦-೩೦). [ಬಳಲು (< ಬಟಿಲ್) + ನೋಟ]

**ಬಳಲುಮುಡಿ** 'ಬಟಿಲ್ಮುಡಿ' ನೋ.

**ಬಳಲುಹೆಜ್ಜೆ** (ನಾ). ದಣಿದ ಹೆಜ್ಜೆ; ಸೋತ ಹೆಜ್ಜೆ: ನೀಲಿಕನ್ನಡಕದ ಮುದುಕ ಬಳಲುಹೆಜ್ಜೆ ಹಾಕುತ್ತ ಹೊರಗೆ ನಡೆದನು (ಕುಸರು. ೨೨೯). [ಬಳಲು (< ಬಟಿಲ್) + ಹೆಜ್ಜೆ₁ (< ಪಜ್ಜೆ)]

**ಬಳಲೊಡಲ್** (ನಾ). ತೆಳ್ಳಗಿರುವ ಶರೀರ; ಕೃಶೋದರ: ಬಳಲೊಡಲ ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಜಶೇ. ೧೮-೨೯). [ಬಳಲ್ (< ಬಟಿಲ್) + ಒಡಲ್]

**ಬಳಲ್ಕೆ** 'ಬಟಿಲ್ಕೆ' ನೋ.

**ಬಳಲ್ಕೆಗಳೆ** 'ಬಟಿಲ್ಕೆಗಳೆ' ನೋ.

**ಬಳಲ್ಗಾಮಿಲೆ** (ನಾ). ಹೆಚ್ಚು ಆಯಾಸವನ್ನುಂಟುಮಾಡುವ ಒಂದು ಬಗೆಯ ಕಾಮಾಲೆರೋಗ: ಮೂಕತ್ವ, ಕಾಮಾಲೆ, ಊದುಗಾಮಿಲೆ, ಬಳಲ್ಗಾಮಿಲೆ, ಕುಂಭಕಾಮಿಲೆ (ಶುಕಸ. ೩೨೭). [ಬಳಲ್ (< ಬಟಿಲ್) + ಕಾಮಿಲೆ (< ಕಾಮಾಲೆ)]

**ಬಳಲ್ಗಿವಿ** (ನಾ). ಜೋತು ಬಿದ್ದ ಕಿವಿ: ಪಡೆ ಗೋಳಿಟ್ಟುದಾನೆಕುದುರೆಗಳೊರೆವ ಕಂಬನಿ ಬಳಲ್ಗಿವಿಗಳಿಂ ಜೋಲ್ದವು (ಕೃಬಿಜಾ. ೦೩-೬೦). [ಬಳಲ್ (< ಬಟಿಲ್) + ಕಿವಿ₁]

**ಬಳಲ್ಚು** (ಕ್ರಿ). (ದ್ರವ ಮುಂತಾದುವನ್ನು) ಬಳಿದುಕೊಳ್ಳು; ಬಳಿದಂ ಕೂಡಿಸು; ಬಾಚು: ವಿಸುಪ ಮಿಂಚಿನೊಳಗೆ ಸುಳಿವ ಬಣ್ಣಮಂ ಬಳಲ್ಚಿಕೊಂಡು ಚಿತ್ರಕಾಶರಾಶಿಯೆನಿಪ . . . ವಿಭೂತಿ (ಜಪೂರ. ೯-೫); ಎಳವಳಿಕೆನೆ ಬೆಳ್ಳಿಗಂ ಬಳಲ್ಚಿ ಶಶಿರುಚಿಯೊಳಿರಿಕಿಪ್ಪಂದದಿನೀಂ ತೊಳಗಿದುದೊ . . . ಸದ್ಯೋಜಾತವದನಂ (ಜಜು. ೫-೩). [ಬಳಲ್ ? + – ಚು₁]

**ಬಳಲ್ದುಱುಬು** (ನಾ). ಜೋತಾಡುವ ಮುಡಿ: ಪೂಗಳು ಮುಡಿಯುದ ಬಳಲ್ದುಱುಬು . . . ಸಿಂಗರಕೆ ಮಿಗಿಲಾಯ್ತುವನಿಸುತೆಗೆ ಋತುಮತಿಯಾಗಲು (ಕೃಬಿಜಾ. ೦೮-೨೫). [ಬಳಲ್ (< ಬಟಿಲ್) + ತುಱುಬು₁ (< ತುಱುಂಬು₁)]

**ಬಳಲ್ನಡು** (ನಾ). ಸಣ್ಣ ಸೊಂಟ; ಬಡನಡು: ಬಿಣ್ಣೊಡೆಯ ಬಡವಾಸೆಯ ಬಳಲ್ನಡುವಿನ . . . ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಜಶೇ. ೧೮-೨೩). [ಬಳಲ್ (< ಬಟಿಲ್) + ನಡು₁]

**ಬಳಲ್ನುಡಿ** (ನಾ). (ಅಲಂ) ನೋವಿನಿಂದ ಕೂಡಿದ ಮಾತು: ಕೊಟ್ಟ ಬಳಿಕಲ್ಲದೆ ಮಾತಾಡೆನೆಂಬ ಬಳಲ್ನು [ಪಾಠಾಂ. ಬಳಲುನು, ಅಳಲ್ನು, ನಳಲನು]ಡಿಯಂ ಕೇಳ್ದು ಶಿವಂ ಕೌತುಕಂಬಟ್ಟು (ಪಂಬರ. ೦೨-೬೮). [ಬಳಲ್ (< ಬಟಿಲ್) + ನುಡಿ₂]

**ಬಳಲ್ಮಿಡಿ** (ನಾ). ತೂಗಾಡುವ ಹೀಚು ಕಾಯಿ: ಬಳಲ್ಮಿಡಿಗಳಲ್ಲಿ ಬಲ್ಮಿಡಿಕಾಯ್ಗಳ್ . . . ತನಿವಣ್ಣೊಳಿಪ್ಪಾವೆಸೆದುದು (ಶೀಕೃಕೃ. ೨-೩-೦೫). [ಬಳಲ್ (< ಬಟಿಲ್) + ಮಿಡಿ₄]

**ಬಳಲ್ಮುಡಿ** 'ಬಟಿಲ್ಮುಡಿ' ನೋ.

**ಬಳಲ್ಮೊಗ** (ನಾ). ಆಯಾಸಗೊಂಡಂತಿರುವ ಮುಖ: ಎಸೆವ ಬಳಲ್ಮೊಗಮುಷ್ಣಮನುಸಿರ್ವುಸಿರನುರಾಗವೇಱುವಕ್ಷಿದ್ವಿತಯಂ . . . ತನುಮನೋಹರಂ ಮಾನಿನಿಯಾ (ಗಂಕ. ೨-೨೦). [ಬಳಲ್ (< ಬಟಿಲ್) + ಮೊಗ]

**ಬಳವಂತ** 'ಬಲವಂತ' ನೋ.

**ಬಳವಡಿಕೆ** (ನಾ). ಒಂದು ಬಗೆಯ ಸಸ್ಯ: ಅಡಕುಪುಟ್ಟನ ಗಿಡ, ಬಳವಡಿಕೆ . . . ರಕ್ತಪುನರ್ನವ (ಶ್ಯಾಶಿ. ೦೩-೨೩೦). [?]

**ಬಳವತ್ಸೈನ್ಯ** 'ಬಲವತ್ಸೈನ್ಯ' ನೋ.

**ಬಳವದ್ವೈರಿ** 'ಬಲವದ್ವೈರಿ' ನೋ.

**ಬಳವಳಿಸು** (ಕ್ರಿ). (?): ಜಳಲವಮಿರ್ದ ಬೆಂಚೆಗೆ ತುಷಾತುರದಿಂ ಪರಿತಂದು ತೀರದೊಳ್ ಘಳಿಲನೆ ಕಾಲನೂಱೆ ಮೊಗಮಂ ನೆಱೆ ನೀಡಿ ತದೀಯ ಪಂಕವಾಷ್ಪುಳದ ಮಹೋಷ್ಣಮೋಷ್ಠಪುಟಮಂ ಸುಡೆ ಸಾರ್ದು ಬಿದಿರ್ಚಿ ಮೋಱೆಯಂ ಬಳವಳಿಸುತ್ತುಮಿರ್ದುದು ಸಮಂತು ಮೃಗೌಘಮದಾ ನಿದಾಘದೊಳ್ (ಕುಕುಪು. ೬-೦೨೭; ಶಾಂತೀಶ್ವ. ೦೨-೨೩ ನೋ.). 'ಅಳವಟಿಸಂ' ನೋ. [P ಇದು 'ಕಳವಳಿಸು' ಎಂಬುದರ ಅಪಲಿಖಿತವಿರಬಹುದೆ ?]

**ಬಳವಿ** (ನಾ). ೧. ಬೆಳವಣಿಗೆ; ವೃದ್ಧಿ: ತಿಂಗಳ ಬಳವಿಯನುಚ್ಚತರಂಗಾಂಬುಧಿ ಬಳೆವ ತೆಱದಿನನುದಿನದಿಂದಂ ತಿಂಗಳ ಬಳವಿಯನಂತಾ ಶೃಂಗಾರಾಂಬುಧಿಗೆ ಗರ್ಭವೇಂ ಬಳೆದತ್ತೊ (ಸುಕುಮಾ. ೦೦-೦೩); ತನುಜನ ಬಳವಿಯನೆ ನೋಡಿ ಜನಕಂ ನಲಿದಂ (ಶಬಮ. ೨೦೮ ಪ್ರಯೋ); ಮಾಡಿದುದು ಚಿಂತಾಕ್ರಾಂತತ್ರಯನೆಮಗೀ ಮಗಳ ಬಳವಿ (ವರ್ಧಪು. ೯-೩೯). ೨. ವ್ಯಾಪ್ತಿ; ಹರಹು: ಕಮ್ಮನೂರ ಬಳವಿಯೊಳು ಅಯ್ಗಣ್ಡುಗಂ ಬೆಬ್ಬಿಲೆ (ಎಕ. XIV, ಎಡತೊ. ೮೮-೦೦; 1079); ಬೆಳತಿಗೆಗಣ್ಣ ಬಳವಿಗಿದುವೆ ಗುಱು

ಯೆಂದು ಕುಜುಪನಿಕ್ಕುವಂತೆ ಕೊನೆಗೊಡಂಕೆಯೊಳ್ ತೋರಮುತ್ತಿನ ಮುಗುಳ್‌ ತೆಗಳ್ಚಿಯುಂ (ಚಂದ್ರಪ್ರ. ೩-೬೩ ವ). ೩. ಆಕ್ರಮಣ; ಮುತ್ತಿಗೆ: ಜಾನ್‌ಕಸ್ತೂರಿಯು ಕೊಡಗುಜನರ ಬಳವಿಗೆ ಸಿಕ್ಕಿ ಜಗಳವಾಡಿ ಬಹಳ ಜನಕ್ಕೆ ಜಾಯ ಜಖಮಿ ಆದ್ದರಿಂದ ಲಾಚಾರಾಗಿ (ರಾಜೇಂದ್ರ. ೪೦).

[ ಬಳ್‌$_1$ + — ವಿ$_1$ ]

**ಬಳವಿಗೆ** (ನಾ). ೧. ಬೆಳವಣಿಗೆ; ವೃದ್ಧಿ: "ಸಚರ ನರರಲ್ಲಿ ಬಳೆದಂ ಬಳವಿ ಬಳವಿಗೆಯೆ ರುಚಿರಮಕ್ಕುಂ" (ಸಂಜೀವ. ೨೬); ಮಕ್ಕಳಂ ಪಡೆದವರ ಕೂಸಾಟಮವರ ಬಳವಿಗೆಯವರ ಹರೆಯದ ವಿಳಾಸಮುಮಂ ನೋಡಲಿವು ಮೂಱುಂ ಮುನ್ನಂ ನೋಣದವರ್ಗೆಂತು ಸಂಭವಿಪುದು (ಸಮ್ಯಕ್ತ್ವ. ೫-೧೦). ೨. ಅಭಿವೃದ್ಧಿ; ಏಳಿಗೆ; ಶ್ರೇಯಸ್ಸು: ಭಕ್ತನ ಬ[ಶಾಶಾಂ. ಬೆ]ಳವಿಗೆಯ ಮಾಡಿದನುಪೋಯೆಂದುದು ಸುರಸ್ತೋಮ (ಶಬರಶ. ೬-೧೯). ೩. ಅತಿಶಯ; ಅಧಿಕ್ಯ; ಹೆಚ್ಚಳ: ಇಳೆಯ ಸುಧರ್ಮಮಾರ್ಗದಲ್ಲಿ ನಲವಿಂದ ಪಾಲಿಸುತಿರ್ದರು ಹರಿಭಕ್ತಿ ಬಳವಿಗೆಯೊಳು ನಲಿದಾಗ (ಕಂಪಪ. ೩-೧೫).

[ಬಳವಿ + —ಗೆ]

**ಬಳವಿವಡೆ** (ಕ್ರಿ). ಹೆಚ್ಚಳವನ್ನು ಹೊಂದು; ಅಧಿಕವಾಗು: ಕೆಚ್ಚು ವಿರ್ದ ಮಚ್ಚುಮನುರ್ಚಿಪೋದ ಮೇಳಮುಮನಳವಿಗಟಿದಲಂಪುಮಂ ಬಳವಿವಡೆದಟ್ಟುಟುಮನೋರೋರ್ವರೊಳ್ ನೆಟಿದು (ಆದಿಪು. ೪-೩೭ ವ).

[ಬಳವಿ + ಪಡೆ$_1$]

**ಬಳವೈರಿ** 'ಬಲವೈರಿ' ನೋ.

**ಬಳಸಿಗ** (ನಾ). ಕವಚವನ್ನು ತೊಟ್ಟವನು: "ಬಳಸಿಗಂ—ಕುಪ್ಪಸಿಗಂ" (ಶಮದ. ವ. ೩೬ ಅಡಿ); ಬಳಸಿಗಂ ಮೊಳೆ ತಾಳಂ . . . ಯಿಱುಕುಳಿಯಿಂಪಾದಿಯಾಗಱ ಕುಳನಂ (ಶಮದ. ೨೬).

[ಬಳಸು$_3$+ —ಇಗ]

**ಬಳಸು$_1$** (ಕ್ರಿ). ೧. ಸುತ್ತುವರಿ; ಸುತ್ತುಗಟ್ಟು: ಶ್ರೀ ತಳ್ಪುರದೊಳ್ ಕೌಸ್ತುಭಜಾತದ್ಯುತಿ ಬಳಸಿ ಕಾಂಡಪಟದಂತಿರೆ (ಕಾಶಾ. ೦-೦); ಪಲವು ವಿಮಾನಂಗಳಂ ವಿಗುರ್ವಿಸಿ ಕ್ಷಪಣಕನ ವಿಮಾನದ ಮುಂದೆ ಬಳಸಿಯುಂ ಪೋಪಂತು ಮಾಡಿಯಾಕಾಶಮೆಲ್ಲಮುಂ ವಿಮಾನಮಯಮಾಗೆ ವಿಗುರ್ವಿಸಿ (ವಡ್ಡಾರಾ. ೬೯-೬); ನೆರೆದರಸುಮಕ್ಕಳ ನಿಡುಗಣ್ಗಳ ಬಳಗಮೆಬಗೆ ತನ್ನಯ ಪೆಂಡ್ಯೊಳ್ ನಡೆ ಬಳಸಿ ಪಲರುಮಂಬಂತುಡೆ ನಡುವಿರ್ದೊಂದು ಪುಲ್ಲೆಯಿರ್ಪಂತಿರ್ದಳ್ (ಶಂಶಖಾ. ೩-೫೦); ಆಗಳಾ ಕೊಳನ ಬಳಸಿ ಬಂದು ನಿರ್ಭರವಾಗಿ ಬೊಬ್ಬಿಱಿದಬ್ಬರಂಗೆಯ್ದು (ಗದಾಯು. ೭-೦ ವ). ೨. ಸುತ್ತುಹಾಕು; ಅಲೆ: "ಬಳಸು—ಭ್ರಮಣ, ಕಂಚುಕಾಂಗಯೋಃ (ಯುದ್ಧಕವಚ)" (ಶಮಘ); ಅವರೋದುವ ಕ್ಷೇತ್ರದೆ ಬಳಸಿಯುಂ ನೋಡಿಸುವುದೆಂದು ಪೇಟ್ಕೊಂಡೆ (ವಡ್ಡಾರಾ. ೦೬೬-೨೨). ೩. ತಿರುಗು; ಹೊರಳು: ಹೊಳೆಯ ಸುಳಿಯಲ್ಲಿ ಸಿಕ್ಕಿದ ಹುಲ್ಲು ಬಳಸುಪದಲ್ಲದೆ ಅಳಿವುದಿಲ್ಲ ಮುಳುಗುವುದಿಲ್ಲ (ಕೋಟಿಶಖ. ೦೫೦-೫೦೭). ೪. ಸುತ್ತಿ ಹೇಳು: ಮುನ್ನಮೆ ಮುಟ್ಟಿ ನುಡಿಯದೆ ಪೊಱಪೊಱಗನೆ ಬಳಸಿ ಕನ್ನೆದು ಶಂಕೆಯಂ ಕಿಡಿಸಿ ಮತ್ತಮಿಂತೆಂದಳ್ (ಶಂಶಖಾ. ೪-೬೩ ವ).

ಬಳಸುಬಳಸು, ಬಳಬಳಸು (ದ್ವಿರುಕ್ತಿ): ಹಲವು ಸೂಳ್ ಕೈ ಮುಟ್ಟಿ ಸವಿಂಸುತ ಬಳಸಿಬಳಸಿ ಬಳಿಕೆ ಹೊಡವಡುತ (ಬಸಪು. ೫೯-೨೩); ಅನಿರೀಕ್ಷಿತವಾಗಿ ಅನೇಕಾನೇಕ ವಿಷಯಗಳು ಅವನ ಮನಸ್ಸನ್ನು ಬಳಬಳಸಿ ಹಾದು ಹೋದುವು (ನಿಶೀಲ. ೦೫೦). ಬಳಸಿ ಹೇಳು= ಸುತ್ತಿ ಹೇಳು; ನೇರವಾಗಿ ಹೇಳದಿರು: ಹಾಗ್ಯಾಕೆ ಬಳಸಿ ಹೇಳ್ತೀಯೋ ಮುನಿಯ? (ನರಪಾ. II, ೧೦೫). [ಬಳ್‌$_2$ +— ಸು$_1$./ತುಳು. ಬಲೆಪು, ಬಳಿಪು]

**ಬಳಸು$_2$** 'ಬಟಸು$_1$' ನೋ.

**ಬಳಸು$_3$** (ನಾ). ೧. ಆವರಿಸುವಿಕೆ; ಮುತ್ತುವುದು; ಸುತ್ತುವರಿಯುವಿಕೆ: ಅಶ್ವತ್ಥಾಮಂ ಭೀಮೋದ್ದಾಮಶ್ಯಾಮಜಳಧರಪಿಮುಕ್ತಶರಾವಳಿಯ ಬಳಸಂ ಕಂಡು ಮುಗುಳ್ನಗೆ ನಕ್ಕು (ಶಂಶಖಾ. ೧೨-೬೭ ವ); ಬೆಳಗುಗಳ ಬಳೆದ ಬಳಗದ ಬಳಸುಗಳೊಳಗೊಳಗೆ ತೊಳಗಿ ಪೊಳೆ ಪೊಳೆದೊಳಗುಚ್ಚಳಿಸಿ ...ತಳರ್ದತ್ತಾಗಳ್ (ಕಾವ್ಯಾ.ಕ. ೨೩). ೨. ಸುತ್ತುವಿಕೆ; ಭ್ರಮಣ: ಚಾಪಂ ಕುಟಿಲತೆಗೆಟ್ಟು ಚಕ್ರವಳಯದ ಬಳಸಂ ಮಾಂಕರಿಸಿ ಬಿಲ್ಲ ಕೊಪ್ಪು ಕೊಡಂಕೆಯ ಕೊಪ್ಪಿನವೊಲವುರೆ (ಶಾಂತಿಪು. ೪-೯೩). ೩. ಸುತ್ತುಗಟ್ಟುವಿಕೆ: ಎಳವಳ್ಳಿಯ ಬಳಸಿಂಗೊಳಗಾದಸುಗೆಯ ಚೊಂಪಂಗಳೊಳ್ (ಕಬ್ಬಿಗಕಾ. ೦೨೫); ದಂತಪಂಕ್ತಿಯ ನಡುವೆ ಎಂತಿಪ್ಪುದದು ಜಿಹ್ವೆ ಅಂತು ದುರ್ಜನರ ಬಳಸಿನಲಿ ಸಜ್ಜನನು ನಿಂತಿಹನು (ಸರ್ವಜ್ಞ. ೬೨೦). ೪. ಸುತ್ತಿ ಕಟ್ಟುವ ಸಾಧನ: ಎಂಟುಂ ದೆಸೆಯ ದೇವತೆಗಳೆ ಗೊಳಸಾಗಿಯುಂ ವಾಸುಗೆಯೆ ಬಳಸಾಗೆಯುಂ (ಕಇ. IV, ೫೦-೧೦; 1000 ?); ಲೋಕಪಾಳಕರೇ ಗೊಂಟಾಗೆ ವಾಸುಗಿಯೇ ಬಳಸಾಗೆ ಫಣಿಕುಳಂಗಳೇ ದಾರವಾಗಿ (ಎಕ. VII, ಶಿಕಾಂ. ೦೦೬-೩೦; 1054). ೫. ಸುತ್ತುಮುತ್ತು; ಆಸುಪಾಸಂ: ಮಾಧವಿಯ ಮಂಡಪದ ಬಳಸಿನೊಳಗೆ ಪಳುಕಿನ ಕುಂಭದೊಳಂ . . . ಕಪ್ಪುರದ ಬೀಯದ ಬಾಯಿನದ ವಿಲಾಸಮಚ್ಚರಿಯಾಗೆ (ಅನಂತಪು. ೯-೩ ವ); ಸಡಗರದಿ ಮಹಿಳಾನಿಕರ ಬಂದುದು ಸತಿಯ ಬಳಸಿನಲಿ (ಜೈಮಿನಿ. ೯-೩೦). ೬. ಆವರ್ತ; ಸುತ್ತು: 'ಮೂಱುವಳಸು' ಪರಾ. ೭. ನೇರವಾಗಿ ಹೇಳದಿರುವಿಕೆ; ಸುತ್ತು ಮಾತು; ನೇರವಲ್ಲದ ಮಾತು: ಬಳಸಿನೋಳೀಂ ತಿಂಬುದು ಮಾತುಳಂಗಪತ್ರಪ್ರಯುಕ್ತಮಧುಮಂ ಬೇಗಂ ಕಳೆಗುಂ ಮಸಗಿದಪಾಪಾನಿಳನಂ (ಲೋಕೋಪ. ೯-೦೯೬); ಎತ್ತುವುದೆ ಮಂತ್ರಮಿನ್ನಾ ಸುತ್ತಂಬಳಸುಗಳ ನುಡಿಯವು (ಮಹಾಸೇ. ೦೦-೬೬); ಸುತ್ತೇಕೆ ಬಳಸೇಕೆ ನೆಟ್ಟನೆ ಮಾತಾಡು (ಇಂಕಾಶ. ೨೩೯-೭೩). 'ಸುತ್ತುವಳಸು' ಪರಾ. ೮. (ಊಟ ಮೊದಲಾದ ವಿಷಯಂಗಳಲ್ಲಿ) ಸರದಿ; ಸಲ; ಬಾರಿ: ಅವರ ಮನೆಯ ಔತಣದಲ್ಲಿ ನಾಲ್ಕು ಬಳಸು ಬಡಿಸಿದರು (ರೂಢಿ). ೯. ಕವಚ; ಚಿಲುಖಿತ್ತು: "ಬಳಸು ಭ್ರಮಣ, ಕಂಚುಕಾಂಗಯೋಃ (ಯುದ್ಧಕವಚ)" (ಶಮಘ).

[ < ಬಳಸು$_1$ ]

**ಬಳಸು$_4$** 'ಬಟಸು$_2$' ನೋ.

**ಬಳಸುಗ** (ನಾ). ಸುತ್ತಾಡುವವನು; ತಿರುಗುವವನು: "ವ್ರಿಣ. ಪ್ರಯಾಣಃ—ಈ ೨ ಬಳಸುಗಂ" (ಕಾಶಬ್ದ. ೦೯೬). [ಬಳಸು$_1$+— ಗ$_2$]

**ಬಳಸುಗೆಯ್ಮೆ** (ನಾ). ಸುತ್ತಿ, ಬಳಸಿ ಮಾಡುವ ಕೆಲಸ; ನೇರವಾಗಿ ಮಾಡದ ಕಾರ್ಯ: ನಿನ್ನ ಸೇನೆಯನೆನಗೆ ತೋರ್ದು, ನಾನದಂ ದೊರೆಗೊರೆವ ಬಳಸುಗೆಯ್ಮೆಗೆ ಬರಿದೆ ದಣಿಯದಿರ್ (ಶ್ರೀರಾಮಪಟ್ಟಾ. ೬೦೭-೦೬೭).

[ಬಳಸು$_1$+ಗೆಯ್ಮೆ (< ಕೈಮೆ$_1$)]

**ಬಳಸುದಾರಿ** (ನಾ). ಸುತ್ತಾದ ಹಾದಿ; ಹತ್ತಿರವಲ್ಲದ ಮಾರ್ಗ; ನೇರವಲ್ಲದ ದಾರಿ: ಬಳಸುದಾರಿಯಲಿ . . . ಮುಂಬರಿಯುತಿದೆ ರಾಯನ ಸವಾರಿ! (ಬಿಜಿದ. ೪-೪); ದಿಮ್ಮಿಗಳನ್ನು ಅಲ್ಲಿಂದ ಸಾಗಿಸುವ . . . ಉದ್ದೇಶದಿಂದ ಬಳಸುದಾರಿಯನ್ನು ತುಳಿದಿದ್ದ (ಬಳಜಃ. ೯೯).

[ಬಳಸು$_1$ + ದಾರಿ]

**ಬಳಸುದೊಂಗಲ್** (ನಾ). ಸುತ್ತಿರುವ ಕುಚ್ಚು, — ಗೊಂಡೆ: ದೇವಿಯರ್ಗೆಂ ಕೊಱತೆ ಪಾಂಡ್ಯಸತಿಯರ ತೊಂಡಲ್ದೀವಿದ ಘನರತ್ನಂಗಳ್ ಪಾಪುಗೆಗಳ ಬಳಸುದೊಂಗಲೆಡೆಯೊಳ್ ತೋರ್ಕುಂ (ಚಕಪ. ೩-೩೬).

[ಬಳಸು$_1$ + ತೊಂಗಲ್]

**ಬಳಹ** 'ಬಳಪ' ನೋ.

**ಬಳಹರಿ** 'ಭಟ್ಟಾರಿ' ನೋ.

**ಬಳಾಕ** 'ಬಲಾಕ' ನೋ.

**ಬಳಾಕೆ** 'ಬಲಾಕೆ' ನೋ.

**ಬಳಾಢ್ಯ** 'ಬಲಾಢ್ಯ' ನೋ.

**ಬಳಾಧ್ಯಕ್ಷ** 'ಬಲಾಧ್ಯಕ್ಷ' ನೋ.

**ಬಳಾರ** 'ಭಟಾರ' ನೋ.

**ಬಳಾರಿ** 'ಭಟಾರಿ' ನೋ.

**ಬಳಾಹಕ** 'ಬಲಾಹಕ' ನೋ.

**ಬಳಾಹಿತ** (ನಾ). ಇಂದ್ರ; ದೇವೇಂದ್ರ: ಬಳಾಹಿತಮುಖಾಮರನತೇ ಗಳಾನ್ವಿತಹಲಾಹಲಭಿಲೇಶಯ ಕಳೇವರವಿಳಾಸದೆ ಕಳಂಕರಹಿತೇ (ರಾಶಕೇ. ೧೦-೧೧೧). [ಸಂ. ಬಲಾಹಿತ]

**ಬಳಿ$_1$** 'ಬೞಿ$_1$' ನೋ.

**ಬಳಿ$_2$** 'ಬೞ್$_3$' ನೋ.

**ಬಳಿ$_3$** 'ಬಲಿ$_3$' ನೋ.

**ಬಳಿಕ** 'ಬೞಿಕ' ನೋ.

**ಬಳಿಕೆಱೆ** (ನಾ). ಒಂದು ಊರಿನ ಹೆಸರು: ಚಿಕ್ಕೇಶ್ವರಕ್ಕೆ ಈಶಾನ್ಯದ ಪೊಳಿಯುಂ ಬಳಿಕೆಱೆಯ ಕೀೞೇರಿಯ ಬೇರುಂಗಾಲಂ ಒಕ್ಕಲೊಳೊನ್ದು ಪೊಱೆಯುಂ ಸಲ್ವದು (ಎಕ. III, ನಂಜನ. ೧೮೩-೦೦; 977). [ಬಳಿ$_1$ + ಕೆಱೆ]

**ಬಳಿಕೋಲು** (ನಾ). ಬಿಲದೊಳಗೆ ಹೊಕ್ಕ ಪ್ರಾಣಿಗಳನ್ನು ಈಚೆಗೆ ಬರುವಂತೆ ಮಾಡಲು ಆ ಪ್ರಾಣಿಗಳು ಹೋದ ಕಡೆ ಹಾಕಿ ತಿವಿಯುವ ಕೋಲು: ಬಳಿಕೋಲು ಹಾಕಿ ನೋಡಿದಾಗ ಒಣೇಲಿ ಗೊತ್ತಾತು! (ಮಲೆವು. ೬೬). [ಬಳಿ$_2$ (<ಬೞ್$_3$) + ಕೋಲು$_1$ ( < ಕೋಲ್$_1$)]

**ಬಳಿಕ್ಕ** 'ಬೞಿಕಂ' ನೋ.

**ಬಳಿಕ್ಕಂ** 'ಬೞಿಕಂ' ನೋ.

**ಬಳಿಗಳುಹಿಸು** (ಕ್ರಿ). ಊರಿಗೆ ಬಂದ ಆಪ್ತೇಷ್ಟರನ್ನು (ಊರಿನ ಹೊರಗಿನ ಜಲಾಶಯದ ವರೆಗೆ ಜೊತೆಯಲ್ಲಿ ಕರೆದುಕೊಂಡು ಹೋಗಿ) ಬೀಳ್ಕೊಡು: ಲಲಿತಲಕಾಂಗಿ ಶಶಿಪ್ರಭೆಯನು ಬಳಿಗಳುಹಿಸಿ ಜಯವರ್ಮನೃಪತಿ ಲಲನೆ ಜಯಶ್ರೀದೇವಿ ಸಹಿತ ತನ್ನ ಪೊಳಲ ಪೊಕ್ಕನು (ಶಂಶ್ರುಸಾಂ. ೧೩-೬೫). [ಬಳಿ$_2$ (< ಬೞ್$_3$) + ಕಳುಹಿಸು]

**ಬಳಿಗೆಲಸ** (ನಾ). ಹತ್ತಿರವಿದ್ದು ಮಾಡುವ ಸೇವಾಕಾರ್ಯ; ಊಳಿಗ: "ಸೇವನಂ, ಸೇವನೀಯಂ, ಸೇವಿಃ, ಸೇವ್ಯಂ, ಸೈವ್ಯಂ — ಈ ೫ ಬಳಿಗೆಲಸಂ" (ಕಾಶಕ್ಕ. ೧೧೫); ಹಲವು ಸೂಳೋರಂತೆ ನಂಬಿಯ ಬಳಿಗೆಲಸವ ಮಾಡಲಾಱದೆ (ಬಸಪು. ೧೮-೧೨); ಬಾರೈ ಬಳಿಗೆಲಸ ಕಿನ್ನರು ನೀನೆಮಗಲ್ಲದಾಪ್ತರಲಿ (ಕೊರರಾ. ೫-೩-೬). [ಬಳಿ$_2$ (< ಬೞ್$_3$) + ಕೆಲಸ]

**ಬಳಿಗೆಲಸಿ** (ನಾ). ಹತ್ತಿರವಿದ್ದು ಸೇವೆ ಮಾಡುವ ವ್ಯಕ್ತಿ: ನಂಬಿಯ ಸಂಗಡಿಗನೋ . . . ಬಳಿಗೆಲಸಿಯೋ ಮಲ್ಲಿಕಾರ್ಜುನಪಂಡಿತರ ಮನೆಯ (ಬಸಪು. ೪೬-೩೬). [ಬಳಿಗೆಲಸ + — ಇ$_3$]

**ಬಳಿಗೆಲಸಿಗ** (ನಾ). = ಬಳಿಗೆಲಸಿ: "ವಾಸಯನ್ = ಬಳಿಗೆಲಸಿಗಂ" (ಕಾಶಕ್ಕ. ೨೮೫). [ಬಳಿಗೆಲಸ + — ಇಗ]

**ಬಳಿಗೊಳ್** 'ಬೞಿಗೊಳ್' ನೋ.

**ಬಳಿಚಿಸು** 'ಬೞ್ಚಿಸು' ನೋ.

**ಬಳಿಚು** 'ಬೞ್ಚು' ನೋ.

**ಬಳಿಜಸ** (ನಾ). ವಂಶದ ಕೀರ್ತಿ: ಪಗೆ ಪಳಿಗಳೆರಡಂ ತೀರ್ಚಿ ಬಳಿ ಜಸವನೆನ್ನ ಪೌರುಷತೇಜಮಂ ಬಿಡದೆ ಸಾಧಿಸಿರ್ಪೆನ್ (ಶ್ರೀರಾಮಪಟ್ಟಾ. ೮೪೨-೪೦೫). [ಬಳಿ$_2$ (< ಬೞ್$_3$) + ಜಸ$_1$]

**ಬಳಿತ** (ನಾ). ಬಳಿಯುವಿಕೆ; ಲೇಪಿಸುವಿಕೆ: "ಲೇಪನಂ, ಲೇಪನೀಯಂ . . . ಲಿಪ್ತಃ — ಈ ೫ ಬಳಿತಂ" (ಕಾಶಕ್ಕ. ೨೦೪). [ಬಳಿ$_1$ (< ಬೞಿ$_1$) + — ತ$_2$]

**ಬಳಿದಪ್ಪು** 'ಬೞಿದಪ್ಪು' ನೋ.

**ಬಳಿದೊತ್ತು** 'ಬೞಿದೊೞ್ತು' ನೋ.

**ಬಳಿದೊಳ್ತು** 'ಬೞಿದೊೞ್ತು' ನೋ.

**ಬಳಿನಕಲು** (ನಾ). ಮೂಲಪ್ರತಿಗೆ ಹತ್ತಿರವಾದ ಪ್ರತಿ: ಬಹು ಸಂಖ್ಯೆಯ ಸ್ವಹಸ್ತ ಪ್ರತಿಗಳು ಇಲ್ಲವೆ ಅವುಗಳ ಬಳಿನಕಲುಗಳು ಅಥವಾ ಪ್ರಾಚೀನಪ್ರತಿಗಳು ನಾಶವಾಗಿ ಬಿಟ್ಟದ್ದು (ಭಾರತ. ೩೮). [ಬಳಿ$_2$ ( < ಬೞ್$_3$) + ನಕಲು]

**ಬಳಿನಡೆ** (ನಾ). ವಂಶಪಾರಂಪರ್ಯವಾದ ನಡವಳಿಕೆ,— ಆಚರಣೆ: ಆಚಣ್ಣದೇವಣ್ಣಗಳು ಬಳಿನಡೆಗೆ ಕೊಟ್ಟ ಗ ೩ ಪು× ×ಯಮ್ಮೆ ಬಳಿನಡೆಗೆ ಕೊಟ್ಟ ಗ ೬ (ಎಕ. VI, ಕಡೂರು. ೫೫-೦೦; 1217). [ಬಳಿ$_2$ ( <ಬೞ್$_3$) + ನಡೆ$_2$]

**ಬಳಿನೀರ್** 'ಬೞಿನೀರ್' ನೋ.

**ಬಳಿನೀರು** 'ಬೞಿನೀರ್' ನೋ.

**ಬಳಿನೀರ್ಗುಡಿ** 'ಬೞಿನೀರ್ಗುಡಿ' ನೋ.

**ಬಳಿನೀರ್ಗೊಳ್** (ಕ್ರಿ). = ಬೞಿನೀರ್ಗುಡಿ: ಮೊಲೆಯೆಂಬ ಲಿಂಗಮಂ ಮುಟ್ಟಿಯಧರಾಮೃತವನೊಲಿದು ಬಳಿನೀರ್ಗೊಂಡ ತಪ್ಪಿಂದಲರೆ ಮೆಯ್ಯನಾದ (ವೀರವು. ೮-೧). [ಬಳಿನೀರ್ ( < ಬೞಿನೀರ್) +ಕೊಳ್$_1$]

**ಬಳಿಬರು** 'ಬೞಿವರ್' ನೋ.

**ಬಳಿಭುಕ್ಕು** 'ಬಲಿಭುಕ್ಕು' ನೋ.

**ಬಳಿಮಾರಿ** (ನಾ). ವಂಶಕ್ಕೆ ಮಾರಕವಾದ ವ್ಯಕ್ತಿ: ಉಳಿದರ್ಗೀಯದೆ ತಾನೇ ಕಾಲಯಮನಂತತ್ಯುಗ್ರಮಂ ತಾಳ್ದಿದಾ ದಳವಾಯೋ ಬಳಿಮಾರಿಯ್ಯೆ (ಸೋಮೇಶ. ೬೪). [ಬಳಿ$_2$ (<ಬೞ್$_3$) + ಮಾರಿ$_2$]

**ಬಳಿಮುಖ** 'ಬಲಿಮುಖ' ನೋ.

**ಬಳಿಯ** 'ಬೞಿಯ' ನೋ.

**ಬಳಿಯಂ** 'ಬೞಿಕಂ' ನೋ.

**ಬಳಿಯಟ್ಟು** 'ಬೞಿಯಟ್ಟು' ನೋ.

**ಬಳಿಯಣ** 'ಬೞಿ$_3$' ಪರಾ.

**ಬಳಿಯಿಸು, ಬಳಿಸು** (ಕ್ರಿ). ೧. ಕಸವನ್ನು ಗುಡಿಸುವಂತೆ ಮಾಡು; ನೆಲವನ್ನು ಸ್ವಚ್ಛ ಮಾಡಿಸು. ೨. (ಬಣ್ಣ ಮೊದಲಾದುವನ್ನು) ಹಚ್ಚುವಂತೆ ಮಾಡು; ಹಚ್ಚಿಸು: ಏಳು ರೇಷ್ಮೆ ಬಟ್ಟೆಯ ತುಂಡುಗಳ ಮೇಲೆಯೂ ಸಪ್ತರಂಜನದ ಏಳು ಬಣ್ಣಗಳನ್ನು . . . ಬಳಿಯಿಸಿ (ಜ್ಯೋತಿರ್. ೨೪೮). **ಬಳಿಸು**: ೧. ಹರಿಯ ದಾಸರಿಗಿನ್ನು ಸರಿಯುಂಟೆ . . . ಮಸಣಿಯಾ ಕೈಯ ಕಸ ಬಳಿಸುವರು (ಪುರಂದ. ೮-೧೪೫-೧). [ಬಳಿ$_1$ (<ಬೞಿ$_1$) + — ಇಸು$_3$]

**ಬಳಿರಿಪು** 'ಬಲಿರಿಪು' ನೋ.

**ಬಳಿವಟ, ಬಳಿವತ್ತ** (ನಾ). ಒಂದು ಬಗೆಯ ತೆರಿಗೆ (?): ಆ ಶಾಂತಿ ಗ್ರಾಮದ ಸಿದ್ಧಾಯದ ಮೊದಲ ಹೊಂನೊಳಗೆ ಆಯ್ದು ಹೊಂನನು ಆವಳ ಸಮಸ್ತ ಬಳಿವಟ ನೋಡಿ (ಮೈ ಆರ. ೧೯೪೦,೩-೨೪; 1216). **ಬಳಿವತ್ತ**: ಒಕ್ಕಲೊಳೊನ್ದು ಪೊಱೆಯುಂ ಕಯ್ಯುಂ ಪದಿಕ್ಕೊಳ್ಗಳು ಭತ್ತಮುಂ ವಿಷಾಸಲಂ ಬಳಿವತ್ತಮುಂ ಸಲ್ವದು (ಎಕ. III, ನಂಜನ. ೧೮೩-೦೦; 977). 'ಬಳಿ$_3$' ಪರಾ. [?]

**ಬಳಿವತ್ತ** 'ಬಳಿವಟ' ನೋ.

**ಬಳಿವರ್** 'ಬೞಿವರ್' ನೋ.

**ಬಳಿವರಿ** (ಕ್ರಿ.) ಸಮೀಪಕ್ಕೆ ನುಗ್ಗು; ಹತ್ತಿರಕ್ಕೆ ಧಾವಿಸು : ಚಿಲ್ಲಿದರೆ ಬಳಿವರಿದು ಚೌಪಟಮಲ್ಲ ಹೊಕ್ಕನು ಹೊಯ್ದು ಗದೆಯಲಿ ಘಲ್ಲಿಸಿದನು (ಕುಮಾ.ದ್ರೋ. ೦೩-೪೦). [ಬಳಿ₂ (<ಬಟಿ₃) + ಪರಿ₁]

**ಬಳಿವರು** 'ಬಟಿವರ್' ನೋ.

**ಬಳಿವಿ** (ನಾ). (?) : ವಿವಿಧಮಣಿಕಿರಣಚಯದಿಂದವನಿಪನಂ ಬಳಿದು ಕೊಟ್ಟ ನರ್ಥಿಜನಕ್ಕಾ ದಿವಿಜೇಂದ್ರಂ ಬಳಿವಿಯು ಮಂತ್ರವಾದಿಯೆನೆ ನೆರೆದ ಮಕುಟಬದ್ಧಸಮಾಜಂ (ಶಾಂತಿಪು. ೦೦-೦೦).

[ಇದು 'ಜಳವೆ = ದಂಡ' ಎಂಬುದರ ಅಪಲಿಖಿತವಿರಬಹುದು]

**ಬಳಿವಿಡಿ** 'ಬಟಿವಿಡಿ' ನೋ.

**ಬಳಿವೆಳಗು** (ನಾ.) ಹತ್ತಿರದ ಬೆಳಕು : ಬಳಿವೆಳಗಿನ. . .ಬೆಳ್ವೆಳಗಿನ ಬೆಳಸಿನ ಸಿರಿಯೆನೆ ತೊಳತೊಳಗಿದುದು ಮೂರ್ತಿ ಚಂದ್ರಪ್ರಭನಾ (ಕಲ್ಯಾ.ಸು. ೦೪೦ ವ್ಯಾ.). [ಬಳಿ₂ (<ಬಟಿ₃) + ಬೆಳಗು₂]

**ಬಳಿವೊರ್ದು** (ಕ್ರಿ). ಸಮೀಪಿಸು ; ಜೊತೆಗೂಡು : ರಾಹು ತೊರೆದೊಡನೆ ಶಶಿಯಂ ರೋಹಿಣಿ ಬಳಿವೊರ್ದಿದಂತೆ . . . ಸೇರ್ದೆಯೆನ್ನಯ ಬಳಿಯಂ (ಶಾಕುಂತ. ೦೦೯-೦೬೫). [ಬಳಿ₂ (<ಬಟಿ₃) + ಪೊರ್ದು₁]

**ಬಳಿಶರ** (ನಾ). ಒಂದರ ಹಿಂದೆ ಒಂದು ಬರುವ ಬಾಣ : ನೂಱುಶರದಲಿ ಬಳಿನಿಶಿಖ ನಾನೂಱಱಲಿ ಬಳಿಶರಕೆ ಬಳಿಶರವಾಱುಸಾವಿರದಿಂದ ತಱಿದನು ಪಾರ್ಥನರಿಬಲವ (ಕುಮಾ.ಗ. ೨-೦೯).

[ಬಳಿ₂ (<ಬಟಿ₃) + ಶರ]

**ಬಳಿಸರಳು** (ನಾ). = ಬಳಿಶರ : ಸರಳನೆಚ್ಚನು ಸರಳನಾ ಬಳಿಸರಳು ಮುಂಚಿದುದಾ ಸರಳ ಬಳಿಸರಳು ಮುಂಚಿದುದು (ಕುಮಾ.ಕ. ೩-೦೯); ಬಳಿಸರಳ ಸಂದಾನದಲಿ ಬಳಿಕುಳಿಕಲಿನ ರಕ್ಕಸರ ಜವಪುರದೊಳಗೆ ಹೊಗಿಸಿದನು (ತೊರವ. ೦-೦೦-೨೨).

[ಬಳಿ₂ (<ಬಟಿ₃) + ಸರಳು₁ (<ಸರಲ್₁)]

**ಬಳಿಸಲ್** 'ಬಟಿಸಲ್' ನೋ.

**ಬಳಿಸಲಿಸು** (ಕ್ರಿ). ಹಿಂದೆ ಬರು; ಅನುಸರಿಸು : ರಿಪುಜಾಲವನು ನೀ ಖಂಡಿಗಳ ಬಹವಾವು ಬಳಿಸಲಿಸಿ (ಕುಮಾ.ದ್ರೋ. ೬-೨೭).

[ಬಳಿ₂ (<ಬಟಿ₃) + ಸಲಿಸು]

**ಬಳಿಸಾರ್**, **ಬಳಿಸಾರು** (ಕ್ರಿ). ಹತ್ತಿರ ಬರು ; ಸಮೀಪಿಸು : ತುಂಬಿ ಕವಿವಾವ್ರುಮನಭ್ರಮೆ ಗೆತ್ತು ಕೇಕಿಮಂಡಳಿ ಬಳಿಸಾರ್ದು ನರ್ತಿಸುಗುಂ (ಶಬಶಂ. ೨-೪೭); ಅಕ್ಕಟಾ ! ಎಂದೊಬ್ಬನಳಲಿ ಬಳಿಸಾರ್ದು . . . ಕರೆದಂ (ಶಾಬೂರ. ೯೬-೦೯೬). **ಬಳಿಸಾರು :** ಏನನೊ ನುಡಿಯುತಲಿರುವಳದೇನೆಂದು ಬಳಿಸಾರಿ ಮೆಲ್ಲನೆ ಕೇಳು (ಶಂಕಾಶ. ೦೩೭-೨೯).

[ಬಳಿ₂ (<ಬಟಿ₃) + ಸಾರ್₁]

**ಬಳಿಸಾರು** 'ಬಳಿಸಾರ್' ನೋ.

**ಬಳಿಸಾಲು** (ನಾ). ಅಕ್ಕಪಕ್ಕದ ಪಂಕ್ತಿ ; ಸಮಾನಾಂತರದ ಸಾಲು : ಹರಗಬಲ್ಲನು ಬಿತ್ತಬಲ್ಲನು ಅರಿದು ಬಳಿಸಾಲುಗಳ ಹೊಡೆವೆನು (ರೇವಣಾ. ೦-೦೯). [ಬಳಿ₂ (<ಬಟಿ₃) + ಸಾಲು₂ (<ಸಾಲ್₃)]

**ಬಳಿಸು** 'ಬಳಿಯಿಸು' ನೋ.

**ಬಳಿಸೇರು** (ಕ್ರಿ). = ಬಳಿವೊರ್ದು : ಆ ವೃತಕ್ಕೆ ದೀರ್ಘಾಯುವಾದ ನೀವು ಬಳಿಸೇರಿ ತಮ್ಮನ್ನು ಆದರಿಸಬೇಕೆಂದು ದೇವಿಯರು ಆಜ್ಞಾಪಿಸುವರು (ಶಾಕುಂತ. ೨೯-೫). [ಬಳಿ₂ (<ಬಟಿ₃) + ಸೇರು₁ (<ಸೇರ್)]

**ಬಳಿಸೇವೆ** (ನಾ). = ಬಳಿಗೆಲಸ : ರಾಜಂಗೆ ಬಳಿಸೇವೆಗೆಯ್ವರೊಳು ನಚ್ಚಿನವರಾರು (ಶಾರಸಿ. ೦೭-೪೬೯). [ಬಳಿ₂ (<ಬಟಿ₃) + ಸೇವೆ₁]

**ಬಳಿಹರ** 'ಬಲಿಹರ' ನೋ.

**ಬಳು** (ನಾ). ಒಂದು ಅಳತೆ (?) : ಮೂಡಣ ಹೆಗ್ಗಡ್ಡ ಅದಱ ಮೇಗಣ ಕೊಡಂಗೆ ಎರಡಱಲ್ಲಿಯು ಮೂಡೆ ೨ ಬಂಣಟಿ ಮೂಡೆ ೨ ಮುಂಡಿನ ಮಾಡುವ ಬಳು ಮೂಡೆ ೧ ಚಿಕ್ಕಬಿಟ್ಟುವ ಕೊಡಂಗೆ ಮೂಡೆ ೧ (ಎಇ. XXVII. ೦೬೨-೪೪; 1260). [?]

**ಬಳುಂಕು** 'ಬೆಳ್ಕು₁' ನೋ.

**ಬಳುಕಿಸು** 'ಬಳ್ಕಿಸು' ನೋ.

**ಬಳುಕು₁** 'ಬೆಳ್ಕು₁' ನೋ.

**ಬಳುಕು₂** 'ಬೆಳ್ಕು₂' ನೋ.

**ಬಳುಕುನಡೆ** (ನಾ). ತೊನೆಯುತ್ತಾ ನಡೆಯುವುದು : ವಿಲಸಿತದ ವಿಭುವಿಂಗೆ ದಟ್ಟಡಿ ಬಳುಕುನಡೆ ಮೆಲ್ನಡೆಗಳೆಂಬಿವು ತಿಳಿವವರ ಮನಸಿಂಗೆ ಮಱಿ ತಾನಲ್ಲವೇ (ತೊರವ. ೦-೮೭). [ಬಳುಕು₁ (<ಬೆಳ್ಕು₁) + ನಡೆ₁]

**ಬಳುಕುನೀರು** (ನಾ). ಒಂದು ಬಗೆಯ ತೆರಿಗೆ : ಕಳುವಡೆ ನಾರಡೆ ಬಳುಕುನೀರು ಊರಸಂತೆ ಮೊದಲಾದ ಹಲ ಉಪಾಧಿಗಳು ಸಹ . . . ಅನುಭವಿಸಿಕೊಂಡು (ಶಾಇಇ. IX-ii, ೯೬೬-೬; ಸು. 1471). [?]

**ಬಳುಕುಮೈ** (ನಾ). (ಒಯ್ಯಾರದಿಂದ) ತೊನೆಯುವ ಶರೀರ : ಕೈಮುಗಿವ ಪ್ರಮದೆಯರ ಕಂಕಣಗಳಲುಗುತ್ತ ಕುಂಬಿಡುವ ಬಳುಕುಮೈಗೆಚ್ಚರಿಕೆಯುಲಿಯೆ (ಶುಲಿರೇ. ೩೦-೪).

[ಬಳುಕು₁ (<ಬೆಳ್ಕು₁) + ಮೈ (<ಮೆಯ್₁)]

**ಬಳುವಟ್ಟಿ** (ನಾ). ಕಾಡುದಾರಿ : ನಾಯಿಗಳ ಹಾಗೆ ಬಳುವಟ್ಟಿ ತಿರುಗಾಡಿಕೊಂಡು ಇರುವುದು (ಮೂಲಕ್ಕ. ೨೭). [< ಪಳುವಟ್ಟೆ]

**ಬಳುವಳ** 'ಬಳ್ವಳಂ' ನೋ.

**ಬಳುವಳಿ** 'ಬಟಿವಟಿ₁' ನೋ.

**ಬಳುವಳಿಕೊಡು** 'ಬಟಿವಟಿಗೊಡು' ನೋ.

**ಬಳುವಳಿಗೊಡು** 'ಬಟಿವಟಿಗೊಡು' ನೋ.

**ಬಳುವೆ** (ನಾ). (?) : ಸುಳಿದವಾಂತಿ ಕರ್ಪೂರದ ಪ್ರಜ್ವಲಿಪ ಮಾಣಿಕದೀಪ್ತಿಗಳ ಪಸು[ಪಾಠಾಂ. ಬಲು]ಗಳವೆಗೂಳಿನ ಬಳುವೆಗಳಲುಪ್ಪುಗಳ [ಪಾಠಾಂ. ಬಳುವೆಯುಪ್ಪರಶಿಯು] ಸೂಸಿಕೆಯು ಕಳಕಳದೊಳೊಪ್ಪಿಮದು ಪಾರ್ಥಿವನಿಳಯವು (ತೊರವ. ೬-೩೩-೦೬); "ಭೀತರ ಸೋಂಕು ತೆಗೆಯುವ ಒಂದು ವಿಧಿ" (ತೊರವ. ಕೋಶ). [?]

**ಬಳೆ₁**, **ವಳೆ₁** (ಕ್ರಿ). ೧. (ಮಾನವ, ಪ್ರಾಣಿ, ಪಕ್ಷಿ ಮೊದಲಾದಂವು ಶಾರೀರಿಕವಾಗಿ ಅಥವಾ ವಯಸ್ಸಿನಲ್ಲಿ ಅಥವಾ ಮಾನಸಿಕವಾಗಿ) ವೃದ್ಧಿಯಾಗು; ವರ್ಧಿಸು : ಕೂಸಿಂಗೆ . . . ಎರಟ್ಬೂಱುತಿಂಗಳ್ಗೆ ತಾಯ್ ಕಟಿದೊಡೆ ಬಂದ ನಂಟರೆ ನಡಪೆ ಬಳೆದೊಡೆ (ವಡ್ಡಾರಾ. ೭೬-೦೭); ಆ ಕಾಲದೊಳ್ ನಾನೆನ್ನ ಮಾವಂ ಕೊಂತಿಭೋಜನ ಮನೆಯೊಳ್ ಬಳೆವಂದು (ಪಂಪಭಾ. ೦-೦೦೬ ವ); ಆ ಕಪಿ ಶಿಶು ತಾಪಸರ ಸವಿಾಪದೊಳೆ ಬಳೆದ ಕಾರಣದಿಂ ತತ್ತ್ವವೇದಿಯಪ್ಪುದಱಿಂ (ಪಂಚತಂ. ೦೯೩-೦೪); ಘಳರಸದಿ ಬೆಳೆವ ನವಶಾಳೀವನಂಗಳಂ ತನಿವಾಲನುಂಡು ಬಳೆವರಗಿಳಿಗಳುರ್ಕಿನಿಂ (ಶಿರುಚ. ದೀ. ೨-೦೦); ಶಶಿ ಮೂಡಿ ಬಳೆದನಾಗಸದೊಳು (ಕೃಸಪ. ೯-೦೬೯). ೨. ಗಿಡ, ಮರಗಳು ವೃದ್ಧಿಯಾಗು; ಸಸ್ಯಗಳು ಬೆಳೆ : ದೆಸೆಗಳಂ ತಡವರಿಸಿಕೊಳ್ವಂತೆ ಬಳ್ವಳ ಬಳೆದು ಸೊಗಯಿಸುವ ಪೆರ್ಮರಂಗಳಿಂದಂ . . . ಅತಿಭಯಂಕರಾಕಾರಮಪ್ಪ ದ್ವೈತವನಕ್ಕೆ ಬಂದು (ಪಂಪಭಾ. ೭-೨೯ ವ) ; ಬಾನುದ್ದಂ ಬಳೆದಿರ್ದ ಪೆರ್ಮರದ ತುಟ್ಟತುದಿಯ ಕೊಂಬನೆತ್ತಿ ಟಪ್ಪಿಯಾಸದಿಂದಂ (ಶಾರಶಾಂ. ೪೩-೦೦). ೩. ಹುಟ್ಟು ; ಮೊಳೆ ; ಅಂಕುರಿಸು : ವಿರೋಧಿಮದೇಭಮಸ್ತಕಸ್ಥಳಜಳರಾಶಿಯೊಳ್ ಬಳೆದ ನಿರ್ಮಳನಿರ್ವ್ರಣಮೃತ್ತಮೌಕ್ತಿಕಾವಳಿಯೆನೆ ತರ್ಪುದು (ಪಂಪಭಾ. ೧೦-೪೭); ಎಳವೆಱಿ ಬಳೆಯದ ಗಗನಸ್ಥಳಿ (ಪುಲ್ಲಿಕೆ. ೩-೦೦೦). ೪. (ಭಯಂ, ಕೋಪ, ಆಶ್ಚರ್ಯ, ಅನುರಾಗ ಇತ್ಯಾದಿ

ಭಾವನೆಗಳು) ಉಂಟಾಗು; ಮೂಡು : ಬಗೆಯೊಳಗೆ ಬಳೆದ ಭೀತಿಯಿ ವಿಗೆ ಭವದಾಸ್ಥಾನಭೂಮಿಯುಂ ಪುಗುಗೆ (ಆದಿಪು. ೧೪-೨೨); ಆದ ಮುಳಿಸಿಂದಮಾಗಳ್ ಮೋದುವ ಬಗೆ ಬಳೆಯೆ (ಶಂಶಭಾ. ೨-೬೨) ; ಬಳೆದ ಹೃದಯಾನುರಾಗದಿನಿಳೇಶನಾಗಳ್ ನಿಜಪ್ರಧಾನಂ ಪ್ರಜ್ಞಾಬಳನ ತನಯಂಗೆ ಮೇಧಾವಿಳನೆಂಬುಚಿತಾಭಿಧಾನಮಂ ತಾನಿತ್ತಂ (ಕಂಸುಚಶಾ. ೬-೦೦೭); ಆ ಮುಕುಂದನ ದಿವ್ಯನಾಮಪ್ರೇಮರಸಕಿದು ಸಿದ್ಧಿಯೆಂದೆನಲಾ ಮಹಾಸ್ಥಾನದಲಿ ಬ[ಹಾಕಾಂ. ಬ]ಳೆದುದು ಬೆಟಗು ಬಿಂಕದಲಿ (ಕುಮ್ಯಾ.ಕ. ೦೩-೩). ೫. (ಗಾತ್ರದಲ್ಲಿ) ಬೆಳವಣಿಗೆಯನ್ನು ಹೊಂದಂ; ದೊಡ್ಡದಾಗಂ ತೋರವಾಗು : ನಿನ್ನನಾ ತನ್ವಿಯೆತ್ತಂ ಬಳೆದುತ್ತುಂಗಸ್ತನಂ ವರ್ಣ್ಣದರದೆ ಬಳಸಲ್ (ಆದಿಪು. ೪-೨೦); ಎನಿತ್ತನಿತ್ತಂಬುಜಪತ್ರನೇತ್ರೆಯಾ ಘನಸ್ತನಂಗಳ್ ಬಳೆಗುಂ ಕಿರಾತೆಯಾ (ಕಾವ್ಯಾವ. ೩೩೯) ; ಚೂಚುಕಂ ತರ್ಗಿದವು ನಾಭಿ ಪೊಚಿವೊಣ್ಮಿತಸಿಯ ನಡುವುಂ ಬಳೆದುದು (ಕಶಪು. ೪-೦೦). ೬. ವೈರಿನಿಂದ ತುಂಬು : ಬಹುವೋಷದಿವಮ್ಮಾವಿನ ಸಹಕಾರದ ಸೊನೆಯ ಸೋನೆ ಬಳೆಯಿಸೆ ಬಳೆಗುಂ ಮಹಿ (ಕಾಂತಪು. ೦-೬೦) ; ಪಸಿದೆಮ್ಮೆ ಬಳೆದ ಕೆಯ್ಯಂ ಪೊಕ್ಕಂತೆ (ಧರ್ಮಾಮೃ. ೭-೯೩). ೭. ಎತ್ತರವಾಗು; ನೀಳವಾಗು; ಔನ್ನತ್ಯವನ್ನು ಹೊಂದು: ಬಳೆಯಲ್ಕಣ್ಮಿದುದಿಲ್ಲ ವಿಂಧ್ಯಗಿರಿಯುಂ ತನ್ನಾಜ್ಞೆಯಿಂದೊರ್ಮೆ ಮುಕ್ಕಳಿಸಲ್ಕಂಬುಧಿ ಸಾಲ್ದುದಿಲ್ಲ (ಶಂಶಭಾ. ೪-೨೦) ; ಆವ ನಗಂ ಮತ್ತಮುಮ ದೆಂದು ಬೀಗಿ ಬಳೆದಂತಿರ್ಕುಂ ಜಿನಸ್ನಾನಪಾವನವಾ ನಿರ್ಜರನಿರ್ಜರೋಜ್ವಲಮಣಿ ಶ್ರೀಕಂದರಂ ಮಂದರಂ (ಅರ್ಧನೇ. ೦-೩೩) ; ಮಾಯಕಾಂತನ ಮೂಲಶಕ್ತಿಯ ತೋಳಿನೆ ಬಳೆದು ತೋಱಿಸಿದ (ತೋಶಕ. ೦೦-೭೭) ; ಅಗಲಕೆ ಭೂಮಂಡಲ ಕಿಱಿದುಬ್ಬಲು ಮಿಗೆ ತಾಳದಷ್ಟದಿಕ್ಕಿಂದು ನಗುತಾಗ ಮೇಲಕ್ಕೆ ಬಳೆದೋಲು ಹೊಂಗೋಂಟಿ ಗಗನಮಂಡಲವ ಮುಟ್ಟಿಹುದು (ಕಂಪಮ. ೬-೪). ೮. ಉದ್ದವಾಗು ; ಲಂಬವಾಗು ; ಚಾಚು : ಬಳೆದ ಜಡೆ ನಿಮಿರ್ದ ಬಳ್ಳಿಗಳೊಳೆ ಪೆಣೆದು ವಿಷೋರಗಾನಲಾರ್ಚಿಗಳಿಂದಂ ವಿಳಿರ್ದುವು (ಆದಿಪು. ೦೪-೦೯೨) ; ಪೆಗಲ್ವರಂ ಬಳೆದು ರಂಜಿಸುಗುಂ ಜಡೆಗಳ್ಮೃಗಾಕ್ಷಿಯಾ (ಕಾದಂಪೂ. ೬೬೪) ; ಬೋಳಾದ ತಲೆಯ ರೋಮಂ ಮೇಲೆನಿಸಿದ ಬೆರಲ ಮುಱಿದ ಸೆಳ್ಳುಗುರುಂ ಸಲ್ಲೀಲೆಯೊಳೆ ಬಳೆವ ತೆಱದಿಂ (ಧರ್ಮಾಮೃ. ೪-೪೦) ; ಬಳೆದೆಸೆದಿರ್ಪ ಸೆಳ್ಳುಗುರ ಮೆಯ್ವೊಳಿಪಿಂ ಮಿಗೆ ಪೆರ್ಮೆವೆತ್ತು ಕಣ್ಗೊಳಿಸಿದಳಾಕೆ (ಕಬ್ಬಿಕಾ. ೭೯). ೯. ಹೆಚ್ಚಾಗು ; ಅಧಿಕವಾಗು : ಬಳೆದ ತಮಮೆಂಬ ಕರಡಮ(?) ನಳವಲ್ಲದೆ ಸುಟ್ಟು ಕಿಡಿಸಲೆಂದು . . . ಅರ್ಕನುದಯಂಗೆಯ್ದಂ (ಕಾವ್ಯಸಾ. ೬೬೦ ಶೂದ್ರಕ) ; ಅನಲಂ . . . ನೀಳ್ದು ಬಳೆದರ್ವಿಸೆ ಪರ್ವಿದನಾ ವನಾಂತಮಂ (ಶಂಶಭಾ. ೩-೯೩) ; ದಿವದಿವಸಂಗಳಿಂ ಕುಂದುವುವಲ್ಲದೆ ಬಳೆಯವಾಯುವುಂ ವಪುವುಂ (ಅಶಪು. ೨-೭೪); ಬೇಸಗೆಯಿಂದ ಬಳೆದ ಬಿಸಿಲಿನೊಳು ಬೆಂದು . . .ನಿಂದನು ಮರದ ನೆಳಲೊಳು (ಹಂಪ. ೨-೬೨). ೧೦. ಹೆಚ್ಚಿಸಂ; ಅಧಿಕಗೊಳಿಸು; ದೇವಮಾತೃಕಮೆನಿಪ್ಪ ಪೊಲಂ ನವಗಂಧಶಾಳಿಯುಂ ಬೆಳೆವುದು ರಮ್ಯನಂದನವನಾಳಿ ವಿಯೋಗಿಜನಕ್ಕೆ ಬೇಟಮಂ ಬಳೆವುದು ನಾಡ ಕಾಡ ಬೆಳಸಿಂ ಬೆಳಸಾ ವಿಷಯಾಂತರಾಳದೊಳ್ (ಶಂಶಭಾ. ೦-೩೪). ೧೧. ಹಬ್ಬು ; ವ್ಯಾಪಿಸಂ ; ಹರಡು : ಕೆಯ್ವತ್ತಿ ನಿಂದಿರೆ ಪತ್ತಿತ್ತು ಸಮಸ್ತಧಾತ್ರಿ ವಳಯಕ್ಕೆಂದುಂ ದಿಶಾದಂತಿಗಳ್ಪರೆಗಂ ತಂದೆಯ ಕೀರ್ತಿಯೋಂ ಬಳೆದುದೋ (ಗದಾಯು. ೦-೦೨) ; ಸಕಲಲೋಕಂಗಳೊಳ್ ಶಿವಭಕ್ತಿ ಬಳವುತಿರ್ಪುದು ದಿನದಿನಕ್ಕೆ (ಶಚಪು. ೩-೭). ೧೨. ಅಭಿವೃದ್ಧಿಯಾಗಂ ; ಏಳಿಗೆಯನ್ನು ಹೊಂದು ; ಪ್ರಗತಿ ಹೊಂದಂ : "ಬಳೆ-ಪ್ರವೃದ್ಧೌ, ಕಾಚಭೂಷಣೇ ಚ" (ಶಮಧಾ) ; ಇಂಚೆಯ ಪಸವಿನ ಬಱಿದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದಂ ವಿರಂಚಿಯ ಕೆಯ್ಪಿಡಿಯವೊಲಾದುವಾ ನಾಡೂರ್ಗಳ್ (ಶಂಶಭಾ. ೬-೩೦) ; ಪೆಣ್ಣ ಪೆತ್ತವರ ಬಳಗ ಬಳೆವುದು ಬೇಗ ಪೆಣ್ಣ ಪೆತ್ತವರು ಪೆರ್ಚುವರು (ಹಂಪ. ೩-೪). ೧೩. ನೆರವೇರು ; ಈಡೇರು : ಬೆಳೆದುದು ಹಿಮವರ್ಷದೆ ರಾತ್ರಿಳಕೆಯೆನಲ್ ಬಳೆದುವಿರುಳ್ಗಳೊಳ್ ಸುರತಂಗಳ್ ಬಳೆದುವು ದಂಪತಿಶತದೊಳ್ ಬಳೆವಿನೆಗಂ ಮದನನಾಜ್ಞೆಯುಂ ಭುಜಬಲಮುಂ (ಜಗನ. ೦೪-೦೭) ; ಎಲೆ ಸಖಿ, ನಿನಗೆ ಸುಖಿಮಜ್ಜನ ಬಳೆಯುತ್ತ ? (ಶಾಕುಂತ. ೩೦-೦೩). ೧೪. ಸಂಪಾದಿಸಂ ; ಪಡೆ ; ಹೊಂದು : ಇಳೆಯೊಳಿದ ಹೇಳುವರ ಕೇಳ್ವರ ಬಳಗವಾಕ್ಷಣ ಪುಣ್ಯರಾಶಿಯ ಬಳೆವುದೆಂಬುದನಱಿದು ಭಾರತಕೃತಿಯ ಹೇಳುವೆನು (ತಂಪಶ. ೦-೨೬). ವಳೆ₁ : ೨. ಎಟ್ಟದಿನ್ನರು ನರಮೊಕರಮನೊಡೆದೊಡೆಪ್ಪಡತ್ತದು ಪುಣಸೂರ್ಯ್ಯೊಲ ನೆಲ್ಲುಪಾಣ್ಣಯು ಪಳೆವದು (ವ್ಯಂಆಂ. ೦೯೩೦. ೩೬-೯; ೩ನೆಯ ಶತ).

ಬಳೆವಳೆ (ದ್ವಿರುಕ್ತಿ) : ತನ್ನಹಾತಿಶಯವಿಶುದ್ಧಗರ್ಭಾವಾಸದೊಳಾ ಸಮಸ್ತಗುಣನಿವಾಸಂ ನೆಲಸಿ ಬಳೆವಳೆಯೆ (ವರ್ಧಪು. ೦೩-೬೩ ವ).

☞ 'ಬಳೆ' ಮತ್ತು 'ಬೆಳೆ' ಎಂಬ ಎರಡು ಧಾತುಗಳ ಬಗ್ಗೆ ಕನ್ನಡದಲ್ಲಿ ಪೂರ್ವಕವಿಗಳು, ವಿದ್ವಾಂಸರು ಅನುಸರಿಸುತ್ತಿದ್ದ ಒಂದು ಪದ್ಧತಿಯಿದ್ದಂತೆ ಕಾಣುತ್ತದೆ. ಕೇಶಿರಾಜನು–"ಬೆಳೆಯೆಂಬ ಧಾತು ಸಸ್ಯಾವಳಿಯೊಳ್ ಬಳೆಯೆಂಬ ಧಾತು ಮಿಕ್ಕೆಡೆಯೊಳ್ ಸಂಗಳಿಕುಂ" ಎಂದು ಹೇಳಿದ್ದಾನೆ. ಅದೇ ಅಭಿಪ್ರಾಯವನ್ನು 'ಕರ್ನಾಟಕ ಸಂಜೀವನಂ' ಎಂಬ ನಿಘಂಟಿನ ಕರ್ತೃವಾದ ಶೃಂಗಾರಕವಿಯು "ಅಚರಂಗಳಲ್ಲಿ ಬೆಳೆದುದು ಬೆಳಸೆನಿಕ್ಕುಮಾ ಸಚರನರರಲ್ಲಿ ಬಳೆದಂ ಬಳವಿ ಬಳವಿಗೆ ರುಚಿರಮಕ್ಕುಂ" ಎಂದು ವಿವರಿಸುತ್ತಾನೆ. ಶೃಂಗಾರಕವಿಯ 'ರುಚಿರಮಕ್ಕುಂ' ಎನ್ನುವ ಶಬ್ದ ಗಮನಾರ್ಹ. ಆದರೆ ಈ ಎರಡು ಶಬ್ದಗಳ ನಡುವೆ ಇದ್ದಿರಬಹುದಾದ ವ್ಯತ್ಯಾಸವು ಬಹುಕಾಲದ ಹಿಂದೆಯೇ, ಅಂದರೆ ವಡ್ಡಾರಾಧನೆ ಮತ್ತು ಪಂಪಭಾರತಗಳ ಕಾಲದಿಂದಲೂ ಮರೆಯಾಗಿರಬೇಕು. ಆದರೆ ಕೇಶಿರಾಜನ ಹೇಳಿಕೆಯನ್ನು ಗಮನದಲ್ಲಿಟ್ಟುಕೊಂಡು 'ಬಳೆ' ಮತ್ತು 'ಬೆಳೆ' ಉಲ್ಲೇಖಗಳನ್ನು ಬೇರೆಬೇರೆಯಾಗಿ ಕೊಟ್ಟಿದೆ. 'ಬೆಳೆ₁' ಪರಾ. [ದೇ.॥ ತುಳು. ಬಳಂಪುನಿ]

**ಬಳೆ₃, ವಳೆ₂** (ನಾ). ೧. ವರ್ತುಲ ; ಮಂಡಲ; ವೃತ್ತ : 'ಅಗ್ಗಿವಳೆದೆಣ್ಣೆ', 'ಬಳಸು₁', 'ಬಳೆಗಣ್' ಪರಾ. ೨. ಕೈಗೆ ತೊಡುವ (ಗಾಜು, ಚಿನ್ನ ಇತ್ಯಾದಿಗಳ) ವರ್ತುಲಾಕಾರದ ಆಭರಣ ; ಕಂಕಣ : "ಬಳೆ-ಪ್ರವೃದ್ಧೌ, ಕಾಚಭೂಷಣೇ ಚ" (ಶಮಧಾ) ; ಬಳೆಯ ಪೇಟನಾನೆ ಮೆಟ್ಟಿದಂತೆ ನುರ್ಬುನೂಱಿಪ್ಪ ನಮವುಂಕಿ (ಶಂಶಭಾ. ೬-೭೭ ವ) ; ಬಳೆಯೆ ಸರ್ವವಿಭೂಷಣಕ್ಕೆ ಮೊದಲ್ಬೆ (ತೋಮಲೇಕ. ೦೪) ; ಕಿಣಿಕಿಣಿಕಿಣಿರೆಂಬ ಕರದ ಕಂಕಣ ಬಳೆ (ಪುರಂದ. ೨-೬೨-೨). ೩. ಕಾಲಿನಲ್ಲಿ ಧರಿಸುವ ಕಡಗ : 'ಕಾಲ್ಬಳೆ' ಪರಾ. ೪. ತೋಳಿಗೆ ಧರಿಸುವ ಆಭರಣ ; ತೋಳು ಬಂದಿ ; ವಂಕಿ : ತೊಟ್ಟು ತೀವಿ ಬಳೆಯಂ ನಿಡುದೋಳ್ಗಳೊಳ್ (ಕಾವ್ಯಾವ. ೩೬೨) ; ಖಿವಖಿವಿಸುವ ತೋಳ ಬಳೆಯ ಕಾವಲಯನೇತ್ರೆಯರೆಸೆದರು (ಕಂಪಮ. ೨೪-೪೩). 'ತೋಳ್ವಳೆ' ಪರಾ. ೫. ಗಂಟಲ ಮೂಳೆ,–ಎಲುವು: ಪಗೆವರ ಗಂಟಲ ಬಳೆಯನೊಡೆದು ಕಳೆವುದನನುಕರಿಸುವಂತೆ ತೀವಿ ತೊಟ್ಟ ಮುಂಗೈಯ ಬಳೆಗಳನೊಡೆದು (ಶಂಶಭಾ. ೯-೦೦೦ ವ). ೬. ಕತ್ತಿನ ಸುತ್ತಲೂ ಇರುವ ವಳಯಾಕಾರದ ಮೂಳೆ : ಕರಿಗಳ ಗಡಣ ಕೆಡೆದವು ಮಸ್ತಕದ ಬಳೆ ಹಱಿದು ಕಳಚಿದವು (ಕುಮ್ಯಾದ್ರೋ. ೬೦೩. ಶಂ. ೨೩೦-೩) ; ಮತ್ತೆ ಕೊರಳಾ ಬಳೆಯೊಳು ಬಳೆಯಂತೆ ತಿರಿಗಿಸಿ ರಾಯನ ತಲೆದೂಗಿಸಿದರು ಗಾಯಕರು (ಭರಕ. ೦೨-೪೬). ೭. ಪರಿಧಿ ; ವಲಯಂ; ಸುತ್ತು;

ತಲೆ ತಿರುಗಿ ತುಟಿಯೊಣಗಿ ಕಂಗಳ ಬಳಿ ಮರಳೆ ಬಸವಳಿಯೆ ಸಾರಥಿ ತೂಲಗಿಸಿದನಾ ರಥವನು (ಕುಮಾ.ದ್ರೋ. ೩-೩೩). ೮. ವರ್ತುಲಾಕಾರದ ಒಂದು ಬಗೆಯ ಆಯುಧ; ಚಕ್ರ: 'ಪಾಱುಂಬಳೆ' ಪರಾ. ೯. ರಥ, ಬಂಡಿ ಮೊದಲಾದುವುಗಳ ಚಕ್ರದ ಹೊರಭಾಗಕ್ಕೆ ತೊಡಿಸುವ ಕಬ್ಬಿಣದ ವರ್ತುಲಾಕಾರದ ಸಾಧನ, – ಕಬ್ಬಿಣದ ಪಟ್ಟಿ: ಜೋಲ್ವ ಬಳ್ಳಿಗೊಂಬಿನ ಬಳಿ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಗೆ ಚಿಲ್ವೆನೆ ನಡೆತಂದುವಂದಸುಗೆಯೆಂಬ ನೆಗಟ್ತೆಯ ತೇರ್ಗಳೆತ್ತಲುಂ (ಕಬ್ಬಿಕಾ. ೨೦೩); ಕೀಲಚ್ಚು ಬಳೆ ಮೊಳೆಯನಾರೈದು ಸಿಂಧವಂ ನೆಗಪಿ ... ಸೂತನಿದಿರಾಗಿ ತಂದಿರಿಸಿದ ತೇರ ತೇಜಿಗೆ ನಮಿಸುತ (ಕಿರಾ. ೯೬.೩೩); ಮೊಳೆ, ಕೊಂಡಿ, ಬಳೆ ಮುಂತಾದ ಸಾಮಾನು ಕಮ್ಮಾರರು ಮಾಡುತ್ತಾರೆ (ಮುಂಬಯಿ. ೯-೦೦೬). 'ನೇಮಿ₂' ಪರಾ. ೧೦. ಆನೆಯ ಕೋರೆಗಳಿಗೆ ಅಥವಾ ಎತ್ತು ಮುಂತಾದ ಪ್ರಾಣಿಗಳ ಕೊಂಬುಗಳಿಗೆ ತುದಿಯಲ್ಲಿ ತೊಡಿಸುವ ಅಲಂಕಾರದ ಸಾಧನ; ಅಣಸು: ಇದಿರಾದರಿಭೂಪಾಲರ ಮದದಾನೆಯ ಕೊಂಬಿನೆಸವ ದಂತದ ಬಳೆಯಂ ಬಿದುವಿನ ಮುತ್ತಿನ ಹಾರಮನೊದವಿಸಿ ಜಯಸಿರಿಗೆ ತುಡಿಸುವಂ ನರಸಿಂಗಂ (ಸೂಕ್ತಿಸು. ೦-೦೬). 'ಬಳೆವೋಗು' ಪರಾ. ವಳ್ಳೆ: ೧೧. (ಕುದುರೆಯ ತುಂಟುತನವನ್ನು ತಡೆಹಿಡಿಯಲು ಕಟ್ಟುವ) ಸೊಂಟಪಟ್ಟಿ; ತಂಗುಪಟ್ಟಿ: "ವಳೆಯೆನಲ್ ಕುದುರೆವಳೆಯುಂ" (ಕಬ್ಬಿಗಂ. ೬೨).

**ಬಳೆಯಾಕೆ** = (ಬಂಗಾರದ) ಕಂಕಣ ಇತ್ಯಾದಿ ಆಭರಣಗಳನ್ನಿಟ್ಟು ಒಲಿಸಿಕೊಂಡವಳು; ಬಂಗಾರದವಳಂ: ತೊಳಾಪ್ಪುರುಷ ಸಾನ್ತರನ ಬಳೆಯಾಕೆ ತಮ್ಮಬ್ಬೆಯು ಸನ್ಯಾ ×× ಛುತ್ತ್ರಂ ಈ ಕಲ್ಲ ಬಸದಿಯುಂ ಒನ್ದು ದೇವಾರಪುಂಮಂ ಮಾಡಿಸಿದಳ್ (ಎಕ. VIII, ನಗರ. ೬೩-೩; ಸು. 950). [ದೇ.॥ ತಮಿ. ವಳ್ಳೈ, ವಳ್ಳೈಯಲ್; ಮಲ. ವಳ; ತೊದ. ಪಳ್; ಕೊಡ. ತುಳು. ಬಳೆ]

**ಬಳೆ₃** 'ಬಲ್ಮೆ₂' ನೋ.

**ಬಳೆಕಣ್** 'ಬಳೆಗಣ್' ನೋ.

**ಬಳೆಗ** (ನಾ). (?): ಪುತ್ತೂರುಡಿ ಶಿವಮಾರಮ್ಮಂ ದುಣ್ಣಗೆಗ್ಗಂ ನಲ್ಲ ತ್ತೂರೊಡೆ ಒಗ್ಗಮನೆ ಬಳೆಗಮುಂ ಅಯ್ದೂಮ್ಬು ಮೊದಕಟನಿಯು ಎಟ್ಟೂಮ್ಬು ಬಾಳೆ ತೊಟ್ಟಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X, ಕೋಲಾರ. ೨೩೦-೯; ಸು. 800 ?). [?]

**ಬಳೆಗಣ್**, ಬಳೆಕಣ್ (ನಾ). ೧. ಒಳಭಾಗದಲ್ಲಿ ವೃತ್ತಾಕಾರವಾದ ಬಿಳಿಯ ರೇಖೆಯುಳ್ಳ ಕುದುರೆಯ ಕಣ್ಣು: ಬಳೆಗಣ್ಣೆಂಬರ್ ಪಾಱುಂಬಳೆಯಂದದ ಬಿಳಿಯ ರೇಖೆ ಕಣ್ಣೊಳ್ ತೋಱಲ್ ಬಳಸಿರೆ ಲೋಚನಯುಗಳಂ ಬಳೆಗಣ್ಣಾದಂದು ಶುಭದಮೊಂದಱೊಳಶುಭಂ (ಅಶ್ವಶಾ. ೨-೩೬). ಬಳೆಕಣ್: ೨. ಸಂತ್ರಲೂ ಹಳ್ಳ ಬಿದ್ದಿರುವ ಕಣ್ಣು; ಗುಳಿಗಣ್ಣು (?): ಬಳಕಣ್ಬೆರ್ದುವು ಕಣ್ಬಾಯ್ಬಳೆಯಾಯ್ತು ಬರ್ದಯಳಿಪುವೆತ್ತುದ [ಟ]ವೋಷಿನೆಗಂ ಬಳಸಿ ಬಲವಂದು ನೋಡುವಯೆಳವೆಂಡಿರನವರೊಳಜ್ಜ ನಿನಗೇಕಜ್ಜಂ (ಅಪು. ೨-೯೩). [ಬಳ್ಳೆ₂ + ಕಣ್]

**ಬಳೆಗಳೆ** (ಕ್ರಿ). ಗಂಟಲ ಮೂಳೆಯನ್ನು ನೆಗ್ಗು: ಕುಳಿಯೊಳಿಕ್ಕುವ ಮುದುಡಿ ಮುಚ್ಚಿ ಮುಗ್ಗುವ ಮುಳಿವ ಬಳೆಗಳೆವ ಹೋಳ್ವ ಸೀಳ್ವಾಱುವ ... ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೬-೨೯). [ಬಳ್ಳೆ₂ + ಕಳೆ₁]

**ಬಳೆಗಾತಿ** (ನಾ). ಬಳೆಯನ್ನು ಮಾರುವವಳಂ: ಬಳೆಗಳ ಕುಱುಹು ಕಂಡುದು ಚಿತ್ರ ನೀವೇನು ಬಳೆಗಾತಿಯರೊಯೆಂದಲೊಲೆದು (ಭರತ. ೪೨-೨೦). [ಬಳ್ಳೆ₂ + – ಕಾತಿ₃]

**ಬಳೆಗಾರ** 'ಬಳೆಗಾಱ' ನೋ.

**ಬಳೆಗಾರ್ತಿ** (ನಾ). = ಬಳೆಗಾತಿ: ಮಾಲೆಗಾರ್ತಿ, ಬಳೆಗಾರ್ತಿ, ಗೆಲ್ಲಗಾರ್ತಿ (ಶಾಶಾಭೂ. ೦೪೯ ಉದಾ); ಮಾಲೆಗಾರ್ತಿ ... ಚಾಲಗಾರ್ತಿ, ಬಳೆಗಾರ್ತಿ (ಶಮದ. ೨೦೯ ಪ್ರಯೋ). [ಬಳೆಗಾಱ + – ತಿ₁(< – ಇತ್ತಿ)]

**ಬಳೆಗಾಱ**. ಬಳಗಾರ, ಬಳಗಾಱ, ಬಳೆಗಾರ (ನಾ). ೧. ಬಳೆಯನ್ನು ಮಾರುವವನು: ಹರಿಬಲರಲ್ಲಿಂ ತಳರ್ದಾದರದಿಂ ... ಬಳೆಗಾಱರ ತಂಬುಲಿಗರ ಮಣಿಗಾಱರ ಗುಂದಿಗರಾಪಣಂಗಳೊಳ್ ನಡೆತಂದರ್ (ಹರಿ. ೬-೧೪); ಎಳವೆರಲ್ಗಳ ಚಿಟುಕೊತ್ತಿ ಕೈದೊಡಿಸುವ ಬಳೆಗಾಱರಿರ್ದಠಿಕ್ಕೆಲದಿ (ಪೋಪಶ. ೩-೨೩). ೨. [ಜೈನ] ಒಂದು ವಂಶದ ಹೆಸರು; P ಶ್ರವಣರ ಪಂಗಡಗಳಲ್ಲಿ ಒಂದಾದ ಬಳಗಾರಗಣದ ಗುರುಗಳನ್ನು ಹೊಂದಿದ ಒಂದು ವಂಶವೆಂದು ಒಂದು ಅಭಿಪ್ರಾಯವಿದೆ: ಬೆಳುಗರನಾಡೊಳ್ ಪುಟ್ಟಿದ ಬಳೆಗಾಱರ ಕುಲದೊಳಿಱಿದಜಿತಶಾಸನವಂ ಬೆಳಗುವ ಚಕ್ರೇಶ್ವರಮಂಡಳೇಶ್ವರಂ ಬೆಸಸೆ (ಅಜಪು. ೧೨-೯೪). **ಬಳೆಗಾರ**: ೨. ಶ್ರೀಮತ್ಸಮ್ಯಕುಲತಿಲಕಂ ಬಳೆಗಾರಮಹೋದಧಿ ಕುರುಳಕಾಮಸೆಟ್ಟಿ (ಸೌಇಇ. IX – i. ೬೦-೯; 931); ಬಡಗಲು ಬಳಗಾರ ಬಳಿಯವರ ಗಡಿಯಿಂದಂ (ಸೌಇಇ. IX – ii. ೪೨೪-೦೩; 1401). **ಬಳಗಾಱ**: ೩. ಒಂದು ವಂಶದ ಹೆಸರು; ಬಳೆಗಾಱರ ಮನೆತನ: ಬಳಗಾಱರ ಕೋಕರು ಪುನುವಲವಳ್ಳಿಯಲಿಟ್ಟು ಪುಯ್ಯಲಂ ಪರಿದು ಮಾರ್ಬ್ಬಲಮಂ ತಳ್ತಿಱಿದು ಸ್ವರ್ಗಾಲಯಕೆ ಸನ್ದಂ (ಎಕ. VIII ಸೊರಬ. ೩೩೦-೩; 979). **ಬಳೆಗಾರ**: ೧. ಬಳೆಗಾರ ಮಣಿಗಾರ ಬಿಚ್ಚೋಲೆಯನ್ನು ಮಾರುವರು (ಪಪಪೋ. ೨-೪೭); ಬಳೆಗಾರಸೆಟ್ಟಿ ಹೋಗಯ್ಯ ನನ್ನ ತವರಿಗೆ (ಜಾಪದ. ೭೯);ಬಳೆಗಾರನ ಅಂಗಡೀಲಿ ಬಾಳೇಹಣ್ಣು ಸಿಕ್ಕೀತೇ? (ಗಾದೆ). [ಬಳ್ಳೆ₂+-ಕಾಱ]

**ಬಳೆಗಾಱಿಕೆ** (ನಾ). ಬಳೆಯನ್ನು ಮಾರುವ ಉದ್ಯೋಗ: ಓಲೆಕಾಱಿಕೆ, ಕಂಚಗಾಱಿಕೆ, ಬಳೆಗಾಱಿಕೆ (ಶಬ್ದಮ. ೯೩೦ ವ್ಯಾಖ್ಯಾ). [ಬಳೆಗಾಱ +–ಇಕೆ]

**ಬಳೆಗೈ** (ನಾ). ಬಳೆಗಳನ್ನು ಧರಿಸಿದ ಕೈ: ಬಳೆಗೈಯೆತ್ತಿ ಬಗಸಿಗಣ್ಗಳ ಕೋಮಲೆಯುರ್ಪಾಱಿಸುತೀಕ್ಷಿಪ ಕಡೆಗಣ್ಣೆಳಗೆಸೆದುವು (ಜಯಶಾ. ೦-೯೦). [ಬಳ್ಳೆ₂+ಕೈ₂ (<ಕೆಯ್₂)]

**ಬಳೆಗೊಯ್** (ಕ್ರಿ). ಕೊರಳ ಸುತ್ತಲೂ ಇರುವ ಮೃದ್ವಸ್ಥಿಯನ್ನು ಕತ್ತರಿಸು: ಊರುರ ಮೂಳೆಯಂ ತಿಂಬಗುರು ಮಯಿಗರಿಯ ತನಿಗೊಂಬಂ ಬಳೆಗೊಯ್ಕಲ್ ಪೂಣ್ದು ತುದಿಯೊಳೊಡಿ ಪೋಪ ಭೀರುವಪ್ಪ ಪಣಿದ ರಾಜನಂತೆ (ಶಾಂತಿಪು. ೮-೯೯ ವ). [ಬಳ್ಳೆ₂+ಕೊಯರ್]

**ಬಳೆಗೋ** (ಕ್ರಿ). ೧. ಬಳೆಯನ್ನು ತೊಡಿಸಂ, – ಹೊಂದಿಸಂ. ೨. (ಅಲಂ) ಸೋತು ಹೋಗು; ಸೋಲೊಪ್ಪು: ತಗಯಲ್ ಚೈಮಿನಿ ತಿಪ್ಪಿಕೊಣ್ಡು ಪರಿಯಲ್ ವೈಶೇಷಿಕಂ ಪೋಗದುಣ್ನಗೆಯೊತ್ತಲ್ ಸುಗತಂ ಕಡಂಗಿ ಬಳೆಗೋಯಲ್ ಕಕ್ಷಪಾದಂ ... ತೂಳ್ದಿತು ಗೋಪಣನ್ದಿ ದಿಗಿಭಪ್ರೋದ್ಭಾಸಿ ಗಂಧದ್ವಿಪಂ (ಎಕ. II. ೩೯-೯೯; ಸು. 1100). ೩. ವಶಪಡಿಸಿಕೊಳ್ಳು; ಹತೋಟಿಗೆ ತರು: ಬಳೆಗೋದುದು ಕೀರ್ತಿದಿಶಾಕಳಭಂಗಳ ನಿಗ್ಗವಂಗಳೊಳ್ ರಿಪುಕಾಂತಾವಳಿಯೊಳ್ ಭವತ್ಪ್ರತಾಪಂ ಬಳೆಗಳಿಯಿಸೆ ತಾನದಕ್ಕೆ ಮಚ್ಚರಿಸುವವೋಲ್ (ಯಶೋಚ. ೩-೪). [ಬಳ್ಳೆ₂+ಕೋ₁]

**ಬಳೆತೊಡಿಸು** 'ಬಳೆದೊಡಿಸು' ನೋ.

**ಬಳೆತೊಡು** 'ಬಳೆದೊಡು' ನೋ.

**ಬಳೆದೊಡಿಸು**, ಬಳೆತೊಡಿಸು (ಕ್ರಿ). ೧. ಕೈಗೆ ಬಳೆಗಳನ್ನು ತೊಡಿಸಂ. ೨. ವೇಶ್ಯೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳುವ ಮೊದಲು ಕೈಗೆ ಬಳೆತೊಡಿಸುವ ವಿಧಿಯನ್ನು ಆಚರಿಸಂ: ಪೆಱರ ಪೆಂಡಿರ್ಗೆ ಬಳೆದೊಡಿಸುವ ಪೆಂಡಿರಂ ಕೊಟ್ಟು ಮಾನ್ಯಂಬಡೆವ ... ಕಟ್ಟಿಗ್ಗರಂತೆ (ರಘುವಾಭ್ಯು. ೯-೦೩೨); ಬಳೆದೊಡಿಸಲೆಂದು ಸುದತಿಯ ಕೆಳೆಯನದೊರ್ವಂ ಕರಕ್ಕೆ ಕೆಯ್ನೀಡೆ (೧೧೮. ೯-೦೩೬). ಬಳೆತೊಡಿಸು: ೩. ಚೊಚ್ಚಿಲುಗರ್ಭಿಣಿಯಾದವಳಿಗೆ

ಏಳನೆಯ ತಿಂಗಳಲ್ಲಿ ನಡೆಸುವ ಸೀಮಂತಸಮಾರಂಭವನ್ನು ಆಚರಿಸು: ಆಗ ನಾನು ಚೊಚ್ಚಲ ಬಸಿರು . . . ಬಳೆತೊಡಿಸುವ ಶಾಸ್ತ್ರವಾಡಿ ನಮ್ಮ ತಾಯಿ ನನ್ನನ್ನು ಕಳಿಸಿದರು (ಕುಂಕುಮ. ೬೭). [ಬಳೆ$_2$+ತೊಡಿಸು]

**ಬಳೆದೊಡು,** ಬಳೆತೊಡು (ಕ್ರಿ). ೧. ಕೈಗೆ ಬಳೆಗಳನ್ನು ಹಾಕಿಕೊಳ್ಳು: ಎಳೆಯಂ ಕೋಳ್ಪಟ್ಟುಂ ಮುಂ ಬಳೆದೊಟ್ಟುಂ ಮುಟ್ಟುಗೆಟ್ಟುಮಿರ್ದೀಗಳ್ ಬಳ್ವಳನೆ ನುಡಿದಪುದೆ (ಕಂದಣ. ೧೨-೧೭೭); ಗಂಡುಗೆಟ್ಟು ಬಳೆದೊಟ್ಟು ಬೃಹನ್ನಳೆಯಾಗಿ ಪಾರ್ಥನಿರ್ದಿರವುಮೆನಲ್ಕೆ ಪಾರ್ಥನದು ರಂಭೆಯ ಶಾಪಮೊ ತನ್ನ ಪಾಪಮೋ (ಗದಾಯು. ೩-೩೦) ; ಕ್ರಿಯಾಸಮಾಸಕ್ಕೆ - ಬಳೆದೊಟ್ಟಂ ; ಕೆಳೆಗೊಂಡಂ (ಶಮದ. ೧೭೭ ವೃ.ಯೋ) ; ಹಲವು ಬಳೆಗಳ ಕೈಯೆ ಫಲಫಲಿರೆನುವುದು ಒಂಟಿ ಬಳೆದೊಟ್ಟ ಕೈ ಮೌನಿ (ಇಂಕಾಶ. ೨೦೦-೯೦). **ಬಳೆತೊಡು :** ೧. ನಿನ್ನಯ್ಯನೇಂ ಬಳೆತೊಟ್ಟು ನಟ್ಟುವನೋ ? ದಿಟ್ಟನಿಂದೆಂದಾದೊಡಂ ಪಂದೆ ಪುಟ್ಟುವುದೆ ? (ಶತ್ರಾಂಗ. ೮೦-೨೦೯೪). ೨. (ಆಲಂ) ಸೋಲನ್ನು ಒಪ್ಪಿಕೊಳ್ಳು : ನಾನೇನು ಬಳೆತೊಟ್ಟು ಕೂತಿಲ್ಲ (ಜೂ). [ಬಳೆ$_2$+ತೊಡು$_1$]

**ಬಳೆದೋಳ್** (ನಾ). ಬಳೆಯ ಆಕಾರದ ಆಭರಣವನ್ನು ಧರಿಸಿದ ತೋಳು : ವನಲಕ್ಷ್ಮಿಗೆ ಸಕಲವಿಲಾಸಿನಿಯರ್ ಬಳೆದೋಳ್ಗಳಿಂದೆ ಚಾಮರಮಿಕ್ಕಲ್ (ಗಿಂಕ. ೨-೯೬); ನವನರ್ತನದ ಹಸನಿಗಂ ಬಳೆದೋಳ ಭಾಗ್ಯನಿಧಿ ಹುಲಿಯುಗುರ ಸುಲಭಿಗಂ (ಬಸರ. ೦-೧೩೦). [ಬಳೆ$_2$+ತೋಳ್]

**ಬಳೆಮುರಿ** (ನಾ). ಒಂದು ಬಗೆಯ ಸಕ್ಕರೆ : ಸೊಟ್ಟ ಸಕ್ಕರೆ ಬೆಲ್ಲ ಬಳೆಮುರಿ ತವರಾಜ . . . ದ್ರಾಕ್ಷಿವಣ್ಗಳ ಹೊಟಿ ಸಾಲಿಟ್ಟವು ಕೊಟ್ಟಗೆಯೊಳಗೆ (ಕುರಾಶಾಂ. ೪೦-೩೩); ಬಳೆಮುರಿ ಸಕ್ಕರೆಯನು ಬಟ್ಟವಾಲೊಳು ಕಲಸಿ ಹೊಂಬಟ್ಟಲನೆತ್ತಿ ಲಲನ ನಲ್ಲನ ಕೈಗೆ ನೀಡುವಳು (ಭರಿಪ. ೦೦-೩೦). [ ? ]

**ಬಳೆಯುವಾಡ** (ನಾ). ಒಂದು ಪ್ರದೇಶದ ಹೆಸರು : ಒನ್ನವಾಡ ಗಂಗವಾಡ ಒಳೆಯುವಾಡರೆನ್ನಾಡಾಳ ಸಿಯುಳಾಜಿಸಾಮಿ ಸರ್ಬರಸ ಕೊಟೋರ್ (ಮ್ಯಾಆ. ೦೯೨೯, ೦೦೪-೦; ಸು. 820). [ ? + ಬಾಡ$_1$ ]

**ಬಳೆಯಿಸು,** ಬಳಯಿಸು, ಬಳೆಸು (ಕ್ರಿ). ೧. ಗಿಡ, ಮರಗಳು ವೃದ್ಧಿಯಾಗುವಂತೆ ಮಾಡು; ಬೆಳೆಸು : ಬಹುಪೋಷಣದಿಮ್ಮಾವಿನ ಸಹಕಾರದ ಸೊನೆಯ ಸೋನೆ ಬಳೆಯಿಸೆ ಬಳೆಗುಂ ಮಹಿಯೆನೆ ಬಣ್ಣಿಸುವ ಪಿತಾಮಹಂಗಮರಿದೆಗ್ಗ ಮೊಗ್ಗ ನಿನಗಮುದೆನಗಂ (ಶಾಂತಿಪು. ೦-೬೦); ಆ ಕಳಮಧಾತ್ರಿ ಕಣಿಶಕುಚಾಕಲಿತಪಯಃಪ್ರತಾನದಿಂ ಬಳೆಯಿಸೆ ನಿರ್ವ್ಯಾಕುಳಮೆನೆ ರಾಜಶುಕಾನೀಕಶಿಶುಪ್ರತತಿ ಬಳೆವುದುಚಿತಸ್ಥಿತಿಯಿಂ (ಚಂದ್ರಪ್ರ. ೦-೯೩). ೨. ಅಭಿವೃದ್ಧಿಗೊಳಿಸು; ಏಳಿಗೆ ಹೊಂದುವಂತೆ ಮಾಡು : ಪಲವು ಧರ್ಮಂಗಳ ಬಳೆಯಿಪುದಾಯಾಸಫಲವ ಭೋಗಿಪುದಾನಂದ (ಹರಿಶ. ೨-೨೭). ೩. ಹೆಚ್ಚಿಸು; ಅಧಿಕಗೊಳಿಸು : ಕಳೆದುದು ಪತ್ರಭಂಗದ ಬೆಡಂಗುಗಳಂ ಕುಟಿಲಾಲಕಂಗಳಂ ಬಳೆಯಿಸಿದತ್ತು . . . ಮೆಯ್ಗೆ ಪುಳಕೋದಯಮಂ ಪಡೆದತ್ತು (ಆದಿಪು. ೦೦-೦೪೭); ಇಲ್ಲದ ತಪ್ಪಂ ಕಲ್ಪಿಸಿ ಮೆಲ್ಲನೆ ಮುಳಿದೊಲ್ದು ಕೂರ್ಮೆಯಂ ಬಳೆಯಿಸುತುಂ ಪಲ್ಲವಕರ್ಣೆರಸೆಸೆ ದರ್ಸಲ್ಲೀಲೆಯನಾಂತು ಲೋಲೆಯರ್ ಮುದದಿಂದಂ (ಉದ್ಭಟ. ೦೨-೬೦) ; ದೇವಪೂಜೆಯ ದೇವರಿಗೆಬಗುವುದು . . . ತನ್ನ ಭಾಷಶುದ್ಧಿಯ ಬಳೆಯಿಪುದು (ಹರಿಶ. ೪-೯). ೪. ಉಂಟುಮಾಡು; ಹುಟ್ಟಿಸು : ಚಕ್ರೇಶ್ವರಂ ವಾರ್ಧಿಭೂತಲನಾಥಂಗನುರಾಗಮಂ ಬಳೆಯಿಸಲ್ಕರ್ಘ್ಯಕ್ರಿಯಾತಂಡುಲಂಗಳಿವೆಂದಾದರದಿಂದೆ ಕೊಂಡನವಜಿರ್ಗೊಳ್ ಪತ್ತೆಂಟು ರತ್ನಂಗಳಂ (ಆದಿಪು. ೦೨-೦೨೦). ೫. ಚಾಚು; ನೀಡು : ಆ ಕೇಶಿಯಂ ಮುಂಜಕೇಶಿ ಮಾರ್ಕಂಡು ಕರಮಂ ತೂಂತಿ ತದಾಸ್ಯದೊಳ್ ಬಳೆಯಿಸಲ್ ತದ್ಧರ್ಘನೋದ್ರೇಕದಿಂ ಸೆರೆಗಳ್ ಬಿಗಿ ನೆಳಲ್ನೆಳಲ್ಗರೆಯೆ (ಜಗನ್ನಾ. ೩-೪೭). ೬. ನಡೆಸು; ನೆರವೇರಿಸು; ಜರುಗಿಸು : ಉತ್ಪಾತಶಾಂತಿಕಪೌಷ್ಟಿಕಕ್ರಿಯೆಗಳಂ ಮಹಾಬ್ರಾಹ್ಮಣರಿಂದಂ ಬಳೆಯಿಸಿ (ಕಂಪಣಾ. ೦-೧೭೭ ವ). ೭. [ಗಣಿತ] ಗುಣಿಸು; ಗುಣಾಕಾರ ಮಾಡು : ಕೊಳಗವೆನಿತಾದೊಡಂ ನೀಂ ಬಳೆಯಿಸು ನಿಧಿಯಗ್ರದಿಂದೆ ಖಂಡುಗಮಕ್ಕುಂ ಬಳೆಯಿಸು ನಿಧಿಯಿಂದರ್ಧಿಸುಯಿಳೆಯೊಳು ಮರುಪಕ್ಕೆ ಬಳ್ಳ ಖಂಡುಗಮಕ್ಕುಂ (ವ್ಯವಹಾ. ೩೩೧೭೮೩). **ಬಳಯಿಸು :** ೧. ಎಳನೀರಿಂ ನಾಳಿಕೇರಂ ಬಳಯಿಸೆ ಕದಳೀಷಂಡಮುಂ . . . ಸೊಗಯಿಕುಂ ತತ್ಪುರೋದ್ಯಾನಷಂಡಂ (ಮಲ್ಲಿಪು. ೨-೩೪); ಅಂಗಜಂ ಪರ್ವಿಸಿದ ಲತೆ ಸುಧಾಸೂತಿ ಪೀಯೂಷಧಾರಾಂಬುವೆ ಪೊಯ್ಸ್ಸಾರಾಗೆ ಮುದ್ದಿಂ ಬಳ[ಶಾಶಾಂ.ಳೆ]ಯಿಸಿ ದೆಳದೆಂಗೆಯ್ದೆ ಮಂದಾನಿಲಂ ತೋಂಟಮೆಸಂಗೆಯ್ದಟ್ಟಿಜಿಂ ಪೆರ್ಚಿಸಿದ ವಿಚಕಿಳಂ ರಯ್ಯಂ (ಚಂದ್ರಪ್ರ. ೦-೬೭); ಕೆಳೆಯ ಪಗೆಯೊಡನೆ ಪಗೆಯಂ ಬಳ[ಶಾಶಾಂ.ಳೆ]ಯಿಪುದಂ ಬಿಟ್ಟು ಕೂಸುಗೊಟ್ಟನುನಯಮಂ ಬಳ[ಶಾಶಾಂ.ಳೆ]ಯಿಸುವುದು (ಚಂರಾಜ. ೦೩-೩೬): ಉಗುರ್ಗಳ ಚೆಲ್ವಿಕೆಯಿಂದುಡುರಾಜಿಬು ಮೊಗಗಡಿಸುತ ಪಲ್ವೆಳಗಿನ ಒಗುಮಿಗೆಯಂ ಬಳಯಿಸುತ ಬೆಳ್ದಿಂಗಳ ಬಗೆಗಾರ್ತಿಯರೆಯ್ದಿದರು (ಕುರಾಶಾಂ. ೫೬-೧೮). ೪. ಕುಸುಮಾವಳಿಯ ತಳೆಯದ ನಿನ್ನ ಬಟಲ್ಮಾಡಿ ಬಳಯಿಸಿದವುದೆನ್ನ ಮನಕೆ ಖೇದಮನೀಗಳ್ (ಕಾದಂಬ. ೩೩೬); ದಳಿತಲಸತ್ಕುಂದದ್ಯುತಿಯಳಂಕೃತಾಶೇಷಭುವನಮಾ ನೃಪನ ಯಶಂ ಬಳಯಿಪುದರಿನೃಪವನಿತೋಜ್ಜ್ವಳಮುಖಚಂದ್ರಂಗೆ ಮಳಿನತೆಯನಿದು ಚಿತ್ರಂ (ವರ್ಧಪು. ೦-೬೯). ೭. ಪೊಡೆ . . . ಬಳಯಿಸು ಏಕಂದೊಡರಿಪ ವಾಕ್ಯಂಗಳ್ ತಾಂ ಪೊಡವಿಯ ನರರ್ಗೆಲ್ಲ ಗುಣೆಯಿಸೆಂಬುದು ನಿರತಂ (ವ್ಯವಹಾ. ೦೦-೦೦). **ಬಳೆಸು :** ೩. ವಿಲಾಸಮನಲರ್ಚಿಸುತುಂ ಮುಳಿಸಂ ನೆಗಟ್ಟುತುಂ ವಿಕಸಿತ ಮೋದಮಂ ಬಳೆಸುತುಂ ಸಲೆ ಕಾಂತೆಯರಾದಮೊಪ್ಪಿದರ್ (ಉದ್ಭಟ. ೦೦-೬೯). [ಬಳೆ$_1$+—ಇಸು$_3$]

**ಬಳೆವೋಗು** (ಕ್ರಿ). ಆನೆಯ ದಂತದ ತುದಿಗೆ ಅಳವಡಿಸಿದ ಅಣಸು ಕಳಚಿ ಬೀಳು : ಕಟ್ಟದಿರೊಳೆ ನೂಂಕಿದಾನೆಗಳ ಕೋಡುಗಳಂ ಬಳೆವೋಗೆ ಪೊಯ್ದುಂ (ಕಂಪಣಾ. ೦೦-೪೦). [ಬಳೆ$_2$+ ಪೋಗು$_1$ (<ಪೋ$_1$)]

ಬಳೆಸು 'ಬಳೆಯಿಸು' ನೋ.

ಬಳೋನ್ಮತ್ತ 'ಬಲೋನ್ಮತ್ತ' ನೋ.

**ಬಳ್ಕಿಸು,** ಬಳುಕಿಸು (ಕ್ರಿ). ಬಾಗುವಂತೆ ಮಾಡು; ಬಾಗಿಸು : ಫಲಭರದಿಂದೆಜಗುವ ಚೂತಲತಿಕೆಯಂತಿರೆ ಕುಚದ್ವಯಂ ಬಳ್ಕಿಸೆ . . . ಲಲನೆ ಭೂಪತಿಗೆ ಪೊಡಮಟ್ಟಳ್ (ಕುಸುಮಾ. ೫-೪೬); ಕ್ಷೋಣಿಯುಂ ಪಯದೇಟಿಗೆ ಬಳ್ವಳ ಬಳ್ಕಿಸುತ್ತಿರೆ . . . ನೃತ್ಯಮನಾಡಿದಂ ಸುರನಾಯಕಂ (ಅಜಿತಪು. ೦೪-೬೦); ಕೈಯಂ ಮುಗಿದು ಬಳ್ಕಿಸಿ ನಡುವನೊಯ್ಯನೆ ನಗೆಮುಗುಳ್ನಿನ ತನ್ನ ಭಾವದಲಿ ಸೇರಿ (ಚಿಕ್ಕಪು. ೪-೦೨). **ಬಳುಕಿಸು:** ವಾಸುಗಿಯ ಬಳುಕಿಸುವ ತಾರೆಗಳ ತಱದಗಿವ ಗರ್ವಿತ ಗೌರವರನರ್ಬುದವನಂಗದವೀರ ತೋಱಿಸಿ ಮೆಚ್ಚಿಸಿದನು (ತೊರವ. ೪-೬-೨೦).

[ಬಳ್ಕು$_1$ (<ಬೆಳ್ಕು$_1$) + — ಇಸು$_3$]

ಬಳ್ಕು$_1$ 'ಬೆಳ್ಕು$_1$' ನೋ.

ಬಳ್ಕು$_2$ 'ಬೆಳ್ಕು$_2$' ನೋ.

ಬಳ್ಕುಡಿ 'ಬಕ್ಕುಡಿ$_1$' ನೋ.

ಬಳ್ಕುಡಿಗೆಯ್ 'ಬಕ್ಕುಡಿಗೆಯ್' ನೋ.

**ಬಳ್ಕುವೋಗು** (ಕ್ರಿ). ನಡುಕವನ್ನು ಹೊಂದು ; ನಡುಗು : ನಯಹೀನರ್ಪಿಡಿದೊತ್ತಿ . . . ನಿರ್ದಯಂದಿಂ ಪೀಡಿಸಿ ಬಳ್ಕುವೋಪಿನೆಗ ಮೆಲ್ವಂ ತಾಪಿನಂ ಮೇಗೆ ಮೂಗಿಯ ಮೂಗಂ ತ್ರಲೆವಾರ ಕೊಯ್ದು (ಸುಕುಮಾ. ೬-೨೯). [ಬಳ್ಕು$_2$(<ಬೆಳ್ಕು$_2$)+ಪೋಗು$_1$(<ಪೋ$_1$)]

**ಬಳ್ಳುಱು** 'ಬೆಳ್ಳುಱು₁' ನೋ.

**ಬಳ್ಳ್ದು** 'ಬಾಟಿಲ್₁' ಪರಾ.

**ಬಳ್ವಳ್₁** (ನಾ). ೧. ಹೆಚ್ಚಳ; ಅತಿಶಯ; 'ಬಳ್ವಳಿಕೆ' ಪರಾ. ೨. ಹಿರಿದಾದುದು: "ಬಳ್ವಳಮೆಂದು ಪಿರಿದಾಗಿ ಬೆಳೆದುದು" (ಕಶಶಾ. ೬೦-೬೦೨). ೩. ವಿಸ್ತಾರವಾದುದು; ವಿಶಾಲವಾದುದು: ಆತನ ಪಡೆಗೆ ನಡೆಯಲಿಡೆ ಮಾಡಿದಂತೆ ಬಳ್ವಳಾದ ದೆಸೆಗಳುಮಾತನ ವಿಜಯಸೈನ್ಯಕ್ಕೆ ತಡೆಯದೆ ಪಾಯಲ್ವೇಟ್ಟು ಮುಂಬಂತೆ ನೆಲೆಯಾದ ಮಹಾನದಿಗಳುಂ . . . ತನ್ನ ಬರವಂ ಪ್ರಕಟಂಮಾಡೆ (ಆಪು. ೦೦-೩ ವ).

**ಬಳ್ವಳ್₂** 'ಬಳ್ವಳಂ' ನೋ.

**ಬಳ್ವಳಂ**, ಬಳುವಳ, ಬಳ್ವಳ್₂ (ಅ). ಹೆಚ್ಚಾಗಿ : ಅಧಿಕವಾಗಿ : ಅತಿಶಯವಾಗಿ : ಪರಿಕಿಪೊಡಗ್ಗಿಗವಾಕೆಯು ವಿರಹಾಗ್ನಿಗವಿಲ್ಲ ಭೇದ ಮಲ್ಲದೊಡೇಂ ಕಪ್ಪುರದ ರಜಕ್ಕಂ ವೀಜನದೆರಲ್ಗಮದು ಕಿಡದೆ ಬಳ್ವಳಂ ಬಳೆನಪುದೇ (ಶಂಪ್ರಪು. ೩-೧೨೯); ಬಲ್ಸೇದೆ ಬಳ್ವಳವುಣ್ಮಲ್ಕೆರ್ದೆಯೊಳ್ದಡಂ ಬಿದಿಗು ನೇತ್ರಂ ಕೆಂಡದಂತಾಗೆ ಗಲ್ಗಲನಾಗಳ್ಪೊರಮಟ್ಟಿಸಂದಿಱದು ತೇರಂ ಮಾತ್ರಿಯುಬ್ಬೆಗದಿಂ (ಶಂಪ್ರಪು. ೦೬-೦೩). **ಬಳುವಳ** : ಕಿಡೆ ವಳಿಗಳು ಬಳುವಳ ಬಳೆಯೆ ತೆಳುವಸಿಕ್ಕೋರ್ವುಳಾಂಗವುಂ ಜವಜವಾಗೆ ಬೆಳೆದುದೆ(ದು) ಗರ್ಭ್ಭಂ (ಕಇ. I, ೨೩-೩೦ ; 1186) : ಸಳನಳಿಸಿ ಬಳು [ಪಾಠಾಂ. ಳ]ವಳ ಬೆಳೆದೆಳಲತೆಯ ತಾಂಬೂಲಲತೆಯು . . . ಚಂದಕಲತೆಯ ಶಿಂತಿಣಿಯುಂ ಸಲ್ಲಲಿತಮಾದ ವಲ್ಲೀವನಪ್ರದೇಶದೊಳ್ (ಧರ್ಮಾಪ. ೦-೩೨ ವ). **ಬಳ್ವಳ್₂** : ಪದ್ಮಬಾಂಧವಂ ಬಳ್ವಳ ನೀಡಿದಂ ಕರಸಹಸ್ರಮಂ (ಅಜಪು. ೬-೬೯) : ಅಲ್ಲಿ ರಿಪುವಂಶರಥಮಂ ಬಳ್ವಳ ಬಗೆದೊಗೆದ ತನ್ನ ವಿಕ್ರಮದಹನಂ ತೋಳ್ವಲಮಂ ಸರ್ವಾರ್ಥನಂದನಂ ಸಿದ್ಧಾರ್ಥಂ (ವರ್ಧಮಾ. ೧೦-೨೨); ಬಳ್ವಳ ಬೆಳೆದ ಬಾಳೆಯೊತ್ತದ ಬಾಟಿಯ್ಪೊಂಪಂಗಳುಮಂ (ಅರ್ಧನೇ. ೩-೦೦ ವ). [< ಬಳ್ವಳ್₁]

**ಬಳ್ವಳನೆ** (ಅ). ಅಧಿಕವಾಗಿ ; ಹೆಚ್ಚಾಗಿ; ತುಂಬ: ಎಳೆಯುಂ ಕೋಳ್ಪಟ್ಟುಂ ಮುಂ ಬಳೆದೊಟ್ಟುಂ ಮುಟ್ಟುಗಟ್ಟುವಿರ್ದೀಗಳ್ ಬಳ್ವಳನೆ ಸಂಪಿದಪುದೆ (ಶಂಶಹಾ. ೦೨-೦೬೬) ; ಬಳ್ವಳನೆ ಬಳೆದ ನಿಜರುಚಿಗಳ್ವೆರಸುಜ್ಜ್ವಲಶಿಲಾತ್ರಳಂ ಮನಮಂ ಬೆಂಕೊಳ್ವಘಮಸರ್ಧಚಂದ್ರಂಗೊಳ್ವಂತೆಸೆದಿರ್ದು ಪರ್ಧಚಂದ್ರಾಕೃತಿಯಿಂ (ಅಜಪು. ೪-೩೩) ; ಅಂಬುದನಿನದಾಡಂಬರ ಮಂಬರದೊಳಳುಂಬವಾಗಳೆಸೆದಪುದೆನೆ ಬೇಗಂ ಬಳ್ವಳನೆಸೆದುದು ಭೋರೆಂಬಿನವಾ ಮುನಿಸುಬಾಭ್ರುವಿಭ್ರುಮನಿನದು (ಸುಕುಮಾ. ೦೧-೬೯).

[ ಬಳ್ವಳ್₂ ( < ಬಳ್ವಳಂ ) + — ಅನೆ₁]

**ಬಳ್ವಳಿಕೆ** (ನಾ). ೧. ಅಧಿಕವಾದ ತೂಗಾಟ ; ಅತಿಶಯವಾದ ಬೀಸಾಟ : ತನ್ನ ಬಾಯ್ವಿಡಿಯೊಳಾಲದ ಪಣ್ಣನೆ ಮೈಯ ಬಣ್ಣದೊಳ್ ಕೊಸಗನೆ ತನ್ನ ಬಳ್ವಳಿಕೆಯೊಳ್ ಸೆಳೆಗೊಂಬನೆ ಪೋಲ್ತು (ಆಪು. ೦೨-೬೮) ; ತಳರ್ದುದು ಕರ್ಣತಾಳಪವನಾಹತಿಯಿಂ ಜಳರಾಶಿ ಕೆಯ್ಯ ಬಳ್ವಳಿಕೆಗೆ ದಿಗ್ಗಜಂ ದೆಸೆಯಿನತ್ತ ತೆರಳ್ವುವು (ಶಂಶಹಾ. ೦೦-೬೦). ೨. ಅಧಿಕವಾದ ಚಲನವಲನ : ಕಿಡುತಂದುದು ಮನದಜಾಯುಮ ನುಡಿಯ ತೊವಲ್ ಪಿಂಗಿ ಪೋಯ್ತು ತಳರ್ವಡಿಯೊಳ್ ಬಲ್ಪುಡರ್ದುದು ಬಳ್ವಳಿಕೆಗೆ ತನುವಡೆ ಗೊಟ್ಟುದು ನಾಡೆ ಶೈತವಾತಿಕ್ರಮದೊಳ್ (ಶಂಪ್ರಪು. ೪-೨). ೩. ವಿಸ್ತಾರವಾದುದು ; ವ್ಯಾಪ್ತವಾದುದು : ಬಿಳ್ವ ಪುಳಕ . . . ವೈವರ್ಣತ್ವ ಪಸು ತಾಳ್ದ ಮೊಗಂ ತವಕಿಪ ತನು ತೂಳಂಗೊಳ್ವಂಗಂ ಹರ್ಷಜಲಂ ಕೀವಿದ ಬಳ್ವಳಿಕೆಯ ನೋಟಂ ಕಣ್ಗೊಪ್ಪಿದುವಾ ನೃಪಸಿಂಘನದೊಳು (ಜಯಶಾ. ೬-೩೦). [ ಬಳ್ವಳ್₁ + — ಇಕೆ ]

**ಬಳ್ವಳಿಕೆವಡೆ** (ಕ್ರಿ). ವಿಸ್ತಾರವಾಗು; ಪೃಥುಲವಾಗು : ನಡೆ ನೋಟ್ಪರ ಕಡೆಗಣ್ಣಿಂ ಕಡುಸಲ್ಲರ ಮನಮುಮೊಡನೆ ಪೊತ್ತುವು ಪುರದೊಳ್ ಮಡದಿಯರ ಮೊಲೆಯುನಲ್ಲದೊಡುಡಿಯದೆ ಬಳ್ವಳಿಕೆ [ಪಾಠಾಂ. ಬಳನಳಿಕೆ, ಬಳು ವಳಿಕೆ]ವಡೆದ ಬಡನಮು ಭರದಿಂ (ಲೀಲಾವ. ೬-೦೦; ಅರ್ಧನೇ. ೪-೨೨ ನೋ).

[ಬಳ್ವಳಿಕೆ + ಪಡೆ₁]

**ಬಳ್ವಳಿಸು** (ಕ್ರಿ). ದೊಡ್ಡದಾಗಿ ಬೆಳೆ; ಹಿರಿದಾಗು: ಶಬರನ ಬೀಸುಂಬಲೆಯು ಪಾಸಮನಿಸಿ ಬಳ್ವಳಿಪ . . . ಲಾಂಗೂಲಲತೆಯೊಳಂ (ವರ್ಧಪು. ೦೦-೩ ವ); ಗುಲ್ಮಕಂಟಕ ವಿಕೀರ್ಣಮಾಗಿ ಬಳಸಿ ಬಳ್ವಳಿಪ ಬಾಟಿಲ್ವೇಲಿಗನತಿದೂರದೊಳ್ (ಕೃಶ್ಪಕೃ. ೨-೬೦ ವ).

[ಬಳ್ವಳ್₁ + — ಇಸು₃]

**ಬಳ್ಳ**, ಬಳ್₁ (ನಾ). ೧. ಒಂದು ಅಳತೆಯ ಪ್ರಮಾಣ; ನಾಲ್ಕು ಸೇರಿನ ಅಳತೆ: p ಎರಡು, ನಾಲ್ಕು, ಹತ್ತು ಅಥವಾ ಹನ್ನೆರಡು ಸೇರಿನ ಅಳತೆಗಳು ಬಳ್ಳವೆಂಬ ಹೆಸರಿನಲ್ಲಿ ಬೇರೆ ಬೇರೆ ಕಡೆಗಳಲ್ಲಿ ಪ್ರಚಾರದಲ್ಲಿದೆ : " ನಾಲ್ಕು ಸೊಲ್ಲಗೆಗೆ ಮಾನಮುವು ನಾಲ್ಕಾಗೆ ಬಳ್ಳಮುವು ನಾಲ್ಕೆನಲು ಕೊಳಗ" (ಮಂಗರಾ. ೦೦೪-೦೦); ಧಾನ್ಯಂಗಳೊಳೆಲ್ಲಂ ಪೊಂಗೆರಡು ಬಳ್ಳಮಂ ಕೊಳ್ವಾತಾಗಿ (ಶಾಇಾ. IX-i, ೪೪-೦೯; 1036); ಕಂಡುಗ ಕೊಳಗ ಬಳ್ಳ ಮಾನ ಸೊಲ್ಲಗೆಯಿನಿತು ಮೊದಲಾಗಿ (ಸಿದ್ಧರಾ. ೬-೬೦). ೨. ಧಾನ್ಯವನ್ನು ಅಳೆಯುವ ಸಾಧನ; ನಾಲ್ಕು ಸೇರು ಹಿಡಿಸುವ ಒಂದು ಸಣ್ಣ ಕೊಳಗದಾಕಾರದ ಸಾಧನ : ಸಟ್ಟಿಯ ಬಳ್ಳಂ ಕಿಱಿದು (ಶಂಶಹಾ. ೦೨-೦೬೩): ಬಳ್ಳದ ಬಾಯಂತೆ ಒಂದೇ ಮನವ ಮಾಡಿ (ಬಸವ. ೬೩೩); ಸಮ್ಮ ಸಟ್ಟಿಯ ಮಾತೊಳ್ಳಿದುವು ಬಳ್ಳಂ ಕಿಱಿದು (ಧರ್ಮಾಮೃ. ೬-೨೩೨). ೩. ತಟ್ಟೆ; ತಳಿಗೆ : ಊಟಕ್ಕೆ ಬಳ್ಳ ಹಾಕಿದ್ದಾರೆ (ಕೂಶಿ). **ಬಳ್₁** : ೧. ಸೆಟಿಗಿನೊಳಂದೊರ್ಬಳ ನೆಲ್ಲಂ ಕಟ್ಟಿಕೊಂಡವಂ ಪೊಜಮಟ್ಟಂ (ದಕಳು. ೦೨-೦೦೬); ಸಲಿಕೆಯ ಹಾಗೆಯಲಿ ಭತ್ತ ಬಳ ೩೦ ಲೆಕ್ಕದ ಮೂಡೆ (ಶಾಇಾ. ಮಂಗಳೂರು. ೪೬೩-೨೪: 1312).

[ದೇ.೩ ತಮಿ. ಮಲ. ವಳ್ಳವಮ್; ತುಳು. ತೆಲು. ಬಳ್ಳ]

**ಬಳ್ಳಂಗಱಿ**, ಬಳ್ಳಗಱಿ, ಬಳ್ಳವಗೆಱಿ (ನಾ). ಒಂದು ಕೆರೆಯ ಹೆಸರು : ಬಳ್ಳಂಗೆಱಿಕ್ಷೇತ್ರೀ ಸಹಪ್ರವಲ್ಲೀಮಾತ್ರ ಕ್ಷೇತ್ರಂ ದತ್ತಂ (ಎಇ. XIII. ೦೯೩-೦೦ : 902). **ಬಳ್ಳಗೆಱಿ** : ಉತ್ತರತ ಬಳ್ಳಗೆಱಿಯ ಪಡುವ (ಇಇ. XII. ೦೬-೪೬; 813). **ಬಳ್ಳವಗೆಱಿ** : ಬರಡ ಕೆಱಿಯ ಮೂಡ ಕಡೆಗೋಡೆ ಬಳ್ಳವಗೆಱಿಯ ಮೂಡಣ ಕಡೆಗೋಡೆ (ಮೈಶಾಂ. ೦೪೦೯. ೦೨-೬೬; 900). [ಬಳ್ಳ ? + ಕೆಱಿ]

**ಬಳ್ಳಂಗೊಱಿ** (ಕ್ರಿ). (ಬಳ್ಳದಷ್ಟು) ದೊಡ್ಡದಾಗಿ ಕೊರೆದು ರಂಧ್ರ ಮಾಡು : ಪಲ್ಗಳಂ ನುರ್ಗುಗುಟ್ಟುವುದುಂ ಕೈಗಳಂ ಗೊಟ್ಟಂಗೊಱಿವುದುಂ ಬಾಯಂ ಬಳ್ಳಂಗೊಱಿವುದುಂ (ಸುಕುಮಾ. ೦೧-೪೬ ವ).

[ಬಳ್ಳ + ಕೊಱಿ₁]

**ಬಳ್ಳಗೆಱಿ** 'ಬಳ್ಳಂಗೆಱಿ' ನೋ.

**ಬಳ್ಳಜ್ಜ** (ನಾ). ಒಬ್ಬಾತನ ಹೆಸರು : ಕೊಪುಘಗೆಱಿಯ ಗವುಣ್ಡ ಬಳ್ಳಜ್ಜನ್ನನ್ನು[ಮು]ಡಿಸಿದ ದೇಗುಲಕೆ ಬಿಟ್ಟ ಕೆಯ್ಯ . . . ಕಱಿದು [ಕೊ]ಣ್ಡರಪ್ಪಡೆ ಕವಿಲೆಯುವ ಕಱುನಟಿದರ ಲೋಕಕೆ ಸಲ್ಗು (ಶಾಇಾ. XI — i. ೩೩-೩; 933). [? + ಅಜ್ಜ₂]

**ಬಳ್ಳನ** (ನಾ). ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದವನು (?) : ಗಣೆಗೂರಾ ನರೆಮೆವರಂ ಬೆಳ್ಳಮಣಿಯುರುಂ ಸನ್ನಿಗೂಲಾ ಪುಚ್ಚಿರುಂ ಬಳ್ಳನರುಂ ಪಸುನ್ನಾಯ ಕಬ್ಬಾತರು ಬಿರದರುಂ ಇ ಪೊಲುನು ಸಡಯಿಸಿದೋರ್ (ಎಕ. XVI ಗುಬ್ಬಿ. ೬೩-೩೪; 733). [?]

**ಬಳ್ಳವಗೆಱಿ** 'ಬಳ್ಳಂಗೆಱಿ' ನೋ.

**ಬಳ್ಳವಳ್ಳಿ** 'ಬಱಿವಟಿ₁' ನೋ.

**ಬಳ್ಳವಾಡಿ** (ನಾ). ಒಂದು ಊರಿನ ಹೆಸರು : ಬಿಟ್ಟುದು ಬಳ್ಳವಾಡಿ

ನೆಱೆ ನಂಬಿರ್ದುರ್ದಾರುಹತಂ ಜಿನೇಂದ್ರನಂತಿರ್ದ ಮಹಾನುಭಾವರ್ × × × (ಕಮುದ. ೨೯ ಕ್ರಯೋ). [ಬಳ್ಳ್ಳಿ, + ಪಾಡ್ಡಿ₂]

**ಬಳ್ಳಿವಿನಾಡು** (ನಾ). ಒಂದು ಸ್ಥಳದ ಹೆಸರು : ಇದರ್ಕ್ಕೆ ಸನ್ದಿನಾಡಯ್ನೂಱುಂ ಮಯ್ಯೂನೂರ್ಱಡೆಟ್ಟತ್ತು ಬಳ್ಳಿವಿನಾಡು ಸಾಕ್ಷಿ (ಎಕ. IV, ಕಡೂರು. ೯-೨೩; ಸು. ೯೯೦ ?); ಬಳ್ಳಿವಿನಾಡ ಹಡಿಯವೊಳಲು (ಎಕ. V ಬೇಲೂರು. ೩೬-೬೨; 1117). [ಬಳ್ಳಿವಿ, + ನಾಡು]

**ಬಳ್ಳಿ** (ನಾ). ೧. ಹಬ್ಬಿ ಬೆಳೆಯುವ ಸಸ್ಯ; ಹಂಬು; ಲತೆ : "ಲತಾ, ಪ್ರತಾನಿನೀ . . . ಪ್ರತತಿಃ—ಈ ಐದು ಬಳ್ಳಿ (ಹಲಾಯು. ೩೦-೨೬); ಬಳ್ಳಿಯುಂ ಕೊರಲೊಳ್ ತಗುಳ್ಚಿಯೆಟಲೆ ಪಿಡಿದುಕೊಂಡು (ವಡ್ಡಾರಾ. ೦೨೦-೦೧); ತವರಾಜದ ಸಸಿಯು ಮೇಲೆ ಸವಿಯ ಬಳ್ಳಿಯುಸಡರಿಸುವಂತೆ (ಪಂಪರಾ. ೦೯-೪೯) ; ಪಡೆಯು ಕಾಲ್ವುಳಿಗಾಗ ಗಿಡು ಬಳ್ಳಿ ಪೆಮ್ಮರ ಪುಡಿಯಾಗೆ (ಕಂಪರಾ. ೦೨-೬). ೨. ವೀಳೆಯದೆಲೆಯ ಬಳ್ಳಿ; ನಾಗವಲ್ಲಿ: ಚನ್ದ್ರತೇಜಭಟ್ಟಾರರ್ಗ್ಗೆ ಮಾವಿನೂರ್ಱೊಳ್ ಬಗಗ[ನು] ಕೊಟ್ಟಂ ಸಾವಿರಂ ಬಳ್ಳಿಯು ತೋಣ್ಟದ ಸಾಮ್ಯಮು ಮುಗಿನ ಕಾಡಮ್ಮನುಂ ಎಱೆನಾಗನುಂ ಕುಪ್ಪನುಂ ಮಾದನುಂ ಒಕ್ಕಲ್ನನಂಗೆಯ್ಯೆ (ಎಕ. XXVI, ೬೨-೦೩; ೯೦೮); ಪನ್ನಿರ್ವರ್ಮತ್ತರು ಸಾಯಿರ ಬಳ್ಳಿಯ ವಿಳಕ್ಕಿಯ ತೋಣ್ಟಮುಮನ್ ಕೊಟ್ಟರ್ (ಎಕ. XI. ಚಿತ್ರದು. ೨೬-೦೬; 947 ?); ಸಾಯಿರ ಬಳ್ಳಿಯ ತೋಂಟಮುಂ ದೇವರ್ಗ್ಗೆ ಕೊಟ್ಟರ್ (ಇಕ. XII, ೨೩೭-೬; ೯೬೦). ೩. ಹಗ್ಗ; ಕಣ್ಣಿ : ಎಳತಂದು ಕಡೆಗೋಲ್ವಳ್ಳಿಯಲಿ ಕೈಗಟ್ಟಿ ಕಂಬದಲಿ ಬಂಧಿಸಿದಳು (ಶಾಳ್ಳರಾ. ೨೦-೦೩); ಮೇವಿಗೆ ಬಿಟ್ಟಿದ್ದ ಹಸು ಕತ್ತಲಾದರೂ ಮನೆಗೆ ಬರಲಿಲ್ಲವೆಂತ. ಕೈಯಲ್ಲಿ ಬಳ್ಳಿ ಹಿಡಿದು ಮಂಜರೇ ಹಕ್ಕಲ ತುಂಬ ಹುಡುಕಾಡಿದರು (ದೇವಹಂ. ೩೬). ೪. ಸುತ್ತು; ಕೊಂಕಾದ ಭಾಗ : ಒಂದು ಬಳ್ಳಿ ಚಕ್ಲಿ ಕೊಡು, ಚಹಾದ ಜೋಡಿ (ಗಂಪಹಾಯಿ. ೬೦). ೫. ದೀರ್ಘದ ಗುರುತು ಮುಂತಾದ ಕಾಗುಣಿತ : ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಟ ಚೆಲ್ವು . . ಬಳ್ಳಿಯೊಳೊಡಂಬಡುತಿರ್ಪ ನಯಂ (ಕೃಷ್ಣಕ. ೦೯-೩೪); ನಂತರ ಅವರು ಕಾಕ ಬಳ್ಳಿ ಕಲಿಸಿದರು (ಸ್ವತಃ. ೧೨೦). ೬. ಸಂಬಂಧ; ನಂಟು : ತಮ್ಮಂ ಸಯೆ ಬಳ್ಳಿಯುಂ ನಿಗಳಮುಂ ತ[ಳ್ತ]ಂದುವೃಂ ಬಳ್ಳಿ ಸಂಕಲೆಯುಂ ಪೋದ ಗಜಂ ಬನಕ್ಕೆ ತಳರ್ವಂತುದ್ವೇಗದಿಂ ಮೋಹನಶೃಂಖಲೆ ಪಾಱಿಟೀಱೆ ತಪೋವನಕ್ಕೆ ತಳರ್ದು (ಶಾಂತಿಪು. ೯-೦೦೬). ೭. ವಂಶದ ಕುಡಿ; ಸಂತಾನ : ನಿನ್ನ ಬಳ್ಳಿ ಹಬ್ಬುತ್ತಿರದೆ, ಧಾರ್ಮಿಕವಾಗಿ ಬಾಳು (ಹಬ್ಬ. ೯); ಹಾಲುಂಡ ತವರಿಗೆ ಏನೆಂದು ಹಾಡಲೆ ಹೊಳೆದಂಡೆಲಿರುವ ಕರಕೀಯ ಕುಡಿಯಂಗ ಹಬ್ಬಲೆ ಅವರ ರಸಬಳ್ಳಿ (ಜನಗೀ. ೩೩). ೮. (?): ಶ್ರೀಲೋಕಪಾಲೇಶ್ವರಕಂ ಪಾಱೆ ಬಳ್ಳಿ (ಇಕ. X, ೦೬೩-೬; 733).

**ಬಳ್ಳಿಬಳ್ಳಿ** (ದ್ವಿರುಕ್ತಿ) = ೧. ಹಬ್ಬಿಕೊಂಡಿರುವಿಕೆ; ವ್ಯಾಪಿಸಿರುವಿಕೆ; ಹಬ್ಬುಗೆ : ಬಳಸಿದ ಮಾಧವೀಲತೆಯ ಬಳ್ಳಿವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ವಳ ಬಳೆದೆಳೆದಳಿಸುವ ಪೊಸ ಕೆಂದಳಿರ್ಗ ಗೊಂದಳದೊಳ್ (ಅಜಿತ. ೦೦-೭೦ ವ). ೨. ಆಧಿಕ್ಯ; ಅತಿಶಯ; ಹೆಚ್ಚಳ; ರತ್ನಭೂಷಣದ ಚೆಲ್ವನುರಾಗದ ಬಳ್ಳಿವಳ್ಳಿಯುಂ ಹೃದಯದೊಳೆಂದು ಪರ್ವಿಸುವುದುಂ (ಮಲ್ಲಿಕ. ೯-೬೯). ೩. ಸಮೂಹ ; ಗುಂಪು : ಓಳಿವಟ್ಟು ಬರ್ಪ ಶುಭಿದ ಬಳ್ಳಿ[ಪಾಠಾಂ. ಳ್ಳಿ]ವಳ್ಳಿಗಳುಮಂ (ಅಂಜಿ. ೦೨-೬೯ ವ). ೪. ಪರಂಪರೆ : ಅದಿರದೆ ಮೋಹವಿರೋಧಿಯ ಪುದಿದೊದವಿದ ಬಳ್ಳಿವಳ್ಳಿಯಂ ಪಱಿದು (ಶಾಂತಿಪು. ೬-೯೬) ; ಪಿತೃಗಳುಪಾರ್ಜಿಸಿಟ್ಟ ಸಿರಿ ಜವ್ವನದೇಟ್ಗೆ ಪೆಱಂಗಿದಿಲ್ಲನಿಪ್ಪತಿಶಯರೂಪುಶಕ್ತಿಗಳಿವಲ್ಲವೆ ಹಾನಿಯ ಬಳ್ಳಿವಳ್ಳಿ ನಿಶ್ಚಿತಂ (ಕಾದಂಬ. ೩೩೯). **ಬಳ್ಳಿಗುರುಡ**=ಒಬ್ಬನ ಕೈಯನ್ನು ಹಿಡಿದ ಇನ್ನೊಬ್ಬನಂತೆ ಸಾಲಾಗಿ ನಿಂತ ಕುರುಡರಲ್ಲಿ ಒಬ್ಬ : ಮೂಢಮತಿಯಿಂದ ಕಾಡ ಲಿಂಗವ . . . ಪೂಜಿಸುವ ಶಿಷ್ಯನು ಬಳ್ಳಿ ಗುರುಡನ ಕಯ್ಯ ಬಳ್ಳಿಗುರುಡವಿಡಿದು ಕಾಣದೆ ಡೊಂಗುರವ ಬಿದ್ದಂತೆ ಗುರುಶಿಷ್ಯರೆಂಬುಭಯರು ಯಮಗುಂಡದಲ್ಲಿ ಬೀಳುವರು (ಬಕರಾ. I, ೯೬); ಜನಾಂಗವು ಬಳ್ಳಿಗುರುಡರಂತೆ ಮುನ್ನುಗ್ಗದೆ ಅದರ ಸಿದ್ಧಾಂತಗಳ ಸಾಧಕ ಬಾಧಕ ಪ್ರಮಾಣಗಳಿಂದ ಒರೆಹಚ್ಚಿ ವಿಚಾರಮಾಡಿ (ಶೂವಾದ. ೦ ಎರಡು ಮಾತುಗಳು). [< ಸಂ. ವಲ್ಲೀ. / ತಮಿ. ಮಲ. ವಳ್ಳಿ; ತುಳು. ಕೊಡ. ಬಳ್ಳಿ; ತೆಲು. ವ್ಲಲ್ಲಿ]

**ಬಳ್ಳಿಕೌಂಗು** 'ಬಳ್ಳಿಗವುಂಗಂ' ನೋ.

**ಬಳ್ಳಿಕ್ಕು** (ಕ್ರಿ). ನಾಯಿ, ನರಿ ಮೊದಲಾದುವು ಅರಚು,— ಬಗುಳು,— ಊಳಿಡು : ಬೀದಿಯನಲೆವ ಶುನಕಸಮುದಯಂ ಬಳ್ಳಿಕ್ಕಿದುವು ಕೂಡೆ (ಶ್ರೀರಾಮಾ. ೯೬೦-೦) ; ಬಳ್ಳಿಕ್ಕುತಿದೆ ಪೊಳ್ಳು ಜಂಬುಕಂ ಸಿಂಗದಿದಿರಿನಲಿ ! (ಚಿತ್ರಾಂಗ. ೬೯-೨೧೬೦). 'ಬಳ್ಳಿಡು' ಪರಾ. [ಬಳ್ಳು₂ (<ಬಗುಳು₂) + ಇಕ್ಕು]

**ಬಳ್ಳಿಗಂಟಕ** (ನಾ). (ಮುಳ್ಳಿನ) ಬಳ್ಳಿಯಂಲ್ಲಿರುವ ಮುಳ್ಳು : ಒಳ್ಳುಣಿಸೊಳ್ಪಿಂದಿರ ಭೋಗಿಪೆನೆಂಬೊಳ್ಪಿತಪ್ಪಿನ್ನೀ ತನುಗೆ ಬಳ್ಳಿಗಂಟಕ ಮಾದುದೀ ಮುಪ್ಪೆಂದಾಗ ತಳ್ಳಂಕವಡೆದನಾ ನೃಪತಿ (ಶ್ರೀಪಾಲ. ೦೯-೩೨). [ಬಳ್ಳಿ + ಕಂಟಕ]

**ಬಳ್ಳಿಗತ್ತಿ** (ನಾ). ಬಳ್ಳಿಯ ಹಾಗೆ ಬಳುಕುವ ತೆಳುವಾದ ಕತ್ತಿ: ಆ ಬಳ್ಳಿಗತ್ತಿಯೇನಾದರೂ ಅವನ ಕಯ್ಯಲ್ಲಿದ್ದುಬಿಟ್ಟರೆ (ಶಂತ್ರಕ. ೯೦-೨೨). [ಬಳ್ಳಿ + ಕತ್ತಿ]

**ಬಳ್ಳಿಗರುಳು** (ನಾ). ಬಳ್ಳಿಯ ಹಾಗೆ ಸುತ್ತಿಕೊಂಡಿರುವ ಕರುಳು : ಬುಳ್ಳನಂ ಹೊಯ್ಸಿತು . . . ಬಳ್ಳಿಗರುಳುಚ್ಚಿದುದು (ಸಾಳ್ಳರಾ. ೩-೩೩). [ಬಳ್ಳಿ + ಕರುಳು (< ಕರುಳ್)]

**ಬಳ್ಳಿಗವರ್ತೆ** (ನಾ). ವೀಳೆಯದೆಲೆಯ ಮೇಲೆ ಹಾಕುತ್ತಿದ್ದ ತೆರಿಗೆ : ಈ ವಿಷಯದ ವಿನ್ನಾಣಿಗಳಾ ಬಳ್ಳಿಗವರ್ತ್ತೆಯನುಃಟುಪಿದ ಆಚಾರಿಯ (ಇಕ. X, ೦೬೯-೬; 7ನೆಯ ಶತ). [ಬಳ್ಳಿ + ಕಪರ್ತ್ತೆ₂]

**ಬಳ್ಳಿಗವುಂಗು, ಬಳ್ಳಿಕೌಂಗು, ಬಳ್ಳಿಗೌಂಗು** (ನಾ). ಬಳ್ಳಿಗಳು ಹಬ್ಬಿಕೊಂಡಿರುವ ಅಡಕೆಮರ : ಬಳ್ಳಿಗವುಂಗು ತಳ್ತಿಲಿವಳ್ಳಿಯ ಕಟ್ಟಲೆಯುನಲೆವ ಸೊಡರ್ಗುಡಿಗಳು (ಅಂಜಿ. ೦೦-೬೩); ರಾಜಪುವು ಬಳ್ಳಿಗವುಂಗಿನ ತಟ್ಟಿ ಬಳ್ಳಿಮಾವಿನ ಮನೆ (ಶಾಂತಿಪು. ೬-೦೩೦). **ಬಳ್ಳಿಕೌಂಗು**: ಕಾಯ್ತು ಬಳ್ಳಿಕೌಂ[ಪಾಠಾಂ. ಗೌಂ]ಗಿನ ಪಸುರ್ವಂದರುಮಂ ಪಣ್ತು ಮಧುರದ್ರಾಕ್ಷೆಯ ಬಾಟ್ವಿಂದರುಮನಿರ್ಕೆಲದೊಳಿಕ್ಕಿ (ಅರ್ಜುನ. ೬-೦೦ ವ). **ಬಳ್ಳಿಗೌಂಗು** : ಎಳಲತೆ ತಳ್ತ ಚಂದನದ ಸಾಲೆಳ ವಳ್ಳಿಗಳೆಂಡುಗೊಂಡು ಗೊಂದಳಿಸಿದ ಬಳ್ಳಿಗೌಂಗು . . . ಮೆಱೆವುದು (ಸುಕುಮಾ. ೯-೩೨). [ಬಳ್ಳಿ + ಕವುಂಗು]

**ಬಳ್ಳಿಗಱುಕೆ** (ನಾ). ಬಹಳ ಉದ್ದವಾಗಿ ಹಬ್ಬಿ ಬೆಳೆಯುವ ಹುಲ್ಲು : "ಗಂಡೋರಿಃ, ಶಕುಲಾಕ್ಷಕಃ — ಈ ೨ ಬಳ್ಳಿಗಱುಕೆ" (ಅಭಿಧಾ. ೦೦೨). [ಬಳ್ಳಿ + ಕಱುಕೆ (<ಕಱುಂಕೆ)]

**ಬಳ್ಳಿಗಾಮೆ** 'ವಳ್ಳಿಗಾಮೆ' ನೋ.

**ಬಳ್ಳಿಗಾವಣ** (ನಾ). ಬಳ್ಳಿಗಳಿಂದ ರಚಿತವಾದ ಮಂಟಪ; ಲತಾಗೃಹ : ಬೀಡುಮಾಣಂಗಳೊಳಿಕ್ಕಿದ ಬಳ್ಳಿಗಾವಣಂಗಳೊಳಂ ನನೆಯ ಜೊಂಪಂಗಳೊಳಂ ವಿಶ್ರಮಿಸುತ್ತುಂ (ಶಂಪರಾ. ೨-೯೩ ವ); ಬಗ್ಗವಳ್ಳಿಯ ಬಳ್ಳಿಗಾವಣ ದೋಳಿಯಿಂ ಸೊಗಯಿಪ್ಪ ಸಮ್ಯಗ್ಗವಾಕ್ಷದ ಮಂಕದಾರದ ಕೇತಕಿರ್ಗೆ ಮಿನೊಂದಿ ನಿಂದು (ಶಾಂತಿಪು. ೩-೭೯). [ಬಳ್ಳಿ + ಕಾವಣ₁]

**ಬಳ್ಳಿಗಾವೆ** 'ವಳ್ಳಿಗಾವೆ' ನೋ.

**ಬಳ್ಳಿಗುರುಳ್** (ನಾ). ಬಳ್ಳಿಯಂತೆ ಕೊಂಕಾಗಿರುವ ಕೂದಲು;

ಗುಂಗುರುಂಕೊಂದಲುಂ ; ಅವಳ ಪೆಱೆನೊಸಲನಲೆವ ಬಳ್ಳಿಗುರುಳೊಳ್ ತೊಡಂಕಿದ ಕಣ್ ಕಣ್ಣಿವಲೆಯೊಳ್ ಕೆಡೆದೆರಲೆಯುಂತಡಿಯಿಡಲಾರ್ತುವಿಲ್ಲ (ಅಜಿತಪು. ೬೮). [ಬಳ್ಳಿ + ಕುರುಳ್$_1$]

**ಬಳ್ಳಿಗೊಳಿಸು** (ಕ್ರಿ). ಸಂಬಂಧವನ್ನುಂಟು ಮಾಡು ; ಹೊಂದಿಸು : ಮತ್ತಮಾ ರಾಗಂಗಳಂ ಪಾಡುವಲ್ಲಿ ಗ್ರಾಮವರ್ಜಂಗಳಂ ತೋಱಿದು ಜನ್ಯ ಜನಕಂಗಳಂ ಬಳ್ಳಿಗೊಳಿಸಿ (ಸಂಗೀ. ೨೪೩). [ಬಳ್ಳಿ + ಕೊಳಿಸು]

**ಬಳ್ಳಿಗೌಂಗು** 'ಬಳ್ಳಿಗವುಂಗು' ನೋ.

**ಬಳ್ಳಿಗ್ಗಮ** (ನಾ). ಒಂದು ಊರಿನ ಹೆಸರು : ನಿಮ್ಮನೂರ ಕಿಳ್ಳಮ್ಮನ್ ಅಣ್ಣುಗಿಯ ರಟ್ಟಗನ್ ಬೆದೆಮೆಟ್ಟಿಯಾಲಮ್ಮನ್ ಬಳ್ಳಿಗ್ಗಮಯು ಗಾಮುಣ್ಣನ್ (ಎಕ. VIII, ಸೊರಬ. ೦೦-೦೩; ಶ. 800).

[☞ ಇದು 'ಬಳ್ಳಿಗಾವೆ' ಎಂಬುದರ ಅಪಲಿಖಿತ]

**ಬಳ್ಳಿಡು, ಬೊಳ್ಳಿಡು** (ಕ್ರಿ). ೧. = ಬಳ್ಳಿಕ್ಕು : ಲಿಂಗನಿಷ್ಠಾಹೀನರು ಓದಿ ಹಾಡಿದರೆ ನಳ್ಳಿಗುಳ್ಳಿಯ ತಿಂದ ನರಿ ಹಳ್ಳದ ತಡಿಯಲ್ಲಿ ಬಳ್ಳಿಟ್ಟು ಬಗುಳ್ದಂತೆ (ಸಿದ್ಧೇಶ. ೭೩-೨೦೪). ೨. (ನಾಯಿ, ನರಿಗಳ ಹಾಗೆ) ಅರಚು; ಕೂಗಾಡು; ಬೊಬ್ಬಿಡು : ಕೊಟ್ಟರೆ ಹರಸುವೆನು ಕೊಡದಿದ್ದರೆ ಬಳ್ಳಿಟ್ಟು ಬಗುಳುವಂಥ ಭ್ರಷ್ಟದಾಸನು ನಾನು (ಪೋತ್ಲು. ೭೩-೨೩); ಹರಿಹರನ ಹರಣಕ್ಕೆಂದು ಬಳ್ಳಿಟ್ಟು ಬೊಗಳುತ್ತ ಬಂದು ಪ್ರಾಂತದೊಳು ಹದುಳಮಿಹನು (ಹಾಶಾ. ೦೪-೬೭). **ಬೊಳ್ಳಿಡು :** ೨. ಒಳ್ಳೆಯ ಮಾತಿಂಗೆಯುಳ್ಳೊಡವೆ ಕೊಡೆನೆಂದು ಬೊಳ್ಳಿಟ್ಟು ಬೊಗಳಿ ಹುಸಿದು ಸಾಲವ ನುಂಗಿ ಇಳ್ಳಿನುತಲಿಹನು (ಸರ್ವಜ್ಞ. ೦೩೯೪).

[ ಬಳ್ಳು$_2$ (<ಬಗುಳ್ಳು$_2$) + ಇಡು$_1$ ]

**ಬಳ್ಳಿತುಱುಚಿ** 'ಬಳ್ಳಿದುಱುಚಿ' ನೋ.

**ಬಳ್ಳಿದಲೆಯ** (ನಾ). (ಬಳ್ಳಿಯಂ ಹಾಗೆ ಹಬ್ಬಿರುವ) ಅನೇಕ ತಲೆಗಳನ್ನುಳ್ಳವನು; ರಾವಣ : ಬಳ್ಳಿದಲೆಯನ ತರಳನಾಗಲೆ ಬಂದನಿಂದ್ರಾರಿ (ತೊರವೆ. ೦೪-೩). [ ಬಳ್ಳಿ + ತಲೆ$_1$ + — ಅ$_7$ ]

**ಬಳ್ಳಿದುಱುಚಿ, ಬಳ್ಳಿತುಱುಚಿ** (ನಾ). ಒಂದು ಬಗೆಯ ಔಷಧೀ ಸಸ್ಯ; ಹಬ್ಬಿ ಬೆಳೆಯುವ ತುರಚಿಗಿಡ : "ಯಾಸಃ, ಯವಾಸಃ, ದುಃಸ್ಪರ್ಶಃ, ಧನ್ವಯಾಸಃ . . . ದುರಾಲಭಾ—ಈ ೧೦ ಬಳ್ಳಿದುಱುಚಿ" (ನಾಕಾರಾ. ೦೦೪) ; ಬಳ್ಳಿದುಱುಚಿಯ ಬೇರು . . . ಅರೆದು ಪೂಸಲು ನಸುಗುನ್ನಿಯ ವಿಷ ಶಮನವಹುದು (ವೈದ್ಯಸಾ. II, ೨೩೪) ; ಬಳ್ಳಿದುಱುಚಿ ನೆಲಬೇವು ಮುಸ್ತೆ (ಕರ್ಣಾ. ೩-೩೨) ; ಬಳ್ಳಿದುಱುಚಿ ನೆಱೆ ಮುಳ್ಳುನೆಗ್ಗಿಲು ಕಾಡಕಳ್ಳಿ . . . ಬೆಳೆದು (ಕೊಶಪು. ೦೬-೩೯). **ಬಳ್ಳಿತುಱುಚಿ :** ಬಳ್ಳಿತುಱುಚಿಯ ಬೇರ ಒಳ್ಳಿತಾಗಿಯೆ ಹಣಿದು ಬೆಳ್ಳಿಯ ರಸದಿ ಬೆರೆಯಲ್ಕೆ ಹೇಮ ತಾ ಬಳ್ಳದಲಿ ಬಕ್ಕು (ಸರ್ವಜ್ಞ. ೦೪೬೪). 'ತುರಚಿಬಳ್ಳಿ' ಪರ್ಯಾ. [ಬಳ್ಳಿ + ತುಱುಚಿ]

**ಬಳ್ಳಿಬರೆ** (ಕ್ರಿ). (ದೀರ್ಘ ಮಂಂತಾದ) ಕಾಗುಣಿತವನ್ನು ಬರೆ : ವಾಡಿಕೇ ಮೀರ ಕಾಗದ ಪುಸ್ತಕ ಓದುವ ಹುಡುಗರು ತಲೆಗೆ ಒಂದು ದುಡ್ಡನ್ನೂ, ಹಲಗೇ ಬರೆಯುವವರು ಮೂರು ಕಾಸನ್ನೂ, ನೆಲದ ಮೇಲೆ ಬಳ್ಳಿಬರೆಯುವವರು ಎರಡು ಕಾಸನ್ನೂ ತಂದು ಪಂತರಿಗೆ ಆ ದಿವಸ ಕೊಟ್ಟು ಶಾರದಾಪೂಜೆಯನ್ನು ಮಾಡಿದರು (ಮೂಷಕರಾ. ೩೪). [ಬಳ್ಳಿ + ಬರೆ$_1$]

**ಬಳ್ಳಿಬೆಳಗು** 'ಬಳ್ಳಿವೆಳಗು' ನೋ.

**ಬಳ್ಳಿಮಾಡ, ಬಳ್ಳಿವಾಡ** (ನಾ). ಬಳ್ಳಿಗಳಿಂದ ರಚಿತವಾದ ಮನೆ; ಲತಾಕುಂಜ : ಮೂವತ್ತೆರಟ್ಟಳ್ಳಿಮಾಡಂಗಳುಮಂ ಮಾಡಿಸಿ(ಪಶ್ಚಾರಾ. ೪೩-೨೦); ಸುರತಸುಖದ ಬಳ್ಳಿವಳ್ಳಿಯೆನಿಪ ಬಳ್ಳಿವಾಡದಿಂ ಮಹಾವಿನೋದನೀಡದಿಂ (ಶಂಶಭಾ. ೦-೩೬ ರಗಳೆ) ; ನಲವಿಂದಂ ಬಳ್ಳಿಮಾಡಂಗಳೊಳ್ ಗುಡಿಯಂ ಬೇಗನೆ ಕಟ್ಟಿಂ (ಕರ್ಣಾ. ೩೨೨). **ಬಳ್ಳಿವಾಡ :** ರತ್ನದೀಧಿತಿಯೊಳೊಂದಿ ಪಳಂಚುವ ಬಳ್ಳಿವಾಡದಿಂ ಕಳಸದ ಮತ್ತವಾರಣದ ಶೋಭೆಗಳಿಂ (ಶಶಾಂಕ. ೩-೪೩) ; ಬಿರಿಮುಗುಳಿನೊಪ್ಪುವ ಕಾಡುಮಲ್ಲಿಗೆಯ ಬಳ್ಳಿವಾಡಮುಂ (ರಾಜಶೇ. ೩೦-೦೬) ; ನಂದನವನಂ ದ್ರಾಕ್ಷಾರಸಾಲಂಗಳಂ ಮಿಂಚುಂದೀವಿಗೆ ಬಳ್ಳಿವಾಡಮೆಸೆಯೆ (ವೃಷಭಪು. ೬-೬೬). [ಬಳ್ಳಿ+ಮಾಡ$_1$]

**ಬಳ್ಳಿಮಾವು** (ನಾ). ಬಳ್ಳಿಗಳು ಹಬ್ಬಿರುವ ಮಾವಿನ ಮರ : ರಾಜಿಪುವು ಬಳ್ಳಿಗವುಂಗಿನ ತಟ್ಟು ಬಳ್ಳಿಮಾವಿನ ಮನೆ ಬಳ್ಳಿಮಲ್ಲಿಗೆಯ ಮಂಡಪಂ (ಶಾಂತಿಪು. ೬-೧೩೦) ; ಇಮ್ಮಾವಿನ ಬಳ್ಳಿಮಾವಿನೆಳಮಾವಿನ ಸೊಂಪೆಸೆಗುಂ ವನಾಂತದೊಳ್ (ಜಗಪು. ೦೪-೨೬) ; ಮೆಲ್ಲನೆ ನಡೆವಂಚೆಗಳಂ ತಳೆದಿರ್ಪ ಬಳ್ಳಿಮಾವಿನ ಸಾಲ್ಗಳ್ (ಕರ್ಣಾ. ೦೦೩). [ಬಳ್ಳಿ + ಮಾವು]

**ಬಳ್ಳಿಮಿಂಚು** (ನಾ). ಬಳ್ಳಿಯ ಹಾಗೆ ಕವಲಾಗಿ ತೋರ್ಪಡಿಸುವ ಮಿಂಚು ; ಕೋಲುಮಿಂಚು : ನೆಗೆದುದು ಬಾಳ್ಗೊಗೆ ಕಾರಮುಗಿಲ್ ಬಳ್ಳಿಮಿಂ[ಚಿನಿಂದು]ಳ್ಕುಪವೋಲ್ (ಶಂಶಭಾ. ೦೦-೬೪); ಅಡರ್ದತ್ತತ್ರಲುಂ ಬಳ್ಳಿಮಿಂಚಂ ತಳೆದಾಶಾಮಂಡಲಂ ಕಟ್ಟನೆ ಕುನಿಯೆ ಜಳಸ್ಫೀತ ಜೀಮೂತಜಾತಂ (ಜಗಪು. ೯-೦೪) ; ಬಂದಳೂರ್ವಶಿ ಬಳ್ಳಿಮಿಂಚಿನ ಮಂದಿಯಲಿ (ಕುಮಾ.ಭಾ. ೯-೦೩). [ಬಳ್ಳಿ + ಮಿಂಚು$_2$]

**ಬಳ್ಳಿವರಿ** (ಕ್ರಿ). ಬಳ್ಳಿಯ ಹಾಗೆ ಹಬ್ಬು,—ವಿಸ್ತಾರವಾಗು,—ಹರಡು : ಬೆಟ್ಟದ ಮೇಲೊಂದು ದಳ್ಳುರಿ ನಿಮಿರಿ ಬಳ್ಳಿವರಿದು ಆಕಾಶಕ್ಕಡರಿ ಜಗದೊಳ್ಪಸರಿಸಿ ಸಪ್ತಸಮುದ್ರಂಗಳ ನುಂಗಿತ್ತು (ಅಡವ. ೩೩-೬೩) ; ಮೂಡಿದುದು ನೆಯ್ದಿಲ ಬೆಳ್ಪು ಮಡಲ್ದುದಚ್ಚಬೆಳ್ದಿಂಗಳ ಬಳ್ಳಿವರಿದತ್ತೆಳೆವೆಂಡಿರ ಕಣ್ಣ ಬೆಳ್ಪು (ಲೀಲಾವ. ೨-೨೦) ; ಸೆಜ್ಜೆವನೆಯ ಸಿರಿಮಂಚದೊಳ್ ಕುಳ್ಳಿರ್ದು ಬಳ್ಳಿವರಿವ ನೇಹಂ ಕುಡಿ ನಿಮಿರೆ(ಗಿರಿಜಾ. ೨-೦೦೩ ವ). [ಬಳ್ಳಿ + ಪರಿ$_2$]

**ಬಳ್ಳಿವಲೆ** (ನಾ). ಬಳ್ಳಿಯಂ ಹಾಗೆ ಇರುವ ಬಲೆ : ತಳ್ಳಿವಲೆ ಬಳ್ಳಿವಲೆ ತೊಡಕುವಲೆ . . . ಮಂದಸಿನ ವಲೆಯು ಹೊಱೆಗಳ ಬೇಡವಡೆ ನೆರೆದುದು (ಹಕಾಸಾ. ೩-೬) ; ಬಿರ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳಿಂಬಿವಂ ಬೀಸರಂಬುಗದೆ ಬಿರ್ಚಿ ಬೀಸಿದಾಗಳ್ (ರಾಜಶೇ.೩-೦೦೪ ವ). [ಬಳ್ಳಿ + ಬಲೆ$_1$]

**ಬಳ್ಳಿವಾಡ** 'ಬಳ್ಳಿಮಾಡ' ನೋ.

**ಬಳ್ಳಿವಾಯ್** (ಕ್ರಿ). ಬಳ್ಳಿಯು ಹಬ್ಬುವಂತೆ ಸಾಲುಗಟ್ಟಿ ನುಗ್ಗು.—ಸಾಲಾಗಿ ನುಗ್ಗು : ಸಪ್ತಚ್ಛದ ಗಂಧದ ಸೊವಡು ಮುಟ್ಟೆ ಮದಕರಿ ಕುಳವೋವದೆ ಬಳ್ಳಿವಾಯ್ದು ಗರಿ ತುಳ್ಕಿದ ಗಿರಿ ಪರಿವಂತೆ ಪರಿದು ಮರವಾಯ್ದುರ್ಕಿಂ (ಶಾಂತಿಪು. ೯-೦೪೦). [ಬಳ್ಳಿ + ಪಾಯ್$_1$]

**ಬಳ್ಳಿವಿಡಿ** (ಕ್ರಿ). ಬಳ್ಳಿಯನ್ನು ಆಧಾರವಾಗಿ ಹಿಡಿ : ದುರಾರೋಹಮುಮಾದೊಡಂ ಬಗೆಯದೆ ಬಳಸಿದ ಬಳ್ಳಿವಿಡಿದಡರ್ದೇಱೆ (ಕಾದಂಪು. ೦೬೬).

[ಬಳ್ಳಿ + ಪಿಡಿ$_1$]

**ಬಳ್ಳಿವೆರ್ಚು** (ಕ್ರಿ). ಬಳ್ಳಿಯು ಹಬ್ಬುವಂತೆ ವ್ಯಾಪಿಸು; ಹರಡು :ಆಕಾಶಗಂಗಾ ಪ್ರವಾಹಮನಾಧಾರತೆಯಿಂದವನಿಗಿಲ್ಳೊಕ್ಕಿತೆಂಬಂತೆ ಒರೊಂದೆಡೆಯ ಬಯಲೊಳ್ ಬೆಳ್ಳಂಗೆದು ಬಳ್ಳಿವೆರ್ಚಿಯುಂ (ಶಂಕ್ರಸ್ತ್ರ. ೬-೪೪ ವ).

[ಬಳ್ಳಿ + ಪೆರ್ಚು$_1$]

**ಬಳ್ಳಿವೆಳಗು, ಬಳ್ಳಿಬೆಳಗು** (ನಾ). ಬಳ್ಳಿಯಂ ಹಬ್ಬಿದಂತೆ ಹರಡಿರುವ ಕಾಂತಿ : ನನೆಗೆಱಪ ತುಂಬಿ ಗಱೆಯೆನೆ ಕೊನೆವೆಳಗಿಂ [ ವೆರಲಿಂ ] ನಿಮಿರ್ವ ಬಳ್ಳಿವೆಳಗುರ್ದಿದ ಕಾಲೆನೆ ಗಱಗಟ್ಟುವುದತನುಗೆ ನನೆಗಟ್ಟುವ ನೆವದೆ ಪುಷ್ಪಲಾವೀನಿವಹಂ (ಪರ್ಶಕು. ೦-೬೩) ; ನುಣ್ಪೆಳಗನೀವ ಪೊಂಬಟ್ಟೆಯ ಬಳ್ಳಿವೆಳಗಂ ಕಱಿವ ಬೆಳ್ವಟ್ಟೆಯ . . . ಮೇಲ್ಕಟ್ಟಿನ ಬೆರಕವೆಳಗು ಮಂಟಪದೊಳಗಂ ಪೊಱಗಂ ತಕ್ಕನೆ ತೀವೆ (ಗಿರಿಜಾ. ೦೦-೨೬ ವ) : ಹರಿದು ಹಬ್ಬುವ ಬಳ್ಳಿವೆಳಗಿನ ಮುರಿವು ಮಂಡಳಿಸಿದುದು (ಕುಮಾ.ಭಾ. ೬-೩೩). **ಬಳ್ಳಿಬೆಳಗು :** ಓರನೋಟದ ಬಳ್ಳಿಬೆಳಗುಗಳ. . . ಗರುವೆಯರಡಸಿದರು ದ್ರುಪದಾತ್ಮಜೆಯ ದಂಡಿಗೆಯ ಬಳಸಿನಲಿ (ಕುಮಾ.ಸ. ೦೨-೦೦೦).

[ಬಳ್ಳಿ +ಬೆಳಗು$_2$]

**ಬಳ್ಳಿವೆಳ್ಪು** (ನಾ). ಬಳ್ಳಿವೆಳಗು : ಗಂಗೆ ಬೞಲ್ದುವೋಲ್ನೆಲಕೆ ಬೆಳ್ಳಿಯ ಬೆಟ್ಟದ ಬಳ್ಳಿವೆಳ್ಪು ಬೆಳ್ಳಗೆಡೆದೊಪ್ಪ (ಅರ್ಜನ. ೨-೬೦); ಕಡುನೆಗೆದಬ್ಬರಂ ವೊಱಗಿನಂತಿರೆ ಬಿಲ್ಲೊಳಮರ್ಕವೆತ್ತ ಕನ್ನಡಿಗಳ ಬಳ್ಳಿವೆಳ್ಪು ಬುಡುವಿಂಚಿನ ವೋಲಿರೆ ... ಮುೞಿಯಂ ಕೞಿದರ್ ವಿಗೆ ಬಿಲ್ಲ ಬಲ್ಲಹರ್ (ಕಬ್ಬಿಗಕಾ. ೨೬೭).

[ಬಳ್ಳಿ + ಬೆಳ್ಪು₂]

**ಬಳ್ಳಿಸುಂಡೆ, ಬಳ್ಳಿಸೊಂಡೆ** (ನಾ). (ಬೇಲಿಗಳ ಮೇಲೆ ಹಬ್ಬುವ, ಕೆಂಪಾದ ಹಣ್ಣು ಬಿಡುವ) ಒಂದು ಬಗೆಯ ಸಸ್ಯ : "ಕರ್ಣಿಕಾ— ಬಳ್ಳಿಸುಂಡೆ" (ಓಷಧಿ. ೨೦): ಬಳ್ಳಿಸುಂಡೆಯ ಸಹಮೂಲವು ಮಂಗರವಳ್ಳಿ ರಸಂಗಳು ಸಹಿತ (ಶಾಳ್ಯಸಾಂ. ೦೯); ಗರುಗವ ಸೊಪ್ಪು ಕುರುಟಿಗೆ ಸೊಪ್ಪು ಹೊನಗನ್ನೆ ಬಳ್ಳಿಸುಂಡೆ ಇದರ ರಸವನು . . . ಅಭ್ಯಂಗವ ಮಾಡಿಸಲು ಪಕ್ಷಿಗ್ರಹ ದೋಷ ಶಮನವಹುದು (ವೈದ್ಯಸಾ. II. ೦೪). **ಬಳ್ಳಿಸೊಂಡೆ :** ಹೀರೆಕಾಯಿ, ಬಳ್ಳಿಸೊಂಡೆ . . . ಜ್ವರದವರಿಗೆ ಪಥ್ಯ ದ್ರವ್ಯಗಳೆಂದು ಮತಾಂತರದಲ್ಲಿ ಹೇಳಲ್ಪಟ್ಟದೆ (ಸಕಲವೈ. ೧೦೨); ಬಳ್ಳಿ ಸೊಂಡೆ ಬೇರು ನರುವಲಬೇರು ಕಡವದ ಬೇರು (ದ್ರಾಕ್ಷಾಷೂ. ೨-೨).

[ಬಳ್ಳಿ + ಸುಂಡೆ₁]

**ಬಳ್ಳಿಸೊಂಡೆ** 'ಬಳ್ಳಿಸುಂಡೆ' ನೋ.

**ಬಳ್ಳಿಹಾಲೆ** (ನಾ). ಬಳ್ಳಿಯಾಗಿ ಹಬ್ಬುವ ಹಾಲೆ ಸಸ್ಯ : "ಮಧು ಪರ್ಣಿಕಾ—ಬಳ್ಳಿಹಾಲೆ" (ಶಾಹಟೀ. ೨-೨-೬೦ ವ).

[ಬಳ್ಳಿ + ಹಾಲೆ₂ (< ಪಾಲೆ₂)]

**ಬಳ್ಳಿಹುಸಿಕ** (ನಾ). (ಬಳ್ಳಿ ಹಬ್ಬುವ ರೀತಿಯಲ್ಲಿ) ಅನೇಕ ಸುಳ್ಳು ಹೇಳುವವನು; ಬಹಳ ಸುಳ್ಳುಗಾರ : ಟಳ್ಳನೆಂದೆಂಗೆ ಕಡುಪಾಪಿಯಿವ ನೆಂದೆಂಗೆ ಬಳ್ಳಿಹುಸಿಕಂ ಬೞಿಯ ಕೋಪಿಯಿವನೆಂದೆಂಗೆ ಶಿವಭಕ್ತಿಡಂಬ ನೆಂದೆನಿಸಲಾಱೆಂ (ತಿರುಕ. ದೇ. ೨೦-೦೫). [ಬಳ್ಳಿ + ಹುಸಿಕ (< ಪುಸಿಕ)]

**ಬಳ್ಳು₁** (ನಾ). ನರಿ; ಜಂಬುಕ : "ಜಂಬುಕಂ ಸೃಗಾಲಂ ನರಿ ಫೇರವಮೞೀಗೆ ಬಳ್ಳು" (ವಸ್ತುಕೋ. ೪೦-೩); ಇಂದ್ರಜಾಲಿಗನಂತುಱಿಯನುಗುಟ್ಟಿ ಬಳ್ಳು ಗಳಂ (ಕಾವ್ಯಸಾ. ೩೨೯ ಶಾಂತ್ಯ); ಆಕಾಶಕ್ಕೆ ಬಾಯಂ ತೆಱೆದೂಳ್ವ ಬಳ್ಳುಗಳುಮಂ (ಪಂಪಭಾ. ೦೩-೪೭ ವ); ಬಳ್ಳೊರಲ್ದುದು ಮುಂದೆ ಮಾರ್ಗವಂ ದಾಂಟಿದುದು ಕುಳ್ಳಿರ್ದ ಮೃಗಮೆದ್ದು (ಜೈಮಿಭಾ. ೦೯-೩).

[ದೇ. || ಮಲ. ವವ್ವಾಯಿ, ವವ್ವಾಲಿ]

**ಬಳ್ಳು₂** 'ಬಗುಳ್ಳು' ನೋ.

**ಬಳ್ಳುಗರೆ, ಬೊಳ್ಳುಗರೆ, ಬೋಳುಗರೆ** (ಕ್ರಿ). ೧. (ನಾಯಿ, ನರಿಗಳ ಹಾಗೆ) ಅರಚು ; ಬೊಬ್ಬಿಡು : ಮುತ್ತ ಮುದು ನರಿಯಂತ ಬಳ್ಳು ಗರೆವರ್ಕಲರು ಕತ್ತೆಯಂತರಱಿ ಕಾಳ್ಗೆಡೆವುತಿರ್ಪರ್ಕಲರು (ಬಸವಪು. ಹ. ೨೬೭-೦೦); ಕೊರೆವಳ್ ಪಲ್ಲಿಂ ಬಳ್ಳುಗರೆವಳ್ ಕನಪರಿಸಿ ಬಳ್ಳುಗರೆವಳ್ (ಸೂಕ್ತಿಸು. ೯-೪೪೯); ನೀ ಬಳ್ಳುಗರೆಯಲು ದಡಿಗ ಹಾಲಿನ ಸವಿಯ ನೋಡುವೆ (ಕೌಶಿಕಾ. ೦೯-೪೮). **ಬೊಳ್ಳುಗರೆ :** ೧. ಹುಚ್ಚುನಾಯಿ ಕಚ್ಚಿದುದರಿಂದ ಅವನು ನಾಯಿಯಂತೆಯೇ ಬೊಳ್ಳುಗರೆಯುತ್ತಿದ್ದನು (ರೂಢಿ). **ಬೋಳುಗರೆ :** ೨. = ಬಳ್ಳಿಕ್ಕು : ಸೂರನ ಬೊಳ್ಳುನಾಯಿ ಬೋಳು ಗರೆಯಿತು (ಮರಮು. ೩೩). [ಬಳ್ಳು₂ (< ಬಗುಳ್ಳು₂) + ಕರೆ₁]

**ಬಳ್ಳುಗೆಡೆ** (ಕ್ರಿ). = ಬಳ್ಳುಗರೆ ೧ : ಕಡಿತಲೆಯ ನಾಯಕರ್ ಕಯ್ಯೊಂಡು ಬಳ್ಳುಗೆಡೆದೆ[ ಪಾಠಾಂ. ಬಳುಗೆಡೆದಿ, ಬಳ್ಳುಗೆಡೆ ]ಕೈವಾಱು ವಾಱೆ (ಪಂಪಭಾ. ೦೦-೯೦ವ); ಕೊಳ್ಳಿಗಳಂ ಬಿಡದೋವದೆ ಬೀಸುವ ಬಳ್ಳು ಗೆಡೆದು ಬಿಸುವುಡಿಯಂ ಸೂಸುವ . . . ಮರುಳ ನೆರವಿಗಿನಿಸಪ್ಪಡಮಗಿ ಯದೆ (ವರ್ಧಮಾ. ೦೩-೨೦ ರಗಳೆ); ಎಲವೊ ರಕ್ಕಸ ಬಳ್ಳುಗೆಡೆಯದಿರುಳಿದು ಹೋದರೆ ನೀನು ವೀರನು (ಕೌಶಿಕಾ. ೨೨-೨೯).

[ಬಳ್ಳು₂ (<ಬಗುಳ್ಳು₂) + ಕೆಡೆ₂]

**ಬಳ್ಳುಪಿಳ್ಳೆ** (ನಾ). ನರಿಯ ಮರಿ : ರಣದೆ ವೈಸೋಲದ ಸಾಲದ ಬಾಲ ನೊರ್ವನಂ ಬಳ್ಳುಪಿಳ್ಳೆಯನೆಂತಂತು ಕೊಂಡುಯ್ವುದಿದಾವ ನ್ಯಾಯಂ ? (ರಾಮಾಶ್ವ. ೦೫೬-೧೦). [ಬಳ್ಳು₁ + ಪಿಳ್ಳೆ]

**ಬಳ್ಳೆ₁** (ನಾ). ಒಂದು ಬಗೆಯ (ಮಾದಕತೆಯನ್ನುಂಟು ಮಾಡುವ) ಸೊಪ್ಪಿನ ಬಳ್ಳೆ: "ಕುಶಲತೆಯೆನಲ್ ಬಳ್ಳೆ" (ಮಂಗರಾ. ೪೩-೪೭); ಬಳ್ಳೆ ಭಂಗಿ ಸುಗ್ಗೆ ಉಳ್ಳಿ ಮೊದಲಾದ ಇವನೆಲ್ಲವ ಬಿಡಬೇಕು (ಬಸವಶ. ೬೪); ಬಳ್ಳೆ ಬೆಲ್ಲವತ್ತದ ಕಾಯಿ ಸೋರೆಯ ಕಾಯಿ ಅತ್ತಿ ಅರಳಿ ಆಲ ಬಸುರಿ ಗೋಣಿ . . . ಕಳವಿಗೆಯ ಹಣ್ಣುಮಂ ತೊಱೆವುದಂ (ಶರಾರ. ೪೪).

[ <ಬಳ್ಳಿ./ತಮಿ. ವಳ್ಳಿ₁₁=ಬಿಳಿಹಂಬು ]

**ಬಳ್ಳೆ₂** 'ಬಾಟಲಿ' ನೋ.

**ಬಳ್ಳೊಳ್ಳಿ** 'ಬೞಿವೞಿ₁' ನೋ.

**ಬಱ, ಬರ₁, ಬರನು, ಬಱಿನ್, ಬಱಿನು** (ನಾ). ೧. ಕ್ಷಾಮ; ದುರ್ಭಿಕ್ಷ: ಇಂಚೆಯ ಪಸವಿನ ಬಱದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ . . . ವಿರಿಂಚಿಯ ಕಯ್ಪುಡಿವೊಲಾದುವಾ ನಾಡುರ್ಗಳ್ (ಶಂಕರಾ. ೯-೫೦); ಎಲೆ ಮುನೀಶ್ವರ ಬಱಗಳಾದುವು ಮಳೆಗಳಿಲ್ಲದೆ ವರುಷ ಹನ್ನೆರಡಾಯ್ತು (ಕೌಶಿಕಾ. ೦-೫೭). ೨. ಒಣಗಿರುವುದು; ಶುಷ್ಕವಾಗಿರುವುದು; ಬತ್ತಿ ದುದು : ಕಟ್ಟುಱದ ಬಱದ ಬಾಯಾಯ್ತುರಿಯಂ ಗೆಲಲಾರ್ಪೊಡೆ ಪೋರ್ಪೊಡೆ . . . ಅಂತು ಸಂಕಿಪರೊಳರೇ (ರಾಮಾಶ್ವ. ೦೫೬-೦೭). ೩. ತಾಪ ಹೆಚ್ಚಾದುದು : ವಿರಹಾನಳನಿಂ ನೆಱೆ ಬಱವಾಗಿರೆ ಪಡುನೇಸ ಱೊಳಳುರ್ದುವಗಲ್ದು ಚಕ್ರವಾಕದ್ವಂದ್ವಂ (ಸೂಕ್ತಿಸು. ೯-೩೦). ೪. ಅತ್ಯಾಸೆ ; ಅತ್ಯಪೇಕ್ಷೆ : ದಿವ್ಯಸ್ವರೂಪನಂ . . . ಕಂಡನ್ನ ಕಂಗಳ ಬಱ ಹಿಂಗಿತ್ತೆಂದು (ಮಹಾದೇ. ಬ. ೩೨-೬೮); ಧರಾಜನದ ಕಣ್ಣ ಬಱ ತಿಳಿದವು (ಸಿದ್ಧರಾ. ೭-೪೫) ; ಇರ್ವರ ಬಾಳ ಬಾಯ್ಗಳ ಬಱಂ ಪಿಂಗಲ್ಕೆವೇಡಂ (ಅನಂಪು. ೦೩-೫೦). **ಬರ₁ :** ೧.ಮಳೆ ಬಂದರೆ ಬೆಳೆ, ಇಲ್ಲವಾದರೆ ಬರ (ನಪಸಿ.೩); ಈ ಬರದೊಡನೆ ಅನೇಕ ಪಿಡುಗುಗಳೂ ಪ್ರಾರಂಭವಾದವು (ಕಳಹು. ೦೦೦). ೫. ಅಭಾವ ; ಕೊರತೆ : ಸಕ್ಕರೆ ಬರ ಬಿದ್ದಾಗ ಕಾಫಿಗೆ ಉಪ್ಪು ಸೇರಿಸಿ ಕುಡಿಯುವಿರಾ (ಹುಚ್ಚುಹು. ೩೭). **ಬರನು:** ೫. ಭಕ್ತಿ ಬರನಾದೀತು ಸತ್ಪಾವ ತಪ್ಪಾರು (ಎಡಕಾ. ೦೨೦-೦೨). **ಬಱಿನ್ :** ೧. ಮರನೊಳ್ ದೇವೇಂದ್ರಚಾಪಂ ನೆಗೆದಿರೆ ಬೆಳೆಗುಂ ಧಾತ್ರಿಯೊಳ್ ಮುಂದೆ ಸಸ್ಯೋ ತ್ಕರನಾಶಂ ವಾರಿಯೊಳ್ ಪುಟ್ಟಿರೆ ಬಱಿನೊಗೆಗುಂ (ಲೋಕೋಪ. ೪-೨೬) ; ಅಂತು ಬಱನಱೆಯುಟ್ಟೆ ಕಂದಮೂಲಫಲಂಗಳಂ ಮೆಲ್ದು ಜೀವಿಪೆವೆಂದು ಕೆಲಂಬರ್ . . . ಅರಣ್ಯಕ್ಕೆ ಬಂದು (ದಶಕು. ೩-೦೨ ವ). ೨. ನಾಲ್ವೆರಲುದ್ದ ದೊಳಗೆ ಕತ್ತರಿಸಿಕೊಂಡೀರ ಪಲಸಿನಕಾಯಂ ಹುಳಿಯುಪ್ಪವೆಱೆದ್ದು ಮೊಸರಂ ಕಲಸಿ ಬಱಿನಾಗುವಂತಟ್ಟು (ಸೂಪಶಾ. ೫-೬೦). ೪. ಎನ್ನ ಗುರು ವಿನ್ನೆಂದು ಬಿಜಯಂಗೈದು ಕರುಣದಲಿ ಕಣ್ಣ ಬಱಿನನು ತಿಳುಹಿ . . . ಮನ್ನಿಸುವನೋ ಎನುತಲಾ ಬಸವಣ್ಣ ಚಿಂತಿಸಿದ (ಪ್ರಭುಲೀ. ೨೨-೩). ೫. ಬಯಕೆಯೊಳು ಬಱಿನುಮಂ ಮೌನದೊಳು ನುಡಿಯುಮಂ . . . ಬಯ್ತು ಡುತೆ (ತಿರುಕ.ದೇ. ೭-೯). ೬. (ಆಲಂ) ಇಲ್ಲವಾದುದಂ; ಹಾಳಾದುದು; ನಾಶವಾದುದು : ಬಱಿತುದು ಧೈರ್ಯವಾರ್ಧಿ ಬಱಿನಾದುದು ಪೆರ್ಚಿದ ಶಕ್ತಿ ಬಿಂಕಮಂ ತೊಱೆದುದು ಚಿತ್ತವೃತ್ತಿ (ಕಬಕಂ. ೪-೯೪). **ಬಱಿನು :** ೪. ಕಿಱುನಗೆವೆರಸಿ ರಾಮನ ನೋಡುವಳು ಕಣ್ಣ ಬಱಿನೆಲ್ಲ ಬಱಿತು ಹೋಹಂತೆ (ಭರತ. ೩-೬೬).

**ಬಱಬಱ, ಬಱಬಱಗು, ಬಱಬಱಿನು** (ದ್ವಿರುಕ್ತಿ) : ಬಱಬಱಾಗಿ ಬಾಯ್ ಬತ್ತುವೊಡಂ. . . ಸಾಯ್ಗುಂ ತುರಗಂ (ಅಶ್ವಶಾ. ೬-೩೭); ಬಱಿತು ಬಸಿವ ಕಂಬನಿಯಿಂದ ನಾಂದಿರ್ದ ಗಱಗಳು ವಿರಹಾಗ್ನಿಯಿಂದ ಬಱಬಱ ಗಾದವು (ಶಂಪ್ರಸಾಂ. ೦೯-೦೪) ; ಬಱಬಱಿನಾಗೆ ತಾಳಿಸಿದಸುರ್ವರೆಯಂ ರವಿ

(ಅಪಂತ್ನ. ೯-೦೩); ಬೇಗೆಯ ಬೆಂಕೆಯಿಂ ಕರಂ ಬಱಬಱನಾಗಿ ತಾಳಿಸಿದವೊಲ್ ಕರಿವೋದುವು ಬೆಂದು ಬೆಟ್ಟುಗಳ್ (ಪಾರತ. ೯-೬೯). ಬಱಬಱಂ ಬತ್ತು, ಬಱಬಱ ಬತ್ತು = ಪೂರ್ತಿ ಒಣಗು; ಸಂಪೂರ್ಣವಾಗಿ ಶುಷ್ಕವಾಗು : ಬೆಂದು ಬೆಂಡೆಳ್ದು ಬಱಬಱಂ ಬತ್ತಿ . . . ಕೋಟಲೆಗೊಳುತಿರ್ಪ ಹೊಕೇನಕುಲದಿಂ (ಗಂ೯. ೯-೨೬ ಪ); ಕಱ್ ಬತ್ತಿ ಬೀಡೇಳೆ ಬಱಬ [ಪಾಠಾಂ. ವ]ಱಂ ಬತ್ತೆ ಪಥಿಕರ ಬಾಯ್ಗಳು . . . ಬೇಸಗೆ ಬಂದುದು (ಕುಮುದಾ. ೬-೬೩); ಅಱಯೆಂ-ಪಾಱಲ್ ಬಾಯ್ಗಂ ಬಱಬಱ ಬತ್ತಿತ್ತು (ಗಾದಂಪೂ. ೦೯೦); ಬಱಬಱ ಬತ್ತೆ ಬಾಯ್ . . . ಚಂದ್ರನಱ ಶೋಕರಸಾಕುಳಚಿತ್ತೆಯಾಗಿ (ಶಂಠಾಮಾ ೯-೩೦).

[ದೇ.॥ ತಮಿ. ಮಲ. ವಱಮ್; ತುಳು. ಬರ ; ತೆಲು. ವರವು ]

**ಬಱಂ** (ಪ್ರ). 'ವರೆಗೆ', ಎಂಬರ್ಥದಲ್ಲಿ ಬಳಕೆಯಾದ ಪ್ರತ್ಯಯ : ಉಟ್ಟಗೆರಡುವರಿಸಬಟ್ಟೆವರಿಯರ ವತ್ತುವರಿಸಂಬಱಂ ಮತ್ತರ್ವಣಂ ಉಟ್ಟಗೂರ್ವಱನ್ದು ಮಾಣಲಾಗ ತಪ್ಪು ಸ್ವೇಚ್ಛೆಯೊ[ಳಂ] ನೆಟ್ಟುದು (ಶಾಇಇ. XI-i ೯೩-೦೯; ೯೭೦). [ಆ ಇದು 'ಬರಂ' ಎಂಬುದರ ಅಪಲಿಖಿತ]

**ಬಱಗಾಲ**, ಬರಗಾಲ (ನಾ). ದುರ್ಭಿಕ್ಷಕಾಲ ; ಕ್ಷಾಮ : ಬಱಗಾಲದ ಕಱ್ಯಂತ್ರ ನೆಱ್ ಬತ್ತಿದ ಬಾಯ್ಗಂ . . . . ಬೆನ್ನಂ ಪತ್ತಿದ ಬಸಿಱುಂಬೆರಸು ಬರ್ಪ ವೃದ್ಧ ತಾಪಸನು ಕಂಡು (ಶಂಕರ. ೬೩-೬) ; ಬಱಗಾಲದ ಬೆಳಸಿನಂತೆ ಮಱಗಾಲದ ಬಿಸಿಲಂತೆ . . . ಸಂಶಯಕ್ಕೆಡೆಯಾದರ್ಥಮುಮಂ (ಧರ್ಮಾಮೃ. ೯-೨೩). **ಬರಗಾಲ** : ಅವರು ಬರಗಾಲ ಮತ್ತು ಕಷ್ಟಕಾಲ ಸಮಯಗಳಲ್ಲಿ ದೀನದರಿದ್ರರನ್ನೂ ಸಾಮಾನ್ಯಜನರನ್ನೂ ಸಂತೈಸುವುದರಲ್ಲಿ . . . ಹಿಂದೆ ಮುಂದೆ ನೋಡಿದವರಲ್ಲ (ಸಸ್ಮ. ೯೩) ; ಬರಗಾಲವಿಲ್ಲದ ದಕ್ಷಿಣದೇಶಕ್ಕೆ ಅವರು ಹೊರಟರು (ಕಪತ್ನ. ೯-೦೦೦) ; ಬರಗಾಲವು ಬಂದು ರೈತರು ದಣಿದಿದ್ದಾರೆ (ಶ್ರೀರಾಮ. ೦೮೬). [ಬಱ + ಕಾಲ]

**ಬಱಗೇಡು** (ನಾ). ಕ್ಷಾಮದಿಂದ ಉಂಟಾಗುವ ಕೇಡು,- ಹಾನಿ : ಆ ಮಂಡಚನೂ ಬಾನಗೇಡು ಬಱಗೇಡು ಎಂನದೆ (ಶಾಇಂ. ೦೯೩೩, ಪಾಠಾಂ. ೩೦೩-೨೨ ; 1293) ; ಬಾನಗೇಡು ಬಱಗೇಡು ಯೆಂನದೆ ೧೨ ಮುಡಿ ಅಕ್ಕಿಯನೂ . . . ನಡಸಿ ಬಹರು (ಶಾಇಇ. IX-ii, ೪೯೯-೩೩ ; 1433). 'ಬಾನಗೇಡು' ಪರಾ. [ಬಱ + ಕೇಡು]

**ಬಱಗೋಡಿ** (ನಾ). ನೀರು ಬತ್ತಿಹೋದ ಕೋಡಿ : ಮಿಗೆ ಬಸಿಲ ಬೇಗೆಯನು ಬಱಗೋಡಿಗಳ ಮೀನ್ಗಳು ದಿನದಿನಕೆ ಮೈದೆಗೆಯುದನುಭವಿಸುತ್ತ ಕುದಿಕುದಿಕುದಿದು ಮಗ್ಗಿದವು (ಶಬಾಗ. ೦೦-೦೯-೦೭). [ಬಱ + ಕೋಡಿ]

**ಬಱಟಿ**, ಬೆರಣಿ, ಬೆಱಟಿ, ಬೆಱಣಿ, ಬೆಱಣೆ, ಬೆಱಳಿ (ನಾ). ೧. (ಇಂಧನವಾಗಿ ಉಪಯೋಗಿಸಲು) ತಟ್ಟಿ ಒಣಗಿಸಿದ ಸಗಣಿ ; ಕುರುಳು : ತರ್ದುಗಳೆಱಗುಂ ಬ[ಪಾಠಾಂ. ಬೆ]ಱಟಿಯೊಳುರ್ದಿ ನೆಲಾವರೆಯ ಬೇರ ಸಾಮುಳಕಮುಮಂ . . . ಪೂಸೆ ದಿನಪಂಚಕದೊಳ್ (ಕಪುದ. ೨೬೦ ಕ್ರಿಯೋ). **ಬೆರಣಿ** : ೧. "ಕರೀಷಂ-ಸಗಣಿ, ಬೆರಣಿ" (೬ಶಧ. ೨೦); ಅವರಿಕೆಸೊಪ್ಪು . . . ಸಹ ಇದರಲ್ಲಿ ರಸವ ಹಿಂಡಿ ಬೆರಣಿ ಬೂದಿಯ ಕಲಸಿ ನೆತ್ತಿಬಾಯಿಗೆ ಒತ್ತಿ ದಾಕ್ಷಿಣವೇ ರಕ್ತವಾಂತಿ ನಿಲ್ವುದೆ (ಸಕಕ. ೦೮೮) ; ಬೆರಣಿಯನ್ನು ಪುಡಿ ಮಾಡಿ ಚಕಮಕಿಯನ್ನು ಹೊಡೆದು ಬೆಂಕಿಯನ್ನು ಮಾಡಿದಳು (ದೇಜೀಕ. ೩೬) ; ಬಿದ್ದ ಬಳೀಲಿ ಬೆರಣಿ ಆಯಬೇಕು ಇದ್ದ ಬಳೀಲಿ ಇರಬೇಕು (ಗಾದೆ). **ಬೆಱಟಿ** : ೧. ಅಂದು ಗೋವರ್ಧನಗಿರಿಯನಿಳೆಗೊಂದು ಬೆಱಟಿಯನಿಳುಹು ವಂತಿಳುಹಿದನು ಮುರವೈರಿ (ಜಾಕ್ಮಭಾ. ೨೦-೬೭). **ಬೆಱಣಿ** : ೧. ಬೆಱಣಿಯ ನಾಯಲಲ್ಲದೆ ಅಟ್ಟುಣ್ಣ ತೆಱಹಿಲ್ಲವೆನಗೆ (ಬಕಪ. ೨೬೦) ; ತನಯನುಂ ತನ್ನೊಡನೆ ಬರುತಿರೆ ಜನನಿ ಬೆಱಣಿಯನಾಯ್ದು ಕೊಂಡಾ ಮನೆಗೆ ಬರುತಿರ (ಅಪ್ನು. ೯೬-೯). ೨. ಸಗಣಿ ; ಗೋಮಯ : ಪುಳ್ಳಿ ಬೆಱಣಿ [ಪಾಠಾಂ. ಬೆರಟ]ಯೊಳಗಣ ಪುಟುವಂ ಸಾರ್ಸುವಲ್ಲಿ ದಯೆಯಿಂದಾರೈವುದೆನಿಪ್ಪ ಮನೆಗಳಲ್ಲದೆ ತೀರ್ಥಂ (ಸಪುಚ. ೬-೯೯); ಉದಧಿಯೊಳ್ ಬೆಱಣಿಯಂ ಹಾಕಿದಂತಾಯ್ತು ಜಿತಶತ್ರುಭೂಪನ ವಾಹಿನಿ (ಸಮ್ಯಕ್. ೬-೩೨). **ಬೆಱಣೆ** : ೧. ಆ ಶಂಕರಾನಂದಂಗಂ ಪಂಚಪಾಯಸವ ಲೇಸಪ್ಪ ಭಕ್ಷ್ಯಗಳ ಬೆಱಣೆ ಮುಳ್ಳುಂ ದಸಿಯು ಪಾಷಾಣದೊಡಕಗಳನೊಡಗೂಡಿ ಗಡಣಿಸಲು (ಗುರುರಾ. ೭-೪೨). **ಬೆಱಳಿ** : ೩. (ಅಲಂ) (ಸಗಣಿಯ ಬಿಲ್ಲೆಯಂತೆ) ಅಗಲವಾಗಿರುವುದು ; ದೊಡ್ಡದು : 'ಬೆಱಳಿಕಿವಲ್' ಪರಾ.

[ದೇ.॥ ತಮಿ. ವರಟ್ಟಿ, ಪರಾಟ್ಟಿ, ವಱಳಿ; ಮಲ. ವರಡಿ, ವರಳಿ, ವಱಟಿ; ತುಳು. ಬೆಜಂಟ್; ತೆಲು. ವರಟ]

**ಬಱಡ** (ನಾ). ೧. ನಿರುಪಯೋಗಿಯಾದ ವ್ಯಕ್ತಿ; ಕೆಲಸಕ್ಕೆ ಬಾರದವನು : ಬಱಡನಿವನೀ ದೈವದೊಡನಬ್ಬರಿಸಿದೊಡೆಯೊ ಇಬ್ಬರಭ್ಯಂತರ ವನಿವರಱಯರೆ ಮುನೀಂದ್ರರು (ಕುಮ್ಯಾಸ. ೯-೩೧). ೨. ಬುದ್ಧಿಯಿಲ್ಲದಿರುವವನು; ದಡ್ಡ ; ಅವಿವೇಕಿ : ವಶಗ್ರೀವಪುರದ ಹನನವು ಪುರದ ಹನನಿಂ ದೊರಕುವುದಲಾಯೆಂಬ ಬುದ್ಧಿಗೆ ಬಱಡನಾಗಿ ಬಳಕ್ಕ ರಕ್ಕಸರಾಯನಿಂತೆಂದ (ತೊರರಾ. ೩-೬-೬). ೩. ಜಿಪುಣ : ತ್ಯಾಗಿಯಂ ಬಱಡಂ ಬಾಲರ ಮುದ್ದ ಬಂಜೆ . . . ಜಱಯಲ್ (ಸೋಮೇಶ. ೯೩). ೪. ಪುಂಸತ್ವವಿಲ್ಲದವನು; ಷಂಡ : ಬಱಡರು ಬಾಳರೆನ್ನದೆ ಪೋಪವರ ಕೈವಿಡಿದು ಕೊಂಡೊಯ್ದು ತೋಳ ತೆಕ್ಕೆಯೊಳಿರಿಕಿ ನಿಮಿಷಕೆ ಮೇಳವಿಸಿ ಹಣಗೊಂಡು ಹೋಗುವ ಖೂಳರೆಂಬಾಕೆಯರ ಕಂಡಸುರಾರಿ ನಗುತಿರ್ದ (ಅಕ್ರೂಕ. ೬-೬೩). [ಬಱಡು + — ಅ./ ತಮಿ. ವಱಟನ್]

**ಬಱಡಾವು** (ನಾ). ಗೊಡ್ಡು ಹಸು ; ಬಂಜೆಯಾದ ಆಕಳು : ಸುರಧೇನು ಚಿಂತಾಮಣಿ ಕಲ್ಪವೃಕ್ಷವ ಬಱಡ[ಡಾ]ವು ಕಲ್ಮರವೆನಿಸಿ ಮುರಹರ ತ್ಯಾಗವ ಕುಡುತಿರ್ದ ಲಕ್ಷ್ಮೀವರನಾದ ಕಾರಣದಿಂದ (ಸೋಹಕ. ೦೬-೩೬). 'ಗೊಡ್ಡಾವು' ಪರಾ. [ಬಱಡು + ಆವು]

**ಬಱಡಿ**, ಬರಡಿ (ನಾ). ೧. ಹೆಣ್ಣಿನ ಸತ್ವವಿಲ್ಲದವಳು; ಸ್ತ್ರೀತ್ವವಿಲ್ಲದವಳು ; ಗೊಡ್ಡಿ : ಬರಡ[ಬಱಡಿ]ಗೆ [ಪಾಠಾಂ. ಬರಗಡೆ]ಯೋಱದಂ ದಸಿಯ ಸೂಱುಮನೇಱದನೊತ್ತಿಗೊಟ್ಟುವಂ ಕರೆದಭಿಮಾನಮಂ ಪೆಱರ್ಗೆ ಕೊಟ್ಟನಟ್ಟಱದುಯ್ದು ರಾಗದಿಂ (ಅಂರಾಪ. ೨-೦೦೦). ೨. ಮಕ್ಕಳಾಗದೆ ಇರುವವಳು; ಬಂಜೆ : ಬಱಡಿಯ ಕೈಯಲ್ಲಿ ಮಕ್ಕಳಿದ್ದಡೆ ತೊರೆವುದೆ ಮೊಲೆ (ಕೋರಾಪು. ೨೩-೦೦೦). **ಬರಡಿ**: ೧. ಬಸುರಿ ಬಾಣತಿಯರು ಶಿಶುವ ಮುದ್ದಾಡುವ ಶಶಿಮುಖಿಯರು ಒಟ್ಟಿಯಿಹರು ಅಸಿಯಳು ಬಂಜೆ ಬರಡಿ ಯೆಂಬ ನುಡಿಗಳ ಘಸಣೆಯಿಲ್ಲವು ಸೀಮೆಯಲಿ (ಪಾದೇಶಾಂ. ೦-೩೮).

[ಬಱಡ + — ಇ./ತಮಿ. ವಱಟಿ]

**ಬಱಡು**, ಬರಡು (ನಾ). ೧. ನಿಸ್ಸಾರವಾದುದು; ವ್ಯರ್ಥವಾದುದು; ಪೊಳ್ಳು : ಮನೋಮುದಂ ಬಱಡನಿಸಿತ್ತು ಮತ್ತುಸಿರ್ವುದೇನೊ ವಿಧಿ ಪ್ರತಿಬಂಧಕಾರ್ಯಮುಂ (ದಕಳು. ೩-೩೭); ದೇವಯಾನಿಯ ಬಯಕೆ ಬಱಡಾಯ್ತು (ಸಂಶಕ. ಶಂ. ೩೨೯); ನರರ ತುತಿಸಿ ನಾಲಿಗೆ ಬಱಡಾಯಿತಲ್ಲ (ಪುರಂದ. ೦-೨೯-೦). ೨. ನಿಸ್ಸಾರನಾದವನು ; ನಿರ್ವೀರ್ಯ ; ದುರ್ಬಲ : ಬ[ಪಾಠಾಂ. ಜ]ಱಡುಗಳು ನೀವೀ ಜನಾರ್ದನನೂರಿಗೆ ಬಹಿರೇ . . . ಹೋಗಿಯೆಂದನು ಭೂಪರಿಗೆ ಭೀಷ್ಮ (ಕುಮ್ಯಾಸ. ೬೦೩. ೦೦-೩೩). ೩. ಗೊಡ್ಡು ಹಸು; ಬಂಜೆದನ : ನೀನೊಲಿದರೆ ಬಱಡು ಹಯನಹುದಯ್ಯ (ಬಕಪ. ೬೬) ; ಸುರಧೇನು ಬಱಡಾದೊಡಿನ್ನೆಂತು ಮಾಡುವೆಂ (ಪಾಗೀರ. ರಿ. ೨೬೦-೦) ; ಕಟಿಯದ ಬಱಡುಗಳು ಹಯನಾದುವು (ಪ್ರಭುಲೀ. ೬-೨೩). (ಗ್ರಾ). ೪. ನಿಸ್ಸಾರವಾದ: ಪೊಳ್ಳಾದ : 'ಬಱಡುಮನ' ಪರಾ. ೫. ಗೊಡ್ಡಾದ; ಬಂಜೆಯಾದ: ಮುಂದೆ ಕಟ್ಟಿರ್ದೀ ಬಱಡುಪಶುವಿಂದೆ ಹಾಲಂ ಮಿಗೆ ಪಡೆವೆ (ಬಸಪು. ೯-೨೬). **ಬರಡು** : ೧. ನನ್ನ ಜೀವನ ಬರಡು (ಹ್ನಾಶಿ. ೮೭); ಇಂದ್ರಿಯಾನು

ಭವದ ಎಲ್ಲೆಯನು ಮೀರಿದ ಭಾವನೆಗಳು . . . ಬರೀ ಜಳ್ಳು, ಬರಡು (ಕಟಕೋ. I, ೬೬೭) ; ಕೃತಿಯಾಗಿ ನಿಲ್ಲದ ಜ್ಞಾನ ಬರಡು (ಮಹಾಪ. ೫೫). ೩. ಕೊರಡು ಕೊನರುವುದು ಬಲು ಬರಡು ಹಯನಹುದು (ಪ್ರಭುಲಿಂ. ೧೦-೨೬) ; ಬರಡು ಹಯನಾಗಿ ಕರುವ ಪಡೆದೀತು ಆವು (ಸೌಂದರ್ಯಾ. ೧೬-೩). [ದೇ. ॥ ತವಿ. ವಱಟು ; ಮಲ. ವಱಡು ; ತುಳು. ಬರಡು]

**ಬಱಿದುಗಱಿ³** (ಕ್ರಿ). (ಗೊಡ್ಡು ಹಸುವಿನ ಹಾಲು ಕರೆಯುವಂತೆ) ನಿಷ್ಪ್ರಯೋಜಕವಾದ ಕೆಲಸವನ್ನು ಮಾಡು : ಮೃತ್ಯುವಿನ ಬಾಯ ತುತ್ತಾಗುತಿರ್ದಂ ದೇವ ಕತ್ತಲೆಯೊಳಗೆ ಬಱಿದುಗಱಿವುತಿರ್ದಂ ದೇವ (ಪಾಂಡ. ದೇ. ೨೬೦-೦೪). [ಬಱಿದು + ಕಱಿ³₁]

**ಬಱಿದುಮನ** (ನಾ). ಭಕ್ತಿ, ಶ್ರದ್ಧೆ, ಪ್ರೀತಿಗಳಿಲ್ಲದ ಅಂತರಂಗ : ಪರರ ಸತಿಯುನನಂಗರತಿಯುಲಿ ಬೆರಸಿತಿಲ್ಲ . . . ದೈವದ್ವಿಜರ ಪೂಜೆಯುಲಿ ಬಱಿದುಮನಸವನು ಮಾಡಿತಿಲ್ಲ (ಕೊರಂ. ೧-೫-೦೬). [ಬಱಿದು + ಮನ]

**ಬಱಿಡೆ**, ಬರಡೆ (ನಾ). = ಬಱಿಡಿ ೨ : ಬಱಿಡೆಯಲ್ಲಾಕೆ ಮರೀಚಿರಾಜನ ನೊಬ್ಬ ಹಿರಿಯ ಪುತ್ರನ ಪೆತ್ತಳೆಹುದು (ಭರತ. ೫೬-೬೦). **ಬರಡೆ :** ಗಂಡಂಗೆ ಮಮಕಾರವಿರಲು ಬರಡೆಯಾದರು ಭಾಗ್ಯಲಕ್ಷ್ಮಿಯಂತಿಹಳು (ಶಂಕ. ೧೦೪-೬). [ಬಱಿಡ + — ಎ₃]

**ಬಱಿನ್** 'ಬಱಿ' ನೋ.

**ಬಱಿನು** 'ಬಱಿ' ನೋ.

**ಬಱಿಪ** (ನಾ). ಅತ್ಯಪೇಕ್ಷೆ ; ಅತ್ಯಾಸೆ : ಸಾಱಿ³ ಬಟಲ್ದ ಮೆಯ್ಗೆ ಚೇತರಣೆಯುಲರ್ಚಿ ಬಾಯ್ಗೆ ಬಱಿಪಂ ಬರಿಸುತ್ತಿರೆ ಪೋದ ಕೂಟಮಂ ಪರಿವಿಡಿಗೆಯ್ಯೆ ಚಿತ್ತಮೆಳಸಿತ್ತು ರತಾಂತಸುಖಾಂತಮೋಪರಾ (ಚಂದ್ರಪ್ರ. ೬-೭೦). [< ಬಱಿ]

**ಬಱಿಲು**, ಬರಲು, ಬರ್ಲ್ (ನಾ). ೧. (ಎಲೆ, ಹೂವು, ಮೊದಲಾದುವುಗಳು ಇಲ್ಲದೆ) ಒಣಗಿ ಕಡ್ಡಿಯಾದುದು ; ಬೋಳಾದುದು : 'ಬಱಿಲುಗೊಳ್' ಪರಾ. ೨. ಒಣಗಿದ ಕಡ್ಡಿ : ಕಲ್ಲಿಂದಿಟ್ಟು ಕರಂ ಬಡಿಯಿಂದವೆ ನಿಲ್ಲದೆ ಬಡಿದು ಬಱಿಲ ಬರ್ಲ್ವೊಯ್ಲಿಂದಲ್ಲೆಡೆ ಬಾಸುಳೆನೇಳಿಸಿ (ಜಯಮಾ. ೦೩-೯೦) ; ಲಂಡೆಯನು ಹಿಡಿತರಿಸಿ ನುಡಿದಾ ಬಾಯೊಳು ಮಣ್ಣತುಂಬಿಸಿ ಬಱಿಲ ತರಿಸಿ . . . ಮೆಯ್ಯುರಂ ಹುಣ್ಣಾ ಹುಣ್ಣಾಗುವಂತೆ ನೆಱಿ³ ಕೊಲಿಸಬೇಕು (ಸಮ್ಯಕ್ತ್ವ. ೬-೫೮). **ಬರಲು:** ೨. ಬಂಬಲೀ ಮರದ ಬರಲಿನಿಂದ ಕೈಗೆ ಬಂದಂತೆ ಹೊಡೆದನಂತೆ (ಹೊಸಕ್ಷ. ೦೬೪) ; ಅವನನ್ನು ಅಲ್ಲಿಯೇ ಒಂದು ಮರಕ್ಕೆ ಬಿಗಿದು ಹುಣಸೆಯ ಬರಲುಗಳಿಂದ ಮನ ಬಂದಂತೆ ಬಡಿಯಹತ್ತಿದನು (ಕಗದ್ಯ. ೩೭); ಒಂದು ಬುಟ್ಟಿ ಕುಳ್ಳು, ಒಂದು ಕಟ್ಟು ಬರಲು ಕೊಟ್ಟು ಕಳಿಸಿದನು (ಪಟ್ಟಹೂ. ೪೪). ೩. ಒಣಗಿದ ಕಡ್ಡಿಗಳ ಕಟ್ಟು ; ಕಸಬರಿಗೆ : ಪೊರಕೆ, ಬರಲು (Broom. ಇಂಕಕ). **ಬರ್ಲ್ :** ೨. ಒಣಗಿದ ಮುಳ್ಳುಗಳು, ಬರ್ಲ್‌ಗಳು, ಟೊಂಗೆಗಳು ಸಾಮ್ರಾಜ್ಯದ ಸೀಮೆಯನ್ನು ಭದ್ರಪಡಿಸಿದ್ದವು (ಪಂಪಜ. ೪೨). [ಬಱಿ + — ಅಲು(< — ಅಲ್₃)]

**ಬಱಿಲುಗೊಳ್** (ಕ್ರಿ). (ಎಲೆ, ಹೂವು ಮೊದಲಾದುವುಗಳಿಲ್ಲದೆ ಗಿಡವು) ಬೋಳಾಗು : ಅಱಿಲುಗೊಂಡ ಕೆಱೆ³ಗೆ ತೊಱೆ³ ಬಂದು ಹಾಯ್ದಂತೆ ಬಱಿಲುಗೊಂಡ ಸಸಿಗೆ ಮಳೆ ಸುರಿದಂತಾಯಿತ್ತು (ಮಹಾದೇ. ೩. ೨೪-೪೩). [ಬಱಿಲು + ಕೊಳ್₁]

**ಬಱಿಸಿಡಿಲ್**, ಬರಸಿಡಿಲು, ಬಱಿಸಿಡಿಲು (ನಾ). ೧. ಮಳೆಯಿಲ್ಲದೆಯೇ ಹೊಡೆಯುವ ಸಿಡಿಲು ; ಅಕಾಲದಲ್ಲಿ ಬೀಳುವ ಸಿಡಿಲು : ಬಱಿಸಿಡಿಲ್ ಪೊಡೆದು ಪ್ರಿಯಸೇನೆ ಸತ್ತಳ್ (ವಡ್ಡಾರಾ. ೩೬-೨೪) ; ಬಱಿಸಿಡಿಲ್ ಪೊಡೆಯೆ ಕೆಡೆದ ಶಾಲತರುಗಳಂತಿರ್ದ ನಾಲ್ವರ್ ತಮ್ಮಂದಿರುಮಂ ಕಂಡು ಬೆಕ್ಕಸಂಬಟ್ಟು (ಪಂಪಭಾ. ೬-೪೫ ವ) ; ಕಲ್ಪಾಂತರ ಬಱಿಸಿಡಿಲಿಯ್ಯಂದು ಪೊಯ್ಯಲ್ವೆಲಂ ಕಂಪಿಸುವಂತೆ (ಗದಾಯು. ೬೦೦). **ಬರಸಿಡಿಲು :** ೧. ಮರುತಾತ್ಮಜನ ಬೆದರಿಸಿದಳೇನೆಂಬೆ ಕಾಮಾರ್ಗಿಲ ಬರಸಿಡಿಲ ಪೋಲ್ವ ಬಿರುನುಡಿಗಳಿಂದ (ಕಂಕಾಣ. ೫-೩-೫) ; ಪ್ರಳಯಕಾಲದಲ್ಲಿ ನಡೆಯುವಂತೆ ಬರಸಿಡಿಲು ರಾಜರ ಸಮೀಪದಲ್ಲಿಯೇ ಬಿತ್ತು (೬೩೪. ೩). ೨. (ಅಲಂ) ಅನಿರೀಕ್ಷಿತವಾದ ಹೊಡೆತ, — ಆಘಾತ : ಇಲ್ಲದೆ ಹೋದರು ತಂದೆ ಬರಸಿಡಿಲೆರಗಿದ ಹಾಗಾದೆ ನಾನಾಗ (ಅಂತಃಕ. ೨೨-೯೬). **ಬಱಿಸಿಡಿಲು:** ೧. ಕಾಲವಲ್ಲದ ಕಾಲ ಬಱಿಸಿಡಿಲೇಳಿಗೆಯುಲುಬ್ಬಿದ್ದು ಮಲ್ಲರ ವಾಳೆಯವ ನೆಱಗುವುದ ನಾನದ ಕಂಡೆ ಸ್ವಪ್ನದಲಿ (ಕುಮ್ಮಾರಾ. ೬೦೫. ೪-೨೨) ; ಹೊಡೆಸಿದ ಪಟಹ ನಿಸ್ಸಾಳ ಭೇರಿ ಪಱಿ³ ಬಱಿಸಿಡಿಲಿನಂತಾಯ್ತು (ಕೌಶಿಕ. ೦೯-೦೦); ಬಱಿಸಿಡಿಲಂತೆ ಭಾರಿಯ ಭೇರಿ ಸೂಳೈಸೆ (ಭರತ. ೨೩-೫೦). [ಬಱಿ + ಸಿಡಿಲ್₂]

**ಬಱಿಸಿಡಿಲು** 'ಬಱಿಸಿಡಿಲ್' ನೋ.

**ಬಱಿಹಾಳೆ** (ನಾ). ಒಣಗಿ ತರಗಾದ ಅಡಕೆಯ ಹಾಳೆ : ವಿಜಯಾರ್ಧ ಶೈಲದೊಳಕ್ಕಿದ ಪಡಿಯ ನಾಳೆ ಹೋಳ್ವಾಡಿ ಬಿಡುವೆನೊಣಗಿದ ಬಱಿಹಾಳೆಯನೊಡೆಯ ಹೊಯ್ದಂತೆ (ಭರತ. ೨೯-೫). [< ಬಱಿ³ + ಹಾಳೆ₁ (< ಪಾಳೆ₁) ]

**ಬಱಿಹು** (ನಾ). ಕ್ಷಾಮ ; ದುರ್ಭಿಕ್ಷ: ವ್ಯಾಧಿಯಲ್ಲಿ ಕ್ಲೇಶದಲ್ಲಿ ಬಱಿಹಿನಲ್ಲಿ ಹಗೆಗಳ್ ಕೊಲಬಂದಲ್ಲಿ ಅರಮನೆಯ ದ್ವಾರದಲ್ಲಿ ಶ್ಮಶಾನದಲ್ಲಿ ತನಗಾದವರೇ ಬಂಧುಗಳ್ (ಪಂಚತಂ. ೬೨-೦೬) ; ಪಱಿ³ಯ ಬಱಿಹಿನಲ್ಲಿ ಅವಗ್ರಾಹ, ಅವಗ್ರಹ ಎನಿಸುಗು (ನಾಚಿರಾ. ೪). [ಬಱಿ + — ಹು₂ ( < ಪು₂)]

**ಬಱಿ** 'ಬಱು' ನೋ.

**ಬಱಿಕಯ್** 'ಬಱಿಗೆಯ್₂' ನೋ.

**ಬಱಿಕೆಯ್** 'ಬಱುಗೆಯ್₁' ನೋ.

**ಬಱಿಕ್ಕೆ** 'ಬಱುಗೆಯ್₁' ನೋ.

**ಬಱಿಗಂಟು** (ನಾ). ೧. ಒಳಗೆ ಏನೂ ಇಲ್ಲದ ಗಂಟು ; ಬೆಲೆಯಿಲ್ಲದ ಗಂಟು. ೨. ಪೊಳ್ಳಾದ ಸಂಬಂಧ ; ಸುಳ್ಳು ಸಂಬಂಧ,—ನಂಟು : ಬಱಿಗಂಟು ಬಱಿಮಾತು ಸುಳ್ಳುಸುದ್ದಿಯ ಹೇಳಿ ಹಿರಿಯಮಗ ನಂತೊಡಲ ಹೊರಕೊಂಬೆ ಮನವೆ (ಪುರಂದ. ದಾ. ೨-೦೦-೪). [ ಬಱು (<ಬಱಿದು) + ಗಂಟು ]

**ಬಱಿಗಲ್ಲು**, ಬರುಗಲ್ಲು (ನಾ). (ಮಣ್ಣಿಲ್ಲದಿರುವ) ಕಲ್ಲಿನಿಂದ ಕೂಡಿದ ನೆಲ; ಹರಳುಹರಳಾಗಿರುವ ಕಲ್ಲಿನ ನೆಲ : ನಿಱಿಗುರುಳಬಲೆ ನಿನ್ನಯ ದಿವ್ಯದೇಹವ ಬಱಿನೆಲದೆಡೆಯಲ್ಲಿ ಹರಹಿ ಬಱಿಗಲ್ಲ ಗಾಯದಿ ಮಿಡುಕುವ ನಾಗರಮಱಿಯಂತೆ ಹೊರಳಬೇಡ (ಪೋಹಕ. ೩೩-೪೬). **ಬರುಗಲ್ಲು** : ಬರುಗಲ್ಲ ಗಾಯದ ಮರಿನಾಗರದ (ಶಂಕ. ೦೨೫-೦೦). [ ಬಱು (<ಬಱಿದು) + ಕಲ್ಲು (<ಕಲ್₃) ]

**ಬಱಿಗಾಲು** 'ಬಱುಗಾಲು' ನೋ.

**ಬಱಿಗುಟ್ಟು** (ಕ್ರಿ). ಬರಿದು ಮಾಡು ; ಇಲ್ಲವಾಗಿಸು : ಮಕ್ಕಳು ಹುಟ್ಟಿ ಕಡೆಯಲಿ ವಂಶವನು ಬಱಿಗುಟ್ಟಿದಲ್ಲದೆ ಮಾಣರು (ಶಿಕಾಗ. ೩-೦-೨೦). [ ಬಱು (<ಬಱಿದು) + ಕುಟ್ಟು₁ ]

**ಬಱಿಗೂಟ್** 'ಬಱುಗೂಟ್' ನೋ.

**ಬಱಿಗೆಂಡ** 'ಬಱುಗೆಂಡ' ನೋ.

**ಬಱಿಗೆಯ್** 'ಬಱುಗೆಯ್₁' ನೋ.

**ಬಱಿಗೆಱಿ³** 'ಬಱುಗೆಱಿ³' ನೋ.

**ಬಱಿಗ್ಗೆ₁** 'ಬಱುಗೆಯ್₁' ನೋ.

**ಬಱಿಗ್ಗೆ₂** 'ಬಱುಗೆಯ್₂' ನೋ.

**ಬಱಿಗೋಪ** (ನಾ). ವ್ಯರ್ಥವಾದ ಕೋಪ : ಗನ್ನದಿಂ ಬಱಿಗೋಪವಂ

ತಾಳ್ದು ರ್ಸುಂಕಿಸುತೆ (ಶಿರುಶ. ದೇ. ೦೩–೦೨). [ಬಱಿ (<ಬಱಿದು) + ಕೋಪ]

**ಬಱಿತನ** (ನಾ). ಬರಿದಾದುದು ; ಹುರುಳಿಲ್ಲದುದು : ಶರಣರೆಂಗಿಹರೆಂಬು ದನೊಲ್ದು ನೋಡದೀ ಬಱಿತನದುಕ್ತಿಚಾಪಲದ ಗೌರವದಿಂ ಫಲವೇಂ (ಶಕಳ. ೦–೬೨). [ ಬಱಿ (<ಬಱಿದು) + — ತನ ]

**ಬಱಿದಲೆ** 'ಬಱುದಲೆ' ನೋ.

**ಬಱಿದು,** ಬರಿದು(ನಾ). ೧. ಏನೂ ಇಲ್ಲದಿರುವುದು ; ಶೂನ್ಯ ವಾದುದಂ : ಖೇಚರಮಹೀಚರಕೋಟಿಗೆ ಬಾಯಿನಂಗಳಂ ತೀವಿವಿಶೇಷ ಕೋಶಗೃಹಮಂ ಬಱಿದಾಗಿರೆ ಕೊಟ್ಟು (ಶಾಂತಿಪು. ೬–೦೯) ; ಎನಿತು ಕುರು ಕ್ಷೇತ್ರದೊಳೆಡೆಯನಿತುಂ ಬಱಿದಿಲ್ಲದಂತು ಶವಶತದಿಂ ತೆಕ್ಕನೆ ತೀವೆ (ಗದಾಯು. ೭–೬೩) ; ದಿವಸಗತಿಯಿಂ ಕಿಱುಗಪ್ಪೆಗಳಿಲ್ಲಮುಮಂ ಬಱಿದಾಗೆ ಮಾಡಿ (ಶಂಕಶಂ. ೨೭೪–೦೦). ೨. ವ್ಯರ್ಥವಾದುದು ; ನಿರರ್ಥಕ ವಾದುದು ; ಪೊಳ್ಳು : ಬಱಿದಲ್ತು ಮೆಚ್ಚು ಶೌಚಂ ಕಿಱಿದಲ್ತು (ಸೌಇಇ. XI–i, ೪೦–೨೩ ; 969). **ಬರಿದು** : ೨. ಜಗಕ್ಕೆಸೆಯೆ ಶಿವಾಲಯ ಮಂ ಮಾಡಿಸುವಂಗೆ ನೊಳಂಬವಟ್ಟಮೆಂಬುದು ಬರಿದೇ (ಸೌಇಇ. IX–i, ೪೯–೬೩ ; 1076 ?).

**ಬಗ್ಗಬಱಿ, ಬಗ್ಗಬರಿ, ಬಚ್ಚಬಱಿ** (ದ್ವಿರುಕ್ತಿ) : ಭರ್ಗನಂ ಕಾಣುತ್ತೆ ಬಗ್ಗಬಱಿಯಾದಳು (ಶಬಪು. ೦೯–೨೭) : ಪುಡಿಪುಡಿಯಾಗಿ ಹಾಱುವವು ರಥಂ ಗಳು ಒಡಲು ಬಗ್ಗಬಱಿಯಾಗಿ ಕೆಡೆವುವು ಹಯ (ಜ್ಞಾನಶ. ೩೦–೦೮) ; ಗಡಿ ಪೊಯ್ಯಲಿನಿಂದ ತಾಂ ಬಗ್ಗಬರಿಯಂ ತೂರ್[ವಾ]ಡಿ ಕೌರವಾನುಜರ ಸದೆದಗ್ಗಳೆಯರಂ ಪೊಯ್ಕೆ ದುಶ್ಶಾಸನಂ ರಥವ ಪರಿಸಿದಂ ಪಟುತರದೊಳು (ಲಕ್ಷ್ಮಭಾ. ೮–೪–೭); ಕಳಕಳವಿದೇನೆಂದು ನೆರೆಯಂಗಡಿಯ ಮುಂದಣಂಗಡಿಯ ಪರದರಂ ಕಂಡು ಬೆಸಗೊಳ್ವ ಬಚ್ಚಬಱಿ[ಶಾಕಾಂ. ಪಚ್ಚುಪಸಿ]ಯೊಗ್ಗರುಮಂ . . . ನೋಡಿ (ಗದಾಯು. ೯–೩೪). **ಬಚ್ಚಬಱಿದಾಗು, ಬಚ್ಚಬರಿದಾಗು** = ಏನೂ ಇಲ್ಲದಂತಾಗು ; ಶೂನ್ಯವಾಗು : ಹೊಱಗೆಲ್ಲವ ತೊಱೆದೊಳಗೆ ನಿರ್ಮಲವಾಗಿ ಮೆಱೆವವರುಂಟು ಲೋಕದೊಳು ಹೊಱಗೆಲ್ಲವಿದ್ದೊಳ ಗೇನುವಿಲ್ಲೆನೆ ಬಚ್ಚಬಱಿದಾದರಾರು ನಿನ್ನಂತೆ (ಶರಶ. ೨–೩೯) ; ದೇಶ ಕೋಶಗಳೆಲ್ಲಾ ಬಚ್ಚ ಬರಿದಾಗಿ, ಅವರೂ ಅವನಂತೆಯೇ ನಾಡಾಡಿಗಳಾಗುವ ದುರವಸ್ಥೆಗುರುಳ್ದಿರುವುದು ಪ್ರತ್ಯಕ್ಷಪ್ರಮಾಣವಾಗಿದೆ (ಮಂತ್ರಶ. ೦೯–೨೩) . **ಬಚ್ಚಬಱಿಯ, ಬಚ್ಚಬರಿಯ** = ಕೇವಲವಾದ; ಅಷ್ಟುಮಾತ್ರದ : ಕೂಡಲಸಂಗಮದೇವಾ ನಿಮ್ಮ ಶರಣರು ಸ್ವತಂತ್ರರು ಎನ್ನ ಬಚ್ಚಬಱಿಯ ಬಸವನೆನಿಸಯ್ಯಾ (ಬಸವ. ೬೦೬) ; ಮಾಡಿಸಿ ಸಂಗವನು ನೋಡಿಸು ನಿನ್ನವರ ಕೂಡಿಸು ಬಚ್ಚಬರಿಯ ಭಕ್ತಿ ನನಗಿನ್ನು ನೀಡು ಪಾದೋದಕ ಪ್ರಸಾದವ (ಸಿದ್ಧಕೃ. ೩೪–೩೦). **ಬಱಿದು ಮಾಡು** = ಖಾಲಿ ಮಾಡು; ಇಲ್ಲದಂತೆ ಮಾಡು : ಕುಡಿಪೆನಾ ಲವಣಾಬ್ಧಿಯನೀಗಡೆ ತೋಳೊಳ್ ತುಳ್ಕಿ ಬಱಿದು ಮಾಟಿಪ್ಪೆನೊ ಪೇೞ್ (ಅನಿಪು. ೧೨–೯೬). **ಬಱಿಯ, ಬರಿಯ**₂ = ೧. ಕೆಲಸಕ್ಕೆ ಬಾರದವನು ; ನಿರುಪಯುಕ್ತ : ವರಧರ್ಮ ಮನುತ್ಸಪದಿಂ ಸ್ಥಿರಮನದಿಂ ಕೇಳಲೊಲ್ಲದಾತನೆ ಕಿಱಿಯಂ ವರಧರ್ಮ ಮನಱಿವಿಂದಂ ಸ್ಥಿರಮನನಾಗಱಿಯಲೊಲ್ಲನಾತನೆ ಬಱಿಯಂ (ಧರ್ಮಾಮೃ. ೨–೦೬೩). ೨. ಖಾಲಿಯಾದ ; ಪೋಳಾಗಿರುವ : ಬಱಿಯ ಗೋಡೆಯ ಮೇಲೆ ಬರೆದ ಚಿತ್ರವ ಕಂಡು ಮಱುಗಿ ಮಾಡುವುದೇನು (ಪೋಹಕ. ೯–೦೭). ೩. ವ್ಯರ್ಥವಾದ : ಬಱಿಯ ಕಾರ್ಪಣ್ಯದಲಿ ಮೇಘದ ಮಱಿಯ ಹೊಕ್ಕರೆ ರಾಹು ಬಿಡುವನೆ (ಕುಮಾರವ್ಯಾ. ೨–೪೪) ; ಬರಿಯ ಮಾತಿನಲ್ಲಿ ಕಾಲ ಕಳೆಯಬೇಡ (ರೂಢಿ). ೪. ಅಷ್ಟು ಮಾತ್ರದ ; ಕೇವಲ : ವಪಮಾಸಂ ತೀವಿ ಬಱಿಯ ಮುಂಡಮಂ ಬೆಸಲೆಯಾಗಿ (ಧರ್ಮಶ. ೯–೫೨ ವ) ; ಬಱಿಯ ಬಾಯಿಯಲಿ ನಿನ್ನ ಹೊಗಳುವ ಭಟ್ಟರಾರು (ಸಂಶಶ. ೪–೨೦). [ದೇ.॥ ತಮಿ. ವಱಿತು]

**ಬಱಿದೂಱು** 'ಬಱುದೂಱು' ನೋ.

**ಬಱಿದೆ,** ಬರಿದೆ (ಅ). ವ್ಯರ್ಥವಾಗಿ ; ಸುಮ್ಮನೆ : ಆತನೊತ್ತಂಬದಿನಾಂ ತೊಡಾಂ ಬಱಿದೆ ತಪ್ಪಿದೆನೆಂದು ಕಿರೀಟಿ ತನ್ನ ಬಿಲ್ಲಂ ಬಿಸುಟಿರ್ದೊಡೆ (ಪಂಪಭಾ. ೧೧–೬೪); ಅಮರಾಪಗೆ ಕೆಟಗೆ ನಿಂದ ಜನಬಿಂಬದ ಮೇಲಮರ್ದಿರೆ ಪರಿತಂಮುದಱಿಂದಮ ಪಾವನವಾಯ್ತು ಬಱಿದೆ ಪಾವನಮಾಯ್ತೇ (ಸಮಪ. ೨–೫೩); ನಂಬರು ನೆಚ್ಚರು ಬಱಿದೆ ಕರೆವರು (ಬಸವ. ೦೦೬). **ಬರಿದೆ** : ಕೌತುಕಕೆ ಬೆಚ್ಚದಿರ್ ಬರಿದೆ (ಚಿತ್ರಾಂಗ. ೨೩–೬೪೨). [<ಬಱಿದು]

**ಬಱಿದೇರು** (ನಾ). ಯಾವ ಅಲಂಕಾರವಿಲ್ಲದ ಮತ್ತು ಯಾರೂ ಕುಳಿತಿಲ್ಲದ ಬರಿಯ ರಥ; ಬರಿದಾದ ತೇರು : ನಿಸ್ಸೋಳಿರ್ದಪುದು ಬಱಿದೇರೆನ್ನ ಕೈಯೊಳಿದೆ ಪನ್ನಗಾರಿಧ್ವಜ ಕಿರೀಟಿಗಳ್ಪೆರಸಿರ್ದ ಸನ್ನುತ ಸ್ಯಂದನಂ ನೋಡು (ಜೈಮಿಭಾ. ೨೭–೪೩).

[ಬಱಿ (<ಬಱಿದು) + ತೇರು₂ (<ತೇರ್₂)]

**ಬಱಿದೊಱೆ** 'ಬಱುದೊಱೆ' ನೋ.

**ಬಱಿನುಡಿ** 'ಬಱುನುಡಿ' ನೋ.

**ಬಱಿಮಾತು** 'ಬಱುಮಾತು' ನೋ.

**ಬಱಿಮಾಯೆ** (ನಾ). ಕೇವಲ ಕಣ್ಕಟ್ಟು,–ತಂತ್ರ : ಎಲವೊ ಬಱಿಮಾಯೆ ಗಳನೆಸಗಿ ಮೋಸದೊಳ್ತುರಗಮಂ ಕೊಂಡು ಬಾಂದಳಕಡರ್ದೊಡೆ ನಿನ್ನನು ಉಳುಹುವರೆ (ಜೈಮಿಭಾ. ೪–೦೩). [ಬಱಿ(<ಬಱಿದು)+ಮಾಯೆ]

**ಬಱಿಮುಳಿಸು** (ನಾ). ಹುಸಿ ಕೋಪ : ಮುರುಹು ಮುದ್ದು ವಿನೋದ ಠಕ್ಕುಪಚಾರ ಬಱಿಮುಳಿ[ಶಾಕಾಂ. ನಿ]ಸು . . . ಎಂಬೀ ಪರಿಪರಿಯ ಮಾಯೆಗಳ ಮಹಿಳಾಜನ ವಿರಾಜಿಸಿತು (ತೊರರಾ. ೦–೩–೩೨).

[ಬಱಿ (<ಬಱಿದು) + ಮುಳಿಸು₂]

**ಬಱಿಮೆಯ್**, ಬರಿಮೈ, ಬಱಿಮೈ (ನಾ). ೧. ಬತ್ತಲೆ ದೇಹ ; ನಗ್ನ ಶರೀರ: ಎಲೆಗೇ ನೀನಲ್ಲರೊಂದಂದದಿನಿರೆ ಬಱಿಮೆಯ್ಯಿಂದಮಿರ್ಪಂ ತುಟಕ್ಕಂ (ಚಂದ್ರಪ್ರ. ೮–೬೩). **ಬರಿಮೈ** : ೧. ಬರಿಮೈ ತಣ್ಣಗೆ, ಮನದಲಿ ಬಿಸಿ ಹಗೆ (ಕಂಜೆಪ. ೦೫೨) ; ಕಿಡಿಗೇಡಿ ಮಗು ! ಬರಿಮೈಯಿಂದ ಮಂಜಿನಲ್ಲಿ ಶಿರುಗುತ್ತಿದೆ ! (ಎರಸ. ೦೭). **ಬಱಿಮೈ** : ೨. ಅಲಂಕಾರರಹಿತವಾದ ಮೈ,—ಶರೀರ : ಕೃಷ್ಣನಾಮಸ್ಮರಣೆ ಮಾಡುತ ಮರುತಸುತನಾ ಕರ ವಿಡಿದು ಬಱಿಗಾಲು ಬಱಿಮೈಯಿಂದ ಬರುತಿರಲು (ಸಂಭಕ. ೨೦–೦೦೩).

[ಬಱಿ (<ಬಱಿದು) + ಮೆಯ್₂]

**ಬಱಿಮೈ** 'ಬಱಿಮೆಯ್' ನೋ.

**ಬಱಿಯಾಟ**, ಬರಿಯಾಟ (ನಾ). ಕೇವಲ ಆಟ,–ಕ್ರೀಡೆ : ಮುನ್ನ ಬಱಿಯಾಟಂಗಳಿಂ ಬೆಳಗನ್ನ ಕಾಡಿದಡೆನ್ನ ಜಠರವದಿನ್ನು ತುಂಬದು (ಬಸಪು. ೦೫–೨೪). **ಬರಿಯಾಟ** : ಯುವಕರ್ಗೆ ಪಯಣವೇದರೆ ಏನು ? ಬರಿ ಯಾಟವೈಸೆ ! (ಚಂದ್ರಸ. ೬೭). [ಬಱಿ (<ಬಱಿದು) + ಆಟ]

**ಬಱಿವಾತು** 'ಬಱುವಾತು' ನೋ.

**ಬಱಿವಾತುಗಾಱ** (ನಾ). ವ್ಯರ್ಥವಾದ ಮಾತಂಗಳನ್ನಾಡುವವನು : ಪೊಱಮಿಂಚುಗೈವನಂ ಬಱಿವಾತುಗಾಱನಂ. . . ತೊಱೆಯದುದೆಗ್ಗತನ ವಲ್ಲೇ (ರಾಜಶೇ. ೦೦–೯೨). [ಬಱಿವಾತು (<ಬಱುವಾತು) + —ಗಾಱ]

**ಬಱಿವಾಯ್** 'ಬಱುವಾಯ್' ನೋ.

**ಬಱಿಸೂಱೆ** 'ಬಱುಸೂಱೆ' ನೋ.

**ಬಱಿಸೂಱೆಗೈ** (ಕ್ರಿ). ವ್ಯರ್ಥವಾಗಿ ಸೂರೆಮಾಡು; ಅನ್ಯಾಯವಾಗಿ ಹಾಳುಮಾಡು : ಇಟ್ಟ ಮರಂಗಳಂ ಒಟ್ಟಿದ ಕಲ್ಗಳಂ ದೈವಮೆಂದು ಪೆಸರಿಟ್ಟು ಕೊಂಡಾಡಿ ವರಮಿಗಾಗುಮೆಂಬಾಸೆಯಿಂ ತಮ್ಮೊಳರ್ಥಮಂ ಬಱಿಸೂಱೆಗೈವರ್ (ಪದ್ಮಸಾ. II, ೮೨೦ ವ).

[ಬಱಿಸೂಱೆ (< ಬಱುಸೂಱೆ) + ಗೈ (< ಕೆಯ್₁)]

**ಬಱಿಸೆಜ್ಜೆ** (ನಾ). ಖಾಲಿಯಿರುವ ಕರಡಿಗೆ : ಗಳದ ಬಱಿಸೆಜ್ಜೆಯಲಿ ಲಿಂಗವು ನೆಲಸಿದುದು (ಬಸವು. ೩೮ ಸೂತಕ). [ಬಱು (<ಬಱಿದು) + ಸೆಜ್ಜೆ]

**ಬಱಿಹುಂಡ** (ನಾ). ನಿರುಪಯುಕ್ತನಾದವನು; ನಿಷ್ಪ್ರಯೋಜಕ : ಬಱಿಹುಂಡನ ಗಡಿವಾಡದಲ್ಲಿರಿಸಿದಂತೆ ಒಡೆಯರಿಲ್ಲದ ಮನೆಯ ತುಡುಗುಣಿ ಹೊಕ್ಕು ಗಡಬಡಿಯ ಮಾಡಿದಂತೆ (ಸಕವ. I, ೨೦೫-೭೮೦).
[ಬಱು(<ಬಱಿದು) + ಹುಂಡ]

**ಬಱು.** ಬರಿ, ಬರು, ಬಱಿ (ಸಪೂರೂ) 'ಬಱಿದು' ಎಂಬ ನಾಮವಾಚಕಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಱುಗಾಲು', 'ಬಱುಗಿವಿ' ಪರಾ. ಬರಿ : 'ಬರಿಗಾಲು', 'ಬರಿಮುನ' ಪರಾ. ಬರು : 'ಬರುಗನಸು', 'ಬರುಮರುಳ' ಪರಾ. ಬಱಿ : 'ಬಱಿಗಾಲು', 'ಬಱಿದಲೆ' ಪರಾ. [<ಬಱಿದು]

**ಬಱುಂಟು,** ಬೆರಟು, ಬೆಱಂಟು, ಬೆಱಟು (ಕ್ರಿ). ೧. (ಕಾಲ್ಬೆರಳಂ ಅಥವಾ ಕೈಬೆರಳಿನಿಂದ) ಕೆರೆ ; ಗೆಬರು; ಗೀರು : ಮತ್ತಮಾ ಹಸ್ತಿ . . . ಭೂಮಂಡಳಮನುಂಡಿಗೆ ಸಾಧ್ಯಂ ಮಾಡಿ ಕುಡುಮಿಂದಱುವ ವಂದದಿಂ ದಕ್ಷಿಣಪಾದದಿಂ ಮೇದಿನಿಯಂ ಬಱುಂಟುತ್ತುಂ (ಪಾರ್ಶ್ವಪು. ೬-೩೪ ವ). ೨. ಕೆದಕು ; ಬೆದಕು : ಪೇಟಲ್ಬಾರದ ಮನದೊಳ್ ಪುಟಲ್ಪಾರದ ಬಱುಂಟಿ[ಪಾಠಾಂ. ಟಿ] ಕೇಳ್ದವರಾರುಂ ಬಾಟಲ್ಬಾರದ ಕನಸಂ . . . ಕಂಸಂ ಕಂಡಂ (ಅರ್ಜನೀ. ೭-೩೬); ಪೊಗೆಯಡಂಗೆಗವಿದ ದೂವೆಯಂತಿರೆ ಬಱುಂಟಿದೊಡೆ ಬಿಸಿಯನುಗುಳ್ವ ಕಪ್ಪುರದ ನುಣ್ಗಳಲ ಜಗುಲಿಯುಂ (ಪರ್ಕ್ಷ. ೩-೬೩ ವ). ೩. ಚಿವುಟು ; ಜಿಗುಟು : ತಂದೆಯ ಮಱಲುಂದಿದಲ್ಲಿಗೆವೋಗಿ ಬಱುಂಟಿ[ಪಾಠಾಂ. ಬೆಱಂಟಿ] ಎಟ್ಟಿ ಪೊಟ್ಟಳಿಗೆಯಂ ತಂದೆಗೆ ಕೊಟ್ಟಳ್ (ವಡ್ಡಾರಾ. ೦೭-೨೩). ೪. ಕೆಣಕು ; ಕೆರಳಿಸು : ಕಾಮನ ತೋಳೊಳಿರ್ದ ರತಿ ಶಂಭುಕುಮಾರನುಮಂ ಬಱುಂಟಲೇ (ಅಸಂಪು. ೦೦-೩೫). **ಬೆರಟು** : ೧. ಬೆರಟಿದೊಡಂಗುಟದಿಂ ಪೊನ್ನೊರೆದೋರ್ಪುರ್ವರೆ ಕಡಲ್ಗೆ ಪಡಿಯೆಂಬಿನೆಗಂ ಪರಿಕಾಲೆತ್ತಂ ಪರ್ವಿರೆ (ಧರ್ಮಾ. ೦-೪); ಐದು ಕುದುರೆಗಳು . . . ನೆಲವನ್ನು ಮುಂಗಾಲಿನಿಂದ ಬೆರಟುತ್ತಿದ್ದುವು (ಪೀರಸಾಂ. ೨೦). **ಬೆಱಂಟು** : ೧. ಭೂಭಾಗ ಮನತ್ಯುತ್ಸಾಹದಿಂ ದಕ್ಷಿಣ ಖುರದೆ ಬೆಱಂಟಿತ್ತು ದಿವ್ಯಾಶ್ವಮಾಗಳ್ (ಸಾಹಂಪು. ೪೬೩); ಉಗುರಿನಿಂದಂಟಿ ಬೆಱಂಟಿಯಂಜನಮುದಕ್ಕುಂ . . . ಶಾನಿದೆಂಬಂತಿರೀ ಜಗದೊಳ್ ಕಣ್ಗೆ ವಿಚಿತ್ರಮಾಗೆ ನೆಱಿ ದಟ್ಟಯ್ಸಿತ್ತನಿತ್ತಂ ತವಂ (ಗಿರಿ. ೪-೭೬); ಅಂಗಡಿಬ್ಬದಿಗಳನುಱುಂಗಿ ಬೆಱಂಟಿ . . . ಪಲ್ಗಿರಿದು ಗೋಲಾಂಗೂಲಂ ಪುರ್ಬಿಕ್ಕಿ ನಗಿಸುವವಲ್ಲಿ ವಟುಕಪಳವ (ಪುದೇಪು. ೩-೦೬). **ಬೆಱಟು** : ೧. ನೆಲನ ತಟ್ಟಿ ಬೆಱಟುವ ಪದಂ ನೆಗೆದಲ್ಲೆ ಬೆಂಗರ್ದ ಬಾಲದಿಂ . . . ಜುಂಕಿಟ್ಟು ಹರಿಯಿತ್ತು (ಹಕಕಾ. ೩-೪೦); ಕಾಲಲ್ಲಿ ನೆಲನಂ ಬೆಱಟುತ . . . ಬಾಲವನೆತ್ತಿ ಬೀಸುತ್ತ (ಜಸಪು. ೩೨-೨೫); ಕಯ್ನುಡಿಯನೊಳ್ಳಗುರಿಂ ಬೆಱಟುತ್ತೆ ಬೆಳ್ಮೊಗಂ ಸಮನಿಸೆ ಕಾಲ್ವೆರಲ್ ಬರೆಯೆ ಭೂಮಿಯನಿರ್ದಳದೊಂದು ಚೆಲ್ವಿನಿಂ (ರಕರ. ೪-೦೫೩). ೩. ಕೇರಿಯೊಳ್ಳಮುತಮಗೆ ಬೆಱಟುತಂ ಕೆರಟುತಂ ಸನ್ನೆಯಿಂ ಮುಗುಳ್ನಗುವವರು (ತಚೆ. ೩-೭೬). ೪. ತಿರುಗಿ ನೋಡಿದ ಬೇತಾಳನ ಬೆಱಟ ಪಲ್ಮೊರೆದೌಡುಗರ್ಚಿಯಂಜಿಸುತ ತರಹರದಿಂದ ನಿಟ್ಟಿಸುತಿರ್ದನಾ ಭೂವರನು (ಕ್ರಿಪಾಂ. ೬-೯೬). ೫. ಕೀಳು ; ಎಬ್ಬು : ಬೆರಲೊಂದು ಬೊಗ್ಗಿಸುತ್ತವನ ಭಾಳಾಕ್ಷಿಯಂ ಬೆಱಟ ತೆಗೆವುತ ಬಾಯ್ಗೆ ಹಾಕಿಕೊಳಲು (ಶೀಕ್ಕಪು. ೬-೨-೩೪); ತನ್ನ ಮುಂದೆ ಮಸಣಿಯೆಯ್ನುತ ಪಣೆಗಣ್ಣ ತೆಗೆಯೆ ಬೆರಳಿಂದದಂ ಬೆಱಟ ನುಂಗಲ್ಕಹಂಕರಿಸಿರ್ದನೆಂದು ಪೊಗಳಲ್ ಮಸಣಿಯಿಂದೆ ಬಳಿಕಾತಂಗೆ ಪಣೆಗಣ್ಣನುಗುಳಿಸಿದನು (ಶಂಕ. ೩೬-೩೩). 'ಪರಡು' ಪರಾ.

[ದೇ.॥ ತಮಿ. ವಱಣ್ಣು, ವಱುಕು ; ತೆಲು. ಬಱಟು, ಬರಟು, ಬರಕು]

**ಬಱುಕಟಿ,** ಬಕ್ಕಟ, ಬರ್ಕಟ (ನಾ). ನಿಷ್ಪ್ರಯೋಜಕವಾದುದು ; ನಿರರ್ಥಕವಾದುದು : ತ್ರಿವಿಧದ ಹುಱಿಯಲ್ಲಿ ಅಡಿಯನಿಕ್ಕಿ ಅಡೆಗೊಡ್ಡಿದಂತೆ ಬದ್ದಿರುತ್ತ ಮತ್ತಱಿಕೆಯ ಮಾತನಾಡಿದಡೆ ಅದು ಬಱುಕಟಿ [ಪಾಠಾಂ. ಟಿ]ಯೆಂಬರು (ಚಾಪುಶು. ಶ. ೩೩೬-೦೬); ಇಂತೀ ಬಱುಬರ ಅರ್ಚನೆ ಹುರಿಯ ಬೊಂಬೆಯಂತೆ ಇಂತೀ ಅಱಿಗುಱಿಗಳ ಪೂಜೆ ಬಱುಕಟಿಯಂತೆ (ಗುಕ್ತಪುಂ. ಶ. ೨೨೨-೩೩); ಬೆಳಗದ ಕಂಚು ತೊಳೆಯದ ಕುಂಭ ಪಕ್ವ ಕಳಿಯದ ಫಲ ನೆಱಿಯಱಿಯದವನ ಸತ್ಕ್ರಿಯೆ ಮಾಟ ಬಱುಕಟಿ ಹೋಯಿತ್ತು (ಸರ್ವಶ. ೦೨೯-೬೩೨). **ಬಕ್ಕಟ** : ಆತ್ಮಜರಾಶ ಬಕ್ಕಟವಕ್ಕು ದೆಂಬಳವಳಿಗೆಗೊಳಲಾಗವನಿನಾಯಕನು (ಶರಾಪು. ೨೭-೩೬). **ಬರ್ಕಟ** : 'ಬರ್ಕಟಬಯಲ್' ಪರಾ. [ಬಱು (<ಬಱಿದು) + ?]

**ಬಱುಕಾಯ** (ನಾ). [ವೀಶೈ] ಇಷ್ಟಲಿಂಗವನ್ನು ಧರಿಸಿದವನು : ಹಲವು ಕೊಂಬಿಂಗೆ ಹಾಯಬೇಡ ಬಱುಕಾಯಕ್ಕೆ ನೀಡಬೇಡ (ಚಕವ. ೬೨೨); ಅಂಗದ ಮೇಲೆ ಲಿಂಗವುಳ್ಳವರ ಮನೆಯ ಹೊಗಿಸಲಾಗದು ಬಱು[ಪಾಠಾಂ. ಬಱಿ]ಯ]ಕಾಯರಿಗೆ ನೀಡಲಾಗದು (ಕನ್ನಶ. ಶ. ೬೩೬-೦೪೩೦) ; ಹುಸಿ ಡಂಭಕ ದುರ್ಮತಿ ಬಱುಕಾಯನಿಗೆ ಅಖಂಡೇಶ್ವರ ಎಂತು ಮಚ್ಚುವನು (ಅಖಂಡೇ. ೯೬-೦೩). [ಬಱು ( < ಬಱಿದು) + ಕಾಯ ]

**ಬಱುಗ** (ನಾ). ಹಣ ಇಲ್ಲದವನು ; ಬಡವ ; ದರಿದ್ರ : ಮತ್ತವನ ವಿತ್ತದೊಳಗಿನಿತುಳಿಯದಂತೆಲ್ಲವಂ ಕವರ್ದುಕೊಂಡು ಬಱುಗನಂ ಮಾಡಿ (ಕೀರಮ. ೬-೩೪). [ಬಱು ( < ಬಱಿದು) + —ಗ]

ಬಱುಗಯ್ 'ಬಱುಗೆಯ್' ನೋ.

**ಬಱುಗಾಲು,** ಬರಿಗಾಲು, ಬರುಗಾಲು, ಬಱಿಗಾಲು (ನಾ). ಪಾದ ರಕ್ಷೆಗಳನ್ನು ಧರಿಸದ ಕಾಲು ; ಜೋಡು ಮೆಟ್ಟದಿರುವ ಕಾಲು ; ಬರಿಯ ಕಾಲು : ದಂತಿಯಿಂದಿಳಿದು ನಡೆದಱಿಯದವ ಬಱುಗಾಲೊಳೆ ತಡಿಯನಿಡುವೆ (ತಕಕಾ. ೯-೬). **ಬರಿಗಾಲು** : ಕಾಲೇಜಿಗೆ ಬರಲು ಬರಿಗಾಲಿನಲ್ಲಿ ಮೈಲುಮೈಲಿಗಳ ದೂರ ನಡಿಗೆ (ರಂಗವ. ೦೨೫); ಎಂಟು ವರುಷದ ಮಗ ಹೊಂಟಾನ ಬರಿಗಾಲ ಬಾಟರಂಗ ಗಿರಿಯ ಏರೂತ (ಸಿದ್ಧಪು. ೩-೩೨); ಈ ಮುಳ್ಳುನೆಲದ ಮೇಲೆ ಬರಿಗಾಲಿನಲ್ಲಿ ಏಕೆ ನಡೆಯುತ್ತೀಯೆ (ಶುಕ್ಲಪು. ೬೬). **ಬರುಗಾಲು** : ಕೊಳಗದಪ್ಪಲೆಯನ್ನು ಹೊತ್ತ ಬರುಗಾಲಿನ ಹೆಂಗಸರಿಬ್ಬರು . . . ಹೊರಗೆ ಬಂದರು (ಕೃಪಸು. ೬೪). **ಬಱಿಗಾಲು** : ಕೃಷ್ಣನಾಮಸ್ಮರಣೆಮಾಡುತ ಮರುತಸುತನಾ ಕರ ವಿಡಿದು ಬಱಿಗಾಲು ಬಱಿಮೈಯಿಂದ ಬರುತಿರಲು (ಸಂಕಶ. ೨೦-೦೦೬); ಕರೆಯದಲೆ ಬರುವವನ ಬರೆಯದಲೆ ಓದುವನ ಬಱಿಗಾಲಿನಿಂದ ನಡೆವವನ ಕರೆತಂದು ಕೆರದಿ ಹೊಡೆಯೆಂದ (ಸರ್ವಜ್ಞ. ೦೩೦೦).
[ ಬಱು (<ಬಱಿದು) + ಕಾಲು₁ (<ಕಾಲ್₁) ]

**ಬಱುಗಿವಿ** (ನಾ). (ಒಡವೆಯನ್ನು ಧರಿಸದಿರುವ) ಕಿವಿ : ಬರಿದಾದ ಕಿವಿ; ಬೋಳಾದ ಕಿವಿ : ಹಾರಪದಕವಿದ್ದು ಬಱುಗಿವಿಯಾದ ಶೃಂಗಾರ ರಮ್ಯವೆ ಹೇಳೆಂದ (ಭರಕ. ೫೭-೩೦). [ಬಱು (<ಬಱಿದು) + ಕಿವಿ]

**ಬಱುಗುತ್ತ** (ನಾ). ಬರಿಯ ರೋಗ ; ಸದಾ ಇರುವ ರೋಗ : ಕಟಕಿ ಹುರುಡು ಮಾಡದಲೆ . . . ಕಲಹ ಸಟೆ ಬಱುಗುತ್ತಗಳನು ಮಾಡೆ ಬೆಲೆವೆಣ್ಗೆ ವಿಟರು ಸೋಲುವರೆ ಧನವನು (ಗುರುಚಾ. ೦-೦೦೬); ಕೊಜಬಾಟ ಹೋರಟೆ ಕಲಹ ಬಱುಗುತ್ತ ಬಯಲೊಲ್ಮೆಗಳ ಮಾಡೆ[ಪಾಠಾಂ. ಬಱುಗುತ್ತು ಬಯಲೊಲ್ಮೆಱಿಗಳ ಮಾಡಿ] ಬೆಲೆವೆಣ್ಗೆ ತೆಱುವರ ಧನವ ಬಲ್ಲವರು (ಶಂಗಾಸಾಂ. ೨೮-೬೯). [ಬಱು (<ಬಱಿದು) + ಕುತ್ತ]

**ಬಱುಗೊಟಿ್.** ಬಱಿಗೊಟಿ್ (ನಾ). (ಸಾರು ಅಥವಾ ಮಜ್ಜಿಗೆ ಬೆರಸದ) ಅನ್ನ ; ಬರಿಯ ಅನ್ನ : ಬಱು[ಪಾಠಾಂ. ಱಿ] ಗೂಟುಂಬ

ನಿಬ್ಬುಗಡಿಯುಂ ಕಳಿಯುಂ ಕೂಟನುಂಬ ಆಯಂಬಿಲವುಮೆಂದಿವಂ ತನ್ನ ಶಕ್ತಿಯಿಂ ಮಱಿಸದಾವುದಂ ಮಾಡಿದೊಡಂ ಪ್ರೋಷಧೋಪವಾಸಮೆಂಬೆರಡನೆಯು ಶಿಕ್ಷಾವ್ರತಮಕ್ಕುಂ (ಧರ್ಮಾ. ೩೦೬). **ಬಱಿಗೂಟ್‌ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ಬಱು (<ಬಱುದು) + ಕೂಟ್‌$_1$]

**ಬಱುಗೆಂಡ**, ಬಱಿಗೆಂಡ (ನಾ). ಉರಿಯಿಲ್ಲದ ಕೆಂಡ; ಬರಿಯ ಕೆಂಡ : ಬಱು[ಪಾಠಾಂ. ಬಱಿ]ಗೆಂಡದೊಳು ಸುಟ್ಟಡಗು ಬೂಲಿಕೆಯೆನಿಕ್ಕು (ಮುಂಗರಾ. ೬೯-೪). **ಬಱಿಗೆಂಡ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.　[ಬಱು (<ಬಱುದು) + ಕೆಂಡ]

**ಬಱುಗೆಯ್‌$_1$**, ಬರಿಗೈ$_1$, ಬಱಿಕೆಯ್‌, ಬಱಿಕ್ಕೈ, ಬಱಿಗೆಯ್‌, ಬಱಿಗೈ$_1$ ಬಱುಗೈ (ಕ್ರಿ). ೧. ಇಲ್ಲದಂತೆ ಮಾಡು; ನಾಶಮಾಡು; ಸಂಹರಿಸು: ಅಲಘುಸಾಹಸಿ ಹೊಡೆದ ಗಾಯಕೆ ಖಳರ ಮುಂಡಗಳಾಡುತಿರ್ದವು ಬಲವ ಬಱಿಗೆಯ್ದು (ಕೌಶಿಕಾ. ೨೮-೪೨). **ಬರಿಗೈ$_1$ :** ೨. ಬರಿದು ಗೊಳಿಸು ; ನಿಷ್ಫಲಗೊಳಿಸು : ಬರಿಗೈಯೆ ನಾ ನಿನ್ನ ಬಯಕೆಯನು (ಪ್ರಭುಲಿಂಗ. ೧೨೪). **ಬಱಿಕೆಯ್‌ :** ೧. ಮಱಿದೊಡನಿರ್ದ ಕಾಕಬಲಮೆಲ್ಲಮಂ ಬಱಿಕೆಯ್ದು (ಶಂಕರಶಂ. ೨೦೨-೨೦) ; ಅದಟರನಾನ್ತು ಕೊಲ್ವದಟನಣ್ಮಿದರಂ ಬಱಿಕೆಯ್ದು . . . ನಿತ್ತರಿಪ ಕಾದುವ ಮೆಯ್ಗಲಿ ಯಾದ್ಧರಿತ್ರಿಯೊಳ್‌ (ಶಾಸನ. XX. ೬೪-೨೪ ; 1112). ೨. ಬಾಯ್ಸವಿಯ ಮಾತುಗಳಂ ಬಱಿಕೆಯ್ವ ಚರ್ಚೆಯಲ್ಲ (ಅನಂತಪು. ೦-೩೬). **ಬಱಿಕ್ಕೈ :** ೧. ಒಂದೆರಡೆಂದು ಸಲುಗೆಗೆ ಸಲಿಸಿ ಬಂದೈನೂಱಿ ಬಱಿಕ್ಕೈದು (ಕುಮಾರವ್ಯಾ. ೩-೬೮); ಹರಿಬಲವ ಬಱಿಕ್ಕೈವುತಿರ್ದುದು ಹರಿಬದತಿಬಲ ಖಳಕದಂಬಕ ಮಸಮಸವುರದಲಿ (ಕೊರಾ. ೬-೫೦-೬). ೨. ಮಾರುತಾಸುರನ ಭಾರಣೆಯ ಬಱಿಕ್ಕೈವ ವೀರರದಾರು (ಐರಾಗ. ೨-೩-೦೮). **ಬಱಿಗೆಯ್‌ :** ೧. ತಲೆ ನಡುಗುತಿರ್ದುವೆನ್ನದೆ ತರದಿಂ ಬಱಿಗೆಯ್ಯುತಿರ್ದ ಮಾಯ್ದಬಿಗುಲಿ ಕರ್ವೇಡನಲ್ಲಿ ಮುದುಗಿಳಿಗಳುಮಂ (ಕಾದಂಪೂ. ೦೬೯) ; ಪೊಯ್ದು ಪೊಯ್ದು ಭರದಿಂ ಬಱಿಗೆಯ್ದನಭೇದ್ಯವಿಕ್ರಮಂ (ಗೀತಗೋ. ೬೩-೦೬). **ಬಱಿಗೈ$_1$ :** ೧. ಎಲವೊ ನಿನ್ನಯ ಬಲವನೆಲ್ಲವ ತುಳಿದು ಬಱಿಗೈವನ್ನಬರ ನೀಸಳಿದು ನೋಡಾ (ಸಂಶಶ. ೬-೦೦೦) ; ಚಾರಿವರಿದನು . . . ಪಡೆಯ ಬಱಿಗೈದು (ಕೌಶಿಕಾ. ೨೨-೬). **ಬಱುಗೈ :** ೧. ಥಟ್ಟುಗೆಡಹಿದನೇನನೆಂಬೆನು ಪಡೆಯ ಬಱುಗೈದ (ಕೌಶಿಕಾ. ೩೩-೦೬).　[ಬಱು (<ಬಱುದು) + ಕೆಯ್‌$_1$]

**ಬಱುಗೆಯ್‌$_2$**, ಬರಿಕೈ$_1$, ಬರಿಗೈ$_2$, ಬರುಗಯ್‌, ಬಱಿಕಯ್‌, ಬಱಿಗೈ$_2$, ಬಱುಗಯ್‌ (ನಾ). ಆಹಾರ, ಹಣ, ಹಣ್ಣು ಹಂಪಲು ಆಯುಧ ಇತ್ಯಾದಿಗಳನ್ನು ಹೊಂದಿರದ ಕೈ ; ಖಾಲಿಕೈ ; ಬರಿದಾದ ಹಸ್ತ; ರಿಕ್ತಹಸ್ತ : ಪಿಂಬಗಲ್ತಿರೆ ಸರ್ವಾಂಗಂ ಬಱುಗೆಯ್ಯಿಂ ಬಯಲ ನೀಗುತ್ತಿರೆ (ಕಲ್ಯಾಣ. ೨-೦). **ಬರಿಕೈ$_1$ :** ತೊಳಲಿ ಶೋಧಿಸಿ ಬಳಲಿ ಬಂದು ಬರಿಕೈಯಾದುದೆನುತ ಚಿಂತಿಸಿ (ಪಂಪಾರಾ. ೫-೫-೦). **ಬರಿಗೈ$_2$:** ಇವಕ್ಕೆ ಬಲಿಬಿದ್ದು ಅನೇಕರು ಬರಿಗೈಯಾಗಿದ್ದಾರೆ (ಮಿಕವ್ಯ. ೨೨); ಹೀಗೆ ಬರಿಗೈಲಿ ಮರಳುವದು ನನಗೆ ಎಳ್ಳಷ್ಟೂ ಸರಿ ಕಾಣುವುದಿಲ್ಲ (ಬಂಗಾಹ. ೩೪) ; ಆನಂದ ಇತ್ತೀಚೆಗೆ ಬರಿಗೈಯಿಂದ ಮನೆಗೆ ಹೋಗಲಾರದೆ ಬಾರಿಬಾರಿಗೂ ನೊಂದುಕೊಳ್ಳುತ್ತಾನೆ (ಕೇಪೋಕ. ೨). **ಬರುಗಯ್‌ :** 'ದೇಹ' ಎಂದು ಸೇರೆಗಯ್ಯನ್ನೆತ್ತಿದ ಆರೂ . . . ಬರುಗಯ್ಯಿಂದ ಹಿಂದಿರುಗಿದರಿಲ್ಲ (ಬಿಟ್ಟಿಕ. ೪೨-೨). **ಬಱಿಕಯ್‌ :** ಮನಸಿಜನಾತ್ಮಜ ಬಱಿಕಯ್ಯೊಳಿರ್ಪುದು ಸನುಮತವಲ್ಲ (ಮೋಹತ. ೩೩-೬೦). **ಬಱಿಗೈ$_2$ :** ಸಂಬಂಧಿಗಳಪ್ಪರಲ್ಲಿಗೆ ಬಱಿಗೈಯಿಂ ಪೋಗಲಾಗದೆಂಬರ್‌ (ಶಂಕಶಂ. ೨೫೦-೨); ತೆಱನಂ ಕಾಣದ ಬಾಳ್ಕೆ . . . ದುರ್ಮಾರ್ಗರೊಳ್‌ ಸ್ನೇಹಮುಂ ಬಱಿಗೈಯಿಂ ಸುಱಿವಂತೆಕ್ಕೆ (ಸೋಮೇಶ. ೦೭); ಬರುತೇನು ತಂದೆ ಬಱಿಗೈಲಿ ಬಂದೆ (ಕುಶಂದ. ೨-೩೩-೧). **ಬಱುಗಯ್‌ :** ಬಱುಗಯ್ಯೊಳೆ ಗುರ್ದೆಯುಂ ಪುಡುಕುನೀರೊಳರ್ದೆಯುಂ (ಅತಪು. ೧೧-೧೦ ವ).

**ಬರಿಕೈಯಲ್ಲಿ ಮೊಳಹಾಕು, ಬರಿಗೈಯಲ್ಲಿ ಮೊಳಹಾಕು** = ಹಣವಿಲ್ಲದೆ ಖರ್ಚಿಗೆ ಯೋಜನೆ ಹಾಕು : ಬರಿಕೈಯಲ್ಲಿ ಮೊಳಹಾಕಿದರೆ ಪುರುಷಾರ್ಥವೇನಿದೆ (ವಾಗ್ವೈಭ. ೧೧೩) ; ಅವುಗಳನ್ನೆಲ್ಲ ಕಂಡುಹಿಡಿದು ಕನ್ನಡಿಗರಿಗೊಪ್ಪಿಸುವ ಶಕ್ತಿಯಾಗಲಿ, ಬರಿಗೈಯಲ್ಲಿ ಮೊಳಹಾಕುವ ನಮ್ಮಂಥ ವ್ಯಕ್ತಿಗಳಿಗೆಲ್ಲಿಂದ ಬರಬೇಕು (ವಾಡೋಚ. ೧೯೬). **ಬರಿಗೈಲಿ ಬರು** = ಕೆಲಸವಾಗದೆ ಹಿಂತಿರುಗು ; ನಿಷ್ಫಲನಾಗಿ ಹಿಂದಿರುಗು : ಹೋಗಿ ಬಂದವರು ಬರಿಗೈಲಿ ಬಂದರು (ಘುಟ್ಟರ. ೬೯). **ಬಱಿಗೈಯವರು** = ಹಣವಿಲ್ಲದವರು; ದರಿದ್ರರು : ನಾವು ಬಱಿಗೈಯವರು ಬರಲೆಮಗಾವುದಲ್ಲಿಯ ಕೆಲಸ (ಕುಮಾರವ್ಯಾ. ೦-೪೩).　[ಬಱು (<ಬಱುದು) + ಕೆಯ್‌$_2$]

**ಬಱುಗೆಱೆ$^3$**, ಬರಿಗೆರೆ, ಬಱಿಗೆಱೆ$^3$ (ನಾ). ನೀರಿಲ್ಲದೆ ಖಾಲಿಯಾಗಿರುವ ಕೆರೆ : ಕೆಱೆಯು ಬಱುಗೆಱೆಯಾಗಲೀಕ್ಷಿಸಿ (ಸಾಳ್ವಭಾ. ೩೦-೩೬). **ಬರಿಗೆರೆ :** ಬರಿಗೆರೆಯೊಳಗೊಂದು ಬಕಪಕ್ಷಿ ಕುಳಿತಂತೆ (ಸಾಂಪರಶಾ. ೬-೦೩೪). **ಬಱಿಗೆಱೆ$^3$:** ಕೆಱೆ ನೆಱೆ ನೀರ್‌ ತವುತರೆ ಬಱಿ[ಪಾಠಾಂ. ಬಱು]ಗೆಱೆಯಾದುವು . . . ಕಾಲವಶಮದೇನಾಗಿಸದೋ (ಜಗಂ. ೦೬-೬೪). [ಬಱು (< ಬಱುದು)+ಕೆಱೆ$^3$]

**ಬಱುಗೈ** 'ಬಱುಗೆಯ್‌$_1$' ನೋ.

**ಬಱುಗೊಂದೆ** (ನಾ). ಕ್ಷುಲ್ಲಕವಾದ ಪಶು; ಹೀನಜಂತು : ಇನ್ನೆಬರಂ ತಮಗೆ ಜಗಂ ತೋಡಾಗದೆಂದು ಸೊರ್ಕಿನುರ್ಕಿಂ ಬಱುಗೊಂದೆ ಪಂದೆರಾಯರಂ ಕಾಡಿ ಬೇಡಿ ಕೂಡಿದ ಜಾಳಿಗೆವೊನ್ನಂ ಕೋಳುಗೊಂಬೆಂ (ರಾಜಶೇಖ. ೦೨೬-೨೮).　[ಬಱು (<ಬಱುದು) + ಗೊಂದೆ$_1$]

**ಬಱುಜಗಳ** (ನಾ). ವ್ಯರ್ಥವಾದ ಕಲಹ; ಒಣಗುದ್ದಾಟ: ಅಕಟಕಟ ಬಱುಜಗಳಗೋಪ ಜಾಣೆಂತಿವಳಾ (ಚಕಂ. ೬-೨೫೦).

[ಬಱು (< ಬಱುದು) + ಜಗಳ (< ಜಗಟು)]

**ಬಱುಜೋಗಿ** (ನಾ). ನಿಷ್ಪ್ರಯೋಜಕನಾದ ಜೋಗಿ : ಪೋ ಪೋಗಿರೆ ! ಬೂದಿಯ ಬಱುಜೋಗಿಯನುಱಿದತ್ತೆಂ (ರಾಜಶೇಖ. ೬೧ ೨೬).

[ಬಱು (< ಬಱುದು) + ಜೋಗಿ$_1$]

**ಬಱುದಲೆ**, ಬರಿದಲೆ, ಬರುದಲೆ, ಬಱಿದಲೆ (ನಾ). ೧. ಬೋಳುದಲೆಯುಳ್ಳವನು ; ಲೋಚುಮಾಡಿಕೊಂಡ ತಲೆಯುಳ್ಳವನು ಜೈನ ಸಂನ್ಯಾಸಿ : ಪೆಱರಂ ದೂಱುವರೊಳ್‌ ತೆಱನಱಿಯದೆ ನುಡಿವವರೊಳ್‌ . . . ಪುರುಡಿಗರೊಳ್‌ ಬಱುದಲೆಯೆಂದೆಳಸಿ ಕೇಳಲಾಗದು ಪುರುಷಂ (ಧರ್ಮಾಮೃ. ೬-೨೦೩). **ಬರಿದಲೆ: ೨.** ಏನನ್ನೂ ಧರಿಸದೆ ಇರುವ ತಲೆ; ಬೋಳುತಲೆ: ಹಿಂದೆ ಟೋಪಿ ಅಥವಾ ಮುಂಡಾಸಿಲ್ಲದ ಬರಿದಲೆಯಲ್ಲಿ ಯಾರೂ ಓಡಾಡುತ್ತಿರಲಿಲ್ಲ (ರೂಢಿ). **ಬರುದಲೆ: ೩.** ಕೂದಲು ಬೆಳೆಯದಿರುವ ಅಥವಾ ಮುಂಡನ ಮಾಡಿಸಿಕೊಂಡ ತಲೆ ; ಬೊಕ್ಕ ತಲೆ : ಆ ಬೋಳ ಚಾಮರಾಜನ ಬರುದಲೆಯನ್ನು (ಸುಗುಗಂ. ೬೨-೦೩). **ಬಱಿದಲೆ: ೨.** ತಂಕಲಲಿ ಬಱಿದಲೆಯುಲಿಹರು (ಸರ್ವಜ್ಞ. ೦೬೦೬).

[ಬಱು (< ಬಱುದು) + ತಲೆ$_1$]

**ಬಱುದೂಱು**, ಬಱಿದೂಱು (ನಾ). ಮಿಥ್ಯಾಪವಾದ : ಅಱುಹಿನವರು ಬಂದು ಕಾಱಿಯ ಕೊಂಡೊಯ್ದರೆ ಬಱುದೂಱೇತಕೋ (ಅಶಕಂ. ೩೦೦-೦೩೦೬). **ಬಱಿದೂಱು :** ಅರಱಿಯದಂತದಱೊಳಗೆ ಹೃದಯಾರವಿಂದದಿ ನೀನಿರಲು ಬಱಿದೂಱು ಜೀವನಿಗುಂಟೆ (ಹಂಸಾ. ೬೪).

[ಬಱು (<ಬಱುದು) + ದೂಱು]

**ಬಱುದೊಡಂಬೆ** (ನಾ). ಹೂವಿರದ ಬರಿಯ ತೊಟ್ಟು : ಮಾವಿನ ಪೊಸಗೊಂಚಲೊಳ್‌ ಬಱುದೊಡಂಬೆಗಳಿರ್ಪವೆ ಕಿಟ್ಟು ಸೂಸೆಯುಱು (ಅಜಿಪು. ೦೦-೪).　[ಬಱು (<ಬಱುದು) + ತೊಡಂಬೆ]

**ಬಱುದೊಱೆ**, ಬಱಿದೊಱೆ (ನಾ). ೧. ನೀರಿಲ್ಲದೆ ಬರಿದಾಗಿರುವ ತೊರೆ, —ಹೊಳೆ. ೨. (ಅಲಂ) ಮರೀಚಿಕೆ: ನೀನೆನ್ನ ಪರಿ ಬಱು[ಪಾಠಾಂ· ಱಿ]ದೊಱೆಯಲೋಲಾಡಿಸದೆ ನೀ ಹಸಿದಿರಿಸಿ ಹಾರುವನ (ನಿಜಾಗ. ೯-೩-೩೯). ೩. ವ್ಯರ್ಥವಾದುದು: ನಿಷ್ಪ್ರಯೋಜಕವಾದುದು: ಕಾಮೇಚ್ಛೆಯುಲಿ ವಡೆದ ಹೊಟ್ಟೆ ಬಱುದೊಱೆಯಾಯಿತೇ . . . ಹಾಯೆಂದೊಟ್ಟೈವೊಱಲಿ ದಳಬಲೆ (ತೊರವೆ. ೨-೩-೩೭). ೪. ನಾಶ; ಅಳಿವು : ಕುದುರೆ ಬಱುದೊಱೆಯಾಯ್ತು ಕರಿಯು ಹಿಂಡಡಗಿದುದು (ಜಮಿ. ೨೮-೩೦). **ಬಱಿದೊಱೆ** : ೧. ಅಱಿವು ತಲೆಕೆಳಗಾಯ್ತು ಧೈರ್ಯದ ನಿಱಿಗೆ ನಗೆಗೆಡೆಯಾಯ್ತು ಲಜ್ಜೆಯ ಹೊಱಿಗೆ ಬಱಿದೊಱೆಯಾಯ್ತು (ಕುವ್ಯಾಭಿ. ೨-೦೨). ೩. ನಿಮ್ಮಾ ತಾತ ಶಂಕರ ಕೊಟ್ಟ ನಿರುತದ ಮಾತು ಬಱಿದೊಱೆಯಾಗದು (ಸಂಕಶ. ೩೦-೩೭). [ಬಱು (<ಬಱಿದು) + ತೊಱೆ₂]

**ಬಱುದೊಱೆವೊಗು** (ಕ್ರಿ). ೧. ನೀರು ಬತ್ತಿದ ತೊರೆಗೆ ಇಳಿ. ೨. (ಅಲಂ) ಫಲ ದೊರಕದ ಕೆಲಸಮಾಡು ; ವ್ಯರ್ಥವಾದ ಶ್ರಮವನ್ನು ಹೊಂದು : ಮಾಯದ ಸಂಸಾರವ ನಚ್ಚಿ ವಾಯಕ್ಕೆ ಕೆಟ್ಟು ಬಱುದೊಱೆವೊಗಬೇಡ (ಬಸವ. ೬೨೪). [ಬಱುದೊಱೆ + ಪೊಗು]

**ಬಱುದೊಱೆವೋಗು**, ಬಱುದೊಱೆಹೋಗು (ಕ್ರಿ). (ನೀರು ಬತ್ತಿದ ಹೊಳೆಯಂತೆ) ವ್ಯರ್ಥವಾಗು : ನಿಷ್ಪ್ರಯೋಜಕವಾಗು : ಕರಣದಿಚ್ಛೆಗೆ ಹರಿದು ನರಕದಲ್ಲಿ ನೆರೆದು ಬಱುದೊಱೆವೋಗದೆ ಮಱೆಯದೆ ಪೂಜಿಸು (ದೇವಾವ. ೩೩-೩೪); ಬಱುದೊಱೆವೋದುದು ಕೆಱೆಗಂ ದೇಗುಲಕವಾಗದುಱಿದವರರ್ಥಂ (ಎಕ. v. ಬೇಲೂರು. ೧೧೩-೮೮; 1161); ಬಱುದೊಱೆವೋದುದೆನ್ನಯ ವಿವೇಕಂ (ಪ್ರಹಾ. ೩೦-೩೩). **ಬಱುದೊಱೆಹೋಗು** : ಮೋಹನ ಮೊಲೆ ಮುದ್ದುಮೊಗದ ಭಾವಕಿಯರ ಲಲ್ಲೆನುಡಿಯೆಂಬ ನಯಗತ್ತಿ ಎಲ್ಲರ ಹೃದಯವ ಕೊಱೆವುತ್ತಿದೆ ನೋಡಾ . . . ಬಲ್ಲತನ ಬಱುದೊಱೆಹೋಯಿತ್ತು (ಸಿದ್ಧೇವ. ೪೦-೧೦೭). [ಬಱುದೊಱೆ + ಪೋಗು₁ (<ಪೋ₁)]

**ಬಱುದೊಱೆಹೋಗು** 'ಬಱುದೊಱೆವೋಗು' ನೋ.

**ಬಱುನುಡಿ**, ಬಱಿನುಡಿ (ನಾ). ಬರಿಯ ಮಾತು ; ಒಣಮಾತು : ಒಡವುಟ್ಟಿದರೆಂಬೀ ಬಱುನುಡಿವಡೆವರ್ಪಱಿದಿರ್ಕೆ ಮಱುಮೆಯ್ಯೊಳದಾರೊಡವುಟ್ಟುವರ್ (ಶಾಂತೀಶ್ವ. ೧೩-೦೨೦); ನಂಬದೊಡೆ ಬಱುನುಡಿಯೊಳಾದ ಫಲವೇನು (ಅಹಿಂ. ೬-೯). **ಬಱಿನುಡಿ** : ದಿಟವೀರನೇ ಕೂರಲಗಿನಲಿ ಮಾತಾಡು ಬಱಿನುಡಿ ಭಂಡತನ (ಕುವ್ಯಾದ್ರೋ. ೦೯-೩). [ಬಱು (<ಬಱಿದು) + ನುಡಿ₂]

**ಬಱುನೆನಹು** (ನಾ). ಬರಿಯ ನೆನಪು : ಬಱುನೆನಹು ಸ್ವಪ್ನಂ (ಮಂಗರಾ. ೯೪-೩). [ಬಱು (< ಬಱಿದು) + ನೆನಹು (<ನೆನಪು)]

**ಬಱುನೋಟ** (ನಾ). ಬರಿಯ ದೃಷ್ಟಿ, —ನೋಟ : ಬಱುನೋಟವನೆ ಪಸರಿಸುವಾ ಮೋಹಮಿಂತೇಕಿವರೊಳೆನಗೆಂಬಾ ಹದನನಱಿವಡೆ (ಶಾಕ್ಕಭಾ. ೯-೩೦). [ಬಱು (< ಬಱಿದು) + ನೋಟ]

**ಬಱುಬ** 'ಬಱುವ' ನೋ.

**ಬಱುಬೆಸನಿಗ** (ನಾ). ಬರಿಯ ದುರಭ್ಯಾಸಗಳುಳ್ಳವನು; ದುಶ್ಚಟಗಳುಳ್ಳವನು : ಪಸಗೆಟ್ಟುರವಣಿಸುವ ಬಱುಬೆಸನಿಗನೊಳ್ಪಸೆಗೆ ಸಂದು (ಅಕಂ. ೬-೦೯೬). [ಬಱು (< ಬಱಿದು) + ಬೆಸನಿಗ]

**ಬಱುಮಂಡೆ** (ನಾ). ಏನನ್ನೂ ಧರಿಸದಿರುವ ತಲೆ; ಬೋಳುತಲೆ; ಬಱುಮಂಡೆ ಬಳಿದ ಬಾವನ್ನ ಸುಲಿದ ಪಲ್ಲು ಮಿಱುಪ ಸಬಳಕೈಕತಿಮೆಱೆಯೆ ಸಬಳಿಗೆರೆಯ್ತಂದರು (ಕುಣಾಸಾಂ. ೦೯-೨೦). [ಬಱು (<ಬಱಿದು) + ಮಂಡೆ]

**ಬಱುಮನ**, ಬರಿಮನ (ನಾ). ಭಕ್ತಿ, ಶ್ರದ್ಧೆ, ಪ್ರೀತಿಗಳಿಲ್ಲದ ಅಂತರಂಗ: ಅಮರ್ದುರ್ ಬಸವಣ್ಣನಂ ಬಂದಿವಿಡಿಯಲ್ಕೆಂದು ಬಱುಮನದ ಹೊಱವಿಭೂತಿಯನಲ್ಲಿ ಶೀವಿಟ್ಟು (ಬಸವ. ೯-೯೩). **ಬರಿಮನ**: ಬರಿಮನಸಲ್ಲದಣ್ಣಾ! ಬಲ್ಲವರೊಳೆಲ್ಲಗ್ಗವನೆ ಮನುಜನಣ್ಣಾ (ಕುಂಪು. ೩೭-೭). [ಬಱು (<ಬಱಿದು) + ಮನ]

**ಬಱುಮಾಟ** (ನಾ). ಶ್ರದ್ಧೆಯಿಲ್ಲದ ಕೆಲಸ ; ಮನಸ್ಸಿಲ್ಲದ ಕಾರ್ಯ : ಶ್ರೀ ಗುರುವಿನುಪದೇಶವಿಲ್ಲದೆ ಹೋಗಿ ದೇವಾರ್ಚನೆಯ ಮಾಡಿದೊಡೇಗುವುದು ಬಱುಮಾಟ ನಿಷ್ಫಲವೆಂದಳಾ ವಿಮಳೆ (ಪ್ರಭುಲೀ. ೭-೬). [ಬಱು (<ಬಱಿದು) + ಮಾಟ₁]

**ಬಱುಮಾತು** 'ಬಱುವಾತು' ನೋ.

**ಬಱುವ**, ಬಱುಬ (ನಾ). ೧. ಬರಿಯ ಕೈಯಲ್ಲಿರುವವನು; ನಿರಾಯುಧ; ಅಸಹಾಯಕ : ಬಱುವಂ ಸಾರಥಿಯಿಲ್ಲ ಮೆಯ್ಗೆ ಮಱೆಯುಂ ತಾನಿಲ್ಲದೆಂತೀಗಳಾನಿಱುವೆಂ (ಪಂಪಭಾ. ೦೨-೨೦೭); ಬಱುವನನಾಜಶ್ರಾಂತನಂ ಯಶೋಧನನಿಱಿಯಂ (ಶಾಂತಿಪು. ೯-೩೦). ೨. ದರಿದ್ರ ; ಬಡವ ; ನಿರ್ಗತಿಕ : ಕಿಱಿಯಂ ಮುತ್ತಂ ಧನದಂ ಬಱುವಂ [ಪಾಠಾಂ. ಱಿಯಂ]ತೊಱೆದಂ ಗೃಹಸ್ಥನೆನ್ನದೆ ಮುಂ ಬಿಟ್ಟಱಿಸಿ ಕೊಲುತಿರ್ಪ ಜವನೆಂಬಱಿಕೆಯ ಪಗೆವಂಗದೆಂತು ಪಂಗಿಗನಪ್ಪಂ (ಆದಿಪು. ೪-೭೭); ಅಱಿವಿಲ್ಲದೆ ಮತ್ತೆಲ್ಲಂ ನೆಱೆದಿರ್ದೊಡಮೇನೊ ಬಱುವನಾತಂ ದಿಟದಿಂ (ಶೀತಿಮಂ. ೨-೩೦೦) ; ಜರೆಯ ನರೆಯ ಮಡಲ್ತು ಸೆರೆದುಱುಗಲ ಸುಕರ್ಮದೊವಲ ಅಸಿದೊಡಲ ಬಱುವಂ ಜೋಗಿಯಂ ಮಾಲಿಸುತ್ತುಂ (ರಾಘಪಾಶ್ವ. ೩೬-೦೬). **ಬಱುಬ** : ೧. ಬಱುಬಂ ಪೊಯಿಲ್ವೆತ್ತಂತೇನುಮನಱಿಯದೆ . . . ನಡನಡಂಗಿ (ಪಂಪಭಾ. ೬-೭೦ ವ) ; ಬ[ಱುಬ]ನನೇಳಿದನಂ ಮೆಯ್ಯುಱಿಯದೊನಂ ಬೆರಲನಳಿಪಿ ಕರ್ಚಿದೊನಂ ಕಾಲ್ಗೆಱಗಿದನನಿಱಿಯಲಾಗದು (ಪಂಪರಾ. ೦೦-೦೯). ೨. ಅದು ಒಡೆಯರೊಡವೆಯಲ್ಲದೆ ಬಱುಬಂಗೆ ಅರಗದು [ಪಾಠಾಂ· ಬಱುಬರಿಗರಗದು] (ಕೋಲಶಾಂ. ೩೭); ಬಱುಬನು ನಿಧಿಗಂಡ ತೆಱನಂತೆ ಸಂತಸದೊಱೆಯೊಳಾಳುತಲೇಳುತಿರ್ದುರ್ (ಪರ್ವತ. ೦೦-೯೩). ೩. ತಿಳಿವಳಿಕೆಯಿಲ್ಲದವನು ; ಅಜ್ಞಾನಿ : ಬಱುಬರನುಱೆ ಬಲ್ಲರೆಂಬ . . . ನೆಱೆ ಜಾಣರು (ಕುಣಾಸಾಂ. ೩೩-೮೮) ; ಬಲ್ಲವನೀತ ಬಱುಬ[ಪಾಠಾಂ. ಡವ]ನೀತ ಚವಳೀಕನೆಲ್ಲಶಾಸ್ತ್ರಂಗಳಱಿವನು ಬಲ್ಲಿದನೀತ ಬಡವನೆಂದು ಪೂಜಿಪಗೆಲ್ಲಿಯ ಶೀಲ(ಅಮುಣಾ. ೯-೦೦೭). [ಬಱು (< ಬಱಿದು) + — ಅ₇]

**ಬಱುವಣ್ಣನೆ** (ನಾ). ಅರ್ಥವಿಲ್ಲದ ವರ್ಣನೆ ; ಬರಿಯ ವಿವರಣೆ : ಪುರುಳಿಲ್ಲದ . . . ಬಱುವಣ್ಣನೆಯ ಬೇಸಱೆಯು ಪಾಟ್ಟಿಗ್ಪಮಂ ಪೊಳ್ಳೆಂದೆ ನುಡಿದಂ (ರಾಘಪಾಶ್ವ. ೦೬೯-೪) [ಬಱು (< ಬಱಿದು) + ಬಣ್ಣನೆ]

**ಬಱುವನೆ** (ನಾ). ಹಾಳುಮನೆ ; ಗೃಹಿಣಿಯೊಳ್ ಸುಗುಣಮಿಲ್ಲದೊಡೆ ಗೃಹಮದು ಬಱುವನೆಯೆ (ಶೀತಿಮಂ. ೩-೨೨). [ಬಱು (<ಬಱಿದು) + ಮನೆ]

**ಬಱುವಾತು**, ಬರಿಮಾತು, ಬಱಿಮಾತು, ಬಱಿವಾತು, ಬಱುಮಾತು (ನಾ). ಕೆಲಸಕ್ಕೆ ಬಾರದ ಮಾತು; ವ್ಯರ್ಥವಾದ ಮಾತು: ಮಾತಱಿಯದ ಮಾತು ತಮ್ಮ ಬಱುವಾತುಗಳೊಳ್ ಪುದಿದು (ಪಂಪಭಾ. ೪-೯೩) ; ವಾಕ್ಕಿನೊಳಿಲ್ಲ ಮೇಣಾವ್ ಪರಿಚಯಂ ಬಗೆ ಮೊಕ್ಕಳಮಂತುಟಲ್ತೆ ಗಂಟಿಕ್ಕುಪರೆಂಜಲಾದ ಬ[ಪಾಠಾಂ. ಬ]ಱುವಾತುಗಳು (ಸೂಕ್ತಿಸು. ೦-೩೭). **ಬರಿಮಾತು** : ಬರಿಮಾತಿನಿಂದ ಏನು ಪ್ರಯೋಜನ ? (ರೂಢಿ). **ಬಱಿಮಾತು** : ಈ ಸವಿಾರಜನೀಗ ಹೃದಯನಿವಾಸಮಾರುತನಜ ಹರೀಶ್ವರರೋಸರದ ಬಱಿಮಾತದಲ್ಲಿದು ವೇದಮಂತವೆಂದ (ತೊರವೆ. ೪-೦೨-೦೩). **ಬಱಿವಾತು** : ಬಱಿವಾತನಿನಿಸು ಪೊಟ್ಟುಂ ಮೆಱೆವಿನೆಗಂ ಗಟಪಲೇಕೆ

(ಕಾವ್ಯಾ. ೦೬೯). **ಬಱುಮಾತು** : ಏನೆಂದಱಿಯರು ಎಂತೆಂದಱಿಯರು ಬಱುವಾತಿನ ಬೊಮ್ಮವನಾಡುತಿಪ್ಪರು (ಅಠಹಂ. ೦೦೬-೪೮೫).
[ಬಱು (< ಬಱಿದು) + ಮಾತು₁]

**ಬಱುವಾತುಂಗುಟ್ಟು, ಬಱುವಾತುಗುಟ್ಟು** (ಕ್ರಿ). ಕೆಲಸಕ್ಕೆ ಬಾರದ ಮಾತನ್ನಾಡು ; ವ್ಯರ್ಥವಾದ ಮಾತನ್ನಾಡು : ಸಂಗರಕೆ ಬಂದು ಬಱುವಾತುಂಗುಟ್ಟದಿರು (ಪೀಠಿಕಾ. ೦೦-೦೫). **ಬಱುವಾತುಗುಟ್ಟು** : ಬಱುವಾತುಗುಟ್ಟಿ ಪೋಪರೇ ಗಂಡರುಂ (ಶಬ್ದ. ೦೬೭ ಪ್ರಯೋ).
[ಬಱುವಾತು + ಕುಟ್ಟು₁]

**ಬಱುವಾತುಗುಟ್ಟು** 'ಬಱುವಾತುಂಗುಟ್ಟು' ನೋ.

**ಬಱುವಾನಿಸ** (ನಾ). ನಿಷ್ಪ್ರಯೋಜಕನಾದ ಮನುಷ್ಯ : ತಾಮಸರ್ ಲೋಕಕಂಟಕರಾಗೆ ರಕ್ಕಸರೆನಿಸಿ . . . ಬಡವು ಬಱುವಾನಿಸರಂ ಕೊಂದು ತಿಂದು ಬಿರ್ಕುಳಿಸಿ ಪೆರ್ಕುಳಿಸಿ ತಿರೆಗೆ ಪೊಱೆಯಾದರ್ (ರಾಮಾಶ್ವ. ೦೦೯-೨೫).
[ಬಱು (<ಬಱಿದು) + ಮಾನಿಸ₁ (< ಮಾನುಸ)]

**ಬಱುವಾಯ್, ಬಱಿವಾಯ್** (ನಾ). ೧. ಬರಿಯ ಬಾಯಿ ; ಖಾಲಿ ಬಾಯಿ. ೨. (ಆಲಂ) ವ್ಯರ್ಥವಾಗಿ ಗಳಹುವ ಬಾಯಿ ; ನಿಷ್ಪ್ರಯೋಜಕವಾದ ಮಾತನ್ನು ಆಡುವ ಬಾಯಿ : ಉಂಡೆ ದಲೆಯೋತಿಗಳು ಬಱುವಾಯ ಬಳ್ಳುಗಳು . . . ಅಗ್ಗದ ಚಂಗಿಗಳ ನಂಗಳು (ಸೋಮಶ. ೪-೪೦). **ಬಱಿವಾಯ್** : ೨. ಬಾಲೆಯರ ಮುಂದೆ ತಿರುಗುತ್ತಿಪ್ಪ ಬಱಿವಾಯ ಭಂಜಕರುಗಳು ತಾವು ಅಱಿವುಳ್ಳವರೆಂದು ಬೀಗಿ ಬೆಱೆಯುತ್ತಿಪ್ಪರು (ಮೋಕ್ಷಮಾ. ೦೮೪-೭೦೯).
[ಬಱು (< ಬಱಿದು) + ಬಾಯ್]

**ಬಱುವಾೞ್ಕೆ** (ನಾ). ನಿರರ್ಥಕವಾದ ಬದುಕು : ವ್ಯರ್ಥವಾದ ಜೀವನ : ಪುರುಳೇಂ ಬಱುವಾೞ್ಕೆಯ ಬರ್ದುಂಕಿನೊಳ್ (ರಾಮಾಶ್ವ. ೬೫-೦೦). [ಬಱು (<ಬಱಿದು) + ಬಾೞ್ಕೆ]

**ಬಱುವೆ** (ನಾ). ನೆರವಿಲ್ಲದವಳು ; ಅಸಹಾಯಕಳು : ಅನೊರ್ವಳೆ ಬಡವೆ ಬಱುವೆಯಾದೆಂ (ರಾಮಾಶ್ವ. ೪೦-೫). [ಬಱುವ + — ಎ₂]

**ಬಱುಸೂಱ್, ಬಱಿಸೂಱ್** (ನಾ). ವ್ಯರ್ಥವಾದ ಸೂರೆ,—ಲೂಟಿ : 'ಬಱುಸೂಱ್ವೋಗು' ಪರಾ. **ಬಱಿಸೂಱ್** : 'ಬಱಿಸೂಱ್ಗೈ' ಪರಾ. [ಬಱು (< ಬಱಿದು) + ಸೂಱ್]

**ಬಱುಸೂಱ್ವೋಗು** (ಕ್ರಿ). ವ್ಯರ್ಥವಾಗಿ ಸೂರೆಹೋಗು ; ಹಾಳಾಗು : ಮೂಜಗಲೋಕವೆಲ್ಲ ಬಱುಸೂಱ್ವೋಯಿತ್ತು (ಅಠಹಂ. ೦೦೯-೪೯೬).
[ಬಱುಸೂಱ್ + ಪೋಗು₁ (<ಪೋ₁)]

**ಬಱ್₁** (ಕ್ರಿ). ಬಱ್ತ (ಭೂತಕೃ). ೧. ಒಣಗು ; ಆರು ; ಬತ್ತು : ನಚ್ಚಿನ ಮುಗ್ಧಾಲಾಪವಿಂಪು ಬಱಿದು ಬಱ್ತುದೆಂಬನ್ನೆಗಂ ಬತ್ತಿರಲ್ಪಾಯ್ (ಕಾದಂಬ. ೫೨೩); ಬಾಡಿದ ಮೊಗಂ ಬಱ್ತ ಬಾಯ್ . . . ಮಾಸಿದ ಮುದಂ ಕೂಡೆ . . . ಪುರಜನಂಗಳಂ ನೋಡಿ ತೋಱಿಸಿ ಬೇಱ್ವೇಱೊಪ್ಪುಗೊಡುತಿರ್ದನಾ ಧೈರ್ಯನಿಧಿ ಭೂಪನು (ಹಕಕಾ. ೯-೦) ; ಕೆಱ್ ತೊಱೆಗಳೊಱತೆ ಬಱ್ತುವು (ಕೈಶಭಾ. ೦೫-೨). ೨. ಒರಟಾಗು : ಬಿರುಸಾಗು ; ಕಠಿಣವಾಗು : ಇನ್ನೆಗಂ ನೆಲಸಿ ನೀರ್ ಸೆಱ್ಗೊಂಡ ಪೊಲಿರ್ದುದರ್ಕೆ ಪೈ ಬಱ್ತವೊಲಾಗಿ (ಚಂದ್ರಪ್ರ. ೪-೦೫). ೩. (ಜ್ವರ, ಬಿಸಿಲು, ಕಾವು ಮೊದಲಾದುವುಗಳಿಂದ) ಬಾಡು; ಕುಗ್ಗು ; ಸೊರಗು: ಸುರಿತಂದಶ್ರುಪ್ರವಾಹಂ ಬಱುತೊಣಗಿದ ಬಾಸುಱಿಗ್ಮಾಗಂ . . . ವ್ಯಸ್ತ್ರಾಳ ಕಂಗಳ್ವಿರಸಲರ್ವಸೆಯೊಳ್ ಕಾಂತೆಯಿಂತಿರ್ದಳಾಗಳ್ (ಶಬ್ದಮ. ೦೩-೭೯).
[ದೇ.॥ ತಮಿ. ವಱು, ವಱ್ಱು : ಮಲ. ವಱ್ಱು, ವಱ್ಱು; ತೆಲು. ವರುಟು; ಕೋತ. ವರ್ವ]

**ಬಟಿಂಜು** 'ಬಣಜು' ನೋ.

**ಬೞಕೆ**, ಬಳಕೆ (ನಾ). ೧. ಉಪಯೋಗಿಸುವಿಕೆ ; ಬಳಸುವಿಕೆ : ಏಕವಚನವೊರ್ವನ ಬೞಕೆಗೆ ಬಹುವಚನವೆಲ್ಲರಂ ಪೇೞ್ವೆಡೆಯೊಳ್ (ಶಬ್ದ. ೨೨೪). ೨. ವಿಶೇಷವಾದ ಪರಿಚಯ,-ಗುರುತು ; ನಿಕಟವಾದ ಸಲುಗೆ : ತನ್ನಳವಂ ಕಲಿತನವುಂ ನಂಬಿ ಬಲಂ ತಳರದೆ ಸಾಧಿಸುವೆನೆಂಬ ಬೞಕೆಯನಾತಂ . . . ರಾತ್ರಿಯೊಳ್ ಗಂಧವತಿಯ ತಡಿ ವಿಡಿದು ಬಂದು (ರಣಾರಿಷ್ಟು. ೦೩-೦೯). **ಬಳಕೆ** : ೧. ನಿಶ್ಚಲದ ನೋಟದ ಲಿಂಗಭಾವದ ಬಳಕೆಯನೆ ಬಲಿದಿರುತಲಿರ್ದನು ನಿಜನಿವಾಸದಲಿ (ಪ್ರಭುಲೀ. ೦೦-೩೭); ಕಲಿತನವೆ ಹೃದಯದಲಿ ಕಾರ್ಯದ ಬಳಕೆ ಕೈಯಲಿ ನಡುವೆ ನಾಲಗೆಯುಲಿದಡೇನಗ್ಗಳಿಕೆಯಹುದೋ (ಕುಮಾರ. ೦೦-೪೩). ೨. ಸುಳಿದಳೂರ್ವಶಿ ಸುರಪತಿಶ್ವದ ಬಳಕೆಯವರಿಗಸಾಧ್ಯವೆಂಬುಜ್ವಲತೆಯಲಿ (ಕೂರಠಾ. ೦-೫-೦೩); ಸಕಲಸೀಮೆಯ ಬಳಕೆಗೆಳೆದಳು ಸಕಲಕುಶಲವನೊರೆದಳು (ಹೊಂಗಳು. ೩-೦೦). ೩. ರೂಢಿ ; ಅಭ್ಯಾಸ : ಮುಂದಕೆ ಪೋಪುದು ತನುವಿದು ಹಿಂದೆಸೆಗೋಡುವುದು ಬಳಕೆಗೈದದ ಮನವೇನೆಂದಪೆನೊ (ಶಾಕುಂತ. ೦೬-೩೪). ೪. ರೀತಿ; ಕ್ರಮ : ಮುನಿಹಿತ ಜಲಜಭವರಂತಲ್ಲ ಪಾರ್ಥನ ಬಳಕೆ (ಕೋಗಮ. ೦೦-೫೭).
[ದೇ.॥ ತಮಿ. ವೞಕ್ಕಮ್, ವೞಕ್ಕು ; ತುಳು. ಬಳಕೆ, ಬೞಕೆ ; ತೆಲು. ವಡುಗು]

**ಬೞಿಪ** 'ಪೞಿಹ' ನೋ.

**ಬೞಲ್**, ಬಳಲ್, ಬಳಲು, ಬೞಲು₁ (ಕ್ರಿ). ೧. ಬಾಡು ; ಒಣಗು : ಅರಸಿಯರ ತೊಟ್ಟ ಪೂದುಡಿಗೆಗಳೆಲ್ಲಂ ಬೞಲ್ದು ಕೞಲ್ದು (ಶಾಂತಿಪು. ೬-೩೧ ವ) ; ಪುಷ್ಪವೊಂದು ಬೞಲಲ್ ಭೃಂಗಕ್ಕೆ ಪೂವಿಲ್ಲವೇ (ಸೋಮೇಶ. ೨೬). ೨. ದಣಿ ; ಆಯಾಸಗೊಳ್ಳು : "ಬೞಲ್—ಶ್ರಾಂತೌ" (ಶಬ್ದಮ) ; ಅರಿಭೂಪಾನೀಕಭಯಂಕರನುಂ ಗಡಮೇಕೆಂದಱಿಯೆಂ ಬೞಲ್ದು ಜೋಲ್ದಂ ಧರೆಯೊಳ್ (ಶಂಕಭಾ. ೬-೪೦) ; ಮಱುವಾತುಗುಡದೆ ರವಿಸುತ ಮಱವಿಂದಿರ್ದಪೆಯೊ ಮೋಣ್ಬೞಲ್ದಿರ್ದಪೆಯೋ (ಗದಾಯು. ೫-೦೫) ; ರುಧಿರಮುಂ ನೆಱ್ ಕಾಱ್ ಬೞಲ್ದು ಬಿಟ್ಟಂ (ದಕಳು. ೪-೦೦೪). ೩. ಜೋಲು ; ನೇತಾಡು : ನನೆಯನೆ ಪೇೞ್ ಕೆಂದಳಿರೊಳೆಯ್ದೆ ಬೞಲ್ದಿಳಮಾವು ಬಂದ ಮಾವನೆ ಮಱಗೊಂಡು ಬಗ್ಗಿಸುವ ಕೋಗಿಲೆ (ಅದಿಪು. ೦-೬೫) ; ಮುಗುಳಂ ಪೇೞ್ ಬೞಲ್ವ ಗೊಂಚಲೆಡೆಯೊಳ್ ಪುಷ್ಪಾಸ್ತ್ರಪತ್ರಂಗಳಂ ತೆಗೆದು (ಅನಂತಪು. ೭-೦೦). ೪. ಜಾರು ; ಸರಿ : ಬೞಲೆ ಪಗಲಿಂ ಚಂಚದ್ಗಲ್ಯಾಂಚಲಂ ಪಗಲಿಂಗೆ ಬಂದೆಬೞಲೆ ಜಡೆಗಳ್ . . . ಪರಿಪಟ್ಟೋರಂತೆ ಆಕಾಶಮಾರ್ಗದೆ ಬಂದ ಪಾಡಳ್ತಿದ ಸಖನಂ ಮುಂದಾಂ ಕಂಡೆಂ (ಕಾದಂಬ. ೭೦೩). ೫. (?) ; ಕಡಿದ ಶರನಿಕರದುಡಿ ನಭದೆಡೆವರೆಗಂ ಬೞಲೆ (ವೀರಾಪು. ೦೩-೦೬೪). **ಬಳಲ್** : ೨. ಖೇಚರರ್ ಬಿಸಿಲ್ಗಂಜುತ್ತುಂ ಭರದೊಳ್ ಬಳಲ್ದು ಬಂದಾ ಗಿರಿಶಿಖರದ ಮರದ ತುದಿಯ ನೆಳಲಂ ಸಾರ್ವರ್ (ಗಿರಿಕ. ೦-೫೫) ; ಮಳಲೊಟ್ಟಲನೇಱ್ ಬಾಱುಗುಪ್ಪೆಯನಾಡಿ ಬಳಲ್ದ ಮಯವ ಬೆಮರಾಂತು (ಮೋಹತ. ೪-೫೬) ; ಚರಿಸಿ ನೆಱ್ ಬಳಲ್ದ ಪಥಿಕರಕ್ಷಿಗಳಿಗೆ ಕಲಶಕುಚದ ಲಾವಣ್ಯಾಂಬುವೆಱೆಯುತೆ (ಶಂಸಪ. ೭-೬೦) ; ಬರಿದೆ ಬಲು ಬಳಲ್ದೆ (ಬಸವಗೀ. ೭೯-೭). **ಬಳಲು** : ೨. ಸೆಳಲನುಡಿಸುವೆನೆಂದು ಬಳಲುವನಂತೆ (ಅದಿಪು. ೨-೭) ; ಸತ್ಯವಱಿಯದತ್ತಲಿತ್ತ ಸುತ್ತಿ ಬಳಲುತಿರ್ದೆನಯ್ಯ (ಹಂಪೆರ. ಹ. ೫೦೦-೦೦) ; ಭಟರು ಬಳಲಿದರಿಂಪು ರಣವುತ್ಕಟವು (ಕುಮಾರದ್ರೋ. ೦೫-೪೩). **ಬೞಲು₁** : ೨. ಗಾಯಂಬಡೆದೆನಸು ಬೞಲುತಿರ್ದಂ ಪಡುನೇಸಱ ಕೆಱದೆ ರಾಜಹಂಸ ನರೇಂದ್ರಂ (ದಕಳು. ೨-೩೭).
[ದೇ.॥ ತಮಿ. ಮಲ. ವಯಂಕು ; ತೆಲು. ಬಡಲು]

**ಬೞಲಿಕೆ** 'ಬೞಲ್ಕೆ' ನೋ.

**ಬಟಲಿಸು,** ಬಳಲಿಸು (ಕ್ರಿ). ಆಯಾಸಪಡಿಸು ; ದಣಿಸು ; ಶ್ರಮಪಡಿಸು : ಎಮ್ಮಂ ನಿಮ್ಮಡಿ ಕೆಮ್ಮನೆ ಬಟಲಿಸಲ್ವೇಡ (ಶಂಶಾ. ೯-೯೪ ವ); ಬಿಸಿಲ್ ಬಟ್ಟೆಗನಂ ಬಟಲಿಸಿತ್ತು (ಶಬ್ದಾನು. ೩೩೬ ವ್ಯಾಖ್ಯಾ). **ಬಳಲಿಸು :** ಬಾರದೆ ತೋಟುತ್ತಳಲಿಸುವನೆ ಜಯ ಸಾರದೆ ಸಾರುತ ಬಳಲಿಸುವನೆ ಜಯ (ಜಯುಕ. ೯-೨೦) ; ಮಾತಾಪಿತರನು ಬಳಲಿಸುವ ಮಗ ಯಾತ್ರೆಯ ಮಾಡಿದರೇನು ಫಲ (ಪುರಂದ. ೦-೬೦-೩) ; ತಂಗಿಯ ಬಳಲಿಸಿದ ಬಲುವೀರನೆನುತುರಿಗೊಳುವ ಕಡುಗೋಪದಲಿ ಕಿಡಿಕಿಡಿಯೋದನಸುರೇಂದ್ರ (ಕೊರದಾ. ೩-೬-೦೯). [ಬಟಲ್ + —ಇಸು$_2$]

**ಬಟಲು$_1$** 'ಬಟಲ್' ನೋ.

**ಬಟಲು$_2$** (ನಾ). ೧. ಸಡಿಲವಾದುದು ; ಬಿಗಿಯಿಲ್ಲದುದು : "ಜಂಗಳ ಬಟಲು ಸೋರ್ಕಡಿಲ್ಲುದಕ್ಕುಂ" (ಶಬ್ದಮಂ. ೫೦). ೨. ದಣಿವು ; ಆಯಾಸ : "ಸೇದೆಯೊಳು ಜೋಲ್ದುದಟ್ಟೊಳಂ ಬಟಲು" (ಶಬ್ದಮಂ. ೦೬೬). [< ಬಟಲ್]

**ಬಟಲ್ಕೆ,** ಬಳಲಿಕೆ, ಬಳಲ್ಕೆ, ಬಟಲಿಕೆ (ನಾ). ೧. ಆಯಾಸ ; ದಣಿವು : "ಬಟಲ್ಕೆಯೊಳ್ ಸೇದೆಯಕ್ಕುಂ" (ಕವಿಕಂ. ೦೬೭) ; ಆ ನಿರ್ದಾಣಮಂ ನೋಡಿ ಮೆಲ್ಲನೆ ಸಾರ್ದಲ್ಲಿ ಬಟಲ್ಕೆಯಂ ಕಳೆದು ಪೋಪೆಂ (ಕಾದಂಪೂ. ೬೧೯) ; ಬಟ್ಟೆಯ ಬಟಲ್ಕೆಯಂ ಕಳೆದು (ಧರ್ಮಾಮೃ. ೦೨-೦೬೫) ; ತನುವಿಂ ಬಟಲ್ಕೆ ಪೋಪಿಂಗೆ (ಕುಸುಮಾ. ೦೦-೯). **ಬಳಲಿಕೆ :** ೧. ಕಂಡುದ ಹಿಡಿಯಲೊಲ್ಲದೆ ಕಾಣದುದನಟಸಿ ಹಿಡಿದಹನೆಂದರೆ ಸಿಕ್ಕದೆಂಬ ಬಳಲಿಕೆಯ ನೋಡಾ (ಅಕ್ಕವ. ೦೪-೫) ; ಸುರಪಥದಲಿ ತಿರುಗಿದ ಬಳಲಿಕೆಯನು ಭರದಿಂ ನೀರೊಳು ಮುಳುಗಿ ಪರಿಹರಿಸುವೆನು (ಕೀಚಕಸಾಂ. ೪-೬೦). **ಬಳಲ್ಕೆ :** ೧. "ಆಯಾಸಕೆ ಬಳಲ್ಕೆಯೆನಿಕುಂ" (ಕರ್ಣ. ೦೨೬) ; ತೊಳಲ್ಕೆಯುಂ ಬಳಲ್ಕೆಯುಂ ಕಾಳಿಗ ದೂಳಿಗಮುಂ ಕನಸಿನೊಳಮಿಲ್ಲೆನಿಸಿ (ಎಕ. XI, ಪೊಳಕಾ. ೨೦-೯೨ ; 1278 ?). ೨. (ಆಲಂ) ಬಾಯಾರಿಕೆ ; ದಾಹ : ನಡೆ ನುಡಿ ಬಳಲ್ಕೆ ಮುನ್ನಂ ಸುಟಟಲ್ಕೆಯ ರೂಪುಗುಂಡ ಬಳಿಕಂ ನಡೆಯರ್ ನುಡಿಯರ್ ನೀರಂ ಕುಡಿಯರ್ (ಗಂಕ. ೨-೨೫). **ಬಟಲಿಕೆ :** ೧. "ದವಥುಃ, ಪರಿತಾಪಃ—ತಿ ಬಟಲಿಕೆ" (ಕರಾಯು. ೯೬-೯೯೭). [ಬಟಲ್+—ಕೆ./ ತಮಿ. ವಟಲಿಕ್ಕೈ ; ತುಳು. ಬಳಲಿಕೆ ; ತೆಲು. ಬಡಲಿಕೆ]

**ಬಟಲ್ಕೆಗಳೆ,** ಬಳಲ್ಕೆಗಳೆ (ಕ್ರಿ). ದಣಿವಾರಿಸು ; ಆಯಾಸವನ್ನು ಪರಿಹರಿಸು : ಪೀಲಿ ಬಿಜ್ಜಣಿಗೆಯನೊಯ್ಯನೆ ಬೀಸುತ್ತಿರೆ ನೃಪನಂದನನಿನಿಸಿನಿಸಂ ಬಟಲ್ಕೆಗಳೆಯುತ್ತಿರ್ದಂ (ಕಾದಂಬ. ೪೫೫). **ಬಳಲ್ಕೆಗಳೆ:** ಶ್ರೀಪುರವನಿಪ್ಪುದ ಸೇರಿದೊಂದುಂಗಡಿಯೊಳಗೆ ವ್ಯಯ್ಯಾರೆ ತನ್ನ ಬಳಲ್ಕೆಗಳೆಯುಲಿಕ್ಕಿರ್ದಂ [ಲ್ಕಿರ್ದಂ] (ಸುಕ್ಕಶಾ. ೦೬-೬೬). [ಬಟಲ್ಕೆ + ಕಳೆ$_1$]

**ಬಟಲ್ಕೆವೋಗು** (ಕ್ರಿ). ಆಯಾಸಗೊಳ್ಳು ; ದಣಿವುಹೊಂದು : ದಿವ್ಯಾಹಾರವಮಂ ಕೈಯೊಳಿಕ್ಕುವುದುಮಾಕಂಠಂ ಉಂಡು ಬಟಲ್ಕೆವೋಗಿರ್ಪುದುಂ (ಧರ್ಮಾಮೃ. ೦-೦೫೦). [ಬಟಲ್ಕೆ+ಪೋಗು$_1$ ( <ಪೋ$_1$ ) ]

**ಬಟಲ್ಚು** (ಕ್ರಿ). ೧. ಬಳಲಿಸು ; ಆಯಾಸಗೊಳಿಸು ; ದಣಿಸು. ೨. ಕೆಳಕ್ಕೆ ಬೀಳಿಸು : "ಬಟಲ್ಚು—ಅಧಃಸ್ರಂಸನೇ (ಕೆಳಕ್ಕೆ ಬೀಳು, ಬೀಳಿಸು), ನಿಶ್ಚೇಷ್ಟಾಯಾಂ (ಅಲುಗೆ ಮಾಡು)" (ಶಮರು). [ಬಟಲ್ +—ಚು$_1$ ]

**ಬಟಲ್ಮುಡಿ,** ಬಳಲುಮುಡಿ, ಬಳಲ್ಮುಡಿ (ನಾ). ಸಡಿಲವಾಗಿ ಜೋತಾಡುವ ಮುಡಿ ; ಇಳಿಬಿದ್ದಿರುವ ಕೂದಲು ; ಜೋಲು ದುರುಬು : ಆಕೆಯ ಮುದ್ದುಮೆರಸಿದ ತೊದಳ್ನುಡಿಗಂ ಪೂಮಾಲೆ ವೆರಸಿದ ಬಟಲ್ಮುಡಿಗಂ... ಒಲ್ದುಮೊಲಿಲ್ದು ಮಿರೆಯಿರೆ (ಶಂಶಾ. ೫-೦೭ ವ); ಕುಸುಮಮಾವಳಿಯಂ ತಳೆಯದ ನಿನ್ನ ಬಟಲ್ಮುಡಿ ಬಳಯಿಸಿದವುದೆನ್ನ ಮನಕೆ ಪೇದಮನೀಗಳ್ (ಕಾದಂಪೂ. ೩೩೮); ಬಟಲ್ಮುಡಿ ಜೋಲ್ದು . . . ಮಿಳಿರ್ದರ್ ನರ್ತಿಸೆ (ಸುಕುಮಾ. ೦೦-೦೧). **ಬಳಲುಮುಡಿ :** ಬಳಲುಮುಡಿ ಬಟ್ಟಮೊಲೆಗಳ್ ಬೆದರುಗಣ್ಗಳ . . . ಕಾವಿನಿ (ಪಂಕಾರಾ. ೫-೬-೩೯) ; ಬಳಲುಮುಡಿ ಬಲ್ಮುಡಿಯು ಸೋರ್ಮುಡಿಯು (ನವಮೋ. ೨೪-೦೪). **ಬಳಲ್ಮುಡಿ:** ಕುಡಿತೆಗಣ್ ಬಳಲ ಕಲ್ಪುವೆ ಕವಲ್ಪುವು ಬಳಲ್ಮುಡಿಯನವಿಲ್ ( ಶಬ್ದಶಾ. ೯-೨೯ ) ; ಸೂಸೆ ಬಳಲ್ಮುಡಿ ಪುಷ್ಪವೃಂದವಂ (ರಾಜಶೇ. ೭-೦೭). [ಬಟಲ್ + ಮುಡಿ$_2$ ]

**ಬಟಲ್ವಂದರ್** (ನಾ). ತೂಗುವ ಬಳ್ಳಿಗಳಿಂದಾದ ಚಪ್ಪರ : ಮಡಲಿಟಿದ ಬಟಲ್ವಂದರ್ ಪೊದೆಯೆ ಕಾಂಚನಲತೆಯಂ ತುಱುಗಿ ಜಂಬೂವೃಕ್ಷದಿನೆಸೆವ ಪೊಂಬೆಟ್ಟದಟ್ಟದ ದಟ್ಟದಟ್ಟಲಂ ಗೆಲೆವಂದಂ(ರಾಜಾಶ್ವ. ೬೫-೨೦). [ಬಟಲ್ + ಪಂದರ್]

**ಬಟಸು$_1$,** ಬಳಸು$_2$ (ಕ್ರಿ). ೧. ಉಪಯೋಗ ಮಾಡು; ಉಪಯೋಗಿಸು : ಬಟಸಿದ ಪಾತ್ರೆಯಂ ಬರುತೆ ಕೆಪ್ಪಿನ ಕಾಲೊಳೆ ನೂಂಕಿ (ಸವಾಶ. ೦೦-೬೦). ೨. ಭೋಗಿಸು ; ಅನುಭವಿಸು : ಕೂಡದನ್ನೆಗಂ ಕೂಡದಂ ತಿರಲಕ್ಕುಂ ಬಸಮಾಗದನ್ನೆಗಂ ಬಟಸಲಕ್ಕುಂ (ಸುಕುಮಾ. ೭-೦೩). **ಬಳಸು$_2$:** ೧. ಗುರುಲಿಂಗಜಂಗಮದಲ್ಲಿ ಸಟೆಯ ಬಳಸಿದೊಡೆ ಆತನು ತ್ರಿವಿಧಕ್ಕೆ ದ್ರೋಹಿ (ಮಹಾದೇ. ಶ. ೩೬-೦೪೦) ; ಸುಣ್ಣದ ಕೊಡತೆಗೆ ಬೆಳ್ದಿಂಗಳಂ ಬಳಸುವಂತೆ (ಅದಃ. ೯೩೫-೦೨) ; ನಯ ಪ್ರಪಂಚವ ಬಳಸಿದೆನು ಕೆಲಕೆಲವನಿನ್ನುೞಿ ಬಳಸುವೆನು (ಕುಮಾ.ಸ. ೦-೩೯). ೨. ನಿಮ್ಮ ಶರಣರು ಉಂಡು ಉಪವಾಸಿಗಳು ಬಳಸಿ ಬ್ರಹ್ಮಚಾರಿಗಳು (ಅದಃ. ೯೭-೦೩೩); ತನ್ನಾಯತನ್ನ ಭೂತಳವ ತಂದು ನಿರಾಯಸದಲೆ ಬಳಸುತ್ತಿರ್ದನು (ಕುಮಾ.ಅ. ೦೪-೩೯) ; ನಳ ಹರಿಶ್ಚಂದ್ರಾದಿ ರಾಘವನ್ನವರು ಹಳುವದಲಿ ಲಲನೆಯರ ತಾವಗಲಿ ಕಷ್ಟವ ಬಳಸಿದಂತೆ (ಪಳಕ. ೦-೦೫). [ದೇ. ॥ ತುಳು. ಬಳಸು]

**ಬಟಸು$_2$,** ಬಳಸು$_4$(ನಾ) . ೧. ಭೋಗ ; ಉಪಭೋಗ: ಪೆಂಡಿರ ವಶಮಾಗಿ ಮಹೀಮಂಡಲದೊಳ್ ಪಲರುಮೆಯ್ದಿದರ್ ದುರ್ಗತಿಯಂ ಪಂಡಿತರಪ್ಪವರದಱಿಂ ಪೆಂಡಿರ ಬಟಸಿಂಗೆ ಬೇಗಮೆಳಸುವರಲ್ಲಂ (ಧರ್ಮಾಮೃ. ೦೦-೨೪). **ಬಳಸು$_4$:** ೨. ಉಪಯೋಗ ; ಬಳಕೆ : ಮಹಾವಿಕ್ರಮನ ಚಳಕವನೇನ ಹೇಳುವೆ ರಥದ ಬಳಸಿನಲಿ (ಕುಮಾ.ದ್ರೋ. ೦೬-೯೩). [<ಬಟಸು$_1$]

**ಬಟಸುವಿಡು** (ಕ್ರಿ) . ಸುತ್ತುವರಿ ; ಆವರಿಸು : ಆ ಎರವ್ಮನುಂ ಅಯ್ವದಿಪ್ಪರುಂ ನಕರಮುಂ ಸೇನೆಯುಂ ಬಟಸುವಿಟ್ಟು ಗೆಲ್ದಲ್ಲಿ (ಎಕ. VI. ಕಡೂರು. ೦೯೫-೬ ; ಸು. 750). [℘ ಇದು 'ಬಳಸುವಿಡು' ಎಂಬುದರ ಅಪಲಿಖಿತ]

**ಬಟ್$_1$,** ಬಡಿ$_2$, ಬಳಿ$_1$ (ಕ್ರಿ). ೧. ಗುಡಿಸು ; ಉಡುಗು ; ಸ್ವಚ್ಛಮಾಡು : "ಬಟ್—ಸಮ್ಮಾರ್ಜನೆ, ಮಾರ್ಗ, ವಂಶೇಷು, ಆಹ್ವಾನಪುರುಷೇ ಚ" (ಶಮರು). ೨. ತೊಡೆ ; ಒರೆಸು : ನಿಟಿಲಾಗ್ರಘರ್ಮಜಲಮಂ ಬೆರಲಿಂ ಬಟಿಯುತ್ತುಂ (ಕುಸುಮಾ. ೦೦-೯). ೩. ಗೋರು ; ಬಾಚು; ದೋಚು : ಬಿದಿರ ಸೀಳಿಕೆಯಲ್ಲಿ ಕಾಲ ಕೆಸಱಿಲ್ಲಮಂ ಬಟಿದು ಕಳೆದು (ಪುಣ್ಯಾಸ್ರ. ೩-೦೬ ವ). ೪. ಲೇಪಿಸು ; ಹಚ್ಚು ; ಸವರು : "ಕರವಲ್ಲಿ ಲೇಪನಂ ಗೆಯ್ವಲ್ಲಿ . . . ಬಟಿಯೆನಿಸುಗುಂ" (ಶಂಶಬ. ೦೬). ೫. ಅಲಂಕರಿಸು; ಶೃಂಗರಿಸು : ತನ್ನ ತಂದನರ್ಘ್ಯರತ್ನದಿಂ ವಿವಿಧಮಣಿಕಿರಣಚಟುದಿಂದವನಿಪನಂ ಬಟಿದು ಕೊಟ್ಟನರ್ಥಿಜನಕ್ಕಾ ದಿವಿಜೇಂದ್ರಂ (ಶಾಂತಿಪು. ೦೦-೦೦). ೬. ನಿವಾಳಿಸು ; ಸುತ್ತಿಸು : ಇನಮಾರದಂದು ಬಸುರಿಯ ಕೊನೆಯಂ ಕೊಂಡೆಡದೆ ಬಟಿದು(ಳಸಿ) [ಶಾಕಾಂ. ಡಿರದೆ ಬಳಸಿ ?] ಕೆಸಱೊಳದಂ ಪೂಟ್ದನಿತಱೊಳ್ (ಲೋಕೋಪ. ೯-೦೩೦). ℘ ಈ ಪ್ರಯೋಗಕ್ಕೆ ಇರುವ ಅರ್ಥಕ್ಕೆ ದುಂಡುಕಂಸದಲ್ಲಿ ಕೊಟ್ಟಿರುವ ಕುಳಸಹಿತವಾದ ಶಬ್ದರೂಪವೇ ಸರಿಯಿರಬಹುದು. **ಬಡಿ$_2$ :** ೪. ಹಣೆಗೆ ಮಟ್ಟಿಯ ಬಡಿದು ದರ್ಭೆಯ ಹಣಿದು (ಕುಮಾ.ವಿ. ೭-೦೨) ; ಪಗಲೊಳೆಸೆವ ಸುದೀಪ ಕಾಂತಿಯೊ ಹೊಗೆ ಬಡಿದ [ಶಾಕಾಂ. ಹೊಗೆಯೊಳೆಸಗಿದ] ಚಿತ್ರದ

ಬೊಂಬೆಯೊ ಎಂಬ ತೆಱದಿಂದ (ವಳಕ. ೬–೨೪) ; ಬೇಡುವಾತನ ಮೋಱೆ ಕಾಡಿಗೆಯು ಬಡಿದಿಕ್ಕು ಬೇಡಲೀಯದನ ಮೋಱೆ ಉರಿಕೆಂಡವನು ನೋಡಿ ದಂತಕ್ಕು (ಸರ್ವಜ್ಞ. ೬೦೩). ಬಳಿ₁ : ೧. ಜವಾನನು ಕೋಣೆಯ ಕಸ ಬಳಿಯುತ್ತಿದ್ದಾನೆ (ರೂಢಿ). ೨. ಮೋಱೆಯಲಿಳಿವ ಬೆವರನು ಬೆರಳ ಕೊನೆಯಲಿ ಬಳಿದು (ಕುಮಾ.ದ್ರೋ. ೦೩–೫೦); ಮಹೋಗ್ರಚಾಪದ ಗುಣವ ಸಡಿಲಿಸಿ . . . ರಕ್ಕಸರಣಭಯಂ ಕರನೈದಿದನು ಬಸಿವ ಮೈವಸೆಗಳನು ಬಳಿದಿಕ್ಕಿ (ತೊರರಾ. ೩–೬–೫೭). ೩. ಹೇರೊಡಲಿನ ಗರುಡನ ಪಕ್ಷಪುಳಿಯಸಮೀರಣನುಬ್ಬಟೆಯಿಂದೆ ವಾರಾಶಿ ಬಳಿದುವು ನೆಗಳಾನೆಗಳು ಕೂಡಿ ನೀರ ಚೆಲ್ಲಿದರೆಂಬ ತೆಱದಿ (ಜೋಹಕ. ೩೭–೫೦); ಏನಾದರೂ ಇದ್ದರೆ ಬಳಿದುಕೊಂಡು ಹೋಗಲು ಬಂದಿದ್ದರು (ಗಂಗಾಸಾ. ೪೦). ೪. ಕಾಡಿಗೆಯೊಳಗೆ ಕಾರಿರುಳ ತಿರುಳ ರಸವಂ ಕಲಸಿ ಮೊಗೆವು ಬಳಿದಂತೆ ಬಳವೆತ್ತ ಕತ್ತಲೆ ಸಿದ್ಧರಾಮಂಗೆ ಬೆಳಗಾದುದು (ಸಿದ್ಧರಾ. ೩–೩೦); ಕಳೇವರಕೆ ಬಳಿದು ಚಂದನವಂ (ಶಬ್ದರಾ. ೯–೯೨) ; ಬೆಂದ ಹುಣ್ಣಲಿ ಸಾಸಿವೆಯ ಬಳಿಯದಿರು ಸಂಜಯ (ಕುಮಾ.ದ್ರೋ. ೧–೮). ೫. (ನೆಲವನ್ನು) ಸಾರಿಸು : ರೋಗಿಗಳು ಮಲಗಿದ ನೆಲವನ್ನು ಕ್ರಿಮಿನಾಶಕವನ್ನು ಬೆರಸಿದ ನೀರಿಂದ ಬಳಿಯಬೇಕು (ರೂಢಿ).

ಬಳಿಬಚ್ಚ=ಅನ್ನವನ್ನು ಕಲಸಿ ಕೈತಂತ್ತು ಹಾಕುವಾಗ ಕೊನೆಯಲ್ಲಿ ಬಳಿದು ತೆಗೆದುದು : ಹಂಚಿದವರಿಗೆ ಬಳಿಬಚ್ಚಿಯೇ ಗತಿ (ರೂಢಿ).

[ದೇ.॥ ತಮಿ. ವೞಿ ; ಮಲ. ವಟಿ ; ತೆಲು. ಬಡಿಯು]

**ಬೞೆ₂** (ನಾ). ಸಾರಿಸುವಿಕೆ ; ಸ್ವಚ್ಛಗೊಳಿಸುವಿಕೆ : "ಸನಿಹ ಪಥ ವಂಶ ಸಮ್ಮಾರ್ಜನಗಳೊಳ್ ಬೞಿ" (ಶಬ್ದಮಂ. ೧೧೯) 'ಕಾಲ್ವೞಿ' ಪರಾ. [<ಬೞಿ₁]

**ಬೞಿ₃, ಬಳಿ₂** (ನಾ). ೧. ದಾರಿ ; ಮಾರ್ಗ : ಅನಿತು ಬೞಿ ಬಲ್ಲೊನವನೆ, ಜಾಣನೆ (ಅಂತಿಗೊ. ೧೭–೩೯೦) ; ಬಯಕೆ ಬೞಿ ಕವಲೊಡೆಗುಂ (ವಸ್ತುಕೋ. ೧೫–೧೧೨). ೨. ಎಡೆ ; ಸ್ಥಳ ; ತಾಣ ; ಪ್ರದೇಶ : "ಬೞಿ– ಎಡೆ, ತಾವು" (ನಾನಾರ. ೬. ೧೨೮) ; ಸುೞಿವೆಳವೊಡಿರ ಕಡೆಗಣ್ ಬೞಿಯಂ ಪಸರಿಸುವ ಬೆಳಗು ಬೆಳದಿಂಗಳ ಪೊಂಪುೞಿಯೆಂದು (ಚಂದ್ರಪು. ೬–೪೭) ; ಬಾಸುೞ್–ಪೊಯ್ದ ಬೞಿ (ಶಮದ. ಶಂ. ೧). ೩. ಸಮೀಪ ; ಹತ್ತಿರ : ಕುಱಿತು ಸಮುಚ್ಚಯದಾ ಬೞಿವಿಕಲ್ಪದಾ ತೆಱದೊಳೆ ದೋಷಮುಮನಂತೆ ಗುಣಮುಮಂ ಕಿಱಿದಱೊಳ್ ನೆಱೆಯೆ ಪೇೞ್ದಂ (ಕವಿರಾ ೧–೧೩೭) ; ಚಂದ್ರಗುಪ್ತಮುನಿಯ ಬೞಿಯಂ ಋಷಿಸಮುದಾಯಮೆಲ್ಲಂ ತಗುಳ್ದು (ವಡ್ಡಾರಾ. ೯೦–೪) ; ಕರಿಕಳಭಂಗಳ ಶಿಶು ಕೇಸರಿಗಳ ಬೞಿಯಂ ತಗುಳ್ದು (ಶಂಶಭಾ. ೨–೧೧) ; ಗಱಿಯ ಬೞಿಯ ಪಾವಿನಂತೆ ಬೆಂಬೞಿಯಂ ತಗುಳ್ದು (ಸುಕುಮಾ. ೬–೫೩ ವ). ೪. ಹಿಂಭಾಗ ; ಹಿಂದಂಗಡೆ : ಅಂತು ಪೊೞಲಂ ಪೊಱಮಡೆ ಬೞಿಯನೆ ತಗುಳ್ದು ಬರ್ಪ ತಮ್ಮೊಡನಾಡಿಗಳಪ್ಪ ಮೋಳದ ಸಬ್ಬವದ ನಗೆಯ ತೆಗೞಿನವರೆಮ್ಮ ಬೞಿಯಟ್ಟಿದಂದು ಬನ್ನಿಮೆಂದು ಪ್ರಿಯಂ ನುಡಿದಿರಿಸಿ (ಶಂಶಭಾ. ೨–೯೫ ವ) ; ಮಿಂಚಿನ ಬೞಿಯ ಮೊೞಗುವೋಲ್ ಬೆನ್ನನೆ ಬಂದಳ್ (ಶಾಂತಿಪು. ೭–೨೮) ; ಸೂಜಿಯ ಬೞಿಯ ದಾರದಂತೆ (ಧರ್ಮಾಮೃ. ೦೯–೧೦೯). ೫. ವಂಶ ; ಪೀಳಿಗೆ; ಕುಲ; ಮನೆತನ : "ಬೞಿ = ಬಟ್ಟೆ, ವಂಶಂ, ಕರೆವಂ, ಲೇಪಿಸುವುದು, ಪಿಂಗಲಿಯ ಬೞಿಗೊರಲ್, ಮತ್ತೆ" (ಶಮದ. ಶಂ. ೧) ; ಅತ್ತಿಗೇರಿಯ ಬೞಿ ಇದಕ್ಕೆ ಸಾಕ್ಷಿ (ಕಇ. II. ೫–೧೨ ; 859) ; ಅವರ ಪಿಡಿವ ಬಿಲ್ ಬಿಲ್ಲೆಮ್ಮಂಬುಗಳುಮವರಿತ್ತ ನಲ್ಲಂಬುಗಳೆಸೆ ಬೞಿಗಾಯದಂತು ಚಲಮನೆ ಕಾವೆಂ (ಶಂಶಭಾ. ೧೨–೩೯) ; ಅಯೋಧ್ಯಾನಗರದೊಳ್ ನೇಸಱ ಬೞಿಯ ಪಲಂಬರರಸರರಸುಗೆಯ್ಯುತಿರ್ಪರ್ (ರಾಮಾಶ್ವ. ೭–೮). ೬. ಪಕ್ಷಿಗಳ ಗಂಟಲಿನ ಇಳಿಜಾರಾದ ಭಾಗ ; ೭ ಪಿಂಗಳಾನಾಡಿಯ ಮುಂದಕೆ ಇರುವ ಗಂಟಲಿನ ಭಾಗ : "ಬೞಿ = ಬಟ್ಟೆ, ವಂಶಂ, ಕರೆವಂ, ಲೇಪಿಸುವುದು, ಪಿಂಗಲಿಯ ಬೞಿಗೊರಲ್, ಮತ್ತೆ" (ಶಮದ. ಶಂ. ೧). ೭. ಕರೆ ; ಆಹ್ವಾನ : "ಕರೆವಲ್ಲಿ ಲೇಪನಂಗೆಯ್ವಲ್ಲಿ ಬಟ್ಟೆಯೊಳ್ ವಂಶದೊಳ್ ಪಲ್ಲಕ್ಕಿಯಾ ಸ್ವರಭೇದದಲ್ಲಿ ಬೞಿಯೆನಿಸುಗುಂ" (ಸಂಜೀವ. ೦೮) ; ಕುಬೇರಸೆಟ್ಟಿಯ (ಧನಮಿತ್ರ) ಶಿರೋರುಹದೊಳ್ ಪಳಿತಾಂಕುರಮಂ ಧನಪತಿ ಕಂಡು ನಿನಗೆ ಬೞಿ ಬಂದುದೆಂದು ನಗುತ್ತುಂ ತೋಱಿದೊಡೆ (ಜೀವಂಧ. ೬೦) ; ಯೌವರಾಜ್ಯಾಭಿಷೇಕಪ್ರಾರಂಭಪ್ರೀತಿಯಿಂದಟ್ಟಿದ ಬೞಿಗೆ ಮಗಂ ಬರ್ಪುದುಂ (ಕಾದಂಪೂ. ೫೭೮). ೮. ಯಾವುದಾದರೊಂದು ಸುದ್ದಿ ಅಥವಾ ಆಹ್ವಾನವನ್ನು ಒಯ್ಯುವ ದೂತ : ರಿಸಿಯರ್ಕಳ್ಗೆಲ್ಲಂ ಬೞಿಯನಟ್ಟಿ ಬರಿಸಿ (ವಡ್ಡಾರಾ. ೮೫–೦೮) ; ದುಶ್ಶಾಸನಾದಿಗಳ್ಗೆಲ್ಲಂ ಬೞಿಯನಟ್ಟಿ ಬರಿಸಿ (ಶಂಶಭಾ. ೬–೩೩ ವ) ; ಒಡಗೊಂಡು ಬರ್ಪಂತು ವೈಶಂಪಾಯನಂಗೆ ಬೞಿಯನಟ್ಟುವಂ (ಕಾದಂಬ. ೪೮೮). 'ಬೞಿಯಟ್ಟು' ಪರಾ. ೯. ಉಡುಗೊರೆ ; ಕಾಣಿಕೆ ; ಕೊಡುಗೆ : 'ಬೞಿವೞಿ₁' ಪರಾ. ೧೦. ನಡೆವಳಿಕೆ ; ವರ್ತನೆ : 'ಬೞಿಯ' ಪರಾ. ಬಳಿ₂ : ೧. ಬಳಿವಿಡಿದು ನಡೆತಂದು ಕಂಡನು ಮುಂದೆ ಮುನಿವರೇಣ್ಯನನು (ಹಶಕಾ. ೫–೬೫) ; ಬಂಡಿಯನೇಱಿ ಪೋಪಾ ಬಳಿಯಲಿರೆ ಪೆರ್ಬಾವು (ಶಾಕ್ಯಶಾ. ೨೦–೮೩). ೨. ಹಳ್ಳಿಯಲಿ ನಗರಂಗಳಲಿ ನಗಕುಲದ ಬಳಿಗಳಲಿ ಬಳಕವರು ಕಾಣದೆ ಹೊಳಲ ಸಾರ್ದರು (ತೊರರಾ. ೩–೨–೦೭) ; ಇಳಿದಿರ್ದ ಬಳಿಯಿಂದ ಪಾಳೆಯದೆಗೆದೊಡೆ (ಕಂಶಪ. ೦೪–೫೨) ; ಪರಮಪತಿವ್ರತೆಯಿದ್ದ ಬಳಿಯೊಳಾ ಸಿರಿರಾಣಿ ಸೇರಿ ಬಂದಿಹಳು (ಹದಿಬ. ೨–೦೭). ೩. ಮಣ್ಣಲಿ ಸಾಸಿಗವ ಬಳಿಯ ಬಾಡಂ (ಎಕ. VII. ಶಿಕಾ. ೯೭–೦೭ ; 1113) ; ಸೈಂಧವನ ತಲೆಯನು ಕೊಡೆದು ನಿನ್ನಯ ಕಾಲ ಬಳಿಯಲಿ ಕೆಡಹುವೆನು (ಕುಮಾ.ದ್ರೋ. ೯–೩೩) ; ನೆಳಲು ತನುವಿನ ಬಳಿಯೊಳಲ್ಲದೆ ಚಲಿಸುವುದೆ (ವಳಕ. ೧–೧೧). ೪. ಬಂದರು ವಸಂತರಾಜನ ಬಳಿಯ ಲತೆಯಂತೆ (ಇಹರ. ದೇ. ೩೩–೦೫). ೫. ಅಣನೂರ್ದರು ಮೂನೂಱ ಬಳಿಯ ಅಂಕುಲಗೆಯ್ವತ್ತಱೊಳಗಣ [ಬಿ]ಟ್ಟಿಯನ ಕರಂಜಿಗೆಯ (ಎಇ. XXVII. ೦೫–೪೪ ; 1114) ; ಅರಿಯಾ ಬಳಿಯವರ ಗಡಿಯಿಂ ಕೊಳಹರ ಬಳಿಯವರ ಗಡಿಯಿಂದಂ (ಸೌಇಇ. XI–ii. ೪೨೪–೦೭ ; 1401) ; ಜನಿಯಿಸಿದೆನು ನಾನು ಮೂರನೆಯವನಾಗಿ ಬಳಿಯ ಬಳ್ಳಿಯ ಕುಡಿಯಾಗಿ (ಇಂಶಾಕ. ೩–೨೯). ೬. ನಗರೇಶ್ವರದೊಳಿರ್ದ್ದೇವರ್ಗಂ ಬಳಿಯನ(ಘ)ಟ್ಟಿಯರಸರಿಂ ಕಾಲು ಕರ್ಚ್ಚಿಸಿ (ಸೌಇಇ. IX — i. ೧೧೧–೩೭ ; 1045) ; ಬಳಿಯನಟ್ಟಿ ಬರಿಸಿ ಕಾಲಂ ಕರ್ಚ್ಚಿ (ಎಇ. XVI. ೬೭–೦೩ ; 1058).

ಬಳಿಯಣ = ಹತ್ತಿರದ ; ಸಮೀಪದ : ಉತ್ತರಕೆ ವೆಂನೊಬನ ಹಳಿ ಬಳಿಯಣ ಮುಂಡುಬಂಡೆ ದಕ್ಷಿಣಕೆ ಹುರಳಿಗೆರೆಯೇ ಮೇರೆ (ಎಕ. XII. ಶಾಶಗ. ೪೭–೫೪ ; 1670). ಬಳಿಯತನ = ಪಾರಂಪರ್ಯ : ಎರಡಿಲ್ಲದ ಬಳಿಯತನದಿಂ ಪಿಂತಣ ಕಬ್ಬಿಗರುಮೊಳರುಂ ಧರೆಗವತರಿಸಲ್ಕಿರ್ಪ ಸಾರ್ವಲೌಕಿಕಕವಿಗೆ ಬಲ್ಲಂತಿರೆ ತಾಂ ಮಾರ್ಗಪರಿಷ್ಕರಣಕಾರಿಗಳ್ ಭುವನಮನವಂಗೆಳ್ಚರಿಸಿ ಸಿದ್ಧಂ ಮಾಳ್ಪರ್ ಸೂಳಾಯ್ತುರುದಯರಾಗವ ಪಾಡುತ್ತುಂ (ಸಂಸಶ. ೮–೫). ಬೞಿವೞಿ₂, ಬಳಿಬಳಿ, ಬಳಿವಳಿ (ದ್ವಿರುಕ್ತಿ) : ಇವರೆಲ್ಲಿಗೆ ಪೋದಪ್ಪರೋ ಎಂದು ಬೞಿವೞಿಯನೆ ವಂದು (ವಡ್ಡಾರಾ. ೭೮–೧) ; ನರನಂದನನ ಬೞಿವೞಿಯಂ ತಗುಳ್ದು ಗಱಿವೞಿಯ ಪಾವಿನಂತೆ ಚಕ್ರವ್ಯೂಹಮಂ ಪುಗಲೆಂದು ಬರ್ಪ ದ್ರುಪದ . . . ಘಟೋತ್ಕಚಾದಿಗಳೊಡನೆ ಮಲ್ಲಾಮಲ್ಲಿಯಾಗಿ (ಶಂಶಭಾ. ೧೧–೪೭ ವ) ; ಹರನು ಮೂಲಿಗನಾಗಿ ಪುರಾತರೊಳಗಾಗಿ ಬಳಿಬಳಿಯಲು ಬಂದ ಮಾದಾರನ ಮಗ ನಾನಯ್ಯಾ (ಬಸವ. ೩೪೭) ; ಕಱುಗಳೋಡದಂತೊಡನೆ ಬಳಿವಳಿಯಲಿದ್ದಲ್ಲರೋಪಾದಿಯಿಂ ನಡೆವುದು (ಸಿದ್ಧರಾ. ೨–೦೪).

[ದೇ.॥ ತಮಿ. ಮಲ. ವೞಿ; ತೊದ. ಪೊಳಿ; ತುಳು. ಬರಿ]

**ಬಟ್ಟ್₄** (ಅ). ಆಮೇಲೆ ; ನಂತರ ; ಮತ್ತೆ : ಮತ್ತಂಬರ್ಥದೊಳು ಸಿರ್ವರ್ ಬಿತ್ತಗರಾ ಬಲ್ಲ ಬಟಿಗಳಂ (ಕಮುದ. ೩೦೯). [← ತಮಿ. ವಟಿ]

**ಬಟಿಕ** 'ಬಟಿಕಂ' ನೋ.

**ಬಟಿಕಂ, ಬಳಿಕ್ಕ₂, ಬಳಿಕ್ಕ, ಬಳಿಕ್ಕಂ, ಬಳಿಯಂ, ಬಟಿಕ್ಕ₂, ಬಟಿಕೆ, ಬಟಿಕ್ಕ₂, ಬಟಿಕ್ಕಂ, ಬಟಿಕ್ಕೆ, ಬಟಿಯಂ** (ಅ). ತರುವಾಯ; ಆಮೇಲೆ; ಅನಂತರ : "ಪಶ್ಚಾತ್, ಚರಮಂ – ೨ ಈ ಬಟಿಕಂ" (ಶಬ್ದಮ. ೧೦೭–೨೨); "ಬಟಿಕಂ ಬಟಿಕ್ಕೆ ಬಟಿಯಂ ಮತ್ತನಿಪ್ಪುದು" (ಕಾಣೀಕ. ೨) ; ನುಡಿ ಮುನ್ನಂ ಸ್ಪಷ್ಟಮಾಗಿರ್ದುದು ಬಟೀವಿಸ್ಪಷ್ಟ ಮಾಯ್ತು (ಕಾದಂಪೂ. ೩೬); ಬಟಿಕಂ [ಪಾಠಾಂ. ಬಟಿಯ] ಮನುಷ್ಯರಂ ಕಂಡು ಗರ್ಜನಾದಿಗಳಿನಂಜಿಸೆ (ಕಾಪುಂಪು. ೦೦). **ಬಳಿಕ್ಕ₂** : ಆ ಮನ ನಿಮ್ಮಲ್ಲಿ ಒಡವೆರೆದ ಬಳಿಕ ಎನಗೆ ಭವವುಂಟೆ (ಮಹಾದೇ. ಏ. ೨೪–೪೬); ನರಲೋಕ ದೊಳ್ ಪುಟ್ಟಿ ಅರಿದು ಬಳಿಕಿಲ್ಲಿರವು ನರನಾದ ಬಳಿಕ ಎತ್ತಣದು ಇತ್ತಣ ಬರವು (ಸಂಶರ. ೦–೩೬). **ಬಳಿಕ್ಕ** : ಅಲ್ಲಿ ಜಯಿಸಿ ಬಳಿಕ್ಕಂದು ಬಪ್ಪಂ ದೇವ (ಬಸರ. ೦–೬೩); ವಿಷವನುಂಡು ಭ್ರಮಿಸಿ ಬಿದ್ದ ಬಳಿಕ್ಕ ಕಾದಡೆ ನಿಮಗೆ ಶಕ್ಯವೆ (ಬಸವ. ೦೩–೬); ಸ್ವಾಮಿಯ ಪದವಂ ನೆನೆದು ಬಳಿಕ್ಕೀ ಕಾವ್ಯ ಮನುಸುರುವೆನು (ಜಮುಕಾ. ೦–೮). **ಬಳಿಕ್ಕಂ** : ಅಲ್ಲಿಂ ಬಳಿಕ್ಕಂ ಎಮ್ಮ ನರ್ಚಿಸುತ್ತೆ ಭಕ್ತರ ಬಂಧುವಾಗಿ (ಬಸರ. ೯–೩೨); ಬಾಲಕನಂ ಬಿಸುಡೆ ಭೂಮಿದೇವಿ ಬಳಿಕ್ಕಂ ಪಾಲಿಸೆ ಬಳೆದಂ (ಹಮ್ಮಿರ. ೨–೨೨). **ಬಳಿಯಂ** : ಸತ್ಯೇಂದ್ರಚೋಳಧರಣೀಶ್ವರಂ . . . ಮುಳಿಯದಿರ್ಪನೆ ಬಳಿಯಂ (ಚೆಶಿಕೆ. ೦೩–೯೯). **ಬಟಿಕ್ಕ₂** : ಅವರಿಂ ಬಟಿಕವರ ಮಗನ್ ರಾಜಪುಲಿ ಕುಲಮುದ್ದನ್ (ಎಕ. VIII, ಸೊರಬ. ೯–೩ ; ಕು. ೩೦೦) ; ಅಲ್ಲಿಂ ಬಟಿಕ ಹಯಖುರಧ್ವಾನಂ (ಅಂಪು. ೦೯–೯೯). **ಬಟಿಕೆ** : ಆಹವವಿಜಯಿಯಪ್ಪ ವಿಜಯನನೆ ವಲಂ ಮುಂ ಕೇಡು ಬಟಿಕೆ ನೃಪನಂ ಕಂಡಂ (ಸಂಶಹಾ. ೯–೦೦); ಪತ್ರಲೇಖಾಂಗನೆಯುಂ ಮುಂದಿಟ್ಟು ಬಟಿಕೆ ಬರ್ಪುದು (ಕಾದಂಸಂ. ೨೬೦); ಬಿಡದಾರಾಧಿಸೆ ಮುನ್ನಮೆ ಕುಡಲಾಜಿದೆ ಬಟಿಕೆ ಗಂಟಲಂ ಮೆಟ್ಟಿದೊಡೆ (ಗದಾಯು. ೩–೩೯). **ಬಟಿಕ್ಕ₂** : ಸಂಧ್ಯಾಸಮಯಾತ್ತರಕ್ತರುಚಿ ಪಿಂಗೆ ಬಟಿಕ್ಕುದಯಾದ್ರಿಯೊಳ್ ಪದಂಗಾಸಿದ ಪೊನ್ನ ಪುಂಜಿಯುಮೊಲಿರ್ದುದು ಕಣ್ಗೆ ಹಿಮಾಂಶುಮಂಡಲಂ (ಸಂಶಹಾ. ೩–೮೦); ಆಕೆಯಂ ತರ್ಪುದನುಟಿಯೆ ಬಟಿಕ್ಕಿಲ್ಲ ಬೇಜಿಕೊಂದುಪಾಯಂ (ಕಾದಂಪೂ. ೬೩೯). **ಬಟಿಕ್ಕಂ** : ಮೊದಲ ಪದಂ ನ್ಯೂನಾಕ್ಷರಮದಱಿಂದೆ ಬಟಿಕ್ಕಮರ್ಥಮಧಿಕಾಕ್ಷರಂ (ಕಶಾ. ೦–೯೯). **ಬಟಿಕ್ಕೆ** : ಶ್ರೀಭದ್ರಬಾಹು ಸಚನ್ದ್ರಗುಪ್ತಮುನೀನ್ದ್ರಯುಗ್ಮದಿನೊಪ್ಪ ವಲ್ ಭದ್ರಮಾಗಿದ ಧರ್ಮಮನ್ದುವಟಿಕ್ಕೆವನ್ದಿನಿಸಳ್ಕಲೋ . . . ವಿದ್ಯಾಧರ ಶಾನ್ತಿಸೇನಮುನೀಶನಾಕ್ಕಿ ಎವೆಳ್ಗೊಳ ಅದ್ರಿ ಮೇಲಶನಾದಿವಿಟ್ಟು ಪುನರ್ಭವಕ್ಕೆಜಿ ಆಗಿ (ಎಕ. II, ೩೦–೨; ಸು. 650); ಈತನೆಮ್ಮಿಂ ಬಟಿಕ್ಕೆ ಚತುರ್ದಶಪೂರ್ವಧಾರಿಯಪ್ಪ ಮಹಾತ್ಮನೊಡೆಯೊಂ ಭದ್ರಬಾಹುಭಟಾರರೆಂಬೊರಪ್ಪೊರ್ (ವಡ್ಡಾರಾ. ೬೯–೯) ; ಬಟಿಕ್ಕೆ ಧಾತ್ರಿಯುಂ ಶತಬಲನಾತ್ಮಜಂಗೆ ನೆಗಟ್ದು (ಆಂಪು. ೨–೦೯). **ಬಟಿಯಂ** : "ಬಟಿಯಂ, ಬಟಿಕಂ, ಬಟಿಕ್ಕಂ, ಬಟಿಕೆ. ಬಟಿಕ್ಕೆ ಇವು ಪಶ್ಚಾದರ್ಥಂಗಳ್" (ಕಮುದ. ಕಂ. ೦) ; ಧರ್ಮಂಗಳಂ ನಮಸ್ಕಂ ನಡೆಯಿಸಿ ಬಟಿಯ ಮೊನ್ದು ವರ್ಷಂ ರಾಜ್ಯಮಂ ಪತ್ತುವಿಟ್ಟು (ಎಕ. II, ೩೯–೦೦೯; 974) ; ಪೊಡೆವೆಂ ಕೂಟಂ ಬಟಿಯಂ ಪೊಡೆವೆಂ ರಕ್ಕಸನಂ (ಸಂಶಹಾ. ೩–೨೯); ಪೊಡೆವಟ್ಟು ಬಟಿಯಂ ವಳೀಮುಖನಿಂತೆಂದುದು (ಸಂಶಕಂ. ೦೦೦–೨).

**ಬಳಿಕಣ**=ನಂತರದ : ಆ ಬಳಿಕಣ ಇದರ ಈ ೨ನೆಯ ಮುದ್ರಣವು . . . ಪ್ರಕಾಶಿತವಾಗಿದೆ (ಗೂರ್ಲೊ.ಶಾ. iii, ಮುನ್ನುಡಿ). [< ಬಟ್ಟ್₄]

**ಬಟಿಕೆ** 'ಬಟಿಕಂ' ನೋ.

**ಬಟಿಕೊಳ್** 'ಬಟಿಗೊಳ್' ನೋ.

**ಬಟಿಕ್ಕ₁** (ನಾ). ಅನಂತರದ ಸಮಯ : ಬಟಿಕ್ಕನ ನುಡಿಗೆ ಸೈರಿಸಲಾಜದೆ ಫಣಿಕೇತನನಿಂತೆಂದಂ (ಸಂಶಹಾ. ೦೩–೨ ವ). [<ಬಟಿಕಂ]

**ಬಟಿಕ್ಕ₂** 'ಬಟಿಕಂ' ನೋ.

**ಬಟಿಕ್ಕಂ** 'ಬಟಿಕಂ' ನೋ.

**ಬಟಿಕ್ಕೆ** 'ಬಟಿಕಂ' ನೋ.

**ಬಟಿಗಳಿಪು** (ಕ್ರಿ). ಹಿಂದೆಯೇ ಕಳುಹಿಸಂ : ಅಗಲಲಾಜದೆ ಕಳಿಪುತ್ತುಂ ಕಳಿಯೆ ಪೋಗಿ ತದಾ [ದ] ನುಗ್ರಹಮಂ ವಿಾಜಲಣ್ಮದೆ ಕಣ್ಬಲರ ಮಾಲೆಯನೆ ಬಟಿಗಳಿಪಿ ಬಂದಂ (ಅಸಂಪು. ೯–೬೨ ವ).

[ಬಟ್ಟ್₃ + ಕಳಿಪು(< ಕಟಿಪು₁) ]

**ಬಟಿಗೊರಲ್** (ನಾ). ಪಕ್ಷಿಗಳ ಗಂಟಲಿನ ಇಳಿಜಾರಾದ ಭಾಗ ; ಪಿಂಗಳಾನಾಡಿಯ ಮುಂದಕ್ಕೆ ಇರುವ ಗಂಟಲಿನ ಭಾಗ : "ಬಟಿ –ಬಟ್ಟೆ, ವಂಶ, ಕರೆವಂ, ಲೇಪಿಸುವುದು, ಪಿಂಗಲಿಯ ಬಟಿಗೊರಲ್, ಮತ್ತೆ" (ಕಮುದ. ಕಂ. ೦). [ಬಟ್ಟ್₃ + ಕೊರಲ್]

**ಬಟಿಗೊಳ್, ಬಳಿಗೊಳ್, ಬಟಿಕೊಳ್** (ಕ್ರಿ). ೧. ಹಿಂದೆ ಹೋಗು ; ಹಿಂಬಾಲಿಸು : ಮುಂಧಣ ಮಿಗಮಂ ಕಟಿಪದೆ ಸಂದಿಸಿ ಬಟಿಗೊಳ್ವ ಮಿಗಮುಮಂ ಕಟಿಪದೆ ತಾನೊಂದಳವಿದಪ್ಪದೆಚ್ಚು ಬಲಿಂದಮನಿಂ ಬಿಲ್ಲ ಬಲ್ಮೆಯಂ ಪೊಗಟಿಸಿದಂ (ಸಂಶಹಾ. ೩–೯೮). ೨. (ಅಲಂ) ಗಮನ ವಿಡು; ಲಕ್ಷಿಸು: ಕಳಶಮನೆತ್ತಿ ನೀರೆಱೆವ ಕಾಂತೆಯ ಲೋಲ ವಿಲೋಚ ನಾಂಶುಸಂಕುಳಮನೆ ವಾರಿಧಾರೆಯೆನುತಂ ನಿಜತೋಯಮನೀಂಟದೊಯ್ಯ ನಂಜಳಿಯನವರ್ಚಿ ಬಾಯ್ಗೆ ಮೊಗಮಂ ಬಟಿಗೊಂಡೆಡಕಂ ಬಲಕಮುಜ್ಜ್ವಳ ತೃಷೆಯಿಂದೆ ತಂದಟಿಕಿ ಪಿಂಗದೆ ನಾಣ್ಚದನೊರ್ವ ಬಟ್ಟಗಂ (ಅದ್ಭುತ. ೩–೩೨). **ಬಳಿಗೊಳ್** : ೧. ಎಂದಿನಂದದಿ ಗೋಕುಲಂಗಳು ಬಳಿಗೊಂಡು (ಅಹಾರ. ದೇ. ೦೬೯–೩); ಅಕೆಯ ಬಳಿಗೊಂಡು ಗಾಯಕಿಯರೆಯ್ದಿದರು (ಭರತ. ೬–೬೭); ಅಲ್ಲಿರ್ದ ಸಭೆಯು ಬೀಳ್ಕೊಟ್ಟು ಮಂತ್ರಿಯ ಸಖರ ಸಲ್ಲೀಲೆಯಿಂದೆ ಬಳಿಗೊಂಡು . . . ಪಲ್ಲಕ್ಕಿಯುಮನೇರಿ (ಸಸವೊ. ೬–೯೩). ೩. ದಾರಿಯನ್ನು ಹಿಡಿ; ಮಾರ್ಗವನ್ನು ಅನುಸರಿಸಂ: ಗಿಡುವಿನ ಸರುವಿನ ದರುವಿನ ಮಡುವಿನ ಬಳಿಗೊಂಡು ಶುನಕನಟ್ಟಿತು ಮೊಲನಂ (ಗಿಂಕ. ೦–೬೩). **ಬಟಿಕೊಳ್** : ೪. ಕ್ರಮವಾಗಿಡು; ಕ್ರಮದಲ್ಲಿರಿಸು : "ಬಟಿಕೊಳ್_ಕ್ರಮಸಂಧಾನೇ (ಕ್ರಮವಾಗಿಡು)" (ಕಮುದ).

[ಬಟ್ಟ್₃ + ಕೊಳ್₁]

**ಬಟಿದಪ್ಪು, ಬಳಿದಪ್ಪು** (ಕ್ರಿ). ೧. ದಾರಿತಪ್ಪು; ಹಾದಿತಪ್ಪು : ಮರದ ಮಱಿಗಳೊಳ್ ಬಟಿದಪ್ಪಿದ ಮಱಿಯನಟಿಸಿ ಮಱುಕದಿಂ ಸೂಟ್ಪರ್ ಖಡ್ಗಧೇನುಗಳ (ಚಂದ್ರಪ್ರ. ೩–೬೩ ವ); ನೀನೆ ಸೋಲ್ತಿರ್ಪ ಜಾಣ್ಮೆಯೊಳ್, ಬಟಿದಪ್ಪಿ ಪೋಗಿರ್ಪ (ಚಿದ್ವಿಕ್ರ. ೨೩–೩೩೩). ೨. ಸಾನ್ನಿಧ್ಯ ತಪ್ಪು; ದೂರವಾಗು: ದಿನೇರನ ಬಟಿದಪ್ಪಿದ ಕಿರಣಂಗಳ್ ಏಟ್ಟಲೆಯಂ ಕಂಡಳ್ಕಿ ತನ್ನ ಮಱಿಯಂ ಪೊಕ್ಕಂತೆ (ಸಂಶಹಾ. ೦೨–೮೮ ವ). **ಬಳಿದಪ್ಪು** : ೧. ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ ಬಳಿದಪ್ಪಿದ ಪಶು ತನ್ನ ಹಿಂಡನಱಸುವಂತೆ (ಬಸವ. ೩೬೩). [ಬಟ್ಟ್₃ + ತಪ್ಪು₁]

**ಬಟಿದೊಟ್ಟು, ಬಳಿದೊತ್ತು, ಬಳಿದೊಳ್ತು** (ನಾ). ವಂಶಪಾರಂಪರ್ಯವಾಗಿ ಬಂದ ಆಳು,–ಸೇವೆ ಮಾಡುವ ವ್ಯಕ್ತಿ : ತೊಟ್ಟೀ ಬಟಿದೊಟ್ಟರ ಪಡಿದೊಟ್ಟಿವಳಾರೊಳ್ವೆಳಿಲಪೊ ನರವಾನರ ಪೇಟ್ (ಶಶಾ. ೬–೨೭೯). **ಬಳಿದೊತ್ತು** : ಬಳಿದೊತ್ತು ಬಳಗದೊತ್ತು ವಂಶದೊತ್ತು ನಾನಯ್ಯ (ಬಸವ. ೩೩೩); ಅವಂದಿರೆನಗೆ ಕುಲವಳಿಯ ಬಳಿದೊತ್ತಿರಪ್ಪ ವಱಿಂದೀ ಸಂಬಿಮನೆನಗೆ ತೊತ್ತಿನ ಮಗನಾಗಿ ಕೊಟ್ಟರ್ (ಸಂಧ. ೬–೦೦೦). **ಬಳಿದೊಳ್ತು** : ನಾವೆಲ್ಲರ್ವಂ ನೆಲೆದೊಳ್ತಿರ್ ಬಳಿದೊಳ್ತಿರ್ ಸಲೆದೊಳ್ತಿರ್ ನಿಮಗೆನುತ್ತೆ (ಗಿಂಕ. ೦೦–೯೩). [ಬಟ್ಟ್₃ + ತೊಟ್ಟು]

**ಬಟ್ಟೀರ್**, ಬಳಿನೀರ್, ಬಳಿನೀರು (ನಾ). ೧. ದೇವತಾವಿಗ್ರಹಕ್ಕೆ ಅಭಿಷೇಕ ಮಾಡಿದ ನೀರು ; ಅ ತನ್ನ ನಿಷ್ಠೆಯನ್ನು ನಿರೂಪಿಸಲು ಈ ನೀರನ್ನು ಕುಡಿಯುವ ಪದ್ಧತಿಯಿತ್ತು. ಇದೊಂದು ದಿವ್ಯ ಪರೀಕ್ಷೆ ; ಇದಕ್ಕೆ ಕೋಶಪಾನವೆಂದೂ ಹೆಸರಿದೆ : "ಕೋಶಪಾನಂ–ಬಟ್ಟೀರು[ರ್]" (ಶೀತಿವಾ. ೨೯–೬೩). ೨. ವೇಶ್ಯೆಯು ವಿಟನಿಗೆ ತನ್ನ ಅಚಲವಾದ ಪ್ರೇಮವನ್ನು ತಿಳಿಸುವುದಕ್ಕಾಗಿ ಮಾಡಿ ತೋರಿಸುವ ಪ್ರತಿಜ್ಞೆಯ ಸಂಕೇತವಾಗಿ ಕುಡಿಯುವ ನೀರು : ವಿಟನು ಕುಡಿದ ಬಳಿಕ ಕುಡಿಯುವ ನೀರು : ನಿಟ್ಟಿಗಳನಿಕ್ಕಿ ದಾಂಟಿಸದೆ ದಂಡಿಸು ವಾಕೆಯನೊತ್ತಿಗೊಳ್ಳದಂತೆಟ್ಟಿಯದೆ ತೇವೆಗುಳ್ಳ ಬಟ್ಟೀರ್ಗಳನಗ್ಗದ ಪೆಣ್ಗೆ ಮೆಯ್ಯನೆಯ್ದುಟ್ಟಿಯದೆ . . . ವಿಟವ್ಯಕ್ತಿಗೆ ಮುಯ್ಯನಾಂಪುದೇ (ಶೀಲಾವ. ೨–೯೩); ನುಡಿಯಲ್ಲಂ ಹೊಲೆ ಸೂರುಳೊಳ್ಳಿಟ್ಟಿ ಹೊಸಂತಿಲ್ ಪೊಂಗೊಳಲ್ ಪುತ್ತುವಾಯ್ಯುಡಿನೀರೊರ್ವಗೆ ಕಮ್ಮನಪ್ಪ ಬಟ್ಟೀರೂರೂರ ದೈವಂಗಳುಂ ಪಡಿಗತ್ತೋಡಿದುವೀಕೆಗಂಜಿ ವಿಟರೆಂದುಂ ಗೆಂಟು (ಶೀಲಾವ. ೨–೧೦೩); ಕುಡಿದೊಡೆ ಹೊಟ್ಟೆಯಿಂದೆ ಬಟ್ಟೀರ್ ಪೊಱ ಪಾಯ್ದುವೆ ಸುತ್ತಿ ಕಾಲನೇಂ ತೊಡರ್ವುವೆ ದಾಂಟುವಲ್ಲಿ ನಿಟ್ಟಿ (ಶಂಕ್ರಪು. ೯–೬೦). **ಬಳಿನೀರ್**: ೨. ಕುಡಿದ ನೀರವರನುಳಿದು ಪೊಗದಂತವರ್ಗೊಡನೆ ಕುಡಿದ ಬಳಿನೀರ್ಗೆ [ಪಾಠಾಂ. ಬಳಲಿಕೆಯ] ಪಡಿಯಾಗೆ ಪಥಿಕರಲ್ಲಿಂ ತೆರಳದೆ ನಿಂದು ತಡೆಯ ದಿಟ್ಟಿಸುತಿಹರವರ (ಕುಮಾಹಾಂ. ೨–೫೦). **ಬಳಿನೀರು** : ೧. ಹರಿ ಬ್ರಹ್ಮರಿಗೆಱಗದಂತೆ ಬಳಿನೀರನೆಱೆಯಿಯಾ (ಚಸಶ. ೪೪೪); ಕೂಲಿಗೆ ಬಳಿನೀರ ಕುಡಿದರೆ ಆಧಾರ ಮುಟ್ಟುವುದು (ಬಸೀಶ್ಮ. ೬೪). ೨. ಬಳಿನೀರ ಕುಡಿದು ನಿಟ್ಟಿಯ ದಾಂಟಿ ಪುತ್ತೂದಿ ಬಳಿಸಂದಿನಿಯರ ಚಿತ್ರವನು ತಿಳಿಪಿ ಕಾಲ್ವಿಡಿದೊಡಗೂಡುವ ಗಳಿಸಾಳಿ ಬೆಲೆವೆಣ್ಣ ಸದರಂದಲ್ಲಿ (ಕುಮಾಹಾಂ. ೨೯–೬೩). [ಬಟ್ಟಿ₁ + ನೀರ್]

**ಬಟ್ಟೀರ್ಗುಡಿ**, ಬಳಿನೀರ್ಗುಡಿ (ಕ್ರಿ). ೧. ದೇವತಾವಿಗ್ರಹವನ್ನು ಅಭಿಷೇಕ ಮಾಡಿದ ನೀರನ್ನು, ತನ್ನ ನಿಷ್ಠೆ ಅಥವಾ ಸತ್ಯಸಂಧತೆಯನ್ನು ನಿರೂಪಿಸಲು ಕುಡಿ : ಬಟ್ಟೀರ್ಗುಡಿದು ಪುಱಿವನ ಸಂತಾನ ಕ್ಷಯಮಕ್ಕುಂ (ಶೀತಿವಾ. ೨೯–೬೩). ೨. ವೇಶ್ಯೆಯು ವಿಟನಿಗೆ ತನ್ನ ಅಚಲವಾದ ಪ್ರೇಮವನ್ನು ತಿಳಿಸುವುದಕ್ಕಾಗಿ ಮಾಡಿ ತೋರಿಸುವ ಪ್ರತಿಜ್ಞೆಯ ಸಂಕೇತವಾಗಿ ವಿಟನು ಕುಡಿದು ಉಳಿಸಿದ ನೀರನ್ನು ಕುಡಿ : ಪೊಸವೇಟವುಂ ಪೊಯ್ದುಕೊಳಲುಂ ಮತ್ತಿನ ಗಂಡರ್ಮೊಟ್ಟಿಯಲ್ಲ ರೆಂದು ಮನದೊಳಗೆ ಬಟ್ಟೀರ್ಗುಡಿದ ಬದ್ದೆಯರ್ (ಆರ್ದಣೀ. ೩–೨ ವ). **ಬಳಿನೀರ್ಗುಡಿ** : ೧. ಪರವೆಣ್ಣಳೆನಗಮ್ಮ ಹರಿಹರದೇವಿಯು ದೊರೆಯೆಂಗೀಶನ ಮುಂದೆ ಭರದಿಂದ ಬಳಿ[ಪಾಠಾಂ. ಬಳಿಕ]ನೀರ್ಗುಡಿವಂತವ ನಾಗಳೆರದೀಂಟಿದನು ತೀರ್ಥಜಲವ (ಕುಮಾಹಾಂ. ೨೯–೮೭). ೨. ಉಟ್ಟ ನಿಟ್ಟಿ ದಾಂಟಿದಡೆ ಕಚ್ಚುವುದೆ ದೈವವುಂ ಮುಟ್ಟಿದಡೆ ಬೆರಳು ಹತ್ತುವುದೆ ಬಳಿನೀರ್ಗುಡಿಯೆ ಹೊಟ್ಟೆ ಹಱಿವುದೆ (ಪಶಣಾ. ೯–೨೩); ದೇವರ ನಿಲುಕೆ ಹತ್ತುವುದೆ ಕರತಳ ನಿಟ್ಟಿಯ ದಾಂಟಲು ಕಚ್ಚುವುದೆ ಬಳಿನೀರ್ಗುಡಿಯುಲೀ ಯುದರ ಉರಿವುದೆ (ಶೀವಂಶ. ೦೭–೩೭). [ಬಟ್ಟೀರ್+ಕುಡಿ₁]

**ಬಟ್ಟಿಯ**, ಬಳಿಯ (ನಾ). ೧. (ವಿಧೇಯಂತೆಯ) ನಡವಳಿಕೆಯುಳ್ಳವನು; ವಿಧೇಯ : "ಬಟ್ಟಿಯನೆಂದೆನೆ ವಿಧೇಯಂ" (ಸಂಶೀಪ. ೯); "ಬಟ್ಟಿಯಂ–ವಿಧೇಯಂ" (ಕಮುದ. ಶಂ ೧). **ಬಳಿಯ**: ೧. ಕಿರುಜಂತುವನುಂ ಕೊಲಲಿಲ್ಲಂ ಪಿರಿಯ ಗುಣಂ ಬಳಿಯುಂ ಗುರುಸೇವೆಯೊಸುರು ಕರುಣಾಳುವನೇನೆಂಬೆಂ (ಸ್ತೌನಂದ. ೩–೫೦). ೨. ಒಂದು ವಂಶದ ಹೆಸರು : ಮಹಾಜನ ಅಯ್ವದಿಂಬರುಂ ಉಭಯಸಮ್ಮತದೊಳಿಟ್ಟು ಬಳಿಯರ ಬಾವಮ್ಮಗೆ ಬೂದಗೂಟನಿತ್ತೂರ್ (ಕ್ತಇಇ. IX–I, ೩೯–೯; ೯). [ಬಟ್ಟಿ₃ + — ಅ]

ಬಟ್ಟಿಯಂ 'ಬಟ್ಟಿಕಂ' ನೋ.

**ಬಟ್ಟಿಯಟ್ಟು**, ಬಳಿಯಟ್ಟು (ಕ್ರಿ). ದೂತನ ಮೂಲಕ ಸುದ್ದಿಯನ್ನು ಕಳುಹಿಸು,–ಕರೆಕಳುಹಿಸು : ಕಜ್ಜಂ ಪುಟ್ಟಿದೊಡೆಮಗೆ ಬಟ್ಟಿಯಟ್ಟದೀ ಪೊಟ್ಟಿದಾವುದು ಮನೆವಾಟ್ಟಿಗೆಟ್ಟಂದೆ (ಶಂಶಣಾ. ೦೦–೩ ವ); ಧಾತ್ರೀಪತಿಗಱಿಪಿ ಮರುತ್ಪುತ್ರಂ ಬಟ್ಟಿಯಟ್ಟಿ ಕರಸಿ (ಗದಾಯು. ೬–೪೪); ಅಂತು ಬಟ್ಟಿಯಟ್ಟಲೊಡಂ ಗಿರಿರಾಜರ್ ನೆಱಿದು ಬಂದು (ಶಂಶಣಂ. ೨೫೯–೦೨). **ಬಳಿಯಟ್ಟು** : ಭುವನೈಕ[ಮ]ಲ್ಲ ಭೂಪತಿ ಬಳಿಯಟ್ಟಿ ತನ್ನನಿಪದಾಬ್ಜ ಯುಗಕ್ಕೆ ವಿನಮ್ರನಾಗಿ (ಎಇ. XVIII, ೦೯೬–೦೯; 1104); ರಾಜಸದ ಹಮ್ಮಿನಲಿ ಬಳಿಯಟ್ಟುವುದು ಬಸವಾ ನಿನಗಿದುಚಿತವೆ (ಪ್ರಭುಲಿಂ. ೦೯–೦೯); ಮಾರಿಯ ಮನೆಗೆ ಬಳಿಯಟ್ಟುವವೊಲಟ್ಟಿದನುರಗಶಯನಂಗೆ (ಜಾಕ್ಕಣಾ. ೨೨–೫೦). [ಬಟ್ಟಿ₃+ಅಟ್ಟು₂]

**ಬಟ್ಟಿವರ್**, ಬಳಿಬರು, ಬಳಿವರ್, ಬಳಿವರು (ಕ್ರಿ). ೧. ಹತ್ತಿರ ಬರು ; ಸಮೀಪಿಸು : ನಂದವನಪವನಂ ಬಟ್ಟಿವಂದೊಡಗೊಂಡೊಯ್ದು ಪುಗಿಸೆ ಬನಮಂ (ಕಾಂತಿಕ. ೬–೩); ನೋಟಕ್ಕೆ ಪರ್ವವನೀ ಬಾಲಕರೆಂಬಿರ್ದರ್ ಬಟ್ಟಿವಂದೆಂ ಭೋಜರಾಜಾಜ್ಞೆಯಿಂ (ಹಗರಿ. ೫–೬೩); ಏನ್ ಬಟ್ಟಿವಂದೊಡಮಂಜೆ ವಡುವೆನ್ (ಬಧಕ್ತ. ೬–೦೬೩). **ಬಳಿಬರು** : ೧. ಗುರುಭಾರವಾದರು ಬಳಿಬಂದ ಮುಗಿಲನು ಹೊರುವುದು ತಲೆಯ ಮೇಲಗವು (ಇಂತಾಪ. ೦೦೯–೩೬). **ಬಳಿವರ್** : ೨. ಕೂಡಿಕೊಳ್ಳು ; ಹೊಂದಿಕೊಳ್ಳು : ಎರಡುಂ ಕೇರಿಯ ಸಾಸಿರ್ವರ್ಗ್ಗಂ ನಿರ್ವಿಕಲ್ಪದಿಂ ಸಹಾಯರಾಗಿ ಬಳಿವನ್ದು ಬಾಳ್ವುದು (ಕ್ತಇಇ. XI–I, ೩೯–೩೬ ; 1028). **ಬಳಿವರು** : ೧. ಅಲರ ಪರಿಮಳವೆಳಸಿದೆಳೆಗಾಳಿ ಸುಳಿವಂತೆ ನಲವಿಂದ ಬಳಿವರುವ ಇನಿಯಳಂತೆ (ವಿಶೀಗೀ. ೩೦–೮). [ಬಟ್ಟಿ₃ + ಬರ್ (< ವರ್) ]

**ಬಟ್ಟಿವಟ್ಟಿ**, ಬಳುವಳಿ, ಬಳ್ವಳ್ಳಿ, ಬಳ್ಳೊಳ್ಳಿ (ನಾ). (ವಿಶೇಷವಾಗಿ ವಂಶದ ಸಂಬಂಧ ಅಥವಾ ಹೆಣ್ಣುಕೊಟ್ಟು ಬೆಳೆಸಿದ ನಂಟಿನ ಮೂಲಕ ಬರುವ) ಕೊಡುಗೆ; ಉಡುಗೊರೆ : "ಬಟ್ಟಿವಟ್ಟಿ (ಬಟ್ಟಿವಟ್ಟಿ) = ಕೊಟ್ಟ ವಸ್ತುವಿನ ಬಟ್ಟಿಯೊಳ್ ಕುಡುವುದು" (ಕಮುದ. ಶಂ. ೦); ಕೊಟ್ಟಂ ತಂಗಿಗೆ ಬಟ್ಟಿವಟ್ಟಿಯಿಂದಿಂತು ಸರ್ವಸ್ವಮೆಲ್ಲಮಂ ಪುರುಷೋತ್ತಮಂ (ಶಂಶಣಾ. ೫–೨೬); ಬಟ್ಟಿವಟ್ಟಿಯೆಂಬುದು ಬಡವಂಗ ಟ್ಟಿಪಂಗೇಂ ಮುಟ್ಟೆ (ಕಾಂತಿಕ. ೬–೨೦). **ಬಳುವಳಿ** : ನಿಮ್ಮಯ ಹೆಂಡಿರನು ಬಳುವಳಿಯ ಕೊಡಿ ಹಾರುವನ ಹೆಂಡತಿಗೆ (ಕುವ್ಯಾಅ. ೦೫–೪೦); ಅಳಿಯನನು ಮನ್ನಿಸುತ ಮಗಳಿಗೆ . . . ಗಜ ರಥ ತುರಗ ಪಾದಾತಿಗಳ ಲಲನೆಯರ ಬಳುವಳಿಯನಿತ್ತ (ಪಕಶ. ೩–೬೨); ನಿಜನಂದನೆಗೆ ಬಳುವಳಿಯನು . . . ವಸ್ತ್ರಾಭರಣವುಂ ಕೊಟ್ಟು (ಕಂಕ. ೩೬–೯೦); ಹರಿಸಂ ಮಿಗೆ ಬಳುವಳಿಯಾಗಿತ್ತ ಧನಕನಕವಸ್ತುವಾಹನಸಖೀಸಂತಾನವನೊಡವೋಪಂತೆ ನೇಮಿಸಿ (ದಪುಸ್ಯ. ೯–೬೬ ವ). ಅವಳ ಅಜ್ಜ ಬಳುವಳಿ ಬಿಟ್ಟಿದಾರೇನು? (ಜಾಕ್ಯಾ. ೬೨). **ಬಳ್ವಳ್ಳಿ**: ಕಾಮ ರತಿದೇವಿಗುಡುಗೊರೆ ಬಳ್ವಳ್ಳಿಗಳ ಕುಡು (ಮೋಹಕ. ೦೫–೦೫). **ಬಳ್ಳೊಳ್ಳಿ** : ದೊಡ್ಡಮಾವನ ಮದುವೆಲಿ . . . ಬಳ್ಳೊಳ್ಳಿ ಕೊಟ್ಟಿದ್ದಂತೆ (ಮಲೆಮ. ೩೦೦). [< ಬಟ್ಟಿ₃ /ತುಳು. ಬಳಿವಳಿ, ಬಳುವಳಿ]

**ಬಟ್ಟಿವಟ್ಟಿಗೊಡು**, ಬಳುವಳಿಕೊಡು, ಬಳುವಳಿಗೊಡು (ಕ್ರಿ). (ವಿಶೇಷವಾಗಿ ಮದುವೆಯಾದ ಹೆಣ್ಣುಮಗಳಿಗೆ ತೌರಿನವರು) ಉಡುಗೊರೆ ಕೊಡು ; ಕೊಡುಗೆ ನೀಡು : ತನ್ನ ಮಗಳಪ್ಪ ಸುಮತಿಗೆ ಬಟ್ಟಿವಟ್ಟಿಗೊಟ್ಟು (ವಡ್ಡಾರಾ. ೦೦೬–೨೨); ಆತನ ಬಟ್ಟಿವಟ್ಟಿಗೊಟ್ಟ ಮದಕರಿಕರೇಣು ಜಾತ್ಯಶ್ವ ಶಶಿತಾರಹಾರವಸ್ತುಗಳಂ ಕೆಯ್ಕೊಂಡು ದ್ರುಪದಜೆಯನೊಡಗೊಂಡು . . . ಮದಗಜಪುರಮನೆಯ್ದೆವಂದಾಗಳ್ (ಪಪಭಾ. ೯–೯ ವ); ಅನೇಕನೂತ್ನರತ್ನಾಭರಣಂಗಳುಮಂ ಬಟ್ಟಿವಟ್ಟಿಗೊಟ್ಟು ಕಟ್ಟಿಪುತ್ತಿಂ ಬರೆವರ್(ನೇಮಿಚ. ೯–೦೦೭ ವ). **ಬಳುವಳಿಕೊಡು** : ಲಿಂಗಯ್ಯ ತಾನು ಮಗಳಿಗೆ

ಬಳುವಳಿ ಕೊಡಲೆಂದು ತೆಗೆದಿಟ್ಟ ನಗಗಳ ಗಂಟನ್ನು ತೆಗೆದುಕೊಳ್ಳಲು ಮರೆಯಲಿಲ್ಲ (ಹಾಹುಕ್ತ. ೯೯). **ಬಳುವಳಿಗೊಡು:** ಉರುತರಮಪ್ಪ ವಸ್ತುವ ಬಳುವಳಿಗೊಟ್ಟು . . . ಕಳುಹೆ ಹರಿಸದಿ ಮದವಕ್ಕಳುಗೂಡಿ ಹಸ್ತಿನಪುರಕೆ ಬಂದನು ಭೀಷ್ಮನೃಪತಿ (ಜೈಮಿನಿ. ೩-೬೨). [ ಬಟ್‌ವಟ್ + ಕೊಡು₁ ]

**ಬಟ್‌ವಟ್‌ಗೊಳ್** (ಕ್ರಿ). ಉಡುಗೊರೆಯಾಗಿ ಸ್ವೀಕರಿಸು,— ಪಡೆ: ನಿನ್ನೀ ಪೊಟಲಂ . . . ನಿನ್ನೀ ಕುಳಧನಮನೊಡನೆ ಬಟ್‌ವಟ್‌ಗೊಳ್ವಂ (ಧರ್ಮಾ. ೬-೬೦). [ ಬಟ್‌ವಟ್ + ಕೊಳ್₁ ]

**ಬಟ್‌ವಿಡಿ**, ಬಳಿವಿಡಿ (ಕ್ರಿ). ಹಿಂದೆ ಹೋಗು; ಹಿಂಬಾಲಿಸು: ನಡೆ ನಟ್ಟ ಕೋಲ ಬಟ್‌ವಿಡಿದೆತ್ತಂ ಸುರಿದುವು . . . ನವರುಧಿರಂಗಳ್ (ಶಂಕರ. ೦೩-೦೪೬); ಇಂದ್ರಾಯುಧದ ಬಟ್‌ವಿಡಿದು . . . ಕುತೂಹಲದಿಂದೆ ಪರಿಜನಂ ಬರುತ್ತಮಿರೆ (ಕಾದಂಬ. ೩೯೦); ವೀಣೆಯ ಕೊಟಲ ಬೆದಂಡೆಯು ಗಾಣದ ಬಟ್‌ವಿಡಿದು ಸುಟಿದು . ಬಳಸುವ ನಾಣಿಲಿಗಳನೀ ಬುಧಾಳಿಯೊಳ್ ಪುಗಿಸುವುದೆ (ಸುಕುಮಾ. ೨-೨೪). **ಬಳಿವಿಡಿ:** ನಿನ್ನ ಶರಣರ ಬಳಿವಿಡಿದರೆ ಎನ್ನ ದಂದುಗ ಹಿಂಗುವುದು (ಬಸವ. ೩೭); ತೀಡುವ ಗಂಧವಹನ ಬಳಿವಿಡಿದು...ಮೊಱೆವ ಮಧುಕರಪ್ರಕರದಿಂ (ಗಿರಿಜಾ. ೨-೬೦ ಪ); ಬಳಿಕ ಸೌಗಂಧಿಕದ ಪವನವ ಬಳಿವಿಡಿದು ನಾ ಬಂದೆ (ಕುಮಾರ. ೦೦-೨೩). [ ಬಟ್ಟ₃ + ಪಿಡಿ₁ ]

**ಬಟ್‌ವಿಡು** (ಕ್ರಿ). ೧. ದಾರಿಯನ್ನು ಬಿಡು ; ಎಡೆಮಾಡಿಕೊಡು : ಸುರರಾ[ಜ] ಕೈವಾರದಿಂ ಬಟ್‌ವಿಟ್ಟು ನಮ್ಮನೆ ನೋಡ ನೋಡುವರ್ (ಶಂಕರ. ೦೩ ೯೩). ೨. ಸಾಮೀಪ್ಯವನ್ನು ಬಿಡು; ದೂರ ಹೋಗು: ಬಟ್‌ವಿಡದೆ ಮುಸುಱುವಳಿಗಳ್ ಬಳಗಕ್ಕೀವೈಸಿ ಮುಗುದೆ ಕೆಳೆಯುಳ್ ಸರದೊಳ್ ಮುಟುಗಿರ್ದು ನೆಗೆದುವಂ ಕಂಡು (ಕುಸುಮಾ. ೩-೦೪೬). [ ಬಟ್ಟ₃ + ಬಿಡು₁ ]

**ಬಟ್‌ವೋಕ** (ನಾ). ದಾರಿಹೋಕ; ಪಥಿಕ, ಪಾಂಥ: ಬಟ್‌ವೋಕರಂ ಕೊಲ್ವ ಕಳ್ವ ದುಱುದುಂಬಿ ಕೊಲೆಗಂಗೆ . . . ಕಾಣಲ್ಬಾರದು (ರಾಮಾಶ್ವ. ೩೪-೨). [ ಬಟ್ಟ₃ + ಪೋಕ ]

**ಬಟ್‌ವೋಗು** (ಕ್ರಿ). ದಾರಿ ಹಿಡಿದು ಹೋಗು; ಮಾರ್ಗವನ್ನು ಅನುಸರಿಸಿ ಸಾಗು: ಲಲಿತಯಾನವಿಳಾಸದಿನೊಂದೆ ಪೋಪ ಹಂಸೆಗಳನದೊಂದು ತಾಣದೊಳಧೀಕ್ಷಿಸಿ ಮೆಲ್ಲಡೆಯಂ ಕಲಲ್ಕೆ ನೆಟ್ಟಗೆ ಬಟ್‌ವೋಗುತಿರ್ದಪುವು ತತ್ಸತಿ ಪೋದವಳಲ್ಲಿಯೆಂಬುದಂ ಬಗೆದಿರದಯ್ದಿದಂ (ಕುಸುಮಾ. ೦೪-೦೨೦). [ಬಟ್ಟ₃ + ಪೋಗು₁ (<ಪೋ₁) ]

**ಬಟ್‌ಸಲ್**, ಬಳಿಸಲ್, ಬಳಿಸಲು (ಕ್ರಿ). ಅನುಸರಿಸಿ ಹೋಗು; ಹಿಂಬಾಲಿಸು : "ಬಟ್‌ಸಲ್_ಅನುಗಮನೇ (ಸಮೀಪಕ್ಕೆ ಬರು)" (ಶಮಧಾ) : ಮತ್ತಿನುಬಿದರುಮನುಬಿಯಲೀಯದೆ ಬಟ್‌ಸಂದಾಗಳ್ (ಶಂಕರ. ೦೦-೯೩); ಮೊದಲೊಳ್ಳತ್ತಿನ್ನರದ್ವಂದ್ವದ ಬಟ್‌ಸಲಲೆತ್ತಾನುಮಚ್ಯೋದಮಂ ಸಾರ್ಪುದದೆತ್ತ (ಕಾದಂಬ. ೩೬೨). **ಬಳಿಸಲ್** : ಜಗತ್ಪ್ರಪಂಚವ ಮಾಡಿ ಆ ಜಗದಲ್ಲಿ ಜೀವರೂಪಿಂದ ಬಳಿಸಂದನೆಂದು ಹೇಳುವ ಶ್ರುತಿಯಂತಿರಲಿ (ಅನುಭ. ೩-೧೬); ಚಿತ್ರಜಕೇಳಿಗೆಂದು ಮತ್ತಗಜಂ ಪರಿವ ಕರಿಣಿಯ ಬಳಿಸಂದು ಬೋಳೈಸಿ ಕರಮಂ ನೆಗಪಿ ಕೊಡುವ . . . ಸಮಯದೊಳ್ ತೊಟ್ಟನೆ ಕಂಠೀರವರವಮಂ ಕೇಳಲಾಗಿ (ಗಿರಿಜಾ. ೦-೦೨೬ ವ); ಹಿಂದಣಂಬುಗಳೆಂಜಲಿಸಿ ಬಳಿಸಂದವುಳಿದಂಬುಗಳೆನಲು ಕವಿದೆಚ್ಚನವನಿವನ (ಕುಮಾರ. ೨-೬೨). **ಬಳಿಸಲು :** ಕಾನನಾಂತರ ಬಳಿಸಲುವರೆನ್ನೊಡನೆ ನೃಪವರರು (ಕುಮಾರ. ೬೦೩. ೨೩-೨೪); ಬಳಿಸಲುವ ತುಂಬಿಗಳ ಪಾಡುವ ಗಿಳಿಗಳ. . .ವನಲಕ್ಷುಮಿ ತಲೆದೂಗಿಸಿತು ಸುರರ (ಶಿವಾಗ. ೪-೩-೦೬). [ಬಟ್ಟ₃ + ಸಲ್₁]

**ಬಟ್‌ಸಲುಹ** (ನಾ). ಹಿಂಬಾಲಿಸುವಿಕೆ : "ಅನುಪದಂ, ಅನ್ವಕ್ಷಂ, ಅನ್ವಕ್ಷಂ _ ಈ ೩ ಬಟ್‌ಸಲುಹ" (ಶಬ್ದಾ. ೦೨೦-೪೬). [ಬಟ್ಟ₃ + ಸಲುಹ]

**ಬಟುವ** (ನಾ). (?) : ಮಱಿಪುಗೆ ಕಾವ ಚಲದಂಕರಾಮ ನನ್ನಿಯ ಮೇರು ಶಂಕರ ಬಟುವ ಪೋಚಣ್ಣನ ತಮ್ಮ ಶ್ರೀಮದ್ದಣ್ಣಿದ ಗಣ್ಡನೊಟಂಬಸೆಟ್ಟಿಯುಂ ಪದ್ಮಾವತಿಯಬ್ಬೆಯು ಪರೋಕ್ಷವಿನಯಕ್ಕೆಂದು ಬಿಟ್ಟ ಛತ್ರ (ಸೌಇಇ. IX-I, ೦೪೦-೨೩; ೪). [?]

**ಬಟ್ಟಿಸು**, ಬಳಿಚಿಸು (ಕ್ರಿ). ೧. ಸವರು ತಡವು (?) : ಪಟು ವೇಷಧಾರಿಯಾ[ದಂ] ಪಟುಮತಿ ಬಟ್ಟಿಸಿದ ಕಯ್ಯ ಕವಳಿಗೆಯುಂ ಕರ್ಪಟಮುಂಬೆರಸಜ್ಞಾನೋತ್ಕಟಮದನರಮನೆಯು ಬಾ ೧ ಲೊ ಳ್ ಬಂದಿರ್ದಂ (ಶಾಂತಿಪು. ೬-೦೨೬). **ಬಳಿಚಿಸು :** ೨. ವಿನಾಯಿತಿ ಕೊಡು; ಲೆಕ್ಕದಿಂದ ಬೇರೆ ಮಾಡು (?) : ಯಿಾ ಹೊಂನಿಗೆ ಬಳಿಚಿಸಿದ ಸ್ಥಳದ ವಿವರ (ಎಕ. VI, ಶುಂಡಗೆ. ೪೦-೨೩; 1516). [ ಬಟ್ಟು + — ಇಸು₃ ]

**ಬಟ್ಟು**, ಬಳಚು, ಬಳಿಚು (ಕ್ರಿ). ೧. ಜಾರು; ಹೊರಳು; ನುಣುಚಿಕೊಳ್ಳು: ಸ್ವರ್ಗದಿಂದ ಬಟ್ಟು ಬಂದಿಲ್ಲಿ. . .ಇಳಾಮಹಾದೇವಿಗೆ ಮಗನಾಗಿ ಪುಟ್ಟುಗುಂ (ವಡ್ಡಾರಾ. ೦೦೬-೬); ಸಮ್ಯಕ್ತ್ವದಿಂ ಬಟ್ಟಿದರಾದೊಡೆ ಅರ್ಧ ಪುದ್ಗಲಪರಾವರ್ತನಕಾಲಮಿರ್ಪರು (ಚಾಮುಂಡ. ೦೨೪-೬). **ಬಳಚು :** ೧. ಕೊರಳುಡಿದು ತೊಡೆಯುಕ್ಕುಳಿಸಿ ತೋಳ್ಗಳು ಜರಿದು ಬೆನ್ನೆಲು ಬಳಚಿ ಕೆನ್ನೆತ್ತರು ಸುರಿದು (ಶಿವಾಗ. ೦೦-೬೬-೪೦). ೨. ಕೊಚ್ಚಿಹಾಕು; ಕತ್ತರಿಸು: ಮೃತ್ಯುವಿನ ಪಾಶದ ಕೊರಳ ಬಳಚಿದವು (ಕುಮಾರ. ೬-೬೩); ಕೊಲುವುದನುಚಿತವೆಂಬ ನುಡಿಯಿಂದೊಳಗವಳ ನಾಸಿಕವನುದ್ವಕೆ ಬಳಚಿದನು (ತೊರಣ. ೩-೪-೨೬). ೩. ಪರಿಹಾರವಾಗು ; ನಿವಾರಣೆ ಹೊಂದು : ಬಂದ ಕಂಟಕ ಬಳ[ಚಾಕಾಂ. ಕಳ, ೪]ಚಿತೇ (ಕುಮಾರ. ೬-೩೩). ೪. ಸವರು; ತಡವು : "ಭಾರವಿದೆ, ಕಂಚಿನ ಮೂರ್ತಿ ಇದ್ದ ಹಾಗೆ ಕಾಣುತ್ತೆ" ಎಂದು ಅರಿಮೆಸಹಿತವಾಗಿಯೇ ಅದನ್ನು ಬಳಚಿ ನೋಡಿದರು (ಮೂಕಜ್ಜ. ೨೦೬); ಮೂಲೆಯಲ್ಲಿದ್ದ ಹರಕುಮುರುಕು ಸ್ಟೂಲನ್ನು ಬಳಚಿ ನೋಡುತ್ತ . . . ಅದರ ಮೇಲೆ ಕುಂಡೆಯೂರಿ ಕುಳಿತ (ಮೂರುದಾ. ೦೬೩). **ಬಳಿಚು :** ೧. ಲೌಕಾಂತಿಕದೇವರಲ್ಲಿಂ ಬಳಿಚಿ ಮನುಷ್ಯರಾಗಿ ಮುಕ್ತರಪ್ಪರು (ಕನಕಮ್ಮ. ೦೬೬). ೨. ಕೊಲುವ ದುರ್ಜನ ಕಾಲಪಾಶವ ಬಳಿಚಿ[ಕಾಕಾಂ. ಸ] ಬೇಕೆಂಬುವರು . . . ಆಶ್ರಯಿಸುವುದು ಹರಿಗುರುಚರಣಪಂಕಜವ (ಶಿವಾಗ. ೩-೦೨-೨೩) ;ಸೀಳ್ದುತ್ತರಿಸಿ ಕೆತ್ತಿ ಖಂಡಿಸಿ ಬಳಿಚಿ ತಿವಿದಿಕ್ಕಿ ಕೊಯ್ದು ಪೊಯ್ದು . . . ಪೊರಳ್ದುದುವರಿಚತುರ್ಬಲವನೆಲ್ಲಮಂ ಕರ್ಣಜನಿಸುವ ಕಣೆಗಳು (ಕೃಷ್ಣರಾ. ೪-೯೪). ೪. ಬಳಿವಿಡಿದು ಬಳಿಚಿದಂಬಂ ಮುಂದೆ ಹರಿದು (ಹಕಕಾ. ೬-೩೪) ; ಬಳಿಚಿ ಬಿಟ್ಟನು ನಾಯ ಕೊಲ್ಲದೆ . . . ಎನುತುಲಿದು ಕಣೆಗಳ ಕೆದಱಿ ಕರ್ಣನ ತಱುಬಿದನು ಭೀಮ (ಕುಮಾರ. ೦೩-೬೦).

[ಬಟಲ್ + — ಚು₁./ತಮಿ. ಮಲ. ವಟುಕ್ಕು; ತೆಲು. ವ್ರಾಲು, ವ್ರಾಲುಚು, ವ್ರೇಲು]

**ಬಟ್ಟಿ** 'ಬಾಟ್₁' ಪರಾ.

Δ **ಬಟ್ಟಿಂಕು** 'ಬರ್ದುಂಕು' ನೋ.

**ಬಾ₁**, ಬಾಯು (ಕ್ರಿ). ೧. ಬಾತ (ಭೂತಕೃ), ಬಾತು₁ (ಭೂತನಞ್). ೧. ಊದಿಕೊಳ್ಳು; ಉಬ್ಬು : "ಬಾ _ ಶೋಫೇ (ಬಾತುಕೊಳ್ಳು)" (ಶಮಧಾ); ಆತನಂ ಕಾಣದಿರುಳುಂ ಪಗಲುಂ ನೆನೆದಟ್ಟು ಕಣ್ಗಳ್ ಬಾತಿರ್ಪುವು (ವಡ್ಡಾರಾ. ೦೬-೩೦); ಪುರಾಕೃತಸಂಕೃತಫಲಂಗಳಮ ನೆನೆದನವರತಮಟ್ಟು ಬಾತ ಕಣ್ಗಳುಂ ಚಿಂತಾನಿದ್ರೆಯಿಂ ದರ್ದುರವಾದ ಮೊಗಮುಂ (ಶಾಂತಿಪು. ೪-೬೯ ವ); ಕುಸಿಗೊರಲಿಟ್ಟಿರ್ದ ಪೊಱಂಟ ಬೆನ್ ಬಾತ ಬಸಿಱಿ (ಧರ್ಮಾ. ೨-೩೯). ೨. (ಅಲಂ) ಸಂತೋಷದಿಂದ ಅಥವಾ ಹೆಮ್ಮೆಯಿಂದ ಉಬ್ಬು,—ಗರ್ವಿಸು : ಪುರುಳಿಲ್ಲ

ದಹಂಕಾರದೊಳ್ ಬಾತು ಬಲ್ಮೆಗೆ ಹಾರೈಸುವರೇಕೆ ಬಯಕೆಗವಿಗಳ್ ಕೆಲಬರ್ (೧೬ಶಾವ. ೦–೨೯). **ಬಾಯು :** 'ಬಾಯಿಸು' ಪರಾ.

**ಬಾತುಕೊಳ್, ಬಾತುಕೊಳ್ಳು** = ೧. ಊದಿಕೊಳ್ಳು : ನಡೆದು ನಡೆದು ಕಾಲುಗಳು ಬಾತುಕೊಂಡು, ಅಡಿ ಇಡುವುದೇ ಕಷ್ಟವಾಗಿದ್ದಿತು (ಶ್ರೀಕಾಪ. ೩೬); ಮುಖವೆಲ್ಲ ಬಾತುಕೊಂಡಿತ್ತು (ಕೀವೋಡ. ೧೦). ೨. (ಆಲಂ) ಬೀಗು; ಗರ್ವಿಸಂ : ಮನೆಯೊಳ್ಮೆಯ್ಮೆಗೆ ಬಾತುಕೊಂಡು ಸಿರಿಯೊಳ್ಕಣ್ಣಾಗದೊಡ್ಡಯ್ಯುವಂ (ಸುಕುಮಾ. ೮–೨೬). **ಬಾತು ಹೋಗು**= ಊದಿಕೊಳ್ಳು: ನಮ್ಮ ಅಂಗೈಗಳೆಲ್ಲ ಬಾತು ಹೋಗಿವೆ (ಕಂಗಕೊ. ೧೦).

[ದೇ.॥ ತಮಿ. ಮಲ. ಕೋಲಾ. ನಾಯ್ಕಿ. ವಾಯ್]

**ಬಾ$_{2}$** 'ವರ್' ಪರಾ.

**ಬಾಂ$_{1}$** 'ಬಾನ್$_{2}$' ನೋ.

**ಬಾಂ$_{2}$** 'ಬಾನ್$_{3}$' ನೋ.

**ಬಾಂಕು$_{1}$,** ಬಾಕು$_{2}$ (ನಾ). ತಂದಿಯಲ್ಲಿ ಸ್ವಲ್ಪ ಬಾಗಿರುವ ಚಿಕ್ಕ ಕತ್ತಿ; ಕಿರುಗತ್ತಿ : ಬಲಗೈಯೊಳು ಬಾಂಕನಾಂತ ನಟನೆಯಿಂದ ಮಲಗಿನ ಮೇಲೊರಗಿರುವ (ಜ್ಞಾಪಕ. ೦೬–೦೦೬); ಈ ಜನದ ವೇಷ ಬದಲುಮಾಡಿ ಕಠಾರಿ ಬಾಂಕು ಮುಂತಾದ ಮಳಾಯುದ ಕೊಟ್ಟು (ರಾಜೇಂದ್ರ. ೫೫). **ಬಾಕು$_{2}$ :** ಚಿನ್ನದ ಬೆಳ್ಳಿಯ ಪಕ್ಕರೆಗಟ್ಟಿದ ರನ್ನದ ಬಾಕು ಕಯ್ಯಂಬು ಹೊನ್ನ ಚೂಡಾಯುತ ಮೆಟ್ಟಿಯ ಬಂದರು ಕೂಡೆ ಕನ್ನಡ ರಾಯರಾವುತರು (ಕುರುಸಾಂ. ೧೦–೨೧) ; ಸಾಯುದರಿಲ್ಲ ಖಂಡೆಯದ ಪೆಟ್ಟಲಿ ನೆಟ್ಟಿ ನೋಯದರಿಲ್ಲ ಬಾಕಿನಲಿ (ಕಂಪವ. ೦೩–೯೮); ಕಟ್ಟಿದ ಕಾಸೆ ಚಿಮ್ಮುರಿ ಬಾಕು ತ್ರಿಶೂಲ (ಬಸ್ವರಾ. ೬–೩೫). 'ಚಾಕು' ಪರಾ.

[←ಹಿಂ. ಬಾಂಕ್; ಮರಾ. ಬಾಂಕ್, ಬಾಕ್]

**ಬಾಂಕು$_{2}$,** ಬಂಕ್ಕು$_{3}$, ಬಾಕು$_{3}$ (ನಾ). ೧. ಸಾಲಾಗಿ ನಾಲ್ಕಾರು ಜನ ಕಾಲು ಇಳಿಬಿಟ್ಟು ಕುಳಿತುಕೊಳ್ಳಬಹುದಾದ, ಮರ, ಕಲ್ಲಂ ಅಥವಾ ಲೋಹದಿಂದ ತಯಾರಿಸಿದ ಆಸನ ; ಬೆಂಚು : ವೆಂಕಟರಮಣ . . . ಮಾಲೆಯುಲ್ಲಿಯ ಕಟ್ಟಿಗೆಯ ಬಾಂಕೊಂದರ ಮೇಲೆ ಹೋಗಿ ಕುಳಿತ (ಮೂರುದಾ. ೦೬೫). **ಬಂಕ$_{3}$ :** ೨. ಮನೆಯ ಮುಂದೆ ಇರುವ ಜಗುಲಿ : ಆ ಸನ್ಯಾಸಿಯು ಹೋಗಿ ಒಂದು ಬಂಕದಲ್ಲಿ ನೆಲದ ಮೇಲೆ ತನ್ನ ಹುಲಿದೊಗಲು ಹಾಸಿ . . . ಅಡ್ಡಾದನು (ಮುಂಬಯಿ. ೯–೦೫೦); ಪಟೇಲರು . . . ಮನೆಯ ಮುಂದಿನ ಬಂಕದಲ್ಲಿಯೇ ಕುಳಿತಿದ್ದರು (ಬಪಸಿ.೬೬). ೩. ಎತ್ತರವಾದ ವೇದಿಕೆಯುಳ್ಳ ಮಂಟಪ : ಆ ಬಂಕಗಳಲ್ಲಿ ಒಂದೊಂದು ಈಶ್ವರಲಿಂಗವೂ ಮುಂದೆ ನಂದಿಕೇಶ್ವರನೂ ಇದ್ದಾರೆ (ಹಬ್ಬಬ. ೯). ೪. ಎತ್ತಿನ ಗಾಡಿಯಲ್ಲಿ ಹುಲ್ಲು ಹೇರಲು ಅನುಕೂಲವಾಗುವಂತೆ ಬಗ್ಗಿಸಿ ಕಟ್ಟಿದ ಗಳು : ಭಪಿ. ಹುಲ್ಲು [illegible]ದ ಈ ಬಂಕದ ಗಾಡಿ ಎಳೆಯಲು ಎತ್ತಿಗೆ ಬಹು ಕಷ್ಟ (ರೂಢಿ). **ಬಾಕು$_{3}$ :** ೧. ಬಾಗಿಲಿನಿಂದ ಬರಲು ಎಡಗಡೆಗೆ ಒಂದು ದೊಡ್ಡ ಬಾಕು (ಉದಪ್ಪ. ೫೫); ಇಬ್ಬರೂ . . .ಬಾಕಿನ ಮೇಲೆ ಕುಳಿತರು (ರಕ್ತಧ್ವ. ೨೯) ; ಎದುರು ಬಾಕಿನ ಮೇಲೆ ರೂಪಾ ಕುಳಿತಿದ್ದಳು (ಜಯಂತ. ೪೯). [ ←ಇಂ. Bank = ಬೆಂಚು. / ತುಳು. ಬಾಂಕು. / ಪೋರ್ಚು. ಬಂಕೊ ; ಸ್ವೀಡಿಶ್. ಜರ್ಮನ್. ಬಾಂಕ್. /ಮರಾ. ಬಾಂಕ್ ]

**ಬಾಂಕು$_{3}$** 'ಬಾಂಗ$_{1}$' ನೋ.

**ಬಾಂಕು$_{4}$** 'ಭಾಂಕಿ' ನೋ.

**ಬಾಂಗ$_{1}$,** ಬಾಂಕು$_{3}$ (ನಾ). ೧. ಗಟ್ಟಿಯಾದ ಕೂಗು. ೨. ಮುಲ್ಲಾನು ಮಸೀದಿಯಲ್ಲಿ ನಿಂತು ನಮಾಜು ಮಾಡಲು ಮುಸಲ್ಮಾನ ಜನರನ್ನು ಕರೆಯುವ ಕೂಗಂ : "ಬಾಂಗೀ"ಗಳು 'ಬಾಂಗ' (ಭಗವದಾಹ್ವಾನ) ಮಾಡಿದ ಕೂಡಲೆ ಎಲ್ಲರೂ ಮೊಣಕಾಲೂರಿ ಭಕ್ತಿಪುರಸ್ಸರವಾಗಿ ಪ್ರಾರ್ಥನೆ ಮಾಡಿದರು (ಶಿರಂಗ. ೨೬). **ಬಾಂಕು$_{3}$ :** ೨. ಮುಸಲ್ಮಾನಜನರು ಸಂಜೆ ಮುಂಜಾನೆಗಳಲ್ಲಿ . . . ಜನರನ್ನು "ಬಾಂಕು" ಕೊಟ್ಟು ಕರೆಯುವಂತೆ ಕ್ರಿಶ್ಚನರು ಉನ್ನತ ಕೊತ್ತಳಗಳನ್ನು ವಿರಚಿಸಿ, ಅವುಗಳಲ್ಲಿ ಘಂಟೆಯನ್ನು ಇರಿಸಿ ಬಾರಿಸತೊಡಗಿದರು (ಬಾಂಕ್ರ. II, ೦೦೬೨).

[ ← ಪಾರ. ಹಿಂ. ಬಾಂಗ್. / ತುಳು. ಬಾಂಕು, ಬಾಂಗ್. ಬಾಂಗ, ಬಾಂಗು ]

**ಬಾಂಗ$_{2}$** (ನಾ). ಅಫೀಮಂ ಬೆರಸಿ ತಯಾರಿಸಿದ ಒಂದಂ ಬಗೆಯ ಮಾದಕ ಪೇಯ : ಮಸಾಲ್ ಹಾಲು ಎಂದು ಹೇಳಿ ಒಂದು ರೀತಿಯ 'ಬಾಂಗ' ಮಾಡಿಕೊಟ್ಟಿದ್ದನು (ಇತಿಸ್ತ್ರೀ. ೦೯೬). [←ಹಿಂ. ಮರಾ. ಭಾಂಗ್]

**ಬಾಂಗಡಲ್** (ನಾ). (ಆಲಂ) ಆಕಾಶದ ನದಿ ; ದೇವನದಿ : ಬಡಬಾಸೆಯೆಂಬ ಜಗುನೆಯೊಳೊಡವೆರೆಯಲ್ಕಚಹಿಮಾದ್ರಿಯಿಂದ್ಯೆದುವ ಬಾಂಗಡಲೆನೆ ಹಿಮಾಂಬು ಪೊಸ ಪೊಂಗೊಡದಿಂ ವಧು ಸೂಸೆ ಸುರಿವುತುಂ ಸೊಗಯಿಸುಗುಂ (ರಾಜಶೇ. ೧೦–೮೨). [ ಬಾಂ$_{2}$ (<ಬಾನ್$_{3}$) + ಕಡಲ್$_{2}$ ]

**ಬಾಂಗಡಿ** (ನಾ). ಕೈಬಳೆ ; ಕಂಕಣ : ವಿಜಾಪುರದ ಬಾದಶಹನು ತನ್ನ ಮಗಳ ಬಳೆಯ (ಬಾಂಗಡಿಗಳ ವೆಚ್ಚಕ್ಕಾಗಿ ಬಾಗಲ್‌ಕೋಟೆಯನ್ನು ಹಚ್ಚಿ ಕೊಟ್ಟದ್ದರಿಂದ ಇದಕ್ಕೆ "ಬಾಂಗಡೀ ಕೋಟ್" ಯೆಂಬ ಹೆಸರು ಬಂತೆಂದು ಹೇಳುತ್ತಾರೆ (ಕಥಾಗಿ. ೫೨೫). [ ← ಮರಾ. ಬಾಂಗಡೀ ]

**ಬಾಂಗಡೆ** (ನಾ). ೧. ಆಕಾಶದ ಕೊನೆ, –ಅಂಚು, –ತುದಿ : ಕಾಣಬಹುದು ಕಾಳಾಹಿಯ ಹಚ್ಚೆಯ ಕಾಣಬಹುದು ಬಾಂಗಡೆಯ (ಕೃಕಂಪ. ೩–೫೬). ೨. ಆಕಾಶದ ಭಾಗ ; ನಭಸ್ಥಳ : ಬಾಂಗಡೆಯ[ಯಿ]ನಿತಂದೆಬಗಿ ನೃಪಸಿಂಗ ಗಜವ ನಿರಂಕುಶದಿನಾಳ್ದಂಗವಿದು ಲೇಸೆನುತಲೀರ್ವರು ನೃಪನ ಪೊಗಳಿದರು (ಸಾಳ್ವಭಾ. ೦೬–೦೫). [ಬಾಂ$_{2}$ (<ಬಾನ್$_{3}$) + ಕಡೆ$_{2}$]

**ಬಾಂಗರೆ** (ನಾ). ಆಕಾಶದ ಅಂಚು ; ದಿಗಂತ ; ಕ್ಷಿತಿಜ : "ದಿಗಂತ ; ಕ್ಷಿತಿಜ ; ಬಾನಂಚು, ಬಾಂಗರೆ" (Horizon. ೩೪೪).

[ ಬಾಂ$_{2}$ (< ಬಾನ್$_{3}$) + ಕರೆ$_{4}$ ]

**ಬಾಂಗಳ** (ನಾ). ಕಲ್ಲಿನ ಗುಹೆ : **ಕಿರಿಯ ಮೂಲೆಯ** ಕಾಡನ್ನು ಹೊಕ್ಕು ಬಾಂಗಳದಿಂದ ತುಸು ದೂರದ**ಲ್ಲಿಯೇ ... ಕಾಪು** ಕುಳಿತರು (ಕ್ಯಾಗಮ. ೩೬); ಬಾಂಗಳದಿಂದ ಹುಲಿ **ಹೊರಟು ಬರುವಲ್ಲೇ ಅಡಗಿ** ಕುಳ್ಳಿರಲು ಸರಿಯಾದ ಜಾಗವಿರಲಿಲ್ಲ (ಕ್ಯಾಗಮ. ೩೬). [?]

**ಬಾಂಗಿ** 'ಭಾಂಗಿ' ನೋ.

**ಬಾಂಗೀ** (ನಾ). ಮಸೀದಿಯಲ್ಲಿ ನಿಂತಂ, ನಮಾಜಿನ ಕರೆ ಕೊಡುವ (ಇಸ್ಲಾಂ) ಮುಲ್ಲಾ : 'ಬಾಂಗೀ'ಗಳು 'ಬಾಂಗ' (ಭಗವದಾಹ್ವಾನ) ಮಾಡಿದ ಕೂಡಲೆ ಎಲ್ಲರೂ . . . ಪ್ರಾರ್ಥನೆ ಮಾಡಿದರು (ಶಿರಂಗ. ೨೬).

[ <ಬಾಂಗ$_{1}$ ]

**ಬಾಂಗುಳಿಗೆ** (ನಾ). ಆಕಾಶದಲ್ಲಿರುವ ಚಿಕ್ಕಚಿಕ್ಕ ಗ್ರಹ ; ಕ್ಷುದ್ರಗ್ರಹ: ಒಂದುವಲಯದಲ್ಲಿ ನೂರಾರು ಕ್ಷುದ್ರಗ್ರಹಗಳು ಹರಡಿರುವುದನ್ನು ಜ್ಯೋತಿಷ್ಕರು ಕಂಡುಹಿಡಿದಿರುವರು. ಈ ತೆರನಾದ ಬಾಂಗುಳಿಗೆಗಳು ಬರಿಯ **ಕಣ್ಣಿಗೆ ಕಾಣವು** (ಜ್ಯೋತಿರ್. ೦೨೮). [ಬಾಂ$_{2}$ (< ಬಾನ್$_{3}$) + ಗುಳಿಗೆ$_{1}$]

**ಬಾಂಗುಟಿ,** ಬಾನಂಗುಟಿ$_{1}$ (ನಾ). ಆಕಾಶದ ಕುಳಿ, –ಗರ್ತ : ವಿಮಾನಂ ಬುಬ್ಬು, ವಿಮಾಂಬುಟು, ಬಾನಂಗುಟಿ, ಬಾಂಗುಟಿ, ಕಣ್ಣಂದೊಟಲಿ, **ಕಣ್ಣೊಟಲಿ** (ಕಪ್ಪಾಸು. ೩೪೬ ಶ್ರಯೊ). **ಬಾನಂಗುಟಿ$_{1}$ :** ಮೇಲಿನ ಪ್ರಯೋಗವನ್ನು ನೋಡಿ. [ ಬಾಂ$_{2}$ (<ಬಾನ್$_{3}$) + ಕುಟಿ$_{2}$ ]

**ಬಾಂಗೂದಲ** (ನಾ). ಆಕಾಶವನ್ನೇ ತಲೆಯ ಕೂದಲನ್ನಾಗಿ ಉಳ್ಳವನು; ವ್ಯೋಮಕೇಶ : ಶಿವ: ಅರೆಗೆಂಪಿಡಿದ ಮಿಂಡಿದ ಜಡೆಮುಡಿ ಬಾಂಗೂದಲನ ಕಪರ್ದಮಂ ಕೀಟ್ಮೂಡೆ (ರಾಮಾಶ್ವ. ೦೩೯–೮).

[ ಬಾಂ$_{2}$ (< ಬಾನ್$_{3}$) + ಕೂದಲ್ (< ಕೂಂದಲ್) + – ಅ$_{7}$]

**ಬಾಂಚೋತ್** (ನಾ). ತನ್ನ ಅಕ್ಕನೊಡನೆ ಅನೈತಿಕಸಂಬಂಧವಿಟ್ಟುಕೊಂಡವನು ಎಂಬ ಅರ್ಥದಲ್ಲಿ ಬಳಸುವ ಒಂದು ಬೈಗುಳು.
[← ಹಿಂ. (ಬಹನ್ + ಚೂತ್)]

**ಬಾಂಜಗುನೆ** (ನಾ). (ಅಲಂ) ಆಕಾಶದಲ್ಲಿರುವ ಯಮುನೆ ; ಆಕಾಶನದಿ; ದೇವನದಿ : ಬಾಂಜಗುನೆಗೆ ನೆಗೆದುವೊ ನೊರೆಯನೆ ಬಗೆಗೊಂಡುವು ಬಾನೊಳೊಗೆದ ಬೆಳಿಯ ಮುಗಿಲ್ಗಳ್ (ಲೀಲಾವ. ೩-೨೨).
[ಬಾಂ$_2$ (<ಬಾನ್$_3$) + ಜಗುನೆ (<ಜಮುನೆ)]

**ಬಾಂಜೊದರ್** (ನಾ). ಆಕಾಶದ ದೀಪ,-ಸೊಡರು ; ಸೂರ್ಯ : ಬಾಂಜೊಡರಿದಿರಂಸಿನ ಹರೆಯಂ (ಜಯಚಾ. ೦೪-೬೭).
[ಬಾಂ$_2$ (<ಬಾನ್$_3$) + ಸೊಡರ್]

**ಬಾಂಡ್** 'ಬಾಂಡು' ನೋ.

**ಬಾಂಡಲಿ** 'ಬಾಣಲಿ' ನೋ.

**ಬಾಂಡಲೆ** 'ಬಾಣಲಿ' ನೋ.

**ಬಾಂಡವಲು** 'ಬಂಡವಾಳ' ನೋ.

**ಬಾಂಡವಲುಶಾಹಿ** 'ಬಂಡವಾಳಶಾಹಿ' ನೋ.

**ಬಾಂಡು, ಬಾಂಡ್** (ನಾ). ೧. ಒಡಂಬಡಿಕೆಯ ಪತ್ರ ; ಕರಾರುಪತ್ರ : ಕೆಲವರು ತಾವಿರುವ ನಾಟಕಕಂಪನಿಯ ಯಜಮಾನನಿಗೆ ಬಾಂಡು ಬರೆದು ಕೊಟ್ಟಿರುವುದರಿಂದ ಬರುವದಾಗುವದಿಲ್ಲವೆಂದು ಹೇಳಿದರು (ಗಂಗೂಬಾ. ೭೦) ; ತಿಂಗಳೊಂದಕ್ಕೆ ೭೫ರೂ ಕೊಡುವ ಕರಾರ ಮಾಡಿ ೬ ವರ್ಷದ ಬಾಂಡು ಬರೆಯಿಸಿಕೊಂಡರು (ದಾಸಹು. ೬). ೨. ಸಾಲಪತ್ರ : ಒಂದರ ಬಾಂಡುಗಳನ್ನೂ ಸ್ಟಾಕುಗಳನ್ನೂ ಇನ್ನೊಂದು ಕಂಪನಿಯ ಮಾಲಿಕರೂ ಚಾಲಕರೂ ಕೊಂಡಿಟ್ಟುಕೊಂಡರೆ ಇದರ ಮೇಲಿನ ಅಧಿಕಾರವೆಲ್ಲ ಅವರ ಕೈಗೆ ಸಾಗುವುದು ತಾನೇ ! (ಹಣಶ್ರ. ೦೨೪). **ಬಾಂಡ್** : ೧. ನೀವು ಒಂದು ವರುಷದವರೆಗಾದರೂ ಇರುವದಾಗಿ 'ಬಾಂಡ್' ಬರೆದುಕೊಡಬೇಕು (ಚಿಪಂ. ೦೬೩). ೩. ದಸ್ತೈವಜುಂಗಳನ್ನು ಬರೆಯುವುದಕ್ಕೆಂದು ತಯಾರಿಸಿದ ಒಂದು ಬಗೆಯ ಉತ್ತಮವಾದ ಕಾಗದ : ಯಂತ್ರದಲ್ಲಿ ಕಾಗದವನ್ನು ತಯಾರಿಸುವಾಗ 'ಸ್ಯೆಜ್' ಅನ್ನು ಸೇರಿಸಿ, ಬಾಂಡ್, ಲೆಡ್ಜರ್, ಇಂಡೆಕ್ಸ್ ಮೊದಲಾದ ಕಾಗದಗಳನ್ನು ತಯಾರಿಸುವರು (ಮುದ್ರಕ. ೯೦).
[ ←ಇಂ. Bond ]

**ಬಾಂಡ್ಲಿ** 'ಬಾಣಲಿ' ನೋ.

**ಬಾಂಡ್ಲೆ** 'ಬಾಣಲಿ' ನೋ.

**ಬಾಂದಲೆಯ** (ನಾ). ಆಕಾಶವನ್ನೇ ತಲೆಯಂ ಕೂದಲನ್ನಾಗಿ ಉಳ್ಳವನು; ವ್ಯೋಮಕೇಶ ; ಶಿವ : ಪುಷ್ಪಂಬನೊಡಲುರಿಕ ಬಾಂದಲೆಯ ಯೆಲುಗೊರಲಯಡಿಗಣ್ಣ ಕಿಚ್ಚುಚ್ಚಿಗನೆ (ಪಪಮೋ. ೩೩-೦).
[ಬಾಂ$_2$ (<ಬಾನ್$_3$) + ತಲೆ$_1$ + -ಅ$_7$]

**ಬಾಂದಳ** (ನಾ). ಆಕಾಶ ; ಗಗನ : ಬಿಸಿಲ್ ಬಾಂದಳನೊಡವುಟಿಯಲ್ . . . ಎಸೆದಂ ಪದ್ಮಿನೀಜೀವಿತೇಶಂ (ಅದ್ಭುರ. ೦೦-೦೪) ; ಮೋಸದೊಳ್ಪುರಗಮಂ ಕೊಂಡು ಬಾಂದಳಕಡರ್ದೊಡೆ ನಿನ್ನನು ಉಳುಹುವರೆ ಯೌವನಾಶ್ವನ ಸುಭಟರು (ಕೈಮಿಭಾ. ೪-೦೩); ಬಾಂದಳದ ಕರುಮಾಡದಲ್ಲಿ ಚಿಕ್ಕೆಮಣ್ಣುಗಳು ನೆರೆದು ಇಳೆಯ ಸೊಬಗನ್ನು ದಿಟ್ಟಿಸುತ್ತಿದ್ದುವು (ಧೂಮಕು. ೩೦).
[ಬಾಂ$_2$ (<ಬಾನ್$_3$) + ತಳ (=ತಲ)]

**ಬಾಂದಿ** 'ಬಾಂದೀ' ನೋ.

**ಬಾಂದೀ, ಬಾಂದಿ** (ನಾ). ಸೇವಕಿ; ದಾಸಿ : ಇಬ್ಬರು ಅರಸತಿಯರನ್ನೂ ವೀರರಾಜೇಂದ್ರಒಡೆಯರವರ ಬಲ ಅಣ್ಣನ ಮಗ ಒಬ್ಬರನ್ನೂ ಎರಡು ಜನ ಬಾಂದೀರನ್ನೂ ಅಂಬಿನಿಂದ ಇಟ್ಟು ಕೊಂದು ಹಾಕಿ (ರಾಜೇಂದ್ರ. ೨೭). **ಬಾಂದಿ** : ಈ ಹುಡುಗಿಯು . . . ಮನೆಯಲ್ಲಿ ಚಾಕರಿ ಮಾಡುವ ಬಾಂದಿಗಳಲ್ಲಿ ಹೆಚ್ಚು ಮಾತನಾಡುತಿರಲಿಲ್ಲ (ಮಾಮರಾ. ೬೭).
[←ಹಿಂ. ಮರಾ. ಬಾಂದೀ ; ಪಾರ. ಬಂದಹ್]

**ಬಾಂದೀತನ** (ನಾ). ಚಾಕರಿ; ಸೇವೆ : ಬಾಂದೀತನಕ್ಕೆ ಆಸಾಮಿಯನ್ನು ಚೋರಿ ಮಾಡೋಣ (ಗ್ರಾಮಸಾಕ. ೦೯೪). [ಬಾಂದೀ + -ತನ]

**ಬಾಂದು** 'ಬಂದ್$_2$' ನೋ.

**ಬಾಂದುಕಲ್ಲು** (ನಾ). (ಭೂಮಿಯ) ಗಡಿಯನ್ನು ಗುರುತಿಸಲು ನಿಲ್ಲಿಸಿರುವ ಕಲ್ಲು : ಗಡಿಕಲ್ಲು : ಬಾಂದುಕಲ್ಲುಗಳೆಂದರೇನು ? (ಭೂಮಿಅ. ೨೩); ಆಕೆಗೆ ತಾಗಿದ ಆ ಕಲ್ಲು ಅಣ್ಣತಮ್ಮಂದಿರನ್ನು ಬೇರ್ಪಡಿಸಿದ, ದೂರವಾಗಿಸಿದ 'ಬಾಂದು' ಕಲ್ಲಾಗಿತ್ತು (ಶರಪಾ. ೦೪೦) ; ಮೋಜಿನೀದಾರರನ್ನು ಕರೆಸಿ, ಅಳತೆ ಮಾಡಿಸಿ, ಸರಿಯಾದ ಸ್ಥಳಕ್ಕೆ ಬಾಂದುಕಲ್ಲು ನಡೆಸಿದ್ದನವನು (ಅನಾಮಿ. ೩೩).
[ಬಾಂದು (<ಬಂದ್$_2$) + ಕಲ್ಲು (<ಕಲ್$_3$)]

**ಬಾಂದೇರ್** (ನಾ). ಆಕಾಶದಲ್ಲಿ ಸಂಚರಿಸುವ ವಿಮಾನ : ಲೆಕ್ಕಿಪನೆ ಲಂಕೇಶ್ವರಂ . . . ಹಾರಿದನು ಬಾನ್ದೇರನೇರಿ (ಶ್ರೀರಾಮಪೂ. ೨೪೭-೩೨೭).
[ಬಾಂ$_2$ (<ಬಾನ್$_3$) + ತೇರ್$_2$]

**ಬಾಂದೊರೆ** 'ಬಾಂದೊಱೆ' ನೋ.

**ಬಾಂದೊಱೆ**, ಬಾಂದೊರೆ (ನಾ). ಆಕಾಶದ ನದಿ ; ದೇವಗಂಗೆ : "ದೇವತಾಗಂಗೆಯೊಳ್ ಬಾಂದೊಱೆ" (ಕಣಾರ್ಣ. ೪೦) ; ಕಱಿಗೊರಲಾತಂ . . . ಬಾಂದೊಱೆಯನೆ ಪೊತ್ತು ಕ[ವ]ಲ್ದೊಱೆ[ಗೆಯ್ದು]ದನೀ ಪ್ರದೇಶದೊಳ್ (ಶಂಕಶಾ. ೩-೭೩) ; ತೊಱೆಗಳೆಲ್ಲಂ ಬಾಂದೊ [ಶಾಂತಾ. ಪಾಠ್ಲ್ರೊ] ಱೆಯೆನಿಸೆಯುಂ (ಆಕಪು. ೪-೭೭ ವ) ; ಬಾಂದೊಱೆಯಂ ಪೊತ್ತಿರ್ಪ್ಪನಗಜೆಯೊಳ್ಕೊಡಿಪ್ಪಂ (ಸಮುಕ. ೯-೩೯). **ಬಾಂದೊರೆ** : ಬೊಮ್ಮಯ್ಯ ಭಕ್ತಿಯು ಬಾಂದೊರೆಯಲ್ಲಿ ಮಿಂದು ಆನಂದತುಂದಿಲನಾದ (ಶರಕ. ೭೭).

**ಬಾಂದೊಱೆದಲೆಯ** = ತಲೆಯಲ್ಲಿ ಗಂಗೆಯನ್ನು ಧರಿಸಿದವನು ; ಶಿವ : ಆ ಬಾಂದೊಱೆದಲೆಯನ ಸಾಪಂದಳೆದು ಬಂದು ನೀನೀ ಪೂವಿನ ಪೊಟಲೊಳ್ ನನೆಯಂಬನೆಂಬರಸಾದೆ (ಕಬ್ಬಿಗಕಾ. ೩೦೪) ; ಬಾಂದೊಱೆದಲೆಯನ ಮೊಗಕೊಂದರಲ್ ಮಱೆಯಾಗೆ ಕಂದಿ ಕುಂದುತ್ತೆ (ಪದ್ಮರಾ. ೬-೩೨). **ಬಾಂದೊಱೆಯ ಮಗ**=ಗಂಗಾದೇವಿಯ ಮಗ ; ಭೀಷ್ಮ : ಅೞಿನ ಮಗಂ ಪ್ರಾರ್ಥಿಸೆ ಬಾಂದೊಱೆಯ ಮಗಂ ಮಾಡೆ ಸಂಧಿಯಾದಪುದೆನುತುಂ ಮಱುಗುವೆಂ (ಗದಾಯು. ೦-೭೨). **ಬಾಂದೊಱೆಯ ಸುತ** = ಬಾಂದೊಱೆಯ ಮಗ : ಚಂದ್ರಹಾಸದ ಕರ್ಬ್ಬಿನೊಳಂ ರುದ್ರನ ಕಾಯ್ಪಿನೊಳಂ ನೆರೆದು ಬಾಂದೊಱೆಯ ಸುತನೊಡ್ಡಿ ನಿಲೆ (ನೇಮಿಪು. ೦೨-೯೮ ವ).
[ಬಾಂ$_2$ (< ಬಾನ್$_3$) + ತೊಱೆ$_2$]

**ಬಾಂಧವ** (ನಾ). ೧. ನಂಟ ; ಸಂಬಂಧಿಕ : ಬಾಂಧವರನಱಿಸಿ . . . ನಮ್ಮಂಧನರೇಂದ್ರನ ಮೊಗವಂ ಗಾಂಧಾರಿಯ ಮೊಗವನಾವ ಮೊಗದೊಳ್ ನೋಟ್ಪೆಂ (ಗದಾಯು. ೩-೭೦); ಅಪತ್ಯ ಭೃತ್ಯಬಾಂಧವಾಂತಃಪುರಪುರಸ್ಸರಯುರಗೇಶ್ವರ ಸಮುದ್ರಮಂ ಪೋಗಿ ಪುಗು (ಜಗಪು. ೩-೦೦೪ ವ) ; ಒಲಿದು ತನ್ನೊಡವುಟ್ಟು ಸೊಸೆ ಮಗಳೆಂದೆಂಬ ಪಲರು ಮುನ್ನಿನ ಬಾಂಧವರು . . . ತಂತಮ್ಮಿಷ್ಟ ಫಲವ ಪಡೆವರೆನ್ನಿಂದು (ಹರಿಪ. ೦-೪೦); ಹೊನ್ನನು ತನ್ನ ತಂದೆಗಾಗಿಯೂ ಬಾಂಧವರಿಗಾಗಿಯೂ ಮಾಡಿದ ಆಚರಣೆಯು ಆ ದೇಶದ ಅರಸನಿಗೆ ತಿಳಿಯಲು . . . ಬಹಳ ಕೌತುಕವಾಯಿತು (ಮುಂಜಿಯ. ೪-೭೮). ೨. ಗೆಳೆಯ; ಮಿತ್ರ. ೩. ಗೆಳೆತನದಿಂದ ಮಾಡುವ ಕಾರ್ಯ : ವಿಶ್ವಲೋಕವಿಭುಗೊರ್ವಂ ಭೂಪನಾತ್ಮೀಯ ಭೂಲವಮಂ ಕೊಟ್ಟಭಿಷೇಕವಂ ನೆಗೞ್ಚೆನೆಂದಂ ಮರ್ತ್ಯವೇಷಂಗೆ ಬಾಂಧವವಂ ತೋಱಲೆ ಬಲ್ಲನೇಕಱುಗುಮಜ್ಜಂ ವಿಷ್ಣುಸಾಮರ್ಥ್ಯವಂ (ಜಗಪು. ೬-೪೮). ೪. ಒಡಹುಟ್ಟಿದವನು; ಸಹೋದರ.
[ಸಂ.]

**ಬಾಂಧವಕೃತ್ಯ** (ನಾ). ಹಿರಿಯರಾದವರಂ ತಮ್ಮ ಸಂಬಂಧಿಕರಿಗೆ ಮಾಡುವ ಸಹಾಯ, ಸಲಹೆ ಮೊದಲಾದ ಕಾರ್ಯ; ಬಂಧುಗಳು ಮಾಡುವ ಕಾರ್ಯ : ವೈಭವಂಬಡೆದಿರೆ ಬಂದು ಸಂದಣಿಪ ಬಂಧುಗಳರ್ಕೆ ಸಮಂತು ನಿನ್ನೊಳಾದೊಡೆ ಕೊನೆಗೊಂಡುದ್ಯೆ ಪ್ರಜೆಯ ಬಾಂಧವಕೃತ್ಯಂ (ಕಾಳಂತ. ೬೪-೦೦೬). [ಸಂ.]

**ಬಾಂಧವ್ಯ** (ನಾ). ೧. ನಂಟಂ ; ನಂಟಸ್ತಿಕೆ ; ಸಂಬಂಧ : ಈಗಲೂ ಕಾಸರ ಮನೆತನಗಳು ಬೆಚನ್‌ಗಳೊದಿಗೆ ಬಾಂಧವ್ಯವನ್ನು ಹೇಳಿಕೊಳ್ಳುತ್ತವೆ (ಮಲೆನಾ. ೫೦); ಏಂತ್ರರ ಸ್ನೇಹವು ಬಾಂಧವ್ಯವಾದರೆ ಮತ್ತಷ್ಟು ಹಿತವನು ತರದೆ (ಇಂಜಾಕ. ೨೦೫-೦೫). ೨. ಕೆಳೆ ; ಸ್ನೇಹ ; ಮೈತ್ರಿ : ಇಲ್ಲಿ ಕಂಡು ಬರುವ ಜಾತಿ, ಮತ, ಕುಲ, ಗೋತ್ರ, ಭಾಷೆ — ಇವುಗಳ ಭಿನ್ನತೆ ನಮ್ಮ ನಮ್ಮ ಬಾಂಧವ್ಯವನ್ನು ಸಡಿಲಿಸುತ್ತಿದೆ (ಕ್ಷಿಭರ. ೨೪). ೩. ಸೋದರತೆ ; ಬಂಧುತ್ವ ; ಜ್ಞಾತಿಸಂಬಂಧ : ಭಾಷೆಗಳ ಬಾಂಧವ್ಯ ವನ್ನು ಪ್ರಕಟಗೊಳಿಸುವ ಅಳತೆಗೋಲು ವ್ಯಾಕರಣ (ದ್ರಾಭಾ. ೦೧ ಹಿನ್ನೆಲೆ). [ಸಂ.]

**ಬಾಂಬ್** 'ಬಾಂಬು' ನೋ.

**ಬಾಂಬ** (ನಾ). ೧. ಮಡಿಕೆ, ಕುಡಿಕೆಗಳನ್ನು ಮಾಡುವವನು ; ಕುಂಬಾರ: "ಬಾಂಬರ್ ಕುಂಬಜಿರ್ (ಕುಜುಂಬರ್)" (ಶಬ್ದ. ಶಕ. ೨); "ಬಾಂಬರ್ಕಳಾ ಕುಂಬಜರ್‌" (ಕರ್ಣಾ. ೬೪) ; ಆ ಮಹಾಪಲಾಧವನ್ನು ನಡೆಯಿಸುವ ಜಡತ್ವವು ದೃಷ್ಟತೆಯು ದುಷ್ಕೃತವು ಬಾಂಬನೆನಿಸಿರುವ ನಾದರೂ, ಆ ಬ್ರಹ್ಮನಿಗೆ ಸಾಧ್ಯವೆ? (ಮಂತ್ರಶ. ೯೦-೬). ೨. (ಆಲಂ) ಹೆಡ್ಡ ; ದಡ್ಡ: ತಾನೊರ್ವನೆ ಜಗಕ್ಕೆ ಗಂಡಂ, ಮಿಕ್ಕುಳಿದರೆಸುಗಳೆಲ್ಲರ್ ಬಾಂಬರೆಂದೆ ಬಗೆವಂ ರಾವಣಂ (ರಾವಣಾ. ೦೨೫-೨).

[ಬಾಂ~1~ (< ಬಾನ್~2~) + — ಬ~2~]

**ಬಾಂಬ~2~** (ನಾ). ಸ್ವರ್ಗಲೋಕದವನು ; ದೇವತೆ : ಸ್ತ್ಯೂಸೇದಂ ಬಾಂಬರನ್ ಅಳಿದಿರ್ಕೆಂದು ಚಲುಂಬಿಡಿದು ತಟಿಸಂದರರೆಬರ್ (ಜಿನ್ನಶ್ರ. ೦೨-೨೯೫).

**ಬಾಂಬರೆಜೆಯ** = ದೇವತೆಗಳ ಒಡೆಯಂ ; ದೇವರಾಜ : ಪಿರಿಯ ಬಾಂಬರೆಜೆಯುನಿವನ್ . . . ಎನ್ನನಿಜಿಯಿಯುತಿರ್ಪವನ್ (ಜಿದ್ಧಶ್ರ. ೦೦-೨೦೫).

[ಬಾಂ~2~ (< ಬಾನ್~3~) + — ಬ~2~]

**ಬಾಂಬಟ್ಟೆ** 'ಬಾನ್ಬಟ್ಟೆ' ನೋ.

**ಬಾಂಬಟ್ಟೆಗ** (ನಾ). ಆಕಾಶಮಾರ್ಗದಲ್ಲಿ ಸಂಚಾರ ಮಾಡುವವನಂ ; ಖೇಚರ ; ದೇವತೆ : ಕಟ್ಟಿದ ವೈಜಯಂತಿಗಳ ಸಂದಣಿ ಬಾಂಬಟ್ಟೆಗರಡೆ ಯಾಟವನು ಕಟ್ಟಿದುದು (ಕುಂದಾಪಾಂ. ೬-೦೨) ; ಪಟ್ಟಸಿಲಾಪುಟಭೇದನ ದಟ್ಟಳಿಗಳನೊಲ್ದು ನೋಡಿ ತೊಲಗದೆ ಮಿಗೆ ಬಾಂಬಟ್ಟೆಗರಿರ್ದ ಪಥ ಶ್ರಮುದಟ್ಟಳಿಯಂ ಕಳೆದು ಪೋಪರತಿಮುದದಿಂದಂ (ಹರಿಶ್ಚಂ. ೦-೬೨); ಅಲರೊಳ್ ಬಂಡುಣಿವಿಂಡುಗಳ್ ಸೊದೆಯೊಳಾ ಬಾಂಬಟ್ಟೆಗರ್ . . . ಎಂದಿಗಂ ತಣಿಯದಂತೆ (ಜಳಪ. ೦-೯೦).

[ಬಾಂಬಟ್ಟೆ (< ಬಾನ್ಬಟ್ಟೆ) + — ಗ~2~]

**ಬಾಂಬಟ್ಟೆಗವೆಣ್** (ನಾ). ಆಕಾಶಮಾರ್ಗದಲ್ಲಿ ಸಂಚರಿಸುವವಳು ; ಖೇಚರಿ ; ದೇವತಾಸ್ತ್ರೀ : ವಿದ್ಯಾಧರರಾಯನ ಮಿಸುಕುವ ರೂಪಿಗೆ ಹೊಸ ಹರೆಯಂ ಬಂದುದು ಬಾಂಬಟ್ಟೆಗವೆಣ್ಗಳನತಿ ಮೋಹಿಸುತ (ಜಯುಕಾ. ೦೪-೬). [ಬಾಂಬಟ್ಟೆಗ + ಪೆಣ್]

**ಬಾಂಬರಿ** (ನಾ). ಆಕಾಶದಲ್ಲಿ ಮಾಡುವ ಸಂಚಾರ; ಗಗನಸಂಚಾರ : ಬಾಂಬರಿಯೊಳ್ ಮಾರ್ತಾಂಡನುಮಂ ಪುಲ್ಲ ಕಡ್ಡಿಗು ಕೈಕೊಳ್ಳಳ್ (ಅರ್ಥನೀ. ೩-೬). [ಬಾಂ~2~ (< ಬಾನ್~3~) + ಪರಿ~3~]

**ಬಾಂಬರು** (ನಾ). ಸಿಡಿಗುಂಡುಗಳನ್ನೆಸೆಯುವ ಯುದ್ಧವಿಮಾನ : ಚಂಡಮಾರುತನೇರಿ ಬಂದ ಬಾಂಬರುಗಳೂ ಸೋತೋಡಿದುವು (ಪಕ್ಷಿಕ್ಷ. ೦೨-೪). [ ← ಇಂ. Bomber]

**ಬಾಂಬಸು** (ನಾ). ಸ್ವರ್ಗಲೋಕದ ಹಸು; ಕಾಮಧೇನು : ಏನೆಮಗಾ ಬಾಂಬಸುವಿಂದೇನೆಮಗಾ ಬಾಮ್ಮರಂಗಳಿಂ (ಅಕ್ಷಾತಿ. ೪೧-೦೨) ; ಮದನನ ಬಾಗದೇಳ್ಗೆಯನಭೀಕ್ಷಿಸಿ . . . ಬೆದರ್ದತ್ತು ಬಾಂಬಸು ಕರಂ (ಚಂದ್ರಶ್ಮು. ೦೫-೦೯೩). [ಬಾಂ~2~ (< ಬಾನ್~3~) + ಪಸು~4~]

**ಬಾಂಬಳಿಕು** (ನಾ). ಸೂರ್ಯಕಾಂತಶಿಲೆ ; ಆಕಾಶಸ್ಫಟಿಕ : ಗೋಡೆ ಗೋಮೇದಿಕರತ್ನದಿಂ ಬಾಗಿಲ್ವಾಡ ಬಾಂಬಳಿಕಿಂದ ಜಗಲಿ ವೈಡೂರ್ಯದಿಂ . . . ನಾಡೆ ಕಣ್ಗೆಸೆದಿಹವಲ್ಲಿ (ಕುಂದಾಪಾಂ. ೩-೬೨).

[ಬಾಂ~2~ (< ಬಾನ್~3~) + ಪಳಿಕು (< ಪಟಿಕ) ]

**ಬಾಂಬಾವು** (ನಾ). ಆಕಾಶದ ಹಾವು ; ರಾಹು ; ಸೈಂಹಿಕೇಯ : "ಬಾಂಬಾವೆಂದು ರಾಹು" (ಕಶಾ. ೪೯-೩೦) ; ಇನಮಂಡಲಮಂ ಪಿಡಿಯ ಲ್ಕನುಗೈದೆಟ್ಟಿಂದು ಸಾರ್ದ ಬಾಂಬಾವೆನೆ ತಾಂ ಮಿನುಗುವ ಮುಡಿಮಣಿಯಂ ತಳೆದೆನಸುಂ ಸೊಗಸಿದುದು ವೇಣಿ ತದ್ಬಾಲಿಕೆಯಾ (ಉದ್ಭಟ. ೫-೪೨); ಬಿಡದೆ ಬಾಂಬಾವಿಗಂಗಮುಮನೋಸರಿಸದೀವುದು (ಕಬಪು. ೦೪-೨೦).

[ಬಾಂ~2~ (< ಬಾನ್~3~) + ಪಾವು~1~]

**ಬಾಂಬಿಲ್** (ನಾ). ಆಕಾಶದಲ್ಲಿ ಮೂಡುವ ಕಾಮನ ಬಿಲ್ಲು; ಇಂದ್ರ ಧನುಸ್ಸು : ಕಣ್ಣ ಬಾಂಬಿಲ್ಗಳಲಿ ನೇಹವನು ಹೂಡುವಿರಿ ಕುದಿವ ಹೃದಯವ ಮಿಡಿಸಿ ಮೌನ ನುಡಿಸಿ (ಹಿಮ್ಮುದ್ರ. ೨).

[ಬಾಂ~2~ ( < ಬಾನ್~3~) + ಬಿಲ್~2~]

**ಬಾಂಬು, ಬಾಂಬ್** (ನಾ). ಫಿರಂಗಿಯಿಂದ ಹೊಡೆಯುವ ಅಥವಾ ಕೈಯಿಂದ ಎಸೆದು ಸಿಡಿಸುವ ಸಿಡಿಮದ್ದು ತುಂಬಿದ ಕಬ್ಬಿಣದ ಗುಂಡು ; ಸ್ಫೋಟಕಗುಂಡು; ಸಿಡಿಗುಂಡು : ಸಿಡಿವ ಮದ್ದಿನುಂಡೆ ಯಂತೆ, ಹಾರಲಿಹ ಫಿರಂಗಿಯಂತೆ, ಒಡೆಯಲಿರುವ ಬಾಂಬಿನಂತೆ, ವಿಪ್ಲ ವದ ಕೇಸರಿಯು . . . ಸಿದ್ಧವಾಗುತಿರುವುದು (ಪಾಂಚಜ. ೩೪-೨೨); ಬಾಂಬಿನ ದಾಳಿಗೆ ಊರು ತುತ್ತಾಯಿತು (ಸಂಧ್ರಪೀ. ೦೪-೫೬). ಬಾಂಬ್ : ಶಿಜಯ . . . ಬಾಂಬ್ ತಯಾರಿಕೆಯಲ್ಲಿ ನಿರತನಾಗುತ್ತಿದ್ದ (ಅಹ್ಮಾರ್ಕ. ೦೩೬).

[← ಇಂ. Bomb]

**ಬಾಂಬೆಣ್** (ನಾ). ಸ್ವರ್ಗದ ಹೆಣ್ಣು ; ದೇವತೆ ; ಅಪ್ಸರೆ.

**ಬಾಂಬೆಂಡಿರ್**=ಅಪ್ಸರೆಯರು : ಅಡರ್ವರ್ತರ್ಾಂ ಪೌರುಷ್ರಂಗಕ್ಕರಿ ಗಳಡರೆ ನೀಂ ತನ್ಮಹಾದುರ್ಗಮಂ . . . ಪಿಡಿವರ್ಬಾಂಬೆಂಡಿರಂ ತಾಂ ಪಿಡಿಯೆ ಜಡಿದು ತತ್ಕನ್ಯಕಾರತ್ನಮಂ ನೀಂ (ಅಕ್ಷಾತಿ. ೬೪-೬೨).

[ಬಾಂ~2~ (< ಬಾನ್~3~) + ಪೆಣ್]

**ಬಾಂಬೊಚ್ಚ** (ನಾ). ಆಕಾಶದ ನದಿ ; ದೇವಗಂಗೆ : ಅವುಗಳೆಲ್ಲಂ ಭೂ ಸ್ವಾಭಾವ್ಯಂಗೊಂಡ ಬಾಂಬೊಚ್ಚದ ನೀರ್ವನಿಗಳವೊಲ್ ಮಾನುಷ ಚಾರಿತ್ರಗಂಧಮಂ ತಾಳ್ದಿದುವು (ಅದ್ಭುತ. ೨-೦೬).

**ಬಾಂಬೊಚ್ಚದಲೆಯ** = ತಲೆಯಲ್ಲಿ ಗಂಗೆಯನ್ನು ಧರಿಸಿದವನು ; ಶಿವ : " ಬಾಂಬೊಚ್ಚದಲೆಯಂ . . . ಕಿಡಿಗಣ್ಣನು " (ಕಬ್ಬಿಕ್ಕಿ. ೪) ; ಕೆಂಗಿಡಿಗಣ್ಣ ಬಾಂಬೊಚ್ಚದಲೆಯ ಪಿರಿದಿನಿವ[ಪೊ]ಡೆಯ ಮಿಡ ನಿರಂಜನ ಲಿಂಗ (ಶಾಸೋಪು. ೦೩-೦) ; ಬಾಂಬೊಚ್ಚಂ ತಲೆಯೊಳ್ ಆವಂಗೆ ಆತಂ ಬಾಂಬೊಚ್ಚದಲೆಯಂ (ಶಬ್ದಾನು. ೩೦೦ ಪ್ರಯೋ.).

[ಬಾಂ~2~ (<ಬಾನ್~3~) + ಪೊಚ್ಚ~3~]

**ಬಾಂಬೊಳಲ್** 'ಬಾಂಬೊಟಿಲ್' ನೋ.

**ಬಾಂಬೊಳಲ** (ನಾ). ಆಕಾಶದಲ್ಲಿ ಕಟ್ಟಿದ ಪಟ್ಟಣಕ್ಕೆ ಸೇರಿದವನು.

**ಬಾಂಬೊಳಲರ್** = ಆಕಾಶದಲ್ಲಿ ಕಟ್ಟಿದ ಮೂರೂರು ಪಟ್ಟಣಗಳಿಗೆ ಸೇರಿದ ವಿದ್ಯುನ್ಮಾಲಿ, ಕಮಲಾಕ್ಷ, ತಾರಕಾಕ್ಷರೆಂಬ ಮೂರೂರು ಜನ

ದೈತ್ಯರು : ಮೂಜಗ ಬಾಂಬೊಳಲರ ಮೊಗ್ಗರಮಂ ಮುಗ್ಗಿಸಿದುಂಗಣ್ಣಂ ಬಗ್ಗಂ ಕುಡುಗೆವುಗೆ (ಉದ್ಭರೇ. ೪-೪೬).
[ಬಾಂಬೊಳಲ್ (<ಬಾಂಬೊಟಲ್) + –ಅ₇]

**ಬಾಂಬೊಳೆ** 'ಬಾಂಬೊಟೆ' ನೋ.

**ಬಾಂಬೊಟಲ್,** ಬಾಂಬೊಳಲ್ (ನಾ). ೧. ಸ್ವರ್ಗದ ಪಟ್ಟಣ : **ಅಮರಾವತಿ** : 'ಬಾಂಬೊಟಲ್ಮರ' ಪರಾ. ೨. ಆಕಾಶದಲ್ಲಿ ಕಟ್ಟಿದ ಪಟ್ಟಣ; ತ್ರಿಪುರ; P ತಾರಕಾಸುರನ ಮಕ್ಕಳಾದ ಮೂರು ಜನ ದೈತ್ಯರು ಕಟ್ಟಿಕೊಂಡ ಮೂರು ಪಟ್ಟಣಗಳು. ಆಕಾಶದಲ್ಲಿ ವಿದ್ಯುನ್ಮಾಲಿಯ ಕಬ್ಬಿಣದ ಪಟ್ಟಣ. ಅದಕ್ಕೂ ಮೇಲೆ ಅಂತರಿಕ್ಷದಲ್ಲಿ ಕಮಲಾಕ್ಷನ ಬೆಳ್ಳಿಪಟ್ಟಣ. ಅದಕ್ಕೂ ಮೇಲೆ ತಾರಕಾಕ್ಷನ ಚಿನ್ನದ ಪಟ್ಟಣ : ಬಾಂಬೊಟಲನುರ್ಕಿಂ ಮೂಱುಮಂ ಸುಟ್ಟು (ಕಬ್ಬಿಗ. ೦೩೬); ಬಾಂಬೊಟಲ ರಕ್ಕಸರಂ ಗಾಱುಗಿಡಿಸಿದ ತನ್ನೊಂದಧಟೆಂದಣುವನನಿರ್ದಿಪ ಫಣಿಭೂಷಂ (ರಾಮಾಶ್ವ. ೦೩೨-೨). **ಬಾಂಬೊಳಲ್** : 'ಬಾಂಬೊಳಲ' ಪರಾ. [ಬಾಂ₂ (<ಬಾನ್₃) + ಪೊಟಲ್₁]

**ಬಾಂಬೊಟಲುರಿಕ** (ನಾ). ಆಕಾಶದ (ಮೂರು) ಪಟ್ಟಣಗಳನ್ನು ಸುಟ್ಟವನು; ಶಿವ : "ಬಾಂಬೊಟಲುರಿಕಂ, ದೇಸಿಗಂ, ಗಂದರಗಿವಿಯಂ, ಬೆಳ್ಪಡಿ . . . ಅಯ್ಯೊಗಂ–ಈ ೩೨ ಈಶ್ವರಂಗೆ ಪೆಸರ್" (ಕಶಸಾ. ೪೭-೧); "ಬಾಂಬೊಟಲುರಿಕಂ ತಿಸುಳಿ ಕಂದುಗೊರಲಂ ಗೊರವಂ" (ಕಚಿಕಂ. ೦೩).
[ಬಾಂಬೊಟಲ್ + ಉರಿಕ]

**ಬಾಂಬೊಟಲ್ಮರ** (ನಾ). ದೇವಲೋಕದಲ್ಲಿರುವ ಮರ ; ಸ್ವರ್ಗದ ವೃಕ್ಷ; ಕಲ್ಪವೃಕ್ಷ: ಪೂತೆಸವ ಬಾಂಬೊಟಲ್ಮರನಂ ದೊರೆಗೊಂಬ ಮಲ್ಲಡಿಗಳಂ (ಜಕವಂ. ೪೪-೭). [ಬಾಂಬೊಟಲ್ + ಮರ₁]

**ಬಾಂಬೊಟೆ,** ಬಾಂಬೊಳೆ (ನಾ). = ಬಾಂಬೊಚ್ಚ : "ಬಾಂಬೊಟೆಯೆನೆ ಮಂದಾಕಿನಿ" (ಶತುಂ. ೦೦); ಬಾನೊಳ್ ಪೊಟೆ, ಬಾಂಬೊಟೆ (ಶಬ್ದಾನು. ೩೦೩ ವ್ಯಾಖ್ಯಾ) ; ಮೊಸಳೆ ಮುಸುಂಕದಚ್ಚ ಪೊಸಬಾಂಬೊಟೆಯಿಂ ಬೊಸಲೊರ್ಮೆ ಕೊನರ್ಗೊಣಾ ಮುಸುಱಿದ ಜೇನ ಪುಟ್ಟಿ ಮೊನೆಮುಳ್ಳಿ ಗೇದಗೆ . . . ಮಾಮಸಗಿತೂ ಗುಡುಮೋಳಿಗರ ಕೈಬೆಮರ್ಗ್ಗೊಂದವ ಸೂಳೆಮೇಳವೇಂ (ಕಕಪು. ೬-೦೩೫). **ಬಾಂಬೊಳೆ** : "ನಾಕನದಿಗಕ್ಕು ಬಾಂಬೊಳೆಯೆಂದು" (ಕಕರ. ೭೭); ಬಾಂಬೊಳೆಯೊಳ್ ಸುರಗಿರಿಗೆ ಪರಿದು ಜನಬಿಂಬಕ್ಕೆಱಗಿ (ಜಯುಕಾ. ೦೩-೨೩); ಇಳೆಯನೀರಡಿ ಮಾಡಿದ ಪಾದ ಜತನ ಬಾಂಬೊಳೆಯು ಪರಿಸಿದಂಘ್ರಿ ಜತನ (ಮೋಹತ. ೦೪-೦೯).

**ಬಾಂಬೊಳೆದಲೆಯ** = ತಲೆಯಲ್ಲಿ ಗಂಗೆಯನ್ನು ಧರಿಸಿದವನು : **ಶಿವ** : ಭಳಿವಟ್ಟಣಬುಗಿಯಾಣ್ಮಾರುವೊಗನ್ನೆಯ ಬಾಂಬೊಳೆದಲೆಯ . . . ಪೊರೆಗೆಮ್ಮನು (ನವಮೋ. ೩೨-೦). [ಬಾಂ₂ (<ಬಾನ್₃) + ಪೊಟೆ]

**ಬಾಂಬೋಳ** 'ಬೊಂಬಾಳ₁' ನೋ.

**–ಬಾಕ, – ಬಕ್ಕ₂** (ಪ್ರ). (ಅತಿಯಾಗಿ ತಿನ್ನುವವನು ಎಂಬರ್ಥದಲ್ಲಿ ಸೇರುವ) ಒಂದು ತದ್ಧಿತಪ್ರತ್ಯಯ : '**ಹೊಟ್ಟೆಬಾಕ**' ಪರಾ. **ಬಕ್ಕ₂** : '**ಕೂಳ್ಬಕ್ಕ**', '**ತಿನಿಸುಬಕ್ಕ**' ಪರಾ.

**ಬಾಕತನ** (ನಾ). ಹೊಟ್ಟೆಬಾಕತನ ; ತಿನಿಸುಬಕ್ಕತನ : ಉಪ್ಪುನೀರಂ ದಿನಂಪ್ರತಿ ಬಾ[ಶಾತಾಂ. ಚಿಾ. ಪಾ]ಕತನದಿಂದ ತಪ್ಪದೇ ಹೀರಿದಾ ತಲೆ ಬಿಗುಡು ಗಗನದೊಳಗೊಪ್ಪದಿಂ ಪರಿವ ದೇವಾಪಗೆಯ ಮಧುರತರವಾರಿಯ ಹೀರಿಹೀರಿ ಚಪ್ಪರಿಸಿದಲ್ಲದೇ ಹೋಗದು (ಸಪ್ನುಕೌ. ೦೨-೯). P ಇದು ಒಂದು ಅಪರೂಪದ ಶಬ್ದ. 'ಹೊಟ್ಟೆಬಾಕ' ಎಂಬುದರ ಸಂಕ್ಷಿಪ್ತ ರೂಪವಾಗಿ 'ಬಾಕ' ಎಂದು ಬಳಕೆಯಾಗಿರುವ ಪ್ರಯೋಗಗಳು ನಮಗೆ ದೊರೆತಿಲ್ಲ. ಆದರೆ ಇಲ್ಲಿ '-ಬಾಕ' ಮತ್ತು '–ತನ' ಎಂಬ ಎರಡು ಪ್ರತ್ಯಯಗಳಂ ಸೇರಿ ನಾಮಪದವಾಗಿರುವುದನ್ನು ಗಮನಿಸಬಹುದು. [–ಬಾಕ + –ತನ]

**ಬಾಕಯ್ಯ** (ನಾ). ಒಬ್ಬಾತನ ಹೆಸರು : ಬಾಕಯ್ಯ ತುಱುಗೊಳೊಳ್ ಸ್ವರ್ಗಸ್ಥನಾದಂ (ಎಕ. XI. ಹೊಳಲ್ಕೆ. ೬೭-೫ ; 975).
[ಬಾಕ₀ | ಅಯ್ಯ₁₁]

**ಬಾಕಿ** (ಗು). ೧. ಇತರ: ಬೇರೆಯ : ಉಳಿದ : ಭಿಸಿ ಹೆಂಡೆ ಮಾಡಿ ತುಕದ ಬಾಕಿ ತುಕದ ತುಪ (ಎಕ. VII. ಶಿವಮೊ. ೦೦೭-೦೭; 1576) ; ಬಾಕಿ ಎರಡು ಪಾಕದ ಹಣವನ್ನೂ ಸಹ ಅವರ ಮನೆಗಳಲ್ಲಿ ಎಂದು ಕೊಡು ತ್ತಾರೆಯೋ ! (ಕಲಾಸಾ. ೨೦). (ನಾ). ೨. ಉಳಿದುದು ; ಮಿಕ್ಕಿದುದು; ಶಿಲ್ಕು : ಇದರೊಳಿಮಗತ್ಯಧಿಕಬಲ ಬಂದೊದಗುವುದುಯಿನ್ನುಳಿದ ಬಾಕಿ ಯನದನು ಕೈಕೊಳ್ಳಯ್ಯ (ಜನಭಾ. ೩೮-೫೦); ಸರಿ! ಇನ್ನದೊಂದೇ ಬಾಕಿ! (ಕಂಕಶೂ. ೮) ; ಈ ಬಾಕಿಯದಷ್ಟೂ ನಾವು ತೆಗೆದುಕೊಳ್ಳೋಣ (ನಡಿಡಾ. I. ೩೨೪). ೩. ತೀರಿಸಬೇಕಾದ ಹಣ; ಸಾಲ : ಏನಾದರೊಂದು ಬಾಕಿಗಾಗಿ ಯಾರಾದರೊಬ್ಬರು ಕಾಡಿದರೆ ಹೆಚ್ಚಾಗಿ ನೆರವಿಗೆ ಬರುತ್ತಿದ್ದುದು ಮಾಲತಿಯೆ (ವಾತ್ಸಲ್ಯ. ೩೦).

**ಬಾಕಿ ಉಳಿಸು** = ೧. ಯಾವುದಾದರೊಂದು ಕೆಲಸವನ್ನು ಪೂರ್ತಿ ಮಾಡಿ ಮುಗಿಸದಿರು : ಇಂದಿನ ಕೆಲಸವನ್ನು ನಾಳೆಗೆ **ಬಾಕಿ ಉಳಿಸ** ಬಾರದು (ರೂಢಿ). ೨. ಕೊಡಬೇಕಾದ ಹಣವನ್ನು ಪೂರ್ತಿಯಾಗಿ ಕೊಡದಿರು : ಈ ತಿಂಗಳು ಬಾಕಿ ಉಳಿಸದೆ ಪೂರ್ತಿಹಣವನ್ನು ಕೊಟ್ಟು ಬಿಡುತ್ತೇನೆ (ರೂಢಿ). **ಬಾಕಿ ತೀರು** = ಕೊಡಬೇಕಾದ ಹಣ ಸಂದಾಯ ವಾಗು; ಸಾಲ ತೀರು : ಬಾಕಿ ತೀರಿದ ಮೇಲೆ ಉಳಿಯುವ ಆಸ್ತಿ ನಮಗೆ ಸೇರುತ್ತದೆ (ಕೃಪಾಶಾ. II. ೪೩೦). **ಬಾಕಿ ಬೀಳು** = ಪೂರ್ಣವಾಗ ದಿರು ; ತೀರದಿರು : ತೆತ್ತಷ್ಟೂ ಬಾಕಿ ಬಿದ್ದರೆ ಮತ್ತೇನು ಕೊಟ್ಟಾನು ? (ಗಾದೆ) ; ಬಾಕಿ ಬಿದ್ದ ಕೆಲಸವನ್ನು ನಾಳೆ ಪೂರೈಸಲೇ ಬೇಕು (ರೂಢಿ). **ಬಾಕಿಮಾತು** = ಬೇರೆಯ ಮಾತು : ನೀನು ಬಂದದ್ದೇಕೆ ಹೇಳು. ಬಾಕಿಮಾತು ಬೇಡ (ರೂಢಿ). **ಬಾಕಿಯಿರಿಸು** = ಕೊಡಬೇಕಾದುದರಲ್ಲಿ ಬಾಕಿಯನ್ನು ಉಳಿಸಿಕೊಳ್ಳು : ತಿಂಗಳಿ ಗೊಮ್ಮೆ ಕೊಡುವ ಹಣದಲ್ಲಿ ಏನೂ ಬಾಕಿಯಿರಿಸಬಾರದು (ಅತುಸಾ. ೦೨೩).
[←ಅರ. ಹಿಂ. ಮರಾ. ಬಾಕೀ]

**ಬಾಕಿದಾರ** (ನಾ). ಸಾಲ ತೀರಿಸದೆ ಇರುವವನು ; ಕೊಡಬೇಕಾದ ಹಣವನ್ನು ಬಾಕಿ ನಿಲ್ಲಿಸಿ ಕೊಂಡವನು : ಸೀತಾರಾಮನು ಬಾಕಿದಾರ ರನ್ನೂ ತಹಸೀಲ್‌ದಾರರನ್ನೂ ಸೆರೆಯಲ್ಲಿಡಿಸಿದನು (ಬಂಕಿಮ. ೩೦೬) ; ಪುಂಡರು ಬಾಕಿದಾರರಿಗೆ ಕಂದಾಯ ಪಾವತಿ ಮಾಡದಂತೆ ಚಿತಾವಣೆ ಮಾಡುತ್ತಿದ್ದರು (ಬಾದಾನ. ೬೨).
[ಬಾಕಿ + –ದಾರ₄. / ಹಿಂ. ಮರಾ. ಬಾಕೀದಾರ್]

**ಬಾಕಿಮಾರು** (ನಾ). ಮನೆಯ ಮುಂದುಗಡೆಯಿರುವ ವಿಸ್ತಾರವಾದ ಜಮೀನು : ಬೀಡಿನ ಮುಂದಿನ ಬಾಕಿಮಾರು ಗದ್ದೆ (ಕೋಟಿಚ. ೧೬).
[←ತುಳು. ಬಾಕಿಮಾರ್, ಬಾಕ್ಯಾರ್]

**ಬಾಕಿಜು** (ಕ್ರಿ). ಕಿರುಗತ್ತಿಯಿಂದ ಇರಿ ; ಚುಚ್ಚು: ರಿಪುಭಟರ . . . ಬಾಕಿಜಿದು ಯಮರಾಜನ ಪುರಕ್ಕೆದಿಸಿದರ (ಕಂಸವ. ೦೪-೬೫).
[ಬಾಕು₂ (<ಬಾಂಕು₁) + ಇಜು₁]

**ಬಾಕು₁** 'ಬಾಹು₁' ನೋ.

**ಬಾಕು₂** 'ಬಾಂಕು₁' ನೋ.

**ಬಾಕು₃** 'ಬಾಂಕು₂' ನೋ.

**ಬಾಕುಳ** 'ಬಾಗುಳ' ನೋ.

**ಬಾಕುಳಿ** 'ಬಾಗುಳಿ' ನೋ.

**ಬಾಕುಳಿಕ** (ಗು). ಅತ್ಯಪೇಕ್ಷೆಯಿಂದ ಕೂಡಿದ ; ಅತ್ಯಾಸೆಯ ; ಶ್ರೀಕಂಠ

ಶಿವನ ನೆನೆಯದು ಲೌಕಿಕವಾರ್ತೆಯನೆ ಸೂರಪುತಿರ್ದಪ್ಪದೆನ್ನೀ ಬಾಕುಳಿಕ ಜಿಹ್ವೆ (ಶಂಕರಿಕಂ. ೦). [ಬಾಕುಳಿ (< ಬಾಗುಳಿ) + ?]

**ಬಾಕುಳಿಕತ್ವ** (ನಾ). ಅತ್ಯಪೇಕ್ಷೆ; ಅತ್ಯಾಸೆ : ಬಾಕುಳಿಕತ್ವ ಸೀಗಿ ಮಿತಾಹಾರ ದಿಂದ ಆಚರಣೆ ಇತ್ಯಾದಿ (ಏಕಾಸು. ೯೯ ಸೂತ್ರ). [ಬಾಕುಳಿಕ+ — ತ್ವ]

**ಬಾಕುಳಿಗ** (ನಾ). ಅಧಿಕವಾಗಿ ಆಸೆಪಡುವವನು, _ ಅಪೇಕ್ಷಿಸು ವವನಂ : ತೋಕಿದರು ತೂಱಂಬ ಬೊಬ್ಬೆಯ ಬಾಕುಳಿಗರೊಳಪೊಕ್ಕು (ತೊರರಾ. ೫-೫-೦೪). [ಬಾಕುಳಿ(<ಬಾಗುಳಿ) + — ಗ₂]

**ಬಾಕುಳಿಗಣ್** (ನಾ). ಅತ್ಯಾಸೆಯಿಂದ ಕೂಡಿದ ಕಣ್ಣು ; ವಿಷಯಾ ತುರವಾದ ಕಣ್ಣು : ಸಿಟ್ಟಪ ಬಾಕುಳಿಗಣ್ಗಳ್ ರುಚಿಯೊಡವುಟ್ಟಿದ ಕಾತರದಿಂ . . . ಮನಮುಟ್ಟಿ ಕರಂ ಕೂಡಿದರಂಗಭವಂ ಮಿಗೆ ಮೆಚ್ಚುವ ತೆಱದಿ (ಜಯುಕಾ. ೨-೬೩). [ಬಾಕುಳಿ(<ಬಾಗುಳಿ)+ಕಣ್]

**ಬಾಕುಳಿಗತನ** (ನಾ). ಅತ್ಯಾಸೆ ; ಲೋಭ : ಸುರಾಸುರರ್ಜಲಧಿಯಂ ಕಡೆಯ ಲತ್ಯಲಘುಸದ್ವಸ್ತುಗಳ್ಬೆರೆ ಮತ್ತೆ ಮತ್ತೆ ಬಾಕುಳಿಗತನದಿಂ ಮಥನಿಸಲ್ಕಿವ ವನುಗುಳೆ . . . ತದ್ಗರಳವನಗಜಾವರಂ ಗಳದಲ್ಲಿ ಧರಿಸಿದಂ (ಶಾಕೋಪು. ೦೦-೬೯). [ಬಾಕುಳಿಗ+ — ತನ]

**ಬಾಕುಳಿಗೊಳ್** (ಕ್ರಿ). ಅಧಿಕವಾಗಿ ಆಸೆಪಡು,_ಬಯಸು : ಹಣ್ಣಿಂಬ ವಾರ್ತೆಯು ಕೇಳಿ ಕಾಮುಕರೆದೆ ಹಣ್ಣಾಗಿ ಬಾಕುಳಿಗೊಂಡು ಹಣ್ಣುಳ್ಳ ಮರಕೆ ಹಕ್ಕಿಗಳೋಡಿ ಬಹ ಮೋಡಿ ಹಣ್ಣ ಕೂಡಿದರು (ಭರತ. ೫೫-೦೬). [ಬಾಕುಳಿ(<ಬಾಗುಳಿ) + ಕೊಳ್₁]

**ಬಾಕುಳಿತನ** (ನಾ). = ಬಾಕುಳಿಗತನ : ಬಾಕುಳಿತನದಿಂ ಬಳಸಿ ನಿರೀಕ್ಷಿಪ ಶಾಕಿನಿ ಡಾಕಿನಿ ಭೂತಪ್ರೇತಾನೀಕದ ಕಣ್ಣೀಱಿಂದಿನಿವಿರಿದುಂ ತಿಂದಿನಿ ಸಕ್ಕಸದೆ ಓಕರಿಸುವ ಬೇತಾಳನ ಬಾಯಿಂದಾ ಕರುಳೋಸದೆ ಸುರಿದುದು (ಜಯುಕಾ. ೬-೩೨); ಬಾಗಿಲ್ಗಾಯ್ದಿರ್ದುದಿದಯ್ಯಗಳೋಜೆಯೆಯೆಂಬಲಿಯುಣ್ಬ ನೊಡನೆ ಬಾಕುಳಿತನದಿಂ ಕಯ್ಯಾಂತಾಂತದ ಸರಿಯದೆ ಸುಱುವುದಿದಯ್ಯ ಗಳೇಳ್ಗಿಯೆ (ಅದ್ಭುದೀ. ೫-೩೨). [ಬಾಕುಳಿ (< ಬಾಗುಳಿ) + — ತನ]

**ಬಾಕುಳಿವಾತು** (ನಾ). ಅಧಿಕವಾದ ಆಸೆಯನ್ನು ಹುಟ್ಟಿಸುವ ನುಡಿ; ಅತ್ಯಪೇಕ್ಷೆಯ ಮಾತು : ಬೇಕಾದಷ್ಟು ಸೆಳೆದುಕೊಂಡು ದೊರೆಯೊಳು ಬಾಕುಳಿವಾತ ಗಂಟಿಕ್ಕಿ (ಪ್ರಾಚಕ. ೩೦-೦೯೪). [ಬಾಕುಳಿ (< ಬಾಗುಳಿ) + ಮಾತು₁]

**ಬಾಕುಳೆ** (ನಾ). ಅಧಿಕವಾದ ಆಸೆಯುಳ್ಳವಳು; ಅತ್ಯಪೇಕ್ಷೆಯುಳ್ಳ ವಳು : ಬಾಕುಳೆಯರ ಬಾಯ್ಮಡಿಪಡೆದ ಸೆಳೆದು ಬದ್ದೆಯುರುಡಿಸಿದೊಡುಡ ಕಲ್ಪ ಕೊವರಸಭಿನವಮದನಂ (ಅನಂತಪು. ೦-೫೯). [ಬಾಕುಳ (< ಬಾಗುಳ) + — ಎ₂]

**ಬಾಗ್** (ನಾ). ತೋಟ; ಉದ್ಯಾನ : 'ಲಾಲ್‌ಬಾಗ್' ಪರಾ. [← ಪಾರ. ಬಾಘ್; ಅರ. ಹಿಂ. ಮರಾ. ಬಾಗ್]

**ಬಾಗ, ಬಾಗೆ₃** (ನಾ). ಪಾಲು ; ಭಾಗ : ಭಾಗಂ_ಬಾಗಂ; ಭಾಡಂ_ ಬಾಡಂ (ಶಬ್ದಮ .ಸೂ. ೨೬೯ ಪ್ರಯೋ). 'ಕಡಿವಾಗ' ಪರಾ. **ಬಾಗೆ₃** : ಅಷ್ಟಮಾಭಾಗೆಯೊಳಗೊಂದು ಬಾಗೆಯುಂ ಕೊಟ್ಟು (ನೋಂಬಿಕ. ೬-೭). 'ಭಾಗೆ' ಪರಾ. [< ಸಂ. ಭಾಗ]

**ಬಾಗಡ, ಬಾಗಡಗೆ** (ನಾ). ಒಂದು ಪ್ರಾಂತ್ಯದ ಹೆಸರು ; P ಈಗಿನ ಬಿಜಾಪುರಜಿಲ್ಲೆಯ ಬಾಗಲಕೋಟೆಗೆ ಒಂದೆ ಇದ್ದ ಹೆಸರು : ಶ್ರೀಮತ್ಪೆರ್ಮಾನಡಿಗಳ್. . . ಕಿಸುಕಾಡೆಪ್ಪತ್ತುಮಂ [ಬಾಗಡೆ]ಪ್ಪತ್ತುಮಂ ನಿರೋಕಂಳಿವಾಳುತ್ತಿರೆ ( ಸೌಇಇ. XI — i, ೯೦-೯; 969). **ಬಾಗಡಗೆ** : ಬಾಗಡಗಾ ರಾಜಪಥೋತ್ತರತಃ ಭೋಗಗಾವುಣ್ಡ ಬಳಮರ್ಧ್ಯೇ ನಿವತ್ರ[F] ನಾನಾಂ ತ್ರಿಂಶತಂ ವಿಷ್ಣುದೇವಾಯನಿವೇದಿತಂ (ಸೌಇಇ. XI-i, ೬೫-೨೨ ; 1049) ; ಕಿಸುಕಾಡೆಪ್ಪತ್ತುಂ ಬಾಗಡಗೆಯೆಪ್ಪತ್ತುಂ (ಇಆ. IX, ೯೯-೨೨ ; 1169); ಅಟ್ಟಿಯಿನ್ದೆ ಬಾಗಡಗೆಯ ರುದ್ರನಾದರದೆ ಮಾಡಿಸಿದಂ ವಿಳಸತ್ ಪ್ರತಿಷ್ಠೆಯುಂ (ಎಕ. II. ೨೩೯. ೬೨; ಸು. 1180). [?]

**ಬಾಗಡಗೆ** ' ಬಾಗಡ ' ನೋ.

**ಬಾಗಡೋರು** (ನಾ). ಕುದುರೆಯ ಲಗಾಮಿಗೆ ಜೋಡಿಸಿದ ಹಗ್ಗ ; ವಾಘ : ಕುದುರೆ ಇಳಿದು ಚಿಕ್ಕ ಮರಕ್ಕೆ ಬಾಗಡೋರು ಹಗ್ಗದಿಂದ ಕಟ್ಟಿಹಾಕಿ (ಕಥಾಮಂ. IV. ೩೪); ಅಲ್ಲಿ ಒಂದು ಕಂಭಕ್ಕೆ ಬಾಗಡೋರು ಹಗ್ಗದಿಂದ ಅವನನ್ನು ಬಿಗಿದು ಆಚೆಗೆ ಹೊರಟು ಹೋದರು (ಮುಸುಗ. ೦೪೩). [← ಹಿಂ. ಬಾಗ್‌ಡೋರ್]

**ಬಾಗಧೂಪ** (ನಾ). ಗುಗ್ಗುಳದ ಮರ ; ಮಡ್ಡಿಮರ : ಗುಗ್ಗುಳಧೂಪ, ಮುಂಡಧೂಪ, ಮಡ್ಡಿಧೂಪ, ಬಾಗಧೂಪ (ವೃಕ್ಷನಿ. ೪-೫೯). [ಬಾಗ್₀ + ಧೂಪ]

**ಬಾಗರಣ** (ನಾ). ವ್ಯಾಕರಣ : ಬಾಗರಣಂ ವ್ಯಾಕರಣಂ (ಶಬ್ದಾಸೂ. ೪೦೯ ವ್ಯಾಖ್ಯಾ). [< ಪ್ರಾ. ವಾಗರಣ./ಸಂ. ವ್ಯಾಕರಣ]

**ಬಾಗರಣಿಗ** (ನಾ). ವ್ಯಾಕರಣಕಾರ; ವೈಯಾಕರಣಿ : ಜೋಯಿಸಮ ನಱಿವನೋದುವಂ ಮೇಣ್, ಜೋಯಿಸಿಗಂ ಏವಂ ಗಣದಿಗಂ . . . ಶಾಸ್ತ್ರಿಗಂ ಬಾಗರಣಿಗಂ (ಶಬ್ದಾಸೂ. ೪೦೮ ಪ್ರಯೋ). [ಬಾಗರಣ + — ಇಗ]

**ಬಾಗವತ್ತ** (ನಾ). ಯಕ್ಷಗಾನ, ಬಯಲಾಟ ಮೊದಲಾದುವುಗಳನ್ನು ಕಲಿಸುವ ಗುರು; ಭಾಗವತ : ಶಾಸನವಂ ಬರೆದಾತಂ ಬಾಗವತ್ತ ಬೀರಮರಸಗ್ಗಂ ಗಾರಬೆಗಂ ಹುಟ್ಟಿದ ಸರಸ್ವತೀಪ್ರಿಯಪುತ್ರ ಹಂದಲ ಕೆರೆಯ ಸೇನಬೋವ ಮಾಲಯ (ಎಕ. XVI, ಶಕ್ಯ ನಾ. ೬೩-೫೦; 1224). [ < ಸಂ. ಭಾಗವತ ]

**ಬಾಗವಸ** (ನಾ). ಧನುರ್ವಿದ್ಯೆಯಲ್ಲಿ ಒಂದು ಪ್ರಕಾರ (?) : ನ್ಯಾಯ ಪುರುಷಸಂತಾನಮಾನಸಂಸ್ಥಾನಂ ಬಿಲ್ಮುಟ್ಟಿ ಲಕ್ಷಣಯೋಪೇತಂ ಬಗೆ ಬಾಗ ವಸವೆಂಬಿವನಱಿದು ಧನುರ್ವಿದ್ಯೆಯೋ ರೂಪುಗೊಂಡಂತಿರ್ದರುಂ ಕಾದೆ (ಶಾಂತಿಪು. ೪-೪೫ ವ). [ ? ]

**ಬಾಗವಳಿ** (ನಾ). ಪಾಲು; ಭಾಗ : ತುರುಬಿನ ತಂಮನಾಯಕನ ಬಾಗವಳಿ ಹಳಿಹರವರಿ ಕೋಣಕಾರು ಅಂತುಯಿಮಕೆ ಗೇಣ ೧೪೦ (ಕಇ. I, ೫೦-೨೦; 1432 ?). 'ಭಾಗಾವಳಿ' ಪರಾ. [ಬಾಗ + — ವಳಿ₃]

**ಬಾಗವಾನ** (ನಾ). ತೋಟವನ್ನು ನೋಡಿಕೊಳ್ಳುವವನು ; ತೋಟಗಾರ : ಸೀತಾಫಲಗಳು ತುಟ್ಟಿಯಾದ ಕಾರಣವೇನೆಂದು ಒಬ್ಬ ಬಾಗವಾನನನ್ನು ಕೇಳಿದನು (ಮುಂಬಯಿ. ೫-೨೬೩) ; ಬಾಗವಾನರ ಮಕ್ಕಳಿಂದ ಕಾಯಿಪಲ್ಯ ಗಳನ್ನು ತೆಗೆದುಕೊಂಡು ತೃಪ್ತರಾಗುತ್ತಿದ್ದರು (ರಂಗಗೋ. ೫೦); ಆ ಹಣ್ಣು ಗಳೆಲ್ಲ ನಮಗೆ ಬರುವಂತಿಲ್ಲ ಅಣ್ಣಾ, ಅವುಗಳನ್ನು ಬಾಗವಾನರಿಗೆ . . . ಮಾರಿ ಬಿಟ್ಟಿದ್ದೇನೆ (ಹಳ್ಳಿಏ. ೦೨೯). [ ← ಪಾರ. ಬಾಘವಾನ್ ; ಹಿಂ. ಮರಾ. ಬಾಗವಾನ್ ]

**ಬಾಗಾದಿ** (ನಾ). (ಅವಿಭಕ್ತಕುಟುಂಬದ) ಆಸ್ತಿಯ ಪಾಲಿಗೆ ಹಕ್ಕುಳ್ಳ ವನು ; ದಾಯಾದಿ : ಬಾಣಂತಿ ಮನೆ ಮುಂದೆ ಹೋಗಿ ಬಾ ಅಣ್ಣಯ್ಯ . . . ನಿನ ಕಂಡು ಬಾಗಾದಿ ಬಾಯ ಬಿಡುವಾಳು (ಹಳ್ಳಿಹಾ. ೬೬); ಬಾಗಾದಿ ಮುಂದಿ ನೀ, ಹ್ಯಾಗಾದಿ ನನ ಮಗನ ಬಾಗಾದಿ ಕೇಳಿ ಹಾಸರತು ಜನದಾಗ ಮೂಗ ಮುಂದಾಡಿ ನಗತಾಳೆ . . . ಬಾಗಾದಿ ಮನಿ ಮುಂದ ಹ್ಯಾಂಗ್ಬಾಯ್ದ ನನ ಮಗನ ಚೌರಿ ಚಿತ್ತರಕಿ ನೆರಳೀಲೆ ಬರುವಾಗ ಬಾಗಾದಿ ಮಾರಿ ತಳ್ಯಾಕೊ (ಕನ್ನಜಾ. ೦೦೨). 'ಭಾಗಾದಿ' ಪರಾ. [< ಸಂ. ಭಾಗಾದಿನ್ ?]

**ಬಾಗಾಯತ**, ಬಾಗಾಯಿತಿ, ಬಾಗಾಯಿತು, ಬಾಗಾಯ್ತು (ನಾ). ತೆಂಗು, ಅಡಿಕೆ ಮೊದಲಾದುವುಗಳನ್ನು ಬೆಳೆಯುವ ನೀರಾವರಿ ಭೂಮಿ ; ತೋಟಪಟ್ಟಿ ಜಮೀನು : ಬಾಗಾಯತ ಭೂಮಿ ಇದ್ದವರಿಗೆ

ಯಾವ ಕಾಲವಾದರೂ ಬರಗಾಲವೇ ಇಲ್ಲ (ಕೃಷಿಕ್ರ. ೦೬೬). **ಬಾಗಾಯಿತಿ** : ಪೆಣ್ಣನ್ನು ಗಂಟು ಹಾಕಿಕೊಳ್ಳೋದು, ಒಂದು ಬಾಗಾಯಿತಿ ಜಮೀನಿನ ಖರೀದಿ ಮಾಡಿದ ಹಾಂಗ (ರಕ್ತರ್ತ. ೬೨). **ಬಾಗಾಯಿತು** : ಜಲಾಧಾರದಿಂದ ಕಬ್ಬು, ತೆಂಗು, ಅಡಿಕೆ, ವೀಳ್ಯದೆಲೆ ಮುಂತಾದ ಬೆಳೆ ತೆಗೆಯುವಂತಾ ಭೂಮಿಯನ್ನು ಬಾಗಾಯಿತುಯೆಂದು ಹೇಳುವುದು (ಕೃಷಿಶಾ. ೩೩) ; ಮತ್ತೊಂದು ಜಾತಿಯ ಪೈರಿಗೆ ವರ್ಷವೆಲ್ಲಾ ನೀರು ಅಷ್ಟೋ ಇಷ್ಟೋ ಬೇಕಾಗುತ್ತದೆ. ಇದನ್ನು ತೋಟದ ಪೈರು ಅಥವಾ ಬಾಗಾಯಿತು ಎನ್ನುತ್ತಾರೆ (ಕಲ್ಪಶಾ. ೩೬೪). **ಬಾಗಾಯ್ತು** : ತರಿ ಬರಿದಾಯ್ತು, ಖುಷ್ಕಿ ಶುಷ್ಕವಾಯ್ತು, ಬಾಗಾಯ್ತು ಹೋಗಾಯ್ತು (ಗಾದೆ). [← ಹಿಂ. ಬಾಗಾತೀ ; ಮರಾ. ಬಾಗಾಈತ್, ಬಾಗಾಯತ್]

**ಬಾಗಾಯಿತಿ** ' ಬಾಗಾಯಂತ ' ನೋ.

**ಬಾಗಾಯಿತು** ' ಬಾಗಾಯಂತ ' ನೋ.

**ಬಾಗಾಯ್ತು** ' ಬಾಗಾಯಂತ ' ನೋ.

**ಬಾಗಾರ** ' ಭಾಗಾಹಾರ ' ನೋ.

**ಬಾಗಿ**$_1$ ' ಬಾಗೆ$_1$ ' ನೋ.

**ಬಾಗಿ**$_2$ ' ಬಾಗು$_2$ ' ನೋ.

**ಬಾಗಿನ** ' ಬಾಯನ ' ನೋ.

**ಬಾಗಿನಕೊಡು** ' ಬಾಯಿನಂಗೊಡು ' ನೋ.

**ಬಾಗಿನಾಡು** (ನಾ). ಒಂದು ನಾಡಿನ ಹೆಸರು : ಕಿಸುಕಾಡೆಪ್ಪತ್ತುಂ ಬಾಗಿನಾಡೆಪ್ಪತ್ತುವಂ ಬೂತುಗಗೆ ಕನ್ನರದೇವಂ ಮೆಚ್ಚುಗೊಟ್ಟಂ (ಎಕ. III. ಮಂಡ್ಯ. ೪೦–೨೦; 950). [ ಬಾಗಿ$_1$ (< ಬಾಗ್ಗೆ$_1$) + ನಾಡು ]

**ಬಾಗಿಲ್**, ಬಾಗಿಲ, ಬಾಗಿಲು (ನಾ). ಪ್ರವೇಶಮಾರ್ಗ ; ದ್ವಾರ : "ದ್ವಾಃ, ದ್ವಾರಂ, ಪಳಜಂ— ಈ ೩ ಬಾಗಿಲ್" (ಪಲಾಯು. ೩೦–೦೪೩) ; ಗುಹೆಯ ಬಾಗಿಲಂ ಪಿರಿದೊಂದು ಸಿಲೆಯಂ ತಂದಿಟ್ಟು ಮುಚ್ಚಿ (ವಡ್ಡಾರಾ. ೦೨೨–೨೦) ; ಬಸಂತದೊಳ್ ಬಸದಿಯ ಬಾಗಿಲಂ ತೆಱೆದ ಮಾಬ್ಬಿಕ್ಕೆ ಯೊಳಿರ್ದುವು ಮಾವುಗಳ್ (ಆದಿಪು. ೦–೬೬) ; ಸಮುತ್ತುಂಗಶಿಖರಂಗಳ್ ನಾಲ್ಕುಂ ದೆಸೆಯೊಳುಮಾಗಿ ಬಾಗಿಲೊಂದೆಯಾಗಿರ್ಪುದು ಗುಹ್ಯಾಖ್ಯಂ (ಶಂಕರಂ. ೨೦೩–೦೪). **ಬಾಗಿಲ** : ಕಾದಿ ಹಿರಣ್ಯಕನ ಕರುಳ ಕೊರಳೊಳಗೆ ಧರಿಸೇಳು ಕಾಯ್ದು ಬಲಿ ಬಾಗಿಲದೊಳು ಭೇದಿಸಿ ಭೂಮಿ ತ್ರಿಪಾದದಿಂದಳೆಬೇಕು (ಪುರಂದ. ೩–೦೩೪–೨). **ಬಾಗಿಲು** : ಅವಾವ ಭಾವದಲ್ಲಿ ಮಾಡಿ ಕೂಡಿಹೆವೆಂಬರ ಬಾಗಿಲ ತೋಱಯ್ಯ (ಬಸವ. ೩೬೨) ; ಅರಗಿನರಸನ ಬಾಗಿಲಲಿ ದಳ್ಳುರಿಗೆ ತಡವೇ (ಕುಮಾರವ್ಯಾ. ೩–೪೦) ; ತುಂಬಿರುವ ಪಟ್ಟಣಕೊಂಭತ್ತು ಬಾಗಿಲು (ಪುರಂದ. ೦–೦೬೨–೦).

**ಬಾಗಿಲ ಕಾ, ಬಾಗಿಲ ಕಾಯ್, ಬಾಗಿಲ ಕಾಯು**= ೧. ದ್ವಾರಪಾಲಕ ನಾಗು : ನಿರ್ಜರಪತಿ ವಿಷ್ಣು ಬಾಗಿಲ ಕಾದಿರ್ಪ ಸಜ್ಜನಸಂಪತ್ತು ಬಡವೆ (ಪೋಚಕ. ೩೦–೦೩). ೨. ಬಿನ್ನಹವಮಾಡಿಕೊಳ್ಳಲೆಂದು ಬಾಗಿಲ ಬಳಿ ಬಂದು ನಿಂತಿರು : ಹರಿಯಜ ಮುನಿಗಳೆಲ್ಲರೂ ನಿಜ ನಿಮ್ಮ ಬಾಗಿಲ ಕಾಯ್ದಿಹರು (ಬಸವ. ೭೪೨) ; ಹರಿಯ ಬಾಗಿಲ ಕಾಯ್ದು ಬಲಿ ಭಾಗ್ಯವಂತ ನಾದ ಹರನ ಬಾಗಿಲ ಕಾಯ್ದು ಬಾಣನಳಿದ (ಪುರಂದ. ೨–೬೩–೧) ; ಬಾಗಿಲ ಕಾಯುವರು ಕಡುಮೂರ್ಖರಿಂತಿದ ನಮಗೆ ಮನ್ನಿಪುದು (ಸಂಶಕ. ೭–೪). **ಬಾಗಿಲ ಸೆಜ್ಜೆ** = ಅಗಸೆಬಾಗಿಲ ಮೇಲಿನ ಗೋಪುರ ; ಬಾಗಿಲಂ ವಾಡ ; ಪಿರಿದಾಗಿ ಬಾಗಿಲ ಸೆಜ್ಜೆಯಬ್ಬುವ ವ್ಯಾಪಿಸಿದುವು ಶುಭ್ರವಿಡಿದು (ಕಂಪಶ. ೬–೦೩).

[ದೇ. ॥ ತಮಿ. ವಾಯಿಲ್ ವಾಯಲ್, ವಾಚಲ್ ; ಮಲ. ವಾಕಿಲ್ ; ತುಳು. ಬಾಕಿಲು ; ತೆಲು. ವಾಕಿಲಿ ; ಕೋಲಾ. ವಕಲ್; ನಾಯ್ಕಿ. ವಾಕಲ್ ]

**ಬಾಗಿಲ** 'ಬಾಗಿಲ್' ನೋ.

**ಬಾಗಿಲಾಯ್ತು** (ನಾ). ಬಾಗಿಲು ಕಾಯುವವನು ; ದ್ವಾರಪಾಲಕ ; ಪಡಿಹಾರ : ಬಾಗಿಲಾಯ್ತುಂ, ಅಚ್ಚುಳಾಯ್ತುಂ, ಕಲ್ಲಾಯ್ತುಂ (ಕಬ್ಬಾಸ. ೪೨೩ ಕ್ರಿಯೋ.). [ಬಾಗಿಲ್ + –ಆಯ್ತು]

**ಬಾಗಿಲು** 'ಬಾಗಿಲ್' ನೋ.

**ಬಾಗಿಲುಗಟ್ಟಳೆ** (ನಾ). (ಯಾವುದಾದರೊಂದು ಸಾರ್ವಜನಿಕ ಕಾರ್ಯಕ್ಕೆ) ಪ್ರತಿಯೊಂದು ಮನೆಯವರೂ ಇಂತಿಷ್ಟು (ಹಣವನ್ನು) ತೆರಬೇಕೆಂಬ ನಿಯಮ : ಬೆಳುಗುಳದ ತೀರ್ತ್ಥದಲ್ಲಿ ವೈಷ್ಣವ ಅಂಗರಕ್ಷೆಗೋಸುಕ ಸಮಸ್ತರಾಜ್ಯದೊಳಗುಳ್ಳಂತಹ ಜೈನರಾ ಬಾಗಿಲು ಗಟ್ಟಳೆಯಾಗಿ ಮನೆಮನೆಗೆ ವರ್ಷಕ್ಕೆ ೧ ಹಣ ಕೊಟ್ಟು . . . ಕೀರ್ತ್ತಿಯನೂ ಪುಣ್ಯವನೂ ಉಪಾರ್ಜ್ಜಿಸಿಕೊಂಬುದು (ಎಕ. II. ೩೪೪–೨೩ ; 1368). [ಬಾಗಿಲು (<ಬಾಗಿಲ್) +ಕಟ್ಟಳೆ$_1$]

**ಬಾಗಿಲುಗಾಹಿ** (ನಾ). = ಬಾಗಿಲಾಯ್ತು : ಕೂಡಲ ಸಂಗನ ಶರಣರ ಬಾಗಿಲುಗಾಹಿ ನಾನಾಗಿರ್ದು ಕರ್ತರು ಗೃಹಕ್ಕೆ ಬಂದರೆ ಬೇಕು ಬೇಡೆನೆ (ಬಸವ. ೦೦೩–೪೦೪). [ಬಾಗಿಲು (< ಬಾಗಿಲ್)+ಕಾಹಿ]

**ಬಾಗಿಲುಜೋಳ** (ನಾ). ಪ್ರತಿಯೊಂದು ಮನೆಯವರೂ (ದೇವರ ಕಾರ್ಯಕ್ಕಾಗಿ) ಇಂತಿಷ್ಟು ಜೋಳವನ್ನು ಕೊಡಬೇಕೆಂಬ ನಿಯಮ : ಸ್ಥಾನಪೂಜೆ ಬೆಳುಗೊಡೆ ಬಾಗಿಲುಜೋಳ ತಳಾಱಗೂಲಿ ಅಸಕನ್ಯಾಯ ವಿಂತಿನಿತುವಂ ಸರ್ಬ್ಬಮಾನ್ಯವಾಗಿ ಹಡದು ದೇವರ ಪೂಜಾರಿಗಂ ಕವಿಲೆಗವಿರಲು ಮ[ಠ]ವಾಗಿ ಬಿಟ್ಟರು (ಕೌತಿ. XV. ೦೦೦–೪೪ ; 1165). [ಬಾಗಿಲು (<ಬಾಗಿಲ್)+ಜೋಳ]

**ಬಾಗಿಲುತಡೆ** 'ಬಾಗಿಲುಂದಡೆ' ನೋ.

**ಬಾಗಿಲುದಡೆ**, ಬಾಗಿಲುತಡೆ (ಕ್ರಿ). (ಮದುವೆಯ ಸಂದರ್ಭದಲ್ಲಿ, ವಧೂವರರು ಪರಸ್ಪರ ಹೆಸರು ಹೇಳುವವರೆಗೂ ಒಳಗೆ ಬರದಂತೆ ವರನ ಸಹೋದರಿಯರು) ಬಾಗಿಲಲ್ಲಿ ತಡೆಗಟ್ಟಿ ನಿಲ್ಲು ; ಹಾಗೆ ತಡೆಗಟ್ಟುವ ಶಾಸ್ತ್ರವನ್ನು ಆಚರಿಸು : ಕುವರರ ಮದುವೆಯೊಳ್ ಬಾಗಿಲುವಡೆದಾಗ ಕುವರಿಯರ್ಗಿತ್ತ ಭೂತಳವ (ಭರತ. ೪೪–೨೪). **ಬಾಗಿಲುತಡೆ** : ಬಾಗಿಲು ತಡೆದ ಅಕ್ಕನನ್ನು ತಮ್ಮ ಕೇಳಿಕೊಳ್ಳುತ್ತಾನೆ (ಜನಪ್ರರು. ೯೬). [ಬಾಗಿಲು (<ಬಾಗಿಲ್)+ತಡೆ$_1$]

**ಬಾಗಿಲುವಾಡ** 'ಬಾಗಿಲ್ವಾಡ' ನೋ.

**ಬಾಗಿಲ್ಕೋಲು** (ನಾ). ಬಾಗಿಲಿಗೆ ಹಾಕುವ ಅಗುಳಿ : ಭೋರಮಣ ದ್ವಾರಸ್ಥರಂ ಕರೆದು ನಿಂದು ಬಾಗಿಲ್‌ಕೋಲ ತೆಗೆಯದಿರಿ ನಮ್ಮರಿಕೆಯಿಂದಲ್ಲದೆ ವಿಪ್ರರಿಂಗೆನಲು ಕೈಗೊಂಡು ಕಾದಿರಲ್ಕೇಲುಭಟರು (ತುರಂಗ. ೬–೩೦). [ಬಾಗಿಲ್ + ಕೋಲು$_1$ (<ಕೋಲ್$_1$)]

**ಬಾಗಿಲ್ಗಾಪು** (ನಾ). ಬಾಗಿಲಿನಲ್ಲಿ ಇರುವ ಕಾವಲು : ಬಂದ ದೆಸೆಯಂ ಪೋದ ದೆಸೆಯನಾರುಂ ಕಾಣದಂದದಿಂ ಪಲವು ಬಾಗಿಲ್ಗಾಪುಗಳನುಳಿದು . . . ಪೋಪುದಿದು ಪರಿಭಾವಿಸೆ ಸಂದೆಳ್ಳಿಕಾಱರೊಳಗಂಟೆ (ಶದ್ಯರಾ. ೩–೩೦); ಬಾಗಿಲ್ಗಾಪಿನ ಪಡಿಯರತಿಯರು ಬಾಗಿ ತುಳಿಲ್ಗೆಯ್ವಾಗ ಒಡತಿಯ ಮುಖವನ್ನು ನೋಡುತ್ತಿದ್ದರು (ಸವತಿ. ೨೦೦). [ಬಾಗಿಲ್ + ಕಾಪು]

**ಬಾಗಿಲ್ಗಾಯ್** (ಕ್ರಿ). ಬಾಗಿಲನ್ನು ಕಾಯು ; ದ್ವಾರಪಾಲಕನಾಗು : ಬಾಗಿಲ್ಗಾಯ್ವುದಿದಯ್ಯಗಳೋಜೆಯೆ (ಉದ್ಭಟ. ೩–೩೨); ಬಾಗಿಲ್ಗಾಯ್ವರ್ ತಾವುರುತರದ ಕೋಟಾಕವಾಟಂಗಳಂ ದಲ್ (ಹಾಲಾಸ್ಯ. ೩–೨–೦೩). [ಬಾಗಿಲ್ + ಕಾಯ್$_1$(<ಕಾ$_1$)]

**ಬಾಗಿಲ್ಮಾಡ** 'ಬಾಗಿಲ್ವಾಡ' ನೋ.

**ಬಾಗಿಲ್ವಾಡ**, ಬಾಗಿಲುವಾಡ, ಬಾಗಿಲ್ಮಾಡ, ಬಾಗಿಲ್ವಾಡು (ನಾ). ೧. ಹೆಬ್ಬಾಗಿಲಂ ; ಪುರದ್ವಾರ ; ಗೋಪುರ : ಸಾಕೇತನಗರವಂ ಬಳಸಿದ

ಕನಕಪ್ರಾಕಾರದ ಬಾಗಿಲ್ವಾಡಂಗಳೊಳಂ (ಅಂಕೃ. ೦೬. ೩೭ ವ); ಇಳಿಯಾಣ್ಮನ ಕರುಣಾರಸಂ ಶೀವಿದ ಲಲಿತತರ್ಟಾವುದಾಗಲ್ಕರವುನೆ ತೊಳಗುವ ಬಾಗಿಲ್ವಾಡವುದಜ ತೊಂಬೆಂಬಪ್ಪೊಲೊಪ್ಪಿದುದು (ಜಯಕಾ. ೧-೬೩). **ಬಾಗಿಲುವಾಡ:** "ಗೋಪುರಂ, ಪುರದ್ವಾರಂ — ಈ ೨ ಬಾಗಿಲುವಾಡಂ" (ಹಲಾಯು. ೪೮-೦೩೩): ಪಿಂತೆ ಪತಿಹಿತವೆ ಸಹಿತಂ ಬರುತಭವನತ್ತ ಪುರದ ಬಾಗಿಲುವಾಡವಂ ಪೊಜಮಡಲು ಕಂಡು (ಇಪಿಗ. ದೇ. ೩೮-೭). **೨. ಅಗಸೆಬಾಗಿಲಿನ ಮೇಲಿನ ಉಪ್ಪರಿಗೆ :** ಮಾಡ ಗೋಪುರ ಮದಿಲ್ ಮಾಳಿಗೆ ಬಾಗಿಲುವಾಡ ದೇಗುಲಗಳನೇಱ ನೋಡಿದ**ಪುರ**ಸತಿಯರು (ಶರಚ. ೩೮-೩೯). **೩. ಬಾಗಿಲಿನ ಚೌಕಟ್ಟು :** ಹೊಸಮನೆಗೆ ಇಂದು ಬಾಗಿಲುವಾಡವನ್ನು ಇಟ್ಟರು (ರೂಢಿ). **ಬಾಗಿಲ್ಮಾಡ : ೧.** ಧಾರಿಣಿವುಹಾದೇವಿಯಯ್ಯೂರ್ವರರಸಿಯರ್ಕಳುಂ. . . ಬಂದು ಬಾಗಿಲ್ಮಾಡದ ಪೊಱಗಣ ದೆಸೆಯೊಳ್ ತಂತಮ್ಮ ವಾಹನಂಗಳಿಂದಿೞಿದು (ಪಮ್ಪಾರಾ. ೮೦-೧೩); ಗಂಗೆ ಜಮುನೆಗಳಿಂದೊಪ್ಪುವ ದ್ವಾರಜಗತೀತಳಂಗಳಂ ತೋಱುತ್ತುಂ ಎರಡನೆಯ **ಬಾಗಿಲ್ಮಾ**ಡವುಂ ಪೊಕ್ಕು (ಶಾಂತಿಪು. ೩-೦೬ ವ). **೨.** ಉಗ್ರಸೇನಮಹಾರಾಜನುಮಂ. . . ಪೊಱಲ ಬಾಗಿಲ್ಮಾಡದ ಮೇಗಸಿಪಂಜರದೊಳ್ಸೆಱೆಯಿಟ್ಟು (ಹಿಂಪಂ. ೩-೪೩ ವ). **ಬಾಗಿಲ್ವಾಡು : ೧.** ಸತತಂ ಪೊಂಗಳಸದ ದೀಧಿತಿಯುನ್ನತಿಗಳ್ಕಿ ಬಳ್ಕಿ ಕೆಲಸಾರ್ದು ದಿವಾಪತಿ ದಕ್ಷಿಣಗತ್ಯುತ್ತರಗತಿಯಾದಂ ಪೊನ್ನ ಬಾಗಿಲ್ವಾಡಂ (ಜಗವಿ. ೯-೦೦೬). [ಬಾಗಿಲ್ + ಮಾಡ₁]

**ಬಾಗಿಲ್ವಾಡು** 'ಬಾಗಿಲ್ವಾಡ' ನೋ.

**ಬಾಗಿಸು₁ (ಕ್ರಿ). ೧. ಬಾಗುವಂತೆ ಮಾಡು; ಬಗ್ಗಿಸು; ಮಣಿಸು :** ಕಲಿಯಂ ದೇವಾಗಾರದ ಮಳಿಯಿಗೆ ದೂರದೆ ಬಾಗಿಸುವನ್ನಿಕ್ಕರ್ಮಲ್ಲಿ ವಾತೋದ್ಧೂತಂ (ಶಾಇಇ. IX–i, ೦೩೬-೪೩; 1090); ನಿಮ್ಮಡಿಯ ನೆನಹೆ ಕೊರ್ವಿದರಿವಾದಿಗಳ ಮೂಗನರಿದು. . .ಬಾಗಿಸದೆ ತಲೆಯಂ (ಪದ್ಮರಾ. ೯-೨೮); ಮಳೆಗೆ ತೆರಳದೆ ಕೋಡ ಬಾಗಿಸಿ ಕಲಿವೃಷಭ ಹೊಗುವಂತೆ ದ್ರೋಣನ ಬಲುಸರಳ ಸರಿವಳೆಗೆ ದುಡೆಯನೊಡ್ಡಿ ದಳವುಳಿಸಿ (ಕುವ್ಯಾದ್ರೋ. ೦೩-೦೨). **೨. ಸೋಲಿಸು; ಪರಾಜಯಗೊಳಿಸು :** ನಾಗಪುರದರಸುಗಳ ಮಕ್ಕಳ ಬಾಗಿಸಿತು ಬಿಲುವಿದ್ಯೆ ಲೋಕದ ಭೋಗಿನ್ಯಪರತ್ನಜರ ವಿದ್ಯೆಯುದೇಕಲವ್ಯನಲಿ ಬಾಗಿ ಹೋಯಿತು (ಸಂಶಕ. ೦೭-೦೨೦). **೧, ೨ :** ಕರವೀರವರ್ಗಮಂ ಬಾಗಿಸಿದರದಟರಂತಿರದೆ ಪುನ್ನಾಗಮುಂ ಪತ್ತಿ ರಂಜಿಸಿದರ್ಚಮುರ ಮಾವುತಿಗರಂತೆ (ಜೈಮಿಭಾ. ೯-೨೨). [ಬಾಗು₁ + — ಇಸು₃]

**ಬಾಗಿಸು₂ (ಕ್ರಿ). ೧. ಸೀಳು; ಹೋಳು ಮಾಡು :** ಶವಕದೆ ಬಿಳಿಯೆಲೆಯ . . . ಪಿರಿದು ಕೆಂಬಲ್ಲಿಂದ ಬಾಗಿಸಿಯಾತಗೆ ಪರಮಪ್ರೀತಿಯುಲುಡುವುದು (ಕೆಂಸಪಿ. ೬. ೦೪೦). **೨. ಭಾಗ ಮಾಡು; ವಿಭಾಗಿಸು :** ಭೃಂಗಕುಂತಲವನು ಬಾಗಿಸಿ ನಿಖಿಲ ಗೋಪಾಂಗನೆಯರು ಜಡೆವೆಣೆಯೆ (ಮೋಹಕ. ೦೯-೪೨). **೩. [ಗಣಿತ] ಭಾಗಾಹಾರ ಮಾಡು ; ಭಾಗಿಸು :** ಲೆಖ್ಖ ಕುಂದದೆ ಬಾಗಿಸಿ ಕೊಟ್ಟರೆ (ಭಾಸ್ಕರ. ೦೩-೩). [ಬಾಗ₁ + — ಇಸು₃]

**ಬಾಗಿಸೂತ್ರ (ನಾ).** ಒಂದು ಬಗೆಯ ಸಸ್ಯ : "ಬಾಗಿಸೂತ್ರ, ಗಂಟರಿಷಣ, ಬಾರ್ಜರಿ, ದೊಡ್ಡ ಮರದರಿಶಿನ, ಪೊಪ್ಪಿವಲ್ಲಿ" (ಸಸ್ಯಕಿ. ೨೦); ದೊಡ್ಡಮರದ ರಿಸಿನ, ಬಾಗಿಸೂತ್ರ (ವೃಕಿಗ. ೦೩-೨೦೯). [?]

**ಬಾಗು₁ (ಕ್ರಿ). ೧. ಮಣಿ ; ಬಗ್ಗು :** ದೇವೋತ್ತಮಾಂಗಂಗಳುಂ ಬಾಗಿದುವು (ಆದಿಪು. ೭-೩೯); ಫಳಭಾರದಿಂದೊಲೆದು ತೂಗಿ ಬಾಗುವ ಮರಂ (ಹರಿಕಾ. ೬-೪೦); ಚಿನ್ನ ಪಣ್ಣೊನೆಯ ಭರದಿಂ ಸನ್ನತಮಾಗಿರ್ದ ಬಾಟಿಸಿಸಿಯೊಳ್ ಮಿಳಿರ್ಗುಂ ತನ್ನ ಶಿಶುವಿಂಗೆ ಮೊಲೆಯಂ ಮನ್ನಿಸಿ ಬಾಗಿರ್ದ ಕೊಡುವ ಬಾಲೆಯ ತೆಱದಿಂ (ಶಾರಪು. ೦-೦೦೬). **೨. ಡೊಂಕಾಗು; ಡೂಗಾಗು; ವಕ್ರವಾಗು :** ಗುಡಿಲಂತೆ ಬಾಗಿದ ಬೆನ್ನುಂ (ಧರ್ಮಾಮೃ. ೪-೬೩); ಹಲ್ಲು ಹೋಗಿ ಬೆನ್ನು ಬಾಗಿ ಅಸ್ಸರಿಗೆ ಹಂಗಾಗದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೦೪೦): ಆಗದು ತಪಕ್ಕೆ ವಿಘ್ನಂ ಬಾಗಿದ ಬೆನ್ನುಡುಗಿದುರಮುಡಂಗಿದ ಜಘನ ತೂಗುವ ತಲೆ ಕಂಪಿಪ ಕೈ (ಧರ್ಮಾಶ. ೩-೯೬): ಬಾಗಿದ ಪುರ್ಬು ತಾವರೆಯೆಸಳ್ನೇಳಿಪ ನಿಡುಗಣ್ಣು (ಮೋಹಕ. ೦೮-೬೨). **೩. ಎರಗು : ವಂದಿಸು : ನಮಸ್ಕರಿಸು :** "ಬಾಗೆಜಗು ಮೊಗ್ಗು ತುಟಿಲ್ಗೈಯ್ಸಲ್ . . . ವಂದನಾರ್ಥ" (ಕಬಿಕಂ. ೦೮೯); ಮುನೀಂದ್ರನಾ ಪದಯುಗದೊಳ್ ಮನೋ ಮುದದೆ ಬಾಗುವೆಂ (ಕವಿರಾ. ೨-೦೦೯); ಅಂಗವರ್ಪನೆಂಬ ಗಂಧರ್ವಂ . . . ಬಾಗಿದಂ ಪದಯುಗಕ್ಕಾರೂಢಸರ್ವಜ್ಞನಾ (ಪಂಪಭಾ. ೩-೩೯). **೪. ಬಗ್ಗಿಸು ; ಮಣಿಸು ; ಬಾಗಿಸು :** ನಾಣ್ಚಿ ತಲೆಯಂ ಬಾಗಿ ನೆಲನಂ ಬರೆಯುತ್ತುಂ (ಪಂಪಭಾ. ೪-೬೫ ವ) : ಉದ್ವೃತ್ತಗೋತ್ರಾಭಿಮುಖಂ ವಜ್ರಾಘಾತವಾದಂತೆ ಸಿಗ್ಗಾಗಿ ತಲೆಯಂ ಬಾಗಿ (ಗದಾಯು. ೩-೭೯ ವ) ; ಕರವ ಮುಗಿದು ಸಜ್ಜನರಿಗೆ ಶಿರ ಬಾಗಿ ಚರಿಸುತಿರಬ್ಬರಿಕೆ (ಪುರಂದ. ೨-೪೩-೨). **೫. ಪಾತ್ರೆಯನ್ನು ಬಗ್ಗಿಸಿ ಅನ್ನದ ಗಂಜಿಯನ್ನು ಬಸಿ :** ಪುಷ್ಪವಾಸನೆಯ ಮೆಲ್ಪಿನ ತಣ್ಪಿನ ಕಂಪಿನಲಂ ಪೊಪೊಟಿ ಪೋಗುತಿರ್ಪ ತಂಡುಲಂಗಳಂ ಕಳೆದುಕೊಂಡು ಬಾಗಿದೋಗರವುನಾರೋಗಿಸುವಂ (ಸುಕುಮಾ. ೦೦-೩೫ ವ) : ಕುದಿ ಬರಲೊಯ್ಯನೆ. . . ಅಗುಬ್ಗಳ ಹವನಂ ತೆಗೆದೊತ್ತಿ ನೋಡಿ ಬಾಗಿದಳಾಗಳ್ (ದಳಕು. ೦೨-೧೨೨) ; ಅನ್ನ ಬೆಂದದ್ದು ಹೆಚ್ಚಾಗಿ, ಬೋನವಾಗಿದೆ. ಬಾಗಿದರೆ ಶಿಳಿಯೇ ಇಲ್ಲ (ಮರಮ. ೨೨). **೬. (ಅಲಂ) ವಿನಯದಿಂದ ವರ್ತಿಸು ; ತಗ್ಗಿ ನಡೆ ; ಸಗ್ಗು :** ತಾಗಿ ಬಾಗದ ಮರುಳುತನದು ದ್ಯೋಗವಿದಕೇನೆಂಬೆನಕಟಕಟೀಗಲದ್ದುದು ಕೌರವಾನ್ವಯವೆಂದನಾ ದ್ರೋಣ (ಕುವ್ಯಾಭೀ. ೦-೯) ; ಪಿರಿಯರ ಸೇವೆಗೆಯ್ . . . ಪರಿಜನವಂ ಕರಂ ಸಲಹು ಭಾಗ್ಯದೆ ಬಾಗಿರು ಪೆಣ್ಗಳಿಂತಿರಲ್ ಗರತಿಯರಪ್ಪರ್ (ಶಾಕುಂತ. ೫೭-೯೬).

**ಬಾಗಿಕೊಂಡಿರು = (ಅಲಂ) ವಿನಯದಿಂದಿರು : ನಮ್ರತೆಯಿಂದಿರು :** ಬೇಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿಪ್ಪಡೆ ಬೇಡಿದ ಪದವಿಯನೀವ . . . ಕೂಡಲ ಸಂಗಮದೇವ (ಬಸವ. ೦೮೯). **ಬಾಗೊತ್ತು = ಬಾಗುವಂತೆ ಒತ್ತು : ಬಾಗಿಸು :** ಪೂಗಣೆಯನ ಚಾಮರವಂ ಸೀಗುರಿಯಂ ಪಿಡಿವಳಂತೆ ಸೆಳೆಗೊಂಬುಗಳಿಂ ಬಾಗೊತ್ತಿ ಗುಜ್ಜುಮಾವಿನ ಪೂಗೊಂಚಲನುಡಿದು ಪಿಡಿದಳಿಳಿವೆರಸೊರ್ವಳ್ (ಲೀಲಾವ. ೦೩-೮೨) ; ಎತ್ತಿದನು ಬಾಗೊತ್ತಿದನು ಕೊರಳಿಗೆ ತೊಡಿಸಿದನು ತಿರುವ (ಕುವ್ಯಾಆ. ೦೫-೨೭): ಹಂಸಧ್ವಜಂ. . .ರಥವೇಱ ಬಾಗೊತ್ತಿ ನಿಜಚಾಪವುಂ ಜೇಗೈದು ಪಡೆಸಹಿತ ಫಲುಗುಣನಂಗಿದಿರಾದನು (ಜೈಮಿಭಾ. ೦೯-೨೪). 'ಬಗ್ಗು₁' ಪರಾ.

[ದೇ.॥ ತಮಿ. ವಾಙ್ಕು. ವಾಕ್ಕು; ಮಲ. ವಾಙ್ಙು ; ತುಳು. ಬಾಗು, ಬಾಂಗು ; ತೆಲು. ವಂಗು; ಕೊಡ. ಬಾಕ್ ; ಕೋಲಾ. ವಂಗ್]

**ಬಾಗು₂, ಬಾಗಿ₂, ಬಾಗೆ₂ (ನಾ). ೧. (ಆಯುಧ ಮುಂತಾದುವುಗಳ ತುದಿಯ) ಕೊಂಕಾದ ಭಾಗ :** ನಾರಿಸುತನ ಆರ್ಕೈಕೆಗೊಂಬುವ ಬೇರಿನ ಬಿಲ್ಲು ನುಂಗಿತ್ತು ಬಿಲ್ಲಿನಾ ಬಾಗಿನಲ್ಲಿ ಇಪರೆಲ್ಲರು ಸಿಕ್ಕಿದರು (ಮೋಳವಮ. ೦೯೦-೭೦೭) ; ತಾಗಿ ಕಡಿದೊಟ್ಟಿದನು ಕೊಡಲಿಯ ಬಾಗಿನಲಿ ಬಹು ಚಾತುರಂಗವ (ಸಂಶಕ. ೨೬-೬೪) ; ಆಗಸದ ಬಾಗು ಚಂದ್ರಮನ ಗುಂಡಿನ ನಣ್ಣು ಸಾಗರದ ತೆರೆಪಂಕು, ಗಿಡಬಳ್ಳಿ ಬಳುಕು . . . ಯಾ ಸೃಷ್ಟಿಯಿಂ ನಮ್ಮೊಳಾಗಿಹುದು ರೂಪರುಚಿ (ಮಂಕುತಿ. ೨೦೭). **೨. ನದಿಯ ತಿರುವಿನಲ್ಲಿ ಇರುವ ಜಮೀನು, ಗದ್ದೆ, ತೋಟ ಮುಂತಾದ ಫಲವತ್ತಾದ ಪ್ರದೇಶ :** ಅಳಿಯಿಲ್ಲದಬ್ಬವನಮಿಲ್ಲು ದ್ಯಾನಸಂತಾನಮಿಲ್ಲದ ಬಾಗಿಲ್ಲ (ಶಾಂತಿಕೀ. ೯-೦೩೩) ; ಆಗ್ನೇಯದೊಳಿಱೆಯ

ಬಾಗುಂ . . . ಪಡುವ ಪೂವಿನ ಕೆಟೆಯುಂ ಬಾರುಲ ಬಾಗುಂ (ಶಾಇ. IX-i, ೦೨೦-೪೩ ; 1058) ; ಮಾಬಲಯ್ಯನ ಬಳದ ಮರೆಯ ಸೋಂಕಿನ ಬಾಗಿನ ಬಟ್ಟೆಯಿಂ ಮೂಡಣ ಮೆಯ್ಯು ಕೆಂಪ್ (ಕಇ. II, ೯-೨೫ ; 1075). ೩. ಸಂದುಗೊಂದು ; ಮೂಲೆ : ಕೆಲ್ಲೆ ಕುಹರದ ಕೋಣೆ ಬಾಗುಗಳೆಲ್ಲವನು ಹೊಕ್ಕರಿಸಿ ತೆರಳಿಚಿದನು ಮಹಾಧನವ (ಕುಮ್ಯಾಸ. ೩-೪೭) ; ಓರಬಾಗಿನ ಕುಟುವ ಕೊಳ್ಳದ ಗೌರಿಕರನಪ್ಪಳಿಸಿ ಮಲೆಯ ವಿಹಾರಿಗಳ ಬಟ್ಟೆಗ್ಗೈದು ತುಂಬಿಸಿದನು ಸುವಸ್ತುಗಳ (ಕುಮ್ಯಾಸ. ೯-೦೦). ೪. [ಸಂಗೀತ] ಧ್ವನಿಯ ಪಲುಕು.—ಬಳುಕು : ಉದ್ದ ನೀಚ ಸ್ಥಾಯಿ ಸಂಚಾರಿ ಠಾಯ ಬಾಗು ಸಬದ್ಧಾಬದ್ಧಾದ್ವಾವಿಂಶತಿ ಶ್ರುತಿಯೇಕವಿಂಶತಿ ಮೂರ್ಛನೆಗಳೆಸೆಯೆ . . . ಪಾಡುತ್ತಿರೆಯುಂ (ಶಾಂತೀಶ್ವ. ೦೬-೬೭ ಪ) ; ಆ ವಧು ಠಾಯ ಬಾಗು ಮೋಹ ಚಾಳೆಯುಮಂ ನೆಟೆ ಮಾಡಿ ತೋಡಿ ವೇಳಾವಳಿ ದೇಶಿ ಗುಜ್ಜರಿವರಾಳಿಗಳಿಂದಮೆ ನಾಡೆ ಪಾಡುತುಂ (ಧರ್ಮೇಕ. ೩-೯೦). ಬಾಗಿ₂ : ೨. ಪಡುವ ಬಾಗಿಯ ವೊಳಗೆ (ಶಾಇ. ೦೯೩೦, ಉಡುಪಿ. ೫೯೬-೦೯: 1414). ಬಾಗ್ಗೆ : ೨. ತೆಂಕಣ ಬಾಗೆಯ ತೋಟವಳಿ ನಾಡ ಜಳತ್ರಯಿ ಮೂಳಗದ್ದೆ ಬೆದ್ದಲು ಚತುಸ್ಸೀಮೆಯಸುಳ್ಳದನು ಸರ್ವಮಾನ್ಯದ ಕೊಡಗೆಯಾಗಿ . . . ಶಿಲಾಶಾಸನವ ಮಾಡಿಕೊಟ್ಟೆವು (ಎಕ. IX, ಬೆಂಗಳೂ. ೮೦-೦೨ : 1363) ; ಚಿಕ್ಕಣ್ಣಗಳ ಬಾಗೆಯೊಳಗೆ ಬೀಯಣ್ಣನ ಹೊಲ (ಎಕ. IX (೩),ಬೆಂಗಳೂ. ೦೬೬-೦೦; 1424).[<ಬಾಗು₁]

**ಬಾಗುಂಜಿ** 'ಬಾಗುಂಜಿ' ನೋ.

**ಬಾಗುಜಿ**, ಬಾಗುಂಜಿ, ಬಾಬಿಂಜಿ, ಬಾವಂಚಿ, ಬಾವಂಜಿ, ಬಾವುಜಿ, ಭಾವಂಜಿ, ವಾಕುಚಿ, ವಾಗುಂಜಿ, ವಾಗುಚಿ (ನಾ). ಒಂದು ಬಗೆಯ ಔಷಧೀಸಸ್ಯ ; ಸೋಮವಲ್ಲಿ : "ಚಂದ್ರಮುಷ್ಟಿ, ಬಾಗುಜಿ" (ಅಕಾಶಿ. ೦೦-೦೦) ; "ಕಾಳಮೇಷಿ—ಕರಿಯ ತಿಗಡೆ, ಕರಿಯ ಜೀರಗೆ, ವಂಜಿಷ್ಠೆ, ಬಾಗುಜಿ ?" (ಓಶಂ. ೩೦). **ಬಾಗುಂಜಿ** : ಚಿತ್ರಮೂಲ ಬಾಗುಂಜೀ ಬೀಜ ಇವನು ಗೋಮೂತ್ರದಿಂದ ಅರೆದು ಲೇಪಿಸಲು ಕುಷ್ಠ . . . ಶಮನ (ವೈದ್ಯಸಾ. I, ೪೯೩) ; ಬಾಗುಂಜಿಬಿತ್ತುವಾಕಳೆತುಪ್ಪದಲಿ ಕುಡೆ ಕುಷ್ಠ ತಾ ಕೆಡುಗುಂ (ಪಾಕ್ಯಸಾಂ. ೨೦) ; ಚಿತ್ರಮೂಲ ಬಾಗುಂಜೀ ಬೀಜ ಇವನು ಗೋಮೂತ್ರದಿಂದ ಅರೆದು ಲೇಪಿಸಲು ಕುಷ್ಠ ಹರ (ಬಿವೈಪಿ. ೦೪೫). **ಬಾಬಿಂಜೆ** : ಗುಲ್ಲಕಂಚಿ, ಬಾಬಿಂಜಿ (ವೈ ಶಿ. ೨೫-೪೬೯). **ಬಾವಂಚಿ** : ಹೀರಿಯು ಮತ್ತು ಬಾವಂಚಿಯು ಮಲಭೇದಕ (ಅಶ್ವಾಂಗ. ೦೬೫-೫ ಟೀಕು) ; ಬಾವಂಚಿ ಗಿಡ, ಕಾರ್ಬೆಕ್‌ಬೀಜ (ವೈ ಶಿ. ೬೫-೦೩೦೩). **ಬಾವಂಜಿ** : ತಗಚಿಯ ಬೀಜ ಬಾವಂಜಿಯ ಬೀಜ . . . ಇವೆಲ್ಲವಂ ತಪ್ಪೊಳು ಸರಿಯಾಗಿ ಕೊಂಡು ಚೂರ್ಣವಂ ಮಾಡಿ (ಬಿವೈಪಿ. ೯೨). **ಬಾವುಜಿ** : "ವಾಕುಚಿಯೆನಲು ಬಾವುಜಿಯೆನಿಕ್ಕು" (ಮಂಗರಾ. ೩೭-೨೦). **ಭಾವಂಜಿ:** ಏಲಕ್ಕಿ ಲವಂಗ . . . ಭಾವಂಜಿಯಲೆರಸದಿಂದರೆದು . . . ಕಲಸಿ ಕೊಡಲು ಜ್ವರಾತಿಸಾರ ಗ್ರಹಿಣಿ ಸಹ ಗುಣಮಕ್ಕುಂ (ಸಕವೈ. ೩೦೯). **ವಾಕುಚಿ:** "ಅವಲ್ಗುಜ, ಸೋಮರಾಜಿ . . . ವಾಕುಚಿ, ವಾಗುಚಿ, ಪೂತಿಫಲಿ " (ಶಾಶಂ. ೩). **ವಾಗುಂಜಿ** : ಸಾಸಿವೆಯ ಗಿಡದ ಅಗಿಲು, ಬಿಳಿಯ ಗುರುಗುಂಜಿ, ವಾಗುಂಜಿಯ ಬೀಜ, ಪ್ರತ್ಯೇಕ ೪ ತೂಕ(ಬಿವೈಪಿ. ೨೮). **ವಾಗುಚಿ** : ಮೇಲಿನ 'ನಾಚಿರಾ' ಪ್ರಯೋಗವನ್ನು ನೋಡಿ.
[<ಸಂ. ವಾಕುಚೀ./ಹಿಂ. ಬಕುಚೀ, ಬಾಬಚೀ; ಮರಾ. ಬಾವಚೀ]

**ಬಾಗುಮರಿಗೆ** (ನಾ). ಅನ್ನದ ಗಂಜಿಯನ್ನು ಬಸಿಯುವ ಪಾತ್ರೆ: ಅನ್ನದ ಹಿತ್ತಾಳೆಚರಿಗೆಯನ್ನು ಒಲೆಯ ಪಕ್ಕದಲ್ಲಿಟ್ಟಿದ್ದ ತಾಮ್ರದ ಬಾಗುಮರಿಗೆಗೆ ಎತ್ತಿ ಇಳಿಸಿ . . . ಅನ್ನ ಬಸಿಯಲು ಅಣಿಯಾಗುತಿದ್ದಳು (ಕುಲಿಶಾ. ೩೦೦). [ಬಾಗು₂ + ಮರಿಗೆ (< ಮರಗೆ)]

ಬಾಗುಪಡೆ (ಕ್ರಿ). ಕೊಂಕನ್ನು ಹೊಂದು ; ವಕ್ರತೆಯನ್ನು ಪಡೆ : ಎಡೆಯಾದ ನೀಡಡಿ ಶರೀರದೊಡನತಿಬಾಗುಪಡೆದೆಡದ ಮೆಯಂ ನೆಗೆದ ಬಲದ ಕಟಿ ನಾರಿಯಂ ತುಡುಕಿ ಕರ್ಣದ ಕಡೆಗೆ ಸೆಳೆದ ಕೈ . . . ದೃಷ್ಟಿ ಮುಷ್ಟಿ ಶರಸಂಧಾನವನುವಾಗೆ ಕೆಡೆಕೆಡೆಯೆನುತ್ತೆ ಕೂಕಿಟೆದೆಚ್ಚನು (ಶಕಲಾ. ೬-೨೯). [ಬಾಗು₃ + ಪಡೆ₁]

**ಬಾಗುಳ್** 'ಬಾಗುಳ' ನೋ.

**ಬಾಗುಳ**, ಬಾಕುಳ, ಬಾಗುಳ್ (ನಾ). ೧. ಮನಸ್ಸಿನ ಗೊಂದಲ; ಕಳವಳ ; ಚಿಂತೆ : "ಬಾಗುಳಂ ವ್ಯಾಕುಲದೊಳ್" (ಶಮಾಂದ. ೬೮); ಬಯಕೆಯ ಬಾಗುಳಮಾ ಕಾಂತೆಯೊಳಂತದು ನೆಗಟ್ದುದಿಲ್ಲಣಂ ತೃಷ್ಣಾರ್ತಿ ಕ್ಷಯಕರನಿರೆ ತಾಂ ಗರ್ಭಾಶಯದೊಳ್ ತೋಱುಗುಮೆ ದೋಹದಂಗಳ ಪೊಂದುಂ (ವರ್ಧಮಾ. ೦೦-೬೨); ಪೋಗುಪೋಗೆಂಬೆನ್ನನಟ್ಟೆಯೆ . . . ಬಾಗುಳದೆ ಹುಲುನರರಿಗೊಪ್ಪುವ ಕೀಳುನುಡಿಗಳಿಗಿ ಬೇಗುದಿಯನೆನೆ ಗಿತ್ತರದರಿಂ ಬೇಗ ಬಂದೆನು (ರಾಮಾಸಂ. ೩-೫-೦೩). **ಬಾಕುಳ** : ೨. ತೀವ್ರವಾದ ಅಪೇಕ್ಷೆ: ಉತ್ಕಟವಾದ ಬಯಕೆ: ನೋಡುವ ಕಣ್ಗೆ ಮೆಯ್ಸೋಂಕುವ ಮಾಡುವ ಕೂರುಗುರ್ವೊಯ್ಕೆ ಮೆಯ್ಯ್ಗಳಂ ನೀಡುವ ಬಾಯ ಬಾಕುಳಕೆ ಪಲ್ಲಟಮಾಡುವ ಬಯ್ದ ಬಯ್ಗುಳಂ ಬೇಡುವ . . . ಗಂಡು ಹೇಸ್ ತಡಂ ಮಾಡುಗುಂ (ಅಪಂಚ. ೯-೫೦). ೩. ಆಸೆ ಪಡುವವನು ; ಆಸಕ್ತ : ತನಿಗಳ್ಳೆ ತವಕಿಗಂ ಬಾಡಿನ ಬಾಕುಳನೀತನೆಂದು ಲೋಹದ ರಸಮಂ ತನು ಕುಡಿಯೆ ಕುಡಿಯಿಪರ್ (ಅಪಂಚ. ೯-೩೫). **ಬಾಗುಳ್:** ೧. ಗಾಳಿ ಬೆಮರ್ತರ್ದಂದು ನೇಸಱ್ ಕಂಗಳನಾದಂದು ಅಮರ್ದು ನಂಜಾದಂದು ನಿನಗೆ ಬಾಗುಳ್ (ರಾಮಾಶ್ವ. ೦೦-೩೦). P ಈ ಶಬ್ದರೂಪ ವಿಚಾರಣೀಯ ವಾದುದು. [< ಸಂ. ವ್ಯಾಕುಲ]

**ಬಾಗುಳಿ**, ಬಾಕುಳಿ (ನಾ). ೧. ಹೆಬ್ಬಯಕೆ ; ಲೋಲುಪತೆ ; ಅತ್ಯಾಸಕ್ತಿ : "ಬಾಗುಳಿಯೆಸಲ್ಕತ್ಯಾಸೆ" (ಕಶಿ. ೬೭). ೨. ಅಧಿಕವಾಗಿ ಬಯಸುವ ವ್ಯಕ್ತಿ: ವ್ಯಸನಿ : ಬಾಗುಳಿಗಳು ಏಸು ನೆರೆದಿರ್ದೊಡೆ ಏನು ಕೂಗಿಸುವೆನು ಕಾಗೆಯಂತೆ (ಶ್ಯಾಪಕ. ೦೯-೦೦೦). **ಬಾಕುಳಿ** : ೧. "ಬಾಕುಳಿ, ಮೊಗಸು, ಪಸಂ, ಇಚ್ಛೆ—ಈ ೪ ಇಚ್ಛೆ" (ಕಶಾ. ೫೭-೨೩೩); ಕೊಸಱುವ ಲಾಗು ಕೂಡಿ ತಣಿವಿಲ್ಲದ ಬಾಕುಳಿ ಗಂಡರಿಚ್ಚೆಯಿಂ ಪೊಸಯಿಪ ಬೇಟಮಂ ಬೆಳಸುವಿಚ್ಚೆಯ ಜತ್ತಕಿ ತಾನೆ ಲೋಕದೊಳ್ (ಸುಕ್ತಿಸು. ೯-೪೦೦) ; ಒಕುಳಿಯ ನೆವದಿಂದ ತೆಕ್ಕೆಯ ಬಾಕುಳಿಗಳುರವಣಿಸಿತೇ (ಕುಮ್ಯಾಕ. ೬-೧೭); ಮಱಿದುಂಬಿ ಮೇಲಱೆಯದೆ ಅಲರ್ಗಳಂ ಬಾಯ ಬಾಕುಳಿಯಿಂದೆ ತುಳಿದು ಸಲ್ಲಲಿತಕುಸುಮಾಮೋದಮಂ ಪೀರ್ವುವೋ (ಅರಾತ. ೨-೦-೦೦). ೨. ಮಂತ್ರೋರ್ವಗಳ್ ಬೆಸನವ ಬಾಕುಳಿ (ರಟಾತ. ೦೯-೪೨೫); ಪುಣ್ಯಲೋಭಿ ಭಕ್ತರ ಬಾಕುಳಿ ಶರಣರ ಸೂಱೆ (ಬಸವ. ೯-೨೫).
[< ಬಾಗುಳ]

**ಬಾಗುಟೆ** (ನಾ). ಬಲೆ ; ಜಾಲ : ವಾಗುರಾ—ಬಾಗುಟೆ (ಕಶಿ ಪು. ೦೪೦ ವ್ಯಾ ಖ್ಯಾ). [< ಸಂ. ವಾಗುರಾ]

**ಬಾಗೆ₁**, ಬಾಗಿ₁ (ನಾ). ೧. ಒಂದು ಬಗೆಯ ಮರ; ಶಿರೀಷ ; ಸಿರಿಸಲ ಮರ : "ಶಿರಿಸಮೆನೆ ಬಾಗೆ" (ಮಂಗರಾ. ೩೬-೦೭); ಬಾಗೆಯಂತೆ ನಿಸ್ಸಾರನಾಗಿ ಅಶೋಕೆಯಂತೆ ನಿಷ್ಫಲನಾಗಿ . . . ಎಲ್ಲಾ ಪಟಿಗಮೊಳಗಾದ್ವೆ (ಧರ್ಮಾಮೃ. ೨-೦೦೫) ; ಬಾಗೆಯನೊತ್ತಿ ಹಿಡಿದ ಕುಂದಂ ಕೃಷ್ಣಾಗರು ವಿಡಿದುಡುವುಳಿಗಳಿಂದಾ ಪೂಗಣೆಯನ ಜಯನಾಲಯಮೆನೆ ವನಮಾವಿಪಾವನವಾಯ್ತು (ಜಯಾಪಾ. ೦೫-೪೪). ೨. ಒಂದು ಊರಿನ ಹೆಸರು : ಬಾಗೆಯೆಪ್ಪತ್ತುಮಂ (ಎಇ. IV, ೩೫-೨೭ ; 975); ಶ್ರೀಮತ್ ಕೇತಲ ದೇವಿಯರ್ ತದ್ದಿಕ್ವಾಡಿಸಾಸಿರದೊಳಗಣಬುನೂಱುಂ ಬಾಡದ ಬಂಪಣ ಬಾಗೆಯುಮ್ಮತ್ತಜ ಬಬೀಯುಮುತ್ತಮಮುಗ್ರಹಾರಂ ಪೊನ್ನವಾಡಮುಂ . . . ಆಳುತ್ತಮಿರೆ (ಇಇ. XIX, ೨೬೨-೬; 1054). **ಬಾಗಿ₁** : ೧. ಕೋಸಲ

ದೇಶದಲ್ಲಿ ಪುಟ್ಟುವ ವಜ್ರವು ಬಾಗೀಹೂವಿನ ವರ್ಣದಿಂದಿರುವದು (ಶೌಗಂಧಿ. ೩೭೩-೨೩) : ಮರಗಳು ಹೆಸವ, ಹೆಬ್ಬಲಸು . . . ತೇಗ, ಕೋಲುತೇಗ, ಬಾಗಿ, ಬಿಲ್ವಾರ, ದಿಂಡಿಗ (ಮಮ್ಮಸು. ೨೩೬).

[ದೇ.II ತಮಿ. ವಾಕೈ; ಮಲ. ವಾಕ; ತುಳು. ಬಾಗೆ]

**ಬಾಗೆ₂** 'ಬಾಗು₂' ನೋ.

**ಬಾಗೆ₃** 'ಬಾಗ' ನೋ.

**ಬಾಗೆಯ** (ನಾ). ಒಬ್ಬಾತನ ಹೆಸರು : ಸಳಿನಾಡಾ ಬಾಗೆಯುಮೆಜೀದು ವಿಟ್ಟಾನ್ (ಎಕ. XVI. ತುಮುಕೂ. ೯೩-೮ ; ಸು. 780).

[ಬಾಗೆ₁ + ಅಯ್ಯ₁ (<ಅಯ್ಯ₆₁)]

**ಬಾಗೆಯೂರ್** (ನಾ). ಒಂದು ಊರಿನ ಹೆಸರು : ಬಾಗೆಯೂರ ಬಲ್ಲಹನೆಜೀ ನೊಳ್ಳಿಯಾನ್ . . . ಪಡೆಯುಳಿಜೀದು ಸತ್ತನ್ (ಎಕ. XVI. ತುಮುಕೂ. ೯೨-೬ ; ಸು. 780) ; ಇದಕ್ಕೆ ಸಕ್ಕಿ ಜಮ್ಬೂರ ಪೆಮ್ಮಾಡಿ ಗಾವುಣ್ಡನು ಬಾಗೆಯೂರ ಕಮ್ಮಾಜಗಾವುಣ್ಡನು (ಎಕ. V. ಚನ್ನರಾ. ೨೫೦-೦೨ ; ಸು. 925). [ಬಾಗೆ₁ +ಊರ್]

**ಬಾಗೆವಾಡಿ** (ನಾ). ಒಂದು ಊರಿನ ಹೆಸರು ; ೞ ಬಸವಣ್ಣನವರ ಜನ್ಮಸ್ಥಳವಾದ, ಈಗಿನ ವಿಜಾಪುರಜಿಲ್ಲೆಯ ಬಸವನ ಬಾಗೆವಾಡಿ: ಸಿ[ಮ್ಮ]ಲಗೆ ಪೂರ್ವ್ವದಿಗ್ಭಾಗೇ ಕೃಷ್ಣಬೇಣ್ಣೋತ್ತರ ಪಥೇ ಬಾಸುರಿಕೋಷು ಇಂಗಳಸರ ಬಾಗೆವಾಡಿ ಸಾಮುಳವಾಡಿಗೆ ಒಡ್ಡವೊಡಿಗೆ ಮಾಧ್ಯಮತ್ರಿ[ಗ] ಓಪ್ಪರಗೆನಾಮಾಗ್ರಮೋ (ಕೌಇಇ. XI — i. ೮-೦೮ ; 862) ; ಅಗ್ರಹಾರಂ ಬಾಗೆವಾಡಿಯೊಳಗೆಸೆದಿರ್ಪ ಅಗ್ರೇಶ್ವರಂ ಕಮ್ಮೆಕುಲ ದಿಂದೆ ಮೆಜೆದಿರ್ಪ ವಿಪ್ರನಿರ್ಪಂ (ಬಸರ. ೦-೯೬). [ಬಾಗೆ₁ + ಪಾಡಿ₂]

**ಬಾಗೇಶ್ರೀ, ಬಾಗೇಶ್ವರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಹತಭಾಗ್ಯೆಯಾದ ಚಿತ್ರಾಂಗದೆ ತನ್ನ ಪೂರ್ವಕಥೆಯನ್ನು ಬಾಗೇಶ್ರೀಯಲ್ಲಿ ತೋಡಿಕೊಳ್ಳುತ್ತಾಳೆ (ಕೃಷ್ಣಹೂ. ೩೨೯). **ಬಾಗೇಶ್ವರಿ** : ಬಾಗೇಶ್ವರಿ ಪೂರಿಯಾ ದರ್ಬಾರಿ ಕಮಾಚ್ ರಾಗಗಳು ಉನ್ಮಾದವನ್ನೂ . . . ಗುಣಪಡಿಸುವುವೆಂಬ ಭಾವನೆ ಉತ್ತರಭಾರತದಲ್ಲಿದೆ (ಶಾರದ. ೩೪೪).

[←ಹಿಂ. ಬಾಗೇಸರೀ; ಮರಾ. ಬಾಗೇಶ್ರೀ, ಬಾಗೇಸರೀ, ವಾಗೇಶ್ವರೀ]

**ಬಾಗೇಶ್ವರಿ** 'ಬಾಗೇಶ್ರೀ' ನೋ.

**ಬಾಚಂಗೆ** 'ಬಾಚಣಿಗೆ' ನೋ.

**ಬಾಚಣಿಗೆ, ಬಾಚಂಗೆ, ಬಾಸಣಿಗೆ₁** (ನಾ). ೧. ಒಂದು ಬಗೆಯ ಮರ : ಈಚಿಗಿಡ, ಅಗ್ನಿಮಂಥ, ತಕ್ಕಿಲೆ, ಬಾಚಣಿಗೆಮರ (ಮೈಶಿಗಿ. ೬೪-೦೩೦೦). ೨. ಕೂದಲನ್ನು ಹಿಕ್ಕುವ ಒಂದು ಬಗೆಯ ಸಾಧನ ; ಹಣಿಗೆ ; ಕಂಕತಿಕೆ : ಅಣದು ವೀಳೆಯದೆಲೆಗೊಡುತ ಬಾಚಣಿಗೆ ಬೊಕ್ಕಸವಾಂತು ಬಲುಸಂದಣಿಸುತ್ತಾಳೀಜನ ನಡೆಯುತಾ ಬಾರುಚಪ್ಪರಕೆ (ಸನತ್ಕು. ೯-೫೭) ; ತಲೆಯ ಕೂದಲೆಲ್ಲಾ ಬಾಚಣಿಗೆ ಕಾಣದೆ ಗಾಳಿಯಲ್ಲಿ ಹಾರಾಟದ ಅಭ್ಯಾಸ ನಡೆಸುತ್ತಿವೆ (ಅಂಹೂ. ೦೦೬). **ಬಾಚಂಗೆ** : ೧. ಬಾಚಂಗೆ (ಪನಿಯಾರ) — ಎತ್ತರವಾದ ವೃಕ್ಷವು. ಇದರ ಕಟ್ಟಿಗೆಯಿಂದ ಹಣಿಗೆಗಳನ್ನೂ ಕರಡಿಗೆ ಮುಂತಾದ ಶೋಭಿಯ ಒಡವೆ ಗಳನ್ನೂ ಮಾಡುತ್ತಾರೆ (ಕಭಾಗ. ೪೪). **ಬಾಸಣಿಗೆ₁** : ೨. ಕಾಳಾಂಜ ಕೈಪಿಡಿ ಬಾಸಣಿಗೆ ಬಂಧುರದಾಲವಟ್ಟ ಚಾಮರದ . . . ನಾರಿಯ ರೈದಿದರು (ಕಂಸವಿ. ೯-೬೮) ; ರನ್ನದ ಬಾಸಣಿಗೆ ಚಿನ್ನದ ಸೀರಣಿಗೆ ಕೈಕಟ್ಟಿನವ ಕಟನಿರಿಗೆ ಸೀರೇಯ ತಾಯಿ ನಮ್ಮವ್ವ ಕಳುವ್ಯಾಳೇ (ಗಾರಕ. ೦೦). [ಬಾಚು (<ಬಾರ್ಚು) + ಹಣಿಗೆ./ತುಳು. ಬಾಚಣಿಗೆ]

**ಬಾಚಣಿಸು₁, ಬಾಸಣಿಸು₁** (ಕ್ರಿ). ಕೂದಲನ್ನು ಹಿಕ್ಕು.— ಬಾಚು : ಕುರುಳ ಬಾಚಣಿಸುತಲಿ ಬೈತಲಿಸರವು ಮುತ್ತಿನ ಬೊಟ್ಟು . . . ಇಟ್ಟು ಶೃಂಗರಿಸೆ (ಸಂಪಿಲೀ. ೩-೬೪); ಹೆದ್ವಾರವಿಂತು ಕಡುಚೆಲುವೆಸೆಯ ತತ್ಪುರದ ಮಧ್ಯ ಭೂದೇವಿ ತನ್ನಸ್ತಕವ ಬಾಚಣಿಸಿ ತಿದ್ದಿದ ಸುಬ್ಬೈತಲೆಯ ರೇಖೆ ಯೆನೆ (ನವಮೋ. ೨-೨೯). **ಬಾಸಣಿಸು₁** : ರುಕ್ಮಿಣಿಸತ್ಯಭಾಮಾದೇವಿಯರ್ ಕುರುಳ ಬಾಸಣಿಸಿ ಪೂವಿಡಿಕಿಜೀದು ಪೆರ್ಜಡೆವೆಣೆದರು (ಮೋಹತ. ೦೪-೪೦); ಶ್ರೀತಳೋದರಿಯ ಕೇಶವ ಬಗಿದು ಬಾಸಣಿಸಿ ಬೈತಲೆಯ ತೆಗೆದು ತಿದ್ದಿದರು (ನವಮೋ. ೨೩-೦೨). [<ಬಾಚಣಿಗೆ + — ಇಸು₃]

**ಬಾಚಣಿಸು₂** 'ಬಾಸಣಿಸು₂' ನೋ.

**ಬಾಚಿ₁** (ನಾ). ಮರವನ್ನು ಕೆತ್ತಲು, ಬಡಗಿಗಳು ಬಳಸುವ ಅಗಲ ಬಾಯಿಯ ಒಂದು ಬಗೆಯ ಕಬ್ಬಿಣದ ಸಾಧನ : "ದುಡಿಯೇನೆ ಬಾಚಿ" (ಮಂಗರಾ. ೦೦೩-೮) ; ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಜೀದುಂ (ಧರ್ಮಾಮೃ. ೩-೭೩) ; ಬಾಚಿಯೊಳು ಕೆತ್ತುವ ಕತ್ತಿಯಿಂ ಕಡಿವ ಕರಗಸದಿ ಕೊಜೀವ ರೌರವದ ನರಕಂ ಭಯಂಕರವಾದುದು (ಸಿದ್ಧರಾ. ೮-೨೪). 'ಕೈಬಾಚಿ' ಪರಾ.

[<ಸಂ. ವಾಶೀ, ವಾಸೀ./ತಮಿ. ವಾಚ್ಚಿ, ವಾಯ್ಚ್ಚಿ ; ಮಲ. ವಾಚ್ಚಿ ; ತುಳು. ಬಾಚಿ, ಬಾಜಿ ; ತೆಲು. ಬಾಡಿಸ]

**ಬಾಚಿ₂** (ನಾ). ಮೈಜೋಡು; ಕಂಚುಕ : "ಆ ವಾರವಾಣಕಂ ಕಂಚುಕಂ ಚೋಳಕಂ ಕುಪ್ಪಸಂ ಬಾಚಿಯುಕ್ಕಂ " (ಮಂಗರಾ. ೦೦೦-೨೯). [?]

**ಬಾಚಿಸು₁** (ಕ್ರಿ). ೧. (ಕಸವನ್ನು) ಒಟ್ಟಾಗುವಂತೆ ಸೇರಿಸು; ಗೋರಿಸು: (೩). ೨. ಹಣಿಗೆಯಿಂದ ಕೂದಲನ್ನು ಹಿಕ್ಕುವಂತೆ ಮಾಡು : ಶಾಂತಿಯೇನೋ . . . 'ಅಕ್ಕ' ನಿಂದ ತಲೆ ಬಾಚಿಸಿಕೊಳ್ಳಲು ಒಪ್ಪಿದಳು (ವಾತ್ಸಲ್ಯ. ೫೬). [ಬಾಚು (<ಬಾರ್ಚು) + — ಇಸು₃]

**ಬಾಚಿಸು₂, ಬಾಜಿಸು₁** (ಕ್ರಿ). ಓದು ; ವಾಚಿಸು : ವಾಚಕನೋಲೆಯರ್ಥ ಮನಜಯದೆ ವಿಪರೀತಮಾಗಿಂತೆಂದು ಬಾಚಿ[ಕಾಕಾಂ. ಜಿ]ಸಿದಂ (ವಡ್ಡಾರಾ. ೭೫-೦೭); ಯುವರಾಜನೃಪಂ . . . ರಾಜಾದೇಶವನಾಗಳ್ಬರ್ಚಿ ನೋಡಿ ತಾಂ ಬಾಚಿಸಿದಂ (ಕಾದಂಬ. ೨೫೭); ಒಂದಂ ಬಾಚಿಸುತಿರೆ ಪುತ್ತೊಂದಂ ಬೆಸಗೊಳ್ವಂ . . . ಇದು ಕಾವ್ಯಮಂ ಖಿಳಂ ಕೇಳ್ವಂದಂ (ಸೂಕ್ತಿಸು. ೦-೫೩). **ಬಾಜಿಸು₁** : ಅದಂ ಸಂಧಿವಿಗ್ರಹಿ ಕೊಂಡು . . . ಅತಿಮಧುರೋದ್ದಾವಿತಗಂಭೀರನಾದದಿಂ ಬಾಜಿಸಿದಂ (ಅಂಪು. ೦೪-೪೬); ಸಂಧಿವಿಗ್ರಹಿ ರಾಜಾಜ್ಞೆಯಿಂ (ರಾಜಶ್ರೇಷ್ಠಿಯಾ) ಲೇಖಮನಿಂತೆಂದು ಬಾಜಿಸಿದಂ (ಕಾಪುಂಪು. ೦೬೩); ಬರೆಯಲುಂ ಬಾಜಿಸಲುಂ ಬಲ್ಲ ಶಬ್ದ ಸಂಸ್ಕಾರವುಳ್ಳಾತ ನಾಗದೇಸಿಗರ್ಗ್ಗೆ ನಿತ್ಯಸ್ಥಿತಿಯೊನ್ದು ಪೊಟ್ಟಜಾಹಾರಮುಂ ಪರಿಷಕ್ಕೊನ್ದು ಕಪ್ಪಡಮುವನಿಕ್ಕಿಯೋದಿಸಿ (ಎಇ. XX. ೬೮-೨೬; 1012). [< ಬಾಜನೆ₁ + — ಇಸು₃]

**ಬಾಚು** ' ಬಾರ್ಚು ' ನೋ.

**ಬಾಚುಗಜು** (ನಾ). ತಲೆ ಬಾಚಿಕೊಳ್ಳುವ ವ್ಯಕ್ತಿ; ಶೃಂಗಾರದಲ್ಲಿ ಆಸಕ್ತನಾದ ವ್ಯಕ್ತಿ : ಲೋಚಿನೊಳಗಿರ್ದಿಂತು ಬಾಚುಗಜುವಾದನೇ ವಾಚಾಲರೊಳಗಿರ್ದನಾಚಾರಿಯಾದನೇ (ಪಾಣೀಠ. ದೇ. ೨೫೬-೭).

[ಬಾಚು (< ಬಾರ್ಚು) + ಕಜು₂]

**ಬಾಚುಮುದ್ದೆಬೆಲ್ಲ** (ನಾ). ಉಂಡೆಬೆಲ್ಲ : ಒಳ್ಳೆಯ ಬಾಚುಮುದ್ದೆಬೆಲ್ಲ ಒಂದು ತಟ್ಟೆಯಲ್ಲಿತ್ತು (ಮರಕು. ೦೨೫).

[ಬಾಚು (<ಬಾರ್ಚು) + ಮುದ್ದೆ₁ + ಬೆಲ್ಲ]

**ಬಾಚುವಲೆ** (ನಾ). (ಬೇಟೆಯಲ್ಲಿ ಪ್ರಾಣಿ, ಪಕ್ಷಿಗಳನ್ನು ಒಟ್ಟಾಗಿ ಗೋರಲು ಸಾಧ್ಯವಾಗುವಂತೆ ಹೆಣೆದ) ಒಂದು ಬಗೆಯ ಬಲೆ : ಬಡಿಗೆವಲೆ ಬಾಚುವಲೆ ಗಾಢವಲೆ ಗೂಢವಲೆ ಮಡಿಕೆವಲೆ ಮಂದರಿನ ವಲೆಯ ಹೊಜೆಗಳ ಬೇಡವಡೆ ನೆರೆದುದು (ಹಕಾ. ೩-೮).

[ಬಾಚು (< ಬಾರ್ಚು) + ಬಲೆ₁]

**ಬಾಜಂತ್ರಿ, ಬಜಂತ್ರಿ** (ನಾ). ಒಂದು ಬಗೆಯ ಚರ್ಮವಾದ್ಯ : ತ್ರಿಸಂಧ್ಯೆ

ಯೊಳಂ ಸಂಜೀವಜೀಯಂ ಬಾಜಂತ್ರಿಯುಂಣ ಹಜೀಕಾಜಗೆ[ಕೆ]ಯ್ಮತ್ತರು ಹಂಸೆರಡು (ಶಾಸಕ. ೯೭-೦೦೦ ; 1178). **ಬಜಂತ್ರಿ :**, ಬಜಂತ್ರಿಗಳು ಡಮುರುಗವು . . . ಮೊರವುತಿರ್ದವು ಸರ್ವವಾದ್ಯವು ಸಕಲಘೋಷದಲಿ (ಜ್ಞಾನಸಿಂ. ೦೩-೨೯) ; ಬಜಂತ್ರಿಯು . . . ಒಡಕುದನಿ ಕಿವಿಯನ್ನು ಗಡಚಿಕ್ಕಿಸಿಬಿಟ್ಟಿತು (ಶೃಕಿ. ೭). [← ಮರಾ. ವಾಜಂತ್ರೀ./ಸಂ. ವಾದಿತ್ರ]

**ಬಾಜಣೆ** 'ಬಾಜನೆ₂' ನೋ.

**ಬಾಜನೆ₁** (ನಾ). ಓದು ; ಓದುವಿಕೆ ; ವಾಚನ : ಬರೆಪದ ಬಲ್ಮೆ ಬಾಜನೆಯ ಬಿನ್ನಣಮೊಪ್ಪುವ ಲೆಕ್ಕದೋಜೆ ಸಂಕರಸುತನೊಳ್ಸರಸ್ವತಿಯೊಳಂಬುರುಹಾಸನನೊಳ್ವಿಚಾರಿಸಲ್ದೊರೆ ಸರಿಪಾಟಿಯೆಂದು ನಿಖಿಳೋರ್ಬ್ಬರೆ ಬಣ್ಣಿಸುತಿರ್ಪ್ಪುದೆಂದೊಡೇಂ ಪಿರಿಯನೊ ಸಿಂಗಂ (ಎಕ. VII, ಶಿಕಾ. ೦೨೯-೨೯; 1077) ; ಚಕಾರಕ್ಕೆ ಜಕಾರಂ . . . ವಾಚನಾ_ಬಾಜನೆ (ಶಬ್ದ. ೨೩೩ ಕ್ರಿಯೋ). 'ಬಾಜನೆಗಬ್ಬ' ಪರಾ. [< ಸಂ. ವಾಚನ]

**ಬಾಜನೆ₂**, ಬಾಜಣೆ (ನಾ). ವಾದ್ಯಗಳನ್ನು ನುಡಿಸುವಿಕೆ, —ಬಾರಿಸುವಿಕೆ: ಆಟಂ ಬಾಜನೆ ಗಾಡಿಗಳ್ ಪಸದನಂ ಬೆಳ್ದಿಂಗಳೊಳ್ವಾತು ಕೊಂಡಾಟಂ ಕತ್ತುರಿ ಕಪ್ಪುರಂ . . . ಎಂದಿಂತಿವಂ ಬೇಟಕ್ಕಾಗರಮೆಂಬೆನಣ್ಣ (ಕಾವ್ಯಾವ. ೬೩೩); ಪಾಡುವ ಸುರಗಣಿಕಾಜನಮಾಡುವ ದೇವಾಂಗನಾಜನು ಬಾಜನೆಯಂ ಮಾಡುವಮರಿ ಜನಂ ತೇಂಕಾಡಿಸುವುದು ರಾಗರಸದೊಳೆ ಮರನ ಸಭೆಯಂ (ಅನಂಪು. ೦೨-೯೦); ನಾಡಿಗೆ ನಾಡೇ ಉರಿಯುತ್ತಿರುವಾಗ ಎಲ್ಲಿಯ ಹಾಡುಗಾರಿಕೆ ? ಬನ್ನವೇ ಅನ್ನವಾದಾಗ ಎಲ್ಲಿಯ ಬಾಜನೆ ? (ಅಷ್ಟ. ೦). **ಬಾಜಣೆ :** ಪರುಟಪಣೆಯು ಗಾನದ ನಚ್ಚಣೆಯು ಬಾಜಣೆಯ ಬಿಜ್ಜೋದರರ ಗಂದರರಚ್ಚರರ ಗಜಬಜಿಂ ತೀರ್ಕೃಸಿದ ... ದೇವಾಂಗನೆಯರ ಗೊಂದಣಂ (ರಾಜಶೇಕ. ೬೬-೨೬). [<ಸಂ. ವಾದನ]

**ಬಾಜನೆಕಾಜ** (ನಾ). ವಾದ್ಯವನ್ನು ನುಡಿಸುವವನು ; ವಾದಕ ; ವಾದನಕಾರ : ರಾಜಸುತೆಯನು ತಜ್ಜಾತಿಗೆ ಕುಡುವುದೊಂದೋಜೆಯು ಮಿಾಜಿ ದುಷ್ಕುಲದ ಬಾಜನೆಕಾಜಗೆ ಕುಡುವುದುಚಿತವೆ (ಶೇಬಸಂ. ೦೨-೬೩).
[ಬಾಜನೆ₂ + — ಕಾಜ]

**ಬಾಜನೆಗಬ್ಬ** (ನಾ). ಒಂದು ಬಗೆಯ ಕಾವ್ಯ : ಪಲತೆಱದ ಪದ್ಯದಿಂದಂ ಲಲಿತವಚೋರಚನನಿಚಯಪದ್ಧತಿಕೆಗಳಂ ಸಲೆ ನಿಲೆ ಸಮೆದುದು ಸರಸಾಖಿಲವರ್ಣನವಾದೊಡದುವೆ ಬಾಜನೆಗಬ್ಬಂ (ಕಾವ್ಯಾವ. ೯೩೩) ; ಕನ್ನಡದ ಮಟ್ಟಿಗೆ ಪಾಡು, ಮೆಲ್ವಾಡು, ಬಾಜನೆಗಬ್ಬಗಳಿದ್ದುವು (ಕಸಾಇ. ೨೯೯).
[ಬಾಜನೆ₁ + ಕಬ್ಬ₁]

**ಬಾಜವಣೆ** 'ಬಜಾವಣೆ' ನೋ.

**ಬಾಜಾ**, ಬಾಜೆ₁ (ನಾ). ೧. ಊದುವ ಅಥವಾ ಬಾರಿಸುವ ವಾದ್ಯ : ಆ ಜಾತ್ರ್ಯಾಗ ಬಾಜಾ ತಗೋತೀನಿ (ಎಬ್ಬು.ಕ. ೦೯೭). ೨. ವಾದ್ಯಗಳನ್ನು ಬಾರಿಸುವಿಕೆ ; ವಾದನ : ಬೇಂಡು ಬಜಂತ್ರಿ ಎರಡೂ ಬಾಜಾ ಸುರುಮಾಡಿದವು (ಶೃಕಿ. ೯). **ಬಾಜೆ₁ :** ೧. 'ಬಾಜೆಬಜಾವಣೆ' ಪರಾ.
**ಬಾಜಾ ಬಜಂತ್ರಿ** — ಹಲವಾರು ಬಗೆಯ ವಾದ್ಯಗಳ ಮೇಳವಾದನ: ರಾಜರಾಜೇಶ್ವರಿ ಕಂಪೆನಿ ಬಹಳ ವೈಭವದಿಂದ ಬಾಜಾಬಜಂತ್ರಿ ಮಾಡಿಸಿಕೊಂಡು ಬೆಂಗಳೂರಿಗೆ ಬಂತು (ಪಟಿಸಾ. ೯೯).
[← ಹಿಂ. ಮರಾ. ಬಾಜಾ. / ಸಂ. ವಾದ್ಯ]

**ಬಾಜಾಣಿ** (ನಾ). ನಾಲ್ಕಾರು ಬಗೆಯ ಧಾನ್ಯಗಳನ್ನು ಹುರಿದು ಕೂಡಿಸಿ ಮಾಡಿದ ಹಿಟ್ಟು ; ಇದರಿಂದ ತಾಲೀಪಿಟ್ಟು, ಕೋಡುಬಳೆ ಮೊದಲಾದ ತಿಂಡಿಗಳನ್ನು ಮಾಡುತ್ತಾರೆ : ಗಿರಿಕ್ಯಾಗ ಬೀಸಿದ ಬಾಜಾಣಿ ಜಿಗುಟ ಇರಾಕಿಲ್ರಿ (ಜಾಬು. ೩).
[← ಮರಾ. ಭಾಜಣೀ, ಭಾಜಾಣೀ]

ಬಾಜಾರ್ '**ಬಾಜಾರ**' ನೋ.

**ಬಾಜಾರ**, ಬಜಾರ್, ಬಜಾರ, ಬಜಾರು, ಬಾಜಾರ್, ಬಾಜಾರು (ನಾ). ದಿನಸಿ ಮುಂತಾದ ಪದಾರ್ಥಗಳನ್ನು ಫರಾರಾಟ ಮಾಡುವ ಸ್ಥಳ; ಪೇಟೆ; ಮಾರುಕಟ್ಟೆ : ಪುರದ ಬಾಜಾರದೈಶ್ವರ್ಯಮಂ ಪೊಗಳಲಳವೆ (ಗುರುಚಾ. ೦-೨೯) : ಪುರದ ಬಾಜಾರದಿಂದೈತಂದರಾನಂದದಿಂ (ಮಹಾಪು. ೦೯-೧೦೦) ; ರೇವತಿ ಗಂಡನಿಂದ ಇಪ್ಪತ್ತು ರೂಪಾಯಿಗಳನ್ನು ಪಡೆದುಕೊಂಡು ಸಾಮಾನುಗಳನ್ನು ತರಲು ಬಾಜಾರಕ್ಕೆ ನಡೆದಳು (ಮುತ್ಕೃದ. ೬೦). **ಬಜಾರ್ :** (ವ್ಯಗಕ. IV, ೬೬೯). **ಬಜಾರ :** ಬಾಜ ಬಜಾರವು ಬಯಲೆದ್ದು ಹೋದೀತು (ಎರಕಾ. ೦೨೬-೨೯). **ಬಜಾರು :** ಬಜಾರಿನಲ್ಲಿ ಕಬ್ಬಿಣದ ಧಾರಣೆ ಹೇಗೆ ಏರುತ್ತಿದೆ ಬಲ್ಲಿರಾ ? (ಕಾಮಿಕಾಂ. ೦೦೩). **ಬಾಜಾರ್ :** ಚಾರುತರದ ಬುರುಜಿನೊಳು ಬಾಜಾರ್ ಹೂಡ್ರೇ (ಶಂಕ. ೨೩). **ಬಾಜಾರು :** ಸರಹದ್ದಿನ ಬೆಟ್ಟ ಪರಿಯಂತ್ರ ಲಷ್ಕರಿನ ಬಾಜಾರು ಇಳಿಸಿ ಇದ್ದರು (ರಾಜೇಂದ್ರ. ೧೩೪) ; ಬಾಜಾರಿನಲ್ಲಿ ಅಕ್ಕಿ ತುಟ್ಟಿ (ಮುಂಜಿಯು. ೩-೨೩೯).
[← ಪಾರ. ಹಿಂ. ಮರಾ. ಬಾಜಾರ್]

**ಬಾಜಾರಬೀದಿ** (ನಾ). ಪೇಟೆಯ ಬೀದಿ : ಮಹಾಲಿಂಗೇಂದ್ರಂ . . . ಮಂಟಪವನುಳಿದು ಬಾಜಾರಬೀದಿಯೊಳ್ಕೈದಲು (ಮಹಾಪು. ೨೯-೩೪).
[ಬಾಜಾರ + ಬೀದಿ]

**ಬಾಜಾರಮುಖ್ಯ** (ನಾ). ಪೇಟೆಯ ಮುಖಂಡ ; ವರ್ತಕಪ್ರಮುಖ : ಲಲಿತ ತೊಂಬತ್ತೆಂಟು ಬಾಜಾರಮುಖ್ಯರ್ಗೆ ಗೆಲವಿನಿಂ ವೀಥಿಗಳ ಶೃಂಗರಿಸವೇಳ್ಕೆಂದು ದಲಿತದಿಂ ಬಸವರಸ ಪೇಳಲು (ಪ್ರಭುಲಿ. ೯-೦೭).
[ಬಾಜಾರ + ಮುಖ್ಯ]

**ಬಾಜಾರಿ**, ಬಜಾರಿ (ಗು). ೧. ಪೇಟೆಗೆ ಸಂಬಂಧಿಸಿದ ; ವ್ಯಾಪಾರ ವಿಷಯಕವಾದ. ೨. ನೀಚ ; ಕೀಳುಮಟ್ಟದ : ನಿಜಗಂಡನ ಸಂಗವನೊಲ್ಲದೆ ಭುಜಗರ ಸಂಗವ ಮಾಡುವ ಬಾಜಾರಿ ತೊತ್ತಿಗೆಲ್ಲಿಯದೋ ನಿಜಮುತ್ತೈದಿತನ (ವಚಾ. I, ೩೩೩). **ಬಜಾರಿ :** ೩. ಕಳಪೆಯಾದ ; ಅತಿಸಾಮಾನ್ಯವಾದ : ಎಣ್ಣೆಯಲ್ಲಿ ಕರಿದಿದ್ದ ವಡೆ, ಹಳಸಿದ ಕೊಬ್ಬರಿ ಮಿಠಾಯಿ, ಬಜಾರಿ ಷರಬತ್ತು ಅವುಗಳ ಕೆಲಸ ಅವು ಮಾಡಿದ್ದವು (ಕಾಂಕ. ೨೬). (ನಾ). ೪. ಮಾನಗೆಟ್ಟ ಹೆಣ್ಣು ; ಸೂಳೆ ; ಬೀದಿಬಸವಿ : ಮಗನಿಗೆ ಆಸ್ತಿಯನ್ನು ತಪ್ಪಿಸಿ ಚಲ್ಲುಚಾಲಿನ ಬಜಾರಿಗೆ ಸ್ವತ್ತು ಸೇರುವಂತೆ ಮಾಡಬಾರದು (ಹುಟ್ಟಿಕ. ೦೮೭) ; ನನ್ನ ಚಾರಿತ್ರ್ಯದ ಬಗ್ಗೆ ಮಾತನಾಡಿದಳೇ ಈ ಮೂರು ಕಾಸಿನ ಬಜಾರಿ ? (ಮೂರುದಾ. ೦೯೩).
[← ಹಿಂ. ಮರಾ. ಬಾಜಾರೀ]

**ಬಾಜಾರು** 'ಬಾಜಾರ' ನೋ.

**ಬಾಜಿ** (ನಾ). ೧. ಪಣವನ್ನಿಟ್ಟು ಆಡುವ ಗಂಜೀಫು, ಇಸ್ಪೀಟು ಮುಂತಾದ ಆಟ ; ದ್ಯೂತ ; ಜೂಜು : ಸಾಕುಸಾಕು ಬಾಜಿಯ ಬಟ್ಟು ತೊಲಗಿರಿ (ಸಮುಹು. ೨೦). ೨. ದ್ಯೂತಕ್ಕೆ ಒಡ್ಡುವ ಪಣ ಅಥವಾ ವಸ್ತು : ಅವ್ರೇನೂ ಬಾಜೀ ಮಡಗ್ಬೇಕಾದ್ದಿಲ್ಲ (ಕಮ್ಮು. ೨೨). 'ಬಾಜಿಕಟ್ಟು' ಪರಾ. [← ಪಾರ. ಹಿಂ. ಮರಾ. ಬಾಜೀ]

**ಬಾಜಿಕಟ್ಟು** (ಕ್ರಿ). ೧. ಜೂಜಿನಲ್ಲಿ ಪಣವಿಡು, — ಪಣಕಟ್ಟು : ಯಾರು ಗೆಲ್ಲುತ್ತಾರೆ, ಯಾರು ಸೋಲುತ್ತಾರೆ ಎಂಬುದಾಗಿ ಅನೇಕರು ಬಾಜಿ ಕಟ್ಟಿದ್ದರು (ಅಜು. ೦) ; ಇಬ್ಬರು ಸ್ನೇಹಿತರು ಬಾಜಿಕಟ್ಟಿ ಅದರ ಅರ್ಥವನ್ನು ನಿರ್ಣಯಿಸುವ ಭಾರವನ್ನು ವಹಿಸಿಕೊಂಡರು (ಅಂಕ. II, ೯೦). ೨. ಒತ್ತೆಯಾಗಿ ಒಡ್ಡು ; ಒಪ್ಪಿಸು : ಇವರು ಒಂದು ಹಗಲೆಲ್ಲ ಅನ್ನ ನೀರು ಇಲ್ಲದೆ ತಮ್ಮ ಪ್ರಾಣವನ್ನೇ ಬಾಜಿಕಟ್ಟಿ ಹಿಂಬಾಲಿಸಿದ ಮೇಲೆ, ಕಳ್ಳರು . . . ಮೊಕ್ಕಾಂ ಮಾಡಿದರು (ವಚಾ. III, ೬೬೨).
[ಬಾಜಿ + ಕಟ್ಟು₁]

**ಬಾಜಿಗ** (ನಾ). ವಾದ್ಯಗಾರ ; ವಾದಕ : ಮೊಳಗಿತು ಬಾಜಿಗರಲ್ಲಿ ಬಾಜಿಸಲ್ ಶುಭವಾದ್ಯ (ಮಣಾಶ. ೯೨-೭೭).

[<ಬಾಜಾ + – ಇಗ./ತುಳು. ಬಾಜಿಗೆ]

**ಬಾಜಿಸು$_1$** 'ಬಾಚಿಸು$_2$' ನೋ.

**ಬಾಜಿಸು$_2$**, ಬಾರಿಸು$_3$ (ಕ್ರಿ). ವಾದ್ಯವನ್ನು ನುಡಿಸು.–ಧ್ವನಿಮಾಡುವಂತೆ ಬಡಿ : ದೇವಲೋಕದ ಪಟಹಗಳಂ ಬಾಜಿಸುತ್ತುಂ . . . ಇಂತೆಂದು ಪೇಳ್ದಪ್ಪಡೆದಂ (ಪಚ್ಚಾರಾ. ೯೪-೭) ; ಸುರಸುದತಿ ಪೆಟಿಳ್ ಮೆಟ್ಟಿದು ಬೀಣೆಯಂ ಬಾಜಿಸಿದಳ್ (ಆದಿಪು. ೭-೨೦) ; ಆ ಸುರದುಂದುಮಾಕುಸುವು ಕೊಯ್ಯದೆ ಸೂಸಿದವು ಬಾಜಿಸದೆ ಮೊಳಗಿದವಾ ಸುರಾನಕವು (ಶಾಳ್ವಭಾ. ೩೩-೯). **ಬಾರಿಸು$_3$** : ಬಾರಿಸುವ ಕೊಂಬು ಮದ್ದಳೆ ಘಂಟೆಯಾಂದುಗೆಯ ಘೋರತರರಭಸದಲಿ . . . ಎಯ್ತಂದರು (ಸಿದ್ಧರಾ. ೮-೪೯) ; ರಾಜಕುಮಾರಿ ವೀಣೆಯನ್ನು ಬಾರಿಸಲಾರಂಭಿಸಿದಳು (ಬಾಣಿಅ. ೪೦).

[ಬಾಜನ್ನೆ$_2$ + – ಇಸು$_3$./ತುಳು. ಬಾರಿಸು; ತೆಲು. ವಾಯಿಂಚು]

**ಬಾಜೀಬಂದು** 'ಬಾಜುಬಂದ' ನೋ.

**ಬಾಜು**, ಬಾಜೂ (ನಾ). ೧. ತೋಳು ; ಭುಜ. ೨. ಪಕ್ಕ; ಮಗ್ಗುಲು; ಪಾರ್ಶ್ವ : ವಿಕ್ರಮನ ಬಾಜುಯಲ್ಲಿ ತಾನೂ ಪವಳಿಸಿ ನಿದ್ರೆಯಂ ಗೆಯ್ಯಲು (ಶೃಮೂ. ೦೩); ಪರವ್ವ ಯಾರದೋ ಮಾರ್ಗಪ್ರತೀಕ್ಷೆ ಮಾಡುತ್ತ ತನ್ನ ಮನೆಯ ಬಲ ಬಾಜುವಿನ ಕಟ್ಟೆಯ ಮೇಲೆ ನಿಂತಿದ್ದಾಳೆ (ಗಂಗಾಗ. ೬೪). ೩. ಪಕ್ಷ ; ಪರ : ಆ ಮುದಿಹದ್ದು ತನ್ನ ಮಗನ ಬಾಜು ಹಿಡಿದು ನನ್ನನ್ನು ದೂಡಬೇಕೆಂದ (ಜೀವಬಾ. ೭೮) ; ಅವರು ಚಂದ್ರಭಾಗಕ್ಕನ ಬಾಜು ಹಿಡಿದು . . . ಧೀಮಾರೀ ಹಾಕಿದರೆ ಚಂದ್ರಭಾಗಕ್ಕನ ಪಾಡು ನಾಯಿ ಪಾಡಾಗುತ್ತಿತ್ತು (ಮೂರುದಾ. ೬೭). **ಬಾಜೂ** : ೨. ಆನೆಗೆ ಬಾಜೂ ಘಂಟೆಗೆ ಕಬ್ಬಿಣದ ಸರಪಣಿ ಸಹಾ ಪೋಣಿಸಿರುವ ಹಿತ್ತಾಳೆ ಸರಪಣಿ ೧ (ಎಕ. XIV, ಶಂಆವ. ೨೯೨-೪೩; 1847); ಎಡಬಲದ ಎರಡು ಬಾಜೂದಲ್ಲಿಯೂ ಒಡ್ಡುಹಾಕಿಸಬೇಕು (ಕೃಷಿಶ್ರ. ೩೩) ; ವಿವಾಹಕಾಲದಲ್ಲಿ ಅಂತಃಪಟವನ್ನು ಹಿಡಿದಿರುತ್ತಾರೆ. ಕೊನೆಗೆ ಚಪ್ಪಾಳೆ ಹೊಡೆದ ಕೂಡಲೆ ಬಾಜೂಕ್ಕೆ ಸರಿಸುತ್ತಾರೆ (ಖಾರಸಂ. ೩೨೩). ೪. ದಿಕ್ಕು ; ಕಡೆ : ಭಾಳ ದಿನಾ ಆತು ನೀವು ಈ ಬಾಜೂಕು ಬಂದು ! (ಬಿಂ೪. ೬೬೨).

[←ಪಾರ. ಹಿಂ. ಮರಾ. ಬಾಜೂ]

**ಬಾಜುಬಂದ**, ಬಾಜೀಬಂದು. ಬಾಜುಬಂದಿ, ಬಾಜುಬಂದು, ಬಾಜೂಬಂದು (ನಾ). ಸ್ತ್ರೀಯರು ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ; ತೋಳುಬಂದಿ : ಕೈಗಳಲ್ಲಿ ರತ್ನಜಡಿತ ಕಂಕಣಗಳು, ಭುಜದಲ್ಲಿ ಬಾಜುಬಂದಗಳು ಒಪ್ಪುತ್ತಿದ್ದವು (ಖಿಶಾ. ೦೦೬); ವಜ್ರದ ಬೆಂಡೋಲೆ ಮುತ್ತಿನ ಕಂಠಿ ಬಸವ್ವ ಬಾಜುಬಂದ ನಾಗಮುರಿಗೆ (ಸಿದ್ಧಕೃ. ೦೯-೬೭). **ಬಾಜೀಬಂದು** : ನಾಗಮುರಿಗೆ, ವಂಕಿ, ಬಾಜೀಬಂದು . . . ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮುರಿಮಂ. ೩೯). **ಬಾಜುಬಂದಿ** : ವಂಕಿಯು ಭಾಪುರಿ ಕಂಕಣಗಳುಲಿಯೆ ಬಾಜುಬಂದಿ ನೆರವಿನ ಮಣಿ ಸಿರಿಯೆ (ಕುಚೀಲೋ. ೦೨೭). **ಬಾಜುಬಂದು** : ತೋಳಿಗೊಂಕಿ ಬಾಜುಬಂದು ಗೊಂಡೆಗಳು (ಕರ್ಣಕ. ೨೯೭). **ಬಾಜೂಬಂದು** : ತೋಳಿಗೆ ಬಾಜೂಬಂದು, ಕತ್ತಿನಲ್ಲಿ ಅಡ್ಡಿಕೆ (ಮುಳ್ಳ. ೪೦).

[←ಪಾರ. ಹಿಂ. ಬಾಜೂಬಂದ್ ; ಮರಾ. ಬಾಜುಬಂದ, ಬಾಜೂಬಂದ]

**ಬಾಜುಬಂದಿ** 'ಬಾಜುಬಂದ' ನೋ.

**ಬಾಜುಬಂದು** 'ಬಾಜುಬಂದ' ನೋ.

**ಬಾಜೂ** 'ಬಾಜು' ನೋ.

**ಬಾಜೂಬಂದು** 'ಬಾಜುಬಂದ' ನೋ.

**ಬಾಜೆ$_1$** 'ಬಾಜಾ' ನೋ.

**ಬಾಜೆ$_2$** (ಗು). ಚಿಲ್ಲರೆಬಾಬುಗಳನ್ನೊಳಗೊಂಡ : ಸಾದಿಲ್ವಾರಿಗೆ ಸೇರಿದ : ಚಿಲರ ಬಾಜೆಬಾಬು ಬೇರೀಜು ಮೇರೆ (ವ್ಯಅಂ. ೧೯೩೮, ೩೦-೦೮; 1817) ; ಬಾಜೆಬಾಬುಗಳು ಸಹಾ ಯಾವತ್ತನ್ನೂ . . . ಅನುಭವಿಸುವದೂ (ವ್ಯಅಂ. ೦೯೩೯, ೪೨-೯೯ ; 1825). [ ← ಮರಾ. ಬಾಜೇ]

**ಬಾಜೆಬಜಾವಣೆ** (ನಾ). ಹಲವಾರು ಬಗೆಯ ವಾದ್ಯಗಳ ಮೇಳ ವಾದನ : ಮದುಮಕ್ಕಳನ್ನು ಬಾಜೇಬಜಾವಣೆಗಳೊಂದಿಗೆ ಮೆರೆಯಿಸುತ್ತ . . . ನಿಬ್ಬಣ ಹೊರಡಿಸಿದರು (ಹೂಬಿಸಿ. ೧೪).

[ಬಾಜೆ$_1$ (< ಬಾಜಾ) + ಬಜಾವಣೆ]

**ಬಾಟಲಿ** 'ಬಾಟಲು' ನೋ.

**ಬಾಟಲು**, ಬಾಟಲಿ (ನಾ). ಗಾಜಿನ ಸೀಸೆ : ಕುಪ್ಪಿ : ಏಳು ಬಾಟಲು ಬ್ರಾಂದಿ ಮೊದಲೇ ತರಿಸಿ ಇಟ್ಟುಕೊಂಡಿದ್ದೆವು (ಬಂಗಾರ. ೭). **ಬಾಟಲಿ** : ನನ್ನ ಶಾಂಪೆನ್ ಬಾಟಲಿ ಎಲ್ಲಿ ಅದೆ ? (ಮೋಹಿನೀ. ೩೬) ; ಬಾಟಲಿ ಕೊಟ್ಟು ಕಳಿಸಿರಿ. ಔಷಧ ಕೊಡುವೆ (ಅಶೋಕ. ೨೪). [← ಇಂ. Bottle]

**ಬಾಟಾ** 'ಭಾಟಾ' ನೋ.

**ಬಾಟಾಮಾರ್ಗ** 'ಭಾಟಾಮಾರ್ಗ' ನೋ.

**ಬಾಟಿ** (ನಾ). ೧. ಒಂದು ಬಗೆಯ ರೊಟ್ಟಿ : ಎಲ್ಲರೂ ದೂರದಲ್ಲಿ ಬದಿಯಲ್ಲಿ ಕುಳಿತು ಬಾಟಿ ತಿನ್ನುತ್ತಿದ್ದರು (ಹೊಸಮೇ. ೨೯೪). ೨. ಜೋಳದ ತೆನೆ : ಸುಗ್ಗಿಯ ಪೂರ್ವದಲ್ಲಿ ಕೂಲಿಕಾರ ಜನರು . . . ಹೊಲಗಳಲ್ಲಿಯ ಬೆಳೆಗಳನ್ನು ಕೊಂಡು, ಬಾಟೀ ಮಾರಿ ಬಹಳ ರೊಕ್ಕ ಗಳಿಸುವರು (ಕಥಾಗ. ೪೩೪) ; ನಾನು ಕೈಯಲ್ಲಿ ಕುಡಗೋಲು ಹಿಡಿದು ಬಾಟಿ ಕೊಯ್ಯುವವ (ಶಾಬಿಂ. ೬೦). [ ← ಹಿಂ. ಮರಾ. ಬಾಟೀ]

**ಬಾಟು** (ನಾ). ಎತ್ತರದಲ್ಲಿ ಸಪಾಟಾಗಿದ್ದು, ವ್ಯವಸಾಯಯೋಗ್ಯವಾಗಿರುವ ಭೂಮಿ : ಸ್ಥಳದ ಪೂರ್ವದ ಮಾನ್ಯ ಆಯ ಸ್ವಾಮ್ಯ ಬಾಟು ಬೋಟು ಸಹ ತೂಗುರಿಗಟ್ಟಿಕೆ ಸಲುವ ಉಪಗ್ರಾಮ ೯ ಹಳಿ ಸಹ . . . ಅನುಭವಿಸಿಕೊಣ್ಣು (ಎಕ. XII, ಮದ್ದಗಿ. ೪೩-೬; 1684 ?).

[← ಹಿಂ. ಭಾಟ್, ಘಾಠ್ ; ಮರಾ. ಭಾಟ್]

**ಬಾಟೆ** 'ಭಾಟಾ' ನೋ.

**ಬಾಡ**, ಬಾಡೆ. ವಾಡ, ವಾಡೆ$_2$ (ನಾ). ೧. ಹಳ್ಳಿ ; ಗ್ರಾಮ : ಇಂತಗ್ರಾಸನಮನುಣುತ್ತಮುಖುವತ್ತುಬಾಡಮನಾಳುತ್ತುಂ ಸುಖಸಂಕಥಾವಿನೋದದಿಂ ಕಾಲಂ ಸಲೆ (ಪಚ್ಚಾರಾ. ೦೯೩-೦೨) ; ಅವರ್ಗೀವುದೊಳ್ಪುನೆಲೆ . . . ಅಯ್ದು ಬಾಡಮಂ (ಪಂಶಭಾ. ೯-೪೩) : ಸಂಧಿಗೆಯಲ್ಕೆ ಜೇಡಿದರೆ ಪಾಂಡುತನೂಭವರಯ್ದುಬಾಡಮಂ (ಗದಾಯು. ೩-೨೦). ೨. ಒಂದು ಊರಿನ ಹೆಸರು : ಕೆಱೆಯೂರ ಜಾದಿಯೂರ ಕೊಡಂಗನೂರ ಬಾಡದ ಮಹಾಜನವುಂ (ಎಕ. XI, ಚಿತ್ರದು. ೬೪-೨೮; 968) ; ಕದಂಬಳಿಗೆ ಸಾಸಿರದ ಬಳಿಯಗ್ರಹಾರ ಬಾಡದ ಶ್ರೀನಾರಾಯಣದೇವರ್ಗ್ಗೆ ನಿವೇದ್ಯಕ್ಕೆ . . . ಬಿಟ್ಟ ಗಟ್ಟಿಯ ಕಮ್ಮ ೨೩೫ (ಎಕ. XI, ದಾವಣ. ೦೪೦-೦೩; 1060). ೩. ಕೆಲವು ಊರಿನ ಹೆಸರುಗಳ ಕಡೆಯಲ್ಲಿ ಸೇರುವ ಶಬ್ದ : 'ಗಂಗವಾಡ' ಪರಾ. **ಬಾಡೆ** : ೪. ಮನೆ ; ನಿವಾಸ : ಅವಳು ಆ ರಾತ್ರಿ ನೆಲಕ್ಕಿ ಬಾಡೆಯಲ್ಲಿ ಬೆಳಗುತ್ತಿದ್ದ ದೀಪಕ್ಕೆ ನಮಸ್ಕರಿಸಿ . . . ಮಟ್ಟಲಿಳಿದಳು (ಹುಲಿಹಾ. ೦೫). ೫. ಹಜಾರ ; ನಡುಮನೆ : ಅತ್ತೆ . . . ಗಂಡನನ್ನೂ ಮಗನನ್ನೂ ಕರೆದುಕೊಂಡು ಬಂದು ಬಾಡೆಯಲ್ಲಿ ಊಟಕ್ಕೆ ಕುಳಿತರು (ಮುಸಕೂ. ೪೪). **ವಾಡ** : ೬. ದನಗಳ ಹಟ್ಟಿ ; ಕೊಟ್ಟಿಗೆ : ವಾಡ–ವಾಡಿ ಪದಕ್ಕೆ ಗೋವುಗಳ ಹಟ್ಟಿ, ಎಂದರ್ಥ (ಕರ್ನಾಟ. ೯೪). 'ಕೊಂಡವಾಡ' ಹೋ. **ವಾಡೆ$_2$** : ೪. ಅವರು . . . ಹಳೇ ಹುಬ್ಬಳ್ಳಿಯ ಒಂದು ಮೂಲೆಯೊಳಗಿನ ಒಂದು ವಾಡೆಯಲ್ಲಿ ಒತ್ತಟ್ಟಿಗಿನ ಒಂದು ಕೋಣೆಯನ್ನು ಬಾಡಿಗೆ ಹಿಡಿದರು (ಮೋಚಿಅ. ೩).

೭. (ಅರಸರು, ಜಮೀನುದಾರರು ಮುಂತಾದವರು ವಾಸಿಸುವ) ಭವ್ಯವಾದ ಗೃಹ ; ಪ್ರಾಸಾದ ; ಭವನ ; ದೊಡ್ಡ ವಾಡೆಯಂತಿದ್ದ ಮನೆ ಅವರದು. ಅದಕ್ಕೊಂದು ಮಹಾದ್ವಾರ (ಸಮಜೀ. ೦೨೪) ; ವಾಡೆಯ ಹೆಬ್ಬಾಗಿಲಿನ ಭವ್ಯವಾದ ಹೊಸ್ತಿಲನ್ನು ಅವಳಿನ್ನೂ ದಾಟಿರಲಿಲ್ಲ (ಗ್ರಾಕೂಯು. ೬). 'ಪಾಡ್ಕಿ' ಪರಾ.

[< ಸಂ. ವಾಟ./ತಮಿ. ವಾಟ್ಟೈ. ಮಲ. ವಾಡ ; ಕೊಡ. ಬಾಡೆ ; ತೆಲು. ವಾಡ = ಮನೆಗಳ ಸಾಲು. / ಮರಾ. ವಾಡ, ವಾಡಾ]

**ಬಾಡಗ** (ನಾ). ತೋಟ ; ವನ : "ವಾಟಕಮೆನೆ ಬಾಡಗವಾದು" (ಕಕಬೋ. ೦೪). [<ಸಂ. ವಾಟಕ]

**ಬಾಡಗೆ, ಬಾಡಿಗೆ, ಭಾಡಿಗೆ** (ನಾ). ಮನೆ, ಕೊಠಡಿ, ಯಂತ್ರ ಮೊದಲಾದುವುಗಳನ್ನು ನಿಯಮಿತ ಅವಧಿಗೆ ಉಪಯೋಗಿಸಿಕೊಳ್ಳುವವನು, ಅವುಗಳ ಒಡೆಯನಿಗೆ ಕೊಡಬೇಕಾದ ಹಣ : "ಭಾಟಕಃ, ಅವಕ್ರಯಃ_ಈ ೨ ಬಾಡಗೆ" (ಹಲಾಯು. ೯೯-೯೦೪) ; ಕೆಯ್ಯ ಗುತ್ತಗೆಯಿಂ ಮನೆಯ ಬಾಡಗೆಯಿಂ ವಿಶೇಷಂ ಗದ್ಯಾಣ ಧರಣವಾಗಿಯುಳಿದಡೆ ಪಸಿದು ಬಂದವರ್ಗಂಬಲಿಯ ಸತ್ರವಂ ನಡೆಯಿಸುವರು (ಕ್ಶಾ. XX. ೦೦೦-೩೯; 1129) ; ಬಾಡ[ಪಾಠಾಂ. ಡಿ]ಗೆಯ ಮನೆಗೆ ಹೊಯಿದಾಡಪಲೇಶಕ್ಕೆ (ಪೋಲೀಪು. ೭-೨೯) ; ಕೊಳಚೆಯಿದಕಕೆ ಕೊಂಬುದೇ ಹಜಿಗ್ಗೋಲ ಬಾಡಗೆಯ (ಕುಮ್ಮಾ.ಕ. ೨೨-೩೦). **ಬಾಡಿಗೆ :** ಲೋಗರ ಕಾರ್ಯಕ್ಕೆ ಬಡಿದು ಕೊಳ್ವ ಬಾಡಿಗೆಯ ಮನೆಗೆ ತಿವಿದುಕೊಳ್ವ . . . ಕಟ್ಟೆಗ್ಗರಂತೆ (ಧರ್ಮಾಮೃ. ೯-೦೬೨); ಎತ್ತ ಹೋದರು ಬಾಡಿಗೆ ಸುಂಕವಿದಕಿಲ್ಲ (ಪುರಂದ. ೦-೦೫೬-೦) ; ಬಾಲಕರಿಲ್ಲದ ಬಾಲೆಯದು ಯಾತರ ಜನ್ಮ ಬಾಡಿಗೆ ಎತ್ತು ದುಡಿದ ಹಾಗೆ (ಹಳ್ಳಿ ಹಾ. ೭೯). **ಭಾಡಿಗೆ :** ವೊಂದು ತೇಣಿ ಮನೆಗೆ ಮಾಡಿದ ಯೆರಡು ವಸರದ ಭಾಡಿಗೆಯಿಂದ . . . ದಿನ ೧ ಕೆ ಸೊಲ್ಲಗೆ ತೆಂಗಿನ ಯೆಂಣೆ (ಕಶಾ. III-1, ೦೪-೩೦; 1545); ಸಾಹೇಬರು . . . ಆ ಜಾಗಾ ಭಾಡಿಗೆಗೆ ಪಡಕೊಂಡರಂತೆ (ಅಶಚಾ. ೦೦೪).

[<ಸಂ. ಭಾಟಕ./ತಮಿ. ವಾಟಕೈ; ಮಲ. ವಾಡಕ. ತುಳು. ಬಾಡಿಗೆ, ಬಾಡಾಯಿ; ತೆಲು. ಬಾಡಿಗೆ, ಬಾಡಿಗ, ಬಾಡುಗ./ಮರಾ. ಭಾಡೇ]

**ಬಾಡಗೆಕಾಱ** (ನಾ). ಕೂಲಿಗೆ ಗೊತ್ತುಮಾಡಿಕೊಂಡ ಆಳು ; ಹಣವನ್ನು ಕೊಟ್ಟು ನೇಮಿಸಿಕೊಂಡವನು : ಬಾಡಗೆಕಾಱ ನನ್ನ ಸ್ತ್ರೀಯೆನಲು ತವರೂರಲ್ಲಿರ್ದ ಜಾರ ನನ್ನ ಸ್ತ್ರೀಯೆನಲು . . . ಅವಳ ಸೀಳಿ ಎರಡು ಹೆಣ್ಣುಗಳ ಮಾಡಿಯುವರಿಬ್ಬರಿಗೆ ಕೊಟ್ಟು (ಭೃರಸೂ. I, ೩೩೭). [ಬಾಡಗೆ + — ಕಾಱ]

**ಬಾಡಗೆಗೊಳ್** (ಕ್ರಿ). ಬಾಡಿಗೆಯನ್ನು ಕೊಡುವ ಕರಾರಿನಿಂದ ವಸ್ತುವನ್ನು ಪಡೆ : ಕೆಲವೆತ್ತಂ ಬಾಡಗೆಗೊಂಡು ಭಂಡಮಂ ಪೇಱ . . . ಪೆರ್ವಟುವಿನೊಳ್ ಬಿಟ್ಟಲ್ಲಿ (ಜಂಹು. ೯-೦೦ ವ). [ಬಾಡಗೆ+ಕೊಳ್]

**ಬಾಡಬ** (ನಾ). ೧. ಕುದುರೆ ; ಅಶ್ವ : ಶ್ರೀರಾಮಚರಿತವಂ ಕೇಳಿಸಲೊಡಂ ಬಾಡಬಂಗಂ ಬಾಡಬಕ್ಕಂ ವಿಮೋಚನಮಕ್ಕುಂ (ರಾಪಟ್ಟಾ. ೦೩೬-೯). ೨. ಕಡಲೊಳಗಿರುವ ಕುದುರೆಯ ಮುಖದಿಂದ ಹುಟ್ಟಿದುದೆಂದು ನಂಬಲಾದ ಬೆಂಕಿ; ಔರ್ವಾನಳ; ಕಡಲ್ಗಿಚ್ಚು : "ಔರ್ವಃ, ಸಮುದ್ರವಹ್ನಿಃ, ಬಾಡಬಃ, ಬಡಬಾಮುಖಃ — ಈ ೪ ಸಮುದ್ರದ ಕಿಚ್ಚು" (ಹಲಾಯು. ೦೩-೭೦); ಭವಗರ್ವರಸಜೀವನಿಧಿಬಾಡಬ ಉಮಾವಲ್ಲಭ (ಶೀಕೃಶ. ೩-೦೦-೦); ನೊರಜು ಬಾಡಬನುದರವರಿವುದೆ (ಜಾತ್ತ.ಕ. ೨೩-೦೪). ೧. ೨ : ಆ ಮಹಾರ್ಣವಂ . . . ಮದ್ಯಜನ್ಮಸ್ಥಾನಮಾಗಿಯುಂ ಬಾಡಬೋಪಭೋಗಯೋಗ್ಯಮುಂ . . . ಎನಿಸಿದುದು (ಶಗಂ. ೦-೪೪ ವ). ೩. ಹಾರವ; ಬ್ರಾಹ್ಮಣ ; ವಿಪ್ರ : "ಬ್ರಾಹ್ಮಣಂ ಬಾಡಬಂ ಭೂಮಿದೇವಂ ದ್ವಿಜಂ" (ಶಂಗರಾ. ೭೩-೦); ಆ ಕಲ್ಲಿದೇವಯ್ಯ . . . ಆ ಬಾಡಬರ್ಗಿಂತೆಂದು ನುಡಿದನು (ಬಸಪು. ೩೫-೭೭); ಘೋರನೆ ಬಂದು ತುಱುಗಿರ್ದ ಜನರು ಬಾಡಬರು ವೈಷ್ಣವರು ತನತನಗಿದು ಚೋದ್ಯವೆನುತ ವೆಂಗಿಸೆ ಕೋಪ ಕೊನರಿತು ಭೈರವಾಂಕನಿಗೆ (ಭೈರವೇ. ೩-೩೦). ೪. [ಕಾಮಶಾ] ರತಿಕ್ರೀಡೆಯಲ್ಲಿ ಒಂದು ಬಗೆ : 'ಬಾಡಬಕರಣ' ಪರಾ. [ಸಂ.]

**ಬಾಡಬಕ** (ನಾ) = ಬಾಡಬ ೪ : ಅಗಲಿರ್ದ ಸ್ತ್ರೀ ತನ್ನಯ ಯೋನಿಯ ಇರ್ದೆಸೆಯಿಂ ಸಂಪುಟಂಗಳಿಂ ಪುರುಷನ ಲಿಂಗವೇಳದಿರ್ದೊಡೆಯಲ್ಲಿ ಈ ಸ್ತ್ರೀಯಿಹಾ ಕರಣದಿಂದೊತ್ತಲ್ಕೆ ರಮಿಸೋದು ಬಾಡಬಕಂ (ಕಾಮಶಾ. ೨೬೩). [ಸಂ.]

**ಬಾಡಬಕರಣ** (ನಾ). = ಬಾಡಬ ೪ : ಪುರುಷನ ಪತಾಕೆಯೊಳಗಿರೆ ಮಗುಳ್ದು ಮಱಗಿರ್ದ ಗುರುಕುಚೆಯುತನುಗ್ರಹದೆರಡುಕಡೆಯೊಳು ಪಿರಿದೊತ್ತಲವಗೆಟ್ಟಱುರವಣಿಸಿ ನೆರವುತಿಪ್ಪರವದೇ ಬಾಡಬಕರಣಂ (ಜಜವ. ೯-೦೪). [ಸಂ.]

**ಬಾಡಬಕ್ಕ, ಬಾಡಬಾಕ, ಬಾಡಬಾಕು, ಬಾಡುಬಕ್ಕೆ, ಬಾಡುಬುಕ್ಕ** (ನಾ). ೧. ಒಂದು ಬಗೆಯ (ದ್ವಿದಳಧಾನ್ಯದ) ಬಳ್ಳಿ: "ಬಾಡಬಕ್ಕ, ಬಾಡಬುಕ್ಕಬಳ್ಳಿ" (ಸಸ್ಯಶ. ೦೦೦); (ವೃಕ್ಷಶಿಗ. ೬೩-೦೩೦೯). ೨. ಒಂದು ಬಗೆಯ ಮುಳ್ಳುಗಿಡ : ಚರ್ವಿತಚರ್ವಣಲಬ್ಧವಾದ ವರ್ಣನೆಗಳನ್ನು ತುರುಕಿ, ಸಾಹಿತ್ಯ ಸೀಗೆ ಗಜ್ಜುಗ ಬಾಡಬಕ್ಕಗಳ ಠಗ್ಗಾಡಾಗುವಂತೆ ಪರಿವರ್ತಿಸುತ್ತಾರೆ (ಪಂಜಾಂತ. ೪೯). **ಬಾಡಬಾಕ :** ೧. ಬಾಡಬಾಕನ ಸೊಪ್ಪಂ ನೀರಿಂ ಅರೆದು ಎಣ್ಣೆಯಾಗಲಿ ಹಸುವಿನ ತುಪ್ಪವಾಗಲೀ ಕೂಡಿಸಿ ಆಱುದಿನ ಕೊಂಡರೆ ಅಂಡವಾತ ಮಾಣ್ಗುಂ (ಏವೈಶ. ೬೩). **ಬಾಡಬಾಕು :** ೨. ಬೆತ್ತ ಕೆಂಜಿಗೆ ಸೀಗೆ ಗಜುಗ ಬಿದಿರು ಮುಳ್ಳುಮುತ್ತುಗ ಬಾಡಬಾಕುಗಳು (ಶ್ಯಾನಕ. ೧೦-೨೬). **ಬಾಡುಬಕ್ಕೆ :** ೨. 'ಬಾಡುಬಕ್ಕ ಮುಳ್ಳು' ಎಂಬ ಚೂಪಾದ ಕೊಕ್ಕೆಯ ಮುಳ್ಳುಂಟು. ಇದಕ್ಕೆ ಮೈ ತಾಗಿದರೆ ಒಂದಿಷ್ಟಾದರೂ ಬಾಡು ಕಿತ್ತು ಬರದೆ ಇರುವುದಿಲ್ಲ (ಪಷ್ಟೂರು. ೩೯೭). **ಬಾಡುಬುಕ್ಕ :** ೧. "ಬಾಡಬಕ್ಕ, ಬಾಡುಬುಕ್ಕಬಳ್ಳಿ" (ಸಸ್ಯಶ. ೦೦೦). [ ? ]

**ಬಾಡಬಾಕ** 'ಬಾಡಬಕ್ಕ' ನೋ.

**ಬಾಡಬಾಕು** 'ಬಾಡಬಕ್ಕ' ನೋ.

**ಬಾಡಬಾಗ್ನಿ** (ನಾ). = ಬಾಡಬ ೨ : ಹಿಡಿದು ಬಲುಹಿಂ ಕಡಲ ಕುಡಿಸುವ ಬಾಡಬಾಗ್ನಿಯನು (ಕೌಶಿರಾ. ೦೩-೪೩); ಕಾಲಾಗ್ನಿ ಬಾಡಬಾಗ್ನಿ ಪಾಷಾಣಾಗ್ನಿ ವೈದ್ಯುತಾಗ್ನಿ ಸೂರ್ಯಾಗ್ನಿ ಎಂಬ ಸೂಕ್ಷ್ಮಬಿಂದುರೂಪ ಪಂಚಾಗ್ನಿ ಧ್ಯಾನಯುಕ್ತನಾಗಿ (ಶಿಪೀಕ. ೦೨೬). [ಸಂ.]

**ಬಾಡಬಾನಲ, ಬಾಡಬಾನಳ** (ನಾ). = ಬಾಡಬ ೨. **ಬಾಡಬಾನಳ :** ಪರಸೈನ್ಯಸುಭಟಮಹಾರ್ಣವಕೆ ಬಿಡು ನಿನ್ನ ವಿಪ್ರಮಬಾಡಬಾನಳನ (ಕುಮ್ಮಾದ್ರೋ. ೦-೦೭). [ಸಂ.]

**ಬಾಡಬಾನಳ** 'ಬಾಡಬಾನಲ' ನೋ.

**ಬಾಡಬೇಯ** (ನಾ). ಎತ್ತು; ವೃಷಭ : "ಉಕ್ಷಾ . . . ಬಾಡಬೇಯಃ, ಶಾಕ್ವರಃ— ಈ ೧೧ ಯೆ(ಎ)ತ್ತು" (ಹಲಾಯು. ೪೪-೦೦೬). [ಸಂ.]

**ಬಾಡವ** (ನಾ). ೧. ಕುದುರೆ; ಅಶ್ವ : ಬಾಡವಂಗಳಂ ಹಂಸೆಗಳಂ . . . ಅಂಬರಚರೇಶ್ವರ ಪ್ರಭು ಮಗಳ್ಗೆ ಬಱವಱಗೊಟ್ಟಂ (ವರ್ಧಮಾ. ೩-೯೯). ೨. = ಬಾಡಬ ೨ : ಕೃತ್ರಿಮಸೌಷ್ಠವದಿಂ ಸಲಿಲಮುಮಂ ಬಾಡವನು ಮನೊಳಕೊಂಡ ಕಡಲನರಸಂ ಪೋಲ್ತಂ (ಲೀಲಾವ. ೪-೭) ; ವಾರಿಧಿಯೊಳಡಗಿ ನಿದ್ರಿಪ ಬಾಡವವೊ ತೃಷ್ಣೆ (ಷಂಕುಕ. ೨೭೭). ೧, ೨ : ಧರೆದೊಳ್ ಶೂದ್ರನೂರ್ಜ್ಜಿತಾರ್ತ್ಥಚಯದಿಂ ಧೈರ್ಯಕ್ರಮಕ್ಷತ್ರಿಯಂ ಪರಸೈನ್ಯಾಂಬುಧಿ ಬಾಡವಂ ದಲ್ ಅದಱಿಂ ತಾಂ ವರ್ಣ್ಣಸಾಂಕರ್ಯ್ಯಮಂ ನರಸಿಂಹಂ

ತಳೆದಿರ್ದನ್ (ಎಕ. v, ಬೇಲೂರು. ೧೯೩-೯೦; 1161). ೩. ಬ್ರಾಹ್ಮಣ; ವಿಪ್ರ : "ಬ್ರಾಹ್ಮಣಃ, ಬಾಡವಃ, ವಿಪ್ರಃ . . . ದ್ವಿಜಃ — ಈ ೧೦ ಬ್ರಾಹ್ಮಣಂ" (ಶಬ್ದಮ. ೬೩-೨೩೬). [ಸಂ.]

**ಬಾಡವಾಗ್ನಿ** (ನಾ). = ಬಾಡಬ ೨ : ತವೆ ಕುಡಿಯಲ್ಕೆಟಿಯದು ಬಾಡವಾಗ್ನಿ ಪೋಗೆಂದು ಕುಂಭಸಂಭವಕೋಪಾಗ್ನಿ ವಿಯತ್ತಳದಿಂ ಕಿಡಿ ವಿಡುತುಮಿಟಿವವೊಲ್ಪವನನವರಜಳನಿಧಿಗಿಟಿದಂ (ಜಲ್ಲಕ್ಕಿ. ೬-೦೯). [ಸಂ.]

**ಬಾಡವಾನಳ** (ನಾ). = ಬಾಡಬ ೨ : ಬಾಡವಾನಳಾವಿಳಜಳವುಂ ಮನಂ ಬಯಸಿ ನೋಡಿದರ್ನರ್ಣವಮುಂ ಗುಣಾರ್ಣವಂ (ಕಂಕಠಾ. ೪-೨೩).

[ಸಂ. ಬಾಡವಾನಲ]

**ಬಾಡವೆ** (ನಾ). ಬ್ರಾಹ್ಮಣ ; ಹಾರವ : ಕನ್ನಡ ಯಾತ್ರಿಕರು ಪಂಢರ ಪುರಿಗೆ ಹೋದಾಗ ಅಲ್ಲಿನ ಬಾಡವೆಗಳು ಅದೇ ಸ್ತಂಭವನ್ನು ದಾಸರ ಸ್ತಂಭವೆಂದು ತೋರಿಸುತ್ತಾರೆ (ಕಠಂ. ii. ಜುಜ್ಞಾ). [ಸಂ. ಬಾಡವ]

**ಬಾಡಿಗೆ** 'ಬಾಡಗೆ' ನೋ.

**ಬಾಡಿಗೆದಾರ** (ನಾ). (ಮನೆ ಮುಂತಾದುವನ್ನು) ಬಾಡಿಗೆಗೆ ಹಿಡಿದಿರುವವನು : ಈ ಸಲ ಬಾಡಿಗೆದಾರರ ಪೈಕಿ ನಾರಾಯಣನು . . . ತುಂಬಾ ಕಂಗಾಲಾಗಿ ಹೋಗಿದ್ದನು (೪೦೦ಜು. ೧೨೩).

[ಬಾಡಿಗೆ (< ಬಾಡಗೆ) + — ದಾರ್]

**ಬಾಡಿಗೆಮನೆ** (ನಾ). ಬಾಡಿಗೆ ಕೊಡುವ ಕರಾರಿನಿಂದ ಪಡೆದ ಮನೆ : ಶ್ಯಾಮಲಾಲರು . . . ಕಲಕತ್ತೆಯ ಬಾಡಿಗೆಮನೆಯಲ್ಲಿ ಹೆಂಡತಿ ಬೀಗ ರೊಡನೆ ವಾಸಿಸುತ್ತಾರೆ (೪೦೦ಹಿಂ. ೦೯೯) ; ಬಾಡಿಗೆಮನೆ, ಕೂಡಿಕೆಹೆಂಟರು (ಗಾದೆ): [ಬಾಡಿಗೆ (< ಬಾಡಗೆ) + ಮನೆ]

**ಬಾಡಿಸು**, ವಾಟಿಸು (ಕ್ರಿ). ೧. ಸೊಪ್ಪು, ತರಕಾರಿ, ಮಾಂಸ ಮುಂತಾದುವನ್ನು ಬಾಣಲಿಯಲ್ಲಿ ಹಾಕಿ ಬೆಂಕಿಯ ಮೇಲಿಟ್ಟು ಹುರಿ,— ತಾಳಿಸು : ಚಮ್ಮಟಿಗೆಗಂಕುಕಕಿಟ್ಟೊಳಗಾಗಿ ಬೆಟ್ಟಿದರ್ ಬಾಡಿಸು ವೇಟ ಬಾಡಿಸುವ ಹೇಱುವ ಕಟ್ಟುವ ಕುಟ್ಟುವಾವಗಂ ಹೂಡುವ ದುಃಖದಿಂ ತಿರಿಕಜಾತಿಯ ಕೋಟಲೆ ಕುಂದದೊರ್ಮೆಯುಂ (ಅಪಂಕ್ಕೆ. ೯-೪೩); ಪಿಸಿತ ವನು ಕತ್ತರಿಸು ಹುರಿ ಹುರಿ ಕಾಸು ತಾಳಿಸು ಬಾಡಿಸು (ವಾಗಪ. ೦೩-೪೩); ಈ ಕಾಯಿಪಲ್ಯಗಳನ್ನು . . . ಬೇಯಿಸುವುದು ಬೇಕಿಲ್ಲ, ಒಗ್ಗರಣೆ ಹಾಕಿ ಬಾಡಿಸಿದರೆ ಸಾಕು ! (ಹಸುಹೂ. ೩೦೦). ೨. ಕಳೆಗುಂದಿಸು ; ಒಣಗಿಸು ; ಕಂದಿಸು : ತೇಜಂ ಬಾಡಿಸುತಿರ್ಪ ರೇಪೆಯೊ ಚಿರಂ ಬಾಟ್ಯಾಸೆಯಿಂದೀ ಮಹಾರಾಜನರ್ನೋಡುವ ತೀವ್ರತೇಜದ ಮಹಾಸಪ್ತಾರ್ಚಿಗಂಡುಂ ಮಹಾ ತೇಜಂ ಭಾಸ್ಕರನಸ್ತದೊಳ್ ಕೆಡೆವುದುಂ ಕಂಡುಂ ಮಹೋಳ್ಕಂ ಜ್ವಳತ್ತೇಜಂ ಬೀಳ್ವುದುಗಂಡುಮುದ್ಧತಮಹಾಮೋಹಾಂಧಕಾರಾಂಧಕರ್ (ಅರ್ಧನೇ. ೪-೩೪). ೩. ಹಪ್ಪಳ, ಉಪ್ಪಿನಕಾಯಿ, ಚಕ್ಕಣ ಮೊದಲಾದ ಪದಾರ್ಥ ಗಳನ್ನು (ಆಹಾರ ಅಥವಾ ಕಳ್ಳಿನೊಂದಿಗೆ) ನಂಜಿಕೊಳ್ಳು : ಉಪದಂಶಃ, ಅವದಂಶಃ, ಭಕ್ಷಣಂ— ಈ ೩ ಕುಡಿವುತ್ತ ಬಾಡಿಸುವುದು (ಶಬ್ದಮ. ೩೪-೦೬೩) ; ಕುಂಟಣಿಮಂ ನೋಡೆಗಬ್ಬೆ ತಿಂಗೆ ಬೇಗುರುಟಿ ಬಳಾರಿ ಬಾಡಿಸುಗೆ (೦೬೦ಬಾಪ. ೨-೦೦೬) ; ಮೊಸರನ್ನ ಉಂಡ ಮೇಲೆಯೂ ಹಾಗೆಯೆ ಪಲ್ಲೆಕಾಯಿ ಬಾಡಿಸುತ್ತ, ಅವು ತೀರಿದ ಮೇಲೆ ಬರಿಯ ಉಪ್ಪನ್ನೆ ಬಾಡಿಸುತ್ತ . . . ಕುಳಿತಾಗ ಬಡಿಸುವವರ ಹುಚ್ಚುನಗೆ ಕಂಡಾಗ ನನ್ನ ಊಟ ಮುಗಿದುದರ ಕಲ್ಪನೆ ಬಂದುದೂ ಗೊತ್ತಿದೆ (ಮುಂಗಾರು ೬೩).

**ವಾಟಿಸು** : ೧. ಪೆರ್ನೊಣಂಗಳಿಂ ತಗುಳ್ದೊಡಾಟಿಸಿಯುಂ ಕಾವಲಿಯೊಳಿಕ್ಕಿ ವಾಟಿಸಿಯುಂ ಇಂತನೇಕವಿಧದಂಡನೆಗಳಿಂ ದಂಡಿಸಿಯುಂ ಸ್ವೈರಿಸಲಾಟಿದೆ (ಧರ್ಮಾಮೃ. ೩-೬೩). [ಬಾಡು + — ಇಸ್ಸು./ತೆಲು. ವಾಡಿಂಚು]

**ಬಾಡು**₁ (ಕ್ರಿ). ೧. (ಹೂವು, ಚಿಗುರು ಮುಂತಾದುವುಗಳು) ಒಣಗು ; ಮುರುಟು : "ಬಾಡು—ಮ್ಲಾನೇ, ಮಾಂಸೇ ಶಾಕೇಚ" (ಕಪುರಾ. ೩) ; ಸಸ್ಯಾವಳಿ ಸುಗಿದುಗಿದು ಕೊಡೆ ಬಾಡಿರ್ದುದು (ಆದಿಪು. ೦೦-೬೬) ; ಹೂ ಬಾಡಿ ದಲ್ಲಿ ಪರಿಮಳವನಱಸುವರೆ (ಚಪ. ೦೨೬) ; ಕಟ್ಟೆಯುಂಮೇನೊ ಮಾಲೆಗಾಚಿನ ಪೊಸಬಾಸಿಗಂ ಮುಡಿವ ಭೋಗಿಗಳಲ್ಲದೆ ಬಾಡಿ ಪೋಗದೇ (ಅಸಂಕ್ಕೆ. ೦-೪೩) ; ಭಯದಲಿ ಬಾಡುವುದಲೇ ರಿಪುನೃಪಾಲರ ಸಮರಜಯಬೀಜ (ಕುಮ್ಮಾಸ. ೦೨-೬೬). ೨. ಕಳೆಗುಂದು ; ಕಾಂತಿಗುಂದು ; ಮಂಕಾಗು : ಇಂದೆಮ ಗುಣಾಳ್ಕೆ ಬಗೆಯಿಲ್ಲುವವಾಸಂಗೆಯ್ದಪ್ಪೆಮೆಂದು ಪರಿಚ್ಛೇದಿಸಿ ನುಡಿದೊಡೆ ಬಿನ್ನನೆ ಮೊಗಂ ಬಾ[ಪಾಠಾಂ. ಮಾ]ಡಿ ಭಟಾರರಂ ವಂದಿಸಿ ಪೋಗಿ (ವಡ್ಡಾರಾ. ೬೦-೦೦); ಈ ಮೊಗವಿದಿಂತೇತರ್ಕೆ ಬಾಡಿರ್ದುದು (ಆದಿಪು. ೩-೨೩); ಅರಾತಿ ನೃಪವಕ್ತ್ರಾಬ್ಜಂ ಕರಂ ಬಾಡುಗುಂ (ಕಾವ್ಯಾವ. ೦೨-೬೨). ೩. ಸೊರಗು ; ಕಂಗ್ಗು : ಇಂತೀಕೆ ಬರ್ದಿ ಬಂಬಳಂಬಾಡಿ ಪಾಡಟಿದುಬ್ಬೆಗಂಬಟ್ಟಿರ್ದ (ವಡ್ಡಾರಾ. ೩೯-೬) ; ಬಾಡಿ ಪಾಡಟಿದು ಬಟಲ್ದು ಜೋಲ್ದಿರವು . . . ಕನ್ನಡಿಸಿದವ್ವವು ಕನ್ನೆಯ ಕನ್ನೆವೇಟವಮಂ (೪೦ಹಂ. ೪-೬೦) ; ಹೂಡಿದಂಬಿನ ತೋಳ ತೆಗಹಿನ ಬಾಡಿದುತ್ಸಾಹದ ವಿತಾಳದ ಬೀಡಿಕೆಯು ಬೀಳುವಗೆ ಬೆಬ್ಬಳೆವೋದನಾ ಪಾರ್ಥ (ಕುಮ್ಮಾಭ. ೦೯-೦೦).

[ದೇ. ॥ ತಮಿ. ವಾಟು, ವಾಟ್ಟು ; ಮಲ. ವಾಟುಕ, ವಾಟ್ಟುಕ; ತುಳು. ಬಾಡು ; ಕೊಡ. ಬಾಡ್ ; ತೆಲು. ವಾಡು ; ಪರ್ಜಿ. ವಾಡ್]

**ಬಾಡು**₂ (ನಾ). ೧. ಅಡಗು ; ಮಾಂಸ : "ಅಡಗು, ಬಿಕ್ಕ, ಬಾಡು— ಈ ೩ ಮಾಂಸಂ" (೪೩ಜಾ. ೩೨-೦೨೩) ; ಲೇಸಾಗಿ ಬೆಂದ ಬಾಡಂ ಬಾಸಣೆಸಿಟ್ಟದನೆಯುವ್ವತಮುತಿಗಟ್ಟಿಸಿದಂ (ಹುಕೋಕ. ೩-೬೦) ; ಸಗರ್ವ ಭೀಮನ ಬಾಡ ಕೊಯ್ಕೊಯ್ದು ಮರುಳ ಬಳಗವ ತಣಿಸಿದಡೆ ಹಿರಿಯರಸರಲಿ ಸಂಧಾನವೆಂಬ್ಬೆ (ಕುಮ್ಮಾಗ. ೩-೨೯) ; ಜೀಮೂತವಾಹನ . . . ತನ್ನೊಡಲ ಬಾಡ ಗರುತ್ಮನಿಗಿತ್ತು ಸತ್ಕೀರ್ತಿಯ ನಾಡೊಳು ಪಡೆದುದನಱಿಯಾ (ಪೋಃಜಕ. ೩-೩೩) ; ಸೂಕ್ಕಿದೀ ಬಾಲ ಹೆಮ್ಮಾರಿ ಕಾಲಿನಂತೋಡದಿದು ; ಹಲ್ಗಳೆಲು ಕಡಿಯದಿದು ; ನಾಲಗೆಯ ತೆರ ಬಾಡ ಸವಿ ತಿಳಿಯದು (ಕುಕ್ಕು. ೯೩-೭). ೨. ತರಕಾರಿ ; ಕಾಯಿಪಲ್ಯ : ಹೆಡಗೆಗೆ ಪೊಂದು ಹಿಡಿ ಬಾಡು (ಕೊಂಕಣ. ೦೯೩೩, ಇಂಡಿ. ೯೬-೦೦; ?). 'ಬಾಡುಕಾಯ್' ಪರಾ. ೩. ಊಟದ ಮಧ್ಯೆ ಮಧ್ಯೆ ನಂಜಿ ಕೊಳ್ಳಲು ಬಳಸುವ ಹುರಿದ ಅಥವಾ ಕರಿದ ಮಾಂಸ, ತರಕಾರಿ ಮುಂತಾದುವುಗಳಿಂದ ಮಾಡಿದ ಪದಾರ್ಥ : ತುಪ್ಪಮುಂ ಪಲವೂ ತೆಱದ ಬಾಡು[ಪಾಠಾಂ. ಶಾಕಂ]ಗಳುಂ ತುಯ್ಯಲುಂ . . . ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ . . . ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ (ವಡ್ಡಾರಾ. ೬೪-೦೬) ; ಆ ಪರದಂ ಕೂಟಂ ಕಲಸಿ ಪಲವುಂ ಬಾಡುವೆರಸಿ ಕೂಟನೊಂದು ದಳಂಬದ ಕಪ್ಪಟದೊಳ್ ಕಟ್ಟಿ ಕೊಟ್ಟಡೆ (ಜಾತಕ. ೦೯-೩೦ ಪ). [ದೇ. ॥ ತಮಿ. ವಾಟ್ಟು; ತುಳು. ಬಾಟಣೆ]

**ಬಾಡು**₃ (ನಾ). ೧. ತೆರೆ ; ಮರೆ : ಕೃಷ್ಣನುಯಲ್ಲಿ ಪೋದನುಯೆನುತ್ತೆ ನಲ್ಲೆಯರು ಕೈಗಳನು ಹೊಸಕೊಳುತ ಬಾಡ ಮರೆಯಲ್ಲಿ ಮರೆಗೊಂಡಿರ್ಪ ನೆಂದು ಪೂತ್ಕರಿಸಿ ಕಾವೆಲ್ಲ[ವಲ್ಲಿ] ಕಾಣದೆ ಮರಳಿ ಬಂದು (ಜಪಮೋ. ೦೦ ೩೪). 'ಮಂಬಾಡು' ಪರಾ. ೨. ಗುಡಾರ ; ತಂಬು : ಸುತ್ತು ವಳೆಯುವರಿ[ಲಿ] ಶುಭ್ರಪಚ್ಚಡಗಳಲಿ ರಚಿತ ಪೊಸಬಾಡನುರೆ ಬಂಧಿಸಿದರು (ಜಪಮೋ. ೩೯-೬೬). [← ತೆಲು. ಬಾಡು./ ಮರಾ. ಬಾಡ್]

**ಬಾಡುಂದಳಿರ್** (ನಾ). ಒಣಗಿದ ಎಲೆ ; ಮುರುಟಿದ ಚಿಗುರು : ಬಟ್ಟೆವೋಪರ್ಬಟಲ್ಕೆಗಟೆದುದನಱಿಪುವ ಬಾಡುಂದಳಿರ ಪಾಸಿಕೆಗಳುಮಂ (ಕಾದಂಬ. ೨೬೬). [ಬಾಡು₁ + ತಳಿರ್₂]

**ಬಾಡುಕಟ್ಟು** (ಕ್ರಿ). (ಹೊಲಗದ್ದೆಗಳ ರಕ್ಷಣೆಗಾಗಿ ಸುತ್ತಲೂ ಬಾಡಿದ ಸೊಪ್ಪು, ರೆಂಬೆ ಮುಂತಾದುವುಗಳಿಂದ) ಬೇಲಿಯನ್ನು ಕಟ್ಟು : ಗಿಡಗಳು ದೊಡ್ಡವಾಗುವವರೆಗೂ ಸುತ್ತಲೂ . . . ಈಚಲುಬರಿಗಳಿಂದಾ

ಗಲಿ ಕರಕಲ ಕಟ್ಟಿಗೆಯು ಬರಿಗಳಿಂದಾಗಲಿ ತಟ್ಟಿಗಳನ್ನು ಹೆಣೆದು ಸುತ್ತಲೂ ಬಾಡು ಕಟ್ಟಿದ ಹಾಗೆ ಕಟ್ಟಿ ಚಾಟು ಮಾಡಬೇಕು (ಕೃಷಿಕ್ರ. ೦೭೩).
[ ಬಾಡು₀ (p ←ತುಳು. ಬಾಡು = ಬೇಲಿ) + ಕಟ್ಟು₁ ]

**ಬಾಡುಕಾಯ್**, ಬಾಡುಕಾಯಿ (ನಾ). ತರಕಾರಿಯಾಗಿ ಉಪಯೋಗಿಸುವ ಕಾಯಿ: ಬಾಡುಕಾಯೆಂಬಿವು ಭಂಡಿಗೆ ಹತ್ತು ತಲೆವೊಜೆಗೆ ನಾಲ್ಕಕ್ಕುಂ (ಎಇ. XIX, ೩೩-೪೦ ; 1135); ಶಾಕಶಾಕಟಂ, ಶಾಕಶಾಕಿನು_ ಈ ೨ ಬಾಡುಕಾಯ ತೋಂಟಂ (ಶಬ್ದಮ. ೨೭-೯); ಮಾಜುವ ಹೆಡಗೆಯ ಹಣ್ಣುಹಂಪಲ್ ಬಾಡುಕಾಯ್ಗೆ ಹಿಡಿಬಾಡು ಹಿಡಿಹಣ್ಣಂ ಕೊಟ್ಟರ್ (ಎಇ. V, ೨೦-೬೯; 1161). **ಬಾಡುಕಾಯಿ:** [ಬೋವ]ಕ್ಕಳು ತಂದು ಮಾಜುವ ಬಾಡುಕಾಯಿಗೆ ಶಿಪ್ಪೆಸುಂಕವ ಕೊಟ್ಟರು (ಕಶಾಇ. XX, ೨೧೪-೭೬; 1228).
[ಬಾಡು₂ + ಕಾಯ್₄]

**ಬಾಡುಕಾಯಿ** 'ಬಾಡುಕಾಯ್' ನೋ.

**ಬಾಡುಣಿ** (ನಾ). ಮಾಂಸವನ್ನು ತಿನ್ನುವಂಥದು; ಭೂತ; ಪಿಶಾಚಿ: ಓಡಂ ಪಿಡಿದಿರ್ದೊಡೆಯುಂ ಬಾಡುಣಿಗಳ ಕೂಡಿ ಬೆತ್ತಲೋಡಾಡಿಯುಂ ನೀಂ ಬೇಡಿದ ವರಗಳ ನೀಡುವೆ (ಶಂಚರ. ೯-೦೦). [ಬಾಡು₂+—ಉಣಿ]

**ಬಾಡುಬಕ್ಕಿ** 'ಬಾಡಬಕ್ಕ' ನೋ.

**ಬಾಡುಬುಕ್ಕ** 'ಬಾಡಬಕ್ಕ' ನೋ.

**ಬಾಡುಮೋಱೆ** (ನಾ). ಮಂಕಾದ ಮುಖ; ಕಾಂತಿಹೀನವಾದ ಮುಖ: ಭೀತಿಯಲಿ ಬಾಡುಮೋಱೆಯುನೆತ್ತಿ ಕೈಗಳ ನೀಡಿ ಕಂಗಳ ಮುಚ್ಚಿ . . . ಬೆಚ್ಚಿದನಡಿಗಡಿಗೆ ಭೀಮ (ಕುವ್ಯಾಕ. ೦೦-೩೯). [ಬಾಡು₁ + ಮೋಱೆ]

**ಬಾಡೆ** 'ಬಾಡ' ನೋ.

**ಬಾಣ₁** 'ಬಾಣೆ' ನೋ.

**ಬಾಣ₂**, ವಾಣ₁ (ನಾ). ಒಬ್ಬಾತನ ಹೆಸರು: 'ಬಾಣರಸ', 'ಬಾಣಸಾಮಿ' ಪರಾ. **ವಾಣ₁** : ಪ್ರತಿಪನ್ನಮಂದರಂ ವಾಣಸ್ಕನ್ನಯುಪುರಂದರಂ . . . ಶ್ರೀಮನ್ಮಹಾಪ್ರಧಾನಂ ಕಿಡಿತವೆರ್ಗ್ಗಡೆ (ಕಇಆ. ೭-೩-೨೬೨; 1062). 'ವಾಣರಸ' ಪರಾ.

**ಬಾಣನ ಪಳ್ಳಿ** = ಒಂದು ಊರಿನ ಹೆಸರು : ದೇವಕೊಮಾರನುಂ ಧೋರನುಮಿಬ್ಬಾರರಪೆ ಬಾಣನ ಪಳ್ಳಿಯು ಕೊಣ್ಣು ಶ್ರೀ ಕೇಸಿಗ × × × ತಲೆಸೆಜೆಯಲು ಕಟ್ಟನ್ ಕಟ್ಟು ವುದರ್ಕ್ಕೆ ಕೊಟ್ಟ ಸ್ಥಿತಿಕ್ರಮವೆಂತುವೆಂದೊಡೆ (ಎಕ. III, ಶ್ರೀರಂಗ. ೦೯೪-೦೨; 904 ?). **ಬಾಣರವಾಡಿ** = ಒಂದು ಸ್ಥಳದ ಹೆಸರು : ಗಂಗವಾಡಿ ತೊಮ್ಬತ್ತಱುಸಾಸಿರವುಂ ಬಾಣರವಾಡಿ ಪನ್ನಿರ್ಚ್ಛಾಸಿರದ ಬಳಂಜಮಲ್ಲ ಸೆರೆದು (ಎಕ. X (೩), ಮುಳಬಾ. ೩೦೭-೩; ಸು.950).

**ಬಾಣ₃** (ನಾ). ೧. ಬಿಲ್ಲಿಗೆ ಹೂಡಿ ಬಿಡುವ ಅಸ್ತ್ರ; ಅಂಬು; ಕಣೆ: "ಚಿತ್ರಪುಂಖಂ ಮಾರ್ಗಣಂ ಬಾಣಂ . . . ಕಾಂಡಮೆಂದೆನಲ್ಕಂಬೆನಿಕ್ಕು" (ಮಂಗರಾ. ೫೭-೩೪); ಗುಣಾರ್ಣವಂ ಮತ್ತಮೈಂದ್ರ ವಾರುಣವಾಯವ್ಯಾಗ್ನೇಯಪಾರ್ವತಾದಿ ಬಾಣಂಗಳಂ ತುಡೆ (ಪಂಪಭಾ. ೨-೭೬ ವ); ಐದುಬಾಣವ ಕೊಂಡು ಯಂತ್ರದ ಹೊಳಹನೀಕ್ಷಿಸಿದ (ಕುವ್ಯಾಕ. ೦೫-೨೯) ; ವನಜಾಕ್ಷಿ . . . ನಂದನನ ಕಾಣದೆ ಕಂಗೆಟ್ಟು ಹೊರಳ್ದಳು ಮುಮ್ಮೊನೆಬಾಣ ತಾಗಿದ ಹುಲ್ಲೆಯಂತೆ (ಮೋಹತ. ೯-೭೯). ೨. ಶಬ್ದ ; ಸದ್ದು : ಶಬರಶಬಲ ಬಾಣಮಯ ಬಾಣಮಯ ಬಾಣಮಯವಾಗಿ ಕಾವನಂ ಕಣ್ಗೆಸೆದುದು (ಪಶಾ. ೫-೦೬). ೩. ಬೆಂಕಿ; ಅಗ್ನಿ : ಮೇಲಿನ 'ಹಚೆಕಾ' ಪ್ರಯೋಗವನ್ನು ನೋಡಿ. ೪. ಒಂದು ಬಗೆಯ ಸಸ್ಯ ; ನೀಲಿಗೋರಂಟೆ : "ನೀಲೀ, ಝಂಟೀ, ಬಾಣಃ_ಈ ೩ ಕರಿಯ ಗೋರಂಟೆ" (ಶಬ್ದಮ. ೩೯-೫೨). ೫. ಈಶ್ವರ ಸಂಕೇತವಾದ ಲಿಂಗಾಕೃತಿಯಲ್ಲಿ ಪಾಣಿವಟ್ಟಲಿನ ಮೇಲೆ ಕಾಣುವ ರುಬ್ಬುಗುಂಡಿನಾಕಾರದಲ್ಲಿರುವ ಭಾಗ; ಅವರು ಶಿವಲಿಂಗದ ಬಾಣವೇ ಪುರುಷಚಿಹ್ನೆಯೆಂದೂ ಅದರ ಕೆಳಗಿರುವ ಯೋನಿಯೇ ಶಕ್ತಿಯೆಂದೂ ಹೇಳುತ್ತಾರೆ (ಭಾರದ. ೨೦೬). ೬. ಶಿವಭಕ್ತನಾದ ಒಬ್ಬ ರಾಕ್ಷಸರಾಜ; ಬಲೀಂದ್ರನ ಮಗ : ಏನು ಕಾರಣ ನೀವು ಬಾಣನ ಬಾಗಿಲ ಕಾಯ್ವುರಿ (ಬಸವ. ೭೯೨); ಸಂಬಂಧಿ ಬಾಣನಂ ಪಾರ್ವತಿಯೊಡೆ ನಿನ್ನ ಬೇರ್ಗೊಲೆಗೆ ಶಿವನಿಪ್ಪ ಕಾರಣಮಸಂಗತ್ವಮೋ ಪ್ರಾಪ್ತವೆಂದು ಹರಿ ತನ್ನ ಸುತನಂ ಜಜಿದನು (ಕೈಮಿಭಾ. ೭-೯೦). ೭. ಹುಲ್ಲು : ತೃಣ. ೮. ಹರ್ಷವರ್ಧನನ ಕಾಲದಲ್ಲಿ ಕಾದಂಬರೀ. ಹರ್ಷಚರಿತಗಳೆಂಬ ಕಾವ್ಯಗಳನ್ನು ಬರೆದ ಒಬ್ಬ ಪ್ರಸಿದ್ಧ ಸಂಸ್ಕೃತಕವಿ : ಬಾಣಂ ವಲ್ಲಭನಕ್ಕುಮೆಂದು ಪಡೆದಾ ವಾಗ್ದೇವಿಗಬ್ಬೋದ್ಭವಂ ಬಾಣಂ ಬಾಣೆಯೆನಿಪ್ಪದೊಂದು ಪೆಸರಂ ಮುನ್ನಿತ್ತಂ (ಕಾದಂಪೂ. ೩). ೯. ದೀಪಾವಳಿ ಮುಂತಾದ ಹಬ್ಬದ ದಿನಗಳಲ್ಲೂ ಸಂತೋಷಸಮಾರಂಭಗಳಲ್ಲೂ ಹಾರಿಸುವ ಹೂಬಾಣ ಮುಂತಾದ ಸಿಡಿಮದ್ದು : ಬುದ್ಬುದ ನಾನಾ ಚಿತ್ರಭೆ ತೋರುವ ಬಾಣ ಬಿರಿಸು ಬಹಳನಲಿ (ಶದಾವ. ೦೯೩-೬); ಹಗಲುಬತ್ತಿಯು ಬಾಣಬಿರಿಸು ಮಹತಾಪುಗಳು (ಕೃಷ್ಣಪ. ೩-೦೦); ಬಾಣಬಿರುಸು ರಂಥೋಲುವಾದ್ಯ (ಹುಟ್ಟಿಹ. ೦೦). ೧೦. ಒಂದು ಬಗೆಯ ಬಟ್ಟೆ,-ವಸ್ತ್ರ. ೧೧. [ಗಣಿತ]ಐದು ಎಂಬ ಸಂಖ್ಯೆಯ ಸಂಕೇತ : ಕ್ಷೋಣೀಶ ವಾಯು ದಿನೇಶ ರುದ್ರನುಂ ಬಾಣಸ್ಥಾನದೊಳಾಗೆ ವಿಶ್ರಮಂ ಬಾಣಂ ನಿಲ್ತಿರೆ ಸಂದುದಲೆ ಕಲ್ಯಾಣಂ (ಛಂದೋಂಬು. ೨-೦೦೨); ಹಿಮಕರ ಬಾಣೇಂದುವಾಗಲಾ ಪುಷ್ಪತೆಯಂ ವಿಪ್ರ ೧ ಕೆ ತಾವರೆಪುಷ್ಪ ೯ ಕೊಡುತ್ತಿರಲು (ಭಾಸ್ಕರ. ೦೭-೬); "ಎಲ್ಲ ಶರದೊಳು ತೃಣದೊಳಸುರನೊಳು ಗೋರಟೆ[ಕಾಕಾಂ.. ಗದೆ]ಯೊಳುಂ ಬಾಣಶಬ್ದಮಕ್ಕುಂ" (ಮಂಗರಾ. ೦೯೮-೯೦); "ಪುಲ್ಲು ವಸನ ದೈತ್ಯ ಸಂಖ್ಯೆ ಶರ ಗೋರಟೆ ಎಂಬಿವು ಬಾಣವಾಚಕಂ" (ನಾನಾರ. ೬). ೧೨. [ಛಂದ] ಪ್ರತಿಪಾದದಲ್ಲಿ ಹನ್ನೆರಡು ಅಕ್ಷರಗಳಿರುವ ಒಂದು ಅಕ್ಷರವೃತ್ತ : 'ಬಾಣವೃತ್ತ' ಪರಾ.
[ಸಂ.]

**ಬಾಣಂತನ** 'ಬಾಣಂತಿತನ' ನೋ.

**ಬಾಣಂತಿ** 'ಬಾಳಂತಿ' ನೋ.

**ಬಾಣಂತಿಕಾಯಿ** (ನಾ). ಪಗಡೆಯಾಟದಲ್ಲಿ (ಬಾಣಂತಿಯಂತೆ) ಪೇಲವವಾಗಿರುವ ಕಾಯಿ ; ಹಳದಿಕಾಯಿ : ದುಗವನೆಸೆ ಭಾರಗಳನಿಡುಯಿಡು ನೆಗೆದು ಹೋಯ್ ಬಾಣಂತಿಕಾಯ್ಗಳ ಚಿಗುಟಬಿಡು .ಹಸುರ (ಅಂಬಿಕಾ. ೯೮-೭೦). [ ಬಾಣಂತಿ (<ಬಾಳಂತಿ) + ಕಾಯಿ₄ (<ಕಾಯ್₄) ]

**ಬಾಣಂತಿಖಾರ** (ನಾ). ಬಾಣಂತಿಗೆ ಪ್ರತಿದಿನ ತಿನ್ನಲು ಕೊಡುವ, ಪುಷ್ಟಿಕರವಾದ ಔಷಧೀದ್ರವ್ಯಗಳಿಂದ ಕೂಡಿದ ಒಂದು ಬಗೆಯ ಖಾರಪದಾರ್ಥ : ಮೆದುವಲ್ಲ ಸಿಹಿಯಿಲ್ಲ ಹಾಲುಬಾಯಿಯವೋಲು ಬಾಣಂತಿಖಾರವೊ ಬಾಳು (ಇಂಚಾಕ. ೯೭-೨೯).
[ಬಾಣಂತಿ (<ಬಾಳಂತಿ) +ಖಾರ₁ (<ಕಾರ₂)./ಮರಾ. ಬಾಳಂತಕಾಢಾ]

**ಬಾಣಂತಿಜ್ವರ** (ನಾ). ಸಾಮಾನ್ಯವಾಗಿ ಹೆರಿಗೆಯಾದ ಹತ್ತು ದಿನಗಳಲ್ಲಿ ಬಾಣಂತಿಗೆ ಬರುವ ಜ್ವರ : ಜನನಾಂಗಗಳ ಸೋಂಕುರೋಗ ಬಾಣಂತಿ ಜ್ವರಕ್ಕೆ ಬಹಳಷ್ಟು ಪ್ರಮುಖ ಕಾರಣ (ಕವಿಕೋ. XII, ೨೬).
[ಬಾಣಂತಿ (<ಬಾಳಂತಿ) + ಜ್ವರ]

**ಬಾಣಂತಿತನ**, ಬಾಣಂತನ, ಬಾಲಂತಿತನ (ನಾ). ೧. ಹೆರಿಗೆಯಾದವಳಿಗೆ ಮಾಡುವ ಆರೈಕೆ,—ಉಪಚಾರ : ನನ್ನ ಬಾಣಂತಿತನ ಮಾಡಿದವಳು ಅತ್ತೆಯೇ (ಸ್ಮೃತಿಚಿ. ೭೬) ; ಎರಡನೇ ಬಾಣಂತಿತನಕ್ಕಾಗಿ ತವರೂರಿಗೆ ಹೋಗಬೇಕೆಂದು ರಮಾದೇವಿಯ ಮನಸ್ಸಿನಲ್ಲಿತ್ತು (ಸ್ವಾಂಬಿ. ೨೨೯). **ಬಾಣಂತನ** : ೧. ಬಾಣಂತನ ಯಾರು ಮಾಡುವರಪ್ಪಾ ? ತಾಯನ್ನೂ ದೂರ ಮಾಡಿದ್ದಾನೆ (ಚಿಕಾ. ೨೫೦) ; ತನ್ನ ಬಾಣಂತನಕ್ಕೆ ತನ್ನ ತಾಯಿ,

ವಾತ್ಸಲ್ಯದೇವಿ ಬರಬಹುದೇ ? (ವಾತ್ಸಲ್ಯ. ೩೭೨). ೨. ಬಾಣಂತಿಯಾಗಿರುವಿಕೆ : ಇಂಥಾ ದಿನಗಳಲ್ಲಿ ವರ್ಷಕ್ಕೊಂದು ಬಾಣಂತನವು ಬೇರೆ ! (ಕೃಣಸ. ೩). **ಬಾಲಂತಿತನ** : ೧. ಬಾಲಂತಿತನಕ್ಕಾಗಿಯೇ ಎಂದು ಬೇವಿನ ಗಿಡದ ಬುಡದಲ್ಲಿ ಹಾಕಿದ ಗುಡಿಸಲಿನಲ್ಲಿ ತಾಯಿ ಶಚೀದೇವಿಯಿಂದ ಅವತರಿಸಿದನು (ಗೌರಾಂಗ. ೬). [ಬಾಣಂತಿ (<ಬಾಳಂತಿ) + – ತನ]

**ಬಾಣಂತಿಬೋಳ** (ನಾ). ಬಾಣಂತಿಯರಿಗೆ ಔಷಧಿಯಾಗಿ ಕೊಡುವ ಕರಿಬೋಳ ಎಂಬ ಸಸ್ಯದ ಅಂಟು : ಲವಂಗಪತ್ರಿ ೧/೨ ಪಾವು. ಬಾಣಂತಿಬೋಳ ೧/೨ ಪಾವು . . . ಇಡಿದು ವಸ್ತ್ರಗಾಳಿತವಂ ಮಾಡಿ . . . ತಾರೆಕಾಯಿಪ್ರಮಾಣವಂ ತೆಗೆದುಕೊಳ್ಳಲು ಸಮಸ್ತಪೈತ್ಯವ್ಯಾಧಿ . . . ಪರಿಹರವಕ್ಕುಂ (ಸಕವ್ಯ. ೦೩೩).
[ಬಾಣಂತಿ(<ಬಾಳಂತಿ)+ಬೋಳ್ಳ(<ಬೋಟ್ಟ)./ಮರಾ. ಬಾಳಂತಬೋಳ]

**ಬಾಣಂತಿಸನ್ನಿ** (ನಾ). ಬಾಣಂತಿಗೆ ಜ್ವರದಿಂದುಟಾಗುವ ಸನ್ನಿಪಾತ : ತಾಯುವೆ:–ಈ ಬೇರಂ ನರವೂಾತ್ರದಿಂದ ಅರೆದು ತೆಗೆದುಕೊಳ್ಳೆ ಬಾಣಂತಿಸನ್ನಿ ಹರ (ವಿವ್ಯ.ಕಿ. ೯); ಪುತ್ರಜೀವಿ ತಿರುಳು, ಬೇವಿನ ಬೀಜದ ತಿರುಳು . . . ನಿಂಬೆಹುಳಿಯಲ್ಲರೆದು ನಾಲಗೆಗೆ ಲೇಪ ಮಾಡೆ ಸುಖಸನ್ನಿದೋಷಂ ಮಾಣ್ಗುಂ ; ಬಾಣಂತಿಸನ್ನಿ, ತಲೆಯು ಪಿತ್ತ ಸಹ ಕೆಡುಗುಂ (ಸಕವ್ಯ. ೦೭೦). [ಬಾಣಂತಿ (<ಬಾಳಂತಿ) + ಸನ್ನಿ]

**ಬಾಣಂತಿಸೂಳೆ**, ಬಾಣತಿಸೂಳೆ (ನಾ). ಇನ್ನೂ ಬಾಣಂತಿಯಾಗಿರುವ ವೇಶ್ಯೆ ; ಕೂಸುಳ್ಳ ಸೂಳೆ : ಹೆತ್ತ ಶಿಶುವಿಂಗಲ್ಲ ವಿತ್ತವನಿತ್ತ ವಿಟನಿಂಗಲ್ಲದೆಡೆಯಾಡುತ್ತಲಿಹ ಬಾಣಂತಿಸೂಳೆಯ ಚೇಷ್ಟೆಯಂದದಲಿ ವ್ಯರ್ಥವಾಗಿಯೆ ಕೆಡುವನಕಟಾ ಮರ್ತ್ಯನೆತ್ತಲು ಮುಟ್ಟ (ಅಮೃತ. ೨-೦೦೬). **ಬಾಣತಿಸೂಳೆ** : ಬಾಣತಿಸೂಳೆಯಂತೆ ಸಿಡಿಮಿಡಿಗೊಂಡು ತಳಾಚನಂ ಕಂಡ ಕಳ್ಳನಂತೆ ಕುಸಿದು (ಶಬರ್ಪ್ರ. ೩-೨೩).
[ಬಾಣಂತಿ (< ಬಾಳಂತಿ) + ಸೂಳೆ$_1$]

**ಬಾಣಗಗೆಜಿ** (ನಾ). ಒಂದು ಕೆರೆಯ ಹೆಸರು : ಅನ್ತೆ ಬನ್ದು ಬಾಣಗಗೆಜಿಯ ಏರಿಯ ಮೇಗಣಿಂ (ಎಕ. III, ತಂಜನ. ೦೩೯-೨೨; 915 ?).
[ಬಾಣಗ$_1$ + ಕೆಜಿ]

**ಬಾಣಗತ್ತಲು** (ನಾ). ಕಣೆಗಳ ದಟ್ಟಣೆಯಿಂದುಂಟಾದ ಕತ್ತಲೆ : ಹತ್ತು ಬಿಲ್ಲಲಿ ಸರಳ ಸುರಿದನದೆತ್ತ ನಭ ದೆಸೆಯೆತ್ತ ರಾಘವನೆತ್ತಲಂಬರ ಮಣಿಯ ಮುಸುಕಿತು ಬಾಣಗತ್ತಲದು (ತೊರಾ. ೨೨-೯೩). 'ಮೊಲಗಟ್ಟಲೆ' ಪರಾ. [ಬಾಣ$_3$ + ಕತ್ತಲು (<ಕಟ್ಟಲೆ) ]

**ಬಾಣಗಾಟ** (ನಾ). ಬಿಲ್ಲಿಗೆ ಕಣೆಗಳನ್ನು ಹೂಡಿ ಬಿಡುವವನು : ರಾಜರು ರಕ್ಕಸವಮಾಂತರು ಲಾಳಿ ಬಲ್ಲೋಜರು ಪೆಟಲಂಬಿನವರು ತೇಜೋಮಯ ಬಾಣಗಾಬಿರೇಜಿತು ಖಗರಾಜನೆಚುಂಕೆಯಿಕ್ಕಲದಿ (ಪೋಹತ. ೩೭-೯೨). [ಬಾಣ$_3$ +– ಕಾಟ]

**ಬಾಣಗೇಹ** (ನಾ). ಕಣೆಗಳನ್ನಿಡುವ ಚೀಲ ; ಬತ್ತಳಿಕೆ ; ಮೂಡಿಗೆ : ಬಾಣಗೇಹನದ್ಯಂಬುಧಿಕಾನನಂ ಶರಧಿ ಎಂದೆನಿಕುಂ (ನಾವಾರ. ೦೨). [ಸಂ.]

**ಬಾಣಜಾತ** (ನಾ). ಕಣೆಗಳ ಸಮೂಹ : ಮುರಹರನ ಮೊಮ್ಮನಾಂ ಬೆಚ್ಚುವೊಡೆ ಬಿಡು ಹಯವನಲ್ಲದೊಡೆ ನೋಡೆನ್ನ ಬಾಣಜಾತವನು (ಕೈಬಿಲಾ. ೨೩-೨೦). [ಸಂ.]

**ಬಾಣಜಾತೆ** (ನಾ). ಬಾಣಾಸುರನ ಮಗಳು; ಅನಿರುದ್ಧನ ಹೆಂಡತಿಯಾದ ಉಷೆ : ಬಾಣಜಾತವನೀಗ ನೋಡಲಿರ್ದಪುದೆ ನೀಂ ಬಾಣಜಾತೆಯ ರಮಣನು (ಕೈಬಿಲಾ. ೨೩-೨೦). [ಸಂ. ಬಾಣಜಾತಾ]

**ಬಾಣತಟ್ಟರ** (ನಾ). ಒಬ್ಬಾತನ ಹೆಸರು : ಬಾಣರಸರ್ ಪ್ರಿಥುವೀರಾಜ್ಯಂಗೆಯೆ ವಿಜಯಿತ್ತನಾಳು ಬಾಣತಟ್ಟರನ್ ತನ್ನ ಆಳು ಉಗೆ ಪೋಗಿ ಮಱುಬಪ್ಪೊಂಗೆ ಕುಂತಿಆಲದಲಿ ಕುದುರೆ ಏಱಿ ಬರುತಿರೆ ಗಣಮೂರ್ತ್ತಿ ಎಚ್ಚೊಡೆ . . . ತಟ್ಟು ಸತ್ತ (ಕೌಇಇ. IX–i, ೬–೮; ೯ನೆಯ ೩೪). [?]

**ಬಾಣತಿ** 'ಬಾಳಂತಿ' ನೋ.

**ಬಾಣತಿಸೂಳೆ** 'ಬಾಣಂತಿಸೂಳೆ' ನೋ.

**ಬಾಣದಾಯಕ** (ನಾ). (ಯುದ್ಧದಲ್ಲಿ ಯೋಧನಿಗೆ) ಕಣೆಗಳನ್ನು ತಂದು ಕೊಡುವವನು : ಹಡಪಿಗ ಚವರ ಬಾಹೆಯ ಬಾಣದಾಯಕರ ಕರೆದು ಮನ್ನಿಸಿ . . . ರಣಸುಮ್ಮಾನದಲಿ ಹೊಗರೇಱಿದನು ಕರ್ಣ (ಕುವ್ಯಾಕ. ೨೦-೩). [ಸಂ.]

**ಬಾಣಧಿ** (ನಾ). = ಬಾಣಗೇಹ : ಅಂತವೋಘಬಾಣವಂ ಬಾಣಧಿಯಿಂದುರ್ಚಿಕೊಂಡು ಪುರುಪರಮೇಶ್ವರಪುತ್ರಂ ಭರತೇಶ್ವರಚಕ್ರವರ್ತಿ ಬಂದಿರ್ದಂ (ಆದಿಪು. ೦೨-೯೬ ವ) ; ಲುಬ್ಧಕರ್ತಂಡದೆ ಸುತ್ತಿ ಮುತ್ತೆ ಗೂಲೆಗೊತ್ತಿದನೇ ಧನುವಂ ಸರಲ್ಗಳಂ ಕೊಂಡನೆ ದಿವ್ಯಬಾಣಧಿಯಿಂ . . . ಜನಾರ್ದನಂ (ಶಂಠಾಪು. ೬-೦೦೩). [ಸಂ.]

**ಬಾಣಪಂಚಕ** (ನಾ). ಐದು ಕಣೆಗಳನ್ನುಳ್ಳವನು ; ಕಾಮ ; ಮನ್ಮಥ : ಬಾಣಪಂಚಕಭಸ್ಮಧಾರಣ ಪರಾಕು (ಶಶಿವೋ. ೨೪-೯೦); ಬಾಣಪಂಚಕಗಿತ್ತು ಚೆಲ್ವನು . . . ಜಾಣರೆಲ್ಲರಿಗೊಡೆಯನಾದ ನಿರ್ವಾಣಲಕ್ಷ್ಮೀಕಾಂತರೀಗೆ ಮಗಿಪ್ಪಸಿದ್ಧಿಯನು (ನಾಗಷ. ೦-೦). [ಸಂ.]

**ಬಾಣಪೀಠ** (ನಾ). ಈಶ್ವರಸಂಕೇತವಾದ ಲಿಂಗಾಕೃತಿಯಲ್ಲಿ (ಅಭಿಷೇಕದ ನೀರು ಹರಿದು ಹೋಗಲು ಅನುಕೂಲವಾಗುವಂತೆ) ಲಿಂಗದ ಸುತ್ತಲೂ ಇರುವ ತಗ್ಗಾದ ಪೀಠ : ಸ್ಫುರಿತರುಚಿರಸ್ಫಟಿಕಲಿಂಗವು ಬಾಣಪೀಠದಲಿ ಸ್ಫುರಿತರುಚಿರಸ್ಫಟಿಕಪೀಠಕೆ ಸುರುಚಿರೋನ್ನತ ಬಾಣಲಿಂಗವು ಕರಮೆಸೆವುತಿರೆ ಸುಪ್ರತಿಷ್ಠಿತವಾದವೆಯಿತೆಂದು (ಬಸಪು. ೩೭-೬೩). 'ಬಾಣಲಿಂಗ' ಪರಾ. [ಸಂ.]

**ಬಾಣಪ್ರಯೋಗ** (ನಾ). ಕಣೆಯನ್ನು ಎಸೆಯುವುದು,–ಬಿಡುವುದು : ಬಾಣಪ್ರಯೋಗದಲ್ಲಿ ಲಾಘವ . . . ವಿಕ್ರಮ ಇವು ಯಾವುದರಲ್ಲೂ ಅರ್ಜುನನು ನನಗೆ ಸಮನಲ್ಲ (ವಶಭಾ. ೨೯೩). [ಸಂ.]

**ಬಾಣಬೆಟ್ಟು** (ನಾ). ಎತ್ತರದ ಪ್ರದೇಶದಲ್ಲಿರುವ ಗದ್ದೆ : ಬಾಣಬೆಟ್ಟಿನಲ್ಲಿ ಬಿದ್ದು ಸುಟ್ಟು ಸಾಯುವ ಅಂತೀಯಾ ? (ಕರಾವ. ೩೭).
[ಬಾಣ$_1$ (< ಬಾಣೆ) + ಬೆಟ್ಟು$_2$ (<ಬೆಟ್ಟ). / ತುಳು. ಬಾನೆಬೊಟ್ಟು]

**ಬಾಣರಸ**, ವಾಣರಸ (ನಾ). ಒಬ್ಬಾತನ ಹೆಸರು : ಮಹಾರಾಜರು[ಂ] ಬಾಣರಸರುಂ ಸೋರೆಮಟಿ ಕೋಟ್ಟಿಂ(ಕೋಟ್ಟ) ಯಿಟ್ಟಲ್ಲಿ (ಎಇ. XXIV. ೦೯೦-೩; ಸ. 885) ; ಪೊಮ್ಬುಲ್ಲಮೊಡೆಯಮೂರ್ಗ್ಗ ಪಾಡಿಯೊಳೊಡ್ಡಿ ಬಾಣರಸರುಳ್ ಕಾದಿ ಪಲರನಿಱಿದು ಬಿಟ್ಟು ಬೀರಲೋಕಮೆಯ್ದಿದ (ಎಕ. X, ಕೋಲಾರ. ೭೯-೦೦ ; ಸ. 890). **ವಾಣರಸ** : ಸ್ವಸ್ತಿಗುವಳಾಲಂಗೊಂಗುಂ ವಾಣರಸ ಆಳೆ (ಎಕ. X, ಮುಳಬಾ. ೨೩೩-೦; ಸ. 860).
[ಬಾಣ$_2$ + ಅರಸ$_1$]

**ಬಾಣರಾಸ** (ನಾ). ಒಬ್ಬಾತನ ಹೆಸರು : ಸಪ್ರತಿಹಾರೀಕ್ರಿತಮಹಾ × × × ಮತ್ ಬಾಣರಾಸರ್ ಗಜ್ಜನಱು × × × ಳುತಿರೆ (ಎಕ. X (s), ಬಾಗೇಪ. ೯೭-೩; ಸ. 820).
[ಇದು 'ಬಾಣರಸ' ಎಂಬುದರ ಅಪಲಿಖಿತ]

**ಬಾಣರಾಸಿ** 'ಬಾರಣಾಸಿ' ನೋ.

**ಬಾಣಲಿ**, ಬಾಂಡಲಿ, ಬಾಂಡಲೆ, ಬಾಂಡ್ಲಿ, ಬಾಂಡ್ಲೆ, ಬಾಣಲೆ, ಬಾಳಣಿ, ಬಾಳಲಿ (ನಾ). ಆಹಾರಪದಾರ್ಥಗಳನ್ನು ಕರಿಯಲು ಅಥವಾ ಹುರಿಯಲು ಬಳಸುವ, ಬಳಪದ ಕಲ್ಲು ಅಥವಾ ಲೋಹದಿಂದ ಮಾಡಿದ, ಅಗಲಬಾಯಿಯ ಒಂದು ಸಾಧನ : "ಅಂಬರೀಷಃ, ಭ್ರಾಷ್ಟ್ರಃ– ೨ . . . ಹುರಿಯುವ ಹೆಂಚು, ಬಾಣಲಿ"

(ಸಿದ್ಧಾಂಶಿ. ೨೬೪): ಕ್ಷೋಣಿಯೊಳೀ ಬಟ್ಟಸಿಲಿಂದೆ ಕಡುಗಾದ ಬಾಣಲಿ ಯಣ್ಣೆಯೊಳಬುದಿ ಹೂಣಿಸಿ ಕುದಿಗೊಂಡು ಮರಳ್ದುದು ವನಚರಶ್ರೇಣಿ ಬೆಂಡೆದ್ದು ತೇಲಿದಾವು (ಕೋಕಚ. ೧೯-೪೫); ಬೀದಿ ಮಗ್ಗುಲಲ್ಲಿ ಬಾಣಲಿ ಇರಿಸಿಕೊಂಡು ಕರೀತಾರಲ್ಲಾ ಆಂಬೊಡೆ, ಅದರ ಹೆಸರು ಕೇಳಿದರೆ ಸಾಕು ಅವಳಿಗೆ ಬಾಯಲ್ಲಿ ನೀರು (ಕಂಗೂಂ. ೯೨). **ಬಾಂಡಲಿ :** ಬಾಂಡಲಿಯೊಳಗೆ, ಕಾದಿರುವ ಎಣ್ಣೆಯೊಳಕ್ಕೆ ಆಹಾರವನ್ನು ಹಾಕಿ ಕರಿಯಬಹುದು (ಗೃಹಶಿ. ೫೯). **ಬಾಂಡಲೆ :** ಏನು ಕಪ್ಪು, ಎಂತಹ ಆಕಾಶ_ಬಾಂಡಲೆಯನ್ನು ಮೇಲೆ ಕವಿಚಿದಂತೆ, ಏನು ನೀರವತೆ! (ರಾಷೂನ. ೧೧೬). **ಬಾಂಡ್ಲಿ:** "ಬಾಣಲಿ (ಲೆ, ಬಾಂಡ್ಲಿ) ಭ್ರಾಷ್ಟ್ರ" (ಶಬ್ದಕೋ. ೬೦). **ಬಾಂಡ್ಲೆ:** ಕಾವಲಿ, ಬಾಂಡ್ಲೆ ಇಟ್ಟುಕೊಂಡು (ಒಡಮು. ೨). **ಬಾಣಲೆ :** "ಅಂಗಾರಶಕಟಿಯೆಂದರೆ ಬಾಣಲೆಯೆನಿಕ್ಕು" (ಮುಂಗುರು. ೬೪-೨೯); ಸಂಪಂಗಿ ಹೂಗಳನ್ನು ಬಾಣಲೆಯಲ್ಲಿ ಹೊಗೆ ಹೋಗದ ರೀತಿಯಲ್ಲಿ ಏಳಾವರ್ತಿ ಹುರಿದು ನಯವಾಗಿ ಅರೆದು ಜೇನುತುಪ್ಪದೊಡನೆ ಕೊಟ್ಟರೆ ಕೆಮ್ಮು ಹೋಗುವುದು (ಶಿಕ್ಷ್ಯ. ಕಂ. ೯೬೫); ಅವರ ಹೊಗಳಿಕೆ ಕೇಳಿ ಎದೆ ಕಾದ ಬಾಣಲೆ! (ಕಡಬಂ. ೬೬-೮). **ಬಾಳಣೆ :** ಅವರ ನಾದಿನಿ ಅವರಿಗೆ ಹುಚ್ಚು ಬಾಳಣೆ ಮುಂತಾದವುಗಳನ್ನು ತರಹೇಳಿದ್ದಳು (ಕ್ಷ್ಯಶಿಶ. ೩೯೨). **ಬಾಳಲಿ:** "ಖಾಜೇಪ, ಓಷ್ಟಪಚನ-ಎಣ್ಣೆಯಲ್ಲಿ ಹಿಟ್ಟನಡುವ ಬಾಳಲಿ" (ಚಾಶರು. ೬).
[ದೇ. ॥ ತಮಿ. ವಾಣಲಿ, ವಾಣಾಲಿ; ತುಳು. ಬಾಣಲೆ; ತೆಲು. ಬಾಣಲಿ]

**ಬಾಣಲಿಂಗ** (ನಾ). ೧. ನರ್ಮದಾನದಿಯಲ್ಲಿ ದೊರಕಿದುದೆಂದು ಭಾವಿಸಿ, ಶಿವಲಿಂಗವೆಂದು ಪೂಜಿಸುವ ಒಂದು ಬಗೆಯ ಬಿಳಿಯ ಶಿಲೆ : ಸ್ಫುರಿತರುಚಿರಸ್ಫಟಿಕಲಿಂಗವು ಬಾಣಪೀಠದಲಿ ಸ್ಫುರಿತರುಚಿರ ಸ್ಫಟಿಕಪೀಠಕೆ ಸುರುಚಿರೋನ್ನತ ಬಾಣಲಿಂಗವು ಕರಮೆಸೆವುತಿರೆ ಸುಪ್ರತಿಷ್ಠಿತ ವಾದವೆಯಿತೆಂದು (ಬಸವು. ೫೬-೬೪); ವಾರಣಾಸಿಯಿಂದ ಬಾಣಲಿಂಗವನು ತರಿಸಿ ವಿಶ್ವೇಶ್ವರ ಲಕ್ಷ್ಮೀನಾರಾಯಣದೇವರ ಪ್ರತಿಷ್ಠೆಯನು ಮಾಡಿಸಿ (ಎಕ. X, ಗೌರಿಬಿ. ೫೯-೬ ; 1408). ೨. [ವೀಶೈ] ಒಂದು ಲಿಂಗಾ ಕೃತಿಯ ಹೆಸರು ; ಸ್ವಯಂಭುಲಿಂಗ, ಬಾಣಲಿಂಗ, ಚರಲಿಂಗ, ಸಂಕೀರ್ಣಲಿಂಗ ಮತ್ತು ಪ್ರಾಣಲಿಂಗವೆಂಬ ಐದು ಬಗೆಯ ಲಿಂಗ ಗಳಲ್ಲಿ ಒಂದು : ಸಜಂಗಿನಲಿ ಕಟ್ಟಿರ್ದ ಬದನೆಯ ಕಾಯಿ ನಿಮಿಷದಲಿ ಸಂಗಮೇಶ್ವರ ಬಸವರಾಜನ ಸಂಗಭಾವದಿ ಬಾಣಲಿಂಗ ಸುರಂಗಮಾದುವು (ಬಸವು. ೯-೫) ; ಶೈವಸಿದ್ಧಾಂತಸಮ್ಮತಮಾದ ಪಂಚಲಿಂಗಾರ್ಚನದೊಳು ಸ್ವಯಂಭುಲಿಂಗ ಬಾಣಲಿಂಗ . . . ಪ್ರಾಣಲಿಂಗಮೆಂಬೈದಱೊಳಗೆ ತಮ್ಮ ತಮ್ಮ ಶಕ್ತ್ಯನುಸಾರವಾಗಿ ಅರ್ಚನತತ್ಪರರಾಗಬೇಕೆಂದು ನಿಶ್ಚಯಿಸಲಕ್ಕುಂ (ಶಿವೇಕ. ೧೧೨). 'ಪಂಚಲಿಂಗ' ಪರಾ. [ಸಂ.]

**ಬಾಣಲೆ** 'ಬಾಣಲಿ' ನೋ.

**ಬಾಣವರ್ಷ** (ನಾ). ಅಂಬುಗಳ ಮಳೆ,—ವೃಷ್ಟಿ : ಅಶ್ವತ್ಥಾಮನು ಅರ್ಜುನನಿಗೆ ಅಡ್ಡವಾಗಿ ಬಂದು ಮೇಘವು ಮಳೆಗರೆದಂತೆ ಅವನ ಮೇಲೆ ಬಾಣವರ್ಷವನ್ನು ಕರೆದನು (ವಚಭಾ. ೨೦೫). [ಸಂ.]

**ಬಾಣವೃತ್ತ** (ನಾ). [ಛಂದ] ಪ್ರತಿಪಾದದಲ್ಲಿ ಹನ್ನೆರಡು ಅಕ್ಷರಗಳಿರುವ ಒಂದು ವರ್ಣವೃತ್ತ: ಸಭರಯಂ ಬರೆ ಬಾಣವೃತ್ತಮಕ್ಕುಂ (ಛಂಬಿ. ೫೦). [ಸಂ.]

**ಬಾಣವೃಷ್ಟಿ** (ನಾ). = ಬಾಣವರ್ಷ : ಇಷ್ಟರೊಳ್ ಪ್ರಸಾದಸೌಮ್ಯ ದೃಷ್ಟಿಯಲ್ಲದೆ ವಿಷ್ಟಪಪತಿ ಪೇಳು ಬಾಣವೃಷ್ಟಿ ಬೀಳ್ವುದೆ (ಶಾಕುಂತ. ೯೬ ೫೩೮). [ಸಂ.]

**ಬಾಣಶಯನ** (ನಾ). ಕಣೆಗಳ ಹಾಸುಗೆ ; ಶರಶಯನ : ಭೀಷ್ಮ . . . ನೋವಿನ ಕಳಕಳಕೆ ಧೃತಿಗೆಡದೆ ಮೆಱೆದನು ಬಾಣಶಯನದಲಿ (ಕುವ್ಯಾಭೀ. ೧೦-೨೬). [ಸಂ.]

**ಬಾಣಸ, ಬಾಣಸು** (ನಾ). ೧. (ಅಧಿಕಸಂಖ್ಯೆಯ ಜನರ ಭೋಜನ ಕೂಟಕ್ಕೆ ಉಪಯೋಗಿಸುವ) ದೊಡ್ಡ ಅಡುಗೆಮನೆ.–ಪಾಕಶಾಲೆ : "ಬಾಣಸ(ಸು) — ಮಹಾನಸ = ಪಾಕಶಾಲೆ" (ಶಬ್ದಕೋ. ೬೦) ; ಅರ್ಣವ ದೊಳ್ ನೀಂ ಮತ್ಸ್ಯನಾಗಲಾನಂದು ಸಮುದ್ರವಿಸಿದನಪ್ಪೊಡದಂ ಗಾಣವಿಕ್ಕಿ ಬಾಣಸಕ್ಕೊಪ್ಪಿಸನೇ (ಜಗಚ. ೧೬-೩೯) ; ಅವರನೊತ್ತಿಟ್ಟ ಮನೆಯನೇಪೊ ಗಳ್ವೆನದು . . . ಅಂತಕನ ನಗರ ಮೃತ್ಯುವಿನ ಬಲುಬಾಣಸದ ಹಂತಿ (ತಕಣ. ೧೨-೨). ೨. ಅಡುಗೆ ; ಪಾಕ : ಸಿರಿಯಾಳನ ಮಗನ ಬಾಣಸವ ಮಾಡಿಸಿ ಉಣಲೊಲ್ಲದೆ ಕಾಡಿದ (ಬಸವ. ೬೯೦); ಸಿಡಿಲುವಕ್ಕಿಯ ಪಕ್ಕಪನು ಕಿತ್ತಡಬಳದ ಬಾಣಸವ ಮಾಡುವ ಕಡುಗಲಿಗಳಾರುಂಟು (ಪ್ರಭುಲೀ. ೮-೧೬) ; ಹೆಣ್ಣಾಗಿ ಬಾಣಸದ ಪವಣಱಿದುದಿಲ್ಲಲಾ (ಕೈರಾಭಾ. ೨-೬೦). 'ಬಾಣಸಗ್ಗೆ' ಪರಾ. ೩. ಅಡುಗೆಯ ಕೆಲಸ,—ಕಸುಬು : ಎಮ್ಮಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು (ಬಸವ. ೬೫೦). ೪. ಉಣಿಸು ; ಆಹಾರ ; ಭಕ್ಷ್ಯ : ಇಂದಿನ ಬಾಣಸಕ್ಕೆನ್ನಂ ನಿವೇದಿಸಿದಂ ದೇವರ್ ಕೈಕೊಳ್ಳಿಂ (ಶಂಕಶಂ. ೦೯೫-೬) ; ಅಂಜಬೇಡ ಮಹಾಸುಸನ ಬಾಣಸದ ಬೀಯಕೆ ರವಣ ವೆಂಟೆಮಗೆ (ಕುವ್ಯಾಶ. ೦-೦೯) ; ಬೆರಕೆಯಲಿ ಜವನುಂಡು ಚೆಲ್ಲಿದ ಪರಿ ಪರಿಯ ಬಾಣಸಗಳೆಸೆದಿಹ ಹರಿಯಣದವೊಲು ಕಣ್ಗೆ ಕೌತುಕವಾಯ್ತು ರಣಭೂಮಿ (ಕಾತ್ರಾ. ೨೦-೨೬). ೫. ಅಡುಗೆಮಾಡುವವನು ; ಅಡುಗೆ ಯವನು : ವಣಿಗ್ವರರ್ ಗಂಧಿಗರ್ ಬಾಣಸರ್ ತಾಂಬೂಲಿಗರ್ . . . ಜೂಡುಗಾಱರ್ ಮುಖ್ಯರೊದಗಿ ಬರುತಿರ್ದರ್ (ಶಂಕ. ೯೬-೯೦). **ಬಾಣಸು :** ೧. ನೃಪೇಂದ್ರತನುಜಾತರ್, ನಿಶ್ಚಿತಂ ಪೊಕ್ಕರ್ ಪಸಿದ ಕೃತಾಂತನ ಬಾಣಸುವೊಲಿರ್ದ ಮಾರಿಯ ಮನೆಯಂ (ಯಶೋಚ. ೦-೫೩) ; ಲಲಿತ ಬೋನದ ವಿವಿಧ ಭಕ್ಷ್ಯಾವಳಿಯ ಬಾಣಸಿನೊ[ಪಾಠಾಂ. ಸದೊ]ಳಗೆ ಬಂದಳು ಮತ್ತಗಜಗಮನೆ (ಕುವ್ಯಾವಿ. ೩-೩೬). ೨. ವಿರಾಟಂ . . . ನಿನ್ನ ನಾಳ್ವೆನೆಂದು ಬಾಣಸಿನ ಕರಣಕ್ಕೆ ನಿರೂಪಣಂಗೆಯ್ದಂ (ಕುಕಥಾ. ೯-೫೯ ವ) ; ಅಂತು ಮನೆಗಟ್ಟ ಬಾಣಸಿನ ಕೂಟಿಲ್ಲಮುನುಂಡುಮವ್ವಾ ಪಸಿವು ಪೋಗ ದೆಂದಡರಿಸಿ ಬೋದ್ಯಂಬಟ್ಟು (ಶಂಹು. ೯-೨೮ ವ); ಅದೊಂದು ನೀಲಪರ್ವತಂ . . . ನಿಚ್ಚಮಯಣಂಬರ್ಪ ಜಾತ್ರೆಯ ಜನರ ಬರ್ದಿನ ಪಗಲೂಟದ ಬಾಣಸಿನಾವಿಗೆಯ ತನಿಗೆಂಡದೋವರಿಯೆಂಬಂತು ತಟತಟನೆ ಪೊಳೆವ ರಂಗು ಮಾಣಿಕದಗಟ್ಟಿಯಿಂ . . . ಮನೋಜ್ಞಂ (ಕುವ್ಯಾವಿ. ೬೨ ೨೫).

**ಬಾಣಸದ ಭವನ** = ಅಡುಗೆಮನೆ ; ಪಾಕಶಾಲೆ : ಸ್ವೈರಿಸರು ಬಾಣಸದ[ಪಾಠಾಂ. ಸಿನ] ಭವನದ ನಾರಿಯರು ದುರ್ಜನರು (ಕುವ್ಯಾವಿ. ೩-೯೦) ; ಹನ್ನೆರಡುಯೋಜನತರದ ಭೋಜನಶಾಲೆಗಳು ವಿಸ್ತರಿಸಿದವು ಬಾಣಸದ ಭವನಂಗಳು ಸುವೀಥಿಯಲಿ (ಕೊರಾ. ೦-೬-೬). **ಬಾಣಸದ ಮನೆ, ಬಾಣಸಿನ ಮನೆ**=ಬಾಣಸದ ಭವನ : ಬಾಣಸದ ಮನೆ–ರಸವತಿ, ಪಾಕಸ್ಥಾನ, ಮಹಾನಸ" (ಚಾಶರು. ೬) ; ಗುಹೇಶ್ವರ ನಿಮ್ಮ ಶರಣ ಕಟ್ಟಿದಿರ ಬಾಣಸದ ಮನೆಗೆ ಬಂದನು (ಅವಸಂ. ೦೯೫-೬೬೨) ; "ಪಾಕ ಸ್ಥಾನಂ, ರಸವತೀ, ಮಹಾನಸಂ—ಈ ೩ ಬಾಣಸಿನ ಮನೆ" (ಹಲಾಯು. ೯೯-೦೯೦) ; ಸಹಸ್ರಸಿಂಹಬಲನೆನಿಪ ಸಿಂಹಬಲನ[ನ್]ಶ್ರಮದೊಳೆ ಕೊಂದು ಜವಂಗೆ ಬಾಣಸುಗೆಯ್ದಂದಿನಂದದೊಳೆ ಬಾಣಸಿನ ಮನೆಯೊಳ್ ಬಂದಿರ್ದಂ (ಕುಕಥಾ. ೯-೬೯ ವ); ಕಳವಳದ ಕರಣದ ಮುಗುದೆ ಬಂದಳು ಬಾಣಸಿನ ಮನೆಗೆ (ಕುವ್ಯಾವಿ. ೩-೩೫). **ಬಾಣಸದ ಶಾಲೆ** = ಬಾಣಸದ ಭವನ : ಮೃತ್ಯುವಿನ ಬಾಣಸದ ಶಾಲೆಯೋ ಸಮರಾಂಗಣವೊ (ಕೊರಾ. ೬-೩೬-೯೩).
[< ಸಂ. ಮಹಾನಸ. / ಪ್ರಾ. ಮಹಾಣಸ. / ತೆಲು. ಬಾನಸ]

**ಬಾಣಸಂಧಾನ** (ನಾ). ಬಿಲ್ಲಿನ ಹೆದೆಗೆ ಕಣೆಯನ್ನು ಹೂಡುವುದು ; ಶರಸಂಧಾನ : ಕರ್ಣನು ಎರಡು ಸಾರಿ ಗುರಿಯಿಟ್ಟು ಬಾಣಸಂಧಾನ ಮಾಡುವುದಿಲ್ಲ (ವಚಭಾ. ೨೯೯). [ಸಂ.]

**ಬಾಣಸಗಿತ್ತಿ** (ನಾ). ಅಡುಗೆಯ ಕೆಲಸ ಮಾಡುವವಳು; ಅಡುಗೆಯವಳು : ಶೂಲಧರ ನಿಮ್ಮಡಬಳಂ ಸಿರಿಯಾಳ ಬಾಣಸಗಿತ್ತಿ ಚಂಗಳೆ (ಬಸವ. ೯-೯೦). [ಬಾಣಸ + –ಗಿತ್ತಿ]

**ಬಾಣಸಗೈ, ಬಾಣಸುಗೆಯ್, ಬಾಣಸುಗೈ** (ಕ್ರಿ). ಅಡುಗೆ ಮಾಡು; ಆಹಾರವನ್ನು ಸಿದ್ಧಪಡಿಸು : ಅನಲ ಬಾಣಸಗೈಯನೋ ತಿಥಿವಿಸವ ಸುರಗುರುವುಸುರನೋ (ಕೊರಂ. ೬ ಸಂ. ೭೦೦). **ಬಾಣಸುಗೆಯ್ :** ಸಹಸ್ರಸಿಂಹಬಲನೆನಿಪ ಸಿಂಹಬಲನ[ನ]ಶ್ರಮದೊಳೆ ಕೊಂದು ಜವಂಗೆ ಬಾಣಸುಗೆಯ್ದಂದಿನಂದದೊಳೆ ಬಾಣಸಿನ ಮನೆಯೊಳ್ ಬಂದಿರ್ದಂ (ಶಂಶಭಾ. ೬-೭೮ ವ); ಪಿರಿಯಣ್ಣನ ನನ್ನಿಯನಾದರದಿಂ ಕಾಯಲ್ಕೆ ಪೆಜರ್ಗೆ ಬಾಣಸುಗೆಯ್ದಿಂ ಕುರುವಂಶಜ ಕೇಳ್ ನಿನ್ನೀ ಶರೀರವಮಾಂಸದೊಳೆ ಮರುಳ್ಗೆ ಬಾಣಸುಗೆಯ್ವಂ (ಗದಾಯು. ೭-೩೬). **ಬಾಣಸುಗೈ :** ಅಗ್ಗಿ ಮೊಗರ್ಗೆ ಬಾಣಸುಗೈದು ನಿಚ್ಚಮುಂ ಯ್ವಜನ್ನದುರಿಯ ನಡುಬೀದಿಯೆನೆ ಮುಗಿಲುದ್ದವೊಂದಿದ ಕರ್ವೊಗೆಯಿಂ . . . ತೋರ್ಪ ತಪೋವನವೊಂದು ಕಣ್ಗೊಳಿಸಲ್ (ರಾಮಾಶ್ವ. ೬೯-೨). [ಬಾಣಸ + ಗೈ (< ಕೆಯ್$_1$)]

**ಬಾಣಸಮನೆ** 'ಬಾಣಸವನೆ' ನೋ.

**ಬಾಣಸವನೆ, ಬಾಣಸಮನೆ** (ನಾ). = ಬಾಣಸ ೧ : ಜವನ ಕಣಜವೊ ಮೇಣು ಲಯವ್ಯತ್ಯುವಿನ ಬಾಣಸವನೆಯೊ (ತೊರಾರಾ. ೬-೦೩-೪೩). **ಬಾಣಸಮನೆ :** ಮರ್ತ್ಯವೆಂಬುವದು ಕರ್ತಾರನ ಕಮ್ಮಟವು ಮತ್ತೆ ಆಚ್ಚಿನ ಮೊಳೆ ಬಾಣಸಮನೆ ದೇವನ ಸೊತ್ತಿಹುದು ನೀನೇನು ಕೊಟ್ಟೆ ಬಸವ (ಸಿದ್ಧಕೃ. ೩೦-೪೯). [ಬಾಣಸ + ಮನೆ]

**ಬಾಣಸವಿದ್ಯೆ** (ನಾ). ಅಡುಗೆಯ ವಿಧಾನವನ್ನು ತಿಳಿಸುವ ಕಲೆ ; **ಪಾಕವಿದ್ಯೆ :** ಹದ್ದು ಕಾಗೆಯ ಮನೆಯ ಬಾಣಸವಿದ್ಯೆಯೆಮ್ಮದು ಯಮನ ನಿಳಯಕೆ ಬದ್ದಿನರು ನೀವು (ಕುವ್ಯಾ.ಶ. ೬-೨೩). [ಬಾಣಸ + ವಿದ್ಯೆ]

**ಬಾಣಸವಿರು** (ಕ್ರಿ). ಅಡುಗೆಯ ಕೆಲಸಕ್ಕಿರು : ಹದ್ದು ಕಾಗೆಯ ಮನೆಗೆ ಬಾಣಸವಿದ್ದುದೋ ಗಜವೆನುತ ಬೊಬ್ಬಿಡುತಿದ್ದುದರಿಬಲವು (ಕುವ್ಯಾ.ದ್ರೋ. ೩-೪೩). [ಬಾಣಸ + ಇರು$_1$ (< ಇರ್$_1$)]

**ಬಾಣಸವೆರ್ಗಡೆ, ಬಾಣಸಿವೆರ್ಗಡೆ, ಬಾಣಸುವೆಗ್ಗಡೆ, ಭಾಣಸವೆರ್ಗಡೆ, ಭಾಣಸುವೆರ್ಗಡೆ**(ನಾ). ಪಾಕಶಾಲೆಯ ಮೇಲ್ವಿಚಾರಕ,–ಮುಖ್ಯಸ್ಥ : ಶ್ರೀಮಹಾಪ್ರಧಾನ ಬಾಣಸವೆರ್ಗ್ಗಡೆ ಮನೆವೆಗ್ಗಡೆ ದಣ್ಣನಾಯಕನನನ್ತ ಪಾಳಯ್ಯಂಗಳ ಪೆರ್ಗ್ಗಡೆ ಸಿರಿಪತಿನಾಯಕಂ . . . ಮೂಜುಗದ್ಯಾಣ ಪೊನ್ನಂ ಬಿಟ್ಟರ್ (ಸಾಂದೇಶ್. ೦೯-೦೦; 1116). **ಬಾಣಸಿವೆರ್ಗಡೆ :** ಶ್ರೀಮನ್ಮಹಾಪ್ರಧಾನಂ ದಣ್ಡನಾ[ಯ]ಕ ಬಾಣಸಿವೆರ್ಗ್ಗಡೆ ಅನನ್ತ ಪಾಳಯ್ಯಗಳ [ಪ(ತ)]ತುಪಾದಪದ್ಮೋಪಜೀವಿ (ಕಇ. IV, ೩-೦೨; 1114). **ಬಾಣಸುವೆಗ್ಗಡೆ :** "ಪೌರೋಗವಃ, ಸೂದಾಧ್ಯಕ್ಷಃ – ಈ ೨ ಬಾಣಸುವೆಗ್ಗಡೆ" (ಹಲಾಯು. ೭೦-೨೭೭). **ಭಾಣಸವೆರ್ಗಡೆ :** ಶ್ರೀಮನ್ಮಹಾಪ್ರಧಾನಂ ಭಾಣಸವೆರ್ಗ್ಗಡೆ ಮನೆವೆರ್ಗ್ಗಡೆ ಪ(ಂ)ಸ್ನಾಯುದಧಿಪ್ಠಾಯಕನ ನನ್ತಪಾಳಯ್ಯದಣ್ಣನಾಯಕರು . . . ಸುಂಕವುಂ ಸರ್ವ್ವಾಯ ಶುದ್ಧಿಯಿಂ ಬಿಟ್ಟರು (ಕಇಇ. IX – i, ೦೩೩-೬೬ ; 1083); ಶ್ರೀಮನ್ಮಹಾಪ್ರಚಂಡದಂಡ ನಾಯಕಂ ಭಾಣಸವೆರ್ಗ್ಗಡೆ ಅನನ್ತಪಾ[ಳ]ದಂಡನಾಯಕಂಗೆ ಬಿನ್ನಪಂಗೆಯ್ದು . . . ಬಿಟ್ಟ ಧರ್ಮ್ಮಮೆಂತೆಂದ[ಡೆ] (ಕಇಇ. XI – ii, ೦೯೦-೬; 1106). **ಭಾಣಸುವೆರ್ಗಡೆ :** ಶ್ರೀಮನ್ ಮಹಾಪ್ರಧಾನಂ ಭಾಣಸುವೆರ್ಗ್ಗಡೆ ಅನನ್ತ ಪಾಳರಸರ ದೇಸಯಿನಪರೀಯಂ . . . ಬೆಜ್ವಲಪೆರಡಾಜುನೂಜುಮಂ ದುಷ್ಟನಿಗ್ರಹಶಿಷ್ಟಪ್ರತಿಪಾಳನದಿಂದಾಳುತ್ತಮಿರ್ದ್ದು (ಎಇ. XVIII, ೦೯೦-೪; 1104) ; ಶ್ರೀಮನುಮಹಾಪ್ರಧಾನಂ ಭಾಣಸುವೆರ್ಗ್ಗಡೆ ಮನೆವೆರ್ಗ್ಗಡೆ ಸೇನಾಧಿಪತಿ ದಂಡನಾಯಕನ ನನ್ತಪಾಳಯ್ಯಂಗಳು... ಧಾರಾಪೂರ್ವ್ವಕವಾಗಿ ಕೊಟ್ಟು (ಕಇಇ. IX – i, ೨೨೪-೦೬; 1130). [ಬಾಣಸ + ಪೆರ್ಗಡೆ$_1$]

**ಬಾಣಸಾಮಿ** (ನಾ). ಒಬ್ಬಾತನ ಹೆಸರು : ಬೆಣ್ಣಗೂರ ಕರ್ವ್ವಣೆ ಬಾಣಸಾಮಿ ಮಗನ್ ಪುಜಿಕಾಮನ್ . . . ಸತ್ತನ್ (ಎಕ. X, ಬಾಂಗ್. ೪೩-೩; ಸು. 880?). [ಬಾಣ$_2$ + ಸಾಮಿ$_1$]

**ಬಾಣಸಿ** (ನಾ). ಅಡುಗೆ ಮಾಡುವ ಕೆಲಸಕ್ಕೆ ನಿಯುಕ್ತನಾದವನು ; ಅಡುಗೆಯವನು : "ಬಾಣಸಿಯೆನಲ್ ಅಡಿಗವಳ್ಂ" (ಶಬ್ದ. ೨೦೬); ಬಾಣಸಿಯಾನು ಭೀಮನ ಮನೆಯವನು (ಕುವ್ಯಾ.ವಿ. ೦-೨೨); ಭೂಮಿ ತಾನೋ ವಾರಿ ತಾನೋ ವ್ಯೋಮಚರ ಬಾಣಸಿಯು ತಾನೋ (ಏಕಾಗ. ೦೦-೦೬-೦೩).

[ಬಾಣಸ + –ಇ$_3$. / ಸಂ. ಮಹಾನಸೀ. / ಪ್ರಾ. ಮಹಾಣಸಿ. / ತಮಿ. ಪಾನಚಿ ; ತೆಲು. ಬಾನಸೀಂಡು]

**ಬಾಣಸಿಗ** (ನಾ). = ಬಾಣಸಿ : "ಆರಾಳಿಕಃ, ಸೂಪಕಾರಃ, ಸೂದಃ, ಪಲ್ಲವಃ – ಈ ೪ ಬಾಣಸಿಗಂ" (ಹಲಾಯು. ೭೦-೨೭೩); ಬಾಣಸಿಗಂ ಬಂದು ಬೋನಮೆತ್ತಿಯೋಗರವಾಜಿದಪ್ಪುದೆಂದು ಪೇಟ್ದೊಡೆ (ವಡ್ಡಾರಾ. ೪೬-೦೬); ವಿರಾಟಂ . . . ತನ್ನ ಬಾಣಸಿಗನಾಗಿರ್ದ ವಲ್ಲಲನಂ ಕರೆದು ಪೇಟ್ವಾಗಳ್ (ಶಂಶಭಾ. ೬-೫೭ ವ); ಎಸರನಿಡುವ . . . ಕಂಚುಗರ್ಚುವ ಬೆಸನಂ ಬೆಸನಲ್ಲದೆ ಮತ್ಸ್ಯನ ಬಾಣಸಿಗಂಗಾರಿತ್ತರೆಲವೊ ನಿನಗೀ ಬೆಸನಂ (ಗದಾಯು. ೭-೩೭). [ಬಾಣಸ + –ಇಗ]

**ಬಾಣಸಿಗತನ** (ನಾ). ಅಡುಗೆಯವನ ಕೆಲಸ ; ಬಾಣಸಿಗನ ಕಾರ್ಯ : ಬಾಣಸಿಗತನಕ್ಕೆ ಸಂದು ವಿಗೆ ಮತ್ಸ್ಯನೃಪಂಗುಣಾಲಿಕ್ಕಿ ಭೀಮ ಜೀವಿಸಿದನು (ಕಜೈಕಂ. ೦೭). [ಬಾಣಸಿಗ + – ತನ]

**ಬಾಣಸಿಗಿತಿ** 'ಬಾಣಸಿಗಿತ್ತಿ' ನೋ.

**ಬಾಣಸಿಗಿತ್ತಿ, ಬಾಣಸಿಗಿತಿ** (ನಾ). = ಬಾಣಸಗಿತ್ತಿ : ಆ ಸತ್ಯಭಾಮೆಯ ಯತಸನ್ನೆ ಬಾಣಸಿಗಿತ್ತಿಯಾಗಿರ್ದೊಂದುದಿವಸಂ . . . ಪಂಚಾಶ್ಚರ್ಯಂ ನೆಗೞ್ (ಹಾವುಂಕು. ೦೯೩). **ಬಾಣಸಿಗಿತಿ :** ಪೂಜಾರಿ ಬಾಣಸಿಗಿತಿ ದವಸಿಗ × × × ತೋಟಿಗಂ ಸಂಕಿಮಯ್ಯನೊಳಗಾಗಿ ಜೀರ್ಣ್ನೋದ್ಧಾರಕಂ ವಿತ್ತಿ ಮೂವತ್ತು (ಎಕ. XII, ಗುಬ್ಬಿ ೦೯-೬೨ ; 1140) ; ಬಿಡದಮ್ಮತಾನ್ನಮ ನೊಜಲ್ದು ಬಾಣಸಿಗಿತಿವೋಲ್ ಕುಡುತಿರ್ದಳ್ (ಕಾವ್ಯಾವ. ೩೩೦).

[ಬಾಣಸಿಗ + – ಇತ್ತಿ]

**ಬಾಣಸಿಗೆ, ಭಾಣಸಿಗೆ** (ನಾ). = ಬಾಣಸಗಿತ್ತಿ : ಕಿಜುಕಬೆ ಸೆರ್ಗ್ಗತನ ಬಾಣಸಿಗೆಯಾಕೆಯ ಪಿರಿಯ ಮಗಂ × × ಟಿಯಕ್ಕಂ (ಎಕ. VIII, ನಗರ. ೪೩-೩; ಸು. 950); ಬಾಣಸಿಗೆಯರ್ . . . ಹಯ್ಯಂಗವೀನವುಮನರಸಂಗು ಪಂಕ್ತಿಯೊಳುಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೦೦-೨೯ ವ). **ಭಾಣಸಿಗೆ :** ನಿವೇದ್ಯಮನಡುವ ಭಾಣಸಿಗೆಗೆ ಮತ್ತುರುಗ (ಕಇಅ. ೯-೩-೩೨೩; 1085). [ಬಾಣಸಿಗ + – ಎ$_2$]

**ಬಾಣಸಿತನ** (ನಾ). = ಬಾಣಸಿಗತನ : ಬಾಹುಕನು . . . ತುರಗನಿಕರದ ಶಿಕ್ಷೆಯಲಿ ಮಂದಿರದ ಬಾಣಸಿತನದ ಕೆಲಸದಿ ನೆಜೆ ನಿಪುಣನೆಂದೆನಿಸಿಕೊಂಡಿಹ ನೃಪನ ಸಭೆಯೊಳಗೆ (ನಳಚ. ೬-೦೯) ; ಅಗ್ನಿಯು ಅನವರತಂ ಬಾಣಸಿ ತನಮುಂ ಕೈಕೊಂಡಿರ್ಪನು (ಶುಕಸ. ೦೯೪). [ಬಾಣಸಿ + –ತನ]

**ಬಾಣಸಿವೆರ್ಗಡೆ** 'ಬಾಣಸವೆರ್ಗಡೆ' ನೋ.

**ಬಾಣಸು** 'ಬಾಣಸ' ನೋ.

**ಬಾಣಸುಗೆಯ್** 'ಬಾಣಸಗೈ' ನೋ.

**ಬಾಣಸುಗೈ** 'ಬಾಣಸಗೈ' ನೋ.

**ಬಾಣಸುವೆಗ್ಗಡೆ** 'ಬಾಣಸವೆರ್ಗಡೆ' ನೋ.

**ಬಾಣಹತಿ** (ನಾ). ಅಂಬಿನ ಹೊಡೆತ,– ಪೆಟ್ಟು : ದೇವ ನಿಜೋಗ್ರ ಬಾಣಹತಿಯಿಂ ತಲೆಗಳ್ ಗಗನಕ್ಕೆ . . . ಪಾಜುತಿರ್ಪಿನಂ . . . ರಾವಣನಂ ರಘುಪ್ರಭವರೂಪದೆ ಮರ್ದಿಸಿದೈ ಜನಾರ್ದನಾ (ಜಗಂ. ೦-೭೦);

ಬಾಣಹತಿಗಕ್ಕುಡಿಸಿ ರಾಜ್ಯಶ್ರೀಣಿ ಜರುಗಿತು (ಕುವ್ಯಾಕ ೨೪-೯೩). [ಸಂ.]

**ಬಾಣಹರ** (ನಾ). ಬಾಣನೆಂಬ ರಾಕ್ಷಸನನ್ನು ಕೊಂದವನು ; ಕೃಷ್ಣ : "ಮುರಹಿರಣ್ಯ ಕಂಸಮಧುಕೇಶಿಬಲಿಬಾಣಹರನೆನಲು . . . ಕೃಷ್ಣಂ" (ಮುಂಗರಾ. ೬-೧೮). [ಸಂ.]

**ಬಾಣಾಗ್ನಿ** (ನಾ). ಬಾಣದಿಂದ ಉತ್ಪತ್ತಿಯಾಗುವ ಬೆಂಕಿ : ಆ ಮಹಾ ರಿಪುಭಯಂಕರನೀಗಳೆನಗಾಗಿ, ತನ್ನೊಲಿದ ಕೈಹಿಡಿದಬಲೆಗಾಗಿ, ಶೋಷಿಸನೆ ಶರಧಿಯಂ ಬಾಣಾಗ್ನಿಯಿಂ ? (ಶ್ರೀರಾಮಾ. ೫೦೬-೪೪೩). [ಸಂ.]

**ಬಾಣಾಯಿತ** (ನಾ). (ಬಿಲ್ಲಿಗೆ) ಅಂಬನ್ನು ಹೂಡುವವನಂ; ಬಿಲ್ಲುಗಾರ : ಕಠಾರಾಯಿತರ ಬಾಣಾಯಿತರ ಮಲ್ಲಜಟ್ಟಿಗಳ . . . ಮೊತ್ತದೊತ್ತರದ ತಿಂಥಿಣಿಯನೊತ್ತರಿಸಿ ಇಟ್ಟಣಿಸಿದ ಕಟ್ಟಣಕದಾಸ್ಥಾನದೊಳು (ಬಸರೆ. ೬-೨೩). [ಬಾಣ$_2$ + – ಆಯಿತ (< –ಆಯ್ತ)]

**ಬಾಣಾರಸಿ** 'ಬಾರಣಾಸಿ' ನೋ.

**ಬಾಣಾಶ್ರಯ** (ನಾ). ಅಂಬಿಗೆ ಆಶ್ರಯಸ್ಥಾನವಾದುದಂ ; ಬತ್ತಳಿಕೆ : "ತೂಣೀರಂ. ಉಪಾಸಂಗಃ . . . ಬಾಣಾಶ್ರಯಃ, ಕಳಾಪಃ — ಈ ೮ ಮೂಡಿಗೆ" (ಹಲಾಯು. ೬೩-೩೦೦). [ಸಂ.]

**ಬಾಣಾಸನ** (ನಾ). ೧. ಬಿಲ್ಲು; ಧನುಸ್ಸು : "ಧನು ಕೋದಂಡಂ ಬಾಣಾಸನಮಸ್ತ್ರಂ ಕಾರ್ಮುಕಾಖ್ಯಮದು ಚಾಪಂ" (ವಸ್ತುಕೋ. ೮೫-೧೬) ; ಪಂಚವಿಂಶತ್ಯನ್ವಿತಸಪ್ತಶತಬಾಣಾಸನೋಚ್ಛ್ರಿತನುಂ ನಲಿನಪ್ರಮಾಣಾಯುಷ್ಯನುಮಾಗಿ . . . ಪುಟ್ಟಿ (ಆದಿಪು. ೬-೫೬ ವ) ; ಬಾಸಣಿಸಿದ ಮದನನ ಬಾಣಾಸನದವೊಲೆಸೆವ ಚಾರುರ್ಚುಂಪಾಣದೊಳುದ್ಭಾಸಿನಿಯರ್ ನೃಪಸುತನ ವಿಳಾಸಿನಿಯರ್ ಬಂದರೇಱಿ ಪೊನ್ನಂದಣಮಂ (ಪುಷ್ಪಪು. ೫-೨೦). ೨. ಬಿಲ್ಲಿನ ಹಗ್ಗ; ನಾರಿ : ವಿನುತ ಶಿವಪದವೆಂಬ ಬಾಣಾಸನವನೇಱಿಸಿ ತಿರುಗುವಿಂದ್ರಿಯವೆನಿಪ ಬಲು ಸಾರಂಗವಂ ನಿಮಿಷಕೆ ಪಱಿಯಲೆಚ್ಚು (ಬಸವು. ೩೪-೩೫). [ಸಂ.]

**ಬಾಣಿ$_1$** 'ಪಾನೆ' ನೋ.

**ಬಾಣಿ$_2$** (ನಾ). ೧. ಮಾತು ; ವಚನ ; ನುಡಿ. ೨. ಶಬ್ದ : ಧ್ವನಿ. ೩. ಮಾತಿನ ಅಧಿದೇವತೆ ; ಸರಸ್ವತಿ; ವಾಣಿ : "ಬಾಣಿ ಬಿಜ್ಜೆವೆಣ್ಣುಂ ಬಾಸೆವೆಣ್ಣು ಸರಸತಿಯುಮೆನೆ ವಾಣಿಯಕ್ಕುಂ" (ಕಬ್ಬಿಕ. ೪) ; ಬಾಣಂ ವಲ್ಲಭನಕ್ಕುಮೆಂದು ಪಡೆದಾ ವಾಗ್ದೇವಿಗಬ್ಜೋದ್ಭವಂ ಜಾಣಿಂ ಬಾಣಿಯೆನಿಪ್ಪದೊಂದು ಪೆಸರಂ ಮುನ್ನಿತ್ತಂ (ಕಾದಂಪೂ. ೩) ; ಬೀಣೆ ಹೊತ್ತಗೆಗಳಂ ಪೊತ್ತ ಕೈಯ ಚೆಲ್ವೆ ! ಸುವ್ವಿ ! ಸುವ್ವಿ ! ಬಾಣಿ (ರಾಮಾಶ್ವ. ೮೮-೬). [<ಸಂ. ವಾಣೀ]

**ಬಾಣಿಗ**, ಬಾಣಿಗ್ಗ, ವಾಣಿ$_2$, ವಾಣಿಯ$_2$ (ನಾ). ೧. ವ್ಯಾಪಾರ ಮಾಡುವವನು ; ವ್ಯಾಪಾರಿ : ಬಾಣಿಗ ಬೀಮಯ್ಯನ ಮಗ . . . ಸಾನ್ತಯ್ಯ ಕೊಟಗವ್ಟನ್ದು ತುಱುವ ಕೊಣ್ದು ಪೋಪಾಗ (ಎಕ. ೧೪೧, ೨೫-೧೧; 1030); ಬಾಣಿಗರ ಬೆಳ್ಳಿಗವುಣ್ಡನ ಮಗ ಬಿಟ್ಟಿಗಾವುಂಡನು . . . ನಡಿಸಿದ ಕಲ್ಲ ಗಾಣ (ಎಕ. ೧೪೩೩, ೬೬-೬ ; 1179) ; ಚಉಡೋಜನ ಬರಹ ಸಮಸ್ತ ಬಾಣಿಗರ ಒಪ್ಪ (ಎಕ. III, ಮಳವ. ೨೦-೨೦ ; 1388). **ಬಾಣಿಗ್ಗ :** ೧. ಸಮಸ್ತ ಬಾಣಿಗ್ಗರ ಅರುಹನಹಳ್ಳಿಯ ಬಾಗಿಗಾಗಿ ನಟ × × × (ಎಕ. III, ಮಳವ. ೨೦-೧೩; 1388). **ವಾಣಿ$_2$ :** ೨. ವ್ಯಾಪಾರ ಮಾಡುವ ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ : ಮಾರವಾಡೀ ಬ್ರಾಹ್ಮಣರು . . . ಹಲಕೆಲವರು ಮಾರವಾಡೀವಾಣೀ ಜನರಲ್ಲಿ ಅಡಿಗೆ ಮಾಡುವರು (ಕಭಾಗ. ೮೪); ಸಿಂಪಿ, ವಾಣಿ (ಬಣಜಿಗ). ಕುಣಬಿ (ಒಕ್ಕಲಿಗ) ಮುಂತಾದವರು ಶ್ರೇಷ್ಠಸಾಧುಗಳೆಂದು ಎಲ್ಲರಿಂದ ಮನ್ನಣೆ ಪಡೆದಿರುವರು (ಕರ್ನಾಸಂ. ೪೬). ೩. ವ್ಯಾಪಾರದ ಸರಕು : 'ಹಸುರುವಾಣಿ' ಪರಾ. P ಈ ಶಬ್ದದ ರೂಪದಲ್ಲಿ ಮರಾಠಿಯ ಪ್ರಭಾವವಿದ್ದಂತೆ ಕಾಣಬರುತ್ತದೆ. **ವಾಣಿಯ$_2$ :** ೧. ವಾಣಿಯರುಂ ವಾರಸ್ತ್ರೀಜಾಣರುಗಳ್ . . . ಶಿಲ್ಪಿಗರ್ ಪೊಱಮಟ್ಟರ್ (ಸೂಕ್ತಿಸು. ೧೮-೨೬); ಶೌರ್ಯನಗರದ ವಾಣಿಯರು ಹೊಕ್ಕಿಱಿದು ಹೋಗಾಡಿದರು ಪತಿರಿಣವ (ಕುವ್ಯಾಕ. ೨೪-೯೩); ವಾಣಿಯರ್ ಚಿನ್ನವರದರ್ ದೂಸಿಗರ್ . . . ಜೂಜುಗಾಱರ್ ಮುಖ್ಯರೊದಗಿ ಬರುತಿರ್ದರ್ (ಶಬಶು. ೪೬-೪೦). 'ಬನಿಯ' ಪರಾ.

[<ಸಂ. ವಾಣಿಜ./ಪ್ರಾ. ವಾಣಿಅ./ಮರಾ. ವಾಣಿಯಾ, ವಾಣೀ./ತಮಿ. ವಾಣಿಯನ್, ವಾಣಿಕನ್ ; ತೆಲು. ವಾಣಿಜುಡು]

**ಬಾಣಿಗ್ಗ** 'ಬಾಣಿಗ' ನೋ.

**ಬಾಣಿನೋಟ** (ನಾ). ಸರಸ್ವತಿಯ ದೃಷ್ಟಿ,–ಕಟಾಕ್ಷ : ಚಂಚಳಿಸುವ ಭಾವವಾಂತೆಡೆಗಳೊಳ್ ನೆಲೆನಿಲ್ವ ಬೆಡಂಗಿನಿಂದಮೋಂ ಬಳೆದುವೊ ಬಾಣಿ ನೋಟದವೊಲೀ ಚಿಕದೇವನ ತಾನದೊಳ್ಪುಗಳ್ (ಚಿಕವಿ. ೪-೧೨೩). [ಬಾಣಿ$_2$ + ನೋಟ]

**ಬಾಣೆ**. ಬಾಣ$_1$ (ನಾ). ಗದ್ದೆಯ ಸಮೀಪದಲ್ಲಿರುವ, ಸಾಮಾನ್ಯವಾಗಿ ಕುರುಚಲುಗಿಡಗಳಿಂದ ತುಂಬಿರುವ ಕಾಡುಪ್ರದೇಶ : (ಕಿಸಂಗ್ರ. ೧೩೦); ಕಾನ, ಬಾಣೆ, ಕುಮುಕಿ, ದರ್ಕಾಸ್ತು, ತೋಡು, ಕೆರೆ ಇವುಗಳ ವಿಸ್ತೀರ್ಣಗಳೆಲ್ಲ ಬಾಯಿ ಪಾಠ (ಕರುಳ. ೬). **ಬಾಣ$_1$ :** 'ಬಾಣಬೆಟ್ಟು' ಪರಾ. [ದೇ. ॥ ತುಳು. ಬಾಣೆ, ಬಾನೆ ; ಕೊಡ ಬಾಣೆ]

**ಬಾತ** 'ಬಾ$_1$' ಪರಾ.

**ಬಾತಖಾನಿ**, ಬಾತಾಖಾನಿ (ಗು). ೧. ಹರಟೆ ಹೊಡೆಯುವ ಸ್ವಭಾವದ : ಆ 'ಬಾತಖಾನಿ' ಮುದುಕಿಗೆ ತನ್ನ ಮಾತು ಕೇಳುವವರು ಒಬ್ಬರು ಬೇಕು (ಶಾಲೀಮು. ೧೦೫). **ಬಾತಾಖಾನಿ :** ೨. ಹರಟೆ ಹೊಡೆಯುವ ಸ್ವಭಾವವುಳ್ಳ ವ್ಯಕ್ತಿ ; ನಿರರ್ಥಕವಾಗಿ ಮಾತನಾಡುವ ವ್ಯಕ್ತಿ : "ಬಾತಾಖಾನಿ = ಮಾತುಗಂಟ" (ಜಾನಕೋ. ೨೦). [← ಮರಾ. ಬಾತೇಖಾನೀ]

**ಬಾತಮಿ** 'ಬಾತಮೀ' ನೋ.

**ಬಾತಮಿದಾರ** 'ಬಾತಮೀದಾರ' ನೋ.

**ಬಾತಮೀ**, ಬಾತಮಿ, ಬಾತ್ಮಿ, ಬಾತ್ಮೆ (ನಾ). ೧. ವರ್ತಮಾನ ; ಸುದ್ದಿ ; ಸಮಾಚಾರ : ಈ ಬಾತಮೀ ತಿಳಿದು ನವಾಬರು ಪಟ್ಟಣದ ದಂಡಿನ ಮೇಲೆ ಬಿದ್ದು . . . ಪತ್ತೆಮಾಡಿದರು (ಹೈದರ. ೫೦). **ಬಾತಮಿ :** ೧. ಯಾರಾದರೂ ಈ ಬಾತಮಿಯನ್ನು ಹೊರಡಿಸಿದರೇ ಎಂದು ಸಂಶಯವು ಆತನ ಮನಸ್ಸಿಗೆ ಥಕ್ಕನೆ ಹೊಳೆಯಿತು (ಏಧಿವ್ಯ. ೧೨೬) ; ಒಂದೆರಡು ಸಲ ನನ್ನಿಂದ ಬಾತಮಿಯನ್ನು ಹೊರಡಿಸುವ ಬೇತಿನಿಂದ . . . ಕೇಳಿ ನೋಡಿದ್ದ (ದೀಶಹ. II. ೧೪). ೨. ಬೇಹು ; ಗೂಢಚರ್ಯೆ : ಇವರನ್ನು ನವಾಬರ ಕಡೆ ಬಾತಮಿ ಕುದುರೆಯವರು ಹಿಡಿದು ಹೈದರಲ್ಲಿಯ ಸಮೀಪಕ್ಕೆ ಕರೆದು ತಂದರು (ಚತ್ರಪಾ. ೮೬). **ಬಾತ್ಮಿ :** ೧. ತೀರ ತಾಜಾ ಬಾತ್ಮಿ ಯಾವುದರಲ್ಲಿ ಇದೆ ? (ಗಾಳಿಪ. ೩೬). **ಬಾತ್ಮೆ :** ೨. ದುಷ್ಮಾನರ ಲಷ್ಕರಿನ ಬಾತ್ಮೆ ಸಮಾಚಾರ ತರಿಸಿಕೊಡಬೇಕು (ರಾಜೇಂದ್ರ. ೧೬೦). [←ಮರಾ. ಬಾತಮೀ. / ಸಂ. ವಾರ್ತಾ ? ]

**ಬಾತಮೀದಾರ**, ಬಾತಮಿದಾರ, ಬಾತ್ಮಿದಾರ, ಬಾತ್ಮೀದಾರ (ನಾ). ೧. (ವರ್ತಮಾನಪತ್ರಿಕೆ ಮುಂತಾದುವುಗಳಿಗೆ) ಸುದ್ದಿ, ಸಮಾಚಾರಗಳನ್ನು ಸಂಗ್ರಹಿಸಿ ತಿಳಿಸುವವನು ; ಸುದ್ದಿಗಾರ ; ವರದಿಗಾರ : ಎಲ್ಲ ಪತ್ರಿಕೆಗಳವರೂ, ಬೇರೆಬೇರೆ ಪ್ರದೇಶಗಳಲ್ಲಿ ಬಾತಮೀದಾರರನ್ನು ನಿಯಮಿಸಿರುತ್ತಾರೆ (ರೂಶಿ). ೨. ಬೇಹುಗಾರ ; ಗೂಢಚಾರ : "ಯಥಾರ್ಹಃ, ವರ್ಣಃ . . . ಗೂಢಪುರುಷಃ — ೭ ಬಾತಮೀದಾರನ ಹೆಸರುಗಳು, ಗೂಢಚಾರನು, ವೇಷಧಾರಿಯಾಗಿ ಕಪಟದಿಂದ ತನ್ನನ್ನು

ತಿಳಿಯುವಡಿಸದೇ ಹೊಂಚಿ ವಿಷಯವನ್ನು ತಿಳಿದು ತಂದರಿಕೆ ಮಾಡುವ ದೂತನು" (ಸಿದ್ಧಾಂತಿ. ೨೩೮). **ಬಾತಮಿದಾರ :** ೧. "(ಸಂಗತಿ) ಹೇಳುವವನು ; ವರ್ತಮಾನ ಕೊಡುವವನು ; ಬಾತಮಿದಾರ್" (Informant. ಇಂಕಿ). ೨. ಗೊಲ್ಲರವನು ದುರ್ಗಕ್ಕೆ ಹೋಗಿ ದಕ್ಷಿಣ ಪ್ರಾಂತದ ಬಾತಮಿದಾರನ ಸಮೇತ ದೊರೆಯ ಸನ್ನಿಧಾನದಲ್ಲಿ ಈ ಸಂಗತಿಯನ್ನು ಅರಿಕೆಮಾಡಿದನು (ಇತ್ಯಾ. ೬೩). **ಬಾತ್ಮಿದಾರ :** ೧. ಸಾಕ್ಷಿಗಳು ಬಾತ್ಮಿದಾರರು ಎಲ್ಲಾ ಬಂದಿದ್ದಾರೋ ? (ವೀರಹೋ. ೫೦); ಪತ್ರಿಕಾಬಾತ್ಮಿದಾರನ ಅಸೂಯೆಯಿಂದ ಆ ವಿಷಯವು ಬರಲಿಲ್ಲವೆಂದು ಸಮಾಧಾನ ಮಾಡಿ, ರಾಯರ ಮನಸ್ಸಿಗೆ ಶಾಂತಿಯನ್ನುಂಟುಮಾಡಲು ಪ್ರಯತ್ನಿಸಿದೆ (ರಾಯರ. ೬೩). **ಬಾತ್ಮೀದಾರ:** ೧. ಒಬ್ಬೊಬ್ಬ ಸಂಪಾದಕರು ಬಗಲಿಗೆ ಇರಲಿ ; ಕೊನೆಗೆ ಬಾತ್ಮೀದಾರ (ಅರಳು. ೩೭೬-೯) ; ಅದರಲ್ಲಿ ಸಮ್ಮೂರಿನ ಬಾತ್ಮೀದಾರನಿಂದ, ರಾಯರ ವಿಷಯವಾಗಿ ಈ ರೀತಿ ಬರೆದಿತ್ತು (ರಾಯರ. ೬೩).

[ಬಾತಮಿ + — ದಾರ್$_4$ ./ ಮರಾ. ಬಾತಮೀದಾರ್]

**ಬಾತಾಖಾನಿ** 'ಬಾತಖಾನಿ' ನೋ.

**ಬಾತಾಳಿಸು** (ಕ್ರಿ). ಕಿರಿಚು; ಅರಚು ; ಒರಲು : ಕೇಳಿ ದಶಕಂಧರನು ಕೋಪ ಚಡಾಳಿಸಲು . . . ತೋಳುಬಲುಹನು ನೋಡೆನುತ ಬಾತಾಳಿಸಲು (ಅನಂರಾ. ೧-೧೦-೨೦); ತೊಡಕೆ ಕಾದುವ ಸುಭಟನಸುವನು ತುಡುಕೆನುತ ಬಾತಾಳಿಸುತಲಾ ವ್ಯೂಹನ ಭೂತಗಣಂಗಳೆಸಲುರುಬಿದರು ಕಪಿವರರು (ಅನಂರಾ. ೬-೧೦-೩೨). [ ← ತೆಲು. ಬಾತಳಿಂಚು, ಬಾತಲಿಂಚು]

**ಬಾತು$_1$** 'ಬಾ$_1$' ಪರಾ.

**ಬಾತು$_2$** (ನಾ). ಊತ ; ಬಾವು : ಉಡಿಯಿಂದ ಮೇಲೆ ಬಾತು ಉಂಟಾಗಿ ಹಣ . . . ಅಪಾನಪ್ರದೇಶ, ಗುಹ್ಯಪ್ರದೇಶಗಳಲ್ಲಿ ಬಾತುವುಂಟಾಗಿ ಇಹಣ . . . ಈ ರೀತಿಯುಳ್ಳಿರಲು ಆತನು ಸರ್ವಥಾ ಜೀವಿಸುವುದಿಲ್ಲ (ವೈದ್ಯಸಾ. I, ೩೩೩). 'ಬಾತುಗಾಲು' ಪರಾ.

[< ಬಾ$_1$ ./ ತುಳು. ಬಾತ್ = ಊದು]

**ಬಾತು$_3$** (ನಾ). ಒಂದು ಬಗೆಯ ನೀರುಹಕ್ಕಿ : "ಬಾತೆನೆ ತಾಂ ಕೋಳಿಯೊಂಬುದರ್ಥಂ" (ಶಾರ. ೨೮); ಚಿಮ್ಮುವ ಬಾಲದ ಬಾತುಗಳು . . . ಉಷ್ಣಕಾಲಿನ ಬಾತುಗಳೂ ಈ ಗುಂಪಿಗೆ ಸೇರುವುವು (ಕನಕೋ. XII. ೨೫).

[ ←ಅರ. ಬತ್; ಪಾರ. ಬತಕ್; ಹಿಂ. ಬತ್, ಬತಕ್, ಬತಖ್; ಮರಾ. ಬತಕ್, ಬದಕ್. / ತಮಿ. ವಾತ್ತು; ಮಲ. ಬಾತ್ತು; ತುಳು. ಬಾತ್, ಬತ್ತು; ಕೊಡ. ಬಾತ್; ತೆಲು. ಬಾತು. /ಪೋರ್ಚ್. ಪಾತೊ]

**ಬಾತುಕೋಳಿ** 'ಬಾತುಗೋಳಿ' ನೋ.

**ಬಾತುಗಾಲು** (ನಾ). ಊತ ಬಂದ ಕಾಲು ; ಬಾವಿನಿಂದ ಕೂಡಿರುವ ಕಾಲು : ನಿತ್ರಾಣವಾದ ಬಿಳಿಯ ಕುದುರೆಯೂ ಬಾತುಗಾಲಿನ ಬಡಕಲ ಕುದುರೆಯೂ . . . ನಿಧಾನವಾಗಿ ಸಾಗುತ್ತಿದ್ದುದರಿಂದ ಅವನು ಅಪರಿಚಿತ ವ್ಯಕ್ತಿಯನ್ನು ಮಾತಾಡಿಸಬೇಕೆಂದು ಕಾತರನಾಗಿದ್ದನು (ಪುನರು. ೨೬೩).

[ಬಾತು$_2$ + ಕಾಲು$_1$ (< ಕಾಲ್$_1$)]

**ಬಾತುಗೋಳಿ,** ಬಾತುಕೋಳಿ (ನಾ). = ಬಾತು$_3$ : ಬಾತುಗೋಳಿ ಹಾಂಗ ಬಾತಕದ ಜಾತ್ಕಲ್ಲ (ಮೂರ್ತಿಗಳು. ೯೬-೦೩). **ಬಾತುಕೋಳಿ :** "ಕಾರಂಡ, ಕಾರಂಡವ — ಕಾಗೆಯ ಹಾಗೆ ಇರುವದೊಂದು ಹಕ್ಕಿ, ಬಾತುಕೋಳಿ" (ಗಂಗಾಮ. ೬೦); ಯಂತ್ರದ ಬಳಿಯ ನೀರಿನಿಂದ ಬಾತು ಕೋಳಿಗಳ ಕೇಕಾರವ ಕೇಳಿಸುತ್ತಿತ್ತು (ಪುನರು. ೨೯೭).

[ಬಾತು$_3$ + ಕೋಳಿ$_1$ (< ಕೋಟ್$_1$) ]

**ಬಾತೆ** 'ಬಾಚಿತ್ತಿ' ನೋ.

**ಬಾತೆಗೇಡು** 'ಬಾರ್ತೆಗೇಡು' ನೋ.

**ಬಾತೆಗೇಡಿ** (ನಾ). ಬದುಕು ಕೆಟ್ಟವನು ; ಹಾಳಾದವನು : ಬಾತೆಗೇಡಿಗಳೆ ಮ್ಲೇಛೆಸಿತು ರೋಷವೆಲೆ ಪಾತಕರನಟ್ಟಿದಟ್ಟಿದು ಮಾಡಲೆಸಲೇಕೆ ಸಲೆ (ಶಾನಂಕ. ೪-೨೦೩).   [ಬಾತೆ (< ಬಾಚಿತ್ತಿ) + ಕೇಡಿ$_1$]

**ಬಾತ್ಮಿ** 'ಬಾತಮಿ' ನೋ.

**ಬಾತ್ಮಿದಾರ** 'ಬಾತಮೀದಾರ' ನೋ.

**ಬಾತ್ಮೀದಾರ** 'ಬಾತಮೀದಾರ' ನೋ.

**ಬಾತ್ಮೆ** 'ಬಾತಮಿ' ನೋ.

**ಬಾದಣ$_1$** 'ಬಾದವಣ' ನೋ.

**ಬಾದಣ$_2$** (ನಾ). ತಟ್ಟೆ; ತಳಿಗೆ : ದೇವವಿತತಿ ಚಂದಿರನ ಬಾದಣಕೆಟ್ ದಮೃತಸೇವನೆಯ ಮಾಡುತಿರೆಯೊಸರ್ದುದೋ ಎಂಬವೊಲು ಕಳಂಕಾಂಕ ನೆಸೆದಿರೆ ಜೊನ್ನಮುಟ್ ಪರ್ಬಿತು (ಸಿದ್ಧೇಶ್ವ. ೦೩-೨೦).  [< ಸಂ. ಭಾಜನ]

**ಬಾದಣಂಗೈಸು** (ಕ್ರಿ). ತೂತು ಬೀಳುವಂತೆ ಮಾಡು : ದನುಜೇಂದ್ರ ನಂಗವ ಬಾದಣಂಗೈಸಿದರು ಶಿವಶಿವ ಶೂಲ ಚಕ್ರದಲಿ (ಅಂಬಿಕಾ. ೪೧-೨೫).

[ಬಾದಣ$_1$ (< ಬಾದವಣ) + ಕೈಸು (<ಕೆಯ್ಸು) ]

**ಬಾದಣಗಂಡ** (ನಾ). ಬಿರುಕು ಬಿಟ್ಟ ಗಾಯದ ಮಾಂಸ : ಬಾಗಿ ಮುರಿದವುಡಿ ಕೆಡವುವ ಮೊಗು ಬಿಗಿದು ಬಾದಣಗಂಡವ ಒಡೆಕಾಟ್ ಓರಿ ಹಿಂಡುವ ಕಂಠ . . . ಮೆಟ್ಟಿಯೆ ಕರಿಗಳಂ ಕೆಡಹಿದುವು ಸಿಂಹಂಗಳು (ಹಕಾ. ೩-೩೭).   [ಬಾದಣ$_1$ (< ಬಾದವಣ) + ಕಂಡ$_1$]

**ಬಾದಣಗೊಟ್** (ಕ್ರಿ). ೧. ತೂತಾಗುವಂತೆ ಕೊರೆ; ರಂಧ್ರಮಾಡು : ನೀ ಬಟ್ಟೇಕೆ ಚುಚ್ಚುವೆ ಕಾಸಿ ಬಾದಣಗೊಟ್ಟಿದ ಘಾಯದಲಿ (ಕುಮಾರ. ೬-೩೯); ಬಾದಣಗೊಟ್ಟಿದು ಪಾತಾಳಕಿಳಿದು ಭೋಗಾಪತಿಯ ಮುತ್ತಿದರು (ಸಿದ್ಧೇಶ್ವ. ೪-೪೭). ೨. ರಂಧ್ರವಾಗು ; ತೂತಾಗು : ರಣದೊಳು ಖಾನಖಾನರ ಮೆಯ್ಗಳು ಬಾದಣಗೊಟ್ಟಿವು (ಕುಂರಾಸಾಂ. ೪೩-೪೭); ಇಭ ನಕ್ರಪತಿಗಳ ಪರಮಸತ್ಕೋತ್ಕರ್ಷವೆಂತುಟೊ ಗಿರಿ ಬರಿಯ ಧರೆ ದೆಸೆಗೆ ಬಾದಣಗೊಟ್ಟಿಯೆ ಪದಹತಿಗೆ (ಶಿವಾಗ. ೮-೩-೮).

[ಬಾದಣ$_1$ (< ಬಾದವಣ) + ಕೊಟ್$_1$]

**ಬಾದಣದಲೆ** (ನಾ). ತೂತು ಬಿದ್ದ ತಲೆ : ಸೂಕರನ ದಾಡೆಗಳಿಟ್ಟಿರ್ದಂಗದ ಬರಿಯ ಬಾದಣದಲೆಯ ಭಟರದೆ ದೇವ ನೋಡು (ತೊರವ. ೬-೨೦-೬೦).

[ಬಾದಣ$_1$ (< ಬಾದವಣ) + ತಲೆ$_1$]

**ಬಾದಣದೆಗೆ** (ಕ್ರಿ). ತೂತುಮಾಡು; ರಂಧ್ರವನ್ನು ಕೊರೆ : ಜೀವಂ ನೆಗೆದು ತಾಗಿ ನಡುನೆತ್ತಿಯಂ ಬಗಿದು ಬಾವಣದೆಗೆದು ಮೇಗಡರ್ದು ಗಗನಕ್ಕೆ ದಂಡಾಯುಮಾನದುರಿಯಾಗಿ ನೆಗೆಯಲ್ಕೆ (ಸಿದ್ಧರಾ. ೪-೩೫).

[ಬಾದಣ$_1$ (< ಬಾದವಣ) + ತೆಗೆ$_1$]

**ಬಾದಣವಾಗಿಲು** (ನಾ). ರಂಧ್ರದ ದ್ವಾರ; ಬಿಲದ ಬಾಯಿ : ಇಂದು ನಿನ್ನೈಶ್ವರ್ಯಲಕ್ಷ್ಮೀಕ್ಕಲಿದು ಭಂಡಾರಮಂದಿರವೊಗಲ್ಸಂಚೆ ಗಡ ಸಾರ್ಚಿರಲು ತಿರುಗುವಂದಗಂಡೊಳಹೊಗಿಸಲಭವ ನಿರ್ಮಿಸಿದ ಬಾದಣವಾಗಿಲದು ಕನ್ನವೆ (ಸಿಂಗಿರಾ. ೦೬-೦೬).

[ಬಾದಣ$_1$ (< ಬಾದವಣ) + ಬಾಗಿಲು (< ಬಾಗಿಲ್) ]

**ಬಾದಣಿಸು,** ಬಾದಳಿಸು (ಕ್ರಿ). ತೂತಾಗು ; ರಂಧ್ರವಾಗು : ಬಾದಣಿಸಿ ದೇಟುಗಳ ಬಾಯೊಳು ಕಾದ ಬಾರಂಗಿಗಳನಳಿಗೆ ಕೋದು ವಾಮ ದೊಳೆಯ್ದೆ ಹಿಡಿದರು ತೈಲಧಾರೆಗಳ (ಕುಮಾರ. ೩-೪೦). **ಬಾದಳಿಸು :** ಬಿಲ್ಲ ನಾರಿಯ ನೀವಿ ರ್ಷೋಗ್ಯೆಯುಲಬ್ಧಿ ತುಳುಕಿ ಮೇದಿನಿಯು ನಡುಗಲಚಲ ಗಳಲುಗೆ ಖಗರ ಹೃದಿ ಬಾದಳಿಸೆ (ಜನಮು. ೨೯-೦೩).

[ಬಾದಣ$_1$ (< ಬಾದವಣ) + — ಇಸು$_1$]

**ಬಾದಮಿ** 'ಬಾದುಂಬ್ಬೆ' ನೋ.

**ಬಾದಮ್ಮ** (ನಾ). ಒಬ್ಬಾತನ ಹೆಸರು: ಬಾಗುಗುಳಿಯ ಮಹಾಜನ ಅಯ್ನೂದಿಂಬರುಂ ಉಭಯಸಮ್ಮತದೊಳಿಟ್ಟು ಬಳಿಯರ ಬಾದಮ್ಮಗೆ ಬೂದಗೂಟನಿತ್ತೂರ್ (ಕ್ಲಾಇ. IX–i, ೩೯–೯; ಸು. 10ನೆಯ ಶಶ).

[? + ಅಮ್ಮ$_1$]

**ಬಾದರ್** 'ಬಹಾದುರ್' ನೋ.

**ಬಾದರ** (ಗು). ೧. ಎಲಚಿಮರಕ್ಕೆ ಸಂಬಂಧಿಸಿದ. ೨. ಹತ್ತಿಯಿಂದ ಮಾಡಿದ. ೩. ಒರಟಾದ; ನಯವಿಲ್ಲದ. (ನಾ). ೪. ಹತ್ತಿ ಮತ್ತು ಅದರ ಗಿಡ; ಅರಳೆ: "ಬಾದರಂ ಪಿಚವ್ಯಾಖ್ಯಮುಱಿಗೆ ಪಿಚು ಕಾರ್ಪಾಸಂ" (ವಸ್ತುಕೋ. ೩೯–೩೦). ೫. ಹತ್ತಿಯಿಂದ ತಯಾರಿಸಿದ ಬಟ್ಟೆ: "ಕಾರ್ಪಾಸಂ, ಬಾದರಂ–ಈ ೨ ಹತ್ತಿಯಿಂದಾದ ಸೀರೆ" (ಹಣಾಯು. ೯೦–೩೯೬). ೬. ಎಲಚಿಗಿಡ ಮತ್ತು ಅದರ ಹಣ್ಣು; ಬೋರೆ. ೭. ನೀರು; ಜಲ. ೮. [ಜೈನ] ಸೂಕ್ಷ್ಮವಲ್ಲದುದು; ಸ್ಥೂಲವಾದುದು: ಸುಗಮಸಂಜ್ವಲನದ ಮುನಿಸೊಮ್ಮೆ ಹಮ್ಮೊಮ್ಮೆ ತೆಗೆದುಹೋದುವು ಮುಂದೆ ಲೋಭ ಏಗೆ ಸೂಕ್ಷ್ಮದೊಳು ನಿಂದುದದಜಿ ಬಾದರಗೂಡಿ ಜಗುಳಿತು ಮಾಯೆ ಲೆಕ್ಕಿಸದೆ (ಶರಸ. ೩೯–೬೩). 'ಬಾದರರೂಪ' ಪರಾ. ೯. (ಹಾಲು, ನೀರು ಇತ್ಯಾದಿ ದ್ರವ ಪದಾರ್ಥಗಳಂತೆ) ವಿಭಾಗ ಹೊಂದಿದ ಮೇಲೆ ಮೂರನೆಯ ವಸ್ತುವಿನ ಸಹಾಯವಿಲ್ಲದೆ ಏಕರೂಪವಾಗುವ ಪುದ್ಗಲಸ್ಕಂಧ: ಅಂತರ್ಮುಹೂರ್ತನಿರುದ್ಧಾಶೇಷಮನೋವಾಗ್ಬಾದರಕಾಯಯೋಗಸೂಕ್ಷ್ಮಕಾಯಯೋಗಪರಿಣತಂ (ಆದಿಪು. ೦೬–೯೯ ವ); ಬಾದರಸೂಕ್ಷ್ಮೈಕೇಂದ್ರಿಯ ದ್ವಿತ್ರಿಚತುರಿಂದ್ರಿಯಸಂಜ್ಞಾಸಂಜ್ಞಿಗಳು ಆದವು ಪರ್ಯಾಪ್ತಾಪರ್ಯಾಪ್ತದ ಭೇದದಿ ಜೀವಸಮಾಸೆ (ದ್ವಾದಶಾ. ೩–೩). ೧೦. ಜೀವಾದಿತತ್ತ್ವಗಳಲ್ಲಿ ವಿವಕ್ಷಿತವಾಗಿರುವ ಹದಿಮೂರು ಪ್ರಕೃತಿಗಳಲ್ಲಿ ಒಂದು: ಸ್ವಕೀಯಚರಮಸಮಯದೊಳನ್ಯತರವೇದನೀಯ . . . ಬಾದರ ಯಶಸ್ಕೀರ್ತಿರುಚ್ಚೈರ್ಗೋತ್ರತೀರ್ಥಕರನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಆದಿಪು. ೦೬–೯೯ ವ); ಚರಮ ಸಮಯದೊಳ್ ಪರಿಶಿಷ್ಟಾನ್ಯತರವೇದನೀಯ ಮನುಷ್ಯಾಯುರ್ಮನುಷ್ಯ ಗತಿ ಪಂಚೇಂದ್ರಿಯ ಜಾತ್ಯಾನುಪೂರ್ವೀತ್ರಸನಾಮಬಾದರಪರ್ಯಾಪ್ತಕ ಸುಭಗಾದೇಯಯಶಸ್ಕೀರ್ತಿ ತೀರ್ಥಂಕರನಾಮೋಚ್ಚೈರ್ಗೋತ್ರಂಗಳೆಂಬ ಪದಿಮೂಱುಂ ಪ್ರಕೃತಿಗಳುಮೊರ್ಮೆಯೆ ನಿರ್ಮೂಲಮಾಗೆ (ಶಂರಾಮಾ. ೦೩–೬೦ ವ). 'ಪ್ರಕೃತಿ' ಪರಾ. [ಸಂ.]

**ಬಾದರಕೃಷ್ಟಿ** (ನಾ). [ಜೈನ] "ಅನಿವೃತ್ತಿಕರಣಗುಣಸ್ಥಾನದಲ್ಲಿ ಸಂಜ್ವಲನಕ್ರೋಧ–ಮಾನ–ಮಾಯಾ–ಲೋಭಗಳ ಅನುಭಾಗಗಳನ್ನು ಕಡಿಮೆಮಾಡಿ ಸ್ಥೂಲಖಂಡ ಮಾಡುವುದು" (ಆದಿಪು. ೬೬ ಜೈನಪಾಂಭಾಷಿಕ ಶಬ್ದಕೋಶ): ಬಾದರಕೃಷ್ಟಿಕರಣಕಾಲಪ್ರಮಾಣಮೇನೆಂದೊಡೆ (ಕ್ಷಪಣ. ೨೩–೩೩). [ಸಂ.]

**ಬಾದರರೂಪ** (ನಾ). [ಜೈನ] ಸೂಕ್ಷ್ಮವಲ್ಲದ ರೂಪ; ಸ್ಥೂಲವಾದ ರೂಪ: ಪದಪು ಜಿನೇಂದ್ರಪಾದಕಮಲಂಗಳೊಳಾವಗಮಾಗೆ ಕರ್ಮಬಂಧದ ಬಿಗಿಪೊಯ್ಯನೊಯ್ಯನೆ ಸಡಿಲ್ದಿರೆ ಬಾದರರೂಪದಿಂದೆ ಕೊಲ್ಲದ ಪರನಾರಿಗಾಟಿಸದ ಕಳ್ಳದಸತ್ಯದೊಳೊಂದದಾಗಳುಂ ಕುದಿದಪತೃಷ್ಣೆಯುಂ ಕುಸಿದು ಮಾಣಿಸುವಯ್ದುಮಣುವ್ರತಂಗಳಂ . . . ತಾಳ್ದಿ (ಆದಿಪು. ೬–೭). [ಸಂ.]

**ಬಾದರಸೂಕ್ಷ್ಮ** (ನಾ). [ಜೈನ] "ಸ್ಥೂಲರೂಪವಾಗಿ ಕಂಡರೂ ಯಾವ ಪುದ್ಗಲಗಳನ್ನು ಛೇದಿಸಲಿಕ್ಕೂ ಅವುಗಳಲ್ಲಿ ಛಿದ್ರವನ್ನು ಮಾಡುವುದಕ್ಕೂ ಅನ್ಯಗಳನ್ನು ಹಿಡಿಯುವುದಕ್ಕೂ ಬರುವುದಿಲ್ಲವೋ ಅವು ಬಾದರಸೂಕ್ಷ್ಮಗಳು" (ಜೈಪರ. ೩೩). [ಸಂ.]

**ಬಾದರಸ್ವರೂಪ** (ನಾ). = ಬಾದರರೂಪ: ಅಲ್ಲಿ ಮೂಲಪ್ರಕೃತಿಗಳೆಂಟುಮಂ ಬಾದರಸ್ವರೂಪದಿಂ ನೂಱ ನಾಲ್ವತ್ತೆಂಟುವಿಕಲ್ಪಮಾದುತ್ತರ ಪ್ರಕೃತಿಗಳುಮನೊಳಕೊಂಡನುಬಂಧಿಸುವ ಬಂಧಂ ಪ್ರಕೃತಿಬಂಧಮೆಂಬುದಕ್ಕುಂ (ಸುಕುಮಾ. ೯–೨೭ ವ). [ಸಂ.]

**ಬಾದರಾಯಣ** (ನಾ). ಬ್ರಹ್ಮಸೂತ್ರ ಮತ್ತು ಮಹಾಭಾರತಗಳನ್ನು ಬರೆದವನೆಂದು ನಂಬಲಾದ ಒಬ್ಬ ಮಹರ್ಷಿ; ವ್ಯಾಸ; ಕೃಷ್ಣ ದ್ವೈಪಾಯನ; ❡ ಈ ಋಷಿಯು ಬದರೀವನದಲ್ಲಿ ಆಶ್ರಮವನ್ನು ಹೊಂದಿ ತಪಸ್ಸನ್ನಾಚರಿಸುತ್ತಿದ್ದ ಕಾರಣ ಈ ಹೆಸರು ಬಂದಿದೆಯೆಂಬ ನಂಬಿಕೆಯಿದೆ: ದ್ವಾಪಾರದಲಿ ಭಾವಜಜನಕನಾವಿರ್ಭವಿಸಿದ ತ್ರಿಜಗವಱಿಯಲು ಬಾದರಾಯಣನೆಂಬ ನಾಮದಲಿ (ಬಸಪು. ೩೯–೩೨); ಶಾಲಿಹೋತ್ರಾಶ್ರಮವನಸಿಬರು ಬೇಳುಕೊಂಡರು ಮತ್ತೆ ಕಂಡರು ಬಾದರಾಯಣನ (ಕುವ್ಯಾಅ. ೦೦–೦); ಹ್ಯಾಂಗೆ ನೀ ದಾಸನಾದಿ ಪ್ರಾಣಿ . . . ಬಾದರಾಯಣಕೃತ ಭಾಗವತ ಕೇಳದೆ (ಕನಕ. ೧೦೭–೯).

**ಬಾದರಾಯಣಸಂಬಂಧ** = (ಆಲಂ) ಕಲ್ಪಿತವಾದ ಅಥವಾ ಅತ್ಯಂತ ದೂರದ ಸಂಬಂಧ; ಬಹುದೂರದ ನಂಟುತನ: ಚೌಲಕರ್ಮಕ್ಕೂ ಸ್ತ್ರೀಯರ ನಗ್ನಚಿತ್ರಗಳಿಗೂ ಯಾವ ಬಾದರಾಯಣಸಂಬಂಧವೋ ಕಾಣೆ (ನಾಡಗೀ. ೨೯೬); ಅವರು ಮನೆ ಬಿಟ್ಟು ಹೋಗುವುದಕ್ಕೂ ನನ್ನ ವಿದ್ಯೆಗೂ ಇರುವ ಬಾದರಾಯಣಸಂಬಂಧವಾವರೂ ಯಾವುದು? (ಛಾರಥ. ೧೦೦). [ಸಂ.]

**ಬಾದರಾಯಣಸಿದ್ಧಾಂತ** (ನಾ). ಬಾದರಾಯಣಮಹರ್ಷಿಯಿಂದ ರಚಿತವಾದ ವೇದಾಂತಸೂಕ್ತಿ: ಈ ವಾದದಲ್ಲಿ . . . ಪುರುಷಾರ್ಥಕ್ಕೆ ಲೋಪವಿಲ್ಲವೆಂಬುದು ತಾತ್ಪರ್ಯವಾಗುತ್ತದೆ. ಬಾದರಾಯಣಸಿದ್ಧಾಂತದಲ್ಲೂ ಇದೇ ತಾತ್ಪರ್ಯವು (ಹಿಂದಶಾ. ೬೩). [ಸಂ.]

**ಬಾದರಾಯಣಸೂತ್ರ** (ನಾ). = ಬಾದರಾಯಣಸಿದ್ಧಾಂತ: ಈ ಬ್ರಹ್ಮಸೂತ್ರಕ್ಕೇ ಬಾದರಾಯಣಸೂತ್ರ, ವೇದಾಂತಸೂತ್ರ, ಶಾರೀರಕಮೀಮಾಂಸಾ, ಬ್ರಹ್ಮಮೀಮಾಂಸಾ ಎಂಬ ಹೆಸರುಗಳು ಬಂದಿವೆ (ಭಾರದ. ೨೭೦). [ಸಂ.]

**ಬಾದಲಿ$_1$**, ಬಾದ್ಲಿ, ಬಾಲ್ದಿ (ನಾ). (ನೀರನ್ನು ಸೇದಲು ಅಥವಾ ತೆಗೆದುಕೊಂಡು ಹೋಗಲು ಬಳಸುವ) ಒಂದು ಬಗೆಯ ಪಾತ್ರೆ: ಬಾದಲಿಯ ಮೇಲೆ ಬಾದಲಿ ಬಿಸಿನೀರು ತಾ, ತಣ್ಣೀರು ತಾ ಎಂದು ಇವನ ಆಜ್ಞೆ ಇರತಕ್ಕದ್ದೆ! (ಗಾಳಿಪ. ೪೩). **ಬಾದ್ಲಿ**: ಚಿನ್ನಿ . . . ಬಾದ್ಲಿಯನ್ನು ನೀರಲ್ಲಿ ಮುಣುಗಿಸಿದಳು (ಹೊಸಪ. ೬೩). **ಬಾಲ್ದಿ**: ಕೆಲವೇಳೆ ಬಾಲ್ದಿ ತೆಗೆದುಕೊಂಡು ಸಸಿಗಳಿಗೆ ನೀರು ಹಾಕುತ್ತಿದ್ದೆವು (ಕಂಠ. ೨೨); ಸೊಸೆ ಬಾಲ್ದಿಯಲ್ಲಿ ನೀರು ತಂದು, ಒದ್ದೆಬಟ್ಟೆಯಿಂದ ನೆಲವನ್ನೊರಸಿದಳು (ಬಾಳಗ. ೪೨).

[ ←ಹಿಂ. ಬಾಲಟೀ, ಬಾಲ್ಟೀ; ಮರಾ. ಬಾದಲೀ, ಬಾರಡೀ, ಬಾಲಟೀ, ಬಾಲಡೀ, ಬಾಲದೀ, ಬಾಲ್ಟೀ./ಇಂ. Bucket]

**ಬಾದಲಿ$_2$** (ಗು). ಜರತಾರಿಯ; ಕಲಾಬತ್ತಿನಿಂದ ಕೂಡಿದ: ಯಾರ ತಲೆಯ ಮೇಲೆ ನೋಡಿದರೂ ಗಾಂಧಿಟೊಪ್ಪಿಗೆಯ ಬದಲು 'ಬಾದಲಿ' 'ಕೋಷಾ' ಪಟಕೆಗಳೇ ಕಾಣಹತ್ತಿದವು (ವಿಜಿತ್ರೀ. ೪).

[ ← ಹಿಂ. ಬಾದಲಾ = ಜರತಾರಿ; ಮರಾ. ಬಾದಲೀ ]

**ಬಾದವಣ**, ಬಾದಣ$_1$, ಬಾದಳ (ನಾ). ೧. (ಮನೆಯಲ್ಲಿ ಗಾಳಿ. ಬೆಳಕು ಬರುವುದಕ್ಕಾಗಿ ಮಾಡಿರುವ) ಗವಾಕ್ಷಿ: "ಬಾದವಣಂ ವಾತಾಯನಂ ಗವಾಕ್ಷಂ ಜಾಳಂ" (ವಸ್ತುಕೋ. ೪೭–೦೦). ೨. ತೂತು; ರಂಧ್ರ: 'ಬಾದವಣಂಬೋಗು' ಪರಾ. **ಬಾದಣ$_1$**: ೧. ನೃಪತಿಯ ಪ್ರಾಸಾದದ ಶಿಖರದ ಮಧ್ಯಪ್ರದೇಶಮಂ ಬಾದಣ[ಪಾಠಾಂ. ವ]ದಂತಿರೆ ಛಿದ್ರಂ ಮಾಡಿ (ವಡ್ಡಾರಾ. ೦೬೩–೦೪); ಕುದುರೆ ಕಟ್ಟುವರ್ ಬಾದಣಮಂ ನೋಡಿದ

ರೆಂಬಂತೆ ನಾಣ್ನುಡಿಯಂ ನನ್ನಿ ಮಾಡಿ (ಧರ್ಮಾಮೃ. ೧೨-೬೩); ಸೂಳೆಗೇರಿಯೋವರಿಯ ಬಾದಣದಿನೊಗೆವ ಅಗುರುವಿನ ಕರ್ಬೊಗೆಯ ಸುರ್ಬಿನೊಳ್ ತಳ್ಪೊಯ್ದು (ಚಂದ್ರಪ್ರ. ೮-೯೬ ವ). ೨. ಬಸುರಿ ಬಾದಣಕೆ ಬಾಯ್ಬಿಟ್ಟು ದುಱುದುಱನೊಗುವ ಬಿಸಿನೆತ್ತರಂ ಕಂಡಿದು (ಹಕಾಕಾ. ೬-೧೬); ಜೋಡನೊಡೆಹಾಯ್ದೆಂಬು ಧರಣಿಯೊಳಾಡಿದವು ಗುಳ ಸರಿದ ಕರಿಗಳ ತೋಡಿ ನೆಟ್ಟವು ಬದ್ಧರಂಗಳ ಬಾದಣದ ಕೊಱೆದು (ಕುವ್ಯಾ.ಶ. ೮-೯೭); ಬೆಟ್ಟಕ್ಕೆ ಬಾದಣವ ತೆಗೆದಂತೆ ಘಾಯವಿರೆ (ಪ್ರಭುಲಿ. ೫-೬೯). **ಬಾದಳ:** ೧. ಆ ಮನೆಗೆ ಒಂಬತ್ತುಬಾಗಿಲು ಈಡ ಪಿಂಗಳವೆಂಬ ಗಾಳಿಯ ಬಾದಳ (ಗಣಕಾ. ೧೫-೫); ಅನುನಯದೆ ಹಣಿಹಣಿಕಿ ನೋಡುತ್ತ ಬಾದಳದಿ . . . ಕಳ್ಳರೆಸೆದರ್ ತಮದೊಳು (ಚಕುತ್. ೦-೬-೦೨). ೨. ಬಲುಗಜಕ್ಕೆ ಬಾದಳದಲ್ಲಿ ಹಾದಿಯುಂಟೆ (ಬಿಚ್ಚಿಸಾ. ೫. ೭೦-೬೬). [<ಸಂ. ವಾತಾಯನ]

**ಬಾದವಣಂಬೋಗು** (ಕ್ರಿ). ರಂಧ್ರವಾಗು ; ತೂತಾಗು : ಪೂಗಣೆಯಿಂ ಬಾದವಣಂಬೋಗಿರೆ ಹೃದಯಂ (ವರ್ಧಪು. ೬-೧೫).
[ಬಾದವಣ + ಪೋಗು₁ (< ಪೋ₁)]

**ಬಾದಶಹ** 'ಪಾತಶಹ' ನೋ.

**ಬಾದಶಾಹ** 'ಪಾತಶಹ' ನೋ.

**ಬಾದಷಹ** 'ಪಾತಶಹ' ನೋ.

**ಬಾದಷಹಜಾದೆ** (ನಾ). (ಮುಸಲ್ಮಾನ) ದೊರೆಯ ಮಗಳು ; ರಾಜಕುಮಾರಿ : ಬಾದಷಹಜಾದೆಯರು ಮದುವೆಯ ಕಟ್ಟಿಗೆ ಸಿಕ್ಕಿ ಸಂಕಟಪಡಬೇಕಾಗಿಲ್ಲ (ಐಂಕಿಮ. ೨೪೬). [←ಪಾರ. ಹಿಂ. ಬಾದಶಾಹ್‍ಜಾದೀ]

**ಬಾದಷಾಹಿ** 'ಪಾತಷಾಹಿ' ನೋ.

**ಬಾದಳ** ' ಬಾದವಣ ' ನೋ.

**ಬಾದಳಗಂಡಿ** (ನಾ). ಗವಾಕ್ಷಿಯ ಕಂಡಿ, ರಂಧ್ರ : ಬಾದಳಗಂಡಿಯೊಳಗೆ ಕಂಡನಸ್ತಾದ್ರಿಗಾದಿತ್ಯಬಿಂಬ ಸಾರ್ದುದನು (ಭರತ. ೧೧-೧೨೪).
[ಬಾದಳ (<ಬಾದವಣ) + ಕಂಡಿ₁]

**ಬಾದಳಗೊಯಿ** (ಕ್ರಿ). ತೂತಾಗುವಂತೆ ಕತ್ತರಿಸು ; ರಂಧ್ರವಾಗುವಂತೆ ಕೊಯ್ಯು : ಸುರಗಿಯಂ ಕಿತ್ತು ಹಱುಗೋಲ ತೊಗಲಂ ಹಱಿಯಲಿಱಿದು ಬಾದಳಗೊಯಿದುಯೆಲವೊ ನಿನ್ನಯ ಹರಿಯ ಚರಣದೊಳಗುದಿಸಿದುದು ದಿಟವಾದೊಡಿವರೆಲ್ಲರಂ ರಕ್ಷಿಸೆಂದೆನುತಿರೆ (ಗುರುಚಾ. ೦೫-೧೨).
[ಬಾದಳ (<ಬಾದವಣ) + ಕೊಯಿ (< ಕೊಯ್)]

**ಬಾದಳಿಸು** ' ಬಾದಣಿಸು ' ನೋ.

**ಬಾದಾಮಿ₁**, ಬಾದಾವಿ (ನಾ). (ಚಾಲುಕ್ಯರ ರಾಜಧಾನಿಯಾಗಿದ್ದ) ಒಂದು ಊರಿನ ಹೆಸರು : " ಬಾದಾಮಿ-ವಾತಾಪಿ = ಒಂದು ಪಟ್ಟಣ " (ತದ್ಭಕೋ. ೩೦) ; ತೊಱೆಗಲ್ಲು ಬಾದಾಮಿ ಮುದಿಗಲ್ಲು ಕೊಪಣದ ತೆಱಿನ ರಾಜ್ಯವೆಲ್ಲವನು ಇಱಿದು ಕೆಡಿಸುತ (ಕುಂರಾಸಾಂ. ೦೯-೯೮) ; ಶ್ರೀತಾಮರಗೆರೇ ರಾಜ್ಯೇ ಗ್ರಾಮಂ ಬಚ್ಚನಹಾಳುಕಂ ಗ್ರಾಮಂ ತಥ್ಯೈವ ಬಾದಾಮಿದೇಶೇ ಖ್ಯಾಡಾಭಿದಂ ಪರಂ (ಎಕ. III (R), ನಂಜನ. ೦೦೨-೨೦; 1576); ಕರ್ನಾಟಕದ ಶಾಸನಗಳಲ್ಲಿ ಕಂಡುಬರುವ ಸುಪ್ರಸಿದ್ಧ ಅತ್ಯಂತ ಪ್ರಾಚೀನ ಕೋಟೆಯೆಂದರೆ ಬಾದಾಮಿಯ ಕೋಟೆ (ಕಶಾಅ. ೨೯೬). **ಬಾದಾವಿ:** ಬಾದಾವಿಯ ಸಿದ್ಧಾಯದೊಳಗೆ ಹತು(ತ್ತು) ಗದ್ಯಾಣ ಪೊನ್ನು . . . ಬಿಟ್ಟರು (ಇಅ. VI. ೦೪೦-೨೫ ; 1139). P ಕ್ರಿ. ಶ. ಎರಡನೆಯ ಶತಮಾನದ ಟಾಲೆಮಿಯು ಬಾದಾಮಿಯನ್ನು 'ಬದಿಯ ಮೈಐ' (Badia maioi) ಎಂಬ ಹೆಸರಿನಿಂದ ಸೂಚಿಸಿರುವುದರಿಂದ. ಆರನೆಯ ಶತಮಾನದ ಜಯಸಿಂಹನಿಗಿಂತ ಹಿಂದೆಯೇ ಇದು ಪ್ರಮುಖಸ್ಥಳವಾಗಿದ್ದಿತೆಂದು ಎಇ. XXVII, ೨ನೆಯ ಶಾಸನದ ವಿವರಣೆಯಿಂದ ತಿಳಿದುಬರುತ್ತದೆ. [← ತಮಿ. ವಾತಾಪಿ. ವಾತಾವಿ]

**ಬಾದಾಮಿ₂**, ಬದಾಮಿ. ಬದಾಮು (ನಾ). ಒಂದು ಬಗೆಯ ಮರ ಮತ್ತು ಕಠಿಣವಾದ ಕವಚವುಳ್ಳ ಪೌಷ್ಟಿಕವಾದ ಅದರ ಬೀಜ : ಕತ್ತರಿಸಿದ ಕಬ್ಬು ಬಾದಾಮಿ ಬುಗುಂರಿಯು ಅತ್ತಿ ಪನ್ನೀರಳಿ ನೆನೆಗಡಲೆಯು (ಪಾಂಶೀ. ೦೪೯-೨); ಮುದಿಕರುಡಿ ಪೊಂಗೆಯಂ "ಬಾದಾಮಿ, ಕೋ" ಯೆನುತ ಪದುಳದಿಂ ಮೊಪ್ಪಿಗೆ ಕೊಡಲು ಸಿಹಿಯಹುದೆ? (ಮುಂಕಳ. ೬೬೩). **ಬದಾಮಿ :** ಬದಾಮಿಯ ಅಗಿಗಳನ್ನು ಒಂದು ವರ್ಷಪರಿಯಂತರ ಚನ್ನಾಗಿ ಬೆಳಸಿ ಬೇರೆ ಒಂದು ಕಡೆಗೆ ತಗ್ಗುಗಳನ್ನು ತಯಾರುಮಾಡಿ ಅಗಿಗಳನ್ನು ಕಿತ್ತಿ ಹಚ್ಚಬೇಕು (ಕೃಷಿಶ. ೦೫೦). **ಬದಾಮು :** ಈ ಹಡಗಗಳಲ್ಲಿ ಅರಬಸ್ತಾನದಿಂದ ಉತ್ತತ್ತಿ, ಖಜೂರ, ದಾಳಿಂಬ, ಬದಾಮು . . . ಪಿಸ್ತೆ ಮುಂತಾದ ಸರಕುಗಳು ಬರುತ್ತವೆ (ಕಭೂಗ. ೩೦೭); ಹೂಣಚಿ ಬದಾಮು ಮುಂತಾದ ಫಲವೃಕ್ಷಗಳು (ಮುಂಬಯಿ. ೬-೨೬೬).

[← ಪಾರ. ಬಾದಾಮ್; ಹಿಂ. ಬದಾಮ್, ಬಾದಾಮ್; ಮರಾ. ಬದಾಮ್, ಬಾದಾಮ್, ಬಾದಾಮಿಾ. / ತಮಿ. ವಾತುಮೈ; ಮಲ. ಬಾದಾಮ್; ತುಳು. ಬಾದಾಮ್, ಬದಾಮು; ತೆಲು. ಬಾದಮು, ಬಾದಾಮು, ಬಾದಾಮಮು]

**ಬಾದಾಮಿಮಾವು** (ನಾ). (ಬಾದಾಮಿಯ ಆಕಾರದ) ಒಂದು ಬಗೆಯ ಉತ್ತಮಜಾತಿಯ ಮಾವು : ಬಾದಾಮಿಮಾವು ಇತರ ಮಾವಿನ ಹಣ್ಣುಗಳಿಗಿಂತ ಸಿಹಿಯಾಗಿರುತ್ತದೆ (ರೂಢಿ). [ಬಾದಾಮಿ₂ + ಮಾವು]

**ಬಾದಾಮಿಹಲ್ವ** (ನಾ). ಬಾದಾಮಿಬೀಜದಿಂದ ತಯಾರಿಸುವ ಒಂದು ಬಗೆಯ ಸಿಹಿತಿಂಡಿ : ದುರೋಟ್, ಬಾದಾಮಿಹಲ್ವ . . . ಗರಮಾಗರಂ ಬಾದೂಷಾ _ ಏನು ಕೊಡಲಿ ಸಾರ್ (ಮುಹಾಂ. ೯೬); ಅವಲಕ್ಕಿ, ಬಾದಾಮಿಹಲ್ವ, ಕೋಸುಂಬರಿ (ರೂಕಸಂ. ೦೭).
[ ಬಾದಾಮಿ₂ + ಹಲ್ವ (< ಹಲ್ವಾ) ]

**ಬಾದಾಮಿಹಾಲು** (ನಾ). ಬಾದಾಮಿಯ ಪುಡಿಯನ್ನು ಮಿಶ್ರಮಾಡಿ ಕಾಯಿಸಿದ ಹಾಲು : ಮೇಜೊಂದರ ಮೇಲಿದ್ದ ಬಾದಾಮಿಹಾಲು ಅಲ್ಲೇ ಆರಿ ತಣ್ಣಗಾಗಿತ್ತು (ಕೀಲುಗೊಂ. ೯೬); ಗೋವಿಂದಪ್ಪನ ಬಾದಾಮಿಹಾಲು ಬಿಟ್ಟರೆ ಹೊಟ್ಟೆಗೆ ಮತ್ತೇನೂ ಬಿದ್ದಿರಲಿಲ್ಲ (ಮುಹಾಂ. ೩೦).
[ ಬಾದಾಮಿ₂ + ಹಾಲು₁ (<ಪಾಲ್₁) ]

**ಬಾದಾವಿ** ' ಬಾದಾಮಿ₁ ' ನೋ.

**ಬಾದಿ** (ನಾ). ಭಾರ ; ಹೊರೆ : ಬದುಕು ಬಾದಿ ಇದು ಅನಾದಿ ಹಿಡಿದ ಹಾದಿ ಲೇಸೋ (ಕನ್ನಿಂಕರ್ನ. ೪-೨೦) ; ಹೆಣ ಹೊರುವವನಿಗೆ ರೋಮ ಬಾದಿಯೇ ? (ಗಾದೆ). [←ತುಳು. ಬಾದಿ = ಭಾರವಾದ]

**ಬಾದಿಪೊಡ್ಡಿ** (ನಾ). ಒಬ್ಬಾಕೆಯ ಹೆಸರು : ಗೋಯಿನ್ದಪೊಡ್ಡಿಯ ಮಗಳು ಬಾದಿ(?ಳ)ಪೊಡ್ಡಿಯುಮ್ಬೊಳ್ . . . ಅಶ್ವರಥ[ಂ]ಗೊಟ್ಟೋಳ್ (ಇಅ. XI. ೦೨೫-೪ ; ಸು. 778). [ ಬಾದಿ₂ + ಪೊಡ್ಡಿ ]

**ಬಾದಿಶರ್ಮ** (ನಾ). ಒಬ್ಬಾತನ ಹೆಸರು: ಪುನ ಬಾದಿಶರ್ಮ್ಮನಾ ಏಕ್ಕಂಶಃ (ಇಅ. VII. ೦೫೦-೩೩ ; 668). [ಬಾದಿ₂ + ಶರ್ಮ]

**ಬಾದು₁**, ವಾದು (ನಾ). ೧. ಮಾತು ; ನುಡಿ : ಬಾದೇನಾ ಮದೀಯ ಕರ್ಮಫಳೋದಿತಸಂತಾಪರೂಪಪಾಪಕಳಾಪಚ್ಛೇದನಕರಮಾಯ್ತು ಭವತ್ಪಾದಪ್ರಕ್ಷಾಳನೋದಕಂ ಮುನಿನಾಥಾ (ಶಂಶಕಾ. ೬-೦೩) ; ಆದರಿಸಿ ಭವ್ಯಜನಮಂ ಸೋದರರಿವರೆಂದು ತಮ್ಮ ಸುಕೃತದ ಫಲದೊಪಾದಿಯನೀವ ಜೈನರು ಬಾದಿನೊಳೇನನ್ಯಸಮಯದವರಿತ್ತಪರೆ (ಸಮುಕ. ೪-೬೬) ; ಓದಿನೊಳಂ ರೂಪಿನೊಳಂ ಬಾದೆಂ ನಮ್ಮೂರೋರ್ವ ಮುನಿಗಳವೋಲೀ ಮೇದಿನಿಯೊಳೊಳರೆ (ಧರ್ಮಾಮೃ. ೪-೦೦೬). ೨. ಚರ್ಚೆ; ತರ್ಕ; ವಾದ: ಬಾದಿನೊಳವೋದಿನೊಳಂ ವಿಬುಧಾಳಿಯಂ ತೊದಲ್ಮಾಡುವ ಕೀರವೀ ಪೊಸವಡಂಗಿಲೆಯೊಪ್ಪುವ ನಂದನಂಗಳೊಳು . . . ರಂಜಿಕುಂ (ಕಇ. IX-i,

೧೧೬ ೨೪ ; ಸು. 1067) : ತರ್ಕದೊಳ್ ಬಾದುಂ ಬರ್ಪಡಿಗುಟ್ಟಿ ಪೊಟ್ಟು ಪಡೆದೆಂ (ಸುಕುಮಾ. ೩-೯೩) : ಆದಿಯಾಗಿಪ್ಪುರ್ದಾರ್ಷತಸಮಯುಕ್ತ ಮೂಲ ಸಂಘಂ ಕೊಣ್ಡಕುನ್ದಾನ್ವಯಂ ಬಾದುವೇಡದಂ ಬಳಯಿಪುದಲ್ಲಿಯ ದೇಸಿಗ ಗಣದ ಪುಸ್ತಕಗಚ್ಛದ . . . ಗಂಗಬನಸೂಪತಿ (ಎಕ.11. ೬೩-೩೦ : 1118). 'ಬಾದುಗುಟ್ಟು'. 'ಬಾದುಗೆಯ್' ಪರಾ. ೩. ಭಾಷೆ ; ಶಪಥ : ಬಾದುಂಟೆಂದು ಪತ್ರನೆಯು ತಲೆಯುಮಂ ನೇರ್ದಾಗಳ್ (ಕಮಿತ. ೨೪೦ ಕ್ರಯೋ). ೪. ಜೊತೆ ; ಜೋಡಿ : ತಿಬಿಕಲ್ಲಾಡುವ ಬೊಟ್ಟು ಪೋರಿಸುವ ಸಂಡಂ ಪೊಪ್ಪು ಬಾದಿಂಗೆ ಕೈನಿಬಿದೆರ್ದಾಡುವ . . . ನಾನಾಕ್ರೀಡೆಯಿಂದಿ ರ್ವರುಂ ತಣಿಸುದು (ಸುಕುಮಾ. ೨-೬). 'ಬಾದುಗ್ಗೈ' ಪರಾ. ವಾದು : ೨. ಇಲ್ಲಿ ಪ್ರಸಾದಮಂ ಕುಡದಿರ್ದ ಬಳಿವಿಡಿದು ಅಲ್ಲಿ ಪ್ರಸಾದಮಂ ವಾದಿನಿಂದಂ ಪಡೆಮ . . . ಎನ್ನ ಪ್ರಸಾದಸಾಮರ್ಥ್ಯಮಂ ತೋಱುತಂ ಮನ್ನಣೆಯೊಳಿಲ್ಲೆಗೈತಪ್ಪುದು (ಬಸವ. ೦-೮೦). 'ವಾದುಗುಟ್ಟು' ಪರಾ. ೫. ಮೂದಲಿಕೆ ; ನಿಂದೆ: ಸೇದುಮೆರಳಿನ ತಿರುವಿನಂಬಿನ ವಾದಿನೆಸುಗೆಯ ಬಿರುದರಗ್ಗದ ಕೈದುಕಾಱರು ಕೆಣಕಿದಮರರ ಹೊಟ್ಟೆ ತೂಱಿದರು (ಕುಮ್ಮಾ. ೬-೨೬). [<ಸಂ. ವಾದ. / ತಮಿ. ವಾತು ; ತೆಲು. ವಾದು]

**ಬಾದು₂** (ನಾ). ೧. (ಉಕ) ವ್ಯರ್ಥವಾದುದು ; ನಿಷ್ಪ್ರಯೋಜಕ ವಾದುದು : ಈ ಹೆಣ್ಣುಮಕ್ಕಳ ಬುದ್ಧಿ ಅಂದರ ವ್ಯವಹಾರಕ್ಕ ಬಾದು (ನಡುಬು. ೫೬). ೨. (ಸಂಖ್ಯೆ, ಪಟ್ಟಿ ಮುಂತಾದುವುಗಳಿಂದ) ಕಳೆದುದು ; ವಜಾಮಾಡಿದುದು : (೯).

**ಬಾದಮಾಲು**=ವಿಕ್ರಯವಾಗದ ಉಳಿದ ಸರಕು ; ನಿಷ್ಪ್ರಯೋಜಕ ವಾದ ಮಾಲು : ಅಂಗಡಿಯಲ್ಲಿ ಉಳಿದ ಬಾದಮಾಲಿನ ಪ್ರಮಾಣ ದಿಂದ, ಆ ಅಂಗಡಿಗೆಂದು ಸರುಕಗಳನ್ನು ಕೊಳ್ಳುವವನ ದಡ್ಡತನ ಜಾಣತನಗಳನ್ನು ತಿಳಿದುಕೊಳ್ಳಬಹುದು (ತಕ್ಕಡಿ. ೦೨೯). **ಬಾದಾಗು**= ೧. ವ್ಯರ್ಥವಾಗು ; ನಿರರ್ಥಕವಾಗು : ಒಂದು ವರ್ಷಂತೂ ಬಾದಾತು. ಇನ್ನು ಮುಂದಿನ ವರುಷರ . . . ಪರೀಕ್ಷಾಕ ಕೂಡಪ (ಅನ್ನ. ೯೬). ೨. ಊನವಾಗು ; ವಿಕಲವಾಗು : ನಡುವಿನ ಸ್ಥಿತಿಯಲ್ಲಿ ಕಳವು ಹೆಚ್ಚಾಗಿ ಒಮ್ಮೊಮ್ಮೆ ರೋಗಿಯ ಯಾವುದಾದರೊಂದು ಅವಯವವೇ ಬಾದಾಗುತ್ತದೆ (ಗೃಹವೈ. ೯೬). ೩. ಶೂನ್ಯವಾಗು ; ತೆರವಾಗು : ಪೋಲಿಗಳೆಲ್ಲಾ ಬರಬರತಾ ಬಹಳ ಬಾದಾಗಲಿಕ್ಕೆ ಹತ್ಯಾವರೆಪಾ (ರಾಯ್ಚೂ. ೪೦). [← ಅರ. ಬಅದ್ ; ಹಿಂ. ಬಾದಿ; ಮರಾ. ಬಾದ್]

**ಬಾದುಂಬೆ** 'ಬಾದುಬ್ಬೆ' ನೋ.

**ಬಾದುಗುಟ್ಟು**, ವಾದುಗುಟ್ಟು (ಕ್ರಿ). ವಾದ ಮಾಡು ; ತರ್ಕಮಾಡು ; ಚರ್ಚಿಸು : ಪರಮನ ಪೋಲ್ವೆಗೆ ಬರ್ಪಂತಿರೆ ತನ್ನೊಳ್ ಬಾದುಗುಟ್ಟಿ ಸುರಡಿಂಭರ್ ಬಿತ್ತರಿಸಿದ ವಿಕ್ರಿಯೆಯೊಳ್ಪಂತಿರೆ ಸಹಜಾತಿಶಯದಿಂದೆ ಸೊಬಗಂ ಸೋಲ್ವರ್ (ಅನಂಪು. ೬-೦೦). **ವಾದುಗುಟ್ಟು** : ವಾದುಗುಟ್ಟ ನಶೇಷಶಾಸ್ತ್ರವನಾದರಿಸನು . . . ವೈಯಾಕರಣನವನು (ಶಿಭಾಗ. ೫-೪-೩೦); ವಾದುಗುಟ್ಟದೆ ಕೊಡು ಮಗನೆ (ಶಿಭಾಗ. ೯-೨-೯೩). [ಬಾದು₁ + ಕುಟ್ಟು₁]

**ಬಾದುಗೆಯ್**, ಬಾದುಗ್ಗೈ, ವಾದುಗೆಯ್ (ಕ್ರಿ). ೧. =ಬಾದುಗುಟ್ಟು : ಇರ್ವರುಮೊಂದುದಿವಸಮಜಿತಂಜಯನೊಡನೆ ಪೋಗಿ ತತ್ಪುರೋಪ ವನದೊಳಿರ್ದ ಮತಿಸಾಗರಮುನಿಪತಿಯೊಳ್ ಬಾದುಗೆಯ್ದು (ಅಂಪು. ೩-೬೩ ವ) ; ಬಿಡೆ ಬಾದುಗೆಯ್ದೊಡರಿಸುವ ತಮ್ಮ ಕಡುಪಿಂದೆ . . . ಹಾಸ ಬೀಭತ್ಸಾದಿ ನಾನಾರಸಂಗಳಿಂದೊಂದಿದ ಜರದ್ದ್ರವಿಳಧಾರ್ಮಿಕಜನಂಗಳಿಂ (ಕಾದಂಬ. ೨೩೦); ಎಕ್ಕಿಯ ಬೇರ್ . . . ಅರೆದು ಲೇಪಿಸೆ ವೃಶ್ಚಿಕಮೂಱಿ ದೊಂದು ತಾಣಕ್ಕೆ ಬಟಿಕ್ಕಮುಗ್ರುಮೆನಿಸಿರ್ಪ ವಿಷಂ ಕಿಡುಗುಂ ಜನಂಗ ಳೆಕ್ಕೆಗೆ ಬಾದುಗೆಯ್ದು ಕಿಮುವಂತಿರೆ ಲೋಕದ ಪಕ್ಷಪಾತದಿಂ (ಖಮದ. ೪೧-೬೨). **ಬಾದುಗ್ಗೈ** : ೨. ಜೊತೆಗೂಡು ; ಸೇರು : ಹೆಣೆದು ಕೊಳ್ಳು : ಅದು . . . ನೀಳ್ಪುವರಿದಡ್ಡಂಬೀಪ್ಪುಳಿಗೊಂಬುಗಳೊಳ್ ಬಾದುಗ್ಗೈದು ಬಳೆದು ಮುಗಿಲಂ ಮುಟ್ಟಿ ಮುಗುಳ್ವಂತೆ ನಸುಬಾಗಿ ನಿಂದ ಕೀಟಿಗ್ಗೊಂಬುಗಳೊಳಂ . . . ಸೊಗಯಿಸಿದುದು (ಲೀಲಾವ. ೬-೪೦ ವ). **ವಾದುಗೆಯ್** : ೧. ಸ್ಕಂದಕುಮಾರಮುನಿಯೊಡನೆ ವಾದುಗೆಯ್ದು ಸೋಲ್ದೊಡೆ (ವಡ್ಡಾರಾ. ೧೬೬-೦೨) ; ಶೂನ್ಯವಾದಿಗಳ್ . . . ಮತಿಸಾಗರ ಮುನಿಪತಿಯೊಳು ವಾದುಗೆಯ್ದು (ಜಾಫುಂಕ. ೨೨). [ಬಾದು₁ + ಕೆಯ್₁]

**ಬಾದುಗ್ಗೈ** 'ಬಾದುಗೆಯ್' ನೋ.

**ಬಾದುಬೆ** 'ಬಾದುಬ್ಬೆ' ನೋ.

**ಬಾದುಬ್ಬೆ**, ಬದುಬೆ, ಬಾದವಿ, ಬಾದುಂಬೆ, ಬಾದುಬೆ, ಬಾದುವೆ, ಬಾದುವೆ, ಬಾಳುಬೆ (ನಾ). ೧. ಒಂದು ಕ್ಷುದ್ರದೇವತೆಯ ಹೆಸರು : ಅದರ ಅತಿ ಪ್ರಾಚೀನರೂಪ ಕ್ರಿ. ಶ. ೮೭೨ರ ಶಾಸನದಲ್ಲಿರುವ ಬಾದುಬ್ಬೆ ಎಂಬುದು. ಕಾಲಕ್ರಮದಲ್ಲಿ ಇದರ ಬೆಳವಣಿಗೆ ಬಾದುಬ್ಬೆ > ಬಾದುಂಬೆ > ಬಾದುಬೆ, ಬಾದುವೆ > ಬಾದವಿ ಎಂದಿರುವಂತೆ ತೋರು ತ್ತದೆ. ಸಾಹಿತ್ಯದಲ್ಲಿ ಈ ಪದ ಹೆಚ್ಚಾಗಿ ಬಳಕೆಯಾಗಿಲ್ಲ (ಕಪ್ಪ. ೪೪). ೨. ವೈಶಾಖಮಾಸದ ಅಮಾವಾಸ್ಯೆಯಂದು ಆಚರಿಸುವ ಒಂದು ಹಬ್ಬ—ಉತ್ಸವ : ಅಂತಹ ಹಬ್ಬಗಳಲ್ಲಿ ಮುಖ್ಯವಾಗಿ ಮೂರು ಹಬ್ಬ ಗಳನ್ನು ಶಾಸನಗಳು ಹೆಸರಿಸಿವೆ—ಬಾದುಬ್ಬೆ, ದೀಪಾವಳಿ, ಕಾರ ಹುಣ್ಣಿವೆ. ಈ ಮೂರು ಹಬ್ಬಗಳು ಇಂದಿಗೂ ಉಳಿದುಕೊಂಡಿವೆ (ಕಶಾಅ. ೦೯೩). **ಬದುಬೆ** : ೨. ಬದುಬೆಯ ಅಮಾವಾಸೆಯಂದು ಸ್ವಸ್ತಿಶ್ರೀಮತು ದಣ್ಡ ನಾಯಕಂ . . . ವಿನಾಯಕಗ್ಗೆ ಬಿಟ್ಟ ಕರಿಯ ಕೆಯಿ (ಕಾಇ. VIII. ೩:೫೦ ; 1090). **ಬಾದವಿ**. **ಬಾದುಂಬೆ** : ೧. ಸಾಯಿರಖಂಡುಗವಂ ಬೆಳದಾಪೊಕ್ಕಲ ಮಗನದೊಂದು ಕಂಬಮನೊಯಿದಿಟ್ಟಾಪೂರಿನ ಬಾದುಂಬೆಗೆ ಸಾಯಿರಮುಂ ಬೆಳದನೆಂದು ನುಡಿವಮರ್ದೊಡರ್ (ಸಮಪ. ೯-೪೨); ಪೆಟಿಯಂ ಗೋಕುಳಮಂ ಗಿರಿಪ್ರಕರಮಂ ಬಾದುಂಬೆಯಂ ಕಾಂತಿಯಂ . . . ದೈವಂಗಳೆಂದಿಂತು ಕೂರ್ತೆಱಗುತ್ತಿರ್ಪವರೆಂತು ಮುಕ್ತಿವಡೆವರ್ (ಕಡಿತ. I. ೦೩೪ ತ್ರೈಲೋಕ್ಯಚೂಡಾಮಣಿಸ್ತೋತ್ರ) : ಬಾದುಂಬೆ ದೇಶ್ಯವೋ ಅನ್ಯದೇಶ್ಯವೋ ಎಂಬುದನ್ನು ನಿರ್ಣಯಿಸುವುದಕ್ಕೂ, ಅದು ಯಾವ ದೇವತೆಯೆಂಬುದಕ್ಕೂ ಇದುವರೆಗೆ ದೊರೆತಿರುವ ಸಾಕ್ಷ್ಯಗಳು ಸಾಲವು (ಕಪ್ಪ. ೫೩). ೨. ದೀಪಾವಳಿ ಬಾದುಂಬೆ ಕಾರ ಪುಣ್ಣಮೆಯೆಂಬೀ ಮಹಾಪರ್ವ್ವಗಳೊಳ್ (ಬೊಂಕಶಾ. ೦೯೩೪, ಹಾವೇಂ. ೬೦-೯೭ ; ?). ೩. ಬಾದುಂಬೆಯೆಂಬ ದೇವತೆಯ ವಿಗ್ರಹವಿರುವ ಒಂದು ಸ್ಥಳದ ಹೆಸರು (?) : ಬಳ್ಳಿಗೊಳನೆ ಮೇರೆ ಯಲ್ಲಿಂ ಪಡುವಲು ಬಾದುಂಬೆಯುನಿಂ ಬಡಗಲು ಪೂದೋಂಟ ಕಂಬ ನಾಲ್ವತ್ತುಮನಾ ದೇವರ ಪೂಜೆ ಪುನಸ್ಕಾರಕ್ಕಂ . . . ಜೀರ್ಣ್ನೋದ್ಧಾರಕ್ಕ ವೆಂದು ಕೊಟ್ಟರು (ಎಕ. VII. ಶಿಕಾಂ. ೧೨೫-೪೦ ; 1019) ; ಅಲ್ಲಿಯ ಬಾದುಂಬೆಯನಿಂ ಬಡಗಣ ಗದ್ದೆಕಟ್ಟು (ಎಇ XIV. ೨೬೩-೯೩ ; 1173). **ಬಾದುಬೆ** : ೧. ವಟವಾರವೆ ಬಾದುಬೆ ಶತ್ರುಸಾಲೆಯಂ ದೇವವಿನಿ ರ್ಮ್ಮಿತಂಗಳೆನೆ ಮಾಡಿಸಿ[ದೀ]ಶ್ವರನೇಂ ಕೃತಾರ್ಥನೋ (ಕಇ. V. ೨೦-೫೪ ; 1080) ; ಪಡುವ ಚಂದಣಗೇರಿಯೆಕ್ಕಸಂದಿಯಿಂ ಬಡಗದಾರಿಯಿಂ ಮೂಡಣ ಮನೆಯ ನಿವೇಶಣಮಂ ಬಾದುಬೆಯ ದೇಗುಲದಿಂ × × × (ಕಾಇ. XIV. ೦೨೯-೯೯ ; 1176) ; ಬನದಬ್ಬೆ ಬಳರಿ ಬಾದುಬೇ ಕಿನಿಸಂಬರಿ [ಪಾಠಾಂ. ಬಾದುಮೆ ಕಿನಿಸಂಬಲಿ, ಬಾದುಂಬೆ ಕಿನಿಸಂಬಲಿ] ಜಲದ ಜಕ್ಕಿ ಜಾತ್ರೆಯ ದೈವಂ ಮನೆದೈವಮೆಂಬಿವೆಲ್ಲಂ ಜನಭಕ್ತಂಗೆಡದ ಕಾಲ ಕಪ್ಪಂ ಕಪ್ಪಂ (ಕಸಾರ. ೪೬೯). ೨. ಬಲಂ ಗೊಣ್ಡು ಸಪ್ತಸ್ತು ಪೋದನೆಸಮೀ ಗ್ರಾಮಾಧಿಪಂ ಸಂದ ಬಾದುಬೆ ದೀಪಾವಳಿ ಕಾರ ಪುಣ್ನಮೆಯೆನಿಪ್ಪೀ ಮೂಱುಪರ್ವ್ವಂಗಳೊಳ್ (ಕಾಇ. XI-1. ೫೨-೬೬ ; 1007) ; ಬಾದುಬೆ ಕಾರ ಪುಣ್ಣಮಿ ದೀಪಾಳಿಗೆ ಮೂಱುಪರ್ವ್ವ

ದೊಳು ಪ್ರತ್ಯೇಕವೊನ್ದು ಗದ್ಯಾಣ (ಎಇ. XX, ೬-೩೩; 1012). **ಬಾದುಮೆ:** ೧. ಹರವಿಲ್ಲಿಕಾರ್ಜುನನಗಷ್ಟಪೂಜೆಯು ಕೊಟ್ಟು ಪರಿಸೂತ್ರದೊಳಗಿರ್ದ ಬಾದುಮೆ[ಪಾಠಾಂ. ದುಮಿ, ದುಪೆ, ಧುಮೆ]ಯು ಕಟ್ಟಿ . . . ಕೈಲಾಸಕ್ಕೆ ಹೋ.ಗಿ (ಸಿದ್ಧರಾ. ೬-೬೦); ಸೊನ್ನಲಿಗೆಯ ಮಲ್ಲಿಕಾರ್ಜುನದೇವಸ್ಥಾನದ ಒಳವಲಯದಲ್ಲಿ ("ಪರಿಸೂತ್ರ") ಬಾದುಮೆದೇವತೆ ಇದ್ದಳೆಂಬುದು ಇದರಿಂದ ತಿಳಿಯಬರುತ್ತದೆ (ಸಂಕೋಶ. ೦೩೩). **ಬಾದುವೆ:** ೧. ಕ್ರಿ. ಶ. ೧೨೦೩ರ ಶಾಸನದಲ್ಲಿ 'ಬಾದುವೆಯ ನಾಯಕ' ಎಂಬ ವ್ಯಕ್ತಿಯು ಹೆಸರಿದೆ . . . ಇಲ್ಲಿ ಬಾದುವೆದೇವತೆಯ ಹೆಸರನ್ನು ಕಾಣಬಹುದು (ಸಂಕೋಶ. ೦೩೬). ೪. ಬಾದುಬ್ಬೆಯೆಂಬ ದೇವತೆಯ ದೇವಸ್ಥಾನ : × × × ಕುಡಿಸುದೆ ಜೀಯ್ಯಂ ಅಯ್ದು ಬ್ರಹ್ಮಪುರಿಯ ಬಾ[ದು]ವೆಯ ಕಾಹಳಿಗಳ ಕೈಯಲು × × × ಪಂ ಪಾದಪ್ರಕ್ಷಾಲನಂ ಮಾಡಿ ಧಾರಾಪೂರ್ವ್ವಕವಾಗಿ ಬಿಟ್ಟರು (ಕರ್ನಾಇ. XV, ೬೨-೩೭; 1186). **ಬಾಳುಬೆ:** ೧. ಪಶ್ಚಿಮದೊಳ್ಪುಷ್ಕರಿಣಿ ವಾಯುವ್ಯದೊಳ್ಗೋಣೇಶ್ವರದೇವರ ತೋಂಟಂ ಉತ್ತರದೊಳ್ ಬಾಳುಬೆಯೇರಿ (ಎಕ. VIII, ಸಾಗರ. ೦೦೯-೬೦; 1042); ಸಾಗರತಾಲ್ಲೂಕಿನ ಶಾಸನವೊಂದರಲ್ಲಿ 'ಬಾಳುಬೆಯೇರಿ' ಎಂದಿದೆ. ಈ 'ಬಾಳುಬೆ' ಎಂಬುದು ಬಹುಶಃ 'ಬಾದುಬೆ' ಎಂದಿರಬೇಕು (ಸಂಕೋಶ. ೦೩೩).

**ಬಾದವಿಅವಮಾಸೆ** = ಬಾದುಬ್ಬೆಯ ಉತ್ಸವ ನಡೆಯುವ ವೈಶಾಖಮಾಸದ ಅಮಾವಾಸ್ಯೆ : ವೈಶಾಖಮಾಸದ ಅಮಾವಾಸ್ಯೆಗೆ 'ಬಾದವಿಅವಮಾಸೆ'ಯೆಂದು ಉತ್ತರಕರ್ನಾಟಕದ ರೂಢಿಯ ಹೆಸರು (ಕಶ್ವ.ಪ. ೯೯); ಬಾದವಿಅವಮಾಸೆಯಲ್ಲಿ ಬಾದಾವಿಯಲ್ಲಿ ಬನಶಂಕರಿಪೂಜೆ ನಡೆಯುತ್ತದೆ (ಕಶ್ವ.ಪ. ೩೦). **ಬಾದಮಿನ್ನೈವೇದ್ಯ**=ವೈಶಾಖದ ಅಮಾವಾಸ್ಯೆಯಂದು ಆಚರಿಸುವ ಬಾದುಬ್ಬೆಯ ಹಬ್ಬದಲ್ಲಿ ಮಾಡುವ ಎಡೆ: ನದಿಯಿಂದಲಾಗಲಿ ಹೊಲದಿಂದಲಾಗಲಿ ಐದು ಚಿಕ್ಕ ಕಲ್ಲುಗಳನ್ನು ಆಯ್ದು ತಂದು ... ಮನೆಯ ಯಜಮಾನ ಅವುಗಳನ್ನು ಪೂಜಿಸಿ ಹೂರಣದ ಹೋಳಿಗೆಯ ನೈವೇದ್ಯ ಮಾಡುವನು . . . ಪ್ರತ್ಯೇಕವಾದ ಎಡೆಯಲ್ಲಿ ಒಡಿಸುವ ಈ ನೈವೇದ್ಯವನ್ನು 'ಬಾದಮಿನ್ನೈವೇದ್ಯ' ಎಂದು ಹೇಳುವರು (ಸಂಕೋಶ. ೦೩೮). **ಬಾದುಂಬೆಯ ಕಟ್ಟೆ**=ಬಾದುಬ್ಬೆಯೆಂಬ ದೇವತೆಯ ಹೆಸರಿನಲ್ಲಿರುವ ಕೆರೆ (?): ಬಾದುಂಬೆಯ ಕಟ್ಟೆಯಿಂ ಮೂಡ ಹಿರಿಯೋಣಿಯಿಂ ಬಡಗ ಕೆಂಗಾಡು ಮತ್ತರೆರಡು (ಕರ್ನಾಇ. IX-i, ೩೦೯-೩೩; 1209). **ಬಾದುಬ್ಬೆಯ ಪರ್ವ, ಬಾದುಂಬೆಯ ಪರ್ವ**=ವೈಶಾಖದ ಅಮಾವಾಸ್ಯೆಯಂದು ಉತ್ತರಕರ್ನಾಟಕದಲ್ಲಿ ಆಚರಿಸುವ, ಬಾದುಬ್ಬೆಯೆಂಬ ದೇವತೆಯ ಒಂದು ಹಬ್ಬ : ಆ ನಗಿಸಿದ ಪಗರಣ ಗಂಗೆ ಪಿರಿದು ಕಸವರವಾನಿತ್ತೂನುದಿಂದಿತ್ತ ಬಾದುಬ್ಬೆ[ಪಾಠಾಂ. ಂಬೆ]ಯ ಪರ್ವವುಂ ಪಗರಣದಾಟಪಾಟಮುಮಾದುವು (ವಡ್ಡಾರಾ. ೦೦೯-೨೦); ಬಾದುಬ್ಬೆಯ ಪರ್ವ್ವದನ್ದು ಪೆರ್ಗ್ಗಡೆ ಗೊಪಗರಣದ ದ್ರವ್ಯಮೆಣ್ಣತ್ತು (ಕಾಇ. ೬೬-೦೮-೨೯; 932); 'ಬಾದುಂಬೆಯ ಪರ್ವ'ವೆಂದು ಶಾಸನಗಳಲ್ಲಿ ಹೇಳಿರುವ ಹಬ್ಬ ಈ ದೇವಿಯ ಜಾತ್ರೆಯ ಕಾಲವೆಂದು ತೋರುತ್ತದೆ (ಕಶ್ವ.ಪ. ೩೦). **ಬಾದುಬ್ಬೆಯ ಪಾಳು, ಬಾದುಂಬೆಯ ಪಾಳು**=ಬಾದುಬ್ಬೆಯೆಂಬ ದೇವತೆಯ ದೇವಸ್ಥಾನಕ್ಕೆ ಬಿಟ್ಟ ಭೂಮಿ,—ಜಮೀನು : ಶ್ರೀಮತ್ತತ್ಪುರುಷ ಪಣ್ಡಿತದೇವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಕಿಸುಕಾಡೆಪ್ಪತ್ತರ ಒಳಯ ಬಾದುಬ್ಬೆಯ ಪಾಳನವರ ವಿದ್ಯಾರ್ತ್ಥಿತಪೋಧನರ ಗ್ರಾಸಕ್ಕಂ ದೇವರ ಪೂಜೆಗಂ . . . ಶ್ರೀ ಬಲ್ಲವರಸರ್ಕ್ಕೊಟ್ಟರ್ (ಕರ್ನಾಇ. XI-i, ೬೦೬-೨೯; 1076); ಈ ದೇವಿಗಾಗಿ ಬಿಟ್ಟ ಭೂದತ್ತಿಗಳಿಗೆ 'ಬಾದುಂಬೆಯ ಪಾಳು' ಎಂಬ ಹೆಸರಿತ್ತೆಂದು ಊಹಿಸಬಹುದು (ಕಶ್ವ.ಪ. ೩೦). **ಬಾದುಬ್ಬೆಯಮಾವಾಸ್ಯೆ, ಬಾದಮಿಅಮಾವಾಸ್ಯೆ, ಬಾದುಂಬೆಅಮಾವಾಸ್ಯೆ, ಬಾದುಂಬೆಯಮಾವಾಸ್ಯೆ** = ಬಾದವಿಅಮವಾಸೆ : ಜಯಸಂವತ್ಸರದ ಬಾದುಬ್ಬೆಯಮಾವಾಸ್ಯೆ ಸೂರ್ಯ್ಯಗ್ರಹಣದನ್ದು . . . ಶ್ರೀಖಣ್ಡಕ್ಕಂ ಧೂಪಕ್ಕಂ ಮೊದಲ್ಗೊಟ್ಟ ಗದ್ಯಾಣಂ ಪದಿನೈಯ್ದು (ಕರ್ನಾಇ. XI-i, ೬೨-೩೦; 1054); ಈಗಲೂ ಆ ಅಮಾವಾಸ್ಯೆಯನ್ನು 'ಬಾದಮಿಅಮಾವಾಸ್ಯೆ' ಎಂದು ಕರೆಯುತ್ತಿರುವುದು, ಆ ದಿನ ಬನಶಂಕರಿಗೆ ವಿಶೇಷಪೂಜೆ ನಡೆಯುವುದು—ಇವೆಲ್ಲಾ ಬನಶಂಕರಿ (=ಬನದಬ್ಬೆ) ಮತ್ತು ಬಾದುಬ್ಬೆ ಒಂದೇ ಎಂಬುದನ್ನು ಸೂಚಿಸುವುದಿಲ್ಲವೇ ? (ಸಂಕೋಶ. ೦೩೯); ವೈಶಾಖ ಬಹುಳಅಮಾವಾಸ್ಯೆಯನ್ನು ಬಾದುವೆ, ಬಾದುಂಬೆಅಮಾವಾಸ್ಯೆ ಯೆನ್ನುವರು. ಈ ಅಮಾವಾಸ್ಯೆಯ ದಿವಸ ಬಾದಾಮಿಯ ಬನಶಂಕರಿಯ ಉತ್ಸವ ನಡೆಯುತ್ತದೆ (ಶಾಪಪ್ರ. ೯೬); ಬಾದುಂಬೆಯಮಾವಾಸ್ಯೆಯಾದಿ ವಾರಂ ಸೂರ್ಯ್ಯಗ್ರಹಣದಂದು . . . ಎಲೆಯ ಪೇಜ಼ಿನ ಸಂಕಮಂ ದೇವಸಿಂಗಜೀಯರ ಪುತ್ರಂ ನೀಲೇಶ್ವರಪಣ್ಡಿತದೇವರ ಕಾಲಂ ಕರ್ಚ್ಚಿ ಧಾರಾಪೂರ್ಬ್ಬಕ(ಂ)ಮ್ಮಾಡಿ ಕೊಟ್ಟಂ (ಕರ್ನಾಇ. IX-i, ೦೯೯-೨೦; 1119). **ಬಾದುಬ್ಬೆಯ ಹಬ್ಬ**=ಬಾದುಬ್ಬೆಯ ಪರ್ವ : ಬಾದುಬ್ಬೆಯ ಹಬ್ಬವು ಮೂಲತಃ ಜೈನರ ಹಬ್ಬ ಎಂದು ಸಾಧಿಸುವ ಪ್ರಯತ್ನವಿದೆ. ಆದರೆ ನಮಗೆ ಮುಖ್ಯವಾದದ್ದು ಈಗಿನ ರಂಜಾನ್ ಹಬ್ಬದಲ್ಲಿನಂತೆ ಬಾದುಬ್ಬೆಯ ಹಬ್ಬದಲ್ಲಿಯೂ ವೇಷಗಳನ್ನು ಕಟ್ಟುತ್ತಿದ್ದರು ಎಂಬುದು (ಸಂಕೋಶ. ೦೩೩). **ಬಾದುಮೆಯ ಮದುವೆ**=ಬಾದುಬ್ಬೆಯೆಂಬ ದೇವತೆಯ ಮದುವೆ; ಅಸಂಭವವಾದುದು : ಗೀಜಗನ ಗೂಡು ಕೋಡಗದಣಲ ಸಂಚ ಬಾದುಮೆಯ ಮದುವೆ ಬಾವುಲ ಬಿದ್ದಿನಂತೆ ಜೂಜುಗಾಜಿನ ಮಾತು ಬೀದಿಯ ಗುಂಡನ ಸೊಬಗು ಒಡನೊಳಗಗೆಯ ಹೊಯ್ದಂತೆ (ಬಸಪ. ೬೩೬); 'ಬಾದುಮೆಯ ಮದುವೆ' ಎಂಬುದು 'ಗಣಪತಿಯ ಮದುವೆ' ಎಂಬ ಉಕ್ತಿಗೆ ಸಮಾನವಾದುದು (ಸಂಕೋಶ. ೦೩೮). ಈ ಶಬ್ದದ ವ್ಯುತ್ಪತ್ತಿಯ ಬಗೆಗೆ ಬೇರೆಬೇರೆ ಊಹೆಗಳಿವೆ. ಶ್ರೀ ಪಿ. ಬಿ. ದೇಸಾಯಿಯವರು 'ವಸಂತಾಂಬೆ' ಎಂಬುದರಿಂದಲೂ ಶ್ರೀ ಡಿ. ಎಲ್. ನರಸಿಂಹಾಚಾರ್ ಅವರು 'ಭದ್ರಾಂಬೆ' ಎಂಬುದರಿಂದಲೂ ಮತ್ತು ಡಾ. ಎಂ. ಚಿದಾನಂದಮೂರ್ತಿಯವರು 'ಬನದಬ್ಬೆ' ಎಂಬುದರಿಂದಲೂ ಈ ಶಬ್ದವು ಬಂದಿರಬೇಕೆಂದು ಊಹಿಸಿದ್ದಾರೆ.

[ ? ]

**ಬಾದುಮಯ** 'ಬಾದುಮಯ್ಯ' ನೋ.

**ಬಾದುಮಯ್ಯ, ಬಾದುಮಯ** (ನಾ). ೧. ಒಂದು ದೇವತೆಯ ಹೆಸರು (?): ಅರಗಿನ ರೂಪನುರಿಯ ಕೊನೆ ಪತ್ತಿದಂತಾಗೆ ಬಾದುಮಯ್ಯನ ಮೆಯ್ಯಂ ಬಜಿಸಿಡಿಲು ಪೊಡೆದಂತಾಗೆ (ಕಂದಾರ. ಹ. ೯೦೩-೦೩); ನಮ್ಮ ದೇವರು ಮಾರಿ ಮಸಣಿ ಬೀರ ಮೈಲಾರ ಉಡಿಸಿಕಾರಿ ಬಾದುಮಯ್ಯ ವೀರನ ಬಿಡಲಾಟಿ (ಶೃರಸೂ. I. ೨೦೪). **ಬಾದುಮಯ** : ೨. ಒಬ್ಬಾತನ ಹೆಸರು (?) : ಅದಕೆ ಒಡೆಯ ಮಲೆಯರ ಪಾರಿಸಯಾ ಬಾದುಮಯಂಗೆ ಮತ್ತರು ೨ (ಕೊಲ್ಹಾಪು. ೩೬-೪೦; 1049).

[ಬಾದುಮೆ(<ಬಾದುಬ್ಬೆ) + ಅಯ್ಯ₁]

**ಬಾದುಮೆ** 'ಬಾದುಬ್ಬೆ' ನೋ.

**ಬಾದುರ** 'ಬಹಾದುರ್' ನೋ.

**ಬಾದುವೆ** 'ಬಾದುಬ್ಬೆ' ನೋ.

**ಬಾದುಶ** 'ಪಾತಶಹ' ನೋ.

**ಬಾದೂಷಾ** (ನಾ). ಒಂದು ಬಗೆಯ ಸಿಹಿತಿಂಡಿ : ಜಿಲೇಬಿ, ದಂರೋಟ್ . . . ಬಜ್ಜಿ, ಗರವಾಗರಂ ಬಾದೂಷಾ—ಏನು ಕೊಡಲಿ ಸಾರ್ ? (ಶುಹಾಂ. ೩೬). [← ಹಿಂ. ಬಾಲೂಸಾಹೀ, ಬಾಲೂಶಾಹೀ]

**ಬಾದೆಯು** (ನಾ). ಒಬ್ಬಾತನ ಹೆಸರು : ಶ್ರೀಗಚ್ಚಮಹಾಚಾರ್ಯ್ಯರಾ

ಮಗನ್ಪಾದೆಯನ್ನಿರಟ್ಟಿ ತುಱುಗೊಳೊಳ್ಕಾದಿ ತುಱುವನಿಕ್ಕಿಸಿ ಸುರಲೋಕದ ಭೋಗಿ ಆದನ್ (ಎಕ. IX, ಹೊಸಕೋ. ೭೪-೨; ಸು. 720).
[? + ಅಯು$_1$ (<ಅಯ್ಯ$_1$)]

**ಬಾದೆಯಹುಲ್ಲು** (ನಾ). ಒಂದು ಬಗೆಯ ಹುಲ್ಲು : ಮೂಡಲ ದೇಶಕ್ಕೆ ಹೋದ್ಯಲ್ಲೊ ಗೀಜುಗ ಬಾದೆಯಹುಲ್ಲ ತಂದ್ಯಲ್ಲೊ ಗೀಜುಗ (ಜಾಪದ. ೧೪). [? + ಹುಲ್ಲು (<ಪುಲ್)]

**ಬಾದೋವೋಜ** (ನಾ). ಒಬ್ಬಾತನ ಹೆಸರು : ಬಾದೋವೋಜ ಮಾಡಿದ (ಎಕ. VIII, ಸೊರಬ. ೯-೬; ಸು. 800). [? + ಓಜ$_1$ (<ಒವರ್ಝ)]

**ಬಾದ್ಲಿ** 'ಬಾದಲಿ$_1$' ನೋ.

**ಬಾಧ** (ನಾ). ೧. ನೋವು ; ವೇದನೆ. ೨. ಕಷ್ಟ ; ತೊಂದರೆ. ೩. ಹಿಂಸೆ; ಕಾಟ; ಕಿರುಕುಳ. ೪. ಕೆಡುಕು ; ಹಾನಿ. ೫. ಅಪಾಯ; ಆಪತ್ತು. ೬. ತಡೆ ; ಅಡ್ಡಿ. ೭. ವಿರೋಧ ; ಪ್ರತಿಷೇಧ. ೮. [ನ್ಯಾಯಶಾ] ಹೇತ್ವಾಭಾಸದಲ್ಲಿ ಹೇಳಿರುವ ವ್ಯಭಿಚಾರ, ವಿರುದ್ಧ, ಸತ್ಪ್ರತಿಪಕ್ಷ, ಅಸಿದ್ಧಿ ಮತ್ತು ಬಾಧ ಎಂಬ ಐದುಬಗೆಯ ದೋಷಗಳಲ್ಲಿ ಒಂದು : ಸವ್ಯಭಿಚಾರ ವಿರುದ್ಧ ಸತ್ಪ್ರತಿಪಕ್ಷ ಅಸಿದ್ಧಿ ಬಾಧಗಳೆಂಬ ಹೇತ್ವಾಭಾಸದೋಷಗಳಿಲ್ಲದಿರುವಿಕೆಯುಂ (ಪಂಚೀಕ. ೧೬); ಬಾಧ ಎಂದರೆ ಪ್ರಮಾಣಜ್ಞಾನದ ವಿಷಯವು ಅಸತ್ ಎಂದು ಸಿದ್ಧಿಸೋಣ (ಭಾತತ್ತ್ವ. ೩೨೩). ೯. ಮನುಷ್ಯನು ಆಚರಿಸಬೇಕಾದ ನಾಲ್ಕುಬಗೆಯ ಆಶ್ರಮಗಳ ವಿಷಯದಲ್ಲಿರುವ ಮೂರು ರೀತಿಯ ಮತಗಳಲ್ಲಿ ಒಂದು : ಆಶ್ರಮವಿಷಯದಲ್ಲಿ ಬಾಧ ವಿಕಲ್ಪ ಸಮುಚ್ಚಯವೆಂದು ಮೂರು ಮತಗಳಾದವು. ಬಾಧಪಕ್ಷವು ಜೈಮಿನಿ ಸಮ್ಮತವು (ಹಿಂದಶಾ. ೦೩೪). [ಸಂ.]

**ಬಾಧಕ** (ನಾ). ತೊಂದರೆ ; ಕಷ್ಟ : ಒಬ್ಬನಿಗೆ ತಲೆ ಸರಿಯಿಲ್ಲ ಅನ್ನುತ್ತಾರೆ. ಏನು ಬಾಧಕ ಅದರಿಂದ ? (ಋಷ್ಯಶೃ. ೨೪೦) ; ಅಳದಿದ್ದರೆ ಮಗುವಿನ ಶರೀರವೃದ್ಧಿಗೆ ಬಾಧಕವೆಂದು ವಿಕಾಸವಾದಿಗಳ ಮತ (ಶಿಪಾಶ್ಚ. ೦೬೦). [ಸಂ.]

**ಬಾಧಾಕರ** (ನಾ). ತೊಂದರೆಯನ್ನುಂಟುಮಾಡುವುದು ; ಉಪದ್ರವಕಾರಿಯಾದುದು : ದೃಷ್ಟಾದೃಷ್ಟಬಾಧಾಕರಮಿದುವೆ ಪರಪ್ರೇಯಸೀಪ್ರೇಮಂ (ಶಂಠಾಪಮ. ೦೦-೮೦). [ಸಂ.]

**ಬಾಧಿಸು** (ಕ್ರಿ). ೧. ಕ್ಲೇಶಪಡಿಸು ; ಸಂಕಟಪಡಿಸು : ಶೂಲೆ ಬಾಧಿಸುತಿಪ್ಪ ಸಂಕಟಕಾಱದಿಳೆಯೊಳು ದೊಪ್ಪದೊಪ್ಪನೆ ಕೆಡೆದು ಹೊರಳುತ ಮಿಗೆ ನರಳುತಿರಲು (ಬಸಪು. ೪೯-೨೬) ; ಪಾತಕದ್ರೋಹಿಗಳ ಮುಂದಲೆಯ ಒಡಿದೆಳೆದುಕೊಂಡೊಯ್ದು ಕೈಕಾಲ ಸಂದುಗಳ ಬಿಡಿಸಿ ಕೊಱದಿಱದರಿದು ಬಾಧಿಸುವುದು (ಶಂಪು. ೩೬-೪೦); ರಮಣೀಯವಾದ ಆ ಗಿರಿಯನ್ನು ನೋಡಿ ರಾಮನ ಮನಸ್ಸನ್ನು ಆ ವ್ಯಥೆ ಬಾಧಿಸುವುದು ನಿಂತುಹೋಯಿತಂತೆ (ಸಪಾಲೋ. ೦೦೧). ೨. ಪೀಡಿಸು ; ಹಿಂಸೆಮಾಡು : ಸಾಧುಗೆ ಸಾಧುಮಾಧೂ(ಧು)ರ್ಯ್ಯಗೆನ್ಗೆ(ಂಗೆ) ಮಾಧೂ(ಧು)ರ್ಯ್ಯಂ ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್ (ಇಕ. X, ೬೦-೩; 7ನೆಯ ಶತ); ಹೆಱರ ಬಾಧಿಸುವುದು ತನು ಕೆಡುವನ್ನಕ್ಕ ಮಾಣದು (ಬಸವ. ೦೦) ; ಬಾಧಿಸುವುದೀ ದೇಹಮಂ ನರೆ ತೆರೆಗಳಿನ್ನು (ಕೃಬಿಭಾ. ೦೦-೩೮). ೩. ನಿಗ್ರಹಗೊಳಿಸು ; ದಂಡಿಸು : ಸಾಧಿಸುವೊಡಮಸ್ತ್ರಚಯಮನಿನ್ನುಂ ತನುವಂ ಬಾಧಿಸು ತಪೋಗ್ನಿಯಿಂದಾರಾಧಿಸು ನೀಂ ಮಗನೆ ದುರಿತಹರನಂ ಹರನಂ (ಶಂಶಭಾ. ೬-೮).
[ಬಾಧೆ + – ಇಸು$_3$]

**ಬಾಧುರ** 'ಬಹಾದುರ್' ನೋ.

**ಬಾಧೆ** (ನಾ). ೧. ನೋವು ; ವೇದನೆ : "ಪೀಡಾ, ಬಾಧಾ . . . ಆಭೀಲಂ, ೯ ಸಾಮಾನ್ಯವಾಗಿ ದುಃಖದ ಹೆಸರುಗಳು" (ಸಿದ್ಧಾಂತಿ. ೬೩). ೨. ಹಿಂಸೆ; ಕಾಟ ; ಕಿರುಕುಳ : ಇಂಚೆಯ ಪಸವಿನ ಬಱದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಪಿಡಿವೊಲಾದುವಾ ನಾಡೂರ್ಗಳ್ (ಶಂಶಭಾ. ೬-೩೦) ; ಜನವೆಲ್ಲ . . . ದೇಶದೊಳಗಾದ ಖಗಮೃಗದ ಬಾಧೆಯನು ಧರಣೀಶನೆನಿಸುವ ಹರಿಶ್ಚಂದ್ರರಾಯಂಗೆ ತವಮ್ಮಾಸಱಿವಂತೆ ಬಿನ್ನೈಸುತ್ತ ಕೈಮುಗಿಯುತಿರ್ದರು (ಹಶಕಾ. ೩-೬೮); ಇನ್ನು ಕೆಲವರು ಇದು ಪಿಶಾಚಿಯ ಬಾಧೆಯೆಂದೂ ಹೇಳತೊಡಗಿದರು (ಕಾಊರ. ೦೪ ಕಱಾಸಾರ). ೩. ಅಪಾಯ ; ಆಪತ್ತು. ೪. ನಿಷೇಧ ; ನಿರೋಧ : "ಆಪತ್ತಿನೊಳು ನಿಷೇಧದೆ ಬಾಧೆಯೆಂದೆಂಬುದು" (ಋಂಗಣ. ೦೪೩-೨೩). ೫. ಅಡಚಣೆ ; ಅಡ್ಡಿ. ೬. [ನ್ಯಾಯಶಾ] ವಾದದಿಂದ ಖಂಡಿಸುವಿಕೆ ; ಆಕ್ಷೇಪಣೆ. [ಸಂ. ಬಾಧಾ]

**ಬಾಧೆಬಡಿಸು** (ಕ್ರಿ). ಸಂಕಟಪಡಿಸು ; ಹಿಂಸಿಸು : ಋಣವೆಂಬ ಸೂತಕವು ಬಹುಬಾಧೆಬಡಿಸುತಿದೆ ಗುಣನಿಧಿಯೆ ನೀ ಎನ್ನ ಕಡೆಹಾಯಿಸಯ್ಯ (ಪುರಂದ. ಧಾ. ೨-೨೦ ಪಲ್ಲವಿ). [ಬಾಧೆ + ಪಡಿಸು]

**ಬಾಧ್ಯ$_1$** (ಗು). ೧. ನೊಂದ ; ವೇದನೆಗೊಳಗಾದ. ೨. ಪೀಡೆಗೊಳಗಾದ : ಹಿಂಸೆಗೊಂಡ. ೩. ವಿರುದ್ಧವಾದ ; ಹೊಂದಿಕೆಯಾಗದ : ಪ್ರಕಟಂ ವಾರಿಧಿವೇಲೆ ವಾರ್ಧಿಗೆ ಜಲೌಘಸ್ಪರ್ಧೆಯೊಳ್ ಬಾಧ್ಯಬಾಧಕಭಾವಂ ನೆಗಟಲ್ಕೆ ನಿಲ್ವ ತೆಱದಿಂದೀ ಸೃಷ್ಟಿಗನ್ಯೋನ್ಯ ಸೈನಿಕಸಂಗ್ರಾಮದೆ ಬಾಧ್ಯಬಾಧತೆ ಪುಟ್ಟಲ್ ನಿಲ್ವನಾನಿಂತು ಸೃಷ್ಟಿ ಕರಂ ಪೆರ್ಚಿದೆ ದೇವ ತಾಳ್ದು ನಿಲಲಾಱೆಂ ತನ್ಮಹಾಭಾರಮಂ (ಜಗಪು. ೦-೩೦). ೪. ಪ್ರತಿಭಟಿಸಲು ಯೋಗ್ಯವಾದ ; ವಿರೋಧಿಸಲು ತಕ್ಕುದಾದ. ೫. ಅಸಂಬದ್ಧವಾದ ; ಅಸಂಗತವಾದ. [ಸಂ.]

**ಬಾಧ್ಯ$_2$** (ನಾ). ೧. (ಆಸ್ತಿಯ ಮೇಲಿರುವ) ಹಕ್ಕು. – ಸ್ವಾಮ್ಯ : ತಂದೆಯ ಆಸ್ತಿಯ ಮೇಲೆ ಮಗನಿಗೆ ಬಾಧ್ಯವುಂಟು (ಬೂಕ). ೨. ಕಟ್ಟು ; ಬಂಧನ ; ಸಂಬಂಧ : "ಬಧನಂ, ಬಧನೀಯಂ, ಬಧ್ಯಂ, ಬಾಧ್ಯಂ, ಈ ೪ ಕಟ್ಟು" (ಕಾಕಿಕ್ಯ. ೦೩೦). ೩. ಹಕ್ಕನ್ನು ಹೊಂದಿರುವ ವ್ಯಕ್ತಿ ; ಸ್ವಾಮ್ಯವನ್ನು ಪಡೆದಿರುವ ವ್ಯಕ್ತಿ : ಹ್ಯಾಗಾದರೂ ಹೆಣ್ಣುಮಕ್ಕಳು ನೆರಮನೆಗೆ ಬಾಧ್ಯರಾಗುವರು (ಕಜಾಕುಂ. IV, ೬). ೪. ಹೊಣೆಗಾರಿಕೆಯನ್ನು ಹೊಂದಿದ ವ್ಯಕ್ತಿ ; ಜವಾಬ್ದಾರ : ಮಂಡಲೇಶ್ವರರಾದ ಶ್ರೀರಂಗರಾಯರು ನಮ್ಮನ್ನು ರಕ್ಷಿಸಲು ಬಾಧ್ಯರಾಗಿದ್ದಾರೆ (ಶ್ರೀಜಾಮ. ೦೨೬). ೫. ಆಸ್ತಿ ; ಸ್ವತ್ತು : "ದಾಯ-ಬಾಧ್ಯ" (ಗಂಗಾಪು. ೦೬೩).

ಬಾಧ್ಯಪಡು = ಸಂಬಂಧಪಡು ; ನಂಟುತನವನ್ನು ಹೊಂದು : ಆಜಂಖಾನನೂ ಡಿಲ್ಲಿಯಲ್ಲಿಯೂ ಆಗ್ರಾದಲ್ಲಿಯೂ ಇದ್ದ ಉಮರಾಗಳೊಲುತ್ಫುಉನ್ನೀಸಗೆ ಬಹಳ ಬಾಧ್ಯಪಟ್ಟವರಾಗಿದ್ದರು (ಕಜಾಕುಂ. ೬೮).

[< ಸಂ. ಬಾಂಧವ್ಯ ? . / ತಮಿ. ಪಾತ್ತಿಯಮ್; ಮಲ. ಬಾಧ್ಯಮ್; ತುಳು. ಬಾಧ್ಯ = ಸಂಬಂಧಿಸಿದ; ತೆಲು. ಬಾಧ್ಯಮು]

**ಬಾಧ್ಯತನ** (ನಾ). ಒಡೆತನ ; ಹಕ್ಕು; ಅಧಿಕಾರ : ಸ್ವಾಮ್ಯ = ಬಾಧ್ಯತನ, ಒಡೆಯತನ (ಗಂಗಾಪು. ೩೪೪). [ಬಾಧ್ಯ$_2$ + –ತನ]

**ಬಾಧ್ಯತೆ** (ನಾ). ೧. ಸಂಬಂಧ ; ನಂಟುತನ : ಈ ಬಾಧ್ಯತೆಯನ್ನು ಪಂಡಿತರು ಅನುಗ್ರಹಿಸಬೇಕು (ಶಾಂತಲಾ. ೬೭). ೨. (ಆಸ್ತಿಯ ಮೇಲಿರುವ) ಹಕ್ಕು ; ಅಧಿಕಾರ : ರಾಜ್ಯದ ಮೇಲೆ ನ್ಯಾಯವಾಗಿದ್ದ ತನ್ನ ಬಾಧ್ಯತೆಯನ್ನು ಸ್ಥಿರಪಡಿಸಿಕೊಂಡನೆಂದೂ ವ್ಯಕ್ತವಾಗುತ್ತದೆ (ಕರ್ನಾಟ. ೦೩೬); ಲಾಜೆಯನ್ನು ಎತ್ತಿ ವಧುಗಳ ಬೊಗಸೆಗಳಿಗೆ ತುಂಬುವ ಬಾಧ್ಯತೆ ವಧುಗಳ ಸೋದರರಿಗೆ ಮಾತ್ರ ಸೇರಿದ್ದು (ಶಾಂತಲಾ. ೦೦೦). ೩. ಹಕ್ಕಿಗೆ ಒಳಗಾಗಿರುವುದು ; ಸ್ವಾಮ್ಯಕ್ಕೆ ಒಳಪಟ್ಟುದು : ಬಾಧ್ಯತೆಗೆ ಬಾಧ್ಯನಾದರೆ ಚೋದ್ಯವೇನು? (ಗಾದೆ). ೪. ಹೊಣೆಗಾರಿಕೆ; ಕರ್ತವ್ಯ : ಒಪ್ಪಂದಗಳು ಮತ್ತು ಇತರ ಅಂತರರಾಷ್ಟ್ರೀಯ ಕಾನೂನುಗಳಿಂದ ಉದ್ಭವಿಸಿದ ಬಾಧ್ಯತೆಗಳು(obligations) ತೃಪ್ತಿಕರವಾಗಿ

ಗೌರವಿಸಲ್ಪಡುವಂತಹ ವಾತಾವರಣವನ್ನು ಕಾಪಾಡಿಕೊಂಡು ಬರಬೇಕು (ಅಂತಸಂ. ೧೫). [ಬಾಧ್ಯ$_2$+ -ತ್ವ$_3$]

**ಬಾಧ್ಯತ್ವ** (ನಾ). ಕಳೆದುಕೊಳ್ಳುವಿಕೆ; ನಿರರ್ಥಕಗೊಳಿಸುವಿಕೆ : ಬಾಧ್ಯತ್ವ ವೆಂದರೆ ತವ್ಮು ಶಕ್ತಿಯನ್ನು ಕಳೆದುಕೊಳ್ಳುವಿಕೆ, ಅಷ್ಟೆ (ಧ್ವನ್ಯಾಲೋ. ೦೬೯). [ ಸಂ. ]

**ಬಾಧ್ಯಸ್ತ** (ನಾ). ೧. ಹಕ್ಕನ್ನುಳ್ಳ ವ್ಯಕ್ತಿ ; ಅಧಿಕಾರವಿರುವ ವ್ಯಕ್ತಿ : ಗಂಡಸುವುಗ ಹುಟ್ಟಿದರೆ . . . ತಾನೂ ಸಕ್ಕರೆ ಹಂಚಲು ಬಾಧ್ಯಸ್ತನಲ್ಲವೇ ? (ಗಂಪೂರಾಯ. ೨೫೮). ೨. ಹಕ್ಕುದಾರ; ಒಡೆಯ : (೩). ೩. (ಯಾವುದಾದರೂ ಒಂದು ಕರ್ತವ್ಯವನ್ನು ಮಾಡಲು) ನಿಯೋಜಿತನಾದವನು ; ಹೊಣೆಗಾರ: (೩). 'ಬಾಧ್ಯಸ್ಥ' ಪರಾ. [ ಬಾಧ್ಯ$_2$+ -ಸ್ತ ]

**ಬಾಧ್ಯಸ್ಥ** (ನಾ). ಹಕ್ಕುದಾರ ; ಉತ್ತರಾಧಿಕಾರಿ : ಚೊಚ್ಚಲ ಮಕ್ಕಳಾದ ಆಲ್ಬರ್ಟ ಎಡ್ವರ್ಡ ಎಂಬವರು ಚಕ್ರವರ್ತಿನಿಯವರ ಪಟ್ಟಕ್ಕೆ ಬಾಧ್ಯಸ್ಥರು (ಪುಂಂಬಯು. ೯-೫); ರಾಂಪುರದಲ್ಲಿ ದೂರದ ನೆಂಟರು, ಬಾಧ್ಯಸ್ಥರು ಇದ್ದಾರೆ ಅಂತ ಯಾರೋ ಹೇಳಿ ಇಲ್ಲಿಗೆ ಕಳಿಸಿದರಂತೆ (ಪುರೆ. ೯೦). 'ಬಾಧ್ಯಸ್ತ' ಪರಾ. [ಬಾಧ್ಯ$_2$+ -ಸ್ಥ]

**ಬಾನ್$_1$** (ಕ್ರಿ). ಮಡಕೆ, ಕುಡಿಕೆ ಮುಂತಾದುವುಗಳನ್ನು ಮಾಡು ; ಕುಂಬಾರನ ಕೆಲಸವನ್ನು ಮಾಡು : " ಬಾನ್-ಕುಲಾಲಕರಣೇ, ಆಕಾಶ, ಗೋಮಯಪಿಂಡಪುಂಜಯೋಃ (ಸಗಣಿಯ ಉಂಡೆಯ ರಾಶಿ) " (ಶಮದ); ತಾನಕ್ಕರೆಯಿನೊಪ್ಪಿ ಬಾಂದೊಡವೆಯೊಡೆವನೇ ಹಿಂಗಿನಿಸ ಕಾಲಂ ? (ಗಿಳಿಂ. ೦೨೩-೪೩).

[ದೇ.॥ ತಮಿ. ಮಣ್ಣು, ಪನ್ನೈ=ಆಕಾರ ಕೊಡು ; ಮಲ. ಮನಯು, ಮನಿಯು ; ತೆಲು. ವಾನು ; ಪರ್ಜಿ. ವಾನ್]

**ಬಾನ್$_2$, ಬಾಂ$_1$, ಬಾನು$_1$** (ನಾ). ೧. ಮಡಕೆ, ಕುಡಿಕೆ ಮುಂತಾದುವು : 'ಬಾನಿಗ' ಪರಾ. ೨. ಮಣ್ಣಿನ ಪಾತ್ರೆಗಳ ರಾಶಿ; ಮಡಕೆ, ಕುಡಿಕೆಗಳ ಒಟ್ಟಿಲು : (೩). ೩. (ಒಣಗಿದ) ಸಗಣಿಯ ರಾಶಿ ; ಬೆರಣಿಯ ರಾಶಿ : "ಬಾನ್—ಕುಲಾಲಕರಣೇ. ಆಕಾಶ, ಗೋಮಯ ಪಿಂಡಪುಂಜಯೋಃ (ಸಗಣಿಯ ಉಂಡೆಯ ರಾಶಿ)" (ಶಮದ). **ಬಾಂ$_1$ :** ೧. 'ಬಾಂಬು$_1$' ಪರಾ. **ಬಾನು$_1$ :** ೨. "ಸಗಣಿಪಿಂಡದ ಪುಂಜದಲ್ಲಿ ಯಾಕಾಶದೊಳ್ ವಿಗೆ ಕುಂಬದೊಟ್ಟಿಲೊಳ್ ಬಾನು" (ಶಬ್ದಮಂ. ೧೧೦). ೩. ಮೇಲಿನ 'ಶಬ್ದಮಂ' ಪ್ರಯೋಗವನ್ನು ನೋಡಿ. [<ಬಾನ್$_1$]

**ಬಾನ್$_3$, ಬಾಂ$_2$, ಬಾನ$_2$, ಬಾನು$_3$** (ನಾ). ೧. ಆಕಾಶ ; ಗಗನ : "ಆಗಸಂ . . . ನುಣುಗಿಲ್ವಟ್ಟೆ, ಬಾನ್—ಈ ೬ ಆಕಾಶಂ" (ಕಶಾ. ೯೯-೯೦); ನಾರದನೆಯ್ದಿ ನೋಡಿ ಬಾನೊಳ್ಕಣದಾಡೆ ದೇವತತಿ ನೋಡೆ (ಶಾಂತಿಪು. ೩-೬೯) ; ಆಗಳ್ ಬಾನತ್ತಣಿನರಟ್ಟಿ ಸುರಿದತ್ತು ರಾಮನ ಸಿರದೊಳ್ (ಅದ್ಭುತ. ೩೬-೨೦) ; ಬಾನಾಚೆಯಿಂ ವಿಶ್ವಸತ್ತ್ವ ತಾನಿಳಿದಿಳೆಗೆ ನಾನೆನುವ ಜೀತನದಿ ರೂಪುಗೊಂಡಿಹುದೋ ? (ಪಂಚಶ. ೦೩೬). ೨. ಸ್ವರ್ಗ: 'ಬಾನಂದ', 'ಬಾನಾಳ್ಕೆ' ಪರಾ. ೩. ಆಕಾಶದಿಂದ ಸುರಿಯುವ ಮಳೆ : 'ಬಾನಗೇಡು' ಪರಾ. **ಬಾಂ$_2$ :** ೧. ಪೊಂಗಾಲಿ ಮಿಳುಗೆ ಪಟ್ಟಯಿಗೆ ಬಾಂಗೆ ಪೆಡಂವುಗುಟಿ . . . ರಥಂಗಳ್ ಪರಿದುವು ಬಳಾಬ್ಧಿ ನಕ್ರಾಕೃತಿಯೊಳ್ (ಜಗಪ. ೭-೬೨) ; ಜೋಡಿಸುವೆನೀ ತುರಗವಂ ತನ್ನ ತೇರ್ಗೆಂದು ಗಾಡದಿಂ ಬಾಂಗೆತ್ತಿಕೊಂಡೊಯ್ಯುದಿರನಬ್ಜಸಖಂ (ಜೈಮಿಭಾ. ೯-೦೯) ; ಆಗಳಾಸುರರುಳ್ಳ ಬಾಂಗಿಟ್ಟನೀ ವೊರೆಯಂ (ಗಿಳಿಂ. ೦೨೦-೨೪). ೨. 'ಬಾಂಬಸು', 'ಬಾಂಬೆಣ್' ಪರಾ. **ಬಾನ$_2$ :** ೧. ಬಾನ ದೊಳಾಗಸವಟ್ಟೆಗರ್[ಶಾಕಾಂ. ಬಾನೊಳು ಸಗ್ಗವಟ್ಟೆಗ, ಬಾನೊಳಾಗಸ ವಟ್ಟೆಗ] ನೆಲದೊಳು ಮಾನವಬಲ ಕಿಕ್ಕಿರಿದು ಸಾನುರಾಗದೊಳೆಯ್ದಿತು ಪುಂಡರೀಕಿಣಿಗಾ ನರನಾಥನೊಂದಾಗಿ (ಶ್ರೀಶಾಂ. ೦೩-೦೬) ; ಬಾನದಿಂದಿಳಿದು ಬಂಡಾ ಬಾಲಭಾಸ್ಕರನೀ ನೆಲದೊಳು ನಡೆವಂತೆ (ಶ್ರಶಂಶ. ೨-೭೩) ; ಇಟ್ಟೆರಡಡಿಯುಂ ಯತಿಗತಿ ಪುಟ್ಟದೆ ಬಾನವುನೊರಲ್ದು ನಿಟ್ಟಿಸಿ ಹಸಿರಿಂದಟ್ಟಿಸಿ ಹಲಗೆಯ ತೊಟ್ಟನೆ ಪಟ್ಟಿರಿಸುವ ಹೊಟ್ಟುಗಬ್ಬಿಗಂ ಕಬ್ಬಿಗನೇ (ಸೀತಾ. ೮೦). **ಬಾನು$_3$ :** ೧. ತನ್ನ ದಾಂಗುಡಿಯ ಗೊನೆ ಬಾನು ಮಣ್ಣೊಂದಾಗಿ ಒಂದಾಗಿ ಕೆಲವಾಗಿ ಇರುವ ಹರುಹಿನ ತುಂಬ . . . ವಿಂಚಿತ್ತು ಒಂದೇ ಬಿಂಬ (ಪಂಚಶಂ. ೩೨-೩) ; ನಿನ್ನ ಬಾಳ ಬಾನಿನಲ್ಲಿ ಗುಡುಗು ಸಿಡಿಲುಗಳಷ್ಟೇ ಇಲ್ಲ ಇಂದ್ರಚಾಪವೂ ಇದೆ (ಕರ್ಮೋಲ. ೨-೦೬). ೨. ಬಾನ್ ಕೊಂಡ ಕೃಷ್ಣನ್, ನೆಲನೆಲ್ಲಮನ್ ಗೆಲ್ದು, ಬಾನುಮನ್ ಕೊಂಡ ಕೃಷ್ಣನ್ ! (ಹೊಂಗಳು. ೨೯-೦೦).

ಬಾನಗಣ್ಣು=ಸೂರ್ಯ: ಬಾನಗಣ್ಣಿನ ಬಿಸಿಯ ಹಸಿಯಾರದಲೆ ಕುಡಿದು ಬೆಳಕ ನೀರಡಿಕೆಯನು ಪುಟ್ಟಿಸುವದು (ಸೂರ್ಯಕಾ. ೦-೩). **ಬಾನ ಜೊಡರ್** =ಆಕಾಶದ ದೀಪ ; ಸೂರ್ಯ ; "ನೇಸಱ್" (ಶಶುಂ. ೩. I. ೯). **ಬಾನದರ್** = ದೇವತೆಗಳು ; ಸುರರು : ಬಾನದರುಘೇಯೆಂದು ಪೊಗಳೆ ಪರ್ಬನವನು ಕೃಶಾನು ಪೊಕ್ಕಂತೆ ಸಂಹರಿಸಿದಂ ಸತ್ಯಸಂಧಾನಿ ಗಾಂಗೇಯಂ (ಲಕ್ಷ್ಮೀಶಾ. ೯-೬). **ಬಾನವರ್**=ಬಾನದರ್ : ಬಾನವರೊರ್ಬ್ಬ ಕಾಡಲ್ ಮನೆಯನ್, ತಪ್ಪದೆ ಕಾಡುಗುವುದಱಾ ಕಾಟವತ್ (ಅಂತಿಗೂ. ೨೬-೩೫೪); ಸಟೆಯ ಕರೆದವರ್ ಬಾನವರ್, ಪ್ರವಿಮಾತ್ಯೂಸ್ ಮುನ್ನೆಣಿಕೆಯುಳ್ಳವನ್ ಎಂದು (ಬಿದ್ದಕ್ರಿ. ೬.೦೦೬). **ಬಾನುದ್ದಂ**=ಆಕಾಶದ ವರೆಗಿರುವ ಎತ್ತರ; ಆಕಾಶದಷ್ಟು ಉದ್ದ : ಬಾನುದ್ದಂ ; ಏನಾಯ್ತು (ಶಮದ. ೬೯ ಪ್ರಯೋ); ಬಾನುದ್ದಂಬರವೊಗೆದಂದೇನೆಸೆದುದು ರತ್ನವಪ್ರಂ (ಪುಣ್ಯಾಸ್ರ. ೦೦-೨೫); ತಣಿವೀವುದು ಬಾನುದ್ದವುಪ್ಪ ಪೇರೊಡಲವರ್ಗಂ (ಶಬ್ದಾನು. ೫೧೨ ವ್ಯಾಖ್ಯಾ). **ಬಾನುದ್ದವಾಗು** =(ಅಲಂ) ಅತಿಯಾಗಿ ಗರ್ವಿಸು,— ಅಹಂ ಕಾರಪಡು : ಆನುಂ ಬುಧರೊಡನೆ ನೃಪಾಸ್ಥಾನದೊಳಿರ್ದಪ್ಪೆನೆಂದು ಕುಕವಿಕದಂಬಂ ಬಾನುದ್ದವುಪ್ಪುದೇಕುದ್ಯಾನದೊಳೊಡನಿರವೆ ಕಾಗೆಯುಂ ಕೋಗಿಲೆಯುಂ (ರೀತಾವ. ೦-೨೬). [ದೇ.॥ ತಮಿ. ಮಲ. ವಾನ್, ವಾನವನ್ ; ತುಳು. ಕೊಡ. ಬಾನ, ಬಾಣ ; ತೆಲು. ಕೋಲಾ. ನಾಯ್ಕಿ. ವಾನ ; ಕೋತ. ವಾನ್ಕ್ ; ಪರ್ಜಿ. ವಾನಿ]

**ಬಾನ$_1$** ' ಪಾನೆ ' ನೋ.

**ಬಾನ$_2$** ' ಬಾನ್$_3$ ' ನೋ.

**ಬಾನಂಗುಳಿಗೆ** (ನಾ). (ಒಣಗಿದ) ಸಗಣಿಯ ಉಂಡೆ ; ಬೆರಣಿ : ನಕಾರಕ್ಕೆ — ಮಿನಾಂಬುಬು, ಬಾನಂಗುಳಿಗೆ (ಶಮದ. ೦೬೨ ಪ್ರಯೋ). P 'ಶಮದ. ನ. ೧೮೩ ಅಡಿಟಿ' ಯಲ್ಲಿ ಈ ಶಬ್ದಕ್ಕೆ 'ನಕ್ಷತ್ರ' ಎಂಬ ಅರ್ಥವನ್ನು ಕೊಡಲಾಗಿದೆ. 'ಬಾಂಗುಳಿಗೆ' ಪರಾ. [<ಬಾನ್$_2$+ಗುಳಿಗೆ$_1$]

**ಬಾನಂಗುಟಿ$_1$** 'ಬಾಂಗುಟಿ' ನೋ.

**ಬಾನಂಗುಟಿ$_2$** (ನಾ). (?) : ಪೂಡ್ದ ಬಾಯ್ ಬೇಕರಿಯೋದಂತಿರ್ದ ಬಾನಂಗುಟಿ[ಶಾಕಾಂ. ಬಾನಂಗುಳಿ, ಬೆನ್ನಂಗುಳಿ] ಗಿಟಿಗಿಟಿಜಂತ್ರಂಬೊ ಲಾಗಿರ್ದ ಮೈ ಮೆಯ್ಸಿರಿ ಚಿದ್ರೂಪಕ್ಕೆ ಪಕ್ಕಾಗಿರ ಚರಿಗೆಗೊಡಲ್ಬಂದ ನೊರ್ವಂ ಮುನೀಂದ್ರಂ (ಅರ್ಥನೇ. ೭-೨); P "ಇಲ್ಲಿ ಬರುವ ಬಾನಂಗುಳಿ ಎಂಬುದು ಮೈಯ ಒಂದು ಭಾಗವಿರಬಂತೆ ತೋರುತ್ತದೆ" (ಶಂಶಪೀ. ೪೯೦). [ ? ]

**ಬಾನಂಗುಟಿಗೆ ?** (?). (?) : ತಾನುಂ ಹಿಡಿಂಬೆಯುಂ . . . ಕೂಕಿಱಿದುಂ ತೇಗಿಯುಂ ಪಸಿಗೆವರಿದುಂ ಬವಳಿವರಿದುಂ ಬಾನಂ[ಶಾಕಾಂ. ಸಂ] ಗುಟಿಗೆವಱಿದುಂ ಸೊಟ್ಟಿರಿದುವಾಡುವಾಗಳುಭಯಬಲಂಗಳ್ ಬೆಕ್ಕಸಂ ಬಟ್ಟು ನೋಡಿ (ಶಂಶಭಾ. ೦೨-೦೫೬ ವ) ; " ಬಾನಂಗುಟಿಗೆ — ಒಂದು

ಬಗೆಯ ನಡಿಗೆ" (ಶಂಕರಾ. ೬೦೪); "ಬಾನುಗುಳಿಗೆವರಿದುಂ-ನಕ್ಷತ್ರ ಮಂಡಲಕ್ಕೆ ನೆಗೆದೂ" (ಶಂಕರ. ೪೮೯).

**ಬಾನಂಚು** (ನಾ). ಭೂಮಿಯೂ ಆಕಾಶವೂ ಸೇರುವಂತೆ ಕಾಣುವ ಭಾಗ; ಕ್ಷಿತಿಜ; ದಿಗಂತ: ಕಣ್ಣು ತುಂಬುವ ಪೋರಿ ಬಾನಂಚಿಗೆ (ಶಿಲಾಮು. ೨೦ ೦೪). [ಬಾನ್$_3$ + ಅಂಚು$_2$]

**ಬಾನಂದ** (ನಾ). ಸ್ವರ್ಗದ ಸೊಬಗು; ದೇವಲೋಕದ ಮನೋಹರತೆ: ಬಾನಂದವನು ಸವಿದ ಸುಖದ ಯುದುಭೂಪರ್ . . . ಕಲೆತೆಲ್ಲ ಬಂದರ್ (ಹೊಂಗಳು. ೩೦-೦೨). [ಬಾನ್$_3$ + ಅಂದ]

**ಬಾನಕ್ಕಿ** 'ಬಾನ್ವಕ್ಕಿ' ನೋ.

**ಬಾನಗಡಿ** 'ಭಾನಗಡಿ' ನೋ.

**ಬಾನಗಿತ್ತಿ** 'ಬೋನಗಿತ್ತಿ' ನೋ.

**ಬಾನಗೇಡು** (ನಾ). ಆಕಾಶದಿಂದ ಸುರಿಯುವ ಮಳೆಯಿಂದ ಉಂಟಾಗುವ ತೊಂದರೆ; ಅತಿವೃಷ್ಟಿಯಿಂದಾಗುವ ಕೆಡುಕು: ಆ ಮಂಡಚನುಂ ಬಾನಗೇಡು ಬಜಗೇಡು ಎಂನದ (ಶಾಸಂ. ೦೯೩೨, ಉಡುಪಿ. ೩೦೬ ೨೨; 1293): ವರುಷಂಪ್ರತಿ ಬಾನಗೇಡು ಬಜಗೇಡುಯೆಂನದೆ ೧೨ ಮುಡಿ ಅಕ್ಕಿಯನೂ . . . ನಡಸಿ ಬಹರು (ಶಾಇ. IX—ii, ೪೪೪-೩೩; 1434). [ಬಾನ$_2$ (<ಬಾನ್$_3$) + ಕೇಡು]

**ಬಾನಲ್** (ನಾ). ೧. ಧಾರೆ; ಪ್ರವಾಹ: ಪೊವಟ್ಟ ಕಣ್ಬನಿಯ ಬಾನಲ ತಣ್ಣಸದೊಳ್ ಪಗಿಲ್ತು ಪಾವಸೆಗೊಳೆ ಕಾರ ತಂದಲೊಳಗುಂದಲೆಯಾಗಿರೆ ನಟ್ಟು ಸೋರ್ವ ಪಾಟ್ಟಸದಿಯ ಪೆಣ್ಣ ಜೋಹದವೊಲೊಟ್ಟಿದಳೋರ್ವಳನಂಗರಾಗದಿಂ (ಶಾಂತಿಪು. ೬-೯೪); ಕಣ್ಣೀರ ಬಾನಲ್ಗಳಿಂ ಬಸಿವಾಸ್ಯಂ . . . ಪಿಸುಣಾಡಿತ್ತಸಮಾಸ್ತ್ರನಸ್ತ್ರಹತಿಯಂ ತತ್ಕಾಮಿನೀರೂಪಕಂ (ಲೀಲಾವ. ೪-೦೯೩); ಕಪೋಲದೊಳ್ ಬಳೆಯಿಸೆ ಬಾನಲಂ ಸುರಿವ ಬಾಷ್ಪಜಳಂ ಕರುಣಾರ್ದ್ರಹಾರವಂ ಬಳೆಯಿಸೆ ಬಾಯ ಬತ್ತುಗೆಯನಿಂತೆರ್ದೆಗೆಟ್ಟುಬಿತ್ತುಂ . . . ಬಿಟ್ಟಿಳಂದಜತಸೇನೆ ನೃಪಾಲಪದಾಬ್ಜಮೂಲದೊಳ್ (ಕಂದ್ರಚಿ. ೩-೦೦). ೨. ನಿಂತ ನೀರು; ಕಂಟಿ; ಬೆಂಚೆ: ನಾನಲ ಬಾನಲ ನೀರಂ ಮೀನೊಲ್ಲುಂ ರಾಜಹಂಸನೊಲ್ಲುಮೆ (ಶಬ್ದಪು. ೦೩-೦೬೩): ಮೆಳೆಯುಮಂ ನಾನಲುಮಂ ಬಾನಲುಮಂ ಸಡಿಂಬಮನಿಡಿಂಬವಂ . . . ಬಳ್ಳಿಯುಮಂ ಕಳ್ಳಿಯುಮಂ ಕಳೆದು ಪೋಗಿ (ಲೀಲಾವ. ೬-೦೬ ವ). ೩. (ಕಣ್ಣೀರು, ಬೆವರು ಇತ್ಯಾದಿಗಳ ತೇವದಿಂದ) ಕದಡಿರುವ ಸ್ಥಿತಿ; ಮಸುಕಾಗಿರುವಿಕೆ: "ಬಾನಲೆನೆ [ಪಾಠಾಂ. ಬಾಸುಳೆನೆ] ಮಸುಳಿದುದುಂ" (ಕಕುಶ. ೬೦); ಉಣ್ಮೆ ಬೆವರ್ ನಸುಬಾನಲಾದ ಬೊಟ್ಟೆಂಬಿವು ಕೂಟದೊಂದು ಸವಿಯಂ ಪಿಸುಣಾಡುವುವೀ ಲತಾಂಗಿಯಾ (ಕಂದ್ರಚಿ. ೯-೭೨); ತಾಬುಂಬಲಿಯಿಟ್ಟ ಚುಂಬುಬೆಮರಿಂ ಕಡೆಗೆನ್ನೆಯ ಬಾನಲಾದ ಬೊಟ್ಟು (ಕಮಾಚ. ೦೬೨ ಪ್ರಯೋ); ಚಿತ್ರಭುಮಣದ ಮಂಕಿನಿಂದ ಬಾನಲಾಗಿ, ರಣಧೀರನಿಗೆ ಅನಿಮಿಷಾಕ್ಷಿಯೂಗಿರುವಳು (ಮಂಕ್ರಶ. ೦೪೩-೭). 'ಬಾನಲ್ಗೊಳ್', 'ಬಾನಲ್ಪೊರೆ' ಪರಾ.

[ದೇ.॥ ತಮಿ. ಪಾಣಲ್ = ವ್ಯವಸಾಯದ ಭೂಮಿ, ಸಮುದ್ರ, ಒಂದು ಬಗೆಯ ಸಸ್ಯ; ಮಲ. ಪಾಣಲ್ = ಒಂದು ಬಗೆಯ ಸಸ್ಯ]

**ಬಾನಲೆ** (ಕ್ರಿ). ಆಕಾಶದಲ್ಲಿ ತಿರುಗು,—ಸುತ್ತಾಡು: ಗಾಳಿ ಬಾನಲೆಯುತಿದೆ ದೆಸೆಗೆಟ್ಟ ತಿರುಕನಂತೆ (ಗೋಕುಪಿ. ೦-೦೩).

**ಬಾನಲೆವರ್** = ಆಕಾಶದಲ್ಲಿ ಸಂಚರಿಸುವವರು; ದೇವತೆಗಳು: ಬನ್ನಿ, ಓ ಬಾನಲೆವರೆ, ನಮ್ಮ ತೋಟಕೆ, ನಂದನವನೆ ಮಿರುಸುವೀ ದಿವ್ಯ ತೋಟಕೆ (ಹಾಕೇ. ೨೦-೧). [ಬಾನ್$_3$ + ಅಲೆ$_1$]

ಬಾನಲ್ಗೊಳ್ (ಕ್ರಿ). ಮಸುಕಾಗು; ಕಾಂತಿಹೀನವಾಗು: ಬೆಳ್ಳೇಜು ಬಾನಲ್ಗೊಂಡ ಮದನಮಂಡಲಮುಮಂ ... ಜಡತೆಗೆಡೆಯಾದ ಯಾನಮುಮಂ ಬೆರಸು ಮೆಲ್ಲನಲ್ಲಿಗೆ ವಂದು (ಕುಸುಮಪ. ೦೩-೪೬ ವ). [ಬಾನಲ್ + ಕೊಳ್$_1$]

**ಬಾನಲ್ಪೊರೆ** (ಕ್ರಿ). (ಕಣ್ಣೀರಿನ) ಧಾರೆಯಿಂದ ಕೂಡಿಕೊಳ್ಳು: ವ್ಯಸ್ತಭೃಂಗಾಳಕಂ ಪ್ರಸ್ತಳಿತೋದ್ಯದ್ವೇಣಿ ಬಾನಲ್ಪೊರೆದಮಳಕಪೋಳ[ಸ್ಥ]ಳಂ . . . ಕಣ್ಗೊಳೆ ತಳೆರ್ವನೆಯೊಳ್ಕಾಂತೆಯುಂತಿರ್ದಳಾಗಳ್ (ಶಾಂತೀಶ್ವ. ೦೦ ೬೯). [ಬಾನಲ್ + ಪೊರೆ$_2$]

**ಬಾನಲ್ವರಿ** (ಕ್ರಿ). ಧಾರೆಯಾಗಿ ಸುರಿ, — ಹರಿ: ಬಲ್ವೆಣನುರ್ಚಿ ಕೋಡೊಳಿರೆ ನೆತ್ತರುರೋಮಣಿಯಿಂ ನೆಲಕ್ಕೆ ಬಾನಲ್ವರಿವನ್ನೆಗಂ ಪ್ರಹತದಿಂಡಿಜಾದೆತ್ತಿದೊಡಗ್ರಹಸ್ತದೊಳ್ (ಕಾವ್ಯಾವ. ೬೮); ಕಣ್ಣೀರೆ ಬಾನಲ್ವರಿದು ಬೆಳಪ ಮೈ ಮೈಯ ಸಂತಾಪದಿಂ ಬಾಡುವ ವಕ್ತ್ರಂ (ಅಗಿ. ೦೦-೬); ಆ ನುಡಿಗೇಳುತಾನಂದಾಶ್ರು ಕಣ್ಗೊಳು ಬಾನಲ್ವರಿದುದು (ಕುಂತಾಕಾ. ೩೬-೪೦). [ಬಾನಲ್ + ಪರಿ$_2$]

**ಬಾನಳ್ಳಿ** (ನಾ). ಒಂದು ಹಳ್ಳಿಯ ಹೆಸರು: ಬಾನಳ್ಳಿಯ ಬನ್ನಿಯಮ್ಮ ಸೆಟ್ಟಿಯ ಮಗ ಪೆಮ್ಮಣ್ಣ (ಎಕ. IV(R), ಶಾಮುಂ. ೦೦೩-೪; 10ನೆಯ ಶತ). [ ? + ಹಳ್ಳಿ (<ಪಳ್ಳಿ$_1$) ]

**ಬಾನಾಡಿ** (ನಾ). ಆಕಾಶವನ್ನು ಮುಟ್ಟುವಂತೆ ಕಾಣುವಷ್ಟು ಎತ್ತರಕ್ಕೆ ಹಾರಾಡುವ ಒಂದು ಬಗೆಯ ಪಕ್ಷಿ; ಟಿಟ್ಟಿಭ: "ಬಾನಾಡಿಯೆಂದು ಟಿಟ್ಟಿಭಂ" (ಕಪಾ. ೩೦-೯೭); ಶುಕಂ ಬಾನಾಡಿ . . . ರತ್ನಖಗದ್ವಿಕರ್ಗಾಂತದ್ವನಾಗೌಘದೊಳ್ (ರಾಪಕೇ. ೩-೩೯); ಈ ದೃಷ್ಟಿಯಿಂದ ಷೆಲ್ಲಿ ಕವಿಯ ಬಾನಾಡಿ (Skylark) ಒಂದು ಹಕ್ಕಿ ಮಾತ್ರವಲ್ಲ; ಅದೊಂದು ಚೈತನ್ಯ (ಸೌಂದಕ. ೩೩). [ಬಾನ್$_3$ + —ಆಡಿ$_1$]

**ಬಾನಾವರ** (ನಾ). ಒಂದು ಬಗೆಯ ಸಸ್ಯ: ಬಾನಾವರ, ನೀರುಸಲ್ಲಿ, ಪಣಕೆ (ವೈ ಶಿ. ೩೯-೭೭೩). [?]

**ಬಾನಾಳ್ಕೆ** (ನಾ). ಸ್ವರ್ಗದ ಆಳ್ವಿಕೆ,— ರಾಜ್ಯಭಾರ: ಸರ್ವಜೀವಂಗಳುಂ ಮುಕ್ತಿಯುಂ ಕಾಣ್ಗೆ . . . ಸಾವುದೆಲ್ಲಾ ಸತ್ತು, ಬಾನಾಳ್ಕೆ ಪೂಣ್ಗೆ (ಹೊಂಗಳು. ೩೮-೨೦). [ಬಾನ್$_3$ + ಆಳ್ಕೆ]

**ಬಾನಿ$_1$** 'ಪಾನೆ' ನೋ.

**ಬಾನಿ$_2$**, ಭಾನೆ (ನಾ). ಗಾಯನದ ರೀತಿ,—ಪದ್ಧತಿ: ಆ ರಾಗವನ್ನು ಹಾಗೆ ಹಾಡಬಹುದೆಂದು ಅವನು ತಿಳಿದಿರಲಿಲ್ಲ. ಆ 'ಬಾನಿ' ಅವನಿಗೆ ತುಂಬ ಹಿಡಿಸಿತ್ತು (ರಾಗಿಪ. ೦೩೬). **ಭಾನೆ**: ನಿಮ್ಮ ಭಾನೆ ನೋಡಿದರೆ ನಿಮಗೆ ಕರ್ಣಾಟಕಸಂಗೀತ ಚೆನ್ನಾಗಿ ಬರುತ್ತೆ ಎಂದು ಕಾಣುತ್ತೆ (ರಾಮಸಾ. ೯೦). [←ಹಿಂ. ಬಾನಾ; ಮರಾ. ಬಾಣೀ]

**ಬಾನಿಗ** (ನಾ). ಮಡಕೆಯನ್ನು ಮಾಡುವವನು; ಕುಂಬಾರ: ನಾಗಪಣ್ಡಿತರ ಮಕ್ಕಳು ಮಲ್ಲಪನವರು ಕಾಳಭಕ್ತನ ಮಕಳು ಮಾರಹಳಿ ಬಾನಿಗ ಕಾಲಭಕ್ತಗೆ . . . ವಿಕ್ರಮಸಂವತ್ಸರದ ಕಾರ್ತಿಕ ಶು ೧ ಪರಿಯನ್ತರ × × × (ಎಕ. III, ಮಳವ. ೦೦೯-೦೯; 1338); ಒಳ್ಳೂರಿಗಂ ಬಾನಿಗಂ, ಪಟ್ಟಣಿಗಂ (ಶಬ್ದಾಮ. ೪೦೯ ಪ್ರಯೋ). [ಬಾನ್$_2$ + —ಇಗ]

**ಬಾನು$_1$** 'ಬಾನ್$_2$' ನೋ.

**ಬಾನು$_2$** 'ಪಾನೆ' ನೋ.

**ಬಾನು$_3$** 'ಬಾನ್$_3$' ನೋ.

**ಬಾನುಲಿ** (ನಾ). ೧. ಆಕಾಶದಲ್ಲಿ ಕೇಳಿ ಬರುವ ಶಬ್ದ: ಅಶರೀರವಾಣಿ: ನೀರಡಿಸಿದುದರಿಂದ . . . ಕೊಳದೊಳಗೆ ಕಾಲಿಟ್ಟನು. ಅಷ್ಟರಲ್ಲಿ ಒಂದು ಬಾನುಲಿಯು ಕೇಳಬಂದಿತು (ಯಕ್ಷಪ್ರ. ೨); ನನ್ನ ದೇಹದ ಬೂದಿಯೊಳಗೊಂದಿನಿತು ಗಂಗೆಯ ಸೇರಲಿ. ಅಲ್ಲ ಧಾರ್ಮಿಕನಂಬಿಕೆಯು; ಅದು ನನ್ನ ಬಾಲ್ಯದ ಬಾನುಲಿ (ನೆಲಮು. ೩೩-೨). ೨. ರೇಡಿಯೋ; ಆಕಾಶವಾಣಿ: ಅದು ಸಂಗೀತಕಚೇರಿ ಇಲ್ಲವೆ ಬಾನುಲಿ ಇವುಗಳಿಂದ ಕೇಳಿ ಬರುವ ಸಂಗೀತವಲ್ಲ (ಕರಕ. ೬೦); ಬಾನುಲಿಯೇ ಕಂಪಿಸಿ ವಿಶ್ವವೆಲ್ಲ

ರ್ಪೊಂಪಿಸಿ ಏನನರ್ಥ ಏನನರ್ಥ ಎಂದು ಕೂಗೆ ಕೂಗಿತು (ಸೂರ್ಯಶಾ. ೧೦-೯).
೩. ನಿಸ್ತಂತುವಾರ್ತಾಪ್ರಸರಣವನ್ನು ಮಾಡುವ ಕೇಂದ್ರ : ಆಕಾಶವಾಣಿನಿಲಯ ; ರೇಡಿಯೋಕೇಂದ್ರ : ಬಾನುಲಿ ಅಧಿ ಉಪಅಧಿಕಾರಿಗಳಿಗೆ ಪಾತಿಗೊಮ್ಮೆ ಕೈಮುಗಿದು ನಗಲು ಸಹ ಸವುಡಿಲ್ಲದಾಯಿತು (ಹುಚ್ಚುಹು. ೧೯) ; ಬಾನುಲಿಯಲ್ಲಿಯು ತನ್ನ ಕಾರ್ಯಕ್ರಮವನ್ನು ಮುಗಿಸಿಕೊಂಡು ಮರುದಿನ . . . ರಹೀಮ ಊರಲ್ಲಿದ್ದ (ಏಳ್ಕ. ೬೩).
[ಬಾನ್$_3$ + ಉಲಿ$_2$]

**ಬಾನುಲಿಕೇಂದ್ರ** (ನಾ). = ಬಾನುಲಿ ೩ : ದೆಹಲಿಯ ಬಾನುಲಿಕೇಂದ್ರದೊಳಿರುವವರು ಆ ರಾಮಕೃಷ್ಣನೆನುವವರು (ಬಂಜಾಶ. ೩೯-೬೦) ; ಬಾನುಲಿಕೇಂದ್ರದ ಮಂತ್ರಿಗಳಿಂದ ಹಿಡಿದು . . . ಪ್ರತಿಯೊಬ್ಬರಿಗೂ ಪತ್ರಗಳನ್ನು ತಂದ (ಹುಚ್ಚುಹು. ೧೭). [ಬಾನುಲಿ + ಕೇಂದ್ರ]

**ಬಾನೆ** 'ಪಾನೆ' ನೋ.

**ಬಾನೆಡೆ** (ನಾ). ಗಗನಸ್ಥಳ ; ಆಕಾಶ : ಎನ್ನೊಡೆಯನ ಬಲ್ಪಂ . . . ಬಾನೆಡೆಯೊಳ್ ಸುಟ್ಟಿದಾಡುವವರೇನಱಿಯರೆ (ಕಬ್ಬಿಗಕಾ. ೧೬೭) ; ಏನೆಂಬೆ ನತುಳಸಂತೋಷಮುಂ ರೋಷಮುಂ ಬಾನೆಡೆಗೆ ನೆಗೆವ ಬೊಬ್ಬಾಟಮುಂ ಘಾಟಮುಂ . . . ದೇವಾಸುರರೊಳೆಸೆದುದು (ಶಂಪು. ೪೩-೩೬).
[ಬಾನ್$_3$ + ಎಡೆ$_3$]

**ಬಾನೆರೆಯ** (ನಾ). ದೇವತೆಗಳ ಒಡೆಯ ; ದೇವರಾಜ : ಪುಣೆಯುಂವೆನು ಪಾತಾಯಿ, ಬಾನೆರೆಯುನೆರಗುವೆನು (ನಡೆರಾ. I, ೪೩೩).
[ಬಾನ್$_3$ + ಎರೆಯ (< ಎಱೆಯ)]

**ಬಾನೊಡತಿ** (ನಾ). ದೇವತೆ ; ಅಪ್ಸರೆ : ಮುಡಿ ಮುಗಿಲ್ಕಣ್ಮಿಂಚುಗುರು ತಾರೆ ಮೊಗ ಸಸಿ ಬಡನಡುವಾಗಸವಾಗೆ ಕಡುರಯ್ಯಮಾದಳು ಯ್ಯಲೆಯೊಳೊರ್ವಳು ಬಾನೊಡತಿ[ಪಾಠಾಂ. ಲಿ]ಯಂತೆ (ಕುಶಾಶಾಂ. ೨೮-೩೩).
[ಬಾನ್$_3$ + ಒಡತಿ]

**ಬಾನೊಡಲ** (ನಾ). ಆಕಾಶವೇ ದೇಹವಾಗುಳ್ಳವನು ; ಸ್ವರೂಪರಹಿತ : ನುಡಿವುದು ಪುದ್ಗಲ ಕೇಳ್ವುದು ಪುದ್ಗಲ ಕಡೆಗೆ ಪುದ್ಗಲ ಸ್ನೇಹ ಕೋಪ ಜಡಿದಿವ ನೂಂಕಿ ಸನ್ನಿದೆಯೊಳಿರಯ್ಯ ಬಾನೊಡಲಾ ಚಿದಂಬರಪುರುಷ (ಭರತ. ೯೬-೦೫೩). [ಬಾನ್$_3$ + ಒಡಲ್ + – ಅ$_7$]

**ಬಾನ್ಕೆ** (ನಾ). "ಕುಂಬಾರಿಕೆ" (ಕ್ರಿಶಣ್ಣ) : ಬಾನ್ಕೆ, ಅನ್ಕೆ, ಸೀನ್ಕೆ (ಶಬ್ದಾನು. ೩೩೭ ಕ್ರಿಯೋ). [ಬಾನ್$_1$ + – ಕೆ]

**ಬಾನ್ನವಿರ** (ನಾ). ಆಕಾಶವೇ ಕೂದಲಾಗಿರುವವನು ; ವ್ಯೋಮಕೇಶ ; ಶಿವ : "ಎಣ್ಮಯ್ಯಂ . . . ಬಾನ್ನವಿರಂ, ದಪ್ಪಕವಗೆಯುಂ . . . ಅಯ್ಮೊಗಂ — ಈ ೩೩ ಈಶ್ವರಂಗೆ ಪೆಸರ್" (ಕಶಶಾ. ೦-೪೭) ; ಬೆಳ್ಳಸುಂದಲಿದೆಸದಿರ್ದ ಬಾನ್ನವಿರನೊಳ್ವರಿಜಂ ತಳೆದೊಪ್ಪಿ ತೋಱಿಂದಂ (ಬಶಿಂ. ೩-೯) ; ಬಾನ್ನವಿರನ ತಲೆಯುಸಡರ್ದುಂ ಪಾರ್ವತಿಗೆ ಸವತಿಯಾಗಿಯುಂ . . . ಪಾತಾಲದತ್ತಣ್ಗೆ ಪೋದ ತ್ರಿಪಥಗೆ ಕಾಣಿಸಿಕೊಂಡಳ್ (ರಾವಶಿಶ್ಯ. ೩೦-೧೧). [ಬಾನ್$_3$ + ನವಿರ್ + – ಅ$_7$]

**ಬಾನ್ನಿಗಾರ್ಲಕುಪ್ಪೆ** (ನಾ). ಒಂದು ಸ್ಥಳದ ಹೆಸರು : ಅನ್ತೆ ಬನ್ನು ಬಾನ್ನಿಗಾರ್ಲಕುಪ್ಪೆಯ ವಾಟಕೊಟ್ಟಿಯು ಸನ್ನು ಪಾದರಿಯುಳ್ ಕೂಡಿತ್ತು (ಪ್ರ್ಯಅಂ. ೦೯೨೭,೦೦೬-೯೮ ; 726). [?]

**ಬಾನ್ನೀಱೆ** (ನಾ). ಸ್ವರ್ಗಲೋಕದ ಹೆಣ್ಣು ; ಅಪ್ಸರೆ : ಮಡದಿ ಬಾನ್ನೀಱೆಯೊರ್ವಳ್ ಚಂಚಲದೃಷ್ಟಿಯಿನತ್ತಮಿತ್ತಂ ನೋೞ್ಪಿಳ್ (ರಾವಶಿಶ್ಯ. ೦-೪). [ಬಾನ್$_3$ + ನೀಱೆ]

**ಬಾನ್ನುಡಿ** (ನಾ). = ಬಾನುಲಿ ೧ : "ಎಲ್ಲೈ ರಾಯ . . . ಇವಳ ಮನೆಗುಯ್ದು ಮಗಳೆಂದೆ ಪಾಲಿಸು" ಎಂದು ಬಾನ್ನುಡಿಯೊಂದಾದುದು (ಅಮೃತ. ೩೦-೨೬). [ಬಾನ್$_3$ + ನುಡಿ$_2$]

**ಬಾನ್ಪಟ್ಟೆ, ಬಾಂಬಟ್ಟೆ** (ನಾ). ಆಕಾಶದ ದಾರಿ ; ಅಂತರಿಕ್ಷಮಾರ್ಗ : ಗಿರಿಶನೊಡವೆರಸಿ ಗಿರಿಜಾತೆ ಬಾನ್ಪಟ್ಟೆಯೊಳು ಬರುತಲಿ (ಸೌಂದಪು. ೦೨-೩೮) ; ಬಾನ್‌ಬಟ್ಟೆಯಲೆವ ಬರ್ದಿಲರಾ ಪಾಚರೆಯೊಳೇಗಳುಂ ಕುಳಿತಿರ್ದ ಶಿಖರಗಾತ್ರದ ಪರ್ದುಮುದಿಯನಂ ಕಂಡದಕೆ 'ಶಕುನಿಶಿಲೆ' ಪೆಸರಿಟ್ಟರನ್ವರ್ಥಮಂ (ಶ್ರೀರಾಮಾ. ೩೬೩-೩೬). **ಬಾಂಬಟ್ಟೆ** : ಇಂದಿರವಿಲ್ಲ ಪಾಂಗನೆಸಮಂ ಬಾಂಬಟ್ಟೆಯೊಳ್ ಬೀಱಿ ಕಣ್ಗೆತ್ತಂ ಸೋಲಮನೀವ ರತ್ನವಸರಂ ಚೆಲ್ವಾದುದಾ ಬೀದಿಯೊಳ್ (ಕನ್ನಕಾ. ೩೬) ; ಅಸಱ ಕೊಲಗಿಪ ಜಲವೃಂಟೆ ಬಾಂಬಟ್ಟೆಯೊಳು (ನಾಗಕು. ೦-೩೩). [ಬಾನ್$_3$ + ಬಟ್ಟೆ$_{11}$]

**ಬಾನ್ಬರೆಪ** (ನಾ). (ಅಲಂ) ವಿಧಿಲಿಖಿತ ; ದೈವಸಂಕಲ್ಪ : ಆ ಭಯಂಕರ ಗಗನಶಕುನಮಂ ನೋಡಿ, ದೊರೆ ದಶರಥಂ ತನ್ನ ಕೊನೆಗಡೆ ಬಾನ್‌ಬರೆಪಮೆಂದು ಬಗೆದು . . . ಒರೆದನಿಂತುಟು (ಶ್ರೀರಾಮಾ. ೩೬-೬೬).
[ಬಾನ್$_3$+ಬರೆಪ]

**ಬಾನ್ಬೆಳಕು** (ನಾ). ಆಕಾಶದ ಬೆಳಕು ; ಗಗನದ ಕಾಂತಿ : ಕಂಡರಾ ಬಡುಗಣ್ಣು ಬೆಳಕನ್, ಪೊಳದು ಪೊಳೆಯುಸುತಿರ್ಪ ಬಿಳಿಯ ಬಾನ್‌ಬೆಳಕನ್ (ಹೊಂಗಳು. ೩೭-೦೨). [ಬಾನ್$_3$ + ಬೆಳಕು$_3$ (<ಬೆಳಗು$_3$)]

**ಬಾನ್ಮಣಿ, ಬಾಮ್ಮಣಿ** (ನಾ). ೧. ಸೂರ್ಯ : "ತಾವರೆಗೆಳೆಯಂ, ಪಗಲ ಬೊಜಂಗಂ . . . ಬಾನ್ಮಣಿ . . . ಗರಂಗಳಾಣ್ಮಂ — ಈ ೧೧ ಸೂರ್ಯನ ಪೆಸರ್" (ಕಶಶಾ. ೪೮-೨೮) ; "ಬೆಂಗದಿರಂ . . . ಬಾನ್ಮಣಿ ಪಿಂಗದೆ ತಾಂ ನೇಸಱೆಂದು ತಾವರೆಗೆಳೆಯಂ" (ಕಶಕಂ. ೪೦). **ಬಾಮ್ಮಣಿ** : ೨. (ಬೇಡಿದುದನ್ನು ಕೊಡಬಲ್ಲುದೆಂದು ಭಾವಿಸಲಾದ) ಸ್ವರ್ಗಲೋಕದ ಒಂದು ರತ್ನ ; ಚಿಂತಾಮಣಿ : ಮದನನ ಬಾಗದೇಳ್ಗೆಯನು ಭೀಕ್ಷಿಸಿ ಬಾಮ್ಮರಮಂದು ನಾಡೆ ನಿಂದುದು ಬೆದರ್ದತ್ತು, ಬಾಂಬಸು ಕರಂ ಮಿಗೆ ಬಾಮ್ಮಣಿ ಕಲ್ಲಿದೆಂದು ತೋರ್ದುದು ಜಗದಲ್ಲಿ (ಶಂದ್ರಕ್ಕು. ೦೫-೦೯೩).
ಬಾನ್ಮಣಿಗಣ್ಣ = ಸೂರ್ಯನನ್ನು ಕಣ್ಣಾಗುಳ್ಳವನು ; **ಶಿವ** : ಬಾನ್ಮಣಿಗಣ್ಣನು . . . ನೆಲದಳಿದನಣುಗಿಯಾಣ್ಮಂ ಸಿದ್ಧನಂಜೇಶ ರಕ್ಷಿಸುಗೆ ಬಿಡದೆಮ್ಮನು (ರಾಘಶ. ೦-೯). [ಬಾನ್$_3$ + ಮಣಿ$_3$]

**ಬಾನ್ಮೀನ್** (ನಾ). (ಆಕಾಶದ) ನಕ್ಷತ್ರ ; ತಾರೆ : ಬಾರ, ಓ ಬಾನ್ ಮೀನ್ಗಳ ಮೇಟೀ ! (ಅಂತಿಗೂ. ೩೦-೦೦೬೩). [ಬಾನ್$_3$ + ಮೀನ್$_1$]

**ಬಾನ್ಮೀನ** (ನಾ). = ಬಾನ್ಮೀನ್ : ನನ್ನಲ್ಲಿ ಏನೊ ಮಿಸುಗುತ್ತಲಿಹುದು ಬಾನ್‌ಮೀನ ಮಿಣುಕುವಂತೆ (ಹೃದಚ. ೯-೮). [ಬಾನ್$_3$ + ಮೀನ]

**ಬಾನ್ವಕ್ಕಿ, ಬಾನಕ್ಕಿ** (ನಾ). ಒಂದು ಬಗೆಯ ಹಕ್ಕಿ ; **ಬಾನಾಡಿ** : ನರ್ತಿಪ ನವಿಲು ಕೊಂಡಾಡುವ ಬಾನ್ವಕ್ಕಿ ಪಕಿಯ ಬೇಡುವ ಗಿಳಿವಿಂಡು ದೈನ್ಯದಿಂ ಬಿನ್ನಹ ಮಾಡುತಿರ್ದುವು ಮನ್ಮಥಗೆ (ಶೋಚಶ. ೩-೪೯). **ಬಾನಕ್ಕಿ** : ಬಾನಕ್ಕಿಯು ಬೇರೆ ತರದಿಂದ ತನ್ನ ಗೂಡು ಕಟ್ಟಿಕೊಳ್ಳುತ್ತದೆ (ಮುಂಬಯ. ೩-೦೦೯) ; ಸುಗ್ಗಿಯಡೆಗಯ್ದುವಾ ಬಾನಕ್ಕಿಯಂತೆ (ಗೂರ್ಶಕಾ. ೯೬-೩೩೯). [ಬಾನ್$_3$ + ಪಕ್ಕಿ]

**ಬಾಪು** 'ಬಾಪ್ಪು' ನೋ.

**ಬಾಪುರಿ, ಬಾಪೂರಿ, ಬಾಪ್ಪುರಿ, ಬಾಹುಪುರಿ, ಬಾಹುರಿ** (ನಾ). ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ ; ಕೇಯೂರ : "ಬಾಪುರಿ (ಬಾಹುರಿ)–ಬಾಹುಪೂರ(_ಯ) = ಕೇಯೂರ" (ಕರ್ಣಕೋ. ೩೦) ; ಕಂಕೆಲ್ಲಿಯ ಕರ್ಣಪೂರಮದಿರ್ದುತ್ತೆಯ ಬಾಪುರಿ ಮೆಱೆವ ಪೂವಿನ ಸಂತೆ ಕರಂ ಮನೋಹರಂ (ಕೃಶಪಿ. ೯-೬೭) ; ಅಳವಡಿಸಿ ತೋಳ ಬಾಪುರಿ ಬಂದಿ ಭುಜಕೀರ್ತಿಗಳನು (ನವಮೋ. ೦೦-೨೩). **ಬಾಪೂರಿ** : ಗೌರಮ್ಮ ಉಟ್ಟಿಹಳು ಭರಜರಿ ಹೊನ್ನ ಹಾರ ತೋಳಿಗೆ ಒಂಕಿ ಬಾಪೂರಿ (ಹಿಧ್ಯಪು. ೦೯-೬೦) ; ಹರಡೇ ಕಂಕಣ ಕಮಲಾದೇವೀ ಒಂಕೀ ಬಾಪೂರೀ ನಿಟ್ಟೆನೊಳಗೇ ಕುಪುಸಾಪೂ (ಹುಟ್ಟಿಹ. ೦೬೩). **ಬಾಪ್ಪುರಿ** : ಬಾಲೆಯ ಕಡಗ ಕಂಕಣ

ತೋರ ಬಾಪ್ಪುರಿ ಮೇಳೈಸಿರೆ ತನುವಿನೊಳು (ತಕ್ಕರಾ. ೭ ೭೭). **ಬಾಹುಪುರಿ :** ಪೊಳೆವ ರತ್ನದ ಬಾಹುಪುರಿ ಭುಜಕೀರ್ತಿ ತೋಳ್ವಳೆ . . ಧರಿಸಿ ಕಳಿಪುವೆನು (ಗೀತಗೋ. ೭-೪) ; ವಜ್ರದ ಕಡಗಗಳಂ ರತ್ನಬಾಹುಪುರಿ ಉಂಗುರಗಳು . . . ತರಿಸಿ ಅವರನ್ನು ತಾನೇ ಅಲಂಕರಿಸಿ (ಮುದ್ರಾಮಂ. ೦೦೪). **ಬಾಹುರಿ :** ರನ್ನಬಾಹುರಿಯು ಕರಮೆಸೆವ ಜಗ್ಗುಣಿತಕಂಕಣ ಬೆರಳ ಮುದ್ರಿಕೆ ಚೆಳ್ಳುಗುರ ಸಿಂಗರವಿಡಾಯದೊಳ್ (ಅನಂಗಾ. ೭ ೭-೧೪) ; ಬಿಂಕದೊಡ್ಯಾಣ ಬಾಹುರಿ ಪಿಲ್ಲಿ ಮಂಟಿಕೆ ಕಂಠಮಾಲಿಯು ಧರಿಸಿಪಳು (ಕಂದಕೊ. ೦೯೧). 'ಬಾಹುಪೂರಕ', 'ಬಾಹುಪೂರಯು' ಪರಾ.

[<ಸಂ. ಬಾಹುಪೂರ./ ತೆಲು. ಬಾಹುಪುರಿ]

**ಬಾಪುರೆ** 'ಬಾಪ್ಪುರೆ' ನೋ.

**ಬಾಪೂರಿ** 'ಬಾಪುರಿ' ನೋ.

**ಬಾಪ್ಪು**, ಬಾಪು, ಬಾರ್ಪು, ಭಾಪು, ಭಾಪ್ಪು (ಅ). ಶೌರ್ಯ-ಸಾಹಸಗಳನ್ನು ಕುರಿತು ಮೆಚ್ಚುಗೆ, ಸಂತೋಷ, ಅಭಿನಂದನೆ ಮುಂತಾದುವುಗಳನ್ನು ಸೂಚಿಸುವಾಗ ಬಳಸುವ ಒಂದು ಶಬ್ದ : ಪೊಗಳಲ್ ಬಾಪ್ಪಪ್ಪುಕೆಯ್ಯಂ ನೃಪಗುಣಗಣವುಂ ರಟ್ಟಕಂದರ್ಪ್ಪದೇವಂ (ಎಪ್. XIII, ತಿ೬೦:೬ ; ೯೬೮) ; ಅರೆ ಪೋಯೆಂಜ ಬಾಪ್ಪೆಂದು ಹರಿಗನಂ ಗುರು ಪೊಗಟ್ಟಿಂ (ಪಂಪಭಾ. ೨-೬೦) ; ಸ್ಥಿರನೇ ಬಾಪ್ಪಮರಾದ್ರಿಯಿಂದಧಿಕ ಗಭೀರನೆ ಬಾಪ್ಪು (ವ್ಯಾಅಂ. ೧೯೪೩, ೦೩-೪; 1170). **ಬಾಪು :** ಉತ್ತುಂಗಂ ಬಾಪೆಂದು ಧಾತ್ರಿ ಕೈಮುಗಿವಿನೆಗಂ ಉಪವಾಸದೊಳ್ನಿಗಟ್ಟಿಂ ಪ್ರೋಷಧೋಪವಾಸನೆಂಬ ನಾಲ್ಕನೆಯ ಶ್ರಾವಕನಕ್ಕುಂ (ಧರ್ಮಾಮೃ. ೫-೧೩೮) ; ಬಾಪು ಭಾಗ್ಯವೆ ನರಜನ್ಮದೊಳು ಬಂದು ಗುರುಕರುಣವಂ ಹೊತ್ತು ಹರಕಿಂಕರನಾಗಿ ಶರಣರ ಬರವಂ ಪಡೆದೆಂ (ಬಸವ. ೬-೯೯). **ಬಾರ್ಪು :** ಆ ಶೇಷನಂ ತಾಂ ಪಡೆಯಿಂ ಬಾಲಂಬರಂ ಬಾಪ್ಪಿಮಮ ಮಾಲೆವರಾಗ್ಗೆಲ್ಲದಂ . . . ಏಕ್ಕಲಕ್ಷೋಣಿಪಾಳ (ಎಕ. VIII, ಸೊರಬ. ೧೩೯-೩೦ ; 1145). **ಭಾಪು :** ಒಬ್ಬರೊಬ್ಬರ ವಿಧಿಯನೊಮ್ಮಿಂಗೆ ಕೈಗೊಳ್ಳು ಉರ್ವಿಶ ಸೊಡ್ಡಳಾ ಭಾಪು ಭಾಪುರೆ (ಸರ್ವಜ್ಞ. ೧೬೩-೭೭೩) ; ಪೂತು ಸಾರಥಿ ಭಾಪು ಮಝರೇ ಸೂತ ಧಿರುಧಿರು ಎನುತ ರಥಿಕವ್ರಾತವಿಗೆ ಬೋಳೈಸಿಕೊಂಡರು ಹಯದ ವಾಘೆಗಳ (ಕುಮಾ.ಭಾ. ೪-೯೩); ದಶಾಸ್ಯನ ಪದವಿಘಾತಿಗೆ ಪೂತು ಮಝು ಭಾಪೆಂದುದಮರಗಣ (ತೊರವೆ. ೦-೦೫-೩೦). **ಭಾಪ್ಪು :** ಅಂಬರದೊಳ್ ನಿಂದು ಗಜಪ್ರಿಯಾಂಬರಚರರ್ ಜೀಯಯ್ಯ ಭಾಪ್ಪೆಂದು ಜೀಂಕರಿಪನ್ನಂ ವನದಂತಿ ಪೋರ್ವುದು ನಿಷಾದ್ಯರೂಢದಿಂ ಪೋರ್ವವೊಲ್ (ಶಾಂತಿಪು. ೩-೦೦೦); ಭಾಪ್ಪೆನೆ ಪಂಚಾಚರಣಂಗಳಿಂ . . . ದಯೆಗೆಯ್ಗೆ ಸೂರಿಗಳಶೇಷರ್ ನಮ್ಮೊಳಾ ಚಾರವಮಂ (ಜಿನಮುನಿ. ೦-೩).

**ಬಬಾಪ್ಪು, ಭಾಪುಭಾಪು, ಭಾಪ್ಪುಭಾಪ್ಪು** (ದ್ವಿರುಕ್ತಿ): ವಂದಿಜನ ಕಲ್ಪಕುಜಾತನೆನಲ್ಕೆ ಸಾಲ್ದು ಲಕ್ಷ್ಮೀನಿಳಯಂ ಬಬಾಪ್ಪೆಸೆದನೀ ಕಲಿಸಿಂದರ ಬಾಚಿಭೂಮಿಪ (ಕೌಇಇ. IX-i, ೨೨೭-೨೯; 1132); ವಿಳಸದ್[ಉ] ಭೋಗಾವತಿಯೆನೆರೆ (ಸ)ಲೆ ಭೋಗಿಗಳಿಂ ಬಬಾಪ್ಪು ಮಾಳಿಗೆ ರಯ್ಯಂ (ಎಪ್. XV. ೩೨೦-೩೩; 1172); ಅಭಿನವಭಂಗಿಯೊಳರಿಯಂ ವಿಭು ಮಡಿಪಿದೆ ಭಾಪುಭಾಪೆ ನುತ್ತುತ್ಸವದಿಂ ನಭದೊಳ್ ಮುನಿಪತಿ ನಾರದಂ . . . ಹರಿಗಿಂತೆಂದಂ (ಜಗನ್. ೫-೪೮); ಗಗನದಿ ಸುರರು ಕೊಂಡಾಡಿದರು ರಾವುತರರಸನಹುದೋ ಭಾಪುಭಾಪೆಂದುದು ಸಮಸ್ತಜನ (ನಳಚ. ೭-೭); ಸಂಗರರಂಗಭೂಮಿಯೊಳ್ಪರಿದುದು ಭಾಪ್ಪುಭಾಪ್ಪು ಮಝು ಭಾಪ್ಪೆನಲಂಣನ ಗಂಧವಾರಣಂ (ಎಕ. VIII, ಸಾಗರ. ೦೦೯-೨೭; 1079).

**ಬಾಪ್ಪುರಿ** 'ಬಾಪುರಿ' ನೋ.

**ಬಾಪ್ಪುರೆ, ಬಾಪುರೆ, ಭಪ್ಪರೆ, ಭಾಪುರೆ** (ಅ). ಶೌರ್ಯ, ಸಾಹಸಗಳನ್ನು ಕುರಿತು ಹೊಗಳುವಾಗ ಬಳಸುವ ಒಂದು ಕೊಂಡಾಟದ ನುಡಿ : ಬಾಪ್ಪುರೆ ಸಿಂಗಂ ಭಬ್ಯ(ವ್ಯ)ಸೇಬ್ಯ(ವ್ಯ)ಂ ಸು(ಶು)ಚಿ ಸು(ಶು)ಭಚರಿತಂ ಧಾತ್ರಿಯೊಳು ಪುಣ್ಯಪುಂಜ[ಂ] (ಇಇ. XVIII. ೩೯-೦೭; ೯೯೯); ನಾನಾವಿಷಯುತತಿಗೆ . . . ತನ್ನುಣ್ಣಿಗೆಯೆನೆ ವಿದಿತಾಜ್ಞಾನ್ವಿತಂ ಮಾಡಿದಂ ಬಾಪ್ಪುರೆ ಪದ್ಮನಂದತೇಜಾ (ಕೌಇಇ. XI-i, ೦೦೭-೭ ; 1075); ಭಲಾ ! ಭಲಾ ! ಭಲಾ! ಬಾಪ್ಪುರೇ! (ಚಂದ್ರಕ. ೪೩-೦೪). **ಬಾಪುರೆ :** ಬಾಪು [ಕಾಕಾಂ. ಪುರ್]ರೆ ಲೋಕೋತ್ತರಮಾಹಾರ್ತವ್ರತಮುದಂ ಬಣ್ಣಿಪ್ಪನೇವ ಗ್ಣಿಪಾ (ಸಮುತ. ೪-೭೧); ಶಿವ ಶಿವ ಮಹಾದೇವ ಬಾ[ಕಾಕಾಂ. ಭಾ]ಪುರೇ ಸೌಂದರಾ (ಸುಬರ. ೦೭-೦೯೩). **ಭಪ್ಪರೆ :** ಭಪ್ಪರೆ ! ಎರಡು ಹೆಚ್ಚಿನ ಕಣ್ಣು ಉಪಯೋಗಿಸಿದ್ದಕ್ಕೂ ಸಾರ್ಥಕ ಆಯ್ತು (ತಂಮುಟ. ೫೨); ಭಪ್ಪರೇ ವಿದ್ಯಾ ಪುಷ್ಪಾ! (ರಂಗವ. ೨೦೫). **ಭಾಪುರೆ :** ಭಾಪುರೇ ಕಾವ್ಯನಾಥಂ ಗಿರಿಜಾನಾಥಂ (ಗಿಂಕ. ೦-೩೩); ಭಾಪುರೇ ಕೌರವಮಹಾರ್ಣವವೆನುತ ಮಕುಟವ ತೂಗಿದನು ಪಾರ್ಥ (ಕುಮಾ.ಕ. ೦೯-೩೪); ಸವ್ಯಾಪಸವ್ಯದಿ ಬಿಡದೆಸುವ ಚಾಪಗಾಜರ ಪೊಗಳ್ವರು ಭಾಪುರೆ ಮಝು ಭಾಪುರೆಯೆಂದು ಸಗ್ಗಿಗರು (ಹಂಪ್ರಸಾಂ. ೮-೪೦). 'ಬಾಪ್ಪು' ಪರಾ. [<ಬಾಪ್ಪು./ತೆಲು. ಬಾಪುರೆ, ಬಾಪುರೇ]

**ಬಾಬಂದಿ** (ನಾ). ಒಂದು ಬಗೆಯ ತೆರಿಗೆ: ಬಾಳ್ಗುಳಿಯೂರೊಡೆಯಂ ಪರುಪತಿ ಧಟ್ಟಾಜ್ಞೆ ಬಾಬನ್ದಿಯ ಸಂಬನ್ಧದ ರಾಜದ್ರವ್ಯವಾದುದೆಲ್ಲಮಂ ಬಿಟ್ಟರ್ (ಕೌಇಇ. IX-i. ೬೬-೦೦; ಸು. 956). [ ? ]

**ಬಾಬತ್** 'ಬಾಬತ್ತು' ನೋ.

**ಬಾಬತು** 'ಬಾಬತ್ತು' ನೋ.

**ಬಾಬತ್ತು**, ಬಾಬತ್, ಬಾಬತು (ನಾ). ವಿಷಯ ; ಸಂಗತಿ : ಇನ್ನೊಂದಷ್ಟು ಖರ್ಚಿನ ಬಾಬತ್ತಿದೆ (ಸಂಸ್ಕಾರ. ೦೨೫) ; ನಲ್ಲಿ ದೀಪ ಇವುಗಳ ಬಾಬತ್ತೆಲ್ಲಾ ನಿಮಗೇ ಸೇರಿದ್ದು (ರಂಬಿರ. ೪೨). **ಬಾಬತ್ :** ಮೊದಲು ಈ ಬಾಡಿಗೆ ಬಾಬತ್ ಫೈಸಲ್ ಮಾಡಿ (ರಂಬಿರ. ೩). **ಬಾಬತು :** ಫಸಲಿನ ಮಾರಾಟದಿಂದ ಸಿಗುತ್ತಿದ್ದ ದ್ರವ್ಯ ಇತರ ಬಾಬತುಗಳಿಗೆ ವ್ಯಯವಾಯಿತು (ಶಾಸಗ. ೩೨); ನಿನ್ನ ಮುಖದ ಗೆಲವು ನೋಡಿದರೆ ಅದೇನೋ ಭಾರೀ ಬಾಬತ್ತೇ ಇದ್ದಾಗಿದೆ (ನಡೆದಾ. I. ೫೩೩).

[←ಅರ. ಪಾರ. ಹಿಂ. ಬಾಬತ್ ; ಮರಾ. ಬಾಬತ್. ಬಾಬದ್]

**ಬಾಬಯ್ಯ** (ನಾ). ಅಂಗೈ ಅಥವಾ ಪಂಜದ ಆಕಾರದಲ್ಲಿರುವ ಒಂದು ಪ್ರತೀಕ ; P "ಮಧ್ಯ ಇರಾನ್ ಮತ್ತು ಮೆಸೊಪೊಟೇಮಿಯವನ್ನು ಆಳಿದ ಬುವಯ್‌ಹಿ ಸಂತತಿಯವರು ಅಲಿಸಂತತಿಗೆ ಭಕ್ತಿಯಿಂದ ನಡೆದುಕೊಂಡು ಕರ್ಬಲದ ದುರಂತಪ್ರಕರಣದ ನೆನಪಿಗಾಗಿ ಕೂಟ ಕೂಡುವುದಕ್ಕೆ ಪ್ರೋತ್ಸಾಹ ಕೊಟ್ಟರು . . . ಇದೇ ರೀತಿ ಇಂಡಿಯದಲ್ಲೂ ವರ್ಷಂಪ್ರತಿ ಕೂಟಗಳು ಏರ್ಪಟ್ಟವು. ಆದರೆ, ಶೋಕಮೂಲವಾದ ಈ ಕೂಟಗಳು ಬರಬರುತ್ತ, ಇಂಡಿಯದಲ್ಲಿ ಉತ್ಸವಸಂದರ್ಭವಾಗಿ ಪರಿಣಮಿಸಿಬಿಟ್ಟವೆ. ಆದರೆ, ಹುಲಿಯ ವೇಷ ಕರ್ಬಲದಲ್ಲಿ ಸತ್ತು ಕೆಡೆದ ವೀರರ ದೇಹವನ್ನು ಕಾದುವೆಂದು ಹೇಳುವ ಹುಲಿಗಳಿಗೂ, ಅಲಾವಹ್ ಅಥವಾ ಹೊಂಡ ಪಾಳಯದ ಹಿಂಭಾಗದಲ್ಲಿ ಹಾಕಿದ್ದ ಬೆಂಕಿಗೂ, ಪಂಜ ಅಥವಾ ಕೈ ಆಕಾರದ ಗುಡಿ (ಬಾವುಟ) ಮುಹಮ್ಮದ್, ಅಲಿ, ಫಾತಿಮ, ಹಸನ್ ಮತ್ತು ಹುಸೇನರಿಗೂ ಚಿಹ್ನೆಯಾಗಿರಬಹುದು" (ಇಸ್ಲಾಂಸಂ. ೬೭೯): ಮುಸ್ಲೀಮರು ಹಿಂದುಗಳ ಮಧ್ಯ ಬೀದಿಯಲ್ಲಿ ಸಣ್ಣಕುಂಡವನ್ನು ತೋಡಿ, ಎದುರಿಗಿದ್ದ ಕೃಷ್ಣಾಚಾರಿಯ ಮನೆಯ ಜಗುಲಿಯ ಮೇಲೆ ಅಂಗೈ ಆಕಾರವಿರುವ ಬಾಬಯ್ಯನ ಬೆಳ್ಳಿಯ ವಿಗ್ರಹಗಳನ್ನು ಸ್ಥಾಪಿಸಿ, ಹೂವು, ಗಂಧ, ಚಂದನದಿಂದ ಪೂಜಿಸುತ್ತಿದ್ದರು (ಮಗವಾಂ. ೦); ಬಾಬಯ್ಯನ ಹಸ್ತಗಳನ್ನು ಕೆರೆಯಲ್ಲಿ ತೊಳೆದು ಅಲ್ಲಿ

ದಾಯ' ಪಾಡುತ್ತಾ ಅವನು ಬರುವಾಗ . . . ಹಿಂದುಗಳ ಕಣ್ಣಿನಲ್ಲೂ ನೀರು ಬಗುತ್ತಿತ್ತು (ಊರುಕೆ. ೩೦).

**ಬಾಬಯ್ಯನ ಜಲ್ದಿ** = ಮೊಹರಂ ಹಬ್ಬದ ಕೊನೆಯ ದಿನದ ಉತ್ಸವ : ಹಿಂದೆ ಹೆಮ್ಮಳ್ಳಿಯಲ್ಲಿ ಬಾಬಯ್ಯನ ಜಲ್ದಿ ಎಂದರೆ ಹಿಂದುಗಳಿಗೆ ಒಂದು ದೊಡ್ಡ ಹಬ್ಬ (ಮಗಮೂ. ೧). 'ಜಲ್ದಿ' ಪರಾ.

**ಬಾಬಯ್ಯನ ಹಬ್ಬ** = ಬಾಬಯ್ಯನ ಜಲ್ದಿ : ಬಾಬಯ್ಯನ ಹಬ್ಬದ ಸಂದರ್ಭದಲ್ಲಿ ಹುಲಿವೇಷದ ಜೊತೆಗೇ ಬರುವ ಮತ್ತೊಂದು ಮನರಂಜನೆಕಲೆ ಕರಿಬೇವಿನ ಸೊಪ್ಪಿನ ವೇಷ (ಕಜಕ. ೧೮೯).

[ಬಾಬು₀ (p ← ಪಾರ. ಹಿಂ. ಮರಾ. ಬಾಬಾ) + ಅಯ್ಯ₆₁]

**ಬಾಬರ** (ನಾ). ಒಂದು ಬಗೆಯ ಸಿಹಿಯ ಭಕ್ಷ್ಯ : ನೆಱ ಸಣ್ಣಗೋದುವೆಯ ಹಿಟ್ಟ ಸಿಹಿಪಾಲೊಳಗೆ ನುಱುಗುವಂದದಿ ಕಲಸಿ ಹೆಚ್ಚೆಟ್ಟ ತೋರದೊಳು ಕೊಱದ ಕರಟಕೆ ತುಂಬಿ ಪೊಡೆಯದೊಲು ತುಪ್ಪದೊಳಗಡಲು ಚಿಲುಮುರಿಯಾದುದು ಎಱಯಪ್ಪದಂತೆ ಬೇಯಿಸಲು ಬಾಬರವಾಯ್ತು ಬಱಮೊಸರು ಕೆನೆಯನದಱೊಳು ಕಲಸಿ ವುಂಡೆಯಂತಱಯೆ ಪಾವುಡವಾಯ್ತು ದೋಸೆಯಂದದಿನಡಲು ತಾನೆ ಬಾಬ[ಪಾಠಾಂ. ಬಾ]ರ ಮಾದುದು (ಸೂಶಶಾ. ೦-೩೩).

[ ?./ಹಿಂ. ಬಾಬರ್=ಒಂದು ಬಗೆಯ ಮಿಠಾಯಿ ]

**ಬಾಬರಿ** (ನಾ). ಒಂದು ಬಗೆಯ ಸಸ್ಯ : "ಕಗ್ಗೊಱಲೆ ಬಾಬರಿ ಕ್ಷುದ್ರ ಪತ್ರಂ" (ಮಂಗರಾ. ೩೯-೩೭). [ ?./ಪಾರ. ಬಾಬಾರೀ=ಕರಿಮೆಣಸು ; ಮರಾ. ಬಾಬರೀ=ತೃಣಧಾನ್ಯ]

**ಬಾಬಿಂಜಿ** 'ಬಾಗುಜಿ' ನೋ.

**ಬಾಬು₁** (ನಾ). ೧. ವಿಷಯ ; ಸಂಗತಿ : ವಿಳಾಸದಾರ ಸಿಗಲಿಲ್ಲ ಎನಿಸುವುದು ಅಷ್ಟೇನೂ ಖರ್ಚಿನ ಬಾಬಲ್ಲ (ಬಕಾಂಗಿ. ೨೦೦); ಅಲ್ಲಿಯವರೆಗೆ ಅದು ಕೇವಲ ಖರ್ಚಿನ ಬಾಬು (ಅಶೋಕ. ೬೯). ೨. ವಸ್ತು; ಪದಾರ್ಥ : ನಮ್ಮ ತಾಯಿಯವರು ಇನ್ನೂ ಕೆಲವು "ಬಾಬು"ಗಳನ್ನು ಹೆಚ್ಚಾಗಿ ಬೇಡಿದರೂ ಅವುಗಳನ್ನು ಸುಬ್ಬರಾಯರು ಕೊಡಲೊಪ್ಪಿದ್ದರಿಂದ ಮಾಧವನ ಮದುವೆಯ ನಿಶ್ಚಯವೇ ಆಗಿಹೋಯಿತು (ಕೋಳಿಮು. ೨೨೭). ೩. ವಿಭಾಗ; ಬಾಬತ್ತು : ಈ ವರ್ಷ ಆ ಬಾಬುಗಳಿಂದಲೂ ಹಣ ಬಂದಿಲ್ಲ ಪ್ರಭೂ (೧೧ಪ. ೦೩೯); ಸೊಸೆಗೆ ಮರದ ಬಾಗಿಣ ಮೊದಲಾದ ಬಾಬುಗಳಿಂದ ಸಿಗುವ ಸಂಭಾವನೆಯ ಲೆಕ್ಕವನ್ನೂ ಆಚಾರ್ಯರು ಹಾಕಿದರು (ಮನಪಿ. ೪೪). ೪. ಸುಂಕ; ತೆರಿಗೆ : ಈ ಜನಗಳು . . . ಕಾಣಿಕೆ ಕಡ್ಡಾಯ ಮನೆದೆರಿಗೆ ಮುಂತಾದ ಬಾಬುಗಳನ್ನು ಕೊಡಕೆಲಸವಿಲ್ಲ (ಮಹಾವಂ. I, ೦೦೬); ರೈತರನ್ನು ತಗ್ಗಿಸುವ ನಿಮಿತ್ತವಾಗಿಯೂ, ಅರಮನೆಗೆ ಕೊಡಿ ಬರುವಂತೆಯೂ, ಹೆಚ್ಚಾಗಿ ಮನೆದೆರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು (ಮಹಾವಂ. I. ೦೨೪). ೫. ಪರಿಪಾಠ; ಕ್ರಮ; ವಾಡಿಕೆ : ಜೀರರಿಗೂ (ಹೂಗಾರ) ಒಕ್ಕಲಿಗನ ಕಣದಲ್ಲಿ ರಾಶಿಗೆ ಪತ್ರಿ ಹೂದಂಡೆಗಳನ್ನು ಕೊಡುವ ಬಾಬಿದೆ (ಕನ್ನಜಾ. ೦೩೪). ೬. ರೂಢಿಯಾಗಿ ಕೊಡುವ ಪದಾರ್ಥ; ಮಾಮೂಲು : ತುಂಬುವ ರಾಶಿಯಲ್ಲಿ ತಟ್ಟೆಯ ತುಂಬ ಜೋಳವನ್ನು ಒಕ್ಕಲಿಗನು ಹೂಗಾರನಿಗೆ 'ಬಾಬು' ಎಂದು ಕೊಡುವ ವಾಡಿಕೆಯು ಈಗಲೂ ಇರುವುದು (ಕನ್ನಜಾ. ೦೩೪); ಹನ್ನೆರಡು ಕಸಬಿನವರೂ ತಮ್ಮ ತಮ್ಮ ಬಾಬಿಗಾಗಿ ಹೊರಗಡೆ ಕಾದಿರುವರು (ಸುಪಸಂ. ೩೦).

ಬಾಬುವಾರು=ಆಯಾ ವಿಷಯಗಳ ಪ್ರಕಾರ : ಆರು ಬಾಬುಗಳಲ್ಲಿ ಕ್ರಿಮಿನಲ್ ಕೋರ್ಟ್ ಕಾನೂನಿನ ಅರ್ಥವನ್ನು ಹೇಗೆ ತಿರುಗುಮುರುಗು ಮಾಡಿತ್ತೆಂಬುದನ್ನು . . . ಬಾಬುವಾರಾಗಿ ಅವನು ಸಮರ್ಥಿಸಿದನು (ಪುನರು. ೩೬೩). [←ಅರ. ಹಿಂ. ಮರಾ. ಬಾಬ್]

**ಬಾಬು₂, ಬಾಬೂ** (ನಾ). (ಸಭ್ಯಗೃಹಸ್ಥ, ಮಹಾಶಯ ಎಂದು ಮುಂತಾಗಿ ಒಬ್ಬ ವ್ಯಕ್ತಿಯನ್ನು ಸೂಚಿಸಲು) ಗೌರವಸೂಚಕವಾಗಿ ಬಳಸುವ ಪದ : ನಯನಜೋರದ ಜಮೀನುದಾರರು ಒಂದಾನೊಂದು ಕಾಲಕ್ಕೆ ಬಾಬು ಎಂಬುದಾಗಿ ವಿಶೇಷ ವಿಖ್ಯಾತರಾಗಿದ್ದರು (ಇಶ್ವಕ. ೦೨೯); ಬಂಗಾಲಿ ಬಾಬುಗಳು ಒಳಗಿದ್ದಾರೆ (ಶಾರತಿ. ೦೩೩). **ಬಾಬೂ :** 'ಬಾಬೂಜಿ' ಪರಾ. [←ಹಿಂ. ಮರಾ. ಬಂಗಾಲಿ. ಬಾಬೂ]

**ಬಾಬುಗಾರ** (ನಾ). ಆಯಾ ವಿಭಾಗದ ಕೆಲಸಕ್ಕೆ ಸಂಬಂಧಪಟ್ಟ ವ್ಯಕ್ತಿ : ಅವನಿಗೆ ಎಲ್ಲ ಆಯಗಾರರೂ, ಬಾಬುಗಾರರೂ ಬರಲೇ ಬೇಕು (ಕನ್ನಜಾ. ೬೩). [ ಬಾಬು₁ + – ಗಾರ (<–ಕಾಱ) ]

**ಬಾಬುಜಿ, ಬಾಬೂಜಿ** (ನಾ). = ಬಾಬು₂ : ಆ ರಮಣಿಯು ಎದ್ದು ನಿಂತು, "ನಮಸ್ಕಾರ ಬಾಬುಜಿ!" ಎಂದಳು (ಇಶ್ವಕ. ೦೯೩). **ಬಾಬೂಜಿ:** ಈ ಜನವೆಲ್ಲ ನಿಷ್ಕರುಣಿಗಳು ಬಾಬೂಜಿ (ಶಾರತಿ. ೬೩).

[ಬಾಬು₂ + – ಜಿ]

**ಬಾಬುದಾರ** (ನಾ). = ಬಾಬುಗಾರ : ಪ್ರಿಯಜನರು, ಅತಿಥಿಗಳು, ಪೂಜ್ಯಮಂಡಲಿಯು, ಬಾಬುದಾರರು ಇವರೆಲ್ಲರನ್ನು ಅರಸನು ಸಂತೋಷಪಡಿಸಿದನು (ತುಳಸೀ. ೯೯); ಬಗೆಬಗೆಯ ಬಾಬುದಾರರು ತಮ್ಮ ತಮ್ಮ ಕರ್ತವ್ಯಗಳಲ್ಲಿ ತಲ್ಲೀನರಾದರು (ಗಂಗಜಾ. ೪೯). [ಬಾಬು₁ + – ದಾರ್₄]

**ಬಾಬೂ** 'ಬಾಬು₂' ನೋ.

**ಬಾಬೂಜಿ** 'ಬಾಬುಜಿ' ನೋ.

**ಬಾಬೂನ** (ನಾ). ಒಂದು ಬಗೆಯ ಔಷಧೀಸಸ್ಯ : ಬಾದರನ ಬೋಯ, ಬಾದ್ವಾನ, ಬಾಬೂನ (ಮುಂಬಪ್ಪ. ೦೬೩).

[←ಪಾರ. ಬಾಬೂನಹ್ ; ಹಿಂ. ಬಾಬೂನಾ ; ಮರಾ. ಬಾಬುನಾ]

**ಬಾಬೆಹುಕುಮತ್** (ನಾ). ಧರ್ಮದರ್ಶಿಗಳ ಸಭೆ : ಸರ್ಕಾರದವರಿಂದ ನಿಯಮಿಸಲ್ಪಟ್ಟ ಧಾರ್ಮಿಕಕಲಹವಿಮರ್ಶನಸಂಘದವರ ರಿಪೋರ್ಟು ಬಾಬೆಹುಕುಮತ್ ಅಂದರೆ ಕೌನ್ಸಿಲ್‌ದವರಿಂದ ಅನುಮೋದಿಸಲ್ಪಟ್ಟು (ಗುರುಜ. ೯೬). [ ← ಹಿಂ. ? ]

**ಬಾಮ** (ನಾ). ಸೊಗಸು ; ವಿಲಾಸ : ಅವರೊಳೊರ್ವಳ್ . . . ತನ್ನೊಂದು ಬೆಡಂಗಿನ ಬಾಮದಿಂ ಬಳ್ಕಿ ಬಾಗಿ ಕುಪ್ಪಸಮಂ ಸಡಿಲ್ಚಿದಳ್ (ರಾಮಾಶ್ವ. ೦೨೩-೦೪) ; ಆ ಸುಶೀಲೆ ಬಾಗಿ ಬಾಮದಿಂ ಬಲ್ಲಿದರ್ಗೆಂದಳ್ (ಅದ್ಭುತ. ೩೯-೨). [< ಸಂ. ಭಾಮ. /ತಮಿ. ವಾಮ; ತುಳು. ಬಾಮ]

**ಬಾಮ್ಮಣಿ** 'ಬಾನ್ಮಣಿ' ನೋ.

**ಬಾಮ್ಮರ** (ನಾ). (ಬೇಡಿದುದನ್ನು ಕೊಡಬಲ್ಲುದೆಂದು ಭಾವಿಸಲಾದ) ಸ್ವರ್ಗಲೋಕದ ಒಂದು ಮರ ; ಕಲ್ಪವೃಕ್ಷ : ಏನೆಮಗಾ ಬಾಂಬಸು ವಿಂದೇನೆಮಗಾ ಬಾಮ್ಮರಂಗಳಿಂ ಬರ್ಪುದು (ಅಕ್ರೂ. ೪೦-೦೩) ; ಸಂಕಿನ ಪಾಱುಂಬಳೆಯ ಬಾಮ್ಮರದ ಪಟಯಿಗೆಯ ಕಾವರೆಯಂಬಸದ ಬಜ್ಜರದ ಮೆಯ್ಸರಿವೆತ್ತ ನುಣ್ಗೆಱಗಳಿಂದೆಸೆವ ಕೆಂದಳಿರ್ಗಳುಮಂ . . . ಕೂರ್ತು ನೋಡುತ್ತಿರ್ದೊಡಂ (ಚಕವಂ. ೪೯-೪). [ಬಾಂ₂ (< ಬಾನ್₃) + ಮರ₁]

**ಬಾಯ್, ಬಾಯಿ₁** (ನಾ). ೧. ಮನುಷ್ಯರ ಹಾಗೂ ಪ್ರಾಣಿ, ಪಕ್ಷಿಗಳ ಮುಖದಲ್ಲಿ, ಆಹಾರ ಪಾನೀಯಾದಿಗಳನ್ನು ಸೇವಿಸುವುದಕ್ಕೂ ಶಬ್ದದ ಉದ್ಗಾರಗಳಿಗೂ ಸಹಾಯಕವಾಗಿರುವ ಒಂದು ಅವಯವ; ವಕ್ತ್ರ : ತಾಳತರುವಿತತಿಯೊಳ್ ಬೇತಾಳಂಗಳ್ ಪೊಱದು ತೆಱದು ಬಾಯ್ಗಳನಾ ಪಾತಾಳಬಿಲಂಗಳವೋಲ್ . . . ಕುಣಿಯೆ ಭಯಮಯ ನಾದಂ (ಕಬರಾ. ೩-೦೯೩) ; ಪಚ್ಚು ಪರಿಕಲಿಸಿ ಬೆನ್ನಂ ಮುಚ್ಚಿರೆ ಮುಡಿ ಕಳ್ಳ ಬೆಳ್ಳಿವಟ್ಟಿಲ್ ಬಾಯೊಳ್ ಬೆಚ್ಚಂತಿರೆ ಸತಿ ಶಶಿಯು ಕಚ್ಚಿ ನೆಲಕ್ಕಿಟಿದ ರಾಹುವಂ ನೆಱ ಪೋಲ್ತಳ್ (ಕಾವ್ಯಸಾ. ೯೩೩ ಶೂದ್ರಕ) ; ಪಾತಾಳಗಣಂ ಗಳಿವೆತ್ತಂ ತಾಳುಗೆವೆರೆಗಂ ತೆಱದ ಬಾಯನನುಕರಿಸಿರ್ಕುಂ (ಅಂಕ್ರೂ. ೦೨-೬೯). ೨. ಪಾತ್ರೆ, ಚೀಲ ಮೊದಲಾದುವುಗಳ ತೆರೆಯುವ

ಭಾಗ : (೬). ೩. ಕೆರೆಯ ತೂಬು, ಬಚ್ಚಲು, ಮೋರಿ ಮೊದಲಾದುವುಗಳ ಹೊರತುದಿ.— ಕಂಡಿ : (೬). ೪. ಚರ್ಮವಾದ್ಯದ ಮೇಲುಭಾಗ : (೬). ೫. ಹುಣ್ಣು, ಗಾಯ ಮೊದಲಾದುವುಗಳ ಬಿರುಕು.—ತೂತು : ಮೇಲ್ವಾಯ್ದು ಪೊಯ್ದುತ್ತು ಕೈಯೇಱಿಡೆಯಿಂ ಬಾಯೇಱ ಬಾಯಿಂದೊಡನೆ ರುಧಿರಮುಂ ಕಂಡಮುಂ ಸೂಸುವನ್ನಂ ಸಿಡಿಲೆಂಬಾಶಂಕೆಯಿಂ ಪೆಣ್ಬುಲಿ ಪಡೆದು ಮೃಗೇಂದ್ರಸೇವಾನುರಕ್ತಂ (ಶಂಪಾಪು. ೩-೩೩) ; ಏಱ ಬಾಯ್ಗಳ ತಳತ ಖಂಡದ ಸೂಱಿಗೊಂಡವು ಹಿಂದಣಂಬುಗಳು (ಕುಮ್ಯಾದ್ರಾ. ೦೬-೩೭). ೬. ಪ್ರವೇಶದ್ವಾರ ; ಬಾಗಿಲು : ಹುತ್ತಕ್ಕೆ ಏಸು ಬಾಯಾದರೇನು ಸರ್ಪನಿರ್ಪುದು ಒಂದೇ ಸ್ಥಾನ (ಬಸವ. ೯೩೦) ; ಏಱುವಾಯ್ ಥೇಬಾಯ್ಗೆಂದುಮ್ ಮಾಡದ ಓ ಮುನ್ನಗದಿರೇ ! (ಅಂತಿಗೂ. ೩-೬೬). ೭. ಚೂರಿ, ಕತ್ತಿ, ಕೊಡಲಿ ಮೊದಲಾದುವುಗಳ ಅಂಚು;-ತುದಿ : ಎನ್ನಯ ಸಂತತಿಗಾಗಿಸಿರ್ದ ಸ್ನಿನ್ನನೆ . . . ಕರವಾಳ ಬಾಯ್ಗುಮಂಬಿನ ಮೊನೆಗಂ ಮಹಾರಥರ ತಿಂತಿಣಿಗಂ ಪಿಡಿದೆಂತು ನೂಂಕುವೆಂ (ಶಂಕಥಾ. ೦೦-೯೦); ಬೆಲ್ಲದ ಮೋಹಕ್ಕೆ ಸುರಗಿಯ ಬಾಯ ಧಾರೆಯ ನೆಕ್ಕುವಂತಾನುಂ (ರವರ್ಾಮ್ಯ. ೬-೦೬೩); ಜಮದಗ್ನಿರಾಮನು . . . ಪರಶುಗೊಡಲಿಯ ಬಾಯ ಮಸೆವುತ ಬಂದು ಭೂಪನ ದಾಯಿಗರ ಹರೆಗಡಿದು ಹಿಡಿದನು ಕಾರ್ತವೀರ್ಯಕನ (ಸಂಭಶ. ೨೬-೩೦). ೮. ನುಡಿ ; ಮಾತು ; ವಚನ : ಬಲ್ಲರ ಬಾಯಂ ಪೊಕ್ಕೋದಿ ಕಲ್ತ ಕವಿ ಸಕಲಮುಮುಂ (ಆರ್ಣವ. ೦-೩೯) ; ಬಾಯಲಿ ಬಲ್ಲಿದನು ನೀನಹೆ ಭಟಾಂಗದ ಮಾತದಂತಿರಲಿ (ಕುಮ್ಯಾದ್ರಾ. ೩-೩೩). ಬಾಯಿ$_1$ : ೧. "ವದನಂ ಮುಖಂ . . . ಆಸ್ಯಂ ಮೋಱಿ ಬಾಯಿಯೆನೆ ಕಬಳಿಕಂ" (ಶಬ್ದಗಾ. ೯೩-೦) ; ಒಱಲುವಮರರ ಬಾಯಿ ಕೈಗಳ ಮೊಱೆಯ ತೆಗಸಿ . . . ನಂದೀಶ್ವರನು ಹೊಕ್ಕನು ಹೊಯ್ದು ದಾನವರ (ಕುಮ್ಯಾ.ಕ. ೬-೨೯) ; ಅಡಸಿ ಗಿರಿಯನು ನುಂಗುವ ವೀರನ ಬಾಯಿ ಹಿಡಿಯದೆ ಪಣ್ಬಲಗಳನು (ಕಂಪರ ೦೯-೬೩). ೨. ಅಷ್ಟೊಂದು ಹತ್ತಿ ತುಂಬಿದರೆ ದಿಂಬಿನ ಚೀಲದ ಬಾಯಿ ಹೊಲಿಯುವುದು ಹೇಗೆ ? (ಕೂಾ). 'ಬಾಯಿಕಟ್ಟು$_2$' ಪರಾ. ೪. ಪುಷ್ಕರಂ . . . ಡೋಲು, ಮದ್ದಳೆ, ಝಡಾ ಮುಂತಾದ ವಾದ್ಯಗಳ ಬಾಯಿ (ಸಿದ್ಧಾಂತಿ. ೯೦೭). ೬. ಅರಮನೆಗೆ ಆರು ಬಾಯಿ (ಗಾದೆ). ೭. ವರದಾನ ಹೃದಯದಲ್ಲಿ ಎರಡು ಬಾಯ ಅಲಗನ್ನು ಹಾಕಿ ತಿರುವಿದಂತಾಯಿತು (ಜಯಂತ. ೬). ೮. ಬಿನ್ನಹಕೆ ಬಾಯಿಲ್ಲವಯ್ಯ ಅನ್ನಂತ ಅಪರಾಧ ಎನ್ನಲ್ಲಿ ಇರಲಾಗಿ (ಪುರಂದ. ೨-೦೫೦ ಪಲ್ಲವಿ) ; ಈ ವಿಷಯವನ್ನು ಸವತಿಯಾದ ಅವಳೊಡನೆ ನಾನೇ ಪ್ರಸ್ತಾಪಿಸಲು ನನಗೆ ಬಾಯಿ ಬಾರದು (ವಚಕಾ. ೦೩) ; ಬಾಯಿ ಒಳ್ಳೆಯದಾದರೆ ಊರು ಒಳ್ಳೆಯದು (ಗಾದೆ). ೯. (ಅಲಂ) ಮಾತನಾಡುವ ಚಾತುರ್ಯ ; ವಾಕ್ಚಾತುರ್ಯ : ಬಾಯಿಯುಳ್ಳವನಾದರೆ ಬರದಲ್ಲಿಯಾದರೂ ಬದುಕಿಯಾನು (ಗಾದೆ).

**ಬಾಯಂ ಬಡಿ, ಬಾಯ ಬಡಿ** = ಇನ್ನೊಬ್ಬರಿಗೆ ಮಾತನಾಡಲು ಅವಕಾಶ ಕೊಡದಂತೆ ಮಾತಾಡು; ವಾದಿಸು : ಮಾದೇವನ ಪೊದ್ದ ಬಟ್ಟೆಯಂ ತಿಳಿಯದವರ್ ವೇದಗಳೊಳಗುಳ್ಳುದೆಲ್ಲಂ ಮಾದೇವನ ಚರಿತಮೆಂದು ಬಾಯಂ ಬಡಿವರ್ (ಸಮಶ. ಅನುಬಂಧ. I, ೩೭೯-೫೦) ; ಪೆಱರ ಬೈಗುಳಂ ಸೈರಿಸುವುದರಿಂದೊ ಪೆಱರೊಡನೆ ಬಾಯಂ ಬಡಿವುದರಿಂದೋ (ರವರ್ಾಮ್ಯ. ೬-೯೦); ಬಲ್ಲಿದ ನೀನೆಂದು ಬಡವರ ಬಾಯ ಬಡಿಯದಿರೆಚ್ಚಱಿಕೆ (ಪುರಂದ. ೦-೦೬೦-೦). **ಬಾಯಂ ಬಿಡು, ಬಾಯ ಬಿಡು** =೧. ಪ್ರಲಾಪಿಸು; ಅಸಹಾಯಕತೆಯಿಂದ ಹಲುಬು; ಹಳಹಳಿಸಂ : ವಿದ್ವಿಷ್ಟವಿದ್ರಾವಣನ ಮೊನೆಯಂಬಿನಂಬೇಱಿಂಗಳ್ಕಿ . . . ಕಿಂಪುರುಷರ್ ಕಾಪುರುಷರಂತೆ ಬಾಯಂ ಬಿಡೆಯುಂ (ಶಂಕಥಾ. ೩-೯೮ ವ); ಸೇದೆವಟ್ಟು ಬಾಯಂ ಬಿಟ್ಟು ಕಾ[ಪಟಾದು] (ಗದಾಯು. ೯-೨೦ ವ); ಆ ಯುವತಿ ಮೃತವಾಗೆ ಮಱುದಿನ ತಾಯಿ ತಂದೆಯರಳುತೊಱಲುತಂ ಬಾಯ ಬಿಡುತಂ ಕೊಂಡು ಬಂದೆಯ್ದೆಂದು (ಬಸವು. ೩೨-೯೨); ಬಾಯ ಬಿಟ್ಟುದು ಸೇನೆ ಕೌರವರಾಯನಾವೆಡೆ ದಳಕೆ ಬಲ್ಗೈನಾಯಕರು ಕೃಪ ಗುರುಸುತರು ಕೈಗೊಟ್ಟರೇ ಹಗೆಗೆ (ಕುಮ್ಯಾ.ಕ. ೦೨-೨೮). ೨. (ಅಭಿಲಾಷೆ ಪೂರೈಸುವುದನ್ನು) ನಿರೀಕ್ಷಿಸು : ಚಾದಗೆಯಂತಾಕಾಸವನಿಗೆ ಬಾಯಂ ಬಿಡುತ್ತುಂ (ರವರ್ಾಮ್ಯ. ೦-೦೬೦); ಪಾರ್ಥಿವಶರಗ್ನಿಯಿಂ . . . ಎಮ್ಮನುಳುಹೆಂದು ಫಣಿಕುಲಂ ಬಾಯ ಬಿಡಲು (ಕೃಬಿಕ್ಯಾ. ೨೯-೩೭). ೩. ಬೆರಗಾಗು ; ಆಶ್ಚರ್ಯಪಡು; ದಿಗ್ಭ್ರಾಂತಿ ಹೊಂದು : ಬೆಕ್ಕಸಂಬಟ್ಟು ಬಾಯಂ ಬಿಟ್ಟರ್ ಭೀಷ್ಮರ್ (ಕರುದ. ೨೯೦ ಪ್ರಹೋ); ಬಲ ಬಾಯ ಬಿಡೆ ಚಿಗಿದುಬು ಕಡುದುದು ಕರ್ಣನಂದನನ (ಕುಮ್ಯಾ.ಕ. ೨೦-೩೩). ೪. ಸ್ಪಷ್ಟವಾಗಿ ನುಡಿ ; ಪ್ರಕಟಪಡಿಸು: ಕಾಯವಳಿದರು ಅಂತರಂಗವ ಬಾಯ ಬಿಡರು (ನಳಚ. ೩-೨೩). ೫. ಬಿರಿ ; ಸೀಳು ; ಬಿರುಕು ಬಿಡು : ಅರಸ ಕೇಳಾಶ್ಚರ್ಯವನು ಗಜಪುರದೊಳಗೆ ನೆಲ ಬಾಯ ಬಿಟ್ಟುದು (ಕುಮ್ಯಾ.ಸ. ೦೩-೯೦). **ಬಾಯ ಕಟ್ಟು** = ಮಾತಿಗೆ ಸಿಕ್ಕಿಸು ; ಮಾತಿಗೆ ಕಟ್ಟುಬೀಳಿಸು : ಸೂರುಳಿಸಿ ನೆಱೆ ಬಾಯ ಕಟ್ಟಿ ಹಣವಂ ಕೊಳಲು ಕಲಿವುದೆಂದೊಬ್ಬ ಕುಂಟಿಣಿಮಗಳ ಬೋಧಿಸಿದಳು (ಸೋಮಕ. ೨-೯೦). **ಬಾಯ ಕಲ್ಲಿ** = ದನಗಳು ಬೆಳೆಗಳನ್ನು ಮೇಯದಂತೆ ನಿರ್ಬಂಧಿಸುವುದಕ್ಕಾಗಿ ಅವುಗಳ ಬಾಯಿಗೆ ಕಟ್ಟುವ ಹೆಣಿಕೆಯ ಬಲೆ ; ಬಾಯಿಕುಕ್ಕೆ : ದಾನಧರ್ಮ ಮಾಡಿ ಉಳಿದ ಹುಡುಗರ ಗಾದಿಯ ಕಾತಿಯಿಂದ ನಾವಿಬ್ಬರೂ ಹಗ್ಗ, ಬಾಯ ಕಲ್ಲಿಗಳನ್ನು ಮಾಡಿದ್ದೆವು (ಸ್ಮೃತಿಚ. ೩೯೦). **ಬಾಯ ತುತ್ತು** = ಬಾಯಿಗೆ ಸೇರಬೇಕಾದ ಕಬಳ: ಆ ತಾಪಸಾಗ್ರ್ಯನ ಬಾಯ ತುತ್ತಿದನೀ ಪವನಸುತ ತಂದನಱಿಯದೆ (ಕುಮ್ಯಾ.ಆ. ಓಂಞ. ೯-೨೨); ತುಡುಗುಣಿಗಳಿವರಿರು ನಭೋಗ್ರಕೆ ಸಿಡಿದು ಹವಿರ್ಗೊಂಬಮರನಿಕರದ ಹೆಡಕ ಮುರಿಸಿ ಬಾಚುತಿರ್ದರು ಬಾಯ ತುತ್ತುಗಳ (ಕೂರರಾ. ೦-೦೦-೮). **ಬಾಯ ಬಡಕ, ಬಾಯ ಬಡಿಕ, ಬಾಯ ಬಡುಕ** = ಬಡಾಯಿ ಕೊಚ್ಚಿಕೊಳ್ಳುವವನು: ಬಾಯ ಬಡಕ[ಪಾಠಾಂ. ಬಾಯಿಬಡಿಕ]ರು ಬಗುಳಿದೊಡೆ ಹರಿಯಾಯಿತಕೆ ಪಾಸಟಿಯೆ (ಕುಮ್ಯಾ.ಸ. ೯-೯೭); ಬಾಯ ಬಡಿಕರು ಬಂದ ಬಣ್ಣಗೆಯೊಸಗಿ ಬಗುಳುವರು (ಕೃಷ್ಣಾ.ಕಾ. ೦೯-೨೯); ಬಾಯ ಬಡುಕನದೆಂದಿರದೆ ಸಮರಾಯತದಿ ನೋಡೆನ್ನ ಭುಜಬಲದಾಯತದ ರಣಕೌಶಲವ ನೀನು (ಕೂಾಗಯು. ೦೩-೨೦). **ಬಾಯ ಬಡಾಯಿ** = ಜಂಬದ ಮಾತು : ಕೇರಿಯವರ ಮುಂದೆ ವೇಳೆ ಅವೇಳೆಯಲ್ಲಿ ಬರಿಯೆ ಬಾಯ ಬಡಾಯಿ ಹೊಡೆಯುತ್ತಿದ್ದರು (ಪುರುರಾ. ೭೦). **ಬಾಯ ಬಿಯಗ, ಬಾಯ ಬೀಗ, ಬಾಯ ಬೀಯಗ** = ೧. ಮಾತನಾಡದಂತೆ ಮಾಡಿದ ತಡೆ.— ಕಟ್ಟು : ದೇವರ್ಕಳ ಬಾಯ ಬಿಯಗಮಂ ಕಳೆಯಿಸುವೈ (ಅಪಂಕ್ತಿ.೦೩-೩೩). ೨. (ಹರಕೆಯನ್ನು ಹೊತ್ತು) ಬಾಯಿಗೆ ಚುಚ್ಚಿ ಸಿಕ್ಕಿಸಿಕೊಳ್ಳುವ ತಂತಿಯ ಸಾಧನ : ಬೇವಿನುಡಿಗೆ ಬಾಯ [ಪಾಠಾಂ. ಯಿ] ಬೀಗದಿಂ ನಿನ್ನಡಿದಾವರೆಗಳಿಗೆಱಗುವೆನು (ಕುಂಬಾಪಾಂ. ೨೩-೬೭). ೩. ಮಾತಿನಿಂದ ಹೇಳಲಾಗದುದು; ವಚನಾತೀತವಾದುದು: ನಿಗಮದ ಬಾಯ ಬೀಯಗವೀ ಮುಕುಂದನನಱವರಾರು (ಕುಮ್ಯಾ.ಸ. ೯-೯೭); ವೇದಶ್ರುತಿಯ ಬಾಯ ಬೀಯಗ . . . ಸಜ್ಜನಸಮಾಧಿಗಳ ಭೇದಕ್ಕೆ ನಿಲುಕದ ಶ್ರೀಕೃಷ್ಣರಾಯನ ಪಾದವ ಕೂರ್ತು ಪೇಳ್ವತೆಯ (ಪೋಷಕ. ೯-೦). **ಬಾಯ ಬೊಬ್ಬೆ** = ಕೂಗಾಟ ; ಕೇಕೆ : ನಾಯಕರ ಕೆಡೆನುಡಿವ ಬೈಗುಳ ಬಾಯ ಬೊಬ್ಬೆಯ ಕೈಯ ಹೊಯ್ಲುಗಳ ದಾಱಗರಲೇ ಎನುತ ಮೂದಲಿಸಿದನು ತಮ್ಮೊಳಗೆ (ಕುಮ್ಯಾ.ಕ. ೨-೦೩) ; ಬಾಯ ಬೊಬ್ಬೆಯ ಬಿಱುಬುಗಳಲಡಹಾಯಿದೋಡುವ ನಿಖಿಳಮೃಗಸಮುದಾಯವನು ಸಂಹರಿಸುತಿರ್ದುದು ಶಬರಸಂದೋಹ (ಕೂರರಾ. ೩-೩-೦೩). **ಬಾಯಲಿ ಬೆರಳನಿಡು** =

(ಶರಣಾಗತಿಯ ಸೂಚಕವಾಗಿ) ಬಾಯಲ್ಲಿ ಬೆರಳನ್ನಿಟ್ಟುಕೊಳ್ಳು : ಕೈಯ ಕೈದುವನಿಳುಹಿ ಬಾಯಲಿ ಬೆರಳನಿಟ್ಟುದು ವೈರಿಪಾಯದಳ (ಕುಮಾ.ದ್ರೋ. ೩-೧೪). **ಬಾಯ ಲೆಕ್ಕ** = ಮನಸ್ಸಿನಲ್ಲಿಯೇ ಲೆಕ್ಕ ಮಾಡಿ, ಬಾಯಲ್ಲಿ ಉತ್ತರವನ್ನು ಹೇಳಬಹುದಾದ ಲೆಕ್ಕ ; ಲೇಖನಿ, ಬಳಪ ಮುಂತಾದುವುಗಳ ಸಹಾಯವಿಲ್ಲದೆ ಮಾಡುವ ಲೆಕ್ಕ ; ಮೌಖಿಕವಾದ ಲೆಕ್ಕ : ಕೇಂಬ್ರಿಜ್ಜಿನಲ್ಲಿ ಬಾಯ ಲೆಕ್ಕ ಕೇಳಿದ ಹಾಗೆ ರ್‍ಯಾಂಗ್ಲರ್ ಮಹಾಜನರು ನನಗೆ ತಿಳಿಸಿಲ್ಲ (ಗಾಳಿಪ. ೧೭೯). **ಬಾಯಲ್ಲಿ ಅಕ್ಕೀಕಾಳು ಹಾಕಿಕೊಳ್ಳು**=ಆಗಬೇಕಾಗಿದ್ದ ಕೆಲಸವಾಗದೆ ದೀರ್ಘನಿರೀಕ್ಷೆಯಲ್ಲಿ ಇರು : ನಾವೆಲ್ಲರೂ ಮುಂದೇನಾಗುವದೋ ಎಂದು ಬಾಯಲ್ಲಿ ಅಕ್ಕೀಕಾಳು ಹಾಕಿಕೊಂಡು ಕುಳಿತೆವು (ಮೋದಕು. ೯೪). **ಬಾಯಲ್ಲಿ ನೀರೂರಿಸು**=ಆಸೆ ಹುಟ್ಟಿಸು ; ಅಪೇಕ್ಷೆಯನ್ನುಂಟುಮಾಡು : ಅಂಬಾಸಮುದ್ರದ ಶಾಸನ . . . ಬಾಯಲ್ಲಿ ನೀರೂರಿಸುವಂಥ ಭಕ್ಷ್ಯಭೋಜ್ಯಗಳನ್ನು ಹೆಸರಿಸುತ್ತದೆ (ಶಾಸಗ.೩೬) **ಬಾಯಲ್ಲಿ ನೀರೂರು**=ಅಪೇಕ್ಷೆಯುಂಟಾಗು : ಆ ಕಾಲದಲ್ಲಿ ಕವಿಗಳು ಚಕ್ರವರ್ತಿಗಳ ಜೊತೆ ಕುಳಿತು ಊಟ ಮಾಡುತ್ತಿದ್ದರು, ಅದರ ನೆನಪಾದಾಗಲೆಲ್ಲಾ ಬಾಯಲ್ಲಿ ನೀರೂರುತ್ತದೆ (ಅಕ್ಷರಮ. ೯೩). **ಬಾಯಾರೆ** = ೧. ಬಾಯಿಗೆ ತೃಪ್ತಿಯಾಗುವಂತೆ; ಬಾಯಿ ತುಂಬ; ವಚೋಕ್ತಿಯಲಿ ಬಾಯಾರೆ ನುತಿಸಿಸುತಿಸಿ (ಜಸಶ. ೬-೨೬) ; ಶಾಸ್ತ್ರಿಗಳೂ ಹಿರಿಯರೂ ಆತನಿಗೆ ಬಾಯಾರೆ ಛಟಕಿಯಾಡಿದರು (ಗೊರೂಗ್ರಂ. VIII, ಮುಮ್ಮುಡಿ). ೨. ಬಾಯಿಬಿಟ್ಟು; ಸ್ಪಷ್ಟವಾಗಿ ; ಖಚಿತವಾಗಿ : ನಾನು ಬಾಯಾರೆ ಕೇಳುವುದಕ್ಕಿಂತ, ಆತ ಸಂತೋಷದಿಂದ ತಾನಾಗಿ ಕೊಡುವುದನ್ನು ಕೊಂಡರೆ ಭೂಷಣ (ಚಾರುದಾ. ೨೦೦). **ಬಾಯಿ ಕೆಡು**=(ರೋಗ ಮೊದಲಾದುವುಗಳ ಪರಿಣಾಮವಾಗಿ) ನಾಲಗೆಗೆ ರುಚಿ ತಿಳಿಯದಂತಾಗು : ಬಾಯಿ ಕೆಟ್ಟು ಹೋಗಿ ತಿನ್ನಲು ಏನೂ ಸೇರುವುದಿಲ್ಲ (ರೂಢಿ). **ಬಾಯಿಗೆ ಬೀಗ**=ಮಾತಿಗೆ ಹಾಕಿದ ತಡೆ,-ಪ್ರತಿಬಂಧ : ಬಾಯಿಗೆ ಬೀಗವಾಯಿತಲ್ಲ ಖಳರ (ವೈಕುಂವ. ೨-೨೦); ಅವಳ ತಾಯಿ ಎಷ್ಟೋ ಸಲ ಗದ್ದರಿಸಿ ಅವಳ ಬಾಯಿಗೆ ಬೀಗ ಹಾಕುತ್ತಾಳೆ (ಇಶ್ವಶ. ೩೨). **ಬಾಯಿಗೆ ಬೀಳು** = ೧. ತುತ್ತಾಗು ; ಬಲಿಯಾಗು : ನಾನು . . . ತೋಳಗಳ ಬಾಯಿಗೆ ಬೀಳುತ್ತೇನೆ (ಕಾವ್ಯಸ. ೭); ಬಾಧೆಪಡುವ ಬಾಳಿಗಿಂತ ಬಕನ ಬಾಯಿಗೆ ಬೀಳೋದುತ್ತಮ (ಗಾದೆ). ೨. ಜನರ ನಿಂದೆಗೆ ಗುರಿಯಾಗು ; ಜನಾಪವಾದಕ್ಕೆ ಒಳಗಾಗು : ಇದ್ದುದನ್ನು ಇದ್ದಂತೆ ಹೇಳಲು ಹೋಗಿ ಅವನು ಎಲ್ಲರ ಬಾಯಿಗೆ ಬೀಳುತ್ತಾನೆ (ರೂಢಿ). **ಬಾಯಿಗೆ ಮಣ್ಣು ಬೀಳು**=ಏನೂ ಉಳಿಯದಿರು ; ಎಲ್ಲವೂ ಹಾಳಾಗು : ಇನ್ನು ನನ್ನ ಜೀವನದ ಬಾಯಿಗೆ ಮಣ್ಣು ಬಿದ್ದು ಹೋಗುವುದು (ಸಿನ್ನಬೀ. ೧೬೮). **ಬಾಯಿಗೆ ಮಣ್ಣು ಹಾಕು** = ಪೂರ್ತಿಯಾಗಿ ಗತಿಗೆಡಿಸು ; ನಿರ್ಗತಿಕಸ್ಥಿತಿಗೆ ಇಳಿಸು : ಇದ್ದದ್ದನ್ನೆಲ್ಲಾ ಲೂಟಿ ಮಾಡಿ, ಅವನ ಬಾಯಿಗೆ ಮಣ್ಣುಹಾಕಿದ (ರೂಢಿ). **ಬಾಯಿಗೆ ಹಾಕು**=ಲಂಚ ಕೊಡು : ಆ ಗುಮಾಸ್ತನ ಬಾಯಿಗೆ ಹಾಕದೆ ಈ ಕೆಲಸ ಆಯಿತು (ರೂಢಿ). **ಬಾಯಿಯಿಲ್ಲದವ** = ಅಗತ್ಯ ಬಿದ್ದಾಗ ತನ್ನ ಅಭಿಪ್ರಾಯವನ್ನು ತಿಳಿಸಲಾಗದವನು : ಈ ಕಾಲದಲ್ಲಿ ಬಾಯಿಯಿಲ್ಲದವ ಬದುಕಲು ಸಾಧ್ಯವಿಲ್ಲ (ರೂಢಿ). **ಬಾಯಿ ಹಾಕು** = ೧. ತಿನ್ನುವುದಕ್ಕೆಂದು ಬಾಯಿಯಿಡು : ಗಬಕ್ಕಂತ ಸಿಂಹ ಕರುಳಿಗೆ ಬಾಯಿ ಹಾಕೋಹಾಗೆ ಒಂದೇ ಉಸಿರಿಗೆ ಆ ಚಿತ್ರ ಎಳಕೊಂಡು . . . ತುಕ್ಡ ತುಕ್ಡ ಮಾಡಿ ಹಾಕಿದ್ನು (ಬಾಗಿವ. ೪೦) ; ಹಸು ಬಂದು ಸಸಿಗೆ ಬಾಯಿ ಹಾಕಿತು (ರೂಢಿ). ೨. ಬೇರೆಯವರ ಮಾತಿನಲ್ಲಿ ಮಧ್ಯೆ ಪ್ರವೇಶಿಸು ; ಬೇರೊಬ್ಬರ ಮಾತಿನಲ್ಲಿ ತಲೆ ಹಾಕು,—ತೂರಿಸು : ಬೇರೊಬ್ಬನು ಮಾತಾಡುವಾಗಲೂ ಮಾತಾಡುವ ಅಪೇಕ್ಷೆ ತೋರಿಸುವಾಗಲೂ ನಾವು ನಡುವೆ ಬಾಯಿ ಹಾಕಬಾರದು (ಮುಂಬಯಿ. ೪-೯೯); ಈವರೆಗೆ ತುಟಿ ತೆರೆಯದಿದ್ದ ವೀರಣ್ಣ ಈಗ ನಡುವೆ ಬಾಯಿ ಹಾಕಿದ (ಹಾಹುತ್ತ. ೯೩). **ಬಾಯ್ಗೆವರ್, ಬಾಯಿಗೆ ಬರು, ಬಾಯ್ಗೆ ಬರ್** = ೧. ಮಾತಿನಲ್ಲಿ ಹತೋಟಿಯಿಲ್ಲದಿರು : ಈ ಪಾರ್ವಂಗಕ್ಕಟ ಮೆಯ್ಯೊಳೊಂದು ಮರುಳುಂಟಕ್ಕುಂ ಎಂದು ಬಾಯ್ಗೆ ವಂದುದನೆ ನುಡಿಯೆ (ಪಂಪಭಾ. ೩-೬೨ ವ); ಮಹಾತ್ಮನ ವಚನಕ್ಕುತ್ತರಮಂ ಕುಡಲಾಱದೆ ಬಾಯ್ಗೆವಂದಂತೆ ನುಡಿದಪಂ (ಧರ್ಮಾಮೃ. ೯-೧೩೨) ; ಹಿಂದೆಗಳೆಹುವನಿವನು ಬಾಯಿಗೆ ಬಂದ ಪರಿಯಲಿ (ಕುಮಾಭೀ. ೦-೦೦) ; ಕಾಗೆ ಬಾಯ್ಗೆ ಬಂದುದಂ ಗೞಪಿದೊಡೆ (ಪಂಪಶ. ೧೪೪-೮೦) ; ಬಾಯ್ಗೆ ಬಂದ ತೆಱದಿಂ ಪೆಱರಿಂದೊಡೆ ಕೇಳ್ದು (ಪಂಚಾಮೂ. ೧೩-೬೨). ೨. ಕಂಠಪಾಠವಾಗಿರು ; ಉರುಹೊಡೆದಿರು : ಸಂತರ ಎಲ್ಲ ಗೀತೆಗಳೂ ಬಾಯಿಗೆ ಬರುತ್ತವೆ (ದೂರಸ. ೬೩). ೩. ದಕ್ಕು; ಲಭಿಸು : ಕೈಗೆ ಬಂದದ್ದು ಬಾಯಿಗೆ ಬರಲಿಲ್ಲ (ಗಾದೆ). **ಬಾಯ್ಮಾಡು, ಬಾಯಿ ಮಾಡು**=೧. ಪ್ರತಿಜ್ಞೆ ಮಾಡು ; ಶಪಥಮಾಡು : "ಬಾಯ್ಮಾಡು (ಬಾಯ್ + ಮಾಡು)—ಪ್ರತಿಜ್ಞಾಯಾಂ" (ಶಮದ); ಅಶ್ವತ್ಥಾಮಂ . . . ಹಸ್ತಿನಪುರದೊಳ್ ಪಾಂಡವರಿರ್ದರೆ ಗೆತ್ತುಮಲ್ಲಿಗೆ ನಿಟ್ಟಾಲಿಯಾಗಿ ದಾಟಿಯುನಿಟ್ಟು ಮುಟ್ಟೆವಂದು ಬಾಯ್ಮಾಡಿ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ ಯುಧಾಮನ್ಯೂತ್ತಮೌಜಸರಂ ಕೊಂದು (ಪಂಪಭಾ. ೦೩-೦೦೬ ವ). ೨. ಕೂಗಾಡು ; ಗಲಾಟೆ ಮಾಡು : ಸುಮ್ಮನೆ ಬಾಯಿಮಾಡಿ ಏನಾಗಬೇಕಾಗಿದೆ ? (ಕಮಲ. ೨೦೯). **ಬಾಯ್ನಾಯ್**= ಮುತ್ತು; ಚುಂಬನ: ಬಾಯ್ನಾಯೊಳಾವಟ್ಟಱೊಂದೊದವಿ ತಂಬುಲಮಂ ಕೊಳಲ್ ಮಱೆದು ನೀನಿರ್ದಂದಮೇಂ (ಆದಿಪು. ೩-೨೩) ; ಹೃದಯ ಮನಿತ್ತವನಾ ಸಮಯದೊಳೆನೆ ಬಾಯ್ನಾಯೊಳಿತ್ತು ತಂಬುಲಮನಲಂ ಪೊದವಲ್ಕೆ ಪರಸಿ ಬೀೞ್ಕೊಳಿಸಿದನೆಂತಾನುಂ ನಿಜಾತ್ಮಜನನಧಿರಾಜಂ (ಕಾದಂಬ. ೩೦೦). [ದೇ. ॥ ತಮಿ. ಕೋತ. ಪರ್ಜಿ. ವಾಯ್; ಮಲ. ವಾಯ್, ವಾ ; ತುಳು. ಬಾಯಿ; ಕೊಡ. ಬಾಯ್; ತೆಲು. ವಾಯಿ; ಕುರುಖ್. ಬಾಈ ; ಬ್ರಾಹುಈ. ಬಾ]

**ಬಾಯಕ್ಕಿ** (ನಾ). ಬಾಯಿಗೆ ರುಚಿಯಾದ ಆಹಾರ; ಮೃಷ್ಟಾನ್ನ (?): ಬಾಯಕ್ಕಿಯ ಬೇಡುವವರೆಲ್ಲರೂ ಬಡವಾಯಿವಂತರ ನೋವು ಬಲ್ಲರೆ ಹಿ[ಪಾಠಾಂ. ಹ]ಸಿವ ವಿಹಂಗ ಪಶುವಿನ ನೋವ ಬಲ್ಲುದೆ (ಮೂಕ್ಯಸಂ. ೩೦೪-೦೪). [ಬಾಯ್ + ಅಕ್ಕಿ₁]

**ಬಾಯನ, ಬಾಗಿನ, ಬಾಯಿನ** (ನಾ). ಮದುವೆ, ಹಬ್ಬ, ವ್ರತ ಮುಂತಾದ ಶುಭಪ್ರಸಂಗಗಳಲ್ಲಿ ಮುತ್ತೈದೆ, ಬ್ರಾಹ್ಮಣ ಮೊದಲಾದವರಿಗೆ ಕೊಡುವ (ಆಹಾರಪದಾರ್ಥ ಇತ್ಯಾದಿಗಳ) ಕಾಣಿಕೆ : ಉಪಾಯನ: ಬಲಿ ಬಾಯನಂಗಳುಂ ಮಂಗಲತೂರ್ಯ ಮುಮೆಸೆಯೆ . . . ಗೋಪಕಾಂತೆಯರ್ ನೆರೆದಾಗಳ್ (ಜಗಪು. ೩-೨೭); ಸುತನಂ . . . ವಿಜಯಾವತೀಮಹಾಸತಿ ಪಡೆದಳ್ ಸಮಂತಿರದೆ ಬರ್ಪುದು ಬಾಯನಕೆ (ಕುಸುಮಾ. ೬-೦೦೬); ಮುನಿಕಾಮಿನಿಯರ್ಗೆಂದು ಕಟ್ಟಿದ ಬಾಯನಂಗಳಂ ಮಱೆತನಲಾ ! (ರಾಮಾಕ. ೨೪-೨೩). **ಬಾಗಿನ** : ಹರನರಸಿ ಗೌರಿಗೆ ಸಮರ್ಪಿಸಿ ಹರುಷದಿಂ ಬಾಗಿನವನೀಯೆಂದುಱುವ ವೇದವ್ಯಾಸಮುನಿ ಗಾಂಧಾರಿಗಱುಹಿದನು (ಸಮಪ. ೨೦-೬); ಬಾಗಿನಕ್ಕಾಗಿ ಚಕ್ಕುಲಿ ಉಂಡೆಗಳು ಮುಂತಾದ್ದು ತುಂಬಾ ಇತ್ತು (ಶೀಶಿಸಂ. II, ೭) ; ಅರಮನೆಯಿಂದ ಮೊರದ ಬಾಗಿನ ತೆಗೆಸಿಕೊಂಡು ಬಂದಿದ್ದೇನೆ (ಇಂದು. ೬೪). **ಬಾಯಿನ** : ಮಣಿಮಯಭಾಜನಂಗಳೊಳ್ ತೆಕ್ಕನೆ ತೀವಿದ ಪಂಚರತ್ನದ . . . ಕಪ್ಪುರದ ವಳಿಕನ ಬಾಯಿನಂಗಳಂ ಬೀಱು (ಆದಿಪು. ೪-೩೪ ವ); ರನ್ನದ ಬಾಯಿನಕ್ಕೆ ಪಲವಂದದ ಚಂದದ ಸೀರೆಗೆನ್ನವರ್ತನ್ನವರೆನ್ನದಿತ್ತು (ಮುಲ್ಲಿಪು. ೪-೦೦೪) ; ಕೂಡಲಸಂಗಮದೇವರಿಗೆ ಚೀಲಾಳನೆಂಬ ಬಾಯಿ [ಪಾಠಾಂ. ಗ]ನವನಿಕ್ಕಿದರೆ ಹೇಳಾ (ಬಸವ. ೦೩೨) ; ಶಾಕಿನಿಯರನು ಕರೆಯಿಸಿ ನಿನ್ನ ಕಯ್ಯಲಿ ಧುರದೊಳಗೆ ಬಾಯಿನವ ಕೊಡಿಸುವೆನು (ಕುವ್ಯಾಸ. – ಓಂಇ.

೦೩-೪೮). 'ಉಪಾಯನ' ಹೋ.

[< ಸಂ. ವಾಯನ. / ಪ್ರಾ. ವಾಯಣ. / ತುಳು. ಬಾಯನ, ವಾಯನ ; ತೆಲು. ವಾಯನ]

**ಬಾಯರು** 'ಬಾಯಾಜು$_2$' ನೋ.

**ಬಾಯಳಿ** 'ಬಾಯಟಿ' ನೋ.

**ಬಾಯಜಿಕೆ** 'ಬಾಯಾಜಿಕೆ' ನೋ.

**ಬಾಯಜು** 'ಬಾಯಾಜು$_1$' ನೋ.

**ಬಾಯಟಿ**, ಬಾಯಳಿ (ಕ್ರಿ). ೧. ಬಾಯಿಯು ಹರಿದು ಹೋಗು, — ಸೀಳಿ ಹೋಗು : ಆಯದ ನೀರೊಳಗೆ ತನ್ನನಡಸಿದ ನೆಗಟಂ ಬಾಯಟಿ ವಿನಮಿಸಿಸಿಯುಮರೆ ಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗಟ್ದಂ (ಪಂಪಭಾ. ೨-೩೦). ೨. ಬಾಯಿ ಸೋಲು ; ಬಾಯಿ ಬಿದ್ದು ಹೋಗು: ಸಂಬೋಧನೆ ದೀರ್ಘೋಕ್ತಿಯೊಳಿಂಬಾಗಿರೆ ಬರ್ಕುಮದನೆ ಪಲವೆಡೆಗಳೊಳೆಂದುಂ ಬಲ್ಲವರಿಡದಿರ್ಕಾದಂ ಬಾಯಟಿದೂಳ್ವೊಲ್ ಕರಂ ವಿರಸತರಂ (ಶಬ್ದಾ. ೨-೨೩) ; ಭಾನುಮತಿ ಬಾಯಟಿದು ಪುಯ್ಯಲಿಡುತುಂ ಬಂದು ಧರ್ಮನಂದನನ ಕಾಲ ಮೇಲೆ ಕವಿದು ಪಟ್ಟು (ಪಂಪಭಾ. ೬-೩೩ ವ) ; ಹಾಹಾರವದಿಂ ಶೂಲಾಗ್ರದೊಳ್ ಬಾಯಟಿದೊಳಜುವಿನಂ ಕೊಲ್ವುದಂ ಕನ್ನೆ ಕಂಡಳ್ (ಸುಕುಮಾ. ೬-೩೫). ೩. ಗೋಳಾಡು ; ದುಃಖಿಸು : ಇಂತುಟು ಸಂಸೃತಿಧರ್ಮವೇಕೆ ಬಾಯಟಿವುದದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ನೋವುದೋ (ಅಜಿತ. ೩-೩೩); ತರಳಕೆ . . . ಕಾದಂಬರಿಯನುಟಿದಿತ್ತ ಪೋಪೆಯೆಂದು ಬಾಯಟಿದು ಪಳವಿಸುತ್ತಮಿರ್ದಳ್ (ಕಾದಂಬ. ೩೭೮) ; ಗಾಂಗೇಯರ ಮಾತುಗೇಳದಟಿದಂ ಕುರುರಾಜನದರ್ಕೆ ದುಃಖದಿಂ ಬಾಯಟಿಯಲ್ಕೆವೇಡ (ಗದಾಯು. ೧೦-೧೨). **ಬಾಯಳಿ :** ೩. ಕಾವುದೆಂದೊಜಿಲುತ್ತುಂ ಬಾಯಳಿವ ಮದನನಂ ಕಾತ್ಯಾಯನಿ ದಯೆಯಿಂದೆ ನೋಡಿ ನಯದಿಂ ನುಡಿದಳ್ (೧೦೪. ೮-೦೩) ; ಓರ್ವಬಳೆ . . . ಮೊಜಿಯಿಟ್ಟೊಜಲಿ ಬಾಯಳಿಯುತ್ತಿರ್ದಳೆ (ಶಾಪಚಂ. ೮-೩೨). ೪. ಕಿರಿಚು; ಬೊಬ್ಬೆ ಹಾಕು : ಸತ್ಯಕ್ರಿಯನು ಒಳಗಜಿಯದೆ ಪೊಜಗಜಿಯದೆ ಕುಕವಿಗಳಿಳಿಕೆಯ್ವುತಿಹರು ಬಾಯಳಿದು (ಕುಮಾಸಾಂ. ೦-೬೬). ೫. ಬಾಯಿಬಿಡು ; ಬಾಯಿ ತೆರೆ : ಆ ಮೃಗನೇತ್ರೆಯು ರೂಪಳವ ಬಣ್ಣಿಸಲು ಬಾಯಳಿದು (ಕುಮಾಸಾಂ. ೨೯-೧೦೬) ; ಪೋಯೆಂದು ಬಂದೆಮ್ಮ ಕೊರಳ ತಕ್ಕಿಸಿಕೊಂಡು ಬಾಯಳಿದುಟಿ ಹಲುಬುವರು (ಭರತ. ೬೩-೯೬) ; ಮದಮುಖಿನೆ ಬಾಯಳಿದು ಪೇಳಲೇಂ ನಮ್ಮಂಗವಂ ಪರಿಕಿಸು (ಪೋರಾಸು. ೨೩-೨೪). ೬. (ನಾಚಿಕೆ ಅಥವಾ ಸಂಕೋಚದಿಂದ) ಮಾತಾಡಲಾಗದಿರು ; ಮಾತು ತೋಚದಿರು : ತಲೆಗುತ್ತಿ ಕಡುನಾಣ್ಚಿ . . .ಭೂಪಾದಿಗಳ್ ಬಾಯಳಿವುತಿರಲು (ಕದ್ರಾ. ೬-೬೯). [ಬಾಯ್ + ಅಟಿ$_1$]

**ಬಾಯಾಚಾರ** (ನಾ). ಹೊರಗಿನ ನಡವಳಿಕೆ ; ಬೂಟಾಟಿಕೆ ; ಕಪಟಾಚರಣೆ : ತಾವು ಕುಂಪನಿಗೆ ಬಾಯಾಚಾರ ದೋಸ್ತಾರರಾದ್ದರಿಂದ, ಇದಕ್ಕಿಂತ ಅಧಿಕವಾಗಿ ಬರದು ಕಳುಹತಕ್ಕದಿಲ್ಲವಷ್ಟೆ (ರಾಜೇಂದ್ರ. ೬೭); ತಾವು ನಾವು ದೋಸ್ತಾರರಾದ್ದರಿಂದಾ ಬಾಯಾಚಾರಕ್ಕೆ ಸಲುವಾಗಿ ಬಹಳ ಫಲವಾಗಿ ಇರುವಂಥಾದ್ದು ವರ್ಧನೆ ಆಗಿ ಇರಬೇಕು (ರಾಜೇಂದ್ರ. ೦೬೦).

[< ಸಂ. ಬಾಹ್ಯಾಚಾರ]

**ಬಾಯಾಡಿಸು** (ಕ್ರಿ). ಆಸ್ವಾದಿಸು ; ರುಚಿ ನೋಡು : ಸತ್ಯ ಲೋಕದಲಿ ತ್ರಿದಶರುಜಿ ಬಾಯಾಡಿಸಿದರಗ್ಗದ ಧ್ರುವಾದಿಗಳನು (ಜಯ್ಯಾಸ. ೬-೩೪); ಬಾಯಾಡಿಸುತ ಬಣ್ಣಿಸುತ ಕೈಗಳ ನೀಡಿ ಬಹುವಿಧಭಕ್ಷ್ಯ ಭೋಜ್ಯಂಗಳನು ಜಠರದಲಿ ಕೂಡಿದನು ಗೋಪರಿಗೆ ಹರುಷವ ಮಾಡಿದನು (ಶಿಭಾಗ. ೧೦-೨೨-೨೮); ಚಿರೋಟಿಗಳನ್ನೂ ಹುರಿಗಾಳನ್ನೂ ಶಾರದಮ್ಮನವರು ಎಲ್ಲರಿಗೂ ಹಂಚಿದರು. ಇಂಥ ಸಂದರ್ಭದಲ್ಲಿ ಇವನ್ನು ಬಾಯಾಡಿಸುವುದರಿಂದ ಬಹಳ ಪ್ರಯೋಜನವಿದ್ದಿತು (ಪುಣಚಾನ. ೦೨೩). [ಬಾಯಾಡು + — ಇಸು$_3$]

**ಬಾಯಾಡು** (ಕ್ರಿ). ಆಹಾರವನ್ನು ಅಗಿ, — ಜಗಿ : ಬಾಯಾಡಿದರೆ ಕೈಯಾಡೀತು (ಗಾದೆ). 'ಬಾಯಾಡಿಸು' ಪರಾ. [ಬಾಯ್ + ಆಡು$_1$]

**ಬಾಯಾನ್** (ಕ್ರಿ). ೧. ಬಾಯಿ ನೀಡು ; ಬಾಯೊಡ್ಡು : ಪಕ್ಕಿ ಸೋವ ವರಸ್ತ್ರೀಯರ . . . ತಂಬುಲಕೆ ಬಾಯಾಂಪಂದದಿಂ ಬಂದು ಪಾಯ್ವುವು ಕೀರಾಳಿಗಳಲ್ಲಿ ಪಾವುರವಧೂಬಿಂಬಾಧರಕ್ಕಾವಗಂ (ರರ್ಮನಾ. ೨-೨೯). ೨. ಆಸೆ ಪಡು ; ಹಾತೊರೆ : ನಮ್ಮ ಉದಾರಾತಿಥ್ಯಕ್ಕೆ ಬಾಯಾಂತು ಹರಿತರುತ್ತಿರುವ ಆ ತಿರಿಕೂಳ ತೆಲುಂಗರೊಡೆಯನಿಗೆ ಉತ್ತರವೇನು (ಮಂತ್ರಶ. ೦೯-೦೪). [ಬಾಯ್ + ಆನ್$_1$]

**ಬಾಯಾರ್**, ಬಾಯಾರು$_1$ (ಕ್ರಿ). ೧. ಕೂಗಾಡು ; ಬೊಬ್ಬಾಟ ಮಾಡು ; ಆರ್ಭಟಿಸು : ವರರುಚಿಭಟ್ಟನಂ ಪಲರ್ ದುಷ್ಟರೊಂದಾಗಿ ಪೊಲೆಯನೆಂದು ಗೆಲೆ ಬಾಯಾರ್ವರೆಂದೊಡುಟಿದರಳವಾವುದು (ಪಂಚತಂ. ೦೪೬-೦೩); ಧರ್ಮಬುದ್ಧಿ ತತ್ಕ್ಷುರ್ವೆಗಿಡಲ್ಕುಡಿದು ನೀಂ ಗೆಲೆ ಬಾಯ್ದಾರ್ದು ಪೋಗಲ್ಪಡೆಯೆ ವಿಚಾರಂಗೆಯ್ವಂ (ಪಂಚತಂ. ೦೬೦-೮). ೨. ಆಕ್ರಂದಿಸು ; ಪ್ರಲಾಪಿಸು ; ರೋದಿಸು : ಗರಳಭಯದಿಂದೆ ಬಾಯಾರ್ವರಂ ಚೀರ್ವರಂ . . . ಚಂದ್ರಚೂಡಂ ಕಂಡನು (ಜಿನ್ಪು. ೨೨-೦೮); ನಡೆಗೊಳಲ್ ಕಂಡು ಬಾಯಾರ್ವಳಂ ಚೀರ್ವಳಂ . . . ಭರತಾವರಜನಗಲ್ದು ಅಡಿಗಡಿಗೆ ತಿರುತಿರುಗಿ ನೋಡುವಂ ಬಾಡುವಂ (ಕೃಮಿಭಾ. ೦೯-೩೦). **ಬಾಯಾರು$_1$ :** ೩. ಬಾಯಿಬಡಿ ; ಅಲ್ಲಗಳೆ : ಬೆಟ್ಟಕ್ಕೆ ಬೇಗೆಯುಕ್ಕಿದನಿವಂ ಸಾಲವಂ ಕೊಟ್ಟುದಿಲ್ಲೆಂದು ಬಾಯಾರಿದನಿವಂ . . . ಬಟ್ಟೆಯಂ ಬಡಿದು ಬಾಳಿದನಿವಂ (ಜಿನ್ಪು. ೫೬-೩೬).

[ಬಾಯ್ + ಆರ್$_1$]

**ಬಾಯಾರಿಕೆ** 'ಬಾಯಾಜಿಕೆ' ನೋ.

**ಬಾಯಾರು$_1$** 'ಬಾಯಾರ್' ನೋ.

**ಬಾಯಾರು$_2$** 'ಬಾಯಾಜು$_1$' ನೋ.

**ಬಾಯಾಲ್** (ಕ್ರಿ). ಬಾಯಿಗೆ ಬಂದದ್ದು ಆಡು ; ಮನಸ್ವಿಯಾಗಿ ಮಾತನಾಡು : ಕಂಡುದ ನುಡಿದೆನು ಸ್ತುತಿಯೆನ್ನದಿರು ಲೇಸ ಕಂಡು ಬಾಯಾಲ್ವನು ಕವಿಯೇ (ಭರತ. ೨-೬೨). [ಬಾಯ್ + ಆಲ್]

**ಬಾಯಾಳಿ** (ನಾ). ಅತಿಯಾಗಿ ಮಾತನಾಡುವ ವ್ಯಕ್ತಿ: 'ಬಾಯಾಳಿತನ' ಪರಾ. [ದೇ.॥ ತಮಿ. ವಾಯಾಟ ; ತುಳು. ಬಾಯಾಳಿ, ಬಾಯಾಡಿ]

**ಬಾಯಾಳಿತನ** (ನಾ). ಅತಿಯಾಗಿ ಮಾತಾಡುವ ಸ್ವಭಾವ : ಅವಳು ಅತಿಕೋಪಸ್ವಭಾವವುಳ್ಳವಳೂ ಬಾಯಾಳಿತನವುಳ್ಳವಳೂ ಆದುದರಿಂದ . . . ಅವಳನ್ನು ಗಯ್ಯಾಳಿಗೌರಿಯೆಂದು ಕರೆಯುತ್ತಿದ್ದರು (ಕಬೀ. ೪೪).

[ಬಾಯಾಳಿ + — ತನ]

**ಬಾಯಾಜಿಕೆ**, ಬಾಯಜಿಕೆ, ಬಾಯಾರಿಕೆ (ನಾ). ೧. ನೀರಿಗಾಗಿ ಬಾಯಿ ಒಣಗುವುದು, — ಗಂಟಲು ಒಣಗುವುದು ; ತೃಷೆ ; ನೀರಡಿಕೆ : ದೇಶಾಂತ್ರಿಯಾದವ ತಿಗುಣಿ ಚಿಕ್ಕುಟ ಪಸಿವು ಬಾಯಾಜಿಕೆ ಗಂಜಿದರೆಂತಹುದು (ಶೀವರ. ಹ. ೩೬೬-೦೪) ; ಮಗಮಗಿಪ ಪರಿಮಳವನಿಕ್ಕಲದು ನವ್ಯೋದಕಂ ಬಾಯಾಜಿಕೆ[ಪಾಠಾಂ. ಯಜಿಕೆ, ಯಜಿತೆ]ಯಂ ಕೆಡಿಪುದು (ಸೂಕಪಾ. ೨-೪೩). **ಬಾಯಜಿಕೆ :** ೧. ಬಾಯ್ದೆಜಿಯುಸೊಲ್ದು ಕರ್ದಂಕಿ ಕರ್ದಂಕಿ ಪೀರ್ದು ಪೀರ್ದೊಡನಡಸಿರ್ಪ ಬಾಯಜಿಕೆಯಂ ತವಿಪೆಂ ಸವಿ ಪೆಂಪುಗೊಂಬಿನಂ (ಜಕವಿ. ೬-೨೦೨). **ಬಾಯಾರಿಕೆ :** ೧. ತೃಷ್ಣೆಯೆಂದೊಡಂ ದಾಹಮೆಂದೊಡಂ ಬಾಯಾರಿಕೆಯೆಂದೊಡಂ ನೀರಡಿಕೆಯೊಂದರಿವುದು (ಸಕಪ್ಪ. ೨೮೨); ಬಹಳ ದೂರ ನಡೆದು ಬಂದಿದ್ದೀಯೆ. ನಿನಗೆ ಬಾಯಾರಿಕೆಯಾಗಿರಬೇಕು (ದೇವೀಭಾ. ೦೦) ; ಬಾಯಾರಿಕೆ ಬಂದಾಗ ಬಾವಿ ತೋಡಿದ ಹಾಗೆ (ಗಾದೆ). ೨. ನೀರಡಿಕೆಯನ್ನು ಓಂಗಿಸುವ (ಎಳನೀರು, ಪಾನಕ ಮೊದಲಾದ) ಪಾನೀಯ ಅಥವಾ ಬೆಲ್ಲದೊಡನೆ ಕೊಡುವ

ನೀರು ಇತ್ಯಾದಿ : ನಾರಾಯಣನು . . . ಒಂದು ಲೋಟ ಬಾಯಾರಿಕೆಯನ್ನು ತಾನೇ ತಂದು ಕೊಟ್ಟನು (ಮುಂಗಾಮು. ೬೪) ; ಬಂದವರಿಗೆ ಬಾಯಾರಿಕೆ ಕೊಡುವುದು ಬೇಡವೆ ? (ದೇವಹು. ೧೬೦) ; ಆತ ಬಂದಷ್ಟು ಹೊತ್ತು ಅಲ್ಲೇ ವಿರಮಿಸಿದ. ಬಾಯಾರಿಕೆ ಕೇಳಿದ (ಮೂಕಜ್ಜಿ. ೩೩).
[ಬಾಯಾಜು$_1$ + — ಇಕೆ./ತುಳು. ಬಾಯಾರಿಗೆ]

**ಬಾಯಾಜಿಸು** (ಕ್ರಿ). ಬಯಕೆಯನ್ನು ಹುಟ್ಟಿಸು : ಆತ್ಮೇಶ್ವರನ ದಿಟ್ಟಿಗೆ ರೂಪುಗಾಣಿಸಿ ಬಾಯಾಜಿಸುತೆ ಬಾಣತಿರೂಪಿಂದೆ ಬಂದಳು ಹರಿಸೀಲವೆಣಿ ತೊಟ್ಟಿಲ ಕಟ್ಟುವೆಡೆಗೆ (ನೋಹತ. ೧೭–೯೭). [ಬಾಯಾಜು$_1$ + — ಇಸು$_3$]

**ಬಾಯಾಜು$_1$**, ಬಾಯಜು, ಬಾಯಾರು$_2$ (ಕ್ರಿ). ೧. ಬಾಯಿ ಒಣಗು ; ನೀರಡಸು ; ದಾಹವುಂಟಾಗು : ಅರಗಿನ ಪುತ್ಥಳಿಯನುರಿ ಕೊಂಡಡೆ ಉದಕ ಬಾಯಾಜಿ ಬಳಲುತ್ತಿದೆ ಅಗೆಯಿಂ ಭೋ ಭಾವಿಯನಗೆಯಿಂ ಭೋ (ಅವತಂ. ೬–೩೦); ಬಾಯಾಜಿತು ಎಂದು ಬಾವಿನೀರಿಗೆ ಪೋದೆ ಬಾವಿಲಿ ಜಲ ಬತ್ತಿ ಬಜಿದಾಯ್ತು (ಶೂರಂದ. ೪–೬೩–೦). ೨. ಹಂಬಲಿಸು ; ಹಾರೈಸು ; ತೀವ್ರವಾಗಿ ಅಪೇಕ್ಷಿಸು : ಚೆನ್ನಮಲ್ಲಿಕಾರ್ಜುನಯ್ಯ ಬಂದಾನೆಂದು ಬಟ್ಟೆಗಳ ನೋಡಿ ಬಾಯಾಜುತ್ತಿಹೆನು (ಮಹಾದೇ. ವ. ೧೪೧–೩೨೦) ; ನೂಜು ಜನ್ಮವ ತಿರುತಿರುಗಿ ಬಾಯಾಜಿ ಕಾವಿಸಲೀತನಂದದ ನೀಜಿರುಂಟೇ ನಳಿನ ಭವ ನಿರ್ಮಿಸಿದ ಸೃಷ್ಟಿಯಲಿ (ಕೊರಂ. ೩–೩–೩೬). ೩. ಗಾಬರಿಯಾಗು ; ದಿಗಿಲುಗೊಳ್ಳು : ಬಾಯಾಜಿದಿರಿ ಕಳ್ಳೀಜುಕಾಜಿನ ಕರುಳ ಹರಹುವೆನು (ಕುಮಾವ್ಯಾ. ೧೬–೩೦); ಬಾಯಾಜಿದುದು ಜನಕೆ ಲಯ ದೋಜಿದುದು ಜಗಕೆ (ಕಿರಾತ. ೩೦–೪). ೪. ಆಯಾಸಗೊಳ್ಳು ; ಬಳಲು : ಮಿಥ್ಯಾದೃಷ್ಟಿಗಳ್ . . . ಕುಚರ್ಚೆಗಳಿಂ ಬಾಯಾರ್ಪೊಡಂ ಸಜ್ಞಾನಮಿಲ್ಲದೆ ದರ್ಶನಮಂ ಪೊರ್ದದೆ ಮೋಕ್ಷಮನೈದಲ್ಬಾರದು (ಧರ್ಮಾಮೃ. ೭–೩೨) ; ದೂರದಲ್ಲಿರ್ದನೆಂದು ಆನು ಬಾಯಾಜಿ ಬಳಲು ತ್ತಿರ್ದೆನಯ್ಯ (ಮಹಾದೇ. ೪. ೧೧೦–೨೩೭); ಬಾಯಾಜಿ ಬೇಜಿ ಚಿತ್ರಾಂಗದೆ ಹಲುಬಲು (ಜೈಮಿಭಾ. ೨೪–೦). **ಬಾಯಜು :** ೧. ಒಜಿತಯಾಜಿತು ವರುಣಶರ ಬಾಯಜಿತು ನೀರಡಿಸಿದುದು (ಕುಮಾವ್ಯಾ. ೧೯–೯೮).
**ಬಾಯಾರು$_2$ :** ೧. ಬಳಲಿ ಬಾಡಿ ಬಾಯಾರಿ ಹಸಿದ ತೋಳನು ಹರಿವ ಹಳ್ಳವನೆ ಸಾರಿ ತೃಷೆಯ ಕಳೆಯಲು ನೀರಿಗಿಳಿಯೆ (ಕುಪು. ೧೨–೧) ; ಪ್ರೇಮಲತೆ ಬಾಯಾರಿ ಕಾತರಿಸಿತಾವುದನೊ ತಾನರಿಯದುದ ಬಯಸಿ (ಚಿತ್ರಾಂಗ. ೭–೧೭೩). ೨. ಯುವತಿ ಪುರುಷನ ಬಯಸಿ ಬಾಯಾರು ವದನರಿದುಯವಳ ಸತ್ಕಾರ್ಯ ತನ್ನಿಂದ ತಡೆದಿದೆಯೆನುತ ರವಿಯಸ್ತ ಮಯಮಾಗಲು (ನವಪೋ. ೨೬–೭). ೩. ನುಡಿ ಸನ್ನಿಯೆಂದೆನಲ್ ಬಡವ ಬಾಯಾರಿದಂ (ಕಾಂಚೀ. ೧೬೦–೩೫೬). ೪. ವೀರವಿಕ್ರಮವಿಜಯ ರೇದಾಗೆ ದೈನ್ಯದಲಪಾರಚಿಂತೆಯೊಳು ಬಾಯಾರುವರೆ ದೇವ ನೀಂ (ವೆಂಕಾಚಾ. ೪–೦–೨೩). [ಬಾಯ್ + ಆಜು$_1$]

**ಬಾಯಾಜು$_2$**, ಬಾಯರು (ನಾ). ೧. = ಬಾಯಾಜಿಕೆ ೧: ಬಾಯಾಜಿದ ಪರುಷಪ್ಪನೀರ್ಗುಡಿಯಲು ಮತ್ತು ಬಾಯಾಜು ಪೆಚ್ಚುವಂದದೊಳು (ಶಶಿ. ೬೩–೩೯). **ಬಾಯರು :** ೨. = ಬಾಯಾಜಿಕೆ ೨ : ಮನೆಗೆ ಬಂದು ಬಾಯರು ಕೊಡಿ ಅಂದಾಗ ಬರಿ ನೀರು ಕೊಟ್ಟರೆ ಸೂರನ ಮುಖ ಸಪ್ಪಗೆ ಆಗುತ್ತದೆ (ಮಲೆಮ. ೩೭). ೩. (ಕರಾ) ದನಕರುಗಳಿಗೆ ಕಂಡಿಯಲು ಇಡುವ, ತವಡು ಬೆರಸಿ ಕುದಿಸಿದ ನೀರು : ದನಗಳು ಹಟ್ಟಿಯನ್ನು ಸೇರುತ್ತವೆ . . . ಅವಕ್ಕೆ ಪ್ಮೈಲಿಗೆಯಲ್ಲಿರುವಾಗಲೇ ಅಕ್ಕಚ್ಚು, ಬಾಯರು ಹಾಕಿ. ಬಳಿಕ ಸ್ನಾನ ಮಾಡಿ . . . ಕಾಲುದೀಪ ಉರಿಸಬೇಕು (ಮಲೆಮ. ೦೨). [< ಬಾಯಾಜು$_1$]

**ಬಾಯಿ$_1$** 'ಬಾಯ್' ನೋ.

**ಬಾಯಿ$_2$** (ನಾ). ೧. ಹೆಂಗಸರ ಹೆಸರಿನ ಕೊನೆಯಲ್ಲಿ ಗೌರವಾರ್ಥವಾಗಿ ಸೇರಿಸುವ (ತಾಯಿ ಅಥವಾ ಅಮ್ಮ ಎಂಬರ್ಥದ) ಪದ : ಹಾಗೆಯೇ ಒರಗಿಕೊಂಡ ಕಮಲಾಬಾಯಿಗೆ ಕ್ರಮೇಣ ಎಚ್ಚರಾಗಿತ್ತು (ಕಮಲೀ. ೯೬೯). ೨. ಮನೆಯ ಒಡತಿ ; ಯಜಮಾನಿ : ಆಚಾರ್ಯರು ಬಂದ ಮೇಲೆ 'ಬಾಯರು' ಒಬ್ಬರ ಬೇಕೇ ಬೇಕು (ಶ್ರೀರಂಗ. ೧೬೦) ; ಬಾಯಿ, ರಾಯರು ಎರಡು ಊಟ ಕಳಿಸಿದ್ದಾರೆ (ಕಪ್ಪುಹು. ೨೮). ೩. ಹೆಂಗಸು ; ಸ್ತ್ರೀ : ಮರಾಠರ ಬಾಯಿಯೊಬ್ಬಳನು ಪಾತ್ರ ತಿಕ್ಕಲು ಗೊತ್ತುಮಾಡಿದೆ (ಸ್ವಪ್ನ. ೨೩೩). ೪. ಸಂಗೀತ, ನೃತ್ಯಗಳಿಂದ ಜೀವಿಸುವವಳು ; ಪಾತ್ರದವಳು ; ವೇಶ್ಯೆ : ಇಷ್ಟು ಪ್ರಸಿದ್ಧ 'ಬಾಯಿ' ಯ ಮನೆಯಲ್ಲಿ ಸಂಗೀತಸಾಮಗ್ರಿಯೊಂದೂ ಕಾಣಲಿಲ್ಲ (ಶ್ರೀರಂಗ. II. ೦೪೧).
[← ಹಿಂ. ಮರಾ. ಬಾಈ]

**ಬಾಯಿಕ** (ನಾ). ಒಬ್ಬಾತನ ಹೆಸರು : ಆಯುದ ಮೆಯ್ಗಲಿ ಬಾಯಿಕ ನೆಮ್ಮ ನೆಗಟ್ಟಿಯಂ ಪ್ರಕಟಿಸಿದನ್ ಶ್ರೀದಯಿತನ ಬಾಯಿಕನ ಮನೋದಯಿತೆಗೆ . . . ತಾಮಾದರ್ ತನಯರ್ ಪೇಟಲ್ ಮಾದುವರಂ ದೋಯಿಲಮ್ಮನೆಪ್ಪರ್ ಪೆಸರಿಂ (ಎಕ. II. ೦೩೯–೨ ; ಸಂ. 950). [ ? ]

**ಬಾಯಿಕಟ್ಟು$_1$** 'ಬಾಯ್ಕಟ್ಟು$_1$' ನೋ.

**ಬಾಯಿಕಟ್ಟು$_2$** 'ಬಾಯ್ಕಟ್ಟು$_2$' ನೋ.

**ಬಾಯಿಕಡಾಣೆ** (ನಾ). ಕುದುರೆಯ ಬಾಯಿಗೆ ಹಾಕುವ ಕಡಿವಾಣ : "ಕವಿಕಾ, ಖಲೀನಃ – ೨ ಬಾಯಿಹಗ್ಗ, ಬಾಯಿಚಿಕ್ಕ, ಲಗಾಂ, ಬಾಯಿ ಕಡಾಣೆ, ಕಣಿಕೆ" (ಸಿದ್ಧಾಂತಿ. ೨೫೦). [ಬಾಯಿ$_1$ (< ಬಾಯ್) + ಕಡಾಣೆ]

**ಬಾಯಿಕಲು** 'ಬಾಯ್ಕಾಲ್' ನೋ.

**ಬಾಯಿಕಲ್ಲಿ** (ನಾ). (ದನಗಳ ಬಾಯಿಗೆ ಕಟ್ಟುವ) ಬಾಯಿಕುಕ್ಕೆ : "(ಕಚ್ಚದಂತೆ, ತಿನ್ನದಂತೆ, ತೋಡದಂತೆ, ಪ್ರಾಣಿಗಳ ತಲೆಗೆ ಕಟ್ಟುವ) (ಬಾಯಿ)ಕುಕ್ಕೆ, ಬಾಯಿಕಲ್ಲಿ" (Muzzle. ಇಂಕನ).
[ಬಾಯಿ$_1$ (< ಬಾಯ್) + ಕಲ್ಲಿ$_1$]

**ಬಾಯಿಕಲ್ಲು** 'ಬಾಯ್ಕಾಲ್' ನೋ.

**ಬಾಯಿಕಾಲು** 'ಬಾಯ್ಕಾಲ್' ನೋ.

**ಬಾಯಿಕುಕ್ಕೆ** (ನಾ). = ಬಾಯಿಕಲ್ಲಿ : ಆಡಿಕೊಳ್ಳುವ ಬಾಯಿಗಳಿಗೆ ಬಾಯಿಕುಕ್ಕೆ ಹಾಕುವುದಕ್ಕಾದೀತೆ ? (ಬಿಳುಮ. ೬೮).
[ಬಾಯಿ$_1$ (< ಬಾಯ್) + ಕುಕ್ಕೆ$_1$]

**ಬಾಯಿಕೊಚ್ಚು**, ಬಾಯ್ಕೊಚ್ಚು (ಕ್ರಿ). ತನ್ನನ್ನು ತಾನೇ ಹೊಗಳಿಕೊಂಡು ಮಾತಾಡು; ಜಂಬ ಕೊಚ್ಚಿಕೊಳ್ಳು; ಬಡಾಯಿ ಕೊಚ್ಚು: ಸೊಸೆಯನ್ನು ಹೊಟ್ಟೆಯ ಮಗಳಿಗಿಂತ ಹೆಚ್ಚಾಗಿ ನೋಡಿಕೊಂಡಿದ್ದೇನೆ . . . ಎಂದು ಬಾಯಿಕೊಚ್ಚಿಕೊಂಡರು (ಕಪ್ಪುಹು. ೧೦). **ಬಾಯ್ಕೊಚ್ಚು :** ಚೆಂಬೊನ್, ಕರ್ಬೊನ್, ಬೆಳ್ಳಿ, ಬಂಗಾರಂಗಳನ್, ನಾನಲ್ಲದಾರ್ ತೋರ್ದರಯ್ ಬಿಜಿದೆ ಬಾಯ್ಕೊಚ್ಚುವನನುಬಿದು ಆರುಮಲ್ತೆಂದೆ ಬಗೆದಪೆನ್ (ಬಿದ್ಧಶ್ರ. ೨೬–೩೬೦). [ಬಾಯಿ$_1$ (< ಬಾಯ್) + ಕೊಚ್ಚು$_1$]

**ಬಾಯಿಕೊಬ್ಬು** 'ಬಾಯ್ಕೊಬ್ಬು' ನೋ.

**ಬಾಯಿಕೋಲು** 'ಬಾಯ್ಕಾಲ್' ನೋ.

**ಬಾಯಿಗರೆ** (ಕ್ರಿ). ನುಡಿ ; ಧ್ವನಿ ಮಾಡು : ಪಿರಿದು ರಂಜಿಸುವುದಂತದ ಜೊಳುಗ್ಗಡಿಸುವ ಗೊರವ ಬಂದುದ ಬಾಯಿಗರೆವ ಅರಗಿಳಿ (ನೇಮಿಸಂ. ೦–೭೪). [ಬಾಯಿ$_1$ (< ಬಾಯ್) + ಕರೆ$_1$]

**ಬಾಯಿಗಾಳೆಗ** 'ಬಾಯ್ಗಾಳೆಗ' ನೋ.

**ಬಾಯಿಗೂಡಿಸು** (ಕ್ರಿ). ಹೊಂದಿಸು ; ಸರಿಗೊಳಿಸು : ಲೆಕ್ಕ ಬಾಯಿ ಗೂಡಿಸುವ ಬಗೆ ಇದಲ್ಲ (ಇಕ್ಕಟ್ಟು. ೨೩೦).
[ಬಾಯಿಗೂಡು (< ಬಾಯ್ಗೂಡು) + — ಇಸು$_3$]

**ಬಾಯಿಗೂಡು** 'ಬಾಯ್ಗೂಡು' ನೋ.

**ಬಾಯಿಚಪಲ** (ನಾ). ತಿನ್ನುವ ಬಯಕೆ ; ಜಿಹ್ವಾಚಾಪಲ್ಯ : ಬಾಯಿ ಚಪಲದವರು ಏನಾದರೂ ಮಾಡಿಕೊಂಡು ತಿಂದದ್ದು ಪತ್ತೆಯಾದರೆ ನಂದಾದೀಪದ ಖರ್ಚನ್ನೆಲ್ಲಾ ಅವನೊಬ್ಬನೇ ದಂಡವಾಗಿ ತೆರಬೇಕಾಗಿತ್ತು (ಹುಟ್ಟಿಹ. ೨೦). [ಬಾಯಿ$_1$(<ಬಾಯ್)+ಚಪಲ]

**ಬಾಯಿಚಿಕ್ಕ** (ನಾ). = ಬಾಯಿಕಡಾಣಿ : "ಕವಿಕಾ, ಖಲೀನಃ — ೨ ಬಾಯಿಹುಗ್ಗ, ಬಾಯಿಚಿಕ್ಕ, ಲಗಾಂ, ಬಾಯಿಕಡಾಣಿ, ಕಂಣಿಕೆ" (ಸಿದ್ಧಾಂತಿ. ೨೫೦). [ಬಾಯಿ$_1$ (<ಬಾಯ್)+ಚಿಕ್ಕ$_2$ (<ಸಿಕ್ಕ$_1$)]

**ಬಾಯಿಚ್ಚೈ** (ನಾ). = ಬಾಯಿಚಪಲ : ಕೊಲ್ಲೆನಯ್ಯಾ ಪ್ರಾಣಿಗಳ ಮೆಲ್ಲೆನಯ್ಯಾ ಬಾಯಿಚ್ಚೈಗೆ (ಬಸವ. ೬೩೫).
[ಬಾಯಿ$_1$ (<ಬಾಯ್)+ಇಚ್ಚೈ]

**ಬಾಯಿಜಾಳಿಗೆ** (ನಾ). = ಬಾಯಿಕಲ್ಲಿ : ಇವೆಗಳಿಗೆ ಸಹಿತ ಬಾಯಿಜಾಳಿಗೆ ಹಾಕಲಿಕ್ಕೆ ಸುರೂ ಮಾಡ್ಯಾರ! (ಬಸೆ. ೬) ; ಎಡೆಕುಂಟೆ ಹೊಡೆಯುವಾಗ ದನಕ್ಕೆ ಬಾಯಿಜಾಳಿಗೆ ಹಾಕಬೇಡವೆ ? (ಅದೇ).
[ಬಾಯಿ$_1$ (<ಬಾಯ್)+ಜಾಳಿಗೆ$_1$]

**ಬಾಯಿಜ್ವರ** (ನಾ). (ಸಾಮಾನ್ಯವಾಗಿ ಬೇಸಗೆಯಲ್ಲಿ) ದನಗಳಿಗೆ ಬರುವ ಒಂದು ಬಗೆಯ ಬಾಯಿಹುಣ್ಣು : ಈ ಎಮ್ಮೆಗೆ ಒಂದು ಸಲ ಕಾಲುಜ್ವರ ಬಾಯಿಜ್ವರ ಆಯಿತು (ಹೇಮಾಶೀ. ೬೪). 'ಕಾಲುಜ್ವರ' ವರಾ. [ಬಾಯಿ$_1$ (<ಬಾಯ್)+ಜ್ವರ]

**ಬಾಯಿಡಬ್ಬು** (ನಾ). ಮಾತಿನ ಆಡಂಬರ ; ಬಡಾಯಿ : ಶೀನಮಯ್ಯರ ಹತ್ತಿರ ಆಪಾಟ ರೂಪಾಯಿ ಎಲ್ಲಿಂದ ಬರಬೇಕು ? ಸುಮ್ಮನೆ ಬಾಯಿ ಡಬ್ಬಿಗೆ ಹೇಳಿರಬೇಕು (ಮರಳು. ೦೫೪).
[ಬಾಯಿ$_1$ (<ಬಾಯ್)+ಡಬ್ಬು$_4$ (<ದಂಬ)]

**ಬಾಯಿತಪ್ಪು$_1$** (ಕ್ರಿ). ಮಾತಾಡುವಾಗ ಎಚ್ಚರವಿಲ್ಲದಿರು ; ಅಜಾಗರೂಕತೆಯಿಂದ ಬಾಯಿ ಬಿಡು : ಇಂದಿರೆಯು ಒಂದು ದಿನ . . . ಬಾಯಿತಪ್ಪಿ "ಇದು ಕಾಲಾದಿಳಿಯ ಡಕಾಯಿತಿ!" ಎಂದು ಬಿಟ್ಟಳು (ಬೀಕು. ೦೦೪) ; ನಾನು ಬಾಯಿತಪ್ಪಿ ಒಂದು ಹೇಳುವುದಕ್ಕೆ ಬದಲು ಇನ್ನೊಂದು ಹೇಳಿದ್ದೆ (ಮಾರ್ಗದ. ೬೩). [ಬಾಯಿ$_1$ (<ಬಾಯ್)+ತಪ್ಪು$_1$]

**ಬಾಯಿತಪ್ಪು$_2$** (ನಾ). ಎಚ್ಚರ ತಪ್ಪಿ ಆಡುವ ನುಡಿ ; ಅರಿವಿಲ್ಲದೆ ಹೊರಬರುವ ಮಾತು : (೯). [< ಬಾಯಿತಪ್ಪು$_1$]

**ಬಾಯಿತೀಟೆ** (ನಾ). ಇತರರನ್ನು ದೂರಬೇಕೆಂಬ ಆತುರ,–ಆಡಿಕೊಳ್ಳ ಬೇಕೆಂಬ ಚಾಪಲ್ಯ : ಈಗಲೆ ನಮ್ಮ ಮೇಲೆ ಕತ್ತಿ ಕಠಾರಿ ಹಿಡಿದು ಎಷ್ಟೋ ಜನ ನಿಂತಿದ್ದಾರೆ. ಅವರ ಬಾಯಿತೀಟೆಗೆ ಗ್ರಾಸ ಒದಗಿಸಿದ ಹಾಗಾ ಗುತ್ತೆ (ಪಟಿಜಾ. ೩೦). [ಬಾಯಿ$_1$ (<ಬಾಯ್)+ತೀಟೆ (<ತೀಂಟೆ$_1$)]

**ಬಾಯಿತೆಗೆ** 'ಬಾಯ್ದೆಗೆ' ನೋ.

**ಬಾಯಿತೆರೆ** 'ಬಾಯ್ದೆಱೆ$_1$' ನೋ.

**ಬಾಯಿದುತ್ತು** 'ಬಾಯ್ದುತ್ತು' ನೋ.

**ಬಾಯಿದೆಱೆ$_1$** 'ಬಾಯ್ದೆಱೆ$_1$' ನೋ.

**ಬಾಯಿದೆಱೆ$_2$** 'ಬಾಯ್ದೆಱೆ$_2$' ನೋ.

**ಬಾಯಿಧಾರೆ** 'ಬಾಯ್ಧಾರೆ' ನೋ.

**ಬಾಯಿನ** 'ಬಾಯನ' ನೋ.

**ಬಾಯಿನಂಗುಡು** 'ಬಾಯಿನಂಗೊಡು' ನೋ.

**ಬಾಯಿನಂಗೊಡು**, ಬಾಗಿನಕೊಡು, ಬಾಯಿನಂಗುಡು (ಕ್ರಿ). ಬಾಗಿನ ವನ್ನು ನೀಡು ; ಉಪಾಯನವನ್ನು ಕೊಡು : ಆಗಳಾ ಶಿವದೇವಿ ಮಹಾದೇವಿಯುಂ ಕನ್ಯಕಾಕದಂಬದಂಬಿಕಾನಿಕುರುಂಬಮುಂ . . . ತೆಕ್ಕನೆ ತೀವಿದ ಕನಕರಜತಭಾಜನಸಮಾಜಮಂ ಭೋಜನಂ ಪೊಗೞೆ ಬಾಯಿನಂ ಗೊಟ್ಟು (ಶಾಂತಿಪು. ೧೩–೩೩ ವ) ; ಬಾಯಿನಂಗೊಟ್ಟು ನಾನಾನವರತ್ನಸ್ವರ್ಣ ವಸ್ತ್ರಂಗಳಿನಖಿಳಜನಂ ಕೂಡೆ ಸಂಪನ್ನಮಪ್ಪನ್ನಂ (ಶಿಶ್ನಪು. ೪–೦೩). **ಬಾಗಿನಕೊಡು** : ಮುತ್ತೈದೆಯರಿಗೆ ಬಾಗಿನಕೊಡುವ ಶಾಸ್ತ್ರವನ್ನೂ ಮಾಡಿ ಆಯಿತು (ಕಳುಬು. ೬೩). **ಬಾಯಿನಂಗುಡು** : ಮನಮಾದು ಮನದನ್ನನ ಬೆನ್ನನೆ ಪೋಗಿರೆ ತನ್ನ ಬಸನದಿಂದಪಳೊಳ್ಪಂ ಮನಮಂ ಬಿಡೆ ಬಳೆಯಿಪ ಬೆಳ್ತನವಿಂದು ಪಾಟ್ಟನೆಗೆ ಬಾಯಿನಂಗುಡುವಂದಂ (ಚಂದ್ರಪು. ೮–೫೯). [ಬಾಯಿನ (<ಬಾಯನ) + ಕೊಡು$_1$]

**ಬಾಯಿನಂದೀವು** (ಕ್ರಿ). ಉಪಾಯನವನ್ನು ತುಂಬಿ ಸಿದ್ಧಪಡಿಸು ; ಬಾಗಿನವನ್ನು ತುಂಬಿಡು : ರಂಗವಲಿಯಿಕ್ಕುವ ಕಾಲ್ವೆಳಗೊಳ್ವ ಬಾಯಿನಂ ದೀವುವ . . . ನಾನಾವಿಧಮಂಗಳಾಚರಣದಕ್ಷೆಯರಿಂ ಪತಿಪತ್ನಿಯರ್ಕಳಿಂ ತೀವಿ ಜನಾವಳೋಕಹೃದಯಾಸ್ಪದಮಾಯ್ತು ವಿವಾಹಮಂಡಪಂ (ಧರ್ಮಪು. ೬–೩). [ಬಾಯಿನ (<ಬಾಯನ) + ತೀವು]

**ಬಾಯಿನೀರು** 'ಬಾಯ್ನೀರ್' ನೋ.

**ಬಾಯಿಪಂತ** (ನಾ). ಕೇವಲ ಮಾತಿನ ಜರ್ಬು : ನೋಡನ್ನ ಕೈಚಳಕವ ಬಾಯಿಪಂತವನಾಡುವರಾವಲ್ಲ (ಮೋಹಕ. ೩೪–೦೪).
[ಬಾಯಿ$_1$ (<ಬಾಯ್) + ಪಂತ$_1$]

**ಬಾಯಿಪಾಠ** (ನಾ). ೧. ಉರು ಹೊಡೆಯುವುದು ; ಕಂಠಪಾಠ : ರಂಗನು ಪ್ರಾಥಮಿಕಶಾಲೆಯ ಅಭ್ಯಾಸವನ್ನು ಮುಗಿಸುವ ಹೊತ್ತಿಗೆ ಅವನಿಗೆ ಅನೇಕ ದೇವರ ಸ್ತೋತ್ರಗಳು ಬಾಯಿಪಾಠವಾದವು (ರಂಗರೋ. ೦೪) ; ಹಸ್ತಪ್ರತಿಗಳನ್ನು ಓದಿ ಓದಿ ಇವನಿಗೆ ಅವು ಬಾಯಿಪಾಠವಾಗಿತ್ತು (ಕನ್ನಸಂ. ೨೬) ; ಬೇಕಾದರೆ ನಿಮ್ಮ ಬಾಯಿಪಾಠ ಪ್ರಕಾಶನಿಗೇ ಒಪ್ಪಿಸಿ (ಮರಳು. ೦೪೬). ೨. ಉರುಹೊಡೆದು ಕಂಠಗತ ಮಾಡಿಕೊಳ್ಳಬೇಕಾದ ಪದ್ಯ, ಕೋಷ್ಟಕ ಮೊದಲಾದುವು : ವಾಸುದೇವನು ಬೆಳೆಯುತ್ತ ಬಂದ ಹಾಗೆಲ್ಲ . . . ಅಕ್ಷರಾಭ್ಯಾಸವಾಯಿತು. ಬಾಯಿಪಾಠಗಳನ್ನು ಬಹುಬೇಗನೆ ಕಲಿತನು (ಭಾರತ. ೨೬೦).

**ಬಾಯಿಪಾಠ ಮಾಡು** = ಉರು ಹೊಡೆ ; ಕಂಠಪಾಠ ಮಾಡು : ಇಬ್ಬರಲ್ಲಿ ಯಾರೂ . . . ಲಕ್ಷಣಗ್ರಂಥಗಳನ್ನು ಬಾಯಿಪಾಠ ಮಾಡಿ ಪ್ರತಿ ವಿಷಯಕ್ಕೂ ಒಂದು ಶ್ಲೋಕವನ್ನುದಾಹರಿಸಬಲ್ಲವರಲ್ಲ (ಗಾನಕ. ೩೮).
[ಬಾಯಿ$_1$ (<ಬಾಯ್) + ಪಾಠ$_2$]

**ಬಾಯಿಬಡಕ** 'ಬಾಯ್ಬಡಿಕ' ನೋ.

**ಬಾಯಿಬಡಿ** 'ಬಾಯ್ಬಡಿ' ನೋ.

**ಬಾಯಿಬಡಿಕ** 'ಬಾಯ್ಬಡಿಕ' ನೋ.

**ಬಾಯಿಬಡಿಕತನ** 'ಬಾಯ್ಬಡಿಕತನ' ನೋ.

**ಬಾಯಿಬಡುಕ** 'ಬಾಯ್ಬಡಿಕ' ನೋ.

**ಬಾಯಿಬಡುಕಿ** 'ಬಾಯ್ಬಡಿಕಿ' ನೋ.

**ಬಾಯಿಬಿಡು** 'ಬಾಯ್ಬಿಡು' ನೋ.

**ಬಾಯಿಬೀಗ**, ಬಾಯ್ಬಿಯ್ಯಗ, ಬಾಯ್ಬ್ಯಾಗ (ನಾ). ೧. (ಹರಕೆ ಹೊತ್ತ ಭಕ್ತರು) ಬಾಯಿಗೆ ಚುಚ್ಚಿಸಿಕೊಳ್ಳುವ ತಂತಿಯ ಸಾಧನ : ಬಾಯಿ ಬೀಗ ಅಕ್ಕಸಾಲಿಗನಿಂದ ಮಾಡಿಸಿದ ಸಣ್ಣ ಬೆಳ್ಳಿಯ ಕಡ್ಡಿ. ಚಚ್ಚೌಕ ವಾಗಿರುತ್ತದೆ. ಒಂದು ಕಡೆಯ ಮೊನೆ ತುಂಬಾ ಹರಿತವಾಗಿದ್ದು ಚೂಪಾಗಿ ರುತ್ತದೆ. ಮತ್ತೊಂದು ಕಡೆ ಒಂದು ತೂತಿರುವಂತೆ ಗುಂಡಗೆ ಮಡಿಸಿರುತ್ತದೆ (ಜೋಕದೇ. ೪೫) : ದೇವರಿಗೆ ಬೇವಿನುಡುಗೆ ನಗನಾಣ್ಯ ಮಾಡಿಸಿಕೊಡುವುದಾಗಿ . . . ಬಾಯಿಬೀಗ ಚುಚ್ಚಿಸಿಕೊಳ್ಳುವುದಾಗಿ ಹರಕೆ ಕಟ್ಟಿಕೊಳ್ಳುತ್ತಾರೆ (ಪಂಜುಂಡ. ೧೩೪) ; ಕೆಲವು ಹೆಂಗಸರು ಬಾಯಿಬೀಗದ ಹರಕೆ ಮಾಡಿಕೊಂಡಿರುತ್ತಾರೆ. ಅಂಥವರು ಬೆಳಗಿನಿಂದ ಉಪವಾಸವಿದ್ದು, ರಂಗದಲ್ಲಿ ಗುಡಿಗೌಡನಿಂದ ಬಾಯಿಬೀಗ ಚುಚ್ಚಿಸಿಕೊಂಡು, ದೇವರ ಹಿಂದೆ ಕೈಯಲ್ಲಿ ಹೊಂಬಾಳೆ ಹಿಡಿದು ಹೋಗುತ್ತಾರೆ (ಪಮ್ಮೂರು. ೫೦).

**ಬಾಯ್ಬಿಯ್ಯಗ :** ೨. (ಆಲಂ) ಬಾಯಿಯ ತಡೆ.—ಹತೋಟಿ : ಸದ್ದು ! ಸಿಂಗಾರಿ ! ಬಾಯ್ಬಿಯ್ಯಗವಿರಲಿ ! (ಪಟ್ಟಿಅ. ೩೯-೦). **ಬಾಯ್ಬೀಗ :** ೧. ಚಿಕ್ಕ ಚಿಕ್ಕ ಹುಡುಗರೂ ಕೂಡ ಬಾಯ್ಬೀಗ ಚುಚ್ಚಿಸಿಕೊಂಡಿದ್ದರು (ರೂಢಿ). [ಬಾಯಿ$_1$ (< ಬಾಯ್) + ಬೀಗ$_1$]

**ಬಾಯಿಬೂಟಕ** (ನಾ). ಡಂಭಾಚಾರದ ಮಾತು : ಸಾಟಿಯಿಲ್ಲೀಕೆಗೆ ಜಗತ್ತಿನ ಕೋಟಲೆಯನಪಹರಿಪಳುರೆ ಬಾಯಿಬೂಟಕದ ನುಡಿಯಲ್ಲ ಸತ್ಯವಿದು (ಕಾವೇಮು. ೦-೦೦೨). [ಬಾಯಿ$_1$ (<ಬಾಯ್) + ಬೂಟಕ]

**ಬಾಯಿಮಾತು** 'ಬಾಯ್ಮಾತು' ನೋ.

**ಬಾಯಿಮುಚ್ಚು** 'ಬಾಯ್ಮುಚ್ಚು' ನೋ.

**ಬಾಯಿಲೆಕ್ಕ** (ನಾ). ಮನಸ್ಸಿನಲ್ಲಿಯೇ ಬಿಡಿಸಿ, ಬಾಯಿಮಾತಿನಲ್ಲಿಯೇ ಉತ್ತರಿಸಬೇಕಾದ ಗಣಿತಪ್ರಶ್ನೆ.—ಲೆಕ್ಕ : ಗಣಿತ, ಬಾಯಿಲೆಕ್ಕ, ಮುಂತಾದುವುಗಳಲ್ಲದರಲ್ಲೂ ಈ ಹುಡುಗಿಯು ಪ್ರಥಮತರಗತಿಯಲ್ಲಿ ತೇರ್ಗಡೆಯಾದಳು (ರೂಢಿ). [ಬಾಯಿ$_1$ (<ಬಾಯ್) + ಲೆಕ್ಕ$_2$]

**ಬಾಯಿವಿಡು** 'ಬಾಯ್ವಿಡು' ನೋ.

**ಬಾಯಿವೆಣ್ಣೆ** 'ಬಾಯ್ವೆಣ್ಣೆ' ನೋ.

**ಬಾಯಿಸವಿ** 'ಬಾಯ್ಸವಿ' ನೋ.

**ಬಾಯಿಸು** (ಕ್ರಿ). ಉಬ್ಬುವಂತೆ ಮಾಡು ; ಊದಿಸು : ಧನಂಜಯ ವಾಯುವೆಂಬುದು ತಾನು ನಿಕ್ಷೇಪಿಸುವಂತಹ ದೇಹವಾದರೆ ಆ ದೇಹವನ್ನೆಲ್ಲ ಉಕ್ಕಿಸಿ ಬಾಯಿಸಿ ಊದಿಸಿ ಓಡಿಸಿ ಭೌತಿಕಾಗ್ನಿಯ ಕೂಡಿ ಹೋಗುವುದು (ವಚನ. II, ೯೭) ; ಆ ದಿನ ಹುಸೇನಿ . . . ಸೋಮನ ಕಪಾಳವನ್ನು ಬಾಯಿಸಿದನು (ರಂಗರೋ. ೪೯) ; ಆ ದೇಶಪಾಂಡೆಯ ಕೆನ್ನೆ ಬಾಯಿಸ ಬೇಕಾಗಿತ್ತು (ಹಣ್ಣಬಿ. ೩೦೩). [ಬಾಯು (<ಬಾ$_1$) + — ಇಸು$_3$]

**ಬಾಯಿಹಗ್ಗ** (ನಾ). = ಬಾಯಿಕಡಾಣಿ : "ಕವಿಕಾ, ಖಲೀನಃ — ೨ ಬಾಯಿ ಹಗ್ಗ, ಬಾಯಿಚಿಕ್ಕ, ಲಗಾಂ, ಬಾಯಿಕಡಾಣಿ, ಕಣಿಕೆ" (ಸಿದ್ಧಾಂತಿ. ೨೫೦). [ಬಾಯಿ$_1$ (<ಬಾಯ್) + ಹಗ್ಗ (<ಪಗ್ಗ)]

**ಬಾಯಿಹುಣ್ಣು** (ನಾ). ಬಾಯಿಬೊಕ್ಕೆ ; ಬಾಯಿಯಲ್ಲಿ ಏಳುವ ಹುಣ್ಣು : ನಿರ್ನಿದ್ರೆ, ನೂತಿ, ಬಾಯಿಹುಣ್ಣು, ಗಂಟಲುಹುಣ್ಣು, ಕಾವುಗಣ್ಣುಗಳಿಗೆ ಇದು ಸಂಜೀವನ (ಬಿಚಿ. ೪). [ಬಾಯಿ$_1$ (<ಬಾಯ್) + ಹುಣ್ಣು (<ಪುಣ್)]

**ಬಾಯು** 'ಬಾ$_1$' ನೋ.

**ಬಾಯುಗಿ** (ನಾ). ದಂತಕ್ಷತ (?) : ತೆಱಪಱೆದೋಪನಪ್ಪಿದೊಡೆ ಮೆಯ್ಮಱೆವಪ್ಪು ಸಡಿಲ್ದುದಕ್ಕೆ ಮೆಯ್ಯಱೆವ ಪೊದಟ್ದು ಬಾಯುಗಿಗೆ ಮೆಯ್ಮಱೆವಂತದು ಮೆಲ್ಲನಾಗೆ ಮೆಯ್ಯಱೆವ . . . ಎಡೆ ಸಾವ ಪುಟ್ಟು ವಡೆಯಾದುದವಳ್ಗೆ ರತಾತಿರೇಕದೊಳ್ (ಲೀಲಾವ. ೦೩-೨೦) ; ತವದ ಕಾಮೋದ್ರೇಕದಲಿ ಕೂಡುವ ಸಮಪ್ರಣಯಿಗಳ ನಿಡುಗಣ್ಣವೆಗಳರೆ ಮುಗಿವುತಿರೆ ... ಸವಿವ ಬಾಯುಗಿಯುಡಗೆ ಮೈ ಮಿಗೆ ಬೆವರೆ ಸೂಳೋಸರಿಸೆ ಕೆಡಪಿದ ಜವಳಿಜಂತ್ರದ ಬೊಂಬೆಯೆನಲೀರ್ವರು ಮಱೆದರೊಡಲ (ಸಾಳ್ವಭಾ. ೦೬-೩೭). [ಬಾಯ್ + ಉಗ್ಗಿ]

**ಬಾಯುಪಚಾರ** (ನಾ). ಕೇವಲ ಬಾಯಿಮಾತಿನ ಮನ್ನಣೆ ; ಹೃತ್ಪೂರ್ವಕವಲ್ಲದ ಗೌರವ ; ಬರಿ ಬಾಯಿಮಾತಿನ ಸತ್ಕಾರ : ಅವರು ಬಾಯುಪಚಾರಕ್ಕಾದರೂ ಬನ್ನಿ ಎಂದು ಕರೆಯಲಿಲ್ಲ (ರೂಢಿ). [ಬಾಯ್ + ಉಪಚಾರ]

**ಬಾಯೂರಿಸು** (ಕ್ರಿ). ೧. ಬಾಯಲ್ಲಿ ನೀರು ಸಂರಿಸು. ೨. (ಆಲಂ) ಅತಿಯಾಗಿ ಹಂಬಲಿಸು.—ಬಯಸು : ಕೆಲವು ಜನ ಅವಳನ್ನು ವರಿಸಲು ಬಾಯೂರಿಸುತ್ತಿದ್ದರು (ಮಸಕೂ. ೪). [ಬಾಯ್ + ಊರಿಸು$_1$]

**ಬಾಯೆಣಿಕೆ** (ನಾ). ಉದ್ಗಾರ ; ಉದ್ಘೋಷ : ಕಾಯಗಟ್ಟಿತು ಭೀತಿ ಬಿರುದಿನ ಬಾಯೆಣಿಕೆ ಬಯಲಾಯ್ತು ಜೀವದ ಬೀಯಕಿವರಂಜಿದರು (ಕುಮಾರಾಽ. ೯-೬೦). [ಬಾಯ್ + ಎಣಿಕೆ]

**ಬಾಯೆತ್ತು** (ಕ್ರಿ). (ಮಾತಾಡಲೆಂದು) ಬಾಯಿ ತೆರೆ ; ಬಾಯಿ ಬಿಡು : ಮತ್ತೆಯುಂ ಪರಸಮಯಿಗಳು ಬಾಯೆತ್ತಲಂಜಿಂತೆಂದರು (ಬಸಪು. ೩೩-೬೦) ; ಬಾಯೆತ್ತದಂತೆ ನುಡಿವುತೆ ಕಾಯಜರಿಪು ಭಕ್ತನೆಲ್ಲರಂ ಗೆಲೆ (ವೃಷಭ. ೩೭-೩೩) ; ಕೋಲಾಹಲವ ಸಂತವಿಸಲವಂ ಎನಿತೊ ಸಲ ಬಾಯೆತ್ತ ಮಾತೊಂದು ಕೇಳಿಸದೆ . . . ಕಲಕಲವೆ ಎದ್ದಿದ್ದು ನಡುವೆ ತವಿವಂದು (ಗೊಲ್ಗೊಥಾ. ೬-೦೫೦). [ಬಾಯ್ + ಎತ್ತು$_1$]

**ಬಾಯೆಸಳ್ ?** (ನಾ). ಬಾಯಿ ಹುಣ್ಣು : ಬಿಸುಸುಯ್ಯೆ ಬಾಯ್ ಕರಂ ಕೆಂಪೆಸೆದಿರೆ ಬಿಡೆ ಲೋಳೆ ಸುರಿಯೆ ಬಾಯ(ಎ)ಸಳದನೋಡಿಸುವೊಡೆ ಕಾಗೆಯ ಗಱಿಯಿಂ ಬಿಸುನೀರೊಳ್ ಕರ್ಚಿ ತೊಡೆಗೆ ಕಟುಕತ್ರಯವುಂ (ಲೋಕೋಪ. ೯-೦೯೯). [ಬಾಯ್ + ಎಸಳ್?]

**ಬಾಯೊದರು** (ಕ್ರಿ). ಕೂಗು ; ಕಿರಿಚು : ವಾನರದಳಂ ಬೆದರಿ ಬಾಯೊದರಿ ದೆಸೆದೆಸೆಗೆ ಕೆದರಿ(ಶ್ರೀರಾಮಾ. ೯೦೩-೦೧೦). [ಬಾಯ್ + ಒದರು$_2$(<ಒದಱು$_2$)]

**ಬಾಯೊರಸು** (ಕ್ರಿ). ಸ್ಪರ್ಶವನ್ನು ಪಡೆ (?) : ಇಱಿಯದ ವೀರವುಂ ಪೊಗಳೆ ಮೆಚ್ಚುವ ರಾಯರ ಗಂಡ ಯಾವ ಸೊಂಪಱಿಯದೆ ಕೀರ್ತಿಸಲ್ ಬರಿದೆ ಪೊಗ್ಗುವ ರಾಯರ ಗಂಡವೊಂಮ್ಮೆ ಬಾಯೊರಸದೆ ಪೆಂಣ್ಗಳಂ ಸೊಬಗರೆಂದವ ರಾಯರ [ಗಂಡ]ನೆಂದು ಬೊಬ್ಬಿಱಿಉದು ಕೀರ್ತಿ ಡಿಂಡಿಮವುಮಿಂ ಜಗದೊಳ್ ವಿಜಯಕ್ಷಿತೀಂದ್ರನಾ (ಎಕ. XI, ಚಿತ್ರದು. ೩-೬ ; ೪). [ ? ]

**ಬಾಯೊಱಿ** (ಕ್ರಿ). ೧. ಬಾಯಲ್ಲಿ ನೀರು ಸುರಿ : ಆ ಸಿಂಹಂ ಮಱು ಗುತ್ತಂಬಟ್ಟು ಗೋಂಕರ ಕಟ್ಟಿಯಂ ಬಯಸಿ ಬಾಯೊಱಿತು ತನಗನುಚರ ನಪ್ಪುದೊಂದು ನರಿಗೆ ಪೇಟ್ದುದುಂ (ಪಂಚತಂ. ೨೬೨-೨೦) ; ಮಿಸುಪ ಪುಳಿಗೆ ಬಾಯೊಱಿತು ಬಾತಂತಿರೆ ತಿಂದು ಕೈಗರ್ಚಿ (ಪುಣ್ಯಾಸ್ರ. ೩-೪೯ ವ). ೨. ಬಯಸು ; ಹಂಬಲಿಸು ; ಹಾತೊರೆ : ನವಯೌವನಕ್ಕೆ ರತಿ ಬಾಯೊಱಿಯೆ . . . ಹದಿನಾಱು ಹರೆಯಮವಾಗಲ್ (ಶಂಪರಿ. ೩-೦೬) ; ಶೃಂಗಾರ ವೀರಕ್ಕೆ ಬಾಯೊಱಿತೀ ತಸ್ಕರಚಾರವೀರವಿಟವೇಶ್ಯಾಕಾಮ್ಯವುಂ ಕೇಳ್ದು ಮೆಯ್ ಮಱಿವರ್ . . . ಭೂಪರ್ (ರತ್ನಾಕ. ೯೭). [ ಬಾಯ್ + ಒಱಿ$_1$ ]

**ಬಾಯ್ಕಟ್ಟು$_1$, ಬಾಯಿಕಟ್ಟು$_1$** (ಕ್ರಿ). ೧. ಬಾಯಿಚಪಲವನ್ನು ನಿರೋಧಿಸು ; ಪಥ್ಯ ಮಾಡು ; ಅಪಥ್ಯವಾದ ಆಹಾರವನ್ನು ಸೇವಿಸದೆ ನಿರ್ಬಂಧದಲ್ಲಿರು : ಅವರು ವೈದ್ಯರು ಹೇಳಿದಂತೆಲ್ಲ ಚೆನ್ನಾಗಿ ಬಾಯ್ಕಟ್ಟಿ ಖಾಯಿಲೆಯನ್ನು ಬೇಗ ವಾಸಿಮಾಡಿಕೊಂಡರು (ರೂಢಿ). ೨. ವಾದದಲ್ಲಿ ಎದುರಾಳಿಯನ್ನು ಬಾಯ್ಮುಚ್ಚುವಂತೆ ಮಾಡು ; ನಿರುತ್ತರಗೊಳಿಸು : ಬಾಯ್ಬಿಡಿ : ಅಕಟ ಇಟ್ಟು ಬಾಯ್ಕಟ್ಟಿ ಬಿಟ್ಟ ಮೇಲೆ ಪಾಪ ಅವನೇನು ಮಾಡಿಯಾನು ? (ರೂಢಿ). ೩. ಮಂತ್ರ ಮಾಟಗಳಿಂದ ಮನುಷ್ಯನ ಅಥವಾ ಪ್ರಾಣಿಯ ಬಾಯನ್ನು ತೆರೆಯಲಾಗದಂತೆ ಮಾಡು.—ಮುಚ್ಚಿಸು : (೩). **ಬಾಯಿಕಟ್ಟು$_1$ :** ೨. ನಾನು ಯಾವಾಗಲೂ ಪ್ರಶ್ನಿಸುತ್ತೇನೆ ; ಆಗ ನೀವು ಹೀಗೆ ಹೇಳಿ ನನ್ನ ಬಾಯಿಕಟ್ಟುತ್ತೀರಿ (ಋಣಾರಿ. ೦೬) ; ಎಲ್ಲರೂ ಸೇರಿಕೊಂಡರು ತೆನ್ನಾಲಿ ಹೇಳಿದ್ದು ಸುಳ್ಳು ಅಂತ ಬಾಯಿಕಟ್ಟುವುದಕ್ಕೆ (ತಪ್ಪೂರು. ೫೮೩). ೪. ಮಾತಾಡಲು ಅವಕಾಶವಿಲ್ಲವಾಗು : ಅಪ್ಪಾಜಿಗೆ ಬಾಯಿಕಟ್ಟಿತು. ಆದರೂ ಕಡೆಯದೊಂದು ಪ್ರಯತ್ನ ಮಾಡಲು ಬಯಸಿದ (ಇಳೆಪ. ೬೪). ೫. ಮಡಕೆ ಅಥವಾ ಪಾತ್ರೆಗಳ ಬಾಯಿಗೆ ಬಟ್ಟೆಯನ್ನು ಕಟ್ಟು : ಮಡಿಬಟ್ಟೆಯಿಂದ ಮಡಿಕೆಯ ಬಾಯಿಕಟ್ಟಿ, ವಿಭೂತಿಕಟ್ಟು ಹಾಕುತ್ತಾಳೆ (ತನ್ನೂರು. ೪೨). [ಬಾಯ್ + ಕಟ್ಟು$_1$]

**ಬಾಯ್ಕುಟ್ಟು₂**, ಬಾಯಿಕಟ್ಟು₂ (ನಾ). ೧. (ನಾಯಿ, ಎತ್ತು ಮೊದಲಾದ ಪ್ರಾಣಿಗಳಿಗೆ) ಬಾಯಿ ತೆರೆಯಲಾಗದಂತೆ ಮುಖಕ್ಕೆ ಅಳವಡಿಸುವ ಬಂಧನ ; ಪ್ರಾಣಿಯ ಬಾಯಿಗೆ ಕಟ್ಟುವ ಕುಕ್ಕೆ,-ಚೀಲ : ಸಳಿಗೋಲು ಒಂದಟ್ಟೆಯ ಕಿರಹು ನಾಯಿಗಳ ಬಾಯ್ಕುಟ್ಟು ಒಳಿಯಿಂದಿವು ಮೆಱೆಯೆ ನಡೆದು (ಶಿಶವು. ೩೦-೪). ೨. ಮಾಟಮಂತ್ರಗಳಿಂದ ಬಾಯಿ ಮುಚ್ಚಿಸುವಿಕೆ,-ಬಾಯಿ ತೆರೆಯದಂತೆ ಮಾಡುವಿಕೆ: (೪). **ಬಾಯಿಕಟ್ಟು₂ :** ೩. ಮುಚ್ಚಳದಂತೆ ಪಾತ್ರೆಗಳ ಬಾಯಿಗೆ ಬಿಗಿದ ಬಟ್ಟೆಯ ಕಟ್ಟು : ಎಕ್ಕದ ಮೊಗ್ಗು ೧ ಬಳ್ಳವಂ ಒಂದು ಮಡಕೆಯಲ್ಲಿ ಹಾಕಿ ನೀರು ಹಾಕಿ: ಪಾವಡೆ ಕಟ್ಟಿ ಜೆಳೆತಿಗೆ ಅಕ್ಕಿಯನ್ನು . . . ರೊಟ್ಟಿ ಮಾಡಿ ಆ ಬಾಯಿಕಟ್ಟಿನ ಮೇಲಿಟ್ಟು ಬೇಯಿಸಿ ತೆಗೆದು (ಸಕವೈ. ೨೦೭). [ಬಾಯ್ + ಕಟ್ಟು₂]

**ಬಾಯ್ಕುಡಿಗೊಳ್** (ಕ್ರಿ). ಔಡುಗಚ್ಚು ; ಹಲ್ಲುಕಡಿ: ಮಿಗೆ ಮಾತಾಡದಿರೇಟಿದಿರ್ ಮಿಡುಕದಿರ್ ಮೇಲ್ಬೀಳದಿರ್ ಸೊರ್ಕದಿರ್ ನಗದಿರ್ ಬಾಯ್ಕುಡಿಗೊಳ್ಳದಿರ್ (ಶಬ್ದಸಾ. ೦೬೬). [ಬಾಯ್ + ಕಡಿ₁ + ಕೊಳ್₁]

**ಬಾಯ್ಕಲ್** 'ಬಾಯ್ಕಾಲ್' ನೋ.

**ಬಾಯ್ಕಾಲ್**, ಬಾಯಿಕಲು, ಬಾಯಿಕಲ್ಲು, ಬಾಯಿಕಾಲು, ಬಾಯಿಕೋಲು, ಬಾಯ್ಕಲ್, ವಾಯ್ಕಾಲು (ನಾ). ಕಾಲುವೆ ; ನಾಲೆ : ಅನ್ತೆ ಬನ್ದು ಕಳರಾ ಬಾಯ್ಕಾಲುಳ್ ಕೂಡಿ . . . ಅನ್ತೆ ಬನ್ದು ತೊಱೆಯುಳ್ ಕೂಡಿತ್ತು (ಎ.ಆಂ. ೦೯೩೬, ೩೩-೨೪; ಸು. 700 ?). **ಬಾಯಿಕಲು:** ಮೂಡಲು ದಿಬ್ಬ ಬಡಗಲು ಪಳ್ಳ ಪಡವಲು ಬಾಯಿಕಲು ತೆಂಕಲು ಭಂಡಿವಟ್ಟೆ (ಸೌಇಇ. IX-i. ೦೬೫-೬೯ ; 1099) ; ತೆಂಕಲು ಕಱುಂಬಗದ್ದೆಯ ಬಾಯಿಕಲು (ಸೌಇಇ. IX-i. ೩೪೩-೫೬ ; 1226). **ಬಾಯಿಕಲ್ಲು :** ಹಿರಿಯ ತುಂಬಿನ ಬಾಯಿಕಲ್ಲ ಮೂಡ ದೆಸೆಯ ಮೊದಲೇರಿಯ ಗದ್ದೆ (ಎ.ಆಂ. ೦೯೩೭. ೦೭-೪೬ ; 1196) ; ತುಂಬಿನ ಬಾಯಿಕಲ್ಲಿಂದಂ ಪಡುವಲು ಮೇರೆ (ಎಕ. XVI, ತಕ್ಕನಾ. ೭೦-೦೭ ; 1235) ; ಮಿಡಿಚ್ಚಿಯ ಬಾಯಿಕಲ್ಲಿಂ ತೆಂಕಲು ಕೋಡಿಯ ಗೋವಿಂದ ಶಣಂಗಿಇಂ ಮೂಡಲು ಗದ್ದೆ ಮತ್ತರು ೧ (ಸೌಇಇ. IX-i, ೩೭೦-೪೮ ; 1259). **ಬಾಯಿಕಾಲು :** ವರುಷಕ್ಕೆ ಗದ್ಯಾಣಂ ಮೂವತುವನೂವು ಆ ಕೆಱೆಗೆ ಆ ತುವ್ವಿಂಗೆ ಆ ಬಾಯಿಕಾಲಿಗೆ . . . ಆ ಮಹಾಜನಂಗಳು ನಡೆಸುತೆ ಬಹರು (ಎಕ. VI, ಕಡೂರು. ೯೨-೦೭ ; 1259 ?). **ಬಾಯಿಕೋಲು :** ಮಚಣನ ಕೆಱೆಯ ತಾಯಿವಳದಿಂದು ಬಡಗಲು ಅಲಕಟಿಗೆ ಹೋದ ಬಾಯಿಕೋಲಿಂ ದೇವಿಹೊಲದ ಕಟ್ಟೊಬೆಯಿಂ ಅಲಕಱ ಪೊಳಗೆಱೆಯಿಂ ಮೂಡಲು ಯಿಂತೀ ಚತುಃಸೀಮೆಯ ಪೊಳಗಣ ಭೂಮಿ (ಎಕ. XIV, ಎಳಂದೂ. ೦೯೭-೦೪ ; 1631). **ಬಾಯ್ಕಲ್ :** ಮೂಚಿಸೆಟ್ಟಿಯ ಕೆಱೆಯ ಪಡುವಣ ಬಾಯ್ಕಲ್ಲ ಬಳಿವಿಡಿದು ಹುಣಿಸೆಯ ಬಾಯ್ಕಲ್ಲಿಂ ತೇಲು ಗದ್ದೆ ಮತ್ತರು ೨ ಹೊಸಗೆಱೆಯ ಬಾಯ್ಕಲ್ಲಿಂ ಮೂಡಲು ಗದ್ದೆ ಕಮ್ಮ ೬೦೦ (ಸೌಇಇ. IX-i, ೦೯೫-೩೦ ; 1079). **ವಾಯ್ಕಾಲು :** ಮೂಡಲು ಪಳ್ಳ ವಾಯ್ಕಾಲು (ಪ್ರಆಸಿ. ೫-೭-೨೯ ; 1088). 'ಕಾಲ್ವಾಯ್' ಪರಾ.

[ಬಾಯ್ + ಕಾಲ್₂./ತಮಿ. ವಾಯಕ್ಕಾಲ್ ; ಮಲ. ವಾಯ್ಕಾಲ್]

**ಬಾಯ್ಕುಟುಕು** 'ಬಾಯ್ಗುಟುಕು' ನೋ.

**ಬಾಯ್ಕುಟ್ಟು** 'ಬಾಯ್ಗುಟ್ಟು' ನೋ.

**ಬಾಯ್ಕೇಳ್** (ಕ್ರಿ). ಮಾತು ಕೇಳು ; ಆಜ್ಞಾಧಾರಕನಾಗು ; ವಿಧೇಯನಾಗಿರು : ಆಳುವಖೇಡಮುಱುಸಾಸಿರನುಮಾನ್ ಚಿತ್ರವಾಹನನಾಳುತ್ತುಂ ಬಾಯ್ಕೇಳದಿರೆ ಮುನಿದು ಕೊಲ್ಲಿ ಪಲ್ಲವ ನೊಟಿಂಬಂ ನೊಟಿಂಬರಾದಿತ್ಯನನ್ ವೆಸಸಲ್ (ಎಕ. VIII, ಸೊರಬ. ೦೦-೩ ; ಸು. 800) ; ಅರಸುಗಳೆಲ್ಲಂ ಬಾಯ್ಕೇಳ್ದರೆಂದುಮಾಶಾಂತರಂಗಳಿಕ್ಕಿದುವೆಂದುಂ ಧರಣಿತಳಂ ಕೀರ್ತಿಸೆ (ಆದಿಪು. ೦೯-೪೯) ; ಪರುಣಂ ಬಾಯ್ಕೇಳನೆಂಬೀ ಮುನಿಸನುವಿಸೆ ಮೇಲೆತ್ತಲೆಂದೀಗಳಿವ್ಮಂ ಬರವೇಳ್ದಿಂ ದಾನವೇಂದ್ರಂ (ಪಂಪಾಪು. ೦೦-೨೦೩).

**ಬಾಯ್ಕೇಳ್ದಂ** = (ಜಲದುರ್ಗ ಮುಂತಾದುವುಗಳನ್ನು) ವಶಪಡಿಸಿಕೊಂಡವನು : ಎಂತಾನುಂ ಸ್ಥಳ ಜಳದುರ್ಗಂ ತವೆ ಬಾಯ್ಕೇಳ್ದ ನೀತನದೆ ದಿಗ್ವಿಜಯಯಾತ್ರೆಯಂತ್ರೋತ್ಸವಂ (ಶಾಂತಿಪು. ೫-೦೪೦).

[ಬಾಯ್ + ಕೇಳ್]

**ಬಾಯ್ಕೇಳಿಕೆ** (ನಾ). ಬಾಯಲ್ಲಿ ಹೇಳುವ ಮಾತು (?) ; ಪರಾಕು ; ಸ್ವಾಗತದ ಮಾತು (?) : ಬಾಳಿಲಗುಂಡಿ ಪಿಕವತಿ ಬಾಯ್ಕೇ[ಶಾಂತಿ. ಯೋ]ಳಿಕೆ ಮಾಂದಳಿರ ಕೆಂಪು ದೀವಿಗೆಯೆನೆ ಭೂಪಾಳಂ ಬರೆ ಶೋಧಿಪ ಪನಪಾಳನವೊಲ್ಮಂದೆ ಬಂದುದಂದು ವಸಂತಂ (ಯಶೋಚ. ೪-೨).

[ಬಾಯ್ + ಕೇಳಿಕೆ₁]

**ಬಾಯ್ಕೇಳಿಸು** (ಕ್ರಿ). ಗೆದ್ದುಕೊಳ್ಳು ; ವಶಪಡಿಸಿಕೊಳ್ಳು ; ತನ್ನ ಆಜ್ಞೆಗೆ ಒಳಪಡಿಸಿಕೊಳ್ಳು : ಆ ಮುನಿರಾಜು ಕರ್ಮಂಗಳಂ ಗಾಳಿಸಿದಂ ಈ ರಾಜರಾಜಂ ಷಟ್ಖಂಡಮಂಡಲಮಂ ಬಾಯ್ಕೇಳಿಸಿದಂ (ಆದಿಪು. ೬-೨೪ ವ); ಮಾಳವಪತಿ . . . ಲೀಲೆಯೊಳೆ ವೀರದೊಳೆ ಬಾಯ್ಕೇಳಿಸುವಂ ಗಡ ಸಮಸ್ತವಸುಧಾತಳಮಂ (ಧರ್ಮಾಮೃ. ೦೦-೨೨೮) ; ರಣವಥೂವಲ್ಲಭಂ ದೇಶದೇಶಂ ಗೆಲ್ಲುತದಟನಿಂ ಬಾಯ್ಕೇಳಿಸುತೆ, ಚಂಡಜವದಿಂದಮಿತ್ರಜಕ್ಕೆ ಸುರ್ಗುತಿಹಂ (ಜಕ್ಕಾಂಗ. ೭೦-೦೪೪೯). [ಬಾಯ್ಕೇಳ್ +— ಇಸು₃]

**ಬಾಯ್ಕೊಡು** (ಕ್ರಿ). ಬಾಯಿ ಬಿಡು ; ಬಾಯಿ ತೆರೆ : ಬಿಕ್ಕಿ ಬಿಕ್ಕಿ ಅತ್ತಳು ; ಎದ್ದು ಕುಳಿತಳು ; ಬಾಯ್ಕೊಟ್ಟು ಗೋಳಿಟ್ಟಳು (ಬಿಡ್ನಾ. ೭).

[ಬಾಯ್ + ಕೊಡು₁]

**ಬಾಯ್ಕೊರ್ಚು** 'ಬಾಯಿಕೊರ್ಚು' ನೋ.

**ಬಾಯ್ಗಳೆ** (ಕ್ರಿ). ಬಾಯಿ ಬಿಡು; ಬಾಯಿ ತೆರೆ : ನುಂಗಲೆಂದು ಬಾಯ್ಗಳೆದು ಬರ್ಪಂರಿದಿರೊಳ್ ಪಲ್ಗಿಱಿಯುತ್ತೆ (ಅದ್ಭುತ. ೪೭-೭). [ಬಾಯ್ + ಕಳೆ₁]

**ಬಾಯ್ಗಾಳೆಗ**, ಬಾಯಿಗಾಳೆಗ (ನಾ). ಬರಿಯ ಮಾತಿನ ಯುದ್ಧ ; ವಾಕ್ಕಲಹ: ಆಂ ಬಿಲ್ಗಾಳೆಗಮೆಂದೇ ಬಗೆದೆಂ ಬಾಯ್ಗಾಳೆಗಮನೀಗಳಱಿದೆಂ (ಶಾಂತಿಪು. ೪-೫೦ ವ). **ಬಾಯಿಗಾಳೆಗ :** ಕಕ್ಕ ಮಾಡುವುದು ಮಗನಿಗಾಗು ತ್ತಿರಲಿಲ್ಲ, ಮಗನವು ಕಕ್ಕನಿಗಾಗುತ್ತಿರಲಿಲ್ಲ. ಯಾವಾಗಲೂ ಬಾಯಿಗಾಳೆಗ ನಡೆದಿರುತಿತ್ತು (ಕ್ರೀಪುತ್ರ. ೭). [ಬಾಯ್ + ಕಾಳೆಗ]

**ಬಾಯ್ಗುಟುಕು**, ಬಾಯ್ಕುಟುಕು (ನಾ). ಒಂದು ಸಲ ಬಾಯಿ ತುಂಬ ಹಾಕಿಕೊಳ್ಳುವಷ್ಟು ಆಹಾರ ; ಒಂದು ತುತ್ತು : ಸಲಿಸುವೆಂ ಇವರಸುವ ಬಾಳ ಬಾಯ್ಗುಟುಕೆಂದು (ವೀರಶ. ಹ. ೪೯೩-೨೮). **ಬಾಯ್ಕುಟುಕು :** ಕೊಡು ತಂದೇ, ಇನ್ನೊಂದೇ ಒಂದೇ ಬಾಯ್ಕುಟುಕು (ಅರಳು. ೩-೦೦). [ಬಾಯ್ + ಕುಟುಕು₂]

**ಬಾಯ್ಗುಟ್ಟು**, ಬಾಯ್ಕುಟ್ಟು (ಕ್ರಿ). ಹರಟು ; ಗಳಹು: ಪಂಪಾಸನ್ನಿಧಾನದ ಸಮುಖದಲ್ಲಿ ಹಾಗೆ . . . ಅ ಸಲ್ಗೆಯಿಂದ ಬಾಯ್ಗುಟ್ಟದಿರಿ ! (ಬಟ್ಟೆಆ. ೦೯೪-೦೭). **ಬಾಯ್ಕುಟ್ಟು :** ಪುಟ್ಟೋಗುರುಡಂ ಕಾಣ್ಬನೆ ಬಟ್ಟೆಯನಮಳಾಕ್ಷನಂತೆ ಸದ್ದೃಷ್ಟಿಯ ಬಾಯ್ಕುಟ್ಟದೆ ಕಾಣ್ಗುಂ ಧರ್ಮದ ಬಟ್ಟೆಯ ನೆಱೆ ಕಾಣಲಱಿವ[ಯ]ನಕ್ಕು ಮದಾಂಧಂ (ಅರ್ಹನೀ. ೪-೫೫).

[ಬಾಯ್ + ಕುಟ್ಟು₁]

**ಬಾಯ್ಗೂಟ** (ನಾ). ಮುತ್ತಿಡುವಿಕೆ ; ಚುಂಬನ : ಬಾಯ್ಗೂಟದೊಳಟ್ಟಱಿ ಪಡೆದ ಕೂಟದೊಳುಣ್ಮಿದ ಬೆಚ್ಚ ತಟ್ಟೆಯೊಳ್ ಕೂಟಸುಖಂಗಳಂ ಪಡೆದನೇಂ ಚದುರಂಗಳ ಬದ್ದದಲ್ಲಟಿಂ (ಕಂಶಿಶಾ. ೩-೮೨); ಮನಸವನಸುಲಜ್ಜೆಯಂ ಮಾಣಿಸಿದುದು ಬಾಯ್ಗೂಟದಿಂಪು (ಶಂದ್ರಪು. ೬-೮೩).

[ಬಾಯ್ + ಕೂಟ₁]

**ಬಾಯ್ಗೂಡು**, ಬಾಯಿಗೂಡು (ಕ್ರಿ). ೧. ಒಕ್ಕೊರಲಾಗು; ಏಕಕಂಠವಾಗು ; ನೋಡಿದರಾನಂದಿಸಿದರು ಪೌರರು ಬಾಯ್ಗೂಡಿ ಬಣ್ಣಿಸಿ

ಪೊಗಳಿದರು (ಕುಣಸಾಂ. ೯-೦೪೪). ೨. (ಆಯುಂಧ ಮೊದಲಾದುವುಗಳ) ಬಾಯಿ ಅಥವಾ ಧಾರೆ ಹರಿತವಾಗು,– ಮಸೆದು ತೀಕ್ಷ್ಣವಾಗು : ಬಾಯ್ಗೂಡಿದುದಾ ಕುಸುಮಾಸ್ತ್ರನ ಚಕ್ರಮಿದೆಂಬೆಸಕಮನಾಳ್ದತ್ತು ಪಸದನಂ ದ್ರೌಪದಿಯಾ (ಪಂಪಭಾ. ೩-೪೭). ೩. ಮುದ್ದಿಸು ; ಚುಂಬಿಸು: ಸಾರ್ಚಿ ಬಾಯ್ಗೂಡಿ ವಿಲಾಸದಿಂ ಕೆಲೆವ ಪಾರಿವಂ . . . ಕುಕಿಲ್ವ ಪಿಕಂ ವಿಯೋಗಿಗೇಂ ಮಾಡದೆ ಪೋಕುಮೇ ಮದನನಂಡಲೆಯಂ (ಕಾಕಾ. ೦-೩೨); ಇಲ್ಲಿ ಬಾಯ್ಗೂಡಿದೆವದಿಲ್ಲಿ ಸರಸಕ್ಕೆಳಸಿ ಕೂಡಿದೆವು (ವಂಕಾರಾ. ೩-೨-೨೯). ೪. (ಲೆಕ್ಕ ಖರ್ಚು ಮುಂತಾದಂವು) ಹೊಂದಾಣಿಕೆಯಾಗು ; ಸರಿದೂಗು : ಇಷ್ಟು ವೆಚ್ಚಗಳು ಬಾಯ್ಗೂಡಿಯೂ ಉಳಿತಾಯವಿತ್ತು (ಶ್ರೀಮಾಶ್ರ. ೨೪೪). **ಬಾಯಿಗೂಡು :** ೩. ಮಡಿಸಿದೆಲೆಯ ಗಳಿಗೆಯ ಕೆಂಬಲ್ದುದಿಗಡಸಿ ಬಾಯೊಳು ಬಾಯಿಗೂಡಿ ತುಡುಕುತ್ತ ಸವಿಮುತ್ತ ನಿವಗೀವ ಪುಣ್ಯವ ಪಡೆವುದೆಂದಿಗೆ ನಾನು (ಕೆಂಪಪಿ. ೯-೧೨೫). ೪. ಖರ್ಚು– ಜಮಾ ಬಾಯಿಗೂಡಿತು (ರೀಪಹ. I. ೧೭೩). [ಬಾಯ್ + ಕೂಡು$_1$]

**ಬಾಯ್ಗೆಡು** (ಕ್ರಿ). ೧. ಬಾಯಿ ರುಚಿಯಿಲ್ಲದಾಗು, –ರುಚಿಗೆಡು : (೬). ೨. ಕಳವಳಿಸು ; ದುಃಖಿಸು : ಕುತ್ಸಿತರ್ . . . ಪರೀಷಹಂಗಳಡಸಿ ದಂದು ದೆಸೆಗೆಟ್ಟು ಬಾಯ್ಗೆಟ್ಟು ಮಱುಗುತ್ತಿರ್ಪರ್ (ಧರ್ಮಾಮೃ. ೦-೧೭೪). 'ಬಾಯಟಿ' ಪರಾ. ೩. ಕೆಟ್ಟ ಮಾತನ್ನಾಡು ; ದೋಷಾರೋಪಣೆ ಮಾಡು (?) : ಉನ್ನತ್ತವಪ್ಪ ವಿಶ್ವಾಸಘಾತುಕಂಗೆ ವಂದಿಸಿ ನಿಂದಿಸುವಂಗೆ ಹಿಂದೆ ಮುಂದೆ ಬಂದುದ ಬಾಯ್ಗೆಡುವಂಗೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಸಂಧಿಸನವರಿಗೆ (ವಚನ. ೨೮೦-೪೭). [ಬಾಯ್ + ಕೆಡು$_1$]

**ಬಾಯ್ಗೆಯ್** (ಕ್ರಿ). ದೊಡ್ಡ ಧ್ವನಿ ಮಾಡು ; ಅಬ್ಬರಿಸು : ವರಾಹ ರೂಪದ ಮೂಕದಾನವಂ . . . ಬಾ[ಯ್ಗೆ]ಯೆ ದಿಗ್ಗಜಂ ಪೆಱಗಿಟ್ಟುವಾಂ [ತ]ರದೆ ತೊಟ್ಟನೆ ದಾಡೆಗುಟ್ಟೆ ಕಟಲ್ದು ತಾರಗೆಗಳ್ ನಭಂಬೆರಸು ಬಿರ್ದುವು (ಪಂಪಭಾ. ೮-೦೫) ; ಇನ್ನು ನಿಮ್ಮ ಸಟೆಗಳ ಸರಗಳನ್ನು ಪವಣಿಸಿ ಬಾಯ್ಗೆಯ್ದು ಕತೆಗುಟ್ಟಿರಿ (ಶಬ್ದಾ. ೩೦-೦೨). [ಬಾಯ್ + ಕೆಯ್$_1$]

**ಬಾಯ್ಗೇಡಿ** (ನಾ). ಬಾಯಿಗೆ ಬಂದಂತೆ ಮಾತಾಡುವವನು,– ಗಳಹುವವನು : "ಜಲ್ಪಾಕ, ವಾಚಾಲ, ಬಹುಗರ್ಹ್ಯವಾಕ್–ಬಾಯ್ಗೇಡಿ" (ಶಾಕಾಬ. ೬). 'ಬಾಯ್ಗೇಡಿತನ' ಪರಾ. [ಬಾಯ್ + ಕೇಡಿ$_1$]

**ಬಾಯ್ಗೇಡಿತನ** (ನಾ). ಬಾಯಿತೀಟೆ ; ಬಾಯಿಚಪಲ : ಬಾಯ್ಗೇಡಿ ತನದೊಳೇನೆಂದಾದೊಡಂ ಜರೆದು ಬಯ್ಗುವೋ ಪಟುಭಟರ್ (ಕೆಬಕೆ. ೪೯-೦೩). [ಬಾಯ್ಗೇಡಿ + – ತನ]

**ಬಾಯ್ಗೊಬ್ಬು, ಬಾಯಿಕೊಬ್ಬು** (ನಾ). ಮಾತಾಡದೆ ಇರಲಾಗದಂತಹ ಚಪಲ ; ಬಾಯಿತೀಟೆ : ಬಾಯ್ಗೊಬ್ಬಿನಿಂದಲನ್ಯರನು ಜಱಿಯಲಾಗದು (ತಿಮ್ಮಣಾಂ. ೬-೦೭) ; ಪಂದೆಗಳ ಬಾಯ್ಗೊಬ್ಬು ಹಿಂದೆ ನಾರಿಯರೆಡೆಯೊಳ್ (ಅದ್ಭುತ. ೪೭-೦೦). **ಬಾಯಿಕೊಬ್ಬು :** ಬಯ್ವ ಜನರು, ಜರಿವ ಜನರು, ಅವರಿಗೇನು, ಬಾಯಿಕೊಬ್ಬು ನೋವ ತೆಗೆವರೆ ? (ಕಬಿಸೋ. ೭೦-೨೦). [ಬಾಯ್ + ಕೊಬ್ಬು$_2$ (<ಕೊರ್ವು$_2$)]

**ಬಾಯ್ಗೊಲೆ** (ನಾ). ಬಾಯಿಂದ ಕಚ್ಚಿ ಕೊಲ್ಲುವಿಕೆ : ಕಯ್ಗೊಲೆ ಬಾಯ್ಗೊಲೆ . . . ಕೋಳ್ಗೊಲೆಯಂ ಕಲಿಪ ಕಡುಬಿನ್ನಣಂಬಡೆದು ಕಟ್ಟಾಳ್ಗನಂಬೆತ್ತಿಂತು ಗಜಾರೋಹಣಧುರೀಣರಾದಾ ಧೋರಣರ್ ನೆರೆದು (ರಾಜಶೇ. ೬-೦೦ ವ). [ಬಾಯ್ + ಕೊಲೆ]

**ಬಾಯ್ಗೊಳ್** (ಕ್ರಿ). ೧. ಧ್ವನಿಮಾಡು ; ಕೂಗು : ತಳಿತ ಪಾಲ್ಮರನೇಱಿ ಪಿಂಗಲಿ ಬಳಿದು ಬಾಯ್ಗೊಂಡವು ಸರಾಗದಿನೊಲಿದು ದಂಪತಿ ತಾಱನಿತ್ತವು ಕರಿಯ ಹಕ್ಕಿಗಳು (ತೊರಾ. ೦-೬-೬). ೨. ಬಾಯಲ್ಲಿ ಸೇರು; ಬಾಯಿಮಾತಾಗು : ಮಹಾಕವಿಯಾದ ಅವನ ಹೆಸರನ್ನೊಂದಿದ ಆ ನಾಮವು . . . ಮಂತ್ರಿನವರ ಬಾಯ್ಗೊಂಡು ರೂಢವಾದುದಾಗಿರಬೇಕು (ನಾಡೋಜ. ೦೬೨). [ಬಾಯ್ + ಕೊಳ್$_1$]

**ಬಾಯ್ಚಳಕ** (ನಾ). ಮಾತಿನಲ್ಲಿರುವ ಚಾಲಾಕು,– ಜಾಣ್ಮೆ,– ಕೌಶಲ ; ವಾಕ್ಚಾತುರ್ಯ : ಕೈಚಳಕ ಬಾಯ್ಚಳಕದಿಂದ ಸಮಾಜದ ದುಡ್ಡನ್ನು ಹೀರಿ ಸ್ವಾರ್ಥ ಸಾಧಿಸುತ್ತಿರುವ ಶೀಲಭ್ರಷ್ಟರ ಕುಲ, ಯಾವ ಕುಲ ? (ಮುಕ್ತಕ. ೦೩೪). [ಬಾಯ್ + ಚಳಕ$_2$]

**ಬಾಯ್ಚು** 'ಬಾರ್ಚು' ನೋ.

**ಬಾಯ್ತರೆ** 'ಬಾಯ್ದೆಱೆ$_1$' ನೋ.

**ಬಾಯ್ದಂಬುಲ** (ನಾ). ಬಾಯಲ್ಲಿಯ ತಾಂಬೂಲ; ಎಂಜಲು : ನಿನಗೆ ಕಿಂಕರವೆರಡು ಸಂತತಿಯೆನಿಸಲೊಲ್ಲದೆ ನೀನು ದುರಿಯೋಧನನ ಬಾಯ್ದಂಬುಲಕೆ ಕೈಯಾನುವರೆ ಹೇಳು (ಕುವ್ಯಾಉ. ೦೦-೯). [ಬಾಯ್ + ತಂಬುಲ]

**ಬಾಯ್ದಣಿ** (ಕ್ರಿ). ಬಾಯಿ ಸೋತುಹೋಗು : ಬಾಯ್ದಣಿಯೆ ಬೈಗುಳಿನಲುಭಯದ ಕಯ್ದುಗಾಱರು ನೀಗಿದರು ನಿಜಪತಿಯ ಹಣರುಣವ (ಕುವ್ಯಾಅ. ೦೪-೦೦). [ಬಾಯ್ + ದಣಿ$_1$ (< ತಣಿ$_1$)]

**ಬಾಯ್ದಾರ** (ನಾ). ಚೀಲ, ಹಸಿಬೆ ಮೊದಲಾದುವುಗಳ ಬಾಯನ್ನು ಕಟ್ಟುವ ದಾರ : ಚಿನ್ನದ ಚೀಲಕ್ಕೆ ರನ್ನದ ಬಾಯ್ದಾರ (ಜಗೀತ. ೨೦). [ಬಾಯ್ + ದಾರ$_1$]

**ಬಾಯ್ದಾರೆ** (ನಾ). ಕತ್ತಿ, ಕುಡುಗೋಲು ಮೊದಲಾದುವುಗಳ ಹರಿತವಾದ ಅಂಚು : "ಬಾಯ್ದಾರೆಗಳೆಂದಸಿಧಾರೆಗಳೊಳ್" (ಕರ್ಣಾಶಿ. ೩೯); ಬಾಯ್ದಾರೆ ನಿಲೆ ಕುಮಾರಂ ಪೊಯ್ದೊಡೆ . . . ಪಱಿದುದಾ ವಂಶವನಂ (ಪಂಪಾಮಾ. ೯-೨೩); ಬಾಳ ಬಾಯ್ದಾರೆಯ ಸೋಂಕೆಂದು ಕದಳೀದಳಸ್ಪರ್ಶನಕ್ಕೆ ದರ್ಪಂಗೆಟ್ಟೊಪ್ಪಂಗುಂದುತ್ತುಂ (ಗಿಂಶ. ೪-೦೦೬ವ). [ಬಾಯ್ + ದಾರೆ$_1$]

**ಬಾಯ್ದುಂಬಿಸು** (ಕ್ರಿ). ಬಾಯಲ್ಲಿ ಗಿಡಿ, – ತುರುಕು : ಬಿಸಿಯ ಮಳಲಂ ತರಿಸಿ ಬಾಯ್ದುಂಬಿಸಿದಪೆಂ ನಾನು (ಬಸಕ. ೦೦-೧೯). [ಬಾಯ್ + ತುಂಬಿಸು]

**ಬಾಯ್ದುತ್ತು, ಬಾಯಿದುತ್ತು** (ನಾ). ಬಾಯಿಗೆ ನೀಡುವ ಆಹಾರ; ಬಲಿ ; ಆಹುತಿ : ಶಸ್ತ್ರಾವಳಿಯ ಬಾಯ್ದುತ್ತುಗಳ ಸೆಳೆಯದಿರೆಂದರುಬ್ಬಿನಲಿ (ಕುವ್ಯಾಕ. ೨-೦೮). **ಬಾಯಿದುತ್ತು :** ಕಾಲನ ಬಾಯಿದುತ್ತಾಗಿ ಸತ್ತು ಹುಟ್ಟುವರೆಲ್ಲ . . . ಎತ್ತ ಬಲ್ಲರು ಲಿಂಗ ಭೋಗೋಪಭೋಗಿ ಶರಣನ ಲಿಂಗಸುಖವ ? (ಪೋಳಪಾ. ೦೩೨ ಶ್ರಸ್ತಾವನೆ). [ಬಾಯ್ + ತುತ್ತು$_2$]

**ಬಾಯ್ದೆಗೆ, ಬಾಯಿತೆಗೆ** (ಕ್ರಿ). ೧. ಬಾಯನ್ನು ತೆರೆ ; ಬಾಯಿ ಬಿಡು : ಸುರಿವ ಖಂಡದ ರಕುತಧಾರೆಗೆ ತರತರದಿ ಬಾಯ್ದೆಗೆದು ಶಾಕಿನಿಯವರ ಸಮೂಹವು ಬಳಿಯಲ್ಯೆದಿತು ಪಾರ್ಥನಂದನನ (ಕುವ್ಯಾದ್ರೋ. ೬-೪೦) ; ಅಗಣಿತಾತ್ಮಕನೆನಿಪ ಹರಿಚರಿತಗಳನಂತವ ಮುನಿವರನು ಬಾಯ್ದೆಗೆದು ಪೇಳಲು ಶೇಷಗೆಯು ಶ್ರುತಿನಿಕರಕಳವಲ್ಲ (ಹಭಾಗ. ೦೦-೯-೨). ೨. ಬಿರಿ; ಬಿರುಕುಬಿಡು : ಅರಮನೆಯೊಳಗೆ ನೆಲ ಬಾಯ್ದೆಗೆದುದು (ಕಾಳ್ಗಶಾ. ೨೦-೩೪). ೩. ಅರಳು ; ವಿಕಾಸವಾಗು : ಮುಗಿದು ದಬ್ಬಾಳಿ ಬಾಯ್ದೆಗೆದುಮುತ್ಪಲನಿಕರಮುಗಲ್ಪುದು ರಥಾಂಗಕುಲಂ (ಪಂಪಕಿ. ೪೬-೨೯). **ಬಾಯಿತೆಗೆ :** ೪. ಮಾತನಾಡಲು ಆರಂಭಿಸು: ಸಭೆಯಲ್ಲಿ ಆ ಹಿರಿಯರು ಬಾಯಿತೆಗೆದ ಕೂಡಲೆ ಜನಸಂದಣಿ ತನ್ಮಯತೆಯಿಂದ ಆಲಿಸಿತು (ಬೂ). [ಬಾಯ್ + ತೆಗೆ$_1$]

**ಬಾಯ್ದೆರೆ$_1$** 'ಬಾಯ್ದೆಱೆ$_1$' ನೋ.

**ಬಾಯ್ದೆರೆ$_2$** 'ಬಾಯ್ದೆಱೆ$_2$' ನೋ.

**ಬಾಯ್ದೆಱಸು** (ಕ್ರಿ). ೧. ಬಿರಿಯುವಂತೆ ಮಾಡು ; ಬಿರುಕು ಬಿಡುವಂತೆ ಮಾಡು : ಬಳಭಾರಂ ಭೂಮಿಯಂ ಬಾಯ್ದೆಱಸೆ . . . ಪರ್ವಿತ್ತು ಮರವಥಮನಾ ಸೈನ್ಯಧೂಳೀತಮಿಸ್ರಂ (ಜಗಪು. ೦೩-೦೯). ೨. (ಆಸೆಯಿಂದ) ಬಾಯಿಬಿಡುವಂತೆ ಮಾಡು ; ಹಂಬಲಿಸುವಂತೆ ಮಾಡು : ಗಾಳಿಯೊಲಪ್ಪಿಗೆ ನಿಲುಕುವವು ಹೊಂಬಾಳೆ ಖಚರೀಜನದ ಕಬರಿಗೆ ಬಾಳೆ ಬಾಯ್ದೆಱ[ಱ]ಸುವವು ಬಿರಿವಣ್ಣಿನ ರಸಾವಳಿಗೆ ಬಾಲಕಿನ್ನರಿಯರನು (ಕೊರಡಾ ೩-೩-೦೩). [ಬಾಯ್ + ತೆಱಸು (< ತೆಱಿಯಿಸು)]

**ಬಾಯ್ದೆಱೆ$_1$**, ಬಾಯಿತೆರೆ, ಬಾಯಿದೆಱೆ$_1$, ಬಾಯ್ತೆರೆ, ಬಾಯ್ದೆರೆ$_1$ (ಕ್ರಿ). ೧. ಬಾಯನ್ನು ತೆಗೆ,— ಬಿಚ್ಚು ; ಬಾಯಿಬಿಡು : ಆ ಮಿಟ್ಟು ಪೋ ಬಾಯ್ದೆಱೆದತ್ತು (ಶಾಂತಿಪು. ೪-೯೨) ; ನಿಮ್ಮ ಪ್ರಸಾದಕ್ಕಲ್ಲದೆ ಬಾಯ್ದೆಱೆಯೆನಯ್ಯಾ (ಬಸವ. ೪) ; ಮೂರಿ ಬಾಯ್ದೆಱೆದಳೋ ಮಹಾದೇವ (ಕುಮಾರವ್ಯಾ. ಕಂ. ೨೯೩-೦೦). ೨. ನುಡಿ ; ಮಾತಾಡು : ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್ (ಶಂಕರಾ. ೬-೮೪) ; ಮತಿವಂತಂಗರ್ದೆದೆಱೆದನಲ್ತೆ ಬಾಯ್ದೆಱೆದಾತಂ (ಶಾಂತಿಪು. ೨-೫೬) ; ಬಾಯ್ದೆಱೆಯಲಂಜಿತು ಸಭೆ (ಸಿಭಾಗ. ೪-೪-೦೯). ೩. ಬೇಡಿಕೊಳ್ಳು ; ಅಂಗಲಾಚು ; ಯಾಚಿಸು : ಹುಯ್ಯಲ ಕಂಡು ಬಿರುತ್ತೋಡಿ . . . ಬಾಯ್ದೆಱೆವವಂ ರಾಜನೇ ಹಗರಣದ ರಾಜನಲ್ಲದೆ (ಚಂಪು. ೯-೦೨). ೪. ಬಯಸು ; ಹಂಬಲಿಸು : ಪುದಿದುರಿಗಣ್ಣಾಣೆಯನದೇಪೊಗಬ್ಬಿಂ ಮುಗುಳೆಂದು ಮುಟ್ಟಬಾರದು ಬನವೆಂದು ಬಾಯ್ದೆಱೆಯಬಾರದು ಸಂಪಗೆಯೆಂದು ಸೂಡಬಾರದು (ಕಬ್ಬಿಗ. ೦೯೬) ; ಸುತನ ಬರವಿಗೆ ಬಾಯ್ದೆಱೆದ ತೆಱದ ಪರಮಸತಿಗಾಗುಳಿಕೆ ಬಂದುದು (ಜಸಪು. ೩-೨). ೫. ಅರಳು; ವಿಕಾಸವಾಗು : ಮುಗುಗಿದವು ಕೋಕ ಕೋಕನದಂಗಳಾಗ ಬಾಯ್ದೆಱೆದುವು ಚಕೋರ ಕೋರಕಕುಮುದರಾಜಿಗಳ್ (ಶೈಖಶಾ. ೨೬-೦೪). **ಬಾಯಿತೆರೆ** : ೧. ರುಕ್ಮಿಣಿಯೂ ಗರ ಬಡಿದವಳಂತೆ ಬಾಯಿ ತೆರೆದುಕೊಂಡು ನೋಡ್ತ್ತಿದ್ದಳು (ಪರ್ವ್ಯ. ೨೦೬). ೨. ಭಾವ ಬಾಯಿ ತೆರೆಯುವ ಸ್ಥಿತಿಯಲ್ಲಿರಲಿಲ್ಲ (ಜಾರುಡಾ. ೯೨). ೩. ಎರಡನೆಯವರಿಗೆ ನಾನು ಎಂದೂ ಬಾಯಿ ತೆರೆದವನಲ್ಲ (ಮುಂಜಯು. ೪-೪೩). ೪. ಪ್ರತಿಯೊಬ್ಬನೂ ಲಂಚಕ್ಕಾಗಿ ಬಾಯಿ ತೆರೆದುಕೊಂಡಿರುವಾಗ, ನನ್ನೊಬ್ಬನಿಂದ ಲಂಚನಿರ್ಮೂಲನ ಹೇಗೆ ತಾನೆ ಸಾಧ್ಯ? (ಕೃಪರು. ೫೬೭). **ಬಾಯಿದೆಱೆ$_1$** : ೧. ಪ್ರಾಣಪದವಾದಿರವಿಗಲ್ಲದೆ ಬಾಯಿದೆಱೆಯದು ಕರಮೆಸೆವ ಸಿಂಪೊಂದು ನೆನವುತಮಿಹುದು ಮಳೆಗಳಿಗೆ (ಬಸವು. ೩೧-೨೪). **ಬಾಯ್ತೆರೆ** : ೧. ಜಯಸೇನನು ಮಾಧವಿಯೆಂದು ಹೇಳುವುದಕ್ಕೆ ಬಾಯ್ತೆರೆಯುವಷ್ಟರಲ್ಲಿ ಅವಳು . . . ಮಾತಾಡಬಾರದೆಂದು ಸಂಜ್ಞೆ ಮಾಡಿದಳು (ಮಜಿಸ. ೮೭) ; ಗಳಗಳನೆ ಬಾಯ್ತೆರೆದು ಶಾಯಿಯಳುತಿಹಳು (ಕಾಲೂರ. ೦೬೨-೩೮೫). ೨. ಸಯ್ಯುರ್ಪುದೀಗ ನೀಂ ಬಂದಾಗ ನೋಳ್ಪಂ ಕಯ್ಯಿವ್ಡಿಯೊಳಳಿವರ್ಪುದೊಳ್ಳಿತೆನೆ ಬೀಳ್ಕೊಂಡ ಬಾಯ್ತೆರೆಯದೆಯೆ ಕಾಳು (ಕಾಲೂರ. ೦೯೫-೩೦೩). ೫. ಚೆಂದೆಂಗು ತಲೆದೂಗಿ ಕೆಂದಳಿರ್ ಬಾಯ್ತೆರೆಯೆ (ಕಾಲೂರ. ೬೭-೦೦೬). **ಬಾಯ್ದೆರೆ$_1$** : ೧. ಬಹುಗುಣಿತ ಜನಗಣದ ಸಂಸ್ತುತಿಯ ಧವಳಧಾರಾಸ್ವಾತಿವರ್ಷಕ್ಕೆ ಬಾಯ್ದೆರೆಯುತೆನ್ನ ಹೃದಯದ ಭಕ್ತಿಶುಕ್ತಿಯಲಿ ಮುತ್ತುಗಳ ರಚಿಸಿ ಕೋದಿಹೆ ವರಣಮಾಲೆಯಂ (ಚಿತ್ರಾಂಗ. ೩೬-೦೦೦೩) ; ಕಟ್ಟಿಳಲ ಬಿಚ್ಚಿ ಕರು ಕರೆಯೆ ಬಾಯ್ದೆರೆದು (ಕಾಲೂರ. ೬೭-೦೦೭). ೨. ದಾರಿಗನು ಬಾಯ್ದೆರೆಯುವುದರೊಳಗಾಗಿ ಮೂವರು ಸೈನಿಕರೂ, ಸೈನ್ಯಾಧಿಪತಿಯೊಬ್ಬನೂ . . . ಮುಂದೆ ನಿಂತರು (ಮಜಿಸ. ೬). ೪. ಕುದಿಯಿಲ್ಲದೆ ಎಸರಿಲ್ಲದೆ ಕಸಂಕಿಗೆ ಬಾಯ್ದೆರೆದವು (ನಂಮು. ೨೩-೪). [ಬಾಯ್ + ತೆಱೆ$_1$]

**ಬಾಯ್ದೆಱೆ$_2$**, ಬಾಯಿದೆಱೆ$_2$, ಬಾಯ್ದೆರೆ$_2$ (ನಾ). ೧. ಬಾಯನ್ನು ತೆರೆದಿರುವ ಸ್ಥಿತಿ; ತೆರೆದ ಬಾಯಿ : ಲಲನೆ ಮುದ್ದಾಡುತ್ತ ಬಾಯ್ದೆಱೆಯೊಳಗೆ ಕಾಣಿಸೆ ಸಕಲಭುವನಾವಳಿಯನು (ಸಿಭಾಗ. ೨-೩-೨೩). ೨. ತುಟಿ ; ಅಧರ : ಮಿಸುಗುವ ತನ್ನ ಬಾಯ್ದೆಱೆಯೊಳಾಲದ ವಣ್ಣನೆ ವ್ಯೆಯ ಬಣ್ಣದೊಳ್ ಕೊಸಗನೆ ತನ್ನ ಬಳ್ವಳಿಕೆಯೊಳ್ ಸಳೆಗೊಂಬನೆ ಪೋಲ್ತು ನೋಡ ಮಾನಸೆಯಂಣಮಲ್ಲಳೀಕೆ (ಅದಿಪು. ೦೨-೩೮) ; ಬಾಯ್ದೆಱೆಯಂ ಧವಳಿಸೆ ನಿಜದಂತಕಾಂತಿಸಂತಾನಂಗಳ್ ಪೂರ್ಣೇಂದುವದನೆ . . . ನೆಱೆ ನುಡಿದಳ್ (ಮಲ್ಲಿಪು. ೪-೮೬) ; ಮಾತನಾಡಿದ ಬಾಯ್ದೆಱೆಯ ಚೆಲ್ವನೆ ಕಂಡು ಸೋತನೀಶ್ವರ ಮನದೊಳಗೆ (ಪ್ರೋಹಶ. ೨೩-೦೪). ೩. ಬಿರುಕು; ಬೀಡೆ : ಎಱೆಯ ಭೂಮಿಯ ಬಾಯ್ದೆಱೆ ಧಾನ್ಯಮಾನ್ಯರ ಕರೆವ ಗೋಳಿಗೆ ಗಂಡು ಮೊರೆವ (?) . . . ನಾಮಾಂಕಿತ ವರವೃಕ್ಷ ವಿಪಿನದೊಳಿಹವು (ಪ್ರೋಹಶ. ೭-೬). ೪. ಬಾಗಿಲು ; ದ್ವಾರ : 'ಚೆಂಬಾಯ್ದೆಱೆ' ಪರಾ. **ಬಾಯಿದೆಱೆ$_2$** : ೫. ಬಾಯಿ ; ವದನ ; ಮುಖ : ಬಾಯಿದೆಱೆಯಿ ನಾಣೆಯಾಯ ತಪ್ಪದ ಗೀತಗಾಯಕಿಯರುಗಳೊಪ್ಪಿದರು (ಪ್ರೋಹಶ. ೦೩-೪೪). **ಬಾಯ್ದೆರೆ$_2$** : ೧. ಭರದಿಂದ ಯೆಕ್ಕಲನ ಹೊಕ್ಕಿರಿದು ಕರಡಿ ಬಾಯ್ದೆರೆಯ ಮುಸುಡಂ ಮುರಿಯಲಿಕ್ಕಿ (ನವಮೋ. ೦೬-೨೩). ೨. ಮೊನೆಯ ನಗೆ ಬಾಯ್ದೆರೆಯ ಸೊಂಪ ಬೀರಿದುವು (ಕಾಲೂರ. ೬೯-೦೨೦). ೬. ಬಾಯಿಮಾತು : ಬರೆಯದೆ ಇರುವ ಬಾಯ್ದೆರೆಯಾಗಿ ಹರಿದು ಬಂದ ಮತೀಯ ಆಚರಣೆಗಳ ಕಟ್ಟಳೆಗಳು, ಹಾಡುಗಳು, ಗಾದೆಗಳು ಸಹ ಸಹಾಯ ಮಾಡಬಹುದು (ಜಾನಗೀ. ೫೦) ; ನನಗೆ ನಿಮ್ಮ ಆಸ್ತಿಯಿಂದ . . . ತೊಂದರೆಯಿಲ್ಲವೆಂಬುದು ಖಾತ್ರಿಯಾದ ಬಳಿಕ ಮಾತ್ರ ಕೊಟ್ಟೇನು. ಅದು ಬಾಯ್ದೆರೆ (ಮುಗಿಯು. ೦೯೯). [ಬಾಯ್ + ತೆಱೆ$_2$]

**ಬಾಯ್ಧಾರೆ**, ಬಾಯಿಧಾರೆ, ವಾಯಿಧಾರೆ (ನಾ). = ಬಾಯ್ಧಾರೆ : ಕಠೋರದ ಮೊರಹುಗಳ ಬಾಯ್ಧಾರೆಗಳ ಕಿಡಿಹೊರಳಿಗಳ ಹೊಗರಂಬು ಹೊಕ್ಕವು ಪಾಂಡುಸೈನ್ಯದಲಿ (ಕುಮಾರವ್ಯಾ. ೨-೫೫). **ಬಾಯಿಧಾರೆ** : ಈ ಉಭಯದ ತಟಗಾಱದೆ ಹೊತ್ತು ಹೋರುವ ಮಾತಿನ ಕತ್ತಿಯ ಬಾಯಿಧಾರೆಯ ಘಾಯಕ್ಕೆ ಇನ್ನೇತಱ ಮದ್ದು (ಪ್ರೋಢವಾ. ೪೪-೦೮೦); ತಳಿತ ಹೊಗರಿನ ಬಾಯಿಧಾರೆಯ ಹೊಳೆಹುಗಳ ಹೊಗರಂಬು ಕವಿದವು (ಕುಮಾರವ್ಯಾ. ೫-೦೩). **ವಾಯಿಧಾರೆ** : ಹೊಳೆವ ಕೆಂಗಂಪುಗಳ ಮಹಾಳಿಯ ಲಲಿತರತ್ನದ ರೋಚಿಗಳ ಗಜಗಲಿಸುವಂಬಿನ ವಾಯಿಧಾರೆಯ ಕಿಡಿಯ . . . ಜ್ವಾಲೆಗಳೆನಲು ಹೊಕ್ಕನು ಮಹಾಹವವ (ಕುಮಾರವ್ಯಾ. ಕಂ. ೨೯೪). [ಬಾಯ್ + ಧಾರೆ]

**ಬಾಯ್ನೀರ್**, ಬಾಯಿನೀರು (ನಾ). ೧. ಬಾಯಲ್ಲಿ ಬರುವ ನೀರು; ಜೊಲ್ಲು ; ಲಾಲಾರಸ : ಪಿಱಾದಶಿಯೊಳಿವಿಲ್ಲದುದರ್ಕೆ ಬಾಯ್ನೀರೊಱೆತು ಬಣ್ಣಂಗುಂದುವರ್ (ಶಳವಂ. ೯-೦೨). **ಬಾಯಿನೀರು** : ೨. ಬಾಯಲ್ಲಿ ನೀರು ಸುರಿಯುವಿಕೆ : ಶ್ವಾಸವು, ಕೆಮ್ಮು, ಬಾಯಿನೀರು . . . ಇನಿತುಂ ಕರ್ಣಿಕ ಸನ್ನಿಪಾತವೆಂದರಿವುದು (ಸಳವ್ಯ. ೦೬೦). [ಬಾಯ್ + ನೀರ್./ತಮಿ. ವಾಯ್ನೀರ್]

**ಬಾಯ್ನುಡಿ** (ನಾ). ಹುರಿಯ ಬಾಯಿಮಾತು ; ಬಾಯಿಬಡಾಯಿ : ನಿನ್ನನ್ನರಂ ಬಾಯ್ನುಡಿಯ ಬೀರರನ್ನೆನಿತೊ ಕಂಡಿಹೆನೊ ನಾಂ (ಚಿತ್ರಾಂಗ. ೬೯-೨೦೮೦). [ಬಾಯ್ + ನುಡಿ$_2$]

**ಬಾಯ್ಪರೆ** 'ಬಾಯ್ಪಱೆ' ನೋ.

**ಬಾಯ್ಪಡಕ** 'ಬಾಯ್ಪಡಿಕ' ನೋ.

**ಬಾಯ್ಪಡಿ**, ಬಾಯಿಬಡಿ (ಕ್ರಿ). ೧. ಇನ್ನೊಬ್ಬರಿಗೆ ಮಾತಾಡಲು ಅವಕಾಶವಿಲ್ಲದಂತೆ ದಬಾಯಿಸಿ ಮಾತನಾಡು; ಇತರರು ಮಾತನಾಡದಂತೆ ಮಾಡು : ಪೊಡವಿಯೊಡೆತನವೆಮ್ಮದೆಂದು ಬಾಯ್ಪಡಿವರೇ (ಸೌಂದಪು. ೪-೭೭). ೨. ಬಡಾಯಿ ಕೊಚ್ಚಿಕೊಳ್ಳು : ವೃಥಾಭಿಮಾನದಲಿ ಹಣುಕಿ ಬಾಯ್ಪಡಿದೇನಹುದು ಕೈಗುಣವ ತೋಱಿರೆ

(ಕುವ್ಯಾ.ಸ. ೦೦-೩೯). **ಬಾಯಿಬಡಿ :** ೧. ಗುಣ ಮಾತನಾಡಿತು ಹಣ ಬಾಯಿಬಡಿಯಿತು (ಇಂಕಾಶ. ೨೦೩-೨) ; ಗಿರಾಕಿಗಳ ಬಾಯಿ ಬಡಿದ ಹಾಗೆ ಹೆಂಡ್ತಿ ಬಾಯಿಬಡಿಯೋಕೆ ಬರಬೇಡಿ (ಜೇಪುಕೂ. ೬) ; ತಪ್ಪು ಮಾಡುವುದು ಮೇಲೆ ಬಾಯಿಬಡಿಯುವುದು (ಕೂತಕಾ. ೩೦).

[ಬಾಯ್+ಬಡಿ$_1$]

**ಬಾಯ್ಬಡಿಕ**, ಬಾಯಿಬಡಕ, ಬಾಯಿಬಡಿಕ, ಬಾಯಿಬಡುಕ, ಬಾಯ್ಬಡಕ (ನಾ). ೧. ಬಡಾಯಿ ಕೊಚ್ಚಿಕೊಳ್ಳುವವನು : ಒತ್ತಿ ನೀನೆನ್ನಂ ಬಲುಹು ಮಾಡುತ್ತ ಕಾಡಲದೆಂತು ಬಹುದಾನೆತ್ತಲ್ಯೆ ನೀನೆತ್ತಲೀತಱ ಮಾತು ಬಾಯ್ಬಡಿಕ (ಬಸವು. ೯೦-೯೬); ಬಱಿಯ ಬಾಯ್ಬಡಿಕನೀ ಶಿಶುಪಾಲನೀ ಪರಿ ನಡೆವುದೇಕ್ಕೆ ಹರಿಯೊಡನೆ ಸಮಬೆಸನ ಬಿಂಕದಲಿ (ಕುವ್ಯಾ.ಸ. ೦೦-೬೬); ಕತ್ತ ಹಿಡಿದೀಗಳೀ ಬಾಯ್ಬಡಿಕನಂ ನೂಂಕು (ಕಬಿಕ್ರು. ೩೦-೨೩). (ಗು). ೨. (ಇನ್ನೊಬ್ಬರಿಗೆ ಮಾತನಾಡಲು ಅವಕಾಶ ಕೊಡದಂತೆ) ಬಹಳ ಮಾತನಾಡುವ ; ಅತಿಯಾಗಿ ಹರಟುವ : ಕೆಡುವೀ ಪ್ರಪಂಚಮಂ ನಿತ್ಯವೆಂದೆಂಬ ಬಾಯ್ಬಡಿಕ ಮೀಮಾಂಸಕರಾ ನೀಂ ಸುಮ್ಮನಿರ್ (ಷಟ್ಸ್ಥ. ೧೦-೦೯) ; ಬಾಯ್ಬಡಿಕ ಹೆಂಗುಸ ಕೊಲುವೆನೆನುತುಗ್ಗಡದ ಕೋಪದಲೆತ್ತಿದನು ಖಂಡೆಯವ ನಸುರೇಂದ್ರ (ಕೂರರಾ. ೩-೩-೩೬). **ಬಾಯಿಬಡಕ :** ೧. ನಾನು ಬಾಯಿ ಬಡಕನಲ್ಲದುದರಿಂದ ಜಗಳವನ್ನು ಬಯಸುವುದಿಲ್ಲ (ಯೋಧರು. ೨೯); ಇದನ್ನು ತಿಳಿದೂ ತಿಳಿದೂ ತಾನು ಅಂಧಶ್ರದ್ಧೆಯ ಬಾಯಿಬಡಕರ ಬಾಲ ವಾಗಬೇಕೇ ? (ಏಡ್ವಾ.ಕಿ. ೬೯); ಬಾಯಿಬಡಕ ಬರದಲ್ಲಿ ಗೆದ್ದ (ಗಾದೆ). **ಬಾಯಿಬಡಿಕ :** ೧. ಹತ್ತಿರಕೆ ಕರೆವರು ಬಾಯಿಬಡಿಕರ ಜಗದ ಭಂಡರನು ಅರಸುಗಳು ದುಶ್ಶೀಲರೆಂಬುದನಱಿಯದೇ ಜಗ (ಕುವ್ಯಾದ್ರೋ. ೦೩-೮) ; ಬಾಯಿಬಡಿಕನಲಾ ವೃಥಾ ರಾಧೇಯ ಮದವೇಕಿನ್ನು . . . ನೀನುಳಿವಾಯತಿಕೆಯಿನ್ನೆಂತು (ಕುವ್ಯಾ.ಕ. ೨೬-೭). ೨. ಆಯತಿ ಹೆಣ್ಣು ಗಳೇನು ಗಹನವೆಂಬ ಬಾಯಿಬಡಿಕ ತವಸಿಗಳ ತಾಯೆ ನೀ ಕೆಡೆಮೆಟ್ಟು (ಮೋಹತ. ೨೩-೯೬). **ಬಾಯಿಬಡುಕ :** ೧. ರಾಯ ಬಿನ್ನಪವಿದನೊಂದ ಚಿತ್ರೈಸೆನ್ನ ಬಾಯಿಬಡು[ಪಾಠಾಂ. ಡಿ]ಕನೆನ್ನದಿರು (ಕುರಾಕಾಂ. ೦೯-೭೦); ವರ್ಣಾಶ್ರಮಗಳಿಂದ ದೇಶ ಹಾಳಾಯಿತೆಂಬ ಬಾಯಿಬಡುಕರೂ ಬಹಳ (ಕಥಾ. VIII ಮುನ್ನುಡಿ). **ಬಾಯ್ಬಡಕ :** ೧. ಮಾತು ಹಡೆಯುವದೆಲ್ಲ, ಮೌನಗರ್ಭದ ಬದುಕು ಬಾಯ್ಬಡಕರಗೇನು ಗೊತ್ತು! (ಅರಳು. ೨೩೯-೦೭); ಅಂಥಾ ಕಥೆಗಳಲ್ಲಿ ಅರ್ಧಕ್ಕರ್ಧ ಸಂಖ್ಯೆ ಊರ ಬಾಯ್ಬಡಕರ ಕಪೋಲ ಕಲ್ಪಿತವೆಂಬುದೇನೂ ಸುಳ್ಳಲ್ಲ (ಒಡ್ಡು.ಉ. ೩೯). ೨. ಕೊನೆಗೆ ಬಾಕ್ಕೀದಾರ, ಇಲ್ಲವೋ ಬಾಯ್ಬಡಕ ಸಾಯ್ಕಲ್‌ಸ್ವಾರ- (ಅರಳು. ೩೪೭-೦೦).

[ಬಾಯ್ + — ಬಡಿಕ$_2$]

**ಬಾಯ್ಬಡಿಕತನ**, ಬಾಯಿಬಡಿಕತನ (ನಾ). ಜಂಬದಿಂದ ದಬಾಯಿಸಿ ಮಾತಾಡುವಿಕೆ ; ಜಂಬಕೊಚ್ಚಿಕೊಳ್ಳುವಿಕೆ : ಘಡ ವಿಕಾರವೆ ನಮ್ಮೊಡನೆ ಬಾಯ್ಬಡಿಕತನವೇ ಕುರುಮಹೀಪತಿಯೊಡನೆ ಹುಟ್ಟಿದೆಯಾದ ಕಾರಣ ಬಿಟ್ಟೆವು (ಕುವ್ಯಾ.ಸ. ೦೯-೯೭) ; ಗಂಡುತನವೇನಾಯ್ತು ಹೆ.ಳಲೆ ಭಂಡ ನೀ ಬಾಯ್ಬಡಿಕತನದಲಿ ತೊಂಡುಗೆಡೆವರೆ (ಕೌಶಿರಾ. ೨೦-೫೦); ಅವ ನಿನ್ನಿಂದ ಬಾಯಲಿ ಬಲ್ಲಿದನು ಬಾಯ್ಬಡಿಕತನದಲಿ ಬಗುಳಿ ಬಾಲವನು ಕೊಳ್ಳಿಗಿಡಿಯಲಿ ಸುಡಿಸಿಕೊಂಡವ (ಕೂರರಾ. ೬-೦೦-೩೬). **ಬಾಯಿಬಡಿಕತನ :** ಹಿರಿದು ರಕ್ಷಿಸಿದೊಡಶಿಯೆಂದಾನಱಿಯದುಸುರಿದೆ ನಿಮಗಿನಿತು ನಿಷ್ಠುರತೆಯಾದಡೆ ನಮಗಿದೇಕೀ ಬಾಯಿಬಡಿಕತನ (ತೊರಾ. ೨-೦-೩೦). [ಬಾಯ್ಬಡಿಕ+—ತನ]

**ಬಾಯ್ಬಡಿಕಿ**, ಬಾಯಿಬಡುಕಿ (ನಾ). ಇನ್ನೊಬ್ಬರಿಗೆ ಮಾತನಾಡಲು ಅವಕಾಶವಿಲ್ಲದಂತೆ ದಬಾಯಿಸಿ ಮಾತನಾಡುವವಳು : ಕೊಡ ಸಮರ್ಥರೆ ಬೇಡಿದುದ ನೀವ್ ನುಡಿದು ತಪ್ಪುವರಲ್ಲಲೇ ಬಾಯ್ಬಡಿಕಿ ಯಿವಳೆಂದೆನ್ನಿರಲಿ (ಕೂರರಾ. ೨-೨-೬). **ಬಾಯಿಬಡುಕಿ :** ರಿಪುರಾಯರಿಗೆ ದಾಸತ್ವವಾಗಲು ಬಾಯಿಬಡುಕಿ[ಪಾಠಾಂ. ಬಾಯ ಬಡಿಕೆ]ಯದಾರೊಡವೆ ತದ್ದಾಸ ಧನವಲ್ಲ (ಕುವ್ಯಾ.ಸ. ೦೩-೦೨). [ಬಾಯ್ಬಡಿಕ+ — ಇ$_2$]

**ಬಾಯ್ಬಡಿಕೆ** (ನಾ). = ಬಾಯ್ಬಡಿಕೆ : ನಿರ್ಬುದ್ಧಿವಂತೆ ಬಾಯ್ಬಡಿಕೆ . . . ಮಧುಗೋಷ್ಠಿಗೊರ್ಬಳೆಡೆಯಾಡುತಿರೆ ಕಂಡಾ ವಿದೂಷಕಂ ಸರ್ಬವದೊಳೆಲ್ಲರಂ ನಗಿಸುತಿವಳೀಗ ಹಸ್ತಿನಿಯೆಂದುಸಿರ್ದನು (ಕಬಿಕ್ರು. ೦೦-೨೩) ; ಹೆಣ್ಣ ವಾದಿಸಬೇಡ ಬಲ್ಲೆ ಬಾಯ್ಬಡಿಕೆಯೆಂದಳು ಖಿದ್ರು ಖಾತಿಯಿಂದ (ತುರಂಗ. ೬-೨೦). [ಬಾಯ್ಬಡಿಕ+ —ಎ$_2$]

**ಬಾಯ್ಬಿಡು** 'ಬಾಯ್ಬಿಡು' ನೋ.

**ಬಾಯ್ಬಿಯ್ಯಗ** 'ಬಾಯಿಬೀಗ' ನೋ.

**ಬಾಯ್ಬೀಗ** 'ಬಾಯಿಬೀಗ' ನೋ.

**ಬಾಯ್ಮಱುಕ** (ನಾ). ಅಭಿವ್ಯಕ್ತಿಗೊಳ್ಳುವ ಪ್ರೀತಿ, —ವ್ಯಾಮೋಹ : ಸೂಳ್ಪಡೆದ ಕೂಟಂ ಪಲ್ಲಟಂಬಾಯ್ವ ಬಾಯ್ಮಱುಕಂ ತಾಂಗಿಗಟಲ್ವ ನಾಣಲಿತನಂ . . . ಅಳುಂಬಂ ಕೂಟದೊಳ್ ನಲ್ಲರಾ (ಕಂದ್ರಕು. ೬-೬೮).

[ ಬಾಯ್ + ಮಱುಕ ]

**ಬಾಯ್ಮಾತು** ' ಬಾಯ್ಮಾತು ' ನೋ.

**ಬಾಯ್ಮಿಡುಕು** (ಕ್ರಿ). ಧ್ವನಿ ಮಾಡು; ಮಾತಾಡು: ಬಱಿದೆ ಬಾಯ್ಮಿಡು ಕದಿರಿ ಮಱಿಯೊಳಡಿಗಡಿಗಿಬ್ಬರೊಂದಾಗಿ ನುಡಿಯದಿರಿ (ಶಾಂಡಪು. ೦-೩೯).

[ಬಾಯ್ + ಮಿಡುಕು$_1$]

**ಬಾಯ್ಮುಚ್ಚು**, ಬಾಯಿಮುಚ್ಚು (ಕ್ರಿ). ೧. ಬಾಯಿ ಬಿಡದಿರು ; ಮಾತಾಡದಿರು ; ತೆಪ್ಪಗಿರು : ಬಾಯ್ಮುಚ್ಚಿರಲ್ ಚೆಲ್ವು ಪೆಣ್ (ಅಕ್ಷಪ್ರಾ. ೦೨-೨೩೩). **ಬಾಯಿಮುಚ್ಚು :** ೧. ಹೆಣ್ಣನ್ನು ತರುವಾಗ ಬಾಯಿಮುಚ್ಚಿಕೊಂಡಿರಬೇಕು ಅನ್ನುತ್ತೀಯಾ ? (ಮುಕ್ತಿ. ೦೩೪). ೨. ಬಾಯಿ ಮುಚ್ಚಿಸು ; ಬಾಯನ್ನು ಕಟ್ಟು : ಮಾಯೆ ಎನ್ನ ಕಾಯ ವನ್ನುಪಾಯದಿಂದ ನೋಯಿಸಿ ಬಾಯಿಮುಚ್ಚಿ ಕೊಲ್ಲುತ್ತಾಳೆ ಕಾಯೊ ಲಕ್ಷ್ಮಿಯರಸನೆ (ಪುರಂದ. ೦-೧೬೬ ಪಲ್ಲವಿ). [ಬಾಯ್ + ಮುಚ್ಚು$_1$]

**ಬಾಯ್ಮೋಸ** (ನಾ). ಮಾತಿನ ತಪ್ಪು ; ಉಕ್ತಿದೋಷ : ಅನಿವರೊಳ್ ವ್ಯವಹರಿಪುದರ್ಕೆನಗೆ ತಿಳಿವಂತೆ ನಿರಪಿಸಿ ರಾಯಸವುಂ ದಯೆಗೆಯ್ವುದು ಇದಱೊಳೇನಾನುಂ ಕೆಯ್ಮೋಸ ಬಾಯ್ಮೋಸಂಗಳುಳ್ಳೊಡವೆಯೊಳ್ಮೆಯಿಂ ಸೈರಿಪುದು (ಜಕವಂ. ೨೩-೯). [ಬಾಯ್ + ಮೋಸ]

**ಬಾಯ್ವಲ** (ನಾ). ಮಾತಿನ ಶಕ್ತಿ ; ವಾಗ್ಬಲ : ಛಲಮಂ ತೋಳ್ವಲಮಂ ನೃಪಾಳನಳವಂ ನಾವಿನ್ನು[ಟೆ]ನ್ದೆಯ್ದು ಬಾಯ್ವಲದಿಂ ಬಣ್ಣಿಸದಿರ್ದ್ದೆ [ಳ]ಣ್ಣ (ಕಇಇ. ೨-೨-೯೦; 1058); ಪಲವುಂ ಮತಂಗಳಂ ಬಾಯ್ವಲದಿಂದಂ ಬಾದುಗೆಯ್ವ ಬಸನದೆ ಮಾಱ್ಬರ್ ಕೆಲಬರದನೊಲುವರೊಲ್ಲರ್ ಪಲರೆಂತುಂ ಮೋಕ್ಷಮಾರ್ಗಮಂ ಜಿನಮತಮಂ (ಸವುಶ. ಅನುಬಂಧ. I, ೬೭೩-೩೬). [ಬಾಯ್ + ಬಲ$_3$]

**ಬಾಯ್ವಸ** (ನಾ). ಬಾಯಿಯ ಉತ್ಕಟವಾದ ಅಪೇಕ್ಷೆ : ಬಾಯ್ವಸವೋಡ ದಂತಡರ ಚುಂಬಿಸೆಯುಂ ಬಗೆದೆಂತು ತಳ್ತೊಡಂ ಮೆಯ್ವಸವೋಡದಪ್ಪು ಗಡ ಕಣ್ಬಸವೋಡದಿದೆಂತು ನೋಡೆಯುಂ (ಅರ್ಥನೇ. ೬-೭).

[ಬಾಯ್ + ಪಸ$_1$]

**ಬಾಯ್ವಱಿ**, ಬಾಯ್ಬರೆ (ನಾ). ಬಾಯಿಂದ ಮಾಡುವ ಶಬ್ದ; ಬೊಬ್ಬೆ : ಸುರಿಗೆ ಶುಭಂಬಂಗತ್ತಿಗೆ ಕರಗಂ ತಲೆಮಂಡೆ ಮುರುಳ ಬಾಯ್ವಱಿ ಪಱಿಯಾಗಿರೆ ಕಳದೊಳಱಿಯುಲಿದಿರ್ದುವು ನೆರೆದು ನಿಶಾಚರರ ತಕ್ಕಿನೆಕ್ಕತುಳಂಗಳ್ (ಕಾವ್ಯಾವ. ೬೬). **ಬಾಯ್ಬರೆ :** ನಾನಾಶಕುಂತವ್ರಜಂ . . . ಪಾಪುರಿಯ ಬಿರುದನಿಗೆ ಕೈಪರೆಗೆ ಬಾಯ್ಬರೆಗೆ ಕಲ್ಗವಣೆ ಗೊಂದಿನಿತು ಪೆಳರಿ ಗಾರಾಗುತುಂ . . . ತೊಡಗಿದಪವಿನ್ನೊರ್ಮೆ ನೆಲ್ಲೀವಿಗೆ

(ಶಬ್ದಾಂಗ. ೫೩–೦೬೫೦). 'ಕೆಯ್ಬಿಡಿ³' ಪರಾ. [ಬಾಯ್+ಪಿಡಿ¹]

**ಬಾಯ್ಬಿಡಿಗುಟ್ಟು** (ಕ್ರಿ). ಬಾಯಿಂದ ಜೋರಾಗಿ ಶಬ್ದ ಮಾಡು ; ಬೊಬ್ಬೆಯಿಡು : ಘಟೋತ್ಕಚನ ತಲೆಯಂತೆ ಮಾರುಳ ಕಾಳೆಗಕ್ಕಾರ್ವ ಸೂಲದ ತಲೆಗಳಂ ತಮ್ಮಟ್ಟೆಯಾಟಕ್ಕೆ ಬಾಯ್ಬಿಡಿ³[ಪಾಠಾಂ· ಯ್ಬಿಡಿ³] ಗುಟ್ಟುವ ಸಿಡಿದಲೆಗಳುಮಂ (ಅರ್ಜುನ. ೫–೭೦ ವ). [ಬಾಯ್ಬಿಡಿ³+ಕುಟ್ಟು₁]

**ಬಾಯ್ವಾತು**, ಬಾಯಿಮಾತು, ಬಾಯ್ಮಾತು (ನಾ). ೧. ಬರಿ ಮಾತು ; ಶುಷ್ಕವಾದ ನುಡಿ ; ತೋರಿಕೆಯ ಮಾತು : ಈ ಬಾಯ್ವಾತಿನೊಳೇ ವಂದಪುದಮ್ಮಣ್ಣಿ ಕಾದುಕೊಳ್ (ಶಂಕಶಾ. ೦೨–೦೬೩). **ಬಾಯಿಮಾತು** : ೧. ನನ್ನ ಕನ್ನಡಾಭಿಮಾನವು ಬರೀ ಬಾಯಿಮಾತಿನಲ್ಲೇ ಉಳಿಯಿತು (ಕಂಗಾಳ್. II. ಮುನ್ನುಡಿ). ೨. ಮುಖತಃ ಹೇಳಿದ ಮಾತು ; ವ್ಯಕ್ತವಾಗಿ ನುಡಿದ ಮಾತು : ಬಾಯಿಮಾತಿನ ದಾಯದೊಳು ಶವುಗಾಯಿತೆಂದೇ ಹಂಕರಿಸಿ . . . ತರಣೋಪಾಯಮರಿಯದವರಿಂಗೊರೆ ಯದಿರು ಮಾಯಹರ ಚಿತ್ಕಾಯ ಘನಗುರುರಾಯ ವಚನವನು (ಗಗಶಾ. ೦೬–೨) ; ಅವಳ ಬಾಯಿಮಾತಿನಲ್ಲಿ ಅರ್ಥವೊಂದಾದರೆ, ಕಣ್ಣಿನ ಭಾಷೆಯ ಅರ್ಥವೇ ಬೇರೆಯಾಗಿತ್ತು (ಭುವನ. ೩೨೨). **ಬಾಯ್ಮಾತು** : ೧. ನಾವೀಗ ಬಾಯ್ಮಾತಿನ ಗೌಡಿಕೆಯನ್ನೂ ಸ್ವಪ್ರತಿಷ್ಠೆಯನ್ನೂ ಮೆರೆಸುವುದರಲ್ಲಿ ಮುಳುಗಿದ್ದೇವೆ (ಸ್ವ.ಶಿಶಿ. ೩೭೦).

[ಬಾಯ್ + ಮಾತು₁]

**ಬಾಯ್ಬಿಡು**, ಬಾಯಿಬಿಡು, ಬಾಯಿವಿಡು, ಬಾಯ್ಬಿಡು (ಕ್ರಿ). ೧. ಬಾಯನ್ನು ತೆರೆ ; ಬಾಯಿ ತೆಗೆ : ಕರಿಗಳ್ ಭೀಮಂ ಪಿಡಿದಡರ್ದೊಡೆ ಬಾಯ್ಬಿಟ್ಟೆಲ್ವಡಗಾದುವು (ಶಂಕಶಾ. ೨–೫); ನೀಂ ಭಕ್ತಿಯಂ ಮಾಡಿದ್ದೆ ನಿನ್ನಯ ಕೂರ್ಮೆಯೊಲ್ಲಿತೆನುತಂ ಬಾಯ್ಬಿಟ್ಟು ಪುಯ್ಯಲ್ಬಿಡಲ್ (ಕಾದಂಶಾ. ೬೭೨); ಪೆರ್ಗೆ ಪೇಟಲಂಜ ಲಜ್ಜೆಯಿಂ ಮಾಗಿಯ ಕೋಗಿಲೆಯಂತೆ ಬಾಯ್ಬಿಡಾಡದೆ (ಧರ್ಮಾಮೃ. ೦–೦೫೭). ೨. ಮಾತನಾಡು ; ನುಡಿ : ತಾಯಿ ಮೋರೆಯ ನೋಡಿಯೇನಾದುದೆಂದೊಡಂ ಬಾಯ್ಬಿಡದೆ ಹಾಸನೋಸರಿಸಿ ಮಲಗಿದಳು (ಕಾಂಊರ. ೦೩೨–೫೮೨). ೩. ಆಶ್ಚರ್ಯ ಪಡು ; ಬೆರಗಾಗು : ಪೋಡಶಯುತ್ಸ್ವಿಜರ್ಗಿತ್ತುದರ್ಕೆ ಬಾಯ್ಬಿಟ್ಟರೆ ವಿಪ್ರಕೋಟಿ . . . ಯಮನಂದನನೇಂ ಕೊಡಲಿಲ್ಲದಿತ್ತನೋ (ಶಂಕಶಾ. ೬–೩೯). ೪. (ನೋವಿನಿಂದ) ನರಳು ; ಚೀರು ; ಕಿರಿಚು : ನೊಂದು . ಬಾಯ್ಬಿಡದಿನಿಸಪ್ಪೊಡಂ ಪೆಳಚದಳ್ಕದೆ . . . ಬಟ್ಟುವಿರ್ದ ನೆಲೆಯಿಂ ಕಲಪುನ್ನದಗಂಧಸಿಂಧುರಂ (ಶಂಕಶಾ. ೦೦–೪೪) ; ಪಟ್ಟಿರ್ದ ನಾಯ ನಡುವಂ ಮೆಟ್ಟಿ ಕನಲ್ದೊಡನೆ ಮೇಲೆ ಪಾಯ್ದದು ಶಿನೆ ಬಾಯ್ಬಿಟ್ಟು ಲಲಿತಾಂಗನಿಟಿದಂ ಕೆಟ್ಟೆನೆನ್ನುತ್ತೊಡುವಾತನಂ ಮತ್ತೊರ್ವಂ ತಾಂ ಕಂಡು (ಧರ್ಮಾಮೃ. ೨–೩೬). ೫. ಮರುಗು ; ಸಂಕಟಪಡು ; ದುಃಖಿಸು : ಮತಿಗೆಟ್ಟಿರ್ದಗಟ್ಟು ಬಟಲ್ದಟಲ್ದು ಬಾಯ್ಬಿಟ್ಟು ಕುಯೋನಿಯೊಳ್ ತಿರಿದು ಪೋದುವು ಕಾಲಮನಂತಂ (ಸುಕುಮಾ. ೦೦–೮೨); ತಾಯ್ ಸತ್ತ ಶಿಶುವಿನಂತೆ ಬಾಯ್ಬಿಡುತ್ತುಂ (ಧರ್ಮಾಮೃ. ೦–೦೪೪) ; ಘುಂಡೋದರಿ . . . ಬಸುಟ ಹೊಡೆದಳಲುತ್ತ ಗರುವಿಕೆಗೆಟ್ಟು ಹೊರಳಿ ದಳಕಟ ಬಾಯ್ಬಿಡುತ (ತೊರಾ. ೩೭–೧). ೬. (ದೈನ್ಯದಿಂದ) ಬೇಡಿಕೊಳ್ಳು ; ಯಾಚಿಸು : ಇನಿಸೆಟ್ಟು ನೋಡಿ ನುಡಿಯೆಂದೆನಿತುಂ ತೆಟದಿಂ ಕಪಿಂಜಲಂ ದೆಸೆದೆಸೆಗಂದು ಬಾಯ್ಬಿಡುತಮಿರ್ದುದನಾಲಿಸಿದಂ (ಕಾದಂಪೂ. ೪೦೩) ; ತಂದೆ ಕರುಣಿಸು ವಿಶಾಪವನೆಂದು ಬಾಯ್ಬಿಡುವ ಮಂದಮತಿಗಳಿಗೆ ದೊರಕದ ಲೇಸನೀಯಬೇಕು (ಸಿದ್ಧರಾ. ೦–೨೫) ; ಗತಿವಿಹೀನೆಗೆ ಕೃಷ್ಣ ನೀನೇ ಗತಿಯೆನುತ ಬಾಯ್ಬಿ [ಪಾಠಾಂ. ಯ್ಬಿ]ಡಲು ಲಜ್ಜಾಸ್ಥಿತಿಯನುಳುಹಿದ ದೈವ ನೀ ಮೈದೋಟಿದೈ ತನಗೆ (ಕುಮಾ.ಭಾ. ೨–೦೩). ೭. ಬಯಸು ; ಹಂಬಲಿಸು : ಘನದುಃಖಂಗಳನೆಯ್ದೆ ಮಾಟ್ಟ ವನಿತಾಸೌಖ್ಯಕ್ಕೆ ಬಾಯ್ಬಿಟ್ಟು ದುರ್ಮಾನುಜಂ ಸಿಕ್ಕಿ ವಿಶೇಷದಿಂದೆ ಬಟಲುತ್ತಿರ್ಪಂ ದಲಾತ್ಮಜ್ಞನೆಂದೆನಿಪಂ ಬಾಯ್ಬಿಡನಂಬುವೆಂಬ ಬಗೆಯಿಂ ಗಾಂಪಂ ಮರೀಚೀಜಲಕ್ಕೆನಸುಂ ಬಾಯ್ಬಿಡುವಂ ಪರೀಕ್ಷಕನದಕ್ಕಿಂ ತಾದೊಡಂ ಬಾಯ್ಬಿಡಂ (ಭಾರಭೂ. ೫–೩೯). ೮. ಬಿರಿ ; ಬಿರುಕು ಬಿಡು ; ಸೀಳು : ನೆಲಂ ಮೊಟಗೆ ಕಂಪಿಸೆ ಬಾಯ್ಬಿಡೆ ಬೆಟ್ಟು ಬೀಟಿ³ ಮಂದಿರಮಪುಡಿದಟ್ಟಿ ತರ್ಗೆ . . . ಘನಾಗಮದೊಳ್ ವಿನಿಂದಿತಂ (ಶೋಕೋಶ. ೪–೭೪). ೯. ಚೆದರು ; ಸಿಡಿದುಹೋಗು : ಮಂದರದ ಘಾರಾಘಾರಿಯಲಿ ಬಾಯ್ಬಿಡುವ ಕಡಲಂತೆ ಅರಿವರೂಥಿನಿ ಕೆದಟಿ ತಳಿತವು (ಕುಮಾ.ದ್ರೋ. ೦೨–೧೯). **ಬಾಯಿಬಿಡು** : ೨. ಅವನ ಆಗಿನ ಮನಸ್ಥಿತಿಯನ್ನು ಸರಿಯಾಗಿ ಅರಿತವಳ ಹಾಗೆ ತುಂಗಕ್ಕ ಮೆಲ್ಲನೆ ಬಾಯಿ ಬಿಟ್ಟಳು (ಮೂರುದಾ. ೪೨) ; ತಮ್ಮ ಯಜಮಾನ ಬಾಯಿ ಬಿಡುವುದನ್ನೇ ನಿರೀಕ್ಷಿಸುತ್ತ ರೈತರು ಅವನನ್ನೇ ನೋಡುತ್ತಿದ್ದರು (ಭುವನ. ೨೬೯); ಬಾಯಿ ಬಿಟ್ಟರೆ ಬಣ್ಣಗೇಡು (ಗಾದೆ). ೬. ಪಡೆದೊಡವೆಯ ಧರ್ಮಕೆ ಈಯದವ ಬಾಯಿಬಿಡುವುದೆ ಪರರಿಗೆ ಸಾಕ್ಷಿ (ಪುರಂದ. ೨–೦೭–೨) ; ಭ್ರಷ್ಟದೈವಕೆ ಬಾಯಿಬಿಟ್ಟಲ್ಲಿ ಫಲವಿಲ್ಲ (ಸರ್ವಜ್ಞ. ೦೯೫). ೭. ಮುನ್ನೂಱುಮವತ್ತು ನಕ್ಷತ್ರಕ್ಕೆ ಬಾಯಿಬಿಟ್ಟುಕೊಂಡಿಪ್ಪುದೆ ಸಿಂಪು ಅದು ಸ್ವಾತಿಗಲ್ಲದೆ ಬಾಯ್ದೆಱೆಯದು ಕೇಳು ಕೇಳಾ ತಂದೇ ಎಲ್ಲವಕ್ಕೆ ಬಾಯ ಬಿಟ್ಟರೆ ತಾನೆಲ್ಲಿಯ ಮುತ್ತಪ್ಪುದೊ (ಬಸವ. ೮೦೯); ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ ಹರಿ ಕೊಡದ ಕಾಲಕ್ಕೆ ಬಾಯಿಬಿಡುವ್ಯಲ್ಲೊ ಪ್ರಾಣಿ (ಪುರಂದ. ೬–೬೭ ಪಲ್ಲವಿ). ೧೦. ಗೌಪ್ಯವಾದುದನ್ನು ಬಯಲು ಮಾಡು,— ರಟ್ಟುಮಾಡು : ಇವನು ತಂದೆ ತಾಯಿ ಬಂಧು ಬಳಗದ ಹೆಸರನ್ನು ಬಾಯಿಬಿಡ (ಪರದಾ. II. ೬೫೬). **ಬಾಯಿವಿಡು** : ೧. ತುರಗದಟಂ ಪಡಲ್ವಡೆ ಕಡಂಗಿ ಘಟಾವಳಿ ತಾಗಿ ಮತ್ತೆ ನಿತ್ತರಿಸದೆ ಭೀತಿಯಿಂ ಪೆಳಟಿ ಬಾಯಿವಿಡೆ (ಎಕ. VIII. ಸಾಗರ. ೦೦೯–೨೬ ; 1042). **ಬಾಯ್ಬಿಡು** : ೧. ಪಿಡಿವ ಪುಲಿ ಕರಡಿ ಬಾಯ್ಬಿಡುವ ಭೂತಂಗಳಸುಗುಡಿವ ಪಾವುಗಳಟ್ಟಿ ಸುಡುವ ಕಾಳ್ಕಿಚ್ಚುಳಿಯಗೊತವು (ಕೈಮಿಥಾ. ೪–೨೩) ; ಬಾಯ್ಬಿಟ್ಟು ಹೇಳುವುದಿಲ್ಲವೇಕೆ, ನಿನಗೀಗ ಬಾಯ್ಗೆ ನೀರು ಬಂದು ಮನ ಸೋತಿದೆಯೆಂದು ? (ಶಿಕ್ತಳ. ೨೬೯). ೫. ಸಂಸ್ಕೃತಿದುಃಖದಿಂದೆ ಬಾಯ್ಬಿಟ್ಟು ಪಲುಂಬುವೆಲ್ಲ ಜನವುಂ ನಡೆ ನೋಡಿ (ಉದ್ಭಟಿ. ೦೦–೫೪) ; ಇರುಳು ತಸ್ಕರಬಾಧೆಯಲಿ ಭೂಸುರರು ಬಾಯ್ಬಿಡುತ್ತಿದೆಯಿಂದ್ರಪ್ರಸ್ಥಪುರವರವ (ಕುಮಾ.ಆ. ೦೯–೨) ; ಹೆಂಡಿರುಗಳ ಬಿಟ್ಟೋಡಿದವರ . . . ಗಂಡನ ಬಿಟ್ಟು ಬಾಯ್ಬಿಡುತ್ತಿದಿದ ಹೆಂಗಳೆಂಡಲೆಗಳನೇವೇಳ್ವೆ (ಕಂಪವ. ೦೦–೫೨). ೬. "ಬಾಯ್ಬಿಡು (ಬಾಯ್+ಬಿಡು)—ದೈನ್ಯೇ" (ಶಮದಾ) ; ಬಟ್ಟಲ ಪಿಡಿದು ಬಾಯ್ಬಿಟ್ಟು ಕೇಳಿದರಿಲ್ಲ ಅಟ್ಟಡವಿಗೆ ಅತ್ತರಿಲ್ಲ (ಪುರಂದ. ಧಾ. ೨–೩೨–೩). ೭. ನೀನೊಲ್ಲದೆನೊಲ್ಲದಿರ್ದೊಡಮೇಂ ನಾನೆರಡಿಲ್ಲದೊಲ್ಲೆ [ಲ್ದೆ]ನದಱಂ ಬೇಱೂರ ಬೇಟಕ್ಕೆ ಬಾಯ್ಬಿಡಲಾಱೆಂ (ಅನಂಪು. ೦೦–೯೫). [ಬಾಯ್ + ಬಿಡು₁]

**ಬಾಯ್ಪೂಸು** (ಕ್ರಿ). ೧. ಬಾಯನ್ನು ಸವರು, — ಒರೆಸು. ೨. (ಅಲಂ) ಬಾಯಿ ಮುಚ್ಚಿಸು : ಸಮಕಟ್ಟಱಿಯದೆ ಹರಿಗರ್ಘ್ಯಮೆತ್ತಿ ನಿಂದಿರ್ದ ಯಜ್ಞಮದು ಮೊದಲೊಳ್ ಶಾಸಮರ್ದುಮಮರ್ದಿ [ರದೆ] ತಣಿಯುಂಡಮರ್ದಂ ಗೋಮೂತ್ರದಿಂದೆ ಬಾಯ್ಪೂಸಿದವೊಲ್ (ಶಂಕಶಾ. ೬–೪೬) [ಬಾಯ್ + ಪೂಸು₁]

**ಬಾಯ್ಬೆಣ್ಣೆ**, ಬಾಯಿವೆಣ್ಣೆ (ನಾ). ನವಜಾತಶಿಶುವಿಗೆ ತಿನ್ನಿಸುವ ಬಜೆ ಮತ್ತು ಬೆಣ್ಣೆಗಳ ಮಿಶ್ರಣ: ಆತನುಂ ಚಂದ್ರಭುಕ್ತನೆಂದು ಪೆಸರನಿಟ್ಟು ಬಾಯ್ಬೆಣ್ಣೆಯೊಡನೆ ಕಿಱುಕಿಱಿದೆ ನಂಜನೂಡಿ ಬಟಿಕೆ ಬಳೆದೊಡಾ ಹಾರದೊಳೂಡಲ್ ತಗುಳ್ದೊಂ (ವಡ್ಡಾರಾ. ೦೬೭–೨೪) ; ತಿರುತಲೆಯೂರ ಶಿವನ ಪ್ರಸಾದವಂ ತಂದು ಬಾಯ್ಬೆಣ್ಣೆಯುಕ್ಕಿದರತಿಸ್ವಾದುವುಂ (ರುದ್ರರ.

ಹ. ೨೦-೩) ; ಶಂಕರಶಿಶುಗೆ ಪರಮಪ್ರಸಾದದಿಂ ಬಾಯ್ವೆಣ್ಣೆಯಿಟ್ಟು ಪೊಲೆಗೊಟ್ಟು (ಶಙ್ಕರಾ. ೨-೬೬). **ಬಾಯಿವೆಣ್ಣೆ** : ಊರೊಡೆಯ ನಾಚರಸರು ಕರುವರ ಕಲ್ಲಗಾವುಂಡಂಗೆ ಬಾಯಿವೆಂಣೆಗೆ ಕೊಟ್ಟ ಮನೆ (ಕೊಲ್ಹಾ.ಶಾ. ೦೩-೩೮ ; 1166). [ಬಾಯ್ + ಬೆಣ್ಣೆ]

**ಬಾಯ್ಬೆಸ** (ನಾ). (ರತಿಕ್ರಿಯೆಯಲ್ಲಿ ಮಾಡುವ) ಚುಂಬನ ಮುಂತಾದ ಬಾಯಿಯ ಕೆಲಸ : ಮೆಯ್ಬೆಸದಿಂ ಕೆಯ್ಬೆಸದಿಂ ಬಾಯ್ಬೆಸದಿಂ ಮಂತ್ರ ತಂತ್ರದಿಂದಂ ಸುಖಮಂ ಮೆಯ್ವಿಡೆ ವನಿತೆಗೆ ಪಡೆದಾ ಮೆಯ್ಯೋಗಕ್ಕೆಳಸಿ ಸೋಲ್ವನೆಟ್ಟುವೊಜಂಗಂ (ಕಾವ್ಯಾವ. ೬೭). [ಬಾಯ್ + ಬೆಸ₁]

**ಬಾಯ್ಬೊಱೆ ?** (ನಾ). (?) : ತೋಳ ವಾಯಸದ ಮೊಲದ ಕರಡಿಯಾ ಕೂಲದೊಂದಿರದ ಬೆಂದ ಮೊರಡಿಯಾ ನರಿಯ ಕೋಡಗದ ಗೂಗೆ(ಬೆ) ಯಂದವಂ ಮರೆಯ ಪಾಟ್ಮನೆಯ ಬಾಯ್ಬೊಱೆಯಂದವಂ . . . ಪೋಲ್ವೊಡಿಲ್ಲ ಮಟಱ (ಜಿಟ್ಟಿಮ. ೬-೦೨). [?]

**ಬಾಯ್ಸನ್ನೆ** (ನಾ). ಬಾಯಿಯ ಸಂಜ್ಞೆ ; ಮುಖದ ಇಂಗಿತ : ಕೈಸನ್ನೆ ಯಿಇದ ಕಾತರದಿಂದ ಪೊಯ್ವನು ಬಾಯ್ಸನ್ನೆಯಿಂದಾನು ಬೈವೆ ಮೈಸನ್ನೆ ಯಿಂದ ಚಿತ್ರದೊಳೊಡಗೂಡುವೆನೈಸರಲನ ಸಮರೂಪ (ಕುಮಾರಾಮ. ೨೬-೦೪೦). [ಬಾಯ್ + ಸನ್ನೆ]

**ಬಾಯ್ಸವಿ**, ಬಾಯಿಸವಿ (ನಾ). ೧. ಬಾಯಿಗೆ ಸಿಹಿಯಾದುದು,— ಮಧುರವಾದುದು : ಚಾರ ಚೋರ ವೀರರ ಕಥೆಯೊಳ್ ಬಾಯ್ಸವಿಯ ಮಾತುಗಳಂ ಬಱಿಕೆಯ್ವ ಚರ್ಚೆಯಲ್ಲ (ಅನಂತ. ೧-೩೬). ಬಾಯ್ಸವಿಗೆ ಮೆಯ್ಸವಿ ಕಣ್ಸವಿಯಪ್ಪ ರೂಪು (ಶಮದ. ೬೮ ಕ್ರಯೋ.). ೨. ಬಾಯಿಗೆ ರುಚಿಯೆನಿಸುವ ಪದಾರ್ಥ ; ಪ್ರಿಯವಾದ ಖಾದ್ಯವಸ್ತು : ಕಲ್ಲ ಗವಿಯೊಳಗೊಕ್ಕ ಬಾಯ್ಸವಿಯ ನಾಲಗೆಯಿಂದೊಕ್ಕನೆ ಸವಱುತ ಮುಂಗಾರ ಪನಿಯೊಳು ಮಿಕ್ಕಿರ್ದವಾ ಪುಲಿವಿಂಡು (ಅನಂತ. ೦೨-೪೦); ಹಸಿವಿಗೆ ಬಾಯ್ಸವಿ ಬೇಡ, ನಿದ್ದೆಗೆ ಹಾಸಿಗೆ ಬೇಡ (ಗಾದೆ). **ಬಾಯಿಸವಿ** : ೨. ಬಾಯಿಸವಿಗೆ ತಿಂದು ನಾಯಿಯಾಸಾವು ಸತ್ತ (ಗಾದೆ). [ಬಾಯ್+ಸವಿ₃]

**ಬಾಯ್ಸೋವು** (ನಾ). ಬಾಯಿಗೆ ಸಿಕ್ಕ ಬೇಟೆ,—ಬಲಿ : ಕೋಟಿಕೋಟಿ ಜನ, ಪರ್ವದ **ಪೂವು**, ತುರುಗಿತು ಜವರಾಯನ ಬಾಯ್ಸೋವು ! (ಪಾಂಚಿ. ೩೩-೬೦೦). [ಬಾಯ್+ಸೋವ್ವು₂ (<ಸೋಪು₁)]

**ಬಾರ್₁** (ಕ್ರಿ). ೧. (ಚರ್ಮವನ್ನು) ಸುಲಿ ; ಕೀಳು : ಕಡಿಯಲ್ಗಲೊಗ್ಗಂ ಕರ್ಕಿ ಪಂದೊವಲಂ ಬಾರ್ದುಂ ಸಾರ್ದುಂ ನಲಿವ ಕಾಗೆ ಗೂಗೆಗಳುಂ. . . ನರಿ ನಾಯ್ಗಳ್ ಪಗಲುಮಿರುಳುಂ ಕಾವಲಿರ್ದುವು (ರಾಮಾಶ್ವ. ೯೬-೦೬). ೨. ಚರ್ಮವನ್ನು ಸುಲಿದು ತೆಳ್ಪವಾದ ಉದ್ದನೆಯ ಪಟ್ಟಿಗಳನ್ನು ತಯಾರಿಸು : "ಬಾರ್—ಚರ್ಮವಲ್ಲೀಕರಣೇ (ಚರ್ಮವನ್ನು ಪಟ್ಟಿಯಾಗಿ ಮಾಡು) ದ್ರವದ್ರವ್ಯನಿರ್ಮುಕ್ತೌ (ಸುರಿ)" (ಶಮಧಾ); ಸೇರ್ದಂ, ಬಾರ್ದಂ, ಗೋರ್ದಂ, ನೋರ್ದಂ ತಾನೆಂದೊಡಂ ಗುರೂಪಧೆಯಿನಿತುಂ (ಶಮದ. ೪೦). ೩. (ಮಣ್ಣನ್ನು) ಅಗೆದು ತೆಗೆ,—ಬಾಚು : ದರಿಗೊಂಡೀಡಿಱ ದಾಡುತುಂ ಕೊಣಕುತುಂ ಬಾರುತ್ತುಮೊಳ್ಗಿಡೊಳಾದರದಿಂ ಮೇದಿಳ ವುಲ್ಗಳಂ ತೊರೆದು ಪಾಲ್ಗಳ್ ಕೆಚ್ಚಲಿಂದೆಚ್ಚು ಪಾಯ್ವುರೆ ಪಟ್ಟಿರ್ದುವು. . . ಕಾಡೆರ್ಮೆಗಳ್ (ಜಗು. ೯-೨೫). ೪. (ನೀರು ಮೊದಲಾದ) ದ್ರವ ವಸ್ತುವನ್ನು ಬಸಿ,— ಸುರಿ : "ಬಾರ್—ಚರ್ಮವಲ್ಲೀಕರಣೇ (ಚರ್ಮ ವನ್ನು ಪಟ್ಟಿಯಾಗಿ ಮಾಡು) ದ್ರವದ್ರವ್ಯನಿರ್ಮುಕ್ತೌ (ಸುರಿ)" (ಶಮಧಾ). ೫. ತಲೆಗೂದಲನ್ನು ಹಣಿಗೆಯಿಂದ ಹಿಕ್ಕು,— ಬಾಚು : 'ಬಾರ್ಚು' ಪರಾ.

[ದೇ.॥ ತಮಿ. ವಾರ್, ವಾರು; ಮಲ. ತೆಲು. ವಾರು; ತುಳು. ಬಾರು]

**ಬಾರ್₂**, ಬಾರ್ವಿ₂, ಬಾರ್ವು₁ (ನಾ). ೧. ತೊಗಲು ; ಚರ್ಮ : ವೀರರೊಳ್ ನೀರಿಬವನಲ್ಲ ಪಂದಿಯ ಬಾರಂ ಕೊಱದದಱ ನೆತ್ತರೊಳ್ ನೀರಿಬವಂ (ಸೂಕ್ತಿಸು. ೩-೨೨೬). ೨. ಚರ್ಮದ ಪಟ್ಟಿ : ಸೊಗಯಿ ಪ್ಪೊಳ್ಪೊಡೆ ನೋಯೆ ಸೂತ್ರದೆಱವೋಲ್ ನೀಳ್ದಿರ್ದ ಬಾರಂತೆ ತೋರ್ಪು ಗಿಯಂ ಪುಣ್ಮೆಯಮಾಗಿ ಮಾಡಿ ಬಿದಿ ಮುಂ ಜಂಘಾಪ್ರಮಾಣಕ್ಕೆ ನೂಲ್ದೆಗೆ ದಂತಿರ್ಪ ನಖವ್ರಣಾವಳಿಗಳಂ ನಲ್ಲಂಗೆ ಕಣ್ಗೆತ್ತುತುಂ ನಗುತುಂ ಸಾರ್ದು ಸವಂಗವುಂ ಕಳೆಯಿಸುತ್ತಿರ್ಪಾಕೆ ಕಣ್ಗೊಪ್ಪಿದಳ್ (ಕಾವ್ಯಾವ. ೬೦೦); ಗೀರ್ವಾಣಮುನಿ ಪೊಱಮಡುತ್ತುಂ ಸಾಣೆಯ ಬಾರಂತೆ ಪೋದ ಕೆಯ್ಯೊಳೆ ಮಗುಟ್ದಂ (ಅನಂತ. ೦೩-೨೩). ೩. ಚರ್ಮದ ತೆಳುವಾದ ಪಟ್ಟಿ ಯಿಂದ ಮಾಡಿದ ಬಾಯಿಹಗ್ಗ ; ಲಗಾಮು : ನಕುಳನುಮಂಕವಣಿ ಯುಂ ಬಾಳುಂ ಬಾರುಂ ಚಮ್ಮಟಿಗೆಯುಮನೊರ್ವ ಕೀಲಾಳಂ ಪಿಡಿಯಿಸಿ ಕೊಂಡು ಬಂದು ವಿರಾಟನಂ ಕಂಡು (ಶಂಕಥಾ. ೬-೩೪ ವ). **ಬಾರ್ವಿ** : ೪. ಚರ್ಮದ ಹಗ್ಗ,— ಮಿಳಿ : ಸುತ್ತಿದ ಮುಪ್ಪುರಿಯ ಬಾರಿ ಕಡ್ಡಣಿಗೆಯು . . . ಕಲಿವೀರ ಬಾಹುಕ ಬರುತ್ತಂ (ಹಕಶ. ೦೦-೦೬); ನೂಲ ಹರಿಗೆಯು ಹೆಗಲ ಬಾರಿಯ . . . ಛಲದಂಕರಾವುತರೊತ್ತಿ ನೂಕಿದರು (ಕುಮ್ವಾ.ಭೀ. ೪-೩೬). **ಬಾರು₁** : ೧. ತಳವಾಱನುಟ್ಟ ಸೀರೆಯ ಸುಲಿದ ನಾಱ ಹೋದರೆ ಮನೆಯ ಗಂಡ ಬೆನ್ನ ಬಾರನೆತ್ತಿದ (ಬಸವ. ೦೦೦) ; ಬಾಲಬ್ರಹ್ಮಚಾರಿಯ ಬಾರನೆತ್ತಿತ್ತ ಕಂಡೆ (ಅವಶಂ. ೯೩-೪೨೬) ; ಕರ್ಣನೆ ಕೊರಳ ಬಾರಲಿ ನಿಲುಕಿಸುವೆನೀ ಶರಸಲಾಕೆಗಳ (ಕುಮ್ವಾ.ಕ. ೨೪-೨೬). ೨. ಮಾಸಾಳ್ಗಳ ಬಾರ ಸಂಕಲೆಯ ತೊಡರ ತೋಟಿಯ ಕಠಾರಾಯಿತರ . . . ಮೊತ್ತದೊತ್ತರದ ಶಿಂಥಿಣಿಯನೊತ್ತರಿಸಿ ಇಟ್ಟಣಿಸಿದ ಕಟ್ಟಣಕ ದಾಸ್ಥಾನದೊಳು (ಬಶರ. ೬-೨೨) ; ಬಾರ ಸಂಕಲೆ . . . ಕೈಹಾರೆ ಕೂರಂಕುಶದ ಬಿರುದರು ಹೊದ್ದಿದರು ಗಜವ (ಕುಮ್ವಾ.ಭೀ. ೪-೬೦). ೩. ಉಗ್ರಾಣಗಳಲ್ಲಿ ನೂಲೇಣಿ, ಹೊರಜಿ, ಮಿಣಿ, ಬಾರು . . . ಬತ್ತಳಿಕೆ ಗಳ ಎಲ್ಲ ವಿಚಾರವನ್ನು ಬಿಡಿಬಿಡಿಯಾಗಿ ನೋಡುವನು (ಸವಾ. ೯೬) ; ಕಡಿವಾಳಕ್ಕೆ ಬಾರಿಲ್ಲದೆ ಇದ್ದುದರಿಂದ . . . ಹುಲ್ಲುಸರವಿಯನ್ನು ಗಂಟು ಹಾಕಿ ಕಟ್ಟಿದರು (ನಗಗ. ೯೯). ೫. ಉದ್ದ ; ನೀಳ : (*). ೬. ಸಾಲು; ಪಂಕ್ತಿ : (*). ೭. ಚರ್ಮದ ಮೇಲೆ ಪೆಟ್ಟಿನಿಂದಾಗುವ ಪಟ್ಟಿಯಾಕಾರದ ಗುರುತು ; ಬಾಸುಂಡೆ : ಸೊಸೆಯ ಮೈ ಮೇಲಿನ ಬಾರುಗಳನ್ನು ನೋಡಿ ಮಗನನ್ನು ಕರೆದು : "ಕಡಬಿನಂತ ಬಾರು ಏಳುವ ವರೆಗೆ ಬಡಿಯಬೇಕೆ ?" ಎಂದು ಸಿಟ್ಟು ಮಾಡಿದಳು (ಕನ್ನಶಾ. ೬೩).

**ಬಾರಗುಣಿ** = ಬಾರುಕೋಲು : ಬಾರಗುಣಿಯಿಂದ ಅವನ ಬೆನ್ನಿಗೆ ಬಲವಾಗಿ ಏಟುಗಳನ್ನು ಕೊಟ್ಟು ಚಕ್ಕಡಿಯನ್ನು ಹೊಡೆದುಕೊಂಡು ನಡೆದನು (ಖಾದ್ಯಶಾ. ೯೦). **ಬಾರುಕಾಲವನು** = ಉದ್ದವಾದ ಕಾಲು ಗಳಿರುವವನು ; ದಾಪುಗಾಲು ಇಡುವವನು : "ಊರ್ಧ್ವಜ್ಞುಃ, ಊರ್ಧ್ವಜಾನುಃ— ೨ ಉದ್ದವಾದ ಮೊಳಕಾಲುಳ್ಳವನು, ಬಾರುಕಾಲ ವನು" (ಸಿದ್ಧಾಂತ. ೦೫೦).

[<ಬಾರ್₁./ತಮಿ. ಮಲ. ವಾರ್; ತುಳು. ಬಾರ; ತೆಲು. ವಾರು]

**ಬಾರ್₃**, ಬಾರು₂ (ನಾ). ೧. ಬಂದೂಕು, ತೋಪು ಮೊದಲಾದುವು ಗಳಿಗೆ ತುಂಬುವ ಸಿಡಿಮದ್ದು : (*). ೨. ಬಂದೂಕಂ, ತುಪಾಕಿ ಮೊದಲಾದುವುಗಳನ್ನು ಮದ್ದು ಗುಂಡು ತುಂಬಿಸಿ ಉಡಾಯಿಸಲು ಅಣಿಗೊಳಿಸಿರುವಿಕೆ : ಬಂದೂಕು ಬಾರಾದವು (ಸಳತ. ೯೦). ೩. ತುಪಾಕಿ ದಳ; ಬಂದೂಕುಸಿಪಾಯಿಗಳ ಪಡೆ : (ಕೃಸ್‌ಗ. II. ೩೪೩). 'ಬಾರ್ಸಿ ಪಾಯಿ' ಪರಾ. **ಬಾರ್ವು** : ೧. "ಯಾವುದಾದರೂ ಒಂದಕ್ಕೆ ತುಂಬ ಬೇಕಾದ ಪದಾರ್ಥದ ನಿಯತವಾದ ಮೊತ್ತ (ಮು. ಬಂದೂಕಿಗೆ ತುಂಬುವ ಸಿಡಿಮದ್ದು; ಬಂದೂಕಿನ ಬಾರು)" (charge. ೨೦೫೪). ೩. ಬಾರು :— ಬಾರಿನವರ ಸಂಖ್ಯೆಯು . . . ಹೆಚ್ಚಿ ಇಂಗ್ಲೀಷ್‌ಪದ್ಧತಿಯಂತೆ ಕವಾ ಯಿತು ಕ್ರಮದಲ್ಲಿ ಸುಶಿಕ್ಷಿತವಾಗಿತ್ತು (ಮಹಾಪಂ. II, ೩೦). ೪. ತುಪಾಕಿ

ಮೊದಲಾದುವುಗಳ ಸ್ಫೋಟ : (೬). ೫. ಹೊಗೆಸೊಪ್ಪು 'ತಿನ್ನು'ವುದಕ್ಕೆ ಪೂರ್ವಸಿದ್ಧತೆಯಾಗಿ ಬಾಯಿಗಿಟ್ಟುಕೊಳ್ಳುವ ವೀಳ್ಯದ ಕವಳ: ಚಹಾ–ತಂಬಾಕದ ಬಾರು ಇಲ್ಲದೆ ಅವರಿಗೆ ನಡೆಯುತ್ತಿರಲಿಲ್ಲ (ದೀಕಹ. II, ೯೦). ೬. ನೋಂದಣಿ ; ದಾಖಲೆ : ' ಬಾರನಿಸಿ ' ಪರಾ.

ಬಾರಕೋತು = ಕಾಲುದಳದ ಯೋಧರ ವಾಸಸ್ಥಾನ,–ಪಾಳೆಯ : (೬). ಬಾರು ಮಾಡು = ೧. ಸಿಡಿಮದ್ದನ್ನು ಬಂದೂಕಿಗೆ ತುಂಬಿ ಉಡಾಯಿಸಲು ಅಣಿಮಾಡು : ತನ್ನ ಬಾರು ಮಾಡಿದ ಬಂದೂಕನ್ನೆತ್ತಿ ಅದರ ಹಣಿಗೆ ಗುರಿ ಇಕ್ಕಿದನು (ಬಂಗಾಹ. ೩). ೨. ವೀಳ್ಯವನ್ನು ಸಿದ್ಧಪಡಿಸು,—ಅಣಿ ಮಾಡು : ರಾವಜೀಕಾಕಾ . . . ತಂಬಾಕದ ಬಾರು ಮಾಡುತ್ತ ನಿರ್ಣಾಯಕ ಅಭಿಪ್ರಾಯ ಕೊಟ್ಟರು (ದೀಕಹ. I, ೬). ೩. (ದಾಖಲೆ) ಪುಸ್ತಕದಲ್ಲಿ ಬರೆದು ಸೇರಿಸು; ನೋಂದುಮಾಡು : (೬).

[← ಮರಾ. ಬಾರ್]

**ಬಾರ್$_4$**, ಬಾರು$_3$ (ನಾ). ೧. ಗಟ್ಟಿಯಾಗಿಯೂ ಉದ್ದವಾಗಿಯೂ ಇರುವ ಲೋಹ, ಮರ, ಸಾಬೂನು ಮೊದಲಾದುವುಗಳ ತುಂಡು : ಒಂದು ಬಾರ್ ಸಾಬೂನು ತಂದು ಈ ಬಟ್ಟೆಗಳನ್ನೆಲ್ಲ ಒಗೆಯಬೇಕು (ರೂ). ೨. ಮಾದಕಪಾನೀಯಗಳನ್ನು ಅಥವಾ ಖಾದ್ಯ ವಸ್ತುಗಳನ್ನು ಒದಗಿಸುವ ಸ್ಥಳ; ಪಾನಶಾಲೆ : ಮಧುಪಾನದ ಸಲಕರಣೆಗಳನ್ನಿಡುವುದಕ್ಕೂ ನಾಲ್ಕುಜನ ಸ್ನೇಹಿತರು ಸೇರುವುದಕ್ಕೂ ಅನುಕೂಲಿಸುವಂತೆ ಒಂದು ಸಣ್ಣ 'ಬಾರ್' ಏಕೆ ಕಟ್ಟಬಾರದು ? (ಯೋಕಥೆ. ೨೯) ; ಒಂದೆರಡು ದಿನದೊಳಗಾಗಿ . . . ಹಡಗಿನ "ಬಾರ್" ನಲ್ಲಿ ಕುಳಿತುಕೊಳ್ಳುವ ಚಟ ಬರುತ್ತದೆ (ಅಪೂಪ. ೧೧). **ಬಾರು$_3$** : ೧. ನನಗೆ ಎರಡು ಬಾರು ಸಾಬೂನು ಬೇಕು (ರೂ). ೩. (ಕಿಟಕಿ, ಬಾಗಿಲು ಮೊದಲಾದುವುಗಳಲ್ಲಿ ತಡೆಗಾಗಿ ಉಪಯೋಗಿಸುವ) ಕಂಬಿ; ಸರಳು : ಕಿಟಕಿಗಳಿಗೆ ಉದ್ದುದ್ದವಾಗಿ ಬಾರುಗಳನ್ನು ಅಳವಡಿಸುವುದುಂಟು (ರೂ).

[ ← ಇಂ. Bar ]

**ಬಾರ್‌ಕಛೇರಿ**, ಬಾರಕಚೇರಿ (ನಾ). ಹಿಂದೆ ಮೈಸೂರು ಅರಸರ ಆಡಳಿತಕಾಲದಲ್ಲಿದ್ದ ಹದಿನೆಂಟು ಕಚೇರಿಗಳಲ್ಲಿ ಒಂದು ; ಕಾಲ್ದಳದ ವಿಷಯವನ್ನು ನೋಡಿಕೊಳ್ಳುವ ಕಚೇರಿ : ೧. ದಿವಾನ್‌ಕಛೇರಿ . . . ೧೨. ಬಾರ್‌ಕಛೇರಿ (ಮಹಾವಂ. II, ೩೯). **ಬಾರಕಚೇರಿ** : ಶ್ರೀಮದ್ರಾಜಾಧಿರಾಜ ಕೃಷ್ಣರಾಜಒಡೆಯರವರು ಅವಲ್‌ಬಾರಕಚೇರಿ ಬಕ್ಷಿ ಗುಲಾಮ ಮಹಮ್ಮದಖಾನರಿಗೆ ಪುತ್ರ ಪವುತ್ರಪಾರಂಪರ್ಯವಾಗಿ ನಡಿಯುವ ಮ್ಯರೆಗೆ ಕೊಟ ಸರ್ವಮಾನ್ಯವಾದ ನಾಚನಹಳ್ಳಿ ಗ್ರಾಮದ ಯಲ್ಲಿಕಲ್ಲು (ಎಕ. III, ಮೈಸೂರು. ೫೬–೩ ; ಸು. 1825 ?). 'ಅಠಾರಾ ಕಚೇರಿ' ಪರಾ. [ ಬಾರ್$_3$ + ಕಛೇರಿ (<ಕಚೇರಿ) ]

**ಬಾರ$_1$** (ನಾ). ಬಾಗಿಲು ; ದ್ವಾರ : ದರ ದಾರ ಬಾರಮುಕ್ಕುಂ ಪರದ್ವಾರಕ್ಕೆ ಪೂರ್ವದೊಳ್ ತದ್ಭವಮಾಗಿರೆ ಸಿರಿಯು ವಂಕ ವಾಣಿಯುಮಿರೆ ಕಂಟಿಯುಮುಚಿತವಿಧಿ ವಿಕಲ್ಪವಿಧಾನಂ (ಶಮದ. ೨೯೬) ; ಶ್ರೀದ್ವಾರ— ಸಿರಿಯುದರ, ಸಿರಿಯುದಾರ, ಸಿರಿಯಬಾರ. ವಕ್ರದ್ವಾರ—ವಂಕದರ, ವಂಕದಾರ, ವಂಕಬಾರ (ಶಮದ. ೨೯೬ ವೃತ್ತಿ). 'ದಾರ್$_2$' ಪರಾ.

[ < ಪ್ರಾ. ಬಾರ, ವಾರ ; ಹಿಂ. ಬಾರ./ಸಂ. ದ್ವಾರ ]

**ಬಾರ$_2$** (ನಾ). ತೂಕ ; ಭಾರ : "ಬಾರ (ರು)_ಭಾರ" (ಶಬ್ದಕೋ. ೩೦).

[ < ಸಂ. ಭಾರ ]

**ಬಾರ$_3$**, ಬಾರಹ, ಬಾರಾ (ನಾ). ೧. ಒಂದು ಸಂಖ್ಯೆ ; ಹನ್ನೆರಡು : ಬಾರಹವೆಂಬುದು ದ್ವಾದಶದ ಪ್ರಾಕೃತರೂಪ ; ಬಾರ ಎಂದರೆ ಹದಿನೆರಡು (ಶಳಂಪಾ. ೨೬೪). ' ಬಾರಮಾಹೆ ' ಪರಾ. ೨. ಲೆತ್ತದಾಟದಲ್ಲಿ ಬೀಳುವ ಹನ್ನೆರಡರ ಗರ ; ದುಗನು ಪಂಚಕ ಬಾರವೆರಡಿತ್ತಿಗೆಯು ಬೇಡಿದಡಲ್ಲಿ ಬೀಳ್ವುದು ವಿಗಡ ಪುಷ್ಕರ ನೃಪನ ಗೆಲಿದನು ಹಲಗೆಯೊಂದಲಿ (ನಳಚ. ೪–೨೯). **ಬಾರಹ** : ೧. ನಾರಿ ಸಹಿತಾ ಪತಿ ಚರಿಸುವುದು ಬಾರಹ ದ್ವಿಜರಿಂಗೆ ಭೋಜನ ಭೂರಿಭೂಷಣ ವಸನ ತಿಲದಾನಾದಿ ಸತ್ಕೃತಿಯಾ (ಶಿಕಾಗ. ೬–೧೭–೦೬). **ಬಾರಾ** : ೧. ನಿನ್ನಂಥ ಬಾರಾ ಹಜಾರ ಮಂದಿನ್ನ ಬಗಲಾಗ ಹಾಕೀನ್ನಾನು (ಬಾಂದಾಯ. ೬೯). ೩. ಹನ್ನೆರಡು ಘಂಟೆ: ಇದೆಲ್ಲಾ ಉದ್ಯೋಗ ನಡಿಯೋದು ರಾತ್ರಿ ಬಾರಾದಿಂದ ನಸುಕು ಹರಿಯೋ ತನಕ (ಅನ್ನ. ೨೫೫).

ಬಾರಖೂನ್ ಮಾಫ್, ಬಾರಾಖೂನಿ ಮಾಫ್ = ಎಷ್ಟು ತಪ್ಪುಮಾಡಿದರೂ ಕ್ಷಮಿಸುವುದು : ತಪ್ಪು ಅನುಗ್ರಹಕ್ಕೆ ಪಾತ್ರರಾದವರಿಗೆ 'ಬಾರಖೂನ್ ಮಾಫ್, ಏನು ಉಪಕಾರವನ್ನಾದರೂ ಮಾಡಿ ಕೊಟ್ಟುಬಿಡುವರು (ಕಲಕ. ೯೦) ; ಒಮ್ಮೊಮ್ಮೆ ಬಾರಾಖೂನಿ ಮಾಫ್ ಅಂತೂ ಅನಬೇಕಾಗತದ (ಧರ್ಮಂ. ೩೨).

[← ಹಿಂ. ಬಾರಹ್, ಬಾರಾ; ಮರಾ. ಬಾರಾ]

**ಬಾರಂಗಧ್ವಜ** (ನಾ). (?) : ಮದನಕೈಯಿದರ ಬೋದಿಗೆಯು ಬಾರಂಗಧ್ವಜ ಕದಳಿಗೊನೆ ಕಬರಿದ ಸುಲೋವೆ ಚಿತ್ರದ ಭಿತ್ತಿ ಮಿದಿವ ನವರತ್ನಗಳ ದೀಪ್ತಿ (ನವಮೋ. ೨–೩೦). [ ? + ಧ್ವಜ ]

**ಬಾರಂಗಿ** (ನಾ). ಒಂದು ಬಗೆಯ ಔಷಧೀಸಸ್ಯ ; ಅಂಗಾರವಲ್ಲಿ ; ಬ್ರಾಹ್ಮಿ : ಬಾದಣಸಿದೇಜುಗಳ ಬಾಯೊಳು ಕಾದ ಬಾರಂಗಿಗಳನಳತೆಗೆ ಕೋದು ಪಾಮದೊಳೆಯ್ದಿ ಹಿಡಿದರು ತೈಲಧಾರೆಗಳ (ಕುಮಾವ್ಯಾ. ೫–೯೦) ; ತಡಸಿ ಸುವರ್ಣ ಬಿಳಿಯ ಬಾರಂಗಿ ಗಿಡವು ಕಗ್ಗಲೆ ಕಂಪು ಪರಿಮಳಯುಡಿ ಗಡಿಗೆ ರಸದಾ ಮಡುಗಳು (ಸಂಧಿಲ. ೬–೧೬). [ < ಸಂ. ಭಾರಂಗೀ ]

**ಬಾರಕಚೇರಿ** 'ಬಾರ್‌ಕಛೇರಿ' ನೋ.

**ಬಾರಗಿರಿ** 'ಬಾರ್ಗೀರಿ' ನೋ.

**ಬಾರಗೀರ** 'ಬಾರ್ಗೀರ್' ನೋ.

**ಬಾರಗೀರು** 'ಬಾರ್ಗೀರ್' ನೋ.

**ಬಾರಗುತ್ತು** 'ಬಾರ್ಗುತ್ತ' ನೋ.

**ಬಾರಗೆಯ್** (ಕ್ರಿ). (?) : ಕ್ಷೀರ ದಧಿ ಮಧು ಘೃತಂ ಸಿತ ನಾಗರಂ ಮರಿಚ ಜೀರಕಂ ಲವಣವೆ[ಮ]ಲ್ಲಾ ದಶಾಮೃತಸಾರಪೂರಕಳಸಂ ನಾಲ್ಕು ಕನಕ ಪುಷ್ಪಾನ್ವಿತ ತಮಂಧಕಳಸಂ ಪೀಲಿಯಿಂ ಬಾರಗೆಯ್ದೊಂದಗ್ರಜಲಭರಿತಮಾಗೆ ಮಂದಾರಮಂಜರಿವಿಡಿದ ಹದಿಮೂಱು ಕಳಸವಿಂತೀರೊಂಭತ್ತಿನ್ನುಳಿದ ವಿಭವವೀ ಪರಿಯಿಂದ ನೇಮದಿಂ ನಡಸಂದಳು (ಸಿದ್ಧರಾ. ೫–೬). "ಅಂದವಾಗಿಸು (?)" (ಸಿದ್ಧರಾ. ಕೋಶ). [ ? ]

**ಬಾರಡ** (ನಾ). ಚರ್ಮದ ಪಟ್ಟಿ : "ಕಂಟ್ಟೆಗೋಲ್ ಬಾರಡಮದಕ್ಕು" (ಮಂಗರಾ. ೦೦೨–೩). [ ದೇ. ; ತಮಿ. ವಾರಾಟ್ಟೈ ]

**ಬಾರಣ** (ನಾ). ಆನೆ : ದಾರುದಾರುಣನು ದಾನವಾರಿವಾರಿತಲೋಕನಂ ಬಾರ ಬಾರಣಮಂ ನೋಡಾ ಸಾರಸಾರಾಂಬುದಾಭಮಂ (ಶಬರಾ. ೨–೦೩೨).

[ < ಸಂ. ವಾರಣ ]

**ಬಾರಣಸಿ** 'ಬಾರಣಾಸಿ' ನೋ.

**ಬಾರಣಾಸಿ**, ಬಾಣರಾಸಿ, ಬಾಣಾರಸಿ, ಬಾರಣಸಿ, ಬಾರ್ಣಾಸಿ, ವಾಣರಾಸಿ, ವಾರಣಶಿ, ವಾರಣಾಸಿ (ನಾ). ಗಂಗಾನದೀತೀರದಲ್ಲಿರುವ ಪ್ರಸಿದ್ಧವಾದ ಯಾತ್ರಾಸ್ಥಳ; ಕಾಶಿ ಕ್ಷೇತ್ರ; ಇದು ವರುಣಾ ಮತ್ತು ಅಸಿ(ಅಥವಾ ಅಸೀ)ಯೆಂಬ ಎರಡು ನದಿಗಳನ್ನು ಒಳಗೊಂಡಿದೆಯೆಂದು ಪ್ರತೀತಿಯಿದೆ ; ಇ ದರ್ಮ್ಮಕ್ಕೆ ಬಕ್ರ ಬಪ್ಪೊಂ ಬಾರಣಾಸಿಯುಳ್ ಸಾಸಿರ್ವ್ವ ಪಾರ್ವ್ವರುಂ ಸಾಸಿರಂ ಕವಿಲೆಯುಂ ಕೊನ್ದ ಪಾತಕನಕ್ಕೆ (ಮೈಲಿಂ. ೬೯೩೬, ೫೩–೩೫ ; ಸು. 550) ; ಇದನಟಿದುಣ್ಡೋನುಂ ಕೊಣ್ಡೋನುಂ ಪಸುವುಂ ಪಾರ್ವ್ವರುಂ ಕೆಱೆಯುಂ

ಆರವೋಯುಂ ಬಾರಣಾಸಿಯುಮುವನಟಿದೊಂ (ಎಶ. III, ಶ್ರೀರಂಗ. ೧೪೭-೧೭; ಸು. ೯೦೦ ?). **ಬಾಣರಾಸಿ :** ದುದ್ಧರಸಂ ಮಾಡಿಸಿದ ತೊಱೆ ಗಟ್ಟಿಯಂ ಮಾಱಿಕೊಣ್ಡವಂ ಬಾಣರಾಸಿಯುಲು ಹಸುವುಂ ಹಾರುವನಂ ಕೊಂದ (ಎಶ. I (R), ೬೨-೩೬; 1095) ; ಇದನಳಿದಂ ಬಾಣರಾಸಿಯುಮಂ ಕವಿಲೆಯುಮಂ ಲಿಂಗಮಂ ಕಿತ್ತ್ರ ಬ್ರಹ್ಮತಿಗೆ ಸನ್ದಂ (ಎಶ. III, ನಂಜನ. ೪೮-೦೦; 1113) ; ಇದಂ ಕಾಯದೆ ಕಾಯ್ವ ಪಾಪಿಗೆ ಕುರುಕ್ಷೇತ್ರೋರ್ವ್ವಿಯೊಳ್ ವಾಣರಾಸಿಯೊಳೇಳ್ಕೋಟಿಮುನೀಂದ್ರರಂ ಕವಿಲೆಯಂ ವೇದಾಢ್ಯರಂ ಕೊನ್ದುದೊನ್ದಯಸಂ ಸಾರ್ಗ್ಗಂ (ಎಶ. II, ೬೩-೪೯; 1118). **ಬಾಣಾರಸಿ:** ಇದನಟಿವಂಗೆ ಕವಿಲೆಯಂ ಬಾಣಾರಸಿಯುಂ ಅಟಿದ ಪಾತಕಂ (ಎಶ. I (R), ೬೯-೦೦; 10ನೆಯ ಶತ). **ಬಾರಣಸಿ:** ಇದನಟಿವೊ ಬಾರಣಸಿಯುನಟಿದೊ ಪಾತಕಂ (ಕಇ. II, ೩-೧೯ ; 859). **ಬಾರ್ಣಾಸಿ :** ಇದನಟಿದೋಂ ಬಾ[ರ್ಣಾ]ಸಿಯುಂ ಕವಿಲೆಯುಮುನಟಿದೋಂ (ಎಶ. IV (R), ಚಾಮರಾ. ೮೦-೦೦ ; ೧೨ನೆಯ ಶತ). **ವಾಣರಾಸಿ :** ಈ ಧರ್ಮ್ಮವುನಳಿದಂ ವಾಣರಾಸಿ ಕುರುಕ್ಷೇತ್ರದೊಳ್ ಸಾಸಿರಕವಿಲೆಯುಂ ಸಾಸಿರಬ್ರಾಹ್ಮಣರನಳಿದ ಪಂಚ ಮಹಾಪಾತಕನಕ್ಕು (ಎಇ. XIX, ೦೯೯-೨೯ ; 1079). **ವಾರಣಶಿ :** ಇದಕ್ಕಾರಾನುಂ ಪ್ರತಿಬಂಧಕರಾಗಿ ಕಿಡಿಸಿದರಪ್ಪಡೆ ವಾರಣಶಿಯುಲು ಕವಿಲೆಯಂ ವಧಿಯಿಸಿದ ದೋಷವುನೆಯ್ದುವರು (ಕಇಜ. ೩೬-೪೯-೨೦ ; 1134). **ವಾರಣಾಸಿ :** ಅಟಿದೊನ್ವಾರಣಾಸಿಯೊ ಸಾಸಿರ್ವ್ವಪಾರ್ವ್ವರುಂ ಸಾಸಿರ ಕವಿಲೆಯುಮುನ್ಕೊನ್ದ ಪಞ್ಚಮಹಾಪಾತಕನಕ್ಕು (ಎಶ. V (R), ತಿರುಮ. ೪೬-೬ ; 8ನೆಯ ಶತ) ; ಗಂಗೆಯೊಳು ಮಿಂದು ಭಾಸುರವಾರಣಾಸಿಯಂ ಹೊಕ್ಕು (ಪಶಶಾ. ೦೦-೩೩).

[< ಸಂ. ವಾರಣಸೀ, ವಾರಾಣಸೀ, ವಾಣಾರಸೀ, ವರಾಣಸೀ]

**ಬಾರಣೆ** (ನಾ). ಊಟ ; ಪಾರಣೆ : ಬಾಯೊಳ್ಸಗೆದ ಹಲ್ಲ ನೋಳ್ಪುದೊಂದೆ ಕ್ಷಣದಿ ನುಂಗಿ ಬಾರಣೆಯ ಸವನಿಸುವೆನು (ಪಾರ್ತಿಸು. ೬೬) ; ಹುಲಿರಾಯನು ಓಲಸರಿಯು ಬಾರಣೆಗಾಗಿ ಹೊರಟನೆಂಬುದು ಅವರಿಗೆ ಗೊತ್ತಾಯಿತು (ಹೀರದಂ. ೨೩) ; ಪಶುಪಕ್ಷ್ಯಾದಿಗಳನ್ನೂ ನೀವು ಮನುಷ್ಯರು ಶಕ್ತಿಯುಕ್ತಿಗಳಿಂದ ಬಡಿದು ಬಾರಣೆ ಮಾಡುತ್ತೀರಂತೆ (ಹಗಂ. ೯೦). 'ಪಾರಣೆ₁' ನೋ. [←ತುಳು. ಬಾರ್ಣೆ. / ಸಂ. ಪಾರಣಾ]

**ಬಾರದ** (ನಾ). ಒಂದು ಮನೆತನದ ಹೆಸರು : ಇದಕ್ಕೆ ಸಕ್ಕಿ ಮುದಿರೆ ಬೂವಯ್ಯ ಬೆಳ್ಳನ ಕರುಕುಡಿ ಬಾರದರೆಱೆಯುವ್ಮ ಕೆದಟೆಯುರಯ್ಯಪ (ಎಶ. IV, ಹುಣಸೂ. ೪೨-೦೨ ; ಸು. 920). [?]

**ಬಾರದಾನ, ಬಾರದಾನು** (ನಾ). ೧. ವ್ಯಾಪಾರದ ಸರಕುಗಳನ್ನು ತುಂಬಲು ಬಳಸುವ ಚೀಲ, ಡಬ್ಬಿ, ಪೀಪಾಯಿ ಮೊದಲಾದುವು : ಬಾರದಾನಗಳನ್ನು ತಿರುಗಿ ಕಳುಹಿಸುವುದಕ್ಕೆ ಬಹಳ ಸಾರಿ ಪತ್ರ ಬರದಿದ್ದು ಇನ್ನೂ ಯಾಕೆ ರವಾನೆ ಮಾಡಲಿಲ್ಲ ? (ಮುಂಬವ್ಯಾ. ೭ ಕೃಷ್ಣಾವಹ). ೨. ಗೋಣಿತಟ್ಟು ; ಗೋಣಿಚೀಲ : ಹೆಗಲಿಗೊಂದು ಬಾರದಾನ ಒಗೆದುಕೊಂಡು, ದಂಡಪಾಣಿಯಾಗಿ ಗೃಹತ್ಯಾಗ ಮಾಡಿದೆವೆಂದರೆ ತೀರಿತ್ತು, ಮರಳಿ ನಮ್ಮ ಗೃಹಾಭಿಗಮನ ಅಪರಾಹ್ನ ಎರಡಕ್ಕೆ (ದೀಶಹ. II, ೦). **ಬಾರದಾನು :** ೧. ಒಂದೊಂದು ಸಾಮಾನು ಒಂದೊಂದು ವಿಧವಾಗಿ ಕಟ್ಟಿ ಬರುವದರಿಂದ, ಅವೆಲ್ಲವುಗಳ ಬಾರದಾನು ಅಥವಾ ಹೊರಗಿನ ಆವರಣ ಒಂದೇ ತರವಾಗಿರುವದಿಲ್ಲ (ಮುಂಬವ್ಯಾ. ೭).

[←ಪಾರ. ಬಾರ್ದಾನ್ ; ಹಿಂ. ಬಾರದಾನಾ ; ಮರಾ. ಬಾರದಾನ್]

**ಬಾರದಾನು** 'ಬಾರದಾನ' ನೋ.

**ಬಾರದೂರ್** (ನಾ). ಒಂದು ಊರಿನ ಹೆಸರು : ಬಾಣಶರ್ಮ್ಮಣೇ ತೇಗಟ್ಟೂರ್ವ್ವಿಷಯೇ ಬಾರದೂರ್ನ್ನಾಮಗ್ರಾಮಸ್ಸರ್ವ್ವಪರಿಹಾರೋಪೇತ ಉದಕಪೂರ್ವ್ವನ್ದತ್ತಃ (ಪ್ಕಅಂ. ೦೯೪೪, ೦೫-೩೪; ಸು. 725). [? + ಊರ್]

**ಬಾರನಿಸಿ** (ನಾ). ೧. ದಾಖಲೆಗಳನ್ನು ನೋಂದುಮಾಡಿ, ಅದರ ಮೇಲೆ ನೋಂದಿಸಲಾಗಿದೆಯೆಂದು ಬರೆಯುವ ಅಧಿಕಾರಿ ; ನೋಂದಣಿಯ ಅಧಿಕಾರಿ : ಹೊರಟು ಹೋಗಲಿದ್ದ ಬಾರನಿಸಿಯಿಂದ ಕಾಗದಪತ್ರಗಳ ಚಾರ್ಜ್ ತೆಗೆದುಕೊಂಡೆ (ಬಂಗಾರ. ೭೯). ೨. ನೋಂದಣಿ ಮಾಡುವ ಕೆಲಸ, – ಹುದ್ದೆ : "ಬಾರನಿಸಿ ಕಾರಕೂನ್" ಸ್ಥಳಕ್ಕೆ ನನ್ನ ನೇಮಕವಾಗಿತ್ತು (ಬಂಗಾರ. ೭೯).

[← ಪಾರ. ಬಾರನಿವಿಶೀ ; ಮರಾ. ಬಾರನಿಶೀ, ಬಾರನಿಸೀ, ಬಾರನೀಸ್]

**ಬಾರಮಾಹೆ** (ನಾ). ಹನ್ನೆರಡುತಿಂಗಳು : ಯಿಾ ನಿರೂಪ ಸ್ವಳಕೆ ತಲಪಿದ ತಾರ್ರಿಖಿನಾರಭ್ಯಾ ಸಾಲ್ಲಿಯಾನಾ ಯೆರಡು ಖಿಸ್ತಿನ ಮೇರ್ರಿಗೆ ಬಾರಮಾಹೆ ಬಜಿನ್ಸ ಕೊಡತಕದು (ಪ್ಕಅಂ. ೦೯೩೮, ೨೬-೦೨; 1830). [ಬಾರ್₃+ಮಾಹೆ]

**ಬಾರವಟ್ಟಿಗೆ, ಭಾರವಡ್ಡಿಗೆ** (ನಾ). ಬಾಗಿಲಿನ ಚೌಕಟ್ಟು ; ಬಾಗಿಲುವಾಡ: ಬಕುಳದ ಬೋದಿಗೆಗಳಿಂ ಬಂಧುರಕದ ಬಾರವಟ್ಟಿಗೆಗಳಿಂ ಕೇತಕಿಯ ಕಂಟವಲಗೆಗಳಿಂ . . . ಕಂಪಿನ ಕಡಾರಮುಂ ತಣ್ಪಿನ ತಾಣಮುಮೆನಿಸಿರ್ಪ ಲತಾಮಂಟಪಮಂ ಪೊಕ್ಕು (ಕುಸುಮಾ. ೦೨-೦೫೬ ವ). **ಭಾರವಡ್ಡಿಗೆ :** ಶ್ರೀರನ್ಗದಂಣ್ನಾಯಕರ ಪಟ್ಟಸಾಹುಣಿ ಮಣ್ಡಲಸಾಹಣಿ ಮಾಡಿಸಿದ ಭಾರವಡ್ಡಿಗೆ (ಎಶ. XIV, ಎಳಂದೂ. ೦೭೨-೨; 1243).

[<ಸಂ. ದ್ವಾರಪಟ್ಟಿಕಾ]

**ಬಾರವಿಗೊಂಡ** (ನಾ). ಒಬ್ಬಾತನ ಹೆಸರು : ಶ್ರೀಬಾರವಿಗೊಣ್ಡಂ ನರಸಿಂಘ ಆತನ ಭ × × × ಬಾಱಿಯ ನನ್ದಿವರ್ಮನ ಮಗಂ ಶ್ರೀಮಾನ್ ಸತ್ಯಮಂಗಲದ ಚೋ × × (ಎಶ. IX, ಹೊಸಕೋ. ೦೦೬-೨; ಸು. 900 ?).

[ಬಾರವಿ₁ + ಗೊಂಡ₁ (<ಗಾವುಂಡ)]

**ಬಾರಸ** (ನಾ). ೧. ಹನ್ನೆರಡು : "ಬಾರಸ–ದ್ವಾದಶ=ಹನ್ನೆರಡು" (ತದ್ಭಕೋ. ೩೦). 'ಬಾರಸನಾಮ' ಪರಾ. ೨. ಜನನವಾದ ಹನ್ನೆರಡನೆಯ ದಿನದಂದಂ ಮಗುವಿಗೆ ಮಾಡುವ ನಾಮಕರಣದ ಉತ್ಸವ : ಬಾಲಂಗೆ ಬಾರಸವ[ಪಾಠಾಂ. ಬಾರಸೆಯ, ದ್ವಾದಶ] ಮಾಡಿ ತೊಟ್ಟಿಲೊಳಿಕ್ಕಿ ವಿಲೇಶನೆಂದು ನಾಮವ ಕೊಟ್ಟು (ಸಿದ್ಧರಾ. ೯-೨೬). 'ಬಾರಸಂಗೆಯ್' ಪರಾ.

[<ಪ್ರಾ. ಬಾರಸ. / ಹಿಂ. ಬಾರಸ ; ಮರಾ. ಬಾರಸಾ. / ಸಂ. ದ್ವಾದಶ]

**ಬಾರಸಂಗೆಯ್** (ಕ್ರಿ). ಹುಟ್ಟಿದ ಹನ್ನೆರಡನೆಯ ದಿನದಂದು ಮಗುವಿಗೆ ನಾಮಕರಣದ ಉತ್ಸವವನ್ನು ಮಾಡು: ಬಾರಸಂಗೆಯ್ದೊಡೆ ಬೋವಂಗೆ ಪಣ ಮೂಱು ತಳಾರಂಗೆ ಪಣ ಮೂಱು (ಪ್ಕಅಂ. ೦೯೩೬, ೨೭-೩೩; 872).

[ಬಾರಸ + ಕೆಯ್₁]

**ಬಾರಸನಾಮ** (ನಾ). ದೇಹದ ಮೇಲೆ ಧರಿಸುವ ಹನ್ನೆರಡು ನಾಮ: ಕಿಸುವೊನ್ನ ಬಟ್ಟಗೊಡೆ ಬಾರಸ[ಪಾಠಾಂ. ಭಾರಸ, ಭಾಸುರ]ನಾಮದ ಬೊಟ್ಟು . . . ಬಗೆವುಗೆ ಬಂದನಂದು ಬಲಿಯಲ್ಲಿಗೆ ವಾಮನನಾಗಿ ಕಾಮದಂ (ಅರ್ಜಶೀ. ೬-೨೩). [ಬಾರಸ + ನಾಮ]

**ಬಾರಸಿ, ಬಾರಸೆ** (ನಾ). ಚಾಂದ್ರಮಾನ ಪಕ್ಷದ ಹನ್ನೆರಡನೆಯಂ ದಿನ ; ದ್ವಾದಶಿ : ಮಾಘಬಹುಳಬಾರಸಿ ವಿಶ್ವಯೋಗದೊಳ್ ತ್ರಿಜ್ಞಾನಧರಂ ಪುಟ್ಟೆ (ಚಾಪುಂಪು. ೦೩೩); ವ್ಯಯಸಂವತ್ಸರದ ಪುಷ್ಯದ ಬಹುಳದ ಬಾರಸಿಯ ಕುಜನ ವಾರದೊಳ್ (ಎಶ. VII, ಶಿಮೊ. ೬೬-೨; 1227 ?). **ಬಾರಸೆ :** ಆರಯ್ಕೆ ಬಿದಿಗೆ ಸಪ್ತಮಿ ಬಾರಸೆಯೆಂಬಿವಱೊಳರ್ಕಸುತ ಕುಜ ದಿನ ಕೃದ್ವಾರಂಗಳುಂ ತ್ರಿಪಾದದ ತಾರೆಗಳುಂ ಕೂಡೆ ತಾಂ ತ್ರಿಪುಷ್ಕರಯೋಗಂ (ಲೋಕೋಶ. ೦-೨೦); ರೇವತಿಯುಗ ಭಾದ್ರಪಾ(ಪ)ದದೆರಡಷ್ಟಮಿ ಬಾರಸೆ ವಾಯುರಿಕ್ಷೆಯಂದತಿಶಯಮಾಗಿ ಗಾಳಿ ಬಿಡೆ ಬೀಸಿದೊಡಾಸಡಿಯಂದು ಮತ್ತೆ ಭೂನುತಮೆನೆ ನಾಡೆ ಪೆರ್ಮಱಿಗಳಪ್ಪವು (ಅಟ್ಟಮ. ೯-೯೦).

[<ಪ್ರಾ. ಬಾರಸೀ. / ಮರಾ. ಬಾರಶೀ. / ಸಂ. ದ್ವಾದಶೀ]

**ಬಾರಸೆ** 'ಬಾರಸಿ' ನೋ.

**ಬಾರಹ** 'ಬಾರ್$_3$' ನೋ.

**ಬಾರಹೆ** (ನಾ). ಒಂದು ಬಗೆಯ ಕೊಳಲು : ರಾಗಸಾಗರನೆಂಬ ವಾಸು ಕಾರಂ ಭಾಸುರತೆವಡೆದ ಬಾರಹೆಯೆಂಬ ವಾಸವಮಂ ಕಳೆದುಕೊಂಡು . . . ಆದಿಗ್ರಾವಂ ರಾಗಚ್ಛಾಯೆ ಸುಚ್ಛವಿಯಿಂ ಪುದಿದು ತೋಱಿ (ಶಾಂತೀಶ್ವ. ೬-೯೩ ವ). [ ? ]

**ಬಾರಾ** 'ಬಾರ್$_3$' ನೋ.

**ಬಾರಾಅಲುತೆ** 'ಬಾರಾಬಲೂತಿ' ನೋ.

**ಬಾರಾಂದರವಯ್ಯ** (ನಾ). ಒಬ್ಬಾತನ ಹೆಸರು : ಪೊಂಕುನ್ದದ ಬಾರಾನ್ದ ರವಯ್ಯ ತಗಡೂರ ಕೆಳೆಯ ಕಾಳೆಗದೊಳೆ ಬಸವಯ್ಯನ ಮುನ್ದೆ ಕಾದಿ ಸತ್ತು ಸಗ್ಗೆಯದ (ಎಕ. X, ಚಾಂಗ. ೪೪-೨; ಸು. ೯೬೦). [? + ಅಯ್ಯ$_1$]

**ಬಾರಾಗೀರ** 'ಬಾರ್ಗೀರ್' ನೋ.

**ಬಾರಾಬಂಗಾಲಿ**, ಬಾರಾಬಂಗಾಳಿ (ನಾ). ೧. "ಮೋಸಗಾರ" (ಜಾನಕೋ. ೨೨). ೨. ಮೋಸಗಾರಿಕೆ; ತಂತ್ರಗಾರಿಕೆ : 'ಬಾರಾಬಂಗಾಲಿವಿದ್ಯೆ' ಪರಾ. ೩. "ಜಪುಣ, ಜೀನ, ಕೈಬಿಡದವ" (ರವಜಾಕಾಂ. ೯೨೦). **ಬಾರಾ ಬಂಗಾಳಿ :** ೨. ಏನೇನೊ 'ಬಾರಾಬಂಗಾಳಿ' ಮಾಡಿ ಹುಡುಗನನ್ನು ಒಪ್ಪಿಸಿಕೊಂಡು ಬಂದಿದ್ದೇನೆ (ಬೆಳಚು. ೩೪). ೪. ತೀರ ಮೇಲಿನ ನ್ಯಾಯಸ್ಥಾನ ; ಸುಪ್ರೀಂಕೋರ್ಟು ; ◘ ಈಸ್ಟ್ ಇಂಡಿಯಾ ಕಂಪನಿಯವರ ಆಡಳಿತಕಾಲದಲ್ಲಿ ಕಲಕತ್ತೆಯ ಸುಪ್ರೀಂಕೋರ್ಟು ಕೊಟ್ಟಕೊನೆಯ ಅಪೀಲ್‌ಕೋರ್ಟಾಗಿತ್ತು. ಹಳ್ಳಿಯ ಪಂಚಾ ಯಿತಿ ನ್ಯಾಯಾಲಯದಿಂದ ಈ ಕೋರ್ಟಿನವರೆಗೆ ಹನ್ನೆರಡು ಕೋರ್ಟುಗಳಿದ್ದುವು : ನೀನು ಏನು ಬೇಕಾದರೂ ಮಾಡು, ನಾನು ಬಾರಾಬಂಗಾಳಿ ನೋಡಿ ಬಿಡುತ್ತೇನೆ (ಲೂಹ).

[ಬಾರಾ (< ಬಾರ್$_3$) + ಬಂಗಾಲಿ]

**ಬಾರಾಬಂಗಾಲಿವಿದ್ಯೆ**, ಬಾರಾಬಂಗಾಳಿವಿದ್ಯೆ (ನಾ). ಮೋಸಗಾರಿಕೆ ; ಕಪಟವಿದ್ಯೆ : ಅದೇನಾ ಹುಡುಗ 'ಬಾರಾಬಂಗಾಲೀವಿದ್ಯೆ' ಕಲ್ತಿದ್ದನೋ ಏನೋ ದೇವರೇ ಬಲ್ಲ ! (ಚಾಗಿಸ. ೧೭). **ಬಾರಾಬಂಗಾಳಿವಿದ್ಯೆ:** (೬).

[ಬಾರಾಬಂಗಾಲಿ + ವಿದ್ಯೆ]

**ಬಾರಾಬಂಗಾಳಿ** 'ಬಾರಾಬಂಗಾಲಿ' ನೋ.

**ಬಾರಾಬಂಗಾಳಿವಿದ್ಯೆ** 'ಬಾರಾಬಂಗಾಲಿವಿದ್ಯೆ' ನೋ.

**ಬಾರಾಬನೂತಿ** 'ಬಾರಾಬಲೂತಿ' ನೋ.

**ಬಾರಾಬನೋತಿ** 'ಬಾರಾಬಲೂತಿ' ನೋ.

**ಬಾರಾಬಲುತೆ** 'ಬಾರಾಬಲೂತಿ' ನೋ.

**ಬಾರಾಬಲೂತಿ**, ಬಾರಾಅಲುತೆ, ಬಾರಾಬನೂತಿ, ಬಾರಾಬನೋತಿ, ಬಾರಾಬಲುತೆ (ನಾ). ಹನ್ನೆರಡು ಜನ ಆಯಂಗಾರರಾದ ಗ್ರಾಮಾಧಿ ಕಾರಿಗಳು ; ◘ "ಗೌಡ, ಶಾನುಭೋಗ, ಪಂಚಾಂಗಿ, ತಳವಾರ, ತೋಟಿ, ನೀರ್ಗಂಟಿ, ಅಗಸ, ನಾಯಿಂದ, ಕುಂಬಾರ, ಲೋಹರ, ಬಡಗಿ, ಅಗಸಾಲೆ" (ಮೈಗೆ. IV, ೬೬೪). ಈ ಪಟ್ಟಿಯ ಹೆಸರುಗಳಲ್ಲಿ ವ್ಯತ್ಯಾಸವಿರುತ್ತದೆ : ಇನಾಮುದಾರರು ಬಾರಾಬಲೂತಿ ಜನರು ತಮಗೆ ಸರಕಾರದಿಂದ ಜಾರಿಯಾಗಿರುವ ಭೂಮಿ ಅಲ್ಲದೆ ಜಾಸ್ತಿ ಭೂಮಿ . . . ಅನುಭವಿಸುತ್ತ ಇರುವಂಥಾದ್ದು ಸಹ ಚೆನ್ನಾಗಿ ದರಿಯಾಪ್ತು ಮಾಡಿ (ಮಹಾಶಿ. II, ೬೦); ಗ್ರಾಮಗಳಲ್ಲಿ ಸೇಕದಾರ, ಶಾನುಭೋಗ, ಗೌಡ, ಬಾರಾಬಲೂತಿಯವರು ಇವರೆಲ್ಲಾ ಈಗಿನಂತೆಯೇ ಇದ್ದರು (ಶಾಗಾ. ೩೪). **ಬಾರಾಅಲುತೆ :** "ಬಾರಾಅಲುತೆ-೧೨ : ಗಾಣಿಗ, ವೀಳೆಯದೆಲೆ ಮಾರುವವನು, ಪಯ್ಗೆಯವನು, ತೋಟಗಾರ, ಜಂಗಮ (ಶಿವಾಲಯದ ಅರ್ಚಕ), ಕಲೆಗಾರ, ಬುಡುಬುಡಿಕೆಯವನು, ಢಕಾರೆಯವನು, ಕುಂಬಾರ, ತಳವಾರ, ಅಕ್ಕಸಾಲಿ, ಚೌಗಲೆ (ಪಟೇಲನ ಕೆಳಗೆ ಕೆಲಸ ಮಾಡುವವನು)" (ಶ್ರೀವತ್ಸ. ೨೯೧). **ಬಾರಾಬನೂತಿ :** ೧೨ ಕೈವಾಡ ಬಾರಾಬನೂತಿ ಸಹ ಯಿಟ್ಟುಕೊಣ್ಡು ದೇವತಾಶೇವೆ ವಗ್ಯೆರೆ ನಡಶಿಕೊಣ್ಡು ಹೋಗಲುಳ್ಳವರು (ಮ್ಯಆಂ. ೦೪೨೯, ೯೭-೨೭ ; 1593). **ಬಾರಾಬನೋತಿ:** ಊರ ಈ ನೌಕರರ ಸಂಖ್ಯೆಯು ಸಾಧಾರಣವಾಗಿ ಹನ್ನೆರಡು ಇರುವದರಿಂದ ಇವರ ಸಂಘಕ್ಕೆ ಬಾರಾಬನೋತಿಯೆನ್ನುವರು (ಮಿಚಾರ. ೦೬೦). **ಬಾರಾ ಬಲುತೆ :** "ಬಾರಾಬಲುತೆ- (i) ನಂಬಿ, ರೆಡ್ಡಿ, ಕರಣ, ಪುರೋಹಿತ, ತಳವಾರ, ಬಡಗಿ, ಕಮ್ಮಾರ, ಕುಂಬಾರ, ಅಗಸ, ಕ್ಷೌರಿಕ, ಹೊಲೆಯ, ಮಾದಿಗ (ಕನ್ನರ. ೬೯೦). (ii) ಬಡಗಿ, ಕಮ್ಮಾರ, ಹೊಲೆಯ, ಮಾದಿಗ, ಕುಂಬಾರ, ಚಮ್ಮಾರ, ಅಗಸ, ನಾಯಿಂದ, ಪುರೋಹಿತ, ಮುಲ್ಲಾ, ಗೊರವ, ಬೆಸ್ತ" (ಶ್ರೀವತ್ಸ. ೨೯೦).

[ ← ಮರಾ. ಬಾರಾಬಲೂತೀ, ಬಾರಾಬಲುತೇ]

**ಬಾರಾಭಾಯಿ** (ನಾ). (ಆಡಳಿತದ ನಿರ್ವಹಣೆಗಾಗಿ ನೇಮಕವಾದ) ಹನ್ನೆರಡು ಜನ ; ◘ ನಾರಾಯಣರಾವ್‌ಪೇಶ್ವೆಯ ವಧೆಯ ನಂತರ ನಾನಾಫಡಣವೀಸ, ಸಖಾರಾಮಬಾಪೂ ಮೊದಲಾದ ಹನ್ನೆರಡು ಜನ ಮುತ್ಸದ್ದಿಗಳು ರಾಜ್ಯಭಾರ ನಡೆಸಿದರು. ಇದಕ್ಕೆ 'ಬಾರಾಭಾಯಿ ಕಾರಭಾರ'ವೆಂಬ ಹೆಸರಾಯಿತು : ರಾಜರ ಕಾಟ ಕಾಯಿಗಳು ಹೆಚ್ಚುತ್ತಾ ಬಂದ ಹಾಗೆಲ್ಲಾ ಬಿಗಿಯಾದ ದರಬಾರನ್ನು ನಡಿಸುವುದಕ್ಕೆ ಅಗತ್ಯವಾದ ಏರ್ಪಾಡುಗಳನ್ನು ಮಾಡಿ ಬಾರಾಭಾಯಿ ಗಳನ್ನು ನೇಮಿಸಿ ಮರಾಟೆಸಂಸ್ಥಾನವನ್ನು ವಿಸ್ತರಿಸಿ ಉದ್ಧಾರ ಮಾಡಿ ದವರು ಪೇಶ್ವೆಗಳಲ್ಲವೆ ? (ಮುಹುಗ. ೩೦).

[←ಮರಾ. ಬಾರಾಭಾಈ, ಬಾರಭಾಈ]

**ಬಾರಾಮಾರ್ಗ**, ಭಾರಾಮಾರ್ಗ (ನಾ). ೧. ಹೆದ್ದಾರಿ; ರಾಜಮಾರ್ಗ : ಅವರಿಬ್ಬರೂ ಬಾರಾಮಾರ್ಗದ ಮಗ್ಗುಲ ಮಾಲೀಕನ ಕಾಡಿನಲ್ಲಿ . . . ಕುದುರೆಯ ಹಿಂಡನ್ನು ಮೇಯಿಸುವ ಸಲುವಾಗಿ ಅಟ್ಟಿಕೊಂಡು ಹೋಗು ತ್ತಿದ್ದರು (ಪುಪಕು. ೨೯೩). ೨. "(ಒಂದು ದೇಶದ ಮೂಲಕ ಹಾದು ಹೋಗಲು ತೆರುವ) ಸಾಗಣೆಸುಂಕ, ಹೆದ್ದಾರಿಯ ಸುಂಕ" (ಕಸಂಗ್ರಾ. ೦೫೨) : ಕಾಕೋಲಂ ಬುಚಯ್ಯನ ಪಟಿತಾ ಬಾರಾಮಾರ್ಗದ ಮುಂಡಿ ಶಿಲದಯನ ವಪಿತಾ (ಎಕ. X (s), ಕೋಲಾರ. ೨೩೬-೯೬; 1761); ಬಾರಾಮಾರ್ಗದ ವೀರಶೆಟ್ಟಿಯಶೆಟ್ಟರು ಹನಿಕೆ ಚೆನ್ನದೇವರು ಬಿಗ ದೇವನಹಳ್ಳಿ ನಿರಂಜನಯ್ಯ . . . ಮೊದಲಾದ ೫೬ ದೇಶದ ಬಾರಾಮಾರ್ಗದವರು ಬರಸಿಕೊಟ್ಟ ದಾನದ ವರದಿ ಕ್ರಮ (ಎಕ. IX (s), ಹೊಸಕೋ. ೦೬೭-೨; 1771). **ಭಾರಾಮಾರ್ಗ :** ೨. ಸ್ಥಳ ಪಂಸ್ಥಳದ ಚತುರ್ದಿಕ್ಕು ಐವತ್ತಾರುದೇಶದ ಭಾರಾಮಾರ್ಗ್ಗದ ದೇಶದವರು (ಎಕ. X (s), ಕೋಲಾರ. ೨೩೬-೦೦; 1761). 'ಭಾಟಾಮಾರ್ಗ' ಪರಾ. [ ? + ಮಾರ್ಗ]

**ಬಾರಾಸುಂಕ** (ನಾ). = ಬಾರಾಮಾರ್ಗ ೨ : ಇನ್ತೀ ಧರ್ಮಮನುತ್ತ ರಾಯಣಸಂಕ್ರಾನ್ತಿ ನಿಮಿತ್ತದಿಂ ಕೊಟ್ಟು ಬಾರಾಸುಂಕದ ಭೇಣಿ ಕಾಚಿರ್ಕ್ಕಡಸದೆ . . . ತಪ್ಪದೆ ಪ್ರತಿಪಾಲಿಸುವರು (ಕಇಅ. ೩೬-೯೯-೦೬; 1134). [ ? + ಸುಂಕ$_1$]

**ಬಾರಿ$_1$**, ವಾರಿ$_1$ (ನಾ). ೧. ಸಲ ; ಸರದಿ ; ಸಾರಿ : ಪಶುಗಳ ಮೆಯ್ಯೊಳೆನಿತು ರೋಮಮುಂಟನಿತು ಬಾರಿ ತಾಂ ಕೊಲಿಸಿಕೊಂಬಂ ವೃಥಾ ಪಶುವಧೆಯಂ ಮಾಡಿದವಂ (ಕಂಕಕಂ. ೬೨-೧೬); ಎನಿತು ಬಾರಿ ಪಲಾಯನದ ಸಿರಿ ನಿನಗೆ ಸೇರಿತು (ಕುವ್ಯಾದ್ರೋ. ೦೮-೯೩); ಬಲಗೊಂಡನುಱಿ ಮೂಱು ಬಾರಿ ತನ್ನೊಳು ತಾನು ಗೆಲವೆಱಿ ಮುನಿಗಳಿರ್ವರಿಗೆ ನಲಿದೆಬ ಗಿದನು (ಚಿಕ. ೩-೬೦). ೨. ಆಹುತಿಯಾಗುವ ಸರದಿ ; ಬಲಿಯಾಗುವ ಪಾಳಿ : ಪಾಳಿಯ ಬಾರಿಯೆಮ್ಮ ಮೇಲೆ ಬಂದುದು (ಕಂಕಶಾ. ೩-೨೩ ವ);

ಅಬ್ಬಾ ನಿಮ್ಮ ಮನೆಗೆ ಬಾರಿ ಬಂದುದು ನಾಳೆ ರಕ್ಕಸನಲ್ಲಿಗಟ್ಟಿಂ (ಕೀಚಕಸಂ. ೩೮-೨೩ ವ); ಎನಗೆ ಬಂದುದು ತಾಯಿ ನಾಳಿನ ದಿನದ ಬಾರಿ (ಕುವ್ಯಾಕ. ೧೦-೦೨). ೩. ಬಲಿ; ಆಹುತಿ : ಅತನಂ ಪವಮಾನಸೂನು ಬಾರಿಯ ನೆವದಿಂ ಪೋಗಿ ಕೀನಾಶಂಗಾಪೋಶನಮನಿತ್ತು ಮತ್ತಂ ಬರೆ (ಕೀಚಪು. ೯-೫೨ ವ); ಎಲ್ಲರುಮಿರ್ದು ಮಾಡಿದೊಡೆ ಮಾಡಿದ ಬಾರಿಯ ಸೂಟಿಬ್ ನಿಯೋಗದಿಂದಲ್ಲಿಯ್ಯುವಂತೆ ಬಂದು ಬಟಿಕಾ ಮನೆಯಲ್ಲಿಗೆ ಬಂದುದು (ಕೀಚಕಸಂ. ೩೬-೨೩). ೪. ಬಾಯಿ; ದವಡೆ : ಬೇಟದುಬ್ಬದಿಗವುನಾಂತ ನಲ್ಲಳ ಮುಖಾಂಬುಜವುಂ ನಡೆ ನೋಡಿ ನೋಡಿ ಸಾಯದೆ ಬರ್ದು ಕಾಡಿದಂ ಜವನ ಬಾರಿಯೊಳಂ ಬರ್ದುಕಬಡದಿರ್ಕುಮೋ (ಅನಪು. ೦೨-೨೫); ಪೆಂಡತಿಯ ಮಾಗನಕಾರಣದಿನರಿವವನಂ ಜವನ ಬಾರಿಗಟ್ಟುವುದೆ ಧರ್ಮಂ (ಶಂಕಸಂ. ೭೮-೯); ಅರಣ್ಯದೊಳ್ ಚರಿಯಿಪ ರೌದ್ರರಾಕ್ಷಸರ ಬಾರಿಗೆ ಬಿಟ್ಟಳೋ ಕಾಂತೆ (ಕುಸುಮಾ. ೧೪-೦೦೪). ೫. ದಾಳಿ; ಆಕ್ರಮಣ; ಲಗ್ಗೆ : ತಳವಟ ಕಳ್ಳರ ಬಾರಿಯೊಳೊಳಗಾಗದೆ ನಿನ್ನ ಬರ್ದುಕಿ ಬಂದಂದ ಮಿದಾರಳವು (ಸುಕುಮಾ. ೭-೨೪); ನೀನಾ ನಿಷ್ಠುರನ ಕೆಯ್ಯೊಳಿರಡಿಲ್ಲದೆ ಪೇರಾನೆಯ ಬಾರಿಗೆ ಬಿರ್ದಾ ಶ್ವಾನನ ತೆಱದಂತೆ ಬಾಧೆಗೊಳಗಾಗಿಪ್ಪೆ (ಧರ್ಮಾಮೃ. ೭-೧೩೦); ಇನನಿದಿರೆಟ್ಟಿ ಕಾರ್ಮುಗಿಲ ಬಾರಿಗೆ ಬಿಟ್ಟನೊ ತಳ್ತ ಬಳ್ಳಿಮಿಂಚಿನ ಬಲೆಯಲ್ಲಿ ಸಿಕ್ಕಿದನೊ . . . ಘನಜಳಧಾರೆಯಿಂ ಕರಗಿ ಹೋದನೊ (ಅನಂಪು. ೯-೦೫). ೬. ಅಧೀನ ; ವಶ ; ಹತೋಟಿ : ಪೊರೆದ ಮಡಿ ಬಟಿಯಂ ಧೂಳಿಯೊಳ್ ಮಾಸಿಯುಸಗನ ಬಾರಿಯೊಳ್ ಬಿರ್ದು ನಿಗ್ರಹಕ್ಕೊಳಗಪ್ಪಂತೆ ಚವಳರ್ . . . ದುಃಖಂಬಡುವರ್ (ಧರ್ಮಾಮೃ. ೯-೩೮); ಭೀಮ ಧರಿತ್ರೀಭೃತ್ಪನುಜೆ ನಳನೃಪಂಗೆರ್ದೆದೆತ್ತು ಕರಂ ಚಿತ್ರಭವನ ಬಾರಿಗೆ ಬಂದಳ್ (ದಮಯಂ. ೩-೦). ೭. ಕಪಿಲೆಬಾವಿಯ ಬಳಿ(ನೀರು ಎಳೆಯುವ) ಎತ್ತುಗಳು ಕೆಳಗೆ ಇಳಿಯುವುದಕ್ಕಾಗಿರುವ ಇಳಿಜಾರುಪ್ರದೇಶ : ಮೊಟ್ಟೆಯ ಬಾರಿಯ ಕಡೆಗೆ ಮಣ್ಣು ಭರತಿ ಹಾಕದೆ ಗುಣೆಗಲ್ಲುಗಳನ್ನು ಅಥವಾ ಗರಸುಮಣ್ಣನ್ನು ಹಾಕಿ . . . ಮೊಟ್ಟೆಯ ಬಾರಿಯನ್ನು ತಯಾರು ಮಾಡಿ ಮೊಟ್ಟೆಯನ್ನು ಸಾಗಿಸಬೇಕು (ಕೃಷಿಶ. ೦೦೪) ; ಬಾವಿಗೊಂದು ಹೊಸ ಮೊಟ್ಟೆಯಾಗಿದೆ; ಬಾರಿಯಾಗಿದೆ (ಬಾಬಂ. ೧೭), ಜೀವ ನೀಗುವ ಈರ್ಷೆಯಿಂದ ಧಡಧಡನೆ ಬಂದ ಬಸವಂತಿ, ಬಾರಿಯ ಮೇಲಿಂದಲೇ ನೀರಿಗೆ ಧುಮುಕಿದಳು (ದೀಶಹ. II. ೦೯೪). ೮. ಕಾಮೋದ್ರೇಕ ; ಬೆದೆ : ಪುಗಿಲಂ ಪೋಗು ಬಾರಿಯಂ ಸನ್ನೆಯಂ ನೂಱುವಮರ್ಖವ ನಿಲ್ವೆಡೆಯಂ ಬಗೆಯಂ ತೆಗೆಯನಲ್ಲಾಟಮಂ . . . ನೀಂ ಬಲ್ಲೆ ಬೇಂಟೆಕಾಱರೊಳೆಲ್ಲಮಾನೆ ಬಲ್ಲಂ (ಶಂಕಶಾ. ೫-೯೩); ಹಸು ಬಾರಿಗೆ ಬಂದಿದೆ, ಹೋರಿ ಕೊಡಿಸಬೇಕು (ರೂಢಿ). ೯. ಕೂಟ ; ಸುರತ ; ಆ ಮುದುಪಂ ಗಡ ಕೊಟ್ಟನೊತ್ತೆಯಂ ಗರಗರನಾಯ್ತು ಬಳ್ಕೆ ಮುದು ಗೂಗೆಯ ಬಾರಿಗೆ ಕೈನೆ ತಾನೆ ಮೈಗರೆದೆನಗೊತ್ತೆಗೊಟ್ಟ ಸುಖ ಮಾಟ್ಕಿವೆ ವಟ್ಟದನಕ್ಕ ಬಟ್ಟಪೆಂ (ಸೂಕ್ತಿಸು. ೬-೪೨೨) ; ಅವನ ಬಾರಿಯೊಳ್ ಮಗಳ ಮೆಯ್ ಕಳೆಯೇಱುವುದೊಳ್ಗೊಗಂ ಪೊಗರ್ತೀವುವುದೋಜೆಯುರ್ಕುವುದು (ಶಕಾ. ೭-೯೬). ಬಾರಿ$_1$ : ೧. ವಾರಿ ಇಲ್ಲದ ಸುಂಕ ದಾರಿಗೆ ದಾರಿಯೇ ? (ಗಾದೆ). ೨. ಬಿರುದರ ಗೋವ ವಾರಿಗೆ ತಪ್ಪುವ ಲೆಂಕರ ಗಂಡ (ಎಕ. VII. ಶಿಕಾ೦. ೦೪೪-೬ ; 1181).

ಬಾರಿಬಾರಿ (ದ್ವಿರುಕ್ತಿ) : ಬಾರಿಬಾರಿಗೆ ಪಾತಿವ್ರತ್ಯವ ಬೋಧಿಸಿ ಜಾರೆಗದಟ ನಿಜ ಸೊಗಸೀತ (ಪುರಂದ. ೦-೦೫೭-೦); ಆ ರಣದೊಳಿಂತಿವನ ಸ್ಯಂದನಸಹಸ್ರಮಂ ಬಾರಿಬಾರಿಗೆ ಕತ್ತರಿಸಿ ಕೆಡಹಿ ಫಲುಗುಣಂ ಪೂರ್ಯಿಸಿದಂ ದೇವದತ್ತಮಂ (ಕೃಷಿಚಾ. ೨೫-೩೪) ; ಇಂದ್ರನೂ ಜಯಂತನೂ . . . ಬಾರಿಬಾರಿಗೂ ಸೋತು ಓಡಿ ಹೋಗಲಿಲ್ಲವೆ ? (ಕೃಪಾಉ. ೦೬೭).

[ದೇ.# ಕೊಡ. ಬಾರೀ ; ತೆಲು. ಬಾರಿ./ಹಿಂ. ಬಾರ್; ಮರಾ. ಬಾರಿ]

ಬಾರಿ$_2$ ' ಬಾರ್$_2$' ನೋ.

ಬಾರಿ$_3$ (ನಾ). ಆನೆಯನ್ನು ಹಿಡಿಯಲು ಮಾಡುವ ಉಪಾಯ : ಗಂಧ ಹಸ್ತಿಯೊಡನೆ ಬಾರಿ [ಪಾಠಾಂ. ಚಾಲಿ, ಬಾಳಿ, ಬಾಲಿ, ಬಾವಿ]ಯೊಳ್ ಮೂವತ್ತೆರಡು ಗಜಕ್ರೀಡೆಗಳಿಂದಂ ನೀಡುಂ ಬೇಗಂ ಕ್ರೀಡಿಸಿಯಾನೆಯಂ ಸೇದೆಗೆಡಿಸಿ ತನ್ನ ಬಸಕ್ಕೆ ಮಾಡಿಯೇಱಿ (ಪಂಪಾಭಾ. ೩೪-೦೪) ; ತೋರದೆರೆ ಮುರಿಯೆ ಮೂಡುವ ವಾರಣಮಂ ಪೋಲ್ತುದಡಸಿ ನಿಡುಗೆಯ್ಯಂ ಭಂಡಾರಿಸಿ ಮೆಡಱಿದ ತಳಿಯಂ ಬಾರಿಯುಮಂ ಮುಱಿಯೆ ಪೊಯ್ದು ಪೋಱಿವುಡು ವಿಭಮಂ (ಅರ್ಧನೇ. ೫-೦೦೩). ' ಕೆಡ್ಡಾ ' ಹೋ. [< ಸಂ. ವಾರೀ]

ಬಾರಿಕ (ನಾ). ೧. ಸರದಿಯನ್ನು ತಿಳಿಸುವವನು : ಬಾಯಾಳೆಂಬ ಬಳ್ಳುಮಂ ಬಾರಿಕನಂ ಮಾಡಿ ಪಲಕಾಲಂ ಸಲುತುಮಿರ್ಪುದುಂ (ಶಂಕಶಂ.೫೮-೦೨) ; ಬಾರಿಕಂ ಬಂದಾ ಪಾರ್ವನಂ ಕಾಣದಬ್ಬಾ ನಿಮ್ಮ ಮಗನ ಮೇಲೆ ಬಾರಿ ಬಂದುದು ನಾಳೆ ರಕ್ಕಸನಲ್ಲಿಗಟ್ಟಿಂ ಎಂದು ಪೇಟ್ದು ಪೋದಾಗಳ್ (ಕೀಚಕಸಂ. ೩೬-೨೩ ವ) ; ಬೊಬ್ಬೆಯಿಂ ಪೇಳ್ದ ಬಾರಿಕನ ನುಡಿಯಂ ಕೇಳ್ದು ತಬ್ಬಿಬ್ಬು ಗೊಂಡು (ಲಕ್ಷ್ಮೀಶಾ. ೩೪-೬). ೨. ಗ್ರಾಮದ ಕಾವಲುಗಾರ : ಸಾಸಿರ್ವ್ವರ ಬಾರಿಕಂಗೆ ಮನೆದೆಱೆ (ಎಪಿ. ೦೪೪೬, ಹಾನಗಲ್. ೨೫೦-೩೩ ; 993) ; ಬಂಟ ಸಾಸಿರ್ವ್ವರ(ರುಂ) ಬಾರಿಕಂಗೆ ಮನೆದೆಱೆ ಬಿಟ್ಟ ಬೆಸಕೂಳ್ದೆಱೆ ಮೊದಲಾಗೆ ಸರ್ವ್ವಮಾನ್ಯಮಾಗೆ ಬಿ[ಟ್ಟ]ರ್ (ಕಇ. II. ೯-೩೩ ; 1072).

[ಬಾರಿ$_1$ + — ಕ$_3$]

ಬಾರಿಕಾರ (ನಾ). ಹಳ್ಳಿಯನ್ನು ಕಾವಲು ಕಾಯುವವನು ; ಗ್ರಾಮದ ಕಾವಲುಗಾರ : ಮನೆಯಲ್ಲಿ ನಿತ್ಯ ಕಸ ಮುಸುರೆಯನ್ನು ಮಾಡುವ ತಳವಾರ, ಬಾರಿಕಾರರಿಂದ ಮದುವೆ ಮುಂಜಿಗಳನ್ನು ಮಾಡಿಸುವ ಪುರೋಹಿತರ ವರೆಗೂ . . . ಬೇರೆ ಬೇರೆ ಮನೆತನಗಳಿರುವವು (ಶಿಳಾ. ೦೩೭).

[< ಬಾರಿಕ + —ಕಾರ$_1$ (< — ಕಾಱ)]

ಬಾರಿಕಿ, ಬಾರೀಕಿ (ನಾ). =ಬಾರಿಕಾರ : ಬಾರಿಕಿ_ಈತನು ಗೌಡನ ಅಪ್ಪಣೆಯಂತೆ ಹಳ್ಳಿಯಲ್ಲಿ ಮುಸುರೆ ತಿಕ್ಕುವದು, ಹಿಲಾಲು ಹಿಡಿಯುವದು ಮುಂತಾದ ಕೆಲಸ ಮಾಡುವವನು (ಮುಶಾರ. ೦೭೨). ಬಾರೀಕಿ : ತೋಟಿ_ತಳವಾರ, ವೆಟ್ಟಿ, ಬಾರೀಕಿ ಅಥವಾ ಕೋಲುಕಾರನೆಂದು ಹೆಸರುಂಟು (ಗ್ರಾಮಾಚ. ೦). [< ಬಾರಿಕ. / ತೆಲು. ಬಾರಿಕಿವಾಡು]

ಬಾರಿಗುಱಿ (ನಾ). ಬಲಿಯಾಗಿ ಕೊಡುವ ಕುರಿ ; ಆಹುತಿಯಾಗಿ ಕೊಡುವ ಕುರಿ : ಕುತ್ತಮಂ ಕಿಡಿಸುವ ನಿಮಿತ್ತದಿಂ ಚಂಡಿಕೆಗೆ ಪಿಂಡಮ ನಿಟ್ಟುಂ ಮಾರಿಗೆ ಬಾರಿಗುಱಿಯನಿತ್ತುಂ . . . ಇಂತನೇಕಪ್ರಕಾರಂಗಳಿಂ ರೌದ್ರದೇವತೆಗಳಂ ಪಿಡಿದು ದುರ್ಗತಿದುಃಖದಿಂದಾಳುತ್ತಂ ಮುಱುಗುತ್ತಮಿರ್ಪರ್ (ಶಪಾರ. ೪೩೬). [ಬಾರಿ$_1$ + ಕುಱಿ$_3$]

ಬಾರಿಗೆ (ನಾ). ಕಸ ಗುಡಿಸುವ ಸಾಧನ ; ಪೊರಕೆ : ಹನುಮಂತಪ್ಪನು . . . ಅಡುಗೆಮನೆಯನ್ನು ಬಾರಿಗೆಯಿಂದ ಸ್ವಚ್ಛವಾಗಿ ಗುಡಿಸಿದನು (ರಕ್ತರೃ. ೦೦೬). ' ಬೋಹರಿಗೆ ' ಪರಾ. [ ? ]

ಬಾರಿದಿ (ನಾ). ವೇಶ್ಯೆ ; ಸೂಳೆ : ಮೊಳ ಬಟ್ಟೆಗೆ ದೇಹವನ್ನು ಮಾರುವ, ಮಾರಿಕೊಂಡ ಬಾರಿದಿಯಾಗಿದ್ದಾಳೆ (ಒಡಮು. ೨೦೦).

[← ಹಿಂ. ಬಾರತಿಯ. / ಸಂ. ವಾರಸ್ತ್ರೀ]

ಬಾರಿಯಿಕ್ಕು (ಕ್ರಿ). (ಸರದಿಯ ಪ್ರಕಾರ) ಕಾವಲಿಡು ; ಕಾವಲು ಹಾಕು : ಅರಸನಪ್ಪಣೆಯಿಂದಾಯಲೂರ ಸೀರೆಯನೆಲ್ಲ ಗಿರಿಯಂತೆ ಮಡಿವಳಯ್ಯನ ಮುಂದೆಯೊಟ್ಟುತ್ತೆ ಕರಿ ತುರಗ ರಥ ಪತ್ತಿ ಮುಂತಾದ ಬಹುಬಲವ ಬಾರಿಯಿಕ್ಕುತ್ತ ಭಟರು ಮಾರುಳಸಗ ಭೂವರಗೆ ನೀನಿದಿರೆ . . . ಎನ್ನಲು (ಪ್ರಭುಪು. ೭-೬೨). [ಬಾರಿ$_1$ + ಇಕ್ಕು]

ಬಾರಿಯಿಡು (ಕ್ರಿ). ಬಲಿಯಾಗಬೇಕಾದ ಪ್ರಾಣಿಯ ಸರದಿಯನ್ನು ಗೊತ್ತುಮಾಡು ; ಸರದಿಯ ಮೇರೆಗೆ ಬಲಿಯನ್ನು ತೆಗೆದಿಡು :

ಫಣಿರಾಜಂ ಬಾರಿಯಿಟ್ಟಟ್ಟಿದೊಡನುದಿನದಿಂ ಬರ್ಪ ಸರ್ಪಂಗಳಂ ಬಲ್ಕಣೆ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಗಿರಿಯೊಳಿರ್ಪಂ ಬಲಂ ಕೇಳಿರೇ (ಕಾವ್ಯಾ.ಶ. ೯೦೦). [ ಬಾರಿ$_1$ + ಇಡು$_1$ ]

**ಬಾರಿಲುಮಕ್ಕಿ** (ನಾ). ಒಂದು ಬಗೆಯ ಭೂಮಿ : ಬಾರಿಲುಮಕ್ಕಿಯು ಗಳ್ದೆಗೆ ಇಕ್ಕಿ ಹೊನ್ನ . . . ಏಳು ಭೆಯದ ಬತ್ತ ಇಂನೂಜ ಮೂವತ್ತು ಇಕ್ಕಿದಂ (ಎಕ. V, ಹಾಸನ. ೩೮-೦೭ ; ಸು. 1000 ?). [ ? + ಮಕ್ಕಿ$_1$ ]

**ಬಾರಿಸು$_1$** (ಕ್ರಿ). ೧. ಚಾವಟಿಯಿಂದ ಹೊಡೆ ; ಚರ್ಮದ ಪಟ್ಟಿಯಿಂದ ಏಟುಕೊಡು : ಆರು ಬಾರಿಪ್ಪನಾರಂ ನಿನಗೆಜಿಗಿಪಂ. . .ಬೆಸಸು ಬೆಸಸು (ಅರ್ಜನೀ. ೬-೬೪) ; ತುಡುಗುಣಿಗೆಳವದಿರು ನಭೋಗ್ರಕೆ ಸಿಡಿದು ಹವಿ ಗೊಂಬಮರನಿಕರದ ಹೆಡಕ ಬಾರಿಸಿ ಬಾಜುತಿರ್ದರು ಬಾಯ ತುತ್ತುಗಳ (ಕೊರರಾ. ೧-೧೧-೯). ೨. ಜೋರಾಗಿ ಏಟು ಕೊಡು ; ಬಿಗಿ : ರೋಷ ಗೊಂಡ ಇನ್ಸ್‌ಪೆಕ್ಟರ್ ಅವನ ಕೆನ್ನೆಗಳಿಗೆ ಬಾರಿಸಿದ (ಅಶ್ವತ್ಥ. ೧೧೯).
[ ಬಾರ್$_2$ + — ಇಸು$_3$. / ತುಳು. ಬರ್ಜು ]

**ಬಾರಿಸು$_2$** (ಕ್ರಿ). ೧. ನಿರೋಧಿಸು ; ಪ್ರತಿಬಂಧಿಸು : ದೇವತೆಗಳ ಮಾಡಿದಾಹಾರಮಂ ರಿಸಿಯರ್ಗೆ ಚರಿಗೆ ಮಾಡಲಾಗದೆಂದು ಬಾರಿಸಿ (ವಡ್ಡಾರಾ. ೯೦-೨೪) ; ಕಡುಕೆಯ್ದು ಕೃತಾಂತನಿಂತು ನಿರ್ನೆರಮೆಂಟಿದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪರೇ (ಆದಿಪು. ೩-೪) ; ಇಷ್ಟರ್ ಬಾರಿಸಿದೊಡಂ ಮಾಣದೆ ದುಷ್ಟರನೊಳಕೊಂಡು ಕಟ್ಟರ ಕಥೆಗಳಂ ಪೇಟಿದ್ವಿಂ (ಶಬ್ದಶಂ. ೦೨೨-೦೨). ೨. ಎಚ್ಚರಿಕೆ ಕೊಡು,—ನೀಡು: ಈ ರೂಪೆಂಬುದು ಭುವನಜನಾರಾಧ್ಯಂ ಚಕ್ರಿಜನನಿಷೇವಿತಮಿದಱೊಳ್ ಸಾರದಳಿಪೆಂದು ಪೆಳ್ಳನೆ ಬಾರಿಸಿದುವು ಬಿಡದೆ ಜಡಿದು ವನದೇವತೆಗಳ್ (ಆದಿಪು. ೯-೯೩) ; ಅಂದೆನ್ನಂ ನೀಂ ಬಾರಿಸಿದುದು ಸನ್ನಿದವಾಯ್ತಿನ್ನಿರ್ದೆ ಪೇಟೆಗೆಯ್ವೆಂ (ಶಬ್ದಶಂ. ೬೯-೦೬); ಬಾರಿಪ ನಿಮ್ಮ ತರ್ಜನದಿನೀ ಜನದೊಂದುಲಿ ಮಾಣ್ಗೆ (ಕೃಷ್ಣಪು. ೭-೩೩). ೩. ಪರಿಹರಿಸು ; ನಿವಾರಿಸು : “ಬಾರಿಸೆಂದು ನಿವಾರಿಪುದು” (ಶಶಾ. ೭೦-೬೦೦) ; ಚಂದ್ರಾಂಶುಚಂದ್ರಕಾಂತದ್ರವ ಕರ್ಪೂರ ಮೃಣಾಲಾದಿಗಳುಂ ಬಾರಿಸಲಾಱವೆ ದಲವನ ದಾಹಜ್ವರವಂ (ಆದಿಪು. ೨-೦೩). ೪. ಹೀಯಾಳಿಸು ; ಧಿಕ್ಕರಿಸು : ಕ್ಷೀರೋದವಾರಿಧಾರಾ ಪೂರದ ಚೆಲ್ವಂಗೆ ಸೆಣಸುವಂತಭಿನವನೀಹಾರದ ಬೆಳ್ಪನೆ ಬಾರಿಸಿ ಪಾಂಡುಕ ಶಿಲಾತಲಂ ಸೊಗಯಿಸುಗುಂ (ಆದಿಪು. ೭-೬೪) ; ಕೀರ್ತಿ ದಿಗ್ವಲಯಭಿತ್ತಿಯ ನೋವದೆ ಬಾರಿಸಿತ್ತು ಭಾಸುರರುಚಿಯಿಂದೆ ಚನ್ದ್ರಮನ ಚನ್ದ್ರಿಕೆಯಂ (ಎಕ. V. ಅರಸೀ. ೦೨೭-೩೭ ; 1185); ನೇರಿತೆಳವಾಟೆಗಂಬಮನೋರಂತಿರೆ ನುಣ್ಪುವೆತ್ತು ಸೋಲಿಪ ಚೆಲ್ವಿಂ ಬಾರಿಸಿ ಸೊಬಗಿಂಗೆತ್ತಿದ ತೋರಣ ಗಂಬಂಬೊಲಿರ್ದುವಾಕೆಯ ತೊಡೆಗಳ್ (ಶಬ್ಬಿಶಾ. ೭೩). ೫. ಬಿಡು ; ತೊರೆ ; ತ್ಯಜಿಸು : ಬಾರಿಸುತಿಂದ್ರಿಯಜ್ಞಾನವ ಪ್ರಾಣಾಪಹಾರಿಯಾಗಿರ್ದ ಕ್ಷುಧೆಯೊಳು ಸಾರನಿಜಾತ್ಮಭಾವನೆಯೆಂಬಮೃತಾಹಾರವ ಕೊಳುತಿರ್ದ ರೊಲಿದು (ಶಾಂತೀಶ. ೪-೭೩). [< ವಾರಿಸು]

**ಬಾರಿಸು$_3$** ‘ಬಾಜಿಸು$_2$’ ನೋ.

**ಬಾರೀಕ** (ಗು). ದಪ್ಪವಾಗಿಲ್ಲದ ; ತೆಳುವಾದ : ತುಂಬುಗಲ್ಲ. ಬಾರೀಕ ಮಿಸೆ, ಭರ್ತಿ ಆಳು (ಹೊಸಕ್ಕಿ. ೬೪).
[←ಪಾರ. ಹಿಂ. ಮರಾ. ಬಾರೀಕ್]

**ಬಾರೀಕಿ** ‘ಬಾರಿಕಿ’ ನೋ.

**ಬಾರು$_1$** ‘ಬಾರ್$_2$’ ನೋ.

**ಬಾರು$_2$** ‘ಬಾರ್$_3$’ ನೋ.

**ಬಾರು$_3$** ‘ಬಾರ್$_4$’ ನೋ.

**ಬಾರುಕೋಲು** ‘ಬಾರ್ಕೋಲು’ ನೋ.

**ಬಾರುಗಿ** (ಕ್ರಿ). ಚರ್ಮವನ್ನು ಎತ್ತು,—ಸುಲಿ : ಒದೆದುಗುರಿಂದೆ ಬಾರುಗಿದುದೆಯ್ದದೆ ಕುತ್ತಿದಳಪ್ಪಿ ಕಂಟಕೌಘದಿನಳಿ ಪಾಱಿದವ್ವಳಿಸಿ ಕೆಂದಳದಿಂದೊಳಪೊಯ್ದು ಪೊಯ್ದುದೆಯ್ದದೆ . . . ಕಡೆಗಣ್ಣಳಿಂ ಪಡೆದಳೋಪನನೋಪಳನಂಗಯುದ್ಧದೊಳ್ (ಲೀಲಾವ. ೦೩-೨೦).
[ ಬಾರ್$_2$ + ಉಗಿ$_1$ ]

**ಬಾರುಗುತ್ತ** ‘ಬಾರ್ಗುತ್ತ’ ನೋ.

**ಬಾರುಗುತ್ತು** ‘ಬಾರ್ಗುತ್ತ’ ನೋ.

**ಬಾರುಗೋಲು** ‘ಬಾರ್ಕೋಲು’ ನೋ.

**ಬಾರುದಾರಿ** (ನಾ). ಚರ್ಮದ ಮೇಲೆ ಬಿದ್ದ ಪೆಟ್ಟಿನ ಗುರುತು; ಬಾಸುಂಡೆ : ಏರಗಯ್ಯನು ಕಟ್ಟಿ ಬಿಜ್ಜನ ಚೇರ ಬಂದನು ಹೆಚ್ಚಿ ಬಡಿಯಲು ಬಾರುದಾರಿಗಳು ಎದ್ದು ಗುರುಗಳ ಬೆನ್ನಿನ ಮೇಲೆ (ನಂದಿಲೀ. ೩-೨೭). [?]

**ಬಾರುಸಿಪಾಯಿ** ‘ಬಾರ್ಸಿಪಾಯಿ’ ನೋ.

**ಬಾರುಳಿ** (ನಾ). (?) : ನೋಟ್ಟ ತರಳಲೋಚನದ ಸರಳಾಪಾಂಗಂ ಹರಿಣೀ ಭಾವಮಂ ಮನಂಗೊಳಿಸಿ ನಿಱಿದಳಿರ್ದೊಂಗಲಂ ತೆಗೆಯೆ ಬಾ[ಶಾಂತಿ. ಬಾ] ರುಳಿಯಂ ದನಿಗೆಯ್ದಶೋಕೆಯೊಳ್ ಕಿಱುಮುಗುಳ್ಗೊಂಜಿಯಂ ತಳೆದು ಪೂವಿನ ಬಿಲ್ ನನೆಯಂಬು ಕೆಯ್ಕೊಳಚ್ಚಿಱಿದಿರೆ ಮೋಚಕಚ್ಛವಿಯ ತಾವರೆ ಗಣ್ಗಳ ಗಾಳುವೆಣ್ಗಳೇಂ ಮೆಱೆದ್ದರೊ ಕೇಳಿಶೈಲಶಿಖಿರಾವಳಿಯೊಳ್ ಶಬರೀವಿಲಾಸಮಂ (ಅನಂಪು. ೭-೦೭). [?]

**ಬಾರೂತ್** ‘ಬಾರೂದು’ ನೋ.

**ಬಾರೂದು, ಬಾರೂತ್** (ನಾ). ತುಪಾಕಿಗಳಿಗೆ ತುಂಬುವ ಮದ್ದು ; ಸಿಡಿಮದ್ದು : ಮತ್ತೊಂದು ಜಹಜನಲ್ಲಿ ಬಾರೂದಿಗೆ ಬೆಂಕಿ ಹತ್ತಿ ಬೆಂದುಹೋಯಿತು (ರಾಜೇಂದ್ರ. ೦೫೦) ; ಒಂದೆರಡು ಕಡೆ ಪೋಲೀಸು ಠಾಣೆಗಳಿಂದ ಕೋವಿ, ಬಾರೂದುಗಳು ಕಾಣೆಯಾಗಿವೆ (ಗೂಂಡಾರ. ೩). **ಬಾರೂತ್** : ಬಾರೂತ್ ಜನಗಳು, ಎಂದರೆ . . . ಖಾಸಾಬಾರು, ಕಂದಾಚಾರ ವಗೈರೆ ಜನರಿಗೆ ಸೇರಿಸಿಕೊಂಡು ನಿಂತರು (ಚಿತ್ರಶಾ. ೬೪).
[← ಪಾರ. ಹಿಂ. ಮರಾ. ಬಾರೂದ್, ಬಾರೂತ್]

**ಬಾರೆ** ‘ಬೋರ್ಕೆ’ ನೋ.

**ಬಾರೆತ್ತು** (ಕ್ರಿ). ಚರ್ಮವನ್ನು ಕೀಳು; ತೊಗಲನ್ನು ಸುಲಿ : ಬಾರೆತ್ತಿ ಸೀಳೆಯುಂ ಗುಗ್ಗುಳಂಬೊತ್ತಿಸೆಯುಂ ಅಸಗವೊಯಲ್ವೊಯ್ಯೆಯುಂ (ಆಚಪು. ೦೧-೦೦ ವ) ; ಮಾದೆಗನಂತೆ ಬಾರೆತ್ತುವರ್ ನಾಯಂತೆ ಕಚ್ಚಿ ತೆಗೆವರ್ (ರಟ್ಟಮತ್ಮ. ೩-೭೩) ; ಮಡದೀ ಹೆಡತಲೆವರಂ ಬಾರೆತ್ತುವುದುಂ ಕೂರಸಿ ಗಳಿಂದೆತ್ತಿ ಕುತ್ತುವುದುಂ (ಶಾಂತೀಶ್ವ. ೯-೦೦೦ ವ).
[ಬಾರ್$_2$ + ಎತ್ತು$_1$]

**ಬಾರೇಟ್** (ಕ್ರಿ). ಹೊಡೆತದಿಂದ ಚರ್ಮದ ಮೇಲೆ ಬಾಸುಂಡೆ ಬರು : ತೋರಮುಡಿವಿಡಿದು ಕುಡಿಯಂ ನಾರಂ ಸದೆವಂತೆ ತದೆದು ಬೀಟೆಯ ಕಾಲಿಂ ಬಾರೇಟ್ ಬದಿಯನೊದೆದೊಡೆ ಕೇರು ಪೊರಳ್ವಂತೆ ಕಾಲ ಮೇಲೆ ಪೊರಳ್ದಳ್ (ಯಶೋಚ. ೨-೫೦) ; ಎನಗಿನ್ನಾರಾಸೆಯಾರ್ಕಾವರಾರ್ಶರಣೆಂದಾ ಕಳಕಂಠನಾದೆ ಬಸಿಱಂ ಬಾರೇಟ್ವಿನಂ ಮೋದಿದಳ್ (ಅನಂಪು. ೦೦-೪೬).
[ಬಾರ್$_2$ + ಏಟ್$_1$]

**ಬಾರ್ಕೋಲು, ಬಾರುಕೋಲು, ಬಾರುಗೋಲು** (ನಾ). ಚರ್ಮದ ಹೆಣಿಕೆಯುಳ್ಳ ಚಾವಟಿ ; ತುದಿಯಲ್ಲಿ ಚರ್ಮದ ಪಟ್ಟಿಗಳನ್ನು ಹೊಂದಿಸಿದ ಚಾವಟಿ ; ಬಾರುಗುಣಿ (ಉಕ) : ಹೇರು ಕಟ್ಟಾಗ ಬಾರ್ಕೋಲ ನಾ ಮರೆತೆ . . . ನಮ್ಮೆತ್ತು ಮುಂದೆ ಮೂರ್ಛೆಜ್ಜೆ ತೂಯೊಲ್ಲೊ (ಹಳ್ಳಿಶಾ. ೩೩). **ಬಾರುಕೋಲು** : ಬಂಡಿಕಾರಣ್ಣನ ಬಂಡಾಟ ನೋಡಿರೊ. ಬಾರುಕೋಲವನ ಬಲಗೈಲಿ (ಹಳ್ಳಿಪು. ೪೮); ಬಿರು ಗಾಳಿ ಮೈದುಂಬಿ, ಆಗಸದ ಮೂಲೆಮೂಲೆಯಲ್ಲಿ ಸಿಡಿಲು ಮಿಂಚಿನ

ಬಾರುಕೋಲು ಬೀಸಿ (ಶಂಪಜು. ೧೨-೦೯). **ಬಾರುಗೋಲು :** ಬಂಡಿಗಾರ ತನ್ನ ಬಾರುಗೋಲನ್ನು ನಡುಪಟ್ಟಿಯಲ್ಲಿ ಸಿಕ್ಕಿಸುತ್ತ . . . ನುಡಿದನು (ಘವರು. ೫೬೦). [ಬಾರ್$_2$+ಕೋಲು$_1$ (<ಕೋಲ್$_1$)]

**ಬಾರ್ಗಿರ್** ' ಬಾರ್ಗೀರ್ ' ನೋ.

**ಬಾರ್ಗೀರ್,** ಬಾರಗೀರ, ಬಾರಗೀರು, ಬಾರಾಗೀರ, ಬಾರ್ಗಿರ್ (ನಾ). ಕುದುರೆದಳದ ಸಿಪಾಯಿ ; ಅಶ್ವಾರೋಹಿಯೋಧ : 'ಬಾರ್ಗೀರ್‌ಕಛೇರಿ ' ಪರಾ. **ಬಾರಗೀರ :** ಹತ್ತು ಮಂದಿ ಸಿಲೇದಾರರೂ ನಾಲ್ವತ್ತು ಮಂದಿ ಬಾರಗೀರರೂ ಅವರನ್ನು ಹಿಂಬಾಲಿಸಿದ್ದರು (ಕವುಂ. ೯೭). **ಬಾರಗೀರು :** ಅರವತ್ತು ಸಾವಿರ ಕುದುರೆಗಳಿಗೆ ಜೀನು ಹಾಕಿ ಸವಾರರು ಏರಿಕೊಂಡು ಯುದ್ಧಕ್ಕೆ ಹೊರಡಲು ಈ ಕ್ಷಣ ಸಿದ್ಧವಾಗಿದ್ದಾರೆ. ಬಾರಗೀರು ಸೇರಿ ಇದಕ್ಕೆ ಎರಡರಷ್ಟು ಫೌಜು ಇದೆ (ಮುಸುರ. ೯೯). **ಬಾರಾಗೀರ :** ದರ್ಬಾರದಲ್ಲಿ ಬಾದಶಹನು ನಮ್ಮನ್ನು ಒಬ್ಬ ಬಾರಾಗೀರನಂತೆ ಭಾವಿಸಿ, 'ದೂರ ನಿಂತುಕೊಳ್ಳುವಂತೆ ಸಂಜ್ಞೆ ಮಾಡಿದನು (ಛತ್ರಶ. ೦೧೨). **ಬಾರ್ಗಿರ್ :** ಇಂಗ್ಲಿಷ್ ಕಂಪೆನಿಕ್ವಾವಲ್ರಿಯ ಪದ್ಧತಿಯಂತೆ ಏರ್ಪಟ್ಟ ೫೦೦ ಮಂದಿ ಸವಾರರು ಕ್ಲೋಸ್‌ಪೇಟೆಯಲ್ಲಿ ಮೊಕ್ಕಾಂ ಮಾಡಿದ್ದರು. ಇವರಿಗೆ ಬಾರ್ಗಿರ್ ಎಂಬ ಹೆಸರು ಕೊಟ್ಟಿತ್ತು (ಮಹಾಪೂ. II, ೯೯). [← ಪಾರ. ಬಾರ್ಗೀರ್ ; ಮರಾ. ಬಾರ್ಗೀರ್, ಬಾರಗೀರ್ ; ಹಿಂ. ಬಾರಗೀರ್]

**ಬಾರ್ಗೀರ್‌ಕಛೇರಿ** (ನಾ). ಹಳೆಯ ಮೈಸೂರು ಸರಕಾರದ ಅಠಾರಾ ಕಛೇರಿಗಳಲ್ಲಿ ಒಂದು ; ಅಶ್ವದಳದ ಕಚೇರಿ : ಕಛೇರಿಗಳು—೧. ದಿವಾನ್‌ಕಛೇರಿ. . ೪. ಬಾರ್ಗೀರ್‌ಕಛೇರಿ (ಮಹಾಪೂ. II, ೩೬). [ಬಾರ್ಗೀರ್+ಕಛೇರಿ(<ಕಚೇರಿ)]

**ಬಾರ್ಗೀರಿ,** ಬಾರಗಿರಿ (ನಾ). ಕುದುರೆದಳದ ಕೆಲಸ ; ಅಶ್ವಾರೋಹಿ ಸೈನಿಕರ ವೃತ್ತಿ : ಅಶ್ವಸೇನೆಯಲ್ಲಿ ಬಾರ್ಗೀರಿಯವರೂ ಸಿಲೇದಾರರೂ ಎಂದು ಎರಡು ಬಗೆಯವರಿದ್ದರು (ಛತ್ರಶ. ೦೩೨). **ಬಾರಗಿರಿ :** ಬಾಗಿಲ ಕಂದಾಚಾರದ ಚಾವಡಿ— ಇಲ್ಲಿ ಸವಾರರು, ಬಾರಿನವರು, ಬಾರಗಿರಿಯವರು . . . ಮುಂತಾದವರ ಲೆಕ್ಕವನ್ನು ಬರೆವಂತೆ ಗೊತ್ತುಮಾಡಿದರು (ಮಹಾಪೂ. I, ೦೯೭). [← ಮರಾ. ಬಾರಗಿರೀ ]

**ಬಾರ್ಗುತ್ತ,** ಬಾರಗುತ್ತು, ಬಾರುಗುತ್ತ, ಬಾರುಗುತ್ತು (ನಾ). ಒಂದು ಬಗೆಯ ಜೂಜು ; ಪಣವೊಡ್ಡಿ ಆಡುವ ಒಂದು ಬಗೆಯ ಆಟ : ನೆತ್ತಂ ಚದುರಂಗಂ ಬಾರ್ಗುತ್ತಂ ಕಡೆಯೊಂಟಿ ಗೊಟ್ಟಿ ಜೂದೆಂಬಿವ ನಾಡುತ್ತುಮಿರಲಾಗದು (ಸಮಶ. ೬-೯೮). **ಬಾರಗುತ್ತು :** ವಾರನಾರಿಯ ಗೊತ್ತು . . . ಬಾರಗುತ್ತು ನಿಯೋಗ ಜೂಜಿನ ಧನ ಸುಭಾಷಿತವು ಏಳುಮಾಳು ವಿವಾಹ ರತಿಯುಪಕಾರ ನೆಗಳಿದ ರಾಜಕಾರ್ಯವಿವಾರನಾಹದ ತಪ್ಪ ತಪ್ಪುಗಂ (ಜೀವಂಕ. ೪-೭೭); ಭೂಕಾಂತರಾತ್ಮಜರು . . . ತಂ ತಮಗೆ ಬಾರಗುತ್ತಾದಿ ಬಹು ಜೂಜುಗಳನಾಡುತಿಹರು (ಪಪಪೋ. ೨-೯೯). **ಬಾರುಗುತ್ತ :** ಲೆತ್ತ ಪಗಡೆ ರಾಯಬೊಗರಿ ಸೊಲ್ಲೆಹ ಬಾರುಗುತ್ತದೊಪ್ಪಿಯ ಸರಿಬೆಸದಿ ವಿತ್ತನಾಶವ ಮಾಡುವ ಜೂದುಗಾಜಿರ ಮೊತ್ತವಿರ್ದುದು ಮನೆಮನೆಗೆ (ಸೋಹಕ. ೨೦-೨೫). **ಬಾರುಗುತ್ತು :** ಬೇಯ ಜೂಜಿನ ಬಾರುಗುತ್ತಿದು ನಿಮ್ಮ ಚಿತ್ತಕೆ ಬಹಡೆ ಮಾಡುವೆವು (ಕುಮ್ಮಾಅ. ೪-೬೨); ಹೊಣೆ ಬಾರುಗುತ್ತು ಕಬ್ಬಿನ ಹಣೆದಂ ಪಿರಿದೊತ್ತಿಗೊಂಬ ಸೂಳೆಯ ಸಂಗಂ ಕ್ಷಣದೊಳ್ ಕೊಲ್ಲದೆ ಮನುಜನ ತೃಣದಿಂ ಕಡೆ ಮಾಡಿದಿಹವೆ (ಶೀತಿಸಾ. ೩೬೯). [?]

**ಬಾರ್ಚು,** ಬಾಚು, ಬಾಯ್ಚು, ಬಾಸ್ಚು (ಕ್ರಿ). ೧. ಎಳೆದುಕೊಳ್ಳು ; ಸೆಳೆ ; ಗೋರು : ಅಸುವಂ ತೀರ್ಚಿ ಕೆಲವರ ಮಹಾ ಡ್ರೂಂಕಾರದಿಂದಂ ತರ್ಚಿ ಕೆಲವರನೊಡನೆ ವಾಳಾಗ್ರದಿಂದಿರದೆ ಬಾರ್ಚಿ ಕೆಲಬರನಂತು ಭಂಗವಂ ಮಾಡುತ್ತಿತರುತಿರ್ದನು (ಕಅಪು. ೧೧-೦೯). ೨. ಉತ್ಕಟವಾದ ಬಯಕೆಯಿಂದ ತಬ್ಬಿ ಹಿಡಿ,— ಬಾಚಿ ಹಿಡಿ ; ಸೆಳೆದಪ್ಪಿಕೊಳ್ಳು : ಪೆರ್ಚುವೆತ್ತಪರಂಜಗಳಶವನಷ್ಟವಿಧಾರ್ಚನೆಯಿಂದ ಸತ್ಕರಿಸಿ ಬಾರ್ಚಿ ಕೈವಿಡಿದನು ಮೂಂದಳಿರಿಗೆ ಪಣ್ಣ ಸಾರ್ಚಿದಂತೊಪ್ಪಿತಾ ಭಾವ (ಧರ್ಮ. ೦೬-೬೫). ೩. ಒಟ್ಟುಗೂಡಿಸು ; ರಾಶಿಮಾಡು : " ಬಾರ್ಚು—ಪುಂಜೀಕರಣೇ (ರಾಶಿ ಮಾಡು)" (ಶಮಂದ). ೪. ತಲೆಗೂದಲನ್ನು ಹಣಿಗೆಯಿಂದ ಹಿಕ್ಕು,— ಸಿಕ್ಕು ಬಿಡಿಸಿ ಓರಣಗೊಳಿಸು : ಪಸರಿಸಿ ಪಂದಲೆಯಂ ಮೆಟ್ಟಿಸಿ ವೈರಿಯ ಪಲ್ಲ ಪಣಿಗೆಯಿಂ ಬಾರ್ಚಿ ಪೊದಟ್ಟಿದ್ದ ಸಗೆಯಿನವನ ಕರುಳ್ಗಳೆ ಪೊಸವಾಸಿಗ ಮಾಗೆ ಕೃಷ್ಣೆಯಂ ಮುಡಿಯಿಸಿದಂ (ಶಂಕಭಾ. ೦೨-೦೫೫); ಮದಿರಾರಸದಿಂದಂ ಬಾರ್ಚಿದರೋ ಪೇಟಿಸಿಸಿ ಪೊಳೆವ ತಲೆದುಡಿಗೆಯು ರನ್ನದಿನೊಸರ್ವ ರಾಗ ರುಚಿಯಂ ಪುದಿದೆಸೆದುದು ಕೇಶಪಾಶವಮಾ ಕಾಮಿನಿಯಾ (ಕಾದಂಅ. ೨೦). **ಬಾಚು :** ೧. ಸಪ್ತಕುಲಪರ್ವತಂಗಳನೊರ್ವ ಬಾಚಿಯಂಗ್ಯೊಳಾಂತು ಓರಂತೆ ತಿರಿಕಲ್ಲನಾಡುತ . . . ಗಹಗಹಿಸುವಂ ಬಾಲಲೀಲೆಯ ಕುಮಾರಂ (ವೀಕೈಪು. ೩-೨೦-೯೯) ; ನಿದ್ರಾಂಗನೆ ಕರುಣೆ ತೋರಿ ಆಕೆಯನ್ನು ಬಾಚಿ ತಬ್ಬಿದಳು (ಕಪಸೇ. ೨೦೦); ಜಗದ ಒಲವನೆಲ್ಲ ಬಾಚಿ ಜ್ವಲಿಸುವಳೀ ಜರ್ಬರಾ ! (ಅರಳೀ. ೦೬-೩). ೨. ನಯದೊಳ್ವನೇ ಬಳಸಿ ಕೈಚಾಚಿ ಬಾಚಿದಿರಿ ಬಳಿಗೆ (ಅಪುಶಂ. ೨೨-೦೯). ೪. ಕಲಿಭೀಮು ಮಾಡಿದ ರಹವನದನೇ ನೆಂಬೆನೈ ಕೂರಿಹ ಕಠಾರಿಯ ಹಣಿಗೆಯುಲಿ ಬಾಚಿದನು ಸಿರಿಮುಡಿಯ (ಕುಮ್ಮಾಅ ೨೨-೧೦). ೫. ಕಿತ್ತುಕೊಳ್ಳು ; ದೋಚು : ಭಟನು ನಾನಿರಲುಭಯರಾಯರ ಕಟಕದೊಳಗಿನ್ನಾವನೆಂದುಬ್ಬಟೆಯ ನುಡಿಗಳ ನುಡಿದು ಬಾಚಿದೆ ಕೌರವನ ಧನವ (ಕುಮ್ಮಾಅ. ೪-೦೯) ; ತುಡುಗುಣಿ ಗಳವದಿರು . . . ಹವಿಗೊಂಬಮರನಿಕರದ ಹೆಡಕ ಬಾರಿಸಿ ಬಾಚುತಿರ್ದರು ಬಾಯ ತುತ್ತುಗಳ (ಕಿರಾತ. ೦-೦೦-೮); ನಾನಾ ಪರಿಯಲರಮನೆಯ ರೊಕ್ಕವಂ ತೀದು ಹೊಳ್ಳಿಸಿ ಬಾಚಿ ದಕ್ಷಿಣೆಯ ನೆವದೊಳಗೆ (ಕುರಂಗ. ೩೭-೦೯). ೬. ಒಟ್ಟುಗೂಡು ; ಗುಂಪಾಗು : ಈ ಚತುರ್ದಶ ಭುವನಜೀವರ ಸ್ವೋಚಿತವ್ರತಪುಣ್ಯವೆಲ್ಲವು ಬಾಚಿ ಪುಟ್ಟಿತು ಕಾಮಧೇನುವಿನಂಗವಮಧ್ಯದಲಿ (ಸಂಅಕ. ೫-೨೬) ; ಕಡಲೆಡೆಯೊಳಿರ್ದ ವಿಗಿಲಾಣಿಮುತ್ತುಗಳ್ ಬಾಚಿ ಬರಲುರ್ವರೆಗೆ ಮಗುಳೊಗುವ ಬಗೆಯೊ . . . ಎನೆ ಬೆಳ್ಸರಿ ಶರತ್ಸಮಯದೊಳ್ ಮೆಚ್ಚಿದವು (ನಂದಿಶೂ. ೨೨-೫೭). **ಬಾಯ್ಚು :** ೪. ಮಾನಿನಿಯರುಂ ಪೊಸೆದು ತಲೆಗರೆದು . . . ಬಾಯ್ಚಿ ಬೈತಲೆಯ ತೆಗೆದು (ಪಪಪೋ. ೯-೬). **ಬಾಸ್ಚು :** ೨. ಪ್ರಿಯದಿಂ ಬಾಚಿ ಪಿಡಿದೈತಂದು ಕುಳಿತರು ತುಪ್ಪುಳಾಸನದಿ (ಕಂಅಮಾ. ೨೦೬-೫೬).
[ಬಾರ್$_1$ + — ಚು$_1$./ತುಳು. ಬರ್ಚು, ಬಾಚು]

**ಬಾರ್ಣಾಸಿ** 'ಬಾರಣಾಸಿ' ನೋ.

**ಬಾರ್ತೆ** 'ಬಾಟ್ಟೆ' ನೋ.

**ಬಾರ್ತೆಗಿಡು** 'ಬಾರ್ತೆಗೆಡು' ನೋ.

**ಬಾರ್ತೆಗೆಡು,** ಬಾತೆಗೆಡಂ, ಬಾರ್ತೆಗಿಡು (ಕ್ರಿ). ಅವಮಾನ ಹೊಂದು ; ಹೀಯಾಳಿಕೆಗೊಳಗಾಗು : ಕೊಳದೊಳಗೆ ಪೊಕ್ಕು ಮೈಯ್ಗರೆದೈ ಚೀ ಖಲ್ಕನೆನೆ ಬಾರ್ತೆಗೆಟ್ಟುಪಮೂಲ್ಯಯಶೋರತ್ನಮೆಂಬುದಂ ಮಾಡುವನೇ (ಗದಾಯು. ೬-೨೯) ; ದಾನವರುಪಟಳಕೆ ಬಣ್ಣಂಗುಂದಿ ಬಾರ್ತೆಗೆಟ್ಟು ದೂಚಾದ ಬರ್ದಿಲರ್ಗೆ ನಾರಾಯಣಂ . . . ಪಡಿನುಡಿದಂ (ರಾಘಾಕ್ಕ. ೦೯-೬). **ಬಾತೆಗೆಡು :** ಯಾಗದಗ್ರದೊಳ್ ಬಾತೆಗೆಟ್ಟಳನು ಪಟ್ಟರಿಸಿ (ಏಕೋಕ. ೯-೭೫). **ಬಾರ್ತೆಗಿಡು :** ನಡೆಗಿಡೆ ಕೀರ್ತಿ ಬಾರ್ತೆಗಿಡೆ ಲಕ್ಷ್ಮಿ ಮೊದಲ್ಗಿಡೆ ಮಾನಸಿಕ್ಕೆ ನೇರ್ಪಡುಗಿಡೆ ಸತ್ಯಶೌಚಗುಣಸಂಪದವೇಳಿದನಾದಂ (ಶಂರಾಪು. ೯-೯೫). [ಬಾರ್ತೆ (<ಬಾಟ್ಟೆ) + ಕೆಡು$_1$]

**ಬಾರ್ತೆಗೆಯ್** 'ಬಾಟ್ಟೆಗೆಯ್' ನೋ.

**ಬಾರ್ಫು** 'ಬಾಪ್ಪು' ನೋ.

**ಬಾರ್ಲಿ** (ನಾ). ಒಂದು ಬಗೆಯ ಧಾನ್ಯ : ಕ್ರಿ.ಪೂ. ೫೦೦೦ರಲ್ಲಿ ಈಜಿಪ್ಟಿನಲ್ಲಿ ಗೋಧಿಯನ್ನೂ ಬಾರ್ಲಿಯನ್ನೂ ಬೆಳೆಯುತ್ತಿದ್ದರು (ಶಿಲ್ಪನಾ. ೯೬೯) ; ಬಾರ್ಲಿ . . . ಇದನ್ನು ಜವೆಗೋದಿ ಎಂದು ಕರೆವುದುಂಟು (ಕವಿಕೋ. XII, ೩೯). [←ಇಂ. Barley]

**ಬಾರ್ಸಿಪಾಯಿ**, ಬಾರುಸಿಪಾಯಿ (ನಾ). ತುಪಾಕಿಯನ್ನು ಹಿಡಿದು ಕಾಲ್ನಡಿಗೆಯಿಂದ ಸಾಗುವ ಪದಾತಿ : "ಪದಾತಿಃ , ಪತ್ತಿಃ . . . ಪದಿಕಃ — ೭ ಕಾಲುನಡೆಯ ಭಟರ ಹೆಸರುಗಳು, ಬಾರ್‌ಸಿಪಾಯಿಗಳು" (ಸಿದ್ಧಾಂತಿ. ೨೩೬). **ಬಾರುಸಿಪಾಯಿ :** ದಳವಾಯಿ ನಂಜರಾಜಅರಸಿನವರ ಅಧಿಕಾರದಲ್ಲಿ ಬಾರುಸಿಪಾಯಿಗಳು ೧,೦೦೦ ಮಂದಿ ಮಾತ್ರ ಖಾಯಮ್ಮಾಗಿದ್ದರು (ಮಹಾವಂ. II, ೦೮). [ಬಾರ್$_3$ + ಸಿಪಾಯಿ]

**ಬಾರ್ಹತ** (ನಾ). ಹೆಗ್ಗುಳ್ಳದ ಕಾಯಿ ; ಬೃಹತೀಫಲ : "ಅಶ್ವತ್ಥಂ, ವೈಣವಂ, ಪ್ಲಾಕ್ಷಂ, ನೈಯಗ್ರೋಧಂ, ಐಂಗುದಂ, ಬಾರ್ಹತಂ . . . ಕ್ರಮವಾಗಿ ಅಶ್ವತ್ಥಾದಿ ವೃಕ್ಷಗಳ ಫಲಗಳಿಗೆ ಹೆಸರುಗಳು" (ಸಿದ್ಧಾಂತಿ. ೧೦೩). [ಸಂ.]

**ಬಾರ್ಹಸ್ಪತ್ಯ** (ಗು). ೧. ಬೃಹಸ್ಪತಿಗೆ ಸಂಬಂಧಿಸಿದ. (ನಾ). ೨. ಬೃಹಸ್ಪತಿಯಿಂದ ರಚಿತವಾದ ಶಾಸ್ತ್ರ. ೩. ಬೃಹಸ್ಪತಿಯ ಅನುಯಾಯಿ. ೪. ಕಾಲವನ್ನು ಅಳೆಯುವ ಒಂದು ಬಗೆಯ ಲೆಕ್ಕಾಚಾರ : ಆ ಸಂವತ್ಸರವೇ ಸೌರ ಚಾಂದ್ರ ಬಾರ್ಹಸ್ಪತ್ಯ ನಾಕ್ಷತ್ರ ಸಾವನಭೇದದಿಂದೈದು ತೆಱನಾಗಿರ್ಪುದು (ಖವೇಶ. ೩೨೧); ಪರಿ ಇಡಾವತ್ಸರನು . . . ಬಾರ್ಹಸ್ಪತ್ಯ ಸೌರಭ ಚಾಂದ್ರಮಾನುಯೆನಿಸಿ ಇರುತಿಹ (ಹಸಾರ. ೩-೯೦). ೫. ಅಗ್ನಿ. ೬. [ಜ್ಯೋತಿ] ಒಂದು ನಕ್ಷತ್ರದ ಹೆಸರು ; ಪುಷ್ಯನಕ್ಷತ್ರ. [ಸಂ.]

**ಬಾಲ**$_1$, ಬಾಳ$_4$ (ನಾ). ೧. ಪ್ರಾಣಿಗಳ ಹಿಂಭಾಗದಲ್ಲಿ ಗುಹ್ಯಾಂಗವನ್ನು ಮುಚ್ಚುವಂತಿರುವ ಹಾಗು ಅಲುಗಾಡಿಸಬಲ್ಲ ಉದ್ದವಾದ ಚಾವಟಿಯಂತಹ ಅಂಗ ; ಲಾಂಗೂಲ ; ಪುಚ್ಛ : "ವಾಳಧಿಯು ಲಾಂಗೂಲ ಮೆನೆ ಬಾಲವೆಸರಕ್ಕು" (ಮಂಗರಾ. ೬೧-೦೩) ; ತೆಗೆದೆಚ್ಚರ್ಜುನನಂಬು ತೀವೆ ತುದಿಯಿಂ ಬಾಲಂಬರಂ . . . ಕೊಂಡುದು (ಶಂಶಭಾ. ೬-೧೭) ; ನಾಯ ಬಾಲಮಂ ಕಾಸಿ ತಿದ್ದಿದೊಡಂ ಕೊಂಕು ಮಾಣದಹಗೆ (ಶಂಶತಂ. ೧೦೩-೨) ; ಹೊನ್ನ ಹುಳವ ಕಂಡು ನರಿ ತನ್ನ ಬಾಲವ ಹುಣ್ಣುಮಾಡಿಕೊಂಡರೆ ಹೋಲಬಹುದೆ (ಬಸವ. ೨೬೭). ೨. ಕೂದಲು. **ಬಾಳ**$_4$: ೧. ವಾಲ–ಬಾಳ (ಶಮದ. ೨೪೯ ಶ್ರಯೋ).

**ಬಾಲ ಅಲ್ಲಾಡಿಸು** = ೧. ಬಾಲವನ್ನು ಅಲುಗಾಡಿಸು : ಅವನನ್ನು ಕಂಡ ಕೂಡಲೇ ಆ ನಾಯಿಯು ಬಾಲ ಅಲ್ಲಾಡಿಸುತ್ತಾ ಅವನ ಬಳಿಗೆ ಬಂದು (ಮುಂಬಯಿ. ೪-೦೦೭). ೨. (ಆಲಂ) ಇನ್ನೊಬ್ಬ ವ್ಯಕ್ತಿಯು ಹೇಳಿದುದಕ್ಕೆಲ್ಲ ಒಪ್ಪಿಗೆ ನೀಡು : ಮುಂದಾಳುಗಳ ಎದುರಿನಲ್ಲಿ ಬಾಲ ಅಲ್ಲಾಡಿಸುತ್ತಿರುವುದೆ ಅವನ ಕಸುಬಿನ ಗುಟ್ಟು (ರೂಢಿ). **ಬಾಲಕೊಳ್ಳಿ** = (ಹನುಮಂತನನ್ನು ನೆನಪಿಸುವ) ಒಂದು ಬಿರುದು : ಪಟಹನುರುವ ಬಾಲಕೊಳ್ಳಿ ಚಬುಕು ಜೇಗಟೆ ಚೋಹ ಜಗಜಾಪು ಚೆಂಡು ನಿಟಿಲದ ನೇತ್ರದ ಬಲುಬಿರುದಿನ ಬಲುಭಟರಲ್ಲದಿಲ್ಲವವನಿಗೆ (ರಾಮಾಖಿ. ೦೪-೯೨). **ಬಾಲ ಬಡಿ** = ಅನುಗ್ರಹ ಸಂಪಾದನೆಗಾಗಿ ಅನುನಯದಿಂದ ವರ್ತಿಸು, –ಅನುಚರನಂತೆ ನಡೆ : ದೈವವಶದಿಂದ ಒಂದು ವೇಳೆ ಕಾಲೀಪದನು ತನ್ನ ವಶವರ್ತಿಯಾಗಿ ಬಾಲ ಬಡಿಯುತ್ತ ಬಂದಿದ್ದರೆ ಇಂದು ಶೈಲೇಂದ್ರನ ಲಜ್ಜೆಗೆ ಸೀಮೆಯೇ ಇರುತ್ತಿರಲಿಲ್ಲ (ಇಕೃಕ. ೩೬೮). **ಬಾಲಬಡುಕ** = (ಆಲಂ) ಅನುಚರ ; ಹಿಂಬಾಲಕ; ಅನುಯಾಯಿ : ಆಂಗ್ಲೇಯ ಬಾಲಬಡುಕರಂತಿದ್ದ ರಂಗನಾಥ, ನಾಗೇಂದ್ರ . . . ಮುಂತಾದವರು ಸ್ವರಾಜ್ಯ ಬಂದ ನಂತರ . . . ಶುದ್ಧ ಖಾದಿಧಾರಿಗಳಾದರು (ಶಂಜಶಂ. ೯೫). **ಬಾಲ ಬಿಚ್ಚು** = (ಆಲಂ) ಚೇಷ್ಟೆ ಮಾಡು; ಕಿತಾಪತಿ ಮಾಡು : ಇವ ಬಾಲಾ ಬಿಚ್ಚಿದರ ಸಾಕು, ಕೊಯ್ದು ಒಗೀತೀವಿ (ಮಣ್ಣುಹ. ೬೪). **ಬಾಲ ಮಡಿಚು** = (ಆಲು) ಸೋತುಹೋಗು ; ಸುಮ್ಮನಾಗು : ನಾವು ಹೆಂಗಸರೇ ಇದ್ದುದಾದರೂ ಗೋವಿಂದಯ್ಯ ಬಾಲ ಮಡಿಚಿ ಹೋಗಲಿಲ್ಲವೇ ? (ತ್ಯಾಗಮ. ೦೬೦). **ಬಾಲಸುಡುಕ** = ಬಾಲವನ್ನು ಸುಡಿಸಿಕೊಂಡವನು ; ಹನುಮಂತ : ಹೇಳಲೇನದನವನ ವಿಧಿಯನು ಕೇಳತಿಲ್ಲವಲಾ ಕಪೀಂದ್ರನ ಪಾಳೆಯವ ಹೊಗಗೊಡದೆ ಕಪಿಪ್ರೋತಂಗಳು ಬ್ಬಿಱಿದು ಬಾಲಸುಡುಕನ ತವರಲಾ ಕಪಿಯೂಳಿಗವು ನಮಗಾಯ್ತು (ತೊರವೆ. ೬-೧೦-೩೯). **ಬಾಲ ಹಿಡಿ** = ಹಿಂಬಾಲಿಸು ; ಅನುಸರಿಸು : ಸುಮ್ಮನೆ ಕಣ್ಣು ಮುಚ್ಚಿಕೊಂಡು ದುರ್ಯೋಧನನ ಬಾಲ ಹಿಡಿದು ಹೋಗುತ್ತ ಪಾಂಡವರನ್ನು ಸದಾ ದ್ವೇಷಿಸುತ್ತಿರುವ ಈ ಕರ್ಣನೊಬ್ಬನೆ ನನ್ನ ಎದೆಗಿಚ್ಚಾಗಿದ್ದಾನೆ (ಪಶಭಾ. ೨೬೧) ; ಗೆದ್ದ ಎತ್ತಿನ ಬಾಲ ಹಿಡಿ (ಗಾದೆ). ☞ ಈ ಉಲ್ಲೇಖದಲ್ಲಿ ಸೂಚಿಸಿರುವ ಎರಡು ಅರ್ಥಗಳೂ ಸಂಸ್ಕೃತಕೋಶಗಳಲ್ಲಿ 'ಬಾಲ' ಉಲ್ಲೇಖಕ್ಕೆ ಇರುವುದಾದರೂ ಇದು 'ವಾಲ' ಎಂಬುದರ ತದ್ಭವವೆಂದು ಪರಿಗಣಿಸಿದೆ.

[<ಸಂ. ವಾಲ]

**ಬಾಲ**$_2$, ಬಾಳ$_5$ (ಗು). ೧. ಬಲಿಯದ ; ಎಳಸಾದ : ಬಾಲ ಮೃಣಾಳಮಂ ಪಿಡಿದು ಕೀಲ್ವವೊಲಶ್ರಮದಿಂ ಮನೋಭವವ್ಯಾಲಗಜೇಂದ್ರದಂತಯುಗಳಂಗಳನೇಕೆಯೊ ಕಿಲ್ತಂ (ಶಂರಾಮಾ. ೬-೩೦). ೨. ಚಿಕ್ಕ ವಯಸ್ಸಿನ; ಎಳೆಯ: ಬಾಲಜಾಯಿಲನಿಂದ ವೇದವನೋಳಿಯಿಂದೋದಿಸನೆ ಹಾವಿನ ಹಾಳ ಕಲಿದೇವಂ (ಬಸಕೃ. ೫೫-೫೩) ; ಬಾರಯ್ಯ ನಮ್ಮ ಮನೆಗೆ ಬಾಲಗೋಪಾಲ (ಪುರಂದ. ೩-೦೦೫ ಅನುಶಲ್ಲಖಿ). ೩. ಆದೇ ಉದಯವಾಗಿ (ಸೂರ್ಯ ಅಥವಾ ಚಂದ್ರನಂತೆ) ಬೆಳೆಯುತ್ತಿರುವ ; ಏರುತ್ತಿರುವ. ೪. ಬಾಲಿಶವಾದ ; ಹುಡುಗಾಟಿಕೆಯ ; ಮಕ್ಕಳಾಟಿಕೆಯ. ೫. ದಡ್ಡತನದ ; ತಿಳಿಗೇಡಿಯಾದ. (ನಾ). ೬. ಬಲಿಯದುದು ; ಎಳಸಾದುದು : ಮೂಲಕಂ ಬಾಲಂ ದೋಷಹರಮಬಾಲಂ ದೋಷಕರಂ (ಶಾಂತಿಪು. ೮-೦೨೯ ವ). ೭. ಮಗು ; ಶಿಶು : ಆತನುಂ ಬಾಲನಾಕಾಂಕ್ಷೆ ಗಚ್ಚರಿವಡುತ ಮೌನವಿರೆ (ಶ್ರೀರಾಮಾ. ೨೦-೩೩೮). ೮. ಹುಡುಗ ; ಬಾಲಕ: "ಬಾಲಃ, ಬಾಲಕಃ–ಈ ೨ ಹುಡುಗಂ" (ಕಾಶಕ್ಕ. ೦೪೭); ನಾನುಂಡು ಇದ್ದದ್ದು ಬಾಲರಿಗುಣಲಿಕ್ಕೆ ಮೇಲಿಟ್ಟು ಮುಚ್ಚಿಡೋ ಎನ್ನ ಗುಡ (ಪುರಂದ. ೩-೧೬೭-೬). ೯. ಪ್ರಾಣಿಗಳ ಮರಿ ; ಪೋತ. ೧೦. ದಡ್ಡ ; ಮೂರ್ಖ. **ಬಾಳ**$_5$ : ೧. ಮುತ್ತಿನ ಸೂಸಕಂಗಳಂ ಬಾಳಮೃಣಾಳಮೆಂದೆ ಕರ್ದು ಕಲ್ಪಗೆಗುಂ ಕಳಹಂಸಪೋತಕಂ (ಮಲ್ಲಿಪು. ೨-೭೭). ೭. "ಬಾಳಃ , ಪಾಕಃ, ಅರ್ಭಕಃ . . . ಡಿಂಬಃ — ಈ ೯ ಮಗವು" (ಹಲಾಯು. ೮೩-೩೪೮) ; ಬಾಳನ ನಾಸಾಪುಟದೊಳ್ ಮೋಳಿಸೆ ದುಗ್ಧೋದಬಿಂದುಸಂದೋಹಂಗಳ್ ಲಿಳಿಯಿನಾಂತುಸಿದೊಡೆ ಕಡುಗಾಳಿಯ ತಱಗೆಲೆಗಳಂತೆ ಪಾಱಿದರಮರರ್ (ಆದಿಪು. ೪-೬೫). ೮. ಬಾಳಂ ನಿಜಾನುಜಂ ರಣಲೋಳಂ ಸಲೆ ದ್ರುಪದನೆನ್ನದರ್ಜುನನು ತತ್ಕಾಳಸುತನಟ್ಟಿ ಪೋಗಿ ವಿಶಾಳಬಳಂ ಕಾದಿ ಕಟ್ಟಿತಂದೊಪ್ಪಿಸಿದಂ (ನೇಮಿಪು. ೯-೩೦). ೧೦. "ವೈಧೇಯಃ, ಬಾಲಿಶಃ, ಬಾಲಃ, ಜಡಃ . . . ಮಾತೃಶಾಸಿತಃ — ಈ ೧೧ ಅಱಿಯದವಂ" (ಹಲಾಯು. ೫೬-೦೮೦). [ಸಂ.]

**ಬಾಲಂಗಚ್ಚೆ** 'ಬಾಲಗಚ್ಚೆ' ನೋ.

**ಬಾಲಂಗೋಚಿ**, ಬಾಲಂಗೋಸಿ (ನಾ). ೧. ಗಾಳಿಪಟದ ತಳಕ್ಕೆ ಕಟ್ಟುವ ಉದ್ದವಾದ ಪಟ್ಟಿ ; ಬಾಲಂಗಚ್ಚೆ : ಗಾಳಿಪಟ ಮೇಲೇರಲು ಬಾಲಂಗೋಚಿ ಅಗತ್ಯ (ರೂಢಿ). ೨. ಉದ್ದವಾದ ಪಟ್ಟಿ ; ದೀರ್ಘವಾದ

ಯಾದಿ : ಉದಾಹರಣೆಗಳ ಬಾಲಂಗೋಚಿ ಬೆಳೆಯುತ್ತಲೇ ಹೋಗುತ್ತಿತ್ತು (ಶಾಹೇಬ್. ೪೮೯). **ಬಾಲಂಗೋಸಿ :** ೧. ಬಣ್ಣದ ಕಾಗದ ಬೇಕು . . . ಬಿದಿರಿನ ಕಡ್ಡಿಗಳು. ಒಂದು ಸಣ್ಣ ಬಾಲಂಗೋಸಿ ಮತ್ತು ಅಂಟು ಬೇಕು (ಕಪಶು. ೨-೨೦). [ಬಾಲ$_1$ + ಗೋಚಿ]

**ಬಾಲಂಗೋಸಿ** 'ಬಾಲಂಗೋಚಿ' ನೋ.

**ಬಾಲಂತಿತನ** 'ಬಾಣಂತಿತನ' ನೋ.

**ಬಾಲಕ,** ಬಾಳಕ$_3$ (ಗು). ೧. ಎಳೆಯ ವಯಸ್ಸಿನ ; ಶೈಶವಾವಸ್ಥೆಯ: ಚಿಕ್ಕಂದಿನ : 'ಬಾಲಕತನ' ಪರಾ. (ನಾ). ೨. ಮಗು ; ಶಿಶು : "ಶಿಶು ಪೋತ ಬಾಲಕ ಶಾಬ ಡಿಂಬವರ್ಭಕ ಪಾಕವೆನೆ ಪಡೆದ ಕೂಸೆನಿಕ್ಕು" (ಮಂಗರಾ. ೪೧-೮) ; ಬಾಲಕನವ್ಯುತವೆ ಕೆಯ್ಯುಂ ಕಾಲುಂ ಬಳೆವಂತೆ ಮಧುರಗಂಭೀರಂ . . . ಎನಿಸಿದಂ ಕಿಱಿಯಂದುಂ (ಶಾಂತಿಪು. ೬-೧೧೬) ; ಬಾಲಕರಿಲ್ಲದ ಬಾಲಿದ್ಯಾತರ ಜನ್ಮ ಬಾಡೀಗಿ ಎತ್ತು ದುಡಿದಂಗ (ಗರತಿ. ೧೦೬). ೩. ಹುಡುಗ ; ಕುಮಾರ : ಕಾಳೆಗದೊಳಂಗೈಸಲಮ್ಮದೆ ಬಾಲಕನ ನೂಕಿದಿರಲಾ ನಿಮ್ಮಾಳುತನವನು ತೋಱಿದಿರಲಾ (ಕುಮ್ಮಾದ್ರೋ. ೬-೨೪). ೪. ಮೂರ್ಖ; ತಿಳಿಗೇಡಿ. **ಬಾಳಕ$_3$ :** ೨. ಅಮೇಧ್ಯದೊಳ್ ಕ್ರೀಡಿಸುವ ಬಾಳಕಂಬೊಲ್ ಕಾಲಮಂ ಬಱಿದೆ ಕಳೆದೆಂ (ಪಂಪಭಾ. ೨೬-೨೪); ಪುಂಡರೀಕನೆಂಬ ಬಾಳಕನಂ ಸಂತಾನಪಾಲನಾರ್ಥಂ ನಿಱಿಸಿ (ಆದಿಪು. ೪-೬೦ ವ). [ಸಂ.]

**ಬಾಲಕತನ** (ನಾ). ಚಿಕ್ಕಂದು; ಬಾಲ್ಯ : ಬಾಲಕತನದಲ್ಲಿ . . . ಕಾಳಿಯ ಮಡುವ ಕಲಕಿದ ಕಾರಣ ಕಾಲು ನೊಂದಿತೆ ನಿನಗೆ ರಂಗಯ್ಯ (ಪುರಂದ. ೩-೧೧-೩). [ಬಾಲಕ + —ತನ]

**ಬಾಲಕಾಲ,** ಬಾಳಕಾಲ (ನಾ). ಚಿಕ್ಕಂದು; ಬಾಲ್ಯಾವಸ್ಥೆ : ಮೃಗ ಶೃಂಗನೆಂಬೋ ತಾಪಸಕುಮಾರನಾತಂ ಬಾಲಕಾಲಪರಿಗೃಹೀತತಾಪಸಾ ಚರಣಂ (ಶಾಂತಿಪು. ೬-೯೩ ವ). **ಬಾಳಕಾಲ :** ಮದದಂತಿದಂತದೊಳೆ ಕಟ್ಟಿದ ತೊಟ್ಟಿಲಂ ನಮದಿಂದಮೇಱಿ[ಸೆ] ಬಾಳ[ಪಾಠಾಂ. ಟ್ವ]ಕಾಲ ದೊಳ್ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱಿದಂ (ಶಂಪಭಾ. ೧-೯೩) ; ನಡೆದುದು ಬಾಳ[ಪಾಠಾಂ. ಟ್ವ]ಕಾಲದೊಳೆ ತೊಟ್ಟಿನಗಂಕದ ಶೌಚವೀಗಳೊಗಡಿಪುದೆ (ಶಂಪಭಾ. ೧೦-೯೬). [ಸಂ.]

**ಬಾಲಕಿ,** ಬಾಳಕಿ (ನಾ). ೧. ಹುಡುಗಿ; ಕನ್ನೆ : ಕೈಯ ಬಟ್ಟಲ ಹಾಲಿಗಂ ತಾಂ ಕೈಯ ನೀಡುತ್ತೀಂಟೆ ಬಾಲಕಿ ಅಯ್ಯನಂ ಬಿಟ್ಟೊದಱಲು (ಬಸವು. ೦೪-೩೨). ೨. ತರುಣಿ ; ಯುವತಿ : ಗರ್ಭಂ ಬಳೆಯದ ಬಾಲಕಿಯ ಬಸಿಱನರ್ಥಕಮಲ್ತೇ (ಮಲ್ಲಿಪು. ೩-೧೧೦); ಬಾಲಕಿಯಲರ್ಗಣ್ಗಳ್ ಸಂಲಾಲಿತ ಲಾವಣ್ಯರಸಮಯಾಬ್ಜಾಕರದೊಳ್ ಬಾಳೆಯ ಮೀಂಗಳ ತೆಱದಿಂ ಲೀಲೆ ಯೊಳಂ ಪೊಳೆದು ತಳೆದವತಿಚಪಳತೆಯಂ (ಪಾರ್ಶ್ವ. ೨-೩೦); ನಿಶಾಚರಿಯ ರಲ್ಲವೇ ನರಕಾಸುರನ ಮನೆಯ ಬಾಲಕಿಯರು (ಜೈಮಿಭಾ. ೨-೩೯). **ಬಾಳಕಿ :** ೨. ಬಾಳಕಿಗಳಿನಿಚೆಯನಾಳಂ ಬಾಳಕಿಗಾ ರೋಮರಾಜಿ ರಂಜಿಸುತಿರ್ಕುಂ ನೀಳದ ಕಾಂಚೀಮಧ್ಯದ ನೀಳದ ನೆಗೆದುನ್ಮುಖ ಪ್ರಭಾರೇಖೆಯ ವೋಲ್ (ಜಗಪ. ೦೦-೨೯); ಉಡೆ ಬಾಳಕಿಯರ ಪಱಿಕ್ಕೈ ದುಡುಕಿಂದಂ ಪಱಿದ ಮುಂಜ . . . ಬದ್ದೆಯರುಡಿಸಿದೊಡುಡಕಲ್ತ ಕೊವರನಭಿನವಮದನಂ (ಅನಂಪು. ೧-೩೬). [ಬಾಲಕ + —ಇ]

**ಬಾಲಕೇಲಿ,** ಬಾಲಕೇಳಿ, ಬಾಳಕೇಳಿ (ನಾ). ೧. ಮಗುವಿನ ಆಟ; ಬಾಲ ಲೀಲೆ ; ಮಕ್ಕಳಾಟ : (ಶ). **ಬಾಲಕೇಳಿ :** ೧. ದಾರಕರೂಪದೆ ಜಿನವೃಂದಾರಕನೊಡನೊಡನೆ ಬಾಲಕೇಳಿಗಳಂ ವೃಂದಾರಕರೆ ಮಾಡಿ ದುರಿತ ವಿದಾರಕನ ಮನಕ್ಕೆ ಮಾಡಿದರ್ ಸಂತಸಮಂ (ಆದಿಪು. ೫-೬೨); ಎನಿತೊಳವು ಬಾಲಕೇಳಿಗಳನಿತಱೊಳಂ ಮುದ್ದುವಡೆದು ಮನೆಯಂಗಣದೊಳ್ ಮನವೊಸೆದಾಡುವ ಮಕ್ಕಳ ವಿನೋದಮಂ ಕಾಣ್ಬ ದಿವಸಮೆಂದಾದ ಪುದೋ (ಸುಕುಮಾ. ೯-೧೧೦). ೨. ಮೂರ್ಖತನದ ನಡವಳಿಕೆ : ನೆಱೆ ಕೇಳಿದೈ ಕೌರವನ ಕದನದ ಬಾಲಕೇಳಿಗಳ (ಕುಮ್ಮಾದ್ರೋ. ೦-೦). **ಬಾಳಕೇಳಿ :** ೧. ಚೆಲ್ವಿಡಿದಿರ್ದುದು ಬಾಳಕೇಳಿ ಧರ್ಮಾತ್ಮಜನಾ (ಶಂಪಭಾ. ೨-೪); ಸುತ ನಿನ್ನ ಬಾಳಕೇಳಿಯನತಿಮುದದಿಂ ನೋಡಿ ಹರ್ಷಮಂ ತಳೆಯಲ್ ಸಂಸ್ತುತ ನೋಂತೆನಿಲ್ಲೆನಲ್ (ನೇಮಿಪು. ೬-೧೯೦). [ಸಂ.]

**ಬಾಲಕೇಳಿ** 'ಬಾಲಕೇಲಿ' ನೋ.

**ಬಾಲಕ್ಕಿ** (ನಾ). ಉದ್ದವಾದ ಪುಚ್ಛವಿರುವ ಒಂದು ಬಗೆಯ ಪಕ್ಷಿ : ಹಾರುತ್ತಿರುವ ಬಾಲಕ್ಕಿಗಳಿಂದ ಬಾನೆಲ್ಲ ಸುಗ್ಗಿಯ ಸ್ವರ್ಗದಂತೆ ಕಾಣಿಸುತ್ತಿದೆ (೧೧ಬಾ. ೩). [ಬಾಲ$_1$ + <ಪಕ್ಕಿ]

**ಬಾಲಕ್ರೀಡೆ,** ಬಾಳಕ್ರೀಡೆ (ನಾ).= ಬಾಲಕೇಲಿ ೧ : ಬಾಲಕ್ರೀಡೆಯೆ ಪೂತನಾ ಬಕಮುಖವ್ಯಾಪಾದನಂ (ವಸ್ತವಂ. ೩-೦೦). **ಬಾಳಕ್ರೀಡೆ :** ಬಾಳಕನಾಗಿ ಬಱಿಕ್ಕಾ ಬಾಳಕ್ರೀಡೆಗಳನೆಯ್ದೆ ತೋಱಿ ಸಮಂತಾ ಲೀಳಾ ನಿಧಿ ನಿಜರೂಪಂ ಬಾಳಂ ತಳೆದಿರಲ್ (ನೇಮಿಪು. ೬-೧೯೦). [ಸಂ. ಬಾಲಕ್ರೀಡಾ]

**ಬಾಲಗಚ್ಚೆ,** ಬಾಲಂಗಚ್ಚೆ (ನಾ). ೧. ಹಿಂಭಾಗದಲ್ಲಿಯ ಕಚ್ಚೆ ; ಹಿಂಗಚ್ಚೆ : ಕೆಂದಳಿರ್ಗೊಂಚಲ ಚೆಲ್ಲಣಂ ಪ್ರವಾಳಲತೆಯ ಬಾಲಗಚ್ಚೆ ಜಲ ಕಿಕ್ಕಿದ ಚಂಪಕಮಾಲೆ ಶೋಭೆಯಂ ಬಳೆಯಿಸೆ ನಿಂದ ಸಚ್ಚಣಿಯ ಭಾವಮನಾ ವನೊಱಲ್ದು ನೋಡಿದಂ (ರಂಜಾಪ. ೧೧-೩೩) : ಬದ್ದಿಗೆಯ ತೊಂಗಲ್ದೆಗೆದು ಬಿಗಿದೆಬಿಲ್ವ ಬಾಲಗಚ್ಚೆಯ ವಿಳಸದ ಸೆಱಗಂ ಸೆಳೆದಳ್ಳಿಱಿಯೆಯುಂ (ಅನಂಪು. ೧೧-೮೫ ವ) ; ಸಕಲರತ್ನರಚನೆಯಿಂ ಸಲ್ಲಲಿತವಾದ ಚೆಲ್ಲಣದ ಚಿತ್ರಿಸಿದ ಪತಾಕಾಂಚಲದಂತೆ ಪಲ್ಲವದ ಶೋಭೆಯಂ ಪಳಚ್ಚನೆ ಮೆಱೆವ ಬಾಲಗಚ್ಚೆಯ ಬೆಳ್ದಿಂಗಳಂ ಬೀದಿವರಿಯಿಸುವ ಪೊಸಮುತ್ತುಗಳ ಮೊತ್ತದಿಂ . . . ಮಂಡಿತಮಾದ ಮಂಡನದ ತಂಡದಿಂ (ಶಾಂತೀಶ್ವ. ೬-೯೩ ವ). **ಬಾಲಂಗಚ್ಚೆ :** ೨. ಗಾಳಿಪಟದ ತಳಕ್ಕೆ ಅಳವಡಿಸಿರುವ ಬಾಲದಂತಹ ಬಟ್ಟೆಯ ಅಥವಾ ಹುರಿಯ ತೆಳುವಾದ ಪಟ್ಟಿ : (ಶ) .೩. (ಆಲಂ) ಯಾವಾಗಲೂ ಹಿಂಬಾಲಿಸಿಕೊಂಡು ಬರುವವನು ; ಅನುಯಾಯಿ; ಹಿಂಬಾಲಕ : ಕೆಲವು ರಾಜಕಾರಣಪಟುಗಳಿಗೆ ಅನೇಕ ಬಾಲಂಗಚ್ಚೆ ಗಳಿರುತ್ತಾರೆ (ರೂಢಿ). [ಬಾಲ$_1$ + ಕಚ್ಚೆ]

**ಬಾಲಗೀಸು** (ಕ್ರಿ). ೧. (ಗಾಡಿಗೆ ಹೂಡಿದ ಎತ್ತನ್ನು ವೇಗಗೊಳಿಸಲು) ಬಾಲ ಹಿಡಿದು ಎಳೆದು ತಿರಿಚು ; ಬಾಲವನ್ನು ಮುರಿ. ೨. (ಆಲಂ) ಪ್ರೇರಿಸು ; ಎತ್ತಿ ಕಟ್ಟು ; ಪ್ರಚೋದಿಸು : ಈ ಗಾಣಿಗನ ಎಲುವು ಇಡದ ಹಾಗೆ ದಬಾಯಿಸು – ಎಂದು ಬಚ್ಚನ ಬಾಲಗೀಸಿ ಬಿಟ್ಟದ್ದೇನೆ ! (ಹಹಸ. ೬೬). [ ಬಾಲ$_1$ + ಕೀಸು$_1$ ]

**ಬಾಲಗುರಿ** (ನಾ). (ಬಾಲವು ಉದ್ದವಾಗಿರುವ) ಒಂದು ಬಗೆಯ ಕುರಿ : ದೊರೆ ಸೀಮೆಹಸು, ಬಾಲಗುರಿ, ಸೀಮೆಕುದುರೆ ಮುಂತಾದುವುಗಳನ್ನು ಸಾಕಿದ್ದ . . . ಬಾಲಗುರಿರೊಪ್ಪವೂ ಇತ್ತು (ನನ್ನೂರು. ೫). [ ಬಾಲ$_1$ + ಕುರಿ$_3$(<ಕುಱಿ$_3$) ]

**ಬಾಲಗ್ರಹ** (ನಾ). ಎಳೆಯ ವಯಸ್ಸಿನ ಮಕ್ಕಳಿಗೆ ಬರುವ ಒಂದು ಬಗೆಯ ಭೀಕರವಾದ ಅಪಸ್ಮಾರರೋಗ ; ᑭ ಮಕ್ಕಳಿಗೆ ಈ ಬಗೆಯ ಪೀಡೆಯನ್ನುಂಟುಮಾಡುವ ಒಂಬತ್ತು ಬಗೆಯ ಗ್ರಹ ಗಳುಂಟೆಂದು ಭಾವಿಸಲಾಗಿದೆ. "ಸ್ಕಂದ, ಸ್ಕಂದಾಪಸ್ಮಾರ, ಶಕುನೀ ಗ್ರಹ, ಪೂತನಾಗ್ರಹ, ಅಂಧಪೂತನಾಗ್ರಹ, ಶೀತಪೂತನಾ, ರೇವತೀ, ಮುಖಮಂಡಿಕಾಗ್ರಹ, ನೈಗಮಗ್ರಹ (ಸಂಶುಶ್ರುತ. ಸಂ. ೧೬೭)." (ಶ್ರೀವತ್ಸ. ೨೯೦). [ಸಂ.]

**ಬಾಲಗ್ರಾಸ** (ನಾ). ಎಳೆಯ ಹುಲ್ಲು,—ಮೇವು : ಘರ್ಮಕಾಲಂ ಸಮ ನಿಸಿರೆಯುಮೆತ್ತುಲುಂ ಬಾಲಗ್ರಾಸಾಳಿಗಳೀ ವರ್ಷತರ್ಷವೊಲ್ದೆಳ್ವರ್ಪ

ಪೋಲೆಡೆಕಿರಿದಿರ್ದತ್ತು ಪಾನೀಯಪೂರಂ (ಶಿಷ್ಯೂ. ೫-೨-೩೩).
[℗ ಇದು 'ಬಾಲಘಾಸ' ಎಂದಿರಬಹುದೇ ?]

**ಬಾಲಘಾತಿನಿ** (ನಾ). ಮಕ್ಕಳನ್ನು ಕೊಲ್ಲುವವಳು : ಈತನೆ ಗಡ ವಿಷಸ್ತನ್ಯೆಯಾದ ಬಾಲಘಾತಿನಿಯಾದ ಪೂತನಿಯೆಂಬ ರಕ್ಕಸಿಯನೆಡೆಗೆಡಹಿ . . . ನಿಂದಿರ್ಪ ಬೆಡಂಗನು ನೋಡಿರಯ್ಯ (ಕಗಪ. ೬೭).
[ಸಂ. ಬಾಲಘಾತಿನೀ]

**ಬಾಲಚಂದ್ರ**, ಬಾಳಚಂದ್ರ (ನಾ). ೧. ಶುಕ್ಲಪಕ್ಷದ ಪ್ರಾರಂಭದಲ್ಲಿ ಕಾಣುವ ಚಂದ್ರ ; ಬಿದಿಗೆಯ ಚಂದ್ರ : ಬಾಲಚಂದ್ರನ ಸೂಡದಂದು . . . ನಿಮ್ಮ ನೀವಱಿಯದೆ ಅನಂತಕಾಲವಿರ್ದಿರಂದು (ಅಖಂಡೇ. ೨-೩). **ಬಾಳಚಂದ್ರ :** ೨. (ಜೈನಮುನಿಯಾದ) ಒಬ್ಬ ಕನ್ನಡ ಕವಿಯ ಹೆಸರು : ಅಧ್ಯಾತ್ಮಕಳಾಧರನುಜ್ವಳಕೀರ್ತಿ ಬಾಳಚುದ್ರ ಮುನೀಂದ್ರಂ (ಎಕ. II. ೨೪೯-೬೯ ; ಶ. 1180) ; ಧರಣೀಚಕ್ರದೊಳತಿ ಚಿತ್ರಂ ಕವಿಚಕ್ರಪ್ರಿಯನೆನಿಸಿ ಬಾಳಚಂದ್ರಂ ನೆಗಟ್ದಂ (ಶಾರ್ಕ್ಯೂ. ೦-೬೮).
[ಸಂ.]

**ಬಾಲಚಮೂ** (ನಾ). 'ಸ್ಕೌಟ್' ಎಂಬ ದಳ; ಸ್ಕೌಟುದಳ ; ℗ ಶಾಲೆಗಳಲ್ಲಿ ಮಕ್ಕಳಿಗೆ ಪಠ್ಯೇತರವಿಷಯಗಳಲ್ಲಿ ತಿಳಿವಳಿಕೆ ಕೊಡಲು ಪಾಶ್ಚಾತ್ಯದೇಶದಲ್ಲಿ 'ಬಾಡನ್‌ಪಾವೆಲ್' ಎಂಬ ಪ್ರಸಿದ್ಧ ಪುರುಷನಿಂದ ೧೯೦೮ರಲ್ಲಿ ಇದು ಸ್ಥಾಪಿತವಾಯಿತು : ಮಕ್ಕಳ ಜೀವನದಲ್ಲಿ ಪರಿಣಾಮಕಾರಿಯಾಗುವಂತೆ ಶಿಕ್ಷಣವೀಯುವ ಸಂಘಸಂಸ್ಥೆಗಳಲ್ಲಿ . . . ಬಾಲಚಮೂ, ರೆಡ್‌ಕ್ರಾಸ್, ರೋಟರಿ ಸಂಘ, ಯುನೆಸ್ಕೋ ಮುಂತಾದುವು ಪ್ರಧಾನವಾದುವು (ಶಿಕ್ಷನ. ೫೩). [ಸಂ.]

**ಬಾಲಚಾರ** (ನಾ). ಸ್ಕೌಟುದಳಕ್ಕೆ ಸೇರಿದ ಹುಡುಗ : ಅಗ್ರಚಾರ (ಸ್ಕೌಟ್) ಬಾಲಚಾರನಿಗಿಂತ (ಬಾಯ್‌ಸ್ಕೌಟ್) ಭಿನ್ನ (ಕವಕೋ. I. ೦೬೭); ನಾಣಿ ನಮ್ಮ ಊರಿಗೆ ಒಬ್ಬ ಬಾಲಚಾರ (ನಮ್ಮೂರ. ೩೯). [ಸಂ.]

**ಬಾಲಚಿಕ್ಕೆ** 'ಬಾಲಚುಕ್ಕೆ' ನೋ.

**ಬಾಲಚುಕ್ಕಿ** 'ಬಾಲಚುಕ್ಕೆ' ನೋ.

**ಬಾಲಚುಕ್ಕೆ**, ಬಾಲಚಿಕ್ಕೆ, ಬಾಲಚುಕ್ಕಿ (ನಾ). (ಸೌರವ್ಯೂಹದಲ್ಲಿದ್ದು ಆಗೊಮ್ಮೆ ಈಗೊಮ್ಮೆ ಅಡ್ಡವಾಗಿ ಬಂದು ಕಾಣಿಸಿಕೊಳ್ಳುವ) ಬಾಲದಂತೆ ಗುಂಜುಗುಂಜಾದ, ಪ್ರಕಾಶವಾದ ಪಟ್ಟೆಗಳನ್ನುಳ್ಳ ಉಲ್ಕೆ ; ಧೂಮಕೇತು; ℗ ಇದು ಉತ್ಪಾತಸೂಚಕವೆಂಬ ನಂಬಿಕೆಯಿದೆ : ಸೂರ್ಯನೂ, ಸೂರ್ಯನ ಸುತ್ತಲೂ ತಿರುಗುವ ಗ್ರಹಗಳೂ. ಬಾಲಚುಕ್ಕೆಗಳೂ ಇವುಗಳಿಗೆ . . . ಎಂದು ಹೆಸರು (ಭೂಗೋಳ ೯). **ಬಾಲಚಿಕ್ಕೆ :** ಈಗ ನಾವು ನೋಡುವ ಬಾಲಚಿಕ್ಕೆಗಳ ಸ್ಥಿತಿಯಂತೆ ಆ ಕಾಲದಲ್ಲಿ ಭೂಮಿಯ ಸ್ಥಿತಿಯಿತ್ತೆಂದು ಹೇಳಬಹುದು (ಮುಂಬಯಿ. ೬-೨೯೨). **ಬಾಲಚುಕ್ಕಿ :** ನಭದೊಳೆಳ್ಳೆಡೆವಿಡದೆ ತುಂಬಿದ ವಸುರರುದಯಕೆ ಬಾಲಚುಕ್ಕಿಗಳು (ಶ್ರಿಹ್ಯಾತ. ೨-೫೩) ; ೧೫೭೭ರಲ್ಲಿ ಒಂದು ಬಾಲಚುಕ್ಕಿಯು ಕಾಣಿಸಿತು (ಶಿಲ್ಪಿವಾ. ೦೦೦). [ಬಾಲ$_1$ + ಚುಕ್ಕಿ$_1$]

**ಬಾಲಜ್ವರ** (ನಾ). ರೋಗಿಗೆ ಆಗ ತಾನೇ ಪ್ರಾರಂಭವಾಗಿರುವ ಜ್ವರ : ರಾಸ್ಮೆ . . . ಬೆಳ್ಳುಳ್ಳಿ ಇವುಗಳನ್ನು ಕುಟ್ಟಿ ಅರೆದು ಕೊಡಲು ವಾತದೋಷಜ್ವರ ಮತ್ತು ಬಾಲಜ್ವರ ಸಹ ಪರಿಹಾರವಾಗುವುವು (ಸಕವ್ಯ. ೦೦೪). [ಸಂ.]

**ಬಾಲತನ** (ನಾ). ಚಿಕ್ಕಂದು ; ಎಳಮೆ : ಬಾಲ್ಯ : ನಿಮಗಾನುಜುವುದೆನ್ನ ಬಾಲ[ಪಾಠಾಂ. ಲ್ಯ]ತನದಿಂದಂದಾದುದೊಂದಾದುದೇ ನಿಮಗಾನಂಜದೊಡಂಜಸಲ್ ನೆಱೆವೆನೇ ತ್ರೈಲೋಕ್ಯಮಂ ಯುದ್ಧದೊಳ್ (ಪಂಪಭಾ. ೦೦-೦೩೪); ಬಾಲತನವೇನೂಣಯವೆ ಕಟ್ಟಾಳುತನವಾಭರಣವವನೀಪಾಲಸುತರಿಗೆ (ಕುಮ್ಮಾದ್ರೌ. ೫-೩೦). [ಬಾಲ$_2$ + -ತನ]

**ಬಾಲತನಯ** (ನಾ). ಒಂದು ಬಗೆಯ ಮರ ; ಕಗ್ಗಲಿಮರ ; ಖದಿರವೃಕ್ಷ : "ಗಾಯತ್ರೀ, ಬಾಲತನಯಃ, ಖದಿರಃ, ದಂತಧಾವನಃ – ೪ ತರೆಯದ ಮರದ ಹೆಸರು; ಕಗ್ಗಲೀಮರ" (ಸಿದ್ಧಾಂತಿ. ೦೨೩). [ಸಂ.]

**ಬಾಲತಪ** (ನಾ). [ಜೈನ] ಶುದ್ಧವಾದ ದರ್ಶನವಿಲ್ಲದೆ, ವ್ಯರ್ಥವಾದ ದೇಹದಂಡನೆಯೊಡನೆ ಆಚರಿಸುವ ತಪಸ್ಸು ; ಮೂರ್ಖತನದ ತಪಸ್ಸು : ಮಿಥ್ಯಾದರ್ಶನೋಪೇತತಪಂ ಬಾಲತಪಂ ನಿಕೃತಿಬಹುಲವ್ರತಧಾರಣಂ ಅನುಪಾಯಕಾಯಕ್ಲೇಶಪ್ರಚುರಂ ಎಂಬಿವು ಮೊದಲಾಗೊಡೆಯವು ದೇವಾಯುಷ್ಯಾಸ್ರವಕಾರಣಂಗಳಪ್ಪುವು (ತತ್ತ್ವಾಸ್ತ್ರ. ೫೩೩). [ಸಂ.]

**ಬಾಲತೆ**, ಬಾಳತೆ (ನಾ). ೧.=ಬಾಲತನ : ಬಾಲತೆಯೊಳ್ ದರ್ಶನಮುಂ ಮೇಲೆನಿಪೀ ವ್ರತಮುಮೊಡನೆ ಸಂಭವಿಸಿದುವು (ಧರ್ಮಾಮೃ. ೩-೨೦). **ಬಾಳತೆ :** ೧. ಬಾಳತೆಯಂ ಕಳಿಪಿ ಸುದಂಭೋಳಿಧರಾನತಪದಂ ಕುಮಾರತೆಯಂ ಸಲ್ಲೀಲಾನಿಧಾನನಾಂತಂ . . . ಭಾಸುರರೂಪಂ (ನೇಮಿಪು. ೯-೪). ೨. ಹುಡುಗುತನದ ವರ್ತನೆ ; ಬಾಲಿಶವೃತ್ತಿ : ಪಾಲಿಪುದು ವಿನಯಮಂ ಬಾಳತೆಯನುಳಿವುದಿದನೇಳಿಸದಿರೆಂದು ಸೌಮಿತ್ರಿ ನುಡಿದಂ (ಕುಮುಂರಾ. ೬-೦೦೭). [ಸಂ. ಬಾಲತಾ]

**ಬಾಲತ್ವ**, ಬಾಳತ್ವ (ನಾ). =ಬಾಲತನ : ಬಾಲತ್ವದೊಳಂ ಗುಣಮಣಿಮಾಲಿನಿ ಶಿಶುಸುಮತಿ . . . ಜನಪತಿಗೆ ವಿನಯವಿನಮಿತೆಯಕ್ಕುಂ (ಶಾಂತಿಪು. ೯-೬೭) ; ಬಾಲತ್ವದಿಂದೆಲ್ಲಿಯುಂ ವಿನಯೋಲ್ಲಂಘನಮಾದುದಿಲ್ಲ (ಗದಾಯು. ೫-೭) ; ಬಾಲತ್ವದೊಳಮುದಾತ್ತಗುಣಾಲಯಮೆನಿಸಿವ ತನೂಜಮುಖಚಂದ್ರಮನಂ ಲೀಲೆಯಿನೀಕ್ಷಿಸಿ ದಶರಥನೋಲಾಡಿದನಧಿಕರಾಗರಸವಾರಿಧಿಯೊಳ್ (ಪಂಪಾರಾ. ೩ ೦೩೨). **ಬಾಳತ್ವ :** ಗಗನಕ್ಕೋಡಾಡಿ ವಾಮೇತರಾಯತಹಸ್ತಾಗ್ರದೊಳಾಂತು ತಾಳ್ದಿದುದಱಿಂ ಬಾಳತ್ವದೊಳ್ ಕೋಟಿಕಾಂತಿತಮಾ ಕಲ್ ತಿರಿಕಲ್ ತ್ರಿಪೃಷ್ಠಮಹಿಪಂಗಕ್ಕುಂ ಪೆಱಂಗಕ್ಕುಮೇ (ಶಾಂತಿಪು. ೫-೨೭); ಬಾಳತ್ವದೊಳುಂದಗಮಂ ಬಾಳಿಸಿದೀ ಕೃಷ್ಣನಳಿಯನಲ್ಲನೆ ಶೌರ್ಯಾಭೀಳನರತನುಜನಲ್ಲನೆ ಪೇೞಿಮಿದೇಂ ಗಹನಮೆನಗೆ ಬೆಸಸಿಂ ನೃಪತೀ (ನೇಮಿಪು. ೦೨-೩೩). [ಸಂ.]

**ಬಾಲದುಡಿಗೆ** 'ಬಾಲದೊಡಿಗೆ' ನೋ.

**ಬಾಲದುಡುಗೆ** 'ಬಾಲದೊಡಿಗೆ' ನೋ.

**ಬಾಲದೆರಿಗೆ** 'ಬಾಲದೆಱಿಗೆ' ನೋ.

**ಬಾಲದೆಱಿಗೆ**, ಬಾಲದೆರಿಗೆ (ನಾ). ದನಕರುಗಳ ಮೇಲೆ ಹಾಕುತ್ತಿದ್ದ ತೆರಿಗೆ; ℗ ದನಕರುಗಳ ಗಣನೆಯ ಸಮಯದಲ್ಲಿ, ಬಾಲಗಳ ಎಣಿಕೆಯಿಂದ ಕಾಲ್ನಡೆಯ ಸಂಖ್ಯೆಯನ್ನು ಸೂಚಿಸುವ ಪರಿಪಾಠವಿದ್ದಿರಬಹುದು : ಪಳ್ಳಿಗರ ಜಾತಿದೆಱಿಗೆ ಬಾಲದೆಱಿಗೆ ನಾಮಗಾಣಿಕೆ ಗೋಪಾಲಸ್ವಾಮಿವರ್ತ್ತನೆ ಸುಂಕಕ್ಕೆ ಸಲ್ಲುವ ಪಟ್ಟಡಿಯೇರುಸುಂಕ (ಎಕ. III. ಶ್ರೀರಂಗ ೦೦೦-೦೬೫; 1724). **ಬಾಲದೆರಿಗೆ :** ಈಚಲಾಕಂದಾಯ ಬಾಲದೆರಿಗೆ ಹೊರಾದಾಯ ಚರಾದಾಯ . . . ಈ ಸಂಖ್ಯೆಯ ಮಹಾಜನರಿಗೂ ಯಥಾಂಶವಾಗಿ ನಿರ್ವಿವಾದವಾಗಿ ಸಲುವದು (ಎಕ. III. ತಿರುಮ. ೬೩-೦೩೬೮: 1748); ಕುರಿದೆರಿಗೆ ಬಾಲದೆರಿಗೆ ಹುಲ್ಲುಹಣ (ಮೈಆರ. ೦೯೩೮. ೨೪-೦೪; 1820). 'ಬಾಲವಣ' ಪರಾ. [ಬಾಲ$_1$+ತೆಱಿಗೆ]

**ಬಾಲದೊಡಿಗೆ**, ಬಾಲದುಡಿಗೆ, ಬಾಲದುಡುಗೆ (ನಾ). ಮಕ್ಕಳಿಗೆ ತೊಡಿಸುವ ಆಭರಣ : ತಾಳಿ ಕಡಗಂ ಜಣ್ಣಸರವುಂ ತೋಳಬಂದಿಯೆನಿಪ್ಪ ಚೆಲ್ವಿನ ಬಾಲದೊಡಿಗೆಗಳ . . . ತಂದಪೆವು (ಬಸವು. ೦೪-೯); ಈತನರ್ಜುನನರಮನೆಯೊಳಭಿಜಾತನೆನಿಪಭಿಮನ್ಯುವನು ಸಂಪ್ರೀತಿಯಿಂ ದಪ್ಪಿದನು ಕೊಟ್ಟನು ಬಾಲದೊಡಿಗೆಗಳ (ಕುಮ್ಮಾಆ. ೨೦ ೦೦). **ಬಾಲದುಡಿಗೆ:** ಆ ಬಾಲಕಂ ಬಾಲದುಡಿಗೆಗಳಂ ತೊಟ್ಟು ನಡೆಗಲ್ತು (ಶಂಕಶಂ. ೦೬೭-೮); ಇಂತು ಸಕಲಸೌಂದರ್ಯಮಂ ಬೀಱುವ ಬಾಲದು [ಪಾಠಾಂ. ದೊ]ಡಿಗೆ

ವೆರಸು ಲೀಲೆ ಮಿಕ್ಕು (೧೧೫. ೩-೮೪ ವ). **ಬಾಲದುಡುಗೆ:** ಜನ್ಮಾಭಿಷೇಕಮಂ ಮಾಡಿ ತದನಂತರಮನೇಕಬಾಲದುಡು[ಶಾಶಾಂ. ಡಿ]ಗೆಗಳಂ ತುಡಿಸಿ ತಾಯಿ ತಂದೆಗೆ ನಂದನನಂ ಕೊಟ್ಟಾಖಂಡಳಂ . . . ನಿಜನಿವಾಸಕ್ಕೆ ಪೋದಂ (ಪುಣ್ಯಾಸ್ರ. ೧೦-೧೬ ವ). [ಬಾಲ್ಯ$_2$ + ತೊಡಿಗೆ (<ತೊಡುಗೆ)]

**ಬಾಲಪಂಡಿತಮರಣ** (ನಾ). [ಜೈನ] ಐದು ಬಗೆಯ ಮರಣಗಳಲ್ಲಿ ಒಂದು; P "ಸಮ್ಯಕ್‌ದರ್ಶನಜ್ಞಾನ, ಏಕದೇಶಚಾರಿತ್ರಗಳನ್ನು ವಶಮಾಡಿಕೊಂಡಿರುವ ದೇಶವ್ರತಿಯ ಮರಣ" (ಜೈನಕೋ. ೦೬೫): ಸಮ್ಯಗ್ದರ್ಶನ ಸಂಯಮಾಸಂಯಮಚಾರಿತ್ರಂಗಳಂ ತನಗೆ ವಶಂಮಾಡಿ ನೆಗಟ್ದ ಸಂಯತಾಸಂಯತನ ಸಾವು ಬಾಲಪಂಡಿತಮರಣಂ (ವಸಾರ. ೩೬೬). [ಸಂ.]

**ಬಾಲಪತ್ರ** (ನಾ). ಕಗ್ಗಲಿಮರ; ಖದಿರವೃಕ್ಷ. [ಸಂ.]

**ಬಾಲಪಾಶ್ಯೆ** (ನಾ). ೧. ಸ್ತ್ರೀಯರು ಬೈತಲೆಗೆ ಧರಿಸುವ ಒಂದು ಬಗೆಯ ಆಭರಣ. ೨. ಒಂದು ಬಗೆಯ ಆಭರಣ; ಜಡೆಬಿಲ್ಲೆ. [ಸಂ. ಬಾಲಪಾಶ್ಯಾ]

**ಬಾಲಪುಳು,** ಬಾಲಹುಳು (ನಾ). ಬಚ್ಚಲುಹರಿ ಮೊದಲಾದ ಕೊಚ್ಚೆ ಸ್ಥಳಗಳಲ್ಲಿ ಹಾಗೂ ಗೊಂಡೆಗಟ್ಟಿದ ಅಕ್ಕಿ ಮೊದಲಾದುವುಗಳಲ್ಲಿ ಪರಿದಾಡುವ ಚಿಕ್ಕ ಬಾಲವುಳ್ಳ ಹುಳು: ಪುರಾಣಿಕನೊಡಲು ಬಿಕ್ಕನೆ ಬಿರಿದುದಾಗಳೆ ಬಾಲಪುಳುಗಳ ರಾಶಿಯಾಯಿತ್ತು (ಬಸವು. ೫೬-೩೦). **ಬಾಲಹುಳು:** ಅಹಂಕಾರವಿಲ್ಲದಿಹಂತಹ ಪುರಾತನರ ಮನೆಯ ಬಚ್ಚಲ ಬಾಲಹುಳುವಾಗಿ ಹುಟ್ಟಿಸಯ್ಯಾ (ಸವಚಂ. ೬-೩೦): ಜಾತಿಪೂರ್ವವ ಎತ್ತಿ ದೂಷಿಸುವ ಪಾತಕರ ಬಾಯಲ್ಲಿ ಬಾಲಹುಳುಗಳು ಸುರಿಯದೆ ಮಾಣ್ಬವೆ ಹೇಳಾ (ಅಬಂಡೀ. ೨೦೬-೪೦). [ಬಾಲ್ಯ$_1$ + ಪುಳು (<ಪುಟು)]

**ಬಾಲಬಂದು,** ಬಾಳಬಂದು (ನಾ). ೧. ಸರಳವಾದುದು; ಸುಲಭವಾದುದು: (*). ೨. ಒಂದು ಬಗೆಯ ಲಿಪಿ: ದೇವನಾಗರೀ ಲಿಪಿ. **ಬಾಳಬಂದು:** (*). [← ಮರಾ. ಬಾಳಬೊಧ, ಬಾಳಬಂದ]

**ಬಾಲಬಾಲಮರಣ** (ನಾ). [ಜೈನ]ಐದು ಬಗೆಯ ಮರಣಗಳಲ್ಲಿ ಒಂದು; "ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ, ತಪಸ್ಸುಗಳೆಂಬ ಆರಾಧನಗಳಲ್ಲಿ ಒಂದೂ ಇಲ್ಲದ ಮಿಥ್ಯಾದೃಷ್ಟಿಯ ಸಾವು" (ಜೈನಕೋ. ೦೬೫): ಬಾಲಬಾಲಮರಣಂ ಬಾಲಮರಣಂ ಬಾಲಪಂಡಿತ ಮರಣಂ ಪಂಡಿತಮರಣಂ ಪಂಡಿತಪಂಡಿತಮರಣಮೆಂದಿಂತು ಪಂಚಪ್ರಕಾರ ಮಕ್ಕುಂ . . . ಚತುರ್ವಿಧಾರಾಧನೆಗಳೊಳೊಂದಾರಾಧನೆಯುಮಿಲ್ಲದ ಮಿಥ್ಯಾದೃಷ್ಟಿಯ ಸಾವು ಬಾಲಬಾಲಮರಣಂ (ವಸಾರ. ೩೬೬). [ಸಂ.]

**ಬಾಲಬೋಧೆ** (ನಾ). ೧. ಚಿಕ್ಕಮಕ್ಕಳಿಗೆ ಕೊಡುವ ಆರಂಭದ ಪಾಠ. ೨. ಮಕ್ಕಳಿಗೆ ಓದು ಕಲಿಸುವುದಕ್ಕಾಗಿ ಬಳಸುವ ಪ್ರಾಥಮಿಕ ಪುಸ್ತಕ; ಬಾಲಪಾಠದ ಪುಸ್ತಕ: (*). [ಸಂ. ಬಾಲಬೋಧಾ]

**ಬಾಲಬ್ರಹ್ಮಚಾರಿ** (ನಾ). ಚಿಕ್ಕಂದಿನಲ್ಲಿಯೇ ಸಂನ್ಯಾಸವನ್ನು ಸ್ವೀಕರಿಸಿದವನು: ಬಾಲಬ್ರಹ್ಮಚಾರಿಯ ಬಾರನೆತ್ತಿತ್ತ ಕಂಡೆ ಭಕ್ತರೆಲ್ಲರೂ ಸತ್ತು ನೆಲಕಿಕ್ಕಿತ್ತ ಕಂಡೆ (ಅವಚಂ. ೯೫-೪೨೬). [ಸಂ. ಬಾಲಬ್ರಹ್ಮಚಾರಿನ್]

**ಬಾಲಭಾವ** (ನಾ). ಬಾಲ್ಯ; ಎಳೆತನ: ಆ ಬಾಳಕೇಳಿಗಳ ಬಟಿಯಿಂ ಬಾಲಭಾವಮಂ ಪೆಟಿಗಿಕ್ಕಿ ಯೌವನಪ್ರಾದುರ್ಭಾವಕ್ಕಿದಿರಾಗಿ (ಶಾಂತಿಪು. ೧೦-೯೦ ವ); ಕಳಾಗುಣಂ ಪೊದಟ್ದಳವಡೆ ಬಾಲಭಾವದೊಳೆ ಭಾವಕಿಯರ್ ಬಳೆವರ್ ನಿರಂತರಂ (ಕವಚ. ೦೯೫ ಪ್ರಹೋ.). [ಸಂ.]

**ಬಾಲಭಾಷಿತ** (ನಾ). ಹುಡುಗುತನದ ಮಾತನ್ನಾಡುವವನು; ಅರ್ಥವಿಲ್ಲದ ಮಾತನ್ನಾಡುವವನು: ಬೀಳುಕೊಂಡಿರೇ ಸಾಕು ಭೀಮನು ಬಾಲಭಾಷಿತನಾದನೀ ಭೂಪಾಲ ಕೌರವನೆಂಬೆನೇ ಮೊದಲಿಗನು ಮೂರ್ಖರಿಗೆ (ಕುಪ್ಮಾಭೀ. ೧೦-೩೬). [ಸಂ.]

**ಬಾಲಭಾಷೆ** (ನಾ). ೧. ಮಕ್ಕಳ ಮಾತು; ಅಪ್ರಬುದ್ಧವಾದ ಭಾಷೆ: ರಂಗನು . . . ತನ್ನ ಬಾಲಭಾಷೆಯಲ್ಲಿ ಏನೇನೋ ಬರೆದು ಮಹಾದೇವಯ್ಯನವರಿಗೆ ತೋರಿಸಿ ತಿದ್ದಿಸಿಕೊಳ್ಳುತ್ತಿದ್ದನು (ರಂಗಣೋ. ೩೪). ೨. ಪ್ರಾಕೃತ ಭಾಷೆ: ಪ್ರಾಕೃತಭಾಷೆಗೆ ಸಾರಸ್ವತವೆಂತಲೂ ಬಾಲಭಾಷೆಯೆಂತಲೂ ಹೆಸರುಗಳುಂಟು (ಮುಂಬಯಿ. ೪-೧೬೫). ೩. (ಆಲಂ) ಬಾಲ್ಯದಲ್ಲಿ ಕಲಿತ ವಿದ್ಯೆ: ಚಾಪದ ಚಾರುವಿದ್ಯೆಯ ನಿಪ್ಪೊಳಜಿ ದುದ ನಿಮಗೆ ತೋಱಿಸುವೆ ಸ್ಮರಿಸುವುದೀ ಬಾಲಭಾಷೆಗೆ ವೈರಬಂಧವ ಬಿಡುವುದು (ಕುಪ್ಮಾಭೀ. ೬-೩೫). [ಸಂ. ಬಾಲಭಾಷಾ]

**ಬಾಲಮುಂಡನ** (ನಾ). = ಬಾಲದೊಡಿಗೆ: ಭುವನೈಕಮುಂಡನನೊಳೇ ನೆಸೆದಿರ್ದುದೊ ಬಾಲಮುಂಡನಂ (ಆದಿಪು. ೫-೬೦). [ಸಂ.]

**ಬಾಲಮರಣ** (ನಾ). [ಜೈನ]ಐದು ಬಗೆಯ ಮರಣಗಳಲ್ಲಿ ಒಂದು: ಅಜ್ಞಾನ ಅಥವಾ ಅವಿವೇಕದಿಂದ ತಂದುಕೊಳ್ಳುವ ಸಾವು: ಸಮ್ಯಗ್ದರ್ಶನಾರಾಧನೆಯನುಳ್ಳಸಂಯತ ಸಮ್ಯಗ್ದೃಷ್ಟಿಯ ಸಾವು ಬಾಲ ಮರಣಂ (ವಸಾರ. ೩೬೬); ಯಾವುದೋ ಕ್ಷುದ್ರದೇವತೆಗೆ ಹರಕೆ ಹೊತ್ತು ಉಪವಾಸ ಮಾಡಿ ಸಾಯುವುದು, ವಿಷಪಾನ ಮಾಡಿ ಅಥವಾ ನೀರಲ್ಲಿ ಮುಳುಗಿ ಸಾಯುವುದು, ಇರಿದುಕೊಂಡು ಸಾಯುವುದು—ಇವುಗಳನ್ನು "ಬಾಲಮರಣ"ವೆಂದೂ (ಬಾಲ = ಅಜ್ಞಾನಿ; ಅವಿವೇಕಿ). ಸಲ್ಲೇಖನ ವನ್ನು "ಪಂಡಿತಮರಣ"ವೆಂದೂ ಕರೆಯುತ್ತಾರೆ (ಕಶಾಂ. ೯೨). [ಸಂ.]

**ಬಾಲಮೆಣಸು** (ನಾ). (ತೊಟ್ಟು ಉದ್ದವಾಗಿರುವ) ಒಂದು ಬಗೆಯ ಮೆಣಸು: "ಚವಿಕೆ, ಗಂಧಮೆಣಸು, ಮರಮೆಣಸು, ಬಾಲಮೆಣಸು, ಕಪ್ಪರಚಿನ್ನಿ" (ಸಸ್ಯನಿ. ೦೦೬): ಕಾಳುಗಳು . . . ಪಕ್ವವಾಗುತ್ತಿದ್ದಂತೆ ಫಲಾವರಣದ ಬುಡ ಅಸಾಧಾರಣವಾಗಿ ಬೆಳೆಯುವುದರಿಂದ ಪ್ರತಿಕಾಳಿಗೂ ಒಂದು ತೊಟ್ಟು (ಬಾಲ) ಹೊರಟಂತೆ ಭಾಸವಾಗುತ್ತದೆ. ಆದ್ದರಿಂದಲೇ ಇದಕ್ಕೆ ಬಾಲಮೆಣಸು ಎಂಬ ಹೆಸರು (ಕಂಕೋ. XII, ೬೬). [ಬಾಲ್ಯ$_1$ + ಮೆಣಸು (<ಮೆಱಸು)]

**ಬಾಲರಕ್ಷೆ** (ನಾ). ದುಷ್ಟಗ್ರಹ ಅಥವಾ ಭೂತಬಾಧೆಯಾಗದಂತೆ ಮಕ್ಕಳಿಗೆ ಕಟ್ಟುವ ತಾಯಿತ, ದಾರ ಮೊದಲಾದ ಪ್ರತಿಬಂಧಕ ಸಾಧನ. [ಸಂ. ಬಾಲರಕ್ಷಾ]

**ಬಾಲರಸ** (ನಾ). [ವೈದ್ಯಶಾ] (ಮಕ್ಕಳ ಹಳೆಯ ಜ್ವರ, ಕೆಮ್ಮು, ಶೂಲೆ ಇತ್ಯಾದಿಗಳಿಗೆ ಕೊಡುವ ಗಂಧಕ, ಸೋನಾಮುಖಿ ಮುಂತಾದುವುಗಳ ಮಿಶ್ರಣದಿಂದ ತಯಾರಿಸುವ) ಒಂದು ಬಗೆಯ ಔಷಧ: ಮಣಿಶಿಲಾಸಿದ್ಧರಸವು ಸಮವಾಗಿ ಕರಗಿಸಲು ಬಾಲರಸ ವಾಗುವುದು (ಗಂಧಶ್ರ. ೯-೦). [ಸಂ.]

**ಬಾಲರಾಕ್ಷಸ** 'ಬಲರಾಕ್ಷಸಿ' ನೋ.

**ಬಾಲರಾಕ್ಷಸಿ** 'ಬಲರಾಕ್ಷಸಿ' ನೋ.

**ಬಾಲರ್ಷಿ** (ನಾ). ಋಷಿಸತ್ವವುಳ್ಳ ಬಾಲಕ: ನನ್ನೊಳ್ಮೆಗೇಂ ಕಡಮೆ, ಹೇಳವ್ವ, ನಿನಗೆ ಬಾಲರ್ಷಿ ಭರತನ ಕೂರ್ಮೆ? (ಶ್ರೀರಾಮಾ. ೬೩-೧೫೨). [ಸಂ.]

**ಬಾಲಲೀಲೆ** (ನಾ). = ಬಾಲಕೇಲಿ: ಶಿಶುವಾಗಿ ಬಾಲಲೀಲೆ ತೋಱದೆ (ಪುರಂದ. ೩-೬೯-೩); ಕಂದನಾಡುವ ಬಾಲಲೀಲೆಯಂ ನೋಡಿ . . . ಪ್ರೀತಿಯಂ ಪಡೆವರ್ (ಜೈಮಿಭಾ. ೦೬-೨೦). [ಸಂ. ಬಾಲಲೀಲಾ]

**ಬಾಲವ** (ನಾ). [ಜ್ಯೋತಿ] ಹನ್ನೊಂದು ಬಗೆಯ ಕರಣಗಳಲ್ಲಿ ಎರಡನೆಯದು; ಒಂದು ಬಗೆಯ ಕಾಲಮಾನ: ಬವ ಬಾಲವ ಕೌಲವ ತೈತಿಲ ಗರಜೆ ವಣಿಜೆ ಭದ್ರೆಗಳೆಂಬವೇಳುಂ ಚರಕರಣಂಗಳು . . . ವರ್ತಿಸುತ್ತಿಹವು (ಜಿವೇಕ. ೨೬೨); ಚರ ಮತ್ತು ಸ್ಥಿರ ಎಂದು ಕರಣ ಎರಡು ವಿಧ. ಬವ ಬಾಲವ ಕೌಲವ ತೈತುಲೆ ಗರಜೆ ವಣಿಜೆ ಭದ್ರೆ ಈ ಏಳು ಚರಕರಣಗಳು (ಜಾತಕ. ಪಂ. ೩-೩೬೬). 'ನಾಗವ' ಪರಾ. [ಸಂ.]

**ಬಾಲವಂದ, ಬಾಳವಂದ** (ನಾ). ಮಕ್ಕಳಿಗೆ ತೊಡಿಸುವ ಉಡುಪು, ಆಭರಣ ಇತ್ಯಾದಿ ; ಮಕ್ಕಳ ಉಡುಗೆ ತೊಡುಗೆ : ಅರಳೆಲೆಯತ್ತಿ ಕಾಯ್ ಪುಲಿಯುಗುರ್ . . . ಗೊಂದಳಿಸಿರೆ ಬಾಲವಂದದ ತೆರಳ್ಕೆಯಿ ನಚ್ಯುತನಾದವೊಪ್ಪಿದಂ (ಸೂಕ್ತಿಸು. ೬-೭೩). **ಬಾಳವಂದ** : ಬಾಳವಂದಂಗಳ ನೊಯ್ಯನೆ ತುಡಿಸಿದರಾಗಳಾ ಶಿಶು ಜಿನಶಿಶುವೆಂಬಿನಗವೋಂ ಮನಂಗೊಳಿಸಿ ದನೋ (ಸುಕುಮಾ. ೦೦-೩೪) ; ಅರಳೆಲೆ . . . ನೂಪುರಂ ವರವಲಯಂ ಗಳೆಂಬ ಪಲವಂದದ ಚಂದದ ಬಾಳವಂದವೊಪ್ಪಿರೆ ಪಿತೃಮಾತೃಗಳ್ಗೆ ಪಡೆದರ್ ತನಯರ್ ನಯನೋತ್ಸವಂಗಳಂ(ಶಂರಾಮಾ. ೬-೦೪೦).
[ ←ಹಿಂ. ಬಾಲಾಬಂದ / ಸಂ. ಬಾಲಬಂಧ ]

**ಬಾಲವಕರಣ** (ನಾ). = ಬಾಲವ : ಬಾಲವಕರಣಕ್ಕೆ ವನೇಳಗಳಿಗೆ ಮೇಲೆ ತ್ಯಾಜ್ಯ (ಭಾಸ್ಕರ. ೬೦-೩). [ಸಂ.]

**ಬಾಲವಣ** (ನಾ). = ಬಾಲದೆಱಿಗೆ : ಬಾಲವಣಮುಮಾಯಿಲದೆಱಿ ಗಳುಮನ್ನೆಲದ ನೇಸಱ ಉಳ್ಳನ್ನೆಗ ಬಿಟ್ಟ (ಶಾಇಇ. XI–i, ೫೪–೬ ; ೪ನೆಯ ೩೩ ೧) ; ಬಾಲವಣಂ ಬೇಡೂವನೊಂದೆ ಗೊಂದೆಗಂ (ಕವಿಮ. ೭೩ ಶ್ರ ಯೋ).
[ ಬಾಲ$_1$ + ಪಣ$_3$ ]

**ಬಾಲವಣದೆಱಿ** (ನಾ). = ಬಾಲದೆಱಿಗೆ: ಚಿಕ್ಕ ಬೆಳುಗಲಿಯ ಹೊಗೆದೆಱಿ ಬಾಲವಣದೆಱಿಯೊಳಗೆ ಎಳ್ಳೇಶ್ವರದೇವರ ನಂದಾದೀವಿಗೆಗೆ ವರುಷ ನಿಬಂದ್ಧಿಯಾಗಿ ಕೊಟ್ಟ ಪ ೨ (ಎಕ. XV, ಹೊಳೆನ. ೯೪-೦೦; 1237).
[ ಬಾಲವಣ + ತೆಱಿ$_3$ ]

**ಬಾಲವತಿ**, ಬಾಳವತಿ (ನಾ). ಹೆರಿಗೆಯಾಗಿ ಇನ್ನೂ ಆರೈಕೆಯನ್ನು ಹೊಂದುತ್ತಿರುವವಳು ; ಬಾಣಂತಿ : ಮಾಡಿದರ್ . . . ಬಾಲವತಿ ಗಂದಭಿಷೇಕವಸುಂಗನಾಜನಂ (ಶಾಂತೀಶ್ವ. ೪-೩೨). **ಬಾಳವತಿ** : ಮಾಡಿದರ್ . . . ಬಾಳವತಿಗಂದಭಿಷೇಕಮನಿಂತು ಕಾಂತೆಯರ್ (ಕುಸುಮಾ. ೬-೭೮). ' ಬಾಳಂತಿ ' ಪರಾ [ ಸಂ. ಬಾಲವತೀ ]

**ಬಾಲವದ್ದೆ** (ನಾ). ಬಾಲ್ಯಾವಸ್ಥೆಯಲ್ಲಿರುವವನು ; ಹಸುಮಗು (?): ಬಾಲವದ್ದೆಯಂ ಕೂಸಂ ಸಿಸುವನವ್ಯಕ್ತನಂ ವಿಸುಟ್ಟೆಂತು ತಪಂಬಟ್ಟೆ ಪಾಪ ಕರ್ಮ ದಯೆಯಿಲ್ಲದೊಂ ನಿಷ್ಕರುಣಿ ಎಂದು ಬಯ್ದರ್ (ಪದ್ಮರಾ. ೯೩-೦೦); ಮಗನೆ ನೀನಿನ್ನುಂ ಕೂಸನ್ಯೆ ಬಾ[ಶಾಕಾಂ. ಳ]ವದ್ದೆ . . . ಪಶ್ಚಾತ್ಕಾಲದೊಳ್ ತಪಂಬಡುವುದೆಂದೊಡೆ (ಪದ್ಮರಾ. ೧೦೩-೬). " ಮಂಗಳ ಕರನಾದ ಬಾಲಕ ? " (ಪದ್ಮರಾ. ಟಿಪ್ಪಣಿ. ೨೯೬). [ಬಾಲ$_2$ + ?]

**ಬಾಲವಧ** (ನಾ). ಮಕ್ಕಳ ಕೊಲೆ ; ಶಿಶುಹತ್ಯೆ : ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ (ಗದಾಯು. ೯-೩೪). [ ಸಂ. ]

**ಬಾಲವಿಧವೆ** (ನಾ). ಚಿಕ್ಕವಯಸ್ಸಿನಲ್ಲಿಯೇ ಗಂಡನನ್ನು ಕಳೆದುಕೊಂಡ ವಳು : ಹೀಗೆಯೇ ಇನ್ನೊಬ್ಬ ಬಾಲವಿಧವೆಯಿದ್ದಳು (ಹುಮುಚ. ೯೩).
[ ಸಂ. ಬಾಲವಿಧವಾ ]

**ಬಾಲವೂರು**, ಬಾಳವೂರು (ನಾ). ಒಂದು ಊರಿನ ಹೆಸರು ; P ಈಗಿನ ಧಾರವಾಡಜಿಲ್ಲೆಯ ಹಾನಗಲ್ಲು ತಾಲ್ಲೂಕಿನ ಬಾಳೂರು : ಪಾನುಙ್ಗಲ್ ಕಿಱುವಳ್ಳಿ ಬಾಲವೂರು . . . ಗ್ರಾಮಾನ್ ಮಧ್ಯೇ (ಇಆ. VIII, ೨೭ : 758). **ಬಾಳವೂರು** : ಬಾಳವೂರು ಇತ್ಯೇತೇಷಾಂ ಗ್ರಾಮಾಣಾಂ (ಎಇ. V, ೨೦೪-೬೮; 757). [ ? + ಊರು$_3$ (<ಊರ್) ]

**ಬಾಲಶಯ್ಯೆ** (ನಾ). (ಮಗುವನ್ನು ಮಲಗಿಸುವ) ತೊಟ್ಟಿಲು : "ಶೈಶವಿ ಬಾಲಶಯ್ಯೆಯೆನೆ ತೊಟ್ಟಿಲಕ್ಕುಂ " (ಮಂಗರಾ. ೬೦-೦೬).
[ ಸಂ. ಬಾಲಶಯ್ಯಾ ]

**ಬಾಲಶಿವಮೌಳಿ** (ನಾ). ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಶಿವ : ಪ್ರಮಥರಱಿಯದೆ . . . ಆದ್ಯರಱಿಯದೆ ಬಾಲಶಿವಮೌಳಿ ಕ್ಷಮೆ ಯುಳಿದು . . . ಭಕ್ತೈಕಭಾವದ ಸಮತೆಯುಳಿದಿಬ್ಬರನು ಮಡಗಿದ ಬೆಡಗು ಲೇಸಾಯ್ತು (ಬಸವಪು. ೬೭-೪೦); ನಿಮ್ಮ ನೆಱಿ ಕೆಟ್ಟಾಡಿದರ ಬಾಯ್ ಹುಳುವುದೆಂದನು ಬಾಲಶಶಿಮೌಳಿ (ಕುಮಾ.ರಾ. ೦೬-೨೫).
[ ಸಂ. ಬಾಲಶಶಿಮೌಲಿನ್ ]

**ಬಾಲಶಿಕ್ಷೆ** (ನಾ). ಚಿಕ್ಕ ಮಕ್ಕಳ ಶಿಕ್ಷಣ ; ಬಾಲಕರಿಗೆ ಕೊಡುವ ವಿದ್ಯಾಭ್ಯಾಸ : ಬಾಲಶಿಕ್ಷೆಗಂ ವಿನ್ಯಾಸದ ಪಕ್ಷಾಣಕ್ಕಂ ವೃತ್ತಿಯ ಭೂಮಿಯೊಳಗೆ ಬಿಟ್ಟ ಭಟ್ಟವೃತ್ತಿಯೊಂದು (ಶಾಇಇ. XX, ೯೩-೬೦ ; ೧). [ಸಂ. ಬಾಲಶಿಕ್ಷಾ]

**ಬಾಲಸಂಗಡ** (ನಾ). ೧. ಕುಸ್ತಿಯ ಒಂದು ಪೇಚು; ಮಲ್ಲಯುದ್ಧದ ಒಂದು ವರಸೆ. ೨. ಕತ್ತಿವರಸೆಯಲ್ಲಿ ಒಂದು ಬಗೆ : ಬಾಲಕರೊಡನೆ ಕೂಡಿದಂಥಾ ಗೊಣೆಯದಕ್ಕೆ ಬಾಲಸಂಗಡಯೆಂಬ ಹೆಸರು (ಖಡ್ಗಲೀ. ೨-೫೦).
[ ←ಹಿಂ. ಬಾಲಸಂಗಾಡಾ, ಬಾಲಸಿಂಗಡಾ ; ಮರಾ. ಬಾಳಸಾಂಗಾಡಾ ]

**ಬಾಲಸನ್ಯಾಸಿ** (ನಾ). ಚಿಕ್ಕವಯಸ್ಸಿನಲ್ಲಿಯೇ ಸಂನ್ಯಾಸಿಯಾದವನು : ಉಡುಪಿಯಲ್ಲಿ ಬಾಲಕೃಷ್ಣನ ಪ್ರತಿಷ್ಠೆಯೂ ಬಾಲಸನ್ಯಾಸಿಗಳ ಪೂಜಾ ಪದ್ಧತಿಯೂ . . . ಭಕ್ತಿಯ ಸಾಕ್ಷಿಯಲ್ಲದೆ ಬೇರೆ ಅಲ್ಲ (ಭಾರದ. ೨೮೬) ; ಬಾಲಸನ್ಯಾಸಿ ಕಟ್ಟರೆ ಖೂಳನಾಯಿಗಿಂತ ಕಡೆ (ಗಾದೆ).
[ <ಸಂ. ಬಾಲಸಂನ್ಯಾಸಿನ್ ]

**ಬಾಲಸರ** (ನಾ). ಗಾಳಿಪಟಕ್ಕೆ ಕಟ್ಟುವ ಉದ್ದವಾದ ಪಟ್ಟಿ : ಬಾಲಂಗಚ್ಚೆ ; ಬಾಲಂಗೋಸಿ : ಪಟ ಬಾಲಸರ ಕೂಡಿದ್ದರೇನು ಸೂತ್ರ ಕಿಂಚಿತ್ತು ತಪ್ಪಿದಡೆ ಅದು ಖೇಚರತ್ವದಲ್ಲಿ ಆಡಲಱಿಯದು (ಪೋಲವಾ. ೩೭-೦೫೬) ; ಪಟದೊಳಗಣ ಬಾಲಸರಕ್ಕೆ ಪ್ರತಿಸೂತ್ರ ನೇಣಂಟೆ (ಮದೇಪ. ೨೭೪-೨೦). [ ಬಾಲ$_1$ + ಸರ$_3$ ]

**ಬಾಲಹುಳು** 'ಬಾಲಪುಳು' ನೋ.

**ಬಾಲಳಿ** (ನಾ). ಎಳೆಯ ದುಂಬಿ ; ಮರಿದುಂಬಿ : ' ಬಾಲಳಿಗುರುಳು ' ಪರಾ. [ಸಂ. ಬಾಲಲಿ]

**ಬಾಲಳಿಗುರುಳು** (ನಾ). ಮರಿದುಂಬಿಯಂತೆ ಕಪ್ಪಾಗಿರುವ ಕೂದಲು : ಸುಳಿಗುರುಳವರುಂಗುರಗುರುಳವರು ಬಾಲಳಿಗುರುಳವರು . . . ಆ ಕುವರಿಯ ಬಳಿವಿಡಿದೈದಿತೊಗ್ಗಿನಲಿ (ಪೋಹಕ. ೨೪-೦೦).
[ ಬಾಲಳಿ+ಕುರುಳು$_1$ (<ಕುರುಳ್$_1$) ]

**ಬಾಲಾಖಾನೆ** (ನಾ). ಉಪ್ಪರಿಗೆ ; ಮೇಲ್ಮಾಡ ; ಮಹಡಿ : ಅರಮನೆಯೊಳಕ್ಕೆ . . . ಎಡಪಾರ್ಶ್ವದ ಬಾಲಾಖಾನೆಯಲ್ಲಿ ಮಹಾರಾಜರವರು ನವರತ್ನಾಲಂಕೃತವಾದ ದಂತದ ಸಿಂಹಾಸನದ ಮೇಲೆ ಮುಹೂರ್ತ ಮಾಡಿಸಿದ್ದರು (ಮಹಾವಂ. II, ೩೩). [←ಪಾರ. ಹಿಂ. ಬಾಲಾಖಾನಾ]

**ಬಾಲಾಟ** (ನಾ). ಮಗುವಿನ ಆಟ ; ಬಾಲಕೇಳಿ : ಬಲು ಪರಿ ಒಂದೊಂದು ಬಾಲಾಟದಲಿ ನಲಿದು ಒಲಿಮೆಯಿಂದಲಿ ನೋಡ ಬಂದ ಯೌವನಸ್ತ್ರೀಯರ ನಿಲಿಯ ಬಿಡಿಸಿ (ವಿಶ್ವೋಕು. ೦೯-೩). [ಬಾಲ$_2$+ಆಟ]

**ಬಾಲಾತಪ**, ಬಾಳಾತಪ (ನಾ). ೧. ಆಗ ತಾನೆ ಉದಯವಾದ ಸೂರ್ಯನ ಬೆಳಕು ; ಎಳೆಬಿಸಿಲು; ಬಲಿಯದಿರುವ ಬಿಸಿಲು : ಹರಿ ಚಂದನವಿಚ್ಛುರಿತಾಂಗರಾಗನತಿರುಚಿರಹಾರನೇನೆಸೆದನೊ ನಿರ್ಝರಮುಂ ಬಾಲಾತಪಮುಂ ಬೆರಸಿರ್ದದ್ರೀಂದ್ರನಂತೆ ಪಾಂಡ್ಯನೃಪೇಂದ್ರಂ (ಶಾಂತಿಪು. ೩-೦೩೬) ; ಪೆಣ್ದುಂಬಿಗಳ್ಪಾಯ್ದು ಪುಷ್ಪರಸಾಸಾರದ ತುಂತುರುಱಿಂದೆಱಿಕೆ ನಾಂದಾಂದೋಳಿತಾಶೋಕಮಂಜರಿಯಂ ಸಾರ್ದುವು ಪಲ್ಲವೋಲ್ಲಸಿತಮುಂ ಬಾಲಾತಪಭ್ರಾಂತಿಯಿಂ (ಮಲ್ಲಿಪು. ೨-೩೬). **ಬಾಳಾತಪ** : ೧. ಮಾತ್ತ್ವರ್ಗಳ ಲೋಚನಕುಮುದಂ ಮುಗಿದುವು ಕುಮುದಿನಿಗಳ್ ಬಾಳಾತಪಕ್ಕೆ ಮೊಗವಿಾಸುದವೋಲ್ (ಮಲ್ಲಿಪು. ೬-೦೨೪). ೨. ಕಿರುಪ್ರಕಾಶ ; ಮಂದಕಾಂತಿ : ಅರಿಕೇಸರಿಯ ಪಾದತಳಂಗಳಡಿಗೆಱಗಿದರಿನರಪಾಲರ ಮಕುಟಮಾಣಿಕ್ಯಮರೀಚಿಜಾಲಬಾಳಾತಪಂಗಳನಲೆದು ಕೆಂಕಮಾದಂತಾದುವು (ಪಂಪಭಾ. ೨-೩೯ ವ). [ಸಂ.]

**ಬಾಲಾಭ್ಯಾಸ** (ನಾ). ಚಿಕ್ಕವಯಸ್ಸಿನಲ್ಲಿ ಮಾಡುವ ಸಾಧನೆ: ಬಾಲಾಭ್ಯಾಸವ ಮಾಡಹೋದರೆ ಎನ್ನ ಸುರಿಗೆ ಎನ್ನ ನಟ್ಟಿತ್ತು, ಎಂತಯ್ಯಾ ಕಲಿಯೊಡನೆ ಶ್ರವವ ಮಾಡುವೆನು (ಬಸವ. ೬೨೪). 'ಬಾಲಸಂಗಡ' ಪರಾ. [ಸಂ.]

**ಬಾಲಾರಿಷ್ಟ** (ನಾ). = ಬಾಲಗ್ರಹ. [ಸಂ.]

**ಬಾಲಾರ್ಕ**, ಬಾಳಾರ್ಕ (ನಾ). ಅದೇ ತಾನೆ ಹುಟ್ಟಿದ ಸೂರ್ಯ; ಉದಯರವಿ: ತದಂಗನಾಂಕತಲದೊಳ್ ಬಾಲಾರ್ಕನಂ ಪೋಲ್ತು ಭಾಸುರ ತೇಜೋಧಿಕನಪ್ಪ ಬಾಲನನೊಱಲ್ದಟ್ಟಿರ್ತು ನೋಡುತ್ತಮಿರ್ಪರುಮಂ ಮೂಱುಮೆ . . . ಬಲಗೊಂಡು (ಅಂಕ್ಷ. ೭-೪೪). ದಿನದೇವಿ ತಾಂ ಬಾಲಾರ್ಕಕಲಶದೀಪಂಬಿಡಿದು ಹೊತ್ತರೆಯು ಪೊಸ್ತಿಲಂ ದಾಂಟುತಿರೆ, ಸೇರ್ದುದಾ ತೇರಯೋಧ್ಯೆಯ ನಾಡಿನೆಲ್ಲೆಯಂ (ಶ್ರೀರಾಮಾ. ೯೭-೪೯೭). **ಬಾಳಾರ್ಕ**: ವೇಲೆಯ ತವಮಾಳವನಮಂ ಕಾಳದ ಕಟ್ಟಲೆಯೆ ಗೆತ್ತು ಮುತ್ತಿದುವಕ್ಕುಂ ಬಾಳಾರ್ಕಬಿಂಬಶತಂ (ಮಲ್ಲಿ. ೦೩-೧೨೭). [ಸಂ.]

**ಬಾಲಾಶೋಕ** (ನಾ). ೧. ಎಳೆಯ ಅಶೋಕವೃಕ್ಷ. ೨. ತರುಣಿಯರಿಗುಂಟಾಗುವ ದುಃಖ; ಯುವತಿಯರಿಗಾಗುವ ಶೋಕ: ೧, ೨: ಬಾಲಾಶೋಕಂ ವಿಗ್ರಹಲೀಲೆ ರಜೋವಿಕೃತಿ . . . ಇಲ್ಲ ಬನದೊಳಲ್ಲದೆ ಜನದೊಳ್ (ಸುಕು. ೩-೨೮).
[ಸಂ. (ಬಾಲ+ಅಶೋಕ; ಬಾಲಾ+ಶೋಕ)]

**ಬಾಲಾಸು** (ನಾ). ಭಾರ ಹೇರುವುದಕ್ಕೆ ಮುಂಚೆ ಎತ್ತು, ಕುದುರೆ ಮುಂತಾದುವುಗಳ ಬೆನ್ನಿನ ಮೇಲೆ ಹಾಕುವ ಬಟ್ಟೆಯ ತಡಿ: ಒಳ್ಳೆ ಒಳ್ಳೆ ಎತ್ತುಗಳ ತಲಾಸು ಮಾಡಿಸಿ ಕವುದಿ, ಗೋಣಿ, ಬಿಗಿ, ಬಾಲಾಸು ಸಹಾ ತಯಾರು ಮಾಡಿಸಿ . . . ಹುಲ್ಲು ನೀರು ಇದ್ದಲ್ಲಿಗೆ ಚರಾಯಿಗೆ ಕೂಡಿಸಿದರು (ರಾಜೇಂದ್ರ. ೭೭). [←ಪಾರ. ಬಾಲಾಸ್]

**ಬಾಲಿಕೆ**, ಬಾಳಿಕೆ$_2$ (ನಾ). ೧. ಹುಡುಗಿ; ಬಾಲಕಿ: ಬಾಲಿಕೆ[ಪಾಠಾಂ. ಲಕಿ]ಮುಗ್ಧೆ ತಕ್ಕುದಱಿಯಳ್ ಪಲರಂ ಪೆಱಗಿಕ್ಕಿ ಸೂಡಿದಳ್ ಮಾಲೆಯುಂ (ಶಂರಾಮಾ. ೩-೯೭). ೨. ಚಿಕ್ಕ ಗಾತ್ರದ ಏಲಕ್ಕಿ. ೩. ಉಸುಕು; ಮರಳು. ೪. ಶ್ರೇಷ್ಠವಾದ ನೆಲ್ಲಿಯ ಮರ; ರಾಯನೆಲ್ಲಿ; ಅರನೆಲ್ಲಿ (?): "ಅರನೆಲ್ಲಿ ಬಾಲಿಕೆ[ಪಾಠಾಂ. ಲಕಿ]ಯೆನಿಕ್ಕು" (ಮಂಗರಾ. ೩೭-೦೪). **ಬಾಳಿಕೆ$_2$**: ೧. ಶಿಖಂಡಿಯು ಕೇಳಿ ನಮ್ಮಾ ಮಾನ ಹೋಗುವುದೆನುತ ರಾತ್ರಿಯಲಿ ಆಲಯುವ ಬೀಳ್ಕೊಂಡು ಗಹ್ವರದೊಳು ವನಕ್ಕೆ ತರಲು ತುಂಬುರು ಬಾಳಿಕೆಯ ಕಂಡಿದು ದುಗುಡವಿದೇನು ಹೇಳೆಂದ (ಸಂಭಕ. ೦೩-೬೦). [ಸಂ. ಬಾಲಿಕಾ]

**ಬಾಲಿಶ** (ಗು). ೧. ಮಗುವಿಗೆ ಸಂಬಂಧಿಸಿದ; ಶಿಶುಸಹಜವಾದ; ಬಾಲಸ್ವಭಾವದ. ೨. ದಡ್ಡತನದ; ಜ್ಞಾನಹೀನವಾದ: ಹೀಗೆ ಸ್ಥಿರವಾಗಿ ಬಂದ ಬಾಲಿಶ ಭಾವನೆಗಳ ಪುಂಜವಾದ ಅಂತಃಕರಣವು ವ್ಯಕ್ತಿ ವ್ಯಕ್ತಿಗೂ . . . ಕಾಲಕಾಲಕ್ಕೂ ಬೇರೆಯಾಗುತ್ತದೆ (ಏಕಾವಾ. ೩೦); ಮೊದಲು ಅರಿವು, ವಿಚಾರಶಕ್ತಿ ಎಂಬುದೇ ಇಲ್ಲ. ಕೇವಲ ಬಾಲಿಶ ಕಲ್ಪನೆ; ಒರಟು ತರ್ಕ (ಬಿಳ್ಕ್ರ. XXIX ಪ್ರಸ್ತಾವನೆ). ೩. ಎಚ್ಚರಗೇಡಿಯಾದ; ಅಜಾಗರೂಕತನದ. ೪. ಮಕ್ಕಳಾಟಿಕೆಯ; ಹುಡುಗುತನದ. (ನಾ). ೫. ಮಗು; ಶಿಶು: "ಮಗುವಿನಲ್ಲಿಯುಂ ಬಾಲಿಶನೆಂಬುದು" (ಶಬಾಯು. ೦೩೪-೩೦); "ಬಾಲನೊಳ್ ಬಾಲಿಶನೆಂದೆಂಬುದು" (ಮಂಗರಾ. ೧೪೦-೦೦). ೬. ಮೂಢ; ತಿಳಿಗೇಡಿ; ಮೂರ್ಖ: ಅಜ್ಞ ಜನಂಗಳ್ ಬಾಲಿಶರೆಂದಜಿತರ್ ಪೇಳ್ವುದಂ (ವಿಷ್ಣುಪು. ೧-೪-೦೩೪); ಬಾಲಿಶರ ನುಡಿಗಳಿಂ ಮರುಳಾಗಿ ಸಂತತಿಯ ಕಾಲವಶಗೆಯ್ಯಲೇಂ ಜೀಯ (ವಂಕಾರಾ. ೬-೪-೨೦); ಬಾಲ ಬಾಲಿಶರು ಗುರುಪೀಠಗಳನೇರಿದರು (ಹುಚೋರ. ೩೪-೨೨). ೭. ಹುಡುಗಾಟ; ಮಕ್ಕಳಾಟ: ಎನ್ನ ಮೇಣೆನ್ನ ಪೊನ್ನ ಪಿಳುಕಿನ ಕೋಲ ಬಾಲಿಶವಮಂ ನೋಡು (ರಾಮಾಶ್ವ. ೦೪೦-೧೨). ೮. ದಿಂಬು; ಮೆತ್ತೆ. [ಸಂ.]

**ಬಾಲಿಶತೆ** (ನಾ). ದಡ್ಡತನ; ಮೂಢತೆ: ಜಗತಿಯುದ್ದಂಡ ರಣಪಂಡಿತ ಸುರೇಂದ್ರಸುತನಿಗೆ ಸಿಲುಕಿದೀ ರಾಜ್ಯ ತನಗೆಂತಡಸಿತೆಂಬ ಬಗೆಯನರಿಯದೆ ಪೋದ ಬಾಲಿಶತೆಗೊಳಗಾದನುಪಕೃತಿಯನೆಣಿಸದಾದ (ವಂಕಾರಾ. ೪-೦೪-೬). [ಸಂ. ಬಾಲಿಶತಾ]

**ಬಾಲಿಶತ್ವ** (ನಾ). = ಬಾಲಿಶತೆ: ಎಲೆ ಮೂಢ ಬಾಲಿಶತ್ವದ ನುಡಿಗಳಿಂ ಮನ ಬಂದ ತೆರದೊಳುಸಿರಿದೆ (ವಂಕಾರಾ. ೬-೨೬-೬೭). [ಸಂ.]

**ಬಾಲು** (ನಾ). ರಬ್ಬರು, ಪ್ಲಾಸ್ಟಿಕ್ಕು ಮುಂತಾದುವುಗಳಿಂದ ಮಾಡಿದ ಆಟದ ಗುಂಡನೆಯ ವಸ್ತು; ಚೆಂಡು: ಬಾಲು ನಮ್ಮ ಗೋಲಿನ ಒಳಗೆ ಬಂದು ಬಿದ್ದಿತ್ತು (ಶಾಲೆಮ. ೭೭). [← ಇಂ. Ball]

**ಬಾಲೆ**, ಬಾಳೆ$_7$ (ನಾ). ೧. (ಹದಿನಾರುವರ್ಷದ ಒಳಗಿನ) ಹುಡುಗಿ: ವಯಸವಿಭೇದದಿಂ ಬಾಲೆ ಯೌವನೆ ಪ್ರೌಢೆ ಲೌಲ್ಯೆಯೆಂದಿಂತು ಧರಿತ್ರಿಯೊಳಪ್ಪರ್ ನಾಲ್ವರ್ ಕಾಂತೆಯರ್ (ಮದತಿ. ೭-೦); ಸಲೆ ಬಲಿಸವಿಷಾರಾಜಿಜಲಿ ಬಾಲೆ (ಬಸವ. ೫-೪). ೨. ಯುವತಿ; ತರುಣಿ: ಬಾಲೆಗೆ ಗುಣಕಾಂತಿ ವಯೋಲೀಲೆಗೆ ವಿನಯಪ್ರಧಾನಗುಣಗಣಗೆಣೆ ಭೂಪಾಲಂ (ಶಾಂತಿಪು. ೫-೦೫೫); ಬಾಲೆಯ ಕಡೆಗಣ್ನೋಟವೆ ಸಾಲದೆ ನನೆಗಣೆಗಳೇವುವು (ಶಂರಾಮಾ. ೫-೪೪); ಕೇಳಲೆ ಬಾಲೆ! ಬಾಲೇಂದು ಫಾಲೆ! (ರಾಮಾಶ್ವ. ೭-೦). ೩. ಮಗು; ಶಿಶು: ಬಾಲೇನ ತೊಟ್ಟಿಲಿಗೆ ಮಲಗಿಸಕ್ಕೆ ಮುಂಚೆ. ಮೈಗೆ ಎಣ್ಣೆ ಹಚ್ಚದೆ ಅಂತಾ ಕಾಣ್ಸದೆ (ಮಲೆಮ. ೪೬೦). ೪. ಒಂದು ಬಗೆಯ ಮಲ್ಲಿಗೆ. ೫. ಒಂದು ಬಗೆಯ ಸಸ್ಯ: "ಬಾಲೆ. ಸೊಟಗೆ. ಸೋಟಿಗೆ" (ಸಸ್ಯನಿ. ೯೯); ಸೊಟಗೆ. ಬಾಲೆ (ವೈಶಿ. ೫೮-೧೧೭೩). ೬. ಸಣ್ಣ ಗಾತ್ರದ ಏಲಕ್ಕಿ. ೭. ಅರಿಸಿನ. ೮. ತೆಂಗಿನ ಕಾಯಿ. **ಬಾಳೆ$_7$**: ೨. ಕೇಳಿರೆ ಕಂಕಭಟ್ಟನೆ ಯುಧಿಷ್ಠಿರನಾ ವಲಲಂ ವೃಕೋದರಂ ಬಾಳೆಯರಂದಲಾಡಿಪ ಬೃಹಂದಳೆ ಫಲ್ಗುಣಂ (ಪಂಪಭಾ. ೯-೬); ತೋಳ ನಖವ್ರಣಕೆಱಗಿ[ದ] ಬಾಳೆಗಳ ನೋಟ್ಟಿ ಬಾಳೆ ಕಣ್ಮೇನೆಂಬಾಳೋಳಮನೊಡರಿಸೆ ಸಲೆ ನೃಪಮಾಳೆಗೆ ಪಡೆದಳ್ ಮೃಗಾಕ್ಷಿ ಪರಿಸಂಭ್ರಮಮಂ (ಶಾಂತಿಪು. ೬-೪೩). [ಸಂ. ಬಾಲಾ]

**ಬಾಲೆಮರ** (ನಾ). ಒಂದು ಬಗೆಯ ಮರ: "ಬಾಲೆಮರ, ಮಲ್ಲಲಿ, ಅಬನಾಸ, ಕರೀಮರ" (ಸಸ್ಯನಿ. ೫೦); (ವೈಶಿ. ೩೦-೫೪೯). [ಬಾಲೆ+ಮರ]

**ಬಾಲೆವೆಣ್ಣು** (ನಾ). = ಬಾಲೆ ೨: ತೋಳೊಳೊಪ್ಪುವ ಸರ ತಾತಿ ಹೊಂಬಳೆಗಳ ಬಾಲೆವೆಣ್ಣುಗಳ್ಳೆದಿದರು (ಕಂಸವ. ೨೦-೦೬).

**ಬಾಲೆವೆಂಗಳು** (ಬಹುವ): ಹೊಸಹರೆಯದ ಹೊಮ್ಮಿನ ಬಾಲೆವೆಂಗಳು ಜಸವಡೆದೆಸೆದರೇನೆಂಬೆ (ಕುಸವ. ೨೪-೪೦). [ಬಾಲೆ+ಪೆಣ್ಣು(<ಪೆಣ್)]

**ಬಾಲೇಂದು** (ನಾ). = ಬಾಲಚಂದ್ರ ೧: ಕೇಳಲೆ ಬಾಲೆ! ಬಾಲೇಂದು ಫಾಲೆ! (ರಾಮಾಶ್ವ. ೭-೦). [ಸಂ.]

**ಬಾಲೇಂದುಗೆಱೆ** (ನಾ). [ಕಾಮಶಾ] ಬಾಲಚಂದ್ರನ ಆಕಾರದ ನಖಕ್ಷತದ ಗುರುತು; ಅರ್ಧಚಂದ್ರಾಕೃತಿಯ ನಖಕ್ಷತದ ಗುರುತು: ಓಪಳ ಗುರುಕುಚಯುಗಳವ ಪುಂಡ್ರೇಕ್ಷುಚಾಪ ಕಣ್ಣಿಟ್ಟು ನಿಟ್ಟಿಸಲು ಸ್ಥಾಪನೆವಡೆದಿರ್ದ ಬಾಲೇಂದುಗೆಱೆ ಸುಸ್ವರೂಪವಾಗಿರ್ದುದೇನೆಂಬೆ (ಪೋಹತ. ೦೬-೫೦). [ಬಾಲೇಂದು+ಗೆಱೆ]

**ಬಾಲೇಂದುಧರ** (ನಾ). ಬಾಲಚಂದ್ರನನ್ನು ಧರಿಸಿದವನು; ಶಿವ: ಅಕ್ಕಱಿಂ ಬಾಲೇಂದುಧರನೊಳು ಪೊಕ್ಕು ಪೊಕ್ಕಲರ್ದಲರ್ದು ಕೂಡುತ ಸೊಕ್ಕಿ ತಲ್ಲಿಂಗದೊಳಗಿಂತು ವಿಲೀನನಾಗಿರ್ದು (ಬಸಪು. ೩೫-೪). [ಸಂ.]

**ಬಾಲೇಯ** (ಗು). ೧. ಬಲಿ ಕೊಡಲು ಯೋಗ್ಯವಾದ. ೨. ಮಕ್ಕಳಿಗೆ ಯೋಗ್ಯವಾದ, —ಉಚಿತವಾದ. ೩. ಕೋಮಲವಾದ; ಮೃದು

ವಾದ. (ನಾ). ೪. ಕತ್ತೆ: "ಬಾಲೇಯಮಾ ಗರ್ದಭಂ ಚಕ್ರೀವತ್ಸರಂ ರಾಸಭಮೆ ಕತ್ತೆಯುಕ್ಕುಂ" (ಮಂಗರಾ. ೫೩-೮). [ಸಂ.]

**ಬಾಲೇಯಶಾಕ** (ನಾ). ಒಂದು ಬಗೆಯ ಸಸ್ಯ: "ಹಂಚಿಕಾ . . . ಬಾಲೇಯಶಾಕಃ, ಬರ್ಬರಃ, ವಂದಕಃ — ೯ ಭಾರಂಗೀ ಹೆಸರುಗಳು" (ಸಿದ್ಧಾಂತಿ. ೧೩೨). [ಸಂ.]

**ಬಾಲೋತ್ತರ** (ನಾ). "ಬಾಲಿಶನುಡಿ, ಹುಡುಗತನದ ಮಾತು" (ಮೋಳವಾ.ಸ. ಕೋಶ): ಹಸಿವ ಕೊಂದೆನೆಂದು ಘೃತ ಹಾಲು ಸಕ್ಕರೆ ಹಣ್ಣುಕಾಯಿ ಮುಂತಾದ ಫಲಾಹಾರವ ಕೊಡು ಫಲಕ್ಕೆ ಬಾರೆವೆಂಬ ಬಾಲೋತ್ತರವ ನುಡಿದು ಬಾಲಹರಾದೆವೆಂಬ ಗೆಲ್ಲಗೂಳಿಗಳು ಕೇಳಿರೋ (ಮೋಳವಾ. ೫೭-೨೬೯). [ಸಂ.]

**ಬಾಲ್ಕನಿ** (ನಾ). ೧. ಮನೆಯ ಗೋಡೆಯಿಂದ ಮುಂಚಾಚಿಕೊಂಡು, ಕಂಬಗಳ ಆಧಾರದಿಂದ ನಿಂತಿರುವ (ಕಟಕಟೆಯುಳ್ಳ) ಭಾಗ: ರಾಮಕೃಷ್ಣ ಹಾಗು ಜಾನಕಿಯರು ತಮ್ಮ ಕೋಣೆಯ ಹೊರಗಿನ ಬಾಲ್ಕನಿಗೆ ಬರುವಾಗ ಅತ್ಯಂತ ಉಲ್ಲಸಿತ ಮನಃಸ್ಥಿತಿಯಲ್ಲಿದ್ದರು (ಅಬೋಲೀ. ೧೨೬); ರೇಣು ಅಲ್ಲಿಂದ ಮೇಲಕ್ಕೆದ್ದು ಬಾಲ್ಕನಿಯೆಡೆಗೆ ಸರಿದುಹೋದಳು (ಹೇಮಂತ. ೨೪೩). ೨. ಚಿತ್ರಮಂದಿರ ಅಥವಾ ನಾಟ್ಯಮಂದಿರಗಳಲ್ಲಿ ಪ್ರೇಕ್ಷಕರು ಕುಳಿತುಕೊಳ್ಳುವುದಕ್ಕಾಗಿ ನಿರ್ಮಿಸಿದ ಮೇಲಟ್ಟದ ಪ್ರದೇಶ: ಶ್ರೀಧರ ಬಾಲ್ಕನಿಗೆ ತಾನೇ ಟಿಕೇಟು ತೆಗೆದ (ದೂಜಿಸ್ಟ್. ೦೦೬). [←ಇಂ. Balcony]

**ಬಾಲ್ದಿ** 'ಬಾದಲಿ$_1$' ನೋ.

**ಬಾಲ್ಯ** (ನಾ). ೧. ಚಿಕ್ಕಂದು; ಎಳವೆ; ಶೈಶವ: ಚಕ್ರಿಗೆ ಬಾಲ್ಯಕ್ಕನು ರೂಪಕ್ರಮವಾಯ್ತೆನಿಸಿ ಮುಶ್ಶಿನುಡಿವೆಣಿಯೆಸೆಗುಂ (ಜಗವಿ. ೩-೪೬); ಹುಟ್ಟಿದ ಒಂದು ವರ್ಷ ತೊಡಗಿ ಹದಿನಾರು ವರ್ಷ ಪರ್ಯಂತಕ್ಕೂ ಬಾಲ್ಯವೆನಿಸಿಕೊಂಬುದು (ಸಕಪ್ರ. ೦೫). ೨. ಹುಡುಗುತನದ ಅವಿವೇಕ: ಮೂರ್ಖತನ. ೩. ವಿನಯ; ನಮ್ರತೆ. [ಸಂ.]

**ಬಾಲ್ಯವಿನೋದ** (ನಾ). = ಬಾಲಕೇಲಿ ೧: ಭವದೀಯಮನೋಹರಬಾಲ್ಯವಿನೋದಾಮೃತದೊಳೆಯ್ದೆ ತೀವಿದ ಮತ್ಸ್ವಾಂತವನಿಂತೀ ವಿಷದಿಂ ತೀವುವುದೇ ಶ್ರೀವತ್ಸವತ್ಸವತ್ಸಾ (ಜಗವಿ. ೩-೯೨). [ಸಂ.]

**ಬಾಲ್ಯವಿವಾಹ** (ನಾ). ಎಳೆಯ ವಯಸ್ಸಿನಲ್ಲಿ ಮಾಡುವ ಮದುವೆ; ವಯಸ್ಸಿಗೆ ಬರುವ ಮುನ್ನವೇ ಮಾಡುವ ಮದುವೆ: ಹಿಂದೆ ಬಾಲ್ಯವಿವಾಹಗಳು ನಡೆಯುತ್ತಿರಲಿಲ್ಲ (ಶಾರದ. ೩೪೦); ಬಾಲ್ಯವಿವಾಹ ಒಳ್ಳೆಯದಲ್ಲ (ಸಿಶಿಉ. ೬೪). [ಸಂ.]

**ಬಾಲ್ಯಾವಸ್ಥೆ** (ನಾ). ೧. ಚಿಕ್ಕಂದು; ಬಾಲ್ಯಕಾಲ: ಬಾಲ್ಯಾವಸ್ಥೆಯ ಪ್ರಾರಂಭದ ಹೊತ್ತಿಗೆ ಜ್ಞಾಪಕಶಕ್ತಿ ತಕ್ಕಮಟ್ಟಿಗೆ ಬೆಳೆದಿರುತ್ತದೆ (ಕವಿಕೋ. XII, ೬೭). ೨. ಪ್ರಾರಂಭದ ಹಂತ, –ಸ್ಥಿತಿ: ಈ ಸಂಘದ ಕಾರ್ಯಯೋಜನೆಗಳು ಇನ್ನೂ ಬಾಲ್ಯಾವಸ್ಥೆಯಲ್ಲಿವೆ (ರೂಢಿ). [ಸಂ. ಬಾಲ್ಯಾವಸ್ಥಾ]

**ಬಾವ** 'ಭಾವ$_1$' ನೋ.

**ಬಾವಂಚಿ** 'ಬಾಗುಜಿ' ನೋ.

**ಬಾವಂಜಿ** 'ಬಾಗುಜಿ' ನೋ.

**ಬಾವಂತಿ** 'ಭವಂತಿ' ನೋ.

**ಬಾವಟೆ** 'ಬಾವುಟ' ನೋ.

**ಬಾವಡಿ** (ನಾ). ಸೋಪಾನವುಳ್ಳ ಅಗಲವಾದ ಬಾವಿ; ಹೊಕ್ಕರಣೆ; ಪುಷ್ಕರಿಣಿ: 'ಬಾವಡಿದಸವಂದ' ಪರಾ. [←ಹಿಂ. ಮರಾ. ಬಾವಡೀ, ಬಾವಲೀ]

**ಬಾವಡಿದಸವಂದ** (ನಾ). "ಬಾವಿ, ಕೊಳ ಮುಂತಾದವನ್ನು ಅಗೆಯಿಸುವ ಹಾಗು ಅವುಗಳನ್ನು ನಡೆಸಿಕೊಂಡು ಹೋಗುವ ಕಾರ್ಯಕ್ಕಾಗಿ ಕೊಡಲಾಗುತ್ತಿದ್ದ ದ್ರವ್ಯಾದಾಯ" (ಕಕಂಗ್ಲಾ. ೯೨). 'ದಶಬಂಧ' ಪರಾ. [ಬಾವಡಿ + ದಸವಂದ (<ದಶವಂಧ)]

**ಬಾವಡೆ** (ನಾ). ಮಣ್ಣಿನ ಮುಚ್ಚಳ: ಶಿವು ಒಂದು ಬಾವಡೆಯಲ್ಲಿ ಗಂಜಿಯನ್ನು ಎತ್ತಿಕೊಂಡು ಹೊರಗೆ ಬರುತ್ತಾನೆ (ವೊಮಗು. ೬೨). [←ತುಳು. ಬಾವಡೆ]

**ಬಾವಣಯ್ಯ** (ನಾ). ಒಬ್ಬಾತನ ಹೆಸರು: ಬರೆದಂ ಬಾವಣಯ್ಯಂ (ಎಕ. I, ೨೮-೪೭; 944). [? + ಅಯ್ಯ$_{1}$]

**ಬಾವಣಿಕೆ** (ನಾ). ಆದರ; ಗೌರವ: ಬಾವಣಿಕೆಯಿಲ್ಲದ ನಂಟರ ಮನೆಗೆ ಹೋಗಬಾರದು (ರೂಢಿ). [< ಭಾವ$_1$]

**ಬಾವಣಿಸು** (ಕ್ರಿ). ಆದರಿಸು; ಗೌರವಿಸು: ಇಂಕರನಾದರೂ ಬಾವಣಿಸ ಬೇಕಲ್ಲ ನನ್ನ ಮಾತಾ? (ಸರ್ವಮಂ. ೦೭). [ಬಾವಣಿಕೆ + –ಇಸು$_1$]

**ಬಾವನಂಟ** (ನಾ). ಸೋದರಿಯ ಗಂಡ; ಭಾವ: ಬಾವನಂಟ ಬಂದಾಗ್ಯೂ ಹಾಲು ಚೆಲ್ಲೋದು ಬಿಡಲಿಲ್ಲ (ಗಾದೆ). [ಬಾವ (<ಭಾವ$_1$) + ನಂಟ]

**ಬಾವನ್ನ$_1$** (ನಾ). ಒಂದು ಸಂಖ್ಯೆ; ಐವತ್ತೆರಡು: ತಿಳಿವುದಾಯುತಾಂ ಚಿಕಿಯ ಬಾವನ್ನಾದಿ ಸಂಜ್ಞೆಯಿಂದೆನುತಲಾಕೃತಿಯುಗದೊಳು . . . ಅವ ರ್ಗಳು ಯೋಚಿಸಲು ಬಾವನ್ನ ತತ್ಕಳಾರೂಪರಹರಾ (ವೀಶೈಪು. ೭-೬-೦೭). ಬಾವನ್ನಮೂರ್ತಿ = ಶಿವನ ಐವತ್ತೆರಡು ಮೂರ್ತಿಗಳು: ಸೃಷ್ಟಿಗಳ ಸವಿಸಯದ ಬಾವನ್ನಮೂರ್ತಿಗಳ ಭೇದಮಂ ನಂಜುಂಡಮೂರ್ತಿ ನೋಡೆ ವಿವರಿಸಿದನಾ ಹಲಗೆಯಾರ್ಯನು (ವೀಶೈಪು. ೦-೬-೪೯). ೫ ಸಾದಾಖ್ಯಗಳು ೫, ಶಿವನ ಅಷ್ಟತನುವಿನ ಅಧಿದೈವಗಳು ೮, ಶಿವನ ಲೀಲಾ ಮೂರ್ತಿಗಳು ೨೫, ರುದ್ರರು ೧೧, ಅವಯವಮೂರ್ತಿಗಳು ೩—ಹೀಗೆ ೫೨ ಕಲೆಗಳು ಅಥವಾ ಮೂರ್ತಿಕಲೆಗಳೆಂದು ವೀಶೈಪು. ೧–೬–೪೪ರಲ್ಲಿ ಹೇಳಿದೆ. ಬಾವನ್ನರು = "ಬುದ್ಧಿಶಾಲಿಗಳು, ವೀರರು" (ಶಿವಗೀ. ಕೋಶ. ೪೪೫): ಕಣ್ಣಾರೆ ಕಂಡೆ ನಾ . . . ಅಘಹರರೂಪಾಗಿ ಅಗಣಿತವಹ ಘನಮಹಿಮರನು ಬಗೆಗೊಳ್ಳದೆ ಬಾವನ್ನರ ಸಂಗವನೊಗೆದು ಈಡಾಡುವ ಓಜೆವಂತರನು (ಶಿವಗೀ. ೦೫೩-೭೫೫); "ಐವತ್ತೆರಡು ಅಕ್ಷರಗಳು" (ಶಿವಗೀ. ಪ್ರಾಬ್ಬಾ. ೪೨೭). [< ಪ್ರಾ. ಬಾವನ್ನ. ಬಾವಣ್ಣ. / ಹಿಂ. ಬಾವನ: ಮರಾ. ಬಾವನ. ಬಾವನ್ನ]

**ಬಾವನ್ನ$_2$** (ನಾ). (ಉತ್ತಮಬಗೆಯ) ಚಂದನ: ಶ್ರೀಗಂಧ: "ಸಿರಿಕಂಡಮೆಂದುಂ, ಬಾವನ್ನಮೆಂದುಂ ಮಲಯಜಂ" (ಕಶಶಾ. ೫೦-೭೦); ಬಾವನ್ನದ ವೃಕ್ಷ ಊರೊಳಗಿದ್ದಡೇನು ಅಡವಿಯೊಳಗಿದ್ದಡೇನು ಪರಿಮಳ ವೊಂದೆ (ಚನ್ನವ. ಕ. ೪೭-೦೦೮); ಜಾತಿಬಾವನ್ನದಲಿ ಸರ್ಪದ ಭೀತಿ ಸತ್ಪುರುಷರಿಗೆ ದುರ್ಜನಭೀತಿ (ಕುವ್ಯಾಆ. ೮-೪೯). [← ಮರಾ. ಬಾವನ್ನ. ಬಾವನ. ಬಾವನಾ]

**ಬಾವನ್ನವೀರ** (ನಾ). ೧. ಐವತ್ತೆರಡು ಸಂಖ್ಯೆಗಳಿರುವ ದೇವತೆಗಳ ಒಂದು ಗುಂಪು, –ದೇವತಾಸಮೂಹ. ೨. ಮಹಾವೀರ; ಪರಾಕ್ರಮಿ: ಅಷ್ಟಾದಶಪಟ್ಟಣಾಧಿಷ್ಠಿತ ಪಂಚಮಟ್ಟಿಗಾದಿ ಬಾವನ್ನ ವೀರಂ ಶಾಸನಪಟ್ಟಸಾಲಿಗಸಮುಯಸಮುದಿತಲಲಾಟಪಟ್ಟಂ ವೈರಿಘರಟ್ಟಂ (ಸೌಇಇ. IX–i, ೭೮-೬೨; 1045); ಏಂದೊರೆಯಸ್ತೇಡಿಂಬದ ನಾಡೆಯ ಬಾವನ್ನವೀರರೊಳ್ಮೆಚ್ಚರದಿಂ ಕಾದುವವರ್ (ಕಇಶ. ೯೭-೪-೫೩; 12ನೆಯ ಶತ); ಬಾವನ್ನವೀರ ಕಂಸನ ಕಡುಗೈಗೇಳಿದಾ ವಸುಧಾಮಂಡಲದ ಚಾವಡಿ ಚಾವಡಿಯೊಳಗುಳ್ಳ ವೀರಭಟಾವಳಿ ಬಂದು ಸೇರಿದುದು (ನೇಮಿಸಂ. ೦೪-೨). [← ಹಿಂ. ಬಾವನಬೀರ; ಮರಾ. ಬಾವನ್ನವೀರ]

**ಬಾವರಿ** (ನಾ). [ಜೈನ] (ದುಂಬಿಯು ಮಧುವಿನ ಸಂಗ್ರಹಕ್ಕಾಗಿ ಹೂಗಳನ್ನು ಹುಡುಕಿಕೊಂಡು ಸುತ್ತುವಂತೆ) ಜೈನಮುನಿಗಳು ಭಿಕ್ಷೆಗಾಗಿ ಶ್ರಾವಕರ ಮನೆಗಳನ್ನು ಕುರಿತು ಹೋಗುವುದು ; ಚರಿಗೆ ಹೋಗುವುದು; ಮಾಧುಕರಿ : ಜಿನಮುನಿಚರ್ಯಾಯೋಗ್ಯವಲ್ಲದ ಕಾಲದೊಳ್ ಭಾ[ಬಾ]ವರಿಯುಂ ನೋಡಿ ತಾಂ ಭೋಜನಮಂ ಮಾಡ್ಪ ಕಾಲಾತಿಕ್ರಮಮುಂ (ಕಕ್ಕ್ರ್ಸ್ರ. ೩೪೪) ; ಬನಮೆ ಬನಕ್ಕೆ ಬಾವರಿಗೆ ಬಂದಪ್ಪೊಲಾಮುದು ತಂಡತಂಡದಿಂ . . . ಸಾಧುಜನಸಂಗಸಮಾಗಮನಪ್ರಪಂಚದೊಳ್ (ಅನಂಪು. ೩-೩೦) ; ಅರಸನನುಜ್ಞೆಯಿಂದರಸಿ . . . ಯತಿಗಳ್ಗೆ ನಮೋಸ್ತುಗೆಯ್ದು ಬಾವರಿಯನೊರ್ಡಿವೇಟ್ಟುಮೆನೆ (ಧರ್ಮಾಸ್ರ್ರ. ೯-೬).

[ < ಸಂ. ಭ್ರಾಮರೀ ]

**ಬಾವರಿಗೊಡು** (ಕ್ರಿ). ಚರಿಗೆಗಾಗಿ ಹೊರಡು ; ಮಾಧುಕರಿವೃತ್ತಿ ಮಾಡು: ಆ ಸುರವಂದಿತ ಕೈಯೆತ್ತಿ ನಾನಾದೇಶಗಳಲ್ಲಿ ವಿಹರಿಸಿ ಕೌಶಂಬಿಪುರಕೆ ಭಾ[ಬಾ]ವ[ಪಾಠಾಂ. ಭವಾ]ರಿಗೊಟ್ಟ ವೃಷಭದತ್ತಸೆಟ್ಟಿ ಮನೆಯೊಳಗಿರ್ದ (ವರ್ಧಪು. ೧೦-೬೩). [ಬಾವರಿ + ಕೊಡು₁]

**ಬಾವರಿಯಿಡು** (ಕ್ರಿ). = ಬಾವರಿಗೊಡು : ಸಾಗರದತ್ತಮುನಿಗಳು ಲೋಕವಂದ್ಯರು ಭಿಕ್ಷೆಗೆಂದು ಆ ಕೇರಿಯೊಳು ಬಾವರಿಯಿಡಲ್ (ಜೀವಂಸಾಂ. ೬-೨೦). [ಬಾವರಿ + ಇಡು₁]

**ಬಾವರಿವುಗು** (ಕ್ರಿ). = ಬಾವರಿಗೊಡು : ನಿನ್ನ ತಂದೆವಿರ್ . . . ಪೊಟಲೊಳಗೆ ಚರಿಗೆವೊಕ್ಕು. ಬಾವರಿವುಗುತ್ತುಂ[ಪಾಠಾಂ. ತಿರಿಯುತ್ತಂ, ತಿರುಗುತ್ತಂ] ಬಂದು ನಿನ್ನ ಮನೆಯಂ ಪೊಕ್ಕು ಪೂಜಿಮಟ್ಟು ಪೋದರ್ (ವಡ್ಡಾರಾ. ೪೬-೨೯). [ಬಾವರಿ + ಪುಗು (< ಪೊಗು)]

**ಬಾವಲ್** 'ವಾವಲ್' ನೋ.

**ಬಾವಲಿ₁** 'ವಾವಲ್' ನೋ.

**ಬಾವಲಿ₂** 'ಬಾವುಲಿ₂' ನೋ.

**ಬಾವಲಿ₃** (ನಾ). ಒಂದು ಬಗೆಯ ತೆರಿಗೆ : ಹರುಗೋಲ ಹಣ ಬಾವಲಿ ಬಿರಾಡ . . . ಸರ್ವಬಾಧೆ ಪರಿಹಾರಕ್ಕೆ ಗದ್ಯಾಣ ಗ ೧೧ ವರಹ (ಮೈಆರ್. ೦೯೩೪, ೨೭-೨೨; 1430). [?]

**ಬಾವಲು** 'ವಾವಲ್' ನೋ.

**ಬಾವಾ** (ನಾ). ಊರೂರು ಅಲೆಯುವ ಜಟಾಧಾರಿಯಾದ ಜೋಗಿ,–ಬೈರಾಗಿ : ಈ ಬಂಕಗಳ ಉಪಯೋಗವನ್ನು ಭಿಕ್ಷುಕರು ಬಾವಾ ಬೈರಾಗಿಗಳು ಇನ್ನೂ ಮಾಡಿಕೊಳ್ಳುತ್ತಾರೆ (ಹಬ್ಬಿ. ೯) ; ಮುಂದ ಹೋಗುವಾಗ ಒಬ್ಬ ಬಾವಾ ಭೆಟ್ಟಿ ಆದನಂತ (ಅಮಾಪ. ೬೪). [←ಮರಾ. ಬಾವಾ]

**ಬಾವಾಜಿ** (ನಾ). = ಬಾವಾ : ನಾನು ಅನೇಕ ಸಲ . . . ಭಿಕ್ಷುಕರನ್ನು ಬಾವಾಜಿಗಳನ್ನು ನೋಡಿದ್ದೇನೆ (ಗಾಳಿಗು. ೬೩); ಬಾವಾಜಿಗಳಂತೆ ಜಟಾಧಾರಿಯಾದೆನು (ಇಂದುಮು. ೬೨). [←ಮರಾ. ಬಾವಾಜೀ]

**ಬಾವಿ, ಭಾವಿ₁, ವಾವಿ₁** (ನಾ). ಭೂಮಿಯ ಒಳಗಿರುವ ನೀರನ್ನು ತೆಗೆದುಕೊಳ್ಳುವುದಕ್ಕಾಗಿ ಅಗೆದು ಮಾಡಿದ ಕೂಪ : "ಅಂಧುಃ, ಕೂಪಃ—ಈ ೨ ಬಾವಿ" (ಹಲಾಯು. ೨೦೩-೬೨) ; ನೀರಂ ತರಲ್ಕೆಂದು ಬಾವಿಗೆವೋದಾಕೆಯಂ ಕಂಡರಸನೆಲೆ ಕೂಸೆ ನೀರಂ ಕುಡಿಯಲೆಜೆಯಾ ಎಂದೊಡೆ (ವಡ್ಡಾರಾ. ೧೧೦-೨೩) ; ರಸರಸದ ಬಾವಿ ಮನೆಮನೆಗೆ ಬೇಜಿಕಿಸುಗಲ್ಗಳ ರಜದ ಕಣಿವೆರಸು ತೋಜಿ (ಶಂಸರಾ. ೪-೧೦); ಮಟಿಗಾಲ ಮುಂಟೆಂದು ತಪ್ಪಿದ ಜೋಯಿಸಂ ಬಾವಿಯ ನೀರನಡಕಿ ನೀರ್ಪೊಯ್ದಂ (ಶಂಶತು. ೦೨೬-೨) . **ಭಾವಿ₁** : ಅನುರಾಧೆ ಭಾನು . . . ಉತ್ತರೆಯೆಂಬಿನಿತಟಿಳೊಳಂ ವಿಧಿಯಿಂ ವರುಣನನರ್ಚಿಸಿ ಭಾವಿ ತೋಡೆ ಶುಭಮಂ ಮಾಡ್ಕುಂ (ಲೋಕೋಪ. ೫-೨) ; ಎಲ್ಲೆಡೆಯೊಳಂ . . . ಮಟಿ ಸುರಿದೊಡಂ ನೀರ್ ಪುಣ್ಯಮಿಲ್ಲದ ಸ್ಥಾನಮಂ ಪರಿಹರಿಸಿ ಬಂದು ತೊಜಿ ಕೆಟಿ ಭಾವಿಗಳೊಳ್ ತೀವುವಂತೆ (ರಸರತ್ನಾ. ೬-೦೨೬). **ವಾವಿ₁** : ವಾವಿಯಿಂ ಬಡಗ ತೋಂಟ ೧ (ಕೌಇಇ. IX–i. ೨೦೦-೨೦ ; 1125).

**ಬಾವಿ ಮುಟ್ಟುವದು** = ಬಾಣಂತಿಯು ಹತ್ತು ದಿನ ಕಳೆದ ಮೇಲೆ ಮೈಲಿಗೆಯನ್ನು ಕಳೆಯುವುದಕ್ಕಾಗಿ. ಊರಿನ ಬಾವಿಯ ಕಟ್ಟೆಯ ಬಳಿಗೆ ಹೋಗಿ ಗಂಗೆಯ ಪೂಜೆ ಮಾಡುವುದು : "ಹಡೆದ ಮೇಲೆ ಬಾಣತಿಯು ಗಂಗೆಯ ಪೂಜಿಸುವದು" (ಜಾನಕೋ. ೨೨). **ಬಾವಿ ಮೆಟ್ಟುವದು** = ಬಾವಿ ಮುಟ್ಟುವುದು: "ಹಡೆದ ಮೇಲೆ ಬಾಣತಿಯು ಗಂಗೆಯ ಪೂಜಿಸುವದು" (ಜಾನಕೋ. ೨೨). 'ಪೊಟಿ ಮೆಟ್ಟು' ಪರಾ. [<ಸಂ. ವಾಪಿ]

**ಬಾವಿಗಪ್ಪು** (ನಾ). (ಆನೆಯನ್ನು ಹಿಡಿಯಲು ತೋಡುವ) ಆಳವಾದ ಕುಳಿ ; ಬಾವಿಯಂತಹ ಹಳ್ಳ : ತೆರೆದ ಬಿಂಬಾಧರವು ನೃಪವಮತಿಯ ಗಜಗತಿಗೆ ಸತಿಯುಗವ ಬಾವಿಗಪ್ಪಿನ ಕಾವಿಮಣ್ಣಾಗೆ (ಶ್ರೀರಾಪಪ. ೬೮-೩೪೭).

[ಬಾವಿ + ಕಪ್ಪು₃]

**ಬಾವಿಗೆ** (ನಾ). = ಬಾವಿ : 'ಪಟಿವಾವಿಗೆ' ಪರಾ. [<ಸಂ. ವಾಪಿಕಾ]

**ಬಾವಿದೋಡು** (ಕ್ರಿ). ಬಾವಿಯನ್ನು ಅಗೆ : ಕಿಚ್ಚೆಟ್ಟಿ ಬಟಿಕೆ ನಂದಿಸಲಚ್ಚಗದಿಂ ಬಾವಿದೋಡುವಂತಿರೆ ಕಣ್ಣಂ ಮುಚ್ಚಿ ಜಪಿಯಿಸುವೆ ರಾಘವ ನೆಚ್ಚಂಬಿಂ ಕಾಯಲಾರ್ಪುವೇ ದೇವತೆಗಳ್ (ಕುಂರಾಪಪ. ೦೪-೧೧೦).

[ಬಾವಿ + ತೋಡು₁]

**ಬಾವು** (ನಾ). ೧. (ಪೆಟ್ಟು, ಖಾಯಿಲೆ ಮುಂತಾದುವುಗಳಿಂದ ಉಂಟಾಗುವ) ಊತ ; ಉಬ್ಬು ; ಶೋಫ : ತಗರಂ ಕೊಕ್ಕುಳಿ . . . ಹರಿದ್ರಾದ್ವಂದ್ವಮಿಾ ಪೇಟ್ಟಿ ಮರ್ದುಗಳಂ ಪುತ್ತಿನ ಮಣ್ಣುಮಂ ಕದಡಿ ಕಾಸಿಟ್ಟೆಯ್ದೆ ಪೊಯ್ಯಾಪ ಬಾವುಗಳುಂ ತೀರ್ಚುಗುಂ (ಲೋಕೋಪ. ೯-೨೪೦); ನೊಸಲ ಬಿಸಿಗಣ್ಣನೇಜಿಂದು ಶಿವಲಿಂಗಮಂ ಮುಸುಕಿ ಬೆಳೆದುತ್ತಮಾಂಗವನು ಬಾವೆಂ[ಪಾಠಾಂ. ಹೆಂ]ದು . . . ಶಂಕಿಸಿ ನೋಡಲಮ್ಮದೊಯ್ಯನೆ ದೂರದಿಂದೆ ದೀವಿಗೆವಿಡಿದು ದಿಟ್ಟಿಸಿದರು (ಸಿದ್ಧರಾ. ೨-೪). ೨. ಹುಣ್ಣು ; ಕುರು ; ವ್ರಣ : ಪಿಡಿಯದು ದೋಷಮಿಲ್ಲದತಿನಿರ್ಮಲಮಪ್ಪೆಡೆಯಂ ಜಲೂಕನೋಗಡಿಸದೆ ಬಾವು ತರ್ದು ತುಜಿಯುಳ್ಳ ತ್ರಿದೋಷದ ತಾಣಮಂ ಕರಂ ಪಿಡಿವುದು (ಜೀವಸಂ. ಪಂ. ೦, ೨೩೯-೧೦); ನಾರುಬೇಳೆಸೊಪ್ಪು, ಕಕ್ಕೆಯ ತಿಗುಡು, ನವಣೆಅಕ್ಕಿ ಇವಂ ಅಕ್ಕಿಗಚ್ಚಿನಲ್ಲಿ ಅರೆದು ಪೂಸೆ ಬಾವು ಮಾಣ್ಗುಂ (ಶಿವೈಪಿ. ೬೬). 'ಬಾಪು₁' ಪರಾ. [ಬಾ₁ + – ವು]

**ಬಾವುಂಜಿಗೆ** 'ಬಾವುಜಿಗೆ' ನೋ.

**ಬಾವುಗ** (ನಾ). ಗಂಡುಬೆಕ್ಕು ; ಗಡವಬೆಕ್ಕು : ಬಲುಕಾಲ ಮುದ್ದಿಸಿ ಕಲಿಸಿ ಮಾತುಗಳ ಗಿಳಿಯ ಸಾಕಿ ಬಾವುಗಗೆ ಒಪ್ಪಿಸುವುದು (ಪುರಂದ. ೪-೦೯೩-೪) ; ಮುಳಿಗೆ ಹಂದರ ಹೊಲ್ಲ ಗಿಳಿಗೆ ಬಾವುಗ ಹೊಲ್ಲ (ಸರ್ವಜ್ಞ. ೦೮೯೯).

[ದೇ.॥ ತೆಲು. ಬಾವುರು, ಬಾವುರುಗಾಂಡು, ಬಾವುರುಗಾಡು, ಬಾವುರುಪಿಲ್ಲಿ, ಬಾವುರಂಬಿಲ್ಲಿ ; ಪರ್ಜಿ. ಬಾವ್ಕಿ ; ಕೂಇ. ಬಾಜಡಿ, ಬಾಜಲಿ; ಮರಾ. ಬಾವಗಾ]

**ಬಾವುಜಿ** ' ಬಾಗುಜಿ ' ನೋ.

**ಬಾವುಜಿಗೆ, ಬಾವುಂಜಿಗೆ, ಬಾಹುಜಿಗೆ** (ನಾ). ಒಂದು ಬಗೆಯ ಸಸ್ಯ : ಕಾಡುಜೀರಿಗೆ : "ವಾಕುಚೀ—ಸೋಮವಲ್ಲಿ, ಬಾವುಜಿಗೆ" (ಓಷಂ. ೦೫೦); ಅವಿನಳೆಯೊಳ್ ಚಗಚ್ಚೆಯ ಬಾವುಜಿಗೆಯ ಬಿತ್ತನಲ್ಲಿ ನಿಶಿಗಂಧಕಮೆಂಬೀ ವಸ್ತುವನರೆದೊಂದಿರೆ ಲೇಪಿ(ಪಿ)ಸಿದೊಡೆ ಚಿಬ್ಬಿನುರ್ಬು ಪರ್ಬದೆ ಕಿಡುಗುಂ (ಲೋಕೋಪ. ೯-೦೦೨) ; ರಜನಿ ಸುದಾರ್ವಿ ಬಾವುಜಿಗೆ ಬೇವಿನ ಬಿತ್ತು . . . ನಿಜದೆ ಸಮಾನಮಾಗರೆದು ಲೇಪಿಸೆ . . . ಉಗ್ರವಿಷಂ ಪರೆಗುಂ (ಖಮದ. ೦೩-೦೪). **ಬಾವುಂಜಿಗೆ** : " ಅವಲ್ಗುಜಃ, ಸೋಮರಾಜೀ . . . ಪೂತಿಫಲೀ—ಈ ೮ ಬಾವುಂಜಿಗೆ" (ನಾಚಿರಾ. ೦೦೯). **ಬಾಹುಜಿಗೆ** :

"ಅವಲ್ಗುಜ : . . . ಪೂತಿಫಲೀ—ಲ ಬಾಹುಜಿಗೆಯು ಪೆಸರುಗಳು" (ಸಿದ್ಧಾಂತಿ. ೦೩೩). [ < ಬಾವುಜಿ ]

**ಬಾವುಟ**, **ಬಾವಟೆ**, **ಬಾವುಟೆ** (ನಾ). ಧ್ವಜ ; ಪತಾಕೆ ; ನಿಶಾನೆ : ಏರಿಸಿ, ಹಾರಿಸಿ ಕನ್ನಡದ ಬಾವುಟ (ಕನ್ನಬಾ. viii ಪ್ರಸ್ತಾವನೆ) ; ಎತ್ತಿ ಕಟ್ಟಿದ ಬಾವುಟಗಳು ಪಟಪಟನೆ ಹಾರುತ್ತಿದ್ದವು (ಕಣಾ. ೦೮). **ಬಾವಟೆ** : ಧಾರಿಗಾಳಿಯು ಬಾವಟೆ ಹಾರೆ, ಮೊಳಗಿಸಿ ಮಿಂಚು ಬೆಳಗಿಸಿ, ತೇರ ನಡೆಯಿಸಿ ಸರಿವೆನ್ನ (ಕಪು. ೩೦-೦೦). **ಬಾವುಟೆ** : ಎದುರಿಗೆ ನೋಡು ರಾಠೋರ ಸೇನಾಪತಿಯ ಕೆಂಪುಬಾವುಟೆಯು ಕಾಣುತ್ತದೆ (ಕೋಹಿನೂ. ೪೦).
[ ← ಮರಾ. ಬಾವಟಾ, ಬಾವಹಟಾ, ಬಾಹುಟಾ]

**ಬಾವುಟೆ** 'ಬಾವುಟ' ನೋ.

**ಬಾವುದಿವಸ** (ನಾ). "ಬಲಿ ಕೊಡುವ ದಿವಸ—ವ್ರತದ ಪಾರಣೆ ದಿನ" (ಜೀವಸಂ. ಕೋಶ) : ಅಷ್ಟೋಪವಾಸಮುರ್ಧಾಷ್ಟಮಿಯೆಂಬಿನ ವಷ್ಟಮಿ ಬಾ[ಪಾಠಾಂ. ನಾ]ವುದಿವಸಮಂ ನೋಂತೀವೆ ಜ್ಯೇಷ್ಠಪುತ್ರಕನೆ ಬಿಸುಡಿದಂ (ಜೀವಸಂ. ೨೩೨-೫೨). [ಬಾವು + ದಿವಸ]

**ಬಾವುದೇವಸ** (ನಾ). = ಬಾವುದಿವಸ : ನಾಳೆ ಬಾವುದೇವಸ[ಪಾಠಾಂ. ಜಾವದಿವಸ, ಬಾಯುದೇವಸ, ಬಾಉದೇವಸ]ದೊಳ್ ದೇವತೆಗೆ ಪರಕೆಗುಡುವ ಮಿಾತನನಿಂದಿನ ದೆವಸಂ ಕಾದಿರಿಂ (ಜೀವಸಂ. ೫೬-೩೬೫). [ಬಾವು + ದೇವಸ]

**ಬಾವುಲಿ**$_1$ 'ವಾವಲ್' ನೋ.

**ಬಾವುಲಿ**$_2$, **ಬಾವಲಿ**$_2$, **ಬಾಹುಲಿ** (ನಾ). ೧. ಕಾಲಿನ ಒಂದು ಆಭರಣ ; ಕಾಲ್ಗಡಗ ; ಪೆಂಡೆಯ : ಪಗಲ ಕೈದೀವಿಗೆಯ ಕಾಲ ಹಾಹೆಯ ವೊತ್ತದ ಬಾವುಲಿಯ ಮಾಲೆದೊಡರ ಮಾಸಾಳ್ಗಳ ಮಂತಣದೊಳಂ (೧೧೪. ೨-೦೦೫ ಪ) ; ಚರಣದ ತೊಡರ ಮೊಳಗಿನ ಬಾವುಲಿಗಳಲಿ ಘಣಘಣಧ್ವನಿಯ ನಿಡಿಯೊಡಲು . . . ದಾನವನವನಿ ಹಜ್ಜೆಗೆ ನೆಗ್ಗಲ್ಕೆ ತಂದ (ಕುಮಾರವ್ಯಾಸ. ೦೫-೪೪) ; ಕಾಲಲಿ ಕಿರುಗೆಜ್ಜೆ ನೀಲದ ಬಾವುಲಿ (ಪುರಂದ. ೦-೦೪೦-೫). ೨. ಕಿವಿಯ ಒಂದು ಆಭರಣ; ಕಿವಿಯ ಹಾಲೆಯ ಮೇಲುಭಾಗದಲ್ಲಿ ನೇತಾಡುವಂತೆ ಇಟ್ಟುಕೊಳ್ಳುವ ಮುತ್ತು, ಹರಳುಗಳನ್ನು ಜೋಡಿಸಿದ ಉಂಗುರದಂತಿರುವ ಚಿನ್ನದ ಆಭರಣ : ಮೌಕ್ತಿಕಗಳ ಮುಡಿವಲೆ ಮೆಱೆವ ಬಾವುಲಿಯ ನಿಡುಗುರುಳಿನ ಮುತ್ತಿನ ಕುಚ್ಚಿನಿಂದ ಬಲ್ಬೆಡಗಾಗಿ ಮೆಱೆವರರ್ತಿಯಲಿ (ಕಂಸವ. ೨೪-೪೨) : ಕಿವಿಯೊಳ್ ಮಾತನಾಡುವವೊಲಂತೆ ನವಿಲು ಗಿಣಿ ಬಾವುಲಿ ಗಳನ್ನಿಟ್ಟು (ಶೌಗಂರಿ. ೨೦೦-೬) : ಕಿವಿಯಲ್ಲಿ ಹರಳು ಮುತ್ತಿನ ಬಾವುಲಿ (ತಿರುಗು. ೬೩). **ಬಾವಲಿ**$_2$ : ೨. ಕಿವಿಯಲ್ಲಿ ಹರಳಿನ ಬಾವಲಿ, ಹಣೆಯ ಮೇಲೆ ತಿಲಕ (ಕುಂಹಿಂ. ೦೫೨) ; ಬಲಗಿವಿಯಲ್ಲಿ ಮುತ್ತು ಕಳಚಿ ಹೋದ ಬಾವಲಿಯ ಚಿನ್ನದ ಉಂಗುರವೊಂದು ತೂಗಾಡುತ್ತಿತ್ತು (ಜನಪ. ೨೬). **ಬಾಹುಲಿ** : ೨. ಥಳಥಳಿಸುವ ಬಾಹುಲಿ . . . ಕಂಕಣ ದಿಂದ ಬಲುಸೊಬಗಾಂತನರ್ತಿಯಲಿ (ಕಂಸವ. ೨೩-೬೪).
[ದೇ.॥ ತಮಿ. ಪಾವಿಲಿ; ತುಳು. ಬಾವಲಿ, ಬಾವೊಲಿ; ತೆಲು. ಬಾವಿಲಿ./ ಸಂ. ಬಾಲೀ]

**ಬಾವುಲಿಗಾಜಿ** (ನಾ). ಬಿರುದಿನ ಕಾಲ್ಗಡಗವನ್ನು ತೊಟ್ಟವನು ; ಬಿರುದಾಂಕಿತನಾದ ವೀರ : ಹಿಣಿಲ ಬಾವುಲಿಗಾಜಿರಾವೆಡೆ ಭಾಷೆಯುತಿ ಒಳರು (ಕುಮಾರವ್ಯಾಭೀ. ೪-೩೯). [ಬಾವುಲಿ$_2$ + — ಕಾಜಿ]

**ಬಾವುಲು** 'ವಾವಲ್' ನೋ.

**ಬಾವೆಮಣ್ಣು** (ನಾ). ಒಂದು ಬಗೆಯ ಮೆದುವಾದ ಮಣ್ಣು : ಅಗೆದ ಎಲ್ಲ ಕಡೆಗಳಲ್ಲೂ ಕಲ್ಲುಗಳಿರಲಿಲ್ಲ. ಕೆಲವು ಕಡೆ ಬಾವೆಮಣ್ಣು (ಬಾಳಿನ. ೬೨). [ ← ತುಳು. ಬಾವೆಮಣ್]

**ಬಾಶಿಗ** 'ಬಾಸಿಗ' ನೋ.

**ಬಾಷೀಕಾಗದ** (ನಾ). (ಛಾಪಾಕಾಗದವಲ್ಲದ) ಸಾದಾಕಾಗದ : ಅಸಲು ಚಿಂಗಡಿ ಸಹ ಸಂತೆಂದು ಒಳ್ಳೇ ಬಾಷೀಕಾಗದದಲ್ಲಿ ರಶೀತಿ ಬರೆದು . . . ಕಳುಹಿಸಿಬಿಟ್ಟನು (ಕಥಾವಂ. IV, ೪೩).
[ಬಾಷೀ + ಕಾಗದ. / ತುಳು. ಬಾಶಿಕಾಗಜ]

**ಬಾಷ್ಕಳ**$_1$ (ನಾ). ೧. ಋಗ್ವೇದದ ಒಂದು ಶಾಖೆ. ೨. ಶತೋಪನಿಷತ್ತು ಗಳಲ್ಲಿ ಒಂದು : ಶ್ರೀರುದ್ರಬೃಹದಾರಣ್ಯಕ . . . ಬಾಷ್ಕಳ [ಪಾಠಾಂ. ಭಾಷ್ಕಳ, ಭಾಸ್ಕಳ] . . . ಮೊದಲಾದವೇ ಉಪನಿಷತ್ತುಗಳು (ವಿವೇಕ. ೫).
[ಸಂ. ಬಾಷ್ಕಲ]

**ಬಾಷ್ಕಳ**$_2$ (ನಾ). ೧. ಸುಳ್ಳು; ಹುಸಿ ; ಅಸತ್ಯ : ಪತಿ ವಿಸರ್ಜಿಸಿದಾಕೆ ಗಾವುದಿನ್ನಧಿಕಾರ ಮೃತಿಯೆ ನಿಷ್ಕೃತಿ ಮಗನೆ ಬಾಷ್ಕಳವೆ ಕೇಳ್ ವೀಸುನಿ ಹುತವಹನನಲ್ಲಿಟ್ಟರವ್ವದೆಲೆ ಕಡೆಯಾಣೆಯುಂತಿದಂ ಗ್ರಹಿಸು ನೀನು (ಹರಿಚ. ೧೬-೦೬). ೨. ನಡತೆಯಲ್ಲಿ ಅಥವಾ ಮಾತಿನಲ್ಲಿ ಹಿಡಿತವಿಲ್ಲದಿರುವುದು ; ಸ್ವೈರವೃತ್ತಿ ; ಸ್ವಚ್ಛಂದವರ್ತನೆ. ೩. ಅಸಭ್ಯತೆ : ಎಂಥ ಬಾಷ್ಕಳ ಮಾತಾಡತೀ ನಿಂಗೀ. ಜನಲಜ್ಜಾ ನಿನಗ ಎಳ್ಳಷ್ಟೂ ಇಲ್ಲಲ್ಲಾ (ರಕ್ತರ. ೨೦೬). ೪. ಅಪ್ರಾಮಾಣಿಕನಾದ ವನು : ಏನಪಾ ರಾಮಾಚಾರಿ, ನೀ ಏನು ಬರೇ ಬಾಷ್ಕಳ ಕಾಣತೀದಿ (ತಿರುಗು. ೪೬). [← ಮರಾ. ಬಾಷ್ಕಲ, ಬಾಷ್ಕಳ, ಬಾಸ್ಕಳ]

**ಬಾಷ್ಕಳಂಗೆಯ್** (ಕ್ರಿ). ಅಸಂಬದ್ಧವಾಗಿ ಮಾತನಾಡು ; ಗಳಹು : ಕೇಳಲೆ ನಿರೀಶ್ವರ ಸಾಂಖ್ಯವಾದಿ ನೀಂ ಮತ್ತತ್ವದಿಂ ಭಾಷ್ಕಳಂಗೆಯ್ಯುದಿರ್ (ಅಂಜಕ. ೩-೬-೦೨). [ಬಾಷ್ಕಳ$_2$ + ಕೆಯ್$_1$]

**ಬಾಷ್ಕಳಗೆಡೆ** (ಕ್ರಿ). = ಬಾಷ್ಕಳಂಗೆಯ್ : ಎಲ್ಲಾ ಜಾತಿಗೂ ನಾವೇ ಮಿಗಿ ಲೆಂದು . . . ಬಳ್ಳಿಟ್ಟು ಬಾಷ್ಕಳಗೆಡೆವುತ್ತಿಪ್ಪರಿ ನೋಡಾ (ಸರ್ವಶಿ. ೧೬೫-೬೨೯) ; ಮನೆಯಲಿ ಸೂಳೆಯರ ಮುಂದೊದಱಿ ಬಾಷ್ಕಳಗೆಡೆದು ಬಂದೀಗ ಕೋಲನಿಕ್ಕದೆ ಗಾಯವಡೆಯದೆ ಕಾಲುವೇಗವ ತೋಱಿದೊಡೆ ನಿನ್ನೋಲಗದೊಳೆಂತಕಟ ನಾಚದೆ ಕುಳ್ಳಿತಿಹೆಯೆಂದ (ಕುಮಾರವ್ಯಾವಿ. ೬-೨೪) ; ವೀರಭದ್ರೇಶ್ವರನ ಬೋಧೆಯಂ ಕೇಳದಾ ನಾರಸಿಂಹಂ ಕೊಬ್ಬಿ ಭಾ [ಬಾ] ಷ್ಕಳಂಗೆಡೆದು . . . ಜಱಿವುತ್ತಿರ್ದಂ (ವೀಶೈಕ. ೩-೫-೨೪). [ಬಾಷ್ಕಳ$_2$+ಕೆಡ್ಡೆ$_2$]

**ಬಾಷ್ಟ** (ನಾ). ನಂಜು ; ವಿಷ : ಗಾಯ ಬಾಷ್ಟವೇರಿ ತುಂಬಾ ನೋವಾಗಿದೆ (ರೂ). [← ತೆಲು. ಬಾಸಟ. / ಮರಾ. ಬಾಸಟ, ಬಾಸೂಟ]

**ಬಾಷ್ಪ** (ನಾ). ೧. ಕಣ್ಣೀರು ; ಅಶ್ರು : "ಅಶ್ರು, ಬಾ(ಷ್ಪಂ)ಟ್ಟಂ, ರೋದನ, ನಯನಜಳಂ, ಅಸ್ರಂ—ಈ ೫ ಕಣ್ಣ ನೀರ್" (ಹಲಾಯು. ೬೬-೩೬೫) ; ಕುಚಾಂತರದೊಳ್ ಕೊಳಗೊಂಡು ಮೋಹವಲ್ಲಿಗೆ ಬಿದಿ ತಿರ್ದಿ ಸುತ್ತಿಸಿದ ನೀರ್ಗೆಣೆಯಾದುದು ಬಾಷ್ಪಮೋಪಳಾ (ಶಾಂತಿಪು. ೮-೬೨) ; ಕ್ಷಣದೊಳೊದಗುವ ಬಾಷ್ಪಲುಳಿತೇಕ್ಷಣನು ಬಂದನು ಮನೆಗೆ (ಕುಮಾರವ್ಯಾಆ. ೩-೨೫). ೨. ಹಬೆ ; ಆವಿ : ಹವೆಯೊಳಗೆ ತೊಯ್ದು ವಸ್ತ್ರಗಳನ್ನು ಬಿಚ್ಚಿ ಹರವಿದರೆ, ಅವುಗಳಲ್ಲಿಯ ನೀರು ಬಾಷ್ಪರೂಪದಿಂದ ಹಾರಿ ಹೋಗಿ ವಸ್ತ್ರಗಳು ಒಣಗುತ್ತವೆ (ಮುಂಬಯು. ೫-೦೩೬). ೩. ಒಂದು ಬಗೆಯ ಸಸ್ಯ. [ಸಂ.]

**ಬಾಷ್ಪಜಲ** (ನಾ). ಕಣ್ಣೀರು : ಅಕ್ಷಿಗಳ್ ಬಾಷ್ಪಜಲಪ್ರಶಮಿತರುಚಿಗಳ್ (ಜಗಚಿ. ೩-೬೬). [ಸಂ.]

**ಬಾಷ್ಪವಾರಿ** (ನಾ). = ಬಾಷ್ಪಜಲ : ಅನವರತಬಾಷ್ಪವಾರಿಧಾರಾಪೂರ ಪರಿವಾರಿತಪಲ್ಲವನೇತ್ರೆಯುಂ (ಗದಾಯು. ೦-೫೫ ವ) ; ವಿಲೋಲಲೋಚನೆ ಯಕಟ ನೆನೆದಳು ಬಾಷ್ಪವಾರಿಯಲಿ (ಕುಮಾರವ್ಯಾವಿ. ೩-೫೪). [ಸಂ.]

**ಬಾಸ** (ನಾ). ಒಬ್ಬಾತನ ಹೆಸರು : ಶ್ರೀ ಬಾಸ (ಎಕ. II, ೪೨೨ ; ಸು. 1000) ; ಶ್ರೀ ಬಾಸನಣ್ಣನ ದಣ್ಣಿ (ಎಕ. II, ೪೫೩-೦ ; ಸು. 1000). 'ಬಾಸಬೆ' ಪರಾ. [?]

**ಬಾಸಂತಿ** (ನಾ). ಒಂದು ಬಗೆಯ ಮಲ್ಲಿಗೆ : ವಾಸಂತಿ : ವಾಸಂತೀ — ಬಾಸಂತಿ (ಕಮರ. ೨೫೮ ಪ್ರಿಯೋ) ; ಉಪವನದಲಾಡುತ ಬಾಲೆಯರು ಬಾಸಂತಿ ಮರುಗ ತವಮಾಲ ಮಾಲತಿ ಮಲ್ಲಿಗೆಗಳ ಮನೋಜ್ಞಸೌರಭದ ಲೋಲಭೃಂಗಾವಳಿಯ ಗೀತವನಾಲಿಸುತ (ಶಿಭಾಗ. ೯-೨೦-೦೩).
[<ಸಂ. ವಾಸಂತೀ]

**ಬಾಸಂಬಳ್ಳಿ** (ನಾ). ಒಂದು ಊರಿನ ಹೆಸರು: ಪಡುವಣ ತೊರೆವಳ್ಳಿಯ ಬಾಸಂಬಳ್ಳಿಯೂರ ಮುನ್ನಡ್ಡಣ ಕೆಱೆಯೊಳಿಸಾರ್ಬ್ಬ ನಮ್ಮಸ್ಯಮಂನ್ದೇವ ಭೋಗಂ ಬಿಟ್ಟಂ (ಎಕ. III, ಮೈಸೂರು. ೩೬-೦೫ ; ಸು. ೧೯೦?).
[ಬಾಸ + ಪಳ್ಳಿ$_1$]

**ಬಾಸಗವುಂಡ** 'ಬಾಸಗಾವುಂಡ' ನೋ.

**ಬಾಸಗಾವುಂಡ, ಬಾಸಗವುಂಡ** (ನಾ). ಒಬ್ಬಾತನ ಹೆಸರು: ಉಚ್ಚಂಗಿಯ ಕೋಟೆಗೆ ರಾಜಾದಿತ್ಯನ ಕಾಳೆಗಕೆ ಚಣ್ಣಡೆ ಬಾಸಗಾವುಣ್ಡಂಗೆ ಕೊಟ್ಟ ಕೊಡಗೆ (ಎಕ. XV, ಬೇಲೂರು. ೩೦೫-೬ ; 971). **ಬಾಸಗವುಂಡ :** ಉಪ್ಪರವಳ್ಳಿಯ ಬಾಸಗವುಣ್ಡನ ಬಿಟ್ಟಿಗವುಣ್ಡನ ಮಗಂ ಬಿಟ್ಟಿಯಣ್ಣ (ಎಕ. VI, ಚಿಕ್ಕಮ. ೩೯-೬; 1012). [ಬಾಸ+ಗಾವುಂಡ (<ಗಾಮುಂಡ)]

**ಬಾಸಟ** (ನಾ). (ಆಯುಧಗಳನ್ನು ಹರಿತಗೊಳಿಸುವುದರಿಂದುಂಟಾದ) ಹೊಳಪು : ಕಾಂತಿ : ಕಂತಂ ಪಿಡಿದ ಖಡ್ಗಕೆ ಬಾಸಟವೇಱುವಂತೆ ಜವ್ವನವೇಱಿದಳು (ಶ್ರೀಪಾಲ. ೩-೯೦); ಆ ತನುಜಾತೆಗೆಣ್ಣೆಯನೊತ್ತಿಸಿದಳು ಪ್ರೀತಿಯಿಂದಂಗಭವನ ಪುಷ್ಪಬಾಣಕ್ಕೆ ಓತು ಬಾಸಟಮಿಕ್ಕುವಂತೆ (ನೇಮಿಸಂ. ೨೩-೨೨೩) ; ಸ್ಮರಗಜಕುತ್ತಮಮದವೇಱುವವೊಲ್ ಸುರಭಿಶರಕೆ ಬಾಸಟಮೇಱುವವೊಲು ಹರಿಣಧರಗೆ ಹದಿನಾಱು ಕಲೆಗಳೇಱುವವೊಲ್ ... ವಿದ್ಯಾಧರರಾಯನ ಮಿಸುಕುವ ರೂಪಿಗೆ ಹೊಸಹರೆಯಂ ಬಂದುದು (ಜಯನೃ. ೦೩-೭). [?]

**ಬಾಸಟಮಿಡು** (ಕ್ರಿ). ಮಸೆದು ಕಾಂತಿಗೊಳಿಸು : ಅಂಗೋದ್ಭವನೆಂಬ ಮಹಾಸಾಹಸಿಗಂಗೊಲಿದು ರತಿ ಬಾಸಟಮಿಟ್ಟಲರ್ಗಯ್ದಂ ಕುಡುವಂತೆ (ಜಯನೃ. ೦೪-೨೨). [ಬಾಸಟ+ಇಡು$_1$]

**ಬಾಸಣ, ಬಾಸಣೆ** (ನಾ). ೧. ಹೊದಿಕೆ ; ಮುಸುಕು : ಆಚ್ಛಾದನ : ಚರಣದ ಧೂಳಿ ಬಾಂದೊಱೆಗೆ ಬಾಸಣಮಾಗಿರೆ . . . ಅದ್ಭುತಮಾಹವ ಭೂಮಿಗಪ್ಪಿನಂ (ಗಂಕ. ೩-೭೭); ಪಂಚರಂಗದ ಚೂಣಿಕೆ, ಬಿಳಿಯ ಬಟ್ಟೆಯ ಬಾಸಣ . . . ರತ್ನಾವಳಿಗಳಿಂದ ಮಂಟಪ ಸುಂದರವಾಗಿ ರಾರಾಜಿಸುತ್ತಿತ್ತು (ಗಂಜ. ೦೨೩). ೨. ಯಾವುದಾದರೂ ವಸ್ತುವನ್ನು ಒಳಗೊಳ್ಳುವ ಸಂಪುಟ ; "ಬುಟ್ಟಿ ; ಪೆಟ್ಟಿಗೆ ; ಪಾತ್ರೆ" (ಕೃಕಣ್ಣ). ೩. ಜ್ಞಾನ ; "ತಿಳಿವಳಿಕೆ" (ಕೃಕಣ್ಣ). **ಬಾಸಣೆ :** ೧. "ಬಾಸಣೆಯೆನೆ ಮುಸುಂಕಿ [ಪಾಠಾಂ. ಮಾಸಣೆಯೆನೆ ಮಿಸುಂಕಿ]ದರ್ಥಂ" (ಕಶಬ್ದ. ೬೦); ತೊಳಲ್ವ ಮಂಜಿನ ತಪ್ಪಲೊಳಗೆ ತನ್ನೊಡಲ ಮರೆಗೊಳಿಪ ಹೂವುಲ್ಲುಗಳ ಬಾಸಣೆಯೊಳು ಸುಳುಹು ಕಾಣಿಸದೆಲರ ತೆಳುವ ಬಣ್ಣವ ಚೆಲ್ಲ ತಳಿವ ಮಿಸುನಿಯ ಮಿಂಚುಹುಳುವೊ ನೀನು ? (ಗಿರಿಮಿಂ. ೬-೫೭).
[<ಸಂ. ವಾಸನ./ಪ್ರಾ. ವಾಸಣ./ಹಿಂ. ಮರಾ. ಬಾಸನ ; ಗುಜ. ವಾಸಣಾ]

**ಬಾಸಣಿ** 'ಬಾಸಣ' ನೋ.

**ಬಾಸಣಿಗೆ$_1$** 'ಬಾಚಣಿಗೆ' ನೋ.

**ಬಾಸಣಿಗೆ$_2$** (ನಾ). ಹೊದಿಕೆ ; ಆಚ್ಛಾದನ ; ಮುಸುಕು : ಪೊಸಮುತ್ತಿನ ಬಾಸಣಿಗೆಯೊಳ್ ಬಾಸಣಿಸಿದ ಬಿರಿಮುಗುಳ್ಗಳೊಳ್ (ಶಂಕಭಾ. ೫-೫ ವ) ; ಇರ್ಪುಪೂರೆದ ದುಗುಲದ ಬಾಸಣಿ[ಪಾಠಾಂ. ಣ]ಗೆಯುಂ ಕಳೆದು (ಕಾದಂಬ. ೦೬೮) ; ಸ್ಮರನಲರ್ವಿಲ್ಲ ಬಾಸಣಿ[ಪಾಠಾಂ. ಬಾಣಸಿ]ಗೆಯುಂ ಕಳೆವಂತೆ ಮುಸುಂಕನೋಸರಿಸೆ (ಲೀಲಾವ. ೦೩-೦೨). [< ಬಾಸಣ]

**ಬಾಸಣಿಗೆಗಳೆ** (ಕ್ರಿ). ಮುಸುಕನ್ನು ಓಸರಿಸು: ಗವಸಣಿಗೆಯನ್ನು ತೆಗೆ : ಶಂಖಮುಂ ಬಾಸಣಿಗೆಗಳೆದು . . . ವಿಕ್ರಮಾರ್ಜುನಂಗೆ ಕೊಟ್ಟು (ಶಂಕಭಾ. ೬-೩ ವ). [ಬಾಸಣಿಗೆ$_2$+ಕಳೆ$_1$]

**ಬಾಸಣಿಸು$_1$** 'ಬಾಚಣಿಸು$_1$' ನೋ.

**ಬಾಸಣಿಸು$_2$, ಬಾಚಣಿಸು$_2$** (ಕ್ರಿ). ೧. ಆವೃತವಾಗು : ಆ ಸಭೆಯು ಮನೇಱಿದ ಸಿಂಹಾಸನವುಮನೊಡನೆ ಬೆಳಗೆ ಬೆಳಗಿಂದೆ ಜಗಂ ಬಾಸಣಿಸಿ ದುದೆನೆ ಸಕಲಸುರಾಸುರಪತಿಯುರದೊಳೆಸೆದುದಿಂದ್ರಚ್ಛಂದಂ (ಆದಿಪು. ೯-೭). ೨. ಹೊದಿಸು ; ಮುಚ್ಚು : ಕರಡಿಯ ತೊವಲಂ ಕಾಡಿಗೆಯೊಳರ್ದಿ ವಿಧಾತ್ರಂ ಲೋಕಮುಂ ಬಾಸಣಿಸಿದನೆಂಬಂತಪ್ಪ ಕತ್ತಲೆಯೊಳ್ (ಧರ್ಮಾಪ್ಪ. ೦೨-೨೦). ೩. ಆವರಿಸು ; ಹಬ್ಬು : ಆ ಸುಗಂಧಕಪದುಮಪರಿಮಳ ಬಾಸಣಿಸಿತೀ ಜನಮನೋವಿನ್ಯಾಸವನು (ಕುಮ್ಮಾರ. ೦೦-೩). ೪. ಧರಿಸು ; ತೊಟ್ಟುಕೊಳ್ಳು : ಎಕ್ಕಡವ ಬಾಸಣಿಸಿ ಪದತಳಕೆ ಶೀತಸುವಾಸವನು ತೆಗೆದುಟ್ಟು . . . ಎಲೆವನೆಯ ಹೊಱವಂಟನಾ ರಾಮ (ತೊರರಾ. ೩-೬-೩೪). ೫. ರಕ್ಷಿಸು ; ಕಾಪಾಡು : ಸ್ಥಾಣುಗಾದಿಯ ಹಳೆಯರಣಕಿಸೆ ಪ್ರಾಣವಂ ಬಾಸಣಿಸಲಱಿಯದ ಹೂಣಿಗರು ಜಾಣರುಗಳಭವನೊಳಗಲದವಿರಳರು (ಶಾಸಂಕ. ೯-೦೦). **ಬಾಚಣಿಸು$_2$ :** ೨. ಕರಿಮೊಗಂ ಸುಂಡಲದಿಂ ಸ್ತನ್ಯಪಾನಂಗೈವುತಿರಲ್ . . . ಸೆರಗ ಬಾಚಣಿಸಿದಗಜೆ ಸಲಹಾ (ನವಮೋ. ೬-೨). [ಬಾಸಣ + — ಇಸು$_3$]

**ಬಾಸಬೆ** (ನಾ). ಒಬ್ಬಾಕೆಯ ಹೆಸರು : ತಾಮ್ಮೆಱೆದ ಕದಮ್ಬನಗ್ಗಳದ ಬಾಸಬೆಗ್ಗಾದನೇಂ ಪುತ್ರನುತ್ತಮನ್ನೆರದಿಕೆ ನೋನ್ತು ಮೂಱುದಿನಮಂ ಸುರನಾಗಿದನಿನ್ತು ರಾಚಿಯಂ (ಎಕ. XV, ಹೊಳೆನ. ೬೭-೦೦ ; ಸು. 950).
[ ಬಾಸ + ಅಬೆ (<ಅಬ್ಬೆ$_1$) ]

**ಬಾಸರ$_1$** 'ವಾಸರ$_1$' ನೋ.

**ಬಾಸರ$_2$** (ಗು). ೧. ಬಿಳಿಚಿಕೊಂಡ ; ಪೇಲವವಾದ : ಮಿಡಿದು ಪಾಯ್ದುಪುದಳ್ಳೆರ್ದೆ ಬತ್ತಿ ತೊಂಡೆವಾಯ್ ಬಾಸರವರ್ಣಮಾಯ್ತು (ಅಸಂಪು. ೯-೦೦). ೨. ಮ್ಲಾನವಾದ ; ನಿಸ್ತೇಜವಾದ : ಕೆದಱಿದ ಕೇಶಬಂಧದ ಮಲಿನದೇಹದ ಬಾಸರದ ಶಶಿಮುಖದ ಸೂಸುವ ಸುಯ್ಲ ಸಂದಣಿಯ ಬೇಸಱಿನ ಬೆಜಗಿನಲಿ (ಶಿಭಾಗ. ೬-೦೩-೫೬). (ನಾ). ೩. ಕಾಂತಿ ; ಮೆರುಗು; ಶೋಭೆ : ಮೃದುಪದಪಂಕಜಂ ನಡೆದು ಕೆಂಪು ಮರಲ್ದು ನಿಜಾರುಣಾಂಶು ಪಾಸಿದ ದುಗುಲಕ್ಕೆ ಬಾಸರದ ಮಾಸರಮಂ ಕುಡೆ ಬಂದ ಯೋಗಿರೂಪದ ನಿಧಿಯಂ (ಅಸಂಪು. ೯-೬೫) ; ಒಪ್ಪುವ ಯಜ್ಞಸೂತ್ರಕಂ ಕಿವಿಯ ತೊಳಂಚಿಯುಟ್ಟುಡೆಯ ಬಾಸರಮಿಕ್ಕಿದ ದರ್ಭೆ ಶೋಭೆವೆತ್ತ ವಿರಳಕೂರ್ಚಂ . . . ಒಪ್ಪೆ (ಮಹಾನೇ. ೦೦-೬೭). ೪. ಶುಭ್ರವಸ್ತ್ರ : ಉಟ್ಟ ಬಾಸರದ ಬಂಬಲ್ ದೊಳ್ಳು ಚೆಲ್ವಾಗೆ ಸಂಭಿನ್ನಶ್ರೋತೃ ಧರಾಮರಂ ನೃಪತಿಗಾಶೀರ್ವಾದಮಂ ಮಾಡಿದಂ (ಶಾಂತೀಶ್ವ. ೨-೯೯); ಉಟ್ಟ ಬಾಸರ ಬಳಲುಗಚ್ಚೆಯನಟ್ಟಹಾಸದ ಜನದ ನಗೆಗಳ ನಟ್ಟವಿಗ ನೋಸರಿಸಿ ಸಭೆಯಲಿ ಮೆಲ್ಲನೈತಂದ (ಕುಮ್ಮಾಕ. ೦೫-೦೫). [<ಸಂ. ಭಾಸ್ವರ]

**ಬಾಸಳು** 'ಬಾಸುಳಿ' ನೋ.

**ಬಾಸಾಳೆ** 'ಬಾಸಂಟಿ' ನೋ.

**ಬಾಸಾಳು** 'ಬಾಸಂಟಿ' ನೋ.

**ಬಾಸಿಂಗ** 'ಬಾಸಿಗ' ನೋ.

**ಬಾಸಿಕಾಱ** (ನಾ). ದೇವಸ್ಥಾನದ ಪರಿಚಾರಕ (?) : ಬೀಹಳಿಯರೆನಿ ಬರಾವಡಂ ಮೆಯಲು ವಿ ೧೦ ಬಾಸಿಕಾಱಂ ಪ ೧ × × × (ಎಕ. XV, ೩೯-೦೦ ; 1148). [ ಬಾಸಿ$_1$ + — ಕಾಱ ]

**ಬಾಸಿಕೆ** (ನಾ). (?) : ಸೂಸುವ ಕಣ್ಣ ಕೆಂಪು ಪೊಸಬಾಸುಳಿ ಮೈ ಜಡೆ ಬಿಟ್ಟ ಮಂಡೆ . . . ಕಿಱುಲಜ್ಜೆ ತೊದಳ್ನುಡಿ ದೋರೆವಲ್ಲು ಕೈ ಬಾಸಿಕೆ

ಕೊಯ್ದು ಮುಂದಲೆ ಕಱಂಗಿದ ಕೆಂದುಟಿಯೊಪ್ಪಿ ಬರ್ಪ ಸಂತೋಷದ ಲೇಸು ಬಾಸಣಿಸಿತಾ ಕವಿರಾಜಕಲಾವಿಲಾಸನಾ (ಕಾವ್ಯಸಾ. ಕುಟ. ೩೩೫). [?]

**ಬಾಸಿಗ**, ಬಾಷಿಗ, ಬಾಸಿಂಗ (ನಾ). ೧. (ಹೂವಿನ) ಮಾಲೆ,_ದಂಡೆ : "ಬಾಸಿಗಮೇದು ಪೂಮಾಲೆ" (ಶಶಸಾ. ೬೩-೪೦೭) ; ಸೂಡಿದ ಪಾರಿಜಾತದ ನಮೇರುವ ಬಾಸಿಗವೊಯ್ಯನೊಯ್ಯನಿಪೊರ್ೞಿಡಿದುದು (ಆದಿಪು. ೩-೩) ; ಕಟ್ಟಿಯುಮೇನೊ ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೆ (ಅನಂತಪು. ೦-೪೫) ; ಪಂದಲೆಯೊಂದು ಬಾಸಿಗಂ ನೆತ್ತರ ತಳ್ತ ಬಲ್ದಲೆಯ ಬಂದಿಗೆ . . . ಇವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೫೩೩). ೨. ವಿವಾಹಸಮಯದಲ್ಲಿ ವಧೂವರರ ಹಣೆಗೆ ಕಟ್ಟುವುದಕ್ಕಾಗಿ (ಚಿನ್ನ, ಮುತ್ತು, ರತ್ನ ಗಳಿಂದ ಅಥವಾ ಕಾಗದ, ಬೆಂಡುಗಳಿಂದ) ರಚಿಸಿದ, ಎಡಬಲಕ್ಕೆ ಗೊಂಚಲುಗಳನ್ನುಳ್ಳ ಒಂದು ಬಗೆಯ ಅಲಂಕಾರಸಾಧನ : ಪೊಳೆವ ಬಾಸಿಗಕೆ ಹದಿನಾಱು ದಂಡೆ (ಅವಶಂ. ೨೪೬-೦೩೦೪); ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ (ಮಹಾದೇ. ಬಿ. ೩೭-೬೪) ; ಮಗ ಸೊಸೆಗೆ . . . ಸಿಂಗರಗೆಯ್ದು ರನ್ನದ ಬಾಸಿಗವನು ಕಟ್ಟಿದರು (ಪೋಹತ ೦೩-೬೪). **ಬಾಷಿಗ :** ೨. ಬಣ್ಣದ ಸೊಡರು ಮೆಟ್ಟಕ್ಕಿಗಳ ಗೂಡೆಯು ಸಡಗರದ ಪುತ್ಥಳಿಯು ವಿರಚಿತ ರತುನಬಾಷಿಗದ . . . ಗಂಧಾಕ್ಷತೆ ಯಗಿಲುಗಳೆಸೆದವು (ಅಂಬಿಕಾ. ೪೬-೩೦). **ಬಾಸಿಂಗ :** ೧. ಮಿಂದು ದಳಿಂಬ ಮನುಟ್ಟುಂ ಚಂದನಮಂ ಪೂಸಿ . . . ನವಕುಸುಮದಾಕೃತದಿಂದಂ ಬಾಸಿಂಗಮ ನಿಮಿರಿ ಕಟ್ಟಿದ ಬಟಿಕೆಂ (ಅಟ್ಟಮ. ೯-೨೫); ಅದಟುಳ್ಳ ಭಟರು ಸೂಡುತೆ ಬಾಸಿಂಗ ಡಾಡೆ ಚೇಗಟೆ ದನಿಮಾಡಿಸುತ್ತ್ಯದಿದರು (ಪೋಹತ. ೩೩-೩೪). ೨. ಆಗಮೋಕ್ತಿಯಲಿ ಬಾಸಿಂಗವ ಸೂಡಿದರ್ . . . ಪರಮ ಶೋಭನದಿಂದೆ ಮದುವೆಯುಂ ಮಾಡಿದರ್ (ಪೋಹತ. ೪೨-೬೨); ಆಸೆಯಿಲ್ಲದ ದೋಸೆ ಮೀಸೆಯಿಲ್ಲದ ಮೋಱೆ ಬಾಸಿಂಗವಿರದ ಮದುವೆ ಇವು ಮೂಱು ಹೇಸಿ ಕಾಣಯ್ಯ (ಸರ್ವಜ್ಞ. ೦೪೯೨).

ಬಾಸಿಂಗಬಲ=ಬಾಸಿಂಗವನ್ನು ಕಟ್ಟುವ ಯೋಗ ; ಮದುವೆಯ ಯೋಗ : ಬಾಸಿಂಗಬಲ ಬರಲು ಬಾಸೆ ಕೊಡುವೆನು ತಂಗಿ (ಕನ್ನಜಾ. ೬೯). 'ಕಂಕಣಬಲ' ಪರಾ.

[ದೇ.॥ ತಮಿ. ವಾಚಿಕೈ; ತುಳು. ಬಾಸಿಂಗ, ಬಾಶಿಂಗ, ಭಾಷಿಂಗ ; ತೆಲು. ಬಾಸಿಕ./ಮರಾ. ಬಾಶಿಂಗ, ಬಾಸಿಂಗ ]

**ಬಾಸಿಗಂಗಟ್ಟು** (ಕ್ರಿ). ೧. ಹೂಮಾಲೆಯಂನ್ನು ಹೆಣೆ ; ಹೂದಂಡೆ ಯನ್ನು ಕಟ್ಟು : ಬಾಸಿಗಂಗಟ್ಟುವನಂತು ಕಟ್ಟುವುದು ಕಬ್ಬಮನುಬ್ಬಿನ ಮಾಗೆ ಕಬ್ಬಿಗಂ (ಶೀಲಾವ. ೦-೬೨). ೨. ಮದುವೆಯ ಕಾಲದಲ್ಲಿ ಬಾಸಿಗವನ್ನು ಧರಿಸು : ಬಾಸಿಗಂಗಟ್ಟಿದ ಶೀರ್ಷದಿಂದೆಱ ಗಿದಂ ವಸುದೇವಂ (ಜಗಚ. ೨-೩೦) ; ಮುತ್ತಿನ ಬಾಸಿಗಂಗಟ್ಟಿ ನಂದಿಯಂ ಮೃಡನೇಱಿದಂ (ಶಬಪು. ೩೭-೪).     [ ಬಾಸಿಗ + ಕಟ್ಟು$_1$ ]

**ಬಾಸಿಗಹುವ್ವು** 'ಬಾಸಿಗಹೂ' ನೋ.

**ಬಾಸಿಗಹೂ**, ಬಾಸಿಗಹುವ್ವು (ನಾ). ಮಾಲೆಯಾಗಿ ಕಟ್ಟಿದ ಹೂವು ; ಹೂವಿನ ಹಾರ : ಶ್ರೀಗೊಮ್ಮಟದೇವರ ನಿತ್ಯಾರ್ಚನೆಗೆ ೨೦ ಬಾಸಿಗ ಹೂವಿಂಗೆ ಶ್ರೀಮನ್ಮಹಾಮಣ್ಡಳಾಚಾರ್ಯ್ಯರು . . . ಕೊಟ್ಟ ದತ್ತಿ (ಎಕ. II, ೨೩೭-೫; 1196 ?). **ಬಾಸಿಗಹುವ್ವು:** ಯಿ ಮರಿಯಾದೆಯಲು ಕುನ್ದದೆ ೬ ಬಾಸಿಗಹುವ್ವನಿಕ್ಕುವರು (ಎಕ. II, ೨೪೩-೦೪; 1274 ?).

[ ಬಾಸಿಗ + ಹೂ$_2$ (< ಪೂ$_2$) ]

**ಬಾಸು$_1$** (ಕ್ರಿ). ಮಲವಿಸರ್ಜನೆ ಮಾಡು : " ಬಾಸು — ಪುರೀ ಷೋತ್ಸರ್ಗೇ" (ಶಮದಾ) ; ಬಾಸುತಂ ಹೇಸುತಂ ಮೂಸುತಂ (ಜಪಮು. ೩೫-೦೫); ಲವಂ . . . ಮೂಸಿಯುಂ ಬಾಸಿಯುಂ ಮೇದುಂ ಪಾಯ್ದುಂ ವನವಂ ಮನಮಂತುಟಾಱೆ ಪುಡಿಗುಟ್ಟಿ ಕಿಱಿಕಿಲ್ವ ಹಯಮಂ ದಿಟ್ಟಿಸಿ (ರಾಮಾಶ್ವ. ೦೫೨-೧೦).

[ದೇ.॥ ತಮಿ. ಪಾಚನ = ಭೇದಿ; ತೆಲು. ಪಾಸನ = ಮಲವಿಸರ್ಜನೆ]

**ಬಾಸು$_2$** 'ಬಾರ್ಚು' ನೋ.

**ಬಾಸುಂಡೆ** 'ಬಾಸುಂಟಿಲ್' ನೋ.

**ಬಾಸುಂದಿ**, ಬಾಸುಂದೆ (ನಾ). ಹಾಲನ್ನು ಗಟ್ಟಿಯಾಗುವಂತೆ ಕುದಿಸಿ ಅದರಲ್ಲಿ ಸಕ್ಕರೆ, ಬಾದಾಮಿ, ದ್ರಾಕ್ಷಿ ಮೊದಲಾದುವುಗಳನ್ನು ಬೆರಸಿ ಮಾಡುವ ಮಂದದ್ರವವಾದ ಒಂದು ಬಗೆಯ ತಿನಿಸು : ಮನೆಯಲ್ಲಿ ತಾನೇ ನಿಂತು ಬಾಸುಂದಿ ಪೂರಿ ಅಡಿಗೆ ಮಾಡಿ ಕಮಲೆಯು ಬಯಕೆಯ ಊಟ ಆರಂಭಿಸಿದಳು (ಶಹಾರ. ೦೦೦); ಕರ್ನಾಟಕ ಕ್ಲಬ್ಬಿನಲ್ಲಿ ಇಂದು ''ಬಾಸುಂದೀ ಪುರೆ''ಯಿತ್ತು (ಸಮಕೇ. ೦೦೦). **ಬಾಸುಂದೆ :** ಕಾರ್ಯದರ್ಶಿಯು . . . ''ಬಾಸುಂದೆ, ಪುರೆ'' ಯಾಗಬೇಕೆಂದು ನಿರ್ಣಯಿಸಿದ್ದನು (ಸಮಕೇ. ೦೦೦).

[← ಮರಾ. ಬಾಸುಂದೀ. ಬಾಸುದೀ. ಬಾಸೋಂದೀ]

**ಬಾಸುಂದೆ** 'ಬಾಸುಂದಿ' ನೋ.

**ಬಾಸುಗಿ** 'ವಾಸುಗಿ' ನೋ.

**ಬಾಸುರಕಬ್ಬು** (ನಾ). ಒಂದು ಬಗೆಯ ಕಬ್ಬು : ''ಇಕ್ಷಾಳಿಕ :— ಬಾಸುರಕಬ್ಬು. ಹೆಗ್ಗಬ್ಬು. ಈಶ್ವರಿ'' (೬ಶಧ. ೦೩).

[ ಬಾಸುರ$_0$ + ಕಬ್ಬು$_2$ (< ಕರ್ಪು$_1$) ]

**ಬಾಸುರಿಕೋಡು** (ನಾ). ಒಂದು ಊರಿನ ಹೆಸರು : ಬಾಸುರಿ ಕೋಡು ಇಂಗಳಿಸರ ಬಾಗೆವಾಡಿ ಸಾಮುಳವಾಡಿಗೆ ಒಡ್ಡವೊಡಿಗೆ ಮಧ್ಯವತ್ತಿ[F] ಪಿಪ್ಪರಗೆನಾಮಗ್ರಮೋ . . . ದತ್ತಿ (ಸೌಇಇ. XI–i, ೯-೦೭; 862). [ ? ]

**ಬಾಸುಳ್** 'ಬಾಸುಟಿಲ್' ನೋ.

**ಬಾಸುಳ** 'ಬಾಸುಟಿಲ್' ನೋ.

**ಬಾಸುಳಿ** 'ಬಾಸುಟಿಲ್' ನೋ.

**ಬಾಸುಳು** 'ಬಾಸುಟಿಲ್' ನೋ.

**ಬಾಸುಳುವಡೆ** (ಕ್ರಿ). ಮೈ ಮೇಲೆ ಬಾಸುಂಡೆಗಳನ್ನು ಬರಿಸಿಕೊಳ್ಳು : ಬಳೆಯ ಮುಱಿಯಿಂ ತೋಳೊಳಗೆ ನೆಲಮೊಲೆಗಳಲಿ ಕೊರಳಲಿ ಬರೆದು ಬಾಸುಳುವಡೆದು ಮುಸುಕಿಟ್ಟು ಮಲಗಿದಳರಸ ಕೇಳು (ಶಾಳ್ಯಭಾ. ೨೯-೦೯).

[ ಬಾಸುಳು (< ಬಾಸುಟಿಲ್) + ಪಡೆ$_1$ ]

**ಬಾಸುಳೆ** 'ಬಾಸುಟಿಲ್' ನೋ.

**ಬಾಸುಳೇಳು** 'ಬಾಸುಟಿಲೇಟಿಲ್' ನೋ.

**ಬಾಸುಟಿಲ್**, ಬಾಸಳು, ಬಾಸಾಳ, ಬಾಸಾಳು, ಬಾಸುಂಡೆ, ಬಾಸುಳ್, ಬಾಸುಳ, ಬಾಸುಳಿ, ಬಾಸುಳಂ, ಬಾಸುಳೆ (ನಾ). ಗೀರಿದ ಅಥವಾ ಹೊಡೆದ ಪೆಟ್ಟಿನಿಂದ ಚರ್ಮದ ಮೇಲೆ ಉದ್ದವಾಗಿ ಉಬ್ಬಿ ಕೊಳ್ಳುವ ಗುರುತು : ಮಿಳಿರ್ವಸಿಯ ಪಸಿಯ ಪೊಸವಾಸುಟಿ ಕರರುಹರೇಖೆ ತುಱುಗಿ ರತನಾಟ್ಯಪರಿಸ್ಖಲಿತಕ್ಕೆ ಮುಳಿದು ದಂಪತಿಗಳ ನಂಗಜನಟನ ಸೆಳೆದ ಬಾಸುಟಿನಿಳಿಕಂ (ಆದಿಪು. ೦೨-೦೫) ; ಎಲ್ಲರ ಮೆಯ್ಗ ಳೊಳಂ ತಳುವಿಲ್ಲದೆ ಬಾಸುಟ್ಗಳೊಗೆಯೆ (ರಮಾಣಾಪು. ೩-೨೦೩); ವಿರಹ ದಿನಟಿಲ್ದು ಬಸವಟಿದು ಪೋದೆ ತನ್ನುರದೊಳ್ ಬಾಸುಟಿ ತಳ್ಳು ಶೋಕ ಶಿಖಿಯಂ ಕಟಿಲ್ಚಲೆಂದೊಟ್ಟಿದಸುಗೆದಳಿರು ಪೋಲ್ಕುಂ (ಕಾವ್ಯಾವ. ೨೦೦). **ಬಾಸಳು :** ಬಾಳೆಯ ಸುಳಿಯ ಕಟ್ಟಿಗೆಕೋಲೊಳವ ಹೊಯ್ದು ನೇಳೇಳು ಮೂಲೆಗೋಡಾಡಿ ಆ ಲೇಸುವೆಂಗಳ ಮೈಗೆ ಬಾಸಳು ಪುಷ್ಪಮಾಲೆಯಂ ತೆದ್ದುವಾಕ್ಷಣವೆ (ಭರತ. ೪೬-೭೪) ; ಓಡಿತಂದೊಡನನಿಬರಾಕ್ಷಣ ನೋಡದೆಡ ಬಲಗಳನು ದೈತ್ಯರ ತ್ರಾಡನೆಯ ಬಾಸಳಿನ ತಲೆಬೋಱುಗಳ ಯೇರಿನಲಿ (ಅಂಬಿಕಾ. ೪೦-೪೪) ; ಬೆತ್ತದೇಟಿಗೆ ಭಾಸಳು ಎದ್ದಿದ್ದುವು (ಕೂಶಕಾ. ೨೯).

**ಬಾಸಾಳ :** ಪಂಡಿತನಿಗೆ ತನ್ನ ಕೆನ್ನೆಯ ಮೇಲೆ ಮೂಡಿದ ಬಾಸಾಳದ ನೆನಪಾಯಿತು (ಸಮಜೀ. ೧೨೦೬) ; ಅವಳ ಬೆನ್ನು ಗಲ್ಲಗಳ ಮೇಲೆ ಬೆತ್ತದ ಬಾಸಾಳಗಳು ಮೂಡಿದ್ದುವು (ದೇವದಾ. ೦೩). **ಬಾಸಾಳು :** ಸಿಕ್ಕವರ ಬೆನ್ನಿಗೆ ಬಾಸಾಳು (ಬಾಖಂ. ೫೪) ; ಕೈಕಾಲುಗಳ ಮೇಲೆ ಬಾಸಾಳು ಮೂಡಿದ್ದಲ್ಲದೆ ಅವನ ಹಣೆಯಿಂದ ರಕ್ತವು ಸುರಿಯತೊಡಗಿತು (ಸಮಜೀ. ೨೩). **ಬಾಸುಂಡೆ :** ಬಾಸುಂಡೆ ಬರುವಂತೆ ಸೆಳೆದ (ಅರಳು. ೦೯೭-೦೦) ; ನೀವು ಈ ಅರಿಯದ ಕಂದನಿಗೆ ಬಾಸುಂಡೆ ಬೀಳುವಂತೆ ಹೊಡೆದಿದ್ದೀರಿ (ಶಿಂವನ. ೪೬). **ಬಾಸುಳ್ :** ನೋಡಯ್ಯ ಮಗನೆ ಎನ್ನಯ್ಯ ಮಯ್ಯ ಬಾಸುಳಂ (ನಾಚರ. ೦೬೭-೨೫) ; ಬಾಸುಳಂ ತೋರದಂದದಿ ಬೆರಳ್ಪೊಡೆತಮಂ ಕೊಡು (ವಂಕಾರಾ. ೫-೨-೪೦). **ಬಾಸುಳ :** ನೊಂದನೆಂದು ಮಯೂರನ ಸಂತೈಸಿ ಬಾಸುಳವ ನೋಡುವ ನೆವದಿಂದ ಕುಪ್ಪಸವ ಕಳೆದು ನೋಳ್ಪಾಗ ಮಯೂರನ ಮೈ ಸುವರ್ಣವಾಗಿರೆ (ಭೈರಸೂ. I, ೪೫). **ಬಾಸುಳಿ :** ಕರಿಕಾಲಚೋಳನಾಳ್ಗಳ ಭರದಿಂದಂ ಹೊಡೆದೊಡಿಲ್ಲ ಬಾಸುಳಿಯೆಂದುಂ (ಭೈರಕೃ. ೦೩-೨೮). **ಬಾಸುಳು :** ತಟಿದ ಬಾಸುಳ ಬರಿಯ ಮುಸುಕುವ ನೊಣದ ಹುಣ್ಣುಗಳ . . . ಕುಟುಹನಡಗಿಸಿಕೊಂಡು ಹಸ್ತದ ನಿಟಿಗೆಯಲಿ ನೆಟಿ ಸುಳಿದನಾ ಪ್ರಭುಲಿಂಗ ಲೀಲೆಯಲಿ (ಪ್ರಭುಲಿಂ. ೨೨-೪೯). **ಬಾಸುಳೆ :** ಮಯೂರನಂ ನರಪ ತಾನೆಸೆದು ಬಾಸುಳೆಯ ನೋಡುವ ನೆವದಿ ಶರಿರವಂ ಪರಿಕಿಸೆ ಸುವರ್ಣದಂತಿರಲು (ಶ್ರೀರಾ. ೨-೪೦) ; ಬೆತ್ತದಿಂ ಬಡಿಯೆ, ಬಾಸುಳೆಗಳಿಂ . . . ನೆತ್ತರೊಡಮೂಡಿದೊಡಮವನೊಂದು ಮಾತನೆತ್ತಿಲ್ಲ! (ಗೂರ್ಲ್ಗೃಹ. ೭೬-೨೪೮).

[ದೇ.॥ / ಪ್ರಾ. ಭಾಸುಂಡ = ಹೊರಸೆಳೆಯುವುದು]

**ಬಾಸುಟೀಟು**, ಬಾಸುಳೀಳು (ಕ್ರಿ). ಮೈಮೇಲೆ ಬಾಸುಂಡೆಯೇಳು,—ಬಾರೇಳು : ಮೈ ಬಾಸುಟೀಟ್ಟನ್ನೆಗಂ ಪಟಿದತ್ತಕ್ಕಟ ಪೊಕ್ಕು ಕೇದಗೆಯ ಪೂಗೊಯ್ಯಲ್ಕೆ (ಸೂಕ್ತಿಸು. ೦೦-೬೦). **ಬಾಸುಳೀಳು :** ಹೊಯ್ಲಿನ ಬಿಟುಸಿನಲಿ ಬಾಸುಳೆದ್ದಾ ತನುಗಳಂ ನಸುಮುಟ್ಟಿ ನೋಡುತ ಹೆದಟುತೋಡುತ್ತ (ಬಸಪು. ೫೨-೦೦) ; ಅರಿದು ನೆತ್ತರಗಾಣದಲಗಿದು ನೆಟಿ ಬಗಿಯೆ ಮೈ ಬಾಸುಳೇಳದ ಹುರಿ ಬಲಿದ ನೇಣ್ ಸೋಂಕಿದೊಡೆ ಹೊಗೆ ಮಸಗದೆದೆಗಿಚ್ಚು (ಕುವ್ಯಾಭಿ. ೩-೦೦). [ಬಾಸುಟ್ + ಏಟ್$_1$]

**ಬಾಸಿ$_1$** (ನಾ). ಎದೆಯ ಮಧ್ಯಭಾಗದಿಂದ ಹೊಕ್ಕುಳ ಮೇಲು ಭಾಗದ ವರೆಗೆ ರೇಖಾಕೃತಿಯಾಗಿರುವ ತೆಳುಕೂದಲಿನ ಸಾಲು,—ರೋಮರಾಜಿ : "ನಾಭಿಯ ರೋಮ ಬಾಸಿಯೆನಿಸಿಕ್ಕು" (ಮಂಗರಾ. ೯೪-೫); ಆಕೆಯ ಬಾಸಿಗಳಂ ಪಗೆವರ ಬಾಟ್ಬಾಸೆಗಳುಮೊಡನೊಡನಸಿಯವಾದುವು (ಶಂಶಭಾ. ೦-೦೪೦ ವ); ಭ್ರೂಲತೆಯ ಬಿಲುಗಳ ಕಟಾಕ್ಷದ ಕೋಲ ಹೊದೆಗಳ ಬಾಸೆಗಳ ಕರವಾಳಗಳ . . . ಮನ್ಮಥನಾಳು ನಡೆದುದು ದ್ರೌಪದಿಯ ದಂಡಿಗೆಯ ಬಳಸಿನಲಿ (ಕುವ್ಯಾಭಿ. ೦೩-೩೪).

**ಬಾಸೆ$_2$**, ಭಾಸೆ (ನಾ). ೧. ಜನರು ತಮ್ಮ ಅಭಿಪ್ರಾಯವನ್ನು ಇತರರಿಗೆ ತಿಳಿಸಲು ಉಪಯೋಗಿಸುವ ಪದಪ್ರಯೋಗ ; ಭಾಷೆ : "ಬಾಸೆಯೆ ಭಾಷೆ" (ಕರ್ಣಾಶಿ. ೬೪); ಭಾಷಾ-ಬಾಸೆ (ಶಮದ. ೨೩೫ ಪ್ರಯೋ). ೨. ಕನ್ನಡ, ತಮಿಳು ಇತ್ಯಾದಿ ಬೇರೆಬೇರೆ ಮಾತು,—ವಾಙ್ಮಯ : ಆತನನಾಕೆಗಳ್ ಬಾಸೆಯೊಳಿಂತೆಂದರ್ (ಶಂಶಭಾ. ೪-೯೫ ವ); ಕೆಲದೊಳಿರ್ದ ವಿದಗ್ಧಸೌಂದರಿಯೆಂಬ ವಿಳಾಸಿನಿ ಅರಸಿಯ ಮನಮನಟಿದು ಆಕೆಯ ಬಾಸೆಯೊಳಿಂತೆಂದಳ್ (ಧರ್ಮಾಮೃ. ೪-೦೯೯). ೩. ಆಣೆ; ಶಪಥ; ಪ್ರತಿಜ್ಞೆ: ದೇವಿ ತನ್ನಯ ತನುವಂ ನಿಲೆ ಪಿಡಿವ ಬಾಸೆಯಂ ಮಾಡುಗುವೋ (ಅನಂತಪು. ೬೭೯). ೪. ವಚನ; ವಾಗ್ದಾನ : ಬಾಸೆಯಂ ಬೇಡಿ ನಾನರಚುವಂದೆನ್ನ ಕಯ್ಯೊಳಾರ್ದರಸಿಟ್ಟರೀ ಗಿರಿಕೆಯನ್ನ? (ಗಿಶಂ. ೫೦-೫). **ಭಾಸೆ:** ೪. ಒಲ್ದ ಮಾಟ್ಕೆಯಿಂ ಭಾಸೆಯನಿತ್ತು ಪುಚ್ಚಳಿವರಲ್ಲದೆ ಭಾಸೆ ಯನುದ್ಧರಿಪ್ಪರೇ (ಎಕ. V, ಬೇಲೂರು. ೦೦೨-೦೦೨; ಸು. 1220 ?).

**ಬಾಸೆಯ ಕೊಡು** = ಮಾತು ಕೊಡು; ವಚನ ಕೊಡು; ಭಾಷೆ ನೀಡು : ಪೂಸರಳಿಂದೆ ಶಿವನ ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯ ಕೊಟ್ಟ ಮನ್ಮಥ ಜೀವನಿಗೆ (ಪೋಹಕ. ೫-೬೦). **ಭಾಸೆಗೆ ತಪ್ಪು**=ಆಡಿದ ಮಾತನ್ನು ನಡೆಸದಿರು; ಕೊಟ್ಟ ಮಾತಿಗೆ ತಪ್ಪು; ಭಾಷೆಗೆ ತಪ್ಪು: ಭಾಸೆಗೆ ತಪ್ಪುವಂಕದ ನೆಗಟ್ತೆಯ ಲೆಂಕರ ಗಂಡಂ (ಎಕ. V, ಬೇಲೂರು. ೦೦೨-೦೦೨; ಸು. 1220 ?). [<ಸಂ. ಭಾಷಾ]

**ಬಾಸೆಗೆಡು** (ಕ್ರಿ). ಕೊಟ್ಟ ಮಾತಿಗೆ ತಪ್ಪು, ವಚನಭ್ರಷ್ಟನಾಗು : × × × ಬಾಸೆಗೆಟ್ಟೊಡೆ × × × (ಕೌಇಇ. IX—i. ೨೨-೦೦; 923). [ಬಾಸೆ$_2$ + ಕೆಡು$_1$]

**ಬಾಸೆಗೊಡು** (ಕ್ರಿ). ವಚನ ಕೊಡು; ಮಾತು ಕೊಡು : ಎಲೆ ಶುಕ ನೀನಾವನನೀ ಲಲನೆಗೆ ಪತಿಯೆಂದು ತರ್ಪೆಯಾತನೆ ನಿನ್ನುಜ್ವಲಪಚಿಗೆ ಭರ್ತೃವೆಂದೆನಲೊಲವಿಂದಂ ಬಾಸೆಗೊಟ್ಟು ಕಟುಪಿವರೆನ್ನಂ (ಉದ್ಭಟ. ೬-೦೨೨); ಸುಭುಜಂ ಪಗೆರಾಯರಂ ಕೊಲ್ವೆನೆಂಬಾಸೆಯಿಂ ಬಾಸೆಗೊಟ್ಟು ತನ್ನ ಪಡೆಯಂ ಕೊಂಚೆಗಟ್ಟನ ಕೋಟೆಯಂತೆ ಸವೆದು (ರಾಮಾಶ್ವ. ೯೪-೨೬). [ಬಾಸೆ$_2$ + ಕೊಡು$_1$]

**ಬಾಸೆದೋಟು** (ಕ್ರಿ). ಮಾತಾಡು; ಧ್ವನಿ ಮಾಡು : ಆ ಶಶಿಮುಖಿ ಮಾಗಿಯ ಕೋಗಿಲಂದದಿ ಬಾಸೆದೋಟದೆ ಸುಮ್ಮನಿರಲು (ಜ್ಞಾನಸ. ೨-೭೪). [ಬಾಸೆ$_2$ + ತೋಟು]

**ಬಾಸೆಯಿಲಿ** (ನಾ). ಸುಳ್ಳು ಹೇಳುವ ವ್ಯಕ್ತಿ : ಮೋಸಮನೀವ ಬಾಸೆಯಿಲಿಗಳ್ ದ್ರವಿಡಾಂಗನೆಯರ್ (ಚಕಿ. ೫-೦೬೩). [ಬಾಸೆ+—ಇಲ್ತಿ]

**ಬಾಸೆವಕ್ಕಿ** (ನಾ). ಮಾತನ್ನಾಡುವ ಹಕ್ಕಿ ; ಗಿಳಿ: ಮೊರೆವ ಕುಕಿಲ್ವ ಪಾಡುವ ಬಾಸೆವಕ್ಕಿಗಳ ಗಜಬಜದಿಂ . . . ತಪೋವನಮೊಂದು ಕಣ್ಗೊಳಿಸಲೊಡಂ (ರಾಮಾಶ್ವ. ೬೪-೬). [ಬಾಸೆ$_2$ + ಪಕ್ಕಿ]

**ಬಾಸೆವತ್ತಳೆ** (ನಾ). ಆಶ್ವಾಸನೆಯ ಪತ್ರ ; ಸಹಾಯದ ವಾಗ್ದಾನ ಕೊಡುವ ಪತ್ರ : ಇದು ನಿಶ್ಚಿತಂ ಇನಿತಟಿಳೊಳವರುಪಟಳಕ್ಕೆ ಬೆಚ್ಚದೆಮ್ಮಂ ನಚ್ಚಿರ್ಪುದು — ಎಂದನಿಬರುಂ ಕಳುಪಿದ ಬಾಸೆವತ್ತಳೆಗಳನಿತ್ತು ಬಿನ್ನವಿಪುದುಂ (ಚಕವಂ. ೪೫-೫) ; ಈ ಬಾಸೆವತ್ತಳೆಯು . . . ಕಾಕತಾಳೀಯದ ಫಲಸಿದ್ಧಿಯಾಗಿ. ನಮಗೆ ಬಹಳಮಟ್ಟಿಗೆ ಉಪಕಾರವಾಗುವುದು (ಬಿಟ್ಟಿ. ೬೬-೦೭). [ಬಾಸೆ$_2$ + ಪತ್ತಳೆ$_1$]

**ಬಾಸೆವಾಲ** (ನಾ). ರೋಮಮಯವಾದ ಬಾಲ (?) : ಶೇಷಕಾಯದ ನಿಡಿದ ನಿಳಿಕೆಯ ದೀರ್ಘತರ ಬಾಸೆವಾಲಂ ಮಿಳಿರೆ ನೇತ್ರತ್ರಯಂಗಳೊಂದೇ ಸಮಯದಿಂ ವಿಸ್ಫುಲಿಂಗಂಗಳ ಸೂಸುತಿರೆ ದಿವ್ಯಶಾರಭರೂಪದಿಂ ಬಾಸಂಗಳಿಗೆ ಭಯಭ್ರಾಂತಿಯಂ ತಳೆದು . . . ದುಷ್ಟನರಕೇಸರಿ ಗಗನದೊಳಿರೆ ಮೇಗಣ್ಗೆ ಜಿಗಿದು ಪಕ್ಷಂಗಳಿಂದಪ್ಪಳಿಸಿದಂ (ರಾಭಕ.೦೪-೦೦). [ಬಾಸೆ$_1$ + ಬಾಲ$_1$]

**ಬಾಸೆವೆಣ್**, ಬಾಸೆವೆಣ್ಣು (ನಾ). ವಾಗ್ದೇವತೆ ; ಸರಸ್ವತಿ : "ನುಡಿವೆಣ್, ಬಾಸೆವಣ್ . . . ಸಾರದೆ, ಸರಸತಿ — ಈ ೬ ಸರಸ್ವತಿಗೆ ಪೆಸರ್" (ಕಶಾ. ೪೮-೦೬); ಬಾಸೆವೆಣ್ಣೊಂದೊಲ್ಮೆದಾಳ್ದಿ ವಾಕ್ಸಿದ್ಧಿಯಂ ಪಡೆದು ನಿನ್ನಂ . . . ರತಿಯಿಂ ನೂರ್ಮಡಿ ಮಿಗಿಲೆನಿಸಿ ಬಣ್ಣಿಪೆಂ (ರಾಮಾಶ್ವ. ೯೬-೨). **ಬಾಸೆವೆಣ್ಣು :** "ನಿರುತಂ ತಾಂ ಬಾಸೆವೆಣ್ಣು ಶಾರದೆಯಕ್ಕುಂ" (ಕವಿಕಂ. ೩೦).

**ಬಾಸೆವೆಣ್ಣನಿಯ**=ಸರಸ್ವತಿಯ ಪತಿ ; ಬ್ರಹ್ಮ : "ಪೊಂಬೊಡೆಯಂ . . . ಬಾಸೆವೆಣ್ಣನಿಯ . . . ಬ್ರಹ್ಮಗೆಸೆವ ನಾಮಂ" (ಕಬ್ಬಿಕ್ಕೆ. ೯) ; ಬಾಸೆವೆಣ್ಣನಿಯ ಕೇಳ್ ಭೂಸುಗರ ಸಲಹುವರೆ ವಾಸಿಯಿಂದುದಯಿಸುವೆ ವಸುಮತಿಯೊಳು (ವಂಕಾರಾ.೦-೨-೦೬). [ಬಾಸೆ$_2$ + ಪೆಣ್]

**ಬಾಸೆವೆಣ್ಣು** 'ಬಾಸೆವೆಣ್' ನೋ.

**ಬಾಸೆಹೀನ** (ನಾ). ಕೊಟ್ಟ ಮಾತಿಗೆ ತಪ್ಪುವವನು ; ವಚಸಭ್ರಷ್ಟ : ಬಾಸೆಹೀನನ ಹೆಣವನೀಶನಿವಾಸದೊಳಗಿರಿಸುವುದನುಚಿತಂ (ಬಸಪು. ೨೯-೨೦). [ಬಾಸ್ಯೆ + ಹೀನ]

**ಬಾಸ್ತಿಮಲ್ಲಿಗೆ** (ನಾ). ಮಲ್ಲಿಗೆಯಲ್ಲಿ ಒಂದು ಬಗೆ ; ಕಸ್ತೂರಿಮಲ್ಲಿಗೆ : ಬಾಸ್ತಿಮಲ್ಲಿಗೆ, ಕಸ್ತೂರಿಮಲ್ಲಿಗೆ (ವೃ.ಶಿಗ. ೯೭-೯೩೭). 'ಬಾಸಂತಿ' ಪರಾ. [ಬಾಸ್ತಿ + ಮಲ್ಲಿಗೆ]

**ಬಾಹ** 'ವರ್' ಪರಾ.

**ಬಾಹಟ** (ನಾ). ೧. ಒಬ್ಬ ಪ್ರಾಚೀನವೈದ್ಯನ ಹೆಸರು. ೨. ಆ ವ್ಯಕ್ತಿಯು ಬರೆದ ವೈದ್ಯಗ್ರಂಥ: "ಅಷ್ಟಾಂಗಹೃದಯವೆಂಬ ವೈದ್ಯಗ್ರಂಥ" (ಪಡ್ಮಾ.ಶಾ. ಟಿಪ್ಪಣಿ) : ಸಾಮುದ್ರಿಕಂ. . .ಬಾಹಟಂ[ಕಾಕಾಂ. ಲಂ] ಸಂಸ್ಕೃತಂ ಕ್ಷಾರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಂ . . . ನೆಱೆಯೆ ಕಲ್ಪಿಸಿ (ಪದ್ಮಾರಾ. ೪-೧). ೩. ವೈದ್ಯಶಾಸ್ತ್ರ : ನ್ಯಾಯ ವೈಶೇಷಿಕ . . . ಬಾಹಟ . . . ಧರ್ಮ ವೇದಾಂತ ಸಿದ್ಧಾಂತಗಳಲ್ಲಿ . . . ಸದ್ಯುಕ್ತಿನಿರೂಪಕರಾದ ವಾದಿಗಳಿಂ (ಏಶೇಕ. ೨೩೬); ಮಾನವರಿಗೆಂದೆನಿಸ ಲಪ್ಪುದನೂನವಿಲ್ಲದ ಬಾಹಟದ ಸಂಜ್ಞಾನಿಬಂಧನ ಪೀಟಿಕೆಯನು ಕರ್ನಾಟಕ ಭಾಷೆಯಲಿ (ಏಶೇಶ. ೦೮-೩೨). ೪. [ಸಂಗೀತ] (?) : ಗತಿ ಸಂಗತಿ ವಡೆಯೆ ಗಮಕಂ ಗಾರವಂಬಡೆಯೆ ಗಹಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ ತನ್ನೆವಣೆ ನಿಸ್ಸರಡೆ ರಂಗರಕ್ತಿ ಬೇಗವಣೆತು ತರಹರಂ ಸುಱಿಪೊಟ್ಟಜೆ ದಾಳವಾಳಂ ಪದಿಪೂರ್ಜೆ ಕೊಂಕು ಕಮ್ಮಣೆ ಪೆಸರಂ ಬೆಡಂಗು ವಡೆಯೆ ಪಾಡುತ್ತಿರ್ಪೆಯುಂ (ಶಾಂತೀಶ್ವ. ೦೭-೬೬ ಪ). [ಸಂ.]

**ಬಾಹಣ** (ನಾ). ಬರುವಿಕೆ ; ಆಗಮನ : ಪೆಗ್ಗಳವಾಗಿಹ ತತ್ತ್ವ ಗ್ರಂಥವ ಹೇಳಿ ವಸ್ತುವಾಗಿ ಪರದು ಹೇಗೆ ಬೊಗ್ಗುವಡವೆ ಮಾಡಬಾಹಣ ವಲ್ಲದೆ ಬೊಗ್ಗು ಕಟ್ಟಿಗೆಯಾಗದಾಗ್ಗೆ (ಜಿವಾಕೋ. ೪೪-೫) ; ಅದು ಹೋಪಣ ಬಾಹಣೆಲ್ಲವಮ್ಮಾ (ಜದಾಪ ೭೯-೯) ; ಸೊಗಸಿನಾಟಕೆ ಪಗಲೆಯಿರುಳೆ ಹೋಗಿ ಬಾಹಣವಾಗಿರುತಿಪ್ಪಾ (ಕಕ್ಯೋ.೯. ೬-೭).

[< ಬರ್ (< ವರ್) + — ಅಣ]

**ಬಾಹತ್ತರ** (ನಾ). ಒಂದು ಸಂಖ್ಯೆ ; ಎಪ್ಪತ್ತೆರಡು : ಸೋಮನಾಥಲಿಂಗ ನಿಮಗೆನ್ನ ಕಾಯ ಮುಂತಾಗಿ ಬಾಹತ್ತರ ಡಿಂಗರಿಗರಯ್ಯ (ವಚಸಂ.೨೫೫-೪೫). **ಬಾಹತ್ತರನಿಯೋಗ, ಬಹತ್ತರನಿಯೋಗ** = ರಾಜ, ರಾಣಿಯರಿಗೆ ಎಪ್ಪತ್ತೆರಡು ಬಗೆಯ ಸೇವೆ ಮಾಡುವವರ ಸಮೂಹ : ಅಲ್ಲಿಗಲ್ಲಿಗೆ ಗುಜಿಗುಜಿಗೊಂಡು . . . ಮಱುಗುವ ಬಾಹತ್ತರನಿಯೋಗದಧಿಕಾರಿ ಗಳುಮಂ (ಶರ್ಪಶಾ. ೩-೯ ಪ); ದರ್ಪಣದ ಹಡಪದ ಶಂಖದ ಬಿಂಕದ ಬಾಹತ್ತರನಿಯೋಗಂ (ನಂಬಿಶ. ೮-೦೭); ಭೂವರಂ ಬಹತ್ತರನಿಯೋಗವನು ಪುರಜನವಲ್ಲಭಂ ಬರಿಸಿ ಇಂತೆಂದನು (ಸಮ್ಯಕ್ತ್ವ. ೨-೯೧). **ಬಾಹತ್ತರ ನಿಯೋಗಾಧಿಪತಿ, ಬಾಹತರನಿಯೋಗಾಧಿಪತಿ** = ರಾಜ, ರಾಣಿಯರ ಎಪ್ಪತ್ತೆರಡು ಬಗೆಯ ಸೇವಾಕಾರ್ಯಗಳಿಗೆ ನಿಯಮಿತರಾದ ಗುಂಪಿನ ಪ್ರತಿಯೊಬ್ಬ ವ್ಯಕ್ತಿ : ಸರ್ವಾಧಿಕಾರಿ ಸೇನಾಧಿಪತಿ ಬಾಹತ್ತರ ನಿಯೋಗಾಧಿಪತಿ ಸಕಳಲಕ್ಷ್ಮೀಪತಿ (ಸೌಇಇ. IX-i. ೪೦೭-೯; 1223) ; ಪರಮವಿಶ್ವಾಸಿ ಬಾಹತರನಿಯೋಗಾಧಿಪತಿ ನಿಯೋಗಯೋಗಂಧರನುಂ (ಎಕ.XVI. ಶಿಕ್ಕನಾ. ೭೦-೦೧; 1235). **ಬಾಹತ್ತರನಿಯೋಗಿ**=ಬಾಹತ್ತರ ನಿಯೋಗಾಧಿಪತಿ : ಚಾಳುಕ್ಯಚಕ್ರೇಶ್ವರಕಟಕ ಬಾಹತ್ತರನಿಯೋಗಿ ನಿವಾ ಹಾರಾಧ್ಯನುಂ (ಎಇ. XV. ೮೦-೧೮ ; 1060); ಮಕ್ಕಳ ದೆಸೆಯುವರನೋಲ ಗಿಸುವರ ಬಾಹತ್ತರನಿಯೋಗಿಗಳ ನಂಬುವುದುಚಿತವೇ (ಕುಮ್ಯಾಭ. ೮-೩೫).

[< ಪ್ರಾ. ಬಾಹತ್ತರ./ಸಂ. ದ್ವಿಸಪ್ತತಿ./ಹಿಂ. ಬಹತ್ತರ್ ; ಮರಾ. ಬಹಾತ್ತರ್, ಬಾಹತ್ತರ್]

**ಬಾಹತ್ತರನಿಯೋಗ** 'ಬಾಹತ್ತರ' ಪರಾ.

**ಬಾಹಪ್ಪಳಿಸು** (ಕ್ರಿ). ತೋಳುಗಳನ್ನು ಚಪ್ಪರಿಸು ; ಸೆಡ್ಡುಹೊಡೆ ; ಬಾಹಾಸ್ಫಾಲನಮಾಡು : ಮಲೆತು ನಿಂದು ಅಖಾಡದೊಳ್ ಪೊಕ್ಕು ಬಾಹಪ್ಪಳಿಸಿ ಬಲ್ಪುದೋಱಿಸಿದ ಮಲ್ಲನನುರ್ಬಿತ್ತೊಯ್ಯನೊಳಪೊಕ್ಕು (ಗಂಕ. ೨-೧೦೫ ಪ) ; ಒಲಿದು ಮುದದಲಿ ಭೀಮ ಬಾಹಪ್ಪಳಿಸಿದನು (ಕುಮ್ಯಾಭ. ೧೦-೨೦); ಗಾಢಮುಷ್ಟಿಯೊಳೌಕಿ ಬಿಡದಲ್ಲಾಡಿಸಿದನಾ ಧನುವ ನದು ಕೈಗೂಡದಿರೆ ಕೈದೆಗೆದು ಬಾಹಪ್ಪಳಿಸಿ ಬೊಬ್ಬಿಱಿದ (ಕೊರಂ. ೧-೦೫-೦೬). [ಬಾಹು + ಅಪ್ಪಳಿಸು]

**ಬಾಹರಪುಟ** (ನಾ). (?) : ಬತ್ತೀಸಕಡಿಯ ಬಾಹರಪುಟದ ಗುಳಪದ ಕಣಂಗಳ ಕುಳಿಶದಳಂ (ಅನಂತ. ೦೪-೬ ಪ). [?]

**ಬಾಹಲ್ಯ** (ನಾ). ಅಗಲ ; ವಿಸ್ತಾರ : ತ್ರಿಭುವನಭವನಕಲಶಾಯ ಮಾನವುಂ ಯೋಜನದ್ವಿತಯಾಂತ್ಯಬಾಹಲ್ಯಮುಮಷ್ಟಯೋಜನಮಧ್ಯ ಬಾಹಲ್ಯಮುಂ . . . ಸ್ಫಾಟಿಕಶಿಲಾತಲದ ಮೇಗರ್ಧಯೋಜನಬಾಹಲ್ಯದಿಂ ಘನೋದಧಿಯಿರ್ಕುಂ (ಸುಕುಮಾ. ೧೦-೭೫ ಪ); ಸೀಮಂತಕಾಭಿಧಾನೇಂದ್ರಕಂ ಕ್ರೋಶೈಕಬಾಹಲ್ಯಂ . . . ತತ್ಪ್ರಕೀರ್ಣಕನಿಕರಂ ತದುಭಯಬಹಲ ಕಲಿತಸಂಖ್ಯಾಬಾಹಲ್ಯಂ (ತತ್ತ್ವಸೂ. ೦೩೦). [ಸಂ.]

**ಬಾಹಾಬಲ** (ನಾ). ತೋಳ್ಬಲ; ಭುಜಶಕ್ತಿ: ಪಲರಾ ವಂಶಜರವನೀತಲಮಂ ಪಾಳಿಸಿದರ[ಳ]ವಿನದಟನ ಬಾಹಾಬಲದ ಕಲಿತನದ ಚಾಗದ ನೆಲೆಯ[ನಿಸಿ] ದುದಾರವೀರಗುಣಗಣನಿಳಯರ್ (ಕಶಾ. ೨-೨-೦೬ ; 1058). [ಸಂ.]

**ಬಾಹಾವಿಹೀನತ್ವ** (ನಾ). ತೋಳುಗಳಿಲ್ಲದಿರುವಿಕೆ ; ಭುಜಗಳಿಲ್ಲ ದಿರುವಿಕೆ : ವಿಚಾರವಿಲ್ಲದುಲಿಯಲ್ ಬಾಹಾವಿಹೀನತ್ವದಾಯಾಸಂ ಬಂದುದು (ಶಾವಕ. ೨೯). [ಸಂ.]

**ಬಾಹಾಸ್ಫಾಲನ, ಬಾಹಾಸ್ಫಾಳನ** (ನಾ). (ಕದನಕ್ಕೆ ಸಿದ್ಧವಾಗಿರುವುದನ್ನು ಸೂಚಿಸಲು) ತೋಳುಗಳನ್ನು ಚಪ್ಪರಿಸುವುದು ; ಸೆಡ್ಡು ಹೊಡೆ ಯುವುದು : ಕುವರನ ಬಾಹಾಸ್ಫಾಲನರವಮುರ್ಬಿಸಿಯಗಿದು ಪಾಡಿ ಬಿಡದೊದಱುತ್ತಿರ್ದಪೊಲಾದುದು ತದ್ಗಹ್ವರನಿವಹಪ್ರಭವಾತಿಭೀಷಣಂ ಪ್ರತಿಘೋಷಂ (ಚಂದ್ರಪು. ೫-೭೭). **ಬಾಹಾಸ್ಫಾಳನ** : 'ಬಾಹಾಸ್ಫಾಳನಂ ಗೆಯ್' ಪರಾ. [ಸಂ.]

**ಬಾಹಾಸ್ಫಾಲನಂಗೆಯ್, ಬಾಹಾಸ್ಫಾಳನಂಗೆಯ್** (ಕ್ರಿ). ತೋಳು ಗಳನ್ನು ಚಪ್ಪರಿಸಿಕೊಳ್ಳು ; ಭುಜಗಳನ್ನು ತಟ್ಟಿಕೊಳ್ಳು : ಸಂತಸದೆ; ಬಾಹಾಸ್ಫಾಲನಂಗೆಯ್ದು ದಿಗ್ವಲಯಂ ಮಾರ್ದನಿಯಿಟ್ಟಪೋಲ್ ಗಜಱಿದಂ ಚಾಳುಕ್ಯಕಂಠೀರವಂ (ಗದಾಯು. ೬-೪೭) ; ಓರೊರ್ವರುದೀರ್ಣರೋಷಾ ವೇಶಪರುಷಪಾಟಲಿತಕಟಾಕ್ಷದಿನಡರೆ ನೋಡಿ ಬಾಹಾಸ್ಫಾಲನಂಗೆಯು ಲೊಡನೆ (ಶಬಶಂ. ೪-೭೦ ಪ). **ಬಾಹಾಸ್ಫಾಳನಂಗೆಯ್** : ಅಲ್ಲಿ ಪರಿಪರಿದಾಡಿ ಮುಂತೆ ಬಾಹಾಸ್ಫಾಳನಂಗೆಯ್ದು ಕುಣಿದಾಡಿ (ಬಸಶ. ೯-೭೦).

[ಬಾಹಾಸ್ಫಾಲನ + ಕೆಯ್$_1$]

**ಬಾಹಾಸ್ಫಾಳನ** 'ಬಾಹಾಸ್ಫಾಲನ' ನೋ.

**ಬಾಹಾಸ್ಫಾಳನಂಗೆಯ್** 'ಬಾಹಾಸ್ಫಾಲನಂಗೆಯ್' ನೋ.

**ಬಾಹಿ** (ನಾ). ದೇವಸ್ಥಾನದ ಹೊರಗಿನ ಪರಿಚಾರಕರಲ್ಲಿ ಒಬ್ಬ : ಬಾಣಸದ ಅಪ್ಪಣೆ ಐದಕ್ಕಂ ಗದ್ಯಾಣಂ ಇಪ್ಪತ್ತು ಬಾಹಿಯವರು ಐದಕ್ಕಂ ಗದ್ಯಾಣಂ ಇಪ್ಪತ್ತು ಮಾಲೆಗಾಱರು ಹತ್ತೂ ಅರ್ಧಕ್ಕಂ ಗದ್ಯಾಣಂ ನಾಲ್ವತ್ತೆ ಎರಡು (ಎಕ. III. ತಿರುಮ. ೯೭-೯೩ ; 1276). [?]

**ಬಾಹಿಗೆ** (ನಾ). ಹೊರಭಾಗ ; ಹೊರವಲಯ : ಪೊಟಲಂ ಪೊಱಮಟ್ಟು ಪುರದ ಬಾಹಿಗೆಯನೆಯ್ದುವಾಗಳ್ ಗಾಂಗೇಯದ್ರೋಣಕೃಪವಿದುರಾದಿ ಗಳ್ ಕೊಂತಿವೆರಸೆಯ್ದೆವಂದು (ಕಂಶಶಾ. ೭-೨೦ ಪ). [<ಸಂ. ಬಾಹೀಕ]

**ಬಾಹಿತ್ಥ** (ನಾ). ಆನೆಯ ಕುಂಭಸ್ಥಳದ ಕೆಳಗಿನ ಹಣೆಯ ಪ್ರದೇಶ : ಕರಮುಂ ಸಂ[ಜೋ]ಗಮುಂ ಕುಂಭಮನುರವಣೆಯುಂ ಗ್ರಾಹಮುಂ ಕರ್ಣ

ಜಾಲಾಂತರಮುಂ ನಿರ್ಯಾಣಮುಂ . . . ಪುಷ್ಕರಮುಂ ಬಾಹಿಸ್ಥ [ತ್ಥ] ಮುಂ ಲೋಚನಘಟಮುನಿಷ್ಕೀಕಾಂತಮುಂ ಕೂಡೆ ತೀರೆ ಶರಸಂಘಾತಂಗಳುಚ್ಚುತ್ತಿರೆ ಕೆಡೆದುವಿಭಾನೀಕಂ (ವರ್ಧಮಾ. ೯-೭೯).

[<ಸಂ. ಬಾಹಿತ್ಥ. /₽ ಸಂಸ್ಕೃತದಲ್ಲಿ 'ಬಾಹಿಸ್ಥ' ಎಂಬ ಶಬ್ದರೂಪವೂ ಇರಬಹುದೆಂದು ಕೋಶಗಳಲ್ಲಿ ಹೇಳಿದೆ]

**ಬಾಹಿತ್ರ** 'ಬಹಿತ್ರ' ನೋ.

**ಬಾಹಿರ** (ಗು). ೧. ಹೊರಭಾಗಕ್ಕೆ ಸೇರಿದ. ೨. ಹೊರದೂಡಲಾದ; ಬಹಿಷ್ಕೃತವಾದ. (ನಾ). ೩. ಹೊರಭಾಗ ; ಪೊರವಲಯ : ಬಹಿಃಪ್ರದೇಶ : ಕಟ್ಟಿದ ಮುಟ್ಟು ಬಾಹಿರಿಗೆ ಕಿಟ್ಟೊಡವಂದುದು (ಸಂಪ್ರ.ಪು. ೯-೯೨) ; ಬಾಹಿರದ ಪಾಳ್ದೇಗುಲದೊಳಗೆ ಸಾವಿರ ಸೊಡರು ಗಳನೆತ್ತಿ ಭಜಿಸುವ ನೇಮವಾತಂಗೆ (ಬಸವ.ಪು. ೩೦-೩೯). ೪. ಹೊರತಾದುದು; ಸಂಬಂಧವಿಲ್ಲದುದು : ಅತೀತವಾದುದು : ಆ ತಪ್ಪುತೀರ್ಮಾನ ವೇನೆಂದರೆ. ಭಾರತದ ಪ್ರಾಚೀನ ತತ್ತ್ವಜ್ಞಾನ ಬೌದ್ಧಿಕತತ್ತ್ವಜ್ಞಾನಕ್ಕೆ ಬಾಹಿರ ವೆಂಬುದು (ತತ್ತ್ವಶಾ. ೯) ; ಪುಣ್ಯಪಾಪಗಳಿಂದ ಬಾಹಿರವಾದ ... ಬ್ರಹ್ಮವೆ ನಿನ್ನ ಗಮ್ಯ (ಪಡಿಪಾ. I, ೩೪೦). ೫. ಅಯೋಗ್ಯವಾದುದಂ : ಬಾಹಿರವ ಕಳೆದು ಎಡೆನಾಣ್ಯವನುಳಿದು ಹಲವು ನಾಣ್ಯವ ಕಳೆದು ಸಲುವ ನಾಣ್ಯವ ಹಿಡಿದು ನೋಡುವೆನಯ್ಯಾ (ಶಿವಶ. ೨೭-೭೭). ೬. ಅನರ್ಹ : ಅಯೋಗ್ಯ; ಭರತವಂಶದ ಬಾಹಿರರು ನಿಮ್ಮರಸುಗಳು (ಕುಮಾ.ಭಾ. ೬-೧೨) ; ಕ್ಷಿತಿಗೆ ಬಾಹಿರನಾದೆನ್ನ ಜೀವಿತವ ಹಿಡಿದಿರಲಾಜಿಸು (ಕೌಶಿರಾ. ೨೨-೬೩). ೭. ಕ್ಷುದ್ರ : ಅಲ್ಪ ; ಹೀನ : ವಚನಿಸಿ ಮಾಡದಿಹ ಬಾಹಿರರು ನಾವಲ್ಲ (ಕುಮಾ.ರಾ. ೧-೯೦) ; ಅಂತಕನ ಬಜಿ ಘಲ್ಲಣೆಗೆ ಬೆದರುವರೆ ಬಾಹಿರರಂತೆ ಮರಣದಲಿ (ಶಿಭಾಗ. ೨-೦-೨೮). [ಸಂ.]

**ಬಾಹಿರಂಗ** (ಗು). ೧. ಹೊರಭಾಗಕ್ಕೆ ಸಂಬಂಧಿಸಿದ ; ಬಾಹ್ಯದ ; ಬಹಿರಂಗದ. (ನಾ). ೨. ಹೊರಗೆ ಕಾಣುವಂಥದು : ರಾಕ್ಷಸರ ವಧೆಗಾ ಸುಲಭ ತನ್ನಿಚ್ಛೆಯಲ್ಲಿ ಜನಿಸಿಯೆ ನಳಿನನಾಭನು ಬಾಹಿರಂಗದ ರೂಪ ಧರಿಸುವನು (ಶಿಭಾಗ. ೦೦-೩೬-೭೭). ೩. (ಅಲಂ) ತೋರಿಕೆ ; ಆಡಂಬರ : ಮೋಹಮುಳ್ಳೊಡೆ ತಪ್ತತೈಲಪೂರಿತ ಘನಕಟಾಹದೊಳ್ಕೆಡಪಿ ಸುವನೇ ತಂದೆ ತನಯನಂ ಬಾಹಿರಂಗದ ಶೋಕವೆಂದು ಜಜಿಯದೆ ಶೋಕಂ (ಕೈವಲ್ಯ. ೧೩-೫೬). [ಸಂ.]

**ಬಾಹಿರಗಿತ್ತಿ** (ನಾ). ವೇಶ್ಯೆ : ಸೂಳೆ : ಕೃತ್ರಿಮದ ರೂಪುಗಳು ಬಾಹಿರಗಿತ್ತಿಯರು (ಬಸವ. ೪೦-೩೩). [ಬಾಹಿರ + — ಗಿತ್ತಿ]

**ಬಾಹಿರತನ** (ನಾ). ಅಯೋಗ್ಯತನ : ನಿನಗೆ ಸಾರಥಿಯಾದ ಬಾಹಿರತನವೇ ತಾಸದು ಸಾಲದೇ (ಕುಮಾ.ಭಾ. ೯-೩೭). [ಬಾಹಿರ + — ತನ]

**ಬಾಹಿರವಟ್ಟ** (ನಾ). ಹೊರಗಿನವರ ನಾಣ್ಯ ವಿನಿಮಯಕ್ಕಾಗಿ ಕೊಡ ಬೇಕಾದ ಸೋಡಿ : ಪಟ್ಟಣದೊಳು ಜನ ಕೊಟ್ಟು ಹಣವನೆಡೆವಟ್ಟ ಬಾಹಿರ ವಟ್ಟವೆಂದು ದಿಟ್ಟತನದೆ ಪೆಸರಿಟ್ಟು ವಟ್ಟವ ಕೊಂಬ ಸೆಟ್ಟಿಗಳಿರುತಿಹರಲ್ಲಿ (ಅಂಜನ. ೩-೯೩). [ಬಾಹಿರ + ವಟ್ಟ]

**ಬಾಹಿರಸುಂಕ** (ನಾ). ಒಂದು ಬಗೆಯ ತೆರಿಗೆ : ಮಾಜಲಿ× ×ಕೊಳಲಿ ಬಾಹಿರಸುಂಕವಿಲ್ಲ (ಕೌಶಿಇ. XX, ೨೦೬-೦೦ ; ೧). [ಬಾಹಿರ + ಸುಂಕ₁]

**ಬಾಹಿರಾತ್ಮ** (ನಾ). ನೀಚವ್ಯಕ್ತಿ ; ದುಷ್ಟಾತ್ಮ : ಬಾಹಿರಾತ್ಮರು ಗೌಳತಾಪಸರೋಹಿಲುಮ್ಯನು ಹುಗದಹಗೆ ಶಿವಗೇಹದಲಿ ಹಗಲೆಯ್ದೆ ಕಾವಲನಿರಿಸಿ . . . ಬಾಗಿಲ ಕದವನುಜಿ ಮೋಹಿ ಬೀಯಗವಿಕ್ಕಿಯನಿಬರು ಗಹಗಹಿಸಿ ನಗುತ (ಬಸವ.ಪು. ೯೩-೯೬). [ಸಂ. ಬಾಹಿರಾತ್ಮನ್]

**ಬಾಹು₁, ಬಾಕು₁** (ನಾ). ೧. (ಪೆಟ್ಟು, ಖಾಯಿಲೆ ಮೊದಲಾದುವು ಗಳಿಂದ ಉಂಟಾಗುವ) ಊತ ; ಉಬ್ಬು ; ಶೋಫ : "ಶೋಫಃ, ಶ್ವಯಥುಃ — ಈ ೨ ಬಾ(ವು) ಹು" (ಹಲಾಯು. ೯೮-೪೪೬) ; ಮರುಳ ಮನ್ನಣೆಯಂತೆ ಬಾಹಿನ ಡೊಳ್ಳಿನಂತೆ ಸೂಳೆಯ ಕರೆಪದಂತೆ . . . ಕಡೆ ಬೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ರಘುರಾಮ. ೬-೧೨೨) ; ತೊಜೆಗಣಿಗಿಲಿಗಳವೊಂದಿರೆ ಮಜುಗಿಸಿ ಕಟಿಯಿಂದಮಂತದಂ ಕಟ್ಟಲೊಡಂ ನೆಜಿಯುಡುಗುಂ ಬಾಹು ವಿಷಂ ಪಜಿಪಡುಗುಂ (ಖಪುರ. ೧೬-೭೦). ೨. ಹುಣ್ಣು ; ವ್ರಣ : ವೇದವತಿಯು ಮೊಗ ದೊಳೊಂದು ಬಾಹು ಪುಟ್ಟಿ ಪೊಲ್ಲರಲ್ಲದರು ಪೊಲ್ಲಲೆಂದು ನುಡಿದೊಡೀ ಬಾಹಾದುದೆಂದೆಲ್ಲರ್ಗಂ ತಿಳಿಯೆ ಪೇಟ್ದು (ಪಂಪರಾಮಾ. ೧೬-೩೬ ವ). **ಬಾಕು**₁ : ೧. ಮಂಡಲವಿಷಕ್ಕೆ ಆರುವೇಗ. ಅದರಲ್ಲಿ ಮೊದಲ ವೇಗ ಮುಖ ದಲ್ಲಿಯು ದೇಹದಲ್ಲಿಯು ಹಳದಿವರ್ಣವನು ಮೈಯಲ್ಲಿ ಬಾಕನು ಉಂಟು ಮಾಡುವದು (ಖಪ್ಪ. ೯-೩) ; ನಡುಮಳೆಗಾಲದಲ್ಲಿ ಚಂದ್ರಯ್ಯಗೌಡರ ಮೈಗೆ ಬಾಕು ಬಂದಿತು (ಕಾನೂರು. ೩೬೩). 'ಬಾವು' ಪರಾ.

[ಬಾ₁ + — ಹು₂ (< — ವು₂)]

**ಬಾಹು₂** (ನಾ). ೧. ತೋಳು ; ಭುಜ : "ದೋರ್ಬಾಹು ಭುಜಮೆನಲು ತೋಳಿಂಗೆ ನಾಮಂ" (ಮಂಗರಾ. ೯೩-೭) ; ದಿಕ್ಕರಿಕರಾನುಕಾರಿಗಳಪ್ಪ ಬಾಹುಗಳಿಂದಮೋರೊರ್ವರಂ ತೆಗೆದಪ್ಪಿ (ಶಂಕರ. ೯-೩೩ವ); ಖಳನ ಬಾಹುವ ನೊದೆದು ತುಜುಬಿಗೆ ನಿಲುಕಿ ಕುಸುಬಿದನು (ಕುಮಾ.ಭಾ. ೨೨-೩೩). ೨. ಹನ್ನೆರಡುಅಂಗುಲದ ಒಂದು (ಉದ್ದಳತೆಯ) ಪ್ರಮಾಣ. ೩. [ಜ್ಯೋತಿ] ಆರ್ದ್ರಾನಕ್ಷತ್ರ. ೪. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಯಮ ನಯನ ಕರ್ಣ ಕರ ಪದ . . . ಬಾಹು ಕಿವಿಗಳೆರಡಱ ನಾಮಂ (ವ್ಯವಹ. ೯-೨). ೫. [ರೇಖಾಗ್ರಾ] ಆಕೃತಿಗಳ ಹೊರವ್ಯೆಯನ್ನು ರಚಿಸುವ ರೇಖೆ ; ಭುಜರೇಖೆ : ಎರಡು ತ್ರಿಭುಜಗಳ ಕೋಣಗಳು ಪರಸ್ಪರ ಸಮನಾಗಿದ್ದರೆ, ಅವುಗಳ ಪರಸ್ಪರ ಬಾಹುಗಳು ಒಂದೇ ಪ್ರಮಾಣದಲ್ಲಿರುತ್ತವೆ (ಗಣಿತ. ೦೯). [ಸಂ.]

**ಬಾಹುಗಡಿ** (ನಾ). ಮುರಿದ ತೋಳು ; ತುಂಡಾದ ತೋಳು : ಕಂಧರ ಗಡಿ ಬಾಹುಗಡಿ ಹಸ್ತಗಡಿ ನೀರಂದದ ನಡುತೊಡೆಗಡಿಯ ವೃಂದಾರಕ ವಿರೋಧಿಗಳು ಬಿದ್ದರು ಕಾಮನಂದನಬಾಣಗಳಿಂದೆ (ಕೋಹತ. ೩೩-೨೨).

[ಬಾಹು₂ + ಕಡಿ₃]

**ಬಾಹುಗತ್ತರಿ** (ನಾ). ಮಲ್ಲಯುದ್ಧದ ಒಂದು ಪಟ್ಟು ; ತೋಳು ಗಳಿಂದ ಪಟ್ಟಿಗೆ ಸಿಕ್ಕಿಸಿ ಹಿಡಿಯುವುದು : ತುಡುಕಿ ಪಿಡಿದು ತೊಡೆಗಳಂ ನಡುವಂ ಚೂರ್ಕರಿಸಿ ಬಾಹುಗತ್ತರಿಯಿಂ ಗಳಮನೊತ್ತುವುದುಂ (ಮಹಾನೇ. ೬-೭೭ ವ). [ಬಾಹು₂ + ಕತ್ತರಿ₂]

**ಬಾಹುಜ** (ನಾ). ೧. ಕ್ಷತ್ರಿಯ ; ಪಾರ್ಥಿವ : ₽ ವಿಷ್ಣುವಿನ ತೋಳಿನಿಂದ ಕ್ಷತ್ರಿಯರು ಹುಟ್ಟಿದರೆಂಬ ಪೌರಾಣಿಕನಂಬಿಕೆಯಿದೆ : ಕಾದಿ ಸಾವುದು ಮೇಣು ರಿಪುಭಟನಾದವನ ನೆತ್ತಿಯಲಿ ಸಬಳವ ಕೋದು ಕೊಂಬುದು ನೆಲನನಿದು ಬಾಹುಜರ ಮಕ್ಕಳಿಗೆ (ಕುಮಾ.ಉ. ೦-೯) ; ವೈಹಾಳಿಯನುಡಿದು ಬಾಹುಜನಿವಹಂ ಬೀಡಂ ಪುಗುತರೆಯುಂ (ರಾಮಾಶ್ವ. ೨೨-೦೬) ; ಕಾದುವುದು ಬಾಹುಜರ ಧರ್ಮ (ನಾಗಂ. ೩೯-೦೩). ೨. ಗಿಳಿ. [ಸಂ.]

**ಬಾಹುಜಿಗೆ** 'ಬಾವುಜಿಗೆ' ನೋ.

**ಬಾಹುತಳ** (ನಾ). ಕುಸ್ತಿಯ ಒಂದು ವರಸೆ ; ಎದುರಾಳಿಯನ್ನು ತೋಳಿನ ಒಳಗೆ ಸಿಕ್ಕಿಸಿಕೊಳ್ಳುವುದು,— ಹಿಡಿಯುವುದು : ಭುಜಗ ಬಂಧಂ ತೋರಹಸ್ತಂ ಶಿರೋವಳಯಂ ಬಾಹುತಳಂ ಚಮತ್ಕರಿಸೆ ನಾನಾಕೌಶಲಂದೋಱಿದರ್ (ಕಬಸಂ. ೯-೬೩ ವ). [ಸಂ. ಬಾಹುತಲ]

**ಬಾಹುದಣೆ** (ನಾ). ಮಲ್ಲಯುದ್ಧದ ಒಂದು ಪಟ್ಟು,— ವರಸೆ : ಪಾಸಗೆ ವನ್ನಿಮುಟ್ಟೆ ಚಟ್ಟು ಸಿರಣವಟ್ಟೆ ಬಾಹುದಣೆ ಖಮ್ಮರಿ ಕತ್ತರಿ . . . ಎನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (?) (ಸಂಪ್ರ.ಪು. ೫-೭೬) ;

ತಿರುಣೆ ಕುಳಾಡೆ ಬಾಹುಗ್ [ದ್] ಣೆ ಸುಭಾಹುಡೆ . . . ಪಟ್ಟಕತ್ತರೆಗಳೆ ನಿಪ್ಪ ಜಟ್ಟಿಗರ ಬಿನ್ನಣವೊಪ್ಪೆ ಕಡಂಗಿ ಕಾದಿದರ್ (ತ್ರಿಪುರ. ೨೬-೧೮). 'ದಣಿವಟ್ಟಿ' ಪಠಾ. [ಬಾಹು$_2$ + ದಣ್$_0$]

**ಬಾಹುದೆಕ್ಕೆ** (ನಾ). ತೋಳಿನ ತೆಕ್ಕೆ ; ಬಾಹುಬಂಧನ : ಭರತೇಶ . . . ಶ್ರೀಹಂಸನಾಥಯೆಂದೊಡನೆದ್ದು ಕುಳಿತನಾ ಬಾಹುದೆಕ್ಕೆಯು ಪಟ್ಟದರಸಿ ಆ ಹೊತ್ತಿನೊಳೆ ರಾಯನಳುವ ಕನಸ ಕಂಡು ದೇಹ ಕಂಪಿಸುತಿರ್ದಳೊಡನೆ (ಭರತ. ೬೩-೦೦). [ಬಾಹು$_2$ + ತೆಕ್ಕೆ$_1$ (<ತಟಿಕ್ಕೆ)]

**ಬಾಹುಪುರಿ** 'ಬಾಪುರಿ' ನೋ.

**ಬಾಹುಪೂರ** (ನಾ). ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ; ಕೇಯೂರ : " ಬಾಹುರಿಕೆಯೆನಲ್ಕೆ ಬಾಹುಪೂರಕೆ [ಶಾಣಂ. ರಕ್ಷೆಗೆ] ನಾಮಂ " (ಶಾರಿ. ೫೩); ಒಂದುಗೆಯ ಬಾಹುಪೂರಮುಂ ದಾಡಿಮಿಬೀಜದ ಕರ್ಣಾವತಂಸಮುಂ . . . ಮಿಗೆ ಸೊಗಸಂ ಮೂಡಿಸೆ (ಗಿಂಶ. ೬-೧೦ ವ); ಸಲ್ಲಲಿತಕಾಂತಿಯು ಕಳಲ್ಚುವ ಭುಜಗಳಿಂದುರಗಬಾಹು ಪೂರಗಳಿಂದಲವಿರತಂ ವಿಶ್ವತೋಬಾಹು ಸಿಂಹಾಸನಾಗ್ರದೊಳು ಕಣ್ಗೊಳಿ ಸಿರ್ದನು (ಸಂಪಿಷೂ. ೫-೮). [ಸಂ.]

**ಬಾಹುಪೂರಕ** (ನಾ). = ಬಾಹುಪೂರ : ಒದವಿದ ನವ್ಯಲತಾಮಧ್ಯದ ಕುಸುಮಮಾಳಿಯೊಳೆ ಮೊರೆವ ಮಜೀದುಂಬಿಗಳಂ ಮುದದಿಂ ಕೀಲಿಪವೋಲ್ ನೀಲದ ರವೆಯುದ ಬಾಹುಪೂರಕಂಗಳನಿತ್ತರ್ (ಗಿಂಶ. ೧೦-೬೩); ಶ್ರೀಪಥು ಮುತ್ತಿನೆಕ್ಕಸರದಂತುರದೊಳ್ ನಲಿವಂತು ವಿಕ್ರಮಶ್ರೀವಧು ಬಾಹು ಪೂರಕದವೋಲ್ ಭುಜದೊಳ್ ನಲಿವಂತು . . . ಪಾಲಿಸಿದನುರ್ವರೆಯಂ ಕಲಿ ಸೋಯಿಬಲ್ಲಹಂ (ಎಕ. VI, ಕಡೂರು. ೦೨-೨; 1233). [ಸಂ.]

**ಬಾಹುಪೂರಯ**(ನಾ). = ಬಾಹುಪೂರ : "ಕೇಯೂರಮೆನೆ ಬಾಹುಪೂರಯ ಮಕ್ಕು" (ಮಂಗರಾ. ೦೦೦-೨೬); ಬಾಹುಪೂರಯಮಂ ತೋಳ್ಗೆ ಕೈ ಕೊಳಿಸಿ (ಬಸರ. ೬-೦೯); ಪದಕದ ಬಾಹುಪೂರಯುದ ತೊಳತೊಳಗುವೆಳ ಮಾಣಿಕದ ಕರ್ಣಪೂರದ ಮಹಾಮುದ್ರಿಕೆಗಳ . . . ಸೊಬಗನಡಿಯಿಟ್ಟನ ಪ್ರತಿಮನವನೀಶನು (ಪಕಶಾ. ೪-೨). [<ಸಂ. ಬಾಹುಪೂರಕ]

**ಬಾಹುಬಲ** (ನಾ). ತೋಳಿನ ಬಲ ; ಭುಜಶಕ್ತಿ : ಬಾಹುಬಲವಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು (ಶಾಂತಿಪು. ೯-೫೦ ವ); ಬಾಹುಬಲ ಬಲವಲ್ಲ ದೈವ ದ್ರೋಹಿಗಳಿಗೆ (ಕುಮ್ಹಾಕ. ೦೫-೦೯) ; ಭರತಖಂಡದ ಆಧುನಿಕ ದುರ್ಗತಿಗೆ ಪ್ರಧಾನಕಾರಣ ಬಾಹುಬಲದ ಅಭಾವ (ಬಂಕಿಮ.೯೬೬). [ಸಂ.]

**ಬಾಹುಬಲಿ** (ನಾ). ೧. ಬಾಹುಬಲವುಳ್ಳವನು. ೨. ಆದಿತೀರ್ಥಂಕರನ ಎರಡನೆಯ ಮಗ : ಇಂತಾದೊಡೆಮಗೆ ಬಾಹುಬಲಿಯ ಸಮರಸಂಘಟ್ಟ ದೋಹಳಮಿದು ದರಿದ್ರಂಗೆ ಹೀನಗರ್ಭದೋಹಳದಂತಾದುದು (ಆಂಪು. ೧೯-೨೦೨ ವ). [ಸಂ. ಬಾಹುಬಲಿನ್]

**ಬಾಹುಬಳೆ** (ನಾ). = ಬಾಹುಪೂರ : ಬಾಹುವಳಯ — ಬಾಹುಬಳೆ (ಕರುದ. ೨೯೯ ಪ್ರಯೋ). [ <ಸಂ. ಬಾಹುವಲಯ ]

**ಬಾಹುಮುರಿ** (ನಾ). = ಬಾಹುಪೂರ : ಶರೀರಕ್ಕೆ ಆನಂದಕರವಾಗಿ . . . ಅರಸುಗಳ ಮನಸ್ಸೆಂಬ ಸಮುದ್ರಕ್ಕೆ ಕೆರೆಯೋಪಾದಿಯಲ್ಲಿ ಪ್ರಕಾಶಿಸುವುದೇ ಬಾಹುಮುರಿಯ ಗುಣಗಳು (ಸಕಳವ್ಯ. ೩೯) ; ಪೂರ್ವದ ಕವಿಗಳು . . . ರಾಜರು ಧರಿಸುವ ಕಿರೀಟ, ಭುಜಕೀರ್ತಿ, ಏದೆಹಾರ, ಬಾಹುಮುರಿ . . . ಮಂಜೂರಿ ಮುಂತಾದುವುಗಳನ್ನೂ ಬಣ್ಣಿಸಿರುವರು (ಹುಟ್ಟಿಹ. ೬೩). [ಬಾಹು$_2$ + ಮುರಿ$_3$ (< ಮುರಿವು)]

**ಬಾಹುಮೂಲ** (ನಾ). ಕಂಕುಳು ; ಬಗಲು : "ಕಕ್ಷಂ, ಬಾಹುಮೂಲಂ– ಈ ೨ ಕೌಂಕುಟು" (ಹಲಾಯು. ೯೬-೩೭೦) ; ಎವೆಯಿಕ್ಕದೆ ನೋಡುವ ನರರಮರರ ಕಣ್ಗಳೊಲೆನ್ನಂಗರಾಜನ ಬಯ್ತುಟ್ಟಮರ್ದಂ ಕೊಳೆ ತಳಿದು ನಾಭಿಮೂಲಮುಂ ಬಾಹುಮೂಲಮುಂ ಸುರವಧುವಾ (ಅರಿಕೃ. ೯-೩೫) ; ಒಂದು ಸರಕಿಯ ತಡಿಯುಲಳವಡೆ ನಿಂದು ಸಂವರಿಸಿದನು ಗದೆಯನು ಬಾಹುಮೂಲದಲಿ (ಕುಮ್ಹಾಗ. ೪-೭). [ಸಂ.]

**ಬಾಹುರಕೆ** 'ಬಾಹುರಕ್ಕೆ' ನೋ.

**ಬಾಹುರಕ್ಕೆ**, ಬಾಹುರಕೆ (ನಾ). ೧. ಯೋಧರು ತೋಳಿಗೆ ರಕ್ಷಣೆ ಯಾಗಿರಲೆಂದು ತೊಡುವ ಕವಚ ; ಭುಜತ್ರಾಣ : ಗುರು ಕವಚಂ ಕರ್ಣಂ ಬಾಹುರಕ್ಕೆ ಸುರಸಿಂಧುನಂದನಂ ಸೀಸಕಂ (ಗದಾಯು. ೨-೨೮) ; ಎಕ್ಕತುಳಕ್ಕಿಜಿವ ವೈರಿ ನಿನ್ನಿಕ್ಕಿದ ವಜ್ರದಮುಪ್ಪರಕೆ ಸೀಸಕವೊನ್ನಿದ ಬಾಹುರಕ್ಕೆ ತಾವಕ್ಕಟ ತಾಯ ಉಟ್ಟ ನಿಜಿ ಬಿಟ್ಟ ಸಿರಂ ಮುಗಿದಿರ್ದ ಕಯ್ ಸಮುನ್ನಿಕ್ಕಿದ ಕೈದು ಹೊಕ್ಕ ಜಳ . . . ಆಜಿಯೊಳ್ (ಎಕ. VI, ಕಡೂರು. ೩೫-೩೯ ; 1136) ; ನುಗ್ಗಾದ ಗುಳವನು ಬಿರಿದ ಸೀಸಕ ಬಾಹುರಕ್ಕೆಯ ಮುಜಿದ ಬಲ್ಲೆಹದ ಅರೆಗಡಿದ ಬಿಲ್ಲುಗಳ . . . ಮುಕ್ಕಾದ ಕೈದುವ ತರಿಸಿ ಕಳುಹಿಸುತಿರ್ದನತಿರಭಸದಲಿ ಕಲಿದ್ರೋಣ (ಕುಮ್ಹಾದ್ರೋ. ೦೫-೦೬). ೨. ಆನೆಯ ಎರಡು ಪಕ್ಕಗಳಿಗೂ ರಕ್ಷೆಯಾಗಿ ಕಟ್ಟುವ ರಂಚೆ ; ಪಕ್ಕರಕ್ಕೆ: ಮದಜಳದ ಕವಡಂ ಕದರಿ ಕೆದಱುವ ಕರ್ಣ ಚಾಮರದ ಕತ್ತಲೆಸಿರ್ಪಿನ ಬಾಹ [ಹು] ರಕ್ಕೆಯುಂ (ಅನಂಪು. ೧೯-೬ ವ). **P** ಇದು 'ಪಕ್ಕರಕ್ಕೆ' ಎಂಬ ಶಬ್ದ ಮತ್ತು ಅರ್ಥಗಳ ಸಾಮ್ಯದಿಂದ ಆದ ಪ್ರಯೋಗವಿರಬಹುದು. **ಬಾಹುರಕೆ:** ೧. ಕರತುಷಾರದ ಲಿವರು ಮೋಜೆಯ ತಿರುಹೆ ನನೆದವು ಬಾಹುರಕೆ ಹಕ್ಕರಿಕೆ ಹಲ್ಲಣ ಜೋಡು ಸೀಸಕ ಛತ್ರ ಚಮರಿಗಳು (ಕುಮ್ಹಾದ್ರೋ. ೩-೪೦). **P** ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು.

[<ಸಂ. ಬಾಹುರಕ್ಷಾ]

**ಬಾಹುರಕ್ಷೆ** (ನಾ). = ಬಾಹುರಕ್ಕೆ ೧ : ಜೋಡು ಸೀಸಕ ಬಾಹುರಕ್ಷೆಗಳ ಮುರುಹಿ ಬಗಿದನು . . . ರಥವೇಜಿದನು ಕಲಿದ್ರೋಣ (ಕುಮ್ಹಾದ್ರೋ. ೯-೦೫) ; ವೀರಪಟ್ಟದ ಬಾಹುರಕ್ಷೆಗಳಿಂದ ಖಳನೆಸೆದ (ಕೌರಾ. ೪೧-೨). [ಸಂ. ಬಾಹುರಕ್ಷಾ]

**ಬಾಹುರಿ** 'ಬಾಪುರಿ' ನೋ.

**ಬಾಹುರಿಕೆ** (ನಾ). ಬಾಹುಪೂರ ; ಕೇಯೂರ : "ಬಾಹುರಿಕೆಯೆನಲ್ಕೆ ಬಾಹುಪೂರಕೆ [ಶಾಣಂ. ರಕ್ಷಗೆ] ನಾಮಂ" (ಶಾರಿ. ೫೩). [< ಬಾಹುರಿ]

**ಬಾಹುಲ** (ಗು). ೧. ಅನೇಕವಾದ ; ಅಧಿಕವಾದ. (ನಾ). ೨. ಹೆಚ್ಚಳ ; ಆಧಿಕ್ಯ ; ವಿಪುಲತೆ. ೩. ಕಾರ್ತೀಕಮಾಸ. ೪. ಬಾಹುರಕ್ಷೆ. ೫. ಅಗ್ನಿ. [ಸಂ.]

**ಬಾಹುಲಿ** 'ಬಾವುಲಿ$_2$' ನೋ.

**ಬಾಹುಲೇಯ** (ನಾ). ಕಾರ್ತಿಕೇಯ ; ಸ್ಕಂದ. [ಸಂ.]

**ಬಾಹುಲ್ಯ**, ಬಾಹುಳ್ಯ (ನಾ). ೧. ಹೇರಳ ; ಆಧಿಕ್ಯ. ೨. ಮಹತ್ತ್ವವುಳ್ಳದು ; ಘನವಾದುದು : ಕೃತಿ ಬಾಹುಲ್ಯಮಪ್ಪುದೆಂದವ ಬುಧರು ಬಲ್ಲಂತನೇಕರೊರೆದಿಹರು (ಕೃಷ್ಣವಿ. ೧-೨೨). ೩. ವಿಸ್ತಾರ ; ಚಿತ್ರೆಯೆಂಬ ಧಾತ್ರಿ ಮೊದಲ್ಗೊಂಡು ಕೆಳಗಶೀತಸಹಸ್ರೋತ್ತರಲಕ್ಷಯೋಜನಬಾಹುಲ್ಯ ಮನಾಂತು ರತ್ನಪ್ರಭೆಯೆಂಬ ಪೃಥ್ವಿಯಿರ್ಕುಂ (ಸುಕುಮಾ. ೧೧-೪೦ ವ). **ಬಾಹುಳ್ಯ:** ೧. ಸಂಗ್ರಹಣದ ಬಾಹುಳ್ಯ ನಮ್ಮ ಶಕ್ತಿಗೆ ಮೀರಿದು ದೆನ್ನಿಸಿತು (ಹಸುಹೂ. ೦೧೫). [ಸಂ.]

**ಬಾಹುವಳನ** (ನಾ). ತೋಳುಗಳ ಚಲನೆ : ಆಕೆಯುರ ನವವಿಧ ಬಾಹು ವಳನದಿಂದೆಲಲತೆಯ ಬಳ್ಳಿ ಚಳಿಸಿದಂತೆಯುಂ . . . ಅತಿಮನೋಹರವಾಗೆ (ಶಂಪ್ರಪು. ೧೨-೦೬೪ ವ). [ಸಂ. ಬಾಹುವಲನ]

**ಬಾಹುವಳಯ** (ನಾ). = ಬಾಹುಪೂರ : ಬಾಹುವಳಯ — ಬಾಹುಬಳೆ (ಕರುದ. ೨೯೯ ಪ್ರಯೋ). [ಸಂ. ಬಾಹುವಲಯ]

**ಬಾಹುವಿಕ್ರಾಂತ** (ನಾ). ತೋಳಿನ ಬಲ ; ಬಾಹುಬಲ : ಚಳುಕ್ಯರುನ್ನತಿ

ಯದಾಗ್ರ್ಗಂ ಬಣ್ಣಿಸಲ್ಬಾರದೆಂಬಿನೆಗಂ . . . ಭೂತಳಮನಾಳ್ದರ್ಬಾಹುವಿಕ್ರಾಂತದಿಂ (ಕಇಅ. ೨-೨-೨೬ ; 1058) ; ಪತಿಗೇಕಚ್ಛತ್ರದಿನ್ಬಾಳಿಸನೆವಸು[ಧೆ]ಯಂ ಬಾಹುವಿಕ್ರಾನ್ತದಿಂ ಚಾಳಿತ ಚೋಳಂ (ಕಇಅ. ೯-೨-೧೩೦ ; 1058). [ಸಂ.]

**ಬಾಹುವಿಕ್ಷೇಪ** (ನಾ). =ಬಾಹುವಳನ : ಮೂವತ್ತೆರಡುಂ ತೆಱದ ಚಾರಿಚಾರಿಸ ತಮ್ಮೊಳ್ ಪತ್ತಿಸಿದುವು ದೃಷ್ಟಿಗಳಂ ಪತ್ತುಂ ತೆಱನೆನಿಪ ಬಾಹುವಿಕ್ಷೇಪಂಗಳ್ (ಮಲ್ಲಿಪು. ೬-೫೦). [ಸಂ.]

**ಬಾಹುವೀರ** (ನಾ). ತೋಳಿನ ಬಲದಿಂದ ಶೂರನೆನಿಸುವವನು ; ಭುಜಬಲಶಾಲಿ: ಕ್ಷತ್ರಿಯನು ಬಾಹುವೀರ, ವಚನವೀರನಲ್ಲ (ವಚಶಾ. ೬೮). [ಸಂ.]

**ಬಾಹುಳ್ಯ** 'ಬಾಹುಲ್ಯ' ನೋ.

**ಬಾಹೆ** (ನಾ). ೧. ಹೊರಭಾಗ ; ಹೊರವಲಯ : ಕೊಂದು ದನುಜನ ಪೆಣನ ಬಂಡಿಯ ಹಿಂದೆ ಬಂಧಿಸಿ ಪುರದ ಬಾಹೆಗೆ ತಂದುಬಿಟ್ಟನು (ಕುವ್ಯಾಆ. ೧೦-೩೯) ; ಅರಸ ಪುರದ ಬಾಹೆಯೊಳಿರೆ ಜೀವಂಧರ ಪರಸೇನೆಯ ತಱಿದು ತುಱುವಿಂಡ ತಾನೊರ್ವನೆ ತಿರುಪುವನೆಂದಿರದೆ ನೆನೆದನೆದೆಯೊಳಗೆ (ಜೀವಂಸಾಂ. ೧೩-೨೯) ; ನಿಜ ಚತುರಂಗವನು ನೆರಹಿದನು ನೃಪನಾ ಪುರದ ಬಾಹೆಯಲಿ (ಉರರಾ. ೬-೩೩). ೨. ಬದಿ ; ಮಗ್ಗುಲು ; ಪಾರ್ಶ್ವ: ತನ್ನಿಳಯಮನ್ನೊಳಪುಗುವ ಕಾಂತೆಯರ ಹಂತಿಯೆಸೆಯಿತ್ತು ಬಸದಿಯ ಬಾಹೆಬಾಹೆಗಳೊಳು (ಸೋಮಚ. ೪-೯೨) ; ತುರಗವ್ಯೆಸಾವಿರಸಹಿತ ಮೋಹರಿಸಿ ನಿಂದನು ಶಕುನಿ ಥಟ್ಟನೆ ಬಲದ ಬಾಹೆಯಲಿ (ಕುವ್ಯಾಗ. ೦-೪) ; ತನ್ನಯ ಬೆರಲು ಮಣಿಮುದ್ರಿಕೆಯ ತೆಗೆದಂಬುರುಹಮುಖಿ ಸುತಗಿಟ್ಟು ತೂಲಗಿದಳೊಂದು ಬಾಹೆಯಲಿ (ಜೀವಂಚ. ೫-೩೯). [< ಸಂ. ಬಾಹ್ಯ]

**ಬಾಹ್ಯ** (ಗು). ೧. ಹೊರಗಿನ ; ಹೊರಗಡೆ ಇರುವ : ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ದ್ವಾದಶವಿಧಮಪ್ಪ ತಪದೊಳ್ ನೆಗಟ್ದು (ವಡ್ಡಾರಾ. ೦-೯). ೨. (ಊರಿನ ಅಥವಾ ಪ್ರದೇಶದ) ಹೊರಗಿರುವ; ಹೊರಭಾಗದಲ್ಲಿರುವ. ೩. ಬಹಿಷ್ಕೃತವಾದ : ಹೊರದೂಡಿದ ; ನಿಷಿದ್ಧವಾದ. (ನಾ). ೪. ಹೊರಭಾಗ : ಹೊರವಲಯ : ಭರದಿ ನಂದಿಗ್ರಾಮ ಬಾಹ್ಯದಲುರಿವ ದಳ್ಳುರಿಗಂಡು ಚಿಂತೆಯ ತಾಳ್ದ ಹನುಮಂತ (ಕೌಶಿರಾ. ೪೪-೩೩). ೫. ಹೊರಗಡೆ ; ಬಹಿರಂಗ : ಒಳಗೆ ಹೊಳೆದನು ಬಾಹ್ಯದಲಿ ಪ್ರಜ್ವಲಿಸಿದನು (ಕುವ್ಯಾಉ. ೯-೬೪) ; ಬಿಡು ಬಾಹ್ಯದೊಳು ಡಂಭವ (ಕೈಕವ. ೬೨-೭ ಪಲ್ಲವಿ). ೬. ಹೊರಗಿನದು ; ಬಹಿರಂಗಕ್ಕೆ ಸಂಬಂಧಿಸಿದುದು : ಬಾಹ್ಯವಾದ ಉಪಪ್ಲವ ಒದಗಿದಾಗ ಕೌಟಿಲ್ಯಾದಿ ನೀತಿಜ್ಞರು ರಾಜರಿಗೆ ಮಾರ್ಗದರ್ಶಿಗಳಾಗಿದ್ದಾರೆ (ಪುಕ್ಸಾರ. ೧೦೬ ಸೀ೧೪). ೭. ಹೊರಗಿನವನು ; ಅಪರಿಚಿತ ; ಹೊಸಬ. [ಸಂ.]

**ಬಾಹ್ಯತಪ** (ನಾ). [ಜೈನ] ದೇಹವನ್ನು ದಂಡಿಸಿ ಕರ್ಮನಿರ್ಜರೆಯನ್ನು ಸಾಧಿಸುವ ತಪಸ್ಸು : ಅಂತು ಬಾಹ್ಯತಪದೊಳಸಹ್ಯಮಾನಸಾಹಸನಾಗಿ ಮತ್ತಮುತ್ತರೋತ್ತರತಪನೊಳುತ್ತರೋತ್ತರಂ ನೆಗಟ್ದು (ಸುಕುಮಾ. ೯-೦೯ ವ) ; ಅನಶನ ಅವಮೋದರ್ಯ ವೃತ್ತಿಪರಿಸಂಖ್ಯಾನ ರಸಪರಿತ್ಯಾಗ ವಿವಿಕ್ತಶಯ್ಯಾಸನ ಕಾಯಕ್ಲೇಶ ಎಂಬಿವಾಱುಂ ಬಾಹ್ಯತಪಂಗಳು (ಕನಾರ. ೩೬೬). [ಸಂ.]

**ಬಾಹ್ಯದರ್ಶನ** (ನಾ). ಹೊರಗಿನ ನೋಟ ; ಹೊರಗಣ್ಣಿಗೆ ಗೋಚರವಾಗುವ ದೃಶ್ಯ : ಭಯಾಕುಳಿ . . . ಬಾಹ್ಯದರ್ಶನಕ್ಕಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ ನಸುಮುಚ್ಚಿಪೋಗಿ ತಣ್ಣೆಲರಲೆಪಿಂದೆ ಮೂರ್ಛೆದಿಳಿದಳ್ (ಶಂರಾಮಾ. ೯-೦೦೦). [ಸಂ.]

**ಬಾಹ್ಯಪ್ರದರ್ಶನ** (ನಾ). ಹೊರಗೆ ಗೋಚರವಾಗುವಂತೆ ಮಾಡುವಿಕೆ; ಪ್ರಕಟವಾಗಿ ತೋರ್ಪಡಿಸುವಿಕೆ: ಒಳಿತಿಗೆ ಬಾಹ್ಯಪ್ರದರ್ಶನಯೋಗ್ಯವಾದ ಶಕ್ತಿಯಿಲ್ಲವಾದರೂ ಆಂತರಿಕಶಕ್ತಿಯಿದೆಯೆಂದು ಸಮಾಧಾನಪಟ್ಟುಕೊಳ್ಳಬಹುದು (ಬಿವ್ಯಕ್ರ. LXVII ಪೀಠಿ). [ಸಂ.]

**ಬಾಹ್ಯಪ್ರಪಂಚ** (ನಾ). ಹೊರಜಗತ್ತು : ಹಿಮಜೂಳಂ ಯಮಕೋಪಲೀಲನುಪಸರ್ಗಂಗೆಯ್ಯೆ ಬಾಹ್ಯಪ್ರಪಂಚಮನಾತ್ಮಾಶ್ರಿತಮಂ ಬಿಸುಟ್ಟರೆ (ಶಾಂತಿಪು. ೯-೨೩). [ಸಂ.]

**ಬಾಹ್ಯಪ್ರಮಾಣ** (ನಾ). ಹೊರಗಿನ ಆಧಾರ; ಬೇರೆಯ ಪ್ರಮಾಣ : ಬಾಹ್ಯಪ್ರಮಾಣಗಳಿಂದ ಆಂಡಯ್ಯನ ಕಾಲಪರಿಮಿತಿಯು . . . ೧೨೬೩ ಎಂದಂತಾಯಿತು (ಸಾಹಿಸ. ೦೫೩). [ಸಂ.]

**ಬಾಹ್ಯಮತಿ** (ನಾ). ಇಂದ್ರಿಯಗೋಚರವಿಷಯಗಳಲ್ಲಿರುವ ಆಸಕ್ತಿ : ಅನಘನೊಳ್ ನಿರವಸ್ಥನೊಳೊಡವೆರೆದು ಬಾಹ್ಯಮತಿಯಱತಿರ್ದಂ (ಶಬಶಂ. ೨-೦೦೩). [ಸಂ.]

**ಬಾಹ್ಯರತ** (ನಾ). [ಕಾಮಶಾ] ಸಂಭೋಗಕ್ಕೆ ಪೂರ್ವಭಾವಿಯಾಗಿ ಕಾಮೋದ್ದೀಪನಕ್ಕಾಗಿ ನಡೆಸುವ ನಖಕ್ಷತ, ದಂತಕ್ಷತ, ಆಲಿಂಗನ, ಚುಂಬನಾದಿ ಕ್ರಿಯೆ : ಆಲಿಂಗನ ಚುಂಬನ ದಂತಕ್ಷತ ತಾಡನ ಚಪೇಟನ ಆಕರ್ಷಣ ಮರ್ದನ ಮೊದಲಾದ ಕೃತ್ಯಗಳೆಂಬ ಬಾಹ್ಯರತಮಂ ತಿಳಿದು ಸುರತಮಂ ಮಾಳ್ಪುದು (ಕಾಮಶಾ. ೨೨೦); ಈ ಉಭಯರತದೊಳು ಬಾಹ್ಯರತ ಮೊದಲು ಮಾಡಬೇಕು ಆ ಬಾಹ್ಯರತದೊಳು ಆಲಿಂಗನ ಮೊದಲು ಮಾಡಬೇಕು (ಕಾಮಶಾ. ೨೨೦). [ಸಂ.]

**ಬಾಹ್ಯವ್ಯಾಪಾರ** (ನಾ). (ದೇಹದ) ಹೊರಗಿನ ಚಟುವಟಿಕೆ : ನಿದ್ದೆಯ ಹೊತ್ತಾಯಿತೆಂದರೆ ಶರೀರದ ಬಾಹ್ಯವ್ಯಾಪಾರಗಳು ಮೆಲ್ಲನೆ ನಿಲ್ಲುತ್ತವೆ (ಮುಂಬಯಿ. ೯-೧೩೦). [ಸಂ.]

**ಬಾಹ್ಯಶೌಚ** (ನಾ). ದೇಹದ ಹೊರಭಾಗದ ಶುದ್ಧಿ; ಬಹಿರಂಗಶುದ್ಧಿ: ಮೃತ್ತಿಕಾಜಲಾದಿಗಳಿಂದ ಶರೀರದ ಮಲವಂ ನಿವೃತ್ತಿಸುವುದರ ಪೆಸರು ಬಾಹ್ಯಶೌಚವೆನಿಸುವುದು (ಮುಮುಕ್ಷುದ್ವಿತೀಯಸೋಪಾನ) ಮೃಜ್ಜಲದಿಂದಾ ಮಾಡೋಣ ಯಿದು ಬಾಹ್ಯಶೌಚವು (ಈಶ್ವಸ್ಮ. ೨೨-೨). [ಸಂ.]

**ಬಾಹ್ಯಸಂಭಾವ್ಯತೆ** (ನಾ). ಗ್ರಂಥಸಂಪಾದನೆಯಲ್ಲಿ ಕವಿಪಾಠವು ಅಕ್ಷರ ಭ್ರಾಂತಿ ಇತ್ಯಾದಿ ವಿಧಾನಗಳಿಂದ ಹೀಗೆಯೋ ಕೆಟ್ಟಿದೆ ಎಂಬುದನ್ನು ಸ್ಪಷ್ಟವಾಗಿ ತೋರಿಸುವಿಕೆ : ಯೋಜಿತಪಾಠಾಂತರವು . . . ಇತರ ಪಾಠಾಂತರಗಳೊಡನೆ ಸಾಂಪ್ರದಾಯಿಕ ಅಥವಾ ಪರಂಪರಾಗತಪಾಠದಲ್ಲಿ ಉಳಿದಿರುವಂಥದಾಗಿದ್ದರೆ ನಮ್ಮ ಊಹಾಪಾಠಕ್ಕೆ ಅಂತಸ್ಸಂಭಾವ್ಯತೆ ಮತ್ತು ಬಾಹ್ಯಸಂಭಾವ್ಯತೆ (Extrinsic probability) ಈ ಎರಡರ ಬೆಂಬಲವೂ ಇದೆಯೆಂದು ಹೇಳಬಹುದು (ಭಾರತ. ೬೮). [ಸಂ. ಬಾಹ್ಯಸಂಭಾವ್ಯತಾ]

**ಬಾಹ್ಯಸೌಂದರ್ಯ** (ನಾ). ಹೊರನೋಟಕ್ಕೆ ಕಾಣುವ ಚೆಲುವು : ಮಾನವನು ಸತ್ಯದ ಕಡೆಗೆ ಗಮನಿಸದೆ ಕೇವಲ ಬಾಹ್ಯಸೌಂದರ್ಯಕ್ಕೆ ದಾಸನಾಗಿ ಅದರ ವ್ಯಾಮೋಹದಿಂದ ನರಳುತ್ತಿರುವನು (ಕಕ್ಕಿ. ೧). [ಸಂ.]

**ಬಾಹ್ಯಸ್ಥ** (ಗು). ೧. ಹೊರಗಿರುವ. (ನಾ). ೨. ಹೊರಗೆ ಇರುವುದು; ಹೊರಗೆ ಗೋಚರವಾದುದು: ತೀರ ಬಾಹ್ಯಸ್ಥವೂ ವ್ಯಕ್ತವೂ ಗಾಢವೂ ಆದ . . . ಆಂಗ್ಲಕಾವ್ಯಗಳನ್ನು ವಿವೇಚಿಸಿದ್ದಾರೆ (ನವ್ಯಕಾ. ೦೦೬). [ಸಂ.]

**ಬಾಹ್ಯಾರ್ಥಸಿದ್ಧಿ** (ನಾ). ಪ್ರಕೃತಕ್ಕೆ ಸಂಬಂಧಪಡದ ಅರ್ಥವನ್ನು ಉಂಟುಮಾಡುವುದು, – ವ್ಯಕ್ತಪಡಿಸುವುದು : ವಿಜ್ಞಾನವ್ಯತಿರಿಕ್ತಸಾಧನವಾಕ್ಯೋಪನ್ಯಾಸದಿಂ ಸಾಧಿಸುವೊಡಾ ವಾಕ್ಯಮೆ ಬಹಿರರ್ಥಮಪ್ಪುದಱಿಂ ಬಾಹ್ಯಾರ್ಥಸಿದ್ಧಿಯಕ್ಕುಂ (ಆದಿಪು. ೨-೦೦ ವ). [ಸಂ.]

**ಬಾಹ್ಯಾಳಿ** (ನಾ). ಕುದುರೆಗಳನ್ನು ಓಡಾಡಿಸುವ ಸ್ಥಳ; ಕುದುರೆ ಸವಾರಿಯ ಮೈದಾನ, – ಬಯಲು : ಸಂಚಾರಿತತುರಗಪರಿಮಳ ಗ್ರಾಹ್ಯಾಳಿಗಳೆನಿಪ ಬಾಹ್ಯಾಳಿಗಳುಂ ಅನುದಿನವಿನೋದಿತಾನೇಕಕರಿಗಳೆನಿಸು ವಾನೆವಱಿಗಳುಂ . . . ತನಗನೂನಶೋಭೆಯಂ ಪಡೆಯೆ (ಭುಕ್ಷಪು. ೯-೨೨ ವ). 'ವೈಹಾಳಿ' ಪರಾ. [<ಸಂ. ವಾಹ್ಯಾಲೀ]

**ಬಾಹ್ಯೋಪಕರಣ** (ನಾ). ಹೊರಗಿನ ಸಾಧನ: ಕೃಷ್ಣಶುಕ್ಲಮುಂತಲಾ ಅಭ್ಯಂತರೋಪಕರಣಮಕ್ಕುಂ ಅಕ್ಷಿಪತ್ರಪಕ್ಷ್ಮದ್ವಯಾದಿ ಬಾಹ್ಯೋಪಕರಣಾ (ತತ್ತ್ವಸೂ. ೯೬). [ಸಂ.]

**ಬಾಹ್ಯೋಪವನ** (ನಾ). (ಊರಿನ) ಹೊರವಲಯದಲ್ಲಿರುವ ತೋಟ: ಹಯವರಸಮಾರೂಢನಾಗಿ . . . ಬಾಹ್ಯೋಪವನಕೆ ಬರಲು (ಜೈಮಿಭಾ. ೨೯-೪೪). [ಸಂ.]

**ಬಾಹ್ಲಿಕ** (ನಾ). ೧. ಒಂದು ದೇಶದ ಹೆಸರು: ದ್ರವಿಳ ಕಾಶ್ಮೀರ ಬಾಹ್ಲಿಕ ಭೋಟಭೂ ಕಾಂಬೋಜ . . . ಕೇರಳಮುಖಾಪಾರದೇಶಂಗಳೊಳೆಸೆವ ಜಂಗಮವು ಭಕ್ತಾಳಿ (ಬಸಪು. ೬-೧೯). ೨. ಆ ದೇಶದ ರಾಜ ಮತ್ತು ಪ್ರಜೆ: ಬಾಹ್ಲಿಕ ಶೂರಸೇನ ಕಳಿಂಗ ಸಲೆ ಗಾಂಧಾರ . . . ದಂತವಕ್ರರು ಬಂದರೊಗ್ಗಿನಲಿ (ಕುವ್ಯಾಸ. ೬-೩). ೩. ಆ ದೇಶದ ಕುದುರೆ. ೪. ಕುಂಕುಮಕೇಸರಿ. ೫. ಇಂಗು. [ಸಂ.]

**ಬಾಹ್ಲೀಕ** (ನಾ). ೧.=ಬಾಹ್ಲಿಕ ೧: ಲಾಳಚೋಳವರಾಳಯುವಬಂಗಾಳ ಬಾಹ್ಲೀಕ . . . ನಿಷಧ ವಿದರ್ಭಧರಣೀಪಾಲಸಂತತಿ ಸಂದಣಿಸಿದುದು ಸಾಕೇತನಗರಿಯುಲಿ (ತೊರರಾ. ೦-೬-೦೮). ೨.=ಬಾಹ್ಲಿಕ ೨: ಬಾಹ್ಲೀಕ ಸ್ವಾಂತ ಕುಂತ ಪರಾಕು (ಯಶೋಧಚ. ೩-೧ ವ). ೩.=ಬಾಹ್ಲಿಕ ೩: ಬಿಸಕಾಂಭೋಜಕ ಬಾಹ್ಲೀಕ ಸೈಂಧವಾರಟ್ಟ ತ್ರೈತಿಲಂ ವಾನೇಯಂ ಪೆಸರ ಕ್ಷೇತ್ರದ ಹಯಕಾ ಪೆಸರೆ ಪೆಸರ್ (ಅಶ್ವಶಾ. ೬-೭೬). ೪. = ಬಾಹ್ಲಿಕ ೪: "ಕುಂಕುಮಂ, ಕಾಶ್ಮೀರಜನ್ಮ, ಅಗ್ನಿಶಿಖಂ, ವರಂ, ಬಾಹ್ಲೀಕಂ . . . ಚಂದನಂ—೧೧ ಕುಂಕುಮದ ಹುವ್ವಿನ ಹೆಸರುಗಳು, ಕುಂಕುಮಕೇಸರಿ" (ಸಿದ್ಧಾಂತಿ. ೨೦೬). ೫. = ಬಾಹ್ಲಿಕ ೫: "ಸಹಸ್ರವೇದಿ, ಜತುಕಂ, ಬಾಹ್ಲೀಕಂ, ಹಿಂಗು, ರಾಮಠಂ—೫ ಹಿಂಗು, ಇಂಗಿನ ಪೆಸರುಗಳು" (ಸಿದ್ಧಾಂತಿ. ೨೮೫). [ಸಂ.]

**ಬಾಳ್**$_{1}$ 'ಬಾಟ್$_{1}$' ನೋ.

**ಬಾಳ್**$_{2}$ 'ಬಾಟ್$_{3}$' ನೋ.

**ಬಾಳ್**$_{3}$, ಬಾಳ$_{1}$, ಬಾಳಿ, ಬಾಳು$_{3}$ (ನಾ). ೧. ಕತ್ತಿ: ಖಡ್ಗ: ಬಾಳಾ ಮೇಲ್ಮಿಖಿ ಮೇಲೆ ಸರ್ಪ್ಪದ ಮಹಾದನ್ತಾಗ್ರದುಳ್ನಲ್ವಪೋಲ್ ಸಾಲಾಮ್ಬಾಲ ತಪೋಗ್ರದಿನುತ್ತ ನಡದೊಂ ನೂಱೆಂಟುಸಂವತ್ಸರಂ. . . ಪೆಗ್ಗೋರವಂ ಸಮಾಧಿ ನೆಱೆದೊನ್ (ಎಕ. II, ೨೨-೦; ಸು. 700); ನಾಗಗುಟ್ಟರಸರ್ . . . ಬಾಳಂ ಕಿಟ್ಟು ನಡದು ಪಲರನಿಱಿದು ಸತ್ತೊಡೆ (ಎಕ. X, ಕೋಲಾರ. ೨೦೦-೦೦; ಸು. 890 ?); ಮಸೆದುದು ಮದನನ ಬಾಳ್ (ಶಂಕರಾ. ೩-೪೭). ೨. ಉಳುಮೆ; ವ್ಯವಸಾಯ: 'ಇರ್ವಾಳ್' ಪರಾ. ೩. ನೇಗಿಲಿನ ಗುಳ. ಬಾಳ$_{1}$: ೪. ಕಾಳಗ; ಯುದ್ಧ; ಕದನ: ಶ್ರೀ ಜುದ್ಧನ್ . . . ಊರೊಳ್ವಲ್ಲಹನಾ ಬಾಳದುಳಿಱಿದು ವಿಟಿತ್ತೋನ್ (ಎಕ. XVI, ತುಮಕೂ. ೯೦-೨; ಸು. 780); ಬಲ್ಲವರಸರ ಬಾಳದುಳ್ . . . ಬಾಗೆಯ ವೆಱಿದು ವಿಟ್ಟಾನ್ (ಎಕ. XVI, ತುಮಕೂ. ೯೩-೪; ಸು. 780). ಬಾಳಿ: ೪. ಬಾಗೆಯೂರ ಬಲ್ಲಹನೇಱಿ ನೊಳ್ಪಿಯಾನ್ ವೈರಾಳ್ ಸಘುಪದರುಳ್ ಕೊಪುಳವೂರ ಬಾಳಿಯೊಳ್ ಪೊಣ್ಣದಿಕ್ಕಿಜ್ಜಿಯ ತಮ್ಮುಳಿ ಪಡೆಯುಳಿಱಿದು ಸತ್ತನ್ (ಎಕ. XVI, ತುಮಕೂ. ೯೨-೧೦; ಸು. 780). ಬಾಳು$_{3}$: ೧. ಸಂಗನ ಶರಣರ ಭಕ್ತಿ ಬಾಳ ಬಾಯ ಧಾರೆ (ಬಸವ. ೨೦೦); ಬಾಳ ಬಾಚಿದಳಿವಳಿನಗೆ ಗೋನಾಳಿಗೊಡ್ಡಿದ ಬಂದಿಯುಲಿ ತುದಿ ನಾಲಗೆಗೆ ನರಸುಕ್ಕನಿಕ್ಕಿದಳಿವಳು ತನಗೆ (ತೊರರಾ. ೨-೨-೩೮); ತೋಳ ನೀಡಿದಳು ಮನ್ಮಥನೊಱೆಯಿಂದುರ್ಚಿ ಬಾಳ ನೀಡಿದನೊಯೆಂಬಂತೆ (ಭರತ. ೦೨-೬೬).

**ಬಾಳ್ವಾಳ್** (ದ್ವಿರುಕ್ತಿ): ಬಾಳ್ವಾಳ್ಗಳ ಘಟ್ಟಣೆಯೊಳ್ ಬಳ್ವಳ ಬಳಿದೊಗೆದು ನೆಗೆದ ಕಿಡಿಗಳ ಬಂಬಲ್ಗಳ್ವೆರಸು ಪೊಳೆದು ನೆಗೆದುದು ಬಾಳ್ವೊಗೆ (ಶಂಕರಾ. ೧೦-೯೪). ಬಾಳಬಟ್ಟು = (?): ಆತನ ಕಲದೊಳ್ ಬಾಳಬಟ್ಟಂ [ಪಾಠಾಂ. ಚಾಳಪಟಂ] ತೂಂತಿಟ್ಟಂತೆ ಸಂದಣಿಸಿ ನಿಂದ ಗೋಪಕುಮಾರರಣಿಯ ನಡುವೆ ಪೊನ್ನ ರಥಮನೇಱಿ ನಿಂದಾತನೆನ್ನ ತಮ್ಮಂ ಕೃತವರ್ಮಂ (ಶಂಕರಾ. ೧೦-೫೭ ವ). ಬಾಳವಣ್ಣ, ಬಾಳ ಬಣ್ಣ=(ತೊಳೆದ) ಕತ್ತಿಯ ಬಣ್ಣ; ನೀಲಿಬಣ್ಣ: ತೊಡರ್ದವರ್ದ ಬಾಳವಣ್ಣದ ತುಡುಗೆ ಪಳಂಚಲೆವ ಪಂಚಜಡೆ ನೊಸಲೊಳೊಡಂಬಡುವರಳೆಲೆಯವೞಿಂ ಚೆಲ್ವಿಡಿದಿರ್ದುದು ಬಾಳಕೇಳಿ ಧರ್ಮಾತ್ಮಜನಾ (ಶಂಕರಾ. ೨-೪); ಪುಳಿಯೊಳ್ ಕರ್ಚಿದ ಬಾಳ ಬಣ್ಣಮನೆ ಪೋಲ್ತಾಕಾಶಂ (ಶಂಕರಾ. ೬-೭೦). ಬಾಳುಗತ್ತಿ = ಉದ್ದವಾದ ಕತ್ತಿ; ನೀಳವಾದ ಖಡ್ಗ: ಜಾಡಿಯ ಹರಿಗೆ ಸಿಂಗಾಡಿ ಕರಾಚೂರಿ ನೀಡುವ ಬಾಳುಗತ್ತಿಗಳ ಪಾಡುಪಂಥದ ಸುಭಟರು ಕೋಟೆಯನಾಗ ರೂಢಿಯೊಳಗೆ ಕಾದಿಹರು (ಕಂನಪಿ. ೦೦-೧೪೮). P ಇದು ಒಂದೇ ಅರ್ಥದ ಎರಡು ಶಬ್ದಗಳು ಸೇರಿ ಆಗಿರುವ ರೂಪ. ಕೊಡವ ಭಾಷೆಯಲ್ಲಿ 'ಬಾಳಿಕತ್ತಿ' ಶಬ್ದಕ್ಕೆ 'ಉದ್ದವಾದ ಕತ್ತಿ' ಎಂಬರ್ಥವಿದೆ.

[ದೇ.॥ ತಮಿ. ಮಲ. ಕೋತ. ವಾಳ್; ತುಳು. ಬಾಳು; ತೆಲು. ವಾಲು]

**ಬಾಳ**$_{1}$ 'ಬಾಳ್$_{3}$' ನೋ.

**ಬಾಳ**$_{2}$, ಬಾಳು$_{4}$ (ನಾ). ಒಂದು ಬಗೆಯ ಸುಗಂಧದ ಬೇರು; ಮುಡಿವಾಳ; ಲಾಮಂಚ: "ಬಾಳಮೆಂದುಂ ಲಾಮಂಚಂ" (ಕಕಸಾ. ೫೪-೦೭೯); ಕುಳಿರ್ವ ಬಾಳದ ಬೇರ್ಗಳ ಕೇರ್ಗಳಿಂ . . . ಒಪ್ಪಿ ತೋರ್ಪ ಜಲಮಂಟಪದಲ್ಲಿಗೆ ಬಂದನಾ ನೃಪಂ (ಕಾದಂಬ. ೪೫೮); ಬಾಳದ ಕಂಪು ಬಾಳ್ಜನುಗುವಾಜಡಿಯಾಜಡಿ ಹಂಸೆ ಹಿಂಸೆ . . . ಬಾಲಿಕೆಗಾದುದೀ ವಿರಹದಿಂದೆ (ಉದ್ಭಟ. ೬-೫೮). 'ಬಾಳವೇರ್' ಪರಾ. ಬಾಳು$_{4}$: ಬಾಳು ಜವಾಜಿ ಕುಂಕುಮಕೇಸರಿ ಅಡಕೆಯ ಹೇರು ಮೆಣ್ಸಿನ ಭಾರ . . . ಮುನ್ನಾದ ಸಮಸ್ತಬೆಪಹಾರಕೆ (ಎಕ. XII, ಶಿರಾ. ೭೬-೧೪; 1379). 'ಕರಿಯ ಬಾಳ', 'ಮುಡಿವಾಳ' ಹೋ. P ಸಂಸ್ಕೃತದ 'ಬಾಲ' ಶಬ್ದಕ್ಕೆ ಮೇಲೆ ಸೂಚಿಸಿರುವ ಅರ್ಥವು ಕೋಶಗಳಲ್ಲಿ ಸಿಗುವುದಾದರೂ ಇದನ್ನು ದೇಶ್ಯಶಬ್ದವೆಂದು ಪರಿಗಣಿಸಲಾಗಿರುವುದರಿಂದ 'ಬಾಲ' ಉಲ್ಲೇಖದ ಜೊತೆಯಲ್ಲಿ ಇದನ್ನು ಪರ್ಯಾಯ ಪದವಾಗಿ ಕೊಟ್ಟಿಲ್ಲ.

**ಬಾಳ**$_{3}$ (ನಾ). ಹಣೆ; ನೊಸಲು: "ಬಾಳ—ಭಾಲ=ಹಣೆ" (ಶಬ್ದಕೋ. ೩೦); ಒಪ್ಪಿದುದೆನಸುಂ ಕಂದರ್ಪನ ವಿಮಳರುಚಿವಿಶಾಲಂ ಬಾಳಂ (ಕುಸುಮಾ. ೬ ೦೦೩); 'ಬಾಳದೊಳೆಸೆವ ಮುತ್ತಿನ ಬೊಟ್ಟು ತಳೆದಿಹ ನೀಲಾಳಕಿಯರೊಪ್ಪಿದರು (ಕಂನಪಿ. ೬-೦೦೩). [<ಸಂ. ಭಾಲ]

**ಬಾಳ**$_{4}$ 'ಬಾಲು$_{1}$' ನೋ.

**ಬಾಳ**$_{5}$ 'ಬಾಲು$_{2}$' ನೋ.

**ಬಾಳಂಗೆಣಸೆ** (ನಾ) ಒಂದು ಬಗೆಯ ಸಸ್ಯ: ಜಾಗುಂಜಿಬೀಜ, ಗೀರುಗೊಟ್ಟೆ, ಬಾಳಂಗೆಣಸೆ ಇವಂ ಸರಿಯಾಗಿ ತೂಗಿಕೊಂಡು . . . ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ ಗ ಮೂರು ತೂಕವನ್ನು ಕಲಸಿ ಕೊಡುವುದು (ವಿವೈವಿ. ೪೦). [?]

**ಬಾಳಂತಪಣ** (ನಾ). ೧. ಹೆರಿಗೆ; ಪ್ರಸೂತಿ: ಫಲ್ಗೂಬಾಯಿ ಕಮಲೆಯನ್ನು ಮುಂಬಯಿಗೆ ಆಮಂತ್ರಿಸುತ್ತ . . . ದವಾಖಾನೆಯಲ್ಲಿಯೇ ಬಾಳಂತಪಣ ಮಾಡಿಸಿಕೊಳ್ಳಲು ಸಲಹೆಯಿತ್ತಳು (ಶೃಹಾರ. ೧೮೨). ೨. ಬಾಣಂತಿಗೆ ಮಾಡುವ ಶುಶ್ರೂಷೆ; ಬಾಣಂತನ.

[ ← ಮರಾ. ಬಾಳಂತಪಣ ]

**ಬಾಳಂತಿ**, ಬಾಣಂತಿ, ಬಾಣತಿ (ನಾ). ಹೆರಿಗೆಯಾಗಿ ಇನ್ನೂ ಆರೈಕೆಯನ್ನು ಹೊಂದುತ್ತಿರುವವಳು; ಹಡೆದವಳು; ಪ್ರಸೂತೆ:

ಬಾಳಂತಿಗೆ ಮಂತ್ರಪೂರ್ವಕಮುಂ ಸುಖೋಷ್ಣಮುಮಪ್ಪ ಜಲಂಗಳಂ ಮೀಯಲೆಱೆದು (ಕಾಪುಂಪು. ೯೦). **ಬಾಣಂತಿ :** "ಪ್ರಸೂತೆಯೆನೆ ಬಾಣಂತಿ ಯಕ್ಕು" (ಮಂಗರಾ. ೯೦-೬); ಕಳಮಾಕ್ಷತಚೂರ್ಣಂ ಮೇಣ್ ನೆಲಗುಂಬಳ ಮಿವಱೊಳೊಂದನೆರ್ಮೆಯ ಪಾಲಿಂ ಕಲಸಿ ಕುಡಿಯಿಸುಗೆ ತೊರೆ(ಱೆ)ಗುಂ ಪೊಲೆಗಳ್ ಬಾಣಂ(ಳಂ)ತಿಗೆಬ್ಬು ಪಾಲ್ ಪಾಯ್ವಿನೆಗಂ (ಲೋಕೋಪ. ೯-೧೮೭); ಬಾಣಂತಿಯೆಂಬೋ ಬಗೆಯು ನೀನಱಿತು ಬಾರೆಂದು ಕರೆವೋಮಚಿತವೆ ರಂಗ (ಪುರಂದ. ೩-೯೩ ಪಲ್ಲವಿ): ಗೌರಿ ಚೊಚ್ಚಿಲು ಬಾಣಂತಿ (ಮಂಗಾಮಂ. ೨೩). **ಬಾಣತಿ:** ಬಸುಱ ಬಾಣತಿ ಕುಮಾರಿ ಕೊಡಗೂಸೆಂಬವರ ಹಿಡಿದು ತಿಂಬ . . . ಕೇತಯ್ಯಗಳೆಂಬ ನೂಱುಮಡಕೆಗೆ ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದು ದಡಿ ಸಾಲದೆ (ಬಸವ. ೫೫೬); ಎರಡೆಡೆ ಯೊಳೋಲಗವೆಂತು ನಿನಗಳವಡುವುದಿದು ಬಾಣತಿಯ ಸೂಳೆಯ ಪಡಪಿ ನಂದದಲಿ (ಬಸವು. ೫೩-೦೨); ಕೂಸುಳ್ಳ ಸೂಳೆಗೆ ಹೇಸದೊತ್ತೆಯ ಕೊಟ್ಟು ಕೂಸತ್ತು ನಲ್ಲ ಬೇಸತ್ತು ಬಾಣತಿಯು ವೀಸಕ್ಕು ಬೇಡ (ಸರ್ವಜ್ಞ. ೧೬೦೬).
[ದೇ.॥ ಮಲ. ವಣ್ಣ ; ತುಳು. ಬಾಣಂತಿ ; ತೆಲು. ಬಾಲಿಂತ. ಬಾಲೆಂತ./ ಸಂ. ಬಾಲವತೀ./ಮರಾ. ಬಾಳಂತ, ಬಾಳಂತೀಣ]

**ಬಾಳಂಬಾಕಂತಿ** (ನಾ). ಒಬ್ಬಾಕೆಯ ಹೆಸರು : ನವಿಲೂರ ಗಣದ ಬಾಳಂಬಾಕನ್ತಿಯರ ಮಗಳ್ ವಿಜಕ್ಕಂ ಪರೋಕ್ಷವಿನಯಂಗೆಯ್ದು ಕಲ್ಲ ನಿರಿಸಿದಳ್ (ಎಕ. VI. ಕಡೂರು. ೧೫೯-೦೩; 961). [ಬಾಳ್‌ಬಾ$_0$+ಕಂತಿ$_1$]

**ಬಾಳಕ$_1$** 'ಬಾಟುಕ' ನೋ.

**ಬಾಳಕ$_2$** (ನಾ). = ಬಾಳ್$_2$ : "ಹ್ರೀಬೇರಂ, ಬಾಳಕಂ, ಜಳಂ — ಈ ೩ ಕರಿಯ ಬಾಳಂ" (ಹಲಾಯು. ೧೦೨-೪೬೬); ಮಗಧ ಕತ್ತುರಿಯಿಂ ಮಳೆಯ ಶ ಚಂದನಂ ಲಾಳನ ಬಾಳಕಂ ನೆಱೆಯುಮೆಂದು ಚರರ್ ಸಲೆ ಬಿನ್ನಪಂಗಳಂ ಕೇಳಸುತಿರ್ಪರೋಲಗದೊಳಂ ವಿಭು ಸಂಕಮದೇವಭೂಪನಾ (ಎಕ. VII, ಶಿಕಾಂ. ೯೬-೦೫; 1179; ಶಾಸಪಂ. ೯೦೦ ನೋ). [<ಬಾಳ್$_2$]

**ಬಾಳಕ$_3$** 'ಬಾಲಕ' ನೋ.

**ಬಾಳಕಾಲ** 'ಬಾಲಕಾಲ' ನೋ.

**ಬಾಳಕಿ** 'ಬಾಲಕಿ' ನೋ.

**ಬಾಳಕೇಳಿ** 'ಬಾಲಕೇಲಿ' ನೋ.

**ಬಾಳಕ್ರೀಡೆ** 'ಬಾಲಕ್ರೀಡೆ' ನೋ.

**ಬಾಳಗಟ್ಟು** 'ಬಾಳ್ಗಟ್ಟು' ನೋ.

**ಬಾಳಚ** (ನಾ). ಒಬ್ಬಾತನ ಹೆಸರು : ಬಾಚಗಾವುಣ್ಡ ಕಂಭಯ್ಯನು ಕಳ್ಳವುಣಯೂರ ಮಹಾಜನಮುಂ ಗೊಗಿಯಮುರದ ಬಾಳಚನು . . . ಸಾಕ್ಷಿ (ಎಕ. XI, ಚಿತ್ರದು. ೫೦-೨೨; 968). [?]

**ಬಾಳಚಂದ್ರ** 'ಬಾಲಚಂದ್ರ' ನೋ.

**ಬಾಳಣಿ** 'ಬಾಣಲಿ' ನೋ.

**ಬಾಳತೆ** 'ಬಾಲತೆ' ನೋ.

**ಬಾಳತ್ವ** 'ಬಾಲತ್ವ' ನೋ.

**ಬಾಳನಯನ** (ನಾ). ೧. ಹಣೆಯಲ್ಲಿ ಇರುವ ಕಣ್ಣು. ೨. ಹಣೆಯಲ್ಲಿ ಕಣ್ಣುಳ್ಳವನು; ಭಾಳನೇತ್ರ : ಶಿವ : ಬಾಳನಯನನದೇನು ಕಾರಣ ಹೇಳಿದನು ಖುತುಪರ್ಣಗರುಹುವದೆಂದು ಈ ಕಥೆಯ (ಅಂಬಿಗಾ. ೩-೫೬). [< ಸಂ. ಭಾಲನಯನ]

**ಬಾಳಪರ್ಣ** (ನಾ). ಲವಂಗ : "ಬಾ[ಕಾಕಾಂ. ಭಾ, ರಾ]ಳಪರ್ಣಂ ಲವಂಗ ಮೆನಿಕ್ಕು" (ಮಂಗರಾ. ೪೨-೪೦). [?]

**ಬಾಳಬಂದು** 'ಬಾಲಬಂದು' ನೋ.

**ಬಾಳ ಬಟ್ಟು** 'ಬಾಳ್$_3$' ಪರಾ.

**ಬಾಳ ಬಣ್ಣ** 'ಬಾಳ್$_3$' ಪರಾ.

**ಬಾಳಮತಿ** (ನಾ). ಹುಡುಗುಬುದ್ಧಿಯುಳ್ಳವನು; ಅವಿವೇಕಿ; ಮೂರ್ಖ : ಆ ಕೋಳನನುಂ ಬಾಳಮತಿ ಪುರುಷರತ್ನದ ಪೇಳಿಗೆಯಂ ಮುಚ್ಚುವಂತೆ ಮುಚ್ಚಿದನಗದಿಂ(ಶಾಂತಿಪು. ೯-೫೦). [ಸಂ. ಬಾಲಮತಿ]

**ಬಾಳಮೃತಿ** (ನಾ). ತಿಳಿವಳಿಕೆಯಿಲ್ಲದೆ, ಬಾಲಿಶಬುದ್ಧಿಯಿಂದ ತಂದು ಕೊಂಡ ಮರಣ. — ಸಾವು : ಅತಿವಯನಾಗಿ ಬಾಳಮೃತಿಯಿಂದಟಿ ದಂದಿನ ಮೂರ್ಖಮೃತಿ ಪಂಡಿತಮೃತಿಯಿಂದಮಲ್ಲದದು ನೀಗದು ಪೋಗೆನಗೆ (ಶಾಂತಿಪು. ೬-೪೦). [ಸಂ. ಬಾಲಮೃತಿ]

**ಬಾಳರ** (ನಾ). ಗರಗಸದ ಹಲ್ಲುಗಳನ್ನು ಹರಿತಗೊಳಿಸಲು ಬಳಸುವ, ಎರಡು ಅಲಗುಳ್ಳ ಅರ : ಗಾಳದ ಡೊಂಕಿಯುಗ್ರಮನೆ ಬಾಳರನಿಂ ಪಿಡಿದರ್ಮವಾರ್ದ್ರಮಂ ಜಾಳಿಸಿ ಜಾಲಮಂ ಬಿಸಿಲೊಳಿಕ್ಕುವ ಬೆಂಕೆಯೊಳೊಡ್ಡಿ ಕಾಸಿ ಕೂಂಡಾಳಿಸಿ ಸೆಂದುಕೋಲನುಡಿಗಟ್ಟುವ ಕೆಂಗಱೆಯಂ ಸರಾಳಿಯೊಳ್ ಮೇಳಿಸಿ ಸುತ್ತುತಿರ್ಪ ಶಬರರ್ಕಳಿನಿಂತೆಸೆದತ್ತು ಪಕ್ಕಣಂ (ಶಾಂತೀಶ್ವ. ೩-೭೪). [←ತಮಿ. ವಾಳರಮ್]

**ಬಾಳರಾಕ್ಷ** 'ಬಲರಾಕ್ಷಸಿ' ನೋ.

**ಬಾಳಲಿ** 'ಬಾಣಲಿ' ನೋ.

**ಬಾಳವಂದ** 'ಬಾಲವಂದ' ನೋ.

**ಬಾಳವಚ್ಚ** (ನಾ). = ಬಾಲವಂದ: ರಕ್ಕೆವಣಿ ಪುಲಿಯುಗುರ್ . . . ಮೊಕ್ಕಳಗಾಡಿಗೆ ಜಡೆ ಸೊಡರ್ವಕ್ಕಿನ ಬೊಟ್ಟೆಂಬ ಬಾಳವಚ್ಚದಿನೆಸೆವಂ (ಪುಷ್ಪಪು. ೪-೪೯). [ಬಾಳ್$_5$ (= ಬಾಲ$_2$) + ಪಚ್ಚ$_2$]

**ಬಾಳವಣ್ಣ** 'ಬಾಳ್$_3$' ಪರಾ.

**ಬಾಳವತಿ** 'ಬಾಲವತಿ' ನೋ.

**ಬಾಳವಾಳಿಗೆ** (ನಾ). ಒಂದು ಬಗೆಯ ತೆರಿಗೆ : ಮನೆವಾರ್ತೆ ಹಣ ಕಾಹು ಕಾಣಿಕೆ ಕಡಾಯ ಬಾಳವಾಳಿಗೆ ಉಡುಗರೆ ಉಲುಪ್ಪ ಮನೆದೆರೆ ಅಳಿಉ ಅನ್ಯಾಯ ಮುಂತಾದ ಸರ್ವಬಾಧೆಯು (ಮೈಆಂ. ೧೯೩೪, ೫೬-೨೪; 1435). [?]

**ಬಾಳವಿದ್ಯೆ** (ನಾ). ಬಾಲ್ಯದಲ್ಲಿ ಕಲಿತ ವಿದ್ಯೆ: ಎಮ್ಮ ಕಂಡುಂ ಕೇಳ್ದು ಮಱೆಯದ ವಸ್ತುಗಳಿಲ್ಲ ಗಾಂಧರ್ವಮೆಂಬುದೆಮ್ಮ ಬಾಳವಿದ್ಯೆಯದ ಜಱೋಳೆಮ್ಮಂ ರಂಜಿಸುವನ್ನರ್ ಪ್ರೌಢರಿಲ್ಲ (ಶಾಂತಿಪು. ೨-೨೦ ವ). [ಸಂ. ಬಾಲವಿದ್ಯಾ]

**ಬಾಳವೂರು** 'ಬಾಲವೂರು' ನೋ.

**ಬಾಳವೇರ್** (ನಾ). ಬಾಳದ ಬೇರು ; ಲಾಮಂಚದ ಬೇರು: ಕೆಂದಳಿರ ಪಂದರೊಳಗಣ ಬಾಳವೇರ ಈರ್ಗಟ್ಟಿನೋವರಿಯೊಳಗೆ (ಚಂದ್ರಪ್ರಪು. ೯-೬೬). [ಬಾಳ್$_2$ + ಬೇರ್$_1$]

**ಬಾಳಾಂಬಕ** (ನಾ). = ಬಾಳನಯನ ೨: ಬಾಳಾಂಬಕನ ಭಕ್ತನಾಗಿ ಭಕ್ತಿಯ ತಾಳಲಱೆಯನೆಂದಡೆ ಅದು ಬಾಲನ ಚಿತ್ತದ ಲೀಲೆಯಂತೆ (ಮೋಳಿಗ. ೨೪-೯೮). [< ಸಂ. ಭಾಲಾಂಬಕ]

**ಬಾಳಾಕ್ಷ** (ನಾ). = ಬಾಳನಯನ ೨ : ಪಾಲು ಸಕ್ಕರೆ ತುಪ್ಪ ಹಾಲನ್ನ ಸವಿವಂತೆ ಬಾಳಾಕ್ಷ ಪೇಳ್ದಾನು (ಕಂಕ. ೩-೦೦). [< ಸಂ. ಭಾಲಾಕ್ಷ]

**ಬಾಳಾತಪ** 'ಬಾಲಾತಪ' ನೋ.

**ಬಾಳಾಯಿ** (ನಾ). ಒಂದು ಬಗೆಯ ಮರ ; ತುಮ್ರಿಮರ: ಬಾಳಾಯಿ (ತುಮ್ರಿ) . . . ಇದರ ಕಟ್ಟಿಗೆಯು ಗಟ್ಟಿ, ಜಿಗುಟುಳ್ಳದ್ದು, ತಾಳಿಯುಳ್ಳದ್ದು ; ಆದಾಗ್ಯೂ ಇದಕ್ಕೆ ಬಹಳ ಬೆಲೆ ಬರುವದಿಲ್ಲ. ಘನಫೂಟಿನ ತೂಕ ೫೦ ರಿಂದ ೭೦ ಪೌಂಡುಗಳ ವರೆಗೆ. ಇದರ ಹಣ್ಣುಗಳನ್ನು ಜನರು ಪ್ರೀತಿಯಿಂದ ತಿನ್ನುವರು (ಕಥಾಗ. ೪೪). [?]

**ಬಾಳಾರ್ಕ** 'ಬಾಲಾರ್ಕ' ನೋ.

**ಬಾಳಾಳ್** (ನಾ). ಖಡ್ಗವಿದ್ಯೆಯನ್ನು ಬಲ್ಲವನು ; ಪರಾಕ್ರಮಿ :

ಸಿಂಗದೀಕ್ಷರ್‌ಬ್ಬಾಳಾಳ್ ಅರಟ್ಟೇತೀರಾರ್ ಕೂಡಲೂರ್ ಆಳಿ (ಮೈ.ಅಂ. ೧೯೧೬. ೦೩-೪; ಸು. 726). [ಬಾಳ್$_3$ + ಆಳ್$_3$]

**ಬಾಳಿ** 'ಬಾಳ್$_3$' ನೋ.

**ಬಾಳಿಕೆ$_1$** 'ಬಾಟ್ಕೆ' ನೋ.

**ಬಾಳಿಕೆ$_2$** 'ಬಾಲಿಕೆ' ನೋ.

**ಬಾಳಿಸು** 'ಬಾಟಿಸು' ನೋ.

**ಬಾಳು$_1$** 'ಬಾಟ್$_1$' ನೋ.

**ಬಾಳು$_2$** 'ಬಾಟ್$_3$' ನೋ.

**ಬಾಳು$_3$** 'ಬಾಳ್$_3$' ನೋ.

**ಬಾಳು$_4$** 'ಬಾಳ್$_2$' ನೋ.

**ಬಾಳುಕ** 'ಬಾಟುಕ' ನೋ.

**ಬಾಳುಗುಳಿ** 'ಬಾಟ್ಗುಳಿ' ನೋ.

**ಬಾಳುಗೇಡಿ** (ನಾ). ಜೀವನವನ್ನು ಹಾಳುಮಾಡುವವನು ; ಬದುಕನ್ನು ಕೆಡಿಸುವವನು : ನೆಟ್ಟನೆಲೆ ಧೃತರಾಷ್ಟ್ರನೃಪ ನೀನಿಟ್ಟ ಕಿಚ್ಚಿದು ಪಾಪಿ ಮಗನನು ಹುಟ್ಟಿದುಂದೇ ಬಿಸುಡದಾದವು ಬಾಳುಗೇಡಿಯನು (ಕುಮ್ಯಾಭಾ. ೯-೯೯). [ಬಾಳು$_2$ (< ಬಾಟ್$_3$) + ಕೇಡಿ$_1$]

**ಬಾಳುಗೇಡು** (ನಾ). ಬದುಕಿಗೆ ಕೇಡು ತರುವಂತಹುದು ; ಜೀವನವನ್ನು ಹಾಳುಮಾಡುವಂತಹುದು : ಆಳುಕೂಳುಗಳ ಮೇಳವಿಲ್ಲದ ಮನೆಯು ಬಾಳುಗೇಡು (ಸರ್ವಜ್ಞ. ೧೯೯೯). [ಬಾಳು$_2$ (<ಬಾಟ್$_3$) + ಕೇಡು]

**ಬಾಳುಡಿ** (ನಾ). ಖಡ್ಗದ ತುಂಡು; ಕತ್ತಿಯ ತುಂಡು : ನೆಣದೊಳ್ಗ ಸಟೆಯೊಳ್ ಜಗಿಲ್ಲಗುರ್ವಡರೆ ನಿರಂತರಂ ಪೊಳೆವ ಬಾಳುಡಿ ಸುಯ್ವ ನವವ್ರಣಂಗಳೊಳ್ ಪೊಡರೆ ಪೊದಟ್ದುದದ್ಭುತಭಯಾನಕಮಾಹವರಂಗ ಭೂಮಿಯೊಳ್ (ಕಂಕಬಾ. ೧೦-೫೬) ; ಬಾಳುಡಿ ವಾಟಿ ಬೀಟಿ ಪಗಲುಳ್ಕದ ವೋಲ್ . . . ಭಯಂಕರಮಾಯ್ತು ತುರಂಗಸಂಗರಂ (ಕಂರಾಮಾ. ೦೩-೬೩). [ಬಾಳ್$_3$ + ಉಡಿ$_6$]

**ಬಾಳುತ್ತಾರ** (ನಾ). ಉಂಬಳಿಯಾಗಿ ಕೊಟ್ಟ ಭೂಮಿ : ಯಾಗ ಉತ್ತಾರವ ಕೊಟ್ಟ ಭೂಮಿ ಸಹ ಬಾಳುತ್ತಾರವಾಗಿ ವಿಂಗಡಿಸಿ ಕೊಡ ಹೇಳಿ (ಎಕ. IX (S), ಬೆಂಗಳೂ. ೦೩೦-೪ ; ಸು. 1700). [ ಬಾಳು$_2$ (<ಬಾಟ್$_3$) + ಉತ್ತಾರ ]

**ಬಾಳುದಲೆ** 'ಬಾಟ್ದಲೆ' ನೋ.

**ಬಾಳುದಲೆವಿಡಿ** ' ಬಾಟ್ದಲೆವಿಡಿ ' ನೋ.

**ಬಾಳುಬೆ** 'ಬಾದುಬ್ಬೆ' ನೋ.

**ಬಾಳುಮನೆ** 'ಬಾಟ್ಮನೆ' ನೋ.

**ಬಾಳುವೆ** 'ಬಾಟ್ವೆ' ನೋ.

**ಬಾಳೆ$_1$** 'ಬಾಟೆ$_1$' ನೋ.

**ಬಾಳೆ$_2$** (ನಾ). ಒಂದು ಬಗೆಯ ಉದ್ದವಾಗಿರುವ ಮೀನು : ಪೇಟಿದ್ದ ನಿಸನಾಂ ಮಗುಟ್ದಾಗಳೆ ಸೂಸಿ ಕಣ್ಣ ನೀರೊಡನೊಡನುಣ್ಮೆ ಕುಂಕುಮ ದೊಳ್ದಿದ ಬಾಳೆಗಳನ್ನವಾಗಿ ಕೆಂಪಡರ್ದಲರ್ಗಣ್ಗಳೀದುಗುಟ್ದು ನೋಡಿದುದಂ ನೆನೆವೇಂ ಮೃಗಾಕ್ಷಿಯಾ (ಆದಿಪು. ೦೨-೨೪); ಬಾಲಕಿಯ ಲರ್ಗಣ್ಗಳ್ . . . ಬಾಳೆಯ ಮೀಂಗಳ ತೆಱದಿಂ ಲೀಲೆಯೊಳೀಂ ಪೊಳೆದು ತಳೆದವತಿಚಪಳತೆಯಂ (ಚಾರಪು. ೨-೩೦) ; ತೊಡೆಯುಮೆಸೆವಕ್ಷಿಯುಂ ಬಾಳೆಯುಂ ಬಾಳೆಯುಂ ನಡುವುಂ ಸುವಾಣೆಯುಂ ಹರಿಯುಮಂ ಹರಿಯುಮಂ ಬಿಡದೆ ಪೋಲ್ತಿರೆ ಮೆಱೆವ ಕಾಂತೆಯರ್ . . . ಸೊಗಯಿಸಿದರು (ಕೃಮಿಭಾ. ೬-೨೩). [ದೇ.॥ ತಮಿ. ವಾಳೈ; ಮಲ. ವಾಳ; ತುಳು. ಬಾಲೆ; ಕೊಡ. ಬಾಳ್; ತೆಲು. ವಾಲುಗ, ವಾಲುವ]

**ಬಾಳೆ$_3$** 'ಬಾಲೆ' ನೋ.

**ಬಾಳೆಕಂಬ** 'ಬಾಳೆಗಂಬ' ನೋ.

**ಬಾಳೆಕೊನೆ** 'ಬಾಳೆಗೊನೆ' ನೋ.

**ಬಾಳೆಗಂಬ,** ಬಾಳೆಕಂಬ (ನಾ). ಬಾಳೆಗಿಡದ ತಾಳು, —ಕಾಂಡ : ತಾವರೆಯಲ್ಲಿ ತಾರೆ ಜನನಂಬಡೆದಂದು ನಗೇಂದ್ರಮೂಲದೊಳ್ ಭಾವಿಸೆ ಬಾಳೆಗಂಬಮೊಗೆದಂದು ಲತಾಗ್ರದೊಳದ್ರಿ ಪುಟ್ಟಿದಂದು . . . ಸತಿಯಂಗ ಮನಾಂ ಪೊಗಳಲ್ಕೆ ಸಾಲ್ದಪೆಂ (ರಾಜಶೇ. ೬-೨೬). **ಬಾಳೆಕಂಬ :** ಚಪ್ಪರ ಕಟ್ಟುವುದಕ್ಕೆ ಇನ್ನೂ ಎರಡು ದೊಡ್ಡ ಬಾಳೆಕಂಬಗಳನ್ನು ತರಬೇಕು (ರೂಢಿ). [ಬಾಳೆ$_1$ (<ಬಾಟೆ) + ಕಂಬ$_1$ (<ಕಂಭ)]

**ಬಾಳೆಗಣ್** (ನಾ). ಮೀನಿನ ಆಕಾರದ ಕಣ್ಣು : ಚಂಚತ್ಕಾಂಚನಾಬ್ಜಾಸ್ಯ ಮಂಡಳಮಿಂಬಾಗಿರೆ ಬಾಳೆಗಣ್ಬೊಳೆಯೆ . . . ಸರಿದ್ವಧು ರಥಾಂಗೋರೋಜೆ ಕಣ್ಗೊಪ್ಪಿದಳ್ (ವೃಷಪು. ೯-೮) ; ಪೊಳೆದೊಪ್ಪೆ ಬಾಳೆಗಣ್ ಬಿಸಜಮುಖಂ ಮರುಚ್ಚಳಿತವೊಂದೆ (ಕಬಕಂ. ೨-೫೩). [ಬಾಳೆ$_2$ + ಕಣ್]

**ಬಾಳೆಗೊನೆ,** ಬಾಳೆಕೊನೆ (ನಾ). ಬಾಳೆಯಕಾಯಿ ಅಥವಾ ಹಣ್ಣುಗಳ ಗೊಂಚಲು : ಜವರ, ನಿಂಗ, ಬೋರಿ ಮುಂತಾದವರು ಕಾಯಿ, ಕೊಬರಿ, ಬಾಳೆಗೊನೆಗಳನ್ನು ಹೇಳದೆ ಕೇಳದೆ ಚಾವಡಿಗೆ ತಂದು ಒಪ್ಪಿಸುತ್ತಾರೆ (ನಮ್ಮೂರು. ೧೯೬). **ಬಾಳೆಕೊನೆ :** ಬಾಳೆಕೊನೆ ತರಾಕೆ ಹೇಳಿದಾರೇನು ನಿನ್ನ ಸಾಹುಕಾರರು ? (ಮರಳು. ೨೮೮). [ಬಾಳೆ$_1$ (<ಬಾಟೆ) + ಗೊನೆ$_3$ (< ಗೊಲೆ$_2$)]

**ಬಾಳೆದೊಡೆ** (ನಾ). ಬಾಳೆಕಂಬದಂತೆ ದುಂಡಗೆ, ನುಣುಪಾಗಿ ಇರುವ ತೊಡೆ : ಪಸುಗೆಳೆವಾತಿನ ಬಾಳೆದೊಡೆಯ ಬಣ್ಣಗೆಗಾಲ . . . ನೀಱೆಯ ನವಲಾವಣ್ಯದ ಸಿರಿಯನದೇನಂ ಬಣ್ಣಿಪೆನು (ಜಯುಕಾ. ೩-೬೩); ಪೇರಡೆ ಹೊನ್ನ ಸೆಳೆಸಡು ಬಾಳೆದೊಡೆ ಮೆಱೆದೆನ್ನರಂ ಸೋಲಿಸುವ ಜವ್ವನವಾಂತನಾ ಕುವರ (ಸಾಳ್ವಭಾ. ೯-೬); ಬಾಳೆದೊಡೆಯ ಕೊನಬುಗಾತಿಯುಳ ಕೊಸರಿ ರಂಗಾಯೆಂಬ ವನಿತೆ ತಾ ವಶವಪ್ಪಳೆಂದೊ (ಕಶಸಾಂ. ೨೨-೧೦). [ಬಾಳೆ$_1$ (<ಬಾಟೆ) + ತೊಡೆ$_2$]

**ಬಾಳೆಮೀನ್,** ಬಾಳೆಮೀನು (ನಾ). = ಬಾಳೆ$_2$ : ಅದನೊಂದು ಬಾಳೆ ಮೀನ್ನುಂಗಿ ಗರ್ಭಮಂ ತಾಳ್ದಿದೊಡೆ (ಕಂಕಬಾ. ೦-೬೩ ವ); ಕಣ್ಣ ನೀರಿಟೆದುವು ಬಾಳೆಮೀನ್ ಜಲಮನಟ್ಕಿಸಲಾಱದೆ ಕಾಱುವಂತೆವೋಲ್ (ಕಾವ್ಯಸಾ. ೬೦೦). **ಬಾಳೆಮೀನು :** ಸೂಳೆ ಸೂತ್ರದ ನೇಣು ಗಾಳವಾಕೆಯ ಮೊಗವು ಮೇಳಯ್ಸುವವಳು ಸಲೆ ಬೆಂಡು ಮಿಂಡ ತಾ ಬಾಳೆಮೀನು (ಸರ್ವಜ್ಞ. ೧೯೪೪). [ಬಾಳೆ$_2$ + ಮೀನ್$_2$. /ತಮಿ. ವಾಳ್ಮೀನ್; ತುಳು. ಬಾಲೆಮೀನ್]

**ಬಾಳೆಮೀನು** ' ಬಾಳೆಮೀನ್ ' ನೋ.

**ಬಾಳೆಲೆ** ' ಬಾಟೆಲೆ ' ನೋ.

**ಬಾಳೆವಣ್** ' ಬಾಟೆವಣ್ ' ನೋ.

**ಬಾಳೆವಸುಳೆ** (ನಾ). ಬಾಳೆಮೀನಿನ ಮರಿ : ಬಾಳೆವಸುಳೆದಿಟ್ಟೆಯ ಬಂಧಕಿಯರ ಜಾಳಂ ನಡೆತಂದುದು (ಜಯುಕಾ. ೦೩-೬೯). [ಬಾಳೆ$_2$ + ಪಸುಳೆ]

**ಬಾಳೆಹಣ್ಣು** ' ಬಾಟೆವಣ್ ' ನೋ.

**ಬಾಳ್ಕಟ್ಟು** ' ಬಾಳ್ಗಟ್ಟು ' ನೋ.

**ಬಾಳ್ಕೆ** ' ಬಾಟ್ಕೆ ' ನೋ.

**ಬಾಳ್ಗನಸು** (ನಾ). (ಆಲಂ) ಜೀವನದಲ್ಲಿ ಒಳ್ಳೆಯದನ್ನು ಬಯಸಿ ಕಲ್ಪಿಸಿಕೊಂಡಿರುವ ಬದುಕಿನ ಭವಿಷ್ಯ : ಹಿಂದಾವ ಮುದಿಯು ಮೆಯ್ಗ್ . . . ಸುಖದಮಾಗಿರ್ದತ್ತೊ ತಾನದೆ ಇಂದು ಸೂಡಿನೊಲ್, ಕಟ್ಟಾಸೆ ಬೀಡಿನೊಲ್, ಬಾಳ್ಗನಸುಗಳೆಲ್ಲ ಕೊನೆಯ ಸುಡುಗಾಡಿನೊಲ್ ಕಾಣುತಿರೆ (ಶ್ರೀರಾಮಾ. ೦೦೯-೦೯೦). [ಬಾಳ್$_2$ (< ಬಾಟ್$_3$) + ಕನಸು]

**ಬಾಳ್ಗಚ್ಚು** 'ಬಾಳ್ಗಟ್ಟು' ನೋ.

**ಬಾಳ್ಗಚ್ಚುಗೊಡು** 'ಬಾಳ್ಗಟ್ಟುಗೊಡು' ನೋ.

**ಬಾಳ್ಗಟ್ಟು, ಬಾಳಗಟ್ಟು, ಬಾಳ್ಕಟ್ಟು, ಬಾಳ್ಗಚ್ಚು, ವಾಳ್ಗಟ್ಟು** (ನಾ). ಯುದ್ಧದಲ್ಲಿ ಪರಾಕ್ರಮವನ್ನು ತೋರಿದುದಕ್ಕಾಗಿ ಯುದ್ಧಾಂತ್ಯದಲ್ಲಿ ವೀರನ ಕತ್ತಿಯನ್ನು ತೊಳೆದು, ಕೊಡುವ ಮಾನ್ಯ: ಕೇಕಯ ಪಲ್ಲವರಂ ಕಾದಿಱಿದು ಪೆತ್ತ್ರಜಯನಾ ವಿಜಅರಸನ್ಗೆ ಬಾಳ್ಗಟ್ಟು ಪಲ್ಮಡಿಉ ಮೂಱುವಳ್ಳಿಉಂ ಕೊಟ್ಟಾರ್ (ಪ್ರ್ಯಆಂ. ೦೧೯೬, ೦೬-೦೨ ; ಸು. 450) ; ಬಾಳ್ಗಟ್ಟು ಕೊಟ್ಟೊದು ಅಯ್ಯುಗ . . . ಕಟನಿ (ಎಕ. XVI, ತುಮಕೂ. ೯೮-೯ ; ಸು. 780) ; ಅವರ ಮಾಮು ತಿಮ ಮೊದೆಯಮಾದಪಾಡಿಯ ಬಾಳ್ಗಟ್ಟು ಕೊಟ್ಟೊ (ಪ್ರ್ಯಆಂ. ೦೧೯೦, ೯೯-೯ ; ಸು. 886). **ಬಾಳಗಟ್ಟು :** ನಾಗಗುಟ್ಟರಸಂ ತಮ್ಮ ಏಱಿದ ಕುದುರೆಯುಮ್ನಗುಂಟಿ ಅಟ್ಟಿ ಬಾಳಂ ಕಿಟ್ಟು ನಡದು ಪಲರನಿಱಿದು ಸತ್ತೊಡೆ ಬೆಳ್ಳಮ್ಪರವಿ ಮಾ×ಬಾಳಗಟ್ಟು ಆಗೆ ಕೊಟ್ಟೊದು (ಎಕ. X, ಕೋಲಾರ. ೨೦೦-೦೫ ; ಸು. 890 ?). **ಬಾಳ್ಕಟ್ಟು :** ಬಲಮಾನ್ಪಾಲ್ದಿ ಎಱಿದು ಬಿಟ್ಟರ್ ಬಿಟಿತ್ತೊಡೆ ಮೆಚ್ಚಿ ಲಕುನ್ದಮಾ ಬಾಳ್ಕಟ್ಟು ಕೊಟ್ಟ (ಎಕ. X (s), ಬಾಗೇಪ. ೬೬-೯ ; 820). **ಬಾಳ್ಗಚ್ಚು :** 'ಬಾಳ್ಗಚ್ಚುಗೊಡು' ಪರಾ. **ವಾಳ್ಗಟ್ಟು :** ಶಾನ್ತನೂರೂ ಎರಡಿಯೂರುಉಂ ವನ್ದು ತುವ್ಪುಕಟನಿಯುಂ ಅವರ ಮನೆಯುಂ ವಾಳ್ಗಟ್ಟುಂ ಪ್ರಸಾದಙ್ಗೆಯ್ದಾರ್ (ಎಕ. X, ಮುಳಬಾ. ೨೫೫-೦೨ ; ಸು. 750) ; ಮೂಱುಕೊಡೆ ಅಣ್ಣಿಯರ್ಪಿಣ್ಣನೂರಾ ಏಱಿನುಳ್ಳೆಱಿದು ಬಿಱ್ದಾರ್ ಕ[ನ್ನ]ರಸರುಳ್ ಇದರ್ಕೆ ಚಿವಾನಿ ಕಳನಿ ವಾಳ್ಗಟ್ಟು ಕೊಟ್ಟೊದು ರೋಣಮೊಡೆಯೊಗೆ ಕೊಟ್ಟರ್ (ಎಕ. XVI, ತುಮಕೂ. ೬೬-೫; ?).

[ಬಾಳ್$_3$ + ಕಟ್ಟು]

**ಬಾಳ್ಗಟ್ಟುಗೊಡು, ಬಾಳ್ಗಚ್ಚುಗೊಡು** (ಕ್ರಿ). ಯುದ್ಧದಲ್ಲಿ ಶೌರ್ಯವನ್ನು ತೋರಿದುದಕ್ಕಾಗಿ ಮಾನ್ಯವಾಗಿ ಭೂಮಿಯನ್ನು ಕೊಡು ; ನೆತ್ತರುಕೊಡುಗೆಯನ್ನು ಕೊಡು : ಆತಂಗೆ ಬಾಣವಿದ್ಯಾಧರಂ ಮೆಚ್ಚಿ ಬಾಳ್ಗಟ್ಟುಗೊಟ್ಟದು (ಕರ್ನಾಇ. IX-i, ೪-೦೦; ಸು. 9 ನೆಯ ಶತ). **ಬಾಳ್ಗಚ್ಚುಗೊಡು :** ನೀತಿಮಾರ್ಗ್ಗ ಪೆಮ್ಮಾರ್ನಡಿಗಳು ನೊಟಮ್ಪಾಧಿ ರಾಜರು ಸೂದೂರಂ ಬಾಳ್ಗಚ್ಚುಗೊಟ್ಟರ್ (ಎಕ. X, ಕೋಲಾರ. ೬೯-೦೩ ; ಸು. 890).  [ಬಾಳ್ಗಟ್ಟು + ಕೊಡು$_1$]

**ಬಾಳ್ಗೀಟ್** (ಕ್ರಿ). ಖಡ್ಗವನ್ನು ಹಿರಿ ; ಕತ್ತಿಯನ್ನು ಒರೆಯಿಂದ ಕೀಳು : ಸಂಗ್ರಾಮವಿದ್ಯಾನ್ವಿತರ್ ××× ಯಂ ಪತಿ ಕೋಗಿಯೂರ ಬಯಲೊಳ್ಬಾಳ್ಗಿಟ್ಟುಕೊಣ್ಡಿಯ್ದಂ (ಎಕ. XIV, ಎಡತೊ. ೩೧-೯; ಸು. 900) ; ಅನಿಬರುಂ ಬಾಳ್ಗಿಟ್ಟು[ಶಾಂ. ತ್ತು] ಮೇಲ್ವಾಯ್ದೊಡರ್ಬಿಸೆ ಶಿಣ್ಣಂ ತೆಗೆದರ್ಧಚಂದ್ರಶರದಿಂ ಸೂಟ್ ಸೂಟ್ಕೊಳೆಚ್ಚಾಗಳೆರ್ಚಿಸಿದಂತಿರ್ದು ದುರುಳ್ದ ಕೌರವಶಿರಃಪದ್ಮಂಗಳಿಂ ಕೊಳ್ಗುಳಂ (ಪಂಪಭಾ. ೦೨-೦೯೩); ಬಾಳ್ಗಿತ್ತು ಮಚ್ಚರದಿಂ ಸಾರ್ಚಿದರಂ ಪಡಲ್ವಡಿಸಿ (ಅಜಿಪು. ೦-೩೬).

[ಬಾಳ್$_3$ + ಕೀಟ್$_1$]

**ಬಾಳ್ಗುಡತೆ** (ನಾ). (ರಾಜರು ಧರಿಸುತ್ತಿದ್ದ) ಅಧಿಕಾರಸೂಚಕವಾದ ಅಂಗಿ : ತೊಟ್ಟ ಮಹಾರಾಜಮುದ್ರೆಯ ಬಾಳ್ಗುಡುತೆಗೂ, ಹಿಡಿದ ವೀರದಣ್ಮಿನ ಕಯ್ದುವಿಗೂ ಕಟ್ಟೀಪವು ಜಕ್ಕುಳಿಕೆಯು ಅಪಮಾನವು ಅಡಸಿ ಮುಸಗುವಂತೆ–ನೀವು ಕುಬುದ್ಧಿಯನೆಣಿಸಿ (ಚಿಬ್ಬಿಅ. ೨೦೯-೦೪).

[ಬಾಳ್$_2$ (< ಬಾಟ್$_3$) + ಕುಡುತೆ$_3$ (< ಕುಡತಿ)]

**ಬಾಳ್ಗುಳಿ** 'ಬಾಟ್ಗುಟಿ' ನೋ.

**ಬಾಳ್ಗಿಡು** (ಕ್ರಿ). ಜೀವನವನ್ನು ಹಾಳುಮಾಡಿಕೊಳ್ಳು : ಕೆಟ್ಟೆವೋ ! ಕಂಗೆಟ್ಟೆವೋ ! ಮನೆಗೆಟ್ಟೆವೋ ! ಬಾಳ್ಗೆಟ್ಟೆವೋ ! (ಶ್ರೀರಾಮಾ. ೭೦೩-೦೨೦).

[ಬಾಳ್$_2$ (< ಬಾಟ್$_3$) + ಕೆಡು$_1$]

**ಬಾಳ್ಗೆಳೆಯ** (ನಾ). ಬಾಳಿನುದ್ದಕ್ಕೂ ಸ್ನೇಹಿತನಾಗಿರುವವನು : ವತ್ಸ ! ಕಾಣದು ಕಣ್ಗೆ ! ಬಗೆಗೆ ಸುಳಿದಿದೆ ಬರವು ಬಾಳ್ಗೆಳೆಯನೊರ್ವನಾ ! (ಶ್ರೀರಾಮಾ. ೨೮೮-೮೬).  [ಬಾಳ್$_2$ (< ಬಾಟ್$_3$) + ಕೆಳೆಯ]

**ಬಾಳ್ಗೊಲೆ** (ನಾ). ಜೀವಹಾನಿ : ಪ್ರಾಣಹತ್ಯೆ : ಗಳಹದಿರು ಕೆಲಬಲದ ಹಂಗಿನ ಬಳಕೆಯೇ ಘಡ ಸೂತಸುತ ಬಾಳ್ಗೊಲೆಯು ಬಾಹಿರ ಬಿಸುಗ ಬೆದಱಿಸಿ ಬಱಿದೆ ಬೆಱತಿಯಲ (ಕುಮ್ಯಾಕ. ೧೧-೨೫) ; ನಿರ್ಜನ ನಿಶಾವೇಳೆಯಲಿ ಚಿತ್ರೆ, ಕ್ಷಾತ್ರಕುಲರಮಣಿ. ಬಾಳ್ಗೊಲೆಗುಜ್ಜುಗಂಗೈದು . . . ಶಶಿತಾರೆಗಳಿಗೆ ಬಿನ್ನೈಸಿದಳ್ ಕೈಮುಗಿದು (ಚಿತ್ರಾಂಗ. ೬೫-೦೬೪).

[ಬಾಳ್$_2$ (< ಬಾಟ್$_3$) + ಕೊಲ್$_2$]

**ಬಾಳ್ತರ** (ನಾ). ತಾಳಿಕೆ : ಬಾಳಿಕೆ : ಬೆತ್ತದ ಸಂದುಕ ನೂರುವರ್ಷ ಬಾಳ್ತರ ಬರುತ್ತದೆ (ಮೂಕಜ್ಜ. ೦೬೩).  [ ← ತುಳು. ಬಾಳ್ತರ ]

**ಬಾಳ್ತಿ** 'ಬಾಟ್ತಿ' ನೋ.

**ಬಾಳ್ತಿಗ** (ನಾ). ಮನೆವಾರ್ತೆಗಾರ : ನಮ್ಮಯ ಮನೋವಿಧಾನಗಳನ್ನು ನಮಗೆ ಕೈಗೂಡಿಸಿ ಕುಡುವುದು . . . ನಿಮ್ಮಂತಹ ಕುಲಕ್ರಮಯುಕ್ತವಾದ ಸ್ವಧರ್ಮನಿಷ್ಠೆಯ ಬಲ್ಲ ಬಾಳ್ತಿಗರಿಗೆ ಬಿರುದಾಗಿದೆ (ಚಿಬ್ಬಿಅ. ೦೯೯-೦೭).  [ ಬಾಳ್ತಿ ( < ಬಾಟ್ತಿ) + –ಗ$_2$ ]

**ಬಾಳ್ತಿಗೆಯ್** 'ಬಾಟ್ತಿಗೆಯ್' ನೋ.

**ಬಾಳ್ದಲೆ** 'ಬಾಟ್ದಲೆ' ನೋ.

**ಬಾಳ್ದಲೆಗೊಳ್** 'ಬಾಟ್ದಲೆಗೊಳ್' ನೋ.

**ಬಾಳ್ದಲೆವಿಡಿ** 'ಬಾಟ್ದಲೆವಿಡಿ' ನೋ.

**ಬಾಳ್ದುದಿ** (ನಾ). ಖಡ್ಗದ ಮೊನೆ ; ಕತ್ತಿಯ ತುದಿ : ಬಾಳ್ದುದಿವೊಲಿರ್ಪ ನಖದಿಂ ಸೀಳ್ದಸುರನ ಕುಕ್ಷಿಯಂ . . . ಬೇಳ್ದಂ ನಿಜವಿಕ್ರಮವಾಗ್ನಿಯೊಳ್ ನರಸಿಂಹಂ (ವಿಷ್ಣುಕೃ. ೦-೫-೨೫೦).  [ ಬಾಳ್$_3$ + ತುದಿ ]

**ಬಾಳ್ಬೀಟ್** (ಕ್ರಿ). (ಅಲಂ) ಶತ್ರುವಿನ ಖಡ್ಗಕ್ಕೆ ಸಿಕ್ಕಿ ಸಾಯು : ತುಱುವನಿಕ್ಕಿಸಿ ರಣದೊಳ್ಬಾಳ್ಬಿಟ್ಟೊ ಸುಗತಿಯ ಪಡೆದನ್ (ಎಕ. VIII, ಸೊರಬ. ೨೦೯-೦೯ ; 965).  [ಬಾಳ್$_3$ + ಬೀಟ್$_1$]

**ಬಾಳ್ಮೆ** 'ಬಾಟ್ಮೆ' ನೋ.

**ಬಾಳ್ಮೊದಲ್** 'ಬಾಟ್ಮೊದಲ್' ನೋ.

**ಬಾಳ್ಮೊನೆ** (ನಾ). = ಬಾಳ್ದುದಿ : ಬಾಳ್ಮೊನೆ : ಪಾಟ್ಮನೆ (ಶಮದ. ೬೭ ಪ್ರಯೋ); ದಾದಿ ಬಟಿ ಪಸುಳೆಯನ್ ಬಾಳ್ಮೊನೆಗೆ ಚುರ್ಚಿದನ್ (ಅಕ್ಕಾ. ೩-೯೬).  [ಬಾಳ್$_3$ + ಮೊನೆ]

**ಬಾಳ್ವಂದರ** 'ಬಾಟ್ವಂದರ್' ನೋ.

**ಬಾಳ್ವನೆ** 'ಬಾಟ್ವನೆ' ನೋ.

**ಬಾಳ್ವಲ** (ನಾ). ಖಡ್ಗಬಲ ; ಆಯುಧಬಲ : ಪರವಿಗ್ರಹದ ಮೇಲಣ ತೋಳ್ವಲಮುಮಂ ನಿಜವಿಗ್ರಹದ ಮೇಲಣ ಬಾಳ್ವಲಮುಮೋಸರಿಸದೆ ಸುತ್ತಿಱಿದ ಮುತ್ತಿದ ಬೀಡಂ ತೆಗೆಯಿಸಿ ಮುಗುಟ್ದು ಬರ್ಪಾಗಳ್ (ಆದಿಪು. ೦೨-೨೭ ವ) ; ಆಳ್ವಲದ ತೋಳ್ವಲದ ಬಾಳ್ವಲದ ಗರ್ವದಿಂದುರ್ವಿ ಮಲೆತ ಗರ್ವಿತೋರ್ವೀಶಬಳಮನೆಟ್ಟಟ್ಟಿ (ಪುಷ್ಪಕೃ. ೫-೫೦ ವ).  [ಬಾಳ್$_3$+ಬಲ$_3$]

**ಬಾಳ್ವಲಿ** (ನಾ). ಪ್ರಾಣದ ಬಲಿದಾನ,—ಆಹುತಿ : 'ಬಾಳ್ವಲಿಗುಡು' ಪರಾ.  [ ಬಾಳ್$_2$ (< ಬಾಟ್$_3$) + ಬಲಿ$_3$ ]

**ಬಾಳ್ವಲಿಗುಡು** (ಕ್ರಿ). ಪ್ರಾಣವನ್ನು ಆಹುತಿ ಕೊಡು,–ಬಲಿಯಾಗಿ ಅರ್ಪಿಸು : ಈ ನಮ್ಮ ನಾಯಕರ ಶರಭಾವತಾರದ ಪ್ರಚಣ್ಡಮೂರ್ತಿಗೆ ಬಾಳ್ವಲಿಗುಡಬೇಕು (ಮುಂತ್ರಶ. ೯೯-೨೫).

[ಬಾಳ್ವಲಿ + ಕುಡು$_1$ (< ಕೊಡು$_1$)]

**ಬಾಳ್ವಿಕೆ** 'ಬಾಟ್ವಿಕೆ' ನೋ.

**ಬಾಳ್ವಡಿ$_1$** (ಕ್ರಿ). ಜೀವಧಾರಣೆ ಮಾಡು ; ಬದುಕು : ಮತ್ತೊಂತೊ

ಬಾಳ್ವಡಿದು ಬಂದರೊಡಗೂಡಿ (ಕಾರೂರ. ೯೮-೧೯೪).

[ ಬಾಳ್$_2$ (< ಬಾೞ್$_3$) + ಪಿಡಿ$_1$ ]

**ಬಾಳ್ವಡಿ₂** (ಕ್ರಿ). ೧. ಕತ್ತಿಯನ್ನು ಹಿಡಿ ; ಖಡ್ಗವನ್ನು ಹಿಡಿ. ೨. (ಆಲಂ) ಯುದ್ಧಮಾಡು ; ಸೆಣಸು : ಬಾಳ್ವಡಿದಾರ್ ಬಾೞ್ದಪ್ಪರಾತ ನಿದಿರೊಳ್ ಪಗೆವರ್ (ಕಬ್ಬಿಕಾ. ೪೯). [ ಬಾಳ್$_3$ + ಪಿಡಿ$_1$ ]

**ಬಾಳ್ವೀಡು** (ನಾ). ಬಾಳುವ ಮನೆ ; ಮೂಲಾಶ್ರಯ ; ನೆಲೆವನೆ: ಸಿಂಹಪುರ ಕಂತುವಿನ ನೆಲೆವೀಡು ಸೊಬಗಿನ ಸಂತತಿಯ ತಾಯ್ವಾಡು ಲಕ್ಷ್ಮಿಯ ಸಂತಸದ ಬಾಳ್ವೀಡೆನಿಸಿ ಶೋಭಿಪುದು ಸೊಬಗಾಗಿ (ಸಾಳ್ವಭಾ. ೨-೦). [ ಬಾಳ್$_1$ (< ಬಾೞ್$_1$) + ಬೀಡು$_2$ ]

**ಬಾಳ್ವೆ** 'ಬಾೞ್ವೆ' ನೋ.

**ಬಾಳ್ವೆಗಡಿಸು** (ಕ್ರಿ). ಬಾಳುಗೇಡು ಮಾಡು ; ಬದುಕನ್ನು ಹಾಳು ಮಾಡು : ಇದಿರಾದರಂ ಬಾಳ್ವೆಗಡಿಸುತ್ತಸುಂಗೊಂಬೆನೀ ಬ್ರಹ್ಮಾಂಡಮಂ ಪೊೞ್ವೆಂ (ಜೈಬಪು. ೩೦-೧೧). [ಬಾಳ್ವೆ (< ಬಾೞ್ವೆ) + ಕೆಡಿಸು$_1$]

**ಬಾಳ್ವಣ** 'ಬಾೞ್ವಣ' ನೋ.

**ಬಾಳ್ವೆಳೆ** (ನಾ). (ಹೊಲಗದ್ದೆಗಳ) ಬೆಳೆಯುತ್ತಿರುವ ಪೈರು ; ಹಸುರಾಗಿರುವ ಬೆಳೆ: ಬೆಳ್ವಳಗಿನ ಬಾಳ್ವೆಳೆಯಂ ತಳ್ವದೆ ಬಾಂಬೊಲದೊಳರುಣಕರ ಶಿಖಿಶಿಖೆ ಪಾಳೆೞ್ವಸಮಳುರ್ದುಱ ಚಿಂತೆಯನಾಳ್ವಂತೆವೊಲೋಪಧೀಶ್ವರಂ ಕಳೆಗಟ್ಟಂ (ರಾಜಶೇ. ೦೨-೧೩). [ಬಾಳ್$_1$ (< ಬಾೞ್$_1$) + ಬೆಳೆ$_2$]

**ಬಾಳ್ವೇಲಿ** 'ಬಾೞ್ವೇಲಿ' ನೋ.

**ಬಾಳ್ವೊಗರ್** (ನಾ). ಕತ್ತಿಯ ಹೊಳಪು, —ಕಾಂತಿ : ಧರಣೀರಕ್ಷಣ ಮಂತ್ರಾಕ್ಷರಮಂ ವಿದ್ವಿಷ್ಟಸೈನ್ಯಮಾರಣಮಂತ್ರಾಕ್ಷರಮಂ ಪೊನ್ನೊರೆಯಿಂದಂ ಬರೆದಂತಾ ನೃಪನ ತೋಳ ಬಾಳ್ವೊಗರೆಸೆಗುಂ (ಮಲ್ಲಿಶು. ೩-೧೩).

[ಬಾಳ್$_3$ + ಪೊಗರ್]

**ಬಾಳ್ವೊಗು** (ಕ್ರಿ). ವೈವಾಹಿಕಜೀವನವನ್ನು ಮೊದಲು ಮಾಡು ; ಸಾಂಸಾರಿಕಜೀವನವನ್ನು ಪ್ರಾರಂಭಿಸು ; ಮದುವೆಯಾಗು : ಪಳೆಯ ರೋಗಕ್ಕೌಷಧಂಗೊಳಲ್ ನವರೋಗಮೊಲಿದು ಬಂದಂತೆ ಮೊದಲಾಣ್ಮನೊಲ್ಲೆಂದೊರ್ವ ಬಲವಂತನಂ ಬಯಸಿ ಬಾಳ್ವೊಗಲ್ ಬಡಿವ ಗಂಡಂ ದೊರಕಿದಂತೆ (ಜೈಬಪು. ೩೩-೭). [ಬಾಳ್$_2$ (< ಬಾೞ್$_3$) + ಪೊಗು]

**ಬಾಳ್ವೊಗೆ** (ನಾ). ಕತ್ತಿಗಳು ಪರಸ್ಪರ ತಾಗಿದಾಗ ಅವುಗಳ ಘರ್ಷಣೆಯಿಂದ ಹೊರಡುವ ಹೊಗೆ : ಬಾಳ್ವಾಳ್ಗಳ ಘಟ್ಟಣೆಯೊಳ್ ಬಳ್ವಳ ಬಳೆದೊಗೆದು ನೆಗೆದ ಕಿಡಿಗಳ ಬಂಬಲ್ಗಳ್ವೆರಸು ಪೊಳೆದು ನೆಗೆದುದು ಬಾಳ್ವೊಗೆ [ಕಾರ ಮುಗಿಲ್] ಬಳ್ಳಿಮಿಂ[ಚಿನಿಂದು]ಳ್ಕುವವೋಲ್ (ಕಂಜಭಾ. ೧೦-೮೪). [ಬಾಳ್$_3$ + ಪೊಗೆ$_2$]

**ಬಾೞೊಬ್ಬೆ** (ನಾ). ಬೆಳೆಯುವ ಪೊದೆ, ಕಂಟಿ ಮೊದಲಾದುವುಗಳಿಂದ ರಚಿಸಿದ ಬೇಲಿ : ಉತ್ತರಸ್ಯಾನ್ ದಿಶಿ ಬಾೞೊಬ್ಬೆ (ಪ್ಯ ಶಿಂ. ೦೯೨೪, ೮೦-೯೮ ; 799).

[P ಇದು 'ಬಾೞೊಬ್ಬೆ' ಎಂಬುದರ ಅಪಲಿಖಿತವಿರಬಹುದು]

**ಬಾೞ್$_1$, ಬಾಳ್$_1$, ಬಾಳು$_1$** (ಕ್ರಿ). ಬದ್ದು$_1$, ಬರ್ದು$_2$, ಬಳ್ದು, ಬೞ್ದು (ಭೂತನ್ಯೂ). ೧. ಬದುಕು; ಜೀವಿಸು : ಪತ್ರಿ ಪ್ರಮಾದ ಫಲಕಮನತ್ಯುಗ್ರಗ್ರಾಹನಿವಹಸಂಕ್ಷೋಭಿತದೊಳ್ ಮತ್ತೀ ರತ್ನಾಕರದೊಳ್ ಪುತ್ರಿಕೆಯೆನೆ ಬೞ್ದಳಿಂತು ಬಾೞ್ವುದೆ ಚೋದ್ಯಂ (ಕವಿರಾ. ೨-೩೭); ಅರಾತಿಗಳ್ಗಳ್ಕಿ ತನ್ನ ಕುಲಮುಂ ಚಲಮುಂ ದೊರೆಯುಂ ಕಿಡೆ ಬಾೞ್ವಂ ಗಂಡರೂಪಿನೊಳ್ ಗಂಡನಲ್ಲು ಪೆಂಡತಿಯ ವಲಂ (ಆದಿಪು. ೧೨-೯೭) ; ಸಮಸಂದ ತನ್ನ ಸಂತತಿಗೆ ಮಕ್ಕಳುಳ್ಳವಳ್ ಬೞ್ದು ಬಾೞ್ವಳ್ [ಕ್ಷಿ]ತಿಯೊಳ್ ಸಮಸಂದೆಸೆಗುಮೆ ಸಂತತಿಗೆ ಮಕ್ಕಳಿಲ್ಲದಳ್ ಬರ್ದುದೇಂ ಬಾೞದುದೇಂ (ಸುಕುಮಾ. ೯-೦೦೪) ; ಸುಖದಿಂ ಅನುಭವಿಸಿಕೊಂಡು ಸರ್ವಮಾನ್ಯವಾಗಿ ಬದ್ದು ಬಹಿರಿ (ಪ್ಯ ಆಂ. ೦೯೩೪, ೩೦-೨೩; 1640). ೨. ಹೊಟ್ಟೆ ಹೊರೆ: ಉದರ ನಿರ್ವಾಹ ಮಾಡು; ಉಪಜೀವನ ನಡೆಸು : ಜೀವಿತಮಂ ಕೊಂಡು ಬಾೞ್ವೆನೆಂಬವಂ ಪ್ರಾಣಮಂ ಕುಡಲ್ವೇೞ್ಕುಂ (ಶಂತಕಂ. ೩೨-೧೧). ೩. ನೆಮ್ಮದಿಯಾಗಿರು ; ಸುಖದಿಂದ ಜೀವಿಸು; ಸಂತುಷ್ಟವಾಗಿರು: ಬತ್ತಲೆಗರ ಮಾತುಗೇಳದಿರು ಬಾೞ್ವೆನವಿಂದ್ರಿಯವರ್ಗದಿಚ್ಚೆಯಂ ಸಲಿಸಿ . . . ಬಿಚ್ಚತಂ ನಲಿವುದು (ಆದಿಪು. ೨-೯) ; ನಾಲಿಗುಳ್ಳನೆ ಬಾೞ್ಗುಂ (ಶಾಹಾಭೂ. ೨೦ ಪ್ರಯೋ); ಬಾೞ್ವ ಮನೆಗೊಂದು ಬಗುಳ್ವುದು ಬೇೞ್ಕುಮೆನ್ನರೇ (ಅನಂಪು. ೦-೪೦). ೪. ಒಕ್ಕಲಾಗು ; ನೆಲಸು ; ವಾಸಮಾಡು : "ಬೞ್ದಂ (ಬಾೞ್ದಂ)=ಜೀವಿಸಿದಂ ; ಒಕ್ಕಲಾದಂ" (ಶಮದ. ಶಂ. ೦) ; ಬಿಸಿಗೂರುಳ್ಬಾೞ್ವ ಪ್ರಜೆಗೆಲ್ಲಂ ಕೊಟ್ಟೊದು ಕಟ್ಟಾಣೆ ಮರ್ಯಾದಿ ಕಾರಾಳ್ಗೊಟ್ಟಾರ್ (ಎಕ. IX (S), ಮಾಗಡಿ. ೦೨೯-೪ ; ಸು. 900). ೫. (ಆನೆಯನ್ನು) ನೆಲೆಯಾಗಿ ನಿಲ್ಲಿಸು: 'ಬಾೞಿಸು', 'ಬಾೞ್ಗಂಬ' ಪರಾ. **ಬಾಳ್$_1$:** ೧. ಕೆಮ್ಮಿ ಕುಮ್ಮಿತ್ತೊಡಲನೊಲೆಯುತ್ತುಂ ಮುಗ್ಗಿ ಬಳ್ದಂ ನಿತಾಂತಂ ಕೆಡೆವಲ್ಲಿಂ ಮುನ್ನ . . . ರಕ್ಷಿಪ್ಪುದೆನ್ನಂ (ರತ್ನಾಕ. ೩೮); ಮೋಹನ ರೂಪನೆ ನಿನ್ನ ಬಿಟ್ಟೀಪರಿಯಲಿ ಬಾಳ್ವ ಜೀಯ (ಮೋಹತ. ೮-೦೮). ೩. ಸಪ್ತಋಷಿಗಳ್ ನುಡಿದಾಪ್ತವಚನಂ ಕರ್ಣರಸಾಯನಮಾಗೆ ಗಿರಿರಾಜಂ ಕೇಳ್ದು ಬಾಳ್ದು ಸಂದಣಿಸಿದ ಪುಳಕದಿಂ ದಳವೇಱ (೧೦ಕ. ೦೦-೨೭ ವ). ೬. ಬಾಳುವೆಮಾಡು ; ಒಗೆತನಮಾಡು ; ದಾಂಪತ್ಯಜೀವನವನ್ನು ನಡೆಸು : ವನಿತೆ ನಿನ್ನಂ ಬಾಳಲೀಯೆವು ಮನೆಯೊಳಿರಬೇಡೀಗ ಹೊಱಪಡು ನಿನಗೆ ನಾವಂಜುವೆವು (ಬಸವು. ೩೨-೨೦). **ಬಾಳು$_1$:** ೧. ಬಾಣಾತ್ಮ ಸಂಭವೆಯಿಲ್ಲದಾನೊರ್ವ ಬಾಳೆನು (ಮೋಹತ. ೩೪-೨೩). ೩. ತಾ ಬಾಳಲಾಱದೆ ವಿಧಿಯ ಬೈದನೆಂಬ ನಾಣ್ನುಡಿಯಾಯಿತ್ತಲ್ಲ ಬಸವಣ್ಣ (ಕೂನ್ಯಸಂ. ೦೦೮-೬೭) ; ಆಯುವಂತನೆ ಬಾಳು ದನುಜನಿಕಾಯಮಸ್ತಕಶೂಲ ಬಾಳೆನ್ನು ತಾಯತಾಂಬಕಿ ಹರಸೆ ಮಾರುತಿ ಪದಸ ವಿವರಿಸಿದ (ಕೌಶಿಂಡ. ೪೩-೩); ಸೊಕ್ಕಾನೆ ಸಿಂಗದೊಳ್ ಕದನವ ಕಟ್ಟಿಕೊಂಡೊಕ್ಕಲಾಗಿರ್ದು ಬಾಳುವುದೇ (ಮೋಹತ. ೩೩-೨೪). ೬. ಎಳೆವೆಣ್ಗಳೀ ಕೃತಿಗೇಳೆ ತಮ್ಮನಿಯರನೆಳಮೆಯೊಳಳವುಗೆಡಿಸದೆ ಬೆಳಿಸಂದು ಬಾಳುವರು (ಹರಿಬ. ೦-೩೩). ೭. ಬೆಲೆಯಾಗು ; ಬೆಲೆ ತರು : ಸಂತೆಯಲ್ಲಿ ಒಂದು ರೂಪಾಯಿ ಬಾಳುವ ಜೋಡು ಶ್ರೀಮಂತನ ಮೂಲಕವಾಗಿ ಎರಡು ರೂಪಾಯಿ ಬಾಳೀತೆಂಬುವ ಹಾಗಲ್ಲ (ಮುಂಬಯಿ. ೩-೦೨೦).

ಬರ್ದಂ, ಬರ್ದೊಂ = ಬದುಕಿದವನು ; ಬಾಳಿದವನು : ಬರ್ದರೊಳಾನೆ ಬ[ರ್ದಂ] [ಶಾಶಂ. ರ್ದಂ] (ಕಂಪಭಾ. ೯-೬೩) ; ಕಲ್ಲೆರ್ದತನದಿಂದೆನ್ನಂತು ಬರ್ದನಾವನುಮೊಳನೇ (ಗದಾಯು. ೩-೨೮) ; ಶಾಂತಮನುತಾಪಮನಾಱಿಸಿತಂ[ದುದಂ]ದು ಬರ್ದೊಂ ಪರೆದಿರ್ದವೋಲ್ ಮುನಿಗೆ ಕಲ್ನೆಲೆ ಬಲ್ನೆಲೆಯಂ ನಿದಾಘದೊಳ್ (ಶಾಂತಿಪು. ೯-೦೦೮).

[ದೇ. ॥ ತಮಿ. ವಾೞ್; ಮಲ. ವಾೞು; ತುಳು. ಬಾಳು; ಕೋತ. ವಾಳ್]

**ಬಾೞ್$_2$** (ಕ್ರಿ). ೧. ಸೀಳು ; ಹೋಳು ಮಾಡು : ಕರಗಸಂಗಳಿಂದಂ ಮರನಂ ಪೋೞ್ವಂತೆ ಕೆಯ್ಯಂ ಕಾಲನಗಲ್ಚಿ ಪಿಡಿದಡಸಿ ಕಟ್ಟಿಯುದ್ದಂ ಬಿಡಿದು ಬಾೞ್ವುದುಂ (ವಡ್ಡಾರಾ. ೦೨೭-೧೩). ೨. (?) : ಬಾೞುಕಂ—ಸೀಳ್ದೊಣಗಿ ಬಾೞ್ದ ಶಾಕಂ (. . . ಶಂ. ೦).

**ಬಾೞ್$_3$, ಬಾಳ್$_2$, ಬಾಳು$_2$** (ನಾ). ೧. ಬದುಕು ; ಇರವು ; ಜೀವನ : ಆವುದು ನಿನ್ನ . . . ಗಮೆಮ್ಮ ಬಾೞಿಸಿತೆ ನೀನಿಂತಿರ್ದೊಡಾವಾಸೆಯೋ (ಆದಿಪು. ೩-೭೩) ; . . ಸ್ತ್ರದ ಶಂಕಾತಂಕದ ಸುತ್ತಿನೊಳಗುಱಿದುಱ ನಮೆವ ಬಾೞುಂ ಬಾೞೀ (ನೇಮಿಪು. ೦೩-೬೪) ; ನೀನೆಂತೂ ಮಱವೆಯೊಳ್ ಪೞರೊಡನುಸಿರ್ದು ಗುಟ್ಟಂ ಬಿಟ್ಟೊಡೆಮ್ಮನ್ನರ ಬಾೞ್ ಪಾೞಿಕ್ಕುಂ (ರಾಮಾಶ್ವ. ೧೦೮-೧೭). ೨. ನೆಮ್ಮದಿ

ಯರಾದ ಬದುಕು ; ಸುಖಜೀವನ : ಪೞಿಪಟ್ಟು ಪಗೆವರಂ ನೆಱೆ ಪೞಿಪಡಲೞಿವಿರಾಯುವವರನವರ್ಗಳ ಬಾೞ್ಗೊಳ್ ನಿಜಸಲ್ ಬಗೆದ್ರು (ಕಂಪಿಹಾ. ೯-೯೩); ನೆಲನ ಈ ಗೆಂಟಟಿಡೆಗೆ, ಬೞಿಯಿರದ ಬಾೞಿರದ ಸಿರಿಯುದೀ ಬಾೞ್ಗೆ ಮೆಟ್ಟಿದೆವು ಬಂದು ಕಟ್ಟಕಡೆಗೆ (ಬಿದ್ಕೃತ್ರಿ. ೦-೦). ೩. ದಾಂಪತ್ಯಜೀವನ; ಸಂಸಾರ : ಸ್ನೇಹವಿಲ್ಲದ ಕೋಡುಂ ಮೋಹವಿಲ್ಲದ ಬಾೞುಂ ಭಕ್ತಿಯಿಲ್ಲದ ಕೊಂಡಾಟಮುಂ ಶಕ್ತಿಯಿಲ್ಲದ ಸೆಣಸುಂ. . . ಒಪ್ಪಲಾರ್ಕುಮೆ (ರಶರ್ಮಮ್ಮ. ೦-೭೩). ೪. ಜೀವನಾಂಶ ; ಜೀವಿತ : ಶಸ್ತ್ರಂಗಳಂ ಬಲ್ಲೊಂಗು ಮಂತ್ರಿಪದವಿಯುಂ ಬಾೞುಮಂ ಪ್ರತಿಪತ್ತಿಯುಮಂ ಕೊಟ್ಟುದಂ ಕೇಳ್ದು (ವಡ್ಡಾರಾ. ೨-೨೩). ೫. ಜೀವ ; ಪ್ರಾಣ : 'ಬಾೞ್ವಿಣ' ಪರಾ. ೬. (ಜೀವಿತಕ್ಕಾಗಿ) ಕೊಡುವ ಭೂಮಿ : ಗಾಡಿಯೆಮ್ಮನಾ ಬಾೞಂ ಪ್ರತಿಪಾಳಿಸ ನಿಲೆ ಪಡೆದೊಂ (ಎಕ. VII. ೨೦೩-೦೪:874). ೭. ಹಸುರಿನಿಂದ ಕೂಡಿದುದು; ಹಸುರಾದುದು : 'ಬಾೞ್ಪೊಂಪ' ಪರಾ. ೮. ಹಸಿಯಾದುದು; ತೇವವುಳ್ಳುದು: 'ಬಾೞ್ಪಿಣ' ಪರಾ. **ಬಾಳ್₂**: ೧. 'ಪುದುವಾಳ್₂' ಪರಾ. ೫. 'ಬಾಳ್ಗೊಲೆ' ಪರಾ. **ಬಾಳು₃**: ೧. ಬಾಳೆ ನೋಡಕಟಕಟ ಎನಗಿದು ಬಾಳೆ (ಐಕವು. ೯೩-೯೦); ಸೇವಾಪರನ ಬಾಳು ನಿರರ್ಥವವನಿಯಲಿ (ಹಿಚಂತ. ೯-೯೯); ಉತ್ತಮಮಾನವನ ಬಾಳೂ, ಬದುಕೂ ಇರಬೇಕು ನದಿಗಳಂತೆ (ಕವಂ. ೦೭). ೩. ಬಾಳಿಲ್ಲದವಳ [ಓ]ಲೆಯಂತಾಯಿತ್ತೆನಗೆ (ಬಸವ. ೨೯೬); ನನ್ನ ಬಾಳು ತಪ್ಪಿಸಿದ ನನ್ನ ಗಂಡನ ವಂಶದ ಹೆಣ್ಣುಮಕ್ಕಳು ಚೆನ್ನಾಗಿ ಬಾಳದೆ ಇರಲಿ (ಒಡೆ. ೨೨). ೬. ಹಿತ್ತಿಲ ಕೇರಿಯ ಉತ್ತರೇಸ್ವರ ದೇವರ ಬಾಳೊಳು ಹೂದೋಟದಿಂ ಪಡುವಲು (ಸೌಇಇ. IX-i. ೩೭೦-೩೩; 1258); ಅನ್ಯ ಮೂ ೧೨ ಹ ೨೦ ಗದೆಯೂ ಆ ಬಾಳಿಂಗೆ ಬಂದ ತೋಟ ಮನೆಯೂ (ಸೌಇಇ. XI-ii. ೪೦೭-೨೭ ; 1364) ; ಧರಣಿದೇವಂಗಳು ಧನಿಯರ ಕಯ್ಯಲು ಧಾರಾಪೂರ್ವ್ವಕವಾಗಿ ಕೊಂಡ ಬಾಳಿನ ವಿವರ (ಸೌಇಇ. IX-ii. ೪೦೯-೪; 1365).

**ಬಾಳದಿರಿಕೆ** = ಭಿಕ್ಷೆಯನ್ನು ಬೇಡಿ ಜೀವಿಸುವಿಕೆ, – ಬದುಕುವಿಕೆ : ವಿಳುಧರಣಿಯನಾಳುವರಸನಂ ಪೊಲೆಯನಿಗೆಯಾಳುಮಾಡಿದೆ ಪಂಚನರ ಸಾರ್ವಭೌಮರಿಗೆ ಬಾಳದಿರಿಕೆಯನಿತ್ತೆ ಶಂಭುಲಿಂಗೈಕ್ಯರೊಳು ಕೀಲಿಸಿದೆ ಪ್ರಾರಬ್ಧಭೋಗನೀತಿಯನು (ಕೈಶಕ್ಕ. ೩-೦೦-೩). **ಬಾಳು ಮಾಡು** = ದಾಂಪತ್ಯಜೀವನವನ್ನು ನಡೆಸು ; ಬಾಳುವೆ ಮಾಡು : ನೋಡು. ನೀನಿನ್ನೂ ಹುಡುಗಿ, ಅದರಲ್ಲೂ ಗಂಡನ ಮನೇಲಿ ಸುಖವಾಗಿ ಬಾಳು ಮಾಡ್ತಾ ಇರೋಳು (ಚಾಗಿಪ. ೭). [<ಬಾೞ್₁]

**ಬಾೞಗಾವುಂಡ** (ನಾ). ಒಬ್ಬಾತನ ಹೆಸರು : ಬಾೞಗಾವುಣ್ಡ ಕಂಭಯ್ಯನು ಕಳ್ಳವುಣುಯೂರ ಮಹಾಜನಮುಂ (ಎಕ. XI. ಹಿಕ್ರಿದು. ೫೦-೨೦; 968). [ಬಾೞ್₀ + ಗಾವುಂಡ (< ಗಾಮುಂಡ)]

**ಬಾೞಿಕೆ** 'ಬಾೞ್ಕೆ' ನೋ.

**ಬಾೞಿಗೆ** 'ಬಾೞ್ಕೆ' ನೋ.

**ಬಾೞಿಮೆ** 'ಬಾೞ್ಮೆ' ನೋ.

**ಬಾೞಿಸು**, ಬಾಳಿಸು (ಕ್ರಿ). ೧. ಬದುಕಿಸು ; ಉಜ್ಜೀವಿಸು : ರಸ[೦]ಶಿಂದ ಮೆಯ್ಗೆ ತಕ್ಕ ಪ್ರತೀಕಾರದ ಮರ್ದುಗಳಂ ಮಾಡಿಯಾತನಂ ಬಾೞಿಸಿ ಕಟುಪಿದಂ (ವಡ್ಡಾರಾ. ೧೩೭-೦೯); ಎನ್ನಿಂ ಮುನ್ನಮೆನ್ನ ಮಗಂ ಸತ್ತನಾತನಂ ಬಾೞಿಸಲ್ವೇಟ್ಕುಂ (ಶಾಪುಂಪು. ೪-೭). ೨. ಸಲಹು ಕಾಪಾಡು : ಆರುಮಂ ತಂತಮ್ಮ ಪುಣ್ಯಮೆ ಬಾೞಿಸುಗುಂ (ಪಂಪಂ. ೩-೦೩ ವ). ೩. ಜೀವನವನ್ನು ಸಾಗಿಸಲು ಅವಕಾಶ ಮಾಡಿಕೊಡು ; ಬಾಳಲು ಅನುಕೂಲ ಮಾಡಿ ಕೊಡು : ಅಯ್ವರುಮನಯ್ದುಬೞಿಯುರೊಳೆ ಬಾೞಿಸು (ಪಂಪಭಾ. ೦೨-೪೮) ; ಪೆರ್ಗ್ಗಡೆ ಮಾಚಯ್ಯ ಮಜ್ಜಲದ ಗಾವುಣ್ಡ ಗೞಿಯು ಮೆಟ್ಟಿಟ್ಟಡೆ ಬಾೞಿಸಿದ ಸ್ಥಿತಿಕ್ರಮಮಾವುದೆನ್ದೊಡೆ (ಎಕ. IV (R). ಶಾಮರಾ. ೦೩೮-೯: 965). ೪. (ಆನೆಯನ್ನು) ನೆಲೆಯಾಗಿ ನಿಲ್ಲುವಂತೆ ಮಾಡು: ನೀಳ್ದ ತೋಳ್ ಮೊೞೆವುವು ಪೇರುರದೊಳ್ ನೆಲಸಿದ ಲಕ್ಷ್ಮೀಕರಿಣಿಗೆ ಬಾೞಿಸಿದ ರನ್ನದಮಳ್ಗಂಬದವೋಲ್ (ಯಶೋಚ. ೨-೪). **ಬಾಳಿಸು** : ೩. ನೀವು ಪ್ರೀತಿಯಿಂದ ನನ್ನನ್ನು ಬಾಳಿಸುವುದು ನನಗೆ ಬೇಕು (ಶದ್ರ್ಯಕ. ೨೦೨). [ಬಾೞ್₁ + – ಇಸು₃]

**ಬಾೞುಕ**, ಬಾಳಕ₁, ಬಾಳುಕ (ನಾ). ಸಂಡಗೆಯಂತೆ ಕರಿದು ನಂಜಿಕೊಳ್ಳಲೂ ಅಗತ್ಯ ಬಿದ್ದಾಗ ತರಕಾರಿಯಂತೆ ಬಳಸಲೂ ಅನುಕೂಲವಾಗುವಂತೆ ಸೀಳಿ ಅಥವಾ ಹೆಚ್ಚಿ, ಉಪ್ಪು ಬೆರಸಿ ಒಣಗಿಸಿದ ಮೆಣಸಿನಕಾಯಿ, ತರಕಾರಿ ಮೊದಲಾದುವು : " ಬಾೞುಕಂ = ಸೀಳ್ದೊಣಗಿ ಬಾಟ್ದ ಶಾಕಂ " (ಕಶಬ. ಶಂ. ೦). **ಬಾಳಕ₁** : ನೊರೆಸಂಡಗೆಯನು ಹುರಿಸಂಡಗೆಯನು ಬಾಳಕವನು ತಪ್ಪದೆಲ್ಲಾ ಸಾಧನವನು ಸಂಪರಿಸಿ ತಂದು (ಸಿದ್ಧರಾ. ೬-೩೩) ; ಪರಿಪರಿಯುಪ್ಪಿನಕಾಯಿ ಹಪ್ಪಳ ಸವಿವೆರಸಿದ ಬಾಳಕವ . . . ತರುಣಿಯರೆಡೆಮಾಡಿದರು (ಶಂಪಪ. ೬-೮೪) ; ಪಡುವಲಕಾಯಿ, ಬದನೆಕಾಯಿ, ಅವರೆಕಾಯಿ, ಹಾಗಲಕಾಯಿ ಇತ್ಯಾದಿ ತರಕಾರಿಗಳ "ಬಾಳಕ" ಮಾಡಿಟ್ಟುಕೊಂಡರೆ ಬೇಕಾದಾಗ ಕರಿದು ಊಟದ ಸಮಯದಲ್ಲಿ ಉಪಯೋಗಿಸಬಹುದು (ಅತುಸಾ. ೦೦೩). 'ಬಾೞ್₂' ಹೋ. **ಬಾಳುಕ** : ಉಪ್ಪಿನಕಾಯ್ ಪಳಿದ್ಯ ಕಚ್ಚರಿ ಬಾಳುಕಂಗಳೊಪ್ಪುವ ಪಕ್ವಫಲ ರಸಾಯನದ ಸೀಕರಣೆಗಳನು . . . ಉೞಿ ನೀಡಿಸಿದನಾ ಮಹಾಚರಕೊಲ್ದು ಚೆನ್ನಬಸವೇಶನಂದು (ಶಿಪಿಪು. ೩-೭೦) ; ರಸರಸಾಯನ ಸಾರ್ಗಳುಪ್ಪುಗಾಯ್ಬಾಳುಕಂ ಕಸರಿಕಚ್ಚಡಿ ಪಾಲ್ಗೊಸರ್ಗಳಿವು ಬಗೆಗೊಳಿಸಿ ಪೊಸತೆನಿಸಿರಲ್ಪವಿದನಚ್ಯುತಂ (ಕೈಬಿರಾ. ೬-೪೪) ; ಸಂಡಗೆಯ ಬಾಳುಕಗಳಂ ಕಲಸೋಗರಂಗಳನು . . . ನೈವೇದ್ಯಮಂ ಮಾರ್ತಂಡಕೋಟಿಪ್ರಭೆಯ ಬೆಳಗುವಗರ್ಪಿಸಿದರೊಲಿದು (ಶಂಕರಾ. ೨-೬೦).

**ಬಾೞುಕಮಾಗು** = (ಅಲಂ) (ಚಿಂತೆಯಿಂದ) ಸತ್ತ್ವಹೀನವಾಗು ; ಬೆಂಡಾಗು : ಒಂಭತ್ತುತಿಂಗಳ್ ಬತ್ತಿ ಬಾೞುಕವಾಗಿ ಪೊತ್ತ ಬೇನೆಯುಂ ಸತ್ತ ಬೇನೆಯುಮಂ ನೀಗಲಾೞಿಂ (ಅರ್ಜನೇ. ೭-೩೩ ವ).

[ದೇ. ॥ ತುಳು. ಬಾಳಕ, ಬಾಳುಗ]

**ಬಾೞ³**, ಬಾಳೆ₁ (ನಾ). ಅಗಲ ಹಾಗೂ ಉದ್ದವಿರುವ ಎಲೆಗಳಿದ್ದು, ಒಂದು ದಂಟಿಗೆ ಒಂದೇ ಗೊನೆ ಬಿಡುವ ಒಂದು ಬಗೆಯ ಹಣ್ಣಿನ ಗಿಡ ; ಕದಳಿ : "ರಂಭಾ ಮೋಚ ಕದಳಿಯೆನಲು ಬಾೞೆಯಕ್ಕುಂ" (ಮಂಗರಾ. ೩೪-೯) ; ಭೀಮಸೇನಂ . . . ಬಾೞೆಯ ಬೆಳ್ವನಪ್ಪ ಬನಮಂ ಕಾಡಾನೆ ಪೊಯ್ದಂತೆ ಪೊಯ್ದನಿಸುಂ ಮಾಣದೆ ನೀಚಕೀಚಕನಿಕಾಯಧ್ವಂಸನಂ ಮಾಡಿದಂ (ಪಂಪಭಾ. ೮-೮೦); ಬಾೞೆಯ ಪಣ್ಣದೊಂದು ರುಚಿ ನೇಱಿಲ ಪಣ್ಣೊಳಗುಂಟೆ (ರಶರ್ಮಮ್ಮ. ೪-೦೨೭). **ಬಾಳೆ₁**: ಬಾಳೆ ತೋಟ್ಟುಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X. ಕೋಲಾರ. ೨೩೦-೩ ; ಸು. 800 ?); ಕಬ್ಬು ಬಾಳೆ ಹಲಸು ನಾರಿವಾಳಕ್ಕೆ ಸಿಹಿನೀರನೆಱೆದವರಾರಯ್ಯ (ಮಹಾದೇ. ಖ. ೦೦-೩) ; ನಿನ್ನ ಬಟ್ಟದೊಡೆಗೆ ಬಾಳೆ ಬಹಿಷ್ಕಾರಂ (ನಂಪರ. ೦೪-೦೬).

**ಬಾಳೆಕಂದು** = ಬಾಳೆಯ ಸಸಿ : ಕಂಬ ತರುವುದು ಎಂದರೆ ಒಂದು ಬಾಳೆಕಂದು ಕಡಿದು ಅದನ್ನು ತೊಳೆದು ಪೂಜೆ ಮಾಡಿ . . . ಅಡಕೆ ಹೊಂಬಾಳೆ ಸಮೇತ ಕಟ್ಟುವುದು (ಪಪ್ಪುರು. ೪೩). **ಬಾಳೆಕಾಯಿ** = ೧. ಬಾಳೆಗಿಡದ ಕಾಯಿ ; ಪಕ್ವವಾಗದ ಬಾಳೆಹಣ್ಣು : ಬಾಳೆಕಾಯಿಯ ಪಲ್ಯ ಎಂದರೆ ನನಗೆ ಇಷ್ಟ (ಊಹ). ೨. (ಸೀರೆಯನ್ನು ಉಡುವಾಗ) ನಿರಿಗೆಗಳನ್ನು ಬಾಳೆಕಾಯಿಯ ಆಕಾರದಲ್ಲಿ ಮೇಲಕ್ಕೆ ತಿರುವಿ, ಸೊಂಟದಲ್ಲಿ ಮಡಿಸಿ ಸಿಕ್ಕಿಸಿದ ಸೀರೆಯ ಅಂಚು :

ಬಾಳೆಕಾಯಿಯಲ್ಲಿ ಸಿಕ್ಕಿಸಿಟ್ಟುಕೊಂಡಿದ್ದ ದುಡ್ಡು ಭದ್ರವಾಗಿಯೇ ಇದೆ (ರೂ೩). ೩. (ಉಕ) ಬಾಳೆಯ ಹಣ್ಣು: ಪೇಟೆಗೆ ಹೋಗಿ ಬೇಗನೆ ದೇವರ ಪೂಜೆಗೆ ನಾಲ್ಕು ಬಾಳೆಕಾಯಿ ತೆಗೆದುಕೊಂಡು ಬಾ (ರೂ೩). **ಬಾಳೆದಿಂಡು** = ಬಾಳೆ ಗಿಡದ ಕಾಂಡದ ಒಳಭಾಗ: ಬಾಳೆದಿಂಡನ್ನು ಅಡಿಗೆಗೆ ಉಪಯೋಗಿಸುತ್ತಾರೆ (ರೂ೩). **ಬಾಳೆಪಟ್ಟೆ** = ಬಾಳೆಕಂಬದ ತೊಗಟೆ.— ಸಿಪ್ಪೆ: ಫಲಗಳ ವೃಕ್ಷಗಳ ಬಿತ್ತಗಳಂ ಚೆನ್ನಾಗಿ ಕಳಿತ ಬಾಳೆಹಣ್ಣುಗಳಿಂದಾ ಬಾಳೆನಾರುಗಳಿಗೆ ಲೇಪವಂ ಮಾಡಿ ಆ ಪಟ್ಟೆಗಳಲ್ಲಿಯಿರಿಸಿ ಮೇಲುಗಡೆ ಬಾಳೆಪಟ್ಟೆಗಳಂ ಮುಚ್ಚಿ (ಸೌಗಂ೦. ೪೨೬-೦೦).

[ದೇ. ॥ ತಮಿ. ವಾಟ್ಟಿ; ಮಲ. ವಾಟಿ; ತುಳು. ಕೊಡ. ಬಾಳೆ]

**ಬಾಟಿಪಣ್** 'ಬಾಟಿವಣ್' ನೋ.

**ಬಾಟಿಲೆ**, ಬಳ್ಳೆ, ಬಾಳೆಲೆ (ನಾ). ಬಾಳೆಯ ಗಿಡದ ಎಲೆ; ಕದಳೀ ಪತ್ರ: ಬಾಟಿಲೆಯುಂ ತಿಂದು ಪಣ್ಣಂ ತಿಂದೆನೆಂಬಂತೆ (ಧರ್ಮಾಮೃ. ೦೪-೧೮೦); ಪಚ್ಚನೆ ಬೆಳೆದ ಬಾಟಿಲೆಯೆ ಪೊಸಕಾವಣವಾಗೆ . . . ಸಮೆದೊಂದೋಲಗದ ಶಾಲೆಯೊಳ್ (ರಾಮಾಶ್ವ. ೫೬-೨೫). **ಬಳ್ಳೆ₂**: ಅಣ್ಣಯ್ಯಾ ಬಳ್ಳೆ ಹಾಕಿದ್ದಾರೆ, ಉಣ್ಣಕ್ಕೆ ಬರಬೇಕಂತೆ (ಕಾನೂರು. ೩೨೬); ಸಾಲಾಗಿ ಬಳ್ಳೆ ಹಾಕಿದ್ದರು ಒಳಗೆ (ಶ್ರಕ್ಕ. ೧೩೦). **ಬಾಳೆಲೆ**: ತುಪ್ಪ ಮಜ್ಜಿಗೆ ಬಾಳೆಲ ತಾಂಬೂಲ ಮುಂತಾಗಿ (ಶೋಂಕಶಾ. ೧೯೯೦. ಕುಮಟಿ. ೧೦೪-೨೭; 1475); ಒಪ್ಪಿರೆ ಬಾಳೆಲೆಯಲ್ಲಿ ಭಕ್ಷ್ಯಭೋಜ್ಯಾದಿಗಳಂ ಗಡಣಿಸಿ . . . ದೇವರಾರೋಗಿಪುದೆಂದೊಡನುಸಿರ್ದು ಕೆಯ್ಮುಗಿದಳೊಲ್ದುಡುಪತಿಮುಖಿ (ವೃತ೩.೩೬-೨೫); ಬಾಲಕರಿಲ್ಲದ ಬಾಲಿದ್ಯಾತರ ಜನ್ಮ . . . ಬಾಳೆಲೆಯ ಹಾಸ್ಯುಂಡು ಬೀಸಿ ಒಗೆದಂಗ (ಗರತಿ. ೦೦೬). [ಬಾಟ್ + ಎಲೆ₁]

**ಬಾಟಿವಣ್**, ಬಾಳೆವಣ್, ಬಾಳೆಹಣ್ಣು, ಬಾಟಿಪಣ್ (ನಾ). ಬಾಳೆಯ ಹಣ್ಣು; ಕದಳೀಫಲ: 'ನಲ್ಬಾಟಿವಣ್' ಪರಾ. **ಬಾಳೆವಣ್**: ವನಪಾಲಂ ಕಾಣ್ಕೆಗೈದಂ ವಿಚಕಿಲದರಲಂ ಪಚ್ಚೆಯಂ ಬಾಳೆವಣ್ಣೊಳ್ಗೊನೆಯಂ (ರಾಜಶೇ. ೦೦-೨). **ಬಾಳೆಹಣ್ಣು**: ಬಾಳೆಹಣ್ಣು, ತುಪ್ಪ ಮುಂತಾದುವುಗಳನ್ನು ಸೇರಿಸಿ ಮಾಡಿದ ಬೂಪ ತಟ್ಟೆಯಲ್ಲಿರುತ್ತದೆ (ನಮ್ಮೂರು. ೯೯); ಬಾಳೆಹಣ್ಣು ತಿನ್ನು ಬಾರೋ ಎಂದರೆ ಸುಲಿದು ಇಟ್ಟದ್ದೀಯಾ ಎಂದ (ಗಾದೆ). **ಬಾಟಿಪಣ್**: ಬಾಟಿಪಣ್ಣಿನಿದಪ್ಪುದೆಂತು ಸಹಜಂ ಸಕ್ಕರೆಗೆ ಸಿಹಿಯಾಗಿರ್ಪುದೆಂತು ಸಹಜಂ . . . ಅಂತೆ . . . ಭಕ್ತಿಯುಂ ಸಹಜಮಾಗಿರ್ಕುಂ (ಧರ್ಮಾಮೃ. ೪-೯೦).

[ಬಾಟ್ + ಪಣ್₃]

**ಬಾಟಿಯೊಟ್ಟಿ**, ವಾಟಿಯೊಟ್ಟಿ (ನಾ). ಬೆಳೆಯುವ ಪೊದೆ, ಕಂಟಿ ಮೊದಲಾದುವುಗಳಿಂದ ರಚಿಸಿದ ಬೇಲಿ; ಹಸುರುಬೇಲಿ: ಅಂತೆ ವಂದು ಮುಂಜಳ್ತೊಣೆವಿ ಬಾಟಿಯೊಟ್ಟಿವಿ ಸಂದು (ವ್ಯಂ೦. ೦೯೨೬. ೦೦೬-೯೯; 726). **ವಾಟಿಯೊಟ್ಟಿ**: ಅಂತೆ ಬಂದು ಬಾನ್ನಿಗಾರ್ಲಕುಪ್ಪೆಯ ವಾಟಿಯೊಟ್ಟಿಯ ಸಂದು ಪಾದರಿಯುಳ್ ಕೂಡಿತ್ತು ಸೀಮೆ (ವ್ಯಂ೦. ೦೯೨೬. ೦೦೬-೩೦; ಕು. 726). [ಬಾಟ್₁ + ಒಟ್ಟಿ (< ಒಟ್ಟಿ)]

**ಬಾಟ್ಕೆ**, ಬಾಳಿಕೆ₁, ಬಾಳ್ಕೆ, ಬಾಳ್ವಿಕೆ, ಬಾಟಿಕೆ, ಬಾಟಿಗೆ (ನಾ). ೧. ಬದುಕು; ಜೀವನ: ಅಂಧನಾದೆನಾರ್ ಶರಣೆನಗೆನ್ನ ಬಾಟ್ಕೆಯೆ ನಿರರ್ಥಕಂ (ಕಾದಂಪೂ. ೯೦೨); ಸತ್ತೊಡೆ ಪುಟ್ಟಿರೆ ತನಗಿದೇಕೆ ಬಾಟ್ಕೆಯ ಮೋಹಂ (ಧರ್ಮಾಮೃ. ೪-೯೦); ಪಾಪಪುಣ್ಯದಟಿವಿಂದಿರದಾತನ ಬಾಟ್ಕೆ ನಿಷ್ಫಲಂ (ದಶಕು. ೦೯-೨೫). ೨. ಉಸಿರು; ಜೀವ; ಪ್ರಾಣ: ಶಾರದಂಗಳ ಜಸದೇಟ್ಗಿ ಲಕ್ಷ್ಮಿಯ ಮುಗುಳ್ನಗೆ ಜೊನ್ನದ ಬಾಟ್ಕೆ ರತ್ನಸಂಕುಳ ದಧಿದೈವಮೆಂದೆಸೆದುದುಜ್ವಳಮೌಕ್ತಿಕಹಾರಮಂಡಲಂ (ಕಾದಂಪೂ. ೦೦೬); ಒಕ್ಕನಿನಿಯಂ ತನ್ನಿಕ್ಕೆಯಂ ಬಾಟ್ಕೆಯಂ (ಅರ್ಜಪೇ. ೩-೯೦). ೩. ಜೀವನಕ್ಕೆ ಹಿತವಾದುದು; ಪ್ರಯೋಜನವುಳ್ಳದು: ಪದಿನೆಂಟುಂ ದೋಸಮುಂ ಪೊರ್ದದಾಡಿದ ಮಾತ್ರಲ್ಲರ ಬಾಟ್ಕೆಯಪ್ಪ ಜೀವಿನೊಳ್ ಮೂಲೋಕಮಂ ಕಾಣ್ಬ . . . ಅರುಹಂತಂ ನಲ್ಮೆಯಿಂ ಮಾಟ್ಕೆ ಬೇಡಿದುದಂ ತನ್ನಜಿವಟ್ಟೆಗರ್ಗೆ (ಶಬ್ದಶಾ. ೩೯೯). ೪. ಬದುಕಿನ ಅವಧಿ; ಸಮಗ್ರಆಯುಷ್ಯ: ಅನಿಮಿರಿದಮಂತಿ ‘ಮಾಳವಮನಾಳ್ದ ವೃಷಭಾಂಕನೃಪನ ಬಾಟ್ಕೆಯ ಸಿರಿಯಾತನ ದಿವಸದ ಭೋಗದನಿತಿಲ್ಲನೆ ಪರವನ ಪಿರಿಯ ಸಿರಿಯೊನಜೀಯಂ ಪೊಗಟಲ್ (ಸುಕುಮಾ. ೯-೬೫). **ಬಾಳಿಕೆ₁**: ೧. ಮೇಲನಜಿಯದ ನೃಪನ ಬಾಳಿಕೆ ಗಾಳಿಗೊಡ್ಡಿದ ಸೊಡರು (ಕುಮ್ಯಾ.ಸ. ೦-೩೦); ಮಾನವಿಲ್ಲದ ಬಾಳಿಕೆಗಿಂತ ಸಾವು ಲೇಸು (ಮುಂಬಯಿ. ೪-೧೯೦). ೪. ಹೊಸಕದ ಶೌರಿಯದ ಬಾಳಿಕೆಯೇಸು ದಿನವೈ (ಕುಮ್ಯಾದ್ರೋ. ೬-೨೦); ತನುವಿದು ತಾಮರಸಬಾಂಧವನ ಬಾಳಿಕೆ ತನಗ ಶಾಶ್ವತವೆ (ತೊರಣ. ೩-೬-೩೪). ೫. ಗೃಹಸ್ಥಜೀವನ; ದಾಂಪತ್ಯ ಜೀವನ: ಸತಿಸುತಕೂಟ ಭಯವೆಂದು ಬಾಳಿಕೆಯನತಿಗಳೆದು ಮರಳಿಯು ಬೋಳು ಮಂಡೆಯ ಕೀರ್ತಿಗೋಸುಗ ಕೋಳುಹೋದನೆ ರಾಮನು (ಶ್ರಘುಲೀ. ೦೪-೫). ೬. ಹೆಚ್ಚು ಕಾಲ ಕೆಡದೆ ಇರುವಿಕೆ; ಚೆನ್ನಾಗಿ ಉಳಿಯುವಿಕೆ; ತಾಳಿಕೆ: ಅಡುಗೆಮನೆಯ ಸಲಕರಣೆಗಳು . . ., ಒಳ್ಳೆಯ ತರಗತಿಯವುಗಳಾಗಿರಬೇಕು. ಇವುಗಳಿಗೆ ಕ್ರಯ ಹೆಚ್ಚಾದರೂ ಹೆಚ್ಚು ಕಾಲ ಬಾಳಿಕೆ ಬರುತ್ತವೆ (ಅಡುಶಾ. ೩೨); ರೆಯಾನ್‌ಬಟ್ಟೆ . . . ಇದು ತಕ್ಕಮಟ್ಟಿಗೆ ಬಾಳಿಕೆ ಬರುತ್ತದೆ (ಗೃಹಾ. ೬೦). ೭. ದತ್ತಿ ಕೊಟ್ಟ ಜಮೀನು; ಮಾನ್ಯದ ಭೂಮಿ: ಹಿರಿಯರು ಲೋಕ ಬೆಟ್ಟಂಬ ಬಾಳಿಕೆಯನು ಬಾಳಿ ಬಂದಲ್ಲಿ ಅಲ್ಲಿಯ ತೆರು [ಸಿ]ದ್ದಾಯ ಬಡ್ಡಿ ವಾಸಿ ಹೊಂನು ಭತ್ತವನು ಕಾಲಕಾಲಕೆ ನಡಸತೀರದೆ ಯಿರಲಾಗಿ (ಸೌಇಇ. IX—ii, ೪೬೦-೦೨; 1465); ಮುಂದಕ್ಕೆ ನಿಂಮ ಬಾಳಿಕೆಯಲು ಪಟ್ಟಲಬಿದ ಕಾರು ಬಿತು ಬಳ್ಳ ೩೦ (ಸೌಇಇ. IX—ii, ೪೬೦-೦೬; 465). **ಬಾಳ್ಕೆ**: ೨. ವಿರೋಧಿಯ ಬಾಳ್ಕೆ ತನ್ನದೆಮ್ಬುದನೆನೆ ಪೆರ್ಮೆಯಂ ತಳೆದನೋ ನ್ರಿಪರೊಳ್ ನ್ರಿಪತ್ಯೆಲಶಾಸ್ತ್ರರಂ (ಎಕ. VIII. ಸಾಗರ. ೦೫೯-೦೩; 1159). ೪. ಜವನುಮಾತನ ಬಾಳ್ಕೆಯ ಲೆಕ್ಕದೋಲೆಯಂ ತೊಡದು ಬಿಸುಟ್ಟನೆಂದಱಿವುದು (ಸೌಇಇ. IX—i, ೨೯೬-೩೦; 1177). ೫. ದುಗುಡದಿ ಬಾಳ್ವ ಗೃಹಸ್ಥರ ಬಾಳ್ಕೆಯ ನಗುವಂತೆ ನಗುತ ನಡೆದರು (ಶರಷ. ೨೦-೩೩); ಬಿಟ್ಟನೆ ರಘುಶ್ರೇಷ್ಠ ನೆನ್ನನು . . . ನೆಗಳ್ದ ಬಾಳ್ಕೆಗೆ ಸಂಚಕಾರಮಂ ಕೊಟ್ಟನೆ (ಶ್ರೈಮಿಫ. ೦೯-೦೪). **ಬಾಳ್ವಿಕೆ**: ೧. ಛೀ ನನ್ನ ಬಾಳ್ವಿಕೆಯೆ, ಛೀ ನನ್ನ ಚೆಲ್ವಿಕೆಯೆ (ಕೃಷ್ಣಾಕು. ೨-೨೦). ‘ಅಳ್ವಿಕೆ’ ಹೋ. **ಬಾಟಿಕೆ**: ೧. "ಜೀವನ ಮೆನಲು ಬಾಟಿಕೆ" (ತುಂಗಗ. ೦೦೨-೦). **ಬಾಟಿಗೆ**: ೭. ಜಿಡ್ಡೂರಾಳ್ಗೆ ಯೆಟ್ಟಿತ್ತರ್ಕ್ಕಂ ಬಳ್ಳಿಗಾಮೆಯ ಬಾಟಿಗೆ ಸಹಿತ ನಾಟ್ಟಾವೃಣ್ಣುಗೆಯ್ಯೆ (ವ್ಯಂ೦. ೦೯೨೯, ೬೫-೭; 964). [ಬಾಟ್₁ + -ಕೆ]

**ಬಾಟ್ಕೆಗೊಡು** (ಕ್ರಿ). ಉಪಜೀವನಕ್ಕಾಗಿ ಭೂಮಿಯನ್ನು ದಾನವಾಗಿ ಕೊಡು,—ವೃತ್ತಿಯನ್ನು ಕಲ್ಪಿಸು: ಕರಣಗ್ರಾಮಮನೀ ಮಾಮರಕ್ಕೆ ಮಧು ಬಾಟ್ಕೆಗೊಟ್ಟು ಕಿಸುವಲಿಗೆಗಳಿಂ ಬರೆದೆತ್ತಿದ ಶಾಸನಕೇಂ ದೊರೆಯಾದುವೊ ಸೊನೆಯ ಪನಿ ಪಗಿಲ್ತೆಳದಳಿರ್ಗಳ್ (ಮಲ್ಲಿಕ. ೬-೩೦).

[ಬಾಟ್ಕೆ + ಕೊಡು₁]

**ಬಾಟ್ಗಿಂಬ** (ನಾ). ಆನೆಯನ್ನು ನೆಲೆಯಾಗಿ ಕಟ್ಟಲು ಕಂಬದಂತೆ ಉಪಯೋಗಿಸುವ ಮರ; ಆಲಾನಸ್ತಂಭ: ಅಂಬುಜಸೂತ್ರಮೆಂಬ ಪಣೆದಾವಣಿಯಂ ಪಱಿದಾವಲೆಂಬ ಬಾಟ್ಗಿಂಬಮನೊತ್ತಿ ಕಿಟ್ಟು . . . ಸೋವುದು ಸಮಿರಾರಣವಾರಣಂ (ಕಾವ್ಯಾವ. ೬೮೯); ಆ ಮಹಾಮದೇಭಂ . . . ಬೀಡಿಂಗೊರ್ಗಾವುದದಟ ಬಾಟ್ಗಿಂಬದೊಳ್ ಸೆಟಿಗೆಯುಮ್ಮಿರ್ದೊಂದುದಿವಸಂ ಕ್ರೋಧಿನಿಯೆಂಬ ಸಪ್ತಮದಾವಸ್ಥೆಯಿಂದಾದ ಮನದ ಮುಸಕದಿನಸವಸದೆ ನೆಲದ ನಾಲಗೆಯುಂ ಕೀಟ್ಟಂತೆ

ಬಾೞ್ಗಂಬವಮಂ ಕಿೞ್ತು (ಚಂದ್ರಪ್ರ. ೯-೧೦೦ ವ); ಅವಳ . . . ನುಣ್ದೊಡೆಯೆಂಬ ಪೊಂಬಾೞಿಯ ಬಾೞ್ಗಂಬಮಲರ್ಗಣೆಯನೆಂಬ ಸೊರ್ಕಾನೆಯಂ ತೊಲಗಲೀಯದೆ ನಿಲಿಸೆಯುಂ (ಕಬ್ಬಿಗ. ೦೨೩).

[ ಬಾೞ್$_1$ + ಕಂಬ$_1$ ( < ಕಂಭ) ]

**ಬಾೞ್ಗುಡಿ** (ನಾ). (ಆಲಂ) ಚಲಿಸುತ್ತಿರುವ ಕುಡಿ ; ಚಂಚಲವಾದ ಚಿಗುರು: ಬಳ್ವಳಿಪ ಬಹುಳಹಿಂಸಾವಿಷಮವಿಷವಲ್ಲಿಯ ಬಳೆದ ಬಾೞ್ಗುಡಿಯೆನೆ ಬೆಡಂಗುವಡೆದ ಲೋಳಲಾಂಗೂಲಲತೆಯೊಳಂ . . . ಭಯಂಕರಮಾದುದು (ಪರ್ಶ್ವ. ೦೦-೩ ವ). [ ಬಾೞ್$_3$ + ಕುಡಿ$_2$ ]

**ಬಾೞ್ಗುದಿ** (ನಾ). ಜೀವಂತವಾಗಿ ಅನುಭವಿಸುವ ಅತಿಯಾದ ಹಿಂಸೆ ; ಪ್ರಾಣಸಂಕಟ : ತೋ[ಕೋ]ಳ್ಗುದಿ ಬಾೞ್ಗುದಿಯಾಗಿ ಬೇವ ದಳ್ಳುರಿಗಳ ಮಾಲೆಗೂಂಡ ಬೆಳಗಿಂ ಬೆಳಗಾಯ್ತು ರಚುಂಬಲಂಗಳೊಳ್ (ಅನಂಪು. ೦೦-೯೭). [ ಬಾೞ್$_3$ + ಕುದಿ$_3$ ]

**ಬಾೞ್ಗುೞಿ**, ಬಾಳುಗುಳಿ, ಬಾಳ್ಗುಳಿ (ನಾ). ಒಂದು ಊರಿನ ಹೆಸರು : ಬಾೞ್ಗುೞಿಯೂರ ಬೊಜಜ್ಗೀಶ್ವರದೇವರ ಪರ್ಬ್ಬದಭೂಮಿ ಎಡೆಯೊಳೆ ರಾಶಿಕವಾಗಿಟ್ಟೊಡೆ ಬಿಡಿಸಿ (ಎಕ. IV (R), ಚಾಮರಾ. ೧೦೪-೯; 10ನೆಯ ಶತ). **ಬಾಳುಗುಳಿ** : ಬಾಳುಗುಳಿಯ ಮಹಾಜನ ಅಯ್ನೂರ್ವರುಂ ಉಭಯಸಮ್ಮತದೊಳಿಟ್ಟು ಬಳಿಯರ ಬಾದಮ್ಮಗೆ ಬೂದಗೂಟನಿತ್ತೊರ್ (ಸೌಇಇ. IX–i, ೩೯-೭; ಸು. 10ನೆಯ ಶತ). **ಬಾಳ್ಗುಳಿ** : ಬಾಳ್ಗುಳಿಯೂರೊಡೆಯಂ ಪಶುಪತಿಭಟ್ಟಜಿಗ್ಗ ಬಾಬನ್ದಿಯ ಸಂಬನ್ಧದ ರಾಜದ್ರವ್ಯಮಾದುದೆಲ್ಲಮಂ ಬಿಟ್ಟರ್ (ಸೌಇಇ. IX–i, ೬೭-೦೦ ; 956) ; ಶ್ರೀಮತುಹರಿಶ್ಚಂದ್ರ ದತ್ತಿಯ ಮಹಾಗ್ರಹಾರಂ ಬಾಳ್ಗುಳಿಯೂರೊಡೆಯ ಪ್ರಮುಖವಿಶೇಷಮಹಾಜನಂ ( ಸೌಇಇ. IX–i, ೨೩೩-೦೪ ; 1143 ) ; ಶ್ರೀವೀರಬಲ್ಲಾಳದೇವರು ಶ್ರೀಮತುಹರಿಶ್ಚಂದ್ರ ದತ್ತಿಯಗ್ರಹಾರ ಬಾಳ್ಗುಳಿಯ ನೆಲೆವೀಡಿನೊಳು . . . ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರ್ದು (ಸೌಇಇ. IX–i, ೩೦೯-೩೨ ; 1193).

[ಬಾೞ್$_3$ + ಕುೞಿ$_2$]

**ಬಾೞ್ಜೊಂಪ** (ನಾ). (ಹಸುರಾದ) ಬಳ್ಳಿಗಳ ಮಂಟಪ; ಲತಾಕುಂಜ : ಮನಮೊಲ್ದಾತನ ಗಾಡಿಯಂ ದರವುರಂಗಂಡಾಕೆಗಳ್ ಪೂವಿನಂಬಿನ ಕೋಳ್ಗಂ . . . ಬಾೞ್ಜೊಂಪಕ್ಕಮೊಂದೊಂದೆ ತಣ್ಬನಿಯೊಳ್ ಕೋಡಿಸುತಿರ್ಪ ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ (ಆದಿಪು. ೦-೭೩); ಬಾೞ್ಜೊಂಪವೋ ಕೋಗಿಲೇ ಗಿಳಿಯೋ ಕಂಡಿರೆ ಪೇೞಿಮೆಮ್ಮ ಪತಿಯಂ (ಸುಕುಮಾ. ೧೨-೨೦); ಅಸುಕೆಯ ಕೆಂದಳಿರ್ಗಳ ಬಾೞ್ಜೊಂಪಂ ಪಸರಿಸಿ ಪಡೆದುದು ಚಿತ್ತದಲಂಪಂ (ಅನಂಪು. ೦೦-೦೬ ರಗಳೆ). [ಬಾೞ್$_3$ + ಜೊಂಪ$_1$]

**ಬಾೞ್ತೆ**, ಬಾತೆ, ಬಾರ್ತೆ, ಬಾಳ್ತೆ, ವಾೞ್ತೆ (ನಾ). ೧. ಬದುಕು ; ಬಾಳುವೆ ; ಜೀವನ : ಸ್ಫಟಿಕನೊತ್ತಂಬರಂ ಪೊಗರ್ವೆತ್ತಂಗದ ಸಿಂಗರಂ ಸೊಗಸಿನೊಪ್ಪಂ ಬಾೞ್ತೆಯೊಂದೇಟ್ಟರಂ ಮಿಗುತೇಂ ಬಂದವುವು ( ಶಕಟ. ೩-೨೩೬ ) ; ಪಗೆದೊರೆಗಳುಮೊಂದಿದರಾ ಬರ್ದಿಲನಾಡ ಬಾೞ್ತೆಯ ಸಿರಿಯಂ (ಅಶ್ವತ. ೦೭-೦೩). ೨. ಉಪಯೋಗ ; ಪ್ರಯೋಜನ : "ಬಾೞ್ತೆ ಪ್ರಯೋಜನಂ" (ಶಮದ. ಶಂ. ೦) ; ಕಿಡುಗುಮೆ ರಾಜ್ಯಂ ರಾಜ್ಯದ ತೊಡರ್ಪದೇವಾೞ್ತೆ (ಶಂಕಭಾ. ೦-೬೨); ದ್ರಷ್ಟವ್ಯ ದರ್ಶನಫಲ ಲೋಚನಮೆಂಬಂತೆ ನೋಡುವುದೆ ಬಾೞ್ತೆ (ಶಾಂತಿಪು. ೩-೭೭ ವ) ; ನಾಲಗೆಯುಮಂ ನಲ್ಲನುಮನೊಲ್ಲದ ಪಣ್ಣಸವಿಯುಂ ಪೆಣ್ಣ ರೂಪುಮೇಂ ಬಾೞ್ತೆ (ಅರ್ಥನೇ. ೩-೦೦ ವ). ೩. ಇಷ್ಟವಾದುದು ; ಬೇಕಾದುದು ; ಬಯಸಿದುದು : ಎಮಗೆ ಮದ್ದು ಬಾೞ್ತೆಯುಪ್ಪೊಡೆಮಗಾಮೆ ಮರ್ದಂ ಬಲ್ಲೆವೆಮಗದು ಬಾೞ್ತೆಯಲ್ತು (ವಡ್ಡಾರಾ. ೬೯-೨೮) ; ನಿಮಗೆ ಬಾೞ್ತೆಯಪ್ಪುದಂ ಬೇಡಿಕೊಳ್ಳಿಂ (ಶಂಕಭಾ. ೩-೭೦ ವ). ೪. ಉಪಯುಕ್ತವಾದುದು ; ತಕ್ಕುದು ; ಯೋಗ್ಯವಾದುದು : "ಬಾೞ್ತೆಯೆನೆ ಯೋಗ್ಯಂ" (ಸಂಜೀವ. ೨) ; ಎಮಗೊಂದು ಪೇೞು ಮಣ್ಣು ಬಾೞ್ತೆಯಾಗೆ ತರಿಸಿಕೊಂಡೆವೀಯುೞಿದ ಮಣ್ಣೆಮಗೆ ಬಾೞ್ತೆಯಲ್ತು ನಿಮ್ಮ ನಿಮ್ಮ ತಂದ ಮಣ್ಣಂ ಕೊಂಡು ಪೋಗಿಂ (ವಡ್ಡಾರಾ. ೦೬೬-೪) : ಈ ವ್ರತಂ ನಮಗೆ ಬಾೞ್ತೆಯಲ್ಲಿದಂ ಬಿಡುವುದು (ನೇಮಿಪು. ೬-೦೮ ವ). ೫. ಯೋಗ್ಯನಾದವನು ; ತಕ್ಕಹನು : ಅರಸಿಯರ್ಕಳೆಲ್ಲಂ . . . ನುಡಿವ ಮಾತುಗಳಂ ಜಿನದತ್ತೆ ಕೇಳ್ದು ಕಿನಿಸಿ ಇನ್ನಾತನೆನಗೆ ಬಾೞ್ತೆಯಲ್ಲನೆಂದು ತನ್ನ ಮಾಡದಿಂ ಪೊಱಮಟ್ಟು . . . ಪೋಗಿದೊರ್ಳ್ (ವಡ್ಡಾರಾ. ೦೦೦-೨೩). ೬. ಕೆಲಸ ; ಕಾರ್ಯ ; ಉದ್ಯೋಗ : ಬಾೞ್ತೆಯುಳ್ಳೊಡೆ ನೀನೆ ಬರ್ಪಂತುಟಾದುದೆ ಪೇೞ ನೀಂ ಬೞಿಯಟ್ಟಲಾಗದೆ (ಶಂಕಭಾ. ೦೨-೯೯) ; ಬಸನದ ಬಾೞ್ತೆಗಪ್ಪೆಡೆಗಳಿಲ್ಲದೆ ನಲ್ಲರ್ . . . ಮನದೊಳ್ಪೊಟಲ್ದಱಸುವರ್ಬನದೊಳ್ ಕೃತಕಾಚಲಂಗಳಂ (ಮಲ್ಲಿಪು. ೨-೩೩) ; ಏಬಾೞ್ತೆಗೆ ಬಂದರಿಲ್ಲಿಗಿವರೆಂದಾರಯ್ವಂ (ನೇಮಿಪು. ೦-೭೭). ೭. ಅಗತ್ಯ ; ಅವಶ್ಯಕತೆ : ಎಂದಾನುಂ ನಿನಗೆ ಬಾೞ್ತೆ [ಪಾಠಾಂ. ರ್ತೆ]ಯಾದಂದೆನ್ನಂ ನೆನೆವುದು (ವಡ್ಡಾರಾ. ೦೩೯-೦೧). **ಬಾತೆ** : ೧. 'ಬಾತೆಗೇಡಿ' ಪರಾ. ೨. ಸಿಂಗದ ನಡು ಮುೞಿಯಲಾ ಸಿಂಗವೇನು ಬಾತೆ ಸುಂಡಿಲು ಮುೞಿದರೆ ಗಜವೇನು ಬಾತೆ (ಬಸವ. ೬೩೪) ; ದಯವಿಲ್ಲದವನ ಭಕ್ತಿ ಏತಕ್ಕೆ ಬಾತೆ (ಗಣಭಾ. ೦೭೦-೩) ; ಹಣವೇನು ಬಾತೆ ನಿನ್ನಯ ಗುಣವೆಂಬುದು ಮಣಿಹಾರವಾಗೆನ್ನ ಮನವ ಕ್ಷಣದಲಿ ಬೀೞುಗೊಂಡುದು (ಶಂನವ. ೭-೦೭೪). ೩. ನಿನ್ನ ಧನಗಿನವೆನಗೆ ಬಾತೆಯೆ ಎನ್ನ ಸೊಬಗಂ ನೋಳ್ಪೆಯಾದಡೆ ಹೊನ್ನನೀಗಳೆ ಬಿತ್ತಿಸುವೆನೇ ಬೀದಿಬೀದಿಯಲಿ (ಬಸಪು. ೨೮-೦೪). ೪. ಮಕ್ಕಳನು ಪಡೆವಡೆ ಸುನೀತಿಗೆ ತಕ್ಕುದಲ್ಲದೆ ಒಡಲ ಕೇಡಿನ ಮಕ್ಕಳೇತಕೆ ಬಾತೆ (ಸಿಭಾಗ. ೪-೮-೩೭). **ಬಾರ್ತೆ** : ೨. ನೀನೀ ಸಾಮ್ರಾಜ್ಯಮನಾವಗಂ ಕೈಕೊಳ್ವುದೆನಗಿದೇನುಂ ಬಾರ್ತೆಯಿಲ್ಲ (ಶಾಪುಂಪು. ೯೯) ; ಧರ್ಮಾರ್ಥಂಗಳಿಗೆ ಶಾಸ್ತ್ರಂ ಬಾರ್ತೆ ಕಾಮಕ್ಕೆ ಶಾಸ್ತ್ರಂ ನಿಃಪ್ರಯೋಜನಂ (ಮುದತಿ. ೦-೩೬ ವ) ; ಪರಿವಾರವಿಲ್ಲದ ರಾಯನ ಸಿರಿಯು ದೇತಕ್ಕೆ ಬಾರ್ತೆ (ಬಕೋಪು. ೦೪-೩೭). ೪. ಅರಲ್ದಿರೆ ಕೊರಗಿ ದುಸ್ಸಹವಿರಹಶಯನರಚನೆಗೆ ಬಾರ್ತೆಯಾಗಲಾಱಿಪೆಂದಗಿದು ಮೆಯ್ದೆಗೆದವೆಂಬಂತೆ ತಾವರೆಗಳ್ ಮುಗಿಯೆ (ಕಾದಂಬ. ೩೭೩) ; ಹರದನ ಬಡ್ಡಿಗೊಟ್ಟೊಡವೆ ರಾಜಕುಮಾರನ ತೇಜದೇೞ್ಗೆ . . . ಚೆನ್ನಪೊಂಗರ ಕುಡಿಮುಱಿಜಿಂಗು ನಿಡುಬಯ್ತಲೆ ಬಾರ್ತೆಯೆ (ಅನಂಪು. ೬-೪೯). ೫. ಮಱಿಗೆ ಪಂದರಂ ಕಾಯದೆ ನೀಳ್ದೊದವಿದ ಜಸಮನುಪಾರ್ಜಿಸದಧಮನದೇತರ್ಕೆ ಬಾರ್ತೆ (ಆದಿಪು. ೦೨-೯೭) ; ಭಕ್ತಿಯಿಲ್ಲದವನೇತರ್ಕಂ ಬಾರ್ತೆಯಲ್ಲಂ (ಶಂಕಶಂ. ೪೨-೨೦). ೬. ಬೆಸನಂ ಪಾರ್ವುವು ಮಂತ್ರದೇವತೆಗಳಾದೇಬಾರ್ತೆಗಂ ಬೇಗಮಾಗಸದೊಳ್ ವಿದ್ಯೆಗಳೆಯ್ದೆ ಬರ್ಪುವು (ಆದಿಪು. ೦-೬೯). ೭. ಆಂ ಪದ್ಮನಗರದೊಳಿರ್ಪೆಂ ನೀಮೆತ್ತಾನುಂ ಬಾರ್ತೆಯುಪ್ಪೊಡಲ್ಲಿಗೆ ಬನ್ನಿಂ (ಶಂಕಶಂ. ೦೦೦-೦). ೮. ಬದುಕಿನ ಕ್ಲೇಶ ; ಜೀವನದ ಜಂಜಾಟ : ವಿಪಿನೋಲ್ಲಂಘನ ಸಿಂಧುಯಾನ ನಗಕೂಟಾರೋಹಣ ಕ್ಲೇಶಮಂತ್ರಪದಧ್ಯಾನ ಬಿಲಪ್ರವೇಶರಸವಾದಾಯಾಸದೊಳ್ ಬಾರ್ತೆ ತೀರ್ದಪುದೇ (ಆದಿಪು. ೦೭-೭). **ಬಾಳ್ತೆ** : ೧. ಬಾಳ್ತೆಯೊಳ್ ಸಲ್ವೆಯೆನೆ ತೊನೆಯುತಿಪೆ ಚೆಲ್ವಂ (ಕಾಬೂರ. ೭೦-೦೨೩). ೨. ಕಾಡ ಕಾಪಿನವರ್ಗೆ ದೂರಿದೊಡೆ ಬಾಳ್ತೆಯೇಂ (ಕಾಬೂರ. ೪೯-೭೨). **ವಾೞ್ತೆ** : ೯. ಸುದ್ದಿ; ಸಮಾಚಾರ : 'ವಾೞ್ತೆಗೊಳ್' ಪರಾ.

**ಬಾತೆಗೆ ಬರು** = ಉಪಯೋಗವಾಗು : ಬಾತೆಗೆ ಬಾರದ ವಸ್ತು ಬಹಳಿದ್ದರೇನು (ಪುರಂದ. ೩-೦೪೩ ಪಲ್ಲವಿ). **ಬಾರ್ತೆ ಮಾಡು** = ಬಯಸು ;

ಇಷ್ಟಪಡು : ಪುದ್ಗಳಮನೆ ಪಾೞಿಸುವರ್ . . . ಪುದ್ಗಳಮಂ ಬಾರ್ತೆ ಮಾಡಿ ಪೊರೆಯರ್ ಜೈನರ್ (ಸಮಪ. ೬-೩೦). ಬಾೞ್ತಿಯಾಗು = ಬಾರ್ತೆಗೆ ಬರು : ಅರಸುಗೆಯ್ಯಾತಂಗೊತಪ್ಪನುಂ ಬಾೞ್ತಿಯಾಗದನಿಲ್ಲಂ (ಶಂಕರ. ೩೪-೧೧). [ಬಾೞ್$_1$ + — ತ್ತಿ]

**ಬಾೞ್ತಿಗೆಯ್**, ಬಾರ್ತೆಗೆಯ್, ಬಾಳ್ತೆಗೆಯ್ (ಕ್ರಿ). ೧. ಬಯಸು ; ಇಷ್ಟಪಡು : ಇಂದುಗತಿಯಂತೆ ರಾಜ್ಯಮನೊಂದರ್ಕಂ ಬಾೞ್ತಿಗೆಯ್ಯ ದಾವನೊ ತೊೞಿದಂ ಮಂದರಧೈರ್ಯಂ ನೃಪಂ (ಶಂಠಾಪು. ೬-೨೪). ೨. ಲೆಕ್ಕಿಸು ; ಗಮನಿಸು : ಗಣನೆಗೆ ತರು : ಅರ್ಣವಮೇಖಲೆಯಂ ಧರಿತ್ರಿಯುಂ ಬಗೆಯನೆ ಬಾೞ್ತಿಗೆಯ್ಯನೆ ಜರತ್ತೃಣಲಾಘವಮೆಂದೆ ರಾಘವಂ (ಶಂರಾಪು. ೬-೧೦೩) ; ಅರಮನೆಯಂ ವಧೂವಿತತಿಯಂ ಸುತರಂ ಪರಿವಾರಮಂ . . . ಬಾೞ್ತಿಗೆಯದಾ ಮಹಿಪಂ ಪೊೞಿಮಟ್ಟಂ (ಶಂಶ್ರಪು. ೨-೬೭). **ಬಾರ್ತೆಗೆಯ್** : ೨. ಶ್ರುತಮಂ ಕಯ್ಕೊಳ್ಳಳಾಚಾರಮನವ ಧರಿಸಳ್ ಸತ್ಯಮಂ ಬಾರ್ತೆಗೆಯ್ಯಳ್ . . . ಸಿರಿಯನಜೀವಿತಂ ಬಣ್ಣಿಪಂ ಗಾಂಪನಲ್ತೇ (ಕಾದಂಪೂ. ೩೯೬) : ಈ ರಾಜೇಂದ್ರಸೌಂದರ್ಯಮ ನೆರಮಬಳಾಚಿತ್ತಸಂಮೋಹನಕ್ಕಾವುದುಮಿಂ ಪೇೞೀಪುದೆಂದು . . . ಪುಂಸ್ಕೋಕಿಲಾಲಾಪಮನಲೆವಲರಂ ಬಾರ್ತೆಗೆಯ್ಯಂ ಮನೋಜಂ (ಮಲ್ಲಿಪು. ೬-೨೯) ; ಬಗೆಯದ ಬಾರ್ತೆ[ಪಾಠಾಂ. ಟ್ತಿ]ಗೆಯ್ಯದೊಲವಂ ಪ್ರತಿಪಾಳಿಸ ದಾಳಿದೋರ್ಪ ಬಲ್ಮೆಗೆ ಬೆಸವಿರ್ಪ . . . ಅಂಗನೆಗೆ ಕೂರ್ತವನಗ್ಗದ ಕಟ್ಟಿಯಲ್ಲನೇ (ಪಾರ್ಶ್ವಪು. ೧೧-೬೯). **ಬಾಳ್ತೆಗೆಯ್** : ೧. ನಿನ್ನವ ರೊಲ್ದುಂಡುಳುಪಿರ್ದ ಶೇಷಮನಗುಂಟೆಂದುಮಾ ಶೇಷಮಂ ಸವಿದಾನಂದ ಮನಾಳ್ದು ಮಿಕ್ಕ ಸುಖಮೊಂದಂ ಬಾಳ್ತೆಗೆಯ್ಯೆಂ (ವೃಷಪು. ೬-೦೩). [ಬಾೞ್ತಿ + ಕೆಯ್$_1$]

**ಬಾೞ್ದಲೆ**. ಬಾಳುವಲೆ, ಬಾಳ್ದಲೆ (ನಾ). ೧. ಜೀವಂತವಾಗಿ ಸಿಕ್ಕಿರುವ ಸೆರೆ : ಮಲೆಪರ್ ಮಂಡಳಿಕರ್ ಕೞುಂಬರದಟರ್ ವೀರರ್ಕಳುಂ ತಮ್ಮ ಬಾೞ್ದಲೆಯುಂ ಬೇಡಿದ ವಸ್ತುವಾಹನಮುಮಂ ಮುಂದಿಟ್ಟು ಮೂಱಿಟ್ಟೆ ಯೊಕ್ಕಲಪೋಲಿಂ ಬೆಸಕೆಯ್ಯೆ ಸಂತಮಿರುತುಂ ಕುಂತೀಸುತರ್ ತಮ್ಮ ತೋಳ್ವಲಮಂ ನಚ್ಚಿರೆ (ಪಂಪಭಾ. ೯-೧೧) ; ಪೋ ಬಾೞ್ದಲೆಯಿಂದೊ ಯ್ದಪನೇ ಬಗೆಯಿಂ ನೀರೊಳಿರ್ದೊಡಂತುಂ ಕೊಲ್ಲೆಂ (ನೇಮಿಪು. ೧೨-೦೪೩); ಮಧುವಿನ ಕುಮಾರಂ ಹಿರಣ್ಯನಾಭಂ ಬಲದೇವನ ಮಾೞ್ಕೆಯಂ ಪೊಕ್ಕುಬೞಿವುನುಮಾತನ ಬಾೞ್ದಲೆವೆಸು ಬಂದು ವಸುದೇವನ ಪಾದಾರ ವಿಂದಕ್ಕೆ ತಾಳಧ್ವಜನುಂ ತಾರ್ಕ್ಷ್ಯಧ್ವಜನುಂ ಪೊಡಮಟ್ಟು (ಮಹಾನೇ. ೬-೫೪. ವ). **ಬಾಳುದಲೆ** : ೧. ಬಾಳುದಲೆಗಳನರಿದು ಹೋಮವ ಬೆಳಗುವೆಸು (ರೇವಣಸಿ. ೨-೨೬). ೨. ಆಗ ತಾನೆ ಕತ್ತರಿಸಿ ಹಸಿರಕ್ತ ವನ್ನು ಸುರಿಸುತ್ತಿರುವ ತಲೆ ; ಹಸಿತಲೆ ; ಪಂದಲೆ : ಬಾಳುದಲೆಸಹಿತ ನಡೆತಂದು ಭೃತ್ಯಂ ಶಿರವ ಚೋಳರಾಯನ ಬಲದ ಕೈಗೆ ಕುಡೆ (ಭಾವಚಂ. ೯-೩೦); ತಲೆಯ ತರಹೇಳಂತಕನ ಬಾಳ್ವಲೆಯ ತರಹೇಳ ಜನಸತಳಕೆ ನಿಲಿಸಹೇಳಮರೇಂದ್ರನಗರವನು (ಕೊರಂಚ. ೬-೨-೦೦) ; ಅ ಹರಿಯಜಸುರೇಂದ್ರಾದ್ಯರಂ ಬಾಳ್ದಲೆಗಳಂ ಕೊಂಬೆನುಳಿದವರ ಪೊದೆಗಳಂ ಸೀಳ್ದಿಕ್ಕುವೆಂ (ಚಿಬಪು. ೩೦-೦೪). **ಬಾಳ್ದಲೆ** : ೧. ಬಲವ ಮುಱಿದು ಕಲುಗೋಟೆಯ ನೃಪನ ಬಾಳ್ದಲೆಯ ಖಂಡಿಸಿದುದನಱಿಯ (ಕಂಠೀರ. ೧೮-೦೩೬). [ಬಾೞ್$_1$ + ತಲೆ$_1$]

**ಬಾೞ್ದಲೆಗೊಳ್**, ಬಾಳ್ದಲೆಗೊಳ್ (ಕ್ರಿ). ಜೀವಂತವಾಗಿ ಸೆರೆ ಹಿಡಿ ; ಕೈದುಮಾಡು : ರಘುವೀರಂ ಲಕ್ಷ್ಮಣಂ ರಾಷ್ಟ್ರಕಂಟಕನಂ ಬಾೞ್ದಲೆ ಗೊಂಡನುಯ್ದುನಿಭವಂ ಪಂಚಾನನಂ . . . ಮಾಕೊರ್ಂಡು ಕೊಂಡುಯ್ವ ಪೋಲ್ (ಶಂಠಾಪು. ೬-೬೨). **ಬಾಳ್ದಲೆಗೊಳ್** : ಚಟ್ಟನಂ ಮುತ್ತಿ ಬಾಳ್ವಲೆಗೊಂಡಂ (ಮುಂಬಶಾ. XI, ೨೩೦-೦೯ ; 1060) ; ವಿಕ್ರಮ ಭೂಪಂ . . . ಅನ್ಯ ಭೂ(ಮಿ)ಪರಂ ಬಾಳ್ವೆರಸೆಯ್ದಿ ಬಾಳ್ವೆರಸು ಬಾಳ್ದಲೆ ಗೊಣ್ಡನ್ (ಎಕ. XI, ದಾವಣ. ೩-೭ ; 1121); ಬಲರಾಮನನು ಬಾಳ್ದಲೆಗೊಂಡವನ ಕರತಳದ ಹಲಾಯುಧಸಹಿತ ಛಲದಂಕ ಕೇಳ್ನಿನ್ನ ತೆರಿಗೆಯ ಹಳ್ಳಿಯೊಳುಳುವೊಕ್ಕಲ ಮಾಡುವೆವು (ನೇಮಿಸಂ. ೨೬-೬೯). [ಬಾೞ್ದಲೆ + ಕೊಳ್$_1$]

**ಬಾೞ್ದಲೆದರ್** (ಕ್ರಿ). ಜೀವಂತವಾಗಿ ಸೆರೆಹಿಡಿದು ತರು : ಇಂದ್ರನ ಮಗನಪ್ಪ ಜಯಂತನನಿಂದ್ರಜಿತ್ಕುಮಾರಂ ಬಾೞ್ದಲೆದಂದೀಯೆ ರಾವಣ ಸಭೆಯಘೋಷಣೆಯುಂ ಮಾಡಿಸಿ (ಶಂಠಾಪು. ೧೦-೨೦೦ ವ); ಚಕ್ರಧರಂ . . . ಧುರದೊಳ್ ಬಾೞ್ದಲೆದಂದಂಬರಚರರಂ ಕರೆದು ಪೇೞ್ದು ಪೇೞ್ದುದು ಗೆಯ್ದಂತಿರೆ ಕೊಟ್ಟು ದಕ್ಷಿಣಶ್ರೇಣಿರಾಜ್ಯಮಂ ಕಟ್ಟಿಪಿದಂ (ಪರ್ಪು. ೯-೬೯). [ಬಾೞ್ದಲೆ + ತರ್]

**ಬಾೞ್ದಲೆವಿಡಿ**, ಬಾಳುದಲೆವಿಡಿ, ಬಾಳ್ದಲೆವಿಡಿ (ಕ್ರಿ). = ಬಾೞ್ದಲೆ ಗೊಳ್ : ಪೞಿಯಂ ಬೀರದಿನಾ ಗೊರವನೆಯ್ದಿ ಬಾೞ್ದಲೆವಿಡಿದಂ (ಕಬ್ಬಿಗಕಾ. ೦೯೪) ; ದೆಸೆಗೆ ಬಿಟ್ಟಾ ರಾಯರ ಬಾೞ್ದಲೆವಿಡಿದು ಜಯ ಕಾಂತೆಗೆ ತೊೞಿತ್ತಿರಂ ಮಾಡುತುಂ (ರಾಜಶೇಖ. ೯೯-೦೬). **ಬಾಳುದಲೆವಿಡಿ**: ದೇಪಗುಹೇಶ್ವರನ ಬಾಳುದಲೆವಿಡಿದೆ (ಅನಸಂ. ೬೭-೩೬೩). **ಬಾಳ್ದಲೆವಿಡಿ** : ಕದಂಪನಗ್ನಿಯನಟ್ಟಿ ಬಾಳ್ದಲೆವಿಡಿದಭಯಘೋಷಣೆಯ ಮಾಡಿಸಿದೊಡನೆ ತತ್ಪತ್ತನವ ಪೊಕ್ಕು (ಸಾಳ್ವಭಾ. ೨೬-೩೦). [ಬಾೞ್ದಲೆ + ಪಿಡಿ$_1$]

**ಬಾೞ್ದಾಣ** (ನಾ). ಬದುಕುವ ಸ್ಥಳ : ವಾಸಸ್ಥಳ : ನೀರ್ಗಂಡಿ, ಬೂರ್ಗಲಿ. ಕೂಟ್ಗಟ್ಟಿ. ಬಾೞ್ದಾಣಂ (ಶಬ್ದಾಮ. ೯೦ ಪ್ರಯೋ.). [ಬಾೞ್$_1$ + ತಾಣ]

**ಬಾೞ್ಣಿಣ** (ನಾ). ದೇಹದಿಂದ ಆದೇ ತಾನೆ ಹೊರಬಿದ್ದ ನೆಣ ; ಹಸಿಯ ಕೊಬ್ಬು : ಕರುಳ್ವಿಣಲ ಪೊದೞಿ ರುಂಡದಡಕಿಲ್ ನರದುರ್ಬ್ಬಿ ಕಪಾಲದೊಳ್ ಬಾೞ್ಣಿಣದೆಡೆ ಖಂಡದಿಂಡೆ ಬಿಸುನೆತ್ತರ ಪೆರ್ಬೊನಲರ್ಬಿ ಸಲ್ಕೆ ಮಾರ್ಗಣಗಣಘಾತದಿಂ ಕವಿಸಿದಂ ವಿರೋಧಿಸೈನ್ಯಮಂ (ಜಗಪ. ೬-೬೪). [ಬಾೞ್$_3$ + ನೆಣ]

**ಬಾೞ್ಕೆ**, ಬಾಳ್ಕೆ, ಬಾೞ್ಮೆ (ನಾ). ೧. ಬದುಕು ; ಜೀವನ : ಅನಟುವು ಬಾೞ್ಕೆಗಳೆಡೆಯೊಳ್ ನಿಂದಿರ್ಪೆಂ (ಚಿತ್ರಗೋ. ೨೮-೨೦). **ಬಾಳ್ಕೆ** : ೧. ಅಪ ಕೀರ್ತಿಯಂ ಪೊತ್ತು ಮೃತಜೀವರಂಥದೋಳ್ಬಾವಿರ್ದ ಬಾಳ್ಕೆಯಂ ಸುಡಲಿ (ತುರಂಗ. ೬೪-೬) ; ಕಯ್ಯಾರಿಸಿದ ಬಿರುದಾವಳಿಯ ಸಮ್ಮೋಹನಕ್ಕೆ ನೀನೇ ಕರಗಿ, ಬೇರೊಂದಚ್ಚಿನ ಬಾಳ್ಕೆಗೆ ಮಾರ್ಪಡುವುದೆ, ಶ್ರೀಮನ್ಮಹಾಶಯ? (ಚಿನ್ಮಿಕ. ೨೦೪-೦೨) ; ಅರ್ಥಹೀನಂ ಬಾಳ್ಕೆ ಒಲುಮೆಯಿಲ್ಲದಿರೆ (ಶತ್ಪಾಂಗ. ೬೬-೦೬೭). **ಬಾೞ್ಮೆ** : ೨. ವೃತ್ತಿ : ಅರಸನಾತಂಗಾದಮಾನು ಮೊಸೆದು ತಂದೆಯ ಬಾೞೆದಗ್ಗಳ ಬಾೞ್ಮೆಯುಂ[ಪಾಠಾಂ. ಬಾಳಂ,ದ ಬಾಳಂ] ಮಾಡಿದಂ (ವರ್ಧಮಾಣ. ೦೬೩-೨). [ಬಾೞ್$_1$ + — ಮೆ$_1$]

**ಬಾೞ್ಮೊದಲ್**, ಬಾಳ್ಮೊದಲ್ (ನಾ). ೧. (ಬದುಕಿಗೆ) ಬಂಡವಾಳ ವಾದುದು; ಮೂಲಧನವಾದುದು : ಮದುವೆಗಿದು ಪೆತ್ತ ಮಕ್ಕಳಿಗಿದು ಬಾೞ್ಮೊದಲೆನ್ನದುಳ್ಳುದಂ ಸವಣರ್ಗಿಕ್ಕಿದಪಂ (ಸಮಪ. ೩-೯೮). ೨. ಬದುಕಿಗೆ ಆಧಾರವಾದುದು; ಜೀವನಸರ್ವಸ್ವ : ಅದು ಸುಖದೊಂದು ಪಿಂಡಮದು ಪುಣ್ಯದ ಪುಂಜಮದಂಗಜಂಗೆ ಬಾೞ್ಮೊದಲದು ಚಿತ್ತಜಂಗೆ ಕುಲದೈವಂ (ಅಜಿಪು. ೨-೭೪); ಕವಿಗಳ್ಗಿದು ಕೆಯ್ಗನ್ನಡಿ ಕವಿತೆಗೆ ಬಾೞ್ಮೊ ದಲುಂದಾತ್ತವಾಗ್ದೇವತೆಗುದ್ಭವಹೇತು (ಕಾವ್ಯಾವ. ೪); ಬಿದಿ ಮೇರೆದಪ್ಪಿ ನಿಷ್ಕರುಣದೆ ನಿಮ್ಮ ಬಾೞ್ಮೊದಲನಕ್ಕಟ ವಂಚಿಸಿ ಕೊಂಡು ಪೋದನೇ (ಪರ್ಪು. ೯-೭೦). ೩. ತವರು ; ನೆಲೆವೀಡು ; ಮೂಲಾಶ್ರಯ : ಒದವಿದ ಕೋಟೆಲೆಗಳ ಬಾೞ್ಮೊದಲೆನಿಸಿದ . . . ನನ್ನೀವೊದಲಂ ನಿಲಿಸಿ ದುದರ್ಕೆಣಾನುಮೊಂದು ನೆಪಮುಂಸಿರ್ದಪ್ಪೆ (ಕಾದಂಪೂ. ೪೩೩); ಅದು

ಪಿರಿಯ ಸಿರಿಯು ಬಾಟ್ಮೊದಲದು ಚಾಗದ ಭೋಗದಾಗರಂ (ಹುಓ. ೦-೩೩). ಬಾಳ್ಮೊದಲ್ : ೨. ಪುರು[ಷಾ]ರ್ತ್ಥದ ನೆಲೆ ಸತ್ಯದ ಕರು ಪರಹಿತಲಕ್ಷ್ಮಿಗಿಕ್ಕಿದಾಣಂ ಶೌಚಾಚಾರದ ಬಾಳ್ಮೊದಲೆಂನೆದೆ. ನರನೆಂಬುದು ಸಿಂ[ಗನ]ಣುಗನಂ ಶೋಭನನ (ಶಾಇ. XX, ೩೩-೨೭; 1118).

[ಬಾಟ್₃ + ಮೊದಲ್₁./ತಮಿ. ವಾಟ್ಮುತಲ್=ದೇವರು, ಸೃಷ್ಟಿಕರ್ತ]

ಬಾಟ್ಮೊಸರ್ (ನಾ). (ಒಗ್ಗರಣೆ ಹಾಕಿದ) ಗಟ್ಟಿಮೊಸರು : ಇದು ಬಾಟ್ಮೊಸರಿದು ಕಟಲಿಂತಿದು ರುಚಿವೆತ್ತಿರ್ದ ಪಾನಮಿದು ಮಜ್ಜಿಗೆ ತಾನಿದು ಶಿಖರಿಣಿಯೆನುತುಂ ತಿಂಬಿದಿಂಬಿ ತಂದೆಟೆದರಬಲೆಯರ್ ಸಿರ್ಪುಗಳಿಂ (ಸುಕುಮಾ. ೧೧-೩೧); ಸಮೆದೆಂ ಮೊಸರಂ ಬಾಟ್ಮೊಸರುಮನಾಂ ಘನವಾಗಿ ತಂದೆಂ (ಅರ್ಥನೇ. ೬-೭೫). [ಬಾಟ್₃ + ಮೊಸರ್]

ಬಾಟ್ವಂದರ್, ಬಾಳ್ವಂದರ (ನಾ) = ಬಾಟ್ಜೊಂಪ : ಕಾಯ್ತು ಬಳ್ಳಿ ಗೌಂಗಿನ ಪಸುರ್ವಂದರುಮಂ ಪಣ್ತು ಮಧುರದ್ರಾಕ್ಷೆಯ ಬಾಟ್ವಂದರು ಮಾಸಿರ್ಕೆಲದೊಳಿಕ್ಕಿಸಿ (ಅರ್ಥನೇ. ೩-೧೦ ವ). ಬಾಳ್ವಂದರ : ಕೆಂದಳಿರ ತುಱುಗಲಿಂದೊಪ್ಪಂಬೆತ್ತ ಬಾಲಸಹಕಾರದ ಬಾಳ್ವಂದರಂಗಳೊಳ್ . . . ಪಳುಕಿನ ವೇದಿಕೆಯೊಳ್ನಿಂದು (ನಾಗಕು. ೨-೨೫ ವ). [ಬಾಟ್₃+ಪಂದರ್]

ಬಾಟ್ವಣ (ನಾ). ಜೀವಂತವಾಗಿರುವ ಧನ,— ಸಂಪತ್ತು : ಎನ್ನ ಕೊಂಡಾಟದ ಬಾಟ್ವಣಮೆ ! (ರಾಮಾಶ್ವ. ೪೪-೧೦). [ಬಾಟ್₃ + ಪಣ್₃]

ಬಾಟ್ವನೆ, ಬಾಳುಮನೆ, ಬಾಳ್ವನೆ(ನಾ). ತವರುಮನೆ; ಮೂಲಾಶ್ರಯ: ಕನರ್ಗೊನರಿರ್ಕೆ ನುಣ್ದಳಿರ ಬಾಟ್ವನೆ ಕೆಂದಳಿರಿರ್ಪ ಬೀಡು . . . ನಸು ದೋಱೆವಣ್ಣ ತಾಯ್ವನೆ ಪೊಸವಣ್ಣ ಗೊತ್ತಿಡೆನೆ ಕಣ್ಗೆಸೆದಿರ್ದುದದೊಂದು ಮಾವುರಂ (ಕಬ್ಬಿಗ. ೦೦೦); ಪಾರ್ವರ ಬಂಚದಜನ ಬಾಟ್ವನೆಯೆಂಬೊಂದು ನೆಗಟ್ಗಡರ್ಪಾಗಿ ಸಂದ ಅಹಿಚ್ಛತ್ರಪುರವರದ ರಾಯನ ಮನ್ನಣೆಯ ಬಿರ್ದಂ ಕೈಕೊಂಡು (ರಾಮಾಶ್ವ. ೩೩-೨೩). ಬಾಳುಮನೆ: ಖೂಳನೆಂಬೆನೆ ಸಕಲ ಕಲೆಗಳ ಬಾಳುಮನೆ ಗಡ ನಿನ್ನ ಬುದ್ಧಿ ವಿಶಾಲಮತಿ ನೀನೆಂಬೆನೇ ಜಗದಜ್ಞ ರಧಿದೈವ (ಕುಮ್ಯಾಸ. ೦೩-೭೫). ಬಾಳ್ವನೆ : ನೆಲವೆಣ್ ಪೊಂಬೆಳಸನ್ನೆಟ್ಟನೆ ಪಡೆದವರ್ಗೀವೊಲ್ ಪಾಲ್ಗೊಜ್ಜನದ ತನೆ ಸುಜನರ ಬಾಳ್ವನೆ ಕಳಮದ ನಿಡಿದೆನೆಯೆಸೆಗುಂ (ಉದ್ಭದೇ. ೨-೨೭). [ಬಾಟ್₃ + ಮನೆ]

ಬಾಟ್ವೆ, ಬಾಳುವೆ, ಬಾಳ್ವೆ (ನಾ). ೧. ಜೀವನ ; ಬದುಕು : ಉಬ್ಬಿದಿರ್ಪಂತೆಮಗಾವ ಗರ್ವಮಿಱಿಯಲ್ವೇಡೆಮ್ಮನೆಮ್ಮುಳ್ಳುದಂ ನೆಱೆ ಕೊಂಡೆಮ್ಮಯ ಬಾಟ್ವೆಯೊಳ್ ನಿಱಿಸುಮಂ ನೀಂ (ಶಂಕಭಾ. ೬-೩೦); ಅವಱ ಬಾಟ್ವೆ ಇಂದಿನದಲ್ಲ, ನಿನ್ನೆಯದುಮಲ್ಲ, ಎಂದೆಂದಿನದು (ಅಂತಿಗೂ. ೨೦-೪೪೦). ಬಾಳುವೆ : ೧. ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗ ನಂತೆ ಎನ್ನ ಬಾಳುವೆ (ಬಸವ. ೩೫); ಅರ್ಥವಿಲ್ಲದ ಸಿರಿಯ ಸಡಗರ ಅರ್ಥಿ ಯಿಲ್ಲದ ಬಾಳುವೆಗಳಿವನರ್ಥಪಾರಂಪರೆ (ಕುಮ್ಯಾಉ. ೪-೫೭); ಬಾಳುವೆಯು ಗೂಡೊಳಗೆ ತತ್ತಿಯಿದನೆಂದು ಮೃತ್ಯು ತಾನಿಕ್ಕಿ ಮೆಯ್ಗುರೆಯಿತೆನಗರಿವೆ ? (ಗಳಿಂ. ೫೦-೦). ೨. ಸಂಸಾರ; ದಾಂಪತ್ಯಜೀವನ : ಐದು ಮಾನವ ಕುಟ್ಟಿ ಒಂದು ಮಾನವ ಮಾಡು ಕಂಡಾ ಮದವಳಿಗೆ ಇದು ನಮ್ಮ ಬಾಳುವೆ ಮದವಳಿಗೆ (ಜಾನ. ೯೭೭) ; ಅವಳು . . . ಮತ್ತೆ ಕೈ ಹಿಡಿದವನ ಕೂಡ ಬಾಳುವೆ ಮಾಡಹತ್ತುವಳು (ಕನ್ನಡ. ೦೨೫). ೩. ಜೀವಮಾನ ; ಆಯುಷ್ಯ ; ಬದುಕಿನ ಅವಧಿ : ಏಸು ದಿನವೀ ಜಗದ ಬಾಳುವೆ (ಕುಮ್ಯಾಶ. ೦೪-೩೨). ೪. ಅಭಿವೃದ್ಧಿ : ಕಾನನದಡವಿಯಲ್ಲಿ ಕಿಚ್ಚು ಬಾ[ಪಾಡಾ. ಬ]ಳುವೆಯಾಗಿ ಮಿಕ್ಕೊಡೆ ಒಱಲುವ ಬಳ್ಳುವಿನಂತಿಪ್ಪರಯ್ಯಾ ಮಾನುಜರು ನರವಿಂಧ್ಯದೊಳಗೆ (ಬಸವ. ೨೨೭); ಕೇಳಿದಳು ಹರುಷದಲಿ ಪುತ್ರಕರೇಳಿಗೆಯು ಮುತ್ತೈದೆತನದಲಿ ಬಾಳುವೆಯು ಕೈಕೊಂಡೆನೆಂದೆಳು ನಗುತ ಗಾಂಧಾರಿ (ಸಂಭಶ. ೨೦-೭). ಬಾಳ್ವೆ : ೧. ಏನಾ ದೊಡೇನೋ ಮಕ್ಕಳ ಹಡೆಯದರ ಬಾಳ್ವೆ ಹೆಣಕೆ ಸರಿ (ಸಮ್ಯಕೌ. ೫-೯); ಸಕಲ ಪ್ರಾಣಿಗಳ ಪ್ರಯತ್ನವು ಬಾಳ್ವೆಗಾಗಿ, ಸಾವಿಗಾಗಿಯಲ್ಲ (ಜೀವಾಶ. ೨೮೪). ೩. "ಆಯುಸ್ = ಆಯುಷ್ಯಂ, ಬಾಳ್ವೆ" (ಕಾಕಶ. ೦೦೯).

ಬಾಳುವೆ ಮಾಡು, ಬಾಳ್ವೆಮಾಡು = ದಾಂಪತ್ಯಜೀವನ ನಡೆಸು ; ಒಕ್ಕತನ ಮಾಡು : ಇಂಥವರೊಡನೆ ತಾನು ಇಲ್ಲಿಯವರೆಗೆ ಹೇಗೆ ಬಾಳುವೆ ಮಾಡಿಕೊಂಡು ಬಂದೆಯೆಂದು ಅವಳೇ ಆಶ್ಚರ್ಯ ಪಟ್ಟಳು (ಹಳ್ಳಿಹಾ. ೯೦); ಯಾರೊಡನಾದರು ಬಾಳುವೆ ಮಾಡುವೆನಳಿವೆಣ್ಣಿನೊಡನಾಟ ಬೇಡ (ಇಂಚಾಕ. ೨೦೨-೯೮) ; ಗಂಡನ ಮನೆಯಲ್ಲಿ ಆರು ತಿಂಗಳ ಕಾಲ ಬಾಳ್ವೆ ಮಾಡಿದ ಗಂಗತ್ತೆಯನ್ನು 'ಆಟ' ತಿಂಗಳಲ್ಲಿ ತವರುಮನೆಯುವರು ಪದ್ಧತಿಯಂತೆ ಕರೆದೊಯ್ದರು (೬೩ಅ. ೦). [ಬಾಟ್₁ + — ವೆ]

ಬಾಟ್ವೆಣ, ಬಾಳ್ವೆಣ (ನಾ). ಜೀವವಿದ್ದರೂ ಸತ್ತಂತಿರುವ ವ್ಯಕ್ತಿ ; ಜೀವಚ್ಛವ : ಪಂದಲೆಯೋಳಿದೊರಣದ ಸೀಯದರಂ ಪೊಸ ದೂಮೆ ದೂಪ ತೂಗುಂದಲೆ ಬಾಟ್ವೆಣಂ ಪೊಡರೆ ಬಳ್ಕುವ ಸಮ್ಮಿನ ಸೂಲಿಮಾಲ ದೊಳ್ ಸಂದಣಿಯಾಗಿ ನೇಲ್ವ ಪೆಣನೊಂದಿರೆ ನಿಂದುರಿಯುಯ್ಯಲೇಱ ಕೈರಂದಱಿಯಲ್ಕೆ ಮಾಡಿದಡೆ ಮಂಚಿಕೆ ಮಿಂಚಿದುದಾ ಶ್ಮಶಾನದೊಳ್ (ಕಾವ್ಯಾವ. ೫೬) ; ವಿಜಯಸಾಪುರೀಶನಂ ಬಾಟ್ವೆಣನೆಂಬಿನಂ ಪಿಡಿದು ಕೆಯ್ಸೆಱೆ ಗೊಂಡುಱೆ ಪಾಡುಪಂತದಿಂ ಬಾಟ್ವನಭೇದ್ಯವಿಕ್ರಮನೆನಲ್ ಮೆಱೆವಂ ಚಿಕದೇವಭೂವರಂ (ಗೀತಗೋ. ೬೫-೦೪). ಬಾಳ್ವೆಣ : ಕಂಗೆಟ್ಟು ಬಾಯ್ವಿಟ್ಟು ಕಲುಮರನಾಗಿ ಕಂಡು ಮತಿಗೆಟ್ಟು ದೆಸೆಗೆಟ್ಟು ಬಾಳ್ವೆಣನಾಗಿ (ಕಣ್ವರ. ದೇ. ೦೯೬-೦೪) ; ಬದುಕಲೆಳಸಿದರಿಂತು ಬಾಳ್ವೆಣಗಳಾಗಿ ! (ಚಕ್ರಸ್ಕ. ೦೩). [ಬಾಟ್₁ + ಪೆಣ]

ಬಾಟ್ವೇಲಿ, ಬಾಳ್ವೇಲಿ (ನಾ). = ಬಾಟ್ಗೊಟ್ಬೆ : ಪೂತ ಚೂತವನಮೆ ಬಾಟ್ವೇಲಿಯಾಗೆ . . . ಅಶೋಕೋದ್ಯಾನಮಧ್ಯದೊಳ್ (ಶಾಂತಿಪು. ೪-೯೫ ವ) ; ಆ ವನಕ್ಕಿಕ್ಕಿದ ಬಾಟ್ವೇಲಿಯಂತೆ . . . ನವ ಫಲಂಗಳಿಂ ನೆಱೆದೊಪ್ಪುವ ಮಾತುಲುಂಗದ ಪೊದಱುಗಳುಮಂ (ಶಂಚತಂ. ೦೦೭-೦೨) ; ನಂದನಕ್ಕೆ ಬಾಟ್ವೇಲಿಯಾದ ಕೇದಗೆಯು ಬನದ ಬಳಸಿನೊಳಗೆ ಶಿವನರಿವೆಣ್ಣನಂ ಹರಿಯು ಹಾದರವಬ್ಬಜನೊಲ್ದು ಲಜ್ಜೆ ಹೇಱಿದೆ ನನೆವಿಲ್ಲ ಬಲ್ಲಹನ ಶೌರ್ಯಮುಮಂ (ಅನಂಪು. ೦-೯೦ ವ). ಬಾಳ್ವೇಲಿ : ಕಂಜಾಸ್ತ್ರನ ವನದುರ್ಗದಂತಾಯ್ತುಪರಂಜಗೇದಗೆಯ ಬಾಳ್ವೇಲಿ (ಶ್ರೀಪಾಂ. ೦-೬೪); ಸುತ್ತಿದ ಜಲಖಾತಿ ಮಿಸುನಿಗೇದಗೆಯ ಬೆಲ್ವೆತ್ತ ಬಾಳ್ವೇಲಿ (ನಾಗಕು. ೨-೩೨). [ಬಾಟ್₁ + ಬೇಲಿ]

ಬಾಟ್ಸಬ (ನಾ). = ಬಾಟ್ವೆಣ : ಎಲೆಲೆ ಸಮ್ಮಂಗುಂದಿದ ಪುಚ್ಚಟಿಯ ಬಾಟ್ಸಬಮೆ ! (ರಾಮಾಶ್ವ. ೦೦೨-೦೫). [ಬಾಟ್₁ + ಸಬ (<ಶಬ)]

ಬಿಂ, ಬಿಮ್ಮು₂ (ನಾ). ಶೂನ್ಯತೆಯನ್ನು ಸೂಚಿಸುವ ಒಂದು ಅನುಕರಣಶಬ್ದ : (೪). ಬಿಮ್ಮು₂ : ಒಂದೆ ನಿಮಿಷದ ಆಯು ಮರುಚಣವೆ ಕತ್ತಲೆಯು ಬಿಮ್ಮೆಂಬ ಕತ್ತಲೆಯು (ಳಾಸೋ. ೬೦-೯). 'ಬಿಮ್ಮುಗೆಱೆ' ಪರಾ.

ಬಿಂಬಿಮ್ಮೆನ್=ನಿರ್ಜನವಾಗಿರು ; ಬಿಕೋ ಎನ್ನು : ಬಿಂಬಿಮ್ಮೆಂಬ ಪೇರಡವಿಯಂ ನೋಡಿ ಜಳಜಮುಖಿ ನಾಡೆಯುಂ ತಲ್ಲಣದಿಂ ಭೋರೆಂದು ಸುಯ್ದು (ಧರ್ಮಾಮ್ರ. ೩-೫೩).

ಬಿಂಕ₁ (ನಾ). ೧. ಗರ್ವ ; ಜಂಬ ; ಸೊಕ್ಕು : "ವಕ್ಕಿಮಂ, ಬಿಂಕಂ . . . ಅದಟು — ಈ ೭ ಗರ್ವಂ" (ಕಶಸಾ. ೫೬-೨೩೦) ; ಆ ದ್ರುಪದಜೆಯೊಳ್ ನೆರೆದೊಸಗೆಗೆ ತಮ್ಮ ಬೀರಮಂ ಬಿಂಕಮುಮಂ ತೆಱವುಂ ತೆಲ್ಲಂಟಿಯುಮೆಂದರಿಕೇಸರಿಗಾಗಳೀವವೋಲ್ ಬೆನ್ನಿತ್ತರ್ (ಪಂಪಭಾ. ೩-೬೨) ; ಬೇಡಿದ ಶರಣರ್ಗಿಲ್ಲೆನ್ನದೀವೆನೆಂಬ ಗೀತದೊಳಗಣ ಬಿಂಕದ ಬಿರುದಂ ಕೇಳ್ದು ನಿನ್ನೊಳೊಂದಂ ಬೇಡಿ ಬಂದೆಂ (ಬಸರ. ೦೨-೪೬) ; ಕಡಲು ಪರಿವರುಣಾಂಬುಜಲಧಿಗೆ ಬಿಡಿಸಿದವು ಬಿಂಕವನು ಶಿವಶಿವ ನುಡಿವ ಕವಿ

ಯಾರಿನ್ನು ಪಾರ್ಥಕುಮಾರನಾಹವವ (ಕುಮಾ.ದ್ರೋ. ೩-೬). ೨. ಠೀವಿ ; ಗತ್ತು ; ಗಾಂಭೀರ್ಯ : ಬಿಂಕದಿಂ ಬಲಗೆಲದೊಳ್ ನೆಗಟ್ತಿವಡೆದಿರ್ಪರಸಂಚೆಯು ಪಿಂಡು (ಕಬ್ಬಿಗ. ೧೨೮) ; ಆವ ಬಿಂಕವೋ ಎಡಗಾಲ ಗದ್ದುಗೆಯ ಮೇಲೋವಿ ಮಡಿದು . . . ಠೀವಿಯೊಳೆಸೆದನಾ ರಾಯ (ಭರತ. ೧-೪೦). ೩. ಹೆಮ್ಮೆ ; ಸ್ವಾಭಿಮಾನ : ಬಿಡೆ ನಿನ್ನ ಪಾದವ ಬಿಂಕವಿನ್ನೇಕೊ ಕೊಡು ಮನದಿಷ್ಟವ ಕೋಪವಿದೇಕೊ (ಪುರಂದ. ೧-೨೩ ಕಲ್ಯಾಣಿ) ; ಲಂಕಾದುರ್ಗಕೆ ಸರಿಯೆಂದಾಪೂರ ಬಿಂಕದೆ ಕೊಂಡಾಡುತಿಹರು (ಕಂಪಿ. ೧೬-೭೨) ; ಗಂಡನ ಬಿಂಕ ಹೆಂಡತಿಯು ವೈನ್ಯವನ್ನೇ ಬಯಸುತ್ತದೆ (ಮಹಾಗ. ೨೯). ೪. ಬೂಟಾಟಿಕೆ ; ಡಂಭಾಚಾರ : ಬಾಯ ಬಿಂಕದ ಸವಿನುಡಿಯನಾ ರಾಯರಾಡಿದರಲ್ಲಿ (ನಳಚ. ೩-೬೦) : ನಾವು ಯೋಧರು, ನೋವನ್ನೂ ಸಹಿಸಬಲ್ಲೆವು, ಸಂತೋಷವನ್ನೂ ಸಹಿಸಬಲ್ಲೆವು. ಈ ಎರಡೂ ನಿಮಗೆ ಸಾಧ್ಯವಿಲ್ಲ. ಇದೊಂದು ಬಿಂಕ (ಶಾಂತಲಾ. ೬೯). ೫. ಆಡಂಬರ : ಡೌಲು : ಪಾತ್ಸ್ಯಾವು ರಣಧೂಳಿಖಾನನ ಬಿಂಕದೆ ಬೀಳ್ಕೊಟ್ಟನಾಗ (ಕಂಪಿ. ೧೧-೯). ೬. ಒಯ್ಯಾರ; ಬೆಡಗು ; ಬಿನ್ನಾಣ : ಸ್ಮರಸಂಜೀವನೆ ಕೃಷ್ಣೆ ಪೂಮುಡಿದಳ್ . . . ಆ ಬಿಂಕಮಾ ತರಳಾಪಾಂಗವಿಲಾಸಂ . . . ಏಂ ಮನಂಗೊಳಿಸಿತೋ ಚಾಳುಕ್ಯಕಂದರ್ಪನಾ (ಗದಾಯು. ೯-೫೦) ; ನಳಿತೋಳ್ಗಳ್ ಮುತ್ತಿನ ಸರಿಗೆಯುನಾಂತಸೆಯೆ ಕಾಂತೆ ಬಿಂಕಮನಾಂತಳ್ (ಜಗನ್ನಿ. ೧೦-೧೧೬) ; ನಿನ್ನ ನಡೆವ ಬಿಂಕದ ಗಾಡಿಯುಮಂ . . . ಆ ನಿನ್ನ ಕಿಱುನಗೆಯ ಬಗೆಯುಮಂ ಕಂಡು ಸೋಲ್ತು ಮೆಚ್ಚಿದೆನಲ್ತೆ ! (ರಾಜಶೇ. ೩೬-೯). ೭. ಸೊಬಗು : ವಿಲಾಸ ; ಸೊಗಸು : ಶ್ರೀವತ್ಸಾಂಕನ ಸುಲಲಿತಯಾನದ ಬಿಂಕಮನನುಕರಿಸಿ ತೋಱುತಿರ್ದಳೆದೊರ್ವಳ್ (ಜಗನ್ನಿ. ೫-೨೦): ನಿಡುಹುರ್ಬಿಂಗಂ ಕರ್ವಿಲ್ಲ ಬಿಂಕಮಂ ಸುಂಕಮಿಕ್ಕಿದಂತೆ . . . ಶೃಂಗಾರಕ್ಕೆ ಸೀಮೆಯಾಗಿಪ್ಪಳ್ (ಪುಷ್ಪಾ.ಸ್ತ್ರ. ೨-೩೨ ವ); ಬಿಂಕದಿಂದಲಿ ಕೊಳಲೂದುತ್ತ ಪಾಡುತ್ತ ಪಂಕಜಾಕ್ಷನು ಬಂದ ಕಾಣಿರೇನೆ (ಪುರಂದ. ೧-೧೪೦-೩). ೮. ಹಿರಿಮೆ ; ಮೇಲ್ಮೆ : ಅತಿಶಯತೆ : ಶಂಕರಂಗೆ ಸಕಲ ಮಜ್ಜನಾದಿ ಪೂಜೆಯಂ ನಿಮಿರ್ಚಿ ಬಿಂಕದಿಂದೆ ಕನಕರತ್ನರಾಶಿಗಳನೆ ಪತ್ತೆ ಸಾರ್ಚಿ (ಮಳೆ.ಹ. ೨೨೦-೦೦) ; ಅರಸನಭ್ಯುದಯವನು ಭೀಮನ ಧರಧುರವನರ್ಜುನನ ಬಿಂಕವನು . . . ಕಂಡೆದೆ ಬಿರಿದುದು (ಕುಮಾ.ಸ. ೦೨-೫೯): ಸಾಸಿರದೆ ಬಿಂಕದ ಕರಿ ಹತ್ತು ಕೊಡಿದ ಬಲುಪೌಜನಂಕುಶಖಾನ ತೋಱಿದನು (ಕಂಪಿ. ೧೦-೯೫). ೯. ಸಾಹಸ: ಪರಾಕ್ರಮ; ದಿಟ್ಟತನ : ಬಿಂಕದಿಂದ ಸಿಯಂ ಜಡಿದು (ಬಸವ. ೦೬-೦೮); ಮನ್ನಣೆಯ ಬಿಲ್ಲ ಗುರುವಿನ ಬಿಂಕ ಬಯಲಾಯ್ತಿಲ್ಲಿಯೆಂಬಪಕೀರ್ತಿ ಹೋಱುವುದು (ಕುಮಾ.ದ್ರೋ. ೦೩-೦೧). ೧೦. ಅಟ್ಟಹಾಸ; ಆಟೋಪ : ಧರಾಧೀಶರಾಗಳ್ ಪೊಣರಲ್ ರಾಜೇಂದ್ರ ಹಮ್ಮೀರನ ತುರಗಿರಿಯಂ ಮುತ್ತಿದರ್ ಬಿಂಕದಿಂದಂ (ಹಮ್ಮೀ.ರ. ೩-೫). ೧೧. ಜಂಬದ ಮಾತು ; ಹೆಮ್ಮೆಯ ನುಡಿ : ಧನವ ಕೊಟ್ಟೆನು ತನುವ ಕೊಟ್ಟೆನು ಮನವ ಕೊಟ್ಟೆನು ಕೊಟ್ಟೆನೆಂಬೀ ಬಿನುಗು ಬಿಂಕವ ನಾಡಲಾ ಧನ ತನು ಮನಂಗಳನು ನಿನಗೆ ಕೊಟ್ಟವರಾರು (ಶ್ರೀಶರೀ. ೦೬-೯೯). ೧೨. ಶಸ್ತ್ರಪ್ರಯೋಗದಲ್ಲಿ ಒಂದು ರೀತಿ,—ಬಗೆ : ಬಿಂಕಂ ಭ್ರಮರೀಚ್ಛಾಲೀಢಮಾಕೀರ್ಣತೆ . . . ಬೆಡಂಗೆಂದೆನಿಪನಿತಱ ವೈಚಿತ್ರ್ಯದಿಂ ಶಾನೆ ಶಸ್ತ್ರಾಗಮಶಿಕ್ಷಾಚಾರ್ಯನೆಂಬೊಂದೆಸಕದಿನೆಸೆದಂ ನಾಡೆ ಕಂದರ್ಪದೇವಂ (ಕುಸುಮಾ. ೬-೬೯). 'ಬಿಗಿ₁' ಪರಾ.

[ದೇ. ‖ ತುಳು. ತೆಲು. ಬಿಂಕ]

**ಬಿಂಕ₃** 'ಬಿಂಗ₁' ನೋ.

**ಬಿಂಕಂಗುಂದು** (ಕ್ರಿ). ಶಕ್ತಿಯು ಕುಂದು: ಪರಾಕ್ರಮವು ಕಡಮೆಯಾಗು : ಬಾಣ್ಬಟ್ಟೆಯೊಳ್ ಬಿಱುವಿಸಿಲ್ ಬೆನ್ನಂ ಸುಡೆ ಬಿಂಕಂಗುಂದಿ ಬಳಲ್ದು ಬರ್ಪ ಗರುಡದಂಪತಿಗೆ ತಂಪಂ ಪರೆಪಲೆಂದು . . . ರಂಜಿಪ ಪರ್ಣಪಾಳಿಯಿನೇಳ್ಗೆವೆತ್ತ ತಾಳಭೂರುಹದಿಂ . . . ಮಹಾಗಹನಮೊಪ್ಪಿರ್ದುದು (ಧರ್ಮ. ೩-೩೫ ವ). [ಬಿಂಕ₁ + ಕುಂದು₁]

**ಬಿಂಕಂಗೆಡಿಸು** (ಕ್ರಿ). ಗರ್ವವು ನಾಶವಾಗುವಂತೆ ಮಾಡು; ಅಹಂಕಾರವನ್ನು ತಗ್ಗಿಸು : ಬಿದಿಗವೆಱೆಯ ಬಿಂಕಂಗೆಡಿಪಧರಂ . . . ಒಪ್ಪಿದುವಾ ಸತಿಗೆ (ಜಯಾ. ೨-೬). [ಬಿಂಕಂಗೆಡು + – ಇಸು₃]

**ಬಿಂಕಂಗೆಡು** (ಕ್ರಿ). ಗರ್ವವು ನಾಶವಾಗು ; ದರ್ಪವು ಅಳಿದುಹೋಗು ; ಅಹಂಕಾರವಡಗು : ಪೊಡವೀಶಬ್ಬೀತಿಯಿಂದಂ ಸೆಡವರಡಗುವ ಕ್ರೋಡುಪಕ್ರೋಂಕಿ ಬಿಂಕಂಗೆಡುವರ್ (ಎಕ. XI, ಚಿತ್ರದು. ೩-೬೭ 1356).

[ ಬಿಂಕ₁ + ಕೆಡು₁ ]

**ಬಿಂಕಂಬಡೆ** (ಕ್ರಿ). ಸ್ವಾಭಿಮಾನದಿಂದ ಕೂಡಿರು : ಅತ್ಯಂತ ಚತುರಚಿತ್ರಕನೊರ್ವಂ ಬಿಂಕಂಬಡೆದೈತಂದು ಕಂತುನಿಭಂಗಭಿವಂದಿಸಿ (ಜಯಾ. ೩-೪). [ಬಿಂಕ₁ + ಪಡೆ₁]

**ಬಿಂಕಂಬೆಱು** (ಕ್ರಿ). ೧. ವಿಲಾಸದಿಂದ ಕೂಡಿರು ; ಸೊಗಸನ್ನು ಹೊಂದಿರು : ಬಿಂಕಂಬೆತ್ತೆಸೆವಂಚೆಯುಂ ಸಂಕುಳಮುಂ ತೊಂಡುಗೆಡೆವ ಶುಕಶಾರಿಕೆಯುಂ ಸೊಂಕಿ ಬಲವಂದು ತೀಡುವ ತೆಂಕಣಗಾಳಿಯುಮಿವೇಂ ಮನಂಗೊಳಿಸಿದುವೋ (ಕಾವ್ಯಾ.ವ. ೦೪); ಬಿಂಕಂಬೆತ್ತಿರೆ ಪಸ್ತನಖಾಂಕುರದೊಳ್ ಬಾಹುಶಾಖೆಯೊಳ್ ದಿವಿಜನಟೀಸಂಕುಳಮಂವನುಗತಿಯಿಂದಂ ಕುರಶಾಖಾಭಿನಯಮನೇಂ ತೋಱಿದುದೋ (ಚಂದ್ರಪ್ರ. ೦೨-೦೯೨) ; ಬಿಂಕಂಬೆತ್ತರ ಮಕ್ಕಳ ತಂಡದ ಮಂತ್ರಿಗಳ ಗೊಂದಣದತಿಚತುರ ಕವೀಂದ್ರರ ಬಲುಸಂದಣಿಯೊಳು . . . ಓಲಗಮಿರ್ದಂ ಜಯಭೂವರನು (ಜಯಾ. ೩-೦). ೨. ಉಬ್ಬು: ಸಡಗರಿಸು : ಉತ್ಸಾಹಿಸು : ಬಿಂಕಂಬೆತ್ತುಬಬೆಂದಾಡುತ್ತಂ ಆಡುವ ಗುಂಪಯ್ಯನ ಪೊಸನೃತ್ಯಂ (ಕಂಪಿ. ೧೩೦-೨೪). ೩. ಗರ್ವಿಸು : ಜಂಬಪಡು : (ಕ). [ಬಿಂಕ₁+ಪೆಱು₁]

**ಬಿಂಕಕಾತಿ** 'ಬಿಂಕಗಾತಿ' ನೋ.

**ಬಿಂಕಕಾರ್ತಿ** 'ಬಿಂಕಗಾರ್ತಿ' ನೋ.

**ಬಿಂಕಕಾಱ** (ನಾ). ಅಹಂಕಾರಿ: ಗರ್ವಿಷ್ಠ: ಬಿರುದಿನ ಬಿಂಕಕಾಱರ ಪಾಸಿಗರ ನಲ್ಲೆನಿಸುವಲ್ಲಮನೆಂಬ ಪೆಸರೆನಗೆ (ಪ್ರಭುಲಿ. ೫-೦೩). [ಬಿಂಕ₁ + – ಕಾಱ]

**ಬಿಂಕಗಾತಿ**, ಬಿಂಕಕಾತಿ (ನಾ). ೧. ಒಯ್ಯಾರಿ; ಬಿನ್ನಾಣಗಿತ್ತಿ : ಕನ್ನಡಿಗಿಂಡಿ ಬಿಜ್ಜಣಿಗೆಗಳ ಪಿಡಿದೂಳಿಗಗೈವ ಬಿಂಕಗಾತಿಯರಾ ಪೊಡವಿಯಾಣ್ಮನ ಪೊದ್ದಿಹರು (ಹಂಬ. ೦-೦೬) ; ಗುರುವ ನೋಟದ ಬಿಂಕಗಾತಿ . . . ಸೋಗೆಗಣ್ಣುಗಳಿಂದ ಕರೆದಳಾ ಕಾಮುಕರರಸಿ (ಸೌಂದರ. ೩-೧೦). **ಬಿಂಕಕಾತಿ:** ೧. ಕರಜಾಣ ನಿನ್ನೋಪನೆಂದು ಸಿರಿವೆಣ್ಣು ಕಿವಿ ಸಾರ್ದು ಸೂಚಿಸು ತ್ತೋಲೈಸಿ ಬರೆ ಬಂದಳಾ ಬಿಂಕಕಾತಿ (ಭರತ. ೬೮-೦೧೯). ೨. ಸೊಕ್ಕಿನವಳು; ಗರ್ವದ ಹೆಂಗಸು : (ಕ). [ ಬಿಂಕ₁ + – ಕಾತಿ₅ ]

**ಬಿಂಕಗಾರ್ತಿ**, ಬಿಂಕಕಾರ್ತಿ (ನಾ). = ಬಿಂಕಗಾತಿ ೧ : ನಲವಿಂದಮೊಡನೊಡನಡಿಯಿಟ್ಟರ್ ನೆರೆದು ಬಿಂಕಗಾರ್ತಿಯರರೆಬರ್ (ಕಬ್ಬಿಗ. ೯೫) ; ನಡೆಯ ಬೆಡಗಿನ ಬಿಂಕಗಾರ್ತಿ[ ಪಾಠಾಂ. ಕಾತಿ ]ಯರ್ . . . ನಡೆತಂದರು (ಚಂಪು. ೯೫-೩೩). **ಬಿಂಕಕಾರ್ತಿ** : ಬಿಂಕಕಾರ್ತಿಯರಲ್ಲಿ ಕಡುಗಾಡಿವೆತ್ತಿರುತಿಹರು (ಕುಮಾರಾ. ೩-೩೫); ಜೆಡೆಯ ಗೊಂಡೆಯ ಬಿಗಿದೊತ್ತಿ ಕಟ್ಟಿದ ಜವದಾಡೆ ಚಿತ್ರಕೆಳಸಿ ಬಿಂಕಕಾ[ಪಾಠಾಂ. ಗಾ]ರ್ತಿ ಬಬ್ಬಿಯರವ ನೊತ್ತಿನೊಳೆಯ್ತಂದರಂದು (ಕುರಾಸಾಂ. ೦೮-೦೯).

[ಬಿಂಕ₁ + – ಕಾಱ + – ತಿ₁ (< – ಇತ್ತಿ)]

**ಬಿಂಕಣ** 'ಬಿಜ್ಜಣ' ನೋ.

**ಬಿಂಕಣಗಿವಿ**, ಬಿಂಕಣೆಗಿವಿ (ನಾ). ಬೀಸಣಿಗೆಯಂತೆ ದೊಡ್ಡದಾಗಿರುವ ಕಿವಿ : 'ಬಿಂಕಣಗಿವಿಯ' ಪರಾ. **ಬಿಂಕಣೆಗಿವಿ** : ಒರ್ಪನೆಯ ಬಿಂಕಣ

ಗಿವಿಯ ಮೂಗೊಂಕುಮೂಗಿನ ಪೇರೊಡಲ ಇಲಿದೇರ ಬೆನಕ ! ಇದೆ ಮಣಿಮ (ರಾಮಾಶ್ವ. ೮೮-೨೦). 'ಬಿಂಕಣಗಿವಿಯ' ಪಠಾ.

[ ಬಿಂಕಣ (<ಬಿಜ್ಜಣ) + ಕಿವಿ₃ ]

**ಬಿಂಕಣಗಿವಿಯ,** ಬಿಂಕಣಿಗಿವಿಯ (ನಾ). ಬೀಸಣಿಗೆಯಂತೆ ದೊಡ್ಡ ದೊಡ್ಡ ಕಿವಿಗಳುಳ್ಳವನು; ಗಣಪತಿ : "ಕರಿಮೊಗಂ . . . ಬಿಂಕಣ [ಪಾಠಾಂ. ಣಿ ]ಗಿವಿಯಂ, ತಂದೆಯ ತಂದೆಯಿಲ್ಲದವಂ — ಈ ೭ ವಿನಾಯಕಂಗೆ ಪೆಸರ್" (ಕಕಸಾ. ೯೭-೪); "ಬಿಜ್ಜವಳಂ . . . ಬಿಂಕಣಗಿವಿಯನು ಮೂಸಕದೇರನೆನೆ ವಿನಾಯಕನ ನಾಮಮಂ" (ಛಬ್ಮಕ್ಕೆ. ೫).
**ಬಿಂಕಣಿಗಿವಿಯ :** ಬಿಂಕಣಿಗಿವಿಯನೆ ಪಾಲಿಪುದಂಕುಶಧರ ದಯದಿ (ಕುಮಾಂ. ೧). [ ಬಿಂಕಣಗಿವಿ + -ಅ₇ ]

**ಬಿಂಕಣಿ** 'ಬಿಜ್ಜಣ' ನೋ.

**ಬಿಂಕಣಿಗಿವಿ** 'ಬಿಂಕಣಗಿವಿ' ನೋ.

**ಬಿಂಕಣಿಗಿವಿಯ** 'ಬಿಂಕಣಗಿವಿಯ' ನೋ.

**ಬಿಂಕಣಿ** (ನಾ). ಒಯ್ಯಾರ ; ಒನಪು : ತೊಟ್ಟ ಸಿಂಗಾರದ ಕೊಂಕು ಬಿಂಕಣಿ ರಸ ತೊಟ್ಟಿಡುವಂತೆ ಲಾವಣ್ಯ ಮುಟ್ಟೆ ಕಂದುವ ಮೈಯ ಪೆಂಗಳಿದ್ದರು (ಭರತ. ೦೨-೬೦). [ ಬಿಂಕ₁ + — ಅಣಿ₄ ]

**ಬಿಂಕತನ** (ನಾ). ಗರ್ವ; ಸೊಕ್ಕು: ಬೇಡಿದರೆ ಕೊಡದಿಹಗೆ ಕಡುಬಿಂಕತನವೇಕೆ ಪಾಡಲರಿಯದವಂಗೆ ಪ್ರೌಢತನವೇಕೆ (ಪುರಂದ. ೨-೬೨-೧).
[ ಬಿಂಕ₁ + —ತನ ]

**ಬಿಂಕಪಡು** (ಕ್ರಿ). ಗರ್ವಿಸು; ಅಹಂಕಾರ ಪಡು; ಸೊಕ್ಕು : ಇತರ ಬಂಧುಜನರೂ ಸೇನಾಪತಿಗಳೂ ತಮ್ಮಿಂದಲೇ ಈ ದ್ವಾರಕೆಯು ಉಳಿದಿರುವುದೆಂದು ಬಿಂಕಪಡುವರು (ಸೀತಿಶಿಂ. XV. ೦೬). [ಬಿಂಕ₁+ಪಡು₁]

**ಬಿಂಕೆಯ** (ನಾ). ಒಬ್ಬಾತನ ಹೆಸರು : ಕನ್ನರವಲ್ಲಹಂ ಪೃಥುವೀರಾಜ್ಯಂಗೆಯ್ಯೆ ಬಿಂಕೆಯ ನಾಡಾಳೆ (ಎಕ. VIII, ಸೊರಬ. ೬೭-೬; 940).
[P ಇದು 'ಬಂಕೆಯ' ಎಂಬುದರ ಅಪಲಿಖಿತವಿರಬಹುದು].

**ಬಿಂಗ₁,** ಬಿಂಕ₂, ಬಿಂಗು (ನಾ). ೧. ಒಂದು ಬಗೆಯ ದೊಡ್ಡ ಜಾತಿಯ ತುಂಬಿ ; ಭ್ರಮರ : "ಅಱಿದಿಯಲರ್ವಕ್ಕಿ . . . ಬಿಂಗ ಬಂಡುಣಿಯೆಲರುಣಿಯು ಪಱಿಮೆ ಚಿತ್ರವಿಹಗಕ್ಕೆ ನಾಮಮಂ " (ಕಬ್ಬಿಗಂ. ೨೮); ಭೃಂಗ- ಬಿಂಗ ; ಭೃಂಗಾರ — ಬಿಂಗಾರ (ಶಮದ. ೨೬೮ ಪ್ರಯೋ). ೨. ಒಂದು ಬಗೆಯ ಖನಿಜ ; ಕಾಗೆಬಂಗಾರ; ಅಭ್ರಕ : ಜಲವಿಹಗಾವಳಿ ಜಲಚರಜಾಲಂ ನೆಱೆ ಚಿತ್ರಿಸೆ ಜಳಕನೆಸೆವ ತೆಳುವಳುಕಿನ ಬಿಂಗದ ಮೇಲ್ಗಟ್ಟೊಪ್ಪಿದುದು (ಜಯಶಾ. ೬-೩); ' ಬಿಂಗದ ಕುಪ್ಪಿಗೆಗಿಳಿವ ಕುಂಕುಮದ ನಿರಂಗದಿ ತಾಂಬೂಲರಸವ ನುಂಗುವಾಗಿದಿರಿಗೆ ತೋಱುವುದರಸನ ನುಂಗೊರಳೇನ ಬಣ್ಣಿಪೆನು (ಭರತ. ೩-೩೩); ಬುದ್ಧಿಯೆನಿಸುವ ಕರಣವನುಭವಸಿದ್ಧವಾಗಿಹುದಾತ್ಮನಡಿಯೊಳಗಿರ್ದು ತೋಱುತ ಬಯಲೊಳೆಸೆಯುವ ಬಿಂಗದಂದದಲಿ (ಅಮೃತ. ೭-೮). ೩. ಒಂದು ಬಗೆಯ ಬಳ್ಳಿ : " ಪಱಿಮೆಯೊಳಗಭ್ರಕದೊಳಂ ಲತೆಯೊಳಂ ಬಿಂಗ" (ಕಬ್ಬಿಗಂ. ೮೯). **ಬಿಂಕ₂:** ೨. ಫಿರಂಗಿಶೂಲೆಗೆ : — ರಸ, ಗಂಧಕ ... ಗೇರ ಹರಳ ಕುಟ್ಟಿ ಬೀಜವ ತೆಗೆದು ಬಿಂಕದ ಹಾಗೆ ಕಾಸಿ (ವೈದ್ಯಶಿ. ೬೯); ಅದರಲ್ಲಿ ಬಿಂಕದ (Mica) ಹುಡಿಗಳು, ಕೆಲವು ಬೆಣಚು(Felspar)ಗಲ್ಲು ಇವೆಲ್ಲ ಥಳಿಸುವುವು (ಪಾಲಕ್ರ. I. ೦೯೬); ಇದು ಒಂದು ಕರಡಿಯಂತಿದ್ದು, ಒಳಗಡೆಯಲ್ಲಿ ಎರಡು ರಬ್ಬರ್ ಬಳೆಗಳ ನಡುವೆ ಸಿಳಿದು ಹಿಡಿಯಲ್ಪಟ್ಟ ಒಂದು ಬಿಂಕದ ಪರೆಯಿಂದ ಕೂಡಿರುತ್ತದೆ (ವಿಜ್ಞಾ. ೨). **ಬಿಂಗು :** ೨. " ಬಿಂಗು (ಗ)—ಭೃಂಗ = ಅಭ್ರಕ " (ಶಬ್ದಕೋ. ೩೦); ಇಂಗು ಕರ್ಪೂರವಕ್ಕು ಬಿಂಗು ಬಜ್ಜರವಕ್ಕು . . . ಕರ್ಮ ತಾ ಹಿಂಗುವ ದಿನಕೆ (ಸರ್ವಜ್ಞ ೯೬೨). [<ಸಂ. ಭೃಂಗ]

**ಬಿಂಗ₂** (ನಾ). ದೋಷ; ಕುಂದು; ಹುಳುಕು.
**ಬಿಂಗ ಬಿಡಿಸು**=ಹುಳುಕನ್ನು ಹೊರಹಾಕು, —ಹೊರಪಡಿಸು : ತಂಗಿಯಾದರೂ ನಮಗೆ ಅನುಕೂಲಳಿದ್ದರೆ ಆ ಗೋವಿಂದನ ಬಿಂಗ ಬಿಡಿಸುತ್ತಿದ್ದೆ (ರಕ್ತಾಕ್ಷಿ. ೨೯೨). [←ಮರಾ. ಬಿಂಗ]

**ಬಿಂಗಗೆಕ್ಕೆ** (ನಾ). ಅಭ್ರಕದಂತೆ ನುಣುಪಾದ ಕಪೋಲ, — ಕೆನ್ನೆ : ಬಿಲ್ಪುರ್ಬಿನ ಬಿಂಗಗೆಕ್ಕೆಯ ಬಿಂಬಾಧರದ . . . ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಮಾಶ್ವ. ೯೮-೨೨). [ಬಿಂಗ₁+ಕೆಕ್ಕೆ]

**ಬಿಂಗರ** 'ಬಂಗಾರ' ನೋ.

**ಬಿಂಗಳಿ** (ನಾ). ದುಂಬಿಯ ಜಾತಿಗೆ ಸೇರಿದ ಒಂದು ಬಗೆಯ ಹುಳು; ಜೀರುಂಡೆ : " ಬಿಂಗಳಿ = ಭೃಂಗಾರೀ=ಜೀರುಂಡೆ " (ಶಬ್ದಕೋ. ೩೦).
[<ಸಂ. ಭೃಂಗಾರೀ]

**ಬಿಂಗಾರ** 'ಬಂಗಾರ' ನೋ.

**ಬಿಂಗಾರಿ₁** (ನಾ). ಜಂಬಗಾತಿ ; ಅಹಂಕಾರಿ ; ಸೊಕ್ಕಿನವಳು : ಹ್ಯಾಗೆ ಹೊಂಟಳು ನೋಡು ಬಿಂಗಾರಿ (ರಂಗಗೀ. ೬೪).
[<ಬಿಂಕ₁. / ತುಳು. ಬಿಂಗಾರಿ, ಬಿಂಗಿರಿ, ಬಿಂಗ್ರಿ=ದುರಭಿಮಾನವುಳ್ಳ]

**ಬಿಂಗಾರಿ₂** 'ಬಂಗಾರ' ನೋ.

**ಬಿಂಗಿ** (ನಾ). ೧. ಶಿವನ ಪ್ರಮಥಗಣಗಳಲ್ಲಿ ಒಬ್ಬ; ಭೃಂಗಿ : ಬಿಂಗಿಯ ಕುಣಿತವನೀಕ್ಷಿಸಿಯಂಗನೆ ನಗೆಯುಂಗುಳ್ವ ತಚ್ಛರೀಕಂಪದ ಕಂಪಿಂಗೆಳಸಿ ಮುಡಿಗೆ ಮುಸುಱಿದ ಭೃಂಗಂಗಳ್ ನೆಗೆದ ಪೀಲಿಗೊಡೆಯೆನೆ ತೋರ್ಕುಂ (ರಸರ. ೨-೯೭) ; ಕಂಗಳ ಮುಚ್ಚಿ ತೆಱೆವುತ ಬಿಂಗಿಯಂತಾಡುವ ಕಂಥೆಯ ಜೋಗಿಣಿಯಂಗದಾಟವೆ ನಮ್ಮ ನೃತ್ಯ (ಭರತ. ೦೯-೩೨). ೨. (ಆಲಂ) ನಿರ್ಗತಿಕವ್ಯಕ್ತಿ ; ದರಿದ್ರ : ಅವನೂ ಬಿಂಗಿಯಂತೆ ಬರಿಗೈಯಲ್ಲಿ ಬಂದು ನಿಂತು ಅವಳ ಸ್ನೇಹಭಿಕ್ಷೆಗೆ ಕೈ ಚಾಚಿರಲಿಲ್ಲ (ರೂಪಸ. ೬೦) ; ನಾನು ಭೂಷಣವಾಗಿರುತೀನಿ ನೀನು ಹೀಗೆ ಕೋರಿ ಸುತ್ತಿಕೊಂಡು ಬಿಂಗಿಯ ಹಾಗೆ ನಿಂತಿರು (ರಾಗಿಣಿ. ೯೦). ೩. ಹುಚ್ಚ ; ಮರುಳ : ಬಂಗಾಳದರಸೀತ ನೋಡೆಂದರೀಕ್ಷಿಸಿ ಮುಂಗಡೆಗೆಯ್ದಿದಳೊಡನೆ ಸಿಂಗಾರ ಮುಱುಕು ವಿಡಾಯ ಹಾಱಿತು ಹೊಸಬಿಂಗಿಯಂತಿರ್ದನಾ ನೃಪತಿ (ಭರತ. ೩೩-೯೪) ; ಏ ಬಿಂಗಿ, ನಾನು ಯಾರು ಅಂತ ಮಾಡಿದ್ದೀ ? ನಿನ್ನ ಅಜ್ಜಿ ಇದ್ದಳಲ್ಲ ? ಅವಳು ನನ್ನ ತಂಗಿ (ಮರಮ. ೯೬೩). [< ಸಂ. ಭೃಂಗಿನ್]

**ಬಿಂಗು** 'ಬಿಂಗ₁' ನೋ.

**ಬಿಂಗುಂಡು** 'ಬಿಣ್ಗುಂಡು' ನೋ.

**ಬಿಂಗುಂಡುಗೊಳ್** (ಕ್ರಿ). ಭಾರವಾದ ಗುಂಡಿಗೆ ಸಿಕ್ಕಿಕೊಳ್ಳು : ಬೆಂ[ಬಿಂ]ಗುಂಡುಗೊಂಡ ಗಂಡಗತ್ತರಿಯ ಸಂಸರ್ಗದರ್ಗಳವಮನಮರೆ ಸಾರ್ಚಿಯುಂ (ಕೃಷ್ಣಕೃ. ೭-೬೯ ಪ). [ಬಿಂಗುಂಡು(<ಬಿಣ್ಗುಂಡು)+ಕೊಳ್₁]

**ಬಿಂಗುಸುಬು** (ನಾ). ಅಭ್ರಕದ ಪುಡಿಯಿಂದ ಕೂಡಿದ ಮರಳು,— ಉಸುಕು : ನನಸು ಕನಸುಗಳ ದರ್ಶನವನೇಂ ತರಲಾರೆ, ಬಿಂಗುಸುಬು ಬಂಗಾರದಿರವನೊರೆವಂತೆ ? (ಗೀಪಂ. ೨೭-೨೦).
[ ಬಿಂಗು (<ಬಿಂಗ₁) + ಉಸುಬು (< ಉಸುಕು) ]

**ಬಿಂಗೆ** (ನಾ). ( ? ) : ಕಂಪಿಸಿದನಡಿಗಡಿಗೆ ತಲ್ಲಣಿಸಿ ಕುರುನೃಪತಿಯು ಬಿಂಗೆಯಾಗಿರುತಿರಲ್ಗರ್ವಗಿರಿ ಜರಿದು ರಕ್ತಂಗಳನ್ನೊಸರುತಿರೆ ದ್ರೋಣ ಕಾರವ ರಾಯನಿಂಗಿತವನರಿದು . . . ಇಲ್ಲಿ ನೀವಿದ್ದೇನು ಫಲವೆನಲು (ತುರಂಗ. ೩೦-೦೪). [?]

**ಬಿಂಜ** (ನಾ). ೧. ಮಹೇಂದ್ರ, ಮಲಯ, ಸಹ್ಯ. ಶುಕ್ತಿಮಾನ್, ಋಕ್ಷವಾನ್, ವಿಂಧ್ಯ ಮತ್ತು ಪಾರಿಯಾತ್ರ ಎಂಬ ಏಳು ಕುಲಪರ್ವತಗಳಲ್ಲಿ ಒಂದು ; ಉತ್ತರ ಹಿಂದೂಸ್ಥಾನ ಮತ್ತು ದಖನ್ನಿನ ಮಧ್ಯದಲ್ಲಿರುವ ನೀಳವಾದ ಪರ್ವತಗಳ ಸಾಲು ; ವಿಂಧ್ಯ : "ಬಿಂಜಮೆನೆ ವಿಂಧ್ಯಂ" (ಕಬ್ಬಿಗಂ. ೬೯) ; ಬಿಂಜವಡವಿಯೊಳಗೆಲ್ಲಂ ನಂಜಿನ

ಮಱಿಗೊಂಡು ಬಿಟ್ಟ ತೆಱನಾಯ್ತು (ಕಾದಂಪೂ. ೧೬೨) ; ಮುಂದಿರ್ಪುದು ಬಿಂಜವಡವಿ ಪಸುಳೆಮಕ್ಕಳಿರ್ಬರ್ ಸಹಿತಂ . . . ಪರ್ವತಕ್ಕೆ ಪೋಪ ಸಂಬಂಧಮೇನೆನೆ (ಕೃಷ್ಣ್ಯಸ್ರ. ೧೨-೩೨ ವ). ೨. ಕಾಡು; ಅಡವಿ : ಅರಣ್ಯ: "ಪಟುವೆಂದುಂ ಬಿಂಜವೆಂದುಂ ಅಡವಿ" (ಕಶಸಾ. ೫೦-೮೦) : ಅಲ್ಲಿ ನೆರೆದ ಪೆರ್ವಡೆ ಪಯಣಂಬೋಪಾಗಳೆಯಿಕ್ಕಿವ ಬಿಂಜವೆ ನಡೆವಂತೆ ಧನುರ್ಬಲಂ ನಡೆಯೆ (ಬಿಂಹರಿ. ೧೧-೬೨ ವ) ; ನೇಸಱುವೆಳಗಿಗೆ ವೆಜ್ಜಗೊಡದೆ ಬೆಳೆದಿರಲಾ ಬಿಂಜಂ ಭೀಕರತರಮಾಯ್ತು (ಜಯಕಾ. ೧೫-೨೪) ; ನಂಜೆಡಿದ ಭರಣಿಯಂತೋ ಮಹಾವಾಯೆಗಳ ಬಿಂಜದಂತೋಯೆಂಬವೂಹೆಗಳವಡ ದಂತೆ ಕಂಜೋದ್ಭವಾಂಡಮೊಪ್ಪಿದರ್ದೇಂ ಸಾಂದ್ರಾಂಧಕಾರದೊಳ್ (ಜೆವಪು. ೪೬-೧೯). ೩. (ಆಲಂ) ಸಮೂಹ; ರಾಶಿ ; ಒಟ್ಟಿಲು : ನೆಲಂ ಬೆಸಲೆಯಾದಂತೆ ಬರ್ಪ ಬೇಡವಡೆ ರಸೆಯಿನೊಗೆವಸುರರ ಪಡೆಯಂತೆಯುಂ . . . ನಡೆವ ನಂಜಿನ ಬಿಂಜದಂತೆಯುಂ . . . ಅಗುರ್ಪುಮದ್ಭುತಮು ಮಾದುದು (ಶಂರಃಪೂ. ೪-೫೪ ವ).

**ಬಿಂಜದೋಜ** = ಅಗಸ್ತ್ಯ ; P ವಿಂಧ್ಯಪರ್ವತವು ಮೇರುವಿನ ಔನ್ನತ್ಯದೊಂದಿಗೆ ಸ್ಪರ್ಧಿಸಿ ಮೇಲೇರಿದಂತೆಲ್ಲಾ ಭೂಮಿಯ ಸಮ ತೂಕವು ತಪ್ಪಿತು. ಆಗ ದೇವತೆಗಳ ಪ್ರಾರ್ಥನೆಯಂತೆ ಅಗಸ್ತ್ಯನು ದಕ್ಷಿಣಕ್ಕೆ ಬಂದಾಗ ವಿಂಧ್ಯವು ಗೌರವದಿಂದ ಅವನಿಗೆ ಮಣಿಯಿತು ಮತ್ತು ಅಗಸ್ತ್ಯನ ಮಾತಿನಂತೆ ಹಾಗೆಯೇ ಬೆಳೆಯದೆ ಉಳಿಯಿತು. ಹೀಗಾಗಿ ಅಗಸ್ತ್ಯನು ವಿಂಧ್ಯಪರ್ವತದ ಗುರುವಾದನು ಎಂಬ ಪೌರಾಣಿಕ ಕಥೆ ಇದೆ : ರಾಜಪರಮೇಶ್ವರಂಗೆ ಬೆಳ್ನಗೆಯೊಳ್ ಬಿಂಜದೋಜ ನೋಜೆಯಿಂ . . . ಪಡಿನುಡಿದಂ (ರಾಮಾಶ್ವ. ೦೪-೨). [<ಸಂ. ವಿಂಧ್ಯ]

**ಬಿಂಜಾಡಿ** (ನಾ). ಒಂದು ಬಗೆಯ ತೆರಿಗೆ ( ? ) : ಕುಡುಕೂರ ಗ್ರಾಮದ ಒಳಗೆ ಅಂಣಹ[ತ್ವಾ]ರನು ಸ(ಂ)ಮ್ಮ ಅರಮನೆಗೆ ತೆಱುವ ಬಿಂಜಾಡಿಯ ಅಧಿವಾಸದ ಒಳಗೆ ತಂನ ಹದಿಮೊದಲು ಅಪ್ಪಣೆಯ ಬಗೆಯಿಂದ ಕಾಟಿ ಗ ೫೫ (ಶಾಇಇ. IX—ii. ೪೬೦-೦೪; 1467). [ ? ]

**ಬಿಂಡಿಗ** (ನಾ). ಒಂದು ಬಗೆಯ ಸಸ್ಯ : "ಅರುಣಮೂಲಮೆನೆ ಬಿಂಡಿಗ ಪಕ್ಕ" (ಮಂಗರಾ. ೩೫-೦೪) ; ವರಮಿಂದ್ರವಾರುಣೆಯ ಬೇರ್ ಪರತರಮೂ ಬಿಂಡ(ದಿ)ಗಂ . . . ಪರಿಹರಿಕುಂ ವಿಷದುರುವ ಪುಣ್ಣಳಂ ತತ್‌ಕ್ಷಣದಿಂ (ಖಮದ. ೦೬-೧೦೩). [<ಸಂ. ಭಿಂಡಕ]

**ಬಿಂಡಿವಾಲ** 'ಬಿಂಡಿವಾಳ' ನೋ.

**ಬಿಂಡಿವಾಳ**, ಪಿಂಡಿವಳ, ಪಿಂಡಿವಾಳ, ಬಿಂಡಿವಾಲ (ನಾ). ಒಂದು ಬಗೆಯ ಆಯುಧ; ಈಟಿ : ಮಧ್ಯಮನಿಷಾದಿಗಳ್ ಮಧ್ಯಮ ನಿಷಾದಿಗಳೊಳಸಿ ಮುಸಲ ಕಣಾಯ ಕಂಪನ ಮುಸುಂಡಿ ಬಿಂಡಿವಾಳ . . . ಪಾಶಾಂಕುಶಾದಿ ಶಸ್ತ್ರಾಸ್ತ್ರಂಗಳೊಳೆಚ್ಚು ಮಿಟ್ಟು ಮಿಱಿದುಂ ಪೊಯ್ದು ಮೂತ್ರಿಭಯಂಕರಾಕಾರಮಾಗಿ ಕಾದುವಾಗಳ್ (ಶಂರಾಪೂ. ೦೩-೬೬ ವ) ; ಸಬಳದಲಿ ಗದೆಯಲಿ ಬಿಂಡಿವಾಳ[ಶಾಕಾಂ. ಲ]ದಲಿ ಪರಿಪರಿಯ ಚಿತ್ರದ ಚಮತ್ಕೃತಿ ಕರವ ತೋಱಿಸಿದನು (ಕುವ್ಯಾಅ. ೬-೨೯). **ಪಿಂಡಿವಳ** : ಚಕ್ರ ಪರಶು ಪಿಂಡಿವಳಂ ಪೇರ್ಬಾಳು . . . ಫಳಕಂಬಿಡಿದಮರರ್ ನೆರೆದುದು (ವೀರೇಶ. ೩೫-೩೦). **ಪಿಂಡಿವಾಳ** : "ಯಷ್ಟಿಃ, ಪಟ್ಟಿಶಕಃ . . . ಪಿಂಡಿವಾಳಃ, ಗದಾದಂಡಃ, ಚಕ್ರಂ — ಇವು ಮೊದಲಾಗುಳ್ಳುವು ಕೆಯ್ದುಗಳ ಭೇದಂಗಳ್" (ಹಲಾಯು. ೬೮-೩೨೨) ; ಪಿಡಿ ಬಡಿ ಕಟ್ಟು ನೂಂಕು . . . ಗಾಣದೊಳ್ ಪಿಱಿ ಪಿಸುಳ್ದಿರೆ [ಪೋ]ಟಿಸು ಪಿಂಡಿವಾಳ ದೊಳ್ (ಸುಕುಮಾ. ೬-೫೨) ; ಪಿಡುಗ ತೋಮರ ಪರಶುಗಳ ಕಕ್ಕಡೆಯ ಕುಂತದ ಪಿಂಡಿವಾಳದ ಕಡುಗಲಿಗಳುಱೆ ಮುಗ್ಗಿದರು ತಗ್ಗಿದುದು ಯಮಲೋಕ (ಕುವ್ಯಾಭೀ. ೪-೩೮). **ಬಿಂಡಿವಾಲ** : ಶೂಲ ಧಮರುಗ ಬಿಂಡಿವಾಲಗಳಿಂದೆ (ಕೊಲ್ಲಿಪಾ. ೯೪-೬). [ <ಸಂ. ಭಿಂದಿಪಾಲ]

**ಬಿಂದ** (ನಾ). ೧. ಗುಂಪು ; ಸಮೂಹ : "ಬಂಬಲ್, ತಱುಗಲ್, ಮಂಗಡಂ, ಗಡಣಂ, ಮೊಗ್ಗರಂ, ಬಿಂದಂ . . . ಗೊಂದಣ (ಉಂದಲ್) —ಈ ೪೦ ಸಮೂಹಂ" (ಕಶಸಾ. ೫೬-೨೨೨) ; ಅನಂಗನ ಬೇಂಟೆಯ ಬಿಂದದಂದದಿಂ ಬರೆ ಪೂಸಸುಗ್ಗಿ ಕೆಯ್ಗಟಿಯೆ ಕಣ್ಗೆಸೆದಿರ್ದುವು ನಂದನಾಳಿಗಳ್ (ಶಾಂತಿಪು. ೬-೧೨೪) ; ಬಿಂದವ ಹಱಿದು ನಿಂದು ಹಾಡಿರೋ ಚಣಿತಿಯರಿರಾ (ಸರ್ವಾ. ೪೮-೨೫೫) ; ಜೇನೆಯ್ಗಳಂ ತರ್ಪುದಕ್ಕೆ ಪೊಗೆಗೊಂಡು ಪೊಱಿಪಡುವ ಬೇಡರ ಬಿಂದಮೊಪ್ಪಿತಾ ಪೆಕ್ಕಣದೊಳು (ಸಮ್ಯಕಾ. ೧೦-೨೬). ೨. ಒಟ್ಟಿಲು : ರಾಶಿ ; ಮೊತ್ತ : ದೆಸೆದೆಸೆಯ ಕಟ್ಟಲೆಯ ಬಿಂದಮೊಂದುಗೂಡಿ ಗುಂಡುಗೊಂಡು . . . ಬಾಂದಳಮನೇಱಿ ಪೋಪುವೆನೆ (ರಾಮಾಶ್ವ. ೬೨-೦೨).

[ < ಸಂ. ಬೃಂದ. / ತೆಲು. ಬಿಂದ ]

**ಬಿಂದಂಗೊಳ್** (ಕ್ರಿ). ಒಟ್ಟಾಗು ; ಕೂಡು ; ಸೇರು : ಬಿಂದಂಗೊಂಡಿಹ ಕಾಲ್ವೆ ಮಾರಿಕಣೆವೇ ಜಾತಂಗಳೆಲ್ಲೆಲ್ಲಿಯುಂ ಸಂದೊಳ್ವಚ್ಚದ ಪಾಂಗನಾಂತ್ರು ಪರಿಗುಂ (ವ್ಯಸೂಮ. ೧-೪೮). [ ಬಿಂದ + ಕೊಳ್$_1$ ]

**ಬಿಂದಣಿಕೆ** ' ಬಂದಣಿಕೆ ' ನೋ.

**ಬಿಂದರೆ**, ಬಿಂದಾರಿ (ನಾ). ಒಂದು ಬಗೆಯ ಮರ : ಬಿಂದರೆ ಬೀಜವನ್ನು ನೀರಲ್ಲರೆದು ತೆಗೆದುಕೊಳ್ಳಲು ಮೂಲವ್ಯಾಧಿಯ ರಕ್ತ ನಿಂತು ಗುಣಮಕ್ಕುಂ (ಸಕವೈ. ೨೮೮). **ಬಿಂದಾರಿ** : ದೊಡ್ಡತೊಪ್ಪೆಮರ, ದೊಡ್ಡಿಮರ, ಬೀದಾರಿಮರ, ದಲ್ಲಿಮರ, ಬಟ್ಟಗ (ವ್ಯಶಿ. ೪೫-೮೮೫). [?]

**ಬಿಂದಲಿ**, ಬಿಂದಿಲು (ನಾ). ಚಿಕ್ಕ ಮಕ್ಕಳ ಮುಂಗೈಗೆ ತೊಡಿಸುವ ಒಂದು ಬಗೆಯ ಆಭರಣ : ಗೋದಕ್ಕ ಕೂಸಿಗೆ ಬಂಗಾರದ ಬಿಂದಲಿ, ಜರದ ಕುಂಚಿಗೆ ಎಲ್ಲಾ ತಂದಿದ್ದರು (ವೃಸಿ. ೨೦೦) ; ದತ್ತೂನ ಬಿಂದಲಿ ಮುರಿಸಿ ಟಿಳಕರಿಗೆ ಎರಡು ತೊಲೆಯ ಉಂಗುರ ಮಾಡಿಸಿದ್ದ (ಸ್ವಾತಿ. ೧೬೪). **ಬಿಂದಿಲು** : ತರುಣಂಗೆ ಬಿಂದಿಲರಳೆಲೆ ಗೆಜ್ಜೆ . . . ಪೊಕ್ಕುಳ ಘಂಟೆ ಮೊದಲಾದ ಮಣಿದೊಡಗಳ ಹರುಷದಿನಲಂಕರಿಸಿ (ರಾಘಶ. ೨-೪೬); ಬಿಂದಿಲರಳೆಲೆ ಗೆಜ್ಜೆಯನ್ನು ... ಮಣಿಮಯಮುದ್ರೆಗಳ ಬೆರಳ್ಗಳಿಗಪರ್ಚಿ (ನವಮೋ. ೦೨-೦೮). [← ಮರಾ. ಬಿಂದಲೀ, ಬಿಂದಲೇ, ಬಿಂದುಲೇ]

**ಬಿಂದಲು** (ನಾ). ಒಂದು ಬಗೆಯ ಹೂವು : ದೇವರಿಗಾಗಿ ಒಂದು ಬಿಂದಲನ್ನು ಕೊಯ್ಯಬಹುದು (ಬಾಳ್ವಿ. ೮೨). 'ಬಿಂದಿಗೆ' ಪರಾ. [?]

**ಬಿಂದಾರಿ** 'ಬಿಂದರೆ' ನೋ.

**ಬಿಂದಿ** (ನಾ). ಒಂದು ಬಗೆಯ ಆಭರಣ : ಮಕ್ಕಳ ಬಯಸಿ . . . ಹರಿಗೆ ಪಟ್ಟದ ಹರಕೆ ತೊಟ್ಟಿಲ ಹರಕೆ ಬಿಂದಿಯ ಹರಕೆವಿಡಿದಿಹರರಸಿ ಕೌಸಲೆದೇವಿ ಕೈಕೆ ಸುಮಿತ್ರೆಯರು (ಕೌಶರಾ. ೦-೩೩); ಕೆಂದ ಪೀತಾಂಬರವ ಸುಧೆ ಉಟ್ಟಿರುವಳು ಅಂದಮುಡಿಗೆ ಮುತ್ತಿನ ಸೊಂಡಿಲ ಬೈತಲ ಬಿಂದಿ ಬಿಜವರ ಬಲು ಚೆಂದ (ಸಿದ್ಧಕೃ. ೦೯-೮೦).

[ ?. / ತೆಲು. ಬಿಂದೀ = ಮುಂದಲೆಯ ಆಭರಣ. / ಹಿಂ. ಮರಾ. ಬಿಂದೀ = ಕೆನ್ನೆಸರಪಳಿ]

**ಬಿಂದಿಗ** (ನಾ). ಗುಂಪಿನಲ್ಲಿರುವ ಕ್ಷುದ್ರದೇವತೆ (?) : ಕೆಮ್ಮಗಿದೇಕೆ ನಾಡ ಪಲಪಂದದ ನಂದಿದ ಬಿಂದಿಗರ್ಕಳಂ ನೀಮ್ಮರುಳಾಗಿ ದೇವರಿವರೆನ್ದು ವರಂ ಮತಿಗೆಟ್ಟು ನಿನ್ನನೇಕಮ್ಮ ತೊಳಲ್ದಿದಪ್ಪೆ ಭವಕಾನನದೊಳ್ ಗೊಮ್ಮಟದೇವನಂ ನೆನೆಯ ನೀಗುವೆ ಜಾತಿಜರಾದಿದುಃಖಮಂ (ಎಕ. II. ೨೩೪-೪೦; ಸು. 1180). 'ವೃಂದಾರಕ' ಹೋ. [ಬಿಂದ + —ಇಗ]

**ಬಿಂದಿಗ** (ನಾ). ೧. ಬಾವಿಯಿಂದ ನೀರನ್ನು ಸೇದಲು ಮತ್ತು ಸೊಂಟದಲ್ಲಿಟ್ಟುಕೊಂಡು ಹೊರಲು ಅನುಕೂಲವಾದ ಸಣ್ಣ ಕಂಠವುಳ್ಳ, ಗುಂಡನೆಯ ಲೋಹದ ಪಾತ್ರೆ ; ಕೊಡಪಾನ ; ಕೊಡ : ಬೆಳಕಿನಿಂದಗ್ಘವಣೆಯುಂ ಕಂಗೊಳಿಸಿ ತುಂಬಿದ ಹೊನ್ನ ಬಿಂದಿಗೆಗಳನಿರಿಸಿ

ಲಲಿತಾಂಗಿ . . . ಧೂಪಾರತಿಯನಿೞಿಯೆ (ಬಸವು. ೧೨-೩೪); ಪಂದಲೆ ಯೊಂದು ಬಾಸಿಗಂ ನೆತ್ತರ ತಳ್ತ ಬಲ್ದಲೆಯ ಬಂದಿಗೆ ಪಾವುಗೆ ಪಂಚಮಸ್ವನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೩೩೩); ತಾರಕ್ಕ ಬಂದಿಗೆ ನಾ ನೀರಿಗ್ಹೋಗುವೆ ತಾರೇ ಬಂದಿಗೆಯ ಬಂದಿಗೆ ಒಡೆದರೆ ಒಂದೇ ಕಾಸು ತಾರೇ ಬಂದಿಗೆಯ (ಪುರಂದ. ೧-೯೯ ಪಲ್ಲವಿ). ೨. ಗುಂಡನೆಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ಮತ್ತು ಅದರ ಹೂವು: ಸುಗಂಧರಾಜ ಕನಕಾಂಬರಿ ಬಂದಿಗೆ ನಾಗಲಿಂಗಪುಷ್ಪ ನೀಲಾಂಬರಿ . . . ಸೂರ್ಯಕಾಂತಿ ಪುಷ್ಪಗಳು (ಸಿದ್ಧಪು. ೨೬-೯೦).

[ದೇ. ‖ ಮಲ. ವಿನ್ದ; ತುಳು. ಬಂದಿ = ಸಣ್ಣ ಮಣ್ಣಿನ ಮಡಕೆ; ತೆಲು. ಬಂದಿಯ, ಬಿಂದೆ. / ಮರಾ. ಬಿಂದಗಾ]

**ಬಂದಿಲು** 'ಬಂದಲಿ' ನೋ.

**ಬಿಂದಿಸು** (ಕ್ರಿ). ಸೊನ್ನೆಯಿಡು; ಬಿಂದುವಿನ ಗುರುತುಮಾಡು: ಬರೆದು ಕುಂಡಲಿಚಕ್ರಮಂ . . . ನಿಜೇಷ್ಟಗ್ರಹದೆಡೆಗೆ ಪೇಟ್ದಿಡೆಗಳಂ ಬಿಂದಿಸಿ ಪೇಟಡೆಡೆ ತರದಿ ರೇಖೆಯನಂತವು ಸರಿಯಾಗಿ ಸರಿಗಳೆವುದು (ಜಾತಕ. ೧೦-೨). [ಬಿಂದು + – ಇಸು₃]

**ಬಿಂದು** (ನಾ). ೧. (ಯಾವುದಾದರೂ ದ್ರವದ) ಹನಿ; ತೊಟ್ಟು: "ಬಿಂದುವೆನೆ ಸುರಿವ ಹನಿಯಕ್ಕು" (ಮಂಗರಾ. ೦೨೯-೦೩); ಅೞಿದಡೆ ತಾವರೆಯೆಲೆಯ ಬಿಂದುವಿನಂತೆ ಅಂಗಲೇಪವಿಲ್ಲದೆ ಗೊಹೇಶ್ವರಲಿಂಗ ವನೞಿಯಬೇಕು (ಆವಚಂ. ೨೬೩-೦೨೦೦); ಹಿಂಡುಹಿಂಡಾಗಿ ನೊಣಗಳು ಬಂದು . . . ಪಾಯಸದ ಬಿಂದುಗಳನ್ನು ನಿರಾತಂಕವಾಗಿ ಹೀರಿದ ದೃಶ್ಯವನ್ನು ವಿಸ್ಮಿತನೇತ್ರಗಳಿಂದ ನಾನು ನೋಡಿದ್ದು ಇಂದಿಗೂ ನೆನಪಿದೆ (ನಂಟರು. ೪೩). ೨. ಚುಕ್ಕೆ; ಬೊಟ್ಟು: ಹಣೆಯಲ್ಲಿ ಚಂದ್ರಕುಂಕುಮಬಿಂದುವನ್ನಿಟ್ಟು (ಜಕ್ಕಾಂಗ. ೦೯-೫೦೪); ಬಿಂದು ವಿಸರಗಳನುವು,ವಂಕು ಸರಲಗಳನುವು ಚೆಂದ ಕಣ್ಣಿಗೆ ವರ್ಣವಿವಿಧಂಗಳನುವು (ಮಂಕುತಿ. ೪೪೬). ೩. ಗುರುತು; ಚಿಹ್ನೆ. ೪. ಆನೆಯ ಮೈಮೇಲಿನ ಬಿಳಿಯ ಮಚ್ಚೆ, – ಚಿಬ್ಬು: "ಬಿಂದು, ಪದ್ಮಕಂ – ಈ ೨ ಚಿಬ್ಬು" (ಹಲಾಯು. ೩೭-೭೭); ಸೂಕ್ಷ್ಮಬಿಂದುರುಚಿ[ರ]ನುಂ ಕಾಳಿಂಗವನಸಂಭೂತನುಮನೇಕಲಕ್ಷಣೋಪೇತನುಮಪ್ಪ ತ್ರಿಭುವನಾ ಭರಣಮೆಂಬಾನೆಗಂ . . . ತ್ರಿಭುವನತಿಲಕಮೆಂಬ ಕುದುರೆಗಂ ಪಟ್ಟಂಗಟ್ಟಿ (ಕಂಕಣಾ. ೦೯-೨೦ ವ). ೫. ಶುಕ್ಲ; ವೀರ್ಯ; ರೇತಸ್ಸು: ಬಾಯೆ ಭಗವಾಗಿ ಕೈಯೆ ಇಂದ್ರಿಯವಾಗಿ ಹಾಕುವ ತುತ್ತುಗಳೆಲ್ಲಾ ಬಿಂದು ಕಾಣಿರೋ (ಆವಚಂ., ೦೦೩-೯೬೯); ಬಿಂದುವೂ ಮೂತ್ರವೂ ಒಂದೆ ನಾಳದಿ ಬಕ್ಕು ಒಂದ ಬಟ್ಟೊಂದ ತಡೆದಿಹರೆ ಪರಬೊಮ್ಮವಮ ತಾನಕ್ಕು (ಸರ್ವಜ್ಞ. ೫೩೬). ೬. ಹುಟ್ಟಿದ ಮಕ್ಕಳನ್ನು ಕಳೆದುಕೊಂಡಿರುವವಳು; ಮಕ್ಕಳಿಲ್ಲದಿರುವವಳು: "ನಶ್ಯತ್ಪ್ರಸೂತಿಃ, ಬಿಂದುಃ – ಈ ೨ ಮಕ್ಕಳ್ ಬಾೞದವಳ್" (ಹಲಾಯು. ೬೦-೩೩೪); "ಮಕ್ಕಳುೞಿ ಸಾವ ಸತಿ ಬಿಂದುವಕ್ಕು" (ಮಂಗರಾ. ೪೯-೩). ೭. ಹುಬ್ಬುಗಳ ನಡುವಿನ ಜಾಗ, ಎಡೆ. ೮. [ವ್ಯಾಕ] (ಯೋಗವಾಹಗಳಲ್ಲಿ ಒಂದಾದ) ಅನುಸ್ವಾರದ ಚಿಹ್ನೆಯಿಂದ ಗುರುತಿಸುವ ವರ್ಣ; ಅನುಸ್ವಾರ; ಸೊನ್ನೆ: ಬಿಂದು ವಿಸರ್ಗಂ ವ್ಯಂಜನವೊಂದಿದ ದದ್ದಕ್ಕಳಂ ಪದಾಂತ್ಯಂ ದೀರ್ಘಂ ಬಂದೊಡೞಿ ವನಜಮುಖಿ ಗುರುವೆಂದು (ಛಂದೋಂಬು. ೧-೩೫); ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಟಿ ಚೆಲ್ವು . . . ವಿಸರ್ಗದೊಳ್ಪೊಂದಿರಲಕ್ಕರಕ್ಕೆ ಬರೆವಂ . . . ಮಾದಿರಾಜವಿಬುಧಂ (ಪುಷ್ಪಕೃ. ೦೯-೫೯); ಬಿಂದುವನುಸ್ವಾರಂ ತಾನೆಂದಕ್ಕುಂ ಸೊನ್ನೆ ಮುತ್ತುವೋಲ್ ವೃತ್ತತೆಯಿಂ ಸಂದಿರ್ಪುದು (ಶಮದ. ೧೦). ೯. [ಕಾವ್ಯಮಿ] ನಾಟಕದ ಕಥಾವಿನ್ಯಾಸದಲ್ಲಿ ಗೌಣವಾಗಿದ್ದ ಘಟನೆಯೊಂದು ಒಮ್ಮೆಲೇ ಪ್ರಾಮುಖ್ಯವನ್ನು ಪಡೆಯುವುದು: ಬೀಜಂ ಬಿಂದು ಪತಾಕೆ ಪ್ರಕರಿ ಕಾರ್ಯಮೆನೆ ಪಂಚವಿಧಂ ನಿಪುಣಕವಿರಚನೆಯೊಳ್ ಸಪ್ರ ಪಂಚದಿಂದೊಂದಿ ತೋಱುಗು ಸಂಧ್ಯಂಗಂ (ಕಾವ್ಯಾವ. ೯೩೬). ೧೦. [ಕಾಮಶಾ] ದಂತಕ್ಷತಗಳಲ್ಲಿ ಒಂದು; ನಲ್ಲಳ ತುಟಿಗಳ ಮೇಲೆ ಒತ್ತಿದ ನಲ್ಲನ ಹಲ್ಲಿನ ಗುರುತು: 'ಬಿಂದುಮಾಲೆ' ಪರಾ. ೧೧. [ತತ್ತ್ವಶಾ] ಪ್ರಪಂಚದ ಸೃಷ್ಟಿಗೆ ಕಾರಣವಾದ ನಾದ, ಬಿಂದು ಮತ್ತು ಕಳೆಗಳೆಂಬ ಮೂರು ಅವಸ್ಥೆಗಳಲ್ಲಿ ಎರಡನೆಯದು: ಬಿಂದು ವಿನೊಳಗೆ ನಾದ ಹೊಂದಿರ್ದ ಭೇದವನು . . . ಲೋಕದ ಸಂದೇಹಿಗಳೆತ್ತ ಬಲ್ಲರೈ (ದೇವಾವ. ೬೫-೦೩೨); ಈ ಷಟ್ಸ್ಥಲಂ ತಮ್ಮೊಳಿರಡೆರಡು ಕೂಡುತ ಮೂಱು ತೆಱನಾಗಿ ಕಳೆ ನಾದ ವರಬಿಂದುವೆಂದು ಭೇದಿಸಿದಾದಿಪೇಶಿಕನ ಚರಣಾಂಬುಜಕ್ಕೆ ಶರಣು (ಲಕಿಚಂ. ೫೦-೦೯); ತನು ನಾದಂ ಗುರು ಲಿಂಗಂ ಮನಮುಂ ವರ ಬಿಂದು (ಹರಿಶ್ಚರ. ೫-೩೪). ೧೨. [ವೀಶೈ] ಮೂರು ತತ್ತ್ವಗಳಲ್ಲಿ ಒಂದಾದ ಪಾಶದ ಐದು ವಿಭಾಗಗಳಲ್ಲಿ ಒಂದು: ಶೈವ ಸಿದ್ಧಾಂತದಲ್ಲಿ ಪಾಶವು ಐದು ವಿಧವಾಗಿದೆಯೆಂಬ ವಿವರಣೆ ಇದೆ. ಮಲ, ರೋಧಶಕ್ತಿ, ಕರ್ಮ, ಮಾಯಾ, ಬಿಂದು ಅಥವಾ ಮಹಾಮಾಯ ಎಂಬಿವೇ ಪಾಶದ ವಿಭಾಗಗಳು (ಶಾರದ. ೨೦೦). [ಸಂ.]

**ಬಿಂದುಕ** (ನಾ). [ಚಿತ್ರಶಾ] ಚಿತ್ರಗಳಿಗೆ ಬಣ್ಣ ಹಾಕುವ ಅನಿಲಕ, ಪತ್ರಕ, ಬಿಂದುಕ, ಧೂಮ್ರಾವರ್ತಕ, ಉದ್ವರ್ತನ ಮತ್ತು ಚಿತ್ರ ಪ್ರವರ್ತನಗಳೆಂಬ ಆರು ಬಗೆಯ ಕ್ರಮಗಳಲ್ಲಿ ಒಂದು: ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಕಮುದ್ವರ್ತನಂ ಚಿತ್ರಪ್ರವರ್ತನ ಮೆಂಬಾಱುಂ ತೆಱದಣ್ಕೆಯುಮಂ . . . ಪರಿಭಾವಿಸಿ ನೋಡಿ (ವುಲ್ಲಕ. ೩-೪೨). [ಸಂ.]

**ಬಿಂದುಗಳೆ** (ಕ್ರಿ). ದ್ರವಿಸುವಂತೆ ಮಾಡು; ಕರಗುವಂತೆ ಮಾಡು (?): ತೀವಿದಮೃತವಂ ತುಳುಂಕಿದಂ ಚಂದ್ರಿಕೆಯಂ ಬಿಂದುಗಳೆದಂ . . . ಎನುತ ಭೋಂಕನೆ ಸಂಕಿಲಿಯನಕ್ಕಲವರ ಮನೆಗೊಯ್ದರ್ (ನೇಮಿರ. ೦೨-೬೨). [ ಬಿಂದು + ಕಳೆ₁ ]

**ಬಿಂದುಚಕ್ರ** (ನಾ). [ವೀಶೈ] ಚಕ್ರವು ರಥವನ್ನು ನಡೆಸುವಂತೆ ಪ್ರಪಂಚದ ವ್ಯವಹಾರವು ನಡೆಯುವುದಕ್ಕೆ ಕಾರಣವಾದ ಶಿವಶಕ್ತಿ: ಕಾಲಚಕ್ರ ಕರ್ಮಚಕ್ರ ನಾದಚಕ್ರ ಬಿಂದುಚಕ್ರದೊಳಗೆ ಹುಟ್ಟದ ಯೋನಿ ಯಿಲ್ಲ ಮುಟ್ಟದ ನೆಲನಿಲ್ಲ (ಚನ್ನವ. ೪. ೫೩೪-೦೦೫೨). [ಸಂ.]

**ಬಿಂದುಚ್ಯುತಕ** (ನಾ). [ಕಾವ್ಯಮೀ] ಇರುವ ಬಿಂದುವನ್ನು ಬಿಡುವುದೂ ಇರಬೇಕಾದ ಬಿಂದುವನ್ನು ಸೇರಿಸುವುದೂ ಸಾಧ್ಯವಾಗುವ ಒಂದು ಪ್ರಹೇಳಿಕೆಯ ಪ್ರಕಾರ: ಸೊಗಯಿಸುಗುಮಿಂದ್ರನೀಲಮಣಿಸನ್ನಿಭದೊಳ್ ಮಿಗೆ ಜಳನಿಧಿಯೊಳಗುದಿತದಿಂದಿರದವೊಲ್ನೆಗದತಿಧವಳಮೂರ್ತಿಗ್ ಘನ ವಳೆಯಸದಗ್ಧ ಗಗನದೊಳುಚ್ಚಿಮುಚ್ಚಿದು ವಿಶಾಳಿತಾಶಾವಳೆಯಂ (ಬಿಂದು ಚ್ಯುತಕಂ) (ಕವಿರಾ. ೨-೧೯೭). [ ಸಂ. ]

**ಬಿಂದುಚ್ಯುತಿ** (ನಾ). = ಬಿಂದುಚ್ಯುತಕ: ಪೇಟ್ಟಿಂ . . . ಆ ವರ್ಣ ವ್ಯತ್ಯಯಮಂ ಬಿಂದುಚ್ಯುತಿಯಂ ಭಾವಿಸಿದೊರ್ನುಡಿಯಂ (ಕವಿರಾ. ೨-೦೯೨). [ ಸಂ. ]

**ಬಿಂದುಜ** (ನಾ). (ನೀರಿನ) ಹನಿಯಿಂದ ಹುಟ್ಟಿದುದು: ಅಂಡಜ ಪಿಂಡಜ ಬಿಂದುಜ (ಜರಾಯುಜ) ಉದಯವಾಗದಂದು . . . ಪರಾಪರ ವಸ್ತು ನೀನೊಬ್ಬನೇ ಇದ್ದೆಯಯ್ಯಾ (ಶಿಲ್ಮೇಷ. ೭-೨೦). [ ಸಂ. ]

**ಬಿಂದುಪಾಶ** (ನಾ) – ಬಿಂದು ೧೨: ಆ ಷಟ್ಪದಾರ್ಥವು ಪಶುಬಂಧಲಕ್ಷಣ ಮುಳ್ಳುದಾಗಿ ಪಶುಕೋಟಿಯಂ ಬಿಡದೆ ವ್ಯಾಪಿಸಿ ಶಿವಾಧೀನಮಾಗಿ ಮಲಪಾಶ ಮಾಯಾಪಾಶ ಕರ್ಮಪಾಶ ಬಿಂದುಪಾಶ ತಿರೋಧಾನಪಾಶ ವೆಂದು ಪಂಚಪ್ರಕಾರಮಾಗಿರ್ಪುದು (ಶಿವೇಶ. ೧೬೩) [ ಸಂ. ]

**ಬಿಂದುಮಂತ** (ನಾ). ೧. ಹನಿಗಳಿಂದ ಕೂಡಿದುದು. ೨. [ವ್ಯಾಕ] ಅನುಸ್ವಾರಸಹಿತವಾದುದು : ಆ ಸಮುಚಿತಬಿಂದುಸ್ಥಿತಿ ಬಿಂದುಮಂತ ಶಬ್ದಕ್ಕೆ ಬಿಂದುಲೋಪಂ ಬಹುಳಂ (ಶಮದ. ೨೬೫). [ಸಂ. ಬಿಂದುಮತ್]

**ಬಿಂದುಮತಿ** (ನಾ). [ಕಾವ್ಯಮಿಾ]ಒಂದು ಪದ್ಯದಲ್ಲಿ ಇರುವ ಪ್ರಸಕ್ತವಾದ ಅರ್ಥವನ್ನು ಸೂಚಿಸುವಲ್ಲಿ ಬಿಂದುವನ್ನು ಅಧಿಕವಾಗಿ ಉಪಯೋಗಿಸಿ ಚಮತ್ಕಾರದಿಂದ ರಚಿಸುವ ಪದ್ಯ : ಒಂದು ಬಗೆಯ ಒಗಟಿನ ಪದ್ಯ. [ ಸಂ. ]

**ಬಿಂದುಮಾಧವ** (ನಾ). ವಿಷ್ಣುವಿನ ಹೆಸರುಗಳಲ್ಲಿ ಒಂದು : p ಕಾಶೀ ಕ್ಷೇತ್ರದಲ್ಲಿ ನೆಲೆಸಿರುವ ವಿಷ್ಣು: ಬಿಂದುಮಾಧವನ ಘಟ್ಟಕ್ಕೆ ಹೋಗುವೆ ತಾರೇ ಬಿಂದಿಗೆಯ (ಶ್ರೀಕಂ. ೧-೯೯-೩); ವಿಶ್ವೇಶ್ವರ . . . ಬಿಂದುಮಾಧವ ಮುಂತಾದ ಎಲ್ಲ ದೇವರುಗಳ ದರ್ಶನವಾಯಿತು (ಗಂಪಯಾ. ೦). [ಸಂ.]

**ಬಿಂದುಮಾಲೆ** (ನಾ). = ಬಿಂದು ೧೦ : ವೃತ್ತವಾಗಿರೆ ತುಟಿಯನೊತ್ತಲದೆಯಧರವಣಿ ಚಿತ್ರಫಲಗ್ರಹ ನಿಟಿಲಕಕ್ಷದಲ್ಲಿ ತಳ್ತಿಸೆಯೆ ಪಲ್ಲಜ್ಜಿ ಮುತ್ತುಗುರೊಳೆಳೆಯಲದು ಬಿತ್ತರದ ಮಣಿಮಾಲೆ ಬಿಂದುಮಾಲೆ (ಜಸವ. ೬-೩೦). [ ಸಂ. ಬಿಂದುಮಾಲಾ ]

**ಬಿಂದುವಿಡು** (ಕ್ರಿ). ಹನಿಯಿಡು ; ತೊಟ್ಟಿಕ್ಕು ; ಒಸರು : ತಮಾಲ ಪಲ್ಲವಮಂ ಪಿಡಿದು ತನ್ನ ಬಿಂದುವಿಡುವ ಮೊಗದ ಬೆಮರಂ ಬೀಸುವಂತ ಯುಮಿರ್ದಳ್ (ಕಾದಂಬ. ೯೦) ; ಬಿಂದುವಿಡುಮಿಾದೂಪಳಜಳಪುತ್ರಿಕೆಗಳಿಂ ಕೆಂಪಿಡುವ ಕಂಕೆಲ್ಲಿಯ ಪಲ್ಲವಾಸ್ತರಣಂಗಳಿಂ . . . ಓಮಗೃಹಮಂ ಸಮೆದು (ಕುಸುಮಾ. ១೩-೯೬ ವ). [ಬಿಂದು + ಇಡು$_1$]

**ಬಿಂಪು** 'ಬಿಣ್ಪು' ನೋ.

**ಬಿಂಬ** (ನಾ). ೧. ಸೂರ್ಯ ಅಥವಾ ಚಂದ್ರನ ಸುತ್ತಲೂ ಇರುವ ಪ್ರಭಾವಲಯ,— ಪರಿವೇಷ : " ಮಂಡಲಂ, ಬಿಂಬಂ—ಈ ಎರಡು ಚಂದ್ರಮಂಡಲದ ಪೆಸರ್ " (ಶಬ್ದಮ. ೬-೪೪) ; ಬಿಂಬದಧಿದೈವಮರ್ಕನ ಬಿಂಬದೆ ತಳರ್ದಿಟ್ಟಿದುದಿಂತಿದದ್ಭುತಮಸುರಂಗೆಂಬಿನಮಿನಬಿಂಬದ ದೆಸೆಯಿಂ ಬಂದಿಳಿಗಿಟ್ಟದನಮಲಕಾಂತಿಮುನೀಂದ್ರಂ (ಜಗಾ. ೫ ೩೨); ಬಿಂಬದೊಳಗಿರ್ಪ ಜಿನಪತಿಬಿಂಬಕ್ಕೆಳೆಯಿಂದೆ ಪೆರ್ಚಿ ಕಣ್ಣೆಂಜಲ್ಗಿಂದ್ರಂ ಬಗಿದ ಪೊನ್ನ ಕಾಹಳೆ ಯೆಂಬಿನಮೆಸೆದಂ ಮೃಗಾಂಕನರ್ಧೋದಯದೊಳ್ (ಅನಂಪು. ೬-೮೦). ೨. ಮಂಡಲಾಕಾರವಾದುದು ; ವೃತ್ತತೆಯುಳ್ಳುದು. ೩. ಪ್ರತಿರೂಪ ; ಪ್ರತಿಚ್ಛಾಯೆ ; ಪಡಿನೆಳಲು : ಅದಱ ಪರಾರ್ಧ್ಯನೀಲಮಣಿ ಕುಟ್ಟಿಮಭೂತಳದರ್ಪಣೈಕಬಿಂಬದೊಳಹಮಿಂದ್ರದಿವ್ಯತನು ಬಿಂಬಿಸೆ ರೂಪಿದು ಬಿಂಬಮಿಂತಿದೆಂಬುದನಱಿಯಲ್ಕೆ ಬಾರದು (ಶಾಂತಿಪು. ೯-೧೨೨). ೪. ಕನ್ನಡಿ ; ದರ್ಪಣ. ೫. ವಿಗ್ರಹ ; ಮೂರ್ತಿ ; ಪ್ರತಿಮೆ : ಕಂಬದಿನೊ ಬಿಂಬದಿನೊ ಮೋಕ್ಷವವರಿಂಗಾಯ್ತು ಸಿಂಬಳದಿ ನೊಣ ನೀನು (ಮುಂಕುಕ. ೯೮೫); ಬಿಂಬದೊಳಗಮಿತಸತ್ತ್ವ ಪಿಡಿದಿಡುವ ಭಕ್ತಿಯಿಂಬು ಕಿಂಚಿನ್ಮತಿಗೆ (ಮುಂಕುಕ. ೯೯೦). ೬. ಒಂದು ಬಗೆಯ ಬಳ್ಳಿ ಮತ್ತು ಅದರ ಹಣ್ಣು; ತೊಂಡೆ: "ಬಿಂಬ ತೊಂಡೆಯಕ್ಕುಂ" (ಮಂಗರಾ. ೩೯-೨೫); ಬಿಂಬದ ಪಕ್ವಮಾದ ಫಳಮೆಂಬಿನಮಿಾ ಜಗದಲಿ ಚೆಲ್ವನಾಲಂಬಿಸಿದತ್ತು ಮಾನಿನಿಯ ಸಾರಮೆನಿಪ್ಪಧರಂ (ಚಾರಪು. ೨-೯೫). ೭. ಓತಿಕೇತ. ೮. ಕಾಮನ ಬಿಲ್ಲು. ೯. ಕಿರಣ; ರಶ್ಮಿ. ೧೦. ಗಗನ; ಆಕಾಶ. ೧೧. ಮಳೆ; ವೃಷ್ಟಿ. ೧೨. ಬಟ್ಟೆ; ವಸ್ತ್ರ " ಅಂಬರಂ ವೃಷ್ಟಿ ಸುವೃತ್ತ ಬಿಂಬಿಕೆ ನಭಂ ಪ್ರತಿರೂಪ ಮಯೂಖಮಿಂದ್ರಚಾಪಾಷ್ಟಕಮಿಂತು ಬಿಂಬಮೆನಿಸಿರ್ಕುಂ" (ನಾನಾರ. ೬೦). ೧೩. ಇಪ್ಪತ್ತೆಂಟು ಶೈವಾಗಮಗಳಲ್ಲಿ ಒಂದು : ಕಾಮಿಕ, ಯೋಗಜ . . . ಚಂದ್ರಜ್ಞಾನ, ಬಿಂಬ . . . ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಚಾರಿದ. ೬೨). 'ಬಿಂಬಾಗಮ' ಪರಾ. [ಸಂ.]

**ಬಿಂಬಕಲ್ಪನೆ** (ನಾ). ಮಾತಿನಿಂದ ಹೊಳೆಯುವ ಚಿತ್ರವನ್ನು ಮನಸ್ಸಿನಲ್ಲಿ ಸೃಷ್ಟಿಸಿಕೊಳ್ಳುವುದು : ಮಕ್ಕಳ ಬಿಂಬಕಲ್ಪನೆಯ ರೀತಿಯಲ್ಲೂ ಭಿನ್ನತೆ ಕಾಣಬಹುದು . . . ಕೆಲವರಿಗೆ ಸ್ಥಾವರರೂಪದ ಬಿಂಬಕಲ್ಪನೆಯಲ್ಲಿ ಚತುರತೆಯಿದ್ದರೆ ಮತ್ತೆ ಕೆಲವರಿಗೆ ಚಲನ ಬಿಂಬಕಲ್ಪನೆಯಲ್ಲಿ ಹೆಚ್ಚಿನ ಚಾತುರ್ಯವಿರುತ್ತದೆ (ಶಿಕ್ಷದ. ೯೪). [ಸಂ. ಬಿಂಬಕಲ್ಪನಾ]

**ಬಿಂಬಗ್ರಾಹಕ** (ನಾ). ಪ್ರತಿಚ್ಛಾಯೆಯನ್ನು ಬಿಂಬಿಸುವ ಯಂತ್ರ ಸಲಕರಣೆ : ಛಾಯಾಗ್ರಾಹಿ ; ಕ್ಯಾಮೆರಾ : ಆಬೆ . . . ಬಿಂಬಗ್ರಾಹಕಗಳಲ್ಲಿ (ಕ್ಯಾಮರಾ) ಮುಖ್ಯ ಸುಧಾರಣೆಗಳನ್ನು ಮಾಡಿದುದಲ್ಲದೆ . . . ಕೂಲಂಕಷಶೋಧನೆ ನಡೆಸಿದ (ಕವಿಕೋ. I, ೩೮೪). [ ಸಂ. ]

**ಬಿಂಬಗ್ರಾಹಿ** (ನಾ). = ಬಿಂಬಗ್ರಾಹಕ : ವಿಮಾನಗಳಲ್ಲಿ ಬಿಂಬಗ್ರಾಹಿಗಳನ್ನು (ಕ್ಯಾಮರ) ಕೊಂಡೊಯ್ದು ಅಂತರಿಕ್ಷದಿಂದ ಒಂದು ಭೂಪ್ರದೇಶದ ಛಾಯಾಚಿತ್ರಗಳನ್ನು ಪಡೆದು . . . ನಕ್ಷೆಯನ್ನು (ಟಾಪೋಗ್ರಫಿಕ್ ಮ್ಯಾಪ್) ತಯಾರಿಸಬಹುದು (ಕವಿಕೋ. I, ೦೨೦). [ ಸಂ. ಬಿಂಬಗ್ರಾಹಿನ್ ]

**ಬಿಂಬಪ್ರತಿಬಿಂಬಭಾವ** (ನಾ). ೧. ಬಿಂಬಕ್ಕೂ ಪ್ರತಿಬಿಂಬಕ್ಕೂ ಇರುವ ಪರಸ್ಪರಸಂಬಂಧ : ಈ ಸಂಬಂಧವನ್ನು ದೃಗ್ದೃಶ್ಯಭಾವ, ಬಿಂಬಪ್ರತಿಬಿಂಬಭಾವ, ವ್ಯಂಗ್ಯ ವ್ಯಂಜಕಭಾವ, ಭೋಗ್ಯಭೋಕ್ತೃಭಾವವೆಂದು ಬುದ್ಧ್ಯಾರೋಹಕ್ಕಾಗಿ ಮನಸ್ಸಿಗೆ ಮನದಟ್ಟಾಗುವುದಕ್ಕಾಗಿ ನಿರೂಪಿಸಿರುವರು (ಬಿಂದಶಾ. ೧೦೨). ೨. [ಕಾವ್ಯಮಿಾ] "ಪರಸ್ಪರ ಸಾದೃಶ್ಯದಿಂದ ಅಭಿನ್ನವೆಂದು ಹೇಳಬಹುದಾದ ಭಿನ್ನಭಿನ್ನ ಧರ್ಮಗಳನ್ನು ಉಪಮಾನೋಪಮೇಯಗಳಲ್ಲಿ ಬೇರೆ ಬೇರೆಯಾಗಿ ಗ್ರಹಿಸಿರುವುದಕ್ಕೆ 'ಬಿಂಬಪ್ರತಿಬಿಂಬಭಾವ' ವೆಂದು ಪ್ರತೀತಿ " (ಕೈಬಿ. ೨೫೭ ಅಬಿ). [ಸಂ.]

**ಬಿಂಬಫಲ,** ಬಿಂಬಫಳ (ನಾ). ತೊಂಡೆಹಣ್ಣು : ಬಿಂಬಫಲಾಧರಂ ಪವಳಮಂ . . . ಪೋಲ್ತಿರೆ (ಧರ್ಮಾಮೃ. ೭-೨೦೯) ; ಬಿಂಬಫಲೋಪಮಾಸರದನಚ್ಛದಮಂ ನಸುಗಚ್ಚಿ (ಸೂಕ್ತಿಸು. ೬-೭೪) ; ಬಿಂಬಫಲಮಂ ಸಮಂತಧರವೆಂದು . . . ಪಂಬಲಿಸಿ ಮಮ್ಮಲ ಮಱುಗುತಿರ್ದನು (ಗುರುಪ. ೧೦-೩೩). **ಬಿಂಬಫಳ :** ಬಿಂಬಫಳರುಚಿಯಂ ಬಗೆಯದರುಣಾಧರೋನ್ನತಿಯ . . . ಕಂಬುಕಂಧರೆಯರು ನೆರೆದರು (ಬಸಪು. ೫-೨೩) ; ಬಿಂಬಫಳಮಂ ಕಂಡ ರಾಜಶುಕಿಯಂತೆ ಬಿಂಬಾಧರಮಂ ಕರ್ದುಂಕಿ (ರಾಜಶೇ. ೧೦-೧೧೦ ವ). [ ಸಂ. ]

**ಬಿಂಬಫಳ** 'ಬಿಂಬಫಲ' ನೋ.

**ಬಿಂಬಲಿ** 'ಬಿಳಿಂಬಿ' ನೋ.

**ಬಿಂಬಾಗಮ** (ನಾ). ಇಪ್ಪತ್ತೆಂಟು ಶೈವಾಗಮಗಳಲ್ಲಿ ಒಂದು : ಆ ಸಿದ್ಧಾಂತಭೇದಂಗಳಾವವೆಂದೊಡೆ ೧. ಕಾಮಿಕಾಗಮ ೨. ಯೋಗಜಾಗಮ . . . ೨೦. ಬಿಂಬಾಗಮ . . . ೨೮. ವಾತೂಲಾಗಮಮೆಂಬವೇ ಇಪ್ಪತ್ತೆಂಟು ದಿವ್ಯಾಗಮಂಗಳಕ್ಕು (ವಿವೇಕ. ೬೩). [ಸಂ.]

**ಬಿಂಬಾಧರ** (ನಾ). ತೊಂಡೆಯ ಹಣ್ಣಿನಂತೆ ಕೆಂಪಾಗಿರುವ ತುಟಿ : ಪುಳಿಯೊಳೆಲೆದ ಪವಳದ ಬಟ್ಟೆನಂತೆ ಸೊಗಯಿಸುವ ಸಂಸಾರಸಾರೋದಯನ ಬಿಂಬಾಧರಮಂಸಂಗರಾಗರಸಮರುಳಿಯಂತಾದುದು (ಸಂಶಭಾ. ೨-೩೯ ವ) ; ಮೆಱೆವ ರತುನಾವಳಿಯ ಬಿಂಬಾಧರಮಯೂಖದಲಿ . . . ಒಪ್ಪಿದಳು ದೇವಿ (ಕಾಶಿರಾ. ೨-೩). [ ಸಂ. ]

**ಬಿಂಬಾಧರೆ** (ನಾ). ತೊಂಡೆಯ ಹಣ್ಣಿನಂತೆ ಕೆಂಪಾದ ತುಟಿಯುಳ್ಳವಳು : ಬಿಂಬಾಧರೆಯರ್ ಬಂದಲರಂಬಿಂ ಕಸ್ತೂರಿಯ ಸಾಣೆಯಿಕ್ಕುವ ತೆಱದಿಂದಂಬುಜವಳಸದೃಶಾಂಬಕದಂಬಿಕೆಗಂಜನಮನೆಚ್ಚಿದರ್ (೧೦ಶ. ೧೦-೪೧); ರಾಜಶುಕಸಲ್ಲಾಪಾಂಗಶೃಂಗಾರೆ ಭಾಸುರಬಿಂಬಾಧರೆ (ಪದ್ಮಿ. ೨-೬೨). [ ಸಂ. ಬಿಂಬಾಧರಾ ]

**ಬಿಂಬಿ** (ನಾ). (?) : ಸಲೆ ನಿಲೆ ಮಾವು ಪೂವು . . . ಗಿಳಿವಿಂಡು ಬಂಡು ಕೋಗಿಲೆ ಗೊಲೆ ತುಂಬಿ ಬಿಂಬಿ ಸುಟಿಗೇದಗೆ ಚಾದಗೆ ಕಂಪು ಸೊಂಪ ಗುಂದಲೆಯೆನೆ ರಮ್ಯಮಾ ವಿಷಯದುರ್ಗಗಳ್ ನಂದನವೃಂದವೆತ್ತಲುಂ (ಪ್ರಕೃತಿ. ೩-೨೩). [ ? ]

**ಬಿಂಬಿತ** (ಗು). ಪ್ರತಿಫಲಿತವಾದ ; ಪ್ರತಿರೂಪವುಂಟಾದ : ಮತ್ತಂ ರತ್ನಪ್ರತಿಬಿಂಬಬಿಂಬಿತಮಣಿದೀಪಪ್ರತಿಬಿಂಬದಂತಾನುಂ . . . ತನ್ನ ಬೆಳಗೆ ಬೆಳಗಾಗೆ ಶುದ್ಧಗರ್ಭಾವಾಸದೊಳ್ ಜಿನಾರ್ಭಕಂ ಬಳೆಯೆ(ಶಾಂತಿಪು. ೯-೨೦೯ ವ); ಶಿತಿಕಂಠನಾಮಪೂರಿತವಾಕ್ಯಪ್ಯುತನಿರೀಕ್ಷಿತನಯನ ಮಣಿ ಮುಕುರಮಧ್ಯಬಿಂಬಿತವದನಂ (ಹರಿಶ್ಚ. ೯-೫೮). [ಸಂ. ]

**ಬಿಂಬಿಸು** (ಕ್ರಿ). ೧. ಪ್ರತಿರೂಪವನ್ನು ತೋರಿಸು ; ಪ್ರತಿಫಲಿಸು : ಅದಱಪರಾರ್ಧ್ಯ ನೀಲಮಣಿಕುಟ್ಟಿಮಭೂತಳದರ್ಪಣೈಕಬಿಂಬದೊಳಹಮಿಂದ್ರ ದಿವ್ಯತನು ಬಿಂಬಿಸೆ ರೂಪಿದು ಬಿಂಬಮಿಂತಿದೆಂಬುದನಱಿಯಲ್ಕೆ ಬಾರದು (ಶಾಂತಿಪು. ೯-೦೨೨); ಕರ್ಣೋತ್ಪಲಂಗಳ್ ಕಪೋಲಬಿಂಬಗಳೊಳ್ ಬಿಂಬಿಸೆಯುಂ (ಕಾದಂಪೂ. ೬೭) ; ಬಿಂಬಿಸುವ ಶಶಿಬಿಂಬದಿಂ ಪ್ರತಿಬಿಂಬಿಸುವ ಮುಖಬಿಂಬದರ್ಪಣ (ಬಸವ. ೫-೨೩). ೨. ಸ್ಪಷ್ಟವಾಗಿ ತಿಳಿಯುವಂತೆ ಮಾಡು ; ವಿಶದೀಕರಿಸು ; ವಿವರಿಸು : ಶೇಷಪ್ಪ . . . ತಾನೀಗ ನಡೆದಿರುವುದು ಕೇವಲ ಗೌಡಿತಿಯ ಕಲ್ಯಾಣಕ್ಕಾಗಿ ಎಂಬುದನ್ನು ಬಿಂಬಿಸಿದ (ಗ್ರಾಮಾಯ. ೫೩೫); ಈ ಮಾತನ್ನು ಹೇಗಾದರೂ ಮಾಡಿ ಶೈಲೇಂದ್ರನಿಗೆ ಬಿಂಬಿಸಬಲ್ಲನಾದರೆ ಕಾಲೀಪದನ ಮನ ಹಗುರಾಗುತ್ತಿತ್ತು (ಇಪ್ಪ ಕ. ೩೯೩). ೩. ತೋರಿಸು ; ಪ್ರಕಟಿಸು : ಅವರ ಹೃದಯದ ವಿಶಾಲ ಮಾರ್ಗವನ್ನು ಬಿಂಬಿಸುವದೇ ಈ ತಿರುಗಾಟದ ಅರ್ಥವಾಗಿದೆ (ರಂಗರೋ. ೩೦); ಕೃಪೆಯನು ಬಿಂಬಿಸಿ, ಬಾಳನು ತುಂಬಿಸಿ. ತೋಟದೊಳರಳಿದ ಹೂ ತಾನಾದುದು ಶ್ರೀಮದ್‌ಭಗವದ್ಗೀತೆ (ಅನಿಕೇ. ೩೨-೦೯). ೪. ತೋರು; ಕಾಣು; ಪ್ರಕಟವಾಗು : ಲಜ್ಜೆ ಬಿಂಬಿಸೆ ಲಾವಣ್ಯದೊಳೊಯ್ಯನೆ ಪಜ್ಜೆಯಿಡುವುದು ಭಾವೆಯರು (ಹರಿಭ. ೮-೩೬). [ಬಿಂಬ + – ಇಸು₃]

**ಬಿಂಬೋಷ್ಠ** (ನಾ). = ಬಿಂಬಾಧರ : ಅಬ್ಜಪತ್ರಾಕ್ಷಿಯ ನವರತಿಸರ್ವಸ್ವ ಬಿಂಬೋಷ್ಠಮಂ ಮುದ್ರಿಡುವೈ ರೋಲಂಬ ನೀನೇ ಕೃತಿ ನಿಜವರ ಸುತ್ರಾಮಣಂ ಕಿಟ್ಟಿವಲ್ತೇ (ಶಾಕುಂತ. ೦೦-೨೯). [ಸಂ.]

**ಬಿಂಬೋಷ್ಠಿ** (ನಾ). = ಬಿಂಬಾಧರೆ. [ಸಂ. ಬಿಂಬೋಷ್ಠೀ]

**ಬಿಂಬೋಷ್ಠೆ** (ನಾ). = ಬಿಂಬಾಧರೆ : ಈ ಬಿಂಬೋಷ್ಠೆಯಂ ಸರ್ಪದಷ್ಟೆಯ ನೆನಗೆ ಮದುವೆಮಾಟ್ಟರಪ್ಪೊಡೆ ನಾಳೆ ನೇಸಮರ್ೂಡದ ಮುನ್ನಮೆ ವಿಷಾಪಹಾರಂ ಮಾಡಿದಪ್ಪೆಂ (ಸುಕುಮಾ. ೬-೬ ವ). [ಸಂ. ಬಿಂಬೋಷ್ಠಾ]

**ಬಿಂಬ್ಲಿ** 'ಬಿಳಿಂಬಿ' ನೋ.

**ಬಿಕ್** (ನಾ). ಒಂದು ಅನುಕರಣಶಬ್ದ : ಬಿಕ್ಕಂ ಕಂಡಿಲಿಯಂತಿರೆ . . . ಮಾರ್ಕೊಳ್ಳದೆ ಮಾರ್ನುಡಿಯದೆ ಬಿಕ್ಕೆನ್ನದೆ ಮಿಡುಕದಿರ್ದರ್ (ಸುಕುಮಾ. ೩-೨೦).

**ಬಿಕನಾಶಿ** 'ಬಿಕನಾಸಿ' ನೋ.

**ಬಿಕನಾಸಿ, ಬಿಕನಾಶಿ** (ಗು). ೧. ಅಲ್ಪವಾದ ; ಕ್ಷುದ್ರವಾದ : ಅವಳು ಆ ಒಂದು ಬಿಕನಾಸಿ ಎಂಟಾಣೆಯ ತುಂಡು ಕದ್ದಳು ಅಂತ ಗೊಜ್ಜು ಗೊಡಸಾರು ತಿನ್ನುವ ಗತಿಗೆ ಬಂದುಬಿಡಿತು ಅನ್ನುತ್ತೀಯೇನೇ (ನಡೆದಾ. I, ೫೨೦). (ನಾ). ೨. ತಿರುಪೆಯಿಂದ ಬದುಕುವ ವ್ಯಕ್ತಿ ; ಭಿಕ್ಷುಕ : ಉಳಿದ ಭಕ್ತರೆಲ್ಲ ಬೇಡುವುದಕ್ಕೇ ಹುಟ್ಟಿದ ಬಡ ಬಿಕನಾಸಿಗಳು (ಕರಿಷ. ೧೨೦); ಇವನಾರೊ ಸಂನ್ಯಾಸಿ, ಅತ್ತೊಬ್ಬ ಬಿಕನಾಸಿ (ಗಂಗಾತ. ೬೦-೦). ೩. ಅಲ್ಪವ್ಯಕ್ತಿ; ಕ್ಷುದ್ರವ್ಯಕ್ತಿ; ಹೀನವ್ಯಕ್ತಿ : ಮಡಿ ಮಡಿ ಮಡಿಯೆಂದು ಮೂರ್ಮಾರು ಹಾಱುತಿ ಮಡಿಯೆಲ್ಲಿ ಬಂತೆ ಬಿಕನಾಸಿ (ಪುರಂದ. ೦-೦೦೫ ಪಲ್ಲವಿ); ಆ ಬಿಕನಾಸಿಯ ಮನೆಗೆ! ನನ್ನ ಮುಂದೆ ಲಕ್ಷವರಹ ಸುರಿದರೂ ಅವಳ ಮನೆಗೆ ನಾನು ಕಾಲಿಕ್ಕುವುದಿಲ್ಲ (ಮಹಾಗ. ೮೫). ೪. ಲೋಭದಿಂದ ಕೂಡಿದ ವ್ಯಕ್ತಿ ; ಕೃಪಣ : ಬಿಕನಾಸಿಗಳ್ಗೆ ಫಲಿಸುವುದೆ ನಿರತಿಶಯ ದಾನಶೌಂಡನ ಭಜನೆ (ಕೊಟ್ಟೂ ಬ. ೯-೬). **ಬಿಕನಾಶಿ** : ೨. ಕಂಚ ದಿಕ್ಕಿಲ್ಲದ ಬಡವ, ಮನೆ_ಮಾರು ತೊರೆದ ಬಿಕನಾಶಿ (ಗ್ರಾಮಾಯ. ೨೦೦). ೩. ಆ ಮೈಸೂರು ಬಿಕನಾಶಿಯ ಸಹವಾಸ ಅವಳಿಗಿನ್ನೂ ಸಾಕಾಗಿಲ್ಲವೇನು ? (ರೂಪಕಸ. ೦೩೨).

[< ಸಂ. ಭಿಕ್ಷಾಶಿನ್. /ತುಳು. ಬಿಕ್ಕನಾಸಿ, ಬಿಕ್ಕೇಸಿ ; ತೆಲು. ಬಿಕಾಸಿ]

**ಬಿಕರಿ, ಬಿಕ್ರಿ** (ನಾ). ಮಾರಾಟ ; ವಿಕ್ರಯ : ನಕಲಿಮಾಲುಗಳು ಬಿಕರಿಗೆ ಬರುತ್ತಿವೆ (ಕಟಿಕೋ. I, ೩೫೦); ಅಂಟುರೋಗದಿಂದ ಮೃತಪಟ್ಟ ದನಗಳನ್ನು . . . ಚರ್ಮದ ಆಶೆಗಾಗಿ ಬಿಕರಿ ಮಾಡುತ್ತಾರೆ (ಗ್ರಾಮಾಕ. ೧೨೦). **ಬಿಕ್ರಿ**: ಅವರ ಮನೆ ಬಿಕ್ರಿಗೆ ಬಂದಿದೆ (ರೂಢಿ).

[←ಹಿಂ. ಬಿಕಿರೀ, ಬಿಕ್ರೀ; ಮರಾ. ಛಿಕರೀ, ವಿಕರಾ./ಸಂ. ವಿಕ್ರಯ]

**ಬಿಕರಿದಾರ, ಬಿಕ್ರಿದಾರ** (ನಾ). ಮಾರಾಟ ಮಾಡುವವನು ; ವ್ಯಾಪಾರಿ : (ಕ). **ಬಿಕ್ರಿದಾರ** : ಕೊಂಬಿನ ಊದುವ ಕಡೆಗೆ ಅಂಗೈಯೊತ್ತಿ ಅದರ ಬಾಯಿಯನ್ನು ಅಂಗಡಿ ಬಿಕ್ರಿದಾರನಿಗೆ ಒಡ್ಡುವರು (ಕಂಠಿ. ೩೯).

[ಬಿಕರಿ + – ದಾರ₄]

**ಬಿಕಾರಿ, ಭಿಕಾರಿ** (ನಾ). ೧. ಭಿಕ್ಷೆ ಬೇಡುವವನು; ತಿರುಕ : ಮುನೀಶ್ವರನ ಪರಭಾಗಮಂ ಸುಕೌಶಲಂ ಕಂಡವರಾರೆಂದು ಬೆಸಗೊಳೆ ಸಹದೇವಿಯೆಂದಳಾ ತನೊರ್ವ ಬಿ[ಶಾಕಾಂ. ಭಿ]ಕಾರಿಯನೇನಂ ಬೆಸಗೊಂಡಪೆಯೆನೆ (ಪುಣ್ಯಾಸ್ರ. ೬-೬೦ ವ); ಅಲುಂಬದ ಡುಂಬಿಗನಂ ಬಿಕಾರಿಯಂ ಬೆಸನಿಗನಂ . . . ಕಸಗಳೆದಿತ್ತು ಮನ್ನಿಪರಮಕ್ಕಳ ಪಟ್ಟಿಗೆ ತಂದು ಸೊರ್ಕಿಸಾ (ಕಕಂ. ೬-೦೦೯) ; ಹೊಟ್ಟೆಗಿಲ್ಲದ ಬಿಕಾರಿಗಳು ಹೊಟ್ಟೆಗಾಗಿ ತೆರತೆರನಾಗಿ ಅಂಗ ಲಾಚಿಕೊಳ್ಳುವರು (ಬಿಶಾಕ. ೩). **ಭಿಕಾರಿ** : ೨. ಗತಿಯಿಲ್ಲದವನು ; ನಿರ್ಗತಿಕ : ಇದ್ದ ಬದ್ದ ಮಕ್ಕಳನ್ನೆಲ್ಲಾ ಕಳೆದುಕೊಂಡು ಭಿಕಾರಿಗಳಾದ ನಿನ್ನ ಅನಾಥ ತಾಯಿ ತಂದೆಗಳನ್ನು ನೆನೆಸಿಕೊಂಡರೆ ಸಂಕಟವಾಗುತ್ತದೆ (ವಚಕಾ. ೩೦೬) ; ನಾನು ಭಿಕಾರಿ, ದುಡಿಮೆಯಿಲ್ಲದ ಭಿಕಾರಿ . . . ಬಡತನದ ಭೂತ ಬಡಿದ ಭಿಕಾರಿ (ಮುಂಗಾಮಿ. ೩೦). (ಗು). ೩. ಕೀಳಾದ ; ತುಚ್ಛವಾದ : ಜಕಣಿಯು ಜಲದೇವರು ಮೊದಲಾದ ಭಿಕಾರಿದೈವಗಳ ಪೂಜಿಸರವರು (ಪುರಂದ. ೦-೦೯೫-೩).

[<ಪ್ರಾ. ಭಿಖಾರಿ./ ಸಂ. ಭಿಕ್ಷಾಚಾರಿನ್./ ಹಿಂ. ಭಿಕಾರೀ, ಭಿಖಾರೀ./ ಮರಾ. ಭಿಕಾರೀ]

**ಬಿಕಾರಿತನ** (ನಾ). ಬಡತನ; ದಾರಿದ್ರ್ಯ; ಕಂಗಾಲುತನ : (ಕ).

[ಬಿಕಾರಿ + – ತನ]

**ಬಿಕೋ** (ನಾ). (ಶೂನ್ಯತೆಯನ್ನು ಸೂಚಿಸುವ) ಒಂದು ಅನುಕರಣ ಶಬ್ದ : ತೊಟ್ಟಿಲಿಲ್ಲದೆ ಕೊಟಡಿ ಬಿಕೋ ಅಂತ ಕಾಣುತ್ತದೆಯಲ್ಲ ! (ಮಹಾಗ. ೨೫೦).

**ಬಿಕೋ ಎನಿಸು**=ಶೂನ್ಯವಾಗಿ ತೋರು ; ಬರಿದಾಗಿರು ; ಖಾಲಿಯಾಗಿ ಕಾಣಿಸು : ಮಗ ಸೊಸೆಯರು ಇಲ್ಲದೇ . . . ಅವರ ಮನಸ್ಸಿಗೆ ಬಿಕೋ ಎನಿಸುತ್ತಿತ್ತು (ಶಾಂಭ. ೦೦೩). **ಬಿಕೋ ಎನ್ನು**=ಬಿಕೋ ಎನಿಸು : ನಿರ್ಜೀವವಾಗಿ ಬಿಕೋ ಎನ್ನುತ್ತಿರುವ ಈ ಊರನ್ನು ನೋಡಲಾರೆ (ವಚಕಾ. ೩೯೦).

**ಬಿಕ್ಕ₁** (ನಾ). (ಸುಮಾರು ಹತ್ತುವರ್ಷ ವಯಸ್ಸಿನ) ಆನೆಯ ಮರಿ : ಹರಿಣರಿಪುಗೆ ಬಿಕ್ಕಪೋತಕಳಭಕುಳಮಾರಣಕೋಳಾಹಳಮಾನೆದಿಂಬಂಗಾವೆ ದೆವಳಿಗೆಯೆಂಬಂತಕ್ಕುಂ (ಶಾಂತಿಪು. ೩-೩೬ ವ); ಅಪಹಸಿತ ಬಿಕ್ಕಪೋತಕಳಭಜ [ ವ ]ನಕಲಾ ಣಯುಘಥತರಪ್ರಾಯಗಜಯೂಥಕೋಳಾಹಳಾರಾವದೊಳ್ (ವರ್ಧಮಾ. ೫-೬೨ ವ). [<ಸಂ. ವಿಕ್ಕ]

**ಬಿಕ್ಕ₂** (ನಾ). ಒಂದು ಅಳತೆಯ ಪ್ರಮಾಣ (?) : ಹಂನೆರಡು ೧೨ ಬಿಕ್ಕ ಹುಣಿಸೆಯಲ್ಲಿ (ಇಂ. ೧೯೪೬, ಹಾನಗಲ್. ೨೨೯–೨೪;೭). [?]

**ಬಿಕ್ಕಟ್ಟು** 'ಬಿಗಿಗಟ್ಟು' ನೋ.

**ಬಿಕ್ಕಡಿಸು** 'ಬಿಕ್ಕುಳಿಸು' ನೋ.

**ಬಿಕ್ಕನೆ** (ಅ). ತಟ್ಟನೆ; ಸರಕ್ಕನೆ : ಭಕ್ತ ವಿರಕ್ತರೆಂದು ಆತ್ಮತೇಜಕ್ಕೆ ಬಿಕ್ಕನೇಟ್ ಬಿರಿವುತ್ತ ಇಂತೀ ಕಟ್ಟ ಕೇಡ ನೋಡಿ . . . ರಾಜೇಶ್ವರ ಲಿಂಗವು . . . ಅಂಜ ನಷ್ಟವಾಗಿ ಹೋದ (ಸರ್ವಚ. ೦೨೦–೬೨೦); ಬಿಕ್ಕನೆ ನೆಜ಼್ ಬಿರಿದರು . . . ಶೋಕೋ ದ್ರೇಕಪರವಶರು (ಸಾಸಂಪ. ೬–೪೨); ಭೂಮಿ ಬಿಕ್ಕನೆ ಸೀಳಿತು ಕೂರ್ಮನ ಬೆನ್ನು ಹೋಳಿಗೆವಡದುದು ಬಲುಬಿಸಿಲೊಂದು ಚಡಾಳಿಕೆ ಜಗವ ಭಂಗಿಸಿತು (ಪೋಪಶ. ೧೯–೪೬.

ಬಿಕ್ಕಬಿಕ್ಕನೆ (ದ್ವಿರುಕ್ತಿ) : ಸವಿಸವಿದು ಬಿಕ್ಕಬಿಕ್ಕನೆ ಸವಿನೋಡೆನ್ನಾಣೆ ಯೆಂದು ರಕ್ಕಸಿಗವದಂ ಸವಿದೋಟ್ ನೆತ್ತರೆಲ್ಲಂ ತವೆ ಮುಳಿಸಿಂದವನ ಕರುಳ ಪಿಣಿಲಂ ನೋಣೆದಂ (ಪಂಪಭಾ. ೦೨–೦೫೯). ಬಿಕ್ಕನೆ ಬಿರಿ, ಬಿಕ್ಕಬಿರಿ, ಬಿಗ್ಗಬಿರಿ=ತಟ್ಟನೆ ಸೀಳು,—ಒಡೆ : ವೃಕೋದರಂ . . . ಡೊಕ್ಕನೆ ಸುರಿಗೆಯೊಳುರವಮಂ ಬಿಕ್ಕನೆ ಬಿರಿಯಿಟ್ಟದು (ಪಂಪಭಾ. ೦೨–೦೫೩) ; ನಮ್ಮ ಕೂಡಲಸಂಗಮದೇವನಲ್ಲದೆ ಪರದೈವಂಗಳು ಮನಕ್ಕೆ ಬಂದುವೆ ಬಿಕ್ಕನೆ ಬಿರಿವ ದೈವಂಗಳು (ಬಸವ. ೩೬೨) ; ಕೋಪದಲಿ ಪವನಜ ಖಳನ ನೆತ್ತಿ ಬಿಕ್ಕಬಿರಿಯೊಲು ತಿವಿಯೆ (ಜಾಂಡಚ. ೪೩–೦೨) ; ಅಗ್ಗ ಸೂರೆ ಅನ್ನವೆಂದು ಬಿಗ್ಗಬಿರಿಯ ಉಂಡಳು (ಗಾದೆ). [ಬಿಕ್ + — ಅನೆ₁]

**ಬಿಕ್ಕಲ** (ನಾ). ಮಾತನ್ನಾಡುವಾಗ ತೊದಲುವವನು ; ಉಗ್ಗ : ಅವನು ಬಿಕ್ಕಲ. ಅವನ ಮಾತುಗಳನ್ನು ಅರ್ಥ ಮಾಡಿಕೊಳ್ಳಲು ಕಷ್ಟ ವಾಗುತ್ತದೆ (ರೂಢಿ). [ಬಿಕ್ಕಲು (<ಬಿಕ್ಕುಳು) + — ಅ₇]

**ಬಿಕ್ಕಲಂ, ಬಿಕ್ಲಂ** (ನಾ). ಓದು, ಬರಹವನ್ನು ತಿಳಿಯದವರಿಗೆ ಬೇರೆ ಯವರು ಪತ್ರ ಇತ್ಯಾದಿಗಳಲ್ಲಿ ಬರೆದುಕೊಟ್ಟ ಬರಹ, – ಒಕ್ಕಣೆ : 'ಬಿಕ್ಕಲಂದಾರ' ಪರಾ. ಬಿಕ್ಲಂ : ಆ ಹಳ್ಳಿಯಲ್ಲಿ ಆತನೇ ಹಳ್ಳಿಗರಿಗೆ ವ್ಯವಹಾರಗಳನ್ನು ನಡೆಸಲು ಬಿಕ್ಲಂಗಳನ್ನು ಬರೆದು ಕೊಡುವ ವಾಡಿಕೆ (ರೂಢಿ). [←ಪಾರ. ಮರಾ. ಬಿಕಲಂ]

**ಬಿಕ್ಕಲಂದಾರ** (ನಾ). ಓದು, ಬರಹ ಬಾರದವರಿಗೆ ಪತ್ರ ಇತ್ಯಾದಿ ಗಳನ್ನು ಬರೆದು ಕೊಡುವವನು : ಈ ಪತ್ರದ ಬಿಕ್ಕಲಂದಾರರು ಚೆನ್ನಾಗಿ ಬರೆದಿದ್ದಾರೆ (ರೂಢಿ). [ಬಿಕ್ಕಲಂ + — ದಾರ₄]

**ಬಿಕ್ಕಲು** 'ಬಿಕ್ಕುಳು' ನೋ.

**ಬಿಕ್ಕಳಿಕೆ** 'ಬಿಕ್ಕುಳಿಕೆ' ನೋ.

**ಬಿಕ್ಕಳಿಸು** 'ಬಿಕ್ಕುಳಿಸು' ನೋ.

**ಬಿಕ್ಕಳು** 'ಬಿಕ್ಕುಳು' ನೋ.

**ಬಿಕ್ಕಿ** (ನಾ). ಒಬ್ಬಾತನ ಹೆಸರು : ಕಳ್ಳವೆಣಸೆಯ ರಟ್ಟನು ಬಿಕ್ಕಿಯು . . . ಸಾಕ್ಷಿ (ಎಕ. XI, ಚಿತ್ರದು. ೬೪–೨೫; 968) ; ಕುಪ್ಪಯ್ಯನುಂ ಚನ್ದನುಂ ಬಿಕ್ಕಿಯುಂ ತಮುತ್ತ ಮೂವರುಂ ಕಲ್ಲ ನಿಱಿಸಿದರ್ (ಎಕ. VIII, ಸೊರಬ. ೪೫೪–೬ ; 973). [?]

**ಬಿಕ್ಕಿಗ₁** (ನಾ). ಮಾವುತ : ಪಿತ್ಥಾಧಿಕನಂತೆ ಬೀಸೆನುತ್ತುಂ ಬಿಕ್ಕಿಗನಂತೆ ತಿವಿಯೆನುತ್ತುಂ (ಧರ್ಮಾಮೃ. ೨–೬೦). [ಬಿಕ್ಕ₁ + — ಇಗ]

**ಬಿಕ್ಕಿಗ₂** (ನಾ). (?) : ಮನ ಮಾಡಿ ಬಿಕ್ಕಿಗನ ಮೊಗವ ನೋಡಿದನು, ಆ ಹೊತ್ತಿಗೆಯೊಳೊಂದೋದ ನೋಡಿದನು (ಕಗದ್ಮ. ೬೪). [?]

**ಬಿಕ್ಕಿಗಿಡ** (ನಾ). ಒಂದು ಬಗೆಯ ಸಸ್ಯ : ಬಿಕ್ಕಿಗಿಡ, ದಿಕಾಮಲಿ, ಕಂಬಿಮೋಣ (ವೃಕಿಗಿ. ೩೬–೬೬೦). [ಬಿಕ್ಕಿ₃ + ಗಿಡ (<ಗಿಡು)]

**ಬಿಕ್ಕಿಯಣ್ಣ, ಬಿಕ್ಕಿಯಣ** (ನಾ). ಒಬ್ಬಾತನ ಹೆಸರು: ಅತಂಗೆ ಬಿಕ್ಕಿಯಣ್ಣಂ ಮಾತೆ[ಗೆ] ಸತ್ಪುತ್ರಂ(ಎಕ. XI, ಚಿತ್ರದು. ೬೪–೯ ; 968).

**ಬಿಕ್ಕಿಯಣ** : ಶ್ರೀಮತ್ ದಿಲೀಪರಸ ಪೃಥಿವೀರಾಜ್ಯಂಗೆಯ್ಯುತ್ತಿರ ಚೊಕ್ಕಯ್ಯಙ್ಗಂ ಆಚಬ್ಬೆಗಂ ಪುಟ್ಟಿದಂ ಬಿಕ್ಕಿಯಣಂ(ಎಕ. XII, ಶಿರಾ. ೩೫–೫ ; 948). [ಬಿಕ್ಕಿ + ಅಣ್ಣ₁]

**ಬಿಕ್ಕಿರಾಣಕ** (ನಾ). ಒಬ್ಬಾತನ ಹೆಸರು : ಶ್ರೀ ಬಿಕ್ಕಿರಾಣಕೇನ ಪುಲಿಕರ ನಗರೇ ಶ್ರೀಶಂಖಜಿನಾಲಯಾಂತರ್ವರ್ತಿ್ರಿಯತ್ಕಾರಿತಂ (ಕೌಇಪ. XX, ೫–೨೬ ; 723). [ಬಿಕ್ಕಿ + ರಾಣಕ₁]

**ಬಿಕ್ಕಿರು** (ನಾ). ಸೊಳ್ಳೆ; ಮಶಕ : ಲಿಖಿತದುರ್ಗಾಸ್ತೋತ್ರಪಟ್ಟಿಕಾವ್ರಾತದಿಂ ತಲೆದೂಗಿ ಬಿಕ್ಕಿರಿನವೊಲ್ಮೊರೆವ ಗೀತದಿಂ (ಕಾದಂಉ. ೨೬೦).

[P ಇದು 'ಚಿಕ್ಕಡು' ಎಂಬುದರ ಅಪಲ್ಲಿಖಿತವಿರಬಹುದು]

**ಬಿಕ್ಕಿಸು** (ಕ್ರಿ). (ದುಃಖಾತಿರೇಕದಿಂದ) ಗದ್ಗದಧ್ವನಿಯನ್ನು ಹೊರ ಡಿಸು ; ಬಿಕ್ಕಳಿಸು : ಸೀರೆಯ ಸೆರಗನ್ನು ಮುಖದ ಮೇಲೆ ಸರಿಸಿ ಕೊಂಡು ಮತ್ತೆ ಬಿಕ್ಕಿಸಲಾರಂಭಿಸಿದಳು (ಶಂಸಂ. ೫೫).

[ಬಿಕ್ಕು₁ + — ಇಸು₃]

**ಬಿಕ್ಕು₁** (ಕ್ರಿ). ೧. ಶ್ವಾಸಾಂಗಗಳು ಅನೈಚ್ಛಿಕವಾಗಿ ಇದ್ದಕಿದ್ದಂತೆ ಸಂಕೋಚಗೊಂಡು, ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ ಗಂಟಲಿನಲ್ಲಿ ಒಂದು ಬಗೆಯ ವಿಲಕ್ಷಣವಾದ ಶಬ್ದವುಂಟಾಗು ; ಬಿಕ್ಕುಳಿಕೆಯುಂಟಾಗು ; ಬಿಕ್ಕಳಿಸು : ಕೆಲರ್ ಕುದುಗುಳಿರಕ್ಕಸರ್ ಬಿಸುಗೆಗಳ್ವೆರಸುಗ್ರಮಹಾಗಜಂಗಳಂ ಚದುರ್ಗಿಡೆ ನುಂಗಿ ಬಿಕ್ಕಿ ಕುಡಿದರ್ ಬಿಸುನೆತ್ತರ ಕಾಟ್ಪುರಂಗಳಂ (ಪಂಪಭಾ. ೦೨–೧೧) ; ಜಿನಂ . . . ಬಿಕ್ಕುವ ತೇಂಕುವ ತೇಗುವ ಕಂಟಳಿಸುವಖಿಳವಿಕೃತಿಗೆ ಸಲ್ಲಂ (ಪುಷ್ಪ ಪು. ೦೨–೬೪). ೨. (ದುಃಖ, ಭಯ ಅಥವಾ ಸಂತೋಷಾತಿರೇಕಗಳಿಂದ) ಮಾತು ತಡವರಿಸು ; (ಭಾವಾತಿರೇಕದಿಂದ) ಗದ್ಗದಿಸು : ಬಿನ್ನಪಂಗೆಯ್ವ ವೊಕ್ಕಲಿಗನಂತೆ ಬಿಕ್ಕುತ್ತುಂ (ಧರ್ಮಾಮೃ. ೦–೦೯೪) ; ಅಬಲೆ . . . ಗದ್ಗದ ಸ್ವನದಿಂ ಬಿಕ್ಕುತುಮಿಕ್ಕಿದಳ್ ಬಿಡದೆ ಭೋರೆಂಬಂತೆ ಬಾಷ್ಪಾಂಬುವಂ (ಕುಸುಮಾ. ೦೩–೯೭) ; ಬಿಕ್ಕಿದನು ಬಿರಿಬಿರಿದು ಸೆರೆಗಳು ಮುಕ್ಕುಱಿಕಿದವು ಕೊರಳ ಹೃದಯದೊಳೊಕ್ಕಲಿಕ್ಕಿತು ಶೋಕಪಾವಕವಾ ನೃಪಾನುಜನ (ಕುವ್ಯಾಅ. ೨೦–೩೩). ೩. ಮೇಲುಸಿರು ಬಿಡು ; ಏದುಸಿರು ಬಿಡು : "ಬಿಕ್ಕು–ಉಚ್ಛ್ವಾಸೇ, ಮಾಂಸಭೇದೇ ಚ"(ಶಮದ); ನಯನಜಲಂಗಳುಣ್ಮು ವೊಡೆ ಬಿಕ್ಕುವೊಡಂ ತನು ಸೇದೆಗೆಟ್ಟು ಬೆಂಕೆಯನೊಳಗೊಳ್ವೊಡಂ ಜ್ವರಿತನೆಂದಱಿದು . . . ಉಪಯೋಗಿಸಿದಂದು ಮುಟ್ಟುಗುಂ (ಲೋಕೋಪ. ೯–೨೦೫) ; ಬಿಱಿಸಿನಲಿ ಖಳ ತಿವಿದೊಡಂಗದ ಬಿರಿದು ಬಿಕ್ಕಿದ ಬಿದ್ದನಾಕ್ಷಣ ಮರಳಿ ಚೇತರಿಸುತ್ತ . . . ತಿವಿದನು (ಕೌಶಿರಾ. ೩೬–೩೦) ; ಹೊಕ್ಕುದಾ ಸಮಯದಲಿ ಸುಂಡಿಲ ಸೆಕ್ಕುಗಳ ಖಂಡಿಯುವ ಗಜದಳ ಬಿಕ್ಕಲಿಳೆ ಬೆರಸಿದುದು ರಣರಥರಾಜಿ (ಕೊರರಾ. ೫–೬–೦೫). ೪. (ಉಸಿರು ಬಿಡುವಾಗ) ಅಳ್ಳೆಯ ಹೊಡೆದುಕೊಳ್ಳು : ಬಿರಿವೆದೆ ಬಿಕ್ಕುವಳ್ಳೆ . . . ಬಿಗಿದ ಗಂಟಲಿನ ಮುಕ್ಕುಳಿಸಿದಕ್ಕಿಗಳೆಸೆವ ಸತಿಯಳಲು ಸೀಗೆ ಯೊಳಗಣ ಬಾಳೆಗೆಣೆಯಾದುದು (ಹಚರಾ. ೦೨–೦೩). ೫. ಹೊರ ಹೊಮ್ಮು; ಹೊರಸೂಸು ; ಪ್ರಕಟಗೊಳ್ಳು : ಪೊರಳ್ವ ಪೆಣದಿಂ ಬಿಡೆ ಬಿಕ್ಕುವ ಮಸ್ತಕೌಘದಿಂ ಕೆದಱಿದ ಮಾಂಸದಿಂದೆ . . . ಜವನುಂಡು ಕಾಱಿದವೊಲಿರ್ದುದು ಮಾರ್ಗಮದೆತ್ತ ನೋಟ್ಪೊಡಂ (ಲೀಲಾವ. ೬–೬); ಮೃಗಶಿಶಿರೆಯ ಮಳೆಯಂತೆ–ದೈವೇಚ್ಛೆಗೆರಗಿ ಹುಗಿದ ಚಿಂತೆಯು ಹೊರಗೆ ಬಿಕ್ಕಿದುದು ಕರಗಿ (ಕಪು. ೩೫–೯). ೬. (ಬಾಣ ಮುಂತಾದುವನ್ನು) ಪ್ರಯೋಗಿಸು : ರಿಪುಗಳನ್ನೊರೆಸಿ ಕೂರ್ಗಣೆಗಳ ಬಿಕ್ಕಿ ರಣಮುಂಡಲಕೆ ಚತುರಂಗಸೇನೆಯೊಳ್ ಪೊಕ್ಕು (ಕುರಂಗ. ೫೦–೨). ೭. ಚೆಲ್ಲು ; ತೂರು : ಕಡಿಕಡಿದು ಕೆಡಹಿದರ್ ಕುರಿಕೋಳಿಲಕ್ಕವಂ ಬಿಕ್ಕಿದರ್ ಬೂದಿಯಂ (ಶ್ರೀರಾಮ. ೬೬೦–೨೪೦); ನಿನ್ನನ್ನು ನನ್ನ ಕತ್ತಿಯ ಬಂದೇ ಪೆಟ್ಟಿಗೆ ತುಂಡರಿಸಿ

ರಣಹದ್ದುಗಳಿಗೆ ಬಿಕ್ಕುತ್ತಿದ್ದೆ (ಶ್ರೀರಾಯ. ೩೫೬). ೮. ಪ್ರಕಟಪಡಿಸು : ವ್ಯಕ್ತಪಡಿಸು : ಸೊಕ್ಕು ಕೌರವಕುನ್ನಿ ನಮ್ಮೊಳಗೆ ಪೌರುಷವ ಬಿಕ್ಕಿದನೆ (ಕುರಂಗ. ೩೬-೨೭). ೯. ಹೊಡೆ ; ಬಡಿ : ಸದೆದು ದಾಡೆಯು ತಿರುಹಿ ಕಿತ್ತನು ಬಿಕ್ಕಿದನು ಬಿದುವಿನಲಿ ಬಲುಗದೆಯ (ಕುಮ್ಮಾಗ. ೧-೫೭). ೧೦. ಧ್ವಂಸಗೊಳಿಸು ; ನಾಶಪಡಿಸು : ಆಹವದೊಳಿವ್ರೊಡನೆ ಕಕ್ಕಸವನು ಮಾಡಿದೊಡವರನು ಯುವೆಯಿಕ್ಕದ ಮುನ್ನ ಬಿಕ್ಕುವೆವು (ತ್ರಿಕುಸಾಂ. ೧೫-೦೬೫). ೧೧. (ಮಾತನ್ನಾಡುವಾಗ) ತೊದಲು,– ಉಗ್ಗು : ಅವನು ಮಾತನಾಡುವಾಗ ತುಂಬ ಬಿಕ್ಕುತ್ತಾನೆ (ರೂಢಿ).

**ಬಿಕ್ಕಿ ಬಿಕ್ಕಿ ಅಳು**=ಗದ್ಗದಿಸುತ್ತ ಅಳು : ಐದು ವರ್ಷದ ಕೂಸಂ ನಿಚ್ಚಣಿ ಎಂಬ ದೇವತೆ ಓಡಿದೊಡಾ ಕೂಸು . . . ಬಿಕ್ಕಿ ಬಿಕ್ಕಿ ಅಳುಗು (ಬಾಲಚಿ. ೧೩೨-೦೩) ; ಕೃಷ್ಣರಾಯರು . . . ಬಿಕ್ಕಿ ಬಿಕ್ಕಿ ಅಳುತ್ತ ಕಡೆಗ ಮುಖವನ್ನು ತಿರುಗಿಸಿಕೊಂಡರು (ಮಹಾಗ. ೨೩೨) ; ಬಿಕ್ಕಿ ಬಿಕ್ಕಿ ಅತ್ತರೆ ಬೀಸುವ ಕಲ್ಲು ತಿರುಗೀತೇ ? (ಗಾದೆ).

[ದೇ. ‖ ತಮಿ. ಮಲ. ವಿಕ್ಕು ; ತುಳು. ಬಿಕ್ಕು ; ಕೊಡ. ಬಿಕ್ಕ್; ತೆಲು. ವೆಕ್ಕು ; ಕುರುಖ್. ಬೆಕ್ನಾ]

**ಬಿಕ್ಕು$_2$**, ಬಿಕ್ಕುರ್ (ನಾ). ೧. ಶ್ವಾಸಾಂಗಗಳು ಅನೈಚ್ಛಿಕವಾಗಿ ಇದ್ದಕ್ಕಿದ್ದಂತೆ ಸಂಕೋಚಗೊಂಡು ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ, ಗಂಟಲಿನಲ್ಲಿ ಹುಟ್ಟುವ ಒಂದು ಬಗೆಯ ವಿಲಕ್ಷಣ ಶಬ್ದ; ಬಿಕ್ಕುಳು : ಇಕ್ಕುತಿರ್ಪುದಸಿರ್ ತಡೆದೊಡಮಿಲ್ಲ ಬಿಕ್ಕು ಬಿಡದೊತ್ತಿದೊಡಂ ತಱಿಸಂದೊಡಿಲ್ಲ . . . ಇಂತು ಕೆಟ್ಟುಪೋಪೊಡಲಿದಕೇಕೆ ಕಾವು (ಶಂಪಾಶ. ೩೩-೯೩); ವಾಯು ಕ್ಷೀಣವಾದವರೆ ಗುರುತು, ದೇಹದಲ್ಲಿ ಬಳಲಿಕೆ . . . ಶ್ಲೇಷ್ಮ ಹೆಚ್ಚುವದು ; ಬಿಕ್ಕು ಉಂಟಾಗಿಹುದು (ವೈದ್ಯಸಾ. I, ೨೪). ೨. (ದುಃಖ, ಅಳು, ಭಯ, ಸಂತೋಷಾತಿರೇಕಗಳಿಂದ) ಧ್ವನಿಯಲ್ಲುಂಟಾಗುವ ನಡುಕ ; ಗದ್ಗದ : ತನ್ನೊಳಗೆ ತೆಕ್ಕನೆ ತೀವಿ ತೆರೆ ಮಸಗುವ ಶೋಕರಸಮುರ್ಕೆ . . . ಮಿಕ್ಕು ನೆಗೆವ ಬಿಕ್ಕಿನೊಳ್ ಬೆರಸಿ (೧೦೪. ೬-೭೭ ವ); ಇರೆ ಕಂಡು ಸುವಿವೇಕಗುರುವ ಪುಳಕಂಗಳುಬ್ಬರಿಸಿ . . . ಬಿ[ಶಾಣಾಂ. ಮಿ]ಕ್ಕು ಮಿಕ್ಕು . . . ಸೈಗೆಡದನು (ಮಮೋಚಿ. ೦-೩೩); ಬಿಕ್ಕು ಬಿಕ್ಕನೆ ತೋಱಿ ಇಕ್ಕುವಳು ಕಣ್ಣೀರ (ಸರ್ವಜ್ಞ. ೧೯೨೪). ೩. ದುಃಖ ; ಸಂಕಟ : ಗುಣವಂತಿಯು . . . ಕಳವಳವನ್ನು ಜಯಂತನು ಸಂಪೂರ್ಣ ಅರಿತನು. ಆದರೆ ಅದಕ್ಕೆ ಅನುಕೂಲವಾಗಿ ಮಾತಾಡಿ ಇನ್ನಷ್ಟು ಬಿಕ್ಕು ತಂದುಕೊಡುವುದು ಬೇಡಾಯಿತು (ಜಯಂತ. ೩೨೬). ೪. ತೊದಲು ; ಉಗ್ಗು : ಅವನಿಗೆ ಬಿಕ್ಕು ಇರುವುದರಿಂದ ಮಾತನ್ನಾಡಲು ಕಷ್ಟಪಡಬೇಕಾಗುತ್ತದೆ (ರೂಢಿ). **ಬಿಕ್ಕುರ್**: ೧. ಬರಿಗಂಡಂ ಪಿಣಿಲೇಱಿ ರೋಮಮುಡಿದಿರ್ಬನ್ನಾಗೆ ಮುಂಗಾಲಗಲ್ತುರೆ ಬಿಕ್ಕುರ್ವೆ . . . ಪೆನೊರ್ದರೆ ಸೂಸುತ್ತಿರೆ ಘೀಕರಂ ಸೊಗಯಿಸಿತ್ತುತ್ಕ್ರೋಶರಂ ಸೂಕರಂ (ಚಂದ್ರಪ್ರ. ೫-೬೦).

[<ಬಿಕ್ಕು$_1$/ತಮಿ. ವಿಕ್ಕು; ಮಲ. ವಿಕ್ಕು, ವಿಕ್ಕವುಱ್ ; ತುಳು. ಬಿಕ್ಕ್]

**ಬಿಕ್ಕು$_3$** (ನಾ). ಮಾಂಸ ; ಅಡಗು : "ಬಿಕ್ಕು-ಉಚ್ಛ್ವಾಸೇ, ಮಾಂಸ ಭೇದೇ ಚ" (ಶಮಧಾ) ; ಚೋಳನ ಕಾರಡಗಿಂಗೆ ವಂಗಭೂಪಾಳನ ಬಿಕ್ಕುಗಂಧ್ರ ನರಪಾಳನ ಮೂಳೆಗೆ ಕಾಯ್ದು ಖಿಳ್ಗಮಾಕಾಳಿಯಡುತ್ತುರ್ ನಿಳ್ಕುವಳು ನಾಲಗೆಯುಂ ನರಸಿಂಗಭೂಪನ (ಎಕ. IV (R), ಹುಣಸೂ. ೩೪-೦೭; 1162); ಅಗುರ್ಬಿಪ ಬಿಕ್ಕಿನಿಂದಮೊಟ್ಟಿದ ನೆಣದಿಂ . . . ಕೆತ್ತುತಿರ್ಪ ಖಂಡದೆ ಜವನುಂಡು ಕಾಱಿದವೊಲಿರ್ದುದು ಮಾರ್ಗಮದೆತ್ತ ನೋೞ್ಪೊಡಂ (ಲೀಲಾವ. ೬-೬) ; ಮೂಳೆ ಬಿಕ್ಕುಗಳ ಸಂದಣಿ . . . ಕಾಳಿಜಗಳೆಕ್ಕೆಕ್ಕೆ ತದ್ರಣರಂಗದೆಲ್ಲೆಡೆಯೊಳುಂ ತೀವೆ ಬಲಮೊರಲ್ ಪೊಣರ್ದುವು (ಚಂಪು. ೪೯-೫೬). [ದೇ. ‖ ತಮಿ. ವಿಟಪ್ಪು. /ಸಂ.ವೃಕ್ಕ, ವೃಕ್ಕಾ]

**ಬಿಕ್ಕು$_4$**, ಬಿಚ್ಚು$_3$ (ನಾ). ೧. ಬೌದ್ಧಸಂನ್ಯಾಸಿ : ತಕ್ಷಶಿಲಾನಗರದಲ್ಲಿ ಮಹಾಯಾನಪಂಥದ ಬೌದ್ಧಬಿಕ್ಕುಗಳು ನೆಲೆಸಿಕೊಂಡು ತಮ್ಮ ಮತವನ್ನು ಬೋಧಿಸತೊಡಗಿದರು (ಬಾಂಚಿತ್ರ. II, ೬೦೩). ಬಿಚ್ಚು$_3$ : ೨. ಸಂನ್ಯಾಸಿ ; ಭಿಕ್ಷು : " ಬಿಚ್ಚುವೆನಲ್ಕೆ ಭಿಕ್ಷು " (ಕರ್ಣಾಸಿ. ೫೩): ಭಿಕ್ಷು-ಬಿಚ್ಚು (ಶಮದ. ೨೭೨ ಕ್ರಯೋ). [<ಪ್ರಾ. ಭಿಕ್ಖು./ಸಂ. ಭಿಕ್ಷು]

**ಬಿಕ್ಕುಂದನಿ** (ನಾ). ನಡುಗುವ ಧ್ವನಿ ; ಗದ್ಗದ : ಸಿಂಗಾರಮ್ಮ :— (ಎದ್ದು ಹೋಗಿ . . . ನಸೆದಿಟ್ಟಿಯ ಬಿಕ್ಕುಂದನಿಯಿಂದ) (ಬಟ್ಟಿಅ. ೯೭-೨೦). [ಬಿಕ್ಕು$_1$ + ದನಿ$_1$]

**ಬಿಕ್ಕುಳಿಕು** ' ಬಿಕ್ಕುಳಿಕೆ ' ನೋ.

**ಬಿಕ್ಕುಳಿಕೆ**, ಬಿಕ್ಕಳಿಕೆ, ಬಿಕ್ಕುಳಿಕು (ನಾ). ೧. ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ ಗಂಟಲಿನಲ್ಲಿ ಹುಟ್ಟುವ ಒಂದು ಬಗೆಯ ವಿಲಕ್ಷಣವಾದ ಶಬ್ದ ; ಬಿಕ್ಕುಳು : ನಿಮಿರ್ಚೆ ಬಿಕ್ಕುಳಿಕೆ ಮೆಯ್ ಮುಯ್ವಾಗೆ ಕಂಪಕ್ಕೆ ದಲ್ ಜುರುರಾಯುಂ ಗದೆವೊಯ್ಲ್ನಿಂದಿಳೆಗೆ ಬಿಟ್ಟಂ ಬೆಟ್ಟು ಬಿಟ್ಟಂದದಿಂ (ರಶರ. ೪-೦೯೦). **ಬಿಕ್ಕಳಿಕೆ** : ೧. ಹಿಕ್ಕೆಯ ಬಾಷ್ಪಮದೆಂತೆನೆ ಬಿಕ್ಕಳಿಕೆಗಳಕ್ಕುಮಕ್ಷಿಯೊಳ್ ತಿಮಿರಂ ತುಂಬಿಕುರ್ಗಂ (ಖಮದ. ೧೫-೪೦) ; ದವನ, ಜೀರಿಗೆ, ಶುಂಠಿ ಇವಂ ಜೇನು ತುಪ್ಪದಿಂದ ಅರೆದು ಕೊಳ್ಳಲು ಬಿಕ್ಕಳಿಕೆ ಮಾಣ್ಗುಂ (ಖಗ್ವೈ. ೦೩೦) ; ಓಮವನ್ನು ಸುಟ್ಟು ಮಸಿಯನ್ನು ಸಕ್ಕರೆಯೊಡನೆ ಕಲಸಿ ಕೊಟ್ಟರೆ ವಾಂತಿ ಬಿಕ್ಕಳಿಕೆ ನಿಲ್ಲುವುದು (ಸಕವೈ. ಶಂ ೪೪೭). ೨. (ದುಃಖ, ಅಳು, ಸಂತೋಷ, ಭಯ ಮುಂತಾದುವುಗಳಿಂದ) ಧ್ವನಿಯಲ್ಲುಂಟಾಗುವ ನಡುಕ,–ಗದ್ಗದ: ಅದನ್ನು ನೆನಸಿಕೊಂಡ ಯಶೋದೆಗೆ ಪುನಃ ಬಿಕ್ಕಳಿಕೆ ಆರಂಭವಾಯಿತು (ವಾತ್ಸಲ್ಯ. ೦೧) ; ಅವಳ ಅಳು ನಿಂತಿತ್ತು ; ಬಿಕ್ಕಳಿಕೆ ಮಾತ್ರ ನಿಂತಿರಲಿಲ್ಲ (ಕುನರು. ೦೧೦). **ಬಿಕ್ಕುಳಿಕು** : ೨. ಧರ್ಮಜನು ತಂದೆ ನಿನಗಿಂತಧಿಕದುಃಖವ ತಂದೊಪಗಿಸಿದೆ ಎನ್ನನೀಗಲೆ ಕೊಂದು ಕರುಣಿಸೆನುತ ಬಿಕ್ಕುಳಿಕಿನಲಿಯುಳಲಿದನು (ತಿಮ್ಮಸ್ತ್ರೀ. ೨-೪೩). [ಬಿಕ್ಕುಳು + –ಇಕೆ]

**ಬಿಕ್ಕುಳಿಸು**, ಬಿಕ್ಕಡಿಸು, ಬಿಕ್ಕಳಿಸು (ಕ್ರಿ). ೧. ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ ಗಂಟಲಿನಲ್ಲಿ ಒಂದು ಬಗೆಯ ವಿಲಕ್ಷಣಶಬ್ದವುಂಟಾಗು ; ಬಿಕ್ಕು : ಕೂಕಿಡುವ ಕುಕಿಲ್ವ ಬಿಕ್ಕುಳಿಪ ತೇಗುವ ತನ್ನ ತೊಡಂಕದೆಯ್ದೆ ನೂರ್ಪುಡಿ ಮವದೊಳ್ ಪಳಂಚಲೆಯೆ ಡಕ್ಕೆಯೊಳಟ್ಟಿಜವಾಗೆಯಾಡಿದಳ್ (ಪಂಪಭಾ. ೪-೯೦). ೨. (ದುಃಖ, ಭಯ, ಸಂತೋಷಾತಿರೇಕಗಳಿಂದ) ಮಾತು ತಡಪರಿಸು,– ಗದ್ಗದಿಸು : ಸಿಕ್ಕಿದ ನಲ್ಲಳು ಮುನಿದ ನಲ್ಲನ ಮುಂದೆ ಬಿಕ್ಕುಳಿಸುತ ನುಡಿವಂತೆ ಲೆಕ್ಕ ಟವಣೆಯಾಗಿ ಕೊರಳು ಕುಣಿದು ದನಿಯಿಕ್ಕುವ ರಾಗ ರಂಜಿಸಿತು. (ಭರತ. ೫-೬೩). ೩. ಕಾರು ; ಕಕ್ಕು : " ಬಿಕ್ಕುಳಿಸು – ಉದ್ಗಾರೇ " (ಶಮಧಾ). **ಬಿಕ್ಕಡಿಸು**: ೨. ಚಿಕ್ಕೋರು ಸುಮ್ಮನೆ ಬಿಕ್ಕಡಿಸಿಕೊಂಡು ಬಿಕ್ಕಡಿಸಿಕೊಂಡು ಅಳ್ತಾನೇ ಇದ್ರು (ಚಂಗಾಳ್ವ. ೫೨೯). **ಬಿಕ್ಕಳಿಸು** : ೨. ರಂಗನು ಬಿಕ್ಕಳಿಸುತ್ತ ನಡೆದ ಸಂಗತಿಯನ್ನೆಲ್ಲ ವಿವರಿಸಿದನು (ರಂಗರೋ. ೪೦) ; ಪರದೆಯ ಹಿಂದೆ ಮತ್ತೆ ಬಿಕ್ಕಳಿಸುವ ಶಬ್ದ ಕೇಳಿಸಿತು (ಝಾರಾಣಿ. ೦೦೪).

[ಬಿಕ್ಕುಳು + – ಇಸು$_3$]

**ಬಿಕ್ಕುಳು**, ಬಿಕ್ಕಲು, ಬಿಕ್ಕಳು (ನಾ). ೧. ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ ಗಂಟಲಿನಲ್ಲಿ ಉಂಟಾಗುವ ಒಂದು ಬಗೆಯ ವಿಲಕ್ಷಣಶಬ್ದ; ಬಿಕ್ಕುಳಿಕೆ : ಕವುಳು . . . ಶುಂಠಿ ಹಿಪ್ಪಲಿ ಇವ ಚೂರ್ಣವ ಮಾಡಿ ಬೇಲದ ಹಣ್ಣಿನ ರಸದಲ್ಲಿ ಅರೆದು ಗುಳಿಗೆಯ ಮಾಡೆ ಬಿಕ್ಕುಳು ಪೋಕುಂ (ಖಗ್ವೈ. ೦೩೯). ೨. (ದುಃಖ, ಸಂತೋಷ, ಕೋಪ, ಭಯ, ಮುಂತಾದುವುಗಳಿಂದ) ಧ್ವನಿಯಲ್ಲುಂಟಾಗುವ ನಡುಕ,— ಗದ್ಗದ : ಎತ್ತಿ ಹಾಯ್ಕುವ ಕೊರಳ ಬಿಕ್ಕುಳ ಕೆತ್ತುವಧರದ

ರೋಷದಲಿ ಹೊಗೆ ಸುತ್ತಿದುರಿವಾತ್ರಗಳ ಸೂಸಿದರವನಿಪನ ಮೇಲೆ (ಕುವ್ಯಾಕ. ೪-೦೯) ; ನಿವಿೂಶ್ವರಕುಲಲಲಾಮನು . . . ಇಳಿವ ಕಂಬನಿಗಳಲಿ ಕಂಪಿತಗಳದ ಬಿಕ್ಕುಳಿನಕ್ಕೆಯಲಿ ಮಕ್ಕಳನು ಕೈವರ್ತಿಸಿ ಕಕುತ್ಸ್ಥಾನ್ವಯನ ಬೀಳ್ಕೊಂಡ (ತೊರರಾ. ೧-೦೭-೨) ; ಉಕ್ಕಿದುದು ಮೇಲುಸಿರು ಕಂಠದ ಬಿಕ್ಕುಳಿನ ಭೀತಿಯಲಿ ತನ್ನೊಂದಕ್ಕರಿನ ಮನದೊಳಗೆ ರಾಮನ ನೆನೆದನಾ ಹನುಮ (ವ್ಯರಾಕಾ. ೩-೭೪). ೩. ಪ್ರಾಣ ಹೋಗುವ ಸಮಯದಲ್ಲಿ ಗಂಟಲಿನಲ್ಲಿ ಉಂಟಾಗುವ ಗದ್ಗದ: ಈ ಐದು ಬಿಕ್ಕುಳುಗಳು ಮುಪ್ಪಿನವರಿಗೂ ಬಹಳವಾಗಿ ಸ್ತ್ರೀಸಂಗವುಳ್ಳವರಿಗೂ ವ್ಯಾಧಿಯಿಂದ ಕ್ಷಯಿಸಿದ ದೇಹದವರಿಗೂ . . . ಮರಣಕ್ಕೆ ಕಾರಣವಾಗಿ ಕಾಣಿಸಿಕೊಂಬುದು (ಸಕವೈ. ೨೪೦). 'ಬಿಕ್ಕುಳುರೋಗ' ಪರಾ. ಬಿಕ್ಕಲು: ೩. ಶ್ಲೇಷ್ಮದಿಂದ ತಡೆಯಲ್ಪಟ್ಟ ಪ್ರಾಣವಾಯು . . . ಐದು ಪ್ರಕಾರವಾದ ಬಿಕ್ಕಲುಗಳ ಉಂಟುಮಾಡುವದು (ವೈದ್ಯಸಾ. I, ೦೩೩). ೪. ಉಗ್ಗು; ತೊದಲು: ಶೇಷಣ್ಣನವರಿಗೆ . . . ಹಾಡಲು ಬಹಳ ಉತ್ಸಾಹ; ಆದರೆ ಬಿಕ್ಕಲು. ಹಾಡಲು ಸಾಧ್ಯವಿಲ್ಲದೆ ಬಹುವಾಗಿ ನೊಂದುಕೊಳ್ಳುತ್ತಿದ್ದರು (ಸಂಗೀತಂ, ೨೬೯). **ಬಿಕ್ಕಳು :** ೧. ಚಂದನಾದಿಚೂರ್ಣ . . . ಮೆಲ್ಲಲು ತೃಷೆ, ಛರ್ದಿ, ಬಿಕ್ಕಳು, ಪಿತ್ತ, ಭ್ರಮೆ, ಅರೋಚಕ ಇವು ಗುಣ (ಐವೈವಿ. ೨೬). ೨. ಉಕ್ಕುವುದಳಲದನೊಯ್ಯನಾಚಿಸುವನು ಬಿಕ್ಕಳು ಬಹುದ ನಿಲ್ಲಿಸುವ (ಭರತ.೦೬-೦೯).

[ದೇ. ‖ ತಮಿ. ವಿಕ್ಕುಳ್, ವಿಕ್ಕಲ್, ವಿಕ್ಕಿಳ್ ; ತೆಲು. ವೆಕ್ಕಿಲಿ, ಎಕ್ಕಿಲಿ]

**ಬಿಕ್ಕುಳುಬೇನೆ** (ನಾ). ಉಸಿರಾಟದ ತೊಂದರೆಯಿಂದ ಅಧಿಕವಾಗಿ ಬಿಕ್ಕಳಿಕೆ ಉಂಟಾಗುವ ಒಂದು ಬಗೆಯ ರೋಗ : ಶೀನು ಬಿಕ್ಕುಳು ಬೇನೆ ನಾನಾಹಾನಿ ಬಳಿಕುದ್ಗಾರಗಳು ಏನೇನೊ ವೈಕಾರಗಳುದಾಸದ ವಾಯುವಿನ ಧರ್ಮ (ಗಗತಾ. ೯-೬೮). [ಬಿಕ್ಕುಳು + ಬೇನೆ]

**ಬಿಕ್ಕುಳುರೋಗ** (ನಾ). = ಬಿಕ್ಕುಳುಬೇನೆ: ಐದು ತೆರನಾದ ಬಿಕ್ಕುಳು ರೋಗದಲ್ಲಿ ಕ್ಷುದ್ರ, ಅನ್ನಜೆ ಎಂಬೆರಡು ವಿಧವಾದ ಬಿಕ್ಕುಳುರೋಗವೆ ಅಸಾಧ್ಯವಾಗಿ ಪ್ರಾಣವನಪಹರಿಸುತ್ತ ಇಹುದು (ಸಕವೈ. ೨೪೦).

[ಬಿಕ್ಕುಳು + ರೋಗ]

**ಬಿಕ್ಕಿ$_1$** 'ಬಿಟಿಕ್ಕಿ' ನೋ.

**ಬಿಕ್ಕೆ$_2$**, ಬಿಚ್ಚೆ (ನಾ). ತಿರುಪೆ ; ಭಿಕ್ಷೆ : "ಬಿಕ್ಕೆ ಭಿಕ್ಷೆಯೆಂ" (ಕರ್ಣಾನಿ. ೭೨) ; ಬಡತನದ ಬೇನೆಯನು ರಾಗದಿಂ ಪಾಡಿ ಜೋಡುಕೈಗಳ ಮನೌನದೈನ್ಯದಿಂ ನೀಡಿ ಬೇಡಿದನು ಬಿಕ್ಕೆಯನು (ಕಗದ್ಯ. ೭೪) ; ಭಕ್ತ ಬೇಡಲು ಬಿಕ್ಕೆ ಇತ್ತ ತೆರನಾದುದೌ ! (ಹೆಲುವಿ. ೩೪). ಬಿಚ್ಚೆ : 'ಬಿಚ್ಚೆಕಾರ' ಪರಾ.

**ಬಿಕ್ಕೆ ಬೇಡು** = ಯಾಚಿಸು ; ಭಿಕ್ಷೆಯನ್ನು ಕೇಳು ; ತಿರಿ : ಬ್ರಿಟಿಶರಲ್ಲಿ ಸ್ವರಾಜ್ಯದ ಬಿಕ್ಕೆ ಬೇಡಲು, ನಾವು . . . ವರ್ಣಾಶ್ರಮವನ್ನು ನಾಶ ಮಾಡಬೇಕೆ ? (ಯುಕ್ಷಶ್ರ. ೪೩) ; ಹೀಗೆ ಸ್ವಾರ್ಥ ಬಿಟ್ಟು ಧರ್ಮಾತ್ಮನಾದರೆ ನಾಳೆ ಬಿಕ್ಕೆ ಬೇಡಬೇಕಾದೀತು (ಕುರುಕಾ. ೧೩೮). [<ಸಂ. ಭಿಕ್ಷಾ]

**ಬಿಕ್ಕೆಯಣ** 'ಬಿಕ್ಕಿಯಣ್ಣ' ನೋ.

**ಬಿಕ್ರಿ** 'ಬಿಕರಿ' ನೋ.

**ಬಿಕ್ರಿದಾರ** 'ಬಿಕರಿದಾರ' ನೋ.

**ಬಿಕ್ಲಂ** 'ಬಿಕ್ಕಲಂ' ನೋ.

**ಬಿಗಡ$_1$** 'ಬೇಗಡ$_2$' ನೋ.

**ಬಿಗಡ$_2$** (ನಾ). ಕಷ್ಟ ; ತೊಂದರೆ ; ಕೇಡು : ಇವರಿಗೆ ಬಿಗಡಾವ ಮಾಡಿ ಲಡಾಯಿಗೆ ನಿಲ್ಲಬೇಕು (ಮುದಕ. ೨೦-೦೩).

[← ಹಿಂ. ಬಿಗಾಡ್ ; ಮರಾ. ಬಿಗಡ, ಬಿಗಾಡ. ಬಿಘಡ, ಬಿಘಾಡ]

**ಬಿಗಡಾಯಿಸು, ಬಿಗಡಿಸು, ಬಿಘಡಾಯಿಸು** (ಕ್ರಿ). ೧. ಹದಗೆಡು ; ಕೆಟ್ಟುಹೋಗು : ಇನ್ನು ಮುಂದು ಸಲ್ಲಾ ಬಿಗಡಾಯಿಸಿವರೆ . . . ನಮ್ಮದವಲತ್ತನ್ನು ಮುಳುಗಿಸಿಬಿಟ್ಟಾರು (ರಾಜೇಂದ್ರ. ೦೦೨) ; ಶ್ರೀಕೃಷ್ಣದೇವರಾಯನ ಆಳ್ವಿಕೆಯ ಅನಂತರದಲ್ಲಿ ರಾಜಕೀಯಪರಿಸ್ಥಿತಿ ತುಂಬಾ ಬಿಗಡಾಯಿಸಿತ್ತು ! (ಹೇಮುಕೂ. ೦೦೯). ೨. ಬಿಗಿಯಾಗು ; ಗಡುಸಾಗು : ಫವುಜು ಜಮಿಯೆತ್ತು ಆಯಿತು ಜಿರಪಾಲೆದವರು ಬಿಗಡಾಯಿಸಿಕೊಂಡೆ ಹೋಗಿಯಿದ್ದರು (ಮುದಕ. ೭೪-೯) ; ಚೇಂಕ್ರನ ಧ್ವನಿ ಬಿಗಡಾಯಿಸಿತು (ಮಲೆಮ. ೪೭೩). **ಬಿಗಡಿಸು :** ೩. ಕೆರಳಿಸು; ಕೋಪಗೊಳಿಸು: ಭಾಗಾನಗರದವರ ಬಗೆಯ (?) ಪೆದೂರ ಲಿಂಗಪ್ಪಂ ಬಿಗಡಿಸಿ ಬಂದಿರಲು (ಕಳನ್ಯ. ೯-೦೪). **ಬಿಘಡಾಯಿಸು :** ೧. ನಮ್ಮ ಕುಟುಂಬದ ಪ್ರಕೃತಿ ಬಿಘಡಾಯಿಸೇದ (ಸಮುಜೀ. ೯೬).

[ಬಿಗಡಾ$_0$ (ಶ ← ಹಿಂ. ಬಿಗಡನಾ ; ಮರಾ. ಬಿಗಡಣೇ, ಬಿಘಡಣೇ) + –ಇಸು$_3$]

**ಬಿಗಡಿಸು** 'ಬಿಗಡಾಯಿಸು' ನೋ.

**ಬಿಗಿ$_1$** (ಕ್ರಿ). ೧. (ಹಗ್ಗ, ಸರಪಣಿ ಮುಂತಾದುವುಗಳಿಂದ) ಕಟ್ಟು,– ಬಂಧಿಸು : "ಬಿಗಿ—ಬಂಧನೇ, ಹಯಪರಿಕರೇ ಚ" (ಶಮಧಾ) ; ಹಗಟುಗಳನಿಕ್ಕಿ ಬಿಗಿದಡೆ ನಾಯ ಬಾಲವದು ಬಳಿಕ ನೀಳಕೆ ಸಸಿನವಹುದೇ (ಬಸವು. ೬೦-೪೮) ; ಮುತ್ತಿನ ಗದ್ದುಗೆ ಗರುಡನ ಹೆಗಲಿನೊಳೆತ್ತಿಸಿ ಬಿಗಿದು ಹಲ್ಲಣಿಸಿ ಅತ್ಯಂತ ಸೌಖ್ಯವ ಮಾಡಿ ಸಂತ್ರಸದಿಂದೆ ಪತ್ತಿದ ಶ್ರೀಕೃಷ್ಣರಾಯ (ಮೋಹತ. ೩೬-೩೭) ; ಡೊಳುಹೊಟ್ಟೆಗೆ ನಾಗರ ಬಿಗಿದವನೇ . . . ದಯಮಾಡಯ್ಯಾ ದಂತಾಯುಧನೇ (ಗಕೀಶ.೦-೦೨). ೨. ಭದ್ರಪಡಿಸು ; ಸಡಿಲವಾಗದಂತೆ ಮಾಡು ; ಅಳ್ಳಕವಾಗಿಲ್ಲದಂತೆ ಮಾಡು : ಗುಲ್ಮದಂತೊತ್ತುವರ್ ಪೊಚಿಕಾಜನಂತೆ ಬಿಗಿದು ಕಟ್ಟುವರ್ (ರಮೂಮ್ಯ. ೩-೭೩) ; ವಿಜಯವೀಣೆಯಂ ಕೊಂಡು . . . ತಂತ್ರಿಯಂ ಬಿಗಿದುರದೊಳ್ ಸಾರ್ಚಿ (ಬಂಹಂ. ೨-೩೧ ವ); ಬಿಗಿದ ಬೀಯಗ ಬದ್ದರದ ಬಂಡಿಗಳು (ಕುವ್ಯಾಕ. ೦೭-೨೯). ೩. ಅವಕಾಶವಿಲ್ಲದಂತೆ ಒತ್ತಿ ಹಿಡಿದಿರು,– ಅಮುಕಿ ಹಿಡಿದಿರು ; ಸಡಿಲವಾಗಿಲ್ಲದಿರು ; ಹತ್ತೆಯಾಗಿರು : ಈ ಪ್ರಿಯಂವದೆಯು ಬಿಗಿಯಾಗಿ ಕಟ್ಟಿದ ವಲ್ಕಲದಿಂದ ನನ್ನ ಎದೆಯು ಬಿಗಿಯುತ್ತಿರುವುದು (ಶಾಕುಂತ. ೯-೬) ; ಈ ಅಂಗಿ ಮಗುವಿಗೆ ಬಿಗಿಯುತ್ತದೆ, ಹಾಕಲಾಗುವುದಿಲ್ಲ (ರೂಢಿ). ೪. ವಸ್ತ್ರ ಮುಂತಾದುವನ್ನು ಉಡಲು ಭದ್ರವಾಗಿ ಕಟ್ಟು,– ಬಂಧಿಸು : ಸಪುರ ಬಿಳಿದಂ ಬಿಗಿದುಡಿಸಿ ಬೆಳಗುವ ದುಕೂಲಮಂ ಪೊದಯಿಸಿ (ಸಂಚಿರ. ೦೦-೪೩) ; ಕಂಸನರಸುಮಕ್ಕಳ್ಗೆಲ್ಲಮುಡಲುಂ ತುಡ[ಲುಮು]ಟ್ಟೆ ನಂದಂಗಂ ಕೃಷ್ಣಂಗಮುಚಿವು ಪುಟ್ಟೆ ಕಲಿಗಂಟಿಕ್ಕಿ ತೆರಳ್ದಿ ಬಿಗಿದುಟ್ಟು ಪೊಯಿಕಯ್ಯನೆಂಬಂತಿರ್ದಂ (ಬಂಹಂ. ೬-೪೭ ವ); ಬಿಗಿದ ಗಂಡುಡಿಗೆಯಲಿ . . . ನಸುನಗೆ ಮೊಗದ ಸೊಂಪಿನಲಾಹವಕ್ಕನುವಾದನಭಿಮನ್ಯು (ಕುವ್ಯಾದ್ರೋ. ೪-೪೯). ೫. ಹೊಂದಿಸು ; ಅಳವಡಿಸು : ಬಿಗಿದ ಸಾರಂಗದ ಮೇಲ್ಕಟ್ಟಿನೊಳಂ ಮಾಂಗಾಯ ಫಲಾವಳಿಗಳೊಳಂ . . . ಎಸೆವ ಮಂಟಪಂಗಳ ನಡುವಣ ಪದ್ಮರಾಗದ ಪಟ್ಟವಣೆಯೊಳ್ ನಿಲಿಸಿದ ಕಾಮದೇವನನತಿಪ್ರೀತಿಯಿಂದರ್ಚಿಸಿ (ಕಾದಂಬ. ೭೮೦) ; ಬಿಗಿದ ರಜಲ್ಲರಿ ಮುಗಿಲ ಹೊಸಕೈದುಗಳ ಮಿಂಚಿನ . . . ತನಿಹೊಗರಿಚಿದು ಪರಬಲದ ಕಡುವೇಸಗೆಗೆ ಕವಿದುದು ರಾಜಹಂಸಪ್ರಕರವೋಸರಿಸೆ (ಕುವ್ಯಾದ್ರೋ. ೧-೪೮) ; ಬಿಗಿದ ಬಂಗಾರಿಗಳ ಮಿಸುನಿಯ ಜಗಲಿಗಳ . . . ವಿಲಾಸದಲಿ ಸೊಗಸಿತಾ ಮಂಟಪ (ತೊರರಾ. ೦-೦೩-೬). ೬. ರಚಿಸು ; ನಿರ್ಮಿಸು : ನಳನು ರಿಪುಸಂಹಾರ ಕಾಲಾನಳನು ಕಾರುಣ್ಯದಲಿ ಬಿಗಿದನು ಜಲನಿಧಿಗೆ ಸೇತುವನು (ತೊರರಾ. ೬-೩ ಸೂಚನೆ) ; ಲೋಲಲೋಚನೆ ಬಳಲಿದುದ ಕಾಣುತ ವನಪಾಲರು ಪಕ್ಷಪಾತದಲಿ ಬಾಲೇಂದುಕಾಂತಸೋಪಾನದ ಬಿಗಿದ ವಿಶಾಲಸರಸಿಯ ತೋರಿದರು (ಮೋಹತ. ೯-೪೦). ೭. ಕೂಡು ; ಸೇರು : ಬಿಗಿದ

ಹುಬ್ಬಿನ ಭೀಮು ಹೊಕ್ಕನು ಗದೆಯ ತಿರುಗಿಸುತ (ಕುವ್ಯಾದ್ರೌ. ೨-೬೨) : ಕರ ನಡುಗೆ ಮೈ ಬಲಿಯೆ ಹುಬ್ಬುಗಳುಱೆ ಬಿಗಿಯೆ . . . ವೀರಾವೇಶದಲಿ ಮುಸಗಿದನು ಕಲಿಭೀಮ (ಕುವ್ಯಾ.ಕ. ೦೨-೧೧). ೮. ಕೂಡಿಸಿ ; ಸೇರಿಸು : ಹುಬ್ಬುಗಳನುಱೆ ಬಿಗಿದೌಡನೊಡೆಯೊತ್ತಿ . . . ಹೊಂಗಿದನಧಿಕರೋಷದಲಿ (ಕುವ್ಯಾದ್ರೌ. ೧೯-೦೪) ; ರ್ಘುಗರ್ಘುಗಿಸಿದುದಾ ಉಭಯಕಾವೇರಿಯ ಬಿಗಿದೊಪ್ಪುತಿಹ ದಿವ್ಯಸೇತು (ಕಂನಪ. ೩-೬೦). ೯. ಗಾಢವಾಗು ; ಗಟ್ಟಿಯಾಗು ; ಬಲವಾಗು : ನಿನ್ನಿಂದಂ ಕೊಲೆಸತ್ತುವಱ ಕೋಟ್ಯಳನಾದಮಾನುಂ ಬಿಗಿದಪ್ಪಿಕೊಂಡು ಸತ್ತುದರ್ಕಿದು ಕಾರಣಂ (ವಡ್ಡಾರಾ. ೩೯-೦೬) ; ಬಿಗಿದಮರ್ದಿರ್ದ ತೋಳ್ ಸಡಿಲೆ ಜೋಲೆ ಮೊಗಂ . . . ಮಱಸೊಂದಿದಂದದೊಳೆ ಜೋಲ್ದ ನಿಜೇಶನನಾ ಲತಾಂಗಿ ತೊಟ್ಟಗೆ ಕೊಳೆ ನೋಡಿ (ಕಂಕಠಾ. ೨-೦೯) ; ಇಲ್ಲೀಗ ಕಂಡೆನಾದಡೆ ಚರಣದಲ್ಲಿ ದೊಪ್ಪನೆ ಬಿದ್ದು ಬಿಗಿದು ತಕ್ಕೈಸಿ . . . ತಲ್ಲೀಯವಪ್ಪೆನು (ಸಿದ್ಧರಾ. ೨-೩೩). ೧೦. ಬಿರುಸಾಗು ; ಕಠಿಣತೆಯನ್ನು ಹೊಂದು : ಕೇಳಂಗನೆ ನಿನ್ನ ಬೀಗಿ ಬಿಗಿದಿರ್ದ ಕುಚದ್ವಯವುಧ್ಯದಲ್ಲಿ ತಾಂ ಪಿಂಗದೆ ನಟ್ಟ ದಿಟ್ಟಿಯನವಂ ಕಿಬಿಲೆಂದನುಗೆಯ್ದು ತೂಗಿದಂ (ಅದಿಪು. ೦೨-೦೩) ; ಬಿಗಿದೊಗೆವ ಕುಚದ್ವಂದ್ವವಿಂತಾಗವೇಡಾ ನಳಿತೋಳಿಂತಾಗವೇಡಾ (ಗದಾಯು. ೬-೬೦) ; ಬಿಗಿದುತ್ತುಂಗಕುಚಂ ಕದಕ್ಕದಿಸೆ ಹಾರಂ ತೂಗೆ (ಜಗಪ. ೦೦-೦೦೦). ೧೧. ಆವರಿಸು ; ಕವಿ ; ಮುಸುಕು : ಧಾರುಣಿಯೊಳುತ್ಪಾತ ಬಿಗಿದುದು (ಕುವ್ಯಾಸ. ೦೩-೯೨) ; ಕತ್ತಲೆ ಬಿಗಿದುದವನೀತಳವ ಪೆಟ್ಟಿಗೆ ಮುಚ್ಚಿದಂದದಲಿ (ವಳಕ. ೩-೯೩). ೧೨. ಕವಿಯುವಂತೆ ಮಾಡು ; ಮುಚ್ಚು : ಭೀಮಸೇನನ ತಱುಬಿ ನಿಂದನು ಭೀಷ್ಮ ಬಿಗಿದನು ಸರಳಲಂಬರವ (ಕುವ್ಯಾ.ಭೀ. ೬-೩). ೧೩. ಮುಚ್ಚಿಕೊಳ್ಳು : ಮೇಲುಗಾಣದ ಪಾರ್ಥನೆಂಬೀ ಕಾಳುಮೂಳನ ವಿಧಿಯನೇಪರಿವೇಳುವೆನು ಹರಿಯೆನುತ ಕಂಗಳನೆವೆಗಳಲಿ ಬಿಗಿದ (ಕುವ್ಯಾ.ಭೀ. ೩-೬೦) ; ರಾತ್ರಿಯೆಲ್ಲಾ ನಿದ್ರೆ ಬರದೆ ಈಗ ಕಣ್ಣು ಬಿಗಿಯುತ್ತಾ ಇದೆ (ರೂಢಿ). ೧೪. ಕುಂದಣಿಸು ; ಕೆಚ್ಚು : ಬಿಗಿದ ಮರಕತಮಣಿಯ ನೆಲಗಟ್ಟುಗಳ . . . ಲೋವೆಗಳ ಕಾಂತಿಯ ಲಳಿಯ ಲಹರಿಯೊಳೆದ್ದನವರಾರಿ (ಕುವ್ಯಾಸ. ೩-೨೯) ; ಪಳುಕಿನಱೆಯಲಿ ಬಿಗಿದ ಬೀದಿಯ ನೆಲನ ನಿಳಯಶ್ರೇಣಿಗಳ ನುಜ್ವಲಿಪ ಚಂದ್ರೋಪಲದ ಘನಸೋಪಾನಪಂಗ್ತಿಗಳ . . . ಪಸರದಿನೆಸೆದುದಾ ಪುರ (ತೊರರಾ. ೦-೯-೦೬). ೧೫. ಸಿದ್ಧಪಡಿಸು ; ಸಜ್ಜುಗೊಳಿಸು : ತವದೊಣೆಗಳಂ ಬಿಗಿದು ಗಾಂಡೀವಮನೇಱಿಸಿ ನೀವಿ ಜೇವೊಡೆದು (ಕಂಕಠಾ. ೬-೬೬ ವ); ಶಿವನ ಬೇಡಿದ ಶರವ ತೆಗೆ ಗಾಂಡಿವವ ಬಿಗಿ . . ಬವರಕೇಳೆಳು (ಕುವ್ಯಾದ್ರೌ. ೪-೨೩). ೧೬. ಉಸಿರು ಅಥವಾ ಸ್ವರವು ಸಹಜವಾಗಿ ಹೊರಬರದಂತೆ ಕಂಠವು ಉಬ್ಬಿ ಕಟ್ಟಿಕೊಳ್ಳು,_ ಅಡ್ಡಿ ಹೊಂದು : ಒಗುವ ಕಂಬನಿಗಳಲಿ ಕಂಠವ ಬಿಗಿದ ಸೆರೆಗಳ ಸೇದುವಕ್ಕಿಯು ವಿಗತಪರಿತೋಷಿತನು ಪಾವನತರರಿಗಿಂತೆಂದ (ತೊರರಾ. ೦-೪-೭) : ಗೆಳೆಯರು ಬಿಗಿದ ಕಂಠದಿಂದಲೇ ಅವರನ್ನು ಬೀಳ್ಕೊಟ್ಟರು (ರೂಢಿ). ೧೭. ನಿರೋಧಗೊಳಿಸು ; ಅಂಕೆಯಲ್ಲಿಟ್ಟುಕೊಳ್ಳು ; ಹಿಡಿತದಲ್ಲಿರಿಸು : ಆತ್ಮನಂ ಭೇದಿಸಿ ಪ್ರಾಣವಾಯು ನಾಡಿಗಳನಱೆತು ಹಿಡಿವ ಭೇದಮಂ ತಿಳಿದು ತೆಗೆವ ಬಿಗಿವ ಸಂಚಮಂ ಕಂಡು . . . ಆತ್ಮಲಿಂಗದಲ್ಲಿ ಸಂಯೋಗವ ಮಾಡುವುದಾತ್ಮಯೋಗ (ಆದವ. ೨೯-೯೬) ; ಪ್ರತ್ಯಾಹಾರ, ಉಪಾದಾನಂ . . . ಇಂದ್ರಿಯಗಳನ್ನು ಹಿಂದಿರುಗಿಸಿ ನಿಗ್ರಹಿಸುವಿಕೆ, ಆಶೆಯನ್ನು ಬಿಡದೆ ಬಿಗಿದು ಹಿಡಿಯುವಿಕೆ (ಸಿದ್ಧಾಂತಿ. ೩೬೦) ; ಹುಲ್ಗರಿಯ ಬಳವಿಗೆಯು ಬಿಗಿದುಸಿರೂಲಾಲಿಸುತ . . . ಎಲೆ ಅಹಂಭಾವ, ನಿನ್ನ ಪರಿವೆಯೆ ಇಲ್ಲದಂದದೊಳು ತೊಲಗುತಿಹುದಿಲ್ಲಲಾ ನಿನ್ನ ಹೇವ (ಪುಲಿವೇ. ೩೩-೦). ೧೮. ಹೊಡೆ ; ಬಡಿ ; ಥಳಿಸು : ಎಲ್ಲಿ ಸಿಕ್ಕಿದರಲ್ಲಿ ಬಿಗಿವರು . . . ಒಡನೆಗೆವರು ನಿಂದು ಕಾದುವರು (ವೋಪಕ. ೧೨-೯೩) ; ಅವನಕ್ಕ ಅವನನ್ನು ಎಳೆದು ಹಾಕಿ ನಾಲ್ಕು ಚೆನ್ನಾಗಿ ಬಿಗಿದರಂತೆ (ಹೊಸಕ್ಕ. ೦೦೯). ೧೯. (ಹೊಟ್ಟೆ ಬಿರಿಯುವಂತೆ) ತುಂಬು,_ ಭರ್ತಿಯಾಗು : ತನ್ನ ಉದರಂ ಬಿಗಿಯೆ ಗಬ್ಬನೆ ತೇಗುತಂ (ಬಸಪು. ೨೩-೩೦). ೨೦. ಸೆಟೆದುಕೊಳ್ಳು ; ಸೆಡೆ : ಬಿಗಿದ ನರಗಳ ತೆಱೆದ ನೊರೆ ವಾಯ ಉಱುಗಿ ಬಾಗಿದ ಶಿರದ . . . ಹೇಸಿಕೆಯು ನಾತವಧಿಕಭಯಂಕರವು (ಬಸಪು. ೯೬-೩೬) ; ಬಿಗಿದ ಸರಂಗಳುಬ್ಬರಿಪ ಬಲ್ಬಸಿಱ್ . . . ನಾತವುಂ ನೆಗಳ್ವ ತದಂಗಕಾರ್ದೆಱಗಿ ಝುಮ್ಮೆನುತೋಡುವ ಮಕ್ಷಿಕಾಳಿಗಳ್ (ವೃಕಂ. ೩೦-೩೩). ೨೧. ಸೆಳೆತದಿಂದ ಕೂಡಿರು ; ಎಳೆತವನ್ನು ಹೊಂದಿರು : ಗಾಯ ಒಣಗುತ್ತಾ ಬಂದಿರುವುದರಿಂದ ಬಿಗಿಯುತ್ತಿದೆ (ರೂಢಿ); ಅನಾರೋಗ್ಯದಿಂದ ಮೈ ಬಿಗಿಯುತ್ತಿದೆ (ರೂಢಿ). ☞ ಈ ಪದವು ಅನೇಕ ಶಬ್ದಗಳ ಮುಂದೆ ಸೇರಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ. 'ಏಟು ಬಿಗಿ, ಭಾಷಣ ಬಿಗಿ' ಇತ್ಯಾದಿ.

**ಬಿಗಿಬಿಗಿ** (ದ್ವಿರುಕ್ತಿ) : ಅಚಲಿತಭಕ್ತನು . . . ಹೊಳಚಿ ತಂದಾ ಸೆಕ್ಕೆಗಳನೊಳಗೊಳಗೆ ಶೋಧಿಸಿ ತನ್ನ ಕಂಬಿಯ ನೆಲಹಿನಿತ್ತರದಲ್ಲಿ ಸುತ್ತಲಾ ಸೆಕ್ಕೆ ಬಿಗಿಬಿಗಿದು (ಬಸಪು. ೯೩-೨೩) ; ಬಗಸೆಗೈಗಳಲಿ ನೀರ್ವಿಡಿವ ಶ್ರೀರಂಗೇಶ ಸೊಗಸುಗಾತಿಯರ ಮೇಲಿಡಲು ಒಗುವ ನೀರ್ಪೊಣ್ಮ ಸೈರಿಸದೆ ಶ್ರೀಹರಿಯನು ಬಿಗಿಬಿಗಿದಪ್ಪಿದರಾಗ (ಕಂನಪ. ೩೩-೦೩೩).

**ಬಿಗಿದುಕೊಳ್, ಬಿಗಿದುಕೊಳ್ಳು** = ೧. ಭದ್ರವಾಗಿ ಕಟ್ಟಿಕೊಳ್ಳು : ತನ್ನ ತೊಟ್ಟ ದಿವ್ಯಾಭರಣಂಗಳೆಲ್ಲವುಂ ಕಳದು ದಿವ್ಯಶರಧಿಗಳಂ ಬಿಗಿದುಕೊಂಡು (ಕಂಕಠಾ. ೪-೦೨ ವ). ೨. ಬಿಗುಮಾನವಾಗಿರು ; ಬಿಗಿಯಲ್ಲಿರು : ಇವತ್ತು ಹೀಗೆ ಯಾಕೆ ಬಿಗಿದುಕೊಂಡಿದ್ದೀಯೆ ಶಾಂತಾ ? (ಮೂರುದಾ. ೦೬೯) ; ಅವನೊಮ್ಮೆ ತನ್ನ ಮುಖ ನೋಡಿದರೆ ಸಾಕು . . . ಬಿಗಿದುಕೊಂಡ ಮುಖ ಹಸನ್ಮುಖವಾಗುತ್ತದೆ (ಕುಸುಕಂ. ೦೬೦).

**ಬಿಗಿದು ಬರು** = ಗಂಟಲಿನ ಸೆರೆಗಳು ಉಬ್ಬು ; ಗದ್ಗದವಾಗು : ಕಂಠವು ಬಿಗಿದು ಬಂತು. ಮುಂದೆ ಮಾತು ಹೊರಡದಾಯಿತು. (ದಾಂಪತ್. ೦೯).

[ದೇ.॥ ತಮಿ. ಪಿಕಿ ; ತುಳು. ಬಿಗಿ ; ತೆಲು. ಬಿಗಿಯು]

**ಬಿಗಿ₂** (ನಾ). ೧. ಭದ್ರವಾಗಿರುವಿಕೆ ; ಗಟ್ಟಿಯಾಗಿರುವಿಕೆ : ಅವರ ಹಾಸಿಗೆಯ ಗಂಟು ಬಿಗಿಯಾಗಿದೆ (ರೂಢಿ). ೨. ಬಲವಾಗಿರುವಿಕೆ ; ದುರ್ಬಲವಲ್ಲದಿರುವಿಕೆ : ಬಾವಿಯಿಂದ ನೀರು ಸೇದುವ ಹಗ್ಗ ಬಿಗಿಯಾಗಿರಬೇಕು (ರೂಢಿ). ೩. ಸಡಿಲತೆಯಿಲ್ಲದಿರುವಿಕೆ ; ಅಳ್ಳಕವಾಗಿಲ್ಲದಿರುವಿಕೆ : ನಿಱಿಯ ಬಿಗಿ ಪೈಸರಿಸೆ ಪೆಣ್ಮಿಂಚೆದಂಚಿದುಪ್ಪುಳ್ವಾಸಿಗೆಳೆ ದೊಯ್ದುಳನಿಯನಂ ಬಲ್ಪಿನಿಂದೆ (ಕೃಪುಶಾ. ೧೧-೦೯) ; ದೊಡ್ಡವನು ತೊಟ್ಟುಕೊಂಡ ಅಂಗಿಯು ಅವನ ಮೈಗೆ ಬಹಳ ಬಿಗಿಯಾಗುತ್ತಿತ್ತು (ಮುಂಬಯಿ. ೪-೬೯). ೪. ಮಜಬೂತಾದುದು : ಅವರ ಮನೆಯ ಬಾಗಿಲು ಬಿಗಿಯಾಗಿದೆ (ರೂಢಿ). ೫. ಕಟ್ಟುಪಾಡು ; ಭದ್ರತೆ ; ವ್ಯವಸ್ಥೆ : ಲಂಚ ಕಡಮೆಯಾಗಬೇಕಾದರೆ ಆಡಳಿತದಲ್ಲಿ ಬಿಗಿ ಮತ್ತು ದರ್ಪ ಹೆಚ್ಚಾಗಿರಬೇಕು (ಕಂಪಕಂ. ೦೬೩). ೬. ಕಟ್ಟುನಿಟ್ಟು ; ಬಿಗುವು : ಆ ಮಾತಿನಲ್ಲಿ ಬಿಗಿಯಿರದೆ ಸರಳಪ್ರಸನ್ನತೆ ಇದ್ದುದನ್ನು ಅರಿತು ಕೊಂಡು (ಚಿಕಂಪಾ. ೦೯) ; ಅವರ ಸ್ವಭಾವ ಬಿಗಿ. ಆದರೆ ಹೃದಯ ವಿಶಾಲವಾದದ್ದು (ಮರಳಿ. ೦೬೬). ೭. ಕಷ್ಟ ; ಕಠಿಣ ; ಜಟಿಲ : ಈ ಭಾವಸಂವೇದನೆಯೇ ಭ್ರಮೆಯೋ ಆ ಬುದ್ಧಿ ವಾದವೇ ಭ್ರಮೆಯೋ ಎಂಬುದನ್ನು ಹೇಳುವುದು ಬಿಗಿ (ಸಾಹಿ. ೦೦೯) ; ವೀಣಾ ಬಾರಿಸಲಿಕ್ಕೆ . . . "ರೂಢೀ ಮಾಡಿದರ, ಅಷ್ಟೇನೂ ಬಿಗೀ ಅಲ್ಲ" (ಗಂಗಾಸಾ. ೯೯). ೮. ಮನಸ್ಸು ಬಿಚ್ಚಿ ಮಾತನಾಡದಿರುವುದು ; ಬಿಗುಮಾನ :

ಹುಡುಗರ ಹತ್ತಿರ ಅವನು ಬಹಳ ಬಿಗಿಯಾಗಿರುತ್ತಿದ್ದ (ಕಾಶಿಪು. ೨೦೯); ಆಕೆ ಬಂದಾಗಿನಿಂದ ಮನೆಗೆ ಹೋಗುವವರೆಗೂ ಬಹಳ ಬಿಗಿಯಲ್ಲೇ ಇದ್ದರು (ರೂಢಿ). ೯. ಕುದುರೆ, ಎತ್ತು ಮುಂತಾದ ಪ್ರಾಣಿಗಳ ಜೀನನ್ನು ಭದ್ರಪಡಿಸಲು ಅವುಗಳ ಒಡಲಿಗೆ ಕಟ್ಟುವ ಚರ್ಮದ ಪಟ್ಟಿ; ತಂಗುಪಟ್ಟಿ: "ಕಾಮುಕರದೊಳೆಟ್ಟಿನ ಪಟ್ಟಿಯಲ್ಲಿ ಬಂಧನದೊಳಂ ದೊರೆಕೊಳ್ಗು ಬಿಗಿಯೆಂಬ ಶಬ್ದವು" (ಶಬ್ದಮ. ೮೨).೧೦. ಎರಡುತೋಳು ಗಳಲ್ಲಿ ಹಿಡಿಯಬಹುದಾದಷ್ಟು ಸೊಪ್ಪು, ಹುಲ್ಲು ಇತ್ಯಾದಿಗಳ ಕಟ್ಟು,—ಹೊರೆ: ಒಂದು ಬಿಗಿ ಹುಲ್ಲು ಕೊಡು (ರೂಢಿ). ೧೧. ಕುಸ್ತಿಯ ಒಂದು ವರಸೆ; ಮಲ್ಲಯುದ್ಧದ ಒಂದು ಪಟ್ಟು: ಬಿಡದೆ ಬಿಗಿಗಳ ಬಿಡಿಸಿ ಕಳಚುವರೊಡನೆ . . . ಬಿನ್ನಣ ಬಿಡಿಕೆಗಳ ಬಂಧದಲಿ ಹೆಣಗಿ ದರುಭಯಪಟುಭಟರು (ಅಂಬಿಕಾ. ೦೬-೨೦). ೧೨. [ಸಂಗೀತ] ತಂತೀ ವಾದ್ಯದಲ್ಲಿ ನಾದವನ್ನು ಹೆಚ್ಚಿಸುವ ಆರುಬಗೆಯ ಸಾಧನಗಳಲ್ಲಿ ಒಂದು: ಬಿರಟೆ ಚಕ್ಕು ಸನ್ನೆ ಬಿಗಿ ಜಬ್ಬು ಜೀವಾಳವೆಂಬಾಱು ಬಗೆಯಾದ ನಾದಕಟ್ಟುಗಳಿಂ ತಂತ್ರಿಗಳಂ ಪರಿಸಿ (ಶಿವತ. ೨೩೭).

**ಬಿಗಿಬಂದು**=ಭದ್ರವಾದ ಕಟ್ಟುಪಾಡು; ಸುವ್ಯವಸ್ಥೆ: ತೊಗರೆಯ ತೊಗೆ ಲೇಸು ಶಿಗುರಿಗೆ ಮೊಳೆ ಲೇಸು . . . ದೊರೆಗಳಿಗೆ ಬಿಗಿಬಂದು ಲೇಸು (ಸರ್ವಜ್ಞ. ೬೨೨). **ಬಿಗಿಬಂದು ಮಾಡು**=ಭದ್ರವಾಗಿ ಅಳವಡಿಸು; ಭದ್ರಪಡಿಸು: ರಂಧ್ರಗಳಲ್ಲಿ ಕಬ್ಬಿಣದ ಸಳಿಯು ಹಾಯ್ದು ಹೋಗಿ ಪತ್ರಗಳನ್ನೆಲ್ಲ ಸೂಚಿಯು ಕವಚಕ್ಕೆ ಬಿಗಿಬಂದು ಮಾಡಲು ಬರುವಂತೆ ಒಂದು ಬಗೆಯ ಯಾಂತ್ರಿಕವ್ಯವಸ್ಥೆಯಿರುತ್ತದೆ (ಗ್ರಂಥಾಲ. ೪೪). **ಬಿಗಿ ಮಾಡು** = ಭದ್ರಗೊಳಿಸು: ಹೀಗೆ ಬಿಗಿ ಮಾಡಿದ ನಂತರ ಅಕ್ಷರ ಮತ್ತು ಪಡಿಯಚ್ಚುಗಳ ಮುಖಭಾಗವನ್ನು ಕುಂಚ(Brush)ದಿಂದ ಚೊಕ್ಕಟಗೊಳಿಸಬೇಕು (ಮುದ್ರಣ. ೩೭). [< ಬಿಗಿ$_1$./ ತುಳು. ತೆಲು. ಬಿಗಿ]

**ಬಿಗಿಕಟ್ಟು** 'ಬಿಗಿಗಟ್ಟು' ನೋ.

**ಬಿಗಿಕಲ್ಲು** (ನಾ). ಕಮಾನಿನ ಕಟ್ಟಡವನ್ನು ಮೇಲುಭಾಗದಲ್ಲಿ ಸೇರಿಸುವ ಕಲ್ಲು; ನೆತ್ತಿಗಲ್ಲು: (ಶಿಸಂಗ್ರಾ. ೩೦). [ಬಿಗಿ$_1$+ಕಲ್ಲು (<ಕಲ್$_3$)]

**ಬಿಗಿಗಟ್ಟು**, ಬಿಕ್ಕಟ್ಟು, ಬಿಗಿಕಟ್ಟು (ನಾ). ೧. ಕಟ್ಟುಪಾಡು; ಬಿಗಿಯಾದ ನಿಯಮ,—ಅಂಕೆ: ತಮ್ಮ ನಾಡನ್ನು ಒಂದು ಬಿಗಿಗಟ್ಟಿನಲ್ಲಿ ಇಟ್ಟುಕೊಂಡು ಬಾಳುತ್ತಿದ್ದ ತಮಿಳರ ಬೇರಿಗೇ ಬಿಸಿನೀರನ್ನು ಎರೆದು . . . ಜಯಭೇರಿಗಳನ್ನು ಬಾರಿಸಿದರು (ಸವಿ. ೦೬೨). **ಬಿಕ್ಕಟ್ಟು**: ೨. ಭದ್ರವಾದ ಕಟ್ಟು,—ಬಂಧನ: ಬಿಕ್ಕಟ್ಟದು ಬಿಕ್ಕಟ್ಟು ಚೌಕಟ್ಟಿನ ಗುಟ್ಟು (ಅರಳು. ೪೦೩-೦೨). ೩. ಕಷ್ಟ; ತೊಂದರೆ: ಆ ಗುಡ್ಡದ ಮೇಲಿಂದ ಆಚೆ ಕಡೆಗೆ ಹೋಗಬೇಕಾದರೆ, ಜೀವಕ್ಕೆ ಅಪಾಯಪಡಿಸುವಂಥ ಬಿಕ್ಕಟ್ಟಿನ ಘಟ್ಟಗಳುಂಟು (ಮುಂಬಯಿ. ೩-೦೬); ಹರಿಕುಲಿಶನಿಗೆ ಬಿಕ್ಕಟ್ಟಿನ ಪರಿಸ್ಥಿತಿ ಯೊದಗಿತು (ಮಹಿಸ. ೦೦೧). ೪. ಸಂದಿಗ್ಧಪರಿಸ್ಥಿತಿ; ಇಕ್ಕಟ್ಟು: ಚಾರುಪೊನ್ನೇರನು . . . ರಾಷ್ಟ್ರಕೂಟಸಾಮ್ರಾಜ್ಯದಲ್ಲಿ ಬಿಕ್ಕಟ್ಟು ತಲೆದೋರಿದಾಗ ತನ್ನ ನಿಷ್ಠೆಯನ್ನು ತಲಕಾಡುಗಂಗರ ಕಡೆಗೆ ಸರಿಸಿದನು (ಮೊಳಂಬ. ೨೭); ಇಂಥ ಬಿಕ್ಕಟ್ಟಿನಲ್ಲಿ ಧೈರ್ಯದಿಂದ ನೀವು ಇದ್ದೀರಲ್ಲ! (ಬಿದುಃ. ೬೩). **ಬಿಗಿಕಟ್ಟು**: ೫. ಸಾಹಿತ್ಯಿಕರಚನೆಗಳಲ್ಲಿ ಇರುವ ಗಾಢವಾದ ಸಂಬಂಧ,—ಹೊಂದಾಣಿಕೆ: ಇವುಗಳಲ್ಲಿ ಬಿಗಿಕಟ್ಟೂ ಇಲ್ಲ, ಹೊಸತನವೂ ಇಲ್ಲ (ಸಾಹಿವಿ. ೬); ಈ ಪ್ರಸ್ತಾರದ ಮತ್ತು ಲಯದ ಬಿಗಿಕಟ್ಟಿಲ್ಲದೆ ಕೀರ್ತನೆಗಳು ಸಹಜಮನೋಹರವಾದ ಗೇಯತೆಯನ್ನು ಪಡೆದುದು ಹರಿದಾಸಸಾಹಿತ್ಯದ ವೈಶಿಷ್ಟ್ಯವೆಂದು ತೋರುತ್ತದೆ (ಕಸಾಚ. ೨೯೭). [ಬಿಗಿ$_2$ + ಕಟ್ಟು$_2$. / ಮರಾ. ಬಿಕಟ]

**ಬಿಗಿಗೊಳಿಸು** (ಕ್ರಿ). ೧. ಎಳೆದು ಭದ್ರಗೊಳಿಸು; ಬಿಗಿಮಾಡು: ನಿರೂಪಣೆ . . . ಒಂದು ಎಳೆಯಿಂದ ಇನ್ನೊಂದು ಎಳೆಯನ್ನು ಬಿಗಿಗೊಳಿಸುವ ಹೆಣಿಕೆಯ ರೀತಿಯಂತೆ . . . ನಡೆಯುತ್ತದೆ (ಹೊಸಕ. ೨೯೨). ೨. ಬಂದೋಬಸ್ತು ಮಾಡು; ಕಟ್ಟುನಿಟ್ಟಾಗಿರುವಂತೆ ಮಾಡು: ಸಿಂಹಾಸನವನ್ನೇರಿದ ಕೂಡಲೇ ಆಡಳಿತವನ್ನು ಬಿಗಿಗೊಳಿಸಿ ಸಮಸ್ತ ಅಧಿಕಾರವನ್ನು ತನ್ನಲ್ಲಿ ಕೇಂದ್ರೀಕರಿಸಿಕೊಂಡನು (ಶ್ರೀದೇವ. ,೪).

[ಬಿಗಿ$_2$ + ಕೊಳ್$_1$ + — ಇಸು$_3$]

**ಬಿಗಿತ** (ನಾ). ೧. ಕಟ್ಟಿದುದು; ಕಟ್ಟು: ಬೇಕಾದಾಗ ಸುಲಭವಾಗಿ ಈ ಬಿಗಿತವನ್ನು ಸಡಿಲಿಸಿ ಬೇರೆ ಪತ್ರಗಳನ್ನು . . . ಸೇರಿಸಿಕೊಳ್ಳಲು ಬರುವಂತೆ ಇರುತ್ತದೆ (ಗ್ರಂಥಾಲ. ೪೪). ೨. ಗಟ್ಟಿ; ಭದ್ರ: ಕರವು(ವು)ಡಿ ಸಾಸಿವೆ ಲೋಯಿಸರದ ತಿರುಳೆಂಬಿವನಿಟ್ಟಡಸಿ ಬಿಗಿತಾಗಿ ಕಟ್ಟಲ್ ನಿಡಪೊಂಗುಡಿದಿರ್ದ ಕೆಯ್ಗ ಭಂಗಂಬಡುಗುಂ (ಲೋಕೋಪ. ೯-೩೩). ೩. ಗಟ್ಟಿಯಾಗಿ ಕಟ್ಟುವಿಕೆ; ಭದ್ರಗೊಳಿಸುವಿಕೆ: ಬಿಗಿತಂ ಬಿಗಿತಂಗಳ್ (ಶಬ್ದಾಮ. ೩೩೪ ಪ್ರಯೋ); ಉಪನಾಹಃ, ನಿಬಂಧನಂ—೨ ವೀಣೆಯ ತಂತಿ ಕಟ್ಟುವ ಬಾಯಿಗೂ ಬಿರಡೆಗಳಿಗೂ ಕಟ್ಟಿನ ಬಿಗಿತಕ್ಕೂ ಹೆಸರುಗಳು (ಸಿದ್ಧಾಂತ. ೩೯). ೪. ಎಳೆತ; ಸೆಳೆತ: ಬೆನ್ನು ಬಿಗಿತದಿಂದ ಯಾವ ಕೆಲಸವನ್ನೂ ಮಾಡಲಾಗಲಿಲ್ಲ (ರೂಢಿ). ೫. ಹೊಡೆತ; ಪೆಟ್ಟು; ಏಟು: ಅವರು ಎರಡು ಬಿಗಿತ ಬಿಗಿದು ಹುಡುಗನನ್ನು ಕರೆತಂದರು (ರೂಢಿ). [ಬಿಗಿ$_1$ + — ತ$_2$]

**ಬಿಗಿತರ್ಬು** (ಕ್ರಿ). ಗಾಢವಾಗಿ ಆಲಿಂಗಿಸು; ಬಿಗಿಯಾಗಿ ಅಪ್ಪು: ತೊಳ್ತಾಕೆ ಬಿಗಿತರ್ಬಿ ಮಗುವನೊತ್ತಿಟ್ಟದರ ಬಾಯಲ್ಲಿ ಸೇರ್ದ ಮಣ್ ಗಟ್ಟಿಯಂ ತೆಗೆವಂತೆ (ಸೌಂದ. ೩-೪೭). [ಬಿಗಿ$_1$+ತರ್ಬು$_1$ (< ತಬ್ಬು$_1$)]

**ಬಿಗಿನೇಣು** (ನಾ). ಕಟ್ಟುವ ಹಗ್ಗ: ವಿಗಡದ ಪುಲಿ ಕರಡಿಗಳ ಬಿಗಿನೇಣ ಪಱಿದು ಕಾದುವ ವೀರರ ಮೊತ್ತ ಸೊಗಸ ಬೀಱುದುದೋಲಗದೆ (ಕಂಪಿ. ೨೦-೯೬). [ಬಿಗಿ$_1$ + ನೇಣು (< ನೇಣ್$_1$)]

**ಬಿಗಿಪಡಿಸು** (ಕ್ರಿ). ಭದ್ರಗೊಳಿಸು: ಜೋಡಿಸಿದ ಮೊಳೆಗಳ ಕರಡುಪ್ರತಿಯನ್ನು ತೆಗೆದು . . . ಮುದ್ರಣಕ್ಕೆ ಅಣಿ ಮಾಡುವಂತೆ ಚೇಸ್‌ನಲ್ಲಿ ಬಿಗಿಪಡಿಸಬೇಕು (ಮುದ್ರಣ. ೩೭). [ಬಿಗಿ$_2$ + ಪಡು$_1$ + — ಇಸು$_3$]

**ಬಿಗಿಪು** (ನಾ). ೧. ಬಂಧನ; ಬಿಗಿತ; ಕಟ್ಟು: ಕರ್ಮಬಂಧದ ಬಿಗಿಪೊಯ್ಯನೊಯ್ಯನೆ ಸಡಿಲ್ದಿರೆ (ಅಂಕ. ೬-೭); ಪದಮಲರ್ಗಳಂದದಿಂ ಬಂಧದ ಬಿಗಿಪಿನೊಳೊಂದಿ ನಿಲೆ ಸಮುಜ್ಜ್ವಳಕಾಂತಿ (ವರ್ಧಮಾ. ೦-೦೦); ತೋಳ ಬಿಗಿಪೊಂದಿರೆ ಕೋಡುತಳಂಗಳಂ ಸಮಂತೊಡನೊಡನಪ್ಪಿದರ್ ಭರದ ಕಾಳಸೆಯಂತಿರೆ ತಮ್ಮೊಳಿರ್ವರುಂ (ಕಾವ್ಯಸಾ. ೬೩೭). ೨. ದೃಢತೆ; ದಾರ್ಢ್ಯ; ಗಟ್ಟಿತನ: ಬಿಗಿಪು ಸಡಿಲ್ದು ಪಲ್ಗಳಿನಿಸುಂ ಚಲಿಸುತ್ತಿದೆ ಮೆಯ್ಯ ನುಣ್ಪೊವಲ್ . . . ಸುರ್ಕುತಿದೆ (ಜೀವಂ. ೬-೨೪೪). ೩. ಬಿರುಸು; ಕರ್ಕಶತೆ: ಬಿಗಿಪಿಂ ಬಿಣ್ಪೊಲೆ ಪೊಂಗಿ ಪೊಣ್ಮಿದೊಡಂ (ಜೀವಂ. ೬-೨೩೯). [ಬಿಗಿ$_1$ + — ಪು$_2$]

**ಬಿಗಿಮುಷ್ಟಿ** (ನಾ). (ಆಲಂ) ಭದ್ರವಾದ ಹಿಡಿತ; ಬಿಗಿಯಾದ ಹತೋಟಿ: ಈ ಬಿಗಿಮುಷ್ಟಿಯಲ್ಲಿರುವ ಮೈಸೂರು ಭದ್ರವಾಗಿಯೇ ಉಳಿಯುವುದು (ದಾಂಡ. ೦೪). [ಬಿಗಿ$_2$ + ಮುಷ್ಟಿ$_2$]

**ಬಿಗಿಮೊಗ** (ನಾ). ಬಿಗಿದುಕೊಂಡಿರುವ ಮುಖ: ಅರುಣತವೆತ್ತ ಮೆಯ್ಬಿಗಿಮೊಗಂ . . . ಚಿತ್ರಿತವೇತ್ರದಂಡಮೊಪ್ಪಿರೆ ಸಹವಾಸಿಗಳ್ ತಳರ್ದರಾತ್ಮನಿಯೋಗನಿವಿಷ್ಟನಿಷ್ಟಿತರ್ (ಶಾಂತೀಶ. ೦೩-೬೯). [ಬಿಗಿ$_1$ + ಮೊಗ]

**ಬಿಗಿಮೊಳೆ** (ನಾ). ೧. (ಕೀಲನ್ನು) ಭದ್ರಪಡಿಸುವ ಮೊಳೆ,—ಆಣಿ: ಗುಡಿಯೊಡೆಯಂಗೆ ಕಂಭವೊಂದು ಬಿಗಿಮೊಳೆಯೊಂಟು ಕಂಭಕ್ಕೆ ಕಟ್ಟಿದ ಆಧಾರದಾರವೈದು (ಮನಸುಗುಂ. ಕ. ೨೬೦-೩೭). ೨. "ಹಡಗುಕಟ್ಟಡದಲ್ಲಿ ಉಪಯೋಗಿಸುವ ಒಂದು ತೆರದ ಬಿಗಿಮೊಳೆ" (Dump. ಇಂಕಿಪಿ). [ಬಿಗಿ$_1$ + ಮೊಳೆ$_2$]

**ಬಿಗಿಯುಪ್ಪು** (ಕ್ರಿ). ಗಾಢವಾಗಿ ಆಲಿಂಗಿಸು, _ ತಬ್ಬು : ಕಳಿದುವು ಮೆಯ್ಯ ಸುಯ್ಯ ಪದಪೆಂಕೆಗಳಂ ಬಿಗಿಯುಪ್ಪಿದಪ್ಪುಗಳ್ (ಕಂಪಟಾ. ೩-೨೬); ಬಾ ಸುತಯೆನುತೆ ತೆಗೆದು ಬಿಗಿಯುಪ್ಪಿ (ಶಬ್ದಮ. ೩-೦೬) ; ಹಸುಳೆಯುದಟನ ನುಡಿಯು ಕೇಳಿದು ನಸುನಗುತ ಧರ್ಮಜನು ಘನಪೌರುಷವು ನಿನಗುಂಟೆಂದು ಕಂದನ ತೆಗೆದು ಬಿಗಿಯುಪ್ಪಿ (ಕುಮ್ಮಾದ್ರೋ. ೯-೩೬).

**ಬಿಗಿಯುಪ್ಪಿಕೊಳ್** = ಬಿಗಿಯಪ್ಪು : ನೀಜನ ಕರ ಬಿಗಿಯುಪ್ಪಿಕೊಂಬೆನು ಬೆಚ್ಚಂತೆ (ಕಂಪಟಿ. ೯-೦೦೮). [ಬಿಗಿ$_1$ + ಅಪ್ಪು$_1$]

**ಬಿಗಿಯಿಸು**, ಬಿಗಿಸು (ಕ್ರಿ). ೧. ಕಟ್ಟು ; ಬಂಧಿಸು : ತ್ರಿಗುಣಿಸೆ ನಯನವಿಭೂಷಾಂಶುಗಳಲಿನ ರುಚಿಯುನಲಗನೆರಡುಂ ಕೈಯೊಳ್ ತ್ರಿಗುಣಿಸಿ ಚಿತ್ರಂಬಡೆದಳ್ ಬಿಗಿಯೆ ಕುಚಂ ಬಿಗಿಯಿಪಂತು ಕಂತುಗೆ ದೋಣೆಯಂ (ಜಗಪ. ೩-೦೬). **ಬಿಗಿಸು** : ೨. ಕಟ್ಟಿಸು ; ಬಂಧಿಸುವಂತೆ ಮಾಡು : ಕಳ್ಳರಿಕ್ಕೆಗಳಂ ಬಿಗಿಸಿ ತೊದಲಂ ನುಡಿಸಿ ಸುಳ್ಳು ನಾಲಗೆಯು ನಡುಗಿಸುತರವನೆರೆಗುಂ (ಅಭಿನ. ೬೬-೦೯೦). ೩. ನಿರ್ಮಿಸು ; ರಚಿಸು ; ಕಲ್ಪಿಸು : ನಗರದುಪಕಂಠದಲಿ ಕೋಟೆಯ ಬಿಗಿದು ಬಿಡಿಸಿದನಧ್ವರಕೆ ಸಲುವಗಣಿತಾಖಿಳವಸ್ತುಗಳ ನೆರಹಿದನು ನರನಾಥ (ತೊರವಾ. ೦-೬-೯). ೪. ಕುದುರೆಗೆ ತಂಗುಪಟ್ಟಿಯನ್ನು ಕಟ್ಟಿ ಸಿದ್ಧಪಡಿಸು : ಚಂದ್ರಹಾಸಂ . . . ಬಳಿಕ ಬಿಗಿಸಿ ನಿಜವಾಜಿಯುಂ ಬಂದಡರ್ದನು (ಕ್ಷೈಮಿಭಾ. ೩೦-೯೨). ೫. ಹೊಡೆಸು ; ಥಳಿಸುವಂತೆ ಮಾಡು : ಅವನಿಗೆ ನಾಲ್ಕು ಬಿಗಿಸಿದರೆ ಸರಿ ಹೋಗುತ್ತಾನೆ (ರೂಢಿ).

**ಬಿಗಿಸಿಕೊಳ್ಳು** = ೧. ಕಟ್ಟಿಸಿಕೊಳ್ಳು : ಕಾಳಗದೊಳೆಲ್ಲರಸಿಕ್ಕಿಪ್ಪುವ ಬಿಗಿಸಿಕೊಂಡವರಲ್ಲವೇ (ಕುಮ್ಮಾಕ. ೯-೯೯). ೨. ಹೊಡೆಸಿಕೊಳ್ಳು; ಪೆಟ್ಟು ತಿನ್ನು : ನೀನು ಹೀಗೆ ಒಂದೇ ಸಮನೆ ಹಠ ಹಿಡಿದರೆ ಚೆನ್ನಾಗಿ ಬಿಗಿಸಿಕೊಳ್ಳುತ್ತೀಯೇ (ರೂಢಿ). [ಬಿಗಿ$_1$ + —ಇಸು$_3$]

**ಬಿಗಿಯುಡುಪು** (ನಾ). ಸಡಿಲವಾಗಿಲ್ಲದಿರುವ ತೊಡುಗೆ ; ಮೈಗೆ ಅಂಟಿಕೊಂಡಿರುವ ಉಡುಗೆ : ಬೇಸಿಗೆಯಲ್ಲಿ ಬಿಗಿಯುಡುಪುಗಳನ್ನು ಧರಿಸಿದರೆ ತುಂಬ ಸೆಕೆಯಾಗುತ್ತದೆ (ರೂಢಿ). [ಬಿಗಿ$_1$ + ಉಡುಪು]

**ಬಿಗಿಯುಡೆ** (ನಾ). = ಬಿಗಿಯುಡುಪು : ಅವಳು . . . ರೇಷ್ಮೆಯ ಬಿಗಿಯುಡೆಯನ್ನು ಧರಿಸಿದ್ದಳು (ಕೃಷರು. ೯೨೦). [ಬಿಗಿ$_1$ + ಉಡೆ$_2$]

**ಬಿಗಿವಡು** (ಕ್ರಿ). ಕಟ್ಟಲ್ಪಡು ; ಜೋಡಣೆಯಾಗು : ಬಲಗಡೆಗಾಗಿ ಬಾಗಿ ಬಿಗಿವಟ್ಟುಟಿ$^3$ ಬಟ್ಟಿತೆಂಬಿನಮುಲ್ಲರ ಸರಂಗಳೊತ್ತರಿಸೆ (ಕಳಾಪ. ೩-೬). [ಬಿಗಿ$_2$ + ಪಡು$_1$]

**ಬಿಗಿವಡೆ** (ಕ್ರಿ). ೧. ಬಂಧನಕ್ಕೊಳಗಾಗು ; ಸೆರೆ ಸಿಕ್ಕು ; ಕಟ್ಟುಬೀಳು : ಅಡವಿಯಲಿ ಫಣಿಭೋಗದಲಿ ಬಿಗಿವಡೆದು ಬಳಲಿದ ಭೀಮಸೇನನ ಬಿಡಿಸಿದನು ಯಮಸೂನು ಧರ್ಮಕಥಾಪ್ರಸಂಗದಲಿ (ಕುಮ್ಮಾಅ. ೦೩ ಸೂಚನೆ); ರಾವಣಸುತನಿನುಬುಜಭವಾಸ್ತ್ರದಲಿ ಬಿಗಿವಡೆದನಾ ಹನುಮ (ತೊರವಾ. ೩-೬ ಸೂಚನೆ). ೨. ಅಳವಡಿಕೆಯಾಗು ; ಹೊಂದಿಕೊಂಡಿರು : ಮುಂಗುರುಳೊಳು ಬಿಗಿವಡೆದಿಹ ಮಣಿಯ ಕುಚ್ಚುಗಳ . . . ಕಡುಚೆಲುವೆಯರೆಸೆದಿಹರು (ಕಂಪಟಿ. ೬-೦೦೯). ೩. ಉಬ್ಬು; ಗರ್ವಿಸು : ದೊರೆಕೊಂಡ ಪೊಸ ಸೊಗದ ಸುಗ್ಗಿಯ ಸುರ್ಗಿನೊಳ್ ಬಿಗಿವಡೆದಗ್ಗದ ಸಗ್ಗದ ಜೋಸೆಯರೊಂದು ನೆರವಿಯೊಳ್ ದೇಸಿಯಿಂ ಬೆರೆದಾಗಳುಂ ಬನದಿಸುತ್ತ (ರಾಮಾಶ್ವ. ೦೩೬-೦೭). ೪. ಕಠಿಣವಾಗು; ದೃಢವಾಗು : ಸತ್ಕ್ಷೋಮಲಾಂಗಿಯ ಪೇರುರದಿ ಹೇಮಾಬ್ಜಮುಕುಳಸ್ತನ ಬಿಗಿವಡೆದಿರೆ ಭ್ರಾಮಕಗೊಂಡು ವೀಕ್ಷಿಸಿದ (ವೋಹತ. ೦೬-೩೬). [ಬಿಗಿ$_2$ + ಪಡೆ$_1$]

**ಬಿಗಿಮಾತು** (ನಾ). ಗಂಭೀರವಾದ ಮಾತು : ಬಿಗಿಮಾತು ಮೆಲ್ಲಮಾತು ನಗೆಮಾತು . . . ಸೊಗವಾತುಗಳಿಂದ ಸೊಗಸ ಕಿವಿಗೆ ಸೂಸುವುದು (ಶಕಪಿ. ೬-೦೫೬ ಸಾಂಗತ್ಯ). [ಬಿಗಿ$_2$ + ಮಾತು$_1$]

**ಬಿಗಿವಿಡಿ**, ಬಿಗಿಹಿಡಿ (ಕ್ರಿ). ೧. ತಡೆ; ನಿಗ್ರಹಿಸು; ಹತೋಟಿಯಲ್ಲಿಟ್ಟುಕೊಳ್ಳು : ನೀನಡಕಮಿರವೇಟ್ಕುಂ ; ಸಿಡಿಲ್ದುಗುವ ಸೂರ್ಕರ್ನುಡಿ ಬಿಗಿವಿಡಿಯವೇಟ್ಕುಂ (ಬಿದ್ಧಕ್ರ. ೦೯-೩೪೨). **ಬಿಗಿಹಿಡಿ** : ೧. ಪರರ ರೀತಿಗೆ ಹರಿವ ಮನವನ್ನು ಬಿಗಿಹಿಡಿದು . . . ವರಸನಾತನಧರ್ಮವೇ ಮಾನ್ಯವೆಂದದನು ಧರಿಸಿ ತಲೆಯಲ್ಲಿ ಮರೆಯದೆ ಪೂರ್ವಿಕರನು (ಕವೃ. ೦೫-೩) ; ಅವಳು ಉಕ್ಕಿ ಬರುತ್ತಿದ್ದ ನಗುವನ್ನು ಪ್ರಯಾಸದಿಂದ ಬಿಗಿಹಿಡಿದಳು (ಕೃಷರು. ೩೨೨). ೨. ಗಟ್ಟಿಯಾಗಿ ಹಿಡಿದುಕೊಳ್ಳು : ಭದ್ರವಾಗಿ ಹಿಡಿ : ಈ ಕುದುರೆಯೇರಿ, ಲಗಾಮು ಬಿಗಿಹಿಡಿದು ಸವಾರಿ ಮಾಡುವುದಷ್ಟು ಸುಲಭವಲ್ಲ (ಕಂಪಮು. ೩೦-೨೦).

**ಬಿಗಿ ಹಿಡಿದುಕೊಳ್ಳು** = ಅಂಕೆಯಲ್ಲಿಡು; ಹಿಡಿತಕ್ಕೆ ತರು : ಅವಳು . . . ಮನಸ್ಸನ್ನು ಬಿಗಿ ಹಿಡಿದುಕೊಂಡು ರೋಗಿಯ ಪರೀಕ್ಷೆ ಮಾಡಹೊರಟಳು (ಕುಂಕುಮ. ೮೯). [ಬಿಗಿ$_1$ + ಹಿಡಿ$_1$]

**ಬಿಗಿವೊಂದು** (ಕ್ರಿ). ಬಿಗಿಕಟ್ಟಿನಿಂದ ಕೂಡಿರು ; ಬಿಗಿಯಾದ ಬಂಧವನ್ನು ಹೊಂದು : ಅಚ್ಚಗನ್ನಡಂ ಬಿಗಿವೊಂದಿರೆ ಕಬ್ಬಿಗರ ಕಾವನೊಲವಿಂದೊರೆದಂ (ಕಬ್ಬಿಕಾ. ೦೬). [ಬಿಗಿ$_2$ + ಒಂದು$_1$]

**ಬಿಗಿಸು** 'ಬಿಗಿಯಿಸು' ನೋ.

**ಬಿಗಿಹಿಡಿ** 'ಬಿಗಿವಿಡಿ' ನೋ.

**ಬಿಗು** 'ಬಿಗುವು' ನೋ.

**ಬಿಗುಗಟ್ಟು** (ನಾ). ಬಲವಾದ ಕಟ್ಟು; ಬಿಗಿಯಾದ ಬಂಧನ : ಜಗದ ಜಂಜಡದ ಕವಡುಮಾಯೆಯ ಬಿಗುಗಟ್ಟಂ ಕಟ್ಟುವಡೆದಾಂ . . . ಬಲ್ಲಿದರ ನೆರೆಯ ಮಣಿಯ ನೆರವಂ ಪಾರುತುಮಿರ್ಪೊಡಾದೆ (ರಾಮಾಶ್ವ. ೦೧೯-೮). 'ಬಿಗಿಗಟ್ಟು' ಪರಾ. [ಬಿಗು (<ಬಿಗುವು) + ಕಟ್ಟು$_1$]

**ಬಿಗುಡು** (ನಾ). ಬೇನೆ ; ನೋವು : ಉಪ್ಪುನೀರಂ ದಿನಂಪ್ರತಿ ಪಾಕತನದಿಂದ ತಪ್ಪದೇ ಹೀರಿದಾ ತಲೆಬಿಗುಡು ಗಗನದೊಳಗೊಪ್ಪದಿಂ ಪರಿವ ದೇವಾಪಗೆಯ ಮಧುರತರವಾರಿಯ ಹೀರಿ ಹೀರಿ ಚಪ್ಪರಿಸಿವಲ್ಲದೇ ಹೋಗದೆಂದೆನುತುಮಾ ನೆಪ್ಪಿಂಗೆ ತದ್ವನಧಿಯಿಂದ ವಡಬಾಗ್ನಿಯೋ ಉಪ್ಪರಿಸಿ ನೆಗೆವಂತೆ ಉಷ್ಣಕಿರಣಂ ಮೂಡಿ ನೆಗೆದುದಂಬರತಳಕ್ಕೆ (ಸಮ್ಮಕಾ. ೦೨-೯). 'ಬಿಗಡ$_2$' ಪರಾ. [ಬಿಗು (< ಬಿಗುವು) + — ಡು$_1$]

**ಬಿಗುನಡೆ** (ನಾ). ಕುದುರೆಯ ಒಂದು ಬಗೆಯ ನಡಗೆ : "ರೇಚಿತಂ— ಬಿಗುನಡೆ, ಜಾರುನಡಿಕೆ, ನೀಡುನಡಿಕೆ" (ಸಿದ್ಧಾಂತಿ. ೨೩೦). [ಬಿಗು$_1$+ನಡೆ$_2$]

**ಬಿಗುಪು**, ಬಿಗುಹು (ನಾ). ೧. ಭದ್ರವಾದ ಜೋಡಣೆ ; ಬಿಗಿಯಾದ ಸೇರುವೆ : ಕೂವಕಂಭಂ ಮುಱಿಯೆ ಬಂಧಂ ಬಿರಿಯೆ ರಣಂ ಮುಱಿಯೆ ಕೀಲ್ ಕಟಲೆ ಬಿಗುಪು ಬಟಲೆ . . . ನಾವಿಕಾಜನಮೆರ್ದೆಗೆಟ್ಟು ಬಾಯ್ಬಿಟ್ಟು ಸುಯ್ಯು (ಕಂಹಂ. ೯-೦೯ ವ); ಇಸೆ ಬಗೆಯನುರ್ಚೆ ಧೈರ್ಯದ ಬೆಸುಗೆಯ ಬಿಗುಪಂ ಸಡಿಲ್ಚಿ (ವೃಷಪಿ. ೨೮-೨೦). ೨. ದೃಢತೆ ; ಬಿರುಸುತನ : ಭವಪಾಶದ ಪುದಿದ ಬಲ್ಕಟ್ಟು ಸಡಿಲುವ ತೆಱದಿ ಸಡಿಲಲಂಗದ ಬಿಗುಪು ಗರ್ಭಿಣಿಗೆ ನವಮಾಸ ಪೂರ್ಣವಾದುದು (ಭಾವಚಂ. ೩-೫೬). ೩. ಶಿಸ್ತು : ಕತ್ತೆತ್ತಿಕೊಂಡು ಸಿಪಾಯಿಗಳಂತೆ ಬಿಗುಪಿನಿಂದ ನಡೆಯುತ್ತಿದ್ದರು (ಸನ್ನಕ. ೦೯). ೪. ಗರ್ವ; ಠೀವಿ; ದರ್ಪ : ದುರ್ಬಲಂ ನಿನ್ನ ಒಳ್ಪಱಿವು ಇಲ್ಲಿ. ಏತಕೆನೆ, ಬೇರಿತಾರಯ್ಕೆಯಿಲ್ಲದ ಬಱಿಬಗೆಯ ಬಿಗುಪೊಂದೆ ವ್ಯರ್ಥಂ (ಬಿದ್ಧಕ್ರ. ೫೯-೦೦೬೩). ೫. ರಭಸ; ಜೋರು : ಬಲ್ಲುಲೇಸು ಗೆಲವರಿದೆಂಬಂತೆ ಬಿಗುಪು ಲೇಸು ಕಳನ ಮೇಗರಿದೆಂಬಂತೆ (ಧರ್ಮಾಮೃ. ೬-೬೦); ಕಾಳಗವೇ ಜೀವಾಳವಾಗಿರುವ ಬಯಲಾಟದಲ್ಲಿ, ಬಯಲಿನಲ್ಲಿ ಕುಣಿತ, ಬಡಿದು ರೂಢಿಯಾದ ಈ ವಾದ್ಯಕಾರರ ಕೈಗೆ ಬಿಗುಪು ಹೆಚ್ಚು ; ಅಬ್ಬರ ಹೆಚ್ಚು (ಯಕ್ಷಬ. ೯೦). **ಬಿಗುಹು** : ೧. ವಾನರರು ಹೊಡಿಲೆಡೆಗೆಡೆಗೆ ಜಱಿವಾ ಮಣ್ಣ ಬೆಟ್ಟಂಗಳ ಬಿಗುಹದೆನಿತು

(ಜಸಹೊ. ೦೯-೩೦) ; ನಾಗಂಗಳ ಬಿಗುಹು ಸಡಿಲಿತು ಧರಣಿ ನೆಗ್ಗಿತು (ಕುಮ್ಮಾರ್ಭ್ರ. ೩-೩೫) ; ಉಗುರುಸೋಂಕಿನಲಬುಜಜಾಂಡದ ಬಿಗುಹು ಬಿಡುವುದು (ಕೊಕಲ. ೩-೯-೧೦). ೨. ಆರು ಮರುಳಾಗರು ವಧೂಟಿಯ ತೋರವೊಲೆಗಳ ಬಿಗುಹನೀಕ್ಷಿಸಿ (ಬಸಪು. ೯೦-೬); ತಳಿತ ರೋಮದ ತೋಳ ಬಿಗುಹಿನ ಕಲಿಗಳಿದ್ದುದು ಕಲಿತ ಘನ ರೌದ್ರಾತಿರೇಕದಲಿ (ಕೊಕಲ. ೬-೧೦-೬). ೩. ಪಿಸುಣಿಗರ ಒಂದು ಪರಿ ವಾರವೆ ದರ್ಬಾರಿನ ಸುತ್ತಲೂ ಅದರ ಬಿಗುಹನ್ನು ಶಿಥಿಲ ಮಾಡಲು ಸುಳಿದಾಡುತ್ತಿದೆ (ಸೂಕಿಮ. ೬೩). ೪. ಬಿಗುಹಿನೊಳ್ ಕೆಲಕೆಲಬರಂ. . . ಮೈದೆಗುಹಿನೊಳ್ ಕೆಲಕೆಲಬರಂ ಮರುಳ್ಮಾಡುತೀಶ್ವರನಡಿಯಿಡುತ್ತಿರ್ದನು (ಕಂಪು. ೦೯-೩೫) ; ಬಿಗುಹ ಬಿಡಿಸುವೆನಿಂದಿನಾಜಿಯೆ ಾಳ್ಳೀಸು ಮೈದೆಗೆಯ ದಿರು (ಕುರುಂಸ. ೬೩-೩೯). ೫. ಕರತಳದ ಬಿಗುಹಿಗೆ ಕುಲಮಹೀಧರ ಕಳಲಿದವು (ಕೊರರಾ. ೬-೩-೦೩). ೬. ಬಿಗುವಮಾನ ; ಬಿಂಕ : ಮುಸುಡ ಬಿಗುಹಿನ ಸೆಳೆದಡಾಯುಧ ಹೊಸಪರಿಯ ಬಿರುದುಗಳ ಗಜರಥವಿಸರ ಮಧ್ಯದಲೆಂಟುಸಾವಿರರಥಿಕರೌಂಕಿದರು (ಕುಮ್ಮಾರ್ಭ್ರ. ೦-೩೬); ದೇಸಾಯ ರೊಬ್ಬರೇ ಕಟ್ಟೆಯನ್ನು ಬಿಗುಹಿನ ಆದರದಿಂದ ಸ್ವಾಗತಿಸಿದರು (ಗಂಪೂಪು. ೯೪). ೭. ಜೊತೆ ; ಸಂಬಂಧ : ಹೊಗಳುಭಟ್ಟರ ಸಾಲ ಕೈದೀವಿಗೆಯ ಕಹಳಾರವದ ಅಗ್ಗಿಯ ಬಿಗುಹಿನಲಿ ಕುರುರಾಯ ಬಂದನು ರಾಜಮಂದಿರಕೆ (ಕುಮ್ಮಾಭ. ೫-೩). ೮. ಸೆಳೆತ ; ಹಿಡಿತ ; ವಶ : ಮೇಲುಸುರ ಬಿಕ್ಕುಳಿನ ಬಿಗುಹಿನ ತಾಳಿಗೆಯ . . . ನರನಾಥ ತೆಗೆದಪ್ಪಿದನು ಫಲುಗುಣನ (ಕುಮ್ಮಾಭ. ೦೬-೦); ಅರಿನೃಪರು ಮೈದೆಗೆವರುಲ್ಕಾಪಾತಭೀತಿಯ ಬಿಗು ಹಿನಲಿ ಬಹಳಪ್ರತಾಪವದೆಂತೊ ದಶರಥನ (ತೊರರಾ. ೦-೩-೨೩); ಶೋಕದ ಬಿಗುಹಿನಲಿ ಚೆಂಡಾದ ಮಾತೆಯ ನಗೆವೊಗದಿ ನಗಿಸುತ್ತಲೊಡಬಡಿಸಿದನು ಶೋಕವನು (ಕೃಷ್ಣಾಗಾ. ೯-೨೬). ೯. ಕುದುರೆಯ ಜೀನನ್ನು ಬಿಗಿ ಗೊಳಿಸಲು ಸೊಂಟಕ್ಕೆ ಕಟ್ಟುವ ಪಟ್ಟಿ ; ತಂಗುಪಟ್ಟಿ : ಬಿಗುಹನೇಱ [ಜಾಕಾ. ಬಿಗಿದು ತಿತ್ತಿ]ಸಿ ಹಯಗಳನು ಱೆಂಚೆಗಳ ಹಮ್ಮಿರರಾನೆಯುಲಿ (ಜಸಜ. ೯-೩೬). ೧೦. ಆಲಿಂಗನ ; ಅಪ್ಪುಗೆ : ಬೆಸುಗೆ ಬಿಗುಹುಳು ಕೊತ್ತುಕಲೆಗಳ ರಸದ ಪಸರವನಱಿಯುಬಾರದು ವಿಗಡವಿಟರುಗಳ (ಕುಮ್ಮಾಆ. ೦೩-೨೫).

[ಬಿಗು + — ವು]

**ಬಿಗುಹೇರು** 'ಬಿಗುಪೇಱು' ನೋ.

**ಬಿಗುಹೇಱು**, ಬಿಗುವೇರು, ಬಿಗುಹೇರು, ಬಿಗುಹೇಱು (ಕ್ರಿ). ೧. ಬಿಗಿಯಾಗು ; ಹಿಡಿದುಕೊಳ್ಳು : ವೊಗಸಿರಿದೋಱೆ ವಿಾಱೆ ನವಿರುಂ ಸೆರೆಗಳ್ ಬಿಗುವೇಱೆ (ಜಸಜ. ೦-೯೯). ೨. ಗಾಢವಾಗು; ತೀವ್ರವಾಗು : ಅಪ್ಪಿರದೊರ್ಮೆಗೊರ್ಮೆ ಮತ್ತಂ ಬಿಗುಪೇಱುತಿರ್ಪುದು (ಚಂದ್ರಪು. ೬-೫೯); ಸಂದರ್ಭದೊಳ್ ಕ್ರಮದಿಂ ಬಿಗುಪೇಱೆ ಬರ್ಪುದುಂ ಕ್ರಮದಿಂದಿೞೆ ತರ್ಪುದುಂ ಸಮಾಧಿಯೆನಿಪುದು (ಅಪ್ರತಿ. ೯-೦೯). **ಬಿಗುಪೇರು** : ೩. ಕಾಠಿಣ್ಯವನ್ನು ಪಡೆ ; ಕರ್ಕಶತೆಯನ್ನು ಹೊಂದು : ದಿನದಿನಕ್ಕೆ ಬಲಿಯಲುದರಂ ತುಂಗಕುಚ ಬಿಗುವೇರಿದವು ಅಕ್ಷಿ ಜಡನಾದವು (ಧರ್ಮನಾ. ೦-೯). **ಬಿಗುಹೇರು** : ೨. ಸೇರುವೆಯ ಸನ್ನಾಹದಿಂ ಬಿಗುಹೇರಿ ಮೊಳಗುವ ಮೊಳಗುಗಳ ವಿಸ್ತಾರದಿಂ ಬಲುನೇರದಿಂ ಕಾಣಿಸಿತು ವರ್ಷರುತು (ಕಾವೇಹು. ೦೩-೯೦). ೪. ಗರ್ವಿಸು ; ಸೊಕ್ಕೇರು : ಬಿಗುಹೇರಿ ಮೈಮುರಿದು ನಿಲ್ಲಲಾಗದು ಮನಸ್ಸು ತೆಗೆದ ಹಾಗೆಲ್ಲ ಮಾತುಗಳಾಡಲಾಗದೀಪಗೆಯಿಂದ (ಕೃಕೃತಿ. ೯-೯). **ಬಿಗುಹೇಱು** : ೨. ಖತಿ ಬಿಗುಹೇಱೆ ಹಲುಹಲುದಿನುತ ಕಂಗಳಲುರಿಯನುಗುಳುತ . . . ಜನಪತಿಯ ಹಣೆಯೊಡೆಯಲಿಡೆ (ಕುಮ್ಮಾಶಿ. ೯-೦೯) ; ನಗೆನುಡಿ ನೋಟ ಸರಸಗಾನದೊಳು ಹೊತ್ತುದೆಗೆವಾಗ ಲೊಬ್ಬರೊಬ್ಬರಿಗೆ ಬಿಗುಹೇಱುತಿದ್ದುದು ತವಕ (ಶರಕ. ೧೦-೬೫). ೩. ಬಿಡೆಯವಿಲ್ಲದ ಕುಚ ಬಿಗುಹೇಱೆ ರುತುಕಾಲವಡೆದ ಪುಷ್ಪಿಣಿಯ ರೊಪ್ಪಿದರು (ಸೋಹಕ. ೦೬ ೫೨) ; ನೀರೊಳು ನನೆದಾಗ ಬಿಗುಹೇಱೆ ವೃತ್ತಾಕಾರದೊಳುನ್ನುಖವಡೆದು ಚಾರುತರದ ವೊಲೆ ಮೆಱೆದುವು ಮೇಲಕ್ಕೆ ಪಾಱುವ ಕೋಕಗಳಂತೆ (ಕಂಸವಿ. ೨೫ ೦೩೨). ೫. ಉಬ್ಬು ; ಉತ್ಸಾಹಿಸು : ಬೊಬ್ಬಿಱಿತದಲಿ ಬಾಹಪ್ಪಳಿಸಿ ಬಿಗುಹೇಱಿದನು ಹನುಮ (ಕೊರರಾ. ೫-೯-೨) ; ತನುವ ಸಗ್ರಂಥದೊಳಿರಿಸಿ ನಿರ್ವಾಣವ ವಿನುತಾತ್ಮ ನೊಡಗೂಡಿ ನೋಡಿ ಜನಿಸಿದ ಸುಖದಿಂದ ಪರಿಪೂರ್ಣನಾಗಿ ಬಿಮ್ಮನೆ ಬಿಗುಹೇಱಿರ್ದನಾಗ (ಭರತ. ೦೯-೬೦). [ಬಿಗುವು+ಏಱು$_1$ (<ಏಱು$_1$)]

**ಬಿಗುಮಾನ** (ನಾ). ಮನಸ್ಸು ಬಿಚ್ಚಿ ಮಾತನಾಡದಿರುವಿಕೆ ; ಅತಿಯಾದ ಸ್ವಾಭಿಮಾನ ; ದೊಡ್ಡಸ್ತಿಕೆ : ಮಾನ್ಯರಾದವರನ್ನು ಬಿಗುಮಾನ ಬಿಟ್ಟು ಗೌರವಿಸಬೇಕು (ಚಕಣ. ೩೩೪) ; ಪ್ರಾಣೇಶಾಚಾರ್ಯರಿಗೆ ಉತ್ತರ ಹೊಳೆಯಿತು. ಆದರೆ ಹೇಳಲು ಬಿಗುಮಾನ (ಸಂಸ್ಕಾರ. ೦೦೩) ; ಸಿರಿವಂತಿಕೆಯ ಬಿಗುಮಾನವೂ ಪರಂಪರಾಗತವಾದುದೇನೋ ! (ಅಜೋಲೀ. ೪೫). [ದೇ.॥ ತೆಲು. ಬಿಗುವಮಾನ, ಬಿಗಿಮಾನ]

**ಬಿಗುಮೊಗ** (ನಾ). ಪ್ರಸನ್ನತೆಯಿಲ್ಲದ ಮುಖ ; ಕೋಪದಿಂದ ಕೂಡಿದ ಮುಖ : ಆ ಕಟ್ಟಾನೆ ಭೋರನೆ ಬಿಟ್ಟ ಕಣು ಬಿಗುಮೊಗದಿನಿದಿರಾಯ್ತು (ಶಾಳ್ಮಲಾ. ೦೩-೦೩). 'ಬಿಗಿಮೊಗ' ಪರಾ.

[ಬಿಗು (< ಬಿಗುವು) + ಮೊಗ]

**ಬಿಗುರ್**$_1$, ಬಿಗುರು$_1$ (ಕ್ರಿ). ಬಿಗುರ್ತ(ಭೂತಕೃ). ಬಿಗುರ್ತು (ಭೂತ ನ್ಯೂ). ಬಿಗುರ್ಪ, ಬಿಗುರ್ವ (ವರ್ತಕೃ). ೧. ಹೆದರು ; ಅಂಜು ; ಭಯಪಡು : "ಬಿಗುರ್–ಭಯೇ" (ಶಮದ) ; ತಕ್ಕಿನ ಕುಂಭಸಂಭವ ನದೀಜ ಕೃಪಪ್ರಮುಖಪ್ರವೀರರೆಕ್ಕೆಯಿನೊರ್ವರೊರ್ವರೆ ಬಿಗುರ್ತಿರ ದಾಂತು ನಿಶಾತಬಾಣಜಾಲಕ್ಕೆ ಸಿಡಿಲ್ದು ಜೋಲ್ದು ಸೆರಗಂ ಬಗೆದೋಡಿದರ್ (ಪಂಪಭಾ. ೮-೦೦೬); ಕಂಠೀರವರವಮಂ ಕೇಳಲೊಡನೆ ಬೆಳ್ಳಾಗಿ ಬಿಗುರ್ತು ರಾಗಮುಳಿದು (ಗಂಕೆ. ೦-೦೨೬ ಶ) ; ದಿಕ್ಕುದಿಕ್ಕಿಂಗೆ ಪರಿದು ಬಲಮನಿತುಂ ಬೞಿದಾದುದಂ ಕಂಡು ಬೆರ್ಚಿ ಬಿಗುರ್ತು (ಜಸಜ. ೨-೦೦೫). ೨. ಕುಗ್ಗು ; ಕುಸಿ ; ಸೊರಗು : ತಮ್ಮನನಾಗಳಂಬರವರೇಶ್ವರಕನ್ನೆಗೆ ಕಾವುವೇಱೆ ತಮ್ಮಪ್ಪನದೊಳ್ ಬಿಗುರ್ತು (ಶಾಂತಿಪು. ೯-೨) ; ಬಲಭಾರಕ್ಕೆ ಬಿಗುರ್ತು ಸುಯ್ಯೆ ಫಣಿರಾಜಂ (ಪಂಪಾಪೂ. ೯-೫೦) ; ಇಂತ್ರಸಮಾಸ್ತ್ರವ್ಯಥೆಯಿಂ ಬಿಗುರ್ತಬಲೆ ಮೆಯ್ಯಿಕ್ಕಿರ್ದಳಾ ಶಯ್ಯೆಯೊಳ್ (ಕುಸುಮಾ. ೦೩-೦೦೬). ೩. ಗರ್ವಿಸು ; ಸೊಕ್ಕು; ಕೊಬ್ಬು: ಬಿಗುರ್ತೀ ಕೌರವರ್ ಕೂಡೆ ನೂರ್ವರುಮಂ ಕೊಲ್ವೆಂ (ಪಂಪಭಾ. ೭-೦೫) ; ಪಿರಿದೊಂದಜ್ಞಾನದಿಂ ಯವೌವನವಿಕಳತೆ ಮೈದೋಱೆ . . . ತತ್ಶರಣಕ್ಕಾಳಾಗಿ ಹಾಳಾಗುತೆ ಬೞುದೋಱೆಪೋದೆಂ ಬಳಲ್ದೆಂ ಬಿಗುರ್ತೆಂ (ರಣ್ಣಕ. ೫). ೪. ಎದುರು ನಿಲ್ಲು ; ವಿರೋಧವನ್ನು ವ್ಯಕ್ತಪಡಿಸು ; ವಿರೋಧಿಸು : ಚಕ್ರಿಗೆ ಬಿಗುರ್ಪ ಮಂಡಲಮೊಳವೇ (ಪರ್ವಪು. ೯-೬೯); ಬಿಗುರ್ತಯ್ಯಂ ದೊಡಂ ಕೋಪದಿಂ ಕೊಲಲಕ್ಕುಂ ಗೆಲಲಕ್ಕುಂ (ಜೀವಸಂ. ೨೨೮-೯೦). ೫. ಬಾಡು ; ಮ್ಲಾನವಾಗು : ಕಣ್ಣ ನೀರಡಿಗಡಿಗುಣ್ಣೆ ಪಾಯ್ತರೆ ಮುಖೇಂದು ಬಿಗುರ್ತಿರೆ (ಅಜಪು. ೬-೦೨೦); ಮಧುಕರಧ್ವನಿಯಿನಲರ್ವಿಲ್ಲ ಜೇವೊಡೆಯ ರವವೆಂದು ಕಿವಿಯಿತ್ತು ಕೇಳಲುಮ್ಮಳಿಸಿ ತಮ್ಮೊಳ್ ಬಿಗುರ್ವ ಬಿರಯಿಗಳುಂ (ಕುಕ್ಷ್ಯಪು. ೨-೩೯ ಶ). ೬. ಆಶ್ಚರ್ಯಪಡು ; ದಿಗ್ಭ್ರಾಂತವಾಗು : ಪಕ್ಕಿ ಸೋವವರ ಸ್ತ್ರೀಯರ ಸೀಯನಪ್ಪ ನುಡಿಯುಂ ಕೇಳ್ದಾಗಳಂತಾತ್ಮಗರ್ವವನೀಡಾಡಿ ಬಿಗುರ್ತು ತಂಬುಲಕೆ ಬಾಯಾಂಪಂದದಿಂ ಬಂದು ಪಾಯ್ವುವು ಕೀರಾಳಿಗಳಲ್ಲಿ ಪಾಮರ ವಧೂಬಿಂಬಾಧರಕ್ಕಾವಗಂ (ಧರ್ಮನಾ. ೨-೩೯). **ಬಿಗುರು**$_1$ : ೪. ಅಕ್ಕಾಜ ಯುದೇವಗೆಯೊಳ್ ಬಿಗದಪ್ಪುವಳೋ ಬಿಗುರದೆ ಮೊಗವಿಟ್ಟು ಮೊಗದೆ ಮುದ್ದಾಡುವಳೋ (ಶಕಪ. ೬-೨೩೪) ; ಬಗೆಯೊಳ್ಬಲ್ಪು ಕಟಲ್ದೊಡಂ

. . . ಮೆಯ್ಯುಂ ಮರಂಬರ್ದೊಡಂ ಬಿಗುರುತ್ತೀನಳವೊಂದಿ ನಿಂದಳಪ ಚಾರಂ ಬರ್ಪುದೆಂದಾರ್ಪಿನಿಂ (ಚಕಪ. ೬-೨೫೦). 'ಬೆಗಡು$_1$', 'ಬೆಗಟು$^1$' ಪರಾ.

**ಬಿಗುರ್$_2$,** ಬಿಗುರು$_2$ (ನಾ). ೧. ಭಯ ; ಅಂಜಿಕೆ ; ಹೆದರಿಕೆ : "ಅಗುರ್ವು, ಬಿಗುರ್, ಬೆಗರ್ . . . ಅದಿರ್ಪು – ಈ ೧೦ ಭಯಂ" (ಕರಾಸಾ. ೩೬-೨೨೩). ೨. ಆಶ್ಚರ್ಯ ; ಬೆರಗು : (ಅ). ೩. ಭಯಂಕರವಾದುದು : (ಅ). **ಬಿಗುರು$_2$ :** ೧. ಚೋದ್ಯವೋಂ–ಬಿಗುರ ಬೀರಿದ ಬೀರಮೊ ? ಬಲ್ಲ ಬಿಜ್ಜೆಯೊ ? (ಗಿರಿಜಾಂ. ೫೨-೮) ; ಬಿಗುರಿಂದ ಬಾಯ್ಬಿಗಿದು ಗಾಳಿ ಬೀಸುವಳು (ಕಾಲೂರ. ೦೬೦-೩೫೩). ೨. "ಬಿಗುರೆನಲ್ ಬೆರಗು" (ಕಕರ. ೭೯). ೩. 'ಬಿಗುರುಗಂಡೆಯು' ಪರಾ. [<ಬಿಗುರ್$^1$]

**ಬಿಗುರಿಸು** (ಕ್ರಿ). ಅಂಜಿಸು; ಹೆದರಿಸು ; ಭಯಗೊಳಿಸು : ಬಿಗುರಿಪ ವಹ್ನಿಜ್ವಾಲಾಖ್ಯಗತಿಗಿವರ್ ಸಲ್ಗುಂ (ವಿಷ್ಣುಪು. ೬-೦೯೭) ; ರವಿತನಯನ ದೂತರಾದೊಡಂ ಬಿಗುರಿಸಲಣ್ಮವರೆ (ವಿಷ್ಣುಪು. ೦೦-೯೩).

[ಬಿಗುರ್$_1$ + – ಇಸು$_3$]

**ಬಿಗುರು$_1$** 'ಬಿಗುರ್$_1$' ನೋ.

**ಬಿಗುರು$_2$** 'ಬಿಗುರ್$_2$' ನೋ.

**ಬಿಗುರುಗಂಡೆಯ** (ನಾ). ಭಯಂಕರವಾದ ಕತ್ತಿ; ರೌದ್ರವಾದ ಖಡ್ಗ: ಬಿಗುರುಗಂಡೆಯ ಪಚ್ಚ ರನ್ನವಾಹಾರ ಪಯ ಬೆಗಡು ನಗೆ ವೈಶ್ವನರವಿಂದ ಸುಮ ಕಸ್ತೂರಿಯೊಗುದಿಗೆಯೊಳಾಂತು ಸುರಿಗಿಯ ಪುಚ್ಛಕಾಗ್ರದೊಳಗಿಹನೆಂಬರತಿಬುಧರ್ಕಳು (ಪ್ರಭುಪು. ೦-೩೮).

[ಬಿಗುರು$_2$ (<ಬಿಗುರ್$_2$) + ಕಂಡೆಯ$_1$ (< ಖಂಡೆಯ$_2$)]

**ಬಿಗುರೇಟ್** (ಕ್ರಿ). ಹೆದರಿಕೆಯಿಂದ ಕೂಡು ; ಅಂಜು : ಬಿಗುರೆಟ್ಟ ಬಗೆಯಿಂತು ಬಗೆಗುಂ (ಚಿನ್ನಕೃ. ೦೦-೨೨೩). [ಬಿಗುರ್$_2$+ ಏಟ್$_1$]

**ಬಿಗುರ್ತ** 'ಬಿಗುರ್$_1$' ಪರಾ.

**ಬಿಗುರ್ತು** 'ಬಿಗುರ್$_1$' ಪರಾ.

**ಬಿಗುರ್ಪ** 'ಬಿಗುರ್$_1$' ಪರಾ.

**ಬಿಗುರ್ಪಿಟಿ** (ಕ್ರಿ). ಉಬ್ಬರವು ಕಡಮೆಯಾಗು ; ಮದವಿಳಿ : ಪೊಸವಸಲಾದ ಪೆಣ್ಗಳ ಜವ್ವನದ ಬಿಗುರ್ಪಿಟಿದು ತಿಳಿವಂತೆ ತೊಳಚಿ ಮೆಂಡಿಗುರ್ಕಿನುಬ್ಬರಮುಡಂಗಿ ತಿಳಿದುದು (ರಾಮಾಶ್ವ. ೬೩-೯).

[ಬಿಗುರ್ಪು+ಇಟಿ]

**ಬಿಗುರ್ಪು** (ನಾ). ೧. ಭಯ; ಅಂಜಿಕೆ : ದೇವ ನಿನ್ನ ಧಾಟಿಯೊಳ್ಮರಾಟ ಗಳ್ಬಿಗುರ್ಪಿನಿಂ . . . ಅಳ್ಕಿ (ಅಶ್ವಶಾ. ೨೮-೨). ೨. ತೀವ್ರತೆ; ಆಧಿಕ್ಯ ; ಹೆಚ್ಚಳ : ರಾವಣಾರಿ ಬಾಗುಟಿಯೊಂದು ಬಿಗುರ್ಪಿಂ ತಲೆ ತಿಣ್ಣಮಾಗೆ . . . ಲಕ್ಷ್ಮಣನಂ ಕರೆದು (ರಾಮಾಶ್ವ. ೨೬-೩). ೩. ಸೊಕ್ಕು ; ಮದ : 'ಬಿಗುರ್ಪಿಟಿ' ಪರಾ. ☞ 'ಬಿಗಿಪು' ಶಬ್ದರೂಪದ ಸಾಮ್ಯದಿಂದ ಈ ರೂಪವನ್ನು ಮಾಡಿರುವ ಸಾಧ್ಯತೆಯಿದೆ. [ಬಿಗುರ್$_1$+ –ಪು$_2$]

**ಬಿಗುರ್ಪುಗೊಳ್** (ಕ್ರಿ). ಹೆದರು; ಭಯಪಡು : (ಹಿಂದಿರುಗಿ ನೋಡಿ ಬಿಗುರ್ಪುಗೊಂಡು) (ಮಿತ್ರಗೋ. ೨೨-೦೮). [ಬಿಗುರ್ಪು+ ಕೊಳ್$_1$]

**ಬಿಗುರ್ವ** 'ಬಿಗುರ್$_1$' ಪರಾ.

**ಬಿಗುರ್ವರಿಜ** (ನಾ). ಭಯಂಕರವಾದ ರೂಪವುಳ್ಳವನು ; ಭೈರವ : "ತೇಟಿಪ್ಪೀರಂ, ಬಿಗುರ್ವರಿಜಂ – ಈ ೨ ಭೈರವಂಗೆ ಪೆಸರ್" (ಕರಸಾ. ೯೭-೮); ಬಿಗುರ್ವರಿಜಂ, ಹಳಿಗಂ, ಕೊಂಡಂ, ಗುಳಿಕಂ ಮೊದಲಪ್ಪ ಭೂತ ವೇತಾಳಂಗಳ ಮರುಳ್ವಡೆವೆರಸು . . . ನಡೆತಂದು (ರಾಮಾಶ್ವ. ೦೩೦-೦೭).

[ಬಿಗುರ್$_2$ + ಪರಿಜ + – ಅ$_7$]

**ಬಿಗುರ್ವು** (ನಾ). ೧. ಭಯ ; ಹೆದರಿಕೆ: "ಮಲ್ಲಬಿ ಬೆಜ್ಜರ ಬೆಬ್ಬಳ ತಲ್ಲಟ ಬಿಗುರ್ವಗುರ್ವದಿರ್ಪು . . . ಭಯನಾಮಮ" (ಕಂಕೆಂ. ೦೦೮); ವಿಧುಂತುದಂ ಸಮೀಪವರ್ತಿಯಾದೊಡಂ ದಿನಕರಂ ಬಿಗುರ್ವನಾನಲ್ಲಿಲ್ಲ (ನರಪ. ೦೦೯-೩). ೨. ಬೆರಗು ; ಆಶ್ಚರ್ಯ : "ಬಿಕ್ಕುಡಿ ಬಿಗುರ್ವಗುರ್ವು ಬೆಬ್ಬಳ . . . ಮಲ್ಲಟಿಯೆನಲ್ಕೆ ಬೆಜಗಪ್ಪ ಭಾವಂ" (ಕಬ್ಬಿಗ. ೯೦).

[ಬಿಗುರ್$_1$ + – ವು]

**ಬಿಗುವು,** ಬಿಗು (ನಾ). ೧. ಬಿಗಿಯಾದ ಕಟ್ಟು, – ಬಂಧನ : ಎಲುವಿನ ಪಂಜರ ನರಗಳ ಬಿಗುವು ತೊಗಲಿನ ಹೊದ್ದಿಕೆ (ಹೃರಂದ. ೦-೦೮೦-೩); ಬಂಧನಂಗಳ ಬಿಗುವು[ಪಾಠಾಂ. ಹು] ಬಿಡೆ(ಕಬಿಕೃ. ೯೭-೩೦). ೨. ಬಿಗಿ ; ಹಿಡಿತ ; ಹತೋಟಿ : ತನ್ನ ರಾಜಮಂಡಲದಲ್ಲಿಯೂ ಬಿಗುವು ತಪ್ಪಿಹೋಗಿದೆ (ಶ್ರೀರಾಮು. ೩೦೦) ; ಗೋವಿಂದಮಾಸ್ತರರ ಬಿಗುವಿಲ್ಲದ ಆಡಳಿತವೇ ಅದಕ್ಕೆ ಕಾರಣ (ಕಾವೇಂ. ೦೦). ೩.ಗತ್ತು ; ಠೀವಿ ; ಬಿಂಕ : ಬಂಧು ಬಂದರೆ ಎನ್ನ ಬಿಗುವ ಬಿಂಕವ ತೋಟಿ ಬಂದೋಡ್ವರ್ಗೆ ಎನ್ನ ಬೇಕೆಂದು ಕೋಪಿಸಿದೆ (ಪುರಂದ. ೨-೯-೦) ; ಬಲವಂತನೆಂಬೊ ಬೆಗ್ಗಳ ಗರ್ವಿಕೆಯೊ ಸಕಲಲೋಕ ನಿನ್ನ ವಶವೆಂಬೊ ಬಿಗ[ಗು]ವೊ (ಮೋಕ್ಷದೀ. ೨೦-೦) ; ರಾಯರು ಬಿಗುವಿನಿಂದ ಉತ್ತರ ಕೊಟ್ಟರು (ಸಮಾಜ. ೯೦). ೪. ಬಿಗಿಯಾದ ಬಂಧ, – ರಚನೆ : ಅವರ ಹಾಡುಗಳಲ್ಲಿ ಅಲ್ಲಲ್ಲಿ ಅಶ್ಲೀಲಪ್ರಯೋಗಗಳು ಕಂಡುಬಂದರೂ . . . ತುಚ್ಛಶೃಂಗಾರವೆಂದು ನಿರಾಕರಿಸಕೂಡದು. ಹಾಗಾದರೆ ಆ ಹಾಡಿನ ಬಿಗುವೆ ಸಡಿಲಾಗುವುದು (ಕನ್ನಜಾ. ೯೬). **ಬಿಗು :** ೧. ಬಿಗು ಹಿಂದುಗಡೆಯಿಂದ [ಪಾಠಾಂ. ಬಿಗುಹಿಂದ ಗಡೆಯಿಂದ] ಸಡಿಲಿಸಲು ಸಡಿಲದಿರೆ ಬಿಗುಹೇರಿ ಭೀಮ ಮಂದರಗಿರಿಗೆ ಸರ್ಪನಾ ತೆಗೆನೇಣದೆಂಬ ಮರಿಯಾದೆಯಲಿ ಬಿಗುಹತ್ತಿ ಕಣ್ಣಾಲಿ ಮೇಲ್ಸಿಕ್ಕಿತು (ತುರಂಗ. ೩೦-೩೦). ೫. ಬಿಗಿಯಾದ ಸೇರುವೆ : ಕುಲಾಚಲಾದ್ರಿಗಳ ಬಿಗು ಸಡಿಲೆ ರಣಭೇರಿಗಳೊಳ್ಗಳಿದುವು (ತುರಂಗ. ೬೩-೦). ೬. ವ್ಯಗ್ರತೆ ; ಅಪ್ರಸನ್ನತೆ ; ಕೋಪ : 'ಬಿಗುಮೊಗ' ಪರಾ.

[ದೇ.॥ ತಮಿ. ಪಿಕು, ಪಿಕುವು ; ತುಳು. ತೆಲು. ಬಿಗು, ಬಿಗುವು]

**ಬಿಗುವುಗುಂದು** (ಕ್ರಿ). ದರ್ಪವಿಲ್ಲದಾಗು ; ಠೀವಿಯನ್ನು ಕಳೆದುಕೊಳ್ಳು : ದುಗುಡದಿಂ ಬಂದು ಪೊಕ್ಕನು ಬೀಡ ಬಲ್ಲಾಳ ಬಿಗುವು [ಪಾಠಾಂ. ಹು]ಗುಂದಿದ ಬಿಂಕದೊಳು (ಕರಾಸಾಂ. ೦೩-೦೫೩).

[ಬಿಗುವು + ಕುಂದು$_1$]

**ಬಿಗುಹಡಗು** (ಕ್ರಿ). ತೀವ್ರತೆಯು ಕುಗ್ಗು : ರಣಬೇಳುವೆಯ ಬಿಗುಹಡಗಿದ ಪೊಲನಿಬರು ತವತವಗೆ ನಾಚಿದರು ಕೋಲಾಹಳಿಕೆ ಪವನಜನ (ಕುಮಾವ್ಯ. ೨೨-೦). [ಬಿಗುಹು (<ಬಿಗುವು) + ಅಡಗು$_1$ (<ಅಡಂಗು$_1$)]

**ಬಿಗುಹತ್ತು** (ಕ್ರಿ). ಬಂಧನವು ತೀವ್ರವಾಗು : ಬಿಗು ಹಿಂದುಗಡೆಯಿಂದ ಸಡಿಲಿಸಲು ಸಡಿಲದಿರೆ . . . ಬಿಗುಹತ್ತಿ ಕಣ್ಣಾಲಿ ಮೇಲ್ಸಿಕ್ಕಿತು (ತುರಂಗ. ೩೦-೩೦). [ಬಿಗು (< ಬಿಗುವು) + ಹತ್ತು$_1$ (< ಪತ್ತು$_1$)]

**ಬಿಗುಹಿಕ್ಕು** (ಕ್ರಿ). ಬಿಗಿಮಾಡು ; ಗಟ್ಟಿಗೊಳಿಸು : ಕುಂಬಳದ ಕಾಯ ಮೇಲಣ ಹಸುರ ಕೆತ್ತಿ ಹಲ್ಲೆಯ ಮಾಡಿ ಕುಯಿದು ಜಾವದೆಯಿಂದವೊತ್ತಿ ನೀರಂ ಹಿಂಡಿ ಕಟ್ಟಿ ಬಿಗುಹಿಕ್ಕಿ (ಸೂಪಶಾ. ೫-೩೦).

[ಬಿಗುಹು (<ಬಿಗುವು)+ ಇಕ್ಕು]

**ಬಿಗುಹು** 'ಬಿಗುವು' ನೋ.

**ಬಿಗುಹುಕಾಱ** (ನಾ). ದರ್ಪವುಳ್ಳವನು ; ಗರ್ವಿಷ್ಠ : ಬೆಳ್ನುಡಿಯಿಂದ ಬಿಗುಹುಕಾಱರ ಬಲ್ಮೆಯಿಂದ ಬಗೆಗಾಱರನೆದೆಗೆಡಿಸುವರಲ್ಲಿಯ ಬಗಸೆ ಗಂಗಳ ಬಾಲೆಯರು (ಕುರಾಸಾಂ. ೯-೦೦೫).

[ಬಿಗುಹು (< ಬಿಗುವು) + – ಕಾಱ]

**ಬಿಗುಹುಗುಂದು** (ಕ್ರಿ). ದೃಢತೆಯನ್ನು ಕಳೆದುಕೊಳ್ಳು ; ಕಾಠಿಣ್ಯವಿಲ್ಲದಿರು : ಹೊಯ್ವಳ್ಳಿ ಬಿಗುಹುಗುಂದಿದ ಕುಚಂ ಬೆಳರ್ತ ಮುಖ (ಹಕಸಾ. ೯-೩೩). [ಬಿಗುಹು (< ಬಿಗುವು) + ಕುಂದು$_1$]

**ಬಿಗುಹುಗೊಳ್** (ಕ್ರಿ). ಬಿಗಿದುಕೊಳ್ಳು ; ಸೇರು ; ಒಂದಾಗು : ಕುಡಿಮಿಸಗಳು ಕೌಱಿದವಂಗ ಕಾಹೇಱಿದುದು ಕಡುಹಿನಲಿ ಬಿಗುಹುಗೊಂಡುಪ್ಪರಿಸಿದವು ಹುಬ್ಬುಗಳು (ಕೊರರಾ. ೨-೩-೬).
[ಬಿಗುಹು (< ಬಿಗುಪು) + ಕೊಳ್$_1$]

**ಬಿಗುಹೇರು** 'ಬಿಗುಪೇಱು' ನೋ.

**ಬಿಗುಹೇಱು** 'ಬಿಗುಪೇಱು' ನೋ.

**ಬಿಘಡಾಯಿಸು** 'ಬಿಗಡಾಯಿಸು' ನೋ.

**ಬಿಘಾ** 'ಬಿಘೆ' ನೋ.

**ಬಿಘೆ,** ಬಿಘಾ (ನಾ). (ಇಪ್ಪತ್ತೈದು ಗುಂಟೆಗಳಿಂದಾದ) ಜಮೀನಿನ ಒಂದು ಅಳತೆ : ೧ ಬಿಘೆಯೆಂದರೆ ಸುಮಾರು ೧ ೩/೪ ಯಿಂದ ೧೩/೪ ಯೆಕರು ಆಗುತ್ತದೆ (ಕಣಾಗ. ೨೪೦) ; ಒಂದು ಬಿಘೆಯಲ್ಲಿ ಸರಾಸರಿ ಎಷ್ಟು ಉತ್ಪತ್ತಿಯಾಗುತ್ತದೆಂಬುದನ್ನು ಗೊತ್ತುಮಾಡುವುದು (ಅಕ್ಬರ. ೧೨೫) ; ತಮ್ಮ ಭೂಮಿ ಹೋದರೆ ಎಷ್ಟು ಹೋದೀತು ? ಇನ್ನೂರು ಬಿಘೆಗಳಿಗಿಂತ ಹೆಚ್ಚು ಹೋಗಲಿಕ್ಕಿಲ್ಲ (ಹೋರಡಿ. ೨೦೫). **ಬಿಘಾ :** ಅವನು . . . ನೂರು ಬಿಘಾ ಭೂಮಿಯನ್ನೂ 'ಮುಲ್ಲಾಜಮಾಸ್ಟ್' ಎಂಬ ಬಿರುದನ್ನೂ ಪಡೆದನು (ದಾದಾನ. ೩). [←ಮರಾ. ಬಿಘಾ ; ಹಿಂ. ಬೀಘಾ]

**ಬಿಚವಾ,** ಬಿಚ್ವ (ನಾ). ಒಂದು ಬಗೆಯ ಔಷಧಪದಾರ್ಥ- ಸೂರ್ತಿಮಣದ ಮೇಲೆ ಕಿವುತ್ತು ಆಗತಕ್ಕ ಜೀನಸುಗಳು. ೧. ಅಕ್ಕಲಖಾರ . . . ೧೭. ಬಿಚವಾ (ನಿರಗುಂಡಿ) (ಮುಂಬಪ್ರಾ. ೧೨೨). **ಬಿಚ್ವ:** ಬಿಚ್ವ . . . ಬೀಜಬಂದ (ಸೂರ್ತಿ ಚವಾಳ ಮಣ) (ಮುಂಬಪ್ರಾ. ೧೭೭). [?]

**ಬಿಚಾಣಿ** 'ಬಿಚಾನ' ನೋ.

**ಬಿಚಾನ,** ಬಿಚಾಣಿ, ಬಿಛಾನಾ (ನಾ). ಹಾಸುಗೆ, ಚಾಪೆ ಮುಂತಾದ ಹಾಸುವ ಸಾಧನ : (೩). **ಬಿಚಾಣಿ :** ಹಾಸಲಿಕ್ಕೆ ಒಂದು ಬಿಚಾಣಿ, ಹೊದೆಯಲಿಕ್ಕೆ ಒಂದು ಚಾದರ — ಇಷ್ಟಿದ್ದರೆ ಸಾವಿರ ಊರು ತಿರುಗೇವು (ರೂ೦). **ಬಿಛಾನಾ :** ನಡೀರಿ, ಎತ್ರಿ ಬಿಛಾನಾ (ಸಹೂರ. ೦೩).
[←ಪಾರ. ಬಿಛಾನ್; ಹಿಂ. ಬಿಚಾನಾ; ಮರಾ. ಬಿಛಾನಾ, ಬಿಛೋನಾ ; ಬಂಗಾಲಿ. ಬಿಚಾನ್ ; ಒರಿಯಾ. ಬಿಚಾಣಃ]

**ಬಿಛಾಯಿತ** 'ಬಿಛಾಯತ' ನೋ.

**ಬಿಚಿಗದಮ್ಮಸೆಟ್ಟಿ** (ನಾ). ಒಬ್ಬಾತನ ಹೆಸರು : ಶ್ರೀಗೊಗ್ಗಿಯ ಮನೆ ಮಗತಿ ಬಿಚಿಗದಮ್ಮಸೆಟ್ಟಿ ಉತ್ತಮಗಳ್ಳಂ ಕ್ರ(ಮ)ದೊಳೆ ನಿಲೆ (ಎಕ. III. ಮೈಸೂರು. ೪೩-೨ ; ಸಂ. ೪೯೧ ೪). [? + ಸೆಟ್ಟಿ]

**ಬಿಚುವಾ,** ಬಿಚ್ಚುವ, ಬೀಚ್ವಾ (ನಾ). ಚೇಳಿನಾಕಾರದ ಒಂದು ಬಗೆಯ ಕತ್ತಿ : ಒಂದೊಂದು ಜನಕ್ಕೆ ಬಾರುಬಂದೂಕು ಒಂದು . . . ಬಿಚುವಾ ಒಂದು, ಈ ಮೇರೆ ಎರಡುಜನಕ್ಕೂ ಜಂಗಿಸಾಮಾನು ಕೊಟ್ಟು (ರಾಜೇಂದ್ರ. ೦೦೫). **ಬಿಚ್ಚುವ :** ತೋಳಿನಲ್ಲಿ ಹುಡುಕಿ ನೋಡಿದ್ದರೆ ಚೇಳಿನ ಹಾಗೆ ಬಾಗಿಕೊಂಡಿದ್ದ ಒಂದು ಬಿಚ್ಚುವ ಎಂಬ ಕಠಾರಿ ಸಿಕ್ಕುತ್ತಿತ್ತು (ಛಾರವೀ. ೩೭). **ಬಿಚ್ವಾ :** ಶಿವಾಜಿಯು . . . ಅಂಗಿಯ ಬಲತೋಳಿನೊಳಗೆ ಬಿಚ್ವಾ ಎಂಬಾಯುಧವನ್ನು ಬಚ್ಚಿಟ್ಟುಕೊಂಡು . . . ಅಫ್ಜುಲ್‌ಖಾನನನ್ನು ನೋಡುವುದಕ್ಕೆ ಹೊರಟನು (ಛತ್ರಶಿ. ೭೭).
[←ಮರಾ. ಬಿಚವಾ ; ಹಿಂ. ಬಿಛೂಆ. /ಪ್ರಾ. ವಿಚ್ಚುಅ =ಚೇಳು]

**ಬಿಚ್ಚಂಡ** 'ಬಿಚ್ಚಂದ' ನೋ.

**ಬಿಚ್ಚಂದ,** ಬಿಚ್ಚಂಡ (ನಾ). ಬಹುಮಹಡಿಗಳುಳ್ಳ ಮಹಲು, ಅರಮನೆ ಮುಂತಾದುವು : "ಬಿಚ್ಚಂದ(ಡ) — ವಿಚ್ಛಂದ — ಮುಖಮಂಟಪಗಳ ಸೌಧ ; ಮಂತ್ರಾಲಯ" (ಶಬ್ದಕೋ. ೩೦) ; ವಿಚ್ಛಂದ — ಬಿಚ್ಚಂದ (ಕಮುದ. ೨೫೭ ಪ್ರಯೋ). **ಬಿಚ್ಚಂಡ :** ದತ್ವಕ್ಕೆ ದತ್ವಂ — ವಿಚ್ಛಂದ — ಬಿಚ್ಚಂಡ (ಕಮುದ. ೨೬೭ ಪ್ರಯೋ). [<ಸಂ. ವಿಚ್ಛಂದ]

**ಬಿಚ್ಚಡಿ** (ನಾ). ದಾಪುಗಾಲು ; ದೊಡ್ಡ ಹೆಜ್ಜೆ (?) : ಕುಂಟನ ಪೊಲು ಕೊಂಕಡಿಗಳನಿಡುತಂ ತುಂಟನ ಪೊಲು ಬಿ[ಪಾಠಾಂ. ಬೆ]ಚ್ಚಡಿಗಳನಿಡುತಂ ಹೆಳವನವೊಲು ಮೊಳಕಾಲಿಕ್ಕುತ್ತುಂ (ಶೃಂಗಾರ. ೧೯-೨೭).
[ಬಿಚ್ಚು$_{1?}$ + ಅಡಿ$_1$]

**ಬಿಚ್ಚಣಿಗೆ** (ನಾ). ಸ್ವಚ್ಛಂದವಾದ ಅಭಿನಯ,— ಹಾವಭಾವ : ಪಾಠಕರ ಸಘಾಟದಿಂ ನಚ್ಚಣಿಗರ ಬಿಚ್ಚಣಿಗೆಯಿಂ ಗಾಣರ ಗಮಕದಿಂ . . . ಮಹೋನ್ನತವೈಭವಮನೊಳಕೊಂಡುದ್ಬಟರಾಜೇಂದ್ರಚಂದ್ರುಮನೋಲಗಂ ವಿರಾಜಿಸುತ್ತಿರ್ದುದು (ಉದ್ಭಟಿ. ೨-೧೭ ವ). [<ಬಿಚ್ಚು$_2$]

**ಬಿಚ್ಚತ** (ನಾ). ೧. ವಿಸ್ತಾರ ; ಹರಹು ; ವಿಶದ : ಓಹಿಲದೇವಂ ನಲವಿಂ ಮಱಿಚಂದರಹಚ್ಚನನೊಚ್ಚತ ಮಚ್ಚಿದ ಬಿಚ್ಚತದಿಂ ತುತಿಸೆ (ಉದ್ಭಟ. ೩-೪೯) ; ಶ್ರೀಪಾದಕ್ಕೆ ಸಮಕ್ಷದಲ್ಲಿ ಬಿಚ್ಚತವಾಗಿ ಬಿನ್ನಯಿಸಿಕೊಳ್ಳುವೆನು (ಮಂತ್ರಕ. ೦೨೫-೨೨). ೨. ಅಧಿಕವಾದುದು ; ಹೆಚ್ಚು : (೩). ೩. ಅನಿರ್ಬಂಧ ; ಸ್ವೇಚ್ಛೆ : ಅಚ್ಚರಕನ್ನೆಯರೊಳ್ ಸರಾಗದಿಂ ಬಿಚ್ಚತವಾಗಿ ಕೂಡಿ ಸುಖಮಿರ್ಪರನಂದಿತದೇವಲೋಕದೊಳ್ (ಜೀವಸಂ. ೯೯-೦೦). ೪. ನೆಮ್ಮದಿಯುಳ್ಳವನು ; ಸುಖಿ : ಅಂತು ಜನಮೆಲ್ಲಂ ಪಗಲ ತಾವರೆಯಂತೆ ಬಿಚ್ಚತರಾಗಿ . . . ಶೃಂಗಾರ ಮಾಡುವುದುಂ (ರಹರ್ಷಾವು. ೮-೨೦೫). [< ಸಂ. ವಿಸ್ಮೃತ]

**ಬಿಚ್ಚತಂ** (ಅ). ೧. ಸ್ವೇಚ್ಛೆಯಾಗಿ ; ಅನಿರ್ಬಂಧಿತವಾಗಿ : ಬಾಬ್ಬಿನ ಮಿಂದ್ರಿಯವರ್ಗದಿಚ್ಛೆಯಿಂ ಸಲಿಸಿ ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ ನಲಿವುದು (ಅಂಜ್ಞ. ೨-೯); ಪರಮೋತ್ಸವದಿಂ ಪಱಿಗುಟ್ಟಿ ಬಿಚ್ಚತಂ ಕುಣಿದುವು ಭೂತಕೋಟಿ (ಶಂರಾಪಾ. ೦೦-೧೪೪); ಬಿಚ್ಚತಂ ನಲಿವ ಮದಕಳಾಪಿಗಳ ಮೊತ್ತಮಂ ಚಿತ್ರಜನ ವಿಚಿತ್ರಫಲಕಾಯುತವ್ರಜವೆಂದಾತಂಕಮನೊಂದುತುಂ (ಕುಸುಪಾ. ೦೨-೦೩೬ ವ). ೨. ಸುಲಭವಾಗಿ ; ನಿರಾತಂಕವಾಗಿ ; ಸರಾಗವಾಗಿ : ಮುಂ ಮಹಿಯೆಲ್ಲಮಂ ಶಿಶಿರರಾಜನೆ ಬಿಚ್ಚತಮಾಳ್ದಂ (ಶಂಕರಾ. ೫-೩೦); ಬಿಚ್ಚತಂ ಬತ್ತೀಸಕೋಟಿ ಸಮುಚ್ಚಯದ ಧನವನು ಗಳಿಸಿದನು (ಸಾಕೃಶಾ. ೦೭-೪೫). ೩. ಅಧಿಕವಾಗಿ; ಯಥೇಚ್ಛವಾಗಿ : ಹರಿನ್ಮಣಿಮರೀಚಿಮೇಚಕಿತಸಾನು ಭಾಗಂಗಳೊಳ್ ಕುರಂಗತತಿ ಬಿಚ್ಚತಂ ಪಸಲೆಗೆತ್ತು ಕಾರ್ದಾಸೆಯಿಂ ನಿರರ್ಥ ಜನಿತಶ್ರಮಂ ಬಳ[ಲ್]ಕದ[ವ]ಲ್ಲಿಯುಂ ಪುಲ್ಲುಮಂ ಗಿರೀಂದ್ರದೊಳ[ಗ]ಲ್ಲಿ ಮೇಯು[ವು] ಹರಿನ್ಮಣಿಭ್ರಾಂತಿಯಿಂ (ವರ್ಧಮಾ. ೫-೫೭) ; ಕರೀಂದ್ರೋತ್ಕರಂ . . . ಚಿತ್ತದೊಳಾದ ಮೋಹಮಚ್ಚುಡಿದಿರೆ ಬಿಚ್ಚತಂ ಕಡುಪನೊಲ್ಲದೆ ನಿಂದುದದೊಂದು ತಾಣದೊಳ್ (ಪುಲ್ಲಿಜ. ೦೦-೭೬) ; ಧೂಮಸಂಪಾದಿತ ಕಾಳಿಮಾಂಕಿತ ನಭಸ್ಥಳಮೆಂದುಮಿಂದೆಂದು ಬಿಚ್ಚತಂ ಮೇದಿನಿ ಮೆಚ್ಚಿ ಬಣ್ಣಿಪುದು ಪೊಂಬೊಳಲಂ (ಸೌಇಇ. XV. ೭೩-೦೨ ; 1189). ೪. ನೆಮ್ಮದಿಯಾಗಿ ; ಸುಮ್ಮನೆ : ಬಿಚ್ಚತಮಿರ್ದು ಕಣ್ಣ ಮಸಪೋಡುಮಿನಂ ಸಲೆ ನೀನೆ ನೋಡ (ಕಾವ್ಯಾವ. ೪೪೪). ೫. ಗಟ್ಟಿಯಾಗಿ ; ಗಾಢವಾಗಿ : ನಿಜೇಶನಂಕದಿನೀಶನ ಕಾಂತೆ ಚಿಚ್ಚರಮೆರ್ದು ಬಿಚ್ಚತಮಪ್ಪಿದಳ್ (ಅನಂಪು. ೨-೪೬). [<ಬಿಚ್ಚತ]

**ಬಿಚ್ಚತಿಕೆ,** ಬಿಚ್ಚತಿಕ್ಕೆ, ಬಿಚ್ಚತಿಗೆ (ನಾ). ೧. ವಿಸ್ತಾರ ; ವ್ಯಾಪ್ತಿ ; ಹರವು ; ವೈಶಾಲ್ಯ : (೩). ೨. ನೆಮ್ಮದಿ ; ಸಮಾಧಾನ : ಪಗಲಂದಿರುಳಾದೊಡೆ ರಾಜ್ಯಮಾದವೋಲ್ ಪೆರ್ಚಿ ಮನಕ್ಕೆ ಬಿಚ್ಚತಿಕೆವಂದಿರೆ (ಶಂಕರಾ. ೬-೭೫) ; ಆತನ ತನುಜಾತರಪ್ರಮಿತಶಾಸ್ತ್ರವಿಶಾರದರಾದೊರಕ್ಕುಮೆಂಬಿನಿತನೆ ಮೆಚ್ಚಿ ಬಿಚ್ಚತಿಕೆಯಿಂ ಪರಿಭಾವಿಸದೀ ದುರಾತ್ಮ ದುರ್ಜನರ್ಗೆ ನಿಕೃಷ್ಟದುಷ್ಚರಿವರ್ಗಾನೊಸೆದಿತ್ತನುದಾತ್ತವೃತ್ತಿಯಂ (ಸುಕುಮಾ. ೨-೨೭). ೩. ಅಡ್ಡಿಯಿಲ್ಲದಿರುವುದು; ನಿರಾತಂಕ: "ವಿಶ್ರಂಭಃ—ಬಿಚ್ಚತಿಕೆ" (ಅಭಿಪಾ. ೨೭-೦೦). ೪. ಅತಿಶಯತೆ ; ಹೆಚ್ಚುಗಾರಿಕೆ : ನೆಱಿಯ ನೆಗರ್ತ್ತೆವೆತ್ತುದು ನಿಯೋಗವುಗುಂದಲೆಯಾಯ್ತು

ತೇಜ ಮಬ್ಬಿಚಿದುದು ಮಿಕ್ಕ ಬಿಚ್ಚತಿಕೆ ಸ × ದವಾದುದು (ಕಡ. V. ೦೯-೩೬ ; 1099). ೫. ಸಲಿಗೆ ; ಅಪ್ಪತೆ : ಜಲಜಾತಾಕ್ಷನೊಳಾಕೆ ಬಿಚ್ಚತಿಕೆಯಂ ಮಾಡಲ್ ಬಟಿಕ್ಕಂ ಕಳಾನಿಲಯಂ ಮಾಡಿದನೊಲ್ದು ಚುಂಬನ ಪರಿಷ್ವಂಗಪ್ರಪಂಚಂಗಳಂ (ಜಗಪಿ. ೦೦-೦೪೦). **ಬಿಚ್ಚತಿಕ್ಕೆ :** ೩. ಅಮಾತ್ಯರಂ ಕರೆದು . . . ಭೂಮಂಡಳಮಂ ಪಚ್ಚು ಬಿಚ್ಚತಿಕ್ಕೆಯಿನಾಳ್ವಂತವರಂ ನಿಯೋಜಿಸಿ (ನೇಮಿಪು. ೩-೪೫ ವ) ; ಬಾಯ್ಗೆ ವಂದಂದದೊಳೆಂದೊಡೆಂದು ದನೊಡಂಬಡಿಪಿಚ್ಚೆಯ ಬಿಚ್ಚತಿಕ್ಕೆ . . . ಇಂಗೊರಲ ಮೆಲ್ಲುಲಿಯೊಪ್ಪಿದುದು (ಚಂದ್ರಪು. ೬-೬೬). ೪. ಮಸೆವುದು ಮಾಸಲಿರ್ದ ಪಟಿವೇಟ ಮನಿಚ್ಚೆಯ ಬಿಚ್ಚತಿಕ್ಕೆಯಂ ಪೊಸಯಿಪುದು (ಶಾಂತಿಪು. ೬-೯೦). ೬. ಹೃದಯವೈಶಾಲ್ಯ ; ಧಾರಾಳತನ : ಆನೊಂದಂ ಬೇಡಿದಪೆಂ ನೀನಪದನೆನಗೀವುದಣ್ಣ . . . ಮೋಸಂಗೊಂಡಿರದೆ ಬಿಚ್ಚತಿಕ್ಕೆಯೊಳಿನಿಸಂ (ಧರ್ಮಾಮೃ. ೨-೦೩೯). **ಬಿಚ್ಚತಿಗೆ :** ೪. ಅಂತು ಮುಟ್ಟಿ ಮೂದಲಿಸಿ ಪೆಟ್ಟಿನಿಂದೆಚ್ಚ ಬಿಚ್ಚತಿಗೆ[ಪಾಠಾಂ. ರಿಕೆ]ಗೊಚ್ಚತಂ ಕೆಳರ್ದು (ಅನಂಪು. ೦೯-೦೮ ವ). [ಬಿಚ್ಚತ + — ಇಕೆ]

**ಬಿಚ್ಚತಿಕ್ಕೆ** 'ಬಿಚ್ಚತಿಕೆ' ನೋ.

**ಬಿಚ್ಚತಿಗ** (ನಾ). ಶ್ರೇಷ್ಠನಾದ ವ್ಯಕ್ತಿ : ಚಿಚ್ಚರಿಗಂ ಪರಿವಾಯಂ ತುಚ್ಚಳನತ್ಯುಗ್ರಕೋಪಿ ಮೂರ್ಖಿಂ ಕಿಸಟಿಸೊಳ್ಕಿಚ್ಚಿಡುವನೆನಿಪ ಖಳನುಂ ಬಿಚ್ಚತಿ[ಪಾಠಾಂ. ರಿ]ಗನೆನಿಕ್ಕುಮೊಂದಿ ಜೈನರ ಕೆಲದೊಳ್ (ಸಮುಕ. ೩-೦೦೬). [ಬಿಚ್ಚತ + — ಇಗ]

**ಬಿಚ್ಚತಿಗೆ** 'ಬಿಚ್ಚತಿಕೆ' ನೋ.

**ಬಿಚ್ಚನೆ** (ಅ). ೧. ಅಗಲವಾಗಿ ; ವಿಶಾಲವಾಗಿ ; ದೊಡ್ಡದಾಗಿ : ಆತಂ ಕ್ರೋಧಾನಲದಿನೆನ್ನನುರಿಪುವಂತು ಕೆಚ್ಚನಾಗೆ ಬಿಚ್ಚನೆ ಬಿಟ್ಟ ದಿಟ್ಟಿಗಳಿಂ ನೋಡಿ (ಕಾದಂಉ. ೦೦೨); ಬಿಸುನೆತ್ತರನೆತ್ತಂ ಸೂಸುವಂತೆ ಬಿಚ್ಚನೆ ಬಿಟ್ಟಿರ್ದರದಂ ಕಣ್ಗಳೊಳವರೊರ್ಬರನೊರ್ಬರ್ನುಂಗುವಂತೆ ನೋಡಿದರೆನಸುಂ (ಗದಾಯು. ೬-೪); ಬಿಚ್ಚನೆ ಬಿಟ್ಟ ದಿಟ್ಟಿ ಸಿಡಿಲಂ ಕೀಟ್ಮಾಡೆ ಬಂದೆಯ್ದಿ . . . ತಾಗಿದುವದ್ಭುತಸ್ವನಿತಮೆಂಬನ್ನಂ ಬೃಹದ್ವೃಂಹಿತಂ (ಶಂರಾಮಚ. ೦೩-೭೬). ೨. ತಟ್ಟನೆ; ಕೂಡಲೆ : ಎಸೆವೀ ಬ್ರಹಾಂಡಮಂ ಬಿಚ್ಚನೆ ಬಿರಿಯಿಸುತಂ ವಾರ್ಧಿಯಂ ಕೂಡೆ ತುಳ್ಕಾಡಿಸುತಂ . . . ಪರ್ವಿತ್ತುರ್ವಿಂ ತಳೆದೊಗೆದ ಗಂಭೀರಭೇರೀನಿನಾದಂ (ಶಾಂತೀಶ್ವ. ೦೫-೩೪). ೩. ರಭಸವಾಗಿ ; ವೇಗವಾಗಿ : (*). [<ಬಿಚ್ಚತ + — ಅನೆ₁]

**ಬಿಚ್ಚಲರ್** (ನಾ). ಅರಳಿದ ಹೂವು : ಮಕರಂದಮಂ ಭ್ರಮರಾವಳಿಗೆ ಮಾಜದೊಲಿದಿತ್ತು ಮೆಚಿವ ಬೆಳ್ದಾವರೆಯ ಬಿಚ್ಚಲರ್ಗಳ ಪೆರ್ಚ ನೋಡು (ಕೈಪಿಡಾ. ೩-೩೪). [ಬಿಚ್ಚು₁ (<ಬಿರ್ಚು) + ಅಲರ್₂]

**ಬಿಚ್ಚಳ್₁, ಬಿಚ್ಚಳೆ** (ನಾ). ಹರಹು; ವಿಸ್ತಾರ; ವೈಶಾಲ್ಯ : "ಬಿಚ್ಚಳ ಮುಮೆನಲ್ ವಿಸ್ತರಾರ್ಥಮಕ್ಕುಂ" (ಕಪಿಕಂ. ೦೯೩). 'ಬಿಚ್ಚಳಿಸು' ಪರಾ. **ಬಿಚ್ಚಳೆ :** ನರನೆಚ್ಚ ಕೆಂಗಣಿಗೋಲ ಬಿ[ಪಾಠಾಂ. ಬ]ಚ್ಚಳೆಯ ಪೊಸಮಸೆಯ ನಿಚ್ಚಳದ ನಿಡುಸರಳ್ವೆಚ್ಚಿದವು . . . ಕೊಚ್ಚಿದವು ಪರಬಲವನು (ಕೈಪಿಡಾ. ೦೩-೦೮). [<ಬಿತ್ತರ./ಸಂ. ವಿಸ್ತರ]

**ಬಿಚ್ಚಳ್₂** 'ಬಿಜ್ಜಣ' ನೋ.

**ಬಿಚ್ಚಳಿಕೆ** (ನಾ). ೧. ಹರಹು ; ವೈಶಾಲ್ಯ : "ಬಿಚ್ಚಳಿಕೆಯೆಂದು ವಿಸ್ತಾರಮಕ್ಕುಂ" (ಕಭಾಕ್ಕ. ೦೬) ; "ಬಿತ್ತರಮೆನಲ್ ಬಿಚ್ಚಳಿಕೆಯೆನಲು ವಿಸ್ತಾರಮಕ್ಕು" (ಕಶಕ. ೬೦). ೨. ಧಾರಾಳತನ ; ಹೃದಯವೈಶಾಲ್ಯ: ದಾನಧರ್ಮಾನುರಾಗಮುಂ ಬಿಚ್ಚಳಿಕೆಯುಂ ಪಾಪಕ್ಕಂ ಪಟಿಗಮುಂಜುವುದುಂ . . . ಅಖಂಡಿತಚಾರಿತ್ರರಾಗಿ ನೆಗಟ್ಟುದುಂ ತಪೋಭಾವನೆಯುಮೆಂದಿವಟಿಂ ಸಾತಾವೇದನೀಯಾಸ್ರವಮಕ್ಕುಂ(ಕರ್ಣಾರ. ೪೪). ೩. ನೆಮ್ಮದಿ; ಸಮಾಧಾನ : ಅನುನಯದಿಂ ಬಿಚ್ಚಳಿಕೆವೆರಸಿ ಮನದೊಳ್ ಮೆಚ್ಚಿ ಮಹೇಶ್ವರನನಲ್ಲಿ ಚಿನ್ನಿಸುತಿರ್ದ್ದಂ(ಇಳಿ. XX, ೬೯-೬; ೨ನೆಯ ಕಠ). ೪. ಹರಡಿರುವುದು ; ಚೆದರಿರುವುದು : (*). [ಬಿಚ್ಚಳ್₁ + — ಇಕೆ]

**ಬಿಚ್ಚಳಿಕೆಗೆಯ್** (ಕ್ರಿ). ವಿಸ್ತಾರವಾಗಿ ನಿರೂಪಿಸು : ಸೌಂದರ್ಯ ಶಾಲಿತನಯಂಗೆ ನೃಪಂ ಯುವರಾಜಪಟ್ಟಮಿತ್ತನುಭವವಮಂ ಬಿಚ್ಚಳಿಕೆಗೆಯ್ವುದುಚಿತಂ ತನುಜಾ (ಕಮುಮಚಾ. ೦೨-೪೬). [ಬಿಚ್ಚಳಿಕೆ + ಕೆಯ್₁]

**ಬಿಚ್ಚಳಿಸು** (ಕ್ರಿ). ೧. ಹಬ್ಬು : ಹರಡು ; ಪಸರಿಸು : ಸ್ಫುರಿತ ಕಮನೀಯಂಗಳಾಗಿ ಬೆಳತಿಗೆಬೆಳಗನಿರದೆಂಟುದೆಸೆಗಳೊಳ್ ಬಿಚ್ಚಳಿಸಿ ಥಳಥಳಿಸುತಿರಲ್ (ಅರಾಕ. ೪-೩-೪) ; ಸೌದಾಮಿನಿಯ ಕರೆಗೆಚಿದ ಪ್ರತಿಮೆಯಂದದೊಳಗಜೆಯಚ್ಚರಿಯ ಬಿಚ್ಚಳಿಸುತೆಸೆದಳಾಗ (ನಂದಿಮಹಾ. ೬-೩). ೨. ವಿಸ್ತಾರಗೊಳಿಸು; ವ್ಯಾಪಿಸುವಂತೆ ಮಾಡು : ನಿಚ್ಚಲುಂ ಬಿಚ್ಚಳಿಸಲ್ ವಿಖ್ಯಾತನಾದಂ (ಬೊಂಕಶಾ. ೦೯೩೬, ರಕ್ಷ್ಮೇಶ್ವರ. ೧೦-೦೩; ?). ೩. ಅತಿಶಯಗೊಳಿಸು; ದೊಡ್ಡದು ಮಾಡು : ತಮ್ಮ ಪಂಡಿತಿಕ್ಕೆಯನಟಿಪಿದೊಡೆ ಸಭೆಯೊಳಿರ್ದ ಪಂಡಿತಜನಮೆಲ್ಲಂ ಮೆಚ್ಚಿ ಬಿಚ್ಚಳಿಸಿ ಪೊಗಟ್ದೊಡೆ (ವಡ್ಡಾರಾ. ೪-೨೬) ; ಸಭಾಸದರ್ ಮೆಚ್ಚಿ ಬಿಚ್ಚಳಿಸಿ ಪೊಗಟ್ವಿನಂ (ಸುಕುಮಾ. ೭-೩೬ ವ). ೪. ಬಿತ್ತರಿಸು; ವಿಶದೀಕರಿಸು; ವಿವರಿಸು : ನಾಯಿಕಾನಿಕುರುಂಬಮುಮಂತವರ ತೆಜಿನಸುಜಿ ಬಿಚ್ಚಳಿಪೆಂ (ರಕರ. ೩-೭೦ ಸೂತ್ರ) ; ನಿಗಮಾಗಮಪುರಾಣವಾಣಿಗಳಿಂ ಸಹಜಸಿದ್ಧಶಿವಾಧಿಕ್ಯಮಂ ಬಿಚ್ಚಳಿಸುತ್ತುಂ (ವೃಷಪಿ. ೩೭-೦೩೨ ವ). ೫. ಅಧಿಕವಾಗಿ ಹೊಗಳು,— ಪ್ರಶಂಸಿಸು : ಆತಂಗೆ ಮೆಚ್ಚಿ ಬಿಚ್ಚಳಿಸಿ ತನ್ನಂಗಚಿತ್ತಮುಮಂ ಕೆಲವು ಬಾಟುಮಂ ಕೊಟ್ಟು (ವಡ್ಡಾರಾ. ೦೬೨-೬); ತದನಂತರಮೇ ಲೋಕಾಂತಿಕಾಮರವೃಂದಂ ಬಂದು ಬಿಚ್ಚಳಿಸಲೊಡಂ ವಜ್ರಕ್ಕೆ ಬಳಮಿತ್ತಂತೆ ವಜ್ರಸೇನಮಹಾರಾಜಂ . . . ತಪಂಗೊಂಡಂ (ಆದಿಪು. ೬-೨೩ ವ); ಸುರರಂಬರದೊಳ್ ತಗುಳ್ದು ಬಿಚ್ಚಳಿಸೆ ನದೀಘನುಚ್ಚಳಿಸೆ ಕಾದಿದನೇಂ ಕಲಿಯೋ ಗುಣಾರ್ಣವಂ (ಪಂಪಭಾ. ೦೦-೪೩). ೬. ಹೆಚ್ಚಾಗು ; ಅಧಿಕಗೊಳ್ಳು : ಪೊರೆವ ಪೆಣ್ದುಂಬಿಯ ಬಿಚ್ಚಳಿಪ ಪರಭೃತದ ಕಳಕಳದೊಳೆ ಮುಸುಳ್ದುದು ದಿವಿಜಯುಗಲಕಲಕಲ ನಿನದಂ (ಆದಿಪು. ೬-೬೪); ಸಾಹಸಂ ಬಿಚ್ಚಳಿಸಲು ಕೊಡಲಿಯಿಂ ಖಂಡಿಸಿದನಾತನ ಶಿರಸ್ಸನು (ಅರಾಕ. ೨-೨-೨೦). ೭. ಸಂತೋಷಪಡು; ಹರ್ಷಗೊಳ್ಳು: ತಳಿರ್ತಳಮಾವು ಮಾವಿನಂಕುರವನೆ ಕರ್ಚಿ ಬಿಚ್ಚಳಿಪ ಕೋಗಿಲೆ ಕಂಪನವುಂಕೆ ಪೊತ್ತು ನಿತ್ತರಿಪೆರಲೆಂಬವೇವುವೊ (ಪಂಪಭಾ. ೫-೦೦); ನಡುವ ಸರಲ್ ಸರಲ್ಕೊಳೆ . . . ಮೆಯ್ವೊಣರ್ಚುವ ಮಹಾರಥರಾಜಿಯೊಳಂತ ಗುರ್ವಿನಚ್ಚುಡಿದಿರೆ ಕಾದಿ ಬಿಚ್ಚಳಿಸಿದರ್ ಬಿಸುನೆತ್ತರ ಸುಟ್ಟುರೆ ಸೂಸುವನ್ನೆಗಂ (ಪಂಪಭಾ. ೦೦-೦೦೪). ೮. ಶೋಭಿಸು; ಪ್ರಕಾಶಿಸು; **ಹೋಳೆ:** ನಚ್ಚಣಿಯರನು ನೋಡುತ್ತೈತರೆರೆ ಬಿಚ್ಚಳಿಪ ಚೆಂಬೊನ್ನ ಸೊಬಗಿನ ಸ್ವಚ್ಛವಾದಾ ಸಿದ್ಧಮಂಡಪಮೆಯ್ದಿ (ಶಾಲ್ಮಭಾ. ೪-೩೨).

[ಬಿಚ್ಚಳ್₁ + — ಇಸು₃]

**ಬಿಚ್ಚಳೆ** 'ಬಿಚ್ಚಳ್₁' ನೋ.

**ಬಿಚ್ಚಾಲೆ** 'ಬಿಚ್ಚೋಲೆ' ನೋ.

**ಬಿಚ್ಚಾಳು** (ನಾ). ಸ್ವಾತಂತ್ರ್ಯವುಳ್ಳವನು ; ಬಿಡುಗಡೆ ಹೊಂದಿದವನು: ಚನ್ನಮ್ಮಾಜಿಯುಮಾಳೋಚಿಸಿ ತಮ್ಮ ರಾಷ್ಟ್ರಕಾಗಿಯವಂ ಬಿಚ್ಚಾಳಾಗಿ ಪೋದುದಹುದಾವಾಳುತ್ತಿರ್ಬಳೆಯೊಳಿಲ್ಲವೆಂದರುಹಿಸಿದಳ್ (ಕಳನ್ನ. ೬-೬೪).

[ಬಿಚ್ಚು₂ + ಆಳು₃ (<ಆಳ್₃)]

**ಬಿಚ್ಚಿಸು** 'ಬಿರ್ಚಿಸು' ನೋ.

**ಬಿಚ್ಚು₁** 'ಬಿರ್ಚು' ನೋ.

**ಬಿಚ್ಚು₂** (ನಾ). ೧. ಸಡಿಲವಾಗುವಿಕೆ : (*). ೨. ಸಡಿಲಗೊಂಡುದು : (*). ೩. ಸರಳತೆ : 'ಬಿಚ್ಚುಗನ್ನಡ' ಪರಾ. ೪. ವಿರಳಗೊಳಿಸುವ

ಸಾಧನ : ಮಚ್ಚರಿಸುವರ ಬಿಚ್ಚು ಕುಜನರ ಬೆಚ್ಚು ಶಾಂತಿಯ ಹೆಚ್ಚು ಧೂರ್ತರ ಕೊಚ್ಚು ಕಲಿತನದಚ್ಚು ಸುಖಕಣಿ ಮುಚ್ಚುಮರೆಯಿಲ್ಲ (ಬಸಪು. ೨೮-೯೮) ; ಜಾರರ ಚೋರರ ಬಿಚ್ಚು ಸಂತತಂ ಕುವಲಯದ ಮನೋವಿಲಾಸದ ಮಚ್ಚು (ನವಮೋ. ೦೬-೨೮). (ಗು). ಶಿ. ಬಿಡಿಯಾದ ; ಚಿಲ್ಲರೆಯಾದ : 'ಬಿಚ್ಚು ರೊಕ್ಕ' ಪರಾ. [<ಬಿಚ್ಚು₁]

**ಬಿಚ್ಚು₃** 'ಬಿಕ್ಕು₄' ನೋ.

**ಬಿಚ್ಚು₄** 'ಬಿಜ್ಜು₂' ನೋ.

**ಬಿಚ್ಚುಕಣ್ಣು** 'ಬಿಚ್ಚುಗಣ್' ನೋ.

**ಬಿಚ್ಚುಕತ್ತಿ** 'ಬಿಚ್ಚುಗತ್ತಿ' ನೋ.

**ಬಿಚ್ಚುಗಣ್,** ಬಿಚ್ಚುಕಣ್ಣು, ಬಿಚ್ಚುಗಣ್ಣು (ನಾ). ಅಗಲವಾಗಿ ತೆರೆದಿರುವ ಕಣ್ಣು : ಎಚ್ಚು ಹಾಯ್ದಂಬುಗಳು ಭೂತದ ಬಿಚ್ಚುಗಂಗಳ ಕೊಂಡದುರಿಯಲಿ ಬಚ್ಚಿಸಿದ ಗಟಿ ಸೀದು ಸೀಕರಿಯೋಗಿ ನಿಮಿಷದಲಿ (ಕುಮಾ.ಗ. ೯-೦೬) ; ಅನಿಲಜನ ಕರಪುಟದಿ ವಿರುಗುತಿರ್ದವತಂಸಮಂ ಬಿಚ್ಚುಗಣ್ಗಳಿಂ ನೋಡುತಿರ್ದು (ಶ್ರೀರಾಮಪು. ೩೨೩-೬೦೩). **ಬಿಚ್ಚುಕಣ್ಣು:** ಅವಳನ್ನು ಬಿಚ್ಚುಕಣ್ಣಿನಿಂದ ನೋಡುತ್ತ . . . ಎಂದಳು (ದೌಂಕ್. ೧೧೧). **ಬಿಚ್ಚುಗಣ್ಣು:** ನೀರಲುಗಿ . . . ಸಾವಿನಲ್ಲಿ ತೆರೆದ ಬಿಳಿಯ ಬಿಚ್ಚುಗಣ್ಣು, ಪಾಚಿಯ ಮೂಲಕ ಕಂಡಿತು (ಹೊಸಕ್ಷಿ. ೦೬೯).

[ಬಿಚ್ಚು₁ (<ಬಿರ್ಚು) + ಕಣ್]

**ಬಿಚ್ಚುಗಣ್ಣು** 'ಬಿಚ್ಚುಗಣ್' ನೋ.

**ಬಿಚ್ಚುಗತ್ತಿ,** ಬಿಚ್ಚುಕತ್ತಿ (ನಾ). ಒರೆಯಿಂದ ಹೊರತೆಗೆದ ಕತ್ತಿ ; ಹಿರಿದ ಕತ್ತಿ : ಹರಿಗೆ ಬಿಚ್ಚುಗತ್ತಿಯು ಹೊಳೆವ ಕಟಿಯ ಮುಂಡುಗಳ ಬಲಗಳ ಮಧ್ಯದೆ ಸರ್ವಸಂಭ್ರಮದೊಳು ಮಳೆಯಾಳೆದವನೀಶ ಬಂದ (ಕಂಸವ. ೨೦-೬೩) ; ಬಿಚ್ಚುಗತ್ತಿಪಹರೆಯವರು ಬಲುಜಾಗರೂಕತೆಯಿಂದ ಕಾವಲು ಕಾಯುತ್ತಿದ್ದಾರೆ (ದೌಂಕ್. ೯). **ಬಿಚ್ಚುಕತ್ತಿ :** ಬಿಚ್ಚುಕತ್ತಿಗಳಂ ಪಿಡಿದು (ಸೌಗಂಧಿ. ೨೩೨-೦೦) ; ಆಪ್ತಭಟರು . . . ಬಿಚ್ಚುಕತ್ತಿಗಳನ್ನು ಹಿಡುಕೊಂಡು ನಿನ್ನ ಸುತ್ತಲು ನಡೆದು ಬರುವರೆ ? (ಕೃವಾಸ. ೦೦) ; ಬಿಚ್ಚುಕತ್ತಿಗಳನ್ನು ಕೈಲಿ ಹಿಡಿದು ಮುಂದೆ ನುಗ್ಗಿದರು (ರಾಜಸೂ. ೩೪).

[ಬಿಚ್ಚು₁ (<ಬಿರ್ಚು) + ಕತ್ತಿ]

**ಬಿಚ್ಚುಗನ್ನಡ** (ನಾ). ಸರಳವಾದ ಕನ್ನಡ ; ತಿಳಿಗನ್ನಡ : ಒಮ್ಮೆ ಕಂಡನೆಂದರೆ ಆಗ ಆಗುವ ಆನಂದವನ್ನು ಬಿಚ್ಚುಗನ್ನಡದಲ್ಲಿ ಬಣ್ಣಿಸಿದ ವಚನಗಳನ್ನು ನೋಡಿ ! (ಕನ್ನಪು. I. ೦೬೩). [ಬಿಚ್ಚು₂ + ಕನ್ನಡ₁]

**ಬಿಚ್ಚುಗಯ್ದು** (ನಾ). ಒರೆಯಿಂದ ಸೆಳೆದ ಆಯುಧ : ಮಲ್ಲರಾಜನನ್ನು ಬೆನ್ನಟ್ಟಿ ಬಂದ ಬಿಚ್ಚುಗಯ್ದುಗಳ ತನ್ನವರನ್ನು ಕೆಯ್ಸನ್ನೆಯಿಂದ ಹಿಂದಣ್ಗೆ ಕಳಿಹಿಬಿಡುವವನು (ಬಿರುಗಂ. ೩೪-೦೪).

[ಬಿಚ್ಚು₁ (<ಬಿರ್ಚು) + ಕಯ್ದು (<ಕೆಯ್ದು)]

**ಬಿಚ್ಚುಜಡೆ** (ನಾ). ಬಿಚ್ಚಿಕೊಂಡಿರುವ ಜಟೆ ; ಹರಡಿಕೊಂಡಿರುವ ಜಟೆ : ಮೆಚ್ಚಿದನು ಮದನಾರಿ ಹೋಮದ ಕಿಚ್ಚು ತುಡುಕದ ಮುನ್ನ ತೆಗೆದನು ಬಿಚ್ಚುಜಡೆಗಳ ಜಹ್ನುಸುತೆಯಲಿ ನಾದಿದನು ಭಟನ (ಕುಮಾ.ಗ. ೯-೨೩). [ಬಿಚ್ಚು₁ (<ಬಿರ್ಚು) + ಜಡೆ₁]

**ಬಿಚ್ಚುನುಡಿ** (ನಾ). ಮುಚ್ಚುಮರೆಯಿಲ್ಲದ ಮಾತು ; ಸ್ಪಷ್ಟವಾದ ನುಡಿ ; ನೇರವಾದ ಮಾತು : ಅವರ ಬಿಚ್ಚುನುಡಿಗಳನ್ನು ನಾನು ಪ್ರೀತಿಸಿದೆ (ಶಾಪೋರೀ. ೯೯) ; 'ಎನ್ನ ತಪ್ಪು ಅನಂತಕೋಟಿ ; ನಿಮ್ಮ ಸೈರಣೆಗೆ ಲೆಕ್ಕವಿಲ್ಲಾ !' ಎಂಬ ಬಿಚ್ಚುನುಡಿ (ಸಾಹಿಹಿಂ. ೩).

[ಬಿಚ್ಚು₁ (<ಬಿರ್ಚು) + ನುಡಿ₂]

**ಬಿಚ್ಚುಪೇಣಿ** (ನಾ). ಒಂದು ಬಗೆಯ ಸಿಹಿತಿಂಡಿ : ಬೆಂದುದಂ ಪಿಡಿದು ತೆಗೆದಿರಿಸಿಯುತ್ತಮದ ಸಕ್ಕರೆಯನದಟಿ ಪದರ್ಗಳೊಳು ತುಂಬಲದು ಬಿಚ್ಚುಪೇಣಿಯಾಯ್ತು (ಸೂಶಪಾ. ೦-೯೮). [ಬಿಚ್ಚು ? + ಪೇಣಿ]

**ಬಿಚ್ಚುಫಿರಂಗಿ** (ನಾ). "ದೊರೆಯ ಸಂಗಡ ತೆಗೆದುಕೊಂಡು ಹೋಗುವ ಆಯುಧ" (ಚಿತ್ರಪಾ. ೨ ಅನುಬಂಧ) : ಓಬಳಣ್ಣನಾಯಕನಿಗೆ ಪಟ್ಟವಾಯಿತು. ಇವನಿಗೆ ಬಿಚ್ಚುಫಿರಂಗಿ ಹಿಡಿಸಿದರು (ಚಿತ್ರಪಾ. ೦೬).

[ಬಿಚ್ಚು ? + ಫಿರಂಗಿ]

**ಬಿಚ್ಚುಫೇಣಿ** (ನಾ). = ಬಿಚ್ಚುಪೇಣಿ : ಈಪೋಪಾದಿಯಲ್ಲಿ ಎಲ್ಲ ಫೇಣಿಗಳನೂ ಅಟ್ಟು ಇರಿಸಿ ಎಲ್ಲ ಪದರಿನೊಳಗೆ ಸಕ್ಕರೆಯ ತುಂಬಿ ತಳಿವುದು. ಇದರ ಹೆಸರು ಬಿಚ್ಚುಫೇಣಿ ಎನಿಸಿಕೊಂಬುದು (ಸೂಶಪಾ. ೦-೯೮ ಅಡಿ). [ಬಿಚ್ಚು ? + ಫೇಣಿ]

**ಬಿಚ್ಚುಮನಸ್ಸು** (ನಾ). ಮುಚ್ಚುಮರೆಯಿಲ್ಲದ ಹೃದಯ ; ತೆರೆದ ಮನಸ್ಸು : ಪದ್ಮಾಕರ ಬಿಚ್ಚುಮನಸ್ಸಿನಿಂದ ಮಾತನಾಡತೊಡಗಿದ (ರತ್ನಗೋ. ೨೨) ; ಒಬ್ಬರನ್ನೊಬ್ಬರು ಬಿಚ್ಚುಮನಸ್ಸಿನಿಂದ ಮೆಚ್ಚಿಕೊಂಡುದು ಜನರಿಗೆ ಮಹದಾನಂದವಾಯಿತು (ಸಂಗೀಶ. ೩೦).

[ಬಿಚ್ಚು₁ (<ಬಿರ್ಚು) + ಮನಸ್ಸು]

**ಬಿಚ್ಚುಮಾತು** (ನಾ). = ಬಿಚ್ಚುನುಡಿ : ನಿನ್ನ ಬಿಚ್ಚುಮಾತನ್ನು ನಾನು ಮೆಚ್ಚುತ್ತೇನೆ (ದೂರಸ. ೦೦೩) ; ಇದನ್ನು ಬಿಚ್ಚುಮಾತಿನಿಂದ ಶ್ರೀಮದಾನಂದತೀರ್ಥರು . . . ಉಪದೇಶಿಸಿದ್ದಾರೆ (ಭಾರದ. ೨೯೦).

[ಬಿಚ್ಚು₁ (<ಬಿರ್ಚು) + ಮಾತು₁]

**ಬಿಚ್ಚುಮೊಗ್ಗೆ** (ನಾ). ಅರಳಿದ ಮೊಗ್ಗು : ಹೌದು ಧಣಿಯ, ನಾ ಬಿಚ್ಚು ಮೊಗ್ಗೆ, ನನಗಿಲ್ಲ ಸೆರಗುಮುಚ್ಚು (ಮುಕ್ತಕಂ. ೨೪-೩).

[ಬಿಚ್ಚು₁ (<ಬಿರ್ಚು) + ಮೊಗ್ಗೆ]

**ಬಿಚ್ಚುರಥಿಕ** (ನಾ). ಏಕಾಕಿಯಾಗಿ ಕಾದಬಲ್ಲ ರಥಿಕ : ಹೆಚ್ಚಿ ವೀರಾವೇಶದಲಿ ಬಹ ಬಿಚ್ಚುರಥಿಕರನಾಯ್ದು ಧೈರ್ಯದ ಕಚ್ಚ ಮುಂಜಿದನು (ಕುವ್ಯಾಕ. ೦೩-೨೨). [ಬಿಚ್ಚು₂ + ರಥಿಕ]

**ಬಿಚ್ಚುರೊಕ್ಕ** (ನಾ). ಚಿಲ್ಲರೆ ಹಣ ; ಪುಡಿಗಾಸು : ಬಿಚ್ಚುರೊಕ್ಕ ವಿರಲಿಲ್ಲ. ಗುಮಾಸ್ತ ರೂಪಾಯಿ ಮುರಿಸಿಕೊಂಡು ಬರಲು ಹೋದ (ಶ್ರೀಮಾಶ್ರ. ೦೯೬). [ಬಿಚ್ಚು₂ + ರೊಕ್ಕ]

**ಬಿಚ್ಚುವ** (ನಾ). ಸಂನ್ಯಾಸಿ ; ಭಿಕ್ಷುಕ : ಒರ್ವ ರಸವಾದಕನೆಂಬ ಬಿಚ್ಚುವಂ [ಶಾಕಾಂ. ಭಿಕ್ಷುಕಂ] . . . ಎಂದೊಡೆ (ವಡ್ಡಾರಾ. ೦೫೬-೦೦); ಆ ಬಿಚ್ಚುವಂ . . . ತನ್ನೊಳವಧಾರಿಸಿ (ಸುಕುಮಾ. ೩-೬ ವ).

[< ಸಂ. ಭಿಕ್ಷುಕ]

**ಬಿಚ್ಚೂರಿಗೆ** (ನಾ). ಒಂದು ಬಗೆಯ ಭಕ್ಷ್ಯ : ಮುಂಡಗೆ ಪೇಣಿ ನಲ್ಲೈದ ಲಡ್ಡುಗೆಯ ಬಿಚ್ಚೂರಿಗೆಗಳಂ ಬಡ್ಡಣಿಸಿದರಂಗನೆಯರು (ಮಪೀಪು. ೦೬-೨೪) ; ಗಾರಿಗೆ ಲಡ್ಡುಗೆ ಬೀಸೂರಿಗೆ ಬಿಚ್ಚೂರಿಗೆ . . . ಮಧು ಸಕ್ಕರೆಗಳ ಸಾರಂಗಳ ಸುಳಿವಾಳೆಯ ದೊನ್ನೆಯೊಳಾರೈದೆರೆದರ್ಸವಿಗಾತಿಯರ್ (ಮರೀಪು. ೦೯-೫೮).

[ಬಿಚ್ಚು ? + ಹೂರಿಗೆ (<ಪೂರಿಗೆ)]

**ಬಿಚ್ಚೆ** 'ಬಿಕ್ಕೆ₂' ನೋ.

**ಬಿಚ್ಚೆಕಾರ** (ನಾ). ಭಿಕ್ಷುಕ ; ತಿರುಪೆಯವನು : ಈ ಬಿಚ್ಚೆಕಾರ ಭಿಕಾರಿ ರಾಯ . . . ಕೊಸವ . . . ವೃದ್ಧಜಂಬುಕ (ಮಂತ್ರಶ. ೦೦೦-೦೯).

[ಬಿಚ್ಚೆ (< ಬಿಕ್ಕೆ₂) + -ಕಾರ₁ (< -ಕಾಱ). /ತಮಿ. ಪಿಚ್ಚೈಕ್ಕಾರನ್]

**ಬಿಚ್ಚೋಗರ** (ನಾ). (ಹೂವಿನಂತೆ) ಉದುರುದುರಾಗಿರುವ ಅನ್ನ ; ಮಿದ್ದೆಯಾಗಿಲ್ಲದ ಅನ್ನ : ಮಲ್ಲಿಗೆಯರಳಂತೆ ಬಿಚ್ಚೋಗರ ಮೊಸರು . . . ರಸರಸಾಯನವ ಚಪ್ಪರಿದು ನೀರ್ವಜ್ಜಿಗೆ ಹಸಗೆಯ್ದಿರಲೀಂಟಿದರು (ಮೋಹತ. ೩-೫೬). [ಬಿಚ್ಚು₁ (< ಬಿರ್ಚು) + ಓಗರ]

**ಬಿಚ್ಚೋಲೆ,** ಬಿಚ್ಚಾಲೆ (ನಾ). (ಮುತ್ತೈದೆಯರು) ಕಿವಿಗೆ ಆಭರಣದಂತೆ ಧರಿಸುವ ತಾಳೆಗರಿಯ ಸುರುಳಿ : ಬಿಚ್ಚೋಲೆ ಹರಿಹು ಹೆಜಿ

ತಿಲಕಂ ಕಂಗಳನಲಸದೆ ಕೇದಗೆವೂಗಳೊಳೆತ್ತಂ ಮಾಡಿ ತೊಟ್ಟರಬಲೆಯರೆಲ್ಲಂ (ಸೂಕ್ತಿಸು. ೧೧-೫೦); ಮಣಿನ ಬಿಚ್ಚೋಲೆಗಳ ಬಣ್ಣದ ಪೊನ್ನ ನೂಲುಗಳ ಗಿಂಗಳೇ ಫಲವಾದುವಾ ಸುರಕರಿಯ ನೋಂಪಿಯ ದಾನಕೆ (ಸಂಭಶ. ೨೦-೨೦); ತಾನೆ ಐರದಾಳಿಯ ಬಿಚ್ಚೋಲೆಯ ಚಂದನದ . . . ಕರಂಡವಂ ಕೈಯೊಳ್ಕೊಂಡು (ರಾಮಾಶ್ವ. ೨೯-೧೭). **ಬಿಚ್ಚಾಲೆ :** ಶ್ರೀರಂಗಮ್ಮನು ಆಭರಣಗಳನ್ನೆಲ್ಲಾ ಪರಿತ್ಯಜಿಸಿ ಅರಿಶಿನ ಕುಂಕುಮವನ್ನು ಇಟ್ಟುಕೊಂಡು ಬಿಚ್ಚಾಲೆಯನ್ನು ಧರಿಸಿಕೊಂಡು . . . ಹೇಳಿ ಕಳುಹಿಸಿದಳು (ಶ್ರೀರಾಯ. ೩೭೦); ಮದುವೆಯಾಗಿದ್ದರೆ ಹೆಂಡತಿಯು ಅರಿಶಿನಕುಂಕುಮ ಬಳೆ ಬಿಚ್ಚಾಲೆಯನ್ನು ತೆಗೆಸುತ್ತಿದ್ದರು (ದೂರಸ. ೨೭೯).

**ಬಿಚ್ಚೋಲೆ ಗೌರಮ್ಮ, ಬಿಚ್ಚೋಲೆಯ ಗೌರಮ್ಮ** = ಯಾವ ಆಭರಣಗಳನ್ನೂ ಹಾಕಿಕೊಂಡಿರದ ಬಡಮುತ್ತೈದೆ : ಅವಳು ಬಿಚ್ಚೋಲೆ ಗೌರಮ್ಮನಂತೆ ಮದುವೆಮನೆಗೆ ಹೊರಟಿದ್ದಳು (ರೂಢಿ); ತಾಯಿಯ ಜಂಬ ಆಡಂಬರಗಳನ್ನೇ ಅರಿಯದ ಬಳೆ ಬಿಚ್ಚೋಲೆಯ ಗೌರಮ್ಮ (ದೂರಸ. ೪೩).

[ಬಿಚ್ಚು$_1$ (<ಬಿಚ್ಚುರ್) + ಓಲೆ . / ತುಳು. ಬಿಚ್ಚೋಲೆ]

**ಬಿಚ್ಚ್ಚವ** ‘ಬಿಚುವಾ’ ನೋ.

**ಬಿಚ್ವ** ‘ಬಿಚಂವಾ’ ನೋ.

**ಬಿಚ್ವಾ** ‘ಬಿಚುವಾ’ ನೋ.

**ಬಿಛಾನಾ** ‘ಬಿಚಾನ’ ನೋ.

**ಬಿಛಾಯತ,** ಬಿಚಾಯಿತ, ಬಿಛಾಯಿತ (ನಾ). ದಲ್ಲಾಳಿ ; ಕಮಿಷನ್ ಏಜೆಂಟ್ : ಇಲ್ಲಿ ಠೋಕಬಂದ ಜೀನಸಗಳ ಒಡವೆ ಬಹಳ, ಅಂತ ನಮ್ಮ ಬಿಛಾಯತರು ಇದು ಧ್ಯಾನದಲ್ಲಿ ತಂದು (ಮುಂಬವ್ಯಾ. ೩೦). **ಬಿಚಾಯಿತ :** ಪರವೂರಿಂದ ಬಂದ ಬಿಚಾಯಿತರು ಊರಿನೊಳಗಿನ . . . ಅಂಬೋಣ ಏನಿರುವದು ಇದನ್ನು ಕೇಳಿಕೊಂಡು ಅದರಂತೆ ವ್ಯವಸ್ಥೆಯನ್ನು ಮಾಡುವದು (ಮುಂಬವ್ಯಾ. ೨೯೦). **ಬಿಛಾಯಿತ :** ಈ ಮಾಹಿತಿಯು ಬಿಛಾಯಿತರಿಗೆ ಬಹು ಅಗತ್ಯ ಇರತಕ್ಕದ್ದು (ಮುಂಬವ್ಯಾ. ೨೯).

[← ಮರಾ. ಬಿಛಾಯತ್, ಬಿಛಾಇತೀ, ಬಿಛಾಯತೀ]

**ಬಿಛಾಯಿತ** ‘ಬಿಛಾಯತ’ ನೋ.

**ಬಿಜ** ‘ಬಿಜಯ’ ನೋ.

**ಬಿಜಆ** (ನಾ). ಒಬ್ಬಾಕೆಯ ಹೆಸರು : ಪೊಳಲಿನಾಡುಳ್ಳೊಱೆಯೂರು ಬರಗೂರು ಬಿಜಆ ಮಾದೇವಿಯಾಳುತ್ತಿರೆ (ಎಕ. XII, ಶಿರಾ. ೨೪-೩೭; ಸು. 900). [< ಸಂ. ವಿಜಯಾ]

**ಬಿಜಯ,** ಬಿಜ (ನಾ). ೧. ವಿಜಯ ; ಗೆಲುವು : “ಬಿಜಯ (ಬಿಜ) — ವಿಜಯ=ಗೆಲುವು” (ತದ್ಭಕೋ. ೩೦). ೨. ಪ್ರಯಾಣ ಮಾಡಿ ಬರುವುದು ; ಆಗಮನ ; ಬರವು : ಮಾಡುವುದು ನೀವ್ ಬಿಜಯವಲ್ಲಿಗೆ (ಸಂಭಶ. ೧೭-೩೦) ; ವರದರಾಜದೇವರ ತೇಚಲ ಪಟ್ಟಣಕೆ ಬಿಜಯಂ ಮಾಡ್ಸಿಕೊಂಡು (ಎಕ. X (S), ಮುಳಬಾ. ೩-೧೭; 1430). ೩. ತೆರಳುವಿಕೆ; ಹೊರಡುವಿಕೆ ; ನಿರ್ಗಮನ : ಬಿಜಯಮೆಸಗಲಿಕೆಮಗನುಜ್ಞೆಯೇಂ (ಶರಶು. ೫-೧೩). ▶ ಇದು ಸಾಮಾನ್ಯವಾಗಿ ರಾಜರು, ಗುರುಗಳು, ಹಿರಿಯರು ಮುಂತಾದವರ ಆಗಮನ, ನಿರ್ಗಮನಗಳಿಗೆ ಅನ್ವಯಿಸುವ ಗೌರವಸೂಚಕವಾದ ಶಬ್ದ. ೪. (?) : ಆ ಊರ ಬಿಜಯರು ಕಂಮಾಜಿರು ಅಗಸಾಲೆಯರು ನಾಯಿಂದರು (ಎಕ. IV (R), ಎಳಂದೂ. ೦೩೪-೪ ; 14ನೆಯ ಶತ). **ಬಿಜ :** ೧. ಮೇಲಿನ ‘ತದ್ಭಕೋ’ ಪ್ರಯೋಗವನ್ನು ನೋಡಿ.

**ಬಿಜಯ ಮಾಡಿಸು, ಬಿಜ ಮಾಡಿಸು** = ೧. ಬರುವಂತೆ ಮಾಡು; ಕರೆತರು : ಸರಸ್ವತೀಮಂದಿರದೊಳಗೆ ಅವರನ್ನು ಬಿಜಯ ಮಾಡಿಸು (ಜದೇವ. ೧೧೫) ; ಆಗ ಹುಜೂರ್‌ಸವಾರಿ ಬಿಜಯ ಮಾಡಿಸುವುದೆಂದರೆ ಬಹಳ ದೊಡ್ಡ ಉತ್ಸವ (ಕೆಲಸ. ೩೪). ೨. (ಉತ್ಸವದಲ್ಲಿ ದೇವರ ವಿಗ್ರಹ ಮುಂತಾದುವುಗಳಂತೆ) ತೆಗೆದುಕೊಂಡು ಹೋಗು ; ಸಾಗಿಸಿಕೊಂಡು ಹೋಗು ; ಒಯ್ಯು : ಆ ಶ್ವೇತವರಾಹಸ್ವಾಮಿಯ ಪ್ರತಿಮೆಯನ್ನು ಬಿಜ ಮಾಡಿಸಿಕೊಂಡು ಶ್ರೀರಂಗಪಟ್ಟಣವನ್ನು ಸೇರಿದರು (ಒಡೆಕ. ೪೪); ಛತ್ರಕ್ಕೆ ಈಶ್ವರದೇವರ ಉತ್ಸವಮೂರ್ತಿಯನ್ನು ಬಿಜ ಮಾಡಿಸಿಕೊಂಡು ಹೋದರು (ಗರುಡಾ. ೦೩೧). ೩. ಬರು ; ಆಗಮಿಸು : ಭರತಪ್ರಭುಗಳ ಸವಾರಿ ಬಿಜ ಮಾಡಿಸುತ್ತಿದೆ (ಹುಟ್ಟಿಹ. ೦೭೨) ; ಮಹಾರಾಣಿಯವರು . . . ಕೈಸಾಲೆಗೆ ಬಿಜ ಮಾಡಿಸಿದರು (ಕುಟ್ಟಿರ. ೭). **ಬಿಜಯ ಮಾಡು, ಬಿಜ ಮಾಡು** = ೧. ದಯಮಾಡು ; ಬರು ; ಆಗಮಿಸು : ಈಯಟವಿಯಲಿ ದುಷ್ಟಮೃಗಸಮುದಾಯವಿದೆ . . . ಬೇಂಟೆಗೆ ಬಿಜಯ ಮಾಡು (ತೊರರಾ. ೩-೩-೬) ; ದ್ವಿಜತಿಲಕ . . . ನಿಜಶಿಷ್ಯನಂ ಕೂಡಿಕೊಂಡು ಮುಖಮಂಟಪಕೆ ಬಿಜಯ ಮಾಡಿದ ಕಜ್ಜಮಾವುದು (ಜೈಮಿಭಾ. ೨೬-೩೨) ; ನಿಜವಾಗಿ ತೆರಳಬೇಕಾಯಿತಾದಡೆ ಜೀಯ ಬಿಜ ಮಾಡಿ ಬೆನ್ನಾಂತುಕೊಂಬೆ (ಮೋಹತ.೩೬-೩೬); ಶ್ರೀ ಜ್ಞಾನಸಂಬಂಧರನ್ನು ಮನೆಗೆ ಬಿಜ ಮಾಡುವಂತೆ ಮಾಡಿರಿ (ಪುರಾಪು. ೧೭೦). ೨. ತೆರಳು ; ನಿರ್ಗಮಿಸು ; ಹೊರಡು : ನಿಮ್ಮ ಪದ ದರುಶನದಿ ಧನ್ಯನು ಬಿಜಯ ಮಾಡುವುದೆನುತ ಕಂದೆಱೆದೀಕ್ಷಿಸಿದನಂದುಭಯಸೈನಿಕವ (ಕುಮ್ಯಾದ್ರೋ. ೦೮-೬೦); ನಿರುತದಾರೋಗಣೆಯ ಮಾಡಿಯೆ ಮರಳಿ ಬಿಜ ಮಾಡು (ಸಂಭಶ. ೨೬-೧೩) ; ಆಶ್ಚರ್ಯವನು ತೋಱುವೆ ಬಂದಿರಾದರೆಯೆನಲು ಬಿಜ ಮಾಡೆಂದು ಮುನಿಪನ ಕೂಡೆ ಹೊಱಮಂಟರು ಕುಮಾರಕರು (ಕೌಶಿರಾ. ೦-೯೭). ೩. ಆರಂಭವಾಗು ; ಮೊದಲಾಗು : ಈ ಸೂತ್ರಸಮುದಾಯ ಮತ್ತು ಇದರೊಂದಿಗೆ ಉಪನಿಷತ್ತುಗಳು ಮತ್ತು ಭಗವದ್ಗೀತೆ ಈ ಮೂರೂ ಸೇರಿ ವೇದಾಂತಶಾಸ್ತ್ರದ ಆಧಾರಶಿಲೆಯೆನಿಸಿದೆ. ವೇದಾಂತವು ಬಿಜ ಮಾಡುವುದು ಇಲ್ಲಿಂದಲೇ (ಶಾರದ. ೨೫೦).

[< ಸಂ. ವಿಜಯ]

**ಬಿಜಯಂಗೆಯ್,** ಬಿಜಯಂಗೆಯಿ, ಬಿಜಯಂಗೈ, ಬಿಜಯಂಗೈಯಿ (ಕ್ರಿ). ೧. ಬರು ; ದಯಮಾಡು ; ಆಗಮಿಸು ; ಚಿತ್ತೈಸು : ಭಟ್ಟಾರಾ ಕಿತ್ತಯ್ಯಂಗಳನೆಮ್ಮಲ್ಲಿಗೊಡಗೊಂಡು ಬಂದು ಚರಿಗೆದೋಱಿ ನೀಮುಂ ಬಿಜಯಂಗೆಯ್ವುದೆನೆ (ವಡ್ಡಾರಾ. ೬೧-೧೫) ; ನಿಮ್ಮಯ್ಯಂ ಧೃತರಾಷ್ಟ್ರನ ಬೆಸದಲ್ ಮುನ್ನಮೆ ಮಾಡಮಂ ಸಮೆದಿಟ್ಟನಲ್ಲಿಗೆ ಬಿಜಯಂಗೆಯ್ಯಂ (ಪಂಪಭಾ. ೩-೨ ವ) ; ಎಲೆ ದೇವಾ ಭೀಷ್ಮರಿಶ್ಚಲಿರ್ದಪರಿತ್ತ ಬಿಜಯಂಗೆಯ್ಯಂ (ಗದಾಯು. ೫-೩೭ ವ). ೨. ಹೊರಡು ; ತೆರಳು ; ನಿರ್ಗಮಿಸು ; ಹೋಗು : ಎಮ್ಮ ಪಾಸಿದ ಚಿತ್ರಪಟವೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಮಿಗಂಗಳಾಗಳೆ ತೊಡರ್ಗುಮುಸಿರದೆ ಬಿಜಯಂಗೆಯ್ಯಂ (ಆದಿಪು. ೩-೬೯ ವ) ; ದೇವ ನೀಮಿಂ ತಡೆಯದೆ ಬಿಜಯಂಗೆಯ್ವುದೌಚಿತ್ಯಂ (ಕುಸುಮಾ. ೯-೧೧೫) ; ವಿಮಳವ್ಯೋಮಕೇಶನು ನಗುತ ಬಿಜಯಂಗೆಯ್ಯಲನುವಾದ (ಕುಮ್ಯಾಕ. ೭-೧೦). ೩. ಇರು ; ವಿರಾಜಿಸು : ಇಂತು ಬಂದು . . . ಗಿರಿಜೆ ಭರದಿಂ ಗಿರಿರಾಜನ ತೊಡೆಯ ಮೇಲೆ ಬಿಜಯಂಗೆಯ್ದಳ್ (ಗಿಂಕ. ೪-೪೪). **ಬಿಜಯಂಗೆಯಿ :** ೧. ಆ ಶಂಕರಪ್ರತಿಮಾನ ನಪಿತಭಯಂಕರಂ ಬಿಜಯಂಗೆಯಿದನಿಂದು (ಬಸಪು. ೫೦-೭). **ಬಿಜಯಂಗೈ :** ೧. ಸಿರಿಸರಸ್ವತಿವೆರಸಿ ಗಿರಿಜೆ ಬಿಜಯಂಗೈದಳು (ಸಿದ್ಧರಾ. ೦-೫೭) ; ಕರುಣಿ ಬಿಜಯಂಗೈದು ಮೃತ್ಯುವಿನುರಿವ ಗಂಟಲೊಳಿಳಿವ ತನ್ನನು ಬರಸೆಳೆದನಂದಮಳಮಾರ್ಕಂಡೇಯಮುನಿ ನುಡಿದ (ಕುಮ್ಯಾಅ. ೧೪-೦೭); ನೀವು ಬಿಜಯಂಗೈವಡಧಿಕೃತಪಾವನರಲೇ (ತೊರರಾ. ೦-೫ ೫೦). ೨. ಹರಂ ಕರುಣದಿಂ ನೋಡಿ ಬಸವನ ಚಿತ್ತದೊಳ್ ಪೊಕ್ಕು . . . ನೆಲಂ ಮೆಚ್ಚೆ ಮೆಱೆದಪೆಂ ಎಂದು ಬೆಸಸಿ ನಿಜಲಿಂಗಕ್ಕೆ ಬಿಜಯಂಗೈವುದುಂ (ಬಸರ. ೨-೬೨); ಹರನ ಕರುಣದ ಹದನನೀತಂಗೊರೆದು ಶತರುದ್ರೀಯವನು ವಿಸ್ತರಿಸಿ ಬಿಜಯಂ

ಗೈದನಾ ಮುನಿಪತಿ ನಿಜಾಶ್ರಮಕೆ (ಉತ್ತರಪುರಾ. ೧೯-೫೪). **ಬಿಜಯಂಗೈಯಿ :** ೨. ನಮಗೆ ನಿಮಗಿನ್ನಾವ ಜಂಜಡ ಬೇಡ ತಪದ ಫಲಾವಳಿಯೆ ಸಾಕಿನ್ನು ಬಿಜಯಂಗೈಯಿ ನೀವು (ತೊರರಾ. ೦-೦೭-೦೭).

[ಬಿಜಯ + ಕೆಯ್₁]

**ಬಿಜಯಂಗೆಯಿ** 'ಬಿಜಯಂಗೆಯ್' ನೋ.

**ಬಿಜಯಂಗೆಯಿಸು** 'ಬಿಜಯಂಗೆಯ್ಸು' ನೋ.

**ಬಿಜಯಂಗೆಯ್ಸು,** ಬಿಜಯಂಗೆಯಿಸು, ಬಿಜಯಂಗೈಯಿಸು, ಬಿಜಯಂಗೈಸು (ಕ್ರಿ). ೧. ಕರೆದು ತರು ; ಬರುವಂತೆ ಮಾಡು : ಜಂಗಮವ ಕಂಡು ಗೃಹಕ್ಕೆ ಬಿಜಯಂಗೆಯ್ಸಿ ತಂದು (ಚನ್ನವ. ೪. ೩೪-೭೪); ಅವರ್ಗಳನೀಗ ಬಿಜಯಂಗೆಯ್ಸಿ ತಹೆ (ಬಸವು. ೬-೧೨) ; ಅರಸನನುಜರು ಸಹಿತ ಮುನಿಮುಖ್ಯರನು ಕಂಡಿದಿರೆದ್ದು ಚರಣದೊಳೆಱಗಿ ಬಿಜಯಂಗೆಯ್ಸಿ ತಂದನು ತಳಿರ ಮಂಟಪಕೆ (ನಳಚ. ೦-೦೦). ೨. ಒಳಹೊಗುವಂತೆ ಮಾಡು; ಪ್ರವೇಶಿಸುವಂತೆ ಮಾಡು : ಪಾರ್ವತಿಯಂ ಪರ್ವತರಾಜಂ ಪುಷ್ಪಕದೊಳ್ ಬಿಜಯಂಗೆಯ್ಸಿ ತಾನುಂ ಕುಳ್ಳಿರ್ದು (೧೦೪. ೫-೦೨ ವ) ; ಸಜ್ಜಾಮಂದಿರಕೆ ಸಡಗರಿಸಿ ಮಾಯೆಯನಲ್ಲಮನನೊಲಿಸಿ ತಂದು ಬಿಜಯಂಗೆಯ್ಸಿದರು ಬಳಿಕಿಂದುಮುಖಿಯರು (ಪ್ರಭುಲಿಂ. ೫-೪೪). **ಬಿಜಯಂಗೆಯಿಸು :** ೧. ಋಷಿಕುಮಾರನಂ . . . ಒಲವಿನಿಂದ ಬಿಜಯಂಗೆಯಿಸಿ ಕರೆತಂದು (ಉದ್ಭಟ. ೨-೨೨ ವ) ; ದಯಾಳುವಂ ಬಿಜಯಂಗೆಯಿಸಿ ತಂದೊಳಗೆ ಕುಳ್ಳಿರಿಸಿ (ಬಸವು. ೫೨-೪). **ಬಿಜಯಂಗೈಯಿಸು :** ೧. ಸೌಂದರವತಿಯಂ . . . ಒಯ್ಯನೆ ಕನಕಾಂದೋಳನದೊಳ್ ಬಿಜಯಂಗೈಯಿಸಿಕೊಂಡೆಟ್ಟಿಂದುಪವನಮಂ ಪೊಕ್ಕು (ಉದ್ಭಟ. ೭-೩೩ ವ). **ಬಿಜಯಂಗೈಸು :** ೧. ಹರಿಯ ಬಿಜಯಂಗೈಸಿ ತಂದಸುರರಸು ಭಂಗಿಸಿ ಯಜ್ಞಕರ್ಮವ ಧರಿಸಿ ಸುಖಿಯಹೆನು (ಕೌಶಿರಾ. ೦-೭೮) ; ಬಂದನತಿಹರುಷದಲಿ ಮುನಿಕುಲವೃಂದದೊಡನೈತರಲು ರಘುಕುಲನಂದು ಬಿಜಯಂಗೈಸೆ ತಂದನು ರಾಜಮಂದಿರಕೆ (ರಾಮಚ. ೩೪-೦೨೭). ೨. ಮತ್ಸ್ಯದೇವರನೊಯ್ದು ಗಂಗೆಯಲಿ ಒಯ್ದು ಬಿಜಯಂಗೈಸೆ ಗಂಗೆಯನ್ನೈದೆ ತುಂಬಿದನೊಂದು ರೂಪಿಲಿ (ಸಂಭಶ. ೪-೬). [ಬಿಜಯ + ಕೆಯ್ಸು]

**ಬಿಜಯಂಗೈ** 'ಬಿಜಯಂಗೆಯ್' ನೋ.

**ಬಿಜಯಂಗೈಯಿ** 'ಬಿಜಯಂಗೆಯ್' ನೋ.

**ಬಿಜಯಂಗೈಯಿಸು** 'ಬಿಜಯಂಗೆಯ್ಸು' ನೋ.

**ಬಿಜಯಂಗೈಸು** 'ಬಿಜಯಂಗೆಯ್ಸು' ನೋ.

**ಬಿಜಯಿತ,** ಬಿಜಯಿತ್ತ, ಬಿಜಯ್ತ, ಬಿದಿಯಾಯ್ತ, ಬಿದೆಯಿತ್ತ, ಬೆಜಯಿತ್ತ (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಬಿಜಯಿತನು ಮರಿಯಸೆಯೊಳ್ ಭಗವತಿಯಂ ಪದಿಷ್ಟೆಗೆಯ್ಸಿದೊಡೆ (ಪ್ರ್ರ ಅ. ೦೧೨೪, ೩೪-೦ ; ಕಾಲವು ಚಿ). **ಬಿಜಯಿತ್ತ :** 'ಬಿಜಯಿತ್ತಯ್ಯ' ಪರಾ. **ಬಿಜಯ್ತ :** ಗವಟಿ ಬಿಜಯ್ತನ ನಟ್ಟ ಬೆಲ್ಲಪಾತ್ರದ ಮರಂಗಳ್ (ಎಕ. III (R), ಪಂಜನ. ೨೩೪-೦೩; ಸು. 10ನೆಯ ಚಿ). **ಬಿದಿಯಾಯ್ತ :** ಬದಿಯಾಯ್ತ ತುಱುವ ನಿಕ್ಕಿಸಿ ಕಾದು ಸತ್ತು ದಿವನೇಱಿದಂ (ಎಕ. II, ೩೪೯-೪; 884 ?). **ಬಿದೆಯಿತ್ತ :** ಪೆರ್ಬಟ್ಟಕ್ಕಂ ಬದಿರೂರ ಅಗ್ಗಳಮೀಳಲ್ಲಿ ಅಂಕಕೆ ಕಾದಿದ ಬಿದೆಯಿತ್ತ ಸತ್ತನ್ (ಎಕ. X, ಶ್ರೀನಿವಾ. ೨೭-೨೪; 870). **ಬೆಜಯಿತ್ತ :** ಬೆಜ[ಯಿ]ತ್ತನ್ . . . ಆಣೆಯುಳ್ ಕುದುರೆಯುಳ್ ತಾಗಿ ಪಲರನಿಱಿದು ಸತ್ತೊಡೆ (ಎಕ. X, ಮುಳಬಾ. ೨೨೬-೭; ಸು. 890 ?). [< ವಿಜಯಾದಿತ್ಯ]

**ಬಿಜಯಿತಗಾವುಂಡ** (ನಾ). ಒಬ್ಬಾತನ ಹೆಸರು : ಇದಕ್ಕೆ ಸಾಕ್ಷಿ . . . ಬಿಜಯಿತಗಾವುಣ್ಡನುಂ ಬನ್ದಗಾವುಣ್ಡನುಂ (ಎಕ. XI, ಹೊಳಲ್ಕೆ. ೩೦-೦೦ ; 964) ; ಬಿಜಯಿತಗಾವುಣ್ಡನ ಮಗಂ ಅಪ್ಪಡಿಗಾವುಣ್ಡಂ (ಪ್ರ ಅ. ೦೯೩೦, ೪೩-೫; 994). [ಬಿಜಯಿತ + ಗಾವುಂಡ (< ಗಾಮುಂಡ)]

**ಬಿಜಯಿತಮಂಗಲ** (ನಾ). ಒಂದು ಸ್ಥಳದ ಹೆಸರು : ಶ್ರೀಮನೊಟಿಮ್ಬಾಧಿರಾಜರ್ ಪೃಥಿವೀರಾಜ್ಯಂಗೆಯ್ಯುತ್ತಿರೆ ಜೋಟಿ ಬಿಜಯಿತಮಂಗಲದ ನೊಲಮ್ಬನ ದಣ್ಡಂ ಕಾದು ಪೆಜ್ಜಿಟಿಯೊಳ್ನೊಲಮ್ಬರಸ ಕಾದಿ ಸತ್ತಂ (ಎಕ. IX, ಹೊಸಕೋ. ೯೭-೬; ಸು. 980 ?). [ಬಿಜಯಿತ + ಮಂಗಲ]

**ಬಿಜಯಿತಾಚಾರಿ** (ನಾ). ಒಬ್ಬಾತನ ಹೆಸರು : ಬೆಸಂಗೆಯ್ದೊಂ ಕೊಯತೂರ ಬಿಜಯಿತಾಚಾರಿಯ ಮಗಂ ವಿಕ್ರಮಾದಿತ್ಯಂ (ಎಕ. X, ಮುಳಬಾ. ೦೦೬-೯; ಸು. 950). [ಬಿಜಯಿತ + ಆಚಾರಿ]

**ಬಿಜಯಿತ್ತ** 'ಬಿಜಯಿತ' ನೋ.

**ಬಿಜಯಿತ್ತಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ಬಿಜಯಿತ್ತಯ್ಯಂ ಮಾದಾಮತ್ತರಸರಾ ಪೊಟಲಮ್ಮನಾ ಮೇಗೆಟ್ಟು (ಎಕ. X, ಶ್ರೀನಿವಾ. ೪೦-೦; ಸು. 900). [ಬಿಜಯಿತ್ತ (< ಬಿಜಯಿತ) + ಅಯ್ಯ₁]

**ಬಿಜಯಿಸು** (ಕ್ರಿ). ಬರು; ಆಗಮಿಸು; ದಯಮಾಡು : ಲಂಕೇಶ್ವರಂ ಶ್ರಮನಿವಾರಣಾರ್ಥಂ ಪುರಕೆ ಬಿಜಯಿಸಿದನು (ಶ್ರೀರಾಮಪಟ್ಟ. ೬೦೦-೨೫೬); ಲಕ್ಷ್ಮಿ, ಪಡಸಾಲೆಯಿಂದ ದೇವರ ಮನೆಗೆ ಬಿಜಯಿಸಿದ ಭಾಸವಾಯಿತು (ದೀಪಕ. II. ೦೯೦). [ಬಿಜಯ + — ಇಸು₃]

**ಬಿಜಯ್ತ** 'ಬಿಜಯಿತ' ನೋ.

**ಬಿಜಲಿ** (ನಾ). ೧. ಮಿಂಚು; ವಿದ್ಯುತ್ತು : ಈ ನಿನ್ನ ಹುಡುಗೆಯಂತೂ ಕೇವಲ ಬಿಜಲಿಯಾಗಿದ್ದಾಳೆ — ಬಿಜಲಿ (ಹಂಸಾ. ೪೮). ೨. ವಿದ್ಯುದ್ದೀಪ: ಅದು ಸಂಜೆಗೆ ಬಿಜಲಿಗಳನ್ನು ಹಚ್ಚಿದಾಗ ಆಟದ ಚಪ್ಪರ . . . ಒಳ್ಳೆ ಸಿಂಗಾರವಾಗಿ ಕಾಣುತ್ತಿದ್ದಿತು (ಪುನರ್ಜ. ೦೫೭).

[← ಹಿಂ. ಮರಾ. ಬಿಜಲೀ. / ಪ್ರಾ. ವಿಜ್ಜಲಿಯಾ]

**ಬಿಜವರ** (ನಾ). ಒಂದು ಬಗೆಯ ಆಭರಣ : ಕೆಂದ ಪೀತಾಂಬರವ ಸುಧೆ ಉಟ್ಟಿರುವಳು ಅಂದಮುಡಿಗೆ ಮುತ್ತಿನ ಸೊಂಡಿಲ ಬೈತಲ ಬಿಂದಿ ಬಿಜವರ ಬಲುಚೆಂದ (ಸಿದ್ಧಶ್ರೀ. ೦೯-೫೦).

[← ಮರಾ. ಬಿಜವರಾ, ಬಿಜೋರಾ]

**ಬಿಜಾಗರಿ** (ನಾ). ತಿರುಗಣೆ; ತಿರುಪುಮೊಳೆ ; ಕೀಲು : ಅದರ ಮೇಲೆ ತಲೆಯು ಹಿಂದೆ ಮುಂದೆ ಮಣಿಯುವ ಹಾಗೆ (ಬಿಜಾಗರಿಯಂತೆ) ಕೂಡ್ರಿಸಲ್ಪಟ್ಟಿದೆ (ಮುಂಬಯಿ. ೬-೧೦೨); ಬಿಜಾಗರಿಯನ್ನು ಟೆಲಿಗ್ರಾಫ್ ಸುತ್ತಿನ ತಂತಿಗೆ ಜೋಡಿಸಿರುತ್ತಾರೆ (ವಿಜ್ಞಾ.ವಿ. ೨೩); ಬೀಗ, ಬಿಜಾಗರಿ, ಅರ, ಕೊಡತಿ ಮೊದಲಾದ ಸಾವಿರಾರು ಸಲಕರಣೆಗಳಿದ್ದುವು (ಅಭೂತ. ೬೭).

[← ಮರಾ. ಬಿಜಾಗರೀ, ಬಿಜಾಗರೇ. / ತುಳು. ಬಿಜಾಗ್ರಿ, ಬಿಜಾಕ್ರಿ, ಬಿಜಗ್ರಿ]

**ಬಿಜಿಕ್, ಬಿಝಿಕ್** (ನಾ). ಒಂದು ಬಗೆಯ ಇಸ್ಪೀಟು ಆಟ ; ಇಬ್ಬರು ಅಥವಾ ನಾಲ್ವರು ಸೇರಿ ಆಡುವ ಆಟ; ಕಪ್ಪುರಾಣಿ ಮತ್ತು ಕೆಂಪು ರಾಜರನ್ನು ಸೇರಿಸಿ ಅಂಕಗಳನ್ನು ಆಡುವ ಆಟ : ಗಂಜೀಪಾ ಆಡೂ ಹಾಂಗಿಲ್ಲಾ, ಬಿಜಿಕ್ ಆಡೂ ಹಾಂಗಿಲ್ಲಾ (ತಿರುಗು. ೩೫); ಮಧ್ಯಾಹ್ನಕ್ಕ ಬಿಜಿಕ್ಕಿಗೆ ಬರತೀವಲ್ಲೋ ? (ತಿರುಗು. ೪೫). **ಬಿಝಿಕ್ :** ನಿನಗೆ ಬಿಝಿಕ್ ಬರುವುದೋ (ಗಾಳಿ. ೦೯); ಈ ಮಿತ್ರರನ್ನು ಕರೆದುಕೊಂಡು ಎರಡನೇ ಕೋಣೆಯಲ್ಲಿ ಬಿಝಿಕ್ ಆಡಲಿಕ್ಕೆ ಹೋಗುತ್ತೇನೆ (ಮೋಹಿನೀ. ೫೯). [← ಮರಾ. ಬಿಜಿಕ್, ಬಿಝಿಕ್./ಇಂ. Bezique]

**ಬಿಜಿಲು** (ಗು). ಗಜಿಬಿಜಿ : ದೊಳ್ಳ ಹೆಬ್ಬಾಗಿಲಲ್ಲಿ ಕಾಣಿಸಿಕೊಂಡು ಬಿಜಿಲು ಬಿಜಿಲು ಮಾತಿನಲ್ಲಿ "ಅಂವಿನ್ನೂ ಬಂದಿಲ್ಲಂತೆ" ಎಂದನು (ಮಲೆಮ. ೩೭೭).

[?]

**ಬಿಜ್ಜ₁** (ನಾ). ಒಬ್ಬಾತನ ಹೆಸರು : ಸತ್ಯಳ್ಗೆ ಎಟ್ಟಿತ್ರಚೋ[ಳೆ] ಬಿಜ್ಜಂ ನಾಟ್ಟು[ವು]ಣ್ಡುಗೆಯೆ (ಸೌಇಇ. XX, ೦೫-೦೦; 904); ಮುಂ ಬಿಜ್ಜನಂ [ಶಾಕಾಂ. ವಜ್ರಯಂ ?] ಕಾದರಿಗನುಟಿದರಂ ಕಾವುದೇಂ ಚೋದ್ಯ

ಮಾಯ್ತೋ (ಶಂಶಚಾ. ೦೦-೬೦); P " ಬಿಜ್ಜನಂ=ವಿಜಯಾದಿತ್ಯನೆಂಬ ರಾಜನನ್ನು " (ಶಂಶದೀ. ೪೦೦).

**ಬಿಜ್ಜನ ಬಂಟ**=ಒಂದು ಬಿರುದು : ಬಲವದರಿನೃಪತಿ ನಿಷ್ಕಂಟಂ ಬಿಜ್ಜನ ಬಂಟಂ (ಎಕ. VIII, ಸಾಗರ. ೦೦೯-೦೦; 1042). [<ಬಿಜಯು]

**ಬಿಜ್ಜ₂, ಬೆಜ್ಜ₂** (ನಾ). ಒಂದು ಬಗೆಯ ತೆರಿಗೆ : ಬೆಳುದಂಡ ಎಸೆ ಒಸಗೆ ಬಿಜ್ಜ ಬಿಡಾರವತ್ತ್ಯಾಗಾಯಿ ಮೊದಲಾಗಿ ಆಱುದೂ ಸಲ್ಲ ಸರ್ವ್ವಮಾನ್ಯವಾಗಿ (ಕಇ. I, ೩೪-೩; 1433 ?); ತುಳುವದ ಶಾಸನಗಳಲ್ಲಿ ಬರುವ ತೆರುವಣಗಳು: ತೆರು. . . ಒಸಗೆ, ಬಿಜ್ಜ, ಬಿಡಾರ (ತುಳುಶಾ. ೨೬೦). **ಬೆಜ್ಜ₂:** ಆ ಮಳಲೂರ ಪಟ್ಟಣದ ಹೊಜಿಕೇರಿಗೆ ಸಲುವ ಬೆಜ್ಜನೂ (ಎಕ. IX (s), ಶಕ್ಯಪ. ೦೫೨-೦೦; 1535 ?). [ ? ]

**ಬಿಜ್ಜಣ, ಬಿಂಕಣ, ಬಿಂಕಣಿ, ಬಿಚ್ಚಳ₂, ಬಿಜ್ಜಣಿ, ಬಿಜ್ಜಲ, ಬಿಜ್ಜಳ, ಬೀಜನ, ವಿಜ್ಜನ** (ನಾ). ಬೀಸಣಿಗೆ; ವೀಜನ; ಪಂಕ : "ಬಿಜ್ಜಣವೆನಲಾಲವಟ್ಟಂ" (ಚಕಹ. ೦೫೨); ಹಿಮಾನಿಲನಿಂ ನಿಮಿರುವ ಪೊಂಬಾಟಿಯ ಸುಟಿಯೆಲೆಯ ಬಿಜ್ಜಣಂಗಳಿಂ . . . ಹಿಮಗೃಹಮಂ ಸಮೆದು (ಕುಸುಮಾ. ೦೩-೪೬ ವ); ಸೊಗಸಿ ತಂಗಾಳಿಗೊಲಿವೆಲೆಯಿಂದೆ ಬಿಜ್ಜಣಮೆಸಗಿ . . . ಬಾಳೆಗಳ್ ಮೆಱೆದುವು (ಕದ್ಮರಾ. ೮-೩೪). **ಬಿಂಕಣ :** "ಬಿಂಕಣ (ಣಿ)—ವ್ಯಜನ" (ಕರ್ನಕೋ. ೩೦ ). 'ಬಿಂಕಣಗಿವಿಯ ' ಪರಾ. P 'ಬಿಂಕಣ' ಶಬ್ದಕ್ಕೆ ಬೇರೆಯ ವ್ಯುತ್ಪತ್ತಿ ಸಾಧ್ಯವಿದೆಯೆ ಎಂಬುದು ಪರಿಶೀಲನಾರ್ಹ. **ಬಿಂಕಣಿ :** 'ಬಿಂಕಣಿಗಿವಿ ' ಪರಾ. **ಬಿಚ್ಚಳ₂ :** ಸೂಟಜಿದೊಯ್ಯನೊಯ್ಯನೆ ಮಹೀಧರನಂದನರೊಲ್ದು ಬೀಸುವಾ ಬಾಳದ ಪೊಚ್ಚ ಬಿಚ್ಚಳದ ತಂಬೆಲರಿಂಪಿಗೆ ಮೆಯ್ಯನಿತ್ತು . . . ಉದ್ಭಟದೇವನೊಪ್ಪಿದಂ (ಉದ್ಭಟ. ೨-೦೦೩). **ಬಿಜ್ಜಣಿ :** ಅನಂತಮೆನಿಪ್ಪ ವೃತ್ತವದನದ ಲಕ್ಷ್ಮಿಯೆತ್ತಿ ಕೈನೀಡಿ ಬೀಸುತ್ತಲಿಹ ಬಿಜ್ಜಣಿಯು ಮೊತ್ತಮೆಂಬಂತಿರ್ದುದು (ರುಕ್ಮಾಂಗ. ೩-೬). **ಬಿಜ್ಜಲ :** ಚೂರ್ಣ ಹಿಮತಾಂಬೂಲ ಪರ್ಣ ಪೂಗಂಗುಡುವೆಲರ್ನಯದ ಬಿಜ್ಜಲದ ವರ್ಣನೆಯ ಸತಿಯರೊಳು ವಾರ್ಣಡೆದೆಳರಸಿ (ಶಾಪಶಂ. ೪-೨೦). **ಬಿಜ್ಜಳ :** ಬಿಜ್ಜಳ ಹಡಪ ಚಾಮರ ಗಿಂಡಿ ಕಾಳಾಂಜಿ . . . ಮುಕುರ ಬಾಚಣಿಗೆಯು ಕಜ್ಜದರೊಱಗಿರ್ದರು ಸುತ್ತ (ಸೂಬಶೋ. ೨೩-೨೭); ಸಿಗಂಧದಣ್ಪಿಗೆ ಬಿಜ್ಜಳದೆಲರಿಗೆ ಪರಿಮಳಿಸುವ ಪನ್ನೀರ್ಗೆ ಏರಿದು ಬಯಸುತವರಿರ್ವರೆಸೆದರಾಗ (ಕಂನಶಂ. ೦೦-೩೨). **ಬೀಜನ:** ಹಿಮರೋಚಿಯ ತಣ್ಗದಿರ್ಗಳ್ಗೆ ಶೀತಶೀತಳಿಕೆಯ ಬೀಜನಕ್ಕೆ ಗುಱಿಯಾಯ್ತು [ವಿ]ಯೋಗಿಜನಂ ಬಸಂತದೊಳ್ (ವರ್ಧಮಾ. ೦೦-೪೯). **ವಿಜ್ಜನ :** 'ವಿಜ್ಜನಸತಿ' ಪರಾ.

**ಬಿಜ್ಜಣದೂಳಿಗ** =ಬೀಸಣಿಗೆ ಹಿಡಿದು ಬೀಸುವ ಸೇವೆ, —ಊಳಿಗ : ಅಂಗಮರ್ದನದ ಬಿಜ್ಜಣದೂಳಿಗವಮಾಂತ ಭೃತ್ಯರಿಂದಂಚಿತ ಚಿಕ್ಕದೇವನರನಾಯಕನಾ ಸಭೆಯೊಳ್ ವಿರಾಜಿಕುಂ (ಚಿಾದಶಂ. ೨-೬೪).

[< ಸಂ. ವೀಜನ./ ಪ್ರಾ. ವಿಜ್ಜ=ಗಾಳಿ ಹಾಕುವುದು,—ಬೀಸುವುದು]

**ಬಿಜ್ಜಣಂದಳೆ** (ಕ್ರಿ). ಬೀಸಣಿಗೆಯನ್ನು ಹಿಡಿ: ಹಸ್ತಕಂಜದಿಂ ಕರೆದುಱಿ ಬಿಜ್ಜಣಂದಳೆದು ಬೀಸಿ ಮುದಂಬಡೆ (ವಿಷ್ಣುಪು. ೩-೬-೬೦). [ಬಿಜ್ಜಣ+ತಳೆ₁]

**ಬಿಜ್ಜಣವಿಕ್ಕು, ಬಿಜ್ಜಳವಿಕ್ಕು** (ಕ್ರಿ). (ಬೀಸಣಿಗೆಯಿಂದ ಬೀಸುವಂತೆ) ಗಾಳಿ ಹಾಕು ; ಗಾಳಿ ಬೀಸು : ಗಱಿಗೆದಱಿ ಕೊಡೆವಿಡಿದು ನಿಂದುವು ಬಿಸಿಲ್ಗೆ ನವಿಲೆಱಕೆಯಿಂ ಬೀಸಿ ಬಿಜ್ಜಣವಿಕ್ಕಿತಂಚೆ (ಕೈಶುಭಾ. ೨೬-೩೬); ಆ ಪಾಂಥದೊಳು ಮಂದಾನಿಲಂ ಕುಳಿರಾಂತು ಬಿಜ್ಜಣವಿಕ್ಕಿದುದು (ಶಂಕರಾ. ೨-೦೯). **ಬಿಜ್ಜಳವಿಕ್ಕು:** ಬಳಲಿದರ್ಗೆಸೆವ ಗಱಿಯಿಂದ ಬಿಜ್ಜಳವಿಕ್ಕಿದಪುವು ಶಿಖಿವಿಸರಂ (ವಂದಶಾ. ೨೦-೨೬). [ಬಿಜ್ಜಣ + ಇಕ್ಕು]

**ಬಿಜ್ಜಣಿ** 'ಬಿಜ್ಜಣ' ನೋ.

**ಬಿಜ್ಜಣಿಗ** (ನಾ). ಬೀಸಣಿಗೆಯಿಂದ ಗಾಳಿ ಹಾಕುವವನು,— ಬೀಸುವವನು : ಹಡಪದವರಂ ಬಿಜ್ಜಣಿ [ಗಾಱಂ. ೪]ಗರನಾ ಕಾಳಾಂಜಿವಿಡಿವರಂ . . . ಎಳೆವಕ್ಕಳ ಕಡುವಿಲಾಸದೊಳವರ್ಚಿಸಿ ಕೊಟ್ಟು (ಚಿವಿಪು. ೩-೪೩). [ಬಿಜ್ಜಣ + — ಇಗ]

**ಬಿಜ್ಜಣಿಗೆ, ಬಿಜ್ಜಳಿಗೆ, ವಿಜ್ಜಣಿಗೆ** (ನಾ). = ಬಿಜ್ಜಣ : "ಬಿಜ್ಜಣಿಗೆ. ಆಲವಟ್ಟಂ — ಈ ೨ ತಾಲವೃಂತಂ" (ಕಕಶಾ. ೬೨-೬೫೨) : ಪೊಸತಳಿರ್ಗಳ ಬಿಜ್ಜಣಿಗೆಯಿನೆಸಿವೆಲರ್ಗಳಿನೊಗೆವ ಘರ್ಮಜಲವಮಂ ಪೀರ್ದಾಱಿಸಿದುವು . . . ಲತಾಂಗಿಯರ್ಗೆ (ಅಂಪು. ೦೦-೬೫); ಅಂತು ಕಂತುಸಂತಾಪಕ್ಕೆ ಪಕ್ಕಾಗಿ . . . ಬೀಸುವ ಕುಱುವೆಯ ಬಿಜ್ಜಣಿಗೆಯೊಳಂ ಪಾಸುವ ಬಾಳಪ್ರವಾಳತಳ್ಪತಳದೊಳಂ . . . ಶಿಶಿರೋಪಚಾರಚಾತುರತ್ವಂ ಮೆಱೆಯೆ (ಅನಂಪು. ೦೦-೨೯ ವ). **ಬಿಜ್ಜಳಿಗೆ :** ಅಹಿಗಳಂ ಸಂತೈಸಿ ಬಿಜ್ಜಳಿಗೆಯಾ ಮೇಲೆ ಬೀಸುತ್ತಲರುಣಿಸನಿತ್ತು ಸಂತೈಸಿ (ವೀಕೃಪು. ೭-೩-೦); ಮಿಳಿರ್ವೆಳದಳಿರ್ದೊಂಗಲ ಬಿಜ್ಜಳಿಗೆಯ . . . ಎಲರಿಂ ಕುಳಿರ್ದುದು ಮೆಯ್ ಬನದೊಳೊಯ್ಯನಾ ಅರಮಗನಾ (ಕಪ್ಪಾಸು. ೬೩ ವ್ಯಾಖ್ಯಾ). **ವಿಜ್ಜಣಿಗೆ :** ಸೊರಗುವವಗೆಯ ತಿಳಿದಳವಳಿದು ವಿಜ್ಜಣಿಗೆ ಬೀಸಿದುದು ನಿನಗೆ ಮಿಗೆ ಬೇಸಱಾದುದಕಟಾ (ಶಕಸ. ೪೯). 'ಬಿಜ್ಜಣ', 'ಬೀಸಣಿಗೆ' ಪರ್ಯಾ. [ < ಸಂ. ವ್ಯಜನಕ. / ತುಳು. ಬಿಜ್ಜಣಿಗೆ]

**ಬಿಜ್ಜಣಿಸು** (ಕ್ರಿ). (ಬೀಸಣಿಗೆಯಂತೆ) ಅತ್ತಿತ್ತ ಒಲೆದಾಡು,—ತೂಗಾಡು : ಕುಕ್ಕಿದಡುಗುರಲಿಳೆ ಬಿಜ್ಜಣಿಪ ಲಂಘನೆಗುದಯಗಿರಿಗಸ್ತಾದ್ರಿ ದಡದಡಿಪ . . . ಸಿಂಗಣಿಕಗಳನರ್ಬುದವನತಿಬಲ ತಾರ ತೋಱಿಸಿದ (ತೊರರಾ. ೪-೬-೨೩). [ಬಿಜ್ಜಣ + — ಇಸು]

**ಬಿಜ್ಜಲ** 'ಬಿಜ್ಜಣ' ನೋ.

**ಬಿಜ್ಜವಳ** 'ಬಿಜ್ಜೆವಳ₁' ನೋ.

**ಬಿಜ್ಜಳ** 'ಬಿಜ್ಜಣ' ನೋ.

**ಬಿಜ್ಜಳವಿಕ್ಕು** 'ಬಿಜ್ಜಣವಿಕ್ಕು' ನೋ.

**ಬಿಜ್ಜಳಿಗೆ** 'ಬಿಜ್ಜಣಿಗೆ' ನೋ.

**ಬಿಜ್ಜಾದರ, ಬಿಜ್ಜೋದರ, ವಿಜ್ಜಧರ** (ನಾ). ೧. ದೇವತೆ; ವಿದ್ಯಾಧರ: ಆ ಡಂಗುರದನಿಗೇಳಿ ಬಿಜ್ಜಾದರನಾಡ ನರೇಂದ್ರನಂದನರು . . . ಗತಿಯುದ್ಧವ ಮಾಡುವೆವೆಂದೆಯ್ದಿದರು (ನೇಮಿಸಂ. ೩-೩೩). **ಬಿಜ್ಜೋದರ:** ೧. "ಅಮರ್ದುಣಿಸುಗಳ್ . . . ಬಿಜ್ಜೋದರರ್ . . . (ಬೋಳೆಯರ್) — ಈ ೯ ದೇವರ್ಕಳ ಪೆಸರ್" (ಕಕಶಾ. ೪೬-೦೯); ವಿದ್ಯಾಧರ–ಬಿಜ್ಜೋದರ (ಶಮದ. ೨೩೯ ಪ್ರಯೋ); ನರರ ಬಿಜ್ಜೋದರರ ಸುರರ ಮುನಿವರರ ಮನದಟಲುರಿ ಏರಿದಾಗೆ (ರಾಮಾಶ್ವ. ೦೨-೦೬). **ವಿಜ್ಜಧರ :** ೨. ಒಬ್ಬಾತನ ಹೆಸರು : ಶ್ರೀಮದುಗ್ಗಮರರ ಪ್ರೋ ಇತ್ತರ್ ವಿಜ್ಜಧರರ ದೇಗುಲ (ಎಕ. VI, ಶಂಕ. ೩೦-೨; ಸು. 750). [ < ಸಂ. ವಿದ್ಯಾಧರ]

**ಬಿಜ್ಜಾದರಿ, ಬಿಜ್ಜೋದರಿ** (ನಾ). ವಿದ್ಯಾಧರ ಸ್ತ್ರೀ; ಹೆಣ್ಣುದೇವತೆ : ಆದರದಿಂ ಪುಣ್ಯನಿಧಿ ನಿನ್ನ ಕಂಡು ಬಿಜ್ಜಾದರಿಗೀಗಲೆಯ್ದಿದವು (ಶ್ರೀಪಾಂ. ೬-೩). **ಬಿಜ್ಜೋದರಿ :** "ಬಿಜ್ಜೋದರಿಯರೆ ವಿದ್ಯಾಧರಿಯರ್" (ಚಕಹ. ೬೪) ; ಮುಗಿಲೆಡೆಯೊಳೆಡೆವಿಡದಡೆಯಾಡಿ ಬಟಲ್ದ ಬಿಜ್ಜೋದರಿಯರ್ಕಳೆಱವಟ್ಟಿಗೆದಾಣಮೆಂಬಂತೆಸೆವೆಳನೀರ್ಗಳಂ ಪೊತ್ತಾಗಸದೆಡೆಗಡರ್ವ ಚೆಂದೆಂಗಿನ ಮರಂಗಳೊಳಂ (ಕಬ್ಬಿಗಾ. ೩೦) ; ಇಲ್ಲೆ ಹುಟ್ಟಲ್ಬಹುದು ಗಂಗೆಯುಂ ಇಲ್ಲೆ ಬಿಜ್ಜೋದರಿಯುಂ (ಪೂಷಷ. ೨೦-೬). [<ಸಂ. ವಿದ್ಯಾಧರೀ]

**ಬಿಜ್ಜು₁** (ನಾ). (ಅತಿಯಾಗಿ ತಿನ್ನುವ) ಒಂದು ಬಗೆಯ ಪಕ್ಷಿ : ಪಾರಿವ ಕೌಡೆ ಬಿಜ್ಜು ಹೊಂಗಱಿ ಚರಣಾಯುಧ ಗಿಡುಗ ಗೀಜಿಗನಾ ಗಿಳಿ ಕಾಡ ಗುಬ್ಬಿಗಳ್ ಬರುತಿರೆ (ಪದ್ಮಚಾ. ೬-೨೦೩); ಪಕ್ಷಿಗಳ ಗೂಡು ಗುಂಪುಗಳ ಗುಯಿರ್ವಾಡುವ ಗಿಡುಗ ಲಗಡು ಬಿಜ್ಜುಗಳಂ (ಶಾಗಂಂ. ೩೦-೬). [ದೇ. ‖ ಕೋತ. ವಿಜ್]

**ಬಿಜ್ಜು₂, ಬಿಚ್ಚು₄** (ನಾ). ೧. ಸಿಡಿಲು : ಕೂಸು ಉಣ್ಣುತ್ತಿರಲಾಗಿ ಆಕಾಶದ ಬಿಜ್ಜು ಹೊಯಿದತ್ತಿತ್ತು . . . ಆ ಬಿಜ್ಜು ಹೊಟ್ಟೆಗೆಯ್ದುದೆ ಅಪ್ಪ ಅಪ್ಪೆ ಎನ್ನುತ್ತಿದ್ದಿತ್ತು (ವಸುಗಂ. ೪. ೨೩೨-೨೪). ೨. (ಅಲಂ) ಹಾನಿ ಕೆಡುಕು: ಎಲ್ಲರಿಗಿಂತಲೂ ಹೆಚ್ಚಾಗಿ ತಾವು ಮೇಲಕ್ಕೆ ಏರಬೇಕೆಂದು ಯತ್ನ ಮಾಡುವಾಗ, ಏನೋ ಒಂದು ಬಿಜ್ಜು ಬಡಿದು ಅವರು ಕೆಳಕ್ಕೆ ಬೀಳುತಾರೆ (ಸುವಚ. ೨೩೬). **ಬಿಚ್ಚು₄** : ೧. ಚತುರನೆ ಒಂದು ಸಿಡಿಲು ಬಡಿಯಿತು . . . ಆ ಅಧಿಕಾರಿಯು ತಾನೇ ಆ ಸ್ಥಳಕ್ಕೆ ಬಂದು ನೋಡಿ ಬಿಚ್ಚು ಬಡಿದು ಆ ಹಗರಣವೆಲ್ಲಾ ಆಯಿತೆಂದು ನಿಷ್ಕರ್ಷೆ ಮಾಡಿಕೊಂಡು (ಅದೂಪಿ. ೦೬೯).

[<ಪ್ರಾ. ವಿಜ್ಜು, ವಿಜ್ಜುಆ./ಹಿಂ. ಬಿಜ್ಜು; ಮರಾ. ವೀಜ್; ಪಂಜಾಬಿ. ಬಿಜ್ಜ; ಸಿಂಧಿ. ವಿಜು]

**ಬಿಜ್ಜೆ, ವಿದ್ದೆ** (ನಾ). ೧. ತಿಳಿವಳಿಕೆ : ಜ್ಞಾನ ; ವಿದ್ವತ್ತು : "ಬಿಜ್ಜೆಯೆಂದು ವಿದ್ಯಂ" (ಕಶಸಾ. ೩೭-೨೪೦); ಉದ್ಯೋಗ—ಉಜ್ಜುಗ; ವಿದ್ಯಾ—ಬಿಜ್ಜೆ (ಕಪಟ. ೨೩೯ ಪ್ರಯೋ); ಬಿನಯದ ಬಿತ್ತು ಬಿನ್ನಣದ ಪೆರ್ಮೊಳೆ ಬಿಜ್ಜೆಯ ಬೇರ್ . . . ಅನುವಾತುವಣ್ಣ ಬಿಣ್ಣೊಸೆಯೆನೆ ಚಿಕ್ಕದೇವ ನೆಸೆದಂ (ಅಶ್ರುತಿ. ೦೩-೨೦). ೨. ಕಲಿಕೆ; ವಿದ್ಯೆ ; ಶಿಕ್ಷಣ: ಸುಗಜಾಶ್ವರೋಹಣ ಭರವಿರಿಂಚಿಯೆನಿಪ್ಪ ಬಿಜ್ಜೆಯ ಕಲಿತನಾ ಕುವರ (ಸುಕ್ಮಶಾ. ೪-೫); ಕಲಿತ ಬಿಜ್ಜೆಯ ಬಲ್ಲರಿಗೆ ಕೇಳಿಪುದೈಸೆ (ಹರಿಣ. ೦-೨೮). ೩. ಜಾಣ್ಮೆ ; ಪ್ರೌಢಿಮೆ ; ಚಾತುರ್ಯ ; ಕೌಶಲ : ಅಲರುವಿಲ್ಲನ ಬಿಜ್ಜೆಯೆಂಬುಗ್ಗಲದ ಬಿನ್ನಣ ಸವೆದ ನರಪುತ್ಥಳಿಗಳೆನಿಸಿದರಾಂತು ನಿಂದಖಿಳಾವನೀಶ್ವರರು(ಸುಕ್ಮಶಾ. ೩೦-೬೩); ಬಿಗುರ ಬೀರಿದ ಬೀರವೊ ? ಬಲ್ಲ ಬಿಜ್ಜೆಯೊ (ಗಿಳಿಬಂ. ೫೨-೬). ೪. [ಜೈನ] ದೇಹವನ್ನು ಮಾರ್ಪಾಟುಗೊಳಿಸುವ ಶಕ್ತಿ ; ವೈಕುರ್ವಣವಿದ್ಯೆ : ದೇವಕೋಟಿಗಳ ಬಿಜ್ಜೆಗಳೊಳ್ ತೊಡರ್ದೇಕೆ ಪೋಪನೀ ದೊರೆಯನನಾಳ್ದನಂ ಪಡೆವುಪಾಯಮುದಾವುದೊ ಜನ್ಮಜನ್ಮದೊಳ್ (ಆದಿಪು. ೯-೭೫) ; ನಾಲ್ಕುಂ ತೆಱದ ಪುಸಿವಡೆಯಂ ಬಿಜ್ಜೆಯಿಂ ಪುಟ್ಟಿಸಿ (ಕಬ್ಬಿಗಾ. ೦೯೬). **ವಿದ್ದೆ** : ೧. "ವಿದ್ದೆ—ವಿದ್ಯಾ" (ತದ್ಭಕೋ. ೪೦); ಓದದೋವಱುದ ವಿದ್ದೆ ಸಲ್ಲದ ಚದುರ್ ನೆಱೆ ಕಲ್ಲದ ಕಲ್ಪಿ (ಶಂಕಥಾ. ೪-೯೫); ಶ್ರೀಗೆ ವಿಜಯಕ್ಕೆ ವಿದ್ದೆಗೆ ಚಾಗಕ್ಕದಟಿಂಗೆ ಜಸಕೆ ಪೆಂಪಿಂಗಿನಿತಕ್ಕಾಗರಂ (ಎಕ. II, ೦೩೩-೩೪; 982) ; ಅವರವರುಗಳ ವಿದ್ದೆಯ ನೋಡಿ ಮೆಚ್ಚಿ ಸದ್ವಿವರದಿಂದುಡುಗೊಱೆಯಿತ್ತು (ಬೋಹಚ. ೦೬-೦೭). ೨. ಗುರುಗಳೆನಗಂ ಭಾರದ್ವಾಜಂಗವೊರ್ವರೆ ವಿದ್ದೆಯೊಳ್ ಪುರುಡು ಪಿರಿದುಂಟು (ಶಂಶಾ. ೦೨-೦೯); ತದಂಬಿಕೆ ಲಸದ್ವೈರಾಗ್ಯ ಸಂಯುಕ್ತೆ ಸಂಜಾತಾನಂದದಿನಿತ್ತು ವಿದ್ದೆಗಳನಾ ಭೀಷ್ಮಂಗೆ (ಶೀಬಪು. ೩-೨೨). [<ಪ್ರಾ. ವಿಜ್ಜಾ./ಸಂ. ವಿದ್ಯಾ]

**ಬಿಜ್ಜೆಗ** (ನಾ). ೧. ವಿದ್ವಾಂಸ ; ಪಂಡಿತ : 'ಬೇದಬಿಜ್ಜೆಗ' ಪರಾ. ೨. ಚತುರ ; ಕುಶಲ ; ಜಾಣ : ಸರಭಸದಿಂದೆರಬ್ಬಲದ ಬಿಲ್ವಡೆಯೊಳ್ ಸಲೆ ಬಿಲ್ಲ ಬಿಜ್ಜೆಗರ್ ಸುರತನದುತ್ತರ್ಕೊಳ್ವ . . . ಬೇಗಮುದೆತ್ತುಟೊ (ಶಾಂತಿಪು. ೬-೭೭). [ಬಿಜ್ಜೆ + —ಗ₂]

**ಬಿಜ್ಜೆಗಲ್, ಬಿಜ್ಜೆಗಲಿ** (ಕ್ರಿ). ವಿದ್ಯೆಯನ್ನು ಕಲಿ ; ಶಿಕ್ಷಣವನ್ನು ಹೊಂದು : ಅವಗಂ ಬಿಜ್ಜೆಗಲ್ವುದುಂ ಬಿನಯಂದೋರ್ಪುದುಂ . . . ಜಯಮುಮಂ ಸಂಪಾದಿಪುದುಂ ಮೊದಲಾದೊಳ್ಗಿಯ್ಯುದೊಳೆ ಪೊತ್ತುಗಳೆಯುತ್ತೆ (ಚಕಾ. ೩-೦೯). **ಬಿಜ್ಜೆಗಲಿ** : ಪಿರಿಯರ ಮಗಳೆಂದು ಬಿಜ್ಜೆಗಲಿತೆನೆಂದು . . . ಬೆಱೆಯುವನುಸರಿಸುವುದಾತ್ಮವಲ್ಲಭನ (ಹರಿಬ. ೩-೩೦).

[ಬಿಜ್ಜೆ + ಕಲ್₁]

**ಬಿಜ್ಜೆಗಲಿ** 'ಬಿಜ್ಜೆಗಲ್' ನೋ.

**ಬಿಜ್ಜೆಗಲಿಸು** (ಕ್ರಿ). ಶಿಕ್ಷಣ ಕೊಡು ; ವಿದ್ಯೆಯನ್ನು ಹೇಳಿ ಕೊಡು : ನಿನಗೆ ಬಿಜ್ಜೆಗಲಿಸಿದ ಬೊಜ್ಜುಹಾರುವ, ಆ ಗಾಲವ. ಹಾಳಾಗಿ ಹೋಗಲಿ ! (ಚಂದ್ರಕ. ೬೦-೦೯). [ಬಿಜ್ಜೆಗಲ್ + — ಇಸು₁]

**ಬಿಜ್ಜೆಗುಱುಹು** (ನಾ). ವಿದ್ಯೆಯ ಗುರುತು.— ಚಿಹ್ನೆ : ಗುತ್ತಿಗೆವಿಡಿದಂತೆ ನೆಱೆ ಸಾಧಿಸಿದಱುವತ್ತುನಾಲುಕು ಬಿಜ್ಜೆಗುಱುಹ ವೃತ್ತಕುಚಾಸ್ವಿತೆಯರ ಪರಿಕೆಯ ನೋಡು ಚಿತ್ತಯಿಸೆಂದರಂಗಜಗೆ (ವೋಹಚ. ೧೬-೦೦).

[ಬಿಜ್ಜೆ + ಕುಱುಹು (<ಕುಱಪು)]

**ಬಿಜ್ಜೆವರು** (ನಾ). ಒಂದು ಊರಿನ ಹೆಸರು : ಬನ್ನಗಾವುಣ್ಣನುಂ ಕೊಳ್ಳವ್ಮಗಾವುಣ್ಣನುಂ ಗಾವುಣ್ಣ ಗಣ್ಣಯ್ಯನುಂ ಬಿಜ್ಜೆವರುವಯಿನ್ದ ಮಯ್ಯನೆಱೆಯವ್ಮನುಂ (ಎಕ. XI, ಮೊಳಕ. ೩೦-೦೦; 964).

[☞ ಇದು 'ಬಿಜ್ಜೆವರ' ಎಂದಿರಬಹುದೆ ?]

**ಬಿಜ್ಜೆವಳ, ಬಿಜ್ಜವಳ** (ನಾ). ೧. ವಿದ್ಯಾವಂತ : ಪಂಡಿತ ; ವಿದ್ವಾಂಸ : ಸರಸತಿಯಡಿದಳಿರ್ಗೆ ತಲೆದುಡುಗೆಯೆನೆ ಪೆಸರ್ವಡೆವ ಬಿಜ್ಜೆವಳನಿಂ ಸಮೆದ ಕಾವಪ ಗೆಲ್ಲಂ ವೊಱೆಯುತಿರ್ಪುದು (ಕಬ್ಬಿಗಾ. ೩೪೯); ಪೊಜಗಣ ತೋಪುಗಳೊಳಂ ಬಿಜ್ಜೆವಳರ ನೆರವಿಗಳೊಳಂ . . . ತಮ್ಮ ಚಾರರಂ ನೆಲೆಗೊಳಿಸಿ (ಭಾರತಾಂ. ೪೩೫-೭೦); ನಾನಾ ನಾಡುಗಳಿಂದೆ ಬಿಜ್ಜೆವಳರುಂ ಕೈಗೈಯ್ದುದೊಳ್ವಾಣರುಂ ತೇನಂತೇನಮೆ ಬಂದು ಬೀಡುಗೊಳುತಂ (ವ್ಮಸೂಪು. ೧-೩೯). ೨. ವಿದ್ಯೆಯ ಅಧಿದೇವತೆ ; ಗಣಪತಿ : "ಕರಿಮೊಗಂ, ಇಲಿದೇರಂ, ಎಡರ್ಗೇಡಿ, ಬಿಜ್ಜೆವಳಂ . . . ತಂದೆಯ ತಂದೆಯಿಲ್ಲದವಂ ಈ ೭ ವಿನಾಯಕಂಗೆ ಪೆಸರ್" (ಕಶಸಾ. ೪೭-೪). **ಬಿಜ್ಜವಳ** : ೨. "ಬಂಕಣಗಿವಿಯನೆನೆ ಬಿಜ್ಜವಳನೆನಲ್ ವಿಘ್ನೇಶಗಭಿಧಾನವು" (ಕಶರ. ೬೦).

[ಬಿಜ್ಜೆ + —ವಳ]

**ಬಿಜ್ಜೆವಳ್ತಿ** (ನಾ). ವಿದ್ಯಾವತಿ ; ಪಂಡಿತೆ : ಕಿರಿದು ಪೊಳ್ತೀ ನೆಲದೊಳಾಂ ಬಿಜ್ಜೆವಳ್ತಿಯರೆನಿಸಿದುದರ್ಕೆ . . . ಮೆಚ್ಚಂ ಪಡೆಯದಿರ್ದೊಡೆಮಗೆ ಪೆಸರ್ವಾಸಿಯಿಲ್ಲಂ (ಮರಾಚ. ೬-೦೯).

[ಬಿಜ್ಜೆವಳ + < — ಇತಿ₁ (< — ಇತ್ತಿ)]

**ಬಿಜ್ಜೆವೆಣ್ಣು** (ನಾ). ವಿದ್ಯೆಯ ಅಧಿದೇವತೆ ; ಸರಸ್ವತಿ : "ವಾಣಿ ಬಿಜ್ಜೆವೆಣ್ಣುಂ ವಾಸವೆಣ್ಣು ಸರಸತಿಯುಮೆನೆ ವಾಣಿಯಕ್ಕುಂ " (ಕಬ್ಬಿಕೈ. ೯). [ಬಿಜ್ಜೆ + ವೆಣ್ಣು (<ಪೆಣ್)]

**ಬಿಜ್ಜೋದರ** ' ಬಿಜ್ಜಾದರ ' ನೋ.

**ಬಿಜ್ಜೋದರಿ** ' ಬಿಜ್ಜಾದರಿ ' ನೋ.

**ಬಿಜಿಂಕ್** ' ಬಿಜಿಕ್ ' ನೋ.

**ಬಿಟಿ** ' ಬಿಟ್ಟಿ₁ ' ನೋ.

**ಬಿಟೆ** ' ಬಿಟ್ಟಿ₁ ' ನೋ.

**ಬಿಟೋಜ** (ನಾ). ಒಬ್ಬಾತನ ಹೆಸರು : ಕಲಿವಿಟ್ಟಯ್ಯನ ಲಿಖಿತ ಬಿಟೋಜನ ಸಿಲಾಕೆಮ್ಪರ್ (ವ್ಮಕಂ. ೦೯೨೪, ೭೬-೦೫; 964).

[<ಬಿಟ್ಟು₂ + ಓಜ₁ (<ಒಪರ್ಢು)]

**ಬಿಟ್ಟ** ' ಬಿಡು₁ ' ಪರಾ.

**ಬಿಟ್ಟಪು** (ನಾ). ಬಿಗಿ; ದಾರ್ಢ್ಯ ; ಅಡವು (?) : ಸಱೆಗೊಂಡ ಪೆರ್ಬಸಿಱ ಬಿಟ್ಟಪುಗಟ್ಟಿ ತೋಳ್ ತೊಡೆ ತೆರಳ್ದ ಮೊಗಂ ನೆರೆ ಪತ್ತೆಮಾಣಳೀ ಬಟ್ಟಿಯ ಚಿಕ್ಕಣಿಕ್ಕೆ ಪೊಸ ಬರ್ಚರ ಸೂಳೆಯರಾಳಿಗೊಂಬುದಂ (ಸೂಕ್ತಿಸು. ೬-೩೪೪). [?]

**ಬಿಟ್ಟರಸ** (ನಾ). ಒಬ್ಬಾತನ ಹೆಸರು : ಸಿಡಿಯನೂರ ಗಾವಿಂಗಗೆಯ್ದು ಮಿದೊ ಊರ ಬಿಟ್ಟರ[ಸ] ರ[ಸ]ಪಟಗೆಯ ಗಂಗರ ಕಾಳೆ × × × (ಕೌಇಇ. XX. ೦೦-೪; 8 ನೆಯ ಶಕ). [ಬಿಟ್ಟು₂ + ಅರಸ₁]

**ಬಿಟ್ಟಿ₁, ಬಿಟಿ, ಬಿಟೆ, ಬಿಟ್ಟೆ** (ನಾ). ೧. ಸಂಬಳವಿಲ್ಲದೆ ಮಾಡುವ ಕೆಲಸ ; ಪುಕ್ಕಟೆ ಕೆಲಸ : ನಾಡ ಗಾದೆಯ ಬಿಟ್ಟಿಯಿಂದ ಕಟಕವ ಕಂಡೆನೆಂಬು

ದೆನಗಾಯ್ತೆನುತ್ತೆಱಗಿದಂ ಭೂನಾಥನು (ಹಡಚಾ. ೩-೬೪); ಪಂಪಾಕ್ಷೇತ್ರಮಂ ಕಾಣ್ಬುದನಂತತಪಃಫಲವಿಲ್ಲದೆ ಸಮನಿಸದು ನೀಂ ಬಿಟ್ಟಿಯಂ ಬಂದು ಕಟಕಮಂ ಕಂಡ ತೆಱನಾಯ್ತು (ಉದ್ಭಟ. ೩-೩೨ ವ); ಬೆಸಸುತಂ ತವೆ ಬಿಟ್ಟಿಯುಂ ಮಾಡಿಸಿಕೊಳುತ ಬಡಕೆಲಸವಂ ಸಂತಸದಿ ಮಾಡಿಸೆ ಮಾಡಿ ಬದುಕುವವು (ಬಿಸವು. ೨೩-೦೮). 'ಮೂವಿಟ್ಟಿ' ಪರಾ. ೨. ಕೆಲಸ; ಕಾರ್ಯ; ವೃತ್ತಿ : ಅಷ್ಟವಿಧಾರ್ಚನೆ ಷೋಡಶೋಪಚಾರವನು ಅರಸಱಿಯದ ಬಿಟ್ಟಿಯ ಮಾಡುವೆನು (ಬಸವ. ೩೭೯); ಎನ್ನ ಮಾಟ್ಟಿ ಬದಗೇಂ ಪೆಱತಾದುದೆ ಬೇಡ ಕೆಮ್ಮಗಂ ಮನೆಗುಸುಟೀಕೆ ತನ್ನ ಸುಖಕಲ್ಲದೆ ಕೇಳಿಕೆ ಯಾರ ಬಿಟ್ಟಿಯೋ (ಲೀಲಾವ. ೨-೦೦೪); ಕಾಯಕ ಯಾವುದಾದರೇನು ? ಶಿವನ ಬಿಟ್ಟಿಯೆಂದು ಮಾಡುವ ಮಾಟವೆಲ್ಲ ಕಾಯಕ (ತುಂಗಭ. ೮). ೩. ಪುಕ್ಕಟೆ ; ಉಚಿತ : ಸಿಟ್ಟು ಸೆಡವಿಲ್ಲದೆಯೆ ಬಿಟ್ಟಿ ದುಡಿದವ ಕೋಣ (ಅರಳು. ೩೪೭-೬) ; ಈ ಮನೆ ೧೮,೦೦೦ ಕ್ಕೆ ಮುಗಿದರೆ ಬಿಟ್ಟಿ ಆದ ಹಾಗೆ (ಯೋಧಕು. ೨೯) ; ಬಿಟ್ಟಿದಿನ ಬಿಟ್ಟಿಗೂ ಹೋಗಬೇಡ (ಗಾದೆ). ೪. ವ್ಯರ್ಥವಾದುದು; ನಿರುಪಯುಕ್ತವಾದುದು : 'ಬಿಟ್ಟಿವೇಟ್' ಪರಾ. ೫. ಒಂದು ಬಗೆಯ ಸುಂಕ: ನೀರುಣಿಸುಂಕಂ ಬಿಟ್ಟಿ ಮೊದಲಾಗಿ ಎಲ್ಲವುಂ ಬಿಟ್ಟೋಪ್ (ಸೌಇಇ. XI-i, ೦೩-೩; 873) ; ಸಕರಕ್ಕಂ ಮಹಾಜನಕ್ಕಂ ಗಾವುಣ್ಡಗಳ್ಗಂ ಪಣ್ಣುಮುಟಸ್ಥಾನಕ್ಕಂ ಬಿಟ್ಟಿಯಿಲ್ಲ (ಸೌಇಇ. IX-1, ೭೭-೩೫ ; 992). ಬಿಟಿ : ೫. ಮನೆವಣ ಸೊಲಗೆ ಬಿಟಿಯನ್ನಿಷ್ಟು ಸರ್ವ್ವಮಾನ್ಯವಾಗಿ ಸ್ವರುಚಿಯಿನ್ದ ಕೊಟ್ಟರು (ಎಕ. 1, ೫೦-೯; ಸು. 13ನೆಯ ಶತ) ; ಹಳದು ಹೊಸ್ತು ಗ್ರಾಮ ವೆಚ ಬಿಟಿ ಬಿರಾಡ ಸೊಲ್ಲಗ ಅಉದೂಯಿಲ್ಲ (ಎಕ. X, ಕುಲಿಬಾ. ೧೭೨-೦೫; 1496). ಬಿಟಿ : ೫. ಏರುಗಾಣಿಕೆ ಕಾಣಿಕೆ . . . ಬಿಟಿ ಮೊದಲಾಗಿ ಎಲ್ಲವನು ಸರ್ವಮಾನ್ಯವಾಗಿ ಬಿಟ್ಟೆಉ (ಎಕ. IX, ಹೊಸಕೋ. ೪-೦೦; 1581). ಬಿಟ್ಟಿ : ೫. ಜೋಲಕಾರರಣ್ಯ ಜೆಡೆದೆರ್ಲ್ ೯ ಪ ೩ ೧೧ ಬಿಟ್ಟಿಯ ಭಂ ೧೩೦ ಗ ೨ ಎತ್ತಿಲು ಪೊತ್ತುರ ಪ ೫ (ಎಕ. XVI, ಚಿಕ್ಕನಾ. ೭೦-೨೦; 1330).

ಬಿಟ್ಟಿಗಂಟು=ಯಾವ ಬಗೆಯ ಶ್ರಮವೂ ಇಲ್ಲದೆ ದೊರೆತ ಹಣ; ಪುಕ್ಕಟೆಯಾಗಿ ಲಭ್ಯವಾದ ದುಡ್ಡು : ಬಿಟ್ಟಿಗಂಟು ಸಿಕ್ಕಿದರೆ ತೆಗೆದುಕೊಳ್ಳುವುದು ಸರಿಯೇ ? (ರೂಢಿ). ಬಿಟ್ಟಿಬೇಗಾರಿ = ಯಾವ ಪ್ರತಿಫಲವೂ ಇಲ್ಲದೆ, ಪುಕ್ಕಟೆಯಾಗಿ ಮಾಡುವ ಕೆಲಸ : ಬಲವಂತದಿಂದ ಬಿಟ್ಟಿಬೇಗಾರಿಯಲ್ಲಿ ಹೊಲಗದ್ದೆಗಳ ಮಾಡಿಸಿಕೊಂಡು ಯಿದ್ದಾಗ್ಯೂ (ಮಹಾದಂ. II, ೫೪) ; ಹೆಣ್ಣುಗಂಡು ಆದಿಯಾಗಿ ಇವರ ಅರಮನೆಯಲ್ಲಿ ಬಿಟ್ಟೀಬೇಗಾರಿ ಚಾಕರಿಯನ್ನು ಮಾಡಿ ಮಾಡಿ ಮುಪ್ಪಾಗುತ್ತಾ ಇದ್ದರು (ಸುಮಾಡ. ೦); ಧನಿಯರ ಬೇಸಾಯ ಬಿಟ್ಟಿಬೇಗಾರಿ ಇದ್ದದ್ದೇ (ಬಾಳಿನ. ೫೫). ಬಿಟ್ಟಿಯ ಮಾನಿಸ = ಹಣ ಪಡೆಯದೆ ಕೆಲಸಮಾಡುವವನು ; ಬಿಟ್ಟಿಯಾಳು : ಪ್ರಕಾಶಾಪ್ರಕಾಶರೂಪಂಗಳಾದ ತೇರಾನೆಕುದುರೆಕಾಲಾಳ್ಗಳುಂ ಬಿಟ್ಟಿಯ ಮಾನಿಸರುಂ ಗೂಢಚರರುಂ (ಕಾದಂಸಾಂ. ೭೭೭-೫೯). ಬಿಟ್ಟಿಹಣ = ಬಿಟ್ಟಿಗಂಟು : ಸುಲಭವಾಗಿ ಸಂಪಾದಿಸಿದ ಬಿಟ್ಟಿಹಣದ ಮಾಲೀಕತ್ವವನ್ನು ಸೂಚಿಸುವ ದುಂದುವೈಭವ ಆ ವಾತಾವರಣದಲ್ಲಿ ತುಂಬಿ ತುಳುಕುತ್ತಿತ್ತು (ಪುನರು. ೨೦೦). [< ಪ್ರಾ. ವಿಟ್ಠಿ / ಸಂ. ವಿಷ್ಟಿ]

ಬಿಟ್ಟಿ₂ 'ಬಿಟ್ಟು₂' ನೋ.

ಬಿಟ್ಟಿಕೂಳು 'ಬಿಟ್ಟಿಗೂಳು' ನೋ.

ಬಿಟ್ಟಿಕೆಲಸ 'ಬಿಟ್ಟಿಗೆಲಸ' ನೋ.

ಬಿಟ್ಟಿಗ (ನಾ). ೧. ಒಬ್ಬಾತನ ಹೆಸರು : ನರಸಿಂಘಅಮ್ಮ × × × ಳಥುಬ್ಜಮರಾ ಬಿಟ್ಟಿಗ ಗೋನಾಥನಾ[ಗುಟೆ]ಪೋತ ಬಮ್ಮ (ಸೌಇಇ. XI-i, ೦೩-೦೬; 869) ; ಬಿಟ್ಟಿಗ ಸಟ್ಟಿವುಣ್ಣುಗೆಯ್ಯೆ (ಎಕ. VIII, ಸೊರಬ. ೨೦೨-೩; 955). ೨. ಹೊಯ್ಸಳರ ಒಬ್ಬ ಪ್ರಸಿದ್ಧ ರಾಜನ ಹೆಸರು ; ವಿಷ್ಣುವರ್ಧನ : ವೀರಾರಿನೃಪಾಳರಂ ಬಿರಿಸಿದಂ ಮೂವಿಟ್ಟಿಗಂ ಬಿಟ್ಟಿಗಂ (ಎಕ. VIII (R), ಹಾಸನ. ೦೫೯-೭೩ ; ?).

[ಬಿಟ್ಟಿ₂ (< ಬಿಟ್ಟು₂) + -ಗ₂]

ಬಿಟ್ಟಿಗೂಳು, ಬಿಟ್ಟಿಕೂಳು (ನಾ). ಪುಕ್ಕಟೆಯಾಗಿ ಲಭ್ಯವಾಗುವ ಆಹಾರ : ಅರಮನೆಯ ಬಿಟ್ಟಿಗೂಳಿಂದ ಕೊಬ್ಬಿ ಉಬ್ಬಿದ ತನ್ನ ಊಳಿಗದವರಿಗೆ ಸತ್ಪುಮದ ಕಾರ್ಯಕಲಾಪಗಳು ಸ್ವಲ್ಪಮಟ್ಟಿಗಾದರೂ ಅಳವಡಿಕೆಯಾಗಿ (ಬಿಟ್ಟಿಅ. ೦೬೯-೩). ಬಿಟ್ಟಿಕೂಳು : ಅಷ್ಟೈಶ್ವರ್ಯವು ವೃಷ್ಟಾನ್ನವಿರುತಿರೆ ಬಿಟ್ಟಿಕೂಳನು ತಿನ್ನಲ್ಯಾಕಯ್ಯ (ಜಾನಗೀ. ೩೮); ತಮ್ಮ ಮನೆಯಲ್ಲಿ ಬಿಟ್ಟಿಕೂಳು ಉಣ್ಣಬೇಕು, ಹುಡುಗನಿಗೆ ಪಾಠ ಹೇಳಿಕೊಂಡಿರಲಿ ಎಂಬ ಭಾವನೆಯೂ ಇರಲಿಲ್ಲ (ಮರಳಿ. ೯೨).

[ಬಿಟ್ಟಿ₁ + ಕೂಳು₂ (< ಕೂೞ್₁)]

ಬಿಟ್ಟಿಗೆಯ್, ಬಿಟ್ಟಿಗೈ, ಬಿಟ್ಟಿಗೆಯ್ (ಕ್ರಿ). ಪ್ರತಿಫಲವಿಲ್ಲದೆ ಸೇವೆ ಮಾಡು; ಬಿಟ್ಟಿಯಾದ ಕೆಲಸಮಾಡು : ಉಜ್ವಲವೀರಶೈವಭಕ್ತಂ ಬಿಟ್ಟಿಗೆಯ್ಯದಿರೆ ತಳುವದಾತನ ಸೊನ್ನಲಿಗೆಯಿಂದೆ ಪೋಗೆಂದು ಸಿದ್ಧರಾಮಯ್ಯ ನುಡಿಯೆ (ಶಾಸೋಕು. ೦೦-೨೯). ಬಿಟ್ಟಿಗೈ : ಅಷ್ಟದಿಕ್ಪಾಲಕರು ದನುಜಗೆ ಬಿಟ್ಟಿಗೈವುದ ಕಂಡನಂಗದ (ಕೌಶಿರಾ. ೧೬-೦೭). ಬಿಟ್ಟಿಗೆಯ್ : ಅನ್ತು ಪರಮಂಡಲಿಕರೆಲ್ಲ ತಂತಮ್ಮ ವಸ್ತುವಾಹನಂಗಳಂ ಕೊಟ್ಟು ಕಂಡು × × ಬಿಟ್ಟಿಗೆಯ್ಯುತ್ತಮಿರೆ (ಸೌಇಇ. XX, ೯೪-೨೬; 1076). [ಬಿಟ್ಟಿ₁ + ಕೆಯ್₁]

ಬಿಟ್ಟಿಗೆಯ್ಮೆ (ನಾ). ಪ್ರತಿಫಲವಿಲ್ಲದ ಊಳಿಗ; ಪುಕ್ಕಟೆ ಕೆಲಸ : ಆವಗಂ ಜಗಮನೊಗಯಿಪ ಬಿಟ್ಟಿಗೆಯ್ಮೆ ಇವಳೊಲ್ದು ನಿಟ್ಟಿಪ ದಿಟ್ಟಿಯಿಂ ಸಫಲಮೆಂದೆನಿಸಿರ್ಕುಂ (ಚಿಕವಂ. ೦೦೪-೦೯).

[ಬಿಟ್ಟಿ₁ + ಗೆಯ್ಮೆ (< ಕೈಮೆ₁)]

ಬಿಟ್ಟಿಗೆಲಸ, ಬಿಟ್ಟಿಕೆಲಸ (ನಾ). = ಬಿಟ್ಟಿಗೆಯ್ಮೆ : ಹಿಂದೆ ನಿನ್ನೊಳು ಪುಟ್ಟಿದುದು ಮೊದಲಿಂದುತನಕೊಂದಡಕೆ ಹಂಗಿನೊಳೊಂದೆನುಸಿಕನೆ ನಿನ್ನ ನಾನೋಲೈಸಿದೆನು ಹೊದ್ದಿ ಕುಂದದಲಸದೆ ಬಿಟ್ಟಿಗೆಲಸಕೆ ಸಂದು ಮಾಡುತ್ತಿರ್ದಡೆ (ಐಸಕು. ೬೦-೫೭). ಬಿಟ್ಟಿಕೆಲಸ : ಸಂಸ್ಥಾನದಲ್ಲಿ ಬಿಟ್ಟಿಕೆಲಸ ಮಾಡಿದರೂ ಅದಕ್ಕೆ ಸರಿಯಾದ ರಿಯಾಯತಿಯು ದೊರಕುತ್ತಿದ್ದಿತು (ಮೂರಾಣಿ. ೦೬೦). [ಬಿಟ್ಟಿ₁ + ಕೆಲಸ]

ಬಿಟ್ಟಿಗೈ 'ಬಿಟ್ಟಿಗೆಯ್' ನೋ.

ಬಿಟ್ಟಿದೇವ (ನಾ). ಹೊಯ್ಸಳರ ಒಬ್ಬ ಪ್ರಸಿದ್ಧರಾಜನ ಹೆಸರು : ವಿಷ್ಣುವರ್ಧನ : ಸಖವರ್ಷ ೧೦೧೭ ಯುವಸಂವಚ್ಛರದ ಸೋಮವಾರ ಸಂಕ್ರಾಂತಿಯಲು ಬಿಟ್ಟಿದೇವ . . . ಬ್ರಹ್ಮೇಸ್ವರದೇವರ್ಗ್ಗೆ ಬಿಟ್ಟ ಗದ್ದೆ ಕಣ್ಡುಗ ೧೫ (ಎಕ. VI (R), ಕೃಷ್ಣರಾ. ೩೭-೭; 1095); ಮಹಾಮಣ್ಡಳೇಶ್ವರ ಪೊಯ್ಸಳ ಬಿಟ್ಟಿದೇವನ ದಣ್ನಾಯಕ (ಎಕ. VII, ಶಿವಮೊ. ೦೨-೫ ; 1120).

[ಬಿಟ್ಟಿ₂ (< ಬಿಟ್ಟು₂) + ದೇವ]

ಬಿಟ್ಟಿಬೆಸ 'ಬಿಟ್ಟಿವೆಸ' ನೋ.

ಬಿಟ್ಟಿಬೆಸಕೆಯ್ 'ಬಿಟ್ಟಿವೆಸಗೆಯ್' ನೋ.

ಬಿಟ್ಟಿಬೆಸನ 'ಬಿಟ್ಟಿವೆಸ' ನೋ.

ಬಿಟ್ಟಿಯಾಳ್, ಬಿಟ್ಟಿಯಾಳು (ನಾ). ಸಂಬಳವಿಲ್ಲದೆ ದುಡಿಯುವವನು; ಪುಕ್ಕಟೆಯಾಗಿ ಕೆಲಸ ಮಾಡುವವನು : ಓ! ಬಿಟ್ಟಿಯಾಳ್ಗಳಂ ಬಿಟ್ಟಂತಾಗದೆ! ಎಂತೀತಂಗಳ್ ಪೋಗಲಾರ್ಪರ್ (ರಾಮಾಶ್ವ. ೦೦೬-೨೩). ಬಿಟ್ಟಿಯಾಳು : ಬಿಟ್ಟಿಯಾಳು ಆದರೆ ಹಟ್ಟಿ ಕಟ್ಟಬಾರದೇ ? (ಗಾದೆ).

[ಬಿಟ್ಟಿ₁ + ಆಳ್₃]

ಬಿಟ್ಟಿಯಾಳು 'ಬಿಟ್ಟಿಯಾಳ್' ನೋ.

ಬಿಟ್ಟಿಯೆಸಗು (ಕ್ರಿ). ಪ್ರತಿಫಲವಿಲ್ಲದೆ ದುಡಿ,-ಕೆಲಸ ಮಾಡು: ತನಿವಾಲಿಂ ಘೃತದಿಂ ಕರುಳೆನಸುಂ ಬಾಲ್ಯದೊಳೆ ನಾಂದುದಿಲ್ಲದಱಿಂ ತಾನೆನಿತು

ತಿರಿದುಂಡೊಡಂ ಪಸಿವನುಗೆಡದಿರೆ ಬಸಿರ್ಗೆ ಬಿಟ್ಟಿಯೆಸಗಿದವನಲ್ತೆ (ವೃಷಭ. ೯-೦೦೭). [ಬಿಟ್ಟಿ$_1$ + ಎಸಗು$_1$]

**ಬಿಟ್ಟಿವಿಡಿ**, ಬಿಟ್ಟಿಹಿಡಿ (ಕ್ರಿ). ಸಂಭಾವನೆಯಿಲ್ಲದೆ ಒತ್ತಾಯದಿಂದ ಕೆಲಸ ಮಾಡಿಸು; ಪುಕ್ಕಟೆಯಾಗಿ ದುಡಿಸಿಕೊಳ್ಳು: ಭೂತದಯಾರಹಿತ ನೀ ಬಿಟ್ಟಿವಿಡಿವುದು ಯೋಗ್ಯವಲ್ಲ (ಸಿಕಾಗ. ೫-೭-೪೦). **ಬಿಟ್ಟಿಹಿಡಿ**: ನಮ್ಮನ್ನು ಬಿಟ್ಟಿಹಿಡಿದು ನಮ್ಮ ಕೈಲಿ ಈ ತೋಟದಲ್ಲೆಲ್ಲ ಅಗತೆ ಮಾಡಿ ಸುತ್ತಾರಂತೆ (ಪುಟ್ಟರ. ೨೦). [ಬಿಟ್ಟಿ$_1$ + ಪಿಡಿ$_1$]

**ಬಿಟ್ಟಿವೆಸ**, ಬಿಟ್ಟಿಬೆಸ, ಬಿಟ್ಟಿಬೆಸನ (ನಾ). = ಬಿಟ್ಟಿಗೆಯ್ಮೆ: ಪೊಲೆಯರುಂ ವಹಾದಿಗರುಂ ಕೀಲಿಗರುಮೆನಿಸಿ ಬಿಟ್ಟಿವೆಸಂಗಳಂ ಮಾಡಿ (ಶಶಾರ. ೨೬೩). **ಬಿಟ್ಟಿಬೆಸ**: ಗಂಗಸಿದ್ಧಾಯ ಹೊಱಗಾಗಿ ಆಯ ದಾಯ ಬಿಟ್ಟಿಬೆಸ ಪಡುವಗೇರಿಗೆ ಪರಿಹಾರವಂ ಬಿಟ್ಟ (ಎಕ. I, ೮೭-೦೩; 1175); ಬಿಟ್ಟಿಬೆಸ . . . ಇದು ದೈಹಿಕಶ್ರಮರೂಪವಾದ ತೆರಿಗೆ (ಕಶಾಶ. ೯೦೦). **ಬಿಟ್ಟಿಬೆಸನ**: ಎಲ್ಲ ಮಾನ್ಯಂಗಳಂ ಭಕ್ತರ್ಗೆ ಸಾರ್ಚುತಂ ಬಿಟ್ಟಿಬೆಸನಂ ಶಿವನ ಭಕ್ತರ್ಗೆ ಮಾಡುತಂ (ಇಳ. ದೇ. ೪೯-೦೩). [ಬಿಟ್ಟಿ$_1$ + ಬೆಸ$_1$]

**ಬಿಟ್ಟಿವೆಸಗೆಯ್**, ಬಿಟ್ಟಿಬೆಸಕೆಯ್ (ಕ್ರಿ). ಸಂಭಾವನೆಯಿಲ್ಲದೆ ದುಡಿ; ಪುಕ್ಕಟೆಕೆಲಸ ಮಾಡು: ಜೀಯೆನುತನುದಿನವೆಯ್ದೆ ಬಿಟ್ಟಿವೆಸಗೆಯ್ವುದ ಜೆಟ್ಟಿಗರಿಲ್ಲ (ಎಕ. XI, ದಾವಣ. ೮೩-೯; 1143). **ಬಿಟ್ಟಿಬೆಸಕೆಯ್**: ಘೋಷಾಕರಸಂಗ್ರಹಾಕರಗೋವ್ರಜಂಗಳುಮನವನಾಳ್ವ ತೆಱಗೊಳ್ವ ಬಿಟ್ಟಿಬೆಸಕೆಯಿಸಿಕೊಳ್ವ ಭೋಗಿಪ ನಿಯೋಗಂಗಳುಮನಿಂತು ಮಾಡಿ (ಆದಿಪು. ೯-೬೩ ವ). [ಬಿಟ್ಟಿವೆಸ + ಕೆಯ್$_1$]

**ಬಿಟ್ಟಿವೇೞ್**, ಬಿಟ್ಟಿಹೇಳು (ಕ್ರಿ). ೧. ವ್ಯರ್ಥವಾದುದನ್ನು ಹೇಳು; ಕೆಲಸಕ್ಕೆ ಬಾರದುದನ್ನು ನಿರೂಪಿಸು, – ತಿಳಿಸು: ಕಾವ್ಯ ಲಕ್ಷಣದೊಳೊಳ್ಪಳವಟ್ಟಿರೆ ಪೇೞ್ವುದಲ್ಲದೇಕಾರಣವಯ್ಯ ಕೆಮ್ಮಗಿರಲಾಗದೆ ಕಬ್ಬ[ವ] ಬಿಟ್ಟಿವೇ[ೞ್ವು]ದೇ (ಬಂಹಂ. ೦-೦೦). **ಬಿಟ್ಟಿಹೇಳು**: ೨. ಕೆಲಸಕ್ಕೆ ನಿಯಮಿಸು, – ಗೊತ್ತುಪಡಿಸು: ಲಿಂಗಕ್ಕೆ ಇಲ್ಲೆಂಬ ಜಂಗಮಕ್ಕೆ ಇಲ್ಲೆಂಬ ಬಂದ ಪುರಾತರಿಗೆ ಇಲ್ಲೆಂಬ ಸಾವಾಗ ದೇಹವ ದೇಗುಲಕ್ಕೊಯ್ಯೆಂಬ ದೇವರಿಗೆ ಹೆಣ ಬಿಟ್ಟಿಹೇಳಿತ್ತೆ (ಬಸವ. ೨೨೨). [ಬಿಟ್ಟಿ$_1$ + ಪೇೞ್]

**ಬಿಟ್ಟಿವೊಱು** (ಕ್ರಿ). ಪುಕ್ಕಟೆಯಾಗಿ ಕಾರ್ಯಭಾರವನ್ನು ಹೊರು, – ವಹಿಸಿಕೊಳ್ಳು: ರಾಜ್ಯಭಾರವಂ ಬಿಟ್ಟಿವೊತ್ತವಂ ಕಲ್ಲ ಭಾರವ ನೀಡಾಡುವಂತೀಡಾಡಿ (ಧರ್ಮಾಮೃ. ೯-೩೨). [ಬಿಟ್ಟಿ$_1$ + ಪೊಱು]

**ಬಿಟ್ಟಿವೋಗು** (ಕ್ರಿ). ಪುಕ್ಕಟೆಕೆಲಸಕ್ಕೆ ಹೋಗು: ಎಲ್ಲವನ್ನು ಬಿನ್ನವಿಸಿ ಪಟ್ಟಾದೇಶನಿರ್ಧಾರವ ಸೋದಿಸಿಂದೇ ಹೋಗಿ ನಾಳೆ ಬಹುದೆನಲವರು ಮೇದಿನಿಯ ನಾಣ್ನುಡಿಯ ವಾರಣಸಿಯ ಬಿಟ್ಟಿವೋದರೆಂದೆಂಬುದೆನ ಗಾಯ್ತೆಂದು ಹರುಷ ಮಿಗಲಾ ಪುರಕ್ಕೈತಂದರು (ಸಿದ್ಧರಾ. ೯-೦೭). [ಬಿಟ್ಟಿ$_1$ + ಪೋಗು$_1$ (< ಪೋ$_1$)]

**ಬಿಟ್ಟಿಹಿಡಿ** 'ಬಿಟ್ಟಿವಿಡಿ' ನೋ.

**ಬಿಟ್ಟಿಹೇಳು** 'ಬಿಟ್ಟಿವೇೞ್' ನೋ.

**ಬಿಟ್ಟು$_1$** 'ಬಿಡು$_1$' ಪರಾ.

**ಬಿಟ್ಟು$_2$**, ಬಿಟ್ಟಿ$_2$, ವಿಟ್ಟು, ವಿನ್ನು (ನಾ). ೧. ಒಬ್ಬಾತನ ಹೆಸರು: ವಂಶಿಗ ಬಿಟ್ಟು ಕೃತಂ (ಇಳ. IX, ೭೯-೪೦; 6 ನೆಯ ಶತ). **ಬಿಟ್ಟಿ$_2$**: ೧. 'ಬಿಟ್ಟಿಗ', 'ಬಿಟ್ಟಿದೇವ' ಪರಾ. **ವಿಟ್ಟು**: ೨. ತ್ರಿಮೂರ್ತಿಗಳಲ್ಲಿ ಒಬ್ಬ; ವಿಷ್ಣು: "ವಿಟ್ಟು - ವಿಷ್ಣು" (ಶಾನಕೋ. ೪೦); ವಿಟ್ಟುವುಂ ಬ್ರಹ್ಮನುಂ ಕಣ್‌ತಲೆಗಳಂ ಶಿವಗೆ ಕೊಟ್ಟು ಡಿಂಗರಿಗರಾದವರವಸೀಶಂಗೆ ಪಡಿಗಟ್ಟುವರೆ (ಕಬಿಪು. ೫೨-೨೪). **ವಿನ್ನು**: ೨. "ವಿನ್ನು – ವಿಷ್ಣು" (ಗುಣಿಮೋ. ೦೬೪೦); ಜನ್ಮಾಂತರದೆ ಮಾಡಿದ ನನ್ನ ದುಷ್ಕರ್ಮಾನುಸಾರವೆ ವಿನ್ನುವಿನ ಸುತನೀಗ ಪೊಸದಾದ ಶಸಿಯನು ಮಾಡಿ ಸನ್ನುತಾಂಗಿಯನೊಯ್ದು . . . ಸಮಕೌಶಲ್ಯವನೆ ತೋರಿಸಿದನು (ರಘುವಂ. ೯-೪೭). [< ಸಂ. ವಿಷ್ಣು]

**ಬಿಟ್ಟುಳಿ** (ನಾ). (?): ಅವುರೆ ಮಾಡಿದ ಬಿಟ್ಟುಳಿಯ ಕಕ್ಕುಂಬ ತೊಡಂಬೆಯ ಮೂಡಿಗೆಯ ಕವಳಿಕೆಯ ಕಂಡಪಟಂಗಳುಮಂ ಪಲವುಂ ತೆಱದ ಪಲವುಂ ಪೊಱೆಯಾಗಿ ಕಟ್ಟಿದ ಬಲೆಗಳುಮಂ . . . ಆಳವಿಯೊಳ್ ಕೂಡಿ ನಡೆಯಲ್ವೇೞ್ದು ಬೇಂಟೆವಸದನಂಗೊಂಡು (ಶಂಕರಾ. ೫-೪೭ ವ). [?]

**ಬಿಟ್ಟೆ** 'ಬಿಟ್ಟಿ$_1$' ನೋ.

**ಬಿಟ್ಟೆಗೆಯ್** 'ಬಿಟ್ಟಿಗೆಯ್' ನೋ.

**ಬಿಟ್ಟೇಱು**, ಬೆಟ್ಟೇಱು$_2$ (ನಾ). (ಕೈಯಿಂದ ದೂರದವರೆಗೆ ಎಸೆಯುವ) ಉದ್ದವಾದ ಈಟಿ; ಎಸೆಯಿಟಿ: "ಬಿಟ್ಟೇಱು ಮೊದಲಾದುದು ಕಯ್ಯಿಂ ಬಿಡಲ್ಪಡುವುದು ಪಾಣಿ(ಕರ)ಮುಕ್ತಮೆಂಬುದು" (ಹಲಾಯು. ೭೭-೩೦೪); ವೀರರೊಳ್ ಕೂಡಿ ಪರಿಗೆಯುಂ ಬಿಟ್ಟೇಱುಂ ಬೆರಸಿರ್ಪಂತೆ (ಧರ್ಮಾಮೃ. ೦೧-೨); ಬಿಟ್ಟೇಱುಟ್ಟಿ ನಖಿಂ ಚಕ್ರ ಪರಶು . . . ಫಳಕಂಬಿಡಿದಮರರ್ ನೆರೆದುದು (ವೀರೇಶ. ೨-೪೦); ಇಟ್ಟ ಸಲ್ಲೆಹ ಸಬಳ ಬಿಟ್ಟೇಱಟ್ಟಿಗಳ ಮಳೆ ಸಾದಿದವು ಕಾದಿದರು ಚೂಣಿಯಲಿ (ಕುಮಾರ. ೦೯-೦೦); ಈಟಿಯಲಿ ಬಿಟ್ಟೇಱನಲಿ ಹೊಗುವ ಹರಿಕದಂಬವ ಹೊಡೆವುತಿಱುವುತ ಜರಿಯುಗೆಡಹಿದರು (ತೊರರಾ. ೬-೦೦-೦೦). **ಬೆಟ್ಟೇಱು$_2$**: ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ ಖಡ್ಗದಿಂ ಪೂಣಿಸಿ ಪೊಯ್ದುಂ ಬೆಟ್ಟೇಱುಗಳಿಂ ಪರಿತಂದಿಟ್ಟುಂ . . . ಸೈರಿಸಲಾಱದೆ (ಧರ್ಮಾಮೃ. ೩-೬೩).

**ಬಿಜ್ಜಲ ಬಿಟ್ಟೇಱು**, ಬಿಜ್ಜಬಿಟ್ಟೇಱು = (?): "ಬಿಜ್ಜಲ ಬಿಟ್ಟೇಱು = ಹಿರಿಯ ಬಿಟ್ಟೇಱು" (ಶಮದ. ಶಂ. ೨); "ಬಿಜ್ಜ[ಶಾಶಾಂ. ಜ್ಜೆ] ಬಿಟ್ಟೇಱೆಂದು ಹಿರಿಯ ಬಿಟ್ಟೇಱೆನಿಕ್ಕುಂ" (ಕಬ್ಬಿಕ್ಕ. ೪೮).

[ದೇ.॥ ತಮಿ. ವಿಟ್ಟೇಱು, ವೆಟ್ಟೇಱು; ಮಲ. ವಿಟ್ಟೇಱು]

**ಬಿಟ್ಟೇಱುಕಾಱ** (ನಾ). ಉದ್ದವಾದ ಈಟಿಯನ್ನು ಹಿಡಿದಿರುವವನು: ಐಶ್ವರ್ಯಮದಮೆಂಬ ಬಿಟ್ಟೇಱುಕಾಱರ್ವೆರಸು ಬಲಮದಮೆಂಬ ಕಟ್ಟಿಗೆಕಾಱರ್ವೆರಸು . . . ನಿಲ್ಲದೆಲ್ಲಿಯುಂ ಬೆನ್ನಟ್ಟಿ ತಗುಳ್ದು (ಧರ್ಮಾಮೃ. ೦೦-೮೭ ಅಂತಿಮ); ನಿಗಳಂಕಮಲ್ಲಂ ಭುಜಬಳವೀರಂ ಕೊಟ್ಟೋಡುವ ಬಿಟ್ಟೇಱುಕಾಱರ ಗಣ್ಡಂ (ಎಕ. VI, ಕಡೂರು. ೩೯-೨೦; 1148). [ಬಿಟ್ಟೇಱು + –ಕಾಱ]

**ಬಿಡ** (ನಾ). ಒಂದು ಬಗೆಯ ಉಪ್ಪು; ಡೋಣಿಯುಪ್ಪು: "ಪಾಕ್ಯಂ, ಬಿಡಂ . . . ತೊಳೆದು ಕಾಯಿಸಿ ತೆಗೆದ ಉಪ್ಪು, ಡೊಣಿಉಪ್ಪು ಮತ್ತು ಪೆಟ್ಲುಪ್ಪು ಮುಂತಾದ ಅಡಿಗೆಯಿಳಿಸಿದ ಕೃತ್ರಿಮಲವಣಕ್ಕೂ ಬಿಡಾಲವಣಕ್ಕೂ ಪೆಸರುಗಳು" (ಸಿದ್ಧಾಂತಿ. ೨೬೭); ಸುರದಾರು ಸೈಂಧವಂ ಜಳಧರಂ ಬಿಡಂ ಬೀಟಿಲಕ್ಕಿ ಸದ್ಯಃಕ್ಷಾರಂ ಸುರಭಿಜಳವೆಣ್ಣೆಯೆಂಬಿವಸಿರದಟ್ಟಿಱೆ ನಸ್ಯಮುಂ ಕಬಿಲ್ಗಂ ಸೆಂಬಂ (ಲೋಕೋಪ. ೯-೨೨೪). [ಸಂ.]

**ಬಿಡಕಿ** (ನಾ). ಗಳಹುವವಳು; ಜಗಳಗಂಟಿ; ಗಯ್ಯಾಳಿ: ಮಗಳಿಗೆ ದುಡಕಿಯ ಕಟಕಿಟಿ ಬಲು ಜೋರ ನಿನ್ನಂಥ ಬಿಡಕಿಗೆ ಹೆಣ್ಣಲ್ಲತಿಗೆ ಹೆಣ್ಣಲ್ಲತಿಗೆ (ಜನಗೀ. ೯೨); ಕೆಲವರು ಬಿಡಕಿಯರು ಮಾತ್ರ 'ಅಯ್ಯೋ . . . ಮದಲಿಂಗಿತ್ತಿಯೋ ಸೋಬಾನೆ ಹೇಳ್ತಾರೆಯೋ ತುಂಬಿದ ಸಭೆಯಾಗೆ' ಎಂದು ಮೂತಿ ತಿರುವಿದರು (ಕಳುಮ. ೩೪). [< ಬಿಡು$_1$]

**ಬಿಡತ** (ನಾ). [ಸಂಗೀತ] ಮೃದಂಗವನ್ನು ಬಾರಿಸುವಾಗ ಎರಡು ಹೊಡೆತಗಳ ನಡುವೆ ಇರುವ ಅವಧಿ, – ಕಾಲಮಾನ: ಚಮತ್ಕಾರಲಾಗು ಹಿಡಿತ ಬಿಡ[ಡ]ತಗಳ ಮೋಹನವನ್ನು ತೋಱ ನುಡಿಸಿದ ಮಾರ್ದಂಗಿಕನು (ಗೋಪಮೇ. ೭-೦೭). [< ಬಿಡು$_1$ + –ತ$_2$]

**ಬಿಡತಿ** 'ಬಿಡದಿ' ನೋ.

**ಬಿಡದಿ**, ಬಿಡತಿ (ನಾ). ೧. ಅತಿಥಿಗಳ ಬಿಡಾರಕ್ಕೆಂದು ತೆರವು

ಮಾಡಿರುವ ಮನೆ ; ಬಿಡಾರ : ಮಡದಿ ನೀಯೊನ್ನ ವಡನೆ ಬಾಯೆಂದು ನಡದಾರು ಖಳನಾ ಬಿಡದಿಗೆ (ವಾಲೀಕ. ೬೩-೧೭) ; ಯುಧಿಷ್ಠಿರನು . . . ಬಿಡದಿಯಲ್ಲಿ ತಂಗಿ ಶ್ರಮಪರಿಹಾರ ಮಾಡಿಕೊಂಡ (ವ್ಯಾಸಬಿ. ೧೨೦). ೨. ತಂಗುವಿಕೆ ; ಮೊಕ್ಕಾಮು ; ವಾಸ್ತವ್ಯ : ನಮ್ಮ ಬಿಡದಿಗೆ ಬೇರೆ ಮನೆಯನ್ನು ಏರ್ಪಾಟು ಮಾಡಿರಬೇಕು (ಶಾಂತ್ರಿ. ೯೩). **ಬಿಡತಿ :** ೧. ನಮ್ಮನ್ನು ನಿಜವಾದ ಆದರದಿಂದ ಸತ್ಕರಿಸಿ, ಅವನ ಭಾರಿ ಹೊಸ ತೊಟ್ಟಿಮನೆಯಲ್ಲಿನ ಮುಖ್ಯಭಾಗವನ್ನು ನಮಗೆ ಬಿಡತಿ ಮಾಡಿ ಕೊಟ್ಟ (ಕಂಷ. ೩೩೪).

**ಬಿಡದಿ ಬಿಡು**=ಬಿಡಾರ ಹೂಡು; ತಂಗು : ಸುಲ್ತಾನರು ಚಿತ್ರದುರ್ಗದಲ್ಲಿಯೇ ಬಿಡದಿ ಬಿಟ್ಟಿದ್ದರು (ದೌಂಕ್. ೨೦೯) ; ಎಲ್ಲರೂ ಬಿಡದಿ ಬಿಟ್ಟಿದ್ದ ಮನೆಗೆ ಪ್ರಯಾಣ ಮಾಡಿದರು (ಮೂಲಾನ. ೦೩೪). **ಬಿಡದಿ ಮನೆ, ಬಿಡದಿಯ ಮನೆ**= (ಮದುವೆ ಮೊದಲಾದ ಸಂದರ್ಭಗಳಲ್ಲಿ) ಅತಿಥಿಗಳ (ವಿಶೇಷವಾಗಿ ಬೀಗರ) ಬಿಡಾರಕ್ಕಾಗಿ ತೆರವು ಮಾಡಿರುವ ಮನೆ: ಬಿಡದಿಮನೆಯಲ್ಲಿ ಸರಿಯಾದ ವ್ಯವಸ್ಥೆಯಿಲ್ಲ (ಮುಕ್ಕೀಹಾ. ೩೭) ; ಲಲನೆ ಲಕುಮಿಯು ಸಹಿತ ವೇಂಕಟನಿಲಯನನ್ನೈದಿಸುತ ಬಿಡದಿಯ ಮನೆಯೊಳಿಳಿಸಿದನು (ಅರ್ಜಾವಿ. ೦೬-೪೯) ; ಬಿಡದಿಯ ಮನೆಯಲ್ಲಿ ಇವನ ಅತ್ತೆ ಮತ್ತು ಇವನ ತಾಯಿಯವರು ಮಾತನಾಡುತ್ತಿದ್ದುದು (ಬಂಗಾಡಾ. ೧೭).

[<ಬಿಡು$_1$ + – ದಿ./ತಮಿ. ಮಲ. ವಿಟುತಿ ; ತೆಲು. ವಿಡಿದಿ]

**ಬಿಡದಿವುಳಿಗ** (ನಾ). ಬಿಡಾರದಲ್ಲಿ ಸಲ್ಲಿಸುವ ಸೇವೆ,—ಊಳಿಗ : ಬಿಡದಿವುಳಿಗದ ಲಿಂಗಣ ಮಡಿವುಳಿಗದ ದೊಡ್ಡಯ (ಎಕ. XIV, ಗುಂಡ್ಲುಪೇ. ೦೪೬-೩೩ ; 1087). [ಬಿಡದಿ + <ಊಳಿಗ]

**ಬಿಡಯ$_1$** 'ಬಿಡೆಯ'$_1$ ನೋ.

**ಬಿಡಯ$_2$** 'ಬಿಡೆಯ$_2$' ನೋ.

**ಬಿಡಯ$_3$** 'ವಿಡಾಯ' ನೋ.

**ಬಿಡಲವಣ** (ನಾ). ಒಂದು ಬಗೆಯ ಉಪ್ಪು ; ಡೊಣೆಯುಪ್ಪು : "ಕೃತ್ರಿಮಕಂ – ಬಿಡಲವಣ" (ಚಿತಂ. ೩೯). [ಸಂ.]

**ಬಿಡವೆ** (ನಾ). ಬಿರುಕು ; ಸೀಳು ; ಸಂದಂ : ಕಲ್ಲ ಬಿಡವೆಯೊಳಿರ್ದ ಪಣವಿನಂತೆ ಸಿಡಿಲೊಳಗಿರ್ದ ಸಕ್ಕರೆಯಂತೆ (ಧರ್ಮಾಮೃ. ೦೩-೦೮೫).

[ದೇ.॥ ತಮಿ. ವಿಟವು, ವಿಟಪ್ಪು ; ಮಲ. ವಿಟವು]

**ಬಿಡವೆಳಗು** (ನಾ). ಹೊರಹೊಮ್ಮುವ ಕಾಂತಿ,– ಪ್ರಭೆ : ಎಡೆಯಾಡುವಬಲೆಯರಡಿರುಚಿತಳಿರನು ಪಡೆದು ನೀಲದ ನೆಲನುಗುರ ಬಿಡವೆಳಗಿಂದಲರಾಗಿ ನೋಡುವರಕ್ಷಿಗೊಡರಿಪುದದುವೆ ಸತ್ಫಲವ (ಪರ್ವಕ. ೫-೪೪).

[? + ಬೆಳಗು$_2$]

**ಬಿಡಾಡಿ** 'ಬೀಡಾಡಿ' ನೋ.

**ಬಿಡಾಡಿಗ** (ನಾ). ಕೀಳಾದ ವ್ಯಕ್ತಿ; ಹೀನವಾದ ವ್ಯಕ್ತಿ: ಹಾದರದೆ ಮುಪ್ಪುಗೊಂಡಾ ಬಿಡಾಡಿಗ ಪೆಣ್ಗಳಾದರದೆ ಕಂಥಾಕಮಂಡಲುಗಳಂ ಬಿಳಿಯ ಸೀರೆಯಂ ಧರಿಸಿಕೊಂಡು (ಮಹಾಂತೇ. ೦೩-೨೩).

[ಬಿಡಾಡಿ (< ಬೀಡಾಡಿ) + – ಗ$_2$]

**ಬಿಡಾಯ** 'ವಿಡಾಯ' ನೋ.

**ಬಿಡಾರ** 'ಬೀಡಾರ' ನೋ.

**ಬಿಡಾರುವಾರ**, ಬಿಡಾರ್ವರ (ನಾ). ಚರ ಹಾಗೂ ಸ್ಥಿರ ಆಸ್ತಿಗಳನ್ನು ಭೋಗಕ್ಕೆ ಪಡೆಯುವುದು, – ವಾರಕ್ಕೆ ಮಾಡಿಕೊಳ್ಳುವುದು : ಹದಿನಾರು ಹಾನೆ ಗದೆಯನು ಬಿಡಾರುವಾರವಾಗಿಯಿರಿಸಿ (ಕೌಇಂ. ೦೯೩೦, ಕುಂಬಾಪುರ. ೬೬೩-೬೩; 1467); ಆ ಜಂನಕೆ ಉಂಟಾದ ಸೀಮೆ ಸಾಮ್ಯ ಯಿಪ್ಪನೂ ಬಿಡಾರುವಾರವಾಗಿ ಮಾಡಿಕೊಂಡು ದುಗ್ಗಣ ಸೆಟಿಯರು ಕೊಟ್ಟ ಅರ್ಥ ಕಾಟಿ ಗ ೬೫೦ (ಕೌಇಇ. IX-ii, ೯೬೩-೯೩ ; 1472); ಕಂದಪರದ ಗ್ರಾಮಿಣಿ ಅಂಣಬುಡುಪರು ಕೊಟ್ಟ ಬಿಡಾರುವಾರದ ಪತ್ರದ ಕ್ರಮವೆಂತೆಂದರೆ (ಕೌಇಇ. IX-ii, ೬೩೩-೦೫ ; 1554). **ಬಿಡಾರ್ವರ :** ತೊಳಹನ ಕಯ್ಯಲೂ ಬಿ[ಡಾ]ರ್ವರ ಮಾಗ ಹಿಡಿವ [ಸುಗೆ] ಬಿತುವ ಬಿದಿರ ಗದ್ದೆಯ ಮೇಲಿಕ್ಕಿದ ಪಾಣ್ಣ್ಯಗದ್ಯಾಣಂ (ಕೌಇಇ. VII, ೩೯೦-೦೪ ; 1140). [<ಬಿಡಾರ + ಅರುವಾರ]

**ಬಿಡಾರ್ವರ** 'ಬಿಡಾರುವಾರ' ನೋ.

**ಬಿಡಾಲ,** ಬಿಡಾಳ (ನಾ). ೧. ಬೆಕ್ಕು; ಮಾರ್ಜಾಲ : "ಮಾರ್ಜಾಲಂ ಬಿಡಾಲಂ . . . ಓತುವೆನೆ ಬೆಕ್ಕೆನಿಕ್ಕುಂ" (ಮಂಗರಾ. ೧೯-೦೦); ಆ ಶಾಗೆ ಸತ್ತು ಬಿಡಾಲನಾದುದಾ ಬಿಡಾಲಂ ಮುನ್ನಿನ ಕುಕ್ಕುಟನಂ ತಿಂದುದು (ಶಂಶಾಪು. ೦೫-೬೭ ವ). ೨. ಕಣ್ಣುಗುಡ್ಡೆ. **ಬಿಡಾಳ :** ೧. ಬಿಡಾಳಕ್ಕಂ ಪಾಲ ಕಾಪನಿತ್ತವೊಲಾಯ್ತು (ಪಾರ್ಶ್ವಪು. ೩-೧೦೩). [ಸಂ.]

**ಬಿಡಾಳ** 'ಬಿಡಾಲ' ನೋ.

**ಬಿಡಿ,** ಬಿಡು$_3$ (ನಾ). ೧. ಒಂದು; ಒಂಟಿಯಾದುದು : 'ಬಿಡಿತನ', 'ಬಿಡಿಮುತ್ತು' ಪರಾ. ೨. ಪ್ರತ್ಯೇಕವಾದುದು; ಭಿನ್ನವಾದುದು; ಬೇರೆಯಾದುದು : ಚರಣಕಾಂಡಂಗಳ್ಗೆ ಬಿರಿಮುಗುಳ ಬಿಡಿಗಳಿಟ್ಟಳವಾದ ಪಾಯವಟ್ಟಂಗಳನಮರ್ಚಿಯುಂ (ಶಾಂತೀಶ್ವ. ೫-೦೨೬ ವ); ಆಯ್ದುಕೊಂಡರೆ ಸಾಕು ಸಾವಿರ ಬಿಡಿಗಳಲೊಬ್ಬೊಬ್ಬರೊಂದೊಂದರಂತೆ ಸಂತೋಷಪಡುವೆನು (ಇಂಕಾಶ. ೭೦-೪೦). ೩. ಒಂದು ಊರಿನ ಹೆಸರು : ಅನ್ತಿಯ ಸುಗ್ಗಯ್ಯನು ಬಿಡಿ ಪೊನ್ನಯ್ಯನುಂ ಅಲ್ಲಮ್ಮನುಂ ಬಯ್ಯರಜೋಗನುಂ ಇನ್ನಿನಿಬರುಂ ಸಾಕ್ಷಿಯಾಗೆ ಕೊಟ್ಟರ್ (ಎಕ. XI, ಹೊಳಕ್ಕೆ. ೩೦-೦೩; 964). **ಬಿಡು$_3$ :** ೨. 'ಬಿಡುಗೆಲಸ', 'ಬಿಡುಮುತ್ತು' 'ಬಿಡುವೆಸರ್', 'ಬಿಡುವೊನ್' ಪರಾ.

**ಬಿಡಿಬಿಡಿ** (ದ್ವಿರುಕ್ತಿ): ಬಿಡಿಬಿಡಿಯಾದ ಹಾಳೆಗಳನ್ನು ಒಟ್ಟಿಗೆ ಸೇರಿಸಿ ಕಟ್ಟಿಡು (ರೂ). [ದೇ.॥ ತಮಿ. ವಿಟಿ; ಮಲ. ವಿಡು ;ತೆಲು. ವಿಡಿ]

**ಬಿಡಿಕಸಬಿ** (ನಾ). ಪ್ರತ್ಯೇಕವಾಗಿ ಕೆಲಸ ಮಾಡುವ ವ್ಯಕ್ತಿ : ಕೈಗಾರಿಕೆಗಳನ್ನೆಲ್ಲ ಬಿಡಿಕಸಬಿಗಳ ಅಡ್ಡಕಸಬಿಗಳ "ಕೈ" ತಪ್ಪಿಸಿ ದೊಡ್ಡ ಪ್ರಮಾಣದಲ್ಲಿ ಅದೇ ಕಸಬಿಗಳನ್ನು ಕೂಲಿಗೆ ಇಟ್ಟು ನಡೆಯಿಸಬಾರದೇಕೆ ? (ಮಾವಾದ. ೯೭). [ಬಿಡಿ + ಕಸಬಿ$_2$]

**ಬಿಡಿಕಾರು** (ನಾ). ಪ್ರತ್ಯೇಕವಾಗಿ ಮಳೆಯ ನೀರಿನಿಂದ ತೆಗೆದ ಫಸಲು (?) : ಉಳುಕೊಳುವ ಭೂಮಿಯಲು [ಬ]ಯಲು ಬಿತ್ತು ಬಿಡಕಾಡು ಮು ೫೦ ××× [ದ್ದು] ಬಿಡಿಕಾರು ಮೂ ೨ (ಕೌಇಂ. ೦೯೨೪, ಮಂಗಳೂರು. ೪೭೦-೦೩; 1329). [ ಬಿಡಿ + ಕಾರು$_2$ (< ಕಾರ್$_2$) ]

**ಬಿಡಿಕಾಸು** 'ಬಿಡಿಗಾಸು' ನೋ.

**ಬಿಡಿಕೆ** (ನಾ). ೧. ಬಿಡಬೇಕಾದುದು; ತ್ಯಾಜ್ಯ : ಒಂದು ಹೇಳಿಕೆಯಲ್ಲಿ ಅತ್ಯುಕ್ತಿಗಾಗಿ ಬಿಡಬೇಕಾದ ಭಾಗ; ಬಿಡಿಕೆ ; ಕಳಿತ ; ತ್ಯಾಜ್ಯಾಂಶ (Discount. ಇಂಕಾ). ೨. ಬೇರೆಯಾಗುವುದು; ಬೇರ್ಪಡುವುದು. ೩. ಜಟ್ಟಿಕಾಳಗದಲ್ಲಿ ಒಂದು ಪಟ್ಟು,– ವರಸೆ : ಬಿಡದೆ ಬಿಗಿಗಳ ಬಿಡಿಸಿ ಕಳಚುವರು . . . ಅಡಿಮಗುಚಿಯುಪ್ಪರಿಸಿ ಬಿನ್ನಣ ಬಿಡಿಕೆಗಳ ಬಂಧವಲಿ ಹೆಣಗಿದರುಭಯಪಟುಭಟರು (ಅಂಬಿಕಾ. ೦೬-೨೦).

[ಬಿಡು$_1$ + – ಇಕೆ]

**ಬಿಡಿಗಮ್ಮಟ** (ನಾ). ಪ್ರತ್ಯೇಕವಾದ ಕೆಲಸಕ್ಕೆ ಗೊತ್ತುಮಾಡಿರುವ ಟಂಕಸಾಲೆ (?) : ಉಣ್ಣಿಗೆಯ ಕಮ್ಮಟದಲು ತಿಂಗಳಿಗೆ ಸ ಒನ್ದು ಬಿಡಿಗಮ್ಮಟದಲು ತಿಂಗಳಿಗೆ ಪ ೧ (ಎಕ. XII, ತಿಪ. ೩೭-೨೦; ಸು. 1040).

[ಬಿಡಿ + ಕಮ್ಮಟ]

**ಬಿಡಿಗಾಸು,** ಬಿಡಿಕಾಸು (ನಾ). ೧. (ಹಿಂದೆ ಬಳಕೆಯಲ್ಲಿದ್ದ) ತಾಮ್ರದಿಂದ ಮಾಡಿದ ಒಂದು ಅತಿ ಸಣ್ಣ ನಾಣ್ಯ; ಚಿಕ್ಕಾಸು.

೨. ಚಿಲ್ಲರೆಹಣ; ಪುಡಿಗಾಸು : ರಸೀತಿ ಕೊಡದೇ ಇದ್ದರೆ ಒಂದು ಬಿಡಿಗಾಸು ಬಿಚ್ಚಲು ಅವನು ಸಿದ್ಧನಿರಲಿಲ್ಲ (ಪ್ರಾರ್ಥ. ೬೯); ಅವರು ಕೊಡುವ ನಾಲ್ಕು ಬಿಡಿಗಾಸುಗಳ ಮೇಲೆ ಅವನು ಬದುಕಬೇಕಿತ್ತು (ಬಿಹಾ.ಕ್ಕಾ. ೬೩). **ಬಿಡಿಕಾಸು :** ೨. ಕೆಲಸ ಮಾಡಿ ರೂಪಾಯಿ ಸಂಪಾದಿಸಬಹುದಾದ ಕಡೆ ಕೆಲಸ ಮಾಡದೆ ಬಿಡಿಕಾಸು ಬಂದರೂ ಅವನಿಗೆ ತೃಪ್ತಿ (ಯೋಚಿ. ೬೩). [ಬಿಡಿ + ಕಾಸು$_2$]

**ಬಿಡಿಗಾಳು** (ನಾ). ಒಂದಕ್ಕೊಂದು ಅಂಟಿಕೊಂಡಿರದೆ ಬೇರೆಬೇರೆಯಾಗಿರುವ ಕಾಳು : ಬಿಡಿಗಾಳು ಬಿದ್ದ; ಇಡಿಹಣ್ಣು ಸಿದ್ಧ, ಬಯಲಲ್ಲೆ ಇರುವ ಬುದ್ಧ (ಅರಳು. ೪೨೭-೯). [ಬಿಡಿ + ಕಾಳು$_2$ (< ಕಾಟ್$_2$)]

**ಬಿಡಿತನ** (ನಾ). ಏಕಾಂತತೆ; ಒಂಟಿತನ : ಬಿಡಿತನದ ಬಿಕ್ಕಟ್ಟಿನಲ್ಲಿ ಇಡಿತನದ ಒಕ್ಕಟ್ಟು ಹುಟ್ಟಿಸುವ ಹುಟ್ಟೀ ಬಳಗ (ವಿಚಾಮಂ. ೬೩).
[ಬಿಡಿ + – ತನ]

**ಬಿಡಿತೆ** 'ಬಿಡುತೆ' ನೋ.

**ಬಿಡಿದರ** (ನಾ). ಸಗಟುಮಾರಾಟದವರಿಂದ ಪದಾರ್ಥಗಳನ್ನು ತಂದು ಬಿಡಿಬಿಡಿಯಾಗಿ ಮಾರುವಾಗ ಹಾಕುವ ಬೆಲೆ : ಬಿಡಿದರದ ಅಂಗಡಿಯ ಮಾತು ಬೇರೆ, ಈ ಅಂಗಡಿಕಾರನು ತನ್ನ ಸರಕುಗಳನ್ನು ದೊರಕಿಸುವುದು ಇಡಿಯ ದರದ ಅಂಗಡಿಗಳಿಂದ . . . ಪೂರೈಸುವುದು – ಪುಡಿಗಿರಾಕಿಗಳಿಗೆ (ತಕ್ಕ.ಬ. ೨೨). [ಬಿಡಿ + ದರ$_3$]

**ಬಿಡಿದಳ** (ನಾ). ಒಂದಕ್ಕೊಂದು ಸೇರಿಕೊಂಡಿರದೆ ವಿರಳವಾಗಿರುವ ಪಕಳೆ : ಹೂವುಗಳು ಬಿಡಿದಳಗಳಿಂದ ಕೂಡಿದ್ದರೆ ಅವುಗಳನ್ನು ಬಿಡಿದಳದ ಹೂವುಗಳೆಂದು (Polypetalous) ಕರೆಯುತ್ತಾರೆ (ಸಸ್ಯಶಾ. ೫೭).
[ಬಿಡಿ + ದಳ$_2$ ( =ದಲ)]

**ಬಿಡಿದಿವಸ** (ನಾ). ಯಾವ ಬಗೆಯ ಉತ್ಸವವಾಗಲಿ ವಿಶೇಷವಾಗಲಿ ಇಲ್ಲದ ದಿನ : ಉಡುಪಿ ಶ್ರೀಕೃಷ್ಣನ್ನ ಬಿಡಿದಿವಸದಾಗೆ ತೋರಿಸಿದಿರಿ (ಹನ್ನೊಂದ. ೨೨). [ಬಿಡಿ + ದಿವಸ]

**ಬಿಡಿನುಡಿ** (ನಾ). ಪ್ರತಿಯೊಂದು ವಚನವೂ ಬೇರೆ ಬೇರೆಯಾಗಿಯೆ ಉಪಯೋಗವಾಗುವಂತೆ ರಚಿತವಾಗಿರುವ ಪದ, ವಚನ ಇತ್ಯಾದಿ: ಬಿಡಿನುಡಿಯ ಬಂಟ, ಸತ್ಯವಾದಿ, ಸರ್ವಜ್ಞಕವಿಗೆ ಗಂಗಪ್ಪ ಮನಸೋತಿದ್ದಾರೆ (ಸಾಸಪು. ೦೫೩). [ಬಿಡಿ + ನುಡಿ$_2$]

**ಬಿಡಿಬಿಲ್** (ನಾ). ಒಂದು ಬಗೆಯ ಜೂಜಾಟ : ನೆತ್ತ ಚದುರಂಗ ಪಗಡೆಯುಂ ಚಿತ್ರಾಯುಂಬೈದುದಾಯ ಬಿಡಿಬಿಲ್ ಸೊಗುಳಿಯುತ್ತಮರಾದರು ಅಡಲ್ಬಿತ್ತರ್ಲೆಯಹ ಭಂಗ ಬಪ್ಪನೆಂಬುದು ಪುಸಿಯೇಂ (ಸೀತಾ. ೬೦೦). [ ? ]

**ಬಿಡಿಬೇಸಟ್ಟು** (ನಾ). ಅನಾದರ; ಅಲಕ್ಷ್ಯ; ಉದಾಸೀನ : ಸೊರ್ಕಿನುರ್ಕಿನ ಬಿಡಿಬೇಸಟ್ಟು ನೆರೆಯೊಳೆಪುವರ್ಣದೊಳ್ಪರ್ ಮುನಿಗಳಂ ಲೆಕ್ಕಿಸದೆ ಠಕ್ಕಟಿದು ಮುಕ್ಕುಳಿಸಿ ಜಕ್ಕುಳಿಸಿದಂ (ರಾಜಶಾಕ್ಕ. ೦೪೭-೨೦).
[ಬಿಡಿ + ಬೇಸಟ್ಟು$_2$]

**ಬಿಡಿಮುತ್ತು**, ಬಿಡುಮುತ್ತು (ನಾ). ಪೋಣಿಸದೆ ಬಿಡಿಯಾಗಿರುವ ಮುತ್ತು; ಒಂಟಿಮುತ್ತು : ಕ್ಷೀರಸಾಗರದಲ್ಲಿ ನಿರುತ ಬಿಡುಮುತ್ತಿ ನಕ್ಷತ್ರೆಯ ಸುರಿಸಿದವೋಲು (ನವಪೋ. ೦೦-೫೩). **ಬಿಡುಮುತ್ತು**: ಕಡೆಯಿಕ್ಕಿದ ಬಿಡುಮುತ್ತಿನ ಪೊಡರ್ದುಣ್ಮುವ ಬೆಳಗು ಪೊಳೆವ ದುಗುಲದ ಪಸೆಯೊಳ್ ತೊಪರ್ದಿರೆ ಪೆಟತಲ್ತಿದೆ ಪಾಲ್ಗಡಲೆನಿಸಿದುದು (ಅಜಿತ. ೬-೦೬) ; ಕಾವಿಲ್ಲದ ಕರ್ನೆಯ್ದಿಲ ಪೂವಿಂ ಬಿಡುಮುತ್ತು ಬಿಡದೆ ಬಿಡುತಂದಪುವೆಂಬೀ ವಿಸ್ಮಯಮಂ ಮಾಡಿದುವಾ ವನಿತೆಯ ನೀಳ್ದ ಕಣ್ಗಳುಂ ಕಣ್ಬನಿಯುಂ (ಶಬ್ದಲಿ. ೯-೦೩) ; ಬಿಡುಮುತ್ತಿನ ಮಣಿಗದ್ದುಗೆಯೊಳಾಗ ಕಡುಸೋಬಿ ಕಣ್ಗೊಪ್ಪಿದಳು (ಶ್ರೀಶಾಂ. ೨-೦೪). [ಬಿಡಿ + ಮುತ್ತು$_3$]

**ಬಿಡಿಮೊಳೆ** (ನಾ). (ಮುದ್ರಣದಲ್ಲಿ ಬಳಸುವ) ಬಿಡಿಬಿಡಿಯಾದ ಮೊಳೆ, –ಅಚ್ಚು : ಸರ್ವಸಮರ್ಪಕವಾಗಿ ಬಿಡಿಮೊಳೆಗಳಿಂದ ಮುದ್ರಿಸುವುದನ್ನು ಕಂಡುಹಿಡಿದವನು ಗೂಟೆನ್ಬರ್ಗ್ (ಮುದ್ರ್ರ.ಕ. ೯). [ಬಿಡಿ+ಮೊಳೆ$_3$]

**ಬಿಡಿಯ$_1$** 'ಬಿಡೆಯ$_2$' ನೋ.

**ಬಿಡಿಯ$_2$** 'ವಿಡಾಯ' ನೋ.

**ಬಿಡಿಯುತ್ತರ** (ನಾ). ಸಂಬಂಧವಿಲ್ಲದ ಮಾತು; ಅಸಂಬದ್ಧವಾದ ಮಾತು : ದಾನವೇಶ ರೋಷದಿಂ ಬಿಡಿಯುವಿಲ್ಲದೆ ಸಭಾಂತರದಿ ಬಿಡಿಯುತ್ತರವ ನುಡಿಯಬಹುದೇ (ಪಪಪೋ. ೨೭-೬೩). [ಬಿಡಿ + ಉತ್ತರ]

**ಬಿಡಿಸರಳು** (ನಾ). ಒಂದೊಂದಾಗಿ ಬಿಟ್ಟ ಅನೇಕಬಾಣಗಳ ವರ್ಗ : ಕಡುಗಿ ನೂಕುವ ಕದನರಾಗಿಗಳೊಡನೆ ಕಾದುವ ಪಾರ್ಥತನಯನ ಬಿಡಿಸರಳು ಬೀಱಿದವು ರಮಣರನವರವಧುಗಳಿಗೆ (ಕುಮಾ.ದ್ರೋ. ೫-೬೬).
[ಬಿಡಿ + ಸರಳು$_1$ (< ಸರಲ್$_1$)]

**ಬಿಡಿಸು**, ಬಿಡಿಸು (ಕ್ರಿ). ೧. ಕಳಚು ; ಸಡಿಲಿಸು; ಕಳೆ : ನಿನ್ನ ಪಡೆಗೆಯ್ಗ[ಟ್ಟ]ಂ ಶರದಿಂ ಬಿಡಿಸಿದನಲ್ಲದೆ ಸರಿತ್ಸುತಂ ಬನ್ನವಿನ್ನವೆಂಬುವು ಮೊಳವೇ (ಶಂಶಭಾ. ೬-೫೩) ; ವಕುಳದ್ರುಮಕಂ ಮಾಲತಿಗಂ ಮದುವೆ ಮಾಡಿದೆಂ ಬಿಡಿಸವರ್ಕೆ ನೀಂ ಕಂಕಣಮಂ (ಕಾದಂಬ. ೫೯೩); ಈ ಕಟ್ಟುಗಳಂ ಬೇಗಂ ಬಿಡಿಸೆಂದು [ಪಾಠಾಂ. ಬಿಡೆಂದು] ಬಿಡಿಸಿಕೊಂಡು ಪೋದಳ್ (ಶಂಶಶಂ. ೬೬-೦೬). ೨. ಹೋಗಲಾಡಿಸು; ನಿವಾರಿಸು: ನುಡಿಸಿದನೆನ್ನಂ ನಲ್ಲಂ ಬಿಡಿಸಿದನೆನ್ನಂತರಂಗದನುತಾಪಮಂ (ಕವಿರಾ. ೩-೨೩೫); ನಂಬದುದಂ ನಂಬಿಸಲುಂ ನಂಬಿದುದಂ ಬಿಡಿಸಲುಂ . . . ಬಲ್ಲೆಂ (ಶಂಶಭಾ. ೫-೪೩ ವ); ಎನ್ನ ಸುತ್ತಿದ ಮಾಯಾಪ್ರಪಂಚವ ಬಿಡಿಸಾ ನಿಮ್ಮ ಧರ್ಮ (ಪುಹಾದೇ. ೪. ೦೯-೨೯); ಎನ್ನ ಗರ್ವಾಂಧಕಾರವ ಬಿಡಿಸಿ ರಕ್ಷಿಸು (ಪುರಂದ. ೨-೯ ಪಲ್ಲವಿ). ೩. ಬಿಡುಗಡೆ ಮಾಡು ; ವಿಮೋಚನೆಗೊಳಿಸು ; ಬಂಧಮುಕ್ತವನ್ನಾಗಿ ಮಾಡು : ಅಂತಪ್ಪೊಡೆ ನಿನ್ನಂ ಕಾವ ಗಂಧರ್ವರೆ ಬಿಡಿಸುಗೆ ಪೋಗೆಂದು ಪೊಯ್ದಂ ದುರಾತ್ಮಂ (ಶಂಶಭಾ. ೯-೭೦) ; ಈ ಕರುಣೆ ಸಾವಿರಹೊನ್ನನಾದಡೆ ಕೊಟ್ಟು ಕುಱಿಯಂ ಬಿಡಿಸದಿರನು (ಬಸಪು. ೨೯-೦೬); ಖೂಳ ಬಿಡಿಸಾ ಭೀಮಸೇನನ ತೋಳುವಲೆಯಲಿ ಸಿಕ್ಕಿದನು ಭೂಪಾಲನು (ಕುಮಾ.ಕ. ೦೩-೪೬). ೪. ಅಗಲಿಸು; ಬೇರ್ಪಡಿಸು; ಪ್ರತ್ಯೇಕಿಸು : ಬಿಡಿಸಿ ಭುಜಂಗಿಯ ತಟ್ಟಂ ಪಿಡಿದುಯ್ವಂತೆಳೆಯ ಮಲಯಜಾತಮನಳಿಪಿಂ ತೊಡರ್ದಾ ಖಚರಿಯ ತಟ್ಟಂ ಬಿಡಿಸಿ ನೃಪಾತ್ಮಜನನೊರ್ವನುಯ್ದಂ ಖಚರಂ (ಅರ್ಜನೇ. ೬-೯); ಬಲಿದ ಮುಳಿಸಂ ತಿಳುಹಲಿಕೆಯೆಮ್ಮಳವಿಯಲ್ಲೆನುತಾತ್ಮಜನ ಕೈಗಳನೆರಡನೊಯ್ಯನೆ ಬಿಡಿಸಿ (ಬಸಪು. ೪೭-೨೩). ೫. ತೆಗೆದುಹಾಕು; ವಜಾ ಮಾಡು : "ನಿಮ್ಮ ಅಗಸನನ್ನು ಬಿಡಿಸಿ ನೋಡಿರಿ" ಎಂದು ನಾನು ಸಲಹೆ ಮಾಡಿದೆ (ದೀಕನ್ನ. ೨೬). ೬. ಕೀಳು; ಕಿತ್ತುಹಾಕು : ಬಿಱುಗಾಳಿಂಗೆ ಕಿದಱಿರ್ಪಸಿಯ ಹೂಗಳನು ಬಿಡಿಸದೆ . . . ನವಪರಿಮಳದ ಬಿರಿಮುಗುಳ್ಗಳನವಿಕಳಾತ್ಮನು ಸೆಜ್ಜೆದುಂಬಲು ತವಕದಿಂ ತವೆ ಕೊಯ್ದುಕೊಂಡು (ಬಸಪು. ೨೨-೪); ಅದನ್ನು ಬಿಡಿಸಿ, ತಂದು ಆರಿಸಿ ಕಾಳು ಬೇರೆ ಮಾಡುತ್ತಾರೆ (ಮುಂಬಯಿ. ೯-೨೭). ೭. ಕತ್ತರಿಸು; ಕಡಿ; ಛೇದಿಸು: ದುರುಳ ನುಡಿದನ ನಾಲಗೆಯ ನಿಡುಸೆಳೆಯ ಬಿಡಿಸುವೆ (ಕುಮಾ.ಕ. ೦೨-೩೦); ನಿನ್ನ ಗಂಟಲ ಬಳೆಯ ಬಿಡಿಸುವ ಮೃತ್ಯುವಿದೆ ನೋಡಿತ್ತ ತಿರುಗು (ತೊರಗಾ. ೦-೦೦-೦೩); ಮುಳಿದು ಕೊಂಡೊಯ್ದೊಡೆ ಜವನ ಗಂಟಲ ಬಳೆಯ ಬಿಡಿಸುವೆನು (ಸಾಳ್ವಭಾ. ೨೭-೨೨). ೮. ಲೆಕ್ಕ, ಒಗಟು ಮುಂತಾದುವುಗಳಲ್ಲಿಯ ಸಮಸ್ಯೆಗೆ ಉತ್ತರವನ್ನು ಕಂಡುಹಿಡಿ,– ಸಮಸ್ಯೆಯನ್ನು ಬಗೆಹರಿಸು : ನೀವಿಕ್ಕಿದ ತೊಡಕ ಬಿಡಿಸಬಾರದು ನೀ ಬಿಡಿಸಿದ ತೊಡಕನಿಕ್ಕಬಾರದು (ಸಿದ್ಧವ. ಕ. ೦೦೭-೩೫೩); ನಮಗಿದರಿದರಿದು ನಮ್ಮಳವಲ್ಲ ಆಸುರದ ತೊಡಕಿದಂ ಬಿಡಿಸ ಬಲ್ಲವರಿಲ್ಲ (ತಿರುಶ. ದೇ. ೨೪-೬);

ಪರೀಕ್ಷೆಯಲ್ಲಿ ಎಲ್ಲ ವಿಷಯಗಳನ್ನು ಚೆನ್ನಾಗಿ ಬಿಡಿಸಿದ್ದನು (ಜಯಂತ. ೬೮). ೯. (ಹಾಸುಗೆ, ಚಾಪೆ, ಬಟ್ಟೆ ಮೊದಲಾದುವನ್ನು) ಹಾಸು ; ಹರಡು ; ಹರವು : ಹಂಸಾವಳಿ ಗಜಾವಳಿ ಮೊದಲಾದ ಪಟ್ಟಾವಳಿಯ ದಿಂಡುಗಳಂ ತರಿಸಿ [ಚೆ]ಂದದೊಳಿರಿಸಿ ತರತರದಿಂ ಬಿಡಿಸಿ (ಬಸವ. ೬-೦೩); ಬಿಡಿಸುತ್ತುಂ ಬೆಳ್ಳಾರವಮಂ . . . ಸಡಿಲಿಸು ಹಾಸಮನೆನುತುಗ್ಗಡದಿಂ ಮುತ್ತಿದುದು ಪುಲ್ಲೆಯಂ ಭಿಲ್ಲಾಘಂ (ಉದ್ಭಟ. ೨-೬೦). ೧೦. (ಚಿತ್ರ, ರಂಗವಲ್ಲಿ ಮುಂತಾದುವುಗಳನ್ನು) ಬರೆ ; ರೇಖಿಸು ; ಚಿತ್ರಿಸು : ಆಗಿನ ಕಾಲದಲ್ಲಿ ಚೀನಿಯರು . . . ಹೂ, ಹಕ್ಕಿ, ನಿಸರ್ಗದ ದೃಶ್ಯ ಮೊದಲಾದುವನ್ನು ಬಿಡಿಸುತಿದ್ದರು (ಚಾಂಕ್ರ. II, ೬೫೦); ಚಿತ್ರ ಬಿಡಿಸುವುದು ಮಕ್ಕಳಿಗೆ ಬಹು ಪ್ರಿಯವಾದ ಒಂದು ಹವ್ಯಾಸ (ಕವಿಕೋ. VII. ೩೯೩). ೧೧. ಕೊರೆ ; ಕಂಡರಿಸು ; ಕೆತ್ತು : ಅಲ್ಲಿ ನಿತ್ಯಮಹ ಮೆಂಬುದು . . . ಭಕ್ತಿಪೂರ್ವಕದಿಂ ಶಾಸನಂ ಬಿಡಿಸುವುದುಂ ಮುನಿಜನಂ ಗಳಂ ಪೂಜಿಸುವುದುಮುಕ್ಕುಂ (ಆಶಾಪು. ೦೨-೦ ವ); ಇಷ್ಟನ್ನೂ ಅಭಿನ್ನಕಲ್ಲಿನಲ್ಲಿ ಕೆತ್ತಿ ಸುತ್ತಲೂ ಅಂಚಿನಲ್ಲಿ ಪ್ರಭಾವಳಿ ಬಿಡಿಸಿದೆ (ಬೋರದೇ. ೯). ೧೨. (ಅತಿಥಿಗಳು) ಬೀಡು ಬಿಡುವಂತೆ ಮಾಡು ; ತಂಗಲು ಅನುವು ಮಾಡಿಕೊಡು ; ವಸತಿಗೊಳಿಸು : ಗಂಗಾಸಿಂಧುಮಧ್ಯಕ್ಷಿತಿ ಪತಿಗಳುಮಿಾ ತಾಣದೊಳ್ ಬಂದು ಕಾಣ್ಬರ್ ಪಲರೆಂದೆಂತಲ್ಲಿ ಚೆಲ್ವಾಗಿರೆ ಬಿಡಿಸಿದನುರ್ವೀಶ್ವರಂ ತನ್ನ ಬೀಡಂ (ಆದಿಪು. ೦೩-೨೦); ಅರಮನೆಯೊಳ ವರವರ ಹವಣಱಿದರಸುಗಳ ನೆಱೆ ಬಿಡಿಸಿ ವಾಣಿಜವರಸು ನಾಂದೀಮುಖದ ಬಳಿಕೊಂದಿಸಿದನೊಲವಿನಲಿ (ಕೀವಂಚ. ೬-೪೪); ಪೊಡೆಸು ಭೇರಿಯನಿಂದೆ ನಡೆಸು ಮತ್ಸ್ಯನ್ನಮಂ ಬಿಡಿಸು ಪಾಳೆಯವನು (ಜೆಶಿಪು. ೪೬-೨೨). ೧೩. ನೆಲೆಗೊಳಿಸು ; ಇರಿಸು ; ಇಡು : ಅಲ್ಲಿ ಜಲಕೇಳಿಯಾಡುವ ಗಾಡಿಕಾರ್ತಿಯರಂ ಕಾಡಲೆಂದೊಳ್ಳಿಗಳಂ ತಂದು ಬಿಡಿಸಿಯವರ್ಕೆ ಪಾಲನೆಱಿದು ಸಡೆವುತಿರ್ಪನ್ನೆಗಂ (ಶಂಕಶಂ. ೧೨೩-೧೯) ; ಆ ಸುರನರ ಭುಜಂಗಮರಿತ್ತ . . . ವಸ್ತುಗಳ ಸರಯುವಿನ ತೀರದಲಿ ಯೋಜನವೆರಡ ಱಳತೆಯ ವಿಶ್ವಕರ್ಮೋದ್ಧರಣರವ್ಯಾಗಾರದಲಿ ಬಿಡಿಸಿದನು ಭೂಪಾಲ (ತೊರರಾ. ೦-೬-೩). ೧೪. ಸಂಬಂಧವನ್ನು ಕಳೆದುಕೊಳ್ಳು ; ಅಗಲು : ಅರಸನುಮಂ ಸ್ವಜನಪರಿಜನಬಂಧುವರ್ಗಮುಮಂ ಬಿಡಿಸಿ ಶ್ರೀವರ್ಮ ರೆಂಬಾಚಾರ್ಯರ ಪಕ್ಕದೆ ದೀಕ್ಷೆಯಂ ಕೈಕೊಂಡು (ವಡ್ಡಾರಾ. ೬೪-೨೮); ಎನ್ನ ಪಂಬಲನಿದಂ ಬಿಸುಡಿಂ ಬಿಡಿಮೆಂದು ಖೇಚರಂ ಬಿಡಿಸಿದನಾಪ್ತರಂ ಬಿಡಿಸು ವಂತಿರೆ ಮೋಹದ ಬಳ್ಳಿವಳ್ಳಿಯಂ (ಆದಿಪು. ೨-೩೦) ; ಗಂಧರ್ವರಾಜ ನಂದನೆಯಿಂ ತನ್ನನೆಂತಾನುಂ ಬಿಡಿಸಿ ಬೀಱಿಕ್ಕೊಂಡು ನಿಜಸ್ಕಂಧಾವಾರಕ್ಕೆ ಪೋಗಲೆಂದು ತದೀಯಭವನವಮಂ ಪೊಱಮಟ್ಟು (ಕಾದಂಋ. ೨೩೩). ೧೫. ಸಡಿಲಗೊಳಿಸು ; ಸುಗಮವಾಗಿಸು : ಕೈದುಕಾಱರ ಬಿಗುಹು ಘನ ನೀ ಹೊಯ್ದು ಮೊದಲಲಿ ಬಿಡಿಸು ಬಳಿಕಾವೈದಿ ನಿನ್ನನು ಕೂಡಿಕೊಂಬೆವು (ಕುವ್ಯಾದ್ರೋ. ೪-೪೪) ; ಮಾಧವನ ಸಮ್ಮುಖವ ಬಿಡಿಸುವ ಸುದಂಡ ಧಾರಿಗಳು ಪೊಲಿದುಗ್ಗಡಿಸಲು (ಪವಮೋ. ೦೦-೦೬). ೧೬. (ಸಿನಿಮಾ, ನಾಟಕ ಮುಂತಾದುವಕ್ಕೆ) ಪುಕ್ಕಟೆಯಾಗಿ ಪ್ರವೇಶಿಸಲು ಅವಕಾಶವಾಗು ವಂತೆ ಮಾಡು : ಇವತ್ತು ನಮ್ಮನ್ನು ಬಿಡಿಸುತ್ತೀರಾ ನಾಟಕಕ್ಕೆ ? (ಪಾಪೋಲೀ. ೦೬೨). ೧೭. ನೀಡು ; ಕೊಡು : ಬಿಳಿಯಕ್ಕಿಯುಂ ಸೊಲ್ಲಗೆಯುಂ ಬಿಟ್ಟಿಯುಂನ್ನುಪ್ಪಮುಮನೆಲ್ಲಾ ಕಾಲಕ್ಕಂ ಸರ್ವ್ವಬಾಧಾಪರಿ ಹಾರವಾಗಿ ಬಿಡಿಸಿದರ್ (ಎಕ. III, ಶ್ರೀರಂಗ. ೦೪೬-೦೪ ; ಸು. 900?) ; ಶ್ರೀಮತ್ತ್ವ[ದ್ಯ]ಬ್ಬರಸಿಯರ್ತ್ತಮ್ಮ ಬಸದಿಗೆ ದಾನಸಾಲೆಗೆ ಬಿಡಿಸೆ (ಕಶಾಇ. XI—i , ೩೮-೬ ; 950). ೧೮. ಚಿತ್ರಿಸಿ, ಕಸೂತಿಮಾಡು : ಕೌಶೇಯ — ತೆರಳೆಯ ಹುಟು ಮುಕುಲಾಕಾರದಿಂದ ಮಾಡಿದುದ ಬಿಡಿಸಿ ನೆಯ್ದು ಸೀರೆ (ಶಾಶರಾ. ೩) **ವಿಡಿಸು** : ೧೯. ಇಗ್ಗಲಿಯೂರಾ ಗವತೆಯ ವಿಡಿಸಿದರ್ (ಮೈಆಂ. ೦೯೩೦. ೪೦-೯ ; ೨ನೆಯ ಶತ).

**ಬಿಡಿಸಿ ನೋಡು** = ವಿಶ್ಲೇಷಿಸು ; ವಿವರವಾಗಿ ಪರಿಶೀಲಿಸು : ಅದರ ಇತಿಹಾಸವನ್ನು ನೋಡುವುದಕ್ಕೆ ಮುಂಚೆ ನಿಟ್ಟೂರನ್ನು ಬಿಡಿಸಿ ನೋಡುವ (ನಿಟ್ಟೂಶಾಂ. ೨). [ಬಿಡು$_1$ + — ಇಸು$_3$]

**ಬಿಡಿಹೂ, ಬಿಡಿಹೂವು** (ನಾ). ಮಾಲೆಯಾಗಿ ಕಟ್ಟದಿರುವ ಹೂವು ; ಪ್ರತ್ಯೇಕಪ್ರತ್ಯೇಕವಾಗಿರುವ ಹೂವು : ಸ್ವಲ್ಪ ಬಿಡಿಹೂಗಳನ್ನು ಬೇರೆ ತೆಗೆದಿಡು (ಕೂಂ). **ಬಿಡಿಹೂವು** : ಬಿಡಿಹೂವಾದರೂ ಮುಡಿಗಿ ಮುಡಿದುಕೊಳ್ಳಬಾರದೇ ? (ಗಾದೆ.) [ಬಿಡಿ + ಹೂ$_2$ (<ಪೂ$_3$) ]

**ಬಿಡಿಹೂವು** ' ಬಿಡಿಹೂ ' ನೋ.

**ಬಿಡಿಹೋರೆ** (ನಾ). ಒಬ್ಬನೇ ಮಾಡುವ ಕೆಲಸ, —ವೃತ್ತಿ, —ಕಸಬು : ಕೈಕಸಬುಗಾರರು ತಮ್ಮ ಬಿಡಿಹೋರೆಗಳನ್ನು ಬಿಟ್ಟು ಕಾರಖಾನೆ, ಗಿರಣಿ ಮುಂತಾದ ಪ್ರಚಂಡಸಂಘಟನೆಯ ಒಳಕೀಲುಗಳಾಗಿ ದುಡಿಯತೊಡಗು ವರು (ಮಾವಾರ. ೦೦೦). [ಬಿಡಿ + ಹೋರೆ$_2$]

**ಬಿಡು$_1$**, ವಿಡು (ಕ್ರಿ). ಬಿಟ್ಟ, ವಿಟ್ಟ$_1$ (ಭೂತಕೃ). ಬಿಟ್ಟು$_1$ (ಭೂತನ್ಯೂ). ೧. ತೊರೆ ; ತ್ಯಜಿಸು : ಪರಲೋಕಮಿಲ್ಲದೆಂದು ತಲ್ಲೋಕಸುಖಾನುಭಾವನಾಪೇಕ್ಷೆಯಿನೈಹಿಕಸುಖವಿಮುಖನಾಗಿ ಶರೀರಾರ್ಥ ವ್ಯಯಂ ಮಾಡುವಾತಂ ಕಯ್ಯದಂ ಬಿಟ್ಟು ಕಾಲದರ್ಕೆಱುಗುವಾತನಂ ಪೋಲ್ಕುಂ (ಆದಿಪು. ೨-೯ ವ) ; ಪಗೆ ಸಮಿಾಪವಾದೆಡೆಯಲ್ಲಿರಲಾಗದು ಯುದ್ಧಂ ಮಾಡಲಾಗದು ಆ ದೇಶಮಂ ಬಿಟ್ಟು ಪೋಪುದು (ಶಂಕಶಂ. ೩೯-೨೩); ಪದ್ಮವ್ಯೂಹದಲಿ ಹೊಕ್ಕಾಳು ಮರಳಿದಡಸ್ತ್ರವಿದ್ಯಾಭಾಳಲೋಚನ ನೆಂಬ ಬಿರುದನು ಬಿಟ್ಟೆ ನಾನು (ಕುವ್ಯಾದ್ರೋ. ೪-೯). ೨. ಅಡ್ಡಿಯಿಲ್ಲ ದಿರು; ತಡೆಯಿಲ್ಲದಿರು: ಎಲೆಲೆ ದೊರೆ ಸಿಕ್ಕಿದನು ಸಿಕ್ಕಿದನಳಿದುದೋ ದ್ರೌಪದಿಯ ಸಿರಿಯೆಂಬುಲುಹ ಕೇಳುತ ಪಾರ್ಥ ಬಂದನು ಬಿಟ್ಟ ಸೂಠಿಯಲಿ (ಕುವ್ಯಾದ್ರೋ. ೨-೩). ೩. ಕಟ್ಟನಿಂದ ಸಡಿಲಗೊಳಿಸು ; ಹಿಡಿತದಿಂದ ಕಳಚು ; ವಿಮೋಚನೆಗೊಳಿಸು ; ಬಿಡುಗಡೆ ಮಾಡು : "ಬಿಡು-ವಿಮೋಚನೇ" (ಶಮದ); ಒಂದಂ ಕ್ರಿಯಾವಿಶೇಷಣಮಂ ದೊರೆಕೊಳೆ ಸಯ್ತು ಪೇಟದದೞಿಕೊಳೆ ಪೞಿತಂ ಸಂಧಿಸಿ ಪೇಱಿಕ್ದೊಡೆ ಕೃತಿಯೊಳ ಗೊಂದಿರದೆರಡಕ್ಕೆ ಬಿಟ್ಟ ಕಱುವಂ ಪೋಲ್ಗುಂ (ಕವಿರಾ. ೨-೯); ಕೊಂದೊಡೇ ವಂದಪುದೆಂದು ದುರ್ಯೋಧನನಲ್ಲಿಗೆ ಪೋಗೆಂದು ಕಟ್ಟಿದ ಕಟ್ಟುಗಳಂ ಬಿಟ್ಟು ಕಳೆದೊಡೆ ಜಯದ್ರಥಂ ಸಿಗ್ಗಾಗಿ (ಪಂಪಭಾ. ೬-೩೨ ವ) ; ತೆಂಗಿನ ಪೊಸ ನೇಣಿಂದಱುದಿಂಗಳ್ವರಮುಡಸಿ ಕಂಬಿಯಂ ಕಟ್ಟಿದೊಡಂ ತಾಂ ಗತ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ರಸಾರ್ಣವ. ೨-೯೨). ೪. ಕಳಚಿಕೊಳ್ಳು; ಬೇರೆಯಾಗು; ಉಚ್ಚು; ಸಡಿಲವಾಗು: ಮಾಯಾ ಪಾಶ ಹಿಂಗಿ ಮನದ ಗಂಟು ಬಿಡದನ್ನಕ್ಕ ಕೂಡಲಸಂಗಮದೇವನೆಂತೊಲಿ ವನಯ್ಯಾ (ಬಸವ. ೨೦೨); ಹೊಗರುಗೆಟ್ಟುದು ಕುಮುದ ಕಮಳದ ಬಿಗುಹು ಬಿಟ್ಟುದು ಚಕ್ರವಾಕದ ತಗಹು ಕೆಟ್ಟುದು ಹೇಳಲೇನು ರಂಜಿಸಿತು ದೀಪಾಳಿ (ಕುವ್ಯಾದ್ರೋ. ೦೫-೩೪). ೫. (ಉಸಿರು ಮುಂತಾದುವನ್ನು) ಹೊರ ಹಾಕು; ಸೂಸು; ಹೊರಹೊಮ್ಮಿಸು : ನಾಸಿಕದಿ ಬಿಡುವಾನಿಲಂ ರೇಚಕ ಮೆನಿಕ್ಕು (ಮಂಗರಾ. ೦೬-೦೪); ಕುಲಶೈಲಂಗಳಾಸಱಿಂ ಕಂದರದ ಮೊಗದಿಂದೆ ಬಿಡುವ ಬಿಸುಸುಯ್ಯೆಲರ್ ಬಂದಪುದೆನಲ್ಕೆ ರ್‍ಘುಳದಿಂ ಬಿಡದೆ ಬೀಸು ತಿರ್ದುದು ಗಾಳಿ ಬೇಸಗೆಯೊಳು (ಜೈಮಿಭಾ. ೦೫-೩). ೬. (ನಾಯಿಯನ್ನು) ಮೇಲೆ ನುಗ್ಗಿಸು, — ಛೂ ಬಿಡು : ಸೀಳ್ನಾಯ್ಗಳಂ ಬಿಡು ಕೋಲಂ ತುಡು (ಕಾದಂಪೂ. ೦೬೦) ; ಒಂದು ಮೊಲಕ್ಕೆ ನಾಯನೊಂಬತ್ತ ಬಿಟ್ಟಂತೆ ಎನ್ನ ಬಿಡು ತನ್ನ ಬಿಡೆಂಬುದು ಕಾಯವಿಕಾರ (ಬಸವ. ೩೬). ೭. ತೆಗೆ ; ತೆರೆ; ಅಗಲಿಸು : ಅಂತು ಕಾದೆ ವಿದ್ವಿಷ್ಟವಿದ್ರಾವಣನ ಮೊನೆಯಂಬಿನಂಬೇ ಱಿಂಗಳ್ಕಿ . . . ಕಿಂಪುರುಷರ್ ಕಾಪುರುಷರಂತೆ ಬಾಯಂ ಬಿಡೆಯುಂ

(ಶಂಶಭಾ. ೫-೯೮ ವ) ; ಬಿಡುಗುಂ ಬಾಯುಂ ನೆಲದೊಳ್ ಪಡುಗುಂ . . . ವಸುಭೂತಿ ಧೈರ್ಯವಿಲ್ಲದೆ ಮನದೊಳ್ (ಧರ್ಮಾಮೃ. ೦-೧೫೭): ಬಿಟ್ಟ ಕಣ್ಣ ಬಿಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಕಟ್ಟು ಗುಡಿಯ ಕೂಡಲಸಂಗಮದೇವ ಹಿಡಿವಡೆದ (ಬಸವ. ೬೧೪). ೮. ವಾಹನ, ಕುದುರೆ ಮುಂತಾದುವನ್ನು ಓಡಿಸು._ನಡೆಸು : ತನ್ನ ಸಂಗಡದವರುಂ ಪರಿಗ್ರಹಮುಮೆಯ್ತರಲಾಱದೆ ಪಿಂದೆ ನಿಲ್ವಿನಂ ಕಡುಪಿನೊಳಂದು ಬಿಟ್ಟನತಿಶೀಘ್ರದೆ ವಾಜಿಯನಾ ನೃಪೋತ್ತಮಂ (ಕಾದಂಪೂ. ೬೨೦); ನೀನಾ ಪಶುವಂ ಬಿಡುವ ಪೊಡೆವ ಕಳಕಳಮಂ ಕೇಳ್ದು ಪಾರ್ವನೆಟ್ಟಿತ್ತೊಡೆಸ್ವ ಕಾರ್ಯಂ ಕಿಡುಗುಂ (ಶಂಚತಂ. ೨೪೭-೧೪): ಬಿಡು ರಥವನಾ ದ್ರೋಣನಿದಿರಲಿ (ಕುಮಾ.ದ್ರೋ. ೨-೩೩). ೯. (ಬಾಣ, ಈಟಿ ಮುಂತಾದುವನ್ನು) ಎಸೆ ; ಹಾಕು ; ಪ್ರಯೋಗಿಸು : ಮತ್ತಮಲ್ಲಿ ಬಡಿವುದುಂ ಬಿಡುವುದುಂ ಚಾಪವಿದ್ಯೆಯೊಳ್ (ಎಇ. XIII, ೩೩೨-೪೦ ; 929) ; ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತು ಬಾಣಂ ಧನುರ್ಗುಣದಿಂದಂ ಬಿಡುವಲ್ಲಿ ನೂಱು (ಗದಾಯು. ೩-೩) ; ತುಡುವಾಗಳೊಂದು ಬಿಲ್ಲಿಂ ಬಿಡುವಾಗಳು ಲಕ್ಕ . . . ಅಪ್ಪುವು ಗಡ ಪಾರ್ಥನ ಬಾಣವೆಂಬರ್ (ಸಮಶ. ೧೧-೦೭೦). ೧೦. ಉಳಿ ; ಹೊರತು ಪಡಿಸು : ಭಟ್ಟರೆ ಕೇಳಿಂ ನಿಮ್ಮಂ ಬಿಟ್ಟು ಕೆಲರ್ಕಲಜರೊಳರೆ (ಧರ್ಮಾಮೃ. ೦-೧೨೦) ; ಹರನಿಂದುರ್ವಿಗೆ ದೈವವೇ ಕಿರಣಕಂದುಂ ಬಿಟ್ಟು ಸೊಂಪುಂಟೆ (ಸೋಮೇಶ. ೬). ೧೧. ನಿರ್ಲಕ್ಷಿಸು ; ಗಣಿಸದಿರು : ಈ ನಡುಗುವುಪಲ್ಲವೇ ತೊಡೆ ನಿತಂಬದ ಬಣ್ಪನೊಳೇವುದಕ್ಕ ಪೋ ಬಿಡು ಕಟಿಸೂತ್ರಮಂ(ಶಂಶಭಾ. ೩-೪೭); ಗುಣದೋಷಮನಱಿದವಱೊಳ್ಗುಣಮಂ ಕೈಕೊಂಡು ದೋಷಮಂ ನೆಱೆ ಬಿಡುವಾ ಗುಣವಂತನ ಮುಂದೋದುಗೆ (ಸಮಶ. ೦-೬೫). ೧೨. ಬಿಡಾರ ಹಾಕು ; ತಂಗು ; ನೆಲಸು ; ವಸತಿ ಮಾಡು : ಮಹಾರಾಜರು[ಂ] ಬಾಣರಸರುಂ . . . ಸಮಸ್ತಬಲಂ ಬೆಱಸಿ ಬಿಟ್ಟೊಡೆ (ಎಇ. XXIV. ೦೯೧-೮ ; ಸು. 885) ; ಆರಾನುಂ ಬಿಟ್ಟೆವೋಪರ್ ಬೀಡಂ ಬಿಟ್ಟಿರ್ದರ್ ನಿಱಿಸುವರ್ (ವಡ್ಡಾರಾ. ೯೯-೫) ; ಹರಿಗನಾ ಕುರುಕ್ಷೇತ್ರದೊಳಂತೇನುಂ ಮಾಣದ ಬಿಟ್ಟುದನಾ ನೆಗಳ್ದ ಸುಯೋಧನಂಗೆ ಚರರಱಿಪುವುದುಂ (ಶಂಶಭಾ. ೧೧-೧) ; ಎಲ್ಲಿಯುಂ ದುರ್ಯೋಧನನನಱಸಿ ಕಾಣದೆ ವಿಸ್ಮಯಂಬಟ್ಟವನ ಬಿಟ್ಟ ಬೀಡಿಂಗೆ ನಿಟ್ಟುರಿಗೊಂಡು (ಗದಾಯು. ೬-೨೮ ವ). ೧೩. ಅವಕಾಶ ಕೊಡು ; ಆಸ್ಪದ ಮಾಡಿಕೊಡು : ತನ್ನ ಪ್ರಕೃತಿ ಬಿಡದಿರಲ್ ಅಱಿಕೆಯೇನಂ ಮಾಡುವುದು (ಶಂಚತಂ. ೦೯-೨) ; ಅವರವರ ಸ್ವಸ್ಥಾನಂಗಳ ಸಲುಗೆಯನಱಿದು ಬಿಡುತ್ತಿದ್ದ ಕೂಡಲಸಂಗಮದೇವರಲ್ಲಿ ಬಸವಣ್ಣನ ಕಾಲವೇಳೆಯನಱಿದು (ಸರ್ವವ. ೬೦-೪೫೩). ೧೪. ಕೊಡು ; ನೀಡು : ಕಿಱುಗ್ಗಾನದೇವಕೆ ಎಲ್ಲಮಾನ್ಯಸರ್ವಪರಿಹಾರಂ ಬಿಟ್ಟ (ಎಕ. VI, ಕೊಪ್ಪ. ೩೯-೭ ; 675?) ; ಪುನ್ನಾಡಱುಸಾಸಿರಕ್ಕೆ ಎಱೆಯರ್ ನೆಲಕ್ಕಿ ಸೊಲ್ಲಗೆ ಬಿಟ್ಟು (ಎಕ. III, ನಂಜನ. ೨೬-೩ ; ಸು. 810) ; ನೈಷ್ಠಿಕತಪೋಧನಗ್ಗಂ ಬಿಟ್ಟು ಮತ್ತರ್ ೪ (ಸೌಇಇ. XI-i, ೦೦೦-೦೫; 1064). ೧೫. ಸುರಿಸು; ಚೆಲ್ಲು: ಮಿಡಿದೊಡೆ ತನಿಗ[ರ್ವ] ರಸಂ ಬಿಡುವುವು (ಶಂಶಭಾ. ೦-೫೭); ಬಿಟ್ಟೆಸೆದುದು ಪೊಱವಾಱಂ ಮುಟ್ಟದ ತರುಣೀಸುಗಂಧಕೇಶಂ ತೆಗೆದಿಂ ಕಟ್ಟಿದಪರೆಂದು ಬಾಷ್ಪಂ ಬಿಟ್ಟೊಡನೆ ಬಱಿಲ್ದುವಟ್ಟುವೋಲಳಿರವದಿಂ (ಲೀಲಾವ. ೦೪-೦೩). ೧೬. ಸುರಿ ; ಹುಯ್ಯು : ಎರಕಕ್ಕೆ ಬಿಟ್ಟ ಕರುವಿನಂತೆ ಮಱುಗುತ್ತುಂ(ಧರ್ಮಾಮೃ. ೧-೦೬೨); ಖಿಡುಗದಡವೊಯ್ಲುಗಳಲಡುಮುದ್ದಡಸಿದರು ಸೂಕರನ ತುಪ್ಪವ ತೊಡೆದರಿಱಿದೇಱಿನೊಳು ಬಿಟ್ಟರು ತೈಲಧಾರೆಗಳ (ಕುಮಾ.ಭೀ. ೫-೪೨). ೧೭. ಚಿತ್ರಿಸು ; ಬರೆ : ಹೆಂಗಸರು ಮನೆ ಮುಂದೆ . . . ಆಕರ್ಷಕವಾಗಿ ರಂಗೋಲಿ ಬಿಡುತ್ತಾರೆ (ಬೋರಡೇ. ೨೩). ೧೮. ಶಿಲೆಯಲ್ಲಿ ಕೆತ್ತಿಸಿ ದಾನಮಾಡು : ಜಿನಗೃಹಂಗಳ್ಗೆ ತನ್ನ ಮನೆಯಿಂ ಗಂಧಪುಷ್ಪಾಕ್ಷತಾದಿಗಳನುಯ್ವುದುಂ . . . ಶಾಸನಂಗಳಂ ಬಿಡುವುದುಂ ಮುನಿಜನಂಗಳಂ ಪೂಜಿಸುವುದುಂ ಚತುರ್ವಿಧಮೆಂಬುದು (ಚಾವುಂಪು. ೨೦೦). ೧೯. ಹೋಗಲು ಅನುಮತಿಸು ; ಬೀಳ್ಕೊಡು ; ನಿರೂಪ ಕೊಡು : ಎನ್ನ ಪಂಬಲನಿದಂ ಬಿಸುಡಿಂ ಬಿಡಿಮೆಂದು ಮೇಚರಂ ಬಿಡಿಸಿದನಾಪ್ತರಂ ಬಿಡಿಸುವಂತಿರೆ ಮೋಹದ ಬಳ್ಳಿವಳ್ಳಿಯುಂ (ಆದಿಪು. ೨-೫೦): ಬಹುಕಳಾಳಾಪಂಗಳಂ ಕಲ್ತು ಬರ್ಪವಮೋಘಂ ಬಿಡಿಮೆಂಬುದುಂ (ಸುಕುಮಾ. ೨-೩೫). ೨೦. ಗಳಹು ; ಆಡು ; ನುಡಿ : ತೊಟ್ಟ ಜೋಹಕೆ ತಕ್ಕ ನುಡಿಗಳ ಬಿಟ್ಟೆವಲ್ಲದೆ ನಿಮ್ಮ ರಾಯನ ಕಟ್ಟಲಾಪೆವೆ (ಕುಮಾ.ದ್ರೋ. ೨-೫೨). 'ಬಿಡಕಿ' ಪರಾ. ೨೧. ಕೆಳಕ್ಕೆ ಇಳಿಬಿಡು: ನೇತಾಡುವಂತೆ ಮಾಡು ; ಜೋಲಾಡಿಸು : ಮಾಯುರಥಂ ಪ್ರಭಾವತಿವೆರಸು ಸಿದ್ಧಕೂಟಚೈತ್ಯಾಲಯದ ಮುಂದಿರ್ದು ಬಿಟ್ಟ ಮಾಲೆಯಂ ನೆಲಂ ಮುಟ್ಟಲೀಯದೆ ಮೇರುವಂ ತ್ರಿಪ್ರದಕ್ಷಿಣಂಗೆಯ್ದು ಕೊಳಲಾಱದೆ (ಚಾವುಂಪು. ೬೪) : ಬಿಡೋ . . . ಪರದೇನಾ (ರಾಯುಕ. ೭೪). ೨೨. ಕ್ಷಮಿಸು : ಕಕ್ಕಸದಿಂ ಕಾದಿ ಹಿಮ್ಮೆಟ್ಟಿ ಗಜ ಮಱೆವೊಕ್ಕಡೆ ಬಿಡೆನೆಂದ ನಗುತೆ (ಮೋಹತ. ೩೪-೩೯). ೨೩. ಹಾಸು ; ಹರಡು : ಒಂದು ಪರಿಣೆ ತನ್ನಯ ಪರಿಸ್ಪಂದಸಹಿತೆಯುದ್ದಿರೆ ಪರಿವರಿಪ ಕಾಳ್ಕಿಚ್ಚು ಮುಂದುಗಡೆ . . . ಬಿಟ್ಟ ಬೆಳ್ವಾರಬಲೆಯೆಡಗಡೆ . . . ಈ ಅನುವರವನು ಮಾಣಿಪರಿಲ್ಲ (ಸಮ್ಯಕೌ. ೨-೪೭). ೨೪. ತೊಡಗಿಸು ; ಆರಂಭಮಾಡಿಸು : ನಾಲ್ಕು ಆಳುಗಳನ್ನು ಈ ಕೆಲಸಕ್ಕೆ ಬಿಟ್ಟರೆ ಬೇಗ ಮುಗಿಸಬಹುದು (ರೂಢಿ). ೨೫. (ಸಾಲದಲ್ಲಿ ಅಥವಾ ವ್ಯಾಪಾರ ಮಾಡುವಾಗ ವಸ್ತುಗಳ ಬೆಲೆಯಲ್ಲಿ) ರಿಯಾಯಿತಿ ತೋರಿಸು ; ಸೋಡಿ ಕೊಡು : ಸಾವಿರಾರುರೂಪಾಯಿಗಳ ವ್ಯಾಪಾರ ಮಾಡಿರುವಾಗ ಹತ್ತು ರೂಪಾಯಿಯೂ ಬಿಡುವುದಿಲ್ಲವೆಂದರೆ ಹೇಗೆ ? (ರೂಢಿ). **ವಿಡು :** ೧. ವಿದ್ರುಮಾಧರ ಶಾಂತಿಸೇನಮುನೀಶನಾಕ್ಕವ ವೆಳ್ಗೊಳದ್ರಿ ಮೇಲಶನಾದಿ ವಿಟ್ಟಪುನರ್ಭವಕ್ಕೆಱೆ ಆಗಿ (ಎಕ. II, ೩೦-೪ ; ಸು. 650). ೨. ಕೆಬ್ಬಲೆನಾಡ ಬೆಳತೂರ ಪಡುವಣದೆಸೆಯ ಮೊಱಡಿಯೊಳ್ಪಿರಿಯ ಪನ್ದಿಗೆ ವಿಟ್ಟೊಡೆ ಪನ್ದಿಯುಂ ನಾಯುಮೊಡಸತ್ತುವು (ಎಕ. III, ಮಂಡ್ಯ. ೪೦-೧೧; 950). ೩. ಸಟ್ಟಿಜ್ಞದರ್ ವಿಜಾರಸರುಂ ಪಲ್ಮಡಿಗೆ ಕುಱುವಿಟ್ಟಡಿವಿಟ್ಟಾರ್ ಆದಾನಳಿವೊನ್ಗೆ ಮಹಾಪಾತಕಮ್ (ಮ್ಯಆಂ. ೦೯೩೭, ೦೬-೦೫ ; ಸು. 450) ; ಅನುಜೊ ಇನ್ದು ಕನಲ್ಗೊಳಿ ನನ್ದಿಯಾಲರಾ ವಿಟ್ಟದು ಪಡೆಪ್ಮೈಲಾಮು ಅಮುಸಪಾಲುಂ (ಎಕ. VI, ಚಿಕ್ಕಮ. ೫೦-೩ : ಸು. 480 ?) ; ಶಿವಮಾರಂ ಪ್ರಿಥುವೀರಾಜ್ಯಂಕೆಯ ವೆಡಿರುನ್ ಸ್ವರ್ಗಗತ್ತಿಱಿಯ ಮರಿಯಾದಿ ಕೊಟ್ಟಾನ್ ಸೇಬೆಗೆ ವಿಟ್ಟಾರ್ (ಎಕ. IV (R), ಹೆಗ್ಗಡ. ೧೫೭-೪ ; ಸು.700).

**ಬಿಟ್ಟ ಬಾಯಿ, ಬಿಟ್ಟ ವಾಯ್** = (ಆಶ್ಚರ್ಯ-ಭಯ ಮುಂತಾದಂವುಗಳಿಂದ) ತೆರೆದ ಬಾಯಿ : ಭಗವಂತನ ಮಹಿಮೆಯನ್ನು ದಾಸರು ಹೃದಯಂಗಮವಾಗಿ ವರ್ಣಿಸುತ್ತಲಿದ್ದಾಗ ನೆಟ್ಟ ಕಣ್ಣು ಬಿಟ್ಟ ಬಾಯಿಯೂ ಆಗಿ ಜನರು ಕೇಳುತ್ತಲಿದ್ದರು (ರಾಜಾಮ. ೨೫೨); ಬಿಟ್ಟ ವಾಯ್ ಬಿಟ್ಟಂತಿರೆ ಬಂದಾಕೆ ಪೊಕ್ಕಳಿರದರಮನೆಯಂ (ಶಾಂತಿಪು. ೪-೧೧೩). **ಬಿಟ್ಟಾಡಿಕೊಳು** = ಮನಸ್ವಿಯಾಗಿ ನಿಂದಿಸು ; ಮನ ಬಂದಂತೆ ತೆಗಳು : ಬಿಟ್ಟಾಡಿಕೊಳುವ ವೈರಿಯ ಮನೆ ಮುಂದೆ ಬಿಚ್ಚುಗತ್ತ್ಯಾಗಿ ಪೊಳೆದೇನು (ಹಮಶ. ೨೨-೧೨). **ಬಿಟ್ಟಕ್ಕು** = ಮೇಲೆ ನುಗ್ಗುವಂತೆ ಮಾಡು ; ಚೋದಿಸು : ವಿರೋಧಿಸಾಧನಘಟಾಳಿಯನೋಡಿಸಲಾಗಳಾದುರ್ ಬಿಟ್ಟಿಕ್ಕಿದರುಗ್ರಸಿಂಧುರಘಟಾವಳಿಯಂ ಮುಳಿಸಿಂ ನಿಷಾದಿಗಳ್ (ಶಂಪಭಾ. ೧೦-೯೨) ; ಅಣೆದಿಭಮಂ ಕೀಱಿ ಬಿಟ್ಟಿಕ್ಕಿ (ಶಾಂತಿಪು. ೫-೫೮). **ಬಿಟ್ಟು ಕೊಡು** = ೧. ತೊರೆ ; ತ್ಯಜಿಸು ; ಬಿಟ್ಟುಬಿಡು : ಅದನ್ನು ಬೇಗ ಬಿಟ್ಟುಕೊಟ್ಟು . . . ಹೊಸಸಮಾಜದೊಂದಿಗೆ, ಬಾಳಿನೊಂದಿಗೆ ಬೆರೆಯಬೇಕು (ಹೊಸಕ್ಷಿ. ೨೭೪) ; ಬ್ರಿಟಿಶ್

ಸರಕಾರವು ದಯಪಾಲಿಸಿದ 'ಸರ್' ಪದವಿಯನ್ನು ಠಾಕೂರರು ಬಿಟ್ಟು ಕೊಟ್ಟರು (ರವೀಂಸಾ. ೬೬). ೨. ನೀಡು ; ಕೊಡು ; ದಾನಮಾಡು : ಅಯ್ಯಪಮಂಗಳದ ಪೂರ್ವ್ವಮರ್ಯ್ಯಾದೆಯ ಬಳನಂ ಬಿಟ್ಟು ಕೊಟ್ಟಂ (ಎಕ. XI, ಹಿಂದೂ. ೧-೨೬ ; 975) ; ಕೂಚಿಭಟ್ಟಾರರ ಕಾಲನ್ ಕಟ್ಟಿ ಧಾರೆಯನೆಱೆದು ಬಿಟ್ಟು ಕೊಟ್ಟರ್ (ಎಕ. IV, ಚಾಮರಾ. ೦೮-೦೭ ; ಸು. 1000 ?) ; ಶ್ರೀಸ್ವಯಂಭುಸೋಮೇಶ್ವರದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಬಿಟ್ಟು ಕೊಟ್ಟರ್ (ಸೌಇಇ. XX, ೯೯-೬೨ ; 1076 ?) ; ರಾಜ್ಯವನ್ನು ಈಗಾಗಲೇ ಬಿಟ್ಟುಕೊಟ್ಟಿದ್ದೇನೆ (ವಕಥಾ. ೪). ೩. ಹೋಗಲು ಅಪ್ಪಣೆ ಕೊಡು ; ಬೀಳ್ಕೊಡು : ನನಗೆ ತಪಸ್ಸಿನ ಮೇಲೆ ಮನಸ್ಸಾಗಿದೆ . . . ನನ್ನನ್ನು ಬಿಟ್ಟುಕೊಡಿ (ವಕಥಾ. ೩೬೯). ೪. ಓಡಿಸು; ಹರಿಯ ಬಿಡು: ಮನಸ್ಸನ್ನು ಲಂಗು ಲಗಾಮಿಲ್ಲದ ಕುದುರೆಯಂತೆ ಬಿಟ್ಟುಕೊಟ್ಟು . . ಆಡಂಬರದ ಆಟಗಳನ್ನು ಕಟ್ಟುತ್ತೇವೆ (ವಾರಾಕ. ೦೦೭). ೫. ಉಳಿಸು ; ಇರಗೊಡು : ಈ ರಾಜರು ಬಿಟ್ಟುಕೊಟ್ಟಿರುವುದರಿಂದ ನಾನು ಬದುಕಿದ್ದೇನೆಯೋ? (ವಕಥಾ. ೯೪). ೬. ಮನಸ್ಸಿನಲ್ಲಿರುವ ವಿಷಯ ವನ್ನು ಬಹಿರಂಗಗೊಳಿಸು,— ರಟ್ಟುಮಾಡು: ನಾನೆಲ್ಲ ಗುಟ್ಟನ್ನು ಅವನಿಗೆ ಬಿಟ್ಟು ಕೊಟ್ಟೆ (ಅಲಹೂ. ೫೯). ೭. ಪಕ್ಷದಿಂದ ಹೊರತುಮಾಡು; ಪಕ್ಷ ವಹಿಸದಿರು : ಜೀವದ ಗೆಳೆಯನಲ್ಲವೇ—ಒಬ್ಬರಿಗೊಬ್ಬರು ಬಿಟ್ಟು ಕೊಡುವವರಲ್ಲ (ಮೂರುದಾ. ೦೯೦). **ಬಿಟ್ಟು ಬಿಡು** = ೧. ತೊರೆ; ತ್ಯಜಿಸು : ಅವನು ಅದನ್ನು ಅಡವಿಗೆ ಒಯ್ದು ಬಿಟ್ಟು ಬಿಡಬೇಕೆಂದು ನಿಶ್ಚಯಿಸಿ ಆದರ ಸರ್ಪಳೀ ಬಿಚ್ಚಿಹೋದನು (ಮುಂಬಯು. ೨-೨೦). ೨. ಗಣನೆಗೆ ತೆಗೆದುಕೊಳ್ಳದಿರು; ಕಡೆಗಣಿಸು: ಆ ವಿಷಯವನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಬಿಟ್ಟುಬಿಡು (ರೂಢಿ). **ಬಿಟ್ಟು ಹೋಗು** = ೧. (ಒಂದು ಸ್ಥಳದಿಂದ) ನಿರ್ಗಮಿಸು ; ಹೊರಡು : ನಿನಗೆ ಇಲ್ಲಿರಲು ಇಷ್ಟ ವಿಲ್ಲದಿದ್ದರೆ ಬಿಟ್ಟು ಹೋಗಬಹುದು (ರೂಢಿ). ೨. ಇಲ್ಲವಾಗು : ಸ್ವರದ ಮುಂದೆ ಸ್ವರವು ಬಂದರೆ ಸಾಮಾನ್ಯವಾಗಿ ಹಿಂದಿನ ಸ್ವರವು ಬಿಟ್ಟು ಹೋಗುತ್ತದೆ (ಪಠ್ಯವು. ೦೭). **ಬಿಡಬೀಸು** = ಕಡೆಗಣಿಸು ; ತಿರಸ್ಕರಿಸು ; ಬಿಟ್ಟು ಬಿಡು : ಎನ್ನ ಬಿಡಬೀಸದಿರು ಕಂಡಾ ಲಿಂಗವೇ (ಶಿವಗೀ. ೩೬-೦೬೮); ಬಿಡಬೀಸದಿರು . . . ಕಡೆಗೆ ಸದ್ಗುರುವೆ (ದೀಕ್ಷಾಬೋ. ೪. ೦೯-೨೯). ☞ ಈ ಧಾತುವು ಹಲವು ಶಬ್ದಗಳ ಜೊತೆಗೂಡಿ ವಿಶಿಷ್ಟ ವಾದ ಧಾತುವಾಗಿ ವಿಧವಿಧವಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾ. ಕಾಯಿಬಿಡು, ಕೈಬಿಡು, ಮನೆಬಿಡು, ಹಾದಿಬಿಡು, ಹೂ ಬಿಡು ಇತ್ಯಾದಿ. [ಬೇ.॥ ತಮಿ. ಮಲ. ವಿಟು; ತುಳು. ಬುಡು; ತೆಲು. ವಿಡು; ಗೊಂಡಿ. ಬಿರ್ಸಾನ; ಬ್ರಾಹೂಈ. ಬಿಟ್ಟಿಂಗ್]

**ಬಿಡು₂** 'ಬಿಡುವು' ನೋ.

**ಬಿಡು₃** 'ಬಿಡಿ' ನೋ.

**ಬಿಡು₄** (ಅ). 'ಛೆ' ಎಂಬರ್ಥದಲ್ಲಿ ನಿಪಾತಾವ್ಯಯದಂತೆ ಬಳಸುವ ಒಂದು ಶಬ್ದ: ಕಲಿತನದಿಂದಂ ಲೋಗರ್ ಪುಲಿಯಂ ಪಿಡಿದೊಡಮದೇಂ ಬಿಡೆಂಬರ್ (ರಘುವ್ಯ. ೦-೦೭೩); ಬಿಡು ಮರೀಚಿಯ ತೊಱೆಗೆ ಹಱು ಗೋಲಿಡುವರಂತೇ (ಕುವ್ಯಾದ್ರೋ. ೪-೩೮). [ < ಬಿಡು₁]

**ಬಿಡುಕುಳ** (ನಾ). ಪ್ರತ್ಯೇಕವಾಗಿರಿಸಿದ ಜಾತಿ ; ಬೇರೆಯಾಗಿರಿಸಿದ ಕುಲ : ಹರಿಜನರ ಚೋಮ, ಪಾತಿರ ಅಪ್ಪು ಮತ್ತು ಮೋದರ ಮುದ್ದ ಮೊದಲಾದವರಂತೆ ತಾನೂ ಬಿಡುಕುಳದ ಮಗನಂತಿದ್ದಾನೆ ! (ಮಸಕೊ. ೧೧). [ಬಿಡು₂ ( < ಬಿಡುವು) + ಕುಳ್₅ (= ಕುಲ)]

**ಬಿಡುಗಂಡಿ** (ನಾ). ಕೆರೆ, ಕಟ್ಟೆ ಮುಂತಾದುವುಗಳಲ್ಲಿ ನೀರು ಹೊರ ಹೋಗುವುದಕ್ಕಾಗಿ ಮಾಡಿರುವ ಕಂಡಿ ; ತೂಬು : ಸಸಿನವಹ ಕೊತ್ತಳದ ಸಾಲಿನ ನುಸುಳುಗಂಡಿಯ ಮುರುಹುಗಳ ಮುಂದೆಸೆವ ಕಲು ಮುಳುವೇಲಿ ಬಿಡುಗಂಡಿಗಳನೀಕ್ಷಿಸಿದ (ಪ್ರಭುರಾಕಾ. ೨-೦೩); ನಾಲೆಯಲ್ಲಿ ಬರುವ ಹೆಚ್ಚು ನೀರನ್ನು ಹೊರಕ್ಕೆ ಸಾಗಿಸುವ ಬಿಡುಗಂಡಿಗಳು ಎರಡು ವಿಧವಾಗಿವೆ (ಶಿಲ್ಪಶಾ. ೩೮೦). [ಬಿಡು₁ + ಕಂಡಿ₁]

**ಬಿಡುಗಟ್ಟು** (ನಾ). (ಕರಾ) ಸಾಲದ ಹಣದ ಮೇಲೆ ಸಮಯಕ್ಕೆ ಸರಿ ಯಾಗಿ ತೀರಿಸದೆ ಇದ್ದಾಗ ಹೆಚ್ಚಾಗಿ ಪಡೆಯುವ ಬಡ್ಡಿ; ದುಬಾರಿ ಬಡ್ಡಿ: (ಕಸಂಗ್ರಾ. ೦೭೮). [ಬಿಡು₂ ( < ಬಿಡುವು) + ಕಟ್ಟು₂]

**ಬಿಡುಗಡೆ** (ನಾ). ೧. ಬಂಧನದಿಂದ ಪಾರಾಗುವಿಕೆ ; ವಿಮೋಚನೆ : ಆ ಉಭಯದ ಬಿಡುಗಡೆಯನಱಿದು ಅಡಗಿಯಲ್ಲದೆ ಸ್ವಯಂಭುವಲ್ಲ (ಪೋಳವಾ. ೨-೩) ; ಕರುಣೆಯ ಸ್ಪರ್ಶವಿಲ್ಲದ ಕಟ್ಟಳೆಯ ಪ್ರಭುತ್ವಕ್ಕೆ ನಾನು ಒಳಗಾದರೆ ಕರ್ಮದಿಂದ ನಮಗೆ ಬಿಡುಗಡೆ ಎಂದೂ ಸಾಧ್ಯವಿಲ್ಲ (ತತ್ವಪ್ರಾ. ೩೩೭). ೨. ಮೋಕ್ಷ ; ಕೈವಲ್ಯ ; ಮುಕ್ತಿ : ಕಡೆಯಿಲ್ಲ ಮೊದಲಿಲ್ಲ ತಡೆ ಬಿಡುಗಡೆಯಿಲ್ಲ (ಪರಬೋ. ೪-೬-೬) ; ಮೋಕ್ಷವೆಂದರೆ ಬಿಡುಗಡೆಗೆ ಪೆಸರು (ಶರಹ. ೬೨-೯). ೩. ಸ್ವಾತಂತ್ರ್ಯ; ಸ್ವತಂತ್ರತೆ : ಮುಂದೆಯದು ತೋರುವುದು ಬಿಡುಗಡೆಯ ಹಬ್ಬದಲಿ ! (ಪಾಂಚಜ. ೬-೪). ೪. ಅಂತ್ಯ ; ಕೊನೆ ; ಮುಕ್ತಾಯ : ನಡುಹೊಳೆಯ ಹಱಿಗೋಲ ಮೂಲೆಯ ಕಡಿದಿರಾದರೆ ನಮ್ಮ ಪುಣ್ಯದ ಬಿಡುಗಡೆಯ ಕಾಲವು (ಕುವ್ಯಾಭೀ. ೯-೩). [ಬಿಡು₁ + ಕಡೆ₃]

**ಬಿಡುಗಣ್**, ಬಿಡುಗಣ್ಣು (ನಾ). ೧. (ಅಗಲವಾಗಿ) ತೆರೆದ ಕಣ್ಣು ; ಬಿಟ್ಟ ಕಣ್ಣು: ಬಿಡುಗಣ್ ಬಿಡುವಾಯ್ . . . ಅಱುಗೆಱೆಯೆಂಬಿವು ಪಡೆ ಯವು ಬಿಂದುವನುದಂತವೃತ್ತಿಯನಾಳ್ದಂ (ಶಬ್ದುದ. ೦೭೦) ; ಬಾಯ್ಗಳಂ ಬಿಡುವ ಬಿಡುಗಂಗಳ ಸುಜಾಣೆಯುರ್ ಸಲೆ ದಶಾವಸ್ಥೆಯೊಳ್ ಕಣ್ಗೆಸೆದರು (ಶಿಬಿಪು. ೦೯-೩೦). ೨. (ಆಲಂ) ದಿವ್ಯದೃಷ್ಟಿ: ಗಿಡಿದ ಕತ್ತಲೆಯ ಗುಹೆ ಯೊಳಡಗಿರ್ದರಾ ಅಸುರರ್ ಕೇಳ್ದರಾ ಪಾಟಮಂ ಪಲ್ಮೊರೆದು, ಕಣ್ಣರಿಯೆ ಕಂಡರಾ ಬಿಡುಗಣ್ಣ ಬೆಳಕನ್ (ಹೊಂಗಳು. ೩೭-೦೦). **ಬಿಡುಗಣ್ಣು** : ೧. ಮೊಗದ ಹೊಗರವಗಡಿಸೆ ಸುಯಿಲಲಿ ಹೊಗೆಯ ಹೊದೆಜಂಕುರಿಸೆ ಬಿಡು ಗಣ್ಣುಗಳೊಳೊಕ್ಕುದು ಕೆಂಪು ಸೊಂಪಡಗಿತು ಮುಖಸ್ನೇಹ (ಕುವ್ಯಾಭೀ. ೬-೨೦); ಶಾಂತೆಯೂ . . . ಕುಳಿತುಕೊಂಡು ಬಿಡುಗಣ್ಣುಗಳಿಂದ ಮನೆಯ ನಾಲ್ಕು ಮೂಲೆಗಳನ್ನೂ ನೋಡುತ್ತಿದ್ದಳು (ಶಿರಾಕ. ೯೭). ೩. ರೆಪ್ಪೆ ಹೊಡೆಯದಿರುವ ಕಣ್ಣು ; ಅನಿಮಿಷನೇತ್ರ : ದೇವತೆಗಳು . . . ಬೆವರಿಲ್ಲದ ಮೈ, ಬಿಡುಗಣ್ಣು, ಬಾಡದ ಮಾಲಿಕೆ, ಭೂಮಿಯನ್ನು ಮುಟ್ಟ ದಿರುವುದು, ಈ ದೇವತೆಗಳ ವಿಶೇಷಚಿಹ್ನೆಗಳನ್ನು ತೋರಿದರು (ವಕಥಾ. ೦೩೦). 'ಬಿಡುಗಣ್ಣ' ಪರಾ. [ಬಿಡು₁ + ಕಣ್ ]

**ಬಿಡುಗಣೆ** (ನಾ). ನಡುವೆ ಬಿಡುವಿಲ್ಲದಂತೆ ಪ್ರಯೋಗಿಸುವ ಬಾಣ ; ಏಕಪ್ರಕಾರವಾಗಿ ತೊಡುವ ಕಣೆ : ವಡಬಗೌತಣವಿಕ್ಕುವರೆ ಕಡ ಲೊಡೆಯಗಹುದು ಸಮರ್ಥನಲ್ಲಾ ಬಿಡುಗಣೆಯ ಬೀಱುವರೆ ಕಟಕಾ ಚಾರ್ಯನು (ಕುವ್ಯಾದ್ರೋ. ೬-೦೯). [ಬಿಡು₂ ( < ಬಿಡುವು) + ಕಣೆ₁]

**ಬಿಡುಗಣ್ಣ** (ನಾ). ೧. ತೆರೆದ ಕಣ್ಣುಳ್ಳವನು ; ಅಗಲವಾಗಿ ಕಣ್ಣು ಬಿಟ್ಟಿರುವವನು : ಪೊಂಜೊಡರು ತೂಗಿದೊಲು ನೆಲ ಬಾನ ತಳ್ಳೆಯಲಿ ನೇಸರನು ಬಿಡುಗಣ್ಣನಾಗುತ್ತಿರಲು . . . ಸ್ವರ್ಣಮಂದಿರದ ಛಾಯೆ ಯೊಲು ಬೆಟ್ಟ ಕಾನು ಗಂಭೀರಗುಂಭದಲಿ ಮೈದುಂಬಿ ನಿಂತಿಹವು (ಖಾವಜೀ. ೦-೬). ೨. ರೆಪ್ಪೆ ಬಡಿಯದಿರುವವನು ; ಬಿಟ್ಟ ಕಣ್ಣುಳ್ಳ ವನು ; ದೇವತೆ : "ಗಾಳಿವಟ್ಟೆಗರ್ . . . ಬಿಡುಗಣ್ಣರೆನೆ ನಿರ್ಜರರ್ಗ ಮರ್ದ ನಾಮಮುಕ್ಕುಂ" (ಶಬ್ದಕ್ಕ. ೦೦೦) ; ಬೇಡುವರನು ಮನ್ನಿಪ ಬಿಡು ಗಣ್ಣರ ನಾಡೆಱೆಯನ ಮಗನಂತೆ ಗಾಡಿವಡೆದ ರೂಪಿನ ಗರುವನ ನೀ ನೋಡು ಕಳಿಂಗನನಬಲೆ (ಜೀವಂಶಾ. ೦೦-೬೪).

**ಬಿಡುಗಣ್ಣರೆಱೆಯ** = ದೇವತೆಗಳ ಒಡೆಯ ; ಶಿವ : ಬಿಡುಗಣ್ಣ

ರೆಜಿಸಿಯುಂ ವಿಶ್ವನಾಥಂ ಪ್ರಸನ್ನನಾದಂ ಭಕ್ತರುಘೆಯುಘೆಯೆನೆ (ಶದ್ಮರಾ. ೭–೩೫). [ಬಿಡುಗಣ್ + –ಅ$_7$]

**ಬಿಡುಗಣ್ಣು** 'ಬಿಡುಗಣ್' ನೋ.

**ಬಿಡುಗಯ್**, ಬಿಡುಗೈ (ನಾ). ತೆರೆದ ಕೈ ; ಮುಕ್ತಹಸ್ತ : ಮಹತ್ಕಾರ್ಯಕ್ಕೆ ಉಜ್ಜುಗಿಸಲೆದೆಗೊಳ್ಳುವ ಸಾಹಸಾತ್ಮನು ಇಂತಹ ಕೋಟಿ ಸಾಧನಗಳನ್ನು ಬಿಡುಗಯ್ಯಿಂದ ಸೂಸಿ ವ್ಯವಸಾಯ ಮಾಡಬೇಕು (ಮಂತ್ರಶ. ೨೬–೦೦). **ಬಿಡುಗೈ :** ಸಾಹಿತ್ಯ ಸಂಗೀತಗಳಿಗೂ ಬೇಕಾದಷ್ಟು ಬಿಡುಗೈ ಉತ್ತೇಜನ ದೊರೆಯುತ್ತಿತ್ತು (ರಂಗನಾ. ೨೦೭).
[ ಬಿಡು$_1$ + ಕಯ್$_2$ (<ಕೆಯ್$_2$) ]

**ಬಿಡುಗಾವಲಿ** (ನಾ). ೧. (ಗದ್ದೆ, ತೋಟ ಮೊದಲಾದುವುಗಳಿಗೆ) ನೀರು ಹರಿಯಲು ಮಾಡಿರುವ ತೋಡು ; ಕಾಲುವೆ : ಗದ್ದೆಯ ನೆಲ್ಲಿಗೆ ಕೆರೆಯ ನೀರು . . . ಬೇಕಾದಾಗ ಬಿಡುಗಾವಲಿಯಿಂದ ಬಿಡುವದುಂಟು. ಬಿಡುಗಾವಲಿನೀರಿನ ಭೂಮಿಯಾದರೆ ಪ್ರತಿವರ್ಷಕ್ಕೆ ಎರಡು ಸಾರೆ ನೆಲ್ಲು ಬೆಳೆಯಾಗುವದು (ಕೃಷಿಕ್ರ. ೫೪).
[ಬಿಡು$_1$ + ಕಾವಲಿ$_3$ (<ಕಾಲ್ವಾಯ್)]

**ಬಿಡುಗಿವಿ** (ನಾ). ಆಭರಣವಿಲ್ಲದೆ ಬರಿದಾಗಿರುವ ಕಿವಿ ; ಬರಿಗಿವಿ : ಬಿಡುಗಿವಿ ಮಿಂಚುವೆತ್ತ ಸುಲಿಪಲ್ ಕುಣಿದಾಡುವ ಕುಂತಳಂ ನೊಸಲ್ಪಿಡಿದ ಬೆಮರ್ (ಸೂಕ್ತಿಸು. ೩–೨೦೦). [ಬಿಡು$_2$ (<ಬಿಡುವು) + ಕಿವಿ$_3$]

**ಬಿಡುಗು** (ನಾ). ಎರಚುವಿಕೆ ; ಇರಿಸಿಲು ; ಎರಚಲು : ಮಿಂಚಿನ ಕಡುಗು ಕತ್ತಿಯು ಬೆಡಗು ಮಳೆನೀರ್ ಕರಿಕರಾಯತದೀ ಬಿಡುಗು (ಕೃಕರ್ಣಾ. ೨–೬೮). [ಬಿಡು$_1$ + ?]

**ಬಿಡುಗುರುಳು** (ನಾ). ಬಿಚ್ಚಿರುವ ಕೂದಲು ; ಕೆದರಿದ ಕೇಶ : ತುರುಬು ಜಡೆಯೊಳು ಬಿಡುಗುರುಳು ಇವೆಲ್ಲವೂ ರುದ್ರನ ಅಡಿವೆಚ್ಚೆಯ ಕುರುಹು (ಸರ್ವವ. ೦೨೫–೬೩೭); ಮೊಗದೊಳ್ ಮುಸುರ್ವ ಬಿಡುಗುರುಳ ಬೆನ್ನೊಳ್ ನಟ್ಟ ಸರಳ ತಬ್ಬಿಬ್ಬೆಸೆವ ನಡೆನುಡಿಗಳ . . . ಸರ್ವದಿಕ್ಪಾಲರೋಟಂ ಗಾಣುತಜನಾಗ್ರಹಂದಾಳ್ದನು (ಕಂಪು. ೪೯–೨೪).
[ಬಿಡು$_1$ + ಕುರುಳು$_1$ (<ಕುರುಳ್$_1$)]

**ಬಿಡುಗುಜೀತನ** (ನಾ). ಮಂದೆಯನ್ನು ಬಿಟ್ಟು ಒಂಟಿಯಾಗಿ ಹೋಗುವ ಕುರಿಯಂ ನಡವಳಿಕೆ : ಹಾ ನುಡಿಯದಿರು ನಿಲು ಪಿತಾ ಮಹನೇನ ಬೆಸಸಿದುದಕೆ ಹಸಾದವು ನೀನು ನಡೆ ಪಾಳೆಯಕೆ ಬಿಡುಗುಜೀತನವ ಮಾಣಿಯುಲ ಮೌನಮುದ್ರೆಯ ಹಿಡಿ (ಕುಮಾ.ಭೀ. ೦೦–೩೭). [ಬಿಡು$_1$ + ಕುಜೀತನ]

**ಬಿಡುಗೂದಲು** (ನಾ). = ಬಿಡುಗುರುಳು : ಆಕೆಯ . . . ಬಿಡುಗೂದಲನ್ನು ಚಿತ್ರಿಸಿದ ಬಗೆ, ಅವುಗಳನ್ನು ಹೊಂಬಣ್ಣದಿಂದ ಮಿನುಗಿಸಿದ ಬಗೆ ಈತನ ಕಲಾನೈಪುಣ್ಯವನ್ನು ಎತ್ತಿ ತೋರಿಸುತ್ತವೆ (ಅಭೂಶ. ೨೯೩).
[ಬಿಡು$_1$ + ಕೂದಲು (<ಕೂಂದಲ್)]

**ಬಿಡುಗೆ** (ನಾ). ೧. ತ್ಯಜಿಸುವುದು ; ದೂರ ಮಾಡುವುದು : "ತ್ಯಜನಂ . . . ತ್ಯಕ್ತಿಃ, ಈ ೫ ಬಿಡುಗೆ" (ಕಾಶಕ್ಕ. ೭೮). ೨. ಬಿಡುಗಡೆ ; ವಿಸರ್ಜನೆ : "ಮುಚ–ಪ್ರಮೋಚನೇ, ಬಿಡುಗೆಯೊಳ್" (ಕಾಶಕ್ಕ. ೨೭೯); ಹಿಪ್ಪಲಿ . . . ಏಲಕ್ಕಿ, ಸೈಂಧವ ಇವುಗಳ ಚೂರ್ಣಿಸಿ ಜೇನುತುಪ್ಪ, ಸಕ್ಕರೆವೆರಸಿ ನಾಭಿಯಿಂದ ಕೆಳಕ್ಕೆ ಲೇಪಂಗೈಯಲು ಜಲ, ಮಲ ಬಿಡುಗೆ (ವೈದ್ಯಸಾ. I, ೪೮೦). ೩. ನಿವಾರಣೆ : "ಪರಿಹಾರಃ–ಬಿಡುಗೆ" (ಕಾಶಕ್ಕ. ೦೩೭). ೪. (ಬರಬೇಕಾದ ಹಣದಲ್ಲಿ ತೋರಿಸುವ) ರಿಯಾಯಿತಿ : ಸೋಡಿ: ಎಷ್ಟನ ವ್ಯಾಪಾರದಲ್ಲಿ ಎಷ್ಟು ಬಿಡುಗೆ ಬಿಟ್ಟುಕೊಟ್ಟರು? (ದೂಡಿ). ೫. ನಿರೂಪ ; ಅಪ್ಪಣೆ : 'ಬಿಡುಗೆಗೊಡು' ಪರಾ.೬. ಅವಕಾಶ ; ಆಸ್ಪದ : 'ಬಿಡುಗೆವಡು' ಪರಾ. [ಬಿಡು$_1$ + –ಗೆ]

**ಬಿಡುಗೆಗುಡು** 'ಬಿಡುಗೆಗೊಡು' ನೋ.

**ಬಿಡುಗೆಗೊಡು**, ಬಿಡುಗೆಗುಡು (ಕ್ರಿ). ೧. ಹೋಗಲು ಅನುಮತಿ ಕೊಡು, –ಅವಕಾಶಕೊಡು ; ಬೀಳ್ಕೊಡು : ಕೆಡುವ ದೇಹವನಿನ್ನು ತಪದಲ್ಲಿ ವೆಚ್ಚಿಸಿ ಕೆಡದ ಸಿದ್ಧಿಯ ಮಾಳ್ಪನದಕೆ ಬಿಡುಗೆಗೊಡೆಂದು ಸಾಷ್ಟಾಂಗವೆರಗಿದನು ಪೊಡವೀಶನೆದೆ ದಿಗಿಲೆನಲು (ಭರತ. ೩೦–೯೩); ಸರ್ವರಿಗೆ ಕೈವೀಸಿ ಬಿಡುಗೆಗೊಟ್ಟರವುನೆಯೊಳಗೆ ತಾ ಹೊಕ್ಕನಾ ಕಡು ಗಾಡಿಕಾಜಿನು (ಭರತ. ೬೨–೯೯). **ಬಿಡುಗೆಗುಡು :** ೨. ಬಿಡುಗಡೆಯನ್ನು ಮಾಡು ; ವಿಮೋಚನೆಗೊಳಿಸು ; ಬಿಟ್ಟು ಬಿಡು : (ಕಟ್ಟುವಟ್ಟವನಿಗೆ ಬಿಡುಗೆಗುಡುವವನು) (ಚಟ್ಟಿಶ. ೦೦೩–೭). [ಬಿಡುಗೆ + ಕೊಡು$_1$]

**ಬಿಡುಗೆಗೊಳ್** (ಕ್ರಿ). ಹೊರಡಲು ನಿರೂಪ ತೆಗೆದುಕೊಳ್ಳು ; ಬೀಳ್ಕೊಳ್ಳು : ಬಿಡುಗೆಗೊಂಡರು ವೃದ್ಧವ್ರತಿಕರು ಭರತೇಶನಡಿಗಳಿಗೆಜಿ ಭಕ್ತಿಯೊಳು (ಭರತ. ೦೬–೦೨೪). [ಬಿಡುಗೆ + ಕೊಳ್$_1$]

**ಬಿಡುಗೆಗೊಳಿಸು** (ಕ್ರಿ). ಬಂಧನದಿಂದ ಹೊರಹಾಕು ; ಸೆರೆಯಿಂದ ಹೊರಗೆ ಕಳಿಸು : ಆ ವೃದ್ಧ ವೆಂಕಟಾದ್ರಿನಾಯಕನನ್ನು ಕಾರಾಗೃಹದಿಂದ ಬಿಡುಗೆಗೊಳಿಸುವ ಸನ್ನಾಹದಲ್ಲಿ ಈ ದುರ್ಮೋಹನದ ಚಿಹ್ನೆಗಳನ್ನೆಲ್ಲ ಮರೆಯುವೆನು (ಸುಗುಗಂ. ೦೦೭–೦೪). [ಬಿಡುಗೆಗೊಳ್ + –ಇಸು$_3$]

**ಬಿಡುಗೆಚ್ಚಲು** (ನಾ). ಹಾಲಿನಿಂದ ತುಂಬಿರುವ ಕೆಚ್ಚಲು ; ತೆರೆದ ಕೆಚ್ಚಲು : ಈ ಉಷೆ ನರ್ತಕಿ ಚಿತ್ರಾಂಬರಧಾರಿ ಬಿಡುಗೆಚ್ಚಲ ಧೇನು ವಿನೊಲು ಎದೆ ತೋರಿ . . . ಬರುವಳು ಲೋಕಕೆ ಜ್ಯೋತಿಯನೆರೆದು ! (ಸೌಂದಶ. ೯೭) [ಬಿಡು$_1$ + ಕೆಚ್ಚಲು (<ಕೆಚ್ಚಲ್)]

**ಬಿಡುಗೆಲಸ** (ನಾ). ಬಿಡಿಯಾದ ಕೆಲಸ ; ಪ್ರತ್ಯೇಕವಾದ ಕೆಲಸ : ತೊಡರಿಸಿ ಪೊಸದಳಿರ್ದೋರಂಬೆದೋರಣಗಳ ನಡೆಮುಡಿಗಳನಳವಡಿಸಿ ಬಿಡುಗೆಲಸದ ಪೆಣ್ಗಳೆಡೆಯಾಡದಿರಿಮಿನ್ನಡೆಯಿಮೆಂದವರನಟ್ಟುವುದು (ಚಕಬಿ. ೬–೩೫ ಸಾಂಗತ್ಯ). [ಬಿಡು$_3$ (<ಬಿಡಿ) + ಕೆಲಸ]

**ಬಿಡುಗೆವಡು** (ಕ್ರಿ). ಅವಕಾಶ ಹೊಂದು ; ಆಸ್ಪದವನ್ನು ಪಡೆ : ಅರಸಿಯರೆಲ್ಲರು ಮುಂಡಿಬಾಗಿ ಚಿಂತಿಸುತಿರಲು ಎಡೆನರೆಹಾಯ್ದು ಪಾಟಿಯ ರಾಣಿಯೊರ್ವಳು ಬಿಡುಗೆವಟ್ಟಂತು ನುಡಿದಳು (ಭರತ. ೫೯–೭೨).
[ಬಿಡುಗೆ + ಪಡು$_1$]

**ಬಿಡುಗೇಶ** (ನಾ). = ಬಿಡುಗುರುಳು : ಹಾಸಿ ಹರಹಿದ ತೋಳುಗಳ . . . ಬಿಡುಗೇಶದನುಜನ ಕಂಡು ದೊಪ್ಪನೆ ಕೆಡೆವನವನಿಯಲಿ (ಕೊರರಾ. ೬–೪೭–೩೭); ಸಿಖಿ ಗರಿಯ ಗೆದರ್ದಂತೆ ಬಿಡುಗೇಶದೋನೆ ಮನೆಯೊಕ್ಕು ಬರೆ ಕಾಣುತ್ತಲಿ (ನವಮೋ. ೨೬–೩೨). [ಬಿಡು$_1$ + ಕೇಶ]

**ಬಿಡುಗೈ** 'ಬಿಡುಗಯ್' ನೋ.

**ಬಿಡುಗೊಡೆ** (ನಾ). ದಾನವಾಗಿ ಬಿಟ್ಟು ಕೊಟ್ಟುದು ; ಕೊಡುಗೆ : ಪಳಥ ಬಿಡುಗೊಡೆಯಾಗಿ ಬಿಟ್ಟ ಗ ೨೧೪ ಪ ೬ (ಎಕ. VI, ಕಡೂರು. ೪೯–೩೩ ; 1291). [ಬಿಡು$_1$ + ಕೊಡೆ$_3$]

**ಬಿಡುಗೊಳ್** (ಕ್ರಿ). ಬಿಡುಗಡೆ ಹೊಂದು ; ವಿಮೋಚನೆಗೊಳ್ಳು : ಚೆನ್ನೆಯ ಕಂಠಾಲಿಂಗನದಿಂ ನೆಱೆ ಬಿಡುಗೊಂಡು ಪೊರಳ್ದ ತಾರಾವಳಿಯಿಂದೇಂ ನೇಹದೆ ಸಂತೈಕುಂ ತನ್ನಮೊಲೆರ್ವೆನ್ನ ತನುವನೊಳ್ಗಳದಿಯ ವೋಲ್ (ಚಿತ್ರಗೋ. ೫೪–೯೦). [ಬಿಡು$_2$ (<ಬಿಡುವು) + ಕೊಳ್$_1$]

**ಬಿಡುಜಡೆ** (ನಾ). ತುರುಬು ಕಟ್ಟದೆ ಇಳಿಬಿಟ್ಟಿರುವ ಹೆರಳು ; ಜಡೆ : ಬಿಡುಜಡೆಯ ಬಿದುಮೊಗದ ಬಿರಿದೆಸಳ್ಗಣ್ಣ ಬಿಲ್ಪುಬ್ಬಿನ . . . ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಮಾಶ್ವ. ೪೯–೨೦).
[ಬಿಡು$_1$ + ಜಡೆ$_1$]

**ಬಿಡುತರ್** (ಕ್ರಿ). ೧. ವಿಮೋಚನೆಯಾಗು ; ಬಿಡುಗಡೆ ಹೊಂದು : ನವನಿರ್ಯತ್ಸಹಕಾರವಾರಿ ಮದವಂ ತತ್ಪಲ್ಲವಂ ಕರ್ಣಪಲ್ಲವಮಂ . . .

ಎಯ್ದೆ ಪೋಲೆ ಬಿಡುತಂದುಗುದ್ವಿಪಂ ಬಂದು ತಾಂಗುವುದೆಂಬಂದೆಳಮಾವಿನೊಳ್ ದ್ವಿಪಮೆಗೆತ್ತೇಂ ಸೊರ್ಕರ್ಸ ಸೈತಿರ್ಕುಮೇ (ಶಾಂತಿಪು. ೯-೧೯೨) ; ವಿನತಾತ್ಮಜನಂ ಕಂಡಂ ವಿನತಾತ್ಮಜನಿಂದೆ ನಾಗಪಾಶಂ ಬಿಡುತಂದನಿರುದ್ಧನಾಗಿ ಮುಂದಿರ್ದನಿರುದ್ಧನನಾಗಳ್ಚಿಂ ಪ್ರದ್ಯುಮ್ನಂ (ಜಗ. ೧೮-೬೦). ೨. ಬಿಚ್ಚಿಹೋಗು ; ಕಳಚಿಕೊಳ್ಳು: ಕಚಬಂಧಂ ಬಿಡುತಂದು ನೀವಿ ಶಿಥಿಲತ್ವಂಬೆತ್ತು . . . ಕಣ್ಗೆಸೆಯೆ ಬಂದರ್ . . . ಕಾಂತೆಯರ್ (ಜಗ. ೧೯-೯೫) ; ಮುಡಿ ಬಿಡುತಂದು ಸೂಸೆ ಮುಗುಳಂ (ರಾಜಶೇ. ೬-೧೧). ೩. ಹೊರಸೂಸು ; ಹೊರಚೆಲ್ಲು : ಪರಚಕ್ರಭೂಪರಟ್ಟಿದ ಕರಿಗಳ್ ಬಿಡುತರ್ಪ ಮದದ ಪೊನಲಿಂದೆತ್ತಂ ನರಲೋಕಚಂದ್ರನಾ ಮಂದಿರದೊಳಗೆಲ್ಲ ಕಾಲಮುಂ ಕೆಸಱಕ್ಕುಂ (ಕಬಿರಾ. ೩-೦೮೨) ; ಬಿಡದೆ ಬಿಡುತರ್ಪ ಸಹಕಾರದ ಸೊನೆಯ ಸೋನೆಯೊಳಂ . . . ಪಾಡುವಪೆ ಣ್ದುಂಬಿಯ ಮಂದ್ರನಾದದಿಂ ಶ್ರುತಿಸುಭಗಮಾಗೆ (ಮಲ್ಲಿಕ. ೩-೧೧೧) ; ತಂಗೊಳದ ಬಿಡುತರ್ಪ ಪುಷ್ಪವಾಸನೆಯಿಂದ ಪಥಶ್ರಮುವಡಗಿಪ್ಪವೇನ ಬಣ್ಣಿಸುವೆ (ಕಂಸವ. ೩-೦೦೪).

[ಬಿಡು$_1$ + ತರ್]

**ಬಿಡುತೆ,** ಬಿಡಿತೆ (ನಾ). ೧. ಬಿಡುಗಡೆ; ಬಂಧನರಾಹಿತ್ಯ; ಸ್ವಾತಂತ್ರ್ಯ: ನಲವಿಂಸಿನ ಕೊಲೆ ಬಿಡುತೆ ಬಿತ್ತಿತ್ತು (ಶಾರಸಿ. ೨೨-೩೦೩). 'ಬಿಡುತೆಗೊಳ್ಳು', 'ಬಿಡುತೆಯಾನ್' ಪರಾ. ೨. ಅವಕಾಶ ; ಆಸ್ಪದ : ಲಂಘನೆಲಾಗು ಬಿಡುತಗಳ ಬಿಡುಬಿನಿಂ ಕುಡಿಮಿಂಚು ಪೊಡವಿಯೊಳು ಕುಡಿದೋಱಿತು (ನಕನ. ೩೫) ; ಕಾರ್ಯಕರ್ತಮಂಡಲಿ ಮೊದಲಾದ ಕೆಲವು ಅಧಿಕಾರ ಸ್ಥಾನಗಳಲ್ಲಿ ಒಂದು ವರ್ಷ ಅಥವಾ ಒಂದು ಸಾರಿ ಇದ್ದವರು ಪುನಃ ಇರಬೇಕಾವುದಿಲ್ಲವೆಂಬ ಬಿಡುತೆಯ ಏರ್ಪಾಟೂ ಇತ್ತು (ಸೋಕ್ರವು. ೦೩). **ಬಿಡಿತೆ :** ೩. (ಬಾಣ ಮುಂತಾದುವನ್ನು) ಬಿಡುವಿಕೆ ; ಪ್ರಯೋಗಿಸುವಿಕೆ ; ಎಸೆತ : ಸರಳಿನ ಬಿಡಿತ ಬಿನ್ನಣಗಳನು ತೋರುವೆವು (ಅಂಬಿಕಾ. ೩೦-೦೩). ೪. ಸ್ವಚ್ಛಂದತೆ ; ಸ್ವೇಚ್ಛೆ : ಸೊಲ್ಲಿನ ಹಿಡಿತ ಬಿಡಿತಗಳೆಲ್ಲ ತ್ರೈಜಗದೊಡೆಯ ತಾ ಬಲ್ಲ (ಗಗಣಾ. ೨-೦೪).

[ಬಿಡು$_1$ + — ತ್ತೆ$_2$]

**ಬಿಡುತೆಗೊಳ್ಳು** (ಕ್ರಿ). ಬಿಡುಗಡೆ ಹೊಂದು ; ಮುಕ್ತಿಯನ್ನು ಪಡೆ : ಏಕಣ್ಣ ಕೆಳರಿಬಿರ್, ಇದೆ ತಾನೆ ಮೇಲೆ ಮೇಲೊತ್ತಿ ಬರ್ಪಬಲಿಂದೆ ಬಿಡುತೆಗೊಂಡಿದ್ದಳನ್ ? (ಅಶ್ವತ್ಥಾ. ೩೨-೬೦೭); ದೋಣಿ ಹೊರಟುನಿಂತಿದೆ ಎಂಬ ಮಾತು ಬಿಡುತೆಗೊಂಡ ಚೇತನದ ನಿಲುವನ್ನು ಧ್ವನಿಸುತ್ತದೆ (ಶಂಶೀ. ೨೩೨). [ಬಿಡುತೆ + ಕೊಳ್ಳು$_1$ (<ಕೊಳ್$_1$)]

**ಬಿಡುತೆಯಾನ್** (ಕ್ರಿ). = ಬಿಡುತೆಗೊಳ್ಳು : ಕೇಡಿಂದೆ ನಾನ್ ಬಿಡುತೆಯಾಂತುಂದೋ ಪೆರ್ನಲಿವು (ಅಂತಿಗೊ. ೨೦-೯೨೨). [ಬಿಡುತೆ + ಆನ್$_1$]

**ಬಿಡುತೆವೆಱು** (ಕ್ರಿ). = ಬಿಡುತೆಗೊಳ್ಳು : ರಾಣಿಯು ಕಯ್ಯೊಳ್ಪೆಂದಿಗೆ ಸಿಲ್ಕಿ ಪುಣ್ಯದಿಂದಮಾಂ ಬಿಡುತೆವೆತ್ತು ಈ ಕಣ್ಗಳಿಂದಮೆ ನಿನ್ನಂ ನೋಡಿದೆಂ (ಚಿತ್ರಗೋ. ೩೩-೦೫). [ಬಿಡುತೆ + ಪೆಱು$_1$]

**ಬಿಡುದಂಬುಲ** (ನಾ). (ನಿರ್ದಿಷ್ಟವ್ಯಕ್ತಿಗಾಗಿ) ಮೀಸಲಾಗಿಟ್ಟ ತಾಂಬೂಲ : ಪಲತೆಱದ ತೊಡುಗೆ ಬಿಡುದಂಬುಲಮೊಳ್ಳುಣಸುಗಳನೆಯ್ದೆ ಸಲಿಸುಗೆ ಕೂರ್ತಂತಲಸದೆ ಸಂಭೋಗದೊಳಂ ಪಲವುಂ ಬಿನದದೊಳವರ್ಗೆ ಕಳೆವುದು ಪೊತ್ತಂ (ಮದಕ. ೮-೬೩). [ಬಿಡು$_1$ + ತಂಬುಲ]

**ಬಿಡುದಲೆ** (ನಾ). ಕೂದಲು ಕೆದರಿದ ತಲೆ ; ಬಿಟ್ಟ ಮಂಡೆ : ಬಿಡುದಲೆಯ ಬಿಟ್ಟ ಬಾಯ್ಗಳ ಬಱತ ಬಸುಱ . . . ಭೂತವೇತಾಳಪಡೆ ಸುತ್ತಿ ಮುತ್ತಿ ಬೊಬ್ಬಿಟ್ಟು ಝುಂಕಿಸಿದವು (ಹಕಕಾ. ೦೨-೩೨) ; ಬಿಡುದಲೆಯ ಬಿಸಿವೇಱುಗಳ ಶೋಣಿತದ ನರಳುವಾರೋಹಕರ . . . ಭಂಗವನೇನ ನೆಂಬೆನು (ಕುವ್ಯಾದ್ರೋ. ೦೮-೩೪). [ಬಿಡು$_1$ + ತಲೆ$_1$]

**ಬಿಡುದಾಣ** (ನಾ). ಇಳಿದುಕೊಳ್ಳುವ ಸ್ಥಳ ; ತಂಗುದಾಣ ; ಬಿಡಾರ : ಮಂಗಳಿವೇಡಂ ಬಿಡುದಾಣಂ ತನಗೆನೆ ಜಸಮಂ ತಾಳ್ದಿದಂ ಕೃಷ್ಣರಾಜಂ (ಸೌಇಇ. XX. ೦೩೩-೦೬; 1067) ; ಪಾಂಡುಪುತ್ರರಲ್ಲಿಂದೆಟ್ಟು ತಮ್ಮ ಬಿಡುದಾಣಕ್ಕೆ ಪೋಪುದುಂ (ಮಹಾಸೇ. ೧೦-೧೪ ವ); ಬಿಡುದಾಣವನೆಯಱರ್ . . . ಪಡೆವಳನಂ ಕಳುಪಿದಳ್ ನಿತಂಬಿನಿ ಕಡುಪಿಂ (ನಳಚಂ. ೭೦೩).

[ಬಿಡು$_1$ + ತಾಣ]

**ಬಿಡುದಾರ** (ನಾ). ಬರಿದಾದ ದಾರ ; ಮಣಿ ಕಳಚಿದ ಎಳೆ : ಮಡದಿ ಜಾನಕಿ ರತುನವಿಲ್ಲದೀ ಮೈಯೊಂದು ಬಿಡುದಾರವಾಯ್ತಲ್ಲೊ ತಮ್ಮಾ (ಶಾರ್ತಿಸು. ೬೬). [ಬಿಡು$_2$ (< ಬಿಡುವು) + ದಾರ$_1$]

**ಬಿಡುದೇವಸ್ವ** (ನಾ). ದೇವಾಲಯಕ್ಕೆ ದತ್ತಿಯಾಗಿ ನೀಡಿದ ಆಸ್ತಿ; ದೇವರ ಸೇವೆ ನಡೆಸುವುದಕ್ಕಾಗಿ ಮಾಡಿದ ದಾನ : ಯೀ ಧರ್ಮಕೆ ಧಾರೆಯನೆಱದು ಆಚಂದ್ರಾರ್ಕಸ್ಥಾಯಿಯಾಗಿ ಬಿಡುದೇವಸ್ವವಾಗಿ ಸರ್ವಮಾನ್ಯವಾಗಿ ಕೊಟ್ಟೆವಾಗಿ ಸುಖದಿಂ ಭೋಗಿಸೂದು (ಸೌಇಇ. IX-ii, ೪೫೦-೦೭; 1447); ಆ ದೇವರಿಂಗೆ ನಡವ ಅಂಗರಂಗ ನೈವೇದ್ಯ ಮುಂತಾದ ಧರ್ಮಂಗಳಿಗೆ ಬಿಡುದೇವಸ್ವವಾಗಿ ಕ್ಷೇತ್ರಂಗಳ ಬಿ[ಟ್ಟು] (ಕಇ. III–i, ೬-೦೩; 1527). [ಬಿಡು$_1$ + ದೇವಸ್ವ]

**ಬಿಡುನಾಯ್** (ನಾ). ಸ್ವೇಚ್ಛೆಯಾಗಿ ತಿರುಗುವ ನಾಯಿ ; ಬೀದಿನಾಯಿ : ಕೊರಲೊಳ್ ಕಟ್ಟಿದ ಮಾಲೆಯ ಸಿರಿಖಂಡದ ತಳ್ಕಿನೊಂದು ಬಿಡುನಾಯ್ಬರ ಸಾದರದಿಂದನರ್ಘ್ಯಮಣಿವಿಷ್ಟರದೊಳ್ ಕುಳ್ಳಿರ್ದು ಸರುಗನುಣೆ ಕಂಡು ದಱಂ ಪ್ರತಿಹೀನರ್. . . ಅತಿಕಷ್ಟರಪ್ಪರವನಿಯೊಳತಿಥಿಗಳಿನ್ನನ್ನದಾನಮಂ ಕುದುಮೆಡೆಯೊಳ್ (ಆದಿಪು. ೦೫-೪೨). [ಬಿಡು$_2$ (<ಬಿಡುವು) + ನಾಯ್]

**ಬಿಡುನುಡಿ** (ನಾ). ಅಡ್ಡಿಯಿಲ್ಲದ ಮಾತು ; ತಡೆಯಿಲ್ಲದ ಮಾತು : ಮತ್ತೋರ್ವಳ್ ಪುರುಡಿನಿಂ ಪುಟ್ಟಿದ ಮುಳಿಸಂ ತಿಳಿಪಲೊಡರಿಸಿದ ವಲ್ಲಭಂಗೆಡೆಗುಡದೆ ಬಿಡುನುಡಿಯಂ ನುಡಿದು (ಚಂದ್ರಪ್ರಪು. ೯-೬೬ ವ): ಬಿಡುನುಡಿಗಳ ಬಿತ್ತರಿಸುವ ಬಿಡದೆ ಕಾದುವ ಗಂಡ ಪೆಂಡಿರನೇತಕೆ ಪಡೆದನಕಟ ಪದ್ಮಭವನು (ಹರಿಬ. ೬-೯); ಸೊರ್ಕಿಂ ಗಟುಪುವರಗಿಳಿಯ ಬಿಡುನುಡಿಯ ಭಂಗಿಯಂತೆ, ಕರ್ಣರಸಾಯನಮಾಗೆ ಶ್ರೀರಾಮನಂ ಪಾಡಿ ಪೊಗೞ್ವ ಗಾಯಕಸಂದೋಹದಿಂ . . . ಕೇರಿಗಳ್ ಸೊಗಯಿಸೆ (ರಾಮಾಶ್ವ. ೨೩-೦೬).

[ಬಿಡು$_2$ (<ಬಿಡುವು) + ನುಡಿ$_2$]

**ಬಿಡುಪಡು** 'ಬಿಡುವಡು' ನೋ.

**ಬಿಡುಬಿಸಿಲು** (ನಾ). ತಡೆಯಿಲ್ಲದ ಬಿಸಿಲು : ಒಂದು ಬೀಜವ ಬಿತ್ತಿವಡೆ ಮೂರು ಫಲವಾಯಿತ್ತು . . . ಅದು ಬಿಡುಬಿಸಿಲಿನಲ್ಲಿ ಒಣಗೆ ಪಡಿಪುಚ್ಚಕ್ಕೆ ಮೂಗಳವಾಯಿತ್ತು (ಪೋಶಿವಶಾ. ೨೦೭-೬೬೧).

[ ಬಿಡು$_2$ ( < ಬಿಡುವು ) + ಬಿಸಿಲು ( < ಬಿಸಿಲ್ ) ]

**ಬಿಡುಬೀಸು** (ನಾ). ೧. ನಿರ್ಬಂಧವಿಲ್ಲದುದು ; ಯಾವ ಕಟ್ಟಿಗೂ ಒಳಪಡದುದು ; ಸ್ವಚ್ಛಂದವಾದುದು : ಆ ಸ್ವಾತಂತ್ರ್ಯದಲ್ಲಿ ನಮ್ಮ ಮನಸ್ಸು ಬಿಡುಬೀಸಾಗಿತ್ತು (ಹಿಂದಿಂ. II, ೪೦). ೨. ವಿಶಾಲವಾದುದು; ವಿಸ್ತಾರವಾದುದು ; ಹರವು : ನಮ್ಮ ಮನೆ ಬಿಡುಬೀಸಾಗಿದೆ (ರಾಮಾನ. ೬೫); ಅವಳು . . . ಕೋಣೆಯ ಬಿಡುಬೀಸಾದ ಸ್ಥಳದಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಸುತ್ತಾಡುತ್ತಿದ್ದಳು (ಶುನರು. ೦೪೩).

[ಬಿಡು$_2$ (<ಬಿಡುವು) + ಬೀಸು$_2$]

**ಬಿಡುಬು** (ನಾ). [ನಾಟ್ಯ]ಒಂದು ಭಂಗಿ (?): ಅಡಿದೊಡರ್ಪನಿದು ಜಡೆಯ ನಡುಬಳಸಿಯನುಗೊಳಿಸಿ ಜಡಿವಪೋಲೆಯನೊಡಂಬಡಿಸಿ ಒಡನೆ ಲಂಘನೆಲಾಗು ಬಿಡುತಗಳ ಬಿಡುಬಿನಿಂ ಕುಡಿಮಿಂಚು ಪೊಡವಿಯೊಳು ಕುಡಿದೋಱಿತು (ನಕನ. ೩೫). [ ? ]

**ಬಿಡುಮಂಡೆ** (ನಾ). = ಬಿಡುದಲೆ : ಹಸುರುಮೈ ಹಾವಿನಾಭರಣ ಬಿಡುಮಂಡೆ . . . ಕೆಂಪಿನ ಪುಷ್ಪಸರಪೊವ್ವಾ ಪೊಸ ವಿಜಯ

ಯುಮದೊಳಿ . . . ಅಜಿತೆಯೆಂಬೆಂಟು ಪೆಸರೆಸೆವ ದೇವಾಂಗನೆಯರು (ಸಿದ್ಧರಾ. ೪-೬) ; ತರಹರಿಕೆ ಕೈಗೂಡದವನೀಶ್ವರನು ಕೌಸಲೆಸಹಿತ ಬಳಲುವ ಶಿರದ ಬಿಡುಮಂಡೆಗಳ . . . ಕಟ್ಟಳಲಿಕೆಯಲ್ಯೆದಿದನವನಿಜಾ ಪತಿಯು (ತೊರೆರಾ. ೨-೩-೫೩); ಆರು ಅಳುಪಿದವರುಗಳು . . . ತೆಂಕಮುಖ ವಾಗಿ ಬಿಡುಮಣ್ಡೆಯಲ್ಲಿ ಸುರಾಪಾನವಂ ಸೇವಿಸಿ ಹೋದವನ ಪಾಪಕೆ ಹೋಹರು (ಎಕ. XI, ದಾವಣ. ೦೦೬-೨೬, 1528). [ಬಿಡು$_1$ + ಮಂಡೆ]

**ಬಿಡುಮಂದಿ** (ನಾ). ಕೆಲಸಕ್ಕೆ ತೊಡಗಿಸಿದ ಜನ ; ಕೆಲಸಕ್ಕೆ ಬಿಟ್ಟ ಜನ : ಕರದ ಕುಡುಗೋಲು ತಡಿಕೆ ಮಕ್ಕರಿ ಸಹ ಬಹ ಕಾಮಾಟದ ಬಿಡುಮಂದಿಗೆ ಲೆಕ್ಕವಿಲ್ಲ (ಕಂಡಾಪ. ೦೦-೪೦). [ಬಿಡು$_1$ + ಮಂದಿ$_1$]

**ಬಿಡುಮಿದುಳ್** (ನಾ). (ತಲೆಯಿಂದ) ಹೊರಚೆಲ್ಲಿದ ಮಿದುಳು : ಬಿಡುಮಿದುಳ ರಾಶಿಗಳ ರಚನೆಯು ರಾಜಹಂಸೆಗಳ . . . ಸರಸಿಯ ನಡುವೆ ನಲಿನಲಿದಾಡುತಿರ್ದುದು ಭೀಮುವನದಂತಿ (ಕುಮಾ.ದ್ರೋ. ೦೨-೨೩) ; ಬಿಡುಮಿದುಳ ಜೊಂಡಿನಿಂ ನಡುತೊಡೆಯ ತುಂಡಿನಿಂ ಪೊಡೆಗೆಡೆದು ಬೀಳ್ದರಿಂ ನೆತ್ತರಿನೊಳಾಳ್ದರಿಂ ರಣಧರಣಿ ಕಣ್ಗೆಸೆದುದು (ಜೈಮಿ. ೩೬-೩೯) ; ಬಿಡುಮಿದುಳ ತುಂಡದಿಂ ತಂಡದಿಂ ರುಂಡದಿಂ ಮುಂಡದಿಂ . . . ಎಡೆವಿಡದೆ ಸತ್ತರಿಂದಿಡಿದಿರ್ದುದು (ಜೈಮಿಭಾ. ೦೨-೪೪).

[ಬಿಡು$_1$ + ಮಿದುಳ್]

**ಬಿಡುಮುಡಿ** (ನಾ). ೧. ತುರುಬು ಕಟ್ಟದಿರುವ ಕೂದಲು ; ಬಿಚ್ಚಿರುವ ತಲೆಗೂದಲು : ಸ್ಮರಕೃತಕಾಚಲಶಿಖರಾಂತರಲತೆ ಮೇಲ್ವಾಯ್ದುದೊಂದು ಸೋಗೆಯು ಬಿಣ್ಪಿಂ ಧರೆಗೆಳಗುವಂತದೊರ್ವಳ್ ವರಾಂಗಿ ಬಿಡುಮುಡಿಯಿನೆಸೆದು ಪಿಡಿಯಿಂದಿಳಿದಳ್ (ಜಗಪ. ೦೪-೫೬) ; ನಿಕ್ಕುವಂ ಪೆಣ್ಣೆ ಇವಳ್. ಸರಸಕಮಲಮೆ ಮೊಗಂ: ಮಿನೆ ಕಣ್; ಪಾಪಸೆ ಬಿಡುಮುಡಿ (ರಾಜಶೇಖ. ೬-೦೦). ೨. ಕೆದರಿದ ತಲೆ ; ಓರಣವಾಗಿ ಬಾಚದಿರುವ ಕೂದಲು : ಬಿಡುಮುಡಿಯ ಸುರಿವ ಕಂಬನಿವೊನಲ . . . ಮಡದಿಯರ ದನಿಯನಾಲಿಸಿ ಪರ್ಣಶಾಲೆಯಿಂ ಪೊಱಮಟ್ಟನು (ಹರಿಶ್ಚಾ. ೬-೨೬) ; ಒಡನೆ ಬಂದರು ಕಂಬನಿಯ ಬಿಡುಮುಡಿಯ ಹಾಹಾ ರವದ ರಭಸದ ನಡೆಯಲಖಿಳವಿಲಾಸಿನಿಯರು ಸಹಸ್ರಸಂಖ್ಯೆಯಲಿ (ಕುಮಾ.ಶ. ೦೪-೬೯). ೩. ಸಡಿಲವಾಗಿ ಹಾಕಿದ ತುರುಬು ಅಥವಾ ಜಡೆ : "ಬಿಡುಮುಡಿ=ತುದಿಯಲ್ಲಿ ಮಾತ್ರ ಗಂಟುಹಾಕಿರುವ ಕೂದಲು" (ಕೃಶಬ್ದ). [ಬಿಡು$_1$ + ಮುಡಿ$_3$]

**ಬಿಡುಮುತ್ತು** 'ಬಿಡಿಮುತ್ತು' ನೋ.

**ಬಿಡುರಥ** (ನಾ). ಹರಿಯುವ ರಥ ; ಮುನ್ನುಗ್ಗುವ ತೇರು : ತುಡುಕುವಾನೆಯನೀಸಿನಲಿ ಖುರವಿಡುವ ಕುದುರೆಯನೊತ್ತಿ ಹಾಯ್ಸುವ ಬಿಡುರಥವ ತಲೆವರಿಗೆಯಲಿ ತವಕಿಸುವ ಕಾಲಾಳ ಕಡಿದನಂಬಿನೊಳಾ ಗಜವನಾ ಕಡುಹಯವನಾ ರಥವನಾ ಮಂಗಡದ ಕಾಲಾಳುಗಳನೊಂದು ವಿಘಳಿಗೆ ಮಾತ್ರದಲಿ (ಕುಮಾ.ಕ. ೦೩-೨೩) ; ಅಶ್ವವನಶ್ವದಿಂದಪ್ಪಳಿಸುತೊಡ ಹಾಯ್ದು ಬಿಡುರಥವ ರಥದಿಂದ ಹೊಯ್ದುಱೆ ಹುಡಿಗೆದಱುತಱಿಯಟ್ಟಿ ಸದೆದನು (ತೊರೆರಾ. ೫-೬-೦೬). [ಬಿಡು$_1$ + ರಥ]

**ಬಿಡುರನ್ನ** (ನಾ). ಬಿಡಿಯಾದ ರತ್ನ : ಕಡೆಗರ್ಭ್ಯಶಾಂತಿಧಾರೆಯ ಮಾಡಿ ಮಿಸುನಿಪೂ ಬಿಡುರನ್ನಗಳ ವೃಷ್ಟಿಮಾಡೆ (ಭರತ. ೫೯-೨೪).

[ಬಿಡು$_3$ (<ಬಿಡಿ) + ರನ್ನ (<ರತ್ನ)]

**ಬಿಡುಲವಣ** (ನಾ). ಒಂದು ಬಗೆಯ ಕ್ಷಾರ ; ಡೊಣೆಯುಪ್ಪು : ಒಡಲೊದವಿ ಬಾತು ತೋರ್ಪೊಡೆ . . . ಆಡಿನ ಪಾಲಂ ಬಿಡುಲವಣ ಮುಮಂ ಕರಿಯ ತೊವರಿಯಶನಮೆ ಪಥ್ಯಂ (ಲೋಕೋಪ. ೯-೦೬೪); ಬಿಡುಲವಣ ಜೀರಕ ಚವ್ಯಲವಣ ಸಂವರ್ಚಕಮುವ್ಯೃತಂ ಶ್ಲೇಷ್ಮವಾತ ಶೂಲಾಪಹರಂ (ಅಶ್ವಶಾ. ೦೦-೦೦). [< ಬಿಡಲವಣ]

**ಬಿಡುವಕ್ಕಲು** (ನಾ). ಪ್ರತಿಯೊಂದು ಒಕ್ಕಲು ; ಪ್ರತ್ಯೇಕವಾದ ಒಕ್ಕಲು : ತಳವಾರ ಮುಖಾಂತ್ರ ಬಾಹ ಬಿಡುವಕ್ಕಲ ತೆರು (ಎಕ. VII, ಶಿವಮೊ. ೩-೨೬ ; 1671). [ಬಿಡು$_3$ (<ಬಿಡಿ) + <ಒಕ್ಕಲು$_2$]

**ಬಿಡುವಡು**, ಬಿಡುಪಡು (ಕ್ರಿ). ಬಿಡುಗಡೆಯನ್ನು ಹೊಂದು; ಸ್ವತಂತ್ರ ವಾಗು; ಮುಕ್ತವಾಗು : ಜನಕಂ ತನ್ನ ಪುಣ್ಯದೊಳದ್ದಮಂ ಧಾರೆಯನೆಱೆ ವುದುಂ ಪಾಪಿಗಳೆಲ್ಲರ್ ಬಿಗಿವಟ್ಟ ನರಕಬಾಧೆಯಿಂ ಬಿಡುವಟ್ಟು . . . ಬರ್ದಿಲರ ನಾಡಂ ಪುಗುತಂದರ್ (ರಾಮಾಶ್ವ. ೦೦೬-೬). **ಬಿಡುಪಡು** : ಬಿಡುಪಟ್ಟ ನೊಸಲ ನುಣ್ಗುರುಳ ಸಾಲಿಂದೊಂದು ಬೆಡಗಾಗಿ ನಿಂದಿರ್ದ ರಾಗ (ಭರತ. ೦೪-೦೨). [ಬಿಡು$_2$ (<ಬಿಡುವು) + ಪಡು$_1$]

**ಬಿಡುವಡೆ** (ಕ್ರಿ). = ಬಿಡುವಡು : ಅಣೆಗಟ್ಟನಲ್ಲಿ ತುಂಬಿ ತುಳುಕುವ ಜೀವನಪ್ರವಾಹವು ಕಡಿಯಲ್ಲಿ ಬಿಡು(ಮೋಕ್ಷ)ವಡೆದು ಹರಿದು ಸಾಗರ ದಲ್ಲಿ ಸಂಗಮುವಡೆದು ಶಾಂತವಾಗುತ್ತಿದೆ (ನಾಡೋಜ. ೩೩೪).

[ಬಿಡು$_2$ (<ಬಿಡುವು) + ಪಡೆ$_1$]

**ಬಿಡುವನಿ** (ನಾ). ಸುರಿಯುತ್ತಿರುವ ಕಂಬನಿ,— ಕಣ್ಣೀರು : ಒಡನೆ ಕಳುಹುತ ಬಂದನಾ ನೆಲದೊಡೆಯನನುಜರುಸಹಿತ ನಯನದಿ ಬಿಡುವನಿಯು ಸಾಲಿನಲಿ ನನೆದರು ಬಂದು ಕಿಱಿದೆಡೆಯು (ಕುಮಾ.ದ್ರೋ. ೪-೫೩); ಹರಿನಂದನನ ಲಲನೆಯು ಲೋಚನದ ಬಿಡುವನಿಯನಂಶುಕದಗ್ರ ದಿಂದೊರಸಿದನು (ತೊರೆರಾ. ೪-೫-೨೬). [ಬಿಡು$_1$ + ಪನಿ$_2$]

**ಬಿಡುವನೆ** (ನಾ). ಇಳಿದುಕೊಂಡಿರುವ ಮನೆ ; ಬಿಡಾರ : ಮಹಾ ರಾಜನು . . . ಆ ವೇಶ್ಯೆಯ ಬಿಡುವನೆಗೆ ಎರಡುಸಾರಿ ಬಿಜಯ ಮಾಡಿ ದ್ದನು (ಮಂತ್ರಿಶ. ೦೩೦-೦೬). [ಬಿಡು$_1$ + ಮನೆ]

**ಬಿಡುವಯಣ** (ನಾ). ಪ್ರಯಾಣಮಧ್ಯದಲ್ಲಿ ತಂಗುವಿಕೆ ; ಉಪ್ಪಯಣ : ಬಿಟ್ಟ ಪಯಣದೊಳು ಬಿಡುವಯಣಮಿಲ್ಲದೆ ದಾಳಿಯಿಟ್ಟು (ಸಮ್ಯಕ್ತ್ವ. ೨-೦೦). [ಬಿಡು$_1$ + ಪಯಣ]

**ಬಿಡುವರಿ** (ನಾ). ಸ್ವೇಚ್ಛೆಯಾಗಿ ನುಗ್ಗುವುದು ; ಅಡೆತಡೆಯಿಲ್ಲದೆ ಸಾಗುವುದು : ಗಿಡುಮರನ ಸೆಳೆಸೆಳೆದು ಬಿಸುಡುತ ಬಿಡುವರಿಯ ಬೀದಿ ಗಳಲಟ್ಟಿದವು . . . ಕಪಿಪಡೆಯ ಕೊಂದವು ಕೋಟಿಸಂಖ್ಯೆಯಲಾ ಮದೇಭ ಚಯ (ತೊರೆರಾ. ೬-೩೨-೫). [ಬಿಡು$_2$ (<ಬಿಡುವು) + ಪರಿ$_3$]

**ಬಿಡುವಲೆ** (ನಾ). ಒಂದು ಬಗೆಯ ಬಲೆ ; ಅಗಲವಾಗಿ ಹಾಸುವಂಥ ಬಲೆ : ಬಿಡುವ[ಪಾಠಾಂ. ವೆ]ಲೆ ಸೊರ್ಕುವುದರ್ಕೆ ಪದವಿಲ್ . . . ಗಿಡಗ ಮೆಪಿಪ್ಪಿವಂ ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದಿದರ್ (ರಾಜಶೇ. ೫-೫೨); ನಿಡುವಲೆ ಸಾಲ್ವಲೆ ಬಿಡುವಲೆಗಳನಿಪ್ಪುವೆಸೆದುವಾ ಬೇಂಟೆಗರೊಳ್ (ಶಬಶಂ. ೩-೨೪). [ಬಿಡು$_1$ + ಬಲೆ$_1$]

**ಬಿಡುವಾಯ್**, ಬಿಡುವಾಯಿ (ನಾ). ಅಗಲವಾಗಿ ತೆರೆದ ಬಾಯಿ : ಬಿಡು ವಾಯ್ ತುಡುಕೊಡರಱುಗೆಱೆಯೆಂಬಿವು ಪಡೆಯವು ಬಿಂದುವನುದಂತ ವೃತ್ತಿಯನಾಳ್ದಂ (ಶಮಂದ. ೦೩೦) ; ಹೆಬ್ಬಲ್ಲ ಬಿಡುವಾಯ ಜೋಲ್ವ ಕೆನ್ನಾಲಗೆಯ ಗಬ್ಬಿನಾಯ್ಗಳ ಹಾಸನುಗಿದು ಬಿಡೆ ಪಂದಿಗಳನಬ್ಬರಿಸಿ ತುಡುಕಿದುವು (ಜೈಮಿಭಾ. ೨೮-೪೬). **ಬಿಡುವಾಯಿ** : ಬ್ರಹ್ಮಹತ್ಯೆ ಕಾರೊಡಲಿಂ ತಾಂ ಬಿಡುವಾಯಿಂ ಕಪ್ಪರವಂ ಪಿಡಿದೊಡನೊಡನೆಯ್ದಿ ಸುರಪನಂ ಪೀಡಿಪುದು (ಹಾಲಾಸ್ಯ. ೦-೨-೨೫). [ಬಿಡು$_1$ + ಬಾಯ್]

ಬಿಡುವಾಯಿ 'ಬಿಡುವಾಯ್' ನೋ.

**ಬಿಡುವಾರು** (ನಾ). ಬೇಟೆಯ ಒಂದು ಸಾಧನ (?) : ಪೆರ್ಬಲೆ ಬಿಡುವಾರು ಗೋಡುವಲೆಯೆಂಬಿನಿತಂ ಪೊಱಿಗಟ್ಟಿ ಕಾನನಸ್ಥಲದೊಳಗಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ದಶಕು. ೨-೦೦೫). [?]

**ಬಿಡುವೀಳೆಯ** (ನಾ). = ಬಿಡುದಂಬುಲ : 'ಬಿಡುವೀಳೆಯದಂಬುಲ' ಪರಾ. [ಬಿಡು$_1$ + ವೀಳೆಯ]

**ಬಿಡುವೀಳೆಯದಂಬುಲ** (ನಾ). = ಬಿಡುದಂಬುಲ : ನಿಡುಸುಯ್ಲ್ಲ ಧಾಳಿಯ ಜಳಕೆ ಜೆಂದುಟಿರಸಪ್ಪೊಡನೆ ಬಿಜಿತುದು ಕರ್ಪುರದ ಬಿಡುವೀಳೆಯದುಂಬುಲ ವಿರಹಾಗ್ನಿಗೆ ಪುಡಿವಟ್ಟುದೇನ ಬಣ್ಣಿಸುವೆ (ಕಂಸವಿ. ೯-೧೬೨).
[ಬಿಡುವೀಳೆಯ+ತಂಬುಲ]

**ಬಿಡುವು**, ಬಿಡು$_{2}$ (ನಾ). ೧. ವಿರಾಮ; ವಿಶ್ರಾಂತಿ : ಗುರುಗಳ ಪರಿಚರ್ಯೆಯನ್ನು ಯಥಾವಿಧಿಯಾಗಿ ಮಾಡಿ ಮುಗಿಸಿದನಂತರವೇ ಅವಳಿಗೆ ಬಿಡುವು ಸಿಕ್ಕುತ್ತಿತ್ತು (ಜಾಣಕ. ೪೦೦); ಬಿಡುವನು ಕೊಟ್ಟಂಥ ಹೊಲದೊಳು ಬೆಳೆದರೆ ಹುಲುಸಾಗಿ ಬಲಿವುದು ಕಾಳು (ಇಂಜಾಶ. ೧೪೦-೯೫); ಆಫೀಸಿನಲ್ಲಿ ಬಿಡುವಿಲ್ಲದ ಕೆಲಸ (ಮಗವಾಂ. ೧೩೪). ೨. ರಜೆ ; ಸೂಟಿ : ಅವರು ಈ ಮೂರು ಬಿಡುವಿನ ದಿನಗಳನ್ನು ಬಹು ಸುಖವಾಗಿ ಕಳೆಯಲಿದ್ದರು (ಅಚೋಲೀ. ೧೨೬) ; ನನ್ನ ಬಿಡುವು ಇನ್ನೆರಡು ವಾರವಿದೆ (ಗಂಬಾ. ೫); ಈ ದಿನ ಶಾಲೆಗೆ ಬಿಡುವು (ಕವಕ್ತ. ೩-೦). ೩. ಅಂತರ ; ಅವಕಾಶ ; ಆಸ್ಪದ : ಪಿಡಿದ ಜವನಿಕೆಯ ಮುಜಿಯೊಳ್ ಕುಡುಮಿಂಚಿನ ಬಳ್ಳಿ ಮುಗಿಲ ತೆಳ್ಪೊರೆಯೊಳ್ ಕಣ್ಗೆಡಱುವೊಲಡರೆ ತೋರ್ದುವು ತೊಡವಿನ ಬಿಡುವುಂ ಬಿಡೌಜನಂಗಚ್ಛವಿಯುಂ (ಅನಂಪು. ೫-೯೪); ಬವರ ಸವೆಯದೆ ತೇಜಿಗಳ ಬಲು ಜವವು ಜಾಱದೆ ಬಿಡುವ ತಿವಿದರೆ ಸವಗವುಚ್ಚಳಿಸುವವು (ಕುವ್ಯಾಭೀ. ೮-೬೬) ; ಕಾರ್ಯಭಾರವು ಬಹಳವಾಗಿದ್ದುದರಿಂದ ಇತ್ತ ಕಡೆ ಬರಲು ಬಿಡುವೇ ಸಿಕ್ಕಲಿಲ್ಲ (ರಾವಿಜ. ೧೦೫). ೪. ಮನೆಗಳಿಲ್ಲದ ವಿಶಾಲವಾದ ಪ್ರದೇಶ ; ಬಯಲು : ಮಂದಿರ ಪ್ರಾಕಾರ ಸೋಪಾನದೊಳು ಕುಳಿತು ಪಡುವ ಬಿಡುವಿನ ಸೊಗಕು ಮಿಗಿಲ ಕಾಣೆ (ಮಲದೀ. ೪೬-೯). ೫. ಸುರಿಯುವಿಕೆ ; ಧಾರೆಯೆರೆಯುವಿಕೆ : ವಿಡೂರಜಂಗಳ ಕೊಡಂಗಳ ಬಿಡುವಿನಿಂ ಘೃತಾಭಿಷೇಕಮನತಿ ಸಂತೈಸುವಂತೆಯುಂ . . . ಅಭಿನಯಿಸುತ್ತುಂ (ಅನಂಪು. ೫-೭೦ ವ). **ಬಿಡು$_{2}$** : ೧. ಈಚೀಚೆಗೆ ಬಿಡು ಸಿಗೋದೇ ಅಪರೂಪವಾಗಿದೆ (ರೂಢಿ). ೬. ಬಿಡುಗಡೆ; ಅನಿರ್ಬಂಧತೆ : 'ಬಿಡುವಡು', 'ಬಿಡುವಡೆ' ಪರಾ. ೭. ಸ್ವಚ್ಛಂದತೆ ; ಸ್ವೇಚ್ಛೆ : 'ಬಿಡುನಾಯ್', 'ಬಿಡುಸೂಳೆ' ಪರಾ. ೧೮. ಬರಿದು ; ಖಾಲಿ ; ಜೊಳ್ಳು : 'ಬಿಡುಗಿವಿ', 'ಬಿಡುದಾರ' ಪರಾ. ೯. ದಾನ ; ಕೊಡುಗೆ (?) : ಚೊಕ್ಕನಾಥದೇವರಿಗೆ ಸಲುವಂತಾ ದಿನಕಟ್ಟಲೆಯುಲು ಕರಡಿಯು ಪಳಿಯು ಚತುಸೀಮೆವೊಳಗಾದ ಬಿಡುಗಳಿಗೆ ಸಲುವ ಗ್ರಾಮ ೧ ಜ ಮುಗ್ಗದೆಜ³ (ಎಕ. IX (S). ಬೆಂಗಳೂ. ೧೬೨-೩ ; 1408).

ಬಿಡುವಾಗು = ಅವಕಾಶವುಂಟಾಗು ; ಆಸ್ಪದವಾಗು : ಇನ್ನು ಮದನನ ಬೀಯಗಕೆ ಬಿಡು [ಶಾಕಾಂ. ಪ]ವಾಯ್ತು ನಿನಗೆಲೆ ರಸಿಜ (ತೊರರಾ. ೪-೫-೧೩). [ಬಿಡು$_{1}$ + — ಪು./ಮಲ. ವಿಟ; ತೆಲು. ಬಿಡುವು]

**ಬಿಡುವುಗೊಳ್** (ಕ್ರಿ). ಸ್ವತಂತ್ರಪೀಂಗಿರು; ಯಾವ ಕಟ್ಟಿಗೂ ಸಿಕ್ಕದಿರು : ಎನ್ನ ಪಕ್ಷಧರ ಚತುಷ್ಪಾದಿಯಿದು . . . ಪಾಯ್ವುದುಂ. ಮನೆಯೊಳಗುದಿಜಿ ಗೊತ್ತಿನೊಳ್ ಬಗೆಯೊಸೆದು ಬಿಡುವುಗೊಂಡಪುದು (ಬದ್ಧಕ್ರ. ೨೨-೪೫೬).
[ಬಿಡುವು + ಕೊಳ್$_{1}$]

**ಬಿಡುವೆಣ್**, ಬಿಡುವೆಣ್ಣು (ನಾ). (ಯಾವುದಾದರೂ ಸೇವೆಗಾಗಿ) ವಿಲಾಸಲಾಗಿ ಕೊಟ್ಟ ಯುವತಿ ; ಸಖಿ : ಕೊಡುವ ಬಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಗಂ ಲೆಕ್ಕಮಿಲ್ಲೆನಿಸಿ ರಾಗಂಗಿಡದೆ ಕೊಂಡಾಡಿದಂ ಬಲ್ಲಹನಜಿಯೆ ಗುಣಾರ್ಣವಂ ಕವಿತಾಗುಣಾರ್ಣವನಂ (ಶಂಪಭಾ. ೧೪-೫೫) ; ವಿಲಾಟಾದ ರೂಪು ಜವ್ವನ ಬಿಡುವೆಣ್ಗಳೊಳ್ ಬೇಟವ ಮಾಳ್ಪುದನ್ಯಾಯ ಕೂಟಕೆ ತರಣಿ ಬಂದರೆ ವೃದ್ಧನೆಂದು ಕವಾಟವ ಮುಗಿದುವಂಭೋಜ (ಮೋಹತ. ೧೫-೬); ಬಿನದಕ್ಕಂಗಣವುಂ ಸಾರುವ ಬಿಡುವೆಣ್ಗಳ್ ಪಿಂಗದೆ ಪಣೆಗಿ ನಡೆವ ಬೆಸವೆಣ್ಗಳ್ . . . ಮನೆವೆಣ್ಗಳ್ ಸೊಗಸಿದುದಾವುದಯದೊಳು (ಜಯಕಾ. ೦೨-೧೫). **ಬಿಡುವೆಣ್ಣು** : ಬಿಡುವೆಣ್ಣುಗಳ ನಿಳಯವೆನಿಸಿ ಪೆಜಿದಿಹುದಾ ದುರ್ಗದ ಕಲಕಲರವ ರಾಜವೀಥಿ (ಕುರಾಕಾಂ. ೮-೦೦೬); ಬಿಡುವೆಣ್ಣು ಬೆಲೆವೆಣ್ಣು ಬೆಸವೆಣ್ಣುಗಳ ಮಂಗಡವಾ ಪುರದೊಳೊಪ್ಪಿದುದು (ರಾಮವಿ. ೩-೪೬); ಬೆಲೆವೆಣ್ಣು ಬೆಸವೆಣ್ಣು ಮನೆವೆಣ್ಣು ಬಿಡುವೆಣ್ಣು . . . ಭೂಲಲನೇಶನ ನೋಡಿದರು (ಗೊಮ್ಮಜ. ೦-೬೫). [ಬಿಡು$_{1}$+ಪೆಣ್]

**ಬಿಡುವೆಣ್ಣು** 'ಬಿಡುವೆಣ್' ನೋ.

**ಬಿಡುವೆಸರ್** (ನಾ). ಬೇರೆಯ ಹೆಸರು ; ಪರ್ಯಾಯನಾಮ : ಒಡವುಟ್ಟಿದ ಕೌಸ್ತುಭಮಣಿಯೊಡನಿರಲಾಗೆಂದು ಬಿಟ್ಟು ವಿಷ್ಣುವಿನುರಮಂ ಬಿಡುವೆಸರ್ಗೆ ಪದ್ಮನಾಭನ ಬೆಡಂಗಿನುರದಲ್ಲಿ ಲಕ್ಷ್ಮಿ ಸಲೆ ನೆಲಸಿರ್ಪಳ್ (ಅರ್ಧನೇ. ೦-೪೨). [ಬಿಡು$_{3}$ (<ಬಿಡಿ) + ಪೆಸರ್]

**ಬಿಡುವೊನ್** (ನಾ). ಹಂಚಲು ಅನುಕೂಲವಾದ ಬಿಡಿಯಾದ ನಾಣ್ಯ.—ಹೊನ್ನು : ಅರ್ಥಿಸಂತತಿಗೀಯಲ್ ಬಿಡುವೊನ್ನುಮನಾಳ್ಗಟ್ಟುವ ತೊಡರೊಳ್ ತೊಡರ್ದಿರ್ದರರಸುಮಕ್ಕಳ್ ಕೆಲಬರ್ (ಶಂಪಭಾ. ೧೦-೩೮).
[ಬಿಡು$_{3}$ (<ಬಿಡಿ) + ಪೊನ್]

**ಬಿಡುಸೂಳೆ** (ನಾ). ಒಬ್ಬನಿಂದ ಪರಿತ್ಯಕ್ತಳಾಗಿ ಸ್ವೇಚ್ಛೆಯಾಗಿ ಬಾಳುವ ಸೂಳೆ,—ವೇಶ್ಯೆ: ಈಗ ಒಬ್ಬರ ಸೂಳೆ ಇನ್ನು ಅವರು ಬಿಟ್ಟರೆ ಬಿಡುಸೂಳೆಯಾಗಿ ಕಂಡವರನ್ನೆಲ್ಲ ಮೋಹಿಸಬೇಕೇ ? (ಹಳ್ಳಹಾ. ೨೮); ಈ ಹಾದಿ ಬಿಟ್ಟವರನ್ನು ಸಾಮಾನ್ಯವಾಗಿ 'ಬಿಡುಸೂಳೆ'ಯರೆಂದು ಊರಲ್ಲಿ ಕರೆಯುತ್ತಾರೆ (ಹುಮುಖ. ೭೯) ; ನಾಳೆ ಎರಡು ಹೊತ್ತಿನ ಅನ್ನಕ್ಕೆ ತೊಂದರೆಯಾಗಿ ಮಗಳು ಬಿಡುಸೂಳೆಯಾಗಿ ಬಾಳುವುದು ಅವಳಿಗೆ ಇಷ್ಟವಿಲ್ಲ (ದೇವಹೊ. ೪೬).
[ಬಿಡು$_{1}$ + ಸೂಳೆ$_{1}$]

**ಬಿಡುಹ** (ನಾ). ತ್ಯಜಿಸುವಿಕೆ ; ತೊರೆಯುವಿಕೆ : ಆವಂಗದಿಂ ಧನ ಬರಲು ಬಿಡುಹವೆ ನಿರಾಶತ್ವ (ಶಿವಗೀ. ೫೬-೨೬೪).
[ಬಿಡು$_{1}$ + — ಹ$_{2}$ (< — ಪ$_{2}$)]

**ಬಿಡುಹು** (ನಾ). ಬಿಡುಗಡೆ ; ಅನಿರ್ಬಂಧತೆ : ತುಡುಕುವಂಕುಶದಿಂದ ಮುನ್ನಿಳೆಯೊಡೆಯ ಗಜ ಗಾಢಿಸಿದವರಸರ ಬಿಡುಹು ತಡೆದೆಡಗಲಸಬಗೆದುವು ವಿಗಡ ಪಾಯದಳ (ಕುವ್ಯಾಭೀ. ೨-೨).
[ಬಿಡು$_{1}$ + — ಹು$_{2}$ (< — ಪು$_{2}$) ./ ತೆಲು. ವಿಡುಪು]

**ಬಿಡೆ$_{1}$** (ನಾ). (ಕರಾ) ಹಣ್ಣಿನ ಒಳಭಾಗದ ಒಂದೊಂದು ಖಂಡ ; ತೊಳೆ : ಹಲಸಿನ ಹಣ್ಣಿನ ಬಿಡೆಗಳನ್ನು ಜೇನುತುಪ್ಪದಲ್ಲಿ ಅದ್ದಿಯದ್ದಿ ಯಥೇಷ್ಟವಾಗಿ ತಿಂದು ತೇಗಿದನು (ಗಂಗಾವ. ೨೦). [< ಬಿಡಿ ? ]

**ಬಿಡೆ$_{2}$** (ಅ). ೧. ವಿಶೇಷವಾಗಿ ; ಅತಿಶಯವಾಗಿ : ಕಪಿಂಜಳಂ ಬಾಯಬಿಡದಬ್ರಹ್ಮಣ್ಯಮೆಂದು ಬಿಡೆ ಪುಯ್ಯಲ್ಚಲ್ (ಕಾದಂಪೂ. ೯೦೮) ; ಬಿಡೆ ಬಗ್ಗಿಸೆ ಮಧುವಿಕಾರಿ ಕೋಗಿಲೆ ಕಿಸುಗಣ್ಣುವೆ ನೀಂ ವಿಜಾತಿಯೊಳ್ಗುಣಮುಂಟೇ (ಮಲ್ಲಪು. ೩-೩೯) ; ಮಿಗೆ ಮುನ್ನಂ ಕಂಡವ್ರೋಲಿರ್ಪುದು . . . ಈ ಪಾದರಿ ಬಿಡೆ ಮೊರವೀ ತುಂಬಿ (ಕಬ್ಬಗಾ. ೧೦೬). ೨. ರಭಸವಾಗಿ ; ತೀಕ್ಷ್ಣವಾಗಿ ; ಜೋರಾಗಿ : ಒಡನೆ ಕಾಳಗ ಬಯಿಸಿದ ಘೋಟಬಯಿಲಪ್ಪರ್ ಜಿಪಿಂಗೆ ಮಾಬ್ಬರ್ಲಂ ಬಿಡೆ ಕಡಿಕಯ್ದು ನೂಂಕಿ ಕೆಡೆ (ಎಕ. II. ೧೩೮-೭ ; ಸು. 940). ೩. ನಿಸ್ಸಂದೇಹವಾಗಿ ; ನಿಜವಾಗಿ ; ಖಂಡಿತವಾಗಿ ; ಸ್ಪಷ್ಟವಾಗಿ : ಎರಡನೆಯ ಪುರಮಥನಯೆನಿಸುವ ವಸಿಷ್ಠ ಮುನಿಪನ ಮೊಮ್ಮನು ಬಿಡೆ ಪರಾಶರನು ನಾನು (ಹಚಕಾ. ೫-೬೫).
☞ ಈ ಅವ್ಯಯವು ಅನೇಕ ಕ್ರಿಯಾಪದಗಳೊಡನೆ ಸೇರಿ ಅನೇಕ ಅರ್ಥಗಳನ್ನು ಕೊಡುತ್ತದೆ. [< ಬಿಡು$_{1}$?]

**ಬಿಡೆಯು$_{1}$**, ಬಿಡಯ$_{1}$ (ನಾ). ೧. ಬಿಡುವು ; ಅವಕಾಶ ; ಪುರುಸೊತ್ತು: ನಿಮ್ಮ ವನದೋಲಗಕೆ ಬಿಡೆಯುಪ ಕಾಣೆನು (ಕುವ್ಯಾಕ. ೧೫-೨೮) ; ಜಗಕೆ ನಿಮ್ಮಡಿವಿಡಿಯಲೆಲ್ಲಿಯು ಬಿಡೆಯ ಮಾಯೆಯ ಸೆಡಕಿನೊಳು ಸಿಲುಕಿ (ಮದೇಪು. ೨೬-೪). ೨. ಎಡೆ ; ಅಂತರ : ಬಿಡೆಯವಿಲ್ಲದ ಕುಚ ಬಿಗುಹೇಱಿ

ರುತುಕಾಲವಡೆದ ಪುಷ್ಪಿಣಿಯರೊಪ್ಪಿದರು (ವೋಹಕ. ೦೯-೩೨). **ಬಿಡಯ್ಮ₁ :** ೨. ನಿನ್ನಾತ್ಮನೊಡಲುಗೊಂಡಿರ್ಪ ತನಕ್ಕೈಕ್ಯಪದಕೆ ಬಿಡಯುವೆಂತಲ್ಲದಱಿ ನೊಡಲುಪಾಧಿಕದಳಿವ ಪಡೆಯಬೇಕು (ಷಟ್‌ಸ್ಥ. ೬-೯೭). ೩. ವಿರಾಮ; ವಿಶ್ರಾಂತಿ : ಬಿಡಯುವಿಲ್ಲದ ಹೊನ್ನಂಡೆಗಾತಿಯರು ಬೆಂಗಡೆಯ ಸಾರಿದರು ರುಕ್ಮಿಣಿಯ (ಮೋಹಕ. ೦೯-೬೦). ೪. ತಣಿವು ; ತೃಪ್ತಿ: ದಣಿಯದಾತನ ಬೆರಳು ನಾರಾಯಣರವದ ವೀಣೆಯಲಿ ಹೃದಯಾಂಗಣದ ಸೀಮೆಗೆ ಬಿಡಯ ವಾಗದು ಕೃಷ್ಣಪದ ಕೇಳಿ (ಕುವ್ಯಾಸ. ೦-೨೪). [< ಬಿಡುವು]

**ಬಿಡೆಯ್ಮ₂**, ಬಿಡಯ್ಮ, ಬಿಡಿಯ, ಭಿಡಿಯ, ಭಿಡೆ, ಭಿಡೆಯ (ನಾ). ೧. ದಾಕ್ಷಿಣ್ಯ; ಸಂಕೋಚ : ನೀನೇ ಕೆಣಕಿದವನೇ ಶಿವಶಿವಾ ರಾವಣತನೂಭವ ನೆಂಬ ಬಿಡೆಯಕೆ ಸ್ಯೆರಿಸಿದೆನ್ಯೆಸೆ (ತೊರರಾ. ೬-೦೪-೮) ; ಅವನೊಬ್ಬಗೆ ಚಿತ್ತ ದಲಿ ಪರರ ಠಾವೆನಿಪ್ಪಾ ಬಿಡೆಯವಿಲ್ಲ (ಏಕಾಗ ೦೦-೩-೦೨) ; ಬಿಡೆಯಮಿದೇ ತರ್ಕೀ ಪರಿ ಕುಡುವಂದದೆ ಕೊಟ್ಟೊಡಾನೆ ಕೊಂಬವನುಸಿರಾ (ಕಕಂ. ೬-೩೩). **ಬಿಡಯ್ಮ₂:** ೧. "ಬಿಡಯಮೆನಲ್ ದಾಕ್ಷಿಣ್ಯಂ" (ಕಕುಂ. ೨೦೨) ; ಕಡು ಜಾಣಂ ಕಲೆಯೊಳ್ ಸಮಂತು ಕುಶಲಂ ಸಂಗೀತಸಾಹಿತ್ಯದೊಳ್ . . . ಆಂ ಬಿಡಯಕ್ಕೆನ್ನನಿದಂ ದಲೆಲ್ಲರುಸಿರ್ವರ್ ಶ್ರೀ 'ಚಿಕ್ಕದೇವೇಂದ್ರನೊಳ್ (ಚಿತ್ರಗೋ. ೩-೭). **ಬಿಡಿಯ :** ೨. ಲಜ್ಜೆ; ನಾಚಿಕೆ: ದಾನವೇಶ ರೋಷದಿಂ ಬಿಡಿಯವಿಲ್ಲದೆ ಸಭಾಂತರದಿ ಬಿಡಿಯುತ್ತರವ ನುಡಿಯಬಹುದೆ (ನವಮೋ. ೨೭-೬೩). **ಭಿಡಿಯ :** ೧. ಭಿಡಿಯಾ ಸಲ್ಲದು ಎನಗೆ ಕೊಡದ ವ್ಯಾಲೆ ತಿಳಿ ಬಡಿವಾರವೇನು ಭಯಬಡುವ ನಾನಲ್ಲ (ಮೋಕ್ಷಲ. ೨೦-೩). ೩. ಪ್ರೀತಿ ; ಪ್ರೇಮ: ಅವಳ ಮುಂದೆನ್ನಾ ಭಿಡಿಯಾಬಿಟ್ಟಾನೆ ಮರ್ಯಾ ಗಳಾಡಿ ಬಿಟ್ಟಾನೆ (ಶ್ರೀಕೃಕಾ. ೨೪). **ಭಿಡೆ :** ೧. ಇವರು ಭಿಡೆ ವ್ಯಕ್ತಪಡಿಸಿ ದಾಗ . . . ಬಲವಂತಗೊಳಿಸಿದ (ಮೂರುದಾ. ೮) ; ಗಾಬರಿಯ ದನಿಯಲ್ಲಿ ನುಡಿದರು ಬರಿಯೇ ಭಿಡೆಗಾಗಿ (ಅಜೋಲೀ. ೦೫೦); ನಿನಗೆ ಭಿಡೆ ಅನಿಸದಿದ್ರ . . . ಖೋಲೀ ಖಾಲೀ ಮಾಡಿಸಿಕೊಡತೀನಿ (ಗೀತುಗ. ೯). ೨. ಮಾಯಾ ಪಾಶ ಬಿಗುಹೇಟಿ ಮಱುಗಿದನು ಭಿಡೆಯನು ಮಱೆದನು (ಕೌಶಿರಾ. ೬-೫೦). **ಭಿಡೆಯ :** ೧. ರಾಯರು ಅಕ್ಕನ ಭಿಡೆಯಕ್ಕೊಳಗಾದರು (ಕಠಂ. ೩೬೮); ಅನಾಥಬ್ರಾಹ್ಮಣನ ಭಿಡೆಯ ಯಾತಕೆ (ಕರ್ಪಾಕ. ೩೦೦).

**ಭಿಡೆ ಬಿರಸತ್ತು** = ದಯೆ ಮತ್ತು ದಾಕ್ಷಿಣ್ಯ: ಪಿಜತ್ತಾಯರಿಗೆ ಭಿಡೆ_ಬಿರ ಸತ್ತಿಲ್ಲವೆಂದು ನನಗೆ ಖಾತ್ರಿಯಾಯಿತು (ಗಂಗಾಪ. ೧೧). **ಭಿಡೆ ಮುರವತ್ತು** = ಭಿಡೆ ಬಿರಸತ್ತು : ಯಾವ ಭಿಡೆ_ಮುರವತ್ತುಗಳಿಗೆ ಒಳಗಾಗುವುದಿಲ್ಲ (೦೦ಹ. ೨) : ನಿನ್ನ ಭಿಡೆ–ಮುರವತ್ತುಗಳನ್ನು ಅಡ್ಡ ಹಾಕಿ ನಮ್ಮನ್ನು ಬಿಡಿಸುವುದಾದರೆ . . . ಹೇಳುವೆವು (ಇಂದುಮು. ೬೩).

[ < ಪ್ರಾ. ವಿಡ್ಡಾ./ಸಂ. ವ್ರೀಡಾ./ತುಳು. ಬಿಡೆ ]

**ಬಿಡೆಯ್ಮ₃** 'ವಿಡಾಯ' ನೋ.

**ಬಿಡೆಯಂಬಡೆ** (ಕ್ರಿ). ಸೊಗಸನ್ನು ಪಡೆ ; ಶೋಭಿಸು : ಕುಡಿದು ಕೊರಲ್ವರಮುಮರ್ದಂ ಕಡುಬಿಡೆಯಂಬಡೆದು ನಡೆವ ಪೊಸಬೆಳ್ಳುಗಿಲಂತಡಿ ಯಿಡುವಳ್ (ಶಕಂ. ೯-೮). [ಬಿಡೆಯ್ಮ₃ (< ವಿಡಾಯ) + ಪಡೆ₁]

**ಬಿಡೋಜ** (ನಾ). ಇಂದ್ರ; ದೇವೇಂದ್ರ : ರೇವಂತನ ರೇಖೆಯಂ ಬಿಡೋಜನೋಜೆಯನೀಶ್ವರನ ದಕ್ಷತನಮಂ ತನ್ನೊಳಳವಡಿಸಿ (ಪುಣ್ಯಾಸ್ರ. ೬-೫೦ ವ). [ < ಸಂ. ಬಿಡೌಜಸ್ ]

**ಬಿಡೌಜ** (ನಾ). = ಬಿಡೋಜ : '' ಪುರುಹೂತಂ. . .ಬಿಡೌಜಂ ಕೌಶಿಕಂ ಹರಿ ಪಾಕಶಾಸನಂ . . . ತುರಾಷಾಡ್ಮರುತ್ವಾನೆನಲ್ಕೆ ಸುತ್ರಾಮನಕ್ಕುಂ'' (ಮಂಗರಾ. ೦೨-೦) ; ವಿಭವಜಿತಬಿಡೌಜಂ ರೇಚಕಾಂತಾಮನೋಜಂ (ಮದಕ. ೦-೦೩) ; ಕುಡಲಱಿಯಂ ನಿಮಗೆಂತುಂ ಬಿಡೌಜನಾ ಪಾರಿಜಾತ ಕುಜವಮಂ (ಜಗಂ. ೧೩-೨೭). [ ಸಂ. ಬಿಡೌಜಸ್ ]

**ಬಿಡೌಜವಧು** (ನಾ). ದೇವೇಂದ್ರನ ಹೆಂಡತಿ ; ಶಚೀದೇವಿ : ಆಗಳ್ ಬಿಡೌಜವಧು ವಿಧುಮುಖಿ ನೂರ್ಮಡಿಸಿದ ಹರ್ಷೋತ್ಕರ್ಷತೆಗೆಡೆಯಾಗಿ ಮರಾಳಯಾನದಿಂ ಪೋಱಮಟ್ಟಳ್ (ನೇಮಿಪು. ೯-೦೦೫). [ಸಂ.ಬಿಡೌಜವಧೂ]

**ಬಿಡೌಜಸ** (ನಾ). = ಬಿಡೋಜ.

**ಬಿಡೌಜಸರ್** (ಬಹುವ) = ಇಂದ್ರನ ಕಡೆಯವರು; ದೇವತೆಗಳು: ನೇಜೆಯದಿಂದಿಱಿದೆತ್ತಿ ನಿಜೌಜಮನೆ ಬಿಡೌಜಸರ್ಗೆ ತೋರ್ಪಂತಸುಹೃದ್ರಾಜಿ ಯನೆ ವಾಜಿವಾಹಕರಾಜಿ ಮಹಾಜಿಯೊಳ್ ತಳರ್ದುದದ್ಭುತಮೊಗೆಯಲ್ (ರಾಜಶೇ. ೬-೬೫). [ ಸಂ. ಬಿಡೌಜಸ್ ]

**ಬಿಣ್**, ಬಿಂ (ಸಪೂರೂ). ಬಿಣ್ಣಿತು ಎಂಬ ನಾಮವಾಚಕಕ್ಕೆ ಸಮಾಸ ಗಳಲ್ಲಿ ಬರುವ ಆದೇಶರೂಪ : 'ಬಿಣ್ಗೆಚ್ಚಲ್', 'ಬಿಣ್ಪು' ಪರಾ. ಬಿಂ : 'ಬಿಂಗುಂಡು', 'ಬಿಂಪು' ಪರಾ. [ < ಬಿಣ್ಣಿತು ]

**ಬಿಣಕು** (ನಾ). (?) : ಫಣಗಳನು ಹೊಲೆವೀರಬಾಹುವು ಬಿಣಕುಗಳ ಮಾಡಿ ಥರಥರದ ಚೇಷ್ಟೆಗಳ ತೋರಿಸಿ ಪುರದ ವೀಥಿಯೊಳಾಗ ಬಂದನು (ಹಪುಹ. ೦೦೫). [ ? ].

**ಬಿಣಮ್ಮ** (ನಾ). ಒಬ್ಬಾತನ ಹೆಸರು : ಶ್ರೀಧರಜೌವೇರಪುತ್ರಸ್ಯ ಬಿಣಮ್ಮದ್ವೇದಿ (ಎಇ. XVIII, ೩೬೭-೦೭; ಕವಿದು ಕಶ). [ ? + ಅಮ್ಮ₁ ]

**ಬಿಣಯಿತ** (ನಾ). ಒಬ್ಬಾತನ ಹೆಸರು : ಶ್ರೀದಸವಮ್ಮರಸರ ಮಗ ಬಿಣಯಿತನಾಳೆ (ಎಕ. XI, ಜಗಳೂ. ೦೩-೦ ; ಸು. 1010 ?).

[ ℗ ಇದು 'ವಿನಯಾದಿತ್ಯ' ಎಂಬುದರಿಂದ ಬಂದಿರಬಹುದು]

**ಬಿಣಿಕೆ** (ನಾ). ಒಂದು ಬಗೆಯ ಸಸ್ಯ : ''ಬಿಣಿಕೆ ಬಲವತಿಯಕ್ಕು'' (ಮಂಗರಾ. ೪೨-೩೭). [ ? ]

**ಬಿಣಿಲು** 'ಬೀಳಿಲ್' ನೋ.

**ಬಿಣ್ಗುಂಡು**, ಬಿಂಗುಂಡು (ನಾ). ಬಂದರಿನಲ್ಲಿ ಹಡಗನ್ನು ನಿಲ್ಲಿಸುವುದ ಕ್ಕಾಗಿ ಹಡಗಿಗೆ ಸೇರಿದಂತೆ ಇಳಿಬಿಡುವ ದಪ್ಪವಾದ ಕಬ್ಬಿಣದ ಗುಂಡು ; ಲಂಗರು : ಅಂತು ಬಿಣ್ಗುಂ[ಶಾಕಾಂ. ಬಿಂಗುಂ, ಬೀಟ್ಗುಂ] ಡಿಕ್ಕಿದ ಬಹಿತ್ರದಂತೆ ಅಲ್ಲಿಂ ತಳರದೆ ನಿಂತ ತನ್ನ ರಥಮಂ ಕಂಡು (ಅಜಿಪು. ೦೨-೯೫ ವ) ; ಆ ಭುವನತ್ರಯವಿಜಯಿಯಪ್ಪ ರೂಪಾತಿಶಯ ದೊಡನವಮಳ್ಬೆಳೆದಂತೆ ಬಳೆದ ನಿಸರ್ಗ ಶೌಚಾದಿಗುಣಂಗಳಿಂ ಬಿಣ್ಗುಂಡಿಕ್ಕಿದ ಭೈತ್ರಮುಮಂ . . . ಪೋಲ್ತು (ಶಾಂತಿಪು. ೦೦-೯೨ ವ). **ಬಿಂಗುಂಡು :** ಭೈತ್ರಕ್ಕೆ ಬೆಂ[ ಬಿಂ ]ಗುಂಡನಿಕ್ಕಿದಂತಿರಬೇಕು ಹಿರಿಯರು (ಅಪಹಂ. ೬೯-೩೩೩). 'ಬೀಟ್ಗುಂಡು' ಪರಾ. [ ಬಿಣ್ (< ಬಿಣ್ಣಿತು) + ಗುಂಡು ]

**ಬಿಣ್ಗುಂದು** (ಕ್ರಿ). ಗರ್ವವು ಇಳಿ; ಸೋಲು : ಮೊದಲಿಸಿ ನುಡಿಯಲಾಗಿ ಬಿಣ್ಗುಂದಿ ತಿರುಗಿ ಶಿವನಂ ಪತ್ರಮಂ ಬೇಡೆ (ಶೀರವು. ೯-೪೦).

[ ಬಿಣ್ ( < ಬಿಣ್ಣಿತು) + ಕುಂದು₁ ]

**ಬಿಣ್ಗೆಚ್ಚಲ್** (ನಾ). ಹಾಲು ತುಂಬಿ ದಪ್ಪಪುಷ್ಟವಾಗಿರುವ ಕೆಚ್ಚಲು: ಬಿಣ್ಗೆಚ್ಚಲಿಕ್ಕಿ ಕೊಡವಾಲ್ಗಱಿಯದಾವಿಲ್ಲ ನುಣ್ಣಾಡಿವತ್ತಿರದ ಪಶುಪಕ್ಷಿ ಮೃಗಮಿಲ್ಲ ಕಣ್ಗೊಳಿಪ ರಾಮರಾಜ್ಯದೊಳ್ (ಶ್ರಜಿಖಾ. ೦೯-೦೩).

[ಬಿಣ್ (<ಬಿಣ್ಣಿತು) + ಕೆಚ್ಚಲ್]

**ಬಿಣ್ಗೊನರ್** (ನಾ). ದಪ್ಪವಾದ ಚಿಗುರು,–ಕುಡಿ : 'ಬಿಣ್ಗೊನರ್ಗಿಱು' ಪರಾ. [ಬಿಣ್ (< ಬಿಣ್ಣಿತು) + ಕೊನರ್₁]

**ಬಿಣ್ಗೊನರ್ಗಿಱು** (ಕ್ರಿ). ಗಟ್ಟಿಯಾಗಿರುವ ಚಿಗುರೆಂದು ಭಾವಿಸಂ,– ಭ್ರಮಿಸಂ : ಪಣ್ಗೆತ್ತು ಸವಿದುಟಿಯ ಬಿಣ್ಗೊನರ್ಗೆತ್ತು ಬೆರಳ್ಗಳ ಸೋವುವ ಪೆಣ್ಗಳಂ ಬಗೆಯದಾ ನುಣ್ಣಿಗಳೆಸೆವವು (ಗುರುಭ. ೨-೦೫).

[ಬಿಣ್ಗೊನರ್ + ಗಿಱು]

**ಬಿಣ್ಗೊನೆ** 'ಬಿಣ್ಗೊಲೆ' ನೋ.

**ಬಿಣ್ಗೊಲೆ**, ಬಿಣ್ಗೊನೆ (ನಾ). ಹೂವು, ಹಣ್ಣುಗಳಿಂದ ತುಂಬಿರುವ ಗೊನೆ ; ದೊಡ್ಡ ಗೊಂಚಲು ; ದಪ್ಪವಾದ ಗೊನೆ : ತೂಗಿ

ಬಿ[ಣಾಣಂ.ಪ]ಣ್ಣೊಲೆಯಿಂ ಬಳ್ಕುವ ಕೌಂಗು ಕಾಯ್ಗುಡುಗಲಂ ಪೇಱರ್ದ ಚೆಂದೆಂಗು . . . ಎಸೆಗುಂ ವಿದ್ಯಾಧರೋದ್ಯಾನದೊಳ್ (ಅಂಪು. ೧-೬೭); ಬಿಣ್ಣೊಲೆ[ಣಾಣಂ. ನೆ]ಯಿಂ ತೂಗಿ ತೊನೆವ ಕೌಂಗಂ ತನ್ನತ್ತಣ್ಗೆ ಬರೆ ತೆಗೆವ ತೆಱದಿಂ ಕಣ್ಣೊಳಿಸಿದುದೆಳಸಿ ನಾಗಲತೆ ದಾಂಗುಡಿಯಿಂ (ಕಾವ್ಯಾ.ವ. ೨೦೮). **ಬಿಣ್ಣೊನೆ :** ಕುದುರೆಯ ಪಂದಿಯ ವಿಷ್ಟೆಯೊಳೊದವಿದ ಕಿರ್ಚಿಂದೆ ಸೂಜಿಯಿಂ ಕಾಸಿ ಬಿಟ್ಟಿಕ್ಕದಟಿರ್ಲ್ ಬಾಟಿಯ ಗೊನೆ ಪುಟ್ಟಿದೆಡೆಯಸಜಿ ದೂಜಿ ಪಿರಿಯ ಬಿಣ್ಣೊನೆಯಕ್ಕುಂ (ಲೋಕೋಪ. ೬-೨೮); ಬಿಣ್ಣೊನೆ ಗಳನ್ನೊನದಾಡುವ ಕೌಂಗು ಬೇಗ್ಗಳಿನ್ನುಱುಗಿರೆ ಕಾಯ್ತು ಬಕ್ಕೆ (ಎಕ. XI, ದಾವಣ. ೩೫-೩೭ ; ಸು. 1160); ಪಣ್ಣಾಗ್ಯುರ್ ತೀವಿದ ಬಾಟಿಯ ಬಿಣ್ಣೊನೆ . . . ಪಥಿಕರ ಕಣ್ಣೊಳ್ಪಂ ಮನಕೆ ಬಯಕೆಯಂ ಪುಟ್ಟಿಸುಗುಂ (ಚಂದ್ರಪ್ರ. ೦-೦೦೬). [ಬಿಣ್ (< ಬಿಣ್ಣಿತು) + ಗೊಲೆ₂]

**ಬಿಣ್ಣಿತು,** ಬಿಣ್ಣಿತ್ತು (ನಾ). ೧. ಹೊರೆ ; ಭಾರ ; ತೂಕ : "ಭಾರಕೆ ಬಿಣ್ಪು ಬಿಣ್ಣಿತಕ್ಕು" (ಕಬ್ಬಿಕ್ಕ. ೬೨) ; ಲಲನೆಯರ್ಗಂಗರಾಗಮದು ದುರ್ವಹಂ . . . ಕಣ್ಮಲರ್ಗೆ ಕಾಡಿಗೆ ಬಿಣ್ಣಿತು ಪಾದಪಂಕಜ ಕ್ಕಲತೆಗೆ ಭಾರಮೆಂದೊಡಱಿಯಂ ಪೊಗೞಲ್ ಸುಕುಮಾರವೃತ್ತಿಯಂ (ಕಾದಂಪೂ. ೦೦೦೩) ; ತನುಲೇಖೆಗೆ ಚಂದನದಣ್ಪು ಬಿಣ್ಣಿತೆಂಬಲಸಪದಕ್ಕ ಲಕ್ತಕರಸಂ ಪೊಱೆಯೆಂಬಿನಿತೊಂದು ಚಿತ್ರಮಾ ಲಲನೆಗೆ ದೇವಕೀವನಿತೆ ಗಾದುದು ನಿರ್ಭರಪೂರ್ಣಗರ್ಭದೊಳ್ (ಜಗಪ. ೨-೯೯) ; ಬಿಣ್ಣಿತೇನೆಮಗೆ ನಿಮಗೆ ಬಂಧುತನದೊಂದು ಬಿಣ್ಣಗೆಯಿರಲಿ (ಭರತ. ೩೫-೯೬). ೨. ದೊಡ್ಡದು ; ಗಾತ್ರವಾದುದು ; ಭಾರಿಯಾದುದು : ಬಿಣ್ಣಿತು ಕೊನೆ, ಬಿಣ್ಣೊನೆ (ಕಬ್ಬಾ.ಸು. ೩೩೪ ಪ್ರಯೋ). **ಬಿಣ್ಣಿತ್ತು :** ೧. ತನ್ನ ಕಯ್ಯ ಕಳಶಮಂ ಬಳ್ಳಿಯೊಳ್ ಕಟ್ಟಿ ನೀರಂ ತೆಗೆವಾಗಳದು ಪುಲಿ ಪಿಡಿದು ನೇಲ್ವುದುಮದು ಕಯ್ಗೆ ಬಿಣ್ಣಿತ್ತಾದೊಡದಂ ನೋಟ್ಟಿ ನೆಂದು . . . ತೆಗೆಯೆ (ಶಂಶತಂ. ೦೦೯-೪) ; ನುಣ್ಣಿತ್ತು ; ತಣ್ಣಿತ್ತು ; ಬಿಣ್ಣಿತ್ತು (ಶವುರ. ೭೭ ಪ್ರಯೋ). ೨. ಬಿಣ್ಣಿತ್ತಾದಲರ್ಜೊಂಪದ ಕಂಪಂ ಹಣ್ಣ ಹದುಳದಿಂದಾಂತೆಳಸುತ್ತಂ . . . ಸುಳಿಗೆಲರಾ ಬನದೊಳ್ (ಉದ್ಭದೇ. ೨-೨೦).

**ಬಿಣ್ಣತಂಬಡೆ**=ಘನತೆಯನ್ನು ಹೊಂದು ; ಗೌರವಾಸ್ಪದವಾಗಿರು : ಬಿಣ್ಣತಂಬಡೆದ ಭವ್ಯೋತ್ತಮರ್ ಕಡು ಮುನಿದು ಬಣ್ಣಗೆಡಿಸುವರೆ ತಮ್ಮ ವರೊಂದುವೇಳೆಯೊಳ್ಪುಮಾತಂ ನುಡಿದೊಡೆ (ಸಮ್ಯಕ್ತ್ವ. ೦೦-೩೫). **ಬಿಣ್ಣದಂ** = ಘನತೆಯುಳ್ಳವನು : ಲಘುಪಾತ್ರನಾಗಿ ಕಾಗೆಯ ಕೊರ ಲೊಳ್ಕಟ್ಟಿದೊಡೆ ಪಾಱುವವನುಂ ನೆಟ್ಟನೆ ಬಿಣ್ಣದನೆನಿಕ್ಕುಮಾರ್ಹತದಿಂದಂ (ಸಮುಕ. ೦೫-೩೫) ; ಗಾರುಡಮೊಂದನೆ ಕಲ್ಲದನ್ನೆವರೆಗಂ ಜನಕಲ್ಲಂ ವಿದ್ಯೆ ಯಿಂದೆ ಬಿಣ್ಣದನಲ್ಲಂ (ಧರ್ಮಾಮೃ. ೦೨-೦೦೫).

**ಬಿಣ್ಣಿತ್ತು** 'ಬಿಣ್ಣಿತು' ನೋ.

**ಬಿಣ್ದೊಡೆ** (ನಾ). ದಪ್ಪವಾದ ತೊಡೆ ; ತೋರವಾದ ಊರು : ಬಿಣ್ದೊಡೆಯ ಬಡವಾಸೆಯ ಬಳಲ್ಪಡುವಿನ . . . ಬೆಡಂಗಿನ ಬಾಲೆ ಯೊರ್ವಳ್ . . . ಬರುತುಮಿರ್ದಳ್ (ರಾಮಾಶ್ವ. ೯೬-೨೩) ; ಬಿಡಯುದೆ ಕಂಭವೇಱಿ ಬಱಿಕ್ಕಿ ಬಿಗಿವಂತಿರೆ ಸುತ್ತಿ ಪಾಯ್ವ ಬಿಣ್ದೊಡೆಗಳಿನುರ್ಬಿ ಪೆರ್ಬೆಣೆಯ ಪೋಲ್ ಬೆಣೆಗೊಂಡು ಪೊದಟ್ಟಿ ತೋಳ್ಗಳಿಂ . . . ಜಟ್ಟಿಗರ್ ಗರುಡಿಗೋವಳನೀ ನೃಪನೆಂದು ವಂದಿಪರ್ (ಜಕಪ. ೪-೦೩೬).
[ಬಿಣ್ (< ಬಿಣ್ಣಿತು) + ತೊಡೆ₂]

**ಬಿಣ್ನುಡಿ** (ನಾ). ಕೆಚ್ಚಿನ ಮಾತು ; ವೀರೋಕ್ತಿ : ನೀಮೆ ಬಿಲ್ಲಾಳ ಬಲ್ಲಾಳರಪ್ಪಿನಂ ಮೊನೆಯೊಳೆ ಹಯಮಂ ಕೊಳ್ವುದು ರಾಮನಂ ತೋಱಿದೆ ಸಂಧಿಗೊಂದೆಂ ಬಿಣ್ನುಡಿಗೆ ಬೆಱಗಾಗೆಂ (ರಾಮಾಶ್ವ. ೦೯೩-೦೩).
[ಬಿಣ್ (< ಬಿಣ್ಣಿತು) + ನುಡಿ₂]

**ಬಿಣ್ಪಡರು** (ಕ್ರಿ). ದೊಡ್ಡದಾಗು ; ಬೆಳೆ ; ವೃದ್ಧಿಸು : ತಿಣ್ಣಮೊಲೆ ಬಿಣ್ಪಡರೆ ಕಾಲ್ಮಿಂದಗತಿಗಲಸೆ . . . ಪೊಸಗಾಡಿವೆತ್ತಿರ್ದಳೀ ವಣ್ಣಿಸುವೆನು (ಕೃಮಿಶಾ. ೦೮-೩೪). [ಬಿಣ್ಪು + ಅಡರು₁ (< ಅಡರ್)]

**ಬಿಣ್ಪರಿ** (ನಾ). ಪ್ರಾಣಿಗಳು ಬೇಟೆಗೆ ಗಾಢವಾಗಿ ಸಿಕ್ಕಿ ಬೀಳುವ ಜಾಗ.– ಪ್ರದೇಶ : ಹರಿಣೀಲೋಚನೆ ದೀವದಾ ಹರಿಣನೇಂ ಪೆರ್ಗಾಡಿದೀ ಬೀಡು ಬಿಣ್ಪರಿಗಳ್ನೀಣ್ಪರಿ ಶಂಬರಾರಿ ಶಬರಂ ಪುಲ್ಲಂಬು ಕೆಲ್ಲಂಬು ಮದ್ವಿರ ಹಾಪಸ್ಥಿತಿ ಗೋರಿಗೋರಗೆಯೆನಿಪ್ಪಂತಾದುದು (ಅನಂಪು. ೦೦-೯೨).
[ಬಿಣ್ (<ಬಿಣ್ಣಿತು) + ಪರಿ₃]

**ಬಿಣ್ಪು,** ಬಿಂಪು (ನಾ). ೧. ಭಾರ ; ಒಜ್ಜೆ ; ತೂಕ : "ಬಿಣ್ಪೆಂದುಂ, ತಿಣ್ಣಮೆಂದುಂ ಭಾರಂ" (ಶಶಾ. ೬೯-೫೬೬) ; ಎಣಿಕೆಗಳುಂಬಮುಂ ಪಿರಿದುಮಾದ ಪದಾತಿವರೂಥವಾಜಿವಾರಣಬಲದಿಂದಮಿರ್ಮಡಿಸೆ ಧಾತ್ರಿಯ ಬಿಣ್ಪಿನಗೆಂದಿನಂದವಲ್ಲಣಕಮಿದೆಂದು . . . ಬೇಸಱಿಂ ತಿಣುಕಿದನಾನಲುಮ್ಮಳಿಸಿ ಶೇಷನಶೇಷಮಹೀವಿಭಾಗಮಂ (ಶಂಶಶಾ. ೬-೯೯) ; ನಡು ನಡುಗೆ ಬಿಗಿದೊಗೆದ ಪೆರ್ಮೊಲೆಯ ಬಿಣ್ಪಿನಿಂ . . . ಚೆಲ್ವೆಸೆಯೆ ಕರಮೆಸೆದರಬಲೆಯರ್ (ಅಜಪು. ೪-೭ ಪಶ್ಚ). ೨. ದೊಡ್ಡ ಗಾತ್ರ, – ಆಕಾರ : ಸ್ತನದ ಬಿಣ್ಪನೆ ನೋಡಿ ಮನಮಿಕ್ಕುವರ್ ವಿಟರ್ ಕನಕಪಂಕಜದ ಬಿರಿಮುಗುಳ ನನೆ ನೋಡಿ ಮನಮಿಕ್ಕುವಂತೆ ಮಱಿದುಂಬಿ (ಉದ್ಭಟಿ. ೦೦-೯೪). ೩. ದೃಢವಾದುದು ; ಮಜಬೂತಾದುದು: ಗಟ್ಟಿಯಾದುದು : (ಕ). ೪. ಅತಿಶಯ ; ಆಧಿಕ್ಯ: ಹೆಚ್ಚಳ: ಭೂತಳ (ಲ)ಸತಿಗೊಳ್ಪನಾಳ್ದ ನವಮೇಖಳೆಯೆಂಬ ಸಮುದ್ರದಂತೆ ಕೊಂಡಲಿ ಗೆಱೆಯೊಪ್ಪಿ ತೋಱುವುದೆನೆ ಬಿಣ್ಪನೊಳಾವರಿಸಿರ್ದ್ದ ಪೆಂಪಿನೊಳ್ (ಎಚ. XIII, ೩೩೦-೩೪ ; 929) ; ನಿನ್ನ ಪೆಂಪಿನ ಬಿಣ್ಪಂಗದಾರ್ ಮರುಳ್ಗೆ ಆಸರ್ (ಕಾದಂಅ. ೦೦೦) ; ಈಗಳಾತನ ಪುರುಷಾರ್ಥದ ಪುರುಳುಂ . . . ಪರಾಕ್ರಮದ ಬಿಣ್ಪುಂ ಕರತಳಾಮಳಕವಾಗಿರ್ದಪ್ಪುದು (ಶಂಶತಂ. ೯೫-೨೦). ೫. ವೈಭವ ; ಆಡಂಬರ : ತನ್ನಹಾರುದ್ರಗಣಭರವಮನೀ ನಾಳ್ಗಳರಸುಗಳ ಬಿಣ್ಪಂ ಶಿವನ ಸಭೆಯುಲ್ಲದಾವ ಲೋಕಂದಳೆದೊಡಂ ಮುಳ್ಗಿ ಬೀಳವೆ ಸಕಲ ದಿಗ್ಗಜಂಗಳ್ (ಶಬಪು. ೨೯-೩೩). ೬. ಹಿರಿಮೆ ; ಮಹತ್ತ್ವ ; ಗುರುತ್ವ : ಮುಂದಣ ಕಜ್ಜದ ಬಿಣ್ಪುಮನಱಿದುಭೋರುಹ ನಾಭಂ ಶುಂಭದಂಭೋಧರಧ್ವನಿಯಿನಿಂತೆಂದಂ (ಶಂಶಶಾ. ೬-೨೨ ವ) ; ಕಂಡಿಹೆಯಾ ಈ ಸೂಕ್ಷ್ಮವ ಈ ಭವ್ಯತೆ ಬಿಣ್ಪ (ಕರುಣ್ಯಾ. ೬೯-೦೬). ೭. ಘನತೆ ; ಗೌರವ ; ದೊಡ್ಡಸ್ತಿಕೆ : ಇಂದುಗುಪಶಾಂತತೆ ಮೇರುಗೆ ಬಿಣ್ಪು ತನ್ನದೊಂದಿರವಿನೊಳಾದುವೆಂಬಿನಮುದಾರಗುಣಪ್ರಕರಂಗಳಿಂದ ಳಂಕರಿಪ ನಿಜಪ್ರಭಾವಮಹಿಮೋನ್ನತಿಯಿಂದೆಸೆದಂ ಮುನೀಶ್ವರಂ (ಕಾದಂಪೂ. ೨೯೩) ; ನೀವಪ್ಪೊಡೆ ಪೆಂಪಿನೊಳಂ ಬಿಣ್ಪಿನೊಳಂ ಸಾಹಸದೊಳಂ ಮರುತಂಗೆ ಪಿರಿಯರ್ (ಶಂಶತಂ. ೨೫೯-೦೪) ; ಸಲೆ ಮೆಱೆವುದಿಂತು ಹಿಮವನ್ನಗೇಂದ್ರಂ ಪೂರ್ವಜಲಧಿ ಪಶ್ಚಿಮವಾರ್ಧಿಗಳ ಕೂಡಿಕೊಂಡು ನಿರ್ಮಲಶಿವನ ಮಾವ ನೆನಿಸುವ ಬಿಣ್ಪಿನಿಂದೆಸೆವುದು (ಶಾಪಶಂ. ೨-೨). ೮. [ಛಂದ] ಉಚ್ಚಾ ರಣೆಗೆ ಎರಡು ಹ್ರಸ್ವಾಕ್ಷರಗಳಷ್ಟು ಕಾಲವನ್ನು ತೆಗೆದುಕೊಳ್ಳುವ ಸ್ವರ ; ದೀರ್ಘಾಕ್ಷರ ; ಗುರು : "ಕೊಂಕು ಬಿಣ್ಪೆನೆ ಗುರುವಲಾ" (ಕಬ್ಬಿಮಂ. ೩೬) ; ಬರೆ ವಕ್ರಂ ಶಿಖಿಯೊಂದು ಕೊಂಕುಕಡೆಯಿಂದಾ ಮಾರುತಂ ವ್ಯೋಮಮೊಪ್ಪಿರೆ ಬಿಣ್ಪಂತೆರಡಾದಿಯೊಳ್ (ಛಂದೋಂಬು. ೦-೩೯). **ಬಿಂಪು:** ೪. ಕೆಂಪ ಕಾಱಿದವಾಲಿಗಳು ಮ್ಯೆ ಕಂಪಿಸಿದುದಡಗಡಿಗೆ ರೋಷದ ಬಿಂಪಿನೊಳು ತಗ್ಗಿದನು ಗುಟಕಿಕ್ಕಿದನು ಹುಬ್ಬುಗಳ (ಕುಮಾ.ಭೀ. ೬-೨೩). ೫. ××× ಪುರಿ ಪೆಂಪಿನಲು ಧರಣೆ ಬಿಂಪಿನಲು ಜಳರಾಸಿ ಗುಂಪಿನಲು ×× ದೇವನಂತಿಪ್ಪರ್ ××× (ಕೌಇಇ. XV. ೫೯-೫೦ ; 1148). ೯. ಗಾಢತೆ ; ತೀವ್ರತೆ : 'ಝೊಂಪಿಸುವ ಸಿರಿಮೊಗದ . . . ನಿಜ

ರಾಜತೇಜದ ವಿಪುಳವೇದಸಯು ಬಿಂಪಗಿಪ ಬೇಸಜಿನ ತುಱುಗಿದ ತಂಪಿನ ಗ್ಗಳಿಕೆಯ ವಿಫಾತಿಯು ರ್ಘೊಂಪಿನಲಿ ಹುದುಗಿದ ಮಹೀಶನ ಕಂಡಸಾ ವಾರ್ಥ (ಕುವ್ಯಾ.ಕ. ೧೬-೫) : ಕುಸುಮಸೌರಭಸಾಂದ್ರದಿಕ್ತಟದ ಬಿಂಪು ದುರ್ಧರವಾಯ್ತು (ಶಿಭಾಗ. ೧೦-೩-೩೩). [ಬಿಣ್ +-- ಪ್ಪು]

**ಬಿಣ್ಪುಗೊಳ್** (ಕ್ರಿ). ಅಧಿಕವಾಗು ; ಹೆಚ್ಚಾಗು ; ತೀವ್ರವಾಗು : ಜನಿಯಿಸಿದತ್ತು ಚಿತ್ರಮತಿದೇವಿಗೆ ಗರ್ಭಮದಿಂತು ನಾಡೆಯುಂ . . . ಜನಿ[ಯಿಸೆ] ಬಿಣ್ಪುಗೊಂಡಲಸಮಾ ನಿಜನಿರ್ಮಳಚಿತ್ತವೃತ್ತಿಯೊಳ್ (ಕುಸುಮಾ. ೧೨-೨೫). [ಬಿಣ್ಪು + ಕೊಳ್$_1$]

**ಬಿಣ್ಪುವೆಱು** (ಕ್ರಿ). ಭಾರವಾಗು : ತೆರೆ ಮಸಗಿ ಬಾಷ್ಪಜಳಮೊತ್ತರಿಸೆ ಮೊದಲ್ ನಾಂದು ಬಿಣ್ಪುವೆತ್ತೆಮೆದೊಱೆಯುಂ ಭರದಿಂ ತಾಂಗಿ ನಿಜಾದ್ರ್ರಾಂ ತರಂಗಧರಮುಂ ನಿವೇದಿಪಂತೀಕ್ಷಿಸಿದಂ (ವರ್ಧಕೃ. ೯-೯೭). [ಬಿಣ್ಪು+ಪೆಱು$_1$]

**ಬಿಣ್ಪೇಱು** (ಕ್ರಿ). ೧. ಭಾರವಾಗು ; ತೂಕದಿಂದ ಕೂಡಿರು : ನನೆಯಂ ಪೂಗೊಂಚಲಂ ಪೊತ್ತು ನಟ್ಟನ ಬಿಣ್ಪೇ[ಱಾಣಂ. ಲ್ಪೇ]ಱಿದ ಬಳ್ಳಿಗೊಂಬು . . . ಚೆಲ್ವಾದುದಿದಿವ್ಯಾವಿನೊಳ್ (ಕಬ್ಬಿಗಾ. ೬೨).
೨. ಹೆಚ್ಚಾಗು ; ಅಧಿಕಗೊಳ್ಳು : ಆಳಿಜನಂ ಮಾಡ್ಪ ಶಿಶಿರೋಪ ಚಾರದ ತಣ್ಪಿಂಗೆ ಬಿಣ್ಪೇಱುವ ವಿರಹಾಗ್ನಿಯಿಂದಂ ಕಂದಿ ಕುಂದಿ (ಉದ್ಭಟ. ೬-೩೦ ವ). ೩. (ಅಲಂ) ಸಡಗರಿಸು : ಉತ್ಸಾಹಗೊಳ್ಳು : ವಿದ್ವಜ್ಜನಂ ನೆರೆದಿಂಪೇಱೆ ನೆಗಬ್ದಿ ಬೀರವಡೆಗಳ್ ಬಿಣ್ಪೇಱೆ . . . ಪಟ್ಟವಣೆಯಂ ತಾನೇಱಿದಂ ಸದ್ಗುಣಾಕರಂ (ಜಕವಿ. ೨-೯೫). [ಬಿಣ್ಪು + ಏಱು$_1$ (<ಏಱ್$_1$)]

**ಬಿಣ್ಪೊಱೆ** (ನಾ). ಭಾರವಾದ ಹೊರೆ ; ತೂಕವಾದ ಹೊರೆ : ಕೂಸಿನ ತಲೆಯೊಳ್ ಬಿಣ್ಪೊಱೆಯನಿಟ್ಟವೋಲಸುಖಕರಂ (ಕವಿರಾ. ೨-೭) ; ನಟ್ಟ ಕೂರ್ಗಣೆಯ ಬಿಣ್ಪೊಱೆಯಿಂದೆ ಬಟಬಿಲ್ದಂ . . . ಸಿಂಧುಜಂ (ಶಂಕರ. ೧೧-೯೫) ; ಇಂತೀ ದುಃಖದ ಬಿಣ್ಪೊಱೆಗಾನಲ್ ಪೆಗಲನ್, ಓ ಸ್ಯೂಸ್ ಎನ್ನಯ ತಪ್ಪೇನ್ (ಬಿಲ್ಪಕ್ರ. ೩೦-೬೩೦). [ಬಿಣ್ (< ಬಿಣ್ಣಿತು)+ಪೊಱೆ]

**ಬಿಣ್ಪಡು** (ಕ್ರಿ). ದೊಡ್ಡದಾಗು ; ಗಾತ್ರವಾಗಿ ಬೆಳೆ : ಪಣೆಗಿಟ್ಟ ಪೊಂಬೊಟ್ಟನೆಡೆಗಟ್ಟಿಯಾ ದಿಟ್ಟ ಬಿಣ್ಪಟ್ಟ ಮೊಲೆಗೆ ತೊಟ್ಟುಡಿಗೆ ಪಟ್ಟ ನೆಱೆದುಟ್ಟುಕೊಂಡೊಟ್ಟಜದ ಪಟ್ಟಣಗರಿಟ್ಟೆಡೆಯ ಬಟ್ಟೆಯಂ ಮೆಟ್ಟಿ ಬರೆ(ಶ್ರೀರಾಮ. ೯-೯). [ ಬಿಣ್(<ಬಿಣ್ಣಿತು) + ಪಡು$_1$ ]

**ಬಿಣ್ಮಾಣಿಕ** (ನಾ). ದೊಡ್ಡದಾಗಿರುವ ಮಾಣಿಕ್ಯ: 'ಬಿಣ್ಮಾಣಿಕವಡೆ' ಪರಾ. [ಬಿಣ್ (<ಬಿಣ್ಣಿತು) + ಮಾಣಿಕ]

**ಬಿಣ್ಮಾಣಿಕವಡೆ** (ಕ್ರಿ). ದೊಡ್ಡದಾದ ಮಾಣಿಕ್ಯವನ್ನು ಹೊಂದು : ಮಱಿದುಂಬಿಗಳ್ ಪಂಚಮದ ನುಣ್ಚರಕ್ಕೆ ಬಿಣ್ಮಾಣಿಕೆ[ಕ]ವಡದ ನೂಪುರಕಲಾಪ ತುಲಾಕೋಟಿಮಂಜರಿಕಾಪುಂಜಶಿಂಜಾನದೊಳಂ (ಅನಂತ. ೩-೯೫ ವ). [ಬಿಣ್ಮಾಣಿಕ + ಪಡೆ$_1$]

**ಬಿಣ್ಮಾಲೆ** (ನಾ). ದೊಡ್ಡ ಹಾರ; ಭಾರವಾದ ಹಾರ : ಗೋಣ್ಮೊದಲ ನೆಲುದಲೆಯ ಬಿಣ್ಮಾಲೆಗಳ್ಗಿತ್ತ ತಣ್ಮೆಯ್ಮುಟ್ಟಮುಗಳಾಣ್ಮನೆನಿಸಿದ ಸ್ಮರನ ಮಣ್ಮಾಡಿದುಱೆ ಸೊಕ್ಕು ಪೊಣ್ಮೆದಾನೆಯ ಸೀಳ್ಪು ಜಾಣ್ಮೆಱೆವ ನೀಕ್ಷಿಸಿದನು (ನಂದಿಮಾ. ೦೬-೦೫). [ಬಿಣ್ (<ಬಿಣ್ಣಿತು) + ಮಾಲೆ]

**ಬಿಣ್ಮೊಲೆ** (ನಾ). ದೊಡ್ಡ ಮೊಲೆ; ತೋರವಾದ ಸ್ತನ : ಬಿಣ್ಮೊಲೆಯ ಮಿಗೆ ಬಟ್ಟಮೊಲೆಯ ತಂಗಾಯ್ಮೊಲೆಯ ನುಣ್ಮೊಲೆಯ . . . ವ್ಯೆಸಿಕ ದೊಳುಣ್ಮುವ ಗುಣಂಗಳ ಮಹಾಪ್ರೌಢವನಿತೆಯರ್ ಕಣ್ಗೆಸೆವರಲ್ಲಿಗಲ್ಲಿ (ಜಿನಪು. ೧೦-೨೦) ; ಮೇಲುದಂ ಬಿಣ್ಮೊಲೆಗಳನೋಸರಿಸೆ ನಿಜೀಯ ಬಿಗಿ ಪ್ಯೆಸರಿಸೆ ಪೆಣ್ಮಂಚವಂಚಿದುಪ್ಪುಳ್ವಾಸಿಗೆಳೆದೊಯ್ದಾನಿರ್ಪುನಂ ಬಲ್ಪಿನಿಂದೆ (ಕೈಪಿಡಿ.೦೦-೦೯). [ ಬಿಣ್ (< ಬಿಣ್ಣಿತು) + ಮೊಲೆ$_1$]

**ಬಿತ್ತ** 'ಬಿಟ್ಟು' ನೋ.

**ಬಿತ್ತಣ**, ಬಿತ್ತನೆ, ಬಿತ್ತಾಣ (ನಾ). ೧. ಬೀಜವನ್ನು ಭೂಮಿಯಲ್ಲಿ ಬಿತ್ತುವಿಕೆ : [ಕೆಯ್ಯೊಳ್] ಪದಂಬಡೆವಂತೆ ಬಿತ್ತಣದಂತೆ ಸಸಿಯಂತೆ (ರವರ್ಣವ್ಯ. ೧೨-೨೪). ೨. ಬೀಜ ; ಬಿತ್ತ : ಕುಂಬಳದ ಹಣ್ಣಿನ ತೊಕ್ಕು ಒಳಗಣ ದುಡ್ಡು ಬಿತ್ತಣಗಳ ಸಹ ತೆಗೆದು (ಸಕಶ. ೨೨೫).
**ಬಿತ್ತನೆ** : ೧. ಭೂಮಿಯನ್ನು ಸಮ ಮಾಡಿದ ನಂತರವೇ ಬಿತ್ತನೆ ಮಾಡ ಬೇಕು (ವ್ಯವಸಾ. ೨೦) ; ಮಳೆಯಿಲ್ಲದೆ ಬಿತ್ತನೆಯ ಕಾಲ ಮುಗಿಯಿತು (ಜನಪಾ. ೩೮). **ಬಿತ್ತಾಣ** : ೧. ಈ ಘರವಲಿ ಗೌಡು ಭೂಮಿ ಆಯ್ದು ದಿನದ ಬಿತ್ತಾಣ ಈ ದೇವರಿಗೆ ಸೋತ್ರವ ತೆತ್ತುಕೊಮ್ಬರು (ಎಕ. XI. ಚಿತ್ರದು. ೩-೩೩; 1356). [ಬಿತ್ತು$_1$ + – ಅಣ]

**ಬಿತ್ತನೆ** 'ಬಿತ್ತಣ' ನೋ.

**ಬಿತ್ತರ**, ವಿತ್ತರ (ನಾ). ೧ ವಿಸ್ತಾರ : ಹರಹು ; ವ್ಯಾಪ್ತಿ : "ಬಿತ್ತರ ಮೆಸಲ್ . . . ವಿಸ್ತಾರಮಕ್ಕುಂ" (ಕಶಶ. ೮೦) ; ಸಂಪತ್ತಿನ ಬಿತ್ತರದೆತ್ತಿವ ಮುತ್ತಿನ ಮಂಡವಿಗೆ ಪೊಬಿಲ ಮನೆಗಳೊಳೆಲ್ಲಂ (ಶಂಕರಾ. ೩-೨) ; ಈ ಕಾವ್ಯಮುಂ ಬಿತ್ತರದಿಂ ತಾನೊಲ್ದು ಪೇಳ್ದಂ ಶಿವಕವಿ ಹರದೇವಂ (ಗಂಕ. ೦-೩೩). ೨. ಅತಿಶಯತೆ ; ಹೆಚ್ಚಳ ; ಆಧಿಕ್ಯ : 'ಬಿತ್ತರಂಬಡೆ', 'ಬಿತ್ತರಿಕೆ' ಪರಾ. ೩. ಪೀಠ ; ಆಸನ : 'ಬಿತ್ತರಂಗೆಯ್' ಪರಾ. ೪. ಒಯ್ಯಾರ ; ಬೆಡಗು : 'ಬಿತ್ತರ್ರಿ' ಪರಾ. **ವಿತ್ತರ** : ೧. ಅರಸಿ ಯರ ಸುಕುಮಾರಕರನಾದರಿಸಿ ಮಧುರರಸೋಕ್ತಿಯಲಿ ವಿತ್ತರದ ನುಡಿಗಳ ನುಡಿದು (ಕುವ್ಯಾಸ. ಶಂತ-೧೬-೪೩). [< ಸಂ. ವಿಸ್ತರ./ಪ್ರಾ. ವಿತ್ಥರ]

**ಬಿತ್ತರಂಗೆಯ್** (ಕ್ರಿ). ೧. ವಿವರವಾಗಿ ಹೇಳು,— ನಿರೂಪಿಸು : ಮೃಡನಿಂತು ಬಿತ್ತರಂಗೆಯ್ಪು ರುದ್ರಾಕ್ಷೆಯಂ ತೊಡಿಸಲು (ಸೌಂದರ್ಯ. ೬-೩೮).
೨. ಆಸನವಾಗು ; ಪೀಠವಾಗು : ಯೋಗಾಭ್ಯಾಸಂಗೆಯ್ವ ಯೋಗೀಂದ್ರ ಬೃಂದಕ್ಕೆ ಯೋಗಾಸನವಾಗಿ ಸುತ್ತುಗೊಂಡು ಬಿತ್ತರಂಗೆಯ್ವಂತಿರ್ದ ಭೋಗೀಂದ್ರವೃಂದಮುಮಂ (ಶಂಕರ. ೦೦೯-೯). [ಬಿತ್ತರ + ಕೆಯ್$_1$]

**ಬಿತ್ತರಂಗೊಳಿಸು** (ಕ್ರಿ). ವಿವರವಾಗಿ ನಿರೂಪಿಸು ; ವಿಶದೀಕರಿಸು : ರಹಸ್ಯಮನಾದೊಡಂ ತಮ್ಮ ಮನದೊಳ್ಮರೆಮಾಜದೆ ಬಯಲ್ಗೆಯ್ದು ಬಿತ್ತರಂಗೊಳಿಸಲಿ ಎಂದು ಶಾಪವನಿತ್ತು (ಭಾರತಾಂ. ೨೨-೬); ನಿಗಮಾ ತಾರ್ಥವ ಬಿತ್ತರಂಗೊಳಿಸುವ ಗ್ರಂಥಂಗಳಂ (ವ್ಯಾಸೂಮ. ೦-೦೩).
[ ಬಿತ್ತರ + ಕೊಳ್$_1$ + — ಇಸು$_3$ ]

**ಬಿತ್ತರಂಬಡೆ**, ಬಿತ್ತರವಡೆ (ಕ್ರಿ). ೧. ವಿಸ್ತಾರವನ್ನು ಹೊಂದು: ದೊಡ್ಡದಾಗು : ಧವಳತೆಯನಾಂತ ಮುಗಿಲ ಮೊತ್ತಮೊತ್ತಲುಂ ಬಿತ್ತರಂ ಬಡೆಯ (ಶಾರಪು. ೯-೬೬ ವ) : ತಳೆಗುಂ ತೋಕೆಯ ಬಿತ್ತರಂಬಡೆದು ಬಿತ್ತಿತ್ತೆಂಬವೋಲಿರ್ದ ಪೆರ್ಬೊಳೆ (ಶಾಕುಂತ. ೦೦೨-೦೬೦). ೨. ಅತಿಶಯ ವಾಗು; ಶ್ರೇಷ್ಠತೆಯನ್ನು ಪಡೆ : ಸಂಪಗೆಯ ಮುಗುಳನಗೆಗಳಿಂ ತೆತ್ತಿಸಿ ಬಿತ್ತರಂಬಡೆದ ಜವಳಿವಡಿಗಳೊಳಿಂ (ಚಂದ್ರಕೃ. ೭-೯೫ ವ): ಸೂಳಱಿದೇಱುವ ಸುತ್ತೇಱುವ ಬಿತ್ತರಂಬಡೆದ ವಾಹಳಿತನದೊಳ್ (ರಾಜಶೇ. ೬-೦೦ ವ).
**ಬಿತ್ತರವಡೆ** : ೧. ಬಿತ್ತರವಡೆವೀ ಪಟ್ಟಣದೊಳಗೊರ್ವನುತ್ತಮನಾಯಕ ನಿಹನು (ಕಂನವಿ. ೯-೪೫). ೨. ವ್ರತದೇಳ್ಗೆಯಿಂತು ಬಿತ್ತರವಡೆದುದೊ ಎನೆ ಸತಿಯರು ಜಸವಡೆದಿಹರು (ಹರಿಶ. ೨-೦೯). [ಬಿತ್ತರ + ಪಡೆ$_1$]

**ಬಿತ್ತರಂಬೆಱು**. ಬಿತ್ತರವೆಱು (ಕ್ರಿ). ೧. = ಬಿತ್ತರಂಬಡೆ ೧ : ಕಟ್ಟಿಲೆಯ ಕಾರಾಗಾರದಂತೆ ಬಿತ್ತರಂಬೆತ್ತು ಬಿಚ್ಚತಂ ಪರ್ಮಿದ ತವಸಾಳ ಮಾಳಾಪರಂಪರೆಗಳಿಂ (ಚಂದ್ರಕೃ. ೧-೦೦೫ ವ). **ಬಿತ್ತರವೆಱು** : ೨. = ಬಿತ್ತರಂಬಡೆ ೨ : ನವೀನಚೀನದಿಂ ಬಿತ್ತರವೆತ್ತ ಮೇಲ್ಗುಡಿ . . .ವಿರಾಜಿತ ಮಾಯ್ತು ವಿವಾಹಗೇಹದೇಳ್ (ರಾಜಶೇ.೯-೨). [ಬಿತ್ತರ + ಪೆಱು$_1$]

**ಬಿತ್ತರವಡೆ** 'ಬಿತ್ತರಂಬಡೆ' ನೋ.

**ಬಿತ್ತರವೆಱು** 'ಬಿತ್ತರಂಬೆಱು' ನೋ.

**ಬಿತ್ತರಿ₁** (ನಾ). ಗದ್ದುಗೆ ; ಸಿಂಹಾಸನ : "ಪಟ್ಟವಣೆಯೆಂದುಂ, ಬಿತ್ತರಿಯೆಂದುಂ ಸಿಂಹಾಸನಂ" (ಶಬ್ದಮ. ೬೦-೩೨೩): ಅಬ್ಜದೆಳೆಯಲಿಗಳ್ ಬಿತ್ತರಿಗಳೊಳರಸಿಯರ್ ನೆವ್ಸಿ (ಶಾಂತಿಪು. ೮-೩); ಈ ಪಟ್ಟದ ಬಿತ್ತರಿಯನ್ನು ನೀನು ಆರೋಹಣ ಮಾಡಬೇಕು (ಬಿಟ್ಟಿಅ. ೧೦೦-೧೦).
[< ಬಿತ್ತರ]

**ಬಿತ್ತರಿ₂** (ನಾ). ಬೆಡಗುಗಾತಿ; ಒಯ್ಯಾರಿ : ಬಿ[ಶಾಂತ. ಭಿ]ತ್ತರಿಯರೆದೆ ಗತ್ತರಿಯರಾ ಪೊತ್ತು ಹಾದರಗಿತ್ತಿಯರು ಪ್ರಪ್ರಕೃತಕಾತಿಯರು (ಬಸವು. ೪೦-೩೫) ; ಕೆಲರು ಬಿತ್ತರಿಯರು ಅತ್ತೆಮಾವಂದಿರಂ ಮರೆಯಿಸಿ (ಸೌಗಂ. ೦೮೬-೩). [ಬಿತ್ತರ + — ಇ₂./ತೆಲು. ಬಿತ್ತರಿ]

**ಬಿತ್ತರಿಕೆ** (ನಾ). ೧. ವಿಸ್ತಾರವಾದ ನಿರೂಪಣೆ : ಸಂಚದೊಳ್ ಸುಸಂಚನೆನಿಸಿ ಕರಂಗಳ ಬಹುರೇಖೆಯು ಚಾರಣೆಯು ಥಿಕ್ಕವಣೆಯು ನೇವಣೆ ಬೊಲ್ಲವಣೆಯು ಬೆಡಂಗು ಬಿತ್ತರಿಕೆಯುಂ ಬೀಜು ಬಾಜಿಸುತ್ತಿರೆಯುಂ (ಶಾಂತೀಶ್ವ. ೭-೯೩ ಪ). ೨. ಅತಿಶಯ ; ಆಧಿಕ್ಯ ; ಹೆಚ್ಚುಗಾರಿಕೆ : ತನ್ನುರವುನುರ್ಚಿದೊಡಚ್ಚರಿದಟ್ಟನೆಚ್ಚ ಬಿತ್ತ[ಶಾಕ. ಚ್ಚ]ರಿಕೆಗಮಾತೆಱಿ ಮುರಿದ ದಂತಿಗಪಾ ವನದೊಳ್ ವನೇಚರಂ (ಸೂಕ್ತಿಸು. ೩-೦೫೮).
[ಬಿತ್ತರ + — ಇಕೆ]

**ಬಿತ್ತರಿಗೆ₁** (ನಾ). ಪೀಠ : ಆಸನ : "ಬಿತ್ತರಿಗೆ—ವಿತರ್ದಿಕಾ = ವಿಷ್ಟರ" (ಶಬ್ದಕೋ. ೩೦); ಬೊಂದರಿಗೆ ಪಟಿಯ ಬಿತ್ತರಿಗೆ ಕರಂ ಪೆರ್ಚುವ ಮಹಿಮೆಯನೆಯ್ದಿ ನಿಮಿರ್ಚೆ (ಪಂಪಭಾ. ೦೪-೨೪); ಬಿತ್ತರದ ಬಿತ್ತರಿಗೆಯೊಳೊತ್ತರದ ಗಾಡಿಯಿನೊಪ್ಪಿರ್ದ ರಾಯಂ . . . ಪೇಟಿಂದೊಡೆ (ರಾಮಾಶ್ವ. ೦೯೨-೮).
[<ಸಂ. ವಿತರ್ದಿಕಾ]

**ಬಿತ್ತರಿಗೆ₂** (ನಾ). ಒಂದು ಬಗೆಯ ಸಸ್ಯ : (ವೃಕ್ಷಶಿ. ೨೦-೩೬೦).
[?]

**ಬಿತ್ತರಿತನ** (ನಾ). ಒಯ್ಯಾರ; ಬೆಡಗು : ಏಳೇ ಸಾಕು ನಿನ್ನ ಬಿತ್ತರಿತನ (ಮಾಮರಾ. ೦೪೬). [ಬಿತ್ತರಿ₂ + — ತನ]

**ಬಿತ್ತರಿಸು** (ಕ್ರಿ). ೧. ವಿಸ್ತರಿಸು ; ಹರಡು : "ಬಿತ್ತರಿಸು—ವಿಸ್ತಾರೇ" (ಶಮಥಾ) ; ಅದಱಿಂದೆನ್ನ ರಾಜ್ಯೋದಯಂ ಬಿತ್ತರಿಸುತ್ತಿರ್ಕುಂ (ಅಜಿತ. ೦೨-೫) : ಪರಿಮಳಮನೆಣ್ದೆಸೆಗೆ ಬಿತ್ತರಿಸುವ ನನೆಗಣೆಗಳಿಂದೆ ಗಿರಿಪತಿತನಯಾ ವಿರಹಾತಪಮೊಗೆಯಲ್ (ಗಿರಿಕ. ೭-೭೦) ; ಅನಂತಸತ್ತ್ವ . . . ಬಿತ್ತರಿಸುತಿಹುದು ಹೊಸಹೊಸತನವನೆಡೆವಿಡದೆ ನಿತ್ಯನಿತ್ಯವು (ಮಂಕುತಿ. ೯೨). ೨. ವಿವರಿಸು; ನಿರೂಪಿಸು: ಕೇಳ್ವಂಗೆ ಬಿತ್ತರಿಪಂಗಾದ ಮಳುಂಬಮಲ್ತೆ ಭಗವಜ್ಜನ್ಮಾಭಿಷೇಕೋತ್ಸವಂ (ಆದಿಪು. ೭-೦೦೦); ನೀವೆತ್ತಣವರೇನೆಂದು ನಿಮ್ಮಭಿಧಾನವೇನಹುದು ಬಿತ್ತರಿಸಿ ಹೇಳು (ಕುವ್ವಾಸ. ೫-೩೦); ಮುನ್ನಂ ಶೇಷಂ ವಾತ್ಸ್ಯಾಯನಂಗೆ ಪೇಟ್ದನದನೆಯೆ ನಿನಗೆ ಬಿತ್ತರಿಪೆಂ (ರಾಮಾಶ್ವ. ೫-೦೦). ೩. ಹಿರಿಮೆಯನ್ನು ಪಡೆ : ಇತ್ತಲಾ ಸಭೆಯೊಳಗೆ ಸಿಂಹಾಸನದ ಮೇಲೆ ಬಿತ್ತರಿಪ ಕನಕಮಣಿ ಭದ್ರಾಸನದ ಮೇಲೆ ಸಕಲನೃಪ ರಾಜಪುತ್ರರ ನಡುವೆಯೊಪ್ಪಿದಂ (ನಂಬಿರ. ೩-೯೮). ೪. ಸಿದ್ಧಪಡಿಸು ; ಅಣಿಮಾಡು: ಲವಲವಿಕೆಯುಂ ಪರಿಯಣಮುಂ ಬಿತ್ತರಿಸಲುಂ . . . ಪೇಟ್ಪುದಾಗಳ್ (ಆದಿಪು. ೭-೨೦ ಪ); ಬಿತ್ತರಿಸಲ್ಕೆವೇಡಾ ಪರೂಢೋತ್ಕರಮಂ ಬಲಿದೊಡ್ಡವೇಟ್ ಪದಾತಿಯಂ (ಕಾವ್ಯಾವ. ೯೦೩). ೫. ವ್ಯಕ್ತವಾಗು; ಗೋಚರಿಸು: ತತ್ಕಪೋಲದೊಳ್ಬಿತ್ತರಿಸಿದುವು ಕೊನರ್ತ ಬೆವರ ಬಿಂದುಗಳಾಗಳ್ (ಕಾದಂಪೂ. ೭೫೭). ೬. ಕೊಂಡಾಡು ; ಕೀರ್ತಿಸು : ಹರಿ ಹರ ಹಿರಣ್ಯಗರ್ಬ್ಬರನುರವಣೆಯಿಂ ಗೆಲ್ದ ಕಾಮನಂ ದೀಪ್ತತಪೋಭರದಿನ್ದುರಿಪಿದರೆನೆ ಬಿತ್ತರಿಸದರಾರ್ ವೀರಣನ್ದಿಸೈದ್ಧಾನ್ತಿಕರ್ (ಎಕ. II, ೦೪೦-೦೬೩; 1145). [ಬಿತ್ತರ + — ಇಸು₃]

**ಬಿತ್ತಲಂಡೆ** 'ಬಿತ್ತಲಟ್ಟೆ' ನೋ.

**ಬಿತ್ತಲಟ್ಟೆ, ಬಿತ್ತಲಂಡೆ** (ನಾ). ಒಂದು ಬಗೆಯ ತೆರಿಗೆ (?): ಕೆಱೆಯ ಕೆಱಗೆ ತಲೆರಾಸಿಯುಲಿ ಬಿತ್ತಲಟ್ಟೆಯುಂ ಖಣ್ಡಗಗಟ್ಡೆಯುಂ ಕೆಱೆಗೆ ಸಲ್ಲು (ಸೌಇಇ. IX- i, ೨೭_೬; 10ನೆಯ ಶತ). **ಬಿತ್ತಲಂಡೆ** : ಕಲ್ಲಳೂರ ಕೆಱೆಯ ಕೆಱಗುಟ್ಟ ಬಿತ್ತಲಣ್ಡೆಯುಂ ಕೆಱೆಗೆ ಇಕ್ಕದನ್ದು ವಾರಣಾಸಿಯುಂ ಕವಿಲೆಯು ಮನಳಿದ ಪಾಪಕ್ಕೆ ಸಲ್ವಂ (ಸೌಇಇ. IX-i, ೩೪-೮ ; 10ನೆಯ ಶತ). [?]

**ಬಿತ್ತವಟ್ಟ** 'ಬಿತ್ತುವಟ್ಟ' ನೋ.

**ಬಿತ್ತಾಣ** 'ಬಿತ್ತಣ' ನೋ.

**ಬಿತ್ತಿ** (ನಾ). ಗೋಡೆ : "ಬಿತ್ತಿ — ಭಿತ್ತಿ = ಗೋಡೆ" (ಶಬ್ದಕೋ. ೩೦): ಬಿತ್ತಿಯೊಳಂದಂಬಡೆವಂತು ಬಚ್ಚಿಸಿದ ಬಣ್ಣಂಗಳಂ . . . ನೋಡಿ (ಶಬ್ದಕಾ. ೮೩) ; ಭರ್ಗಸಖನ ಬಂಡಾರದ ನವರತ್ನವರ್ಗದ ಬಿತ್ತಿಗಳಿಂದ ದೀರ್ಘವಡೆದು ದಿವ್ಯಕಾಂತಿಯ ಬೀಱುತ ದುರ್ಗಾಮಂಟಪವಿದ್ದುದು (ಕಂಸವ. ೭-೩೩). [< ಸಂ. ಭಿತ್ತಿ]

**ಬಿತ್ತಿಕೆ, ಬಿತ್ತಿಗೆ₁** (ನಾ). =ಬಿತ್ತಣ ೧ : ಮಾಟಕೂಟವೆಂಬ ಹೊಲದಲ್ಲಿ ಪಾಪ ಪುಣ್ಯವೆಂಬ ಬೀಜದ ಬಿತ್ತಿಕೆಲ್ಲ ತಂಗಾಲಕ್ಕೆ ಬೆಳೆದು ಮಳೆಗಾಲಕ್ಕೆ ತಗ್ಗಿ ಹೊಲದ ಒಳಹರಿಯಲ್ಲಿ ಜಲ ನಿಂದು ಹೋಯಿತ್ತು (ಮೋಲೀಮಹಾ. ೦೦೪-೪೦೩) ; ಗೋದಿಯ ಬಿತ್ತಿಕೆಯಕ್ಕಿಂತಲೂ ಸ್ವಲ್ಪ ಅಗಲವಾಗಿ ನಾಲ್ಕು ಬೆರಳು ಅಂತರಕ್ಕೊಂದು ಬೀಜ ಬೀಳುವಂತೆ ಬಿತ್ತಬೇಕು (ಕೃಷಿಶ್ರ. ೯೨). **ಬಿತ್ತಿಗೆ₁** : ಬಿತ್ತಿಗೆಯ ಬಿತ್ತೊಂದುಳಿಯದಂತೆ ಬಂಧುರವಾಗಿ ನಾಂಟಿ ಕಂಗೊಳಿಸುತಿರ್ದವು (ಮಲ್ಲಿಶ. ೦೨-೦೦) ; ನವಬೀಜದ ಹೊಸ ಬಿತ್ತಿಗೆಗಾಗಿ ಬಿಡಬೇಕು, ಹೊಲ ಬಿಡಬೇಕು (ಹ್ರದಸ. ೩೩-೩) ; ಒಂದು ಹಳ್ಳಿ ಬೆಳೆದರೆ ಹತ್ತು ಹಳ್ಳಿಗಳಲ್ಲಿ ಬಿತ್ತಿಗೆಯಾಗುತ್ತಿರಲಿಲ್ಲ (ವಚ್ಛಿಪು. ೫).
[ಬಿತ್ತು₁ + — ಇಕೆ]

**ಬಿತ್ತಿಕ್ಕು** (ಕ್ರಿ). ಬೀಜವನ್ನು ಎರಚು ; ಕಾಳುಗಳನ್ನು ಬಿತ್ತು : ತೆತ್ತೀಸಕೋಟಿ ನಿರ್ಜರರು ಮುತ್ತಿನ ತ್ಯಾಗವ ಕೊಟ್ಟಂತೆಯೂಳಿಕಲ್ ಬಿತ್ತಿಕ್ಕ ಬಿರ್ದುದುರ್ವಿಯಲಿ (ಮೋಹತ. ೪-೩೮).
[ಬಿತ್ತು₂ (< ಬಿಟ್ಟು) + ಇಕ್ಕು]

**ಬಿತ್ತಿಗ** 'ಬಿತ್ತಗ' ನೋ.

**ಬಿತ್ತಿಗವೇಕ್** 'ಬಿತ್ತಗವೇಕ್' ನೋ.

**ಬಿತ್ತಿಗವೆಣ್** 'ಬಿತ್ತಗವೆಣ್' ನೋ.

**ಬಿತ್ತಿಗೆ₁** 'ಬಿತ್ತಿಕೆ' ನೋ.

**ಬಿತ್ತಿಗೆ₂** (ನಾ). ಪ್ರೌಢೆ ; ಚದುರೆ : ಒರ್ವ ಬಿತ್ತಿಗೆಯುಂ ನಿಟ್ಟಿಸಿ ನೀರಡಿಕೆಯುಂ ತೀರ್ಚ ತೆಱನಾವುದೆಂದು ಬೆಸಗೊಳಲ್ (ವಠಿಕ. ೦೦೬-೩).
[ಬಿತ್ತಿಗ (< ಬಿತ್ತಗ) + — ಎ₂]

**ಬಿತ್ತಿಸು** (ಕ್ರಿ). ಬೀಜವನ್ನು ನಾಟಿಸು : ಕೇತಿದೇವನು ಸಸಿನೆ ಬಿತ್ತಿಸಿ ಸಾಲು ಸಾವಿರವಾಗಿ ಬೆಳೆದನಲಾ (ಬಸವು. ೬೦-೦೯) : ಅರಿನೃಪರನು ಕೊಂದು ಪುರವ ಪಾಳ್ಗೈದಾಗ ಹರಳ ಬಿತ್ತಿಸಿದರೇನೆಂಬೆ (ಕಂಸವ. ೩-೦೬).
[ಬಿತ್ತು₁ + — ಇಸು₃]

**ಬಿತ್ತು₁, ವಿತ್ತು₁** (ಕ್ರಿ). ೧. ಬೀಜ ಹಾಕು; ಬೀಜಾವಾಪ ಮಾಡು : "ಬಿತ್ತು—ಬೀಜಸ್ಥಾಪನೇ, ಬೀಜೇ ಚ" (ಶಮಥಾ) ; ಸುಕ್ಷೇತ್ರಮಲ್ಲದ ನೆಲದೊಳ್ ಬಿತ್ತಿದ ಫಲಮಂ(ಮುಂ) ಬಿತ್ತೆಂದುಂ ಫಲಮಾಗಲಾಱವು (ಚಾವುಂಪು. ೦೩೬); ಹೊಳ್ಳ ಬಿತ್ತಿ ಫಲವನಱಸುವಂತೆ (ಮಹಾದೇ. ಬ. ೫೬-೦೪೦); ಹುರಿದು ಬಿತ್ತಿದ ಬೀಜ ಮೊಳೆವುದೆ (ಭರತ. ೨-೩೩). ೨. ಪ್ರಕಟಪಡಿಸು; ಹರಡು : ಸತ್ಕೀರ್ತಿಯಂ ಧರೆಯೊಳ್ ಬಿತ್ತುವಗಡ್ಡದುಡ್ಡು ಜಱ ವರ್ಗಿಷ್ಟಾರ್ಥದಾನಂಗಳುಂ . . . ಈಕ್ಷಿಸಲ್ ದೊರೆಗಳ್ಗೆತ್ತಣ ನೀತಿಯ್ಯೆ (ಸೋಮೇಶ. ೬೦); ಚರ್ಮಭಸ್ತ್ರಿಕೆಯನೊಂದಂ ಚೆಂದಮಪ್ಪಂತೆ ನಿರ್ಮಿಸಿದೆಂ ಲಕ್ಷ ಸುವರ್ಣಮಂ ಕಱಿವುದೆಂಬೀ ಸುದ್ದಿಯಂ ಬಿತ್ತಿದೆಂ (ದಶಕು. ೬-೦೩೭);

**ಬಿತ್ತು₁ :** ೧. ಒಕ್ಕಲ್ತನಕ್ಕೆಯ್ವನಾ ಬಿತ್ತಿದಲ್ಲಿ ಬೆಳೆಯಾದೆ ಕೆಡುಗೆ (ಎಕ. VII, ಶಿಕಾ೦. ೦೫೪–೦೭ : 685). [ದೇ.॥ ತಮಿ. ವಿತ್ತು. ವಿತ್ತು ; ಮಲ. ವಿತೆ ; ತೊದ. ಪಿತ್ ; ಕೊಡ ಬಿತ್ತ್ ; ತುಳು. ಬಿತ್ತು, ಬುತ್ತು ; ತೆಲು. ವಿತ್ತು ; ಕೋಲಾ. ನಾಯ್ಕಿ. ಪರ್ಜಿ. ಗದಬ. ವಿತ್]

**ಬಿತ್ತು₂** 'ಬಿಟ್ಟು' ನೋ.

**ಬಿತ್ತುಕಟ್ಟು** (ನಾ). ಕೆರೆಯ ಜೀರ್ಣೋದ್ಧಾರಕ್ಕಾಗಿ ಬೆಟ್ಟ, ಭೂಮಿ ಮೊದಲಾದುವನ್ನು ಮತ್ತು ಅವುಗಳ ಆದಾಯವನ್ನು ಬಿಟ್ಟುಕೊಡುವುದು : ತಿರುವಯ್ಯನ ಮಗಂ ಚನ್ದ್ರಸೇಕರಂ ಮಣ್ಣಿಗಲ್ಲ ಕೆಱೆಗೆ ಬಿತ್ತುಕಟ್ಟು ಬಿಟ್ಟಂ(ಎಕ. X, ಮುಳಬಾ. ೦೯೬–೪: ಸು. 950); ಬಂಗವಾಡಿಯ ಕೆಱೆಗೆ ಬಿತ್ತು ಕಟ್ಟು ಬಿಟ್ಟುದು (ಎಕ. X, ಕೋಲಾರ. ೦೯೮–೩೫: ಸು. 950); ಶ್ರೀಮಾತ್ತಂಬಯ್ಯಂ ಬಿದಿರೂರನಾಳುತ್ತಿರ್ದ್ದು ಕೆಱೆಗೆ ಬಿತ್ತುಕಟ್ಟಂ ಬಿಟ್ಟ (ಎಕ. X, ಮುಳಬಾ. ೦೨೭–೦೮; 961). 'ಬಿತ್ತುವಟ್ಟ' ಪರಾ.

[ಬಿತ್ತು₂ (<ಬಿಟ್ಟು) + ಕಟ್ಟು₂]

**ಬಿತ್ತುಗಟ್ಟಣೆ** (ನಾ). = ಬಿತ್ತುಕಟ್ಟು : ಆಸಂದಿಯುಬಯ್ಯುಳದ ಬಿತ್ತುಗಟ್ಟಣೆಯ ಗ೧ವ ಕೊಟ (ಮೈಆ. ೦೯೩೭, ೩೦–೨೫ ; 1162) ; ಬಿತ್ತುಪಾಟವೆಂದೂ, ಬಿತ್ತುಕಟ್ಟೆಂದೂ, ಬಿತ್ತುಗಟ್ಟಣೆಯೆಂದೂ ಕೆಲವೆಡೆಗಳಲ್ಲಿ ಕರೆದಿರುವರು (ಸಂಭಾನೆ. ೨೦೦).

[ಬಿತ್ತು₂ (<ಬಿಟ್ಟು) + ಕಟ್ಟು₁ + – ಅಣೆ₄]

**ಬಿತ್ತುಪಾಟ** 'ಬಿತ್ತುವಟ್ಟ' ನೋ.

**ಬಿತ್ತುಬೀಜ** (ನಾ). ಬಿತ್ತುವ ಬೀಜ ; ಬೀಜವರಿ : ನಾಲ್ಕುಮೂಡೆ ಬಿತ್ತುಬೀಜದ ಗದೆಯನು× ×ಕಾಣಿಕೆ ಕಡ್ಡಾಯ ಅಱುದೂಯಿಲ್ಲ (ಶಾಇ. IX–ii, ೪೨೫–೦೫; 1401). [ಬಿತ್ತು₁ + ಬೀಜ]

**ಬಿತ್ತುಬೀಟಿರ್** (ನಾ). ಬೀಜವನ್ನು ಬಿತ್ತುವ ಭೂಮಿ : ಬಿತ್ತುಬೀಟಿ ಮೂಗೊಳ ಗಟ್ಟಿದ್ದಿಯುಂ ಮೂಗೊಟಿ ಪಾಳುಂ ಬಿಟ್ಟರ್ (ಎಕ. X, ಚಿಂತಾಮ. ೧೫೩–೫; ಸು. 1000). [ಬಿತ್ತು₁+ಬೀಟಿರ್₂ (<ಬೀಡು₂)]

**ಬಿತ್ತುವಟ್ಟ,** ಬಿತ್ತವಟ್ಟ, ಬಿತ್ತುಪಾಟ, ಬಿತ್ತುವಾಟ (ನಾ). = ಬಿತ್ತುಕಟ್ಟು : P "ಬಿತ್ತುವಟ್ಟವೆಂದರೆ ಕೆರೆಯ ಹಿಂದಿನ ತರೀ ಜಮೀನಿನಲ್ಲಿ ಬಿತ್ತು ಅಥವಾ ಬೀಜವರಿಯ ಮೇಲೆ ವಟ್ಟ ಎಂದರೆ ಪಾಲು ಎಂದರ್ಥ" (ಸಂಭಾನೆ. ೨೦೦) : ಮೂಡಣ ಕೆಱೆಯಂ ಕಟ್ಟಿಸಿ ಮೂಱು ಕೆಱೆಯ ಬಿತ್ತುವಟ್ಟವಂ ಪಡೆದಂ (ಎಕ. IX, ಬೆಂಗಳೂ. ೭೬–೮ ; ಸು. 820) ; ಊರುಮ್ಮಹಾಜನವು ವರುಣಶಿವಬಟಾರರುಮಿಬ್ಬು ಕೆಱೆಗೆ ಬಿತ್ತುವಟ್ಟ ಕೊಟ್ಟು (ಶಾಇ. IX–i, ೨೪–೩೯ ; 936) ; ಊರೊಕ್ಕಲು ಒಬ್ಬೊಬ್ಬನೂ ಒಂದು ಕೊಳಗ ಬಿತ್ತುವರಿಗೆ ಒಂದು ಪಡಿ ನೆಲ್ಲನ್ನು ಬಿತ್ತುವಟ್ಟವಾಗಿ ಕೊಡಬೇಕೆಂಬ ಆಣತಿ ಕಳೆದ ವರುಷ ಶಾಸನವಾಯಿತು (ಸವಶಿ. ೦೬೬) ; ಊರಿನ ಜನ ಸೇರಿ ಕೆರೆಗಾಗಿ ಒಂದು ಜಮೀನನ್ನು ಬಿಡುತ್ತಿದ್ದರು. ಬಹುಶಃ ಇದನ್ನೇ ಬಿತ್ತುವಾಟ ಅಥವಾ ಬಿತ್ತುವಟ್ಟ ಎಂದು ಶಾಸನಗಳಲ್ಲಿ ಕರೆದಿರುವುದು (ಕಶಾಅ. ೯೩೪). **ಬಿತ್ತವಟ್ಟ :** ಹೊಲದವರೆಯ ನೆಟ್ಟು ಸೊಡಗೆಯು ಸುಲಿದಲ್ಲಿ ತಳಲು ಬಲಿದು ಒಡೆದುದಿಲ್ಲ ಬಿತ್ತವಟ್ಟಕ್ಕೆ ಮೊದಲೆ ಕೊಳೆ ಹೋಯಿತ್ತು (ಸೋಸವಾ. ೨೬೫–೬೦೭) ; ಬಿತ್ತಿದ ಬೆಳೆಯು ಪೃಥ್ವಿ ನುಂಗಿದಾಗ ಬಿತ್ತ[ಪಾಠಾಂ. ಬಿತ್ತಿದ]ವಟ್ಟ ಎಂತಪ್ಪುದೊ (ಗುಪ್ತವಂ. ೨೦೩–೬) : ಹೊತ್ತ ಕೋಗವ ಇಳುಹುವರಿಲ್ಲ ಸಣ್ಣಗೆ ಮೂಱು ಕವೆ ಪೊಂದೆ ಬಿತ್ತವಟ್ಟ ಮೊರಕ್ಕ ಮೂಱು ಗೋಟು (ಕಲ್ಯಾಶಾಂ. ೦೦೨–೬). **ಬಿತ್ತುಪಾಟ :** ಪನ್ನಿರ್ಕ್ಕರ್ಣ್ಡುಗ ಮಣ್ಣು ಬಡಗ ದಡಿಯ ಬಿತ್ತುಪಾಟವುಮಂ ಕೊಟ್ಟರ್ (ಎಕ. XII, ತಿಪ. ೯–೪೦ ; 1072). **ಬಿತ್ತುವಾಟ :** ಚಿತ್ತಪ್ಪ ಕೆಱೆಯನ್ ಕಟ್ಟಿಸಿ ನಾಲ್ಕಳವೆಯ ಭಾಗಂ ಬಿತ್ತುವಾಟಂ ಕೆಱೆಗೆ ಕುಡುವುದು (ಎಕ. XI, ಹಿಂದೂ. ೩೩–೬; ಸು. 890); ಕೆಱೆಯ ಬಿತ್ತುವಾಟಮುಂ ಕೆಱೆಗೆ ಕೊಡದುಣ್ಡುಮನುಮನ್ನೆ (ಮೈಆ. ೦೯೩೬, ೬೭–೦೦ ; 908) ; ದುರಸ್ತು ಮಾಡಿಸಲು ಬಿಟ್ಟುಕೊಡುತ್ತಿದ್ದ ಭೂಮಿಯನ್ನೇ 'ಬಿತ್ತುವಾಟ' ಎಂದು ಶಾಸನಗಳು ಕರೆದಿರುವುದು (ಕಶಾಅ. ೩೬೮).

[ಬಿತ್ತು₂ (<ಬಿಟ್ಟು) + ವಟ್ಟ₂]

**ಬಿತ್ತುವರಿ** (ನಾ). ಒಂದು ನಿರ್ದಿಷ್ಟ ಅಳತೆಯ ಜಮೀನಿಗೆ ಬಿತ್ತಲು ಬೇಕಾಗುವಷ್ಟು ಬೀಜದ ಪ್ರಮಾಣ : ಊರೊಕ್ಕಲು ಒಬ್ಬೊಬ್ಬನೂ ಒಂದು ಕೊಳಗದ ಬಿತ್ತುವರಿಗೆ ಒಂದು ಪಡಿ ನೆಲ್ಲನ್ನು ಬಿತ್ತುವಟ್ಟವಾಗಿ ಕೊಡಬೇಕೆಂಬ ಆಣತಿ ಕಳೆದ ವರುಷ ಶಾಸನವಾಯಿತು (ಸವಶಿ. ೦೬೬).

[P 'ಇದು ಬೀಜವರಿ' ಎಂಬ ಶಬ್ದಸಾಮ್ಯದಿಂದ ಆದ ರೂಪ]

**ಬಿತ್ತುವಾಟ** 'ಬಿತ್ತುವಟ್ಟ' ನೋ.

**ಬಿತ್ತುಹ** (ನಾ). ಬಿತ್ತುವಿಕೆ : ನೆಲದಲ್ಲಿ ತಾವರೆಯಂ ಬಿತ್ತುಹವಂ . . . ಕುರುಡಂಗೆ ಕನ್ನಡಿಯುಂ ತೋಱುಹವಂ (ವಂಕಕಂ. ೦೩೬–೯).

[ಬಿತ್ತು₁ + – ಹ₂(< – ಪ₂)]

**ಬಿತ್ತಿಗ,** ಬಿತ್ತಿಗ (ನಾ). ೧. ಪಂಡಿತ ; ಬಲ್ಲಿದ ; ವಿದ್ವಾಂಸ : "ಬಿತ್ತಿಗಂ–ಪ್ರೌಢಂ" (ಕಮುದ. ಕಂ. ೨) ; ಬಿತ್ತವೇಜಾದರೆ ಶರೀರಶೋಧನಗ್ಯೆದು ಬಿತ್ತಿಗರಿಳೆಯೊಳಿಹಂತೆ ಒತ್ತಿದ ಮದವ ಪೆಂಗಳೊಳಾಡಿ ಕಳೆದು ರಾಜೋತ್ತಮನಿಪ್ಪನಾತ್ಮನೊಳಗೆ (ಶರಷ. ೦೦–೦೨೪) ; ಬಿತ್ತಿಗರೊಳ್ ಬಿಜ್ಜೆಯ ನೆನೆತೆರ್ದಪುಗೆ ಕಲ್ವರನಿತ್ತು ತಿಳಿವು ಪೊಣ್ಮುಗುಮುವರೊಳ್(ನೇಮಿಪಂ. ೨–೨೮೬). ೨. ನಿಪುಣ ; ಚತುರ: ಕಂಗಜನ ಮೊನೆಯಂಬುಗಳ್ ಕಣ್ದೆಱೆಯಿಸಿದವು ಪೊಣರ್ಪ ಬಿಲ್ಲ ಕಡುಪಿತ್ತಿಗರಂ (ಪಂಪಭಾ. ೦೦–೬೩). **ಬಿತ್ತಿಗ :** ೨. ಮಾರ್ಮಲೆದು ಬಿಲ್ಲ ಬಿತ್ತಿಗರೊರ್ಮೊದಲಿಸೆ ಕಣೆಗಳರ್ಚಿ ಪೋದುವು ನೆಜಿಸಂ (ಪಂಪಾವಾ. ೦೩–೪೦) : ಶರಾಳಿಯಂ ಕಱೆದರಾಪವಪೊಳ್ ಕಡುಬಿಲ್ಲ ಬಿತ್ತಿಗರ್ (ಉದ್ಭಟ. ೪–೬೮).

[ಬಿತ್ತ₀ (P ← ತಮಿ. ವಿತ್ತೈ = ವಿದ್ಯೆ) + –ಗ₂]

**ಬಿತ್ತಿಗವೆಣ್,** ಬಿತ್ತಿಗಪೆಣ್, ಬಿತ್ತಿಗವೆಣ್ (ನಾ). ಪ್ರೌಢೆಯಾದ ಹೆಣ್ಣು ; ಜಾಣೆ ; ಚತುರೆ : "ಬಿತ್ತಿಗವೆಣ್ಣೆಂದು ಪ್ರೌಢೆ" (ಕಕಸಾ. ೬೨–೩೭೪) ; "ಬಿತ್ತಿಗವೆಣ್ಣನೆ ಪ್ರೌಢೆಗೆ" (ಕವಿಕಂ. ೦೬೫). **ಬಿತ್ತಿಗಪೆಣ್ :** ಗಣಿಕೆ ಬಿತ್ತಿಗಪೆಣ್ಣೊಳೊರ್ವಳತಿ ಸ್ನೇಹದಿಂದ್ಯೆತರುತ (ರುಕ್ಮಾಂಗ. ೩–೪೦). **ಬಿತ್ತಿಗವೆಣ್ :** "ಬಿತ್ತಿಗವೆಣ್ಣೆನಲ್ ಪ್ರೌಢೆ" (ಕಬ್ಬಕ್ಕೆ. ೨೭) ; "ಬಿತ್ತಿಗವೆಣ್ಣನಲ್ ಪ್ರೌಢೆಯೂ" (ಕಶರ. ೭೮). [ಬಿತ್ತಿಗ + ಪೆಣ್]

**ಬಿತ್ತೋಣ** (ನಾ). ಬಿತ್ತನೆ ಮಾಡುವಿಕೆ ; ಬಿತ್ತುವಿಕೆ : ಒಂದು ವರ್ಷ ಹದ ತಪ್ಪಿ ಬಿತ್ತೋಣದರಿಂದಾಗಲಿ ಅಥವಾ ಮಳೆಯು ಹೆಚ್ಚು ಕಡಿಮೆಯಾಗುವದರಿಂದಾಗಲಿ . . . ಒಂದು ವರ್ಷ ಬೆಳೆಯದೆ ಹೋದರೆ ಆ ಪದಾರ್ಥಗಳು ನಮ್ಮ ದೇಶದಲ್ಲಿ ಆಗುವುದಿಲ್ಲವೆಂದು ಬಿಟ್ಟು ಬಿಡಲಾಗದು (ಕೃಷಿಶ್ರ. ೫೦). [ಬಿತ್ತು₁ + – ಓಣ]

**ಬಿದಣ** (ನಾ). (?) : ವ್ಯಾಧಿಯೊಳು ನೊಂದು ನಡು ಬಗ್ಗಿ ಕಣ್ಗಳ ಮುಚ್ಚಿ ಹಾದಿಗಾಣದರು ಹಿರಿಯರೆಯಲ್ಲು ಹಿರಿಯಳೆಮ್ಮಕ್ಕ ಮಹದೇವಿಯೆನುತಂ ಮೇದಿನಿಯೊಳತಿಬಿದಣಗೊಂಡು ಕರಪುರಿ ಹೆಚ್ಚಿ (ಶ್ರಬಖ. ೬–೬೮). [?]

**ಬಿದಾಗಿ** (ನಾ). ಬೀಳ್ಕೊಡುವಾಗ ಕೊಡುವ ಕಾಣಿಕೆ,_ಸಂಭಾವನೆ : ಸಲ್ಲ ತಕ್ಕ 'ಬಿದಾಗಿ'ಯ ಆಸೆಯನ್ನು ತೊರೆದು ದಾರಿ ಸಿಕ್ಕತ್ತ ಕಾಲಿಗೆ ಬುದ್ಧಿ ಹೇಳಿದರು (ಗ್ರಾಮಾಯ. ೫೩).

[←ಹಿಂ. ಬಿದಾಈ ; ಮರಾ. ಬಿದಾಗೀ, ಬಿದಾಈ]

**ಬಿದಾನಂದ,** ಬಿದಾನದ (ನಾ). ತಿಳಿವಳಿಕೆ ಪತ್ರ ; ನೋಟೀಸು : ಮೈಸೂರ ಬಿದಾನಂದ ಮದ್ದಗಿರಿ ಕಸಬೆ ಬೆಟ್ಟದ ಹಿಂದೆ ಸುತ್ತು ಅಡವಿ ಗಿಡಾ ಕಡದು ಸಾಗುವಳಿ ಮಾಡುವ ಬಗ್ಗೆ . . . ಸರಕಾರಕ್ಕೆ ಹಣಾ ಸಂದಾಯ ಮಾಡುತ್ತಾ (ಮೈಆ. ೦೯೨೯, ೯೪–೪ ; 1813). **ಬಿದಾನದ :**

ನಗರ ಸರಕಾರ ದಾರೂಲರಿಯಾಸತ ಮ್ಯೆಯಿಶೂರು ಬಿದಾನದದ್ದರಿವಿಲ್ಲ ತಾಲೋಕ ಮಜಕೂರ ಪೈಕಿ (ಮೈಅಂ. ೧೯೩೧, ೩೨-೩ ; 1812).

[← ಪಾರ. ಬಿದಾನಂದ್; ಮರಾ. ಬಿದಾನಂದ್, ಬಿದಾನದ್]

**ಬಿದಾನದ** 'ಬಿದಾನಂದ' ನೋ.

**ಬಿದಿ** (ನಾ). ೧. ಸೃಷ್ಟಿಕರ್ತ ; ಬ್ರಹ್ಮ : "ಅಂಚೆದೇರಂ, ನುಡಿವೆಣ್ಣನಿಯಂ, ಪೊಂಬಸಿಱಂ, ಬಿದಿ . . . ತಾವರೆವಸೆಯಂ— ಈ ೮ ಬ್ರಹ್ಮಂಗೆ ಪೆಸರ್" (ಕಶಸಾ. ೪೮-೦೫) ; ಸೌಂದರಿಯರ ಗಾಡಿಗಳೊಳಗೊಂದೊಂದನೆ ನೆಱಪಿ ಮಾಡಿದಂ ಬಿದಿ (ಆದಿಪು. ೨-೩೬) ; ಪುಟ್ಟಿಸಿದನದೇಕೆಯೊ ಬಿದಿ (ಪುಷ್ಪವೃ. ೦-೫೦) ; ತಾರಕನುಪಟಳವನು ಬಿದಿಯೊಳು ಸುರರು ಬಿನ್ನೈಸೆ (ಪ್ರೋಹಕ. ೫-೩). ೨. ಅದೃಷ್ಟ ; ಹಣೆಬರಹ : ಕಿರಾತಂ ಬೇಸತ್ತು . . . ಬಿದಿಯಂ ಬಯ್ದು ತನ್ನ ಮನೆಗೆ ಮಗುಟ್ದಂ (ಶಂಕಕಂ. ೨೯೦-೦೬) ; ಇದು ಬಿದಿಯ ಕುಶಲತೆಯು . . . ಬೆಳ್ಳಸವನುರುಳಿಸುವ ಕಾಲನೆಂಬುವ ವಿಲಯರುದ್ರ ನೊಲಿದಲೆಯುಚಿಹ ಕಟ್ಟುರಿಯ ಸುಡುಗಾಡು ! (ಕವಿಕಾ. ೨೯-೬).

**ಬಿದಿಯ ತೇರು** = ಬ್ರಹ್ಮನ ವಾಹನ; ಹಂಸ: "ಬಿದಿಯ ತೇರುಮಂಚೆ ಯೆಂದು ಹಂಸಾಖ್ಯಮದಕ್ಕುಂ" (ಕಬ್ಬಿಕೈ. ೯). [< ಸಂ. ವಿಧಿ]

**ಬಿದಿಗ** (ನಾ). ೧. ಅದೃಷ್ಟಶಾಲಿ : ಗ ಪ್ರತ್ಯಯಕ್ಕೆ . . . ಬಿದಿಗಂ, ಸಟೆಗಂ (ಶಮದ. ೨೦೧ ಕೃಯೋ). ೨. ಒಬ್ಬಾತನ ಹೆಸರು : ಶ್ರೀಮತ್ ರೂವಾರಿ ಬಿದಿಗಯಾ ಕಮ್ಮಟದ ಸೂಳೇರಿದ ಮುಟ್ಟಿದರ ಮೆಯಿ ಜಾಯಿಲೆ ಪೆಜಗಗಿನ್ (ಎಕ. II, ೩೦೬ ; ಸು. 950). [ಬಿದಿ + —ಗ$_2$]

**ಬಿದಿಗೆ,** ಬಿದಿಯೆ (ನಾ). ಪಕ್ಷದ ಎರಡನೆಯ ದಿನ ; ದ್ವಿತೀಯೆ : "ಬಿದಿಗೆಯೆನಲ್ಕೆ ದ್ವಿತೀಯಾಖ್ಯೆ" (ಕಕರ. ೬೮); ಗರ್ಭಾವತರಣಂ ಆಷಾಢ ಬಹುಲಬಿದಿಗೆಯುತ್ತರಾಷಾಢಾನಕ್ಷತ್ರದ ಬೆಳಗಪ್ಪ ಜಾವದೊಳ್ (ಆದಿಪು. ೬-೩೨ ವ) ; ಶುಕ್ಲಪಕ್ಷದೊಳ್ ಬಿದಿಗೆಯೊಳಾದಿವಾಸರದೊಳ್ . . . ವೃಶ್ಚಿಕಲಗ್ನದೊಳ್ಕರ್ಜಾಂಶವಮಾದುದು ಕವಿರತ್ನನಂದನನ ರಾಯನ ಜಾತಕಮುತ್ತರೋತ್ತರಂ (ಅಜಿಪು. ೦೨-೩೩). **ಬಿದಿಯೆ :** ಭಾದ್ರಪದ ಬಹುಳ ಬಿದಿಯೆ (ಎಇ. VI, ೨೫೯-೬ ; 975) ; ಜೇಷ್ಟ ಸುದ್ಧ ಬಿದಿಯೆ (ಕಇ. II, ೬-೨೨ ; 1030).

**ಬಿದಿಗೆಚಂದ್ರ, ಬಿದಿಗೆಯ ಚಂದ್ರ** = ವೃದ್ಧಿಯಾಗುತ್ತಿರುವ ಚಂದ್ರ; ಶುಕ್ಲಪಕ್ಷದ ಚಂದ್ರ : ಬಿದಿಗೆಚಂದ್ರ ಬಂದ ನೋಡು ದೀಪ ಹಚ್ಚಿದಂತೆ ಜೋಡು (ಆಠಳು. ೨೬೯-೦); ಆತನುಂ ಬಿದಿಗೆಯ ಚಂದ್ರನಂತೆ ಕ್ರಮಕ್ರಮದಿಂ ಸುಖದಿಂ ಬೆಳೆದು (ವಡ್ಡಾರಾ. ೬೩-೦೯) ; ಬಿದಿಗೆಯ ಚಂದ್ರ [ಕಾಣಂ. ದ್ರುಮ]ನಂತಭಿವೃದ್ಧಿಯನೆಯ್ದಿ ಶೈಶವಂ ಪತ್ತುವಿಡಲ್ (ಪುಣ್ಯಾಸ್ರ. ೬-೨೦ ವ). [< ಪ್ರಾ. ಬಿಇಅ, ಬಿದಿಯ. /ಸಂ. ದ್ವಿತೀಯಾ]

**ಬಿದಿಗೆದಿಂಗಳ್** (ನಾ). ವೃದ್ಧಿಯಾಗುತ್ತಿರುವ ಚಂದ್ರ ; ಶುಕ್ಲಪಕ್ಷದ ಚಂದ್ರ : ಸಭಾಕೈರವಕುತೂಹಳಕೆ ಬಿದಿಗೆದಿಂಗಳ್ ನಗೆಯ ಜೊನ್ನಮಂ ಸಿಂಚಿಸುತೆ, ಮಿಡಿಯತೊಡಗಿದನಿಂತು ತನ್ನುಸಿರ್ತೇನೆಯಂ (ಶ್ರೀರಾಪಟ. ೫೬೪-೩೨೫). [ಬಿದಿಗೆ + ತಿಂಗಳ್]

**ಬಿದಿಗೆವೆಱೆ** (ನಾ). = ಬಿದಿಗೆದಿಂಗಳ್ : ಬಿದಿಗೆವೆಱೆಯ ಬಿಂಕಂಗಿಡಿ ಪಥರಂ . . . ಒಪ್ಪಿದುದುವಾ ಸತಿಗೆ (ಜಯುಕಾ. ೨-೬) ; ಬಿದಿಗೆವೆಱೆಯಂ ನಾಣ್ಚಿಸುವ ಕೋರೆದಾಡೆಗಳ್ (ರಾಫಚ. ೦೯-೬). [ಬಿದಿಗೆ + ಪೆಱೆ]

**ಬಿದಿಮಾಳ್ಕೆ** (ನಾ). ವಿಧಿಯ ಕೆಲಸ; ಅದೃಷ್ಟದ ಕೈವಾಡ : ಬಿದಿಮಾಳ್ಕೆ ಯೊಳ್ಸಿತಕ್ಕುಂ (ಶ್ರೀರಾಪಟ. ೪೩೦-೨೯೫).

[ಬಿದಿ + ಮಾಳ್ಕೆ (< ಮಾಟ್ಕೆ)]

**ಬಿದಿಯಣ್ಣ** (ನಾ). ಒಬ್ಬಾತನ ಹೆಸರು : ಕೊನೆಗೌಡ ಬಿದಿಯಣ್ಣ . . . ಏಳುತ್ತ ಓಡೆ (ಎಕ. VIII, ಸೊರಬ. ೪೫೬-೫; 972). [ಬಿದಿ + ಅಣ್ಣ$_1$]

**ಬಿದಿಯಮ್ಮ** (ನಾ). ಒಬ್ಬಾತನ ಹೆಸರು : ಮಗಂ ಬಿದಿಯಮ್ಮಂ ಕುಪ್ಪಳೂರ ಮಹಾಜನಕ್ಕೆ ಗೋಸಹಸ್ರಕೆ ಪೊನ್ನ ಕೊಟ್ಟು (ಎಕ. VIII, ಸೊರಬ. ೨೯೬-೧ ; ಸು. 950 ?). [ಬಿದಿ + ಅಮ್ಮ$_1$]

**ಬಿದಿಯಾಯ್ತು** 'ಬಿಜಯಿತ್ತ' ನೋ.

**ಬಿದಿಯೆ** 'ಬಿದಿಗೆ' ನೋ.

**ಬಿದಿರ್$_1$,** ಬಿದಿರು$_1$, ಬಿದುರ್, ಬಿದುರು (ಕ್ರಿ). ೧. ಕೆದರು ; ಚೆದರು; ಹರಡು : "ಬಿದಿರ್—ವಿಕೀರ್ಣೇ (ಚದರು—ಹರಡು), ವೇಣೌ ಚ" (ಶಮಧಾ); ದರಿಗಳಂ ಕೋಡೊಳ್ ಕುತ್ತಿಯೆತ್ತಿ ಬಿದಿರ್ದೀಡಾಡುತಿರ್ದು (ಕಂಚಕಂ. ೪೬-೧) ; ಬಿದಿರ್ದೀಡಾಡಿ ಕೆಲಂಬರಂ ಕೆಲಬರಂ ನಿಟ್ಟೆಲ್ವು ನುಗ್ಗಾಗೆ ಕಾಯ್ದೊದೆದು . . . ಕೊಂದಂ ಮರುನ್ನಂದನಂ (ಕಂಗಾಪಟ. ೦೦-೦೯೩). ೨. ಕೊಡಹು ; ಒದರು ; ರ‍್ಘಾಡಿಸು : ಕಯ್ಯುಂ ಬಾಯುಂ ಬೆಂದೊಡೆ ಮೆಯ್ಯುನದಿರ್ದು ಕೈಯಂ ಬಿದಿರ್ದನವನಂ ಕಂಡು ನಕ್ಕಿಂತೆಂದಳ್ (ವಡ್ಡಾರಾ. ೦೬೬-೨೦) ; ಭೀಮಸೇನಂ ತನ್ನ ತಲೆಯೊಳಂ ಮೆಯ್ಯೊಳಂ ಕರಗಿ ಸುರಿವರಗಿನುರಿಯ ಬಂಬಲ್ಗಳಂ ಪೊಸೆದು ಬಿದಿರ್ದು ಕಳೆದು (ಕಂಪಭಾ. ೩-೬ ವ) ; ಶುನಕಂ ಕಡಂಗಿ ಪಕ್ಕಿಸೆ . . . ಕರ್ಣಮಂ ಬಿದಿರೆ ತಾನೆ ಪರಾಜಯಮಕ್ಕುಮಾಜಿಯೊಳ್ (ಲೋಕೋಕ. ೦೨-೨೮). ೩. ಅದಿರು ; ನಡುಗು ; ಕಂಪಿಸು : ಬಿದಿರ್ದಪರಿನರರ ಹೃದಯಂ (ಎಕ. VII, ಶಿಕಮೊ. ೫೬-೨೮ ; 1125). ೪. ಚೆಲ್ಲು ; ತುಳುಕು : ಅರೆಗೊಡ ತುಳುಕುವುದಲ್ಲದೆ ತುಂಬಿದ ಸಿರಿಗೊಡ ಬಿದಿರ್ವುದೆ (ಭರತ. ೬೦-೬೬). ೫. ಎಸೆ ; ಎರಚು: ಹದನಱಿದೆಸರಿಟ್ಟೊಯ್ಯನೆ ಮೃದುವಹ್ನಿಯನೆಸಗಿ ಪದೆದೆಸರ್ ಕಾಯಲ್ ನಿಲ್ಲದೆಯಕ್ಕಿಯೆರಡನೊಲೆಯೊಳ್ ಬಿದಿರ್ದೆಸರೊಳ್ ಪೊಯ್ದುಳಕ್ಕಿಯಂ ಸತಿಯಾಗಳ್ (ದಶಕು. ೦೨-೦೨೦). ೬. ಒಗೆ ; ಬಿಸಾಡು : ಮುಚ್ಚರಂ ದೋರ್ಪ್ಪ ಸಾಮಂತರನಾಟಂದೊತ್ತಿಗೆ ಗೋಣಂ ನುಲಿದು ಬಿದಿರ್ವ ಮಾಕಾಳಿ ಸಾವನ್ನಕೇತಂ (ಎಕ. VI, ಕಂಒಕ. ೪೨-೫೫; 1206). ೭. ನುಡಿಸು; ಮಿಡಿ ; ಮೀಟು : ವೀಣೆಯಂ ಬಿದಿರ್ದು ಮೃದುಸ್ವನಂ ನೆಗೞೆ (ಕಾವ್ಯಸಾ. ೩೬. ೨೩೬). ೮. ಇಲ್ಲವಾಗು ; ನಾಶವಾಗು : ಬಿದಿರ್ದುದು ಬಿಂಕಂ ಬೀತುದು ಪರಿ ಪ್ಯೆಸರವೋದುದು ಪೆಂಪು (ಜಯುಕಾ. ೫-೫೨). **ಬಿದಿರು$_1$ :** ೧. ಬಿದಿರಿದುವು ಮಕುಟ ತಾಗಿ ತಾರಕೆಗಳು . . . ನಮ್ಮ ಕೂಡಲಸಂಗಮದೇವನಿಂದು ನಾಟ್ಯವನಾಡೆ (ಬಸವ. ೫೯೦); ತಪ್ಪದೆ ಜಲಚರನಿಕರ ಬಿದಿರೆ ಮೇಲಕುಪ್ಪರಿಸುವ ಜಲಬಿಂದು ಚಿಪ್ಪಿಂದ ಲೊಡೆದು ಸಿಡಿವ ಮುತ್ತುಗಳೆನಲೊಪ್ಪಿದುದತಿರಮ್ಯಮಾಗಿ (ಕಂಸಪಿ. ೫-೪೫). ೨. ಕುದುರೆ ಕಂಬನಿಯಿಕ್ಕಿದವು ಮೈ ಬಿದಿರಿದವು ದಂತಿಗಳು (ಕುವ್ಯಾಭಾ. ೦೦-೦೬); ಕಾಲ ಹುಡಿಯನು ಬಿದಿರಿ ಬಿಸುಡುವವೋಲು ಸಕಲವನೊದೆದು ನಡೆದನು (ಶಿಭಾಗ. ೪೦೦-೦೨). ೩. ಬಟ್ಟಕಂತುಕದಿಂದೆ ಬಲ್ಮೊಲೆ ಬಿದಿರು ವಂತಿಟ್ಟಾಡಿದುದು ಸಖಿನಿವಹ (ಪ್ರೋಹಕ. ೦೯-೯೬). ೯. (ಅಲಂ) ವಿನಯದಿಂದಿರು ; ನಮ್ರವಾಗಿರು : ಬಿದಿರಲಂದಣವಕ್ಕು ಬಿದಿರ ಸತ್ತಿಗೆಯಕ್ಕು ಬಿದಿರಲ್ಲಿ ಗುಡಿಯು ಗೂಡಾರವಕ್ಕು ಬಿದಿರಲ್ಲಿ ಸಕಲ ಸಂಪದವೆಲ್ಲವು ಬಿದಿರದವರ ಮೆಚ್ಚ ನಮ್ಮ ಕೂಡಲಸಂಗಮದೇವ (ಬಸವ. ೨೨೦); ಬಿದಿರೆ ಅಂದಣವಕ್ಕು ಬಿದಿರೆ ಸತ್ತಿಗೆಯಕ್ಕು ಬಿದಿರಿಂದ ಸಕಲ ಪದವಕ್ಕು ಲೋಕದೊಳು ಬಿದಿರದವ ಕೆಟ್ಟ (ಸರ್ವಜ್ಞ. ೬೬೯). **ಬಿದುರ್ :** ೧೦. ಕಟ್ಟನ್ನು ಬಿಚ್ಚು ; ಕಟ್ಟನ್ನು ಸಡಿಲಿಸು : "ಬಿದುರ್ — ಅಶ್ಯಂಬಿ ಲಾಯಾಂ" (ಶಮಧಾ). ೧೧. ಕೀಳು ; ಉತ್ಪಾಟಿಸು : ಕೆಲರಂ ಕಿರ್ತ್ತಿಕ್ಕಿ ಬೇರಂ ಬಿದುರ್ದ್ದು ಕೆಲರನತ್ಯುಗ್ರಸಂಗ್ರಾಮದೊಳು ಬಾಳ್ದಲೆಗೊಂಡು (ಎಕ. II, ೦೩೨-೨೦; 1123). **ಬಿದುರು :** ೨. ಶಿರವ ಬಿದುರಿ ಮಹಾ ದುರಾಗ್ರಹಬುದ್ಧಿಯಲಿ ಬಂದನು ನಿಜಾಲಯಕೆ (ಸಂಭಕ. ೮೫-೨೦); ಕಾಗೆ . . . ಪಕ್ಕವ ಬಿದುರೆ ನಿರ್ವಾಣಿಯು ಲಿಂಗಶಿರಭಾಗದೊಳು ಬೀಳಲು (ಗುರುಚಾ. ೫-೬೦); ಮರುತಸುತ ಕ್ರೋಧದಿಂದೌಡೊತ್ತುತ ಬಿದುರುತಂ

ಬಾಲವುಂ ಭೂತಳಕೆ ಧುಮ್ಮಿಕ್ಕಿ ಸದೆದು ಗಜರಥತುರಗಕಾಲಾಳು ಗಳನೆಲ್ಲನೊದೆದೆಮನ ಸದನಕಂ ಕಳುಪುತಿರ್ದನು (ವಂಕಾರಾ. ೫-೦೬-೦೬). ೩. ಸುರಗಿರಿ ವಜ್ರಹತಿಯುಲಿ ಬಿದುರಿ ಬೀಳುವವೊಲು (ಶಿಭಾಗ. ೦೦-೩೯-೩೦); ದಿಕ್ಕರಿ ಕವುತರೆದೆ ಬಿಮುರೆ ಮುುರಸುಹರನ ಪಾರ್ಥನ ವಳದ ಚೂಣಿಯು ಸಮರ ರಂಜಿಸಿತು (ಕೋಗಯು. ೨೦ ಸಂಹಿನ). ೫. ಅಕ್ಷತೆ ಫಲಗಳ ಬಿದುರಿದ ರವರು ನಲ್ಮೆಯೊಳು (ಜ್ಞಾನಸ. ೪೯-೯೯). ೧೨. ಬಿಡು; ತ್ಯಜಿಸು: ಕಡಿವಡೆದು ರಥಿಕರು ಬಿಮುರಿದರು ಜೀವವನು (ಶಿಭಾಗ. ೦೦-೫೬-೦೪).

[ದೇ.॥ ತಮಿ. ವಿತಿರ್; ಮಲ. ವಿತರು; ತುಳು. ಬಿದುರ್, ಬಿದುರು]

**ಬಿದಿರ್$_2$, ಬಿದಿರು$_2$** (ನಾ). ೧. ಉಷ್ಣ ಹಾಗೂ ಉಪೋಷ್ಣವಲಯು ಗಳಲ್ಲಿ ಸ್ವಾಭಾವಿಕವಾಗಿ ಮರದ ರೀತಿಯಲ್ಲಿ ಬೆಳೆಯುವ ಹುಲ್ಲು ಜಾತಿಯ ಸಸ್ಯ ; ವಂಶವೆಂಬ ಸಸ್ಯ: "ತ್ವಚಿಸಾರಃ, ಚಪಃ, ವಂಶಃ, ವೇಣುಃ, ತ್ವಕ್ಸಾರಃ, ಮಸ್ಕರಃ – ಈ ೬ ಬಿದಿರ್" (ಹಲಾಯು. ೩೪-೫೦); ಬಿದಿರ ಸಿಡಿಂಬಿನ ಪೊದಱೊಳಗೆ ಮಱೆದೊಱಗಿದ ಮೃಗರಾಜನಂತೆ (ವಂಕಭಾ. ೦೦-೫೦ ವ). ೨. ಗಳು; ಗಳೆ : ಮಿಳಿಯ ಬಿದಿರ ಮೇಗೇಱಿಯಾಕಾಶ ದೊಳಾಡುವ ವಿದ್ಯಾಧರ ಲಂಗಿಗರ ಮನೆಯೊಳ್ ಪೆಣ್ಣಾತ್ರಿಯಾಗಿ ಪುಟ್ಟಿ (ವಡ್ಡಾರಾ. ೬-೨೬). **ಬಿದಿರು$_2$:** ೧. "ವಂಶಃ, ತ್ವಕ್ಸಾರಃ . . . ವೇಣುಃ, ಮಸ್ಕರಃ, ತೇಜಸಃ – ಈ ೯ ಬಿದಿರು " (ನಾಚಿರಾ. ೦೦೨); ಬೆತ್ತ ಬಿದಿರಿಡ ದಡಸಿ ಬೆಳೆದ ಮೆಳೆಗಳ ನಡುವೆ . . . ನಿಂದೆಯೊ (ಸಿದ್ಧರಾ. ೨-೬೦); ಕಬ್ಬಿಗರೋದುಗಬ್ಬವ ಹಾಡುಗಬ್ಬವ ಕಬ್ಬದೊಳೊರೆವರಿವೆರಡು ಕಬ್ಬಿನಂತಿರ ಬೇಕು ಬಿದಿರಂತೆ ರಚಿಸಲೇಕಬ್ಬ ಹೇಳೆಲೆ ಸರಸ್ವತಿಯೆ (ಭರತೇ. ೦-೬); ಬಿದಿರವಿಮಾಬ್ಜಂಗಲ್ ಮುಸುಕಿದ ಆ ದಿವ್ಯಚಂದನದ್ರುಮಗಳೆನೆ . . . ನಿಮ್ಮ ಶ್ರೀಪಾದಭಕ್ತರ್ ದುರಿತಮುಕ್ತರಿಪ್ಪರ್ (ಜಿಬಿಪು. ೩-೦೩).

ಬಿದಿರ ಲಳಿಗೆ=ಬಿದಿರಿನ ಅಂಡೆ: ಬಿದಿರ ಲಳಿಗೆಯುಲಗ್ಘವಣಿಯ ತಂದು . . . ಲಿಂಗವ ಸಿಂಗಾರವ ಮಾಡಿ ನೋಡುವದೆಂದು ದೊರೆಕೊಂಬುವುದೋ ಎನಗೆ (ಸಕವ. II, ೬೦೬–೬೯೯).

[ದೇ.॥ ತಮಿ. ವೆತಿರ್, ವೆತಿರಿ, ವಯಿರ್; ತುಳು. ಬೆದ್‌ರ್; ತೆಲು. ವೆದುರು; ಕೋಲಾ. ವೆದುರ್; ಪರ್ಜಿ. ವೆದ್ರ್; ಗಡಬ. ವೆದಿರ್, ವೆದ್ರೆ; ಗೊಂಡಿ. ವೆದುರಿ, ವೆದೂರ್; ಕೊಂಡ. ದೇರ್; ಕುವಿ. ದೇರು]

**ಬಿದಿರಕ್ಕಿ** (ನಾ). ಬಿದಿರಿನ ಸಸ್ಯದಲ್ಲಿ ಉತ್ಪತ್ತಿಯಾಗುವ ಕಾಳು,– ಬೀಜ : ಶೀತಳಶಶಿಕಾಂತದಿಂ ಸಮೆದೊರಲ್ಗಳೊಳಂ ಬಿದಿರಕ್ಕಿಯಿಕ್ಕಿ (ಗಂಚ. ೦-೦೨೩) ; ಬಿದಿರಕ್ಕಿಯೋಗರವೊಲಿದೊಡುಡುವಿನ ತುಪ್ಪವುಂಟಲ್ಲಿ (ಬಿಸಪು. ೮೮-೧೭); ಬಿದಿರಕ್ಕಿಯಿನಿಜೇನುತುಪ್ಪ ಕರ್ಜೂರ ದ್ರಾಕ್ಷೆ ಬದರಿ ಮುಂತಾದ ಸತ್ಫಲವ . . . ತಂದು ಇದಿರಿಕ್ಕಿದರು ಮೇಲ್ಮೇಲೆ (ಮೋಹತ. ೦೪-೬೩); ಬಿದಿರಕ್ಕಿ ದೇಹಕ್ಕೆ ಉಷ್ಣ ಎಂದು ಹಿಂದಣ ಕಾಲದವರು ಉಪಯೋಗಿಸಲು ಅಂಜಿರಲಾರರು (ಸ್ವಕೃಹೂ. ೨೩೦). [ಬಿದಿರ್$_2$+ಅಕ್ಕಿ$_1$]

**ಬಿದಿರಿಸು** (ಕ್ರಿ). ೧. ಕೊಡಹು ; ಝಾಡಿಸು : ಕೊಸರ್ವಡಿದ ಕೋ ಎನುತಲೊಂದೆ ತಿರುಪಿನೊಳು ಬಿದಿ [ಪಾಠಾಂ.ದು]ರಿಸಿ ಬಿಟ್ಟು ನಿಂದು ನಿರುಪಾಧಿಕಜ್ಯೋತಿಯಂತೆಸದಧಿಕ ಪದವಡೆದು (ಲಶಿಹಂ. ೩೬-೨) ; ಕಲಹಕ್ಕಿ ಕಾಲ್ಕೆದರಿ ಗರಿಯು ಪಸರಿಸಿ ತಮ್ಮ ತಲೆಯ ಬಿದಿರಿಸಿ . . . ಕಲಹಂಸ ಕಂಗೆಸೆದಿರ್ದವು (ಪವಪೋ. ೬-೩೨). ೨. ಉದುರಿಸು ; ಎರಚು : ಭಸಿತ ವನು ತೆಗೆದು ಕಂಗೊಳಿಸುತವನಿಯೊಳು ಬಿದಿರಿಸಲ್ (ಸಿದ್ಧೇಪು. ೬-೨೬). [ಬಿದಿರ್$_1$ + – ಇಸು$_3$]

**ಬಿದಿರು$_1$** 'ಬಿದಿರ್$_1$' ನೋ.

**ಬಿದಿರು$_2$** 'ಬಿದಿರ್$_2$' ನೋ.

**ಬಿದಿರುಪ್ಪು** (ನಾ). ಬಿದಿರಿನ ಪೊಳ್ಳುಬೊಂಬಿನೊಳಗೆ ಸಂಗ್ರಹ ವಾಗುವ ಒಂದು ಬಗೆಯ ಹರಳು ; P "ಹರಳಿನ ರೀತಿಯ ಬಿದಿರುಪ್ಪು (ಟ್ಯಾಬಷಿಯರ್) ಔಷಧಿಯಾಗಿಯೂ ರಾಸಾಯನಿಕ ಕ್ರಿಯೆಗಳಲ್ಲಿ ವೇಗವರ್ಧಕವಾಗಿಯೂ ಬಳಕೆಯಾಗುತ್ತದೆ" (ಕವಿಕೋ. XII. ೦೨೦) : "ವಂಶಜಾ – ಬಿದಿರುಪ್ಪು" (ಓಷಧಿ. ೦೨೬).

[ಬಿದಿರು$_2$ (<ಬಿದಿರ್$_2$) + ಉಪ್ಪು$_1$]

**ಬಿದಿರುಮೆಳೆ** (ನಾ). ದಟ್ಟವಾಗಿ ಬೆಳೆದ ಬಿದಿರಿನ ಪೊದೆ,– ಪೊದರು : ಬಿದಿರುಮೆಳೆ ಧಗಧಗಿಸೆ ಘನಹೆಬ್ಬಿದಿರು ಛಟಛಟರೆನಲು (ವಳಕ. ೬-೬); ದಟ್ಟಯಿಸಿ ಬೆಳೆದಿರ್ದ ಬಿದಿರುಮೆಳೆ ಪವನಸಂಘರ್ಷಣೆಗೆ ಘೀಂಕರಿಸಲಿಭ ದಂತಿಪೋಲ್ ವಿಕಟರವಗೈದು ಕಂಪಿಸಿತು ಕಾಂತಾರವಮಾ ಕೀಚಕಧ್ವನಿಗೆ ! (ಶತ್ರುಂಗ. ೫೦-೦೪೯೦). [ಬಿದಿರು$_2$ (<ಬಿದಿರ್$_2$) + ಮೆಳೆ$_1$]

**ಬಿದಿರುಲಳಿಗೆ** (ನಾ). ಬಿದಿರಿನ ಅಂಡೆ ; ಬೊಂಬಿನಿಂದ ಮಾಡಿದ ಪಾತ್ರೆ : ಜೇನುತುಪ್ಪದ ಗಡಿಗೆಗಳನ್ನು ಬಿದಿರುಲಳಿಗೆಗಳಲ್ಲಿ ತುಂಬಿದ್ದ ಮುತ್ತಿನ ಮಣಿಗಳನ್ನು ತಂದು (ಶಿವಪ. ೯೯-೩).

[ಬಿದಿರು$_2$ (<ಬಿದಿರ್$_2$) + ಲಳಿಗೆ (<ನಳಿಗೆ)]

**ಬಿದಿರುವಳ್ಳಿ** 'ಬಿದಿರ್ವಳ್ಳಿ' ನೋ.

**ಬಿದಿರೂರ್** (ನಾ). ಒಂದು ಊರಿನ ಹೆಸರು ; P ಶಿವಮೊಗ್ಗ ಜಿಲ್ಲೆಯ ಈಗಿನ ಬಿದನೂರು : ಪೆರ್ಬಟ್ಟಕ್ಕಂ ಬಿದಿರೂರ ಅಗ್ಗಳ ವಿಳಿವಲ್ಲಿ (ಎಕ. X, ಶ್ರೀನಿವಾ. ೨೬-೨೨ ; ಸು. 870) ; ಬಿದಿರೂರಲು ಬೂತುಗನಂ ಪೊನ್ನಿಗಂ ಕಾದಿ ಸತ್ತು ಸ್ವರ್ಗ್ಗದಲಿಟ್ಟು (ಎಕ. XII, ಮಧ್ಯಗಿ. ೭೨-೦೬ ; ಸು. 950) ; ಬಿದಿರೂರಂ ಬೆದೆಗೆಡಿಸಿ . . . ಇರ್ಕೇರಿಯ ನೊಕ್ಕಲಿಕ್ಕಿ (ಚಕಪ. ೫-೨೬). [ಬಿದಿರ್$_2$ + ಊರ್]

**ಬಿದಿರೆಲೆ** (ನಾ). ೧. ವಂಶವೆಂಬ ಸಸ್ಯದ ಎಲೆ ; ಬಿದಿರಿನ ಗರಿ : ಬಿದಿರೆಲೆಯೊಳ್ ರಸಮನಱಸುವ ಕಳ್ಳಿಯ ಪಾಲೊಳ್ ಬೆಣ್ಣೆಯನಱಸುವ (ಧರ್ಮಾಮೃ. ೦೨-೨೪) ; ಬಿದಿರೆಲೆಯ ಮೆಲಿದರೆ ಮೆಲಿದಂತಲ್ಲದೆ ರಸವನು ಪಡೆಯಲು ಬಾರದು (ಬಸವ. ೫೫೪). ೨. ಬಿದಿರಿನ ಗರಿಯ ಆಕಾರದ ಬಾಣ : ಹಿಳಿಕು ಕವಲಂಬು ಬೋಳೆವಿದಿರೆಲೆ . . . ಸಮವಾಯನೆಂಬ ನಾನಾ ಸರಳನು ಸೆಳೆದು (ಕೋಮಪ. ೫-೨೬) : ದೊರೆವಡೆದ ಕಣಗಿಲ ಪುಳುಂಬವು ತರದಿ ಬಿ[ಪಾಠಾಂ. ವಿ]ದಿರೆಲೆ ಶರಧಿಯಂ ತಳ್ತಿರಿಸಿದಾ ಬತ್ತಳಿಕೆಗಳು ನೆರೆದಿರ್ದುವವರಲ್ಲಿ (ಸಾಳ್ವಭಾ. ೫-೦೪). [ಬಿದಿರ್$_2$ + ಎಲೆ$_1$]

**ಬಿದಿರ್ಕಲ್** (ನಾ). ಒಂದು ಊರಿನ ಹೆಸರು : ಕರಿಕನಾಡ ಬಿದಿರ್ಕಲ್ಲಾಳ್ದ ಕುಕ್ಕರ ಪಾಳಿಕ್ಕಾಱನಾಡಿಯರ್ ತುರಿದು (ಎಕ. IX, ಬೆಂಗಳೂ. ೩೬-೩ ; ಸು. 750). [ಬಿದಿರ್$_2$ + ಕಲ್$_3$]

**ಬಿದಿರ್ಕೆ** (ನಾ). ಎರಚುವಿಕೆ : ಅದಿರ್ಕೆ, ಬಿದಿರ್ಕೆ, ಪೊಣರ್ಕೆ (ಶಬ್ದಾನು. ೫೫೭ ಪ್ರಯೋ). [ಬಿದಿರ್$_1$ + –ಕೆ]

**ಬಿದಿರ್ಚು** (ಕ್ರಿ). ೧. ಹರಡು ; ಕೆದರು : ಎರಲಲೆಪಿಂದೆಸೆಟ್ಟಿಸುಪ ನೆಯ್ದಿಲಂ . . . ಬಿದಿರ್ಚಿ ದಳಂಗಳಂ ತೆಱಿಂದಿರಿದುದು ಜಕ್ಕವಕ್ಕಿ (ಅನಂಪು. ೬-೬೦); ನುಡಿಯಾಗರವಂ ಬಿದಿರ್ಚಿದ್ಯೆ! (ಗಿಳಿಪಂ. ೫೦-೫). ೨. ಕೊಡಹು; ಝಾಡಿಸು : ಎಱಂಕೆಗಳಂ ಬಿದಿರ್ಚಿಕೊಂಡು ತಾಮ್ರತುಂಡಂ ಕಣ್ದೆಱೆದು . . . ಅಗ್ರಭಾಗದೊಳ್ಮನಂಗೊಳಿಪವನಿಪನಾಲೋಕನಂಗೆಯ್ದು (ಅದ್ಭುಟಿ. ೫-೨ ವ) ; ಎಱಕೆಗಳೊಳ್ ಪೊದಟ್ದು ಪನಿಪುಲ್ಲ ಪಯಃಕಣಮಂ ಬಿದಿರ್ಚಿ (ಶಾಂತೀಶ್ವ. ೦೦-೯೭) ; ತುಂತುಱನುದಿರ್ಚಿತು ಸಾರಸಂ ಸಲಿಲದೊಳ್ನನೆದ ಪಕ್ಕಂಗಳಂ ಬಿದಿರ್ಚಿ (ಜೈಮಿಭಾ. ೨೮-೩೬). ೩. ಬಿಚ್ಚು; ಕಳಚು : "ಬಿದಿರ್ಚು–ರಥವಿಮೋಚನೇ, (ಬಂಡಿಯಿಂದ ಕುದುರೆ ಮೊದಲಾದುವನ್ನು ಬಿಚ್ಚು, ಹರಡು)" (ಶಮಧಾ) ; ಮೋಹಪಾಶದ ತೊಡರಂ ಬಿದಿರ್ಚಿ ದೆಸೆಯಂತುವರಂ ನಿಜಕೀರ್ತಿಯಂ ನಿಮಿರ್ಚಿದಂ (ಶಂರಾಮಾ. ೨-೨೬). ೪. ತೆರೆ ; ಅಗಲಿಸು : ಮುಂದಿರ್ದ ಕಣ್ಣೆವೆಯುಂ ಬಿದಿರ್ಚಿ ನೋಡೆಮ್ಮಂ (ರಾಮಾಶ್ವ. ೬೦-೬). [ಬಿದಿರ್$_1$ + –ಚು$_1$]

**ಬದಿರ್ದಟ್ಟಿ** (ನಾ). ಬಿದಿರಿನ ಸೀಳಿನಿಂದ ಹೆಣೆದು ಮಾಡಿದ ತಡಿಕೆ : ಬದಿರ್ದಟ್ಟಿ, ಪೊಗರ್ವಟ್ಟೆ (ಕಮಪ. ೪೩ ಕೃಯೋ). [ಬಿದಿರ್$_2$ + ತಟ್ಟಿ$_1$]

**ಬದಿರ್ಮುತ್ತು** (ನಾ). ಬಿದಿರಿನಲ್ಲಿ ಸಿಗುತ್ತದೆ ಎಂದು ನಂಬಲಾದ ಒಂದು ಬಗೆಯ ಮುತ್ತು ; ೮ ಆನೆ, ಸರ್ಪ, ಮೀನು, ಕಾಡು ಹಂದಿ, ಕಪ್ಪೆಚಿಪ್ಪು, ಶಂಖ, ಮೋಡ ಹಾಗೂ ಬಿದಿರುಗಳಲ್ಲಿ ಮುತ್ತು ಸಿಗುತ್ತದೆಯೆಂಬ ಕವಿಸಮಯವಿದೆ: ತೋರಬದಿರ್ಮುತ್ತಿನ ನವಹಾರದ ಕೆಂದಳಿರ್ಗಳುಡೆಯ ವನಚರಿಯೊರ್ವಳ್ . . . ನವಸಂಧ್ಯಾ ರಾಗದೊಳೆಸೆವ ನಿಶೆಯನನುಕರಿಸಿರ್ದಳ್ (ಜಗಪ. ೦೬-೦೬).
[ಬದಿರ್$_2$ + ಮುತ್ತು$_3$]

**ಬದಿರ್ವಳ** (ನಾ). ಬಿದಿರಿನ ಕೆಲಸ ಮಾಡುವವನು ; ಮೇದಾರ : ಕದಿರ್ವಳಂ, ಬದಿರ್ವಳಂ (ಕಬ್ಬಿಷ. ೬೩ ಕೃಯೋ). [ಬದಿರ್$_2$ + — ವಳ]

**ಬದಿರ್ವಳ್ಳಿ**, ಬಿದಿರುವಳ್ಳಿ (ನಾ). ಒಂದು ಊರಿನ ಹೆಸರು : ಬೀರವುರವುಂ ಬದಿರ್ವ್ವಳ್ಳಿಯುಮನೊನ್ದು ಅಗ್ರಹಾರಂ ಮಾಡಿ(ಎಕ. XI, ಚಿತ್ರದು. ೫೦-೦೬ ; 968). **ಬಿದಿರುವಳ್ಳಿ** : ಶ್ರೀಮತ್ಕನ್ನಯ್ಯ ಚರಿತ್ರ ವಳ್ಳಿಯುಮುಮಂ ಪೆರ್ಬ್ಬಾಳುಮಂ ಬಿದಿರುವಳ್ಳಿಯು ××× ರದೊಳ್ ಕೊಣ್ಡು (ಎಕ. XI, ಚಿತ್ರದು. ೪೯-೬೦ ; 947). [ಬಿದಿರ್$_2$ + ಪಳ್ಳಿ$_1$]

**ಬದಿರ್ಹಕ** (ನಾ). ಒಂದು ಊರಿನ ಹೆಸರು : ಬಿದಿರ್ಹಕದ ಏಚಗಾವುಣ್ಡ ನೆಕ್ಕಲವನ್ದಿಯ್ಯನಿಱಿದು ಪನ್ದಿ ಸತ್ತಿಂಬಳಿಯಿಂ ತಾಂ ಸತ್ತಂ (ಎಕ. XV, ಹೊಳೆ. ೦೨೮-೦; 970). [ ? ]

**ಬದಿವಸ** (ನಾ). ವಿಧಿಯ ವಶದಲ್ಲಿರುವುದು ; ದೈವಾಧೀನ : ಬದಿವಸದಿಂದೆ ಪುಟ್ಟುವುದು ಪುಟ್ಟಿಸುವಂ ಬದಿ (ಶಂಕಭಾ. ೦೨-೦೬೨).
[< ಸಂ. ವಿಧಿವಶ]

**ಬದು$_1$**, ವಿದು$_1$ (ನಾ). ೧. ಚಂದ್ರ ; ಇಂದು : "ಜೊನ್ನೊಡಲಂ . . . ಬಿದು . . . ಕಟ್ಟಿಲೆವಣೆ, ತಿಂಗಳ್ — ಈ ೨೦ ಚಂದ್ರನ ಪೆಸರ್" (ಕಶಪಾ. ೪೬-೨೩); ಮವನಂಗೆ ಜಯಮಕ್ಕೆ ಮಧುಗೆ ಸಂಪದಮಕ್ಕೆ ಬಿದುವೆಗದಿರಿಂತು ನೆಲಸಿರ್ಕೆ (ಉದ್ಭಟ. ೦೦-೯೭); ಬಿದುಗೆಱಪೆ ರಾಹುವಿನ ಮಾಳ್ಕೆಯಿಂ ರಥವ ಬಳಿಗೊದಗಿ ಪಿಡಿದಪ್ಪಳಿಸೆ (ಜಿರಿಶು. ೨೮-೩೦). ೨. ತ್ರಿಮೂರ್ತಿಗಳಲ್ಲಿ ಒಬ್ಬ ; ವಿಷ್ಣು : ಬಿದಿಯನುಮಂ, ಬಿದುವನುಮಂ ಪಾಸಟಿಗೆಯ್ವನಲ್ಲಂ (ಅದ್ಭುತ. ೪೩-೨). **ವಿದು$_1$** : ೧. "ನೆಯ್ದಿಲ್ಗೆಳೆಯಂ ವಿದು ಬೆಳ್ಗದಿರಂ" (ಕರ್ಣಾಶಾ. ೩೯). ೨. "ಸಿರಿಯರಸಂ . . . ಪರ್ದುದೇರ ವಿದು ಕಾರೊಡಲನಲರ್ಪೊಡೆಯ ಕಾವನಯ್ಯಂ ಬಟ್ಟುಗೆಯ್ವುಗಯ್ಯಂ ಭಾವಿಸೆ" (ಚಂ. ಹಂ. ೬). [< ಸಂ. ವಿಧು]

**ಬದು$_2$** (ನಾ). ೧. ಆನೆಯ ಕುಂಭಸ್ಥಳದ ಮಧ್ಯಭಾಗ : "ಬಿದು — ವಿದು = ಆನೆಯ ಗಂಡಪ ನಡು" (ಶಬ್ದಕೋ. ...); ಬಡಿಗೊಳೆ ಬಿದು ಬಿಬ್ಬರಬಿರಿದೊಡನುಗೆ ಪೊಸಮುತ್ತು (ಶಂಕಭಾ. ೧೧-೦೦೩); ಅಮರೇಂದ್ರೋ ತ್ತುಂಗವಾತಂಗದ ಬಿದುವಿನ ಮುಕ್ತಾಳಿಯಿಂಪಾದ ಮಂಜೂಷಮಿದು (ಜಗಪ. ೬-೨೯). ೨. ಕುದುರೆಯ ಕಿವಿಯ ಹೊರಭಾಗ : ಉದಯಿಸೆ ಸುಟಿಗಳ್ ತುರಗದ ಬಿದುಸಂಸ್ಥಾನಕದೊಳರ್ಥಹಾನಿಯನವು ಮಾಡದೆ ಮಾಣವು (ಅಶ್ವಶಾ. ೪-೨೦); ಕಿವಿಯ ಪೊಱಗಣ್ಗೆ ಬಿದುವೆಂಬ ಪೆಸರಕ್ಕುಂ (ಅಶ್ವಶಾ. ಪುಟ. ೮೮-೬). [< ಸಂ. ವಿದು]

**ಬಿದುಗದಿರ್** (ನಾ). ಚಂದ್ರಕಿರಣ : ಬಿದುಗದಿರಿಂತು ನೆಲಸಿರ್ಕೆ ರತಿಗೆ ಸಂಮುದಮೆಂದು ತೊಲಗದಿರುತಿರ್ಕೆ (ರಾಜಶೇ. ೦೦-೯೯).[ಬಿದು$_1$+ಕದಿರ್$_2$]

**ಬಿದುಗಲ್**, ಬಿದುಗಲ್ಲು (ನಾ). ಚಂದ್ರನ ಕಾಂತಿಯಿಂದ ದ್ರವಿಸುವುದೆಂದು ನಂಬಲಾಗಿರುವ ಶಿಲೆ ; ಚಂದ್ರಕಾಂತಶಿಲೆ : ಸದಲಂಕಾರ ವೃಷೇಂದ್ರನಂ ವಿತತರೋಚಿರ್ಗಾತ್ರನಂ ಛಿತ್ರನಂ ಬಿದುಗಲ್ಗನ್ನಡಿಯಂ . . . ಸ್ವಪ್ನದೆ ಕಂಡಳಾ ವಧುಕಳಾಶ್ರೀಸಾಂದ್ರನಂ ಚಂದ್ರನಂ (ರಾಜಶೇ. ೪-೨೦) ; ಬಿದುಗಲ್ನೆಲದೊಳುಂ ಬಾಡುತಿರ್ಪ ತಳಿರಡಿ ನಡೆಯೆ ಕಾಪಥ ದೊಳೆಂತಪ್ಪದವನಿಸುತೆಗೆ (ಶ್ರೀರಾಮಾ. ೦೬-೫೩). **ಬಿದುಗಲ್ಲು** : ಜೊನ್ನದೊಂದು ಪುತ್ತಳಿಯುಪೊಲೊಪ್ಪವೆತ್ತ ಬಿದುಗಲ್ಲಿನ ಬೊಂಬೆಯು ಪಾಂಗಿನಂತೆ (ಕಬ್ಬಿಗಾ. ೮೦) ; ತಬಿತಬನೆ ಪೊಳೆದು ಬಿತ್ತರಂಬಡೆದ ಬಿದುಗಲ್ಲ ಸುತ್ತಣ ಮೆಟ್ಟಡಿಯಿಂ . . . ಕೊಳಂ ಪಗಲ್ವೆಣ್ಣ ಕೈಪಿಡಿಯೆಂಬಂತಿರೆ ಸೊಗಯಿಸಿದತ್ತು (ರಾಮಾಶ್ವ. ೫೨-೦೮). [ಬಿದು$_1$ + ಕಲ್$_3$]

**ಬಿದುಗಲ್ಲು** 'ಬಿದುಗಲ್' ನೋ.

**ಬಿದುಮೊಗ** (ನಾ). ಚಂದ್ರನಂಥ ಮುಖ : ಬಿಡುಜಡೆಯ ಬಿದುಮೊಗದ ಬಿಳಿದೆಸಳ್ಗಣ್ಣ . . . ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಮಾಶ್ವ. ೪೮-೨೦). [ಬಿದು$_1$ + ಮೊಗ]

**ಬಿದುರ್** 'ಬಿದಿರ್$_1$' ನೋ.

**ಬಿದುರ** (ನಾ). ಸಿಡಿಲು; ಅಶನಿ: ಕದನಕ್ರೀಡಾವಿನೋದನುದ್ಧತದರ್ಪ್ಪಂ ಬಿದುರ ಪರಾಕ್ರಮನಾದಂ ವಿದಿತಗುಣಂ ಮಲ್ಲಿದೇವಂ (ಎಕ. XI, ದಾವಣ. ೪೩-೬೩; 1164); ಬಿದುರ ಹತಿಯಿಂ ಶೈಲಮೊಡೆವವೊಲ್ (ವಂಕಾರಾ. ೦-೦೯-೫೩). [<ಸಂ. ಭಿದುರ]

**ಬಿದುರಾಳ್ಗಿ** (ನಾ). ಒಂದು ಪ್ರದೇಶದ ಹೆಸರು : ಬಿಟ್ಟಗಂ ಬಿದುರಾಳ್ಗಿ ಎಟ್ಟತ್ತರ್ಕ್ಕಮವು ನಾಟ್ಗಾವುಣ್ಡುಗೆಯ್ಯೆ (ಎಕ. VIII, ಸೊರಬ. ೫೩೦-೪; 967). [ ? ]

**ಬಿದುರು** 'ಬಿದಿರ್$_1$' ನೋ.

**ಬಿದೆಯಿತ್ತ** 'ಬಿಜಯಿತ' ನೋ.

**ಬಿದ್ದ** 'ಬೀೞ್$_1$' ಪರಾ.

**ಬಿದ್ದ$_2$** (ನಾ). ೧. ಕೊರೆದುದು ; ತೂತು ; ರಂಧ್ರ : "ಬಿದ್ದ_ವಿದ್ಧ = ತೂತು, ತೂತಾದ" (ಶಬ್ದಕೋ. ೩೦). ೨. ಗಾಯ ; ಪೆಟ್ಟು ; ವ್ರಣ : 'ಬಿಱಬಿದ್ದಂಬೋಗು' ಪರಾ. ೩. ಬಿಂಬ ; ಆಕೃತಿ : ಕರುಣದ ಕರುವೋ ಕಾರ್ಪ್ಪಣ್ಯದ ತಿಟ್ಟವೊ ವಿರಹದ ಬಿದ್ದವೊ ದುಃಖದ ಮೂರ್ತಿಯೋ (ಕುಮುರಾ. ೯-೪೬). [<ಸಂ. ವಿದ್ಧ]

**ಬಿದ್ದಣ** 'ಬಿರ್ದಿನ' ನೋ.

**ಬಿದ್ದಣಂಬೇಳು** (ಕ್ರಿ). ಔತಣಕ್ಕೆ ಕರೆ ; ಊಟಕ್ಕೆ ಆಹ್ವಾನಿಸು : ವೈತಾಪಿಯು ಸುರನಿಪಹಮುನಿಚಯಕೆ ಬಿದ್ದಣಂಬೇಳಿಯತಿಭರದಿನಿಲವಲನ ಕೊಂದಾ ಮಾಂಸವಿಕ್ಕಿ ಚಿಚ್ಚರದಿನವರುಂಡ ಬಳಿಕಿಲವಲಾ ಎನಲು (ಪಾಸೋಳ್ತು. ೯-೩೦). [ಬಿದ್ದಣ (< ಬಿರ್ದಿನ) +ಪೇಳು (<ಪೇೞ್)]

**ಬಿದ್ದಿ** 'ಬಿರ್ದಿ' ನೋ.

**ಬಿದ್ದಿಕ್ಕಿಸು** (ಕ್ರಿ). ಔತಣ ಮಾಡಿಸು : ಕಡುಹಿತನೊಲು ತೊಡಗಿಸಿ ನೆಱೆ ಬಿದ್ದಿಕ್ಕಿಸುವೆನಿನಕ್ಕೆನುತಯ್ದಿದನೀಶನ ಸಭೆಗಿತ್ತಲ್ ಮುನಿಪತಿನಾರದನು (ವೀರೇಶ. ೦-೫೩). [ಬಿದ್ದಿ$_2$ (<ಬಿರ್ದು$_1$)+ಇಕ್ಕಿಸು$_1$]

**ಬಿದ್ದಿಕ್ಕು** 'ಬಿರ್ದಿಕ್ಕು' ನೋ.

**ಬಿದ್ದಿನ** 'ಬಿರ್ದಿನ' ನೋ.

**ಬಿದ್ದಿನಂಗೆಯ್** (ಕ್ರಿ). = ಬಿದ್ದಿಕ್ಕಿಸು : ಬಿಳಿದಿನಿಸು ನಱುಗಂಪಿನಿಂಪು ಸೊಂಪಿಂ ತಂಬಲರ ಬಿದ್ದಿನಂಗೆಯ್ದು (ಕಾವ್ಯದೇ. ೨-೩೪).
[ಬಿದ್ದಿನ (<ಬಿರ್ದಿನ)+ಕೆಯ್$_1$]

**ಬಿದ್ದು$_1$** 'ಬೀೞ್$_1$' ಪರಾ.

**ಬಿದ್ದು$_2$** 'ಬಿರ್ದು$_2$' ನೋ.

**ಬಿದ್ದೂಟ** 'ಬಿರ್ದೂಟ' ನೋ.

**ಬಿನ್**— (ಉಪ). ಇಲ್ಲದುದು ಎಂಬ ಅರ್ಥವನ್ನು ಕೊಡುವ ಒಂದು ಉಪಸರ್ಗ: 'ಬಿನ್‌ಪಗಾರಿರಜೆ', 'ಬಿನ್‌ಪುಕಾರ್' ಪರಾ.
[← ಹಿಂ. ಮರಾ. ಬಿನ್ = ಇಲ್ಲವಾದ, ಹೊರತಾದ]

**ಬಿನ್‌ಪಗಾರಿರಜೆ** (ನಾ). ಸಂಬಳರಹಿತವಾದ ರಜೆ : ಬಿನ್‌ಪಗಾರಿ ರಜೆಯ ಬಗ್ಗೆ ವಿಚಾರ ಮಾಡುವೆನು (ಸ್ವಾಲಿಬಿ. ೦೦೦).
[ಬಿನ್ – + ಪಗಾರಿ + ರಜೆ(<ರಜಾ)]

**ಬಿನ್‌ಪುಕಾರ್** (ಅ). ಯಾವ ದೂರೂ ಇಲ್ಲದೆ : ಕೆಲಸ ಸಲೀಸಾಗಿ ಬಿನ್‌ಪುಕಾರ್ ನಡೆದು ಹೋಗುತ್ತೆ (ಕಂಪ. ೨೮೬).
[ ಬಿನ್ –+ಪುಕಾರ್$_0$ (<ಪುಕಾರು) ]

**ಬಿನಎತ್ತಿಅಬ್ಬೆ** (ನಾ). ಒಬ್ಬಾಕೆಯ ಹೆಸರು : ಮಾರಕ್ಕಅರಸರ್ ಬನವಾಸಿ ನಾಡಾ ಬಿನಎತ್ತಿಅಬ್ಬೆ ಊರಾಳೆ (ಸೌಇಇ. XX, ೦೦-೨; ೯ನೆಯ ಶತ).
[ < ವಿನಯಾದಿತ್ಯ + ಅಬ್ಬೆ$_1$ ]

**ಬಿನದ** (ನಾ) ೧. ವಿನೋದ ; ತಮಾಷೆ : " ಬಿನದಂ ವಿನೋದದೊಳ್ " (ಕರ್ಣಾಪ. ೦೬); ಗೌರೀಪತಿಯ ಬಿನದಕ್ಕೆ ಭೂಭೃತ್ಸುತೆ ಬೇಡಿತಿಯಾದ ಕೆಚಿನನನುಕರಿಸಿರ್ದಳ್ (ಕಾದಂಸಂ. ೯೦). ೨. ಆಟ ; ವಿಹಾರ ; ಕ್ರೀಡೆ : ಬೇಂಟೆಯೆ ಬಿನದಂಗಳೆರಸಲ್ಕೇ (ಶಂಕಪಾ. ೩-೯೬). 'ಬಿನದವೆಟ್ಟು' ಪರಾ. ೩. ಸಂತೋಷ; ಆನಂದ: 'ಬಿನದಂಬಡೆ' ಪರಾ. [< ಸಂ. ವಿನೋದ]

**ಬಿನದಂಬಡೆ** (ಕ್ರಿ). ಸಂತೋಷಗೊಳ್ಳು ಆನಂದಿಸು : ತುಂಗಮೃದಂಗ ಮಂಗಳರವಂ . . . ಶಂಖನಿನದಂ ಬಿನದಂಬಡೆದಿರ್ದ ಭಕ್ತಲೋಕಂಗಳ ಕಂಗಳಂಗವಿಸೆ ಸಂಗಳಿಸಿರ್ಪುವು ಲಿಂಗಗೇಹದೊಳ್ (ರಾಜಶೇ. ೨-೦೨೬).
[ ಬಿನದ + ಪಡೆ$_1$ ]

**ಬಿನದಗೊಳು** (ಕ್ರಿ). = ಬಿನದಂಬಡೆ : ಭವಲೀಲೆಯುದ್ವೀಕ್ಷಣಗವಾಕ್ಷ . . . ನಿರುಕಿಸುತ ಬಿನದಗೊಳೆ ಸರ್ವಪಕ್ಷ (ಮಲದೇ. ೯೯-೦೦).
[ ಬಿನದ + ಕೊಳು (< ಕೊಳ್$_1$) ]

**ಬಿನದವಡಿಸು** (ಕ್ರಿ). ಸಂತೋಷಗೊಳಿಸು ; ಆನಂದಿಸುವಂತೆ ಮಾಡು : ಮಾಯೆ ಬೊಮ್ಮನ ಬಿನದವಡಿಸಿ ನಮ್ಮಿ ಜಗವ ಕಾಯುವಳು ತನ್ನಿಚ್ಚೆ (ಮಂಕುಕ. ೦೯೬). [ ಬಿನದ + ಪಡಿಸು ]

**ಬಿನದವಾಡು** (ಕ್ರಿ). ಕ್ರೀಡಿಸು ; ವಿಹರಿಸು : ಮನದ ಬನದಲಿ ಬಿನದ ವಾಡಿದೆ ತನ್ನ ತಿಳಿಯದೆ ತಾನು (ಕರಳು. ೦೯-೬). [ಬಿನದ+ಆಡು$_1$]

**ಬಿನದವೆಟ್ಟು** (ನಾ). ವಿಹಾರಕ್ಕಾಗಿ ರಚಿಸಿದ ಕೃತಕವಾದ ಬೆಟ್ಟ ; ಕ್ರೀಡಾಶೈಲ : ಬಾವಿ ಕೊಳಂ ಬಿನದವೆಟ್ಟುಗಳ್ ನೆರೆದಿರ್ಕುಂ (ಜಆಪು. ೩-೦೨೨). [ ಬಿನದ + ಬೆಟ್ಟು$_2$ (<ಬೆಟ್ಟ) ]

**ಬಿನದವೇಂಟೆ** (ನಾ). ವಿನೋದಕ್ಕಾಗಿ ಮಾಡುವ ಬೇಟೆ : ಮೆರೆದುವಾ ಕುಂಭಕರ್ಣನ ಬಿನದವೇಂಟೆಯ ಕವರ್ತೆಗಳ್, ತೋರುಮನೆಯಲ್ಲಿ ! (ಶ್ರೀರಾಪ. ೯೩೩-೨೭೬). [ಬಿನದ + ಬೇಂಟೆ ]

**ಬಿನದಸಾಲೆ** (ನಾ). ವಿಹಾರಶಾಲೆ ; ಕ್ರೀಡಾಮಂದಿರ : ಓಲಗಸಾಲೆ ಮಂತಣಸಾಲೆ ನಾಟಕಸಾಲೆ ಬಿನದಸಾಲೆ . . . ಸುಚಿತ್ರಸಾಲೆಗಳೊಳಜಿಸಿ ದಳಾ ಲೋಲಲೋಚನೆ ರಾಮನನು (ಕುರಾಶಾಂ. ೩೩-೯೩).
[ ಬಿನದ + ಸಾಲೆ$_4$ ]

**ಬಿನದಿ** (ನಾ). ವಿನೋದಪ್ರಿಯನಾದವನು : ಜಗಳವಾಡಿಸಿ . . . ನಗುತಲಿರುವನು ನೋಡಿ ; ಪರಬೊಮ್ಮನೇಂ ಬಿನದಿ ! (ಮಂಕುಕ. ೦೬೨) ; ತರುಣ ತರುಣಿಯರು ಮಾಡದಲ್ಲಿರುವ ಬಿನದಿಗಳ ಜತೆಯಲ್ಲಿ ಸೇರುತ್ತಾರೆ (ಹಂಸದ. ೦೩೬). [ ಬಿನದ + – ಇ$_3$ ]

**ಬಿನದಿಸು** (ಕ್ರಿ). ಆನಂದಿಸು ; ಸಂತೋಷಪಡು : ಪಾರಿವಂಗಳೊ ಳ್ಬಿನದಿಪ ಸರಸಯುವತಿಯರಿಂ (ಉದ್ಭಟ. ೧-೭೬ ವ) ; ಬಿನದಿಪ ಹಸುಳೆ ಜವಾದಿಯ ಮಿಗಗಳನನುರಾಗದಿ ನೋಡುತ ಬಿಜಯಂಗೈವನಿತಜಿಳು (ಜಯಾ. ೯-೨) ; ಮಾತೆಯ ಪಕ್ಷಪುಟವ ಸೇರುವ ತೊದಲ್ನಾತ ನುಡಿದು ಬಿನದಿಸುವ . . . ಗಿಳಿವಱಿಗಳ ರೀತಿಯ ಕಂಡಳಾ ಕಾಂತೆ (ಕಂಪವ. ೯-೯೭). [ ಬಿನದ + – ಇಸು$_3$ ]

**ಬಿನದೆ** (ನಾ). ವಿನೋದಿಸುವವಳು : ವಿನೋದಪ್ರಿಯೆ : ಕಾಡ ಬಂದವರಲ್ಲ ನೋಡಬಂದೆವು . . . ಎಂದು ಮಾತಾಡಿದರಾ ಬಿನದೆಯರು (ಶರಶ. ೯೨-೦೬). [ ಬಿನದ + – ಎ$_2$ ]

**ಬಿನಮಿತ** (ನಾ). ಒಬ್ಬಾತನ ಹೆಸರು : ಎಱೆಯ ಪೆರ್ಮಾಡಿಯ ಸಾನ್ತಸಾಮನ ಮಗಮ್ಬಿನಮಿತನ ಮಗಂ . . . ಪುರದೊಳ್ಗಣ್ಡಂ (ಎಕ. VII, ಶಿಕಾಂ. ೨೮೯-೩; 902). [ ? ]

**ಬಿನಮ್ಮ** 'ಬಿನಾಮ್ಮ' ನೋ.

**ಬಿನಯ** (ನಾ). ೧. ವಿನಯ ; ನಮ್ರತೆ : ಬಿನಯದ ಬಿತ್ತು ಬಿನ್ನಣದ ಪೆರ್ಮೊಳೆ (ಅಶ್ರಪು. ೦೫-೨೦) ; ಬಿನಯಂ ಬೇರ್ವರಿಜಾಂತುದೋ (ಜಆಪು. ೩-೦೦೩). ೨. ಪ್ರೇಮ; ಪ್ರೀತಿ (?): "ಬಿನಯಂ ಪ್ರೇಮಂ" (ಕರ್ಣಾಪ. ೯೦). [< ಸಂ. ವಿನಯ]

**ಬಿನಸು** (ನಾ). ಹಾನಿ ; ನಷ್ಟ : ತನಗಾಪ್ತರೆನಿಸಿ ಚಿರಕಾಲದಿಂದಾಶ್ರೈಸಿ ಮನಸು ಮರ್ಮಗಳರಿತ ಜನರು ಸುಕ್ಲೇಶಕರವನು ಪೇಳ್ವರಲ್ಲದನ್ಯವ ನುಸುರರೆಂಬ ನಂಬುಗೆಯ ದೃಢತೆಗೈದು ಬಿನಸು ತೋರದ ತೆರದಿ ರಾಜಾರ್ಥಕೊಣಯಂ ತೋರದಂತೆ (ವೆಂಕಾರಾ. ೬-೦೩-೬).
[ <ಸಂ. ವಿನಾಶ./ಮರಾ. ಬಿನಸಣೇ, ಬಿನಾಸಣೇ = ನಷ್ಟವನ್ನುಂಟು ಮಾಡು ]

**ಬಿನಾಕಳಿ** (ನಾ). ಒಂದು ಊರಿನ ಹೆಸರು : ಕುಟುವರುಂ ಬಿನಾಕಳಿ ಊರುಗ್ಗಾವುಣ್ದುಗೆಯೆ (ಎಕ. VIII, ಸೊರಬ. ೯೩೭-೯ ; 972). [?]

**ಬಿನಾಮಿ** 'ಬೇನಾಮಿ' ನೋ.

**ಬಿನಾಮಿ** 'ಬೇನಾಮಿ' ನೋ.

**ಬಿನಾಮೆ** 'ಬೇನಾಮಿ' ನೋ.

**ಬಿನಾಮ್ಮ**, **ಬಿನಮ್ಮ** (ನಾ). ಒಬ್ಬಾತನ ಹೆಸರು : ಶ್ರೀಪುರುಷಮಹಾ ರಾಜರ್ ಪೃಥುವೀರಾಜ್ಯಂಗೆಯೆ ಕೆಸುಗೊಳಮೊಡೆಯ ಬಿನಾಮ್ಮಂಗೆ ಧಣ್ಣಗವಾಡಿಯಂ ಬ್ರಹ್ಮಾದೇಯಂಗೊಟ್ಟಂ (ಎಕ. IV, ಹೆಗ್ಗಡ. ೯-೩ ; ಸು 750). **ಬಿನಮ್ಮ** : ಸವುಳಜ್ಜದ ಮೆಣ್ಡಗಾವುಣ್ಡನು ಬೆಳ್ಗೊಟಲ ಬಿನ ಮ್ಮನು (ಎಕ. V, ಚನ್ನರಾ. ೨೫೦-೦೯ ; ಸು. 925). [? + ಅಮ್ಮ$_1$]

**ಬಿನುಂಗು**, **ಬಿನುಗು$_2$** (ನಾ). ಒಂದು ಬಗೆಯ ತೆರಿಗೆ : ನಗರದ ವಶ ವರ್ತಿಗಳಪ್ಪ ಬಿನುಂಗಿನೊಳ್ಪೇಸವಂ ೧೦ ಮಾನ್ಯ ಸಾಮ್ಯದೊಳ್ಪಣ ೧ (ಎಕ. VII, ಶಿಕಾಂ. ೯೯-೩೩ ; 1094). **ಬಿನುಗು$_2$** : ಆಯ್ದು ಬಿನುಗು ಮೂವತ್ತು × × × ರರಸ ಕೊಟ್ಟ ಬಿನುಗು (ಪ್ರಾಲಿಅಂ. ೦೯೩೦, ೬೬-೦೫ ; 1300) ; ಆಡ ತೆಱೆ ಕುಂಬಾರುದೆಱೆ ಬಿನುಗು ಬೆಸಪಿಕ್ಕಲು ತಗಡೂರ ಸ್ಥಳಕ್ಕೆ ಸಲುವ ಸುಂಕ (ಪ್ರಾಲಿಅಂ. ೦೯೯೬, ೦೬-೨೦ ; 1488). [ ? ]

**ಬಿನುಗ** (ನಾ). ಅಲ್ಪವ್ಯಕ್ತಿ ; ಕ್ಷುದ್ರವ್ಯಕ್ತಿ : ಮದ ಮತ್ಸರವ ಬಿಡದೆ ಕುದಿದು ಕೋಟಲೆಗೊಂಬ ಬಿನುಗರನೊಲ್ಲ ನಮ್ಮ ಬಸವಪ್ರಿಯ ಕೂಡಲ ಚೆನ್ನಬಸವಣ್ಣ (ವಚಸಂ. ೬೯೬-೦೯೬) ; ಬಿನುಗರಪರವರಂಗದಲಿ ಕೈಮನವ ಖಂಡಿಸಿ ಸಕಲರಿಪುಸಾಧನವನೊಬ್ಬನೆ ಕರ್ಣ ಗೆಲಿದನು (ಕುವ್ಯಾಕ. ೦೦-೬) ; ಡಂಬಕಬಿನುಗರು ಕಡೆಯ ಕಾಲಕೆ ಪೂಜೆಗೊಂಬರೊಳ್ಳಿದನುಂಬರು (ಶರಶ. ೬೦-೩೯). [ ಬಿನುಗು$_1$ + – ಅ$_7$ ]

**ಬಿನುಗಾಟ** (ನಾ). ಅಲ್ಪತನ ; ಕ್ಷುಲ್ಲಕತನ : ಮನುಜರ ಗುಣ ತನ ಗೊಂದೂ ಬಿಡದೆ ಘನವನಱಿವೆನೆಂಬ ಬಿನುಗಾಟದ ಮಾತೇಕೆ (ಪೋಳ್ಪವ. ೬೬-೩೦೦). [ ಬಿನುಗು$_1$ + ಆಟ ]

**ಬಿನುಗು$_1$** (ನಾ). ೧. ಹೀನವ್ಯಕ್ತಿ ; ಕ್ಷುದ್ರವ್ಯಕ್ತಿ ; ಅಲ್ಪವ್ಯಕ್ತಿ : ಅನಿವಿಷಗತಿಯೆಂಬ ದನುಜನಾಯಕ ವಿಕ್ಕ ಬಿನುಗುಗಳನು ಮುಟ್ಟೆನೆಂದು ವನಜನಾಭನು ಮೊದಲಾದ ದೇವರ್ಕಳು ಶನಗಾಹುತಿಯೆನುತಿಹನು (ಶ್ರೀಕೃಶಾಂ. ೩-೩೬); ಕಟ್ಟಿತುರಿ ದೆಸೆ ನಾಲ್ಕಱಲಿ ಬೆಸ್ನಟ್ಟ ಹೊಯ್ದುದು

ಬಿನುಗರ್ಗಳ (ಕುಮ್ನಾ.ಭಾ. ೬-೪೧). ೨. ಬಡವ; ದರಿದ್ರನಾದವನು : ಬಿನುಗಂ ನಂಬಿ ತೆಱುವೊಕ್ಕಲಂ ಕಳೆವ ಪ್ರಭುವುಮಂ (ಧರ್ಮಾಮೃ. ೯-೩೦). (ಗು). ೩. ಅಲ್ಪವಾದ ; ಕ್ಷುದ್ರವಾದ : ಇಂತೀ ಬಿನುಗುವಮಾನವನ . . . ಹೀನಯೋನಿಯಲ್ಲಿ ಬರಿಸದೆ ಮಾಣ್ಬನೆ (ಚನ್ನವ. ಕ. ೯೩-೨೦೯); ಹಾರುವ ನಿನಗೆ ಬಿನುಗುಭೀಮಾರ್ಜುನರ ಪರಿಯಂತೇಕೆ (ಕುಮ್ನಾ.ದ್ರೋ. ೦-೩೩).

ಬಿನುಗುಬಿಚ್ಚಟೆ, ಬಿನುಗುಬಿಕ್ಕಟೆ, ಬಿನುಗುಬಿಚ್ಚಟ = ಅಲ್ಪವ್ಯಕ್ತಿ; ಕ್ಷುದ್ರಮನುಷ್ಯ : ಆಳು ನಡೆದುದು ಮುಂಗುಡಿಯ ಹರಿಧಾಳಿ ನೂಕಿ ಹಿರಣ್ಯನಗರಿಯ ಮೂಲೆಗೈದಿತು ಹೊಯ್ದುರಲ್ಲಿಯ ಬಿನುಗುಬಿಚ್ಚಟೆಯ (ಕುಮ್ನಾ.ಆ. ೦೨-೦೩); ಧನಿಕದೊರೆಗಳ ಬಿನುಗುಬಿಚ್ಚಟೆಯ ಹಲವುಜಾತದ ವರ್ಣಭೇದದ ಹೊಲಲ ಜನದ ಸಮಸ್ತಭುವನಾವಳಿಯ ಭರಭಾರವನು ಹೊಱಿಸಿದನಗ್ನಿದೇವರಿಗೆ (ಕೊರರಾ. ೩-೯-೩೩); ಭಟರು . . . ಮುಕ್ಕುರಿಕಿಯಿರಿ ದಿರಿದು ಕೊಂದರಗಣಿತ ಬಲವ ಬಿನುಗುಬಿಕ್ಕಟೆಜನಗಳ (ತುರಂಗ. ೪೩-೮) ; ಒರ್ವರ ಸುಳುವ ಕಾಣೆನು ಬಿನುಗುಬಿಚ್ಚಟರಲ್ಲದೀ ಪುರಿಗೆ (ಉತ್ತ.ಕ. ೧೦-೩೩).

[ದೇ. ॥ ತೆಲು. ಬಿಲುಗು=ಕಪಟವಾದ]

**ಬಿನುಗ್ಗು₂** 'ಬಿನುಂಗು' ನೋ.

**ಬಿನುಗುತನ** (ನಾ). ನೀಚತನ; ಕ್ಷುಲ್ಲಕತನ : ಪಟ್ಟಮರ್ಮದಿಂ ಬಾಳ್ವ ಬಿನುಗುತನಗಳನುಳಿದು . . . ಸರ್ವಾವಧಾನದಿಂ ಚರಿಪನೆ ನಿರಾಭಾರಿ ವೀರಶೈವಂ (ಶಾಸೋಪು. ೦೨-೩೬); ಬಿನುಗುತನದಿಂದಖಿಳವಿಷಯಗಳನುಂಡು ಅನುವರಿಯದ ಜ್ಞಾನದೊಳಗೆ ಬಳಿಸಂದು (ಶತ್ಪ್ರ.ಶ. ೩೩-೧).

[ಬಿನುಗು₁ + — ತನ]

**ಬಿನೆಯ** (ನಾ). (?) : ಅರಳಿಹಳಿಯ ಬಿನೆಯ ಗ ೯೮೦ ಯಿಾ ಧಂರ್ಮಾಗಳಿಗೆ ಆವನಾನೊಬನು ನಡಪದೆ ಇದವನು ಗೋಉ ಭ್ರಾಂಹ್ಮರನು ವಾರ್ಣಾಸಿ ಯಲಿ ಕೊಂದ ಪಾಪವ ಪೊಯಿದುವನು (ಎಕ. XI, ಹೊಳಲ್ಕೆ. ೦೦೩-೨೦; 1556). [ ? ]

**ಬಿನ್ನ** 'ಬಿನ್ನಪ' ನೋ.

**ಬಿನ್ನಗೆ** (ಅ). ೧. ನೀರವವಾಗಿ; ಮೌನವಾಗಿ; ಸುಮ್ಮನೆ : "ಱಿಕ್ಕಟಂ, ಬಿನ್ನನೆ, ಬಿನ್ನಗೆ— ಈ ೩ ಸುಮ್ಮನೆಯೆಂಬರ್ಥಂ" (ಕಶಶಾ. ೩೬-೨೮೩); ಮಗನಟಲೊಂದು ಭೂಪತಿಯು ತಮ್ಮನೊಳಾದಟಲೊಂದು ನೊಂದು ಬಿನ್ನಗೆ ಮೊಗದಿಂದೆ ಕುಂದಿ ಫಣಿಕೇತನನಿರ್ದಟಲೊಂದು (ಶಂಶಭಾ. ೦೨-೦೭೦). ೨. ಬರಿದಾಗಿ; ಬಿಕೋ ಎಂದು; ಉರವೇಕೆ ಹಾರವುಣಿಮಂಜರಿಯಿಲ್ಲದೆ ಬಿನ್ನಗಿರ್ದುದು (ಶಂಶಭಾ. ೯-೬೨); ಮಂದರಗಿರಿ ಬಿನ್ನಗಾಯ್ತು ಮದುವೆ ಪೋದ ಮಂದಿರವೊ ಎಂಬಂತೆ (ಶಂಕ್ರಸಾಂ. ೨೪-೦೬೬). ೩. ಖಿನ್ನವಾಗಿ; ಖೇದದಿಂದಿರುವಂತೆ: ಬೇನೆಗಳೊಳ್ ಮೊಗಂಗಳಂ ಬಿನ್ನಗೆ ಮಾಡದಿರ್ದರಳ ವಚ್ಚರಿಯಾಗೆ ಕೆಲರ್ ಮಹಾರಥರ್ (ಶಂಶಭಾ. ೦೦-೩); ಇನ್ನಱುದಿಂಗ ಳುಂಟೆನೆ ನಿಜಾಯು ಸುರಪ್ರಕರಂ ಮೊಗಂಗಳಂ ಬಿನ್ನಗೆ ಮಾಡೆಯುಂ (ಶಾಂತಿಪು. ೬-೭೯). [? + — ಅಗ್ಗೆ]

**ಬಿನ್ನಣ** 'ಬಿನ್ನಾಣ' ನೋ.

**ಬಿನ್ನಣಂದೋಱು**, ಬಿನ್ನಣದೋಱು (ಕ್ರಿ). ಕೌಶಲ್ಯವನ್ನು ತೋರು; ಚಾತುರ್ಯವನ್ನು ತೋರಿಸು : ಸುತ್ತಿ ಬಳಸಿ ಮೊನೆದೋಱುವ ಬಿರುದಿನಂಕಮನುರವಣಿಸಿ ಪತ್ತಿ ಪೊರಳ್ಚಿ ಕೊಳ್ವ ಬಿನ್ನಣಂದೋರ್ಪ ಗನ್ನದಂಕವಂ ಬಿಡಿಸಿ (ಗಿಂಕ. ೨-೦೦೩ ವ). **ಬಿನ್ನಣದೋಱು** : ಬಿಲ್ಲ ಬಿನ್ನಣದೋಱಿದನು ನೃಪತಿ (ಸಾಳ್ವಭಾ. ೯-೭೦).

[ಬಿನ್ನಣ (< ಬಿನ್ನಾಣ) + ತೋಱು]

**ಬಿನ್ನಣಂಬಡೆ**, ಬಿನ್ನಣವಡೆ (ಕ್ರಿ). ಕೌಶಲ್ಯವನ್ನು ಪಡೆ ; ನೈಪುಣ್ಯ ವನ್ನು ಹೊಂದು : ಪೊಳ್ತಂ ಸನ್ನೆಯಂ ಜಾತಿಯಂ ಜವಂಗೆಡದಱಿವ ಬಿನ್ನಣಂಬಡೆದ ಬೇಡರೊಡವರೆ (ರಾಜಶೇ. ೩-೦೦ ವ). **ಬಿನ್ನಣವಡೆ** : ಭರತಕ್ಷೇತ್ರವಿಜಯಾಚಲದಿರ್ಕೆಲದೊಳು ವಿಮಾನಧ್ವಜನಾಡುಯೊಳನೆಸಲಿ ದುದು ಸರಸಿಜನಣುಗನ ಕೈಮಾಟಕೆ ಕಡುವಿರಿದುಂ ಬಿನ್ನಣವಡೆದು (ಜಿಚಂಕಾ. ೦-೩೪).
[ ಬಿನ್ನಣ (< ಬಿನ್ನಾಣ) + ಪಡೆ₁ ]

**ಬಿನ್ನಣಕಾತಿ** (ನಾ). ಒಯ್ಯಾರ ಮಾಡುವವಳು ; ಬೆಡಗುಗಾತಿ : ಅಣಿಮಾದಿಸಿದ್ಧಿದೇವಿಯರೊಡನೆಯ್ದೆ ಬಿನ್ನಣಕಾತಿ ಬಂದಳಾ ದೇವಿ (ಬಸವ. ೭೬-೦೦೬). [ ಬಿನ್ನಣ (< ಬಿನ್ನಾಣ) + — ಕಾತಿ₂ ]

**ಬಿನ್ನಣಗವಿ** (ನಾ). ಚಮತ್ಕಾರಗಳಿಂದ ಕೂಡಿದ ಕಾವ್ಯವನ್ನು ರಚಿಸುವ ವನು; ಕುಶಲನಾದ ಕವಿ : ಗತಪ್ರತ್ಯಾಗತಾದಿ ಸಂಧಾನ ಮುರಜಬಂಧಾ ಗಳಂ ಮಾಳ್ಪ ಬಿನ್ನಣಗವಿಯುಂ (ಶೀಶಿವಾ. ೩೦-೬).

[ ಬಿನ್ನಣ (< ಬಿನ್ನಾಣ) + ಕವಿ₅ ]

**ಬಿನ್ನಣಗಾರ್ತಿ** (ನಾ). = ಬಿನ್ನಣಕಾತಿ : ಕಂಬುಕಂಠದ ಕಂಗತಿಪು ಬಿಂಬಾಧರದ ಬಿನ್ನ[ ಶಾಶಂ. ನ್ನಾ ]ಣಗಾರ್ತಿಯರವಲಂಬಿಸಿ ಕೊಳಸ ತಡಿ ಯೊಳು (ಜೀವಂಸಾಂ. ೦೮-೩೬).

[ ಬಿನ್ನಣ (< ಬಿನ್ನಾಣ) + — ಕಾಱ + — ತಿ₁ (< — ಇತ್ತಿ) ]

**ಬಿನ್ನಣದೋಱು** 'ಬಿನ್ನಣಂದೋಱು' ನೋ.

**ಬಿನ್ನಣವಡೆ** 'ಬಿನ್ನಣಂಬಡೆ' ನೋ.

**ಬಿನ್ನಣಿ** 'ಬಿನ್ನಾಣಿ₂' ನೋ.

**ಬಿನ್ನಣಿಗ** 'ಬಿನ್ನಾಣಿಗ' ನೋ.

**ಬಿನ್ನಣಿಗೆ** (ನಾ). ಕೌಶಲ ; ಚಮತ್ಕಾರ : ಗಗನದಿಂದಲೊ ಗಗನದರು ಗಿಂದಲೊ ಮೊಗೆವೆ ತುಂಬಿದೆಯ ಮುಂಬಗೆದಿಲ್ಲದಿಹ ಬಿನ್ನಣಿಗೆಯುಗುವು ದಾರ ಗಾಯನದ ರಘುರಿಯಿಂ (ಗಿಶಿಂ. ೯-೬). [ < ಬಿನ್ನಾಣ ]

**ಬಿನ್ನಣಿಸು** 'ಬಿನ್ನಾಣಿಸಂ' ನೋ.

**ಬಿನ್ನಣೆ** (ನಾ). ಜಂಬ ; ಹೆಮ್ಮೆ : ನಿನ್ನ ಮಗನ ಬಾಧ ಜಲು ಘನ ವಾಗಿದೆ ಇನ್ನೆಷ್ಟು ಕಾಲ ತಾಳುವೆವೆ ಗೋಪಿ ಬಿನ್ನಣೆಯನು ಬಿಡು ಬಲು ದುಷ್ಟನು ಕೇಳೆ (ಪುರಂದ. ೩-೨೦೬-೧). [ಬಿನ್ನಣ (<ಬಿನ್ನಾಣ)+_ಎ₄]

**ಬಿನ್ನತಿ** (ನಾ). ನಿವೇದನೆ ; ವಿಜ್ಞಾಪನೆ ; ಅರಿಕೆ : 'ಬಿನ್ನತಿಗೆಯ್' ಪರಾ. 'ವಿನಂತಿ' ಹೋ.

[<ಪ್ರಾ. ವಿನ್ನತ್ತಿ, ವಿಣ್ಣತ್ತಿ./ಹಿಂ. ಬಿನತಿ./ಸಂ. ವಿಜ್ಞಪ್ತಿ]

**ಬಿನ್ನತಿಗೆಯ್** (ಕ್ರಿ). ವಿಜ್ಞಾಪನೆ ಮಾಡು ; ಬಿನ್ನವಿಸು : ಅನು ಮೊಂದು ಬಿನ್ನತಿಗೆಯ್ವಂ (ಜಯುಕಾ. ೩-೩೩); ಭಕ್ತಿಯಿಂ ಬಿನ್ನತಿಗೆಯ್ವನಾ ಪುದು (ಜಕಶಿ. ೩-೬೬) ; ಅಪ್ರತಿಮಂ ಯಾದವಗಿರಿಯೊಡೆಯನಡಿಗೆ ಬಿನ್ನತಿ ಗೆಯ್ದಂ (ಜಕಶಿ. ೦೩). [ಬಿನ್ನತಿ + ಕೆಯ್₁]

**ಬಿನ್ನತಿಪತ್ತಳೆ** (ನಾ). ಅರಿಕೆಯ ಓಲೆ ; ವಿಜ್ಞಾಪನಾಪತ್ರ; ಬಿನ್ನ ವತ್ತಳೆ : ಈ ಬಿನ್ನತಿಪತ್ತಳೆಗೆ ಮಹಾಸನ್ನಿಧಾನದ ಸಮುಖದ ಅವಸರದ ಆಜ್ಞಾಪನ (ಮಂಕ್ರಶ. ೦೨೭-೦೦). [ಬಿನ್ನತಿ + ಪತ್ತಳೆ₁]

**ಬಿನ್ನನೆ** (ಅ). ೧. ಮೌನವಾಗಿ ; ನೀರವವಾಗಿ : "ಱಿಕ್ಕಟಂ, ಬಿನ್ನನೆ, ಬಿನ್ನಗೆ – ಈ ೩ ಸುಮ್ಮನೆಯೆಂಬರ್ಥಂ" (ಕಶಶಾ. ೩೬-೨೮೩); ಎನ್ನಂ ಬೆಂಕೊಂಡು ಕಾದಲುಂ ಬಂದೀಗಳ್ ಬಿನ್ನನೆ ಮೊಗದಿಂ ಬೀರರ್ ಬೆನ್ನಿತ್ತುದನಿನಿಸು ನೋಡ (ಶಂಶಭಾ. ೩-೭೩) ; ಲಕ್ಷ್ಮಣನುಂ ಬಿನ್ನನೆ; ಬಿನ್ನನೆ ನಡೆದಂ (ರಾಪವಾಶ್ಮ. ೩೩-೦೭). ೨. ಚಿಂತೆಯಿಂದ ಕೂಡಿ ; ಖಿನ್ನವಾಗಿ : ಪರಿಚ್ಛೇದಿಸಿ ನುಡಿದೊಡೆ ಬಿನ್ನನೆ ಮೊಗಂ ಮಾಡಿ (ವಡ್ಡಾರಾ. ೬೦-೦೦) ; ಎಮ್ಮಣುಗದಮ್ಮನಿಲ್ಲದೆ ಬಿನ್ನನೆ ಸಾಮ್ರಾಜ್ಯಮಿ ನಿತುಮಾದೆಱಕಮುಮತ್ಯುನ್ನತಿಯಲ್ತು (ಆದಿಪು. ೦೯-೬೨); ಚರನ ಬಿನ್ನಪದಿಂ ಬಿನ್ನನೆ ಮೊಗಮಂ ಮಾಡಿ (ಸುಕುಮಾ. ೬-೯ ವ).

ಬಿನ್ನನಿರ್, ಬಿನ್ನನಿರು = ೧. ಸುಮ್ಮನೆ ಇರು ; ಮೌನ ವಾಗಿರು ; ನೀರವವಾಗಿರು : ನಾಣ್ಚಿ ತಲೆಯಂ ಬಾಗಿ ಬಿನ್ನನಿರೆಯುಂ

(ಅನಂತನಾ. ೯-೩೯ ವ) ; ಅಭಿಮಾನದಿಂದಮೋ ಸೊರ್ಕಿಂದಮೋ ನಾನ್ ಬಿನ್ನನಿರ್ದಪೆನೆಂದು ಬಗೆಯಲಿಂ (ಜಗನ್ನಾ. ೨೯-೯೯೬) ; ಕೆಲರು ವೀಣೆಯ ನುಡಿಸಿ ಕುವರಿಯನೊಲಿಸಲಱಿಯದೆ ಬಿನ್ನನಿರೆ (ನಾಗ್ಯಶಾ. ೬-೬). ೨. ಖಿನ್ನವಾಗಿರು ; ಚಿಂತೆಯಿಂದಿರು : ತನ್ನಗಲ್ಕೆಗೆ ಬಿನ್ನನಿರ್ಪಂತೆ ಬಿನ್ನನಾಗಿರ್ಪ ವಿಮಾನದ ಮಣಿಕುಟ್ಟಿಮಭೂಮಿಗಳುಂ (ಅಂಪು. ೩-೩ ವ); ಮಾಸಿ ತಾಱಿದ ಕುರುಳ್ಗಳುಂ ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯಂ (ಗದಾಯು.೯-೩). ೩. ಬಿಕೋ ಎನ್ನು ; ಬಣಗುಂಡು ; ಬಿನ್ನನಿರ್ದುದು ಸುರಶೈಲಮದೊಂದು ಮದುವೆಗಳಿಪಿದ ಮನೆವೊಲ್ (ಅಂಪು. ೬-೧೦೮). [ ? + — ಅನ್ $_1$]

**ಬಿನ್ನಪ**, ಬಿನ್ನ, ಬಿನ್ನಹ, ಬಿನ್ನಾಯ $_1$, ವಿನ್ನಪ, ವಿನ್ನಪ್ಪ (ನಾ). ೧. **ಅರಿಕೆ** ; ವಿಜ್ಞಾಪನೆ ; ಮನವಿ ; ವಿನಂತಿ : ದೇವ ಬಿನ್ನಪಂ (ಶಂಕರಭಾ. ೩-೯೯); ಆಲಿಸೆನ್ನ ಬಿನ್ನಪವ ಲಾಲಿಸೆನ್ನ ಬಿನ್ನಪವ (ಮಹಾದೇ. ಏ. ೩೬-೬೦); ಬಿನ್ನಪವ ಕೇಳದರಸಿನೋಲಗದಿಂದ ಸಂನ್ಯಾಸ ಲೇಸು (ಸರ್ವಜ್ಞ. ೬೬೩). **ಬಿನ್ನ** : ೨. [ವೀಶೈ] ಜಂಗಮರನ್ನು ಊಟಕ್ಕೆ ಆಹ್ವಾನಿಸುವುದು : ನಿಮ್ಮನ್ನೇ ದೇವ್ರೂಂತ ತಿಳ್ಕೊಳ್ಳ ತೀವಿ. ಬಿನ್ನ ಬಿಡುಗಡೆ ಎಲ್ಲಾನು ನೀವೇ ತೀರಿಸ್ಬೇಕು (ಮುಳ್ಳಿಹಾ. ೧೯೩). **ಬಿನ್ನಹ** : ೧. ಕಿಂಕರನಾಗಿ ಬಿನ್ನಹವ ಮಾಡುವ ಸದ್ಭಕ್ತರ ತೋಱಯ್ಯಾ (ಬಸವ. ೯೯೯) ; ಬಿನ್ನಹವ ಕೇಳ್ದೆ ಕೃಷ್ಣ (ಕುಮಾವ್ಯಾಸ. ೩-೭); ಬಿನ್ನಹಕೆ ಬಾಯಿಲ್ಲವಯ್ಯ (ತ್ರಿಂಶ. ೨-೦೫೦ ಹಲ್ಲ). **ಬಿನ್ನಾಯ $_1$** : ೨. ಊರಿನ ಒಂದು ಬಿನ್ನಾಯದ ಸೇವ ಮಾಡಿಕೊಂಡು . . . ಊರು ಬಿಟ್ಟು ಕೆಲ ತಿಂಗಳು ಅಸ್ತಂಗತರಾದರು (ಗ್ರಾಮಾಯ. ೨೦). **ವಿನ್ನಪ** : ೧. 'ವಿನ್ನಪಂಗೆಯ್' ಪರಾ. **ವಿನ್ನಪ್ಪ** : ೧. 'ವಿನ್ನಪ್ಪಂಗೆಯ್' ಪರಾ. [<ಪ್ರಾ. ವಿನ್ನಪ್ಪ, ವಿಣ್ಣಪ್ಪ, ವಿನ್ನವ. / ತಮಿ. ವಿಣ್ಣಪ್ಪ ; ತುಳು. ಬಿನ್ನಯ, ಬಿನ್ನಹ; ತೆಲು. ವಿನ್ನಪ. / ಸಂ. ವಿಜ್ಞಾಪನ]

**ಬಿನ್ನಪಂಗೆಯ್**, ಬಿನ್ನಪಂಗೈ, ಬಿನ್ನಹಗೆಯ್, ಬಿನ್ನಹಗೈ, ವಿನ್ನಪಂಗೆಯ್, ವಿನ್ನಪ್ಪಂಕೆಯ್ಯ್, ವಿನ್ನಪ್ಪಂಗೆಯ್ (ಕ್ರಿ). ಅರಿಕೆ ಮಾಡಿಕೊಳ್ಳು; ವಿಜ್ಞಾಪನೆ ಮಾಡು : ಮಂತ್ರಿಯರರಸಂಗಿಂತೆಂದು ಬಿನ್ನಪಂಗೆಯ್ದಂ (ವಡ್ಡಾರಾ. ೬೦-೦೩); ಕುರುಕುಳಗಗನಮೃಗಧರಂ ಬಂದನೆಂದು ಬಿನ್ನಪಂಗೆಯ್ವುದುಂ (ಶಂಕರಭಾ. ೦೩-೬೩ ವ); ಬಗೆಯಱಿದು ಬಿನ್ನಪಂಗೆಯ್ದು (ಸೌಂದ. ೦೩೦). **ಬಿನ್ನಪಂಗೈ** : ವಿರಚಿತಾಂಜಲಿಪುಟಘಟಿತಕರನಿಂತೆಂದು ಬಿನ್ನಪಂಗೈದಂ (ಶಾಂತಿಪು. ೨-೦೯ ವ); ಹಂಪೆಯ ಹರಿಹರಂ ಬಿನ್ನಪಂಗೈದಂ [ಶಾಸಂ. ಗೆಯ್ದಂ] (ಗಿಂಶ. ಕಥಾಗರ್ಭಸಂ. ೩). **ಬಿನ್ನಹಗೆಯ್** : ಸುರಿವ ಕಂಬನಿಯಿಂದೆ ಬಿನ್ನಹಗೆಯ್ದಳು (ಮೋಹತ. ೬-೩೦). **ಬಿನ್ನಹಗೈ** : ಎನ್ನ ಮೆಲ್ನುಡಿಯ ನಿವಾರಿಸಬೇಡೆಂದು ಬಿನ್ನಹಗೈದಳು (ಮೋಹತ. ೦೦-೨೩). **ವಿನ್ನಪಂಗೆಯ್** : ಆ ಗ್ರಾಮದ ಪ್ರಜೆಗಳೆಲ್ಲಂ ಸುಖಮಿರೆ ಪುಣ್ಯಂ ನಿನಗಕ್ಕುಮೆನ್ನು ವಿನ್ನಪಂಗೆಯ್ದಡೆ (ಪ್ರಾಕಂ. ೦೯೩೦. ೬೬-೯೨ ; 1080). **ವಿನ್ನಪ್ಪಂಕೆಯ್** : ತಟಕ್ಕಾಡಾ ಯಿರ್ಪ್ಪತ್ತಯ್ವರ್ಕ್ಕಂ ಸಿನ್ದರಸರುಂ ದೇವಸತ್ತಿಅರಸರುಂ ಮನಸಿಜರುಂ ವಿನ್ನಪ್ಪಂಕೆಯೆ (ಎಕ. III, ತಿರುಮ. ೦-೬ ; 726). **ವಿನ್ನಪ್ಪಂಗೆಯ್** : ಎಟಿಯಿತಿಯಡಿಗಳ್ಪ್ರಸಾದಂಗೆಯ್ದು ಪೂರ್ವಾವತಾರಬಾಣರಾಜರ್ಗೆ × ಣ್ಣಾರಂ ವಿನ್ನಪ್ಪಂಗೆಯ್ದೊಡೆ ಅಡಿಗಳಾ ಪ್ರಸಾದಂಗೆಯ್ದನ್ತೆ ಸಲ್ಗೆನ್ದರ್ (ಕೌಇಇ. IX-1, ೪೬-೦೦ ; ಸು. 8ನೆಯ ಶತ).
[ಬಿನ್ನಪ + ಕೆಯ್ $_1$]

**ಬಿನ್ನಹಂಗೈ** 'ಬಿನ್ನಪಂಗೆಯ್' ನೋ.

**ಬಿನ್ನಯಿಸು** 'ಬಿನ್ನವಿಸು' ನೋ.

**ಬಿನ್ನಯ್ಸು** 'ಬಿನ್ನವಿಸು' ನೋ.

**ಬಿನ್ನವತ್ತಲೆ** 'ಬಿನ್ನವತ್ತಳೆ' ನೋ.

**ಬಿನ್ನವತ್ತಳೆ**, ಬಿನ್ನವತ್ತಲೆ (ನಾ). ೧. (ರಾಜ, ಅಧಿಕಾರಿ ಮೊದಲಾದ ವರಿಗೆ ಒಪ್ಪಿಸುವ) ಅರಿಕೆಯ ಓಲೆ ; ಮನವಿಪತ್ರ ; ವಿಜ್ಞಾಪನಾ ಪತ್ರ : ಕುನಡಸಂಧಿವಿಗ್ರಹಿ ಬಿಂನವತ್ತಳೆಯ ಪ[ದ್ಮ][ರ]ಸನುಂ (ಕೌಇಇ. XI-i, ೫೦-೨೫ ; 1138); ಚರಣಕಾನತನಾಗಿ ಕೊಟ್ಟನು ಬಿನ್ನವತ್ತಳೆಯ (ತೊರವೆ. ೦-೦೬-೨); ದುರಗಲಿ ದಳವಾಯಿಯೊಡೆಯನ ಬಳಿಗಾಗ ಬರಿಸಿದ ಬಿನ್ನವತ್ತಳೆಯ (ಕಂಸವ. ೦೬-೦೭೩). ೨. ಸನ್ಮಾನಪತ್ರ ; ಮಾನ ಪತ್ರ : ಪುರಪ್ರಮುಖರು ಹಲವರು ಸೇರಿ ದಾದಾಭಾಯಿಗೆ ಬಿನ್ನವತ್ತಳೆ ಯನ್ನೂ ನಿಧಿಯನ್ನೂ ಅರ್ಪಿಸಬೇಕೆಂದು ನಿರ್ಧರಿಸಿದರು (ದಾದಾಭ. ೯೯). **ಬಿನ್ನವತ್ತಲೆ** : ೧. ಬಿನ್ನವತ್ತಲೆಯುಂ ತಂದಿರೆ ತೋಱೆವೆಂದು ನುಡಿವುದುಂ (ಕಾದಂಕ. ೬೩೬) ; ಕಳುಹಿದ ಬಿನ್ನವತ್ತಲೆ ಚಂದದುಡುಗೊಱೆಗಳನು ಕಟ್ಟಿಸಿ . . . ತಾ ಮುದದಿಂದಲೈದುವ ಹದನ ತನ್ನಯ ತಂದೆಗಱುಹೆಂದಟ್ಟಿ ನಡೆತರುತಿರ್ದ (ಸವಷ್ಟು. ೦೨-೯೩) ; ಪಾಂಡ್ಯರಾಜನಿಗೆ ಬಿನ್ನವತ್ತಲೆಯಲ್ಲಿ ಬರೆದು ಮಧುರಾಪುರಕ್ಕೆ ಕಳುಹಿಸಿದನು (ಕಂಕ. ೫೯).
[ಬಿನ್ನ (<ಬಿನ್ನಪ)+ ಪತ್ತಳೆ $_1$. / ತುಳು. ಬಿನ್ನತ್ತಲೆ]

**ಬಿನ್ನವಿಸು**, ಬಿನ್ನಯಿಸು, ಬಿನ್ನಯ್ಸು, ಬಿನ್ನೈಸು (ಕ್ರಿ). ಅರಿಕೆ ಮಾಡಿಕೊಳ್ಳು ; ವಿನಂತಿಸು ; ವಿಜ್ಞಾಪಿಸು : ಕೇಳ ಬಿನ್ನವಿಸುವೆನೆನ್ನ ಕಂಡುದನೆ (ಶಂಕರಾ. ೬-೪೦); ದೇವ ಕೈಕೊಂಡು ಕಾವುದು ನೀನೆಂದು ಸುರಾಳಿ ಬಿನ್ನವಿಸೆ (ಧರ್ಮಾಮೃ. ೦-೨೦೦); ತಪ್ಪದೆ ಬಿನ್ನವಿಸಿದನು ಮಾದ್ರ ರಾಜಂಗೆ (ಕುಮಾವ್ಯಾಕ. ೫-೦೮). **ಬಿನ್ನಯಿಸು** : ಹರಭಕ್ತನಂ ಪದುಳದಿಂದೆ ಕಳುಪಿದೆನೆಂದನು ಬಿನ್ನಯಿಸೆ (ಸೀರಿ. ದೇ. ೩೬-೭) ; ವಿನಯದಲಿ ಬಿನ್ನಯಿಸೆ ಕೃಪನೆಂದನು (ಕುಮಾವ್ಯಾಶ. ೨-೩೯) ; ಎನ್ನ ಬಿನ್ನಪವ ಲಾಲಿಪುದೆಂದು ಸುಗುಣಂಗೆ ಬಿನ್ನಯಿಸಿದಳು (ಮೋಹತ. ೯-೨೩). **ಬಿನ್ನಯ್ಸು** : ಬಿನ್ನಯ್ಸಿದಂ ಸುರರೆಲ್ಲ ಚೋದ್ಯಮೆನೆ (ಕಣ್ಣರ. ದೇ. ೦೫೦-೨); ಪಣೆಯೊಳ್ಕೆಯ್ಗಳಿಟ್ಟು ಬಿನ್ನಯ್ಸಿದಂ (ಶಬರ. ೩-೯). **ಬಿನ್ನೈಸು** : ಎಲ್ಲರ್ಗೆ ಕೊಟ್ಟೆನೆಂದಭವಂಗೆ ಬಿನ್ನೈಸೆ (ಬಸರ. ೦-೯೫); ಸಾತ್ಯಕಿ . . . ಉತ್ತಮಾಂಗಕೆ ಕರಯುಗವ ಚಾಚುತ್ತ ಬಿನ್ನೈಸಿದ ಧನುರ್ಧರಫಾಲನೇತ್ರಂಗೆ (ಕುಮಾದ್ರೋ. ೦೦-೬); ಸನ್ನಿಧಿಯಲಿ ಬಿನ್ನೈಸಿದೆವು (ಮುದ್ರಾಮಂ. ೫೦).
[<ಬಿನ್ನಪ + — ಇಸು $_3$]

**ಬಿನ್ನಹ** 'ಬಿನ್ನಪ' ನೋ.

**ಬಿನ್ನಹಗೆಯ್** 'ಬಿನ್ನಪಂಗೆಯ್' ನೋ.

**ಬಿನ್ನಹಗೈ** 'ಬಿನ್ನಪಂಗೆಯ್' ನೋ.

**ಬಿನ್ನಾಣ**, ಬಿನ್ನಣ, ಬಿನ್ನಾಯ $_2$, ವಿಂದಾಣ, ವಿನ್ನಾಣ (ನಾ). ೧. ವಿಶೇಷವಾದ ಜ್ಞಾನ ; ಗಾಢವಾದ ತಿಳಿವಳಿಕೆ : ಬಂದು ನಿಂದನಂ ಕೆಡು ವಿರಾಟಂ ನಿನ್ನ ಬಿನ್ನಾಣಮೇನೆಂದು ಬೆಸಗೊಳೆ (ಪಂಪಭಾ. ೯-೩೩ ವ); ಎನ್ನೊಡಲೂ ಅಲ್ಲ ನಿನ್ನೊಡಲೂ ಅಲ್ಲ ಅದು ನೀ ಮಾಡಿದ ಜಗದ ಬಿನ್ನಾಣದೊಡಲು ಕಾಣಾ ರಾಮನಾಥ (ದೇವಾವ. ೦೭-೨೯); ಪನ್ನಗಧರ ಕೊಟ್ಟ ಬಿನ್ನಾಣದಿಂದ ಸ್ತುತಿಗೈದರ ಪೊಗಳುವೆ (ಸರ್ವಜ್ಞ. ೨೬). ೨. ಕೌಶಲ್ಯ ; ನೈಪುಣ್ಯ ; ಚಾತುರ್ಯ ; ಜಾಣ್ಮೆ : ಬೆಡಗು ಬಿನ್ನಾ [ಶಾಸಂ. ನ್ನ]ಣವೆಂಬುದೇನೋ (ಬಸವ. ೭೭); ಬಾಣಾವಳಿಯ ಬಿನ್ನಾಣವನು ತೋಱಿದನು (ಸಂಶಕ. ೦೬-೭೦) ; ಎನ್ನೊಡಲೊಳಗೆ ತೋಱಿ ತೋಱಿ ಅಡಗುವ ನಿಮ್ಮ ಬೆಡಗು ಬಿನ್ನಾಣವನೆನಗೆ ತಿಳಿಯಬಾರದು (ಅಲ್ಲಮದೇ. ೨೯೦-೬೫). ೩. ಚಮತ್ಕಾರದಿಂದ ದೊರಕಿದುದು ; ಕೌಶಲದಿಂದ ಲಭ್ಯವಾದುದು : ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಸರ್ವಜ್ಞ. ೬೦೩). ೪. ಅಂದ ; ಸೊಬಗು : ಪಚ್ಚೆಯ ಪಾಸುಗಲ್ಲ ಬಿನ್ನಾಣದಿನಿಂದ್ರನೀಲಮಣಿವೇದಿಕೆಯಿಂ . . . ಬಗೆಗೆ ಕೌತುಕಮಾಯ್ತು ವಿವಾಹಮಂಟಪಂ (ಅಲ್ಲಟ. ೬-೯). ೫. ಒನಪು ; ಒಯ್ಯಾರ :

ಹೆದರುವೆನು ನಾ ನಿನ್ನ ಬಿನ್ನಾಣಕೆಲೆ ಹೆಣ್ಣೆ (ಐಂಗೀತ. ೩೯-೧). ೬. ವಿನೋದ ; ಹಾಸ್ಯ ; ಗೇಲಿ : ಬಾಣ ನಿಷ್ಫಲವಾದುದವುರರ ಶ್ರೇಣಿಗಳು ಕೈಮುಚ್ಚಿ ನಗೆ ಬಿನ್ನಾಣವಾದುದು ದನುಜ ಕೈಗುಂದಿದನು ನಿಮಿಷದಲಿ (ಕೌಶಿರಾ. ೨೨-೪). **ಬಿನ್ನಣ :** ೧. ತನ್ನ ಬಿನ್ನಣವುಂ ನೆರೆದ ನೆರವಿಗೆ ಮೆಚಿಯಲ್ವೇಡಿ (ವಡ್ಡಾರಾ. ೧೨೦-೧೭); ಶಿವಭಕ್ತರೆಲ್ಲರು ಶೂನ್ಯಸಿಂಹಾಸನದ ಗುರುವಿನ ಬಿನ್ನಣಕೆ ಬೆಱಗಾಗುತಿರ್ದರು (ಪ್ರಭುಲಿಂ. ೨೩-೩). ೨. ನೆಗಟ್ದುದು ಬಿಲ್ಲ ಬಿನ್ನಣಮಿಳಾವಳಯಕ್ಕೆ ಸಮಸ್ತಧಾತ್ರಿ ಕೆಯ್ಮುಗಿವುದು ನಿಮ್ಮದೊಂದೆ ಪೆಸರ್ಗೇಳ್ದೊಡೆ (ಶಂಕಭಾ. ೦೩-೫೭); ಅಱಿಯಮೆ ಬಿಲ್ಲ ಬಿನ್ನಣಕೆ ಗಾಂಡಿವಿಯಲ್ಲು ಪಿನಾಕಪಾಣಿಯುಂ ನೆಱಿಯನಿದಿರ್ಚಿ ನಿಮ್ಮೊಡನೆ ಕಾದಿ ಗೆಲಲ್ (ಗದಾಯು. ೪-೪೪); ಪಿರಿದುಂ ಬಿನ್ನಣದಿಂದೆ ನಿರ್ಮಿಸಿದ ನಾನಾಚಿತ್ರಸತ್ಪುತ್ರಿಕೋತ್ಕರಮಂ ತೆತ್ತಿಸಿ (ಪಾರ್ಶ್ವ. ೪-೩೨). ೪. ಬಿನ್ನಣದ ಮನೆ ಕಟ್ಟಿ ಕೋಟಿಕೊತ್ತಳವಿಕ್ಕಿ (ಪುರಂದ. ೦-೧೩೨-೨). ೬. ಬಿನ್ನಣದಿ ಮಿಗೆಯೋರೆನೋಟಡ ಕಣ್ಣಿನಿಂದೀಕ್ಷಿಸಿದಳೆಂದಾಡಿದರು ಕೆಲಕೆಲರು (ನಳಚ. ೩-೬೦). ೭. ಹೆಚ್ಚುಗಾರಿಕೆ ; ಅತಿಶಯ : ಎನ್ನಟ್ಟಡುಗೆಯನುಂಡೊಡೆ ಬಿನ್ನಣಮೇನರಸ ನರೆಗಳಾಗವು (ಶಂಶಭಾ. ೬-೩೪); ಇನ್ನಿಪ್ಪ ವುವಿಮಾ ತೆಱದಿಂ ಬಿನ್ನಣಮೇಂ ಕಂದಲಕ್ಷಣಂ ಕಮಲಮುಖೀ (ಛಂದೋಂಬು. ೪-೨೩೨ ಅಜಕರ). ೮. ಭ್ರಮೆ ; ಭ್ರಾಂತಿ : ಮುನ್ನಿಲ್ಲದುದಂ ಪಡೆವನೆ ಬಿನ್ನಣ ಮಾಕಾಶದಲ್ಲಿ ಪೂವಡೆವಂದಂ (ಸಮುಕ. ೦೦-೨೦). **ಬಿನ್ನಾಯ್ಯ :** ೨. ಬಿಲ್ಲ ನಾಯಕರು ದೇವ ರಘುರಾಮರ ಹೊಗಳುವ ಭಟರು ಬಿನ್ನಾಯ ದಿಂದೊಪ್ಪುತಿಹರು (ಕರ್ನಾಕ. ೨೭೮). **ವಿಂದಾಣ :** ೯. ಮಲ್ಲಯುದ್ಧದ ಒಂದು ವರಸೆ,– ಪಟ್ಟು : ವಿಂದಾಣಕೆ ಮೈಗೊಡುವವನು ಡೊಕ್ಕರದಿಂದ ಹಾಕಿದೊಡುರುಳುವವನು . . . ಮುಕುಂದನದೇಂ ವ್ಯಸಿಕನೊ (ವೇಱುಸಂ ೦೬-೨೨೩); ಸಂದ ಕೊಕ್ಕಸ ಗುಂಡು . . . ಚೀಣ ಪಟ್ಟಸು ಮೆಂದೆನಿಪ ವಿಂದಾಣದಲಿ ಕಾದಿದರು ಜಟ್ಟಿಗಳು (ಸಾಳ್ವಭಾ. ೨೨-೬೨). **ವಿನ್ನಾಣ :** ೧೧. [ಕಾಮಶಾ] ಸುರತದ ಒಂದು ಬಗೆ, – ರೀತಿ : ನಸುಸಡಿಲಿದ ತಕ್ಕೆಯು ವಿನ್ನಾಣದಿನಸಮಾಯುಧನ್ನಪನೀಕ್ಷಿಸುತಿರೆ ಭರವಸದಿಂ ಮೋಹನಮಲ್ಲಗಲಥಮಂ ಮಾಡಿದರಾ ಪ್ರಿಯರು (ಜಯುಕಾ. ೯-೫೦).

[ < ಪ್ರಾ. ವಿನ್ನಾಣ. ವಿಣ್ಣಾಣ; / ತಮಿ. ವಿಣ್ಣಾಣ; ತೆಲು. ವಿನ್ನಾಣ. /ಸಂ. ವಿಜ್ಞಾನ]

**ಬಿನ್ನಾಣಗಿತ್ತಿ** (ನಾ). ಒಯ್ಯಾರಿ; ಬೆಡಗುಗಾತಿ : ಫೋಟೋ ತೆಗಿಸಿ ಕೊಳ್ಳಲಿಕ್ಕೆ ಹೋಗಿದ್ದಳೇ ಈ ಬಿನ್ನಾಣಗಿತ್ತೀ? (ಮಾರುದಾ. ೪೪); ಇನ್ನು ಕೆಲವರು ಬಿನ್ನಾಣಗಿತ್ತಿ ಎಂದರು(ಆಲೋಲೀ. ೦೬೩); ಮನಸ್ಸು . . . ಒಬ್ಬ ಬಿನ್ನಾಣಗಿತ್ತಿಯನ್ನು ಆರಾಧಿಸಲೆಳಸಿತು (ಸಾಬಿಕ. ೩೮).

[ ಬಿನ್ನಾಣ + – ಗಿತ್ತಿ]

**ಬಿನ್ನಾಣವತಿ** (ನಾ). = ಬಿನ್ನಾಣಗಿತ್ತಿ : ಬಿನ್ನಾಣವತಿಯು ತಿಸರದ ಚೆನ್ನೆಯು . . . ನೆರೆವುದಿನ್ನೆಂತೊ (ಶಶಸಾಂ. ೨೭-೩೮).

[ ಬಿನ್ನಾಣ + – ವತಿ ]

**ಬಿನ್ನಾಣೆ** (ನಾ). = ಬಿನ್ನಾಣಗಿತ್ತಿ : ಬಿನ್ನಾಣಿ, ಸೊಕ್ಕೆಲ್ಲ ಇಳಿಯುವುದು ನಾಳೆ ! (ಚಂದ್ರಸ. ೮೯-೩); ಕೊಂಕುನೋಟದೊಳೆನ್ನನೇತಕೆ ಕೊಲ್ಲುವೆ ಬಿನ್ನಾಣಿ (ಐಂಶಾಪ. ೦೮೭-೦೭). [ ಬಿನ್ನಾಣ + – ಇ$_2$ ]

**ಬಿನಾಣ್ಣಿ,** ಬಿನ್ನಣಿ, ವಿನ್ನಾಣಿ (ನಾ). ೧. ಜಾಣ; ಚತುರ : ಜಗದ ಬಿನ್ನಾಣಿಯು ತೊಡಕ ಬಿಡಿಸಬಾರದು (ಬಸವ. ೭೨೪); ಪ್ರೌಢಿಯೊಳೆಂತಪ್ಪ ರುವಂ ಮೆಚ್ಚದೆ ಕಡುಬಿನ್ನಾ[ಪಾಠಾಂ. ನ್ನ]ಣಿಯಪ್ಪ ಪಱಿಯುಂಗೊಸೆ ದೊಡೆ (ಶಿಂಶಂ. ೫-೦೩); ಸಮಱೋಳ್ ಜೋಕೆಯಿಂ ಕಾದಿದರ್ ಬಿಲ್ಲ ಬಿನ್ನಾಣಿಗಳ್ (ಶಂಕಿತ್ತಿ. ೩೯-೦೦). ೨. ಕುಶಲಕಾರ್ಯಗಳಲ್ಲಿ ನೈಪುಣ್ಯ ವುಳ್ಳವನು; ಕರಕುಶಲಿ : ಸೂತ್ರಧಾರಿ ಶ್ರೀಗುಂಡನ್ ಅನಿವಾರಿತಾಚಾರಿಗೆ ಮೂಮೆ ಪೆರ್ಜ್ಜಱಿಪುಪಟ್ಟಮು ತ್ರಿಭುವನಾಚಾರಿಯೆಂದು ಪೆಸರಿತ್ತು ಪ್ರಸಾದಂಗೆಯ್ದಾ ಪ್ರಿ(ಪೃ)ಥಿ(ಥ)ವಿಯಾ ಬಿನ್ನಾಣಿಗಳಾ ಬಳ್ಳಿಗವಾರ್ತ್ತೆ ಇಲ್ಲ (ಇಆ. X, ೦೬೪-೭; ೩ನೆಯ ಕತ); ದೇಗುಲಮುಂ ಬೆಸಗೆಯ್ದ ಬಿನ್ನಾಣಿ ಪೊಲ್ಲಮುಂಗೆ ಪನ್ನೆರಡು ಮತ್ತರ್ (ಎಇ. IV, ೩೩೪-೩೭; 975); ಹಲವು ಚಿತ್ರವ ಬರೆದನವಱೊಳಿಹನೆ ಅಳವಟ್ಟ ಕೆಲಸಂಗಳೊಳಗಿಹನೆ ಬಿನ್ನಾಣಿ (ಶಿವಗೀ. ೩೪-೦೫೬). **ಬಿನ್ನಣಿ :** ೧. ಬಲ್ಲಾಳಪ್ಪ ಬಿಲ್ಲ ಬಿನ್ನಣಿಯಿದಿರ ರೂಪನೆತ್ತಲೀಯದೊಂದೆ ಕೋಲಿಂದಿಸುವಂತೆ (ಶಂಕಶಂ. ೦೨೬-೦೭). **ವಿನ್ನಾಣಿ :** ೨. ಸೂತ್ರಧಾರಿಗೆ ಮೂಮೆ ಪೆರ್ಜ್ಜಱಿಪುಗೆಯ್ದು ಬಱಿಕ್ಕೆ ಈ ವಿಷಯದ ವಿನ್ನಾಣಿಗಳಾ ಬಳ್ಳಿಗವರ್ತ್ತೆಯನುಱಿಪಿದ ಆಚಾರಿಯ ಪೆಸರಿವನಱೀಮಿ (ಇಆ. X, ೦೬೫-೬; ೩ನೆಯ ಕತ).

[ ಬಿನ್ನಾಣ + – ಇ$_3$ /ಪ್ರಾ. ವಿಣ್ಣಾಣಿ. / ತೆಲು. ವಿನ್ನಾಣಿ ]

**ಬಿನ್ನಾಣಿಗ,** ಬಿನ್ನಣಿಗ (ನಾ). ಚತುರ; ನಿಪುಣ : ಪ್ರಾಣ ಕೊರಳಲಿ ನಿಲಲು ರಣಬಿನ್ನಾಣಿಗರು ಜವಗುಂದೆ (ಕುಮ್ಮಾಭಿ. ೬೦೫. ೫-೬೫). **ಬಿನ್ನಣಿಗ :** ಎಚ್ಚಾಡಿದರ್ ಬಿಲ್ಲ ಬಿನ್ನಣಿಗರಂದು (ಜಬಪು. ೪೮-೪೪); ಬಿಜ್ಜೆಯೊಳ್ ಬಿನ್ನಣಿಗರನಾಗಿಸಿ . . . ಬಿಲ್ಗಾಱಿಕೆಯೊಳ್ ಬಲ್ಗೈಗಲಿ ಗಳನೆಸಗಿ, ಪಾಟವಮಾಟಮಪ್ಪಂತು ಕಲಿಸಲೊಡಂ (ರಾಜಾಶೃ. ೦೫೦-೦೪).

[ಬಿನ್ನಾಣ + – ಇಗ ]

**ಬಿನ್ನಾಣಿಸು,** ಬಿನ್ನಣಿಸಂ (ಕ್ರಿ). ೧. ಚಾತುರ್ಯವನ್ನು ತೋರು; ಕುಶಲತೆಯನ್ನು ತೋರಿಸು : ತನ್ನ ಮಂತ್ರಿಯ ಕೈಗೆ ಕೊಟ್ಟು ನಿವಾಳಿಯ ಬಿನ್ನಾಣಿಸಿದನಕಂಪಾಂಕಾ(ಭರತ. ೫೭-೫೭). ೨. ಚಾತುರ್ಯ ದಿಂದ ಹೇಳು; ಕುಶಲತೆಯಿಂದ ನಿರೂಪಿಸು : ನೀವೊಮ್ಮೆ ದೇವನ ಮುನ್ನ ಕಂಡಿದ್ದುದರಿಂದ ಬಿನ್ನಾಣಿಸಿದಿರದು ನಮಗೆ ಕಂಡಂತಾಯ್ತು (ಭರತ. ೬೭-೦೭೭); ಮುನ್ನಿನ ಪಾಂಡವವರಸುತಕಥನವ ಬಿನ್ನಾಣಿಸುವೆ ಧರೆಯೊಳಗೆ (ಕುಮಾಸಾಂ. ೦೦). ೩. ಮಲ್ಲಯುದ್ಧದ ಪಟ್ಟು ಹಾಕು : ಹುಗುವರು ಹೊಕ್ಕು ಹೋರುವರು ಬಿನ್ನಾಣಿಸಿ ಬಿಗಿವರು ಕೈ ಕಾಲ ಬೆರಲ ಸಿಗಿವರು ಸಿಕ್ಕಿದರಾಯೆನ್ನಲೊಲ್ಲದೆ ಸಗುಣಾತ್ಮಕರು ಕಾದಿದರು (ಮೋಹಕ. ೩೯-೩೭). **ಬಿನ್ನಣಿಸು :** ೧. ಲಸದ್ಭಿತ್ತಿಯೊಳಾ ಚಿತ್ರ ಪಟದೊಳೊಪ್ಪುವ ನವಬಾಲಿಕೆಯ ಅದ್ಭುತಮಪ್ಪ ವಿಲಾಸಶ್ರೀಯಂ . . . ಅತಿಚತುರಂ ಬಿನ್ನಣಿಸುತ ಬರೆದಂ (ಜಯುಕಾ. ೩-೦೩). ೪. ಕೌಶಲ್ಯದಿಂದ ರಚಿಸಂ : ಮುನ್ನಮಿಾಶಾಲಯದೊಳಗೆ ಚಿತ್ರರಥನೆಂಬವಂ ನಿಖಿಲವರ್ಣ ಕದೆ ಚಿತ್ರಮುಂ ಬಿನದದಿಂ ಬಿನ್ನಣಿಸೆ (ಕದ್ಮರಾ. ೦೦-೦೯೩).

[ಬಿನ್ನಾಣ + – ಇಸು$_1$]

**ಬಿನ್ನಾಯ$_1$** 'ಬಿನ್ನಪ' ನೋ.

**ಬಿನ್ನಾಯ$_2$** 'ಬಿನ್ನಾಣ' ನೋ.

**ಬಿನ್ನೈಸು** 'ಬಿನ್ನವಿಸು' ನೋ.

**ಬಿಪ್ಪಂಡ** (ನಾ). ಪಕ್ಷಿಗಳ ಕೂಗು,–ಕಲರವ : "ಬಗ್ಗು, ಬಿಪ್ಪಂಡಂ, ಬೆಜ್ಜ, ಚಪ್ಪರಣೆ–ಈ ೪ ಜಂಕಣೆ" (ಕಶಸಾ. ೫೭-೨೫೭); ಪಪ್ಪುಕಂ, ಕಪ್ಪಡಿ, ಬಿಪ್ಪಂಡಂ, ಉಪ್ಪಂಡಂ (ಶಮುದ. ೩೭ ಪ್ರಯೋ); "ವ್ಯರ್ಥ" (ಶಮುದ. ನ. ೪೭ ಪ್ರಯೋ). [ ? ]

**ಬಿಪ್ಪಂಡಿಸು** (ಕ್ರಿ). (ಆಲಂ) ದೂಷಿಸಂ ; ದೂರು : ಮತಿಯಂ ಬಿಪ್ಪಂಡಿಪಳ್ ಲಕ್ಷಣಮನೆಸಲೌದಾರ್ಯಮಂ ಚಿಂತಿಸಳ್ (ಕಾದಂಪೂ. ೫೪೮); ಈ ನಡೆನುಡಿವಳಿಗಳಿಂದ ಜಂಕಿಸಿ ಬಿಪ್ಪಂಡಿಸಿ ನಮ್ಮನ್ನೊದೆದು, ಹುಚ್ಚಡಸು ವಂತೆ ಹೀಗೆ ಕುಣಿಯಿಸಿ (ವಂಶಸ್ತ. ೦೬೦-೦೮). [ಬಿಪ್ಪಂಡ + – ಇಸು$_1$]

**ಬಿಬೀಚಣ** (ನಾ). ರಾವಣನ ಸಹೋದರ ; ವಿಭೀಷಣ : ಸುಸೇಣಂ, ಬಿಬೀಚಣಂ ಮುಂತಪ್ಪ ಬೀರರ ಕೂಟಮುಂ (ಅದ್ಭುತ. ೪೮-೦೪).

[<ಸಂ. ವಿಭೀಷಣ]

**ಬಿಬ್ಬಚ್ಚ** (ನಾ). ೧. ಅಸಹ್ಯ : 'ಬಿಬ್ಬಚ್ಚಿ' ಪರಾ. ೨. (ಆಲಂ) ನಿವಾರಣೆ ; ಪರಿಹಾರ : 'ಬಿಬ್ಬಚ್ಚಿಸು' ಪರಾ. ೩. ನಿಷ್ಫಲ; ವ್ಯರ್ಥ: 'ಬಿಬ್ಬಚ್ಚಗೊಳಿಸು' ಪರಾ. [<ಸಂ. ಬೀಭತ್ಸ]

**ಬಿಬ್ಬಚ್ಚಗೊಳಿಸು** (ಕ್ರಿ). ನಿಷ್ಫಲಗೊಳಿಸು ; ವ್ಯರ್ಥಮಾಡು : ಮೆಚ್ಚಿದೆನೊ ಅಹಿತೆನ್ನ ಶರ ಬಿಬ್ಬಚ್ಚಗೊಳಿಸಿದಕೇಗಲುರುಗಾಸ್ತ್ರೆಚ್ಚಪೆನು ತಡೆಯೆಂದು ಬಿಡಲು (ಜೈಂಮಿಭಾ. ೩೨೪-೯೬). [ಬಿಬ್ಬಚ್ಚ + ಕೊಳ್$_1$ + — ಇಸು$_3$]

**ಬಿಬ್ಬಚ್ಚಿಸು** (ಕ್ರಿ). ನಿವಾರಿಸು; ಹೋಗಲಾಡಿಸು : ತುಚ್ಛರಾಗುವರಂದು ಮಿಗಿಲ ಭೂಭುಜರು ಘುಂದೆಚ್ಚರದೊಳಿರ್ದಲ್ಲೆ ವಿಜಯಾಧಿನಾಥ ಬಿಬ್ಬಚ್ಚಿಸದಲಿರಲ್ (ಜಿನಮು. ೬-೩೦); ಆ ವ್ಯಸನವನು ಬಿಬ್ಬಚ್ಚಿಸಲು ತಿಳುಹಾಗುದಲ್ಲಾಗೆನೆ ವಿಭೀಷಣನು (ಜೈಂಮಿಭಾ. ೪೨೯-೨೦).

[ಬಿಬ್ಬಚ್ಚ + — ಇಸು$_3$]

**ಬಿಬ್ಬಚ್ಚು** (ನಾ). ಅಸಹ್ಯಕರವಾಗಿರುವುದು : ಬೇರಸಗಿತಿಂಬವನಿಸುರರಿರವೀ ರಣಕೆ ಬಿಬ್ಬಚ್ಚು . . . ಎಂದೊದರೆ ಕಹಳೆಗಳು (ಪಕುಭಾ. ೨೩-೧೧).

[< ಸಂ. ಬೀಭತ್ಸ]

**ಬಿಬ್ಬಚ್ಚೆ** (ನಾ). ಅಸಹ್ಯವನ್ನುಂಟುಮಾಡುವವಳು ; ಅಸಹ್ಯಕರಳಾದವಳು : ಮೆಚ್ಚಿದನುಕೂಲೆಯರ ಸಂಗ ಸುಖಪುಂಗ ಬಿಬ್ಬಚ್ಚೆಯರ ಬಲಾತ್ಕಾರ ನೋಟಮುಂ ಬೇಟವನು ಥೆಚ್ಚುವದೆ (ಜಿನಮು. ೨೮-೧೪).

[ಬಿಬ್ಬಚ್ಚ + — ಎ$_2$]

**ಬಿಬ್ಬನೆ** (ಅ). ಅತಿಶಯವಾಗಿ ; ಅಧಿಕವಾಗಿ : ಬೆಬ್ಬನೆ ಬೆಱತು ಬಿಬ್ಬನೆ ಬೀಗಿ ಅಹಂಕಾರಭರಿತನಾಗಿಪ್ಪವನ ಮನೆಯು ಲಿಂಗಸನುಮತರು ಹೊಗರು (ಸಕವ. II, ೩೩೦-೯); ಸಂತೋಷಂ ಸರ್ವಾಂಗದೊಳು ತೀವಿ ಬಿಬ್ಬನೆ ಬಿರಿದಬ್ಬರಿಸುತ್ತಿ (ಸಂಬಿರ. ೫-೩೪); ಓಹಿಲದೇವಂ ಕೊಬ್ಬುತ್ತುಬ್ಬುತ್ತಂ ಬಿಬ್ಬನೆ ಬೀಗಿ (ಉದ್ಭಟದೇ. ೩-೯೩). [ಬಿಬ್$_0$ + — ಅನೆ$_1$]

**ಬಿಬ್ಬಿ** 'ಬೀಬಿ' ನೋ.

**ಬಿಬ್ಬನಂ** (ಅ). ಕೂಡಲೆ : ಮತ್ತಾರ್ಗಂಗನಿಕಾಯಂ ಬಿಬ್ಬನಂ ಬೆಕ್ಕನೆ ಬಿರಿದಪುದು (ಸುಕುಮಾ. ೪-೧೧).

**ಬಿಬ್ಬುರಿವಲ್** 'ಬಿರ್ಬಿ' ಪರಾ.

**ಬಿಬ್ಬೋಕ** (ನಾ). ೧. [ಕಾವ್ಯಮೀ] ಸ್ತ್ರೀಯ ದಶವಿಧಶೃಂಗಾರ ಭಾವಗಳಲ್ಲಿ ಒಂದು ; ಲೀಲಾ, ವಿಲಾಸ, ವಿಚ್ಛಿತ್ತಿ, ವಿಭ್ರಮ, ಕಿಲಕಿಂಚಿತ, ಮೊಟ್ಟಾಯಿತ, ಕುಟ್ಟಮಿತ, ಬಿಬ್ಬೋಕ, ಲಲಿತ ಮತ್ತು ವಿಹೃತ ಎಂಬ ಹೆಣ್ಣಿನ ಹತ್ತು ಸ್ವಭಾವಜನ್ಯ ಅಲಂಕಾರಗಳಲ್ಲಿ ಒಂದು ; ಗರ್ವದಿಂದ ಉಂಟಾಗುವ ಅನಾದರ : "ಬಿಬ್ಬೋಕಮೆಂದೊಡೆ ಕಾಂತನ ಕೂಟಂಗಳಲ್ಲಿ ಗರ್ವದಿಂದಿಹ ಅನಾದರಣಂಗಳು" (ನಾಕಿರಾ. ೯೬); ಲಲಿತವಿಲಾಸಬಿಬ್ಬೋಕವಿಭ್ರಮಗುಣ ಕಿಲಕಿಂಚಿತಲೀಲೆಗಳು ತೊಲಗದೆ ಸಲೆ ನೆಲಸಿಹವಾ ಕೇರಿಯ ಬೆಲೆವೆಣ್ಣಳೊಳಗೆ (ಕುಮಾರರಾಮ. ೪-೧೧೬). ೨. ಹುಸಿಮುನಿಸಂ; ಹುಸಿಕೋಪ : ಉಳ್ಳುಡೆಯಂ ಮೆಲ್ಲನೆ ಲೀಲೆಯಿಂ ಸೆಳೆದೊಡೆನ್ನಂ ಸಸ್ಪೃಹಂ ಕೊಳ್ವಪೊಲ್ ಕಡೆಗಣ್ಣಿಂದಮೆ ಕೊಂಕುವಳ್ ಸಹಜಮಿಾ ಬಿಬ್ಬೋಕಮೆನ್ನಾಕೆಯಾ (ಲೀಲಾವ. ೨-೧೧೪) ; ಸೌಂದರಿ . . . ಬಿಬ್ಬೋಕಂ ಕುಡಿವರಿಯಲ್ ನಿಬ್ಬೆಗದೆ ನಿನಗಕಾರಣಂ ಹಸನಮುದೆಂದಳ್ (ಅಾದ್ಯಟಿ. ೧೧-೨೩). [ಸಂ].

**ಬಿಭೀಷಿಕೆ** (ನಾ). ಅಂಜಿಕೆ; ಭಯ : ಉತ್ತಪ್ತರಜತಾವದಾತಲೋಹಪುತ್ರಿಕಾನಂದ ಲಾಕ್ಷಾಹಿಂಗುಲಿ ಕಪಾಟಲಕಮರ್ಧಕರವಾಳಚಾಲನಪ್ರಕಟಿತ ಭಟಬಿಭೀಷಿಕಾಡಂಬರಂ (ಆದಿಪು. ೦೩-೯೩ ವ); ಅಂತೆ ವೇಷದಲಿ ಮತವೆಂಮ ಕಾಣುವ ಬಿಭೀಷಿಕೆಯು ನಿಜವಾಗಿ ಮತವೆನ್ನಬಾರದಲೆ ಅದು ಬಿಭೀಷಿಕೆಯೆಂದು ತೋರುವುದು ನಿಜವಾದ ಮತಕೆ ಬೆಲಿ ತಂದಂತೆ (ನವರಾ. II, ೪೦).

[ಸಂ. ಬಿಭೀಷಿಕಾ]

**ಬಿಮ್ಮಗೆ$_1$** (ಅ). ೧. ಬಿಗಿಯಾಗಿ ; ಬಲವಾಗಿ : ಗಟ್ಟಿಯಾಗಿ ಒಮ್ಮೆಯುಂಡವ ತ್ಯಾಗಿ ಇಮ್ಮೆಯುಂಡವ ಭೋಗಿ ಬಿಮ್ಮಗುಂಡವ ನೆಱೆ ರೋಗಿ (ಸರ್ವಜ್ಞ. ১০৯৯); ಹಾಗೆಲ್ಲ ಬಿಮ್ಮಗೆ ಉಂಡು ತೇಗಬೇಕಾದರ . . . ಉಡುಪಿಗೇನೆ ಹೋಗಬೇಕು (ಪುರವು. ೯೯) ; ಬೊಪ್ಪಣ . . . ಮಹಾರಾಣಿಯ ಕಾಲುಗಳನ್ನು ಬಿಮ್ಮಗೆ ಹಿಡಿದು, ಅದರ ಮೇಲೆ ತನ್ನ ತಲೆಯನ್ನಿಟ್ಟ (ಶಾಂತಲಾ. ೧೮೪). [ಬಿಮ್ಮು$_1$ + — ಅಗೆ$_3$./ತುಳು. ಬಿಮ್ಮಗೆ]

**ಬಿಮ್ಮಗೆ$_2$** (ಅ). ಮೌನವಾಗಿ; ಸುಮ್ಮನೆ : ಬೊಮ್ಮವನು ಅಱಿದಿಹರೆ ಬಿಮ್ಮಗಿದ್ದಿರಬೇಕು (ಸರ್ವಜ್ಞ. ೪೩೪); ಬಿರುಸು ಲಲ್ಲೆ ಮಣ್ಣಿಗಾಯ್ತು ಬಿಮ್ಮಗುಳಿದಳು (ಪಲಾವ. ೨೪-೭); ನಿಲ್ಲೆಂದ ಹಾಗಾಗಿ, ಅಲ್ಲೆ ನಿಂತಿತ್ತೊ, ಜಾಣ ಹೊರಟಾಗ ಕೇಳಿದರೆ ಬಿಮ್ಮಗಿಹರು (ಪುಸಾಹಿ. ೨೬).

[ಬಿಮ್ಮು$_2$ (< ಬಿಂ) + . — ಅಗೆ$_3$]

**ಬಿಮ್ಮನಸೆ, ಬಿಮ್ಮನಿಸೆ** (ನಾ). ಬಸಿರಿ ; ಗರ್ಭಿಣಿ : ಹೆಣ್ಣು ಬಿಮ್ಮನಸೆಯಾಗಿ, ಒಡವೆಗಳು ಹೊರೆಯಾದಾಗಲೂ ಅವುಗಳ ಚಾಪಲ್ಯ ಹಿಂಗುವುದಿಲ್ಲ (ಸಂಜಂಂ. ೦೨೮) ; ಅಬ್ಬಬ್ಬ . . . ಎಂದು ಬಿಮ್ಮನಸೆ ಅಬ್ಬರಿಸಿದಳು (ಕುಸರು. ೨೬೮). **ಬಿಮ್ಮನಿಸೆ** : ಬಿಮ್ಮನಿಸೆ ಆಗಿಬಿಟ್ಟಳು (ನನ್ನೂರು. ೨೯೮).

[<ಬಿಣ್ + < ಮಾನಸೆ]

**ಬಿಮ್ಮನಿಸೆ** 'ಬಿಮ್ಮನಸೆ' ನೋ.

**ಬಿಮ್ಮನೆ$_1$** (ಅ). ೧. ವೇಗವಾಗಿ : ಶೀಘ್ರವಾಗಿ ; ರಭಸವಾಗಿ : "ಬಿಮ್ಮನೆ ಗಮ್ಮನೆ ವಹಿಲಂ" (ಶಶಬ್ಧಿ. ೬೦); ಈ ಪರಿಯಂ ಕೇಳಿಪ್ಪುದುಂ ಪಡೆವಳರೆಲ್ಲರ್ ದಿವ್ಯನೆಟ್ಟು ಬಿಮ್ಮನೈತಂದು (ರಾಮಾಕ್ವ. ೦೩೬-೧); ಹೆಮ್ಮೆಯ ಮುಗಿಲಿಗೆ ಬಿರುಗಾಳಿಯಿದೋ ಬಿಮ್ಮನೆ ಬೀಸುವುದಂ ನೋಡಿ (ನಡೆದಾ. I, ೪೩೩). ೨. ಬಲವಾಗಿ ; ಗಟ್ಟಿಯಾಗಿ ; ಬಿಗಿಯಾಗಿ : ಬಾಯಲ್ಲಿ ತುತ್ತನಿಕ್ಕಲೊಲ್ಲದೆ ಬಿಮ್ಮನೆ ಬಾಯಂ ಮುಚ್ಚಿಕೊಳಲು (ಧರ್ಮಾಮೃ. ೧೧-೨೧೮). [ಬಿಮ್ಮು$_1$ + — ಅನೆ$_1$./ತುಳು. ಬಿಮ್ಮನೆ]

**ಬಿಮ್ಮನೆ$_2$** (ಅ). ೧. ಬಿಕೋ ಎನ್ನುವಂತೆ ; ಬಣಗುಟ್ಟುವಂತೆ : ಬಿಮ್ಮನೆಯಾಗಿ ಮದುವೆಗಳುಪಿದ ಮನೆಯಂದದಿನಿರ್ದುದು (ಅಚಪು. ೬ ೯೦). ೨. ಸುಮ್ಮನೆ ; ತೆಪ್ಪಗೆ : ಪ್ರಭುವು ಅವರ ಯಾವ ಮಾತುಕತೆಗಳಲ್ಲಿಯೂ ಭಾಗವಹಿಸಲಿಲ್ಲ. ಬಿಮ್ಮನೆ ಕುಳಿತನು (ಬಿಟ್ಟಹೂ. ೨೬).

[ಬಿಮ್ಮು$_2$ (<ಬಿಂ) + — ಅನೆ$_1$]

**ಬಿಮ್ಮಿಸು** (ಕ್ರಿ). ಅಹಂಕಾರಪಡು ; ಗರ್ವಿಸು : ಪೂವಸಿಱಿ ಪೂವಿಲ್ಲ ಮೊದಲಹ ಜೀವಿಗಳ್ಬಿಮ್ಮಿಸಿದೊಡಸದಳ ದೇವನಲ್ತೆ ಕೀಳ್ಗವಂ ಜವಗೆಟ್ಟ ಮುಂಗಥೆಯ (ಪುದೇಪು. ೩-೨). [ಬಿಮ್ಮು$_1$ + — ಇಸು$_3$]

**ಬಿಮ್ಮು$_1$** (ನಾ). ೧. ದೊಡ್ಡತನ ; ಘನತೆ ; ಹಿರಿಮೆ: ಬಲ್ಲವರ ಬೆಸಗೊಂಡರೆ ಎನ್ನ ಬಿಮ್ಮು ಕೆಟ್ಟಹುದೆಂದು ಮೆಲ್ಲನೆ ಪ್ರಸಂಗದಿಂದ ತಿಳಿದು ನೋಡುವೆ (ಬಸವ. ೮೮೮); ಭಕುತಿಯ ಬಿಮ್ಮಿನಲಿ ಬೀಸಾಡಿದನು ಪದದಲಿ ಕಳೇವರವ (ಸಿಶಾಗ. ೯-೭-೪೦). ೨. ಗರ್ವ ; ಅಹಂಕಾರ : ನಗುವುದು ನುಡಿವುದು ಶಿವಭಕ್ತರೊಡನೆ ಸುಮ್ಮಾನ ಹಮ್ಮು ಬಿಮ್ಮಾಗಿರಲೇಕಯ್ಯ (ಬಸವ. ೨೪೨); ಬಿಮ್ಮು ಬೀಸರವಹುದೆ ನಿಮ್ಮ ಸೂಮ್ಮಿನವರಿಗೆ (ಕುಮಾ.ವ್ಯಾ.ವಿ. ೮-೫೩). ೩. ಬಿಗುಹು ; ಬಿಗಿತ : ಪ್ರಾರಬ್ಧಕರ್ಮದ ಬಿಮ್ಮು ತೀರಲು . . . ಸುಖಿಯಹನು (ಅಮೃತ. ೬-೫೦) ; ಇತ್ತ ರವಿರಶ್ಮಿಗಳ ಬಿಮ್ಮು ಸಡಿಲುತ್ತಿರ್ದುದಂ ನೋಡಿ (ಕುರಂಗ. ೫೬-೧೮); ಈ ಪ್ರಸಂಗದಿಂದ ಹಿಂದಿನ ಹತ್ತಿಪ್ಪತ್ತು ದಿನಗಳ ಬಿಮ್ಮು ಒಮ್ಮೆಲೆ ಬಿಟ್ಟು ಬಯಲಾಯಿತು (ಕಾಳರಾ. ೧೦). 'ಬಿಮ್ಮಗೆ$_1$' ಪರಾ.

[ದೇ.॥ ತಮಿ. ವಿಮ್ಮು = ಭಾರ, ಹೊರೆ]

**ಬಿಮ್ಮು$_2$** 'ಬಿಂ' ನೋ.

**ಬಿಮ್ಮುಗಟಿ** (ಕ್ರಿ). ಬಿಕೋ ಎನ್ನು ; ಬಣಗುಡು : ಪಾ[ಟ]

ದಾಟದ ಮುದ್ದಿನ ಬಿದ್ದಿನ ವಿಳಾಸಿನೀಜನದ ಬಿನದವಿಲ್ಲದೆ ಬಿಮ್ಮುಗಟಿ ಯುತ್ತಿರ್ದವಿನಾಣಿಗಳ ಬಾಗಿಲ್ಕೆತ್ತಂತೆ ಬಿನ್ನನಾಗಿ (ವರ್ಧಮಾ. ೫-೯ ವ).

[ಬಿಮ್ಮು$_2$(<ಬಿಂ) + ಕಟು$_1$]

**ಬಿಮ್ಮುಗಿಡು** 'ಬಿಮ್ಮುಗೆಡು' ನೋ.

**ಬಿಮ್ಮುಗೆಡು**, ಬಿಮ್ಮುಗಿಡು (ಕ್ರಿ). ಅಹಂಕಾರವಿಲ್ಲವಾಗು ; ಗರ್ವ ನಾಶವಾಗು : ಗರಳವಂ ಕೊರಳ ಹೊಱಗಿಟ್ಟುಕೊಂಡಾ ಹೆಮ್ಮೆ ಬಿಮ್ಮು ಗೆಡುತಿರೆ (ಸಿದ್ಧರಾ. ೫-೦೬); ನಿಮ್ಮ ಶರಣಂಬೊಕ್ಕವೆನುತಂ ಬಿಮ್ಮುಗೆಟ್ಟ ಪ್ಪಾಂಗದಿಂ ಪೊಡವಡುತ ನಸು ಸಾರ್ದು (ಬಸವು. ೫೬-೪೩). **ಬಿಮ್ಮುಗಿಡು :** ಪೊಣರ್ದರಿಳೆ ಕಮಠಫಣಿರಾಜಾಳಿ ಬಿಮ್ಮುಗಿಡಲಲ್ಲಿ ಮುಟಿದುದು ಭಾಪು ಚತುರವೈಹಾಳಿ ಹರ್ಷದ ಭಡಾಳಿ (ಭಾವಚಿಂ. ೬-೦೨). [ಬಿಮ್ಮು$_1$+ಕೆಡು$_1$]

**ಬಿಮ್ಮೆನ್ನಿಸು** (ಕ್ರಿ). ಬಿಕೋ ಎನ್ನಿಸು ; ಬಣಗುಟ್ಟು : ಏನು ಸೊಗಸು ಈ ಶರತ್ಕಾಲ . . . ಇಷ್ಟಾದರೂ ಏಕೋ ಬಿಮ್ಮೆನ್ನಿಸುತ್ತದೆ (ರಾಕ್ಷಸು. ೪೨). [ಬಿಮ್ಮು$_2$ (<ಬಿಂ) + ಎನ್ನಿಸು (<ಎನಿಸು$_1$)]

**ಬಿಯ**, ಬಿಯ್ಯ, ಬೀಯ್ಯ, ಬೆಯ, ಬ್ರಯ, ವೆಯ, ವ್ರಯ (ನಾ). ೧. ಖರ್ಚು ; ವೆಚ್ಚ ; ಪುಟ್ಟದಂದಿವಂಗಿದು ಬಿಯಮೊಳ್ಪವಂಗಿದು ವಿನೋದವಿವಂಗಿದು ಸಾವ ಪಾಂಗು (ಪಂಪಭಾ. ೦೨-೦೮೨); ಚಾರುದತ್ತಂ ಬಿಯಕ್ಕೆ ತಕ್ಕುದಂ ಬೇಡಿದನೆನೆ (ವಡ್ಡಾರ. ೯-೫೫ವ). 'ಉಪಬಿಯ' ಪರಾ. ೨. ದಾನ; ಕೊಡುಗೆ : ಬಿಯಮುಂ ಪರಾಕ್ರಮಮುಮೊಪ್ಪಿರೆ ತನ್ನೊಡ ವುಟ್ಟಿದರ್ ಸಮಂತೊಡವರೆ ವಾರಣಾವತಮನೆಯ್ದಿದನವ್ವನ ಗಂಧ ವಾರಣಂ (ಪಂಪಭಾ. ೨-೯೮); ಜನಕೆಲ್ಲಮಿವಾವ ಸೂಸುವ ಕುಡುವೀಡಾಡುವ ವಸ್ತುಗಳಿಂದೆಡಟೋಡುವಿನಂ ಪಿರಿದನಿತ್ತು ಬಿಯಮಂ ಮೆಚ್ಚಿದಳ್ (ಸುಕುಮಾ. ೦೦-೯೨). ೩. ಅಳಿವು ; ನಾಶ : ಹರಣದ ಬಿಯಕೊಂದಿನಿಸು ಮನೆಣಸದ ದೊರೆಗಲಿಗಳ್ ಬಿನದಕೆ ನಡೆವಂದದಿ ಹರಿಸಂ ಮಿಗೆ ನಡೆತಂದರ್ (ಜಗನ್ನಾ. ೬-೨೪). ೪. [ಗಣಿತ] ಭಾಗಿಸಿ ಉಳಿದ ಶೇಷ : ಧನಂ ತದವಾಪಂ ನಗಸಂಗುಣ ಫಣಿಹೃತಂ ಶೇಷಂ ಬಿಯಂ (ಲೋಕೋಪ. ೩-೨೦) ; ಧನಮಂ ಏಟಜಿಂ ಗುಣಿಸಿ ಎಂಟಱಿಂ ಭಾಗಿಸಲ್ ಉಟಿದ ಶೇಷಂ ಬಿಯಂ (ಲೋಕೋಪ. ೩-೨೦ ಟೀಕೆ). **ಬಿಯ್ಯ :** ೩. ಮಾರಿಯ ಮನೆ ಬಿಯ್ಯದ ಕಣಜಂ ಮತ್ತಾ ರಾಜಕೃತಾಂತನ ಬಳಕೆಯ ಭಂಡಾರಂ . . . ತಾಮೆನಲಾ ದಾರುಣತರಸಂಗ್ರಾಮಧರಾತಳಮತಿಭೀಕರಮಾಯ್ತು (ಜಗನ್ನಾ. ೭-೨೦). **ಬೀಯ್ಯ :** ೧. ಪಡದೊಡಮೆಯಂ ಮೂಱು ಭಾಗಂಗೆ ಯ್ದೊಂದು ಭಾಗಮಂ ಧರ್ಮಕ್ಕೆ ಮತ್ತೊಂದು ಭಾಗಮಂ ಮನೆಯ ಬೀಯಕ್ಕೆ . . .ಸಂವಿಭಾಗಂಗೆಯ್ದು (ಚಾವುಂಪು. ೨೦೬); ಆಯಕ್ಕೆ ಬೀಯ ಸರಿ ಮೇಲೆ ಭಂಡಾರಕ್ಕೆ ರಾಯರಿಕ್ಕಿದ ಕಪ್ಪ ತಾವುಪಾರ್ಜಿಸಿದರ್ಥ (ಅರಿಚಂ. ೩೦-೪೦); ಆಯ ಬೀಯವನವಳೊಡನಾಲೋಚಿಸಿ ಕೈಯಡಕದೊಳಿರಿಸುವುದು (ಹಂಬ. ೬-೪೨). ೨. ಬೀರಕೆ ಬೀಯಕ್ಕಱಿವ ಬೆಡಂಗನೊಳಾದೊರೆ ನೆಱ ತೋರ್ಕುಮೆ ಶತ್ರುಜನಕಮರ್ಥಿಜನಕ್ಕಂ (ಗದಾಯು. ೧-೦೬) ; ಜನಕಂ ಬೀಯದ ಚಾಗದ ಪೆರ್ಮೆಯುಂ ಮೆಱೆವುದುಂ (ಪಂಪಾಮಾ. ೫-೦೯೦ ವ); ನಯದ ಬೀಯದ ಚಾಗದುಪಭೋಗದೆಸಕದೊಳಂ . . . ಅತಿ ಮನೋ ಹಾರಿಯಪ್ಪ ಸೂಱೆಗೇರಿಗಾಸನ್ನಮಾದ ವಿಪಣಿವೀಥಿಯೊಳ್ (ಪುಷ್ಪದು. ೨-೭೭ ವ). ೩. ಜೀವದ ಬೀಯಕಿವರಂಜಿದರು ನೆನೆದರು ಮನೆಯ ರಾಣಿಯರ (ಕುಮಾವ್ಯಾ. ಭೀ. ೬-೬೦) ; ವಾಯುಸೂತ್ರದಲಿಂದು ರವಿ ಚಕ್ರಾಯುಧಂಗಳು ತಿರುಗುತಿರ್ದೊಡೆ ಬೀಯವಹವವ ನಿಲಿಸಲಱಿಯದ ಭವಿಗಳಾಯುಷ್ಯ (ಪ್ರಭುಲಿಂ. ೬-೩೨). ೫. ವೆಚ್ಚಕ್ಕೆ ಆಧಾರವಾದ ದ್ರವ್ಯ ; ಧನ : ಪೊಂದರುತಿರೆ ಗಂಡಂ ಸಾಯೆಂದಡೆ ಜೀಯೆಂದು ಪೇಟ್ಟೊಡಂ ಮಾಡುವರಿಂತೊಂದು ದಿನ ಬೀಯ[ಪಾಠಾಂ. ವಿನಯ]ಮಿಲ್ಲದೊಡಂದಾ ಗಳ್ಮಾತುಗೇಳರ್ (ಸಮಯ. ೫-೦೦೦) ; ❚ ಈ ಶಬ್ದವು 'ಬೀ' ಎಂಬ ಧಾತುವಿಗೆ ಸಂಬಂಧಪಟ್ಟಿರಬಹುದೇ ಎಂಬುದು ಪರಿಶೀಲನಾರ್ಹ ವಾಗಿದೆ. **ಬೆಯ :** ೧. ಇಂತೀ ದೇವದಾನವಸ್ಥಳಂಗಳ ಆಯಕ್ಕೆ ಬೆಯ ಸರಿ (ಎಕ III, ತಿರುಮ. ೯೭-೮೪ ; 1276). ೬. (?) : ಭಟ್ಟವುತ್ತರ್ ಸಾಸಿರ್ವರು ಒಲೆಯ ಅಯ್ನೂರ್ವರು ಬೆಯ ಮೂನೂರ್ವರುಂ . . . ಧರ್ಮನಿಮಿತ್ತ ಕೊಟ್ಟ ಸ್ಥಿತಿಯ ಕ್ರಮ (ಎಕ. XVI, ತುಮಕೂ. ೮೦-೮:೯೦). **ಬ್ರಯ :** ೧. 'ಧರ್ಮಬ್ರಯ' ಪರಾ. ೭. (ಯಾವುದಾದರೂ ಖರ್ಚು, ವೆಚ್ಚಗಳಿಗಾಗಿ ವಸೂಲು ಮಾಡುತ್ತಿದ್ದ) ಒಂದು ಬಗೆಯ ತೆರಿಗೆ : 'ಮಳಬ್ರಯ' ಪರಾ. **ವೆಯ :** ೧. ನರನೊಂದು ವೆವಹಾರ ಕೆರಡಾಯವೆಯ ಲೆಕ್ಕ ಹೊರಗಣಸುಭೋಗಕೊಂದೊಳನೀಕಿಗೊಂದು (ಮಂಕುತಿ. ೬೬೪). **ವ್ರಯ :** ೧. ಇನ್ನಿನಿತಂ ನಿತ್ಯವ್ರಯವಾಗಿ ನಡೆವುದು (ಹೈಆಸಿ. ೫-೬-೪೦ ; 1088). 'ಧರ್ಮವ್ರಯ' ಪರಾ.

[<ಸಂ. ವ್ಯಯ./ಪ್ರಾ. ವಯ, ವಿಅ]

**ಬಿಯಂಗೆಯ್**, ಬಿಯ್ಯಂಗೆಯ್, ಬೀಯಂಗೆಯ್ (ಕ್ರಿ). ೧. ವೆಚ್ಚ ಮಾಡು ; ಖರ್ಚುಮಾಡು : ತವದಾಯುಷ್ಯದ ಕುಂದದಂದದ ಬಿಯಂ ಗೆಯ್ದುಂ ಪವಣ್ಗೋಱದುದ್ಧವದೇ ನೋಡೆನಿಪ್ಪ ರೂಪಿನ ಮನಂಗೊಂ ಡಿರ್ಪ ಲಾವಣ್ಯದೊಪ್ಪುವ ನೇಪಥ್ಯದವರ್ಕೆ ನಿಲ್ಲವನಿರ್ಮೋಹೆಂದ್ರಾದಿಗಳ್ಗಿಂ ದೊಡಾರ್ಗಿವು ನಿಲ್ಕುಂ (ಶಾಂತಿಪು. ೭-೮) ; ಸಿರಿಯಂ ತಕ್ಕಲ್ಲಿಗಿನ್ನಿತ್ತನ ತೆಱದೆ ಬಿಯಂಗೆಯ್ಕಲ್ (ಎಕ. III, ಮಂಡ್ಯ. ೦೨೦-೩೨ ; 1235). **ಬಿಯ್ಯಂಗೆಯ್ :** ೧. ಪೂರ್ವೋಪಾರ್ಜಿತಪುಣ್ಯದಿಂ ಧನಂಬಡೆದ ಗೃಹಸ್ಥಂ ನಿರರ್ಥಕಂ ಬಿಯ್ಯಂಗೆಯ್ಯದೆ . . . ಸ್ವಸಮಯಿಗಳ್ಗೆ ಕೊಟ್ಟೊಡಕ್ಷಯದಾನಮಕ್ಕುಂ (ಪಸಾರ. ೩೨೨). **ಬೀಯಂಗೆಯ್ :** ೧. ಬೇಟ್ಪರ್ಥವನಾರ್ಜಿಸಿ ಬೀಯಂಗೆಯ್ದು ಧನಮಿತ್ರನುಮಾನುಂ ಸುಖದಿನಿರೆ (ದಶಕು. ೬-೦೫೪ ವ). ೨. ದಾನ ಮಾಡು ; ಕೊಡುಗೆ ನೀಡು : ನಿಧಿಗಳೊಳಿರ್ದೊಡಮೆಯಂ ಬೀಯಂಗೆಯ್ದು . . . ಅಹಮಿಂದ್ರನಾದೊಂ (ಚಾವುಂಪು. ೨೮೯) ; ಪೇರಾನೆಗಳ ತೇರ್ಗಳ ವಂಗಡಮಂ ತಂಡತಂಡದಿಂ ಬೀಯಂಗೆಯ್ವರಸುಮಕ್ಕಳ ಮುಂದೋದಿ ಮೆಚ್ಚಂ ಕೊಳ್ವಕ್ಕರಿಗರಬ್ಬರ ದೊಳಂ (ಕಬ್ಬಿಗಾ. ೪೪) ; ಇನಿತಜನರತ್ನಮುಂ ನಚ್ಚಿ ನಿಜಾಲಯದರ್ಥ ಮೆಲ್ಲಮಂ ಬೀಯಂಗೆಯ್ದನಸುಂ ದರಿದ್ರೆಯಾದಳ್ (ದಶಕು. ೬-೨೦೬).

[ಬಿಯ + ಕೆಯ್$_1$]

**ಬಿಯಕಾರ್ತಿ** (ನಾ). ಬೆಲೆವೆಣ್ಣು ; ಗಣಿಕೆ ; ವೇಶ್ಯೆ : ಕಣ್ಗೆಸೆದರ್ . . . ಲೀಲೆಯಿನಾಂತು ನಿಂದ ಬಿಯಕಾ[ಪಾಠಾಂ. ಗಾ]ರ್ತಿಯರಗ್ಗದ ಗಾಡಿ ಕಾರ್ತಿಯರ್ (ಪಾರ್ಶ್ವಪು. ೦೨-೯).

[ಬಿಯಕಾಱ + – ತಿ$_1$ (< – ಇತ್ತಿ)]

**ಬಿಯಕಾಱ**, ಬೀಯಕಾಱ (ನಾ). ಹೆಚ್ಚಾಗಿ ಖರ್ಚುಮಾಡುವವನು ; ದುಂದುಗಾರ : "ಬಿಯಕಾಱರ್ ವ್ಯಯಶೀಲರೊಳ್" (ಶಬ್ದಾಸಾ. ೬೩) ; ನಯವಿದನೊಪ್ಪುವ ಬಿಯಕಾಱನೊಳ್ಪಿದ ಪ್ರಿಯಂತಮನಾಗೆ ತನ್ನ ಮುನ್ನೋಂತ ನೋಂಪಿಯ ಫಲವೈಸೆ ಬೆಲೆವೆಣ್ಣೆ (ಸೂಕ್ತಿಸು. ೬-೩೪೪). **ಬೀಯಕಾಱ :** ಬೀಯಕಾಱನಂ ಬಿಟ್ಟು ಬೇಂಟಗಾಱನಂ ಕರೆವ ಸೂಳೆಯುಮಂ (ಧರ್ಮಾಮೃ. ೬-೫೦). [ಬಿಯ + – ಕಾಱ]

**ಬಿಯುಗ$_1$** 'ಬೀಗ$_1$' ನೋ.

**ಬಿಯುಗ$_2$**, ಬಿಯ್ಯಗ$_2$, ಬೀಗ$_2$, ಬೀಗು$_2$, ಬೀಯುಗ$_2$ (ನಾ). ೧. ಮದುವೆ ಯಿಂದ ಪರಸ್ಪರ ಸಂಬಂಧವನ್ನು ಬೆಳೆಸಿದವನು ; ಅಳಿಯನ ಅಥವಾ ಸೊಸೆಯ ತಂದೆ : ಬಿ[ಪಾಠಾಂ. ಬೀ]ಯುಗನನಟ್ಟಿಱಿಂ ತಟ್ಟಿಯಿಸಿ (ಪರ್ವತಿ. ೫-೪೩ ವ) ; ಅಂತಹ ಶ್ರೀಮತಿಯನ್ನು . . ದುವೆಯಾಗಬೇಕಾದರೆ ಬಿಯುಗರಿಗೆ ಸಮನೆನಿಸಿಕೊಳ್ಳುವಷ್ಟು . . . ಸೇರಿಸಬೇಕು (ಕಂಠಿ. ೨). 'ಬಿಯುಗತನ' ಪರಾ. **ಬಿಯ್ಯಗ$_2$ :** ೧. ರುದ್ರದೇವ ಮಹಾದೇವ

ರಿಬ್ಬರೂ ಬಿಯ್ಯಗರಯ್ಯಾ ಒಬ್ಬರು ಹೆಣ್ಣಿನವರು ಒಬ್ಬರು ಗಂಡಿನವರು (ಸರ್ವಜ. ೨೯-೦೩೯) ; ಬಿ[ಪಾಠಾಂ. ಬೀ]ಯ್ಯಗನಾದ ಜನಕನು ನಿಮಗೆ ಮತ್ತೇನು ಪಾಳೆಯವ ನೀನಿದಿರುಗೊಳ್ಳೆನೆ (ಕೌಶಿರಾ. ೨-೩೩); ಏಚಲದೇವಿ ಬಿಯ್ಯಗನನ್ನು ಸಂತೋಷದಿಂದ ನೋಡುವುದಾಗಿ ಹೇಳಿ ಕಳುಹಿಸಿದಳು (ಸರಾ. ೬೨). **ಬೀಗ$_2$** : ೧. ನಿನ್ನ ಸತಿ ಸುತರ ಒಡಹುಟ್ಟಿದ ಬಂಧುಗಳು ಸ್ನೇಹಿತರು ಬೀಗರು . . . ಸಕಲರು ಅಳಿದು ಹೋಗುವದು ನೋಡುತ್ತಿದ್ದಿ (ವಚಾ. I, ೨೪೯-೨೩); ಬೀಗರುಂಬುವ ದಿನದಿ ಯೋಗಿ ಭಿಕ್ಷಕೆ ಬರಲು ಬೀಗರಿಗೆ ನೀಡಿ ಯೋಗಿಗಿಲ್ಲೆಂದವಗೆ ಕಾಗೆಯು ಜನುವು (ಸರ್ವಜ್ಞ. ೬೩೨) ; ಜೋಯಿಸರು ಹಾರಿ ಬಂದು ಬೀಗರ ಕಿವಿಯಲ್ಲಿ ಏನೋ ಪಿಸುಮಾತಾಡಿ . . . ಎಂದರು (ಹುಟ್ಟಿಹ. ೦೦). **ಬೀಯ್ಯ$_1$** : ೨. ಭಾವಮೈದುನ : ನರನ ಬೀಯನೆ ಕೇಳು ವಿಜಯವಿಠ್ಠಲ ಇದಕ್ಕೆ ಕರುಣ ಮಾಡುವ ದೇವರ ದೇವನು ನೀನೆ (ಮೋಕ್ಷದೀ. ೮೩-೩). **ಬೀಯಗ್ಗ$_2$** : ೧. ಮಗನೆ ನೀಂ ಬಪ್ಪಾಶಿ ದಿವಸ ದೊಳ್ಳೆದಾಜು ಸೂಳುಂಡಲ್ಲದೆ ನಿಲಲಾಟಿ ಬೀಯ[ಪಾಠಾಂ. ಬಿಯ, ಬಿಯ್ಯ] ಗರ ಮನೆಯೊಳಿದು ಕಂಡೊಡೆ ಮರುಳಾಡುವರದಱಿಂ ಕಿಱಿದಾಗಿ ಯುಣ್ಬುದು (ಧರ್ಮಾಪ. ೯-೨೩ ವ) ; ನೃಪಾಲ ಮದುವೆಯು ಮನೆಗೆ ರಾಯರ ಧಾಳಿ ಬಿದ್ದಿನವಾಯ್ತು ನಡೆ ಸಂತ್ಯಸು ಬೀಯಗರ (ಕುಮ್ಮಾರ. ೦೫-೪೭); ತಾಯೊಂದೆಸೆ ಮಕ್ಕಳೊಂದೆಸೆ ಕೊಟ್ಟಿಹ ಬೀಯಗರೊಂದೆಸೆ ಯಾಗಿ . . . ಹೊಕ್ಕರಾಯಾಸಗೊಂಡು ಹೆಮ್ಮಲೆಯ (ಕಂಪರಾ. ೦೦-೪೭). ೩. = ಬಿಯಗತನ : ಕನಕಪುರದ ಜಯಭೂಭುಜ . . . ನಿಮ್ಮೊಡೆಗೆ ಬೀಯಗಮನೆ ತಮಗಾದುದರಿಂದೆಮ್ಮನೊಯ್ಯಾರ ವಿಂಗೆ ಕಳುಹಿದನು (ನಾಗಕು. ೩-೪೩); ಹರಿಕುಲಪಾಲಕರು ಶೌರೀಪುರವ ಪರಿಪಾಲಿಪರು ನಮ ಗಲ್ಲಿ ಬೀಯಗವುಂಟು (ಜನಭಾ. ೩-೦೨).

**ಬೀಗರೌತಣ** = ಸಾಮಾನ್ಯವಾಗಿ ಮದುವೆಯ ಮಾರನೆಯ ದಿನ ವರನ ಕಡೆಯವರು ವಧುವಿನ ಕಡೆಯವರಿಗಾಗಿ ಏರ್ಪಡಿಸುವ ಔತಣ : ಬೀಗರೌತಣ ಬಹಳ ವಿಜೃಂಭಣೆಯಿಂದ ನಡೆಯಿತು (ರೂಢಿ). **ಬೀಯ ಬಿಜ್ಜರು**=ಮದುವೆಯಿಂದ ಪರಸ್ಪರ ಸಂಬಂಧ ಬೆಳೆಸಿದವರು; ಬೀಗರು : ತಾಯಿ ಮಕ್ಕಳು ಸೊಸೆ ಒಂದೆಯಾದರೆ ಮದುವೆ ಬೀಯಾ ಬಿಜ್ಜರ ಗೋತ್ರಭೇದವ್ಯಾಕೊ (ವಿಕಾಸು. ೩೯-೦). ☞ ಇದು ಒಂದು ಕೂಡುನುಡಿ. [ದೇ. ‖ ತುಳು. ಬೀಗೆ ; ತೆಲು. ವಿಯ್ಯ]

**ಬಿಯಗತನ**, ಬೀಗತನ, ಬೀಯಗತನ (ನಾ). ಮಕ್ಕಳ ಮದುವೆಯಿಂದ ಪರಸ್ಪರ ಉಂಟಾದ ಸಂಬಂಧ; ನಂಟಸ್ತಿಕೆ : ಪುಣ್ಯವಶದಿಂದಿನ ಕುಲೇಂದ್ರನ ಬಿಯಗತನವಿದು ನುತ್ಯಮೆನಿಪುದಲಾ (ರಾಮಾಶಂ. ೦-೯-೪೭). **ಬೀಗತನ** : ಬೀಗತನ ಮಾಡಿದ ಮೇಲೆ ಅವನ ಪರಿಚಯವಿಲ್ಲದ ಭಾಗವೇ ಇರಲಿಲ್ಲ ಆ ವಿಜಯನಗರದಲ್ಲಿ (ಹೇಮಕೂ. ೬೪); ಇಲ್ಲಿಯ ಮುಸ್ಲಿಂರು ಪಾಕಿಸ್ತಾನಿ ಮುಸಲ್ಮಾನರೊಡನೆ ಬೀಗತನ ಬೆಳೆಸುವುದು ಪರರಾಷ್ಟ್ರ ದೊಡನೆ ಸಂಬಂಧಮಾಡಿದಂತೆ (ಹುಸ್ಸೇಕೃ. ೦೬೨). **ಬೀಯಗತನ** : ಬೀಯಗ ತನದೆ ಆಳವಾಡಿದಿರಿ ಮತ್ಪಿತನಲಗರ್ಗೋಲಿಂದೆ ಭಾಳಾಕ್ಷ ತಪಗೆಟ್ಟನಱಿಯು (ಮೋಹತ. ೩೩-೪೩) ; ಜನಕರ ಕಾಲದೊಳ್ನಡೆದ ಬೀಯಗತನ ತನುಜ ರೊಳ್ಕೆಡಬಾರದು (ಭರತ. ೩೬-೪೪). [ ಬಿಯಗ$_1$ + — ತನ ]

**ಬಿಯದ** ' ಬ್ಯಾದ ' ನೋ.

**ಬಿಯದವೆಣ್** (ನಾ). ಬೇಡರ ಹೆಣ್ಣು ; ಶಬರಿ : ಬಿಂಕದ ಬೆಡಂಗಿನ ಬಿಯದವೆಣ್ಣಿಳೊಡನೆ ಸಂಭ್ರಮಾಡಂಬರಂ ಮಿಗೆ ಬಂದ ಗಿರಿತನೂಜೆ ವೆರಸು ಕಿರಾತಮಹೇಶ್ವರಂ . . . ನಡೆತಂದು (ಕಬಿಕಂ. ೩-೨೮ ವ).

[ಬಿಯದ ( < ಬ್ಯಾದ) + ಪೆಣ್]

**ಬಿಯದಿ$_1$** (ನಾ). = ಬಿಯದವೆಣ್ : ಬೆಳಶಿಗೆಗಣ್ಣ ಬಲ್ಮೊಲೆಯ ತೊಳಪ ಗಲ್ಲದ ತೋರ ಪೊಱವಾಱ ಬಿಯದಿಯರೆಳಸಿ ನೋಡಿದರು ಭೂವರನ (ಶ್ರೀಪಾಂ. ೬-೩೦). [ಬಿಯದ ( < ಬ್ಯಾದ) + — ಇ$_2$]

**ಬಿಯದಿ$_2$** ' ಬ್ಯಾದಿ ' ನೋ.

**ಬಿಯಸ** (ನಾ). ವ್ಯಾಸಮಹರ್ಷಿ : "ಬಿಯಸ — ವ್ಯಾಸ = ಒಬ್ಬ ಋಷಿ " (ಶಬ್ದಕೋ. ೩೦) ; ಬಿಯಸಗೊಲಿದು ಸನತ್ಕುಮಾರನು ನಯದ ಗಸ್ತ್ಯೇಶಾದಿಲಿಂಗೋದಯವನಾ ಮಹಿಮೆಯನೊರೆಯಲು (ಶಾವೇಮ. ೪೬ ಪಲ್ಲವಿ). [< ಸಂ. ವ್ಯಾಸ]

**ಬಿಯಸಂಗ** (ನಾ). ಅಭ್ಯಾಸ ; ವ್ಯಾಸಂಗ : ವ್ಯಾಸಂಗ — ಬಿಯಸಂಗ (ಕಮದ. ೨೩೪ ಪ್ರಯೋ). [< ಸಂ. ವ್ಯಾಸಂಗ]

**ಬಿಯಳ** ' ಬ್ಯಾಲ ' ನೋ.

**ಬಿಯಳಗಾವುಂಡ** (ನಾ). ಒಬ್ಬಾತನ ಹೆಸರು : ಇದಕ್ಕೆ ಸಾಕ್ಷಿ ಶಾನ್ತಿ ಭಟ್ಟಾರರುಂ ಉತ್ತಮರಾಶಿಭಟ್ಟಾರರುಂ ಬಿಯಳಗಾವುಣ್ಡನುಂ (ಎಕ. XI, ಹೊಳಲ್ಕೆ. ೩೦-೦೦ ; 964 ).

[ಬಿಯಳ ( < ಬ್ಯಾಲ) + ಗಾವುಂಡ ( < ಗಾಮುಂಡ)]

**ಬಿಯಳಚೋರ** (ನಾ). ಒಬ್ಬಾತನ ಹೆಸರು : ಬಿಯಳಚೋರ ತನ × ತುಱುಗೊಳೊಳ್ . . . ಸತ್ತ (ಎಕ. IX (ಸ), ಕಾಸಕಾ. ೦೩೦-೯ ; ೯೦೦). [ಬಿಯಳ (<ಬ್ಯಾಲ) + ಚೋರ]

**ಬಿಯಳಮ್ಮ** (ನಾ). ಒಬ್ಬಾತನ ಹೆಸರಂ : ಕಿಱುವುಣಾಸೆಯ ಬಿಯಳಮ್ಮ ನ×ಗ ಪಡೆವಳ್ಗ ಅರಿಗನು ಎಱಿಯಬ್ಬೆಯಂ . . . ಅಬ್ಬನ್ತರಸಿದ್ಧಿ ಪಡೆದರ್ (ಎಕ. VIII, ಸೊರಬ. ೩೦೦-೩ ; 958).

[ಬಿಯಳ (<ಬ್ಯಾಲ) + ಅಮ್ಮ$_1$]

**ಬಿಯಳಯ್ಯ** (ನಾ). ಒಬ್ಬಾತನ ಹೆಸರು : ಬಿಯಳಯ್ಯ ಮಗ ಚಟ್ಟಯ್ಯನಳಿಯ ಕನ್ನಯ್ಯ (ಎಕ. VIII, ಸೊರಬ. ೪೩೩-೬ ; 972).

[ಬಿಯಳ (<ಬ್ಯಾಲ) + ಅಯ್ಯ$_{1}$]

**ಬಿಯ್ಯ** ' ಬಿಯ ' ನೋ.

**ಬಿಯ್ಯಂಗೆಯ್** ' ಬಿಯಂಗೆಯ್ ' ನೋ.

**ಬಿಯ್ಯಗ$_1$** ' ಬೀಗ$_1$ ' ನೋ.

**ಬಿಯ್ಯಗ$_2$** ' ಬಿಯಗ$_2$ ' ನೋ.

**ಬಿಯ್ಯದ** ' ಬ್ಯಾದ ' ನೋ.

**ಬಿರಂಜಿ** (ನಾ). (ಅಕ್ಕಿಯಿಂದ ತಯಾರಿಸುವ) ಒಂದು ಬಗೆಯ ತಿನಿಸು : ಅಮ್ಮ ಬಿರಂಜೀ ಮಾಡತೀನಿ ಅಂತಿದ್ದಳು, ಕಳಿಸಿಕೊಡತೀನಿ. ಬಿರಂಜಿ ಅಂದರೇನು ಮತ್ತೆ ? ಅನ್ನ . . . ಇದು ಬರಿ ಬೆಣ್ಣಾಗ ಬೇಯುತ್ತೈತಿ (ಪಾಪಿಂ. ೫೭). [←ಪಾರ. ಬಿರಿಂಜ್./ತೆಲು. ಬಿರಂಜಿ]

**ಬರಟು** ' ಬಿರಡೆ$_2$ ' ನೋ.

**ಬರಟೆ** ' ಬಿರಡೆ$_1$ ' ನೋ.

**ಬರಡಿ** ' ಬಿರಡೆ$_2$ ' ನೋ.

**ಬರಡೆ$_1$**, ಬಿರಟೆ, ಬಿರುಡೆ (ನಾ). ೧. (ಸೀಸೆ, ಮೊದಲಾದುವು ಗಳಿಗೆ ಅಳವಡಿಸುವ) ಮುಚ್ಚಳ ; ತಿರುಪು ; ಬೂಚು (ಉಕ) : ಪದ್ಮಜಂ ಪದೆದಿಟ್ಟ ಪವಳದಂಕುರದ ಬಿರಡೆಗಳೊ ಲಾವಣ್ಯದ ಶಲಾಕೆಗಳ ತೆಱದ ಚರಣಾಂಗುಲಿಗಳೊಪ್ಪಿದುವಮೋಘದಿಂ ಶ್ರೀ ಪಾರ್ವತೀದೇವಿಯ (ಶಂಭಿಪಾ. ೯-೦೦) ; ತೌಟಿಗೆಯ ಮೇಲೆ ನೀರು ತುಂಬಿದ ಗಾಜು ಬಿರಡೆಯ ಸೀಸೆಯೂ ಬೆಂಕಿಪೊಟ್ಟಣವೂ . . . ಇದ್ದುವು (ಕೃಪರು. ೨೬೩). ೨. ವೀಣೆ, ತಂಬೂರಿಗಳ ತಂತಿಯನ್ನು ಬಿಗಿಗೊಳಿಸಲು ಅಳವಡಿಸಿರುವ ಸಾಧನ, — ಕೀಲು : ಬಿರಡೆಯನ್ನು ನುಲಿದು ಎಳೆತವನ್ನು ಹೆಚ್ಚಿಸಿದರೆ ಸ್ಥಾಯಿಯು ಏರುವುದು (ಶ್ರಾಶಿ. ೦೪೨) ; ಈ ವ್ಯಾಳೀತಲೆಗೆ ನಾಲ್ಕು ಬಿರಡೆಗಳಿವೆ (ಸಂಗೀಶಂ. ೦೦೨). ೩. ಅಂಗಿ ಮೊದಲಾದ ಉಡುಪಿನ

ಗುಂಡಿ : ಕೋಟಿನ ಬಿರಡೆಗಳನ್ನು ಬಿಚ್ಚಿ, ಬೆವರಿನಿಂದ ಒಣಗಿ ಹೋದ ಶರ್ಟ್ ಒಣಗುವುದಕ್ಕೆ ಅವಕಾಶ ಮಾಡಿಕೊಟ್ಟೆ (ಶೆಂದುಟ. ೬೩). **ಬಿರಟೆ:** ೧. ತೊಗಟೆಯಿಂದ ಬಿರಟೆ ತಯಾರಾಗುತ್ತದೆ (ಕವಿಕೋ. I. ೬೮೦) ; ಅದರ ಬಾಯಿಗೆ ಬಿರಟೆಯಂತೆ ಇಡಬೇಕಾದ ಹತ್ತಿ ಎಲ್ಲವನ್ನೂ ಶುದ್ಧ ಪಡಿಸಿಕೊ (ಹೊಸಕ್ಷ. ೭) ; ಅಷ್ಟು ವಾಸನೆ ಸಹಿಸಲಾಗದಿದ್ದರೆ ಮೂಗಿಗೆ ಬಿರಟೆ ಹಾಕಿಕೊಳ್ಳಿ (ಹಸುಹೊ. ೦೬). **ಬಿರುಡೆ :** ೧. ಜಂತದಲಿ ಹೊಂಗರಡಿಗೆಗಡೆದು ಕರ್ಮಣಿಯ ಬಿರುಡೆಯ ಬಿಗಿದಿಟ್ಟನೆಂಬಂತೆ ಬಲ್ಮೊಲೆ ಯೆರಡರ ಮೊಗಪು ತೋಱಿದುವು (ವೋಹತ. ೨೩-೨೩) ; ಕಲಧೌತಂಗಳ ಭರಣಿಗಳ ಬಾಯ್ಗಿರಿಸಿದಿಂದ್ರನೀಲದ ಮಣಿಯ ಬಿರುಡೆಗಳೊ ಪೇಳೆನಲ್ ಸ್ತನಚೂಚುಕದ ಕಪ್ಪು ಕರಮೊಪ್ಪಲೊಪ್ಪಿದಳ್ (ಜಐಪು. ೯-೦೯). ೨. ನಖಗಳಿಂ ಬಿರುಡೆಯಂ ಪಿಡಿದೌಂಕಿಯೊಡರ್ಚೆ ಮೇಳವಮಂ (ಚಕವಿ. ೬-೨೨೨). ೩. ಕತ್ತರಿಸಿತು ಬಾಸು ಬಿರುಡೆಯ ಶಕ್ತಿಗಳುತ್ತರಿಸಲು ಜೋಡು ಜರಿದು ಬಿತ್ತರಿಸಿದುವಂಬುಗಳು ಮೆಯ್ಯೊಳು ಬಿಸುನೆತ್ತರ ಬಸವಂತಗೊಳಿಸಿ (ಮೋಹತ. ೩೯-೫೨) ; ಚಿನ್ನದ ಬಿರುಡೆಯ ನೇಜೆಯದಧಟರ ಸನ್ನಾಹದೆ ಬಹನಾರೆ (ಕಂಪವಿ. ೨೫-೫೦).

[ದೇ.॥ ತಮಿ. ಪಿರಟ್ಟೈ ; ತೆಲು. ಬಿರಡ, ಬಿರಡಾ]

**ಬಿರಡೆ₂,** ಬಿರಟು, ಬಿರಡಿ (ನಾ). ಒಂದು ಬಗೆಯ ಸಸ್ಯ : ಹೆರಳೆ ಬಿರಡೆ ಬೇವು ಹಾಲೆ ತಾಳೆ . . . ಮೊದಲಾದ ಗಗನವಮಂ ತುಡುಕುವ ವೃಕ್ಷಂಗಳ್ (ಸೌಗಂಂ. ೫೯-೫). **ಬಿರಟು :** ಬಿರಟು, ಸೀಸೆಬಿರಟುಮರ (ವೃಶಿಸಿ. ೫೯-೦೦೭೬) ; ಬಿರಟು, ಪಾದರು, ನೆಲವೆಂಬು (ಪವ್ನನು. ೨೬೯). **ಬಿರಡಿ :** ಶಿಸ್ಸು, ಬಿರಡಿ, ಶಿಷ್ಟಭಾಗೆ, ಬಿಂಡಿ, ಇರಗುಂಡಿಮಾವು (ವೃಶಿಸಿ. ೨೯-೫೫೨).

[?]

**ಬಿರದ** (ನಾ.) ಒಂದು ವಂಶದ ಹೆಸರು : ಸನ್ದಿಗಾಲಾ ಪುಟ್ಟರುಂ ಬಳ್ಳ ವರುಂ ಪಸುಂಗಾಯ ಕಟಿಪ್ಪಾತರು ಬಿರದರುಂ (ಎಕ. XVI, ಗುಬ್ಬಿ. ೬೫-೬೮ ; 733).

[?]

**ಬಿರಬಿರ** (ನಾ). ಒಂದು ಅನುಕರಣ ಶಬ್ದ : 'ಬಿರಬಿರನೆ' ಪರಾ.

**ಬಿರಬಿರನೆ** (ಅ). ವೇಗವಾಗಿ ; ಶೀಘ್ರವಾಗಿ : ಶರಧಿಯೊಳ್ ಬಿರಬಿರನೆ ಮಂದರ ತಿರುಗಲಾಗ ಧಳಂಧಳಧ್ವನಿ ಮೊರೆಯಲು (ಅಪಂಂಚ. ೧-೨೨-೯) ; ಹೋಗಬೇಕು ಅಂತ ಎರಡು ದಿನ ಹೊರಟರು. ನಾನೇ ತಡೆದೆ . . . ಎಂದು ಬಿರಬಿರನೆ ಹೇಳಿದಳು (ಮಹೋನಸಂ. ೩೦). [ಬಿರಬಿರ + — ಅನೆ₁]

**ಬಿರಯ,** ಬಿರಹ (ನಾ). ಅಗಲಿಕೆ ; ವಿರಹ : "ಬಿರಯಮೆನೆ ವಿರಹಮಕ್ಕುಂ" (ಕಶರ. ೧೨೬). 'ಬಿರಯಿ' ಪರಾ. **ಬಿರಹ :** "ಬಿರಹಂ ಕೂಟದಗಲ್ಕೆಯಲ್ಲಿ" (ಕರ್ಣಾನಿ. ೬೮) : ಬಿರಹದ ಬೆಂಕೆಯಿಂ ಬೆಂದು ಕಡುಹರವಸಂಬೋದರಮರಿಯರ್ (ಕಐಪು. ೦೯-೯೩). [<ಸಂ. ವಿರಹ]

**ಬಿರಯಿ** (ನಾ). ಅಗಲಿಕೆಯನ್ನು ಹೊಂದಿದವನು ; ವಿಯೋಗ ಹೊಂದಿದವನು ; ವಿರಹಿ : "ವಿಯೋಗಿಯೊಳ್ ಬಿರಯಿಯೆನಲ್" (ಕರ್ಣಾನಿ. ೬೩) ; ನಂದನಂಗಳೊಳ್ ಸುೞಿವ ಬಿರಯಿಯಿಂ ಕಂಪು ಕಣ್ಮಲಿಯೆ ಪೂತ ಸುರಯಿಯಿಂ (ಕಂಶಭಾ. ೩-೨೨) ; ಮದನಾನಳನ ಕರ್ಪೊಗೆಯೆನಿಸಿ ಬಿರಯಿಗಳ ಕಣ್ಗಳೊಳು ಕಣ್ಬನಿಯನೊದವಿಸೆಯುಂ (ವರ್ಧಪು. ೬-೨೯ ವ) ; ಮಲ್ಲಿಗೆಗಳೇಂ ಬಿರಿದುವೋ ಬಿರಯಿಯೆರ್ದೆ ಬಿರಿವ ಮಾಳ್ಕೆಯಿಂದಾ ಬಸಂತದ ಮೊದಲೊಳು (ಜಐಪು. ೯೫-೦೬). [<ಸಂ. ವಿರಹಿನ್]

**ಬಿರಯಿಸು** (ಕ್ರಿ). ಅಗಲಿಕೆಯನ್ನು ಅನುಭವಿಸು ; ವಿರಹವನ್ನು ಹೊಂದು : ಬಿರಯಿಸಿ ಬೇಟದೊಳ್ ಬಿರಿವ ನಲ್ಲರಗಲ್ದು ಕನಲ್ದೊನಲ್ದು ನಲ್ಲರ ದೆಸೆಯಿಂದಮಟ್ಟಿವರೆ (ಕಂಶಭಾ. ೯-೦೨೦) ; ಕಮಳಪತ್ರಚಯ ಮೆನಿತನಿತುಂ ಕೊರಗುವಿನಂ ಬಿಸುಸುಯ್ದೇಂ ಬಿರಯಿಸಿದುವೊ ಚಕ್ರವಾಕ ಮಿಥುನಮಮಿರುಳೊಳ್ (ಕಾವ್ಯಾವ. ೬೫೯) ; ಬಿರ[ಪಾಠಾಂ. ರಿ]ಯಿಸಿ ಬೇಂಟದೊಳ್ ಮನಮದಾಟಿಸೆಯುಂ ಮನವಿಾಯದಿರ್ದುಮಂತಿರದೆ ಬೞಿಕ್ಕಮಾ ಖಳನ ಲಲ್ಲೆಗೆ ತಾನೊಳಗಾದಳ್ (ಪಾರ್ಶ್ವಪು. ೩-೧೦೦). [ಬಿರಯ + — ಇಸು₃]

**ಬಿರವ** (ನಾ). (?) : ಭಂಡಾರಿಯ ಟಾವಿನ ಬಿರವದಲು ಭತ ಮೂ ೧೦ (ಸೌಇಂ. ೦೯೩೦, ಮಂಗಳೂರು. ೩೪೯-೫೦ ; 1353). [?]

**ಬಿರಸ** (ನಾ). ರಸಹೀನತೆ ; ಅಸುಖ : ಖಿರತೆ ಬಾಸಿಂಗ ಕಟ್ಟಿ ಸರಸದಲಿ ಮೆರೆಸಲು ಹರುಷದ ಸೊಬಗು ತಿಳಿದಡೆ ಅದು ತಾನು ಬಿರಸದ ದಡ್ಡಿಗೆ ಮರಳುವುದು (ಉದ್ಯೋಕ್ಷ. ೬-೪೦-೨೦). [< ಸಂ. ವಿರಸ]

**ಬಿರಹ** 'ಬಿರಯ' ನೋ.

**ಬಿರಾಡ** 'ಬೀಡಾರ' ನೋ.

**ಬಿರಾಡಿಸು,** ವಿರಾಡಿಸು (ಕ್ರಿ). (ಭೂಮಿಯ ಮೇಲೆ) ಸುಂಕ ಹಾಕು ; ತೆರಿಗೆ ಹಾಕು : ಗದೆ ಸಹವಾಗಿ ಬಿರಾಡಿಸಿ ಗದೆಯ ಮೇಲೆ (ಸೌಇಂ. ೦೯೩೯, ಮಂಗಳೂರು. ೦೫೬-೦೯ ; 1419). **ವಿರಾಡಿಸು :** ನಿಮ್ಮ ದಸವಂದದ ಗದೆ ಸಹವಾಗಿ ವಿರಾಡಿಸಿ ಗದೆಯ ಮೇಲೆ ರೊಕ ಭತ್ತವನೂ ವರಿಯನಿಕಿ ಎತ್ತಿ ಕೆಱಿಯನು ಕಟಿಸುವೆಲು (ಎಕ. X, ಮುಳಬಾ. ೦೬೨-೦೯ ; 1496).

[ಬಿರಾಡ (< ಬೀಡಾರ) + — ಇಸು₃]

**ಬಿರಾಡು** 'ಬೀಡಾರ' ನೋ.

**ಬಿರಾದರಿ** (ನಾ). ಸೈನ್ಯದಲ್ಲಿ ಒಂದು ಭಾಗ ; ಒಂದು ನಿರ್ದಿಷ್ಟವಾದ ಸಂಖ್ಯೆಯಿರುವ ಕುದುರೆಯ ಸೇನೆ ; P "ಬಿರಾದರಿ — ಕುದುರೆ ಸೇನೆಯ ಒಂದು ಭಾಗ, ಸವಾರ ಕಚೇರಿ ಇಲಾಖೆಯಲ್ಲಿ ಬಿರಾದರಿಗೆ ಇರಬೇಕಾದ ಕುದುರೆ ಸಂಖ್ಯೆಯನ್ನು ಗೊತ್ತುಮಾಡಿದಾರೆ" (ಜತ್ರಪಾ. ಅನುಬಂಧ. ೨) : ಖಾಸಾ ಬಿರಾದರಿ . . . ಖಾಸಾಬಾರು, ಕಂದಾಚಾರ ವಗೈರೆ ಜನರಿಗೆ ಸೇರಿಸಿಕೊಂಡು ನಿಂತರು (ಜತ್ರಪಾ. ೬೩) ; ಪೇಶ್ವೆ ಶ್ರೀಮಂತ ಬಾಜೀರಾಯರನ್ನು ಕೈಸೆರೆ ಹಿಡಿದ ಬಿರಾದರಿಯಲ್ಲಿ ನಾನು ಸೇರಿದ್ದೆ (ಮುಸುಗ. ೦೬೬).

[←ಪಾರ. ಹಿಂ. ಮರಾ. ಬಿರಾದರೀ = ಬಂಧುವರ್ಗ ; ಬಳಗ]

**ಬಿರಿ₁** (ಕ್ರಿ). ಬಿರಿದ (ಭೂತಕೃ), ಬಿರಿದು (ಭೂತನ್ಯೂ). ೧. ಒಡೆ ; ಬಿರುಕುಂಟಾಗು ; ಹಿಸಿದು ಹೋಗು : "ಬಿರಿ — ಸ್ಫುಟನೇ" (ಶಮಧಾ) ; ಭರದಿಂದಂ ದಂಡದೊಳ್ ತಾಟಿಸಿದೊಡೆ ವಿಜಯಾರ್ಧಾಚಳಂ ತೊಟ್ಟನಾಗಳ್ ಬಿರಿದತ್ತು (ಆದಿಪು. ೦೩-೩೬); ಒತ್ತಂಬದಿಂ ಬರ್ಪ ಕೆಮ್ಮಿಂ ಬಿರಿಯಲ್ಬೆಟ್ಟಂಗಳ್ (ಕಾದಂಪೂ. ೦೬೩) ; ಬೆಳೆದು ಬೀಗಿ ತಮ್ಮಿಂ ತಾವೆ ಬಿರಿದು ಬಿರಿವಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪರಿಪೊನಲ ಪರಿನೀರಾಗೆ (ಕಂಶಕಂ. ೦೦೭-೦೫). ೨. (ಹೂವು) ಅರಳು ; ವಿಕಾಸ ವಾಗು : ಬಿರಿದೊಂದು ಮುಗುಳ ಕಂಪಿನೊಳೆ ಮೊಗಂಗಿಡುವುವು ತುಂಬಿಗಳ್ (ಕಂಶಭಾ. ೦-೫೬) ; ಅಂಗಜಾತನ ಪುಷ್ಪಶರ ಬಿರಿದಪುವೆಂದು ಹೊಂಗಟ್ಟುಗಳ ಬಿಗಿದಂತೆ . . . ಉಂಗುರಗಳನಿಕ್ಕಿದರು (ಮೋಹತ. ೨೩-೪೨). 'ನಸುವಿರಿ' ಪರಾ.

**ಬಿಬ್ಬಿರಿ ಬಿರಿ,** ಬಿಬ್ಬರಂಬಿರಿ, ಬಿಬ್ಬರಬಿರಿ (ದ್ವಿರುಕ್ತಿ) : ಕರಿ ಮಕರಂಗಳ ಕಯ್ಯೊೞನೊಳ್ ಬಿಬ್ಬಿರಿ[ಪಾಠಾಂ. ಬಿಬ್ಬರಿ, ಬಿಚ್ಚಿರಿ]ಬಿರಿದೊಡವ ಮುಕ್ತಾಪುಟೋದರಂಗಳೊಳಗಣಿಂದಮುಚ್ಚಳಿಸಿದ ತಾರಾತರಳಮುಕ್ತಾ ಫಳಂಗಳುಮಂ (ಆದಿಪು. ೦೨-೬೯ ವ) ; ಬಿಸಿಲೊಳೆ ಬಿಬ್ಬರಂ ಬಿರಿವ ಮಸ್ತಕ ಶುಕ್ತಿಕೆಯಿಂದೆ ಮುತ್ತು ಎಂದೆಸೆ ಕವಿತಂಬೊಡಾಂತಿರುತೆ . . . ಪುಷ್ಕರಮನೆತ್ತಿದುದಂದು ನಭಕ್ಕದೊಂದಿಭಂ (ಚಂದ್ರಪು. ೯-೬೩) ; ಬಡಿಗೊಳೆ ಬಿದು ಬಿಬ್ಬರ ಬಿರಿದೊಡನುಗೆ ಪೊಸಮುತ್ತು ಕೋದನೂಱ ಮಧೇಭಂ ಕೆಡೆದುವು (ಕಂಶಭಾ. ೦೦-೦೦೩) ; ಉರುಮುದದಿಂದಂ ಬಿಬ್ಬರ ಬಿರಿವಂತಿರೆ ಬಿರಿದುವಂದು ಮಲ್ಲಿಗೆ ವನದೊಳ್ (ನೇಮಿಪು. ೦೩-೦೪). **ಬಿಬ್ಬಿರಿವಲ್ =** ಸಂದು ಬಿಟ್ಟಿರುವ ಹಲ್ಲು : ಪಱಿದಲೆ ಕುಱನೊಸಲಬಿಗಣ್ . . .

ಬಿಬ್ಬಿರಿ[ಶಾಕಾಂ. ಬು]ವಲ್ ಕುಸಿಗೊರಲ್ (ಹುಕೋತ. ೨-೩೮).
[ದೇ. II ತಮಿ. ವಿರಿ; ಮಲ. ತೆಲು. ವಿರಿಯು; ತುಳು. ಬಿರಿ, ಬಿರಿಯು]

**ಬಿರಿ$_2$** (ನಾ). ೧. ಬಿರುಕು ; ಸೀಳು : ಮಣ್ಣಿನ ಬಿರಿ[ಶಾಕಾಂ. ರ]ಯ ತೆಱಂತೆ ಬಲ್ಲತನವಿಲ್ಲದವನ ಅನುಭಾವಕೂಟ ಕಲ್ಲಿನ ಹೋಟೆಯಂತೆ (ಗುಶ ಷಂ. ೪. ೨೦೭-೩೬). 'ಕೋಟೆವಿರಿ', 'ಬಿರಿವಡು' ಪರಾ. ೨. ತಡೆ; ನಿಯಂತ್ರಣ : ತಿಮ್ಮಪ್ಪಯ್ಯ ಒಮ್ಮೆ ಬಾಯಿ ತೆರೆದರೆಂದರೆ ಅದಕ್ಕೆ ಬಿರಿಯೇ ಇಲ್ಲ (ಸರಸ. ೪). ೩. ಕಠಿಣ ; ಕಷ್ಟ ; ಬಿಗಿ : ನಿಮಗೆ ಅದೇನು ಬಿರಿಯಲ್ಲ, ಆದರೆ ಅದನ್ನು ಒಪ್ಪುವುದೇ ಬಿರಿ (ಅರಗ. ೧೦೦) ; ಒಬ್ಬರ ಮನಸ ಸಂಬಾಳಿಸೋದಂದರ ಭಾಳ ಬಿರೀ ಐತಿ (ಸಿಸರ್ಗ. ೦೬೩): ಸಂಸಾರವನ್ನು ಸರಿಯಾಗಿ ಮಾಡಿಕೊಂಡು ಹೋಗುವುದು ಅವನಿಗೆ ಬಿರಿಯಾಯಿತು (ಕಸಿಂಹಾ. ೧೦). ೪. ಒಂದು ಬಗೆಯ ಆಯುಧ : ಹಾರೆ ಬಿರಿ ಕೊಱಡು ಪೆಟಲ ತಿರುಗಣೆ ಬೀಸುವಲೆ ತಳೆಯ ಮರದ ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಪ್ಪಿತು (ಸಮ್ಯಕ್. ೬-೨೮). ೫. ಚಲಿಸುತ್ತಿರುವ ಯಂತ್ರವನ್ನು ನಿಲ್ಲಿಸಲು ಅಥವಾ ಅದರ ವೇಗವನ್ನು ಕಡಮೆ ಮಾಡಿ ಮುಂದೆ ಬೇಕಾಗಿರುವಷ್ಟು ಹೊತ್ತು ನಿಶ್ಚಲವಾಗಿಟ್ಟಿರಲು ಬಳಸುವ ವೇಗನಿರೋಧಕಸಾಧನ ; ಬ್ರೇಕು : "ಚಕ್ರದ ಚಲನೆಯನ್ನು ತಡೆಯಲು ಉಪಯೋಗಿಸುವ ಸಲಕರಣೆ ; ಬಿರಿ ; ತಡೆ" (Brake. ೨೮೪೨) ; ರೈಲುಬಂಡಿಗಳಲ್ಲಿನ ಪ್ರತಿಚಕ್ರಕ್ಕೂ ಬಿರಿ(brake)ಯನ್ನು ಒತ್ತಲು ಇವನ್ನೇ ಉಪಯೋಗಿಸುವರು (ಬಾಲಶ್ರ. I, ೦೬೭) ; ಕೆಲವು ಬಂಡಿಗಳಲ್ಲಿ ನಿರ್ವಾತ ಬಿರಿಗಳ ಬದಲಿಗೆ ವಾಯುಸಂಕೋಚನೆಯ ಬಿರಿಗಳಿವೆ (ವಿಜ್ಞಾವಿ. ೫೦). ೬. ಅಗಳಿ ; ಚಿಲಕ : ಮನೆಬಾಗಿಲು ಮುಚ್ಚಿ ಬಿರಿ ಕಟ್ಟಬಿಟ್ಟು ಊರು ಮುಂದಕ್ಕೆ ಹೊರಟು ಹೋದನು (ಕಥಾಮಂ. IV, ೩೨). [< ಬಿರಿ$_1$]

**ಬಿರಿ$_3$** 'ಬಿಱು$_2$' ನೋ.

**ಬಿರಿಕಂಡ** (ನಾ). ಸೀಳಿಹೋದ ಮಾಂಸ : ನೇರ್ವಲ್ಲಿ ಕನ್ನೆತ್ತರುಂ ಬಿರಿಕಂಡಂಗಳೆ ಬೀಟಲ್ (ಹಂಪಸಾ. ೯-೬೩). [ಬಿರಿ$_1$ + ಕಂಡ$_1$]

**ಬಿರಿಕಿ** 'ಬಿರಿಕೆ$_1$' ನೋ.

**ಬಿರಿಕು**, ಬಿರುಕು (ನಾ). ೧. ಒಡಕು ; ಸೀಳು : ಪುದಿದ ತನಿವಣ್ಣ ಬಿರಿಕಿಂದುದಿರ್ದೆತ್ತಂ ರಾಸಿಯಾದ ಬಿಱುಗಳಿಂ (ಕಬ್ಬಿಗಕಾ. ೧೦೯). **ಬಿರುಕು** : ೧. ರಸದಾಳಿಂಬದ ಪಣ್ಣು ಬತ್ತು ಬಿರುಕಿಂ ತೋರ್ಪಂತೆ (ಸೂಕ್ತಿಸು. ೧೦ ೦೦೩); ಹೋಳಾದ ಕವಚವ ಹೊಲಿಸಿದರು ಬಾಹುರಿಕೆ ಸವಗದ ಬಿರುಕ ಬೆಸಸಿದರು (ಕುವ್ಯಾದ್ರೋ. ೫-೩೬). ೨. (ಅಲಂ) ವೈಮನಸ್ಯ ; ಮಾನಸಿಕ ಒಡಕು : ಪಂತಕುಟುಂಬದಲ್ಲಿ ಮೂಡಿದ ಬಿರುಕು, ಈ ಒಂದು ಸಣ್ಣ ಮಾತಿನಿಂದಾಗಿ ಊರು ತುಂಬ ಹರಡುವುದು ಬೇಡ (ದೀಪಹ. II, ೯).

ಬಿರುಕು ಬಿಡು=೧. ಸೀಳಿಹೋಗು : ನೆಲ ಕಿತ್ತು ಹೋಗಿದೆ, ಗೋಡೆಗಳು ಬಿರುಕು ಬಿಟ್ಟಿವೆ (ರಂಗಕ. ೧೦೦). ೨. (ಅಲಂ) ವೈಮನಸ್ಯ ಬರು : ಒಡಕುಂಟಾಗು : ತಪ್ಪುತಿಳುವಳಿಕೆಯಿಂದ ಆಪ್ತಸ್ನೇಹಿತರಿಬ್ಬರ ವಿಶ್ವಾಸದಲ್ಲಿ ಬಿರುಕುಬಿಟ್ಟಿತು (ರೂಢಿ). [< ಬಿರಿ$_1$/ತುಳು. ಬಿರ್ಕೆ]

**ಬಿರಿಕುಂಟೆ** (ನಾ). ಬಂಡಿಯ ಓಟವನ್ನು ನಿಯಂತ್ರಣ ಮಾಡುವ ಸಾಧನ ; ಗಾಡಿಯ ಓಟವನ್ನು ನಿಯಂತ್ರಿಸುವ ತಡೆಮರ : ಇಳುಕಲಲಿ ಬಿರಿಕುಂಟೆಯೊತ್ತಿ ಮುಲುಕಿತು ಕುಲುಕಿ . . . ಮುರುಕು ಬಂಡಿ (ತಂಡವು. ೨೯-೧೦). [ಬಿರಿ$_2$ + ಕುಂಟೆ$_4$]

**ಬಿರಿಗಲ್ಲು** 'ಬಿಱುಗಲ್' ನೋ.

**ಬಿರಿಗಳಿಕೆ** (ನಾ). ಅರಳುತ್ತಿರುವ ಮೊಗ್ಗು : ಕುರುವಕದಂಕುರವನದಱ ಬಿರಿಗಳಿಕೆಯುಮಂ . . . ತಾವರೆಯೆಲೆವಟ್ಟಲ್ಗಳೊಳಮೊಟ್ಟಿ ಕಟ್ಟಿ (ಲೀಲಾವ. ೦೪-೩೬ ವ). [ಬಿರಿ$_1$ + ಕಳಿಕೆ$_1$ (=ಕಲಿಕೆ$_2$)]

**ಬಿರಿನನೆ** (ನಾ). ಅರಳುತ್ತಿರುವ ಮೊಗ್ಗು : ಬಿರಿನನೆ ನಾರು ಬೀರದೇ ? (ಗೀಪಂ. ೨೮-೩೯). [ಬಿರಿ$_1$ + ನನೆ$_3$]

**ಬಿರಿಬಿರಿ** (ನಾ). ಒಂದು ಅನುಕರಣಶಬ್ದ : ದೂತರು ಬಿರಿಬಿರಿ ನೋಡುತ ಭರದೊಳು ಬಾಪದ ಸರಳಿನೊಳೊಗೆಯುತ ಹರಣವ ಕಳೆಯುತಲಿ (ಹವುಕ. ೦೭); ಆ ತರುಣಿ ಬಿರಿಬಿರಿ ನೋಡುತ್ತಲೇ ಇದ್ದಳು (ಹಿರೋಟಿ. ೦೬೭) ; ಭುವನದ ಭಾಗ್ಯವು ಬಿರಿಬಿರಿ ಬಿರಿದಾಗ ಕವಿ ರಚಿಪನು ತನ್ನ ಕೃತಿಯ (ಇಂಚಾಕ. ೬೬-೦೭).

**ಬಿರಿಮುಗುಳ್**, ಬಿರಿಮುಗುಳು (ನಾ). ಅರಳುತ್ತಿರುವ ಮೊಗ್ಗು: ತಳಿರ ನಿಱಿದಳಿರ ಮುಗುಳ ಬಿರಿಮುಗುಳ ಮಿಡಿಯ ಕಱುಮಿಡಿಯ ಬಲ್ಮಿಡಿಗಳೊಳಱಗಿ (ಪಂಪಭಾ. ೫-೩ ವ) ; ಇರವಂತಿಯೊಳ್ ಪೆಱಿವ ಬಿರಿಮುಗುಳ್ಗಳಂ ಕೊಂಡು (ಬಸವ. ೩-೨೨) ; ಸುರಯಿಯ ಬಿರಿಮುಗುಳು ಮನದಱ ಪೂವುಮಂ . . . ತಾವರೆಯೆಲೆವಟ್ಟಲ್ಗಳೊಳಮೊಟ್ಟಿ ಕಟ್ಟಿ (ಲೀಲಾವ. ೦೩-೩೬ ವ) . **ಬಿರಿಮುಗುಳು** : ತಳಿತಿಹ ಬಿರಿಮುಗುಳನೀಕ್ಷಿಸುವ ಮಱಿದುಂಬಿಗಳ ಮೇಳವದ . . . ಪಕ್ಷಿಮೃಗಕುಲವೆರಸಿ ಮೆಱೆದವು ಬನದ ಸುತ್ತಲು (ಕುವ್ಯಾಕ. ೩-೨); ನಸುನಗುವೊಲು ಬಿರಿಮುಗುಳ ಶೃಂಗಾರದ ಮಲ್ಲಿಗೆಯಿಹುವು (ಕಂಸವಿ. ೬-೫೦). [ಬಿರಿ$_1$ + ಮುಗುಳ್$_2$]

**ಬಿರಿಮುಗುಳು** 'ಬಿರಿಮುಗುಳ್' ನೋ.

**ಬಿರಿಮೊಗ್ಗೆ** (ನಾ). = ಬಿರಿಮುಗುಳ್ : ಚಂಪಕದ ಬಿರಿಮೊಗ್ಗೆಯ ತುದಿಗಮ್ಮುತದ ಘಂಟಿಕೆಯನಿರಿಸಿದವೊಲು (ಜಯಸಾ. ೫-೮); ಸಾಂಗದಿಂ ಮಿಸಲಾಗಿರ್ದ ಬಿರಿಮೊಗ್ಗೆಯ ನವಿಂಗಳಿಂದರಿಯದೆಯುತಿಸಾವಧಾನದಿಂದ . . . ತಿರುವುತಲಿರ್ದರು (ನವನೋ. ೨೪-೫೭). [ಬಿರಿ$_1$ + ಮೊಗ್ಗೆ$_1$]

**ಬಿರಿಯಾನಿ**, ಬಿರ್ಯಾನಿ (ನಾ). ಮಾಂಸಮಿಶ್ರಿತವಾದ ಒಂದು ಬಗೆಯ ಕಲಸನ್ನ : ಕೋಳಿಮರಿಯ ಮಾಂಸ ಅಥವಾ ಸಿಗಡಿಮೀನುಗಳಿಂದಲೂ ಇದೇ ರೀತಿ ಬಿರಿಯಾನಿ ತಯಾರಿಸಬಹುದು (ಅಡುಗೆ. ೯೯). **ಬಿರ್ಯಾನಿ** : ಬಿರ್ಯಾನಿಯನ್ನು ತಯಾರಿಸುವ ವಿಧಾನವನ್ನು ಆ ಪುಸ್ತಕದಲ್ಲಿ ಹೇಳಿದೆ (ರೂಢಿ). [← ಪಾರ. ಬಿರ್ಯಾನ್ = ಬೇಯಿಸಿದ ಅಥವಾ ಹುರಿದ ; ಹಿಂ. ಬಿರಿಯಾನೀ; ಮರಾ. ಬಿರಿಯಾಣೀ, ಬಿರ್ಯಾಣೀ]

**ಬಿರಿಯಿಕ್ಕು** (ಕ್ರಿ). ತಡೆ ಹಾಕು ; ನಿಯಂತ್ರಿಸು : ಪಂತಿಪಂತಿಯ ಪೊಂಜುಗಳ ಕೆಂಜೊಡರ್ವೆಳಗು ತನ್ನನೆಡ್ಡೆಸೆಯಿಂದಮಾವರಿಸುವಂತೆ ಪೋಲ್ ಬಿರಿಯಿಕ್ಕಿದನು ತನ್ನಂಘ್ರಿಶೀಘ್ರತೆಗೆ (ಶ್ರೀರಾಮಪಾ. ೬೦೩-೬೦). [ಬಿರಿ$_2$ + ಇಕ್ಕು]

**ಬಿರಿಯಿಸು**, ಬಿರಿಸು$_1$ (ಕ್ರಿ). ೧. ಸೀಳು ; ಹೋಳು ಮಾಡು : ಆಭೀಳನಿಸ್ಸಾಳನಾದಂ ನೆಱಿ ಮಿಕ್ಕಂಬೋಜಗರ್ಭಾಂಡಮನೆ ಬಿರಿ[ಶಾಕಾಂ. ರ]ಯಿಸುತ್ತಿರ್ಪನಂ ಬೇಗದಿಂ ತಾಂ ಪೊಱಮಟ್ಟಂ (ಕುಸುಮಾ. ೪-೯೨). ೨. ಅರಳಿಸು ; ವಿಕಾಸಗೊಳಿಸು : ಸುರಯಿಯ ಬಿರಿಮುಗುಳೊಳು ರವದಳಪತಿ ಬಿರಿ[ಶಾಕಾಂ. ರ]ಯಿಸೆ (ಅರನೀ. ೬-೮). **ಬಿರಿಸು$_1$** : ೧. ವಿರಹಿಗಳೆದೆ[illegible]ನು ಬಿರಿಸುವ ಮಳೆಮೋಡ ಗಗನದೊಳಿದ್ದಿದೆ ನೋಡ (ಇಂಚಾಕ. ೯-೯೦). ೨. ಕೇಳದೆ ಹೋದರು ತಾವರೆಹೂವನು ತಾನಾಗಿ ರವಿ ಬಿರಿಸುವನು (ಇಂಚಾಕ. ೦೦೬-೦೯). [ಬಿರಿ$_1$ + ಇಸು$_3$]

**ಬಿರಿಯೂರ್** (ನಾ). ಒಂದು ಊರಿನ ಹೆಸರು : ಮಹೇನ್ದ್ರಮ್ ಅಜಯಿತ್ ಬಿರಿಯೂರ್ ಸುಱೂರ್ ಅನ್ಯತ್ರ ಸಾಮಿಯರಣೇ (ಪ್ರ್ಯಅಂ. ೦೯೨೦, ೦೦-೫೬; 962). [ ? + ಊರ್ ]

**ಬಿರಿವಡು** (ಕ್ರಿ). ಬಿರುಕು ಬಿಡು ; ಸೀಳಿಹೋಗು : ಬೆಳೆದು ಬೀಗಿ ತಮ್ಮಿಂ ತಾವೆ ಬಿರಿದು ಬಿರಿವಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪರಿಪೊನಲೆ ಪರಿನೀರಾಗೆ (ಕಂಕಶಂ. ೦೦೭-೦೫). [ಬಿರಿ$_2$ + ಪಡು$_1$]

**ಬಿರಿವಣ್ಣು** (ನಾ). (ಚೆನ್ನಾಗಿ ಮಾಗಿ) ಸೀಳಿದ ಹಣ್ಣು ; ಬಿರಿದ ಹಣ್ಣು :

ಗಾಳಿಯೊಳಹಿಗೆ ನಿಲುಕುವವು ಹೊಂಬಾಳೆ ಖಚರೀಜನದ ಕಬರಿಗೆ ಬಾಳೆ ಬಾಯ್ದೆರೆಸುವವು ಬಿರಿವಣ್ಣಿನ ರಸಾವಳಿಗೆ (ತೊರರಾ. ೩-೩-೧೩).
[ ಬಿರಿ$_1$ + ಪಣ್ಣು$_2$ (<ಪಣ್$_3$) ]

**ಬಿರಿವಾಯಿತ** (ನಾ). (?) : ತಿಗಳಾಂಣ್ಯ ಮಂಗಳಾಣ್ಯಾದಲ್ಲಿ ನೆಟ್ಟ ಕಲ್ಲು ಬಿಟ್ಟ ಬಸವಿ ಆಚಾರ ವ್ಯವಹಾರಕ್ಕೆ ಪವಾಡಪುರುಷ ಬಿರಿವಾಯಿತನೆಂದು ಕೊಟ್ಟಂಥಾ ಧರ್ಮ (ಎಕ. XVI. ಗುಬ್ಬಿ. ೬೩-೬೬ ; ಸು. 1672). [?]

**ಬಿರಿವೂ** (ನಾ). ಅರಳಿದ ಹೂವು : ಬಿರಿವೂವಂ ನಗುವ ನಾಲ್ಕು ಮೊಗಮುಂ (ಕಲ್ಯಾಣ. ೨೯೩) ; ಕೊಸಗಿನ ಬಿರಿವೂವಂ ಕೈವಿಡಿದಂದದಿನೊರ್ವ ಕಲಾವಿದೆ ಪಿಡಿದು ವಿರಾಜಿಸಿದಳು ಚಿನ್ನದ ಕಾಳಂಜಿಯನು (ಜಯಸಾ. ೨-೦೬).
[ ಬಿರಿ$_1$ + ಪೂ$_2$ ]

**ಬಿರಿವೊಡೆ** (ನಾ). ಒಡೆದ ಹೊಟ್ಟೆ ; ಸೀಳಿದ ಉದರ : ಗಜಮುಖನ ಬಿರಿವೊಡೆಯ ಪಾವಂ . . . ತನ್ನ ಬಸವನಂ ಇನ್ನಾನುಂ ಪಗೆಯಂ ಮುಟಿತು ಸಂತಂ ಪುದುವಾಟ್ವುದೆಂದು ಬುದ್ಧಿವೇಟಲೊಡಂ (ರಾಜಾಶ್ಯ. ೪೨-೦೨).
[ ಬಿರಿ$_1$ + ಪೊಡೆ$_3$ ]

**ಬಿರಿಸು$_1$** ‘ಬಿರಿಯಿಸಂ’ ನೋ.

**ಬಿರಿಸು$_2$** ‘ಬಿಱುಸು’ ನೋ.

**ಬಿರಿಹೊಳ್ಳೆ** (ನಾ). ಅರಳಿದ ಮೂಗಿನ ಹೊಳ್ಳೆ : ಮುರುಟದ ಮುಸುಡಿನ ಹಳ್ಳದ ಮೂಗಿನ ಬಿರಿಹೊಳ್ಳೆಗಳ . . . ಮೃಗವಿದಿಗೋ ಗುಡ್ಡೆಯ ಕಣ್ಣುಗಳ ! (ಶ್ರೀಂದಸ. ೩೬). [ ಬಿರಿ$_1$ + ಹೊಳ್ಳೆ$_1$ ]

**ಬಿರು$_1$** ‘ಬಿಱು$_2$’ ನೋ.

**ಬಿರು$_2$** ‘ಬಿಱು$_3$’ ನೋ.

**ಬಿರುಕಿಸು** (ಕ್ರಿ). ಬಿರಿಯುವಂತೆ ಮಾಡು ; ತೆರೆ : . . . ಅಗ ಬಿರುಕಿಸಿದ್ದ ತುಟಿ ಇನ್ನೂ ಹಾಗೆಯೇ ಇದ್ದಂತೆ ತೋರಿತು (ಹೋರಪು. ೦೩)
[ ಬಿರುಕು (< ಬಿರಿಕು) +– ಇಸು$_3$ ]

**ಬಿರುಕು** ‘ ಬಿರಿಕು ’ ನೋ.

**ಬಿರುಗಡಲು** (ನಾ). ಕ್ಷೋಭೆಗೊಂಡ ಸಮುದ್ರ; ಪ್ರಕ್ಷುಬ್ಧವಾದ ಸಾಗರ : “ಭಾರಿ ಬಿರುಗಾಳಿ, ಚಂಡಮಾರುತ; ಬಿರುಗಡಲು” (Heavy-Storm, Sea. ಇಂಕಾ); ಬಿರಿದ ಕಮ್ಮಲರ್ಗಳಲಿ ಮುಗುಳುನಗುತಿಪನು ಬಿರುಗಡಲ ನಿಲುಗನ್ನಡಿಯಲಿ ನಿರುಕಿಪನು (ಗೀತಂ. ೨-೯).
[ ಬಿರು$_2$ (<ಬಿಱು$_3$) + ಕಡಲು (<ಕಡಲ್$_2$) ]

**ಬಿರುಗಣ್ಣ** (ನಾ). (ಕೋಪದಿಂದ) ಕಣ್ಣನ್ನು ಉಗ್ರವಾಗಿ ತೆರೆದಿರುವವನು : ಲೇಖನಿ ಉದ್ದವಾಯಿತೆಂದು ಬಿರುಗಣ್ಣರಾಗಬೇಡಿರಿ (ಮುಂಗಾಪು. ೯). [ ಬಿರುಗಣ್ಣು + _ ಅ$_7$ ]

**ಬಿರುಗಣ್ಣು** (ನಾ). (ಕೋಪದಿಂದ) ಉಗ್ರವಾದ ಕಣ್ಣು : ಗುರುತರ ದಪರಾಧವೆನ್ನಿಂದಲಾಯಿತೆ ಬಿರುಗಣ್ಣನೇತಕೆ ಬಿಡುವೆ (ಜಂಜಾಕ. ೦೨೪-೯) ; ಭೀಮಸೇನನು ಕೆಂಪಾದ ತನ್ನ ಕಣ್ಣುಗಳನ್ನು ಅರಳಿಸಿ ಬಿರುಗಣ್ಣಿನಿಂದ ನೋಡುತ್ತ ... ಪ್ರತಿಜ್ಞೆ ಮಾಡಿದನು (ವಚಭಾ. ೦೦೩) ; ಆನೆಯು ಮುಟ್ಟಲಿಲ್ಲ, ಬಿರುಗಣ್ಣಿನಿಂದ ನೋಡಲಾರಂಭಿಸಿತು (ಶ್ರೀರಾಮ. ೦೯).
[ ಬಿರು$_1$ (<ಬಿಱು$_2$) + ಕಣ್ಣು (<ಕಣ್) ]

**ಬಿರುಗತ್ತಲು** ‘ಬಿಱುಗತ್ತಲೆ’ ನೋ.

**ಬಿರುಗಯ್ಪು** (ನಾ). ಅಧಿಕವಾದ ಕಹಿಯ ಅನುಭವ : ಈ ನಿಮ್ಮ ಬಿರುಗಯ್ಪಯು ಬೆಟ್ಟಬೇಗುದಿಯು ಜುಗುಪ್ಸೆಯು . . . ಇಂದಿಗೆ ಹಿತವಾದುದಲ್ಲ (ಮಂತ್ರಕ. ೩೪-೦೩). [ ಬಿರು$_2$ (< ಬಿಱು$_3$) + ಕಯ್ಪು ]

**ಬಿರುಗಾರ್ಮುಗಿಲ** (ನಾ). ಕಾರ್ಗಾಲದ ಬಿರುಸಾದ ಮಳೆ : ಹೊರಗಡೆ ಹೊಯ್ಯುತಿದೆ ಬಿರುಗಾರ್ಮುಳೆ (ಅಗ್ನಿಹಂ. ೬೯).
[ಬಿರು$_2$ (<ಬಿಱು$_3$) + ಕಾರ್ಮುಳೆ (<ಕಾರ್ಮುಱಿ)]

**ಬಿರುಗಾವಲ್** (ನಾ). ಭದ್ರವಾದ ಪಹರೆ ; ಬಿಗಿಯಾದ ಕಾವಲು : ಅವರನ್ನೆಲ್ಲಾ ನಿರಾಯುಧರನ್ನಾಗಿಸಿ, ಬಿರುಗಾವಲ್ಗುಡುತ್ತಿರುವರು (ಬಿರುಗಂ. ೨೩-೧). [ಬಿರು$_2$ (<ಬಿಱು$_3$) + ಕಾವಲ್$_1$]

**ಬಿರುಗಾಳಿ** ‘ಬಿಱುಗಾಳಿ’ ನೋ.

**ಬಿರುಗು** (ನಾ). (ಅಲಂ) ಬೆಪ್ಪ ; ಪೊದ್ದು : ಪೆದ್ದ : ಹಾಂಗೆಲ್ಲಾ ಹೇಳಬ್ಯಾಡೇ ! ಅಯ್ಯೋ ನನ್ನ ಬಿರುಗುಮುಗಳೇ ! (ಮಾಲಿಮ. ೩೬).
[< ಸಂ. ಭೃಗು]

**ಬಿರುಗುಟ್ಟು** ‘ಬಿಱುಗುಟ್ಟು’ ನೋ.

**ಬಿರುಗೂದಲು** (ನಾ). ಬಿರುಸಾದ ಕೂದಲು : ಒರಟುಕೂದಲು : ಇವುಗಳಲ್ಲಿ ಬಿರುಗೂದಲುಗಳಿದ್ದು ಚಲನೆಗೆ ಇವುಗಳಿಂದ ಸಹಾಯ ಒದಗಿದೆ (ಕರಕೋ. I, ೦೯೩) ; ಬಿರುಗೂದಲುರೂಪ – ಭಾಗಗಳು ಸಣ್ಣ, ದಪ್ಪ ಬುಡದಿಂದ ಕ್ರಮೇಣ ತುದಿ ಚೂಪು (ಕೀಟಶಿ. ೦೯).
[ಬಿರು$_2$ (< ಬಿಱು$_3$) + ಕೂದಲು (< ಕೂಂದಲ್)]

**ಬಿರುಜವ್ವನ** (ನಾ). ಕಠಿಣವಾದ ಕುಚ : ನಿನ್ನ ತುಂಬುವರಯದ ಗುಂಡದೋಳ್ಗಳ ತಳ್ತಪ್ಪುಗೆಯಲ್ಲಿ ನನ್ನೀ ಬಿರುಜವ್ವನದ ಬಿಗಿಪಿನ ಅನಮ್ರತೆಯ ಕರ್ಕಶಾಹಂಕಾರವನ್ನೊಡೆದು ಮಣ್ಮಾಳಿಗಿಳಿಹಿ ಬಾಗಿಸಿಕೊ ! (ಬಿಟ್ಟಿಂ. ೩೬-೩). [ಬಿರು$_2$ (<ಬಿಱು$_3$) + ಜವ್ವನ]

**ಬಿರುಡೆ** ‘ ಬಿರಡೆ$_1$’ ನೋ.

**ಬಿರುದ** (ನಾ). ಗೌರವಸೂಚಕವಾದ ಪ್ರಶಸ್ತಿಯನ್ನು ಪಡೆದವನು ; ಬಿರುದು ಗಳಿಸಿದವನು : ಧನದರನ್ನರಿವರೆನಿಪ ಪರದರಿಂ ದೇವರನ್ನರಿವರೆನಿಪ ಬಿರುದರಿಂ (ಶಂಕಪಾ. ೩-೨೨ ರಗಳೆ) ; ಬಿರುದರ ಬಿಂಕಮಂ ಕಿಡಿಸಿ (ಎಕ. VII. ಶಿಕಾ೦. ೩೩೪-೦೩ ; ಸು. 1100) ; ಸುಗ್ಗಾಯ್ಯ ಬಲ ಸುಮ್ಮಾನ ಬೀತುದು ಬಿರುದರಿಗೆ ಕಾಲೂಱಿತಪಮಾನ (ಕುವ್ಯಾಕ. ೩-೦೪). [ಬಿರುದು + –ಅ$_7$]

**ಬಿರುದಂಕ** (ನಾ). ೧. ಪ್ರಶಸ್ತಿಯಿಂದುಂಟಾಗುವ ಖ್ಯಾತಿ,– ಪ್ರಸಿದ್ಧಿ : ಬಿಂಕದ ಬಿರುದಂಕದ ವಿಡಾಯದ . . . ಪರಿಗೆಕಾಱರ ವೊತ್ತದೊತ್ತಿ ನುಭಯಪಾರ್ಶ್ವದೊಳಿಂಬುಗೊಂಡು (ಹಮ್ಮೀರ. ೩-೩೩೭). ೨. =ಬಿರುದ : ಬಿರುದಂಕದ [ರ]ಂತೆ ಪೋಗದೆ ಕಾದುವರ್ (ಧರ್ಮಾಮ್ಮ. ೩-೬೩).
[ಬಿರುದು + ಅಂಕ$_2$]

**ಬಿರುದನಿ** ‘ಬಿಱುದನಿ’ ನೋ.

**ಬಿರುದಾಯತ** (ನಾ). ಪ್ರಸಿದ್ಧಿಯನ್ನು ಹೊಂದಿದವನು ; ಪ್ರಖ್ಯಾತನಾದವನು : ರಾಯ ಮೆಚ್ಚಿದ ಸಾರಥಿಯ ಬಿರುದಾಯತ [ಶಾಶಾಂ. ಕ]ನು ನೀನೆಂದು ಕೊಂಡಾಡಿದನು ಬಾಹುಕನ (ನಳಚ. ೮-೩೨).
[ಬಿರುದು + — ಆಯತ$_3$ (< — ಅಯ್ತ)]

**ಬಿರುದಾವಲಿ, ಬಿರುದಾವಳಿ** (ನಾ). ೧. ಗೌರವಸೂಚಕವಾಗಿ ಕೊಡುವ ಪ್ರಶಸ್ತಿಗಳ ಸಮೂಹ : ಬಿರುದುಗಳ ಸಾಲು. ೨. (ಅಲಂ) ಅಡ್ಡ ಹೆಸರುಗಳ ಗುಂಪು : ಗುರುಗಳು ಕೊಟ್ಟ ಈ ಬಿರುದಾವಲಿಯಿಂದಲೇ ಒಬ್ಬರನ್ನೊಬ್ಬರು ಕೂಗಿ ಕರೆಯುತ್ತಿದ್ದರು (ಕೃಂಗರೋ. ೨). **ಬಿರುದಾವಳಿ:** ೧. ಕಹಳಾಧ್ವನಿಗಳಿಂ ಬಿರುದಾವಳಿಯನೋದುತ (ಪದ್ಮರಾ. ೯-೦೦); ಮಲೆತ ಹಗೆವನ ಪಡಿಮುಖದ ಬಲುವಲಗೆಯಲಿ ಗದೆಯಿಂದ ರಾಯನ ಬಲುಹ ಬಿರುದಾವಳಿಯ ಬರೆವೆನು (ಕುವ್ಯಾಗ . ೩-೩೩); ಬಿರುದಾವಳಿಯ ಪದ್ಯವ ನೋದಲಾಗಿ ... ಸಂತೋಷವಂ ಪಟ್ಟು (ವಚಕಾ. ೦) . [ಬಿರುದು + ಆವಲಿ]

**ಬಿರುದಾವಳಿ** ‘ಬಿರುದಾವಲಿ’ ನೋ.

**ಬಿರುದಿಕ್ಕು** (ಕ್ರಿ). (ಒಂದು ಉದ್ದೇಶಕ್ಕಾಗಿ) ಸವಾಲು ಹಾಕು ; ಸವಾಲು ಎಸೆ : ಧರಣಿಪಕುಲೋತ್ತುಂಗಚೋಳರಾಯಂ ತನ್ನ ಪುರಕೆ ರೋಗದ ಮೇಲೆ ಬಿರುದಿಕ್ಕೆ ಜಂಗಮಂ ಭರದೆ ಕುಷ್ಠವ್ಯಾಧಿಯಿಂ ಬರಲ್ ಕಂಡು (ಬಿಬಪು. ೩೩-೩೨). [ಬಿರುದು + ಇಕ್ಕು]

**ಬಿರುದು** (ನಾ). ೧. ಗೌರವಸೂಚಕವಾಗಿ ಕೊಡುವ ಹೆಸರು,— ಪ್ರಶಸ್ತಿ : ಕುಡೆ ಪಡೆದಂ ವಶ್ಯವಾಣಿ ಕವಿಚಕ್ರವರ್ತಿಬಿರುದಂ ಬಾಣಂ (ಸೂಜತಂ. ೪-೬); ಜಗಭಂಡರಿವರಿಗೆ ಮತ್ತೆ ಬಿರುದುಗಳೆ (ಕುವ್ಯಾದ್ರೋ. ೦೦-೪೩); ಭಕ್ತವತ್ಸಲನೆಂಬ ಬಿರುದ ಪೊತ್ತಾ ಮೇಲೆ ಭಕ್ತರಾಧೀನನಾಗಿರಬೇಡವೆ (ಶಿರಂದ. ೦-೯೩-೩). ೨. ಪ್ರಶಸ್ತಿಯ ಸೂಚಕವಾದ ಅಲಂಕಾರ ಸಾಧನ : ಹೇಡಿ ಬಿರುದ ಕಟ್ಟಿದಂತಾಯಿತ್ತೆನ್ನ ವೇಷ (ಬಸವ. ೩೦೦); ಬಿರುದಿನ ಪೊಂಬಾವಡೆ ಸೆಡಕಿನ ಛಲ್ಲಿ ಕೊರಳ ಮುತ್ತಿನ ಜೂಳಿಯುದ . . . ಹಯ ಖುರವೆತ್ತಿ ಕುಣಿಯುತ್ತೈದಿದುವು (ಕಂಪವಿ. ೦೩-೦೪). ೩. ಪ್ರಖ್ಯಾತಿ; ಪ್ರಸಿದ್ಧಿ: 'ಬಿರುದಾಯತ' ಪರಾ. ೪. ಸ್ಪರ್ಧೆಗೆ ನೀಡುವ ಆಹ್ವಾನ; ಸವಾಲು : 'ಬಿರುದಿಕ್ಕು' ಪರಾ.

**ಬಿರುದಂತೆಂಬರ ಗಂಡ** = ಪ್ರಶಸ್ತಿಯನ್ನು ಗಳಿಸಿದ ವೀರರನ್ನು ನಿಗ್ರಹಿಸಬಲ್ಲ ವೀರ; ಒಂದು ಬಿರುದು : ಬಿರುದಂತೆಂಬರ ಗಂಡ ಭೀಮಪರಾಕ್ರಮಿ ಧುರಧೀರನೇಕಾಂಗವೀರ (ಕಂಪವಿ. ೦-೨೦) ; ಸಕಲಕಲಾ ಪ್ರವೀಣ ಬಿರುದಂತೆಂಬರ ಗಂಡಂ (ಜಶಿ. ೦-೯೭ ಪ); ಬಿರುದಂತೆಂಬರ ಗಂಡ ಎಂಬ ಮಹಾಬಿರುದು ಶ್ರೀಮನ್ಮಹೀಶೂರಮಹಾರಾಜವಂಶಕ್ಕಲ್ಲದೆ ಇತರರಿಗೆ ಸಲ್ಲುವುದಿಲ್ಲ (ಬಿರುಗಂ. ೨೦-೦೨). **ಬಿರುದಗೂರ್ವ** = ತಾನು ಗಳಿಸಿದ ಪ್ರಶಸ್ತಿಗಳಿಂದ ವೈರಿಜನಕ್ಕೆ ಭಯಂಕರಸ್ವರೂಪನಾದವನು : ವೈರಿಮದಭಂಜನಂ ಬಿರುದಗೂರ್ವ್ವನುಂ (ಸೌಇಇ. XX, ೪೦-೨೨; 1069). **ಬಿರುದನಿಕ್ಕು** = ಬಿರುದಿಕ್ಕು : ಸುರಪುರದ ಸೂಳೆಯರ ಸೊಬಗಿಗೆ ಬಿರುದನಿಕ್ಕುವ . . . ನವ್ಯಯವ್ವನಭರದ ವನಿತೆಯರೊಪ್ಪಿದರು (ತೊರರಾ. ೦-೩-೨೭) ; ಬಿರುದನಿಕ್ಕುವೆನಿನ್ನು ದಶಕಂಧರಗೆ ಕೈ ಮಾಡಿದ ನಿಶಾಟರನರೆವೆನೆಂದುಬ್ಬರದ ಹರುಷವ ತಾಳ್ದನಾ ಹನುಮ (ತೊರರಾ. ೩-೩-೨೭). **ಬಿರುದ ಭಂಗಾಱ** = ಪ್ರಶಸ್ತಿಗಳನ್ನು ಹೊಂದಿದವರಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ತ್ಯಾಗವಿನೋದಂ ಮುಂಜು[ಡಿ]ಯ ಮಣ್ಡಳಿಕ ಬಿರುದ ಭಂಗಾಱಂ (ಸೌಇಇ. XI-i, ೯೭-೭ ; 1062). **ಬಿರುದ ರಂಕುಸ** = ಪ್ರಶಸ್ತಿಗಳನ್ನು ಗಳಿಸಿಕೊಂಡವರಿಗೆ ಅಂಕುಶದಂತಿರುವವನು ; ಒಂದು ಬಿರುದು : ಮಾವನ ಬಣ್ಣ ಬಿರುದರಂಕುಸ ಬಣ್ಣರ ಭೀಮ (ಎಕ. VI, ಚಿಕ್ಕಮ. ೭೦-೦೦ ; 1058 ?) ; ಪರಚಕ್ರಸಾಧನ ಬಿರುದ ರಂಕುಸಂ (ಸೌಇಇ. XI-i, ೯೭-೦೦ ; 1062). **ಬಿರುದರ ಸಿಂಗ** = ಪ್ರಶಸ್ತಿಯನ್ನು ಗಳಿಸಿದವರಿಗೆ ಸಿಂಹದಂತಿರುವವನು ; ಒಂದು ಬಿರುದು : ಬಿರುದರ ಸಿಂಗಂ ಸಾಮನ್ತಭುಜಂಗಂ (ಸೌಇಇ. XI-i, ೭೪-೦೦ ; 1041). **ಬಿರುದರಾದಿತ್ಯ**=ಪ್ರಶಸ್ತಿಯನ್ನು ಗಳಿಸಿದವರಿಗೆ ಸೂರ್ಯನಂತಿರುವವನು ; ಒಂದು ಬಿರುದು : ಕಲಿಗಳ ಮೊಗದ ಕಯ್ ಬಿರುದರಾದಿತ್ಯಂ (ಎಕ. VII, ಶಿಕಾ. ೧೨೦-೯ ; 1048). **ಬಿರುದರೂವಾರಿ** = ಕೀರ್ತಿಯನ್ನು ಪಡೆದ ಶಿಲ್ಪಿ ; ಒಂದು ಬಿರುದು : ದಾಸೋಜನಿಗೆ 'ಬಿರುದ ರೂವಾರಿ ಗೋಂದಲ ಬಡಿವ' ಎಂದೂ . . . ಬಿರುದುಗಳಿತ್ತೆಂದು ಶಾಸನಗಳಿಂದ ನಮಗೆ ಗೊತ್ತಾಗಿದೆ (ಶಾರದ. ೩೦೩). **ಬಿರುದಿನಂಕ**=ಬಿರುದಂಕ ೧: ಎಡೆಯಿಂ ಕೋಲೊಡ್ಡಿದ [ಪಾಠಾಂ. ಕೋಲಾಡಿದ, ತೋಲಾಡಿದ]ಬಿರುದಿನಂಕದಂತಿರೆ ಖಚರಂ (ಅಂಕು. ೩-೭೪) ; ಭುವನಕ್ಕಾರಾಧ್ಯನೆಂಬೀ ನೆಗಟ್ದ ಬಿರುದಿನಂಕಕ್ಕೆ ತಕ್ಕಂದದಿಂ . . . ಬಿಲ್ಲೊ ವಜಂ ಗಾಂಡೀವಿಯೊಳ್ಕಾದಿದಂ (ಗದಾಯು. ೨-೩೦); ಅದಿರದೆ ಪೆಱತೆಗೆಯದೆ ಬೆಚ್ಚದೆ ಬೆದಱದೆ . . . ಕೋಲೊಡ್ಡಿದ ಬಿರುದಿನಂಕದಂದದಿನದೇಂ ಪರಿಚ್ಛೇದಮಾತನೊಳ್ ಕೂಡಿದುದೋ (ಸುಕುಮಾ. ೦೨-೬). **ಬಿರುದಿನ ತೊಡರ್** = ಬಿರುದಿನ ಸಂಕೇತವಾದ ಕಾಲಿನ ಬಳೆ : ಬಿರುದಿನ ತೊಡರ್ ಝುಣಝುಣಿಸಲೇಳ್ದು (ರಾಜಶೇ.೬-೦೦ ಪ). **ಬಿರುದಿನೋಲೆ**=ಪ್ರಶಸ್ತಿಸೂಚಕವಾದ ಪತ್ರ: ತನ್ನ ಬಿರುದಿನೋಲೆಗಂಜಿ ಪಾಳಯಗಳ ನನ್ನೊಡೆಯನ ಕೇಳದಾನು ತನ್ನವರೊಡನಟ್ಟುವಣ ಗಡಮಿಾ ಕಜ್ಜಕಿನ್ನೆಣೆಯಿಲ್ಲ ಭೂಮಿಯಲಿ (ಕರಾಕಾಂ. ೦೦-೦೦). **ಬಿರುದುಧ್ವಜ** = ಪ್ರಶಸ್ತಿಸೂಚಕವಾದ ಬಾವುಟ ; ಲಾಂಛನದ ಧ್ವಜ : ಕೆಲವು ಭದ್ರಗಜಗಳು ಬಿರುದುಧ್ವಜಗಳನ್ನು ಮುರಿದು ತಿರುಗುತ್ತಿದ್ದವು (ಕೃವಾಥೀ. ೭೪). **ಬಿರುದುಪಾಡು, ಬಿರುದ ಪಾಡು** = ಪ್ರಶಂಸೆಯ ಕೀರ್ತನೆ ; ಗುಣಗಾನ : ಬಿರುದುಪಾಡಿನ ಚೂಳಿಗಲಹದ ಕದಡುಜೂಜಿನ ತೋಳುವಲರೊಳ ತೋಟಿ ಮಸಗಿತು ದಿವಸದಿವಸದಲಿ (ಕುವ್ಯಾಆ. ೯-೦) ; ಪ್ರತಿಗರುಡಿಕಾಱ ಬಿರುದ[ಪಾಠಾಂ. ರಿದ, ರುದಿನ]ಪಾಡಿಂಗೆ ಒದಗಲು ವೀರಪಟ್ಟೆಯ ಕಟ್ಟಿ ತಿಗುರಸೇಱಸಿಕೊಂಬೆ (ಬಸವ. ೭೦೦). **ಬಿರುದುಪೆಂಡೆಯ** = ಬಿರುದಿನ ತೊಡರ್ : ಬಿರುದುಪೆಂಡೆಯ ಕಾಲೊಳಿಟ್ಟು ಪೊಗಳಿಸಿಕೊಂಬ ಧುರಧೀರ ಮಾವತಿಗರು . . . ಇರ್ದರವನೀಶನೋಲಗದೊಳು (ತಬಪು. ೬-೦೩). **ಬಿರುದುಬಾವಲಿ** = ಪ್ರಶಸ್ತಿಸೂಚಕವಾದ ವಸ್ತುವಿಶೇಷ : ಬಿರುದು ಬಾವಲಿ ಹೆಚ್ಚೆ ? ಹೆಸರು ಹೊಗಳಿಕೆ ಹೆಚ್ಚೆ ? (ಕೋಗಿಲೆ. ೯೩-೩); ಪೋಲೀಸ್ ಅಧಿಕಾರಿ . . . ಎದೆಯ ಮೇಲೆ ಬಿರುದುಬಾವಲಿಗಳನ್ನು ಧರಿಸಿದ್ದ ಹಳ್ಳಿಯ ಹೆಗ್ಗಡೆ–ಇವರೆಲ್ಲ ಅವನ ಬಳಿ ನಿಂತಿದ್ದರು (ಕೃಸರು. ೭೯) ; ಈ ರಾಜಾಸ್ಥಾನದಲ್ಲಿ ಬಿರುದುಬಾವಲಿಗಳನ್ನು ನೀವೇ ಹಂಚುವಿರಂತೆ (ತುಟಿಮಿ. ೩೨): 'ಬಾವುಲಿ₂' ಪರಾ. P ಇದು ದ್ವಿರುಕ್ತಿಯಂತಿರುವ ಒಂದು ದ್ವಂದ್ವಪದ.

[ದೇ.॥ ತಮಿ. ಮಲ. ವಿರುತು ; ತುಳು. ಬಿರುದು, ಬಿದ್ರ್ ; ತೆಲು. ಬಿರುದು, ಬಿರುದ. /ಸಂ. ವಿರುದ]

**ಬಿರುದುಗೆದಱು** (ಕ್ರಿ). (ತನ್ನ) ಪ್ರಶಸ್ತಿಯನ್ನು ಹೇಳಿಕೊಳ್ಳು ; ಹಿರಿಮೆಯನ್ನು ಮೆರೆ : ಇದಿರಾಂತು ಸುರಗಿಯೊಳಹಮಿನದಟರು ಬಿರುದುಗೆದಱುತ್ತಹಿತರಿಱಿದಾಡಿದರು (ಕುವ್ಯಾಭೀ. ೪-೨೦).

[ಬಿರುದು + ಕೆದಱು₁ (<ಕೆದಱ್₁)]

**ಬಿರುನಗೆ** 'ಬಿಱುನಗೆ' ನೋ.

**ಬಿರುನುಡಿ** 'ಬಿಱುನುಡಿ' ನೋ.

**ಬಿರುನೆಲ** (ನಾ). ಒರಟಾದ ಭೂಮಿ ; ಬಿರುಸಾದ ನೆಲ : ಬಿರುನೆಲವನ್ನು ಎಂದೂ ಮೆಟ್ಟದಿದ್ದ ಆವನ ಕಾಲಗಳಲ್ಲಿ ನೆತ್ತರು ಹನಿಯುತ್ತಿತ್ತು (ಹೇಮಕೂ. ೩೯). [ಬಿರು₂ (<ಬಿಱು₃) + ನೆಲ]

**ಬಿರುನೋಟ** 'ಬಿಱುನೋಟ' ನೋ.

**ಬಿರುಬ** 'ಬಿಱುಬ' ನೋ.

**ಬಿರುಬಿಸಿಲ್** 'ಬಿಱುಬಿಸಿಲ್' ನೋ.

**ಬಿರುಬಿಸಿಲು** 'ಬಿಱುಬಿಸಿಲ್' ನೋ.

**ಬಿರುಬು** 'ಬಿಱುಬು' ನೋ.

**ಬಿರುಮಳೆ** 'ಬಿಱುವಳೆ' ನೋ.

**ಬಿರುಮಾತು** 'ಬಿಱುವಾತು' ನೋ.

**ಬಿರುವರಿ** 'ಬಿಱುವರಿ₂' ನೋ.

**ಬಿರುವಳೆ** 'ಬಿಱುವಳೆ' ನೋ.

**ಬಿರುವುರಿ** (ನಾ). ತೀವ್ರವಾದ ಜ್ವಾಲೆ ; ತೀಕ್ಷ್ಣವಾದ ಉರಿ : ಕಂಪಿಸಿತು ರೌಪ್ಯಗಿರಿ ; ಸುಗಿದರಮರರ್ ಬೆದರಿ ಬಿರುವುರಿಗೆ ! (ಚತ್ರಾಂಗ. ೮೩-೨೨೯).

[ಬಿರು₂ (<ಬಿಱು₃) + ಉರಿ₂]

**ಬಿರುವೆಲರ್** 'ಬಿಱುವೆಲರ್' ನೋ.

**ಬಿರುವೆಲರು** 'ಬಿಱುವೆಲರ್' ನೋ.

**ಬಿರುವೇಸಗೆ** (ನಾ). ತೀಕ್ಷ್ಣವಾದ ಬೇಸಗೆಯ ಕಾಲ : ದವದ ದಳ್ಳುರಿ ದಹಿಸೆ ಬಿರುವೇಸಗೆಯ ಮಲೆಯ ನೀರಸಾರಣ್ಯಮಂ (ಶ್ರೀರಾಮಾ. ೯೩-೪೩೩).

[ಬಿರು₂ (<ಬಿಱು₃)+ಬೇಸಗೆ]

**ಬಿರುಸರ** 'ಬಿಱುಸರ' ನೋ.

**ಬಿರುಸು** 'ಬಿಱುಸು' ನೋ.

**ಬಿರುಸುಗಾಳಿ** (ನಾ). ರಭಸವಾಗಿ ಬೀಸುವ ಗಾಳಿ ; ಜೋರಾಗಿ ಬೀಸುವ ಗಾಳಿ : ಇರುಳುವೇಳೆಯು ಬಿರುಸುಗಾಳಿಯು ಕರಗಳಿಂದಲೆ ತರುವೆನು (ಶಿಪುತ್ರ. ೨೯-೫) ; ಬಿರುಸುಗಾಳಿಯುದರ ಬರವ, ಕೇಳು, ಅದೋ ಸಾರುತಿದೆ ! (ಪಾಂಚಜ. ೩೪-೧೮). [ ಬಿರುಸು (<ಬಿಱುಸು) + ಗಾಳಿ$_1$ ]

**ಬಿರುಸುಗೂದಲು** (ನಾ). ಒರಟಾದ ಕೂದಲು : ಸಿಂಹದ ಹೆಗಲುಗಳ ಮೇಲೆ ಬಿರುಸುಗೂದಲು ಉದ್ದವಾಗಿ ಬೆಳೆಯುವುವು (ಮುಂಬಯಿ. ೪-೨೦೬). [ಬಿರುಸು (<ಬಿಱುಸು) + ಕೂದಲು (<ಕೂಂದಲ್)]

**ಬಿರೋಜಾ** (ನಾ). ನೀಲಿವಜ್ರದ ಬಣ್ಣವಿರುವ ಒಂದು ಬಗೆಯ ಶಿಲೆ : ಮೈಸೂರಲ್ಲಿ ದೊರೆಯುವ ಬಿರೋಜಾ ಎಂಬ ಶಿಲೆಯು (ಮುಂಬಯಿ. ೨-೨೫೨). [ ←ಪಾರ. ಬೀರೋಜನ್ ; ಮರಾ. ಬಿರೋಜಾ ]

**ಬಿರ್ಕು** 'ಬಿಕ್ಕು$_2$' ನೋ.

**ಬಿರ್ಕುಬಿರ್ಕು** (ನಾ). ಒಂದು ಅನುಕರಣ ಶಬ್ದ : ಮೆಯ್ಯ್ ಬಿರ್ಕು ಬಿರ್ಕನೆ ಸಿಬ್ಬರಂ ಬಿರಿದೊಳಱುಗುಂ ಜೋಲ್ಗುಂ ವೈಚಿತ್ರ್ಯಜೀವರ ರೂಪದಿಂ (ಶಾಂತಿಪು. ೬-೯೨).

**ಬಿರ್ಚಿಸು, ಬಿಚ್ಚಿಸು** (ಕ್ರಿ). ಕಳಚುವಂತೆ ಮಾಡು ; ತೆಗೆಸು : ದಿಗ್ದಂತಿಯುಂ ಬಾಯ್ವಿಡೆ ಬೆದಱಿಸುತುಂ ನಭೋಬಂಧಮುಂ ಬಿರ್ಚಿಸುತುಂ (ಶಾಂತೀಶ್ವ. ೧೫-೩೪). **ಬಿಚ್ಚಿಸು** : ಆ ಬಂಧನದಿಂದ ಅದಕ್ಕೆ ತೊಂದರೆಯೆಂದು ಆ ಕಟ್ಟನ್ನು ಬಿಚ್ಚಿಸಿದೆ (ಶಂಗಾಳ್ಯ. ೦೫೦). [ಬಿರ್ಚು + -ಇಸು$_3$]

**ಬಿರ್ಚು, ಬಿಚ್ಚು$_1$** (ಕ್ರಿ). ೧. ಬೇರೆಮಾಡು ; ವಿಭಾಗಿಸು ; ಭಾಗ ಮಾಡು : "ಬಿರ್ಚು—ವಿಭಜನೇ" (ಕಮುಧಾ) ; ಪಸುಳೆಯನ್ ಬಾಳ್ ಮೊನೆಗೆ ಚುರ್ಚಿದನ್, ಬಿರ್ಚಿದನ್, ಕೊಯ್ದನ್ (ಅಶ್ವಶಾ. ೩-೦೬). ೨. ಬಿಡಿಸು ; ಸುಲಿ : ಬೆಳೆದೆಳ್ಳಂ ಬಿರ್ಚಿ ರಾಶಿಸ್ಥಿತಿಯಿನಿರಿಸಿ ತದ್ರಾಶಿಯಂ ಮತ್ತಮೋರಂತಳವಟ್ಟಿರ್ದಂದದಿಂದಾ ಕೊದಳಿಯ ಮಣಿಯೊಳ್ ಶೀವುತಿರ್ದಾಗಳ್ (ಸುಕುಮಾ. ೫-೩೪). ೩. ತೆರೆ ; ಅಗಲಿಸು : ಧ್ಯಾನದೊಳಿರ್ದ ಲೋಚನಯುಗಳವ ಬಿರ್ಚಿಯಾನಂದ ಮನದೊಳು ಮೆರ್ಚಿ (ಮೋಹತ. ೨೦-೩೯). ೪. ಕಳಚಿಕೊಳ್ಳು ; ಬಿಚ್ಚಿಕೊಳ್ಳು : ಹಱಿಗವಿಗಳ ಕಬ್ಬಂಗಳ ಹೊಱಗಳಿಂಟುಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ಒಱೆ ತಾಱಿಗೆ ಬೀಱಿಗ (ಗಂಕ. ೦-೨೩) ; ಸಂಧಿಬಂಧಮದು ಪೋ ಬಿರ್ಚಿತ್ತೆನಲ್ (ಸುಕುಮಾ. ೦೪-೦೦೦). ೫. ಇಬ್ಭಾಗವಾಗು ; ಬಿರಿ : ಆ ಗಿರಿ ಬಿರ್ಚಿದಂತೆಯುಂ ಸರ್ಪಂ ಸತ್ತಂಗಿಡದಂತೆಯುಂ ಪ್ರತ್ಯೇಕಮವರವರ್ಗೆ ಪ್ರಾಣವನಿತ್ತು (ಸಳಪ್ಪ. ೯). ೬. ಬೇರೆಯಾಗು ; ಅಗಲು : ಹಂಸಮಿಥುನಮಂ ನೋಡಿ ನಸುನಗುತ್ತುಮಿವು ಬಿರ್ಚಿ ಬಿರ್ಚುಗುಂ ತೊಲಗಿಮೆಂದು . . . ಪರಿಜನಮುಮಂ ತೊಲಗಿಸಿ (ವರ್ಧಪು. ೪-೯ ವ) ; ಅಂತು ಬೆಚ್ಚಂತೆ ಬಿರ್ಚದಚ್ಚಳಿಯದ . . . ಶಿವಯೋಗನಿದ್ರಾಮುದ್ರಿತನಾಗಿ (ಶೃಶಚಿ. ೨೩-೧೧ ವ). ೭. ಇಲ್ಲವಾಗು ; ತೊಲಗು : ಪಕ್ಷ್ಮಯುಗ್ಮನಿದ್ರಾಳುತೆ ಬಿ[ಪಾಠಾಂ. ವೆ]ರ್ಚಿ ಬಳ್ಳಿಯುಲಿ ಪೆರ್ಚಿ ಮನಂ ಬಿಡೆ ಪೊಯ್ದು ಕರ್ಣಮಂ ಲೀಳೆಯಿನೀಶ ನಿನ್ನ ಗಜರಾಜಗಳೆಬ್ಬಿಪುವಲ್ತೆ ಸಜ್ಜೆಯಿಂ (ಶಾಂತಿಪು. ೫-೯೦). ೮. ಹರಡು ; ಅಗಲಿಸು : ರೂಢಿಯ ಪರಮಾತ್ಮನದೇಂ . . . ಕರಿಯಂ ಸೀಳ್ದೀಡಾಡುವನೆ ಬಿರ್ಚಿ ಜೆಡೆಯ ನೆರ್ದಾಡುವನೇ (ಸಮಶ. ೯-೬೪) ; ಪಳಂಚಲೆದೊಲೆದು ಪಕ್ಕಮಂ ಬಿರ್ಚಿಲಲ್ಲೆಗೆಯ್ದುತ್ತು ಪಾರಿವಂ ಪಾರಿವದೊಳ್ (ಗಂಕ. ೨-೫೨). ೯. ನೀರು ಕೋಡಿ ಹರಿ : ಒಲ್ದು ಕೂಟದೊಳ್ ನೆಗಳ್ವನಮಂಗಜಾಂಬು ಕೆಱೆ ಬಿರ್ಚಿದ ಪೋಲ್ ಸತಿಯರ್ಗೆ ಪೊಣ್ಮುಗುಂ (ಮುಪ್ಪಿ. ೩-೦೪). ೧೦. ವ್ಯಕ್ತಪಡಿಸು ; ಪ್ರಕಟಗೊಳಿಸು : ಒಡನೆ ಸುದತೀಶಿರೋಮಣಿ ನಿರ್ದೋಷಿ ತಾನೆಂದು ಹೃದಯದ ಮಾತ ಬಿರ್ಚಿದಳು (ಮೋಹತ. ೬-೫). **ಬಿಚ್ಚು$_1$** : ೧. ಕಾಯದ ಜೀವದ ಹೊಲಿಗೆಯು ಸಂದ ಬಿಚ್ಚಲಱಿಯದವನು ನಾನು (ಸಿದ್ಧವ.೪ ೪೦-೦೨೯). ೫. ಶಲ್ಯನ ಶರಹತಿಗೆ ಬಿಚ್ಚಿದವು ಹೂಡಿದ ಹಂಗೆಯುಬ್ಬಿಗಿಯಾದವಾ ಬದ್ಧರದ ಬಂಡಿಗಳು (ಕುವ್ಯಾಕ. ೨-೩೯); ಘಣಿಪ ಕೂರ್ಮನ ಹೃದಯ ಬಿಚ್ಚಿತು . . . ದಶಾಸ್ಯನ ಪದವಿಘಾತಿಗೆ (ತೊರರಾ. ೦-೦೫-೨೦). ೬. ಇನಿಯರ್ ಬಿಚ್ಚದೆ ಮುಚ್ಚಿ ಬಾಟೆಗೆ ಸೊಬಗಿಂ (ಅನಂಪು. ೯-೩೦); ತಾಯನೆಳಗಱು ಬಿಚ್ಚುವಂತೊಯ್ಯನೊಯ್ಯನತ್ಯಾಯಾಸದಿಂದಗಲ್ದು . . . ಸೌಮಿತ್ರಿ ಸಾಗಿದನು (ಕೃಶಿಬಾ. ೦೯-೩೦). ೧೦. ಕೋಪವಂ ಕಣ್ಗಳೊಳ್ ಬಿಚ್ಚುವರ್ (ಕಬಪು. ೨೪-೦೮); ಅವರ ಕಥೆ ಓದಿ ಎಂಥೆಂಥ ಪಂಡಿತರೂ ಸಹ ತಲೆದೂಗುವರೆಂಬ ಸುದ್ದಿಯನ್ನೂ ಬಿಚ್ಚುವರು (ಕಟ್ಟಹೊ. ೧೧). ೧೧. ಸಡಿಲಿಸು ; ಕಳಚು : ನಿಚ್ಚಟನೆ ನೀನವನ ಬಂಧನ ಬಿಚ್ಚುವೀಗಳಿಗೆಗಳ ಕಂಡುದೆ ಅಚ್ಚರಿ ಕಣಾ (ಸಾಳ್ವಭಾ. ೦೬-೨೦); ಆ ಗಂಟುಗಳನ್ನು ಬಿಚ್ಚಲು ನಮ್ಮ ಯಾರ ಕೈಯಲ್ಲೂ ಆಗುವುದಿಲ್ಲ (ಆರ್ಯಕ. ೬೬). ೧೨. ಸಡಿಲವಾಗು ; ಶಿಥಿಲವಾಗು : ಬೆಚ್ಚದಗಲದೆ ಲೆಕ್ಕಿಸದೆ ಧೃತಿ ಬಿಚ್ಚದತಿಬಳ ಬೊಮ್ಮದೇವಂ ಹೆಚ್ಚಿ ಹೋ ಹೋ ನಿಲ್ಲುನಿಲ್ಲೆಂದೆನುತ ರ್ಝಂಕಿಸಲು . . . ಮದಕರಿ ಕೆಡೆದು ಮಡಿಯಿತು (ಬಸಪು. ೨೨-೩೩). ೧೩. ಕೆದರು ; ಹರಡು : ಕಿಡಿಗಳ ಬಿಚ್ಚಲುದುರಿತು ಚಾಪಮಾರ್ಗಣ ರಥ ತುರಂಗಚಯ (ಕುವ್ಯಾಕ. ೨೦-೦೯). ೧೪. ಅರಳಿಸು ; ವಿಕಾಸಗೊಳಿಸು : ಸೌರಭದ ಮುದ್ರೆಯನೊಡೆವಂತೆ ಹೂವಂ ಬಿಚ್ಚುತೊಳಗಣ ಪರಿಮಳದ ತೆನೆಯು ಮುಗ್ಗುಲೊಳೊಗ್ಗಿ (ಬಸರ. ೬-೬೯). ೧೫. ಕತ್ತಿ ಮುಂತಾದುವನ್ನು ಸೆಳೆ.—ಹಿರಿ : 'ಬಿಚ್ಚುಗತ್ತಿ' ಪರಾ. ೧೬. ವಿಶಾಲವಾಗು; ವೈಶಾಲ್ಯವನ್ನು ಹೊಂದು: 'ಬಿಚ್ಚುಮನಸ್ಸು' ಪರಾ. ೧೭. (ಆಲಂ) ಕೊಡು; ನೀಡು: ಐದು ರೂಬಲ್ ಬಿಚ್ಚು. ನಾನವಳನ್ನು ಬಿಡಿಸ್ತೀನಿ (ಕೃವರು. ೪೭೪); ಸಣ್ಣ ಪುಟ್ಟ ಕೆಲಸಗಳಿಗೂ ಹಣ ಬಿಚ್ಚದಿದ್ದರೆ ಮುದುವೆ ನಡೆಯುವುದಿಲ್ಲ (ವನ್ಮೂರು. ೩೦೬).

**ಬಿಚ್ಚಿ ಹೇಳು** = ವಿವರಿಸಿ ಹೇಳು ; ವಿಶದೀಕರಿಸು : ದಯಮಾಡಿ ನನ್ನ ಸಹೋದರರನ್ನು ಹೊರಗೆ ಕಳುಹಿರಿ, ಅಂದರೆ ನಾನು ತಮಗೆಲ್ಲಾ ಬಿಚ್ಚಿ ಹೇಳುತ್ತೇನೆ (ಮುಂಬಯಿ. ೪-೬೬). 'ಬಿರಿ$_1$' ಪರಾ.

[ದೇ.॥ ತುಳು. ಬಿಚ್ಚು; ತೆಲು. ವಿಚ್ಚು, ವಿಜ್ಜು, ವಿರುಚು]

**ಬಿರ್ಚುವಲೆ** (ನಾ). ಅಗಲವಾಗಿ ಹರಡಿಕೊಳ್ಳುವ ಒಂದು ಬಗೆಯ ಬಲೆ : ಬಿರ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂ ಬುಗದೆ ಬಿರ್ಚಿ ಬೀಸಿದಾಗಳ್ (ರಾಜಶೇ. ೫-೦೦೪ ವ). [ಬಿರ್ಚು + ಬಲೆ$_1$]

**ಬಿರ್ದ** 'ಬೀಟು$_1$' ಪರಾ.

**ಬಿರ್ದಿ, ಬಿದ್ದಿ** (ನಾ). ಮುದುಕಿ ; ವೃದ್ಧೆ : ಗಂಭೀರೆಯೆಂಬೊಳೊರ್ವಳ್ ಬಿ[ರ್ದಿ] [ಪಾಠಾಂ. ದ್ದಿ, ಳ್ದಿ]ಯಾಕೆಯ ಮಗಳ್ ಹರಿಣಿಯೆಂಬೊಳ್ (ವಡ್ಡಾರಾ. ೦೫-೦೨) ; ಬಿಸಿಯಂಬಲಿಯಂ ಬಾಯೊಳಿಟ್ಟಾಗಳ್ ಕಯ್ಯುಂ ಬಾಯುಂ ಬೆಂದೊಡೆ ಮೆಯ್ಯನದಿರ್ಚಿ ಕೈಯಂ ಬಿದಿರ್ದವನಂ ಬಿರ್ದಿ ಕಂಡು ನಕ್ಕಂತೆಂದಳ್ (ವಡ್ಡಾರಾ. ೦೬೪-೨೦). **ಬಿದ್ದಿ** : ಬೆಕ್ಕಸಂಬಟ್ಟು ನಿಂದಂತೆ ನೋಚ್ಪಲ್ಲಿ ಪಳವಿಸುತ್ತಿರ್ದ ಬಡಬಿದ್ದಿಯುಂ ಕಂಡು (ಬಿಂಹರಿ. ೬-೦೨ ವ). [< ಸಂ. ವೃದ್ಧಾ]

**ಬಿರ್ದಿಕ್ಕು, ಬಿದ್ದಿಕ್ಕು** (ಕ್ರಿ). ಔತಣವನ್ನು ಏರ್ಪಡಿಸು : ಈ ವಿದ್ಯಾಧರ ಸೈನ್ಯಮಂ ನಿಮಿಷದಿಂ ಪರ್ದಿಂಗೆ ಬಿರ್ದಿಕ್ಕುವೆಂ (ಶಂರಾಮಾ. ೯-೫೬) ; ಭೀಮಸೇನನುದ್ದಾಮಕೋಪದಿಂ ಕುರುರಾಜನನುಜವ್ರಾತಮಂ ಜವಂಗೆ ಬಿರ್ದಿಕ್ಕಿದಂ (ಶೀಬಿಪು.೦೨-೬೩ ವ). **ಬಿದ್ದಿಕ್ಕು** : ಬಿದ್ದಿ[ಪಾಠಾಂ. ಬಡಿದಿ]ಕ್ಕಿದ ಮೊಲಾಯ್ತುಮಮ ವಿಲಯದ ಮೃತ್ಯುದೇವತೆಗೆ (ತೊರರಾ. ೬-೨೭-೨೦). [ಬಿರ್ದು$_3$ + ಇಕ್ಕು]

**ಬಿರ್ದಿನ, ದಿಬ್ಬಣ, ನಿಬ್ಬಣ, ಬಿದ್ದಣ, ಬಿದ್ದಿನ** (ನಾ). ೧. ಆತಿಥ್ಯಕ್ಕೆ ಪಾತ್ರನಾದವನು ; ಉಪಚಾರಕ್ಕೆ ಅರ್ಹನಾದವನು ; ಅತಿಥಿ :

**ಬಿರುಸು** 'ಬಿಱುಸು' ನೋ.

**ಬಿರುಸುಗಾಳಿ** (ನಾ). ರಭಸವಾಗಿ ಬೀಸುವ ಗಾಳಿ ; ಜೋರಾಗಿ ಬೀಸುವ ಗಾಳಿ : ಇರುಳುವೇಳೆಯು ಬಿರುಸುಗಾಳಿಯು ಕರಗಳಿಂದಲೆ ತರುವೆನು (ಕುಪು. ೨೯-೫) ; ಬಿರುಸುಗಾಳಿಯುದರ ಬರವ, ಕೇಳು, ಅದೋ ಸಾರುತಿದೆ ! (ಹಾಂಕಜ. ೩೪-೦೬). [ಬಿರುಸು (<ಬಿಱುಸು)+ಗಾಳಿ$_1$]

**ಬಿರುಸುಗೂದಲು** (ನಾ). ಒರಟಾದ ಕೂದಲು : ಸಿಂಹದ ಹೆಗಲುಗಳ ಮೇಲೆ ಬಿರುಸುಗೂದಲು ಉದ್ದವಾಗಿ ಬೆಳೆಯುವುವು (ಮುಂಬಯಿ. ೪-೨೦೬). [ಬಿರುಸು (<ಬಿಱುಸು)+ಕೂದಲು (<ಕೂಂದಲ್)]

**ಬಿರೋಜಾ** (ನಾ). ನೀಲಿವಜ್ರದ ಬಣ್ಣವಿರುವ ಒಂದು ಬಗೆಯ ಶಿಲೆ : ಮೈಸೂರಲ್ಲಿ ದೊರೆಯುವ ಬಿರೋಜಾ ಎಂಬ ಶಿಲೆಯು (ಮುಂಬಯಿ. ೨-೨೫೨). [←ಪಾರ. ಬೀರೋಜನ್ ; ಮರಾ. ಬಿರೋಜಾ]

**ಬಿರ್ಕು** 'ಬಿರ್ಕ್ಕು$_2$' ನೋ.

**ಬಿರ್ಕುಬಿರ್ಕು** (ನಾ). ಒಂದು ಅನುಕರಣ ಶಬ್ದ : ಮೆಯ್ ಬಿರ್ಕು ಬಿರ್ಕೆನೆ ನಿಬ್ಬರಂ ಬಿರಿದೊಳಱುಗುಂ ಜೋಲ್ಗುಂ ವೈಚಿತ್ರ್ಯಜೀವರ ರೂಪದಿಂ (ಶಾಂತಿಪು. ೬-೯೨).

**ಬಿರ್ಚಿಸು,** ಬಿಚ್ಚಿಸು (ಕ್ರಿ). ಕಳಚುವಂತೆ ಮಾಡು ; ತೆಗೆಸು : ದಿಗ್ದಂತಿಯಂ ಬಾಯ್ವಿಡೆ ಬೆದಱಿಸುತುಂ ನಭೋಬಂಧಮಂ ಬಿರ್ಚಿಸುತುಂ (ಶಾಂತೀಶ್ವ. ೦೫-೩೪). **ಬಿಚ್ಚಿಸು :** ಆ ಬಂಧನದಿಂದ ಅದಕ್ಕೆ ತೊಂದರೆ ಯೆಂದು ಆ ಕಟ್ಟನ್ನು ಬಿಚ್ಚಿಸಿದೆ (ತಂಗಾಳ್ವ. ೦೫೦). [ಬಿರ್ಚು+-ಇಸು$_1$]

**ಬಿರ್ಚು,** ಬಿಚ್ಚು$_1$ (ಕ್ರಿ). ೧. ಬೇರೆಮಾಡು ; ವಿಭಾಗಿಸು ; ಭಾಗ ಮಾಡು : "ಬಿರ್ಚು—ವಿಭಜನೇ" (ಶಮಧಾ) ; ಪಸುಳೆಯನ್ ಬಾಳ್ ಮೊನೆಗೆ ಚುರ್ಚಿದನ್, ಬಿರ್ಚಿದನ್, ಕೊಯ್ದನ್ (ಅಶ್ವಶಾ. ೩-೦೬). ೨. ಬಿಡಿಸು ; ಸುಲಿ : ಬೆಳೆದೆಳ್ಳಂ ಬಿರ್ಚಿ ರಾಶಿಸ್ಥಿತಿಯಿನಿರಿಸಿ ತದ್ರಾಶಿಯಂ ಮತ್ತಮೋರಂತಳವಟ್ಟಿರ್ದಂದದಿಂದಾ ಕೊದಳಿಯ ಮಣಿಯೊಳ್ ಶೀವು ತಿರ್ದಾಗಳ್ (ಸುಕುಮಾ. ೫-೩೪). ೩. ತೆರೆ ; ಅಗಲಿಸು : ಧ್ಯಾನದೊಳಿರ್ದ ಲೋಚನಯುಗಳವ ಬಿರ್ಚಿಯಾನಂದ ಮನದೊಳು ವೆರ್ಚಿ (ಪೋಹಶ. ೨೦-೩೯). ೪. ಕಳಚಿಕೊಳ್ಳು ; ಬಿಚ್ಚಿಕೊಳ್ಳು : ಹಱಿಗವಿಗಳ ಕಬ್ಬುಗಳ ಹೊಱಗೆಳೆಯುತ್ತರದ ಹೊಲಿಗೆ ಬಿರ್ಚಿದೊಡಲ್ಲಂ ಬಱಿ ತಾಱಿಗೆ ಬೀಱಿಗ (ಗಂಶ. ೦-೨೩) ; ಸಂಧಿಬಂಧಮುದು ಪೋ ಬಿರ್ಚಿತ್ತೆನಲ್ (ಸುಕುಮಾ. ೦೯-೦೦೦). ೫. ಇಬ್ಭಾಗವಾಗು ; ಬಿರಿ : ಆ ಗಿರಿ ಬಿರ್ಚಿದಂತುಯುಂ ಸರ್ವಂ ಸತ್ವಂಗಿಡ ದಂತೆಯುಂ ಪ್ರತ್ಯೇಕಮವರವರ್ಗೆ ಪ್ರಾಣವನಿತ್ತು (ಶಬ್ದಪ್ವ. ೯). ೬. ಬೇರೆ ಯಾಗು ; ಅಗಲು : ಹಂಸಮಿಥುನಮಂ ನೋಡಿ ನಸುನಗುತ್ತುಮಿವು ಬಿರ್ಚಿ ಬಿರ್ಚುಗುಂ ತೊಲಗಿಮೆಂದು . . . ಪರಿಜನಮುಮಂ ತೊಲಗಿಸಿ (ವರ್ಧಪು. ೪-೯ ವ) ; ಅಂತು ಬಿಚ್ಚಂತೆ ಬಿರ್ಚದಚ್ಚಳಿಯದ . . . ಶಿವಯೋಗ ನಿದ್ರಾಮುದ್ರಿತನಾಗಿ (ಕೃಕಪ. ೨೩-೦೧ ವ). ೭. ಇಲ್ಲವಾಗು ; ತೊಲಗು : ಪಕ್ಷ್ಮಯುಗ್ಮನಿದ್ರಾಳುತೆ ಬಿ[ಪಾಠಾಂ. ವೆ]ರ್ಚೆ ಬಳ್ಳಿಯುಲಿ ಪೆರ್ಚೆ ಮನಂ ಬಿಡೆ ಪೊಯ್ದು ಕರ್ಣಮಂ ಲೀಲೆಯಿನೀಶ ನಿನ್ನ ಗಜರಾಜಗಳೆಬ್ಬಿಪುವಲ್ತೆ ಸೆಜ್ಜೆಯಿಂ (ಶಾಂತಿಪು. ೫-೯೦). ೮. ಹರಡು ; ಅಗಲಿಸು : ರೂಢಿಯ ಪರಮಾತ್ಮನದೇಂ . . . ಕರಿಯಂ ಸೀಳ್ದೀಡಾಡುವನೆ ಬಿರ್ಚಿ ಜೆಡೆಯ ನೆರ್ದಾಡುವನೇ (ಸಮಶ. ೬-೬೪) ; ಪಳಂಚಲೆದೊಲೆದು ಪಕ್ಕಮಂ ಬಿರ್ಚಿ ಲಲ್ಲೆಗೆಯ್ದುತ್ತು ಪಾರಿವಂ ಪಾರಿವದೊಳ್ (ಗಂಶ. ೨-೩೨). ೯. ನೀರು ಕೋಡಿ ಹರಿ : ಒಲ್ದು ಕೂಟದೊಳ್ ನೆಗಳ್ವನಮಂಗಜಾಂಬು ಕೆಱೆ ಬಿರ್ಚಿದ ವೋಲ್ ಸತಿಯರ್ಗೆ ಪೊಣ್ಮುಗುಂ (ಪುಷ್ಪಪ. ೩-೦೯). ೧೦. ವ್ಯಕ್ತಪಡಿಸು ; ಪ್ರಕಟಗೊಳಿಸು : ಒಡನೆ ಸುದರ್ಶನಶಿರೋಮಣಿ ನಿರ್ದೋಷಿ ತಾನೆಂದು ಹೃದಯದ ಮಾತ ಬಿರ್ಚಿದಳು (ಪೋಹಶ. ೬-೫). **ಬಿಚ್ಚು$_1$ :** ೧. ಕಾಯದ ಜೀವದ ಹೊಲಿಗೆಯು ಸಂದ ಬಿಚ್ಚಲಱಿಯದವನು ನಾನು (ಸಿದ್ಧಪ.ಕ ೪೦-೦೨೯). ೨. ಶಲ್ಯನ ಶರಹತಿಗೆ ಬಿಚ್ಚಿದವು ಹೂಡಿದ ಹರಿಗೆಯುಬ್ಬರಿಯಾದವಾ ಬದ್ದರದ ಬಂಡಿಗಳು (ಕುವ್ಯಾಕ. ೨-೩೯) ; ಫಣಿಪ ಕೂರ್ಮನ ಹೃದಯ ಬಿಚ್ಚಿತು . . . ದಶಾಸ್ಯನ ಪದವಿಘಾತಿಗೆ (ತೊರರಾ. ೦-೦೫-೨೦). ೬. ಇನಿಯರ್ ಬಿಚ್ಚದೆ ಮುಚ್ಚಿ ಬಾಟಗ್ಗಿ ಸೊಬಗಿಂ (ಅನಂತಪು. ೬-೩೦) ; ತಾಯನೆಳಗಱು ಬಿಚ್ಚುವಂತೊಯ್ಯನೊಯ್ಯನತ್ಯಾಯಾಸದಿಂದಗಲ್ದು . . . ಸೌಮಿತ್ರಿ ಸಾಗಿದನು (ಕೃಬಿಹಾ. ೦೯-೩೦). ೧೦. ಕೋಪಮಂ ಕಣ್ಗಳೊಳ್ ಬಿಚ್ಚುವರ್ (ಕಬಪು. ೨೯-೦೬) ; ಅವರ ಕಥೆ ಓದಿ ಎಂಥೆಂಥ ಪಂಡಿತರೂ ಸಹ ತಲೆದೂಗುವರೆಂಬ ಸುದ್ದಿಯನ್ನೂ ಬಿಚ್ಚುವರು (ಕಬ್ಬಹೊ. ೦೦). ೧೧. ಸಡಿಲಿಸು ; ಕಳಚು : ನಿಚ್ಚಟನೆ ನೀನವನ ಬಂಧನ ಬಿಚ್ಚುವೀ ಗಳಿಗೆಗಳ ಕಂಡುದೆ ಅಚ್ಚರಿ ಕಣಾ (ಕಾಳ್ಯಶಾ. ೦೬-೨೦) ; ಆ ಗಂಟುಗಳನ್ನು ಬಿಚ್ಚಲು ನಮ್ಮ ಯಾರ ಕೈಯಲ್ಲೂ ಆಗುವುದಿಲ್ಲ (ಅರ್ಚುಕ. ೬೬). ೧೨. ಸಡಿಲವಾಗು ; ಶಿಥಿಲವಾಗು : ಬಿಚ್ಚದಗಲದೆ ಲೆಕ್ಕಿಸದೆ ಧೃತಿ ಬಿಚ್ಚದತಿಬಳ ಬೊಮ್ಮದೇವಂ ಹೆಚ್ಚಿ ಹೋ ಹೋ ನಿಲ್ಲುನಿಲ್ಲೆಂದೆನುತ ರ್ಝಂಕಿಸಲು . . . ಮದಕರಿ ಕೆಡೆದು ಮಡಿಯಿತು (ಬಸಪು. ೨೨-೩೩). ೧೩. ಕೆದರು ; ಹರಡು : ಕಿಡಿಗಳ ಬಿಚ್ಚಲುದುರಿತು ಚಾಪಮಾರ್ಗಣ ರಥ ತುರಂಗಚಯ (ಕುವ್ಯಾಕ. ೨೦-೦೯). ೧೪. ಅರಳಿಸು ; ವಿಕಾಸಗೊಳಿಸು : ಸೌರಭದ ಮುದ್ರೆಯನೊಡೆವಂತೆ ಹೂವಂ ಬಿಚ್ಚುತೊಳಗಣ ಪರಿಮಳದ ತನಿಯು ಮಗ್ಗುಲೊಳೊಗ್ಗಿ (ಬಸಶ. ೬-೬೯). ೧೫. ಕತ್ತಿ ಮುಂತಾದುವನ್ನು ಸೆಳೆ,—ಹಿರಿ : 'ಬಿಚ್ಚುಗತ್ತಿ' ಪರಾ. ೧೬. ವಿಶಾಲವಾಗು; ವೈಶಾಲ್ಯವನ್ನು ಹೊಂದು: 'ಬಿಚ್ಚುಮನಸ್ಸು' ಪರಾ. ೧೭. (ಆಲಂ) ಕೊಡು; ನೀಡು: ಐದು ರೂಬಲ್ ಬಿಚ್ಚು. ನಾನವಳನ್ನು ಬಿಡಿಸ್ತೀನಿ (ಪುನರು. ೪೬೪) ; ಸಣ್ಣ ಪುಟ್ಟ ಕೆಲಸಗಳಿಗೂ ಹಣ ಬಿಚ್ಚದಿದ್ದರೆ ಮದುವೆ ನಡೆಯುವುದಿಲ್ಲ (ಪನ್ನೂರು. ೩೦೬).

**ಬಿಚ್ಚಿ ಹೇಳು** = ವಿವರಿಸಿ ಹೇಳು ; ವಿಶದೀಕರಿಸು : ದಯಮಾಡಿ ನನ್ನ ಸಹೋದರರನ್ನು ಹೊರಗೆ ಕಳುಹಿ, ಅಂದರೆ ನಾನು ತಮಗೆಲ್ಲಾ ಬಿಚ್ಚಿ ಹೇಳುತ್ತೇನೆ (ಮುಂಬಯಿ. ೯-೬೬). 'ಬಿರಿ$_1$' ಪರಾ.

[ದೇ.॥ ತುಳು. ಬಿಚ್ಚು; ತೆಲು. ವಿಚ್ಚು, ವಿಜ್ಜು, ವಿರುಚು]

**ಬಿರ್ಚುವಲೆ** (ನಾ). ಅಗಲವಾಗಿ ಹರಡಿಕೊಳ್ಳುವ ಒಂದು ಬಗೆಯ ಬಲೆ : ಬಿರ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂ ಬುಗದೆ ಬಿರ್ಚಿ ಬೀಸಿದಾಗಳ್ (ರಾಜಶೇ. ೫-೦೦೪ ವ). [ಬಿರ್ಚು + ಬಲೆ$_1$]

**ಬಿರ್ದ** 'ಬೀಟ್$_1$' ಪರಾ.

**ಬಿರ್ದಿ,** ಬಿದ್ದಿ (ನಾ). ಮುದುಕಿ ; ವೃದ್ಧೆ : ಗಂಭೀರೆಯೆಂಬೊಳೊರ್ವಳ್ ಬಿ[ರ್ದಿ] [ಪಾಠಾಂ.ದ್ದಿ, ಧ್ದಿ]ಯಾಕೆಯ ಮಗಳ್ ಹರಿಣಿಯೆಂಬೊಳ್ (ವಡ್ಡಾರಾ. ೦೫-೦೨) ; ಬಿಸಿಯುಂಬಲಿಯುಂ ಬಾಯೊಳಿಟ್ಟಾಗಳ್ ಕಯ್ಯುಂ ಬಾಯುಂ ಬೆಂದೊಡೆ ಮೆಯ್ಯನದಿರ್ಚೆ ಕೈಯಂ ಬಿದಿರ್ದವನಂ ಬಿರ್ದಿ ಕಂಡು ನಕ್ಕಿಂತೆಂದಳ್ (ವಡ್ಡಾರಾ. ೦೬೬-೨೦). **ಬಿದ್ದಿ :** ಬೆಕ್ಕಸಂಬಟ್ಟು ನಿಂದಂತೆ ನೋಟ್ಪಲ್ಲಿ ಪಳವಿಸುತ್ತಿರ್ದ ಬಡಬಿದ್ದಿಯಂ ಕಂಡು (ಬಿಂಪಂ. ೬-೦೨ ವ).

[< ಸಂ. ವೃದ್ಧಾ]

**ಬಿರ್ದಿಕ್ಕು,** ಬಿದ್ದಿಕ್ಕು (ಕ್ರಿ). ಔತಣವನ್ನು ಏರ್ಪಡಿಸು : ಈ ವಿದ್ಯಾಧರ ಸೈನ್ಯಮಂ ನಿಮಿಷದಿಂ ಪರ್ದಿಂಗೆ ಬಿರ್ದಿಕ್ಕುವೆಂ (ಶಾಂತಿಪು. ೯-೫೬) ; ಭೀಮಸೇನನುದ್ದಾಮಕೋಪದಿಂ ಕುರುರಾಜನನುಜವ್ರಾತಮಂ ಜವಂಗೆ ಬಿರ್ದಿಕ್ಕಿದಂ (ನೇಮಿಪು.೦೨-೯೩ ವ). **ಬಿದ್ದಿಕ್ಕು :** ಬಿದ್ದ[ಪಾಠಾಂ. ಬಡಿದಿ]ಕ್ಕಿದ ಪೊಲಾಯ್ತುಮುಮು ವಿಲಯದ ಮೃತ್ಯುದೇವತೆಗೆ (ತೊರರಾ. ೬-೨೭-೨೦).

[ಬಿರ್ದು$_2$+ಇಕ್ಕು]

**ಬಿರ್ದಿನ,** ದಿಬ್ಬಣ, ನಿಬ್ಬಣ, ಬಿದ್ದಣ, ಬಿದ್ದಿನ (ನಾ). ೧. ಆತಿಥ್ಯಕ್ಕೆ ಪಾತ್ರನಾದವನು ; ಉಪಚಾರಕ್ಕೆ ಅರ್ಹನಾದವನು ; ಅತಿಥಿ :

ಹೂಡಿ ಬಿಡುವ ಸಾಧನ ; ಧನುಸ್ಸು : ಚಾಪ : "ಬಿಲ್–ವಿಸ್ರಯೋ (ಮಾಜು), ಕೋದಂಡೇ ಚ" (ಶಮಂಧಾ) : ಅಸುರರುಂ ಬಿಲ್ಲಳನೇಱಿಸಿ ತಿರುವಾಯೊಳಂಬನಿಟ್ಟಸಲೆಂದು ತೆಗೆದಿಸುವನ್ನೆಗಂ (ವಡ್ಡಾರಾ. ೯೬–೬) ; ಸೆಳ್ಳುಗುರಂ ಕೇದಗೆ ಪುರ್ಬನಂಗಜನ ಬಿಲ್ ದಂತಾಳಿಯುಂ ಮುತ್ತು ಕೈಮುಗಿದಾರಾಧಿಸಿ ಪೋಲ್ತುವು (ಆದಿಪು. ೬–೬೫) ; ಚಂದ್ರ ಅಳಿಯನ ಬಿಲ್ಗೆ ಬೆಳಸಿದಂತೆ ಧವಳೇಕ್ಷುಗಳ ಗದ್ದೆ ರಾಜಿಸುತಿಹುವು (ಕಂಸವಿ. ೩–೭೪). ೨. ಧನುಸ್ಸಿನಿಂದ ಬಾಣಪ್ರಯೋಗ ಮಾಡುವ ಕೌಶಲ; ಧನುರ್ವಿದ್ಯೆ : ಮೂಲಬಲಮಿಲ್ಲದ ತುಟಿಲಸಂದನಂತೆ ಬಿಲ್ಲೊಳ್ಗೊಟ್ಟ ನಾಗಿ (ಶಾಂತಿಪು. ४–೩೦ ವ). ೩. ಬಿಲ್ಲಿನ ಆಕಾರವಾದುದು : ಜೊನ್ನಿರುಳ್ ಭೂಪ್ಯೋಮಸಾಗರಂಗಳನೊಂದುಮಾಳ್ಪಂತೆ ಬೆಸೆದಪ್ಪಿದುದು, ಮುಡಿದ ಬಿಲ್ದಿಂಗಳಿಂದೊಪ್ಪಿ (ಶ್ರೀರಾಮಾ. ೫೫೦–೬೯೦). ೪. ಬಿಲ್ಗಾರರ ಸೈನ್ಯ : ಧನುಸ್ಸನ್ನು ಹಿಡಿದ ಸೇನೆ: ಸರಳ ಪೊದಟ್ಟ ಬಲ್ಸರಿಯ ಕೋಳ್ಗಿರ ಲಾಜಿದೆ ಬಿಲ್ ತೆರಳ್ದು ದುರ್ಘರಹಯಮುಟ್ಕಿ ಸಂದಣಿಸಿ ಸಂದಣಿ ಕೋಟ್ಟುದಿಗೊಂಡುದು (ಶಂಕರಾ. ೩–೬೦). ೫. ಒಂದು ಬಗೆಯ ಮರ : ತಂಡಸು ಬಿಳಿಲ್ಬಿಲ್ಮತ್ತಿ ಬೇವತ್ತಿ . . . ಕೆಕ್ಕಮ್ಮರಂ ಎಂಬೀ ಮರದುಱುಗಲಿಱುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ (ಪಾರ್ಶ್ವಪು. ೧೨–೫೬). 'ಬಿಲ್ವರ₁' ಪರಾ. ೬. [ಜೈನ] ನಾಲ್ಕು ಮೊಳ ಗಳ ಎತ್ತರದ ಒಂದು ಅಳತೆ : ನಾಲ್ಕು ನಾಲ್ಕುಂ ಬಿಲ್ಪಿಡಿಯಪ್ಪ ಮೂಱುಂ ಪೀಠಂಗಳ ಮೇಲೆ (ಶಾಂತಿಪು. ೪೩) ; ಸಮನಿಕ್ಕುಂ ಮುನ್ನ ಮಾದ್ಯಕ್ಷಿತಿಯೊಳಳವಿಯಿಂದೇೞುಬಿಲ್ ಮೂಱುಹಸ್ತಂ ಸಮಸಂದಾಱಂಗುಲಂ ಗಳ್ ನಿರಯಜರ್ಗೆ ತನೂತ್ಸೇಧಂ (ವರ್ಧಮಾ. ೦೫–೭) ; ದೇಹ ಮಿರ್ಛಾಸಿರ ಬಿ[ಶಾಶಾಂ.ವಿ]ಲ್ ಬಳೆಯೆ ಸುಧಾಸಾರಮನಾಮುಳಕಫಲ ಪ್ರತಿಮಮಂ ದಿನಾಂತರಮುಣ್ಬರ್ (ಶಂರಾಮಾ. ೦–೬೯). 'ಧನು' ಪರಾ.

**ಬಿಲು** : ೧. ಪರಶು ಬಿಲು . . . ಸುರಗಿ ಮೊದಲಾಗೆ ಮೂವತ್ತೆರಡಾ ಯುಧಮಂ . . . ಪೂಜಿಸಿ (ಧರ್ಮಾಮೃ. ೨–೦೨೮) ; ಅಖಿಳಯಾದವಜಾಲ ವೆದ್ದುದು ಬಿಗಿದ ಬಿಲುಗಳ ಸೆಳೆದಡಾಯುಧದಿ (ಕುಮಾ.ಕ. ೮–೩೬).

**ಬಿಲ್ಲು₁** : ೧. "ಅಸ್ತ್ರಂ . . . ಬಾಣಾಸನಂ, ದ್ರುಣಾ–ಈ ೯ ಬಿಲ್ಲು" (ಪಲಾಯು. ೭೭–೩೦೦); ಕರ್ಬಿನ ಬಿಲ್ಲ ದೊರೆಯೆನಿಪ ಪುರ್ವಿನಿಂ ನಗೆಮೊಗದ ಚೆಲ್ವೆಸೆಯೆ (ಅಶ್ವ. ४–೭); ನಾರಿ ಹಱಿಯಿತ್ತು ಬಿಲ್ಲು ಮುಱಿಯಿತು (ಅವತಂ. ೦೨೨–೫೫೭) ; ಮದನಂ ಗರ್ಜಿಸಿ ಬಿಲ್ಲುಮಂ ಸರಲುಮಂ ಕೈಕೊಂಡು ಬಂದಾದರ್ (ಶಂಪಾಶ. ४೦). ೬. ಮೊದಲ ನಾರಕರ ದೇಹೋತ್ಸೇಧಮೇೞು ಬಿಲ್ಲು ಮೂಱು ಮೊೞನುಮಾಱಂಗುಲಮುಮಕ್ಕುಂ (ಸುಕುಮಾ. ೦೦–४೭ ವ). ೭. (ದೂರವನ್ನು ತಿಳಿಸುವ) ಒಂದು ಅಳತೆ : ಈಡಿಱಿದನಂಬಿನಿಂ ಪಾರ್ಥನ ವರೂಥಮಂ ಕೂಡೆ ಹಿಂಭಾಗಕ್ಕೆನೂಱು ಬಿಲ್ಲಂತರಕೆ ಪೋದುದು (ಕೃಬಿಭಾ. ೦४–೦೨). ೮. ಕಾಮನ ಬಿಲ್ಲು ; ಇಂದ್ರಧನು : ಬಿಲ್ಲು ಮೂಡಿದ ಮೋಡ ಸುರಿಯುತ್ತಿರುವುದು ! (೩೦ಗೀತ. ೦೨–೦೫). ೯. (ಅಲಂ) ನಮ್ರನಾಗಿರುವ ವ್ಯಕ್ತಿ; ವಿನೀತನಾದ ವ್ಯಕ್ತಿ : ಕಲ್ಲಾಗಿಯಿರ ಬೇಕು ಕಠಿಣಭವತೊಱೆಯೊಳಗೆ ಬಿಲ್ಲಾಗಿಯಿರಬೇಕು ಬಲ್ಲವರೊಳಗೆ (ಪುರಂದ. ೦–೩೨–೦). ೧೦. ಪಿಟೀಲನ್ನು ಬಾರಿಸುವ ಕಮಾನು: ತಂತಿಗಳ ಮೇಲೆ ಬಿಲ್ಲನ್ನು ಕಿವಿವರೆಗೆ ಸೆಳೆದೂಸೆಳೆದೂ ಉಜ್ಜುತ್ತಿದ್ದನು (ರಾಯುಕ. ೬೦). ೧೧. [ಜ್ಯೋತಿ] ಹನ್ನೆರಡುರಾಶಿಗಳಲ್ಲಿ ಒಂಬತ್ತನೆಯದು ; ಧನುಸ್ಸು : ಬಿಲ್ಲನೇಱಲು ಗುರುವು ತಲ್ಲಣವು ಪಿರಿದಕ್ಕು (ಸರ್ವಜ್ಞ. ೦೫೮೮).

**ವಿಲ್** : ೧. ×× ಗಮನವಮಂ ನೋಬ್ರ್ಬಂನ್ತೆವಿಲ್ಲೊಬ್ಬಿ ××× ನೀಬ್ದಾತನೆಂದೀಯಾ ××× (ಸೌಇಇ. XI–i, ೦೦–೨೦; 864) ; ಪಲರನ್ ×× ಎಚ್ಚು ವಿಲ್ಮುಱಿದೊಡೆ . . . ಪಲರನೆಱಿದು ಸಗಮೇಱಿದನ್ (ಎಕ. X, ಶಿಡ್ಲ. ೩೨–೫; 870 ?) ; ಕಂಗಳ ಬಲೆ ಕಟಾಕ್ಷಂಗಳ ಬಾಣ ಭೃಂಗಂಗಳ ವಿಲ್ವೆಱಿನೊಸಲ ಪಿಂಗದೆ ಬಡಿಕೋಲು ನಗೆತುನಿಯಿಂ ಸ್ತ್ರೀ ಜನಂಗಳು ಬೇಂಟೆಯಾಡುವರು (ಅಮುಸಾಂ. ೩–೯೦).

**ಬಿಲ್ಲಂಕಕಾಱ** = ಧನುರ್ವಿದ್ಯೆಯಲ್ಲಿ ನಿಪುಣನಾದವನು ; ಒಂದು ಬಿರುದು : ರಣರಂಗನೀಱಿನುಂ ಬಿಲ್ಲಂಕಕಾಱನುಂ ಕಂಣ್ಮಂಬಿನಾಥನುಂ . . . ಅದೆಂತುಮೊಪ್ಪುವನುಂ (ಎಕ. VI. ತರೀಕೆ. ೬೦–೩४ ; 1154). **ಬಿಲ್ಲ ಕೊಪ್ಪು** = ಬಿಲ್ಲಿನ ತುದಿ ; ಗೊಲೆ : "ಕಾರ್ಮುಕಕೋಟಿಃ, ಅಟನಿಃ – ಈ ೨ ಬಿಲ್ಲ ಕೊಪ್ಪು" (ಪಲಾಯು. ೭೭–೩೦೦) : ನಾರೀಚೋರ ನಡೆನಡೆ ಯೆನುತ ಶಿವಿದನು ಬಿಲ್ಲ ಕೊಪ್ಪಿನಲಿ (ಕುಮಾ.ಭ. ೨೨–೩೭) ; ಅಲ್ಲಿ ಶಿವನು ಬಿಲ್ಲ ಕೊಪ್ಪಿಗೆ ನೆಮ್ಮಿದಾತನಾಗಿ ಮುಗುಳುನಗೆಯಿಂದ ತ್ರಿಪುರವ ನೋಡಲು (ಭೃರಸೂ. I, ೩೦). **ಬಿಲ್ಲ ಜಾಣ**=ಧನುರ್ವಿದ್ಯೆಯಲ್ಲಿ ನಿಪುಣನಾದವನು.– ಕೌಶಲ್ಯವನ್ನು ಹೊಂದಿದವನು : ಕನಕಕಲಶಧ್ವಜನುಮೆನಿಸಿದ ಬಿಲ್ಲ ಜಾಣಂ ದ್ರೋಣನಟಿವಿನೊಳಂ . . . ಸುಯೋಧನಂ ಚಿಂತಾಕ್ರಾಂತನಾಗಿ (ಗದಾಯು. ೨–೦೦ ವ). **ಬಿಲ್ಲ ನಾರಿ** = ಧನುಸ್ಸಿನ ಹಗ್ಗ ; ಹೆದೆ : "ಬಿಲ್ಲ ನಾರಿಯೊಳು ಸುರಗುರುವಿನೊಳು ತುರಗದೊಳಗೆಲ್ಲ ಜೀವವೆನಿಕ್ಕು" (ಮಂಗರಾ. ಮಡಕೆ ದೈವ ಮೊಱ ದೈವ ಬಿಲ್ಲ ನಾರಿ ದೈವ ಕಾಣಿರೋ (ಬಸವ. ೫೭೩). ೦೫೦–೫೩) ; **ಬಿಲ್ಲ ಬಂಟ** = ಬಿಲ್ಲ ಜಾಣ : ಕಲಿ ಪಂದಿಯೊಂದು ಕಟ್ಟುಬ್ಬ ಟೆಯಿಂ ಮೆಲ್ಲನೆ ಪೊಱಮಡುತ್ತಿರೆ ಬಂದಲ್ಲೂರ್ವರ್ಗಂ ಬಿಲ್ಲ ಬಂಟನಿರ್ದುಂ ಮಱೆಯೊಳ್ ಮುಂಬಂದೆಚ್ಚೊಡೆ (ಹರಿಶ್ಚ. ४–४४). **ಬಿಲ್ಲ ಬಲ್ಮೆ**, **ಬಿಲ್ಲ ಬಲುಮೆ**=ಬಿಲ್ಲುಗಾರಿಕೆಯ ಚಾತುರ್ಯ,–ನೈಪುಣ್ಯ : ನೋಟ ಮನಂಗನ ಬಿಲ್ಲ ಬಲ್ಮೆಯಂ ಪಡೆಯೆ (ಆದಿಪು. ೨–४) ; ಬಿಲ್ಲ ಬಲ್ಮೆಯುಂ ಕುಲಮುಂ ನಿರ್ವ್ಯಾಜಂ ಮಸುಳ್ದುವು (ಗದಾಯು. ೨–೦೮) ; ಬಿಲ್ಲ ಬಲುಮೆ ಯದೆನ್ನ ಗಂಡನೊಳಿಲ್ಲದಾರಿಗೆ ಹೇಳು ಚೌಪಟಮಲ್ಲತನ (ಕೂರರಾ. ४–೫–೦೯). **ಬಿಲ್ಲ ಬಲ್ಲಹ** = ಬಿಲ್ಲ ಜಾಣ : ಕೋಲ ಮಳೆಯಂ ಕಱೆದರ್ ಮಿಗೆ ಬಿಲ್ಲ ಬಲ್ಲಹರ್ (ಕಬ್ಬಿಗಾ. ೨೭೭). **ಬಿಲ್ಲ ಬಿತ್ತಿಗ** = ಬಿಲ್ಲ ಜಾಣ : ಬಿಲ್ಲ ಬಿತ್ತಿಗರ್ ಕಡುಪೊತ್ತುಂಬಱಿಯದೆ ತಮ್ಮೊಳ್ ಸಲೆ ಸುರಿಗಿಱಿದಱಿದರ ವಂಧ್ಯಮಲ್ತೆ ವೀರೋದ್ರೇಕಂ (ಶಂಪ್ರಪು. ೧೦–೬೦). **ಬಿಲ್ಲವ₁**=ಬಿಲ್ಲಾಳ್ : ಕುದುರೆ ತಗುಳ್ದುವಾ ದೆಸೆಯು ಬಿಲ್ಲವರಂ (ಕವಿರಾ. ೦–೦೨೦) ; ತೆಗೆಸಿದರು ಸೇನೆಯನು ನೂಕಿನರಂದು ಬಿಲ್ಲವರ (ಕುಮಾ.ಭಿ. ४–೧೦). **ಬಿಲ್ಲ ಹಬ್ಬ** = ಧನುಸ್ಸನ್ನು ಪೂಜಿಸುವ ಹಬ್ಬ : ಬಿಲ್ಲ ಹಬ್ಬವೆನುತ್ತ ಧರೆಯೊಳಗೆಲ್ಲ ಬೊಬ್ಬಿಱಿದಾಡುತಿರೆ (ಸಿಭಾಗ. ೦೦–೩೭–४೬); ಬಿಲ್ಲ ಹಬ್ಬದ ಚೆಲುವ ಬಳಿಕಾ ಮಲ್ಲಯುದ್ಧದ ದಂಡಿಯನು ಕಂಡಲ್ಲದೀ ಬಲ ಕೃಷ್ಣರಿಹರೇ ಕೇಳಿಲಂಪಟರು (ಅಕ್ರೂಚ. ೩–೩).

[ದೇ.॥ ತಮಿ. ಮಲ. ಕೋಲಾ. ಪರ್ಜಿ. ವಿಲ್; ತುಳು. ಬಿಲ್ಲು, ಬಿರು; ತೆಲು. ವಿಲು, ವಿಲ್ಲು, ವಿಲ್; ಕುಇ. ವಿಲು, ವಿಡು; ಕುವಿ. ವೆಲ್ಲೂ ; ಬ್ರಾಹುಈ. ಬಿಲ್]

**ಬಿಲ್‌ಕುಲ್**, **ಬಿಲ್‌ಖುಲ್** (ಅ). ೧. ಸಂಪೂರ್ಣವಾಗಿ ; ಪೂರ್ತಿ ಯಾಗಿ : ಇದೆಲ್ಲಾ ಬಿಲ್‌ಕುಲ್ ಸುಳ್ಳು (ಸರ್ವಮಂ. ೨೮೮). ೨. ಖಡಾ ಖಂಡಿತವಾಗಿ : ಅವಳು ಬಿಲ್‌ಕುಲ್ ಆಗದೆನ್ನುತ್ತಾಳೆ (ಪುಸರು. ४೬೦). **ಬಿಲ್‌ಖುಲ್** : ೨. ನಾನಂತೂ ಬಿಲ್‌ಖುಲ್ ಬರೊಲ್ಲ (ರಾಗಿಣಿ. ೦೦೫); ಮೊದಲು ಬಿಲ್‌ಖುಲ್ ಆಗುವುದಿಲ್ಲವೆಂದು ಜೋರು ಮಾಡಿ . . . ಅವರ ಮಾತನ್ನೆಲ್ಲಾ ಕೇಳಿ ನನಗೆ ವರದಿ ಮಾಡಬೇಕು (ಕಲಿಸಿ. ೦೦೦).

[←ಅರ. ಬಿಲ್ಕುಲ್ಲ್ ; ಉರ್ದು. ಬಿಲ್‌ಕುಲ್ಲ್ ; ಹಿಂ. ಬಿಲ್‌ಕುಲ್, ಬಿಲ್ಕುಲ್ ; ಮರಾ. ಬಿಲ್‌ಕುಲ್, ಬಿಲ್‌ಕೂಲ್, ಬಿಲ್ಕುಲ್, ಬಿಲ್ಕೂಲ್]

**ಬಿಲ್‌ಖುಲ್** 'ಬಿಲ್‌ಕುಲ್' ನೋ.

**ಬಿಲ** (ನಾ). ೧. ಆಳವಾದ ಹಳ್ಳ ; ಕುಳಿ ; ಕೊಳ್ಳ : "ನಿಮ್ನಂ, ಅಗಾಧಂ, ಗರ್ತಃ, ಶ್ವಭ್ರಂ, ಸುಷಿರಂ, ಬಿಲಂ . . . ದರಃ – ಈ ೧೫

ಕುಟಿ" (ಹರಿಶ್ಚ. ೧೦೩-೨) ; ಬೇತಾಳಂಗಳ್ ಮೊಱೆದು ತೆಱೆದು ಬಾಯ್ಗಳನಾ ಪಾತಾಳಬಿಲಂಗಳವೋಲ್ ... ಕುಣಿಯೆ ಭಯಮಯನಾದಂ (ಶಬರಾ. ೩-೧೯); ಇದು ಪಾತಾಳಬಿಲಕ್ಕೆ ಬಾಗಿಲಿದು ದಲ್ ಘೋರಾಂಧಕಾರಕ್ಕೆ ಮಾಡಿದ ಕೂಪಂ(ಶಂಕರಾ. ೧೩-೬೨) ; ಮಾರಿಯು ದಿಂಡುಗೆಡಹುವೆನೆನುತ ತೆರಳಿದ ಕುಂಭಿನಿಯು ಬಲಕೆ (ಕೌಶಿರಾ. ೧೯-೩೩). 'ನರಕಬಿಲ' ಪರಾ. ೨. (ಇಲಿ, ಮೊಲ, ಹಾವು ಮುಂತಾದುವು ವಾಸಕ್ಕಾಗಿ ನೆಲದಲ್ಲಿ ಮಾಡಿಕೊಂಡಿರುವ) ಡೊಗರು ; ಹೋರು ; ರಂಧ್ರ : ಬಿಲದೊಳಗಿರ್ದ ಇಲಿಯಂ ತೆಗೆವಂತೆ (ಪಂಚತಂ. ೦೩೭-೮) ; ಬಿಲದೊಳಗಣ ಇಲಿ ಹುತ್ತದೊಳಗಣ ಹಾವು ಇತ್ತಂಡವು ಕೂಡಿ ಮನೆಯೊಳಗಣ ಬೆಕ್ಕು ಮುರಿಯಿತ್ತು (ಬಿಬ್ಬಣಾ. ೨೦-೪೪); ಬಿಲ ಸಿಕ್ಕೊಂತ ಹುಲಿ ನುಗ್ಗೋಕಾಗುತ್ತೆ ! (ದುರಂನಾ. ೬೮). ೩. ಗುಹೆ ; ಗವಿ : ಭೂತಂಗಳಾತನನೊಂದುಬಿಲದೊಳಿಕ್ಕಿ ಕಲ್ಲಂ ಕವಿದೊಡೆ (ಕಾವ್ಯಾವ. ೦೬೮); ನೀನೀ ಬಿಲನ ಬಾಗಿಲ ಕಾದಿರೆನುತೊಳಹೊಕ್ಕನಾ ವಾಲಿ (ತೊರರಾ. ೪-೨-೨೬). ೪. ಹೊರಕಿಂಡಿ: 'ಬಿಲದ್ವಾರ' ಪರಾ. ೫. ಸ್ತ್ರೀಯ ಇಂದ್ರಿಯನಾಳ; ಯೋನಿನಾಳ. ೬. ದೇವೇಂದ್ರನ ಕುದುರೆ ; ಉಚ್ಚೈಃಶ್ರವಸ್ಸು. [ಸಂ.]

**ಬಿಲಂದರ** (ನಾ). ಮೋಸಗಾರ ; ವಂಚಕ : ಮಧುರಾದಾಸನೆಂದರೇನು ಸಾಮಾನ್ಯನೇ. ಪಕ್ಕಾ ಬಿಲಂದರನಿರುವನು (ಕರ್ನಾಟಿ. ೦೩).
[←ಮರಾ. ಬಿಲಂದರ್, ಬಲಿಂದರ್]

**ಬಿಲಂದರಿ₁** (ನಾ). ಮೋಸಗಾರಿಕೆ ; ವಂಚಕತನ : ಮೊದಲಿನಂತೆಯೇ ಬಿಲಂದರಿಯಾದ ಮುಖಚರ್ಯೆ. ಆದರೆ ವ್ಯಥೆಗೊಂಡಂತೆ ಅವನ ಕಣ್ಣು ಕಂಡವು (ಪರುಗಾ. ೩೩). [<ಬಿಲಂದರ]

**ಬಿಲಂದರಿ₂** (ನಾ). (ಉಕ) ೧. ಮೋಸಗಾತಿ ; ವಂಚಕಿ. ೨. ಚತುರೆ; ನಿಪುಣೆ : ಆಕೆ ಬಿಲಂದರಿಯಾದ್ದರಿಂದ ಇಕ್ಕಟ್ಟಿನಿಂದ ಪಾರಾದಳು (ರೂಢಿ). [ಬಿಲಂದರ + — ಇ₂]

**ಬಿಲಂಬುಗು** (ಕ್ರಿ). ರಂಧ್ರವನ್ನು ಪ್ರವೇಶಿಸು : ಗಱೆವೆರಸು ಬಲಂಬುಗುವೆನೆಂಬ . . . ಬೆಳ್ತನಮುಕ್ಕುಂ (ರಸಾರಾಮ್ಯ. ೦೯-೦೩೪).
[ಬಿಲ + ಪುಗು (<ಪೊಗು)]

**ಬಿಲಚರ** (ಗು). ಬಿಲಗಳಲ್ಲಿ ಓಡಾಡುವ; ಡೊಗರುಗಳಲ್ಲಿ ಸಂಚರಿಸುವ : ಕಿಱುವೇಂಟೆಗಾಱರ್ ಇಲಿ ಬೆಳ್ಳಿಲಿ ಮೊದಲಾದ ಬಿಲಚರಪ್ರಾಣಿಗಳಂ ತಂದು ಮುಂದಿರಿಪುದುಂ (ಜಗನ್ನಾ. ೬-೨). [ಸಂ.]

**ಬಿಲದುರ್ಗ** (ನಾ). (ಆಲಂ) ರಹಸ್ಯಸ್ಥಾನ ; ದುರ್ಗಮಪ್ರದೇಶ : ಯಕ್ಷಿಣಿಯರಂ ಬಯಸಿ ಮಾಡುವ ಜಪಂಗಳಿಂ ಬಿಲದುರ್ಗಮಂ ಪೊಕ್ಕು ಪಡೆವ ಶಾಪಂಗಳಿಂ (ಕಾದಂಬ. ೨೬೦). [ಸಂ.]

**ಬಿಲದ್ವಾರ** (ನಾ). ೧. ಗುಹೆಯ ಬಾಗಿಲು ; ಗುಹಾಮುಖ: ಬಿಲಕ್ಕೆ—ಬಿಲದ್ವಾರ, ಬಿಲಸರ್ಗ (ಬಿಲಸಗ್ಗ), ಪೆರ್ಬಿಲ (ಶಮದ. ೨೧೮ ಪ್ರಯೋ); ಕಾಯುತಿಹನಣ್ಣನಾಣತಿಯಂತೆ ಸುಗ್ರೀವನಾ ಬಿಲದ್ವಾರಮಂ (ಶ್ರೀರಾಮಾ. ೨೬೮-೪೮). ೨. ಹೊರಕಿಂಡಿ : ಪದಿನಾಱು ದಿಡ್ಡಿ ಬತ್ತೀಸ ಬಿಲದ್ವಾರ ವಿಧುಮಿತ್ರುದುಪಲದಿಂ ಬಿಗಿದ ರುಧಿರಾಪುರದಾಳುವೇರಿಯ ಸೌಭಾಗ್ಯದುದಯವನೇನ ಬಣ್ಣಿಸುವೆ (ಮೋಹತ. ೨೦-೦೪). [ಸಂ.]

**ಬಿಲಮಾರ್ಗ** (ನಾ). ಕಂದರದ ದಾರಿ ; ಕೊಳ್ಳದ ಹಾದಿ,—ಮಾರ್ಗ : ಬಲವೈರಿಸುತನ ನಂದನನಾ ಫಣಿಲೋಕಕೆ ತಳತಂತ್ರುಸಹಿತೈದಿ ಬಂದ ಬಿಲಮಾರ್ಗವೆಂದೆನಲಾ ಪುರದಗಳು ಕಣ್ಗೊಳಿಸಿದುದು (ಕಂಸವ. ೨-೬೦). [ಸಂ.]

**ಬಿಲವರ** 'ಬಿಲ್ವರ₂' ನೋ.

**ಬಿಲವರಗ** (ನಾ). ಒಂದು ಬಗೆಯ ಸೊಪ್ಪು : ಸೊಪ್ಪುಗಳು . . . ದೊಡ್ಡಬಸಲಿ, ಬಿಲವರಗ, ಬಿಳಿಸಾಸವೆ, ಕಾರೆ (ಸಪ್ಯಾಖು. ೨೩೬). [?]

**ಬಿಲವಾರ** 'ಬಿಲ್ವರ₁' ನೋ.

**ಬಿಲಸಗ್ಗ**, ಬಿಲಸರ್ಗ (ನಾ). ೧. ನರಕ. ೨. ದೊಡ್ಡ ಬಿಲ ; ಗವಿ : ಬಿಲಸಗ್ಗಂ ಸವಿ ಸಂದಿ ಡೋಣಿ ಪರಿಚಾರೇರುಂ ಪುಗಿಲ್ವಟ್ಟೆ . . . ರಯ್ಯಮಾ ಬೆಟ್ಟದೊಳ್ (ಸೂಕ್ತಿಸು. ೩-೨). **ಬಿಲಸರ್ಗ: ೨.** ಬಿಲಕ್ಕೆ—ಬಿಲದ್ವಾರ, ಬಿಲಸರ್ಗ (ಬಿಲಸಗ್ಗ), ಪೆರ್ಬಿಲ (ಶಮದ. ೨೧೮ ಪ್ರಯೋ).
[< ಸಂ. ಬಿಲಸ್ವರ್ಗ]

**ಬಿಲಸರ್ಗ** 'ಬಿಲಸಗ್ಗ' ನೋ.

**ಬಿಲಹರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಈ ಸಮಸ್ತ ರಾಗಂಗಳೊಳಗೆ ರಾಮಕ್ರಿ . . . ಬಿ[ಲಾ.ಕಾಂ. ಮ]ಲಹರಿ ಧನ್ನಾಸಿ ಆರಭಿ ಎಂಬ ಮೂವತ್ತೆರಡುರಾಗಂಗಳೇ ಲೋಕಪ್ರಸಿದ್ಧವಾಗಿಹವು (ಏವೀಳ. ೦೮೯); ಬಿಲಹರಿ :— ೨೯ನೇ ಮೇಳಕರ್ತ, ಧೀರಶಂಕರಾಭರಣದಲ್ಲಿ ಜನ್ಯ (ಸಂಗೀತಂ. ೦೩೬). [ಸಂ.]

**ಬಿಲಾಕ** (ನಾ). ಒಂದು ಬಗೆಯ ಔಷಧೀಸಸ್ಯ: ರಕ್ತಗಂಧಕ, ಬಿಲಾಕ, ಚೆಂಗಣಗಿಲೆ, ಶ್ವೇತಗುಂಜ (ವಿಷ್ಣುಶಿ. ೯೨). [?]

**ಬಿಲಾರ** 'ಬಿಲ್ವರ₁' ನೋ.

**ಬಿಲಾವಲ್** (ನಾ). [ಸಂಗೀತ] ಒಂದು ರಾಗದ ಹೆಸರು : ತಿಲಂಗ್, ಬಿಲಾವಲ್ ಮುಲ್ತಾನಿ, ರಾಮಕಲಿರಾಗಗಳು ಕ್ಷಯರೋಗವನ್ನೂ . . . ಗುಣಪಡಿಸುವುವೆಂಬ ಭಾವನೆ ಉತ್ತರಭಾರತದಲ್ಲಿದೆ (ಭಾರತ. ೪೪೪).
[← ಹಿಂ. ಬಿಲಾವಲ್ ; ಮರಾ. ಬಿಲಾವಲ್, ಬಿಲಾವರ್]

**ಬಿಲಿ** 'ಬಿಲ್₁' ನೋ.

**ಬಿಲಿಗಿ** 'ಬಲಿಗೆ' ನೋ.

**ಬಿಲಿತರ್** (ಕ್ರಿ). ಕೊಂಡು ತರು ; ಖರೀದಿಸು : ಇಂದು ದೇವತೆಗೆಂದು ನೀ ಬಿಲಿತಂದ ಕುಱಿಯುಂ ತಾರದಡೆ ನಾವಿಂದೊಸಗೆಯುಂ ಮಾಡಲಮ್ಮೆವು (ಬಸವು. ೨೮-೨೪). [ಬಿಲಿ (< ಬಿಲ್₁) + ತರ್]

**ಬಿಲು** 'ಬಿಲ್₂' ನೋ.

**ಬಿಲುಕುಡಿ** 'ಬಿಲ್ಕಡೆ' ನೋ.

**ಬಿಲುಕೊಡೆ** 'ಬಿಲ್ಕಡೆ' ನೋ.

**ಬಿಲುಗಡೆ** 'ಬಿಲ್ಕಡೆ' ನೋ.

**ಬಿಲುಗಾರ** 'ಬಿಲ್ಗಾಱ' ನೋ.

**ಬಿಲುಗಾಱ** 'ಬಿಲ್ಗಾಱ' ನೋ.

**ಬಿಲುಗಾಱತನ** 'ಬಿಲ್ಗಾಱತನ' ನೋ.

**ಬಿಲುಗೊಳು** 'ಬಿಲ್ಗೊಳ್' ನೋ.

**ಬಿಲುಜಾಣ** 'ಬಿಲ್ಜಾಣ' ನೋ.

**ಬಿಲುಜಾಣತನ** (ನಾ). ಧನುರ್ವಿದ್ಯೆಯಲ್ಲಿ ಹೊಂದಿರುವ ಪ್ರೌಢಿಮೆ : ಆವ ಬಿಲು ಬಿಲುಜಾಣತನದ ಮಹಾವಿಚಿತ್ರಪ್ರೌಢಿಯೋ (ತೊರರಾ. ೦-೦೦-೦೩). [ಬಿಲು (< ಬಿಲ್₂) + ಜಾಣತನ (< ಜಾಣ್ಮನ)]

**ಬಿಲುಜಾಣಿಕೆ** 'ಬಿಲ್ಜಾಣಿಕೆ' ನೋ.

**ಬಿಲುಜೇವಡೆ** (ನಾ). ಬಿಲ್ಲಿನ ಹೆದೆಯ ದನಿ ; ಧನುಷ್ಟಂಕಾರ : ಭುಜದ ಹೊಯ್ಲಿನ ಹರಿಗೆಗಳ ಗಜಬಜದ ಬಿಲುಜೇವಡೆಯ ರವದಕ್ಕಜದ ಕಾಲಾಳೊದಗಿತು (ಕುಮಾ.ಕ. ೨-೪); ರಣದೊಳಗೆ ಬಿಲುಜೇವಡೆಯ ಬಲುಹಿಲ್ಲ (ತೊರರಾ. ೬-೦೯-೪೩). [ಬಿಲು (< ಬಿಲ್₂) + ಜೇವಡೆ₂(< ಜೇವೊಡ್ಡೆ)]

**ಬಿಲುಟಂಕಾರ** (ನಾ). = ಬಿಲುಜೇವಡೆ : ಹರಿಯ ಬೊಬ್ಬೆ ರಥಾಶ್ವದಬ್ಬರ ನರನ ಬಿಲುಟಂಕಾರ . . . ಅರಿಬಲವ ತಿವಿದುದು (ಕುಮಾವ್ಯಾ. ೦೯-೨೮).
[ಬಿಲು (< ಬಿಲ್₂) + ಟಂಕಾರ]

**ಬಿಲುದನಿ** 'ಬಿಲ್ದನಿ' ನೋ.

**ಬಿಲುದಿರು** 'ಬಿಲ್ದಿರುವು' ನೋ.

**ಬಿಲುದಿರುವು** 'ಬಿಲ್ದಿರುವು' ನೋ.

**ಬಿಲುದುಡುಕು** (ಕ್ರಿ). ಬಿಲ್ಲನ್ನು ಥಟ್ಟನೆ ಹಿಡಿ : ಶರಸಂಧಾನಕ್ಕೆ ಸಿದ್ಧವಾಗು : ಸೈಂಧವ ಬಿಲುದುಡುಕೆ ಮೋಹರಿಸಿದರು ಭೂರಿಶ್ರವಾದಿಗಳು (ಕುಮಾವ್ಯಾ. ೯-೦೯); ಸರಳ ಸೂತ್ರದಲಹಿತವೀರರ ಶಿರವ ಸೂತ್ರಿಸಿ ಕಾಲಕಂಠನ ಕೊರಳಲಿಕ್ಕುವೆನೆನುತ ಬಿಲುದುಡುಕಿದನು ಸೌಮಿತ್ರಿ (ತೊರಾ. ೩-೩-೦೨). [ಬಿಲು (< ಬಿಲ್$_2$) + ತುಡುಕು$_1$ (< ತೊಡಂಕು$_1$)]

**ಬಿಲುದುದಿ** (ನಾ). ಬಿಲ್ಲಿನ ತುದಿ, – ಕೊಪ್ಪು : ಕದಳಿ ಕಡವಮ್ಮಾವುಗಳ ಬಿಲುದುದಿಯಲಿಱಿದನು (ತೊರಾ. ೩-೮-೩೦). [ಬಿಲು (< ಬಿಲ್$_2$) + ತುದಿ]

**ಬಿಲುದೆಗಹು** (ನಾ). ಶರಸಂಧಾನದಲ್ಲಿ ಬಿಲ್ಲ ತಿರುವನ್ನು ಹಿಂದಕ್ಕೆ ಎಳೆಯುವಿಕೆ : ಬಿಲುದೆಗಹಿನಾಕರ್ಣಪೂರದ ಹಿಳುಕಿನನಿಲಜನಿರಲು ಸಿಂಹದ ಹೊಲನ ಹೊಗುವಿಭದಂತೆ ಹೊಱಕಾಲ್ಗೊಳುತಲಿರೆ ಕಂಡು . . . ತೆಗೆದೆಚ್ಚನಾ ಭೀಮ (ಕುಮಾವ್ಯಾ. ೦೨-೩೦). [ಬಿಲು (< ಬಿಲ್$_2$) + ತೆಗಹು]

**ಬಿಲುದೆಗೆ** (ಕ್ರಿ). = ಬಿಲುದುಡುಕು : ದಾನವ ಕಾಳೆಗಕ್ಕನುವಾಗಿ ನಿಂದನು ಬಗಿದ ಬಿಲುದೆಗೆದು (ಕುಮಾವ್ಯಾ. ೦೩-೯೬). [ಬಿಲು (< ಬಿಲ್$_2$) + ತೆಗೆ$_1$]

**ಬಿಲುಮುರಿ** (ನಾ). (ಕರಾ) ವಿಷವಿಲ್ಲದ ಒಂದು ಬಗೆಯ ಚಿಕ್ಕ ಹಾವು. [?]

**ಬಿಲುರವ** (ನಾ). ಬಿಲ್ಲಿನ ಹೆದೆಯ ಶಬ್ದ ; ಜ್ಯಾರವ : ಬಿಲುರವದ ವೊಳಗಿನಲಿ ಕೃಷ್ಣನ ಫಲುಗುಣನ ಮೈಕಾಂತಿ ಮೇಘಾವಳಿಗಳಲಿ . . . ನಿಲುವ ಹಂಸವ್ಯೂಹವೆಲ್ಲಿಯದು (ಕುಮಾವ್ಯಾ. ೦೦-೩೦). [ಬಿಲು (<ಬಿಲ್$_2$) + ರವ$_1$]

**ಬಿಲುವಡಿಕೆ** (ನಾ). ಒಂದು ಬಗೆಯ ತೆರಿಗೆ : ನಾಡೊಳಗೆ ಬಿಲುವಡಿಕೆಯೇನು ಬಂದೊಡಂ ಕೋಗಿಲೂರ ಹಳಿಉಳೂರ ಹದಿಕೆಯ ಬಲ್ಲೇಶ್ವರ ದೇವರ ಧೂಪದೀಪಕೆ . . . ನಡಸಿ ಕೊಡುವರು (ಎಕ. VII, ಶಕ್ಕಾಗಿ. ೨೦-೩೬ ; 1262); ಹಂನಿಬ್ಬರು ಮಹಾಜನಂಗಳಿಗ್ಗು ತಮ್ಮ ಬಿಲುವಡಿಕೆ ಮುಖ್ಯವಾಗಿ ಕಬ್ಬಿಲವಡಿಕೆ ಆವುದು ಬಂದಡಂ ಸರ್ವ್ವನಮಸ್ಯವಾಗಿ ಧಾರಾಪೂರ್ವಕಂ ಮಾಡಿಕೊಟ್ಟು ಬಿಟ್ಟ ಧರ್ಮ (ಸೌಇಇ IX –i ; ೩೫೦-೦೦; 1282). 'ಕಬ್ಬಿಲವಡಿಕೆ' ಹೋ. [?]

**ಬಿಲುವರ** 'ಬಿಲ್ವರ್$_1$' ನೋ.

**ಬಿಲುವರೆ** 'ಬಿಲ್ವರ್$_1$' ನೋ.

**ಬಿಲುವಿಡಿ** 'ಬಿಲ್ವಿಡಿ' ನೋ.

**ಬಿಲುವಿದ್ದೆ** 'ಬಿಲ್ವಿದ್ದೆ' ನೋ.

**ಬಿಲುವಿದ್ಯ** (ನಾ). = ಬಿಲ್ವಿದ್ದೆ : ಹರನು ಬಿಲುವಿದ್ಯವನು ಕೊಡು ತಪೆ ಪರಶುರಾಮುಂಗೆಂದನಧಮರಿಗೊರೆಯದಿರು ಸತ್ಪಾತ್ರಕಿದನಾದರಿಸಿ ಕಲಿಸೆಂದ (ಕುಮಾಳ. ೯-೨). [ಬಿಲು (< ಬಿಲ್$_2$) + ವಿದ್ಯ]

**ಬಿಲುವಿದ್ಯೆ** 'ಬಿಲ್ಲುವಿದ್ಯೆ' ನೋ.

**ಬಿಲುವೊಯ್** 'ಬಿಲ್ವೊಯ್' ನೋ.

**ಬಿಲೇಶ** (ನಾ). ಬಿಲದ ಒಡೆಯ ; ಹಾವು : 'ಬಿಲೇಶಭೂಷಣ' ಪರಾ. [ಸಂ.]

**ಬಿಲೇಶಭೂಷಣ** (ನಾ). ಹಾವನ್ನು ಆಭರಣವನ್ನಾಗಿ ಉಳ್ಳವನು ; ಸರ್ಪಭೂಷಣ ; ಶಿವ : ಈಶ ಸೂರಿಯಕೋಟಿತೇಜಃಪುಂಜ ಬಿಲೇಶಭೂಷಣ ದೋಷನಾಶ . . . ಶರಣು (ಪ್ರೋಚಕ. ೨೦-೩೯). [ಸಂ.]

**ಬಿಲೇಶಯ** (ನಾ). ೧. ಬಿಲದಲ್ಲಿ ವಾಸಿಸುವ ಪ್ರಾಣಿ ; ಹಾವು : ವಾಸುಗಿಯ ತಕ್ಷಕನನಂತನ ಪ್ರೈಸಿಗಳಡುಗಿದವು ಬಣಗು ಬಿಲೇಶಯಂಗಳ ಕಾಣೆನದಿರಿನಲುರಗಮರ್ದನನ (ತೊರಾ. ೬-೦೩-೩೦) ; ಗಲಾನ್ವಿತ ಹಲಾಹಲ ಬಿಲೇಶಯಕಳೇವರವಿಳಾಸ (ರಾಶೇ. ೦೦-೦೦೦). ೨. ಇಲಿ. ೩. ಮೊಲ. [ಸಂ.]

**ಬಿಲೋರು** (ನಾ). ಒಂದು ಬಗೆಯ ಖನಿಜಶಿಲೆ ; ಸ್ಫಟಿಕ : ಪರದೆಯ ಹೊರಮೈಯಲ್ಲಿ ಬಿಲೋರಿನ ಝುಮುಕುಗಳೊಳಗೆ ದೀಪಗಳು ರಾತ್ರಿಯಲ್ಲಿ ಬೆಳತನಕ ಉರಿಯುತ್ತಿರುತ್ತವೆ (ಮುಂಜಯು. ೬-೨೬). 'ಬಿಲ್ವರ್$_2$' ಪರಾ. [← ಅರ. ಬಿಲ್ಲಾರ್; ಮರಾ. ಬಿಲೋರ್, ಬಿಲ್ಲೋರ್]

**ಬಿಲ್ಕಡೆ, ಬಿಲುಕುಡಿ, ಬಿಲುಕೊಡೆ, ಬಿಲುಗಡೆ, ಬಿಲ್ಕೊಡೆ** (ನಾ). ಒಂದು ಬಗೆಯ ತೆರಿಗೆ : ಬೆಸದೆ ಬಿಲ್ಕಡೆಯ ಸುಂಕಾಧಿಪತಿಯೆನಿಸಿದ (ಬೊಂಕಶಾ. ೦೯೩೩, ಶಾಪೇಂ. ೬೨-೨೪; 975); ತಮ್ಮ ನಡೆವ ಬಿಲ್ಕಡೆ ಯೆರಡಱೊಳಮೆರಡುಲಕಮಡಕೆಯ ಸುಂಕಮಂ ಕೆಱೆಯ ಕಲುಕಟ್ಟಂಗೆ ಬಿಟ್ಟ (ಕಾ. II, ೯-೩೦; 1072). **ಬಿಲುಕುಡಿ** : ತಪ್ಪು ತವುಡಿ ದಣ್ಣವಣ್ಣಗೆ ಹಾದರ ಹಸುಕರು ಸಂತಿಯಲು ಅಲ್ಲಾ ಕೂಡಿ ಬಿಲುಕುಡಿ (ಎಕ. IX, ಶಂಗಳೂ. ೬೦-೨೨; 1332). **ಬಿಲುಕೊಡೆ** : ವಂಶಂಪ್ರತಿ ನಿಬಂಧವಾಗಿ ಸಲುವ ಗದ್ಯಾಣವೆರಡು ಯಾ ಬಿಲುಕೊಡೆಯಧಿಕಾರಿ ಬೊಪ್ಪಯ ದಂಣಾಯಕರ ಹೆಗಡೆ . . . ಕೊಟ್ಟ ಗದ್ಯಾಣವೆರಡು (ಸೌಇಇ. IX – i, ೩೪೦-೦೦; 1226). **ಬಿಲುಗಡೆ** : ಅಂತು ಗ ೩೦ ॥ ೪ ॥ ಬಿಲುಗಡೆ ಪಾಲುಬೀಜ (ಎಕ. VIII, ತೀರ್ಥಹ. ೯೯-೦೯; 1681). **ಬಿಲ್ಕೊಡೆ** : ತಿಳಿವಳ್ಳಿಯ ಟ್ಠಾಣೆಯದ ಬಿಲ್ಕೊಡೆಯ ಅಧಿಷ್ಠಾಯಕಂ ರವಿದುಪಯ್ಯನುಂ (ಸೌಇಇ. XX, ೩೯-೦೩; 1053) ; ವಡ್ಡರಾವುಳಮುಮೆರಡುಂ ಬಿಲ್ಕೊಡೆಯುಂ ಸರ್ವ್ವನಮಸ್ಯಮೆಂದು ಬಿಟ್ಟರ್ (ಎಕ. VII, ಶಿಕಾಂ. ೯೯-೩೦; 1103); ಬಿಲ್ಕೊಡೆ–ಇದು ಎರಡು ತೆರಿಗೆಗಳನ್ನು ಅಥವಾ ಸುಂಕಗಳನ್ನು ಸೂಚಿಸುತ್ತದೆ (ಕಶಾ. ೯೦೦). [?]

**ಬಿಲ್ಕಾಱ** 'ಬಿಲ್ಗಾಱ' ನೋ.

**ಬಿಲ್ಕುನಿಕ** (ನಾ). ಒಂದು ಬಗೆಯ ಸಸ್ಯ : ಕಲ್‌ನಂದಿ, ಜಗಳಗಂಟಿ, ಬಿಲ್ಕುನಿಕ (ಪ್ರಕಿಂ. ೩೦-೬೦೨). [?]

**ಬಿಲ್ಕೊಡೆ** 'ಬಿಲ್ಕಡೆ' ನೋ.

**ಬಿಲ್ಗಂಟೆ** (ನಾ). ಬಿಲ್ಲಿಗೆ ಕಟ್ಟಿರುವ ಗಂಟೆ : ಕುಂಭಾಂಡ ಬಿರುದಿನ ಬಿಲ್ಗಂಟೆ ಧ್ವನಿರೆನೆ ಕೊಂಡ ಕಾರ್ಮುಕವ (ಮೋಚಕ. ೩೯-೨೯). [ಬಿಲ್$_2$ + ಗಂಟೆ$_2$]

**ಬಿಲ್ಗಲ್** (ಕ್ರಿ). ಧನುರ್ವಿದ್ಯೆಯನ್ನು ಕಲಿತುಕೊಳ್ಳು, – ಅಭ್ಯಾಸ ಮಾಡು : ಅಂತು ಬಂದು ವೈರಿಗಜಘಟಾವಿಘಟನನೊಳ್ ವಿಘಟಿಸಿ ಬಿಲ್ಗಲ್ತು (ಶಂಕಶಾ. ೨-೫೬ ವ). [ಬಿಲ್$_2$ + ಕಲ್$_1$]

**ಬಿಲ್ಗಲ್ಪಿ** (ನಾ). ಧನುರ್ವಿದ್ಯೆ ; ಬಿಲ್ವಿದ್ಯೆ : ಪೊಱಮುಯ್ಯಂ ತಾಗೆ ತಿಣ್ಣಂ ತೆಗೆನೆಱದಿಸೆ ಬಿಲ್ಗಲ್ಪಿ ತನ್ನೇಱನೊಳ್ ಕಣ್ದೆಱದತ್ತೆಂಬಂತುಂ . . . ಖಚರಪತಿ ಭರಂಗೆಯ್ದು ಕೆಯ್ವೋಗದೆಚ್ಚಂ (ಶಾಂತಿಪು. ೯-೯೨). [ಬಿಲ್$_2$ + ಕಲ್ಪಿ]

**ಬಿಲ್ಗಾರ** 'ಬಿಲ್ಗಾಱ' ನೋ.

**ಬಿಲ್ಗಾರತನ** 'ಬಿಲ್ಗಾಱತನ' ನೋ.

**ಬಿಲ್ಗಾರಿಕೆ** 'ಬಿಲ್ಗಾಱಿಕೆ' ನೋ.

**ಬಿಲ್ಗಾಳೆಗ** (ನಾ). ಬಿಲ್ಲು ಬಾಣಗಳಿಂದ ಮಾಡುವ ಯುದ್ಧ : ಎರಡುಂ ಪಡೆಯ ನಾಯಕರ್ ಬಿಲ್ಗಾಳೆಗಮಾದುವಾಗಳ್ (ಶಂಕಶಾ. ೦೦-೬೦ ವ) ; ಆಂ ಬಿಲ್ಗಾಳೆಗಮೆಂದೇ ಬಗೆದೆಂ ಬಾಯ್ಗಾಳೆಗಮನೀಗಳಱದೆಂ (ಶಾಂತಿಪು. ೯-೩೦ ವ). [ಬಿಲ್$_2$ + ಕಾಳೆಗ]

**ಬಿಲ್ಗಾಱ, ಬಿಲುಗಾರ, ಬಿಲುಗಾಱ, ಬಿಲ್ಕಾಱ, ಬಿಲ್ಗಾರ, ಬಿಲ್ಲುಗಾರ, ಬಿಲ್ಲುಗಾಱ** (ನಾ). ಧನುರ್ವಿದ್ಯೆಯಲ್ಲಿ ಪಾರಂಗತನಾದವನು : ಬಿಲ್ಗಾಱನಂತೆ ನಾರಿಗಾಸೆ ಮಾಡದೆ (ಧರ್ಮಾಮೃ. ೩-೯೯) ; ಬಿಲ್ಗಾಱನ

ಕೈಯಂತೆ ಮಿಸುಪ ಸರದಿಪ್ಪಳವಟ್ಟುಂ ಪಾಲಿಗಾಱನೆನಿಸಂ (ಕಬ್ಬಿಗಕೈ. ೬೧) : ಅರಿದೆನೆ ತೋಱಿದ ಕೈಚಳಕವನಿನ್ನು ಕುಱುಹಿನ ಬಿಲ್ಗಾಱನೆನಿಸಿ (ಪ್ರೋಢರಾ. ೧೯-೩೯). **ಬಿಲುಗಾರ :** ಒಳ್ಳಿಯ ಬಿಲುಗಾರರಗಿಲ್ಲವೊ ಬಡಿವಾರ (ಇಂಚಾಶ. ೯೭-೨೦). **ಬಿಲುಗಾಱ :** ವೀರನಹೆಯೋ ಪಾರ್ಥ ನಿನ್ನವೊಲಾರು ಬಿಲುಗಾಱರು (ಕುಮ್ಮಾದ್ರೋ. ೧೪-೦೫) ; ಸಲುವುದು ಬಲರಾಮ ಕೈಚಳಕದಲಿ ನೀ ಬಿಲುಗಾಱರೊಳಗೆ ತಪ್ಪಲ್ಲ (ಮೋಹತ. ೪೦-೩೭). **ಬಿಲ್ಕಾಱ :** ದಿಃಹು ಕಾಱಂ, ಬಿಲ್ಕಾಱಂ, ಮೊನೆಕಾಱಂ (ಭಾಷಾಭೂ. ೧೭೦ ಉದಾ). **ಬಿಲ್ಗಾರ :** ನಡೆದನಗೊ ಬಿಲ್ಗಾರ (ಶಾರೂರ. ೬೨-೧೬೦) ; ಈ ನಾಲ್ವರು ನಾಯಕರುಗಳನ್ನು ಕೊಂದದ್ದು ಒಬ್ಬನೇ ಚತುರನಾದ ಬಿಲ್ಗಾರ (ಶಾಂತಲಾ. ೨೨೦). **ಬಿಲ್ಲುಗಾರ :** ಒಬ್ಬೊಬ್ಬ ಬಿಲ್ಲುಗಾರನಿಗೆ ಏಳು ಏಳು ಮಂದಿ ಹರಿಗೆಯವರನ್ನೂ ಸವರಿಸಿ ವ್ಯೂಹಂಗಳನ್ನು ಒಡ್ಡುತ್ತಿದ್ದರು (ಕೃವಾಶೀ. ೨೩). **ಬಿಲ್ಲುಗಾಱ :** ಗಾಡಿವಡೆದತಿಬಿಲ್ಲುಗಾಱನೆ ಸುವ್ವಿ ಎಂದವರು ಪಾಡಿದರು (ಕಂಜಚ. ೨-೬೩); ಮನ ಬಂದ ಪರಿಯಲ್ಲಿ ಎಚ್ಚಾಡುವಾತ ಅರ್ತಿಕಾಱ ನಲ್ಲದೆ ಬಿಲ್ಲುಗಾಱನಲ್ಲವಯ್ಯ (ಶಿವಶ. ೯೨-೩೭). [ಬಿಲ್$_2$ + —ಕಾಱ]

**ಬಿಲ್ಗಾಱತನ,** ಬಿಲುಗಾಱತನ, ಬಿಲ್ಗಾರತನ (ನಾ). ಬಿಲ್ಲು ಬಾಣಗಳನ್ನು ಬಳಸುವ ಸಾಮರ್ಥ್ಯ ; ಧನುರ್ವಿದ್ಯೆಯ ಪ್ರೌಢಿಮೆ : ಅಗರೆ ಬಿಲ್ಗಾಱತನವೆಲ್ಲಿಗೆಯೆಂತುಟೋ (ಕೃಮಹಾ. ೨೨-೩೬). **ಬಿಲುಗಾಱತನ :** ಮನಗಲಿತನದಳವ ಬಿಲುಗಾಱತನದಳವ ಬಲಿಯಿರೇ ನಮ್ಮೊಡನೆ ಮೆಚ್ಚಿಸಿ ಬಳಿಕ ಹಡೆಯಿರೆ ಬಿರುದ (ಕುಮ್ಮಾಶೀ. ೯-೩೦). **ಬಿಲ್ಗಾರತನ :** ಬೇರಿವನ ಗುಣಾಕೃತಿಗಳ್ಬೇರಿದು ಪನ್ನತಿಕೆ ಚಾಗ ಬಿಲ್ಗಾರತನಂ (ಪರಶ. ೩೭-೩೭). [ಬಿಲ್ಗಾಱ + — ತನ]

**ಬಿಲ್ಗಾಱಿಕೆ,** ಬಿಲ್ಗಾರಿಕೆ, ಬಿಲ್ಲುಗಾರಿಕೆ (ನಾ). = ಬಿಲ್ಗಾಱತನ : ಅದಸನು ಪೊಸಬಿಲ್ಗಾಱಿಕೆಯುನು ಕಲ್ತು ಧರೆಯೊಳು ಜಸವಡೆದಿಹನು (ಚಂಕೃಸಾಂ. ೦೫-೫). **ಬಿಲ್ಗಾರಿಕೆ :** ಎನಿತೊ ಸೋಜಿಗದ ಬಿಲ್ಗಾರಿಕೆಯ ಕಯ್ಯಾಗಳ ಕಂಡಗೆ . . . ತಾನುಮಂತೆಸಗಬೇಕೆಂಬುವ ಸ್ಫೂರ್ತಿಯಾದರೆ ತಪ್ಪೊ (ಹಬ್ಬೆರ. ೦೭-೩೯). **ಬಿಲ್ಲುಗಾರಿಕೆ :** ಮನವೆನ್ನ ಕಡುಗುತ್ತಿದೆ ತಂದೆಯಾಗದ ಬಿಲ್ಲುಗಾರಿಕೆಯ ಕಲಿಯೆ ! (ಹಬ್ಬೆರ. ೨-೦೦) ; ಹೊಸದೊಂದು ಬಿಲ್ಲುಗಾರಿಕೆಯನ್ನು ತೋರಿದೆ (ಇಂಚಾಶ. ೦೫೦-೪೩). [ಬಿಲ್ಗಾಱ + — ಇಕೆ]

**ಬಿಲ್ಗೀಸು** (ಕ್ರಿ). ಬಿಲ್ಲನ್ನು ಕೆತ್ತು, — ಹೆರೆ : ಮಾರ್ಗಣವಂ ಗಱಿಗಟ್ಟು ತಿರ್ಪ ಬಿಲ್ಗೀಸುವ ಬಾಣವಂ ತಿರುಪಿ ತಿರ್ದುವ . . . ವನೇಚರರಿಂ ಬಗೆಗೊಂಡುದಾ ವನಂ (ಜಗಪ. ೦೬-೦೭). [ಬಿಲ್$_2$ + ಕೀಸು$_1$]

**ಬಿಲ್ಗೊನೆ** (ನಾ). ಬಿಲ್ಲಿನ ಕೊನೆ ; ಗೊಲೆ ; ಕೊಪ್ಪು : ಎನ್ನೆಡಗೈಯ ಗರ್ವಿಸುವ ಕರ್ಬಿನ ಬಿಲ್ಗೊನೆಯಲ್ಲಿ ಬಾರದಿರ್ಪನ್ನೆಗಂ . . . ಉಱು ತನ್ನ ಕಡುಸೊರ್ಕು ಬಱಿಕ್ಕದು ಪಾಱಿ ಪೋಗದೇ (ಕಬ್ಬಿಗಕೈ. ೦೯೦). [ಬಿಲ್$_2$ + ಕೊನೆ$_2$]

**ಬಿಲ್ಗೊಪ್ಪು** (ನಾ). = ಬಿಲ್ಗೊನೆ : ಅಂದೆನ್ನ ಸುತ ಭೀಮನಂ ಮುಳಿದು ಬಿಲ್ಗೊಪ್ಪಿನಿಂದಿಱಿದ ಕರ್ಣನಯ್ಯನನಿಂದು ಕಾವದೇಕೆಂದು (ಶಾಪಶಂ. ೯-೭). [ಬಿಲ್$_2$ + ಕೊಪ್ಪು$_1$]

**ಬಿಲ್ಗೊಲೆ** (ನಾ). = ಬಿಲ್ಗೊನೆ : ಪೂಷಾದಿತ್ಯ ದಂತಂಗಳಂ ಜವದಿಂ ಬಿಲ್ಗೊಲೆಯಿಂದುದಿರ್ಚಿ . . . ಅಮರನಿವಹಮಂ ಭಂಜಿಸಿದಂ (ವೃಷವಿ. ೩೭-೦೦೦). [ಬಿಲ್$_2$ + ಗೊಲೆ$_1$]

**ಬಿಲ್ಗೊಳ್,** ಬಿಲುಗೊಳು (ಕ್ರಿ). ಧನುಸ್ಸನ್ನು ಹಿಡಿ ; ಶರಸಂಧಾನಕ್ಕೆ ಸಿದ್ಧವಾಗು : ಅಂತು ವಿಕ್ರಮಾರ್ಜುನಂ ಬಿಲ್ಗೊಳಲುಂ ಭೀಮಸೇನಂ ಗದೆಗೊಳಲುಮಾಪುದರಿಂದು (ಪಂಪಭಾ. ೨-೯೦ ವ) ; ಎಕ್ಕಡಮಂ ಮೆಟ್ಟಿ ಬಿಲ್ಗೊಂಡು . . . ನಾಯಿಗಳ್ವೆರಸು ಸಿವಿಗೆಯನಿರಿಸಿ ನಡೆದು (ಧರ್ಮಾಮೃ. ೬-೬೩); ಬಾಣಪ್ರಯೋಗಂಗಳಿಂ ಪ್ರವೀರಂ ಕೊಲ್ವುದಂ ಕಂಡು ಬಿಲ್ಗೊಂಡು ಕೋಪದಿಂದೆ . . . ಕಣೆಗರೆಯುತೆ (ಕೃಮಹಾ. ೯-೨೯). **ಬಿಲುಗೊಳು :** ಬಿಲುಗೊಂಡುರವಣಿಸಿ ತಡೆದನು ವಿರಾಟನು ಕಳಶ ಸಂಭವನ (ಕುಮ್ಮಾದ್ರೋ. ೦೭-೩೯) ; ಕಂಡು ನನ್ನನು ಮನಸಿಜನು ಬಿಲುಗೊಂಡು ಬಿಡದೆಸುತಿರ್ದನೆನ್ನನು (ಸಭಾಗ. ೩-೪-೪). [ಬಿಲ್$_2$ + ಕೊಳ್$_1$]

**ಬಿಲ್ಜಾಣ,** ಬಿಲುಜಾಣ (ನಾ). ಧನುರ್ವಿದ್ಯೆಯಲ್ಲಿ ನಿಪುಣನಾದವನು : ಎಳವೆಯೊಳ್ ಪರಸುತ್ತೆ ತಂದೆ ಬಿಲ್ಜಾಣನಾದೆ, ಗೆಲ್ (ಅಕ್ಷಶಾ. ೩೦-೭೦೦): ಬಿಲ್ಜಾಣನಾಗು, ಜಸವಡೆಯ ಜಗದಲಿ ಕಂದ ! (ಹಬ್ಬೆರ. ೦೩-೬೨). **ಬಿಲುಜಾಣ :** ಕಾಣಿಸಿತು ಕರ್ಬುರರ ಕದನದ ಶೋಣಿತಾಂಬುಧಿಯಗಲದಲಿ ಬಿಲುಜಾಣರೊಳಗಿನ್ನಾವ ವೀರನೊ ನಿಮ್ಮ ಪಿತನೆಂದ (ತೊರರಾ. ೩-೬-೦೨). [ಬಿಲ್$_2$ + ಜಾಣ]

**ಬಿಲ್ಜಾಣಿಕೆ,** ಬಿಲಂಜಾಣಿಕೆ (ನಾ). = ಬಿಲುಜಾಣತನ : ದ್ರೋಣಂಗಂ ನಿನಗಂ ಬಿಲ್ಜಾಣಿಕೆಯದು ಸಕ್ಕಸಮನೆ (ಶಮರ. ೦೨೨ ಪ್ರಯೋ); ಮುಪ್ಪುರಕೆ ಸಾಣೆಯಲಗಿನ ಸರಳ ಸುರಿದುವಿನ್ನೆಂತೊ ಬಿಲ್ಜಾಣಿಕೆ ಕುಮಾರ ಕಂಠೀರವನ ಜಗಜಟ್ಟಿ ಭಾಪೆಂದು ಸುರರುಲಿದರು (ಜೆಮಿ. ೪೩-೨೦) ; ಮೆರೆಸುವೆ ಸೊಗದಿ ಬಗೆಬಗೆಯಾ ಬಿಲ್ಜಾಣಿಕೆಯಾ ! (ಹಬ್ಬೆರ. ೦೭-೪೬). **ಬಿಲುಜಾಣಿಕೆ :** ಬೋಳೆಯತನವೊ ಬಿಲುಜಾಣಿಕೆಯ ಬಿಂಕವೊ ನಿನಗೆ (ಕುಮ್ಮಾಆ. ೨೦-೩೩). [ಬಿಲ್$_2$ + ಜಾಣಿಕೆ]

**ಬಿಲ್ದನಿ,** ಬಿಲುದನಿ (ನಾ). ಧನುಸ್ಸಿನ ಹೆದೆಯ ನಾದ ; ಜ್ಯಾರವ : ಬಱಿಯ ಬಿಲ್ದನಿಗೆ ರವಣನ ತಾಗಿತಂಬೆಂದು ನೆಱೆ ಮೋಹದಿಂ ಪೊರಳ್ದುವು ಕೆಲವು (ಕೃಮಹಾ. ೨೫-೫೦). **ಬಿಲುದನಿ :** ಇವರ ಬಿಲುದನಿ ತುರಗ ಹೇಷಾರವದ ಘಲ್ಲಣೆ . . . ದಿವಿಜನಿಕರದ ಸಾಧುವಾದದಿ ಭುವನ ಶಬ್ದಬ್ರಹ್ಮಮಯವಾಯ್ತೊಂದು ನಿಮಿಷದಲಿ (ಕುಮ್ಮಾಕ. ೨೩-೯). [ಬಿಲ್$_2$+ದನಿ$_1$]

**ಬಿಲ್ದಿರುವು,** ಬಿಲುದಿರು, ಬಿಲುದಿರುವು (ನಾ). ಧನುಸ್ಸಿನ ಹಗ್ಗ ; ಹೆದೆ : "ಬಿಲ್ದಿರುವಿನೊಳು . . . ಗುಣಮೆನಿಕ್ಕುಂ" (ಪಂಗರಾ. ೦೪೭-೩೭) ; ಬಿಲ್ದಿರುವಿನಬ್ಬರದ ಕೋಳಾಹಳಕೆ ಧರೆ ಬಿರಿಯೆ ನಡೆತಂದನು (ಕೃಮಹಾ. ೪-೨೭) ; ಕಣೆಗಳಿಂ ಪಂಜರಂಗಳಂ ಬಿಲ್ದಿರುವುಗಳಿಂ ಬಿಗಿನೇಣ್ಗಳಂ . . . ಅಳವಡಿಸಿ (ಜಕವಂ. ೫೪-೦೭). **ಬಿಲುದಿರು :** ನರನೆ ಹೊಕ್ಕವನಾದಡಯ್ಯನ ಹರಿಬವೆನ್ನದೆನುತ್ತ ಬಿಲುದಿರು ಮೊರೆಯೆ ಮೋಹರಗಡಲ ಕವಿಸಿದನಂದು ಗುರುಸೂನು (ಕುಮ್ಮಾಶೀ. ೬-೩೯). **ಬಿಲುದಿರುವು :** ಧರ್ಮಜ ಬಿಲುದಿರುವ ನೇವರಿಸಿ ನಿಂದನು ಸಮರಕನುವಾಗಿ (ಕುಮ್ಮಾಕ. ೪-೩೬). [ಬಿಲ್$_2$ + ತಿರುವು$_3$]

**ಬಿಲ್ಪತ್ರೆ** 'ಬೆಲ್ಲವತ್ತ' ನೋ.

**ಬಿಲ್ಬಲ್ಮೆ** 'ಬಿಲ್ವಲ್ಮೆ' ನೋ.

**ಬಿಲ್ಬಿಜ್ಜೆ** (ನಾ). ಧನುರ್ವಿದ್ಯೆ ; ಬಿಲ್ಲುವಿದ್ಯೆ : ನೆಲದ ಸಿರಿ, ಬಿಲ್ಬಿಜ್ಜೆ, ಮೈಬಲ್ಮೆ, ರಣಕೀರ್ತಿ, ಮೇಣ್ ಅರಸಕುವರಿಯತನಂ ತೃಣವಾಗಿ ಖುಣವಾಗಿ ಕಾಣಿಸಿದುವು (ಅಶ್ವತ್ಥಾಂಗ. ೨೪-೬೯೦). [ಬಿಲ್$_2$ + ಬಿಜ್ಜೆ]

**ಬಿಲ್ಬಿನ್ನಣ** (ನಾ). ಧನುರ್ವಿದ್ಯೆಯಲ್ಲಿ ಹೊಂದಿರುವ ಪ್ರೌಢಿಮೆ.— ಪ್ರಾವೀಣ್ಯ : ಕಲ್ತ ಬಿಲ್ಬಿನ್ನಣಕ್ಕಿಂತಿದೆ ಯುಕ್ತಂ ಭೀಷ್ಮನಾಮಕ್ಕಿದು ಸಮುಚಿತಂ (ಗದಾಯು. ೨-೩೦) ; ಅಂತೆಚ್ಚ ಪುಳಿಂದ ಪುರಾಂತಕನ ಬಿಲ್ಬಿನ್ನಣಕ್ಕೆ ಬೆಱಗುವಟ್ಟು (ಕಬಕಂ. ೪-೫೨ ವ); ಬಿಲ್ಬಿನ್ನಣದ ಬಳವಿಗಕ ಮೂಲವೆಂದೆನಾವಡೆ ಕೇಳ ! (ಹಬ್ಬೆರ. ೦೫-೫). [ಬಿಲ್$_2$ + ಬಿನ್ನಣ (< ಬಿನ್ನಾಣ) ]

**ಬಿಲ್ಲ$_1$** (ನಾ). ಮಾರಾಟದ ವಸ್ತುಗಳನ್ನು ಖರೀದಿ ಮಾಡುವವನು,— ಕೊಂಡುಕೊಳ್ಳುವವನು : "ಬಿಲ್ಲನೆನಲ್ಕೆ ಕೊಂಡವನೊಳುಂ" (ಕಶಾಶಿವಿ. ೨೭). [ಬಿಲ್$_1$ + — ಅ$_7$]

ಕರ್ನಾಟಕ ಸರ್ಕಾರದ ಉದಾರ ಧನಸಹಾಯದಿಂದ ಕನ್ನಡಿಗರ ಬಹುದಿನಗಳ ಬೇಡಿಕೆಯಾಗಿದ್ದ ಕನ್ನಡ ನಿಘಂಟಿನ ಎಂಟು ಸಂಪುಟಗಳು ಈಗ ಪುನರ್ಮುದ್ರಣಗೊಂಡು ನಿಮ್ಮ ಕೈಸೇರುತ್ತಿವೆ.

ಸಮಸ್ತ ಕನ್ನಡಿಗರಿಗೆ ಈ ಸಂಪುಟಗಳನ್ನು ಒಪ್ಪಿಸಲು ನೆರವು ನೀಡಿದ ಕರ್ನಾಟಕ ಸರ್ಕಾರವನ್ನು ನಾನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಡಾ. ನಲ್ಲೂರು ಪ್ರಸಾದ್ ಆರ್. ಕೆ.
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು

ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ಏಳನೆಯ ಸಂಪುಟ

ಬಿಲ್ಲ$_2$ – ಲೌಹಿತ್ಯ

"ಶಬ್ದಪಾರಮಾರ್ಗಮಶಕ್ಯಂ"
–ಕೇಶಿರಾಜ

ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : ಬೆಂಗಳೂರು – ೧೮
೧೯೯೩.

ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ಏಳನೆಯ ಸಂಪುಟ

"ಶಬ್ದಪಾರಮಾರ್ಗಮಶಕ್ಯಂ"
–ಕೇಶಿರಾಜ


ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : : ಬೆಂಗಳೂರು–೧೮

೧೯೯೩

KANNADA NIGHANTU - VOL-VII
Second Edition : 2010
Published by : Kannada Sahitya Parishat
Pampa Mahakavi Road, Chamarajapet, Bangalore - 560 018
Pages : X+6481 to 7747 Price : Rs. 350=00

ಮೊದಲನೆಯ ಮುದ್ರಣ – ೧೯೯೩
ಎರಡನೆಯ ಮುದ್ರಣ – ೨೦೧೦
ಪ್ರತಿಗಳು : ೨೦೦೦
ಬೆಲೆ : ಮುನ್ನೂರು ಐವತ್ತು ರೂಪಾಯಿಗಳು





ಮುದ್ರಣ: **ರಾಜಾ ಪ್ರಿಂಟರ್ಸ್**
ನಂ.೫೯, ೪ನೆ ಕ್ರಾಸ್, ಲಾಲ್‌ಬಾಗ್ ರಸ್ತೆ
ಕೆ.ಎಸ್. ಗಾರ್ಡನ್, ಗಂಗಾಧರಪ್ಪ ಬ್ಲಾಕ್
ಬೆಂಗಳೂರು– ೫೬೦ ೦೨೭.

# ಕನ್ನಡ ನಿಘಂಟು ಸಂಪಾದಕ ಸಮಿತಿ

(೧೯೭೨ನೆಯ ಡಿಸೆಂಬರ್ ತಿಂಗಳಿನಲ್ಲಿ ಇದ್ದಂತೆ)

**ಅಧ್ಯಕ್ಷರು**

ಪ್ರೊ. ಜಿ. ಎಸ್. ಗಾಯಿ, ಪಿಎಚ್.ಡಿ.

**ಪ್ರಧಾನ ಸಂಪಾದಕರು**

ಶ್ರೀ ಎನ್. ಬಸವಾರಾಧ್ಯ. ಎಂ.ಎ.

**ಸದಸ್ಯರು**

ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.
ಡಾ. ಆರ್.ಸಿ. ಹಿರೇಮಠ, ಎಂ.ಎ., ಪಿಎಚ್.ಡಿ.
ಡಾ. ಹಾ.ಮಾ. ನಾಯಕ, ಎಂ.ಎ., ಪಿಎಚ್.ಡಿ.
ಡಾ. ಜಿ.ಎಸ್. ಶಿವರುದ್ರಪ್ಪ, ಎಂ.ಎ., ಪಿಎಚ್.ಡಿ

ಡಾ. ಎಂ. ಚಿದಾನಂದಮೂರ್ತಿ, ಎಂ.ಎ., ಪಿಎಚ್.ಡಿ.
ಡಾ. ಟಿ.ವಿ. ವೆಂಕಟ್ಟಾಚಲ ಶಾಸ್ತ್ರೀ, ಎಂ.ಎ. ಪಿಎಚ್.ಡಿ.
ಡಾ. ಕೆ.ವಿ. ರಮೇಶ್, ಎಂ.ಎ., ಪಿಎಚ್.ಡಿ.
ಡಾ. ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿಎಚ್.ಡಿ.

**ಕರ್ನಾಟಕ ಸರ್ಕಾರದ ಪ್ರತಿನಿಧಿಗಳು**

ಡಾ. ಸಿದ್ಧಯ್ಯ ಪುರಾಣಿಕ, ಡಿ.ಲಿಟ್.

**ಪರಿಷತ್ತಿನ ಅಧ್ಯಕ್ಷರು**

ಶ್ರೀ ಗೊ.ರು. ಚನ್ನಬಸಪ್ಪ

**ಪರಿಷತ್ತಿನ ಗೌರವ ಕಾರ್ಯದರ್ಶಿಗಳು**

ಪ್ರೊ. ಎಸ್. ಶ್ರೀನಿವಾಸನ್, ಎಂ.ಎ.
ಶ್ರೀ ಜಿ. ಚನ್ನವೀರಸ್ವಾಮಿ, ಎಂ.ಎ., ಬಿ.ಇಡಿ.

**ಪರಿಷತ್ತಿನ ಗೌರವ ಕೋಶಾಧಿಕಾರಿಗಳು**

ಪ್ರೊ. ಹೆಚ್.ಆರ್. ದಾಸೇಗೌಡ, ಎಂ.ಎ., ಬಿ.ಎಲ್.

# ಕನ್ನಡ ನಿಘಂಟು ಕಚೇರಿಯ ಸಿಬ್ಬಂದಿ

(೧೯೭೨ನೆಯ ಡಿಸೆಂಬರ್ ತಿಂಗಳಿನಲ್ಲಿ ಇದ್ದಂತೆ)

ಪ್ರಧಾನ ಸಂಪಾದಕರು

**ಶ್ರೀ ಎನ್. ಬಸವಾರಾಧ್ಯ,** ಎಂ.ಎ.

**ಉಪ ಸಂಪಾದಕರು**

ಶ್ರೀ ಟಿ. ಆರ್. ಮಹಾದೇವಯ್ಯ, ಎಂ.ಎ.

**ಸಹಾಯಕ ಸಂಪಾದಕರು**

ಶ್ರೀಮತಿ ಮಂಜುಳಾರಾವ್, ಎಂ.ಎ.
ಶ್ರೀಮತಿ ಎಂ.ಎನ್. ಜಾನಕಮ್ಮ, ಎಂ.ಎ.
ಶ್ರೀಮತಿ ಉಮಾದೇವಿ, ಎಂ.ಎ
ಶ್ರೀಮತಿ ವಿಜಯಲಕ್ಷ್ಮಿ, ಎಂ.ಎ
ಶ್ರೀಮತಿ ಎಂ.ಎಸ್. ಸುಜಯ, ಎಂ.ಎ
ಶ್ರೀ ಬಿ. ಆರ್. ಬಸವರಾಜ, ಎಂ.ಎ.

**ಪೂರ್ಣಕಾಲದ ಸಹಾಯಕರು**

ಶ್ರೀ ಕೆ.ಆರ್. ಶೇಷಗಿರಿ, ಎಂ.ಎ.

ಬೆರಳಚ್ಚುಗಾರ್ತಿಯರು : ಶ್ರೀಮತಿ ಎ. ನೇತ್ರಾವತಿಬಾಯಿ, ಶ್ರೀಮತಿ ಸಿ. ಎನ್. ವಿಜಯಲಕ್ಷ್ಮಿ

ಸಹಾಯಕರು : ಶ್ರೀ ರಾಘವೇಂದ್ರ ಪ್ರಸಾದ್, ಶ್ರೀ ಆರ್. ಶಂಕರಪ್ಪ, ಶ್ರೀ ರೇವಯ್ಯ,

# ಅಧ್ಯಕ್ಷರ ನುಡಿ

'ನಿಘಂಟು ಎಂದರೆ ಕನ್ನಡ ಸಾಹಿತ್ಯ ಪರಿಷತ್ತಿನ ಬೃಹನ್ನಿಘಂಟು' ಎಂದೇ ಖ್ಯಾತವಾಗಿರುವ ಈ ಮಹಾನಿಘಂಟಿನ ಎಂಟು ಸಂಪುಟಗಳನ್ನು ಅದು ಪ್ರಕಟವಾದ ೧೫ ವರ್ಷಗಳ ನಂತರ ಮತ್ತಷ್ಟು ಸುಂದರವಾಗಿ ಮರುಮುದ್ರಣಗೊಳಿಸಿ ಕನ್ನಡ ಕುಲಕೋಟಿಗೆ ಅರ್ಪಿಸಲು ನನಗೆ ಸಂತೋಷವೆನಿಸುತ್ತದೆ. ಕನ್ನಡ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ಪಡೆದುಕೊಂಡಿರುವುದು ಅದರ ಸಂಪನ್ನತೆ ಮತ್ತು ಅರ್ಹತೆಗಳಿಂದಾಗಿಯೇ ಎಂಬುದನ್ನು ಲೋಕದೆದುರು ಬಿಚ್ಚಿತೋರಿಸುವ ಸಾಧನಗಳಲ್ಲಿ ಮುಖ್ಯವಾದದ್ದು ಈ ಬೃಹತ್ ನಿಘಂಟು. ಕನ್ನಡದ ಸಮಸ್ತ ಜ್ಞಾನವನ್ನೂ ತನ್ನೊಳಗೆ ಐಕ್ಯಗೊಳಿಸಿಕೊಂಡಿರುವ ಈ ನಿಘಂಟಿನ ವಿವಿಧ ಸಂಪುಟಗಳಲ್ಲಿ ಶಬ್ದವೊಂದರ ಅರ್ಥ, ವಿವರಣೆ, ಉದಾಹರಣೆ ಒಮ್ಮೊಮ್ಮೆ ಅರ್ಧಪುಟವನ್ನು ದಾಟಿ ಒಂದು ಪುಟವನ್ನು ಆವರಿಸಿಕೊಂಡಿರುವುದುಂಟು.

ಕ್ರಿ.ಶ.೪೫೦ರ ಹಲ್ಮಿಡಿಶಾಸನದಿಂದ ಪ್ರಾರಂಭವಾಗಿ ಈ ಸಂಪುಟ ಯೋಜನೆ ಅನುಷ್ಠಾನಗೊಂಡ ೧೯೯೫ರವರೆಗೆ ಕನ್ನಡದಲ್ಲಿ ಪ್ರಕಟವಾದ ಎಲ್ಲ ಬಗೆಯ ಸಾಹಿತ್ಯ ಪ್ರಕಾರಗಳಿಂದಲೂ ಉಲ್ಲೇಖಗಳನ್ನು ನೀಡಲಾಗಿರುವುದು, ಕೆಲವೊಮ್ಮೆ ಒಂದೇ ಶಬ್ದಕ್ಕೆ ಬೇರೆ ಬೇರೆ ಅರ್ಥಗಳು ಪ್ರಾಪ್ತವಾಗುವ ಸಂದರ್ಭಗಳನ್ನು ಜೊತೆಗಿರಿಸಿ ಕೊಟ್ಟಿರುವುದು, ಪ್ರತಿಯೊಂದು ಶಬ್ದವನ್ನೂ ನಾಮಪದ ಅಥವಾ ಕ್ರಿಯಾಪದವೆಂದು ಖಚಿತವಾಗಿ ವಿಂಗಡಿಸಿಕೊಂಡಿರುವುದು, ಅರ್ಥ ಸ್ಪಷ್ಟೀಕರಣಕ್ಕೆಂದು ಉದಾಹರಣೆಯಾಗಿ ಕೊಟ್ಟಿರುವ ವಾಕ್ಯ ಅಥವಾ ವಾಕ್ಯತುಂಡುಗಳೇ ಮೂಲಕಾವ್ಯವನ್ನು ಓದಬೇಕೆನ್ನುವ ಆಸಕ್ತಿಯನ್ನು ಹುಟ್ಟಿಸುವುದು – ಈ ಎಲ್ಲ ಅಂಶಗಳು ಇದರ ಅಪೂರ್ವತೆಯನ್ನು ಎತ್ತಿ ಹಿಡಿಯುವ ಸಾಕ್ಷಿಕಲ್ಲುಗಳಾಗಿವೆ. ನಿಘಂಟು ಎನ್ನುವುದೇ ತುಂಬ ವೈಜ್ಞಾನಿಕವಾದ, ಒಂದು ಭಾಷೆಯ ಸೃಜನ ಸಾಹಿತ್ಯದಷ್ಟೇ ಪ್ರಮುಖವಾದ, ಭಾಷೆಯಲ್ಲಿರುವ ಶಬ್ದಗಳನ್ನು ಶುದ್ಧವಾಗಿ ಉಚ್ಚರಿಸಬೇಕೆಂದು ತಿಳಿಸಿಕೊಡುವ ರಚನೆಯಾಗಿರುವುದರಿಂದ ಜ್ಞಾನೇಂದ್ರಿಯಗಳೆಲ್ಲದರ ಎಚ್ಚರದ ದುಡಿಮೆಯನ್ನು ಬಯಸುತ್ತದೆ. ಕನ್ನಡದ ಅಭಿಮಾನವನ್ನು ಮೈತುಂಬಿಕೊಂಡ ಘನ ವಿದ್ವಾಂಸರ ಸತತ ಪರಿಶ್ರಮದಿಂದ ಈ ಯೋಜನೆ ಶಿಸ್ತುಬದ್ಧವಾಗಿ ಯಶಕಂಡಿದೆ. ಮೊದಲ ಮುದ್ರಣದ ೧೦,೦೦೦ ಪ್ರತಿಗಳು ಕೆಲವೇ ವರ್ಷಗಳಲ್ಲಿ ಕನ್ನಡಿಗರ ಮನೆಯ ಕಪಾಟುಗಳನ್ನು, ಗ್ರಂಥಭಂಡಾರಗಳನ್ನು, ಶಾಲೆಕಾಲೇಜುಗಳನ್ನು ಅಲಂಕರಿಸಿದ್ದರಿಂದ ಕನ್ನಡ ಸಾಹಿತ್ಯ ಪರಿಷತ್ತು ಧನ್ಯತಾಭಾವವನ್ನು ತಳೆಯುವಂತಾಯಿತು. ಆದರೆ ನಿಘಂಟುವಿನ ಉಪಯುಕ್ತತೆಯನ್ನು ತಡವಾಗಿ ಅರ್ಥಮಾಡಿಕೊಂಡವರು ಅಂದಿನಿಂದ ಇಂದಿನವರೆಗೆ ಸಾಹಿತ್ಯ ಪರಿಷತ್ತಿಗೆ ದೂರವಾಣಿ ಕರೆ ಮಾಡಿ, ಮಾರಾಟ ವಿಭಾಗದಲ್ಲಿ ವಿಚಾರಿಸಿ, ಪುಸ್ತಕ ಮಳಿಗೆಗಳಲ್ಲಿ ಹುಡುಕಾಡಿ ಸಿಗದೆ ನಿರಾಶರಾಗಿದ್ದಾರೆ. ಮರುಪ್ರಕಟಿಸುವಂತೆ ಒತ್ತಾಯ ಮಾಡಿದ್ದಾರೆ.

ಎಂಟು ಸಂಪುಟಗಳಲ್ಲಿ, ಒಂಬತ್ತು ಸಾವಿರಕ್ಕಿಂತಲೂ ಅಧಿಕ ಪುಟಗಳ ವಿಸ್ತಾರದಲ್ಲಿ ಹರಡಿಕೊಂಡಿರುವ, ಎಲ್ಲರ ಮನೆಯನ್ನೂ ಬೆಳಗಬೇಕಾಗಿರುವ ಈ ನಿಘಂಟನ್ನು ಮುದ್ರಿಸುವುದಾಗಲೀ, ಮುದ್ರಿತ ಪ್ರತಿಗಳನ್ನು ಒಂದೆಡೆ ಜೋಡಿಸಿಡುವುದಾಗಲೀ, ಮಾರಾಟದ ವ್ಯವಸ್ಥೆ ಮಾಡುವುದಾಗಲೀ, ಹೆಚ್ಚಿನ ಪ್ರಮಾಣದಲ್ಲಿ ಒಂದು

ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವುದಾಗಲೀ ಅಷ್ಟೊಂದು ಸುಲಭವಾದ ಕೆಲಸವಲ್ಲ. ಈ ಅಸಾಧ್ಯವನ್ನು ಸಾಧ್ಯವಾಗಿಸುವ ಧೈರ್ಯೋತ್ಸಾಹಗಳು ಪರಿಷತ್ತಿನೊಡಲಲ್ಲಿ ಚಿಮ್ಮುವುದಕ್ಕೆ ಕರ್ನಾಟಕ ರಾಜ್ಯ ಸರ್ಕಾರ ಕಾರಣವಾಯಿತೆಂದರೆ ಅದನ್ನು ಯಾರೂ ಅತಿಶಯೋಕ್ತಿಯೆಂದು ಭಾವಿಸಬೇಕಾಗಿಲ್ಲ. ಕರ್ನಾಟಕ ರಾಜ್ಯ ಸರ್ಕಾರ ಕನ್ನಡ ಸಾಹಿತ್ಯ ಪರಿಷತ್ತಿನ ಮಾತುಗಳನ್ನು ಪ್ರೀತಿಯಿಂದ ಆಲಿಸುತ್ತಿರುವುದು, ಕನ್ನಡ ಸಾಹಿತ್ಯ ಪರಿಷತ್ತನ್ನು ಕನ್ನಡದ ಸಾರ್ವಭೌಮ ಪ್ರತಿನಿಧಿಯೆಂದೇ ಭಾವಿಸುತ್ತಿರುವುದು ಕನ್ನಡದ ಭಾಗ್ಯವೆಂದೇ ಹೇಳಬೇಕು. ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಹಲವು ಒತ್ತಡಗಳ ನಡುವೆಯೂ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳಲ್ಲಿ ಅತ್ಯಂತ ಪ್ರೀತಿಯಿಂದ ಭಾಗವಹಿಸುತ್ತಿರುವುದು, ಸಮಾರಂಭಗಳಲ್ಲಿ ಕೊಟ್ಟ ಆಶ್ವಾಸನೆಗಳನ್ನು ಅತಿಶೀಘ್ರವಾಗಿ ಅನುಷ್ಠಾನಗೊಳಿಸುತ್ತಿರುವುದು, ಪರಿಷತ್ತಿನ ಎಲ್ಲಾ ಯೋಜನೆಗಳಿಗೂ ಹಸಿರು ನಿಶಾನೆ ತೋರುತ್ತಿರುವುದು, ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳು ಮುಖ್ಯಮಂತ್ರಿ – ಕನ್ನಡ ಸಂಸ್ಕೃತಿ ಮಂತ್ರಿಗಳ ಕಚೇರಿಯ ಹೊರಗೆ ಕಡತಗಳೊಂದಿಗೆ ಗಂಟೆಗಟ್ಟಲೆ ಕಾಯುತ್ತಿದ್ದುದನ್ನು ತಪ್ಪಿಸಿರುವುದು, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಿಂದ ತಾಲ್ಲೂಕು ಸಮ್ಮೇಳನಗಳವರೆಗೆ ಎಲ್ಲವೂ ಅದ್ದೂರಿಯಾಗಿ ನಡೆಯಲು ಬೇಕಾದಷ್ಟು ಪ್ರಮಾಣದಲ್ಲಿ ಹಣ ಬಿಡುಗಡೆ ಮಾಡುತ್ತಿರುವುದು – ಇಂಥವನ್ನೆಲ್ಲಾ ಕಂಡಾಗ ಪರಿಷತ್ತಿನ ಅಧ್ಯಕ್ಷನಾಗಿ ನನಗೆ ಮನಸ್ಸು ತುಂಬಿ ಬರುತ್ತದೆ. ಆರುಕೋಟಿ ಕನ್ನಡಿಗರ ಪರವಾಗಿ ಅವರಿಗೆ ಕೃತಜ್ಞತಾ ಕುಸುಮಗಳನ್ನು ಅರ್ಪಿಸಬೇಕೆನ್ನಿಸುತ್ತದೆ. 'ಕನ್ನಡದ ಮುಖ್ಯಮಂತ್ರಿ' 'ಕನ್ನಡಿಗರ ಮುಖ್ಯಮಂತ್ರಿ' ಎಂದು ಅಭಿಮಾನದಿಂದ ನುಡಿಯಬೇಕೆನ್ನಿಸುತ್ತದೆ. ಸನ್ಮಾನ್ಯ ಮುಖ್ಯಮಂತ್ರಿಗಳ ಕನ್ನಡದ ಮೇಲಿನ, ಕನ್ನಡ ಸಾಹಿತ್ಯ ಪರಿಷತ್ತಿನ ಬಗೆಗಿನ ಈ ಅಖಂಡ ಪ್ರೀತಿ ಹೀಗೇ ಮುಂದುವರಿಯಲೆಂದು ಆಶಿಸುತ್ತೇನೆ.

ಕರ್ನಾಟಕ ಸರ್ಕಾರ ನಿಘಂಟು ಯೋಜನೆಯ ಮಹತ್ವವನ್ನು ಮನಗಂಡು ಒಂದು ಕೋಟಿ ರೂಪಾಯಿಗಳನ್ನು ಸಾಹಿತ್ಯ ಪರಿಷತ್ತಿಗೆ ಉದಾರವಾಗಿ ನೀಡಿದೆ. ಸರ್ಕಾರ ಹಣ ನೀಡಿರುವುದು ಪರಿಷತ್ತಿಗಾದರೂ ಇದು ಜನತೆಯ ಹಣ ಮತ್ತು ಇದರ ಅಂತಿಮ ಫಲಾನುಭವಿಗಳೂ ಜನತೆಯೇ. ಈ ಎಚ್ಚರವನ್ನಿರಿಸಿಕೊಂಡೇ ಸಾಹಿತ್ಯ ಪರಿಷತ್ತು ಬಹುಬೇಡಿಕೆಯ ಬೃಹನ್ನಿಘಂಟಿನ ಎಂಟು ಸಂಪುಟಗಳನ್ನು ಪುನರ್ಮುದ್ರಣಗೊಳಿಸುತ್ತಿದೆ. ಸರ್ಕಾರದ ಉದಾರ ಆರ್ಥಿಕ ನೆರವಿನ ಪರಿಣಾಮವಾಗಿ ನಿಘಂಟಿನ ಬೆಲೆಯನ್ನು ಸಾಮಾನ್ಯರೂ ಕೊಳ್ಳಲು ಮನಸ್ಸು ಮಾಡುವಂತೆ ಕಡಿಮೆಗೊಳಿಸಲಾಗಿದೆ. ಭಾಷೆ ಮತ್ತು ಸಾಹಿತ್ಯಾಭಿಮಾನದ ಸಂಕೇತವೆಂಬಂತೆ ಈ ಯೋಜನೆಯ ಯಶಸ್ಸಿನಲ್ಲಿ ಪ್ರಮುಖ ಪಾತ್ರ ನಿರ್ವಹಿಸಿರುವ ರಾಜ್ಯ ಸರ್ಕಾರವನ್ನು ಹಾಗೆ ಕನ್ನಡ ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಜಯರಾಮರಾಜೇ ಅರಸ್ ಮತ್ತು ನಿರ್ದೇಶಕರಾದ ಶ್ರೀ ಮನು ಬಳಿಗಾರ್ ಅವರುಗಳನ್ನು ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ. ನಿಘಂಟು ಯೋಜನೆ ಪ್ರಾರಂಭವಾದಾಗ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣರಿಂದ ಮೊದಲಗೊಂಡು ಮುಕ್ತಾಯವಾದಾಗ ಅಧ್ಯಕ್ಷರಾಗಿದ್ದ ಡಾ. ಸಾ.ಶಿ. ಮರುಳಯ್ಯನವರವರೆಗೆ ಇದನ್ನು ಆಸಕ್ತಿಯಿಂದ ಮುನ್ನಡೆಸಿಕೊಂಡು ಬಂದ ಎಲ್ಲ ಅಧ್ಯಕ್ಷರುಗಳಿಗೂ ನಿಘಂಟು ಸಮಿತಿಯ ಅಧ್ಯಕ್ಷರು, ಸದಸ್ಯರುಗಳು, ಸಂಪಾದಕರು, ಸಿಬ್ಬಂದಿ ವರ್ಗದವರಿಗೂ ಅಂದವಾಗಿ ಮುದ್ರಿಸಿಕೊಟ್ಟ ರಾಜಾ ಪ್ರಿಂಟರ್ಸ್‌ನವರಿಗೂ ಮತ್ತು ಅವರ ಸಿಬ್ಬಂದಿ ವರ್ಗದವರಿಗೂ ಕನ್ನಡ ಸಾಹಿತ್ಯ ಪರಿಷತ್ತು ತುಂಬಾ ಆಭಾರಿಯಾಗಿದೆ. ಮರುಮುದ್ರಣದ ಈ ನಿಘಂಟಿನ ಸಂಪುಟಗಳನ್ನು ಕನ್ನಡ ಜನತೆ ಪ್ರೀತಿ ವಿಶ್ವಾಸಗಳಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಬೆಂಗಳೂರು
೫–೬–೨೦೧೦

**ಡಾ. ನಲ್ಲೂರು ಪ್ರಸಾದ್ ಆರ್.ಕೆ.**
ಅಧ್ಯಕ್ಷರು

# ಅರಿಕೆ

**ಕ**ನ್ನಡ ಸಾಹಿತ್ಯ ಪರಿಷತ್ತು ಕೈಕೊಂಡಿರುವ ಕನ್ನಡ ನಿಘಂಟು ಕಾರ್ಯ, ಕರ್ನಾಟಕ ಸರ್ಕಾರದ ಒಂದು ವಿಶೇಷ ಸಾರಸ್ವತ ಯೋಜನೆಯಾಗಿದೆ. ಭಾರತೀಯ ಭಾಷೆಗಳಲ್ಲಿಯೇ ವಿಶಿಷ್ಟವಾಗಿ ರಚನೆಯಾಗುತ್ತಿರುವ ಈ ನಿಘಂಟು ಹಲವು ಭಾಷೆಗಳ ನಿಘಂಟುಗಳಿಗೆ ಮಾದರಿಯೆಂಬಂತಿದೆ. ಭಾಷಾಶಾಸ್ತ್ರ ನಿಯಮಗಳಿಗೆ ಅನುಸಾರವಾಗಿ, ಚಾರಿತ್ರಿಕ ವಿವರಣೆಗಳಿಂದ ಕೂಡಿ ಸಿದ್ಧವಾಗಿರುವ ಈ ನಿಘಂಟು ಪ್ರಮಾಣಭೂತವೂ ಸಮಗ್ರವೂ ಆಗಿದೆ.

ಕನ್ನಡ ನಿಘಂಟು ಯೋಜನೆ ಪ್ರಾರಂಭವಾದಾಗ ಅದು ಇಷ್ಟು ವ್ಯಾಪಕವಾಗಿ ಬೆಳೆಯುವುದೆಂಬ ಕಲ್ಪನೆ ಯಾರಿಗೂ ಇರಲಿಲ್ಲ. ಪ್ರಾರಂಭದಲ್ಲಿ, ಸರ್ಕಾರದ ಒಂದು ಲಕ್ಷ ರೂಪಾಯಿಗಳ ಅನುದಾನದ ಮೂಲಕ ೧೯೫೪ನೆಯ ಇಸವಿ ಅಕ್ಟೋಬರ್ ತಿಂಗಳು ೧೮ನೆಯ ತಾರೀಖು ಈ ಕಾರ್ಯ ಪ್ರಾರಂಭವಾಯಿತು. ಆಗ ನಿಘಂಟನ್ನು ಒಂದೇ ಸಂಪುಟದಲ್ಲಿ ಮುಗಿಸುವ ಯೋಚನೆಯಿತ್ತು. ೧೯೫೮ರ ಹೊತ್ತಿಗೆ ಕನ್ನಡ ನಿಘಂಟಿನ ರೂಪರೇಖೆಗಳು ಸ್ವಲ್ಪಮಟ್ಟಿಗೆ ವಿಸ್ತೃತಗೊಂಡವು. ಆಗ ಈ ಯೋಜನೆಗೆ ಒಂದುಲಕ್ಷ ರೂಪಾಯಿ ಸಾಲದು ಎನ್ನಿಸಿತು. ಏಕೆಂದರೆ ನಿಘಂಟನ್ನು ಒಂದೇ ಸಂಪುಟದಲ್ಲಿ ಮುಗಿಸಲು ಸಾಧ್ಯವಾಗುವುದಿಲ್ಲವೆನ್ನುವುದು ಮನವರಿಕೆಯಾಯಿತು. ಇದಕ್ಕಾಗಿ ಸರ್ಕಾರವು ನೇಮಿಸಿದ ಬಿ. ಎಂ. ಕೃಷ್ಣನ್ ಸಮಿತಿ ಸಂಬಂಧಪಟ್ಟವರೊಡನೆ ಸಮಾಲೋಚನೆ ನಡೆಸಿ ಒಂದು ವರದಿಯನ್ನು ನೀಡಿತು. ಅದರಲ್ಲಿ ನಿಘಂಟನ್ನು ಐದುಸಾವಿರ ಪುಟಗಳ ನಾಲ್ಕುಸಂಪುಟಗಳಲ್ಲಿ ೧೯೬೭ರ ವೇಳೆಗೆ ಹೊರತರಬೇಕೆಂದು ಸೂಚಿಸಲಾಯಿತು. ಈ ಹದಿನೈದುಲಕ್ಷ ರೂಪಾಯಿಗಳ ಯೋಜನೆಯನ್ನು ಸರ್ಕಾರವು ೧೯೬೧ನೆಯ ಮೇ ತಿಂಗಳು ೨೯ರಂದು ಅಂಗೀಕರಿಸಿತು.

ಮೊದಲಿಗೆ ನಿಘಂಟು ರಚನೆಗೆ ಆಗತ್ಯವಾದ ಶಬ್ದಸಂಗ್ರಹ ಕಾರ್ಯ ತ್ವರಿತವಾಗಿ ನಡೆಯಿತು. ನಿಘಂಟುಕಾರ್ಯಕ್ಕೆ ಸಮರ್ಥವಾದ ಸಿಬ್ಬಂದಿ ದೊರೆಯದೆ ನಿಘಂಟು ರಚನೆ ವಿಳಂಬವಾಯಿತು. ನಿಘಂಟಿನ ಕರಡುಪ್ರತಿಯ ಸಿದ್ಧತೆ, ಪರಿಷ್ಕರಣ, ಸಂಪಾದಕ ಸಮಿತಿಯಲ್ಲಿ ಅದರ ವಿವರವಾದ ಚರ್ಚೆ, ಅನುಮೋದನೆ, ಮುದ್ರಣಪ್ರತಿಯ ಸಿದ್ಧತೆ– ಈ ವಿವಿಧ ಹಂತಗಳು ಸಾಕಷ್ಟು ಸಮಯವನ್ನು ತೆಗೆದುಕೊಂಡುವು. ಇಂತಹ ವಿದ್ವತ್‌ಕಾರ್ಯ ತ್ವರಿತವಾಗಿ ಮುಗಿಯುವ ಸ್ವರೂಪದ್ದಲ್ಲವೆಂಬುದೂ ಆಗ ಅನುಭವಕ್ಕೆ ಬಂದಿತು.

ನಿಘಂಟಿನಲ್ಲಿ ಬಳಸಿರುವ ಹಲವು ಬಗೆಯ ಅಕ್ಷರಗಳು, ಚಿಹ್ನೆಗಳು ಮತ್ತು ಅದರ ವಿಶಿಷ್ಟ ವಿನ್ಯಾಸ ಮೊದಲಾದುವುಗಳಿಂದಾಗಿ ಮುದ್ರಣಕಾರ್ಯವನ್ನು ಶೀಘ್ರವಾಗಿ ಮುಗಿಸಲು ಸಾಧ್ಯವಾಗಲಿಲ್ಲ. ಈ ಹಿನ್ನೆಲೆಯಲ್ಲಿ ನಿಘಂಟಿನ ನಾಲ್ಕು ಸಂಪುಟಗಳು ಕ್ರಮವಾಗಿ ೧೯೭೦, ೧೯೭೫, ೧೯೭೭ ಮತ್ತು ೧೯೭೯ರಲ್ಲಿ ಪ್ರಕಟವಾದುವು.

ಹಿಂದೆ ಯೋಚಿಸಿದ್ದಂತೆ ಕನ್ನಡ ನಿಘಂಟು ಐದುಸಾವಿರ ಪುಟಗಳ ನಾಲ್ಕುಸಂಪುಟಗಳಲ್ಲಿ ಮುಗಿಯುವುದಿಲ್ಲವೆಂಬುದು ಮನವರಿಕೆಯಾಯಿತು. ಇದಕ್ಕೆ ಕಾರಣಗಳೇನೆಂದರೆ : ಅಪ್ರಕಟಿತ ಹಸ್ತಪ್ರತಿಗಳಿಂದ, ಅಧಿಕಸಂಖ್ಯೆಯ ಶಾಸನಗಳಿಂದ ಶಬ್ದಗಳನ್ನು ಸಂಗ್ರಹಿಸಲಾಗಿತ್ತು ; ಪ್ರಾದೇಶಿಕ ಭಾಷೆಯ ವಿಶಿಷ್ಟಪದಗಳ ಸೇರ್ಪಡೆಗೂ ಅವಕಾಶ ನೀಡಲಾಗಿತ್ತು. ಇದರಿಂದಾಗಿ ಶಬ್ದಸಂಗ್ರಹ ಹೆಚ್ಚಿತು ; ನಿಘಂಟಿನ ವ್ಯಾಪ್ತಿ ಬೆಳೆಯಿತು. ನಾಲ್ಕುಸಂಪುಟಗಳ ಯೋಜನೆ ಎಂಟುಸಂಪುಟಗಳ ಯೋಜನೆಯಾಗಬೇಕಾದುದು ಅನಿವಾರ್ಯವಾಯಿತು. ಈ ಎಲ್ಲ ಅಂಶಗಳನ್ನೂ ಸರ್ಕಾರದ ಗಮನಕ್ಕೆ ತಂದು ಹೆಚ್ಚಿನ ಧನಸಹಾಯಕ್ಕೆ ಮನವಿಯನ್ನು ಸಲ್ಲಿಸಲಾಯಿತು. ಕರ್ನಾಟಕ ಸರ್ಕಾರ ಈ ಯೋಜನೆಯ ಮಹತ್ತ್ವವನ್ನು ಮನಗಂಡು ಹೆಚ್ಚಿನ ಅನುದಾನಕ್ಕೆ ಒಪ್ಪಿಗೆಯನ್ನು ನೀಡಿತು. ಸರ್ಕಾರ ಮತ್ತೆ ಕೊಟ್ಟ ಅವಧಿ ಮತ್ತು ಅನುದಾನ ಸಾಲದೆಹೋದಾಗ, ಅದು ಮರುಪರಿಶೀಲನೆ ಮಾಡಿ ಅಗತ್ಯವಾದ ಕಾಲಾವಕಾಶವನ್ನೂ ಧನಸಹಾಯವನ್ನೂ ಒದಗಿಸಿ ಈ ಯೋಜನೆ ಮುಂದುವರಿಯಲು ಅವಕಾಶಮಾಡಿಕೊಟ್ಟಿತು.

ಐದನೆಯ ಸಂಪುಟ ಮುದ್ರಣಕ್ಕೆ ಸಿದ್ಧವಾಗಿದ್ದರೂ ಅನಿವಾರ್ಯ ಕಾರಣಗಳಿಂದ ಅದನ್ನು ಅಚ್ಚುಮಾಡಲು ಎಂಟು ವರ್ಷಗಳು ಕಾಯಬೇಕಾಯಿತು. ಅದು ೧೯೮೮ರಲ್ಲಿ ಹೊರಬಂದಿತು. ಅನಂತರ ಆರನೆಯ ಸಂಪುಟವು ೧೯೯೦ರಲ್ಲಿ, ಮೈಸೂರಿನಲ್ಲಿ ಜರುಗಿದ ೬೦ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಬಿಡುಗಡೆಯಾಯಿತು.

ಈಗ ನಿಘಂಟಿನ ಉಳಿದ ಭಾಗಗಳ ಹಸ್ತಪ್ರತಿಯ ಸಿದ್ಧತೆ ಮುಗಿದಿದೆ. ಅದರ ಬಹುಭಾಗವನ್ನು ಸಂಪಾದಕ ಸಮಿತಿ ಪರಿಶೀಲಿಸಿದೆ. ಈ ಏಳನೆಯ ಸಂಪುಟದಲ್ಲಿ 'ಬಿಲ್ಲ~2~' ಶಬ್ದದಿಂದ ಲಕಾರದ ಎಲ್ಲ ಶಬ್ದಗಳೂ ಸೇರ್ಪಡೆಯಾಗಿವೆ. ಇನ್ನುಳಿದ ಅಕ್ಷರಗಳ ಶಬ್ದಗಳು ಕೊನೆಯದಾದ ಎಂಟನೆಯ ಸಂಪುಟದಲ್ಲಿ ಸೇರ್ಪಡೆಯಾಗಲಿವೆ. ಸರ್ಕಾರಿ

ಮುದ್ರಣಾಲಯದವರು ನಿಘಂಟು ಮುದ್ರಣಕ್ಕಾಗಿ ವಿಶೇಷ ಏರ್ಪಾಡುಗಳನ್ನು ಮಾಡಿ ಕೆಲವು ತಿಂಗಳುಗಳಲ್ಲಿಯೇ ಈ ಕಾರ್ಯವನ್ನು ಮುಗಿಸಿಕೊಟ್ಟಿದ್ದಾರೆ. ಇದಕ್ಕೆ ನೆರವಾದ ಸರ್ಕಾರಿ ಮುದ್ರಣಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಇ. ಕೃಷ್ಣನಾರಾಯಣ ಮತ್ತು ಈಗಿನ ನಿರ್ದೇಶಕರಾದ ಶ್ರೀ ಡಿ. ಎಸ್. ಅಶ್ವಥ್ ಅವರಿಗೆ ಮತ್ತು ಅವರ ಸಹಾಯಕ ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದವರಿಗೆ ನಮ್ಮ ಧನ್ಯವಾದಗಳು.

ಕನ್ನಡ ನಿಘಂಟಿನ ಸಂಪಾದಕ ಸಮಿತಿಯಲ್ಲಿ ನಾಡಿನ ಪ್ರಸಿದ್ಧ ವಿದ್ವಾಂಸರು ಇದ್ದುಕೊಂಡು ತಮ್ಮ ಜ್ಞಾನಾನುಭವಗಳ ಬೆಳಕು ಚೆಲ್ಲಿ ಈ ಕೋಶ ಶಾಸ್ತ್ರೀಯವಾಗಿ ರೂಪುಗೊಳ್ಳಲು ಕಾರಣರಾಗಿದ್ದಾರೆ. ಕಾಲಕಾಲಕ್ಕೆ ಅವರ ಸಲಹೆ ಸಹಕಾರಗಳು ಈ ಸಂಪುಟದ ಸಿದ್ಧತೆಯಲ್ಲಿಯೂ ದೊರೆತಿವೆ. ಇವರೆಲ್ಲರಿಗೂ ಗೌರವಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇವೆ.

ಏಳನೆಯ ಸಂಪುಟದ ಸಿದ್ಧತೆಯಲ್ಲಿ ೧೯೯೨ರ ಫೆಬ್ರುವರಿ ತಿಂಗಳವರೆಗೆ ಅಧ್ಯಕ್ಷರು ಹಾಗೂ ಪ್ರಧಾನ ಸಂಪಾದಕರಾಗಿ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಸಲ್ಲಿಸಿರುವ ಸೇವೆಯನ್ನು ನಾವು ವಿಶ್ವಾಸದಿಂದ ನೆನೆಯುತ್ತೇವೆ.

ಕನ್ನಡ ನಿಘಂಟು ಸಿಬ್ಬಂದಿವರ್ಗ ನಿಘಂಟು ರಚನೆಯಲ್ಲಿ ನುರಿತವರಾಗಿದ್ದಾರೆ. ನಿಘಂಟು ಬರವಣಿಗೆ, ಪರಿಷ್ಕರಣ, ಕರಡುಪರಿಶೀಲನೆ ಮೊದಲಾದ ಎಲ್ಲ ಹಂತಗಳಲ್ಲೂ ಸಮರ್ಪಣಬುದ್ಧಿಯಿಂದ ದುಡಿದಿದ್ದಾರೆ. ಅವರ ಸಹಕಾರವನ್ನಿಲ್ಲಿ ಸ್ಮರಿಸುತ್ತೇವೆ.

ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ. ರು. ಚನ್ನಬಸಪ್ಪ, ಗೌರವ ಕಾರ್ಯದರ್ಶಿಗಳಾದ ಪ್ರೊ. ಎಸ್. ಶ್ರೀನಿವಾಸನ್ ಹಾಗೂ ಶ್ರೀ ಜಿ. ಚನ್ನವೀರಸ್ವಾಮಿ, ಗೌರವ ಕೋಶಾಧಿಕಾರಿಗಳಾದ ಪ್ರೊ॥ ಹೆಚ್. ಆರ್. ದಾಸೇಗೌಡ ಇವರೆಲ್ಲರೂ ಈ ಸಂಪುಟ ಹೊರಬರಲು ಒತ್ತಾಸೆ ನೀಡಿದ್ದಾರೆ. ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಕೊನೆಯದಾದ ಎಂಟನೆಯ ಸಂಪುಟವನ್ನೂ ಸಹ ಇಷ್ಟರಲ್ಲಿಯೇ ಪೂರಯಿಸುವ ಭರವಸೆ ನೀಡುತ್ತ, ಈ ಸಂಪುಟವನು ಕನ್ನಡ ಜನತೆಯ ಕೈಯಲ್ಲಿಡುತ್ತಿದ್ದೇವೆ. ಪ್ರಾಜ್ಞರು ಈ ಏಳುಸಂಪುಟಗಳನ್ನೂ ಪರಿಶೀಲಿಸಿ ನಿಘಂಟಿನ ಉತ್ತಮಿಕೆಗೆ ನೀಡುವ ಎಲ್ಲ ಸಲಹೆ ಸೂಚನೆಗಳನ್ನು ನಾವು ಕೃತಜ್ಞತೆಯಿಂದ ಸ್ವೀಕರಿಸುತ್ತೇವೆ.

**ಡಾ॥ ಜಿ. ಎಸ್. ಗಾಯಿ**
ಅಧ್ಯಕ್ಷರು

**ಎನ್. ಬಸವಾರಾಧ್ಯ**
ಪ್ರಧಾನ ಸಂಪಾದಕರು

# ಪರಿಷತ್ತಿನ ಅಧ್ಯಕ್ಷರ ಕೃತಜ್ಞತೆ

ಕನ್ನಡ–ಕನ್ನಡ ಬೃಹನ್ನಿಘಂಟು ಪ್ರಕಟಣೆ, ಕನ್ನಡ ಸಾಹಿತ್ಯ ಪರಿಷತ್ತಿನ ಹೆಮ್ಮೆಯ ಸಾಧನೆಗಳಲ್ಲೊಂದು. ಕನ್ನಡಕ್ಕೆ ಒಂದು ಆಧಾರಭೂತವಾದ ಸಪ್ರಮಾಣವಾದ ಸಮಗ್ರ ನಿಘಂಟು ಅಗತ್ಯವೆಂಬ ಬಹುಜನ ಆಸಕ್ತರ ಅಭಿಲಾಷೆಯೊಂದಿಗೆ ಪ್ರಾರಂಭವಾದ ನಿಘಂಟು ಯೋಜನೆ ಮೊದಲು ಐದು ಸಂಪುಟಗಳಿಗೆ ಮುಗಿಯುವುದೆಂದು ಭಾವಿಸಲಾಗಿತ್ತು. ಕನ್ನಡದ ಅಗಾಧವಾದ ಶಬ್ದರಾಶಿ, ಅವುಗಳಿಗಿರುವ ಅರ್ಥವ್ಯಾಪ್ತಿ, ವಿಸ್ತಾರವಾಗಿರುವಂತೆ ನಾಲ್ಕು ಸಂಪುಟಗಳ ನಿಘಂಟು ಎಂಟು ಸಂಪುಟಗಳಿಗೆ ಹರಡಿದೆ. ಇದರ ಏಳನೆಯ ಸಂಪುಟವನ್ನು ಇದೀಗ ಕನ್ನಡಿಗರ ಕೈಯಲ್ಲಿರಿಸಲು ಹರ್ಷಿಸುತ್ತೇನೆ. ಕೊನೆಯ ಹಾಗೂ ಎಂಟನೆಯ ಸಂಪುಟವನ್ನು ಆದಷ್ಟು ಶೀಘ್ರವಾಗಿ ಪೂರ್ಣಗೊಳಿಸಲು ವ್ಯವಸ್ಥೆ ಮಾಡಲಾಗಿದೆ. ನಿಘಂಟುವಿನ ಕೆಲಸ ಅವಸರದ ಕೆಲಸವಲ್ಲ. ಒಂದು ಪದಕ್ಕೆ ಸಮರ್ಪಕವಾದ ಅರ್ಥವನ್ನು ಖಚಿತಗೊಳಿಸುವ ಮೊದಲು ಅದನ್ನು ಹಲವಾರು ರೀತಿಯ ನಿಕಷಕ್ಕೊಡ್ಡಿ ಅಂತಿಮವಾಗಿ ಅಂಗೀಕರಿಸಲಾಗುತ್ತದೆ. ಈ ಕಾರ್ಯದಲ್ಲಿ ಕನ್ನಡದ ಘನವಿದ್ವಾಂಸರಿಂದ ಕೂಡಿರುವ ಸಂಪಾದಕ ಮಂಡಳಿ ಸ್ತುತ್ಯಾರ್ಹವಾದ ಕೆಲಸ ಮಾಡುತ್ತಿದೆ.

ಈಗ ನಿರ್ಧಾರವಾಗಿರುವಂತೆ ಎಂಟನೆಯ ಸಂಪುಟದ ಪ್ರಕಟಣೆಯೊಂದಿಗೆ ಈ ನಿಘಂಟು ಯೋಜನೆಯ ಕಾರ್ಯ ಮುಗಿದಂತಲ್ಲ. ಇದು ವಾಸ್ತವವಾಗಿ ಮೊದಲ ಹಂತ. ಮುಂದಿನ ಹಂತ ಈ ಎಲ್ಲ ಸಂಪುಟಗಳ ಪರಿಷ್ಕರಣ. ನಿಘಂಟು ರಚನೆಯಲ್ಲಿ ಸಾಕಷ್ಟು ಎಚ್ಚರವಹಿಸಿರುವುದು, ಶ್ರಮಪಟ್ಟು ವ್ಯಾಪಕ ಶಬ್ದ ಸಂಗ್ರಹ ಮಾಡಿರುವುದು ಇದುವರೆಗಿನ ಸಂಪುಟ ಗಳನ್ನು ಅವಲೋಕಿಸಿದಾಗ ಯಾರಿಗಾದರೂ ಅರ್ಥವಾಗುತ್ತದೆ. ಆದರೆ ಒಂದು ಜೀವಂತಭಾಷೆಗೆ ಕಾಲಗತಿಯಲ್ಲಿ ಹೊಸ ಹೊಸ ಶಬ್ದಗಳು, ಹೊಸ ಹೊಸ ಪ್ರಯೋಗಗಳು ಸೇರಿಕೊಳ್ಳುತ್ತಲೇ ಇರುತ್ತವೆ. ಅಂದಾಗ ಅಚ್ಚಾಗಿರುವ ಸಂಪುಟಗಳಲ್ಲಿ ಅಂತಹ ಎಷ್ಟೋ ಹೊಸ ಶಬ್ದಗಳು, ಬಳಕೆಗಳು ಕೈಬಿಟ್ಟುಹೋಗಿರುವ ಸಾಧ್ಯತೆ ಇಲ್ಲದಿಲ್ಲ.

ಇಂತಹ ನಿಘಂಟುಗಳ ಕಾರ್ಯ ಇಲ್ಲಿಗೇ ಕೊನೆ ಎನ್ನುವಂತಿಲ್ಲ. ಅವು ಪುನಃ ಪುನಃ ಪರಿಷ್ಕರಣಕ್ಕೆ ಒಳಗಾಗುತ್ತಲೇ ಇರಬೇಕಾಗುತ್ತದೆ. ಭಾಷೆಯ ಬಳಕೆಯೊಡನೆ ನಿಘಂಟಿನ ಸಂಬಂಧ ಬೆಳೆದುಕೊಂಡೇ ಬರುತ್ತದೆ. ಇದನ್ನು ಗಮನದಲ್ಲಿಟ್ಟು ಕೊಂಡು ಈಗಾಗಲೇ ಪೂರ್ಣಗೊಂಡಿರುವ ಏಳು ಸಂಪುಟಗಳ ಪರಿಷ್ಕರಣಕಾರ್ಯವನ್ನು ಕೈಗೆತ್ತಿಕೊಳ್ಳಲು ನೆರವಾಗ ಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಲಾಗಿದೆ. ಎಂಟನೆಯ ಸಂಪುಟ ಇನ್ನೊಂದು ವರ್ಷದೊಳಗೆ ಮುಗಿಯಲಿದ್ದು ಅದರ ಪರಿಷ್ಕರಣಕಾರ್ಯವೂ ನಡೆಯಬೇಕಾಗುತ್ತದೆ. ರಾಜ್ಯಸರ್ಕಾರ ಈ ಕಾರ್ಯಕ್ಕೆ ಸಕಾಲದಲ್ಲಿ ನೆರವಾಗುವುದೆಂದು ನಂಬಿದ್ದೇನೆ.

ಕನ್ನಡ–ಕನ್ನಡ ನಿಘಂಟು ಕಾರ್ಯ ಪರಿಪೂರ್ಣವಾಗಿ ಸರ್ಕಾರದ ಯೋಜನೆ. ಕನ್ನಡ ಸಾಹಿತ್ಯ ಪರಿಷತ್ತು ಅದನ್ನು ನಿರ್ವಹಿಸುತ್ತಿದೆ. ಈ ಯೋಜನೆಯನ್ನು ಪೂರ್ಣಗೊಳಿಸುವ ಸಲುವಾಗಿ ನಿಗದಿಪಡಿಸಲಾಗಿರುವ ಕಾಲಾವಧಿಯನ್ನು ವಿಸ್ತರಿಸಲು ಹಾಗೂ ಅಗತ್ಯವಾದ ಅನುದಾನವನ್ನು ಮಂಜೂರು ಮಾಡಲು ಕರ್ನಾಟಕ ಸರ್ಕಾರ ತುಂಬ ಸಹಕಾರ ನೀಡುತ್ತಿದೆ. ಇದಕ್ಕಾಗಿ ಸಂಬಂಧಿಸಿದವರಿಗೆಲ್ಲ ಕನ್ನಡ ಸಾಹಿತ್ಯ ಪರಿಷತ್ತು ಚಿರಋಣಿ.

ಕನ್ನಡ ನಿಘಂಟಿನ ಮುದ್ರಣಕಾರ್ಯ ಸುಲಭವಾದ್ದೇನೂ ಅಲ್ಲ. ಇಂಥ ಕ್ಲಿಷ್ಟವಾದ ಕೆಲಸವನ್ನು ಅತ್ಯಂತ ಸಮರ್ಥವಾಗಿ ಅಚ್ಚುಕಟ್ಟಾಗಿ ಮಾಡಿಕೊಟ್ಟಿದ್ದಾರೆ ಸರ್ಕಾರಿ ಮುದ್ರಣಾಲಯದವರು. ಹಿಂದಿನ ನಿರ್ದೇಶಕರಾದ ಶ್ರೀ ಇ. ಕೃಷ್ಣನಾರಾಯಣ ಮತ್ತು ಈಗಿನ ನಿರ್ದೇಶಕರಾದ ಶ್ರೀ ಡಿ. ಎಸ್. ಅಶ್ವಥ್ ಅವರಿಗೂ, ಇತರ ಅಧಿಕಾರಿಗಳು ಹಾಗೂ ಸಿಬ್ಬಂದಿಗಳಿಗೂ ಧನ್ಯವಾದಗಳು.

ಪ್ರಸ್ತುತ ಏಳನೆಯ ಸಂಪುಟದ ಸಿದ್ಧತೆಯ ಕಾರ್ಯದಲ್ಲಿ ನಿಘಂಟಿನ ಹಿಂದಿನ ಪ್ರಧಾನ ಸಂಪಾದಕರೂ, ಅಧ್ಯಕ್ಷರೂ ಆದ ಪ್ರೊ॥ ಜಿ. ವೆಂಕಟಸುಬ್ಬಯ್ಯ ಅವರ ಸೇವೆಯನ್ನು ಮತ್ತು ಈಗಿನ ಪ್ರಧಾನ ಸಂಪಾದಕರಾಗಿರುವ ಶ್ರೀ ಎನ್. ಬಸವಾರಾಧ್ಯ ಅವರ ಶ್ರಮವನ್ನು, ನಿಘಂಟು ಸಂಪಾದಕ ಮಂಡಳಿಯ ಅಧ್ಯಕ್ಷರಾಗಿರುವ ಡಾ॥ ಜಿ. ಎಸ್. ಗಾಯಿ ಅವರ ಸೇವೆಯನ್ನು ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ. ಸಂಪಾದಕ ಮಂಡಳಿಯ ಎಲ್ಲ ಸದಸ್ಯರಿಗೂ, ನಿಘಂಟು ಸಿಬ್ಬಂದಿ ವರ್ಗಕ್ಕೂ ಪರಿಷತ್ತು ಆಭಾರಿಯಾಗಿದೆ. ಅಷ್ಟೇ ಅಲ್ಲದೆ ಪರಿಷತ್ತಿನ ಹಿಂದಿನ ಅಧ್ಯಕ್ಷರಾದ ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯನವರಿಗೂ, ಪದಾಧಿಕಾರಿಗಳಿಗೂ, ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಈ ಕಾರ್ಯದಲ್ಲಿ ನೆರವಾದ ಎಲ್ಲರಿಗೂ ಅನಂತ ವಂದನೆಗಳು.

ದಿನಾಂಕ : ೧-೧೧-೧೯೯೩

ಬೆಂಗಳೂರು – ೫೬೦ ೦೧೮

ಗೊ. ರು. ಚನ್ನಬಸಪ್ಪ
ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

**ಬಿಲ್ಲ$_2$**, ಬಿಲ್ಲವ$_2$ (ನಾ). ಬೇಡ; ಕಿರಾತ; ವ್ಯಾಧ: "ಬಿಲ್ಲನೆಂಬ ನಾಮಂ ವ್ಯಾಧನಲ್ಲಿ" (ಶಬ್ದಕೈ. ೩೮): ಮೆಯ್ಮವಿರ್ ಪೞಿಗುಮೆಂದು ವಿಡುಕಲೊಲ್ಲದಲ್ಲಿಯೆ ಸಂದು ಬಿಲ್ಲರ್ಗೆ ತವ್ವಿಂ ತಾವೆ ಪಡುಮಿಗಂಗುಡುವ ಚಮರೀಮೃಗಂಗಳುಂ (ಕಂಠ್ರ್ಯ. ೩-೬೩ ವ). **ಬಿಲ್ಲವ$_2$** : ತೊಡೆಚಲ್ಲಣ ತೊಟ್ಟ ಜೋಡು ಬಿಡದೆ ಮೆಱೆಯೆ ಬಿಲ್ಲವರು ನಡೆತಂದರು (ಕುಂಠಸಾಂ. ೧೧-೩೩) ; ಹುದುಗಿರ್ದ ಹೊದೆಯಿಂದೆ ಕಾರೊಡಲ ಬಿಲ್ಲವನುರದೆ ಚಿಮ್ಮಿ ತುಡುಕಿದನದಂ ಮಾಂಸದೊಲವಿಂದೆ (ಶ್ರೀರಾಮ. ೨-೨೩). [< ಸಂ. ಭಿಲ್ಲ]

**ಬಿಲ್ಲ$_3$** (ನಾ). ಒಂದು ಬಗೆಯ ಸಸ್ಯ : ಬಿಳಿಪಾದ್ರಿ, ಹುದ್ದೆ, ಬಿಲ್ಲ, ಹುವ್ವುಲವೆ, ಹುಲವ (ವೃಕ್ಷಿಗ. ೬೨-೦೪೬೬). [ ?./ಸಂ. ಬಿಲ್ಲ=ಇಂಗು]

**ಬಿಲ್ಲಣಿ** (ನಾ). ಬಿಲ್ಲಾಳುಗಳ ಸೈನ್ಯ ; ಬಿಲ್ಗಾರರ ಸೇನೆ : ಬಿಲ್ಲಣಿ ಬಿಲ್ಲಣಿಯೊಳೆಯ್ದೆ ತೇರ್ ತೇರೊಳ್ ತಳ್ವಿಲ್ಲದೆ ತಾಗಿದುದು (ವರ್ಧಮಾ. ೪-೩೩) ; ರಣಗಟ್ಟಿಲೆ ಕೈಮಿಗೆ ಬಿಲ್ಲಣಿ ಕಡುಕೆಯ್ದು ಭಯಬಲದೊಳಂಬಿಕ್ಕುವುದುಂ (ಶಂಠಾಪು. ೧೩-೩೯); ಕಡುಮುಳಿಸಿಂ ಬಿಲ್ಲಣಿ ತಳ್ತಿಱಿಯುತ್ತಿರ್ದುದು (ಶಬ್ದಕಾ. ೨೬೦). [ಬಿಲ್$_2$ + ಅಣಿ$_3$]

**ಬಿಲ್ಲಪಕ್ಕಣ** (ನಾ). ಬೇಡರಂ ವಾಸಿಸುವ ಹಳ್ಳಿ : ಗೊಲ್ಲಪಳ್ಳಿಗಳೊಳು ಗುಹಾಂತರ ಬಿಲ್ಲಪಕ್ಕಣದೊಳು . . . ಬೆಂಬತ್ತಿದನು ಬಿಡದಾ ಕನಕಮಯ ಮೃಗವ (ತೊರಂಜಿ. ೩-೮-೩೮). [ಬಿಲ್ಲ$_2$ + ಪಕ್ಕಣ]

**ಬಿಲ್ಲಪಳ್ಳಿ** (ನಾ). = ಬಿಲ್ಲಪಕ್ಕಣ : ಅಱದಿನಿಸಂ ಬೆಟ್ಟದೆ ತಾಟಿಸ್ಸಿಱಿಗೊಂಡಿರಲೆಂದು ಬಿಲ್ಲಪಳ್ಳಿಗಳೆಲ್ಲಂ ತೊಱೆದುವು ಕೊಱೆದಡಿಗಳಂ (ಜಗು. ೪-೧೧). [ ಬಿಲ್ಲ$_2$ + ಪಳ್ಳಿ$_1$ ]

**ಬಿಲ್ಲವ$_1$** 'ಬಿಲ್$_2$' ಪರಾ.

**ಬಿಲ್ಲವ$_2$** 'ಬಿಲ್ಲ$_2$' ನೋ.

**ಬಿಲ್ಲವತ್ತ** ' ಬೆಲ್ಲವತ್ತ' ನೋ.

**ಬಿಲ್ಲವೆಲ್ಗಂಡ ?** (ನಾ). ಒಂದು ಪ್ರಾಂತದ ಹೆಸರು (?) : ಆತನಿಂ ಕಿಱಿಯಂ ಮೂವತ್ತಿಚ್ಛಾಸಿರದ ಬಿಲ್ಲವೆಲ್ಗಣ್ಣಸಿಮೆಯಿನ್ದ ಕಿಱಿಯ ಪೊನ್ನಯ್ಯ ಬಲ್ಲಹನ ಬೆಸದಾಳು ಗಜಾಂಕುಶಚೋೞನ ಮೇಗೆ ದಣ್ಡು ಪೋಗಲು (ಸೌಇಇ. IX – i. ೨೩-೬ ; 948). [ ? ]

**ಬಿಲ್ಲಹದಿಕೆ** (ನಾ). ಒಂದು ಬಗೆಯ ತೆರಿಗೆ : ಪಂಚಕಾರುಕ ಕಬ್ಬಿನದ ಸುಂಕ ಬಿಲ್ಲಹದಿಕೆ ಬಾಲವಣ (ಎಕ. XVI. ತಿಪ್ಪಾ. ೬೦-೨೯ ; 1330). ' ಬಿಲುವಡಿಕೆ ' ಪರಾ. [? + ಹದಿಕೆ$_1$ (< ಪೊದಕೆ$_2$) ]

**ಬಿಲ್ಲಹಾವು** (ನಾ). ಮರದಲ್ಲಿ ವಾಸಿಸುವ, ಉದ್ದವಾದ ವಿಷಪೂರಿತ ಹಸುರುಹಾವು : (♦). [ಬಿಲ್ಲ$_?$ + ಹಾವು (<ಪಾವು$_1$) ]

**ಬಿಲ್ಲಾಯ್ತ** (ನಾ). = ಬಿಲ್ಗಾರ : ಅವನೆ ಬಿಲ್ಲಾಯ್ತರಲಿ ಗಡ ಪಿನಾಕಿ ! (ಹಪ್ಪರ. ೩-೨೬). [ಬಿಲ್$_2$ + – ಆಯ್ತ ]

**ಬಿಲ್ಲಾಳ್**, ಬಿಲ್ಲಾಳು (ನಾ). ಬಿಲ್ಲುಗಾರ; ಬಿಲ್ವಿದ್ಯೆಯನ್ನು ಬಲ್ಲ ವೀರ: "ಬಿಲ್ಬಂಟನೆಂದು ಬಿಲ್ಲಾಳೆನ್ನಲ್ ವೀರರ್ಗೆ ನಾಮಮಕ್ಕುಂ" (ಶಬಿಕಂ. ೦೨೬) ; ದೊಣೆಯಿಲ್ಲದ ಬಿಲ್ಲಾಳ್ . . . ಎಣೆಯಿಲ್ಲದ ಜಕ್ಕವಕ್ಕಿ ಸೊಗಯಿಸಿದಪುದೇ (ಆಪು. ೬-೪೬) ; ಮಾರನಿದಿರೊಳ್ ಬಿಲ್ಲಾಳೆ (ಸೋಮೇಶ. ೬); ನೀನೆ ಜಗದ ಬಿಲ್ಲಾಳ್ಗಳೊಳಗೆ ಜಾಣ್ಮೆಯುಳ್ಳವನಪ್ಪೆ (ಕಿಪು. ೪೯-೦೪). **ಬಿಲ್ಲಾಳು** : "ಧನ್ವೀ, ಧನುಷ್ಮಾನ್, ಧಾನುಷ್ಕಃ, ನಿಷಂಗೀನ್, ಧನುರ್ಧರಃ— ಈ ೫ ಬಿಲ್ಲಾಳು" (ಪಾಪರಿ. ೦೩೪) ; ಕಾಮನೆಂಬ ಬಿಲ್ಲಾಳು ಉಂಟೆಂಬುದ ನಾವು ಕೇಳಿ ಬಲ್ಲೆವೈಸೆ (ಸಪುವ. ೩-೮). [ಬಿಲ್$_2$ + ಆಳ್$_3$]

**ಬಿಲ್ಲಾಳು** ' ಬಿಲ್ಲಾಳ್ ' ನೋ.

**ಬಿಲ್ಲಾಳುತನ** 'ಬಿಲ್ಲಾಳ್ತನ' ನೋ.

**ಬಿಲ್ಲಾಳ್ತನ**, ಬಿಲ್ಲಾಳುತನ (ನಾ). ಧನುರ್ವಿದ್ಯೆಯ ಪ್ರೌಢಿಮೆ ; ಬಿಲ್ಲುವಿದ್ಯೆಯ ನೈಪುಣ್ಯ : ಆತನ ಸಾಹಸದ ಚಲದ ಬಲದ ಬಿಲ್ಲಾಳ್ತನದಳವಿಗಳನಳಿದು ನೋಡಿ (ಶಂಕಖಾ. ೯-೦೩ ವ) ; ಜವನ ಬಿಲ್ಲಾಳ್ತನವಂ ಪೇಱಿಸ್ಪೊಡೆ (ರಮಾರ್ಣವ್ಯ. ೭-೯೫) ; ಪೊಸತು ಬಿಲ್ಲಾಳ್ತನದೊಳ್ ಕಲಿ ನೀನಲ್ಲದೆ ಪೆಱರಾರ್ (ಕಬಿಕಂ. ೪-೯೯). **ಬಿಲ್ಲಾಳುತನ** : ಪೂತು ಮರ್ಝು ಬಿಲ್ಲಾಳುತನವಿದು ಭೂತನಾಥಂಗಿಲ್ಲ (ಕುವ್ಯಾದ್ರೋ. ೬-೦೪). [ಬಿಲ್ಲಾಳ್ + – ತನ]

**ಬಿಲ್ಲು$_1$** 'ಬಿಲ್$_2$' ನೋ.

**ಬಿಲ್ಲು$_2$** (ನಾ). ೧. ಕಾನೂನಿನ ಮಸೂದೆ : ಹೊಸ ವಿಶ್ವವಿದ್ಯಾನಿಲಯದ ಸ್ಥಾಪನೆಯ ಬಿಲ್ಲು ವಿಧಾನಸಭೆಯಲ್ಲಿ ಚರ್ಚೆಯಾಗುತ್ತಿದೆ (ರೂಢಿ). ೨. ವ್ಯಾಪಾರದಲ್ಲಿ ವಿಕ್ರಯಿಸಿದ ಪದಾರ್ಥಗಳ ಅಥವಾ ಮಾಡಿದ ಕೆಲಸಕ್ಕಾಗಿ ಕೊಡಬೇಕಾಗುವ ಹಣದ ವಿವರವನ್ನು ಸೂಚಿಸುವ ಪಟ್ಟಿ; ಬೆಲೆಪಟ್ಟಿ : ತಾಲ್ಲೂಕುಕಚೇರಿಯಿಂದ ಸಂಬಳದ ಬಿಲ್ಲು ಪ್ಯಾಸಾಗಿ ಬಂದ ನಂತರ . . . ತೆಗೆದುಕೊಳ್ಳಬೇಕು (ಗ್ರಾಪುಕ. ೬) : ದುಡಿದದ್ದೆಲ್ಲ ಹೊಟ್ಟೆಗೆ – ಡಾಕ್ಟರ ಬಿಲ್ಲಿಗೆ (ಅನ್ನಾಪ. ೦೫). [← ಇಂ. Bill]

**ಬಿಲ್ಲುಂಬೆರಗು** 'ಬಿಲ್ಲುಂಬೆಱಗು' ನೋ.

**ಬಿಲ್ಲುಂಬೆಱಗು**, ಬಿಲ್ಲುಂಬೆರಗು (ನಾ). ಕಕ್ಕಾಬಿಕ್ಕಿ ; ದಿಗ್ಭ್ರಮೆ : ನೆಗಱ್ತೆಯ ಬೀರರೆಲ್ಲಂ ಬಡವರ ಪಿತರರಂತೆ ಮಿಳ್ಮಿಳ ನೋಡುತ್ತಿರೆ . . . ಬಿಲ್ಗಳಂ ಮುಂದಿಟ್ಟು ಬಿಲ್ಲುಂಬೆಱಗುವಾಗಿರೆ (ಶಂಕಖಾ. ೭-೩೩ ವ) ; ಸಾಲ್ವಂ ಬಲಿಸೂನು . . . ಕಂಡು ಬಿಲ್ಲುಂಬೆಱಗಾದರೊರ್ವೊರ್ದಲೆ ಪಾಱುವುದುಂ ಶಿಶುಪಾಲಮಸ್ತಕಂ (ಜಗಪ. ೦೭-೩೪) ; ಮಾರಿದತ್ತನೃಪಂ ಬಿಲ್ಲುಂಬೆಱಗು ಮಾದನುದ್ವೇಗಪರಂ (ಯಶೋಚ. ೪-೬೦). **ಬಿಲ್ಲುಂಬೆರಗು** : ಥಾಮ ನಾಯಕ : (ಬಿಲ್ಲುಂಬೆರಗಾಗಿ) ಏನು ? (ಕುಗುಗಂ. ೪-೦೯). [ಬಿಲ್ಲು ? + ಬೆಱಗು]

**ಬಿಲ್ಲುಂಬೆಱಗುವಡು** (ಕ್ರಿ). ದಿಗ್ಭ್ರಮೆಹೊಂದು ; ಕಕ್ಕಾಬಿಕ್ಕಿಯಾಗು : ತಬ್ಬಿಬ್ಬುಗೊಂಬ ತುರಗಾರೋಹಕಪ್ರತತಿ ಬೆಬ್ಬಳಿಸಿ ಬಿಳ್ದು ಬಿಲ್ಲುಂಬೆಱಗುವಟ್ಟು ನಿಂದಾ ಮಹಾರಥಸಂತತಿ (ಸಪ್ತ್ಯಕ. ೮-೬೩). [ಬಿಲ್ಲುಂಬೆಱಗು + ಪಡು$_1$]

**ಬಿಲ್ಲುಗಾರ** 'ಬಿಲ್ಗಾಱ' ನೋ.

**ಬಿಲ್ಲುಗಾರಿಕೆ** 'ಬಿಲ್ಗಾಱಿಕೆ' ನೋ.

**ಬಿಲ್ಲುಗಾಱ** 'ಬಿಲ್ಗಾಱ' ನೋ.

**ಬಿಲ್ಲುಗೆಡು** (ಕ್ರಿ). ಬಿಲ್ಲನ್ನು ಕಳೆದುಕೊಳ್ಳು; ಧನುಸ್ಸು ಇಲ್ಲವಾಗು : ಹಲ್ಲುಮುಱಿದಹಿಯಂತೆ ಕಣನಲಿ ಬಿಲ್ಲುಗೆಟ್ಟವನಂತೆ . . . ಭಲ್ಲುಕರ ಘರ್ಜನೆಗೆ ಕಲ್ಲೆದೆ ತಲ್ಲಣಿಸುತಿರೆ (ಶೌರಿಶಾ. ೦೯-೩). [ಬಿಲ್ಲು$_1$ (< ಬಿಲ್$_2$) + ಕೆಡು$_1$]

**ಬಿಲ್ಲುರಿಗ** (ನಾ). ಒಂದು ಬಗೆಯ ಹಾವು : ಬಿಲ್ಲುರಿ[ಪಾಠಾಂ.ಲಿ]ಗಂ ಕೊಂಡೊಡೆ ತಡವಿಲ್ಲದೆ ತೊಡೆ ಕಡವು ನೀಲಿ ನುಗ್ಗೆಯ ಬೇರ (ಜಪುದ. ೦೦-೬೨). 'ಬಿಲುಘುರಿ'. 'ಬಿಲ್ಲೂರಿಹಾವು' ಪರಾ. [?]

**ಬಿಲ್ಲುಲಿ** (ನಾ). = ಬಿಲ್ದನಿ : "ಜೇವೊಡೆ ಬಿಲ್ಲುಲಿಯೆಂದೆನಲಾವಗ ಗುಣನಾದ" (ಶಬಿಕಂ. ೮೨). [ಬಿಲ್$_2$ + ಉಲಿ$_2$]

**ಬಿಲ್ಲುವಿದ್ಯೆ**, ಬಿಲುವಿದ್ಯೆ (ನಾ). = ಬಿಲ್ವಿದ್ದೆ : ಆ ಮುನಿಪತಿಗೆ ಶಿಷ್ಯನಾಗಿಯೆ ಪ್ರೇಮದಲಿ ವರಬಿಲ್ಲುವಿದ್ಯೆಯ ನೇಮಗೊಂಡೇ ಸಾಧಿಸಿದನಾ ಕೆಲವುಕಾಲದಲಿ (ಸಂಭಶ. ೦೯-೦೭). **ಬಿಲುವಿದ್ಯೆ** : ಕುರುಕುಲದ ಮಕ್ಕಳಿಗೆ ಬಿಲುವಿದ್ಯೆ ಕಲಿಸುವನಂತೆ (ಹಪ್ಪರ. ೨-೦೨). [ಬಿಲ್ಲು$_1$ (<ಬಿಲ್$_2$) + ವಿದ್ಯೆ]

**ಬಿಲ್ಲೂರಿಹಾವು** (ನಾ). = ಬಿಲ್ಲಹಾವು : (♦). [? + ಹಾವು (< ಪಾವು$_1$)]

**ಬಿಲ್ಲೆ** (ನಾ). ೧. (ತರಕಾರಿ, ಕಲ್ಲು, ಲೋಹ ಇತ್ಯಾದಿಗಳ) ಚೌಕ, ವೃತ್ತ ಮೊದಲಾದ ಆಕಾರಗಳ ತೆಳುವಾದ ಹಲ್ಲೆ: ಹುರಿಮೆಣಸು ಗಡಲೆ ಸಕ್ಕರೆ ಶುಂಠಿ ಕಬ್ಬುವಿಲ್ಲೆಗಳನುಱೆ ಮಾಱುವರ್ ಬರುತಿರ್ದರು

(ಶಿಂಪ್ಪ. ೯೭-೯೨) ; ಕಾಲಿಶದ ಚಿಕ್ಕಬಿಲ್ಲೆಗಳೋ . . . ಚಂದ್ರಕಾಂತದ ಶಿಲೆಯ ಬಿಲ್ಲೆಯೊ (ಕವಳಾ. ೨೭-೯೦). ೨. (ಹಿಂದಿನ ಕಾಲದಲ್ಲಿ ಪ್ರಚಲಿತವಾಗಿದ್ದ) ಮೂರುಕಾಸಿನ ನಾಣ್ಯ : ಇವರಿಗೆ ಸಿಕ್ಕುವ ಈ ಇಪ್ಪತ್ತು ಬಿಲ್ಲೆಗಳಿಗೇನಾದರೂ ಕೈಹಚ್ಚಿದ್ದವೆ ? (ಅಗಸ್ಟ. ೩೦); ಉಪನಯನಕ್ಕೆ ಮುಂಚೆ ಬರೆ ಒಂದು ಬಿಲ್ಲೆ ದಕ್ಷಿಣೆ ಸಿಗುತ್ತಿತ್ತು (ಶ್ರೀಕೃ. ೧೫೭). ೩. ನಾಣ್ಯ : ಅವನಿಗೆ ನಾಲ್ಕಾಣೆ ಬಿಲ್ಲೆ ಸಿಕ್ಕಿತು (ಕೂಪ). ೪. "ಒಂದು ಅಧಿಕಾರದ, ಉದ್ಯೋಗದ ಅಥವಾ ಸಂಸ್ಥೆಯ ಗುರುತಾಗಿ ಧರಿಸುವ ಲಾಂಛನ" (Badge. ಇಂಕಅ) : ಕಾವ್ಯಸರಸ್ವತಿಯ ಸೇವಕನಾಗಿ, ಅವಾಂತರದಲ್ಲಿ ಇಂದು ಗಣಪತಿಯ ದರಬಾರಿನ ಬಿಲ್ಲೆಯನ್ನು (Badge) ಧರಿಸಿಕೊಂಡು ಕುಳಿತಿದ್ದೇನೆ (ಶಿವಂಥ. II, ೨೦೨). ೫. ಹೆಂಚು : 'ಚದುರುಬಿಲ್ಲೆ' ಪರಾ.

[← ಹಿಂ. ಮರಾ. ಬಿಲ್ಲಾ./ತಮಿ. ಪಿಲ್ಲೈ, ವಿಲ್ಲೈ; ಮಲ. ವಿಲ್ಲ ; ತುಳು. ಬಿಲ್ಲೆ ; ತೆಲು. ಬಿಳ್ಳ, ಬಿಲ್ಲ]

**ಬಿಲ್ಲೆಜವಾನ** (ನಾ). ತನ್ನ ಹುದ್ದೆಯ ಗುರುತನ್ನು ಸೂಚಿಸುವ ಬಿಲ್ಲೆಯನ್ನು ಧರಿಸಿದ ಸೇವಕ : ಫೌಜುದಾರರು ೫, ಬಿಲ್ಲೆಜವಾನರು ೫೦, ಬೋವಿಯವರು ೨೪ (ಗುರುದ. ೧೧). 'ಡವಾಲಿಜವಾನ' ನೋ.

[ಬಿಲ್ಲೆ + ಜವಾನ]

**ಬಿಲ್ಲೆಸುಗೆ** (ನಾ). ಬಿಲ್ಲಿನಿಂದ ಬಾಣವನ್ನು ಬಿಡುವುದು ; ಧನುರ್ವಿದ್ಯೆ: ವಿದುರನಿಗೆ ಬಿಲ್ಲೆಸುಗೆ ಕಲಿಸಿದವರಾರ್ಗೆ ? (ಹಪ್ಕರ. ೩-೯೦).

[ಬಿಲ್$_2$ + ಎಸುಗೆ]

**ಬಿಲ್ಲೆಹುಳು** (ನಾ). ಜೋಳಕ್ಕೆ ಹತ್ತುವ ಒಂದು ಬಗೆಯ ಹಸುರು ಹುಳು : (+). [ಬಿಲ್ಲೆ? + ಹುಳು (<ಪುಟು)]

**ಬಿಲ್ಲೊಜೆಯ** (ನಾ). ೧. ಬಿಲ್ಲುವಿದ್ಯೆಯನ್ನು ಕಲಿಸುವ ಗುರು ; ಧನುರ್ವಿದ್ಯಾಗುರು : ಸಾರಲಿಂ ಬಿ[ಪಾಠಾಂ.ಬ]ಲ್ಲೊಜೆಯನೆಂದುಪೆ ಮಾತು (ಕಮದ. ೨೩೪ ಪ್ರಯೋ). ೨. ಪಾಂಡವ, ಕೌರವರುಗಳಿಗೆ ಧನುರ್ವಿದ್ಯೆಯನ್ನು ಕಲಿಸಿದ ಗುರು ; ದ್ರೋಣಾಚಾರ್ಯ : ಬಿಲ್ಲೊಜೆಯನೊಡ್ಡಿದ ನಂಕದ ಚಕ್ರವ್ಯೂಹಮನಾಹವರಂಗದೊಳ್ ((ಶಂಕಖಾ. ೧೧-೮೭); ಬಿಲ್ಲೊಳೀಕಿಜೆಯವರಂ ಕುಮಾರಕರನೆಯ್ದೆ ಕರಂ ಕುಶಳರ್ಕಳಾಗೆ ಬಿಲ್ಲೊಜೆಯ ಸಮಂತು ಮಾಡಿಮೆನೆ (ವೇಖಪ್ಪ. ೯-೦೨). [ಬಿಲ್$_2$ + ಒಜೆಯ]

**ಬಿಲ್ಲೊವಜ**, ಬಿಲ್ಲೋಜ (ನಾ). ೧. = ಬಿಲ್ಲೊಜೆಯ ೧. ೨. = ಬಿಲ್ಲೊಜೆಯ ೨ : ಕಮ್ಮಟಿಯೊವಜಂ ಬಿಲ್ಲೊವಜನೆಂಬುದಂ ಮಾಡುವೆನೇ (ಶಂಕಖಾ. ೦೨-೩). **ಬಿಲ್ಲೋಜ** : ೧. ದಾನೋಪಾಧ್ಯಾಯನಾತ್ಮಾಕೃತಿಯ ತನುಗೆ ಬಿಲ್ಲೋಜನೋಜಃಪ್ರಸಾದಾಧೀನಂ (ಅರ್ಧನೇ. ೯-೩೫); ಬಿಲ್ಲೋಜರು ಪೆಟಲಂಬಿನವರು ತೇಜೋಮಯಬಾಣಗಾಬಿರೇಜಿತು ಖಿಗರಾಜನೆಜಂಕೆ ಬಿಕ್ಕೆಲದಿ (ಪೋಹತ. ೩೭-೯೨). ೨. ತಪ್ಪದೆ ಕಮ್ಮಟಿಯೋಜನೆನಿಸಿದಂ ಬಿಲ್ಲೋಜಂ (ಗದಾಯು. ೨-೦೩) ; ಈತನಹಿತಕೃತಾಂತಕುಂಭಜನೀತನಜಿ ಬಿಲ್ಲೋಜನೆಂಬವನು (ಸಾಳ್ವಭಾ. ೩೦-೦೫). [ಬಿಲ್$_2$ + ಒವಜ (<ಒವರ್ಝ)]

**ಬಿಲ್ಲೋಜ** 'ಬಿಲ್ಲೊವಜ' ನೋ.

**ಬಿಲ್ವ** (ನಾ). (ಪವಿತ್ರವೆಂಬ ಭಾವನೆಯಿಂದ ಪೂಜೆಗೆ ಉಪಯುಕ್ತವಾದ) ಒಂದು ಬಗೆಯ ಮರ ಮತ್ತು ಅದರ ಎಲೆ, – ದಳ : "ಮಾಲೂರಃ, ಶ್ರೀಫಲಃ, ಬಿಲ್ವ – ಈ ೩ ಬೆಲ್ಲವತ್ರದ ಪೆಸರ್" (ಹಲಾಯು. ೩೨-೯೦) : ಬಿಲ್ವ[ಪಾಠಾಂ. ಬಿಲಂ] ತೊಳಚಿ ಸಮಸ್ತಂ ದೆಯ್ವಮಿಂತಿವೆಂಬಮೂರ್ಖರ್ (ಸಚುತ. ೯-೩೨) ; ದೂರ್ವೆ ತುಲಸಿ ಬಿಲ್ವಾದಿ ಪತ್ರಜಾಲಂಗಳಂ . . . ಬೇಱೆ ಬೇಱೆ ಸಂಪಾದಿಸಿ (ಶಿವೇಕ. ೯೪).

**ಬಿಲ್ವಾಂಜನಮುರಾರಿ** = [ವೈದ್ಯಶಾ] (ಬಿಲ್ವಪತ್ರೆಯ ಬೇರು ಮತ್ತು ಇತರ ಕೆಲವು ಪದಾರ್ಥಗಳಿಂದ ತಯಾರಿಸುವ) ಒಂದು ಬಗೆಯ ಔಷಧ : ಪ್ಯೆಲುತುತ್ಥ . . . ಬಿಲ್ವದ ಬೇರು, ಕೊಮ್ಮೆ ಬೇರು, ಕರೀಹುಲಿಹೂವು, ಕಚೋರ, ಸೈಂಧವಲವಣ ಇಷ್ಟನ್ನೂ ಸಮಭಾಗ ಹಾಕಿ ಚೂರ್ಣಿಸಿ . . . ಕಣ್ಣಿನಲ್ಲಿಡಲು ಸ್ತ್ರೀಸಂಗದೋಷಗಳು, ನೇತ್ರರೋಗಗಳು, ಸರ್ಪವಿಷಗಳು, ಸನ್ನಿಪಾತಜ್ವರಗಳು ಸಹ ಪರಿಹಾರವಾಗುವುವು. ಇದಕ್ಕೆ ಬಿಲ್ವಾಂಜನಮುರಾರಿ ಎಂಬ ಹೆಸರಿದೆ (ಸಕವೈ. ಶಂ. ೯೦೯). **ಬಿಲ್ವಾದಿ ಅಂಜನ**=(ಬಿಲ್ವಪತ್ರೆಯ ಬೇರು ಇತ್ಯಾದಿಗಳಿಂದ ತಯಾರಿಸುವ) ಒಂದು ಬಗೆಯ ಅಂಜನ.—ಔಷಧಿ : ಬೆಲ್ಲವತ್ರದ ಬೇರು . . . ಅರಿಸಿನ ಇಷ್ಟು ಸಮಾನ ಚೂರ್ಣಂ ಮಾಡಿ ನಿಂಬೇಹಣ್ಣಿನ ರಸದಲ್ಲಿ ಮರ್ದಿಸಿ ಬಿಲ್ವಾದಿ ಅಂಜನ ಮಾಡುವುದು (ವೈಶಿ. ೯೦). **ಬಿಲ್ವಾದಿ ಕಲ್ಕ**= (ಬಿಲ್ವಪತ್ರೆಯ ಬೇರು ಇತ್ಯಾದಿಗಳಿಂದ ತಯಾರಿಸುವ) ಒಂದು ಬಗೆಯ ಕಲ್ಕ : ಪೈತ್ಯಜ್ವರ, ಛರ್ದಿ, ವಿದಾಹ ಮುಂತಾದುದಕ್ಕೆ ಬಿಲ್ವಾದಿ ಕಲ್ಕ (ಸಕವೈ. ೭೭). **ಬಿಲ್ವಾದಿ ಲೇಹ್ಯ**= (ಬಿಲ್ವಪತ್ರೆಯ ಬೇರು ಮುಂತಾದುವುಗಳಿಂದ ತಯಾರಿಸುವ) ಒಂದು ಬಗೆಯ ಲೇಹ್ಯ : ಬಿಲ್ವಾದಿ ಲೇಹ್ಯ :—(ಆಮಾತಿಸಾರಕ್ಕೆ)- ಬೆಲ್ಲವತ್ರದ ಬೇರು ಹಲ ೩೦ . . . ಜೇನುತುಪ್ಪ ಮಾನ ೧ ಲೇಹ್ಯಪಾಕ (ವೈಶಿ. ೯೦) ; ಬಿಲ್ವಾದಿ ಲೇಹ್ಯ . . . ಇದು ಅರೋಚಕ, ಛರ್ದಿ, ಮಂದಾಗ್ನಿ, ಶ್ವಾಸರೋಗಗಳನ್ನು ಹೋಗಲಾಡಿಸುವುದು (ಸಕವೈ. ಶಂ. ೯೫೫).

[ಸಂ.]

**ಬಿಲ್ವಡೆ** (ನಾ). ಬಿಲ್ಗಾರರ ಸೇನೆ : ಇಱಿದುಂ ಬಿಲ್ವಡೆ ಪಡೆದುದು ಭೋರ್ಗರೆದು ಪರಿವ ನೆತ್ತರ ಕಡಲಂ (ಶಂಖಭಾ. ೧೧-೭೫) ; ಬಿಲ್ವಲಿಕೆಯಿಂದಿದಿರ್ಚಿದ ಬಿಲ್ವಡೆ ತನ್ನೆಚ್ಚ ನಿಶಿತಶರಸಂಹತಿಯಿಂದೆಲ್ವಡಗಾಯು (ಕಾವ್ಯಾವ. ೭೯) ; ಇರದೆ ಬಿಲ್ವಡೆ ಬಂದಂಬಿಕ್ಕಲಂಬಂಬನೊರಸಿ ಕೆದಱಿದ ಕಿಡಿಗಳು ಕರಮೆಸೆದವು (ಕುಮಾರಾಂ. ೦೨-೫೩). [ಬಿಲ್$_2$ + ಪಡೆ$_2$]

**ಬಿಲ್ವಪತ್ರೆ** (ನಾ).=ಬಿಲ್ವ : ಬಿಲ್ವಪತ್ರೆಯ ಬೇರು, ಗುಳ್ಳದ ಬೇರು . . . ಇವುಗಳ ಕಷಾಯವಂ ಕಾಯಿಸಿ ಸೇವಿಸಿದಲ್ಲಿ ವಾತಜ್ವರ ಪರಿಹಾರವಾಗುವುದು (ಸಕವೈ. ೬೫) ; ನಾನು ಗೋದಾವರಮ್ಮನ ಮನೆಗೆ ಬಿಲ್ವಪತ್ರೆಗೆಂದು ಹೋಗಿದ್ದು, ಅಲ್ಲಿ ಅವರು ಕೇಳಿದ್ದು ಹೇಳಿದೆ (ಶ್ರೀಕೃ. ೦೫೭).

[ಸಂ. ಬಿಲ್ವಪತ್ರ]

**ಬಿಲ್ವಫಲ** (ನಾ). ಬಿಲ್ವಪತ್ರೆಯ ಕಾಯಿ : ಧನು ಬಿಲ್ವಫಲವನೊಂದೇ ವೇಳೆ ಒಡೆದಾವ ಮನುಜನೆಸಬಲ್ಲನಿಳೆಯೊಳು ಗುರಿಯನು (ಜೈಕೃ. ೨೨-೯೫) : ಬಿಲ್ವಫಲ ತುಪ್ಪ ಜೇನುತುಪ್ಪ ಸಜ್ಜರಸ ಕರ್ಪೂರವೆಂಬ ದಶಾಂಗಧೂಪಂಗಳಂ . . . ಬೇಱೆ ಬೇಱೆ ಸಂಪಾದಿಸಿ (ಶಿವೇಕ. ೯೯).

[ಸಂ.]

**ಬಿಲ್ವರ$_1$**, ಬಿಲಾರ, ಬಿಲುವರ, ಬಿಲುವರೆ, ಬಿಲ್ವಾರ$_1$ (ನಾ). ಒಂದು ಬಗೆಯ ಮರ ; ಕೆಂಪುಮತ್ತಿ ; ಧನ್ವಿ : "ಬಿಲ್ವರಂ ಧನ್ವಿಯಕ್ಕು" (ಕುಂಗರಾ. ೩೭-೦೬). **ಬಿಲಾರ** : "ಅಬನಾಶಿ, ಬಿಲಾರದ ಮರ, ತುಂಬುರಸು, ಬಿಲಾರ, ತೂಬರ" (ಸಸ್ಯನಿ. ೫೦). **ಬಿಲುವರ** : ಬಿಲುವರ ಕಪಿತ್ಥ ಸೈಕಣಿಕೆ (ಕುಕ್ಕುಂಗ. ೧೦-೨). **ಬಿಲುವರೆ** : ಬಡಗ ಪುತ್ತಿರಲ್ ಬಿಲುವರೆಯಿಂ ಮೂಡಲು ಮೂಗಯ್ಕಂ ಮಾಣ್ದಗುಟು (ಅಭಿಮು. ೦೦-೧೨). **ಬಿಲ್ವಾರ$_1$** : ಮರಗಳು . . . ತೇಗ, ಕೋಲುತೇಗ, ಬಾಗಿ, ಬಿಲ್ವಾರ, ದಿಂಡಿಗ, ಬೂರಗ (ಪಶುಪು. ೨೩೭) ; ಬಿಲ್ವಾರ, ಬಿಳಿವಾರ, ಬಜಾರಿ, ಬೆಟ್ಟಸುಜ್ಜಲು (ವೃಶಿಗ. ೯-೭೭). [ಬಿಲ್$_1$ + ಮರ$_1$]

**ಬಿಲ್ವರ$_2$**, ಬಿಲವರ, ಬಿಲವಾರ, ಬಿಲ್ವಾರ$_2$ (ನಾ). (ಉಕ) (ಒಂದು ಬಗೆಯ) ಚಿನ್ನದ ಬಳೆ ; ಬಂಗಾರದ ಬಳೆ : ಸ್ವರಾಜ್ಯಫಂಡು ಕೂಡಿಸಲು ಹೊರಟಾಗ ಕೈಯಲ್ಲಿ ಬಿಲ್ವರಗಳನ್ನು ಕೊಟ್ಟು ಆಗ ಆರು ವರ್ಷದ ಬಾಲಿಕೆಯು ಇವನನ್ನಾಕರ್ಷಿಸಿದ್ದಳು (ದಾಸಚು. ೯೫).

" ಬಿಸಕಂಠಂ ಬಳಾಕವೆನೆ ಬೆಳ್ಳಕ್ಕಿ " (ಷುಂಗರಾ. ೫೧-೬).
[<ಸಂ. ಬಿಸಕಂಠಿನ್]

**ಬಿಸಕಂಠಿಕೆ** (ನಾ). = ಬಿಸಕಂಠ$_2$ : " ಬಲಾಕಾ, ಬಿಸಕಂಠಿಕಾ — ಈ ೨ ಬೆಳ್ಳಕ್ಕಿ " (ಹಲಾಯು. ೪೨-೯೬); " ಬಲಾಕಾ. ಬಿಸಕಂಠಿಕಾ—೨ ಕೊರಳು ಉದ್ದವಾಗಿಯೂ, ಬಿಳುಪಾಗಿಯೂ ಇರುವ ದೊಡ್ಡಬೆಳ್ಳಕ್ಕಿಯ ಹೆಸರು" (ಸಿದ್ಧಾಂತ. ೧೬೦). [ಸಂ. ಬಿಸಕಂಠಿಕಾ]

**ಬಿಸಕಂದ** (ನಾ). ತಾವರೆಯ ಗಡ್ಡೆ ; ಕಮಲದ ಗಡ್ಡೆ : ಬಿಸಕಂದದಂತೆ ತೋರ್ಪ ತಿವೃತ್ತದಿಂ ಪೂರ್ಣರಸಭಾವದಿಂದಲಂಕಾರದಿಂ . . . ಮಹಾ ಕವಿಯ ತೆಱದೊಳಂತಲ್ಲಿಯ ಸರೋವರಂ ಕಣ್ಗೆಸೆದುದು (ಹರಿಶ. ೩-೪೩).
[ಸಂ.]

**ಬಿಸಕಾಂಡ** (ನಾ). ಕಮಲದ ನಾಳ ; ತಾವರೆಯ ದಂಟು,—ದೇಟು : ಕೋಮಳಬಿಸಕಾಂಡಮಂ ಬೆರಸು ನೀಡಿದನಾಗಳದೋರ್ವ ಲುಬ್ಧಕಂ (ಕಾದಂಪೂ. ೧೬೩); ಬಿಸಕಾಂಡಗರ್ಭದಿಂ ಪಡೆದನೊ ಪದ್ಮಗರ್ಭನೆನೆ . . . ಬೆಡಂಗುವೆತ್ತುದು ನರೇಂದ್ರವಧೂಧವಳಪ್ರಸಾಧನಂ (ವಾಲ್ಲಪು. ೪-೫೪). [ಸಂ.]

**ಬಿಸಗುಡಿ** (ಕ್ರಿ). ವಿಷವನ್ನು ಕುಡಿ,— ಪಾನಮಾಡು : ಅಂದು ಬಿಸಗುಡಿದು ಸಾಯದೆ ಭಕ್ತಕೃತಪುಣ್ಯದಿಂದ ಬದುಕಿದಂ (ಸಂದವಾ. ೦೬-೪೦). [ಬಿಸ$_1$ + ಕುಡಿ$_1$]

**ಬಿಸಗೊರಲ್**, ಬಿಸಗೊರಲು. ಬಿಸಗೊರಳಂ (ನಾ). ವಿಷವನ್ನು ಧಾರಣೆಮಾಡಿದ ಕೊರಳು : ನಂಜನ್ನು ಧರಿಸಿದ ಕಂಠ : 'ಬಿಸ ಗೊರಲ' ಪರಾ. **ಬಿಸಗೊರಲು** : ಲೋಕವನುರುಪುವಗ್ನಿಗಣ್ಬಿಸಗೊರಲು ತಲೆಮಾಲೆ (ಶೀಕ್ಷಪು. ೫-೫-೦). **ಬಿಸಗೊರಳು** : ಜಡವನಿತೆಯಂ ಪೊರೆವ ಸುಡುವಾ ಬಿಸಗೊರಳಲಿ (ಅಕ್ಕತ್ರಿ. ೪). [ಬಿಸ$_1$ + ಕೊರಲ್]

**ಬಿಸಗೊರಲ** (ನಾ). = ಬಿಸಕಂಠ$_1$ : ಬಿಸಗೊರಲನ ಬಿಸುಗಣ್ಣ ಸುತಂ ಬರುತ್ತೈದನೆ (ವೀರೇಶ. ೨-೨೫) ; ಕಲ್ಗಳಿಂ ಗುಂಡಿನಿಂ ಮರದ ಕೊಂಬಿನಿಂದೆ ಬಿಸಗೊರಲನಂ ಸೆಣಸಲೆಲೆ ತವಸಿ ನೀನೀಗ ಪೊಸತಾದ ಕೆಯ್ದುವುಳ್ಳೊಡೆ ಕೊಂಡು ಬಾರೆನಲ್ಕೆ (ಕಲಪು. ೫೩-೫೦). [ಬಿಸಗೊರಲ್ + —ಅ$_7$]

**ಬಿಸಗೊರಲು** ' ಬಿಸಗೊರಲ್ ' ನೋ.

**ಬಿಸಗೊರಳು** ' ಬಿಸಗೊರಲ್ ' ನೋ.

**ಬಿಸಜ** (ನಾ). ಕಮಲ ; ತಾವರೆ : ಬಿಸಜನಿತಂಬಿನೀಮನೋನಯನಾ ನಂದನನುಂ . . . ನಿತ್ಯೋದಯನುಮಪ್ಪ ಗಭಸ್ತಿಮಾಲಿಗರ್ಘ್ಯಮನೆತ್ತಿ (ಶಂಶಕಂ. ೨೫೫-೨೦) ; ಬಿಸಜದೆಸಟ್ಗಳಂ ಬಿಡೆ ಸಡಿಲ್ಚಿ . . . ಬಂದೆಸಗಿತು ಸುಪ್ರಭಾತದ ಸಮಿಾರಣಂ (ಪಾರ್ಶ್ವಪು. ೦೦-೭೮). [ಸಂ.]

**ಬಿಸಜಕರ್ಣಿಕೆ** (ನಾ). ತಾವರೆಯ ಬೀಜಕೋಶ ; ಕಮಲದ ಮಧ್ಯ ಭಾಗ : ಎಸಳೆಸಳು ಮಿಗೆ ಸರಿಸದಲಿ ಜೋಡಿಸಿದನವನೀಪಾಲರನು ತದ್ಬಿಸಜಕರ್ಣಿಕೆಯೊಡ್ಡಿನಲಿ ಬಲಿದನು ಸುಯೋಧನನ (ಕುಮಾರವ್ಯಾ. ೪-೦೬). [ಸಂ. ಬಿಸಜಕರ್ಣಿಕಾ]

**ಬಿಸಜಗಂಧಿ** (ನಾ). ತಾವರೆಯ ಹೂವಿನ ಪರಿಮಳದಂತೆ ಸುಗಂಧ ವುಳ್ಳವಳಂ ; ಕಮಲಗಂಧಿ : ಎಸಳುಗಂಗಳ . . . ಮುರಿದ ಕುರುಳಿನ ಬಿಸಜಗಂಧಿಯ ರೂಪನಭಿವರ್ಣಿಸುವಡರಿದೆಂದ (ಕುಮಾರ. ೦೩-೦೩) ; ಕರೆ ತಂದು ಬಿಸಜಗಂಧಿಯನು ಕೈಗೂಡಿಸುತ ಬಹಳ ಸಂತಸದಿಂದ . . . ತಾಂ ಸುಖದೊಳಿರುತಿರ್ದನು (ಶ್ರೀಶಾ. ೩-೦೦).
[ಸಂ. (ಬಿಸಜ + ಗಂಧ + —)]

**ಬಿಸಜತಂತು** (ನಾ). ಕಮಲದ ದಂಟಿನ ನಾರಂ, — ಎಳೆ ; ತಾವರೆಯ ದಂಟಿನ ಸೂತ್ರ : ಬಿಸಜತಂತುವಿನ ಸಂಚದಿಂದ ಮದಗಜ ಬಂಧವಡೆಯ ಬಲ್ಲುದೆ (ಶಶರ. ೫೪-೨೪೫). [ಸಂ.]

**ಬಿಸಜಬಂಧು** (ನಾ). ಕಮಲದ ಮಿತ್ರ : ಸೂರ್ಯ : ಬೆಸಸಿದುದಕೆ ಹಸಾದವೆಂದನು ಬಿಸಜಬಂಧುವ ಕಳುಹಿದನು (ಕುಮಾರವ್ಯಾ. ೦೦-೩೦).
[ಸಂ.]

**ಬಿಸಜಭವ** (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ : ಬಿಸಜಭವನಕ್ಕೆ ಮೃಡನಕ್ಕಸುರಾಂತಕನಕ್ಕೆ (ಶಂಶಭಾ. ೦೦-೦೨೦) : ಬಿಸಜಭವನೀತನನೆ ನಿರ್ಮಿಸಿ ಕಳಿಪಿದಂ (ವಿಷ್ಣುಪು. ೪-೦-೦೦೫). [ಸಂ.]

**ಬಿಸಜಲೋಚನ** (ನಾ). ಕಮಲದಂತೆ ಕಣ್ಣುಳ್ಳವನು ; ವಿಷ್ಣು : ಉದಯಾಸ್ತಮಯಕಾಲದಲಿ ಎಸೆವ ನಿದ್ರಾಂಗನೆಯೊಳೊಂಟರೆ ಬಿಸಜ ಲೋಚನನಾದೊಡೆಯು ವರ್ಜಿಸುವಳವರನು ಭಾಗ್ಯಸಿರಿ (ಕುಮಾರವ್ಯಾ. ೩-೫೬). [ಸಂ.]

**ಬಿಸಜಸಖ** (ನಾ). ಕಮಲದ ಗೆಳೆಯ ; ಸೂರ್ಯ : ಹೊಸರತ್ನನದ ಗೋಪುರದಿಂ ಬಿಸಜಸಖನನೇಳಿಪ ಕಳಸಂಗಳು ವಸುಧೆಗೆ ಹೊಸತಾಗಿಹವು (ತ್ರಿಷಷ್ಟಿಸಾಂ. ೬-೬೬) ; ಬಿಸಜಸಖನುದಯದಲಿ ಸತಿ ಮಾಸವೊಸೆದು. . . ಸಾರಿದಳು ತದ್ದೇವತಾಲಯಕೆ (ಜೀವಂಧ. ೧೪-೨೬). [ಸಂ.]

**ಬಿಸಜಾಕ್ಷ** (ನಾ). = ಬಿಸಜಲೋಚನ : ನಾಡೆ ರಂಜಿಸಿದಂ. . .ಶಂಕರಂ ಬಿಸಜಾಕ್ಷಾಕ್ಷಿಸಮರ್ಚಿತಾಂಘ್ರಿಕಮಲಂ ಪಂಪಾಂಬಿಕಾವಲ್ಲಭಂ (ಉದ್ಭಟ. ೦೨-೦೪೦). [ಸಂ. (ಬಿಸಜ + ಅಕ್ಷಿ + —) ]

**ಬಿಸಜಾಕ್ಷಿ** (ನಾ). ತಾವರೆಯಂತೆ ಕಣ್ಣುಳ್ಳವಳು ; ಕಮಲಾಕ್ಷಿ : ಬಿಸಜಾಕ್ಷಿಯೂ ಮಾತ ಮಱಿಹಿಟ್ಟು ಮನದೊಳಾರೈವುತಿರಲು (ಶ್ರೀಶಾ. ೨-೨೯). [ಸಂ. ಬಿಸಜಾಕ್ಷೀ (ಬಿಸಜಾಕ್ಷ + —)]

**ಬಿಸಜಾರಿ** (ನಾ). ಕಮಲದ ಶತ್ರು ; ಚಂದ್ರ : ಬಿಸಜಾರಿ ಹರಿಯೊಳಿರೆ ವೀಕ್ಷಿಸೆ ಕನಕಾದಿಗ್ರಹಂ ಮಹೀನಾಥಂ...ಅಕ್ಕುಂ (ಜಾತಕ. ೨೦-೫). [ಸಂ.]

**ಬಿಸಟಂಬರಿ** 'ವಿಸಟಂಬರಿ$_1$' ನೋ.

**ಬಿಸಣಿಗೆ** 'ಬೆಸಳಿಗೆ' ನೋ.

**ಬಿಸದಳ** (ನಾ). = ಬಿಸವಂದ : (+). [?]

**ಬಿಸನಾಳ** (ನಾ). ತಾವರೆಯ ದಂಟು ; ಮೃಣಾಳ : ಬಿಸಿಲೆಲ್ಲಂ ಬಿಸನಾಳ ಜಾಲಕದಿನಾಗಳ್ಕೂಡೆ ಪೀರ್ತಂದುದು . . . ಎಂಬಿನವೊಂದು ಬೆಳ್ವಿಳಗು ಪರ್ವಿತ್ತೆಯ್ದೆ ರೋದೋಂತಮಂ (ಕಾದಂಉ. ೦೦೩). [ಸಂ. ಬಿಸನಾಲ]

**ಬಿಸನಿಧಿ** (ನಾ). ಸಮುದ್ರ; ಕಡಲು : ಅಸಹಾಯಶೂರ ಹನುಮ ಬಿಸನಿಧಿಗೆ ಹಾರಿ ದಶಶಿರನ ಭಂಜಿಸಿ (ಪಿಸ್ತೋತ್ರಸು. ೬೫-೨). [ಬಿಸ$_1$ + ನಿಧಿ]

**ಬಿಸಪ್ರಸೂನ** (ನಾ). = ಬಿಸಜ : "ಸಹಸ್ರಪತ್ರಂ, ಶತಪತ್ರಂ . . . ಬಿಸಪ್ರಸೂನಂ . . . ಪಂಕಜಂ— ಈ ೧೭ ತಾವರೆ" (ಹಲಾಯು. ೦೦೨-೫೬); ಪಡಲಿಟ್ಟ ಪಡೆಯ ನೆತ್ತರ ಮಡುವಿನೊಳುಡಿದುಡಿದು ಕೆಡೆದ ಕರಿ ದಂತಂಗಳ್ ತಡಿವಿಡಿದ ಸುಭಟಶಿರಮುಂ ಪಡೆದುವು ತದ್ಬಿಸಬಿಸಪ್ರಸೂನದ ಸಿರಿಯಂ (ರಾಜಶೇ. ೬-೦೦೬). [ಸಂ.]

**ಬಿಸಮು$_1$**, ವಿಸಮು (ಗು). ಕೆಟ್ಟ; ದುಷ್ಟ: ಬಿಸಮರಕ್ಕಸರ ಬೊಬ್ಬಾಟಮುಂ ಘಾಟಮುಂ ಬಹುಭಯಂಕರಮಾದುದು (ಶಬಪು. ೪೪-೩೦). **ವಿಸಮು** : ಅತಿವಿಸಮು ಹಯಪ್ರವುಢರೇಖಾರೇವಂತನುಂ ಪರಬಳಕ್ರಿತಾಂತನುಂ (ಎಕ. XI, ದಾವಣ. ೦೭೨-೦೨; 1266) 'ಬೆಸ್$_2$' ಪರಾ.
[<ಪ್ರಾ. ವಿಸಮು./ಸಂ. ವಿಷಮು]

**ಬಿಸಮು$_2$** (ನಾ). ಒಬ್ಬಾತನ ಹೆಸರು : ಶ್ರೀಮಾದವೆಯರಾಳ್ ಬಿಸವ್ರ ನೆವ್ರೋ ಮನೆಮಗತಿ ಆತ ನಟ್ಟ ಕಲಕೆ ಒರ್ಪತ್ತು ಕೆಯ್ಯ ಕೊಟ್ಟೊರ್ (ಎಕ. XI, ತಳ್ಳಕೆ. ೩೩-೮; ಸು. 815). [ಬಿಸ$_7$ + ಅಮ (<ಅಮ್ಮ$_1$) ]

**ಬಿಸಯ**, ವಿಸಯಂ (ನಾ). ೧. ಇಂದ್ರಿಯಭೋಗ ; ವಿಷಯಸುಖ : ಬಿಸಯಕ್ಕೀಡಾದ ದೇಹಕ್ಕತಿಸುಕರಮೆನಿಪನ್ನಪಾನಂಗಳಿಂ (ಪಾಪ್ರಾಶ. ೬೨). **ವಿಸಯು** : ೨. ದೇಶ ; ನಾಡು : "ವಿಷಯು — ವಿಸಯ" (ಶಬ್ದ. ೨೫೩

ತ್ರ ಷೋ). ೩. ಸಮಾಚಾರ; ಸಂಗತಿ : "ವಿಸಯು–ವಿಷಯು = ಸಂಗತಿ. ದೇಶ" (ಶಬ್ದಕೋ. ೪೦). [< ಪ್ರಾ. ವಿಸಯ./ಸಂ. ವಿಷಯ ]

**ಬಿಸರ** (ನಾ). ೧. ಸಮೂಹ ; ಗುಂಪು : " ಬಿಸರಮೆನಲದು ಸಮೂಹಂ" (ಅಭಿ. ೬೮). ೨. ಆಧಿಕ್ಯ; ಹೆಚ್ಚಳ : ಸಗ್ಗಿಗರಾಣ್ಮನ ಘನಕರಿಘಟೆಗಳ್ ಬೇಸಗೆಯ ಬಿಸರಕ್ಕೆ ಬಸವಟ್ಟುದು (ರಾಮಾಕ್ಕ. ೩-೬). [< ಸಂ. ವಿಸರ]

**ಬಿಸರುಹ** (ನಾ). = ಬಿಸಜ : ಬಿಸರುಹದಳಂಗಳಿಂ ಪೊದೆಯಿಸಿರ್ದ ಹಿಮಗೃಹವನವನಿಪಾಲಂ ಕಂಡಂ (ಕಾದಂಬ. ೨೦೯); ಬಿಸರುಹ ರಥವಕ್ಕಿ ತಸ್ಕರಜಾರರ್ಗೆ ಬಿಸವಾದುದು ಶಶಿಕಿರಣ (ಮೋಹತ. ೧೮-೩೨). [ಸಂ.]

**ಬಿಸರುಹನೇತ್ರ** (ನಾ). ಕಮಲದಂತೆ ಕಣ್ಣುಳ್ಳವನು ; ವಿಷ್ಣು. [ಸಂ.]

**ಬಿಸರುಹನೇತ್ರಗಣ** (ನಾ). [ಛಂದ] ಒಂದು ಅಂಶಗಣದ ಹೆಸರು ; ವಿಷ್ಣುಗಣ : ಬಿಸರುಹೋದ್ಭವಗಣಂ ರಸದಶಸ್ಥಾನದೊಳ್ ಬಿಸರುಹನೇತ್ರಗಣಮೆ ಬರ್ಕು (ಛಂದೋಂಬು. ೩-೨೪೯). [ ಸಂ.]

**ಬಿಸರುಹನೇತ್ರೆ** (ನಾ). ಕಮಲದಂತೆ ಕಣ್ಣುಳ್ಳವಳು: ಬಿಸರುಹೋದ್ಭವಗಣಂ ರಸದಶಸ್ಥಾನದೊಳ್ ಬಿಸರುಹನೇತ್ರಗಣಮೆ ಬರ್ಕುಟ್ಟಿದುವು ಬಿಸರುಹನೇತ್ರೇ ತ್ರಿಪದಿಗೆ (ಛಂದೋಂಬು. ೩-೨೪೯).

[ಸಂ. ಬಿಸರುಹನೇತ್ರಾ (ಬಿಸರುಹನೇತ್ರ + –) ]

**ಬಿಸರುಹಾಕ್ಷ** (ನಾ). = ಬಿಸರುಹನೇತ್ರ : ಬಿಸರುಹಾಕ್ಷನ ಸಿರಿಯುದಾರ್ಯ (ಗಗತಾ. ೩-೨೦). [ ಸಂ. (ಬಿಸರುಹ + ಅಕ್ಷಿ + –) ]

**ಬಿಸರುಹೋದ್ಭವ** (ನಾ). = ಬಿಸಜಭವ. [ಸಂ.]

**ಬಿಸರುಹೋದ್ಭವಗಣ** (ನಾ). [ಛಂದ] ಮೂರು ಅಂಶದ ಗಣ ; ಬ್ರಹ್ಮಗಣ : ಬಿಸರುಹೋದ್ಭವಗಣಂ ರಸದಶಸ್ಥಾನದೊಳ್ ಬಿಸರುಹನೇತ್ರಗಣಮೆ ಬರ್ಕುಟ್ಟಿದುವು ಬಿಸರುಹನೇತ್ರೇ ತ್ರಿಪದಿಗೆ (ಛಂದೋಂಬು. ೩-೨೪೯). [ಸಂ.]

**ಬಿಸರುಹಾಸನ** (ನಾ). ಕಮಲವನ್ನು ಆಸನವಾಗುಳ್ಳವನು ; ಬ್ರಹ್ಮ : ಶಶಿ ರವಿ ತಾರಸಲೀ ಪುರವ ಸಗ್ಗವನೊಲ್ದು ಬಿಸರುಹಾಸನ ತೂಗುತಿರಲು (ಕಂಸವ. ೩-೪). [ಸಂ.]

**ಬಿಸರೇಖೆ** (ನಾ). ವಿಷದ ಗೆರೆ : ಎಲುದೊಡಿಗೆ ಫಣಿಕುಂಡಲ ಕೊಲುವ ಬಿಸರೇಖೆ ಕೊರಲೊಳ್ (ಬಕೋಪು. ೯-೬). [ ಬಿಸ$_1$ + ರೇಖೆ ]

**ಬಿಸಲಡಿಗೆ** 'ಬಿಸಿಲಡಿಗೆ' ನೋ.

**ಬಿಸಲತೆ** (ನಾ). ಕಮಲದ ಬಳ್ಳಿ : ಬಿಸಲತೆಯೊಳಂ ನೆಯ್ದಲ ಸಣ್ಣಕಾವಿನೊಳಂ. . .ಬೇಱೆವೇಱೆ ಸುತ್ತಿ ಸೊವಡಿಂಗೆಬಿಗಿದ ಮಱಿದುಂಬಿಯ ಮುದ್ರೆಯಾಗೆ ತಂದು ಮುಂದಿಟ್ಟಿಪಿ (ಪುಲ್ಲಕು. ೩-೪೯). [ಸಂ. ಬಿಸಲತಾ]

**ಬಿಸವಂದ** (ನಾ). ವಿಸ್ಮಯ : ಆಶ್ಚರ್ಯ ; ಸೋಜಿಗ : "ಬಿಸವಂದಮೆನೆ ವಿಸ್ಮಯಾರ್ಥಮಕ್ಕುಂ" (ಶಬ್ದಕ. ೪೮) : ಇದಱಿಂದಂ ಬಿಸವಂದಂ (ಕಂಶಕಾ. ೬-೩); ನೀನೆಸಗಿದ ಬಿಸವಂದಮಂ ಪೇಟ್ವೆನಲ್ (ದಕಳು. ೯-೪ ಪ).

[?./ ಸಂ. ವಿಸ್ಮಾಪನ]

**ಬಿಸವಂದಂಗೊಳ್** (ಕ್ರಿ). ಆಶ್ಚರ್ಯ ಹೊಂದು ; ವಿಸ್ಮಯಪಡು : ಆಗಳ್ ರಾಯನಿಂತೀ ತೆಱನ ಮೊರೆಯಂ ಕೇಳ್ದು ಬಿಸವಂದಂಗೊಂಡು . . . ಬಂದು (ರಾಮಾಕ್ಕ. ೧೦೬-೬). [ಬಿಸವಂದ + ಕೊಳ್$_1$]

**ಬಿಸವಲ್ಲರಿ** (ನಾ). = ಬಿಸಲತೆ : ಜನಶಿಶುವ ಕೋಮಳಾಮಳತನು ಸವನಪಯಃಪ್ರವಾಹದೊಳ್ ಸೊಗಯಿಸಿದತ್ತನಿಮಿಷರ ಕಣ್ಗೆ ಗಂಗೆಯ ಪೊನಲೊಳ್ ನಳನಳಿಸಿ ಮಿಸುಪ ಬಿಸವಲ್ಲರಿವೊಲ್ (ಚಂದ್ರಪು. ೧೨-೧೨೯).

[ಸಂ.]

**ಬಿಸವಲ್ಲಿ** (ನಾ). = ಬಿಸಲತೆ : ಲಲಿತಕರತಲವೊಂದಿ ಮೆಱೆವ ನಳಿತೋಳ ರೆಣಜಲಜವಾಂತೆಸೆವ ಬಿಸವಲ್ಲಿಯುಂ ನೀರ್ವೊಗಿಸೆ ಸಲೆ ಕೊರಲ್ ಜಡಜಾತ ಶಂಖಮಂ ಝುಂಕಿಸೆ (ಪದ್ಮರಾ. ೩-೨೯). [ಸಂ. ಬಿಸವಲ್ಲೀ]

**ಬಿಸಸನ** 'ವಿಸಸನ' ನೋ.

**ಬಿಸಸಿತ** (ನಾ). ತಾವರೆಯ ದಂಟಿನ ಬಿಳಿಯ ಬಣ್ಣವುಳ್ಳುದು: ಎನಗಾಸೆದೋಱೆ ಬಿಸಸಿತಮೆನಿಸುವ ನಿಜತಾರಹಾರಲತೆಯಿಂದಂ . . . ಮದೀಯಾಭಿಮಾನವಂ ಕಟ್ಟೊಯ್ದ (ಕಾದಂಪೂ. ೮೦೨). [ಸಂ.]

**ಬಿಸಸೂತ್ರ** (ನಾ). ಕಮಲದ ದಂಟಿನ ನಾರು ; ತಾವರೆದಂಟಿನ ದಾರ : ಬಿಸಸೂತ್ರದ ಕಟಿಸೂತ್ರಂ ಪೊಸದುಗುಲದ ಕೋವಣಂ ಕಮಂಡಲು ರಾರಾಜಿಸೆ ದಂಡಪಾಣಿ ಪೊಕ್ಕಂ . . . ನೃಪಸಭೆಯಂ (ಕಂಠಾಮಾ. ೩-೧೯) ; ಪವಿತ್ರಬಿಸಸೂತ್ರವೃತಂ ನವಪಿಷ್ಟಚರ್ಚಿಕಾಶಸ್ತಮು ಪಾತ್ರದರ್ಭರಚನಂ . . . ಪೂರ್ಣಕಲಶಂ ತಳೆದತ್ತತುಳಂ ವಿಳಾಸಮಂ (ಚಂದ್ರಪು. ೬-೫೩). [ಸಂ.]

**ಬಿಸಾಕು** ' ಬೀಸಾಕು ' ನೋ.

**ಬಿಸಾಟು** ' ಬೀಸಾಡು ' ಪರಾ.

**ಬಿಸಾಡಿಸು** (ಕ್ರಿ). ಎಸೆಯುವಂತೆ ಮಾಡು : ಪರ್ಣಲಘುವಿದ್ಯೆಯಿಂದಾಕೆಯನಾಕ್ಷಣದೊಳ್ ಕೊಂಡೊಯ್ದೊಂದು ನಟ್ಟಡವಿಯೊಳ್ ಬಿಸಾಡಿಸಲ್ (ಪುಣ್ಯಾಸ್ರ. ೧-೯೨ ವ).

[ಬಿಸಾಡು ( < ಬೀಸಾಡು) + – ಇಸು$_3$]

**ಬಿಸಾಡು** ' ಬೀಸಾಡು ' ನೋ.

**ಬಿಸಾತು** (ನಾ). ಗಣನೆ ; ಲಕ್ಷ್ಯ : ತನ್ನೆದುರಿಗೆ ಯಾರದೇನು ಬಿಸಾತು ? (ವಾಕೋರಿ. ೧೨೪) ; ಕದ್ದು ಕದ್ದು ಕೇಳಿ ಗುಸುಗುಸು ಯಾಕೆ ಮಾತಾಡ್ತೀರಿ . . . ಯಾರಪ್ಪನ ಬಿಸಾತು ಇಲ್ಲವೋ (ಮೂರುದಾ. ೧೮೦) ; ಈ ಒಕ್ಕಲಿಗನಿಗೆ ಅಂಜುವುದೇಕೆ ? ಅವನ ಬಿಸಾತೇನು (ಕಥಾವಂ. IV, ೩೩).

[←ಹಿಂ. ಬಿಸಾತ್: ಮರಾ. ಬಿಸಾತ್, ಬಿಸಾದ್, ಬಿಶಾದ್, ಬಿಶಾತ್. ತುಳು. ಬಿಸಾತ್ ; ತೆಲು. ಬಿಸಾತು]

**ಬಿಸಿ** (ನಾ). ೧. ಕಾವು ; ಶಾಖ : ಹೊಸ ಹಾಲ ಹನಿಗಳಡಸಿದ ತೆಱದ ತೆನೆಗಳಂ ತಿಱಿತಿಱಿದು ತಂದು . . . ರಸವುಳ್ಳ ಹಸುರುಳ್ಳ ಬಿಸಿಯುಳ್ಳ ಹಸಿಯ ಕೆಂಪುಳ್ಳವಲನಿತ್ತು (ಸಿದ್ಧರಾ. ೨-೨೯); ಬಿಸಿಯು ಕಂಡರೆ ಬೆಣ್ಣೆ ಕರಗಿದಲ್ಲದೆ ಮಾಣ್ಬುದೆ (ಸಿದ್ಧೇವ. ೦೩೬-೩೦). ೨. ಶಾಖದಿಂದ ಕೂಡಿರುವುದು ; ಉಷ್ಣದಿಂದ ಕೂಡಿರುವುದು : ಕುಸುಮಂಗಳೆಂಬ ಮಾತದು ಪುಸಿ ದಹನಮಯಂಗಳಂಬುಗಳ್ ಮನಸಿಜನಾ ಜಸಮಱಿಯೆ ಸುಡುವು[ವೆ]ರ್ದೆಯಂ ಬಿಸಿಯುವಿವೆಂದಿಂತೆ ಪೇಟ್ದೆ ಧರ್ಮಾಪೋಹಂ (ಕಬಿಕಾ. ೩-೦೮೩); ಆದೇಂ ಬಿಸಿಯವೊ ಜಯಕುಮಾರನನಲಶರಂಗಳ್ (ಆದಿಪು. ೦೩-೬೪); ತಾಳ್ದ ವಿರಹದೊಳೀಕೆಗೆ ಬೆಳ್ದಿಂಗಳ್ ಬಿಳಿಯ ಕಿರ್ಚು ಸಸಿ ಬಿಸಿ (ಗಿರಿಕ. ೪-೦೦೬). ೩. ಬೆಂಕಿ : ಅಗ್ನಿ : ' ಬಿಸಿಗಣ್ಣು ' ಪರಾ. ೪. ತೀಕ್ಷ್ಣತೆ ; ಪ್ರಖರತೆ : 'ಬಿಸಿನಗೆ' ಪರಾ. (ಗು). ೫. ಬೆಚ್ಚನೆಯ ; ಕಾವಿನಿಂದ ಕೂಡಿರುವ : ಹೊಸತುಪ್ಪದಿಂದೆ ಕಲಸಿದ ಸಕ್ಕರೆಯನಿಕ್ಕಿಯಟ್ಟ ಹೂರಿಗೆಯ ಬಿಚ್ಚಿ ಬಿಸಿಯೋಡಿನೊಳಗಿಕ್ಕೆ ಖಂಡಮಂಡಕವೆಂಬ ಹೆಸರಾಯ್ತು (ಸೂಶಾ. ೧-೨೮).

**ಬಿಸಿಬಿಸಿ** (ದ್ವಿರುಕ್ತಿ) : ಬಿಸಿಬಿಸಿಯೋಗರಂ ಕೆಲದ ಸೋಡಗೆ ತಳಿಪ್ಪಳು ದುಪ್ಪಮುಪ್ಪುಗಾಯ್ ಮೊಸರ್ (ಸೂಕ್ತಿಸು. ೦೦-೨೬೩) ; ಅಸಿಪತ್ರವನದ ಱೊಳಗೊಗಿಸಿ ನಿನ್ನ ಬಿಸಿಬಿಸಿ ಖಂಡವ ಹೊಱಿಡಿಸಿ (ಪುರಂದ. ೧-೦೪೨-೪) : ಬಿಸಿಬಿಸಿ ಅನ್ನ ಸಾರುಗಳನ್ನು ಬೇಗೆ ಬೇಗ ಬಡಿಸಿ ಮುಂದುವರಿದರು (ಮರವು. ೯೮). **ಬಿಸಿಬೇಳೆಭಾತು** = ಅಕ್ಕಿ, ಬೇಳೆ ಮತ್ತು ಕೆಲವು ತರಕಾರಿಗಳನ್ನು ಒಟ್ಟಿಗೆ ಬೇಯಿಸಿ, ಮಸಾಲೆ ಪದಾರ್ಥಗಳನ್ನು ಬೆರಸಿ ಮಾಡುವ ಒಂದು ಬಗೆಯ ಕಲಸನ್ನ : ಇವೊತ್ತಿನ ಉಪಾಹಾರಕ್ಕೆ ಬಿಸಿಬೇಳೆಭಾತು ಮತ್ತು ಗುಲಾಬಜಾಮೂನು ಮಾಡಿದ್ದಾರೆ (ರೂಢಿ). **ಬಿಸಿ ಮಾಡು** = ಬೆಚ್ಚಗೆ ಮಾಡು ; ಕಾಯಿಸು :

ರೇವೆಯನ್ನು ಕಬ್ಬಿಣದ ಕೊಪ್ಪರಿಗೆಯೊಳಗೆ ಹಾಕಿ . . . ಬಿಸಿ ಮಾಡು ತ್ತಾರೆ (ಘುಂಐಯ. ೪-೩೩) ; ಕೇಸರಿಯನ್ನು ಬಿಸಿ ಮಾಡಿ, ಅನಂತರ ಪುಡಿ ಮಾಡಿ ನೆನೆ ಹಾಕಬೇಕು (ಅಡುಗೆ. ೯೯). **ಬಿಸಿಯಾಗು** = ೧. ಕಾದು ಬೆಚ್ಚಗಾಗು ; ಉಷ್ಣತೆಯನ್ನು ಹೊಂದಂ : ಬಿಸಿಯಾಗಿರುವಾಗಲೇ ಬಡಿಸಿರಿ (ಅಡುಗೆ. ೦೦೬). ೨. ಉದ್ರೇಕಗೊಳ್ಳು : ಕಾವೇರು : ಶಶಿಯು ನೇಮದೆ ಕರ ಚರರು ಕೋಪವ ತಾಳಿ ಬಿಸಿಯಾಗಿ ಖಳರ ಮಾರ್ಬ ಲಕೆ ಮುಸುಕಿ ಕಗ್ಗೊಲೆಗೈದಿದೊಲು ಚಂದ್ರಜ್ಯೋತಿಗಳೆಸೆದುವು ಪಾಳಯ ದೊಳಗೆ (ಕಂಷಪ. ೦೪-೧೦). [ದೇ.॥ ತುಳು. ಬಿಸಿ, ಬಿಶಿ ; ತೆಲು. ಬಿಸಿ]

**ಬಿಸಿಗ** (ನಾ). ಶಾಖದಿಂದ ಕೂಡಿದವನು : ರಾಜಾಧಿಪನೆಂಬೆನೆ ನಷ್ಟಪುಷ್ಪ ಸರೋಜಾಪ್ತನೆಂಬೆನೆ ಬಿಸಿಗ ತೇಜೋಮಯ ಕಂದ ಬಾರೆಂದು ರತಿ ಬೃಹದ್ಬೀಜಕ್ಕೆ ಮುತ್ತನಿಕ್ಕುವಳು (ಮೋಹತ. ೦೬-೬೩). [ ಬಿಸಿ + _ ಗ$_2$]

**ಬಿಸಿಗಣ್ಣ** (ನಾ). ಬೆಂಕಿಯಂ ಕಣ್ಣನ್ನು ಹೊಂದಿದವನು : ಶಿವ : ಇತ್ತ ಬಿಸಿಗಣ್ಣನೊಡನೆ ಕಾದುವೆನೆಂದು ಕಾಮ ತನ್ನಸಿಯಳ ಕೂಡೆ ಪೇಳಿದನು (ಮೋಹತ. ೬-೩) ; ಕರ್ಮವ ಸುಟ್ಟರುಹನಾ ಪಣೆಗಣ್ಣನೆಂಬರು ಬಿಸಿಗಣ್ಣ ನೆಂಬರು ಗುಣನಾಮವವು ನೋಡುವಾಗ (ಶರತ. ೬೬-೦೬೬).

[ ಬಿಸಿಗಣ್ಣು + —ಅ$_7$ ]

**ಬಿಸಿಗಣ್ಣು** (ನಾ). ಬೆಂಕಿಯ ಕಣ್ಣು; ಅಗ್ನಿನೇತ್ರ : ಶಶಿಧರ ಮುನಿದು ಬಿಸಿಗಣ್ಣ ತೆರೆದರೆ ಶಿವಶರಣರದನ್ನು ಮನಸಿಗೆ ತಾರರು (ಅಷಕಂ. ೨೧೩-೯೬೩); ನೊಸಲ ಬಿಸಿಗಣ್ಣನೇಱೆಂದು ಶಿವಲಿಂಗಮಂ ಮುಸುಕಿ ಬೆಳೆದುತ್ತ ಮಾಂಗವನು ಬಾವೆಂದು ದಿಟ್ಟಿಸಿ ನೋಡದೆ . . . ಶಂಕಿಸಿ (ಸಿದ್ಧರಾ. ೨-೪).

[ಬಿಸಿ + ಕಣ್ಣು (<ಕಣ್)]

**ಬಿಸಿಗದಡು** (ನಾ). ಬೆಚ್ಚನೆಯ ಕಲ್ಕ : ಸಾಸಿವೆಯ ಬಿಸಿಗದಡು ಬೀಳೆ ಜಠರಾಗ್ನಿಯೊಳ್ ಕೇಸುರಿಗಳುಬ್ಬಿದುವು (ಚಬಪು. ೯೨-೩೪).

[ ಬಿಸಿ + ಕದಡು$_2$ ]

**ಬಿಸಿಗದಿರ್** (ನಾ). ಶಾಖವಾದ ಕಿರಣ ; ಶಾಖವುಳ್ಳ ರಶ್ಮಿ : ಇಳಾತಳಮಂ ನಿರಂತರಂ ಬಿಸಿಗದಿರಿಂದೆ ನೋಯಿಸಿದ ಪಾಪಮನಿಲ್ಲಿಯೆ ನೀಗಲೆಂದು . . . , ಇನನೆಯ್ದಿದನಸ್ತಶೈಲಮಂ (ಸೂಕ್ತಿಸು. ೬-೮).

[ ಬಿಸಿ + ಕದಿರ್$_2$ ]

**ಬಿಸಿಗದಿರ** (ನಾ). ಶಾಖವಾದ ಕಿರಣಗಳನ್ನುಳ್ಳವನಂ ; ಸೂರ್ಯ : ಬಿಸಿಗದಿರನು ಹುಟ್ಟಿ ಪೂರ್ವಾಚಲದಿ ರಂಜಿಸಿದನು (ಮೋಹತ. ೪-೯೩) ; ಬಿಸಿಗದಿರನಾದರೋ ಬೆಂಕಿಯನ್ನು ಕಾರುತ್ತಿದ್ದನು (ಕ್ಯೋತಿರ್. ೨೪೩).

[ ಬಿಸಿಗದಿರ್ + — ಅ$_7$ ]

**ಬಿಸಿಗದಿರ್ವಟ್ಟು** (ನಾ). ಸೂರ್ಯಬಿಂಬ : ಬಿಸಿಗದಿರ್ವಟ್ಟೆಂಬ ಕಂಬಿ ಯಚ್ಚಿಂ ಕಾಲವೆಸರ . . . ಕನಕಪ್ರಭೆಯ ಹೊಸಹೊನ್ನ ಸರಿಗೆದೆಗೆವ ಸುತ್ತುಗಂಭದೊಂದೆಸಕವಾಯಿತು ಮೇರುಶಿಖರಿ (ಪ್ರಕಂ. ೧-೩೦).

[ ಬಿಸಿಗದಿರ್ + ಬಟ್ಟು ]

**ಬಿಸಿಗಮ್ಮ** (ನಾ). ಶಾಖೋತ್ಪತ್ತಿ ಮಾಡುವವನು ; ಸೂರ್ಯ : ಕಮಲಚಯ ಬಿಸಿಗಮ್ಮನುದಿಸಲು ವಿಕಸನವನೈದಿದೊಲು (ನವಮೋ. ೨೬-೩೩). [ಬಿಸಿ + ಕಮ್ಮ$_3$]

**ಬಿಸಿಗಾಣ್** (ಕ್ರಿ). ಶಾಖವನ್ನು ಪಡೆ ; ಕಾವುಗೊಳ್ಳು : ಬಿಸಿಗಂಡ ಪೊನ್ನ ಪುತ್ಥಳಿಯ ಪೊರೆದ ಪಾದರಸವಾಱಿದ ತೆಱನಾಯ್ತು (ಶ್ರೀಶಾಂ. ೪-೬೮).

[ಬಿಸಿ + ಕಾಣ್]

**ಬಿಸಿಗಿರಣ** (ನಾ). = ಬಿಸಿಗದಿರ : ಪಾಂಡ್ಯದ ಧೊರೆಯ ದುರ್ಧರ ತೇಜದಿಂ ಬಿಸಿಗಿರಣ ತೆಂಕಣದಿಕ್ಕಿನಲಿ ಸಂಚರಿಪ ಕಾಲದಲಿ ಧರಿಸುವನು ಸೌಮ್ಯತೆಯನು (ರಘುಷ. ೩೯-೪೯). [ಬಿಸಿ + ಕಿರಣ$_1$]

**ಬಿಸಿಗುಂದು** (ಕ್ರಿ). ಕಾವು ಕಡಮೆಯಾಗು,_ ಕುಗ್ಗು : ಕಾದುವ ಕೆಯ್ದು ಪೋದುದೆನುತಳ್ಕಿದನೇ . . . ಸಾರವೀರರಸಮೇಂ ಬಿಸಿಗುಂದಿದುದೇ (ಕಬಕಂ. ೪-೬೭). [ಬಿಸಿ + ಕುಂದು$_1$]

**ಬಿಸಿಗೂಡು** (ಕ್ರಿ). ಬೆಚ್ಚಗಿರುವ ಆಹಾರವನ್ನು ಬೆರಸು : ಹಸಿವಿಲ್ಲದುಣ ಬೇಡ ಹಸಿದು ಮತ್ತಿರಬೇಡ ಬಿಸಿಗೂಡಿ ತಂಗೂಳುಣಬೇಡ (ಸರ್ವಜ್ಞ. ೨೦೦೦). [ಬಿಸಿ + ಕೂಡು$_1$]

**ಬಿಸಿಗೂರ್** (ನಾ). ಒಂದು ಊರಿನ ಹೆಸರು : ಶಿವಮಾರೆಱೆಅಪ್ಪೆ ಕಣಾಂಗಿಲ್ನಾಡಾಳೆ ಬಿಸಿಗೂರುಳ್ಪಟ್ಟ ಪ್ರಜೆಗೆಲ್ಲಂ ಕೊಟ್ಟೊದು (ಪ್ಯಕಂ. ೦೯೦೩, ೦೯-೪ ; ೮೦೦). [? + ಊರ್]

ಬಿಸಿಗೆ 'ಬೀಸಗೆ' ನೋ.

**ಬಿಸಿಗೆಲಸ** (ನಾ). (?) : ಬಿಸಿಗೆಲಸದಲ್ಲಯ್ಯ ಕಕ್ಕಯ್ಯ ಬಂಟಯ್ಯ ನುಸಿ ಗೆಲಸದ ಮಲ್ಲಯ್ಯ ಧಾರಯ್ಯ ಭೋಗಯ್ಯ (ಲಂಗತು. ೨೪-೩೨). 'ನುಸಿ ಗೆಲಸ' ಪಾಠ. [ಬಿಸಿ ? + ಕೆಲಸ]

**ಬಿಸಿದು** (ನಾ). ೧. ಶಾಖದಿಂದ ಕೂಡಿರುವುದು: ಬಿಸಿಯಾದುದು : ಸುಯ್ ಪೊದಱ್ದು ಬಿಸಿದುಂ ಕಮ್ಮಿತ್ತುಮಾಯ್ತೋಪಳಾ (ಕಾವ್ಯಸಾ. ೩೮೮ ಕೂದ್ರ೪); ಕರಂ ಬಿಸಿದಾಗಿ ಕಾಸಿ ಕಳ್ಳನೆ ಕೆಡೆಯಿಕ್ಕಿ ಬಾಯೊಳೆಱೆವರ್ (ಸಮುಕ. ೦೦-೬೩); ಬಿಸಿದಪ್ಪ ತುಪ್ಪಮುಸಱಿಯದೆ ಶಿರು ಸುಂಗಿದಂತೆ (ಧರ್ಮಾಮೃ. ೮-೦೦). ೨. ತೀಕ್ಷ್ಣವಾದುದು; ತಾಪಕರವಾದುದು: ಪ್ರಖರವಾದುದಂ : ಉಸಿರ್ದೊಡೆ ಬಗೆ ತೀರ್ಗುಂ ಬಿಸಿದುಂ ಬೆಟ್ಟಿತ್ತು ಮುಸಿರದೇಂ ತೀರ್ದಪುದೇ (ಪಂಕಭಾ. ೪-೬೩); ನುಡಿ ಸುರಿಚಳೆದಿನ್ವಚೆಳಂ ಪರಾಕ್ರಮಂ ಖರಕರತೇಜದಿಂ ಬಿಸಿದು (ಎಕ. II, ೦೩೩-೨೮; 982).

**ಬಿಸಿಯಂ** = ತಾಪದಿಂದ ಕೂಡಿರುವವನು; ಸೂರ್ಯ : ಬಿಸಿಯಂ ತಣ್ಣದನಪ್ಪವೊಲ್ ಕಡಲೊಳಂದೋಲಾಡೆ ಚಂಡಾಂಶು (ಲೀಲಾವ. ೬-೬೬).

[< ಬಿಸಿ]

**ಬಿಸಿನಗೆ** (ನಾ). ತೀಕ್ಷ್ಣವಾದ ನಗೆ; ಪ್ರಖರವಾದ ನಗೆ : ಬಿಸಿನಗೆ ಯಾವುದು ತಣ್ಣಗೆಯಾವುದು ಹುಸಿನಗೆ ಮುಗುಳುನಗೆಗಳು ರಸನಗೆಯೆಳೆ ನಗೆಯೆಂಬವೆಂತಿಹವೆಂದು ನಸುನಗುತವಳು ಪಾಡಿದಳು (ಭರತ. ೧೦-೩೦).

[ಬಿಸಿ + ನಗೆ]

**ಬಿಸಿನಿ** (ನಾ). ೧. ತಾವರೆಯ ಗಡ್ಡೆ : "ಕಂದಃ. ಬಿಸಿನೀ, ನಳಿನೀ— ಈ ೩ ಅವಱ ಗೆಡ್ಡೆ" (ಹಲಾಯು. ೦೦೨-೬೦): "ಸಾರಸದ ಗಡ್ಡೆಯದು ಕಂದಂ ಬಿಸಿನಿಯಕ್ಕು" (ಮಂಗರಾ. ೧೨೪-೦೭). ೨. ತಾವರೆಯ ಬಳ್ಳಿ : ಬಿಸಿನಿ ಬಿಸಿವಿಸಿಲಸುಟ್ಟಳೆಂಬಂತೆ ಬಿಗಿದುಟ್ಟ ಮಿಸುನಿವಟ್ಟೆ ಮಿಸುಗುತ್ತಿರೆ (ರಾಜಶೇ. ೩-೦೯ ವ). [ಸಂ. ಬಿಸಿನೀ]

**ಬಿಸಿನೀರ್**, ಬಿಸಿನೀರಂ (ನಾ). ಕಾದ ನೀರು; ಸುಡುವ ನೀರಂ : ಸುಂಟಿ ತಿಂದ ಬಾಯೊಳ್ ಬಿಸಿನೀರಂ ಕುಡಿದರಂತೆ ಮಿಡುಮಿಡುಮಿಡುಕಿ (ಧರ್ಮಾಮೃ. ೦೦-೦೯೨ ವ); ಚಲದಿಂ ಮಂಡಳೇಸರ್ಗೆ ಬೇರೊಳ್ಬಿಸಿನೀರಂ ಪೊಯ್ದಂ (ಎಕ. XI. ದಾವಣ. ೪೨-೩೨ ; 1162); ಬಿಸಿನೀರಲ್ಕುಡೆ ವಾತ ಪ್ರಶಮಿಸುಗುಂ (ಅಶ್ವಶಾ. ೭-೪೭). **ಬಿಸಿನೀರು** : ಪೊಬಡಿಗವ ಸಾರ್ಚಿ ಬಿಸಿನೀರ ಗಿಂಡಿಯೊಳ್ ತಂದು ಕಾಲ್ತೊಳೆಯೆ (ಮೋಹತ. ೦೮-೯೯) ; ಮಡಿವಳರ್ ಬಿಸಿನೀರ ಕೇಣಿಗರ್ ಜೂಜುಗಾಱರ್ ಮುಖ್ಯರೊದಗಿ ಬರುತಿರ್ದರ್ ರೆಂ ವಣ್ಣಿಸುವೆನು (ಚಬಪು. ೪೭-೪೦). [ಬಿಸಿ + ನೀರ್]

ಬಿಸಿನೀರು 'ಬಿಸಿನೀರ್' ನೋ.

**ಬಿಸಿನೆತ್ತರು** (ನಾ). ಬೆಚ್ಚನೆಯಂ ರಕ್ತ: ಬಿತ್ತರಿಸಿದುವಂಬುಗಳು ಮೆಯ್ಯೊಳು ಬಿಸಿನೆತ್ತರ ಬಸವಂತಗೊಳಿಸಿ (ಮೋಹತ. ೩೮-೩೨) ; ವೀರರಸಮೊತ್ತರಿಸಿ ಮೇಲುಕ್ಕುವಂದದಿಂ ಬಸಿವ ಬಿಸಿನೆತ್ತರೆಸೆದಿರೆ (ಜೈಮಿಭಾ. ೦೨-೨೩).

[ಬಿಸಿ+ ನೆತ್ತರು (< ನೆತ್ತರ್)]

**ಬಿಸಿಮಸಗು** (ಕ್ರಿ). ಶಾಖವು ಹೆಚ್ಚಾಗಂ; ಉಷ್ಣತೆಯೇರು : ದಡ

ದಡಿಪೆರ್ದೆ ಬಿಸಿಮಸಗುವ ನಿಡುಸುಯ್ ಕಂಪಿಪ ಕರಂಗಳ್ (ಶೃಶಂ. ೯-೬೨). [ಬಿಸಿ + ಮಸಗು]

**ಬಿಸಿರಕುತ** (ನಾ). = ಬಿಸಿನೆತ್ತರು : ಮಸೆಯ ಮೈಗಳೊಳೊಱೆವುಶಿರ್ದವು ಬಿಸಿರಕುತ (ಕುಮ್ಮಾದ್ರೌ. ೦೯-೯); ಅಱೆಯಟ್ಟಿ ಖಳರ ಖಂಡಿಸಿ ಬಿಸಿರಕುತ ಕೆಂದೊಱೆಯೊಳು ತೊಳೆದ ಚಕ್ರವನು (ಕೋಚಕ. ೦೫-೩); ಹೃದಯದ ಬಿಸಿರಕುತವ ಬಸಿದು . . . ಕುದಿದು ಕಂಗೆಡುವೀ ಬಾಳನು ತೊಳೆದು (ಅನೀಲ. ೦-೩). [ಬಿಸಿ + ರಕುತ]

**ಬಿಸಿರಕ್ತ** (ನಾ). ೧. = ಬಿಸಿನೆತ್ತರಂ : ದುಱುದುಱುವ ಬಿಸಿರಕ್ತ ವೇಱೆನೊಳೊಱಿತ ಮಸಗಿತು (ಕುಮ್ಮಾಕ. ೧೯-೪) ; ಬಿಸಿರಕ್ತವ ಭೂತಕಿರದೆ ಚೆಲ್ಲಿದರಾಕ್ಷಣದೆ (ಕಂಪಾ. ೦೫-೩೭). ೨. (ಅಲಂ) ಹರೆಯದ ಉತ್ಸಾಹ: ಎಂತಹ ಪರಿಶ್ರಮಪಡಬೇಕೆಂಬುದು ಆ ತರುಣರ ಬಿಸಿರಕ್ತಕ್ಕೆ ಗೋಚರ ವಾಗಲಿಲ್ಲ (ಬಂಗಾಹ. ೦೬). [ಬಿಸಿ + ರಕ್ತ]

**ಬಿಸಿಲ್, ಬಿಸಿಲು** (ನಾ). ೧. ಸೂರ್ಯನ ಪ್ರಖರವಾದ ಬೆಳಕು,– ಪ್ರಕಾಶ : ಬಿಸಿಲಂ ಬೆಳ್ದಿಂಗಳುಮಂ ಪಸರಿಸೆ ಕಟ್ಟಲೆ ತೆರಳ್ದು ತೂಳ್ದೋಡೆ(ಆದಿಪು. ೦೩-೩೦). 'ಬಿಸಿಲ್ಗುದುರೆ', 'ಬಿಸಿಲ್ಮಱೆ' ಪರಾ. ೨. ಸೂರ್ಯನ ಪ್ರಕಾಶದಿಂದುಂಟಾಗುವ ತಾಪ,– ಬಿಸುಪು,–ಕಾವು : ನಡುವಗಲ ಬಿಸಿಲ್ ತನ್ನಂ ಸುಡೆ ವನಕರಿ . . . ಸರಸಿಜವಂ ಕಿಡಿಸಲ್ ತಾಂ ಪೊಕ್ಕುದಾಗ ಕೊಳನಂ (ಕಬರಾ. ೩-೧೧೫). 'ಬಿಸಿಲ್ಗಾಯ್' ಪರಾ. **ಬಿಸಿಲು** : ೧. 'ಬಿಸಿಲುಗೊಳ್', 'ಬಿಸಿಲುಗೋಲು' ಪರಾ. ೨. "ಬಿಸಿಲು ರೌದ್ರಪದಾತಪಾಖ್ಯಮೆನಿಸಿಕ್ಕು" (ಮಂಗರಾ. ೦೦–೨); ಉದಯದ ಮಾಗಿಯ ಬಿಸಿಲು ಅಂಗಕ್ಕೆ ಹಿತವಾಯಿತ್ತು (ಐಸಪ. ೨೦೯); ಬಲು ಬಿಸಿಲೊಳುಱೆ ನೊಂದ ನೈದಿಲೆಗಳಿಗೆ ಚಂದ್ರಿಕೆ . . . ಅಂತಿರೆ ಪಾರ್ಥ ನೈದೋಱೆದನು ನಿಜಬಲಕೆ (ಕುಮ್ಮಾದ್ರೌ. ೩-೪೬); ತಲೆ ಮತ್ತು ಕತ್ತಿನ ಹಿಂಭಾಗ ನೇರ ಬಿಸಿಲಿನಿಂದ ಕಾಯುತ್ತಿರುವಾಗಲೂ . . . ವ್ಯಕ್ತಿ ಬಿಸಿಲ ಧಕ್ಕೆಗೆ ಈಡಾಗುವುದಿದೆ (ಕಂಕೋ. XII, ೦೨೬).

ಬಿಸಿಲ ಕುದುರೆ = ಬಿಸಿಲ್ಗುದುರೆ ೨ : ಇವನ ಬಾಳೇ ಹೀಗಾಯಿತಲ್ಲ– ಬರಿಯೆ ಬಿಸಿಲ ಕುದುರೆಯ ಹಿಂದೆ ಓಟ (ಮೂರುಬಾ. ೦೫೬). **ಬಿಸಿಲ ಹೊಳೆ**= ಬಿಸಿಲ್ಗುದುರೆ ೨ : ತೃಷೆ ಮೊದಲು ವಿಷಯಾಭಿಲಾಷೆಯು ಬಿಸಿಲ ಹೊಳೆಯೊಳಗಾಡಲೆಂದೀಪ್ಸಿಸಿ ಪರಿಭ್ರಮಿಸುವನು ಮಾಯಾಮೂಢಮತಿ (ಜಿಹಾಗ. ೫–೮–೫). [ದೇ.|| ತಮಿ. ಮಲ. ವೆಯಿಲ್; ತುಳು. ಬಿಸುಲು]

**ಬಿಸಿಲಕ್ಕಿ** (ನಾ). ಬಿಳಿಯ ಅಕ್ಕಿ ; ಬೆಳತಿಗೆಯಕ್ಕಿ : ಬಿಸಿಲ [ಪಾಠಾಂ. ಬದಿರ, ಬಿಸಲ, ಬೀಸ]ಕ್ಕಿಯುಂ ತೊಳೆದು ನೀರಂಬಿಲದಮೊಸಱನೊಸೆದು ಪೊಲೆಗೆತ್ತಿಯಕ್ಕಿಯ ಹಾಕಿ (ಸೂಶಶಾ. ೩-೩೭). [? + ಅಕ್ಕಿ$_1$]

**ಬಿಸಲಡಿಗೆ, ಬಿಸಲಡಿಗೆ** (ನಾ). ಮದುವೆಯ ದಿನದ ಹಿಂದಿನ ವರಪೂಜೆಯ ದಿನದ ರಾತ್ರಿ ಊಟಕ್ಕಾಗಿ ಸಿದ್ಧಪಡಿಸುವ ಆಹಾರ ಪದಾರ್ಥ,– ಅಡುಗೆ ; ☞ ಇದು ರಾತ್ರಿಯಲ್ಲಿ ನಡೆಯುವ ಊಟವಾಗಿದ್ದು ಬಿಸಿಲಿನ ಸಂಬಂಧವಿಲ್ಲದುದರಿಂದ ಈ ಶಬ್ದದ ವ್ಯುತ್ಪತ್ತಿಯ ಬಗ್ಗೆ ಅನುಮಾನವೂ 'ಬಿಸಿಲಡ್ಡಿಗೆ'ಯ ಊಟ ಇರಬಹುದೆ ಎಂಬ ಅಭಿಪ್ರಾಯವೂ ಇದೆ : ಬೀಗರು ಬರುವುದು ನಿಧಾನವಾಗಿ ಅವರ ಮನೆಯಲ್ಲಿ ಬಿಸಿಲಡಿಗೆ ಊಟ ತುಂಬ ತಡವಾಯಿತು (ರೂಢಿ). **ಬಿಸಲಡಿಗೆ** : ಬೀಗರ ಕಡೆಯವರಿಗೆ ಮಾತ್ರವಲ್ಲದೆ ಊರಿನವರಿಗೂ ಬಿಸಲಡಿಗೆ ಊಟ ವಾಯಿತು (ಗ್ರಹಂ. ೩೫). [ < ಬಿಸಿ + ಅಡಿಗೆ (<ಅಡುಗೆ) ]

**ಬಿಸಿಲು** 'ಬಿಸಿಲ್' ನೋ.

**ಬಿಸಿಲುಕುದುರೆ** 'ಬಿಸಿಲ್ಗುದುರೆ' ನೋ.

**ಬಿಸಿಲುಕೋಲು** 'ಬಿಸಿಲುಗೋಲು' ನೋ.

**ಬಿಸಿಲುಗುದುರೆ** 'ಬಿಸಿಲ್ಗುದುರೆ' ನೋ.

**ಬಿಸಿಲುಗೊಳ್** (ಕ್ರಿ). ಬಿಸಿಲಿನ ಬೆಳಕನ್ನು ಪಡೆ ; ಬಿಸಿಲಿನ ಉಜ್ವಲತೆಯನ್ನು ಹೊಂದು : ಮಣಿಕುಟ್ಟಿಮಭೂಮಿಭಾಗದೊಳಪ್ರಮಿತವಿಕ್ರಮಾದೇವನ ದಿವ್ಯಚ್ಛಾಯೆ ಪ್ರತಿಬಿಂಬಿಸೆ ಬಿಸಿಲುಗೊಂಡು ಸೋಂಕೆಱಿದ ಕಣ್ಣ[ಬ್ಬ]ಂತುಳ್ಕೆ (ಶಾಂತಿಪು. ೯-೩೩ ವ). [ಬಿಸಿಲು (<ಬಿಸಿಲ್) + ಕೊಳ್$_1$]

**ಬಿಸಿಲುಗೋಲು, ಬಿಸಿಲುಕೋಲು** (ನಾ). ಛಾವಣಿ, ಕಿಟಕಿ ಮುಂತಾದುವುಗಳ ಕಂಡಿಗಳ ಮೂಲಕ ಕೋಲಿನಂತೆ ಬೀಳುವ ಸೂರ್ಯನ ಬೆಳಕು : ಆ ಮಾಧುರ್ಯ . . . ಬಿಸಿಲುಗೋಲಿನ ಹಾಗೆ ಚಕಮಕಿಸುತ್ತದೆ (ಅಂಹೂ. ೦೯). **ಬಿಸಿಲುಕೋಲು** : ಬಿಸಿಲುಕೋಲು ಒಂದು ಕತ್ತಲೆಕೋಣೆಯೊಳಗೆ ಬಿದ್ದರೆ ಆ ಬಿಸಿಲುಕೋಲಿನಲ್ಲಿ ಧೂಳಿನ ಸಣ್ಣ ರವೆಗಳು ಸಿಕ್ಕಾಬಟ್ಟೆಯಾಗಿ ಕುಣಿದಾಡುತ್ತಿರುವುದು ಕಾಣುತ್ತದೆ (ಭೌತಶಾ. ೨೬೬). [ಬಿಸಿಲು (<ಬಿಸಿಲ್) + ಕೋಲು$_1$ (<ಕೋಲ್$_1$) ]

**ಬಿಸಿಲುಚಿಕಿತ್ಸೆ** (ನಾ). ಬಿಸಿಲಿನ ಶಾಖದಿಂದ ಮಾಡುವ ಒಂದು ಬಗೆಯ ಚಿಕಿತ್ಸೆ,– ವೈದ್ಯೋಪಚಾರ : ಸೂರ್ಯಕಿರಣಗಳನ್ನು ಯಾವುದಾದರೊಂದು ವಸ್ತುವಿನ ಮೂಲಕ ಕೇಂದ್ರೀಕರಿಸಿ ಅಥವಾ ಸಂಗ್ರಹಿಸಿಟ್ಟುಕೊಂಡು ಮಾಡುವ ಚಿಕಿತ್ಸೆಯೇ ಬಿಸಿಲುಚಿಕಿತ್ಸೆ (ಜನಾ. ೦). [ಬಿಸಿಲು (<ಬಿಸಿಲ್) + ಚಿಕಿತ್ಸೆ]

**ಬಿಸಿಲುದಕ** (ನಾ). ಮರೀಚಿಕೆ ; ಬಿಸಿಲಂಕುದುರೆ : ಬಯಲಾಸೆಯಲಿ ಬಿಸಿಲುದಕದಲಡಿ ಮುಂಚುವುದು ಕೈಸೋಂಕಿಗೆ (ಕೂರಾ. ೩-೮-೪೬). [ಬಿಸಿಲ್ + ಉದಕ$_2$]

**ಬಿಸಿಲುದೊಱೆ** 'ಬಿಸಿಲ್ದೊರೆ' ನೋ.

**ಬಿಸಿಲುಮಚ್ಚು** (ನಾ). ಕಟ್ಟಡದ ಮೇಲುಭಾಗದಲ್ಲಿ ಸೂರ್ಯನ ಬೆಳಕು ಬೀಳುವಂತಿರುವ ತೆರಪಾದ ಭಾಗ ; ಮಾಳಿಗೆಯ ಮೇಲು ಭಾಗ : ಮತ್ತೊಂದು ಅಂತಸ್ತಿನ ಬಿಸಿಲುಮಚ್ಚಿನೊಳ್ ನಿಂತು ಚನ್ನಾಗಿ ನೋಡಿ (ಶೌಗಂಧಿ. ೩೩೯–೦೩); ಮಹಡಿಯ ಮೇಲೆ ಕೂಡ ಒಂದು ಅಂಗಳ . . . ಒಂದು ಪುಟ್ಟ ಬಿಸಿಲುಮಚ್ಚು ಇವೆ (ದೂರಶ. ೬೩) ; ಮಧುರನು . . . ಎಲ್ಲಿ ಹೋಗುತ್ತಾನೆಂದು ನೋಡಲು ಬಿಸಿಲುಮಚ್ಚಿಗೆ ಬಂದಳು (ಬಂಕಿಮ. ೪೦). [ಬಿಸಿಲು (<ಬಿಸಿಲ್) + ಮಚ್ಚು$_4$]

**ಬಿಸಿಲುಮಳೆ** 'ಬಿಸಿಲ್ಮಱೆ' ನೋ.

**ಬಿಸಿಲುಮಾಳಿಗೆ** (ನಾ). = ಬಿಸಿಲುಮಚ್ಚು : ಆ ಮನೆಯಲ್ಲಿ ಸಂಡಿಗೆ ಹಾಕಲು ಬಿಸಿಲುಮಾಳಿಗೆ ತುಂಬಾ ಅನುಕೂಲವಾಗಿದೆ (ರೂಢಿ). [ಬಿಸಿಲು (<ಬಿಸಿಲ್) + ಮಾಳಿಗೆ$_1$]

**ಬಿಸಿಲುವಳೆ** 'ಬಿಸಿಲ್ಮಱೆ' ನೋ.

**ಬಿಸಿಲ್ಗಾಯ್** (ಕ್ರಿ). ಸೂರ್ಯನ ತಾಪಕ್ಕೆ ಮೆಯ್ಯೊಡ್ಡು : ಸೀರ್ದುಪ್ಪಟ ಬಂಬಲ್ಗಳನುಗುರಿಂ ಪಿಕ್ಕಿ ಬಿಸಿಲ್ಗಾದುದದೊಂದು ಮರದ ಕೋಡೊಳ್ ಕೋಡಂ (ಶಾಮ. ೦೯–೦೦). [ಬಿಸಿಲ್ + ಕಾಯ್$_4$]

**ಬಿಸಿಲ್ಗುದುರೆ, ಬಿಸಿಲುಕುದುರೆ, ಬಿಸಿಲುಗುದುರೆ** (ನಾ). ೧. ಬಿಸಿಲಿನ ಝಳದಲ್ಲಿ ಹರಿಯುವ ನೀರಿನಂತೆ ಕಾಣುವ (ಕಲ್ಪನೆಯ) ದೃಶ್ಯ ; ಮರೀಚಿಕೆ ; ಮೃಗಜಲ : "ಬಯಲ್ತೊಱೆ ಬಿಸಿ[ಪಾಠಾಂ. ಸು]ಲ್ಗುದುರೆ– ಈ ೨ ಮರೀಚಿಕಾಜಲಂ" (ಕಶಾ. ೪೯–೩೦) ; ಘೋಟಾಯ್ಲರ್ ಪೊಳೆಯಿಸೆ ಬಿಸಿಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ . . ಒಡ್ಡಿ ನಿಂದಾಗಳ್ (ಕಂಶಾ. ೦೦-೩೦ ವ) ; ಬಿಸಿಲ್ಗುದುರೆಯಂ ನೀರೆಂದಾಸೆವಟ್ಟು ಪರಿವ ಮೃಗಮುಂ ಸಂಸಾರದೊಳು ಶನಗಲ್ಲದವರ್ಕಾಟದ ಪರನ್ನಂ ಸೇದೆವಡೆಗಂ (ಶೀಪಸಂ. ೪೯-೨). ೨. (ಅಲಂ) ಕೈಗೆ ಎಟುಕದುದು ; ಭ್ರಮೆ : ಬಿಸಿಲ್ಗುದುರೆಯಾಯ್ತು ಕೊಳ್ಕೊಡೆಗಳೆದೆಯೊಳ್ ಬಯಕೆ (ಶಾಂಭಿ. ೩೬–೬೬). **ಬಿಸಿಲುಕುದುರೆ:** ೨. ಭಾವೀಸುಖದ ಕಲ್ಪನೆಯ 'ಬಿಸಿಲುಕುದುರೆ'ಯನ್ನೇರಿದ ಇವರ ಮನಸ್ಸು–ಆ ಸಂತೋಷದ ಚಿಹ್ನ ಹಚ್ಚಿರದಿದ್ದರೆ

ಅವರು ಮಕ್ಕಳಿಗೆ ಮನೆಯಲ್ಲಿಯೇ ಇದ್ದುಬಿಡಲು ಹೇಳುತ್ತಿದ್ದರೇನೋ ? (ಮುಗಿಮು. ೬೫) ; ಕರುಣಾವಿನ ನೆನಪು ಎಲ್ಲರಿಗೂ ಬಿಸಿಲುಕುದುರೆಯಾಯಿತು (ಕಿಪರಾ.೬೦). **ಬಿಸಿಲುಗುದುರೆ** : ೧. "ಖರಕಿರಣ, ಘರೀಚಿಕೆ, ಮೃಗತೃಷ್ಣೆ ಬಿಸಿಲುಗುದುರೆ" (ಜಾಸರಾ. ೪) ; ಬಿಸಿಲುಗುದುರೆಯೇಱಿ ಬೇಸಗೆರಾಜ ಸಂದೆಸಗಿ ದುಮ್ಮಾಳಿಸಲು . . . ಸುಳಿಗಾಳಿ ಪಸರಿಸಿತು (ಶಂಪಾ. ೯-೦೨). ೨. ಬಿಸಿಲುಗುದುರೆಯ ನಂಬಿ ನಡೆದಿರುವೆ ನಾನೀಗ (ಸ್ವರ್ಣ. ೦೨).

[ಬಿಸಿಲ್ + ಕುದುರೆ]

**ಬಿಸಿಲ್ದೊರೆ, ಬಿಸಿಲುದೊಱೆ** (ನಾ). = ಬಿಸಿಲ್ಗುದುರೆ ೧ : ಮಿಥ್ಯೆ ತಾಂ ತನ್ನ ಪುಸಿಸಾಸದ ಬಿಸಿಲ್ದೊರೆಯ ಬೇಂಟೆಯಿಂ ಬೇಸತ್ತು (ಶ್ರೀರಾಮಾ. ೯೨೪-೮೮). **ಬಿಸಿಲುದೊಱೆ** : ಸಾರತರಪೀಯೂಷಪಾರಾವಾರವಿರಲಾ ಬಿಸಿಲುದೊಱೆಯಲಿ ಮರಿಕೆಳೆಯೆ (ಪಿಭಾಗ. ೩-೩-೫).

[ ಬಿಸಿಲ್ + ತೊರೆ$_3$ (<ತೊಱೆ$_2$) ]

**ಬಿಸಿಲ್ಮಟೆ, ಬಿಸಿಲುಮಳೆ, ಬಿಸಿಲುವಳೆ** (ನಾ). ಬಿಸಿಲಿರುವಾಗ ಬೀಳುವ ಮಳೆ : ಶರದಭ್ರಕುಸುಮತರುಗಳ್ . . . ಅರಲಂ ಸುರಿದಪುವೆನೆ ಸುರಿವ ಬಿಸಿಲ್ಮಟೆಗಳೆಸೆದುವಭ್ರಾಂಗಣದೊಳ್ (ಜಗಪು. ೯-೬೦). **ಬಿಸಿಲುಮಳೆ** : ಬಿಸಿಲುಮಳೆ ನೋಡಲು ಚೆಂದ (ಲೂಪಿ). **ಬಿಸಿಲುವಳೆ** : ಬಿಱುವಳೆ ಬೆದರ್ವಳೆ ಬಿಸಿಲುವಳೆ ಸರಿಸೋನೆ ಸಿಡಿಲಿನ ಘಸಣಿವಳೆಯಲಿ ಘಾಸಿಯಾದುದು ಜಗದ ಜನನಿಕರ (ಕೊರಣಾ. ೯-೬-೬). [ಬಿಸಿಲ್ + ಮಱೆ]

**ಬಿಸಿಲ್ವಕ್ಕಿ** (ನಾ). ಚಕ್ರವಾಕ ; ಎಣೆವಕ್ಕಿ ; ☞ ಈ ಹಕ್ಕಿಜೋಡಿಯು ಹಗಲಲ್ಲಿ ಜೊತೆಗೂಡಿ ರಾತ್ರಿವೇಳೆಯಲ್ಲಿ ಅಗಲಿರುವುದೆಂಬುದು ಕವಿಸಮಯ : "ಪೊಣರ್ವಕ್ಕಿ, ಜಕ್ಕವಕ್ಕಿ, ಬಿಸಿಲ್ವಕ್ಕಿ . . . ಅವುಳ್ವಕ್ಕಿ —ಈ ೭ ಚಕ್ರವಾಕಂ" (ಚಕನಾ. ೫೫-೨೦೦) ; ಕೋಗಿಲೆಯು ಬನವಂ ಪಗಲಂ ಬಿಸಿಲ್ವಕ್ಕಿ ಸೋಗೆ ಕಾರ್ಮುಗಿಲಂ . . . ನೆನೆವೊಲ್ (ಪಂಕಾರಾ. ೯-೩-೩೨) ; ಮಿಕ್ಕು ಮಿಱುವ ಬಿಸಿಲ್ವಕ್ಕಿಮೊಲೆಗಳ ಕೊಳರ್ವಕ್ಕಿಗಳರವದ . . . ವಿದಗ್ಧಾಂಗನೆಯು ಕಣ್ಗೆ ಸಿಂಗರಮಾದಳು (ಬಕೋಪು. ೫-೯೦).

[ಬಿಸಿಲ್ + ಪಕ್ಕಿ]

**ಬಿಸಿವಡೆ** (ಕ್ರಿ). ಬಿಸಿಯಾಗು ; ಕಾಯು : ಬಿಸಿವಡೆದಾ ಸರೋವರದಲ್ಲಿ ವಿಹಂಗಳು ಬಿಸಿ ತಾಗಿ ಬಾಯ್ಬಿಡುವುದನು ಅಸಿಯುಳು ಮಱುಕದಿಟ್ಟಯಲಿ ನೋಡಲ್ಕಾಗ ಪಸಿ ತಾಪ ಪರೆದುದಾಕ್ಷಣದಿ (ಮೋಹತ. ೯-೪೫).

[ಬಿಸಿ + ಪಡೆ$_1$]

**ಬಿಸಿವಿಸಿಲ್** (ನಾ). ಸೂರ್ಯನ ಉಗ್ರವಾದ ತಾಪ,—ಶಾಖ : ಅಳುರ್ವ ಬಿಸಿವಿಸಿಲ ಬೇಗೆಯನಿಳೆ ಸೈರಿಸಲಾಱದಭ್ರಗಂಗಾಜಳದೊಳ್ ಮುಳುಗಲ್ (ರಾಜಶೇ. ೫-೯೫). [ಬಿಸಿ + ಬಿಸಿಲ್]

**ಬಿಸಿವೆಱು** (ಕ್ರಿ). ತಾಪವನ್ನು ಹೊಂದು ; ಕಾವು ಪಡೆ : ತೇಂಕು ದಾಣಂಗಳಲುಗುವಂಗಂಗಳತಿ ಬಿಸಿವೆತ್ತಿವೆ (ಸಿದ್ಧರಾ. ೨-೫) ; ಕುಂದಣವನು ರಸಗೆಯ್ದೊಡಾಕ್ಷಣ ಕರುವಿಂದೆ ಬೇರ್ಪಡಿಸಿ ಪುತ್ಥಳಿಯ ತಂದಡರ್ಚಿದರೆನೆ ಬಿಸಿವೆತ್ತು ಪ್ರಾಣಸಂಬಂಧಿಯ ಬಿಗಿಯಪ್ಪಿದಳು (ಮೋಹತ. ೨೬-೫೬).

[ಬಿಸಿ + ಪೆಱು$_1$]

**ಬಿಸಿಷ್ಟ, ವಿಸಿಷ್ಟ** (ನಾ). ೧. ವಿಶೇಷವಾದುದು ; ಅತಿಶಯಂವಾದುದಂ : ಕೇಶವನಿಂಬಿನೆ ಮಾಡಿಸಿದಂ ಬಿಸಿಷ್ಟವೆನೆ ಜಗದೊಳಗೆ (ಶಾಶಾ. XX. ೬೦-೨೯; 1108). **ವಿಸಿಷ್ಟ** : (ಗು). ೨. ವಿಶೇಷವಾದ ; ಅತಿಶಯವಾದ : ಷಟ್ಕರ್ಮನಿರತರತಿಥಿಅಭ್ಯಾಗತವಿಸಿಷ್ಟಜನಪೂಜೋತ್ಸಾಹರ್ (ಶಾಶಾ. XX. ೫೬-೯ : 1084). [<ಸಂ. ವಿಶಿಷ್ಟ]

**ಬಿಸಿಸೂಲ** (ನಾ). ಕಾಯಿಸಿದ ಶೂಲ : ನಿಮ್ಮ ಸೂಲಕೆ ಹಾಕಿಸೇನು ನಿಮ್ಮನ್ ಹಸಿಸೂಲಕೆ ಬಿಸಿಸೂಲಕ್ ನಡಸದೆ ಬಿಟ್ಟರೆ ತಿರುಮಲದೇವ್ರಲ್ಲ (ಜಾಪದ. ೦೬೫). [ಬಿಸಿ + ಸೂಲ$_2$]

**ಬಿಸಿಹಗೆ** (ನಾ). ತೀವ್ರವಾದ ಶತ್ರುತ್ವ ; ಉಗ್ರವೈರ : ಬರಿಮೈ ತಣ್ಣಗೆ, ಮನದಲಿ ಬಿಸಿಹಗೆ, ಎರಡೆಳೆ ನಾಲಗೆ ಇದ್ದರು ಸುಮ್ಮಗೆ (ಕವ್ಯಶಾ. ೦೨೩).

[ಬಿಸಿ + ಹಗೆ$_2$ (<ಪಗೆ$_2$)]

**ಬಿಸು$_1$**, ಬೆಸು, ಬೆಸೆ$_2$ (ಕ್ರಿ). ಬೆಚ್ಚ$_1$ (ಭೂತಕೃ). ೧. ಹೊಂದಿಸು ; ಒಂದಕ್ಕೊಂದು ಸೇರುವಂತೆ ಮಾಡು ; ಕೂಡಿಸು : ವಿನಯಪ್ರಧಾನ ಗುಣಗಣಗೆಣೆ ಭೂಪಾಲಂ ನಿನಗದಱಿಂದನುಕೂಲಂ ಬಿದಿ ಬಿಸುಗೆ ಸಿಂಧುವೊಲ್ ಮಾನದಿಯೊಳ್ (ಶಾಂತಿಪು. ೫-೦೫೫). ೨. ಲೋಹಗಳನ್ನು ಕಾಯಿಸಿ ಒಂದಕ್ಕೊಂದನ್ನು ಸೇರಿಸು ; ಬೆಸುಗೆ ಹಾಕು : "ಬಿಸು— ಲೋಹಸಂಧಾನೇ (ಬೆಸೆಯು)" (ಶಮದ) ; ಕಾಯಿಸುವ ಕರಗಿಸುವ . . . ಬಿಸುವ ಮಸೆವ ಸಣ್ಣಿಸುವ ನುಣ್ಣಿಸುವ ಸಾಣೆವಿಡಿವ ಕಮ್ಮಾಱರ ಮುಂಗುಡಿಯಿಂ ಪುರಂ ಕಣ್ಗೆಂಬಾದುದು (ರಾಪಾಹ್ಯ. ೦೦೩-೨೫). **ಬೆಸು** : ೧. ಬೆಚ್ಚರೆ ಬೆಸುಗೆಯಱಿಯದಂತಿರಬೇಕು (ಮಹಾದೇ. ೧ ೦೯೬-೩೩೬) ; ಬೆಸುವ ಭೇದಿಸುವ ಸಮಬಾವಳವ ನುಡಿವ ಕವಿಯಾರ್ಯ (ಕುಮ್ಮಾಸ. ೦೦-೩೬); ಅಚ್ಚಕಪಿಲವರ್ಣದ ಪಶು ಖುರ ಶೃಂಗ ಬೆಚ್ಚಂತೆ ಸ್ವರ್ಣಕೋಹಳಿಕೆ ವಚ್ಚ ಸಹಿತ ಬಂದಿರೆ (ಮೋಹತ. ೨೨-೩೬). ೨. ಬೆಳುಗಾರವ ಬೆರಸಿ ಬೆಚ್ಚ ಭಂಗಾರಕ್ಕೆ ಸಂದುಂಟೆ ಹೇಳಾ (ಅವಕಾ. ೨೨೬-೧೦೨೯) ; ಬಿಸಿಯ ಹದನನು ತಿಳಿದು ಲೋಹವ ಬೆಸುವವೊಲು (ಶ್ರಕುರಿ. ೦೯-೯೦). **ಬೆಸೆ$_2$** : ೧. ಪ್ರಸ್ತಕ್ಕೆ ನುಡಿದಿಹರೆ ಬೆಸ್ತಂತೆ ಇರಬೇಕು (ಸರ್ವಜ್ಞ. ೦೩೩೬) ; ಮನವೊಂದು ಮುರಿದರೆ ಮೊದಲಿನಂತೊಂದಾಗಿ ಕೋರ್ವಂತ ಬೆಸೆಯುವುದರಿದು (ಇಂಜಾಶ. ೫೦-೯೫). ೩. ಉಂಟಾಗು ; ಒದಗು : ಬೆಸೆಯಿತೇ ಕೇಡೆಂದು ಬಿಸುಸುಯ್ದಳವಳು (ಕಾಮಿನ. ೦೩೨-೨೯೩).

**ಬಿಸು$_2$**, ಬೆಂ$_2$. ಬೆಚ್ಚ$_2$ (ಸಪೂರೂ). 'ಬಿಸಿದು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಿಸುಗಣ್ಣು', 'ಬಿಸುಗದಿರ್' ಪರಾ. ಬೆಂ$_2$ : 'ಬೆಂಗದಿರ್', 'ಬೆಂಗಲ್' ಪರಾ. ಬೆಚ್ಚ$_2$ : 'ಬೆಚ್ಚಂಬಿಲ', 'ಬೆಚ್ಚಗುಱು' ಪರಾ. [< ಬಿಸಿದು]

**ಬಿಸುಗಂಪು** (ನಾ). ತೀಕ್ಷ್ಣವಾದ ವಾಸನೆ; ಕಟುವಾಸನೆ : ಸುರಯಿಯ ಸೂರ್ಕುಗಂಪು ಪೊಸಸಂಪಗೆಯೊಳ್ಬಿಸುಗಂಪು ತೋರ್ಪ ಪಾದರಿಗಳ ತಣ್ಪುಗಂಪು . . . ಬಗೆಗೊಂಡುದು (ರಾಜಶೇ. ೧೦-೦೯).

[ಬಿಸು$_2$(< ಬಿಸಿದು) + ಕಂಪು]

**ಬಿಸುಗಂಬನಿ** (ನಾ). ಬೆಚ್ಚನೆಯ ಕಣ್ಣೀರು : ಚೆಲ್ಲಿತು ಹೆಣ್ಣ ಕಣ್ಣನಲಿ ಬಿಸುಗಂಬನಿ ಹೊನಲ್! (ಶಕ್ರಾಂಗ. ೦೫-೪೦೩).

[ಬಿಸು$_2$ (< ಬಿಸಿದು) + ಕಂಬನಿ (< ಕಣ್ಬನಿ)]

**ಬಿಸುಗಣ್** (ನಾ). ಪ್ರಜ್ವಲಿಸುವಂತಹ ಕಣ್ಣು; ಅಗ್ನಿನೇತ್ರ : ಶಶಿಧರ ಮುನಿದು ಬಿಸುಗಣ್ಣ ತೆಗೆದರೆ ಶಿವಶರಣರದ ಮನಸಿಗೆ ತಾರರು (ಜಪಸಂ. ೨೦೫-೯೬೩); ಬಿಸುಗಣ್ಣಿಂ ಭಸಿತದಿಂ ಬಾಸಣಿಸಿ ಬಾಸಿಗಮನಿಕ್ಕಿ (ಗಿರಿ. ೦೦-೬೦ ಪ).

**ಬಿಸುಗಣ್ಗೊರವ** = ಪ್ರಜ್ವಲಿಸುವ ಕಣ್ಣುಳ್ಳ ಯತಿ; ಅಗ್ನಿನೇತ್ರನಾದ ಶಿವ : ಚೆಲ್ವಿಂ ಶೀವಿರೆ ಬಿಸುಗಣ್ಗೊರವಂ ಕಾವನ ತೋಳ್ವಲ ಮನಱಿವೆನೆಂದೆಬ್ಬಿಂದಂ (ಕಬ್ಬಿಗಾ. ೨೯೦).

[ಬಿಸು$_2$ (< ಬಿಸಿದು) + ಕಣ್]

**ಬಿಸುಗಣ್ಣ** (ನಾ). ಅಗ್ನಿನೇತ್ರ; ಶಿವ : "ಬಿಸುಗಣ್ಣನೆನಲ್ಗೊರವನಪ್ಪುದು" (ರಪ್ಯಕಂ. ೬) ; ಒರ್ವಂ ಬಿಸುಗಣ್ಣನ ಮುಂದೆ ನಿಂದು ತಾನಿಂತೆಂದಂ (ಕಬ್ಬಿಗಾ. ೨೯೩); ಬಿಸುಗಣ್ಣನಂ ದೇವತಾರಾಧ್ಯನಂ . . . ನುತಿಸಿದಂ (ಉದ್ಭಟ. ೩-೩೦).

**ಬಿಸುಗಣ್ಣಮಗ** = ಶಿವನ ಮಗ; ವೀರಭದ್ರ : "ವೀರಭದ್ರಂಗೆ ಬಿಸುಗಣ್ಣಮಗನೆಂಬ ನಾಮವಕ್ಕು" (ಕಕರ.೬೯). **ಬಿಸುಗಣ್ಣನ ಮಗ, ಬಿಸು**

ಗಣ್ಣ ಮಗ = ಬಿಸುಗಣ್ಣಮಗ : "ಬೀರನೆಂಟಡಿವರಿಜ ಜನ್ಮವಗೆಯಂ ವಿಸುವ ಬಿಸುಗಣ್ಣನ ಮಗನುಮರೆವಾನಿಸವಗೆಯುನೆಂದು ವೀರಭದ್ರಗೆ ಪೆಸರ್" (ಶಬ್ದಕೈ. ೬) ; "ಜನ್ಮವಗೆಯಂ . . . ಬಿಸುಗಣ್ಣ ಮಗಂ. ಅರವಾನಿಸವಗೆಯಂ— ಈ ೫ ವೀರಭದ್ರಂಗೆ ಪೆಸರ್" (ಶಕಸಾ. ೦–೬). ಬಿಸುಗಣ್ಣ ಸುತ=ಬಿಸುಗಣ್ಣಮಗ : ಬಿಸಗೊರಲನ ಬಿಸುಗಣ್ಣ ಸುತಂ ಬರುತ್ತೈದನೆ (ವೀರೇಶ. ೨–೨೫). [ಬಿಸುಗಣ್ + — ಅ$_7$]

**ಬಿಸುಗದಿರ್**, ಬಿಸುಗದಿರು, ಬೆಂಗದಿರ್, ಬೆಂಗದಿರು (ನಾ). (ಸೂರ್ಯನ) ಬೆಚ್ಚನೆಯ ಕಿರಣ ; ಉಷ್ಣರಶ್ಮಿ : ವಾಸರಪತಿ ಬಿಸುಗದಿರಿಂ ಪೇಸದೆ ತವೆ ಪೀರ್ಗುವೆಂಬ ಮಂಜುಕದೊಳಂಭೋಜಾಸನನಂಬುಜವನವಂ ವಾಸಣಿಸಿದನೆನಿಪುವಿಡಿದ ತಾವರೆಯೆಲೆಗಳ್ (ಕಾವ್ಯಾವ. ೨೩೭); ಶಶಿಯ ಪೊಸತಣ್ಗದಿರ್ಗಳ್ ಬಿಸುಗದಿರ್ಗಳಾಗಿ ಸೋಂಕಿದುವು (ಕುಸುಮಾ. ೦೦–೭೦). **ಬಿಸುಗದಿರು** : ಬಿಸುಗದಿರಳಿದ ಹಿಮಕಿರಣನಂತೆ ನೋಳ್ಪರ ಕಣ್ಗೆ ಚೆನ್ನಬಸವಂ ಚಿಸ್ನವಂ ತಳೆದನು (ಚಂಶ್ರೀ. ೫–೯೨) ; ರವಿ ಬಿಸುಗದಿರಂ ಕಚಿಯಂ . . . ಆ ಮುನಿವನದೊಳ್ (ಕಶೆಂ. ೨–೬೬). **ಬೆಂಗದಿರ್** : ಕಂಜಮಿತ್ರನ ಬೆಂಗದಿರ್ಗಳಳವಂ ಕಂಡು ಮಂಜುಳತರಾನಂದವಂ ನಾಡೆ ಕೈಕೊಂಡು (ಉದ್ಭಟ. ೩–೮೫): ಬೆಂಗದಿರ್ಗಂ ತಂಗದಿರ್ಗಂ ತೆಱಪುಗುಡದ ಮರದುಱುಂಗಲಿ ಕಟ್ಟಲೆಯುಂ ಕಾರಿರುಳ್ಗಿತ್ತು (ಶಬ್ದಶಾ. ೨೩೯). **ಬೆಂಗದಿರು** : 'ಬೆಂಗದಿರುಗಲ್' ಪರಾ. [ಬಿಸು$_2$ (<ಬಿಸಿದು) + ಕದಿರ್$_2$]

**ಬಿಸುಗದಿರ**, ಬೆಂಗದಿರ (ನಾ). ಬಿಸಿಯಾದ ಕಿರಣಗಳುಳ್ಳವನು ; ಸೂರ್ಯ : "ಬಿಸುಗದಿರಂ ದಿನೇಶನೊಳೆ" (ಶಬ್ದಾಭ. ೬೦); ಬಿಸುಗದಿರನ ಬೆಂಕೆಗೆ ಸೈರಿಸದೆ . . . ತಾರಗೆಗಳ್ ಪುಂಜಿಸಿದಾ ಮಣಿಗಾಱವಸರದ ಪೊಸಮುತ್ತಿನ ಸೆವದನಿರ್ಪುವಿರುಳಟ್ಟಸೆಗಂ (ಪರ್ಶಪು. ೦–೫೯) ; ಬಿಸುಗದಿರನ ನುಂಗಿ ನೀರ್ಗುಡಿದಖಿಳರಾಕ್ಷಸಿಯ ಮಸ್ತಕದ ಬೈತಲೆಯ ಅಸಿಯ ಚಂದ್ರಾಂಕಿತವೆಂಬಂತ ಸಂಜೆಗೆಂಪೆಸೆದುದು (ಮೋಹತ. ೨೭–೨೨). **ಬೆಂಗದಿರ** : "ತಾವರೆಗೆಳೆಯಂ. ಪಗಲ ಬೊಜಗಂ. ಬೆಂಗದಿರಂ . . . ಗರಂಗಳಾಣ್ಮಂ— ಈ ೧೧ ಸೂರ್ಯನ ಪೆಸರ್" (ಶಕಸಾ ೯೮–೨೮) ; ಇಂಗದಿರನೆಂಬ ಪೆಸರಂತಿರಲಿ ಚಂದ್ರಂಗೆ ಬೆಂಗದಿರನೆಂಬ ಪೆಸರುಚಿತವೆಂದೆನುತೆ . . . ಒರ್ವ ವಿರಹಿಣಿಯಿರ್ದಳ್ (ಸೌಂದಪು. ೦೭–೪೨); ಬೆಂಗದಿರನ ಕಾಯ್ಪು. ತಣ್ಗದಿರನ ತಣ್ಪು . . . ಪಡಿಗೊಳೆ ದಶರಥಕುಮಾರಂ ರಾಜ್ಯಮನಾಳುತಿರ್ದಂ (ರಾಮಾಶ್ವ. ೭–೦೭). [ಬಿಸುಗದಿರ್ + — ಅ$_7$]

**ಬಿಸುಗದಿರು** 'ಬಿಸುಗದಿರ್' ನೋ.

**ಬಿಸುಗದಿರ್ವಕ್ಕಿ** (ನಾ). = ಬಿಸಿಲ್ವಕ್ಕಿ : ಚಾದಗೆ ತಣ್ಬಸುಗದಿರ್ವಕ್ಕಿಗೆ ಬಗೆಗೊಳಿಪಾನಂದದಿರವದಗ್ಗಳಮಲ್ತೆ (ಶಕಾ. ೪ ೦೫೨). [ಬಿಸುಗದಿರ್ + ಪಕ್ಕಿ]

**ಬಿಸುಗಯ್ಯ** 'ಬಿಸುಗೈಯ' ನೋ.

**ಬಿಸುಗಲ್**, ಬೆಂಗಲ್ (ನಾ). ಸೂರ್ಯಕಾಂತಶಿಲೆ : "ನೇಸರ್ಗಲ್, ಬಿಸುಗಲ್ – ಈ ೨ ಸೂರ್ಯಕಾಂತಂ" (ಶಕಸಾ. ೫೦–೫೪); ಬಿಸುಗದಿರ್, ಬಿಸುಗಲ್ (ಭಾಷಾಭೂ. ೦೪೬ ಉದಾ). **ಬೆಂಗಲ್** : ಪಂದಲೆ, ಬೆಂಗಲ್ (ಶಬ್ದಾಮ. ೩೪೨ ಪ್ರಯೋ). [ಬಿಸು$_2$ (< ಬಿಸಿದು) + ಕಲ್$_3$]

**ಬಿಸುಗಾಳಿ** (ನಾ). ಬಿಸಿಯಾದ ಗಾಳಿ : ಬಿಸುನೀರ್, ಬಿಸುಗಾಳಿ (ಕಮಿದ. ೦೮೨ ಪ್ರಯೋ). [ಬಿಸು$_2$ (< ಬಿಸಿದು) + ಗಾಳಿ$_1$]

**ಬಿಸುಗುತ್ತ** (ನಾ). ಮೈಯ ಶಾಖವೇರುವ ಒಂದು ಬಗೆಯ ರೋಗ ; ಜ್ವರ : ಬೆಳ್ಪಿನಿಂದಲ್ ಬಂದು ಮಲೆನಾಡ ಬಿಸುಗುತ್ತದೊಳ್ಗಣೆಗೆಯುಮೊಂಕುತಿರೆ (ಕಾವೂರ. ೦೬೯–೩೭೮). [ಬಿಸು$_2$ (< ಬಿಸಿದು) + ಕುತ್ತ$_1$]

**ಬಿಸುಗುದಿ** (ನಾ). ೧. ತೀವ್ರವಾದ ಶಾಖ, ಬಿಸಂಪು : ಅಲಿಯ ಬಿಸುಗುದಿಯ ಬಲುಕೆಂಡವಂಬಿನ ಪೊಸಮುಸೆಗಳಿಂ ಝಾಡ ಝಳಪಿಸಿ (ಕುವ್ಯಾಅ. ೬–೭): ಬಿಸಿಲ ಬೇಗೆಗೆ . . . ಕಡಲುಗಳು ಬಿಸು[ಪಾಠಾಂ. ಸಿ] ಗುದಿಯುಲುಕ್ಕಿದವು (ತೊರಟಾ. ೨–೪–೦೫); ಮರಳಿ ಮರಳಿ ಬಿಸುಗುದಿಯ ಬಾಣಗಳ್ ಥಟ್ಟುಬ್ಬಿ ಕವಚಮಂ ಹಸಗೆಡಿಸಿ (ತುರಂಗ. ೬೨–೩೫). ೨. (ಅಲಂ) ತಳಮಳ ; ಉದ್ವೇಗ ; ಬೇಗುದಿ : ಎತ್ತಿದ ದುಗುಡದಲಿ ಕುಳ್ಳಿರ್ದನಾ ಸುರನದಿಯ ತೀರದಲಿ . . . ಬೇಗೆಯ ಬೇಸಱಿನ ಬಿಸುಗುದಿಯ ಸುಯ್ಲಿನಲಿ (ಕುವ್ಯಾಅ. ೨೦–೦೫).

[ಬಿಸು$_2$ (<ಬಿಸಿದು) + ಕುದಿ$_3$]

**ಬಿಸುಗೆ$_1$**, ಬೆಸಗೆ, ಬೆಸಿಗೆ, ಬೆಸುಗೆ (ನಾ). ೧. ಹೊಂದಿಕೆ; ಜೋಡಣೆ ; ಸೇರುವೆ : ಬೀಸುವಾವೃತಿಯ ಕಳಂಕಪಂಕದೊಳೆ ಪೆರ್ಚಿದ ಕಚ್ಚಿಲೆ ತೀವ್ರ ಶಸ್ತ್ರಸಂಹತಿಗಳ ದೀಪ್ತಿಯಿಂ ಬಿಸುಗೆಯಾಗಿ ಕರಂ ಪೊಗರ್ವಟ್ಟು (ಕಂಶಬಾ. ೦೦–೫೦) ; ವಾರಣದ ಬಿದು ಪಿಸುಟುದ್ಧೋರಣನಿರದುರುಳೆ ಬಿಸುಗೆ ರಿಪುನೃಪಕಾಂತಾದಾರಾಭರಣದ ಬಿಸುಗೆವೊಲೋರಂತಿರೆ ಕಬಿಲೆ ಭರದಿನೆಚ್ಚರ್ ಜೋದರ್ (ಪಾರ್ಶ್ವಪು. ೩–೦೨೨). **ಬೆಸಗೆ** : ೨. ಲೋಹಭಾಗಗಳನ್ನು ಕಾಯಿಸಿ ಒಂದರೊಡನೊಂದು ಸೇರಿಸುವುದು : ಈ ಪಾತ್ರೆಗೆ ಬೆಸಗೆಯನ್ನು ಚೆನ್ನಾಗಿ ಹಾಕಿಲ್ಲ (ಮುದ್ರಮ. ೦೩೨). **ಬೆಸಿಗೆ** : ೨. ಈ ಪಾತ್ರೆಗೆ ಬೆಸಿಗೆ ಹಾಕಿಸಬೇಕು (ರೂಢಿ). ೩. ಗೋಡೆಗೆ ಸೇರಿಕೊಂಡಂತೆ ಕಟ್ಟಿರುವ ಕಟ್ಟೆ ; ಬಡು : ಬೆಸಿಗೆಯ ಮೇಲೆ ಮದ್ದಿನ ಕಲ್ಲದೆ (ಕಂಗಾಳ. ೧೬೭) ; ಪಾತ್ರೆಗಳನ್ನು ಇಡಲು ಒಂದು ಬೆಸಿಗೆ ಅಥವಾ ಸಣ್ಣ ಬೀರನ್ನು ಅಡಿಗೆಮನೆಯಲ್ಲಿಟ್ಟುಕೊಂಡರೆ ಅಡಿಗೆಸಾಮಾನುಗಳನ್ನೂ ಪಾತ್ರೆಗಳನ್ನೂ ಅದರಲ್ಲಿಟ್ಟುಕೊಳ್ಳಬಹುದು (ಗೃಹಶಾ. ೦೭೫). **ಬೆಸುಗೆ** : ೧. ಬೆಚ್ಚರೆ ಬೆಸುಗೆಯುಱಿಯದಂತಿರಬೇಕು (ಮಹಾದೇ. ಬ. ೦೪೭–೩೩೬) ; ಚಕ್ರವಾಕದ ಬೆಸುಗೆ ಸಡಲಿತು ಚಾರುಚಂದ್ರಾನನೆಯ ಬರವಿನಲಿ (ಸಃಭಶ. ೨೯–೩೮) ; ಕಮಲಕುಟ್ಮಲದೊಳು ಬೆಸುಗೆಯಾಂತುವು ತುಂಬಿಗಳು (ಕಂಪಶಿ. ೪–೫೯). ೨. ನನ್ನ ಸರದ ಬೆಸುಗೆ ಬಿಟ್ಟುಹೋಗಿದೆ (ರೂಢಿ). ೪. ಒಂದಾಗುವಿಕೆ ; ಲೀನವಾಗುವಿಕೆ : ಅಸುಪರಿತ್ಯಾಗದಲಿ ಯೋಗದ ಬೆಸುಗೆಗಳನುಳ್ಳವರು . . . ನಿಮ್ಮನ್ನಯದ ರಾಯರು (ತೊರಟಾ. ೦–೩–೦೯).

[ಬಿಸು$_1$ + — ಗೆ. / ತುಳು. ಬೆಸಿಗೆ]

**ಬಿಸುಗೆ$_2$** (ನಾ). ೧. ಪಗಡೆ ಅಥವಾ ಚದುರಂಗದಾಟಕ್ಕೆ ಬಳಸುವ ಕಾಯಿ ; ಸಾರಿ : "ದುಂಡಿಜೆಯುಮಂ ಬಿಸುಗೆ ಸಾರಿಯೆಂದಕ್ಕುಂ" (ಶಬ್ದಕೈ. ೮೦) ; ಬಿಸುಗೆ — ಡೆಂಜೆಯಂ (ಡೆಂಚೆಯಂ) (ಕಮಿದ. ೫೦. ೨) ; ಹಗಲಿರುಳ ಹಾಸಂಗಿಯೊಡ್ಡಿ ಮಾನವರಂ ಬಿಸುಗೆಯಾಗಿಸಿ ನಿಯತಿಯಾಡಿಸುವುದವರಂ (ಗೀಶಂ. ೦೨೨–೩೫). ೨. ಅಂಬಾರಿ ; ಹೌದಾ : ಆಗಳೇಱಿಸಿದ ಬಿಸುಗೆಗಳುಮಿಕ್ಕಿದ ಲೋಹವಕ್ಕರೆಗಳುಂ . . . ಬೆರಸು (ಕಂಶಬಾ. ೦೦–೫೦ ವ) ; ಕನ್ನರದೇವಚೋಟನಂ ಕಾದುವನ್ನು ಬೂತುಗಂ ರಾಜಾದಿತ್ಯನಂ ಬಿಸುಗೆಯ ಕಳನಾಗಿ ಸುರಿಗಿಱಿದು ಕಾದಿ ಕೊನ್ದು (ಎಇ. III, ಮಂಡ್ಯ. ೪೦ ೨೦ ; 950) ; ಏಱಿಸಿದ ಬಿಸುಗೆಯುಮಮರ್ಚಿದ ಲೋಹವಕ್ಕರೆಯುಂ (ಪರ್ಶಪು. ೬–೪೪ ವ). 'ಶಿಬಿಕೆ', 'ಸಿವಿಗೆ' ಹೋ. [?]

**ಬಿಸುಗೈಯ**, ಬಿಸುಗಯ್ಯ (ನಾ). =ಬಿಸುಗದಿರ : ಬಿಸುಗೈಯನಟ್ಟಿದ ಬೇಹುಕಾಱರ ಸೋವೆನಲಾಗಸದೊಳೆಡೆಯೆಡೆಯೊಳಱಿಲುಂ . . . ಎಸೆದುವು (ರಾಜಶೇಶ್ವ. ೨೨–೨೯). **ಬಿಸುಗಯ್ಯ** : ಬಿಸುಗಯ್ಯಂ ತಣ್ಣಸಗಯ್ಯಂ ಪೊಸಕಿಸುಬಿಸುಮಯ್ಯಂ ಕಣ್ಣಾದು (ಉದ್ಭಟ. ೦–೨).

[ಬಿಸು$_2$ (<ಬಿಸಿದು) + ಕೈ$_2$ (<ಕೆಯ್$_2$) + — ಅ$_7$]

**ಬಿಸುಟು$_1$** (ಕ್ರಿ). (ದೂರಕ್ಕೆ) ಎಸೆ ; ಒಗೆ : ಗುಡಿಗಳುಂಟು ಶಯನಕೆನಗೆ ಒಡೆಯರುಗಳು ಬಿಸುಟಿದರುವೆ ಶೀತಕುಂಟಲ್ಲೆ (ಕುಶಾರ. ೮೦–೦); ಸೇವಕರು ಅರಮನೆಯಿಂದ ಎಳೆದು ಬೀದಿಗೆ ಬಿಸುಟಿದರು (ಮುಂಡಾಶಿ. ೦೪೨).

[<ಬಿಸುಡು]

**ಬಿಸುಟ್ಟು₂** 'ಬಿಸುಡು' ಪರಾ.

**ಬಿಸುಟ್ಟು₃** 'ಬಿಸುಡು' ಪರಾ.

**ಬಿಸುಡಿಸು** (ಕ್ರಿ). ೧.ಎಸೆಯುವಂತೆ ಮಾಡು ; ಒಗೆಸು : ಕೋಪದಿಂ ಬಂದ ಮದನನ ಬಿಲ್ಲ ಬಿ[ಸುಡಿಸಿದ] ಭಾಪುರೇ (ಸಿದ್ಧರಾ. ೪ ಸೂಕ್ತಪ); ನ್ನನೆಮುಂಬಂ ಕಂತುವಿಂದಂ ಬಿಸುಡಿಸಿ (ಪುಷ್ಪಪು. ೨-೨೬). ೨. ಬಿಟ್ಟು ಬಿಡುವಂತೆ ಮಾಡು : ಎಂದು ನುಡಿದು ಬಿಸುಡಿಸಿದಂ ಮತ್ತೊರ್ವಂ ತನ ಗೆರಡಱಿಯದೊಲ್ದ ನಲ್ಲಳಂ (ಶಂಶಭಾ. ೪-೯೨ ಪ). [ಬಿಸುಡು + — ಇಸು₃]

**ಬಿಸುಡು** (ಕ್ರಿ). ಬಿಸುಟ್ಟು₂, ಬಿಸುಟ್ಟು₃(ಭೂತನ್ಯೂ). ಬಿಸುಟ್ಟಿ(ವರ್ತಕೃ). ೧. (ದೂರಕ್ಕೆ) ಎಸೆ ; ಒಗೆ ; ಚೆಲ್ಲು : ಕೊಲ್ಲೆಂ ಬಿಸುಡಾಯುಧಮಂ ಪುಲ್ಲಂ ಕರ್ಚೆಱು ಪುತ್ತಂ (ಕಬಿರಾ. ೩-೧೪೪) ; ಆ ಬಾಲೆ ಕಾಯ್ದು ಪುಡಿಯೊಳಗೆ ಬಿಸುಟ್ಟೆಳವಾಱಿಯಂತೆ . . . ಮಮ್ಮಲಮಱುಗುತಿರ್ದಳ್ (ಶಂಶಭಾ. ೫-೧೧ ಪ); ಮುನಿಜನನಿವಾಸದೊಳೀತನನುಯ್ದು ಬಿಸುಟ್ಟುದು (ಕಾವ್ಯಂಪು. ೬೪); ಮಧುಮಾಸದಗ್ನಿಯಲಿ ಚಿಂತೆ ಬೆಸನೆಂಬ ಚಳಿಬೆಂತೆಯನು ಬಿಸುಡು (ಉಮರ. ೯೩-೭). ೨. ತೊರೆ; ತ್ಯಜಿಸು; ಬಿಡು : ತನ್ನೆಯ ತಾಯ್ವರಾ ಸನ್ಮಾನಮು(ಂ)ನುಳಿದು ಬಿಸುಟೋಂ (ಶಾಇ. XI-i, ೧೧-೬; 965); ಸವಣದ ಧರ್ಮಮಂ ನಮಗೆ ಕೊಳಲಾಗ ಬಿಸುಡು (ವಡ್ಡಾರಾ. ೦೩-೨೦); ಸಮರಾಕರಮಂ ಬಿಸುಟ್ಟು ಕಮಲಾಕರಮಂ ಪೊಕ್ಕಲವೊ ಮರುಳೆ ಬರ್ದು ಕಲ್ಬಗೆವಾ (ಗದಾಯು. ೭-೧೨): ಧರೆಗೆ ಹೊಱೆಯಾದೆನ್ನ ತನುವನುಯಿರದೆ ಬಿಸುಡುವ ತೆಱನ ಕೃಪೆ ಮಾಡು (ಕುವ್ಯಾಕ. ೬೦೫. ೨೬-೩೩) ; ಬೋಯಿಗಳು ಪಲ್ಲಕ್ಕಿಯನ್ನು ಬಿಸುಟು ಓಡಿಹೋದಾಗ ಮತ್ತೊಂದು ವಿಪತ್ತಿಗೆ ಕಾರಣ ವಾಯಿತೆಂದು ತಿಳಿದಳು (ದೇಶೀಕಾ. ೩೩). ೩. ತೆಗೆದು ಹಾಕು ; ಕಳಚು : ಮಾಯೆಯು ಮೇಲ್ಮುಸುಕನು ಬಿಸುಡೆ (ಬಸೀಗೀ. ೬-೩). [ದೇ.॥ ತಮಿ. ವಿಚಿಱು; ತುಳು. ಬೀಜಾಡು, ಬೀಜಾವು; ತೆಲು. ವಿಸರು,ವಿಸುರು]

**ಬಿಸುಡುಗಾರ್ತಿ** (ನಾ). ೧. ಗಂಡನನ್ನು ಬಿಟ್ಟವಳು; ಪತಿಯನ್ನು ತ್ಯಜಿಸಿದವಳು : ಇಳೆ ರವಿಯೇೞಱೊಳ್ ಬಿಸುಡುಗಾರ್ತಿಯೆನಿಕ್ಕುಂ (ಶಾಕಂ. ೨೨-೦೩). ೨. ನಡತೆಗೆಟ್ಟವಳು; ವೇಶ್ಯೆ : ಸೂಳೆ ವಿಧವೆ ಬಿಸುಡು ಗಾರ್ತಿ ಕನ್ನೆಯೆಂಬಿವರೊಳ್ (ಶತ್ಕ್ರ. ೨೯೦); ಇತ್ವರಿಯೆಂಬಳು ಬಿಸುಡು ಗಾರ್ತಿ (ಶಸಾರ. ೩೦೬).

[ಬಿಸುಡು + — ಕಾಱ + —ತಿ₁ (< —ಇತ್ತಿ)]

**ಬಿಸುದೊಱೆ** (ನಾ). ಬಿಸಿನೀರಿನ ನದಿ : ಬಾಂದೊಱೆ ಬಿಸುದೊಱೆ ಯಾದುದು ಕಾಲವಶಮದೇನಾಗಿಸದೋ (ಜಗಂ. ೧೬-೬೬).

[ಬಿಸು₂ (< ಬಿಸಿದು) + ತೊಱೆ₂]

**ಬಿಸುನೀರ್, ಬೆನ್ನೀರ್, ಬೆನ್ನೀರು** (ನಾ).= ಬಿಸಿನೀರ್ : "ಬಿಸುನೀರ್ ಬೆನ್ನೀರ್" (ಕರ್ಣಾಶ. ೬); ಅರಾತಿಪಾರ್ಥಿವರ ಕಾಂತಾನೇತ್ರ ನೀರೇಜದೊಳ್ ಬಿಸುನೀರಂ . . . ಪುಟ್ಟಿಸುವಂ ತನ್ನೃಪನಂದನಂ (ರೇಶಾವ. ೦-೯೮) ; ಈ ಕೂಸಿನ ಮೆಯ್ಯ ಮಾಸಂ ತೊಳೆಯೆ ಬಿಸುನೀರ್ಗಾಪಾಯಮಂ ನೆನೆಯಲ್ (ದಶಕು. ೨-೮೪ ಪ). **ಬೆನ್ನೀರ್** : ಪಗೆವರ ಬೇರೊಳ್ ಬೆನ್ನೀರಂ ಪೊಯ್ದು ನಿನಗೆ ಮಾೞ್ಪಂ ಧರೆಯಂ (ಶಂಶಭಾ. ೮-೩೪) ; ಮುನ್ನೀರ್ ಬೆನ್ನೀರೆನೆ ಬೆರಸಲಣ್ಣ ಕಣ್ಣೀರೊಳವೆ (ಶಂರಾವಾ. ೯-೯೨) ; ಮಿತ್ರಂ ಬಿಸಿಲಂ ಹಿಳಿಯಲ್ ಬೆನ್ನೀರೊಸರ್ವಂತಿರ್ದುದು ಮರೀಚಿಕಾಜಲ ಮೆತ್ತಂ (ಗಂಕ. ೯-೧೮). **ಬೆನ್ನೀರು** : ಒಡಿದು ಪೊನ್ನಂಡೆಗಳ ತೀವಿದರೊಡನೆ ಬೆನ್ನೀರೆರೆಜಲಕ್ಷ್ಮಿದರ್ಬೆಡಗಿಯರು ನಳಿತೋಳ (ಶಾಗಹ. ೫-೬) ; ಕುನ್ನಿಗಳ ಬುಡಕೆ ಬೆನ್ನೀರೆರೆಯದಿರೆ ನಾನು ಕೆಮ್ಮನೀ ಕೊಡಲಿವೊತ್ತವನೇನು (ಕಶಾರ. ೭೨). [ಬಿಸು₂ (< ಬಿಸಿದು) + ನೀರ್]

**ಬಿಸುನುಡಿ** (ನಾ). ಕಠಿಣವಾದ ಮಾತು : ಆ ವನಿತೆ ಬಿಸುನುಡಿಗಳಂ ಗೂಢ ಪಾದರಾಗಿರಿಯೆಂದಳು (ಬಕೋಪು. ೦೩-೯). [ಬಿಸು₂ (< ಬಿಸಿದು) + ನುಡಿ₂]

**ಬಿಸುನೆತ್ತರ್** (ನಾ). = ಬಿಸಿನೆತ್ತರು : ಬಿಸುನೆತ್ತರ್ ನೆಣನಡಗೆಲ್ಲ ಸಮಸ್ತಂ ಸುರಿಯೆ ಕೈಗೆ ತೊವಲುಱಿಯಲ್ (ಶಂಪಭಾ. ೮-೭೭) ; ಭೀಷ್ಮರ ಬಿಸುನೆತ್ತರಂ ಕುಡಿವೊಡನ್ನುಮೊಳಂ (ಗದಾಯು. ೪-೪೨) ; ಕಿಂಕರಯೂಥಮಾಗ್ಗಿ ತಗ್ಗಿರೆ ಬಿಸುನೆತ್ತರುಣ್ಕೆ ಪರಿಯುತ್ತಿರೆ (ಎಕ. VIII, ಸಾಗರ. ೧೦೯-೨೬ : 1042).

[ಬಿಸು₂ (< ಬಿಸಿದು) + ನೆತ್ತರ್]

**ಬಿಸುಪು**, ಬಿಸುಪ್ಪು (ನಾ). ೧. ತಾಪ ; ಕಾವು ; ಉಷ್ಣತೆ: ಬಿಸಿಲೆಸಕ ದಿಂದೆ ಕೊರಗಿದ ದೆಸೆವೆಣ್ಗಳ ಬಿಸುಪನಾಱಿಪಂತಿರೆ ಗಿಳಿಗಳ್ ಪಸುರೆಱಕೆ ಯೆಂಬ ಬಾೞಿಯ ಪೊಸಬಿಜ್ಜಣಿಗೆಗಳಿನೆಸಗಿಪುವು ತಣ್ಣೆಲರಂ (ಕಾದಂಪೂ. ೧೩೦); ಬಿಸುಪಮರ್ದ ನೊಸಲ ಕಣ್ಣಂ . . . ನೋೞ್ಪ ರನಂಜಿಸೆ (ಕಬ್ಬಿಗಕಾ. ೨೫೫) ; ಚೆನ್ನೇಸಱ ಬಿಂಬಂ ಬಿಸುಪನುಳಿದು (ಜಯನೃ. ೩-೭೭). ೨. ಮೈಯ ಕಾವೇರುವಿಕೆ; ಜ್ವರ : ಬೆಳ್ಳಿ ಬಿಸುಪಿಂದ ಮಾಗು ಳೊಮ್ಮೆ ಮಲಗಲ್ (ಕಾಲೂರ. ೧೫೮-೩೫೦). ೩. (ಅಲಂ) ವಿರಹ ತಾಪ : ಮನದ ಮೆಯ್ಯ ಸಂತಾಪದೊಳ್ ಬಿಸುಸುಯ್ದು ಬಿಸುಪಿನೊಳ ನಿತುಮಂ ಗೆಲ್ದು ಕೆಂದಳಿರ್ವಾಸು ಸೇಕದ ತೊವಲ್ಗಣೆಯಾಯ್ತು (ಶಂಶಭಾ. ೫-೬ ಪ). Δ **ಬಿಸುಪ್ಪು** : ೧. ಕೇದಗೆಪೂವಂ ಚಾದಗೆ ಬಾಯಂ ಬಿಡೆ ಬಿಡುತಿರೆ ಬಿಡುವನಿ ಕಡುವಿಸಿಲಿಂ ಸೋದು ಬಿಸುಪ್ಪಂ ಚಾದಿಯ ಕಂಪಂ . . . ಎಲರ್ಬಂದುದು (ಅರ್ಜಪು. ೪-೧೨೭) : ನೆಲೆವೆರ್ಚಿದ ಪೂಗೊಳಂ ಬಿಸುಪ್ಪೆಸಗದ ನುಣ್ಬಿಸಿಲ್ (ಎಕ. VII, ಶಿಕಾ. ೧೯೭-೪೦; 1181); ವಿರಹ ವಿಮ್ಮಡಿಸೆ ಸುಯ್ ಮೂಮಡಿಸೆ ಮೈ ಬಿಸುಪ್ಪಿರದೆ ನಾಲ್ವಡಿಸೆ ಕಿಡಿಕಿಡಿಯಾಗಿ (ಶಬಪು. ೪೬-೧೦). [ಬಿಸು₂ (<ಬಿಸಿದು) + —ಪು₂]

**ಬಿಸುಪುಗಿಡಿಸು** (ಕ್ರಿ). ತೀಕ್ಷ್ಣತೆಯನ್ನು ಹೋಗಲಾಡಿಸು ; ಶಾಖ ವನ್ನು ಕುಗ್ಗಿಸು : ಧರಣೇಶನ ಚಿತ್ತದ ಶಾಂತರಸಂ ನೆಲೆವೆರ್ಚೆ ಬಿಸುಪು ಗಿಡಿಸಿತ್ತಕ್ಕುಂ ಖರಕಿರಣಂಗಳಂ (ಮಲ್ಲಪು. ೧೧-೩).

[ಬಿಸುಪು + ಕಿಡಿಸು (< ಕೆಡಿಸು₁)]

**ಬಿಸುಪೇರು** 'ಬಿಸುಪೇಱು' ನೋ.

**ಬಿಸುಪೇಱು**, ಬಿಸುಪೇರು (ಕ್ರಿ). ೧. ತಾಪವು ಹೆಚ್ಚಾಗು; ಕಾವೇರು : ಸಪ್ತಾಬ್ಧಿವೇಳಾಲತಾಂಗಂ ಬಿಸುಪೇಱಿತ್ತಭ್ರಗಂಗಾಬ್ಜಿನಿ ಮುಗಿದುದದೇಂ ರೌದ್ರಮೋ ಶೈಲದಾಹಂ (ಜಗಂ. ೮-೩೫) ; ಕೋಡಿ ಬಾಡಿ ಸುರುಳ್ದುರುಳ್ದು . . . ಬಿಸುಪೇಱಿ ಕಳೆಗುಂದಿ (ಗಂಕ. ೪-೧೧೮ಪ); ಪೆಱತೊಂದು ನೆಪದೊಳು ಬಿಸುಪೇಱಿದ ಕೋಪದುಱುಬಿನಿಂದೊದಱುವ ಪತಿಗೆ . . . ಪೆಱದೆಗೆವುದು (ಹರಿಬ. ೩-೨೭). **ಬಿಸುಪೇರು** : ೨. ಜ್ವರವು ಹೆಚ್ಚಾಗು ; ಮೈಯ ತಾಪವೇರು : ಬೆಳ್ಳಿ ಬಂದಳ್ ಮನೆಗೆ ಬಿಸುಪೇರಿ (ಕಾಲೂರ. ೦೩೩-೨೮೧).

[ ಬಿಸುಪು + ಏಱು₁ (< ಏಱ್₁) ]

**ಬಿಸುಬೂರಿಗೆ** 'ಬೀಸುಂಬೂರಿಗೆ' ನೋ.

**ಬಿಸುರ್**, ಬಿಸುರು (ಕ್ರಿ). ೧. ತಾಪಗೊಳ್ಳು ; ಸಂಕಟಪಡು : ಹಾ ಮಲ್ಲಣಿಯೆನುತ್ತಿರದೆ ಕಳವಳಿಸಿ ನುಡಿಯಲ್ಕೇಳ್ದು ಮನದನ್ನನುಲಿ ಯೆಂದು ತಿಳಿದು ಬಿಸುತ್ತರ್ (ಕುವಾಪು. ೩-೧೧೫). **ಬಿಸುರು** : ೨. (?): ಸಂದ ದ್ರವ್ಯವ ಮತ್ತೆ ಉಲ್ಲಂಘಿಸಿ ಇರುತ್ತ ಮತ್ತೆ ವಿಶ್ರದಿಂದ ದ್ರವ್ಯಂಗಳು ಬಿಸುರಿ ಬಂದು ಸೋಂಕಲಿಕೆ ಮತ್ತಿರಿಸಬಹುದೇ (ಸರ್ವವ. ೧೧೮-೬೦೨). [ < ಬಿಸು₂ ]

**ಬಿಸುರಕ್ತ** (ನಾ). = ಬಿಸಿನೆತ್ತರು : ಸುರಿವ ಬಿಸುರಕ್ತದಿಂದಾ ಜನಜಾಲ ವೈಡಿತು ದೆಸೆದೆಸೆಗೆ (ಕಂವಂ. ೧೧-೫೦). [ ಬಿಸು₂ (< ಬಿಸಿದು) + ರಕ್ತ ]

**ಬಿಸುರು** 'ಬಿಸುರ್' ನೋ.

Δ **ಬಿಸುಪ್ಪು** 'ಬಿಸುಪು' ನೋ.

**ಬಿಸುವಳಿ** (ನಾ). (ಮೃಗಗಳ ಹಿಂಡು) ಸೇರುವ ಜಾಗ (?) : ನೆಲನಂ ನಿಱುಗೆಯಂ ನಡೆವೊಂದು ಪದಮುಮಂ ಸೋವಳಿ ಮೋವಳಿ ಬಿಸುವಳಿಯುಂ

ಬಲವುಂ ಶಕುನಮನೊಳ್ಕೊತ್ತುಪಾಳ್ಳುಪುಂ ಪಿಡಿವಂದು (ಶಂಶಾ. ೩-೪೬) ; "ಬಿಸುವಳಿಯಂ — ಒಟ್ಟಾಗುವಿಕೆಯುನ್ನು" (ಶಂಶೋ. ೧೯೬).

[ಬಿಸು$_1$ + — ವಳಿ$_3$]

**ಬಿಸುವಾತು** (ನಾ). ಕಾವೇರಿದ ಮಾತು ; ಆವೇಶದ ನುಡಿ : ಪಸಿದು ಬಳಲಿ ಪರದೇಸಿ ಬಾಯ್ವಿಡೆ ಕಂಡಸಮಯವೆಂದಬ್ಬರಿಸದೆ ಬಿಸುವಾತಿನೊಳು ಬೇಯಿಸದಿದ್ದ ಮಾತ್ರವನೊಸದೀವುದೊಳ್ಮಾತಿನೊಳು (ಹರಿ. ೪-೩೩).

[ಬಿಸು$_2$ (< ಬಿಸಿದು) + ಮಾತು$_1$]

**ಬಿಸುವಿಸಿಲ್**, ಬಿಸುವಿಸಿಲು, ಬೆಂಬಿಸಿಲ್ (ನಾ). = ಬಿಸಿವಿಸಿಲ್ : ದೆಸೆವೆಣ್ಗಳ್ ಬಿಸುವಿಸಿಲಿಂ ಬಸವಳಿದುಃಪೆಂದು ಸುಯ್ದು ಬಿಸುಸುಯ್ಕೆಲರೆಂಬೆ ಸಕವಮನೊಡರ್ಚೆ ಬೀಸಿದುದು (ರಾಜಶೇ. ೩-೩೨). **ಬಿಸುವಿಸಿಲು** : ಬಸವಳಿದು ಬಿಸುವಿಸಿಲ ಪರಿಯಿಂದೆ ನೆರೆ ನೊಂದು . . . ಮರಿದುಂಬಿಯು ಬಳಿಸಾರೆ (ಶಂಕ. ೨-೧೩). **ಬೆಂಬಿಸಿಲ್** : ಅವ್ಯಯೀಭಾವಕ್ಕೆ — ಅಂಗಯ್ . . . ಬೆಂಬಿಸಿಲ್, ಬೆಂಗೊಡಂ (ಶಮದ. ೧೬೩ ಪ್ರಯೋ).

[ಬಿಸು$_2$ (<ಬಿಸಿದು) + ಬಿಸಿಲ್]

**ಬಿಸುವಿಸಿಲು** 'ಬಿಸುವಿಸಿಲ್' ನೋ.

**ಬಿಸುವುಡಿ** (ನಾ). ಕಾದ ಮರಳು : ಕೊಳ್ಳಿಗಳಂ ಬಿಡದೋವದೆ ಬೀಸುವ ಬಳ್ಳಿಗೆಡೆದು ಬಿಸುವುಡಿಯಂ ಸೂಸುವ . . . ಮರುಳ ನೆರವಿಗಿನಿಸಪ್ಪಡ ಮಗಿಯದೆ (ಶರಪಾ. ೧೩-೨೦ ರಗಳೆ) ; ಜನವೆಲ್ಲಂ ನೋಡೆ ಚೌವಟ್ಟದ ಬಿಸುವುಡಿಯೊಳ್ ಬಿಟ್ಟು ಸಾವಂತುಟಾಯ್ತೇ (ಶಾವ್ಯ. ವ. ೩೬೪).

[ಬಿಸು$_2$ (<ಬಿಸಿದು) + ಪುಡಿ]

**ಬಿಸುವೂರಿಗೆ** 'ಬೀಸುಂಬೂರಿಗೆ' ನೋ.

**ಬಿಸುಸುಯ್$_1$**, ಬಿಸುಸುಯ್ಯು (ಕ್ರಿ). (ದುಃಖ, ಕೋಪ, ಆಯಾಸ ಮುಂತಾದಂವುಗಳಿಂದ) ಬಿಸಿಯುಸಿರನ್ನು ಬಿಡು : ಮನದ ಮೆಯ್ಯ ಸಂತಾಪದೊಳ್ ಬಿಸುಸುಯ್ದು ಬಿಸುಪಿನೊಳನಿತುಮಂ ಗೆಲ್ದು (ಶಂಶಾ. ೩-೬ ವ) ; ಸತ್ತ ಭೂಪರ ಪೆಂಡಿರ್ ಬಿಸುಸುಯ್ಯೆ (ಎಕ. VIII, ಸಾಗರ. ೧೦೯-೩೩; 1042) ; ಹೇಳಿ ಫಲವಿನ್ನೇನೆನುತ ಬಿಸುಸುಯ್ದನಾ ಪಾರ್ಥ (ಕುಮ್ಯಾ. ೧೬-೨೮). **ಬಿಸುಸುಯ್ಯು** : ಕಣ್ಣನಿಯೊಸರುತ್ತೆಲೆ ನಲ್ಲಳೆ ಹಾಯೆನುತುಂ ಬಿಸುಸುಯ್ಯುತೆ (ಶಮುಕಾ. ೨-೨೩); ಮುನಿಮುಖ್ಯಂ . . . ಬಿಸಿಲಿನೊಳು ಬೆಂದುಱಿ ಬೆಮರುತ ಬಿಸುಸುಯ್ಯುತ್ತಂದು ನಿಂದನು ಮರದ ನೆಳಲೊಳು (ಹರಿ. ೨-೩೨). [ಬಿಸು$_2$ (<ಬಿಸಿದು) + ಸುಯ್$_1$]

**ಬಿಸುಸುಯ್$_2$** (ನಾ). (ದುಃಖ, ಕೋಪ, ಆಯಾಸ ಮುಂತಾದುವುಗಳಿಂದ ಬಿಡುವ) ಬಿಸಿಯಾದ ಉಸಿರು : ನೀಳ್ದ ಪೊಗೆಯುಂ ಕಿಡಿಯುಂ ಬಿಸುಸುಯ್ಯ ಗಾಳಿಯೊಳ್ ತೊಡರ್ದು (ಆದಿಪು. ೨-೪೦) ; ಅವಳ . . . ಬಿಸುಸುಯ್ಯಲರಿಂ ಗಱಿ ಸೀದು ಸೌರಭಕ್ಕೆಱಗಿದಳಿಗಳುರುಳುತ್ತಿರೆ (ಶರಪು. ೪-೯೯) ; ವಿರಹಿಗಳ ಬಿಸುಸುಯ್ಯ ಕಿಚ್ಚಟ್ಟ ತನ್ನೆರ್ದೆ ಪೊತ್ತಿ ಪೊಗೆವ ಪರಿಯೋ . . . ಎನಲ್ ಹರಿಣಾಂಕನುದರದ ಕಲಂಕವೊಪ್ಪಿದುದು (ಶದ್ಯರಾ. ೮-೬೩).

[ಬಿಸು$_2$ (<ಬಿಸಿದು) + ಸುಯ್$_2$]

**ಬಿಸುಸುಯಿಲ್**, ಬಿಸುಸುಯಿಲು (ನಾ). =ಬಿಸುಸುಯ್$_2$: ಬಿಸುನೆತ್ತರ್, ಬಿಸುಸುಯಿಲ್ (ಶಾಕಾಭೂ. ೦೯೬ ಉದಾ). **ಬಿಸುಸುಯಿಲು** : ಅರಸ ನೆಱೆ ಬಿಸುಸುಯಿಲ ಸುಯಿವೃತ ಪುರಕ ತೆರಳದೆಯಿರಲಿಕೆ (ಶಂಶಕ. ೨೬-೦೬) ; ಸುಮಂತ್ರನು . . . ಸಾರದನಕ್ಷಿಯುಗಳದ ವಾರಿಗಳ ಬೀಳಿಕೆಯು ಬಿಸುಸುಯಿಲಿ[ಶಾಶಾಂ. ಸುಯಿಲ್ಲ]ನ ಮಹೀಪತಿಯು (ತೊರರಾ. ೨-೩-೩).

[ಬಿಸು$_2$ (<ಬಿಸಿದು) + ಸುಯಿಲ್]

**ಬಿಸುಸುಯಿಲು** 'ಬಿಸುಸುಯಿಲ್' ನೋ.

**ಬಿಸುಸುಯ್ಯು** 'ಬಿಸುಸುಯ್$_1$' ನೋ.

**ಬಿಸುಸುಯ್ಲು** (ನಾ). = ಬಿಸುಸುಯ್$_2$ : ಜಯವಹುದೆ ನಿರ್ವೇದದಲಿ ನಿರ್ಭಯವಹುದೆ ಬಿಸುಸುಯ್ಲನಲಿ (ಕುಮ್ಯಾ. ೦೬-೬) ; ರಾಗವಡಗಿದ ಮನದ ಬಿಸುಸುಯ್ಲ ಸೂಟಿಗಿಂಬಾಗಿರ್ದ ನಾಸಿಕದ ಬಿಗಿದ ಬೆಱಗಿನ ಚಿಂತೆಗಾಗರಂ ತಾನಾಗಿ (ಕಬಪು. ೬-೨೪).

[ಬಿಸು$_2$ (<ಬಿಸಿದು) + ಸುಯ್ಲು (<ಸುಯ್ಯಲ್)]

**ಬಿಸುಹೂರಿಗೆ** 'ಬೀಸುಂಬೂರಿಗೆ' ನೋ.

**ಬಿಸುಳಿಗೆ** 'ಬೆಸಳಿಗೆ' ನೋ.

**ಬಿಸುಟ್ಟ** 'ಬಿಸುಡು' ಪರಾ.

**ಬಿಸೂರಿಗೆ** 'ಬೀಸುಂಬೂರಿಗೆ' ನೋ.

**ಬಿಸೆಯಸತ್ತಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬಿಸೆಯಸತ್ತಿಕುಮಾರ ವಸುನ್ಧಪತಿತನಯ ಪಟುಕ್ಕಣ್ಣಸತ್ತಿಯಾ ಪುತ್ರನತಿಪ್ರಸಿದ್ಧಘನನಿರ್ಮಲ ಮಾಗುತ (ಎಕ. XVI, ಶಾವುಗ. ೦೨-೦ ; ಸು. 754). [?]

**ಬಿಸ್ಕತ್ತು**, ಬಿಸ್ಕೀಟು, ಬಿಸ್ಕೆಟ್ಟು (ನಾ). ಗೋಧಿ ಮೊದಲಾದ ಧಾನ್ಯಗಳ ಹಿಟ್ಟಿಗೆ ಹುದುಗು ಹಾಕದೆ ತೆಳ್ಳನೆಯ ಸಣ್ಣ ಬಿಲ್ಲೆಗಳ ಆಕಾರದಲ್ಲಿ ತಯಾರಿಸಿದ, ಹಗುರವಾಗಿ ಇರುವ ಒಂದು ಬಗೆಯ ತಿನಿಸು : ಸುಶೀಲೆಯೇನು ಚಿಕ್ಕಗೂನೆ ಬಿಸ್ಕತ್ತು ತಿನ್ನೋಕೆ ? (ಐಪಕಂ. ೨೨೬) ; ಸ್ನೇಹವಾಕ್ಯದ ಜೊತೆಗೆ ಚಹ ಬಿಸ್ಕತ್ತುಗಳು ಮಾತ್ರ ಸಿಗುತ್ತಿದ್ದವು (ದಾಅಇ. ೪ ಕಥಾಮಾಲಿ). **ಬಿಸ್ಕೀಟು** : ಎದುರಿಗಿದ್ದ ಬಿಸ್ಕೀಟುಗಳನ್ನು ಒಂದೊಂದಾಗಿ ಬಾಯಿಗೆ ಹಾಕಿಕೊಳ್ಳುವುದೂ . . . ನಡೆದಿತ್ತು (ರಕ್ಯಗೋ. ೩) ; ಚಹ ಬಂತು, ಬಿಸ್ಕೀಟಿಗೂ ಹೇಳಿದ್ದಾಯಿತು (ಕೆಂದುಟಿ. ೬೬). **ಬಿಸ್ಕೆಟ್ಟು** : ಅವರು ಕಾಫಿ, ಬಿಸ್ಕೆಟ್ಟು ಕೊಟ್ಟರು (ರೂಪ).

[←ಇಂ. Bisoult]

**ಬಿಸ್ಕೀಟು** 'ಬಿಸ್ಕತ್ತು' ನೋ.

**ಬಿಸ್ಕೆಟ್ಟು** 'ಬಿಸ್ಕತ್ತು' ನೋ.

**ಬಿಸ್ಮಿಲ್ಲಾ** (ನಾ). ಮುಸಲ್ಮಾನರು ಕಾರ್ಯಾರಂಭದಲ್ಲಿ ಹೇಳುವ 'ದೇವರ ಹೆಸರಿನಲ್ಲಿ' ಎಂಬರ್ಥದ ಮಾತು : ಬಿಸ್ಮಿಲ್ಲಾ ಹೇಳಲಿಕ್ಕ ದಿಕ್ಕಿಲ್ಲದಾಯಿತ (ಶ್ರೀಮುಖ. ೦೦೬). [←ಅರ. ಹಿಂ. ಬಿಸ್ಮಿಲ್ಲಾಹ್ ; ಮರಾ. ಬಿಸ್ಮಿಲ್ಲಾ]

**ಬಿಳಚಿ** (ನಾ). ಒಂದು ಬಗೆಯ ಸಸ್ಯ : ಹೆತ್ತರಾಣಿಕೆ, ನಲ್ಲ, ಹೆದ್ದರಣೆ, ಬಿಳಚಿ, ತೆರಣೆ, ಕಕೋರ್ಲ (ವೃಕಿಗ. ೬೩-೦೨೬೯).

[ದೇ.॥ ತಮಿ. ಪಿಳಚ್ಚಿಲ, ಪಿಲಿಞ್ಚಿ, ಪುಳಿಚ್ಚಿಲ]

**ಬಿಳಲ್** 'ಬೀಟಿಲ್' ನೋ.

**ಬಿಳಲು** 'ಬೀಟಿಲ್' ನೋ.

**ಬಿಳಲುಬಿಡು** 'ಬೀಟಿಲ್ಬಿಡು' ನೋ.

**ಬಿಳಲ್ವರಿ** 'ಬೀಟಿಲ್ವರಿ' ನೋ.

**ಬಿಳವೃತ್ತಿ** 'ಬೀಟಿವೃತ್ತಿ' ನೋ.

**ಬಿಳಸ** (ನಾ). ಒನಪು; ಒಯ್ಯಾರ : "ಬಿಳಸ (ವಿಳಸ) — ವಿಲಾಸ = ಶೃಂಗಾರ ಚೇಷ್ಟೆ, ಒಯ್ಯಾರ" (ಶದ್ಯಕೋ. ೩೦); ವಿಲಾಸ–ಬಿಳಸ ; ಬಂಧೂಕ-ಬಂದುಗೆ (ಶಬ್ದಾಸು. ೦೬೦ ಪ್ರಯೋ). [<ಸಂ. ವಿಲಾಸ]

**ಬಿಳಿ$_1$** (ಕ್ರಿ). ಮುಗಿ : ತೀರು : ಮಳೆಗಾಲ ಬಿಳಿದ ಮೇಲೆ ಅವರಿಗೆ ರಜೆ ಉಂಟಂತೆ (ಸ್ವಕ್ಷಹೂ. ೯೬). [? ತೆಲು. ವೆಲಿಯು = ಮಳೆಯು ನಿಲ್ಲು]

**ಬಿಳಿ$_2$** (ನಾ). ೧. ಬಿಳುಪು; ಶ್ವೇತವರ್ಣ : ಬಿಳಿಯ ತಾವರೆಯೆಸಳ್ಗಳ್ ಪಡಿದ ಬೆಳ್ಗೊಡೆ ರಮ್ಯಮಾಗೆ (ಶಂಶಾ. ೧೩-೦೦೩); ಜಳಜಭವನೊಲಿದು ಕನ್ನೆಯ ತಳಕಂ ತಂದೀಯೆ ವಾರಿಜಂಗಳ ಕೆಂಪಂ ಬಿಳಿಯ ಸರಸಿರುಹ ಮಾದುವು (ಧರ್ಮಾಮೃ. ೩-೦೩೪) ; ಬಿಳಿಯ ಚೌರಿಗಳೆಸೆಯೆ (ಕುಮ್ಯಾದ್ರೋ. ೦೬-೩೦). (ಗು). ೨. ಬಿಳುಪಾದ; ಶ್ವೇತವರ್ಣದ : 'ಬಿಳಿಕಂಚು ವಾಳ', 'ಬಿಳಿಗಣಿಗಲು' ಪರಾ. [ದೇ.॥ ತಮಿ. ವೆಳ್; ಮಲ. ವೆಳ; ತುಳು. ಬಿಳಿ; ತೆಲು. ವೆಲಿ; ಪರ್ಜಿ. ವಿಲ್]

**ಬಿಳಿಅಕ್ಕಬುಹುಲ್ಲು** (ನಾ). ಒಂದು ಬಗೆಯ ಸಸ್ಯ : (ವೃ.ಶಿಗ. ೩೦-೫೯೭).
[ಬಿಳಿ$_2$ + ಅಕ್ಕಬು + ಹುಲ್ಲು (< ಪುಲ್)]

**ಬಿಳಿಅಗಿಲು** (ನಾ). ಒಂದು ಬಗೆಯ ಮರ : ಬಿಳೀಬುಡ್ಲಿಗೆ, ಬಿಳೀ ದೇವದಾರು, ಬಿಳೀಅಗಿಲು (ವೃ.ಶಿಗ. ೩೨-೩೧೯).
[ಬಿಳಿ$_2$ + ಅಗಿಲು (< ಅಗಿಲ್)]

**ಬಿಳಿಅಭ್ರಾಂಗ** (ನಾ). ಒಂದು ಬಗೆಯ ಸಸ್ಯ : (ವೃ.ಶಿಗ. ೪೧-೮೦೩).
[ಬಿಳಿ$_2$ + ಅಭ್ರಾಂಗ$_0$]

**ಬಿಳಿಉಪ್ಪಿ** (ನಾ). ಒಂದು ಬಗೆಯ ಔಷಧೀಸಸ್ಯ : ಬಿಳಿಕೊಮ್ಮೆ, ಬಿಳಿಉಪ್ಪಿಎಲೆ, ಆಡುಸೋಗೆ, ಹಾಲುಕೊರಟಿಗೆ, ಕುಪ್ಪಿಎಲೆ, ಮಂಗರವಳ್ಳಿ . . . ಚೂರ್ಣಿಸಿ (ಸಳವೈ. ಶಂ. ೪೯೫) : ಬಿಳೀಉಪ್ಪಿಗಿಡ, ಎಸಗಳೆ, ಎಗಚಿ (ವೃ.ಶಿಗ. ೦೦-೦೮೭). [ಬಿಳಿ$_2$ + ಉಪ್ಪಿ]

**ಬಿಳಿಉಪ್ಪುನೇರಳೆ** (ನಾ). ಒಂದು ಬಗೆಯ ಉಪ್ಪುನೇರಳೆ : ಬಿಳೀ ಉಪ್ಪುನೇರಳೆ, ಹಿಪ್ಪಲಿನೇರಳೆ (ವೃ.ಶಿಗ. ೫೫-೧೦೯೯).
[ಬಿಳಿ$_2$ + ಉಪ್ಪುನೇರಳೆ]

**ಬಿಳಿಊರ್** (ನಾ). ಒಂದು ಊರಿನ ಹೆಸರು : ಪೆದ್ದೊಱೆಗರೆಯ ಬಿಳಿಊರ್ಪ್ಪನ್ನಿಪ್ಪತ್ತಳ್ಳಿಯುಮಂ. . . ಕೊಟ್ಟರ್ (ಇಆ. VI, ೦೦೩-೪; 887).
[ಬಿಳಿ$_?$ + ಊರ್]

**ಬಿಳಿಎಕ್ಕೆ** 'ಬಿಳಿಯೆಕ್ಕೆ' ನೋ.

**ಬಿಳಿಂಬಿ**, ಬಿಂಬಲಿ, ಬಿಂಬ್ಲಿ, ಬಿಳ್ಳಂಬಿ (ನಾ). ೧. ಒಂದು ಬಗೆಯ ಹಣ್ಣಿನ ಮರ ಮತ್ತು ಅದರ ಹುಳಿಹಣ್ಣು ; ಈ ಹಣ್ಣಿನ ರಸ ವನ್ನು ಚರ್ಮರೋಗಕ್ಕೆ ಔಷಧವನ್ನಾಗಿ ಬಳಸುತ್ತಾರೆ : "ಬಿಲಿಂಬಿ ಮರ, ಬಿಳಿಂಬಿ. ಬಿಂಬ್ಲಿ" (ಸಸ್ಯ.ಶಿ. ೦೭). **ಬಿಂಬಲಿ** : ೨. ಒಂದು ಬಗೆಯ ಮರ : ಕಿಡಕಿಯ ಹೊರಗಿನ ಬಿಂಬಲೀಮರದ ಮೇಲೆ ಕಾಗೆಯೊಂದು ಎಡೆ ಬಿಡದೇ ಕಾವ್‍ಗುಡುತ್ತಿತ್ತು (ಮೂರುದಾ. ೯೫). **ಬಿಂಬ್ಲಿ** : ೧. ಬಿಳಿಂಬಿ, ಬಿಂಬ್ಲಿ (ವೃ.ಶಿಗ. ೦೧-೦೮೩). **ಬಿಳ್ಳಂಬಿ** : ೨. ಬಿಳ್ಳಂಬಿ (ಲಾಲಿ). —ಇದು ಬಹಳ ಯೆತ್ತರವಾಗಿ ಬೆಳಿಯದಿದ್ದರೂ ಇದರ ಟೊಂಗೆಗಳು ಗಡುತರವಾಗಿ ದೂರ ದೂರ ಹಬ್ಬುತ್ತವೆ . . . ಇದನ್ನು ಇಮಾರತಿಗೆ ಬಹಳ ಉಪಯೋಗಿ ಸುವರು (ಕಜಾಗ. ೯೫).

[ದೇ.॥ ತಮಿ. ಪಿಲಿವ್ವಿ ; ತುಳು. ಬಿಲಿಂಬಿ, ಬಿಂಬಲಿ, ಬಿಂಬಿಲಿ, ಬಿಂಬುಲಿ ; ತೆಲು. ಬಿಲಿಂಬಿ ]

**ಬಿಳಿಕ** (ನಾ). ಬೆಳ್ಳಗಿರುವವನು ; ಬಿಳಿಯ : ಕರಿದುಂಟೀತಂಗೆ ಈತನೊಳ್ ಮೇಣ್ ಕರಿಕಂ ಏವಂ ಬಿಳಿಕಂ (ಶಬ್ದಮ. ೪೦೩ ಪ್ರಯೋ).
[ ಬಿಳಿ$_2$ + — ಕ$_3$ ]

**ಬಿಳಿಕಂಚುವಾಳ** (ನಾ). ಬಿಳಿಯ ಹೂವುಗಳನ್ನು ಬಿಡುವ ಒಂದು ಬಗೆಯ ಕಂಚುವಾಳದ ಮರ : ಬಿಳೀಕಂಚುವಾಳ, ಬಿಳೀಮಂದಾರ (ವೃ.ಶಿಗ. ೦೨-೨೦೭). [ ಬಿಳಿ$_2$ + ಕಂಚುವಾಳ ]

**ಬಿಳಿಕಕ್ಕೊರಲೆ** (ನಾ). ಒಂದು ಬಗೆಯ ಸಸ್ಯ : ಬಿಳಿಕಕ್ಕೊರಲೆ ಅರುಣ ರಿವು ಸುರಸುರಿಕೆ (ಅಕಾಶಿ. ೧೦-೦೦). [ ಬಿಳಿ$_2$ + ಕಕ್ಕೊರಲೆ ]

**ಬಿಳಿಕಣಗಲು** 'ಬಿಳಿಗಣಗಲು' ನೋ.

**ಬಿಳಿಕಣಿಗಿಲ** 'ಬಿಳಿಗಣಗಲು' ನೋ.

**ಬಿಳಿಕಲ್ಲು** (ನಾ). ೧. ಬಿಳುಪಾದ ಕಲ್ಲಂ. ೨. ಬಿಳಿಯ ಹರಳಂ : ನಮಗೇಕಪ್ಪ ಅಂತಹ ಓಲೆ. ಅದೆಲ್ಲಾ ನಿಮ್ಮಂತಹ ಹಣವಂತರಿಗೆ ! ನಮ್ಮಂತಹ ಬಡವರಿಗೆ ಬಿಳಿಕಲ್ಲಿನದೇ (ಅರಿಹೂ. ೪೦).
[ ಬಿಳಿ$_2$ + ಕಲ್ಲು (< ಕಲ್$_3$) ]

**ಬಿಳಿಕಸ** (ನಾ). ಒಂದು ಬಗೆಯ ಹುಲ್ಲು : ಬೇರುಮಾರಿಗಿಡ, ಬಿಳಿಕಸ (ವೃ.ಶಿಗ. ೬೨-೦೯೬೯). [ ಬಿಳಿ$_2$ + ಕಸ ]

**ಬಿಳಿಕಾಕಮುಷ್ಟಿ** (ನಾ). ಒಂದು ಬಗೆಯ ಸಸ್ಯ : ಬಿಳೀಕಾಕಮುಷ್ಟಿ, ಪೆಲ್ಲ, ತೆಲ್ಲಕಾಕಮುಷ್ಟಿ (ವೃ.ಶಿಗ. ೦೯-೩೫೪). [ ಬಿಳಿ$_2$ + ಕಾಕಮುಷ್ಟಿ$_?$]

**ಬಿಳಿಕಾರೆಮುಳ್ಳು** (ನಾ). ಒಂದು ಬಗೆಯ ಮುಳ್ಳಿನ ಗಿಡ : ಬಿಳೀಕಾರೆ ಮುಳ್ಳು, ಸಣ್ಣಕಾರೆ (ವೃ.ಶಿಗ. ೬೩-೧೩೩೮). [ ಬಿಳಿ$_2$ + ಕಾರೆಮುಳ್ಳು]

**ಬಿಳಿಕಿ** (ನಾ.) ಬೆಳ್ಳಗಿರುವವಳು : ಕರಿಕಿ, ಬಿಳಿಕಿ, ಮುದುಕಿ (ಶಬ್ದಮ. ೦೯೪ ಪ್ರಯೋ). [ಬಿಳಿಕ + — ಇ$_2$]

**ಬಿಳಿಕುಂತಾಳು** (ನಾ). ಒಂದು ಬಗೆಯ ಸಸ್ಯ : (ವೃ.ಶಿಗ. ೩೫-೬೮೭).
[ ಬಿಳಿ$_2$ + ಕುಂತಾಳು$_0$ (< ಕುಂತಳ$_2$) ]

**ಬಿಳಿಕೆಸವು** (ನಾ). ಕೆಸವಿನಲ್ಲಿ ಒಂದು ಬಗೆ ; ಬಿಳಿಯ ಬಣ್ಣದ ಕೆಸವು : ಬಿಳಿಕೆಸವು, ಕರಿಕೆಸವು . . . ಹೊಸಅಕ್ಕಿಅನ್ನ ಇವು ಜ್ವರದವರಿಗೆ ಅಪಥ್ಯ (ವೈದ್ಯಸಾ. I. ೫೭). [ಬಿಳಿ$_2$ + ಕೆಸವು]

**ಬಿಳಿಕೇಪಲ** (ನಾ). ಒಂದು ಬಗೆಯ ಸಸ್ಯ : (ವೃ.ಶಿಗ. ೪೭-೯೨೭).
[ ಬಿಳಿ$_2$ + ಕೇಪಲ ]

**ಬಿಳಿಕೊಗ್ಗಿ** (ನಾ). ಒಂದು ಬಗೆಯ ಸಸ್ಯ : ಬಿಳಿಕೊಗ್ಗಿಬೇರು ಆಲದ ಹಾಲಿನಿಂದ ಅರೆದು (ಕಾಮಶಾ. ೨೭೪).
[ ಬಿಳಿ$_2$ + ಕೊಗ್ಗಿ (< ಕೊಗ್ಗಿ$_1$) ]

**ಬಿಳಿಕೊಮ್ಮೆ** (ನಾ). ಒಂದು ಬಗೆಯ ಔಷಧೀಸಸ್ಯ : ಕಿರೀಹುಳಿಪ . . . ಬಿಳಿಕೊಮ್ಮೆ (ವೃ.ಶಿಗ. ೬-೦೨೭) : ಜೀರಿಗೆ ಬೇಲದ ಹಗಿನು ಬಿಳಿಕೊಮ್ಮೆ . . . ನುಗ್ಗೆಹೂವು ಇಷ್ಟು ತೂಕಗೊಂಡು (ಕಾಮಶಾ. ೨೭೪).
[ ಬಿಳಿ$_2$ + ಕೊಮ್ಮೆ$_2$ ]

**ಬಿಳಿಗಣಗಲು**, ಬಿಳಿಕಣಗಲು. ಬಿಳಿಕಣಿಗಿಲ (ನಾ). ಬಿಳಿಯ ಹೂವು ಗಳನ್ನು ಬಿಡುವ ಒಂದು ಬಗೆಯ ಕಣಿಗಿಲು : ಕಾಡುಜನಗಲು, ಬಿಳಿಗಣಗಲು, ಗಿಡ್ಡ (ವೃ.ಶಿಗ. ೭೮-೦೭೦೪). **ಬಿಳಿಕಣಗಲು** : (ವೃ.ಶಿಗ. ೫೭-೧೦೨೯). **ಬಿಳಿಕಣಿಗಿಲ** : ಚಳಿಸೋಂಕಿಗೆ ಬಿಳಿಕಣಿಗಿಲ ಹೂತೊಲು . . . ಮನವಲರಲಿ ಕನ್ನಡ ಮನೆಮನೆಗೆ (ಅರಳು. ೨೬೭-೭).
[ಬಿಳಿ$_2$ + ಕಣಗಲು (< ಕಣಗಿಲೆ$_1$)]

**ಬಿಳಿಗಣಿಜಲು** (ನಾ). ಒಂದು ಬಗೆಯ ಔಷಧೀಸಸ್ಯ : ಬೇವಿನ ಸೊಪ್ಪು, ಬಿಳಿಗಣಿಜಲ ಬೇರು, ಮಾವಿನ ಬೀಜ ಇವನು ಹಾಲಿಂದ ಅರೆದು (ವೈದ್ಯಸಾ. II. ೨೩೦). [ಬಿಳಿ$_2$ + ಗಣಿಜಲು$_0$ (< ಗಣಜಲೆ$_1$)]

**ಬಿಳಿಗಣಿಜೆ** (ನಾ). ಒಂದು ಬಗೆಯ ಔಷಧೀಸಸ್ಯ : ಬಿಳಿಗಣಿಜೆ, ಜೀರಿಗೆ ಸಹ ಹಳೇನೀರಿನಲ್ಲರೆದು ಕದಡಿ ಕುಡಿಯೆ ಮೂರು ದಿನಕ್ಕೆ ದಾಹಜ್ವರ ಬಿಡುವುದು (ಸಳವೈ. ೭೭). [ಬಿಳಿ$_2$ + ಗಣಿಜೆ$_?$]

**ಬಿಳಿಗರಿಕೆ** 'ಬಿಳಿಗಱಿಕೆ' ನೋ.

**ಬಿಳಿಗಱಿಕೆ**, ಬಿಳಿಗರಿಕೆ (ನಾ). ಬಿಳಿಯ ಬಣ್ಣದ ಹುಲ್ಲು : "ಚಂಡ— ಇಲಿವಾಲ, ಬಿಳಿಗಱಿಕೆ" (ಓಕಧ. ೫೩). **ಬಿಳಿಗರಿಕೆ** : ಬಿಳಿಗರಿಕೆಯನ್ನು ಔಷಧಿಗೆ ಬಳಸುತ್ತಾರೆ (ಕೂಥ). [ಬಿಳಿ$_2$ + ಕಱಿಕೆ (< ಕಱುಂಕೆ)]

**ಬಿಳಿಗಾರ**, ಬಿಳುಗಾರ (ನಾ). ಒಂದು ಬಗೆಯ ಖನಿಜಲವಣ ; ಟಂಕಣ : "ಟಂಕಣ—ಬಿಳಿಗಾರ" (ಅಗಾಶಿ. ೦೦-೩); ಅಗಸೇರುಮಂ ಬಿಳಿಗಾರಮುಂ ತನ್ನ ಪಂಚಮಲಸಹಿತ ಸುಣ್ಣದೊಳಗಿಕ್ಕೆ ಸ್ತ್ರೀವಶ್ಯಂ (ಕಾಮಶಾ. ೫೬೨); ೧ಸೇರು ಬಿಸಿನೀರಿನಲ್ಲಿ ೧ತೊಲ ಬಿಳಿಗಾರ ಮತ್ತು ೧ತೊಲ ಪಟಿಕವನ್ನು ಪುಡಿಮಾಡಿ ಹಾಕಿ . . . ನಾಲಗೆಯನ್ನು ಪದೇಪದೇ ತೊಳೆಯುವುದು (ಗ್ರಾಮಾಶ. ೧೩೫). **ಬಿಳುಗಾರ** : ಸೈಂಧವಲವಣ, ಬಿಳುಗಾರ, ಅಳಲೆಕಾಯಿ . . . ಅರೆದು ಸೇವಿಸಲು ಶ್ಲೇಷ್ಮಜ್ವರ ಬಿಡುವುದು (ಸಳವೈ. ೮೭); ಬೆಸುಗೆಯಲಿ ಬಿಳುಗಾರ ವಸುವಿನಲಿ ಬೆರವಂತೆ ಕುಶಲಮನವಾತ್ಮಸಮರಸದಲಿರುತಿಹುದು (ಸತ್ಯಶ. ೪೦-೫). 'ಬೆಳುಗಾರ' ಪಠಾ. [ಬಿಳಿ$_2$ + ಕಾರ$_2$]

**ಬಿಳಿಗುಗ್ಗಲ** (ನಾ). ಒಂದು ಬಗೆಯ ಮರ: ಧೂಪದ ಮರ, ಸಾಲುಧೂಪ. ಬಿಳೀಗುಗ್ಗಲ . . . ಉಗುಳುಧೂಪ (ವೃ.ಶಿಗ. ೭೭-೧೫೭೭).
[ಬಿಳಿ$_2$ + ಗುಗ್ಗಲ$_0$ (< ಗುಗ್ಗಿಳ)]

**ಬಿಳಿಗುರುಗಂಜಿ** 'ಬಿಳಿಗುರುಗುಂಜಿ' ನೋ.

**ಬಿಳಿಗುರುಗುಂಜಿ, ಬಿಳಿಗುರುಗಂಜಿ** (ನಾ). ಬಿಳಿಯ ಬಣ್ಣದ ಗುಲಗಂಜಿ: ಬಿಳಿಗುರುಗುಂಜಿ, ಬಿಳಿಸಟ್ಟುಗದ ರಸದಲ್ಲಿ ಮರ್ದಿಸಿ . . . ಹೊಕ್ಕುಳು ತಪ್ಪಿಸಿ ಕೆಳಗೆ ಲೇಪವಂ ಮಾಡೆ ಮೂತ್ರ ಬಿಡುವುದು (ವಿವೈಶಿ. ೭೦). **ಬಿಳಿಗುರುಗಂಜಿ :** ಬಿಳಿಗುರುಗಂಜಿಬೇರನ್ನು ಆದಿವಾರ ಮೌನದಿಂ ತಂದು ಕಿವಿಗೆ ಕಟ್ಟುವುದು (ಸಕವೈ. ೧೨೦). [ಬಿಳಿ$_2$ + ಗುರುಗುಂಜಿ]

**ಬಿಳಿಗುಳ್ಳ** (ನಾ). ಒಂದು ಬಗೆಯ ಗುಳ್ಳ : (ವೃ.ಶಿಗ. ೭೦-೧೪೪೨).
[ಬಿಳಿ$_2$ + ಗುಳ್ಳ]

**ಬಿಳಿಗೆಂಪು** (ನಾ). ಬಿಳಿ ಮತ್ತು ಕೆಂಪುಬಣ್ಣಗಳ ಮಿಶ್ರವರ್ಣ : ಪಾಟಲ : "ಪಾಟಲ — ಬಿಳಿಗೆಂಪು" (ಗಂಗಾಮ. ೨೦೪) [ಬಿಳಿ$_2$ + ಕೆಂಪು$_1$]

**ಬಿಳಿಗೆಂಪುಕೇಪಲ** (ನಾ). ಒಂದು ಬಗೆಯ ಸಸ್ಯ : ಪಾಟಲವರ್ಣದ ಕೇಪಲ : (ವೃ.ಶಿಗ. ೪೭-೯೨೭). [ಬಿಳಿಗೆಂಪು + ಕೇಪಲ]

**ಬಿಳಿಚ** (ನಾ). ಒಂದು ಬಗೆಯ ಮೀನು : ಬಿಳಿಚ ಚಿಪ್ಪಲು ಮಲಗು ಪೆಮ್ಮಲಗು . . . ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಕಲ. ೫-೪೭). [<ಬಿಳಿ$_2$]

**ಬಿಳಿಚಗತೆ** (ನಾ). ಒಂದು ಬಗೆಯ ಚಗಚೆಗಿಡ : ಬಿಳಿಚಗತೆಸೊಪ್ಪು, ಮೆಣಸು, ಬೆಳ್ಳುಳ್ಳಿಬೇಳೆ. ಇವಂ ಅರೆದು ಕಿವಿಗೆ ಬಿಡೆ ಮೇಲ್ನಾಗುರು ತೀರ್ಗುಂ (ವಿವೈಶಿ. ೭೩). [ಬಿಳಿ$_2$ + ಚಗತೆ (< ಚಗಚಿ)]

**ಬಿಳಿಚಳ್ಳೆ** (ನಾ). ಒಂದು ಬಗೆಯ ಚಳ್ಳೆಮರ : ಹಾಡಗ. ಬಿಳೀಚಳ್ಳೆ. ಗವುಡಿ (ವೃ.ಶಿಗ. ೨೪-೪೫೧). [ ಬಿಳಿ$_2$ + ಚಳ್ಳೆ (<ಸೆಳ್ಳ) ]

**ಬಿಳಿಚಿಕ್ಕನಗಿಡ** (ನಾ). ಒಂದು ಬಗೆಯ ಗಿಡ : (ಶಿ).
[ಬಿಳಿ$_2$ + ಚಿಕ್ಕ$_?$ + ಗಿಡ (<ಗಿಡು) ]

**ಬಿಳಿಚಿತ್ರಮೂಲ** (ನಾ). ಒಂದು ಬಗೆಯ ಸಸ್ಯ : (ವೃ.ಶಿಗ. ೬೩-೦೨೭೪).
[ ಬಿಳಿ$_2$ + ಚಿತ್ರಮೂಲ ]

**ಬಿಳಿಚು** (ಕ್ರಿ). ಕಾಂತಿಯನ್ನು ಕಳೆದುಕೊಂಡು ಬೆಳ್ಳಗಾಗು : ಮೆಯ್ಯ್ ಬಿಳಿಚಿ ಬೆವರ್ಯಾವೊ (ಜಾಹಾದ. ೫೫-೨೪).
**ಬಿಳಿಚಿಕೊಳ್ಳು** = ಕಾಂತಿಯನ್ನು ಕಳೆದುಕೊಂಡು ಬೆಳ್ಳಗಾಗು : ಮೋರೆ ಹೀಗೇಕೆ ಬಿಳಿಚಿಕೊಂಡಿದೆ (ಅಡೋಲ. ೯೦) : ಅವಳ ಮುಖ ಬಿಳಿಚಿಕೊಂಡಿತ್ತು (ಅಶ್ರಮ. ೬೦). **ಬಿಳಿಚಿ ಹೋಗು** = ಬಿಳಿಚಿಕೊಳ್ಳು : ಸುಯೋಧನನು ವ್ಯಥೆಯಿಂದ ಬಡವಾಗಿ ರಕ್ತ ಕಳೆದುಕೊಂಡು ಬಿಳಿಚಿ ಹೋಗಿದ್ದಾನೆ (ವ್ಯಾಸತಿ. ೦೦೪). [ಬಿಳಿ$_2$ + — ಚು$_1$]

**ಬಿಳಿಜಂಬುಹುಲ್ಲು** (ನಾ). ಒಂದು ಬಗೆಯ ಹುಲ್ಲು : (ವೃ.ಶಿಗ. ೪೮-೯೪೬).
[ ಬಿಳಿ$_2$ + ಜಂಬುಹುಲ್ಲು ]

**ಬಿಳಿಜಾಲ** (ನಾ). ಸೌತೆಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ : ಸೈದಿಲೆಎಸಳು ಸಹದೇವಿಯುಂ ಬಿಳಿಜಾಲ ಮಾಗಳಿಬೇರಂ ಇವೆಲ್ಲವಂ ಚೂರ್ಣವಂ ಮಾಡಿ (ಕಾಮಶಾ. ೨೭೩). [ ಬಿಳಿ$_2$ + ಜಾಲ$_1$ ]

**ಬಿಳಿಜಾಲಿ** (ನಾ). ಒಂದು ಬಗೆಯ ಬಳ್ಳಿ : ಬಿಳೀಜಾಲಿ. ತೊಪ್ಪಾಲೆ. ಸಾರಾಯಿಬೇಲ, ತುಂಬೆಮರ (ವೃ.ಶಿಗ. ೧-೦೩). [ ಬಿಳಿ$_2$ + ಜಾಲಿ$_2$ ]

**ಬಿಳಿಜೇರಿಗೆ** (ನಾ). ಒಂದು ಬಗೆಯ ಜೀರಿಗೆ : "ಕಣಾಹ — ಬಿಳಿಜೇರಿಗೆ" (ಓಷಧಿ. ೨೦). [ಬಿಳಿ$_2$ + ಜೇರಿಗೆ ]

**ಬಿಳಿಜೋಳ** (ನಾ). ಬಿಳಿಯ ಬಣ್ಣದ ಜೋಳ : ಗೌರಿಹುಣ್ಣಿವೆ ಹಾಲ್ಗುಡಿದು ಬಿಳಿಜೋಳ ಧ್ವಜವನ್ನೆತ್ತಿತು (ನಂಹು. ೦೨-೧೦)..
[ ಬಿಳಿ$_2$ + ಜೋಳ ]

**ಬಿಳಿಡಾಮರ್** (ನಾ). ಒಂದು ಬಗೆಯ ಸಸ್ಯ: ಧೂಪದ ಮರ . . . ಬಿಳೀಡಾಮರ್. ಹಾಗಡಮರ, ಉಗುಳುಧೂಪ (ವೃ.ಶಿಗ. ೭೩-೦೫೭೭).
[ ಬಿಳಿ$_2$ + ಡಾಮರ್$_0$ ]

**ಬಿಳಿತಾವರೆ** 'ಬಿಳಿದಾವರೆ' ನೋ.

**ಬಿಳಿತಾಳೆ** 'ಬಿಳಿದಾಳೆ' ನೋ.

**ಬಿಳಿತಿಗಡೆ** (ನಾ). ಒಂದು ಬಗೆಯ ಸಸ್ಯ : "ಶರಭಃ — ಬಿಳಿತಿಗಡೆ" (ಓಷಧಿ. ೧೫೯). [ ಬಿಳಿ$_2$ + ತಿಗಡೆ$_2$ ]

**ಬಿಳಿದಾವರೆ. ಬಿಳಿತಾವರೆ** (ನಾ). ಬಿಳಿಯ ಬಣ್ಣದ ತಾವರೆ : ಬಿಳಿದಾವರೆಯನ್ನು ಸುತ್ತುವರೆದ ದುಂಬಿಗಳ ಹಿಂಡಿನಂತಿತ್ತು ಶಿವನ ಕಂಠ (ಶಾಸಗ. ೭೯) ; ಕೈಯಲ್ಲಿ ಒಂದು ಬಿಳಿದಾವರೆಯನ್ನು ಹಿಡಿದು ಹಂಸವನ್ನು ತನ್ನ ಹತ್ತಿರ ಕರೆಯುವವಳು (ಇಶದು. ೦೫). **ಬಿಳಿತಾವರೆ :** "ಪುಷ್ಪಗಂಧಿ — ಬಿಳಿತಾವರೆ. ಕಲ್ಲಕ್ಕಿ" (ಓಷಧಿ. ೧೦೦). [ಬಿಳಿ$_2$ + ತಾವರೆ (< ತಾಮರೈ)]

**ಬಿಳಿದಾಸವಾಳ** (ನಾ). ಬಿಳಿಬಣ್ಣದ ಹೂವುಗಳನ್ನು ಬಿಡುವ ದಾಸವಾಳ: ಹಾಲು ಮತ್ತು ಸಕ್ಕರೆಯ ಜೊತೆಗೆ ಬಿಳಿದಾಸವಾಳದ ದಳಗಳ ಅಥವಾ ಬೇರಿನ ರಸವನ್ನು ಸೇರಿಸಿ ಕುಡಿಯುವುದರಿಂದ ಮೇಹರೋಗಗಳು ವಾಸಿಯಾಗುವುವು (ಕವಿಕೋ. IX, ೫೬೫). [ಬಿಳಿ$_2$ + ದಾಸವಾಳ (< ದಾಸವಣ)]

**ಬಿಳಿದಾಳೆ, ಬಿಳಿತಾಳೆ** (ನಾ). ಒಂದು ಬಗೆಯ ತಾಳೆಮರ : ಬಿಳಿದಾಳೆ . . . ಕೈತಾಳೆ (ವೃ.ಶಿಗ. ೭೨-೦೪೭೫). **ಬಿಳಿತಾಳೆ :** ಬಿಳಿಪೋಕು. ಬೂದಿತಾಳೆ. ಪುಳಿಕೆ. ಬಿಳಿತಾಳೆ, ತೆಲ್ಲಪುನಿ (ವೃ.ಶಿಗ. ೩೯-೭೭೩).
[ ಬಿಳಿ$_2$ + ತಾಳೆ$_1$ (<ತಾಟಿ) ]

**ಬಿಳಿದು** (ನಾ). ೧. ಬಿಳಿಯ ಬಣ್ಣ : ಶ್ವೇತವರ್ಣ : "ಗೌರಃ, ಶ್ವೇತಃ . . . ಪಾಂಡರಃ — ಈ ೧೨ ಬಿಳಿದು" (ಹಲಾಯು. ೦೨೦-೪೭) : ಎಚ್ಚೆಯೆ ಸಿತಪ್ರಯುತಾಸವಮಂ ಪೊಯ್ಗೆರ್ಯ ಪಾಲಂ ದಾಸಿವಣದ ಪೂ ಬಿಳಿದಕ್ಕುಂ (ಲೋಕೋಪ. ೭-೫೦) : ಕವಿಗಳ್ ಕರಿದೆಂದೊಡೆ ಕರಿದವರ್ಗಳ್ ಬಿಳಿದೆಂದೊಡೆ ಬಿಳಿದೇಕವರನುಜಿದೆ ಕಿಡುವರ್ ಕೆಲಬರ್ (ಲೀಲಾವ. ೧-೯): ಸುರಪತಿಯ ಹಯುವಹುದು ಬಿಳಿದೋ ಕರಿದೊ ಹೇಳೌ ಅಕ್ಕ (ಸಂಭಪ. ೫-೪೩). ೨. ಬೆಳ್ಳಗಿರುವ ಬಟ್ಟೆ; ಶುಭ್ರವಸನ : ಮಡಿಯ ಕೂಲಿಯ ಬೇಡ ಹೋದರೆ ಬಿಳಿದು ಹಜಿದು ಎನ್ನ ಮೇಲೆ ಬಿಸಾಟನು (ತುಡವಶ. ೨೯-೮೨) : ಉಟ್ಟ ಬಿಳಿದು ಬೆಳ್ದಿಂಗಳಂ ಬೀಱೆ (ಗಂಧ. ೨-೦೦೫ ವ). ೩. ವಾಸಿಯಾಗದಿರುವ ಗಾಯದಲ್ಲಿ ಬೆಳ್ಳಗೆ ಕಾಣುವ ಭಾಗ : ಉಗನಿ . . . ಹಾಲನ್ನು ಬೆಂದ ಹುಣ್ಣಿನ ಬಿಳಿದಿಗೆ ತೊಡೆದರೆ ಬಿಳಿದು ಹೋಗಿ ಚೆನ್ನಾಗುವದು (ವಿವೈಶಿ. ೩). ೪. = ಬಿಳುಪು ೩ : ಜೂಜಕ್ಕಿ ಸಮೂಲವನ್ನು ಮಜ್ಜಿಗೆಯಲ್ಲಿ ತೆಗೆದುಕೊಳ್ಳೆ ಬಿಳಿದು ಹೋಗುವುದು ಮಾಣ್ಗುಂ (ವಿವೈಶಿ. ೪).

**ಬಿಳಿಯ** = ೧. ಬಿಳುಪಾದ ದೇಹವುಳ್ಳವನು. ೨. ಯುರೋಪು ದೇಶದವನು : ಕರಿಯರದೋ ಬಿಳಿಯರದೊ ಯಾರದಾದರೆ ಏನು ? ಸಾಮ್ರಾಜ್ಯವಾಪಗಂ ಸುಲಿಗೆ ರೈತರಿಗೆ! (ಕೋಗಿರ. ೦೫-೦). **ಬಿಳಿಯಳ್** = ೧. ಬಿಳುಪಾದ ದೇಹವುಳ್ಳವಳು. ೨. ತಿಳಿಗೇಡಿ ; ದಡ್ಡ : ❓ ಇಲ್ಲಿ 'ಬೆಳ್' ಎಂಬ ಶಬ್ದಕ್ಕೆ ಇರುವ ಅರ್ಥಗಳಲ್ಲಿ ಒಂದನ್ನು ಕವಿಯು ಉಪಯೋಗಿಸಿರಬಹುದು. ೧, ೨ : ಶ್ರುತಮೂರ್ತಿಯಾಗಿಯುಂ ರುಚಿರತನು ಕರಂ ಬಿಳಿಯಳಾಗಿಯುಂ ಚತುರವಚೋನ್ವಿತೆ . . . ವಾಗ್ದೇವಿ ಕೂರ್ತು ಮಾಟ್ಕೆಮಗಱಿವಂ (ಶಾಶಪ. ೬೦-೨).
[ದೇ.॥ ತಮಿ. ವೆಳಿತು ; ತುಳು. ಬೊಳ್ದು. ಬೊಲ್ದು ; ಗದಬ, ವಿಲಿದ್]

**ಬಿಳಿದೇವದಾರು** (ನಾ). ಒಂದು ಬಗೆಯ ದೇವದಾರುವೃಕ್ಷ : ಬಿಳೀಬುಡ್ಲಿಗೆ, ಬಿಳೀದೇವದಾರು, ಬಿಳೀಅಗಿಲು (ವೃ.ಶಿಗ. ೩೨-೭೦೯).
[ಬಿಳಿ$_2$ + ದೇವದಾರು]

**ಬಿಳಿದೊಡ್ಡಕಾಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಸಿಹುಲ್ಲು . . . ಬಿಳೀದೊಡ್ಡಕಾಚಿಹುಲ್ಲು (ವೈ.ಶಿಗ. ೨೬–೩೦೬).
[ಬಿಳಿ$_{2}$ + ದೊಡ್ಡ + ಕಾಚಿಹುಲ್ಲು]

**ಬಿಳಿನೀರು** (ನಾ). (ಆಲಂ) ಹೆಂಡ ; ಮದ್ಯ : ಅಗ್ರೋದಕದಿ ನಿರ್ಮಲವಾಗಿ ಪೂಜೆಯ ಮಾಡೆಂದರೆ ಬಿಳಿನೀರ ಕುಡಿದು ಬತ್ತಲೆ ಬೇವು ಉಟ್ಟು ಹುಳಿ ಮೂಲಂಗೀರುಳ್ಳಿ ತಿಂಬುವನೆ ಮೋಡಿ (ತ್ರಿರಂಗ. ೨–೩೮–೩).
[ಬಿಳಿ$_{2}$ + ನೀರು$_{1}$ (< ನೀರ್)]

**ಬಿಳಿಪಾದ್ರಿ** (ನಾ). ಒಂದು ಬಗೆಯ ಹೂವಿನ ಮರ : ಬಿಳಿಪಾದ್ರಿ, ಹುದೆ, ಬಿಲ್ಲ, ಹುವ್ವಲವೆ, ಹುಲವೆ (ವೈ.ಶಿಗ. ೬೨–೧೯೬೬).
[ಬಿಳಿ$_{2}$ + ಪಾದ್ರಿ$_{0}$ (< ಪಾವರಿ$_{2}$)]

**ಬಿಳಿಪೊಳಿಕು** (ನಾ). ಒಂದು ಬಗೆಯ ಸಸ್ಯ : ಬಿಳಿಪೊಳಿಕು, ಬೂದಿತಾಳೆ, ಪುಳಿಕೆ, ಬಿಳಿತಾಳೆ, ತೆಲ್ಲಪುನಿ (ವೈ.ಶಿಗ. ೩೯–೬೬೩). [ಬಿಳಿ$_{2}$ + ಪೊಳಿಕು$_{0}$]

**ಬಿಳಿಬಂಟ** (ನಾ). ಸುಗ್ಗಿಯ ಕಣದಲ್ಲಿ ಪೂಜಿಸುವ ಒಂದು ಸಾಂಕೇತಿಕ ದೇವರು : ಶರಣ ಮಡಿವಾಳಾದ ಕರಿಬಂಟ ಕಣದಾಗ ಹರಳಾದ ಕಣಕ ಬಿಳಿಬಂಟ ಪ್ರಭುಲಿಂಗ ಗುರುಬುದ್ಧಿವಂತ ಲಿಂಗಾದ (ಕನ್ನಜಾ. ೧೩೩). ❡ " 'ವೀರಘಂಟೆಯ ಮಡಿವಾಳ'ನಿಗೆ ಒಕ್ಕಲಿಗನು 'ಕರಿಬಂಟ' ನೆಂದೂ ಮತ್ತು ಪಾವನಭಕ್ತಿಯುಳ್ಳ ಮಹಾಶರಣ ಹರಳಯ್ಯನಿಗೆ 'ಬಿಳಿಬಂಟ' ನೆಂದೂ ಕರೆದಿರುವನು " (ಕನ್ನಜಾ. ೧೩೩).
[ಬಿಳಿ$_{2}$ + ಬಂಟ$_{1}$]

**ಬಿಳಿಬರಲು** (ನಾ). ಒಂದು ಬಗೆಯ ಸಸ್ಯ : ಬಿಳೀಬೂರುಗ, ಬಿಳೀಬರಲು (ವೈ.ಶಿಗ. ೩೪–೬೬೦). [ಬಿಳಿ$_{2}$ + ಬರಲು$_{?}$]

**ಬಿಳಿಬಸುರಿ** (ನಾ). ಬಸರಿಮರಗಳಲ್ಲಿ ಒಂದು ಬಗೆ : ಬಿಳಿಬಸುರಿ, ಬೋವಿಯ ಮರ (ವೈ.ಶಿಗ. ೩೭–೬೩೦). [ಬಿಳಿ$_{2}$ + ಬಸುರಿ$_{2}$ (< ಬಸರಿ)]

**ಬಿಳಿಬಾಳ** (ನಾ). ಬಿಳಿಯ ಬಣ್ಣದ ಲಾಮಂಚ : " ಉಶೀರ, ಲಾಮಜ್ಜಕ, ಲಾಮಂಚ, ಬಿಳಿಬಾಳ " (ಪಾಚಶಾ. ೪). [ಬಿಳಿ$_{2}$ + ಬಾಳ$_{2}$]

**ಬಿಳಿಬೀಟೆ** (ನಾ). ಒಂದು ಬಗೆಯ ಬೀಟೆಮರ : ಹಸುರುಗನ್ನಿ, ಬೆಲಗ, ಬಿಳೀಬೀಟೆ, ಬೆಟ್ಟದ ಹಸುರುಗೋಣಿ (ವೈ.ಶಿಗ. ೨೮–೩೪೬).
[ಬಿಳಿ$_{2}$ + ಬೀಟೆ$_{2}$]

**ಬಿಳಿಬುಡ್ಲಿಗೆ** (ನಾ). ಒಂದು ಬಗೆಯ ಸಸ್ಯ : ಬಿಳೀಬುಡ್ಲಿಗೆ, ಬಿಳಿದೇವದಾರು, ಬಿಳೀಅಗಿಲು (ವೈ.ಶಿಗ. ೩೨–೬೦೯). [ಬಿಳಿ$_{2}$ + ಬುಡ್ಲಿಗೆ$_{?}$]

**ಬಿಳಿಬೂರುಗ** (ನಾ). ಒಂದು ಬಗೆಯ ಅರಳೆಗಿಡ : ಬಿಳೀಬೂರುಗ, ಬಿಳೀಬರಲು (ವೈ.ಶಿಗ. ೩೪–೬೬೦). [ಬಿಳಿ$_{2}$ + ಬೂರುಗ$_{1}$ (< ಬೂರ)]

**ಬಿಳಿಬೆಂಡುಗಿಡ** (ನಾ). ಒಂದು ಬಗೆಯ ಸಸ್ಯ : (ವೈ.ಶಿಗ. ೬೨–೦೨೬೮).
[ಬಿಳಿ$_{2}$ + ಬೆಂಡು$_{?}$ + ಗಿಡ (< ಗಿಡು)]

**ಬಿಳಿಭೂತಾಳೆ** (ನಾ). ಒಂದು ಬಗೆಯ ಭೂತಾಳೆ : ಬಿಳಿಭೂತಾಳೆ, ಮದ್ದಲೆ (ವೈ.ಶಿಗ. ೬೮–೦೩೯೪). [ಬಿಳಿ$_{2}$ + ಭೂತಾಳೆ]

**ಬಿಳಿಮಂದಾರ** (ನಾ). ಒಂದು ಬಗೆಯ ಸಸ್ಯ : ಬಿಳೀಕಂಚುವಾಳ, ಬಿಳೀಮಂದಾರ (ವೈ.ಶಿಗ. ೦೨–೨೦೬). [ಬಿಳಿ$_{2}$ + ಮಂದಾರ]

**ಬಿಳಿಮತ್ತಿ** (ನಾ). ಒಂದು ಬಗೆಯ ಮತ್ತಿಮರ : ಬಿಳಿಮತ್ತಿ, ತೊರೆಮತ್ತಿ, ಹೊಳೆಮತ್ತಿ (ವೈ.ಶಿಗ. ೬೪–೦೩೦೦) ; ಬಿಳಿಮತ್ತಿ . . . ಮೆಕ್ಕಲುಮಣ್ಣಿನ ಭೂಮಿಗಳಲ್ಲಿ ಬಲುಸಮೃದ್ಧವಾಗಿ ಬೆಳೆಯುತ್ತದೆ (ಕಂಕೋ. XII, ೧೯೬).
[ಬಿಳಿ$_{2}$ + ಮತ್ತಿ$_{1}$ (< ಮಟ್ಟಿ$_{1}$)]

**ಬಿಳಿಮೀನು** (ನಾ). ಒಂದು ಬಗೆಯ ಮೀನು : ಬಿಳಿಮೀನು ದೊಡ್ಡಗಾತ್ರದ್ದು . . . ಉದರಭಾಗ ಬಿಳಿ. ಅಂಚುಗಳು ಮಾತ್ರ ಕೆಂಪು (ಕಂಕೋ. XII, ೧೯೬). [ಬಿಳಿ$_{2}$ + ಮೀನು$_{2}$ (< ಮೀನ್$_{2}$)]

**ಬಿಳಿಮೆಣಸು** (ನಾ). ಒಂದು ಬಗೆಯ ಮೆಣಸು ; ಬಿಳಿಬಣ್ಣದ ಮೆಣಸು : ಬಿಳಿಮೆಣಸನ್ನು ಔಷಧಿಗೆ ಉಪಯೋಗಿಸುತ್ತಾರೆ (ರೂಢಿ).
[ಬಿಳಿ$_{2}$ + ಮೆಣಸು (< ಮೆಳಸು)]

**ಬಿಳಿಮೆಯ್ಯ** (ನಾ). ೧. ಬಿಳುಪಾದ ದೇಹವುಳ್ಳವನು. ೨. ಲಕ್ಷ್ಮಣ : ಬಿಳಿಮೆಯ್ಯನೆಳ್ಚತ್ತು ಹೊರಗೆ ಹೋಗಿರೆ. ನೀಲಿಮೆಯ್ಯನಂ ಕನವರಿಸಿದನ್ (ಶ್ರೀರಾಮಪು. ೨೬೩-೨೬೪). [ಬಿಳಿ$_{2}$ + ಮೆಯ್$_{2}$ + — ಅ$_{7}$]

**ಬಿಳಿಯಂಬು** (ನಾ). ಒಂದು ಬಗೆಯ ಬಾಣ : ಪೊಯಿಸಿ ಇಱಿದೊಡೆ ತನ್ನಂ ಪಲವುಂ ಬಿಳಿಯಂಬು ಜಟ್ಟಿಗೆಗಳಂ ಬಸಮಱಿದಿನ ಕೊಳೆ ತಾಂ ಸತ್ತು (ಎಕ. XI, ಚಳ್ಳಕೆ. ೮–೪ ; ಸು. 810 ?) ; ಬಾಣದ ಹಲವಾರು ಪ್ರಭೇದಗಳ ಹೆಸರುಗಳು ಶಾಸನಗಳಲ್ಲಿ ದೊರೆಯುತ್ತವೆ–ಬಿಳಿಯಂಬು, ಕೋಲಂಬು, ಸೂಂಗಲಂಬು ಇತ್ಯಾದಿ . . . ಬಿಳಿಯಂಬು ಎಂಬುದು ಪ್ರತಿಷ್ಠಿತವ್ಯಕ್ತಿಗಳು ಬಳಸುತ್ತಿದ್ದ ಹೊಳಪಿನ ಬಾಣವಿರಬಹುದೆ ? (ಕಶಾಅ. ೨೬೩).

**ಬಿಳಿಯಂಬಿನಾತ** = ಒಂದು ಬಿರುದು : ಮಹಾಸಮಸ್ತತುರಗವೆ[ಡೆ]ಜ್ಜ ಬಿಳಿಯಂಬಿನಾತನಾಹವಸೂದ್ರಕಂ ವಿದ್ವಿಷ್ಟಮಾತ್ರಸ್ಪಡಪ್ರಿಯ ಗಾಳ್ಯ ಚಾಳುಕ್ಯವಂಶೋದ್ಭವಂ (ಸೌಇಇ. IX – i, ೬೪–೪ ; 944).
[ಬಿಳಿ$_{2?}$ + ಅಂಬು$_{2}$]

**ಬಿಳಿಯಕ್ಷತೆ** (ನಾ). ಪಿತೃಕಾರ್ಯಗಳಲ್ಲಿ ಪೂಜೆಗೆ ಬಳಸುವ ನೆನಸಿದ ಅಕ್ಕಿ ; ಅರಸಿನ ಅಥವಾ ಕುಂಕುಮಗಳನ್ನು ಹಚ್ಚದಿರುವ ಅಕ್ಕಿ : (೪). [ಬಿಳಿ$_{2}$ + ಅಕ್ಷತೆ]

**ಬಿಳಿಯತ್ತಿ** (ನಾ). ಒಂದು ಬಗೆಯ ಅತ್ತಿಮರ : ಚಿಲ್ಲ ಬೆಲ್ಲವತ್ತದ ಬಿಳಿಯತ್ತಿಯಿಪ್ಪೆಯ ಮರಂಗಳ ಕೊಂಬುಗಳ್ . . . ಪರ್ಬಿರೆ (ಅರಾವ. ೩–೨೨) ; ಅಂಕೋಲೆ ಬಿಳಿಯತ್ತಿ . . . ಮುತ್ತುಗ ಮೊದಲಾದ ಮರಗಳ ಬಳಗದಿಂದದು ಕಣ್ಗೆಸೆದುದು (ಕುರಾಸಾಂ. ೪–೬). [ಬಿಳಿ$_{2}$ + ಅತ್ತಿ$_{1}$]

**ಬಿಳಿಯರಳೆ** (ನಾ). ಬೆಳ್ಳನೆಯ ಹತ್ತಿ : ಬಿಳಿಯರಳೆಯಂತೆ ಗಂಗಾಜಳದಂತೆ . . . ಪವಿತ್ರಮತ್ತಿಮಬ್ಬೆಯ ಚರಿತಂ (ಅಜಿಪು ೦೨–೬). [ಬಿಳಿ$_{2}$ + ಅರಳೆ$_{1}$]

**ಬಿಳಿಯವರೆ** (ನಾ). ಅವರೆಯಲ್ಲಿ ಒಂದು ಬಗೆ ; ಬೆಳ್ಳಗಿರುವ ಅವರೆ : "ಮಾಧ್ವೀಕಃ-ಬಿಳಿಯವರೆ " (೬ಶಧ. ೦೨೪). [ಬಿಳಿ$_{2}$ + ಅವರೆ$_{1}$]

**ಬಿಳಿಯಾಚಾರಿ** (ನಾ). ಒಬ್ಬಾತನ ಹೆಸರು : ಇಲ್ಲಿಯ ಬೆಸಮಕ್ಕಳಾರೆನ್ದೊಡೆ . . . ಬಿಳಿಯಾಚಾರಿಯುಂ ಕುಬಾಚಾರಿಯುಂ (ಎಕ. III, ತಂಜನ. ೦೩೯–೯; 915?). [ಬಿಳಿ$_{?}$ + ಆಚಾರಿ]

**ಬಿಳಿಯಾನೆ** (ನಾ). ೧. ಬೆಳ್ಳಗಿರುವ ಆನೆ : ಇಂದ್ರನ ಐರಾವತ ಬಿಳಿಯಾನೆ ಎಂದು ಹೇಳುತ್ತಾರೆ (ರೂಢಿ). ೨. ಒಂದು ಬಗೆಯ ಮೀನು: ಹೆಮ್ಮಲಗು ಬಿಳಿಯಾನೆ . . . ಗಿಱಿಲುಗಳೆಂಬ ಪೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಕಕಾ. ೩–೪೬). ೩. (ಆಲಂ) ಹೆಚ್ಚು ಬೆಲೆಯುಳ್ಳುದು; ದುಬಾರಿ; ತುಟ್ಟಿ : ಆ ಇಲಾಖೆ ಸರ್ಕಾರಕ್ಕೆ ಬಿಳಿಯಾನೆಯಾಗಿಬಿಟ್ಟಿದೆ (ರೂಢಿ). [ಬಿಳಿ$_{2}$ + ಆನೆ$_{1}$]

**ಬಿಳಿಯಾಬಲ್**, ಬಿಳಿಯಾಬಲು (ನಾ). ಬಿಳಿಬಣ್ಣದ ತಾವರೆ : " ಶ್ವೇತಪರ್ಣಂ – ಬಿಳಿಯಾಬಲ್ " (೬ಶಧ. ೦೬೦). **ಬಿಳಿಯಾಬಲು** : "ಕದಂಬಕಃ–ಮತ್ತಿ, ಅತ್ತಿ, ಬಿಳಿಯಾಬಲು" (೬ಶಂ. ೨೫)
[ಬಿಳಿ$_{2}$ + ಆಬಲ್ (< ಆಪಲ್$_{1}$) ]

**ಬಿಳಿಯಾಬಲು** 'ಬಿಳಿಯಾಬಲ್' ನೋ.

**ಬಿಳಿಯಾಲಿ** (ನಾ). ಕಣ್ಣುಗುಡ್ಡೆಯ ಬಿಳುಪಾದ ಭಾಗ : ಕಾಡಿಗೆಯೊಳ್ ಕೂಡಿ ಬಿಳಿಯಾಲಿಯಿಂ ಕರಿಯಾಲಿಯಿಂದಮೆಯಿಂ ಕಣ್ಣೊಪ್ಪುವಂತೆ (ಧರ್ಮಾಮೃ. ೦೨ ೩) ; ಚಕ್ಷುವಿಂಗೆ ಕರಿಯಾಲಿ ಬಿಳಿಯಾಲಿ ಇವೊಳಗಣಾಪಕರಣಂ ಎವೆ ಹೊಟ್ಟೆಯೆಂಬಿವು 'ಬಾಹ್ಯೋಪಕರಣಂ (ಕಸಾರ. ೯೩).
[ಬಿಳಿ$_{2}$ + ಆಲಿ$_{2}$]

ಉಳ್ಳಿ (ನಾ). ಒಂದು ಬಗೆಯ ಗಡ್ಡೆ : ಬೆಳ್ಳುಳ್ಳಿ : "ಮಿಶ್ರಗಂಧಃ
ಳ್ಳಿ. ಬಿಳಿಯುಳ್ಳಿ (ಬೆಳ್ಳುಳ್ಳಿ)" (೬೫೦. ೦೨೫). [ಬಿಳಿ₂ + ಉಳ್ಳಿ₁]
ಕ್ಕೆ, ಬಿಳಿಎಕ್ಕೆ (ನಾ). ಎಕ್ಕೆಯಲ್ಲಿ ಒಂದು ಬಗೆ : "ಶ್ವೇತಾರ್ಕಃ–
ಯೆಕ್ಕೆ" (೬೫೦. ೧೬೦). ಬಿಳಿಎಕ್ಕೆ : ಸ್ತ್ರೀನಾಮಮಂ ಬರೆದು
ಎಕ್ಕೆಯ ಕಟ್ಟಿಗೆಯ ಕೆಂಡದಿಂ ಕಾಸಲು ವಶಮಪ್ಪಳು (ಕಾಮಶಾ. ೨೬೨).
[ಬಿಳಿ₂ + ಎಕ್ಕೆ₂]
ಲಚಿ (ನಾ). ಎಲಚಿಯಲ್ಲಿ ಒಂದು ಬಗೆ : "ಸರ್ಪಗಿಡ–
ಯೆಲಚಿ" (೬೫೦. ೦೬೪). [ಬಿಳಿ₂ + ಎಲಚಿ]
ಲವ (ನಾ). ಎಲವದಲ್ಲಿ ಒಂದು ಬಗೆ ; ಬಿಳಿಯ ಬೂರುಗದ
ರ : "ಶುಕ್ಲಲೋಹಿತಃ – ಬಿಳಿಯೆಲವ" (೬೫೦. ೦೬೯).
[ಬಿಳಿ₂ + ಎಲವ]
ಕ್ಕಸಿ (ನಾ). ಒಂದು ಬಗೆಯ ಸಸ್ಯ : ಬಿಳಿರಕ್ಕಸಿಯ ಗೆಡ್ಡೆಯ ನಾಳದ
ದು ಕುಡಿಯೆ ನಿರ್ವಿಷ (ಬಿವೈ. ೯೩). 'ಬಿಳಿರಕ್ಕಸಿ' ಪರಾ.
[ಬಿಳಿ₂ + ಎಲವ]
(ನಾ). ಒಂದು ಬಗೆಯ ಭೂಮಿ : ಕುಂದೇಶ್ವರದೇವರಿಗೆ . . .
ರ ಮೆಕ್ಕೆ ಚ ೧ ಮೂ ೧ ಊಳೂರಳ ಗಡಿಂ (ಸೌಇಇ. IX-ii. ೪೪೬-೩೩;
) : ತೆವಾರರ ಹೊಸಗದೆಯ ಬಿತ್ತಿನ ಬಿಳಿರ ನಾವು ಗೋರಿಸಿದ ಮಕೆಗದೆ
ಂ (ಎಕ. VI. ಮೂಡಗೆ. ೩೯-೨೪; 1561 ?).
[?/ತುಳು. ಬೊಳಿರ್ = ಒಂದು ಬಗೆಯ ಪೊದರು]
'ಬೀಳಿಲ್' ನೋ.
'ಬೀಳಿಲ್' ನೋ.
ೊದ್ದುಗ (ನಾ). ಒಂದು ಬಗೆಯ ಮರ : ಬಿಳಿಯ ಬಣ್ಣದ
ೋಧ್ರಕ : ಶ್ರೀಗಂಧ ಬೆಲ್ಲವತ್ತ ಬಿಳೀಲೊದ್ದುಗ ಕೆಂಪುಲೊದ್ದುಗ
. ಮೊದಲಾದ ಪುಷ್ಪಫಲಭರಿತವಾದ ವೃಕ್ಷಗಳನ್ನು (ಕೃವಾಕ. ೨೨೬).
[ಬಿಳಿ₂ + ಲೊದ್ದುಗ₂]
ಪಿಗೆ (ನಾ). ಬಿಳಿಬಣ್ಣದ ಹೂವುಗಳನ್ನು ಬಿಡುವ ಸಂಪಗೆಯ
ದು ಬಗೆ : ಆ ಮರದಲ್ಲಿ ಎಲೆಗಳು ಕಾಣದಷ್ಟು ಬಿಳಿಸಂಪಿಗೆ ಅರಳಿವೆ
). 'ಕೆಂಡಸಂಪಿಗೆ' ಪರಾ. [ಬಿಳಿ₂ + ಸಂಪಿಗೆ (<ಸಂಪಗೆ)]
ಟ್ಟುಗ (ನಾ). ಒಂದು ಬಗೆಯ ಸಸ್ಯ : ಬಿಳಿಗುರುಗುಂಜಿ. ಬಿಳಿ
ಟ್ಟುಗದ ರಸದಲ್ಲಿ ಮರ್ದಿಸಿ . . . ಹೊಕ್ಕುಳು ತಪ್ಪಿಸಿ ಕೆಳಗೆ ಲೇಪವಂ
ಡೆ ಮೂತ್ರ ಬಿಡುವುದು (ಬಿವೈ. ೬೦). [ಬಿಳಿ₂ + ಸಟ್ಟುಗ₂]
ಳಿ (ನಾ). ಒಂದು ಬಗೆಯ ಸಸ್ಯ: ಕಾಕಸರಳಿ. ಬಿಳಿಸರಳಿ. ಅಕ್ಕಸರಳಿ
ಶಿ. ೩೦-೬೦೫) [ಬಿಳಿ₂ + ಸರಳಿ₂]
ಮೆಹುಲ್ಲು (ನಾ). ಒಂದು ಬಗೆಯ ಹುಲ್ಲು: (ವೃಶಿ. ೫೯-೦೦೯೦).
[ಬಿಳಿ₂ + ಸಾಮೆಹುಲ್ಲು]
ಸುವೆ, ಬಿಳಿಸಾಸುವೆ (ನಾ). ಒಂದು ಬಗೆಯ ಸಾಸುವೆ :
ಾರ್ಥ : (ವೃಶಿ. ೦೯-೨೯೭). ಬಿಳಿಸಾಸುವೆ : ಬಿಳಿಸಾಸುವೆ ಕೆಂಪಿನ
ಬಿಳಿಹುವ್ವ ತುಪ್ಪ ಸಹಿತ ತಿಲಕಮಿಡಲು ತ್ರೈಲೋಕ್ಯವಶವಪ್ಪುದು
ುಶಾ. ೨೬೨). [ಬಿಳಿ₂ + ಸಾಸಿವೆ]
ಸುವೆ 'ಬಿಳಿಸಾಸಿವೆ' ನೋ.
ರೆ (ನಾ). ೧. ಬಿಳಿಯ ಬಣ್ಣದ ಸೀರೆ : ಅವಳು ಹೆಚ್ಚಾಗಿ ಬಿಳಿ
ಯನ್ನೇ ಉಡುತ್ತಾಳೆ(ರೂಢ). ೨. ಹೆಂಗಸಿನ ಒಂದು ಬಗೆಯ
ಕ್ಯರೋಗ ; ಶ್ವೇತಪ್ರದರ ; ಬಿಳಿಸೆರಗು : ಜಂಬೂಘೃತ . . .
ೆಯದಲ್ಲಿ ಗ ೨ ತೂಕವಂ ತುಪ್ಪವಲ್ಲಿ ಕಲಸಿಕೊಡಲು ರಕ್ತಪಿತ್ತ.

ಬಿಳಿಸುರಿಮುಳ್ಳು (ನಾ). ಒಂದು ಬಗೆಯ ಸಸ್ಯ : ಬೊಮ್ಮರಲು. ಬಿಳಿ
ಸುರಿಮುಳ್ಳು. ಸಣ್ಣಗುರಕಿ (ವೃಶಿ. ೬೯-೦೬೩೦). [ಬಿಳಿ₂ + ಸುರಿಮುಳ್ಳು]
ಬಿಳಿಸೂಲಿ (ನಾ). ಒಂದು ಬಗೆಯ ಸಸ್ಯ : ಸೊಪ್ಪುಗಳು : – ಅಗಸೆ, ಬಿಳಿ
ಸೂಲಿ. ಅಕವಿ. ಗೊರಬಿ (ಸಮ್ಯಪಾ. ೨೩೬). [ಬಿಳಿ₂ + ಸೂಲಿ₂]
ಬಿಳಿಸೆರಗು (ನಾ). =ಬಿಳಿಸೀರೆ ೨ : ಗರ್ಭಿಣಿಯ ಬಿಳಿಸೆರಗಿಗೆ . . . ನೆಗ್ಗಿಲ
ಮುಳ್ಳಿನ ವಸ್ತ್ರಗಾಳಿತ ಚೂರ್ಣ ಅರ್ಧತೊಲೆಗೆ ಕಲ್ಲುಸಕ್ಕರೆ ಮತ್ತು
ತುಪ್ಪ ಒಂದೊಂದು ತೊಳೆ ಕೂಡಿಸಿ ಬೆಳಗ್ಗೆ ಮತ್ತು ಸಂಜೆ ನೆಕ್ಕುವುದು
(ಮನೆಮ. ೯೯). [ಬಿಳಿ₂ + ಸೆರಗು₁ (<ಸೆಜಂಗು)]
ಬಿಳಿಸೊಂಡೆ (ನಾ). ಸೊಂಡೆಯಲ್ಲಿ ಒಂದು ಬಗೆ : ಬಿಳುಪಾದ ಸೊಂಡೆ :
ಬಿಳಿಸೊಂಡೆ ಸೊಪ್ಪಿನ ರಸವನ್ನು ಎಳ್ಳೆಣ್ಣೆ ಬೆರಸಿ ಮೂರುದಿನ
ಕುಡಿಯ ಕೊಡಲು ಮೂಷಿಕವಿಷಹರ (ವಿಕಚಿ. ೨೦-೩).
[ಬಿಳಿ₂ + ಸೊಂಡೆ₁(<ಸುಂಡೆ₁)]
ಬಿಳಿಹಂಬು (ನಾ). ಒಂದು ಬಗೆಯ ಬಳ್ಳಿ : ಕಾಡುದ್ರಾಕ್ಷಿ. ಬಿಳಿಹಂಬು
(ವೃಶಿ. ೫-೦೦೪). [ಬಿಳಿ₂ + ಹಂಬು₂ (<ಪರಪ್ಪು₂)]
ಬಿಳಿಹರಳು (ನಾ). ಒಂದು ಬಗೆಯ ಹರಳುಗಿಡ : ಬಿಳಿಹರಳಲೆ,
ಅಮರದವೆಳ್ಳಿ . . . ಹಿಪ್ಪಲಿ ಪ್ರತಿಪಾಕವಿಟ್ಟು ಸೇವಿಸಿದರೆ ವಾತಜ್ವರ
ತೀರ್ಗುಂ (ಸಕವೈ. ೬೪). [ಬಿಳಿ₂ + ಹರಳು (<ಪರಲ್)]
ಬಿಳಿಹರಿವೆ (ನಾ). ಒಂದು ಬಗೆಯ ಹರಿವೆ : ಕೊತ್ತುಂಬರಿ.
ಕೊಡಸಿಗೆಬೇರು, ಬಿಳಿಹರಿವೆಬೇರು . . . ಕಷಾಯ ಕಾಯಿಸಿ ಕೊಡಲು
ವಾತಜ್ವರಂ ಮಾಣ್ಗುಂ (ಸಕವೈ. ೬೫). [ಬಿಳಿ₂ + ಹರಿವೆ₂(<ಹಜುಹೆ)]
ಬಿಳಿಹಿಂಡಿಸೊಪ್ಪು (ನಾ). ಒಂದು ಬಗೆಯ ಸಸ್ಯ : (ವೃಶಿ. ೩೯೪).
[ಬಿಳಿ₂ + ಹಿಂಡಿಸೊಪ್ಪು (< ಪಿಂಡಿಸೊಪ್ಪು)]
ಬಿಳಿಹುಲಿ 'ಬಿಳಿಹೂಲಿ' ನೋ.
ಬಿಳಿಹುಲುಗಿಲು (ನಾ). ಒಂದು ಬಗೆಯ ಹೊಂಗೆಮರ : ಬಿಳಿ
ಹುಲುಗಿಲ ಬೇರು. ಬಿಳಿಯ ಲೊಕ್ಕಿಯ ಬೇರು . . . ಇವಂ ಹುಳಿಯೆಲೆ
ಯಲ್ಲಿ ಅರೆದು ಪೂಸಲು ಬಿಳಿಯ ಕುಷ್ಠ ಮಾಣ್ಗುಂ (ಬಿವೈ. ೯೦).
[ಬಿಳಿ₂ + ಹುಲುಗಿಲು₀ (<ಪುಲಿಗಿಲ್)]
ಬಿಳಿಹೂರಿ (ನಾ). ಒಂದು ಬಗೆಯ ಮರ : ಹೊಂಗೆತೊಕ್ಕು. ತಪಸಿ
ತೊಕ್ಕು . . . ಬಿಳಿಹೂರಿತೊಕ್ಕು – ಇವು ಪ್ರತ್ಯೇಕ ೩೦ ಹಲ . .
ಪಾಕವ ಮಾಡಿ (ಸಕವೈ. ೩೩೯). [ಬಿಳಿ₂ + ಹೂರಿ₀]
ಬಿಳಿಹೂಲಿ, ಬಿಳಿಹುಲಿ (ನಾ). ಒಂದು ಬಗೆಯ ಹೂಲಿಗಿಡ :
ಬಿಳಿಹೂಲಿಯ ಕೊಸರು, ವಡಪಾರದ ಕೊಸರು . . . ಕೊಡಲು
ಬಹುಮೂತ್ರಂ ನಿಲ್ಲುವುದು (ಸಕವೈ. ೩೯೫). ಬಿಳಿಹುಲಿ : ಬಿಳಿಹುಲಿ
ಚಿಗುರು ಒಂದು ಪಿಡಿ . . . ಕಂಚುವಾಳದ ಹೂವು ಒಂದನ್ನೂ ಅರೆದು
ಸೇರಿಸಿ . . . ಕೊಟ್ಟರೆ ಬಹುಮೂತ್ರ ನಿಲ್ಲುವುದು (ಸಕವೈ. ಅ. ೫೦೨).
[ಬಿಳಿ₂ + ಹೂಲಿ₁ (< ಪೂಲಿ₁)]
ಬಿಳುಗ (ನಾ). ಒಂದು ಬಗೆಯ ಮರ : ಬಿಳುಗದ ಮರದ ಹೊಲದ
ಪಡುವ ತೆಪರ ಅರೇ ಬಳಿಯ ಮೂಡವಂಬಿನೆ (ಎಕ. III. ತಿರುಮ.
೬೩-೮೫೦; 1748). [?]
ಬಿಳುಗಾರ 'ಬಿಳಿಗಾರ' ನೋ.
ಬಿಳುಪು, ಬಿಳ್ಪು (ನಾ). ೧. ಬಿಳಿಯ ಬಣ್ಣ : ಹಸಿಯ ತೊಂಡೆಯ ಬೇರ
ಕಟ್ಟಿ ತೊಳಸಿದೊಡೆ ಬಿಳು[ಕಾಣಂ.ಳಿ]ಪಹುದು (ಸೂಪಶಾ. ೨-೩). ೨.
ಚರ್ಮವು ಬೆಳ್ಳಗಾಗುವ ಒಂದು ಬಗೆಯ ರೋಗ ; ತೊನ್ನು ;
ಗಂಧಕ, ಇಲ್ಲಣ, ಅರಿಸಿನ, ಸೈಂಧವ, ಕಹಿಹೀರೇಬೀಜ ಇವಿಷ್ಟನೂ
ಸಮಾಂಶವಾಗಿ ಚೂರ್ಣಿಸಿ ಬೆಳ್ಳೆಯಲ್ಲಿ ಕಲಸಿ ಬಿಳಿಯ ಕುಷ್ಠ

ಪ್ರವರರೋಗವುಳ್ಳ ಹೆಂಗಸಿನ ಜನನಾಂಗದಿಂದ ಸ್ರವಿಸುವ ಬಿಳಿಯ ದ್ರವ : ಬಿಳುಪು ಸೋರುವುದು ; ಬಿಳಿಸೆರಗು (Leucorrhoea. ೩೦೪೩).

**ಬಿಳ್ಪು :** ೧. ಇಂದ್ರಜನೊಳ್ಪಿರೆ ಬಿಳ್ಪಿನೊಳು . . . ಪುಳ್ಳಿನೊಳ್ಜರ್ಜು ನಾಖ್ಯಾಪಾಕ್ಯಂ (ಮಂಗರಾ. ೧೯೮-೯೯). [ಬೆಳ್$_2$ + — ಪು$_2$]

**ಬಿಳುಪುಗಟ್ಟು** (ಕ್ರಿ). ಬಿಳಿಚಿಕೊಳ್ಳು : ಬೆಳ್ಳಗಾಗು : ಅವಳ . . . ಮುಖ ಮಾತ್ರ ಭಯದಿಂದ ಬಿಳುಪುಗಟ್ಟಿತ್ತು (ದುಠಕ. ೨೨೦).

[ಬಿಳುಪು + ಕಟ್ಟು$_1$]

**ಬಿಳುಪೇರು** 'ಬಿಳುಪೇಱು' ನೋ.

**ಬಿಳುಪೇಱು**, ಬಿಳುಪೇರು (ಕ್ರಿ). ೧. ಬಿಳಿಯ ಬಣ್ಣವಾಗು : ನರೆ : ಕಣ್ಣವೆ ಬಿಳುಪೇಱೆ ಕಪ್ಪ ಪತ್ತಿಸಿ . . . ಹುಣ್ಣಿನಲಿಯು ಸೀರೆಯಲಿ ಮಾಜಿಸಿಹ ಮುಂದಿಪಣ್ಯಾಂಗನೆಯರೂಪ್ಪಿದರು (ಕಂಪಪು. ೬-೧೬೨). **ಬಿಳುಪೇರು:** ೨. ಬಿಳಿಚಿಕೊಳ್ಳು : ನಿಸ್ತೇಜವಾಗು : ಅಂಬಾಲಿಕಗೂ ಅವನನ್ನು ಕಂಡಾಗ ಕಳವಳದಿಂದ ಮುಖ ಬಿಳುಪೇರಿಬಿಟ್ಟಿತು (ಪಪಭಾ. ೩).

[ಬಿಳುಪು + ಏಱು$_1$ (< ಏಱ್$_1$)]

**ಬಿಳುಮಲ್ಲಿಗೆ** (ನಾ). ಒಂದು ಬಗೆಯ ಬತ್ತ : ಸೋಮಶಾಲಿಯ ಬಿಳುಮಲ್ಲಿಗೆ ಕೆಂಬೂತಿ ಹೇಮವರ್ಣದ . . . ಪುಷ್ಪಮಂಜರಿಯ ಸನಾಮದ ತೆನೆಗಳೊಪ್ಪಿಹವು (ಕಂಪಪು. ೫-೬೯). [?]

**ಬಿಳುವ** (ನಾ). ಹಲಸಿನಲ್ಲಿ ಒಂದು ಬಗೆ : ಹಲಸಿನ ಹಣ್ಣಿನ ಮಹಾಗಾತ್ರವನ್ನು ನೋಡಿ ಅಜ್ಜೀಸಾಬು ಕೇಳಿದನು "ಬಿಳುವನೋ ? ಬಕ್ಕೆಯೋ ?" (ಮಲೆಮ. ೪೩೦). [?]

**ಬಿಳಿಯ** 'ವೀಳೆಯ' ನೋ.

**ಬಿಳ್ಕೆ** 'ಬಿಟ್ಕೆ' ನೋ.

**ಬಿಳ್ತು** 'ಬಿಟ್ತು' ನೋ.

**ಬಿಳ್ಪು** 'ಬಿಳುಪು' ನೋ.

**ಬಿಳ್ಳ** (ನಾ). ಒಂದು ವಂಶದ ಹೆಸರು (?) : ಬಿಳ್ಳರ ಪೋಚರಸರುಂ ಅಳ್ವನ್ದು ಈ ಸಾಸನ ಸಿವಜಿಗ್ಗೆ ಬಿಟ್ಟ (ಎಕ. VII. ಶಿಕಾ. ೯೬-೨೯; 915). [?]

**ಬಿಳ್ಳಂಬಿ** 'ಬಿಳಂಬಿ' ನೋ.

**ಬಿಱ್$_1$** 'ಬಿಱು$_2$' ನೋ.

**ಬಿಱ್$_2$** (ನಾ). (?) ; ಅಬ್ಬರಕ್ಕೆ ಬಸಿಱುಬ್ಬರಿಸೆ ಬಿಱಿಯಂ ಕೊಂಡು ಬಿಱುವರಿವ ಬೀಱುಗರುಮಂ . . . ಕಂಡು (ಲೀಲಾವ. ೫-೦೦೪ ಕ). [?]

**ಬಿಱ್ಗೆಂಡ** (ನಾ). ದಪ್ಪವಾದ ಕೆಂಡ : ಅರಲೆಯೊಡ್ಡಿನ ಮೇಲೆಱೆದು ಕಱಿವ ಬಲುಬಿಱ್ಗೆಂಡದ ಮಳೆಯಾಯ್ತು (ಸೇಬುಸಂ. ೫೯-೬೪).

[ಬಿಱ್$_1$(<ಬೆಟ್ಟಿತು) + ಕೆಂಡ]

**ಬಿಱ್ನೋಟ** 'ಬಿಱುನೋಟ' ನೋ.

**ಬಿಱ್ಪಿಡಿ** (ಕ್ರಿ). ದೃಢವಾಗಿ ಹಿಡಿ : ಬಲವಾಗಿ ಹಿಡಿ : ಅಹಂಕಾರ ತೋಱಿದಂತೆ ಬಿಱ್ಪಿಡಿದಲೆವುತ್ತಿಪ್ಪುದಮ್ಮ (ಶಿವನೀ. ೦೩೦-೬೯೯ ವಚನ).

[ಬಿಱ್$_1$ (< ಬೆಟ್ಟಿತು) + ಪಿಡಿ$_1$]

**ಬಿಱ್ಬಿಗಿ** (ಕ್ರಿ). ದೃಢವಾಗಿ ಬಿಗಿ ; ಬಲವಾದ ಕಟ್ಟುಹಾಕು : ಎಂಟು ತೊಡಕಿನ ನೇಣಿನಲಿ ಬಿಱುಬಿಗಿದರಮ್ಮ (ಶಿವನೀ. ೦೩೩-೬೯೯ ವಚನ).

[ಬಿಱ್$_1$ (< ಬೆಟ್ಟಿತು) + ಬಿಗಿ$_1$]

**ಬಿಱ್ಬಿಱನೆ** 'ಬಿಱುಬಿಱನೆ' ನೋ.

**ಬಿಱ್ಸು** 'ಬಿಱುಸು' ನೋ.

**ಬಿಱು$_1$** 'ಬೆಱ್' ನೋ.

**ಬಿಱು$_2$**, ಬಿರ್$_3$, ಬಿರು$_1$, ಬಿಱ್$_1$, ಬೆಟ್ಟು$_4$ (ಸಪೂರೂ). 'ಬೆಟ್ಟಿತು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : "ಬಿಱುವೆಂದು ಬೆಟ್ಟಿತು" (ಕಲಾ. ೬೨-೫೯೬) : "ಬಿಱುವೆಂಬುದು ಬೆಟ್ಟಿತರ್ಕ" (ಶಬ್ದದ. ೦೩೯). 'ಬಿಱುಗತ್ತಲೆ'. 'ಬಿಱುಬಿಮ್ಮು' ಪರಾ. **ಬಿರ್$_3$** : 'ಬಿರಿಗಲ್ಲು' ಪರಾ. ಬಿರು$_1$ : "ಬಿರುವೆನೆ ಕಠಿಣವಾಕ್ಯಂ" (ಕಶ. ೬೯). 'ಬಿರುಗಣ್ಣು' ಪರಾ. ಬಿಱ್$_1$: 'ಬಿಱ್ಗೆಂಡ' ಪರಾ. ಬೆಟ್ಟು$_4$: 'ಬೆಟ್ಟುಬ್ಬಸ', 'ಬೆಟ್ಟುವೊಲೆ' ಪರಾ. [< ಬೆಟ್ಟಿತು]

**ಬಿಱು$_3$**, ಬಿರು$_2$ (ಸಪೂರೂ). 'ಬಿಱುಸು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಿಱುಕೆರಳ್', 'ಬಿಱುಗಾಳಿ' ಪರಾ. ಬಿರು$_2$ : 'ಬಿರುಗಾರ್ಮುಗಿಲ್'. 'ಬಿರುಗೂದಲು' ಪರಾ.

[< ಬಿಱುಸು]

**ಬಿಱುಕೆರಳ್** (ಕ್ರಿ). ತೀವ್ರವಾಗಿ ಕೋಪಗೊಳ್ಳು: ಆ ತೆಱನ ಬಿಱುಕೆರಳ್ದು ಜಱುಬು ಟ್ಟಿಪೋಪ ಏರ್ದೆಯಿಂದೆ ಕೂಬ್ಬುದಿದು ಉರ್ಕರ್ಪುದು (ಅದ್ವತ್ರ. ೨೦-೪೨೬). [ಬಿಱು$_3$ (< ಬಿಱುಸು) + ಕೆರಳ್ (<ಕೆಳರ್)]

**ಬಿಱುಗತ್ತಲೆ**, ಬಿರುಗತ್ತಲು (ನಾ). ಗಾಢವಾದ ಕತ್ತಲೆ : ಕಗ್ಗತ್ತಲೆ : ಹುಲಿಯ ಹುಲ್ಲೆಯ ನೇಹ ಬಿಱುಗತ್ತಲೆಯ ಬೆಳಗಿನ ಮೈತ್ರಿ . . . ಇರ್ದುದು ಬನದೊಳಾ ಮುನಿಯ (ಕೂರಾ. ೦-೫-೯೩). **ಬಿರುಗತ್ತಲು :** ಅಸಿತರೊಳ ಬಿರುಗತ್ತಲೊಂದು ಬಾನೆಲ್ಲವ ಬಾಸಣಿಸಿ (ಗೂರೊತಾ. ೦೦೨-೩೦೫). [ಬಿಱು$_2$(ಬೆಟ್ಟಿತು) + ಕತ್ತಲೆ$_1$ (<ಕಜ್ತಲೆ)]

**ಬಿಱುಗಲ್**, ಬಿರಿಗಲ್ಲು, ಬಿಱುಗಲ್ಲು (ನಾ). ದಪ್ಪವಾದ ಕಲ್ಲು : ಕಲಿ ಪಾರ್ಥಂ ಧನುವಿಂದ ಪೊಯ್ದಂ . . . ಮಹಾಬಲಸಾಂಖ್ಯಂ ಬಿಱುಗಲ್ಲಿಂದೆ ಬಿಡದಿಟ್ಟಂ (ವ್ಯಕಪ. ೯-೦೦೬). **ಬಿರಿಗಲ್ಲು :** ಕರೆಸಿದರು ಹುಡಿಗಲ್ಲು ನಿಡುಗಲ್ಲು ಬಡಿಗಲ್ಲು . . . ಬಿರಿಗಲ್ಲುಗಳನು (ಪಪಸೋ. ೩೩-೩೩) ; ಗುಡ್ಡದ ಬಿರಿಗಲ್ಲ ಹುಡಹುಡುಕುತ ಬಂದ ಧರೆಗೆ ಶಿವಲಿಂಗಪೂಜೆಗೆ ಕೊರೆದ (ಅಪನೀ. ೯೩). **ಬಿಱುಗಲ್ಲು :** ಹೇಱುವ ಬಿಱುಗಲ್ಲು ಬಳವಡಿ ವರಶಕ್ತಿ ಪಾಱುಂಬಳೆ ಶೂಲದಿಂದೆ ಪಱುಗಾಱಟಿ . . . ಗಾಱುವಾಡಿದರು (ಮೋಹಕ. ೫೯-೨೬). [ಬಿಱು$_2$ (< ಬೆಟ್ಟಿತು) + ಕಲ್$_3$]

**ಬಿಱುಗಲ್ಲು** 'ಬಿಱುಗಲ್' ನೋ.

**ಬಿಱುಗಹಳೆ** (ನಾ). ಜೋರಾಗಿ ಸದ್ದು ಮಾಡುವ ಕಹಳೆ : ಬಹಳಶಂಖಧ್ವನಿಗುಡಲು ಬಿಱುಗಹಳೆಗಳು ಪರಸಮಯಕಾನನದಹನವೆನುತಂ ಮೊಱೆಯಲು (ಏಕಪು. ೫೦-೦೬). [ಬಿಱು$_3$ (< ಬಿಱುಸು) + ಕಹಳೆ]

**ಬಿಱುಗಾಣ್ಕೆ** (ನಾ). ಕ್ರೂರವಾದ ನೋಟ ; ಘೋರದೃಶ್ಯ : ಸಾಲ್ಗುಮಿ ಬಿಱುಗಾಣ್ಕೆ. ಮುಚ್ಚಿಂ, ಮುಚ್ಚಿಂ (ಅಶ್ವತ್ಥಾ. ೪೦-೬೫೦). [ಬಿಱು$_2$ (<ಬೆಟ್ಟಿತು) + ಕಾಣ್ಕೆ]

**ಬಿಱುಗಾಳಿ**, ಬಿರುಗಾಳಿ (ನಾ). ಬಿರುಸಾಗಿ ಬೀಸುವ ಗಾಳಿ ; ಚಂಡಮಾರುತ : ಬಿಱುಗಾಳಿ ದೂಳಿಗಳನಾಗಿಸಿ ಬಾಧಿಸಿದತ್ತು ತದ್ಬಳಂ (ವರ್ಧಪು. ೦೫-೩೯); ಒಂದೊಂದು ಬಿಱುಗಾಳಿ ಬೀಸಿತ್ತು (ಅಂರ. ದೇ. ೦೬೬-೦೭) ; ಜಡಿವ ತುಂತುರ್ವನಿಗಳನು ಬಿಱುಗಾಳಿ ಮೊಗೆವವೊಲನಿತು ಸೆಲ್ಲೆಹ ಶರವಳೆಯ ಗದೆಯಿಂದ ಘಟ್ಟಿಸಿದ (ಕುವ್ಯಾಗ. ೦-೫೫). **ಬಿರುಗಾಳಿ :** ನಿನ್ನನೀ ನಿನ್ನ ಪಡೆವೆರಸಿ ಬಿರುಗಾಳಿ ತರಗೆಲೆಯನೊದೆದಟ್ಟುವಂತೆಬ್ಬ (ಕಕ್ಯಾಂಗ. ೬೯-೨೦೬೪); ಬಿರುಗಾಳಿ ನೌಕೆಯನ್ನು ಎಳೆದೊಯ್ಯುವಂತೆ ವಿಷಯಗಳು ಮಾನವಬುದ್ಧಿಯನ್ನು ಎಳೆದೊಯ್ಯುತ್ತವೆ (ಧರ್ಮಸಾ. ೦೩೦). [ಬಿಱು$_3$ (< ಬಿಱುಸು) + ಗಾಳಿ$_1$]

**ಬಿಱುಗಿಡಿ** (ನಾ). ಉಗ್ರವಾದ ಕಿಡಿ : ಅಳವಿಗೊಟ್ಟುದು ಮತ್ತೆ ಕೌರವಬಲಪಯೋನಿಧಿ ವೈರಿಬಡಬನ ಬಿಱು ಸರಳು ಬಿಱುಗಿಡಿಯಂಲೌಕಿತು ಚಾತುರಂಗದಲಿ (ಕುವ್ಯಾದ್ರೋ. ೬-೩). [ಬಿಱು$_2$ (<ಬೆಟ್ಟಿತು) + ಕಿಡಿ]

**ಬಿಱುಗುಟ್ಟು**, ಬಿರುಗುಟ್ಟು (ಕ್ರಿ). ಬಿರುಸಾಗಿ ಮೊರೆ; ಜೋರಾಗಿ ಶಬ್ದ ಮಾಡು : ಬಿಱುಗುಟ್ಟುತಾ ಬಾಣ ಪೋಗಿ ಮಾಗಧನಿದ್ದ

ಹೊಱಗಣ್ಗೊಲಗದ ಶಾಲೆಯೊಳು ನಿಱಿಸಿದ ಕಂಭಕ ತೊಟ್ಟನೆ ನೆಟ್ಟಿತು (ಧರಕ. ೨೪-೩೮). **ಬಿರುಗುಟ್ಟು :** ತೊಟ್ಟು ಮಾಗಿದ ಫಲನಿಚಯ ಬಿರುಗುಟ್ಟುವನಿಲೋದ್ಧತಿಗುದುರುವೋಲ್ . . . ಯಾದವವೀರರಲ್ಲಿಲ್ಲಿ ತಟ್ಟನುರುಳಿದರನಿಲಜನ ಗದೆಯಟ್ಟುಳಿಗೆ (ಕೋಗಮು. ೨೪-೨೮).

[ಬಿಱು$_3$ (<ಬಿಱುಸು) + ಕುಟ್ಟು$_{11}$]

**ಬಿಱುಗೊಳ್ಳು** (ಕ್ರಿ). ಒರಟಾಗಿ ವರ್ತಿಸು ; ಅಂಕೆಗೆ ಒಳಗಾಗದಿರು : ಈ ತುರಂಗಮಾ ಕುದುರೆಯಂ ಕಾಣುತಂ ಧ್ವನಿಗೈದು . . . ಮಾಣಿಕ್ಯ ಮುಕ್ತಾಳಿಗಳ ಭೂಷಣಂಗಳಂ ಪಱಿದಿಕ್ಕಿ ಬಿಱುಗೊಂಡವು (ಕೃಬಿಜಾ. ೨೫-೮).

[ಬಿಱು$_3$ (<ಬಿಱುಸು) + ಕೊಳ್ಳು$_1$ (<ಕೊಳ್$_1$)]

**ಬಿಱುಗೋಲ್**, ಬಿಱುಗೋಲು (ನಾ). ತೀಕ್ಷ್ಣವಾದ ಬಾಣ : ಘನ ಮೇಘಾಳಿ ಸುರಿದವೊ ಮಳೆಯನೆನೆ ಬಿಱುಗೋಲ ಸೈವಳೆಗಱಿದರುಭಯದ ಜೋದರವಗಡಿಸಿ (ಕುವ್ಯಾಶಾ. ೪-೬೪). **ಬಿಱುಗೋಲು :** ತೋರಹತ್ತದಲಿ ಬೀಱಿದ ಬಿಱುಗೋಲುಗಳೆಂಬ ನಟ್ಟೆಯನೂಱಿದನೀರ್ಗೈಗಡೆಗೆ (ಮೋಹಕ. ೩೬-೯೭).

[ಬಿಱು$_3$ (<ಬಿಱುಸು) + ಕೋಲ್$_1$]

**ಬಿಱುಗೋಲು** 'ಬಿಱುಗೋಲ್' ನೋ.

**ಬಿಱುದನಿ**, ಬಿರುದನಿ (ನಾ). ಬಿರುಸಾದ ಧ್ವನಿ ; ಕರ್ಕಶಸ್ವರ : ಉರುಗಂಭೀರಭೇರಿಯ ಬಿಱುದನಿಗಳುಬ್ಬರಿಸಿದವು (ಕುವ್ಯಾದ್ರೋ. ೧೪-೩೭); ಬಿಱುದನಿಯ ಬೊಬ್ಬೆಗಳ ಲಗ್ಗೆಯ ಹಱಿಯನೊಡೆಬಡಿದು (ಕೊರಣ. ೬-೦೦-೦೫). **ಬಿರುದನಿ :** ಪಾಮರಿಯ ಬಿರುದನಿಗೆ ಕೈಪರೆಗೆ ಬಾಯ್ಬುರೆಗೆ ಕಲ್ಗವಣೆಗೊಂಧಿನಿತು ಪೆಳರಿ (ತತ್ತ್ವಂಗ. ೩೩-೦೫೫).

[ಬಿಱು$_3$ (< ಬಿಱುಸು) + ದನಿ$_1$]

**ಬಿಱುದೇಗು** (ಕ್ರಿ). ರಭಸವಾಗಿ ತೇಗು : ಧಾರುಣೀಶರು ಮಿಡಿದರೊಂದೇ ಸಾರಿಗೆಯಲ್ಲೆನೂಱು . . . ಮಾರಿ ಬಿಱುದೇಗಿದಳು (ಕುವ್ಯಾದ್ರೋ. ೦೯-೫೦).

[ಬಿಱು$_3$ (<ಬಿಱುಸು) + ತೇಗು$_1$]

**ಬಿಱುನಗು** (ಕ್ರಿ). ಜೋರಾಗಿ ನಗು ; ಅಟ್ಟಹಾಸ ಮಾಡು : ರಾಜ ವಿನೋದಂ ಬಿಱುನಕ್ಕು ನಕ್ಕು ಕುಕಿಲುತ್ತುಂ (ರಶರ. ೨-೯೩).

[ಬಿಱು$_3$ (<ಬಿಱುಸು) + ನಗು$_1$]

**ಬಿಱುನಗೆ**, ಬಿರುನಗೆ (ನಾ). ಜೋರಾದ ನಗು ; ಅಟ್ಟಹಾಸ : ಕೇಳಿ ಕೆದಱಿದ ಬಿಱು[ಪಾಠಾಂ. ಕಡು]ನಗೆಯಲಡಬೀಳುತೇಳುತ . . . ಸೂಳುನಗೆ ಬೆಳುನಗೆಯಲಡಿಗಡಿಗಾಳುಮುಳುಗುಬ್ಬಸದಲಿದ್ದು (ಕುವ್ಯಾಶ. ೬೦೨. ೨-೯೫); ಅರೆನಗೆಯು ಬಿಱುನಗೆಯು ನಗೆಗಳ ಹೊರಳಿಗಳಲಡಬಿದ್ದು (ಕೊರಣ. ೦-೦೫-೮). **ಬಿರುನಗೆ :** ಆತನ ಉಪ್ಪೀಪವನ್ನು ಹಾರಿಸಿ ಬಿಸುಟು ತಿರಸ್ಕೃತಿಯ ಬಿರುನಗೆಯನ್ನು ಬೆಳಗಿ (ಬರುಗಂ. ೩೨-೪).

[ಬಿಱು$_3$ (<ಬಿಱುಸು) + ನಗೆ]

**ಬಿಱುನಡೆ** (ನಾ). ರಭಸವಾದ ನಡಗೆ ; ಬಿರುಸಾದ ನಡೆ : ಪರಿಕಿಸದೆ ನಡೆವ ಬಿಱುನಡೆಯ ಪದಹತಿಗಳಿವ ಪಲತಱದ ಜೀವಿಗಳಿಗೆ ವಿಮೋಕ್ಷಂ ದೊರೆವುದು (ಐಸಪ್ರಿ. ೩೪-೩೭).

[ಬಿಱು$_3$ (<ಬಿಱುಸು) + ನಡೆ$_2$]

**ಬಿಱುನಾಲಿಗೆ** (ನಾ). ಕಟುವಾದ ಮಾತುಗಳನ್ನಾಡುವ ನಾಲಗೆ : ಪೌರ ಜನ ಜಾಳಿಸುವ ಕಂಬನಿಗಳಲಿ ಬಿಱುನಾಲಿಗೆಯ ಬೈಗುಳಲಿ ಮುನಿಯನು ಕೀಳುನುಡಿಯಲಿ ಜಱಿವುತಿರ್ದುದು (ಕೊರಣ. ೦-೯-೪೩).

[ಬಿಱು$_3$ (<ಬಿಱುಸು) + ನಾಲಿಗೆ (<ನಾಲಗೆ)]

**ಬಿಱುನುಡಿ**, ಬಿರುನುಡಿ (ನಾ). ಕಠಿಣವಾದ ಮಾತು ; ಚುಚ್ಚುಮಾತು; ಕಟಕಿ : ಎಲ್ಲಾ ಮದವ ಸೇವಿಸುತ್ತ ಅಱಿಯದ ಮದವನೊಂದು ನುಡಿದಡೆ ಬಿಱುನುಡಿಯೆಂದೆಂಬರು (ಶಳವ. III, ೩೪೫-೩೪೯); ಶಲ್ಯನ ಬಿಱುನುಡಿಗೆ ಬೆಚ್ಚದೆ . . . ಬಿನ್ನವಿಸಿದನು (ಕುವ್ಯಾಶ. ೫-೦೬); ಹೀನವಮಾನವರ ಬಿಱುನುಡಿಗೆ ತತ್ವದ ಜ್ಞಾನಿಯಂಜುವನೆ (ಸರ್ವಜ್ಞ. ೩೮೩). **ಬಿರುನುಡಿ :** ಮದವಮುಖಿಯು . . . ಮರುತಾತ್ಮಜನ ಬೆದರಿಸಿದಳೇನೆಂಬೆ ಕಾರ್ಮುಗಿಲ ಬರಸಿಡಿಲ ಪೋಲ್ವ ಬಿರುನುಡಿಗಳಿಂದ (ಪಂಕಾರಾ. ೫-೩-೫) ; ತನ್ನನು ಹೊಗಳನು ಹೆರರನು ತೆಗಳನು ಆಡನು ಬಿರುನುಡಿಗಳನು . . . ಕರುಣನು ಸರ್ವನಾದವನು (ಇಂಜಾಕ. ೬೭-೨೪).

[ಬಿಱು$_3$ (<ಬಿಱುಸು) + ನುಡಿ$_2$]

**ಬಿಱುನುಡಿಗೇಳ್** (ಕ್ರಿ). ಬಿರುಸಾದ ಮಾತನ್ನು ಕೇಳು ; ಕಠೋರವಾದ ನುಡಿಯನ್ನು ಆಲಿಸು : ಬಂದಳು ಭಾಮಿನಿ ರನ್ನೆ ನಿನ್ನೊಳಗೇನೆಂದಳು ಬಿಱುನುಡಿಗೇಳ್ದು (ಮೋಹಕ. ೦೦-೩೩).

[ಬಿಱುನುಡಿ + ಕೇಳ್]

**ಬಿಱುನೋಟ**, ಬಿರುನೋಟ, ಬಿಱಿನೋಟ (ನಾ). ಬಿರುಸಾದ ನೋಟ ; ತೀಕ್ಷ್ಣವಾದ ದೃಷ್ಟಿ : ಬೆಳುನೋಟವಾಗ ಬಿಱುನೋಟವಾದಾಗ . . . ಓರೆನೋಟವಾದಾಗ (ಶರಕ. ೦೦-೫೦); ಹಾಲು ಇಲ್ಲದ ಊಟ ಬಾಲೆಯರ ಬಿಱುನೋಟ . . . ಕಂಗಳನ ಕೋಲು ಕಳೆದಂತೆ (ಸರ್ವಜ್ಞ. ೦೫೩೭). **ಬಿರುನೋಟ :** ತನ್ನ ಗೆಡ್ಡೆಗಣ್ಣುಗಳಿಂದ ಬಿರುನೋಟವನ್ನು ಬೀರುತ್ತ . . . ಮುಂದೆ ಬಂದನು (ವತಾ. ೩೮); ಅವನು ನನ್ನ ಕಡೆಗೊಮ್ಮೆ ಬಿರುನೋಟ ಬೀರಿದ (ಅಲಹೂ. ೫೭). **ಬಿಱಿನೋಟ :** ಕಿಱಿನೋಟ ವಿಟನಿಂಗೆ ಅರೆನೋಟ ವಿದೂಷಕಗೆ . . . ಪೀಠಮರ್ದನಗೆ ಬಿಱಿನೋಟ (ಸರ್ವಜ್ಞ. ೦೬೩೨).

[ಬಿಱು$_3$ (< ಬಿಱುಸು) + ನೋಟ]

**ಬಿಱುಬ**, ಬಿರುಬ (ನಾ). ಕಠಿಣಮನಸ್ಸಿನವನು ; ಕ್ರೂರಿ : ಅಱಿವು ಸಂಪನ್ನರಲ್ಲಿ ಇದಿರೆದೆಯಡಗಬೇಕಲ್ಲದೆ ಬಱಿ ಕಾಯದ ದರುಶನ ಬಿಱುಬರಲ್ಲಿ ಉಂಟೇ ನೆಱಿಯಱಿವಿನ ಹೊಲಬು (ಸರ್ವವ. ೫೭-೩೦೦) ; ಇಂದುಧರನು ಪೋಲಗದಿ ಕುಳ್ಳಿರೆ ಗಿರಿನಂದನೆ ಸಹಿತ ಸಂತಸದಿ ನಂದೀಶನು ಬರೆ ಬಿಱುಬ ಗಣೇಶನು ನಿಂದಿಸಿ ನಿಲಿಸೆ ಬಾಗಿಲಲಿ (ಐಶಕ ೦-೨೭). **ಬಿರುಬ :** ಎಲ್ಲರು ಭಯಭಕ್ತಿ ಜಂಗಮದಾಸೋಹಿಗಳಲ್ಲದೆ ಬಿರುಬರಲ್ಲಿಲ್ಲ (ಪಾರದೇಶಾಂ. ೦-೩೭).

[ಬಿಱುಬು + — ಅ$_7$]

**ಬಿಱುಬಿದ್ದ** (ನಾ). ಬಿರುಸಾದ ಏಟಿನಿಂದಾದ ವ್ರಣ ; ದೊಡ್ಡಗಾಯ : ಬೆಟ್ಟತರ್ಕೆ ಬಿಱು ಎಂದು . . . ಆದೇಶಮಕ್ಕುಂ . . . ಬಿಱುವೊಯಲ್, ಬಿಱುಬಿದ್ದಂ (ಶಮದ. ೦೬೪ ವೃಯೋ). [ಬಿಱು$_2$ (< ಬೆಟ್ಟಿತು) + ಬಿದ್ದ$_2$]

**ಬಿಱುಬಿದ್ದಂಬೋಗು** (ಕ್ರಿ). ದೊಡ್ಡಗಾಯವನ್ನು ಹೊಂದು ; ತೀವ್ರವಾದ ವ್ರಣವನ್ನು ಹೊಂದು : ಪೊಯ್ದು ಪೊಯ್ದಂಗಯ್ಯಿಂ ಮೊಗಮಂ ಮುಸುಂಬು ಬಿಱುಬಿದ್ದಂಬೋಗೆ ವೀರಂಗೆ ದೋರ್ಭಂಗಂ ಮಾಡಿದಂ (ಶಂಠಾಪಾ. ೯-೨೪).

[ಬಿಱುಬಿದ್ದ + ಪೋಗು$_1$ (<ಪೋ$_1$)]

**ಬಿಱುಬಿಮ್ಮು** (ನಾ). ಅಧಿಕವಾದ ಗರ್ವ.—ಅಹಂಕಾರ : ಉಪ್ಪರದ ಕೈಮನವ ಕಬಳಿಸಿ ತೆಱಹು ಬಿಱುಬಿಮ್ಮಿನಲಿ ಬಿಗಿದುದು ತೆಗೆದವಬ್ಬರ ಘಾಯಘಾತಿಗಳು (ಕುವ್ಯಾಗ. ೬-೨೪).

[ಬಿಱು$_2$ (<ಬೆಟ್ಟಿತು) + ಬಿಮ್ಮು$_1$]

**ಬಿಱುಬಿಸಿಲು** 'ಬಿಱುವಿಸಿಲ್' ನೋ.

**ಬಿಱುಬಿಱನೆ**, ಬಿಱಿಬಿಱನೆ (ಅ). ಬಿರುಸಾಗಿ; ತೀಕ್ಷ್ಣವಾಗಿ : ಬಿಱುಬಿಱನೆ ಕಂಗಳಂ ಬಿಟ್ಟು ಪಲ್ಲಂ ಕಿರಿದುವುಱುಗಿಸುತೆ ಮೊಗಮಂ . . . ಭ್ರಂಗಿ . . . ಎಸೆದಿರ್ದನು (ಶರಭ. ೨-೨೭). **ಬಿಱಿಬಿಱನೆ :** ಬಿಱಿಬಿಱನೆ ಕಣ್ಬಿಡುತ ಬಿಂಕದಲಿ ಲಂಕೆಯನು ಸುರಸುರನೆ ಬಾಲದಲಿ ಸುಟ್ಟು ರಣಧಿಟ್ಟ (ಐಾಂಕೀ. ೨೮-೨).

[<ಬಿಱುಸು + — ಅನೆ$_1$]

**ಬಿಱುಬು**, ಬಿರುಬು, ಬಿಱುಹು(ನಾ). ೧. ಬಿರುಸು; ತೀಕ್ಷ್ಣತೆ; ಉಗ್ರತೆ : "ಬಿಱುಬುಂ ತಾಂ ಬೆಟ್ಟಿತಕ್ಕು" (ಶಬ್ದಂ. ೨೨೨) ; ಮುನಿಯ ಕೋಪದ ಕಿಚ್ಚಿನುಬ್ಬರದ ಬಿಱುಬನಱಿದು (ಹಕಣ. ೬-೦೪) ; ಅಂಟಿನಂದದ ಸ್ನೇಹ ಬಿಱುಬಿನಂದದ ಕೋಪವುಂಟಾದವರನು ಕೆತ್ತುವೆದು (ಶರತ. ೭೬-೩೪). ೨. ರಭಸ ; ತೀವ್ರತೆ : ಬಿಱುಬಿಂದಂ ಬೀಸೆ ಗದೆಯ ಗಾಳಿಯ ಕೋಟೆಚ್ಚ ಱಿಸಿದುದು ಭೀಮನಂ (ಗದಾಯು. ೯-೩೨) ; ಆ ಪಡೆಯ ಬಿಱುಬಂ

**ಬಿಱುಹೊಯ್ಲು** 'ಬಿಱುವೊಯಲ್' ನೋ.

**ಬಿಜ್ಜನೆ**, ಬಿರ‍್ರನೆ (ಅ). ಬಲವಾಗಿ ; ಬಿರುಸಾಗಿ : ಮತ್ಸ್ಯಮಕರಸಿಂಹ ವ್ಯಾಘ್ರಾದಿಪತಾಕಾನೀಕದೊಳಂ ದೆಸೆಗೆ ಬೆಸೆದು ಬಿಜ್ಜನೆ ಬಿಗುವ ಪೊಸ ಸಿರಿವಂತಸಂತೆ (ಶಾಂತಿಪು. ೧೧-೨೦ ವ): ಸಜ್ಜನೆ ಹಱಿತಂದು ಬಿಜ್ಜನೆ ಕಲ್ಲಿಲಿಡುವುದಿದಾವ ಪೂಜೆಯೊಳಗು (ವಚನ. I, ೪೬೦). **ಬಿರ‍್ರನೆ** : ಸಲ್ಲದು . . . ಸಿಡಿಲ್ಗೆ ಸಾಟಿಯೆನೆ ಬಿರ‍್ರನೆ ಬೀಳ್ವ ಭವ್ಯಚ್ಛಿಳೀಮುಖಂ (ಕಾಕಂಅ. ೩-೧೧); ಬಿರ‍್ರನೇ ಬೀಸುವ ಬಿರುಗಾಳಿಯು ಗಿಡವನ್ನು ಬೇರುಸಹಿತ ಕಿತ್ತು ಹಾಕುವಂತೆ, ಕಾಮದೇವನು . . . ಕೊಲ್ಲುವನು (ಶ್ರೀಕೃತೇ. ೧೨೬).

[< ಬಿಱುಸು + – ಅನೆ$_1$]

**ಬಿಟಲ್** 'ಬೀಟಿಲ್' ನೋ.

**ಬಿಟಲು** 'ಬೀಟಿಲ್' ನೋ.

**ಬಿಟವೃತ್ತಿ** 'ಬೀಟಿವೃತ್ತಿ' ನೋ.

**ಬಿಟಾದೆ** (ನಾ). ಒಂದು ಸ್ಥಳದ ಹೆಸರು (?) : ಆವಜ್ಙಿ ವಂಶೋತ್ಪತ್ತಿಯಾಗೆ ದಾಯಗೊಟ್ಟುದು ಮದೆಗೂಟುವ್ವಿಬಿಟಾದೆಯು (ಎಕ. X, ಶ್ರೀನಿವಾ. ೬-೧೧; ಸು. 780). [?]

**ಬಿಟಿಲ್** 'ಬೀಳಿಲ್' ನೋ.

**ಬಿಟಿಕ್ಕ**, ಬಿಕ್ಕ$_1$, ಬಿಳ್ಕೆ (ನಾ). ೧. ಒಂದು ಬಗೆಯ ಕಾಡುಮರ ಮತ್ತು ಅದರ ಹಣ್ಣು : "ಬಿಟಿಕ್ಕ=ಒಂದು ಮರಂ" (ಶಮದ. ಶಂ. ೦); "ಬಿಟಿಕ್ಕೆಯೆನಲೊಂದು ವೃಕ್ಷಂ" (ಸಂಕೀವ. ೯); ಬೇರಂ ಬಿಟಿಕ್ಕೆಯನೆ ತಿಂದ ದೆವಸದೊಳಟ್ಟಾಡಿದ ಬೀರಮಿಾಗಳೇಂ ಪೊಸತಾಯ್ತೋ (ಶಂಶಭಾ. ೦೨-೦೭೮); ಏಕಾಕಿ(ನಿ)ಯಾಗಿ ವನವಂ ಪೊಕ್ಕು ಬೇರಂ ಬಿಟಿಕ್ಕೆಯುಮಂ ತಿಂದಿರಲ್ (ವೇಖುಪು. ೦೯-೧೨೭ ವ). **ಬಿಕ್ಕ$_1$** : ೧. ಸಿರಿಸಂ ಸೀರೆ ಬೆಳಲ್ಲವಂಗಮೆಲವಂ ಬಳ್ಳಾಲೆರಂ ಬಿಕ್ಕ (ಕಾವ್ಯಸಾ. ೦೦೯೦ ಕೂದ್ರಕ); ಬಿಕ್ಕಯಂ ಬೇರುಮನುಂಡಡವಿಯೊಳಗಿರ್ಪ ಮುನಿಗಳ ನಡೆವಳಿಯೆತ್ತೆತ್ತ ಯುವತಿಜನದನುರಾಗಂ (ಕಾದಂಪೂ. ೮೦೮) ; ವನದಲಿ ಬೇವು ಬಿಕ್ಕಯನಱಿಸಿ ತೊಳಲಿದು ಸಾಲದೇ ಹದಿಮೂಱು ವತ್ಸರದಿ (ಕುವ್ಯಾವಿ. ೯-೯೦). ೨. ಒಂದು ಬಗೆಯ ಮರ ಮತ್ತು ಅದರ ಹಣ್ಣು; ಸೀಬೆ : ತುಮಕೂರಿನ ಸುತ್ತಮುತ್ತಲಲ್ಲಿ ಸೀಬೆಹಣ್ಣಿಗೆ ಬಿಕ್ಕಿ ಎನ್ನುತ್ತಾರೆ (ರೂಢಿ). **ಬಿಳ್ಕೆ** : ೧. ಬಿಳ್ಕೆ ಮುಳ್ತುಗ . . . ಹೊನ್ನೆಯ ತರುಗಳ್ (ಹರಿಶ್ಚಂ. ೯-೬೮) ; ನೆಲೆಯಿಲ್ಲದಲೆದಲೆದು ಬೇರು ಬಿಳ್ಕೆಯ ನುಂಡು . . . ಬಳಲುವರ್ ನಾವು ಲೋಗರೆ ದಿಟಂ ! (ಶತ್ರುಂಗ. ೧೪-೩೩೦).

**ಬಿಟ್ತು**, ಬಿತ್ತ, ಬಿತ್ತು$_2$, ಬಿಳ್ತು (ನಾ). ೧. ಬಿತ್ತನೆಗೆ ಉಪಯೋಗಿಸುವ ಕಾಳು ; ಬೀಜ : ಕೆಲವುದಿವಸಕ್ಕೆ ಬಿಟ್ತು ಪತತ್ರಿಗೋತ್ರಕ್ಕಪವೃತ್ತು ಮೂಡುವಂತೆ ಮೂಡುವುದುಂ (ಶಂಶಕಂ. ೨೮೯-೭). ೨. ದಾಳಿಂಬೆ ಮುಂತಾದ ಹಣ್ಣುಗಳೊಳಗೆ ಇರುವ, ತಿನ್ನಬಹುದಾದ ಕಾಳು : ಅಂಬುಜಲೋಚನೆಯ ಪಲ್ಗಳಂ ಪೊಸರಸದಾಳಿಂಬದ ಬಿಟ್ತುಗಳೆನುತಂ ಚುಂಬಿಸಲಾರ್ಪುದುದೊಂದು ಮಂಜುಳಕೀರಂ (ಉದ್ಭಟ. ೧೧-೩೨); ಬಂಡಿನಲ್ಲರ್ವುಡಿಯಿಂ ಪೊರೆದ ಪರಮೆವಱಿಯಿಂ ಕೋಶದೆಳಬಿಟ್ತುಗೆತ್ತು ಕರ್ದುಂಕಲೆಂದವ್ವಳಿಪ ಬಾಲಹಂಸಂಗಳಿಂ . . . ಸೊಗಯಿಸಿದತ್ತು (ರಾಮಾಶ್ವ. ೩೨-೨೮). **ಬಿತ್ತ**: ೧. ಬದಿರಡಿಯ ಗದ್ದೆ ಅಂತ್ತು ನಾಗಂಡುಗದಲೂ ಬಿತ್ತ ಬಿತ್ತುವ ಹತ್ತುಮೂಡೆ ಗದ್ದೆಗೆ (ಶಾಇಇ. IX–ii, ೪೦೩-೦೩; 1372); ಕಾಮನ ಬಿಲ್ಲಿನ ಬಿತ್ತವ ಬಿತ್ತಿ ಬೆಳೆಯಾದಂತಿದೆ ಹೂದೋಟ (ಕೋಗಿಲೆ. ೭೭-೭). **ಬಿತ್ತು$_2$**: ೧. ಸತ್ಕದ ಬಿತ್ತು ಹುರಿದುದು (ಕುವ್ಯಾಅ. ೨೦-೬೯) ; ಚಿತ್ರಜಕೀರ್ತಿಲತೆಯ ಬಿತ್ತುಗಳವೊಲು ಚಿತ್ರಕಾನಂದವನೀವ ಒತ್ತಿದ ಮುಗುಳುಮಲ್ಲಿಗೆಯ ವಂಗಡವೆಸೆವತ್ತು (ಕುರಾಶಾಂ. ೩-೦೨). ೨. ರಸದಾಡಿಮದ ಬಿತ್ತುಮಂ ಪೊಸಮುತ್ತುಮಂ ಮುಕ್ಕುಳಿಸಿದಂತಪ್ಪ . . . ದಂತಪಂಕ್ತಿಗಳ್ (ಶಂಶಭಾ. ೨-೩೯ )ವ; ಗಿಳಿಗಳ್ ಗೂಡಿಂದುದಿರ್ವ ದಾಳಿಂಬದ ಬಿತ್ತುಗಳಿನೊಸರ್ವ ತನಿರಸದೆಸಪದೊಳು (ಕಾದಂಪೂ. ೯೭). **ಬಿಳ್ತು** : ೧. ಸಾಮರ್ಥ್ಯದ ಬಿಳ್ತಿನಂತೆ ಸೌಂದರ್ಯದಂಕುರದಂತೆ . . . ಗಿರಿಜಾತೆ . . . ಬಳೆಯುತ್ತಿರ್ದಳ್ (ಗಿರಿಕ. ೩-೬೯ ವ): ಪಱ್ಬೆನಿಪ ಗೊಬ್ಬರವಂ ತಳಿದಲ್ಲಿ ಚೆಲ್ಲಿ ತಾರಗೆಗಳೆನಿಪ್ಪ ಬಿಳ್ತುಗಳಂ . . . ಸುಧಾಮರೀಚಿಜಳವಂ ಸುರಿದಂ ಸಲೆ ಕಾಲಪಾಮರಂ (ರಾಜಶೇ. ೧೧-೬೮).

[<ಬಿತ್ತು$_1$. /ತಮಿ. ಮಲ. ವಿತ್ತು; ತುಳು. ಬಿತ್; ಕೊಡ. ಬಿತ್ತೀ: ತೆಲು. ವಿತ್ತು ; ಕೋತ. ವಿತ್: ತೊದ. ಪೀತ್; ಗದಬ. ವೀತ್]

**ಬಿಟ್ದು$_1$** 'ಬೀಟ್$_1$' ಪರಾ.

**ಬಿಟ್ದು$_2$** 'ಬಿದ್ರ್$_2$' ನೋ.

**ಬಿಟ್ಮಣ್ಣು** (ನಾ). ಒಂದು ಬಗೆಯ ತೆರಿಗೆ (?) : ಪಾರ್ವನ ಮಣ್ಗಲ್ಲಿ ಕೊಡಿತೆ ಕಾಯ ಬಿಟ್ಮಣ್ಣುಂ ಅರಸಣ್ಣುಂ ಅಯ್ದೊನ್ದಿ ಒತ್ತೆ ಮಣ್ಣತ್ತು ಪಾದಂತ್ತೆತ್ತುನ್ಮೊರ ಬಿಟ್ಟುಂ ಪರಿಯಾರವಾನ್ (ಎಕ. XIV. ತಿರುಮ. ೨೩೩-೭; ಸು. 800). [?]

**ಬೀ**, ಬೀಗಂ$_1$, ಬೀಯು (ಕ್ರಿ). ಬೀತ (ಭೂತಕೃ), ಬೀತು (ಭೂತನ್ಯೂ) ೧. ಮುಗಿ;ಕೊನೆಗಾಣು; ತೀರು; ಕಳೆ: "ಬೀತುದೆನಲ್ ಮುಗಿದಿರ್ದುದು" (ಶಾರಅ. ೨೯); ಬೀತು ಬರೆ ಮಳೆಗಾಲ . . . ಶೀತಋತುವಂಕುರಿಸೆ (ಸಮ್ಯಕ್ತ್ವ. ೦-೩೦) ; ಬೀತುದು ಮಳೆಗಾಲ ಜಲ ನೆಲೆಗೊಂಡುದು (ಮೋಹತ. ೪-೬೨). ೨. ನಾಶವಾಗು ; ಅಳಿ ; ಧ್ವಂಸಗೊಳ್ಳು : ಬೀತುದಿಂದ್ರನ ಬಲುಹು ವಿಗಡನ ವೀತಿಹೋತ್ರನ ವಿಲಗ ತಿದ್ದಿ ವಿಧೂತರಿಪುಬಲ ಬಂದನು (ಕುವ್ಯಾಸ. ೦-೨) ; ನ್ಯಾಯಮನುಱಿಯದನೈಸಿರಿ ಬೀಯದೆ ಬೇಡಿದ ಸುಖಂಗಳಂ ಬೀಱಿಯಪಂಗಾಯುಷ್ಯಾಂತಂಬರಮನಪಾಯಾಶ್ರಯಮಕ್ಕು ಮವನ ಸಂತಾನಕ್ಕಂ (ನೀತಿಮಂ. II, ೮೨). ೩. ಇಲ್ಲವಾಗು ; ಮರೆಯಾಗು ; ಮಾಯವಾಗು : ದಯೆ ದಾಂಟಿ ನೀತಿ ಬೀತು . . . ಕೆಡಿಸದೆ ಮಾಣೆನೆಂದು ಗರ್ಜಿಸುವ ಕೌಶಿಕನ ಹೂಂಕಾರದಿಂದೊಗೆದರಿಬ್ಬರು ಸತಿಯರು (ಹಕಾ. ೭-೧); ಘಾಸಿಯಾದೆನು ಮಗನ ಮೇಲಿನ್ನಾಸೆ ಬೀತುದು (ಕುವ್ಯಾದ್ರೋ. ೧-೮); ಆಸೆ ಬೀತುದೆನ್ನುವ ಜಂಭದ ಸಂನ್ಯಾಸಿ ಇತ್ತ ಬರದಿರೆ ಲೇಸು (ನವರಾ. V, ೩೦). ೪. ಮರಣಹೊಂದು ; ಸಾಯು : " ಬೀ—ಅಪಸಾನೇ " (ಶಮದ). ೫. ಆರು ; ನಂದು : ಹೊಗೆ ಸುತ್ತಿ ಸುಳಿಯುತಿರೆ ಅದರಾಳದೊಳಗೆಲ್ಲೊ ಬೀತ ಕಿಡಿಯೊಲು ಹೂತ ಮಾಸು ನೆನಪು (ನಕಬಂ. ೪೨-೮). ೬. ನಿವಾರಣೆಯಾಗು ; ಪರಿಹಾರವಾಗು : ನಿನ್ನವಗೆ ತಿಳಿದುದು ಸೊಕ್ಕು ಚಿತ್ತದ ಬವಣೆ ಬೀತುದು (ಕುವ್ಯಾಕ. ೨೦-೦); ಲೇಸು ಮಾಡಿದಿರೆನ್ನ ಚಿತ್ತಕ್ಲೇಶ ಬೀತುದು ನಾನು ಬದುಕಿದೆ (ಕೌಶಿಕಾ. ೪೩-೨೯). ೭. (ಮರಗಿಡಗಳಲ್ಲಿ ಹಣ್ಣು, ಹೂವು ಮೊದಲಾದುವು ಬಿಡುವುದು) ನಿಂತುಹೋಗು ; ಕೊನೆಗೊಳ್ಳು: ಆವಲರುಂ ಪಣ್ಣುಂ ಬೀತೋವವು ಗಡ ಬೀಯುವಲ್ಲಿ ಮಲ್ಲಿಗೆಗಳುಮಿಮ್ಮಾವುಗಳುಮೆಂದೊಡಿಂ ಪೆಱತಾವುದು ಸಂಸಾರಸಾರಸರ್ವಸ್ವಫಲಂ (ಶಂಶಭಾ. ೦-೩೩); ಅಂತಶಿಪ್ರಬಲ ಮಾದ ಘನಸಮಯಮತಿಕ್ರಮಿಸೆ ಮೊಲ್ಲೆಯ ಪೂಗುಡಿ ಪಲ್ಲಟಿಸೆಯುಂ ಗಿರಿಮಲ್ಲಿಗೆ ಬೀತು ಬಿನ್ನನಾಗೆಯುಂ (ಶಂರಃವಾ. ೭-೦೬೩ ವ); ಪಣ್ ಎಂದುಂ ಬೀಯದ ಫಲವೃಕ್ಷಂಗಳೆತ್ತಂ ತುಱುಗಿ ಬೆಳೆದಿರೆ (ರಾಮಾಶ್ವ. ೪೩-೦೨). ೮. ಬಿಗಿಯನ್ನು ಕಳೆದುಕೊಳ್ಳು ; ಸಡಿಲವಾಗು : ಹಗೆಯ ಕಟ್ಟಲು ಕೊಟ್ಟ ಭಾಷೆಯ ಬಿಗುಹು ಬೀತುದು (ಕುವ್ಯಾದ್ರೋ. ೪-೫). ೯. ಬಡವಾಗು ; ಕೃಶವಾಗು ; ಕ್ಷೀಣಿಸು : '' ತವೆದುದು ತೀರ್ದುದು ಬೀತುದು ಸವೆದುದೆನಲ್ ಕ್ಷಯಮನೈದಿತೆಂದಱಿಗೆ ಬುಧರ್ " (ಶಾರಅ. ೪೨); ಸವೆದುದೀ ವನವಿಲ್ಲಿ ಫಲ ಮೃಗನಿವಹ ಬೀತುದು (ಕುವ್ಯಾಅ. ೦೯-೩) ; ಜಾತರೂಪಾಂಗದ ಸುಕೋಮಲ ಬೀತ ತನು ಬಾಲಕಿಯ ರೊಡಲು ಪರೀತಧೂಳೀಧೂಸರಿತದಿಂ ಕಂದಿ ಕರಕಾಗೆ (ತಿಮ್ಮಸ್ತ್ರೀ. ೨-೨೦).

೧೦. ಬಾಡು ; ಒಣಗು : "ಬೀತುದೆನೆ ಬೀಡಾದುದಕ್ಕು ಬೀಕಲುಮಕ್ಕು" (ಶಬ್ದಮಂ. ೨೩) ; ಬೀತು ಪಸುರೇಱಿರ್ದ ಕುಂದಲತೆ ಪುಷ್ಪಮಂ ನಿಷ್ಪಂದಿಸೆ ಸೊಗಯಿಸಳೆ ಮಧುಪನಿಕರಕ್ಕೆ (ಶಾಂತಿಪು. ೬-೧೩೮ ವ) ; ಬಱಸಂದು ಗುರುಜನಂಗಳ ಪೞಿಯರ ಮಂತ್ರಿಗಳ ನೃಪರ ಕುವರರ ಮೊತ್ತಂ ಕಱಪಲ್ಕೆ ಪೋಗೆ ವಿಭುವಂ ಪೊೞಲನುಕರಿಸಿದುದು ಬೀತ ನಂದನವನಮಂ (ಪುಷ್ಪಪು. ೧೩-೮೮) ; ಬೀತ ತರು ಶುಕನಿಕರಕೀವುದೆ ಊತಣವ (ಕುವ್ಯಾಅ. ೧೬-೩೬). ೧೧. ಕುಂದು ; ಕುಗ್ಗು : ಕಡಮೆಯಾಗು : ಬೀಯದಟ್ಟಿ ಱೊಳಂ ಪಾಸಿಗೆ ನಾಂಬ ಮುಂಬದಮಳುಂಬಂ ಕುಱಿದೊಳ್ ನಲ್ಲರಾ (ಚಂದ್ರಪು. ೮-೬೮) : ಸೊಗಸು ಬೀಯದು ರಮಣವಿಲ್ಲದ ಬೆಗಡು ನೋಯದು ಕ್ಷತ್ರಧರ್ಮದ ತಗಹು ಸಾಯದು ನಿನಗೆ (ಕುವ್ಯಾಸ. ೧೪-೨) ; ತನುವಿನ ಬಿಗುಹು ಬಿಱಿಪುದು ಬೀತುದಗ್ಗದ ಸತ್ವ (ತೊರವೆ. ೫-೦-೩೦). ೧೨. ಸೋಲು : ಹಿಮ್ಮೆಟ್ಟು : ಎನ್ನೆವರಂ ಶ್ರೀರಾಮಂ ತಾನೆ ಮೆಯ್ಪೋಱಿಂ ಬಾರನನ್ನೆವರಂ ವಾಜಿಯುಂ ಸಾಜದಿಂದೀಯೆಂ ಬೀಯೆಂ (ರಾಮಾಶ್ವ. ೧೪೨-೨೬). ೧೩. ದಣಿ : ಆಯಾಸಗೊಳ್ಳು : ಅವನಿಯೊಳು ನಿಪತಿತಪ್ರಸವಜಾತ ವಾಸನನಾಗೆ ಕುಳ್ಳಿರ್ದಾತು ಬಿಡೆ ನಿಡುಸುಯಿಲುಗಳು ತಾ ಬೀತ್ರದೆಯು ನೀವೃತ್ತ ಸಂಬಿಯು ಮೊಗವನೀಕ್ಷಿಸುತ (ಬಸವಪು. ೨೬-೪೨) : ಈಕ್ಷಣಯುಗಳ ಬೀಯದು ನೋಡಿ ಪಾರ್ಥನ ಮಾತ ಸವಿಸವಿದು ತೆಗೆದು ನಿಲ್ಲದು ಕರ್ಣಯುಗ (ಕುವ್ಯಾಆ. ೧೨-೬೨). ಬೀಗು₁ : ೩. ಬೀಗೆ ಕುಂತಳತಮಂ ಸಾಗೆ ಚೆಂದುಟಿಗೆಂಪು ಮೇಗೆ ಸೌಖ್ಯೋದಯದ ಬೆಳಗ ಪಸರಿಸಿ ನಿತ್ಯನಾಗೆಸೆವ ಪಂಪಾವಿರೂಪಾಕ್ಷಸೂರ್ಯನಾನಂದಮಂ ನಮಗೀಯಲಿ (ಚೆಬಪು. ೦-೨). ೧೨. ತಾಗಿ ಮರಳದ ಬಸವ ಬೀಗಿ ಬೆದಱದ ಬಸವ (ಬಸರ. ೯-೮೯) ; ಭೋಗಿಭೂಷಣನರಸಿ ಮಾಡಿದಳ್ ತಪವನು . . . ಮೇಗೊಗುವ ಶೀತ ಶಿಖಿವಾರಿಧಾರೆಗೆ ಮನಂ ಬೀಗದೆ (ಚೆಬಪು. ೩೬-೪); ತಾಗಿ ದಂದುಗಗೊಂಡನನು ಸಾಲ್ವನಂಗೈಸಿ ಬೀಗಿದಂ ಕರ್ಣಜಂ (ಜೈಮಿಭಾ. ೨೨-೪೦) ; ಜಂಬುಕನೊದರಿ ತಾಗಿದರಳುಕಿ ಗಜ ಬೀಗುವುದೆ (ಅಂಬಿಕಾ. ೬-೪೦). ಬೀಯು : ೯. ಬೀತ ನರಪೇತಗಳಿರಾ ! ಬಾತಂಥ ಪ್ರೇತಗಳಿರಾ ! (ಗಂ. ೫೦-೯).

[ದೇ.॥ ತಮಿ. ವೀ. ವೀಕ್ಕು : ತೆಲು. ವೀಗು]

**ಬೀಂಟೆ** ' ಬೀಟ್ಟೆ₁ ' ನೋ.

**ಬೀಕಲ್**, ಬೀಕಲು (ನಾ). ೧. ಕೊನೆ; ಅಂತ್ಯ : ಆ ಕುಠಾರನನೇಳನೆಯ ದಿನ ಬೀಕಲಾಗದ ಮುನ್ನ ತಕ್ಷಕನೌಕಿ ಕೊಲಲಿ (ಶಿಭಾಗ. ೦-೦೩-೦೨). ೨. ಅಳಿವು : ನಾಶ : ಬೀಕಲಾದುವು ತನ್ನ ಕರ್ಮಾನೀಕ (ಶಿಭಾಗ. ೦-೦೦-೬೨). **ಬೀಕಲು** : ೧. ಎಷ್ಟು ಮಕ್ಕಳನ್ನು ತೂಗಿದೆಯೋ ಈ ತೊಟ್ಟಿಲು . . . ಆ ತೊಟ್ಟಲಿಗೆ ಬಿದ್ದ ಮಗು ಯಾವುದೂ ಬೀಕಲಾಗಿಲ್ಲ (ಪಚೆದಾ. II, ೦೦೦೯). ೩. ಒಣಗಿದುದು ; ಶುಷ್ಕವಾದುದು : "ಬೀತುದೆನೆ ಬೀಡಾದುದಕ್ಕು ಬೀಕಲುಮಕ್ಕು" (ಶಬ್ದಮಂ. ೨೩). ೪. (ಕಾಳು. ಧಾನ್ಯ ಮುಂತಾದುವುಗಳಲ್ಲಿ) ಆಯ್ದು ನಂತರ ಉಳಿಯುವ ಭಾಗ : " ಆರಿಸಿಕೊಂಡು ಉಳಿದದ್ದು " (ಜಾನಕೋ. ೨೩). ೫. " ಫಲಪುಷ್ಪಗಳು ಮೊದಲು ಸಮೃದ್ಧಿಯಾಗಿ ಆಗಿ ಕೊನೆಗೆ ಕಡಿಮೆಯಾದುದು " (ಶ್ರಶಬ್ದ). ೬. ಪೊಳ್ಳಾದ ಕಾಳು; ಜಳ್ಳು : ಬಿತ್ತಿದ ಬೆಳೆಯಲ್ಲಿ ಬೀಕಲು ಹೊರಡುವದು (ರಕ್ತರ್. ೩೦೨). ೭. ಅಲ್ಪ : ತುಚ್ಛ : ಏಕೆ ಕೆಣಕಿದೆ ಕರ್ಣ ಬೂತಿನ ಬೀಕಲಿನ ಬದಗಿಯನು (ಕುವ್ಯಾಸ. ೦೫-೦೪). ಚಿಕ್ಕ ಬೀಕಲಿದು. ಮಿಕ್ಕದೊಗ್ಗದದು. ಭೂಮಿಯು ಬರಿಯ ಸ್ಮಶಾನ (ಜಪನಾ. ೩೧). (ಗು). ೮. ವ್ಯರ್ಥವಾದ ; ಅಪ್ರಯೋಜಕವಾದ : ಆಂಗ್ಲಕಾವ್ಯಮಾಲೆಯ . . . ಅಭ್ಯಾಸ ಫಲದಿಂದ ಈ ಗೀತಗಳು ಬಂದಿರುವದರಿಂದ ಇಲ್ಲಿ ಬೀಕಲು ಫಲ ಒಂದೂ ಇಲ್ಲ (ವಿಶಾಮಂ. ೦೨೦). [ಬೀ + — ಕಲ್₄]

**ಬೀಕಲು** ' ಬೀಕಲ್ ' ನೋ.

**ಬೀಗ₁**, ಬಿಯಗ₁, ಬಿಯ್ಯಗ₁, ಬೀಯಗ₁, ಬೀಯ್ಯಗ₁ (ನಾ). (ಬಾಗಿಲು, ಪೆಟ್ಟಿಗೆ ಮುಂತಾದುವುಗಳನ್ನು) ಭದ್ರಪಡಿಸಲು ಹಾಕುವ ಒಂದು ಬಗೆಯ ಲೋಹದ ಸಾಧನ : ಕೀಲಿ : ಆವಾವ ಸ್ಥಲಂಗಳನಾಧರಿಸಿ ನಡೆವಲ್ಲಿ ಘಟವೇ ಬೀಗವಾಗಿ ಎಸಳೇ ಆತ್ಮನಾಗಿ ಅಱಿವೇ ಕೈಯಾಗಿ ಸ್ವಸ್ಥಘಟಕ್ಕೆ ಸ್ವಸ್ಥಕೈಗಳಿಂದ ಸಿಕ್ಕು ಹರಿವುದಲ್ಲದೆ ಮತ್ತೊಂದು ಕೈಯಿಕ್ಕಿ ತುಡುಕಿದಡೆ ಬಿಟ್ಟುದುಂಟೇ ಆ ಸಿಕ್ಕು (ಮೋಳಿವಃ. ೯-೩೦); ಪುಷ್ಕರಾಗದ ಬೀಗಗಳಿಂದ ಕೂಡಿರುವ ನಾಲ್ಕು ವಾಗಿಲುಗಳಿರುವುವು (ಸೌಗಂಧಿ. ೦೦೫-೦೨). **ಬಿಯಗ₁** : ಉತ್ತರದ್ವಾರದ ಬಾಗಿಲ ಬಿಯಗವ ತೆಗೆದಲ್ಲಿ ನಾದಮೂರುತಿಯಪ್ಪ ಪ್ರಸಾದವ ಕಂಡೆ (ಆದಪ. ೨೪-೬೯). **ಬಿಯ್ಯಗ₁** : "ಗೃಹಬಂಧನಂ ಬಿಯ್ಯಗ" (ಮಂಗರಾ. ೫೬-೪) : ಒಂಬತ್ತು ಬಾಗಿಲ ಬಿಯ್ಯಗವಿಕ್ಕಿಹವು (ಅಪಚಂ. ೨೨೨-೦೦೦೮) ; ಪೆರ್ವಾಗಿಲಂ ತಾಗೆ ಒಂದು ಬಿಯ್ಯಗವಿಕ್ಕಿ ಚಿಕ್ಕುಟುಂ ನುಸುಳಲ್ಬಾರದಂತಾಗಿ ಬಿಗಿಯೆ ಕೆತ್ತಿದ ಕರ್ಬುನದ ಪಡಿಗಳಂ ಕಂಡು (ಅರ್ಧನೇ. ೬-೪೪ ವ). **ಬೀಯಗ₁** : ಬಂಡಿಯನು ಚಾವಡಿಯ ಮುಂದಿರಿಸಿ ಬೀಯಗದ ಕೊಂಡಿಯಂ ಕಳಚಿ (ಸಿದ್ಧರಾ. ೯-೧೪): ತರಣಿ ತೆಗೆದನು ತಾವರೆಯ ಬಾಗಿಲಿನ ಬೀಯಗವ (ಕುವ್ಯಾವಿ. ೩-೬೩). **ಬೀಯ್ಯಗ₁** : ಆಕೆಯ ಓವರಿಯ ಬೀಯ್ಯಗವನ್ನೊಡೆದು . . . ಒಳ ನುಗ್ಗುತ್ತಿದ್ದುದು ಆವ ಪುರುಷಾರ್ಥಕ್ಕೋಸ್ಕರವಾಗಿ (ಪಟ್ಟಅ. ೦೨೫-೬).

**ಬೀಗದ ಕೆಯ್**, **ಬೀಗದ ಕೈ**, **ಬೀಯಗದ ಕಯ್ಯ**=ಬೀಗವನ್ನು ತೆರೆಯುವ ಸಾಧನ : ಕೀಲಿಕೈ : ಪೆಟ್ಟಿಗೆ ಕದ್ದ ಕಳ್ಳ ಬೀಗದ ಕೆಯ್ಗೆ ಬಂದಾನೇ ? (ಗಾದ) : ಇಂಥ ಹೆಂಡತಿಯಿದ್ದರೆ, ದುಡ್ಡಿನ ಪೆಟ್ಟಿಗೆಯ ಬೀಗದ ಕೈಯನ್ನೂ ಕೊಡಬಹುದು (ಮರಮ. ೦೩೨) ; ಖಡ್ಗವ ಪಿಡಿದು ಜಡಿದು . . . ಮುಕ್ತಿಯ ಮಹಾಕವಾಟದ ಬೀಯಗದ ಕಯ್ಯೊ ಎನ ಲಮೃತಮತಿ ಕೊರಲ್ಗಮರಿಸ್ತುತ್ತ (ಭಾವಚಂ. ೯ ೪೨).

[ದೇ.॥ ತಮಿ. ಪೀಕಮ್. ವೀಕಮ್ ; ಮಲ. ವೀಕಮ್ : ತುಳು. ಕೊಡ. ಬೀಗ ; ತೆಲು. ಬೀಗಮು]

**ಬೀಗ₂** 'ಬಿಯಗ₂' ನೋ.

**ಬೀಗತನ** 'ಬಿಯಗತನ' ನೋ.

**ಬೀಗತಿ** 'ಬೀಗಿತ್ತಿ' ನೋ.

**ಬೀಗದಮರ** (ನಾ). ಒಂದು ಬಗೆಯ ಮರ : ಬೀಗದ ಮರ. ಗುಡ್ಡದ-ರೆಂಬೆ, ಕ್ಯಾಸತ್ತೆ, ರಾಹುಬೀಜ (ವೃಕ್ಷಕಿ. ೩೩-೬೩೮). [ಬೀಗ₁ + ಮರ₁]

**ಬೀಗಮುದ್ರೆ**, ಬೀಯ್ಯಗಮುದ್ರೆ (ನಾ). ೧. ಬೀಗ ; ಕೀಲಿ : ಬೀಗ ಮುದ್ರೆಗಳಿಲ್ಲದೂರಿಗೆ ಬಾಗಿಲುಗಳೊಂಭತ್ತು (ಹಂಸಾ. ೮೬); ಬಲಿದ ಕವಾಟದ ಬೀಗಮುದ್ರೆ ತಾಂ ಬಲಿದಂತೆಯಿಹುದು (ನವಮೋ. ೦೧-೪೬) ; ಅದರ ಮೇಲಿಂದ ಕಂಸನ ಎದೆಯಷ್ಟೇ ಅಗಲವೂ ದಪ್ಪವೂ ಕಠಿಣವೂ ಆದ ಬೀಗಮುದ್ರೆಯು (ವಾರಾಕ್ಷ. ೪೨). ೨. ಬಾಗಿಲಿಗೆ ಕೀಲಿಯನ್ನು ಹಾಕಿ ಅರಗಿನಿಂದ ಮುದ್ರೆಹಾಕುವುದು, — ಭದ್ರಪಡಿಸುವುದು : ಸದ್ದಡಗಿತು ವೇಳೆ ಗಂಟೆ ಸಾರಿತು ಬೀಗಮುದ್ರೆಗಳಾಗಿಯದೆ ಬಾಗಿಲಿಗೆ (ಪುರಂದ. ೩-೦೩೧-೩) ; ಏಸು ದಿನವಾಯಿತೊ ಬೀಗಮುದ್ರೆಯ ಮಾಡಿ (ಏದಾಕ್ಷ. ೫೬-೦) ; ಬೀಗಮುದ್ರೆ : ಕಾರ್ಮಿಕವಿವಾದ ಬಗೆಹರಿಯದ ಕಾಲದಲ್ಲಿ, ಕಾರ್ಖಾನೆಯ ಆಡಳಿತಮಂಡಳಿ ಕೈಗೊಳ್ಳುವ ಒಂದು ಕ್ರಮ (ಕಪಕೋ. XII, ೦೪೭). ೩. (ಬಾಗಿಲಿನ) ಬೀಗಕ್ಕೆ ಹಾಕಿರುವ ಮುದ್ರೆ,— ಮೊಹರು : (ಶ). ೪. ಬೀಗ ಹಾಕಿ ಆದರ ಮೇಲೆ ಮೊಹರಿನಿಂದ ಮುದ್ರೆಯೊತ್ತುವ ಅಧಿಕಾರ : ಈಗ ಸಧ್ಯಾ ಕೋಟೆಬಾಗಿಲು ಬೀಗಮುದ್ರೆ ನಿನ್ನ ವಶದಲ್ಲಿಯಿರಲಿ (ಕ್ಷದರ. ೨೬). **ಬೀಯ್ಯಗಮುದ್ರೆ** : ೨. ಈ ಬಾಗಿಲ್ಗೆ ಬೀಯ್ಯಗಮುದ್ರೆ ಮಾಡಿ, ನೀನೂ ನಿನ್ನವರೂ ಹೊರಗೆ ಕಾವಲ್ಗುಡುತ್ತಿರಿ (ಪಟ್ಟಅ. ೦೪೬-೨). [ಬೀಗ₁ + ಮುದ್ರೆ]

**ಬೀಗಳೆ** (ಕ್ರಿ). ತಿರಸ್ಕರಿಸು ; ಹೀಯಾಳಿಸು : ತನ್ನನ್ನು ಭಕ್ತನಲ್ಲವೆಂದು ಬೀಗಳೆಯುವ ಇವನಾರು ! (ಕರಕ. ೩೦); ಈ ಆಂದೋಲನವನ್ನು ವಹಾಬೀ ಆಂದೋಲನವೆಂದು ಬ್ರಿಟಿಷರು ಬೀಗಳೆದರು (ಕಕ್ಪ್ರಾ. ೫೮೬).

[ಬೀ + ಕಳೆ$_1$]

**ಬೀಗಿತಿ** 'ಬೀಗಿತ್ತಿ' ನೋ.

**ಬೀಗಿತ್ತಿ**, ಬೀಗತಿ, ಬೀಗಿತಿ, ಬೀಯಗಿತ್ತಿ (ನಾ). ವಧುವಿನ ತಾಯಿ ಮತ್ತು ವರನ ತಾಯಿ -- ಇವರಿಬ್ಬರ ನಡುವೆ ಮದುವೆಯ ಸಂಬಂಧದಿಂದ ಉಂಟಾಗುವ ಪರಸ್ಪರಸಂಬಂಧಸೂಚಕಪದ : ಸುಮಿತ್ರೆ ಕೇಳ್ದು ತನ್ನ ಬೀಗಿತ್ತಿ[ಪಾಠಾಂ. ತಿ] ದೇವಿಲೆಯಲ್ಲಿಗೆ ಪೋಗಿ ಇಂತೆಂದಳ್ (ಪುಣ್ಯಾಸ್ರ. ೪-೧೫ ವ); ಇವರು ನಿಮ್ಮ ಬೀಗಿತ್ತಿಯಲ್ಲವೆ! (ದೇವೀಕಾ.೬). **ಬೀಗತಿ :** ಹೆಣ್ಣಿನ ಕಡೆಯವರು ಗಂಡಿನ ಕಡೆಯವರು, ಬೀಗ ಬೀಗಶಿಯರು (ಸುಪಸಂ. ೩೦) ; ಸ್ವತಃ ಪಾರೋತಿಯೇ . . . ಮುಂದೆ ಸವತಿಯಾಗುವವಳನ್ನು ಸಿಂಗರಿಸಿದಂಥ ನೋಟ, ಅವಳ ಬೀಗತಿಯ ಎಲ್ಲ ಅನುಮಾನಗಳನ್ನೂ ಹೋಗಲಾಡಿಸಿದವು (ಪುರಪು. ೦೦೩). **ಬೀಗಿತಿ :** ದಂಪತಿಗಳು ಹಿಮಗಿರಿಗೆ ತೆರಳೆ ಅಲ್ಲಿ ಒಟ್ಟಗಿದ್ದ ಬೀಗಿತಿಯರಾದ ಗೌರೀ ಸರಸ್ವತಿಯರಿಗೆ ನಮಸ್ಕರಿಸಿದರು (ಶಾರದ. ೪೪೮). **ಬೀಯಗಿತ್ತಿ :** ಒಂದಿರುಳ್ ಕಾರ್ಯಮಂ ಸಮಕಟ್ಟಿ ತನ್ನ ಬೀಯಗಿತ್ತಿಗಾ ವೃತ್ತಾಂತಮನೆಲ್ಲಮಂ ಪೇಳ್ದು (ಪುಣ್ಯಾಸ್ರ. ೩-೫೨ ವ). [ಬೀಗ$_2$ (<ಬಿಯಗ$_2$) + — ಇತ್ತಿ]

**ಬೀಗು$_1$** 'ಬೀ' ನೋ.

**ಬೀಗು$_2$** (ಕ್ರಿ). ೧. ದಷ್ಟಪುಷ್ಟವಾಗು ; ತುಂಬಿಕೊಂಡಿರು : "ಬೀಗು – ಹರ್ಷಭಾವೇ, ಸ್ಥೌಲ್ಯೇ ಚ (ಉಬ್ಬು)" (ಶಮಧಾ) ; ಅಂಗಜಸನ್ನಿಭಂ ತಲೆಯನೇಕೆಗೆ ತೂಗಿದನೆಂದೊಡಕ್ಕ ಕೇಳಂಗನೆ ನಿನ್ನ ಬೀಗಿ ಬಿಗಿದಿರ್ದ ಕುಚದ್ವಯಮಧ್ಯದಲ್ಲಿ ತಾಂ ಪಿಂಗದೆ ನಟ್ಟ ದಿಟ್ಟಿಯನವಂ ಕಿೞಲೆಂದನು ಗೆಯ್ದು ತೂಗಿದಂ (ಅದಿಪು. ೦೨-೦೩); ಬೀಗಿ ಬೆನ್ನಿಂ ಬಿರಿವನ್ನಂ ಕೊರ್ವಿ ಮುಂಗಾಲ್ ಗಡಿಯೆನೆ ಕಡ್ಗಗೆಚ್ಚಲ್ ಪೊದಟ್ಟಿಂದು ವತ್ಸೋತ್ಕರಮೆಲ್ಲಂ ಬಾಲವಂಬಂ ಕೞಿಯೆ . . . ಮಾಹಿಷೀಸಂತತಿ ವಿಪಿನಭವಂ ಕಣ್ಗಗು ವಾರ್ಯು ಕಾರೊಳ್ (ಚಂದ್ರಪು.೪-೪೮). ೨. ಉಬ್ಬು; ಊದಿಕೊಳ್ಳು : "ಬಾತುದೆನಲ್ ಬೀಗಿ [ಪಾಠಾಂ. ಬಿಗಿದಿ]ರ್ದುದು" (ಶಾರಸಿ. ೨೯) ; ಕುಟಿಲಾ ನೀಲಾಳಕಂಗಳ್ ನಿಮಿರ್ದಿರೆ ಬೆಳರ್ವಾಯ್ ನಾಡೆಯುಂ ಬೀಗೆ ರೋಷೋತ್ಕಟದೇಹಂ ರಾಗದಿಂ ಪಿಳ್ಳನೆ ಪಿಟಿದವೊಲಿಂಬಾಗೆ . . . ನಿಂದಿರ್ದಳೊರ್ವಳ್ (ಕಾವ್ಯಾವ. ೮೦೨) ; ಬೀಗಿ ಬಿಗಿದವು ಕೊರಳ ಸೆರೆಗಳು (ಬಿಭಾಗ. ೯-೨೦-೦೨) ; ತನಿಯಡಗನಡಸಿ ತಿಂದು ಬಸುಱು ನೆಱೆ ಬೀಗೆ ಡಜ್ಜನೆ ತೇಗಿ (ಸಾಳ್ವಭಾ. ೨೫-೨೩). ೩. (ಸಂತೋಷ ಅಥವಾ ಅಭಿಮಾನದಿಂದ ಹೃದಯವು) ಉತ್ಸಾಹಗೊಳ್ಳು : "ಬೀಗು – ಹರ್ಷಭಾವೇ, ಸ್ಥೌಲ್ಯೇ ಚ (ಉಬ್ಬು)" (ಶಮಧಾ); ರತರಾಗದುರುಳಿವೊಲಾಗೆ ಕರಂ ಬೀಗಿ ಬಾಯ್ಗಳಂ ಜುಂಬಿಸಿದರ್ (ಕಾವ್ಯಸಾ. ೬೭೭ ಚಂದ್ರ೪); ನನೆಗಳರಳದ ಮುನ್ನ ಮನವರಳ್ದು ಪೊಂಗುತಂ ನನೆ ಬಿರಿವುದಕ್ಕೆ ಬಿತ್ತಂ ಬೀಗಿ ಬಿರಿವುತಂ (ಪುಷ್ಪರ. ೦೦-೦); ಓಹಿಲದೇವಂ ಕೊಬ್ಬುತ್ತುಬ್ಬುತ್ತಂ ಬಿಬ್ಬನೆ ಬೀಗಿ . . . ಶಂಕರನಳ್ಕಱ ಪೂಜೆಗೆ ಸಲ್ವಂ (ಉದ್ಭದೇ. ೩-೪೩). ೪. ಹೆಚ್ಚಾಗು ; ಅಧಿಕವಾಗು : ಬೀಗಿ ಸುಗ್ಗಿಯ ಬಿಸಿಲ್ ನೆಲೆಗೆಡಿಸೆ ನೆಳಲಂ (ಕಾಲಿಂರ. ೦೩೬-೨೯೨). ೫. ಸೊಂಪಾಗು ; ಸಮೃದ್ಧಿಯಾಗು ; ಹುಲುಸಾಗು : ಬೆಳೆದು ಬೀಗಿ ತಮ್ಮಿಂ ತಾವೆ ಬಿಗಿದು ಬಿರಿವಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪನಿವೊನಲೆ ಪರಿನೀರಾಗೆ (ಶಂಕಕಂ. ೦೦೬-೦೪); ಪಣ್ಣಾಗುತೆ ಕಾಯ್ಗಳ್ ಪೊಱಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಿರಿಕ. ೨-೫೦); ನಸುದೋರೆ ದೋರೆವಣ್ ಕಳಿತೆಸೆವಚ್ಚಪಣ್ಣಡಿದು ಬೀಗಿದ ಬಿಣ್ಗೊನೆಯಾಂತು . . . ಬಗೆಗೊಂಡುದು ಶೈಲನಂದನಂ (ಕಬಕಂ. ೦-೫೦). ೬. ಅಹಂಕಾರ ಪಡು ; ಸೊಕ್ಕು ; ಮೆರೆ : ಪೊಂಗಿ ಕಡಂಗಿ ಬೀರದೊಳೆ ಬೀಗುವ ನಿನ್ನಣುಗಾಳೆ ನೋಡೆ . . . ಕೋಡಗಗಟ್ಟುಗಟ್ಟಿ ಚಿತ್ರಾಂಗದನಯ್ಯೆ (ಪಂಪಭಾ. ೯-೫೪); ಹಾರುವನ ವಧೆ ಸುಡಲಿ ಪಾತಕವೆಂದು ಬಿಟ್ಟರೆ ಬೀಗಿ ಬೆಱತೆಯಲ (ಭಿಭಾಗ. ೯-೦೪-೩೨) ; ಸೊರ್ಕಿನುರ್ಕಿಂ ಬೀಗಿರ್ಪಯ್ (ರಾಮಾಶ್ವ. ೨-೯). ೭. ಸೆಟೆದುಕೊಳ್ಳು ; ಬಿಗಿದುಕೊಳ್ಳು ; ಪೆಡಸಾಗು : ಬಟಲ್ವಿನಂ ಬಡಿದು ಗೋವುಗಳಂತಿರೆ ಪೇಱೆ ದುಃಖಮಂ ಪೀಱೆ ಬಿಗುರ್ತು ಬೀಗಿ ನಡುವೆನ್ನೊಡೆದಿರ್ಬಗಿಯಾಗಿ ಪೋಟ್ದು (ಸುಕುಮಾ. ೫-೦೬) ; ಮಿಗೆ ಬೀಗಿ ಬಾಗಿರ್ದಿಭಘಟಾವಳಿಯ ಸೆಡೆದ ಕಾಲ್ಗಳ ಕುದುರೆಗಳ . . . ಕಂಡು (ಕೊರಂ. ೩-೯-೪).

**ಬೀಗಿ ಬೆಳೆ** = ೧. ಸೊಂಪಾಗಿ ಬೆಳೆ ; ಹುಲುಸಾಗಿ ಬೆಳೆ : ಬೆಡಂಗುವೆತ್ತು ನೆಱೆ ಬೀಗಿ ಬೆಳೆದವು ಮಗಮಗಿಪ ಗಂಧಶಾಲಿವನಂಗಳ್ (ಸುಕುಮಾ. ೯-೫೨) ; ಬೀಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿದ್ದಡೆ ಬೇಡಿದ ಪದವಿಯನೀವ ಕೂಡಲಸಂಗಮದೇವ (ಬಸವ. ೦೮೯). ೨. ಉನ್ನತಿಯನ್ನು ಹೊಂದು ; ಅಭಿವೃದ್ಧಿಗೆ ಬರು : ಭಾವಪುಷ್ಪಂಗಳಲ್ಲಿ ಪೂಜೆಯಂ ಮಾಡಿ ಬೀಗಿ ಬೆಳೆವುತ್ತಿಪ್ಪ[ಪಾಠಾಂ. ಬೆಳಗುತ್ತಿಪ್ಪ] ಶರಣಂಗೆ ಮತ್ತೆ ಅನುಭಾವದ ಸುಖ ಸವಿದೋಱುವುದೇ (ಛಸವ. ೩೬-೨೯). ೩. ಚೆನ್ನಾಗಿ ಅರಳು : "ಬೀಗಿ ಬೆಳೆದುದನು ಕವಿಗಳ್ ಬೇಗದಿ ತಾನುಳ್ಳಲರ್ದುದೆಂಬರ್" (ಕವಿಕಂ. ೨೬೦).

[ದೇ. ‖ ತಮಿ. ವೀಙ್ಕು, ವೀಕ್ಕು; ಮಲ. ವಿಙ್ಙು, ವೀಕ್ಕು ; ತೆಲು. ವಿಕ್ಕು, ವೀಗು]

**ಬೀಚ** (ನಾ). ಒಬ್ಬಾತನ ಹೆಸರು : ಆತನ ಮಗಂ ಬೀಚಂಗು ಕಲ್ಕಟೀನಾಡ ನೆಟ್ಟೂರ ಕಲ್ನಟಂಗೊಟ್ಟರ್ (ಎಕ. V, ಕಪ್ನರಾ. ೨೬೨-೦೮ ; 971). [?]

**ಬೀಚು** (ನಾ). ಸಮುದ್ರದ ದಡ ; ಕಡಲಿನ ತೀರ : ಶಾಂತಿಯನ್ನು ಕಳೆದುಕೊಂಡು ಎಸರು ಕುದಿವ ವೀಚಿಗೆ ಎರಡು ಕಡೆಗೆ ಬೀಚಿಗೆ (ಸೂರ್ಯಪಾ. ೪೦-೬); ಬೀಚಿನಲ್ಲಿ ಮರಳಿನ ಹಾಸಿಗೆಯಲ್ಲಿ ಅನೇಕ ಜನ ವಿಶ್ರಮಿಸಿರುವರು (ಹೂಅರ. ೧೫). [← ಇಂ. Beach]

**ಬೀಜ** (ನಾ). ೧. ಸಂತಾನೋತ್ಪತ್ತಿ ಶಕ್ತಿಯುಳ್ಳ ಮತ್ತು ತನ್ನಂಥವೇ ಜೀವದ್ರವ್ಯವನ್ನು ಬೆಳೆಸಿ ವೃದ್ಧಿಮಾಡುವ ಸತ್ವವುಳ್ಳ ವಸ್ತು; ಬಿತ್ತ : ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ ಲಿಂಗವೆಂಬ ಎಲೆಯಾಯಿತ್ತು (ಬಸವ. ೫೨೬); ಧರೆ ಬೀಜಂಗಳ ನುಂಗೆ ಬೇಲಿ ಹೊಲನೆಲ್ಲಂ ಮೇದೊಡಂ . . . ಹರ ಕೊಲ್ಲಲ್ ಪರ ಕಾಯ್ವನೇ (ಸೋಮೇಶ. ೨೯). ೨. ದಾಳಿಂಬೆ ಮೊದಲಾದ ಹಣ್ಣುಗಳೊಳಗೆ ಇರುವ ಕಾಳು : ಕುಂಕುಮಂಬೊರೆದ ಕರ್ಪೂರವಳುಕಂ ಕೆದಱಿದಂತಿರ್ದ ದಾಡಿಮಬೀಜ ರಾಜಿಯೊಳಂ . . . ಅತಿರಮಣೀಯಮಾಗಿ (ಮಲ್ಲಿಪು. ೨-೩೩); ಆ ದಾಡಿಮದ್ರುಮದೊಳ್ ಬಿಡೆ ಸವಿಯಲ್ ಬೀಜಮನುಗಿವೆಡೆಯೊಳ್ ಚಂಚೂಪುಟಂಗಳಂ ಬಿಡದೆಂತುಂ ತೊಡರ್ದೊಡೆ (ಕುಸುಮಾ. ೯-೨೩). ೩. ಮೂಲ ; ಉತ್ಪತ್ತಿಸ್ಥಾನ : ಕಮಲಜನ ಚಾತುರ್ಯಬೀಜಮೋ . . . ಎನಲ್ ಪುಷ್ಪಕಂ ಕಣ್ಗೆಸೆದುದು (ವಂಕಾಂರಾ. ೫-೪-೩); ಅಜ್ಞಾನವೇ ದುಃಖಹೇತುವಾದ ಸಂಸಾರದ ಬೀಜ (ಶಾರದ. ೦೨೨). ೪. ಕಾರಣ ; ಹೇತು: "ಹೇತು ನಿದಾನಂ ಬೀಜಂ" (ವಸ್ತುಕೋ. ೦೩೧-೮೦); ಜನಮತದೊಳ್ ಸಮ್ಯಗ್ದರ್ಶನಮುಳ್ಳೊಡೆ ಸಾಲ್ದೊಡದುವೆ ಬೀಜಂ ಗಡ ನೆಟ್ಟನೆ ಮೋಕ್ಷಸುಖಕೆ (ಅಜಿತ. ೦೦-೧೩). ೫. ವೀರ್ಯ ; ರೇತಸ್ಸು : "ಶುಕ್ಲಂ, ವೀರ್ಯಂ. ಬಲಂ, ಬೀಜಂ, ಇಂದ್ರಿಯಂ, ರೇತಃ— ಈ ೬ ಇಂದ್ರಿಯಂ" (ಪಠಾಯು. ೧೦೫-೦೬); ಬೀಜವೆಂದರೆ ಶುಕ್ಲ ಶೋಣಿತಗಳು (ಭಾರದ. ೫೪). ೬. ಅಂಡ ; ವೃಷಣ : ಹೋರಿಯ ಬೀಜವನ್ನು ಹಿಡಮಾಡಿ ಎತ್ತುಗಳಾಗಿ ಮಾರ್ಪಡಿಸಿ ಉಳುಮೆಗೆ ಬಳಸುತ್ತಾರೆ (ರೂಢಿ). ೭. ಸಂತಾನ ;

ಸಂತತಿ: 'ಹರಬೀಜ' ನೋ. ೮. [ಕಾವ್ಯವಿ॰] ನಾಟಕ ಮುಂತಾದುವುಗಳ ಕಥಾವಸ್ತುವಿನ ಮೂಲಕಾರಣ: ಬೀಜ ಬಿಂದು ಪತಾಕಾ ಪ್ರಕರೀ ಕಾರ್ಯ — ಈ ಲಕ್ಷಣಗಳುಳ್ಳ ಐದು ಅರ್ಥಪ್ರಕೃತಿಗಳೆಂದು ಕೀರ್ತಿತವಾಗಿವೆ (ದಶರೂ. ೧-೨೬); ಕಥಾವಿಸ್ತರೀಕರಣ ದೃಷ್ಟಿಯಿಂದ, ವಸ್ತುವಿನಲ್ಲಿ ಐದು ಅಂಶಗಳು ಕಂಡುಬರುತ್ತವೆ. ಅವುಗಳಿಗೆ 'ಅರ್ಥಪ್ರಕೃತಿ' ಗಳೆಂದು ಹೆಸರು. ಅವು ಯಾವುದೆಂದರೆ: ೧. ಬೀಜ — ಹಣ್ಣನ್ನು ಪಡೆಯುವುದಕ್ಕಾಗಿ ಮೊದಲು ಆ ಹಣ್ಣಿನ ಬೀಜವನ್ನು ಬಿತ್ತುವಂತೆ ಕಥಾಫಲಕ್ಕೆ ಸಾಧನಭೂತವಾದ ಘಟನೆಯನ್ನು ಸೂಚಿಸಿರುವಿಕೆ (ಕ್ಷಿಬಿ. ೨೦೬). 'ಅರ್ಥಪ್ರಕೃತಿ' ಪರಾ. ೯. [ಗಣಿತ] ಸಂಖ್ಯಾವಿಚಾರವನ್ನು ಅಕ್ಷರಸಂಜ್ಞೆಯ ಮೂಲಕ ಪ್ರತಿಪಾದಿಸುವ ಶಾಸ್ತ್ರ: 'ಬೀಜಗಣಿತ' ಪರಾ. ೧೦. [ತತ್ತ್ವಶಾ] ಒಂದು ದೈವದ ಉಪಾಸನೆಯ ನಿರ್ದಿಷ್ಟಮಂತ್ರದ ಮೂಲಭೂತವಾದ (ಆಧ್ಯಾತ್ಮಿಕ) ಅಕ್ಷರ; ಮಂತ್ರವನ್ನು ಪ್ರತಿನಿಧಿಸುವ ಅಕ್ಷರ; ಬೀಜಾಕ್ಷರ: ಮಂತ್ರದೇವತಾನಾಮವರ್ಣವಿಶೇಷವಾದ ಬೀಜವನೇ ನಾಭಿಯಲ್ಲಿ . . . ಸ್ಮರಣಂಗೈದು (ವಿವೇಕ. ೬೯). ೧೧. ನಲವತ್ತೈದು ಮಂತ್ರಸಾಧನಗಳಲ್ಲಿ ಒಂದು: ಬೀಜ ಶಕ್ತಿ ಕೀಲಕ . . . ಆತ್ಮೈಕ್ಯಗಳೆಂಬ ಪಂಚಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (ವಿವೇಕ. ೬೦).

**ಬೀಜಕ್ಕೆ ಬಿಟ್ಟ ಗೂಳಿ** = ಗರ್ಭಧಾರಣೆ ಮಾಡಿಸಲು ಆರಿಸಿರುವ ಉತ್ತಮಜಾತಿಯ ಹೋರಿ: ಒಳ್ಳೆ ಬೀಜಕ್ಕೆ ಬಿಟ್ಟ ಗೂಳಿಯ ಹಾಗೆ ಸೊಕ್ಕಿದ್ದಾನಲ್ಲವೆ ಅವನು! (ಮೂರುದಾ. ೧೩೨). [ಸಂ.]

**ಬೀಜಕ** (ನಾ). ೧. ಬೀಜ. ೨. ಬಕುಳವೃಕ್ಷ: "ವಕುಳಂ ಕೇಸರತರು ಬೀಜಕಮಕ್ಕುಂ" (ವಸ್ತುಕೋ. ೩೩-೫). ೩. ಒಂದು ಬಗೆಯ ಮರ ಮತ್ತು ಅದರ ಹಣ್ಣು; ಮಾದಲ. [ಸಂ.]

**ಬೀಜಕೋಶ** (ನಾ). ೧. ಸಸ್ಯದ ಹೂವಿನಲ್ಲಿ ಬೀಜಗಳಿರುವ ಭಾಗ; ಅಂಡಾಶಯ: (ಪಕ್ವವಾದ ಮೇಲೆ ಬಾಯಿಬಿಟ್ಟುಕೊಳ್ಳುವ) ಒಣಗಿದ ಬೀಜಕೋಶ (Capsule. ಇಂಕಿ). ೨. (ತಾವರೆ) ಹೂವಿನ ಒಳಗಿನ ಗೊಂಡೆ; ಕರ್ಣಿಕೆ: "ವರಾಳಕಂ ಬೀಜಕೋಶಮದು ಕರ್ಣಿಕೆಯುಂ" (ವಸ್ತುಕೋ. ೨೫-೨೦). ೩. ಕಾಯಿ: "ಶಮಿ ಬೀಜಕೋಶಮೆನೆ ಕಾಯ್ಗೆ ನಾಮಂ" (ಮಂಗರಾ. ೩೩-೬). ೪. (ಪ್ರಾಣಿಗಳ) ವೃಷಣದ ಚೀಲ; ಅಂಡಕೋಶ. [ಸಂ.]

**ಬೀಜಕೋಶಿ** (ನಾ). ೧. (ದ್ವಿದಳಧಾನ್ಯಗಳನ್ನು ಹೊಂದಿರುವ ಸಸ್ಯದ) ಕಾಯಿ: "ಬೀಜಕೋಶೀ, ಶಮೀ, ಶಿಂಬಾ — ಈ ೩ ಕಾಯ್" (ಹಲಾಯು. ೩೧-೩೫). ೨. = ಬೀಜಕೋಶ ೨: "ಕರ್ಣಿಕಾ, ಬೀಜಕೋಶೀ — ಈ ೨ ಕರ್ಣಿಕೆ" (ಹಲಾಯು. ೧೧೨-೬೦); "ಕರ್ಣಿಕೆ ಬೀಜಕೋಶಿಯಕ್ಕುಂ" (ಮಂಗರಾ. ೦೨೪-೦೬). [ಸಂ. ಬೀಜಕೋಶೀ]

**ಬೀಜಗಣಿತ** (ನಾ). [ಗಣಿತ] ಸಂಖ್ಯಾವಿಚಾರವನ್ನು ಅಕ್ಷರಸಂಜ್ಞೆಯ ಮೂಲಕ ಪ್ರತಿಪಾದಿಸುವ ಶಾಸ್ತ್ರ: ಈ ಪುಸ್ತಕದಲ್ಲಿ . . . ಅನಿವಾರ್ಯವಾಗಿ ಕೆಲವು ಕಡೆ ಬೀಜಗಣಿತ, ತ್ರಿಕೋಣಮಿತಿ . . . ಈ ಭಾಗಗಳನ್ನು ಉಪಯೋಗಿಸಲಾಗಿದೆ (ಭೌತವಿ. ೧೫); 'ಬ್ರಾಹ್ಮಣ' ಎಂಬ ವೈದಿಕಮತ ಗ್ರಂಥದಲ್ಲಿ ಅಂಕಗಣಿತ, ರೇಖಾಗಣಿತ. ಬೀಜಗಣಿತ ಮತ್ತು ಖಗೋಳ ಶಾಸ್ತ್ರ ಇವುಗಳು ಉಪಯೋಗಿಸಲ್ಪಟ್ಟಿವೆ (ಗಣಿತ. ೬). [ಸಂ.]

**ಬೀಜಗಾಣು** (ಕ್ರಿ). (ಭೂಮಿಯು) ಬೀಜವನ್ನು ಪಡೆ; ಬಿತ್ತನೆಯಾಗಂ: ಮಳೆಯಾಗದಿದ್ದರೆ ಹೊಲಗಳು ಬೀಜಗಾಣುವುದಿಲ್ಲ (ಮುಂಬಯು. ೨-೯೯); ಇಬ್ಬನಿಯಲ್ಲಿ ಮಿಂದ ಅದೇ ಹೊಸದಾಗಿ ಬೀಜಗಂಡ ಹೊಲದ ಮೇಲೆ ಹಾಯ್ದು ಬಂದ ನಸುಕಿನ ಮಂದಪವನ . . . ನನ್ನ ಮೈಗೆ ಮುಳ್ಳು ತಂದವು (ಇಶ್ವಕ. ೨೦೬). [ಬೀಜ + ಕಾಣು (< ಕಾಣ್)]

ಬೀಜನ 'ಬಿಜ್ಜಣ' ನೋ.

**ಬೀಜಪೂರ** (ನಾ). ಈಳೆ ಜಾತಿಗೆ ಸೇರಿದ ನಿಂಬೆ, ಧೊಡ್ಡೀಳೆ, ಮಾದಲ ಮುಂತಾದ ಯಾವುದಾದರೂ ಮರ ಮತ್ತು ಅದರ ಹಣ್ಣು: ಸಕಳೋದ್ಯಾನಂಗಳೊಳ್ ಸಂತತಸರಸಫಳವ್ರಾತದಿಂ ಸೇವ್ಯಮಲ್ಲಲ್ಲಿ ಕರಂ . . . ಬೀಜಪೂರಪ್ರಕರಂ ನಾರಂಗಸಂಘಂ (ಕೃಶ್ವಕೃ. ೯-೦೫); ಇಚ್ಛೆಗಾರ್ತಿಯ ಪೆರ್ಚಿದ ಬಲ್ಮೊಲೆಯ ಪಾಂಗಿನಿಂ ಜೋಲ್ದು ಪೊಂಬಣ್ಣದಿಂ ಮನೋಜ್ಞಮಾದ ಬೀಜಪೂರದಿಂ . . . ಸೊಗಯಿಸಿ ತೋರ್ಕುಂ (ರಾಮಾಶ್ವ. ೫೩-೮೯). [ಸಂ.]

**ಬೀಜಪೂರಕ** (ನಾ). = ಬೀಜಪೂರ: "ಬೀಜಪೂರಕಂ ರುಚಕಂ ಜಂಬೀರಂ" (ವಸ್ತುಕೋ. ೩೯-೬); "ಫಲಪೂರಕಃ, ಬೀಜಪೂರಕಃ, ರುಚಕಃ, ಮಾತುಲುಂಗಕಃ — ೪ ಮಾದೀಗಿಡ, ಮಾದಾಳದ ಗಿಡ" (ಸಿದ್ಧಾಂತಿ. ೦೩೦). [ಸಂ.]

**ಬೀಜಬುದ್ಧಿ** (ನಾ). [ಜೈನ] ಬುದ್ಧಿಋದ್ಧಿಯ ಹದಿನೆಂಟುಭೇದಗಳಲ್ಲಿ ಒಂದು; ಒಂದು ಬೀಜಾಕ್ಷರವನ್ನು ಗ್ರಹಿಸುವುದರ ಮೂಲಕ ಅನೇಕ ಅರ್ಥಗಳನ್ನು ತಿಳಿಯುವ ಜ್ಞಾನ: ಅಲ್ಲಿ ಕೇವಲಜ್ಞಾನಮುಂ ಅವಧಿಜ್ಞಾನಮುಂ ಮನಃಪರ್ಯಯಜ್ಞಾನಮುಂ ಬೀಜಬುದ್ಧಿಯುಂ ಕೋಷ್ಠಬುದ್ಧಿಯುಂ . . . ವಾದಿತ್ವಮುಂ ಎಂದು ಬುದ್ಧಿಮಹರ್ದ್ಧಿ ಪದಿನೆಂಟುತೆಱಂ (ಕಶ್ಯಕ್ರ. ೦೬೩); ಏಕಬೀಜಪದದಿಂದನೇಕಾರ್ಥಮನಱಿವುದು ಬೀಜಬುದ್ಧಿಯೆಂಬುದು (ಕಸಾರ. ೩೮೬). 'ಬುದ್ಧಿಋದ್ಧಿ', 'ಬುದ್ಧಿಮಹರ್ದ್ಧಿ' ಪರಾ. [ಸಂ.]

**ಬೀಜಭೋಜಿ** (ನಾ). ಬಿತ್ತನೆಗೆಂದು ಕಾಯ್ದಿರಿಸಿದ ಕಾಳನ್ನೇ ತಿನ್ನುವವನು: ಮಗನೆ . . . ಕಠೋರಚಕ್ರಶಸ್ತ್ರಗಣಮುಖಕ್ಕೆ ನಿನ್ನನಱಿಯುತ್ತುಮೆ ನೆಟ್ಟಗೆಪುಟ್ಟಿ ಬೀಜಭೋಜಿಗಳವೊಲಪ್ಪುದಪ್ಪುದುಱು ವಾಟಿಮಗ್ (ನೇಮಿಕೃ. ೦೨-೩೦). [ಸಂ. ಬೀಜಭೋಜಿನ್]

**ಬೀಜಮಂತ್ರ** (ನಾ). ೧. ರಹಸ್ಯವಾದ ಅರ್ಥವುಳ್ಳ ಮಂತ್ರ; ಪರಮಾರ್ಥವನ್ನು ಪ್ರತಿಪಾದಿಸುವ ಮಂತ್ರ: ಅಸುರಬಾಧೆಗೆ ಸಿಲುಕಿ ಅಶೋಕವನದಲಿ ಶಶಿಮುಖಿ ಬೀಜಮಂತ್ರವ ಜಪಿಸೆ (ತೊರಂದ. ರಾ. ೨-೦೫೬-೮). ೨. (ಆಲಂ) ಮುಖ್ಯವಾದ ಉಪಾಯ: ಸಾಮವೆಂಬುದು ರಾಜನೀತಿಗೆ ತಾ ಮನೋಹರರೂಪು ಬದುಕುವ ಭೂಮಿಪಾಲರನಂತವಿಭವಕೆ ಬೀಜಮಂತ್ರವಿದು (ಕುವ್ಯಾಉ. ೯-೫). [ಸಂ.]

**ಬೀಜಮುದ್ರೆ** (ನಾ). [ಯೋಗ] ಮಂತ್ರಶಾಸ್ತ್ರಪ್ರಸಿದ್ಧವಾದ ಒಂದು ಬಗೆಯ ಹಸ್ತಮುದ್ರೆ: ಅಸ್ತ್ರಮುದ್ರೆ ಚಕ್ರಮುದ್ರೆ . . . ಬೀಜಮುದ್ರೆ ಶಾಂತಿಮುದ್ರೆ . . . ಸಂಹಾರಮುದ್ರೆಯೆಂಬಾದಿಯಾಗಿ ಸಕಲ ಮುದ್ರೋಪಮುದ್ರಾಬಂಧಲಕ್ಷಣಂಗಳಂ ಗುರುಮುಖದಿಂದಱಿತು (ವಿವೇಕ. ೦೦೩). [ಸಂ. ಬೀಜಮುದ್ರಾ]

**ಬೀಜವರಿ$_1$** (ನಾ). ಒಂದು ಬಗೆಯ ತೆರಿಗೆ: ಸಕಲಸುವರ್ಣಾದಾಯ ಭತ್ತಾದಾಯ ತುರುಕಾಣಿಕೆ ವಿರುಭ ಬೇಡಿಗೆ ಬೀಜವರಿ ಮಣುದೆರೆ ಮಗ್ಗದೆರೆ . . . ಕುದುರೇಸುಂಕ (ಎಕ. X, ಕೋಲಾರ. ೨೯೬-೨೬; 1637?). [ಬೀಜ + ವರಿ$_1$]

**ಬೀಜವರಿ$_2$** (ನಾ). ೧. ಒಂದು ನಿರ್ದಿಷ್ಟಪ್ರಮಾಣದ ಬೀಜವನ್ನು ಬಿತ್ತನೆ ಮಾಡಬಹುದಾದಷ್ಟು ಭೂಮಿ: ಹಿರಿಯ ಕೆಱೆಯ ತೆಂಕಣ ಕೋಡಿಯ ವೊ[ಳ]ಗಣ ಭತ್ತಾದಾಗ ಬೀಜವರಿ ವೊಕ್ಕಳವೆಂದು ಬಿಟ್ಟರು (ಎಕ. IX. ದೇವಂ. ೫೩-೨೫; 1374); ಪೂರ್ವದ ಗ್ರಾಮದ ಜೋಡಿಬೇಡಿಗೆ ಕಾಣಿಕೆ ಬಿರಾಡ ಓಟ್ಟು ಹುಗ್ಗಿ ಬೀಜವರಿಯುವೆಲ್ಲವನು . . . ಮಾಡಿದರು (ಎಕ. V, ಹಾಸನ. ೨-೨೯; 1563). ೨. ಒಂದು ನಿರ್ದಿಷ್ಟ ಅಳತೆಯ ಜಮೀನಿಗೆ ಬಿತ್ತಲು ಬೇಕಾಗುವಷ್ಟು ಬೀಜದ ಪ್ರಮಾಣ: ಸತಖಂಡದ ಗದ್ದೆ ಬೀಜವರಿ ಖ[ಂ]ಡುಗ ೧ ಕೊಳಗ ೫ (ಸೌಇಇ. IV, [illegible] 1199);

ಆ ಕೆಱೆಯ ಕೆಳಗಿಹ ಗದ್ದೆಯಲ್ಲಿ ಬೀಜವರಿ ಖಂಡುಗ ಗದ್ದೆ ಊರಿ ಬಡಗಲು × × × ನಹ ಹೊಲ ಬೀಜವರಿ ಖಂಡುಗ ಬೆಜಲು ಯಿದನ್ನು ಸರ್ವಮಾನ್ಯವಾಗಿ ಕೊಟ್ಟೆವು (ಎಕ. IX, ಕನ್ನಕ. ೦೬೯-೦೭ ; 1416) ; ಕೆಲವು ಬೀಜಗಳ ವಿನಾ ಮಿಕ್ಕವೆಲ್ಲವನ್ನೂ ಕೈಯಿಂದ ಚೆಲ್ಲುವುದು ವಾಡಿಕೆಯಾಗಿದೆ. ಹೀಗೆ ಚೆಲ್ಲುವುದರಿಂದ ಬೀಜವರಿ ಹೆಚ್ಚಾಗುವುದಲ್ಲದೆ, ಹರತೆ ಮಾಡುವುದು, ಕಳೆ ಕೀಳುವುದು ಮೊದಲಾದ ಕೆಲಸಗಳನ್ನು ಮಾಡಲು ಅಷ್ಟು ಸುಲಭವಾಗಿ ರುವುದಿಲ್ಲ (ವ್ಯವಮು. ೨೦).

[ಬೀಜ + – ವರಿ₂./ ತಮಿ. ಪೀಚವಾರಿ ; ಈ ಶಬ್ದದಲ್ಲಿರುವ ' ವಾರಿ ' ಎಂಬುದು ಉರ್ದುಮೂಲದಿಂದ ಬಂದಿರಬಹುದೇ ? ; ತೆಲು. ಬೀಜು ವರಿ = ಬಿತ್ತನೆಗೆ ಯೋಗ್ಯವಾದ ಮೊಳಕೆ ಬಂದ ಬತ್ತ]

**ಬೀಜವೃಕ್ಷನ್ಯಾಯ** (ನಾ). [ತರ್ಕಶಾ] ಲೌಕಿಕನ್ಯಾಯಗಳಲ್ಲಿ ಒಂದು ; ◆ ಮರವು ಬೀಜದ ಫಲ ಮತ್ತು ಬೀಜವು ಮರದ ಪರಿಣಾಮ. ಇವು ಪರಸ್ಪರ ಕಾರಣ ಮತ್ತು ಫಲವಾದುದರಿಂದ ಇವುಗಳಲ್ಲಿ ಯಾವುದು ಮೊದಲೆಂದು ನಿರ್ಧರಿಸುವುದು ಅಸಾಧ್ಯ : ಈ ಶರಣ ಲಿಂಗ ಎರಡಕ್ಕೂ ಬೀಜವೃಕ್ಷನ್ಯಾಯದ ಹಾಂಗಲ್ಲದೆ ಭಿನ್ನವಿಲ್ಲ (ಸಿದ್ಧೇವ. ೦೩-೩೯); ಬೀಜವೃಕ್ಷನ್ಯಾಯವಿದ ಭೇದಿಸುವವರಾರಿನ್ನು (ಹಂಸಾ. ೯೩) ; ಬೀಜವೃಕ್ಷನ್ಯಾಯವನ್ನು ನೋಡಿ. ಬೀಜದಿಂದ ಅಂಕುರವು ಹೊರಟಾಗಲೇ ಎಲೆ ಕಡ್ಡಿಗಳಾಗಿ ಮೊರಡುವುದು (ಮುಹಾಜ. ೩೦೯). ' ಬೀಜಾಂಕುರ ನ್ಯಾಯ ' ಪರಾ. [ಸಂ.]

**ಬೀಜವೊನ್ನು**, ಬೀಜಹೊನ್ನು (ನಾ). ಮೂಲಧನ ; ಅಸಲು ; ಬಂಡವಾಳ : ಅಧಿಕಾಲೋಗಣೆಗೆ ಹೊಂಗೆ ಹಾಗವೊಂದ ವೃದ್ಧಿಯಂ ಬೀಜವೊಂನಾಗಿ ಮಹಾಜನಂಗಳಿಗೆ ನಡಸುವಂತಾಗಿ ಕೊಟ್ಟ ಗ ೨ (ವ್ಯಾಆಂ. ೦೯೩೦, ೩-೬ : 1241) ; ನಿಯತಕರವಹ ಸಿದ್ಧಾಯಕೆ ಬೀಜವೊನ್ನನು ಕೊಂಡು (ಎಕ. IV (R), ಹುಣಸೂ. ೯೩-೬ ; ಸು. 14ನೆಯ ಶತ). ಬೀಜ ಹೊನ್ನು : ಈ ಗದೆಯ ಹದಿಕೆ ಗದ್ಯಾಣ ಹತ್ತನು ಬೀಜಹೊಂನಾಗಿ ಹಿರಿಯಪ್ಪನ ಕೈಯಲು ಕೊಂಡು ಅಕರವಾಗಿ ಭೂಮಿಚಂದ್ರರುಳ್ಳನಬರಂ ಸಲುವಾದೆಂದು ಕೊಟ್ಟ ಶಾಸನ (ಎಕ. VI(R), ಶ್ರೀರಂಗ. ೧೦೬-೯ ; ಸು. 13ನೆಯ ಶತ) ; ನಾಗಣಹೆಗ್ಗಡೆ ಬೀಜಹೊಂನ ತೆಗೆದುಕೊಂಡು ತಂನ ಮೂಲದ ಮೇಲೆ ಕುಳಕ್ಕೆ ಬರಸಿ ಕೊಟ್ಟ ಭೂಮಿ (ವ್ಯಾಆಂ. ೦೯೩೯, ೦೯-೦೬ ; 1516). [ಬೀಜ + ಪೊನ್ನು (< ಪೊನ್)]

**ಬೀಜಹೊನ್ನು** 'ಬೀಜವೊನ್ನು' ನೋ.

**ಬೀಜಾಂಕುರನ್ಯಾಯ** (ನಾ). [ತರ್ಕಶಾ] ಒಂದು ಲೌಕಿಕನ್ಯಾಯ ; ಬೀಜ ಮತ್ತು ಚಿಗುರಿನ ನಿತ್ಯಪರಂಪರೆಗೆ ಸಂಬಂಧಪಟ್ಟ ನಿಯಮ; ◆ ಕಾರ್ಯ ಕಾರಣಗಳ ಪರಸ್ಪರ ಅನಿವಾರ್ಯ ಅವಲಂಬನೆಯನ್ನು ಹೇಳುವ ನ್ಯಾಯ. ಬೀಜವು ಚಿಗುರನ್ನು ಉತ್ಪತ್ತಿ ಮಾಡುತ್ತದೆ. ಹಾಗೆಯೇ ಚಿಗುರು ಬೀಜವನ್ನು ಉತ್ಪಾದಿಸುತ್ತದೆ. ಆದುದರಿಂದ ಅವು ಪರಸ್ಪರ ಕಾರಣ ಮತ್ತು ಫಲ : ಆ ವಿರಾಜಿತಭಕ್ತಿಯಿಂದಂ ಪ್ರಸಾದಪ್ರಭಾವಂ ಪ್ರಸಾದದಿಂ ಭಕ್ತಿ ಸಂಭವಿಸಿಪ್ಪುದಾವಗಂ ಬೀಜಾಂಕುರ ನ್ಯಾಯಮೆಂದವನ ಚರಣಾಂಬುಜಕ್ಕೆ ಶರಣು (ಲಿಶಿಅಂ. ೩೯-೦೬) ; ಬೀಜಾಂಕುರನ್ಯಾಯದಿಂದ ಸರ್ವಜ್ಞ ಪರಂಪರೆಯೂ . . . ಪ್ರಪಂಚೋದ್ಧಾರ ಪರಂಪರೆಯೂ ನಡೆಯುತ್ತಮೆಂದು ನಿರ್ಣಯ (ಹಿಂದಸಾ. ೮೯). [ಸಂ.]

**ಬೀಜಾಕೃತ** (ಗು). ೧. ಬಿತ್ತನೆಯಾದ ಮೇಲೆ ಕುಂಟೆ ಹೊಡೆದ : (+). (ನಾ). ೨. ಬಿತ್ತನೆಯಾದ ಮೇಲೆ ಕುಂಟೆ ಹೊಡೆದ ಭೂಮಿ : " ಬೀಜಾಕೃತಂ, ಉಪ್ತಕೃಷ್ಟಂ — ೨ ಮೊದಲು ಬಿತ್ತಿ ಬಳಿಕ ಗೆಯಿದ ಕ್ಷೇತ್ರದ ಹೆಸರುಗಳು " (ಸಿದ್ಧಾಂಶಿ. ೨೬೬). [ಸಂ.]

**ಬೀಜಾಕ್ಷರ** (ನಾ). [ತತ್ತ್ವಶಾ] ಒಂದು ದೈವದ ಉಪಾಸನೆಯ ನಿರ್ದಿಷ್ಟ ಮಂತ್ರದ ಮೂಲಭೂತವಾದ (ಆಧ್ಯಾತ್ಮಿಕ) ಅಕ್ಷರ ; ◆ ಇವುಗಳ ಸಂಖ್ಯೆಯಲ್ಲಿ ವ್ಯತ್ಯಾಸವಿದೆ. "ಬೀಜಾಕ್ಷರ—೩: ಅಕಾರ, ಉಕಾರ, ಮಕಾರ (ಆದಯ್ಯ. ೨೮೯). ಬೀಜಾಕ್ಷರ–೫ : (ಅ) ಪ್ರಣವಬೀಜ, ಮಾಯಾ–, ಜ್ಞಾನಶಕ್ತಿ–, ಇಚ್ಛಾ–, ಕ್ರಿಯಾ– (ಸಾಂಖ್ಯ. ೪೪). (ಆ) ವಾಯುಬೀಜಾಕ್ಷರಗಳು ೧೦, ಅಗ್ನಿಬೀಜಾಕ್ಷರಗಳು ೧೦. ಭೂಮಿ–, ಜಲ–, ಗಗನ— (ವಿದ್ಯಾಕ. ೬೦). (ಇ) ಕ್ಷಿಪ ಓಂ ಸ್ವಾಹಾ (ಖಿಮುದ. ೮೮–೩೪ ವ)" (ಶ್ರೀವತ್ಸ. ೨೯೨) : ಅಕಾರ ಉಕಾರ ಮಕಾರಮೆಂಬ ಬೀಜಾಕ್ಷರಂಗಳಿಂ . . . ನಿತ್ಯಪರಿಪೂರ್ಣತ್ವದಿಂದೆಡದೆಬಿಹಿಲ್ಲ ದಿರ್ಪನಯ್ಯಾ (ಆದಪ. ಮು. ೧೬೯-೨೮೯) ; ಕ್ಷಿಪ ಓಂ ಸ್ವಾಹಾ ಎಂಬೀ ಪಂಚ ಬೀಜಾಕ್ಷರಂಗಳುಂ ಯಥಾಕ್ರಮದಿಂ ಹಾರಿದ್ರಶುಭ್ರಸುವರ್ಣಕೃಷ್ಣಸುರ ಚಾಪನಿಭಂಗಳಪ್ಪುವು (ಖಮುದ. ೯-೩೯ ವ) ; ಆಧಾರಚಕ್ರಸ್ಥಾನದಲ್ಲಿ ನಾಲ್ಕೆಸಳ ಕಮಲದ ವ ಶ ಷ ಸ ಎಂಬ ನಾಲ್ಕು ಬೀಜಾಕ್ಷರದ ಪೃಥ್ವಿತತ್ತ್ವದ ಶೋಣವರ್ಣದ ನೆಲೆಯನಱಿಯಬೇಕಯ್ಯ (ಸಿದ್ಧೇವ. ೩೯-೦೬೩). [ಸಂ.]

**ಬೀಜಾಣು** (ನಾ). ಒಂದು ವಸ್ತುವಿನ ಮೂಲಾಂಶ : ಇವುಗಳಲ್ಲಿ ಯಾವುದನ್ನೇ ಆಗಲಿ ಮತ್ತು ಪಟ್ಟಿಗೆ ಸೇರಿಸಬಹುದಾದ ಇತರ ಅಸಂಖ್ಯಾತ ಪ್ರೇರಣೆಗಳನ್ನಾಗಲಿ ಸಂಪೂರ್ಣ ತೃಪ್ತಿಕರವಾದ ಕಥೆಯೊಂದಕ್ಕೆ ಬೀಜಾಣು ವಾಗಿ ಮಾಡಿಕೊಳ್ಳಬಹುದು (ಸಾಹಿತ್ರ. ೨೯೬). [ಸಂ.]

**ಬೀಜಾಪೂರ** (ನಾ). = ಬೀಜಪೂರ : ತಿಲಕ ಲವಂಗ ಬೀಜಾಪೂರ ಕುಟಜ ಸದಿಕ್ಷು ಖರ್ಜೂರ (ಶಿಭಾಗ. ೯-೩-೦೩). [ < ಬೀಜಪೂರ ]

**ಬೀಜಾವಾಪ** (ನಾ). ೧. ಬೀಜವನ್ನು ಬಿತ್ತುವುದು ; ಬಿತ್ತನೆ : ಅಘದಿಂ ಬೀಜಾವಾಪಮೆನೆ ಜನ್ಮಲತೆಗೆ ಕಲಾಪಿಸ್ತ್ರೀಯುದರದಲ್ಲಿ ವಿಂಧ್ಯ ದೊಳೊಗೆದಂ (ಚುಕೋಚ. ೩-೩೯). ೨. ಅಂಕುರಾರ್ಪಣೆ ಮಾಡುವುದು; ಪ್ರಾರಂಭ : ಸಮಸ್ತಮಂತ್ರಿಸಭಾಭ್ರೂಲತಾಗ್ರಥಿತಾನೇಕನೀತಿಬೀಜಾವಾಪ ವಿಜಿತಸಕಲಾರಾತಿಸಚಿವನಿರಸ್ತಸನ್ಮತಿಯಪ್ಪ ಸನ್ಮತಿಯಿಂತೆಂದಂ (ಶಾಂತಿಪು. ೨-೩೩ ವ) ; ಸಿದ್ಧಿಕನು. . .ತನ್ನ ಕಾರ್ಯಸಾಧನೆಗೆ ಬೀಜಾವಾಪ ಮಾಡಿ ಮನೆಗೆ ಹೊರಟನು (ದಾಂತ್. ೨೮). [ಸಂ.]

**ಬೀಜಾವಾಪನ** (ನಾ). = ಬೀಜಾವಾಪ ೨ : ಆ ರಾಷ್ಟ್ರದಲ್ಲಿ ತಮ್ಮ ಪಂಥದ ಬೀಜಾವಾಪನ ಮಾಡಿದ್ದರು (ಕಥಲಿ. ೬೦೩). [ಸಂ.]

**ಬೀಜಿ** (ಗು). ೧. ಕಾಳುಗಳನ್ನು ಹೊಂದಿರುವ. ೨. ಒಂದು ವಂಶಕ್ಕೆ ಸೇರಿದ. (ನಾ). ೩. ಮೂಲಪುರುಷ ; ಆದ್ಯಪ್ರವರ್ತಕ: ಜಗಮೆಂಬ ವೃಕ್ಷಕ್ಕೆ ಬೀಜಂ ವಿಚಾರಿಸಲ್ ಬೀಜಿಯುಂ ಫಲಭೋಕ್ತೃವುಂ ನೀನೆಯಾಗಿ (ಲಿಶಿಅಂ. ೯-೨೬). [ಸಂ. ಬೀಜಿನ್]

**ಬೀಜಿಗಾಳು** (ನಾ). ಬೀಜರೂಪದ ಕಾಳು : ಹೂ ಹಣ್ಣಿನಲ್ಲಿರುವ ಬೀಜಿಗಾಳೇ ನೀನು ಒಳಹೊಕ್ಕು ಹೊರಗೆ ಬರುವಿ . . . ಬೀಜಿಗಾಳೇ ನೀನು ಗಾಳಿಯಲಿ ತೇಲಿ ಬಹೆ : ನಿನಗಾಗಿ ಜಪ್ಪಿಸಿಹೆನು (ಕಯುಖ. ೦೦೯-೨)

[ಬೀಜಿ + ಕಾಳು₂ (< ಕಾಱು₂)]

**ಬೀಜಿಸು** (ಕ್ರಿ). ಮೊಳಕೆ ಬರು ; ಕುಡಿಯೊಡೆ : ಅಜನ ಪದಮಂ ಸಾರ್ದಿರ್ಪಾ ಜನಮೆಲ್ಲಂ ಕೃತಾರ್ಥರವರಡಿಸೋಂಕಿಂ ಬೀಜಿಸುತೆ ನಿವಿರ್ದ ಪುಳಕವ್ರಾಜಮೆನಲ್ನೆಲ್ಲಿಸಸಿ ಮನಂಗೊಳಿಸಿರ್ಕುಂ (ವೀರಶಿ. ೧-೩೬).

[ಬೀಜ + – ಇಸು₃]

**ಬೀಜ್ಯ** (ಗು). ೧. ಬೀಜದಿಂದ ಉತ್ಪತ್ತಿಯಾದ,—ಹುಟ್ಟಿದ. ೨. ಸದ್ವಂಶದಲ್ಲಿ ಹುಟ್ಟಿದ ; ಸತ್ಕುಲಪ್ರಸೂತ. [ಸಂ.]

**ಬೀಟ್‌ರೂಟ್** (ನಾ). (ತರಕಾರಿಯಾಗಿ ಹಾಗೂ ಸಕ್ಕರೆ ಮಾಡಲು ಉಪಯೋಗಿಸುವ) ಒಂದು ಬಗೆಯ ಗೆಡ್ಡೆ: ನಮ್ಮಲ್ಲಿ ಸಕ್ಕರೆಯು ಕಬ್ಬಿನಿಂದ ತಯಾರಾಗುವುದು. ಎಷ್ಟೋ ದೇಶಗಳಲ್ಲಿ ಸಿಹಿಯಾದ

ಬೀಟ್‌ರೂಟ್ ಗಡ್ಡೆಯಿಂದ ಅದನ್ನು ತಯಾರಿಸುತ್ತಾರೆ (ಜಾಂಶ್ರ. II, ೬೪೪); ಕೆಲವು ದೇಶಗಳಲ್ಲಿ ಸಕ್ಕರೆ ತಯಾರಿಸುವುದಕ್ಕಾಗಿಯೂ ದನಗಳ ಮೇವಿಗೆಂತಲೂ ಬೀಟ್‌ರೂಟನ್ನು ಬೆಳೆಯುವರಂತೆ (ಕಠಕ. ೩೦).

[←ಇಂ. Beetroot]

**ಬೀಟು** (ನಾ). ೧. ಕಾವಲುದಳದವನು ಮಾಡುವ ಪಹರೆ,—ಗಸ್ತು : ಒಬ್ಬ ಪೋಲಿಸ್ ಕಾನಸ್ಟೇಬಲ್‌ನು ಒಂದು ಗ್ರಾಮಕ್ಕೆ (ಗಸ್ತು) ಬೀಟು ಸಂದಿಸಲು ಬಂದ ಕಾಲದಲ್ಲಿಯಾಗಲಿ . . . ಬೀಟುಬುಕ್ಕಿನಲ್ಲಿ ದಾಖಲ್ ಮಾಡಬೇಕು (ಗ್ರಾಪಾಕ. ೪೩); ರಸ್ತೆಯಲ್ಲಿ ಬೀಟಿನ ಪೋಲಿಸಿನವನನ್ನು ಬಿಟ್ಟು ಯಾರ ಸುಳಿವೂ ಇಲ್ಲ (ಕಾಯಿಕ. ೪೭). ೨. ಪಹರೆಯವನ ಗಸ್ತಿಗೆ ಒಳ ಪಡುವ ಪ್ರದೇಶ : ನಮ್ಮ ಕಚೇರಿಯ ಕ್ಷೇತ್ರದಲ್ಲಿ ನಾಲ್ಕು 'ಬೀಟು' ಗಳಿದ್ದುವು (ಬಂಗಾರ. ೦೬೪). [← ಇಂ. Beat]

**ಬೀಟೆ**$_1$, ಬೀಂಟೆ, ಬೀಡು$_1$, ಬೀಡೆ$_1$ (ನಾ). ಬಿರುಕು; ಸೀಳು ; ಸಂದು : ಕೆಚ್ಚೆ ಬತ್ತಿ ಪೋದುವಿರ್ಪಾವೆಡೆಯೆಂಬಿನಂ ಬಚಿತು ಬೀಟೆಯನಾಳ್ದುದು ಬೆಂಚೆ (ಸೊಕ್ರೆಸು. ೦೦-೯೦); ಮಂದಮತಿಯಾ ಸುಯೋಧನನ್ನಪಂ ಕಗ್ಗಲ್ಲ ಬೀಟೆಯಂದದಿ ಮುನಿಸನು ಒಂದಿನಿಸು ಮುಚ್ಚದಾ ಕಳ್ಳರಂ ನಾಳೆ ನೀಂ ತಂದೊಪ್ಪಿಸೆಂದು . . . ಕಳುಹಿ (ನಮ್ಮಳೌ. ೨-೬೯) ; ಬೀಟೆಯಂದದಿ ಬಾಯ ಬಿಟ್ಟಿರ್ದ ವಜ್ರಕವಾಟಗಳ್ಕೂಡೆ ಮುಚ್ಚಿದುವು (ಕಠಕ. ೬೯-೦೦೯). **ಬೀಂಟೆ** : ತಚಿಟುದಲೆ ಹುರುಪುವೆಯಿ ಮೇಲ್ಬಿರಿದಿಹ ಹಿಮ್ಮಡಿಯ ಭೀಂಟಿ (ವನ್ನಕಾ. ೬-೨೦೪). **ಬೀಡು**$_1$ : ಕಾಡುಜನರು ಇಲಿಗಳನ್ನು ಹಿಡಿಯುವುದಕ್ಕಾಗಿ ನೆಲದ ಬೀಡುಗಳಲ್ಲಿ ಬೆಂಕೀ ಹಾಕುತ್ತಾರೆ (ಕುಂಬಯಿ. ೩-೪). 'ಬೀಡುಗಾಲು' ಪರಾ. **ಬೀಡೆ**$_1$ : "ಬೀಡೆಯೆನೆ ಬಿರುಕೆನಿಕ್ಕುಂ" (ಅಭ್ಕಕ್ಕೆ. ೬೬) ; ನೆರಪಿ ಮಧುಕಂ . . . ಜಾಜೆಂಬಿವನಿಟ್ಟೊರಸುತ್ತಿರೆ ಕಾಲ ಬೀಡೆ ಬೇಗಂ ಕಿಡುಗುಂ (ಲೋಕೋಪ. ೯-೦೪೬) ; ಎಳವೆಣ್ಣ ಮೆಯ್ಯ ಕೋಮಲನಬಿರೇವೆಯಂತಿರೆರೆಗೆಯ್ದುಗೊಳ್ಳುದುವು ಕೂಡೆ ಬೀಡೆಗಳ್ (ಜಗಪ. ೦೯-೭) ; ಬೀಡೆಗಳುದ್ದಾಮಂಬೆತ್ತೊಗೆದುವರೆಯು ಕೆಯ್ಗುಳೊಳ್ (ಕುಸುಮಾ. ೭-೩).

ಬೀಟೆ ಬೀಳು = ಬಿರುಕು ಬಿಡು ; ಸೀಳು : ಧೂಳಿನಲ್ಲಿ ತಿರುಗಾಡಿ ಕಾಲು ಬೀಟೆ ಬಿದ್ದಿವೆ (ಊ). [ದೇ.॥ ತಮಿ. ಮಲ. ವೆಟ ; ತೆಲು. ಬೀಟ]

**ಬೀಟೆ**$_2$ (ನಾ). (ಪೀಠೋಪಕರಣಗಳಿಗೆ ಬಳಸುವ) ಒಂದು ಬಗೆಯ ಉತ್ತಮಜಾತಿಯ ಮರ ; ಕರಿಮರ : ಬೀಟೆ, ತೊಟಿಗಟ್ಟ, ಕರೇಪ್ಪಾಡಿ (ವ್ಯಕಿಗಿ. ೨೮-೩೪೪) ; ನಮ್ಮ ಸೋಫಾ ಮತ್ತು ಕುರ್ಚಿಗಳು ಬೀಟೆಯ ಮರದಲ್ಲಿ ಮಾಡಿದವು (ಅರಿವು. ೨೭).

[ದೇ.॥ ತಮಿ. ಈಟ್ಟಿ ; ಮಲ. ವೀಟ್ಟಿ ; ತುಳು. ಬೀಟೆ]

**ಬೀಟೆಗಾಲ್**, ಬೀಡುಗಾಲು, ಬೀಡೆಗಾಲ್ (ನಾ). ಬಿರುಕು ಬಿಟ್ಟಿರುವ ಕಾಲು ; ಒಡೆದಿರುವ ಪಾದ : ಬಿಟ್ಟಿರ್ಪ ಬಾಯ್ ಬೀಟೆ [ಪಾಠಾಂ. ಡೆ] ಗಾಲೊಳೆಪೊಕ್ಕಿರ್ದ ಕಟೀತಟಂ (ಮಹಾಪೇ. ೬-೦೫೩) ; ಕೂನ ಬೆನ್ನ ಕುಗ್ಗಿದ ಕೊರಲ ಬೀಟೆಗಾಲ್ ಜಗ್ಗುನಡೆಯ . . . ವನಚರರಿಂದೆ ವನಮೆಸೆದುದು (ಕಂಠೀ. ೩೪-೨೨). **ಬೀಡುಗಾಲು** : ಕೋಡಗನ ಮುಸುಡಾಗಿ ಬೀಡುಗಾಲ ವಳಾಗಿ ನೋಡುವರಿಗೆಲ್ಲ ನಗೆಯಾಗಿ ಇಂಬಚಿದು ಕೂಡುವಳೆ ಸತಿಯು (ಸರ್ವಜ್ಞ. ೦೭೦೯). **ಬೀಡೆಗಾಲ್** : ಕೆಂದಲೆಯ ಕಾಳಿಗವರ್ಣದ ಬೀಡೆಗಾಲ . . . ಪೇರುರದ ಲುಬ್ಧಕರಿರ್ದರಲಬ್ಧಮಾರ್ದವರ್ (ಪುಷ್ಪಕೃ. ೩-೫೯).

[ಬೀಟೆ$_1$ + ಕಾಲ್$_1$]

**ಬೀಟೆಗೈ** (ನಾ). ಬಿರುಕು ಬಿಟ್ಟಿರುವ ಕೈ : ಮುದುಡುಗುಳಿ ಬೀಟೆಗೈ ಸಲೆ ಕೀಸುವಲ್ಲು ಕೆವಿಗ್ಮಾಸೆ ಬೀಭತ್ಸರಸ ಬಲಿದು ಪುರುಷಾಕಾರವಾದಂತೆ ಶಂಕರಾ ನಂದನೆಯ್ದಿಂದು ನಿಂದಂ (ಶೀಕೃತ. ೩-೯-೦೬). [ಬೀಟೆ$_1$+ಕೈ$_2$ (<ಕೆಯ್$_2$)]

**ಬೀಟೆಬಿರಿ**, ಬೀಡುಬಿರಿ, ಬೀಡೆಬಿರಿ (ಕ್ರಿ). ಬಿರುಕು ಬಿಡು ; ಸೀಳು : ಧರೆ ಬೀಟೆಬಿರಿ[ಪಾಠಾಂ.ಡೆವರಿ]ದುದು ಹೊಲಂ ಕರಿಕುವರಿಯಿತ್ತು (ಸೋಮವತ. ೨-೭೦). **ಬೀಡುಬಿರಿ** : ಜೋಡು ಹಚಿದುದು ಸೀಸಕದ ದಡಿ ಬೀಡುಬಿರಿ ದುದು ತಲೆಯ ಚಿಪ್ಪಿನ ಜೋಡು ಜಚಿದುದು ಮನಕೆ ಸುರಿದುದು ಸೊಗಡು ರಣರಭಸ (ಕುವ್ಯಾಕ. ೦೯-೩೭). **ಬೀಡೆಬಿರಿ** : ಶಾಂಭವಬಾಣವಂ ಹೆದೆಗೆ ಹೂಡಲ್ . . . ಅದ್ರಿಗಳ ತತಿ ಬೀಡೆಬಿರಿದುದು (ಕಿರಾತ. ೧೦-೩೦).

[ಬೀಟೆ$_1$ + ಬಿರಿ$_1$]

**ಬೀಟೆವರಿ**, ಬೀಡೆವರಿ (ಕ್ರಿ). ಬಿರುಕು ದೊಡ್ಡದಾಗು ; ದೊಡ್ಡ ಸೀಳುಂಟಾಗು : ಬೀಟೆವರಿದಿರ್ದ ಮಡಂ ಸೆರೆಗೊಂಡ ಕಾಲ್ಗಳಿಂ ಮನಕೆ ವಿರಕ್ತಿಯಂ ಪಡೆವ ಮುಪ್ಪಿನ ಪಾರ್ವನದೊರ್ಬನೊಪ್ಪಿದಂ (ಪುಣ್ಯಾಸ್ತ್ರ. ೬-೫೦) ; ಬೀಟೆವರಿ [ಪಾಠಾಂ. ಬಿರಿ]ದ ಕಾಲ್ಹೊಲ್ಲ ಗಲ್ಲಂ ವಿಸುಪ ವೃದ್ಧ ವನಚರಿಯೊರ್ವಳಾ ಪಣ್ಗಳಂ ಸವಿದು . . . ಏಚುಂಜವ್ವನಂಬಡೆದಳು (ನಮ್ಮಳೌ. ೦೦-೪೩). **ಬೀಡೆವರಿ** : ಬೀಡೆವರಿದುವು ನಿರಂತರೋತ್ತಪನ ತಾಪದಿಂ ಪೆರ್ಗೆಚಿಗಳ್(ಶಂಬರಮಾ. ೭-೫೪); ವಾರಿಯಚಿತಾ ತಟಾಕಂ ಬೀಡೆ ವರಿದುದೇನೆಂಬೆ ಬೇಸಗೆಯುಗ್ರಮಂ (ಕಾಪಕಂ. ೩-೭). [ಬೀಟೆ$_1$ + ಪರಿ$_2$]

**ಬೀಟೆಸೆಳೆ**, ಬೀಡುಸೆಳೆ (ಕ್ರಿ). =ಬೀಟೆಬಿರಿ : ಕಟ್ಟೆ ಕಾಲ್ಗಳಾ ಚಕ್ರವುದಿಂಗಿ ಬೀಟೆಸೆಳೆಯಲ್ ಪೊಳೆ ವಳ್ಳವುದುಂ ಜಳಂಗಳಂ ವಿಕ್ರಯಿಸಲ್ಕೆ ತಾನಿನಿತು ಮಿಲ್ಲದೆ ಪೋದುದದೇನರಿಷ್ಟಮೋ (ಪಾಠಾಸ್ತ್ರ. ೦-೦೩-೩). **ಬೀಡುಸೆಳೆ** : ಹೊಲಗಳಲ್ಲಿ ಬೀಡುಸೆಳೆಯಲಿಕ್ಕೆ ಹತ್ತಿದ್ದರಿಂದ ಭೂಮಿಯು ಬಿರಿಯು ವದೋ ಏನೋ ಎಂದು ಕೆಲವರು ಹೆದರಿದರು (ಕಗದ್ಯ. ೯೬).

[ಬೀಟೆ$_1$ + ಸೆಳೆ$_1$]

**ಬೀಡ** 'ಬೀಡಾ' ನೋ.

**ಬೀಡಾ**, ಬೀಡ, ವಿಡಾ (ನಾ). ಅಡಿಕೆ, ಸುಣ್ಣ ಮುಂತಾದುವನ್ನು ಹಾಕಿ ಸಿದ್ಧಪಡಿಸಿದ ವೀಳ್ಯ ; ಪಾನ್‌ಪಟ್ಟಿ : ಕೊನೆಯಲ್ಲಿ ಎಲ್ಲರೂ ಬೀಡಾ ತರಿಸಿ ಹಾಕಿಕೊಂಡೆವು (ಮುರುಳಿ. ೧೨೦) ; ಇನ್ನು ಕೆಲವರು ಬೀಡಾ, ಬೀಡಿಯಂಗಡಿ, ಚಾದಂಗಡಿ ಇಟ್ಟಿರುವರು (ಕುಟ್ಟಿರೂ. ೩೦). **ಬೀಡ** : ಈ ಬೀಡ ನಾನು ತಯಾರಿಸಿದ್ದು ; ಇದರ ರುಚಿ ಪರಾಂಬರಿಸಬೇಕು ಸ್ವಾಮಿಯವರು (ರಂಗಕ. ೯೦); ಬೀಡವನಡಕಿ ಬಾಯಲ್ಲಿ ಚಿಟಿಕೆಯಲಿ ಮದ್ರಾಸುನಶ್ಯ ಮಿಡಿದು (ಪಡಿಮಂ. ೬೪-೦೨). **ವಿಡಾ** : ಆಚಾರ್ಯರಿಗೆ ಒಂದು ವಿಡಾ ಮಾಡಿಕೊಡು (ಸಮುಜ. ೫೦) ; ಅವಳು . . . ವಿಡಾ ಕಟ್ಟಿ ಧೀರನ ಮುಂದೆ ಹಿಡಿದಳು (ರಕ್ತರ್ಕ. ೨೦೭).

[←ಹಿಂ. ಬೀಡಾ ; ಮರಾ. ವಿಡಾ ; ಬಂಗಾಲಿ. ಬಿಡಾ ; ಸಿಂಧಿ. ಬಿಡೊ./ಪ್ರಾ. ಬೀಡಗ, ವೀಡಗ, ವೀಡಯ./ಸಂ. ವೀಟಿಕಾ]

**ಬೀಡಾಡಿ**, ಬಿಡಾಡಿ (ನಾ). ೧. ಕೆಲಸವಿಲ್ಲದೆ ಅಲೆದಾಡುವವನು ; ಅಪ್ರಯೋಜಕ : ಜೋಡೆಯಲಿ ಜನಿಸಿದತನೀ ಬೀಡಾಡಿ ಕೂಡಿದನು (ಕುವ್ಯಾಅ. ೮-೨೭). ೨. ಕಟ್ಟುಪಾಡಿಗೆ ಒಳಪಡದಿರುವವನು ; ಸ್ವೇಚ್ಛಾಚಾರಿ : ನಾಡೊಳಗೆ ತಾನಿದ್ದಡೆನ್ನನು ಕಾಡುವವು ವಿಷಯಂ ಗಳೆಂದು ನದೀಜಲಾಂತವಲಿ ಓಡಿ ಹೊಕ್ಕಡಗಿರ್ದ ತನ್ನನು ಮಾಡಿದೀ ಪರಿ ಹರಹರಾ ಬೀಡಾಡಿಯನು ಮಧುವಿಷ್ಣುಮಾಯೆಯ ಕಳೆವರಾರು (ಬಿಶಾಗ. ೯-೭-೪೩) ; ಈ ಬೀಡಾಡಿಯ ಬಿಟ್ಟರಾಜ್ಯದಲ್ಲಿ ಅಡ್ಡಹಾದಿ ಹಿಡಿಯದ ಹೊರತು ಬಿಡುಗಡೆ ಹೊಂದುವ ಹಾದಿಯೇ ಇಲ್ಲ (ಹುತ್ತಾಟ. ೬೦). ೩. ಕಟ್ಟುಪಾಡಿಗೆ ಒಳಪಡದಿರುವುದು ; ನಿಯಂಮದ ಉಲ್ಲಂಘನೆ : 'ಬೀಡಾಡಿತನ' ಪರಾ. **ಬಿಡಾಡಿ** : ೧. ಎಲ್ಲಿ ನೋಡಿದರೆ ಕರೆದಡೆ ಓ ಎಂಬಾತನೇ ಬಿಡಾಡಿ (ಸರ್ವವ. ೩೩-೦೭೭). ೩. ಇಂದ್ರಿಯವ ಕಟ್ಟಿ ವಸ್ತುವನಚಿಹಿಹೆನೆಂದಡೆ ಅದು ಕಚಿವ ಹಸುವಲ್ಲ ಇಂದ್ರಿಯವ ಬಿಟ್ಟು ವಸ್ತುವ ಹಿಡಿದಿಹೆನೆಂದಡೆ ಬಿಡಾಡಿಯಲ್ಲ (ಮೋಳಿಗಮಾ. ೦೦೭-೪೨೭). (ಗು). ೪. ಕೆಲಸಕ್ಕೆ ಬಾರದ ; ನಿರುಪಯೋಗಿಯಾದ : ಗೂಢಾರ್ಥ

ವಿಲ್ಲದೆ ವಾಕ್ಯ ಹೇಳಲು ಅಪ್ಪನವರೇನು ಬಿಡಾಡಿ ಸಾಧುವೇ ? (ಗ್ರಾಮಾಯ. ೫೪೭) ; ಕೊನೆಗೆ ಅತ್ಯಂತ ನಿಶ್ಚಿತವಾದ ನಿಕಷ–ಬೀದಿಯು ಬಿಡಾಡಿ ಕೆಲಸಿಗ ನಿಮ್ಮನ್ನು ಕಂಡು ಎದ್ದು ನಿಂತರೆ—ನೀವು ತಿಳಿದುಕೊಳ್ಳಲಾರಿರೋ ? (ಗಾಳಿಹ. ೬೦). [ಬೀಡು$_3$ + — ಆಡಿ$_1$]

**ಬೀಡಾಡಿತನ** (ನಾ). ಕಟ್ಟುಪಾಡಿಗೆ ಒಳಪಡದಿರುವಿಕೆ : ಪುಂಡತನ : ಬಿಡುಬಿಡು ಬೇಡ ಬೀಡಾಡಿತನದಿ ಬಂದು ಹಿಡಿದ ಸೆಣಗನು (ನೇಮಿಸಂ. ೦೯–೯೯). [ಬೀಡಾಡಿ + — ತನ]

**ಬೀಡಾರ**, ಬಿಡಾರ, ಬಿರಾಡ, ಬಿರಾಡು, ಬೀಢಾರ, ವಿರಾಡ (ನಾ). ೧. ನೆಲಸುವ ಸ್ಥಳ; ನೆಲೆ: ನಾರಿಯರು ನಿಖಿಳಾಮರರು ಬೀಡಾರ ಕೈದಿತು (ಕುಮ್ಯಾಅ. ೬–೯೬) ; ಮಾಡಬೇಕಾಮದೆಲ್ಲವ ಮಾಳ್ಪುದೆಂದೀಶ ಬೀಡಾರಕೆ ಸಾಗಿದನು (ಮೋಹತ. ೩೫–೬೫) ; ವಿಜಯಲಕ್ಷ್ಮಿಗೆ ಬೀಡಾರ ವಾದೊಲು ಹರ್ಮ್ಯ ತ್ರಿಜಗಕಚ್ಚರಿಯು ಬೀಡಿಂದುವು (ಕಂಪಿ. ೬–೨೩). ೨. ಮನೆ ; ಗೃಹ ; ನಿವಾಸ : "ಬೀಡಾರಂ ಮನೆ" (ಶಾರಿ. ೯೮) ; ಸಾಕು ಬೀಡಾರಕ್ಕೆ ನೀ ಹೋಗೀಕೆ ನಿನಗಹಳಲ್ಲ (ಕುಮ್ಯಾವಿ. ೨–೦೯). ೩. ಅತಿಥಿಗಳು ಇಳಿದುಕೊಳ್ಳುವುದಕ್ಕಾಗಿ ವ್ಯವಸ್ಥೆ ಮಾಡಿರುವ ಭವನ ; ಅತಿಥಿಗೃಹ : ಧೃತರಾಷ್ಟ್ರಭೂಪಾಲ ಬೆಜಗು ಬಿನ್ನಾಣದಲಿ ಮಕ್ಕಳ ಮರುಳುಮಾಡಿದನೇನ ಹೇಳುವೆನುರಿವನೆಯು ಬೀಡಾರದಲಿ ಬಿಡಿಸಲ್ಕೆ ಮನದಂದ (ಕುಮ್ಯಾಅ. ೯–೬೦) ; ನಮ್ಮ ಮನೆಗಳಿದ್ದು ಬೀಡಾರವೇಕೆಂದು ಸಮ್ಮಾನಿಸಿದರಾಗ ಸಖರು (ಭರತ. ೯೬– ೦೨೩) ; ಬಂದ ರಾಯರನುಚಿತ ವಚನದಿಂ ನುಡಿಸಿ ಕರತಂದು ಬೀಡಾರವಂ ತೋರ್ದು . . . ಮನ್ನಿಸು ತಿರ್ದರಲ್ಲಲ್ಲಿ (ಶ್ರೀರಾಮ. ೫–೩೯). ೪. ಪರಸ್ಥಳದವರು ಇಳಿದುಕೊಳ್ಳುವ ವಸತಿ,–ತಂಗುವ ಸ್ಥಳ ; ತಂಗುದಾಣ : ಪುರದೊಳಗೆ ಹೇರಾಳ ಹಬ್ಬದ ಹರಹಿನಲಿ ಬೀಡಾರ ಭಿಕ್ಷಾಚರಿತರಿಗೆ ದೊರಕುವುದೆ (ಕುಮ್ಯಾಅ. ೦೨–೬); ನೆಗಳ್ದುವಲ್ಲಲ್ಲಿ ಮಯನಿರ್ಮಿತದೊಳಾಗ . . . ಚಾವಡಿ ಹಜಾರ ಹಯ ಗಜಶಾಲೆ ಮುಖ್ಯಬೀಡಾರಂಗಳು (ಪಿಂಪಿಳ. ೯೬–೩೩) ; ಎರಡು ಕೊಟಡಿಗಳು ಮತ್ತು ಕೈಸಾಲೆಗಳಿವೆ. ಜಾತ್ರೆಯಾಗುವಾಗ ಇವೆಲ್ಲ ಸುಬೇದಾರರ ಮತ್ತು ತಾಲ್ಲೂಕಿನ ಉದ್ಯೋಗಸ್ಥರ ಬೀಡಾರವಾಗುತ್ತವೆ (ಸಾವಿತ್ರಿ. ೩೯). ೫. ರಣರಂಗದ ಬಳಿಯ ಶಿಬಿರ, – ಪಾಳೆಯ : ತನ್ನ ಬೀಡಾರದೆಡೆ ಆ ಮಹಾ ಪ್ರಾಣಿಯಿಂ ಭೂತಲಕ್ಕವತರಿಸಿ ...ಕೈಕೊಳುತೆ ಕನ್ಯೆಯರ ಕೈಂಕರ್ಯವಂ ಪೊಕ್ಕಳಾ ರಾಜ್ಞಿ ಭರ್ಮಕರ್ಮಂಗೈದ ರಮ್ಯಪಟಹರ್ಮ್ಯವಂ (ಚಿತ್ರಾಂಗ. ೦೮–೯೮೪). ೬. ವಾಸ್ತವ್ಯ ; ಮೊಕ್ಕಾಮು : ವಿಪ್ರನೊಬ್ಬನ ಭವನದಲಿ ಮಾಡಿದರು ಬೀಡಾರವನು ವಿನಯದಲಿ (ಕುಮ್ಯಾಅ. ೦೦–೩). ೭. ಹಿಂದೆ, ಮನೆಯ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಬಿಟ್ಟೆ ಬೀಡಾರಂ ಹೊಜಿಗೆ . . . ಕಡ್ಡಾಯ ಕೊಟ್ಟು ಗುತ್ತಗೆವಾರ ವುಂಟೆಂದಟ್ಟಿ ನಿನ್ನವರಿಂದವೆನ್ನಂ ಕಟ್ಟಿ ಕುಟ್ಟಿಪುದರಸ ಧರ್ಮವೆ (ಬಸವ. ೨೬–೫೨). **ಬಿಡಾರ**: ೧. ಮರ್ತ್ಯಲೋಕವನೆ ಮಹಾಪ್ರಮಥಬಿಡಾರವ ಮಾಡಿದಾತ ನಮ್ಮ ಬಸವಯ್ಯನು (ಶೀಲವ. ೨೬–೧); ಕಂಚುಗಾಜಿನ ಬಿಡಾರದಂದದಿ ಕಂಚು ಹಿತ್ತಾಳೆ ಪ್ರತಿಮೆಗಳ ನೆರಹಿ (ಕುರಂಡ. ೨–೨೫–೨). ೨. ಸ್ವಾಮಿ ಪುಷ್ಕರಿಣಿಯೊಳ್ ಸ್ನಾನಾದಿ ನಿತ್ಯಕರ್ಮಂಗಳಂ ನೆರವೇರಿಸಿ ಬಿಡಾರಕ್ಕೈದಿ ಶ್ರೀನಿವಾಸನಂ ಸೇವಿಸಲ್ ಪೊರಡಬೇಕೆಂದಿರ್ಪಲ್ಲಿ (ಅಜ್ಞಾಪಿ. ೦೯–೩೦ ವ) ; ರಾಜೀವನೂ ಆತನ ಹೆಂಡತಿಯೂ . . . ಬೇರೊಂದು ಪ್ರತ್ಯೇಕ ಬಿಡಾರದಲ್ಲಿರಲಿ (ಹೊಸಹಹ. ೬೯). ೩. ಸಕಲವಸ್ತುಗಳಿಂದಲೂ ಸೇವಕಜನಗಳಿಂದಲೂ ಸಮೃದ್ಧವಾದ ದಿವ್ಯಮಂದಿರವಂ ಬಿಡಾರವಂ ಮಾಡಿ . . . ಅಲ್ಲಿ ಚಾಣಕ್ಯ ಚಂದ್ರಗುಪ್ತರನ್ನಿಳಿಸಿದಂ (ಮುದ್ರಾಮಂ. ೫೩). ೪. ನಿಮ್ಮ ಬಿಡಾರ ಎಲ್ಲಿ ? (ಕುವರು. ೩೦೩). ೫. ನಾರಾಯಣನ ಬಿಡಾರದ ಮುಂದೆ ಹಜಾರ ಹೊಂಗಳಸವೆತ್ತಿದುವು (ಮೋಹತ. ೩೬–೬೦) ; ಪಾಳೆಯಗಾರರೆಲ್ಲರೂ ತಮ್ಮ ಬಿಡಾರಗಳನ್ನು ಸೇರಿದರು (ದೌಂತ್. ೩೯೨). ೭. ಎಸೆವೊಸಗೆ ಬಿಟ್ಟಿ ಬಿಡಾರ ಎತ್ತು ಗಾ[ಇ] ಮೊದಲಾಗಿ ಅಉದು ಸಲ್ಲ (ಕಇ. I. ೫೩–೨೮; 1433); ಆ ಸ್ಥ[ಳ]ಗದಲು ಇದ್ದ ವೊಕ್ಕಲಿಗೆ ಬಿಟ್ಟಿ ಬಿಡಾರ ಸಲ್ಲದು (ಎಇ. XX, ೯೪–೫೪; 1556). **ಬಿರಾಡ** : ೧. ತನ್ನ ಆಳು–ಕಾಳು ಬಿರಾಡದ ವ್ಯವಸ್ಥೆಯನ್ನೂ ಮಾಡಿಕೊಳ್ಳಲಿ. ಅವನಿಗೆ ವಾಡೆಯಲ್ಲಿ ಇರುವ ಅಧಿಕಾರವಿಲ್ಲ (ದೀಪಹ. II. ೦೦೩). ೭. ಕಾಣಿಕೆ ಖಡ್ಡಾಯ ಬೇಡಿಗೆ ಬಿರಾಡ ಮುಂತಾದ (ಸೌಇಎ. ೦೯೩೦, ೫೩೯–೧೪: 1446) ; ಬಿರಾಡವ ಸರ್ವ್ವಮಾನ್ಯವಾಗಿ ಬಿಡಿಸಿ ಕೊಡಬೇಕೆಂದು ಬಿಂನಹ ಮಾಡಲಾಗಿ (ಸೌಇಇ. XX, ೨೩೯–೮; 1547); ಎಡೆಗೆಡೆಗಿರ್ಪುಡಿಸುವ ತೆಜಿಗೆ ಬೇಡಿಗೆ ಬಿರಾಡ ಬಿಟ್ಟಿಗಳಟ್ಟುಳಿಯಿಂ ಪ್ರಜೆಗಳು ಕಿಡಿಪರ್ (ಚಿಕವಂ. ೬–೫). **ಬಿರಾಡು** : ೧. ಅವಳಿಗೆ ಅನ್ಯ ಬಿರಾಡಾಗುವವರೆಗೆ ಇದು — ಅಂದರೆ — ಅವಳು ರಾತ್ರಿ ಬಂದು, ಬೆಳಗು ಹರಿಯುವ ತನಕ ಇದ್ದು — ಮತ್ತೆ ನಿಷ್ಕ್ರಮಿಸುವದು ನಿರಾಬಂಧವಾಗಿ ಸಾಗಬಹುದಾಗಿತ್ತು (ದೀಪಹ. II, ೧೪೬). ೭. ಯಿದಕೆ ನೀಉ ಪ್ರಾಕು ಕೊಡುವ ಗುತ್ತಿಗೆ ರೊಕ್ಕ ಬಿಟ್ಟಿ ಬಿರಾಡು (ಎಕ. X, ಮೊಳಕಾ. ೬–೦೦ : 1551). **ಬೀಢಾರ** : ೭. ಬಿಟ್ಟಿ ಬೀಢಾರ ಸೇಸೆ ಮರನ ಬಿಟ್ಟಿ ಜೋಡಿ ಗ್ರಾಸ (ಮೈಆರ. ೦೯೪೧, ೩೬–೪೪; 1399); ಹಿರಿಯರ ಮನೆಯಿಂದ ಬಂದ ಬಿಟ್ಟಿ ಬೀಢಾರ ಮರದ ಬಿಟ್ಟಿ (ಎಕ. VII, ಶಿಮೊ. ೭೦–೨೯; 1431). **ವಿರಾಡ** : ೭. ಅರಮನೆಇಂದ ಖಾಣಧಾನ್ಯ ಯೆತ್ತು ತುಪ್ಪ . . . ಮುಂತಾದ ವೆಚ್ಚ ವಿರಾಡವನು ಕುಳಸರದಿಯಲಿ ತೆಜುವೆಉ (ಸೌಇಇ. IX–ii, ೪೩೩–೫೫: 1408); ಗ್ರಾಮದಿಂ ಭಂಡಾರಕ್ಕೆ ತೆತ್ತು ಬಹ ಸಮಸ್ತ ಕುಳವರಿ ವಿರಾಡ ಕಾಣಿಕೆ ಬೇಡಿಗೆ ಹೊಂನು . . . ಎಲ್ಲವನು ಕುಳವ ಕಡಿದು ಬಿಟು (ಎಕ. III (R), ಗುಂಡ್ಲುಪೇ. ೨೬–೦೬: 1506).

**ಬಿಡಾರದ ಊಳಿಗ** = (ರಾಜರು ಅಥವಾ ಅಧಿಕಾರಿಗಳು) ಬೀಡು ಬಿಟ್ಟಾಗ ಮಾಡುವ ಸೇವೆ : ಅರಮನೆಯಲ್ಲಿ ಸಮುಖದೊಳು ನಿತ್ಯ ಕಟ್ಟಳೆಯಲ್ಲಿ ನಡೆಯುವ ಊಳಿಗಗಳು . . . ಹಾವುಗೆಯ ಊಳಿಗ, ಬಿಡಾರದ ಊಳಿಗ . . . ಚಾವಡಿಯ ಕಾವಲ ಊಳಿಗ (ಮಹಾವಂ. I, ೪೩).

[ದೇ.॥ ತಮಿ. ಮಲ. ವೀಟಾರಮ್; ತುಳು. ಬುಡಾರ; ತೆಲು. ಬಿಡಾರ, ಬಿಡಾರು./ಮರಾ. ಬಿಡಾರ್, ಬಿಢಾರ್]

**ಬೀಡಿ** (ನಾ). ಹೊಗೆಸೊಪ್ಪನ್ನು ಹದಮಾಡಿ ಎಲೆಯಲ್ಲಿ ಸುತ್ತಿ ಮಾಡಿದ ಒಂದು ಬಗೆಯ ಸೇದುವ ಬತ್ತಿ ; ಚುಟ್ಟ ; ಹೊಗೆಬತ್ತಿ : ಇಷ್ಟು ಸಣ್ಣಪ್ರಾಯದಲ್ಲೇ ಬೀಡಿ ಸೇದುತ್ತಾನೆ (ತ್ಯಾಗಮ ೦೯೧); ಕೊಡೆಯ ಮರೆಯಲ್ಲಿ ಬೀಡಿ ಹೊತ್ತಿಸಲು ಅನುವಾಗುತ್ತಿತ್ತು (ಮರಳು. ೫೪೩).

**ಬೀಡಿಎಲೆಮರ** = ಬೀಡಿ ಕಟ್ಟಲು ಬಳಸುವ ಎಲೆಗಳನ್ನು ಬಿಡುವ ಒಂದು ಬಗೆಯ ಮರ : ಕಂಬಳಿಕರೀಮರ, ಬೀಡಿಎಲೆಮರ, ತೂಪ್ರ, ತೂಬರೆ (ಮೈಶಿಗ. ೩೦–೬೦೪). [←ಹಿಂ. ಬೀಡೀ]

**ಬೀಡಿಕೆ**, ಬೀಡಿಗೆ (ನಾ). ೧. ನಿವಾಸ ; ವಾಸಸ್ಥಾನ : ಹಂದರಹಾಳು ಕಿತ್ತನಕೆಜ಼ಿ ಬೀಡಿಕೆಯಾಗಿ ಸುಖಸುಖಥಾವಿನೋದದಿ ನಡೆಯುತ್ತ ಮಿರೆ (ಮೈಆರ. ೦೯೩೫, ೨–೨೯ ; 1132) ; ಸತ್ಯದೆಳ್ತರಕೆ ನಿವಾಸಮಾದ ಶಿವಭಕ್ತಿಗೆ ಬೀಡಿಕೆಯಾದ . . . ಪಂಪೆಯನೇಂ ಪೊಗಳಲ್ಕೆ ಬಕರ್ಮೋ (ಶಿರೂಪಾ. ೪೦) ; ದಾನವರ ವನವದು ಮೃತ್ಯುವಿನ ಬೀಡಿಕೆ ಮಹಾಹಿಯು ಹುತ್ತ (ಶಿಭಾಗ. ೦೦–೦೫–೨೩). ೨. ಅತಿಥಿಗಳು ಇಳಿದುಕೊಳುವುದಕ್ಕಾಗಿ ವ್ಯವಸ್ಥೆ ಮಾಡಿರುವ ಭವನ ; ಅತಿಥಿಗೃಹ : ಆತನತಿ ಪ್ರೀತಿಯಂ ಮಾಡಿ ತನ್ನರಮನೆಯ ಸಮೀಪದೊಳ್ ಬೀಡಿಕೆಯಂ ಕುಡೆ ಕುಮಾರನಲ್ಲಿರುತ್ತಂ (ಕುಮ್ಯಾಸ್ರ. ೩–೪೩ ವ) ; ಪ್ರಧಾನಿಗಳಿಂದ ಬೀಳ್ಕೊಂಡು ಶ್ರೀನಿವಾಸನಾಯಕ ತನ್ನ ಬೀಡಿಕೆಯ ಕಡೆ ನಡೆದ (ಹೇಮುಕೂ. ೦೬). ೩. (ಪರಸ್ಥಳದವರು ಇಳಿದುಕೊಳ್ಳುವ) ವಸತಿ ; ಬಿಡದಿ ; ಬಿಡಾರ :

ಮುನಿಗೆ ಬೀಡಿಕೆಯಾಯ್ತು . . . ವರವೈದೇಹನಗರದಲಿ (ತೊರಾ. ೦-೦೨-೨೬) ; ನಂದಾದಿಗಳು . . . ವನದೊಳಗೆ ಬಿಟ್ಟರು ವಿಸ್ತರದ ಬೀಡಿಕೆಯು (ಸಿಭಾಗ. ೦೦-೩೬-೦೪) ; ದೇಶದೇಶದಿಂದ ಬಂದಾರೆ ದೊಂಬಾರು ಬಿಟ್ಟಾರೆ ಬೀಡಿಕೆಯು (ಜಾನಪ. ೪೬). ೪. ಶಿಬಿರ ; ಪಾಳೆಯ ; ಠಾಣ್ಯ : "ನಿವೇಶಃ, ಶಿಬಿರಂ– ಈ ೨ ಬೀಡಿಕೆ" (ಹಲಾಯು. ೬೪-೨೯೮) ; ಬಾಡಿದುತ್ಸಾಹದ ವಿಶಾಳದ ಬೀಡಿಕೆಯು ಬೇಳುವೆಗೆ ಬೆಬ್ಬಳಿವೊದನಾ ಪಾರ್ಥ (ಕುವ್ಯಾ.ಕ. ೦೪-೦೦) ; ಎತ್ತಿದುದು ಯಾದವರ ಬೀಡಿಕೆ ಪೊತ್ತದಲಿ ಹೂಡಿದವು ಭಂಡಿಗೆ (ಸಿಭಾಗ. ೦೦-೬೬-೪೦). ೫. ನೆಲಸುವುದು ; ವಾಸ್ತವ್ಯ ; ಮೊಕ್ಕಾಮು : ಕೂಡ ನೆಱೆ ಚತುರಂಗಬಲದಲಿ ಬೀಡಿಕೆಯು ಕೈಕೊಳ್ಳದಲ್ಲಿಗೆ ಮೂಢ ಬಂದನು ಕೇಡ ಕರೆಯಲು ತನಗೆ ಬೇಗದಲಿ (ಸಂಭಕ. ೨೬-೦೦) ; ಆ ನದಿಯ ಕಂಡಘುವಸೌಖ್ಯಕಿಶಾನು ಪರಿತೋಷದಲಿ ನವಮಗೀ ಸ್ಥಾನವೇ ಸಾಕೆಂದು ನಿಶ್ಚಯಿಸಿದನು ಬೀಡಿಕೆಯು (ತೊರಾ. ೩-೦-೪೬) ; ರೂಢಿಯೊಡೆಯನು ತನಗೆ ಹಳ್ಳಿಯ ಗೌಡನಲಿ ಬೀಡಿಕೆಗೆ ನೆಲನನು ಬೇಡಿಕೊಂಬಂತಾಯ್ತು (ಸಿಭಾಗ. ೮-೦೪-೦೬). **ಬೀಡಿಗೆ :** ೨. ಬಿರ್ದಿನರು ನಮಗವರಾರಯಲ್ಕೆ ಬಡಿಸುವೆನು ಬಾಣಾವಳಿಯ ಬಿಸಿಯಡಿಗೆಗಳನಂತಕನ ಪುರದಲಿ ಕೊಡಿಸುವೆನು ಬೀಡಿಗೆಯು (ಹೂಶವಾ. ೩೬). [ಬೀಡು₂ + — ಇಕೆ]

**ಬೀಡಿಕೆಗೊಳ್ಳು** (ಕ್ರಿ). ತಂಗು ; ಬಿಡಾರ ಮಾಡು : ನಮ್ಮ ಗುಪ್ತಚಾರರು ಅಲ್ಲಿ ಆ ಗಡುವಿನ ಪರ್ಯಂತ ಬೀಡಿಕೆಗೊಂಡಿರುವರು (ಪಟ್ಟಳ. ೦೪೫-೦೨). [ಬೀಡಿಕೆ + ಕೊಳ್ಳು₁ (< ಕೊಳ್₁)]

**ಬೀಡಿಗೆ** ' ಬೀಡಿಕೆ ' ನೋ.

**ಬೀಡಿಳಿ** (ಕ್ರಿ). = ಬೀಡಿಕೆಗೊಳ್ಳು : ಆ ರಣಧೂಳಿಖಾನ . . . ಬಲುವಾದ್ಯರವಕೆ ಒಡೆಯಲು ಬ್ರಹ್ಮಾಂಡ ಚೆನ್ನಪಟ್ಟಣದ ಮುಂಗಡೆ ಬೀಡಿಳಿದನೇ ವೇಳ್ವೆ (ಕಂಪಹ. ೦೨-೬). [ಬೀಡು₂ + ಇಳಿ₁ (< ಇೞಿ)]

**ಬೀಡು₁** ' ಬೀಟೆ₁ ' ನೋ.

**ಬೀಡು₂**, ಬೀಡ್ಕೆ, ಬೀಳ್₂, ಬೀಳು₃, ಬೀಟು₂, ವೀಡು (ನಾ). ೧. ಆವಾಸ ; ನೆಲೆ : ಬಳವೆತ್ತ ಮದನನರಮನೆ ವಸಂತನ ಬೀಡು . . . ಎನಿಪ್ಪ ಕೇಳೀವನಕ್ಕೆಯ್ತಂದನು (ಹಪಕಾ. ೩-೨೬) ; ರೋಷಗ ಬೀಡು ಭೀಮನ ಕಂಡು ಧರ್ಮಜ ಬೇಡಿಕೊಂಡನು ತನ್ನ ಕೊರಳಿನ ಬೆರಳ ಸನ್ನೆಯಲಿ (ಕುವ್ಯಾ.ಸ. ೦೫-೦೫). ೨. ನಿವಾಸ ; ಮನೆ ; ಗೃಹ : "ಮನೆಯೊಳಂ ಬಿಡುವ ಭಾವದೊಳು ಬೀಡಕ್ಕು" (ಕಬ್ಬಮಂ. ೯೫); ದುರ್ಯೋಧನನಂ ಬೀಡಿಂಗೆ ಪೋಗಲ್ವೇೞ್ದು (ಪಂಪಭಾ. ೨-೯೨ ವ); ತಾಂಬೂಲಾದಿ ದಾನಸನ್ಮಾನಪುರಸ್ಸರಮವರ ಪೂರ್ವವೃತ್ತಿಯುಮಂ ಕಮ್ಮವಟ್ಟಿಯುಮನಿತ್ತು ಬೀಡಿಂಗೆಪೋಗಿಮೆಂಬುದುಂ (ಸುಕುಮಾ. ೨-೦೩ ವ). ೩. ತಂಗುದಾಣ; ಬಿಡದಿ; ಬಿಡಾರ; ಅಪರಾಜಿತಂ ಯಥೋಕ್ತಪ್ರತಿಪತ್ತಿಯಿಂ ದೂತನಂ ಬೀಡಿಂಗೆ ಪೋಗಲ್ವೇೞ್ದುಂ (ಶಾಂತಿಪು. ೨-೨೨ ವ). ೪. ವಾಸ್ತವ್ಯ ; ಠಿಕಾಣಿ ; ಮೊಕ್ಕಾಮು : ಬೀಡನೆಲ್ಲಿ ಬಿಡುವಮೆನೆ ನಿಮ್ಮಯ್ಯಂ ಧೃತರಾಷ್ಟ್ರನ ಬೆಸದಲ್ ಮುನ್ನಮೆ ಮಾಡಮಂ ಸಮೆದಿಟ್ಟನಲ್ಲಿಗೆ ಬಿಜಯಂಗೆಯ್ಯಿಮೆನೆ (ಪಂಪಭಾ. ೩-೨ ವ). ೫. ಸೈನ್ಯದ ಶಿಬಿರ,_ ಪಾಳೆಯ : ಎರಡುಂ ಪಡೆಯ ನಾಯಕರಪಹಾರತೂರ್ಯಂಗಳಂ ಬಾಜಿಸಿ ತಮ್ಮ ತಮ್ಮ ಬೀಡುಗಳ್ಗೆ ಪೋದರ್ (ಪಂಪಭಾ. ೦೦-೦೨೪ ವ); ನಿನ್ನ ಮುಳಿಸಿನ ಬೆಂಕೆಯಿಂ ಪೊತ್ತಿ ಪೊಗೆದುರಿವ ಪಗೆವರ ಬೀಡಿನಂತೆ ಸುತ್ತಲುಂ ಪೂತ ಮುಳ್ಮುಟ್ಟುಗದ ಮರಂಗಳೊಳಂ . . . ಬಿನದಕ್ಕೆ ಪಕ್ಕಾದ ಬನಮುಂ ನೋಡಲ್ವೇೞ್ಪುದು (ಕಬ್ಬಿಗಾ. ೮೯) ; ಗುಡಿಗಳನು ಬಿಡಿಸಿದರು ಲೋಹದ ತಡಿಕೆಗಳನಳವಡಿಸಿ ಬೀಡಿನ ನಡುವೆ ರಚಿಸಿದರವನಿಪಾಲನ ರಾಜಮಂದಿರವ (ಕುವ್ಯಾ.ಶ. ೦-೩೦). ೬. ಸ್ಥಳ ; ಜಾಗ; ಭೂಮಿ : ನಡೆವ ಬೀಡಿನೊಳೊಂದೊಟ್ಟೆ ಪೊಲಂಬುಗೆಟ್ಟು ಬಂದಾಡುತ್ತಿರ್ದುದನತಿದೂರದೊಳ್ ಕಂಡು (ಪಂಚತಂ. ೦೪೦-೬); ಗಾಡಿಗನ ನಿರಲೀಸಲಾಗದು ಬೇಡಬೇಡಾವಂದದಿಂದೀ ಬೀಡಿನಲಿ ಹೊಱವಡಿಸಿಯತ್ತಲಿ ತಗುಳುವುದು ಮತವು (ಬಸಪು. ೪೩-೫೨); ಮಲೆಯ ಬೀಡಿನೆದೆಯ ಮೇಲೆ ದಟ್ಟಗಾಡು ಹಬ್ಬಿರೆ (ಅಶೀಕ. ೪೨-೫). ೭. ಸೀಮೆ; ರಾಜ್ಯ ; ಪ್ರಾಂತ್ಯ : ಮಾಗಡಿನಾಡ ರಾಜವ್ಯೊಬಿಲ ಬೀಡಿನೊಳ್ ಸುಖಸಂಕಥಾವಿನೋದದೊಳ್ ಪ್ರಿಥುವೀರಾಜ್ಯಂಗೆಯುತ್ತುಮಿರೆ (ಎಕ. v. ಚಾಗಮಂ. ೫೦-೭; 972); ಅಸುರ ವಿಭಾಡ ನಸುನಗುತುಗ್ರವೈಷ್ಣವಬಾಣವನು ಬೆಸಸೆ . . . ಅಮರರ ಬೀಡಿಗಭಯವ ಕೊಡುತಲಡಗಿಸಿತಾ ಶಿರತ್ರಯವ (ತೊರಾ. ೩-೬-೨೩) ; ನಡೆದುದು ನಾಡು ಬೀಡು ಗುಡಿ ಗೋಪುರಗಳ್ ಪುಡಿಯೇಳೆ (ಚಿಕಪ. ೨-೦೦೫). ೮. ಸೈನ್ಯ ; ಪಡೆ : ಮಹಾಸಾಮಂತರ ಪದಿರ [ಪ]ಱೆಗಳಿಂದಮುಗುರ್ವಾಗೆ ನಡೆವ ಬೀಡಿಂಗೆ ಬೀಡುವಿಡಲ್ ನೆಲನುಂ . . . ಆನೆಗಂಬಕ್ಕೆ ಪೆರ್ಮರಂಗಳುಮಾ ಪಡೆಗೆ ನೆಱೆಯವೆನಿಸಿ (ಪಂಪಭಾ. ೯-೦೦೪ ವ); ದಾಂಟಿದುದು ಕೃಷ್ಣನ ಬೀಡು ಕಳಿಂದಕನ್ಯೆಯಂ (ಜಗಪ. ೦೬-೭೦); ಬೀಡು ನಡೆಯಲಿ ಮುಂದೆ ಮತ್ಸ್ಯನ ನಾಡಿನೊಳು (ಕುವ್ಯಾ.ವಿ. ೪-೨೪). ೯. ಒಕ್ಕಲು : ಮೂವತ್ತಾರು ಬೀಡುಗಳುಂ ಸೆಟ್ಟಿಯರುಂ ಸೆಟ್ಟಿಗುತ್ತರುಂ (ಮುಂಬಾರಾ. IX, ೨೯೮). ೧೦. ಪರಿವಾರ ; ಪರಿಜನ : ಬೀಡಂ ಪೆಱಗೆ ಬಪ್ಪಂತು ನಿಯಮಿಸಿ ಪಯಣದಿಂ ಬಂದು (ಕಾವ್ಯಾಂಶು. ೨೪) : ಪಡೆವಳನಂ ಬರಿಸಿ ಬೀಡೆಲ್ಲಮರ್ಚನಾದ್ರ್ಯಂಬೆರಸು ಪೂಜಿಮಾಡುವಂತೆ ಸಾರೆಂದು ನಿಯಮಿಸಿ (ಧರ್ಮಾಮೃ. ೦-೬೨) ; ಬೀಡು ಕಾಣಿಕೆಯಿತ್ತು ಕಂಡುದು ನಾಡೆ ಕಾಣಿಸಿದನು ಪುರೋಚನ (ಕುವ್ಯಾ.ಆ. ೯-೪೪). ೧೧. ಮರ, ಗಿಡ, ಪೈರು ಮುಂತಾದುವುಗಳು ಒಂದು ಸಲಕ್ಕೆ ಬಿಡುವ ಫಲ, ಫಸಲು ಮುಂತಾದುವು : ಹಣ್ಣು–ಹಂಪಲು, ಕಾಯಿ–ಕಸರು ಮೊದಲಾದುವುಗಳ ಮೊದಲನೆಯ ಬೀಡನ್ನು ಮಠಕ್ಕೆ ಮೀಸಲೆಂದು ನೀಡುತ್ತಾನೆ (ಕನ್ನಚಾ. ೬). ೧೨. (ಹಿಂದೆ ಮನೆಯ ಮೇಲೆ ಹಾಕುತ್ತಿದ್ದ) ಒಂದು ಬಗೆಯ ತೆರಿಗೆ: ಸೆಟ್ಟಿಯರ್ಗಂ ಪನ್ನಸಿಗರ್ಗ್ಗಂ ಗಾವುಣ್ಡಗಳ್ಗಂ ಬಿಟ್ಟಕೊಟ್ಟಣಂ ಬೀಡು ಬೆಸಂ ಪೊಱಗು (ಎಇಇ. IX–೧, ೬೬–೨೬; 992); ವೀರಭದ್ರದುರ್ಗ್ಗದ ಅಗ್ರಹಾರಕ್ಕೆ ತೆಱುವ ಬೀಡು ದೇವಸ್ಥಾನದ ಅರೆವಾಸಿ ಊಳಿಗಮಾನ್ಯ (ಎಕ. III, ಶ್ರೀರಂಗ. ೦೦೦–೦೬೪; 1724). ೧೩. ತೆರೆಯುವುದು; ಬಿಡುವುದು : 'ಕಣ್ಬೀಡು', 'ಕಿಸುಗಣ್ಬೀಡು' ಪರಾ. ೧೪. (ಬಾಣದ) ಎಸೆತ; ಪ್ರಯೋಗ : ಮಾಸಾಳ್ಗಳಂತೆ ಬೀಡೆನುತ್ತುಂ ಹರಕಾಱರಂತೆ ಕಾಸೆನುತ್ತುಂ (ಧರ್ಮಾಮೃ. ೨-೬೦). 'ಅಂಬುವೀಡು' ಪರಾ. **ಬೀಡ್ಕೆ :** ೪. ತತ್ಪುರದ ಭವಿಕತರ ಮಾದ ಮಠದಲ್ಲಿ ಬೀಡೆಯ ಬಿಡಿಸಿ ಸಾಂಗಮನೆ ಸತ್ಕರಿಸುತಂ (ಮಹಾಪು. ೨೬-೯೨). **ಬೀಳ್₂ :** ೨. 'ಬೀಳ್ಕೊಳ್' ಪರಾ. **ಬೀಳು₃ :** ೨. 'ಬೀಳುಕೊಳ್' ಪರಾ. **ಬೀಟು₂ :** ೨. 'ಬೀಟ್ಕೊಳ್' ಪರಾ. ೬. 'ಬಿತ್ತುಬೀಟು' ಪರಾ. **ವೀಡು :** ೨. ರಾಜಪುರುಷರ್ಮ್ಮನೆಗಳೊಳ್ ವೀಡಿಲ್ಲಾದದು ರಾಜದತ್ತಂ ರಾಜಶ್ರಾವಿತಂ ಸಪ್ತಮೆ ಮರ್ಯ್ಯಾದೆ ತಾಂಬ್ರಶಾಸನಂ ಭುಕ್ತಾನುಭೋಗಂ (ಎಇ. XIV, ೦೪೦–೬; 725); ವೀಡಿಲ್ಲಾದದು ಕೊಟಿಲ್ಲಾದದು ತೆಱೆಯುಂ (ಎಇ. XIV, ೦೪೦–೩೦; 725). ೭. ಮಂಡಳಿಸಾಸಿರದೊಳಗಣಕೆಡೆಹಳ್ಳಿಯ ವೀಡಿನೊಳ್ ಸುಖಸಂಕಥಾವಿನೋದದಿಂ ರಾಜ್ಯಂಗೆಯುತ್ತಮಿರಲ್ (ಎಕ. VII, ಶಿಕಪೊ. ೯೬–೦೬; 1113); × × × ಹಳ್ಳಿಯ ವೀಡಿನಲು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಿರೆ (ಎಕ. VII, ಶಿಕಪೊ. ೩೯–೩೬; 1122).

**ಬೀಡುವೀಡು, ಬೀಡುಬೀಡು** (ದ್ವಿರುಕ್ತಿ) : ನಾಳೆ ಕಾಳೆಗಮೆಂದು ಪಡೆವಳರ್ ಪೋಗಿ ಸಾಱೆಮೆಂಬುದುಮವರ್ ಬೀಡುವೀಡುಗಳ್ಗೆಲ್ಲಂ ಸಾಱಿದಾಗಳ್ (ಪಂಪಭಾ. ೦೦-೩೪ ವ) ; ಬೀಡುಬೀಡೊಳಗೆಲ್ಲಮಿಾ ಸಂಭ್ರಮಂ ಕೂಡೆ (ಪಂಚಿರ. ೫-೦೦). **ಬೀಡಂ ಬಿಡಿಸು, ಬೀಡ ಬಿಡಿಸು** = ೧. ಬಿಡಾರ

ಹೂಡುವಂತೆ ಮಾಡು : ತಂಗುವಂತೆ ಮಾಡು : ಕಡುಪಗಲಾದುದು ಬೀಡಂ ಬಿಡಿಸುವುದೀ ಪುಣ್ಯನದಿಯ ತಡಿಯೊಳ್ ದೇವರ್ (ಆದಿಪು. ೧೧-೬೭): ಮಧುಸೂದನಂ ಮಧ್ಯಮಾರ್ಗದೊಳೊಂದು ಕೊಳಸಿರಲ್ಕಲ್ಲಿ ಬೀಡಂ ಬಿಡಿಸಿ ನಸುನಗುತೆ ರುಕ್ಮಿಣಿಯೊಳಿಂತೆಂದನು (ಜೈಮಿಭಾ. ೭-೮). ೨. ದಂಡಿನ ಠಾಣ್ಯವನ್ನು ಹೂಡು ; ಪಾಳೆಯ ಹೂಡು : ಶರಧಿಯ ಗಾಡಿಕೆಯು ಕಳಿದೆಂತು ಮುಂದಕೆ ಬೀಡ ಬಿಡಿಸುವೆವೆಂತು ಲಂಕಾಪುರವನೀಕ್ಷಿಪೆವು (ತೊರಾ. ೫-೧-೦೯). **ಬೀಡಂ ಬಿಡು, ಬೀಡ ಬಿಡು** = ೧. ವಸತಿ ಮಾಡು ; ತಂಗು : ಆರಾನುಂ ಬಟ್ಟೆವೋಪರ್ ಬೀಡಂ ಬಿಟ್ಟಿರ್ದರ್ ನಿಜಿಸಿಂ ವರಪ್ಪುದಟಿಂದೆ ಚರಿಗೆವುಗುವುದೆಂದೊಡೆ (ವಡ್ಡಾರಾ. ೬೯-೫) ; ಚತುರ್ವೇದ ಪಾರಗರ ಮನೆಯ ಮುಂದಣ ಚತುಶ್ಶಾಲೆಯೊಳ್ ಬೀಡಂ ಬಿಟ್ಟು ಧರಾಮರವೇಷದೊಳೊಂದುವರುಷಮಿರ್ಪನ್ನೆಗಂ (ಶಂಶಭಾ. ೩-೨೨ ವ) ; ಬಸದೊಳಗೆ ಬೀಡ ಬಿಟ್ಟ ನಿಮಿತ್ತವನ್ಯಾಯಕೋಟಿಯುಂ ಮಾಡಿ . . . ಮಾತ್ತೀಗ ಬೇಡ ಕೋಪವನುಡುಗು ತಂದೆಯೆಂದಡೆ ನಿನ್ನ ಕೋಡ ಕೊಜಿಯದೆ ಬಜಿದೆ ಬಿಟ್ಟಪೆನೆ (ಹಕಳಾ. ೮-೨೦). ೨. (ದಂಡಿನ) ಠಾಣ್ಯವನ್ನು ಹೂಡು; (ಸೈನ್ಯದ) ಶಿಬಿರವನ್ನು ಹಾಕು : ದುರ್ಯೋಧನಂ . . . ಕುರುಕ್ಷೇತ್ರದ ಪೂರ್ವದಿಗ್ಭಾಗದೊಳ್ ಪ್ರಳಯಂ ಮೂರಿವಿಟ್ಟಂತೆ ಬೀಡಂ ಬಿಟ್ಟು (ಶಂಶಭಾ. ೧೧-೩೦ ವ); ಇರುಳೆಲ್ಲಂ ಬಂದು ಬೀಡಂ ಬಿಡುವ ಕಟಕಮಂ ಕಂಡನಾಗಳ್ ನರೇಂದ್ರಂ (ಕಾದಂಉ. ೪೩೨); ಹಿಂಗದೆ ತಳತಂತ್ರಸಹಿತ್ಯೈದಿ ನೆಜಿ ಶಿವಗಂಗೆಯೊಳಗೆ ಬೀಡ ಬಿಟ್ಟ (ಕಂವಿ. ೧೦-೫೭). **ಬೀಡನೆತ್ತು** = ಬಿಡಾರವನ್ನು ತೆಗೆ : ಮಱುದಿವಸಂ ಬೀಡನೆತ್ತಿ ಕತಿಪಯ ಪಯಣಂಬೋಗಿ (ರವರ್ಣಕ್ಕು. ೧-೨೦೬); ತೊಳಪ ಜಿನಚೈತ್ಯಾಲಯಂಗಳ ನಳವಿಗಳಿದತಿಭಕ್ತಿಯಲಿ ತಾನೊಲಿದು ಪೂಜಿಸಿ ಬೀಡನೆತ್ತಿದನು (ಸಾಳ್ವಭಾ. ೦೯-೨೦). **ಬೀಡಿನ ಮನೆ** = ಅತಿಥಿಗಳು ಇಳಿದುಕೊಳ್ಳುವ ಸ್ಥಳ ; ವಸತಿ; ಬಿಡಾರ : ನಿನಗೆ ಸಾಕಿನ್ನೇಕೆ ಬೀಡಿನ ಮನೆ ವೃಥಾ ಬೇಜಿೊಂದು ಸಂಕಲ್ಪನೆಯ ಬಿಡು (ಶ್ರುಖಲೀ. ೫-೩೦).

[ ದೇ.॥ ತಮಿ. ಮಲ. ವೀಟು; ತುಳು. ಬೀಡು ; ತೆಲು. ವೀಡು ]

- **ಬೀಡು$_3$, ಬೀಳ್$_3$, ಬೀಳು$_4$, ಬೀಟಿರ್$_3$** (ನಾ). ೧. ನಿಷ್ಪ್ರಯೋಜಕವಾದುದು ; ನಿರರ್ಥಕವಾದುದು : "ಬೀತುದೆನೆ ಬೀಕಲೆನೆ ಬೀಡಾದುವಕೆ" (ಕಜಿ. ೮೦). 'ಬೀಡಾಡಿ' ಪರಾ. ೨. ಸಾಗುವಳಿಯಿಲ್ಲದ ಭೂಮಿ ; ಬಂಜರುನೆಲ: 'ಬೀಡು ಪ್ರದೇಶ' ಪರಾ. **ಬೀಳ್$_3$:** ೩. ಅಲ್ಪವಾದುದು; ಕ್ಷುದ್ರವಾದಂದು : 'ಬೀಳಾಸೆ' ಪರಾ. ೪. ತಪ್ಪು; ದೋಷ : ಪತ್ರಿಕೆಯೊಳಿಡಹಿ ಬರೆದಕ್ಕರದ ಬೀಳಿರ್ದೊಡದಜಿಂದೆ ಕೆಡುವುದಗ್ಗದ ಕಜ್ಜಂ (ಕೈಬಿಶಾ. ೩೦-೨೭). **ಬೀಳು$_4$:** ೧. ಹೆಂಗೆಯ ನೋವಿನ ಹುಯಿಲುಗಳೆಲ್ಲಂ ಮಕ್ಕಳ್ ಪುಟ್ಟದೆ ಬರಿ ಬೀಳೆಲ್ಲಂ (ಮೂರುನಾ. ೦೦೩-೨೦೪); ಕಗ್ಗಂಟಾಗಿ ಪರಿಣಮಿಸಿದರೆ ಅಸಂತೋಷ! ಬಾಳೇ ಬೀಳು (ಚಂದುಟಿ. ೪೫). ೨. ಹುಲುಗಲಯಾಯ್ಚಗಾವುಣ್ಣ ಬಿಟ್ಟ ತೋಟ ಸಲಕಾಲ ಬೀಳಾಗಿರಲು (ಸೌಇಇ. XI–ii, ೦೫೮–೩೬; 1109); ಗುತ್ತಿಯ ದಾರಿಯ ಬೀಳು ೧೩ ಸಿಂಗಟಗೆರೆ ಬೀಳು (ಎಕ. VIII, ಸೊರಬ. ೪೭೫–೨೦; 1577) ; ಮನೆಯೆಲ್ಲ ಹಾಳು, ನೆಲವೆಲ್ಲ ಬೀಳು, ಈ ಬಾಳು ಗೋಳು ಗೋಳು (ಚಂದ್ರಮೂ.೩-೭). 'ಬೀಳುದಂಡು', 'ಬೀಳಂಭೂಮಿ' ಪರಾ. ೩. ಪೇಳಲಿನ್ನೆನಿತದುರಿಗರಿದರು ಬೀಳ ನುಡಿವದ ಬಿಡದ ಪಕ್ಷವ ತಾಳಿದಳು ಏನಾದಡುಳಿವೆಯ ನಿಮ್ಮ ನೃಪಸುತೆಗೆ (ಜಿರಾಮೂ. ೦೭-೭೭) ; ಅರಿಯಾ ಬಗೆಯುಂ ಬೀಳೆಂದಾವುದಂ ಕಾಯದೆಳ್ಚರು ಉಯ್ಯಾತಂ ಕಾಗೊಳಿಲ್ಲಾದನಲೆಪಂ ಕುರುಡಂಬೊಲೆ (ಸೌಶಂಡ. ೦೪-೩೯); ಹಾಳರ್ಧ ಹೊಲೆಯರೆಂದೂ ಬೀಳರ್ಧ ಹೆಣ್ಣು ಎಂದೂ ಹೋಳು ಹೋಳಾಗಿಹುದು (ಗಂ. ೫೨-೭). ೫. ಹೀನಸ್ಥಿತಿ : ಹೆಂಗುಸರಾಗಿರುವುದರಿಂದ ನಮಗೆ ಅಗೌರವ, ನಮ್ಮ ಬೀಳು (ಪಿಬಂಧ. II, ೨೦೫). ೬. ಹಾಳು; ಶೂನ್ಯ : 'ಬೀಳುವಳ್ಳಿ' ಪರಾ. **ಬೀಟಿರ್$_3$ :** ೨. ಬೀಟ್ಕಳ್, ಬೀಡುಗಳ್, ಬೀಟ್ಗಳ್ (ಶಬ್ದಾಮ. ೨೩೩ ಪ್ರಯೋ). 'ಬೀಟ್ಕಿಲ' ಪರಾ. ೬. 'ಬೀಟ್ಬಿಡಿಸು' ಪರಾ.

**ಬೀಡು ಬೀಳು, ಬೀಳು ಬೀಳು** = (ನೆಲವು) ಹಾಳಂ ಬೀಳು : ಬಂಜರಾಗು : (೬) ; ಹೀಗೆ ಹೊಲಗಳೆಲ್ಲ ಕರಿಕೆಯನ್ನು ಬೆಳೆಯಿಸಿಕೊಂಡು ನಿಂತರೆ ಕೆಲವು ದಿನಗಳಲ್ಲಿ ಅವು ಬೀಳು ಬೀಳುವಂತಾದೀತು! (ಮಾಕೃಮ. ೪೦): ಐದು ವರ್ಷಗಳೊಳಗೆ ೧೫ ಚದರ ಮೈಲಿ ವಿಸ್ತೀರ್ಣ ಬೆಂಗಾಡಾಗಿ ಬೀಳು ಬಿದ್ದಿತು (ಹಸುಹೊ. ೨೨). **ಬೀಳ ಮಾತು** = ಅಲ್ಪವಾದ ಮಾತು : ಬೀಳ ಮಾತಿಗೆ ಬೆದರಿ ನಿಲುವರೆ (ಉದ್ಯೋಕ್ರ. ೧-೫-೭).

[ದೇ.॥ ತಮಿ. ಪೀಟು; ತೆಲು. ಬೀಡು, ಬೀರು]

**ಬೀಡು$_4$** (ನಾ). ಎರಕ ಹೊಯ್ದ ಕಬ್ಬಿಣ ; ತಾಂಡವಾಳ : ಈ ರೀತಿಯಿಂದ ಬೀಡು ಅಂದರೆ ಹೊಯಿದ ಕಬ್ಬಿಣವು ಹುಟ್ಟುವದು (ಮುಂಬಿಯು. ೬-೦೯); ಈ ಕೊಳವೆಗಳನ್ನು ಬೀಡೆಂಬ ಹೊಯ್ದ ಕಬ್ಬಿಣದಿಂದ ಮಾಡಿರುವ ಕಾರಣ (ಮುಂಬಿಯು. ೬-೩೫೫).

[←ಮರಾ. ಬೀಡ್ ; ತುಳು. ಬೀಡು. ಬೀತ್ ; ತೆಲು. ಬೀಡು]

**ಬೀಡುಂದಾಣ, ಬೀಡುದಾಣ, ಬೀಟುಂದಾಣ, ಬೀಟ್ದಾಣ** (ನಾ). ೧. ಬಿಡಾರ ಮಾಡುವ ಸ್ಥಳ ; ವಿಶ್ರಾಂತಿ ಪಡೆಯುವ ಸ್ಥಳ ; ತಂಗುದಾಣ : ನಾಡೊಳ್ ನಗರಗ್ರಾಮಂಖೇಡಂಖರ್ವಡಮಡಂಬ ಪತ್ತನಮೆಂಬೀ ಬೀಡುಂದಾಣದೊಳೆಲ್ಲಿಯು ನೋಡುತ್ತುಂ (ಅಪಂಪು. ೧೧-೫೮); ತನಗೆ ಬೀಡುಂದಾಣಮಾದ ಮಾಡದ ಪೆಜಗಣ ನಂದನವನದ ಮಾಕಂದಭೂರುಹದ ಮಂದಚ್ಛಾಯೆಯೊಳ್ (ಅನಂಪು. ೧೧-೨೯ ವ) **ಬೀಡುದಾಣ :** ೧. ಬೀಡುದಾಣಂಗಳೊಳಿಕ್ಕಿದ ಬಳ್ಳಿಗಾವಣಂಗಳೊಳಂ ನನೆಯ ಜೊಂಪಂಗಳೊಳಂ ವಿಶ್ರಮಿಸುತ್ತುಂ ಬಂದು (ಶಂಶಭಾ. ೨-೯೭ ವ); ರಾಜಮಂದಿರಮಂ ಪೊಕ್ಕು ಸಕಲರಾಜಲೋಕಮಂ ಬೀಡುದಾಣಂಗಳ್ಗೆ ಪೋಗಲ್ವೇಟ್ಟು (ಕಾದಂಉ. ೪೫೪) ; ಮಯ ರಚಿಸಿದ ಬೀಡುದಾಣದ ಕೆಲದೊಳಾನೆಯ ನಿಲಿಸಿದನವನೀಶ (ಭರತ. ೨೨-೬೩). ೨. ನಿವಾಸ ; ನೆಲೆ : ವಿವೇಕದ ಬೀಡುದಾಣವಾಪ್ಪಿ ನ ಕಣಿಯೆನ್ದು ಬಣ್ಣಪುದು ಭೂವಳಯಂ (ಎಕ. VII, ಶಿಕಾರಿ. ೦೨೪–೨೮; 1077) : ಜಗಮೆಲ್ಲಮನುಡುಗಿ ಸುಡುವ ಕಲ್ಪಾಂತಹುತವಹಂಗಿದಜಿ ಕಣ್ಬೇಡೆ ಬೀಡುದಾಣವೆಂಬಂತೆ ಕೆಂಪಡರ್ದು ಕೆಂಡಮಂ ಕೇಸುರಿಯನುಗುಟ್ವ ಕಣ್ಗಳುಂ . . . ಭಯಂಕರಮಪ್ಪಿನಂ ಬಂದು (ಜಗಪಿ. ೬-೪೦ ವ). **ಬೀಟುಂದಾಣ :** ೧. ವಿಮಾನಂಬುಟು . . . ಬೀಟುಂದಾಣಂ (ಶಬ್ದಾಮ. ೫೫ ಪ್ರಯೋ). **ಬೀಟ್ದಾಣ :** ೧. ಬೀಡು + ತಾಣಂ, ಬೀಟ್ದಾಣಂ (ಶಬ್ದಾಮ. ೮೨ ಪ್ರಯೋ). [ಬೀಡು$_2$ + ತಾಣ]

**ಬೀಡುಕಬ್ಬಿಣ** (ನಾ). ಎರಕ ಹೊಯ್ದ ಕಬ್ಬಿಣ : ತಾಂಡವಾಳ : ಎರಡನೆಯ ಮಹಾಯುದ್ಧದಿಂದೀಚೆಗೆ ವಿದ್ಯುಚ್ಛಕ್ತಿಯ ಉಪಯೋಗದಿಂದ ಬೀಡುಕಬ್ಬಿಣ ತಯಾರಾಗುತ್ತಿದೆ (ಕವಿಕೋ. III, ೮೭೬).

[ಬೀಡು$_4$ + ಕಬ್ಬಿಣ (<ಕರ್ಬೊನ್)]

**ಬೀಡುಕಾಜಿ** (ನಾ). ಪಾಳೆಯದಲ್ಲಿರುವ ಸೈನಿಕ : ಹೊಮ್ಮಾಡಿಗೆಯ ಹೊದಜಿಗಳ ಬಿರುದಿನ ಬೀಡು[ಪಾಠಾಂ. ಗಾಡಿ]ಕಾಜಿರು ಬೀದಿವರಿದಟ್ಟಿದರು ಬಲಿಮುಖರ (ತೊರಾ. ೬-೩೭-೦೧). [ಬೀಡು$_2$ + –ಕಾಜಿ]

**ಬೀಡುಕೊಳ್** 'ಬೀಡುಗೊಳ್' ನೋ.

**ಬೀಡುಗಲಹ** (ನಾ). ಬೀಡಿನಲ್ಲಿ ನಡೆಯುವ ಕಲಹ ; ಒಳಜಗಳ : ಬೀಡುಗಲಹದ ಕೈದೊಳಸು ಕೊಂಡೆಸಗಿ ನಟಿಸಿತು ನಾಡುನಾಡಿನಲಿ (ಕುವ್ಯಾಉ. ೮-೨). [ ಬೀಡು$_2$ + ಕಲಹ ]

**ಬೀಡುಗಾಲು** 'ಬೀಟೆಗಾಲ್' ನೋ.

**ಬೀಡುಗೆಯ್** (ಕ್ರಿ). ವಸತಿ ಮಾಡು : ತಂಗು : ತೃಣಜಲಸಮೃದ್ಧಮಾದೆಡೆಯೊಳ್ ಬೀಡುಗೆಯ್ದು (ಕಾದಂಬ. ೫೦೦). [ಬೀಡು$_2$ + ಕೆಯ್$_1$]

**ಬೀಡುಗೊಳ್**, ಬೀಡುಕೊಳ್, ಬೀಡುಗೊಳು, ಬೀಳುಕೊಳ್, ಬೀಳುಗೊಳ್, ಬೀಳ್ಕೊಳ್, ಬೀಳ್ಕೊಳು, ಬೀಳ್ಕೊಳ್ಳು, ಬೀಟ್ಕೊಳ್ (ಕ್ರಿ). ೧. ವಸತಿ ಹೂಡು ; ಬಿಡಾರ ಮಾಡು ; ತಂಗು : ಬಿಡಬೇಡಣ್ಣಲೆ ಬೀಡುಗೊಳ್ವೊಡೆನಸುಂ ಕಣ್ಗಾಣಳೆಮ್ಮತ್ತೆ ನೋಟ್ಪಡೆ ಮಾವಂ ಶತವೃದ್ಧಂ . . . ಎಂದತಿಜಾತಿಜಾರೆ ನುಡಿದಳ್ ಜಾರಂಗೆ ವಕ್ರೋಕ್ತಿಯಿಂ (ಸೂಕ್ತಿಸು. ೯-೧೩೯). ೨. ಶಿಬಿರವನ್ನು ಹಾಕು ; ಠಾಣ್ಯ ಹೂಡು : ಬೀಡುಗೊಂಡಿರ್ದ ಕತ್ತಲೆಯ ಪಾಳೆಯಮೆತ್ತಲೋಡಿದುದೊ ನೋಡಿದಪೆನು (ಕೈಬಿಭಾ. ೨-೬೫). **ಬೀಡುಕೊಳ್** : ೩. (ಮನೆಯಿಂದ) ಹೊರಡಲು ನಿರೂಪವನ್ನು ತೆಗೆದುಕೊಳ್ಳು ; ಮುಂದೆ ಸಾಗಲು ಅಪ್ಪಣೆ ತೆಗೆದುಕೊಳ್ಳು : "ಬೀಡುಕೊಂಡಂ_ಬೀಟ್ಕೊಂಡಂ" (ಶಮದ. ೧೯ ಪ್ರಯೋ). ೪. ಹೋಗಲು ಅನುವು ಮಾಡು; ಕಳಿಸಿ ಕೊಡು : "ಬಿಡುಗೆ ಬೀಡುಕೊಳ್ಳೆಂಬುದದು ಬೀಟ್ಕೊಳ್ಳೆನಿಕ್ಕುಂ" (ಸಂಜೀವ. ೨೨). **ಬೀಡುಗೊಳು** : ೧. ನಾನಾನಾಡುಗಳಿಂದೆ ಬಿಜ್ಜೆವಳರುಂ ಕೈಗೆಯ್ತುದೊಳ್ಜಾಣರುಂ ತೇನಂತೇನವೆ ಬಂದು ಬೀಡುಗೊಳುತಂ ಮೈಸೂರಿನಲ್ಲಿರ್ಪುಗೊಂಡು (ಮೈಸೂವು. ೧-೩೯). **ಬೀಳುಕೊಳ್** : ೩. ನೃಪತಿಯು ಬೀಳುಕೊಂಡಿನನಂದನನು . . . ಕುರುಭೂಮಿಗೈತಂದ (ಕುಮಾದ್ರೋ. ೧-೧೯) ; ಬೀಳುಕೊಂಡನು ಮುನಿ ಬಳಿಕ ಭೂಪಾಲಕನ ಹರುಷದಲಿ ತನ್ನೃಪಬಾಲಕರು ಸಹಿತ (ತೊರರಾ. ೧-೯-೪೩). ೪. ಲಕ್ಷ್ಮೀಪತಿಯು ಕಮಲಜ ಬೀಳುಕೊಂಡನು (ಸಂಭಕ. ೬-೫೦); ಭೂಪಾಲನನು ತಿಳುಹಿದ ದ್ವಿಜೋತ್ತಮ ಬೀಳುಕೊಂಡನು (ಶಿಭಾಗ. ೧೧-೧೬-೫೦). ೫. ಬಿಟ್ಟು ಹೊರಡು : ಶಾಲಿಹೋತ್ರಾಶ್ರಮವನನಿಬರು ಬೀಳುಕೊಂಡರು ಮತ್ತೆ ಕಂಡರು ಬಾದರಾಯಣನ (ಕುಮಾಅ. ೧೧-೧). ೬. ಇಲ್ಲವಾಗು ; ಕಳೆದು ಹೋಗು : ಕೀಳು ಮೇಲಿನ ಸೀಮೆ ನಿನ್ನಲಿ ಬೀಳುಕೊಂಡುದು (ಕುಮಾಕ. ೫-೨೩). **ಬೀಳುಗೊಳ್** : ೩. ನಾನೀ ಬಂಧನವ ಬಿಡಿಸಲ್ಕೆ ಬಂದೆನು ಎಂದು ನಾರದ ಬೀಳುಗೊಂಡನು (ಕೌಶಿರಾ. ೦೯-೬೦). ೬. 'ಬೀಳುಗೊಳಿಸು$_1$' ಪರಾ. **ಬೀಳ್ಕೊಳ್** : ೩. ಭಕ್ತವಚನಂಗಳಂ ಕೇಳಿಸ್ಯೆ ಕಿವಿಗಳ್ಗೆ ಎಂದು ಬೀಳ್ಕೊಂಡು ಬಪ್ಪಂ (ಇಊರ. ದೇ. ೦೦೬-೦೦); ಮಲಗಿದ ಮುತ್ತಯ್ಯನ ಬೀಳ್ಕೊಂಡು ಕೌರವರಿತ್ತ ಸರಿದರು (ಕುಮಾದ್ರೋ. ೦_೦೦); ಮುಕ್ಕಣ್ಣನರಸಿಯು ಬೀಳ್ಕೊಂಡು ರತಿದೇವಿ . . . ಹೊಕ್ಕಳು ಕುಸುಮಾವತಿಯ (ಮೋಹತ. ೮-೪೯). ೪. ಶಿರವ ತಡಹುತ ದೇವತತಿ ಪುರಹರನ ಬೀಳ್ಕೊಂಡರು (ಕುಮಾಕ. ೭-೪೬); ಆರೋಗಣೆವೇಳೆಗೆ ಸನ್ನೆಯಾಯ್ತೆಂದು ಆ ರಾಜಸಭೆ ಭೋಂಕನೆದ್ದು ಆ ರಾಯಗೆಱಗಿ ಬೀಳ್ಕೊಂಡುದು (ಭರತ. ೨-೦೦೫); ನೃಪಾಲನಂ ಬೀಳ್ಕೊಂಡು . . . ದುಷ್ಟಬುದ್ಧಿ ಪೊಱಮಡುತಿರ್ದನು (ಜೈಮಿಭಾ. ೨೯-೨೭). ೫. ಈ ನಿಷ್ಪನ್ನತೆಯ ಬೀಳ್ಕೊಂಡ ಪಾಂಡವಗುನ್ನಿಗಳ ಗರುವಾಯ ಮಾಡುವಿರೆಂದು ಖಳ ನುಡಿದ (ಕುಮಾವಿ. ೪-೦೮) ; ಮಡಿದುದೈ ನಿನ್ನಾನೆ ನಿನ್ನುಗ್ಗಡದ ಭಟ ಬೀಳ್ಕೊಂಡನೈ (ಕುಮಾಕ. ೦-೩). **ಬೀಳ್ಕೊಳು** : ೩. ಭುವನೋದ್ಧರಣಶೀಲನಾಗಿ ಮೃಡನಿಂ ಬೀಳ್ಕೊಳುತ್ತೆ . . . ಅಲ್ಲಿಂ ತಳರ್ದ (ಶದ್ಮರಾ. ೨-೬೦); ಅನುಜನಾ ಕ್ರಮದಿಂದ ವಂದಿಸಿ ಜನನಿಯನು ಬೀಳ್ಕೊಳೆ (ತೊರರಾ. ೨-೩-೪೭). **ಬೀಳ್ಕೊಳ್ಳು** : ೩. ಹಿಂತಿರುಗುವಾಗ ಖಂಡಿತಾ ಬರುವೆವು ಎಂದು ಹೇಳಿ ಅವರಿಂದ ಬೀಳ್ಕೊಂಡು ನಮ್ಮ ಪ್ರಯಾಣವನ್ನು ಮುಂದುವರಿಸಿದೆವು (ಪ್ರಕಾಶ. ೫೦). ೪. ಗಂಗವ್ವನೇ ಇವರನ್ನು ಬೀಳ್ಕೊಳ್ಳುವಾಗ ಒಂದು ಮಾತು ಹೇಳಿದಳು (ಅಕೋಳ. ೨೯). **ಬೀಟ್ಕೊಳ್** : ೩. ಕೇಳೀವನಪಾದಪಂಗಳಿರ ಚಿತ್ತಂಗೊಂಡು ಬೀಟ್ಕೊಂಡು ರಾಗದೆ ನಿಮ್ಮಂ ಬಲಗೊಂಡು ಪೋಪ ಗುಣಮಂ ಕೊಳ್ಳಿಂ (ಆದಿಪು. ೦೦-೦೩೦) ; ಗಂಧರ್ವರಾಜನಂದನೆಯಿಂ ತನ್ನನೆಂತಾನುಂ ಬಿಡಿಸಿ ಬೀಟ್ಕೊಂಡು . . . ಪೊಱಮಟ್ಟು (ಕಾದಂಬ. ೨೫೩) ; ಅತಿಪ್ರೀತಿಯಿಂ ನುಡಿದಿಂದ್ರಂ ಬೀಟ್ಕೊಂಡು ಪೋದಂ (ಜಗಚಿ. ೫-೦೯ ವ). ೪. ಸೂರ್ಯಸೂನುವಂ ಸೂರ್ಯದಿನದಂದು ಕಂಡು ಕಾರ್ಯಸಿದ್ಧಿಯಂ ಮಾಡಿ ಬನ್ನಿಮೆಂದು ಕೊಂತಿಯಂ ಬೀಟ್ಕೊಂಡು (ಪಂಪಭಾ. ೯-೬೩ ವ) ; ಅಂತೆಗೆಯ್ವೆನೆಂದು ನಿಜಗುರುಜನಮಂ ಬೀಟ್ಕೊಂಡು ಬೀಡಿಂಗೆ ಪೋಗಲ್ವೇಟ್ಬು (ಗದಾಯು. ೪-೦೩ ವ). [ಬೀಡು$_2$ + ಕೊಳ್$_1$]

**ಬೀಡುಗೊಳು** 'ಬೀಡುಗೊಳ್' ನೋ.

**ಬೀಡುದಾಣ** 'ಬೀಡುಂದಾಣ' ನೋ.

**ಬೀಡುಪ್ರದೇಶ** (ನಾ). ಸಾಗುವಳಿ ಮಾಡದ ಭೂಮಿ ; ಬಂಜರುನೆಲ : ಜಲವಸತಿಯಿರುವ ಕಡೆಗಳಲ್ಲಿನ ಬೀಡುಪ್ರದೇಶವನ್ನು ಸುತ್ತುಮುತ್ತಲೂ ಜಮೀನಿಲ್ಲದೆ ತೊಂದರೆಪಡುತ್ತಿರುವ ಜನರಿಗೆ ಹಂಚಿ ಕೊಟ್ಟು ಅವರಿಂದ ಬೇಕಾದ ತರಕಾರಿಬೆಳೆ ಮಾಡಿಸಲಾಗುತ್ತದೆ (ಕರಬೆ. ೬೬).

[ಬೀಡು$_3$ + ಪ್ರದೇಶ]

**ಬೀಡುಬಿಡು$_1$**, ಬೀಡೆವಿಡು (ಕ್ರಿ). ಬಿರುಕು ಬಿಡು ; ಸೀಳಿಹೋಗು : ಔಡುಗಚ್ಚಿದನಂಘ್ರಿಯಲಿ ನೆಲ ಬೀಡುಬಿಡಲೊದೆದನು (ಕುಮಾಅ. ೦೯-೨೦). **ಬೀಡೆವಿಡು** : ಖರಕರನ ತಾಪದಿಂದಂ ಧರಣಿತಳಂ ಬೀಡೆವಿಟ್ಟು ತಾಪದೊಳಂ ಭೋರ್ಗರೆದು ಮಟ್ಟೆ ಕಱೆ(ಗು)ಯೆ ವಿಶ್ವಂಭರೆ ಬೆಳೆಗುಂ ಮನಕೆವಂದ ಧಾನ್ಯವ್ರಜಮಂ (ಅಟ್ಟಮ. ೦-೩೨).

[ಬೀಡು$_1$ (<ಬೀಟೆ$_1$) + ಬಿಡು$_1$]

**ಬೀಡುಬಿಡು$_2$** 'ಬೀಡುವಿಡು' ನೋ.

**ಬೀಡುಬಿಡು$_3$**, ಬೀಳುಬಿಡು (ಕ್ರಿ). ೧. ಸಾಗುವಳಿ ಮಾಡದಿರು ; ಪಾಳುಬಿಡು : ಬೆಳೆ ಕೈಗೆ ಬಂದ ನಂತರ ನೆಲವನ್ನು ಕೆಲವು ತಿಂಗಳ ಮಟ್ಟಿಗಾದರೂ ಬೀಡುಬಿಡುವುದು ನಮ್ಮ ದೇಶದಲ್ಲಿ ಹಳೇ ಪದ್ಧತಿ (ಕರಬೆ. ೦೦). **ಬೀಳುಬಿಡು** : ೨. ಹಾಳುಗೆಡವು ; ನಿರರ್ಥಕಗೊಳಿಸು : ಯಕ್ಷಗಾನದ ಪಾಲಿಗೆ ಈಗ ಒಂದು ಸಂಧಿಕಾಲವೇ ಬಂದಂತಿದೆ. ಅದನ್ನು ಜನರು ಪ್ರೋತ್ಸಾಹಿಸದೆ ಬೀಳುಬಿಡುತ್ತಿದ್ದಾರೆ (ಯಕ್ಷಬ. ೨೩).

[ಬೀಡು$_3$ + ಬಿಡು$_1$]

**ಬೀಡುಬಿರಿ** 'ಬೀಟೆಬಿರಿ' ನೋ.

**ಬೀಡುವಿಡು**, ಬೀಡುಬಿಡು$_2$ (ಕ್ರಿ). ೧. ವಸತಿ ಮಾಡು ; ತಂಗು ; ಬಿಡಾರ ಹೂಡು : ಪೂತದಿವರ್ಮ್ಯತ್ತಯ ಸುತ್ತಿ ಸುತ್ತಿದ ಸೈಕತಭೂತಳಂಗಳೆಸೆಳೆ ಮೆಲ್ಲನೆ ಬೀಡುವಿಡುತ್ತುಂ (ಆದಿಪು. ೪-೫೮) ; ಸುರಮ್ಯಪ್ರದೇಶಂಗಳೊಳ್ ಬೀಡುವಿಡುತ್ತುಂ ಬಂದು (ಜಗಚಿ. ೦೭-೬೦) ; ಉಪವನಪ್ರದೇಶದೊಳ್ ಬೀಡುವಿಟ್ಟು (ವರ್ಧಪು. ೬-೩೨ವ). ೨. (ಸೈನ್ಯದ) ಶಿಬಿರ ಹಾಕು ; (ದಂಡಿನ) ಪಾಳೆಯ ಹೂಡು : ಮಹಾಸಾಮಂತರ ಪದಿರ [ಪ]ಱೆಗಳಿಂದಮಗುರ್ವಾಗೆ ನಡೆವ ಬೀಡಿಂಗೆ ಬೀಡುವಿಡಲ್ ನೆಲನುಂ . . . ಆನೆಗಂಬಕ್ಕೆ ಪೆರ್ವರಂಗಳುಮಾ ಪಡೆಗೆ ನೆಱೆಯವು (ಪಂಪಭಾ. ೯-೦೦೪ವ). ೩. ವಸತಿ ಹೂಡುವಂತೆ ಮಾಡು ; ತಂಗುವಂತೆ ಮಾಡು : ತನ್ನ ತಮ್ಮಂ ವಿಜಿಗೀಷುವಾಗಿ ಪೋದೊಡಾತನಂ ಸಾಮಾದಿಗಳಿನೊಡಂಬಡಿಸಿ ತಂದಲ್ಲಿ ಬೀಡುವಿಟ್ಟಿರೆ (ಜಾವುಂಪು. ೨೩). ೪. ಆವರಿಸು ; ವ್ಯಾಪಿಸು ; ಹರಡು : ಕುಡುವುರ್ವ ಸೆಡೆಯೆ ಬಿಡುಜಡೆ ಬೀಡುವಿಡೆ . . . ಪಾಡಿ ಬಿನದಿಪ ಕಡುಬೆಡಗಿನಚ್ಚರಸಿಯರುಂ (ರಾಜಶೇ. ೬೩-೯). **ಬೀಡುಬಿಡು$_2$** : ೧. ಚಂಪಕವೀಧಿಗಳೆ ವಿನೋದವಿಹರಣವೀಧಿಗಳಾಗೆಯುಂ ಬೀಡುಬಿಡುತ್ತುಂ (ಚಂದ್ರಪು. ೬-೮೭ವ) : ಒಂದು ಕಡೆ ಸಸ್ಯಜಲಸಮೃದ್ಧಿಯಾದ ಒಂದು ಮನೋಹರವಾದ ಪ್ರದೇಶದಲ್ಲಿ ಆ ರಾತ್ರಿಗೆ ಬೀಡು

ಬಿಟ್ಟರು. (ಹಕ್ಕುತು. ೨೦) ; ನಗರದ ಹೊರಗೆ ವ್ಯಾಪಾರಿಗಳು ಬೀಡು ಬಿಟ್ಟಿದ್ದರು (ಕೃತುಹ. ೬೦). ೨. ವಿಖ್ಯಾತನ ತಾರಕಾಸುರನ ಬೀಡು ಬಿಡುತ್ತಿದೆ ನೋಡಲದ್ಭುತಂ (ಗಿಂಕ. ೬-೯೮) ; ಬೀಡುಬಿಟ್ಟುದು ಬಳಿಕ ಸಿಡಿಲ ಸಘಾಡಸಬುದದ ನಿಶಿತಗಿರಿಗಳ ಕೋಡುಗಲ್ಗಳ ಖಣಿಖಟಿಲ ಕಡುಹು ಗಳಲಿನಸುತನ (ಕೊರಂ. ೬-೬-೨೬). ೩. ನೆಲೆ ನಿಲ್ಲು ; ನೆಲಸಂ ; ತಳವೂರು : ಆರ್ಯರು ಈ ವೇಳೆಗಾಗಲೆ ಭಾರತದಲ್ಲಿ ಭದ್ರವಾಗಿ ಬೀಡು ಬಿಟ್ಟಿದ್ದ ದ್ರಾವಿಡರೊಡನೆ ಬೆರೆತು ಹೋದರು (ದ್ರಾಬಿ. ೩೦).

[ಬೀಡು$_2$ + ಬಿಡು$_1$]

**ಬೀಡುವೇಟ್** (ಕ್ರಿ). ತಂಗುದಾಣವನ್ನಾಗಿ ನಿಯಮಿಸು ; ವಸತಿಗೃಹ ವನ್ನು ಸೂಚಿಸು : ಮತ್ತಿನ ನಾಲ್ವರ್ಗಂ ಕೊಂತಿಗಂ ಬೇಱೆವೇಱೆ ಮಾಡಂಗಳಂ ಬೀಡುವೇಟ್ಟು (ಪಂಪಭಾ. ೩-೯೦ ವ). [ಬೀಡು$_2$+ಪೇಟ್]

**ಬೀಡುವೊಗು** (ಕ್ರಿ). ಬಿಡಾರವನ್ನು ಪ್ರವೇಶಿಸು : ಬೀಡುಂಬೊಕ್ಕಂ, ಬೀಡುವೊಕ್ಕಂ (ಶಬ್ದಾಸು. ೩೯೦ ಪ್ರಯೋ). [ಬೀಡು$_2$+ಪೊಗು]

**ಬೀಡುಸೆಳೆ** 'ಬೀಟೆಸೆಳೆ' ನೋ.

**ಬೀಡೆ$_1$** 'ಬೀಟೆ$_1$' ನೋ.

**ಬೀಡೆ$_2$** 'ಬೀಡು$_2$' ನೋ.

**ಬೀಡೆಗಾಲ್** 'ಬೀಟೆಗಾಲ್' ನೋ.

**ಬೀಡೆತ್ತು** (ಕ್ರಿ). ಶಿಬಿರವನ್ನು ತೆಗೆ. — ಕೀಳು ; ಶಿಬಿರದಿಂದ ಬೇರೆ ಕಡೆಗೆ ಪ್ರಯಾಣ ಮಾಡು : ನಿಶಾವಸಾನಸಮಯದೊಳ್ ಪಯಣದ ಸೂಟಗಾಳೆಗಳಂ ಪಿಡಿದು ಬೀಡೆತ್ತಲುದ್ಯೋಗಂಗೆಯ್ವುದಂ ಕಂಡು (ಪಂಪಶಂ. ೧೨೬-೧೨). [ಬೀಡು$_2$ + ಎತ್ತು$_1$]

**ಬೀಡೆಬಿರಿ** 'ಬೀಟೆಬಿರಿ' ನೋ.

**ಬೀಡೆಯೊಡೆ** (ಕ್ರಿ). ಬಿರಿ ; ಬಿರುಕು ಬಿಡು : ಆ ಮುಗ್ಧಾಂಗನಾನಿವಹದ ಸೊಗಯಿಸುವ ಬಾಯ್ದೆಱೆಗಳಂ ಬೀಡೆಯೊಡೆದ ದಾಡಿಮದ ಪಣ್ಗಳೆಂದು ತಳಿರ ತೊಂಗಲೊಳ್ ನಿಳ್ಕಿ ನೋಡುವ ಶುಕಶಿಶುಪ್ರಕರಮುಂ (ಶಾಸುಮಾ. ೨-೬೦ ವ). [ಬೀಡೆ$_1$ ( < ಬೀಟೆ$_1$) + ಒಡೆ$_1$]

**ಬೀಡೆವಡು** (ಕ್ರಿ). ಬಿರುಕುಂಟಾಗು ; ಸೀಳು : ಹರಿಣಧರಹರಿಣನಂ ಪೂಮರದಡಿಯೊಳ್ ಪೊಯ್ದು ಪಟ್ಟ ಪುಲಿಗಳಿವೆನಿಕುಂ ಪರೆದರುಣಸಿತಾಸಿತ ಮಪ್ಪ ರಾಗದಿಂ ಬೀಡೆವಟ್ಟ ಬೆಟ್ಟದ ಸಱೆಗಳ್ (ಆದಿಪು. ೯-೨೪).

[ಬೀಡೆ$_1$ ( < ಬೀಟೆ$_1$) + ಪಡು$_1$]

**ಬೀಡೆವಣ್** (ನಾ). ಬಿರಿದ ಫಲ ; ಬಿರುಕು ಬಿಟ್ಟಿರುವ ಹಣ್ಣು : ಬೀಡೆವಣ್ಣಿಂ ತುಱುಗಿರ್ದ ದಾಡಿಮಚಯಂ . . . ಕುಂದವು ನಂದನಂ ಗಳೊಳ್ (ಜಗನ್ನಾ. ೨-೧೫); ಬೀಡೆವಣ್ಗಳೆಸೆದಿರ್ಪ ದಾಡಿಮತರುವ್ರಜಮಾ ಬನದೊಳ್ ವಿರಾಜಿಕುಂ (ಶಾಸುಮಾ. ೦-೯೦) ; ಬೀಡೆವಣ್ಣೆತ್ತು ಕೀರಕ್ಕೊಲವಂ ಮೇಳಿಪ್ಪ ದಾಳಿಂಬದ ತರುತತಿಗಳ್ . . . ಓರಂದದಿಂ ಕುಂದವೆಂದುಂ (ಶಾಂತೀಶ್ವ. ೧೩-೧೩೨). [ಬೀಡೆ$_1$ ( < ಬೀಟೆ$_1$) + ಪಣ್$_3$]

**ಬೀಡೆವರಿ** 'ಬೀಟೆವರಿ' ನೋ.

**ಬೀಡೆವಿಡು** 'ಬೀಡುಬಿಡು$_1$' ನೋ.

**ಬೀಡೆವೆಱು** (ಕ್ರಿ). ಬಿರುಕನ್ನು ಹೊಂದು ; ಬಿರಿ : ಬಿಸಿದುಕೊಳ್ಳು : ಪಾಮರಿಯರ ದೋರೆವಾಯ್ದೆಱೆಗಳಂ ನೆಱೆಮಿಕ್ಕಿಸಿ ಬೀಡೆವೆತ್ತು ಬಿತ್ತರಿ ಸುವ ದಾಡಿಮವ್ರಜಮೆಂಬಭಿಶಂಕೆಯನಪ್ಪುಕೆಯ್ದು ಪೀವರಕುಚದಲ್ಲಿ ಕೇಗುವುದು ಪೋಗದೆ ಕೀರಕುಳಂ ನಿರಾಕುಳಂ (ಶಾಂತೀಶ್ವ. ೧-೯೩).

[ಬೀಡೆ$_1$ ( < ಬೀಟೆ$_1$) + ಪೆಱು$_1$]

**ಬೀಡೆವೋಗು** (ಕ್ರಿ). ಬಿರುಕು ಬಿಡು; ಸೀಳು : ಬೀಡೆವೋಗಿರ್ದ ತಣ್ಣೀರೊಸದಾಣಿಂ (ಜಗನ್ನಾ. ೧೬-೬೪).

[ಬೀಡೆ$_1$ (< ಬೀಟೆ$_1$) + ಪೋಗು$_1$ (<ಪೋ$_1$)]

**ಬೀಡೊಡೆಯ** (ನಾ). ನಾಡಿನ ಪ್ರಭು ; ರಾಜ್ಯದ ದೊರೆ : ಸುವ್ವಿ ಕಾಡೊಡೆಯನೆ ಸುವ್ವಿ ಬೀಡೊಡೆಯನೆ ಸುವ್ವಿ ಬೇಡರ ಕುಲತಿಲಕ (ಜಂಬಕ. ೨-೬೫). [ಬೀಡು$_2$ + ಒಡೆಯ$_1$]

**ಬೀಢಾರ** 'ಬೀಡಾರ' ನೋ.

**ಬೀಣೆಗ** (ನಾ). ವೀಣೆಯನ್ನು ನುಡಿಸುವವನು : ವೈಣಿಕ : ಬೀಣೆಗಂ, ಗಾಣೆಗಂ, ಕೇಣೆಗಂ (ಶಬ್ದಾಸು. ೯೦೬ ಪ್ರಯೋ). [ಬೀಣೆ + —ಇಗ]

**ಬೀಣೆಗೆ** (ನಾ). ಹುರಿ; ಹಗ್ಗ (?) : ಕೆಚ್ಚನಪ್ಪ ನೂಲ ಪಾಸಿನ ಬೀಣಿಗೆಯ ಮಳವೆ ಮೂವತ್ತಕ್ಕೊಂದು ಪತ್ತಿಯ ಮಳವೆ ಅಯ್ವತ್ತಕ್ಕೊಂದು (ಎಕ. XIX, ೧೯೫-೧೬; 1075); ಮುದ್ದಳಿಗಂ . . . ಪೊಱಮನದ ಕಾಂತೆಯಂತೆ ಬೀಣೆಗೆಯಂ ಬಿಗಿದು . . . ನಾನಾಶಬ್ದಂಗಳಂ ಬಾರಿಸಿ (ಧರ್ಮಪ. ೨-೨೩ ವ). [?]

**ಬೀಣೆ** (ನಾ). ಒಂದು ಬಗೆಯ ತಂತೀವಾದ್ಯ; ವೀಣೆ : ದನಿಯಿಂಪು ಬೀಣೆಯಂ ಮಿಡಿದವೊಲಾಗೆ ಗಾನದೊಳೊಡಂಬಡೆ ಮೇನಕೆ ಮುಂದೆ ಪಾಡಿದಳ್ (ಪಂಪಭಾ. ೬-೯೯); ಕೊರಲ ಬೆರಲ ರಸಮೆಸೆಯೆ ಬೀಣೆಯಂ ಬಾಜಿಸಿದಳ್ (ಸುಕುಮಾ. ೧೦-೨೪); ವನರುಹಸೂತ್ರಂ ತಂತ್ರಿಗಳೆನೆ ಶಿವನಂ ಜಾಣೆ ಬೀಣೆಯಂ ಕೇಳಿಸುವಳ್ (ಗಿಂಕ. ೩-೯೮). [< ಸಂ. ವೀಣಾ]

**ಬೀಣೆಗಾಱ** (ನಾ). ವೀಣೆಯನ್ನು ನುಡಿಸುವವನು; ವೈಣಿಕ : ಬಾಜಿಪ ಬೀಣೆಗಾಱರಾಗರಮೆನೆ ಪೆಂಪು ಸೊಂಪನೊಳಕೊಂಡೆಸೆದಿರ್ಪುದು ಸೂಳೆಗೇರಿಗಳ್ (ಕಬ್ಬಿಗ. ೪೨) ; ಈಗಳೀ ಮಾನವಲೋಕದೊಳ್ ನೆಗೞ್ತೆವೆತ್ತ ಬೀಣೆಗಾಱರುಂ . . . ಪೊಸವಗೆಯ ತಾನಂಗಳಂ ಸಂದರ್ಭಿಸಿದುದಿಲ್ಲೆಂಬುದು ವಿದಿತಮೈಸೆ (ಪಳವಂ. ೧೬೨-೯). [ಬೀಣೆ + — ಕಾಱ]

**ಬೀಣೆವಾಜಿಸು** (ಕ್ರಿ). ವೀಣೆಯನ್ನು ನುಡಿಸು : ಸಪ್ತಸ್ವರಮಂ ಗುಣಿಯಿಸುವ ಬೀಣೆವಾಜಿಪ . . . ಬಿನದಮುವರ್ಗಳ ಬಿನದಂ (ಆದಿಪು. ೩-೮); ಚಕ್ರಿ ಬೀಣೆವಾಜಿಸೆ ಸುತಿಗೂಡಿ ತಾರಯಿಪ ತುಂಬಿಗಳಿಂತಿವು (ವರ್ಧಮಾ. ೫-೬೦). [ಬೀಣೆ + ಬಾಜಿಸು$_2$]

**ಬೀಣೆವಾಡ** (ನಾ). ವೀಣೆಯ ಮನೆ,—ಮೆಟ್ಟಿಲು : ತೆಪ್ಪನೆ ಬೀಣೆ ವಾಡದೊಳಗಾಡುವ ವಾಣಿಯ ನೂಪುರಸ್ವರಂ (ಜಗದು. ೪-೧೦೪).

[ಬೀಣೆ + ವಾಡ$_2$]

**ಬೀತ** 'ಬೀ' ಪರಾ.

**ಬೀತು** 'ಬೀ' ಪರಾ.

**ಬೀದಿ** (ನಾ). ೧. ಹಾದಿ ; ಮಾರ್ಗ ; ದಾರಿ : "ಪ್ರತೋಳೀ. ವಿಶಿಖಾ, ರಥ್ಯಾ—ಈ ೩ ಬೀದಿ" (ಹಲಾಯು. ೪೮-೧೩೪); ಅಗಳಾ ಪೊಟಲ ಬೀದಿಗಳೊಳೆಲ್ಲಂ ಗಂಧೋದಕ ಪಂಚಗವ್ಯಂಗಳಂ ತಳಿಯಿಸಿ (ಪಂಪಭಾ. ೪-೫ ವ); ಎಸೆವ ಬಹುರತ್ನರಾಶಿಯ ಪಸರಂಗಳಿನದಟ ಬೀದಿಗಳ್ ಪಲವುಂ ರಂಜಿಸಿ ತೋರ್ಕುಂ (ಪಂಪಶಂ. ೧೪-೧೦). ೨. ವಿಸ್ತಾರ ; ವ್ಯಾಪ್ತಿ ; ಹರಹು : ಕಮಲೋದರನು ಕೈಕೊಂಡನು . . . ಸಕಲಲೋಕದ ಬೀದಿ ವಿಸಟಂಬರಿವ ವಿಮಲವಿರಾಟರೂಪವನು (ಕುವ್ಯಾಭೀ. ೩-೬೪). 'ಬೀದಿಗಿಬ್ಬು' ಪರಾ.

ಬೀದಿಬೀದಿ (ದ್ವಿರುಕ್ತಿ) : ಆಕೆಯ ವಿಳಾಸಹಾಸಮೆ ಪೊಱಪೊಣ್ಮಿದಂತೆ ಬೀದಿಬೀದಿಗಳೊಳೆಡೆಗಿಱಿದಿರೆ ಕೆದಱಿದ ಕುಸುಮರಜಂಗಳುಂ (ಆದಿಪು. ೭-೩೭ವ); ಬೀದಿಬೀದಿ ತಪ್ಪದೆ ಚಂದನದೆಳದಳಿರ್ಗಳಿಂ ತೋರಣಂಗಟ್ಟಿ (ಧರ್ಮಾಮೃ. ೬-೨೦೫). ಬೀದಿಕಾಮಣ್ಣ=ರಸ್ತೆಯಲ್ಲಿ ತಿರುಗಾಡುವ ಪೋಕರಿ : ಬೀದಿಕಾಮಣ್ಣಗಳ ಹಾವಳಿ ಇತ್ತೀಚೆಗೆ ಹೆಚ್ಚಾಗಿದೆ (ರೂಢಿ). ಬೀದಿಗೆ ಬರು= (ರಹಸ್ಯ) ಹೊರಗೆ ಬರು—, ಬಯಲಾಗು; (ಗುಟ್ಟು) ಪ್ರಕಟವಾಗು : ಸಂಸಾರದ ಗುಟ್ಟು ಬೀದಿಗೆ ಬರಬಾರದು (ರೂಢಿ). ಬೀದಿಗೆಳೆ, ಬೀದಿಗೆ ಎಳೆ=ಬೀದಿಪಾಲುಮಾಡು ; ಹಾಳು ಮಾಡು ; ಅವಮಾನಕ್ಕೆ ಅವಕಾಶ ಮಾಡಿಕೊಡು : ನಮ್ಮ

ವಂಶದ ಗೌರವ ಬೀದಿಗೆಳೆದುಬಿಟ್ಟಳು (ಕಶಿಸಂ. ೨೬೦); ಅರಿಯದ ಹೆಣ್ಣನ್ನು ಬೀದಿಗೆ ಎಳೆಯುವ ಕಲೆ ಚೆನ್ನಾಗಿ ತಿಳಿದಿದೆ (ಬದ್ಕ್ರಿ. ೭೬). **ಬೀದಿಜಗಳ** = ಎಲ್ಲರೆದುರಿಗೆ ನಡೆಯುವ ಜಗಳ; ಮುಚ್ಚುಮರೆಯಿಲ್ಲದ ಕಲಹ : ಹಾದಿಜಗಳ ಹಣವಡ್ಡ, ಬೀದಿಜಗಳ ಮುಪ್ಪಾಗ (ಗಾದೆ) **ಬೀದಿದೀಪ** = ಸಾರ್ವಜನಿಕರ ಉಪಯೋಗಕ್ಕಾಗಿ ರಸ್ತೆಗಳಲ್ಲಿರುವ (ಸಾಮಾನ್ಯವಾಗಿ) ವಿದ್ಯುದ್ದೀಪ : ಬೀದಿದೀಪದ ಕೆಳಗೆ ನಾಯಿಗಳು ಕಚ್ಚಾಡುತ್ತಿವೆ (ರೂಢಿ). **ಬೀದಿನಲ್ಲಿ** = ಸಾರ್ವಜನಿಕರ ಉಪಯೋಗಕ್ಕಾಗಿ ರಸ್ತೆಗಳಲ್ಲಿರುವ ಕೊಳಾಯಿ : ಬೀದಿನಲ್ಲಿಯ ಹತ್ತಿರ ದೊಡ್ಡಗುಂಪು ಸೇರಿತ್ತು (ರೂಢಿ). **ಬೀದಿಯ ಗುಂಡ** = ಗುರಿಯಿಲ್ಲದೆ ಅಲೆದಾಡುವ ಒನಪುಗಾರ : ಜೂಜುಗಾರನ ಮಾತು ಬೀದಿಯ ಗುಂಡನ ಸೊಬಗು ಓಡಿನೊಳಗಗೆಯ ಹೊಯ್ದಂತೆ (ಬಸವ ೬೩೬). **ಬೀದಿಯ ಬಸವ** = ರಸ್ತೆಯಲ್ಲಿ ಗುರಿಯಿಲ್ಲದೆ ಅಲೆದಾಡುವ ಗೂಳಿ; ತೊಂಡುದನ : ಬೀದಿಯ ಬಸವಂಗೆ ದೇಗುಲದ ಪಶುವಿಂಗೆ ಹುಟ್ಟಿದ ಕಋ ಹೋರಿಗಳು ಬಸವಗಳಪ್ಪವೆ ಲಿಂಗಮುದ್ರೆಯನೊತ್ತದನ್ನಕ್ಕರ (ಚನ್ನಬ. ೪. ೧೯೨-೪೨೪). **ಬೀದಿಯ ಬಸವಿ** = ಬೀದಿಬಸವಿ: ಬೀದಿಯ ಬಸವಿ, 'fool' ಎಂದೆಯಲ್ಲ ! (ಹೂಸಕ್ಷಿ. ೧೪). **ಬೀದಿಯ ಭಿಕಾರಿ** = ಬಹಳ ದರಿದ್ರನಾದವನು : ಬೀದಿಯ ಭಿಕಾರಿ ಜೀವಿಸುವ ಈ ಬೊಂಬಾಯಿನ ಫುಟ್‌ಪಾತಿನಲ್ಲಾದರೂ ಕಾಲ ತಳ್ಳಿದರಾಯ್ತು (ಕೂಸಿಶೇ.೧೯೯). **ಬೀದಿಯಲಿ ಬೀಳು, ಬೀದಿಯಲ್ಲಿ ಬೀಳು** = ೧. ಪತನ ಹೊಂದು; ಪತಿತವಾಗು : ವಾದಗೊಳ್ಳದ ಬಹಳ ವಸ್ತುವನೀ ದುರಾತ್ಮಕನೆತ್ತ ಬಲ್ಲನು ಬೀದಿಯಲಿ ಬಿದ್ದವನು (ಕುವ್ಯಾಸ. ೯-೦೩). ೨. ಧೂಳಿನಲ್ಲಿ ಬೀಳು : ಬೀದಿಯಲ್ಲಿ ಬಿದ್ದ ಮಾಣಿಕ್ಯವ ಹೂಳಿರ್ದ ನಿಧಾನವನಾರಿಗೂ ಕಾಣಬಾರದು ನೋಡ (ಅವಚಂ. ೨೨೯-೧೧೩೨); ಬೀದಿಯಲ್ಲಿ ಬಿದ್ದ ಶಿಶುವನು ಹೆತ್ತ ತಾಯಿ ಹತ್ತಿರ ಬಂದು ಎತ್ತುವಂತೆ (ಬಸವ. ೩೯೦). **ಬೀದಿವೆಡಂಗ** = ತಿರುವಾರೂರಿನಲ್ಲಿ ಪೂಜಿಸಲ್ಪಡುವ ಶಿವನ ಉತ್ಸವಮೂರ್ತಿ : ಇಲ್ಲಿ ದೇವರ ದೇವನಪ್ಪ ಬೀದಿವೆಡಂಗ ಪೆರುಮಾಳೆಯನೋಲೈಪ ತಳಿಯಲಾರಕುಲದ ಪರಮ ಯೌವನೆಯಪ್ಪ ಪರವೆನಾಚಿಯರೆಂಬ ಕನ್ಯಾಕನಕಲತೆಯಿರ್ದಪುದು (ನಂಬಿರ. ೧೦-೧೧). [< ಸಂ. ವೀಥಿ, ವೀಥೀ]

**ಬೀದಿಗ** (ನಾ). ರಸ್ತೆಯಲ್ಲಿ ಹೋಗುವವನು; ದಾರಿಹೋಕ : ಶಿವಶಿವಾ ದುರ್ಗಂಗಳಿರದೆ ಕೋಳ್ವೋದುವೆಂದೆಡೆಗೆಡೆಗೆ ಬೀದಿಗರ್ ಗಜಬಜಿಸಲು (ಚಿಬಿಕ್ಕ. ೪೨-೪೪). [ಬೀದಿ + -ಗ₂]

**ಬೀದಿಗಪ್ಪಡ** (ನಾ). ದಾರಿಯಲ್ಲಿ ಬಿದ್ದಿರುವ ಮೈಲಿಗೆಬಟ್ಟೆ : ಬೂದಿಯಿಂದೊಕ್ಕ ಮಾಲೆಯಿಂ ಬೀದಿಗಪ್ಪಡದಿಂ ಘಟಕಂಠದಿಂ ಸಿಂಗರಿಸಿಕೊಂಬುದುಮಕ್ಕುಂ (ರಸರ. ೪-೧೩೦ ವ). [ಬೀದಿ + ಕಪ್ಪಡ]

**ಬೀದಿಗರು** 'ಬೀದಿಗಋ' ನೋ.

**ಬೀದಿಗಲಹ** (ನಾ). ೧. ದಾರಿಯಲ್ಲಾಡುವ ಜಗಳ; ಬಹುಜನರೆದುರಿಗೆ ಆಡುವ, ಗುಟ್ಟಾಗಿ ಉಳಿಯದ ಜಗಳ : ಬೀದಿಗಲಹದ ಕದಡು ಬೀಡಿನಲ್ಲಿದೆ ಹಬ್ಬಿತು (ಕುವ್ಯಾಆ. ೮-೨); ಸುದ್ದಿಯಿಲ್ಲದೆ ಹೋದ ಪಾಂಡವರಿದ್ದರಾದೊಡೆ ಬೀದಿಗಲಹದ ಯುದ್ಧಕೆಳಸದೆ ತಿರುಗಿಸುವುದೊಬ್ಬನನು ಕರಿಪುರಿಗೆ (ಕುವ್ಯಾವಿ. ಓಂಡ. ೪-೦೩). ೨. (ಆಲಂ) ಮರ್ಯಾದೆ ಬಿಟ್ಟು ಆಡುವ ಜಗಳ : ಬೀದಿಗಲಹದೊಳೊಮ್ಮೆ ಪೈಸರವಾದಡದು ಪರಿಹರಿಸಿದವರೇ ಸೋದರರು (ಕುವ್ಯಾಆ. ೨೦-೩೩): ತೋಱಿಸುವೆ ನಿಮಗಹ ಗುರುಲಘುತ್ವದ ಪರಿಯ ತುದಿಯಲಿ ದೊರಕು ವಶುಭದ ಬೀದಿಗಲಹವನು (ಕೂರಗಾ. ೨೫-೨೯). [ಬೀದಿ + ಕಲಹ]

**ಬೀದಿಗಋ, ಬೀದಿಗರು** (ನಾ). ಬೀದಿಪಾಲಾದ ಕರು; ಅನಾಥವಾದ ಕರು. **ಬೀದಿಗರು**. **ಬೀದಿಗಋವಾಗು, ಬೀದಿಗರುವಾಗು** = ಅನಾಥವಾಗು; ತಬ್ಬಲಿಯಾಗು; ದಿಕ್ಕಿಲ್ಲದಂತಾಗು : ಘನಮಹಿಮ ಸುಟ್ಟು ಗುಹೇಶ್ವರ ಬ(ೀ?)ದಿಗಋವಾದ (ಅವಚಂ. ೯೯-೩೯೮); ಮೇದಿನಿಗೆ ಬೀದಿಗಋ[ಪಾಠಾಂ. ಱು]ವಾದುದೆನ್ನಯ ಭಕ್ತಿ (ಪೂತರ. ದೇ. ೩೩೦-೯); ಖೇದವೇಕಂದೇನು ಮಕ್ಕಳು ಬೀದಿಗಋವಾದರು ವನಾಂತದಲಾದ ಚಿತ್ತವ್ಯಥೆಯ ಕೇಳಿದು ಬೆಂದುದೆನ್ನೊಡಲು (ಕುವ್ಯಾಅ. ೦೭-೯); ಬಂದೆನಿತ್ತಲು ಬಱಿದೆ ಮಸಣದ ಮಂದಿರದ ಮುಕ್ಕಣ್ಣನನು ಬಳಿಸಂದು ಬಳಲುತ ವರಪರೀಕ್ಷೆಗೆ ಬೀದಿಗಋವಾಗಿ (ಶಿಬಾಗ. ೧೦-೯೦-೨೪); ಪಾಂಡುವಿನ ಮಕ್ಕಳು ವನಾಂತರದಿ ಬೀದಿಗರುವಾದರು (ತುರಂಗ. ೩೪-೩). [ಬೀದಿ + ಕಋ₂]

**ಬೀದಿಗಾಣಿಸು** (ಕ್ರಿ). ೧. ದಾರಿಯನ್ನುಂಟು ಮಾಡು. ೨. (ಆಲಂ) ಗಾಯವನ್ನು ಉಂಟುಮಾಡು : ಎಡದಲೌಕುವ ಸಾಂಬನನು ಹಣೆಯೊಡೆಯಲೆಚ್ಚನು ಮಾರಿ ಬಹ ಬಲುಗದೆಯ ಪ್ರದ್ಯುಮ್ನನ ಶರೀರದಿ ಬೀದಿಗಾಣಿಸಿದ (ಕೋಗದು. ೨೩-೩೪). [ಬೀದಿ + ಕಾಣಿಸು]

**ಬೀದಿಗಾವಲಿ** (ನಾ). ದಾರಿಯ ಪಕ್ಕದಲ್ಲಿರುವ ತಗ್ಗು; ಚರಂಡಿ : ಬೀಡಾಡಿನಾಯಿಗೆ ಬೀದಿಗಾವಲಿ ನೀರು (ಸಜೀಗಿ. ೭೪-೪).
[ಬೀದಿ + ಕಾವಲಿ₃ (< ಕಾಲ್ವಾಯ್)]

**ಬೀದಿಗಿಚ್ಚು** (ನಾ). ವಿಸ್ತಾರವಾಗಿ ಹಬ್ಬುವ ಕಿಚ್ಚು; ವ್ಯಾಪಕವಾಗಿ ಹರಡುವ ಬೆಂಕಿ – ಅಗ್ನಿ : ಕಂಬದಲಿ ಆದುದಾವಿರ್ಭಾವ ಸಿಡಿಲಿನ ಸೋದರರದ ಕಣ್ಣುಗಳ ಭಾಳದ ಬೀದಿಗಿಚ್ಚಿನ ರೌದ್ರದಲಿ ನರಸಿಂಹರೂಪಾಗಿ (ಕುವ್ಯಾಸ. ೯-೪೩). [ಬೀದಿ + ಕಿಚ್ಚು]

**ಬೀದಿಗೊಳ್** (ಕ್ರಿ). ೧. ದಾರಿಯನ್ನು ಹಿಡಿ; ಹಾದಿಯನ್ನು ಅನುಸರಿಸು: ಕಂಪಿನ ಪೊಟಲಂ ಪೊಕ್ಕು ಬೀದಿಗೊಂಡು ಬರ್ಪಾಗಳ್ (ಕಬ್ಬಿಕಾ. ೩೩೩). ೨. ಅಡೆತಡೆಯಿಲ್ಲದಂತೆ ದಾರಿಮಾಡಿಕೊಳ್ಳು : ಸೂಕಳಾಶ್ವಂಗಳನಂ ಕಣೆಯಂ ಬಗೆಯದೆ ಮುಂಕೊಂಡು ಶಂಕಿಸದೇಱಿ ಮಾಱಿ ಬೀದಿಗೊಂಡು ಪರಿಯಿಪಾಗಳ್ (ರಾಜಶೇ. ೬-೧೧೨); ಬೀರರ ಜಂಗುಳಿಯೊಳ್ ನುರ್ಗಿ ಬೀದಿಗೊಂಡು ರಾಯನಿದಿರ್ವಂದು ಶತ್ರುಘ್ನಂ . . . ಎಂದಂ (ರಾಮಾಶ್ವ. ೪೭-೭). [ಬೀದಿ + ಕೊಳ್₁]

**ಬೀದಿಪಾಲು** (ನಾ). (ಆಲಂ) ನಿರಾಶ್ರಿತಸ್ಥಿತಿ; ನಿರ್ಗತಿಕಸ್ಥಿತಿ : ಒಂದು ಜೀವವನ್ನು ಬೀದಿಪಾಲಾಗಗೊಡುವುದು ಧರ್ಮವಾಗುತ್ತಿತ್ತೆ ? (ಐವಶಂ. ೦೭೦). 'ಕಾಡುಪಾಲು' ಪರಾ.

**ಬೀದಿಪಾಲು ಮಾಡು** = ಅನಾಥವಾಗಿ ಮಾಡು; ನಿರ್ಗತಿಕವಾಗಿಸು : ಮಕ್ಕಳನ್ನು ಬೀದಿಪಾಲು ಮಾಡಿದೆ. ನಾನು ಪಾಪಿ ! (ಭಾರತಿ. ೨೭). [ಬೀದಿ + ಪಾಲು₂ (< ಪಾಲ್₂)]

**ಬೀದಿಬಸವಿ** (ನಾ). ಸ್ವೇಚ್ಛಾಚಾರಿಯಾದ ಸೂಳೆ : ಬೀದಿಬಸವಿಯಾಗಿ ನೀನು ಕುಲಗೆಟ್ಟು ಹೋದರೆ ಅದರ ಕಷ್ಟ ಅನುಭವಿಸುವವಳು ನೀನೇ ಹೊರತು ನಾನಲ್ಲ (ಕಶಿಸಂ. ೦೮೨); ನಾಯಿಲ್ಲಿ ಕತ್ತೇ ಹಂಗೆ ಚಾಕರಿ ಮಾಡಿಕೊಂಡಿದ್ದೀನ್ನೀ, ನೀನು ಬೀದಿಬಸವಿ ಹಂಗೆ ಮನೆ ಮನೆ ತಿರುಗ್ಕೊಂಡು ನಿಂತಿರು (ಸರ್ವಮಂ. ೩೩೩). 'ಊರುಬಸವಿ' ಪರಾ.
[ಬೀದಿ + ಬಸವಿ]

**ಬೀದಿವರಿ₁** (ಕ್ರಿ). ೧. ಸುತ್ತಾಡು; ಅಲೆದಾಡು : ಮೈದೆಗೆದು ಮರನಾಗಿ ದೆಸೆಯಲಿ ಬೀದಿವರಿವುತ ವಿವಿಧಭಾವನಭೇದದಲಿ ಮನ ಮುಂದುಗೆಡುತಿರ್ದುದು ಧನಂಜಯನ (ಕುವ್ಯಾಆ. ೬-೩೨); ವರುಣನನು ಬೆಸಗೊಂಡು ತತ್ಪುರವರದೊಳಗಲಕೆ ಬೀದಿವರಿದುಪ್ಪರಿಸಿ ಲೋಕಾಲೋಕ ಪರ್ವತದಗ್ರಪರಿಯಂತಸುರವಿರೋಧಿಯ ಕಾಣದೆ (ಕೂರಗಾ. ೪-೩೯). ೨. ಸ್ವೇಚ್ಛೆಯಾಗಿ ಓಡಾಡು; ಸ್ವಚ್ಛಂದವಾಗಿ ನಡೆ : "ವಿಸಟಂಬರಿದುದೆನಲ್ ಬೀದಿವರಿದುದು" (ಕಾಲು. ೦೩); ಎಲ್ಲರೊಡಲ ಕಳವಳಿಗೆಯನ್ನು

ಬೀದಿವರಿದೊಕ್ಕಲಿಕ್ಕಿತ್ತು ರಕ್ಕಸಮಿಗಂ (ಹಕಶಾ. ೬-೭); ಕೂರಂಕುಶ ದಲಾನೆಯು ಬೆಗಡುಗೊಳಿಸಲು ಬೀದಿವರಿದುದು ಸುಭಟರೆದೆಯೊಡೆಯೆ (ಕುವ್ಯಾದ್ರೋ. ೩-೧೩). ೩. ಬೀದಿಗೆ ನುಗ್ಗು; ರಸ್ತೆಗೆ ಧಾವಿಸು : ಮೈ ನಡನಡುಗಿ ಬೆದರುತ ಬೀದಿವರಿವುತ್ತೊಡನೊಡನೆಯೊರಲಿದಳು ರಕ್ಕಸಿ ಬೆಟ್ಟ ಬಿರಿವಂತೆ (ಶಿಶಾಗ. ೧೧-೫-೪೦). ೪. ಮುನ್ನುಗ್ಗು; ಮುಂದು ವರಿ : ಕರದೊಳ್ ಕಿಟ್ಟಿ ಕಠಾರಂಬೆರಸದಟಿಂ ಬೀದಿವರಿಯುತಿರ್ಕಲಸಂ ಸಂಹರಿಸುತ್ತಾ ದನಿವಱಿಯಿಂದರಸನಿದಿರ್ಗೊರ್ವ ವೀರಸೆಣ್ದುದನಾಗಳ್ (ದಶಕು. ೭-೧೧೬); ಅವನಿಪಾಲಕುಮಾರಕಂಠೀರವನು ರಣದಲಿ ಬೀದಿ ವರಿದುತ್ಸವದಲಹಿತರನಿಱಿದು . . . ವಾಸವನ ಸಿಂಹಾಸನವನಡರುವ ತವಕದಲಿ ಜಾಱಿದನು (ಕುವ್ಯಾದ್ರೋ. ೭-೩). ೫. ಹಬ್ಬು: ಹರಡು; ವ್ಯಾಪಿಸು : ಮುತ್ತಮೊತ್ತರಿಸಿ ಬಯಲೊಳ್ ಬೀದಿವರಿದುಂ ಬಟ್ಟೆಯೊಳ್ ಬಿದ್ದುಂಬರಿದುಂ . . . ತತ್ತವೋಬಳಂ . . . ಸಕಳಜಗಮುನಂಡಲೆದು ನೆಲಸೆ (ವರ್ಧಪು. ೬-೩೨ ವ); ತೊಟ್ಟ ಮುತ್ತಿನ ತೊಡಿಗೆಗಳ ಬೆಳಗು ದೆಸೆಯು ಪಸರಿಸಿ ಪರ್ಬಿ ಬೀದಿವರಿಯೆ (ಹಕಶಾ. ೯-೮); ರಿಪುವನನಿಕರದಲಿ ಸಲೆ ಬೀದಿವರಿದುದು ಭೀಮುದಾಪಾಗ್ನಿ (ಕುವ್ಯಾದ್ರೋ. ೧೨-೨೪).

**ಬೀದಿವರಿದಾಡು** = ೧. ಸ್ವೇಚ್ಛೆಯಾಗಿ ತಿರುಗು. ೨. (ಅಲಂ) ಮನಸ್ಸಿಗೆ ಬಂದಂತೆ ವರ್ತಿಸು: ರಕ್ಕಸದೋಟಿಗರ ಹೊಯ್ದೊರಸಿ ಬನದಲಿ ಬೀದಿವರಿದಾಡಿದನು ಕಲಿಹನುಮ (ತೊರರಾ. ೫-೯-೧೪).
[ಬೀದಿ + ವರಿ$_{2}$]

**ಬೀದಿವರಿ$_{2}$** (ನಾ). ೧. ಸಂಚಾರ; ಚಲನೆ: ಕಾದುಕೊಳ್ಳೆನುತೆಚ್ಚ ನಂಬಿನ ಬೀದಿವರಿ ಬಲುಹಾಯ್ತು (ಕುವ್ಯಾದ್ರೋ. ೧೯-೯); ಆದುದೀರ್ವರ್ಗೆ ಸಮರಂಗವಂಬಂಬುಗಳ ಬೀದಿವರಿಗಿಂಬಿಲ್ಲವಾಗಸಂ ಬೊಬ್ಬೆಯ ನಿನಾದಕಾಶಾ ತಟಂ ಸಾಲದು (ಕೆಬಿಪು. ೩೯-೧೧). ೨. ಸ್ವೇಚ್ಛೆಯಿಂದ ಕೂಡಿದ ನಡೆ; ಸ್ವಚ್ಛಂದವಾದ ಓಡಾಟ : ಬಿಟ್ಟ ಮಂಡೆಯು ಬೀದಿವರಿಗಳ ಕಟ್ಟುಲುಹು ಗಳ ತೆಗೆದ ಸರಕಿನ ಮೊಟ್ಟೆಗಳ . . . ಪುರಜನಪಱಿಳದೆಸೆಯಲಿ ಪಟ್ಟಣವ ಹೊಱಿಪಡುತಲಿರ್ದುದು (ತೊರರಾ. ೫-೬-೭೮). ೩. (ಅಲಂ) ಸ್ವೇಚ್ಛೆಯಿಂದ ಕೂಡಿದ ವರ್ತನೆ,—ನಡವಳಿಕೆ : ಆದುದಾವಿರ್ಭಾವ . . . ಇಂದ್ರಿಯದ ಬೀದಿವರಿಗಳ ಬಹಳವಿಷಯವಿಭೇದಸಹಿತ ದಿಗಾಂಶುಗೆ (ಶಿಶಾಗ. ೩-೩-೧೯). [ಬೀದಿ + ವರಿ$_{3}$]

**ಬೀದಿವರಿಗ** (ನಾ). ಮುನ್ನುಗ್ಗುವವನು; ಮುಂದಕ್ಕೆ ಧಾವಿಸುವವನು : ಬೀದಿವರಿಗರ[ಪಾಠಾಂ. ಳ] ಬೆರಳ ಸೋಂಕಿನಲಿ ತಳಪುಗುಬಿದವು ತೋರ ಗಿರಿ . . . ಕಡುಹೆಂತೊ ಕಪಿರಾಜೇಂದ್ರಸೈನಿಕದ (ತೊರರಾ. ೬-೫-೧೩).
[ಬೀದಿವರಿ$_{1}$ + — ಗ$_{2}$]

**ಬೀದಿವರಿಯಿಸು, ಬೀದಿವರಿಸು** (ಕ್ರಿ). ೧. ಹಬ್ಬಿಸು; ಹರಡುವಂತೆ ಮಾಡು : ಪಲ್ಲವದ ಶೋಭೆಯಂ ಪಳಚ್ಚನೆ ಮೆಱೆವ ಬಾಲಗಚ್ಚೆಯ ಬೆಳ್ದಿಂಗಳಂ ಬೀದಿವರಿಯಿಸುವ ಪೊಸಮುತ್ತುಗಳ ಮೊತ್ತದಿಂ (ಶಾಂತೀಶ್ವ. ೭-೯೩ ವ). **ಬೀದಿವರಿಸು** : ೨. ಬೀದಿಯಲ್ಲಿ ನಡೆಸು,—ಸಾಗುವಂತೆ ಮಾಡು : ತೇಜಿಗಳನು ಕುಣಿಸುವರು ಕಲಭವನು ಮಾಜದೆ ಬೀದಿವರಿಸುವ ರಾಜಕುಮಾರರ . . . ಸೌಭಾಗ್ಯ ನೆಱೆ ವಿಭ್ರಾಜಿಸಿತಾ ಕೇರಿಯೊಳಗೆ (ಕಂಸವಿ. ೭-೧೧). ೩. ಮುಂದೆ ನುಗ್ಗುವಂತೆ ಮಾಡು.—ಧಾವಿಸು ವಂತೆ ಮಾಡು; ಮುನ್ನುಗ್ಗಿಸು : ಕರಿಗಳ . . . ದುರಗಲಿ ಜೋದರು ಬೀದಿವರಿಸುತಾಗಳುರವಣಿಸಿದರಾಕ್ಷಣದೆ (ಕಂಸವಿ. ೦೬-೯೩).
[ಬೀದಿವರಿ$_{1}$ + — ಇಸು$_{3}$]

**ಬೀದಿವರಿವರಿ** (ಕ್ರಿ). ಮುಂದೆ ನುಗ್ಗು; ಧಾವಿಸು : ಅಹಿತಕುಮಾರಶತಕವ ತಲೆಯುನರಿವೆನು ಸುರರುಘೋಯೆನೆ ಬೀದಿವರಿವರಿದು ಗೆಲವ ಸೂಱೆಯು ಕೊಂಬೆನು (ಕುವ್ಯಾದ್ರೋ. ೫೦. ೨೭೯). [ಬೀದಿವರಿ$_{2}$ + ವರಿ$_{2}$]

**ಬೀದಿವರಿಸು** 'ಬೀದಿವರಿಯಿಸು' ನೋ.

**ಬೀದಿವಱೆ** (ನಾ). ಬೀದಿಯಲ್ಲಿ ಬಡಿಯುವ ತಮಟೆ; ರಸ್ತೆಯಲ್ಲಿ ಬಡಿಯುವ ಡೋಲು : ಪಂಡಿತರುಂ ವಿವಿಧಕಳಾಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ಕಂಡರ್ ಕೇಳ್ವೊಡೆ ಗೊರವರ ಡುಂಡುಬಿಯೋ ಬೀದಿವಱೆ[ಪಾಠಾಂ. ರಿ]ಯೊ ಬೀರನ ಕತೆಯೋ (ಶಬ್ದಸಾ. II. ೪೧ : ರಘುಸಾ. ೧-೫೭ ನೋ). [ಬೀದಿ + ಪಱೆ$_{1}$]

**ಬೀದಿವಾಡ** (ನಾ). ಬೀದಿಯ ಎರಡುಕಡೆಗಳಲ್ಲಿ ಇರುವ ಸೌಧ,—ಮಹಡಿಮನೆ : ಮುಂಡಾಡುವಂತಾಗಸಕೆ ನೆಗೆದ ಬೀದಿ[ಪಾಠಾಂ. ನೆಲೆ] ವಾಡಂಗಳ (ಕಬ್ಬಿಕಾ. ೦೮). [ಬೀದಿ + ವಾಡ$_{1}$]

**ಬೀದಿವಾಡು** (ನಾ). ೧. ಬೀದಿಯಲ್ಲಿ ಹೇಳುವ ಹಾಡು : ಪ್ರೌಢವಲ್ಲದ ಕಾವ್ಯ: ನೀರಸರಱಿವಂತೇನಿದು ತಾರೆಲೆಯೋ ಬೀದಿವಾಡೆ ನೆರವಿಯ ತುಮುಕೇ (ಗಿರಿಳ. ೧-೩೧); ಮಹಾಮಹಾಪಂಡಿತರ ಸಭೆಯಲ್ಲಿ ಈ ಬೀದಿ ವಾಡು ? (ತುಂಗಭ. ೬೨). ೨. ಸಾಮಾನ್ಯಜನರು ಹಾಡುವ ಹಾಡು; ಜನಪ್ರಿಯವಾದ ಹಾಡು : ಅವರು ಬೀದಿವಾಡುಗಳನ್ನು ಬರೆದಿದ್ದಾರೆಯೋ ? (ಚತ್ರಸ್ವ. ೫೦ ಮುನ್ನುಡಿ). [ಬೀದಿ + ಪಾಡು$_{2}$]

**ಬೀದಿಸುದ್ದಿ** (ನಾ). ೧. ಬೀದಿಯಲ್ಲೆಲ್ಲ ಹರಡಿರುವ ಸಮಾಚಾರ; ಎಲ್ಲರೂ ಮಾತಾಡಿಕೊಳ್ಳುವ ಸುದ್ದಿ : ಹಾದಿಸುದ್ದಿ : ನಗರವಲ್ಲೆಲ್ಲ ಬೀದಿಸುದ್ದಿಯಾಗಿ ಹರಡುತ್ತಿದ್ದ . . . ಅವನ ಮತ್ತು ಕಾತ್ಯೂಷಳ ವಿವಾಹವಿಷಯ (ಪುನರು. ೯೧೯). ೨. ನಿರಾಧಾರವಾದ ಸಂಗತಿ,—ಸುದ್ದಿ; ವದಂತಿ; ಗಾಳಿವರ್ತಮಾನ: "ವದಂತಿ. ಗಾಳಿಸಮಾಚಾರ; ಬೀದಿಸುದ್ದಿ" (cry. ಇಂಕಿಂ). [ಬೀದಿ + ಸುದ್ದಿ]

**ಬೀದಿಹೋಕ** (ನಾ). (ಅಲಂ) ನಾಡಾಡಿ; ದಾರಿಹೋಕ : ಅತ್ಯಮೂಲ್ಯ ದಿವ್ಯರತ್ನದ ಬೆಲೆಯನ್ನು ಒಪ್ಪ ಸಾಮಾನ್ಯ ಬೀದಿಹೋಕ. ಕೇವಲ ನಾಡಾಡಿ ಅರಿಯಲಾರ (ತುಂಗಭ. ೨೩). [ಬೀದಿ + ಹೋಕ (<ಪೋಕ)]

**ಬೀಬಿ. ಬಿಬ್ಬಿ** (ನಾ). ೧. ಮುಸಲ್ಮಾನ ಹೆಂಗಸು : (ಅ). ೨. ಹೆಂಡತಿ; ಪತ್ನಿ : ಜುಟ್ಟುಳ್ಳ ನೊಟಿನ ಪಾರಿವಾಳಗಳು. ದೊಡ್ಡ ಸಾಹೇಬನ ಬೀಬಿಗಳು . . . ಇದೆಲ್ಲಾ ಸ್ವಪ್ನದಂತೆ (ಶಿಬಿಂರ. II. ೩೭೨); ನೀನೂ ನಿನ್ನ ಬೀಬಿಯೂ ಮಕ್ಕಳಿಗಾಗಿ ಹಂಬಲಿಸುತ್ತಿದ್ದಿರಿ (ಮುಂಗಾರು. ೫). ೩. ರಾಣಿ; ಅರಸಿ : ಈ ಮಗು ಕಣ್ಣೂರ ಬೀಬಿಯದು (ರಾಜೇಂದ್ರ. ೬೫). **ಬಿಬ್ಬಿ** : ೩. ಬಿಬ್ಬಿಯರ ಮೋಹರದೊಳು ಬಂದನಂದೋಲಗಕತಿವೇಗದೊಳು (ಕುರಾಸಾಂ. ೯೦-೨); ಆನೆಯ ಮೇಲೆ ತೊಟ್ಟಿಲ ಚಪ್ಪರದಲಿ ಸುಮ್ಮಾನದ ಬಿಬ್ಬಿಯ ರೊಡನೆ ಆನಂದವಾಡುತ ಬರುವ ಖಾನರುಗಳನೇನ ಬಣ್ಣಿಸುವೆನು (ಕಂಸವಿ. ೧೧-೩೦). [←ಪಾರ. ಬೀಬೀ; ಹಿಂ. ಬೀಬೀ. ಬೀವೀ; ಮರಾ. ಬಿಬೀ, ಬಿಬ್ಬೀ. ಬುಬೂ]

**ಬೀಭತ್ಸ** (ಗು). ೧. ಅಸಹ್ಯಕರವಾದ; ಜುಗುಪ್ಸೆಗೊಳಿಸುವ; ಹೇಸಿಕೆ ಯನ್ನುಂಟುಮಾಡುವ : ತಲೆಗಳೊಟ್ಟಿಲ ಕರಿಗಳಟ್ಟೆಯುನೆಳೆವ ರಕುತದ ಹೊನಲ ಮುಂಡದ ಲಳಿಯ ನಾಟ್ಯದಲೆಸೆದುದೈ ಬೀಭತ್ಸರೌದ್ರವಲಿ (ಕುವ್ಯಾಕ. ೦೫-೨೭). ೨. ಹಾನಿಕರವಾದ; ಕೇಡುಂಟುಮಾಡುವ. ೩. ಭಯಂಕರವಾದ; ಭೀಕರವಾದ; ಘೋರವಾದ. (ನಾ). ೪. ಅಸಹ್ಯ; ಜುಗುಪ್ಸೆ; ಹೇಸಿಕೆ : ನಕ್ತಂಚರರ ರುಧಿರಪಾನಕ್ಕೆ ಬೀಭತ್ಸ . . . ಎನಿಸಿದ ಹಿಮಕರನೆಸೆದಿರುತ್ತಿರ್ದನು (ಹಕಶಾ. ೩-೪೫); ಇಷ್ಟ ಮೋಹಕ ದಿವ್ಯಗುಣಗಳೊಂದು ಕಡೆ ಕಷ್ಟ ಬೀಭತ್ಸ ಘೋರಂಗಳ ನ್ನೊಂದು ಕಡೆ (ಮಂಕುಕ. ೨೩). ೫. ಅಸಹ್ಯಕರವಾದುದು; ಜುಗುಪ್ಸೆ ಯನ್ನುಂಟುಮಾಡುವಂಥದು : ಪಂಡಿತರು . . . ಒಂದು ಹಿಂದಿನ ಕಾಲದ ಪಂಡಿತ—ರಸಿಕತೆಯನ್ನು ಪ್ರಯೋಗ ಮಾಡಿದರು. ಅದು ಸ್ವಲ್ಪ ಬೀಭತ್ಸವಾಗಿತ್ತು (ಬಿಂಶಿನು. XXVi ಕವಿಶಾಹಿಕ). ೬. = ಬೀಭತ್ಸರಸ :

ವೀರ . . . ಬೀಭತ್ಸ ಮಹಾಸಾರತರಹಾಸ್ಯ ಶಾಂತಾಧಾರಂ ನವವಿಧವಿಟ್ಟುಮಾ ರಸಮಾರ್ಗಂ (ಶಬರಾ. ೩-೦೮೮); ಕೃತ ಜುಗುಪ್ಸಸಂ ಬೀಭತ್ಸಂ (ಕಾವ್ಯಾವ. ೮೨೦): ಬಳಿಕ ಶೃಂಗಾರ ಹಾಸ್ಯ . . . ಬೀಭತ್ಸಾಗ್ಭುತ ಶಾಂತಂಗಳೆಂಬ ನವರಸಾವಸ್ಥೆಯಂ ಪಡೆವುತ್ತಿರ್ಪುದೆಂಬ ರಸಜ್ಞತೆಯಿಂ (ಏಪೀಕ. ೨೨೭). ೭. [ನಾಟ್ಯ] ಎಂಟು ಬಗೆಯ ರಸದೃಷ್ಟಿಗಳಲ್ಲಿ ಒಂದು ; P "ಅಲಿಯನ್ನೂ ರೆಪ್ಪೆಯನ್ನೂ ಚಲಿಸಿ ರೆಪ್ಪೆಯನ್ನು ಅರ್ಧ ಮುಚ್ಚಿ ಕಡೆಗಣ್ಣಿನಿಂದ ನೋಡುವುದು . . . ಜುಗುಪ್ಸೆಯನ್ನು ಅಭಿನಯಿಸುವಾಗ" (ಅಸ್ಕರಂ. ಗದ್ಯಾನುವಾದ ೨೬೭): ಮಿಗೆ ಚಲಿಸೆ ತಾರೆ ಮತ್ತಂ ಮುಗುಳ್ದವೆ ನೋಡಲ್ಕೆ ನಿಲ್ಲದಿರ್ದಾಪಾಂಗಂ ಸೊಗಯಿಪ ಬೀಭತ್ಸಾಖ್ಯಂ ನೆಗಳ್ದಂ ಸಲೆ ದಿಟ್ಟಿ ಮದನಮೋಹನರೂಪೇ (ಅಸ್ಕರಂ. ೩-೦೭). [ ಸಂ. ]

**ಬೀಭತ್ಸರಸ** (ನಾ). [ಕಾವ್ಯವಿ] ಶೃಂಗಾರ, ಹಾಸ್ಯ. ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ ಮತ್ತು ಶಾಂತ ಎಂಬ ಒಂಬತ್ತು ಬಗೆಯ ರಸಗಳಲ್ಲಿ ಒಂದು ; ಜುಗುಪ್ಸೆಯ ಅನುಭೂತಿ ; ಅಸಹ್ಯದ ಅನುಭವ : ಉತ್ಸವದಿಂದೆ ಹಾಸ್ಯರಸಮಾಮಧುರೋಕ್ತಿಗಳಿಂದಮಲ್ತೆ ಬೀಭತ್ಸರಸಾಂತರಂ ಶಿಥಿಲ ಬಂಧನದಿಂ (ಶಬರಾ. ೨-೦೦೦) ; ಪುಲ್ಲಂ ಕರ್ಚಿ ಕೊಲ್ಲದಿರೆಂದು ಪಲತೆಱದ ನಾಣಂ ತೊಱೆದು ಬೆಂಗೊಟ್ಟೋಡಿದಿಂದ್ರನೋಟವಮನಭಿನಯಿಸಿಯಾಡಿ ತೋರ್ಪ ವೈತಾಳಿಕರಿಂ ಬೀಭತ್ಸರಸಮುಂ ಇಂತು ನವರಸಂಗಳಿಂದಭಿನವರಸಂಗಳಾಗಿ ನೆಗೞುತ್ತುಮಿರೆ (ಜಗಪು. ೨-೩೯ ವ). [ಸಂ.]

**ಬೀಭತ್ಸ** (ಗು). ೧. ಭೀಕರವಾದ ; ಭಯಂಕರವಾದ ; ಘೋರವಾದ; ಭಯಾನಕವಾದ : ಕಾಕೋಳೂಕಸೃಗಾಲಶಾರ್ದೂಲೋಷ್ಟ್ರಖರಮುಖಂಗಳನನುಕರಿಸುವ ಮಹಾ ಬೀಭತ್ಸಕುತ್ಸಿತೋತ್ಪತ್ತಿಸ್ಥಾನಂಗಳೊಳ್ (ಸುಕುಮಾ. ೦೦-೪೦ ವ). (ನಾ). ೨. ಅಸಹ್ಯಕರವಾದುದು ; ಜುಗುಪ್ಸೆಯನ್ನುಂಟು ಮಾಡುವಂಥದು : ಬಹುಮಲಪರಿಪೂರ್ಣಮುಮನವರತ ನಿಷ್ಯಂದಶ್ರೋತಾಖಿಲಗಂಧಿಯುಂ ಅತಿಬೀಭತ್ಸುವುಂ . . . ಅಪ್ಪುದು (ಅಜಿಪು. ೮-೨೮ ವ). ೩. ಅರ್ಜುನನ ಹೆಸರುಗಳಲ್ಲಿ ಒಂದು : ಬೀಭತ್ಸುವಿನ ಕೈ ಮನದಳವನಱಿಯಾ ಕಂಡು ಕಂಡು ಕಾಣುತ ಮರಳಹರೆಯಿಂದ (ಕುವ್ಯಾಉ. ೩-೦೩೪) ; ಉತ್ಸವದೊಳಧ್ವರಹಯಂ ಮುಂದೆ ನಡೆಯೆ ಬೀಭತ್ಸು ಮೊದಲಾದನುಜರೆಡದೊಳಡಿಯಿಡೆ (ಕೃಬಂಭಾ. ೬-೨೩). [ಸಂ.]

**ಬೀಮ**, ಬೀವ (ಗು). ೧. ಭಯಂಕರವಾದ ; ಭೀಕರವಾದ : (೬). (ನಾ). ೨. ಪಂಚಪಾಂಡವರಲ್ಲಿ ಎರಡನೆಯವನು ; ಭೀಮ : ಭೀಮ–ಬೀಮ (ಶಮದ. ೨೩೩ ಪ್ರಯೋ). ೩. ಒಬ್ಬಾತನ ಹೆಸರು: ಬೀಮಗೋಸಾಸಿ ನಿಱಿಸಿದ (ಎಕ. VII, ಶಿಕಾ೦. ೬೦-೦೦; 978); ಮೊರಮೊರಡೆಯ ಮಗ ಬೀಮನ ಧರ್ಮ (ಎಕ. XIV, ಎಳೆಂದೂ. ೭೯-೨ ; 16ನೆಯ ಶತ). **ಬೀವ** : ೨. ಭೀಮ_ಬೀವ (ಶಮದ. ೨೬೩ ಪ್ರಯೋ). ೩. ಬಿಟ್ಟಿಗ ನಟ್ಟ ವುಣ್ಣಿಗೆಯ್ಯೆ ಶೇಶಿಗಳ ಬೀವನುಗ್ಗವುಣ್ಣಿಂಗೆಯ್ಯೆ (ಎಕ. VIII. ಸೊರಬ. ೨೦೨-೪ ; 956). [< ಸಂ. ಭೀಮ]

**ಬೀಮಯ** (ನಾ). ಒಬ್ಬಾತನ ಹೆಸರು : ಬೀಮಯ ಗಂಡಕ್ಕಂ ಕೊಟ್ಟು (ಎಕ. IV, ಗುಂಡ್ಲುಪೇ. ೮೭-೦೩; ಸು. 750). [ಬೀಮ+ ಅಯ್ಯ$_1$ (<ಅಯ್ಯ$_{61}$)]

**ಬೀಮಾ** 'ವಿಮೆ' ನೋ.

**ಬೀಮಾದಸ್ತೈವಜು** (ನಾ). ವಿಮೆಯ ದಾಖಲೆ, – ಕರಾರುಪತ್ರ : ಮರಣದ ಅಥವಾ ನಷ್ಟದ ರುಜುವಾತನ್ನು ಇನ್‌ಷ್ಯೂರರುಗಳೆಂಬ ಬೀಮಾ ದಸ್ತೈವಜು ಮಾಡಿಕೊಡುವವರಿಗೆ ಕೊಟ್ಟುಕೊಡಲೇ (ಗ್ರಾಮಾಕ. ೦೬೭).

[ಬೀಮಾ (< ವಿಮೆ) + ದಸ್ತೈವಜು (<ದಸ್ತಾವೇಜು) ]

**ಬೀಯ$_1$** (ನಾ). ೧. ಅಕ್ಕಿ : ಮಂತ್ರಾಕ್ಷತೆಯ ನಿವಹದಿಂ ಸಪ್ತಲಕ್ಷಪ್ರವಾಳೀಪುಜೆಗಂ ಬೀಯಮಂ ಕರಂ ತಾನೆನಲಧಿಕತರಾಲಂಕೃತಂ ಕೌರವೇಂದ್ರಂ(ಕಾವ್ಯಸಾ. ೪೦೦) ; ಕಾಯಕವ ಮಾಡಿಯದ ಮಾಱಿದಾ ಧನದಿಂದ ಬೀಯಮಂ ತಂದು ಬೋನವ ಮಾಡಿ ಚರಲಿಂಗ ಕಾಯಕದಿಯಾರೋಗಣೆಯ ಮಾಡಿಸಿದನು (ಬಶಿಪು೦. ೩೮-೪೮). ೨. ಆಹಾರ ; ಊಣಿಸು : ಬೆವಸಾಯವ ಮಾಡಿ ಮನೆಯ ಬೀಯ[ಪಾಠಾಂ. ಬಿಯ್ಯ]ಕ್ಕೆ ಬತ್ತವಿಲ್ಲದಿರ್ದಡೆ ಆ ಬೆವಸಾಯದ ಘೋರವೇತಕಯ್ಯ (ಅವಚಂ. ೧೭-೬೩) ; ನೀನಿಕ್ಕಿದ ಬೀಯದಲ್ಲಿ ವಂಚನೆಯುಳ್ಳರೆ ಸಂಗಾ ನಿಮ್ಮ ತೊತ್ತುತನಕ್ಕೆ ದೂರವಯ್ಯಾ (ಬಸವ. ೪೩೩) ; ಅಮೃತವೇ ಮನೆಯ ಬೀಯ (ಹಪಶಾ. ೨-೧). ೩. ಔತಣ; ಭೋಜನ : ಅರಸ ಹೊಱವಡು ಭೀಮ ಪಾರ್ಥರ ಕರುಳ ಬೀಯವ ಭೂತನಿಕರಕೆ ಬಡಿಸುವೆವು (ಕುವ್ಯಾಗ. ೪-೩೩) ; ರಾಯಸವನು ಕೊಟ್ಟು ಬೀಯಮನೊಲಿದಿತ್ತು ರಾಯನವನ ಬೋಳೈಸಿ (ಅಂಜಪ. ೬-೦೦). ೪. ಸಮಾರಾಧನೆ : ಸೌಂದರಂ ಪರವೆಯಲ್ಲಿಗೆ ಬಂದು ತಿರುನಾಳ ಬೀಯ[ಪಾಠಾಂ. ಬಿಯ್ಯ]ಕ್ಕೆ ಪುರಕೆ ಪೋದಪೆನೆಂದು ನುಡಿಯೆ (ನಂಬಿರ. ೧೭-೬೪) ; ನೆರೆಯದೇ ಸ್ವಾಮಿ ಈ ಪೊಸ ಪೊನ್ನ ರಾಶಿ ಸುರಗಿರಿಯಂತಿರಿದೆ ಪರವೆನಾಚಿಯರ್ಗಾನೀವ ತಿರುನಾಳ ಬೀಯಕ್ಕೆನುತ್ತ ಸೌಂದರನು ಬಿನ್ನೈಸೆ (ಸೌಂದಪು. ೦೦-೦೭). ೫. (ಧಾನ್ಯರೂಪದಲ್ಲಿ ಕೊಡುವ) ಒಂದು ಬಗೆಯ ತೆರಿಗೆ; ಸುಂಕ : ಬಿಟ್ಟ ಬೀಯಂ ಈನ್ನಿವಱ (ಬೊಂಕಶಾ. ೦೧೩೫, ರಾಚಶಪ್ಪೂರು. ೬-೨೦ ; 955); ಈ ಬಸದಿಯ ವೃತ್ತಿಯೆಲ್ಲವಕ್ಕಂ ದೇವಿದೆಱೆ ಅಡೆಗಟ್ಟ್ರ ಕಾಣಿಕೆ ಸೇಸೆ ಬಿಮ್ದ ಬೀಯ ಮೊದಲಾಗೆ . . . ಸರ್ವ್ವಬಾಧಾಪರಿಹಾರವಂ ಮಾಡಿದರ್ (ಎಕ. VIII, ನಗರ. ೩೭-೦೫೫ ; 1077).

[ದೇ.॥ ತಮಿ. ವೀಯ ; ತೆಲು. ಬೀಯು, ಬಿಯ್ಯ ; ಕೋಲಾ. ಬೀಯುವ್./ಪ್ರಾ. ಬೀಅ./ಹಿಂ. ಬೀಯಾ./ಸಂ. ಬೀಜ]

**ಬೀಯ$_2$** 'ಬಿಯಗ' ನೋ.

**ಬೀಯ$_3$** 'ಬಿಯ' ನೋ.

**ಬೀಯಂಗೆಯ್** 'ಬಿಯಂಗೆಯ್' ನೋ.

**ಬೀಯಕಾಱ** 'ಬಿಯಕಾಱ' ನೋ.

**ಬೀಯಗ$_1$** 'ಬೀಗ'$_1$ ನೋ.

**ಬೀಯಗ$_2$** 'ಬಿಯಗ$_2$' ನೋ.

**ಬೀಯಗತನ** 'ಬಿಯಗತನ' ನೋ.

**ಬೀಯಗಿತ್ತಿ** 'ಬೀಗಿತ್ತಿ' ನೋ.

**ಬೀಯದ** 'ಬ್ಯಾದ' ನೋ.

**ಬೀಯು** 'ಬೀ' ನೋ.

**ಬೀಯ್ಯಗ$_1$** 'ಬೀಗ$_1$' ನೋ.

**ಬೀಯ್ಯಗ$_2$** (ನಾ). (?) : ಹುಯಿಯೆ ಬೀಯ್ಯಗವನು ಕಾಲ್ವಿಡಿಯೆ ಜನನ ಪೆತ್ತ ಹರಿಹರ ವರಗುಡು ಮತಿಗೆ (ದೇವಾಂಕು. ೦-೮೭). [?]

**ಬೀಯ್ಯಗಮುದ್ರೆ** 'ಬೀಗಮುದ್ರೆ' ನೋ.

**ಬೀರ್$_1$** 'ಬೀಱು$_1$' ನೋ.

**ಬೀರ್$_2$** 'ಬೀರು$_2$' ನೋ.

**ಬೀರ** (ನಾ). ೧. ವೀರ ; ಶೂರ ; ಕಲಿ : "ಬೀರರೆನಲ್ ವೀರರೊಳಂ" (ಶಬ್ದಾಶಾ. ೯೨); ಕುರುಬಲದೊಳ್ ಕರಂ ನೆಗಟ್ದ ಬೀರರ ಚೆನ್ನರ ಸಂದ ಚೆನ್ನಪೊಂಗರ ತಲೆ ತಾಟಪಣ್ ಕೆದಱಿದಂತೆ ನಿರಂತರಮಾಜಿರಂಗದೊಳ್ ಪರದಿರೆ (ಪಂಪಭಾ. ೬-೦೦೭) ; ಬೀರರ್ ದಾರಿಗೆಟ್ಟರಂತೆ ಬೆದಱೆ (ರವಾರ್ಜುಮ. ೨-೯೯). ೨. ಶೌರ್ಯ ; ಕಲಿತನ : ಕುಲಮೆಂಬುದುಂಟೆ ಬೀರಮೆ ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ (ಪಂಪಭಾ. ೨-೮೩); ಮರುಳ್ಗಣಸಾಗಿ ಯುದ್ಧದೊಳ್ ಕುಱಿದಱಿಯಾಗಿ ಬಿಟ್ಟರಿಬಲಂಗಳೆ ಪೇಟಿವೆ ನಿನ್ನ ಬೀರಮಂ (ಗದಾಯು. ೨-೩). ೩. ಒಬ ದೇವತೆಯ

ಹೆಸರು ; ವೀರಭದ್ರ : "ಜನ್ನವಗೆಯಂ, ಎಂಟಡಿವರಿಜಂ, ಬೀರಂ . . . ಈ ೫ ವೀರಭದ್ರಂಗೆ ಪೆಸರ್" (ಕಠಶಾ. ೪೭-೬) ; ಉರಿಗಣ್ಣಿನೊಗೆದ ಬೀರಂಬೆರಸೊಪವಿದ ನಂಜುರೂಪುವೆತ್ತವೊಲೇನಚ್ಚರಿಯಂ ಪುಟ್ಟಿಸಿದರೊ ಬಂದೆರಡುಂ ಕೆಲದಲ್ಲಿ ನಿಂದ ಬೀರ ಗಣೇಸರ್ (ಕಪ್ಪಶಾ. ೧೬೦) ; ಭೈರವ ಬೊಮ್ಮರಕ್ಕಸ ಕಾಳ ಜಟ್ಟಿಗ ಬೀರ ಬೇತಾಳರಾರೊಳರು ಬೀರತ್ತೆಯುಳ್ಳವರ್ಗಳು ನಿನ್ನಸುಗಾವೊಡಾರಾದರುಮಡ್ಡ ಬರಲಿ (ತ್ರಿಶಾಂ. ೯-೫೯). ೪. ಈಶ್ವರ : ತುಳುವದಲ್ಲಿ ಜೈನಧರ್ಮಾವಲಂಬಿಗಳೂ ಈ ಭೂತಾರಾಧನೆಯ ಕಟ್ಟಿಗೆ ಒಳಪಡಬೇಕಾಯಿತು. ರಕ್ತೇಶ್ವರಿಯೂ (ಲೆಕ್ಕೆಸಿರಿ), ಈಶ್ವರನೂ (ಬೀರ) ತುಳುವದ ಪ್ರಧಾನದೈವತಗಳು (ತುಳುನಾ. ೨೫೪). ೫. ಒಬ್ಬಾತನ ಹೆಸರು : ಆತನ ಮಗ ಬೀರನೆಂಬೋನು ಗಾದಿಂಗಾಯಿಗನುಮಾ ಕಲ್ಲನಿಱಿಸಿದ (ಎಕ. VIII, ಸೊರಬ. ೨೦೬-೯ ; 903) ; ಮಾರಸಂದ್ರ ಕೆಯ ಕೊಟ × ಗಳವೆಯ ಬೀರ ಕೊಟ (ಎಕ. II (R), ೬೨-೨ ; ಶ. 1150).

ಬೀರದೇಟ್ಟ, ಬೀರದೇಳ್ಗೆ = ಪೌರುಷದ ಏಳಿಗೆ, —ಅಭಿವೃದ್ಧಿ : ಚಾಗದ ನೆಗೞ್ತಿಯೊಳ್ ಬೀರದೇಟ್ಟಿಯೊಳ್ ನೆಗೞ್ ಮಗಂ (ಶಂಶಶಾ. ೧-೪೨) ; ಕಂತುಗೆ ಪೂಜಾರ್ಥಮಿದೆಂದು ಸುಯ್ಗೞಗುವುನ್ಮತ್ತಾಳಿಯಿಂ ಬೀರದೇಟ್ಟಿಗಳಂ ಪಾಡಿಸುತುಂ ಜಯಧ್ವಜಮನೆತ್ತಿರ್ಪಂತಿರ್ದ ಮಾಲೆಗಳಿಂ ತೋಳ್ಗಳುವೊಪ್ಪೆ ಕಣ್ಗೊಳಿಸುತಿರ್ಕುಂ ಪುಷ್ಪಲಾವೀಜನಂ (ಜಗಾ. ೯-೧೧೩); ಭುಜಾಸಿಯೊಳೊಪ್ಪಿರೆ ಬೀರದೇಳ್ಗೆಯೊಳ್ (ಸೌಇ. IX-i, ೧೧೨-೧೧ ; 1046) ; ಚೋಳನೆ ಪೇಳನೆ ಬೀರದೇಳ್ಗೆಯಂ (ಕಇಕ. ೨-೨-೩೩ ; 1058). ಬೀರರ ಬಂಟ = ಪರಾಕ್ರಮಿಗಳಲ್ಲಿ ಪರಾಕ್ರಮಿಯಾದವನು ; ವೀರರ ವೀರ ; ಒಂದು ಬಿರುದು : × ಬಂಬಕುಲಾನ್ತಕ ಬೀರರ ಬಣ್ಟ ಪರಿಕರ ನಕಿಗಂ (ಎಕ. II (R), ೪೯-೦; ಶ. 10ನೆಯ ಶತ). ಬೀರರ ಬೀರ = ಬೀರರ ಬಂಟ : ಶ್ರೀಗೆ ವಿಜಯಕ್ಕೆ . . . ಪೆಂಪಿಂಗಿನಿತಕ್ಕಾಗರಮಿದೆನ್ದು ಕನ್ದುಕದಾಗಮದೊಳ್ ನೆಗೞ್ಗಮಲ್ತೆ ಬೀರರ ಬೀರ (ಎಕ. II, ೧೩೩-೬೬ ; 982); ಚತುರ್ಬಲಂಗಳ್ ಮೆಯ್ಗಳೊಳ್ ಬಗಿದಸುಂಗೊಳೆ ಸುಯ್ದು ಕೆತ್ತುವ ಪುಣ್ಣ ಬಾಯ್ಗಳೆ ಬೀರಮಂ ಪೊಗೞ್ವ ಬಾಯ್ಗಳೆನಿಪ್ಪುವಣ್ಣನ ಪೆಂಪು ಬೀರರ ಬೀರನಾ (ಕಾವ್ಯಾವ. ೩೫). ಬೀರೇ ದೇವರು = ವೀರಭದ್ರ : ಅದೇನು ಜಾತಿ ಹೆಣ್ಣಪ್ಪ ಇದು. ಮಸಾಣದ ಬೀರೇದೇವರನ್ನಾ ಮಾದೇವಪ್ಪನ ಮಾಡೋ ಜಾತಿ (ಮಲ್ಲ. ೧೨) ; ಮಾರಮ್ಮನಿಗೆ ಗಂಡನಿಲ್ಲ, ಬೀರೇದೇವರಿಗೆ ಹೆಂಡತಿಯಿಲ್ಲ (ಗಾದೆ). [< ಸಂ. ವೀರ]

**ಬೀರಕಡಗ** (ನಾ). ಶೌರ್ಯದ ಗುರುತಿಗಾಗಿ ಧರಿಸುವ ಕೈಬಳೆ ; ವೀರ ಕಂಕಣ: ಬರೆವ ಕೆಯ್ಯ ಗಂಡುಗೆಡದೆ ಬೀರಕಡಗ ತೊಟ್ಟಿತು (ಗಂ. ೪೨-೦೩). [ಬೀರ + ಕಡಗ$_1$]

**ಬೀರಕಲ್** 'ಬೀರಗಲ್ಲು' ನೋ.

**ಬೀರಕ್ಕ** (ನಾ). ಒಬ್ಬಾಕೆಯ ಹೆಸರು : ಬೀರಕ್ಕನ ಮಗಂ ಎಱೆಕಳಿಂಗಂ (ಮ್ಯಾಆಂ. ೧೯೪೪, ೧೧-೦ ; ಶ. ೩ನೆಯ ಶತ). [ಬೀರ + ಅಕ್ಕ$_1$]

**ಬೀರಕ್ಕಿ** (ನಾ). (ವಿವಾಹಕಾಲದಲ್ಲಿ ವಧೂವರರಿಗೆ) ಮಂತ್ರಪೂರ್ವಕವಾಗಿ ತಳಿಯುವ ಅರಸಿನ ಅಥವಾ ಕುಂಕುಮದಲ್ಲಿ ಕಲಸಿದ ಅಕ್ಕಿ; ಮಂತ್ರಾಕ್ಷತೆ : (ಎಸವ್ಯ. II, ೨೯). [ಬೀರು (< ಬೀಱು$_1$) + ಅಕ್ಕಿ$_1$]

**ಬೀರಗಂಗ** (ನಾ). ಒಬ್ಬಾತನ ಹೆಸರು : ಗಂಗವಾಡಿಯ ತಿಗುಳರ ಬೆಂಕೊಣ್ದು ಬೀರಗಂಗಂಗೆ ನಿಮಿಚ್ಚಿ ಕೊಟ್ಟಂ (ಎಕ. II (R), ೫೬೦-೩೯; 10ನೆಯ ಶತ). [ಬೀರ + ಗಂಗ]

**ಬೀರಗಚ್ಚೆ** (ನಾ). ವೀರರು ಹಾಕಿಕೊಳ್ಳುವ ಒಂದು ಬಗೆಯ ಕಚ್ಚೆ; ವೀರಗಚ್ಚೆ ; ▸ ಮಲ್ಲಯುದ್ಧ ಮುಂತಾದ ಕಾಳಗಸಮಯದಲ್ಲಿ ಧರಿಸುವ, ಚಲನವಲನಕ್ಕೆ ಅಡ್ಡಿಯಾಗದಂತೆ ಉಡುಪನ್ನು ಬಿಗಿಗೊಳಿಸುವ ಕಚ್ಚೆ : ವಸುಧೇಶನ ಕಣ್ಗನಸುಂ ಮಿಸುಗುವ ಪೊಸಮಸೆಯ ಪೊನ್ನ ಕೂರಂಕುಸವಾಳಿಸಿ ಬರಿಯ ಬೀರಗಚ್ಚೆಯೊಳೆಸೆದುದು ಕಾರ್ಮುಗಿಲ ಕೆಲದ ಕುಡುಮಿಂಚಿನವೊಲ್ (ಶಂಪ್ರಪು. ೯-೯೦) ; ಪಂಚವಣ್ಣದ ಪಟ್ಟೆಯ ಬಿರುದಿನ ಬೀರಗಚ್ಚೆಗಟ್ಟಿರ್ದ ಪಿರಿಯ ನೇಜೆಯಮನೋಜೆಯಿಂದೆತ್ತಿ ಪಿಡಿದು ಸಮರಸಮಯಸಮುಚಿತನೈಪಥ್ಯಂಬಡೆದಬ್ಬರಿಸಿ ಬೊಬ್ಬೆಗೊಟ್ಟೇಱಿ (ರಾಜಶೇ. ೬-೧೧ ವ). [ಬೀರ + ಕಚ್ಚೆ]

**ಬೀರಗನಸು** (ನಾ). ವೀರೋಚಿತವಾದ ಕಲ್ಪನೆ : ತನ್ನ ಮಕ್ಕಳ ಬೀರಗನಸುಗಳುಬ್ಬುತಿರೆ ನಸುನಗುವಳು (ಹೊಂಗಳು. ೯ ೦೯). [ಬೀರ + ಕನಸು]

**ಬೀರಗಲು** 'ಬೀರಗಲ್ಲು' ನೋ.

**ಬೀರಗಲ್ಲು, ಬೀರಕಲ್, ಬೀರಗಲು** (ನಾ). (ಮಡಿದ) ವೀರನ ಸ್ಮಾರಕವಾಗಿ ನೆಡುವ ಕಲ್ಲು ; (ಸತ್ತ) ವೀರನ ನೆನಪಿಗಾಗಿ ನೆಡುವ ಕಲ್ಲು ; ವೀರಗಲ್ಲು ; ವೀರಶಾಸನ : ತುಱುವಂ ಮಗುಳ್ಚಿ ಸುರಲೋಕಪ್ರಾಪ್ತವಾದರು ಇ ಬೀರಗಲ್ಲ ಮಾಡಿಸಿದವನು ಪದು × × × (ಎಕ. XVI, ಶಕ್ಯನಾ. ೬೦-೬; 1124) ; ಚೆಂನೋಜ ಮಾಡಿದ ಬೀರಗಲ್ಲು (ಮ್ಯಾಆಂ. ೧೯೩೨. ೭-೦೭ ; 1289). **ಬೀರಕಲ್** : ಇ[ವ]ನ ತಮ್ಮ ಗಾವುಣ್ಡ ಸುವಿಲಂ ಬೀರಕಲ್ಲ ನಿಱಿಸ್ಸಿದ (ಎಕ. IV, ಹೆಗ್ಗಡ. ೭೩-೩೨; 1007 ?). **ಬೀರಗಲು** : ಅಂಕೋಜನು ದೇವಲೋಕಕ್ಕೆ ಸಲಬೇಕೆಂದು . . . ಪ್ರತಿಷ್ಠೆಯ ಮಾಡಿದ ಬೀರಗಲು (ಮ್ಯಾಆಂ. ೧೯೪೪. ೧-೭; 1286); ಆ ಬೀರಗಲಿಗೆ ಪೂಜೆ ಪುರಸ್ಕಾ × × × ತೊಗೊಡಗೆಯಾಗಿ . . . ಉದಕಧಾರಾಪೂರ್ವಕಮ್ಮಾಡಿ ಕೊಟ್ಟ ಗದ್ದೆ (ಎಕ. XVI, ಶಕ್ಯನಾ. ೭೯ ೧೧ ; ?). [ಬೀರ + ಕಲ್ಲು (<ಕಲ್$_3$)]

**ಬೀರಗಾಸೆ** (ನಾ). = ಬೀರಗಚ್ಚೆ : ಮೆಟ್ಟಿದ ಬಣ್ಣವಾವುಗೆಯ ಸಿಂಗರದುಟ್ಟ ಬೀರಗಾಸೆಯುಂದದ . . . ನಡೆವೊಂದು ಗಾಡಿಯ ಪುಷ್ಕಲಂ (ರಾಮಾಶ್ವ. ೪೯-೦೭). [ಬೀರ + ಕಾಸೆ$_1$]

**ಬೀರಗುಡಿ** (ನಾ). ಮೊರಸುಒಕ್ಕಲು ಪಂಗಡದವರು ವಿವಾಹಕಾಲದಲ್ಲಿ ಜರುಗಿಸುವ ಒಂದು ವಿಧಿ ; ▸ ಕೆಲವು ಮನೆತನಗಳಲ್ಲಿ ವಿವಾಹಕಾಲದಲ್ಲಿ ವರ ಮತ್ತು ಆತನ ಕಡೆಯವರು ಮೂರು ದಾರಿಗಳು ಕೂಡುವ ಜಾಗಕ್ಕೆ ಮಧ್ಯರಾತ್ರಿ ಹೋಗಿ, ಬೇಯಿಸಿದ ಆಹಾರವನ್ನು ಮನುಷ್ಯಾಕಾರದ ಚಿತ್ರಕ್ಕೆ ಅರ್ಪಿಸಿದ ನಂತರ ಯಾವ ಸದ್ದುಗದ್ದಲವಿಲ್ಲದೆ ಮತ್ತು ಹಿಂದಕ್ಕೆ ತಿರುಗಿ ನೋಡದೆ ಮನೆಗೆ ಮರಳುತ್ತಾರೆ. ಇದು ಯಾವುದಾದರೂ ಹಾನಿಕರವಾದ ಭೂತಪಿಶಾಚಿಗಳ ಶಾಂತಿಗಾಗಿ ಉದ್ದೇಶಿತವಾಗಿರುತ್ತದೆ (ಎಸವ್ಯ. XV, ೦೫). [?]

**ಬೀರಗೂಳ್** (ನಾ). ಯುದ್ಧದಲ್ಲಿ ಸತ್ತ ವೀರರ ಸಂಸ್ಸಾರದ ಪೋಷಣೆಗಾಗಿ ರಾಜ, ಸಾಮಂತ ಅಥವಾ ಊರಿನವರು ಉಂಬಳಿ ಅಥವಾ ದತ್ತಿಯನ್ನು ಬಿಟ್ಟು ಕೊಡುತ್ತಿದ್ದ ಒಂದು ವಿಧಿ : ಬೈಚೇನಾಯಕನು ಬೀರಗೂಳ ಮಾಡಿ ಕಲ್ಲ ನಿಲಿಸಿದ (ಎಕ. VIII, ಸೊರಬ. ೬೯-೧೧ ; 1147). [ಬೀರ + ಕೂಳ್ (< ಕೂೞ್$_1$)]

**ಬೀರಗೂಳೆತ್ತು** (ಕ್ರಿ). ಯುದ್ಧದಲ್ಲಿ ಸತ್ತ ವೀರನ ಸಂಸಾರದ ನಿರ್ವಹಣೆಗೆ ರಾಜ, ಸಾಮಂತ ಅಥವಾ ಊರಿನ ಜನರು, ದತ್ತಿಯನ್ನು ಬಿಟ್ಟು ಕೊಡು : ಹೆಲ್ಲಬ್ಬೆಯಿಡದ ಕೆಱೆಯಂ ಕಟ್ಟಿಸಿ ಪರೋಕ್ಷವಿನೆಯಂಗಳಂ ಮಾಡಿ ಬೀರಗೂಳೆತ್ತಿ ಕಲ್ಲ ನಿಱಿಸಿದಳು (ಎಕ. VIII, ಸೊರಬ. ೪೭೬-೯ ; 1112); ಕೇತಯನಾಯಕ ವೀರಭಟಂಗೆ ಬೀರಗೂಳೆತ್ತಿ ಕಲ್ಲ ನಿರಿಸಿ ಕೃತಾರ್ಥನಾದ (ಎಕ. VIII, ಸೊರಬ. ೫೨೫ ; 1152). [ಬೀರಗೂಳ್ + ಎತ್ತು$_1$]

**ಬೀರಜೇಗಟೆ** (ನಾ). ಯುದ್ಧದಲ್ಲಿ ಉಪಯೋಗಿಸುತ್ತಿದ್ದ ಜಾಗಟೆ : ಬೀರಜೇಗಟೆ[ಪಾಠಾಂ. ಜೇಘಂಟೆ, ಜಾಗಟೆ]ಯ ಬೆನ್ನ ಚಮರದ . . .

ಪದಾತಿವ್ಯೂಹದಿಂ (ಧಾಶಶೀ. ೬-೦೧ ವ).. [ಬೀರ+ಜೀಗಟೆ (<ಜೇಗಂಟೆ]

**ಬೀರಡವುಡೆ,** ಬೀರಡೌಡೆ (ನಾ). ಯುದ್ಧದಲ್ಲಿ ಉಪಯೋಗಿಸುತ್ತಿದ್ದ ಒಂದು ಬಗೆಯ ಚರ್ಮವಾದ್ಯ; ವೀರಡಿಂಡಿಮ: ಪೊಡೆವ ಬೀರಡವುಡೆ [ಪಾಠಾಂ. ಡೌಡೆ]ಯ ಪಿಂಗಾಲೊಳ್ಳಲ್ವ ಭಾರಿ ಸಂಕಲೆಯ . . . ಗಂಧಸಿಂಧುರಸಂದೋಹದಿಂ (ಧಾಶಶೀ. ೬-೦೦ ವ). **ಬೀರಡೌಡೆ** : ತಂಬಟದ ಪಟಹದ ಬೀರಡೌಡೆಯ . . . ಕಹಳೆಗಳ ರವಕಸುರಾರಿ ನಗುತಿರ್ದ (ಅಕ್ರೂಚ. ೭-೩೬). [ಬೀರ + ಡವುಡೆ$_1$]

**ಬೀರಡಿ** (ನಾ). ಒಬ್ಬಾತನ ಹೆಸರು : ಆನೆಸಾಸಲಾ ಬೀರಡಿಗಳು ಮಾರಡಿಗಳುಂ . . . ಇ ಪೊಲನಂ ನಡೆಯಿಸಿದೋರ್ (ಎಕ. XVI, ಗುಬ್ಬಿ. ೭೩-೩೬; 733). [ಬೀರ + ಅಡಿ$_1$]

**ಬೀರಡೌಡೆ** 'ಬೀರಡವುಡೆ' ನೋ.

**ಬೀರಣ$_1$** 'ವೀರಣ$_1$' ನೋ.

**ಬೀರಣ$_2$** (ನಾ). ಒಬ್ಬಾತನ ಹೆಸರು : ಹುಲಿಯ ಜಂಗುಳಿ ಬೀರಣನ ಮಗ ಮೂವಡಿ (ಎಕ. VIII, ಸೊರಬ. ೪೬-೩; 1018 ?). [ಬೀರ + <ಅಣ್ಣ$_1$]

**ಬೀರಣವಜಿ³** (ನಾ). ಒಂದು ಬಗೆಯ ಚರ್ಮವಾದ್ಯ : ಹತ್ತು ಚಂಬಕವಜಿ³ ಹತ್ತು ಬೊಂಬುಳಿಜುಂಚೆ ಹತ್ತು ಬೀರಣವಜಿ³ (ಶುಂಠಾಸಾಂ. ೪೦-೬೭). [ಬೀರಣ$_1$ (<ವೀರಣ$_1$) + ಪಜಿ³$_1$]

**ಬೀರಣಿಗ** (ನಾ). (?) : ಅವರಿಗೆ ಆರು ಸಹಾಯವಾಧಾರು ಅವರಿತ್ತಂಡವನೂ ಕೊಂದವನೇ ಬೀರಣಿಗ ಹಾಕಿದಗೆ ಮಂಗಳ ಜವಳಿ ಅವರಿತ್ತಂಡವು ನಾಡು ನಖರ ಪರಿವಾರಕೆ ಹೊರಗು (ಎಕ. V, ಬೇಲೂರು. ೭೩-೦೨೯; 1382). [?]

**ಬೀರಣೆ** (ನಾ). ಅಧಿಕಾರಸೂಚಕವಾದ ಆಸ್ಥಾನದ ಉಡುಪು (?) : ಕುಪ್ಪಸದ ಬೀರಣೆಯ ಬಿನ್ನಣದ ಹಸ[ನಿ]ಗಂ ಟೊಪ್ಪಿಗೆಯ ಹೊಜಿವೇಷದಿಹಪರದ ಲಕ್ಕಿಗಂ (ಬಸರ. ೩-೩೯); ಹೊಳೆವ ನವ್ಯಾಭರಣವೆಲ್ಲವಂ ನೆಜಿ³ ತೆಗೆದು ಪಳಿಯ ಬೀರಣೆ ಕುಪ್ಪಸಂಗಳಂ ಮಿಗೆ ಕಳೆದು (ಶೀಲಶ. ಹ. ೩೦೦-೪). [?]

**ಬೀರಣೆಗಾವುಂಡ** (ನಾ). ಒಬ್ಬಾತನ ಹೆಸರು : ಮಾಗರ ಬೀರಣೆಗಾವುಣ್ಡರ ಮಗಂ ಬಸವಯ್ಯಂಗೆ ಪಲ್ಲವಾದಿತ್ಯ ನೊಲಂಬಗಾವುಣ್ಡನೆಂದು ಪೆಸರಂ ದಯೆಗೆಯ್ದು (ಪ್ರ್ಎಂ. ೦೯೩೨, ೪೯-೦೦; ಸು. 960). [ಬೀರಣೆ$_2$ + ಗಾವುಂಡ (<ಗಾಮುಂಡ)]

**ಬೀರತಣೆ** (ನಾ). ಮಡಿದ ವೀರನ ಆತ್ಮಶಾಂತಿಗಾಗಿ ನೀಡುವ ತರ್ಪಣ: ಬಟ್ಟೆಯ ಕಣ್ಣೊಳು[ಳ್] ಕಲ್ಲನಿಟ್ಟವರೆಲೆ ಬೀರತಣೆಯನಿತ್ತುಂ ಮೂಡರ್ (ಸಮಕ. ೦೨-೩). [ಬೀರ + ತಣ$_3$]

**ಬೀರತೆ** (ನಾ). ಶೌರ್ಯ; ಕಲಿತನ : ಭೈರವ ಬೊಮ್ಮರಕ್ಕಸ ಕಾಳ ಜಟ್ಟಿಗ ಬೀರ ಬೇತಾಳರಾರೊಳರು ಬೀರತೆಯುಳ್ಳವರ್ಗಳು ನಿನ್ನಸುಗಾವೊಡಾರಾದರುಮಡ್ಡ ಬರಲಿ (ಶ್ರೀಪಾಂ. ೬-೩೯). [ಬೀರ +– ತೆ$_3$]

**ಬೀರದೇವ,** ಬೀರೆದೇವ (ನಾ). ೧. ಒಬ್ಬಾತನ ಹೆಸರು : ಶ್ರೀಮನ್ಮಹಾಮಂಡಲೇಶ್ವರ ಕುಮಾರ ಬೀರದೇವನೊಡನೆ ಚಾಲುಕ್ಯ ವಿಕ್ರಮದ ೧೯ನೆಯ ಯುವಸಂವತ್ಸರದ ಮಾಘಸುದ್ಧ ಪಂಚಮಿ ಆದಿತ್ಯವಾರದಂದು ಪರಲೋಕಪ್ರಾಪ್ತನಾಗುತ್ತಮಿರೆ (ಎಕ. VIII, ಸಾಗರ. ೬೦-೨೯; 1096). **ಬೀರೆದೇವ :** ೨. ಒಬ್ಬ ದೇವತೆಯ ಹೆಸರು; ವೀರಭದ್ರ : (೩). [ಬೀರ + ದೇವ]

**ಬೀರನೊಲಂಬ** (ನಾ). ನೊಳಂಬವಂಶದ ಒಬ್ಬ ರಾಜನ ಹೆಸರು : ಶ್ರೀಮನ್ನೊಳಂಬಾಧಿರಾಜ ಅಯ್ಯಪದೇವನ ಮಗ ಅಣ್ಣಿಗ ಬೀರನೊಲಮ್ಬ (ಎಕ. X, ಗೌರಿಬಿ. ೪-೩; ಸು. 920); ಶ್ರೀಪ್ರಿಥಿವೀವಲ್ಲಭ ಪಲ್ಲವಕುಲತಿಲಕ ಶ್ರೀಮತ್ ಅಯ್ಯಪದೇವನ ಮಗಂ ಬೀರನೊಲಮ್ಬಂ (ಎಕ. X, ಕೋಲಾರ. ೩೭-೪; ಸು. 925). [ಬೀರ + ನೊಲಂಬ]

**ಬೀರಪೆರ್ಮನಡಿ** (ನಾ). ಗಂಗವಂಶದ ಒಬ್ಬ ರಾಜನ ಹೆಸರು : ನೀತಿಮಾರ್ಗದೇವರಿಯಪ್ಪ ಪೆರ್ಮ್ಮನಡಿಯ ಮಗ ಶ್ರೀಮತ್ಸತ್ಯವಾಕ್ಯ ಬೀರಪೆರ್ಮ್ಮನಡಿಯು ಗೊಟ್ಟ ಕಲ್ನಾಟು (ಎಕ. V, ಅರಕ. ೬೦-೪; 920). [ಬೀರ + ಪೆರ್ಮನಡಿ (<ಪೆರ್ಮಾನಡಿ)]

**ಬೀರಬೊಬ್ಬೆ** (ನಾ). ಪೌರುಷಸೂಚಕವಾದ ಗರ್ಜನೆ,– ಬೊಬ್ಬೆ : ಬೀರಬೊಬ್ಬೆ. ವಿಜಯಯಾತ್ರೆ ಮತ್ತೆ ಮತ್ತೆ ಗುಡುಗಲಿ (ಗಂ. ೪೩-೦೦). [ಬೀರ + ಬೊಬ್ಬೆ$_2$]

**ಬೀರಮಂಡಿ** (ನಾ). ವೀರನು ಮಂಡಿಯೂರಿ ಕುಳಿತುಕೊಳ್ಳುವ ಒಂದು ಭಂಗಿ ; ವೀರನು ಬಾಣಪ್ರಯೋಗ ಮಾಡಲು ಮಂಡಿಯೂರುವ ಒಂದು ಭಂಗಿ ; ವೀರಮಂಡಿ : ' ಬೀರಮಂಡಿಯೂರು ' ಪರಾ. [ಬೀರ + ಮಂಡಿ$_2$]

**ಬೀರಮಂಡಿಯೂರು** (ಕ್ರಿ). ವೀರಮಂಡಿ ಹಾಕು ; ಮೊಣಕಾಲನ್ನು ಊರಿ ಕುಳಿತುಕೊಳ್ಳು : ಬೀರಮಂಡಿಯೂರಿ ಯುವರಾಜನಿಗೆ ಪ್ರೇಮಾಲಿಂಗನವಿತ್ತು (ಚಟ್ಟಿಅ. ೦೯-೧೬). [ಬೀರಮಂಡಿ + ಊರು$_1$ (<ಊಱು$_1$)]

**ಬೀರಮುದ್ದಳೆ** ' ಬೀರವದ್ದಳೆ ' ನೋ.

**ಬೀರಮ್ಮ** (ನಾ). ಒಬ್ಬಾತನ ಹೆಸರು : ಬೇಡರ ಬೀರಮ್ಮನ ಪರಿಯೊಳ್ . . . ಪೆ ×× ಱಿದು ಸರ್ಗ್ಗಕೆ ಸನ್ದನ್ (ಎಕ. V, ಹಾಸನ. ೨೪-೩ ; 985) ; ಮಲೆಯುಂ ಕೊಟ್ಟತ್ತು ಬೀರಮ್ಮನ ಕುಲಮನಿತುಂ ದಾಸಿಪತ್ರಕ್ಕೆ ನಿಂದರ್ (ಇಇಇ. XX, ೪೯-೨೪; 1076?). [ಬೀರ + ಅಮ್ಮ$_1$]

**ಬೀರಯ್ಯ** (ನಾ). ೧. ಒಂದು ಕ್ಷುದ್ರದೇವತೆಯ ಹೆಸರು : ಮಾರಯ್ಯ ಬೀರಯ್ಯ . . . ಕೇತಯ್ಯಗಳೆಂಬ ನೂಱು ಮಡಕೆಗೆ ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದು ದಡಿ ಸಾಲದೆ (ಬಸವ. ೫೫೭). ೨. ಒಬ್ಬಾತನ ಹೆಸರು : ಬರದೊಂ ಬೀರಯ್ಯ (ಎಕ. IV, ಹೆಗ್ಗಡ. ೦೦೬-೦೪; ಸು. 930). [ಬೀರ + ಅಯ್ಯ$_1$]

**ಬೀರರವ** (ನಾ). =ಬೀರಬೊಬ್ಬೆ : ತೆಗೆಯೆ ಬೀರರವ[ದೆ] ಮೇಲೆ ಪರಿವ ಮದಗಜಂಗಳಿಂ ಚಳತ್ತುರಂಗಮಂಗಳಿಂ (ಶಂಕಥಾ. ೦-೩೯ ರಗಳೆ). [ಬೀರ + ರವ]

**ಬೀರರಸ** (ನಾ). ಒಬ್ಬಾತನ ಹೆಸರು : ಬೀರರಸನ ಮಗ ಬೊಂಮರಸನ ಪೆಂಪೆಂತೆಂದಡೆ (ಎಕ. VIII, ಸಾಗರ. ೩೦-೯; 1000 ?). [ಬೀರ + ಅರಸ$_1$]

**ಬೀರವಟ್ಟ** (ನಾ). ೧. ಮುಖ್ಯಸೇನಾಪತಿಯ ಪಟ್ಟ,–ಪದವಿ ; ಸೈನ್ಯದ ನಾಯಕತ್ವ ; ವೀರಪಟ್ಟ : ಬೀರವಟ್ಟಮನಾನಿರೆ ನೀನೀಸೂತಸುತಂಗೆಡೆಗೊಂಡು ಕೈವಾರದಿಂದೊಸೆದಿತ್ತೊಡಮೇನಾಯ್ತು (ಶಂಕಥಾ. ೦೨-೪೩); ಬೀರವಟ್ಟಕ್ಕೆ ಮೆಚ್ಚಿಡೆ ಬೀರಾಂಗನೆ ಸೇಸೆಗೊಂಡ ಪಡೆಯಂ ಕೈಸನ್ನೆಗೆಯ್ದುದ್ಧತಂ ನಡೆಯಲ್ವೇಚಿಸ್ದೊಡೆ (ಶಾಂತಿಪು. ೩-೦೦೬). ೨. ಮುಖ್ಯಸೇನಾಪತಿಯ ಪದವಿಯನ್ನು ಸೂಚಿಸುವ (ಹಣೆಗೆ ಕಟ್ಟುವ) ಸಣ್ಣ ಪಟ್ಟಿ : ಜೋಲ್ದ ಪೂರ್ವನೆತ್ತಿ ಕಟ್ಟಿದ ಲಲಾಟಪಟ್ಟದೊಳಿಟ್ಟಳವೊಪ್ಪುವ ಬೀರವಟ್ಟಮುಮುಸದಳಮೆಸೆಯೆ (ಶಂಕಥಾ. ೬೦-೩೨ ವ). [ಬೀರ + ಪಟ್ಟ$_3$]

**ಬೀರವಣ** (ನಾ). ೧. ಸೈನಿಕರ ಜೀವನನಿರ್ವಹಣೆಗಾಗಿ ಪ್ರಜೆಗಳು ಕೊಡುತ್ತಿದ್ದ ತೆರಿಗೆ : ಕಿಸುಕಾಡೆಪ್ಪತ್ತಱೊಳಂ ಸಾರಿಗೆ ಬೀರವಣಸಹಿತಂ ಸುಂಕಂ ಪರಿಹಾರಂ (ಎಇ. XV, ೭೯-೨೪; 1050); ಬೀರವಣ ಕೊಡತಿವಣ . . . ಆಚಂದ್ರಾರ್ಕ್ಕತಾರಂಬರಂ ಸಲ್ಗೆ (ಪ್ರ್ಅಂ. ೦೯೩೨, ೦೬-೩೦; 1069); ೨. ಊರಿನ ಜನರು ವೀರನೊಬ್ಬನ ಶೌರ್ಯವನ್ನು ಮೆಚ್ಚಿ ಅವನಿಗೆ ಕೊಡುತ್ತಿದ ಹಣ : ಶಿವಲಿಂಗಮಹಾಮಹಿಮಂಗೆ ನಾಗವಾಡಂ ತನಗೀವ ಬೀರವಣ ದತ್ತ್ಯಮನಾವಗಮಿತ್ತನಶ್ಚಿಯಿಂ (ಕೊಲ್ಲಾಶಾ. ೬-೬೦; 1147). [ಬೀರ + ಪಣ$_3$]

**ಬೀರವಣಿಗ** (ನಾ). ವರ್ತಕರ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು ; ವೀರಬಣಂಜುಧರ್ಮ ಮತ್ತು ಆ ಧರ್ಮಕ್ಕೆ ಸೇರಿದವನು : **ಬೀರರುಂ** ಬೀರವಣಿಗರುಂ ಗವುಂಡರುಂ . . . ಅಪ್ಪ ಶ್ರೀಮದಯ್ಯೂರ್ವ್ವರ ವಿಖ್ಯಾತಿಯೆನ್ತೆಂದಡೆ (ಕಾಇಇ. IX-i, ೦೦೬-೫೫; 1057); ಸೆಟ್ಟಿಗುತ್ತರುಂ ಗಾವುಣ್ಡರುಂ ಗಾವುಣ್ಡಸ್ವಾಮಿಗಳುಂ ಬೀರರುಂ ಬಿ(ಬೀ)ರವಣಿಗರುಂ (ಎಇ. XIX, ೩೩-೨೦ ; 1135). [< ಸಂ. ವೀರವಣಿಜ್]

**ಬೀರವದ್ದಳೆ**, ಬೀರಮದ್ದಳೆ (ನಾ). ಯುದ್ಧಕಾಲದಲ್ಲಿ ಉಪಯೋಗಿಸುವ ಒಂದು ವಾದ್ಯ : ರಣವಾದ್ಯ : ತಂತಮ್ಮ ಮೊನೆಯ ನಾಯಕರ ಬಿರುದಿನ ಬೀರವದ್ದಳೆಯ ಪದಿರ ಪಱೆಯ ಕಹಳೆಯ ಕಳಕಳಂ ಕಿವಿಶಬ್ದಂಗಿಡೆ ದಿವಮನೆಯ್ದೆ (ಶಂರಾಮಾ. ೦೩-೩೯ ವ). **ಬೀರಮದ್ದಳೆ:** ಕೋಕಿಲಾರವಮದು ಬೀರಮದ್ದಳೆಯ ನಿಸ್ಸನಮಾಗಿರೆ (ತಂಪ್ರಶ. ೬-೯೨). [ಬೀರ + ಮದ್ದಳೆ$_1$ (<ಮದ್ದಲೆ$_1$)]

**ಬೀರವರ್ತಿ** (ನಾ). ವೀರವೃತ್ತಿಯ ವ್ಯಕ್ತಿ; ಸೈನಿಕ : ಜಗಮನದಿರ್ಪಲಾರ್ಪ ಬಿರುದಾಂತ ಬಲಂಗಳನೆತ್ತಿ ನುಂಗಿ ಮತ್ತುಗುಟದ ಬೀರವರ್ತಿನಿಕರಂಗಳ ಬಾಟಿಱೊದಲಾದ ಚಾಗದೋಲಗದ ವಿಡಂಬಡಂಬರಕೆ ಕಣ್ಣೆಲೆಯಾದ ವಿಲಾಸಮೊಪ್ಪೆ ಗದ್ದುಗೆಯೊಳಗಿರ್ದುದಗ್ಗಳಿಕೆಯಗ್ಗದ ಪಾರ್ಥಿವಪುತ್ರಸಾರ್ಥಕಂ (ಅಪಂಪು. ೨-೨೬). [< ಸಂ. ವೀರವರ್ತಿನ್]

**ಬೀರವಸದನ** (ನಾ). ವೀರೋಚಿತವಾದ ಅಲಂಕಾರ,— ಪ್ರಸಾಧನ : "ಬೀರವಸದನ — ವೀರಪ್ರಸಾಧನ = (ವೀರೋಚಿತ ಆಭರಣ, ಅಲಂಕಾರ)" (ಕಣ್ಕೋ. ೩೦). 'ಬೀರವಸದನಂಗೆಯ್' ಪರಾ. [ಬೀರ + ಪಸದನ]

**ಬೀರವಸದನಂಗೆಯ್** (ಕ್ರಿ). ವೀರೋಚಿತವಾದ ವೇಷಭೂಷಣಗಳನ್ನು ಧರಿಸು : ಕಣ್ಗಂಬಾಗಿರೆ ಬೀರವಸದನಂಗೆಯ್ದು . . . ಪೊಱಮಟ್ಟಂ (ಕಬ್ಬಿಗ. ೦೯೬). [ಬೀರವಸದನ + ಕೆಯ್$_1$]

**ಬೀರವಱೆ** (ನಾ). ವೀರೋಚಿತವಾದ ಒಂದು ವಾದ್ಯ,— ಹರೆ ; ಒಂದು ಬಗೆಯ ರಣವಾದ್ಯ,— ತಮಟೆ : ಬಾಜಿಸುವ ಬೀರವಱೆಯ ಪೊಡೆವ ಡಕ್ಕೆಯ ಓಡಿದ ಬಿರುದಿನ ಕಾಳೆಯ ಬಿಲ್ಲುಲಿಯ ಸಡಗರಮೆಲ್ಲಾ ದೆಸೆಗಳಂ ಕಿವುಂಡುವಡಿಸೆ (ಕಬ್ಬಿಗ. ೨೫೦); ನಾನಾ ಬೀರವಱೆಗಳ ರಭಸದಲಿ ರಂಜಿಸಿದುದಾ ದುರ್ಗ (ಕೊರಟಾ. ೬-೬-೦೫). [ಬೀರ + ಪಱೆ$_1$]

**ಬೀರವುರ** (ನಾ). ಒಂದು ಊರಿನ ಹೆಸರು : ನಾಲ್ಕು ಮತ್ತರ್ಕ್ಕೆಯು ಬಿಡುವುದೊಕ್ಕೆ ಬೀರವುರಮುಂ ಬಿದಿರ್ವ್ವಳ್ಳಿಯುಮನೊನ್ದೆ ಅಗ್ರಹಾರಂ ಮಾಡಿ (ಎಕ. XI, ಹಿರಿದು. ೫೦-೦೬ ; 968). [ಬೀರ + ಪುರ$_2$]

**ಬೀರಸಂಕಲೆ** (ನಾ). ವೀರನು (ಬಿರುದಿನ ಸಂಕೇತವಾಗಿ) ಧರಿಸುವ ಕಾಲ ಬಳೆ ; ವೀರಶೃಂಖಲೆ ; ತೊಡರು : ಪೊನ್ನ ಬೀರಸಂಕಲೆಯ ತೊಳಪ್ಪ ಕನ್ನಡಿಯ ಚಿನ್ನಡಿಯಡ್ಡಣವೆಡ್ಡವಾಗೆ (ಕಬ್ಬಿಗ. ೨೬೨). [ಬೀರ + ಸಂಕಲೆ$_1$]

**ಬೀರಸಗ್ಗ** (ನಾ). ಕಾಳಗದಲ್ಲಿ ವೀರೋಚಿತವಾದ ಮರಣವನ್ನು ಪಡೆದ ವೀರನಿಗೆ ದೊರಕುವುದೆಂದು ಭಾವಿಸಲಾದ ಸ್ವರ್ಗ ; ವೀರಸ್ವರ್ಗ : 'ಬೀರಸಗ್ಗಂಬಡೆ' ಪರಾ. [ಬೀರ + ಸಗ್ಗ]

**ಬೀರಸಗ್ಗಂಬಡೆ** (ಕ್ರಿ). ವೀರಸ್ವರ್ಗವನ್ನು ಹೊಂದು,—ಪಡೆ : ಚೋಟಿಗಣ್ಣರ್ ಆಟ್ದನ ಮುನ್ದೆ ಪಱಿದು ಬೀರಸಗ್ಗಂಬಡೆದು (ಪ್ರಕಂ. ೦೯೨೯, ೩೨-೩ ; 1056). [ಬೀರಸಗ್ಗ + ಪಡೆ$_1$]

**ಬೀರಸಾಂತರ** (ನಾ). ಸಾಂತರವಂಶದ ಒಬ್ಬ ರಾಜನ ಹೆಸರು : ಸಾನ್ತಳಿಗೆಯ ಬೀರಸಾನ್ತರನ ಮೇಲೆ ನಡೆವಯ್ವುತ್ತು ನಾಡೊಳಗಣ ಬಲ್ಲುಗದೊಳ್ಪಟ್ಟಟ್ಟನ್ದು (ಎಕ. VIII, ಸೊರಬ. ೯೭೭-೦೫ ; 991). [ಬೀರ + ಸಾಂತರ]

**ಬೀರಸೆಟ್ಟಿ** (ನಾ). ವ್ಯಾಪಾರಿಗಳ ಒಂದು ವರ್ಗ : ಊರಿಗೆಯ್ದಿದ ಮಾರಿ ಬೀರಸೆಟ್ಟಿಯ ಹೊಯ್ದು ದಾರಿಕಾಱರ ಗಾದೆಯಂತೆ (ಶರತ. ೯೨-೯೯). [ಬೀರ + ಸೆಟ್ಟಿ]

**ಬೀರಸೇನಸಿದ್ಧಾಂತ** (ನಾ). ಒಬ್ಬಾತನ ಹೆಸರು : ಶ್ರೀ ಬೆಳ್ಗೊಳನಿವಾಸಿಗಳಪ್ಪ ಶ್ರೀ ಬೀರಸೇನಸಿದ್ಧಾನ್ತದೇವರವರ ಶಿಷ್ಯರ್ (ಎಕ. I, ೬೬-೯; 978). [ಬೀರ + ಸೇನ$_2$ + ಸಿದ್ಧಾಂತ]

**ಬೀರಸೇಸೆ** (ನಾ). (ಯುದ್ಧ ಮುಂತಾದ ಸಂದರ್ಭಗಳಲ್ಲಿ) ವೀರನ ತಲೆಯ ಮೇಲೆ ತಳಿಯುವ ಅಕ್ಷತೆ ; ವೀರಸೇಸೆ : ನೊಸಲ ಕಣ್ಣ ಮಾದೇವನ ಮಿಸುಪ ನೊಸಲೊಳ್ ಬೀರಸೇಸೆಯನಿಟ್ಟು (ರಾಮಾಶ್ವ. ೧೩೦-೦೫). [ಬೀರ + ಸೇಸೆ$_1$]

**ಬೀರಾಳ್** (ನಾ). ಶೂರನಾದ ಸೈನಿಕ : ಇಂತಿಂತು ಬೀರಾಳ್ಗಳಿಲ್ಲಿಲ್ಲಿ ನಗೆನುಡಿಯುತಿರೆ (ಜಕ್ಕಾಂಗ. ೬೬-೨೧೩೧): ಲೆಕ್ಕಕ್ಕೆ ಮಿಗಿಲ್ ಬೀರಾಳ್ಗಳಂ ತಿಂದೆ (ಶ್ರೀರಾಮಾ. ೭೯೩-೨೫೯). [ಬೀರ + ಆಳ್$_3$]

**ಬೀರಿಸು** 'ಬೀಱಿಸು' ನೋ.

**ಬೀರು**$_1$ 'ಬೀಱು$_1$' ನೋ.

**ಬೀರು**$_2$, ಬೀರ್$_2$ (ನಾ). ಒಂದು ಬಗೆಯ ಮದ್ಯ : ಇನ್ನೂ ಸೊಲ್ಪ ಬೀರು ಬೇಕು (ಅಶಿವಾ. ೬೬). **ಬೀರ್$_2$** : ನಾಲ್ಕು ಜನ ಸ್ನೇಹಿತರು ಕುಳಿತು ಸಂಜೆ ಬೀರ್ ಕುಡಿಯುವುದಕ್ಕೆ ಸೊಗಸಾದ ಸ್ಥಳ (ಯೋಧಪು. ೨೫); ಆಧುನಿಕ ನಿರನುಭವಿ ಯುವಕರಂತೆ ಬೀರ್ ಕುಡಿದು ನೋಡಿದ (ಪ್ರಕ್ಕ. ೫೯). [← ಇಂ. Beer]

**ಬೀರು**$_3$ (ನಾ). ಬಾಗಿಲುಳ್ಳ ನಿಲುಪೆಟ್ಟಿಗೆ : ಕಪಾಟು : ಅಲಮಾರು : ಒಂದು ಬೀರುವನ್ನು ಮುರಿದು ಹಾಕಲಾಗಿತ್ತು (ನಾಕೋಲಿ. ೧೨೬); ಬಟ್ಟೆಗಳು ಗಾಜಿನ ಬೀರುವನ್ನು ಸೇರಿದ್ದುವು (ಮುಂಶಿಮಾ. ೨೨); ಚಂದ್ರಪ್ಪಗೌಡರು ತಮ್ಮ ಬೀರುವಿನ ಪಕ್ಕದಲ್ಲಿ . . . ಮಂಡಿಸಿ ಎಲ್ಲರೊಡನೆಯೂ ಸಂಭಾಷಣೆ ನಡಸುತ್ತಿದ್ದರು (ಕಾನೂರು. ೬೯).
[ ← ಇಂ. Bureau. / ತಮಿ. ಪೀರೋ ; ತೆಲು. ಬೀರುವಾ, ಬೀರುವ]

**ಬೀರುಗಲ್** (ನಾ). ತೂರಿ ಬರುವ ಕಲ್ಲು ; ಎಸೆದ ಕಲ್ಲು : ಎತ್ತಿರುಗಲುವಿಲ್ಲದಮ್ಮೋರ್ ಬೀರುಗಲ್ಗಳ್ . . . ನೆರನಿರಿಯೆ, ತೊಪ್ಪತೊಪ್ಪನೆ ಕುಪ್ಪೆಯೊಟ್ಟಿದರ್ (ಜಾರಸಿ. ೦೬-೯೦೦). [ಬೀರು$_1$ (<ಬೀಱು$_1$) + ಕಲ್$_3$]

**ಬೀರೆದೇವ** 'ಬೀರದೇವ' ನೋ.

**ಬೀರ್ವಗ್ಗ** 'ಬೀಱುವಗ್ಗ' ನೋ.

**ಬೀರ್ವ** (ನಾ). ಕಟ್ಟು; ಕಟ್ಟಳೆ (?): ಪರ್ವ ನಾಲ್ಕರೊಳಾವುದಾನೊಂದು ಪರ್ವವ ಪೂರ್ವಗೊಂಡುಪವಾಸವಿಹೆನು ಸರ್ವಥಾ ಯಮವಲ್ಲ ನಿಯಮ ಮತ್ತದರೊಂದು ಬೀರ್ವ ತಿಂಗಳಿಗೊಂದು ದಿವಸ (ಶರತ. ೦೯-೬೯). [ ? ]

**ಬೀವ** 'ಬೀವು' ನೋ.

**ಬೀವು**, ಬೀಹು (ನಾ). ೧. ಬೆನ್ನುಹುರಿ : ಬೆನ್ನ ಬೀವಂ[ಪಾಠಾಂ. ಮಂ] ತೆಗೆವ ಬೇಶಾಳರುಮಂ . . . ಕಂಡು (ಗದಾಯು. ೫-೩ ವ); ಬಿಗಿದ ಬೆನ್ನ ಬೀವುಂ ತೆಗೆದ ಬಸಿಱುಂ . . . ನಾಲ್ಕುಂ ತಳಮುಂ ತೋಱುತ್ತುಂ ಸರಳಿಸಿ ಪಾಯ್ದು ಪೋಪ ಪೊಳ್ಳೆವಂದಿಯುಂ ಕಂಡು (ಲೀಲಾವ. ೩-೦೬ ವ); ಸಂದ ನೇಪಾಳನ ಬೆನ್ನ ಬೀವನಿರದೆತ್ತಿ (ಎಇ. XV, ೩೨೦-೨೨; 1172). ೨. ನರ ; ಸ್ನಾಯು : ಕೀವಿನ ನೆತ್ತರ ತಿಪ್ಪೆ ಬೀವಿನಿಂದಂ ಬಿಗಿದಿರ್ದ ಪರ್ಣಿಣದ ಖಂಡದ ಮಾಂಸದ ತಾಣವಲ್ಲವೇ (ಧರ್ಮಾಮೃ. ೫-೨೬) ; ಹಲವೆಲುವಿನೆಕ್ಕೆಗಳ ಬಿಗಿದು ಬೀವಂ ನೆಯ್ದು ನುಲಿಯ ಹಂದೊಗಲು ಹಾಸಿನೊಳು ಮಂಚಂ ಜಡಿಯೆ (ಹಕಶ. ೦೦-೩೦). ೩.

ಹುರಿ ; ಹಗ್ಗ: ರಜ್ಜು: ಬೀವಂ ಮಿಳಿಯುಮಂ ಮಾಜಿ ಕೊಳಲಾರ್ಪಡೆ ಬಾ (ಶಬ್ದಹ. ೯-೬೬ ವ); ತನ್ನ ಕೊರಲಸರ್ವಾಭರಣಮುಂ ಬೀವಂ ಮಾಡಿ ಕುಮಾರಿಯ ಕೆಯ್ಯೊಳ್ ಕೊಟ್ಟು ... ಆ ಕುಮಾರಿಯುಂ ಕಟಿಪುವುದುಮಾಕೆ ಬೀವಂ ಮಾಱುತ್ತುಂ ಬರೆ (ಸುಕುಮಾ. ೬-೩೦ ವ); ರಂಜಿಪ ಬೆರಕೆವರಲ ಚಿಬ್ಬಿಲೊಳಗೆ ಹೊಸ ಹೊನ್ನ ಸರಿಗೆಯ ಬೀವುಗಳನು ತುಂಬಿ (ಪೇಬಸಂ. ೨೦-೨೭). ೪. ತಂತೀವಾದ್ಯಗಳಲ್ಲಿ ಉಪಯೋಗಿಸುವ ಸರಿಗೆ.— ತಂತಿ : "ಪಿಟೀಲು, ಮೊ. ವಾದ್ಯಗಳ ಹುರಿ ; ಬೀವು ; ತಂತಿ" (chord. ಇಂಕಡಿ). ಬೀಹು : ೨. ಬಲ್ಲಿಂದ ಬೀಹಿನ ಹಗಱು ಮುಱಿವವೋಲು ಕಲ್ಲಿಂದ ಕಾಲ್ಸುಡಿಸುವೊಲು ಬಲ್ಲಿತಪ್ಪಾ ಕೊಲೆಯಿಂ ಕೊಂದರಾ ವಿಗಮಿಲ್ಲಿಂ ನಿಲ್ಲವೆಂಬಂತೆ (ಪೇಬಸಂ. ೨-೫೨).

**ಬೀವು ಮಾಡು** = ಹಗ್ಗವನ್ನಾಗಿ ಮಾಡು ; ಹುರಿಯನ್ನಾಗಿಸು : ತನ್ನೆಸೆವ ರತ್ನಮಾಲೆಯುನುನ್ನತನಂತೆಸೆಯೆ ಬೀವು ಮಾಡಿ ಬಲಿಕ್ಕಾ ಕನ್ನೆಯ ಕಯ್ಯೊಳ್ ಕೊಟ್ಟು (ಪೇಬಪು. ೬-೫೭).

**ಬೀವುಗಾರ್ತಿ** (ನಾ). ಹಗ್ಗವನ್ನು ಮಾರುವವಳು : ಬೀವ ಕೊಳ್ಳಿರೆ ಯೆಂದು ವೀಣಾರಾವದಿಂ ಪೊಳಲಂಗಡಿಯೊಳಾ ಬೀವುಗಾರ್ತಿ [ಶಾಕಾಂ. ತಿ] ಬರಲ್ಕೆ (ಸಾಳ್ವಭಾ. ೩೦-೨೮). [ಬೀವು + —ಕಾಱ + —ತಿ$_1$ (< —ಇತ್ತಿ)]

**ಬೀವುಗಿತಿ** (ನಾ). = ಬೀವುಗಾರ್ತಿ : ಬೀವುಗಿತಿ ನಿನಗೇತಱಿಂದಾಯಿತ್ತಾ ವಿಭವಮೆನೆ ಬೀವ ಮಾಱಿದೊಡೀ ವಿಭವವಾಯ್ತೆಂದವಳ ಸಖಿ ನುಡಿಯೆ (ಸಾಳ್ವಭಾ. ೩೦-೨೯). [ಬೀವು + — ಗಿತಿ$_0$ (< — ಗಿತ್ತಿ)]

**ಬೀವುಗೊಳ್** (ಕ್ರಿ). ಹಗ್ಗವನ್ನು ಕೊಂಡುಕೊಳ್ಳು : ಬಂದಂಗನೆ ಬೀವು ಗೊಳ್ಳೆಮೆನುತುಂ ಪೊಕ್ಕಾ ಪುರೀವೀಥಿಯೊಳ್ ನಿರಹಂಕಾರದಿನಿಟ್ಟಿರುತ್ತಿರೆ (ಪೇಬಪು. ೬-೫೮); ಪೋಗಿ ಪೊಬಲಂ ಜಳಜಾನನೆ ಬೀವುಗೊಳ್ಳೆಮೆನುತಂ ಪೊಕ್ಕಳ್ (ಶಬ್ದಹ. ೯-೬೦). [ಬೀವು + ಕೊಳ್$_1$]

**ಬೀವೋಜ** (ನಾ). ಒಬ್ಬಾತನ ಹೆಸರು : ಅಭಿಮಾನುಗಳೆಂಬ ಗೊಗ್ಗಿ ತನ್ನ ಮನ್ನೆಯ ×× ಬೀವೋಜಂಗೆ ಬಿಟ್ಟಂ (ಎಕ. XI, ಚೊಳಕಾ. ೨೭-೮ : 962). [ಬೀವ (< ಬೀವು) + ಓಜ$_1$ (<ಓವರ್ಜು)]

**ಬೀಸ**, ಬೀಸು$_3$ (ನಾ). ೧. ಒಂದು ಸಂಖ್ಯೆ ; ಇಪ್ಪತ್ತು : "ಬೀಸಿಗೆ (ಬೀಸ) — ವಿಂಶತ್ = ಇಪ್ಪತ್ತು" (ಶಬ್ದಕೋ. ೩೨). ೨. ಇಪ್ಪತ್ತರಲ್ಲಿ ಒಂದು ಭಾಗ. ೩. (?) : ಭಂಗಾರವಂ ಮಾಱಿನಿಕದಲ್ಲಿ ದೇವರಂಗ ಭೋಗಕ್ಕೆಯಾಚಂದ್ರಾರ್ಕ್ಕ ×× ನಡವಂತಾಗಿ ನೂಱಕ್ಕೆ ಬೀಸಮಂ ಬಿಟ್ಟರ್ ಮತ್ತಂ ಚೈತ್ರಾರೋಪಣಕ್ಕೆ ವರ್ಷಂಪ್ರತಿ ಬೀಸಕ್ಕೆ ಭಾಗವೊಂದು ಬಿಟ್ಟರ್ (ಸೌಇಇ. XV. ೦೪೫-೫೨; 1179). ಬೀಸು$_3$ : ೧. 'ಉತ್ತಮ ಬೀಸು' ಪರಾ. 'ವೀಸ' ಹೋ.

[← ಹಿಂ. ಮರಾ. ಬೀಸ್./ಪ್ರಾ. ವೀಸ್./ಸಂ. ವಿಂಶತಿ]

**ಬೀಸಗೆ**, ಬಿಸಿಗೆ, ಬೀಸಿಗೆ$_2$ (ನಾ). ೧. ಇಪ್ಪತ್ತುಪಲದ ಪ್ರಮಾಣ: ಬೀಸಗೆವೊಂದಕ್ಕಾ ಪೆರೆ ಲೇಸಾಗಿಹ ಗಂಧ ಪಂಚಭಾರವ ಸುಂಕಂ ಅರಸನೊಲಿ ದೀವ ಪಡಿಯುಂ ಭರದಿಂ ತೊರಭತ್ತು ಭಾರಕೇನುಂ ಬರ್ಕುಂ (ವ್ಯವಹಾ. ೨೮-೦೫); ೧ ಬೀಸಗೆ—೨೦ ಪಲ (ಕಣಾಅ. ೩೯೫). ಬಿಸಿಗೆ : ೧. ವಿಂಶತಿ ಪಲಂ ಬಿಸಿಗೆ (ಕನಾರ. ೯೪); ಬಿಸಿಗೆ ಪಂದ ಕೊಪರಲೆ ಸಾಗಿಹ ಗಂಧ ಪಂಚ ಭಾರದ ಸುಂಕಂ (ಬಾಸ್ಕರ. ೩೪-೪). ಬೀಸಿಗೆ$_2$ : ೧. "ಪಲಮಕ್ಕವಿಪ್ಪತ್ತೆನಲ್ಕೆ ಬೀಸಿಗೆಯುದಕ್ಕುಂ" (ಕುಂಗಣಾ. ೦೦೪-೦೦); ಭಂಡಿಯ ಕರುಸೆಯ ಮಳವೆ ಗೆರಡು ಬೀಸಿಗೆ (ಎಇ. XIX, ೩೩-೨೮ ; 1185) ; ದಶವ್ಯಯಪಲದಿಂ ನಿಲ್ಕುಂ ಬೀಸಿಗೆ (ವ್ಯವಹಾ. ೪-೨೫). ೨. (ಅರುವತ್ತುಸಂವತ್ಸರಗಳನ್ನು ಮೂರುಭಾಗಗಳನ್ನಾಗಿ ವಿಂಗಡಿಸಿದ) ಇಪ್ಪತ್ತುವರ್ಷಗಳ ಅವಧಿ : ಮೊಧಲುತ್ತಮಬೀಸಿಗೆಯಿಂದಷ್ಟಯಿಸುಗುಂ ನಾಲ್ಕು ಯುಗಮವುಂ ಪ್ರಭವಾದ್ಯ(ಬ್ದ)ಂ (ಜಟ್ಟಿಕು. ೭-೫); ಕ್ರಮದಿಂದುತ್ತಮಂ ಬೀಸಿಗೆ ಮಧ್ಯಮಂ ಬೀಸಿಗೆ ಕನಿಷ್ಠಂ ಬೀಸಿಗೆಗಳೆನಿಸಿ ಇಪ್ಪತ್ತಿಪ್ಪತ್ತು ವರುಷಂಗಳಿಂದೊಪ್ಪುತ್ತಿಸು ಭೂತಫಲಮಾಗಿರ್ಕುಂ (ಶಿವಕೆ. ೩೨೦). ೩. ಒಂದು ಸಂಖ್ಯೆ; ಇಪ್ಪತ್ತು : "ಬೀಸಿಗೆ (ಬೀಸ) —ವಿಂಶತ್ = ಇಪ್ಪತ್ತು" (ಶಬ್ದಕೋ. ೩೨).

[ಬೀಸ + —ಗೆ]

**ಬೀಸಣಿ** 'ಬೀಸಣಿಗೆ' ನೋ.

**ಬೀಸಣಿಕೆ** 'ಬೀಸಣಿಗೆ' ನೋ.

**ಬೀಸಣಿಗೆ**, ಬೀಸಣಿ, ಬೀಸಣಿಕೆ (ನಾ). ಗಾಳಿ ಬೀಸಿಕೊಳ್ಳಲು (ಓಲಿಗರಿ, ಬಿದಿರು ಮುಂತಾದುವುಗಳಿಂದ) ತಯಾರಿಸಿದ ಒಂದು ಸಾಧನ ; ವ್ಯಜನ : "ವ್ಯಜನಂ, ತಾಲವೃಂತಕಂ — ಈ ೨ ಬೀಸಣಿಗೆ" (ಹಲಾಯು. ೫೨-೦೫೫); ಬೀಸಣಿಗೆ ಗಿಂಡಿ ಹಡಪಂ ಮಣಿ ಕಾಳಾಂಜಿಯನಾಂತಸೆದರ್ . . . ಸತಿಯರ್ (ಉತ್ತಲ. ೨-೯) ; ಝಳವ ಝೋಂಪಿಸಿ ಬೀಸಿದವು ತಂಬೆಲರ ಬೀಸಣಿಗೆಗಳು (ಕುವ್ಯಾಅ. ೦೨-೦೫). ಬೀಸಣಿ : ಕರದಿ ಬೀಸಣಿ ಕೊಡೆಯ ಭಸಿತದಾಧಾರ ಜಪಸರವಾಂತು (ಸೋಲಖಂ. ೦೨-೯). ಬೀಸಣಿಕೆ : ಚಂದನದಿಂದ ಪೆಟ್ಟಿಗೆ ಕರಡಿಗೆ ಬೀಸಣಿಕೆ ಮುಂತಾದವುಗಳನ್ನು ಮಾಡುತ್ತಾರೆ (ಮುಂಜಯು. ೩-೭೮); ಕೂಸು ಇದ್ದ ಮನಿಗೆ ಬೀಸಣಿಕೆ ಯಾತಕ ಕೂಸು ಕಂದಯ್ಯ ಒಳ ಹೊರಗ ಆಡಿದರ ಬೀಸಣಿಕೆಗಾಳಿ ಸುಳಿದಾವ (ಗರತಿ. ೬೬). 'ಬಿಜ್ಜಣಿಗೆ' ಪರಾ.

**ಬೀಸಣಿಗೆಯ ಊಳಿಗ** = ಬೀಸಣಿಗೆಯನ್ನು ಹಿಡಿದು ಗಾಳಿ ಬೀಸುವ ಸೇವೆ : ಅರಮನೆಯಲ್ಲಿ ಸಮುಖದೊಳು ನಿತ್ಯಕಟ್ಟಳೆಯಲ್ಲಿ ನಡೆಯುವ ಊಳಿಗಗಳು — ಸಂಚಿಯ ಊಳಿಗ . . . ತೂಗುನೀರಿನ ಊಳಿಗ, ಬೀಸಣಿಗೆಯ ಊಳಿಗ (ಮಹಾವಂ. I, ೯೩).

[< ಬೀಸು$_1$. / ತಮಿ. ವಿಚಿಱಿ; ಮಲ. ವೀಶೇರಿ, ವಿಶರಿ; ತುಳು. ಬೀಸಣಿಗೆ, ಬೀಸನಿಗೆ ; ತೆಲು. ವೀವನ. / ಸಂ. ವ್ಯಜನ]

**ಬೀಸಣಿಗೆಮರ** (ನಾ). ಬೀಸಣಿಗೆಯಾಕಾರದ ಎಲೆಗಳನ್ನು ಹೊಂದಿ ರುವ ಒಂದು ಬಗೆಯ ಮರ : ಶ್ರೀತಾಳೆ, ಕೊಡೆಮರ, ಸೇಗೋ, ಬೀಸಣಿಗೆಮರ, ಓಲೆಗರಿಮರ (ವೃಶಿಗಿ. ೨೫-೯೩೮). [ಬೀಸಣಿಗೆ + ಮರ$_1$]

**ಬೀಸನೆ** (ಅ). ವೇಗವಾಗಿ ; ಶೀಘ್ರವಾಗಿ : ಅಲ್ಲಿಂದ ಬೀಸನೆ ಹೆಜ್ಜೆ ಹಾಕಿ ಹೊರಟಾಗ . . . ಕೇಳಿಸಿತು (ಮೂಕಜ. ೬೭).

ಬೀಸಬೀಸನೆ (ದ್ವಿರುಕ್ತಿ) : ಬನ್ನಿ, ಬೀಸಬೀಸನೆ ಹೋಗುವಾ (ಮೂಕಜ. ೩೯). [ಬೀಸು$_1$ + —ಅನೆ$_1$]

**ಬೀಸರ**, ಬೀಸರು (ನಾ). ೧. ವ್ಯರ್ಥವಾದುದು ; ನಿರರ್ಥಕವಾದುದು; ನಿಷ್ಪ್ರಯೋಜಕವಾದುದು: ತಡಿಯೊಳ್ ಪೊಳೆವ ತವಮ್ಮ ನೆಟಿಲನಟಿಲ್ವೋದ ನಲ್ಲಳಿಂದು ಲಲ್ಲೆಸಿ ನೋಟ್ಟಿ ಜಕ್ಕವಕ್ಕಿಗಳಾಸೆಯಂ ಬೀಸರಂ ಮಾಡಿಯುಂ . . . ಸಾಯಂತನಸಮಯಸವಿಾರಣಂ ಸೌಖ್ಯಸಾರಸರ್ವಸ್ವಮೆನಿಸಿರ್ದಾಸಳ್ (ಚಂದ್ರಪು. ೬-೪ ವ) ; ಪರಿಮಳದ ಮಯವೆನಿಪ ಸಕಲದ್ರವ್ಯಂಗಳಂ ಪರಮಗೆಂತರ್ಪಿಸುವೆನವು ಬೀಸರಂಗಳಂ (ದೀಕ್ಷಾಬೋ. ೯೯-೫೪) ; ಬಿನ್ನು ಬೀಸರವಹುದೆ ನಿಮ್ಮಯ ಸೊಮ್ಮಿನವರಿಗೆ (ಕುವ್ಯಾವಿ. ೬-೫೩) ; ಬೀಸರ ಮಿದೆಂದು ಜೀವವುಂ ಪರಮೇಶ್ವರಂಗರ್ಪಿಸುತ್ತಂ (ವೀಶೈಪು. ೭-೦೭-೨೫). ೨. ನಾಶ ; ಹಾಳು ; ಕೇಡು : ಅಸುರವಾದುದು ಬೀಸರವಾಯಿತು (ಅವತಂ. ೦೨೦-೫೯೪) ; ಕೇಳು ನಿನ್ನಾತನ ವಿನೋದದ ಖೂಳ ಬೋಳಿಯ ತನದಲೊದಗಿದ ಬಾಳಿಕೆಯ ಬೀಸರವನೆಂದನು ಸಂಜಯನು (ಕುವ್ಯಾಕ. ೦-೦೭) ; ಮೇದಿನೀಪರಿಯಟಣ ಪುಣ್ಯಫಲೋದಯಕೆ ಪಡಿಯುಂಟೆ ಬೀಸರವಿಲ್ಲ ಪಿತಗೆಂದ (ಶಿಭಾಗ. ೯-೭-೦೫). ೩. ಅಹಿತವಾದುದು ; ಕೆಟ್ಟುದು ; ನಿಂದೆ : ಕೂಸಂ ಕೊಟ್ಟಪೆನೆಂಬೀ ದೂಸಱೆ ನೀವಿಂತ ವಜ್ಜೆಗೆಯ್ಯುತ್ತೆನ್ನಂ ಬೀಸರವಾನೆ ನುಡಿ[ಶಾಕಾಂ. ಮಾಡ್ಡಿ]ದಪಿರಿ (ಕಂಕಕಂ. ೨೬-೩); ಕುರುಪತಿ ಬೀಸರಮಂ ನುಡಿಯುದೊಳ್ಳಿತಂ ನುಡಿದಪನೇ (ಶಾವ್ಯಾ. ಗ.

10 15 20 25 30 35 40 45

೩೯೭). 'ಬೀಸರನುಡಿ' ಪರಾ. ೪. ಕಷ್ಟ ; ಆಪತ್ತು : ಆ ಸುಯೋಧನ ಸುತರ ಸರಳ ವಿಳಾಸವನು ಖಂಡಿಸಿದನವದಿರ ಬೀಸರಕೆ ಬಂದಡ್ಡಬೀಳುವ ಭಟರ ಕೆಡೆಯೆಚ್ಚ (ಕುಮಾ.ದ್ರೋ. ೫-೬೫); ಬೀಸರಕೆ ಬೆದಱುವ ವಧೂಜನ ದಾಸಱಡಗಲು . . . ನಗುತಿಂತೆಂದನಸುರಾರಾತಿ ಕರುಣದಲಿ (ಕಿಭಾಗ. ೦೦-೦೬-೫೨). ೫. ಕೊರತೆ ; ಲೋಪ ; ಕುಂದು : ಬೀಸಱವಖಿಳವೇದಂ ಗಳುಚ್ಚರಿಪ ವಿಘ್ನೇಶನ ಪಡೆದ ಮಾತೃಕೆಯು ಭಾಸುರಜಿಹ್ವೆಯೊಳ್ ಪೊಱ ಮಟ್ಟು ವಚನಕೆ ಬೀಸರವಿಲ್ಲೆಂದಳವಳು (ವೋಹಕ. ೨೫-೩೦). ೬. ಅಂತ್ಯ ; ಕೊನೆ; ಮುಕ್ತಾಯ : ಕಡುಪಿನಿಂದೆರಗಿದಂ ಬೇಡಬೇಡೆಂಬವರ ಕಡೆಗಣಿಸಿ ನುಡಿಗಳ್ಗೆ ಬೀಸರಂ ಬರೆದಂ (ಕಾಲೂರ. ೦೭೦-೩೯೦). ೭. ಮಲಿನತೆ ; ಅಶುದ್ಧತೆ ; ಮೈಲಿಗೆ : ಸಂಸಾರವೆಂಬ ಶ್ವಾನನಟ್ಟಿ ಮಿಾಸಲ ಬೀಸರ ಮಾಡಿದಿರಯ್ಯಾ (ಬಸವ. ೫೦೬) ; ಮನ ಬೀಸರವಾದೊಡೆ ಪ್ರಾಣ ಪಲ್ಲಟ ವಹುದವ್ವ (ಮಹಾದೇ. ಬ. ೯೬-೯೮) ; ಮರುತನ ಸಂಗದಿಂದ ಪರಿಮಳ ಬೀಸರವಾಯಿತ್ತು (೦೦ಗಲೀ. ೩೬೫-೨). ೮. ಚೆಲ್ಲಾಪಿಲ್ಲಿ ; ಅಸ್ತವ್ಯಸ್ತ: ಕಡುಗೊಯ್ಯಲಾದ ಕೆಯ್ಯಂತೆ ತೆನೆ ಮುಱಿದು ಬೀಸರವಾದ ರಾಶಿಯಂತೆ ಪುಲಿವೊಗಂಗೆಟ್ಟು (ಅಸಂಪು. ೦೦-೬೩ ಪ) ; ಭಾಸುರನಾಗನಾಥನ ಫಣಾಮಣಿ ರುಕ್ಷ್ಮಯಮುರ್ಬಿ ಧಾತ್ರಿ ಮೇಣ್ಬೀಸರಮಾಗಲಲ್ಲಿ ಪೊಱಪೊಣ್ಮಿ ಮಡಲ್ತು ವಿಜ್ರಂಭಿಪಂತೆ ತೋರ್ಪಿ ಸರಸೀಡ್ಡಸನ್ನಿಧಿಯೊಳ್ (ಉದ್ಭಟ. ೦-೯೬). ೯. ಕೆದರುವಿಕೆ ; ಕಲಸುವಿಕೆ : ಪೂಸಿದ ಕುಂಕುಮಮೆನಸುಂ ಬೀಸರಮಾಗಿ ರದು (ಬಂಹಂ. ೩-೦೮). ೧೦. ಛಿದ್ರ ; ಭಿನ್ನ ; ಭಂಗ : ತನ್ನಿಷ್ಟಲಿಂಗ ಭಿನ್ನಮಾದಾಗೆ . . . ದೋಷಹರ ಬಸವ ಶಂಕರದೇವರಾ ಲಿಂಗ ಬೀಸರಾಗಲಿ ತಮ್ಮ ತನುವಂ ನಿರಾಕರಿಸಿ ಶೇಷಧರನಂಘ್ರಿಯಂ ಪೊರ್ದಿ ಸುಖಿಯಾದರ್ (ಗುರುರಾ. ೦೬-೨೬). ೧೧. ಅಳ್ಳಕ ; ಸಡಿಲ : ಬೀಸರವಾಗದಪ್ಪು . . . ಮಿಾಸಲಂತಿರೆ ಮನವಿರ್ಪುದು (ಅರ್ಜನ. ೯-೯೬). ಬೀಸರು: ೧೨. ಕಪಟ ; ವಂಚನೆ ; ಮೋಸ : ಲೋಕದಲ್ಲಿ ಬಿನ್ನಾಣದಿಂ ಬೀಸರಿಲ್ಲದ ಭಾವಶುದ್ಧಿ ಯಿಂದೊಲಿದು ನಲಿದೊಲವಿನಿಂದ ಸ್ಥಾಣುವಿಗೆ ನೀರೆಱೆದು . . . ಮುನಿ ಸಂಕುಲಂ ಕೇಣಮಿಲ್ಲದೆ ತದ್ವನಾಂತರದೊಳಿರ್ದುದು (ಸಂದವಹ ೨-೨೦).

[ಬೀ + ?./ ತೆಲು. ವೀಸರ]

**ಬೀಸರಂಬೊಂದು** (ಕ್ರಿ). ಮಲಿನವಾಗು : ಇವಳ ಕಡೆಗಣ್ಣ ನುಣ್ಣದಿರ್ಗಣೆ ಯಿನೆಚ್ಚಪಂ ಕಾಮದೇವಂ . . . ಬೀಸರಂಬೊಂದಿತ್ತು ಮನದೆಸಕಂ (ಆರಾಕ. ೨-೫-೭). [ಬೀಸರ + ಪೊಂದು$_1$ (< ಪೊರ್ದು) ]

**ಬೀಸರಂಬೊಗಿಸು** (ಕ್ರಿ). ಮಲಿನಗೊಳಿಸು : ಏಕಭಾಂಡವಾದುವ ಕಂಡುಣದೆ . . . ಆ ಸಯದಾನಗಳ ತೆಗೆದವಂ ಬಳಸದೆ ಬಳಸಿ ಬೀಸರಂ ಬೊಗಿಸಿದೊಂದಱಿೊಳೆಳದಿಂದೆಯೊಂದಿತೆನ್ನದೆಯುಂಡು (ಸಿದ್ಧೇಪು. ೨೩-೦೦೨). [ಬೀಸರಂಬೊಗು + — ಇಸು$_1$]

**ಬೀಸರಂಬೊಗು**, ಬೀಸರಂಹೊಗು (ಕ್ರಿ). ೧. ಕೆಡು ; ಕೆಟ್ಟುಹೋಗು : ಮುಖದೊಳ್ಗಾನಮಂ ಕೆಯ್ಯೊಳಭಿನಯಮಂ ದೃಷ್ಟಿಯೊಳ್ ರಸಮಂ ಪದ ತಳದೊಳ್ ತಾಳಮಂ ಬೀಸರಂಬೊಗಲೀಯದೆ ಸೆಱೆವಿಡಿದು (ರಾಜಶೇ. ೫-೦೯ ಪ). ೨. ಕಡಮೆಯಾಗು ; ಕುಗ್ಗು ; ಕುಂದು : ವಾಸವಂ ಬೀಸರಂ ಬೊಗದ ಸಡಗರದಿಂದೀಸಿಕೊಂಡು ಲೇಸಾಗಿ ವಾಸನೆವಡೆದ ದೇವಾಂಗ ವಾಸಮಂ ತನ್ನಯ ಪರ್ಯಂಕಾಸನಬಂಧದೊಳ್ ಪಾಸಿ ಮೆಲ್ಲನಲ್ಲಿ ಕುಳ್ಳಿರಿ ಸುವುದುಂ (ಪಾರಪು. ೭-೬೫ ಪ). ೩. ಮುಗಿ ; ತೀರು ; ಕೊನೆಗಾಣು : ಬಿರ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂಬೊ [ಪಾಠಾಂ. ಬು]ಗದೆ ಬಿರ್ಚಿ ಬೀಸಿದಾಗಳ್ (ರಾಜಶೇ. ೫-೦೦೯ ಪ). ೪. ಅಶುದ್ಧ ವಾಗು ; ಮಾಲಿನ್ಯವನ್ನು ಹೊಂದು : 'ಬೀಸರಂಬೊಗಿಸು' ಪರಾ. **ಬೀಸರುಹೊಗು** : ೩. ಮುರಹರನಾಣೆಘೋಷಣೆಯಲಿ ಜವಿ ಬೀಸರು ಹೊ[ಪಾಠಾಂ ಹೋ]ಗದಂತೆ ನೀನಿರ್ದು ಕರೆಯಲಟ್ಟಿದರೆ ದ್ವಾರಕಿಗೆಯ್ದು ವುದು (ಮೋಹತ. ೦೩-೦೨) ; "ಜವಿಬೀಸರು = ಕೂದಲಷ್ಟು ಪಾಲುಮಾರಿಕೆ" (ಮೋಹತ. ೦೩-೦೨ ಅಡಿಟಿ). [ಬೀಸರ + ಪೊಗು ]

**ಬೀಸರಂಬೋಗು**, ಬೀಸರಂವೋಗು, ಬೀಸರವೋಗು (ಕ್ರಿ). ೧. ವ್ಯರ್ಥವಾಗು ; ನಿರರ್ಥಕವಾಗು : ತೊಡರಂ ದೇಸೆಗೆ ಕಾಲೊಳಿಕ್ಕಿ ಪಡೆದ ರ್ಥಂ ಬೀಸರಂಬೋಗದಂತೊಡಲಂ ರಕ್ಷಿಸಿ (ಎಕ. V. ಪೀಂಶಾರು. ೦೦೨-೯೮ ; ೧೨೨೦) ; ಅಲರ ಬಿಜ್ಜಣಿಗೆಯಿಂ ಬೀಸೆ ಬೀಸರಂಬೋದಂತೆ ಹಸನಂ ಹಸಂಗೆಡೆ (ರಾಜಶೇ. ೭-೯೨ ಪ). ೨. ನಾಶವಾಗು ; ಹಾಳಾಗು : ಬೀಸರಂಬೋದುದಿನ್ನೇನು ವಂಶದ ಛಲಂ (ಇಹರ. ದೇ. ೩೬-೨೨). ೩. ಮುಗಿ ; ಕೊನೆಗಾಣು : (ಕ). **ಬೀಸರಂವೋಗು** : ೪. ವಿಚಲಿತ ವಾಗು ; ವಿಕ್ಷಿಪ್ತವಾಗು : ಕುಕಿಲ್ವ ಪಡಿಯಱವಕ್ಕಿಗಳ್ಗಡಣೆಗೆ ಬೀಸರಂ ವೋಗದೆ ... ಪದ್ಮಕಿಂಜಲ್ಕದೊಳ್ ಸ್ವಸ್ತಿಕಂ ಬರೆವ ಹಂಸಗಾಮಿನಿಯರುಂ (ನಾಗಕು. ೩೦-೩೬ ಪ). **ಬೀಸರವೋಗು** : ೧. ಹಿಡಿದುದ ಬಿಡಸು ಬಿಟ್ಟು ಱಚ್ಚೆಯು ಬಳಸಿ ಮುಂದಣಡಿಗೆ ಬೀಸರವೋಗಿ ಬಳಲುವನಲ್ಲ (ಶಿವಗೀ. ೨೭-೦೦೭) ; ಮಿಾಸರ ಗಂಡನೆಂದೆಂಬ ಬಿರುದಿನ ವಿಲಾಸದ ಸಡೆ ನಮಗಿನ್ನು ಬೀಸರವೋಗದೆಂದ್ದೆಣಿಕೆಯುನಾ ನೃಪ ಸೂಸಿ ಬಿಟ್ಟನು ಮನದೊಳಗೆ (ಶೂರಾಸಾಂ. ೮-೯೬). ೨. ದಿನ ವೃಥಾ ಹೋಗದೆ ಯೌವನ ಬೀಸರ ವೋಗದ ಮುನ್ನ ಪಿನಾಕಿಯು ತಂದು ನೆರಹೆನ್ನವ್ವಾ (ಸವಚ. ೯೩-೫೦೯): ವಿತರ್ಕಣಾಮ್ರು ಮುಂತಾದ ನೈವೇದ್ಯಸಂತತಿಯುದೀಶಂಗೆ ಹಿತ ವಲ್ಲೆಂದು ನೆನೆದು ನಿಶ್ಚಿತದೆ ಬೀಸರವೋಗದಮಳತರಸಾರ ಜೀವಾತ್ಮಾ ರ್ಪಿತಂಗೆಯ್ಯುತೆ (ಸಿದ್ಧೇಪು. ೨೦-೩೫). ೩. ಮೋಸಹೋಗು ; ವಂಚಿತ ವಾಗು : ಈಶ್ವರ ನುಡಿದ ನುಡಿಯುನಱಿದವೆಂದು ಬೀಸರ ವೋದರಣ್ಣಗಳಿಲ್ಲ (ಅವಕಂ. ೨೫-೦೦೯). ೬. ಮಲಿನವಾಗು ; ಮಿಾಸಲಳಿ; ಮಾಲಿನ್ಯವನ್ನು ಹೊಂದು : ತನು ಮಿಾಸಲು ಮನವೆಲ್ಲ ಮಿಾಸಲು ಶಿವನ ಈ ಮಿಾಸಲು ಬೀಸರವೋಗದಂತಿದ್ದರೆ ಆತನೆ ಜಗದೀಶ ಕಾಣಾ (ದೇವಾವ. ೫೦-೦೦೦) ; ಲಿಂಗದಲ್ಲಿ ಮಱಿದು ಮಚ್ಚಿರ್ದ ಮನವು ಹೊಱಗೆ ಬೀಸರವೋಗದೆ (ಮಹಾದೇ. ಕ. ೦೨೩-೨೯೮); ಬೀಸರವೋಗದ ಮುನ್ನ ಮಿಾಸಲಾಗಿ ಅರ್ಪಿಸಬಲ್ಲಡೆ ಕೂಡಿಕೊಂಡಿಪ್ಪ ನಮ್ಮ ಕೂಡಲ ಚನ್ನಸಂಗಮ ದೇವನು (ಕನ್ನಪ.ಕ. ೯೨೦-೮೯೯). ೭. ಭಂಗವಾಗು ; ಮುರಿ : ತನ್ನಲ್ಲಿ ತಾನು ನಿಶ್ಚಯವಾಗಿ ಭಾಷೆ ಬೀಸರವೋಗದೆಯಿಪ್ಪ ಇರವು ಕೂಡಲಸಂಗಮ ದೇವರಲ್ಲಿ ನಮ್ಮ ಮಹದೇವಿಯಕ್ಕಂಗಾಯಿತ್ತು (ಬಸವ. ಕ. ೦೨೬೫). [ಬೀಸರ + ಪೋಗು$_1$ (<ಪೋ$_1$)]

**ಬೀಸರಂವೋಗು** 'ಬೀಸರಂಬೋಗು' ನೋ.

**ಬೀಸರನುಡಿ** (ನಾ). ಮಾಳಿದಲಿಕೆಯು ಮಾತು ; ನಿಂದೆ : ಹರ ಶಂಕರ ಪಕ್ಷದಿನೀ ದೊರೆ ಪೊಸಬೆಯುನಂಟಿಕೊಂಡು ಬೀಸರನುಡಿಯಂ ಸೂರೆಹಿ ಕೆಡೆನುಡಿವುತೆನ್ನಂ ಜಱಿದಪನೀ ನಿಂದೆ ನಿನ್ನದೇ ಶಶಿಮೌಳೀ (ಪಾಲಾಸ್ತ ೩-೦೨-೨೪). [ಬೀಸರ + ನುಡಿ$_2$]

**ಬೀಸರವೋಗು** 'ಬೀಸರಂಬೋಗು' ನೋ.

**ಬೀಸರಿಗ** (ನಾ). ನಾಶಮಾಡುವವನು ; ಕೇಡುಂಟು ಮಾಡುವವನು : ಲೇಸು ಮಾಡಿದೆ ಭುವನಭವನದ ಬೀಸರಿಗನಸುಗೊಂಡು ನಿಜಪದದಾಸ ವರ್ಗವನುದ್ಧರಿಸಿದೆ (ಕಿಭಾಗ. ೩-೯-೯೦). [ಬೀಸರ + — ಇಗ]

**ಬೀಸರಿಸು** (ಕ್ರಿ). ೧. ನಾಶ ಮಾಡು : ಸುತ್ತ ಕೆದರಿದ ಹಿಳುಕನೋಸರಿಸಿ ಬೀಸರಿಸಿ . . . ಬಿತ್ತಿದನು ಹಿಳುಕನಂಗಾಂಗದೊಳು (ಜಸಮು. ೩೭-೬೨). ೨. ಭಂಗವಾಗು : ಭಾಸುರಬಾಹ್ಯಸಾಮಗ್ರಿಯೊಳ್ಮನಿ ಧ್ಯಾನ ಬೀಸರಿಸದೆ ನಿಂದನೊಳಗೆ (ಭರತ. ೭೭-೯). ೩. ಬಿಡು ; ತ್ಯಜಿಸು ; ತೊರೆ : ಮೋಸದೊಳಿರ್ದವ ನಾನಲ್ಲದವನಿನ್ನು ಬೀಸರಿಸುವೆನು ನೋಡೆಂದ (ಭರತ. ೯೦-೭). [ಬೀಸರ + — ಇಸು$_1$]

**ಬೀಸರು** 'ಬೀಸರ' ನೋ.

**ಬೀಸರುಹೊಗು** 'ಬೀಸರಂಬೊಗು' ನೋ.

**ಬೀಸಲು** (ನಾ). ೧. ಬೀಸುವಿಕೆ ; ಬೀಸುವುದು : ಕಟಂಜನದ ಮಿಂಚುಂ ಗಂಬಿಯುನ್ನೊದೆದು ನೀಡುಂಗಣ್ಣುಳ ಬೀಸಲಿಂದ ತೇಲ್ದು ಹೋಗಿ (ಪಟ್ಟಿ. ೦೦೯-೦೫). 'ತೋಳ್ವೀಸಲು' ಪರಾ. ೨. ವಿಸ್ತಾರವಾದುದು ; ವಿಶಾಲವಾದುದು : 'ಬೀಸಲುಮನ' ಪರಾ.
[ಬೀಸು₁ + — ಅಲು (< —ಅಲ್₂) ]

**ಬೀಸಲುಮನ** (ನಾ). ವಿಶಾಲವಾದ ಮನಸ್ಸು : ಬೀಸಲುಮನದಲ್ಲಿ ಉತ್ಸಾಹ ಜೀವಾಳ ಈಸಲು ಬಿದ್ದಿತು ರಾಮರಾಮಾ (ಸೂರ್ಯಪಾ. ೮೫-೬). [ಬೀಸಲು + ಮನ]

**ಬೀಸಾಕು**, ಬಿಸಾಕು (ಕ್ರಿ). ಎಸೆ; ಒಗೆ : ಅವನು ಪಾತ್ರೆ ಬೀಸಾಕಬಹುದು (ಶಾರತಿ. ೬೩). **ಬಿಸಾಕು** : ಯಾರೋ ಉಂಡು ಬಿಸಾಕಿದ ಎಂಜಲೆಲೆ ಯನ್ನು ಹೆಕ್ಕಿ ನೆಕ್ಕುತ್ತಿದ್ದರು (ಮುಂಗಾಮು. ೦೯); ನನ್ನ ಕಡೆ ಯಾರೂ ಒಂದು ರೊಟ್ಟಿಯ ತುಂಡನ್ನೂ ಕೂಡ ಬಿಸಾಕುವುದಿಲ್ಲ (ಕಮಳ. ೦೦೬).
[ಬೀಸು₁ + ಹಾಕು (<ಪಾಯ್ಯು₁)]

**ಬೀಸಾಟು** 'ಬೀಸಾಡು' ಪರಾ.

**ಬೀಸಾಡು**, ಬಿಸಾಡು (ಕ್ರಿ). ಬಿಸಾಟು, ಬೀಸಾಟು (ಭೂತನ್ಯೂ). ೧. (ದೂರಕ್ಕೆ) ಒಗೆ ; ಎಸೆ ; ಬಿಸುಡು : "ಬೀಸಾಡು (ಬೀಸು + ಆಡು) ಕರವಿಮೋಚನೇ" (ಶಮಂಶಾ); ಲೇಸುಲೇಸೆನುತೆ ಪೆಟ್ಟಿಗೆಯನೀಕ್ಷಿಸು ತಂದು ಬೀಸಾಟನೆತ್ತಿ ಹೊಅಯಿಂಕೆ (ಹರಿರ. ದೀ. ೦೩-೬); ಅವಳು . . . ಅವನಿಯಲಿ ಬೀಸಾಟು ಪದಕವ ಬೆಪರಿ ಬಳಲುತ ಬಸುಜ ಹೊಯ್ದಳು (ಕೌತಿರಾ. ೩-೩೨). ೨. ತೊರೆ ; ತ್ಯಜಿಸು : ಒಳಹೊಱಗೊಂದಾಗದವರಿಗೆ ಅಳಿಯಾಸೆದೋಱ ಬೀಸಾಡುವನವರ ಜಗದೀಶ ಕೂಡಲಸಂಗಮದೇವ (ಬಸವ. ೯೬). **ಬಿಸಾಡು** : ೧. ಮಡಿಯ ಕೂಲಿಯ ಬೇಡ ಹೋದರೆ ಬಿಳಿದು ಹಱಿದು ಎನ್ನ ಮೇಲೆ ಬಿಸಾಟನು (ಮಡಿವಾ. ೨೯-೪೨): ಸತ್ತಡೆಳದು ಬಿಸಾಡುವರು (ಎಕ. X (೩), ಚನ್ನಪ. ೦೬೬-೦೩ ; 1300) ; ಮೈಮೇಲಿನ ಬಟ್ಟೆಗಳಿಗೆ ಬೆಂಕಿ ಹತ್ತಿದರೆ, ಆ ಕ್ಷಣವೇ ಅದನ್ನು ಮೈಮೇಲಿಂದ ತೆಗೆದು ದೂರ ಬಿಸಾಡಬೇಕು (ಮುಂಬಯು. ೪-೬೦). ೨. ಸುಡಲಿನ್ನು ಸಂಸಾರಭೋಗವಿನ್ನೇಕೆಂದು ಬಿಡುವಲ್ಲಿ ಬಿಸಾಡಿದನೊ (ಅಂಜತ. ೦೪-೦೩೬). [ಬೀಸು₁ + ಆಡು₁]

**ಬೀಸಿಕೆ**, ಬೀಸಿಗೆ₁ (ನಾ). ೧. ಎಸೆಯುವಿಕೆ ; ಬೀಸುವಿಕೆ : ಗಿರಿಯ ಶಿಖರದ ಹೊಯ್ಲಿನಲಿ ಹೆಮ್ಮರನ ಬೀಸಿಕೆಗಳಲಿ . . . ಹೊದೆಸಿದುದು ನೆಲದುಪ್ಪರದ ರುಧಿರದಲಡಗಿದುದು ನಭವಿವರ ಸಮರದಲಿ (ಕೊರರಾ. ೬-೦೩-೩೬). **ಬೀಸಿಗೆ₁** : ೨. ಅಡುವಿಕೆ ; ಹೊಡೆತ ; ಪೆಟ್ಟು : ಹಱಗೊರಳ ತೋಳಿನ ಬೀಸಿಗೆ [ಶಾಂತಿಂ. ಕೆ]ಯ ಬಿಱಸಿನಲಿ ಹೊರಳುತ ಮುಂಡವಾ ಖಳನ (ಕೊರರಾ. ೩-೬-೨೬) : ಅಸುರಾರಿ ಮಹಾಸ್ತ್ರನಿಕರದ ಬೀಸಿಗೆಯ ಬಿಱುವಳೆಯನದ ಹೊಱಬೀಸಿದುದು ಸುರರಸ್ತ್ರಶಸ್ತ್ರಾವಳಿಯ ಬಿಱುಘಾಳಿ (ಏಕಾಗ. ೬-೦೦-೦೬). ೩. ವ್ಯಾಪ್ತಿ ; ಹರಹು : ನೇಸಱನು ಮುಸುಕಿತು ವಿಮಾನದ ಬೀಸಿಗೆಯ ಬಹುರತ್ನಕಾಂತಿಗಳು (ಏಕಾಗ ೪-೦೦-೩೦). [ಬೀಸು₁ + — ಇಕೆ]

**ಬೀಸಿಗೆ₁** 'ಬೀಸಿಕೆ' ನೋ.

**ಬೀಸಿಗೆ₂** 'ಬೀಸಗೆ' ನೋ.

**ಬೀಸಿಸು** (ಕ್ರಿ). ದೀಪ ಮುಂತಾದುವನ್ನು ಗಾಳಿಯೂದಿ ಆರಿಸು,— ನಂದಿಸು : ಒಂದು ದಿನ ಫಲುಗುಣನ ಭೋಜನದಂದವನು ತಾವಱ ಯಲಿಕೆಯರವಿಂದವದನೆಯ ಕೈಯ ದೀಪವನಿರುಳು ಬೀಸಿಸಿದ (ಸಂಭಪ ೦೭-೦೦೬). [ಬೀಸು₁ + — ಇಸು₃]

**ಬೀಸು₁** (ಕ್ರಿ). ೧. (ವೇಗವಾಗಿ) ಎಸೆ : ಒಗೆ ; ಬಿಸುಡು : ದೈತ್ಯನಂ ಪಿಡಿದು ಮೃಣಾಳನಾಳಮನೆ ಸೀಳ್ವವೊಲೊರ್ಮೆಯೆ ಸೀಳ್ದು ಬೀಸಿದಂ (ಶಂಕಪಾ. ೩-೦೯) ; ಕಾಲನವುಂಕೆ ಪತ್ತಿ ಪಿಡಿದೋಘದೆ ಭೋರೆನೆ ಬೀಸಿ ಕಂಭದೊಳ್ ಲೀಲೆಯಿನಟ್ಟಿ ಮೋದಿಸನೆ (ಧರ್ಮಾಮೃ. ೯-೦೬೦). ೨. (ಪ್ರಾಣಿ, ಪಕ್ಷಿ ಮುಂತಾದುವುಗಳನ್ನು ಹಿಡಿಯುವುದಕ್ಕಾಗಿ ಬಲೆ, ಒಟ್ಟೆ ಇತ್ಯಾದಿಗಳನ್ನು) ಎಸೆದು ಹರಡು, — ಹರವು : ನಾಳೆ ಬಂದು ಜಾಲಮಂ ಬೀಸಿ ಮತ್ಸ್ಯಂಗಳಂ ಪಿಡಿವಂ (ಶಂಕಶಂ. ೧೩೬-೨೦); ಬಲೆಯು ನೊಂದಂ ಗಳಿಸಿ ನಿಚ್ಚಂ ಬಲೆಯನುದಕದೊಳೆತ್ತಿ ಬೀಸಲು (ಬಸವು. ೨೭-೨೦); ಸಿಲುಕುವುವು ಮೃಗಪಕ್ಷಿ ಹೂಡಿದ ಬಲೆಗಳಲಿ ಕಾಡಾನೆ ಬೀಸಿದ ಬಲೆಯ ಕೊಂಬುದೆ (ಕುಮ್ಯಾ.ಕ. ೦೩-೦೪). ೩. (ಮಾಯೆ, ಗಾರುಡಿ, ಪರಿಮಳ ಮುಂತಾದುವುಗಳನ್ನು) ಪಸರಿಸು ; ಆವರಿಸುವಂತೆ ಮಾಡು : ಮಾಯುಮನೆ ಬೀಸಿ ಪೆಱರುಪಾಯದೆ ಠಕ್ಕಿಕ್ಕಿ (ಧರ್ಮಾಮೃ. ೦-೦೦೨) ; ಕಾಡೊಡೆಯನಂ ನೋನು ಸೊಕ್ಕಿನ ಧೂಪಮಂ ಬೀಸು (ಹಕಕಾ. ೫-೨೯); ಮೋಹನದ ಮದ್ದುಗಳ ಮಾಯೆಯ ಬೀಸುವುದು ಸೂಸುವುದು ಸೊಗಸುಗಳ (ಕುಮ್ಯಾ.ಅ. ೦೩-೨). ೪. ಚಾಚು ; ನೀಡು: ಸುತ್ತಲುಂ ಭೀಮಭೀಷಣ ಕುಟಿಲಜಟಲವಿನ್ಯಾಸದಿಂ ಶಾಖಾಮಹಾಶಾಖೆಗಳ ಬೀಸಿ, ಸ್ವಚ್ಛಂದದಿಂ ಬೆಳೆದಿರ್ದುವಲ್ಲಿ ಭೂರ್ಜಶಕುಲಕೀರ್ತಿಗಳ್ ಲಕ್ಷೋಪಲಕ್ಷವಾಗಿ (ಶಕ್ಯಾಂಗ. ೩-೬೦). ೫. (ಬೀಸಣಿಗೆ ಮುಂತಾದುವುಗಳಿಂದ) ಗಾಳಿಯನ್ನು ಹಾಕು : ಎಳಮೃಂದವಾಟಿಯೆಲೆಯ ಬಿಜ್ಜಣಿಗೆಗಳಿಂ ಬೀಸಲ್ವೇಟ್ದು (ಶಂಕಪಾ. ೫-೬ ವ) ; ಬಬಲ್ಲರ ಮೊಗದೊಳ್ ನೀರಂ ತಳಿದು ಬೀಸಿ ಚೇತರಿಸಿ ದಾಗಳ್ (ಧರ್ಮಾಮೃ. ೦೦-೯೭); ಚಂಚತ್ತಾಳವೃಂತಂಗಳಿಂ ತಾಂ ನೀಹಾರಮಯೂಖಬಿಂಬಮುಖಿಯರ್ ಬೀಸುತ್ತೆ ಕಣ್ಗೊಪ್ಪಿದರ್ (ಅದ್ಭುಟ. ೭-೪೨). ೬. ತೀಡು; ಸುಳಿ : ಮೊಕ್ಕಳಂ ಬೀಸುವ ಗಾಳಿ ಚಾಮರದ ಗಾಳಿಯೆನಲ್ (ಶಂಕಪಾ. ೭-೨೯): ಸುಳಿದು ಬೀಸುವ ಗಾಳಿ ಉರಿಯಾಯಿತ್ತವ್ವ (ಮಹಾದೇ. ಬಿ. ೪೩-೦೦೦); ಆಳಾಪಿಸಿದರು ಕೇಳುವ ಜನರೆದೆಗೆ ತಂಗಾಳಿ ಬೀಸಿದ ತೆಱನಾಗೆ (ಭರತ. ೦-೬೨). ೭. ರಭಸವಾಗಿ ಚಲಿಸು ; ವೇಗವಾದ ಚಲನೆಯನ್ನು ಹೊಂದು : ವಿಳಯಾನಿಳಂ ಬೀಸೆ ಮಸಗಿದ ಜಲನಿಧಿಯ ಕಲ್ಲೋಲದಂತೆ (ಶಾಂತಿಪು. ೪-೭ ವ) ; ಪೊಡೆವ ಸಿಡಿಲಿಂ ಮಿಂಚಿಂ ಭೋರೆಂದು ಬೀಸುವ ಗಾಳಿಯಿಂ (ಧರ್ಮಾಮೃ. ೨-೨೨೯): ಬೀಸುವ ಬಿಱು ಗಾಳಿ ಬೀಸಬಾರದು ಬೀಸದಿರಬಾರದು (ಸಕವ. II. ೬೬೦-೦೯೪೮) ; ಅತಿ ನಿರ್ಝರದೊಳನಿಲಂ ಬೀಸಿದನು ಕೆಂಧೂಳಿ ನೆಗೆಯಿತ್ತು (ಬಸವು. ೬೦-೦೧). ೮. (ದೊಣ್ಣೆ, ಕತ್ತಿ, ಗದೆ ಮುಂತಾದ ಆಯುಧಗಳನ್ನು ವೇಗವಾಗಿ) ಆಡಿಸು ; ತಿರುಗಿಸು ; ಝಳಪಿಸು : ಕಾಲದಂಡಮಂ ಪೋಲ್ವ ತನ್ನ ಗದಾದಂಡಮಂ ಕೊಂಡು ತಿರುಪಿ ಬೀಸುತ್ತುಂ ಬರ್ಪ ಭೀಮಸೇನನಂ (ಶಂಕಪಾ. ೦೨-೦೬೦ ವ) ; ಗದೆಯಂ ಬೀಸುವ ಬೆಡಂಗು ರಂಜಿಸಿತು ಭೀಮ ದುರ್ಯೋಧನರಾ (ಗದಾಯು. ೯-೮) ; ಬೀಸಲ್ ಗಜೆಗಳನವರಂದಾ ಸಕಳ ಧರಿತ್ರಿ ತಿರುರಿಯಂತಿರೆ ತಿರಿವತ್ತು (ನೇಮಿಪು. ೦೨-೦೯೬). ೯. (ಸೊಂಡಿಲು, ಕೈ ಮುಂತಾದುವುಗಳನ್ನು) ತೂಗು ; ಅಲುಗಾಡಿಸು : ಘನಸಾರ ಸರಲಚಂದನವನಮೃದುಪಲ್ಲವಮನಗ್ರಹಸ್ತದೆ ಕೊಂಡೊಯ್ಯನೆ ಬೀಸೆ ಚೆಲ್ವುವಡೆದುದು ಜಿನಂಗೆ ಚಾಮರಮನಿಕ್ಕುವಂತಮರಗಜಂ (ಆದಿಪು. ೭-೬೨); ಲಲಿತಾಂಗಿ ಮೆಲ್ಲಮೆಲ್ಲನೆ ನಳಿತೋಳಂ ಬೀಸೆ (ಕಾದಂಪೂ. ೫೦೭) ; ಓಸರಿಸಿ ಬರ್ಚಿ ಪಕ್ಕಮನೋಸರಿಸದೆ ಮುನಿಗಳಿರ್ಪ ಹೋಮಸ್ಥಳದೊಳ್ ಭಾಸುರ ದಿನಂತುಮಿಂತುಂ ಬೀಸುತ್ತೆಳ್ಚಱಿಸಿ ಕುಡುವುದಾ ಶಿಖಿ ಶಿಖಿಯಂ (ಗಂಕ. ೦-೬೬). ೧೦. (ಯುದ್ಧವನ್ನು ಆರಂಭಿಸಲು ಚಾಮರ, ದೀವಟಿಗೆ ಅಥವಾ ಕೈಯನ್ನು) ಅಲುಗಾಡಿಸಿ ಸೂಚನೆ ಕೊಡು: ಆಗಳೆರಡುಂ ಪಡೆ ಯೊಡೆಯರ್ ಕಾದುವ ಪೊಟ್ಟಱಿದು ಕಡುಮುಳಿದು ಕೈಯ ಕುಂಚಮಂ

ಬೇಗಬೇಗಂ ಬೀಸಲು (ಕವ್ಯಕಾ. ೨೬೪) ; ನೆಗಹಿ ಬೀಸುವ ಚೌರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕೆ ತೋರಿಸಿದರು (ಕುವ್ಯಾದ್ರೋ. ೯-೧೬) ; ಬೀಸಿದರು ಚೌರಿಗಳ ಬಲಪಾರಾಶಿ ಮಸಗಿತು (ಕುವ್ಯಾಕ. ೧೩-೬). 'ಕೆಯ್ವೀಸು' ಪರಾ. ೧೧. (ಕತ್ತಿ, ಈಟಿ ಮುಂತಾದುವನ್ನು) ಗುರಿಯಿಟ್ಟು ಪ್ರಯೋಗಿಸು : ಅವರ ಸಮನ್ತಂ ಶ್ರೀಮುತ್ತರ ಅತಿರಥಗಣ್ಡ ಪೊಸವೆಣ್ನೆರಟ್ಟೆ ಬೀಸಿ ತಪ್ಪದೊನ್ (ಎಕ. XV, ಅರಸೀ. ೨೦೫-೪ ; ಸು. ೭೨೦). ೧೨. ಅಲುಗಾಡು ; ಅಲ್ಲಾಡು ; ಅತ್ತಿತ್ತ ಚಲಿಸು : ಬಿಡೆ ಬಿಡಿಸುವಂತೆ ನೃಪರೊಳ್ನುಡಿಯಂ ಬೀಸುವುದು ಚಾಮರಾವಳಿ (ಕಾದಂಪೂ. ೫೫೬) ; ಬೀಸುತಿರ್ಪ ತಾಳವೃಂತಮಾಸೆ ಯಾಗದಿರೆ (ಅಜಪು. ೨-೪). ೧೩. ತಿರುಗಿಸು; ಹೊರಳಿಸು; ಸುತ್ತಿಸು : ಸುತ್ತಿರ್ದುದು ಜಂಬೂದ್ವೀಪಮಂ ವಾರಿಧಿ ಕವಯರಮಂ ಬೀಸಿದಂತಾಗೆ ಚೆಲ್ವಿಂ (ಧರ್ಮಾಮ್ಮ. ೧-೬೫) ; ಕೈವಾರಮಂ ಬೀಸಿದಂತೆ ಬಟ್ಟಿತ್ತಾಗಿ ತೋರ್ಪುದು ಸೊನ್ನೆ (ಕಮುದ. ೧೬ ವೃತ್ತಿ). ೧೪. ಚೆಲ್ಲು; ಎರಚು : ವಾಸವನಪೂರ್ವನಾಟ್ಯವಿಳಾಸದೆ ತಾಂ ಭ್ರಮರಿಗುಡುವುದುಂ ನೇತ್ರಸಹಸ್ರಾಸಿತರುಚಿ ಕರ್ನೆಯ್ದಿಲ ಬಾಸಿಗಮಂ ಬೀಸಿದಂತುಟಾದುದು ಸಭೆಯೊಳ್ (ಅಜಪು. ೫-೦೫) ; ಒಗೆದಂಭೋಧರಕ್ಕಮಳಮರ್ತ್ಯಪತಿ ಬೀಸುತ್ತಿರ್ಪ ಮುಕ್ತಾಮರತ್ರೆಗಳೋ . . . ಪೇಟಿನ ಮಿಂಚುಗಳ್ ನಿವಿರ್ದುವಾ ಜೀಮೂತಯೂಥಾಗ್ರದೊಳ್ (ಕುಸುಮಪು. ೬-೧೫). ೧೫. ಸೂಸು; ಬೀರು : ದ್ವಾರಕಾಪುರದೊಳು ಬೇಸರಾಗಿಹರೆಲ್ಲ ಜನಗಳಿಗೆ ಹರುಷಮಂ ಬೀಸಿ ಬಹೆ ನಾನು (ಕುರಂಗ. ೮೦-೧೩) ; ರಾಯರು . . . ಬಲಪ್ರಯೋಗದಿಂದ ಮುಗುಳುನಗೆಯನ್ನು ಬೀಸಿ, ಕೈಲಿದ್ದ ದೊಣ್ಣೆಯ ಸಹಾಯದಿಂದ ವೇದಿಕೆಯನ್ನು ಹತ್ತಿ, ಮೇಜನ್ನು ಬಿಗಿಯಾಗಿ ಹಿಡಿದು ಕೊಂಡು ನಿಂತರು (ರಾಯುಕ. ೪೪). ೧೬. ಸೆಳೆ ; ಸೆಣೆ ; ಕುಕ್ಕು ; ಅಪ್ಪಳಿಸು : ಜವನ ಬಾರಿಯೊಳಿಕ್ಕುವೆನೆಂದು ಪರ್ವ ಭೋರ್ಭೋರೆನೆ ಬೀಸೆ ತದ್ವದನಗಹ್ವರದಿಂ ಬಿಸುನೆತ್ತರುಣ್ಮೆ (ಶಂಕಭಾ. ೩-೩೦) ; ಕಾಸಿ ಕಮ್ಮಾಱನಾದ ಬೀಸಿ ಮಡಿವಾಳನಾದ (ಬಸವ. ೫೯೧) ; ಸೆಳೆವ ಸೇದುವ ಬೀಸುವೊಗೆವ ಕುಸುಕುವ . . . ಖಳರ ಕಳಕಳದ ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೬-೨೯) ; ಕುದಿಸಿ ಉದಕದೊಳಲುಬಿ ಬೀಸುತೊಗೆದು ಪರಡಿ ತಗೆತೆಗೆದು ಘಳಿಗೆಯನೊದಗಿಪುದು ಮೈಲಿಗೆ ಮಡಿಗಳಹುದಕ್ಕು (ಬಸಪು. ೩೬-೪೭). ೧೭. ರಭಸದಿಂದ ಮುಂದುವರಿ; ನುಗ್ಗು : ಮಸಗಿ ಬೀಸುವ ಕಂಸನಾನೆಯನಸು ಬಡಿದ ಗಡ (ಕುವ್ಯಾಸ. ೧೧-೧೬). ೧೮. ನುಗ್ಗಿಸು ; ಎರಗುವಂತೆ ಮಾಡು : ಆನೆಗಳ ತುಡುಕಿ ಹಯಾವಳಿಯ ಬಿಸಿದರು ರಥಿಕರು ಹಾಯ್ಸಿದರು ರಥವ (ಕುವ್ಯಾಕ. ೨-೦೫). ೧೯. ನಿವಾರಿಸು ; ಪರಿಹರಿಸು ; ಅಟ್ಟು ; ಓಡಿಸು : ಕುಮುದಾವತಂಸ ಮಧುಪಂಗಳುಮಂ ಕರದಿಂದೆ ಪಿಂಗೆ ಬೀಸುವ . . . ಬೇವಸಮನಾವರಿಸಿರ್ದಳ್ (ಕಾದಂಬ. ೨೯೦) ; ಅಳಿಯ ಮುತ್ತಿಗೆಗಳನು ಬೀಸದೆ ನೆಲಕೆ ಕಿವಿಯನು ಜೋಲುಬಿಡುವುದು ಬಲುಕಣೆಯ ಹಿಡಿಹಿಂಗೆ ಲಾಗಿಸುತಿರ್ದುದಾ ದಂತಿ (ಕುವ್ಯಾದ್ರೋ. ೩-೩೬). ೨೦. ಹಾರಾಡಿಸು ; ಹಾರಿಸು : ಅಂತು ರಿಪುಕುರಂಗಕಂಠೀರವನ ಕೆಯ್ಕೊಳ್ ವೈಕರ್ತನಂ ಸಾಯುಲೊಡಂ ಮೇಲುದಂ ಬೀಸಿ ಬೊಬ್ಬಿಱಿದಾರ್ವ ಪಾಂಡವಪತಾಕಿನಿಯೊಳ್ (ಶಂಕಭಾ. ೧೨-೨೦೬ ವ) ; ಮುಱಿದು ಬಹ ನಿಜಸೇನೆಗಭಯದ ಸೆಱಗ ಬೀಸುತ ಭೀಮಸೇನನ ತಱುಬಿ ನಿಂದನು ಭೀಷ್ಮ (ಕುವ್ಯಾಭೀ. ೬-೫). ೨೧. ಹೊಂದಿಸು; ಅಳವಡಿಸು : ಗಜಕೆ ಗುಳವನು ಬೀಸಿ ವಾಜಿವ್ರಜವ ಹಲ್ಲಣಿಸಿದರು (ಕುವ್ಯಾಕ. ೨-೮). ೨೨. (ಬೀಸುವ ಕಲ್ಲು ಮೊದಲಾದುವನ್ನು ತಿರುಗಿಸಿ ರಾಗಿ, ಜೋಳ ಮುಂತಾದ ಧಾನ್ಯಗಳನ್ನು) ಅರೆ; ಪುಡಿಮಾಡು: ಗೋಪವನಿತೆಯರು ಕುಟ್ಟುತ್ತ ಬೀಸುತ್ತ ತಾ ಪೊಗಳುತಿಪ್ಪ ನಾಮ (ಪುರಂದ. ೨-೨೦೪-೩) ; ಇಡಿ ಗೋಧಿಯನ್ನು ಬೇಕಾದಂತೆ ಬೀಸಿ ಹಿಟ್ಟು ತಯಾರಿಸಿಕೊಳ್ಳುವುದು ಒಳ್ಳೆಯದು (ಅಡುಗೆ. ೬೩).

**ಬೀಸಹೆಜ್ಜೆ ಹಾಕು** = ವೇಗವಾಗಿ ನಡೆ : ಹೆಂಡತಿಗೆ ಬೈದು ದಂಬ ಬೀಸಹೆಜ್ಜೆ ಹಾಕುತ್ತ ಹೊರಟನು (ದಂಬಣಾ. ೪೦). **ಬೀಸಿ ಒಗೆ** = ವೇಗವಾಗಿ ಎಸೆ : ರಭಸದಿಂದ ಬಿಸುಡು : ಆ ಹಿಮಾಲಯದಿಂದ ನಿನ್ನನ್ನು ಬೀಸಿ ಒಗೆದರೆ ಇಲ್ಲಿಗೆ ? (ಶಲಮು. ೦೦-೦೫). **ಬೀಸಿಕೊಳು, ಬೀಸಿಕೊಳ್ಳು** = ೧. (ಬೀಸಣಿಗೆ ಮುಂತಾದುವುಗಳಿಂದ) ಗಾಳಿ ಹಾಕಿಕೊಳ್ಳು ; ಗಾಳಿ ಬರುವಂತೆ ಮಾಡಿಕೊಳ್ಳು : ಪೊಂಬಾಳೆಯ ಬಿಜ್ಜಣಿಗೆಯಿಂ ಮೆಲ್ಲಮೆಲ್ಲನೆ ಬೀಸಿಕೊಳುತ್ತಂ (ನಂಬಿರ. ೧೨-೪೯) ; ಅಂದು ಅವನು ದಿನವಿಡೀ ಆಂಗ್ಲರಮಣಿಯು ಬೀಸಣಿಕೆ ಬೀಸಿಕೊಳ್ಳುವದನ್ನು ನೋಡಿದನು (ಇಕ್ಕೆ. ೩೬೧). ೨. (ಬೀಸಣಿಕೆ ಮುಂತಾದುವುಗಳನ್ನು) ಆಡಿಸು ; (ಬೀಸಣಿಗೆ ಮುಂತಾದುವುಗಳಿಂದ) ಗಾಳಿ ಹಾಕು : ದೇವಸ್ಥಾನದಲ್ಲಿ ಚಾಮರ ಬೀಸಿಕೊಂಡು ಇರುವ ಹೆಣ್ಣು ನನ್ನನ್ನು ಹಾಗೆ ಅವಮಾನಿಸುವುದೇ ? (ದೇವಹಂ. ೦೫೪). ೩. ಹಾರಾಡಿಸು ; ಹಾರಿಸು : ಅವಳು ಸೆರಗು ಬೀಸಿಕೊಂಡು ಹೋಗುತ್ತಿದ್ದಾಳೆ (ರೂಪ). **ಬೀಸಿಡು** = ಬೀಸಿ ಒಗೆ : ಗದೆಯಂ ಬೀಸಿಟ್ಟೊಡಾ ಮಾಗಧನೃಪನ ರಥಂ ನುರ್ಗೆ (ದಶಕು. ೨-೨೬). **ಬೀಸಿ ಪೊಯ್** = ರಭಸವಾಗಿ ಹೊಡೆ, _ಬಡಿ: ಮೂಳೆಯಂ ದಬ್ಬುಕದಿಂದೆ ನುಗ್ಗುನುಱಿಯುಟ್ಟಿನೆಗಂ ಬಿಡೆ ಬೀಸಿ ಪೊಯ್ದು . . . ಕೊಲ್ವ ಕೊಲೆಯಂ ಹರಿಣೀಕ್ಷಣೆ ಕಂಡು (ಸುಕುಮಾ. ೬-೬) ; ಬಡಗಿಯಂತೆ ಕೆತ್ತುವರ್ ಅಗಸನಂತೆ ಬೀಸಿ ಪೊಯ್ವರ್ (ಧರ್ಮಾಮ್ಮ. ೩-೭೩). **ಬೀಸಿ ಬಿಸುಡು** = ಬೀಸಿ ಒಗೆ : ಬೀಸಿ ಬಿಸುಟವು ಪಾಯ್ದಳವ . . . ಬಲವಾರಾಶಿಯಲಿ ತಾಯ್ಕಳಲ ಮೊಗೆದವು ಭೀಷ್ಮನಂಬುಗಳು (ಕುವ್ಯಾಭೀ. ೯-೧೧) ; ಬೀಸಿ ಬಿಸುಟ ಮದೇಭ ಮಾರುತಪಾಶದಲಿ ಸಿಲುಕಿದವು (ತೊರೆರಾ. ೬-೩೨-೦೨). **ಬೀಸುವ ಕಲ್ಲು, ಬೀಸೂ ಕಲ್ಲು, ಬೀಸೋ ಕಲ್ಲು** = (ರಾಗಿ, ಅಕ್ಕಿ, ಮೊದಲಾದ) ಧಾನ್ಯಗಳನ್ನು ಹಿಟ್ಟು ಮಾಡಲು ಬಳಸುವ ಕಲ್ಲಿನ ಸಾಧನ ; ರಾಗಿಕಲ್ಲು ; ಘರಟ್ಟ : "ಬೀಸುವ ಕಲ್ಲು ಪೆಸರು ಸಂಘಟ ಯೆನಿಕ್ಕು" (ಮಂಗರಾ. ೬೧-೦೯) ; ಬೀಸುವ ಕಲ್ಲಿನ ಮುಂದೆ ಕುಳಿತು ನೀಲವ್ವ ಆ ಕಾಳು ಬೀಸುತ್ತಿದ್ದಳು (ಬರಹಾ. ೦೦೬) ; ಬಿಕ್ಕಿ ಬಿಕ್ಕಿ ಅತ್ತರೆ ಬೀಸುವ ಕಲ್ಲು ತಿರುಗೀತೇ ? (ಗಾದ) ; ಗಂಗಾಳ ಚರಿಗಿ ಮಂಗಳಸೂತ್ರಾ ತಕ್ಕೊಂಡು ಹೋದರೋ ಬೀಸೂಕಲ್ಲಾ ಎಲ್ಲಾ ತಗೊಂಡರೊ ಸಿಕ್ಕಷ್ಟು (ಶ್ರೀಂಧ. ೬೬) ; ಈಸೋ ಕಾಯನೆ ಬಿಟ್ಟು ಬೀಸೋ ಕಲ್ಲನೆ ಕಟ್ಟಿ ಈಸುವ ತೆಱದಿ ಈ ಭೂಸುರರಾ ದ್ರವ್ಯ (ಪುರಂದ. ೦-೦೯-೨) ; ರಾಗಿ ಬೀಸೋ ಕಲ್ಲೆ ರನ್ನ ಮುತ್ತಿನ ಕಲ್ಲೆ ಅಣ್ಣನ ಮನೆಯ ಸಿರಿಗಲ್ಲೆ (ಜಾನಪ. ೩). **ಬೀಸುವ ದೊಣ್ಣೆ** = (ಆಲಂ) ಅಪಾಯ ; ಆಪತ್ತು: ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರ್ಷ ಆಯುಸ್ಸು (ಗಾದ). **ಬೀಸುವಾತ** = ಗಾಳಿ ಬೀಸಲು ಕಾರಣನಾದವನು ; ವಾಯು : ಬೀಸುವಾತನು ಬೀಯವಹನಾಕಾಶದಲಿ ಭೂತಾದಿಯೊಳಗಾಕಾಶವಡಗಿದಡಡಗುವನು ವರಯೋಗಿಯುದಱೊಳಗೆ (ಶಿಭಾಗ. ೨-೧-೪೬).

[ದೇ.॥ ತಮಿ. ವೀಚು; ಮಲ. ವೀಜು, ವೀಯು, ವೀಶು ; ತುಳು. ಬೀಜ್, ಬೀಜು, ಬೀಪು, ಬೀಸ್, ಬೀಸು ; ಕೊಡ. ಬೀಜ್ ; ತೆಲು. ವೀಚು; ಕೋತ. ವೀಚ್; ತೊದ. ಪೀಸ್; ಕುಇ. ವೀಂಜ. /ಸಂ. ವೀಜ್]

**ಬೀಸು₂** (ನಾ). ೧. ಬೀಸುವಿಕೆ ; ಝಳಪಿಸುವುದು ; ತೂಗುವಿಕೆ; (ಕ). ೨. ಸಂಚಾರ ; ನಡೆ ; ಓಟ : ತಿಳಿಗಾಳಿ ತೀಟದಲಿ . . . ಬಿರುಗಾಳಿ ಬೀಸಿನಲಿ ಬರುವ ಮಾರುತಿಯೆ (ಏಸಿಗೀ. ೪೮-೪). ೩. ವಿಸ್ತಾರ ; ಹರಹು : ಕನಕಪತ್ರಮನಲ್ಲಿ ಕಂಡು ಬೀಸುಂ ಬಟಿಯು

ವಿಲ್ಲದೆ ನಿಬಿಡಮಾಗಿ ಬರೆದಿರ್ದಕ್ಕರಂಗಳಂ ಅನುಮಾನಿಸಿ ತಾನೆ ನೋಡಿ (ಅರ್ಧನೇ. ೬-೬೦ ವ) ; ಕಾಲುವೆ ಮೇಲೆ ಗೇರಮರನ ಕಟ್ಟಿ ಬೀಸುವೊಳತಾಗಿ ಗಡಿಯಂಕನಹಳ್ಳೀ ಮೇರೆಯು ಸುಂಕದವರ ಕಟ್ಟೆ (ಎಕ. VII, ಶಿವಮೊ. ೮೩-೦೦೦ ; 1527) ; ಪ್ರತಿಯೊಂದು ವಾಕ್ಯದ ಬೀಸು ಬಿರುಸುಗಳು ಜೋರು ಜಾರುಗಳು . . . ಪ್ರತಿಕೃತಿಯಲ್ಲೂ ಮೂಡಬೇಕು (ಸಾಹಿಶ್ರ. XI, ಶ್ರಿಶ್ರಾವಪೆ). ೪. ವಿಶಾಲವಾದುದು ; ವಿಸ್ತಾರವಾದುದು : ಬೀಸಾದ ಬಲೆಯೊಳಗೆ ಕಾಸಿಮಿಾಸೆಯ ಮೃಗವು ತಾ ಸೋತು ಬಿದ್ದು (ಮೃಲಾರ. ೪೩-೪೫) ; ಇಲ್ಲಿಯ ಸಭಾಮಂಟಪದ ಬೀಸಾದ ಕಂಭಗಳ ಮೇಲಿನ ಕೆತ್ತನೆಯ ಕೆಲಸವು ಅದ್ಭುತ ವಾದುದು (ಕಬಿಂತ. ೯೫); ಆ ಗಾಳಿ ಜತಿಗೆ, ನೀ ಗೂಳಿ ಹಾಂಗ ಅಡ್ಡಾಡಿ ಹೇಳು ಏಸು ? ಮುಸುಗುಡುತ ಹೊರಟೆ ಬಯಲಾಗ—ನನ್ನ ಮುಗುದಾಣ ಭಾಳ ಬೀಸು (ಹೃದಸ. ೦೬-೦೮). ೫. ಉದ್ದ ; ಲಂಬ : ಮೊದಲೇ ಬೀಸಾದ ಕೆಂಪಾದ ಆಳು, ಮತ್ತೇನು ಕೇಳುವದು ? (ಹೂಬಿಸಿ. ೨೬). 'ಬೀಸುಗಾಲು' ಪರಾ. ೬. ಹೊರವು ; ಸೊಂಪು : ಬೀಸಾಗಿ ಬೆಳೆದು ನಿಂತ ಬಾಳೆಯು ನಿಲುವು (ಜೀವರಂ. ೨೫) ; ತನ್ನ ಆಕಳ ಹಾಲು ಕುಡಿಯದ ಹೋರಿಯು ಸದೃಢವೂ ಆಗುವುದಿಲ್ಲ ಮತ್ತು ಬೀಸಾಗಿಯೂ ಬೆಳೆಯುವುದಿಲ್ಲ (ಗೋಗ್ರಾಸ. ೬೬).

**ಬಿಚ್ಚುಬೀಸು** = ಸ್ವೇಚ್ಛೆ ; ಸ್ವಚ್ಛಂದತೆ : ನಮ್ಮ ಅಪೂರ್ವನು . . . ಬಿಚ್ಚುಬೀಸಾಗಿ ತಿರುಗುವ ಈ ಬಾಲಿಕೆಯನ್ನು ನಾಲ್ಕಾರು ಬಾರಿ ನೋಡಿದ್ದಾನೆ (ಇಶ್ವಕ. ೫೬). [ < ಬೀಸು$_1$./ತವಿ. ವೀಚ್ಚು ]

**ಬೀಸು$_3$** 'ಬೀಸ' ನೋ.

**ಬೀಸುಂಬಲೆ**, ಬೀಸುಬಲೆ, ಬೀಸುವಲೆ (ನಾ). (ಪ್ರಾಣಿ, ಪಕ್ಷಿ, ಮುಂತಾದುವುಗಳನ್ನು ಹಿಡಿಯಲು, ಎಸೆದು ಹರಡುವ) ಒಂದು ಬಗೆಯ ಬಲೆ : ಅಖಿಳಮೃಗಪಟಳಮಂ ಪಿಡಿಯಲೊಡರಿಸಿ ಸಮೆದ ಶಮನ ಶಬರನ ಬೀಸುಂಬಲೆಯ ಪಾಸಮೆನಿಸಿ (ಪರ್ಧಪು. ೦೦-೫ ವ). **ಬೀಸುಬಲೆ :** ಬೀಸುಬಲೆಯಲಿ ಹುಲಿಯ ಹಿಡಿಯಬಲ್ಲಾ (ಮೀನಗ. ೫೯-೯). **ಬೀಸುವಲೆ :** ಹಾಸುವಲೆ ಬೀಸುವಲೆ . . . ಮುಂದಸಿನವಲೆಯ ಹೊಚಿಗಳ ಬೇಡವಡೆ ನೆರೆದುದು (ಹಕಶಾ. ೫-೬); ಬೀಸುವಲೆ ತಳಿಯ ಮರದ ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಪ್ಪಿತು (ಸಮ್ಯಕೌ. ೬-೨೯).
[ಬೀಸು$_1$ + ಬಲ್$_1$ ]

**ಬೀಸುಂಬೂರಿಗೆ**, ಬಿಸುಬೂರಿಗೆ, ಬಿಸುವೂರಿಗೆ, ಬಿಸುಹೂರಿಗೆ, ಬಿಸೂರಿಗೆ, ಬೀಸುರಿಗೆ, ಬೀಸುಹೂರಿಗೆ, ಬೀಸೂರಿಗೆ (ನಾ). (ಎಣ್ಣೆ ಸವರಿ ಹೆಂಚಿನ ಮೇಲೆ ಬೇಯಿಸಿ ಮಾಡುವ) ಅಗಲವಾಗಿರುವ ಒಂದು ಬಗೆಯ ಸಿಹಿ ಭಕ್ಷ್ಯ : ದೇವ ಬೀಸುಂಬೂರಿಗೆಯನೊಮ್ಮೆ ಸವಿಯಯ್ಯ (ಬಸರ. ೬-೦೨೬). **ಬಿಸುಬೂರಿಗೆ:** ಬಿಸುಬೂರಿಗೆಯಂ ಪಲವಂ ನಲವಿನಿಂದವಂ ಬಡ್ಡಿಸಿದರ್ (ಶಾಂತೀಶ್ವ. ೦೫-೬೦). **ಬಿಸುವೂರಿಗೆ :** ಅಲ್ಲಿ ಬಿಸುವೂರಿಗೆ [ಪಾಠಾಂ. ಬಿಸುಪ ಹೂರಿಗೆ] ಗಾರಿಗೆಗಳಾಗೆ ತನಿವಾಲ ಸಣ್ಣ ಸೇವಗೆಯ ಪಾಯಸಮಾಗೆ (ಕೊಮ್ಮರ. ಹ. ೩೪೫-೦೫). **ಬಿಸುಹೂರಿಗೆ :** ಹೂರಿಗೆಯ ಮಂಡಿಗೆಯ ಘನಬಿಸುಹೂರಿಗೆಯ[ಪಾಠಾಂ. ಚಕ್ಕುಲಿ ಗಾರಿಗೆಯ] . . . ಸಂವರಣೆ ಸವನಿಸಲೀ ಕ್ಷಣದಲೆಂದ (ಶಿಭಾಗ. ೦೦-೨೨-೦೮). **ಬಿಸೂರಿಗೆ :** ಚಕ್ಕುಲಿ ಬಿಸೂರಿಗೆಯತಿರಸ (ಜ್ಞಾವಶ. ೩೮-೦೨೦). **ಬೀಸುರಿಗೆ :** ಕರಜಿಗೆ ಕಾಯತಿರಸ ಮನೋಹರದುಂಡೆ ತರಗು ಚಕ್ಕುಲಿ ಬೀಸುರಿಗೆಯ (ಜ್ಞಾವಶ. ೨-೦೩೬) ; ಹೊನ್ನ ಹರಿವಾಣದಲಿ ಬಡಿಸಿದರೆಣ್ಣೂರಿಗೆ ಬೀಸುರಿಗೆ ಮಂಡಿಗೆ . . . ಕ್ಷೀರ ಸಕ್ಕರೆಯ (ಸುದಾಮ. ೪-೦೮). **ಬೀಸುಹೂರಿಗೆ :** ಬೀಸುಹೂರಿಗೆ ತಱಿಂಗೆಳ್ಳುಂಡೆ . . . ಪೂಸಣವಾದಿ ಭಕ್ಷ್ಯಚಯಮಂ ತಂದಿಕ್ಕಿದರ್ ಕಾಂತೆಯರ್ (ಧರ್ಮಪ. ೨-೫೬). **ಬೀಸೂರಿಗೆ :** ಗಾರಿಗೆ ಲಡ್ಡುಗೆ ಬೀಸೂರಿಗೆ . . . ಮುಖಭಕ್ಷ್ಯಂಗಳಿಗೊಪ್ಪುವ ಖರ್ಜೂರಂ ಕದಳಿ ಸಾರಘೃತಂ ಮಧುಸಕ್ಕರೆಗಳ ಸಾರಂಗಳ ಸುಳಿವಾಳೆಯ ದೊನ್ನೆಯೊಳಾರೈ ದೆಱದರ್ಸವಿಗಾತಿಯರ್ (ಮದೇಶ್ವ ೦೯-೫೮). [ಬೀಸು$_2$ + ಪೂರಿಗೆ]

**ಬೀಸುಗಂಡೆಯ** (ನಾ). ತೂಗುವಂತೆ ಕಟ್ಟಿದ ಕತ್ತಿ,—ಖಡ್ಗ : ಕಟ್ಟಿದ ಕೊಂಬುಗತ್ತಿಯ ಸುಂಡಿಲೊಳಗಳವಟ್ಟಿದ ಬೀಸುಗಂಡೆಯದ ಕಟ್ಟಿರಕದ ಚಿತ್ರಪಟಗಳಿಂ ರಾಯನ ಪಟ್ಟದಾನೆಗಳೈದಿದುವು (ಕಂಪಣ. ೩-೪೩);
[ಬೀಸು$_1$ + ಕಂಡೆಯ$_1$ (<ಖಂಡೆಯ$_2$)]

**ಬೀಸುಗಣ್ಣೆ** (ನಾ). (ಮೃಗಪಕ್ಷಿಗಳನ್ನು ಹಿಡಿಯಲು ಉಪಯೋಗಿಸುವ) ಎಸೆಯುವ ಹಗ್ಗ : ಬೀಸುಗಣ್ಣೆ ಗುಗ್ಗುರಿಯರಳು . . . ಕತ್ತಿ ಬಡಿಕೋಲ್ ಕಲ್ಲಿ ಹಿಡಿದ ಹುಲಿ ಶರಭ ಭೇರುಂಡ ಸಿಂಹ ಪ್ರಕರವೆರಸಿ ಬೇಡರು ನೆರೆದರು (ಹಕಶಾ ೫-೯) ; ತಡಿಕೆಗಳೆ ಬೀಸುಗಣ್ಣೆ ಹಿಡಿಯೆರಳೆ . . . ಪರಿಪರಿಯ ಹಕ್ಕಿವೆರಸಡವಿಗಂತಕರಂತೆ ನಡೆವ ಶಬರರ ಕಂಡನು (ಸೋಮಶ. ೩-೪). [ಬೀಸು$_1$ + ಕಣ್ಣೆ]

**ಬೀಸುಗಲ್** (ನಾ). ಕವಣೆಯಲ್ಲಿಟ್ಟು ಎಸೆಯುವ ಕಲ್ಲು ; ಕವಣೆಕಲ್ಲು : ನಸುಬಾಗಿ ಬೀಸುಗಲ್ಗಳನಿಡುತಿರ್ಪ ಪಾಮರಿಯರೊಪ್ಪುಪರಾ ಕಳಮ ಪ್ರದೇಶದೊಳ್ (ದಶಕು. ೦-೨೯). [ಬೀಸು$_1$ + ಕಲ್$_3$]

**ಬೀಸುಗವಣೆ** (ನಾ). ರಭಸವಾಗಿ ಎಸೆದ ಕವಣೆ : ಒಡನೆ ನೂಕಿತು ತೋಕುವಂಬಿನ ತಡೆಪ ಶೂಲವ ಹೊಯ್ವ ಖಡುಗದ ಬಿಡುವ ಚಕ್ರದ ಬೀಸುಗವಣೆಯ[ಪಾಠಾಂ. ಬೀಸುಗಣೆಯಲಿ] ಬಹಳ ಭಟನಿಕರ (ತೊರಭಾ. ೫-೬-೦೦). [ಬೀಸು$_1$ + ಕವಣೆ$_1$]

**ಬೀಸುಗಾಲು** (ನಾ). ೧. ಉದ್ದವಾದ ಕಾಲು ; ನೀಳವಾದ ಕಾಲು : ಚಂಡಿ ಚಾಮುಂಡಿಯರ್ ನರಶಿರಗಳೊಂದರ್ಬುದವ ಹರಡಿ ಧ್ರುವದಿಂದ ಧ್ರುವಬರಂ ಬೀಸುಗಾಲಿಂದೊದೆದು ಕ್ರೀಡಿಸುವ ಕೆಂಗಾಲ (ಪಶ್ವಧ್ವ. ೦೨-೧). ೨. ದೊಡ್ಡ ಹೆಜ್ಜೆ ; ದಾಪುಗಾಲು : ಆತ ಓಡುತ್ತಿದ್ದಾನೆ ; ಇವರು ಅವನ ಹಿಂದೆ ಬೀಸುಗಾಲು ಹಾಕುತ್ತಿದ್ದಾರೆ (ಜಾರುದಾ. ೨೨೬).
[ಬೀಸು$_2$ + ಕಾಲು$_1$ (<ಕಾಲ್$_1$)]

**ಬೀಸುಗೆಯ್**, ಬೀಸುಗೈ (ನಾ). ೧. ನೇಲುವ ಕೈ ; ಜೋಲುಗೈ : ಬೀಸುಗೆಯ್ಗಳ[ಪಾಠಾಂ. ಗೈಗಳ] ಡೊಂಕುಗಾಲುಗಳ . . . ತೋರ ಕಾರೊಡಲ ಕುಱುಬಂ (ಬಸವು. ೨೦-೦೦). **ಬೀಸುಗೈ :** ೨. ಯುದ್ಧದ ಆರಂಭವನ್ನು ಸೂಚಿಸುವ ಸಲುವಾಗಿ ಅಲುಗಾಡಿಸುವ ಕೈ : ರಾಯರಿಬ್ಬರ ಬೀಸುಗೈಗಳ ಸನ್ನೆ ಸಮವಾಗೆ . . . ಬೆರಸಿದುದುಭಯಬಲ ಬಲುಖತಿಯ ಬಿಂಕದಲಿ (ಕುವ್ಯಾಕ. ೨-೦೩). [ಬೀಸು$_1$ + ಕಯ್$_2$]

**ಬೀಸುಗೈ** 'ಬೀಸುಗೆಯ್' ನೋ.

**ಬೀಸುಗೊಳ್ಳಿ** (ನಾ). ಅತ್ತಿತ್ತ ಅಲುಗಾಡಿಸುತ್ತಿರುವ ಕೊಳ್ಳಿ,—ದೊಂದಿ: ಮುಂದೆ ಪಾರ್ಥನ ಬೀಸುಗೊಳ್ಳಿಗಳಿಂದ ತಮದಾವಳಿ ಮುಱಿಯೆ . . . ಅನಿಬರಟವೀವೃಂದದಲಿ ಬರುತಿರ್ದರಿರುಳು (ಕುವ್ಯಾಕ. ೦೦-೨೬).
[ಬೀಸು$_1$ + ಕೊಳ್ಳಿ$_1$]

**ಬೀಸುಗೋಲು** (ನಾ). "ಒಂದು ಬಗೆಯ ಬೇಟೆಯ ಕೋಲು" (ಅಭ್ಯಲೂ. ಕೋಶ) : ಬೀಸುಗೋಲಿನ ಸಾಳ್ವ ಕರದ ಮೋಸದಿ ಮೃಗಪಕ್ಷಿ ಹಿಡಿವ ಬಲೆಗಳಿಂದ ಲೇಸಾಗಿ ನಡೆದರೊಗ್ಗಿನಲಿ (ಅಭ್ಯಲೂ. ೩-೨೮).
[ಬೀಸು$_1$ + ಕೋಲು$_1$ (<ಕೋಲ್$_1$)]

**ಬೀಸುದೋಳ್** (ನಾ). ೧. ಜೋತು ಬಿದ್ದಿರುವ ತೋಳು ; ನೇಲುವ ತೋಳು : ಸೆಡೆದೇಳ್ವ ಬೀಸುದೋಳ್ಸಿರೆ ನೆಗದಿರ್ಪ ಗೋಣ್ (ವೃಹಬಿ. ೦೦-೬೦). ೨. ಅತ್ತಿತ್ತ ತೂಗಾಡುವ ಕೈ,—ಚಲಿಸುವ ಕೈ : ಗಳಗಳನೆ ನಡೆವಾಗ ಬಿಸುದೋ[ಪಾಠಾಂ. ತೋ]ಳಿಂ ರಕ್ತವಿಳಿದು ಬೆರಳ್ಗಳು ಬಾತು ಮಿಡಿದೊಡೆವುತು (ಸೋಮಶ. ೩-೫೩). [ಬೀಸು$_1$ + ತೋಳ್]

**ಬೀಸುಬಲೆ** 'ಬೀಸುಂಬಲೆ' ನೋ.

**ಬೀಸುರಿಗೆ** 'ಬೀಸುಂಬೂರಿಗೆ' ನೋ.

**ಬೀಸುವಲೆ** 'ಬೀಸುಂಬಲೆ' ನೋ.

**ಬೀಸುವಿಟ್ಟು** (ನಾ). (ಬೀಸುವ ಕಲ್ಲಿನಲ್ಲಿ) ಪುಡಿ ಮಾಡಿದ ಹಿಟ್ಟು: ತೆಂಗಾಯುನರೆದಿಕ್ಕಿ ಕಡಲೆಯು ಬೀಸುವಿಟ್ಟನಲ್ಪವನಿಕ್ಕಿ ಕಲಸಿ (ಸೂಶಾ. ೯-೬೭). [ಬೀಸು$_1$ + ಪಿಟ್ಟು]

**ಬೀಸುಹೂರಿಗೆ** 'ಬೀಸುಂಬೂರಿಗೆ' ನೋ.

**ಬೀಸೂರಿಗೆ** 'ಬೀಸುಂಬೂರಿಗೆ' ನೋ.

**ಬೀಹಳಿ** (ನಾ). : (?) [ಬೀ]ಹಳಿಯುರೆನಿಬರಾದಡಂ ಮೆಯಲು ವಿ ೧೦ (ಕೌಇ. XV. ೩೯-೧೦; 1148); ಹಾಡುವ ಮೊಖರಿಗಂ ಬೀಹಳಿ ಯಿರ್ಪ್ಪರ್ಗ್ಗಂ ಎರೆ ಮತ್ತ ೧೬ (ಕೌಇ. XX. ೩೦೦-೩; 12ನೆಯ ಶತ). [?]

**ಬೀಹು** 'ಬೀವು' ನೋ.

**ಬೀಳ್$_1$** 'ಬೀೞ್$_1$' ನೋ.

**ಬೀಳ್$_2$** 'ಬೀಡು$_2$' ನೋ.

**ಬೀಳ್$_3$** 'ಬೀಡು$_3$' ನೋ.

**ಬೀಳಲ್** 'ಬೀೞಲ್' ನೋ.

**ಬೀಳಲು** 'ಬೀೞಲ್' ನೋ.

**ಬೀಳಲುಪಲ್ಲು** (ನಾ). ಅಲ್ಲಾಡುತ್ತಿರುವ ಹಲ್ಲು; ಬೀಳುವ ಹಲ್ಲು: ಬೀಳಲುಪಲ್ಲು ಪತ್ತಿದ ಗಲ್ಲದ ನೆಱೆ ವೃದ್ಧನಡಿಯಿಟ್ಟನೊಲಿದು (ಚೆಸಂಸಾಂ. ೦೬-೫೦). [ಬೀಳಲು (<ಬೀೞಲ್) + ಪಲ್ಲು (<ಪಲ್)]

**ಬೀಳಲುಬಿಡು** 'ಬೀೞಲ್ಬಿಡು' ನೋ.

**ಬೀಳಲುವರಿ** 'ಬೀೞಲ್ವರಿ' ನೋ.

**ಬೀಳವೃತ್ತಿ** 'ಬೀೞವೃತ್ತಿ' ನೋ.

**ಬೀಳಾನುವಿರ್ತಿ** (ನಾ). = ಬೀಳಾನುವೃತ್ತಿ: ಶ್ರೀಮನ್ಮಹಾಮಣ್ಡಳೇಶ್ವರಂ ಜೋಯಿಮಯ್ಯರಸರ್ ಸಿಂದವಾಡಿಸಾಸಿರಮಂ ಬೀಳಾನುವಿರ್ತ್ತಿಯಿಂ ತ್ರಿಭೋಗಾಭ್ಯಂತರಸುದ್ಧಿಯಿನಾಳ್ದು ಸುಖದಿನರಸುಗೆಯ್ಯೆ (ಕೌಇ. IX-i, ೦೯೩-೦೭; 1077). [☞ ಇದು 'ಬೀಳಾನುವೃತ್ತಿ'ಯ ಅಪಲಿಖಿತ]

**ಬೀಳಾನುವೃತ್ತಿ** (ನಾ). ಮಾಂಡಲಿಕ ಅಥವಾ ತುಂಡರಸನು ಸ್ವಾಮಿ ಭಕ್ತಿಯಿಂದ ಸೇವೆ ಸಲ್ಲಿಸಿದ ಸಲುವಾಗಿ, ಅಧಿರಾಜನಿಂದ ಪಡೆಯುವ ವಿಶೇಷವಾದ ಪದವಿ, ಅಧಿಕಾರ ಮುಂತಾದುವು: ಸೋಮೇಶ್ವರ ದೇವರ್ಪ್ರಿಳ್ವೊಲವೂನೂಱುಂ ಪುರಿಗೆಱೆಮೂನೂಱುಮಂ ಬೀಳಾನು ವೃತ್ತಿಯಿನಾಳುತಂ ಸುಖದಿನಿರೆ (ಕೌಇ. XI-i, ೮೯-೮; 1049); ಶ್ರೀಮನ್ಮ ಹಾಮಣ್ಡಳೇಶ್ವರಂ ಲೋಕರಸನಬಲು ಮೂನೂಱುಮಿಱಿಸಿ ಮೂನೂ ಱುಮಂ ಬೀಳಾನುವೃತ್ತಿಯಿಂ ರಾಜ್ಯಂಗೆಯ್ಯುತಮಿರಲು (ಕಇಕ. ೯-೩-೨೯೯; 1062); ಚಾಳುಕ್ಯಚಕ್ರವರ್ತಿ ತ್ರೈಲೋಕ್ಯಮಲ್ಲದೇವನ ಮಗ ಸೋಮೇ ಶ್ವರನು 'ಬೀಳಾನುವೃತ್ತಿ'ಯಿಂದ ಆಳುತ್ತಿದ್ದಂತೆ ಒಂದು ಶಾಸನದಿಂದ ತಿಳಿದು ಬರುತ್ತದೆ (ಕಹಾಇ. ೩೯೦). 'ಕುಮಾರವೃತ್ತಿ', 'ಬೀೞವೃತ್ತಿ' ಪರಾ. [ಬೀಳ್$_1$ (< ಬೀೞ್$_1$) + ಅನುವೃತ್ತಿ]

**ಬೀಳಾಸೆ** (ನಾ). ತುಚ್ಛವಾದ ಆಸೆ; ಕೀಳಾದ ಅಪೇಕ್ಷೆ: ಆವ ಬೀಳಾಸೆಯಿಂದಾದಾವ ಶಾಪಕ್ಕೊ . . . ನಮ್ಮ ತಾಯ್ನುಡಿ ತನಗಾದ ನಾಡಿನೊಳೆ ತಾನಮಂಗಳೆಯೆನಿಸಿ . . . ಬನ್ನಪಡುತಿರಲು (ಗಕೇಶ. ೯೦-೩). [ಬೀಳ್$_3$ (< ಬೀಡು$_3$) + ಆಸೆ$_1$]

**ಬೀಳಿಕೆ** (ನಾ). ೧. ಬೀಳುವಿಕೆ; ಪತನ: ಅದೇ ಪ್ರಕಾರ ಈ ಏಳು ಬೀಳಿಕೆಯು ಹೆಣಕ್ಕೆ ಕೂಡ ಇರುತ್ತದೆ (ಮುಂಬಯಿ. ೬-೨೨೦). ೨. ಸುರಿ ಯುವುದು; ಸುರಿತ: ಸುಮಂತ್ರನು ಶೂನ್ಯಹರುಷದಲಿ . . . ಸಾರಿದ ನಕ್ಷಿಯಂಗಳದ ವಾರಿಗಳ ಬೀಳಿಕೆಯ [ಪಾಠಾಂ. ಬಳಲಿಕೆಯ] ಬಿಸುಸುಯ್ಲಿನ ಮಹೀಪತಿಯ (ತೊರರಾ. ೨-೫-೩). [ಬೀಳ್$_1$ (< ಬೀೞ್$_1$) + -ಇಕೆ]

**ಬೀಳಿಕ್ಕು** (ಕ್ರಿ). ಕೆಳಗೆ ಬೀಳುವಂತೆ ಮಾಡು; ಬೀಳಿಸು: ಹೋಗಿ ದೇಶಂಗಳಲಿ ತಿರಿದುದ ಬಾಗಿಲಲಿ ಬೀಳಿಕ್ಕುವಂತಿರೆ ಯೋಗಗತಿಗೀಡೇ ಬದಿಳಿವರು ಮೃತ್ಯುವಿನ ಮುಖಕೆ (ತಿಭಾಗ. ೧೦-೯೩-೩೬). [ಬೀಳ್$_1$ (< ಬೀೞ್$_1$) + ಇಕ್ಕು]

**ಬೀಳಿಚು** 'ಬೀಳ್ಚು' ನೋ.

**ಬೀಳಿಲ್**, ಬಿಣಿಲು, ಬಿಳಿಲ್, ಬಿಳಿಲು, ಬೀೞಿಲ್, ಬೀಳಿಲು (ನಾ). ೧. ಆಲ ಮುಂತಾದ ಮರಗಳ ಕೊಂಬೆಗಳಿಂದ ಕೆಳಮುಖವಾಗಿ ಇಳಿ ಬಿದ್ದ ಬೇರು,—ಜಟೆ: ಘಳಿಲನೆ ಬೀಳಲ್ವಿಡಿದಡರ್ದು ನಿಡುಗೊಂಬಿ ನೆಲೆದುಱುಗಲ ಪೊದಱ ಪೊರೆಯೊಳ್ ಮೆಯ್ಗರೆದಿರ್ದ ಗಂಧರ್ವಸೌಂದರಿ ನೆಲೆವಡೆದಕ್ಷೀಣರೂಪಯಕ್ಷಿಣಿಯಂತಸೆಯೆ ಮಿಸುಪ ವಟವಿಟಪಿಯಿಂ (ಶಬಕು. ೩-೩೫ ವ). **ಬಿಣಿಲು**: ೧. ಬಣಗಿದ ಮರ ಚಿಗಿತು ಬಿಣಿ[ಪಾಠಾಂ. ಳಿ]ಲು ಬಿಡುವುದ ಕಂಡೆ (ಸರ್ವಜ್ಞ. ೨೦೬೦). **ಬಿಳಿಲ್**: ೨. ಬೀಳಲನ್ನು ಹೊಂದಿ ರುವ ಆಲದ ಜಾತಿಯ ಮರ: ಬಿಳಿಲ್ಬದರಿ ಸಾಲಮಾ ಹೊನ್ನೆ ಚೆನ್ನಂಗಿ ಮೊದಲಾದ ವೃಕ್ಷಂಗಳಿಂ ವನಮೆಸೆದುದು (ಶಬಪು. ೩೩-೧೮). **ಬಿಳಿಲು**: ೧. ಆಲದ ಬಿಳಿಲಂ ಮೇಕೆಯ ಹಾಲಲ್ಲಿ ಅರೆದು . . . ೩ ದಿನ ಕೊಳ್ಳಲು ವೀರ್ಯವರ್ಧನಂ (ಶಿವ್ಯಶಿ. ೬೨); ಉರ್ವರೆಗೆ ಇಳಿದ ಬಿಳಿಲಿನ ಹರಹಿನಲಿ ಕಂಗೊಳಿಸುತಿಹ ವಟವೃಕ್ಷ ತಂಪಿನ ನೆಳಲ ವಳಯದಿ ಸುಳಿದುವಾಯ್ದರು (ಅಂಬಿಕಾ. ೩-೪). ೨. ಬಿಳಿಲರಳಿಯೆರಂ ಕಕ್ಕೆ . . . ತಱಿಯದಿಂದೊಪ್ಪು ತಿರ್ದತ್ತರಣ್ಯಂ (ಗಂಸೆ. ೦-೬೨); ಬಿಳಿಲಾಲ ಬೇಲ ಹೆಬ್ಬೇವು. . . ಮೊದಲಾದ ಮರಗಳ ಬಳಗದಿಂದದು ಕಣ್ಗೆಸೆದುದು (ಕುರಾಸಾಂ. ೯-೬). **ಬೀೞಿಲ್**: ೧. "ಶಿಫೆ ಜಟೆಯೆನೆ ಬೀೞಿಲಕ್ಕು" (ಶಬ್ದಮಣಿ. ೩೨-೯); ಸೈಂಧವದಿಂದರೆದಾಲದ ಬೀೞಿಲನಳಿವೆರಸಿ ಕುಡಿದಂದು ಮಾಣ್ಬವತಿಸಾರಂ ಕೆಡುಗುಂ (ಕರ್ಣಾ ಕಾ. ೯-೦೩). ೨. ಬೀೞ್ಬಿಲ್ಮತ್ತೆ . . . ಕಿಕ್ಕಮ್ಮರಂ ಎಂಬೀ ಮರದುಱುಗಲಿಱುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ (ಪಾರ್ಶ್ವ. ೦೨-೩೮). **ಬೀಳಿಲು**: ೧. ಸ್ಮರನಿಧಿಯೆಡೆಗೆಯ್ದುವ ನವಮೋಹನ ತರುವಿನಸಿಯ ಬೀಳಿಲ ತೆಜದಿಂ ಬಂಧುರವಮಾದುವು ಕರಯುಗವಂ (ಜಯುಕಾ. ೩-೩೬). [ಬೀಳ್$_1$ (<ಬೀೞ್$_1$) + -ಇಲ್$_3$]

**ಬೀಳಿಲು** 'ಬೀಳಿಲ್' ನೋ.

**ಬೀಳಿಲುಬಿಡು** (ಕ್ರಿ). ಮರದ ಕೊಂಬೆಗಳಿಂದ ಜಟೆಯು ಕೆಳ ಮುಖವಾಗಿ ಬೆಳೆ: ಪುರುಷನಾವನು ಬಂದಡಾಲದ ಮರನು ಬೀಳಿಲು ಬಿಡುವುದಾತನು ವರನು ತರುಣಿಗೆ ತಪ್ಪದಪ್ಪನು (ಶಜಕ. ೩-೩೦). 'ಬೀೞಲ್ಬಿಡು' ಪರಾ. [ಬೀಳಿಲು (<ಬೀಳಿಲ್) + ಬಿಡು$_1$]

**ಬೀಳಿಸು** 'ಬೀೞಿಸು' ನೋ.

**ಬೀಳು$_1$** 'ಬೀೞ್$_1$' ನೋ.

**ಬೀಳು$_2$** 'ಬೀೞ್$_2$' ನೋ.

**ಬೀಳು$_3$** 'ಬೀಡು$_2$' ನೋ.

**ಬೀಳು$_4$** 'ಬೀಡು$_3$' ನೋ.

**ಬೀಳು$_5$** 'ಬೀೞ್$_4$' ನೋ.

**ಬೀಳುಕಟ್ಟೆ** (ನಾ). ನೀರು ಜಲಪಾತವಾಗಿ ಬೀಳುವಂತೆ ಮಾಡುವ ಒಂದು ಬಗೆಯ ಕಟ್ಟೆ: ಆದರೆ ಬೀಳುಕಟ್ಟೆಯನ್ನು ಕಟ್ಟಿದ ಕಡೆ ದೋಣಿಗಳ ದಾರಿಯನ್ನು ಪಾತದಿಂದ ಬೇರೆಯಾಗಿ ಇಡಬೇಕಾಗುತ್ತದೆ (ತಿಂಪಾ. ೩೮೩). [ಬೀಳು$_1$ (< ಬೀೞ್$_1$) + ಕಟ್ಟೆ$_1$]

**ಬೀಳುಕೊಡು** 'ಬೀಳ್ಕೊಡು' ನೋ.

**ಬೀಳುಕೊಳ್** 'ಬೀಡುಗೊಳ್' ನೋ.

**ಬೀಳುಗ** (ನಾ). ಕೆಡೆಯುವವನು: "ಪತನ್, ಪತತ್ರಿಃ, ಪತಕಃ—ಈ ೩ ಬೀಳುಗಂ" (ಶಾಶಕ್ಕ. ೦೯೯). [ಬೀಳು$_1$ (<ಬೀೞ್$_1$)+ -ಗ$_2$]

**ಬೀಳುಗತ್ತಲೆ** (ನಾ). ಗಾಢವಾದ ಅಂಧಕಾರ : ಹೊಳಜೆಯ ಅವುಗಯ್ಯ ಧೂಳ ಚಿಂಜೆಗೆ ಸೇರಿ ವಾಳದೊಳು ಬಿಟ್ಟ ಬೀಡಾರ ಬೆಳತನಕ ಬೀಳ್ಗತ್ತಲೆಯು ಬೆಳಕಾಗಿ (ಕಷ್ಟಜಾ. ೩೦೫).
[ಬೀಳು$_1$ (< ಬೀಟು$_1$) + ಕತ್ತಲೆ$_1$ (< ಕಟ್ತಲೆ) ]

**ಬೀಳುಗಳೆ** (ಕ್ರಿ). ಹೀನಾಯ ಮಾಡು; ಹೀಗಳೆ : ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು (ಹರಿ. ೫-೭) ; ನಾಡನ್ನು ಕಾಡೆಂದು ಬೀಳುಗಳೆವರೆ ಬೀಡ ಕಟ್ಟಿ ಪಟ್ಟಣವನ್ನು ಆಳಬೇಕು (ಅರಳು. ೪೦೨-೫) ; ಮನುಷ್ಯನ ಮನಸ್ಸು ಮಿಕ್ಕವನ್ನೆಲ್ಲ ಬೀಳುಗಳೆಯುವುದು (ಸುಹಾಣ. ೩೦). [ಬೀಳು$_4$ (< ಬೀಡು$_3$) + ಕಳೆ$_1$]

**ಬೀಳುಗುಂಡಿ** (ನಾ). ಉರುಳಿಸಲು ಮಾಡಿರುವ ಹಳ್ಳ; ಬೀಳಿಸಲು ನಿರ್ಮಿಸಿದ ಕಂದಕ : ಶಕುನಿಯೂ . . . ದುಶ್ಶಾಸನನೂ ಕೋಲು ಜೇನಿಗಾಗಿ ಮರದ ತುದಿಗೆ ಹತ್ತಿ ಬಿಟ್ಟು ಅಲ್ಲಿ ಜೋಲಾಡುತ್ತಿದ್ದಾರೆ. ಕೆಳಗೆ ಭೀಮನ ಕೋಪವೆಂಬ ಬೀಳುಗುಂಡಿ ಅವರುಗಳ ನಾಶಕ್ಕಾಗಿ ಬಾಯಿ ತೆರೆದು ಕಾದಿರುವುದು ಆವರುಗಳಿಗೆ ತಿಳಿಯಲಿಲ್ಲವಲ್ಲಾ ! (ವ್ಯಾಸವಿ. ೧೯೨).
[ಬೀಳು$_1$ ( < ಬೀಟ್$_1$) + ಗುಂಡಿ$_2$]

**ಬೀಳುಗುಂಡು** 'ಬೀಟ್ಗುಂಡು' ನೋ.

**ಬೀಳುಗುವರ** (ನಾ). ಅಯೋಗ್ಯನಾದ ತರುಣ, —ಯುವಕ : ಬಾಳಿ ಬದುಕಿ ತಣಿವಿಲ್ಲದ ತಮ್ಮಂತೆ ಬಾಳಲೆಳಸುವ ಬಾಲಕಿಯ ಬೀಳುಗುವರನಿಗೆ ಬೆಲೆಗೈದರೆಂಬುದ ಕೇಳಿ ಕಿವಿಯ ಮುಚ್ಚುವುದು (ಹರಿ. ೫-೦೯).
[ಬೀಳು$_4$ (< ಬೀಡು$_3$) + ಕುವರ$_2$]

**ಬೀಳುಗೆಡವು** (ಕ್ರಿ). ಭೂಮಿಯನ್ನು ಸಾಗುವಳಿ ಮಾಡದಿರು ; ಜಮೀನನ್ನು ಹಾಳುಗೆಡವು : ಅವನು ಕಳ್ಳಭಟ್ಟಿ ಮಾರುವ ಕಸುಬಿಗೆ ಕೈಹಾಕಿ ಗದ್ದೆಗಳನ್ನೆಲ್ಲ ಬೀಳುಗೆಡವಿದ (ರೂಶಿ).
[ಬೀಳು$_4$ (< ಬೀಡು$_3$) + ಕೆಡವು (< ಕೆಡಪು)]

**ಬೀಳುಗೊಡು** 'ಬೀಳ್ಕೊಡು' ನೋ.

**ಬೀಳುಗೊಳ್** 'ಬೀಡುಗೊಳ್' ನೋ.

**ಬೀಳುಗೊಳಿಸು$_1$** (ಕ್ರಿ). ನಿವಾರಿಸು ; ಪರಿಹರಿಸು : ಉಸುರುಬ್ಬಸದ ದುಸ್ಥಿತಿಯ ಬೀಳುಗೊಳಿಸುವೆನು (ಶಿಕಾಗ. ೪-೭-೫೨).
[ಬೀಳುಗೊಳ್ (< ಬೀಡುಗೊಳ್) + — ಇಸು$_3$]

**ಬೀಳುಗೊಳಿಸು$_2$** (ಕ್ರಿ). ನಿರರ್ಥಕಗೊಳಿಸು ; ನಿಷ್ಪ್ರಯೋಜಕವನ್ನಾಗಿ ಮಾಡು : ನಾವು ಈ ಶಕ್ತಿಯನ್ನು ಬೀಳುಗೊಳಿಸಿರುವೆವು, ಕೀಳುಗೊಳಿಸಿರುವೆವು (ಶಿಶಾಮು. ೬೩). [ಬೀಳು$_4$ (<ಬೀಡು$_3$) + ಕೊಳ್$_1$ + —ಇಸು$_3$]

**ಬೀಳುಡಿಗೆ** (ನಾ). (ಇನ್ನೊಬ್ಬರು ಉಟ್ಟು) ಕಳಚಿದ ಬಟ್ಟೆ : ಆವನಾದರೇನು ಶಿವಮಹಾದೇವನ ನೆನೆವವನ ಬಾಯ ತಂಬುಲ ಮೆಲುವೆ ಬೀಳುಡಿಗೆ [ಪಾಠಾಂ. ಡೆ]ಯ ಹೊದೆವೆ (ಬಸವ. ೪೭೩) ; ತನ್ನ ನಿರ್ಮಲವ ಕೊಟ್ಟನೆನಗೆ ಆ ತೊಟ್ಟ ಬೀಳುಡಿಗೆಯ ಹೊದೆದುಕೊಂಡೆನಾಗಿ ಆ ಮಡಿವಳ ಮಾಚಿತಂದೆಯ ಕೃಪೆಯಿಂದ ಆನು ಬದುಕಿದೆನಯ್ಯಾ (ಬಸಹ. ೦೦೭-೩೦೭) ; ನಮ್ಮ ಕಲಿದೇವನ ಶರಣರ ಬೀಳುಡಿಗೆಯ ತೊಳೆವ ಲೆಂಕನ ಬಡತನವ ನೋಡು (ಶೃರಸೂ. I, ೩೪೬).
[ಬೀಳ್$_1$ (<ಬೀಟ್$_1$) + ಉಡಿಗೆ$_1$ (<ಉಡುಗೆ)]

**ಬೀಳುಡೆ** 'ಬೀಟುಡೆ' ನೋ.

**ಬೀಳುದಂಡ** (ನಾ). ಬೀಳುಭೂಮಿಯ ಮೇಲೆ ಹಾಕುವ ತೆರಿಗೆ : ಆಲನೆಯು ಅನ್ಯ ಬೀಳುದಂಡ ಬೊಗಾರದಣ್ಣ ಅಪೂರ್ವ್ವಾಯ ಏನು ಬಂದಡು ಕಂಚುಗಾಟ ಮರ್ಯ್ಯಾದಿಯಲಿ ಧಾರೆಯನೆಱದು ಆ ಪಂಚಾಳ ನಡಸುವ ಧರ್ಮಕ್ಕೆ ಸಲುವುದು (ಎಕ. IX (S), ಶಾಶಕಾ. ೯೨-೩೦ ; ಸು. 1300).
[ಬೀಳು$_4$ (<ಬೀಡು$_3$) + ದಂಡ]

**ಬೀಳುನುಡಿ$_1$** (ಕ್ರಿ). ಹೀಯಾಳಿಕೆಯ ಮಾತನ್ನು ಆಡು ; ನಿಂದಿಸು ; ಜರೆ: ಪಾಳುಹರಟೆ ಬಿಟ್ಟು ಹೊತ್ತುಕಳೆವುದೆ ಹಬ್ಬ . . . ಬೀಳುನುಡಿವರ ಬಿಟ್ಟುಕೊಡುವುದೆ ಹಬ್ಬ (ಜಗದಾ. ೧೩೦). [ಬೀಳು$_4$ (<ಬೀಡು$_3$)+ ನುಡಿ$_1$]

**ಬೀಳುನುಡಿ$_2$** (ನಾ). ವ್ಯರ್ಥವಾದ ಮಾತು ; ನಿರರ್ಥಕವಾದ ನುಡಿ : ಬೀಳುನುಡಿಯ ಬಿಡು ಮುನಿಪ (ಹಂಶಾಂ. ೦-೦೭).
[ ಬೀಳು$_4$ (< ಬೀಡು$_3$) + ನುಡಿ$_2$ ]

**ಬೀಳುಬಾವಿ** (ನಾ). ಹಾಳುಬಿದ್ದ ಬಾವಿ ; ನಿರುಪಯುಕ್ತವಾದ ಬಾವಿ : ಎದುರಿಗಿದ್ದ ಬೀಳುಬಾವಿ ತನ್ನ ಶಾಂತವಕ್ಷಃಸ್ಥಲದಲ್ಲಿ ಆಕಾಶದ ಸಕಲ ಸಂಪತ್ತನ್ನೂ ತುಂಬಿಕೊಂಡು ನಗುವಂತಿತ್ತು (ಶಾಣಳ. ೯೨).
[ಬೀಳು$_4$ ( < ಬೀಡು$_3$) + ಬಾವಿ]

**ಬೀಳುಬಿಡು** 'ಬೀಡುಬಿಡು$_3$' ನೋ.

**ಬೀಳುಬುಟ್ಟಿ** (ನಾ). ಒಂದು ಬಗೆಯ ಬಳ್ಳಿಯಿಂದ ಹೆಣೆದ ಕುಕ್ಕೆ : ಅದನ್ನು ಒಂದು ಬೀಳುಬುಟ್ಟಿಯಲ್ಲಿ ತುಂಬಿಸಿ ಒಕ್ಕಲು ಲಿಂಗನ ತಲೆಯ ಮೇಲಿಟ್ಟು . . ಕಳುಹಿಸಿ ಕೊಟ್ಟ (ದೇವಹಂ. ೧೪೭).
[ಬೀಳು$_5$ (<ಬೀಟ್$_4$) + ಬುಟ್ಟಿ (<ಪುಟ್ಟಿ$_1$)]

**ಬೀಳುಭೂಮಿ** (ನಾ). ಸಾಗುವಳಿ ಮಾಡದ ನೆಲ, — ಜಮೀನು : ಬೀಳು ಭೂಮಿಯನ್ನು ಹೊಸದಾಗಿ ಸಾಗುಮಾಡೋಣ (ಗಂಗಾಮು. ೬. ೦೨೭).
[ಬೀಳು$_4$ (<ಬೀಡು$_3$) + ಭೂಮಿ]

**ಬೀಳುಮಾತು** (ನಾ). = ಬೀಳುನುಡಿ$_2$ : ಬೀ[ಪಾಠಾಂ. ಕೀ]ಳುಮಾತುಗಳೇಕೆ ನಿನಗಿದು . . . ನಳನೃಪಗೆಯೊರಡೆಣಿಸುವುದೆ (ನಳಕ. ೪-೦೦) ; ಭಾಳಲೋಚನನ ಸರ್ಪಾಭರಣಮಂ ನೀನು ಹರಿಯ ಪರಿಯಂಕವೆಂಬ ಬೀಳುಮಾತನು ಸಭಾಪತಿ ಸಭ್ಯರುಗಳು ಮಿಗೆ ಕೇಳಿ ಛೀ ತೆಗೆಯೆಂಬ ತೆಱದಿ (ಬಿಕೋಕ್ಷು. ೦೩-೫). [ ಬೀಳು$_4$ (<ಬೀಡು$_3$) + ಮಾತು$_1$ ]

**ಬೀಳುವಲೆ** (ನಾ). (ಮೃಗ, ಪಕ್ಷಿಗಳು ಸಿಕ್ಕಿಕೊಳ್ಳುವ) ಒಂದು ಬಗೆಯ ಬಲೆ,—ಜಾಲ : ಬೀಳುವಲೆ ಜವಳಿವಲೆ . . . ಸಗಾಢವಲೆಗಳ ಹೊಱಗೆಳೋಳಿಯಂ ಪೊತ್ತು ನಡೆತಂದುದು ಪುಳಿಂದರೂಪದಲಿ ಭೂತಗಣಂಗಳು (ಸೌಂದಪು. ೦೬-೩೯) ; ಬೀಳುವಲೆ ಕಣ್ಣವಲೆ ಸಿಡಿಲುವಲೆ . . . ಮರೆವಲೆಗಳಿರ್ದುವಾ ಶಬರರಲ್ಲಿ (ಸಿದ್ಧೇಶ್ವ. ೬-೭).
[ ಬೀಳು$_1$ (<ಬೀಟ್$_1$) + ಬಲೆ$_1$ ]

**ಬೀಳುವಳ್ಳಿ** (ನಾ). ಹಾಳು ಬಿದ್ದ ಗ್ರಾಮ ; ನಿರ್ಜನವಾದ ಹಳ್ಳಿ : ನಗರ ಪಟ್ಟಣ ಖೇಡ ಖರ್ವಡ ಪುರ ಗ್ರಾಮಗಳೆಂಬ ನಾನಾಪೆಸರಾಂತು ಸೊಗಯಿಸುತಿಪ್ಪವಾ ದೇಶದಿ ಬೀಳುವಳ್ಳಿಗಳಿಲ್ಲ (ಮೋಹಕ. ೨-೦೭).
[ಬೀಳು$_4$ (<ಬೀಡು$_3$) + ಪಳ್ಳಿ$_1$]

**ಬೀಳುವೆಣ** (ನಾ). ಬಿದ್ದಿರುವ ಹೆಣದಂತಿರುವವನು : ಬಾಳುವೆಣನ ಬೀಳುವೆ [ಪಾಠಾಂ. ಬೀಳ್ವೆ]ಣನ ಸಂಸಾರವೇನವನ (ಬಸವ. ೦೫೭).
[ ಬೀಳು$_1$ (<ಬೀಟ್$_1$) + ಪೆಣ ]

**ಬೀಳುವೃತ್ತಿ** (ನಾ). = ಬೀಳಾನುವೃತ್ತಿ : ಶ್ರೀಮತ್ಕುಂದ್ದಮರಸಬ್ಬಣನವಾ[ಸಿ]ಪನ್ನಿಚ್ಚಾರ್ಪ[ಸಿ]ರಮಂ ಸುಖಸಂಕಥಾವಿನೋದದಿಂ ಬೀಳುವೃತ್ತಿಯಿನಾಳುತ್ತುಮಿರೆ (ಕಇ. II, ೭-೦೨ ; 1030). [<ಬೀಟವೃತ್ತಿ]

**ಬೀಳ್ಕೆ** 'ಬೀಟ್ಕೆ' ನೋ.

**ಬೀಳ್ಕೊಡಿಗೆ** 'ಬೀಳ್ಕೊಡುಗೆ' ನೋ.

**ಬೀಳ್ಕೊಡಿಸು** (ಕ್ರಿ). ೧. ಕಳುಹಿಸು ; ಹೋಗಲು ಅನುವು ಮಾಡು : ಮಕುಟವರ್ಧನರಂ ಕಾಣಿಸುತಂ ಬಂದ ಚಾರರಂ ಬೀಳ್ಕೊಡಿಸುತಂ ಸುಖದೊಳಿಪ್ಪಲ್ಲಿ (ಬಸರ. ೭-೩೫) ; ಇಳೆಯಾಣ್ಮನ ಮನದಿಂಗಿತವಱಿತು ಹೊಂಜೆಳೆ ವಿಡಿದಬ್ಜನೇತ್ರೆಯರು ಎಳವೆಣ್ಣುಗಳ ಚಿತ್ತೈಸೆಂದು ಸತಿಯರ ನಿಳಯಕೆ ಬೀಳ್ಕೊಡಿಸಿದರು (ಮೋಹಕ. ೨೨-೦೫). ೨. ನಿವಾರಿಸು ; ಪರಿಹರಿಸು :

ನಿಜಶ್ರೀಪದವ ತೋಱಿಸಬೇಕು ವನವಾಸದ ಪರಿಕ್ಲೇಶಾನುಸಂತಾಪವನು ಬೀಳ್ಕೊಡಿಸಿ (ಕುಮ್ಮಾವಿ. ೧೧-೪೬). [ಬೀಳ್ಕೊಡು + — ಇಸು$_3$]

**ಬೀಳ್ಕೊಡು**, ಬೀಳುಕೊಡು, ಬೀಳುಗೊಡು, ಬೀಳ್ಗುಡು (ಕ್ರಿ). ೧. (ಅತಿಥಿ, ಬಂಧು, ಗೆಳೆಯ ಮುಂತಾದವರನ್ನು) ಕಳುಹಿಸಿಕೊಡು ; ಹೋಗಲು ಬಿಟ್ಟು ಕೊಡು : ಮೃಡಂ ರಕ್ಷಿಸುವೆನೆನುತ್ತೆ ವಿನಯೋಕ್ತಿಯಿಂದ ಬೀಳ್ಕೊಡೆ (ಶಬ್ದರಾ. ೬-೧೧೬) ; ಭದ್ರದೇಹದ ಭಟನ ಬೀಳ್ಕೊಡೆ ರುದ್ರರೂಪದ ದೈತ್ಯ ಬಂದನು ರಾಮನಿದ್ದೆಡೆಗೆ (ಕೌಶಿರಾ. ೪೯-೨೮) ; ಮತ್ತಗಜಗಮನೆಯರ ಬೀಳ್ಕೊಟ್ಟನು ಮಹೀಪಾಲ (ಕೊರರಾ. ೧-೫-೪೪). ೨. ಬಿಡು ; ತ್ಯಜಿಸು : ಮಾನನಿಧಿ ಸಾವಿತ್ರಿಯ ಪಾಖ್ಯಾನವನು ಕೇಳಿದನು ಚಿತ್ತಗ್ಲಾನಿಯನು ಬೀಳ್ಕೊಟ್ಟನು (ಕುಮ್ಮಾಅ. ೨೪-೪). ೩. ತಲುಪುವಂತೆ ಮಾಡು ; ತಲುಪಿಸು : ಬಿರಯಿತಿಯಾಕೆಗೆ ಬೀಳ್ಕೊಡಿದನು ತೂಗಲಿಗರಿಗೆ ಗರಿಯಂ ! (ಗೀಶಿಂ. ೪೬-೧೨). **ಬೀಳುಕೊಡು** : ೧. ನೀ ಹೋಗೆಂದು ಗುಣದಲಿ ಬೀಳುಕೊಟ್ಟನು ದ್ರೋಣನರ್ಜುನನ (ಕುಮ್ಮಾದ್ರೋ. ೯-೫೦) ; ದೇಶಾಂತರ ದ್ವೀಪಾಂತರಂಗಳಿಂ ಬಂದ ಜನವ ಕಾರುಣ್ಯದಿಂದ ಮನ್ನಿಸಿ ಬೀಳುಕೊಟ್ಟು ತಿರುವಾರೂರೊಳೊಪ್ಪುತಿರ್ದಂ ಸೌಂದರಾಧಿಪಂ (ಸೌಂದಪು. ೧೧-೪೦) ; ಬೀಳುಕೊಡಿ ನಿಮ್ಮರಸರಿಗೆ ತಾ ಹೇಳಲೇನದ ಹೇಳಿ (ಕೊರರಾ. ೫-೪-೧೧೨). ೨. ಕೇಳು ಮಾಯಾಮಲವ ಜಾಳಿಸುವ ಪರಿಗಳಂ ಬೀಳುಕೊಡು ಕುಲವೆಂಬ ಕಾಳ್ಗುರುಳ್ತನಗಳಂ (ದೀಕ್ಷಾಬೋ. ೪೨-೮೩೨) ; ಗುರು ಬೀಳುಕೊಟ್ಟನು ದೇಹವನು (ಕುಮ್ಮಾದ್ರೋ. ೧೯-೧) ; ಯೋಗಿಸಮೂಹ ನಗದೇ ಮನುಜಭಾವವ ಬೀಳುಕೊಡಿ (ಕೌಶಿರಾ. ೪೪-೪೮). ೪. ಇಲ್ಲವಾಗಿಸು ; ಮರೆಯಾಗಿಸು ; ಅಡಗಿಸು : ನಿಮ್ಮ ಭೃತ್ಯನ ಭಾವ ಬೆಚ್ಚಿತು ವಿಶ್ವರೂಪವ ಬೀಳುಕೊಡಿ (ಕುಮ್ಮಾಭೀ. ೩-೬೪). **ಬೀಳುಗೊಡು** : ೧. ನಿಮ್ಮಯ ಕರುಣವೇ ಸಾಮ್ರಾಜ್ಯ ನಮ್ಮನು ಬೀಳುಗೊಡಿರಿ (ಕುಮ್ಮಾಸ. ೧೨-೫೨) ; ಏಳುದಿನದಲಿ ಮುಗಿದುದಾ ಮಖಶಾಲೆ ದಕ್ಷಿಣೆಗೊಟ್ಟು ವಿಪ್ರರ ಬೀಳುಗೊಟ್ಟನು (ಕೌಶಿರಾ. ೧-೯೫). **ಬೀಳ್ಗುಡು** : ೧. ಹಸ್ತಸೂಚನದಿಂದ ಬೀಳ್ಗುಡುವನು (ಚಟ್ಟಿಅ. ೧೧೧-೮).

[ಬೀಳ್$_2$ (< ಬೀಡು$_2$) + ಕೊಡು$_1$]

**ಬೀಳ್ಕೊಡುಗೆ**, ಬೀಳ್ಕೊಡಿಗೆ (ನಾ). ಒಬ್ಬರನ್ನೊಬ್ಬರು ಅಗಲುವಾಗ ಒಪ್ಪಿಗೆ ತೆಗೆದುಕೊಳ್ಳುವುದು ಅಥವಾ ಕೊಡುವುದು : ನಮ್ಮ ಕಚೇರಿಯಲ್ಲಿ ನಿವೃತ್ತರಾದ ಅಧಿಕಾರಿಯೊಬ್ಬರಿಗೆ ಬೀಳ್ಕೊಡುಗೆ ಸಮಾರಂಭ ಇಟ್ಟುಕೊಂಡಿದ್ದೇವೆ (ರೂಢಿ). **ಬೀಳ್ಕೊಡಿಗೆ** : ಅವನು ಪರಸ್ಪರ ಬೀಳ್ಕೊಡಿಗೆಯಲ್ಲಿ ಮಗ್ನವಾಗಿದ್ದ ಜನರನ್ನು ನೋಡುತ್ತಿದ್ದನು (ಪುನರು. ೨೪೪) ; ಹಿತವಚನವನ್ನು. ಆ ಬೀಳ್ಕೊಡಿಗೆ ಸಮಾರಂಭದ ಮುಕ್ತಾಯ ಕಾರ್ಯಕ್ರಮವಾಗಿ ನುಡಿದರು (ರೂಶಸಂ. ೨೧). [ಬೀಳ್ಕೊಡು + — ಗೆ]

**ಬೀಳ್ಕೊಳ್** 'ಬೀಡುಗೊಳ್' ನೋ.

**ಬೀಳ್ಕೊಳಿಸು** 'ಬೀಟ್ಕೊಳಿಸು' ನೋ.

**ಬೀಳ್ಕೊಳು** 'ಬೀಡುಗೊಳ್' ನೋ.

**ಬೀಳ್ಕೊಳ್ಳು** 'ಬೀಡುಗೊಳ್' ನೋ.

**ಬೀಳ್ಗುಡು** 'ಬೀಳ್ಕೊಡು' ನೋ.

**ಬೀಳ್ಗೆಡಹು** (ಕ್ರಿ). ಬೀಳುವಂತೆ ಕೆಡಹು ; ಬೀಳಿಸು : ರಿಪುಗಳ ಕಾಲ್ಗೆಡಸಿ ಬೀಳ್ಗೆಡಹಿ ಸೈನ್ಯವ ನಾಲ್ಗಡೆಗೆ ಪಾರಿಸಿದಡೆ (ಅಪಂರಾ. ೧-೧೪-೬).

[ಬೀಳ್$_1$ (< ಬೀಟ್$_1$) + ಕೆಡಹು (< ಕೆಡಪು) ]

**ಬೀಳ್ಗೆಡೆ** (ಕ್ರಿ). ಹಾಳಾಗು ; ಹಾಳುಬೀಳು : ಜಲಮಿಂಗಿ ಪೋದ ತಂಗೊಳಗಳನಾಗ ಬೀಳ್ಗೆಡೆದ ತೋಂಟಗಳಿಂ . . . ಅಪಾರಪಕ್ಷಿಮೃಗಸಂಕುಲಮಿಲ್ಲದ ಕಾನನಂಗಳಿಂ (ಚಂದ್ರಭು. ೧೨-೯೬).

[ಬೀಳ್$_2$ (< ಬೀಡು$_2$) + ಕೆಡೆ$_1$]

**ಬೀಳ್ಚು**, ಬೀಳಿಚು (ಕ್ರಿ). ೧. ಉರುಳಿಸು : ಕೆಡಹು : ನಿನ್ನನುಜನವಗಡಿಸೆ ಕೆಡೆಯೆಚ್ಚು ಬೀಳ್ಚಿದಂ (ಜೈಮಿಭಾ. ೨೦-೪೪). **ಬೀಳಿಚು** : ೨. ಸಾಯಿಸು ; ಕೊಲ್ಲು : ಮೊರೆಮೊರೆದು ಹೂಂಕರಿಸೆ ಮಾವ್ತರು . . . ಬೀಳಿಚಿದುವೆರಡರ್ಬುದವನಾಭೀಳಸರಪಳಿಯಿಂದ ನಿಮಿಷಕೆ ಕಾಲನಾಲಯ ತುಂಬಿ ತುಳುಕಿಸಲಾಡೆ ಗಜನಿವಹ (ಕೋಗಯು. ೨೦-೧೪) ; ಕಾಲಾಳಿನಲಿ ಖತಿಯಿಂದ ದೈತ್ಯನು ಬೀಳಿಚಿದನೈನೂರುಲಕ್ಷವ (ಕೋಗಯು. ೨೪-೬೫).

[ಬೀಳ್$_1$ (< ಬೀಟ್$_1$) + — ಚು$_1$]

**ಬೀಳ್ದಲೆ** (ನಾ). ಉರುಳುವ ತಲೆ ; ಕೆಳಗೆ ಬೀಳುವ ಶಿರ : ದೇವರೊಳ್ಪೆರ್ದಲೆವೆತ್ತು ವಿರಾಜಿಸಿರ್ಪನಾ ತಲೆಯದು ಸಾಟಿ ನಿನ್ನ ತಲೆಗನ್ನರ ಬೀಳ್ದಲೆ ಸಾಟಿಯಕ್ಕುಮೋ (ವ್ಯಶಿ. ೨೬-೬೨).

[ಬೀಳ್$_1$ (< ಬೀಟ್$_1$) + ತಲೆ$_1$]

**ಬೀಳ್ದಿಸೆ** 'ಬೀಟ್ದಿಸೆ' ನೋ.

**ಬೀಳ್ದೋಳು** (ನಾ). ಎತ್ತಲಾಗದ ತೋಳು ; ಬಿದ್ದುಹೋಗಿರುವ ತೋಳು : ಸುರಪತಿಗೆ ಬೀಳ್ದೋಳು ಮಿಗೆ ದಂತಶೂಲೆ ಪೂಷಂಗೆ ಯಮಜಂಗೆ ಮತ್ತುರುತರಶಿರೋವೇದನೆ (ಲಶಿಸಂ. ೪೯-೮೨).

[ ಬೀಳ್$_1$ ( < ಬೀಟ್$_1$) + ತೋಳು (< ತೋಳ್)]

**ಬೀಳ್ನೆಲ** 'ಬೀಟ್ನೆಲ' ನೋ.

**ಬೀಳ್ವನೆ** 'ಬೀಱುಮನೆ' ನೋ.

**ಬೀಱ್** 'ಬೀಱು$_1$' ನೋ.

**ಬೀಱಿಕೆ** (ನಾ). ೧. ಹೊರಸೂಸುವುದು ; ಹೊರಹೊಮ್ಮಿಸುವಿಕೆ : ತಲೆದೂಗಿ ನಸುನಗೆದೋಱಿಕೆಯ ನಯನಾಗ್ರದುಗ್ರದ ಬೀಱಿಕೆಯಲೀ ಮಾತನಾಡಿದನಾ ಪ್ರಹಸ್ತಂಗೆ (ಕೊರರಾ. ೫-೬-೪೨). ೨. ಅರ್ಪಿಸುವುದು ; ಅರ್ಪಣೆ : ಮೂಱಿಱೊಳಗೊಲಿದದಱಲರ್ಚಿಸೆ ಮೂಱುಮುಡಿಫಲವಹುದು ಯಜ್ಞದ ಬೀಱಿಕೆಯಲಾ ದ್ವಿಜರು ಭಕ್ತಿಯಲರ್ಚಿಸುವರೊಲಿದು (ಶಿಶಾಗ ೧೧-೪೪-೧೪). [ಬೀಱು$_1$ + — ಇಕೆ]

**ಬೀಱಿಸು**, ಬೀರಿಸು (ಕ್ರಿ). ೧. ಅತ್ತಿಂದಿತ್ತ ತೂಗಿಸು ; ಓಲೆದಾಡಿಸು : ಬಳಿಕ ಮಿಕ್ಕನ ಕಾಕುದೈತ್ಯರ ಬಳಗಕಳವೇ ಹರಿಯ ನಾಮವು ಹುಳುಕು ನಂಜಿನ ಹರಿಯ ನಾಮದ ಘೋಷದಾರ್ಭಟಕೆ ತಲೆಯ ಬೀಱಿಸಿಕೊಂಡು ಬಳಲಿಯೆ ಕಳವಳಿಸೆ ಸ್ವಾತಂತ್ರ್ಯಮಹಿಮನ ಬಳಕೆಗದು ಯೋಗ್ಯವೇ (ಸಂಥಶ. ೬-೨೦). **ಬೀರಿಸು** : ೨. ಎಸೆಯುವಂತೆ ಮಾಡು ; ತೂರುವಂತೆ ಮಾಡು : ಕೆಲವು ಪುಂಡರು ಚಿಕ್ಕ ಹುಡುಗರ ಕೈಯಲ್ಲಿ ಬಸ್ಸಿಗೆ ಕಲ್ಲು ಬೀರಿಸುತ್ತಿದ್ದಾರೆ (ರೂಢಿ). ೩. ಹಂಚಿಸು ; ವಿತರಣೆ ಮಾಡಿಸು : ಅವಳು ತನ್ನ ಚಿಕ್ಕ ಮಗಳ ಕೈಯಲ್ಲಿ ಎಳ್ಳು ಬೀರಿಸುತ್ತಿದ್ದಾಳೆ (ರೂಢಿ). ೪. ಬದಲಾಯಿಸಿಕೊಳ್ಳು ; ವಿನಿಮಯ ಮಾಡು : ರತುನ ಬೆಲೆಗೆ ಹಾಕಿ ಪಲ್ಯವ ಕೊಂಬಂತೆಗತಿಗೆ ಸಾಧನವಾದ ನಿನ್ನ ನಾಮಂಗಳು ಕ್ಷಿತಿಯೊಳು ಶಾರೆ ತೌಡಿಗೆಬೀರಿಸಲು ಅನುಚಿತಕರ್ಮಗಳೆಲ್ಲ ಉಚಿತಹವೆಂದು ನಗುತ ಕಾಲ ಕಳೆವೆನೊ (ವಿದಾಕೃ. ೪೦-೪).

[ಬೀಱು$_1$ + —ಇಸು$_3$]

**ಬೀಱು$_1$**, ಬೀರ್$_1$, ಬೀರು$_1$, ಬೀಱ್ (ಕ್ರಿ). ೧. (ಕಲ್ಲು, ಬಾಣ, ಕೋಲು ಮುಂತಾದುವುಗಳನ್ನು) ಒಗೆ ; ತೂರು ; ಎಸೆ : ಸಮರ್ಥನಲ್ಲಾ ಬಿಡುಗಣೆಯ ಬೀಱುವರೆ ಕಟಕಾಚಾರ್ಯನೆಂದೆನುತ (ಕುಮ್ಮಾದ್ರೋ. ೬-೧೯) ; ಹುಚ್ಚು ಹಿಡಿದಿತು ಎನಗೆ . . . ಕಡುದುಷ್ಟರನ್ನು ಕಂಡು ನಾನು ಕಲ್ಲು ಕಲ್ಲು ಬೀಱುವಂಥ (ಪುರಂವ. ೩-೨೯-೨); ನಾಲ್ಕೈದು ಬಾಣಂಗಳಂ ಬೀಱಿದಂ ಬಭ್ರುವಾಹನನ ಮೇಲೆ (ಜೈಮಿಭಾ. ೨೨-೧೫). ೨. (ಬಲೆ ಮುಂತಾದುವುಗಳನ್ನು) ಬೀಸು : ಮಾಯಾಪಾಶಮಂ ಬೀಱುತಿರ್ಪ ಸತಿಯರ ಭಾವಮಂ ಕಂಡನು (ಸೋಪುಚ. ೨-೨೪). ೩. ಕಟ್ಟಿ ಹಾಕು ;

ಬಂಧಿಸು : ಚಲ್ಲಗಣ್ಣಡೆಯು ಕುಡಿವೆಳಗೆಂಬುರುಳ್ಗಣ್ಣಿಯಲ್ಲಿ ಪಥಿಕಮನೋಮೃಗವನೆಯ್ದೆ ಬೀಱಿ ತಂದಿಲ್ಲಿ ತಡೆವರಿವಳ್ದಿರೇಂ ವ್ಯಾಧವಧುಗಳೋ ಮೇಣ್ ಪ್ರಪಾವಧುಗಳೋಯೆನೆ (ಶಬ್ಧರಾ. ೮-೯). 'ಬೀಱುಗಣ್ಣಿಕೆ' ಪರಾ. ೪. ಎರಚು; ಚೆಲ್ಲು : ಮುಳಿದೆಚ್ಚಾಗಳ್ ಮಹೋಗ್ರಪ್ರಳಯಶಿಖಿಶಿಖಾನೀಕಮಂ ವಿಸ್ಫುಲಿಂಗಂಗಳುಮಂ ಬೀಱುತ್ತುಂ . . . ಬಂದು ಕೊಂಡಾಗಳೆ ಗಗನತಳಂ ಪಾಯ್ದು ಕೆನ್ನೆತ್ತರಿಂದುಚ್ಚಳಿಸುತ್ತಿರ್ದನ್ನೆಗಂ ಬಿಟ್ಟುದು ಭರದೆ ಸಿಡಿಲ್ದತ್ತ ಕಣ್ಣೋತ್ತಮಾಂಗಂ (ಶಂಖಶಾ. ೧೨-೩೦೩); ಬಿರಿಮುಗುಳನು ಮಿಗೆ ಬೀಱಿದರು ಸರಿಮಿಗಿಲೆನೆ ಸಿರಿಯರಸನೊಳರಸಿಯರು (ಗೀತಗೋ. ೯-೧೬). ೫. ಸುರಿಸು; ಕರೆ ; ವರ್ಷಿಸು : ಉಪನಿಷತ್ಸಂಕುಳವಚೋಭಿಪ್ರಾಯಪೀಯೂಷವನು ಬೀಱಿದರೆ ಖಳರಿಗತಿದರ್ಪಜ್ವರಪ್ರಜ್ವಲಿತರಿಗೆ ಸೊಗಸುವುದೆ (ಕುವ್ಯಾಸ. ೯-೬೩); ಬೀಱಿದರಂಬುಗಳ ಮಳೆಯ (ಕುವ್ಯಾದ್ರೋ. ೫-೨೩). ೬. ಎರಗು ; ಮೇಲೆ ಬೀಳು : ಪೇಱಿದರ್ ಭಯರಸಮನೊಡನೆ ಬಾಯಾಱಿದರ್ ಬೀಱಿದರ್ ಸಿಡಿಲಂತೆ ಕೌತುಕಂದೋಱಿದರ್ ಮಾಱಿದರ್ ಮೃಗಗಳಂ ದನುಜರುಂ ಮರುಳ್ಗಳುಂ (ಶಬ್ದು. ೩೨-೩೮). ೭. (ಸ್ವಸಂತೋಷದಿಂದ) ಕೊಡು; ನೀಡು : "ಬೀಱು—ಸ್ವೇಚ್ಛಾಪ್ರದಾನೇ (ಇಷ್ಟ ಬಂದಂತೆ ಕೊಡು)" (ಶಮುಧಾ) ; ಜನಪತಿಗೆ (ಯೊ)ಸಗೆಯುಂ ಪುರಜನಮೆಲ್ಲಂ ಬೀಱುತಿರ್ಪರ್ (ಕವಿರಾ. ೧-೯೬); ಅಱಿತ್ತೈ ಗೋನಾಳಿ ಫಲುಗುಣ ತೋಱು ನಿನ್ನಱಿತವನು ಸಲಿಲವ ಬೀಱು ಬೇಗದಿನೆನಲು (ಕುವ್ಯಾಆ. ೧೧-೨೬); ಸೇರಿದೆ ನಿನ್ನನ್ನು ಕೋಱಿದ ವರಗಳ ಬೀಱುವೆನೆಂದು ವಿಚಾರ ಬಿಡಿಸೋ ಎನ್ನ (ಪುರಂದ. ೧-೧೬೬-೧). ೮. ಹಂಚು ; ವಿತರಣೆ ಮಾಡು : ಪುರಾಂಗನಾನಿಕರಕ್ಕೆ ಮಣಿಮಯಭಾಜನಂಗಳೊಳ್ ತೆಕ್ಕನೆ ತೀವಿದ ಪಂಚರತ್ನದ [ಕೇಸರಿ]ಯ ಕತ್ತುರಿಯ ಕೊಳತದ ಕಪ್ಪುರದ ಪಳಿಕಿನ ಬಾಯಿನಂಗಳಂ ಬೀಱಿ (ಆದಿಪು. ೯-೩೯ ವ); ನರಪರಿವೃಢನಾ ರತ್ನೋತ್ಕರಮೆಲ್ಲಮನಂದು ತನ್ನ ಪರಿಜನಕ್ಕಂ ತತ್ಪುರಜನಕಮರ್ಥಿಜನಕಂ ಪರಿವಿಡಿಯಿಂ ಬೀಱಿ ಸುಖದಿನಿರಲ್ (ನೇಮಿಚಂ. ೨-೫೦); ಅಕ್ಷರಜ್ಞಾನಮುಂಟದನ್ನೆದೆ ಮಾಱುವೆಂ ತ್ರ್ಯಕ್ಷನಣುಗಗಾರ್ಗದ ಹೊಂಗಳಂ ಬೀಱುವೆಂ (ಬಸವ. ೫-೧೨). ೯. ಹರಡು; ವ್ಯಾಪಿಸು; ಪಸರಿಸು : ಬೀಱುವ ಸೌರಭದಿಂಪಿನಿಂದೆ ಕಂಪಿನ ಕರುವಾದ ಕೇದಗೆಯ ಮಂಟಪಮೊಪ್ಪುವುದೆತ್ತ ನೋಟಿಕ್ಕೊಡಂ (ಕುಸುಮಾ. ೧-೧೦೨); ಗಾಯಕರು ತಾಳಂಗಳನುಗುಡೆ ಗೇಯರಸದ ಲಹರಿಗಳಂ ದೆಸೆದೆಸೆಗೆ ಬೀಱುತಿರೆ (ಬಸವು. ೨೬-೮) ; ಬಳಿಕ ನಿನ್ನಯ ವರಸುದರ್ಶನ ಸುಳಿವುದೋಱಲು ಕೋಟಿಸೂರ್ಯರ ಬೆಳಗು ಬೀಱಲು (ಕುವ್ಯಾಅ. ೦೬-೨೮). ೧೦. ಹಬ್ಬುವಂತೆ ಮಾಡು ; ಹರಡುವಂತೆ ಮಾಡು : ಬಾಲಾತಪಂ ಸುತ್ತಲುಂ ಕಂಪಿನ ಸೊಂಪಂ ಬೀಱಿ (ಕಾದಂಸೂ. ೩೫೯); ಪಗಲುಂ ಬೆಳ್ದಿಂಗಳಂ ಬೀಱುವ ಸೊದೆವೆಳಗು ತಾಳ್ದು ನೀಳ್ಪಿಂದಮೆತ್ತಂ ಮುಗಿಲಂ ಪೊತ್ತಿರ್ಪ ಕೂಟಪ್ರಕರದಿಂ (ಚಂದ್ರಪ್ರ. ೩-೮೨). ೧೧. ಸಾರು ; ಘೋಷಿಸು : ಕಳುಪಿ ಕೊಟ್ಟಾದೇಶಮಂ ದೇಶದೊಳು ಸಾಱಿ ತಿಳಿವಡಿದು ಸುಕುಮಾರವೈವಾಹವಂ ಬೀಱಿ (ಶಂಬರ. ೫-೮) ; ನಿಬ್ಬರದ ಬಿರುದನು ಬೀಱುತಿರ್ದವು ಗೌಱುಗಹಳೆಗಳು (ಕುವ್ಯಾಕ. ೮-೧೯). ೧೨. ಹೊರಸೂಸು; ಹೊರಹೊಮ್ಮಿಸು : ವೃತ್ತೋತ್ತುಂಗಸ್ತನೆಯರ್ ಶ್ರಮಮುತ್ತುಮದೇಂ ಸುರಭಿಗಂಧಮಂ ಬೀಱಿದರೋ (ಆದಿಪು. ೧೧-೭೦); ಸರಸಿಜಾಯುತದಂದವನು ಮೋಹರಿಸಿ ಮುಂಚುವ ಪರಿಮಳವನಂದರಸಿ ಬೀಱುತ ಬಂದು ಹೊಕ್ಕಳು ರಾಜಮಂದಿರವ (ಕುವ್ಯಾಶಿ. ೧-೨೮); ಕಾಂತಿಯು ಬೀಱಿದವು ಭುಜಲತೆಗಳಭಿನವಗರ್ಭದೇಳ್ಗೆಯಲಿ (ಕೊರರಾ. ೧-೮-೨). ೧೩. ತೋರಿಸು ; ಪ್ರಕಟಗೊಳಿಸು ; ಪ್ರದರ್ಶಿಸು : ಮಾ[ಱೊ]ಡ್ಡುದಲ್ ಸಾಲದೆನ್ನೀ ಬಾಣಾವಾಸಕ್ಕೆನುತುಮುಳಿಪಂ ಬೀಱುತುಂ ಬಿಲ್ಗಿಱಾಂ ದ್ರೋಣಂ ನಿಂದಂ ಮಸಗಿ ತಿರುಪುತ್ತೊಂದು ಕೂರಂಬನಾಗಳ್ (ಶಂಖಶಾ. ೧೧-೫೬) ; ಎಲ್ಲಾ ರತ್ನಂಗಳುಮನೊಳಕೊಂಡೊಳ್ಪನ ಭೋಧಿ ಲೋಕಕ್ಕೆಲ್ಲಂ ಬೀಱಲ್ ಪೊಱಗೆ ಕಸೆವಂ ನಿಚ್ಚಮಿಾಡಾಡುತಿರ್ಕುಂ (ಕಾವ್ಯಾವ. ೨೫೨); ಸುರಭಿ ಪಾರ್ಲೇಯತೋಯಂಗಳಂ ಯುವ ಪಾಂಥರ್ಗೆಱೆವಲ್ಲಿ ತಮ್ಮ ಲಲಿತಾಂಗೋಪಾಂಗಶೃಂಗಾರಗೌರವಮಂ ಬೀಱುವರೆಂಬ ದೂಱನೆಸಗುತ್ತಿರ್ಪರ್ ಪ್ರಪಾಕಾಂತೆಯರ್ (ಪುಷ್ಪಪು. ೨-೨೨) : ಸೇರಿದ ಹೊಲವನ್ನು ಹೋರುವ ಮಗನನ್ನು ಚಾರು ಮೈನೆಱೆದ ಮಗಳನ್ನು ಪರರಲ್ಲಿ ಬೀಱುವವನೆಗ್ಗ (ಸರ್ವಜ್ಞ. ೧೫೨೬). ೧೪. ಮೆರೆ ; ಕಂಗೊಳಿಸು : ಬೀಱುತಿಹ ಫಲರಸದೊಳಿಪ್ಪ ನವರುಚಿಯಂತೆ ವಾರಣದ ಮಸ್ತಕದ ಮುತ್ತಿನಂತೆ (ಶಿವಗೀ. ೩-೨). ೧೫. ತೂಗು ; ಒಲೆದಾಡು: 'ಬೀಱಿಸು' ಪರಾ.

**ಬೀರ್₁** : ೩. 'ಬೀರ್ವಗ್ಗ' ಪರಾ. ೪. 'ಬೀರ್ಚು' ಪರಾ. ೧೩. ಅತುಲಸೊಗಸಂ ಬೀರ್ವ ವಿಟನಂತೆ ಮುಂಬರಿದು ತಂಬೆಲರು ತೀಡಿತಾಗ (ವಂಕಾರಾ. ೫-೬-೩೨). **ಬೀರು₁** : ೧. ಕಳ್ಳರು ಹಿಂದುಗಡೆಯಿಂದ ಕವಣೆಗಲ್ಲನ್ನು ಬೀರುತಾ ಬಂದರು (ಶಾಶಿಚಂ. XI, ೯); ಹುಡುಗರು ಬಸ್ಸಿಗೆ ಕಲ್ಲು ಬೀರುತ್ತಿದ್ದಾರೆ (ರೂಢಿ). ೩. ನಾಯಿಮರಿಯ ಕುತ್ತಿಗೆಗೆ ಜೋರಾಗಿ ಹಗ್ಗ ಬೀರಬೇಡ (ರೂಢಿ). ೮. ಅವಳು ಎಳ್ಳನ್ನು ಬೀರುವುದಕ್ಕೆ ಬಂದಿದ್ದಾಳೆ (ರೂಢಿ). ೧೨. ಬಾಗುವೆ ಬಳುಕುವೆ ಬಳೆಗಳನೆಣಿಸುವೆ ಕಳ್ಳನೋಟವ ಬೀರುತಿರುವೆ (ಇಂಜಾಶ. ೮೯-೩೫); ನಾರಾಚದೇರಿಗಾರದೆ ಸೋಗೆ ನರಳು ದನಿಯಂ ಬೀರಿ ಚೀರಿಡೆ (ಕಶ್ಯಾಂಗ. ೫೯-೦೯೩೯) ; ಹೀಗೆ ಮಾಡಿದರೆ ಅದು ವಿಘಟನೆ ಹೊಂದಿ ಕೆಟ್ಟವಾಸನೆಯನ್ನು ಬೀರುತ್ತದೆ (ಗೃಹವಿ. ೫೦). ೧೩. ಹರಿ ವಿರಂಚಿಗಳಾನಲಾರದ ಭರಿತಕಾರ್ಯವನಿಳೆಯೊಳಂದಿಸಿವ ನರನು ತಾ ನಿರ್ವಹಿಪನೆಂದೇ ನಯವ ಬೀರಿದಿರಿ (ಕೋಗಯ. ೮-೧೯). ೧೪. ಕೃಷ್ಣಮೇಘಸವೃಶವೇಣಿ ತೂರಿ ಬೀರಿ ಬರುವಳು! (ಶಾಂತಜ. ೧೧-೯). ೧೬. ಉಂಟಾಗಿಸು ; ಉಂಟುಮಾಡು : ಚೆಲುವಿಕೆಯದೋರಿ ಮಾಯಾಭ್ರಮೆಯ ಬೀರಿದುದು (ಆನಂರಾ. ೩-೯-೯೩); ಹಾಡಿ ಮುದವನು ಹೀರಿ, ಜನಕೆ ಹರುಷವ ಬೀರಿ ತೇಲು ಮುಂದೆ (ಶಾಂತಜ. ೯೫-೧೯); ನೀತಿ ಮತ್ತು ಧರ್ಮದ ಪ್ರಭಾವವನ್ನು ಜನರ ಮೇಲೆ ಬೀರಲು ಯತ್ನಿಸುವನು (ತತ್ವಶಾ. ೬೦೬). **ಬೀಱ್** : ೧. ಬಕಾರಕ್ಕೆ— ವಿಱ್, ಬೀಱ್, ಬಸಿಱ್ (ಶಮುದ. ೫೮ ಪ್ರಯೋ). ೭. ಅರ್ಕಚಂದ್ರಾಗ್ನಿಲೋಚನನನಳವಳಿಸುವೆಂ ಬೀಕರ್ಱಳೆಗಕೆ ವಿಳೆಯವನು (ಶಬ್ದು. ೯೩-೫೩). ೯. ದೆಸೆದೆಸೆಗೆ ಬೀರ್ವ ತನಿಗಂಪಿನಿಂ ತಂಪಿನಿಂ . . . ಕೊಳಂ ಕಣ್ಗೆಸೆದುದು (ಕೃವಿಭಾ. ೧೫-೯). ೧೨. ಕಂತುತನಯಂಗೆ ಪೂರ್ವದಿಗಂಗನೆ ತಂದು ತೋರ್ವ ಮಾಣಿಕದ ಕನ್ನಡಿಯೆನೆ ಕಾಂತಿಯ ಬೀರ್ವ ಭಾಸ್ಕರ ಮೂಡಿದನು (ಮೋಹತ. ೩೨-೧೬).

**ಬೀರಿಕೊಳ್ಳು** = ಬಿಗಿದುಕೊಳ್ಳು ; ಬಲವಾಗಿ ಕಟ್ಟಿಕೊಳ್ಳು : ನಡುಪಟ್ಟಿಯನ್ನು (ಬೆಲ್ಟ್) ಬಿಗಿಯಾಗಿ ಬಿರಿಕೊಂಡರೆ ಹಸಿವು ತೋರುವುದಿಲ್ಲ (ಕೊವಕ್ಷ್ಯ. ೨೬).

[ದೇ.॥ ತಮಿ. ವೀಱು; ತುಳು. ಬೀರು; ಕೋತ. ವೀರ್]

**ಬೀಱು₂** (ನಾ). ೧. ಬಿಗಿದು ಕಟ್ಟುವ ಕುಣಿಕೆ,— ಗಂಟು : 'ಬೀಱುಗೊಳ್' ಪರಾ. ೨. ಚಂಚಲವಾಗಿರುವುದು : ಬಲೆದೊಡಕುಗಳು ಕರ್ಮಮಾರ್ಗಂಗಳ ಮೊಳೆಗಳುಗ್ರಂಗಳಾಶಾವಳಯಿತಂಗಳು ಜಾಱುಗಳು ಬೀಱುಗಳು (ಬಸವು. ೯೦-೫೭). [<ಬೀಱು₁]

**ಬೀಱುಗುಂಡು** (ನಾ). (ಯುದ್ಧ ನಡೆಯುವ ಸಮಯದಲ್ಲಿ) ತೂರಿ ಬರುವ ದೊಡ್ಡ ಕಲ್ಲು ; ಎಸೆಯುವ ದೊಡ್ಡಕಲ್ಲು : ಬೀಳ್ವ ಕವಣೆಗಲ್ಗಳ ಬೀಱುಗುಂಡುಗಳ ಘಾತಿಯಿಂ ಬಸವಳಿದು ಬೀಳುತಿರ್ದರ್ ಕೆಲಬರು (ಶಬ್ದು. ೯೨-೨೬). [ಬೀಱು₁ + ಗುಂಡು]

**ಬೀಱುಗುಣಿಕೆ** (ನಾ). ಬಿಗಿದು ಕಟ್ಟುವ ಕುಣಿಕೆ : ಬಂಧಿಸುವ ಗಂಟು : ವಾರುವಗಳ ಡಾವಣೆ ನೇಣ್ಗಳ ಬಲುಬೀಱುಗುಣಿಕೆಗಳ ಪಱಿದು ಕೇರಿಕೇರಿಯೊಳು ತಮ್ಮಿಚ್ಚೆಯೊಳಗೆ ಸಲೆ ತಾಱುಮಾಱಾಗಿಯೋಡಿದುವು (ಕುಂವರಾ. ೦೫-೯೦). [ಬೀಱು$_1$ + ಕುಣಿಕೆ$_2$ (< ಕುಳಿಕೆ$_1$)]

**ಬೀಱುಗೊಳ್** (ಕ್ರಿ). ಕುಣಿಕೆಗೆ ಸಿಗುವಂತೆ ಮಾಡು ; ಬಂಧಿಸು : ಹಣವೇನು ಬಾತೆ ನಿನ್ನಯ ಗುಣವೆಂಬುದು ಮಣಿದಾರವಾಗೆನ್ನ ಮನವ ಕ್ಷಣದಲಿ ಬೀಱುಗೊಂಡುದು (ಕುಂವರಾ. ೬-೦೬೯).

[ಬೀಱು$_2$ + ಕೊಳ್$_1$]

**ಬೀಱುವಗ್ಗ**, ಬೀರ್ವಗ್ಗ (ನಾ). ಕುಣಿಕೆಯಿರುವ ಹಗ್ಗ.—ಪಾಶ : ಪಾವಿನ ಪೇಳಿಗೆ ಗಾಣದ ಸಿಡಿಗಳು ಓವದೆ ಬೀಱುವಗ್ಗಗಳು ತೀವಿ ಪಣಿಯು ನೂಂಕುವ ಕವೆವಱಿಗಳಿಂ ಭಾವಿಸೆ ಕೌತುಕಮಾಯ್ತು . . . ಬಲದೊಳಗೆ (ಅವಂತ. ೧೯-೯೯). **ಬೀರ್ವಗ್ಗ** : ಮೋಣಮನೆಱೆದು ತನುಗಳಂ ಕಾಸಿದರ್ ಬೀರ್ವಗ್ಗಮಂ ಹಾಯ್ಕಿ ಸೇದಿದರ್ ಮರುಳ್ಗಳಗಳಂ ತೂಂತರು (ಚಂದ್ರ. ೪೨-೩೬). [ಬೀಱು$_1$+ವಗ್ಗ]

**ಬೀೞ್$_1$**, ಬೀಳ್$_1$. ಬೀಳು$_1$, ಬೀೞು$_1$. ವೀಳ್, ವೀೞ್ (ಕ್ರಿ). ಬಿದ್ದ$_1$. ಬಿರ್ದ, ಬಿೞ್ದ (ಭೂತಕೃ).ಬಿದ್ದು$_1$, ಬಿರ್ದು$_1$, ಬಿೞ್ದು$_1$ (ಭೂತನ್ಯೂ). ೧. **ಕೆಳಕ್ಕೆ ಕೆಡೆ**,—ಕುಸಿ ; ಪತನ ಹೊಂದು : ತಾನುಂ . . . ಕಣೆಪಂಜರದೊಳೆಱಗಿ ಭೀಷ್ಮನ್ನಿಟ್ಟನ್ತೆ ನೆಲ ಮುಟ್ಟದೆ ಬೀೞ್ದೋನಾನ್ (ಎಕ. VIII. ಸೊರಬ. ೦೦-೯ ; ಸು. 800); ಅನಿಬರ ಬಿಲ್ಗಳುಂ ಮುಱಿದು ದವರ್ಗಳನಿಬರುಂ ಪೆಱಗಣ್ಗುರುಳ್ದು ಬೀೞ್ದೊಡೆ (ಪಮ್ಪಭಾ. ೯೬-೯); ಬಿೞ್ದುದು ಭರದೆ ಸಿಡಿಲ್ದತ್ತ ಕರ್ಣೋತ್ತಮಾಂಗಂ (ಪಂಪಭಾ. ೦೨-೩೦೩); ಜೇರಿಗೆಯೊಕ್ಕಲ್ಗಣೆಯಾಗಿ ಬಿೞ್ದ ಭಟರಿಂ ಬಿೞ್ದಶ್ವದಿಂ ಬಿೞ್ದ ದಂತಿಗಳಿಂದಂ ಜವನುಂಡು ಕಾಱಿದವೊಲಾಯ್ತುತ್ತಂ ಕುರುಕ್ಷೇತ್ರದೊಳ್ (ಗದಾಯು. ೩-೨). ೨. ನಮಸ್ಕಾರಮಾಡು ; ಮಣಿ : ಕಿಡೆದಿರ್ದುದು ಷಣ್ಣವತಿ ಸಹಸ್ರಾಂಗನಾಳಿ ನೃಪನಡಿಮೊದಲೊಳ್ ಬಿರ್ದು ನಿನಗೆ ಚತುರ್ದಶರತ್ನಂ ಜನೇಶ ಬೆಸಕೆಯ್ದುವಮರರೆಲ್ಲಂ ಬೆಸನೇನೆನುತಿರ್ಪರ್ (ಆದಿಪು. ೦೦-೩೫) ; ☞ ಇಲ್ಲಿ 'ಬಿರ್ದು' ಎಂಬುದು ೩೪ ಮತ್ತು ೩೫ನೆಯ ಪದ್ಯಗಳ ನಡುವೆ ವಚನಭಾಗವಾಗಿ ಬರಬೇಕಿತ್ತು ; ಅದು ಮಡುವಿಂ ಪೊಱಮಟ್ಟು ಬಂದೊಂದೊಂದಱ ಕಾಲ ಮೇಲೆ ಬಿರ್ದಾನಂದಾಶ್ರುಗಳನಿಕ್ಕಿ (ಶಂಕರ. ೪೦೦-೦೩). ೩. (ಹೂವು, ಕಿಡಿ ಮುಂತಾದಂವು) ಉದುರು : ಮಲಯಾನಿಳನೆಸಕದಿನುದಿರ್ವಲರ್ಗಳ ಮಕರಂದಮಾಲೆಗಳ ಪರೆದತ್ತಂ ನೆಲದೊಳ್ ಬಿೞ್ದಂ ಪಡೆದುದು ವಿಲೋಚನಾಂಬುಗಳನಗ್ಗಳಂ ವಿರಹಿಗಳಾ (ಧರ್ಮಾ. ೩-೦೩೬); ಭೋಂಕನೊಗೆತರ್ಪ ಮಹೋರಗನೆಯ್ದೆ ಪಲ್ಗಳರ್ದೊಡೆ ಕಿಡಿವೀೞೆ ನೆತ್ತರೊಱೆದುರ್ಚುಗೆ ಕೊಂಡುದು ತತ್ತಪಸ್ವಿಯುಂ (ಆದಿಪು. ೨-೪೦); ಮಾತಂಗಕುಂಭದಿಂ ರಣಭೂತಲದೊಳ್ ಬಿೞ್ದುವೊಡನೆ ಮೌಕ್ತಿಕ ಮಣಿಗಳ್ (ಶಂಖಪಾಬ್ಧಾ. ೦೩-೭೭). ೪. (ಸಿಡಿಲು, ಬಾಣ, ಕಲ್ಲು ಇತ್ಯಾದಿ) ಎರಗು; ಹಾಯು; ಬಡಿ : [ಸಿ]ಡಿಲ್ ಬೀೞೆ ಮರಂ ಮುಱಿಯೆ (ಶಾಂತಿಪು. ೯-೦೦೬); ಕುಮಾರನನೆತ್ತಿಕೊಂಡು ಮಾಣದೆ ಗಗನಕ್ಕೆ ಮತ್ತೊಗೆದನುರ್ವಿಗೆ ಬಿೞ್ದ ಸಿಡಿಲ್ ಸಿಡಿಲ್ವವೊಲ್ (ಚಂದ್ರಪ್ರ. ೫-೫). ೫. ಇಳಿ : ಕೆಳಮಟ್ಟಕ್ಕೆ ಬರು ; ಶಾಪದಿಂದಕಟ ತಿರ್ಯಗ್ಜಾತಿಯೊಳ್ಬೀೞ್ದೆನೇ (ಕಾದಂಬ. ೭೦೮). ೬. ಅಸ್ತಮಿಸು ; ಮುಳುಗು : ಬಟ್ಟು ಬೀೞುವೊಲ್ನೊಟ್ಟನೆ ನೊನ್ದ ಬೀೞ್ವಿಡೆಯೆ × × (ಎಕ. II, ೦೩೯-೦೭; ಸು. 940). ೭. ಜಾರು : ಅಂಬರದೊಳಾಡುವ ಪರ್ದಿನ ಬಾಯಿಂದಂ ಬಿರ್ದು ಬರ್ದುಂಕಿದೊಂದು ಪೆಣ್ಣಲಿಯುಂ ಕಂಡು (ಶಂಕರ. ೨೫೭-೭); ನಿತ್ತರಿಸದೆ ಬಲ್ದೊಱೆಯೊಳ್ ಮತ್ತನಿಸದೆ ಬಿರ್ದೊಡಣ್ಣ ಸಹವಾಸಿಯೆ ಬಂದೆತ್ತುವುದು (ಧರ್ಮಾಮೃ. ೦-೦೨೫). ೮. ದುಮುಕು ; ಜಿಗಿ : ಬಡಗ ರೆಕ್ಕಕದದುಬದಗಾಯ್ವೆಟ್ಟದಿಂ ಬಿೞ್ದ ಕೊಲ್ಲಿಯುಟ(? ಉ) × × × (ಎಚ. XVIII, ೩೭೯-೨೭ ; ೪ನೆಯ ಕಾ): ಬೇಡನೋಂದು ಪುಲಿ ತನ್ನನಟ್ಟಿವರೆ ಪ್ರಾಣಭಯದಿಂ ದೆಸೆಗಾಣದೆ ಪುರಾಣಕೂಪದೊಳ್ ಬಿರ್ದಂ ಆ ಪುಲಿಯುಂ ಕೋಪಾಂಧನಪ್ಪುದಱಿಂದಲ್ಲಿಯೆ ಬಿರ್ದುದು (ಶಂಕರ. ೦೦೯-೦೬); ಬೆದಱಿ ಪುಲಿ ಬಾವಿಯೊಳ್ ಬಿರ್ದುದನಱಿದೊಡೆ ಗುಂಡುಗೊಂಡು [ಕೊಂದಿ]ಕ್ಕುಗುಂ (ಸುಕುಮಾ. ೭-೩೭); ಪರ್ವತವೇಱಿ ಬಿದ್ದರಂತೆ ನಿರ್ಜೀವನಾಗಿ (ಧರ್ಮಾಮೃ. ೦-೦೭೯). ೯. (ಭೂಮಿ. ಕಟ್ಟಡ ಇತ್ಯಾದಿ) ಕುಸಿ: ಜರಿ : ಪಡೆಯ ಪೊಱಗಗಿದು ಶೇಷಂ ಪೆಡೆಗಳನುಡುಗುವುದುಮೆಳೆ ಬೊದಿಲ್ಲನೆ ಬಿಟ್ಟತ್ತಡಿಗಿಡೆ ಕೂರ್ಮನ ಬೆನ್ನಂ ದೊಡೆದು ಸಿಡಿಲ್ದೊಡನೆ ನುಚ್ಚುನೂಱಪ್ಪಿನೆಗಂ (ಪಂಪಭಾ. ೧೦-೭೦); ಭುವನವ್ರಾತಂ ನಿರಾಧಾರದೊಳಡಕಿರಲುಂ ಬೀೞ್ಗುಮೆಂದಂದು ಕಂಜೋದ್ಭವಂ . . . ಸ್ಥಿತಿಟ್ಟ ವಿಭಾಸ್ವತ್ಕಾಂಚನಸ್ತಂಭಮಿದೆನೆ (ಕುಸುಮಾ. ೦-೨೫). ೧೦. ಬಳಲು ; ಆಯಾಸಹೊಂದು : ಪದೆದಾಂ ನೋಡಿದೆನಾತನಿರ್ದ ದೆಸೆಯುಂ ನಟ್ಟಾಲಿ ಬೀೞ್ವನ್ನೆಗಂ (ಕಾದಂಬ. ೭೯೯) ; ನೋಡಿದಳಬ್ಜಾನನೆ ನಿನ್ನ ಚಿತ್ರಪಟಮಂ ನಟ್ಟಾಲಿ ಬೀೞ್ವನ್ನೆಗಂ (ದಶಕು. ೦೦-೫೨). ೧೧. ಮರಣ ಹೊಂದು ; ಸಾಯು : ನಾಡನೊರೊಳ್ರಣವಿಕ್ರಮ ನಾನ್ನೆಱೆತಿಯಡಿಗಾಳ್ಪೆಟ್ಟತ್ತು ಸಿಂಭಗೆ ಕೊಳ್ಗೊಳದುಳ್ವೀೞೆ ಎಱೆದು ಗೆಲ್ದು ಅಲ್ಲಿ ಮಹಾಜನಮಾನ್ಕರೆದು ನಿಗಳ ಬಾಟ್ಟನುತ್ತ ಜೀವಿತು ಬೇಡಿ ಕೊಳ್ವಮೆನ್ದೊಡೆ (ಸೌಇಇ. IX-i, ೪೭-೩ ; ಸು. ೪ನೆಯ ಕಾ) ; ಅಪ್ಪಬಲಮನ್ನ ಎಱೆದು ಬಿೞ್ದ × × (ಎಕ. IX. ಬೆಂಗಳೂ. ೩೭-೪ ; ಸು. 750) ; ಅಗ್ಗಳಾ ಅರಸರಾ ಬೆಸಸಿದೊಡೆ ಬೆಸನ ಪೆತ್ತುರ್ಬಿ ಬಲಮಾನ್ತಾಳ್ದಿ ಎಱೆದು ಬಿೞ್ದರ್ (ಎಕ. X (8), ಬಾಗೇಪ. ೯೭-೮ ; ಸು. 820). ೧೨. (ಆಹಾರ ಮುಂತಾದುವು) ಹಳಸು ; ನೀರು ಬಿಟ್ಟುಕೊಳ್ಳು : "ಬಿೞ್ದುದು—ಪಟಸಿದುದು, ಸತ್ತುದು. ಕೈ ಜೋಲ್ದುದು" (ಕವಿದ. ಕಂ. ೦) : "ಬಿೞ್ದುದೆನೆ ಪಟಸಿದುದು ಸತ್ತುದುಂ ಕೈಯಿಂದೆ ಜಾರ್ದುದಕ್ಕುಂ" (ಸಂಜೀವ. ೦೬). 'ಬೀೞಂಬಲಿ' ಪರಾ. ೧೩. ಚೆಲ್ಲಾಪಿಲ್ಲಿಯಾಗು ; ಚೆದರು ; "ಪಡಲಿಟ್ಟುದೆನಲು ಬಿರ್ದುದು" (ಕವಿಕಂ. ೨೨೩). ೧೪. (ಪೆಚ್ಚ, ಬೆಲೆ ಇತ್ಯಾದಿ) ಉಂಟಾಗು ; ತಗಲು : ತಮಗೆ ಸುಂಕ್ಕಂ(ಕಂ) ಬೀೞ್ದಲ್ಲಿ ಒನ್ದು ಪೇಱಿಗೆ (ಇಅ. VIII, ೨೮೭-೩; 732). ೧೫. ಸಿಕ್ಕಿ ಹಾಕಿಕೊಳ್ಳು ; ಸಿಲುಕು : ಚಂಡಾಲರ ಕಯ್ಯೊಳ್ಬೀೞ್ವ ತೋಲ್ಪಂಜರದ ಪಡಿಕೆಯೊಳ್ನಲ್ವ ದುರ್ವಾರದುಃಖೋತ್ಕರಮೆಲ್ಲಂ ನೋಡಲೆನ್ನಿಂದ್ರಿಯ ನಿವಹದ ದೋಷಂ ದಲ್ (ಕಾದಂಬ. ೭೫೨); ಪೇರಾನೆಯ ಬಾರಿಗೆ ಬಿರ್ದ ಶ್ವಾನನ ತೆಱದಂತೆ ಬಾಧೆಗೊಳಗಾಗಿರ್ಪ (ಧರ್ಮಾಮೃ. ೬-೧೩೦) ; ನಿಚ್ಚಮಾ ವೇದವಚನಕಂತುಂ ಸಿಲ್ಕದಣ್ಣ ನೀನೇ ವಿಚಿತ್ರಮಿದಲ್ತೆ ತೊಡರಿ ಬೀೞ್ದ ಕೈಕೆಯೊರೆದ ಬಿಱುನುಡಿಯೊಂದಕೆ (ಶ್ರೀರಾಮ. ೪-೨೯). ೧೬. ಧಾರೆಯಾಗು ; ಸುರಿ : ನೇರ್ವಲ್ಲಿ ಕೆನ್ನೆತ್ತರುಂ ಬಿರಿಖಂಡಂಗಳೆ ಬೀೞಲುಣ್ಬ ಮನದೊಂದಣ್ಮಿಟ್ಟಳಂ ಪೊಣ್ಮೆ ಬೀರರಸಕ್ಕಾಗರಮಾಯ್ತು ನೋಡೆ ಕವಚಂಗೊಂಡಂದಮಾ ಕರ್ಣನಾ (ಪಂಪಭಾ. ೯-೭೩). ೧೭. ನ್ಯೂನವಾಗು ; ಕೊರತೆಯಾಗು; ಅಪೂರ್ಣವಾಗು : 'ಬೀೞಿಕ್ಕರ' ಪರಾ. **ಬೀಳ್$_1$** : ೧. ಇನ್ತೀ ಧರ್ಮ್ಮಮನಳಿದವರು . . . ನರಕಕ್ಕೆ ಬೀಳ್ವರು (ಕಇ. II, ೦೦-೨೯; 1080); ಗಿರಿಯ ಶಿರದಲಿ ಪೂತ ಕಕ್ಕೆಯ ಮರ ಮುಱಿದು ಬೀಳ್ವಂತೆ (ಕುಮಾರವ್ಯಾ. ದ್ರೋ. ೩-೭೬). ೨. ದಂಡವತ್ಪ್ರಣತೆಯಿಂ ಮುನ್ನಂ ಮನಂ ಬಿಳ್ದ (ಶಿರು. ದೇ. ೦೦-೪); ಹರಹರ ನಮಃಶಿವಾಯೆಂದು ಬಿರ್ದಂ ನೋಡ (ಅಂಶ. ದೇ. ೦೭೬-೨೫). ೩. ಜೇರಿಗೆ ಬೆಲ್ಲಂ ಸಡಿಲ್ದು ಕಂಪನದೆ ಬಿಳ್ದು ಪಗಜೆಯ ಪದದೊಳ್ (ಗಂಕ. ೦೦-೯೨) ; ಕಂಬನಿವೊಂದೆರಡು ಬೀಳ್ತಿರ್ದಡಂ (ಬಸಪು. ೪೪-೨೯). ೭. ಕೈಯಾಯುಧಂ ಬೀಳ್ವುದಂ ಕಣನಂ ಲುಬ್ಧಕನಂ . . . ಕನಸೊಳ್ ಕಾಣಲು ಬಾರದೈ (ಸೋಬೋಕ. ೭೦). ೧೧. ಸಂತರಾಗಲಸಂತ

ರಾಗಲಿಯಂತೆಕಾಲದಲವರು ಬೀಳ್ವರು ಮಂತ್ರಗಳು ತಾವಿರವು ಜ್ಯೋತಿಯ ಸಾಕ್ಷಿಯಿಲ್ಲದಿರೆ (ಸಂಭಶ. ೪-೧೫). ೧೬. ಬೀಳ್ವ ಲೋಳೆಯ ಬಿಗಿದ ಗಲ್ಲಗಳ ಅಂಗವಿಬ್ಯಾಘೆಯು . . . ನಾರ್ವ ಬಾತೊಡಲ (ಬಸವು. ४೭-೫೭). ೧೮. ಸೋತುಹೋಗು ; ಸೋಲು : ಸಂಕಿಲಿನಾಚಿಯರ ನೋಟದೊಡನೆ ತನ್ನ ನೋಟಂ ಘಳಿಲನೆ ಸಂದಿಸೆ ಹಳಿಲನೆ ಮನಂಬಿದ್ದುದು (ನಂಬಿರ. ೦೨-೫೨); ಬೀಳ್ದುದು ಮತ್ತಂ ಪಾಂಡ್ಯನ ಬಾಳ್ದ ಬಲಂ (ಹಾಲಾಸ್ಯ. ೩-೩-೨೭). ೧೯. ಆಕ್ರಮಿಸು ; ಧಾಳಿ ಮಾಡು : ಬಾಳೆಯಮಕ್ಕೆ ಸೋದಿಯ ಮೇಲೆ ದಂಡಂ ಬೀಳ ವೇಳಲೇಱಿ ಬಂದು ಪರಿಗೆಯ ಬಯಲಲಿ ಬೀಡಂ ಬಿಟ್ಟು (ಪ್ಕಆಂ. ೦೯೨೯, ೬೩-೩ ; 1216). ಬೀಳು$_1$ : ೧. ಬಿದ್ದವು ತೋಳ ಗಾಳಿಗೆ ತರುಕದಂಬಕವವಳ ಗಮನದಲಿ (ತೊರಣಾ. ೦-೦೦-೬). ೨. ಬಿರಿ ಮುಗುಳಂದದಿ ಎನ್ನ ಹೃದಯ ನಿಮ್ಮ ಶ್ರೀಚರಣದ ಮೇಲೆ ಬಿದ್ದರಳುಗೆ (ಬಸವ. ४೮೬); ನರನ ನುಡಿಯನು ಹೊಳ್ಳುಗಳೆವರೆ ಚರಣದಲಿ ಬೀಳುವೆವು (ಕುವ್ಯಾದ್ರೋ. ೯-೫४) ; ನರಹರಿಯ ಪಾದಕೆ ನಾ ಬೀಳಲಿಲ್ಲ (ಪುರಂದ. ೦-೦೭೭-೦೨). ೩. ಬೀಳುವುದು ತಾ ಮತ್ಸ್ಯವಾಲದಿ ಜಾಳಿಸಿದ ಜಲವೀಗ ಭೂಮಿಗೆ (ಸಂಭಶ. ४-೨೯) ; ದೇವರ ದಯದಿಂದ ಎಲ್ಲಿಯೂ ಕಿಡಿ ಬೀಳಲಿಲ್ಲ (ಮುಂಬಯಿ. ४-೬೩). ೪. ಬೀಳುವಂಬಿನ ಹೊಯ್ಲ ಖಡ್ಗದ ತೂಳ್ಳ ಮಾನೆಯ ತೂಕಿ ತಾಗುವ . . . ಧಾಳಾಧೂಳಿ ಮಸಗಿತು (ಕುವ್ಯಾಕ. ೦೧-೯) ; ನಿಡಿಗಲ್ಲು . . . ಬಟುಗಲ್ಲು ಬೀಳೆ ತುಡುಕಿದ ವಜ್ರಮಾರ್ಗಣದಿಂದ ಶ್ರೀಕೃಷ್ಣ ಹುಡಿಯೇಳಲೆಚ್ಚು ಹಾಱಿಸಿದ (ಮೋಹತ. ४೦-೬೩). ೫. ಅಧಿಕವಹ ಕೋಪದಲಿ ಬೀಳುವರು ಅಧಮತೆಯಲಿ (ಸಿಭಾಗ. ೦೦-೯-೨೫) ; ಬೆಲೆ ಏರು ತ್ತಿರುವ ಅಥವಾ ಬೀಳುತ್ತಿರುವ ಸೂಚನೆಯನ್ನು ಅನುಸರಿಸಿ . . . ಚಲಾವಣೆಗೆ ತರಬಹುದು (ಹಣಶ್ರ. ೦೯). ೮. ಕೂಡಲಸಂಗನ ಶರಣರೊಡನೆ ಮಱೆದು ಸರಸವಾಡಿದರೆ ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ (ಬಸವ. ೬೬೦ ಅ) ; ಬರುತ ಮೇರುವನೇಱಿ ಬೀಳಲು ಧರಣಿ ಹತ್ತಿಯ ಶಯನದಂದದಿ ಪರಮುನಿಗೆ ತಾನಾಗಿ (ಸಂಭಶ. ೨೫-೨४); ಕಾಳ ಕೂಟದ ಮಡುವಿನೊಳು ಮುಳುಗುವೆನೊ ಬೆಟ್ಟವನೇಱಿ ಬೀಳುವೆನೊ (ಪಳಶ. ೫-೨೩) : ತಾನು ಬಾವಿಗೆ ಬೀಳುವುದನ್ನು ಸಹಾ ಬಿಡದೆ ಹೇಳಿದಳು (ಸಿಂದಣ. ೦೦೦). ೯. ಹಿತ್ತಲ ಗೋಡೆಯು ಬೀಳಲಿ (ಪುರಂದ. ೩-೨೦-೨). ೧೧. ಉಮೆಯ ನಲ್ಲನು ವಿಷವನುಂಡು ಭ್ರಮಿಸಿ ಬಿದ್ದ ಬಳಿಕ್ಕ ಕಾವಡೆ ನಿಮಗೆ ಶಕ್ಯವೆ (ಬಸವು. ೧೩-೬); ಬೀಳು ಬೀಳಭಿಮನ್ಯುವಿನ ವಧೆ ಬಾಳಲೀವುದೆ ನಿನ್ನನೆನುತುಬ್ಬಾಳುತನದಲಿ ಪಾರ್ಥ ಬೊಬ್ಬಿಡೆ (ಕುವ್ಯಾದ್ರೋ. ೦४-४೦) ; ಹುಟ್ಟಿದೆನು ಶ್ರೀಹಂಪೆಯಲ್ಲಿ ಬಾಳುವೆನು ಇಲ್ಲಿ ಬೀಳುವುದೂ ಇಲ್ಲಿಯೇ (ತುಂಗಭ. ೯). ೧೪. ದೂರದೂರದ ಸ್ಥಲಗಳಿಗೆ ಪತ್ರ ಕಳುಹಿಸಬೇಕಾದರೆ ಅರ್ಧ ರೂಪಾಯಿ, ಮುಕ್ಕಾಲು ರೂಪಾಯಿ, ಒಂದು ರೂಪಾಯಿಯ ತನಕ ಬೀಳುವದು (ಮುಂಬಯಿ. ೬. ४-೯೭); ಈ ಸೀರೆಗೆ ಎಷ್ಟು ಬಿತ್ತು ? (ರೂಢಿ). ೧೫. ಕೆಸಱಿಲ್ಲಿ ಬಿದ್ದ ಪಶುವಿನಂತಾನು ದೆಸದೆಸೆಗೆ ಬಾಯ ಬಿಡುತ್ತಿದ್ದೇನಯ್ಯಾ (ಬಸವ. ೫೨) ; ಕಾಲನುದ್ದಂಡೋಗ್ರದಂಡಕರಾಳಬಾಧೆಗೆ ಬಿದ್ದೆಯಲ್ಲಾ (ಬಸವು. ४೯-೦೦) ; ಬಿದ್ದನಬಲಾಜನದ ಬಲೆಯೊಳಗೊದ್ದು ಕೊಳುತ ಮುನೀಂದ್ರನಂಗಜನುದ್ದುರುಟುತನಕಾರು ಸರಿ ಸುರನರ ಭುಜಂಗರಲಿ (ತೊರಣಾ. ೦-೫-೫೬). ೧೬. ತನುಪರಿಚ್ಯುತವೀರ್ಯ ಬೀಳಲ್ಕ ಕನಕಕಳಸದೊಳಿರಿಸಲು (ಸಂಭಶ. ೦೭-೬೯). ೨೦. ಒದಗು; ಸಂಭವಿಸು; ಬರು : ಸೂರ್ಯನು ಇಲ್ಲದಿದ್ದರೆ ಎಲ್ಲಾ ಕಡೆಯಲ್ಲಿಯೂ ಚಳಿ ಬೀಳುತ್ತಿತ್ತು (ಮುಂಬಯಿ. ೬. ೨-೨೪). ೨೧. ಜೋಲು ; ನೇಲು : ಬಿದ್ದ ಮೊಲೆಯ್ಗ ಱವಿಕೆಯೊಳೇಱಿಸಿ ಕಟ್ಟಿ (ಕಂಪಶ. ೬೦-೯೩) ; ಬಲೆಯು ಹಱಿದರೆ ಹೊಲ್ಲ ಮೊಲೆಯು ಬಿದ್ದರೆ ಹೊಲ್ಲ (ಸರ್ವಜ್ಞ. ೬೦४). ೨೨. ಸೇರು ; ಕೂಡು : ನಿನ್ನ ಪಾಲಿಗೆ ಬಿದ್ದೆನೊ ಪರಮಕೃಪಾಳೋ (ಪುರಂದ. ೨-೦೯४ ಪಲ್ಲವಿ) ; ಉತ್ತರದಲ್ಲಿ ಆರ್ಕ್ಟಿಕ್ ಸಾಗರಕ್ಕೆ ಬೀಳುವ ನದಿಗಳು (ಭೂಗೋಳ. ೨೫). ೨೩. ಗುರಿ ತಗುಲು ; ಗುರಿ ತಾಕು.—ಮುಟ್ಟು : ಎಚ್ಚತ್ತು ಮುಗುಳೆ ನೋಡಿದೊಡೆ ಮನ್ಮಥ ಬೀಳಲೆಚ್ಚನು ದೈತ್ಯೇಶನೊಡಲ ಎಚ್ಚೆಱು ಪಲ್ಲಟ ವಾಗಿರೆ ಕಣ್ದೆಱೆದೆಚ್ಚತ್ತು ರತಿಯು ನಿಟ್ಟಿಸಿದ (ಮೋಹತ. ೦೦-೦೨). ಬೀಟು$_1$ : ೧. ಇಂತಖಿಳ ದಿಶಾಚಕ್ರದೊಳ್ತೆಕ್ಕನೆ ತೀವಿ ಕೊರ್ವಿ ಪರ್ವಿದತುಳಧ್ವಾಂತ ದೊಳಲ್ಲಿಗಲ್ಲಿಗೆ ಬೀಟುತ್ತಾಂ ಮೆಲ್ಲನೆ ಬರೆವರೆ (ಉದ್ಯೋಟ. ೫-೦೩ ವ). ೭. ಬೀಟುವಿನಂ ಕಣ್ಣುಳ್ಕೆ ನಿರಾಳಂಬನವಾಗೆ ಮನದ ಮೋಹಸ್ತಂಭಂ ಬೀಟೆ . . . ನಭಸ್ಥಲದೊಳಾದುದುಳ್ಕಾಪಾತಂ (ಅಜಪು. ೬-४೭). ವೀಳ್ : ೧೯. ನೀಂ ಗಡಿಯೊಳ್ ಭಗದಿಂ ವೀಳೆ ಪಾಂಚಾಳ ಬೀಡಂ ನಡೆಸಂದಾದ್ರೀಸಪ್ಪೋಗಗ್ಗಣಿಸೆನುತೆ ಬೆಸಂಬೇಳರ್ . . . ವೇತ್ರಹಸ್ತರು (ಎಕ. VII, ಶಿಪವೊ. ೫-೦೫; 1218). ವೀಟ್ : ೧೧. ಸ್ವಸ್ತಿಶ್ರೀ ಅಜ್ಜವರ್ಮ್ಮ ಕಾಸರೂರ್ ಆಳ × × × ಪಣ್ಣನೂರ್ದ್ × × ಕೀರ್ತ್ತಣ್ಣನ್ ಗಡ್ಡಿಪುರದುಳ್ ದುಗ್ಗಮಾರಪ್ಪಡೆಯು × × × ಎಱಿದ ವಿಟೆರ್ದೀರ್ (ಎಕ. IX, ದೇಪವ. ೬४-೬; ಸಂ. 780). ᑭ ಈ ಧಾತುವು ಅನೇಕ ಶಬ್ದಗಳ ಮುಂದೆ ಸೇರಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ :—ಉಪವಾಸ ಬೀಳು, ಏಟು ಬೀಳು, ಕಣ್ಣಿಗೆ ಬೀಳು, ಕಳ್ಳ ಬೀಳಂ, ಕಾಲಿಗೆ ಬೀಳು, ಕಿವಿಗೆ ಬೀಳು, ಜಾರಿ ಬೀಳು, ತಿರುಗಿ ಬೀಳು, ತೂತು ಬೀಳು, ಬೀದಿಗೆ ಬೀಳು ಇತ್ಯಾದಿ.

ಬಿದ್ದಂಬರಿ = ಬೀಳುವಂತೆ ಓಡು : ಪೋಗೆಂಬ ಬಾಯೆಂಬ ಬಿದ್ದಂ ಬರಿಯೆಂಬೋವೋವೊ ಕೂ ಕೂಗು . . . ಪುರದೊಳ್ಪೊಣ್ಮಿತ್ತು (ಶಂರಾಪೂ. ४-೦೦೦) ; ಬಯಲೊಳ್ ಬೀದಿವರಿದುಂ ಬಟ್ಟೆಯೊಳ್ ಬಿದ್ದಂ ಬರಿದುಂ (ಪರ್ವತಿ. ೬-೩೨ ವ). ಬಿದ್ದಂಬೀಟ್ = ವೇಗವಾಗಿ ಬೀಳು : ಬಿದ್ದಂಬೀಟ್ವ ಕೊಂತಕ್ಕೆ ಸುತ್ತುವ ಪಾಶಕ್ಕೆ . . . ನಾಂಟುವ ಗೇಣ್ಗೆಂಬಿನ ಮಾದುದದ್ಭುತಮಾದಶ್ವವ್ಯೂಹದುಗ್ರಾಹವಂ (ಚಂದ್ರಪು. ೦೦-೯೦). ಬಿದ್ದ ನಾಲಿಗೆ = ಸೇದಿ ಹೋದ ನಾಲಿಗೆ : ಕೋಷ್ಠ. ಮಧುಕ . . . ಕುಂಕುಮ ಇವಂ ನೀರಿಂದ ತೇದು, ನಾಲಿಗೆ ತೊಡೆಯಲು ಬಿದ್ದ ನಾಲಿಗೆ ಬಕ್ಕು (ಖಗೇಂ. ೬೫). ಬಿದ್ದ ಬೀಳು = ವಿಶೇಷವಾಗಿ, ನಡೆದಾಡುವ ಮಕ್ಕಳಿಗೆ ಭೇದಿಯಾಗುತ್ತಿದ್ದರೆ, ನಡೆದಾಡುವಾಗ ಕೆಟ್ಟ ಸ್ಥಳದಲ್ಲಿ ಬಿದ್ದು ಉಂಟಾದ ಖಾಯಿಲೆಯೆಂದು, ಅದರ ಪರಿಹಾರರೂಪವಾಗಿ ಮಾಡುವ ಒಂದು ಸಾಂಪ್ರದಾಯಿಕ ವಿಧಿ; ᑭ ಕುಂಕುಮ ಕಲಸಿದ ಅನ್ನ ಒಂದು ಉಂಡೆ. ಅರಿಸಿನ ಕಲಸಿದ ಅನ್ನ ಒಂದು ಉಂಡೆ. ಇಜ್ಜಲು ಪುಡಿಯನ್ನು ಕಲಸಿದ ಅನ್ನ ಒಂದು ಉಂಡೆ – ಹೀಗೆ ಮೂರು ಬಗೆಯ ಅನ್ನದ ಉಂಡೆ ಗಳನ್ನು ಮಗುವಿಗೆ ನಿವಾಳಿಸಿ ನೆಲದಲ್ಲಿ ಅಗೆದ ಗುಳಿಯಲ್ಲಿ ಹುಗಿದಿಟ್ಟು ಮತ್ತೆ ಒಂದು ಚೊಂಬು ನೀರನ್ನು ಮಗುವಿಗೆ ನಿವಾಳಿಸಿ ಅದರ ಮೇಲೆ ಚೆಲ್ಲಿ, ಮೂರು ಸಾರಿ ಆ ಗುಳಿಯನ್ನು ದಾಟಿಸುತ್ತಾರೆ : ಮಗುವಿಗೆ ಏಕೋ ತುಂಬಾ ಭೇದಿಯಾಗುತ್ತಿದೆ. ಬಿದ ಬೀಳು ಮಾಡಿಸಬೇಕು (ರೂಢಿ). ಬಿದ್ದ ಮೋರೆ = ಅವಮಾನದಿಂದ ಜೋತು ಬಿದ್ದ ಮುಖ ; ಇಳಿ ಬಿದ್ದ ಮುಖ : ಗದ್ದಿಗೆಯ ಬಳಿ ಕೆಡವಿದರು . . . ಬಿದ್ದ ಮೋರೆಯ, ನಿದ್ದೆಗಣ್ಣಿನ ಒದ್ದೆ ಕೂದಲ ದೊಂಬನಾ (ಕುಪು. ४೦-೨೯). ಬಿದ್ದು ಸಾಯು = (ಆಲಂ)ಬಹಳ ಇಷ್ಟ ಪಡು : ಸುಭಗೆಯನ್ನು ಕಂಡರೆ ಗಂಗಾಸಾನಿ ಬಿದ್ದು ಸಾಯುವಳು (ಗಂಗಾಸಾ. ೨೫). ಬೀಳಗೆಡಹಿಸು = ನೆಲಕ್ಕೆ ಬೀಳುವಂತೆ ಮಾಡು; ನೆಲಕ್ಕುರುಳಿಸು : ಸೋಲ ಮಿಗಲೊಳಸರಿವ ಬಿರುದರ ಬೀಳಗೆಡಹಿಸಿ . . . ಪಾರ್ಥನಿದಿರಾದ (ಕುವ್ಯಾಶೀ. ೬-೦೩). ಬೀಳಲಿಡು = ಕೆಳಗೆ ಕೆಡವು ; ಬೀಳಿಸು : ಎಲಲೆ ಕೋಡಗ ಕೊಲುತಲದೆ ಕಪಿ ಬಳೆಯು ಬೀಸಿರೋ ಬೀಳಗೆಡಹಿರೊ

ತೊಲಗದಿರಿರೋ ಕವಿಯೆನುತ . . . ತಱುಬಿದರು (ತೊರಂ. ೩-೪-೨೦): ತುರಗಗಳನು ಬೀಳಗೆಡಹಿ ಬೆಟ್ಟದ ಚಾಮ ದುರಗಲಿ ಮೆಱೆದ ಸಾಹಸವ (ಕಂಪವ. ೩-೯೦). **ಬೀಳಜಡಿ**=ಬೀಳುವಂತೆ ಹೊಡೆ,-ಬಡಿ : ಹಾಲ ಹಸುಳೆಯನಿಂತು ಭಂಗಿಸಿ ಬೀಳ ಜಡಿ [ಪಾಠಾಂ. ಹೊಯ್ದು]ದಡವಿಯನು ಹೊಗಿಸುವ ಕಾಳು[ಮೂಳಿ]ಯನೇನನೆಂಬೆನು ಸುರುಚಿಯೆಂಬವಳ (ಶಿಭಾಗ. ೪-೬೭-೩೯). **ಬೀಳಬಡಿ**=ಬೀಳಜಡಿ : ಆಳ ಹೆದಱಿಸಿ ನುಡಿವ ನಾಯ್ಗಳ ಬೀಳ ಬಡಿ (ಕುವ್ಯಾದ್ರೋ. ೨-೬೯). **ಬೀಳಲಿಕ್ಕು** = ನೆಲಕ್ಕುರುಳುವಂತೆ ಬಾಣ ಪ್ರಯೋಗ ಮಾಡು : ಸೊಂಡಿಲೊಳ್ ಕೊನೆವೆತ್ತ ಮದಹಸ್ತಿಗಳ ಕಚ್ಚಿ ಕೊಂಡಿರ್ದ ಕೇಸರಿಗಳನು ತುಂಡದೊಳೆರಡು ಕಾಲ್ಗಳೊಳೆರಡಾಂತ ಭೇರುಂಡನ ಬೀಳಲಿಕ್ಕಿದನು (ಮೋಹತ. ೦೯-೩೬). **ಬೀಳಲಿಡು** = ನೆಲಕ್ಕುರುಳಿಸು : ಬೀಳಿಸು: ಕೀಲ ಕಳೆವರು ರವಿಯ ಬಂಡಿಯ ಬೀಳಲಿಡುವರು ಚಂದ್ರಬಿಂಬವ (ಸಂಭಶ. ೬-೦೮). **ಬೀಳಲಿಱಿ** = ಕೆಡೆಯುವಂತೆ ಹೊಡೆ,-ಚುಚ್ಚು : ಭಾಳಾಕ್ಷನ ರೂಹು ನಿನಗೇಕೆನುತ ನಾರಿಕೇಳಫಲವ ಕಟ್ಟಿ ತೂಗಿ ಬೀಳ ಲಿಱಿದು ಕೊಲುವಂತೆ ತೆಂಗಿನ ಕಾಯ ಹೋಳ ಮಾಡಿದರು ಜೂಧಿನಲಿ (ಮೋಹತ. ೨೦-೨೨) ; ಅಗೆ ತಳವುಟ್ಟಿ ಕೋಟೆಯ ದ್ವಾರಗಳ ಮಾಡಿ ಹೊಗುವಡ್ಡಲಾದರಿಭಟರ ಮಿಗೆ ಬೀಳಲಿಱಿ (ಕಂಪವ. ೦೪-೮). **ಬೀಳ ಹೊಡೆ**=ಬೀಳ ಜಡಿ : ಕಾಲ ಕೆರಹುಗಳಂ ತೆಗೆಯದಿಂತಿರ್ದಡೆಲೊ ನಿನ್ನ ಬೀಳ ಹೊಡೆವೆನು (ಬಸಪು. ೪೯-೦೦). **ಬೀಳ ಹೊಯ್**=ಬೀಳ ಜಡಿ : ಬೀಳ ಹೊಯ್ ಹೊಯ್ ಬಿಡೆಯದಲಿ (ಕುವ್ಯಾಕ. ೦೨-೦೩) ; ಪೌಂಡ್ರಕ ಸೃಗಾಲನ ಬೀಳ ಹೊಯ್ದನು (ಶಿಭಾಗ. ೩-೨-೩೬). **ಬಿಟ್ಟಿರ್, ಬಿರ್ದಿರ್, ಬಿದ್ದಿರು**=೧. ಬೀಳು ; ಕೆಡೆ : ಸರೋವರದಿಂ ಪೊಱಮಟ್ಟೊಂದೆರಡಡಿಯನಿಡುತೆ ಗತಪ್ರಾಣನಾಗಿ ಬಿಟ್ಟಿರ್ದಂ (ಶಂಶಭಾ. ೮-೩೯) ; ವರರತ್ನಂ ಪೇಲೊಳ್ ಬಿದ್ದಿರೆಯದು ಪೊಲ್ಲೆಂದು ಬಿಸುಡಲಪ್ಪುದೆ (ಧರ್ಮಾಮೃ. ೪-೦೬೦). ೨. ಇರು ; ನೆಲಸು : ಆ ಮಾರ್ಗಂಬಿಡಿದು ಬಿಟ್ಟಿರ್ದ ಸರಸಸರಸಿಜಶಾಲೂರಶಕಲಶೈವಾಲಂಗಳೊಳಡಿಯಿಡುತ್ತುಂ (ಲೀಲಾವ. ೬-೬೦ ವ) ; ಆ ಕೋಂಟೆಯೊಳಗೆ ಮೂಱುಂ ಲೋಕಂ ಬಿರ್ದಿರ್ದುದಕ್ಕುಮೆಂಬಳವಿಗೆ ಮಂದೇಕ ದ್ವಿ ತ್ರಿ ಚತುಶ್ಶಾಲಾಕೀರ್ಣಂ ಪುರವರಂ ಕರಂ ಸೊಗಯಿಸುಗುಂ (ಶಾಂತಿಪು. ೯-೦೪೬) ; ಕೂಳಿಗೆ ಬಿದ್ದಿರುವ ಬೋಳಿಗೆ ನಿನಗಿಷ್ಟು ಗರ್ವ್ಯಾಳಿತನವೇಕೆ (ಪುರಂದ. ೩-೫೦ ಕಲ್ಪಿ). ೪. ಮರಣ ಹೊಂದಿ ಉರುಳು ; ಸತ್ತು ಬೀಳು : ತಾರಪರ್ವತದ ತಟ್ಟಲೊಳ್ ಬಿಟ್ಟಿರ್ದ ಗಂಡನಗಮಂ ಪೋಲ್ತಿರ್ದ ಗೋಪತಿಯಂ ಮೃಗಾಧಿಪತಿ ನೋಡಿ (ಶಂಶಶಂ. ೦೯೦-೮) ; ವಿದ್ಯೆ ಕಲಿಸದ ತಂದೆ ಬುದ್ಧಿ ಹೇಳದ ಗುರುವು ಬಿದ್ದಿರಲು ಬಂದು ನೋಡದ ತಾಯಿಯು ಶುದ್ಧ ವೈರಿಗಳು (ಸರ್ವಜ್ಞ. ೦೫೦೨).

[ದೇ.॥ ತಮಿ. ವಿಟು, ವೀಟ್ ; ಮಲ. ವೀಟು ; ತುಳು. ಬೂಳು ; ಕೊಡ. ಬೂಳ್ ; ತೆಲು. ಬಿದ್ದು]

**ಬೀಟ್$_2$** ‘ಬೀಡು$_2$’ ನೋ.

**ಬೀಟ್$_3$** ‘ಬೀಡು$_3$’ ನೋ.

**ಬೀಟ್$_4$**, ಬೀಳು$_5$ (ನಾ). (ಬುಟ್ಟಿ ಹೆಣೆಯಲು, ಮನೆಯ ಜಂತೆಗಳನ್ನು ಜೋಡಿಸಲು ಬಳಸುವ) ಒಂದು ಬಗೆಯ ಬಳ್ಳಿ : ಲೋಕದ ಲೋಗರ್ ಕಾಡ ಬೀಟಂ ತಂದು ಊರ ಮರನೊತ್ತಿಗಿಡುವರುಂಟು (ರಾಮಾಕೃ. ೬೮-೨). **ಬೀಳು$_5$** : ಅಲ್ಲೇ ಇದ್ದ ಬೀಳೊಂದನ್ನು ಕಿತ್ತು ಸುಬ್ಬನ ಎರಡು ಕೈಗಳನ್ನು ಬೆನ್ನಿನ ಕಡೆಗೆ ತಿರುಗಿಸಿ ಹಿಂದುಗಡೆ ಬಲವಾಗಿ ಕಟ್ಟಿಹಾಕಿದ (ಕನಾಥ. ೧೪೫) ; ಎರಡನ್ನು ಜೋಡಿಸಲು ಹುರಿಹಗ್ಗವನ್ನೂ ಉಪಯೋಗಿಸಿರಲಿಲ್ಲ. ಕಾಡಿನಲ್ಲಿ ದೊರೆವ ಬೀಳುಗಳನ್ನೇ ಬಿಗಿದಿದ್ದರು (ಜಾಗ. ೩೯). ‘ಬೀಳುಬುಟ್ಟಿ’ ಪರಾ.

[?./ ತಮಿ. ವೀಟಿ=ಒಂದು ಬಗೆಯ ಸಸ್ಯ]

**ಬೀಟಂಬಲಿ** (ನಾ). ಹಳಸಿದ ಅಂಬಲಿ : ಬೀಟಂಬಲಿಯೊಳ್ ಕಲಸಿದ ಜೋಳದ ಪುರಿಗೂಟನಿಕ್ಕಿಮೊಡಲಿಡಿಯದವೋಲ್ ಕೇಳೆಲಗೆಯಿಂದಂ ಮುಱಿದಡೆ ಮೇಳಿಸುಗುಂ ನಿನಗೆ ಕಾಷ್ಠದಂಡದ ಘಾಯಂ (ಪುಣ್ಯಾಸ್ರ. ೯-೬).

[ಬೀಟ್$_1$ + ಅಂಬಲಿ$_1$]

**ಬೀಟಕ್ಕರ** (ನಾ). [ವ್ಯಾಕ] ಸ್ವರಾಕ್ಷರವನ್ನು ಬಿಟ್ಟಿರುವ ಅರ್ಧಾಕ್ಷರ ; ವ್ಯಂಜನಾಕ್ಷರ : “ ಬೀಟಕ್ಕರವೆಂದು ವ್ಯಂಜನಂ ” (ಶಶಸಾ. ೫೭-೨೩೭) ; ವ್ಯವಹರಿಪುದೆತ್ವವಿಧಿ ಬಲ್ಲವರಿಂ ಮೇಲೆಂದು ಪೇಟ್ವ ಬೀಟಕ್ಕರಕಂ (ಕಮುದ. ೧೨೦); ಜೀವಾಕ್ಷರಗಳನ್ನು ಕೂಡಿಸದಿರುವುವು ‘ನಿರ್ಜೀವಾಕ್ಷರಗಳು’. ಇವನ್ನು ಅರ್ಧಾಕ್ಷರಗಳು—ಅಥವಾ ಬೀಟಕ್ಕರಗಳು—ಎನ್ನುತ್ತಾರೆ (ಸಂಕೋಧ. ೦೫).

[ಬೀಟ್$_1$ + ಅಕ್ಕರ$_2$]

**ಬೀಟಲ್**, ಬಿಳಲ್, ಬಿಳಲು, ಬಿಟಿಲ್, ಬಿಟಿಲು, ಬೀಳಲ್, ಬೀಳಲು (ನಾ). ೧. ಆಲ ಮುಂತಾದ ಮರಗಳ ಕೊಂಬೆಗಳಿಂದ ಕೆಳಮುಖವಾಗಿ ಇಳಿಬಿದ್ದ ಬೇರು, —ಜಟೆ : “ಜಟಾ, ಶಿಫಾ—ಈ ೨ ಮರದ ಬೀಟಲ್” (ಹಲಾಯು. ೩೦-೨೯); ತೇಜದ ಬೀಟಲನನುಕರಿಪುವಾದುವೊಗೆ ದುರಿವುರಿಗಳ್ (ಶಂಶಕಾ. ೧-೩೫); ಬಿಸುಗದಿರ್ಗಳಂತಿರ್ದ ಬೀಟಲ್ಗಳೊಳಂ (ಲೀಲಾವ. ೮-೪೦ ವ). **ಬಿಳಲ್** : ೧. ‘ಬಿಳಲ್ವರಿ’ ಪರಾ. **ಬಿಳಲು** : ೧. ಆಲದ ಮರನ ಬಿಳಲ ಪಿಡಿಕೊಂಡು ಶಿವಯೋಗನಿಜಸಮಾಧಿಯಲಿ ನಿಂದು (ಚಬಪು. ೬೩-೩೬) ; ಚಪ್ಪರಕ್ಕೆ ಕುಚ್ಚುಗಳನ್ನು ಕಟ್ಟಿದಂತೆ ಆಲದ ಬಿಳಲುಗಳು ತೂಗುತ್ತಿದ್ದವು (ವಂಶವೃ. ೧೨೨). **ಬಿಟಿಲ್**: ೧. ಆಲದ ಬಿಟಿಲಂತೆ ನೆಲಕ್ಕೆಱಗದೆ (ಧರ್ಮಾಮೃ. ೫-೯೯); ಮುನೀಶಂ ಬೇರೂಱಿದ ಬಿಟಿಲ ತೆಱದೆ ಮರವೊದಲಿರ್ದಂ (ರಸರ. ೨-೦೨೩). ೨. ಬಿಳಲನ್ನು ಬಿಡುವ ಆಲದ ಜಾತಿಯ ಮರ : ಬಿಳಿಯ ಸಾಸಿವೆ ಬಜೆ ಬಿಟಿಲಿನ ಬೀಜಮೆಂಬಿವಂ ಸರಿಗೊಂಡಂತಜಮೂತ್ರದೊಳರೆದೆಚ್ಚುಗೆ (ಲೋಕೋಶ. ೯-೦೯೬). **ಬಿಟಿಲು** : ೧. ‘‘ ಶಿಫಾ, ಜಟಾ—ಈ ೨ ಬಿಟಿಲು ’’ (ನಾಚಿರಾ ೦೦೫); ಮಿಂಚಿನಂಚಿವೆರಸು ಕಾರ್ಮುಗಿಲ ಬಿಟಿಲು ಕಾಲೂಱಿದಂತೆ ಮೇಲೆ ಮೆಱೆಯೆಯುಂ (ಅನಂಪು. ೨-೨೯ ವ). **ಬೀಳಲ್** : ೧. ಗಿರಿಶಿಖರಂ ಮುಖಂ ಮರದೊಳೊಪ್ಪುವ ಬೀಳಲೆ ತಜ್ಜಟಾಳಿ (ಗಿಂಶ. ೦-೫೧); ಮಿಸುಪ ಬೀಳಲ್ಗಳಂ ಡೋಳಂಗಳಂ ಮಾಡಿಯುಸವಸದಿಯಾಡುತಿರ್ಪರ್ಕಿಲರ್ (ಅರಾಶ. ೫-೬-೫೨). **ಬೀಳಲು** : ೧. ಬೀಳಲೋ ಬ್ರಹ್ಮಾಂಡತರುವಿನ ನಾಳದಂಡವೋ ನಾಕನಳಿನದ . . . ಎನಲೆಸೆದುದಮಲಪದ (ಶಿಭಾಗ. ೮-೧೮-೨೫); ಈ ಬೆಟ್ಟದ ಮೆಯ್ಯಲ್ಲಷ್ಟೆ ಮನುಷ್ಯನ ಕೈಗೆ ಸಿಗದ ಹೊದರು, ಬೀಳಲನ್ನು ನಾನು ಕಂಡದ್ದು (ಅಪೂಶ. ೩೩). ೨. ಕಿಕ್ಕಿಱಿದ ಮಾವು ಮೊದಲನಿಕರ ಬೀಳಲಿಬ್ಬೀಡೆ (ರುಕ್ಮಾಂಗ. ೧೦-೩). ೩. (ಮನೆ ಕಟ್ಟಲು ಅಥವಾ ಬುಟ್ಟಿ ಹೆಣೆಯಲು ಉಪಯೋಗಿಸುವ) ಒಂದು ಬಗೆಯ ಬಳ್ಳಿ : ಬೀಳಲುಗಳಿಂದ ಒಂದು ಡೋಲಿಯನ್ನು ಮಾಡಿ ದೊಡ್ಡನನ್ನು ಮಲಗಿಸಿ ಕೆಲವರು ತಲೆಗೂಟ್ಟು ಹೊತ್ತು ಮುಂದೆ ನಡೆದರು (ಕಾಲೂರ. ೭ ಕಥಾಸಾರ); ತಿಮ್ಮ ಬೇಟೆಯ ನೆಪದಿಂದಲೋ, ಬೀಳಲು ತರುವ ನೆಪದಿಂದಲೋ . . . ಅಲೆದಾಡುತ್ತಲಿರುವ (ಕುದಕೂ. ೨೫೮). ೪. ಬೀಳುವುದು ; ಕಳಚುವುದು : ‘ ಬೀಳಲುಪಲ್ಲು ’ ಪರಾ.

[ಬೀಟ್$_1$ + —ಅಲ್$_2$./ ತಮಿ. ವಿಟಲ್; ತೆಲು. ಬಿಲ್ಲು, ಬಳ್ಳು]

**ಬೀಟಲ್ಗಱಿ$^3$** (ಕ್ರಿ). ಮರದ ಕೊಂಬೆಗಳಿಂದ ಹೊರಟ ಜಟೆಯು ಧಾರೆಯಂತೆ ಕೆಳಕ್ಕೆ ಇಳಿಬೀಳು,—ಬೆಳೆ : ನಿಮಿರ್ದೊಳ್ಪಂಬೆತ್ತು ಬೀಟಲ್ಗಱಿದ ಜಡೆಗಳಿಂ ನೀಳ್ದು ಚೆಲ್ವಾದ ಶಾಖಾಸಮುದಾಯಂ ಪತ್ತು ತೋಳ್ಗಳ್ ಮಿಸುಗುವ ತನಿವಣ್ಗೊಂಪು ಭಾಳಾಕ್ಷಿಯಾಗಲ್ ಕ್ರಮದಿಂದಂ ತಾಂಡವಾಡಂಬರಮನೆಸಗುವೀಶಂಬೊಲೊಪ್ಪಿರ್ದುದು . . . ವಟತರು ಪತ್ರಪ್ರವಾಳಪ್ರಸಿದ್ಧಂ (ದಶಕು. ೦೧-೩). [ಬೀಟಲ್ + ಕಱಿ$^3_1$]

**ಬೀಟಿಲ್ಬಿಡು**, ಬಿಳಲುಬಿಡು, ಬೀಳಲುಬಿಡು (ಕ್ರಿ). ಮರದ ಕೊಂಬೆಗಳಿಂದ ಜಟೆಯು ಕೆಳಮುಖವಾಗಿ ಇಳಿಬೀಳು,–ಬೆಳೆ : ಈ ಗಿರಿಯ ದಕ್ಷಿಣೋತ್ತರಭಾಗಂಗಳೊಳಮರಪುರಮೆ ಬೀಟಿಲ್ಬಿಟ್ಟಂತಾಗಿರ್ದಂಬರಚರಪುರಭಾಗಮೆ ಪರಭಾಗಮೆನಿಪುವುದ್ಯಾನಂಗಳ್ (ಶಾಂತಿಪು. ೨–೮೯). **ಬಿಳಲುಬಿಡು :** ಇಲ್ಲಿ ಒಂದು ತರಹ ಮರ ಬೆಳೆಯುತ್ತದೆ. ಇದು ಅನೇಕ ಬಿಳಲುಬಿಡುತ್ತದೆ (ಕೃವಾಇ. I, ೫೬). **ಬೀಳಲುಬಿಡು :** ಆಲ ಬೀ[ಪಾಠಾಂ. ಬಿ]ಳಲು ಬಿಟ್ಟು ಜಡೆಗಟ್ಟಿಕೊಂಡಿರ್ದರೇನು (ಸಮಾವ. ೪–೦೨).
[ಬೀಟಿಲ್ + ಬಿಡು$_1$]

**ಬೀಟಲ್ವರಿ, ಬಿಳಲ್ವರಿ, ಬೀಳಲುವರಿ** (ಕ್ರಿ). ೧. = ಬೀಟಿಲ್ಬಿಡು : ಭುಜಸಹಸ್ರಂಗಳೊಳ್ಕೈದುವಂ ಸಾಸಿರಮಂ ಕೈಕೊಂಡು ಬೀಟಲ್ವರಿವ ಗಿರಿಯೆನಲ್ಬಂದು ದೈತ್ಯೇಂದ್ರನೆಂದಂ (ಜಗವಿ. ೧೬–೫೦) ; ಸೂಟಂ ಕುಡೆ ದೋರ್ಮಾಲೆಗೆ ಕೀಲಿಸಿದ ನಮೇರುಮಾಲೆ ಸುರತರುಣಿಯದೇನಾಳಂಗೊಂಡಳೊ ಬಯಲೊಳ್ ಬೀಟಲ್ವರಿದಂಗಭವನ ಜಂಗಮಲತೆಯಂ (ಅವಂತಿ. ೦೪–೬೪). ೨. ಮರದ ಕೊಂಬೆಯಿಂದ ಹೊರಟ ಜಟೆಯ ಹಾಗೆ ಹಬ್ಬು, –ವ್ಯಾಪಿಸು : ಪರಿವೃದ್ಧಿವೆತ್ತು ಬೀಟಲ್ವರಿದುದುರಸ್ಥಳದೋಳ್ ಮುನೀಂದ್ರನ ಹೃದಯಸ್ಫುರದಮಳಸತ್ವಮೆನೆ ಮುನಿವರನ್ರೊಳ್ ಯಜ್ಞೋಪವೀತತತಿ ಸೊಗಯಿಸುಗುಂ (ಜಗೂ. ೦೦–೯) ; ಅಗಲದೆ ನೆಲಸಿದ ಲಕ್ಷ್ಮಿಯ ನಗೆಗಣ್ಗಳ ಬೆಳಗು ಬೀಟಲ್ವರಿದತ್ತಗಲ್ಬುರದೊಳೆಂಬ ತೆಜದಿಂ ಸೊಗಯಿಸಿದುದು ವಿಮಳತರಳತಾರಾಹಾರಂ (ಶಂತ್ರಪು. ೬–೫೬). **ಬಿಳಲ್ವರಿ :** ೧. ತರುಕುಳಂ ಶಿವನ ರೂಪಂ ಬಯಸಿ ಬೆಳೆದವು ಸಿರಾಕುಳಂ ಹರನ ಜೆಡೆಯಂ ಕಂಡು ಬಿಳಲ್ವರಿದವಿಂತಿಲ್ಲಿ[ಪಾಠಾಂ. ಬಿಳಲುವರಿದವಿಲ್ಲಿ] (ಶಂಬಿರ. ೯–೨೬). **ಬೀಳಲುವರಿ :** ೨. ನರ ಉಬ್ಬೆ ಮೈಯ್ಯೊಳಗೆ ಬೀಳಲುವರಿಯುಲಂತೆ [ಪಾಠಾಂ. ಬೀಳಲ್ವರಿಯುತ್ತಂತೆ] (ಶಿಂದೋರ. ಹ. ೫೦೫–೦೨).
[ಬೀಟಿಲ್ + ಪರಿ$_2$]

**ಬೀಟಿವೃತ್ತಿ**, ಬಿಳವೃತ್ತಿ, ಬಿಟಿವೃತ್ತಿ, ಬೀಳವೃತ್ತಿ (ನಾ). = ಬೀಳಾನುವೃತ್ತಿ : ಮುನ್ನಿಂ ಕನ್ನರದೇವನಾಳ್ದ × × × ಜಿಮಂ ಬೀಟಿವೃತ್ತಿಯಿಂದಾಳುತ್ತಮಿರೆ (ಸೌಇಇ. IX–i, ೯೩–೨೨; 1038); ಒಂದು ವಂಶದ ರಾಜನ ಆಶ್ರಯದಲ್ಲಿ ಅದೇ ವಂಶದ ಇತರರು ಅಧೀನರಾಗಿ ಆಳುತ್ತಿದ್ದ ವಿಷಯವನ್ನು ಬೀಟಿವೃತ್ತಿಯು ಸೂಚಿಸಬಹುದು. 'ಅಚಲವೃತ್ತಿ', 'ಅಣುಗವೃತ್ತಿ' ಮತ್ತು 'ಬೀಟಿವೃತ್ತಿ' ಗಳಲ್ಲಿ ಯಾವುವು ಸಮಾನಾರ್ಥಕ ಪದಗಳೋ, ಅವುಗಳ ನಿರ್ದಿಷ್ಟವಾದ ಅರ್ಥವೇನೋ ಸ್ಪಷ್ಟವಾಗಿ ಗೊತ್ತಾಗುವುದಿಲ್ಲ (ಕಶಾಅ. ೩೪೦). **ಬಿಳವೃತ್ತಿ :** ಸಾಸ್ತ್ರಳಿಗೆಸಾಸಿರಮುಮಂ ಬಿಳವೃತ್ತಿಯಿಂ ತ್ರಿಭೋಗಾಭ್ಯಂತರಸಿದ್ಧಿಯಿನ್ದ ಮಾಳುತಮಿರೆ (ಎಕ. VII, ಶಿಕಾ. ೩೦–೦೦; 1031). P ಇದು 'ಬೀಳವೃತ್ತಿ' ಎಂಬುದರ ಅಪಲಿಖಿತವಿರಬಹುದು. **ಬಿಟಿವೃತ್ತಿ :** ಆರಂಭಲ್ಲವನ್ ಇದುಳೆಯ ಬಿಟಿವೃತ್ತಿ ಆಳುತ್ತಿರೆ (ಎಕ. XIV; ಶಾಗಮಂ. ೦೩೭–೬; 900); ಶ್ರೀಮತ್ ಪನ್ಸಯ್ಯಂ ಕದಂಬಳಿಗೆಸಾಯಿರಮುಮಂ . . . ಬಿಟಿವೃತ್ತಿಯೊಳಾಳುತ್ತಿರೆ (ಎಕ. XI, ಚತ್ರದು. ೫೦–೦೦; 968). P ಇದು 'ಬೀಟಿವೃತ್ತಿ'ಯೆಂಬುದರ ಅಪಲಿಖಿತವಿರಬಹುದು. **ಬೀಳವೃತ್ತಿ :** ಶ್ರೀಮತ್ಪಡವಳ್ಪ ತೈಲಪಯ್ಯಂ ಮಾಸವಾಡಿ ನೂಜನಾಲ್ವತ್ತುಮಂ ಬೀಳವೃತ್ತಿಯಿನಾಳುತ್ತುಮಿರೆ (ಸೌಇಇ. XI–i, ೫೨–೩೬; 1007). 'ಬೀಳಂವ್ರಿತ್ತಿ' ಪಠಾ. [< ಬೀಳಾನುವೃತ್ತಿ]

**ಬೀಟಿಸು**, ಬೀಳಿಸು (ಕ್ರಿ). ೧. ಕೆಡೆಯುವಂತೆ ಮಾಡು ; ಕೆಡವು ; ಉರುಳಿಸು : ಮದನನ ಪೂಜೆಗೆಯ್ವವಳ ನಲ್ಲನನಾಗಿಸುವಂತೆ ಮಾಡುವೆಂ . . . ಸಮಾನಮಹ ನೋಪನೆ ಕಾಣಿಸುತ್ತೀಕೆಗೊಪ್ಪುವಾ ಪದದೊಳೆ ತಂದು ಬೀಟಿಸುವೆನಾನವಳೀಟಿಗ್ಗಿಯ ಬಲ್ಲೆನಾವಗಂ (ಮಲ್ಲಿಕಾ. ೦೫–೦೭೦). **ಬೀಳಿಸು :** ೧. ದುರಾತ್ಮಕರೆಸ್ನನೆಳದೊಯ್ದು ಬೀಳಿಸುವರಗ್ನಿಯುರಿ (ಕುಮ್ಮಾವಿ. ೩–೯೯) ; ಆನೆಯನ್ನು ಕಪ್ಪಕ್ಕೆ ಬೀಳಿಸಬೇಕೆಂದು ಹಠ ತೊಟ್ಟುಕೊಂಡಿದ್ದ (ಕಂಗಾಳ್ವ. ೨೪೪). ೨. ಸುರಿಸು ; ಕರೆ : ದೇವಿಯರು ಕೆರಳ್ದ ಕರಾಳವಚನವನದಜಿಸೆನ್ನನು ಬೀಳುಕೊಡೆ ಬರಫಾಯ್ನ್ತಸುತ ಬೀಳಿಸಿದ ನಶ್ರುಗಳ (ಕೋರಂ. ೩–೦೦–೫). ೩. ಅನುಭವಿಸುವಂತೆ ಮಾಡು : ಕುಮಾರನು ಚಿಕ್ಕವನು. ತಾಯಿ-ತಂದೆಗಳನ್ನು ಸರ್ವಥಾ ಕ್ಲೇಶಬೀಳಿಸುತ್ತಾನೆ (ಹಿಕ್ಕಸ್ವ. ೪–೦೫). ೪. ನಾಶಮಾಡು : ಚೋಳನ ದರ್ಪಮಂ ಮುಜಿಯಲಾಂಧ್ರನನಂಡಲೆಯಲ್ಕಳಿಂಗನಂ ಬೀಳಿಸಲ್ . . . ಪಾಣ್ಡ್ಯಭೂಪಾಳನೆ ಸಾಲ್ಕುಂ (ಎಕ. XI, ದಾವಣ. ೩–೦೪ ; 1121). ೫. ಸಾಯಿಸು : ಪುರುದಂಣ್ಡ[ಲ್ಗೊಲ್ಲ]ಯರ ಮಗಳ್ ಕಾಳಬ್ಬೆ × × ×ಯ್ದು ಬೀಳಿಸಿ ಕಲ್ಲು ನಿಜಿಸಿದೋರ್ (ಸೌಇಇ. XI–i, ೨೪–೦೪ ; 897).
[ಬೀಟು$_1$ + –ಇಸು$_3$]

**ಬೀಟು$_1$** 'ಬೀಟು$_1$' ನೋ.

**ಬೀಟು$_2$**, ಬೀಳು$_3$ (ನಾ). ೧. ಬೀಳುವಿಕೆ ; ಪತನ : "ಪತನ ಖಿಲ ಕ್ಷೇತ್ರದೊಳ್ ಬೀಟು" (ಕಬ್ಬಿಶಂ. ೦೦೬). **ಬೀಳು$_2$ :** ೨. ಬಿದ್ದಿರುವಂಥದು : ಕವನಗಳ್, ಬಳಿಕಾಗದದ ಮೇಲೆ ಬರಿ ಮಸಿಯ ಬೀಳಲ್ತೆ ? (ಅಗ್ನಿಹಂ. ೫೯). ೩. (ಪ್ರಾಣಿಗಳ) ಹೆಣ ; ಶವ : ಅಲ್ಲಿ ಗುರ್ರ್ರು ಪೂಜಿಸಿದ ಆ ಸಮಾಧಿಗೆ ಸಲ್ಲುತಿಹ ಎಲ್ಲ ಮರ್ಯಾದೆ ಇಲ್ಲಿ ಕತ್ತೆಯ ಬೀಳಿಗಾಗುತಿದೆ (ನಶಾ. ೨–೩೦) ; ಹುಲಿಯೋ ಕಿರುಬನೋ ಒಂದೆಡೆಯಲ್ಲಿ ಬೀಳ ತಿನ್ನುತಾ, ಇನ್ನೊಂದೆಡೆಯಲ್ಲಿ ಗರ್ಜಿಸುತಾ ಮಲಗಿರುವವು (ಅತೂಟ. ೩).

ಬೀಳಂ ಮುನ್ನಿಜಿವಂ = ತಾನು ಸಾಯುವ ಮುಂದೆ ಶತ್ರುಗಳನ್ನು ಇರಿಯುವವನು ; ಒಂದು ಬಿರುದು : ಬೀಳಂ ಮುಂನ್ನಿಜಿವಂ ವನಗಜಸೂಜಿಕಾಜಿ [ಸು]ಜನಾಧಾರಂ . . . ಶ್ರೀಮತಂ [ಗೊ]ಲ್ಲಿಮಯ್ಯಂ (ಕಇ. II, ೭–೦೯; 1030). **ಬೀಳೇಳು** = ಇಳಿತ ಮತ್ತು ಏರುವಿಕೆ ; ಉಬ್ಬರವಿಳಿತ ; ಏಳುಬೀಳು : ಉಸಿರ ಬೀಳೇಳಿನಲಿ ಡೊಂಕೆ ಪ್ರಾಣಗತಿ (ಉಹನ್ನರ. ೩–೦೨) ; ಬೀಳೇಳುಗಳಿಗನುವೊ ಗೆಯ್ಮೆಯೋ ದೂಸರೇಂ ಪೇಳಿ ಮನೆಗೆಯ್ಮೆಯುಂ ಪೊಲ ತೂಗುತೊರೆಗುಂ (ಕಾಬೂರ. ೫೮–೯೪).
[< ಬೀಟು$_1$]

**ಬೀಟುಂದಾಣ** 'ಬೀಡುಂದಾಣ' ನೋ.

**ಬೀಟುಡೆ**, ಬೀಳುಡೆ (ನಾ). (ಇನ್ನೊಬ್ಬರಿಂ ಉಟ್ಟು) ಕಳಚಿದ ವಸ್ತ್ರ ; ಬೀಳುಡಿಗೆ: ಪೆಜರ್ ವಿಂದ ನೀರ್ . . . ಬೀಟುಡೆ ಬಾಯ ತಂಬುಲ ವಿವಸ್ತ್ರಲಶ್ಯಂಗಳೇಸಲ್ಲಮೋ (ಶಂರಾಮಾ. ೯–೦೮೦); ಸೀರೆಗಳಂ ಕಂಸದೇವನುಡುಗುಮೆಂದಾತನ ಬೀಟುಡೆಯವರುಮುಡುಗುಮಲ್ಲದೆಡೆಯ ಕಡೆಯ ಬಡವರುಡಬಾರದೆನೆ (ಅರ್ಜನೀ. ೯–೭೬ ಪ); ತಳಿರ್ಗಳ್ ಬೀಟುಡೆ ಹಸ್ತಪಾವತಳರಾಗಶ್ರೀಗೆ ಕಣ್ಗೊಳ್ವ ಕಣ್ಗಳ ನಿರ್ಮಾಲ್ಯದ ಮಾಲೆ ಕೈರವವನಂ . . . ಎನೆ ಬಣ್ಣಿಸಲ್ಪವಣೆ ರೂಪು ಭೂಪನರ್ಧಾಂಗಿಯಾ (ಅವಂತಿ. ೨–೦೬). **ಬೀಳುಡೆ :** ಬೀಳುಡೆ ಸೀರೆ ಮೈಲಿಗೆಯೊ ಪೇಳೀ ಪಾಣ್ಡ್ಯಭೂಪಾಳನ (ಎಕ. XI, ದಾವಣ. ೦೬೮–೦೫ ; 1148?); ಕಣ್ಣಪ್ಪನಂ ತಂದು ಗಣಪದವಿಯಂ ಕೊಟ್ಟು ಬಣ್ಣಬಣ್ಣಗೆಯ ಪೊಸ ಬೀಳುಡೆಗಳಂ ಕೊಟ್ಟು (ಕಣ್ಣರ. ದೇ. ೦೫೦–೦೪); ದೇವಯಿನಗೀ ಬೀಳುಡೆಯನೀವುದು (ಕದ್ಯರಾ. ೪–೬೩); ಅಶನ ಬಾಯ ತಂಬುಲ ಬೀಳುಡೆಯ ಬಲದಿಂದ ಬದುಕುವವು (ಕುಮ್ಮಾಗ. ೦೦–೫೫).
[ಬೀಟು$_1$ + ಉಡೆ$_2$]

**ಬೀಟುಮನೆ**, ಬೀಳ್ಮನೆ (ನಾ). ಹೀನಸ್ಥಿತಿಗೆ ಇಳಿದಿರುವ ಮನೆ; ನಾಶವಾದ ಮನೆ : ಕಿಜುದೋಟಂ ಕಡೆವಳ್ಳಿ ಬೀಟುಮನೆ . . . ಬಜಗ್ಯೆ ಸುಜಿದಂತೆಲ್ಲೆ (ಸೋಮೇಶ. ೦೭). **ಬೀಳ್ಮನೆ :** ಬಾಳಕನ ನಗೆನುಡಿಯು ಮಾಳಿಗೆಯು ಮುಜಿದಂತೆ ಬಾಳು ಉಳ್ಳವರ ಬಿಜುನುಡಿಯುಬೀಳ್ಮನೆಯು ಏಳಿಗಾದಂತೆ (ಸರ್ವಜ್ಞ. ೦೩೪೯). [ಬೀಟು$_1$ (< ಬೀಟು$_1$) + ಮನೆ]

**ಬೀೞ್ಕೆ, ಬೀಳ್ಕೆ** (ನಾ). ೧. ಬೀಳುವಿಕೆ ; ಪತನ : ಬಿಟ್ಟಿಪರ್ ಬಲ್ಲ ನೆಱೆ ಜಾಣರುವರ್ ನಾಣ್ಗೆಟ್ಟು ಬೀೞ್ಕೆಯಂ (ಅಂತಗೊ. ೯೬-೯೬೨). **ಬೀಳ್ಕೆ**: ೧. "ಪತ್ಯಂ, ಪಾತ್ಯಂ, ಪತನಂ, ಪತನೀಯಂ, ಈ ೪ ಬೀಳ್ಕೆ" (ಕಾಶಕ. ೦೯೮).
೨. (ಮೇಲಿನಿಂದ ಕೆಳಕ್ಕೆ) ಕೆಡೆದ ವಸ್ತು ; ಬಿದ್ದ ಪದಾರ್ಥ : ನೋಳ್ಪೆಮಲ್ಲಿರ್ಪುದಾ ಬೀಳ್ಕೆ ! (ಶ್ರೀರಾಪರಾ. ೨೯೪-೩೬೨).
[ಬೀೞ್₁ + –ಕೆ]

**ಬೀೞ್ಕೊಳ್** 'ಬೀಡುಗೊಳ್' ನೋ.

**ಬೀೞ್ಕೊಳಿಸು, ಬೀಳ್ಕೊಳಿಸು** (ಕ್ರಿ). ಹೋಗಲು ಅನುವು ಮಾಡು ; ಹೊರಡಲು ನಿರೂಪ ಕೊಡು: ಜನಕಂ ಬೀೞ್ಕೊಳಿಸಿದನೆನ್ನನುಜನನೊಡಗೊಂಡು ಬಂದಪೆಂ ಚಿಚ್ಚರದಿಂ (ಕಾದಂಬ. ೯೯೩); ದಿವಿಜರಾಜನಂ ಯಥಾಯೋಗ್ಯದಾನಸನ್ಮಾನದಿಂ ಬೀೞ್ಕೊಳಿಸಿ ಕಟಿಪಿ (ಜಗವ. ೧೦-೮೯ ವ). **ಬೀಳ್ಕೊಳಿಸು** : ಪೇರೋಲಗಂಗೊಟ್ಟು ಬಳಿಕೆಲ್ಲರಂ ಬೀಳ್ಕೊಳಿಸಿ ಪರಿಮಿತಂಗೆಯ್ದು (ಶಬ್ದರಾ. ೪-೨೨) ; ಅಲಘುವಿರಹವಿಮೋಹಜಲಪರಿಲುಳಿತ ನಯನರನಪ್ಪಿ ಹಳಿ ಬೀಳ್ಕೊಳಿಸಿ ಮರಳಿದು ಬಂದು ಹೊಕ್ಕನು ದ್ವಾರಕಾಪುರವ (ಕಭಾಗ. ೧೦-೬೮-೩೨).
[ಬೀೞ್ಕೊಳ್ (< ಬೀಡುಗೊಳ್) + –ಇಸು₃]

**ಬೀೞ್ಗುಂಡು, ಬೀಳುಗುಂಡು** (ನಾ). ಬಂದರಿನಲ್ಲಿ ಹಡಗನ್ನು ನಿಲ್ಲಿಸಲು ಹಡಗಿನ ಪಕ್ಕದಲ್ಲಿ ಇಳಿಬಿಡುವ ಭಾರವಾದ ಕಬ್ಬಿಣದ ಸಾಧನ, –ಗುಂಡಂ ; ಲಂಗರಂ ; "ಹಡಗು ನಿಲ್ಲಿಸುವುದಕ್ಕಾಗಿ ನೀರಿನಲ್ಲಿ ಇಳಿಬಿಟ್ಟ ಗುಂಡು" (ಪ್ರಭಣ್ಣ) : ಅಂತು ಬೀೞ್ಗುಂಡಿಕ್ಕಿದ [ಪಾಠಾಂ. ಬಿಂಗುಂಡಿಕ್ಕಿದ, ಬಿಣ್ಗುಂಡಿಕ್ಕಿದ] ಬಹಿತ್ರದಂತೆ ಅಲ್ಲಿಂ ತಳರದೆ ನಿಂದ ತನ್ನ ರಥಮಂ ಕಂಡು (ಆದಿಪು. ೧೨-೬೩ ವ). **ಬೀಳುಗುಂಡು** : ಅವರು ಮಲಬಾರ್ ತೀರಕ್ಕೆ ಬಂದು ಸೇರಿ ಬೀಳುಗುಂಡನ್ನು ಇಳಿಸಿ ತಂಗಿದ ರಾತ್ರಿಯೇ, ಕಡಲ್ಗಳ್ಳರು ಬಂದು ಮೇಲೆ ಬಿದ್ದರು (ಶಾರದಾ. ೦೦೬).
'ಬಿಣ್ಗುಂಡು' ಪರಾ. [ಬೀೞ್₁ + ಗುಂಡು]

**ಬೀೞ್ಗೊಂಬು** (ನಾ). ಜೋಲುತ್ತಿರುವ ಕೊಂಬೆ : ಕುಬ್ಜಾಮ್ರಕುಜದ ಬೀೞ್ಗೊಂಬಿನ ಪಸುರೆಲೆಯ ಕುಸುಂಕುಜಾಳಗೆ ರಸಾಯನದ ಕುಪ್ಪಿಗೆಯಂತೆ ತೋರ್ಪ ತನಿವಣ್ಣಿಂ ತಿಱುಯಲೊಡನೆ (ಅರ್ಜಸ. ೩-೮೦ ವ).
[ಬೀೞ್₁ + ಕೊಂಬು₁]

**ಬೀೞ್ಜೊಂಪ** (ನಾ). ಇಳಿಬಿದ್ದಿರುವ ಗೊಂಚಲು : ನಾನಾ ಲತಾಮಂಟಪದೊಳಿಸೆವ ಬೀೞ್ಜೊಂಪದೊಳ್ . . . ವಿನಾಸುಮಂ ಕಟ್ಟುದನಱುವ ಪೋರ್ ಕೂಡೆ ನೋಡುತ್ತಮಿರ್ದಂ (ಕಾದಂಬ. ೯೯೯).
[ಬೀೞ್₁ + ಜೊಂಪ₁]

**ಬೀೞ್ತರ್** (ಕ್ರಿ). ೧. (ಮೇಲಿನಿಂದ ಕೆಳಕ್ಕೆ) ಕೆಡೆ ; ಪತನ ಹೊಂದು : ಮೊದಲಿಂ ಕಿಟ್ಟು ಕುಲಾಚಳಪ್ರತತಿಗಳ್ ಪ್ರೋದ್ಯದ್ಗದಾಘಾತವಾತದಿನಾಕಾಶಮನೆಯ್ದೆ ಪೊಳ್ದು ಕವಿತಂದಂಭೋಧಿಯೊಳ್ ಸೂಟು ಸೂಟದೆ ಬೀೞ್ತಂದುವು (ಶಂಪಾ. ೦೩-೯೩); ಪುಷ್ಕರದಿಂ ಧರಣಿಗೆ ಬೀೞ್ತರ್ಪುದನಾ ಹರಿಶೇಕ್ಷಣೆ ಸೀತೆ ಕಂಡಳೆರಡಂ ಕನಸಂ (ಶಂರಾಮಾ. ೦೫-೬೩) ; ನೀಡಿದುಪ್ಪರಪೊಯ್ಲಿಂ ಪೊಡವಿಗೆ ಬೀೞ್ತರೆ ತಲೆ (ಕಬ್ಬಿಗ. ೨೬೩). ೨. ಉರುಳು ; ಬೀಳು : ಕುಳಿಶ್ಯಳದಂತೆ ಕರಿಗಳ್ ಬೀೞ್ತಂದುವುಗ್ರಾಜಿಯೊಳ್ (ಶಂಪಾ. ೦೦-೬೬) : ಮೂರ್ಛೆವೋಗಿ ಬೀೞ್ತರಲಿರದೆತ್ತಿಕೊಂಡಿಟ್ಟಿರ್ದರ್ ಧರಣೀಪತಿಯಂ ತುರಂಗದಿಂ (ಕಾದಂಬ. ೯೩೬) ; ತೋರವೆಣಗಳ್ ಬೀೞ್ತಂದುವುಗ್ರಾಜಿಯೊಳ್ (ಶಂರಾಪಾ. ೦೩-೩೮). ೩. (ಕಿಡಿ ಮುಂತಾದುವು) ಉದುರು : ಕೇಸರಿ ಸೂಸೆ ತನ್ನ ಮೊಗದಿಂ ಕಿಡಿ ಬೀೞ್ತರೆ ತನ್ನ ಕಣ್ಗಳಿಂ (ಶಂರಾಪಾ. ೦೦-೦೦೬).
೪. ಕಳಚಿ ಬೀಳು; ನುಣುಚಿಕೊಂಡು ಬೀಳು; ಜಾರು: ಮುಂಗಯ್ಯಂ ಪಿಡಿದೊತ್ತಿ ಕೈಯ ಕರವಾಳ್ ಬೀೞ್ತರ್ಪಿನಂ . . . ಪೊಯ್ದು (ಶಂರಾಪಾ. ೮-೨೮). ೫. ಧಾರೆಯಾಗು ; ಸುರಿ : ಅನ್ತೆ ಬನ್ದು ಮೂಡಾಯಿನ್ಬೀಟ್ರಿನ್ತ ನೀರಿಟ್ಟಿವೆ (ಪ್ರಕಂ. ೦೯೩೬, ೫೩-೨೬ ; ಸು. 850 ?) ; ಈಶಾನಂಗೆ ಸೀಮೆ ನೆಡುವೊಱಡಿಯಾ ಪುಣುಸೆ ವುಗರಿಯಾ ಎಡೆಯ ಬೀೞ್ತನ್ದ ಪಳ್ಳಮೆ ಅನ್ತೆ ಬನ್ದು ಬಾಳಪುಡಿಯೊಳ್ಕೂಡುಗು (ಎಕ. IX(s), ದೇಂಗಳು. ೦೩೦-೪೯: 828). [ಬೀೞ್₁ + ತರ್]

**ಬೀೞ್ದಾಣ** 'ಬೀಡುಂದಾಣ' ನೋ.

**ಬೀೞ್ದಸೆ, ಬೀಳ್ದಸೆ** (ನಾ). ಹೀನವಾದ ಸ್ಥಿತಿ ; ಕೀಳಾದ ಸ್ಥಿತಿ : ಸುರನಕ್ಕೆ ನರನಕ್ಕೆ ಅಲ್ಲಿ ತಾನಾರುಂ ನನ್ನದೀ ಬೀೞ್ದಸೆಗೆ ಪಿರ್ಗುಶಿರಲಿಲ್ಲಂ (ಬಿಪ್ಪಕೃ. ೦೦-೦೯೪). **ಬೀಳ್ದಸೆ** : ಮೇಳವವರೊಂದಿಗೆ ಹೇಳಿಕೊಳ್ಳುವುದರಲ್ಲಿ . . . ಮಾನವ್ಯದ ಬೀಳ್ದಸೆಯನ್ನು ಕುರಿತು ಅಲ್ಲಗಳೆಯುವುದು ಉದ್ದೇಶವಲ್ಲ (ಬಿತ್ತಕೃ. XLii, ಪಾಠಕರ ಸಹಕ್ಕೆ).
[ಬೀೞ್₃ (< ಬೀಡು₃) + ದೆಸೆ₁ (< ದಸೆ)]

**ಬೀೞ್ನೆಲ, ಬೀಳ್ನೆಲ** (ನಾ). ಸಾಗುವಳಿ ಮಾಡದ ಭೂಮಿ ; ಹಾಳುಗೆಡವಿದ ನೆಲ ; ಬೀಡುಭೂಮಿ : ತುಱುವಟ್ಟೆಯ ದಾರಿಯ ಬೀೞ್ನೆಲನದೇನುಮಿಲ್ಲಾ ನಾಡೊಳ್ (ಸೂಕ್ತಿಸು. ೪-೮). **ಬೀಳ್ನೆಲ** : ಕೈಕಾಲ್ಗಳೊಳ್ ಸಡುಕಮುಂ ನಿತ್ರಾಣಮುಂ ಪೆರ್ಚಿ ಬೀಳ್ನೆಲದ ಮುಮ್ಮ್ಯರಿಗೆ ದಿಂಡುರುಳೆ ಕೆಡೆಪಿದುವು (ಸಂಸಹ. ೨೦-೬). [ಬೀೞ್₃ (< ಬೀಡು₃) + ನೆಲ]

**ಬೀೞ್ಪಡಿಸು** (ಕ್ರಿ). ಹಾಳುಮಾಡು ; ಕೆಡಿಸು : ಮುಂತಣರವಿನೊಳ್ಪೋಸಪೋದಂ ; ಪಿಂತಣೋಜೆಯಂ ಬೀೞ್ಪಡಿಸಿದಂ (ಶಬವಂ. ೫೮-೦೦).
[ಬೀೞ್₃ (< ಬೀಡು₃) + ಪಡಿಸು]

**ಬುಂಡೆ** 'ಬುರುಂಡೆ' ನೋ.

**ಬುಂದು, ಬೂಂದು** (ನಾ). ಕಾಫಿಯ ಗಿಡ ಮತ್ತು ಅದರ ಬೀಜ : ನೀಲಗಿರಿಯಲ್ಲಿ ಹುಟ್ಟುವ ಬುಂದು . . . ಚಹಾ ಇವೆರಡೂ ವ್ಯಾಪಾರದಲ್ಲಿ ಬಹಳ ಪ್ರಸಿದ್ಧವಾದವು (ಮುಂಬದು. ೪-೦೫೯) ; ಬುಂದು(ಕಾಫಿ) ಯಾಲಕ್ಕಿ ಕೆಲವು ಕಡೆ ಸ್ವಲ್ಪ ಸ್ವಲ್ಪ ಬೆಳೆಯುವದುಂಟು (ಮುಂಬಶೂ. ೦೩೦). **ಬೂಂದು** : ಬೂಂದಿನ ಗಿಡಗಳು ತೋಟಗಳಲ್ಲಿ ಯಾವ ಭೂಮಿಗಳಲ್ಲಿ ಯಾದರೂ ಬೆಳೆಯುತ್ತವೆ (ಕೃಬಕೃ. ೦೯೯) ; **ಕಾಫಿಗಿಡ, ಕಾಫಿಬೀಜ** ; ಬೂಂದುಬೀಜ (coffee. ೩೦೪೩). [← **ಮರಾ.** ಬುಂದ್, ಬೂದ್ ; **ಅರ.** ಬುನ್. / **ಮಲ.** ಬುನ್; **ತುಳು.** ಬುನ್ನು, ಬೂಣು].

**ಬುಂಭುಕ, ಭುಂಭುಕ** (ನಾ). ೧. ಕುಚ್ಚು ಮತ್ತು ಅದರಿಂದ ಮಾಡುವ ಅಲಂಕಾರ : ಬಳಸಿದ ಚೆಂಬೊನ್ನ ಮಾಂಗಾಯ ಗೊಂಚಲ್ಗಳ ಪೊಂದಳಿರ ತೊಂಗಲ್ಗಳ ಸುತ್ತುಂಗೊಂಡ ಸುರಿಗೆಯ ಮುತ್ತಿನ ಬುಂಭುಕಂಗಳ [ಪಾಠಾಂ. ಜುಂಗುಕಂಗಳ, ಲಂಬಣಂಗಳ] ನಡುವೆ (ಆದಿಪು. ೬-೦೫ ವ) : ಆ ನೆರೆಯ ಚೌಪಳಿಗೆಗಳೊಳನೇಕ ಪ್ರಾಸಾದದ ಮೇಲೆ . . . ಪೊನ್ನ ಮಾಂಗಾಯ ಗೊಂಚಲ್ಗಳುಮಂ ಮುತ್ತಿನ ಬುಂಭುಕಂಗಳುಮನೆಟಿಲೆ ಕಟ್ಟಿಸಿ (ಶಂಶಪಾ. ೩-೪೦ ವ) ; ಅನ್ನೆಗಂ ಮುನ್ನಮೆ ಸಮೆದ ವಿವಾಹಗೇಹಂ . . . ಮುತ್ತಿನ ಲಂಬಣದ ನೀಲದ ಬುಂಭುಕದ ಮೇಳಾಪಕಮೆಂಬ ಲೋಲಲೋಚನವಿಕಾಸವಿಲಾಸದೊಳಂ . . . ನಲಿದು ನಾಟಕಮಾಡುವಂತಿರ್ದುದು (ಅನಂತಪು. ೬-೪೦ ವ). **ಭುಂಭುಕ** :
೨. ಅತಿಶಯವಾದುದು; ಅದ್ಭುತವಾದುದು : ಅತಿ ಭುಂಭುಕಮೆನಿಸಿದ ಕೋಪ್ಪ ಕೋಟಿವಿಧದಿಂದೆಸೆಗುಂ (ಎಕ. XIII, ೩೩೦-೩೮; 927); ಭುಜಬಳಶಾನ್ತರನೃಪತಿಯ ಭುಜಬಳದಳವುಂ . . . ನಿಜವಿಜಯಮುಮಿಮಾ ಲೋಕದೊಳಗೆ ಭುಂಭುಕಮೆನಿಕುಂ (ಎಕ. VIII. ಸಗರ. ೩೫-೫೫ ; 1077) ; ಆ ಬೇಗದವಷ್ಟಂಭ ಜಗದ್ಭುಂಭುಕವೆನೆ ರಿಪುವಂ ಚಕ್ರದಿಂ ಕೃಷ್ಣನಿಟ್ಟಂ (ಜಗವ. ೦೮-೬೩). ೩. ಅದ್ಭುತ ವ್ಯಕ್ತಿ : ಕೀರ್ತ್ಯಂಗನೆ ಶುಭ್ರಚ್ಛಾಯೆಯಾದಳ್ . . . ಮಜ್ಜನವುಂ ಪ್ರೋವಹಪ[ಗಾವಾರಿಯೊ]ಳೆನೆ ಪಿರಿದುಂ

ಭುಂಭುಕಂ ಸಾಹಸಾಂಕಂ (ಗದಾಯು. ೦೦-೦೦) ; ಸ[ನ್ನೂ್ರರು]ಗುರ ಮೂರ್ಜಿತನ್ಪುರ್ಜಗದ್ಭುಂಭುಕರ್ (ಕ್ಷಿಶಿ. XI-ii. ೦೬೦-೦೩; 1094); ಸಕಳೋರ್ವೀಸ್ವಸ್ತವಪ್ಪ ಧರ್ಮವನಿದಂ ಕಾದಂ ಚಿರ್ರ್ಕಸ್ವರ್ಯಭುಂಭುಕ ನಕ್ಕುಂ (ಎಕ. VII, ಶಿವೊ. ೬೭-೩೦ ; 1112). (ಗು). ೪. ಅದ್ಭುತ ವಾದ ; ಆಶ್ಚರ್ಯಕರವಾದ : ಭಾಸುರಯಶಃಶ್ರೀಭಾಸಿಭೂಭೂತ ಭುಂಭುಕವಾಗ್ಮಿಪ್ರವರಂ (ಸುಕುಮಾ. ೨-೩೮).

[ದೇ. ?./ ಪ್ರಾ. ಬುಂಬುಅ=ಗುಂಪು, ಸಮೂಹ]

**ಬುಕಣಿ,** ಬುಕಣೆ (ನಾ). ಪುಡಿ; ಚೂರ್ಣ: ಕನಡಿ ಒಡದಿಲ್ಲಾ, ಬುಕಣಿ ಆಗಿಲ್ಲಾ (೦೬೫೪. II. ೩೦). **ಬುಕಣೆ :** ತಾಪ್ಪುದ ಬುಕಣೆ ಮಾಡಬೇಕು. ಅದನ್ನು ಮಜ್ಜಿಗೆಯಲ್ಲಿ ೪-೫ ದಿವಸಗಳು ನೆನೆ ಇಡಬೇಕು (ಶಿಕ್ಷಿ. ೪೦).

[← ಹಿಂ. ಬುಕನೀ; ಮರಾ. ಬುಕಣೀ]

**ಬುಕಣೆ** 'ಬುಕಣಿ' ನೋ.

**ಬುಕಂಟು** 'ಬೂಜಂ₁' ನೋ.

**ಬುಕ್ಕ₁** (ನಾ). ವ್ಯವಸಾಯದ ಒಂದು ಉಪಕರಣ ; ಬೀಜವನ್ನು ಬಿತ್ತಲು ಉಪಯೋಗಿಸುವ ಬಿದಿರಿನ ನಳಿಕೆಗೆ ಅಳವಡಿಸಿರುವ ಬಟ್ಟಲು : ಸದ್ದೆಬಟ್ಟಲು : ಬೆಳೆಯನ್ನು ತೆಗೆದುಕೊಂಡ ನಂತರ ಆ ಹೊಲ ದಲ್ಲಿ ಮಡಿಕೆಯು ಹೂಡಿ ಆ ಮಡಿಕೆಗೆ ಬುಕ್ಕಾ ಕಟ್ಟಿ ಕಡಲೆಯನ್ನು ಬಿತ್ತ ಬೇಕು (ಕೃಷಿಕ್ಕ. ೩೬): ಬೀಜಗಳನ್ನು ಕೂರಿಗೆ ಹಿಂದೆ ಬುಕ್ಕಾ ಕಟ್ಟಿ ನಾಲ್ಕು ಬೆರಳಿಗೊಂದು ಬೀಜ ಬೀಳುವಂತೆ ಬಿತ್ತಬೇಕು (ಕೃಷಿಕ್ಕ. ೬೯).

**ಬುಕ್ಕ₂** (ನಾ). ೧. ಎದೆ ; ಹೃದಯ : "ಬುಕ್ಕಮೆಂದೆನಲಗ್ರಮಾಂಸ ಮೆಂದೆನಲು ಬಹ ಬಿಕ್ಕಕ್ಕ" (ಮಂಗರಾ. ೦೦೬-೭); ಕಬಳಿತವಲ್ಲೂರಂ ಗಿಳಿತ ಬುಕ್ಕಮಾ ಪೀತರಕ್ತಮೇಂ ತಿಂದುದೊ ಹಸ್ತ ಬೃಹಸ್ಪತಿಷ್ಕಂ ತಾಯ ಬಾಯ ಮಾಂಸವನೆ ತೋಡಿ ರಾಕ್ಷಸಲೋಕಂ (ಅರ್ಜನೆ. ೫-೪೧). ೨. ಮೋಕೆ ; ಗಂಡಾಡು. [ಸಂ.]

**ಬುಕ್ಕಚ್ಚಿ** (ನಾ). ಮಕ್ಕಳ ಭಾಷೆಯಲ್ಲಿ ಎರೆಯುವುದಕ್ಕೆ ಬಳಸುವ ಒಂದು ಅನುಕರಣ ಶಬ್ದ : ಮಣ್ಣಾಟ ಬೇಡವೊ ಬುಕ್ಕಚ್ಚಿ ಮಾಡಬೇಕು ಅಣ್ಣಯ್ಯ ಬಾರೆಂದು ಎತ್ತಿಕೊಂಡು ಎಣ್ಣೆ ಒತ್ತಿ ಬೇಗ ಎಜಿನಳು ಗೋಪ್ಯಮ್ಮ (ಪುರಂದ. ೨-೨೦೦-೦).

**ಬುಕ್ಕಿ** 'ಬುರುಕ₂' ನೋ.

**ಬುಕ್ಕಿಟ್ಟು** 'ಬುಕ್ಕಿಹಿಟ್ಟು' ನೋ.

**ಬುಕ್ಕಿಹಿಟ್ಟು,** ಬುಕ್ಕಿಟ್ಟು (ನಾ). ೧. ಉತ್ಸವ, ಹಬ್ಬ ಮುಂತಾದ ಸಮಾರಂಭಗಳಲ್ಲಿ ಉಪಯೋಗಿಸುವ ಒಂದು ಬಗೆಯ ಸುವಾಸನೆಯ ಹಿಟ್ಟು.—ಪುಡಿ: "ಚರ್ಚಾ, ಚರ್ಚಿಕ್ಯಂ ಸ್ಥಾಸಕಃ-೩ . . . ಮೃಗಜ್ಜುವ ಗಂಧಪುಡಿ, ಉದ್ವರ್ತನ ಚೂರ್ಣ, ಬುಕ್ಕಿಹಿಟ್ಟು" (ಸಿದ್ಧ್ಯಂಶಿ. ೨೦೩); ಸುರಗಿ ಹೂವಿನ ಮಾಲೆ, ಬುಕ್ಕಿಹಿಟ್ಟು, ಘೇಡೆಯ ಉಂಡೆಗಳನ್ನೂ ಒಟ್ಟದ ಗುಟನ್ನು ದಾಸರ ಕೈಯಲ್ಲಿಟ್ಟು ಅದೃಶ್ಯನಾದನು (ಕಥಾ. ೩೦೩). **ಬುಕ್ಕಿಟ್ಟು:** ೧. ಅಗರ ವಾಬರು . . . ಊದಿನ ಕಡ್ಡಿ, ಬುಕ್ಕಿಟ್ಟು ಮುಂತಾದ ಸುಗಂಧದ್ರವ್ಯ ಗಳನ್ನೂ ಮಾಡಿ ಮಾರುವುದೇ ಇವರ ಮುಖ್ಯ ವೃತ್ತಿಯು (ಕಜಾಗ. ೦೦೦): ಅಗರು ಚಂದನಗಂಧ ಅರಸಿನ ಬುಕ್ಕಿಟ್ಟು . . . ಮೃಗನಾಭಿ ತರಿಸಿಟ್ಟರಬಲೆಯರಾಗ (ಕ್ರೀಕ್ಕಶಾ. ೩೦) ; ಬುಕ್ಕಿಟ್ಟು ಊದಿನ ಕಡ್ಡಿಗಳ ವಾಸನೆ ಇಡಿಗಿತ್ತು (ಪ್ಪಕಿ. ೬). ೨. ಒಂದು ಬಗೆಯ ಹಲ್ಲುಪುಡಿ : ಸ್ವಲ್ಪ ಬುಕ್ಕಿಟ್ಟು ಕೊಡು, ಹಲ್ಲುಜ್ಜಿಕೊಳ್ಳಬೇಕು (ಜಾಂ).

[ಬುಕ್ಕಿ (<ಬುರುಕ₂) + ಹಿಟ್ಟು (<ಪಿಟ್ಟು)]

**ಬುಕ್ಕು** (ನಾ). ೧. ಪುಸ್ತಕ; ಹೊತ್ತಿಗೆ : ಕೈಯು ಕಾದ ಬಳಿಕ ಅವರ ಮೇಲೆ ಒಂದು ಬುಕ್ಕು ಹಿಡಿದರೆ, ಆ ಬುಕ್ಕು ಬಿಸಿಲಿನಿಂದ ಬರುವ ಶಕೆಗೆ ಅಡ್ಡಾಗುತ್ತದೆ (ಶುಃಚಿಪು. ೬.೬೬) : ಇದೀಗ ತಪ್ಪು ಹಿರಿಯ ಮಗಳು ಮುಲ್ಕೀ ಪರೀಕ್ಷೆ ಪಾಸಾದ ಮೇಲೆ ಇಂಗ್ಲೀಷ್ 'ಎರಡು ಬುಕ್ಕು' ಕಲಿಸಲು ಧಾರವಾಡಕ್ಕೇ ಮನೆ ಮಾಡಿರುವದಾಗಿಯೂ ಹೇಳಿದನು (ಗಂಶಾಯು. ೯). ೨. ಕಂದಾಯದ ನೋಂದಣಿ ಪುಸ್ತಕ : (ಕಸಂಗ್ರ. ೦೫೨).

[← ಇಂ. Book]

**ಬುಕ್ಕೆ** (ನಾ). ಎದೆ ; ಹೃದಯ ; ಗುಂಡಿಗೆ. [ಸಂ. ಬುಕ್ಕಾ]

**ಬುಗಟು** 'ಬುಗುಟು₁' ನೋ.

**ಬುಗಟೆ** 'ಬುಗುಟು₁' ನೋ.

**ಬುಗಡಿ** 'ಬುಗುಡಿ' ನೋ.

**ಬುಗಬುಗನೆ** (ಅ). ಒಂದು ಅನುಕರಣಾವ್ಯಯ : ನೀರು ಒರತೆಯಿಂದ ಬುಗಬುಗನೆ ಮೇಲೆ ಬರುತ್ತಿತ್ತು (ಜಾಂ).

[ಬುಗಬುಗ₀ + —ಅನೆ₁]

**ಬುಗರಿ** 'ಬುಗುರಿ' ನೋ.

**ಬುಗಿಯೂರ್** (ನಾ). ಒಂದು ಊರಿನ ಹೆಸರು : ಅನಸನ್ನಡಿಯ ಬಡಿದು ಸುರಾಂಗನೆಯೊಳ್ ನೆರೆದನಾತಗೆ ಕೊಟ್ಟ ಕಲ್ಲ × × × ನಿಲಿಪ್ರ ಬುಗಿ ಯೂರ ಪಾಟು (ಎಕ. X, ಶ್ರೀನಿವಾ. ೬೪-೬; ಕ್ರಿ. ೨೩೦). [ಬುಗಿ₀+ಊರ್]

**ಬುಗಿಲ್,** 'ಬುಗಿಲು (ನಾ). ೧. ಒಂದು ಅನುಕರಣ ಶಬ್ದ : 'ಬುಗಿಲನೆ', 'ಬುಗಿಲೆನ್' ಪರಾ. **ಬುಗಿಲು:** ೨. "ಚಿಂತೆ, ವೇದನೆ" (ಶಾಶಸೂ. ೨೩).

**ಬುಗಿಲನೆ** (ಅ). ಒಂದು ಅನುಕರಣಾವ್ಯಯ : ಒಲೆ ಬುಗಿಲನೆ ಹತ್ತಿ ಕೊಂಡಿತು (ಜಾಂ). [ಬುಗಿಲ್ + —ಅನೆ₁]

**ಬುಗಿಲು** 'ಬುಗಿಲ್' ನೋ.

**ಬುಗಿಲೆನ್** (ಕ್ರಿ). ಬುಗಿಲ್ ಎಂದು ಶಬ್ದಮಾಡು : ಮುಕ್ಕಣ್ಣನೆನಿಪ ಶಂಕರದಾಸಿಮಯ್ಯ ಸಿಟ್ಟುಕ್ಕಿ ಕಿಡಿಗಣ್ಣ ಬಿಡಲನಲ ಬುಗಿಲೆನುತ ಬರೆ (ಗುರುರಾ. ೮-೫೪).

ಬುಬ್ಬುಗಿಲೆನ್ (ದ್ವಿರುಕ್ತಿ) : ಬುಬ್ಬು[ಗಿ ಲೆಂ. ಬ್ಬು]ಗಿಲೆನಲೇಳ್ವ ಬಾಯ್ಗ್ಗಳಿನೊಗೆವರುಣಜಳಂಗಳೆಯೆ ಕ ಣ್ಣಾ ಕಿ ಛ ಯ ಮಂ (ಪಂಪಾಶ. ೧೨-೨೩). [ಬುಗಿಲ್ + ಎನ್₁]

**ಬುಗುಂಟು** 'ಬುಗುಟು₁' ನೋ.

**ಬುಗುಂಟುವೋಗು** (ಕ್ರಿ). ಬಾವು ಬರು; ಬೊಬ್ಬೆಯುಂಟಾಗು : ಅಬುಚಿಟ್ಟುಂ ತಲೆ ಬುಗುಂಟುವೋದುದೊಜ ನಾಬ್ಬುಡಿದಂತೆ (ರಶಾಗಪ್ಪು. ೬ ೨೬). [ಬುಗುಂಟು (< ಬುಗುಟು₁) + ಪೋಗು₁(< ಪೋ₁)]

**ಬುಗುಟ** 'ಬುಗುಟು₁' ನೋ.

**ಬುಗುಟು₁,** ಬುಗಟು, ಬುಗಟೆ, ಬುಗುಂಟು, ಬುಗುಟ, ಬುಗುಟೆ, ಬುಗುಂತು (ನಾ). ೧. ಉಬ್ಬಿಕೊಂಡಿರುವುದು; ಊದಿಕೊಂಡಿರು ವುದು: ಉಬ್ಬು: ಒಪ್ಪಿದ ಕರ್ಪಸಿವಾ ಬೃಹತ್ಕುಚಂ ಬುಗುಟೊದವಿರ್ದ ನಾಭಿ . . . ವಳವುಂ ಕರಂ ಕೆಲವುಸಾಪ್ಪು ಗುರಾಗೆ ಗಜಾಳಿ ನಿಂದಿತಂ (ಲೀಲಾಶಸ. ೦೦-೬೨). ೨. ಪೆಟ್ಟಿನಿಂದ ತಲೆ ಅಥವಾ ಮೈಮೇಲೆ ಉಂಟಾಗುವ ಊತ, —ಬೋರೆ: ಗುಬಟು: ಕಿದಜಾದ ತಲೆಯ ತೊನೆವ ನಡೆಯ ಬುಗುಟಿನ ಕರಸ್ಥಲದ . . . ಎಡಬಲದ ಬದಿಯ ತಟ್ಟಿನ ಮುಳ್ಳು ದಜಾಹಿನ ಕಂಬಳ ಸೀಳು ಒಂದು ನೋಡುವ ಜನರು ಬೆಚಿಗಾಗೆ (ಬಸವ. ೩೨-೦೫೭); ನೆಗೆದ ಬುಗುಟದೆ ಹಣೆಯುಲಿ (ಕುಪ್ಪಾಕ. ೦೨-೩೦); ಹೋ ತಲೆಬುಗುಟು ನೋಪುತಿದೆ (ರಾಶಕ. ೦೫.೬೬). **ಬುಗಟು :** ೨. ಅಗ ದುರ್ಯೋಧನನು . . . ಮುಂದಕ್ಕೆ ಸಾಗಲು, ಗೋಡೆಯನ್ನು ಹಾದು ತಲೆಗೆ ಬುಗಟು ಎಬ್ಬಿಸಿಕೊಂಡು ಕಣ್ಣಲ್ಲಿ ಕತ್ತಲುಗೂಡಿಸಿದ್ದರಿಂದ ನೆಲಕ್ಕೆ ಕುಳಿತನು (ಮಹಾಶ. ೬೬). **ಬುಗಟೆ :** ೨. ತಲೆಗೆ ಭಾರಿ ಭಾರಿ ಬುಗಟೆಗಳು ಬಂದಿದ್ದವು (ಅಕ್ಕಂ. ೦೦). **ಬುಗುಂಟು :** ೨. 'ಬುಗುಂಟುವೋಗು' ಪರಾ. **ಬುಗುಟ :** ೨. ಎರಡು ಮೊಲೆಯರಂಗಳಿಂ ನಿಮಿರದೊಳು

ಅಯ್ಯನ ಶಿರವನು . . . ಕುಟ್ಟುತಿರೆ ತಲೆ ಒಡೆದು ಬುಗುಟಿಗಳೆದ್ದೊಡೆದು ನೆತ್ತರು ಬಿಡದೆ ಜೋರನೆ ಸುರಿಯೆ (ಬಸಪು. ೩೮–೨೮). ಬುಗುಟೆ: ೨. ಹಣೆಗೆ ಹೊಸ್ತಿಲ ಬಡಿದದ್ದರ ಪರಿಣಾಮವಾಗಿ ಬುಗುಟೆಯೆದ್ದಿದೆ (ಸುಗಿಪು. ೦೪೭) : ಅದು ಅವನ ಹಣೆಗೆ ಬುಗುಟೆಯನ್ನೇ ಎಬ್ಬಿಸಿತು (ರಂಗರೂ. ೫೭).

**ಬುಗುಡು:** ೧. ತುಂಡಿಲ, ತುಂಡಿಭ=ಹೊಕ್ಕುಳು ಬುಗುಡಾಳ್ವವನು (ಶಾಶಬ. ೪). 'ಗುಬುಟು' ಪರಾ. [ ದೇ.॥ ತೆಲು. ಬುಗಡ, ಬೊಗಡ]

**ಬುಗುಟ್ಟು₂** 'ಬೂಜು₁' ನೋ.

**ಬುಗುಟೆ** 'ಬುಗುಟ್ಟು₁' ನೋ.

**ಬುಗುಡ** (ನಾ). ಬೊಜ್ಜುಹೊಟ್ಟೆಯವನು ; ಡೊಳ್ಳುಹೊಟ್ಟೆಯವನು : "ಬುಗುಡಂ ತುಂದಿಳಂ" (ವಸ್ತುಕೋ. ೬೪–೩೮); "ತುಂದಿಯೆಂಬವಂ ಬ[ಬು]ಗುಡಂ" (ಪಠಾಯು. ೧೦೦–೪೫೭).

[ಬುಗುಡು (<ಬುಗುಟ್ಟು₁) + –ಅ₁]

**ಬುಗುಡಿ, ಬುಗಡಿ, ಬುಗುಡೆ** (ನಾ). ೧. (ಕಿವಿಯಲ್ಲಿ ಧರಿಸುವ) ಒಂದು ಬಗೆಯ ಆಭರಣ : ಮುತ್ತಿನ ಮೂಗುತಿ ಕೆತ್ತಿದ ವಾಲೆಯು ಇತ್ತರಾ ಬುಗುಡಿ . . . ಮುತ್ತಿನ ಹಾರವು ರತ್ನದ ಪದಕಾ ಅರ್ತಿಲಿ ನಾರಿಯಾ ಕುತ್ತಿಗೆಗ್ಹಾಕುತ (ಚಾಂಕೀ. ೬೫–೧೭); ಕಡಗ ಪಟ್ಟಿಯು ಡಾಬು ಬುಗುಡಿ ಗೀರ್ಬಳ್ಳಿ ಸರಿಗೆ ಚಿಂತಾಕ ಸರವಣಿಗಳ ಜಡಜಾಕ್ಷಿಯರ್ ಧರಿಸಿ (ಸಿದ್ಧಕಾ. ೮–೦೨); ನೆಗಡಿಯಂತಹ ಬೇನೆಯಿಲ್ಲ, ಬುಗುಡಿಯಂತಹ ಒಡವೆಯಿಲ್ಲ(ಗಾದೆ). ೨. ಮಂಚದ ಕೀಲುಗಳನ್ನು ಜೋಡಿಸಲು ಅಳವಡಿಸುವುದಕ್ಕಾಗಿ ಉಪಯೋಗಿಸುವ, ತಲೆಯ ಮೇಲೆ ಗುಬುಟು ಇರುವ ಮೊಳೆ ; ಗುಬುಟುಮೊಳೆ : ಇಂದ್ರನೀಲದ ಕಾಲು ವಜ್ರದ ಬುಗುಡಿಗಳಿಂದ ಹೇಮದಿ ವಿರಚಿಸಿದ ಚಂದದ ಹಲಗೆಯಿಂ ಹೊಳೆವ ಮಂಚವನವನಂದು ಸಾರ್ದನು ರಾಗದಲಿ (ತೀಮಂಕಾಂ. ೨–೭೦). ೩. ಔಷಧಕ್ಕೆ ಉಪಯೋಗವಾಗುವ ಬುಗುಡಿಯಾಕಾರದ ಹೂವು ಬಿಡುವ ಒಂದು ಬಗೆಯ ಮರ : ಶಗ್ಗೊಜಲೆ ಬುಗುಡಿ ಮಿಟಿಲೆಯ ನುಗ್ಗಿಯ ಪತ್ರಂಗಳೊಡನೆ ಮಾಳಿಚದ ಚೂರ್ಣಂ ಅಗ್ಗಳೆಯೊಂದಿರೆ ನಸ್ಯದೊಳಿಗ್ಗಲ್ಲದೆ ವಿಷಹರಂ ವಲಂ ಪ್ರತ್ಯೇಕಂ (ಖವೈದ. ೬–೮೨); ಕುರುಟಿಗೆಸೊಪ್ಪು, ಬುಗುಡಿಯ ಸೊಪ್ಪು ಇವೆರಡನು ನಿಂಬೇಹಣ್ಣಿನ ರಸದಿಂದರೆದು ಒಡಿಯ ಕೊಡಲು ನರಿಯ ಹಲ್ಲು ತಾಗಿದ ವಿಷ ಶಮನವಹುದು (ವೈದ್ಯಸಾ. I. ೨೦೭); ಬುಗುಡಿ ಮರದ ಕಾಲುವೆ ಸುಕ್ಷೇತ್ರದಲ್ಲು ಲಿಂಗಮುದ್ರೆ ಸ್ಥಾಪ್ಯವ ಮಾಡಿಸಿ ಕೊಟ್ಟ ಗದ್ದೆ (ಎಕ. XII. ಪಾವುಗ. ೬೦–೨೫; 1663). **ಬುಗಡಿ :** ೧. "ಕರ್ಣಿಕಾ_ ತಾಳಪತ್ರಂ ೨ ಕಿವಿಗಿಟ್ಟುಕೊಳ್ಳುವ ವಾಲೆ, ಸರಪಣಿ, ಬುಗಡಿ ಮುಂತಾದದ್ದು" (ಸಿದ್ಧಾಂತ. ೦೯೯); ಹೊನ್ನಾವು ಗಾತ್ರಮುತ್ತಿನ ಬುಗಡಿ ಗರುವೆ ಕರ್ಣದಲಿಟ್ಟು . . . ಮುದ್ದು ಸುರಿವುತಲಿ (ಶ್ರೀಕೃಕಾ. ೧೧). **ಬುಗುಡೆ :** ೨. ಹುಣ್ಣಿಗೆ ಮದ್ದು :– ಅಡಿಕೆ, ಕಾಚು, ಈಶ್ವರಿ, ಬುಗುಡೆ ಬೇರು, ಅಕ್ಕಿಯ ರಸದಲ್ಲಿ ಮರ್ದಿಸಿ ಪೂಸುವುದು (ವೈಪ. ೦೭೦).

**ಬುಗುಡಿಅಂಚು, ಬುಗಡಿಯಂಚು**=ಬುಗುಡಿಯ ಆಕಾರದ ಚಿತ್ರ ಬರುವಂತೆ ನೆಯ್ದಿರುವ ಅಂಚು : ಪಾರೋತಿಗಾಗಿ ಬಿಳಿಯಂಚಿನ ಎರಡು ಪಾಲ್ಕಾಟು ಸೀರೆಗಳು, ಲಚ್ಚನಿಗೆ ಬುಗುಡಿ ಅಂಚಿನ ಬಚ್ಚಕಾನೆ ಇಷ್ಟನ್ನು ಕೊಂಡರು (ಮರಳು. ೦೯೮); ಆಕೆ ಬುಗಡಿಯಂಚಿನ ಸೀರೆ ಉಟ್ಟಿದ್ದಳು (ರಖಾ). [ದೇ.॥ ತಮಿ. ಪುಕಂಟಿ, ಪುಕಿಟಿ, ಪೂಟಿ, ಪೊಕಿಟಿ; ತುಳು. ಬುಗುಡಿ; ತೆಲು. ಬುಗಡ, ಬೊಗಡ./ ಮರಾ. ಬುಗಡೀ]

**ಬುಗುಡಿಗೆ** (ನಾ). ಒಂದು ಬಗೆಯ ಮರ : "ಶ್ರೋತ್ರಾಂಗೀ–ಬುಗುಡಿಗೆ" (೬೫೦. ೦೬೨). [<ಬುಗುಡಿ]

**ಬುಗುಡು** 'ಬುಗುಟ್ಟು₁' ನೋ.

**ಬುಗುಡೆ** 'ಬುಗುಡಿ' ನೋ.

**ಬುಗುರಿ** 'ಬವರಿ' ನೋ.

**ಬುಗುರಿಮೊಲೆ** 'ಬೊಗರಿಮೊಲೆ' ನೋ.

**ಬುಗ್ಗನೆ** (ಅ). ಒಂದು ಅನುಕರಣಾವ್ಯಯ; ಕೂಡಲೆ ; ಬೇಗನೆ: ಹೆಗ್ಗಡ್ಡದೊಳ್ಳಿಂದ ಪೆಟಲ ಮದ್ದಂ ಸುಡಲ್ಕಗ್ಗಿಗಿಡಿಯಿಂದಳಿದ ಹೆಗ್ಗಸಂತಂಗಜಂ ಬುಗ್ಗಿಯಾದಂ ಬುಗ್ಗನುರಿದು (ಪುದೀಕೃ. ೦೨–೦೮).

[ಬುಗ್$_0$ + –ಅನೆ₁]

**ಬುಗ್ಗಿ** (ನಾ). ಬೂದಿ; ಭಸ್ಮ : ಪೆಗ್ಗಳದ ಭಾಗ್ಯ ಗಳಿಗೇಲಿ ಪೋಪಾಗ ಬುಗ್ಗಿ [ಪಾಠಾಂ. ಗ್ಗೆ]ಯ ಹೊರ್ಯೊಂಡು ಹೋದ್ಯಲ್ಲೊ ಪ್ರಾಣಿ (ತ್ರಿರಂಗ. ೦–೬೨–೨); ಹೆಗ್ಗಡ್ಡದೊಳ್ಳಿಂದ ಪೆಟಲ ಮದ್ದಂ ಸುಡಲ್ಕಗ್ಗಿಗಿಡಿಯಿಂದಳಿದ ಹೆಗ್ಗಸಂತಂಗಜಂ ಬುಗ್ಗಿಯಾದಂ ಬುಗ್ಗನುರಿದು (ಪುದೀಕೃ. ೦೨–೦೮).

[ ದೇ.॥ ತೆಲು. ಕೋಲಾ. ಬುಗ್ಗಿ ; ಗದಬ. ಬುಗ್ಗ = ಭೂದಿ ]

**ಬುಗ್ಗೆ** (ನಾ). ೧. ನೀರು ಉಕ್ಕುವಿಕೆ. ೨. ನೀರು ಉಕ್ಕುವ ಸ್ಥಳ; ಚಿಲುಮೆ ; ಒರತೆ : ನೆಲದೊಳಗಿಂದ ಹೊರಡುವ ನೀರಿನ ಬುಗ್ಗೆಯಿಂದೆಂದು ವ್ಯಕ್ತವಾಗುತ್ತದೆ (ಪಂಪಭಾ. ೬–೦೬೮) ; ನೀರಿಲ್ಲದ ಬಾಯಾರಿ ವ್ಯೆಲುಗಟ್ಟಲೆ ಮರಳುಗಾಡಿನಲ್ಲಿ ಓಡುವವನಿಗೆ ದೂರದಲ್ಲಿ ನೀರಿನ ಬುಗ್ಗೆಯನ್ನು ಕಂಡರೆ ಹೇಗಿರುತ್ತೆ ? (ಕೃತಾಹ. ೩೨); ಸೀಳು, ಒಡೆ, ಬಾಳ್ವಂದೆಯಿಂ; ಬುಗ್ಗೆಯುಕ್ಕುವೋಲ್ ಮೂಡಿ ನಿಲ್ ಕಣ್ಮುಂದೆ, ಕಿಳ್ತೆಸೆದು ಒಲ್ಲಸದ ಈ ವೇಷವಂ (ಶ್ರೀರಾಪಾ. ೨೬೯–೯೭).

[ ದೇ.॥ ತಮಿ. ಪುಕ್ಕೈ, ಪೊಯ್ಕೈ ; ತೆಲು. ಬುಗ್ಗ ]

**ಬುಚಡ, ಬುಚಡೆ** (ನಾ.) ಸ್ತ್ರೀಯರ ಕೇಶರಚನೆಯಲ್ಲಿ ಒಂದು ಪ್ರಕಾರ; ತಲೆಯ ಕೂದಲನ್ನು ಒಟ್ಟಿಗೆ ಸೇರಿಸಿ ಹಾಕಿರುವ ಗಂಟು ; ಎಣೆಗಂಟು : ಆ ಬುಚಡ, ಜೈತಲ, ಸೀರೆ, ಸೆರಗು, ರಂಭೆ ಅಂತ ತಿಳ ಕೊಂಡಾಳ ನಮ್ಮವ್ವ ! (ಸಪಾಪೀ. ೨೭); ಅಡುಗೆಮನೆಯಲ್ಲಿ ಇನ್ನೂ ಅರದೆ ಇದ್ದ ತನ್ನ ಕೂದಲಿನ ಬುಚಡ ಕಟ್ಟುತ್ತಾ ಪತ್ನಲೆಯು ಕುಳಿತಿದ್ದಳು (ಅಪ್ಪುವ. ೦). **ಬುಚಡೆ :** ಅವಳು ತನ್ನ ನೀಲಾಳಕಗಳನ್ನು ಚೆನ್ನಾಗಿ ಬಾಚಿ, ಚಮತ್ಕಾರವಾಗಿ ಕಾಣುವಂಥ 'ಬುಚಡೆ' ಯನ್ನು ಕಟ್ಟಿದ್ದಳು (ತೋಳವು. ೨೩೪). [ ←ಮರಾ. ಬುಚಡ. ಬುಚಾಡ ]

**ಬುಚಡೆ** 'ಬುಚಡ' ನೋ.

**ಬುಜಗೇಸ್ವರ** (ನಾ). ಸರ್ಪಗಳ ಒಡೆಯ ; ಭುಜಗೇಶ್ವರ : ಶ್ರೀ ಬುಜಗೇಸ್ವರದೇವರಿಗೆ ಯೆರಡು ನಂದಾದೀವಿಗೆ ಮಾಡಿ ಹೊತ್ತಿನ ಉಪಾರಕಂ × × × ಗೆ × × ಭೂಮಿ (ಎಕ. IV (R). ಚಾಮುಂ. ೯೭–೯ ; 16ನೆಯ ಶತ). [ < ಸಂ. ಭುಜಗೇಶ್ವರ ]

**ಬುಜರೂಕ** (ನಾ). ತಿಳಿದವನು ; ಅನುಭವಿ : ಹಿರಿಯ : ನಮ್ಮಲ್ಲಿ ವೃದ್ಧ ರಹೀಮನಂಥ 'ಬುಜರೂಕ' ರಾದ ಜನರು ಕೆಲಕೆಲವು ಪ್ರಸಂಗಗಳಲ್ಲಿ ತಮ್ಮ ನಿಜಮೂಲಿಕೆಗಳ ಜ್ಞಾನದಿಂದ ಎಷ್ಟೋ ಜೀವಿಗಳನ್ನು ಉಳಿಸಿದ್ದು ಪ್ರಸಿದ್ಧವಿದೆ (ಕ್ರೀಮಾ. ೭೬).

[ ←ಮರಾ. ಬುಜರೂಕ್, ಬುಜರೂಗ್, ಬುಜರುಕ್, ಬುಜರುಗ್; ಹಿಂ. ಬುಜುರ್ಗ್ = ಹಿರಿಯ, ಪೂರ್ವಿಕ ; ಪಾರ. ಬುಝುರ್ಗ್ ]

**ಬುಜ್ಜಣೆ** 'ಬುದ್ದಲಿ' ನೋ.

**ಬುಜ್ಜಣೆಗೆ** 'ಬುದ್ದಲಿಕೆ' ನೋ.

**ಬುಜ್ಜಯಿಸು, ಬುಜ್ಜವಿಸು** (ಕ್ರಿ). ಉಬ್ಬಿಸು : ಪುಸಲಾಯಿಸು : ತುಂಬುರಾದಿಗಳೆಡೆವೊಕ್ಕು ಇರ್ಪರುಮಂ ಬೇಚಿ ಬೇಚಿ ನಿಲಿಸಿ ಪುಮಾರನಂ ಬುಜ್ಜಯಿಸಿ ಕೈಮುಗಿದು (ಪಂಪರಾ. ೬–೦೩೭) ; ನಿನ್ನ ಸಡಿಲದ ತಕ್ಕೆ ಸಗ್ಗದ ಸುಖಕ್ಕೆಯಿನ್ನುತಂ ವಿಟನೊರ್ವನೆಸೆವ ರತಿಯೊಳ್ ಸತಿಯ ಬುಜ್ಜಯಿಸಿ ನೆರೆವುತಿರ್ದಂ (ಕೇರಪು. ೮. ೫೦). **ಬುಜ್ಜವಿಸು :** ಬಜ್ಜವಿದು ತಾನೆಂದು ಬಸವಂ ಬುಜ್ಜವಿಸಿ [ಪಾಠಾಂ. ಬುಜ್ಜಯಿಸಿ, ಭುಜ್ಜವಿಸಿ]

ಪೇಳಲ್ಕೆ ರಾಯುಂ ಲಜ್ಜೆಯುಂ ನಾಚಿಕೆಯುಮುಳಿದಾಗಲಿ ಎನುತ ಬಂದು (ರಸಶು. ೩೩-೩೮); ಬಾಳೆಮಿನ್ನಣ್ಣಬಳೆ ಮುಳಿಯದಿರು ನೀನೆನುತ್ತಾಳೆ ಗೊಳುತುಂ ಚದುರನಂಗನೆಯು ಬುಜ್ಜವಿಸಿ ಮೇಳವಮಂ ಮಾಡುತಿರೆ (ಭಾಪತಂ. ೬-೨೮). [←ತೆಲು. ಬುಜ್ಜಗಿಂಚು, ಬುಜ್ಜಿಗಿಂಚು]

**ಬುಜ್ಜವಿಸು** 'ಬಂಜ್ಜಯಿಸು' ನೋ.

**ಬುಟೆ** (ನಾ). ಎತ್ತಿನ ಗಾಡಿಗಳಿಗೆ ಹಾಕಿರುವ ಹಲಗೆ : ಯಾವ ಗಾಡಿಗೂ ತೋಳು ಇಲ್ಲ. ಯಾವುದರ ಬುಟೆಯು ಮುರಿದುಹೋಗಿದೆ. . .ಎಂದು ಅದನ್ನೂ ಗಟ್ಟಿಯಾಗಿ ಕೂಡಿಸಿದನು (ಶೇಷಾ. ೧೬೬). [← ಮರಾ. ಬುಟೇ]

**ಬುಟೇದಾರಿ** 'ಬೂಟಾದಾರಿ' ನೋ.

**ಬುಟ್ಟ** 'ಬೂಟಾ' ನೋ.

**ಬುಟ್ಟಲ** (ನಾ). ಬುಟ್ಟಿ ಮುಂತಾದುವುಗಳನ್ನು ಮಾಡುವವನು: ಬುಟ್ಟಲರು, ಅಂದರೆ ಬುಟ್ಟಿಗಳನ್ನು ಮಾಡುವವರು (ಶಾಗಿ. ೨೨೨). [ ಬುಟ್ಟ ( $<$ ಪುಟ್ಟ$_1$) + – ಅಲ್$_2$ + –ಅ$_7$ ]

**ಬುಟ್ಟಾ** 'ಬೂಟಾ' ನೋ.

**ಬುಟ್ಟ** 'ಪುಟ್ಟ$_1$' ನೋ.

**ಬುಟ್ಟಗರಗೆಲಿ** (ನಾ). ಒಂದು ಬಗೆಯ ಸಸ್ಯ: ಸಣ್ಣುಡಿಪ್ಪೆ, ಬುಟ್ಟಗರಗೆಲಿ (ಪ್ರಶಿಗಿ. ೪೦-೬೦೦). [ ಬುಟ್ಟ$_?$ + ಗರಗು$_1$ ( $<$ ಗರುಗ) + ಎಲೆ$_1$]

**ಬುಟ್ಟಯುಡಿಪ್ಪೆ** (ನಾ). ಒಂದು ಬಗೆಯ ಸಸ್ಯ: ಫಾಲ್ಸ, ತಡಸಲಿ, ಬುಟ್ಟಯುಡಿಪ್ಪೆ, ಜಾಣ (ಪ್ರಶಿಗಿ. ೪೦-೬೦೬). [ ? ]

**ಬುಟ್ಟೆದಾರ** 'ಬೂಟಾದಾರಿ' ನೋ.

**ಬುಟ್ಟೆದಾರಿ** 'ಬೂಟಾದಾರಿ' ನೋ.

**ಬುಟ್ಟೇದಾರಿ** 'ಬೂಟಾದಾರಿ' ನೋ.

**ಬುಡ** (ನಾ). ೧. ಮರದ ಕಾಂಡದ ಅಡಿಭಾಗ; ಬೊಡ್ಡೆ : ತೊಟ್ಟು ಬಿಟ್ಟು ಹಣ್ಣಿಂಗೆ ಮತ್ತಾ ಬುಡದಾಸೆಯೇಕೆ (ಸಳಪ. I. ೪೬೩-೮೬); ಅನಿಲಜನು. . .ಬಳಲಿ ಬೆವರುತ ಬಳಿಕ ಬಂದಾ ಮರದ ಬುಡವನು ಹಿಡಿದು ಕುಳ್ಳಿದನು (ಸಂಶಪ. ೦೬-೦೩); ಸಿಡಿದು ಹಾಜೀದ ಹಸ್ತಮುಚಾಬೆಗೆ ಬುಡ [ಶಾಶಾಂ. ಗಿಡು] ಸಹಿತ ಬಲುಮರ ಧರಾತಳಕುಡಿದು ಬಿದ್ದವು (ಕೂರಶಾ. ೧-೮೦-೦೪). ೨. ಅಡಿಭಾಗ; ತಳಭಾಗ ; ಮೂಲ : ಸಕಲ ಸ್ಥಾವರ ಚರ ಘಟ ಬುಡಾದಿಗಳೆಲ್ಲಕ್ಕೆ ಪೃಥ್ವಿಯಿಂದವೇ ಜನನ (ಕೋಶಪೂ. ೨೬೪-೩೯); ನನ್ನ ಬುಡಕ್ಕೆ ನಾನೇ ಕೊಡ್ಲಿಯನ್ನು ಹಾಕಿದಂತಾಯಿತು! (ದೀಂಶಾ. ೩೯). ೩. ವಂಶ ; ಮನೆತನ : ಬಿಭೂಮಿಯು ಸಿಂಗಾಪುರದ ಗಿರಿಭಟ್ಟರ ಬುಡದವರಿಗೆ ನಡದು ಬಂತು (ಪ್ರಕರ. ೦೯೨೯, ೦೬-೦೦೬ ; ,1402). ೪. ಹತ್ತಿರ ; ಸಮೀಪ : ಒಡೆದು ಕೆಡಿಸಿದೆ ಪಾಪಿ ನೀನು ನಿನ್ನಯ ಸವತಿ ಬುಡದಿಯೈನೂರು ಸಂವತ್ಸರಂ ದಾಸಿಯಾಗೆಡೆಬಿಡದೆಯಿರುಯೆಂದು ಶಾಪಮಂ ಕೊಟ್ಟನರುಣನು (ತುರಂಗ. ೩-೦೩).

**ಬುಡಕ್ಕೆ ನೀರು ತಿದ್ದು** = ಸಮೂಲ ನಾಶಮಾಡು : ಅವನು ಬುಡಕ್ಕೆ ನೀರು ತಿದ್ದಿದ (ಕೂಶ). **ಬುಡನಾಶ** = ಬೇರುಸಹಿತವಾಗಿ ಆಗುವ ನಾಶ ; ಸಂಪೂರ್ಣನಾಶ : ದುರ್ಯೋಧನನೊಬ್ಬನ ಅಕೃತ್ಯದಿಂದ ಕ್ಷತ್ರಿಯರು ಬುಡನಾಶವನ್ನೈದುತಲಿಧಾರೆ (ಕೃಪಾಶಿ. ೦೬೦). **ಬುಡ ಭದ್ರವಿರು** = ಗಟ್ಟಿಯಾದ ತಳಹದಿ ಇರು._ಆಧಾರವಿರು : ಭಾರತದ ಅಸಂಖ್ಯಾತ ಯುವತರಂತೆ ನನಗೆ ಬುಡ ಭದ್ರವಿಲ್ಲ (ಹೊಸಕ್ಷಿ. ೩೪೮). **ಬುಡಮುಟ್ಟ, ಬುಡಮಟ್ಟ** = ೧. ತಳದ ವರೆಗೂ; ಕೆಳಭಾಗದ ವರೆಗೂ: ಕಾಮನುಯೆರಗಿ ಒಡನೆಯೆದೆಯ ಕ್ರೂರದಾರೆಯು ಕಠಾರಿಯುಂ ಬುಡಮುಟ್ಟ ಶಿಮಿಯಲು (ಪಪಪೊ. ೦೨-೮೦). ೨. ಸಂಪೂರ್ಣವಾಗಿ : ಬಡತನದ ಬುಡಮುಟ್ಟ ಕೀಳ ಬನ್ನಿ (ಕೋಗಿರಿ. ೨೮-೨); ದೇವಾಲಯಗಳನ್ನೆಲ್ಲಾ ಬುಡಮುಟ್ಟ ಕಿತ್ತೊಗೆಯಬೇಕು (ದಾಂಶ. ೩೪). **ಬುಡ ಮೇಲಾಗು** = ಅಡಿ ಮೇಲಾಗು ; ತಲೆ ಕೆಳಗಾಗು : ಭುಜದ ಸೋಂಕಿಗೆ ಭೂಭೂಜ ವ್ರಜವು ಬುಡ ಮೇಲಾದವು (ಕೂರಶಾ. ೩-೮-೪೯); ಮನೆಯೇ ಬುಡ ಮೇಲಾದಂತೆ ಅವಳಿಗೆ ಭಾಸವಾಯಿತು (ಹಳ್ಳಿಹಾ. ೦೦೬). **ಬುಡ ಮೇಲು** = ಅಡಿಮೇಲು ; ತಲೆಕೆಳಗು : ಕೆಟ್ಟಲ್ಲ ಧರ್ಮ ಹುಟ್ಟಲ್ಲ ಧರ್ಮಂತ ಬುದಿಲ್ಲ ದೇವರೂ ಇರಲಿ ಬುಡ ಮೇಲು! (ಅರಳು. ೩೪೯-೦೨). **ಬುಡಮೇಲು ಮಾಡು** = ಅಡಿಮೇಲು ಮಾಡು ; ತಲೆಕೆಳಗು ಮಾಡು : ದಾನವರು ಆಧುನಿಕರಾಜಕೀಯತಂತ್ರದಂತೆ ಅವರ ನಾಟಕಪ್ರಯೋಗಗಳನ್ನು ಬುಡಮೇಲು ಮಾಡಿದರು (ಪ್ರಶಂಥ. ೦೩); ಲಾರ್ಡ್ ಕೇನ್ಸರ ಪ್ರತಿಪಾದನೆ . . . ವೈಯಕ್ತಿಕಸ್ವಾತಂತ್ರ್ಯತತ್ತ್ವವನ್ನು ಬುಡಮೇಲು ಮಾಡಿತು (ಳವಿಕೋ. I. ೯೦೪).

[ದೇ. ‖ ತುಳು. ಬುಡ, ಬುಡೊ; ತೆಲು. ಬುಡ. / ಸಂ. ಬುಧ್ನ]

**ಬುಡಕಟ್ಟು** (ನಾ). ೧. ಸಸ್ಯಗಳ ಬುಡದ ಸುತ್ತಲೂ ಹಾಕುವ ಮಣ್ಣಿನ ರಾಶಿ : ಜೋಶಿಯುವರು, ತೆಂಗಿನ ಮರದ ಬುಡಕಟ್ಟನ್ನು ಸರಿ ಮಾಡಲು ಕೈಯಲ್ಲಿ ಹಿಡಿದ ಕುಠಾರಿಯ ಕಾವಿನ ಮೇಲೆ ತಮ್ಮ ಸೊಂಟವನ್ನು ಆನಿಸಿ . . . ಕೇಳಿದರು (ಮೂರುದಾ. ೩೦). ೨. ಮೂಲ; ಉತ್ಪತ್ತಿಸ್ಥಾನ: ತಮಿಳು ಮಾತ್ರ ಮೂಲತಃ, ಅದೇ ಬುಡಕಟ್ಟಿನದಾದರೂ ತನ್ನ ವ್ಯಾಕರಣವನ್ನು ಪ್ರತ್ಯೇಕವಾಗಿ ನಿರ್ಮಿಸಿಕೊಂಡಂತೆ ವರ್ಣಮಾಲೆಯನ್ನೂ ಪ್ರತ್ಯೇಕವಾಗಿಯೇ ನಿರ್ಮಿಸಿಕೊಂಡಿತು (ಭಾಶಾಶಾ. ೦೦೨). ೩. ಅಡಿಪಾಯ ; ತಳಹದಿ ; ಬುನಾದಿ : ಇಂಥ ವ್ಯಕ್ತಿಗಳು, ಇಂಥ ಮನೆತನಗಳು ಹೆಚ್ಚು ಹೆಚ್ಚು ಆದಂತೆ ಸಮಾಜದ ಬುಡಕಟ್ಟು ಭದ್ರವಾಗುತ್ತದೆ (ಸಂಜಶಂ. ೮ ಮುನ್ನುಡಿ) ; ನಮ್ಮ ಸಮಾಜದ ಬುಡಕಟ್ಟು ಅದಿರುತ್ತಿರುವುದರಿಂದ ಆದರ ಮೇಲೆ ನಾವು ನಿಲ್ಲಿಸಬೇಕೆಂದಿರುವ ಸ್ವರಾಜ್ಯಮಂದಿರವು ಸುಸ್ಥಿರವಾಗಿ ಎಂದೂ ತಾಳಿ ಬಾಳಲಾರದು (ಹುಕ್ಷಕ್ರ. ೦೩). ೪. ವಂಶ ; ಕುಲ ; ಮನೆತನ : ಈತನು ಅರೇಬಿಯದ ಕುರಾಯಿಷ್ ಬುಡಕಟ್ಟಿಗೆ ಸೇರಿದವನು (ಇಸ್ಲಾಂಸಂ. ೦); ಇದರ ಜೊತೆಗೆ ನಾನಾ ಬುಡಕಟ್ಟಿನ ಜನರ ಸಂಪ್ರದಾಯಗಳೂ ದೇಶಾಚಾರಗಳೂ ಸೇರಿಕೊಂಡುವು (ಶಂಕಮ. ೪೩೮) ; ಒಂದು ದೇಶದಲ್ಲಿ ಬೇರೆ ಬೇರೆ ಬುಡಕಟ್ಟುಗಳ ಜನರು ಒಟ್ಟುಗೂಡುವುದರಿಂದ . . . ರಾಷ್ಟ್ರಶೀಲವು ಒಟ್ಟಿನ ಮೇಲೆ ಮಾರ್ಪಡುತ್ತದೆ (ಶ್ರೀಪಡಾಶಿ. ೦೩). [ಬುಡ + ಕಟ್ಟು$_2$]

**ಬುಡಕ್ಕನೆ** (ಅ). ಒಂದು ಅನುಕರಣಾವ್ಯಯ : ಆ ಭಾಗದಲ್ಲಿ ಒಳಗಡೆ ನೆಲವು ಮೃದುವಾಗಿರುವುದೆಂದು . . . ಬುಡಕ್ಕನೆ ಅಲ್ಲಿ ಧುಮುಕಿದನು (ಕಾಬಿರೂ. ೬೦). [ ಬುಡಕ್$_0$ + – ಅನೆ$_1$ ]

**ಬುಡಬುಡಕೆ** ಬುಡುಬುಡಿಕೆ' ನೋ.

**ಬುಡಬುಡಿಕೆ** 'ಬುಡುಬುಡಿಕೆ' ನೋ.

**ಬುಡಮೆ** 'ಬುಡುಮೆ' ನೋ.

**ಬುಡಪಳತಿ** (ನಾ). ಅಳಿಯಸಂತಾನದ ನಿಯಮವನ್ನು ಪಾಲಿಸುತ್ತಿರುವ ವಿಧವೆ : (ಕಸಂಗ್ರಾ. ೦೬೮).

[?./ತುಳು. ಬುಡೆದಿ, ಬುಡೆತ್ತಿ, ಬೊಡೆದಿ, ಬೊಡೆತ್ತಿ = ಹೆಂಡತಿ : ಬುಡದಾರೆ = ವಿಧವೆಗೆ ಮಾಡುವ ಮರುಮದುವೆ, ಮರುಮದುವೆಯಾದವಳು]

**ಬುಡಿಗೆ** 'ಪುಡಿಕೆ' ನೋ.

**ಬುಡು** (ನಾ). ಒಂದು ಅನುಕರಣ ಶಬ್ದ : ಬಲಗೈಯ ಹತ್ತಿರ ಆಗಾಗ "ಕುಡು, ಬುಡು" ಎಂದು ಬಾರಿಸುವ ಚಿಕ್ಕ 'ಡಮರುವಾದ್ಯ' ಟೊಂಕಕ್ಕೆ ನೇತಾಡುತ್ತಿತ್ತು (ಹಂಸಾ. ೩).

ಬುಡುಬುಡು (ದ್ವಿರುಕ್ತಿ) : ಮರುದಿನ ಬುಡುಬುಡಿಗನೊಬ್ಬ 'ಬುಡುಬುಡು' ಎಂದು ತನ್ನ ದುಡಿಯನ್ನು ನುಡಿಸುತ್ತ ಸುಂದರಪುರದಲ್ಲಿ ಕಾಣಿಸಿಕೊಂಡನು (ಕರ್ಣಬಿ. ೯೦).

**ಬುಡುಕೆ** 'ಪ್ರುಡಿಕೆ' ನೋ.

**ಬುಡುಜಾಗನಗಡ್ಡೆ** (ನಾ). ಔಷಧಕ್ಕಾಗಿ ಉಪಯೋಗಿಸುವ ಒಂದು ಬಗೆಯ ಗಡ್ಡೆ ಮತ್ತು ಭೂಮಿಯಿಂದ ಸ್ವಲ್ಪ ಮಾತ್ರವೇ ಮೇಲಿದ್ದು ಸದಾ ಹೂವು ಬಿಡುವ ಅದರ ಬಳ್ಳಿ: (ಶ).
[< ಬುಡ್ಡ + < ಜಾಗಗಡ್ಡೆ]

**ಬುಡುಬುಡಿಕ** (ನಾ). ಬುಡುಬುಡಿಕೆಯನ್ನು ಬಾರಿಸುವವನು: ಈ ವಿಚಿತ್ರವೇಷದ ಆ ವ್ಯಕ್ತಿ ಬುಡುಬುಡಿಕನೆಂಬುದನ್ನು ನಮ್ಮ ವಾಚಕರಿಗೆ ಬಿಚ್ಚಿ ಹೇಳುವ ಅವಶ್ಯಕತೆಯಿಲ್ಲ (ಹಂಸ. ೪). 'ಬುಡುಬುಡಿಗ' ಪರಾ.
[ಬುಡುಬುಡಿಕೆ + — ಅ]

**ಬುಡುಬುಡಿಕೆ,** ಬುಡಬುಡಕೆ, ಬುಡಬುಡಿಕೆ, ಬುಡುಬುಡುಕೆ (ನಾ). ೧. ಡಮರುಗದಂತಹ ಒಂದು ಬಗೆಯ ಚಿಕ್ಕ ವಾದ್ಯ: 'ಜನತೆ ಜನತಾ' ಎಂದು ಬುಡುಬುಡಿಕೆ ಬಾರಿಸುತ್ತ ದೇಶದ ಭವಿಷ್ಯವನು ಸಾರಬಲ್ಲ (ಪಂಪು. ೩೬-೦೦): ಗ್ರಾಮೀಣರಿಗೆ ಬುಡುಬುಡಿಕೆಯವನು ನುಡಿಯುವ ಶಕುನದ ಬಗ್ಗೆ ಅಪಾರವಾದ ನಂಬಿಕೆ (ಕಜಕ. ೦೫೦). ೨. ಸುಳ್ಳು: ಅಸತ್ಯ: (ಶ). ೩. (ಅಲಂ) ಸತ್ವವಿಲ್ಲದುದು; ಚೈತನ್ಯರಹಿತವಾದುದು; ಹುರುಳಿಲ್ಲದುದು: ಬರಿಯ ಬುಡುಬುಡಿಕೆಯಂಥ ಯಶಸ್ಸನ್ನು ಕಟ್ಟಿಕೊಂಡು ಏನು ಮಾಡಬೇಕು (ಶಂಕಮು. ೦೦೨). **ಬುಡಬುಡಕೆ:** (ಶ). **ಬುಡಬುಡಿಕೆ:** ೧. ಡಮರು:, ಮಡ್ಡು:, ಡಿಂಡಿಮ:, ಝುರ್ಝುರ:, ಮರ್ದಳ:, ಪಣವ:—೬ ವಾದ್ಯಪ್ರಭೇದಾ:—ಈ ೬ ಶಬ್ದಗಳೂ ಕ್ರಮವಾಗಿ ಬುಡಬುಡಿಕೆ, ಡಿಕ್ಕಿ, ಡಿಮಕಿ, ಝಾಯಿ, ಮದ್ದಳೆ ಗೋಮುಖಾದಿ ವಾದ್ಯಗಳೂ ಉಂಟು (ಸಿದ್ಧಾಂತಿ. ೫೯): ಬುಡಬುಡಿಕೆ—ಸಣ್ಣ ಡಮರು (ಶಾಸಕೋ. ೨೩). ೩. ಕೀರ್ತಿ—ಅಪಕೀರ್ತಿಗಳು ನನಗೆ ಬುಡಬುಡಿಕೆಯಂತೆ ಎಂದೆನ್ನಿಸುತ್ತದೆ (ಸ್ವತಿ. ೪೪೪). **ಬುಡುಬುಡುಕೆ:** ೪. ಒಂದೇಸಮನೆ ಮಾತನಾಡುವಿಕೆ; ಗಳಹುವಿಕೆ: ತಂಬೂರಿ ಇಲ್ಲದೆ ಹೋದರೆ ನನ್ನ ಪೀಕಲಾಟದ ಬುಡುಬುಡುಕೆ ಹೇಗೆ ನಡೆಯಬೇಕು? (ಕ್ರಶಾಕ. ೦೬). [←ತೆಲು. ಬುಡುಬುಡುಕ್ಕ, ಡುಬುಡಕ್ಕ]

**ಬುಡುಬುಡಿಗ** (ನಾ).=ಬುಡುಬುಡಿಕ: ಮರುದಿನ ಬುಡುಬುಡಿಗನೊಬ್ಬ 'ಬುಡುಬುಡು' ಎಂದು ತನ್ನ ದುಡಿಯನ್ನು ನುಡಿಸುತ್ತ ಸುಂದರಪುರದಲ್ಲಿ ಕಾಣಿಸಿಕೊಂಡನು (ಕರ್ಣಾ. ೯೧). [<ಬುಡುಬುಡಿಕ]

**ಬುಡುಬುಡಿಸು** (ಕ್ರಿ). ಬುಳುಬುಳು ಎಂಬ ಶಬ್ದಮಾಡು: ಎಜಗಿವಶನಿ ಘಾತಮುಚ್ಚಿಯ ಬಿಜುಬಿನಲಿ ಬುಡುಬುಡಿಸಿ ನೆತ್ತರಿನೊಜಿತೆ ಹಾಯ್ದುದು ವದನದಲಿ ನಾಸಿಕದ ನಾಳದಲಿ (ಕೊರಂ. ೫-೫-೩೪): ಬುಡುಬುಡು[ಡಿ]ಪೇಜಿನಿಂದಮಾರೆಗರ್ಚಿದ ನಾಲಗೆ ಬಿಟ್ಟ ದಿಟ್ಟಿಗಳ ನಡುಗುವ ಮೆಯ್ . . . ಕಡೆವಾಯುಲೋಳೆವೆರಸುಬ್ಬಿಸದಿಂದೊಳಜುತ್ತ ಜೀವಮಂ ಬಿಡುವ ಮಹಾಮೃಗಂ ವರುಣಮಂ ಪಿಡಿವಿತ್ತುದು ತದ್ವನಾಂತದೊಳ್ (ಕೃಪೂ. ೨೭-೬೩); ನಾಸಿಕದಲ್ಲಿ ಬುಡುಬುಡಿಸಿದುದು ಶ್ರೋಣಿತ ಚಿಮ್ಮಿ ಭೂತಳಕೆ (ಶಂಭಕಾ. ೨೨.೫೦). 'ಬುದುಬುದಿಸು' ಪರಾ.
[<ಬುಡು + —ಇಸು]

**ಬುಡುಬುಡುಕೆ** 'ಬುಡುಬುಡಿಕೆ' ನೋ.

**ಬುಡುಮೆ,** ಬುಡಮೆ (ನಾ). ಸೌತೆಯ ಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ: ಕೆಕ್ಕರಿಕೆ; ಹಾಲ್ಮೆಕ್ಕೆ: "ಚಿತ್ರಾ, ಗವಾಕ್ಷೀ, ಗೋತುಂಬಾ—೩ ಹಮ್ಮೆಕ್ಕೆ ಹೆಸರು. ಆಂಧ್ರರೀ ಶಬ್ದಗಳಿಗೆ ಪಿಲ್ಲಪಾಪರಬೆಟ್ಟುಯೆಂತಲೂ ಬುಡುಮೆಕಾಯಿಯೆಂತಲೂ ಹೇಳುವರು" (ಸಿದ್ಧಾಂತಿ. ೦೯೬); ಬದನೆಯ ಪಳಿದೆಯ, ಬುಡುಮೆಯ ಪಲ್ಯ, ಸಾವೆಯಕ್ಕಿಯನ್ನ, ಸವಣೆಯ ಪಾಯಸ: ಉಂಡರು ಏನ? ಅರಸುತನದ ಕನ್ನ (ರಾಮಪ. ೨೩-೫). **ಬುಡಮೆ:** ಸೌತೆಕಾಯಿ. ಬುಡಮೆಕಾಯಿ (ವೈ ಶಿ. ೨೬-೯೮೪): ಬುಡಮೆಕಾಯಿ, ಹಾಲ್ಮೆಕ್ಕೆಬಳ್ಳಿ (ವೈ ಶಿ. ೨೬-೯೯೯). [←ತೆಲು. ಬುಡಮು, ಬುಡ್ಡಮು]

**ಬುಡ್ಡಗ** (ನಾ). ಒಂದು ಕ್ಷುದ್ರದೇವತೆಯ ಹೆಸರು: ಎಲ್ಲರು ದಾಟುವ ಹೊಸ್ತಲು ಬುಡ್ಡಗನು ಕಲ್ಲು ಮಾರರಿಂದ ತೋಟದ ಹೆಬ್ಬಯ್ಯಾ . . . ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು (ಚಾಕು. ೫೬-೨).
[ಬುಡ್ಡ ? + —ಗ]

**ಬುಡ್ಡಿ** 'ಬುರುಡೆ' ನೋ.

**ಬುಡ್ಡೆ** (ನಾ). ಒಂದು ಬಗೆಯ ಗಿಡ: "ಕರಿಬೀಜದ ಬುಡ್ಡೇಗಿಡ" (ಕಕ್ಕ. ೪೦). 'ಕಾಡುಬುಡ್ಡೆ' ಪರಾ. [←ತೆಲು. ಬೊಡ್ಡ]

**ಬುಡ್ಡೆಜಾಲಿ** (ನಾ). ಒಂದು ಬಗೆಯ ಜಾಲಿಗಿಡ: ಬುಡ್ಡಜಾಲಿ, ಕೊಡೆಮುಳ್ಳುಜಾಲಿ, ಮೊಡೆಜಾಲಿ (ವೈ ಶಿ. ೨-೦೮).
[ಬುಡ್ಡೆ+ಜಾಲಿ. / ತೆಲು. ಬುಡಜಾಲ]

**ಬುತ್ತಿ** (ನಾ). ೧. ಪ್ರಯಾಣಕಾಲಕ್ಕಾಗಿ ಕಟ್ಟಿ ಸಿದ್ಧಪಡಿಸಿದ ಮೊಸರನ್ನ, ರೊಟ್ಟಿ, ಕಲಸನ್ನ ಮೊದಲಾದ ಆಹಾರ: ಪಾಥೇಯ: ತಾಂ ಜಲೆಯ ಗೊತ್ತು . . . ಜೀವದ ಸೆಜೆವನೆ ಜವನೆಂಜಲಿಸಿದ ಬುತ್ತಿ ತನುವೆನಿಪ್ಪುದು ಪುಸಿಯೇ (ತಂತ್ರಪು. ೦೦-೦೦೦); ಬಿಡವೆ ಬುತ್ತಿಯನೊಂದು ಕೈಯಲಿ ಹಿಡಿದು ಬಂದನು ದೈತ್ಯನಲ್ಲಿಗೆ ಭೀಮ ಬೇಗದಲಿ (ಸಂಭಶ. ೨೩-೬೬); ಬುತ್ತಿಯನ್ನವನಾರೋಗಿಸಿಯಾ ತೊಜೆಯೊತ್ತಿನ ಬನಕೆ ನಡೆದರು (ಶರತ. ೬೩-೬೩): ನಾಯಿ ತಲೆ ಮೇಲಣ ಬುತ್ತಿಯ ಹಾಗೆ (ಗಾದ). ೨. ಕೂಡಿಟ್ಟುದು; ಸಂಚಿತವಾದುದು; ಸಂಗ್ರಹ: ಕೊಟ್ಟದ್ದು ಕಟ್ಟಿತೆನಬೇಡ ಮುಂದಕ್ಕೆ ಕಟ್ಟಿಹುದು ಬುತ್ತಿ (ಸರ್ವಜ್ಞ. ೬೦೭); ಸಗ್ಗದವರಿಗನೇಕ ಪುಣ್ಯದ ಬುತ್ತಿ ತೀರಲು ನೂಕುವರು ಭೂತಳಕೆ (ಅರ್ಜಾಪಿ. ೨೦-೨೨). ೩. ಚೆಣ್ಣೆ ಕೋಲಾಟ, ಚೆಂಡಾಟ ಮೊದಲಾದ ಆಟಗಳಲ್ಲಿ ಹಾರಿಬಂದ ಚೆಣ್ಣೆ, ಚೆಂಡು ಮೊದಲಾದುವನ್ನು ಹಿಡಿಯುವುದು: ಅಯ್ಯ ಕಾಳನಿಗೆ ಬುತ್ತಿ ಕೊಟ್ಟು ಆಟವನ್ನು ಕಳೆದುಕೊಂಡನು(ಕಳಮು. ೦೮). 'ಬುತ್ತಿ ಹಿಡಿ' ಪರಾ. ೪. (ಅಲಂ) ಸ್ಮರಣೆ; ನೆನಪು: ಬಾಳಿನ ಅನುಭವದ ಬುತ್ತಿಯನ್ನು ಅವನ ಮನಸ್ಸು ಬಿಚ್ಚಿ ನೋಡುತ್ತಿದೆ (ಮಂಗಮಾ. ೯೦).

**ಬುತ್ತಿಗಂಟು**=೧. ಪರವೂರಿಗೆ ಪ್ರಯಾಣ ಹೊರಟಾಗ ಕಟ್ಟಿಕೊಂಡು ಹೋಗುವ ಆಹಾರದ ಗಂಟು,–ಕಟ್ಟು. ೨. (ಅಲಂ) ಅನುಭವಿಸಬೇಕಾದುದು: ಎಷ್ಟು ಜನರ ವಿರೋಧವನ್ನು ಬುತ್ತಿಗಂಟಾಗಿ ಕಟ್ಟಿಕೊಳ್ಳಬೇಕು (ಜನಪಾ. ೩೦). **ಬುತ್ತಿಯ ಚೀಕ್ಲ**=ಅನ್ನದ ಚೀಲ: ಬುತ್ತಿಯ ಚೀಕ್ಲವನ್ನೂ ಸೋರೇಬುರುಡೆಯನ್ನೂ ತಕ್ಕೊಂಡು ಅಡವಿಯಲ್ಲಿ ಹಸುಗಳನ್ನು ಕಾಯುತಲಿದ್ದರು (ಕೃಚಾಕ. ೬೯). **ಬುತ್ತಿಯನ್ನು ಕಟ್ಟು,** **ಬುತ್ತಿಕಟ್ಟು**=೧. ಪ್ರಯಾಣಕ್ಕೆ ಸಿದ್ಧವಾಗು: ಹಾಗಾದರಿನ್ನೇನು? ಬುತ್ತಿಯನ್ನು ಕಟ್ಟು; ಈಗ ನಿನಗೆ ತಪೋವನವೂ ಉಪವನವಾಯಿತಂದೂ ಹಿಸುಪೆನು (ಶಾಕುಂ. ೨೬-೫). ೨. ಪ್ರಯಾಣದಲ್ಲಿ ಬೇಕಾಗುವ ಆಹಾರವನ್ನು ಕಟ್ಟಿಕೊಳ್ಳು: ಅಪ್ಪಾ, ನಾನು ಊರಿಗೆ ಹೋಗಬೇಕಾಗಿದೆ ಬುತ್ತಿಕಟ್ಟಿ ಕೊಡು (ರೂಢ). [< ಸಂ. ಭುಕ್ತಿ]

**ಬುತ್ತಿಗೊಡು** (ಕ್ರಿ). ಎಡೆ ಮಾಡು; ನೈವೇದ್ಯ ಮಾಡು: ಪೊಸತಿಲ ಮೇಲನೊಕ್ಕಿಜಿದು ಮಿಸಲ ತುಯ್ಯಲನಟ್ಟು ಬಾಗಿಲರ್ಚಿಸಿ ಜಿಗುರಿಕ್ಕಿ ಚಟ್ಟಜಿದು ಕಂಬದೊಳಿಂಬಿನೆ ಬುತ್ತಿಗೊಟ್ಟು ಪೂಜಿಸಿ (ಶಬರ. ೯೬೩).
[ಬುತ್ತಿ + ಕೊಡು]

**ಬುತ್ತಿಚಿಗುರು** (ನಾ). (ಮೈಸೂರಿನಲ್ಲಿ ಸಿಗುವ) ತುಂಬಾ ರುಚಿಕರವಾದ ಚಿಗುರು ವೀಳೆಯದೆಲೆ: ಮೈಸೂರಿನಲ್ಲಿ ಬುತ್ತಿಚಿಗುರು ತುಂಬಾ ಪ್ರಸಿದ್ಧಿ (ರೂಢ). [ಬುತ್ತಿ ? + ಚಿಗುರು (< ಚಿಗುರ್)]

**ಬುತ್ತಿಯಿಡು** (ಕ್ರಿ). = ಬುತ್ತಿಗೊಡು: ತಲಪಜ್ಜಾಭ್ಯಾಕ್ತದಿಂ ಮರ್ದಿಸಿ

ರಜಕನನಾತ್ಮಪ್ರವೇಶಕ್ಕಿದೇ ಮಂಗಲಮೆಂಬಂತಾ ಪುರದ್ವಾರದೊಳವನಡಗಿ ಬುತ್ತಿಯಿಟ್ಟಿಲ್ದಿನಿಂ ಪೂವಲಿಗೆಯ್ದು . . . ಪೊಕ್ಕಂ ದನುಜನ ಪೊಬಲಂ ಸಾಗ್ರಜನ್ಮಂ ಮುಕುಂದೆಂ (ಜಗಪ. ೬-೧೦). [ಬುತ್ತಿ + ಇಡು$_1$]

**ಬುತ್ತಿರೊಟ್ಟಿ** (ನಾ). ೧. ಪ್ರಯಾಣಕಾಲಕ್ಕೆಂದು ಕಟ್ಟಿದ ರೊಟ್ಟಿ : ಹಳ್ಳಿ ದಿಳ್ಳಿಯವರೆಗೆ ನೂರುದಾರಿಯ ಸವೆದು ಎಲ್ಲರಿಗು ಹಂಚೋಣ ಬುತ್ತಿ–ರೊಟ್ಟಿ (ಕಂಹು. ೧೯-೧೬) ; ನಿಮ್ಮಂತಹ ವೀರರನ್ನು ಬುತ್ತಿ ರೊಟ್ಟಿಯನ್ನು ತಿನ್ನುವುದಕ್ಕೆ ಬಿಡದೆ ಕಟ್ಟಿಹಾಕಿದರೆ (ದೇಶಿಬಾ. ೬೨). ೨. (ಉಕ) ಸುಮಾರು ಐದು ಅಥವಾ ಏಳನೆಯ ತಿಂಗಳಿನಲ್ಲಿ ಗರ್ಭಿಣಿಸ್ತ್ರೀಗೆ ನಡೆಸುವ ಒಂದು ಉತ್ಸವಸಮಾರಂಭ ಮತ್ತು ಅಂದು ಊರ ಜನರಿಗೆಲ್ಲ ಊಟಕ್ಕೆ ಏರ್ಪಡಿಸುವ ಒಂದು ವಿಧಿ: ಆದರ ಜೊತೆಗೇನೇ ಚೊಚ್ಚಿಲ ಬಸುರಿಗೆ ಮಾಡಬೇಕಾದ ಬುತ್ತಿರೊಟ್ಟಿಯ ಚಿಂತೆ ಅವನಿಗೆ ಹತ್ತಿತು (ಅಬೋಳ. ೬೮).

[ಬುತ್ತಿ + ರೊಟ್ಟಿ]

**ಬುತ್ತಿಹಿಡಿ** (ಕ್ರಿ). ಚಿಣ್ಣಕೋಲಾಟ, ಚೆಂಡಾಟ ಮುಂತಾದ ಆಟವಲ್ಲಿ ತೂರಿ ಬಂದ ಚಿಣ್ಣಿ, ಚೆಂಡು ಮೊದಲಾದುವುಗಳನ್ನು ಹಿಡಿ : ಅಶೋಕನ ಗುಂಪಿನ ರಂಗನು ಗೆರೆಯ ಹತ್ತಿರ ನಿಂತು ಚೆಂಡು ಎಸೆದನು . . . ಶಂಕರನು ಬುತ್ತಿಹಿಡಿದನು (ಕಶಕ. ೪-೪೮); ಮೂರನೇ ಏಟಿನಲ್ಲಿ ರಾಮಚಂದ್ರ ಬುತ್ತಿಹಿಡಿದನು (ಕಳಹು. ೦೮).

[ಬುತ್ತಿ + ಹಿಡಿ$_1$ (< ಪಿಡಿ$_1$)]

**ಬುದಿಂಗನೆ** (ಅ). ಒಂದು ಅನುಕರಣಾವ್ಯಯ : ಕಂಳಿತಲ್ಲಿಂದ ಅವನು ಬುದಿಂಗನೆ ಎದ್ದು ನಿಂತ (ಐಶಸ. ೦೩) ; ಈಕೆ ಹಾದಿ ನೋಡಿದಳು. ಬುದಿಂಗನೆದ್ದು ಬಾಗಿಲಿಗೆ ಬಂದಳು (ಏಶಕ. ೩೮). [? + –ಅನೆ$_1$]

**ಬುದಿಲ್** (ನಾ). ಒಂದು ಅನುಕರಣ ಶಬ್ದ : 'ಬುದಿಲೆನ್' ಪರಾ.

**ಬುದಿಲನೆ** (ಅ). ಒಂದು ಅನುಕರಣಾವ್ಯಯ : ಬುದಿಲನೊಗೆವಾನಂದ ಜಲವರಿವ ಜಲಕಣ್ಣೊಳೊದಗೆ . . . ಶ್ರೀಪದದ ಕಿಂಕರಭಾವದಿಂದ ಕಿನ್ನರಿಯ ಬ್ರಹ್ಮಯ್ಯ ನುತಿಸುತ್ತಿರ್ದನು (ಹರಿಶೂ. ೩೯-೬). [ಬುದಿಲ್ + –ಅನೆ]

**ಬುದಿಲೆನ್** (ಕ್ರಿ). ಬುದಿಲ್ ಎಂದು ಶಬ್ದಮಾಡು : ಬುದಿಲೆನೆ ತೊಜೆಯುಂ ಪಾಯ್ದು ಮಾತಂಗ ಕಳಭಮಂ ಪಿಡಿದು . . . ತನ್ನ ಮಠಕ್ಕೆ ತಂದು (ಧರ್ಮಾಮೃ. ೦೨-೦೨೮) ; ಸಜ್ಜಿಂಟ ಘುಲಿಲೆಂಬ ಗಿಟಿಲೆಂಬ ಬುದಿ [ಪಾಠಾಂ. ಘುರಿ]ಲೆಂಬ ಭೋರೆಂಬ ಕೂರಸಿಗಳುರವಣೆಯ ದನಿಯುಡುತಂ ಪುಟ್ಟಿ (ಇಹಪ. ರೀ. ೪೦-೨೩).

ಬುದಿಲ್ಬುದಿಲೆನ್ (ದ್ವಿರುಕ್ತಿ) : ದೊಪ್ಪುಢಮಲೆಂಬ ಬುದಿಲ್‌ಬುದಿ ಲೆಂಬ ಸಂಭ್ರಮಂ ನೆರೆದು . . . ನೆಟಿಲ್ ಪಟಿಲ್ ಗಂಗಿರಿಲೆಂಬ ನಿಷ್ಠುರ ರವಂ ಮಿಗೆ ತಳ್ಪಿಜಿದತ್ತು ಯುದ್ಧದೊಳ್ (ಗಂಳ. ೬-೬೬).

[ಬುದಿಲ್ + ಎನ್$_1$]

**ಬುದುಬುದ** (ನಾ). ನೀರ ಮೇಲಿನ ಗುಳ್ಳೆ ; ಬುದ್ಬುದ : ಬಸವನ ನುಡಿ ಶಿಲಾಶಾಸನವು ತಪ್ಪದ ನುಡಿಗಳಲ್ಲದೆ ಮಿಕ್ಕಿನಂತೆ ಕೆಡುತ್ತ ಹುಟ್ಟುತಿಹ ಕಡಲ ತೆರೆಗಳೆ ಬುದುಬುದು[ಪಾಠಾಂ. ಬುದ್ಬುದಂ]ಗಳೆ . . . ಗಾಳಿಯ ಮಿಂಚುಗಳ ಚಂದ್ರಮನೇ (ಬಸಪು. ೬೭-೨೫) ; ಜಲಸಮುದ್ರದ ಬುದು ಬುದಂ[ಪಾಠಾಂ. ಬುದ್ಬುದಂ]ಗಳೊ ಶಿಳಿಯಲರಿದೆನೆ ಹರಿಗೆ ಮುಸುಕಿತು ಬಿಳಿದು ಚಾರಿಗಳುಲಿವ ಘಂಟೆಯ ಬಿರುದಿನುಬ್ಬುಟೆಯ ತಲಪಟದೊಳೆಂಕಿದರು (ಕುಮ್ಮಕಿ. ೪-೨೬) ; ಮಗನೆ ಕಲ್ಪಾಂತದ ಮಹಾಂಬುಧಿಯುಗ್ರವೀಚೀಭುಜದ ಭಂಗದಲಿ ಬುದುಬುದು[ಪಾಠಾಂ. ಬುದಬುದಂ]ಗಳು ತೋಜಿ ಕೆಡುವಂದದಲಿ ತಾನಿದರಾಗುಹೋಗಿನ ಹದನನಜಿಯೆನು (ಐಶಾಗ. ೨-೨-೩೬).

[< ಸಂ. ಬುದ್ಬುದ]

**ಬುದುಬುದಿಸು** (ಕ್ರಿ). ಗುಳ್ಳೆಯ ಹಾಗೆ ಊದಿಕೊಳ್ಳು, –ಊದು : ಪಜಾಗಳು ಬುದುಬುದಿಸಿ ರಕುತವ ಕಾಜಿ ಕಾಳಿಜ ಬಿಂಡ ನೆಣ ಜಗಿದೋಜಿ . . . ಪೂರಾಯ ಘಾಯದ ತಾರುಥಟ್ಟಿನ ಹೆಣನ ಮೆದೆ ಹೇರಾಳ ರಂಜಿಸಿತು (ಕುಮ್ಮದ್ರೋ. ೦೦-೬). 'ಬುದುಬುಡಿಸು' ಪರಾ.

[ಬುದುಬುದ + –ಇಸು$_3$]

**ಬುದ್ದಣಿ** 'ಬುದ್ದಲಿ' ನೋ.

**ಬುದ್ದಣಿಗೆ** 'ಬುದ್ದಲಿಕೆ' ನೋ.

**ಬುದ್ದಲಿ**. ಬುಜ್ಜಣಿ, ಬುದ್ದಣಿ, ಬುದ್ಲಿ (ನಾ). ಎಣ್ಣೆ, ತುಪ್ಪ, ನೀರು ಮೊದಲಾದ ದ್ರವಪದಾರ್ಥಗಳನ್ನು ತುಂಬಿಡುವ ಚರ್ಮದ ಚೀಲ ; ಪಕ್ಕಲೆ : ಬುದ್ದಲಿ[ಪಾಠಾಂ. ಣಿ] ಹಾಡ ಪಕ್ಕಲೆ ಕಂಬಿಗಳ ಕೊಡನ ಧಾರೆಗಳ ಘೃತ ತೈಲ ಬಸೆಗಳ ಸಾರ ಕಟ್ಟಿತು (ಕೊಪಿಭಾ. ೩-೯-೪) ; ಹೆದ್ದನಿ ಬುಡನಾಶ ಉದ್ದ ಗುಡ್ಡವು ತಂದ ಬುದ್ದಲಿ ನಡು ದೊಡ್ಡ ಕುಕ್ಷಿ ಶುದ್ಧ ಕುರೂಪಿಗಳ್ಬುದ್ಧಿಯೊಳಧಿಕರಲ್ಲಿದ್ದ ವೈಶ್ಯರ ಕೇರಿಗಳ ಮುಂದೆ ನೋಡುತ ಬರಲು (ಕದಾ. ೩-೦೦೪) ; ತಾಲ್ಲೂಕಿನ ಪ್ರತಿ ಕುಲಕರಣಿಯೂ ಒಂದೊಂದು ಬುದ್ದಲಿ (ಕುದುರೆಯ ಮೇಲೆ ಹೇರುವ ಚರ್ಮದ ಹಸಿಬೆ) ತುಪ್ಪವನ್ನು ತಂದುಕೊಡಬೇಕೆಂಬ ಕಟ್ಟಲೆಯಾಯಿತು (ಕರಾ. ೩೭೪). **ಬುಜ್ಜಣಿ** : 'ಪೊಂಬುಜ್ಜಣಿ' ಪರಾ. **ಬುದ್ದಣಿ** : ಮೇಲಿನ 'ಬುದ್ದಲಿ' ಉಲ್ಲೇಖಿದ 'ತೊರೆರಾ' ಪ್ರಯೋಗದ ಪಾಠಾಂತರ ವನ್ನು ನೋಡಿ. **ಬುದ್ಲಿ** : ಹರಳೆಣ್ಣೆ ಬೆಣ್ಣೆಗಾಸಿದ ತುಪ್ಪ ಗೊಪ್ಪರಿ ಯೆಣ್ಣೆಗಳ ಬುದ್ಲಿಗಳ ತಿಂಥಿಣಿಯನ್ನು ನಿನ್ನೊಡೆ ಬರಿಯ ಕೊಡಿಪೆನು ಕೂಳ ಕೂಲಿಯನು (ಅರ್ಜುಪಿ. ೬-೩೧).

[← ಹಿಂ. ಬುದಲಾ ; ಮರಾ. ಬುದಲಾ. ಬುದಲೀ, ಬುಧಲಾ./ತುಳು. ಬುದ್ದಲಿ, ಬುದ್‌ಲೆ, ಬುದಲಿ, ಬುದುಳೆ, ಬುದ್ದೊಲಿ]

**ಬುದ್ದಲಿಕೆ**, ಬುಜ್ಜಣಿಗೆ, ಬುದ್ದಣಿಗೆ (ನಾ). ೧.=ಬುದ್ದಲಿ : "ಚರ್ಮ ಘರ್ಘರಮೆನಲು ಬುದ್ದಲಿಕೆ[ಪಾಠಾಂ. ಬುದ್ದಣಿಗೆ,ಬುಧಳಿಗೆ] ನಾಮಮುಕ್ಕಂ" (ಮುಂಗಾಪು. ೬೩-೨೬) ; ಎಣ್ಣೆಯ ದೊಡ್ಡ ದೊಡ್ಡ ಬುದ್ದಲಿಕೆಗಳ ಮರೆಯಲ್ಲಿ ಕುಳಿತುಕೊಂಡೆ (ಮೇಂಐಪು. ೦೬೦). **ಬುಜ್ಜಣಿಗೆ** : ೧. ಸ್ನನವೆ ಬುಜ್ಜಣಿಗೆ [ಪಾಠಾಂ. ಬಿಜ್ಜಣಿಗೆ, ಬುದ್ದಲಿಕೆ] ವೈ ಲಾವಣ್ಯರಸತೈಲ ವನಜಾಕ್ಷಿಮುರ ತೋಳೆ ದಂಡ ಘನಕಾಂತಿವೆತ್ತ ಮಾಣಿಕ್ಯಮುಂಗುರವೆರಲ್ಗಿನುಗಿನ ಸೊಡರೊಪ್ಪಿ ದುವು (ಪೋಚಹ ೦೫-೬). ೨. (ಮದುವೆಯಲ್ಲಿ ವಧುವಿಗೆ ಕೊಡ ಬೇಕಾದ ಮಂಗಳಕರ ವಸ್ತುಗಳನ್ನು ತುಂಬಿರುವ) ಮುಚ್ಚಳದಿಂದ ಕೂಡಿದ ಬಿದಿರಿನ ಬುಟ್ಟಿ : ಸಜ್ಜೆಯ ಮನೆಗಳೊಳಗೆ ಚಿಕ್ಕಮಯವಾದ ಗುಜ್ಜರಿಗಾಲ ಮಂಚಗಳು ಬಿಜ್ಜಣಿಗೆಗಳೆಲೆಯಾಹ ಬುಜ್ಜಣಿಗೆಗಳ್ಬಜ್ಜಾಯ ವಿರಾಜಿಪವು (ಅಂಜತ. ೩-೦೨೪) ; ಮೂರುಂಡೆ ತವಟ, ಒಂದು ಚಿಪ್ಪು ಹಣ್ಣು, ತೆಂಗಿನಕಾಯಿ, ತಾಲಿ, ಪರಿಗಡಗ—ಇವು ಬುಜ್ಜಣಿಗೆಯಲಿ ತುಂಬ ಬೇಕಾದ ಸಾಮಾನುಗಳು (ಪಪ್ಪೂರು. ೮೦). **ಬುದ್ದಣಿಗೆ** : ೧. ಕೃತಿ— ಸ್ನೇಹಪಾತ್ರ, ಬಿತ್ತು=ಕೊಗಲ ಬುದ್ದಣಿಗೆ (ಪಾಶಂ. ೪). [<ಬುದ್ದಲಿ]

**ಬುದ್ಧಿ** (ನಾ). ೧. ತಿಳಿವಳಿಕೆ ; ಜ್ಞಾನ ; ಅರಿವು : ಉದ್ದವಾಗಿ ಬೆಳೆದವಾಗಿ ಬುದ್ಧಿ ಕಡಿಮೆ (ಗಾದೆ). ೨. ಜ್ಞಾನಿಗಳನ್ನು, ಹಿರಿಯ ರನ್ನು, ಪೂಜ್ಯರನ್ನು ಸಂಬೋಧಿಸುವಾಗ ಬಳಸುವ ಗೌರವಸೂಚಕ ವಾದ ಪದ,—ಶಬ್ದ : P ಮೈಸೂರಿನ ಅರಸುಮನೆತನದವರಲ್ಲಿ ಸಿರಿವಂತರನ್ನು ಸೇವಕರೂ ಮತ್ತು ಹಿರಿಯರನ್ನು ಕಿರಿಯರೂ ಸಂಬೋಧಿಸುತ್ತಿದ್ದ ರೀತಿಯಿದು. ಆ ಬಳಿಕ ಕಿರಿಯರು ಹಿರಿಯ ರನ್ನು, ಕೆಳಮಟ್ಟದವರು ಒಡೆಯರನ್ನು ಕರೆಯಲು ಇದು ಎಲ್ಲಾ ಸನ್ನಿವೇಶಗಳಲ್ಲೂ ಅನ್ವಯವಾಯಿತು. ಇದರ ಅವಶೇಷವೇ ಈಗಲೂ ಅಲ್ಲಲ್ಲಿ ಕಂಡು ಬರುವುದು : ಬುದ್ಧಿಯವರು ಮರುಗಬಾರದು, ಸಂಕಟ ಪಡಬಾರದು (ಸಂಗಸೋ. ೦೩೩-೨೦) ; ಅರಮನೆಯ ಮೆಟ್ಟಿಲಿನಿಂದ

ಯಾರೋ ಕೂಗಿದರು . . . ಬುದ್ಧಿಯೋರು. ಪುಟ್ಟ ಬುದ್ಧಿಯವರು (ಪುಟ್ಟರ. ೩) ; ಆ ಹಾಡು ಕೇಳಿದಿಯಾ, ರಂಗ? ಕೇಳಿದೀನಿ ಬುದ್ಧಿ (ಶರೀಪ. ೦೦೪). [<ಸಂ. ಬುದ್ಧಿ]

**ಬುದ್ಧಿಗಲಿಸು** (ಕ್ರಿ). ತಿಳಿವಳಿಕೆಯನ್ನು ಹೇಳಿಕೊಡು ; ಬುದ್ಧಿ ಹೇಳು : ಪಾಠಕಲಿಸು : ಹೊದ್ದಿರಲುರ್ವಿಯು ಹೆಜಸಾರು ಸಾರೆಂದು ಬುದ್ಧಿಗಲಿಸಿ ಕೇಳದಿರಲು ಗದ್ದಿಸಿ ತೆರೆಗೆಯ್ಗಳಿಂದೆ ತಾಡಿಸುವಂತೆ ಗುದ್ದಿತು ಜಲನಿಧಿ ತಟವ (ಮೋಹತ. ೨-೬). [ಬುದ್ಧಿ + ಕಲಿಸು₁]

**ಬುದ್ಧಿವಂತ, ಬುದ್ಧಿವಂತ₂** (ನಾ). ಎಣ್ಣೆ ಮೊದಲಾದ ದ್ರವ ಪದಾರ್ಥಗಳನ್ನು ಕಿರಿದಾದ ಬಾಯೊಳಕ್ಕೆ ಸಾಗಿಸಲು ಉಪಯೋಗಿಸುವ ಅಗಲ ಕಿರಿದಾಗುತ್ತ ಹೋಗುವ ಕೊಳವೆ ; ಆಲಿಕೆ : ಒಂದೂವರೆ ಮೊಳದ ಉದ್ದ ಬಿದಿರಿನ ಕೊಳವೆಯನ್ನು ತೆಗೆದುಕೊಂಡು ಕೊನೆಯನ್ನು ಸಿವರು ಇಲ್ಲದ ಹಾಗೆ ನುಣುಪಾಗಿ ಮಾಡಿ, ಮತ್ತೊಂದು ಕೊನೆಗೆ ಒಂದು ಬುದ್ಧಿವಂತವನ್ನು (Funnel) ಸಿಕ್ಕಿಸಿ . . . ಪಿಚಕಾರಿ ಹೊಡೆದು ಮಲವಿಸರ್ಜನೆ ಮಾಡಿಸಬೇಕು (ಗ್ರಾಪಶಿ. ೦೨೩). ಬುದ್ಧಿವಂತ₂ : ಆ ಗೋಡೆಯ ಹತ್ತಿರ ಓರಣಗೊಂಡ ಒಂದು ಧಾನ್ಯದ ಮೂಡೆ . . . ಮಗ್ಗುಲಲ್ಲಿ ಸೀಮೆಯೆಣ್ಣೆಯ ಡಬ್ಬ, ಬುದ್ಧಿವಂತ, ಪಂಪು (ರಾಮೂಶಿ. ೦೦೧) ; ದಳ ವಲಯ ಕೊಳವೆಯಂತೆ ಉದ್ದವಾಗಿದ್ದು ಬುದ್ಧಿವಂತದ (ಫನ್ನಲ್) ಆಕಾರ ಹೋಲುತ್ತದೆ (ಕಬಕೋ. I, ೫೭೦).

[ ? ]

**ಬುದ್ಧ** (ಗು). ೧. ತಿಳಿದ ; ಅರಿತ ; ಬಲ್ಲ. (ನಾ). ೨. ತಿಳಿದುದು; ಅರಿವಿಗೆ ಬಂದುದು : "ಬುದ್ಧಂ, ಬುಧಿತಂ . . . ಅಪಸಿತಂ, ಅವಗತಂ—೭ ತಿಳಿಯಲ್ಪಟ್ಟದ್ದು, ಅರಿಕೆಯಾಗಲ್ಪಡುವದು" (ಸಿ‌ಬ್ರಾಂತಿ. ೩೩೨). ೩. ತಿಳಿದವನು ; ಜಾಣ ; ಬುದ್ಧಿವಂತ : ಈ ಪುಸ್ತಕ ಬುದ್ಧರಿಗಾಗಿ ಅಲ್ಲ. ಸಿದ್ಧರಿಗಾಗಿಯೂ ಅಲ್ಲ . . . ನನ್ನಂತಹ ಅಬುದ್ಧರ ಬುದ್ಧಿಯ ಪ್ರಚೋದನೆಗಾಗಿ ಮಾತ್ರ (ಶಾಪಾತ್ರ. ix ಸಂಕಲ್ಪ). 'ನಿಶ್ಚಯಬುದ್ಧ' ಪರಾ. ೪. ಬೌದ್ಧ ಅಥವಾ ಜೈನ ಸಂನ್ಯಾಸಿ : "ಯತಿ ಬುದ್ಧಂ . . . ಜಿತಕಾಮಾಪ್ನಯಂ" (ಪಾಪಾರ. ೪೩). ೫. ಪೂರ್ಣಜ್ಞಾನವನ್ನು ಸಂಪಾದಿಸಿದ ಶಾಕ್ಯವಂಶದ ದೊರೆಯಾದ ಸಿದ್ಧಾರ್ಥ ; ಬೌದ್ಧಮತ ಪ್ರವರ್ತಕ : ಇಪ್ಪತ್ತೈದು ಜನ ಅರ್ಹಂತ ಅಥವಾ ಬುದ್ಧರಲ್ಲಿ ಕೊನೆಯವನು : ವಿಷ್ಣುರೂಪವಾದ ಮತ್ಸ್ಯ, ಕೂರ್ಮ, ವರಾಹ, ನೃಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ಎಂಬ ದಶಾವತಾರಗಳಲ್ಲಿ ಒಂಬತ್ತನೆಯ ಅವತಾರವನ್ನು ಧರಿಸಿದವನು ; P "ಬುದ್ಧರು ೨೪ : ದೀಪಂಕರ, ಕೊಂಡಸ್ಸ (ಕೌಂಡಿನ್ಯ), ಮಂಗಲ, ಸುಮನ, ರೆವತ (ರೈವತ), ಸೊಭಿತ (ಶೋಭಿತ), ಅನೊಮದಸ್ಸೀ (ಅನೋಮದರ್ಶೀ), ಪದುಮ (ಪದ್ಮ), ನಾರದ, ಪದುಮುತ್ತರ (ಪದ್ಮೋತ್ತರ). ಸುಮೇಧ, ಸುಜಾತ, ಪಿಯದಸ್ಸೀ (ಪ್ರಿಯದರ್ಶೀ). ಅತ್ಥದಸ್ಸೀ (ಅರ್ಥದರ್ಶೀ), ಧಮ್ಮದಸ್ಸೀ (ಧರ್ಮದರ್ಶೀ), ಸಿದ್ಧತ್ಥ (ಸಿದ್ಧಾರ್ಥ), ತಿಸ್ಸ (ತಿಷ್ಯ), ಫುಸ್ಸ (ಪುಷ್ಯ), ವಿಪಸ್ಸೀ (ವಿಪಶ್ಯೀ), ಸಿಖೀ (ಶಿಖೀ), ವೆಸ್ಸಭು (ವೇಸ್ಸಭೂ), ಕಕುಸಂದ (ಕಕುಸಂಧ). ಕೋಣಾಗಮನ (ಕನಕಮುನಿ), ಕಸ್ಸಪ (ಕಾಶ್ಯಪ) (ಬುದ್ಧವಂಸೋ—ಸಂ. ೨೧೮ ; ಭಾರಸಂ. ೯೩). ಬುದ್ಧರು—೨೫ : ಬುದ್ಧರು—೨೪+ಗೌತಮ ಬುದ್ಧ (ಸಂ. ೨೧೮)" (ಶ್ರೀಪತ್ರ. ೨೯೩) : "ಶೌದ್ಧೋದನಿಃ, ದಶಬಲಃ, ಬುದ್ಧಃ, ಶಾಕ್ಯಃ, ತಥಾಗತಃ . . . ಜಿನಃ, ಸಿದ್ಧಾರ್ಥಃ —ಈ ೧೧ ಬುದ್ಧನ ಪೆಸರ್" (ಹಲಾಯು. ೦೩-೯೩) ; ಬುದ್ಧನ ರಥಮಂ ಪೊಜಮಡಿಪ್ಪದ್ಧತೆಯಿಂ ದೇವಲೋಕದಿ ದೇವರ್ ಸನ್ನದ್ಧಪರರಾಗಿ ಪಲವುಂ ಪದ್ಧತಿಯಿಂ ಬಂದರಲ್ಲಿ ಸಂದೆಯಮುಂಟೇ (ಧರ್ಮಾಮೃ. ೬-೨೦೩) ; ದೈವಗಳು ಜಿನ ಬುದ್ಧರಾದೊಡೆ ಆವಗಂ ಮನುಜಾಕೃತಿಯೊಳಿಹರೇ ವಸುಧೆಯೊಳು ನಿಜಮಹತ್ವಮನುಡುಗಿ (ಬಸಪು. ೩೪-೭); ಬುದ್ಧ, ಶಂಕರ, ವಿದ್ಯಾರಣ್ಯ, ವಿವೇಕಾನಂದ ಇತ್ಯಾದಿ ಮಹಾಪುರುಷರು ಭಾರತೀಯಸಂಸ್ಕೃತಿಯ ಉದ್ಧಾರಕರು (ಜುಕ್ತಾರ. ೦೦೩ ಶೀ೩೪). [ಸಂ.]

**ಬುದ್ಧಜಾತಕ** (ನಾ). ಗೌತಮಬುದ್ಧನ ಜನ್ಮಾಂತರಗಳ ಕತೆ : ಆತನು ಹೇಳಿದ ಕಥೆಗಳು ಬುದ್ಧಜಾತಕಗಳಲ್ಲಿ ಹೇರಳವಾಗಿ ಕಂಡುಬರುತ್ತದೆ (ಕಥೆ. ೪). [ಸಂ.]

**ಬುದ್ಧದರ್ಶನ** (ನಾ). ಬೌದ್ಧಧರ್ಮ—ಸಿದ್ಧಾಂತ : ಬುದ್ಧದರ್ಶನದಲ್ಲಿ ಬದ್ಧಹೃದಯಂ ವೈಶ್ಯ ಬುದ್ಧದಾಸಂಗೆ ಮತ್ತಾತನ ಮನೋರಮಣಿ ಬುದ್ಧದಾಸಿಗೆ ಜನಿಸಿ (ಸಮ್ಯಕ್. ೯-೩). [ಸಂ.]

**ಬುದ್ಧವಿಹಾರ** (ನಾ). ಬೌದ್ಧಭಿಕ್ಷುಗಳು ವಾಸಿಸುವ ಸ್ಥಳ : ನೆಗಬ್ದತ್ತುಂಗಶಿವಾಲಯಪ್ರತತಿಯಾದಿತ್ಯಾಲಯಂ ಸಾಲೆ ವಿಷ್ಣುಗೃಹಂ ಬುದ್ಧವಿಹಾರ ಮಹಾಭವನಂ ನಾಗಾಲಯಂ ಬಾವಿ [ದಿ]ಗ್ಗಿಗೆ ಶತ್ರಂ ಕೆಜೆ ದೀಪಮಾಲೆಯಿನೆ ನಾನಾಧರ್ಮ್ಮಮಂ ಮಾಡಿಸಲ್ (ಸೌಇಇ. XX, ೪೯-೩೯ ; 1076 ?). [ಸಂ.]

**ಬುದ್ಧಸಮಯ** (ನಾ). ಬೌದ್ಧಧರ್ಮ,—ಮಾರ್ಗ : ಈಶ್ವರನೆ ಕರ್ತನೆಂದು ವಸುಮತಿಯೊಳ್ ಪ್ರತಿಷ್ಠಿಸಿಯೆಂದುವುಂ ಜಿನ ಬುದ್ಧಸಮಯವಿದೆಂದುಳಿವ ಪೆಸರಿಲ್ಲದಂತಾತನಾ ತೊಡೆದು ಕಳೆದು (ಬಸಪು. ೩೦-೫೦). [ಸಂ.]

**ಬುದ್ಧಾವತಾರ** (ನಾ). ವಿಷ್ಣುವಿನ ದಶಾವತಾರಗಳಲ್ಲಿ ಒಂಬತ್ತನೆಯ ಅವತಾರ : "ಶ್ರೀಘನ—ಬುದ್ಧಾವತಾರ" (ಗಂಗಾಮ. ೩೦೧). [ಸಂ.]

**ಬುದ್ಧಿ** (ನಾ). ೧. ತಿಳಿವಳಿಕೆ : ಅರಿವು : "ಪ್ರೇಕ್ಷಾ, ಪ್ರಜ್ಞಾ, ಪ್ರತಿಭಾ. . .ಬುದ್ಧಿಃ, ಮತಿಃ, ಮೇಧಾ, ಸಂಖ್ಯಾ, ಸಂವಿತ್ತಿಃ, ಉಪಲಬ್ಧಿಃ—ಈ ೧೩ ಬುದ್ಧಿ" (ಹಲಾಯು. ೫೩-೦೭೯) ; ನಿದ್ರೆಯಿಲ್ಲದೆ ಬಗೆ ಬೆರ್ಚಿ ಬುದ್ಧಿಯುಣಮಿಲ್ಲದೆ ಸಲ್ಲಳಗಲ್ಕೆಯಿಂದಮಾದಪವಳಲಚ್ಚಿಗಂ ಮಜುಕಮೆಂಬಿಪಜೆಂದೆ ಕನಲ್ದು ಮುಸ್ಸೆ ಬೇಜದ ಸದಿಗಂಡಸಲ್ಲದಜಾಯಂ ಶ್ರಮಮಂ ಕಡುಮೇಟಕಾಜಿರಾ (ಆದಿಪು. ೦೨-೨೨) ; ಅಸ್ತು ಸಮಸ್ತರಾಜ್ಯಮಂ ಮಾಡಿ ಬುದ್ಧಿಯನವಗ್ಗಿರ್ಸೆಂದು ಪೇಳ್ದರು (ಎಕ. VII, ಶಿಕಮೊ. ೪-೩೦ ; 1122); ಅಟ್ಟ ಮೇಲೆ ಒಲೆ ಉರಿಯಿತು. ಕಟ್ಟ ಮೇಲೆ ಬುದ್ಧಿ ಬಂತು (ಗಾದೆ). ೨. ಅಭಿಪ್ರಾಯ ; ಉದ್ದೇಶ : ಗಾಲವರ ಬುದ್ಧಿಯಂ ಕೇಳ್ದು ಕುಂತಳೇಂದ್ರಂ ಚಂದ್ರಹಾಸಪ್ರಭುಗೆ ತನ್ನ ಕುಮರಿಯಂ ಗಾಂಧರ್ವವೈವಾಹವಿಧಿಯಿಂದ ರಾಜ್ಯಸಹಿತಂ ಧಾರೆಯೆರೆದಿತ್ತು (ಚಂದ್ರಸ. ೦೦೬-೫). ೩. ಮನಸ್ಸು : ತಿಂಗಳಾರಕೆ ಮರಳಿ ಬಹೆನೆಂಬ ಭಾಷೆಯಂ ಭಾವಿಸುತೆ, ಭಾಮಿನಿ ಸಮಾಧಾನಬುದ್ಧಿಯಿಂ ಮೇಲೇಳುತಲ್ಲಿಂ ನಡೆದು ಶಿವಾಯತನಕ್ಕೆ (ಚನ್ನಾಂಗ. ೫೬-೦೫೩೯). ೪. ಹಿರಿಯರನ್ನು, ಪೂಜ್ಯರನ್ನು ಗೌರವಾರ್ಥವಾಗಿ ಸಂಬೋಧಿಸುವಾಗ ಬಳಸುವ ಶಬ್ದ : ಮಂದಾರಧ್ವಜನು ಬುದ್ಧೀಯೆಂದು ಕರಮಂ ಮುಗಿದು (ಸೌಗಂಧಿ. ೩೫-೩): "ಹಾದೇನಯ್ಯಾ ?" ಎಂದು ಅರಸು ಕೇಳಿದರೆ "ಅದು ಹಾದು ಬುದ್ಧೀ" ಎಂದೇ ನುಡಿವರು (ಮುದ್ರಾಮಂ. ೨೯) : ಅಷ್ಟು ಹೊತ್ತಿಗೆ ಹೊರಗಡೆ ಯಾರೋ "ಬುದ್ಧಿ" ಎಂದರು (ಮಾಶಾಂ. ೭೨). ೫. [ಜ್ಯೋತಿ] ಲಗ್ನದಿಂದ ಪಂಚಮರಾಶಿ : ತ್ರಿತ್ರಿಕೋಣಾಖ್ಯಮಾ ನವಮಂ ಪಂಚಮರಾಶಿ ಬುದ್ಧಿಯೆನಿಕುಂ . . . ಲಗ್ನಕ್ಕಷ್ಟಮಸ್ಥಾನಂ (ಜಾತಿ. ೦-೩೩). ೬. [ತರ್ಕಶಾ] ಸಾಂಖ್ಯಮತದಂತೆ ಇಪ್ಪತ್ತೈದು ತತ್ತ್ವಗಳಲ್ಲಿ ಹುಟ್ಟುವ ಮನಸ್ಸು, ಅಹಂಕಾರ, ಬುದ್ಧಿ ಎಂಬ ಆತ್ಮನ ಮೂರು ಬಗೆಯ ಅಂತಃಕರಣಗಳಲ್ಲಿ ಒಂದು :

ಬುದ್ಧಿ, ಅಹಂಕಾರ, ಮನಸ್ಸು ಎಂದು ಮೂರು ಅಂತಃಕರಣಗಳು (ಹಿಂದಹಾ. ೬೦). ೭. ಪಂಚಭೂತ ಸಮುದಾಯದಿಂದ ಹುಟ್ಟುವ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತವೆಂಬ ಆತ್ಮನ ನಾಲ್ಕು ಅಂತಃಕರಣಗಳಲ್ಲಿ ಒಂದು ; P ಸಾಂಖ್ಯಮತದವರ ಅಭಿಪ್ರಾಯದ ಪ್ರಕಾರ ಅಂತಃಕರಣಗಳು ಮೂರಾದರೆ ಶ್ರೀಶಾಂಕರಸಿದ್ಧಾಂತದ ಪ್ರಕಾರ ಆತ್ಮನ ಅಂತಃಕರಣಗಳು ನಾಲ್ಕು. ಅವುಗಳ ವಿವರಣೆ ಹೀಗಿದೆ: "ಚಂಚಲ ಹುಟ್ಟುವುದು ಮನಸ್ಸು. ನಾನು ನನ್ನದು ಎಂಬುವದು ಅಹಂಕಾರ, ಇದು ಇಂತಹದೆಂದು ನಿಶ್ಚಯಿಸುವುದು ಬುದ್ಧಿ, ಕೇವಲ ಭಗವಂತನಡಿಗಳಲ್ಲಿ ಸ್ಥಿರವಾಗಿ ನಿಲ್ಲುವ ಬುದ್ಧಿಯೇ ಚಿತ್ತವೆನಿಸುವುದು. ಬುದ್ಧಿಯಲ್ಲಿ ಸುಬುದ್ಧಿ ದುರ್ಬುದ್ಧಿಯೆಂಬೆರಡು ವಿಧಗಳುಂಟು. ಪುಣ್ಯಕರ್ಮದಲ್ಲಿ ಪ್ರವರ್ತಿಸುವುದು ಸುಬುದ್ಧಿ. ಪಾಪಕರ್ಮಪ್ರವೃತ್ತಿಯೇ ದುರ್ಬುದ್ಧಿ" (ಜಕಾರ. ೫-೨೫ ಟಿಪ್ಪಣಿ) : ಪೃಥ್ವಿ ಅಪ್ಪು ತೇಜ ವಾಯು ಆಕಾಶವೆಂಬ ಪಂಚಭೌತಿಕ ಮನ ಬುದ್ಧಿ ಚಿತ್ತ ಅಹಂಕಾರ ಚತುಷ್ಟಯಕರಣಂಗಳು ಸತ್ವ ರಜ ತಮದಲ್ಲಿ ಆತ್ಮನ ಎತ್ತಲೆಂದರಿಯರು (ಅವಹಂ. ೪. ೮೪-೧೪೪). ೮. (ಕೈವಲ್ಯನವನೀತ ಕಾರರ ಪ್ರಕಾರ) ಆತ್ಮನ ಅಂತಃಕರಣಗಳಾದ ಜ್ಞಾತೃ, ಅಹಂಕಾರ, ಚಿತ್ತ, ಬುದ್ಧಿ ಮತ್ತು ಮನಸ್ಸು ಎಂಬ ಐದು ಬಗೆಗಳಲ್ಲಿ ಒಂದು : ಬಯಲು ನಭದೇ ಜ್ಞಾತೃ ಭೂಕಳೆವೆರೆಯೆ ಹಮ್ಮು ಜಲಾಂಶ ಕೂಡಲ್ಕಿರುವ ಚಿತ್ತ ಕೃಶಾನುಭಾಗದಿ ಬುದ್ಧಿ ಮಾರುತನ ಹೊರೆಗಲಸಿ ಮನವಾಯಿತಂತಃಕರಣವೈದೀ ವ್ಯೋಮತತ್ತ್ವದ ಪರಮಸಾರದಲುದಿಸಿದವು (ಅಪ್ಪ.ಶ. ೪-೦೪). ೯. ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ ಮತ್ತು ಸಂಸ್ಕಾರ ಎಂಬ ಆತ್ಮನ ನವವಿಧ ಗುಣಗಳಲ್ಲಿ ಒಂದು : ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ ಮತ್ತು ಸಂಸ್ಕಾರ—ಇವುಗಳೆಲ್ಲ ಆತ್ಮನ ಗುಣಗಳೆಂದು ತಾರ್ಕಿಕರು ಹೇಳುತ್ತಾರೆ (ಭಾಸ್ಕಹಾ. ೨-೩೪). ೧೦. ನ್ಯಾಯಶಾಸ್ತ್ರದ ಪ್ರಕಾರ ಹೇಳಿರುವ ಪ್ರಮೇಯದ ಹನ್ನೆರಡು ಭಾಗಗಳಾದ ಆತ್ಮ, ಶರೀರ, ಇಂದ್ರಿಯ, ಅರ್ಥ, ಬುದ್ಧಿ, ಮನಸ್ಸು, ಪ್ರವೃತ್ತಿ, ದೋಷ, ಪ್ರೇತ್ಯಭಾವ, ಫಲ, ದುಃಖ ಮತ್ತು ಅಪವರ್ಗ ಎಂಬಿವುಗಳಲ್ಲಿ ಒಂದು : ನ್ಯಾಯಶಾಸ್ತ್ರದಲ್ಲಿ ಹೇಗೆಂದರೆ—ಆತ್ಮ, ಶರೀರ, ಇಂದ್ರಿಯ, ಅರ್ಥ, ಬುದ್ಧಿ . . . ಅಪವರ್ಗವೆಂದು ಹನ್ನೆರಡು ವಿಧವಾಗಿ ಪ್ರಮೇಯವನ್ನು ಒಂಬತ್ತನೆಯ ಸೂತ್ರದಲ್ಲಿ ವಿಭಾಗ ಮಾಡಿರುವರು (ಹಿಂದಹಾ. ೦೦೩). ೧೧. [ದ್ವೈತ] ಹತ್ತು ಬಗೆಯ ಪದಾರ್ಥಗಳಲ್ಲಿ ಒಂದಾದ ದ್ರವ್ಯದ ಇಪ್ಪತ್ತು ಬಗೆಗಳಲ್ಲಿ ಒಂದು : ಪರಮಾತ್ಮ, ಲಕ್ಷ್ಮಿ, ಜೀವಾತ್ಮ, ಅವ್ಯಾಕೃತಾಕಾಶ, ಪ್ರಕೃತಿ, ಗುಣತ್ರಯ, ಮಹತತ್ತ್ವ, ಅಹಂಕಾರ ತತ್ತ್ವ, ಬುದ್ಧಿ, ಮನಸ್ಸು, ಇಂದ್ರಿಯ, ಮಾತ್ರಾ, ಭೂತ, ಬ್ರಹ್ಮಾಂಡ, ಅವಿದ್ಯೆ, ವರ್ಣ, ಅಂಧಕಾರ, ಕಾಲ, ವಾಸನಾ, ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಹಿಂದಹಾ. ೨೬೩). 'ದ್ರವ್ಯ' ನೋ. ೧೨. ಹತ್ತು ಪದಾರ್ಥಗಳಲ್ಲಿ ಒಂದಾದ ಗುಣದ ನಲವತ್ತು ಬಗೆಗಳಲ್ಲಿ ಒಂದು ವಿಧ: ಸ್ನೇಹ, ಶಬ್ದ, ಬುದ್ಧಿ, ಸುಖ . . . ಶೌರ್ಯ, ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಹಾ. ೨೬೩). 'ದ್ರವತ್ವ' ನೋ. ೧೩. [ಶೈವ] ಶೈವಾಗಮದಲ್ಲಿರುವ ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯೆ, ಕಾಲ, ನಿಯತಿ, ಕಲೆ, ವಿದ್ಯೆ, ರಾಗ, ಪುರುಷ, ಪ್ರಕೃತಿ, ಗುಣ, ಬುದ್ಧಿ, ಅಹಂಕಾರ, ಚಿತ್ತ, ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ, ವಾಕ್ಕು, ಪಾದ, ಪಾಣಿ, ಪಾಯು, ಉಪಸ್ಥ, ಶಬ್ದತನ್ಮಾತ್ರ, ಸ್ಪರ್ಶತನ್ಮಾತ್ರ, ರೂಪತನ್ಮಾತ್ರ, ರಸತನ್ಮಾತ್ರ, ಗಂಧತನ್ಮಾತ್ರ, ನಭಸ್ಸು, ವಾಯು, ವಹ್ನಿ, ಜಲ, ಭೂಮಿ, ಎಂಬ ಮೂವತ್ತಾರು ತತ್ತ್ವಸಮುದಾಯದಲ್ಲಿ ಒಂದು : ಷಟ್ತ್ರಿಂಶತ್ತತ್ತ್ವಗಳು:—ಶಿವ, ಶಕ್ತಿ . . . ಬುದ್ಧಿ, ಅಹಂಕಾರ, ಮನಸ್ಸು . . . ಜಲ, ಭೂಮಿಯು : (ಇವು ಶೈವಾಗಮದಲ್ಲಿರುವ ತತ್ತ್ವಸಂದೋಹಗಳು) (ಬಾರತ. ೬೩ ೮೩೬). ೧೪. [ಜೈನ] ಬುದ್ಧಿ, ತಪ, ವಿಕ್ರಿಯೆ, ಔಷಧಿ, ರಸ, ಬಲ ಮತ್ತು ಅಕ್ಷೀಣ ಎಂಬ ಏಳುಬಗೆಯ ಋದ್ಧಿಗಳಲ್ಲಿ ಒಂದು : ತ್ರೈಲೋಕ್ಯ ಕ್ಷೋಭಕಾರಣ ತೀರ್ಥಕರ ಪುಣ್ಯಹೇತುಗಳಪ್ಪ ಷೋಡಶಭಾವನೆಗಳಂ ಭಾವಿಸಿ ಭಾವನೆಯೊಳಾದ ಬುದ್ಧಿತಪೋವಿಕ್ರಿಯೌಷಧಿ ರಸ ಬಲಾಕ್ಷೀಣಾಭಿಧಾನ ಸಪ್ತರ್ದ್ಧಿಗಳೊಳಂ ನೆಱೆದು (ಆದಿಪು. ೬-೩೩೮).

ಬುದ್ಧಿಪೂರ್ವಕ = ಅರಿವಿನಿಂದ ಕೂಡಿದುದು : ಶ್ರುತಿಯನ್ನು ನೆಚ್ಚದೆ ಬುದ್ಧಿಪೂರ್ವಕವಾದ ವಿಚಾರವೇ ತತ್ತ್ವಕ್ಕೆ ಆಧಾರವೆಂಬ ವಾದವೇ ಬುಧ್ಯಾರೂಢವೆಂದು ಹೇಳುವುದಾದರೆ ಆಧುನಿಕ ತತ್ತ್ವಗಳನ್ನೆಲ್ಲ ಬುಧ್ಯಾರೂಢವಾದಗಳೆಂದು ಪರಿಗಣಿಸಬೇಕಾಗುತ್ತದೆ (ಶವಿಶ.೨೬. I, ೬೬೮). ಬುದ್ಧಿಮಾತು = ವಿವೇಕದಿಂದ ಕೂಡಿದ ಮಾತು ; ಹಿತವಚನ : ಬುದ್ಧಿಮಾತು ಹೇಳಿದರೆ ಕೇಳಬೇಕಮ್ಮ (ಪುರಂದ. ೪-೦೩೨ ಪಲ್ಲವಿ) : ನಿನಗೆ ಒಂದು ಬುದ್ಧಿಮಾತು ಹೇಳುವುದಕ್ಕೆ ನಾನು ನಿನ್ನ ಮನೆಯ ಬಾಗಿಲ ವರೆಗೆ ಬರಬೇಕಾಯಿತು (ಕಸಂ. ೨೬೨). ಬುದ್ಧಿಯೊಡೆಯ = ಅರಿವುಳ್ಳವನು ; ವಿವೇಕಿ : ಶಾಸ್ತ್ರಜ್ಞರುಂ ಬುದ್ಧಿಯೊಡೆಯರುಂ ಯೋಗ್ಯರುಮಪ್ಪಂತು ಮಾಡಿಂ (ಪಞ್ಚಾ. ೩-೦೩) ; ಇನ್ನುಂ ಪಾಂಡವರೊಳರೆಂಬ ಮಾತುಗಳಂ ಬುದ್ಧಿಯೊಡೆಯರಾರಾನುಂ ನುಡಿವರ್ (ಹಂಪಭಾ. ೩-೩೨ ವ). [ಸಂ.]

ಬುದ್ಧಿಋದ್ಧಿ (ನಾ). [ಜೈನ] ಬುದ್ಧಿ, ಕ್ರಿಯಾ, ವಿಕ್ರಿಯಾ, ತಪ, ಬಲ, ಔಷಧಿ, ರಸ ಮತ್ತು ಅಕ್ಷೀಣ ಎಂಬ ಎಂಟು ಬಗೆಯ ಋದ್ಧಿಗಳಲ್ಲಿ ಒಂದು ; ಅಪರಿಮಿತವಾದ ಬುದ್ಧಿಶಕ್ತಿ ; P ಈ ಬುದ್ಧಿಋದ್ಧಿಯಲ್ಲಿ ಹದಿನೆಂಟು ಬಗೆಗಳಿವೆ. ಅವು ಯಾವುವೆಂದರೆ "ಕೇವಲಜ್ಞಾನ, ಅವಧಿಜ್ಞಾನ, ಮನಃಪರ್ಯಯಜ್ಞಾನ, ಬೀಜಬುದ್ಧಿ, ಕೋಷ್ಠಬುದ್ಧಿ, ಪದಾನುಸಾರಿತ್ವ, ಸಂಭಿನ್ನ ಶ್ರೋತೃತ್ವ, ದೂರಾಸ್ವಾದನ, ದೂರಸ್ಪರ್ಶ, ದೂರದರ್ಶನ, ದೂರಶ್ರವಣ, ದೂರಘ್ರಾಣ, ದಶಪೂರ್ವತ್ವ, ಚತುರ್ದಶಪೂರ್ವತ್ವ, ಅಷ್ಟಾಂಗಮಹಾನಿಮಿತ್ತತ್ವ, ಪ್ರಜ್ಞಾಶ್ರವಣತ್ವ, ಪ್ರತ್ಯೇಕಬುದ್ಧಿತ್ವ, ವಾದಿತ್ವ" (ಕೈಪಕೋ. ೦೮೬): ಕೇವಲಜ್ಞಾನಾವಧಿಮನಃ ಪರ್ಯಯಜ್ಞಾನಂ . . . ಪ್ರತ್ಯೇಕಬುದ್ಧಿತ್ವಂ ಪ್ರವಾದಿತ್ವಮೆಂದಷ್ಟಾದಶಪ್ರಕಾರಮಪ್ಪ ಬುದ್ಧಿಋದ್ಧಿಯೊಳಂ . . . ನೆಱೆದು (ಚಂದ್ರಪ್ರ. ೦೪-೩೦ ವ) ; ಬುದ್ಧಿಋದ್ಧಿಯುಂ ಕ್ರಿಯಾಋದ್ಧಿಯುಂ ವಿಕ್ರಿಯಾಋದ್ಧಿಯುಂ ತಪೋಋದ್ಧಿಯುಂ ಬಲಋದ್ಧಿಯುಂ ಔಷಧಋದ್ಧಿಯುಂ ರಸಋದ್ಧಿಯುಂ ಅಕ್ಷೀಣಋದ್ಧಿಯುಂ ಎಂದೆಂಟು ಭೇದಮಕ್ಕುಂ (ಜಕಾರ. ೩೮೬). [ಸಂ.]

ಬುದ್ಧಿಕಲಿ 'ಬುದ್ಧಿಗಲಿ' ನೋ.

ಬುದ್ಧಿಕಲಿಸು 'ಬುದ್ಧಿಗಲಿಸು' ನೋ.

ಬುದ್ಧಿಗಮ್ಯ (ಗು). ೧. ಬುದ್ಧಿಗೆ ಮಾತ್ರ ತಿಳಿಯುವ : ಭಾಷಾಜ್ಞಾನ— ವ್ಯಾಕರಣಗಳ ಬಲದಿಂದ ಉಜ್ಜುಬಲ್ಲೆನೆಂದೊಡೆ, ಬುದ್ಧಿಗಮ್ಯ ಆನಂದ ! (ಕರ್ಣಾಶ. ೦೦೩). (ನಾ). ೨. ಬುದ್ಧಿಗೆ ಮಾತ್ರ ತಿಳಿಯುವಂಥದು; ತಿಳಿವಳಿಕೆಗೆ ಮಾತ್ರ ಗೋಚರಿಸುವಂಥದು : ಅಧ್ಯಯನದ ಫಲವಾದ ಜ್ಞಾನಸಂಪಾದನೆ ಬುದ್ಧಿಗಮ್ಯವಾದರೆ . . . ಪ್ರಕೃತಿಸೌಂದರ್ಯದ ಆನಂದಾನುಭವ ಹೃದ್ಗಮ್ಯ (ಜುಶ್ಚರ. ೮೨ ಬಿ೭೬೪). [ಸಂ.]

ಬುದ್ಧಿಗಲಿ, ಬುದ್ಧಿಕಲಿ (ಕ್ರಿ). ತಿಳಿವಳಿಕೆಯನ್ನು ಹೊಂದು.—ಪಡೆ : ಹುಟ್ಟಿ ನಾ ಬುದ್ಧಿಗಲಿತು ನಿನ್ನಾಜ್ಞೆಯ ಕಟ್ಟನೊಳಿಹೆನು (ತೋಪಹ. ೨೬-೩೫). ಬುದ್ಧಿಕಲಿ : ಹುಡುಗೀನ ಮನೆಗೆ ಕರೆದುಕೊಂಡು ಬಂದು

ಏನೋ ಬುದ್ಧಿಕಲೀಲಿ ಎಂದು ಎರಡು ಏಟು ಹೊಡೆದರೆ (ಶ್ರಕ್ಕ. ೦೨೦).
[ಬುದ್ಧಿ + ಕಲಿ₁ (<ಕಲ್₁)]

**ಬುದ್ಧಿಗಲಿಸು, ಬುದ್ಧಿಕಲಿಸು** (ಕ್ರಿ). ೧. ತಿಳಿವಳಿಕೆಯನ್ನುಂಟುಮಾಡು : ಅರಿವನ್ನುಂಟುಮಾಡು : ಇನ್ನಾಂ ನಿನಗೇನೆಂದು ಬುದ್ಧಿಗಲಿಸಿದಪೆಂ ನಿನಗೆ ಕ್ಷೇಮಮುಮಂ ಎನಗೆ ತೇಜಮುಮೆಂತಕ್ಕುಮಂತೆ ಮಾಡು (ಕಂಕಹ. ೪೩-೨); ದಂಡಿಬೊಳೇಗಳುಂ ಪ್ರಾಣಕಾಂತನಟ್ಟಿಕೊಂಡಿರಿ ತೊಲಗಬೇಡೆ ನಾತೆ ಪೆಂಡಿಯರಿಗೆ ಬುದ್ಧಿಗಲಿಸುವಂತೆಲಿಪಳ್ಳಿ ಮುಂಡಿಗೆಗಳನಡರಿದುವು (ಕೋಡಕ. ೨೪-೩೩). ೨. ತಿಳಿವಳಿಕೆಯನ್ನುಂಟುಮಾಡುವ ಉದ್ದೇಶದಿಂದ ಶಿಕ್ಷಿಸು, –ದಂಡಿಸು, –ಪೆಟ್ಟುಕೊಡು : ಕೋಪದಿಂದ ಅವನನ್ನೊದೆದು ನೆಲಕ್ಕೆ ಕೆಡಹಿ ಚೆನ್ನಾಗಿ ಬುದ್ಧಿಗಲಿಸಿದನು (ಕ೬೪. ೩೦). **ಬುದ್ಧಿಕಲಿಸು** : ೧. ಈ ಮಾರ್ಯಾದೆಯಲ್ಲಿ ನೀವು ಬುದ್ಧಿಕಲಿಸಿದಂಥ ಈ ವೃತ್ತಾಂತವು ಬಹು ಸಂಗ್ರಹವಾಗಿರುವುದರಿಂದ. . .ವಿವರವಾಗಿ ನಿರೂಪಿಸಬೇಕು (ಕಕ್ಕ. ೬); ತನಗರಿವಿಲ್ಲವೆಂಬರಿವಿರುವಾತನು ಮುಗ್ಧನು ನೀ ಬುದ್ಧಿಕಲಿಸು (೨೦೫೩. ೦೩೦-೩೬). ೨. ನಾಲ್ಕು ಲಾತ ಬಿಗಿದು ಇವನಿಗೆ ಬುದ್ಧಿ ಕಲಿಸೋದು ಬಿಟ್ಟು ಇವನ ಮಾತುಗಳನ್ನೆಲ್ಲ ತಲೆಗೆ ಹಾಕಿಕೊಳ್ಳುತ್ತಿರುವರಲ್ಲಾ (ಕೊಸ೬. ೦೦೬). [ಬುದ್ಧಿ + ಕಲಿಸು₁]

**ಬುದ್ಧಿಗುಡು** (ಕ್ರಿ). ತಿಳಿವಳಿಕೆಯನ್ನು ನೀಡು : ಮೆಲ್ಲಗೆ ಪೋಗಿನ್ನುಡಿದಪ್ಪದೊಳ್ನುಡುಕು ಚಮತ್ಕಾರದಿಂದೆಂದು ಬುದ್ಧಿಗುಡುತ್ತುಂ ನಡೆತರ್ಪ ಚೇಟಿಯರ ಮಾತಂ ವಿಚಾ. . .ಮೃಗಾಕ್ಷಿ ಪರಿತಂದಬ್ಜಾಕ್ಷನಂ ನೋಡಿದಳ್ (ಶಗಹ. ೦೬-೬೨). [ಬುದ್ಧಿ + ಕುಡು₁ (<ಕೊಡು₁)]

**ಬುದ್ಧಿಗೆಡು** (ಕ್ರಿ). ಆಲೋಚಿಸುವ ಶಕ್ತಿಯನ್ನು ಕಳೆದುಕೊಳ್ಳು; ವಿಚಾರಹೀನವಾಗು : ವಿವೇಕವಿಲ್ಲದಾಗು : ಮತಿಗೆಟ್ಟರ್ ಧೃತಿಗೆಟ್ಟರ್ ಗತಿಗೆಟ್ಟರ್ ಬುದ್ಧಿಗೆಟ್ಟರುನ್ನತಿಗೆಟ್ಟರ್ (ಗಂಳ. ೬-೨೩); ಸಲೆ ಮಾಯಾಮೋಹದಾಚ್ಛಾದಿಸೆ ನಿಜ ಧೃತಿಗೆಟ್ಟುಂ ವೃಥಾ ಧಾತುಗೆಟ್ಟುಂ. . .ಕರಂ ಬುದ್ಧಿಗೆಟ್ಟುಂ (ಕಣ್ಣಕ. ೩೩); ಇವನೊಬ್ಬ ಬುದ್ಧಿಗೆಟ್ಟ ಶತಪೆಂಡ ಅಷ್ಟೆ! (ಶಿಕೆಪೊ. ೦೬). [ಬುದ್ಧಿ + ಕೆಡು₁]

**ಬುದ್ಧಿಗೇಡಿ** (ನಾ). ತಿಳಿವಳಿಕೆ ಇಲ್ಲದ ವ್ಯಕ್ತಿ ; ತಿಳಿಗೇಡಿ : ಈ ನಾಟಕ ಬಿಟ್ಟು ತುಂಗಕ್ಕ, ಆ ಬುದ್ಧಿಗೇಡಿ ವೆಂಕಟರಮಣ, ಇನ್ಯಾರಾರೋ ಎಂದರೇನೇ ಇಡಿಯ ಊರಾಗಿಬಿಟ್ಟಿತೇ ? (ಶೂಕುದಾ. ೦೬೪).
[ಬುದ್ಧಿ + ಕೇಡಿ₁]

**ಬುದ್ಧಿಗೇಡಿತನ** (ನಾ). ತಿಳಿವಳಿಕೆ ಇಲ್ಲದಿರುವಿಕೆ : ಮತಿಹೀನತ : ಬುದ್ಧಿಗೇಡಿತನದಿಂದ ಪರಮಾರ್ಥದ ಸುಖದ ಹೋಗಲಾಡಿಸಿಕೊಂಡು . . . ಮನ ಹೇಸದೆ ಬಂದಿರಣ್ಣಾ (ಶುಶಾರೇ. ೩. ೬೬-೦೬೬); ಒಬ್ಬರೊಬ್ಬರ ಮನಸ್ಸನ್ನು ತಿಳಿಯದ ಹೊರತು ಮದುವೆಯಂಥ ಮಹತ್ತ್ವದ ಸಂಬಂಧವನ್ನು ಬೆಳಸುವುದು ಕೇವಲ ಬುದ್ಧಿಗೇಡಿತನ (ಕಮಪ. ೦೦೦).
[ಬುದ್ಧಿಗೇಡಿ + –ತನ]

**ಬುದ್ಧಿಜೀವಿ** (ನಾ). ಜೀವನದಲ್ಲಿ ವಿವೇಕಕ್ಕೆ ಪ್ರಾಧಾನ್ಯತೆ ನೀಡುವವನು: ಬೌದ್ಧಿಕಕ್ರಿಯೆಗಳಲ್ಲಿ ಆಸಕ್ತಿಯುಳ್ಳವನು : ಬುದ್ಧಿಜೀವಿಯಾದ ಈತನನ್ನು ಕ್ರಮವರಿತ ಮಾರ್ಗದಲ್ಲಿ ನಿರ್ದೇಶಿಸುವುದು ಶಿಕ್ಷಣದ ಉದ್ದೇಶ (ಕೊಳಂಬ. ೬೩): ಕನ್ನಡಿಗರು ಭಾವಜೀವಿಗಳು, ಬುದ್ಧಿಜೀವಿಗಳಲ್ಲ (ಪಾಪಪ. ೦೦). [ಸಂ. ಬುದ್ಧಿಜೀವಿನ್]

**ಬುದ್ಧಿದಾರಿದ್ರ್ಯ** (ನಾ). ವಿವೇಕವಿಲ್ಲದಿರುವುದು ; ಜ್ಞಾನವಿಲ್ಲದಿರುವುದು: ಶ್ರೀಸಾಮಾನ್ಯನ ಹೃದಯದಾರಿದ್ರ್ಯ, ಕರ್ತವ್ಯದಾರಿದ್ರ್ಯ, ಬುದ್ಧಿದಾರಿದ್ರ್ಯಗಳು ಕರುಣೆಯ ಹಾದಿಯನ್ನು ಕಾಯುತ್ತ ಅನಿವಾರ್ಯದ ಬದುಕಿಗೆ ಅಳಾಗಿರುವವರೆಗೆ 'ಕಾದಂಬರಿ'ಗಳು ಏನು ಕೆಲಸ ಮಾಡಿಯಾವು? (ಕಂಪಹಂ. ೬ ಶ್ರಶ್ರಾಕಕ). [ಸಂ.]

**ಬುದ್ಧಿನಾಶ** (ನಾ). ತಿಳಿವಳಿಕೆಯು ಇಲ್ಲವಾಗುವುದು : ಸ್ಮೃತಿವಿಭ್ರಮದಿಂದ ಬುದ್ಧಿನಾಶವಾಗುತ್ತದೆ (ರಮಗಶಾ. ೦೩೨). [ಸಂ.]

**ಬುದ್ಧಿನಿರೂಪ** (ನಾ). ಪ್ರಭುವಿನ ಆಜ್ಞೆ: ರಾಜಾಜ್ಞೆ : ಮಹಾಸ್ವಾಮಿಯವರ ಬುದ್ಧಿನಿರೂಪದ ಮೇರಿಗೆ ಮಾಮನಮುದ್ರೆ ಶಿಲಾಪ್ರತಿಷ್ಠೆಯು ಮಾಡಿದ ಶಿಲಾಶಾಸನ (ಎಳ. XVI. ಶಕ್ಯಶಾ. ೪೩-೨೩; ೭). [ಸಂ.]

**ಬುದ್ಧಿನಿಷ್ಠತೆ** (ನಾ). ಅರಿವಿನ ಬಗೆಗಿರುವ ಆಸಕ್ತಿ,–ಶ್ರದ್ಧೆ: ಬುದ್ಧಿನಿಷ್ಠತೆ, ಹೃದಯಸಂಪನ್ನತೆ, ಸಾತ್ವಿಕತೆ, ಸಹಜಸಹಾನುಭೂತಿ, ಸಾಮರಸ್ಯದ ದಾರಿಯ ಸಂಕಲ್ಪ ಇಲ್ಲವೆ ಕ್ರಿಯಾಶಕ್ತಿ–ಈ ಐದು ಶಕ್ತಿಗಳನ್ನು ಮಾನವನು ತನ್ನಲ್ಲಿ ಬೆಳಸಿಕೊಳ್ಳಬೇಕಾಗಿದೆ (ಪಶ್ಯಶಾ. ೦೨). [ಸಂ. ಬುದ್ಧಿನಿಷ್ಠತಾ]

**ಬುದ್ಧಿಪೇಳ್** 'ಬುದ್ಧಿವೇಳ್' ನೋ.

**ಬುದ್ಧಿಬಲ** (ನಾ). ೧. ಅರಿವಿನ ಸಾಮರ್ಥ್ಯ,–ಶಕ್ತಿ : ಎಷ್ಟೋ ಸಲ ದೈಹಿಕಬಲದಿಂದ ಆಗದ ಕೆಲಸವನ್ನು ಬುದ್ಧಿಬಲದಿಂದ ಸಾಧಿಸಬಹುದು (೯೨೨). ೨. (ಉಕ) ಚತುರತೆಯಿಂದ ಆಡುವ ಆಟ; ಚದುರಂಗ.
[ಸಂ./ಮರಾ. ಬುದ್ಧಿಬಳ]

**ಬುದ್ಧಿಭ್ರಂಶ** (ನಾ). ತಲೆಕೆಡುವಿಕೆ ; ಬುದ್ಧಿಭ್ರಮಣೆ : ದ್ರಾಕ್ಷಿಹಣ್ಣು, ಯಷ್ಟಿಮಧುಕ, ಇಪ್ಪೆಹೂವು, ಖರ್ಜೂರದ ಹಣ್ಣು . . . ಲಾಮಂಚ ಇವಂ ಕಷಾಯವನಿಟ್ಟಾದರೂ ಶೀತಕಷಾಯವನಾದರೂ ಸೇವಿಸೆ ಸಮಸ್ತತೃಷ್ಣೆ, ಮದಮೂರ್ಛೆ, ಬುದ್ಧಿಭ್ರಂಶ ಇವೆಲ್ಲ ಪರಿಹರಮಕ್ಕುಂ (ಕಕವ್ಯ. ೨೬೩); ಇದು ಕೇವಲ ಬುದ್ಧಿಭ್ರಂಶದ ಆರಂಭ ಮಾತ್ರ (ಹೇಶುಂಕ. ೨೪೩). [ಸಂ.]

**ಬುದ್ಧಿಭ್ರಮಣೆ** (ನಾ). ಹುಚ್ಚು : ಬುದ್ಧಿವಿಕಲ್ಪ : ಅಲೆಕ್ಸಾಂಡರ್ ಚಕ್ರವರ್ತಿಗೆ ಬುದ್ಧಿಭ್ರಮಣೆಯಾಗಿ ಕೂಗಾಡುತ್ತಿದ್ದಾಗ ಅವನ ವೈದ್ಯ . . . ವಾದ್ಯವನ್ನು ನುಡಿಸಿ ಮನಸ್ಸಿಗೆ ಶಾಂತತೆಯನ್ನು ತರುತ್ತಿದ್ದನಂತೆ (ಘಾಕರ. ೩೪೪); ಮಕ್ಕಳಲ್ಲಿ ಇವುಗಳ ಜೊತೆಗೆ . . . ಕೆಲವು ವೇಳೆ ಬುದ್ಧಿಭ್ರಮಣೆಯುಂಟಾಗುತ್ತದೆ (ಕಂಕೋ. ೩೬). [ಸಂ. ಬುದ್ಧಿಭ್ರಮಣ]

**ಬುದ್ಧಿಭ್ರಮೆ** (ನಾ). = ಬುದ್ಧಿಭ್ರಮಣೆ: ಕ್ಷತ್ರಿಯರಲ್ಲೆಲ್ಲಾ ನೀನೇ ಗಂಡಸು, ಮತ್ತೊಬ್ಬನಿಲ್ಲ ಎಂದು ನೀನು ತಿಳಿದುಕೊಂಡಿರುವುದು ಬುದ್ಧಿಭ್ರಮೆ (ಪಕಭಾ. ೬೪); ನನ್ನನ್ನು ನೋಡಿ ನನ್ನ ಕಡೆಗೆ ಬರುವುದು ಬುದ್ಧಿಭ್ರಮೆಯೇ ಆಗಬೇಕೆ? (ಸಾ.ಳ. I. ೨-೪೩). [ಸಂ. ಬುದ್ಧಿಭ್ರಮ]

**ಬುದ್ಧಿಭ್ರಾಂತಿ** (ನಾ). = ಬುದ್ಧಿಭ್ರಮಣೆ : ಒಂದು ವಸ್ತುವನೆರಡು ಮಾಡುವೆನೆಂದು ಬುದ್ಧಿಭ್ರಾಂತಿಯಲಿ ಮನಸಂದು ಸಮ್ಯಜ್ಞಾನದುದಯದ ನೆಲೆಯು ಕಾಣಿಸದೆ ದಂದುಗಂಬಡುತಿಹುದು . . . ಜಗವು (ಕವ್ಯಾಣ. ೪-೦೬). [ಸಂ.]

**ಬುದ್ಧಿಮತ್ತೆ** (ನಾ). ಜಾಣತನ ; ಚಾತುರ್ಯ : ಬರಿಯ ಬುದ್ಧಿಮತ್ತೆಯೊಂದೇ ಅಷ್ಟು ಅಹಂಕಾರಕ್ಕೆ ಕಾರಣವಾಗದು (ಬಂಟಕ. ೯೩): ಮಗಳ ಬುದ್ಧಿಮತ್ತೆಯಲ್ಲಿ ಅವರಿಗೆ ವಿಶ್ವಾಸವಿತ್ತು (ರಂಗಕೂ. ೦೬೬).
[ಸಂ. ಬುದ್ಧಿಮತ್ತಾ]

**ಬುದ್ಧಿಮಹರ್ದ್ಧಿ** (ನಾ). = ಬುದ್ಧಿಋದ್ಧಿ : ಬುದ್ಧಿಕ್ರಿಯಾವಿಕ್ರಿಯಾತಪೋಬಲೌಷಧರಸ ಕ್ಷೇತ್ರಭೇದದಿಂ ಋದ್ಧಿಪ್ರಾಪ್ತ್ಯಾರ್ಯರಷ್ಟವಿಧಂ ಅಲ್ಲಿ ಕೇವಲಜ್ಞಾನಮುಂ . . . ಪ್ರತ್ಯೇಕಬುದ್ಧತೆಯುಂ ವಾದಿತ್ವಮುಂ ಎಂದು ಬುದ್ಧಿಮಹರ್ದ್ಧಿ ಪದಿನೆಂಟು ತೆಱಂ (ತತ್ತ್ವಸೂ. ೦೬೪). 'ಬುದ್ಧಿಋದ್ಧಿ' ಪರಾ. [ಸಂ.]

**ಬುದ್ಧಿಮಾಂದ್ಯ** (ನಾ). ಅರಿವಿನಲ್ಲಿ ಉಂಟಾಗುವ ಆಲಸ್ಯ; ಬುದ್ಧಿಯ ಜಡತೆ : ನಮ್ಮ ಕುರುಡು ಆಚಾರಗಳು ಹೇಗೆ ಬುದ್ಧಿಮಾಂದ್ಯವನ್ನು ತರುತ್ತವೆಂಬುದಕ್ಕೆ ಒಂದು ಸಣ್ಣ ಆಕಸ್ಮಿಕಘಟನೆಯನ್ನು ತಿಳಿಸುತ್ತಾರೆ (ಶಿಬಂರ. I. xiii ಮುಖ್ಯ); ಇವರ ಜೊತೆಗೆ ಬುದ್ಧಿಮಾಂದ್ಯವನ್ನುಂಟು

ಮಾಡುವ ಸುರೆ . . . ಅಜ್ಞಾನ, ಅವಿವೇಕ ಇವೂ ಪಾಪಕಾರಣಗಳು (ಜುಸ್ಕಾರ. ೦೦೬). [ಸಂ.]

**ಬುದ್ಧಿವಂತ₁** (ನಾ). ೧. ತಿಳಿವಳಿಕೆಯುಳ್ಳ ವ್ಯಕ್ತಿ; ಚತುರ; ಜಾಣ: ನೀನಪ್ಪೊಡೆ ಕರಂ ಬುದ್ಧಿವಂತಂ (ಹಂಸಹಂ. ೨೯೨-೯); ವೈರಿಯಂ ನಾರಿಯಂ ನದಿಯಂ ಜಾರೆಯಂ ನಯವಿಡಿದು ಕೊಂಬುದು ಕಾರಯುವನವ ಬುದ್ಧಿವಂತನು (ಕೌಶಿರಾ. ೩೭ ೦೯); ಬುದ್ಧಿವಂತನಲ್ಲ ರಂಗನು ಮುದ್ದು ಮಾಡಿ ಮಗನ ಸಲಹಿದೆ ಗೋಪಿ (ಪುರಂದ. ೦-೦೦೯ ಪಲ್ಲವಿ). ೨. ಊರಿನ ಹಿರಿಯ; ಹಳ್ಳಿಯ ಮುಂಖಂಡ: ಈ ಕಾಳೀಕಂಣಬೆಗಳು ಇರುವ ಹಳ್ಳಿಯಲ್ಲಿ ಬುದ್ಧಿವಂತನೆಂಬವನೊಬ್ಬ ಅಧಿಕಾರಿ ಇರುವನು (ಕಹಾಗ. ೦೩೦). [<ಸಂ. ಬುದ್ಧಿವತ್]

**ಬುದ್ಧಿವಂತ₂** 'ಬುದ್ಧಿವಂತ' ನೋ.

**ಬುದ್ಧಿವಂತಿಕೆ** (ನಾ). ಜಾಣತನ ; ಚಾತುರ್ಯ : ಶಂಭು ಮಡಿಕೇರಿಯ ಹೈಸ್ಕೂಲು ಸೇರಿ ಅಲ್ಲಿ ಬುದ್ಧಿವಂತಿಕೆಯಿಂದ ಮುಂದುವರಿಯುತ್ತಿದ್ದುದು ನನಗೆ ಗೊತ್ತಿದೆ (ಕವಣೀ. ೬೦); ಈ ಹಸಿವನ್ನು ತೃಪ್ತಿಪಡಿಸಲು ಇಡೀ ಮಾನವಜಾತಿಯೇ ತನ್ನ ಬುದ್ಧಿವಂತಿಕೆಯನ್ನೆಲ್ಲಾ ಖರ್ಚು ಮಾಡುತ್ತಲಿದೆ (ಕೀಪಾತ್. ೦೬೨). [ಬುದ್ಧಿವಂತ₁ + – ಇಕೆ]

**ಬುದ್ಧಿವಂತೆ** (ನಾ). ಜಾಣೆ ; ಚತುರೆ : ನಿಮ್ಮ ತಂಗಿ ತುಂಬಾ ಬುದ್ಧಿವಂತೆ (ದೂಕಲ್ಪ. ೦೬೪); ಚೆನ್ನಮ್ಮನು ಬುದ್ಧಿವಂತೆಯೂ ಚೆಲುವೆಯೂ ಧೀರಳೂ ಆಗಿದ್ದಳು (ಕಪಪೂ. ೪-೯೦). [ಬುದ್ಧಿವಂತ₁ + – ಎ₂]

**ಬುದ್ಧಿವತಿ** (ನಾ). = ಬುದ್ಧಿವಂತೆ : ಬುದ್ಧಿವತಿಯಾಗಿ ನಡೆವುದು ಸದ್ಧರ್ಮಮನೆಯ್ದೆ ಮಾಳ್ಪುದು (ಶಾರಪು. ೦೨-೦೦). [ಸಂ. ಬುದ್ಧಿವತೀ]

**ಬುದ್ಧಿವಾದ** (ನಾ). ವಿವೇಕವನ್ನು ತಿಳಿಸುವುದು ; ಉಪದೇಶ : ಮಗನಿಗೆ ಬುದ್ಧಿವಾದ ಹೇಳಿದ್ದಳು ವಿಶ್ವವರಾದೇವಿ (ವಿಕಂಶಾ. ೮೩); ನಮ್ಮ ತಾಯಿಗೆ ಎಲ್ಲವನ್ನೂ ಹೇಳಿ ಅವರ ಬುದ್ಧಿವಾದವನ್ನು ಕೇಳಿಯೇ ಬಿಡಬೇಕೆಂದು ನನಗೆ ಬಹಳ ಸಲ ಅನ್ನಿಸಿತ್ತು (ಕಾಲಿಮ. ೦೫೩). [ಸಂ.]

**ಬುದ್ಧಿವಾನಸೆ** (ನಾ). ವಿವೇಕವನ್ನು ತಿಳಿಸುವವಳು ; ಸಮಯೋಪಾಯವನ್ನು ಹೇಳುವವಳು : ತನಗಾದು ಪರಿಚಾರಕಾಕೃತಿಯಶಸ್ಯ್ರೀಚಾರು ಚಾರಿತ್ರಕಾಮಿನಿ ರಾಜಚ್ಛಮರೀಜಕಾಂತೆ ಮನೋಗಾದಿಪ್ಪಾರ್ಕೆ ನಿಚ್ಚಂ ದಯಾಂಗನೆ ಪಾಗ್ವಲ್ಲಭೆ ಬುದ್ಧಿವಾನಸೆ ಕರಂ ಭಾಸ್ವತ್ಪ್ರಪೋಲಕ್ಷ್ಮಿ ಸಜ್ಜನಮಾಗಲ್ ಕುಲಭೂಷಣಬ್ರತಿವರಂ ಸ್ತ್ರೀರಾಜ್ಯದಿಂ ರಾಜಿಪಂ (ಎಕ. VIII, ಸೊರಬ. ೦೯೦-೭೭ ; 1198). [ಬುದ್ಧಿ + ಮಾನಸೆ]

**ಬುದ್ಧಿವಿಕಲ** (ನಾ). ಹುಚ್ಚ ; ಮತಿಹೀನ : ಕೊನೆಯ ವರ್ಗದವರು ಬುದ್ಧಿಹೀನರು ಮಾತ್ರವಲ್ಲ, ಬುದ್ಧಿವಿಕಲರಾಗಿಯೂ ತಿಳಿಗೇಡಿಗಳಂತೆಯೂ ತೋರುತ್ತಾರೆ (ತಿಸ್ವದ. ೩೯೦). [ಸಂ.]

**ಬುದ್ಧಿವಿಕಲ್ಪ** (ನಾ). ಹುಚ್ಚು ; ಬುದ್ಧಿಭ್ರಮಣೆ : ನನ್ನ ತಾಯಿಯ ಆ ದಿನಗಳ ಸಂಕಟವನ್ನೂ ಅವಸ್ಥೆಯನ್ನೂ ನೆನಸಿಕೊಂಡುಬಿಟ್ಟರೆ ನನಗೆ ಬುದ್ಧಿವಿಕಲ್ಪವಾಗಿ ಹೋಗುತ್ತದೆ (ಮಹಾಗ. ೦೩೪). [ಸಂ.]

**ಬುದ್ಧಿವಿಕಾರ** (ನಾ). = ಬುದ್ಧಿವಿಕಲ್ಪ : ಬುದ್ಧಿವಿಕಾರದಿಂದ ನರಳುವ ಮಕ್ಕಳಿಗಾಗಿ ಪ್ರತ್ಯೇಕವಾದ ಶಾಲೆಯಿರುತ್ತದೆ (ರೂಪ). [ಸಂ.]

**ಬುದ್ಧಿವಿಕಾಸ** (ನಾ). ಅರಿವಿನ ಬೆಳವಣಿಗೆ : ಓದುವ ರೂಢಿ ಬಲಿತು ಬುದ್ಧಿವಿಕಾಸವಾದಂತೆ ಕ್ರಮೇಣ ಸೂಕ್ಷ್ಮ ಹಾಗೂ ಗಹನವಾದ ಶಾಸ್ತ್ರೀಯ ಗ್ರಂಥಗಳನ್ನು ಆಯ್ಕೆ ಮಾಡಬೇಕು (ಗ್ರಂಥಾಂ. ೯). [ಸಂ.]

**ಬುದ್ಧಿವೇಳ್** 'ಬುದ್ಧಿವೇಟ್' ನೋ.

**ಬುದ್ಧಿವೇಟ್, ಬುದ್ಧಿಪೇಳ್, ಬುದ್ಧಿವೇಳ್, ಬುದ್ಧಿಹೇಳು** (ಕ್ರಿ). ತಿಳಿವಳಿಕೆಯನ್ನು ನೀಡು ; ವಿವೇಕವನ್ನು ಹೇಳು : ಉಪದೇಶಿಸಂ : ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ ಬುದ್ಧಿವೇಳ್ಬು . . . ಕಣ್ಣೀರ್ಗಳಂ ವಿಡಿವ ಬಹುಪ್ರಕಾರಜನಸಂಕಟಮೊಪ್ಪಿದುದಾ ಪ್ರಯಾಣದೊಳ್ (ಆದಿಪು. ೪-೫೭); ಅದು ಕಾರಣದಿಂ ವಿಮಾನ್ಯಮಣ್ಬುದುಡುವುದು ಮೋಸದಿಂದಿರವೇಡೆಂದು ಬುದ್ಧಿವೇಟ³ (ಧರ್ಮಾಮೃ. ೩-೧೩೩). **ಬುದ್ಧಿಪೇಳ್**: ಕಲಿತಪ್ಪ ತೋರುಪೆನು ದೇವರು ಬಲಿಯದಾಟವ ಬುದ್ಧಿಪೇಳ್ವುದು (ಜಾಗಹ. ೯-೭೯). **ಬುದ್ಧಿವೇಳ್** : ಮೆಯ್ದೋಜು ಬುದ್ಧಿವೇಳ್ವರಸು ನಂಟರ್ಕಳಂ ಹೊಯ್ದನಿಕ್ಕಡಿಯಾಗೆ ರಣಮೊನೆಯವರ್ಗಳಂ (ಜಹರ. ದೇ. ೪೧-೫); ಜಾಣತನದಿ ಬುದ್ಧಿವೇಳ್ದು ರಕ್ಷಿಸ ಹೇಳು (ಮೋಹತ. ೩೭-೧೪). **ಬುದ್ಧಿಹೇಳು** : ಬುದ್ಧಿಹೇಳೆ ಗೋಪಿ ನಿನ್ನ ಮುದ್ದು ಕಂದಗೆ (ಪುರಂದ. ೩-೬೬ ಪಲ್ಲವಿ); ಅವನ ಅಂತರಾತ್ಮವು ಎದ್ದುಬಂದು ಅವನಿಗೆ ಬುದ್ಧಿಹೇಳುತ್ತಿತ್ತು (ದೇಳ್ಕ. ೯೪). [ಬುದ್ಧಿ + ವೇಟ್]

**ಬುದ್ಧಿವೈಕಲ್ಯ** (ನಾ). ಅರಿವಿನಲ್ಲಿ ಉಂಟಾಗುವ ವ್ಯತ್ಯಾಸ...ಏರುಪೇರು. [ಸಂ.]

**ಬುದ್ಧಿಶಕ್ತಿ** (ನಾ). ಬುದ್ಧಿಯ ಸಾಮರ್ಥ್ಯ ; ಬುದ್ಧಿಬಲ : ವಿಷಯಮಸೆಜ್ಞೆಯಲುಂ ಬಾರವಜ್ಞೊಳು ಬುದ್ಧಿಶಕ್ತಿಯಿಲ್ಲದುದಱಿಂ ಪರಲೋಕಬಂಧಮೋಕ್ಷ . . . ದ್ರವ್ಯಾದಿಗಳೊಳ್ ಸರ್ವಜ್ಞಪ್ರಮಾಣತೆಯಿಂ ತತ್ಪ್ರಮಾಣತಾಗಮದೊಳ್ ಪೇಳ್ದುವೆಲ್ಲಂ ಅವಶ್ಯಂ ತಪ್ಪುವುವಲ್ಲೆಂದು ಸಮ್ಯಗ್ದರ್ಶನ ಸ್ವಭಾವದಿನಪ್ಪ ನಿಶ್ಚಯಚಿಂತನಂ ನಪಮಧರ್ಮಂ (ಅಕಪು. ೬-೨೯ ಪ). [ಸಂ.]

**ಬುದ್ಧಿಶಾಲಿ** (ನಾ). ಚಾತುರ್ಯವುಳ್ಳ ವ್ಯಕ್ತಿ ; ಚತುರ ವ್ಯಕ್ತಿ : ಬುದ್ಧಿಶಾಲಿಯಂತಾರ್ಕೈಕೆಯುಳ್ಳನುಂ ದೂರದರ್ಶಿಯುಂತೆ ಮೇಲನಱವನುಂ . . . ಅಪ್ಪುದು (ಧರ್ಮಾಮೃ. ೫-೪೪); ಈ ಸಂದರ್ಭದಲ್ಲಿ ಹುಡುಗನ ತಾಯಿಗೂ ಇಷ್ಟವಿದ್ದುದರಿಂದಲೂ ಹುಡುಗಿ ಬುದ್ಧಿಶಾಲಿಯಾದುದರಿಂದಲೂ ಇದೇ ಒಂದು ದಾರಿಯಾಯಿತು (ಕಥ. I, ೨-೪೨). [ಸಂ. ಬುದ್ಧಿಶಾಲಿನ್]

**ಬುದ್ಧಿಶೂನ್ಯ** (ನಾ). ತಿಳಿವಳಿಕೆಯಿಲ್ಲದ ವ್ಯಕ್ತಿ ; ವಿವೇಕವನ್ನು ಕಳೆದುಕೊಂಡ ವ್ಯಕ್ತಿ ; ಬುದ್ಧಿಶೂನ್ಯನಾಗಿ ಎನ್ನಾಪದ್ದಕಾರ್ಯಕಾಹಕಮನವ ತಿದ್ದಿ ಹೃದಯಶುದ್ಧಿ ಮಾಡೊ ಪ್ರದ್ಯುಮ್ನನೆ (ಕಪಕ. ೯೯-೦೪); ಇದನ್ನು ನಾನು ಬುದ್ಧಿಶೂನ್ಯಳಾಗಿ ಮಾಡಿದ್ದೇನೆಂದು ತಿಳಿದುಕೊಳ್ಳಬೇಡ (ಪತಶಾ. ೪೭). [ಸಂ.]

**ಬುದ್ಧಿಸಹಾಯ** (ನಾ). ರಾಜನಿಗೆ ಸಲಹೆ ಕೊಡುವವನು ; ಮಂತ್ರಿ ; ಸಚಿವ : "ಮಂತ್ರೀ, ಬುದ್ಧಿಸಹಾಯಃ, ಅಮಾತ್ಯಃ, ಸಚಿವಃ—ಈ ೪ ಮಂತ್ರಿ" (ಕರಾಯು. ೬೦-೨೬೨). [ಸಂ.]

**ಬುದ್ಧಿಸಿದ್ಧಿ** (ನಾ). [ಯೋಗ] ಅರುವತ್ತುನಾಲ್ಕು ಸಿದ್ಧಿಗಳಲ್ಲಿ ಒಂದು; ಈ ಬುದ್ಧಿಸಿದ್ಧಿಗಳಲ್ಲಿ ಎಂಟು ವಿಧಗಳಿವೆ. ಅವು ಯಾವುವೆಂದರೆ "(ಅ) ಜಗಜ್ಜನನ, ಜಗದ್ರಕ್ಷಣ, ಜಗತ್ಸಂಹರಣ, ಇಷ್ಟಕರಣ, ಅಭಿಮತಲೋಕಪ್ರವರ್ತನ, ಅಸದೃಶಲೋಕನಿರ್ಮಾಣ, ಅಶುಭಕರಣ, ಶುಭಕರಣ (ವಿಚಿಂ. ೬-೪೫೭). (ಆ) ಅಭ್ಯಾಸಾಂತರದಲ್ಲಿ ವೇದಾಂತಿ ಗುಣಗಳು : ನಿತ್ಯಾನಿತ್ಯವಿವೇಕ, ಸಕಲಭೋಗವಿರಕ್ತಿ, ಪರಮಶಾಂತಿ, ಅವ್ಯಭಿಚರಿತಭಕ್ತಿ, ದೃಢತರಶ್ರದ್ಧೆ, ವೈದಿಕಾಸ್ತಿಕ್ಯ, ಬ್ರಹ್ಮಜ್ಞಾನ, ಬ್ರಹ್ಮಾನಂದ (ವಿಚಿಂ. ೬-೪೫೭)" (ತ್ರಿಣಕ್ತ. ೨೯೩): ಜಗಜ್ಜನನ ಜಗದ್ರಕ್ಷಣ . . . ಶುಭಕರಣವೆಂಬೆಂಟು ಬುದ್ಧಿಸಿದ್ಧಿಗಳವಱೊಡನೆ ಮೊದಲೈವತ್ತಾಱು ಗುಣಮುಂ ಕೂಡಿದಱುವತ್ತುನಾಲ್ಕು ಗುಣಂಗಳಿಂ ಸಂಪನ್ನನಾಗಿ ಸತ್ಯಲೋಕದಲ್ಲಿ ಬ್ರಹ್ಮನಿರ್ಪಂ (ಶಿವೇಕ. ೨೨೫). 'ಸಿದ್ಧಿ' ಪರಾ. [ಸಂ.]

**ಬುದ್ಧಿಸ್ಥಾನ** (ನಾ). [ಜ್ಯೋತಿ] ಜಾತಕನ ಬುದ್ಧಿಶಕ್ತಿಯನ್ನು ಸೂಚಿಸುವ, ಲಗ್ನದಿಂದ ಗುರುತಿಸುವ ಐದನೆಯ ಸ್ಥಾನ : "ಬುದ್ಧಿಸ್ಥಾನ—ಲಗ್ನದಿಂದ ಐದನೆಯ ಸ್ಥಾನ" (ಜಾತಕಿ. ಶಂ. ೩೯೦). [ಸಂ.]

**ಬುದ್ಧಿಹೀನ** (ನಾ). ಮತಿಹೀನ ; ದಡ್ಡ : ಬುದ್ಧಿಹೀನರ ಮಾತ ಕೇಳಿ ನಾ ಮರುಳಾದೆ (ಕುರಂದ. ಧಾ. ೨-೨-೩) ; ಉದ್ದ ಮೇದ ಕತ್ತೆಯು ಹಾಗೆ ಬುದ್ಧಿಹೀನನು (ಗಾದೆ). [ಸಂ.]

**ಬುದ್ಧಿಹೇಳು** 'ಬುದ್ಧಿವೇಳ್' ನೋ.

**ಬುದ್ಬುದ$_1$** (ನಾ). ಒಂದು ಬಗೆಯ ಕಣ್ಣಿನ ರೋಗ : 'ಬುದ್ಬುದ ನೇತ್ರ' ಪರಾ. [ಸಂ. ಬುದ್ಬುದಾ]

**ಬುದ್ಬುದ$_2$** (ನಾ). ನೀರಿನ ಮೇಲಿನ ಗುಳ್ಳೆ ; ಬೊಬ್ಬುಳಿ : ಜಲದಾಟೋಪೋಪಮಂ ಬುದ್ಬುದನಿವಹನಿಭಂ ಫೇನಪಿಂಡಾಯಮಾನಂ ಜಲರೇಖಾಕಾರಮಾಖಂಡಲಲಲಿತಧನುರ್ಲೀಲ ಮಾಕಾಳಿಕೀಸಂಚಲವಿಮಾ ಸೌಂದರ್ಯಂ (ಆಪು. ೬-೫೦) ; ಕೆಡುತ್ತ ಹುಟ್ಟುತಿಹ ಕಡಲ ತೆರೆಗಳ ಬುದ್ಬುದಂಗಳೆ ಜಡಧರಂಗಳೆ ಶಕ್ರಚಾಪವೆ . . . ನುಡಿದ ಭಾಷೆಯನಿಂತು ನಡೆಸಲು ಬಸವನೇ ಬಲ್ಲ (ಬಸಪು. ೩೭-೨೫) ; ಹಯಖೋಹರದ ತೆರೆಮಾಲೆಯಲಿ ಬಲುರಥಾಲ್ಲರಿಯ ಬುದ್ಬುದತತಿಯಲಿ . . . ಅರಿಬಲಾರ್ಣವ ಗಜಜಾವಿಗಲಳ್ಳಿಜಿಯುತದೆ ಬಹುವಿಧದ ವಾದ್ಯವಿಡಾಯರಭಸದಲಿ (ಕುವ್ಯಾಭೀ. ೩-೨೩). [ಸಂ.]

**ಬುದ್ಬುದನೇತ್ರ** (ನಾ). ೧. ಬುದ್ಬುದವೆಂಬ ರೋಗವುಳ್ಳ ಕಣ್ಣು. ೨. ಬುದ್ಬುದವೆಂಬ ಕಣ್ಣಿನ ರೋಗವುಳ್ಳವನು; ನೇತ್ರರೋಗಿ : ಉದಯಸ್ಥಂ ದಿನನಾಥನಾಗೆ ವಿಕಲಾಕ್ಷಂ ನಿರ್ಭಯಂ ನಿರ್ದಯಂ ಸದನಂ . . . ಇಂದುಗ್ರಹಲಗ್ನಸ್ಥಾಯಿಯಾದಂದು ಬುದ್ಬುದನೇತ್ರಂ (ಜಾತಿ. ೧೬-೧). [ಬುದ್ಬುದ$_1$ + ನೇತ್ರ]

**ಬುದ್ಬುದಾಕ್ಷ** (ನಾ). = ಬುದ್ಬುದನೇತ್ರ ೧ : ಬುದ್ಬುದಾಕ್ಷರೋಗದಲ್ಲೂ ಯಾವುದು ಹೂಗಣ್ಣೆನ್ನುವುದನ್ನು ತಿಳಿಯಬಹುದು (ಜಾತಿ. ೪-೩೯ ಅಡಿ). [ಸಂ.]

**ಬುದ್ಬುದಿಸು** (ಕ್ರಿ). ನೀರುಗುಳ್ಳೆಯೇಳು; ಬೊಬ್ಬುಳಿಕೆಯುಂಟಾಗು : ವಿಚಾರವು ಆವಿನ ನೊರೆಹಾಲಿನಂತೆ ಬುದ್ಬುದಿಸಿದಾಗ ಅದಕ್ಕೊಂದು ಪ್ರೌಢಿಮೆ ಬರುತ್ತದೆ (ಮುಂಗಾರು. ೫ ಕುಮ್ಮ) [ಬುದ್ಬುದ$_2$ + —ಇಸು$_3$]

**ಬುದ್ಲಿ** 'ಬುದ್ದಲಿ' ನೋ.

**ಬುಧ** (ಗು). ೧. ಬುದ್ಧಿಶಕ್ತಿಯುಳ್ಳ; ತಿಳಿವಳಿಕೆಯಿಂದ ಕೂಡಿದ. (ನಾ). ೨. ವಿದ್ವಾಂಸ; ಪಂಡಿತ : "ಸೂರಿ ಬುಧಂ ಕವಿ ವಾಗ್ಮಿ . . . ಸಭಾಸದಂ ವಿದ್ವಾಂಸಂ" (ಶಬ್ದಕೋ. ೯೬-೪) ; ಪರಮಬುಧಜನೋಪಾಸನಮುಂ ಕೃತಿಪರಿಚಯಮುಂ (ತರ್ಕಂ) ಪ್ರತೀತಿ(ಯಂ) ವಾಗ್ಮಿದಗ್ಧತಾನಿಪುಣತೆ (ಯೊಳ್) (ಕವಿರಾ. ೧-೧೦) ; ಜಿನರ್ಗಂ ತ್ರಿಕಾಲಯೋಗಂ . . . ನೆಜೆಯೆ ನೋಡಿ ನಂಬುಗೆ ಮಹಾಪುರಾಣದೊಳೆ ಬುಧರ್ (ಆದಿಪು. ೦೨-೩೦) ; ಬುಧರ್ದುರ್ ನೋಟ್ಪುದು ಪುರಾತನನೂತನಕಾವ್ಯರೇಖೆಯಂ (ಗದಾಯು. ೧-೪೭) ; ಮಿಗುವವಧಿ ಬುಧರಜಿಯೆ ನಿನ್ನಿನ ಹಗಲು ನಿನ್ನದು ಪಾಂಡುತನಯರು ಹೊಗುವಡಿಂದಿನ ದಿವಸವವರದು ಕಂದ (ಕುವ್ಯಾದ್ರೋ. ೭-೨೨). ೩. ದೇವತೆ ; ದಿವಿಜ : "ಬುಧರನ್ವಿತರ್ಕಳುಂ ದಿವಿಜರುಂ" (ಶಬ್ದಕೋ. ೦೨೦-೦೪). ೨. ೩ : ಇತಿಹಾಸಮೆಂಬ ವಿಮಳಾಮೃತವಾರ್ಧಿಯೊಳೊಗೆದ ಕಲ್ಪಕುಜದಂತೆ ರಸಾನ್ವಿತಮಾದೀ ಕೃತಿ ಬುಧಸಂತತಿಗಕ್ಷಯಸುಖಮನೀವುದೊಂದಚ್ಚರಿಯೇ (ಯುಕೋಶ. ೦-೨೫). ೪. ಬೃಹಸ್ಪತಿಯ ಹೆಂಡತಿಯಾದ ತಾರೆಯಲ್ಲಿ ಚಂದ್ರನಿಂದ ಜನಿಸಿದವನು : "ರೌಹಿಣೇಯಃ, ಬುಧಃ, ಸೌಮ್ಯಃ, ಚಾಂದ್ರಮಸಾಯನಃ—ಈ ೪ ಬುಧನ ಪೆಸರ್" (ಹಲಾಯು. ೪-೪೭) ; ರವಿ ಚಂದ್ರ ಬುಧ ನೀನೆ ರಾಹುಕೇತುವು ನೀನೆ (ಕುರಂದ. ೨-೨೭-೧). 'ಬುಧತಾತ' ಪರಾ. ೫. [ಜ್ಯೋತಿ] ನವಗ್ರಹಗಳಲ್ಲಿ ಒಂದು : ಮಂಗಳ, ಬುಧ, ಬೃಹಸ್ಪತ್ಯಾದಿ ನವಗ್ರಹಂಗಳೆಲ್ಲಂ ಪೊಣಪೊಂಸಲಿಂಗಂಗಳ್ (ಕವಿಪ. ೮೬ ಶೃ.ನೋ.) ; ಸೂರ್ಯನಿಗೆ ಅತ್ಯಂತ ಸಮೀಪದಲ್ಲಿರುವ ಗ್ರಹ ಬುಧ (ಆಕಾಶ. ೦೫). ೬. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : "ನವ . . . ಬುಧ, ಬಂಧ, ಗ್ರಹ, ಗ್ರಹಣ, ರಸ, ನಾಟ್ಯಾಂಗ, ಇಂತಿನಿತುಂ ೯ಕ್ಕೆ ಪೆಸರು" (ವ್ಯವಹಾ. ೦೦-೪). [ಸಂ.]

**ಬುಧತಾತ** (ನಾ). ಬುಧನ ತಂದೆ; ಚಂದ್ರ : ಬುಧತಾತನ ತಿಳಿಚೊನ್ನಂ ವಿದಿತಾಶಾವಳಿವಿಕೀರ್ಣಪೂರ್ಣವಿಲಾಸಂ (ಹರಿಶ್ಚ. ೨-೩೩). [ಸಂ.]

**ಬುಧನಾಲು** (ನಾ). ಒಂದು ಬಗೆಯ ಶಿಕ್ಷೆ ಹಾಗೂ ಅದಕ್ಕೆ ಬಳಸುವ ಮರದ ಸಾಧನ : ಅಸುರೇಂದ್ರ ತಾನೆ ಪೋಗಿ ಬಲುಗಾಳಗಂಗೈದು ಹಿಡಿತಂದು ಯರಡುಕಾಲ್ಗಳಿಗೆ ಬುಧನಾಲ ಜೋಡಿಸಿ ಪಹಿಬರ್ಪವರ ಬಲುಹ ನೋಡುವನೆನುತ (ಪಪಮಾ. ೨೪-೪೨). [← ಮರಾ. ಬುಧನಾಲ]

**ಬುಧವಾರ** (ನಾ). ಬುಧನಿಗೆ ಸಂಬಂಧಿಸಿದ ದಿನ; ವಾರದ ನಾಲ್ಕನೆಯ ದಿವಸ : ಕ್ರೋಧಿಸಂವತ್ಸರದ ಮಾಘ ಶುದ್ಧ ಬಿದಿಗೆಯು ಬುಧವಾರದಲು (ಎಕ. IV. ಹುಣಸೂ. ೨೫-೪ ; 1544). [ಸಂ.]

**ಬುಧ್ನ** (ನಾ). ೧. ಪಾತ್ರೆಯ ತಳಭಾಗ,-ಅಡಿ. ೨. ಮರದ ಬುಡ : "ಅವಾಗ್ಭಾಗಃ, ಬುಧ್ನಃ—ಈ ೨ ಮರದ ಮೊದಲ್" (ಹಲಾಯು. ೩೦-೨೭). ೩. ಅತ್ಯಂತ ಕೆಳಭಾಗ. ೪. ಎತ್ತರ ; ಔನ್ನತ್ಯ. ೫. ಉಬ್ಬಿದ ಹೊಟ್ಟೆ. ೬. ಉಬ್ಬಿದ ಹೊಟ್ಟೆಯುಳ್ಳವನು; ದಪ್ಪ ಹೊಟ್ಟೆಯುಳ್ಳವನು. ೭. ದೇಹ; ಶರೀರ. ೮. ಈಶ್ವರ; ಶಿವ: "ಉನ್ನತೋದರನಲ್ಲಿ ಶಿವನಲ್ಲಿ ಬುಧ್ನವೆಂಬುದು" (ಮಂಗರಾ. ೦೪೩-೨೨) ; "ಔನ್ನತ್ಯಮುಂ ಮೂಲಮುಂ ಶಿತಿಕಂಠಂ ತ್ರಯ ಬುಧ್ನಮಕ್ಕುಂ" (ನಾನಾರ. ೦೩೭). [ಸಂ.]

**ಬುನಗು, ಬುನುಗು** (ನಾ). ದಂಡಿನ ಹಿಂದೆಯೇ ಇದ್ದುಕೊಂಡು ಆಹಾರಸಾಮಗ್ರಿ ಮುಂತಾದುವುಗಳ ಸರಬರಾಜನ್ನು ನೋಡಿಕೊಳ್ಳುವವರ ತಂಡ : "ಪರಿಗ್ರಹ, ಪರಿಗ್ರಹಣ = ೧. ಸೇವಕ. ೨. ದಂಡಿನ ಹಿಂದಿನ ಬುನಗು" (ಗಂಗಾಮು. ೦೪೮). **ಬುನುಗು** : "ಪ್ರತ್ಯಾಸಾರ = ದಂಡಿನ ಬುನುಗು" (ಗಂಗಾಮು. ೨೨೦). [← ಮರಾ. ಬುನಗಾ, ಬುಣಗಾ, ಬುಣಗೇ]

**ಬುನಾದಿ** (ನಾ). ೧. ಅಡಿಪಾಯ; ತಳಹದಿ; ಅಸ್ತಿವಾರ : ಊರಲ್ಲಿ ರಾಯರು ಇಲ್ಲದಿದ್ದರೆ ಕೋಟೆಯ ಕಲ್ಲುಗಳು ಎಷ್ಟು ಮನೆಗಳ ಬುನಾದಿಗಳಾಗಿ ಕೊಳೆಯಬೇಕಾಗಿತ್ತೋ ಏನೋ (ಹಂಗೀತ. ೪) ; ಕತ್ತಲಿನ ಕಗ್ಗಲ್ಲ ಬುನಾದಿಯ ಕೆಳಗೆ ನಕ್ಷತ್ರಗಳು ಉಸಿರುಕಟ್ಟಿ ಸತ್ತುಹೋಗಿರಬೇಕು (ಅನಾಥ. ೦೪). ೨. ಮೊದಲು; ಪ್ರಾರಂಭ : ಸಕಲಕಾರ್ಯಗಳು . . . ಮಂಗಳಕರವಾಗಿ ಮುನ್ನಡೆದು ಮುಗಿಯಲೆಂಬ ಸದುದ್ದೇಶದಿಂದ ಆದಿಯಲ್ಲಿ ಇಷ್ಟದೇವತಾಪ್ರಾರ್ಥನೆ ಮಾಡುವುದು ಬುನಾದಿಯಿಂದ ಬಂದ ಆರ್ಯ ಸಂಪ್ರದಾಯ (ಜಗರಾ. ೩೩೦) ; ಇವತ್ತು ನಿನ್ನೆ ಕಟ್ಟಿಸಿದ ಗುಡಿಗಳೇನೋ ಇವು? ಜಕ್ಕಣಾಚಾರ್ಯರ ಗುಡಿಗಳು! ಬಹಳ ಬುನಾದಿಯಿಂದ ಬಂದವು! (ಹೊಸಂಸಾ. ೭). [← ಪಾರ. ಬುನ್ಯಾದ್; ಹಿಂ. ಬುನಿಯಾದ್; ಮರಾ. ಬುನಾದ್, ಬುನಿಯಾದ್, ಬುನ್ಯಾದ್]

**ಬುನುಗು** 'ಬುನಗು' ನೋ.

**ಬುಬ್ಬಣ** 'ಬುಬ್ಬುಣ' ನೋ.

**ಬುಬ್ಬಣಚಾರ** 'ಬುಬ್ಬುಣಾಚಾರ' ನೋ.

**ಬುಬ್ಬಣಾಚಾರ** 'ಬುಬ್ಬುಣಾಚಾರ' ನೋ.

**ಬುಬ್ಬಣೆ** (ನಾ). ಒಯ್ಯಾರಿ ; ಸೋಗಲಾಡಿ ; ಮಿಟುಕಲಾಡಿ : ಈಗ ಆ ಬುಬ್ಬಣೆ ಸತ್ತ ಮ್ಯಾಲ, ನೀರು ಕೊಡಾಕ ಗತಿ ಇಲ್ಲದ ಪತ್ರಾ ಬರಸ್ಯಾನ ನಾಚಿಕಿಲ್ಲದೆ (ಕುಂಕುಮ. ೦೦೦). [ಬುಬ್ಬಣ (< ಬುಬ್ಬುಣ) + —ಇ$_2$]

**ಬುಬ್ಬುಣ, ಬುಬ್ಬಣ** (ನಾ). (ಉಕ) ನಟನೆ; ಸೋಗು; ಬೂಟಾಟಿಕೆ :

'ಬುಬ್ಬುಣಾಚಾರ' ಪರಾ. ಬುಬ್ಬಣ: ಬಿಂಕಾ ಮಾಡಿಕೊಂತ ಡಾಕ್ಟರ ಮನ್ಯಾಗ ಹೊಕ್ಕು ಡಾಕ್ಟರ ಮನಿ ಎಲ್ಲೈತಿ ? ದವಾಖಾಣಿ ಎಲ್ಲೈತಿ? ಅಂತಾ ಬುಬ್ಬುಣಾ ಮಾಡತೀಯೇನು ? (ಪೂಸಂಸಾ. ೦೪೨). [ ? ]

**ಬುಬ್ಬುಣಚಾರ** 'ಬುಬ್ಬುಣಾಚಾರ' ನೋ.

**ಬುಬ್ಬುಣಾಚಾರ, ಬುಬ್ಬುಣಚಾರ, ಬುಬ್ಬಣಾಚಾರ, ಬುಬ್ಬುಣಚಾರ** (ನಾ). = ಬುಬ್ಬುಣ: ಹಾಗಾದರೆ ಅಂತಃಕರಣದ ಬುಬ್ಬುಣಾಚಾರ ಹೇಳಬೇಡ (ಪಪಂ. ೯೦). **ಬುಬ್ಬಣಚಾರ**: ನೀವು ನೋಡಬೇಕಾಗಿತ್ತು: ಪ್ಯಾಲೆ ಎಂಥಾ ಬುಬ್ಬಣಚಾರದ ಮಾತು ಸುರಸತಾಳ ಅಂಬೂದನ್ನ (ವೃತಿ. ೨೩೩). **ಬುಬ್ಬಣಾಚಾರ**: ಎಷ್ಟು ಬುಬ್ಬಣಾಚಾರದ ಮಾತನಾಡುತ್ತೀಯೆ (ಅದೇ). **ಬುಬ್ಬುಣಚಾರ**: ನಾಲ್ಕು ಬುಬ್ಬುಣಚಾರದ ಮಾತುಗಳನ್ನಾಡಿ ಸಾಂಬನು ಹೊರಟುಬಿಟ್ಟನು (ಕಪಲಾ. ೯೪) ; ಇಷ್ಟು ಬುಬ್ಬುಣಚಾರ ಹೇಳುವವಳು ಅವಳ ಮದುವೆಯನ್ನು ಮಾಡಬೇಕು (ಬಾಕಿಕು. ೧೨೩).

[ ಬುಬ್ಬುಣ + ಆಚಾರ ]

**ಬುಭುಕ್ಷಿತ** (ಗು). ೧. ಆಹಾರಕ್ಕಾಗಿ ಹಾತೊರೆಯುವ: ತಿನ್ನುವ ಅಪೇಕ್ಷೆಯುಳ್ಳ. ೨. ಹಪಹಪಿಸುವ: ಬಯಸುವ: ನಾನು ನನ್ನ ಬಹುದಿನದ ಬುಭುಕ್ಷಿತಭಕ್ತಿಯನ್ನು ವ್ಯಕ್ತಗೊಳಿಸಿ ಅದನ್ನು ಸಾರ್ಥಕಗೊಳಿಸ ಬಯಸಿದೆ (ಇಶ್ವಕ. ೦೯೦). (ನಾ). ೩. ಆಹಾರಕ್ಕಾಗಿ ಹಾತೊರೆಯು ವವನು ; **ಕ್ಷುಧಿತ**: "ಕ್ಷುತ್ಕ್ಷಾನ್, ಬುಭುಕ್ಷಿತಃ . . . ಕ್ಷುಧಿತಃ —ಈ ೫ ಹಸಿದಾತಂ" (ಹಲಾಯು. ೩೯–೨೦೩) ; ಧರೆಯೊಳ್ ಕಲಸಿ ಪರೆದ ಕೂಟಂ ಕಂಡಾನಿರದೆ ಬುಭುಕ್ಷಿತನೆಂ ಭೋರ್ಗರೆಯುತ್ತುಂ ಪಾಯ್ದಿಂ (ಶಂತಶಂ. ೨೯೨–೩). [ ಸಂ. ]

**ಬುಭುಕ್ಷೆ** (ನಾ). ೧. ಹಸಿವು ; **ಕ್ಷುಧೆ**: "ಅಶನಾಯಾ, ಬುಭುಕ್ಷಾ . . . ಕ್ಷುಧಾ—ಈ ೬ ಹಸಿವು" (ಹಲಾಯು. ೩೯–೨೦೩) ; ಒಪ್ಪಿಡಿಯ ಕವಳ ಏತಕ್ಕೆ ಸಾಕು ಅದು ಮಹಾಸುರದ ಭಿಕ್ಷೆ ಅನಂತತೆಯ ಸಂತಶಿಯನುಂಡು ತೀರಿತು, ಆ ಬುಭುಕ್ಷೆ (ಕೃಕ್ಷಾಲ. ೦೬–೬). ೨. ಆಸೆ ; ಬಯಕೆ.

[ ಸಂ. ಬುಭುಕ್ಷಾ ]

**ಬುರಕಾ, ಬುರಕಿ, ಬುರುಕ₃, ಬುರುಕಾ, ಬುರುಕಿ, ಬುರುಕೆ, ಬುರ್ಕ** (ನಾ). ೧. ಮುಖವನ್ನು ಮರೆಮಾಡಿಕೊಳ್ಳಲು ಹಾಕಿಕೊಳ್ಳುವ ನವಿರಾದ ಬಟ್ಟೆಯ ಮುಸುಕು ; **ಅವಕುಂಠನ**: ರಜಪೂತಹೆಂಗಸರಲ್ಲಿ ಬುರಕಾ ತೊಡುವ ಪದ್ಧತಿಯಿದ್ದಿತು (ಅದೇ). ೨. ಮುಸಲ್ಮಾನಸ್ತ್ರೀಯರು ತಲೆಯಿಂದ ಕಾಲಿನ ವರೆಗೂ ಮುಚ್ಚುವಂತೆ ತೊಡುವ ಒಂದು ಬಗೆಯ ಉಡುಪು: ಸಂಪ್ರದಾಯನಿಷ್ಠರಾದ ಮುಸಲ್ಮಾನ ಹೆಂಗಸರು ಇಂದಿಗೂ ಬುರಕಾ ಧರಿಸಿಯೇ ತಿರುಗಾಡುತ್ತಾರೆ (ಅದೇ). **ಬುರಕಿ**: ೧. ಹಿಂದೂಸ್ತ್ರೀಯರು ಬುರಕಿ ಹಾಕಿಕೊಳ್ಳುವ ಪದ್ಧತಿಯು ಈಗ ಕಡಿಮೆಯಾಗಿದೆ (ಅದೇ). ೩. (ಆನೆ, ಪಲ್ಲಕ್ಕಿ ಮುಂತಾದುವಕ್ಕೆ ಹೊದಿಸುವ) ಗೌಸು; **ಆಚ್ಛಾದನೆ**: ಲಿಂಗಾಜಮ್ಮಣ್ಣಿಯವರು ಪಟ್ಟಿಸಿದ ಬೆಳ್ಳಿಬಸವನ ಆಭರಣದ ಲೆಖ್ಖಾ . . . ೨ ಬುರಕೀ ಕಾರ್‍ಜೆ ೧ (ಎಕ. XIV, ಸಂಹನ. ೨೯೫–೬ನೆಯ ೪೭೦ ; 1847). **ಬುರುಕ₃**: ೨. ಒಬ್ಬ ಹಿಂದೂ ಸ್ತ್ರೀಯು, ಬುರುಕದಲ್ಲಿ ಕೋಟೆಯಿಂದ ಪಾರಾಗಿ ತಪ್ಪಿಸಿಕೊಳ್ಳಲೆತ್ನಿಸಿದ್ದ ಪಂಪರ್‌ಖಾನನನ್ನು ಗುರುತಿಸಿ . . . ಕೊಂದು, ತಾನೂ ಆತ್ಮಹತ್ಯೆ ಮಾಡಿ ಕೊಂಡಳು (ರಾತಿಸ್ತ್ರೀವ. ೨೦೩). **ಬುರುಕಾ**: ೨. ಪಂಪರ್‌ಖಾನನು ಬುರುಕಾ ಸ್ತ್ರೀಯಂತೆ ವೇಷ ಧರಿಸಿ, ಕೋಟೆಯಿಂದ ತಪ್ಪಿಸಿಕೊಳ್ಳುವ ಪ್ರಯತ್ನದಲ್ಲಿ ಇದ್ದನು (ರಾತಿಸ್ತ್ರೀವ. ೨೦೪). **ಬುರುಕಿ**: ೧. ಅವರ ಸ್ತ್ರೀಯರು . . . ಮುಖಕ್ಕೆ ಬುರುಕಿ ಹಾಕಿಕೊಳ್ಳುವುದಿಲ್ಲ (ಕೃವಾಇ. I, ೩೦೪). ೩. ತಾವು ನಾಯಿಯುತವೆನಿಸಿ ಪೊಳೆವವೆ ಸಮಸ್ತರುಂ ಮುಂದೆನುತೆ ಬುರುಕಿಯನು ಹಾಕಿಸಿ ದುದಾ ಹಿಪಿಂ ಪೈಮಂತದಿ (ಕರಬ. ೦೩–೩೦). **ಬುರುಕೆ**: ೧. ತಳ್ಳಸ್ನ ಬುರುಕೆಯೊಳಗಿಂದ ಹೊರಗೆ ಕಾಣುವ ಯುವತಿಯ ಮುಖದಂತೆ (ತಂದುಬಿ. ೬೦). **ಬುರ್ಕ**: ೨. ಅರಬರ ಲುರಾಯಿಷ್ ಮೊದಲಾದ ಬುಡಕಟ್ಟುಗಳಲ್ಲಿ ಮದುವೆಯಾದ ಹೆಂಗಸರು ಬುರ್ಕ ಹಾಕಿಕೊಳ್ಳುತ್ತಿದ್ದರು (ಇಸ್ಲಾಂಸಂ. ೩೩೩).

[←ಅರ. ಬುರಕಾ, ಬುರ್ಕಅ; ಹಿಂ. ಬುರಕಾ; ಮರಾ. ಬುರಕಾ, ಬುರಖಾ, ಭುರಕಾ, ಭುರಕೀ]

**ಬುರಕಿ** 'ಬುರಕಾ' ನೋ.

**ಬುರಗಿಬೊಟ್ಟು** (ನಾ). ಕಿವಿಗೆ ಧರಿಸುವ, ಗುಂಡನೆಯ ಒಂದು ಬಗೆಯ ಆಭರಣ : ನಡುಗಿವಿಗೆ ಲವಂಗದ ಹೂವು, ಬುರಗಿಬೊಟ್ಟು (ಕಂಕೋ. I, ೮೨೪). [? + ಬೊಟ್ಟು₂ (<ಬಟ್ಟು)]

**ಬುರಜು** 'ಬುರುಜು' ನೋ.

**ಬುರಣಿ** 'ಬೂರಣ' ನೋ.

**ಬುರದೆ, ಬುರುದೆ** (ನಾ). ಕೆಸರು; **ರಾಡಿ**: ಹಿಮಾಲಯಂಗಳಿಗೆ ಏಕವಾಗಿರುವ ಬುರದೇ ಭೂಮಿಗೆ "ತಾರೇಯಿ" ಎಂದು ಹೆಸರು (ಭೂಗೋಳ. ೫೦). **ಬುರುದೆ**: ನಾಲ್ಕೈದು ಆಳುದ್ದ ಜಲಸಮೃದ್ಧಿಯಿದ್ದ ಭಾವಿ, ಬರೀ ಬುರುದೆಯಾಯಿತು (ತಂದಕೋ. ೯೦).

[ದೇ.॥ ತುಳು. ಬುರುದೆ, ಬುರದ, ಬುರ್ದೆ; ತೆಲು. ಬುರುದ; ಪರ್ಜಿ. ಬುರ್ದ]

**ಬುರಬುರ** (ನಾ). ಒಂದು ಅನುಕರಣ ಶಬ್ದ: ಅವನು ಬುಂಡೆಯಲ್ಲಿ ಹೆಂಡ ತಂದಿಟ್ಟು ಹಸಿ ಈಚಲ ಗರಿ ಅದಿಸಿ, ಹಾಲನ್ನು ಬುರಬುರ ಅನ್ನುವಂತೆ ಉಕ್ಕಿಸುತ್ತಿದ್ದ (ನಮ್ಮೂರು. ೦೩೬).

**ಬುರಬುರನೆ** (ಅ). ಒಂದು ಅನುಕರಣಾವ್ಯಯಂ: ಪರಿಪರಿಯ ದಿವ್ಯ ವಸ್ತುಂಗಳಂ ತೆಗೆದು ಪಿಡಿದು ಶರಣರ ಪ್ಯೆಯೊಳು ಬುರಬುರನೆ ನೆಗೆನೆಗೆದೇಳ ಪುಳಕದಸಾಲ್ಗೆ ದೃಷ್ಟಿಯಾದವುದೆಂದು ಗವಸಣಿಗೆಯಿಕ್ಕುವಂತೆ ವೈತೀವಿ ಪೊದೆಯಿಸಿ (ಬಸರ. ೯–೦೪) ; ತುಟಿಗಚ್ಚಿ ಬುರಬುರನೊಡನೆ ಚುಂಬಿಪಳು (ಭರತ. ೧೦–೯೭). [ಬುರಬುರ + –ಅನೆ₁]

**ಬುರಬುರಿ₁, ಬುರಬೂರಿ** (ನಾ). ಕಡಲೆಹಿಟ್ಟಿನಿಂದ ಕರಿದು ಮಾಡುವ ಒಂದು ಬಗೆಯ ಖಾರವಾದ ತಿಂಡಿ: ಕಡಲಿಯಿಂದ ಬುರಬುರಿ, ವಡಿ . . . ಹೂರಣದ ಕಡಬು ಮೊದಲಾದ ಪಕ್ವಾನ್ನಗಳನ್ನು ಮಾಡುತ್ತಾರೆ (ಕೃಷಿಶ್ರ. ೯೩); ಹಪ್ಪಳ ಸಂಡಿಗೆ ಅಂಬೊಡಿ ಬುರಬುರಿ ಕೋಸಂಬರಿ . . . ಎಲ್ಲಾ ಅನುಕೂಲ ಪ್ರಕಾರ ದಿನಂಪ್ರತಿ ಇದ್ದೇ ಇರತಾವ (ತಿದುಗು. ೩೪). **ಬುರಬೂರಿ**: ಕರ್ಜಿಕಾಯಿ ಮಾಡಿದ್ದೇವೆ, ಚಕ್ಕುಲಿ ಬುರಬೂರಿ ಕರಿದಿದ್ದೇವೆ (ಜನನಾ. ೧೦೬). [?]

**ಬುರಬುರಿ₂** (ನಾ). ಗಿಡಗಳಿಗೆ ಹತ್ತುವ ಒಂದು ಬಗೆಯ ಹುಳು : ಬುರಬುರಿಯು ಹತ್ತುವಂಥ ಅವರಿ, ಅಲಸಂದಿ, ಹೆಸರು, ಮಡಿಕಿ, ಹುರಳಿ ಮೊದಲಾದ ಧಾನ್ಯಗಳನ್ನು ತುಂಬಿ ಇಡಬೇಕಾದರೆ ರಾಗಿಯನ್ನು ಸಮ ತೂಕವಾಗಿ ಕಲಿಸಿ . . . ಹಾಕಿ ಇಟ್ಟರೆ ಎಷ್ಟು ದಿವಸ ಇದ್ದ ಕಾಲಕ್ಕೂ ಹುಳಗಳು ಹತ್ತುವದಿಲ್ಲವು (ಕೃಷಿಶ್ರ. ೩೭). [?]

**ಬುರಬೂರಿ** 'ಬುರಬುರಿ₁' ನೋ.

**ಬುರಲೆ** 'ಪ್ರಜಿಲೆ' ನೋ.

△**ಬುರುಂಡೆ₁** 'ಬುರುಡೆ' ನೋ.

**ಬುರುಂಡೆ₂** (ನಾ). ಬಿದಿರಿನಿಂದ ಮೊರ, ಕುಕ್ಕೆ, ಬುಟ್ಟಿ ಮೊದಲಾದು ವನ್ನು ಮಾಡುವವಳು ; ಮೇದರ ಹೆಂಗಸು : ದಾಸಿಯ ಬುರುಂಡೆ [ಪಾಠಾಂ. ಟೆ]ಯ ಕಪಾಲಿನಿಯ . . . ಸೈರಂಧ್ರಿಯ ಕರ್ತವ್ಯದಿಂದಿನಿ ಬರೊಡನಾಡಿದೊಡೆ ಬಾಲೆಯರ್ಗವೆ ದುರಾಚಾರಮುಂ ಕಲಿವರ್ (ಶ್ರೀಬಾ. ೩–೩೮). [<ಬುರುಡ + –ಎ₂]

**ಬುರುಕ$_1$** (ನಾ). ಎಳೆಯ ಮಗು; ಹಸುಗೂಸು: ಬೆನ್ನೊಳೊಲಿವ ಬುರುಕ ಚನ್ನನ ಸರ ರನ್ನದ ಪಾಳುಗೆ ಕೊರವೀಗೆ (ಕಂದಕೊ. ೦೯೯); ಕೌಸಲ್ಯಾದೇವಿ ಕೊರವಂಜಿಗೆ ಮುತ್ತುರತ್ನಂಗಳಂ ಬುಟ್ಟಿಯೊಳ್ತುಂಬಿ ಬುರುಕನಿಗೆ (ಮಗುವಿಗೆ) ಹಾಲು ತುಪ್ಪವನೆರೆದು ಅನೇಕ ವಸ್ತ್ರಾಭರಣಗಳಿಂದ ಅಲಂಕರಿಸಿ ಕಳುಹಿದಳು (ಕರ್ಣಾಸಂ. ೬೪). [←ತೆಲು. ಬುರುಕ]

**ಬುರುಕ$_2$, ಬುಕ್ಕಿ** (ನಾ). ಮದುವೆ, ಹಬ್ಬ ಮುಂತಾದ ಮಂಗಳ ಪ್ರಸಂಗಗಳಲ್ಲಿ ಬಳಸುವ ಸುಗಂಧಯುಕ್ತವಾದ ಬಣ್ಣದ ಪುಡಿ: ಅರಸ ಕೇಳುಪವನಕೇಳಿಗೆ . . . ತರುಣಿಯರೀರ್ವರು ಕೂಡಿ ಸುಗಂಧದ ಬುರುಕದ ಪುಡಿಗಳ ತರಲು (ಶೀವಂಶಾಂ. ೦೨-೦೪); ಬುರುಕದಗಿಲು ಪರಗಂಧ ಕಸ್ತೂರಿಗಳ ಭರಣಿಗಳಿಂದ ಕರ್ಪುರದ ಕರಡಿಗೆಗಳ ಸಾಲಿಂದ ಕಂಗೆಸೆದವಾ ಗುರುಕುಚೆಯರ ಗುಡಾರ (ಳುರಾಶಾಂ. ೪೨-೬೩). **ಬುಕ್ಕಿ:** ‘ಬುಕ್ಕಿಟ್ಟು’, ‘ಬುಕ್ಕಿಹಿಟ್ಟು’ ಪರಾ.

[← ಹಿಂ. ಭುರಕಾ, ಬುಕ್ಕಾ; ಮರಾ. ಬುಕಾ, ಬುಕ್ಕಾ, ಬುಕ್ಕೀ: ಗುಜ. ಭುಕೀ. / ತೆಲು. ಬುಕ್ಕ]

**ಬುರುಕ$_3$** ‘ಬುರಕಾ’ ನೋ.

**ಬುರುಕಾ** ‘ಬುರಕಾ’ ನೋ.

**ಬುರುಕಿ** ‘ಬುರಕಾ’ ನೋ.

**ಬುರುಕೆ** ‘ಬುರಕಾ’ ನೋ.

**ಬುರುಗಲು, ಬುರುಗು$_1$** (ನಾ). ೧. ನೆನೆಸಿದ ಬತ್ತವನ್ನು ಹುರಿದು ಮಾಡುವ ಅರಳು; ಚುರುಮುರಿ: ಪುರಿ: ಮಂಡಕ್ಕಿ: “ಪೃಥುಕಃ, ಚಿಪಿಟಕಃ—೨ ಅವಲಕ್ಕಿ. ಧಾನಾ, ಭೃಷ್ಟಯವೆ ಹುರಿದ ಬುರುಗಲು” (ಸಿದ್ಧಾಂತಿ. ೨೮೮). **ಬುರುಗು$_1$:** ೧. ಬುರುಗು ಕಡಲೆಯು ಕೊಡುವೆ ಸರಕು ಯಿರ್ದೊಡೆ ಕೊಡಿರಿ (ಹುತೋರ. ೩೦). ೨. (ಪುರಿಯ ಹಾಗೆ) ಹಗುರವಾಗಿ ಉಬ್ಬಿರುವ ಸಣ್ಣಗುಳ್ಳೆಗಳಿಂದ ಕೂಡಿರುದು; **ನೊರೆ;** ಫೇನ: ಗಿಡಗಳ ತೊಗಟೆಯ ಮೇಲೆ ಬಂದ ಬುರುಗಿನ ಒಂದು ಕಣವನ್ನು ಯಂತ್ರದೊಳಗಿಂದ (Microscope) ನೋಡಿದರೆ ಅದರೊಳಗೆ . . . ಅರಣ್ಯವೇ ಕಾಣುತ್ತದೆ (ಮುಂಬಯು. ೩-೦೯೩); ಸಮುದ್ರ ನಗುತ್ತಿತ್ತು ಬುರುಗಿನ ದುಗ್ಧಹಾಸದಲಿ (ಪವ್ಯಧ್ವ. ೯-೧).

[ದೇ.॥ ತೆಲು. ಬೊರುಗುಲು, ಬೊರುವುಲು]

**ಬುರುಗು$_1$** ‘ಬುರುಗಲು’ ನೋ.

**ಬುರುಗು$_2$, ಬೂರುಗ$_2$, ಭೂರುಗ, ಭೂರ್ಗ** (ನಾ). ಒಂದು ಬಗೆಯ ಕಹಳೆಯಂತಹ ವಾದ್ಯ: ಹೆಗ್ಗಹಳೆ ಕಿಜುಗಹಳೆಯೊತ್ತು ಬುರುಗುಗಳ ಶಂಖ ಸಾಜಿ ಬೀಜುವ ದನಿಗಳಿಂದ ಮಂಗಳವಾದ್ಯ ಪೂರವಿಸೆ (ಲಕಂ ೩೦-೬೩); ಒತ್ತಿ ಊದುವ ಚಿನಗಾಳೆ ಬುರುಗು ಚಿನ್ನತಿತ್ತಿರಿ ಶಂಖ ವಾಸಗಳ ಮೊತ್ತದ ನಾದ ಕೇಳ್ವರ ಕಿವಿವಾಗಿಲ ಕೆತ್ತವದೇನ ಬಣ್ಣಿಪೆನು (ಳುರಾಶಾಂ. ೩೮-೯೩); ಮುರಿದೋಡಿತು ನಮ್ಮ ಬಲವಾ ದಳವಾಯ ಬುರುಗಿನ ದನಿಯುನಾಲಿಸುತ (ಕಂಪಾ. ೦೭-೬೩). **ಬೂರುಗ$_2$:** ಭೇರಿ ತಮ್ಮಟ ಡೌಡೆ ಗಿಡಬಿಡಿಯು ಬೂರುಗಂ ಘೋರಿಡಲು (ಪಪಮೋ. ೦೪-೨೯). **ಭೂರುಗ:** ಕರಣೆ ಭೂರುಗ ಢಕ್ಕೆ ಮರುಳೆ ದುಂದುಭಿಯು ಧರಣಿ ಬೆದರುವ ತೆರದಿ ಸುಡಿವ ಭೇರಿಗಳು (ಹವಾಕ. ೨೩೩). **ಭೂರ್ಗ:** ಕೊಂಬು ಕಹಳೆ ಭೂರ್ಗ ತುತೂರಿ (ಗುರುದ. ೦೦).

[ದೇ.॥ ತಮಿ. ಪೂರಿಕ್ಕೈ; ಮಲ. ಪೂರಿಕ; ತೆಲು. ಬೂರ, ಬೂರಗ. ಬೂರುಗು, ಬೂರುವು. / ಮರಾ. ಬುರಗ, ಬುರಂಗ, ಬುರುಗ, ಬುರುಂಗ]

**ಬುರುಗುಗಟ್ಟು** (ಕ್ರಿ). ನೊರೆಗಟ್ಟು; ನೊರೆಯೇಳು: ತುಪ್ಪದ ಖಳಖಳ ಕಡಿಮೆಯಾಗುತ್ತ ಬುರುಗುಗಟ್ಟತೊಡಗಿತು (ಗಂಪೂಯು. ೦೮೮); ತುಂಗಕ್ಕ ತಂದ ಸುದ್ದಿ ಕಸ-ಕಡ್ಡಿಯಾಗಿ ನೆರೆಬಂದ ಈ ಪ್ರವಾಹದಲ್ಲಿ ಕೊಚ್ಚಿಹೋದುವು, ವಾಸುದೇವ, ವಾಸುದೇವನ ತಾಯಿ ತಮ್ಮ ಊರವರು ಎಂಬ ಅಭಿಮಾನವೂ ಅಲ್ಲಿ ಇಲ್ಲಿ ಬುರುಗುಗಟ್ಟಿತು (ಮೂರುದಾ. ೦೯೭).

[ಬುರುಗು$_1$ (< ಬುರುಗಲು) + ಕಟ್ಟು$_1$]

**ಬುರುಗುಗಾಳೆ** (ನಾ). ಒಂದು ಬಗೆಯ ಕಹಳೆ: ಡಮಾನ ಚಂಬಕೆ ಬುರುಗುಗಾಳೆ ಹೆಗ್ಗಳೆ ಗಜರ್ವ ಪಟುಕಹಳೆಯುಂ . . . ಮದ್ದಳೆಗಳೆಂಬ ಬಹುವಾದ್ಯದುಬ್ಬಟೆಯುಖಿಳದೆಸೆಯೊಳಾವರಿಸಲು (ಕಬಶ್ರು. ೩-೭).

[ಬುರುಗು$_2$ + ಕಾಳೆ (< ಕಹಳೆ)]

**ಬುರುಜು, ಬುರಜು, ಬುರ್ಜು, ಬೂಜು$_2$** (ನಾ). ೧. ಕೋಟೆಯ ಪ್ರಾಕಾರದ ಮೇಲೂ ಗೋಪುರಗಳ ತುದಿಯಲ್ಲೂ ಕಟ್ಟುವ ವರ್ತುಲಾಕಾರದ ಕಟ್ಟಡ; P ಹಿಂದಿನ ಕಾಲದಲ್ಲಿ. ಆಕ್ರಮಣ ಮಾಡುತ್ತಿದ್ದ ಶತ್ರುಗಳ ಮೇಲೆ ಬುರುಜಿನ ನಡುವೆ ಇರುವ ರಂಧ್ರಗಳ ಮೂಲಕ ಗುಂಡು ಹಾರಿಸುತ್ತಿದ್ದರು: ಆ ಕೋಂಟೆಯ ನಾಲ್ಗಡೆಯಡದಿಟ್ಟೆಗಳೊಳ್ ಬುರುಜುಗಳನ್ನೆಬ್ಬಿಸಿ ಶತಘ್ನಿಗಳಂ ಪೂಡಿಸಿ ತತ್ಪ್ರಯೋಗಮುಖದಿಂದಾ ಬಿದುರೂರ ಕೋಂಟೆಯುಂ ತೆಗೆದುಕೊಂಡು (ಕೆಳನೃ. ೩-೪೪); ಆ ಕಾಲದಲ್ಲಿ ಹಳ್ಳಿಹಳ್ಳಿಗೂ ಕೋಟೆಗಳೂ ಬುರುಜುಗಳೂ ಕಟ್ಟಲ್ಪಡುತ್ತಿದ್ದವು (ಕಥಾ. ೦೩೨). ೨. ಸೋಲು, ಗೆಲವು ನಿಶ್ಚಿತವಾಗದ ಚದುರಂಗದ ಆಟ: (ಕ). **ಬುರಜು:** ೧. ಗ್ರಾಮಗ್ರಾಮಕ್ಕೂ ಒಂದೊಂದು ಬುರಜು ಎಂದು ಕಟ್ಟಿರುತ್ತಿದ್ದರು (ಶಾಸಗಾ. ೭೯). **ಬುರ್ಜು:** ೧. ಗಗನಾಗ್ರ ಮುಟ್ಟುವತಿ ಮಾನೆಗಳಿಂ ತೆನೆಗಳಿಂ ಝಗಝಗಿಪ ಬುರ್ಜುಗಳ ವ್ರಾತದಿಂ ಘಾತದಿಂ . . . ಕೈಲಾಸಮೊಪ್ಪಿರ್ದುದು (ಸಿದ್ಧಕಾ. ೦-೨೩); ಕೋಟೆಗೋಡೆಯ ಬುರ್ಜಿನ ಮೇಲೆ ಕುಳಿತುಕೊಳ್ಳಲು ಜಾಗಮಾಡಿದ್ದರು (ದಿಲ್ಲಕ. ೪೩). **ಬೂಜು:** ೩. ಸೋತವನು ಗೆದ್ದವನಿಗೆ ತನ್ನ ಕೆಲವು ಎಲೆಗಳನ್ನು ಕಾಣಿಕೆಯಾಗಿ ಕೊಟ್ಟು ಆಡುವ ಒಂದು ಬಗೆಯ ಇಸ್ಪೀಟಿನಾಟ: (ಕ).

[←ಅರ. ಪಾರ. ಬುರ್ಜ್; ಹಿಂ. ಬುರ್ಜ್, ಬುರ್ಜೀ; ಮರಾ. ಬುರುಜ್, ಬುರೂಜ್, ಬುರಜೀ, ಬೂಜ್]

**ಬುರುಡ** (ನಾ). ಬಿದಿರಿನಿಂದ ಬುಟ್ಟಿ, ಮೊರ ಮೊದಲಾದುವುಗಳನ್ನು ಮಾಡುವ ಒಂದು ಜಾತಿ ಮತ್ತು ಆ ಜಾತಿಗೆ ಸೇರಿದವನು; ಮೇದ: ಅಗಸ ಮುಚ್ಚಿಗ ನಟ ಬುರುಡ ಕೈವರ್ತ ಮೇದ ಬಿಲ್ಲರೆಂಬ ಈಯೇಳು ಮಂದಿಯೂ ಅಂತ್ಯಜಾತಿಯೆನಿಸಿಕೊಂಬುದು (ಶುಕಸ. ೦೪೯); ಪಸಿಯ ಮಾಂಸಗಳಿಂದಲುಪಜೀವಿಸುವವನ ನಟ್ಟುಗನ ಬುರುಡನ ಸಸಿನೆ ಪಡದೀಮೂವರುಗಳನ್ನವ ನಿರಂತರವು . . . ಉಣಲಾಗದು (ಕಾವೇಮು. ೬೭-೨೩).

[ಸಂ.]

**ಬುರುಡೆ, ಬುಂಡೆ, ಬುಡ್ಡಿ. ಬುರುಂಡೆ$_1$, ಬುರ್ರ, ಬುರ್ರೆ** (ನಾ). ೧. ಬಿಲ್ವ, ಬೇಲ ಮೊದಲಾದುವುಗಳ ಸೊಟ್ಟೆಯನ್ನು ಒಣಗಿಸಿ ಮಾಡಿದ ಪಾತ್ರೆಯಾಕಾರದ ಒಂದು ಸಾಧನ: ಬೆಂಗಲ್ಲಿ ತೊಡಕುವಲೆ ಕಂಬಿ ತಿತ್ತಿಯು ಸೋರೆಯ ಬುರುಡೆಗಳು ಬಿಲ್ಲುಗೊಂಚಿಯು ಸರಳ್ಗಳ ಪಿಡಿದು . . . ಬೇಂಟೆಯಾಡುತ್ತಿರ್ದರು (ರಾಶಕ. ೦೭-೬೭). ೨. ಬೇಲ, ಬಿಲ್ವ ಮುಂತಾದ ಕಾಯಿಗಳ ತಿರುಳನ್ನು ತೆಗೆದು ಒಣಗಿಸಿ. ಬಿರಡೆ ಹಾಕಿ. ನಶ್ಯ, ಶಾಯಿ ಮುಂತಾದುವನ್ನು ಹಾಕಿಡಲು ಸೀಸೆಯಂತೆ ಉಪಯೋಗಿಸುವ ವಸ್ತು: ಗಂಗಾರಾಮನು ತನ್ನ ನಶ್ಯದ ಬುರುಡೆಯಿಂದ ಒಂದಿಷ್ಟು ನಶ್ಯವನ್ನು ಮೂಗಿಗೇರಿಸಿ ಕಥೆಯನ್ನು ಪ್ರಾರಂಭಿಸಿದನು (ಶಿಧಿವ್ಯ. ೧೪); ಅವನು ತನ್ನ ಕಿಸೆಯೊಳಗಿಂದ ನಸ್ಯದ ಬುರುಡೆಯನ್ನು ಹೊರಗೆ ತೆಗೆದು ಮೂಗಿಗೇರಿಸಿದನು (ಘತದಾ. II, ೯೦೦). ೩. ಈಜುವಾಗ ನೀರಿನಲ್ಲಿ ಮುಳುಗದಂತಿರಲು ಬೆನ್ನಿಗೆ ಕಟ್ಟಿಕೊಳ್ಳುವ, ಒಣಗಿದ ಸೋರೆ ಮುಂತಾದುವುಗಳಿಂದ ಮಾಡಿದ ಸಾಧನ: ಹೊಳೆಗೆ ಬುರುಡೆ

ಯನ್ನು ನಂಬುತಿಳಿದ ನರನು ಮುಳುಗದಿಹನೆ (ಹಾರವಾ. ೩೬). 'ಈಜು ಬುರುಡೆ' ಪರಾ. ೪. ದೀಪ ಆರಿಹೋಗದಂತಿರಲು ಕಂದೀಲು ಮೊದಲಾದುವುಗಳಿಗೆ ಹಾಕುವ ಕೊಳವೆಯಾಕಾರದ ಉಬ್ಬಿದ ದುಂಡನೆಯ ಗಾಜಿನ ವಸ್ತು : ಕತ್ತಲೆಯಾದ್ದರಿಂದ ದೀಪ ಹಚ್ಚಲೆಂದು ಕಂದೀಲಿನ ಕಾಜಿನ ಬುರುಡೆಯನ್ನು ಉಜ್ಜುತ್ತಿದ್ದ ಪುರುಷೋತ್ತಮ 'ಖುಕ್' ಎಂದ (ಮೂರುದಾ. ೪೯). ೫. ವೀಣೆ, ತಂಬೂರಿ ಮುಂತಾದ ತಂತೀವಾದ್ಯಗಳ ತುದಿಗಳಲ್ಲಿ ಅಳವಡಿಸುವ, ಸೋರೆ, ಕುಂಬಳ ಮುಂತಾದ ಒಣಗಿದ ಕಾಯಿಗಳಿಂದ ಮಾಡಿರುವ ಗುಂಡನೆಯ ಸಾಧನ : ಆ ವೀಣೆಯ ಬುರುಡೆಯ ಮೇಲೆ ಚಿತ್ತಾಕರ್ಷಕವಾದ ದಂತದ ಕೆತ್ತನೆ ಕೆಲಸವಿದೆ (ರೂಢಿ). ೬. ತಲೆಯ ಚಿಪ್ಪು ; ಓಡು : ಕಪಾಲ : ತಂದ ರಾವುನ ತಲೆಯ ಬುರುಡೆಯನು ನಿರುಕಿಸುತ (ಶ್ರೀರಾಹ. ೬-೭೪). 'ತಲೆಬುರುಡೆ' ಪರಾ. ೭. (ಆಲಂ) ತಲೆ ; ಶಿರಸ್ಸು : ಪತ್ಯವಸ್ತುವನ್ನು ಉಪಾಧ್ಯಾಯರೇ ಅವರ ಬುರುಡೆಗೆ ತುಂಬಲು ಯತ್ನಿಸುವುದು ನಿಂತಿತು (ಶಿಕ್ಷದ. ೬೮೭). ೮. ಸುಳ್ಳು ಮಾತು ; ಬೊಗಳೆ : ಸ್ವಾಮಿ. ಈ ಬುರುಡೆಯನ್ನು ಯಾರಲ್ಲಿ ಬಿಚ್ಚುತ್ತೀರಿ ? (ದೇವಹಂ. ೨೨೮) ; ಇಂಥ ಬಾಯ್ಬಡಕರ ಬುರುಡೆಗಳಿಗೆ ಸೊಪ್ಪುಹಾಕಿದರೆ ಜಾಗೀರಿನ ಕೆಲಸವು ನಡೆಯಲಿಕ್ಕಿಲ್ಲ (ಜನಪ. ೨೦). **ಬುಂಡೆ :** ೧. ಬುಂಡೇನ್ ಎತ್ತಿ ಕುಡುದ್ಬುಟ್ಟಾಂದ್ರೆ — ತಕ್ಕೊ ! ಪದಗೊಳ್ ಬಾಣ ! (ಕನ್ನಬಾ. ೦೦೩) : ಬಂದರೆ ಸಮಯವು ನುಸುಳಿ ನನ್ನೆಡೆ ಬರುವ ಹೊತ್ತಿಗೆ ಅವಕೆ ರುಚಿ ತೋರಿಸುವೆನು : ಬುಂಡೆಯುಲಿ ನೊರೆಪೆಂಡವೀಯುತ ಹಳೆಯ ಪಳ್ಳಿಯ ಹಾಡನು (ನಲಿವು. ೯೩-೪). **ಬುಡ್ಡಿ :** ೨. ಬುಡ್ಡಿಯಲ್ಲಿದ್ದ ಶಾಯಿಯನ್ನು ಮಗುವು ಚೆಲ್ಲಿಬಿಟ್ಟಿತು (ರೂಢಿ). ೯. ಚಿಮಣಿ ದೀಪ : ಪಡಸಾಲೆಯಲ್ಲಿ ಭಯಂಕರವಾದ ಹೊಗೆಯನ್ನು ಕಾರುತ್ತಿರುವ ಸೀಮೆಯೆಣ್ಣೆಯ ಚಿಮಣಿಯ ಬುಡ್ಡಿ ಉರಿಯುತ್ತಿತ್ತು (ರಂಗರೋ. ೦೦೪) : ಹೊಗೆ ಕಾರುತ್ತಾ ಉರಿಯುತ್ತಿದ್ದ ಬುಡ್ಡಿಯನ್ನು ಆರಿಸಿ ಚೆನ್ನವ್ವನೂ ಮಲಗಿಕೊಂಡಳು (ಹಂದಕೋ. ೧೯೨).

Δ **ಬುರುಂಡೆ**$_1$ **:** ೧೦. ಒಂದು ಬಗೆಯ ಸಿಹಿತಿಂಡಿ ; ಉಂಡೆ : ತುಪ್ಪದ ಹೂರಿಗೆ ಬುರುಂಡೆ ಜಾಕಾಯ್ನುಜುಗಂಪೊಪ್ಪುವ ಮೋರುಂಡೆ ಮನಕೊಪ್ಪಿಸಿದುವು ಮಧುರರಸದ ಸುಧೆಯುಂ ಬುಧರೊಳ್ (ನಳಕಂ, ೪೪೩). **ಬುರ್ರ :** ೧೧. ಒಂದು ಬಗೆಯ ವಾದ್ಯ : ಹಾಡುಗಾರರು ಮದ್ದಳೆಯಂತಹ ಒಂದು ವಿಧವಾದ ವಾದ್ಯವಿಶೇಷವನ್ನು ಬಾರಿಸುತ್ತಾ ನರ್ತಿಸುತ್ತಾರೆ. ಈ ವಾದ್ಯವಿಶೇಷಕ್ಕೆ 'ಗುಮ್ಮಟಿ' ಎನ್ನುತ್ತಾರೆ. ತೆಲುಗಿನಲ್ಲಿ ಬುರ್ರ (ಬುರುಡೆ) ಎಂದು ಹೆಸರು (ಕಜಕ. ೦೩೨). 'ಬುರ್ರ ಕತೆ' ಪರಾ. **ಬುರ್ರೆ :** ೫. ವಿಪಂಚಿ ಯಾಕೆಂದು ಬಂದೆ ಎಂ ಮರುಳಗ್ಯ ವಿರಂಗವೆ ನಾಳ ಬುರ್ರೆಯೋಲುಂ ಮೆರೆವ ವಕ್ಷರುಹ ಮೇಲುದರ ನೆರೆತಂತಿಗುಂ ಮೇಲೆ ಶಿರಬಿರುಡೆಯೆನುತ್ತೈದಿದೆನಲು ಕೈಹೊಯ್ದಾಳಿಯರು ನಗುತಿರೆ (ಜನಮು. ೧೨-೪೧).

**ಬುರುಡೆ ಉರುಳಿಸು** = ಸುಳ್ಳು ಹೇಳು ; ಬೊಗಳೆ ಬಿಡು : ಕುಮುದ ರತ್ನಮ್ಮನ ಜೀವನಕತೆ ಕೇಳಬೇಕಂತಾಳೆಂತ ಬುರುಡೆ ಉರುಳಿಸಿದೆ (ಹಾದುಹು. ೦೦೧). **ಬುರುಡೆ ಬಿಡು** = ಬುರುಡೆ ಉರುಳಿಸು : ಬುರುಡೆ ಬಿಡುವುದರಲ್ಲಿ ಅವನು ಒಳ್ಳೆ ಸಮರ್ಥನಾಗಿದ್ದ (ಸ್ವಾತಿಹ. ೩೩೦). **ಬುರುಡೆಯ ಮಾತು** = ಸುಳ್ಳುಮಾತು : ಬೊಗಳೆ ಮಾತು : ಹೊಲದ ಒಡ್ಡಿಗಾಗಿ ಬರುವುದು ಸಾಧ್ಯವಾಗುವುದಿಲ್ಲವೆಂದು ಹೇಳಿ ಕಳಿಸಿದ ಮಾತು ಕೇವಲ ಬುರುಡೆಯ ಮಾತಾಗಿರಬಹುದೆ ? (ವಂಶವು. ೬೨). **ಬುರುಡೆ ಹೊಡೆ** = ಬುರುಡೆ ಉರುಳಿಸು : ಇಲ್ಲಿ ಸಿಂಹವಿದೆಯೆಂದು ಬುರುಡೆ ಹೊಡೆದೆಯಲ್ಲ ! ಅದಕ್ಕೆ ನಿನ್ನ ಆಧಾರವೇನೋ ? (ಹಸುಹೂ. ೨೯೯) ; ನೀನು ಬುರುಡೆ ಹೊಡೆಯುತ್ತಿದ್ದೀ (ಕಾರಮು. ೪). [ದೇ.॥ ತಮಿ. ಪುರುಟ್ಟಾ, ಪುಟ್ಟಿ : ತುಳು. ಬುರುಡೆ ; ತೆಲು. ಬುಡ್ಡಿ, ಬುಡ್ಡಿಗ, ಬುರುಡ, ಬುರ್ರ, ಬುಜ್ಜ ; ಕೋಲಾ. ಬುರ್ರಾ ; ನಾಯ್ಕಿ. ಬುರ್ರ ; ಪರ್ಜಿ. ಬುರ್ಕ : ಗೊಂಡಿ. ಪುರ್ಕಾ]

**ಬುರುದೆ** 'ಬುರದೆ' ನೋ.

**ಬುರುಬುರನೆ** (ಅ). ಉಬ್ಬುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಬುರುಬುರನೆ ಬೋರೆಗಳು ನೆಗೆದೊಡೆದರುಣಜಲದೇಜುಗಳ ಲಿಬ್ಬರು ತರಣಿ ಶಶಿಯವೊಲೊಪ್ಪಿದರು ಕಡೆವಗಲ ಪೌರ್ಣಮಿಯ (ಕೊರಗಾ. ೬-೦೭-೪೦) ; ಬಿಳಿಯ ಕಡಲೆಯ ಸಣ್ಣ ಹಿಟ್ಟ ಸೋದಿಸಿ ಹಾಲಿನೊಳಗಿಕ್ಕಿ ಸಂಪಳವ ಮಾಡಿ . . . ತುಪ್ಪವನು ಕಾಸಿ ಇಳಿಯಬಿಡೆ ಬುರುಬುರನೆ ಬೆಂದು (ಸೂಶಾ. ೦-೩೬). [ಬುರುಬುರು + –ಅನೆ$_1$]

**ಬುರುಬುರಿಸು** (ಕ್ರಿ). ಬುರುಬುರು ಎಂದು ಶಬ್ದ ಮಾಡು : ಬುರುಬುರಿಸುವ ಬಹುವಾದ್ಯಕ್ಕೆ ಕಾಲ್ತುರಹರಿಸದೆ ರಾಯನಿದಿರೊಳು ಹರಿಗೆ ಕಾಜಿರು . . . ಎಯ್ತಂದರಾಗ (ಭರತ. ೨೩-೦೭).
[ಬುರುಬುರು + –ಇಸು$_3$]

**ಬುರುಬುರು** (ನಾ). ಒಂದು ಅನುಕರಣ ಶಬ್ದ : ಕಾದ ಎಣ್ಣೆಗೆ ಲಟ್ಟಿಸಿದ ಹಿಟ್ಟನ್ನು ಹಾಕಿದಾಗ ಬುರುಬುರು ಎಂದು ಊದಿಕೊಂಡಿತು (ರೂಢಿ). 'ಬುರುಬುರನೆ'. 'ಬುರುಬುರಿಸು' ಪರಾ.

**ಬುರುಸಾಲು** (ನಾ). ಒಂದು ಬಗೆಯ ರೇಷ್ಮೆಯ ಬಟ್ಟೆ : ಅರುಣ ಹಸುರು ನೀಲ ಹಳದಿ ಕದಂಬದ ಸುರುಚಿರ ಬುರುಸಾಲುಗಳ ಮೆಚ್ಚಿವ ಪನ್ನಂಗದೊಳಗೆ ಬಿಂಕ ಬೆಡಗಿನ ತರಳಾಕ್ಷಿಯರ್ ನಡೆತರಲು (ಜ್ಞಾನಸ. ೨೩-೨೪). [← ತೆಲು. ಬುರುಸ, ಬುರುಸಾ]

**ಬುರುಸು** 'ಬೂಜು$_1$' ನೋ.

**ಬುರುಸುಗಟ್ಟು** 'ಬೂಜುಗಟ್ಟು' ನೋ.

**ಬುರುಸುಗೆಡು** (ಕ್ರಿ). ಬೂಜು ಹಿಡಿ : ಅತ್ಯಂತ ಪ್ರಾಚೀನಕಾಲದಲ್ಲಿ ಜ್ಞಾನೋನ್ಮಾದದ ವಿಕ್ಷಿಪ್ತ ಕುಟಿಲತೆಯ ಮೂಲಕ ನಾಟಕವು ಮುಳುಗಿತು ಹಾಗು ಬೀಭತ್ಸಶೃಂಗಾರದಿಂದ ಬುರುಸುಗಟ್ಟ "ಭಾಣ"ವಾಗಿ ಅದು ಪರಿಣಮಿಸಿತು (ಶ್ರಬಿಂಥ. ೨೩). [ಬುರುಸು (< ಬೂಜು$_1$) + ಕೆಡು$_1$]

**ಬುರ್ಕಾ** 'ಬುರಕಾ' ನೋ.

**ಬುರ್ಜು** 'ಬುರುಜು' ನೋ.

**ಬುರ್ನಾಸು** (ನಾ). ೧. ಕೆಲಸಕ್ಕೆ ಬಾರದುದು ; ಕಳಪೆ ; ಕೀಳು : ನನ್ನ ಶಾಯಿ ಕುಳವಾರುಗಳಿಗೇ ಕೊಟ್ಟು ಬರುತ್ತೇನೆ. ನಷ್ಟ ಮಾಲೀನು ಬುರ್ನಾಸಲ್ಲವಲ್ಲ (ಹೊಸಕ್ಷಿ. ೩೬); ಇಷ್ಟೆಯೋ ನಿಮ್ಮ ಶಾಲೆ, ಏನು ಮಹಾ ? ಬರೇ ಬುರ್ನಾಸು ಎಂದು ಗ್ರಹಿಸಬೇಡಿ (ರೂಹಸಂ. ೬೦). ೨. ನಿಸ್ಸಾರವಾದುದು ; ಸತ್ವರಹಿತವಾದುದು : ಕೇಸರಿಬಣ್ಣದ ತೊಗರಿಬೇಳೆ, ನೀವು ಬುರ್ನಾಸು ಅಂತೀರಲ್ಲ (ಹರಸ. ೨೦). ೩. ಕೆಲಸಕ್ಕೆ ಬಾರದವನು ; ನಿಷ್ಪ್ರಯೋಜಕ : ಬುರ್ನಾಸು, ಬರೀ ಬುರ್ನಾಸು. ಆ ಪಾದ್ರಿ (ಮುರಮು. ೨೦೭): ಪಾಣಿ ಇಷ್ಟೊಂದು ಬುರ್ನಾಸು ಆಗುತ್ತದೆ ಎಂದು ನಾನೆಣಿಸಿರಲಿಲ್ಲ (ಮರಮು. ೨೦೭). (ಗು). ೪. ನಿಷ್ಪ್ರಯೋಜಕವಾದ : ಕಳಪೆಯಾದ : ಈ ಬುರ್ನಾಸು ಅಂಗಡಿಯನ್ನು ನಾನಲ್ಲವೇ ಈ ಸ್ಥಿತಿಗೆ ತಂದದ್ದು (ಮೂರುದಾ. ೬೦); ನಮ್ಮ ಕಾಂಗ್ರೆಸ್ ಅಧ್ಯಕ್ಷರಾದ ಅಣ್ಣಪ್ಪಯ್ಯನವರೂ ಆ ಬುರ್ನಾಸು ಹೆಸರನ್ನು ಕಿತ್ತು ಹಾಕಬೇಕು (ಶಾರದಾ. ೨೪೬).
[← ತುಳು. ಬುರ್ನಾಸ್]

**ಬುರ್ನಿಷ್** 'ಬುರ್ನಿಸ್' ನೋ.

**ಬುರ್ನಿಶ್**, ಬುರ್ನಿಷ್, ಬೂರ್ನೀಸು (ನಾ). ಉಣ್ಣೆಗೆ ಕೆಲವು ಅಂಟು ಪದಾರ್ಥಗಳನ್ನು ಸೇರಿಸಿ ಮಾಡಿದ ಒಂದು ಬಗೆಯ ಮೆತ್ತನೆಯ

ಕಂಬಳಿ : (೩). ಬುರ್ನಿಷ್ : "ರಾಂಕವಂ, ೧ ಮೃಗರೋಮಜಂ– ಮೃಗರೋಮಗಳಿಂದ ಮಾಡಲ್ಪಟ್ಟ ಶಾಲು, ಬನಾತು, ಬುರ್ನಿಷ್" (ಸಿದ್ಧಾಂತಿ. ೨೦೨). ಬುರ್ನೀಸು : ಬುರ್ನೀಸು ಹೊದ್ದುಕೊಂಡರೂ ಚಳಿ ತಡೆಯಲಾಗುತ್ತಿಲ್ಲ (ರೂಢಿ).

[← ಮರಾ. ಬುರಣೂಸ್, ಬುರಣಸ್./ತೆಲು. ಬುರ್ನೀಸು, ಬುರುನೀಸು]

**ಬುರ್ರ** 'ಬುರುಡೆ' ನೋ.

**ಬುರ್ರಕತೆ** (ನಾ). ಮದ್ದಳೆಯಂತಹ ಒಂದು ಬಗೆಯ ವಾದ್ಯವನ್ನು ಬಾರಿಸಿಕೊಂಡು ಹೇಳುವ ಕಥೆ; P ತೆಲುಗಿನಲ್ಲಿ ವಿಶೇಷವಾಗಿ ಪ್ರಚಾರದಲ್ಲಿರುವ ಜನಪದಕಲೆಗಳಲ್ಲಿ ಒಂದಾದ ಇದರಲ್ಲಿ ಮೂವರು ಭಾಗವಹಿಸುತ್ತಾರೆ. ಒಬ್ಬನು ಕಥೆಯನ್ನೂ ನಡುನಡುವೆ ಹಾಡನ್ನೂ ಹೇಳುತ್ತಾನೆ. ಉಳಿದ ಇಬ್ಬರು ಬುರ್ರವನ್ನು ಬಾರಿಸುತ್ತಾ ನರ್ತಿಸುತ್ತಾರೆ: ಕ್ರೈಸ್ತಮತಪ್ರಸಾರಕ್ಕೆಂದು ಪಾದ್ರಿಗಳು ತೆಲಂಗಾಣಕ್ಕೆ ಬಂದಿಳಿದಾಗ . . . ತಮ್ಮ ಮತವನ್ನು ಸೇರಿ ಉನ್ನತಿಗೇರಿದ ಮಹನೀಯರ ಚರಿತ್ರೆಗಳನ್ನು 'ಬುರ್ರಕತೆ'ಯ ರೂಪದಲ್ಲಿ ಬರೆಸಿ ಆಡಿಸಿದರೆಂದೂ ತಿಳಿದು ಬರುತ್ತದೆ (ಕಜಕ. ೦೩೨).

[ಬುರ್ರ (< ಬುರುಡೆ) + ಕತೆ]

**ಬುರ್ರಕಥೆ** (ನಾ). = ಬುರ್ರಕತೆ : ಬುರ್ರಕಥೆಯಲ್ಲಿ ಮೂವರು ಭಾಗವಹಿಸುತ್ತಾರೆ (ಕಜಕ. ೦೩೨). [ಬುರ್ರ (< ಬುರುಡೆ) + ಕಥೆ]

**ಬುರ್ರೆ** 'ಬುರುಡೆ' ನೋ.

**ಬುಲಾಕು** (ನಾ). ಮೂಗಿನ ಎರಡು ಹೊಳ್ಳೆಗಳ ನಡುವೆ ಜೋತಾಡುಹಂತೆ ತೊಡುವ ಒಂದು ಬಗೆಯ ಆಭರಣ : ಅವಳ ಮೂಗಿನಲ್ಲಿ ತಳತಳಿಸುವ ದೊಡ್ಡಮುತ್ತಿನ 'ಬುಲಾಕೂ' . . . ವಜ್ರದುಂಗುರವೂ ಇಷ್ಟೇ ಅವಳ ಆಭರಣಗಳಾಗಿದ್ದವು (ತಿರಂಗ. ೦೬); ಬುಲಾಕಿನ ರತ್ನ ಮೇಲ್ತುಟಿಯ ಮಧ್ಯದಲ್ಲಿ ಮಿನುಗುತಿದೆ (ಪವರಾ. II. ೦೦).

[←ಪಾರ. ಹಿಂ. ಬುಲಾಕ್ ; ಮರಾ. ಬುಲಾಕ್, ಬುಲಾಖ್]

**ಬುಲೆಟ್ಟು** (ನಾ). ಬಂದೂಕಿಗೆ ಉಪಯೋಗಿಸುವ ಸೀಸದ ಗುಂಡು,– ಗೋಲಿ : ಡಕಾಯಿತನ ಬುಲೆಟ್ಟಿನಿಂದ ಗಾಯಗೊಂಡಿದ್ದ ಆತನು ಆಸ್ಪತ್ರೆಯಲ್ಲಿ ಚೇತರಿಸಿಕೊಳ್ಳುತ್ತಿದ್ದಾನೆ (ರೂಢಿ). [←ಇಂ. Bullet]

**ಬುಲ್ಬುಲ್** (ನಾ). ಹಾಡುವ ಜಾತಿಗೆ ಸೇರಿದ, ಒಂದು ಬಗೆಯ ಸಣ್ಣ ಗಾತ್ರದ ಹಕ್ಕಿ : (ಬುಲ್‌ಬುಲ್ ಪಕ್ಷಿಗಳು) (Bulbuls) : ಆಫ್ರಿಕಾದಿಂದ ಏಷ್ಯಾಖಂಡದಾದ್ಯಂತ ಕಂಡುಬರುವ ಸಂಗೀತಕ್ಕೆ ಹೆಸರಾಂತ ಪಕ್ಷಿಪ್ರಭೇದವಿದು (ಪಕ್ಷಿ. ೨೨೬).

[←ಪಾರ. ಹಿಂ. ಬುಲ್‌ಬುಲ್; ಮರಾ. ಬುಲಬುಲ್, ಬುಲ್ಬುಲ್]

**ಬುಲ್ಬುಲ್‌ತರಂಗ** (ನಾ). ಒಂದು ಬಗೆಯ ವಾದ್ಯವಿಶೇಷ : ಲಲಿತಗತಿಯು ಕಾಣಿಸುವಲ್ಲಿ ಬುಲ್‌ಬುಲ್‌ತರಂಗ, ವೀಣೆ, ಕೊಳಲುಗಳು ಬೇಕು (ಬಾಲಕೃ. II. ೯೬೯); ಪರದೇಶದವರ ಸಹವಾಸದಿಂದ . . . ಬುಲ್‌ಬುಲ್‌ತರಂಗ, ಅಗ್ನಿತರಂಗ . . . ಕಾಷ್ಠತರಂಗ ಮುಂತಾದುವು ಎಷ್ಟೋ ಬಂದಿವೆ (ಗಾವಕ. ೦೦೦). [ಬುಲ್ಬುಲ್, + ತರಂಗ]

**ಬುಲ್ಲಣೆ** 'ಬುಲ್ಲವಣೆ' ನೋ.

**ಬುಲ್ಲಯಿಸು** 'ಬುಲ್ಲವಿಸು' ನೋ.

**ಬುಲ್ಲಯ್ಸು** 'ಬುಲ್ಲವಿಸು' ನೋ.

**ಬುಲ್ಲವಣೆ, ಬುಲ್ಲಣೆ, ಭುಲ್ಲಣೆ, ಭುಲ್ಲವಣೆ, ಭುಲ್ಲವಣೆ** (ನಾ). ೧. ಅತಿಶಯ ; ಮೇಲ್ಮೆ ; ಹೆಚ್ಚಳ : "ಬು[ಪಾಠಾಂ. ಭು]ಲ್ಲವಣೆವೆಸಲ್ ಪೆರ್ಚುಗೆ" (ಶಬ್ದಮ. ೨೦) ; ಭಕ್ತಿಭಾವದ ಬುಲ್ಲವಣೆಯಲ್ಲಿ ಮರುಳು ಶಂಕರದೇವನಿಂತೆಂದ (ಪ್ರಭುಲಿ. ೧೫-೯); ಆರು ಬಲ್ಲರು ವೀರಗಟಕದ ಬೀರಿ ಬುಲ್ಲವಣೆಯನು (ಮೋಹತ. ೦-೨೯). ೨. ಉತ್ಸಾಹ ; ಹುರುಪು : ನಲ್ಲಳೊತುದು ಪಾಪವೇ ಕೊಡಲೊಲ್ಲೆ ಉಚಿತಕೆ ಬಜೆಯ ಬೇಟದ ಬು[ಪಾಠಾಂ. ಭು]ಲ್ಲವಣೆ ಸಲಿಸುವುದು ನೀತಿಯೆ (ಐಸಕ. ೯೨-೬). ೩. ಸಡಗರ ; ಸಂಭ್ರಮ : ಇವನ . . . ಭರಹಂಘವಣೆ ಗರುವಿಕೆ ಗಮಕ ಭಾವವಭೀತಿ ಬು[ಪಾಠಾಂ. ಭು]ಲ್ಲವಣೆ ಇವನ ವಿಮಲಕ್ಷತ್ರ ವಿಕ್ರಮವಿವನ ಕೊಂಡಯತನವಿವೇ ಸಾಕಿವನು ಘಾಟದ ವೀರನೆಂದರು ವೀರ ರಜುರ್ನನನ (ಕುವ್ಯಾಆ. ೧೫-೨೫); ಇಲ್ಲಿಗಿದೇಂ ಬರವೆಂದಾ ಸಲ್ಲಲಿತ ಕವೀಶ ನೆಯ್ದೆ ನುಡಿಯೆ ಕವೀಶರ್ ಬುಲ್ಲವಣೆಯಿಂದೆ ಕೇಳ್ದಾ ಸೊಲ್ಲಂ ಕಡುನೇಹದಿಂದೆ ನುಡಿದರ್ ತರದಿಂ (ಹಾಲಾಸ್ಯ. ೯-೩-೦೯). **ಬುಲ್ಲಣೆ** : ೩. ಮಹಬುಲ್ಲಣೆಯಿಂದಂ ಬೂದಿಯ ಪೂಸುತ ಬೇಡುವರೇ ಮಗನು (ಪ್ರಭುಕ. ೩-೨೪೦). **ಭುಲ್ಲಣೆ** : ೧. ಹಲ್ಲಣಿಸಿದುದು ಯಾವವರ ಪಡೆ ಘುಲ್ಲಣೆಯ ಘರ್ಘರದ ಘೋಷದ ಭುಲ್ಲಣೆಯ ಗಂಭೀರಭೇರಿಯ ಬಹಳರಭಸದಲಿ (ಕುವ್ಯಾಸ. ೦೦-೬೦). ೩. ಪುಲ್ಲ ನಲ್ವಾಸಿನೊಳ್ ಚೆಲ್ಲದಿಂ ನಲ್ಲಳ್ವಿರಸವೆ ನಿಲ್ಲದೆ ಕುಳ್ಳಿರ್ದು ಮೆಲ್ಲಮೆಲ್ಲನೆ ಲಲ್ಲೆಗಜೆವ ಬಲ್ಲತನದ ಸೊಲ್ಲ ಸೊಗದ ಭುಲ್ಲಣೆಯ ಕೊಲ್ಲಣದೊಳೆಸೆದುಂ (ರಾಮಾಶ್ವ. ೭೩-೩). **ಭುಲ್ಲವಣೆ** : ೩. ಭುಲ್ಲವಣೆಯಲಿ ನಿನ್ನ ಜವ್ವನ ಕೊಬ್ಬಿನಲಿ ಮಜೆದು ಪಲ್ಲವಿಸಿ ನೀ ಕಾವಿಸಿರ್ದೊಡೆ ಖುಲ್ಲತನದಲಿ ವಿಕೃತವೇಷದಲಲ್ಲಮನೆ ತಾ ಬಂದನೈಸಲೆ (ಪ್ರಭುಲಿ. ೬-೧೮). **ಭುಲ್ಲವಣೆ** : ೧. ತಾಮಸದ ಭುಲ್ಲವಣೆಯಲಿ ಕುರುಭೂಮಿಪನ ಬಲವೊದಜೆ ವೈರಿಸ್ತೋಮ ಕಂಡುದು ಪವನತನಯನ ರಣದ ಭಾರಣೆಯ (ಕುವ್ಯಾಕ. ೧೦-೨). ೨. ಭುಲ್ಲವಣೆಯಲಿ ಮಾತನಾಡಲಿ ಬಲ್ಲೆನು (ಪ್ರಭುಲಿ. ೧೬-೩೮) ; ಅರಿಬೊಬ್ಬಿಡುವೆಡಬಲದ ರಣಭೈರವನ ಭುಲ್ಲವಣೆಯಲಿ ಮುಂಗಾರ ಮುಗಿಲು ಬ್ಬರದವೊಲು ನಡೆತಂದನಾಹವಕೆ (ತೊರವೆ. ೬-೨೮-೯) : ಇವಳ ಮೃದುಮಾತಿನ ನಗೆಯ ಭುಲ್ಲವಣೆ ನಡೆ ವರ್ತನೆ . . . ಲಲ್ಲೆಯಿಂದೆಲ್ಲವರನೊಮ್ಮೆಗೆ ಮರುಳುಗೆಡಿಸುವುವು (ಅಕ್ರೂಚ. ೭-೦೬). ೪. ಕಳೆ ; ಶೋಭೆ : ಎಲ್ಲಿಗೆಲವೋ ಹೋಗದಿರು ಕಪಿ ನಿಲ್ಲಿದೇತಜೆ ಕಲಸ ಬೇಹಿನ ಭುಲ್ಲವಣೆ ಬಾರಿಸುತಲಿದೆ ನೆಜೆ ನಿನ್ನ ಮೋಜೆಯಲಿ (ತೊರವೆ. ೫-೨-೯). 'ಬುಲ್ಲವಿಸು' ಪರಾ.

[← ಮರಾ. ಭುಲ್ಲವಣ = ಮೈಮರೆವು, ಮೋಹ, ಮರುಳು]

**ಬುಲ್ಲವಿಸು, ಬುಲ್ಲಯಿಸು, ಬುಲ್ಲಯ್ಸು, ಬುಲ್ಲೈಸು, ಭುಲ್ಲಯಿಸು,** ಭುಲ್ಲವಿಸು, ಭುಲ್ಲಿಸು, ಭುಲ್ಲೈಸು (ಕ್ರಿ). ೧. ಅತಿಶಯಿಸು ; ಅಧಿಕಗೊಳ್ಳು: ಕ್ರೋಧಶಿಖಿ ಬುಲ್ಲವಿ[ಪಾಠಾಂ. ಭುಲ್ಲಯಿ]ಸೆ ಮುಳಿದು ವಿರೋಧಿಯನು ನೋಡಿದನು (ಕುವ್ಯಾಕ. ೨೩-೪೫). ೨. ಉತ್ಸಾಹಗೊಳ್ಳು ; ಹುಮ್ಮಸ್ಸಿನಿಂದ ಕೂಡಿರು : ಒಡನೆ ಬುಲ್ಲವಿಸುತಂ ಬ್ರಹ್ಮಸುತನೆಜಿಗೆ ಪುಳಕಿಪನ ಚರಣಾಂಬುಜಕ್ಕೆ ಶರಣು (ಅಶಿಜಂ. ೨೭-೦೯) ; ಸಿದ್ಧಲಿಂಗೇಶ್ವರನ ಘನ ಸುಪ್ರಸಾದಮಂ ಸವಿದು ತಣಿದು ಬು[ಪಾಠಾಂ. ಭು]ಲ್ಲವಿಸಿ ಹೆಚ್ಚಿ ಹೆಕ್ಕಳಗೊಂಡು ಕುಕಿಲಿಜೆದು (ಸಿದ್ಧೇಶ್ವ. ೦೫-೬೨). ೩. ಸಡಗರ ಪಡು; ಸಂಭ್ರಮಪಡು : ತಮ್ಮಯ ಕೃಪಾಪಾಂಗದಿ ಮೆಲ್ಲನಾರೈದು ನೋಡೆ ಸಲ್ಲಲಿತ ಗುರುಭಕ್ತನಡಿಯು ಮೊದಲಂತಾಗೆ ಬುಲ್ಲವಿಸಿ ತೆಗೆದಪ್ಪಿಕೊಂಡು (ಶ್ರೀಶರಾ. ೭-೦೦) ; ಕುಳ್ಳಿರಿಸಿ ತೊಡೆಯೊಳಗೆ ಹಿಗ್ಗುತ ಗಲ್ಲ ಮಿಡಿವುತ ಬುಲ್ಲವಿಸಿ ಬಲುಜೊಲ್ಲಿಳಿವ ಬಾಯಲ್ಲಿ ಬಾಯಿಟ್ಟೊಲಿದು ಮುದ್ದಿಸುತ (ದೇವಕು. ೩-೪). ೪. (ಸುಖ, ಸಂತೋಷಗಳ ಆಧಿಕ್ಯದಿಂದ) ಬೀಗು ; ಉಬ್ಬು: ಸಂಭ್ರಮದೊಳೆ ವಡೆತಂದು ಮೈ ಬು[ಪಾಠಾಂ. ಭು]ಲ್ಲವಿಸೆ ಹರ್ಷದಿಂ ಪಾರ್ಥನಂ ಕಂಡು (ಜೈಮಿಭಾ. ೦೭-೪೭) ; ಕಿಜೆದನಜೆದುದಜೆಂ ನೀಂ ಬುಲ್ಲವಿಸಿ ಬೆಜೆಯವೇಟ್ಟುದೆ (ಶೀತಿಮಂ. I. ೦೩೦). ೫. ಗರ್ವಪಡು ; ಸೊಕ್ಕು : ಉನ್ನತೋನ್ನತಪುತ್ರಪೌತ್ರಾಭಿವೃದ್ಧಿಯಂ ತನುಲ್ಲಿಯೇ ಪಡೆದು ಬಿಡದ ಮಮಕಾರದಿಂ ತನ್ನ ಕಾಂ ಬುಲ್ಲವಿಸುತತ್ಯಶಿಷ್ಟದ್ದ ಲಾಂಗುಲನೆನಿಪನಂ (ಅಶಿಜಂ. ೯-೬). ೬. ಉದ್ವೇಗಗೊಳ್ಳು: ಮೆಲ್ಲನೆದ್ದನು

ಮತ್ತೆ ತರಣಿಜ ಬುಲ್ಲವಿಸಿದನು ಕೋಪಶಿಖಿಯಲಿ ಚೆಲ್ಲವಾಡುತ ಕೊರಳು ಕೈಗಳ ಬಿಗಿದ ಬಾಲದಲಿ (ಕೌಶಲಾ. ೨೦-೪೮). ೭. ಉತ್ಸಾಹಗೊಳಿಸು : ಉಬ್ಬಿಸು : ಬಲ್ಲಾಳನೃಪತಿಗೆ ಬಹುದ್ರವ್ಯಮಂ ಯಶವುನುಲ್ಲಾಸವುಂ ಪ್ರತಾಪಮುಸೊಂದಿಸುತ್ತುವನ ಬುಲ್ಲವಿಪ ಬಲದ ಭಾಗದ ದೇವರೆನಿಸಿ (ಶಬ್ದ.ಲಾ. ೪-೨೫). ೮. ಸಂತವಿಸು : ಸಾಂತ್ವನಗೊಳಿಸು : ಸಮಾಧಾನಪಡಿಸು : ಈತಂ . . . ನಿನಗೊಲಿದು ವರವೀವೆನೆನುತ ಪ್ರತ್ಯಕ್ಷವಾಗೀಯದಿರೆ ಕೊಚಿತೆ ಬೆಸಗಾಗಿ ಬೇಡೇನಾದೊಡಂ ಎನುತ ತಲೆಡಹಿ ಬುಲ್ಲವಿಸಲು (ಗುರುಚಾ. ೦೦-೦೨) : ಕಂದ ಕೇಳ್ನೆ ನಿನಗೆ ಹಿತವಹದೊಂದು ವರವಂ ನಾಳೆ ಕೊಟ್ಟಪೆ ನೆಂದು ಶಂಕರದಾಸಿಮಯ್ಯನ ಕರೆದು ಬುಲ್ಲವಿಸಿ (ಶಂಕದಾ. ೩-೩೦). ೯. (ಅಲಂ) ಚಿಗುರುವಂತೆ ಮಾಡು : ಪಲ್ಲವಿಸುವಂತೆ ಮಾಡು : ಮದ್ಯ ಗಂಡೂಷದಲಿ ಬಕುಳದ ಮರನ ಬು[ಪಾಠಾಂ. ಭು]ಲ್ಲವಿಸಿದೆವು (ಕುಮಾ.ಭ. ೦೬-೨೩). ಬುಲ್ಲಯಿಸು : ೭. ತಳುವೇಳವುದೆನ್ನ ಮನ ನಿನ್ನ ತೆರೆಯೀ ಹರಿಯ ನಿಲುತದಲೆ ತಡೆವೆ; ಬುಲ್ಲಯಿಸುವೇಕೆನ್ನ ? (ಗೀಶಂ ೨೬-೪). ೧೦. ಮೆರೆ : ವಿಜೃಂಭಿಸು : ಹೇಳಿಗೆಯ ಮುಚ್ಚುಳ ಜಾಜಿಸಿದ ಫಣಿಯಂತೆ ಬುಲ್ಲಯಿಸಿ [ಪಾಠಾಂ. ಭುಲ್ಲವಿಸಿ]ತ್ತು ಕುರುಸೇನೆ (ಕುಮಾ.ಕ. ೨೩-೩೯). ಬುಲ್ಲಯ್ಸು : ೧. ಪೋಡಿ ಕೊಪ್ಪರಿಸಿದುದು ಧೈರ್ಯವನೀಡಿಜಿದುದಪದೆಸೆ ವಿಶಾಳಿಸಿ ಖೇಡತನ ಬುಲ್ಲಯ್ಸು [ಪಾಠಾಂ. ಭುಲ್ಲವಿಸ , ಭುಲ್ಲೈಸು] ತಿದ್ದುದು ಭಾನುನಂದನನ (ಕುಮಾ.ಕ. ೦೯-೩೭). ಬುಲ್ಲೈಸು : ೨. ಬಲ್ಮೆಹದಲ್ಲಿದೊ ಖಿಂಡೆಯುದೊಳು ತನ್ನ ಗೆಲ್ಲವ ತೋಜುವನೆಂದು ಬುಲ್ಲೈಸಿ ಕೈಯಿಕ್ಕುತಿದ್ದನು (ಶರತ. ೩೦-೭೯). ಭುಲ್ಲಯಿಸು : ೨. ತೆಲ್ಲಯಿಸಿ ಮಂಗಳಾರತಿಯ ವನಿತೆಯರೆಲ್ಲ ಭುಲ್ಲಯಿಸಿ ಹಾಡಿ ಹರಸುವ ಹೊತ್ತು ಮೆಜಿದು ಸಿರಿವಲ್ಲಭಂ ಗೋಪಿಯಗೊಲಿದು ಪ್ರತ್ಯೇಕರೂಪಾಗಿ ನೆರೆದುತಿರ್ದರು (ಸಿದ್ಧಲಾ. ೬-೬೬). ೧೦. ಪ್ರಳಯದ ಭವನ ರೌದ್ರದ ವೋಲು ಭುಲ್ಲಯಿಸಿದನು ಕಲಿಭೀಮ (ಕುಮಾ.ಶ. ೦೩-೦೯). ಭುಲ್ಲವಿಸು : ೧. ಸುಮ್ಮಾನದಂಕೆಯ ರಥಂಕೆಗಳ ಭರ ಭುಲ್ಲವಿಸಿದುದು (ಕುಮಾ.ಸ. ೨-೯೦): ಭುಲ್ಲವಿಸೆ ಕೋಪಾಗ್ನಿ . . . ಕರಾಳ ಕರವಾಳವನುಗಿದು ತೆಗೆದು (ಶಾವೇಮ. ೪೦-೬೫). ೨. ಭುವನಜನ ಭುಲ್ಲವಿಸೆ . . . ಯಜ್ಞಪ್ರವರದಲಿ ಪಡೆದನು ಮಹೀಪತಿ ಪುತ್ರಪಿಂಡಕವ (ತೊರಲಾ. ೦-೭ ಸೂಚನೆ); ಮಿಂಡೆದ್ದ ಹೆಣ್ಗಳು ಪವನಕೆ ನಡೆತಂದು ಮುಂಕೊಂಡು ಬಹುವಿಧದ ಚೇಷ್ಟೆಗಳಿಂದೆ ಭು[ಪಾಠಾಂ. ಬು]ಲ್ಲವಿಸಿ ಕಂಡಕಂಡವನಿಜಾತಂಗಳಂ ಚಿಗುರಿಸಿದರು (ಕೃಮಾಲಾ. ೩೦-೫). ೩. ಚೆಲುವ ಕುವರರನ ಪಡೆದು ಬಲುವೋಹದಿಂದಲಾನೊಲಿದು ಭುಲ್ಲವಿಸಿ ಮನದ ಪ್ರೀತಿಯಿಂ ಸಲಿಸಲೇದಿರ್ದೆಂ (ಜತುಕೃ. ೪-೮-೨೭). ೪. ಭೂಮಿಪತಿ ಭುಲ್ಲವಿಸಿದನು ನಿಸ್ಸೀಮ ಸಂತೋಷದಲಿ (ಕುಮಾ.ಭ. ೦-೦೦); ಭುಲ್ಲವಿಸಿತಮರಬಲಮೊಡನ ದೆಸೆದೆಸೆಗಳ್ಗೆ ಚೆಲ್ಲಿದುವು ಖಳರ ಬಲಂ (ತಬಕೃ. ೪೯-೦೫). ೫. ತಿಳಿಯಬೇಕೆಂಬೆಲ್ಲರಿಗೆ ಕರ ಸುಲಭ ವೆನುತಲಿ ಭುಲ್ಲವಿಸಿ ಗಿರಿಜಾತೆ ನುಡಿಯಲು (ಕೃಶುಲೀ. ೨-೩೭). ೮. ನಿತ್ಯ ಶಿವನ ಕಾಣುತ್ತಲಡಿದಾವರೆಯೊಳುರುಳ್ವ ರಾಘವನ ಪಿಡಿದೆತ್ತಿ ತೆಗೆದಪ್ಪಿ ಗಲ್ಲವ ಪಿಡಿದು ಭುಲ್ಲವಿಸಿಯುಮೆಯರಸನು (ರಾಶತ. ೦೩-೦೦). ೧೧. ಸಂತೋಷಪಡು : ಹಿಗ್ಗು : ಅರಸಿಯು ಹರುಷದರ್ಪಣ ಬೆಳಗುವುದು ಮರಳು ಭಾವಿಸುತ ಭುಲ್ಲವಿಸಿದನು ಭೀಮ (ಕುಮಾ.ಶ. ೦೨-೪೪). ೧೨. ಮೋಹಗೊಳಿಸು ; ಮರುಳುಮಾಡು : ಎಲ್ಲಾ ಯೌವನವುಬಲೆಯರೆಲ್ಲಂಗದಿಸೀಕ್ಷಿಸಲ್ಕೆ ಕುಟಿಲಾನ್ವಿತೆಯರ್ ಭುಲ್ಲವಿಸ ಲೇತಕೆನ್ನದಿರೊಲ್ಲದೊಡಾ ವಿಷಯಬದ್ಧವಾತ್ಮದ್ರೋಹಂ (ಅಪಮು. ೩-೦೮). ೧೩. ಮೋಹಗೊಳ್ಳು : ಮರುಳಾಗು : ಇಲ್ಲದಿಹ ವಸ್ತುವೊಳು ಚಿತ್ತವು ಭುಲ್ಲವಿವುದು (ಶಂತಲೀ. ೨೩-೦). ೧೪. ಕೃಪೆ ಯಿಂದ ಕಾಣು : ಸೊಲ್ಲಬೇಕನಿತೊಂದನೆನ್ನಂ ಭುಲ್ಲವಿಸಿ ಮರ್ತ್ಯಕೆ ಜಗತ್ರಯವಲ್ಲಭನೆ ನೀವಲ್ಲದೊರ್ಬನು ಕರ್ತನಿದ್ದಹನೆ (ಜಸಪು. ೨-೪೨). ೧೫. ಅತಿಶಯಗೊಳಿಸು : ಕಾನನದ ನಡುವೆ ಭುಲ್ಲವಿಸುತಿಹಳಾ ಸ್ಥಳ ವನು ಬಲ್ಲವರ್ವಿಗೆ ಕುಂಭಕೋಣದ ಸಲ್ಲಲಿತ ಸುಕ್ಷೇತ್ರವೆಂಬರ್ (ಕಾವೇಮ. ೩೯-೦೪). ಭುಲ್ಲಿಸು : ೧೩. ಅರಗಿಳಿ ಮಾತನಾಡಿದುದು ನಿನ್ನೊಡನಂತೆಳಸುತ್ತುಮಿರ್ದೆ ನೀಂ ಮರುಳೆಯ ಕೂಡೆ ಪಾರಿವದ ಲಲ್ಲೆಗೆ ಭುಲ್ಲಿಸು ತಿರ್ದೆಯೆಂದು ಮಂದರಗತಿಯಿಂದೆ ಹಂಸನೊಡನಾಡಿದೆಯೆಂದತಿ ಕೋಪದಿಂ ಪ್ರಿಯಂ ಮುರುಡಿಸೆ (ಜಸಂಕೃ. ೬-೪೭). ಭುಲ್ಲೈಸು : ೧. ಭಾಳನೇತ್ರನ ತೆರದಿ ಮುಂಡಿಸಿರೆ ಸೌಮಿತ್ರಿ ತಾಳಿ ಶರಚಾಪಗಳ ಕೆಲದಿ ನಿಂದಿರೆ ಹನುಮನಾಳೂಳಿಗಂಗೈವುತಡಿಗಡಿಗೆ ಜಾಂಬುವಂ ಪೊಗಳಿ ಭುಲ್ಲೈಸುತಿರಲು (ವಂಕಾಲಾ. ೪-೭-೩). ೩. ಪೂರ್ವದಲಿ ಹಿಮಗಿರಿರಾಜ ನೆಂತು ಶಾಂಕರಿಯ ಕಲ್ಯಾಣಕುತ್ಸವಿಪಂತೆ ಭುಲ್ಲೈಸುತಿರ್ದನೀಶಾನಸೆಟ್ಟಿ (ಸೌಂದಪು. ೨೩-೨೭) : ಸುಖಭಾರದಲ್ಲಿ ಭುಲ್ಲೈಸಿ ಪಾರ್ಥನು ನಿದ್ದೆ ತಿಳಿದೆಚ್ಚ ತ್ತನು (ಶಾಮುಕ. ೦೨೨). ೧೬. (ಅಲಂ) ಮೆರೆ; ಆರ್ಭಟಿಸು : ಬಸಗೆವಜಿ ಭುಲ್ಲೈಸೆ [ಪಾಠಾಂ. ಭುಲ್ಲವಿಸೆ]ನೂತನವಸನವಿಮಲವಿಭೂಷಣಂಗಳಲೆಸೆವನ್ನ ಮೂರ್ಧಾಭಿಷೇಕದ ರಾಜತೇಜದಲಿ (ಕೊರಲಾ. ೨-೨-೦೪) ; ಕಟಿಸ್ಥ ಗ್ರಮಂ ಬಲ್ಲಗೋಸುಗ ತಾಳ್ದು ಸಾತ್ವಿಕರಸಂ ಮತ್ತೇಳು ತೂಬಿಂದಮುಂ ಭುಲ್ಲೈಸುತ್ತುಗೆ ಪೂರವಾಗಿ ಪರರು ನಿರ್ಮೂಲನಂ ಮಾಡುತಂ (ಮೃಸೂಮ. ೨-೭೦). ೧೭. ಹೊಗಳು : ಸ್ತುತಿಸು : ಯಮಸುತನ ತಕ್ಕೈಸಿ ಭೀಮನ ಮಮತೆಯನು ಭುಲ್ಲೈಸಿ . . . ವಿದುರಪ್ರಮುಖ ರನು ಬೀಳ್ಕೊಟ್ಟು ಬಿಜಯಂಗೈದನಸುರಾರಿ (ಕುಮಾ.ಗ. ೦೩-೦೪).

[ಬುಲ್ಲವಣೆ + – ಇಸು₃]

ಬುಲ್ಲಿ (ನಾ). ಪುರುಷನ ಜನನೇಂದ್ರಿಯ : ನಲ್ಲಳೆ ಬಾ ಎಂದು ಕರೆದು ಸೊಲ್ಲ ಸೊಲ್ಲ ಮಾತನಾಡಿ ವಲ್ಲಭ ಶ್ರೀಪುರಂದರವಿಠಲ ಬುಲ್ಲಿ ತೋಜಿ ಪೋದ (ಪುರಂದ. ೩-೩೩-೩) ; ಘಾಸಿಯಾಗುವಿಯೆನೆ ಆಕಾಶದವಗೆ ನನ್ನ ವಿಾಸಲು ಬುಲ್ಲಿಯು ಲೇಸೆಂದೆನುವ (ಕೃಸಪಾ. ೦೭-೦೫).

[←ತೆಲು. ಬುಲ್ಲಿ, ಬುಲ್ಲ./ಮರಾ. ಬುಲ್ಲೀ, ಬುಲೀ]

ಬುಲ್ಲಿಕಾಯಿ (ನಾ). ಬುಲ್ಲಿ ಮುಚ್ಚುವಂತೆ ಬೆತ್ತಲೆ ಮಕ್ಕಳಿಗೆ ತೊಡಿಸುವ ಒಂದು ಬಗೆಯ ಆಭರಣ : ಹೊಂಗೆಜ್ಜೆ ಕಾಲ ಗಗ್ಗರ ಹೊನ್ನುಡಿದಾರ ರಂಗು ಡಾಳಿಪ ಬುಲ್ಲಿಕಾಯಿ (ಜ್ಞಾಶತ. ೩-೦೬೩) ; ಕಿರಿಗಂಟೆ ಉಡುದಾರ ಬುಲ್ಲಿಕಾಯಿಯ ಶ್ರೀಚರಣದಂದುಗೆ ಗೆಜ್ಜೆಕಾಯಿಯ ತರಳನಪ್ಪಿಕೊಂಡರ್ ತರಳೆಯರು (ಕೃಸಾಟ. ೬-೩).

[ಬುಲ್ಲಿ + ಕಾಯಿ₄ (<ಕಾಯ್₄)]

ಬುಲ್ಲೈಸು 'ಬುಲ್ಲವಿಸು' ನೋ.

ಬುವಾ (ನಾ). ಹಿರಿಯ ವ್ಯಕ್ತಿಗಳನ್ನು ಸಂಬೋಧಿಸುವಾಗ ಬಳಸುವ ಒಂದು ಮಾತು : ಸದಾನಂದ ಬುವಾಗೆ ಸಂಗೀತದ ಮೇಲಿದ್ದಷ್ಟೇ ಪ್ರೀತಿಯಿದ್ದ ವ್ಯಕ್ತಿ. ಆತನ ಹೆಂಡತಿ (ಶಂಗೀತ. ೦೦೦).

[←ಮರಾ. ಬುವಾ]

ಬುವಿ 'ಬೂವಿ' ನೋ.

ಬುವ್ವ 'ಬೂವು' ನೋ.

ಬುಸ್. ಬುಸು (ನಾ). ನಿಟ್ಟುಸಿರು, ಹಾವಿನ ಫೂತ್ಕಾರ ಮೊದಲಾದುವನ್ನು ಅನುಕರಿಸುವ ಒಂದು ಶಬ್ದ : ಹಾವಿಗೆ ಏಟು ಬಿದ್ದಿರಬೇಕು ; ಅದು ಹೆಡೆಯನ್ನು ಇಷ್ಟಗಲ ಬಿಚ್ಚಿ ಬುಸ್ ಎಂದು ಕಲ್ಲುಚಪ್ಪಡಿಯನ್ನು ಕುಟ್ಟಿತು (ಕೃಕ್ಷ. ೦೭೮). 'ಬುಸ್ಸೆನ್ನು' ಪರಾ. ಬುಸು : 'ಬುಸುಗರೆ', 'ಬುಸುಗುಟ್ಟು'. 'ಬುಸುಗುಡು' ಪರಾ.

ಬುಸುಬುಸು (ದ್ವಿರುಕ್ತಿ) : ಹಾವು ರೋಷದಿಂದ ಬುಸುಬುಸು ಎನ್ನುತ್ತಿತ್ತು (ಅದೇ).

**ಬುಸ** (ನಾ). ಧಾನ್ಯಗಳ ಮೇಲಿನ ಹೊಟ್ಟು,–ತೌಡು : "ಕಡಂಗರಂ ಬುಸಂ" (ವಸ್ತುಕೋ. ೯೩–೨೦). [ಸಂ.]

**ಬುಸು** 'ಬುಸ್' ನೋ.

**ಬುಸುಗರೆ** (ಕ್ರಿ). ರೋಷದಿಂದ ಬುಸುಬುಸು ಎಂದು ಶಬ್ದ ಮಾಡು. – ವೇಗವಾಗಿ ಉಸಿರು ಬಿಡು : ತಿಮ್ಮಿ . . . ಅಂತ ಬುಸುಗರೆದ ಚಿನ್ನ (ಪರ್ವ. II. ೦೦೬೦). [ ಬುಸು (< ಬುಸ್) + ಕರೆ$_1$ ]

**ಬುಸುಗುಟ್ಟು** (ಕ್ರಿ). = ಬುಸುಗರೆ : ಬುಸುಗುಟ್ಟುವ ಪಾತಾಳದ ಹಾವೋ ? (ಕುಕೃ. ೨೬–೦) ; ಈ ಮರಗಳೆಲ್ಲಾ ಆಯಾಸದಿಂದ ಬುಸುಗುಟ್ಟುತ್ತ, ತಲೆ ಬಗ್ಗಿಸಿಕೊಂಡು, ಕೊಂಬೆಗಳನ್ನು ಬಲವಾಗಿ ಅಲ್ಲಾಡಿಸಿಕೊಂಡು ಓಲಾಡುತಿರುವುದೇತಕ್ಕೆ ? (೬೦ಕಥೆ. ೩೦). [ ಬುಸು (< ಬುಸ್) + ಕುಟ್ಟು$_1$ ]

**ಬುಸುಗುಡು** (ಕ್ರಿ). = ಬುಸುಗರೆ : ನಿಲ್ಲಲಾರದೆ ಕುಸಿದು ಕುಳ್ತನಾ ಧರಣಿಪತಿ, ಮಂತ್ರಶಕ್ತಿಗೆ ಸಿಲ್ಕಿ ಹಾವಾಡಿಗಂ ಬರೆದ ಮಂಡಲದ ತಡೆಯೊಳಗೆ ಬುಸುಗುಡುವಹೀಂದ್ರನೋಲ್ (ಶ್ರೀರಾಮಾ. ೭೦–೯೯೯) : ಅನ್ನ ಅನ್ನ ಬುಸುಗುಡುತಿದೆ ಮಾನವನಾಗರವು (ಅರಗು. ೯೦೩. ೦೬).

[ ಬುಸು (< ಬುಸ್) + ಕುಡು$_1$ (< ಕೊಡು$_1$) ]

**ಬುಸ್ತ** (ನಾ). ೧. ಸುಟ್ಟ ಮಾಂಸದ ಕರಿಕಾದ ಭಾಗ. ೨. ಕೆಲವು ಕಾಯಿ. ಹಣ್ಣು ಅಥವಾ ಬೀಜಗಳ ಒಣಗಿದ ಹೊರಪದರ. [ಸಂ.]

**ಬುಸ್ಸೆನ್, ಬುಸ್ಸೆನ್ನು** (ಕ್ರಿ). = ಬುಸುಗರೆ: ಪತ್ತೆಸಾರ್ದ ಮರುಳ ಮೊತ್ತಮಂ ಬುಸ್ಸೆಂದು ಬೆದಱಿಸುವ ಪಾವಿನ ತೊಡವುಗಳೊಳಂ . . . ಚೆಲ್ವನಾಂತು (ಕಬ್ಬಿಗ. ೦೬೭). **ಬುಸ್ಸೆನ್ನು** : ಪಕ್ಕಗಳಾಂತ ಪನ್ನಗತತಿ ಬುಸ್ಸೆಂದು ಚಿಕ್ಕನೆ ಪಾಱಿ ಬರ್ಪಂತೆ ಲೆಕ್ಕವಿಲ್ಲದ ಬಾಣಗಳು ಬಂದುಱೆ ನೆಲಕಿಕ್ಕಿದವಹಿತ ವಾಹಿನಿಯ (ಕಂಕ್ರಸಾಂ. ೯–೩೦) ; ಬಡದೇವರನ್ನು ಕಂಡರೆ ಬಿಲ್ಪತ್ರೆ ಕೂಡ ಬುಸ್ಸೆನ್ನುತ್ತದೆ (ಗಾದೆ).

**ಬುಸ್ಸುಬುಸ್ಸೆನ್ನು** (ದ್ವಿರುಕ್ತಿ) : ಚಂಡಚೂಡಾಘಾತದಿಂದಲಖಂಡ ತತ್ವಂಗಳು ತೆರಳುತಿರೆ ತಾಂಡವೋದ್ಧತಿಯಿಂ ಧರಿಸಿದಹಿ ಬುಸ್ಸುಬುಸ್ಸೆನಲು [ ಪಾಠಾಂ. ಭುಸ್ಸುಭುಸ್ಸೆನಲು ] (ಬಸವೃ. ೦೬–೦೮). [ ಬುಸ್ + ಎನ್$_1$ ]

**ಬುಸ್ಸೆನ್ನು** 'ಬುಸ್ಸೆನ್' ನೋ.

**ಬುಳಿಗೆಱೆ**[3] (ನಾ). ಒಂದು ಸ್ಥಳದ ಹೆಸರು : ಅನ್ತೆ ಬನ್ದು ಬುಳಿಗೆಱೆಯ ಮೂಡಣ ಕಟೆಯ ಪೆರಿಸನ್ದರಿಂ (ಎಕ. III, ಸಂಜನ. ೦೩೯–೦೩ : 915). [ಬುಳಿ$_0$ + ಕೆಱೆ[3] ]

**ಬುಳುಬುಳನೆ** (ಅ). ಒಂದು ಅನುಕರಣಾವ್ಯಯ : ಅಹಿಬಾಣಮಂ ಬಿಡಲ್ ಬುಳುಬುಳನೆ ಪರಿವುತ್ತ ಭುಸ್ಸುಭುಸ್ಸೆನುತ ಪೆಡೆಗಳ ಕೆದರಿ . . . ಅರೆಯಟ್ಟಿ ಬರೆ (ಶತುಪು. ೯–೦೦–೬೦) ; ಭೂಮಿಗುರುಳಿದರಿವರು ಬುಳುಬುಳನೆ (ರಾಮಾಸಂ. ೬–೩–೨೨). [ ಬುಳುಬುಳು + – ಅನ್$_1$ ]

**ಬುಳುಬುಳು** (ನಾ). (ಹುಳುಗಳ ಹರಿದಾಟವನ್ನು ಸೂಚಿಸುವ) ಒಂದು ಅನುಕರಣ ಶಬ್ದ : ಅಪ್ಪುವಿಂಗೆ ಇಳಿಜಾರಿನಲ್ಲಿ ಚಲಿಸುವಾಗ ಹುಟ್ಟುವ ಬುಳುಬುಳು ಚಳಚಳ ಭೋರ್ಭೋರೆಂಬ ಶಬ್ದ ಉಂಟು (ವಿಜ್ಞಾ. II. ೩೨). 'ಬುಳುಬುಳುಗುಟ್ಟು' ಪರಾ.

**ಬುಳುಬುಳುಗುಟ್ಟು** (ಕ್ರಿ). (ಹುಳುವು) ಹರಿದಾಡಿದಂತಾಗು : ನೆಶ್ಯವು ಮೂಗಿನೊಳಕ್ಕೆ ಹೋದುದೇ ತಡ ಬುಳುಬುಳುಗುಟ್ಟಿ ಅಸಾಧ್ಯ ಫಜೀತಿ ಮಾಡಿಬಿಟ್ಟಿತು (ಕಳಹು. ೬೬). [ ಬುಳುಬುಳು + ಕುಟ್ಟು$_1$ ]

**ಬುಳ್ಳ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಕಲ್ಲು ಮೂರರಿಂದ ತೋಟದ ಹೆಬ್ಬಯ್ಯಾ ಬುಳ್ಳನು ಸುಕ್ಕಾಲಯಿ ಹಾದಿಬೀದಿ ಒಡೆಯಾ . . . ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು (ಜಾಸು. ೩೮–೨). [ ? ]

**ಬುಱಾಗಿ** (ನಾ). ಒಂದು ಬಗೆಯ ಪಕ್ಷಿ : ಮರಕುಟಿಗಂ ಪುಱಿಲೆ ಬುಱಾಗಿ ಪಸುಬಂ . . . ನೆಗಱ್ದವೆನಿಸುವು[ವನಿಶಂ] (ಸೂಕ್ತಿಸು. ೩–೦೯೬). [ ? ]

**ಬುಱಿಲೆ** 'ಪುಱಿಲೆ' ನೋ.

**ಬೂಂದಿ** (ನಾ). ಕಡಲೆಹಿಟ್ಟಿನಿಂದ ತಯಾರಿಸುವ ಒಂದು ಬಗೆಯ ಸಿಹಿಭಕ್ಷ್ಯ : ಕಂಚಿ ಇಡ್ಲಿ. ಉಡಿಪೀ ಉಪ್ಪಿಟ್ಟಿ . . . ಧಾರವಾಡದ ಫೇಡೇ. ಬಳ್ಳಾರಿ ಬೂಂದಿ (ಹನ್ನೊಂದ. ೭೯).

[ ← ಹಿಂ. ಬೂಂದೀ, ಬುಂದಿಯಾ ; ಮರಾ. ಬುಂದೀ ]

**ಬೂಂದು** 'ಬಿಂದು' ನೋ.

**ಬೂಚಗ** (ನಾ). ಒಬ್ಬಾತನ ಹೆಸರು : ಕವಿಲೆಯನಱಿದ ಬ್ರಹ್ಮತ್ತಿ ಬೂಚಗನಬ್ಬಾತನವು × × × (ಎಕ. I (R). ೩೭–೦೩ : 944). [ ? ]

**ಬೂಚಿ** (ನಾ). ೧. ಹುಳು ; ಕ್ರಿಮಿ : ಇತ್ತ ದೊಡ್ಡ ತಾಯಿ ಲಚ್ಚನನ್ನು ಎತ್ತಿಕೊಂಡು ಹೊರಟರೆ, ಅವನು ದಾರಿಯುದ್ದಕ್ಕೂ 'ಅಂಬಾಗಳನ್ನೂ ಬೂಚಿಗಳನ್ನೂ ಕಾಕಾಗಳನ್ನೂ ಕೊಕ್ಕೋಗಳನ್ನೂ' ಮಾತನಾಡಿಸುತ್ತ ಸಾಗುತ್ತಾನೆ (ಮುಂಡು. ೧೯೨). ೨. ಮಕ್ಕಳಿಗೆ ಭಯವನ್ನು ಹುಟ್ಟಿಸಲು ಹೇಳುವ ಒಂದು ಕಾಲ್ಪನಿಕ ಭೂತ : ಗುಮ್ಮ : ಬೂಚಿ ಬಂದಿದೆ ರಂಗ ಬೂಚಿ ಬಂದಿದೆ ಚಾಚಿ ಕುಡಿದು ಸುಮ್ಮನೇ ನೀ ಮಲಗಿಕೊಳ್ಳೊ ಕೃಷ್ಣಯ್ಯ ನಾಲ್ಕುಮುಖದ ಬೂಚಿಯೊಂದು ಗೋಕುಲಕ್ಕೆ ಓಡಿ ಬಂದು ಲೋಕರನ್ನು ಎಳೆದುಕೊಂಡು ಕಾಕು ಮಾಡಿ ಒಯ್ಯುವುದಕೆ (ಪುರಂದ. ೪–೦೦೧–೦) ; ನೀವು ಎರಡು ಬೂಚಿಗಳ ಕತೆ ಕೇಳಿರಬಹುದು. ಅವೂ ಮಧ್ಯರಸ್ತೆಯಲ್ಲೇ ಹೋಗುತ್ತಿದ್ದವು (ಕೀಶ್ರಕ್ಕ. ೦೯೮). ೩. ಹಸು. ಎಮ್ಮೆ ಮುಂತಾದ ಚತುಷ್ಪಾದಪ್ರಾಣಿ : ಒಳಗೆ ಆಡು ಬಾರೊ ರಂಗ ಅಲ್ಲಿ ಹೊಱಗೆ ಬೂಚಿಮುಖದ ಹುಲಿ ತಿರುಗುತಿದೆ (ಪುರಂದ. ೪–೩ ೮).

[ ದೇ.॥ ತಮಿ. ಮಲ. ಪೂಚ್ಚಿ ; ತೆಲು. ಬೂಚಿ, ಬೂಚ ]

**ಬೂಚು** (ನಾ). ೧. ಬಿರಡೆ; ಮುಚ್ಚಳ : ಸುಣ್ಣದ ಬಣ್ಣದ ಮಾಡದಲ್ಲಿ ಈಗ ಸೆರೆಯು ಬರಿದಾದ ಬಾಟಲಿಗಳು, ಅವುಗಳ ಬೂಚುಗಳು ಮಲಗಿವೆ (ಹೂಲವು. ೨೨೩); ಒಂದು ಶೀಸೆಯ ಬೂಚನ್ನು ತೆಗೆದು ಅದರೊಳಗಿದ್ದ ದ್ರಾವಕವನ್ನು ಕುಡಿದು ಬಿಟ್ಟನು (ಮರುಸ. ೯). ೨. ಬೆಣೆ ; ಗೂಟ : ಜಗ್ಗಿ ಕಿತ್ತವರಾರು ತಮದ ತೂಬಿನ ಬೂಚು? (ತಂಡಮು. ೦೯–೮); ಕೋಡಿಯ ಬೂಚು ಹಾಕಿಲ್ಲದ್ದರಿಂದ ಕೆರೆಯ ನೀರೆಲ್ಲ ಹೋಯಿತು (ರೂಢಿ).

[ ←ತುಳು. ಬೂಚು, ಬೂಚಿ./ಮರಾ. ಬೂಚ್]

**ಬೂಜು$_1$**, ಬುಕುಟು, ಬುಗುಟು$_2$, ಬುರುಸು, ಬೂಷಲು, ಬೂಷ್ಟು, ಬೂಸರು, ಬೂಸಲು (ನಾ). ೧. ತೇವದಿಂದ ವಸ್ತುಗಳ ಮೇಲೆ, ಹತ್ತಿಯ ಅಥವಾ ತುಪ್ಪಟದ ನವಿರೆಳೆಗಳಂತೆ ಕಟ್ಟುವ ಬಿಳಿಯ ಪೊರೆ: ನಿಗ ತಪ್ಪಿ ಸ್ವಲ್ಪ ತೇವವಾಗಿರುವ ಸ್ಥಳಗಳಲ್ಲಿ ಇಡಲ್ಪಡುವ ತೆಂಗಿನ ಕಾಯಿ ಹೋಳುಗಳು, ಬ್ರೆಡ್, ಉಪ್ಪಿನಕಾಯಿ, ಕಳಿತ ಹಣ್ಣುಗಳು ಇವನ್ನು ಬೂಜು ಒಳಹೊಕ್ಕು ಹುಲುಸಾಗಿ ಬೆಳೆದು . . . ಹಾಳು ಮಾಡುವುವು (ಗೃಹವಿ. ೩೬); ಮಾನವನಲ್ಲೂ ಪ್ರಾಣಿಗಳಲ್ಲೂ ಬಹುತ್ವಕ್ಕೂ ಮೀರಿದ ಬಗೆಗಳ ಅಣಬೆ (ಬೂಜು. ಬೂಷ್ಟು. ಶಿಲೀಂಧ್ರ)ಗಳಿಂದ ಸೋಂಕುರೋಗಗಳು ಕಾಣಿಸಿಕೊಳ್ಳುತ್ತವೆ (ಕವಿಕೋ. I. ೨೨೬). **ಬುಕುಟು** : ೧. ಅಟ್ಟದ ಮೇಲೆ ಇರಿಸಿದ ಹಪ್ಪಳ ಸಂಡಿಗೆ ಈ ಪಾಟಿ ತಂಡಿಗೆ ಬುಕುಟು ಹಿಡಿಯದೇ ಇದ್ದೀತೇ! (ಮರಮು. ೩೩). **ಬುಗುಟು$_2$** : ೧. ಬುಗುಟು ಹಿಡಿದ ಕಾಳಿನಂತೆ ಒಳಗೊಳಗೆ ಕೊಳೆಯುತಿರುವ ನಾರು ತಿರುವ ಹೆಣ್ಣಿಗೆ (ಪರಿಬು. ೬೨–೦೦). **ಬುರುಸು** : ೧. ಕಿಟಕಿಯ . . . ಬದಿಗಳಲ್ಲಿ ಬುರುಸು ಬೆಳೆದಿದ್ದರೆ, ಸೀಮೆಎಣ್ಣೆಯಲ್ಲಿ ಚಿಂದಿಯನದ್ದಿ ಒರಸಿದರೆ ಹೋಗುವುದು (ಅಡುಗೆ. ೩೯). **ಬೂಷಲು** : ೧. ಉಪಯೋಗಿಸದೆ ಪೆಟಾರಿಯಲ್ಲಿಟ್ಟರೆ ಪೀತಾಂಬರಕ್ಕಾದರೂ ಬೂಷಲು ಬರುತ್ತದೆ (ಮಳೆಮು. ೪೬). **ಬೂಷ್ಟು** : ೧. ಮರವನ್ನು ದುರ್ಬಲಗೊಳಿಸುವ ತೇವ, ಬೂಷ್ಟು (Fungus) ಕ್ರಿಮಿಗಳು . . . ಇವುಗಳಿಂದಾಗುವ ತೊಂದರೆಯು ತಪ್ಪು

ತ್ತದೆ (ಹಿಸ್ವಪ್ನ. ೩೨೯); ಕೆಲಕಾಲ ತೇವದ ಬೆಚ್ಚನೆಯ ಗಾಳಿಯಲ್ಲಿರಿಸಲ್ಪಟ್ಟ ವಸ್ತುಗಳ ಮೇಲೆ ಉಂಟಾಗುವ ಹತ್ತಿ, ತುಪ್ಪಟದ ನವಿರೆಳೆಗಳಂತೆ ಕಟ್ಟುವ ಒಂದು ಬಗೆಯ ಬೂಷ್ಟು ಅಲ್ಲಿ ಉಂಟಾಗಿತ್ತು (ವಿಜ್ಞಾನಿ. ೦೩೬); ಬೂಷ್ಟುಗಳಿಂದಲೂ ಅಣಬೆಗಳಿಂದಲೂ ಆವೃತವಾದ ಪ್ರದೇಶ (ಹಸುಹೊ. ೦೬೬). **ಬೂಸರು :** ೧. ಮಾಡದಲ್ಲಿ ಇಂದು ಹಳಸಿದ ಅನ್ನ, ಬೂಸರು ಬಂದ ರೊಟ್ಟಿಯ ಚೂರುಗಳು ರಾಶಿಯಾಗಿ ಬಿದ್ದಿವೆ (ಹೊಲಮ. ೨೨೫). **ಬೂಸಲು :** (ಗು). ೨. (ಆಲಂ) ನಿಷ್ಪ್ರಯೋಜಕವಾದ ; ಕೆಲಸಕ್ಕೆ ಬಾರದ : ಆ ಬಡಕಲು ಬೂಸಲು ದೇವತೆಯನ್ನು ನೋಡಿ ಅವನ ಆಶೆ ಕಮರಿಗೆ ತಲೆಕೆಳಗಾಗಿ ಉರುಳಿ ಹೋಯಿತು ! (ಮಲೆಮ. ೪೩೯).

[ದೇ.॥ ತಮಿ. ಪೂಞ್ಞು ; ಮಲ. ಪೂಕ್ಕ, ಪೂಪ್ಪು; ತುಳು. ಬೂಜು, ಬೂಚು, ಬೂಚಿ ; ತೆಲು. ಬೂಂಜು, ಬೂಚು, ಬೂಜು./ಮರಾ. ಬುರಸಾ, ಬುರಸೀ, ಬುರಶೀ]

**ಬೂಜು₂** 'ಬುರುಜು' ನೋ.

**ಬೂಜುಗಟ್ಟು, ಬುರುಸುಗಟ್ಟು** (ಕ್ರಿ). ಬೂಷ್ಟುಹಿಡಿ : ಬೂಜು ಗಟ್ಟಿದ ಪದಾರ್ಥಗಳನ್ನು ಉಪಯೋಗಿಸುವುದರಿಂದ ಬಾಯಿಲೆಗಳಿಗೆ ಹಾದಿ ಮಾಡಿಕೊಟ್ಟಂತಾಗುತ್ತದೆ (ರೂಢಿ). **ಬುರುಸುಗಟ್ಟು :** ಬೂಟು ಚಪ್ಪಲು ಮಾತ್ರವಲ್ಲಿಯೆ ಬುರುಸುಗಟ್ಟಿವೆ ಘಂಡಿಗೆ (ನೆರಮು. ೦೨-೨೩); ಅಲ್ಲು ಬಲೆಯು ಒಟ್ಟಿತ್ತು ಜೇಡಹುಳುವಿನ ಕೃತಿಗೆ ಬುರುಸುಗಟ್ಟಿತ್ತು (ಗಂಗಾತ. ೩೦-೨) ; ಬುರುಸುಗಟ್ಟಿರಬಹುದು ಒಳಗಡೆಗೆ ಪುಪ್ಪುಸ (ಅರರೋ. ೫೪).

[ಬೂಜು₁ + ಕಟ್ಟು₁]

**ಬೂಟ₁** (ನಾ). ೧. ಮೋಸ; ಕಪಟ : ಹುಡುಗೀನ ಪುಟ್ಟಮ್ಮಾಜೀಗೆ ಜೊತೆಯಾಗಿರಲೀ ಅಂತಲ್ಲವೆ ಕರದದ್ದು? ಇದರಲ್ಲಿ ಬೂಟ ಇಲ್ಲವಲ್ಲ (ಚಕರಿ. ೦೯೩). ೨. ವೇಷ; ನಟನೆ; ಸೋಗು : ಅಲೆವೆಲರಿಗೆ ತಲೆಯೊಲೆಯುವ ನಿಲುವು ಚೆಂದ ಇದೆಸಗುವ ಸೂರ್ಯನ ಬೂಟ (ಕಲುವು. ೬-೪); ನಾನೂ ನಿಮ್ಮಂತೆಂದಾ ವೈರಿ ಸೇಹವ ತೋರಿ ಜತೆಯಂ ಸೇರಿ ಆಟದಿ ಬೆರತು ಬೂಟಕೆ ಸೋತು (ಗೋಕಳ. ೦೫-೨೪). 'ಬೂಟಗಾರ' ಪರಾ.

[ದೇ.॥ ತುಳು. ಬೂಟಿ, ಬೂಟು; ತೆಲು. ಬೂಟ]

**ಬೂಟ₂** 'ಬೂಟಾ' ನೋ.

**ಬೂಟಕ** (ನಾ). ೧. ವೇಷ; ನಟನೆ; ಸೋಗು : ಕೋಟಿಯೊಂದಕೆ ಸಲ್ಲದೊಂದುಕೋಟಿಗೆ ಮಿಗಿಲು ನೋಟಕರ ಸಾಫಲ್ಯಮಕ್ಕುದಲೆ ನಿಜಸಂಗ ಬೂಟಕದ ಸಂಗ ಬಿಡು ನಿನ್ನೊಳಿರುತಿರೆ ಮಣಿಯು ಖೇಟಗತಿ (ಅಪಶಂ. ೨೮೨-೦೨೯೩) ; ನೀಟುಗಾತಿಗುರೊಲುಮೆ ಬೂಟಕವೆಂದು ತಿಳಿಯಿರೊ (ಪುರಂದ. ೨-೦೬-೦). ೨. ಸುಳ್ಳು; ಅಸತ್ಯ : ಸಾಟಿಯಿಲ್ಲದ ಶಂಖಚಕ್ರವು ಚತುರಹಸ್ತದಲಿರಲು ಕಂಡೆನು ಬೂಟಕದ ಮಾತಲ್ಲ ಕೇಳಿರೊ ಭೂರಿದೈವದ ರಮಣನಂಘ್ರಿಯ (ಪುರಂದ. ೦-೮೦೯-೧); ಜನಕ ನೀಯೆನಗರಸ ನೃಪರುಷಿ ಮನುಜನೇ ಪರಮಾರ್ಥ ಪುಣ್ಯಶರೀರಿ ಬೂಟಕವೆ (ಅಂದಶಾ. ೪೮-೩೮). ೩. ತೋರಿಕೆಯ ವೇಷವನ್ನು ಧರಿಸಿದವನು; ಸೋಗುಹಾಕುವವನು : ಅಯ್ಯಾ ನಾಟಕನಲ್ಲ ಬೂಟಕನಲ್ಲ ಶೀಲಿಗನಲ್ಲ (ವಚಶಾ. I, ೦-೩); ಪುಣ್ಯತೀರ್ಥಗಳಲ್ಲಿ ಪರಿಗ್ರಹವಂ ತೆಗೆದುಕೊಂಬವನಲ್ಲಾ ಬೂಟಕನಲ್ಲಾ ಮೃದುಮನವುಳ್ಳವನು (ಕಾಶೀಮ. ೪೫೮-೨); ಪಡಿಯ ಚಾಟಕನಲ್ಲ ಒಡನೆ ಬೂಟಕನಲ್ಲ (ಪ್ರಭುಲಾರ. ೦೩೦-೫). (ಗು). ೪. ತೋರಿಕೆಯ; ನಟನೆಯ ; ಸೋಗಿನ : ದತ್ತನು, ಆ ಬೂಟಕ ಜಂಗಮನಂ ಕರೆಸಿಕೊಂಡು ಕಳುಹಿಸುವುದಕ್ಕೆ ಪೋಗುವಾಗ್ಗೆ (ಪುರಾಪಿ. ೬೦).

[ದೇ.॥ ತಮಿ. ಪೂಟ್ಟಕ, ಪೂಟ್ಟಕ್ಕ ; ತುಳು. ಬೂಟಕ, ಬೂಟಂಗ; ತೆಲು. ಬೂಟಕ]

**ಬೂಟಕತನ** (ನಾ). ತೋರಿಕೆಯ ನಡವಳಿಕೆ; ಡಂಭಾಚಾರ; ಬೂಟಾಟಿಕೆ: ಅವರಾಟವನಜ್ಞಿಯದೆ ಬೂಟಕತನದಿಂದ ದಿಮ್ಮಿಸಾಲೆ (ಕಾಲಸಂ. ೬೮-೪); ಗೂಟನಾಮವ ಹೊಡೆದು . . . ನಾ ಧರೆಯೊಳಗೆ ಬರಲೆನ್ನ ಬೂಟಕತನ ನೋಡಿ ಭ್ರಮಿಸದಿರಿ ಜನರೆ (ಪುರಂದ. ೪-೦೬೫-೦): ಬೂಟಕತನ ಮಾಡಿದರೆ ಕಾಟಕತನ ತಪ್ಪೀತೇ? (ಗಾದೆ). [ಬೂಟಕ + -ತನ]

**ಬೂಟಕಮಾತು** (ನಾ). ಸೋಗಿನ ಮಾತು; ನಟನೆಯ ಮಾತು: ಕೊಡದೆ ಬೂಟಕಮಾತಿನಲಿ ಮನ್ಮಥಕೇಳಿಗೊಟನ್ನೆದುವ ಬೋಸರಿಗನ ನಡೆ ನಾಳೆ ಕರೆವೆನೆಂದೆಬ್ಬಿಸಿ ಪೊನ್ನೀವ ಕಡುದಾತನ ಕರೆ ಹಂಗಳೆ (ಕಂಪಾ. ೬-೦೪೭).

[ಬೂಟಕ + ಮಾತು₁]

**ಬೂಟಗಾರ** (ನಾ). =ಬೂಟಕ ೩ : ಆಟಗಾರನು ಅತ್ತ ಪ್ರಭುವಿಗೆ ಬೂಟಗಾರ ಬಸವನು ಪಾಟಿಗೆಟ್ಟನು ಪರಮಭಕ್ತಿ ಸಘಾಟ ಮಿಾರಿ (ಕರಶೀ. ೩೪೫ ೦).

[ಬೂಟ₁ + -ಗಾರ (< -ಕಾರ)]

**ಬೂಟಾ, ಬುಟ್ಟ, ಬುಟ್ಟಾ, ಬೂಟ₂** (ನಾ). ರೇಷ್ಮೆಬಟ್ಟೆಯ ಮೇಲೆ ಹಾಕುವ ಜರಿಯ ಅಥವಾ ರೇಷ್ಮೆನೂಲಿನ ಬೇರೆ ಬೇರೆ ಆಕಾರದ ಕಸೂತಿ: ಫಲತಾಂಬೂಲದ ಚೀಲ ಕೊಡುತ್ತಿದ್ದಾಕೆ ನೀಲಿಯ ಬೂಟಾ ಹೂವಿನ ಬನಾರಸ್‌ಸೀರೆ ಉಟ್ಟಿದ್ದರು (ಹಿಂದಿನ. ೬) ; ಹಕೀಂನು ಯಾವತ್ತೋ ಒಂದುದಿನ ಬೂಟಾಪೇಟ ಕಟ್ಟಬೇಕು ಅಂತ ಹೇಳಿಕೊಂಡಿದ್ದ ಆಹವಾಲು ಆವೊತ್ತು ಫಲವಾಯಿತು (ಮುಲ್ಲ. ೩೪). **ಬುಟ್ಟ :** ಕಡುನೀಲಿವರ್ಣದ ಸೀರೆಯಲ್ಲಿ ನಕ್ಷತ್ರಗಳಂತಿರುವ ಬುಟ್ಟಗಳು ಎದ್ದು ಕಾಣುತ್ತವೆ (ರೂಢಿ). **ಬುಟ್ಟಾ :** ಮದುವೆಯ ಹುಡುಗಿಗೆ ಬುಟ್ಟಾ ಇರುವ ಸೀರೆಯನ್ನು ಉಡಿಸಿದ್ದರು (ರೂಢಿ). **ಬೂಟ₂:** ಬೂಟ ಇರುವ ಸೀರೆಗೆ ಬೆಲೆ ಹೆಚ್ಚು (ರೂಢಿ).

**ಬೂಟಾಸೀರೆ, ಬುಟ್ಟಾಸೀರೆ** = ಕಲಾಪತ್ತಿನ ಹೂವುಗಳ ಚಿತ್ರದಿಂದ ಕೂಡಿದ ಸೀರೆ : ಅವರ ಅಂಗಡಿಯಲ್ಲಿ ಬೂಟಾಸೀರೆಗಳೇ ಹೆಚ್ಚಾಗಿವೆದ್ದುವು (ರೂಢಿ): ಮಗಳ ಮದುವೆಗೆಂದು ನಾನು ಎರಡು ಬುಟ್ಟಾಸೀರೆಗಳನ್ನು ಕೊಂಡು ತಂದೆ (ರೂಢಿ).

[←ಪಾರ. ಬೋತಾ; ಹಿಂ. ಬೂಟಾ, ಬೂಟೀ, ಬುಟ; ಮರಾ. ಬೂಟ, ಬುಟ, ಬುಟಾ, ಬುಟೀ, ಬುಟ್ಟೀ]

**ಬೂಟಾಟ, ಬೂತಾಟ₁** (ನಾ). ೧. ಬೂಟಾಟಿಕೆ; ನಟನೆ; ತೋರಿಕೆ; ಮಾತುಗಾರಿಕೆಯ ಬೂಟಾಟದಿಂ ಬಡಪಾರ್ವರೇತೆರದಿ ಸೋಲಿಸದೆ ಶಂಭುಭಟ್ಟನ ಕೂಡೆ ಖ್ಯಾತವಾದವ ಮಾಡಿ ಜೈಸಿದಡೆ ವಿದ್ವಾಂಸನಲ್ಲದೊಡೆ ಗಾಂಪನೀತಂ (ಚತುವು. ೪-೦೪-೨೩); ಇಂಟರ್‌ವ್ಯೂ ಎಲ್ಲಾ ಬರೀ ಬೂಟಾಟ ಅಂತ ಹೇಳ್ತಿದಾನೆ (ಆಶಾ. ೩೫). **ಬೂತಾಟ₁ :** ೧. ಬಜೀದೆಯುಂ ಬೂತಾಟವಿನ್ನೇಕೆ ಮಾಣೆನು ಬನ್ನಕ್ಕೆಡೆಯಾದೆನೀ ವಿಹಗನಿಂ (ಕಾದಂಉ. ೬೨); ನಿಂ ನಿನ್ನ ಮುನ್ನಿನ ಕೂಸಾಟವನೆಲ್ಲಿಯುಂ ಬಿಸುಡೆ ನಿನ್ನಂ ಸ್ವೈತಿಡಲ್ಬಾರದಿನ್ನಿನಿಸಂ ಮಾಡದೆ ಮಾಡಿದಂತಿರೆಲವೋ ಇನ್ನೇಕೆ ಬೂತಾಟವೋಪನೆ (ಶೃಂಗಾರ. ೦-೫೨) : ಕೈಯ ಹೊಯ್ಯುತಾಟವೇತಕೆ ಧರ್ಮನಂದನನಾಟ ಪೊಳ್ಳಿತು (ಕುಮ್ಯಾಸ. ೦೩-೪೭). ೨. ತಂಟೆ; ಗೋಜು: ಋಷಿಯಲ್ಲ ಋಷಿಗೇಕಾಯುಧಂಗಳ ಗೊಡವೆ ನಮಗೇಕದರ ಬೂತಾಟ (ಕುಮ್ಯಾಆ. ೫-೨೦).

[ಬೂಟ₁ + ಆಟ]

**ಬೂಟಾಟಂಗೊಡು** (ಕ್ರಿ). ಬೂಟಾಟಿಕೆ ಮಾಡು ; ಸೋಗು ಹಾಕು : ತಾಂ ಬೂಟಾಟಂಗೊಡಿ ಪಜ್ರಿ ಪ್ರಕಟಿತ ಬಹುಮಾನಂಗಳಿಂ ಮಗಂ ವಿಾಟದಾ ನೂತ್ನಹಾರಂಗಳನೊಸೆದು ಕುಡುತ್ತಂ (ಹಾಲಾಸ್ಯ. ೦-೮೫-೨೩).

[ಬೂಟಾಟ + ಕೊಡು₁]

**ಬೂಟಾಟಿಕೆ, ಬೂತಾಟಿಕೆ** (ನಾ). ತೋರಿಕೆಯ ಪ್ರದರ್ಶನ; ಸೋಗು; ನಟನೆ : ಎಲ್ಲರೂ ಮಾಡುತ್ತಿರುವುದು ಬೂಟಾಟಿಕೆಯ ಬೈಲಾಟ (ಜರಹಾ. ೦೩೬); ದೇವರ ಹೆಸರಿನಲ್ಲಿ ಉಪವಾಸ ಮಾಡಿದರೆ ಅದೂ ಬೂಟಾಟಿಕೆಯೆ?

(ಅಪಾಖ. ೫೬). **ಬೂತಾಟಿಕೆ** : ಹಸಿವುಳ್ಳನ್ನಕ್ಕರ ವ್ಯಾಪಾರ ಬಿಡದು . . . ಮಾತುಳ್ಳನ್ನಕ್ಕರ ಬೂತಾಟಿಕೆ ಬಿಡದು (ಅಪಹಂ. ೨೦೫-೯೨೪); ನೀವ್ ಹಣೆಯೊಳೋತು ಬೊಟ್ಟನಿತು ಬೂದಿಯನಿಟ್ಟ ಬಳಿಕವಿಾ ಬೂತಾಟಿಕೆ ಯೊಳೊಡೆಯರೊಡೆಯರೆಂದ್ಯೆದುತಿರ್ಪಿರಿ(ಸಿದ್ಧೇಶ್ರು. ೨೦-೧೨).

[ಬೂಟಾಟ + – ಇಕೆ]

**ಬೂಟಾದಾರಿ, ಬುಟೇದಾರಿ, ಬುಟ್ಟೆದಾರ, ಬುಟ್ಟೆದಾರಿ, ಬುಟ್ಟೇದಾರಿ, ಬೂಟೆದಾರಿ** (ಗು). ಬುಟ್ಟಾಕೆಲಸದಿಂದ ಕೂಡಿದ; ಬುಟ್ಟೆಗಳುಳ್ಳ : ಅವನ ತಲೆಯ ಮೇಲಿದ್ದ ಬೂಟಾದಾರಿ ರುಮಾಲು, ಕೈಯಲ್ಲಿದ್ದ ಚಿನ್ನದ ಚೈನು, ಉಂಗುರಗಳನ್ನು ಕಂಡು ವೇಣು ಗೌರವವಾಗಿ ಮಾತನಾಡಿಸಿದ (ಶಾಯುಳ. ೫೬). **ಬುಟೇದಾರಿ** : ಬುಟೇದಾರಿ ಪಚ್ಚಡ ಮದುಮಗನಿಗಲ್ಲದೆ ಮುದಿಮುದುಕನಿಗೆ ಒಪ್ಪೀತೇ? (ಗಾದೆ). **ಬುಟ್ಟೆದಾರ** : ಇಲ್ಲಿ ಬುಟ್ಟೆದಾರ ವಸ್ತ್ರಗಳೂ ಜಿನುಗು ನಾರುಬಟ್ಟೆಗಳೂ ಆಗುತ್ತವೆ (ಗ್ರಾಟಿಬ್ರ. ೬೩). **ಬುಟ್ಟೆದಾರಿ** : ಸೂರ್ಯಪೀಠದ ಮುಖ ಮೇಲೆ ಹಾಸಿಗೆಗಳು ರತ್ನ ಹುವ್ವುಗಳೆ ಬುಟ್ಟೆದಾರಿ ಜರತಾರಿ ಹುವ್ವುಗಳೆ (ಕುರಂದ. ೫-೬೯-೫). **ಬುಟ್ಟೇದಾರಿ** : ಕಾಂಬೆಯಿಂದಲೂ ಬುಟ್ಟೇದಾರಿ ಬಟ್ಟೆಗಳನ್ನು ಕೊಂಡುಕೊಳ್ಳುವಾಗ ಅಷ್ಟಾನಂದವಾಗಲಿಲ್ಲ (ಶಾರಪೀ. ೦೯೮). **ಬೂಟೆದಾರಿ** : ವಲ್ಲಿ ಉತ್ತಮವಾದ್ದು, ಕಲಾಪತ್ತು ಬೂಟೆದಾರೀದು (ಸುಖಕ. ೬೬).

[← ಹಿಂ. ಬೂಟೆದಾರ್; ಮರಾ. ಬುಟಾದಾರ್, ಬುಟೇದಾರ್]

**ಬೂಟು** (ನಾ). ಹರಡಿನ ಮೇಲಕ್ಕೆ ಬಂದು ಪಾದವನ್ನು ಪೂರ್ತಿಯಾಗಿ ಮುಚ್ಚುವಂತೆ, ಒರಟುಬಟ್ಟೆ ಅಥವಾ ಚರ್ಮದಿಂದ ಮಾಡಿದ ಪಾದರಕ್ಷೆ ; ಮೋಜ : ಅಂದೇ ಹೊಸ ಬೂಟು ಧರಿಸಿದ್ದೆ (ತೆಂದುಬಿ. ೭೫) ; ಬೂಟು ಚಪ್ಪಲು ಮಾಡದಲ್ಲಿಯೆ ಬುರುಸುಗಟ್ಟಿವೆ ಥಂಡಿಗೆ (ವಿಲಪು. ೦೨-೨೩).

[← ಇಂ. Boot]

**ಬೂಟೆದಾರಿ** 'ಬೂಟಾದಾರಿ' ನೋ.

**ಬೂಡು** (ನಾ). ಮನೆ ; ನೆಲೆ ; ಆಶ್ರಯ : ಕಾಡನು ಕಡಿದಾ ಹಾಡಿಯ ಮಾಡಿದ ಬೂಡನು ಕಟ್ಟಿದ ಕರಿಪ್ಯೆದ (ಕಾಕೋಜ. ೩೬).

[← ತುಳು. ಬೂಡು]

**ಬೂತ** 'ಬೂತು$_2$' ನೋ.

**ಬೂತಗನ್ನಡಿ** (ನಾ). ವಸ್ತುವು ಇರುವುದಕ್ಕಿಂತ ದೊಡ್ಡದನ್ನಾಗಿ ಮಾಡಿ ತೋರಿಸುವ ಕನ್ನಡಿ ; ರಾವುಗನ್ನಡಿ : (*).

[ಬೂತ (<ಬೂತು$_2$) + ಕನ್ನಡಿ$_1$]

**ಬೂತಟ್ಟು** (ಕ್ರಿ). ೧. ಅವಮಾನಗೊಳಿಸುವುದಕ್ಕಾಗಿ ದೂತನನ್ನು ಅಟ್ಟು ; ಕುಚೋದ್ಯಕ್ಕಾಗಿ ದೂತನನ್ನು ಕಳುಹಿಸು : ಇಂದ್ರಂ ಮೃಗೇಂದ್ರನಂತೆ ಗರ್ಜಿಸಿ ಚತುರಂಗಬಲಸಮೇತಂ ಪೊಱಮಟ್ಟು ಬೂತಟ್ಟಿ ದೊಡುಪೇಂದ್ರನುಂ . . . ಬಂದು ತಾಗುವುದುಂ (ಶಾಂತಿಪು. ೬-೮೦ವ) ; ಘೋರಾಂಧಕಾರಂ ಬಟ್ಟ ಕೆಲದಿಂದಮೇಬೂತಟ್ಟಿದುದೆನೆ ದಿನಕರಂಗೆ ತತ್ಕಾನನದೊಳ್ ಮುಟ್ಟಿದುದಜಗರಮುಖದಿಂ ಪುಟ್ಟಿದ ವಿಷವಹ್ನಿ ಯುಗುಟ್ಟ ಕರ್ಪೊಗೆ ಮುಗಿಲಂ (ಲೀಲಾವ. ೬-೨೪) ; ಜವನೆರ್ದೆಯಂ ಮೆಟ್ಟುವೀಶಂಗೆ ಬೂ[ಪಾಠಾಂ. ದೂ]ತಟ್ಟುವಗರ್ವಂ ತೋಱದಪ್ಪಂ (ಜಗಪ್ರ. ೦೩-೩೮). ೨. (ಅಲಂ) ಸ್ಪರ್ಧೆಗೆ ಆಹ್ವಾನಿಸು ; ಹುರುಡಿಸು : ಮನೋಜವಕ್ಕೆ ಬೂತಟ್ಟುವ ತಕ್ಕು ಮಿಕ್ಕು ಬರೆ ಬಂದುವು ಪೊಂಬುಲಿದೋಲ ಪಲ್ಲಣಂಗಟ್ಟಿದ ಪಟ್ಟಸಾಹಣದ ವಾಜಿಗಳಂದು ಜಯೋತ್ಸವಾಜಿಗಳ್ (ಮಲ್ಲಪು. ೯-೪). [ಬೂತು$_1$ + ಅಟ್ಟು$_2$]

**ಬೂತರಸ** (ನಾ). ಒಬ್ಬಾತನ ಹೆಸರು : ಬೂತರಸ ಯುವರಾಜಪಥಮುಳ್ ನಿನ್ದು ಕೊಣ್ಣೆಲ್ಲಾಡು ಪೂನಾಡಮನಾಳುತಿಟ್ದು (ಎಕ. III (R), ಸಂಜನ. ೩೬೫-೫ ; 870) ; ಸತ್ಯವಾಕ್ಯಪೆರ್ಮ್ಮಾನಡಿಗಳ ಪೃಥುವೀರಾಜ್ಯಂಗೆಯ್ಯ ಬೂತರಸ ತೊಱಕಾರಟ್ಟಿಯ ಪದಿಯಳಿಯು ನೆಲೆಗೂರು ಮೊಗವೆ ಅಳಿಯುವು ಬಿಚ್ಚಿ (ಎಕ. III (R), ಗುಂಡ್ಲುಪೇ. ೫೬-೩ ; 9ನೆಯ ಶತ).

[ಬೂತ$_?$ + ಅರಸ$_1$]

**ಬೂತಾಟ$_1$** 'ಬೂಟಾಟ' ನೋ.

**ಬೂತಾಟ$_2$** (ನಾ). ೧. ಪಿಶಾಚಿಯ ಆಟ ; ದೆವ್ವದ ಕುಣಿತ : ಅಂತಾಕೆಗಳ್ ತೂಗಿ ತೊನೆವ ತೊನೆಪಂಗಳುಮಂ ಮುರಸರಿಗೆವಿಡಿದು ಬಿಲ್ಪಿಡಿದಾಡುವ ಬೂತಾಟಂಗಳುಮಂ ನೋಡಿ (ಶಂಖಭಾ. ೪-೯೦ ವ). ೨. ಸ್ವೇಚ್ಛಾಚಾರ : ಚಾಗು ಕೌರವಬಲದವರ ಬೂತಾಟವಾಯಿತೆ ನಮ್ಮ ಘಟ್ಟನಲಿ (ಕುವ್ಯಾದ್ರೋ. ೦೯-೨೬). [ಬೂತು$_2$ + ಆಟ]

**ಬೂತಾಟಿಕೆ** 'ಬೂಟಾಟಿಕೆ' ನೋ.

**ಬೂತಾಳೆ** (ನಾ). ಗದ್ದೆ, ಹೊಲಗಳ ಸುತ್ತ ಬೇಲಿಯಂತೆ ಬೆಳೆಸುವ, ತಾಳೆಜಾತಿಗೆ ಸೇರಿದ ಒಂದು ಬಗೆಯ ಸಸ್ಯ : ಊರಿನ ಸುತ್ತಲೂ ಕಳ್ಳಿ ಬೂತಾಳೆಗಳ ಬಲವಾದ ಬೇಲಿಗಳಿದ್ದುವು (ಹುಬ್ಬಹ. ೧).

[<ಸಂ. ಭೂತಾಲ]

**ಬೂತಿಕ್ಕು** (ಕ್ರಿ). ಕುಚೋದ್ಯ ಮಾಡು ; ಅಪಹಾಸ್ಯ ಮಾಡು : ಆರುಹತರೆಲ್ಲ ಬೂತಿಕ್ಕಿ ನಗುತಿರೆ ಕಂಡು (ಕೋವುತ. ೪-೨೪).

[ಬೂತು$_1$ + ಇಕ್ಕು]

**ಬೂತು$_1$** (ನಾ). ೧. ಕುಚೋದ್ಯ ; ಕುಚೇಷ್ಟೆ : 'ಬೂತಟ್ಟು', 'ಬೂತಿಕ್ಕು' ಪರಾ. ೨. ಸೋಗು ; ನಟನೆ : 'ಬೂತುಗ' ಪರಾ. ೩. ನಾಚಿಕೆಗೆಟ್ಟ ಮಾತು : ಅಶ್ಲೀಲವಾದ ಮಾತು : 'ಬೂತುಗೆಡೆ' ಪರಾ. ೪. ನಾಚಿಕೆಗೆಟ್ಟ ವ್ಯಕ್ತಿ ; ಭಂಡ : ಅಲ್ಪವ್ಯಕ್ತಿ : "ಬೂತುಗಳೆನೆ ಬಂಡರೆಂದು ತಿಳಿಗೆ" (ಶಾರಶಿ. ೨೯) ; ಈ ಬೂತು ಪಗೆಯೊಳೊಡಂಬಟ್ಟು ಬಂದನಾಗಲ್ವೇಟ್ಟುಂ (ಪಂಪಭಾ. ೨೪೦-೪) ; ಜಾತಿಸೂಳೆಗೆ ರಣಭೀತನ ಪುಸಿನುಡಿಮಾತನ . . . ಬದಗನ ಬೂತಿನ ಮಾತು ದಿಟವಲ್ತು (ಲೀಲಾವ. ೨-೩೪) ; ಏಕೆ ಕೆಣಕಿದೆ ಕರ್ಣ ಬೂತಿನ ಬೀಕಲಿನ ಬದಗಿಯನು (ಕುವ್ಯಾಸ. ೦೫-೦೪). ೫. ಮೋಸಗಾರ ; ವಂಚಕ : ಒಂದು ದಿವಸಮೊರ್ವ ಬೂತಿಂಗೆ ದ್ರವ್ಯಮಂ ಕೊಟ್ಟೊಡಂಬಡಿಸಿ . . . ಕಟ್‌ಪಿದ ಬಟ್‌ಕ್ಕೆ ಬರ್ಪೊನನ್ನೆಗಮಾ ಬೂತುಮಾ ಪ್ರಸ್ತಾವದೊಳ್ ಪೋಗಿ ಮಹಾದೇವಿಯ ವಂಚಮನೇಱದರ್ಗಳ್ (ವಡ್ಡಾರಾ. ೦೬೬-೦೬) ; ಕೃತಕರುಧಿರಮಪ್ಪುದ ನಱದೀ ಬೂತೆನ್ನಂ ಬಂಚಿಸಿದನೆಂದು ನೆಱಯದ ನರಕಾಯುಷ್ಯಮಂ ನೆಱಪುವನೆಂಬಂತೆ ಮುಳಿದು (ಆದಿಪು. ೨-೦೪ವ) ; ಬೂತಿನ ಪೊಗಟ್ತೆಯಂತೆ . . . ಸೌಂತೆಯ ತೋಂಟದಂತೆ ಕಡೆಯೊಳ್ ಪೇಸುಪಥಮುಮಶೋಭೆಯು ಮಾಗದೆ ಪೋಗದು (ಧರ್ಮಾಮ್ಮ. ೭-೦೨೨). ೬. ಸಾಮಾನ್ಯನಾದವನು ; ನಾಡಾಡಿ : ನೆರೆದ ಬೂತುಗಳ ಕೋಳಾಹಳರವಂಗಳಿಂ . . . ಕರಮೆ ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಜಪು. ೪-೭ ರಗಳೆ). ೭. (ದಾನ ಪಾತ್ರನಾದ) ದೀನ ; ದರಿದ್ರ : ದ್ರುಪದನ ಪೊಱಲೊಳ್ ಪಾಂಡವರ್ ಚಾಗಕ್ಕೆ ಬೂತುಂ ಭೋಗಕ್ಕೆ ಪೊಟ್ತುಂ ನೆಱಯದೆನಿಸಿ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಿರ್ಪನ್ನೆಗಂ (ಪಂಪಭಾ. ೪-೦ ವ). ೮. ಕೈಯಲ್ಲಿ ಆಗದವನು ; ಹೇಡಿ : ಭೀತಿ ಮನದಲಿ ಪೌರುಷಾಂಗದ ಮಾತು ಮುಖದಲಿ ಮುರಿವ ಕಾಲಲಿ ಬೂತುಗಳು ಕುರುವೀರರೆನುತಿದಿರಾದುದರಿಸೇನೆ (ಕುವ್ಯಾದ್ರೋ. ೦೫-೨೫) ; ಸೂತಸುತ ದಳಪತಿಯೆ ಘಡ ಮುಯ್ಯಾಂತರೇ ಮುಂಬಿಗರು ಬಿರುದಿನ ಬೂತುಗಳ ಬೊಬ್ಬಾಟ ಬಿಡದೇ ಕಂಡು ಕಾಣರಲ (ಕುವ್ಯಾಕ. ೨-೮). ೯. ಕೆಲಸಕ್ಕೆ ಬಾರದವನು ; ನಿಷ್ಪ್ರಯೋಜಕ : ಇಹಕಂ ಪರಕಂ ಪೆಱಗಾದ ಬೂತಾದೆಂ (ರಾಮಾಶ್ವ. ೦೦೫-೦).

ಬೂತನಟ್ಟು=ಬೂತಟ್ಟು ೧ : ಅರ್ಜುನಂ ಕರ್ಣನಲ್ಲಿಗೆ ನಾಳೆ

. . . ತಾನುಮಾನುಂ ಕಾದುಪಮೆಂಬುದಂ ಪೇೞ್ದು ಬನ್ನಿಮೆಂದು ಬೂತ ನಟ್ಟಿದೊಡೆ (ಹಂಹಂ. ೧೨-೩೨ ವ). [ದೇ.॥ ತೆಲು. ಬೂತು]

**ಬೂತು$_2$**, ಬೂತ (ನಾ). ೧. ದೆವ್ವ ; ಪಿಶಾಚಿ ; ಭೂತ : ಕೂಡಿ ನಿನ್ನೊಡನೆ ಭೋಗಿಸಲೀಯದೆ ಕಮ್ಮನೆನ್ನನುಯ್ವಂತಕನೆಂಬ ಬೂತನೆಲೆ ಮಾಣಿಸಲಾಗದೆ ಪೇೞ್ (ಅಂಶು. ೩-೫) ; ಈ ಬೂತೆನ್ನ ಸರಂಗೇಳ್ದೊಡಲ್ಲದೆ ಪೊಱಮಡುವನಲ್ಲನಿವಂಗಾನೆ ಸಾಲ್ವೆಂ (ಗದಾಯು. ೭-೯ ವ); ಅಕಟಾ ಬೂತುಗಳ ಕೈಬಾಯ್ಗೆ ಬಂದ್ಯೆ ತಂದೆ ಕುರುರಾಯ (ಕುವ್ಯಾ.ಗ. ೫-೧೫). **ಬೂತ** : ೧. ಕೆಲಕೆ ಕಾದಿಹ ಬೂತ ಪೇತವು ಹಲವು ಜಟ್ಟಿಗ ಮಾಣಿ ಭದ್ರರು (ಕೌಶಿರಾ. ೩೮-೨೩) : ಕನಸು ಬೂತವಾಯಿತು, ಮನಸು ನಾನೇ ಆದೆ (ವಚವಾ. I, ೪೩೫). ೨. (ಅಲಂ) ದೊಡ್ಡದಂ ; ಗಾತ್ರವಾದುದಂ : 'ಬೂತಗನ್ನಡಿ' ಪರಾ.

**ಬೂತಾಗು** = ಪ್ರೇತವಾಗು ; ಹೆಣವಾಗು : ತಾಗಿದ ಬೇಗದೊಳೆ ಶಿರೋಭಾಗಮನಿಪು ನಡೆ ಕಡಂಗುವುದ್ಭಟನಂ ಬೂ[ಪಾಠಾಂ. ಭೂ]ತಾಗಿರೆ ಕೆಡೆದಂ ತಲೆಕೆೞಗಾಗಿ ಪರಾಜಯಮುಮನಱಿಪುವಂತರಿಬಲದೊಳ್ (ಪರ್ಣಪಾ. ೪-೫೬). [<ಸಂ. ಭೂತ ]

**ಬೂತು$_3$** (ನಾ). ೧. ಸರ್ಕಾರಕ್ಕೆ ಸಂಬಂಧಿಸಿದ ಡೈರಿಯ ಹಾಲು, ಮೊಸರು ಮುಂತಾದುವನ್ನು ಮಾರುವ ಸ್ಥಳ : ಏಳು ಗಂಟೆಯಾದರೂ ಬೂತಿಗೆ ಇನ್ನೂ ಹಾಲು ಬಂದಿಲ್ಲ (ರೂಢಿ). ೨. (ಸಾರ್ವಜನಿಕ ಸಂಸ್ಥೆ ಮೊದಲಾದ ಸದಸ್ಯರ) ಚುನಾವಣೆಯಲ್ಲಿ ಮತ ಚಲಾಯಿಸಲು ಗೊತ್ತುಪಡಿಸುವ ಸಾರ್ವಜನಿಕ ಸ್ಥಳ : ಈ ಶಾಲೆಯನ್ನು ಚುನಾವಣೆಯ ಬೂತು ಮಾಡಿದ್ದಾರೆ (ರೂಢಿ). [← ಇಂ. Booth]

**ಬೂತುಗ** (ನಾ) ೧. ಸೋಗುಗಾರ : ಮಾತುಗಂ, ಬೂತುಗಂ, ಕಂತೆಗಂ (ಶಮದ. ೨೦೦ ಪ್ರಯೋ). ೨. ಒಬ್ಬಾತನ ಹೆಸರು : ಶ್ರೀಮತ್ ಬೂತುಗ ಎಱೆಯಪ್ಪ ಪೆರ್ಮ್ಮಾಡಿ ಪಟ್ಟಬದ್ಧನಪ್ಪವನ್ನು (ಎಕ., VII, ಶಿವಮೊ. ೯೬-೧೩; ಸು. 915); ಬೂತುಗನಜ್ಜಕಾಜಿ ಶ್ರೀಮತ್ ಮನಾಲರಜ್ಜಿ ಅಸುವರದೊಳ್ ಮೆಚ್ಚಿ ಬೇಡಿಕೊಳ್ಳೆನ್ವೊಡೆ (ಎಕ. III. ಮಂಡ್ಯ. ೪೦-೯ ; 950).

[ ಬೂತು$_1$ + — ಗ$_2$ ]

**ಬೂತುಗಿ** (ನಾ). ಸೋಗು ಹಾಕುವವಳು : ಮಾತುಗಿ, ಮಾತುಗಿತಿ, ಬೂತುಗಿ, ಬೂತುಗಿತಿ (ಶಬ್ದಮ. ೦೯೩ ಪ್ರಯೋ). [ ಬೂತುಗ + — ಇ$_2$ ]

**ಬೂತುಗೆಡೆ** (ಕ್ರಿ). ತುಚ್ಛವಾದ ಮಾತನ್ನಾಡು ; ಕೆಟ್ಟ ಮಾತನ್ನಾಡು : ಬೂತುಗೆಡೆವನೊಳೆಂಬೆನೇ ಮಱುಮಾತನೆಲೆ ಗಾಂಗೇಯ (ಕುವ್ಯಾ.ಸ. ೦೫-೦೦); ಕಾತರಿಸಿ ವಿಷಯಾತುರರು ನೆಱೆ ಬೂತುಗೆಡೆದರೆ ಗರುವರಾದವರಾತು ಮಾಱುತ್ತರವ ಕೊಡುವರೆ (ತೊರರಾ. ೩-೪-೨೨). [ಬೂತು$_1$ + ಕೆಡೆ$_2$]

**ಬೂತುಗೆಯ್** (ಕ್ರಿ). = ಬೂತಿಕ್ಕು : ಅಯ್ಯೋ ಇದೇಕೆ ಹರಿಯಣ್ಣಂಗೆ ಬಲ್ಮರುಳ್ ಮೆಯ್ಯನಾವರಿಸಿತೆನೆ ತದ್ದೂಷಕರ್ ಬೂತುಗೆಯ್ಯುತಂ ಗಹಗಹಿಸುತಿರೆ (ಶಶ್ಯಾ. ೫-೦೦). [ಬೂತು$_1$ + ಕೆಯ್$_1$]

**ಬೂತುಗೊಳ್** (ಕ್ರಿ). ಪಿಶಾಚಿ ಹಿಡಿ ; ಭೂತ ಮೆಟ್ಟಿಕೊಳ್ಳು : ನೆಟ್ಟನೆ ಬೂತುಗೊಳ್ವ ತೆಱದಿಂ ದಶಕಂಧರನಾಡಿ ಪಾಡಿ ನಾಣ್ಗೆಟ್ಟಿರೆ ಕೊಂಡನಲ್ಲದೆ ಬರಂಗಳನೀಶ್ವರನಲ್ಲ ಪೇೞಿಮಾವೊಟ್ಟಜೆಯಿಂದೆ ಕೊಂಡಂ (ಕಂಪರಾ. ೯-೫೩). [ಬೂತು$_2$ + ಕೊಳ್$_1$]

**ಬೂತುತನ** (ನಾ). ಸೋಗು ; ನಟನೆ ; ಒಯ್ಯಾರ : ಒದೆದುಗಿದಲ್ಲದೇಂ ಪಿಡಿವಳೇ ನೆಱಗಂ ನೆಱೆ ಪ್ರಾಣ ತಾಣಮುಂ ಬೆದಕವೆ ಸೈತೆ ಸೋಂಕುವಳೆ ಬೂತುತನಂ ಪೆಱಗಾಗೆ ಮಾತುಗುಟ್ಟಿದವಳೆ (ಲೀಲಾವ. ೨-೧೦೦).

[ಬೂತು$_1$ + — ತನ]

**ಬೂತುತಪ** (ನಾ). ಸೋಗಿನ ತಪಸ್ಸು : ವನರುಹಗರ್ಭನೆಂಬವನ ಮುನ್ನಿನ ಗೆಯ್ದ ತಪಂ ತಿಲೋತ್ತಮಾಂಗನೆಯಿನದೆಂತುಟಾದುವೆನೆ ಮತ್ತಿನ ಬೂತುತಪಂಗಳೆಪ್ಪು ಪರ್ವಿನ ಕಡೆಯೊಂದು ಪರ್ವಿನೊಳೆ ತೀರ್ವ್ವಿಪ (ಕಂಪರಾ. ೬-೮೦). [ಬೂತು$_1$ + ತಪ$_3$]

**ಬೂತುವಣಿಗ** (ನಾ). = ಬೂತುಗ ೧ : ಬೂತುಗಂ, ಬೂತುವಣಿಗಂ (ಶಬ್ದಮ. ೪೦೫ ಪ್ರಯೋ). [ ಬೂತು$_1$ + — ವಣಿಗ$_2$ ]

**ಬೂತೇಶ್ವರ**, ಬೂತೇಸ್ವರ (ನಾ). ಶಿವನ ದೇವಾಲಯವಿರುವ ಒಂದು ಸ್ಥಳದ ಹೆಸರು : ಶ್ರೀಮದ್ಗುಗ್ಗಂ ಬೂತೇಶ್ವರಕೆ ಪಡುವಣ ತೊರೆವಳ್ಳಿಯ ಬಾಸಂಬಾಳ್ಳಿಯೂರ ಮುನ್ನಣ ಕೆಱೆಯೊಳೆ ಸಾಬ್ಬರ್ನಮಸ್ಯಮಂ ದೇವಭೋಗಂ ಬಿಟ್ಟಂ (ಎಕ. III, ಮೈಸೂರು. ೩೬-೦೪ ; ಸು. 990 ?). **ಬೂತೇಸ್ವರ** : ಶ್ರೀಮತ್‌ಗೊಗ್ಗಿ ಬೂತೇಸ್ವರಕ್ಕರಡಗೋಡುವಳ್ಳಿಯ ದೇವಭೋಗಂ ಬಿಟ್ಟಂ (ಎಕ. III, ಮೈಸೂರು. ೩೬-೩ ; ಸು. 990 ?).

[ <ಭೂತೇಶ್ವರ ]

**ಬೂತೇಸ್ವರ** 'ಬೂತೇಶ್ವರ' ನೋ.

**ಬೂದ** 'ಬೂದಿ' ನೋ.

**ಬೂದಗುಂಬಳ** 'ಬೂದಿಗುಂಬಳ' ನೋ.

**ಬೂದಗೂಱ್** (ನಾ). ಒಂದು ಊರಿನ ಹೆಸರು (?) : ಬಾಳುಗುಳಿಯ ಮಹಾಜನ ಅಯ್ವದಿಂಬರುಂ ಉಭಯಸಮ್ಮತದೊಳಿಟ್ಟು ಬಳಿಯರ ಬಾದಮ್ಮಗೆ ಬೂದಗೂಱನಿತ್ತೊರ್ (ಸೌಇಇ. IX-i. ೫೯-೯; 10ನೆಯ ಶತ); ಅರಸರ ಮೆಚ್ಚಿಸಿ ಬೂದಗೂಱಂ ಬಿಡಿಸುವೊನಕ್ಕುಮೆಂದೊಡವ ಬಿಡಿಸಿದೊಡೆ (ಎಇ. XI, ೬-೧೨ ; 10ನೆಯ ಶತ). [ ? ]

**ಬೂದವೇಱು** (ಕ್ರಿ). ಬೂದಿಬಣ್ಣವನ್ನು ಹೊಂದು : ಊದಾಬಣ್ಣಕ್ಕೆ ತಿರುಗು : ಅದು ಮೊದಲ್ಗೊಂಬುಗಳಿನಿಱಿದಿಳೆಯೊಳ್ ಬಿಟ್ಟು ಬೇರೂಱಿ ಬೆಳೆದ ಬೀೞಲ್ಗಳೊಂದೊಂದನೊತ್ತಿ ಪತ್ತಿ ಸುತ್ತಿ. . .ಕಪಲ್ತು ಕೊರ್ಬಿ ಬೂದವೇಱಿ ಬೆಳೆದು ಬೆಳಗಾದು ಬಣ್ಣವಾಗಿ (ಲೀಲಾವ. ೮-೪೦ ವ).

[ ಬೂದ (<ಬೂದಿ) + ಏಱು$_1$ (<ಏಱ್$_1$) ]

**ಬೂದಿ**, ಬೂದ, ಬೂದು(ನಾ). ೧. ಯಾವುದಾದರೊಂದು ವಸ್ತುವನ್ನು ಬೆಂಕಿಯು ಪೂರ್ಣವಾಗಿ ಸುಟ್ಟು ಉಳಿಸುವ ಭಾಗ : ಒಲೆಯ ಬೂದಿಯು ಬಿಲಿಯಲು ಬೇಡ ಒಲಿದಂತೆ ಹೂಸಿಕೊಂಡಿಪ್ಪುದು (ಬಸವ. ೦೧೪) ; ವಾದಿಗಳಾಚಾರಿಯನಾಗಿ ಪರನೊಳು ಕಾದಿ ಬೂದಿಯನೆಯ್ದಿದೆಯಾ (ಮೋಹತ. ೮-೨೦). ೨. ಗೋವಿನ ಸಗಣಿಯನ್ನು ಒಣಗಿಸಿ, ತುಷಾಗ್ನಿಯಲ್ಲಿ ಸುಟ್ಟು ಸಂಸ್ಕರಿಸಿದ ಪುಡಿ ; ವಿಭೂತಿ ; ಭಸ್ಮ : "ಬೂದಿಯು ಭೂತಿಯುಕ್ಕು" (ಶಬ್ದಮಂ. ೧೩) ; ಬೂದಿ ಜೆಡೆ ಲಕ್ಕಣಂ ತಪಕಾದುವೆರಟೆೞ್ದೊಡೆ ಶರಾಸನಂ ಕವಚಮಿವೆಂತಾದುವೊ ಮುತ್ತುಂ ಮೆಱಸುಂ ಕೋದಂತುಟೆ ನಿನ್ನ ತಪದ ಪಾಂಗೆಂತು ಗಡಾ (ಕಂಪರಾ. ೬-೯೨); ಜಸಮೆ ತನಗೆ ಮೆಯ್ಸಿರಿಯೆಂಬುದನಱಿಪುವಂತೆ ಪೂಸಿದ ಬೂದಿಯೊಳಂ . . . ಚೆಲ್ವನಾಂತು (ಶಬ್ದಶಾ. ೦೬೭) ; ಚೊಕ್ಕಣದ ಬೂದಿಯನುಃಫೆನುತಊದಿ ಮೂಗಿನೊಳ್ ಪೊಕ್ಕೊಡೆ ಸೀಂತು . . . ಪುರ್ಬಿಕ್ಕುವ ಮರ್ಕಟಂ ನಗದ ತಾಪಸರಂ ನಗಿಸಿತ್ತರಣ್ಯದೊಳ್ (ಕಾವ್ಯಸಾ. ೧೦೦೮). ೩. ಊದಾಬಣ್ಣ : 'ಬೂದಿಗುಂಬಳ' ಪರಾ. **ಬೂದ** : ೩. 'ಬೂದವೇಱು' ಪರಾ. ೪. ಊದಾಬಣ್ಣವುಳ್ಳುದು : ತವ್ಮೊಳು ತಾವುವೊಪ್ಪಿ ಆ ಕುದುರೆ ಬೂದಸುಯೆಂದು ಕದ್ರುವೆಂದಳು (ಕಾಶೀಖಂ. ೨೫೩-೫). **ಬೂದು** : ೩. 'ಬೂದುಂಗುಂಬಳ' ಪರಾ.

**ಬೂದಿ ಮಾಡು** = ಸುಡು ; ದಹಿಸು : ಇದು ಕೈಲಾಸಂ ಭವಾನೀಧವನ ನೆಲೆ ಮನೋಜಾತನಂ ಬೂದಿ ಮಾಡಿ[ತ್ತಿ]ದಱೊಳ್ (ಕಂಪರಾ. ೭-೭೪) : ಅವನ ಕೋಪಾಗ್ನಿಯು ಲೋಪಿಸಿ ಬೂದಿಮಾಡುವೆನು (ಚರಚ. ೨೩-೭೪). **ಬೂದಿ ಮುಚ್ಚಿದ ಕೆಂಡ** = ಮೇಲೆ ಬೂದಿ ಮುಚ್ಚಿಕೊಂಡಿದ್ದು ಒಳಗೊಳಗೇ ಉರಿಯುತ್ತಿರುವ ಕೆಂಡ ; ಅಂತರಂಗದಲ್ಲಿ

ತಾಪವನ್ನು ಹೊಂದಿರುವಿಕೆ: ಆದೊಡಂ ಲೌಕಿಕರ ಮತಂ ಶಾನಾಗಿ ಸಂತತಂ ಬೂದಿಮುಚ್ಚಿದ ಕೆಂಡದಂತಾಗಿ ಅಂಕಕಾಱಂ ತಾನದಾಗಿ (ಶಿಪು. ೨೦೬-೯೪); ಬೂದಿ ಮುಚ್ಚಿದ ಕೆಂಡದಂತೆ ಮುದುರಿ ಕೂತವಳನ್ನು ರಂಗ ನಿಷ್ಠುರದೃಷ್ಟಿಯಿಂದ ನೋಡಿದ (ಶ್ರಕ್ಕ. ೫೦). **ಬೂದಿಹುಣ್ಣಿಮೆ, ಬೂದಿಹುಣ್ಣವೆ** = (ಶಿವನು ಮನ್ಮಥನನ್ನು ಸುಟ್ಟ ಸಂಕೇತವಾಗಿ) ಫಾಲ್ಗುಣಮಾಸದ ಹುಣ್ಣಿಮೆಯಂದು ಆಚರಿಸುವ ಹಬ್ಬ : P ಕಾಮನನ್ನು ಸುಟ್ಟನಂತರ ಆ ಬೂದಿಯನ್ನು ಮೈಗೆ ಹಚ್ಚಿಕೊಳ್ಳುವುದು, ಬಣ್ಣದ ನೀರಿನಿಂದ ಓಕುಳಿಯಾಡುವುದು, ಹಾಡುವುದು ಈ ಹುಣ್ಣಿಮೆಯ ಮುಖ್ಯ ಆಚರಣೆಗಳು ; "ಘೋಳಿಹುಣ್ಣಿಮೆ" (ಶ್ರಲ್ಕ); (೪). [ < ಸಂ. ಭೂತಿ ]

**ಬೂದಿಕಟ್ಟೆ** (ನಾ). ಸುಡುಗಾಡು ; ಶ್ಮಶಾನ : ಇನ್ನೂ ನನಗೆ ಬೂದಿಕಟ್ಟೆಗೆ ಹೋಗುವ ಕಾಲ ಬರಲಿಲ್ಲ (ಶುಕಚ. ೨೬). [ ಬೂದಿ+ಕಟ್ಟೆ$_1$ ]

**ಬೂದಿಕುಂಬಳ** 'ಬೂದಿಗುಂಬಳ' ನೋ.

**ಬೂದಿಗ** (ನಾ). ೧. ವಿಭೂತಿಯನ್ನು ಧರಿಸಿದವನು : ಪಾರ್ವನ ಪುತ್ರನಂ ಕೆಡಿಪ ನಂಟುಗಳ್ಳಿನ ತೆಱದಿ ಬೂದಿಗರ ಪತ್ತಿ ಬಿಡದಾತಂ ಪರಬ್ರಹ್ಮವೇ (ಐಕೋಶ. ೧೩-೩). ೨. ಶಿವ ; ಪರಮಾತ್ಮ : ಅಂದಿವಳಿ ದರ್ಡಾ ಬೂದಿಗ ನೊಸಲ ಕಣ್ಣಿಂದ ಕೀಳಿನ್ನ ಸುಡುವನೆ (ಕುಗಾಕಾಂ. ೧೭-೯೬). ೩. ಒಬ್ಬಾತನ ಹೆಸರು : ಪೊಲುಕೇಶಿಯ ಬೂದಿಗನ ಕಾಳೆಗದೊಳ್ ಪೊಲುಕೇಸಿಯೊಡತಿಹದು ಕೊಕಾಳಿನ ಕೊನ್ದು ಸತ್ತ (ಎಕ. III, ಮೈಸೂರು. ೪೪-೭ ; ಸು. ೯೯೦ ?). [ ಬೂದಿ + —ಗ$_2$ ]

**ಬೂದಿಗುಂಬಳ**, ಬೂದಗುಂಬಳ, ಬೂದಿಕುಂಬಳ, ಬೂದುಗುಂಬಳ (ನಾ). ತರಕಾರಿಯಾಗಿ ಬಳಸುವ, ಕುಂಬಳಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ ಮತ್ತು ಅದರ ದೊಡ್ಡ ಗಾತ್ರದ ಬೂದಾ ಬಣ್ಣದ ಕಾಯಿ : ಬೂದಿಗುಂಬಳದ ಕಾಯಂಗಡಿಯೊಳಿಟ್ಟಿರಲು ಮೇದಿನಿಪ ಕಂಡು ಬಸವಯ್ಯನಿಂದು ಭಕ್ತನೇ ಸಾಡದದಿ ನೋಡೆಂದು ಪೇಳೆ (ಗುರುಚಾ. ೬-೨೯); ಕಳ್ಳಂಗಡಲೆ . . . ರಾಸ್ನೆ, ಬೂದಿಗುಂಬಳದ ಬೇರು, ಇವಂ ಸಮಭಾಗ ಕಷಾಯಂ ಕಾಸಿ ಕೊಡಲು ಸನ್ನಿಪಾತಜ್ವರ ಗುಣಮಕ್ಕುಂ (ಸಕಪ್ರ. ೧೭೭) ; ಬೂದಿಗುಂಬಳ ಬಳ್ಳಿಗಾಧಾರವೆಂದು, ಮೊನೆಯಾದ ಮುಳ್ಗಳ ನೀಡಿ ಬೆಳೆವ ಪೊದೆಯಂತೆ (ಕಂಕು. ೪೩-೬). **ಬೂದಗುಂಬಳ** : ಹೊಂಗೆಬೀಜ, ಬೂದಗುಂಬಳ, ತಿಗಡೆ, ಮತ್ತಿ, ಕಫಿಪಡುವಲ, ಬಿಸುರು, ಇವಂ ಸಮತೂಕ ಹಾಕಿ ಕಷಾಯ ಕಾಯಿಸಿಕೊಟ್ಟಲ್ಲಿ ಶೀತಜ್ವರ, ವಿಷಮಜ್ವರ, ದೋಷಜ್ವರವೂ ಸಹ ಮಾಣ್ಗುಂ (ಸಕಪ್ರ. ೬೮). **ಬೂದಿಕುಂಬಳ** : ಬೂದಿಕುಂಬಳ :—ಈ ಬೀಜವಂ ಹಾಲಲ್ಲಿ ಅರೆದು ಬೆಲ್ಲ ಸಹ ಕುಡಿಯಲು ಋತುವಾಗುವಳು (ಬಿಪ್ರಶಿ. ೭). **ಬೂದುಗುಂಬಳ** : ನಮಗೆ ಹುರಿದ ಬೂದುಗುಂಬಳದ ಬಿತ್ತವನ್ನು ಕೊಟ್ಟವರೆ ; ನಾವು ನೋಡದೆ ಬಿತ್ತಿದ್ದು ತಪ್ಪು (ಹುಬ್ಬಹ. ೦೬೩). [ ಬೂದಿ + ಕುಂಬಳ ]

**ಬೂದಿಬಡಕ** 'ಬೂದಿಬಡಿಕ' ನೋ.

**ಬೂದಿಬಡಿಕ**, ಬೂದಿಬಡಕ, ಬೂದಿಬಡುಕ (ನಾ). ೧. ವಿಭೂತಿಯನ್ನು ಬಳಿದುಕೊಂಡಿರುವವನು ; ಭಸ್ಮವನ್ನು ಲೇಪಿಸಿಕೊಂಡಿರುವವನು. ೨. ಶಿವ ; ಪರಮಾತ್ಮ : ಬೂದಿಬಡಿಕನ ಮೆಯ್ಗೆ ಬಾವನ್ನವುಂ ಶಿವಿರ್ದು (ಉಚಕಚ. ೧೬೦-೦೩). **ಬೂದಿಬಡಕ** : ೨. ಉಸುರ್ದರೇ ಹರಿಯುಜಾದ್ಯರ್ ನಮ್ಮ ದೂಱನಾ ಮಸಣಗಾಹಿಗೆ ಬೂದಿ ಬಡಕನಾ ವೊರೆಯುನಾಲಿಸಿದನೇ (ಕಂಕು. ೪೭-೦೯) ; ಬಿನುಗುವೇಷವ ಕಾಳ್ದ ಬೂದಿ ಬಡಕನಿಗೆ ವನಿತೆಯಾಗುವರೆ ಬಾಲೆ (ಹುಗಳ. ೦೮). **ಬೂದಿ ಬಡುಕ** : ೧. ಬೂದಿಬಡು[ಪಾಠಾಂ. ಡ]ಕರ ಮಾತನೆ ನಂಬಿ ಸನ್ಮಾರ್ಗವೇಧಿಯ ಮಾಶವ ನೀಸುಳಿದು (ಗೊಮ್ಮಕ. ೭-೪೪) ; ಮಸಣದೊಳ್ಭೂತಪ್ರೇತಪಿಶಾಚಿಗಳೊಡನೆ ವಿರೂಪಾಕ್ಷನೆನಿಸಿಕೊಂಡು ಕುಣಿಯುತ್ತಿರ್ಪ ಬೂದಿಬಡುಕ ಶಿವನಂ ಶೈವರ್ಬಗೆಗೆ ಬಂದಂತೆ ಬಣ್ಣಿಪರ್ (ಅರ್ಗಾಪ. ೨೮-೨೮ ವ).

[ ಬೂದಿ + —ಬಡಿಕ$_2$ ]

**ಬೂದಿಬಡುಕ** 'ಬೂದಿಬಡಿಕ' ನೋ.

**ಬೂದಿಬಾಳೆ**, ಬೂದುಬಾಳೆ (ನಾ). ಒಂದು ಬಗೆಯ ಬಾಳೆಯ ಗಿಡ ಮತ್ತು ಅದರ ಹಣ್ಣು : ಬದನೆಯ ಕಾಯ ಬೂದಿಬಾ[ಪಾಠಾಂ. ದಾ]ಳೆಯ ಹೂವ ಉನ್ನತಿಕೆವಡೆದ ಕಗ್ಗುಂಬಳದ ಕಾಯುನಡಹೇಳಿ (ಸೂಪಶಾ. ೫-೫೨); ಬೂದಿಬಾಳೇಹಣ್ಣು . . . ಅಗಸೇಮರದ ಒಳನಾರು ತಳಿಗೆ ಹಾಕಿ ಕಿವಿಚಲು, ಒಳ್ಳೆಯ ಎಳನೀರ ಹಾಗೆ ಬಿಡುವುದು (ಬಿಪ್ರಶಿ. ೭೦); ಬಾಳೆಯ ಕುಲದಲ್ಲಿ ಗುಜರಾಥಿ, ರಸಬಾಳೆ . . . ಬೂದಿಬಾಳೆ, ಸೊನ್ನಿಬಾಳೆ, ಏಣು ಬಾಳೆ ಎಂದು ಈ ಪ್ರಕಾರ ಹಲವು ವಿಧವಾದ ಬಾಳೆಯ ಕುಲಗಳುಂಟು (ಕೃಶಿಶ್ರ. ೦೫೭). **ಬೂದುಬಾಳೆ** : ಹಾದೀಕಲ್ಲಿಗೆ ತೇದ ಗಂಧಾವನಿಕ್ಕಿ ಬೂದುಬಾಳೆಹಣ್ಣ ಸುಲಿದಿಕ್ಕಿ ವಳಗೀರೋ ಬಾಲೆ ಬಂದಕ್ಕೀ ತೋಳಸ್ಮಾಳೋ (ಹುಬ್ಬಹ. ೫೦). [ ಬೂದಿ + ಬಾಳೆ$_1$ (<ಬಾಟಿ[3]) ]

**ಬೂದಿಬುಕ್ಕ** (ನಾ). ಮೈಗೆಲ್ಲಾ ಬೂದಿ ಹತ್ತಿರುವಂತಹುದು : ಬೂದಿ ಬುಕ್ಕಗಳಾಗಿದ್ದ ಅವನ ಮನೆಯ ನಾಯಿಗಳೂ ರಂಗ ಪುಟ್ಟರ ಮನೆಯ ನಾಯಿಗಳೂ . . . ಕೂಗತೊಡಗಿದ್ದುವು (ಹುಲಿಚು. ೦೪).

[ ಬೂದಿ + ಬುಕ್ಕ$_0$ ]

**ಬೂದಿಬುಧವಾರ** (ನಾ). "ಕ್ರೈಸ್ತರ ಉಪವಾಸ ವ್ರತದಿನಗಳ ಮೊದಲನೆಯ ದಿನ (ಆ ದಿನ ಪಶ್ಚಾತ್ತಾಪಿಗಳ ತಲೆಯ ಮೇಲೆ ಬೂದಿಯನ್ನೆರಚುವ ಪದ್ಧತಿ ರೋಮನ್‌ಕ್ಯಾತೊಲಿಕರಲ್ಲಿದೆ)" (Ash-Wednesday. ಇಂಕಶ). [ ಬೂದಿ + ಬುಧವಾರ ]

**ಬೂದಿಮೆಯ್ಯ** (ನಾ). ಮೈಗೆ ಭಸ್ಮವನ್ನು ಬಳಿದುಕೊಂಡಿರುವ ಶಿವ : "ಎಲುಗೈಯ ಬೂದಿಮೆಯ್ಯಂ . . . ಜತ್ತುಗದಲೆಯನೆನೆ ಸತ್ಯವೀಂದ್ರರ್ ಸಲೆ ಪೇಳ್ವರ್ ಸ್ಮರಹರಂಗೆ ನಾಮವಿದೆನುತಂ" (ಕಚಕ. ೦೮).

[ ಬೂದಿ + ಮೆಯ್$_2$ + —ಅ$_7$ ]

**ಬೂದಿಪೂಸು** (ಕ್ರಿ). ವಿಭೂತಿಯನ್ನು ಧರಿಸು : ನಾಗಶರ್ಮಂ ಬೂದಿ ಪೂಸಿದ ತಪೋಧನನಂತೆಯುಂ . . . ಅಳಿಗಣ್ಣರಂತೆ ಮಿಳುಮಿಳನೆ ನೋಡುತ್ತುಂ ಮಠದಿಂ ಪೊಱಮಟ್ಟು ನಿಂದ ಛಾಂದಸಬ್ರಾಹ್ಮಣನಂ ಕಂಡು (ಕಂಶಕಂ. ೦೬೭-೦೭). [ಬೂದಿ + ಪೂಸು$_1$]

**ಬೂದು** 'ಬೂದಿ' ನೋ.

**ಬೂದುಗುಂಬಳ** 'ಬೂದಿಗುಂಬಳ' ನೋ.

**ಬೂದುಬಾಳೆ** 'ಬೂದಿಬಾಳೆ' ನೋ.

**ಬೂಪಳ** (ನಾ). ಬೂಟಾಟಿಕೆ; ನಟನೆ : 'ಬೂಪಳಗಾತಿ' ಪರಾ. [?]

**ಬೂಪಳಗಾತಿ** (ನಾ). ಸೋಗಲಾಡಿ; ಮಿಟಕಲಾಡಿ : ಬೂಪಳಗಾತಿ . . . ಏನೂ ಅರೀದ ಪಾಯಿ ಹಂಗೆ ಅಳ್ತಾ ಕುಂತವ್ಳೆ ಇಲ್ಲಿ (ಸರ್ಪಮಂ. ೨೦೦).

[ ಬೂಪಳ + —ಕಾತಿ$_5$ ]

**ಬೂಮ**, ಬುವ್ವ, ಬೂವ (ನಾ). ೧. ಮದುವೆಯ ದಿನದಂದು ವಧೂವರರೂ ಎರಡು ಕಡೆಯ ಬೀಗರೂ ಒಂದೇ ಪಂಕ್ತಿಯಲ್ಲಿ ಕುಳಿತು ಮಾಡುವ ಮೃಷ್ಟಾನ್ನದ ಊಟ : ಮದುವೆಯಂದು ವಧೂವರರು ಬೂಮ ಮಾಡುವಾಗ, ಅಳಿಯ ತನ್ನ ಎಂಜಲುಕೈಯಿಂದಲೇ ಅತ್ತೆಯ ಕೈ ಹಿಡಿದು ಆಕೆಯ ಗಂಡನ ಹೆಸರು ಹೇಳಿಸುವ ಪದ್ಧತಿಯಿದೆ (ರೂಶಿ). **ಬುವ್ವ** : ೧. (ಎಸಪ್ಪ. III, ೯). ೨. (ಮಕ್ಕಳ ಭಾಷೆಯಲ್ಲಿ) ಅನ್ನ : ಬುವ್ವ ಬೇಕೆಂದು ಮಗು ಕಾಡುತ್ತಿತ್ತು (ರೂಶಿ). **ಬೂವ** : ೧. ಇರೆ ತಂದು ಮುಂದಿಟ್ಟರಂದು ಬೂವವನಲ್ಲಿ ಘರನ ಕಂಡಲ್ಲದಿನ್ನೆನಗೂಟವಿಲ್ಲಲ್ಲಿ ಎನುತ ನಡೆತಂದಳಾಮುದದಿಂದ ಶಿವನೆಡೆಗೆ (ಶಿಪು. ೨೬೯-೦೦೩); ತದನಂತರಂ

ಬೂವಮನರ್ಚಿಸಿದಿಂ ಬಚಿಯುಮರಸನನರಲಸಜ್ಜೆವನೆಯೊಳಿರಿಸಿ (ಲೀಲಾವ. ೦೩-೪ ವ) ; ಬೂವಕ್ಕವಸರಮಾಗಲ್ ಪಾವನತರಮಾದುದೊಂದು ಮಣಿಭಾಜನಮಂ ಪೀವರಮಂ ತಂದಿರಿಸೆ ವಧೂವರರೊಂದಾಗಿ ಕುಳ್ಳಿದರ್ ಮುದದಿಂದಂ (ಶಾರಕ್ಷ. ೦೦-೧೬೨).

ಬುವ್ವದ **ಪೂಜೆ** = ವಧೂವರರಿಗೆ ಸಿದ್ಧಪಡಿಸುವ ಭೋಜನ ಸಾಮಗ್ರಿಗಳಿಗೆ ಮಾಡುವ ಪೂಜೆ ಮತ್ತು ಅನಂತರದ ಊಟದ ಸಮಾರಂಭ : (ಎಕವು. XVII. ೦೪). **ಬುವ್ವದ ಪೆಟ್ಟಿಗೆ** = ವಧೂವರರಿಗೆ ಕೊಡಬೇಕಾದ ಉಣಿಸು ಮುಂತಾದುವುಗಳನ್ನೊಳಗೊಂಡಿರುವ ಪೆಟ್ಟಿಗೆ : ವಸ್ತ್ರಗಾರಪೆಟ್ಟಿಗೆ ಬುವ್ವದ ಪೆಟ್ಟಿಗೆ ಅಷ್ಟಪೆಟ್ಟಿಗೆ ಇವುಗಳ ಮೆರವಣಿಗೆ ಆಗುತ್ತದೆ. ಈ ಪೆಟ್ಟಿಗೆಯಲ್ಲಿ ಗಂಡಿನ ಕಡೆಯವರು ಹೆಣ್ಣಿಗೆ ಕೊಡಬೇಕಾದ ಎಲ್ಲಾ ಉಡುಗೆರೆಗಳನ್ನೂ ಇಟ್ಟಿರುತ್ತಾರೆ (ಹಳ್ಳಿಜಾ. ೬೦). [< ಸಂ. ಭೂಮನ್./ತಮಿ. ಪೂವ: ತೆಲು. ಬುವ್ವಮು./ಮರಾ. ಭೂವು]

**ಬೂರ**, ಬೂರಗ, ಬೂರಗೆ, ಬೂರಲ, ಬೂರವ, ಬೂರುಗ, ಬೂರುಗೆ (ನಾ). ಒಂದು ಬಗೆಯ ಮರ ಮತ್ತು ಅದರ ಅರಳೆ; ದೂದಿ ; ಶಾಲ್ಮಲಿ : ಎನ್ನ ಭಕ್ತಿ ಎಲವದ ಕಾಯ ಫಲದಂತೆ ನೋಡಯ್ಯಾ ಹೊರಗೆ ಹೆಂಪು ಒಳಗೆ ಬೂರವಯ್ಯ (ವಚಸಂ. ೩೦೪-೪೦); ವೀರತಪಸ್ವಿ ನಿಂದನಿರುಳುಂ ಪಗಲುಂ ಹಿಮಪುಂಜಮುಂಗದೊಳ್ ಬೂರವನೊಟ್ಟಿದಂತಲೆಯೆ . . . ಬೆಳ್ಳವಾಸದೊಳ್ (ಅಸುಪು. ೪-೨೦); ಆರಯ್ಯೆ ಲಘು ವಪ್ಪುದಾ ಹುಲ್ಲು ಹುಲ್ಲಿಂದ ಬೂರವತಿಲಘುವಲಾ ಬೂರದಿಂ ಲಘುವಪ್ಪರಾರೆನಲು ಯಾಚಕನೆನಲ್ಕೆ (ಬೀಕ್ಷ್ಮಕೃ. ೪-೨೫-೨೫). 'ಕೆಂಬೂರ' ಪರಾ. **ಬೂರಗ** : ಬೂರಗದ ಮರದ ಹುರುವನ್ನೂ ಅರಿಸಿನ ನೀಲಿಬೀಜ ತ್ರಿಫಲಂಗಳನ್ನೂ ಚೂರ್ಣವಂ ಮಾಡಿ ಮದ್ಯವೆರಸಿ ಹತ್ತಿಯ ಗಿಡಕ್ಕೆ ಲೇಪನಂಗೈದು (ಸೌಗಂ. ೪೩೬-೦೯); ಬೂರಗದ ಮರದ ಕೆಳಗೆ ವಿಶ್ರಮಿಸಿಕೊಳ್ಳುತ್ತ . . . ಈ ಸುಪುತ್ರನನ್ನು ಹಡೆವಳು (ಶಕ್ತೋಟಿ. ೦) ; ನೆಳಲು ಬೂರಗಕಿಲ್ಲ ಕೂಳಿಗೆ ನೀತಿಯಿಲ್ಲ (ಗಾದೆ). **ಬೂರಗೆ** : 'ಬೂರಗೆಬಂಕೆ' ಪರಾ. **ಬೂರಲ** : ಪ್ರಯೋಜನವಲ್ಲದ ಬೂರಲದ ಮರದ ಹೂವ ನೋಡಿ ಗಿಡಗಳ ಸಮೂಹ ಮುಂದಕ್ಕೆಯ್ದದೆ (ವಚಶಾ. I, ೨೦೬-೩ ಅರ್ಥ) ; ನಮ್ಮ ಉಪಾಧ್ಯಾಯರು ನನ್ನನ್ನು ಬೂರಲದ ಹೂವಿಗೂ ಸೊಟ್ಟ ಸೋರೆ ಗುಂಬಳಕಾಯಿಗೂ ಹೋಲಿಸಿ ಉಪಹಾಸ ಮಾಡುತ್ತಿದ್ದರು (ಇಶ್ವಕೃ. ೪೪೬). **ಬೂರವ** : ಎಲವದ ಬೂರವನೊರಳೊಳ್ ತುಳಿದಡೆ ತದ್ವರ್ಣ ಬಿಡದ ತೆಜದಿಂ (ಪಶ್ಚಾ. ೫-೦೦೬). **ಬೂರುಗ**$_1$: "ಪಿಚ್ಛಿಲಾ . . . ಶಾಲ್ಮಲೀ—ಶಿ ಬೂರುಗದ ಗಿಡ, ಚಕ್ಕಮುಕ್ಕೀ ಹತ್ತೀಗಿಡ, ಬೆಂಡುಹತ್ತೀಗಿಡ, ಎಲವದ ಮರ" (ಸಿದ್ಧಾಂತ. ೦೨೨) ; ಜಗದೊಳಗೆ ಲಘು ರಾಷ್ಟ್ರಮದಱಿಂ ಲಘು ತೃಣಂ ತೃಣದಿಂದೆ ಲಘು ನೆಱೆ ಲಘು ಶಿರೋಜ ಶಿರೋಜದಿಂ ಲಘು ಬೂರುಗ (ಕಂಕದಾ. ೬-೨೨) ; ಬೂರುಗದ ಚಕ್ಕೆ, ಬೂರುಗದ ಎಲೆ ಇವುಗಳನ್ನು ನೀರಿನಲ್ಲಿ ಬೇಯಿಸಿ . . . ಎಲಕ್ಕಿ ಪ್ರತಿಪಾಕವಿಕ್ಕಿ ಆರೆಸು ಕೊಡಲು ಛಳಿಜ್ವರ ಬಿಡುವುದು (ಸಕವೈ. ೬೪) ; ಬೂರುಗದ ಮರ ಗಿಣಿ ಕಾದ ಹಾಗೆ (ಗಾದೆ). **ಬೂರುಗೆ** : 'ಬೂರುಗೆಬಂಕೆ' ಪರಾ.

**ಬೂರದ ಹಾಸು** = ದೂದಿಮರದ ಅರಳೆಯಿಂದ ಮಾಡಿದ ಹಾಸುಗೆ : ಸುಡುವ ಬೆಂಕಿಯ ತುದಿಯ ಮೊನೆಯಲ್ಲಿ ಒಂದರಗಿಸ ಮಣಿಮಾಡದ ಮನೆಯಲ್ಲಿ ಬೂರದ ಹಾಸು ಹಾಕಿ ನೀರಿನ ಮಂಚದ ಮೇಲೆ ನಾರಿಯರೆಲ್ಲರು . . . ಮಲಗಿರಲಾಗಿ (ಮೋಳಿಗೆ. ೨೬೦-೬೦೦). **ಬೂರಲ ಅರಳೆ, ಬೂರುಗದ ಅರಳೆ** = ದೂದಿಮರದ ಅರಳೆ,—ಹತ್ತಿ : ಬೂರಲ ಅರಳೆಯ ಮಿದುವಾದ ದಿಂಬಿಗೆ ಮೊಲಕನ್ನು ಆಸರೆಯಾಗಿರಿಸಿ ಮಲಗಿದ್ದೆ (ಕಂದುಷ. ೮೦) : ಅವರ ಮಹಾಕೃತಿಗಳು ಬೂರುಗದ ಅರಳೆಯಂತೆ ಹಗುರವಾಗಿಲ್ಲ, ವಜ್ರದಂತೆ ಘನವಾಗಿವೆ (ಶಾಪಗೀ. ೩೦). **ಬೂರುಗದ ಹತ್ತಿ** = ಬೂರಲ ಅರಳೆ : ಬೂರುಗದ ಹತ್ತಿಯ ಮೃದುವಾದ ಹಾಸುಗೆಯ ಮೇಲೆ ಮಲಗಿದ ಕೂಡಲೆ ನಿದ್ರೆ ಹತ್ತಿತು (ಲೂಡಿ).

[ದೇ.॥ ತಮಿ. ಪೂಲ್, ಪೂಲಾ, ಪೂಳೈ : ಮಲ. ಪುಲ ; ತುಳು. ಬೂರಿಗ್, ಬೂರುಗ, ಬೋರ ; ತೆಲು. ಬೂರಗ, ಬೂರುಗ, ಬೂರುಗು, ಬೂರುವು ; ಪರ್ಜಿ. ಬೂರು]

**ಬೂರಗ** 'ಬೂರ' ನೋ.

**ಬೂರಗಬಂಕ** 'ಬೂರಗೆಬಂಕೆ' ನೋ.

**ಬೂರಗೆ** 'ಬೂರ' ನೋ.

**ಬೂರಗೆಬಂಕೆ**, ಬೂರಗಬಂಕ, ಬೂರುಗಬಂಕ, ಬೂರುಗೆಬಂಕೆ (ನಾ). ಎಲವದ ಮೇಣ ; ದೂದೀಮರದ ಹಗಿನು : "ಪಿಚ್ಛಾ, ಶಾಲ್ಮಲೀ. ವೇಷ್ಟಃ — ೩ ಬೂರಗೆಬಂಕೆ ಹೆಸರು ; ಎಲವದ ಮ್ಯಾಣ" (ಸಿದ್ಧಾಂತ. ೦೨೩). **ಬೂರಗಬಂಕ** : "ಪಿಚ್ಛಾ—ಗಂಜಿ, ಬೂರಗಬಂಕ" (ಸಿದ್ಧಾಂತ. ೪೪೫). **ಬೂರುಗಬಂಕ** : (೬). **ಬೂರುಗೆಬಂಕೆ** : (೬).

[ಬೂರಗೆ (< ಬೂರ) + ಬಂಕೆ$_1$]

**ಬೂರಣ**, ಬುರಣೆ (ನಾ). ಯಾವುದಾದರೂ ವಸ್ತುವಿಗೆ ಹುಳುಹಿಡಿದು ಜೊಳ್ಳಾದುದು : ನಾಂದುಪನಡಿಗಟ್ಟಂ ಪುಟು ತಿಂದುವಸಡೆಯೊತ್ತಿ ಬೆಂದುವಂ ಬೂರಣಮು(ದಿ)ಂ ಕಂದಿದುವಂ ಪೊಳೆವೋದುವನೆಂದುಂ ಕಟ್ಟಲ್ಕೆವೇಡ ಖಾ(ಬಾ)ಣದಿಗಳಂ (ಅಶ್ವಶಾ. ೬-೫೬). **ಬುರಣೆ** : ಬುರಣೆಯಾದ ಕಡಲೆಯ ತಿಂವರೆ ನಾಱುವ ನೀರ ಕುಡಿದರೆ ನಾಱುವ ಕವಳವ ಕೊಂಡರೆ (ಅಕ್ಕವೀ. ೬೬-೬). 'ಬುರಬುರಿ$_2$' ಪರಾ. [?]

**ಬೂರಲ** 'ಬೂರ' ನೋ.

**ಬೂರವ** 'ಬೂರ' ನೋ.

**ಬೂರವಟ್ಟಿಗೆ** (ನಾ). ಮೇಲೆ ಹೊದ್ದುಕೊಳ್ಳುವ ವಸ್ತ್ರ : "ಬೂರವಟ್ಟಿಗೆ ಬೃಹತಿಕಾಸಂಜ್ಞಕಂ" (ವಸ್ತುಕೋ. ೬೯-೨೦). [< ಸಂ. ಬೃಹತಿಕಾ ?]

**ಬೂರವಡ** (ನಾ). ದೂದಿಮರದ ಹತ್ತಿಯಿಂದ ಮಾಡಿದ ಬಟ್ಟೆ : ಅಂಬುಜನೇತ್ರೆಯರ್ಕಳ ಘನಸ್ತನದೊತ್ತು ನಿತಂಬದೊತ್ತು . . . ಬಿಂಕಂಬಡೆದಿರ್ದ ತೆಳ್ಗದಪಿನೊತ್ತು ವಿಟರ್ ನೆಱೆ ಕಾವುವಲ್ಲದೀ ಕಂಬಳಿ ದಟ್ಟಿ ಬೂರವಡವೆಂಬಿವು ಕಾವುವೆ ಶೀತಕಾಲಮಂ (ಸೂಕ್ತಿಸು. ೦೦-೨೬೦).

[ಬೂರ + ಪಡ$_4$]

**ಬೂರಾ** (ನಾ). ನಯವಾದ ಒಂದು ಬಗೆಯ ಬಿಳಿಸಕ್ಕರೆ : ಈ ಸ್ಥಳವಲ್ಲಿ ಬೂರಾಸಕ್ಕರೆ ತಯಾರಿಸುತ್ತಿದ್ದರು (ಕೃಪಾಇ. I, ೪೦೨) ; ಹನ್ನೆರಡುದಿನಗಳೂ ಬೂರಾಸಕ್ಕರೆ, ಹೂ, ಗಂಧವನ್ನು ಹೊತ್ತು, ಭಕ್ತಿಯಿಂದ ಬಾಬಯ್ಯನ ವಿಗ್ರಹದ ಮುಂದೆ ನಿಂತು ಪ್ರಾರ್ಥಿಸುತ್ತಿದ್ದಳು (ಮುಗಹೂ. ೧).

[← ಹಿಂ. ಬೂರಾ, ಭೂರಾ]

**ಬೂರುಗ**$_1$ 'ಬೂರ' ನೋ.

**ಬೂರುಗ**$_2$ 'ಬುರುಗು$_2$' ನೋ.

**ಬೂರುಗಬಂಕ** 'ಬೂರಗೆಬಂಕೆ' ನೋ.

**ಬೂರುಗೆ** 'ಬೂರ' ನೋ.

**ಬೂರುಗೆಬಂಕೆ** 'ಬೂರಗಬಂಕೆ' ನೋ.

**ಬೂರುಡೆ** (ನಾ). ಒಂದು ಬಗೆಯ ಮರ : ಭೂತಾಳೆ ಬೂರುಡೆ ವಿಟ್ಟಲಿಯ ದಿಂಡ ಪಾತಂಗ ಮುಗುಳಿಯ ಪುರಸು . . . ಅಲ್ಲಿಹವು (ನಿಜಗುಂ. ೦-೫೫). [?]

**ಬೂರ್ಜವಾ** 'ಬೂರ್ಜ್ವಾ' ನೋ.

**ಬೂರ್ಜ್ವಾ**, ಬೂರ್ಜವಾ (ನಾ). ೧. ಮಧ್ಯಮ ವರ್ಗದ ಜನತೆ ಮತ್ತು ಆ ವರ್ಗಕ್ಕೆ ಸೇರಿದವನು : ನಮ್ಮ ದೇಶದ ಎಲ್ಲ ಚಳವಳಿಗಳೂ

ಬೂರ್ಜ್ವಾ ಮಟ್ಟವನ್ನು ಮೀರಿಹೋಗಿಲ್ಲ (ದೂ). **ಬೂರ್ಜ್ವಾ :** (ಗು). ೨. ಮಧ್ಯಮ ತರಗತಿಯ : ಈ ಬೂರ್ಜ್ವಾ ಗವರ್ನ್‍ಮೆಂಟು ಹೋಗಲೇಬೇಕು (ಹಮ್ಮಿಂದ. ೦೩). [←ಇಂ. Bourgeois]

**ಬೂರ್ನೀಸು** 'ಬುರ್ನಿಸ್' ನೋ.

**ಬೂಲ, ಬೂಲು** (ನಾ). ೧. ಶರೀರ; ದೇಹ ; ಮೈ : ನಿನ್ನ ಈ ಕರೀ ಬೂಲಕ್ಕೆ ಯಾಕೋ ಈ ಬಿಳಿಬಟ್ಟೆ? (ಶುಲಿಶು. ೪೪). **ಬೂಲು :** ೨. (ಕರಾ) ನಡು ; ಸೊಂಟ. [ ?. / ತೆಲು. ಬೂಲಿ=ಮರದ ಕಾಂಡದ ಮಧ್ಯದ ನಿಸ್ಸಾರವಾದ ಭಾಗ]

**ಬೂಲು** 'ಬೂಲ' ನೋ.

**ಬೂವ** 'ಬೂವು' ನೋ.

**ಬೂವಗಾವುಂಡ** (ನಾ). ಒಬ್ಬಾತನ ಹೆಸರು : ಇನಿತು ಮಣ್ಣ ಬಿಡಿಸಿದ ಪ್ರಭುಗಳಂಕನಾವು ಬೂವಗಾವುಂಡ ಪಡಿಲಜ್ಯ ಪಡುದೆಯ್ಯ (ಎಕ. V. ಅರಕ. ೨೪-೦೩; ಕು. ೯೦೦). [ಬೂವ₁+ಗಾವುಂಡ (<ಗಾವುಂಡ)]

**ಬೂವಯ್ಯ** (ನಾ). ಒಬ್ಬಾತನ ಹೆಸರು : ಮುಟ್ಟಿಯುರ ಬೂವಯ್ಯನ ಮಗಂ ಬಿದಿಯಾಯ್ತು ತುಱುವನ್ನಿಕ್ಕಿಸಿ ಕಾದಿ ಸತ್ತು (ಎಕ. II, ೩೯೪-೮; ೮೫೩?); ಪತ್ತುಗದ್ಯಾಣ ಪೊನ್ನುಂ . . . ಭತ್ತಮುಮಂ ಎಲ್ಲಾ ಕಾಲಕ್ಕಂ ಸಾಸನವಾಗೆ ಬಿಟ್ಟರ್ ಬೂಪಯ್ಯನಕ್ಕರಂ (ಎಕ.I(R), ೯೭-೧೦; ೯ನೆಯ ಶತ). [ಬೂವ₁ + ಅಯ್ಯ₁₁]

**ಬೂವಿ, ಬುವಿ**(ನಾ). ಧರಣಿ ; ಭೂಮಿ : "ಎಳೆ, ಪೊಡವಿ, ತಿರೆ, ಧರೆ, ರನ್ನವಸುಬಿಳ್, ಬೂವಿ, ಬುವಿ–ಈ ೭ ಭೂಮಿ" (ಕರಸಾ. ೩೩-೨೦೦); ಮಕಾರಕ್ಕೆ ವಕಾರಂ . . . ಭೂಮಿ–ಬೂವಿ (ಶಮದ. ೨೭೩ ಪ್ರಯೋ): ಬೂವಿಯೊಳುಱ ನೀನೆ ಸಕಲಮಾನ್ಯೆ ಸುಕನ್ನೇ (ಹಾಲಾಸ್ಯ. ೨-೫-೪೦); ನಿನ್ನನ್ನರಂ ಬೂವಿ ಬಿರಿದಿನ್ನುಮೇಕೆ ನುಂಗಳೊ ?(ಸಂಸಚ. ೨೪_೦). **ಬುವಿ:** "ಧರೆಗಂ ತಾಂ ಬೂವಿಯುಂ ಬುವಿಯುಮೆಂದೆನುತ್ತುಂ" (ಶಬ್ದಶಂ. ೪೭); ಯುವತಿಜನಸಂಸ್ಪರ್ಶತನುವೀ ಬುವಿಗೆ ಬಯಸಿತೆ ಹಾಯೆನುತ ಜನನಿವಹ ನೆಱ ಮಱುಗಿತ್ತು ತದ್ರಾಜಾವಸಾನದಲಿ (ಜೈಮಿಂಕ. ೫-೫); ಬುವಿಯುಲ್ಲಿ ಕುಸುಮದೊಳ್ ಲಿಂಗದಾಕೃತಿ ತಾಳ್ದು ಶಿವ ಮೆಱೆವುತಿರ್ಪುದೀ ಕರವೀರ ಪುಷ್ಪವೃಕ್ಷವು (ಶ್ರೀಶರಾ. ೩-೩೪); ಇಳಿಯೆ ನೀವು ಅಳಿಯೆ ನೋವು ಬುವಿಗೆ ದಿವಿಯು ತನ್ನ! (ಅರಶೇ. ೨೦-೬). [<ಸಂ. ಭೂಮಿ]

**ಬೂವು** (ನಾ). (?): ತಂಬುಲಿಗರೊಳ್ಪಣ ೧ ತಲ್ಲಿಗರೊಳ್ಪಣ ೧ ಜಗತಿಯ ಬೂವುಗಳೊಳ್ಪಣ ೧ ಅವರೊಕ್ಕಲೊಳ್ಗೇಸ ೧೦ (ಎಕ. VII, ಶಿಕಾ. ೯೪-೩೨; 1094). [ ? ]

**ಬೂಷಲು** 'ಬೂಜ್ಜು₁' ನೋ.

**ಬೂಷ್ಟು** 'ಬೂಜ್ಜು₁' ನೋ.

**ಬೂಸ, ಬೂಸಿ** (ನಾ) ೧. (ದನಕರುಗಳು ಕುಡಿಯುವ ಕಲಗಚ್ಚಿನೊಡನೆ ಮಿಶ್ರ ಮಾಡುವ) ಧಾನ್ಯದ ಹೊಟ್ಟು; ತವುಡು; ಉಮ್ಮಿ : ಹೇರಿ ಕೊಪ್ಪು ಜಿನಿಸು ವಿದಳ ಬೂಸ ಅಕ್ಕಿ ಭತ್ತ ರಾಗಿ ಉಪ್ಪು ಬೆಲ್ಲ ಎಣ್ಣೆ ತುಪ್ಪ ಮುನ್ತಾದ ಜಿನಿಸುಗಳನೂ ಕಾಲಕಾಲಂ ಪ್ರತಿಯಲ್ಲೂ ಹೇರಿ ತನ್ದು ಕೊಣ್ಡು (ಎಕ. VIII, ತೀರ್ಥಹ. ೪೨-೨೦ : 1642) : ಇಲ್ಲಿಯ ಪೇಟೆಯಲ್ಲಿ ಬೂಸದ ವ್ಯಾಪಾರವಾದರೂ ತಕ್ಕಮಟ್ಟಿಗೆ ನಡೆಯುತ್ತದೆ (ಮುಂಬಯಿ. ೪-೦೪೩). ೨. ದಿನಸಿ ; ಧಾನ್ಯ ; ಕಿರಾಣಿ : (?). ೩. (ಅಲಂ) ಸತ್ತ್ವವಿಲ್ಲದುದು ; ಹುರುಳಿಲ್ಲದುದು ; ನಿಷ್ಪ್ರಯೋಜಕವಾದುದು : ಈ ಬರವಣಿಗೆ ತೀರಾ ಬೂಸ ಎನಿಸಿತು (ದೂ). **ಬೂಸಿ :** ೪. ತಥ್ಯವಿಲ್ಲದುದು ; ಸತ್ಯದೂರವಾದುದು ; ಜಳ್ಳು : ನೀನು ಹೇಳಿದ್ದೆಲ್ಲಾ ಬರೀ ಬೂಸಿ (ದೂ). [←ಹಿಂ. ಭೂಸಾ, ಭೂಸೀ; ಮರಾ. ಭುಂಶೀ, ಭುಂಸಾ, ಭೊಂಸ್, ಭೂಸ್; ಬಂಗಾಲಿ. ಭೂಶಿ; ಗುಜ. ಭುಸೋ, ಭುಸ; ಪಂಜಾಬಿ, ಭುಸ್./ ಸಂ. ಬುಷ, ಬುಸ./ತೆಲು. ಬೂಸ]

**ಬೂಸಣ** (ನಾ). ಅಲಂಕಾರ; ಭೂಷಣ: ಈಗಳ್ ರಾವಣನ ಬಲದೊಳ್ ಮಲೆನಾಡಿಗರ ದಂಡೊಂದುಬಱದುದು ಇವರ್ಗಾಳ್ಪಲಕಿರ್ದಂತೆ ಕೈದುಗಳುಂ ಬೂಸಣಂಗಳುಮಿಲ್ಲಂ (ಅದ್ಭುತ. ೪೭-೨೭). [< ಸಂ. ಭೂಷಣ]

**ಬೂಸರು** 'ಬೂಜ್ಜು₁' ನೋ.

**ಬೂಸಲು** 'ಬೂಜ್ಜು₁' ನೋ.

**ಬೂಸಿ** 'ಬೂಸ' ನೋ.

**ಬೃಂದ** (ನಾ). ೧. ಗುಂಪು ; ಸಮೂಹ : "ನಿಕುರುಂಬಂ ನಿವಹಂ ವ್ರಜಂ ಸಮುದಯಂ ಬೃಂದಂ ಚಯಂ . . . ಸಮೂಹಂ ವ್ರಾತಮೋಕಾರ್ಥಕಂ" (ವಸ್ತುಕೋ. ೦೦೨-೨೭) ; ಅದೆಂತುಚಿತಮಾರ್ಕ್ಯಮಾತ್ಮಗುಣಬೃಂದವಿಂತೀ ಜಗಕ್ಕದೆಂತು ಸಯನೋತ್ಸವಂ ಸತತಮಾರ್ಕ್ಯಮಂತಾಗೆ ಯತ್ನದಿಂ ನಿಜಶರೀರಮಂ ನಿಲಿಸವೇಬ್ಬುದಿಂ ದೇವಿಯರ್ (ಕಾದಂಬ. ೪೦೫).: ಅರಿ ಭೂಪಾಳತಿ(ಕಿ)ರೀಟತ್ರಾಟಿತಪದಂ ಸಪ್ತಾಬ್ಧಿಸನ್ಮುದ್ರಿತೋರ್ವರೆಗೊಪ್ಪಂ ಪತಿ ಸಂದ ವಂದಿ ಬುಧಬೃಂದಕ್ಕೊಂದುಪೊಂದಂದದಿಂ ಪಿರಿದೀವಂ (ಎಇ. XXVIII. ೩೪-೧೧; 1032). 'ಬೃಂದಗಾನ' ಪರಾ. ೨. ರಾಶಿ ; ಒಟ್ಟಿಲು. [ಸಂ.]

**ಬೃಂದಗಾನ** (ನಾ). ಸಾಮೂಹಿಕವಾಗಿ ಹಾಡುವ ಹಾಡು: ವೃಂದಗಾನ: ಅವರ ಸಂಗೀತ ಬೃಂದಗಾನರೂಪದಲ್ಲೇ ಪ್ರಗತಿಹೊಂದಿದೆ (ಸಂಗೀತಂ. ೦೮೬). [ಸಂ.]

**ಬೃಂದಾರಕ** (ಗು). ೧. ದೇವಲೋಕಕ್ಕೆ ಸೇರಿದ; ಸ್ವರ್ಗದ : ಮರ್ತ್ಯದಿಂ ಸ್ವರ್ಗಕ್ಕೆ ಕೊಂಡೊಯ್ಯುವೊಂದು ಬೃಂದಾರಕವಿಮಾನವೆನೆ ಚಿತೆ ಹೊಡಿ ನಿಂದುದು ವಸಧಿಮೇಲೆಯುಲಿ (ಚಿತ್ರಾಂಗ. ೮೪-೨೮೩೭). (ನಾ). ೨. ದೇವತೆ; ಅಮರ ; ಸುರ : "ಋಭುಗಳುಂ . . . ಅಮರ್ತ್ಯ ಬೃಂದಾರಕ ಸುಪರ್ವ ನಾಕಸದನರ್ . . . ವಿಬುಧರ್ಗೆ ನಾಮಂ" (ಮಂಗರಾ. ೩-೮); ಬೃಂದಾರಕ ರೋರೊರ್ವರ್ಗೊಂದುಕನತ್ಕಳಶನಿಕರಮಂ ಕೆಯ್ಗೆಯ್ದೊಳ್ ತಂದೀವ ಕೊಳ್ವ ಸಂಭ್ರಮದಂದಮಂ ಪೋಲ್ತತ್ತು ಕಂದುಕಕ್ರೀಡಿತಮಂ (ಚಂದ್ರಪ್ರ. ೦೨-೦೨೪); ಸೈರಾಶ್ಯದಿಂದುದ್ಭವಿಸಿ ತೋರ್ಪವೋಲಾಶಾಮರೀಚಿ ತಾಂ, ಬೃಂದಾರಕಂ ವೈದೋರ್ದನೊರ್ವನ್ (ಶ್ರೀರಾಮಾ. ೨೬೬-೭೮). [ಸಂ.]

**ಬೃಂದಾರಕತರು** (ನಾ). ದೇವಲೋಕದ ಮರ ; ಕಲ್ಪವೃಕ್ಷ : ತೀರ ಮಹೀರುಹನಿಕರಂ ನೀರೊಳ್ಪ್ರತಿಬಿಂಬಿಸಿದೊಡೆ ಪೋಲ್ತುದು ತತ್ಕಾಸಾರಂ ಬೃಂದಾರಕತರುವಾರಮನೊಳಕೊಂಡು ಪೆಂಪುವಡೆದಂಬುಧಿಯಂ (ರಾಜಶೇ. ೨-೬೫). [ಸಂ.]

**ಬೃಂದಾರಕಮುನಿ** (ನಾ). ದೇವತೆಗಳ ಮುನಿ; ದೇವರ್ಷಿ; ನಾರದ: ಬೃಂದಾರಕಮುನಿ ಭಗವತ್ಪದಸಾರಜ್ಞಾನಿಗಳೊಳಗ್ರಗಣ್ಯ ನೀನೇ (ಹೂದತಂ. ೬-೧೧). [ಸಂ.]

**ಬೃಂದಾವನ** (ನಾ). ೧. ಗೋಕುಲದ ಬಳಿಯ ಒಂದು ಪವಿತ್ರಕ್ಷೇತ್ರ; P ವಿಷ್ಣುಭಕ್ತನಾದ ಕೇದಾರರಾಜನ ಮಗಳಾದ 'ಬೃ(ವೃಂ)ದೆ' ಎಂಬುವವಳು ಲಕ್ಷ್ಮಿಯ ಅಂಶದಿಂದ ಜನಿಸಿ, ದುರ್ವಾಸಮಹರ್ಷಿಯಿಂದ ವಿಷ್ಣುಮಂತ್ರವನ್ನು ಪಡೆದು, ವಿರಕ್ತಳಾಗಿ ಅರುವತ್ತು ಸಹಸ್ರವರ್ಷಗಳ ಕಾಲ ಅರಣ್ಯದಲ್ಲಿ ತಪಸ್ಸನ್ನಾಚರಿಸಿ, ಪ್ರಸನ್ನನಾದ ಶ್ರೀಕೃಷ್ಣನೇ ತನಗೆ ಪತಿಯಾಗಬೇಕೆಂದು ವರವನ್ನು ಕೇಳಿದುದರಿಂದ ಅವಳ ಅಪೇಕ್ಷೆಯಂತೆ ಕೃಷ್ಣನು ಬಹಳ ಕಾಲ ಅರಣ್ಯದಲ್ಲಿ ಅವಳೊಂದಿಗೆ ಸುಖವಾಗಿದ್ದನೆಂದೂ, ಅವಳಿದ್ದ ವನಕ್ಕೆ 'ಬೃಂ(ವೃಂ)ದಾವನ' ಎಂದು ಹೆಸರಾಯಿತೆಂದೂ ಪುರಾಣಕಥೆಯಿದೆ : ಈ ವರನುಂ ನೀನುಂ ನಾನಾವಿಧ ನವಕುಸುಮಶಯ್ಯೆಯೊಳ್ ರಮಿಯಿಸು

ಬೃಂದಾವನದೊಳಂಪ್ರವನಪರಿಭಾವಿದೊಳಗಲದೆ ಸುಗಂಧಪಾಟಳಗಂಧಿ: (ಶಾಂತಿಪು. ೩-೦೩೦); ಯಾದವರಾಯ ಬೃಂದಾವನದೊಳು ವೇಣುನಾದವ ಮಾಡುತಿರೆ (ಕನಕ. ೨೦೦ ಪಲ್ಲವಿ): ಬೃಂದಾವನದೆದೆಯ ವಿಡಿದು ಬಂತು ಕೊಳಲ ಮೆಲ್ಲುಲಿ (ಕಬಕಮ. ೩೯-೦೭). ೨. ಪೂಜೆಗಾಗಿ ತುಳಸಿಯ ಗಿಡವನ್ನು ಕಟ್ಟೆಕಟ್ಟಿ ಬೆಳೆಸುವ ಸ್ಥಳ: ತುಳಸೀಕಟ್ಟೆ: ಮಾಡೋದು ಅನಾಚಾರ, ಮನೇ ಮುಂದೆ ಬೃಂದಾವನ (ಗಾದೆ). ೩. ವೈಷ್ಣವ ಸಂನ್ಯಾಸಿಗಳ ಸಮಾಧಿಸ್ಥಳ: ಭಾರತೀಯ ಯತಿಗಳ ಇತಿಹಾಸದಲ್ಲಿ ಸಶರೀರರಾಗಿ ಬೃಂದಾವನಪ್ರವೇಶ ಮಾಡಿದವರಲ್ಲಿ ವಾದಿರಾಜರು ಮೊದಲನೆಯವರು (ಕಶಿ. ೦೬೧). [ಸಂ.]

**ಬೃಂದಾವನಸ್ಥ** (ನಾ). ಸಮಾಧಿಯಲ್ಲಿ ನೆಲಸಿದವನು ; ಬೃಂದಾವನಸ್ಥರಾದ ಮೇಲೂ ಅಂದಿನಿಂದ ಇಂದಿನವರೆಗೆ . . . ಇಷ್ಟಾರ್ಥಗಳನ್ನು ಕೊಡುತ್ತಿರುವವರು ವಾದಿರಾಜರು (ಕಶಿ. ೦೬೧). [ಸಂ.]

**ಬೃಂದಾವನಿ** (ನಾ). [ಸಂಗೀತ] ಒಂದು ರಾಗದ ಹೆಸರು: ಬೃಂದಾವನಿಯು . . . ಸದಾಕಾಲವಲ್ಲಿಯೂ ಹಾಡುವಂತಹದು (ಶತುಕೃ. ೦೩೪). [ಸಂ. ಬೃಂದಾವನೀ ?]

**ಬೃಂದಿಗ** (ನಾ). (ಬಂಧುಗಳ) ಗುಂಪಿನಲ್ಲಿರುವವನು; ಕುಟುಂಬಿ : ಉಡುರಾಜಂ . . . ನೆಲಸ ವಿತ್ತಸ್ಥಾನದೊಳ್ ವಿತ್ತಮಂ ಪಡೆಗುಂ ಬೃಂದಿಗನಕ್ಕುಂ (ಜಾತಕ. ೦೬-೭). [ಬೃಂದ + —ಇಗ]

**ಬೃಂದಿಷ್ಠ** (ನಾ). ೧. ಅತಿಶಯವಾದ ಮನೋಹರತೆಯನ್ನುಳ್ಳದ್ದು : "ಬಹಳ ಮನೋಹರವಾದುದು ಬೃಂದಿಷ್ಠವು ಎಂದರ್ಥವಾಗುತ್ತದೆ" (ಸಿದ್ಧಾಂತ. ೩೩೩). ೨. ಅತ್ಯಂತ ಶ್ರೇಷ್ಠನಾದವನು : ಕಷ್ಟ ಭ್ರಷ್ಟ ಕನಿಷ್ಟ ದಕ್ಷವಿಳಸದ್ಭೂಯಿಷ್ಠಬೃಂದಿಷ್ಠ ನಾದಿಷ್ಠೋತ್ಕೃಷ್ಟನಿಜೇಷ್ಟದಾಧ್ವರಹರಂ . . . ರಕ್ಷಿಕ್ಕೆ ವಿಶ್ವೇಶ್ವರಂ (ಪಬಸ್ತುತಿ. ೦-೭). [ಸಂ.]

**ಬೃಂದೆ** (ನಾ). ೧. ತುಳಸಿಯ ಗಿಡ. ೨ = ಬೃಂದಾವನ ೧ : ಎರಡು ಎಲುಬಿನ ಗೂಡು, ಒಂದಾದೊಡನೆ ನೋಡು, ಹಿಂದಿನಾ ಸುಡುಗಾಡು ಬೃಂದೆ ಜಾಯ್ತು (ಶಾಂಕವ. ೬೧-೧೬). ೩. ಕಾಲನೇಮಿಯೆಂಬ ರಾಕ್ಷಸನ ಮಗಳು ; ಜಲಂಧರ ರಾಕ್ಷಸನ ಹೆಂಡತಿ: ೪. ವಿಷ್ಣುಭಕ್ತನಾದ ಕೇದಾರರಾಜನ ಮಗಳು. ೫. ರಾಧೆಯ ಹದಿನಾರು ಹೆಸರುಗಳಲ್ಲಿ ಒಂದು. [ಸಂ. ಬೃಂದಾ]

**ಬೃಂಹಿತ** (ನಾ). ಆನೆಯ ಘೀಳು : "ಬೃಂಹಿತವೆಂದು ವಾರಣ ಶಬ್ದಿತಂ" (ಅಭಿ.ಕೋ. ೬೦-೩೭): ಆ ವಿಜಯಪ್ರಯಾಣಭೇರೀನಿನಾದಮಂಭೋಭಾರಗಂಭೀರಾಂಭೋಧರಸ್ತನಿತ ಬಹಳಸ್ನಿಗ್ಧಂಗಳಪ್ಪ ಮದಸ್ತಂಬೇರಮ ಬೃಂಹಿತಂಗಳಿಂದಂ . . . ಸಂದಣಿಸಿ (ಆದಿಪು. ೦೩-೬೩ ವ) ; ಕರಿ ಮುಗಿಲ ಮೊಳಗಂ ಮಸುಳಿಸಿ ಪೊಣ್ಮಿತ್ತು ಬೃಂಹಿತಂ ಕಾನನದೊಳ್ (ಶಂಕಾಪಾ. ೦೦-೦೩೭) : ಒಂದು ಕಡೆಯಲಿ ತಪಿಗಳಬ್ಬರ ಒಂದು ಕಡೆಯಲಿ ರಥದ ಚೀತ್ಕೃತಿ ಕರಿಯ ಬೃಂಹಿತವು (ಕೌರವ. ೨೫-೦೦). [ಸಂ.]

**ಬೃಂಹಿತಂಗೆಯ್** (ಕ್ರಿ). ಘೀಂಕಾರ ಮಾಡು: ಘೀಳಿಡು : ದಿಕ್ಕುಂಭಿಗಳ್ಕೆ ಬೃಂಹಿತಂಗೆಯ್ವುಂಗಡಿಗಳನಗೆದು ಪೊಯ್ವು ಮಾಮಸಕಂ ಮಸಗಿ ಕೋಲಾಹಲಂನೆಸಗಿ . . . ಮೆಟ್ಟಿ ಸಿಳ್ಳ ಕಟ್ಟುಬ್ಬಟೆಯ ದುಷ್ಟಂಜಂಗಳಂ (ರಾಜಶೇ. ೬-೦೦ ವ). [ಬೃಂಹಿತ + ಕೆಯ್₁]

**ಬೃಂಹಿತಧ್ವನಿ** (ನಾ). ಆನೆಯು ಘೀಳಿಡುವ ಶಬ್ದ : ಮದಗಜಬೃಂಹಿತಧ್ವನಿ ತುರಂಗಮ ಹೇಷಿತಘೋಷ[ಮಾ]ದಮೊರ್ಮೊದಲೆ ಪಯೋಧಿಮಂಥನಮಹಾರವಮಂ ಗೆಲೆ (ಶಂಕಪಾ. ೩-೩೯); ರಣವಾಜಿವಂತಿಗಳ ಹೇಷಾರವಂಗಳಂ ಬೃಂಹಿತಧ್ವನಿಗಳಂ . . . ರಣಶಿಬಿರಮೆಸೆದತ್ತು (ಶಶ್ಯಾಂಗ. ೦೬-೯೭೩). [ಸಂ.]

**ಬೃಂಹಿತೆ** (ನಾ). = ಬೃಂಹಿತ : ಕರಿಯ ಬೃಂಹಿತ ಕೇಳಿ ಮದದಿಕ್ಕರಿಗಳಜಿಚಿದವು (ಕೌರವ. ೪೦-೯). [ಸಂ. ಬೃಂಹಿತ]

**ಬೃಂಹಿಸು** (ಕ್ರಿ). = ಬೃಂಹಿತಂಗೆಯ್: ಸಿಂಹನಾದಕೆ ಸೆಡೆದತ್ತಿತ್ತ ಕದಲುತ ಬೃಂಹಿಸುವಾನೆಯೊಡ್ಡಿನೊಳು ಸಿಂಹಪರಾಕ್ರಮನಿದಿರೆದ್ದು ಕಂಡನು (ಭರತ. ೨೨-೨೬). [(ಸಂ. ಬೃಂಹಣ) + — ಇಸು₁]

**ಬೃಗ** 'ಭಿಕರ್ಣ₂' ನೋ.

**ಬೃಸಿ** (ನಾ). ಯೋಗಿಗಳ ಆಸನ: "ವ್ರತಿಗಳ ಆಸನವು ಬ್ರುಸಿ (ಬೃಸಿ) ಯೆಂಬುದು" (ಶಠಾರಚು. ೬೯-೨೫೭) : ಈ ವಿಧದಿ ರಘುವರನ ತಪನ ವಂಶೋತ್ತಮನ ಪ್ರೀತಿಯಿಂ ಸಂಗ್ರಹಿಸಿ ಬೃಸಿಯ ಮಧ್ಯದಿ ಮಂಡಿಸಿ (ವೆಂಕಾರಾ. ೦-೦೩-೩೯). [ಸಂ. ಬೃಸೀ]

**ಬೃಹಂದಳೆ** (ನಾ). ಪಾಂಡವರ ಒಂದು ವರ್ಷ ಅಜ್ಞಾತವಾಸದ ಕಾಲದಲ್ಲಿ ವಿರಾಟರಾಜನ ಆಸ್ಥಾನದಲ್ಲಿ ನಾಟ್ಯಾಚಾರ್ಯನಾಗಿ ನಪುಂಸಕ ವೇಷದಲ್ಲಿದ್ದ ಅರ್ಜುನನ ಹೆಸರು: ರಂಭೆ . . . ಒಂದಬ್ಬದೊಳೆ ಬೃಹಂದಳೆಯಾಗೆಂದು ಮುನಿದು ಶಾಪವನಿತ್ತಳ್ (ಶಂಪಠ. ೯-೨೯); ಕೇಳಿರೆ ಕಂಕಭಟ್ಟನೆ ಯುಧಿಷ್ಠಿರಂ . . . ಬಾಳೆಯುರಂ ದಲಾಡಿಪ ಬೃಹಂದಳೆ ಫಲ್ಗುಣಂ (ಶಂಪಠಾ. ೯-೬). [< ಸಂ. ಬೃಹನ್ನಲಾ]

**ಬೃಹಚ್ಚರಣ** (ನಾ). ದೊಡ್ಡದಾದ ಪಾದವುಳ್ಳವನು : ಬೃಹಚ್ಚರಣಂ ಸ್ಥೂಲಾಂಗಂ ಸೂಕರವದನಂ ಕರ್ಕಟಾದಿಮದ್ರೇಕ್ಕಾಣಂ (ಜಾತಕ. ೦೯-೦೦). [ಸಂ.]

**ಬೃಹತಿ** (ನಾ). ೧. ಅಧಿಕವಾದುದು : ಹೆಚ್ಚಾದುದು. ೨. ದೊಡ್ಡದಾದ ವೀಣೆ. ೩. ನಾರದನ ವೀಣೆ. ೪. ಹೆಗ್ಗುಳ್ಳದ ಗಿಡ : "ಗುಳ್ಯಂ ಬೃಹತಿಯಕ್ಕುಂ" (ಶಬ್ದಗಾ. ೩೯-೨೯). ೫. ಶಲ್ಯ ; ಉತ್ತರೀಯ : "ಬೃಹತೀ, ೧ ರಾಮಗುಳ್ಳದ ಗಿಡ, ಪಾದ ೧೬ಕ್ಕೆ ೯ ಅಕ್ಷರಗಳುಳ್ಳ ಛಂದಸ್ಸು, ಅಧಿಕವಾದ್ದು, ಉತ್ತರೀಯ" (ಸಿದ್ಧಾಂತ. ೩೯೩). ೬. ಮಾತಂ; ನುಡಿ. ೭. ವೇದ. ೮. [ಛಂದ] ಪ್ರತಿಯೊಂದು ಪಾದದಲ್ಲಿ ಒಂಬತ್ತು ಅಕ್ಷರಗಳಿರುವ ಒಂದು ಸಮವೃತ್ತ : ಇಪ್ಪತ್ತಾರು ಬಗೆಯ ಅಕ್ಷರಛಂದಸ್ಸಿನಲ್ಲಿ ಒಂಬತ್ತನೆಯದು: ಉಕ್ತೆ ಅತ್ಯುಕ್ತೆ ಮಧ್ಯ ಪ್ರತಿಷ್ಠೆ ಸುಪ್ರತಿಷ್ಠೆ ಗಾಯತ್ರಿ ಉಷ್ಣಿಕ್ ಅನುಷ್ಟುಪ್ ಬೃಹತಿ . . . ಉತ್ಕೃತಿ—ಎಂದಿಪ್ಪತ್ತಾರು ಛಂದಂಗಳಕ್ಕುಂ (ಛಂದೋಂಬು. ೦-೯೭). ೯. [ತತ್ತ್ವಶಾ] ಪರಮಾತ್ಮ ; ಪರಬ್ರಹ್ಮ : ಆದ್ಯಂತ ೭೨ ಸಾವಿರ ನಾಡಿಗತ ದೇವತೆಗಳಲ್ಲಿಯೂ ನಾಡಿಗಳಲ್ಲಿಯೂ ತಚ್ಛಬ್ದವಾಚ್ಯನಾಗಿದ್ದುದರಿಂದ ಬೃಹತೀ ಎಂಬ ನಾಮವು ಶ್ರೀಪರಮಾತ್ಮನಿಗೆ ಪ್ರಾಪ್ತವಾದುದು (ಹಕಾರ. ೪-೩ ತಾತ್ಪರ್ಯ). [ಸಂ. ಬೃಹತೀ]

**ಬೃಹತಿಕೆ** (ನಾ). ಹೊದೆಯುವ ವಸ್ತ್ರ; ಶಲ್ಯ; ಉತ್ತರೀಯ : "ವೈಕಕ್ಷ್ಯಂ, ಉತ್ತರಾಸಂಗಃ, ಬೃಹತಿಕಾ—ಈ ೩ ಉತ್ತರಾಸಂಗಂ" (ಶಠಾರಚು. ೬೯-೨೫೭). [ಸಂ. ಬೃಹತಿಕಾ]

**ಬೃಹತೀಫಲ, ಬೃಹತೀಫಳ** (ನಾ). ಹೆಗ್ಗುಳ್ಳದ ಕಾಯಿ: ಊರ್ಮಿನೆರ್ದೆ ಯೊಡೆದು ಬೃಹತೀಫಲಜನು ಪಚ್ಚಿದಂತಾದುದು (ಶಂಖಕ. ೪೯-೨೦). ಬೃಹತೀಫಳ: ಸ್ವಯಂಪತಿತ ಸಾರವಪ್ಪಫಳಬೀಜಮಂ ಕೊಂಡು . . . ಬೃಹತೀತ(ಫ)ಳ ಕ್ಷಾರವಾರಿಯೊಳ್ ಪುದಿದುಕೊಂಡು ಧೂಪಿಸಿ ವಿಳಂಗದಂ ತಾಪ್ಪದಿಂ (ಕಾಕೋಪ. ೩-೬). [ಸಂ.]

**ಬೃಹತೀಫಳ** 'ಬೃಹತೀಫಲ' ನೋ.

**ಬೃಹತ್ಕಥೆ** (ನಾ). ೧. ದೊಡ್ಡ ಕಥೆ : ಈ ಮುಖ್ಯವಾದ ಆಖ್ಯಾನವೇ ಅನೇಕ ಉಪಾಖ್ಯಾನಗಳನ್ನೊಳಗೊಂಡು ಒಂದು ಬೃಹತ್ಕಥೆಯಾಗಿದೆ (ಭಾರತ. ೦೦೦). ೨. ಸಂಸ್ಕೃತದಲ್ಲಿ ಗುಣಾಢ್ಯನೆಂಬ ಕವಿಯಿಂದ ರಚಿತವಾದ ಒಂದು ಕೃತಿ : ಬೃಹತ್ಕಥೆಯ ಆಧಾರದ ಮೇಲೆ ಬರೆದುವು —ಸ್ವಪ್ನವಾಸವದತ್ತ, ಪ್ರತಿಜ್ಞಾಯೌಗಂಧರಾಯಣ, (ಬಹುಶಃ) ಅವಿಮಾರಕ, ಚಾರುದತ್ತ (ಶಂಪಾಟ. ೭೩). [ಸಂ. ಬೃಹತ್ಕಥಾ]

**ಬೃಹತ್ಕರಿಸು** (ಕ್ರಿ). ದೊಡ್ಡದಾಗಿ ಮಾಡು : ಮ್ಯಾಕ್‌ಡೂಗಲ್ಲನು ಹೇಳುವಂತೆ ಮಿದುಳನ್ನು ಬೃಹತ್ಕರಿಸಿ . . . ಆಧುನಿಕಯಂತ್ರಗಳ ಸಮೇತ ಇಟ್ಟು (ಮುಕ್ತ. ೨೩). [(ಸಂ. ಬೃಹತ್ಕರಣ) +‒ಇಸು೩]

**ಬೃಹತ್ತು** (ಗು). ೧. ದೊಡ್ಡದಾದ ; ಗಾತ್ರವಾದ : ಗುರುಗಾತ್ರ ಭವ್ಯದಿಂ ಪರ್ವತಸಹೋದರತೆಯಾಂತುದು ವಿಯಚ್ಚುಂಬಿಭೈರವಬೃಹತ್ತ ರುಪರಂ (ಶ್ರೀರಾಮಾ. ೫೫೬‒೬೮೨). (ನಾ). ೨. ದೊಡ್ಡದಾದುದು; ಹಿರಿದಾದುದು: "ಬೃಹತ್, ಉರು, ಗುರು, ವಿಸ್ತೀರ್ಣಂ . . . ಭದ್ರಂ, ವರಿಷ್ಠಂ — ಈ ೧೨ ಹಿರಿದು" (ಹಲಾಯು. ೦೦೬‒೦೯); ಮಹದಾದಿಗಣಕ್ಕೆ ನಪುಂಸಕಲಿಂಗದಲ್ಲಿ ಪ್ರಥಮೈಕವಚನದ ಮೇಲೆ ದ್ವಿತ್ವದಿಂ ಉತ್ತ್ವಮಕ್ಕುಂ ಮಹತ್ತು, ಬೃಹತ್ತು, ಪ್ರಾಕ್ಕು, ಅವಾಕ್ಕು, ಸಮ್ಯಕ್ಕು...ಎಂಬಂತೆ (ಶಮದ. ೯೬ ಅ೨೬). ೩. ವಿಶಾಲವಾದುದು; ವಿಸ್ತಾರವಾದುದು. ೪. ಅಧಿಕವಾದುದು; ಹೆಚ್ಚಾದುದು. ೫. ಬಲವಾದುದು; ಶಕ್ತಿ ಯುತವಾದುದು. ೬. ಒತ್ತಾದುದು ; ಸಾಂದ್ರವಾದುದು. ೭. ಪೂರ್ಣವಾಗಿ ಬೆಳೆದುದು. ೮. (ಶಬ್ದದಂತೆ) ಜೋರಾದುದು. [ಸಂ. ಬೃಹತ್]

**ಬೃಹತ್ಸಂಹಿತೆ** (ನಾ). ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಿಸಿದ ವರಾಹಮಿಹಿರನ ಒಂದು ಕೃತಿ : ಸ್ತ್ರೀಯರ ವಿಷಯದಲ್ಲಿ ಬಹುಉದಾರವಾದ ಭಾವನೆಯನ್ನು ವ್ಯಕ್ತಪಡಿಸಿರುವವರಲ್ಲಿ ಬೃಹತ್ಸಂಹಿತೆಯ ಕರ್ತೃ ವರಾಹಮಿಹಿರನು ಅಗ್ರೇಸರನು (ಕಣಾಅ. ೯೨೬). [ಸಂ. ಬೃಹತ್ಸಂಹಿತಾ]

**ಬೃಹದಾಕಾರ** (ನಾ). ದೊಡ್ಡ ಆಕಾರ; ಹಿರಿಯ ಗಾತ್ರ : ಬೃಹದಾಕಾರ ಉಳ್ಳವೂ . . . ಹಾಸಿನ ಮೇಲೆ ಹೊರಳಾಡುವುವೂ ಕಂಪಿಸುವುವೂ ಆದ ಪಗಡೆದಾಳಗಳು ನನ್ನನ್ನು ಸಂತೋಷಗೊಳಿಸುತ್ತವೆ (ಶುಕ್ಲಾರ. ೩೦೩) : ಹಲವಾರು ಪ್ರಶ್ನೆಗಳ ಮಾಲೆ ಒಮ್ಮೆಲೆ ಕಾಣಿಸಿಕೊಂಡು ಈ ಸಮಸ್ಯೆಯ ಬೃಹದಾಕಾರವನ್ನೂ ಜಟಿಲತೆಯನ್ನೂ ತೋರಿಸುತ್ತದೆ (ದ್ರಾಶಿಶಿ. ೨೦). [ಸಂ.]

**ಬೃಹದಾರಣ್ಯಕ** (ನಾ). ದಶೋಪನಿಷತ್ತುಗಳಲ್ಲಿ ಒಂದು; ಶತಪಥ ಬ್ರಾಹ್ಮಣದ ಕಡೆಯ ಆರು ಪ್ರಪಾಠಕಗಳೆಂಬ ಭಾಗಗಳನ್ನೊಳಗೊಂಡ, ಯಜುರ್ವೇದದ ಕಾಣ್ವಶಾಖೆಗೆ ಸಂಬಂಧಿಸಿದ ಉಪನಿಷತ್ತು : ಬೃಹದಾರಣ್ಯಕದಲ್ಲಿ ಯಾಜ್ಞವಲ್ಕ್ಯನಿಗೂ ಗಾರ್ಗಿಗೂ ನಡೆದ ಚರ್ಚೆ ಪ್ರಸಿದ್ಧವಾದುದು (ಕಣಾಅ. ೨೩೯) : ಯಜುರ್ವೇದದ ಕಾಣ್ವ ಶಾಖೆಯ ಶತಪಥಬ್ರಾಹ್ಮಣದ ಕಡೆಯ ಕೆಲವು ಅಧ್ಯಾಯಗಳೇ ಬೃಹದಾರಣ್ಯಕ (ಭಾರತ. ೩೮). 'ತೈತ್ತಿರೀಯ' ಪರಾ. [ಸಂ.]

**ಬೃಹದ್ಗ್ರಂಥ** (ನಾ). ದೊಡ್ಡ ಕೃತಿ,—ಹೊತ್ತಗೆ : ಎರಡು ಮೂರು ವರುಷಗಳ ಕೆಳಗೆ ಹೊರಬಂದ ಭದ್ರಿರಾಜು ಕೃಷ್ಣಮೂರ್ತಿಯವರು ಬರೆದ ತೆಲುಗುಭಾಷೆಯ ಮೂಲ ಧಾತುಗಳು ಎಂಬ ಬೃಹದ್ಗ್ರಂಥ ಅಮೂಲ್ಯ ಕಾಣಿಕೆ (ದ್ರಾಶಿಶಿ. ೨). [ಸಂ.]

**ಬೃಹದ್ಭಾಗ್ಯ** (ನಾ). ಅತಿಶಯವಾದ ಐಶ್ವರ್ಯ : ಧರ್ಮಂ ವಿಶ್ರುತ ಸಶ್ರುತಾತಿಶಯಮಂ ಧರ್ಮಂ ಬೃಹದ್ಭಾಗ್ಯಮಂ . . . ಧರ್ಮಂ ಧಾರ್ಮಿಕ ನಪ್ಪವಂಗೆ ಕುಡುಗುಂ ನಿರ್ವಾಣಕಲ್ಯಾಣಮಂ (ಸುಕುಮಾ. ೬‒೯೨). [ಸಂ.]

**ಬೃಹದ್ಭಾನು** (ನಾ). ೧. ಬೆಂಕಿ; ಅಗ್ನಿ : "ಸಪ್ತಾರ್ಚಿಃ, ದಮುಲಃ . . . ಬೃಹದ್ಭಾನುಃ, ಆಶ್ರಯಾಶಃ . . . ಹುತಾಶನಃ—ಈ ೪೦ ಕಿಚ್ಚಿನ ಪೆಸರ್" (ಹಲಾಯು. ೦೨‒೬೨): ಮಹಾತೇಜನಾಗಿರ್ಪುದರಿಂದ ಬೃಹದ್ಭಾನುವೆಂದು ಹೆಸರು (ಭಾರತಂ. ೯೩). ೨. ಸೂರ್ಯ. ೩. ವಿಷ್ಣುವಿನ ಹೆಸರು. ೪. ಹರಳಂಗಿಡ. [ಸಂ.]

**ಬೃಹದ್ರಥ** (ನಾ). ೧. ದೊಡ್ಡ ರಥ : ರಥದಿಂದಂ ಮುಂಚೆ ಮನೋರಥಂ ಮನೋರಥದಿನೆತ್ತಲದು ಮುಂಚಿ ಬೃಹದ್ರಥದಿಂತು ಭರತರಾಜನ ರಥದ ಮನೋರಥದ ಬೇಗಮೊದಮಿದುದಾಗಳ್ (ಆದಿಪು. ೦೨‒೮೦). ೨. ಇಂದ್ರ. ೩. ಮಹಾಭಾರತದಲ್ಲಿ ಬರುವ ಒಬ್ಬ ರಾಜನ ಹೆಸರು; ಜರಾಸಂಧನ ತಂದೆ. ೪. ಶಕ್ತಿಶಾಲಿಯಾದ ನಾಯಕ. ೫. ಸಾಮ ವೇದದ ಒಂದು ಭಾಗ. [ಸಂ.]

**ಬೃಹನ್ನಡೆ** (ನಾ). =ಬೃಹಂದಳೆ : ನಾನು ಕಿವಿಗಳಲ್ಲಿ ಕುಂಡಲಗಳನ್ನಿಟ್ಟು ಜಡೆ ಹೆಣೆದುಕೊಂಡು ಬೃಹನ್ನಡೆಯೆಂಬ ಹೆಸರಿನಿಂದ ರಾಜನ ಅಂತಃಪುರದ ಜನರಿಗೆ ಕಥೆಹೇಳುತ್ತ ಗೀತನೃತ್ಯಗಳನ್ನು ಹೇಳಿಕೊಡುತ್ತ ಕಾಲ ಕಳೆಯುತ್ತೇನೆ (ವಕಥಾ. ೦೯೩). [ಸಂ. ಬೃಹನ್ನಡ]

**ಬೃಹನ್ನಳೆ** (ನಾ). =ಬೃಹಂದಳೆ : ಹಿಂದುಗಳೆಯದೆ ಕರೆಸು ನಮ್ಮ ಬೃಹನ್ನಳೆಯನು (ಕುಮ್ಯಾಶಿ. ೫‒೬೦). [ಸಂ. ಬೃಹನ್ನಲ, ಬೃಹನ್ನಲಾ]

**ಬೃಹವಾರ** (ನಾ). ಬೃಹಸ್ಪತಿವಾರ ; ಗುರುವಾರ : [ಶ್ರೀ][ಮ] ಚಾಳುಕ್ಯವಿಕ್ರಮ[ವ]ರ್ಷದ ೨೬ನೆಯ ವಿಷ[ಸಂ]ವತ್ಸರದ ಕಾರ್ತ್ತಿಕ ಸು ೮ ಬೃಹವಾರದಂದು (ಶಾಂದೀಶ್. ೦೨‒೬ ; 1101). [<ಸಂ. ಬೃಹಸ್ಪತಿವಾರ]

**ಬೃಹಸ್ಪತಿ** (ನಾ). ೧. ಅಂಗಿರಸನ ಮಗ; ದೇವತೆಗಳ ಗುರು; ವಾಚಸ್ಪತಿ: "ವಾಚಸ್ಪತಿಃ, ಆಂಗಿರಸಃ, ಬೃಹಸ್ಪತಿಃ, ಗುರುಃ...ಚಿತ್ರಶಿಖಂಡಿಪ್ರಸೂತಿಃ (ಕಥ್ಯತೇ)—ಈ ೮ ಬೃಹಸ್ಪತಿಯ ಪೆಸರ್" (ಹಲಾಯು. ೯‒೯೭) ; ಭಾರತೀಯಪುರಾಣಗಳಲ್ಲಿ ಬೃಹಸ್ಪತಿಯೇ ಸಕಲದೇವತೆಗಳಿಗೂ ಪುರೋಹಿತ ನೆಂದು ಹೇಳಿದೆ (ಜ್ಯೋತಿರ್. ೦೨೯). ೨. ಮೂವತ್ತಾರು ಜನ ಸ್ಮೃತಿ ಕಾರರಲ್ಲಿ ಒಬ್ಬಾತನ ಹೆಸರು ; ▶ "ಸ್ಮೃತಿಕಾರರು—೩೬ : ಮನು, ವಿಷ್ಣು, ಯಮ, ದಕ್ಷ, ಅಂಗಿರಸ್ಸು, ಅತ್ರಿ, ಬೃಹಸ್ಪತಿ, ಆಪಸ್ತಂಬ, ಉಶನಸ್ಸು, ಕಾತ್ಯಾಯನ, ಪರಾಶರ, ವಸಿಷ್ಠ, ವ್ಯಾಸ, ಸಂವರ್ತ, ಹಾರೀತ, ಗೌತಮ, ಪ್ರಚೇತ, ಶಂಕ, ಲಿಖಿತ, ಯಾಜ್ಞವಲ್ಕ್ಯ, ಕಾಶ್ಯಪ, ಶಾತಾತಪ, ಲೋಮಶ, ಜಮದಗ್ನಿ, ಪ್ರಜಾಪತಿ, ವಿಶ್ವಾಮಿತ್ರ, ಪೈಠೀನಸೀ, ಬೌಧಾಯನ, ಪಿತಾಮಹ, ಛಾಗಲೇಯ, ಜಾವಾಲೀ, ಮರೀಚಿ, ಚ್ಯವನ, ಭೃಗು, ಋಷ್ಯಶೃಂಗ, ನಾರದ" (ಶ್ರೀವತ್ಸ. ೫೦೩) : ಬೃಹಸ್ಪತಿಯ ಅಭಿಪ್ರಾಯಗಳೂ ಯಾಜ್ಞವಲ್ಕ್ಯನ ಅಭಿಪ್ರಾಯಗಳನ್ನೇ ಬಹುಮಟ್ಟಿಗೆ ಹೋಲುತ್ತವೆ (ಕಣಾಅ. ೦೯). ೩. [ಜ್ಯೋತಿ] ಸೌರವ್ಯೂಹದಲ್ಲಿಯ ಅತಿದೊಡ್ಡ ಗ್ರಹ ; ಗುರುಗ್ರಹ : ಬೃಹಸ್ಪತಿಯು ಅತಿವೇಗದೊಡನೆ ತನ್ನ ಸುತ್ತಲೂ ತಾನೇ ಹತ್ತು ಗಂಟೆಗಳಿಗೆ ಕಡಿಮೆಯಾದ ಕಾಲದಲ್ಲಿ ತಿರುಗುತ್ತದೆ (ಜ್ಯೋತಿರ್. ೦೩೦). ೪. [ಸಂಗೀತ] ಒಂದು ರಾಗದ ಹೆಸರು : ಕೌಶಿಕೆ, ವೇಳಾವಳಿ . . . ಬೃಹಸ್ಪತಿ . . . ಶಯಸೋದರಿಯೆಂಬ ಮೂವತ್ತುನಾಲ್ಕು ಭಾಷಾಂಗದಿಂದಾದ ರಾಗಂಗಳು (ಬಿವೇಕ. ೦೮೯). [ಸಂ.]

**ಬೃಹಸ್ಪತಿಮತ** (ನಾ). ಬೃಹಸ್ಪತಿಯ ಮತ ; ಚಾರ್ವಾಕ ಮತ ; ನಿರೀಶ್ವರವಾದ: ಬೃಹಸ್ಪತಿಮತಾನುಸಾರಿಯಪ್ಪ ಮಹಾಮತಿ ನುಡಿದು (ಆದಿಪು. ೨‒೯ ವ); ಆ ನೆವದಿಂದಂ ಶ್ರಾವಕಮಾನಿಗಳನನೇಕವಿಧದಿನುಪಜೀವಿಪರಜ್ಞಾನಿಗಳ ಬುದ್ಧಿಪೌರುಷಹೀನಮಜೇವಿಕ್ರತಂ ಬೃಹಸ್ಪತಿಮತದೊಳ್ (ಶಾಂತಿಪು. ೯‒೦೩೦). 'ಲೋಕಾಯತಿಕ ಮತ' ಪರಾ. [ಸಂ.]

**ಬೃಹಸ್ಪತಿವಾರ** (ನಾ). ಬೃಹಸ್ಪತಿಯು ಅಧಿಪತಿಯಾಗಿರುವ, ವಾರದ ಐದನೆಯ ದಿನ ; ಗುರುವಾರ : ಪ್ರತಿ ಬೃಹಸ್ಪತಿವಾರ ಹುಣಸೂರಿನಲ್ಲಿ ವಿಶೇಷದಿನ (ಸರ್ವಮಂ. ೩೯). [ಸಂ.]

**ಬೆ** (ನಾ). [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಬೆ, ಬೆನ್ನಿ, ಯಮ, ನಯನ . . . ದಂಪತಿ ಇಂತಿನಿತುಂ ೨ಕ್ಕೆ ಪೆಸರು" (ವ್ಯವಹಾ. ೦೦‒೧೦). [ ? ]

**ಬೆಂ₁** 'ಬೆನ್' ನೋ.

**ಬೆಂ₂** 'ಬಿಸಂ₂' ನೋ.

**ಬೆಂಕಟ್ಟು** (ನಾ). ಕಟ್ಟಡದ ಸೂರಿನ ಮೇಲುತುದಿ: ಎರಡೂ ಕಡೆಯ ಹೆಂಚುಗಳ ಹಂದರಗಳು (ಪಾರುಗಳು) ಕೂಡುವ ಭಾಗ : ಹಂಚು ಹೊಚ್ಚಿ ಬೆಂಕಟ್ಟಿನ ಮೇಲೆ ತಲೆಹಂಚು ಹಾಕುತ್ತಾರೆ (ಮುಂಬಯಿ. ೪-೦೦೮). [ಬೆಂ₁ (<ಬೆನ್) + ಕಟ್ಟು₂]

**ಬೆಂಕಿ** 'ಬೆಂಕೆ' ನೋ.

**ಬೆಂಕಿಕಡ್ಡಿ** (ನಾ). ಗೀರಿದರೆ ಉರಿ ಬರುವಂತೆ, ತುದಿಯಲ್ಲಿ ರಂಜಕಾಂಶವನ್ನು ಮೆತ್ತಿರುವ ಕಡ್ಡಿ; ದೀಪದ ಕಡ್ಡಿ : ಬೆಂಕಿಕಡ್ಡಿ : ಒರಟು ಮೈಮೇಲೆ ತುಸು ಒತ್ತಡ ಹೇರಿ ಉಜ್ಜಿದಾಗ ಸುಲಭವಾಗಿ ಬೆಂಕಿ ಹೊತ್ತುವ ರಾಸಾಯನಿಕ ಲೇಪಿತ ತುದಿಯುಳ್ಳ ಮರದ ಕಡ್ಡಿ (ಕವಿಕೋ. XII, ೦೮೪). [ಬೆಂಕಿ (<ಬೆಂಕೆ) + ಕಡ್ಡಿ]

**ಬೆಂಕಿಗಣ್ಣು** 'ಬೆಂಕೆಗಣ್' ನೋ.

**ಬೆಂಕಿಗೆಳೆಯ** (ನಾ). ಬೆಂಕಿಯ ಸ್ನೇಹಿತ; ಅಗ್ನಿಸಖ ; ವಾಯು: ಬೆಂಕಿಗೆಳೆಯನ ಸುತಂ ತನ್ನಿಷ್ಟಲಿಂಗದಿರವಂ ಕಾಣದಂಗದೊಳು ಸಾಪೊಡಮುಪ್ಪುಗಿಸೆ (ರಾಶಿಕ. ೬-೬೨). [ಬೆಂಕಿ (<ಬೆಂಕೆ) +ಗೆಳೆಯ (<ಕೆಳೆಯ)]

**ಬೆಂಕಿಪಟ್ಟಣ** 'ಬೆಂಕಿಪೊಟ್ಟಣ' ನೋ.

**ಬೆಂಕಿಪೆಟ್ಟಿಗೆ** (ನಾ). ಬೆಂಕಿಕಡ್ಡಿಗಳಿರುವ ಪೊಟ್ಟಣ ; ಬೆಂಕಿಪೊಟ್ಟಣ; ಕಡ್ಡಿಪೆಟ್ಟಿಗೆ : ಅವರು ದೀಪಹಚ್ಚಲು ಬೆಂಕಿಪೆಟ್ಟಿಗೆ ತಂದರು (ರೂಢಿ). [ಬೆಂಕಿ (<ಬೆಂಕೆ) + ಪೆಟ್ಟಿಗೆ]

**ಬೆಂಕಿಪೊಟ್ಟಣ, ಬೆಂಕಿಪಟ್ಟಣ** (ನಾ). = ಬೆಂಕಿಪೆಟ್ಟಿಗೆ : ಸಮಯಕ್ಕೆ ಅಂತ ಮೋಂಬತ್ತಿ, ಬೆಂಕಿಪೊಟ್ಟಣ ಎರಡನ್ನೂ ಇರಿಸಿರುವರು (ತಂಗಾಳಿ. ೦೪೦); ಬೆಂಕಿಪೊಟ್ಟಣದ ಕಾರ್ಖಾನೆಯೊಂದು ವಿಶೇಷಲಾಭ ಹೊಂದುತ್ತಿದ್ದರೂ ಕೆಲಸಗಾತಿಯರಿಗೆ ಬಹಳ ಕಡಿಮೆ ಸಂಬಳ ಕೊಡುತ್ತಿತ್ತು (ಸ್ವಾತೀರ. ೯೭). **ಬೆಂಕಿಪಟ್ಟಣ** : ಕಿಸೆಯಲ್ಲಿ ಬೀಡಿಕಟ್ಟು ಬೆಂಕಿಪಟ್ಟಣ ಬೇರೆ ಇರಬಹುದೊ ಏನೋ! (ಶೃಕ್ಷ. ೨೫). [ಬೆಂಕಿ (<ಬೆಂಕೆ)+ಪೊಟ್ಟಣ (<ಪೊಟ್ಟಳ)]

**ಬೆಂಕೆ, ಬೆಂಕಿ** (ನಾ). ೧. ಉರಿ ; ಕಿಚ್ಚು ; ಅಗ್ನಿ : "ನಿದಾಘಃ, ಘರ್ಮ್ಮ... ಈ ೨ ಬೆಂಕೆಯ ಪೆಸರ್" (ಶಬ್ದಮ. ೮-೪೦); ಭಟಾರರ್ . . . ಜ್ಯೇಷ್ಠ ಮಾಸದ ಬಿಸಿಲುಂ ಝಳಪಮುಂ ಬೆಂಕೆಯುಂ ಕಿಚ್ಚುಮಂ ಸೈರಿಸಿ . . . ಮೋಕ್ಷಕ್ಕೆ ಪೋದರ್ (ವಡ್ಡಾರಾ. ೦೦೪-೦೭); ಕವಿದಳ್ವರ್ ಬೆಂಕೆಯೊ[ಳಾ]ಡಿಸಿದರ್ ಮೊಗಮನಮರಸುಂದರಿಯರ್ಕಳ್ (ಶಂಕಶಾ. ೦೨-೦೮೬); ಸುರಸಿಂಧುವಂ ತಳೆದ ಶಂಭು ನಿಜಾಕ್ಷಿಯ ಬೆಂಕೆ ಸೋಂಕದಿರ್ದೊಡೆ ... ಎಂತು ನಿತ್ತರಿಪರೆಂಬನಿತಾದುದು ಮಾಘಡಂಬರಂ (ಕುಸೃಷ್ಟಿ. ೬-೩೦). ೨. ಉಷ್ಣ; ತಾಪ : ತಚ್ಛಶಿರಾಂತಶಿಲಾತಳಂ ಸಿಡಿಲ್ವುದೊಡದತ್ತಿದೇಂ ಬಿಸಿಯೋ ಬೇಟದ ಬೆಂಕೆ ಮೃಗಾಂಕವಕ್ತ್ರೆಯಾ (ಶಂಕಶಾ. ೫-೭); ಮುಖೇಂದು ಬಿಗುರ್ತಿರೆ ಸುಯ್ಯ ಬೆಂಕೆಯುಂ ನಿಡುಪಮಳುಂಬಮಪ್ಪಿನೆಗಂ ... ಪಲಪಾಡಿದರಂದಜಿತಂಗನಾಜನಂ (ಅಜಿಪು. ೬-೦೨೦); ಮುಯ್ಯ ಬಿಸುಪಿಂ ಸುಯ್ಯೆಲರ ಬೆಂಕೆಯಿಂ ವನಂ ಕೊರಗುತ್ತಮಿರೆ (ಶಂಬರ. ೦೨-೦೦೪). **ಬೆಂಕಿ** : ೧. ಗಜದ ದಂತದಂತೆ ಬೆಂಕಿಯುಷ್ಣದಂತೆ ... ಪಂಚಪರಮೇಷ್ಠಿಗಳೊಳಪ್ಪ ಪತ್ತುಗೆವೆರಸು (ರತ್ನಾಕ್ಮ. ೫-೦೨೫); ವಾದ್ಯಮಂ ಬಾಳಿಸಿ ಜಾರುವಂ ಬಿಸಿಲೊಳಿಕ್ಕುವ ಬೆಂಕಿಜೊಳೊಡ್ಡಿ ಕಾಸಿಕೊಂಡಾಳಿಸಿ ಸಂದುಕೋಲ ಸುಡಿಗಟ್ಟುವ . . . ಶಬರರ್ಕಳಿನೊಪ್ಪಿದುದೊಂದು ಪಕ್ಕಣಂ (ಕಾಸುಪುಪಾ. ೦೦-೦೪೬); ಅಂಕುರವಡೆದ ಪೂಗಿಡುವೃಕ್ಷ ಲತೆವೇರ್ಗೆ ಬೆಂಕಿಯು ಹರಿಹಿದಂತಾಯ್ತು (ಪೋಶತ. ೨೬-೩೦). ೨. ಕೊಳನಂ ಪುಗಿಸೆ ಮೆಯ್ಯ ಬೆಂಕಿಯಿಂ ಜುಯ್ಯೆಂದು ನೊರೆಗಟ್ಟಿ ಬಿಸಿಯ ತೆರೆ ತಾಮುರ್ಗ್ಗೆಟ್ಟಿ . . . ಕಾದ ನೀರ್ ಕಾಯುವಮಂ ಸುಡೆ (೧೧೪. ೪-೦೦೬ ಪ).

**ಬೆಂಕಿ ಉಗುಳು** = (ಅಲಂ) ಅತಿಯಾದ ಕೋಪವನ್ನು ತೋರು; ಬಹಳ ಕ್ರೋಧವನ್ನು ಸೂಚಿಸು : ಶಾನಭಾಗರು, ಶಾನಭಾಗರ ಮನೆಯವರು ಎಂದರೆ ಇಷ್ಟೊಂದು ಬೆಂಕಿ ಉಗುಳುತ್ತಾನಲ್ಲ ಮಾತಿನಲ್ಲಿ? (ಪೂರುಂಗ. ೬೮). **ಬೆಂಕಿ ಕಾರು** = ೧. ಬೆಂಕಿಯನ್ನು ಉಗುಳು,—ಹೊರಹಾಕು : ಅಗ್ನಿಪರ್ವತ ಬೆಂಕಿಕಾರಿ ನೂರಾರು ಜನರು ಸತ್ತರು (ರೂಢಿ). ೨. (ಅಲಂ) ತಾಪವನ್ನು ಹೆಚ್ಚುಮಾಡು : ಹುಡುಕಿದರು ಕಂದ ಸಿಗದಲ್ಲ ಎಂಬ ಸುದ್ದಿ ಕಿಡಿಕಿಡಿ ಬೆಂಕಿ ಕಾರಿತ್ತು (ಸಿದ್ಧಶ್ರೀ. ೪-೪೪). ೩. ಬಹಳ ಕೋಪವನ್ನು ತೋರು; ಸಿಟ್ಟಿಗೇಳು : ತಪ್ಪು ಮಾಡಿದ ಹುಡುಗರ ಮೇಲೆ ಮಾಸ್ತರರು ಬೆಂಕಿಕಾರಿದರು (ರೂಢಿ). **ಬೆಂಕಿಕೋಳಿ** = ಪಕ್ಷಿ ಜಾತಿಯಲ್ಲಿ ಅತಿ ದೊಡ್ಡದಾದ ಕೋಳಿ; ಉಷ್ಟ್ರಪಕ್ಷಿ ; P ಈ ಪಕ್ಷಿಯು ಬೆಂಕಿಯನ್ನು ನುಂಗಬಲ್ಲದೆಂಬ ನಂಬಿಕೆ ಪ್ರಚಾರದಲ್ಲಿದೆ : "ಉಷ್ಟ್ರಪಕ್ಷಿ ... ಬೆಂಕಿಕೋಳಿ" (Ostrich. ಇಂಕಾ). **ಬೆಂಕಿ ತೋರಿಸು** = ಬೆಂಕಿಯನ್ನು ಹಚ್ಚು; ಅಗ್ನಿಸ್ಪರ್ಶ ಮಾಡಿಸು : ಫಿರಂಗಿಯ ಮದ್ದಿಗೆ ಬೆಂಕಿತೋರಿಸಿದ ಸಮಯವನ್ನೂ ಅದರ ಆಸ್ಫೋಟನೆಯು ಕೇಳಿಬಂದ ಸಮಯವನ್ನೂ . . . ಪರಿಶೀಲಿಸಿ ಶಬ್ದದ ವೇಗವನ್ನು ಗಣಿತ ಮಾಡಿದರು (ಭೌತವಿ. ೦೪೦). **ಬೆಂಕಿ ಬೀಳು** = ಬೆಂಕಿ ತಗಲು ; ಅಗ್ನಿಸ್ಪರ್ಶವಾಗು : ಹುಲ್ಲುಮೆದೆಗೆ ಬೆಂಕಿಬಿದ್ದು ಸುಟ್ಟುಹೋಯಿತು (ರೂಢಿ). **ಬೆಂಕಿ ಹಚ್ಚಿಸು** = ಉರಿಯನ್ನು ಉಂಟುಮಾಡು : ಬೆಂಕಿಹಚ್ಚಿಸುತಿನ್ನು ನೀರಿಗೋಡಾಡುವಿರೆ? (ಹಪ್ಪರ. ೪೦-೬೦). **ಬೆಂಕಿ ಹಚ್ಚು** = ಬೆಂಕಿ ಹಚ್ಚಿಸು : ಕಾಜಿ ಬೆಂಕಿಹಚ್ಚಲು ಹೈಗೈ ಮಾಡಲಿಲ್ಲ (ಕೋಕಳಾ. ೩೬). **ಬೆಂಕಿಹತ್ತು** = ಉರಿತಗಲು; ಹತ್ತಿಕೊಳ್ಳು : ಗಡ್ಡಕ್ಕೆ ಬೆಂಕಿಹತ್ತಿದಾಗ ಬಾವಿ ತೋಡಲು ಹೊರಟರು (ಗಾದೆ). **ಬೆಂಕಿ ಹಾಕು** = ಬೆಂಕಿ ಹಚ್ಚಿಸು : ಅವರ ಮನೆಗೆ ಬೆಂಕಿ ಹಾಕಿ ಉರಿಸಿಬಿಡುತ್ತೇನೆ (ಅರ್ಜುಕ. ೨೬).

[ದೇ.॥ ತಮಿ. ವೆಕ್ಕೈ; ಮಲ. ತೆಲು. ವೆಕ್ಕ ; ತುಳು. ಬೇಂಕಿ]

**ಬೆಂಕೆಗಣ್, ಬೆಂಕಿಗಣ್ಣು** (ನಾ). ಜ್ವಾಲೆಯನ್ನು ಸೂಸುವ ಕಣ್ಣು; ಅಗ್ನಿಯನ್ನು ಕಾರುವ ನೇತ್ರ : ಈಶನ ಬೆಂಕೆಗಣ್ಣ ಬಾಧೆಯನೆನೆ ಶಾಂ ಮರ್ದಿಸಿದನಪ್ರತಿಮಮಲ್ಲರೆನಿಪ್ಪ ಮಲ್ಲರಂ (ಜಗಪು. ೬-೭೬); ಆ ದಾವಾಗ್ನಿ ಬೆಂಕೆಗಣ್ಗಳೆನೆ ಸಿಡಿದೇಳ್ವ ಕೆಂಗಿಡಿಗಳಿಂ ಸೂಸಿದುದು ತೋರ ಶಾರೆಯ ಕೆಂಡಧಾರೆಯಂ (ಶ್ರೀರಾಮಪಾ. ೦೨೭-೬೨೨). **ಬೆಂಕಿಗಣ್ಣು** : ಕೈ ಪಂಜುಗಳನೆ ಬೆಂಕಿಗಣ್ಣು ನಂಜೊಜ್ಜವಾಯ ಗೋದಣೆವಲ್ಲ ಭೂತಗಳ್ ಮುಂಜುಳವೆನೆ ನೆಗಹಿದುವು (ಪೋಶತ. ೨೪-೦೦). [ಬೆಂಕೆ + ಕಣ್]

**ಬೆಂಕೆವೆಟ್ಟು** (ನಾ). ಕುದಿಯುತ್ತಿರುವ ಲಾವಾರಸವನ್ನು ಉಗುಳುವ ಬೆಟ್ಟ; ಅಗ್ನಿಪರ್ವತ : ಬೆಂಕೆವೆಟ್ಟುಗಳೋಕರಿಸಿದುವು ಭಯಂಕರ ಯುಗಾಂತಕದ್ರಾವಾಗ್ನಿಯಂ (ಶ್ರೀರಾಮಪಾ. ೮೦೬-೦೯೬). [ ಬೆಂಕೆ + ಬೆಟ್ಟು₂ (< ಬೆಟ್ಟ) ]

**ಬೆಂಕೊಳ್** 'ಬೆಂಗೊಳ್' ನೋ.

**ಬೆಂಕೊಳಿಸು** (ಕ್ರಿ). ೧. ಹಿಂಬಾಲಿಸುವಂತೆ ಮಾಡು; ಅನುಸರಿಸುವಂತೆ ಮಾಡು : ಹರಣಮಂ ಕೂಡಿಕೊಂಡಿರ್ಪನಂ ತಳ್ತರದಾತ್ಮಪ್ರಾಣಮಂ ಬೆಂಕೊಳಿಸಿ ಬೆರಸಿದ್ದೆ (ವ್ಯಕಪು. ೨೪-೩೦). ೨. ಬೆನ್ನು ತೋರಿಸುವಂತೆ ಮಾಡು : ಓಡಿಹೋಗುವಂತೆ ಮಾಡು : 'ಆಹವದೊಳು . . . ಸಾಹಸದಿಂ ಪಡಲ್ವಿಡಿಸಿ ಬೆಂಕೊಳಿಸಿದ ಸೋಹಿಲ್ಲದಂತೆಂಟುಮೇಳೆ (ಗಿರಿಮ್ನಕ. ೬-೦೦೨). [ಬೆಂಕೊಳ್ (< ಬೆಂಗೊಳ್) + —ಇಸು₃]

**ಬೆಂಕೊಳು** 'ಬೆಂಗೊಳ್' ನೋ.

**ಬೆಂಗಟೆ** (ನಾ). ಮನೆಯ ಮೇಲೆ ಹೆಂಚು ಹೊದಿಸಲು ಸಿದ್ಧಪಡಿಸಿದ ಬಿದಿರಿನ ತಡಿಕೆ : ಕಾಣಿಸುತ್ತಿದೆ ಬಿಡಾರದ ಬೆಂಗಟೆಯಿಂದ ನೇತಾಡುತ್ತಿದ್ದ ಪಿಜಿಣನ ನಿಶ್ಚಲ ಕೃತಕಳೇವರ ! (ಮಲೆಮ. ೯೩೬). [ ? ]

**ಬೆಂಗಡೆ$_1$** (ನಾ). ೧. ಬೆನ್ನಿನ ಭಾಗ ; ಹಿಂಭಾಗ : ಹಿಂಬದಿ : ಹೊಂಗೆಜ್ಜೆ ಬಿಡುವಿಲ್ಲದ ಹೊನ್ನಂಡೆಗಾತಿಯರು ಬೆಂಗಡೆಯ ಸಾರಿದರು ರುಕ್ಮಿಣಿಯ (ನೇಮಿಚ. ೧೪-೬೦). ೨. ಹಿನ್ನೆಲೆ : ಆಡುವ ಮಾತಿನ ಬೆಂಗಡೆಯಲ್ಲಿ ಏನೋ ಅಪೂರ್ವರಹಸ್ಯ ಹುದುಗಿದೆ (೬೦ಬರ. ೨೮೩). ೩. (?). ರನ್ನನ ಪೆರ್ಮೆಡರ್ಗಳೋಳಗಳಳವಟ್ಟು ಬಿತ್ತರಿಪ ಮುತ್ತಿನ ಬೆಂಗಡೆಗಳ್ ಪೊದಟ್ಟು ಶೋಭೆಗೆ ನೆಲೆಯಾಗಿ ಕಂಗೊಳಿಪುದು (ಕಾಂತೀಶ. ೩-೦೨೦).

[ಬೆಂ$_1$ (<ಬೆನ್) + ಕಡೆ$_3$]

**ಬೆಂಗಡೆ$_2$** (ನಾ). ದೋಣಿಯನ್ನು ನಡೆಸುವ ಹುಟ್ಟು : "ಅರಿತ್ರಂ, ಕೇನಿಪಾತಕಃ — ನಾವೆನಡೆಸುವ ಹುಟ್ಟಿನ ಹೆಸರು. ಬೆಂಗಡೆಂದು ಎಂಬರು" (ಶಾಶಶಾ. ೦೦೦). [ಬೆಂ$_1$ (<ಬೆನ್) + ಗಡೆ$_1$ (<ಗಟೆ)]

**ಬೆಂಗದನಾಥ** (ನಾ). ಒಬ್ಬಾತನ ಹೆಸರು : ಸತ್ಯಶೌಚಶೀಲಾಚಾರಸಮ್ಪನ್ನ ಬೆಙ್ಗದನಾಥ ಶ್ರೀಮ[ತ್] ಪೊಮ್ಮಲ್ಲಪೊಡೆಯರ್ (ಎಕ. X, ಕೋಲಾರ. ೬೪-೯ ; 890). [< ಸಂ. ವೇಂಕಟನಾಥ]

**ಬೆಂಗದಿರ್** 'ಬಿಸುಗದಿರ್' ನೋ.

**ಬೆಂಗದಿರ** 'ಬಿಸುಗದಿರ' ನೋ.

**ಬೆಂಗದಿರು** 'ಬಿಸುಗದಿರ್' ನೋ.

**ಬೆಂಗದಿರುಗಲ್** (ನಾ). ಸೂರ್ಯಕಾಂತ ಶಿಲೆ : ಸರಸಿಜಾಳಿಯೊಳು ನೋಟಂ ಪತಿವಿರೋಧಕರೊಳುಜಿ ಚಿಂತೆ ಪಾಂಸುಲಾಪಂಕ್ತಿಯೊಳ್ ಸುಯ್ಯೆಂಗದಿರುಗಲ್ಲೊಳಂ ತಾಪ ವಿಕಳತೆಯುಲೂಕದೊಳ್ (ಪಂಪಭಾ. ೨೨-೯೬). [ಬೆಂಗದಿರು (<ಬಿಸುಗದಿರ್) + ಕಲ್$_3$]

**ಬೆಂಗರೆ** (ನಾ). (ಕರಾ) (ಬಿಳಿಯ ಮರಳಿನ) ಕಡಲಿನ ಕರೆ ; ಸಮುದ್ರದ ದಂಡೆ : ಹೊಳೆಯಿಂದಂ ಬಡಗಲು ಬೆಂಗರೆಯಿಂದಂ ಮೂಡಲು (ಸೌಇಂ. ೧೪೩೦, ಉಡುಪಿ. ೩೮೦-೦೪ ; 1396); ಬೆಂಗರೆಯ ಮೇಲೆ, ಕಡಲುಗಾಳಿಗೆ ಪಾಪಿ ಒಡ್ಡಿ, ನಡೆಯುವುದು ಸಣ್ಣ ಆಟವಲ್ಲ (ಪ.ರಪು. ೩): ಬೆಂಗರೆ ಮನೋಹರವಾಗಿ ತೋರುತ್ತಿತ್ತು (ಹೊಸಸ್ಕೆ. ೬೨).

[← ತುಳು. ಬೆಂಗರೆ. ಬೆಂಗ್ರ]

**ಬೆಂಗಲ್** 'ಬಿಸುಗಲ್' ನೋ.

**ಬೆಂಗಲ** (ನಾ). ಸುಟ್ಟ ಮಡಕೆ ; ಬೆಂದ ಮಡಕೆ : ಬೆಂಗಲ, ಬೆಂಗದಿರ್; ಬೆಂಬೊಳಲೆ, ಬೆನ್ನೀರ್ (ಕಭಾದ. ಪ. ೦೯೩ ಶ್ರಯೋ).

[ಬೆಂ$_2$ (<ಬಿಸಿದು) + ಕಲ$_1$]

**ಬೆಂಗಲ್ಲಿ** 'ಬೆನ್ನಲ್ಲಿ' ನೋ.

**ಬೆಂಗಳೂರು** 'ಬೆಂಗುಳೂರ್' ನೋ.

**ಬೆಂಗಜಿ** (ನಾ). ಬೆನ್ನಿನಲ್ಲಿ ನಾಟಿರುವ ಬಾಣ : ನಿಃಂಕುಪದ್ಧನಾಯು ತಮವನೀಶ ಕಂತುವಿಸೆ ನಟ್ಟು ತುಱುಂಗಿದ ಬಾಣಜಾಲದೀ ಕ್ಷಿತಿಗೊಱಗಿತ್ತು ಬೆಂಗಜಿಗಳುಣ್ಮಿದ ಕೂರ್ಮಸಮಾಜವೆಂಬಿನಂ (ಕುಸುಮಾ. ೦೧-೬೦).

[ಬೆಂ$_1$ (<ಬೆನ್) + ಗಜಿ]

**ಬೆಂಗಾಡು**, ಬೆಗ್ಗಾಡು, ಬೆಳ್ಕಾಡು (ನಾ). ೧. ಸುಟ್ಟುಹೋದ ಕಾಡು : ಅಗ್ನಿಸ್ಪರ್ಶವಾದ ಅರಣ್ಯ : ಕಾಳ್ಗಿಚ್ಚಿನಿಂದ ಆ ಪ್ರದೇಶವೆಲ್ಲ ಬೆಂಗಾಡಾಗಿದೆ (ಬಳಕೆ). ೨. ಬೆಳೆ ಬೆಳೆಯದ ಪ್ರದೇಶ: ಬರಡುಭೂಮಿ: ಸುಮಾರು ಇಪ್ಪತ್ತು, ಮೂವತ್ತು ಹಳ್ಳಿ ಬೆಂಗಾಡು ಸ್ಮಶಾನದಂತಾಗಿದೆ (ಹುಬ್ಬಹ. ೦೬೦) : ಐದು ವರ್ಷಗಳೊಳಗೆ ೧೫ ಚದರಮೈಲಿ ವಿಸ್ತೀರ್ಣ ಬೆಂಗಾಡಾಗಿ ಬೀಳುಬಿದ್ದಿತು (ಹಸುಹೂ. ೨೨). **ಬೆಗ್ಗಾಡು** ೨. ಬೆಗ್ಗಾಡು ಮೊರಡಿಯಲ್ಲಿ ಹಸುರೆರಚುವೆ ನೂರುಹೋಗೆಯು ನೆಳಲ ತಂಪನೀವೆ (ದ್ಯಾಕಿರಾ. ೦೦-೦). **ಬೆಳ್ಕಾಡು**. ೩. ಹೆಣವನ್ನು ಸುಡುವ ಜಾಗ ; ಶ್ಮಶಾನ : ಆಕೆಯಂ ಬೆಳ್ಕಾಡೊಳ್ ಮಸಣದೊಳ್ ಕೊಂಡುಪೋಗಿಕ್ಕಿಂ (ಶಬ್ದಾರ. ೦೦೨-೩). [ಬೆಂ$_2$ (<ಬಿಸಿದು) + ಕಾಡು$_2$]

**ಬೆಂಗಾಣ್** (ಕ್ರಿ). (ಇತರರು ತನ್ನ) ಬೆನ್ನನ್ನು ನೋಡು ; ಓಡಿಹೋಗುವುದನ್ನು ಕಾಣು : ಪಚ್ಚವಡು ಬೆಂಗಾಣದ ನಿಚ್ಚಟಗಲಿ ಮನಹ ದಿಟ್ಟ ದೇವಂ (ಎಕ. XII, ತಿಪ್ಟೂ. ೨೯-೦೯ ; 1149). [ಬೆಂ$_1$ (<ಬೆನ್) + ಕಾಣ್]

**ಬೆಂಗಾಣಿಸು** (ಕ್ರಿ). ಬೆನ್ನನ್ನು ತೋರಿಸು : ಹಿಮ್ಮೆಟ್ಟು ; ಓಡು : ಕಾಣುತ ಬೇಡರ ಪಡೆ ಹೆದೆವಿಲ್ಲಿಗೆ ಬಾಣವ ಹೂಡಿ ಬೊಬ್ಬಿಱಿದು ಹೂಣಿಸಿ ಕವಿದೆಸೆಯಲು ಮಥನನು ಬೆಂಗಾಣಿಸಿ ಮರಳಿದ ಪುರಿಗೆ (ಜೈಮಿನಿ. ೮-೨೯).

[ಬೆಂ$_1$ (<ಬೆನ್) + ಕಾಣಿಸು]

**ಬೆಂಗಾಪು**, ಬೆಂಗಾಹು (ನಾ). ಬೆನ್ನಿನ ಹಿಂದೆ ಇದ್ದು ಕಾಯುವುದು ; ಬೆಂಗಾವಲು ; ಅಂಗರಕ್ಷಣೆ : ಆ ಕುದುರೆಯ ಬೆಂಗಾಪಿನ ದಕ್ಕಡರ ಗಂಡುಗಲಿಗಳ ಗಂಡು ರಾಘವಾವರಜನೆನ್ನನಿಂತು ಪೇಳ್ದಟ್ಟಿದಂ (ರಾಮಾಶ್ವ. ೦೯೨-೦೬) ; ಬೆಳ್ಳಿಯ ಕಟ್ಟಿನ ನೇಜೆಯುದವರು (ಭರ್ಜಿಯ ಸೈನ್ಯ) ಬೇಗಾಪಿನವರಿಗಾಗಿ ಬರುತ್ತಿದ್ದರು (ಕರ್ಣಾಜ. ೦೩೯). **ಬೆಂಗಾಹು** : ಸೈಂಧವನ ಬೆಂಗಾಹಿನ ಭಟರು ಭಾರಣೆಯುಲೊದಗಿದರು (ಕುಮಾವ್ಯಾ. ೨೨-೩೦).

[ಬೆಂ$_1$ (<ಬೆನ್) + ಕಾಪು]

**ಬೆಂಗಾರ್** (ನಾ). ಕಾರ್ಗಾಲದ ಅನಂತರದ ಸಮಯ : ಅಂಗಯ್ಯುಂಗಯ್ . . . ಬೆಂಗಾರ್ ಬೆಂಬಿಸಿಲಿವ ನ್ಯಯಾಭಾವಾಪ್ಯಂ (ಕಭಾಪ. ಪ. ೦೬೬ ಅವಿ). [ಬೆಂ$_1$ (<ಬೆನ್) + ಕಾರ್$_2$]

**ಬೆಂಗಾರಿಸು** (ಕ್ರಿ). ಸುಡು ; ತಾಪಗೊಳಿಸು : ಅಡಗಿದಳು ಕಡುಕೋಪ ಮನವನು ಹಿಡಿದು ಬೆಂಗಾರಿಸುತ ಕಾಂತೆಯು ನುಡಿಯು ಬಾಧನವಾಗಿ (ಶಶಿಶ. ೨೮-೩೩). [ಬೆಂ$_2$ (<ಬಿಸಿದು) + ಗಾರಿಸು]

**ಬೆಂಗಾಲ್** (ನಾ). ಕಾಲಿನ ಹಿಂಭಾಗ : ಹಜ್ಜೆಯ ಹಿಂಭಾಗ : ಅಸ್ಯಯಾಭಾವಕ್ಕೆ . . . ಬೆಂಬಿಸಿಲ್, ಬೆಂಗಾಲ್, ಬಯ್ಗುರುಳ್ (ಕಭಾದ.ಪ. ೦೬೬ ಶ್ರಯೋ). [ಬೆಂ$_1$ (<ಬೆನ್) + ಕಾಲ್$_1$]

**ಬೆಂಗಾವಲ್**, ಬೆಂಗಾವಲು, ಬೆನ್ನುಗಾವಲು (ನಾ). = ಬೆಂಗಾಪು : ಜನ್ನಗುಂದುರೆ ಬೆಂಗಾವಲ್ಗೆ ಸೈನ್ಯಸಾಗರ ಸಹಿತ . . . ಪೊರಮಟ್ಟು (ಶಶ್ರಾಂಗ. ೬೦-೧೯೪೩). **ಬೆಂಗಾವಲು** : ಬೆಂಗಾವಲಾಗಿರ್ದ ಪಟುಭಟನಿರ್ಮಿತದ ತುರಂಗಯುಗವಂ ಕಾಣದೈತಂದು (ಕೃಬಾಶಾ. ೨೮-೬) ; ಪಸ್ತು ಒಡವೆ ಆ ಕುಟುಂಬದ ಬೆಂಗಾವಲಿಗೆ ನಿಂತವು (ಅಶ್ವಘೂ. ೯೩). **ಬೆನ್ನುಗಾವಲು** : ರಣೋತ್ಸಾಹವುಳ್ಳ ಅರ್ಜುನನೂ ಮಹಾಬಲನಾದ ಭೀಮಸೇನನೂ ಬೆನ್ನುಗಾವಲಾಗಿರಲು (ಕೃಪಾಣ. ೨೨೯).

[ಬೆಂ$_1$ (<ಬೆನ್) + ಕಾವಲ್$_1$]

**ಬೆಂಗಾವಲು** 'ಬೆಂಗಾವಲ್' ನೋ.

**ಬೆಂಗಾಹು** 'ಬೆಂಗಾಪು' ನೋ.

**ಬೆಂಗಾಳು** (ನಾ). ಬಿಸಿಯಾದ ಕಾಳು : ಒಂದು ಹಿಡಿ ಜೀರಿಗೆಯನ್ನು ನಸುಗೆಂಪಾಗಿ ಹುರಿದು ಬೆಂಗಾಳಾಗುವ ಹಾಗೆ ನೀರ ತಳಿದು (ಸಅಪ್ಪ. ೦೨೦).

[ಬೆಂ$_2$ (<ಬಿಸಿದು) + ಕಾಳು$_2$ (<ಕಾಟ್$_2$)]

**ಬೆಂಗಿ** 'ವೆಂಗಿ$_2$' ನೋ.

**ಬೆಂಗಿಮಂಡಳ** (ನಾ). ಒಂದು ದೇಶದ ಹೆಸರು ; ವೆಂಗಿನಾಡು : ಆ ಮಳಯಾಚಳ ಹಿಮಗಿರಿಸೀಮಾಪನಿತಳ[ಕೆ] ಬೆಂಗಿಮಂಡಳದೊಳ್ ಚೆಲ್ವಾವಗಮೆ ತನಗದೊಂದೂರ್ ನಾಮದೊಳಂ ವೆಂಗಿಪಟು (ಶಂಕಥಾ. ೦೯-೪೦).

[ಬೆಂಗಿ (<ವೆಂಗಿ$_2$) + ಮಂಡಳ (=ಮಂಡಲ)]

**ಬೆಂಗುಡಗಿ** (ನಾ). ಗೊಂದಲ ; ಗಜಿಬಿಜಿ : ಏನು ಸಬಾನೋ ಸಬಾ. ಪಕ್ತ ಬೈಗೋಳು — ಬಡದಾಟ — ಬೆಂಗುಡಗಿ ! (ಜಾರಾಂ. ೯೩). [ ? ]

**ಬೆಂಗುಡು** 'ಬೆಂಗೊಡು' ನೋ.

**ಬೆಂಗುಳೂರ್**, ಬೆಂಗಳೂರು (ನಾ). ಒಂದು ಊರಿನ ಹೆಸರು : P ಕರ್ನಾಟಕದ ಈಗಿನ ರಾಜಧಾನಿ : ಶ್ರೀಮತ್ ನಾಗತರಸ ಮನೆವಗಶಿ

ಪೆರ್ಗ್ಗಡೆಣಸೆಟ್ಟಿ ಬೆಂಗುಳೂರ ಕಾಳೆಗದೊಳ್ ಬಿಳ್ದಾಗತರನ ಮಗಂ ಬುಟ್ಟಣಪತಿ ಸತ್ತಂ (ಎಕ. IX (s), ಬೆಂಗಳೂ. ೦೮೨-೯ ; ಸು. 850). **ಬೆಂಗಳೂರು :** ಬಳಲಾಪುರ ಬೆಂಗಳೂರು **ಕೋಳಾಲದಿಳೆಯಾಣ್ಮ** ರುಜಿ ಕಂಗೆಟ್ಟು ತಳತಂತ್ರುವ ಸೀಗಿ ತಮ್ಮಯ ಪುರಗಳ್ಗೆ ತಳುವದೆ ಸರಿದರು (ಕಂಸಂ. ೩-೯೨) ; ಭಗವನ್ತ ಗಿರಿ ಗೋಸಾವಿ ಬೆಂಗಳೂರು ವಳಗಡಿ ಬೇಗೂರುತಾಲ್ಲೂಕು ಪೈಕಿ ತಾವರೇಕೆರೆಗ್ರಾಮಕ್ಕೆ ಪೂರ್ವದಿಕ್ಕಿನಲ್ಲಿಯಿರುವ ಧರ್ಮಾದೀಕ್ಷಿತರ ಭಟವಮಾನ್ಯದ ಹೊಲ ಖ ೧-೦-೨ (ಎಕ. IX, ಬೆಂಗಳೂ. ೩-೬ ; 1855).

[? + ಊರ್]

**ಬೆಂಗೂಸು** (ನಾ). ಬೆನ್ನಿನ ಬಾಗು,—ಡೂಗಂ : ಮಿಂಗೆ ಕಾಸಿ ತಿರ್ದಿದಂತೆ ಪೊಲಗಲದ ಬೆಂಗೂಸುಮಳಿಯೆ ಸಸಿನಂದಳೆದಾ ಜಗಶೀಪತಿಯಾಗಂ ಪೊಗರುಗೆ ಸೌಂದರ್ಯಮನೆ ತಾಳ್ದು ಕಂಗೊಳಿಸಲೊಡಂ (ಪ್ರಶಂ. ೩೯-೯೫).

[ಬೆಂ$_1$ (<ಬೆನ್) + ಕೂಸು$_2$ (<ಕೂನ್$_2$)]

**ಬೆಂಗೆಡಿಸು** (ಕ್ರಿ). ಹಿಂದಕ್ಕೆ ಓಡಲು **ಅವಕಾಶವಿಲ್ಲದಂತೆ ಮಾಡು :** ಅಪಿತರ್ಕಳು ಅಚ್ಚರಿಯೊಳೊಡನೊಡನೆ ಕಂಗೆಡಿಸಿ ಬೆಂಗೆಡಿಸಿ ಕೊಚ್ಚಿ ಕೊಯ್ದು (ಪಂಪು. ೯೯-೯). [ಬೆಂ$_1$ (<ಬೆನ್) + ಕೆಡಿಸು$_1$]

**ಬೆಂಗೊಡತಿ** (ನಾ). **ಬೆನ್ನಿನಲ್ಲಿ ಧರಿಸಿರುವ ಕೊಡತಿ :** ನಡೆಮುದಲ್ಲಿಂ ಮೇಲೆ ನೆಲ ದಡದಡಿಸಲಾನೆಗಳಂಕುಶದ **ಬೆಂಗೊಡತಿ**ಗಳ ಬಲುಪೊಯ್ಲ ಬೊಬ್ಬೆಯು . . . ಕಳಕಳಿಕೆ ಕೂಗಿತ್ತೆ (ಕೂರಣ. ೫-೬-೦೦).

[ಬೆಂ$_1$ (<ಬೆನ್) + ಕೊಡತಿ (<ಕೊಡಂತಿ)]

**ಬೆಂಗೊಡು**, ಬೆಂಗುಡು, ಬೆನ್ನುಕೊಡು (ಕ್ರಿ). ೧. (ಯುದ್ಧದಲ್ಲಿ ಶತ್ರುಗಳಿಗೆ) ಬೆನ್ನುತೋರಿಸು ; **ಸೋತು ಓಡು :** "ಅಕ್ಕುಳಿಸಿತೆಂದುಂ . . . ಬೆಂಗೊಟ್ಟುದೆಂದುಂ . . . ಪಾರಗೆಯ್ಕೆಂದುಂ—ಈ ೧೩ ಅಪಸರಣಕ್ಕೆ ಪೆಸರ್" (ಶಬ್ದಾ. ೬೨-೬೪೯) ; ಕಾಮನೃಪಾಳನೋಡಿದನವಂ ಬೆಂಗೊಟ್ಟು ಕಾಳ್ಗಟ್ಟೆಯಿಂ (ಎಇ. XX, ೦೨-೨೬ ; 1167); ಮುನಿವರ್ಗೆ ಬೆಂಗೊಡದ ದೆಸೆಯೊಳತಿಲೋಭಿ ದುರ್ಜನರ ಮಾತಂ ಕೇಳದೆಡೆಯೊಳತಿ ಮೂರ್ಖ (ಹಕಳ. ೨-೦೬) ; ನಡುಗಿ ಸಂಗರಭೀತಿಯಲಿ ಬೆಂಗೊಡುವ ನಾಯಕವಾಡಿಗಳ ವಂಗಡವ ನೋಡುತ ಮುಟಿಯ ಚಕ್ರವ ತೆಗೆದನಸುರಾರಿ (ಕುಮಾರರಾ. ೦೯-೯೫). ೨. (ಬೆನ್ನನ್ನು ನೀಡಿ) ಆಧಾರವಾಗು ; ಆಶ್ರಯವಾಗು : ವೃಂದಾರಕರಾದಿಯಾದ ರಾಕ್ಷಸರಾಜರೊಂದಾಗಿ ಸೊದೆಗಡಲ್ಗೆ ತೆಯ ಮಂದರಗಿರಿ ಮುಳುಗಿದಡೆ ಕಚ್ಛಪರೂಪಿನಿಂದ ಬೆಂಗೊಟ್ಟಾತನೀತ (ಪೋಕಶ. ೩೬-೨೩). **ಬೆಂಗುಡು :** ೧. ಪೊಳೆವಿಂದುಗಳ್ಕೆ ಬೆಂಗುಡೆ ಪೊಳೆದುವು ಬೆನ್ನಿಂದಮೆರ್ದೆಗೆ ಕದಿರ್ದಾಜುಗಲೆನಲ್ ತೊಳಗಿದುವು ಮದನಸಿಖಿ ವಿಹ್ವಳಹೃದಯನ್ಯಸ್ತಹಸ್ತನಖದೀಧಿತಿಗಳ್ (ಕಾದಂಪು. ೯೦೬) ; ಕೋಡೇಱಂಗೆ ಮಾಱಾನೆಗಳ್ ರಣದೊಳ್ ಬಂಗುಡೆ ಜೋದರೆಚ್ಚ ಪಲವುಂ ನಾರಾಚದೇಱಂಗೆ ಬಲ್ಲಣೆಗಳ್ ಬೆಂಗುಡೆ (ಶಂಠಾಮಾ. ೦೩-೯೦). **ಬೆನ್ನು ಕೊಡು :** ೧. ಅವರು ಬೆನ್ನುಕೊಡಲಾಗಿ ಬೆನ್ನಟ್ಟಿ ಪೊಸಕೋಟೆಪೇಟೆ ವಳಗೂ ಹೊಕ್ಕು ಕಡದು ಬಹುಜನಕ್ಕೆ ಜಖಂ ಮಾಡಿ . . . ಬೆಂಗಳೂರಿಗೆ ಬಂದು ದಾಖಲಾದರು (ಹೈದರ. ೯೦). [ಬೆಂ$_1$ (<ಬೆನ್) + ಕೊಡು$_1$]

**ಬೆಂಗೊಳ್**, ಬೆಂಕೊಳ್, ಬೆಂಕೊಳು, ಬೆಂಗೊಳಂ (ಕ್ರಿ). ಬೆನ್ನಟ್ಟು ; ಹಿಂಬಾಲಿಸು ; ಅನುಸರಿಸು : "ಬೆಂಗೋಳ್—ಅನುಧಾವನೇ (ಬೆನ್ನಟ್ಟು)" (ಶಮಾಾ) ; ಬೆಳ್ಳೆರಲೆಯುಂ ಬೆಂಗೊಂಬಂತೆ ತಗುಳ್ದು (ವರ್ಧಮಾ. ೯-೨೫೨). **ಬೆಂಕೊಳ್ :** ಆ ಅರಸು ಬನ್ದು ಎಳಬ್ಬೆನಾಯ ಪುಟ್ಟಪೋಗೆ ಬೆಂಕೊಣ್ದು ಕ್ಕಳಕ್ಕಾಟ್ಟಯೊ ಕಾದಿ ಸತ್ತಂ (ಎಕ. XV, ಅರಸೀ. ೨೦೫-೮ ; 890) ; ನಿನ್ನನುಬುಗಿಸಲುಮಾಜಿಯೊಳೆನ್ನಂ ಬೆಂಕೊಂಡು ಕಾದಲು ಬಂದೀಗಳ್ . . . ಬೀರರ್ ಬೆನ್ನಿತ್ತುದನಿನಿಸು ನೋಡ (ಶಂಶಬಾ. ೩-೬೩) ; ಕ್ರೂರ ಮೃಗಂಗಳವಂ ಕಂಡು ಬೆಂಕೊಂಡು (ಶಂಪಕಂ. ೨೬೦-೬). **ಬೆಂಕೊಳು :** ಕೆಲರು ಪೂಗೊಂಚಲಿನ ತುಂಬಿಯ ಬಳಗವನು **ಬೆಂಕೊಂಡ**ರು (ಕುಮಾ.ಭಾ. ೦೯-೯) ; ಬಿತ್ತರದೊಳೊತ್ತರಿಸಿ ಪರಗಣಂ ಸುರಗಣವ ಬೆಂಕೊಂಡುದು (ಕಂಪು. ೩೦-೯೩). **ಬೆಂಗೊಳು :** ಪಲವು ಪರಿಯಲಿ ಬೇಡಿ ಬೆಂಗೊಳುವ ಪದನಿಲ್ಲ ಮನಸಿನೊಂದೇ ಪೂಜೆ ನಿನ್ನ ಸೇವನೆಗೆ (ಕಂಶ. ೦೦೦-೬).

**ಬೆಂಕೊಳ್ವನ ಕೋಲ್** = ಭೂಮಿಯನ್ನು **ಅಳೆಯುವ** ಒಂದು ಬಗೆಯ ಕೋಲು,–ಗಳೆ : ಸಿ[ರಿ]ಗಳಬ್ಬೆ[ಯಾ] ಕೆಱೆಯಿಂ ಪಡುವಲು ಬೆಂಕೊಳ್ವನ ಕೋಲಲು ಬಿಟ್ಟ ಕೆಯಿ ಮತ್ತರು ಹತ್ತು ಎಇ (XXVII, ೬೩-೫೦ ; 1114) ; ಮೂಡಲು ಪದಿಮೂಱು ಗೇಣ ಬೆಂಕೊಳ್ವನ ಕೋಲ ಮತ್ತರು ನೂಱು (ಕಇ. II, ೦೨-೯೫ ; 1114).

[ಬೆಂ$_1$ (<ಬೆನ್) + ಕೊಳ್$_1$]

**ಬೆಂಗೊಳು** 'ಬೆಂಗೊಳ್' ನೋ.

**ಬೆಂಗೋಡೆ** (ನಾ). ಹಿಂಬದಿಯ ಗೋಡೆ : ಓಂಭಾಗದ **ಭಿತ್ತಿ :** ಗಗನದೊಳಗೆ ಬಂದು ನೃಪನ ಬೆಂಗೋಡೆಯೊಳಗಣಾದಿಜಿನಬಿಂಬಕ್ಕದಿರ ಗಗನಪುರುಷ ಸಿದ್ಧಬಿಂಬಗಳಿಗೆ ಕೈಯ ಮುಗಿದಿಳಿದರು ಗಮಕದೊಳು (ಭರತ. ೦೩-೧೯೦). [ಬೆಂ$_1$ (<ಬೆನ್) + ಗೋಡೆ]

**ಬೆಂಗೋಲು** (ನಾ). ಬೆನ್ನಿಗೆ ಹೊಡೆಯಲು ಎತ್ತಿರುವ **ಕೋಲು :** ಜಗದ ಜಂಗುಳಿಗೆ **ಬೆಂಗೋಲನೆತ್ತಿ** ಕಾಡಿತ್ತು ಮಾಯೆ (ಪ್ರಭುಲಿಂ. ೩. ೧೬-೨೬). [ಬೆಂ$_1$ (<ಬೆನ್) + ಕೋಲು$_1$ (< ಕೋಲ್$_1$)]

**ಬೆಂಚ** 'ಬೆಂಚೆ' ನೋ.

**ಬೆಂಚಗ** (ನಾ). ಒಂದು ಬಗೆಯ ಪಕ್ಷಿ: ಬೆಳುವ ಬೆಂಚ [ಶಾಕಾಂ. ಚೆ]ಗ . . . ಮಡಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡು (ತೊರವೆ. ೩-೦-೩೩).

[ ? ]

**ಬೆಂಚೆಯಹಂಬು** (ನಾ). ಒಂದು ಬಗೆಯ ಬಳ್ಳಿ : ಬಾಗಿಲಲ್ಲಿ ಕಟ್ಟಿದ್ದಿತ್ತೊಂದು ಬಲುಗೋಡಗಕ್ಕೆ ಬಾಯ ಅಣಲಿನ ಸಜಿವ ಕೂಳು ಉಡಿಯೊಳಗಳ ಬೆಂಚೆ [ಶಾಕಾಂ. ಬೆ]ಯ ಹಂಬು ಹಂಬಿನೊಳಗಳ ಬಹುಧಾನ್ಯದ ತೆನೆ (ಮಹದೇವ. ಕ. ೨೬೮-೦೦೦೬). [ ? + ಹಂಬು$_2$ (<ಪರವು$_2$) ]

**ಬೆಂಚು** (ನಾ). ೧. (ಸಾಮಾನ್ಯವಾಗಿ ಶಾಲೆಗಳಲ್ಲಿ ವಿದ್ಯಾರ್ಥಿಗಳು ಕೂರಲು ಇರುವ) ಸ್ವಲ್ಪ ಎತ್ತರದ ಕಾಲಿರುವ ಉದ್ದವಾದ ಮಣೆ : ದೊಡ್ಡಸೇಠ್‌ಜಿ ತಬೇಲಿ ಮಧ್ಯ ಬೆಂಚು ಹಾಕಿಸಿ ಕೂತ (ಶಂಗೂರ. ೯೩) : ಸಾಕಾದಷ್ಟು ಬೆಂಚುಗಳಿರಲಿಲ್ಲ, ಹಲಗೆಗಳಿರಲಿಲ್ಲ (ರಂಗಳ. ೪೫). ೨. ಒಬ್ಬರಿಗಿಂತ ಹೆಚ್ಚಾಗಿ ನ್ಯಾಯಾಧೀಶರಿರುವ ನ್ಯಾಯಾಸ್ಥಾನ ಮತ್ತು ಇಂತಹ ನ್ಯಾಯಾಸ್ಥಾನದಲ್ಲಿ ಕೂರಲು ಅರ್ಹನಾದ ವ್ಯಕ್ತಿ,— ನ್ಯಾಯಾಧಿಪತಿ : ದಾವೆಗಳನ್ನು ವಿಚಾರಿಸುವ ಬಗ್ಗೆ ಏರ್ಪಟ್ಟ ಬೆಂಚುಗಳಲ್ಲಿ ಕೂತುಕೊಳ್ಳಲು ಅರ್ಹರಾದ ಜನರ ಪಟ್ಟಿಯಲ್ಲಿ . . . ಹೆಸರುಗಳು ಸೇರಿರತಕ್ಕದ್ದು (ಗ್ರಾಮಪಂಚ. ೦೦).

[← ಇಂ. Bench]

**ಬೆಂಚೆ**, ಬೆಂಚ (ನಾ). ಸಣ್ಣಹೊಂಡ ; ಚಿಕ್ಕ ಜಲಾಶಯ ; ಕುಂಟೆ : "ನಿಪಾನಂ, ಉದಪಾನಂ, ವಾಪೀ, ಆಹಾವಃ—ಈ ೪ ಬೆಂಚೆ" (ಹಲಾಯು. ೦೦೩-೬೨) ; ಪೂಗೊಳಂ ತಾಸಿರೆಯುಂ ಬಕನಿಕರಲುಳಿತಕಲುಷೋದಕ ವಿರಳದೊಳಂಚೆ ಬೆಂಚೆಯೊಳ್ ಮಸುಳಿಕುಮೋ (ಕಾವ್ಯಾ.ಶ. ೬೦೩) ; ಅಂಚೆಗಳಿಲ್ಲದ ಬೆಂಚೆ ಬೇಟವಿಲ್ಲದ ಬೆಳೆವೆಣ್ಗಳಿಲ್ಲ ಪೆಸರಿಲ್ಲದ ಮಾನಸರಿಲ್ಲದೆಲ್ಲಿಯುಂ (ಕಬ್ಬಿಗ. ೨೬) ; ಅರಸಂಚೆಗಳ ಸಂಚಯಂ ಬೆಂಚೆಗಳೊಳು ಸಂಚರಿಸಲು ವಿನೋದದಿಂ (ಸೌಂದಪು. ೦೦-೨). **ಬೆಂಚ :** ಬೆಲೆಯ ಚಿನ್ನಿಗ ಬಲ್ಲ ನೆಲೆಯನಂಬಿಗ ಬಲ್ಲ ಮಲೆಯ ಬೆಂಚದಿಂದಱವಂತೆ ಸೂಳೆ ನೆಱೆ ಪೊಲಬನಱಿದಿಹಳು (ಸರ್ವಜ್ಞ. ೦೯೦೩).

[ದೇ.॥ ತೆಲು. ಮೆಂಚ]

**ಬೆಂಜನ** (ನಾ). ೧. ನಂಜಿಕೊಳ್ಳುವ ಪದಾರ್ಥ; ಬಾಡಿಸಿಕೊಳ್ಳುವ ವಸ್ತು: ನಂಚಿಕೆ : ಬಾಡುಂ ಬೆಂಜನಮುಂ ಕೂೞುಂ ರುಚಿಮಾಡುವನಿತಲ್ಲದೆ ತಾಂ ಬೇೞ್ ತಣಿಪಲ್ಕೆಱಗುಮೆ (ಶಬ್ದಸಂ. ೩೭-೮). ೨. [ವ್ಯಾಕ] ಸ್ವರಗಳ ಸಹಾಯವಿಲ್ಲದೆ ಸ್ವತಂತ್ರವಾಗಿ ಉಚ್ಚರಿಸಲಾಗದ ವರ್ಣ; ವ್ಯಂಜನ : ಯತ್ವಲೋಪಕ್ಕೆ . . . ವ್ಯಂಜನ–ಬೆಂಜನ (ಶಬ್ದ. ೨೯೧ ಪ್ರಯೋ). [< ಸಂ. ವ್ಯಂಜನ]

**ಬೆಂಜನಂಗೆಯ್** (ಕ್ರಿ). ಬಾಡಿಸಿಕೊಳ್ಳುವ ಪದಾರ್ಥವನ್ನು ತಯಾರಿಸು; ವ್ಯಂಜನಪದಾರ್ಥವನ್ನು ಸಿದ್ಧಪಡಿಸು : ಆತನ ಮನೆಯೊಳರ್ಪಿತಂಗೆಯ್ದು ಸಮಯದೊಳು ನೂತನದಲಾಬೂಫಲದೆ ಬೆಂಜನಂಗೆಯ್ದು ಸಾಶಿತಯದಿಂ ನೀಡಲು (ಸಿದ್ಧೇಶ. ೧೧-೪೪). [ಬೆಂಜನ + ಕೆಯ್$_1$]

**ಬೆಂಡ** (ನಾ). ಒಂದು ಮನೆತನದ ಹೆಸರು (?) : ತುಱುವ ಮೊಱುಕ ಕೊಳ್ಳೆ ಬೆಣ್ಡರ ಮಾಕಿ ಕಾದಿ ಇಕ್ಕಿಸಿ ಸತ್ತು ಸಗ್ಗಸ್ತನಾದಂ (ಎಕ. X (8), ಮುಳಬಾ. ೩೦೭-೨ ; 950). [?]

**ಬೆಂಡಾಡು** (ಕ್ರಿ). ಬೆಂಡಿನಂತೆ ಹಗುರವಾಗಿ ಚಲಿಸು,—ತೇಲು : ಬೆಳ್ದಿಂಗಳೆಂಬ ಪಾಲ್ಗಡಲೊಳ್ ಬೆಂಡಾಡುವ ಚಕೋರಂಗಳಂ ನೋಡುತ್ತಾಂ ಮೆಲ್ಲಮೆಲ್ಲನೆ ಬರೆವರೆ (ಉದ್ಭಟ. ೫-೧೫ ವ). [ಬೆಂಡು + ಆಡು$_1$]

**ಬೆಂಡಿಗ,** ಬೆಂಡುಗ, ಬೆಂಡುಳಿಗೆ (ನಾ). ಒಂದು ಬಗೆಯ ಮರ : ಹಳ್ಳದ ಪಡುವಣಾತ್ತಿನ ಬೆಂಡಿಗದ ತಾಳಿಗೆ ತೆಂಕಣ ನೈಋತ್ಯದ ನಡುವೆ ನೆಟ್ಟ ಕಲ್ಲು (ಎಕ. XIV, ಮೈಸೂರು. ೧೦೪-೩೯೭ ; 1074). **ಬೆಂಡುಗ** : ಕಷವೆ ಬೆಂಡುಗ ಕಾವಮರ ಕಂಚಾಳವು ಎಡವಿಡದಿಹ ಪುತ್ರಜೀವಿ . . . ಎಸೆದಿಹವು (ಮಹದೇಶಾಂ. ೦-೩೪) ; ಬೆಂಡುಗೆ, ಬೆಂಡುಳಿಗೆ (ವ್ಯಶಿ. ೭೯-೦೪೦೨). **ಬೆಂಡುಳಿಗೆ** : ಬೆಂಡುಗ, ಬೆಂಡುಳಿಗೆ, ನಾಯಿಕುಳಿ, ಬೋಡು ಛಕೆಹುಲ್ಲು (ಸಸ್ಯಶಿ. ೦೦೬). 'ಬಿಂಡಿಗ' ಹೋ. [ ? ]

**ಬೆಂಡು** (ನಾ). ೧. (ಜೋಳ ಮುಂತಾದುವುಗಳ) ದಂಟಿನ ಹಗುರವಾದ ಒಳಭಾಗ : ಕಾಲಲಿ ಕಟ್ಟಿದ ಗುಂಡು ಕೊರಳಲಿ ಕಟ್ಟಿದ ಬೆಂಡು ತೇಲಲೀಯದು ಗುಂಡು ಮುಳುಗಲೀಯದು ಬೆಂಡು (ಬಸವ.ಷ. ೧೦೭-೩೫೦); ಬೆಂಡಿರದೆ ಮುಳುಗಿದರು ಗುಂಡೆದ್ದು ತೇಲಿದರು . . . ಸಾಲಿಗನು ಕೊಂಡದ್ದು ಕೊಡನು (ಸರ್ವಜ್ಞ. ೧೩೯೭). ೨. ತಿರುಳಿಲ್ಲದುದು; ಸತ್ತ್ವವಿಲ್ಲದುದು; ಜಡವಾದುದು: ಈ ಕಜ್ಜದೊಳ್ನೀಂ ತೊಡರ್ದು ಮರುಳೆ ಬೆಂಡಾಗದಿರ್ (ಗದಾಯು. ೯-೦೫); ಬೆಂಡಾಗೆ ಮನಂ ಮೌನಂಗೊಂಡಿರೆ ವಲ್ಲಭನ ಮನವನಱಿವಾಗ್ರಹದಿಂ ಮುಂಡೋದರಿ ಮಾಣದೆ ಬೆಸಗೊಂಡಳ್ (ಶಂರಾಮಾ. ೯-೦೩೭); ತಪನನುಷ್ಣತೆಯಿಂದ ತನುಲತೆ ಬೆಂಡಾಗಿ ಲಪನಾಂಭೋರುಹ ಕೊರಗಿ ಅಪರಾಹ್ಣಕಾಲದಿ ರತಿ ಶಂಬರಾಸುರನುಪವನವನು ಪೊಕ್ಕಳಂದು (ಮೋಹತ. ೯-೩೯). ೩. (ಜೋಳದ ದಿಂಡಿನಾಕಾರದ) ಒಂದು ಬಗೆಯ ಸಿಹಿತಿಂಡಿ : ಅವರು ಮಂಡಕ್ಕಿ . . . ಬೆಂಡು, ಬತ್ತಾಸು ಕೊಂಡುಕೊಂಡರು (ಕಪಳ್ಳಿ. ೩-೨೫); ಕರ್ಮಿರ್ನ್‌ಸಾಬರು . . . ಮಿಠಾಯಿ, ಬತ್ತಾಸು, ಬೆಂಡು ಮೊದಲಾದ . . . ಪದಾರ್ಥಗಳನ್ನೂ ಮಾರಾಟಕ್ಕೆ ತರುತ್ತಿದ್ದರು (ಮಳೆಮ. ४३७).

**ಬೆಂಡು ಬೆಱಗಾಗು, ಬೆಂಡು ಬೆರಗಾಗು**=ಸತ್ತ್ವಹೀನವಾಗುವಷ್ಟು ಆಶ್ಚರ್ಯಪಡು ; ನಿಬ್ಬೆರಗಾಗು ; ಮಿಡಿವಿಲ್ಲೊಳೆಚ್ಚೊಡೆಯೊಳ್ ಪುಂಡ್ರೇಕ್ಷುಮಂ ತಾಗೆ ಗಂಟೊಡೆದೆತ್ತಂ ರಸಮೆಚ್ಚು ಪಾಯೆ ಪಥಿಕರ್ ಪೊಕ್ಕೀಂಟುತುಂ ಕೈಯ ಬಾಯೆಡೆಯೊಳ್ಪ್ಪುಯ್ದುಗೆ ಕಂಡು ಬೆಂಡುಬೆಱಗಪ್ಪರ್ ಪಾಮರೀವಕ್ತ್ರಮಂ (ಅನಂಪು. ೧-೬೦); ಬಂದವರು:—(ಬೆಂಡು ಬೆರಗಾಗಿ ಬಣ್ಣಗೆಟ್ಟು ಬಾಗಿಲೆಡೆಯಲ್ಲಿ ಒಗ್ಗಾಗಿ ನಿಂತು ನಿರೀಕ್ಷಿಸುತ್ತಿರುವರು) (ಮಂತ್ರಶ. ೭೪-೩).

[ದೇ.॥ ತಮಿ. ವೆಣ್ಟು; ತುಳು. ಬೆಂಡ್, ಬೆಂಡು, ಬೊಂಡು; ತೆಲು. ಬೆಂಡು]

**ಬೆಂಡುಖರ್ಜೂರ** (ನಾ). (ಸಾಮಾನ್ಯವಾಗಿ ಮರುಭೂಮಿ ಪ್ರದೇಶಗಳಿಂದ ಪಿಂಡಿಗಳಲ್ಲಿ ಆಮದಾಗಿ ಬರುವ) ಒಂದು ಬಗೆಯ ಖರ್ಜೂರ : ಅವರ ಮನೆಯವರು ಜಾತ್ರೆಯಿಂದ ಬೆಂಡುಖರ್ಜೂರವನ್ನು ತಂದಿದ್ದಾರೆ (ಕೂಪ). [<ಸಂ. ಪಿಂಡಖರ್ಜೂರ]

**ಬೆಂಡುಗ** 'ಬೆಂಡಿಗ' ನೋ.

**ಬೆಂಡುಗರೆ** (ಕ್ರಿ). ಬೆಂಡಿನಂತಾಗು; ಸತ್ವವನ್ನು ಕಳೆದುಕೊಳ್ಳು; ನಿಸ್ಸತ್ತ್ವಗೊಳ್ಳು : ಮದನುದ್ದಂಡದೇವಿಯೊ . . . ಪುಂಡರೀಕಾಂಬಕಿಯೊ ಯಿಾಚಲು ಗಂಡರಾರೆಂದೀಕ್ಷದಲಿ ಕಣ್ಬೆಂಡುಗರೆದೊರಗಿದರು ನೃಪಸುತರರ್ಥಮೂರ್ಛೆಯಲಿ (ಜರಾಮಾ. ೨೦೭-೩೫); ಚಿಂತೆಯಿಂದ ನನ್ನ ಹೃದಯವು ಬೆಂಡುಗರೆದಿದೆ (ಶ್ರೀರಾಶ. ೦೦). [ಬೆಂಡು + ಕರೆ$_2$ (<ಕಱೆ$^3_1$)]

**ಬೆಂಡುಗಳೆ** (ಕ್ರಿ). ಬೆಂಡಿನಂತೆ ಸತ್ತ್ವಹೀನವನ್ನಾಗಿ ಮಾಡು,–ನಿಸ್ಸತ್ತ್ವಗೊಳಿಸು : ಕಂಡ ಕಡೆಗೆ ನಡೆನಡೆದಳುಕದೆ ಕಾಲುಗಂಡ ಕರಾಳವೆಣ್ಣುಗಳ ಅಂಡಲೆದವರೊಳು ಬಳೆದೊಳ್ನೀಹವ ಬೆಂಡುಗಳೆದು ಬಿಡಿಸುವುದು (ಹರಿಭ. ೬-೯೭). [ಬೆಂಡು + ಕಳೆ$_1$]

**ಬೆಂಡುನೆಗೆ** (ಕ್ರಿ). =ಬೆಂಡುಗರೆ : ಆ ರಮಣಿ ಕೃತಕಶೋಕಾಸಾರದ ಪೊನಲೊಳಗೆ ಬೆಂಡುನೆಗೆದಿರ್ದುಮದೇಂ ರಾರಾಜಿಸಲಾರ್ತಳೊ ತಿಳಿನೀರೊಳಗಣ ಚಂದ್ರಕಲೆಯ ನೆಬಿಲೆಂಬಿನೆಗಂ (ಶಂರಾಮಾ. ೯-೩೭); ಕುಮುದ ಕೇಸರದ ರಜದೊಳರ್ದ ಚರಣಚಯಮಂ ಕೀಟಲಾಜಿದೆ ಪಟುವಂಡಿನೊಳ್ಬೆಂಡುನೆಗೆದು ಪೊರಳ್ದು ನರಳ್ದು ಮೊರೆವ ಮಱಿದುಂಬಿಗಳ ಗಱಿಯಂ ಗಿಜ್ಜನೆ ತೆಗೆದು ನೆಗಪುಮುಂ (ಲೀಲಾವ. ೩-೨೦ ವ). ೨. ಬೆಂಡಿನಂತೆ ಹಗುರವಾಗಿ ತೇಲು : ಪ್ರಧಾನಿ ಹರಿಯಾತಂ ಪೋಗುತಮೊಂದು ಸರಸಿಯೊಳ್ ಶಿಲೆಯತುಳಂ ನೀರೊಳಗೆ ಬೆಂಡುನೆಗೆದಿರೆ ಕಂಡಂ (ರರ್ಪುಶ. ೫-೫).
[ಬೆಂಡು + ನೆಗೆ$_1$]

**ಬೆಂಡುಮಗುಚ್** (ಕ್ರಿ). (ನೀರಿನಲ್ಲಿ) ಬೆಂಡಿನಂತೆ ಅಡಿಮೇಲಾಗು; ಬೋರಲಾಗು : ಮುಡಿಯ ಪೂವಿನ ರಜದಿಂ ವಾಸಿಸಿದ ನೀರ ಕವಡಿಂ ದಾಸವದೊಳ್ ಸೊರ್ಕಿ ಬೆಂಡುಮಗುಚ್ದುವು ಮಿಾಂಗಳ್ (ಶಂಶಭಾ. ೫-೭೫).
[ಬೆಂಡು + ಮಗುಚ್]

**ಬೆಂಡುಮಾರ** 'ಬೆಂಡುವರ' ನೋ.

**ಬೆಂಡುಮರಲ್** (ಕ್ರಿ). ಸತ್ತ್ವವನ್ನು ಕಳೆದುಕೊಳ್ಳು ; ಜಡತ್ವವನ್ನು ಹೊಂದು : ನಿಷಾದಿತಿಯೆಂಬ ಬೇಡಿತಿಗಮುಯ್ವರ್ ಮಗಂದಿರ್ಗಮುಣಲಿಕ್ಕಿದೊಡೆ ತಣಿಯುಂಡು ಬೆಂಡುಮರಲ್ದು ಮಱಸುಂದಿದರ್ (ಶಂಶಭಾ. ೩-೪ ವ). [ಬೆಂಡು + ಮರಲ್$_1$]

**ಬೆಂಡುವರ,** ಬೆಂಡುಮರ (ನಾ). ಪೊಳ್ಳಾದ ಮರ; ಹಗುರವಾದ ಮರ : ಗುಂಡಿಗೆಗೊಡ ಕೊಪ್ಪರಿಗೆ ಡೋಣಿ ಪಱಿಗೋಲು ಬೆಂಡುವರಗಳನು ತರಿಸಿ ಮಂಡಲಪತಿ ಸುತರೊಡನೆಳ್ತರಲು (ಕುರಾಶಾಂ. ೨೭-೦೦೦). **ಬೆಂಡುಮರ** : ನರಸಿಂಹನ ಮೈಯಿಂದ ಬೆವರು ಬಸಿದು ಶರೀರ ಬೆಂಡು ಮರದಂತಾಯಿತು (ಮಗಮಾಂ. ೮೯). [ಬೆಂಡು + ಮರ$_1$]

**ಬೆಂಡುಪಾಱಿಸು** (ಕ್ರಿ). ಬೆಂಡಿನಂತೆ ಹಾರಿಸು ; ನಿಸ್ಸತ್ತ್ವಗೊಳಿಸು: ತಿಱಿಕಲ್ಲಾಡುವೆನೋ ಕುಲಾದ್ರಿಚಯಮಂ . . . ಮೇರುವಂ ಪೆಱತೇನೂದಿಯೆ ಬೆಂಡುಪಾಱಿಸುವೆನೋ ಬ್ರಹ್ಮಾಂಡಮಂ ಪೋಟ್ಟಿಸೋ (ಜಗವಿ. ೭-೩೫). [ಬೆಂಡು + ಪಾಱಿಸು]

**ಬೆಂಡುವೋಗು** (ಕ್ರಿ). ಬೆಂಡಿನಂತೆ ಹಗುರವಾಗು; ನಿಸ್ಸತ್ತ್ವಗೊಳ್ಳು: ಬೆಂಡುವೋದುವೋ ಬಂಡೆ ಎನೆ ಮಹದ್ಭಾರದಾ ಪ್ರಾಕ್‌ಶಿಲಾಶಕಲಂಗಳಂ ತಬ್ಬಿ ಪಿಡಿದಲುಗಿ ಕಿತ್ತು ಪೊತ್ತೆತ್ತಿದರು (ಶ್ರೀರಾಮಾ. ೫೯೦-೦೯೭).
[ಬೆಂಡು + ಪೋಗು$_1$ (<ಪೋ$_1$)]

**ಬೆಂಡುಳಿಗೆ** 'ಬೆಂಡಿಗ' ನೋ.

**ಬೆಂಡೆ** (ನಾ). ಒಂದು ಬಗೆಯ ಗಿಡ ಮತ್ತು ತರಕಾರಿಯಾಗಿ ಬಳಸುವ ಅದರ ಕಾಯಿ : "ಲೋಮಿಕೆಯೆನಲ್ ಬೆಂಡೆ" (ಮುಂಗರಾ. ೯೫-೪೭) ; ಹಸಿಯಲ್ಲವಂ ಹಾಕಿ ಬೆಂಡೆಯ ಬೇರಿನಿಂದ ತಿರುಹಿ ಕದಡಿ ಪನ್ನೀರ ಸೇವಂತಿಗೆಯ ಹೂವಿಕ್ಕಿ (ಸೂಶಶಾ. ೨-೨೫) ; ಇತರ ತರಕಾರಿಗಳ ಜೊತೆಯಲ್ಲಿ ಬೆಂಡೆಕಾಯಿ ಬೆಳೆಸಿದರೆ ಮಿಶ್ರಬೆಳೆಯಿಟ್ಟಂತಾಗಿ ಬಗೆಬಗೆಯ ತರಕಾರಿ ಸಿಗುವುದು (ತರಜ. ೦೮).

[ ದೇ.॥ ತಮಿ. ವೆಣ್ಟೈ, ವಣ್ಟೈ ; ಮಲ. ವೆಣ್ಡ ; ತುಳು. ಬೆಂಡೆ ; ತೆಲು. ಬೆಂಡ. / ಸಂ. ಭಿಂಡ, ಭಿಂಡಕ, ಭಿಂಡಾ, ಭೇಂಡಾ, ಭೇಂಡೀ, ಹಿಂ. ಭಿಂಡೀ ; ಮರಾ. ಭೇಂಡೀ ]

**ಬೆಂಡೇರು** (ಕ್ರಿ). ಸತ್ತ್ವವನ್ನು ಕಳೆದುಕೊಳ್ಳು ; ದುರ್ಬಲವಾಗು : ಆ ಬಗೆಯ ಕಂಡು ಹರಿ ಮೊಗ್ಗಿದನು ಹರಸದೆ ಬೆಂಡೇರಿತು (ಜಾಗಹ. ೨೦-೦).

[ ಬೆಂಡು + ಏರು$_1$ (< ಏಱ್$_1$) ]

**ಬೆಂಡೇಳ್** 'ಬೆಂಡೇೞ್' ನೋ.

**ಬೆಂಡೇಳು** 'ಬೆಂಡೇೞ್' ನೋ.

**ಬೆಂಡೇೞ್**, ಬೆಂಡೇಳ್, ಬೆಂಡೇಳು (ಕ್ರಿ). ೧. (ನೀರಿನಲ್ಲಿ) ಬೆಂಡಿನಂತೆ ಹಗುರವಾಗಿ ಚಲಿಸು ; ತೇಲು : "ಬೆಂಡೇೞ್ವುದೆಂದುಂ ತೇಂಕೆಂದುಂ ತೇಲ್ವುದು" (ಕಶಾ. ೭೧-೬೨೩). ೨. ಸತ್ತ್ವಹೀನವಾಗು : ದುರ್ಬಲವಾಗು : ಜಡವಾಗು : ಎನಸುಂ ವಿಮಾನೇಕ್ಷಣಂ ಸೋಲದ ರಸದೊದವಿಂ ಸೊರ್ಕಿ ಬೆಂಡೇೞ್ವಿನಂ . . . ಅನುನಯದಿಂದಾಕೆಯೊಳ್ ಕೂಡಿದಪ್ಪೆಂ (ಕಾದಂಉ. ೫೨೩) ; ಪೊಯ್ವುತ್ತಬ್ಧಿಯಂಭೋರವವೊಗೆಯೆ ಪಳಂಚಿತ್ತು ನಕ್ಷತ್ರಮಾರ್ಗಾಂತರವಂ ಬೆಂಡೇೞ್ವಿನಂ ಪೋಗೊದೆದುವು ದಿವಮಂ . . . ರಾಮಕೃಷ್ಣಪ್ರಬಳಶರಭುಜಾಸ್ಫಾಲನಾಭೀಳನಾದಂ (ಜಗಚ. ೬-೬೨) : ಪ್ರಸೂನಾಂಬಕಂಗಳ್ ಸಲೆ ಬೆಂಡೇೞಲ್ . . . ಸಲಮಿಂದಂ ಕೂಡಿದಂ ತನ್ನನವನಿತೆಯೊಳಾತ್ಮೀಯಕಾಂತಂ ವಸಂತಂ (ಕೇಸುಪಶಾ. ೫-೨೯). **ಬೆಂಡೇಳ್** : ೨. ತಿಳಿನೀರನೀಂಟಿ ನೆಳಲೊಳ್ ಪಟ್ಟಿರ್ದು ಬೆಂಡೇಳ್ವಲೋಳೆ ಪಿಂಡಿಲ್ಗಟ್ಟಿ ಮೇವಂ ಮಗುಳ್ಚಿ . . . ಕಾಳರಕ್ಕಸರಂತಿರ್ಪ ಕಾಳ್ಕೋಣಂಗಳಿಂ (ಗಿಂಕ. ೦-೦೨೮ ವ) ; ರಕುತದ ಕಡಲೊಳಗೆ ಬೆಂಡೆದ್ದು ನೆಗೆದುದು ಕೋಟಿಪಾಯದಳ (ಕುಮಾರವ್ಯಾ. ೬-೯೮) ; ಆರ ಸಂತೈಕೆಗುಂ ಮಳ್ಗಲಾರದತಿಸಂತಾಪದಿಂದೆ ಬೆಂಡೇಳ್ವನಂ, ಭರತನಂ ಬಂದೆಳ್ಚರಿಸಿದತ್ತು ಗುರುವಸಿಷ್ಠನ ವಾಣಿ (ಶ್ರೀರಾಪಶಾ. ೦೦೬-೦೯೬). **ಬೆಂಡೇಳು** : ೨. ವನಚರಶ್ರೇಣಿ ಬೆಂಡೆದ್ದು ತೇಲಿದುವು (ಷೋಹಶ. ೦೯-೯೫) ; ಆ ತೆರೆನೊರೆಗಳ ನೆಲೆಯಲ್ಲಿ ಮೂಲೋಕವೇ ಮುಳುಗಿ ಬೆಂಡೇಳುಹುದು (ಮುಂಗಾಪು. ೨).

[ ಬೆಂಡು + ಏೞ್$_1$ ]

**ಬೆಂಡೇೞಿಸು** (ಕ್ರಿ). ಬೆಂಡಾಗುವಂತೆ ಮಾಡು ; ನಿಸ್ಸತ್ತ್ವಗೊಳ್ಳುವಂತೆ ಮಾಡು : ಬಿಮ್ಮನೆ ಬಿಗುಪೇಱೆ ಮೀಱೆ ಪೊಣ್ಮುವ ಮೊಲೆಗಳ್ ಪಿಮ್ಮೊಸೆದೋರ್ಪಿನೆಗಂ ಮನದುಮ್ಮಹದಿಂ ಬಿಗಿದು ಬಿಗಿದು ಬೆಂಡೇೞಿಪನೋ (ತಳಪ. ೬-೨೦೯).

[ ಬೆಂಡೇೞ್ + —ಇಸು$_3$ ]

**ಬೆಂಡೋಲೆ** (ನಾ). ಒಂದು ಬಗೆಯ ಕಿವಿಯ ಆಭರಣ ; ಓಲೆ ; ಹಿಂದಿನ ಕಾಲದಲ್ಲಿ ಕಿವಿಗೆ ಬೆಂಡನ್ನೇ ಓಲೆಯಂತೆ ಧರಿಸುತ್ತಿದ್ದರು : ಬೆಂಡೋಲೆ ಮುಂಜುಹು ಮಾಗಾಯಿಯ್ . . . ಗೋಡೆಯುದುಡಿದಾರಂ ಭೂಮಂಡಲಪತಿಯಾತ್ಮಜಂಗೆ ರಂಜಿಸುತಿರ್ಕಂ (ವಶಕು. ೨-೬೩) ; ಮಾಂಗಾಯಿ ಬಂದಿ ಬೆಂಡೋಲೆ ಸಿಂಗಾರವಾಗಿ ಮತ್ತಾ ಬಾಲಕೇಶವನಂಗಣದೊಳಗಾಡುತಿರಲು (ಕೇಬಂಕಂ. ೦೫-೮೩). [ ಬೆಂಡು + ಓಲೆ ]

**ಬೆಂತರ**, ವೆಂತರ (ನಾ). ಭೂತ ; ಪಿಶಾಚಿ : ಎನಿಸುಕಾಲ ನಿಮ್ಮ ಪೂಜಿಸಿ ಏವೆನಯ್ಯಾ ಮನದಲಿ ದೃಢವಿಲ್ಲದನ್ನಕ್ಕ ನಿಧಾನವ ಕಾಯ್ದಿರ್ದ ಬೆಂತರನಂತೆ ಆದೆಱ ವಿಧಿಯೆನಗಾಯಿತ್ತು (ಬಸವ. ೯೯) ; ಕರವೆಸೆಯೆ ಸಮೆದು ಬಂದುದು ಚರಣಾಯುಧಯುದಱ ಚಿತ್ರಪರಿಶೋಭೆಗೆ ಬೆಂತರನೊಂದಾಶ್ರೈಸಿದುದು (ಹುಷೋತ. ೩-೨೯) ; ಬೆಂತರ ದೈವವೆಂಬವವು ವಹಿಲದಿಂದೊಂದೊಂದು ಕೆಲಸಕೆ ವಿಹಿತವಾಗಲು (ಬಸಪು. ೩೩-೩೦). **ವೆಂತರ** : ನರ್ತಕಿಯರಾಟಗಳ ನೋಡಲು ಮುತ್ತುತಿಹ ವೆಂತರರ ಜಡಿಕೈದತ್ತ ತೊಲಗಿಸಿ (ಶಾಳ್ಮಶಾ. ೩೩-೩೭) ; ಹಿಂದೆ ಕಳಿಕನ ದಿನದಿ ಹಾದರದಿಂದ ರುದ್ರನ ಲಿಂಗಭೇದನವೆಂದುದಾಧರಿಸಿರ್ದ ವೆಂತರನಾಗಿ ಪೂಜೆಯನು ನಿಂದು ತಾನೇ ಲಿಂಗನಾಗಿಹೆನೆಂದುದಾದಿನದಿಂದ (ಚಿಟ್ರಪು. ೬೨-೩೯) ; ಸುರರು ವೆಂತರಜ್ಯೋತಿರೇಂದ್ರರು ಉರಗ ವಿದ್ಯಾಧರರು ಸುರಕುಜಧರವು ಫಲಪುಂಜದಲಿ ಕಾಲತ್ರಯವು ಪೂಜಿಪರು (ಜಾಗಕ. ೦-೦೦೯).

[ < ಸಂ. ವ್ಯಂತರ ]

**ಬೆಂತರಬಲ್ಲಹ** (ನಾ). ಪಿಶಾಚಿಗಳ ಒಡೆಯ ; ಭೂತನಾಥ ; ಶಿವ : ಪಲಗಣ್ಣಂ . . . ಬೆಂತರಬಲ್ಲಹನುಜ್ವಲಿಸುವ ಜೋಯಿಸರಾಣ್ಮಂ ಮಿಗದ ರಸಂ ಮೊದಲಾಗಿ ಸಲೆ ಸೊಗಯಿಸುವ ಶತೇಂದ್ರರ್ . . . ಜನಪನ ಗಂಧಕುಟಿಯೊಳೆಡಗಿಱಿದಿಪುದು (ಜಯುಕಾ. ೧೬-೩೯).

[ ಬೆಂತರ + ಬಲ್ಲಹ$_1$ ]

**ಬೆಂತರಿ** (ನಾ). ಹೆಣ್ಣುಭೂತ : ಪಿಶಾಚಿನಿ : ತತ್ಪುರುಷಪ್ಯಾಲಿ ಮಡಿದು ಬೆಂತರಿಯಾಗುದಯಿಸಿ ಕಾಳಿವೆಸರನಾಂತು ಕರಂ ಪಿಂತಣ ಭವದನೆನೆಯಿತ್ತು (ಜಯುಕಾ. ೦೦-೪೨).

[ ಬೆಂತರ + —ಇ$_2$ ]

**ಬೆಂದ** 'ಬೇ$_1$' ಪರಾ.

**ಬೆಂದಗುಳ್** (ಕ್ರಿ). ಬೆನ್ನಟ್ಟು ; ಓಡಿಸಿಕೊಂಡು ಹೋಗು : ಅಂದವು ದಟಲೆಯೆ ಮುನಿಜನಂದಮನಳವಿಗಳೆದು ಕೇಸರಿಯುಳವಂ ಬೆಂದಗುಳೆ ವಜ್ರಬಾಹು ಪುರಂದರರ್ (ಶಂಬಾಪಶಾ. ೦-೦೩೭) ; ಚಾರುದತ್ತಂ ಚಾಪಹಸ್ತನಾಗಿ ಭೋರೆಂದಿಸಲವಂದಿರಂ ಬೆಂದಗುಳ್ದು ತಾನಂದು ಮಗುಱ್ದಂತೆ ಪೋಗೆ (ನೇಬಂಪು. ೯-೭೦ ವ).

[ ಬೆಂ$_1$ (< ಬೆನ್) + ತಗುಳ್$_1$ ]

**ಬೆಂದವಾಡಿ** (ನಾ). ಒಂದು ನಾಡಿನ ಹೆಸರು : ದೇವಜ್ಞಯ ಮೆಚ್ಚಿ ಬೆಂದವಾಡಿಯ ಸೋಮಶಿವರಂ ಬರಿಸಕ್ಕೆ ಸಿವಸ್ಥಾನಕ್ಕೆ ಮುನ್ನ ಕೊಟ್ಟ ಭೂಮಿ (ಎಕ. III (R), ಗುಂಡ್ಲುಪೇ. ೬೨-೭ ; 995).

[ ? + ಪಾಡಿ$_2$ ]

**ಬೆಂದಿ** (ನಾ). (?) : ಮಱುಮಾರ್ತ್ಗೆಗೊಳ್ಳನ್ ಬೆಂದಿಯುಂ ಕಳಚುಮಾಜಿಡಿಯುಮಾಗಳಿದನೆ ಕಾದಿ ತನ್ನಾಳ್ದಾತ ಸಯೆ ಬಾಟನ್ (ಶಾಇಇ. XI — i, ೦೦-೭ ; 865).

[ ? ]

**ಬೆಂದು** 'ಬೇ$_1$' ಪರಾ.

**ಬೆಂದೊಗಲ್** 'ಬೆಂದೊವಲ್' ನೋ.

**ಬೆಂದೊವಲ್**, ಬೆಂದೊಗಲ್ (ನಾ). ಬೆನ್ನಿನ ಚರ್ಮ : ಮೃಗಕುಳಮಾಸೆಗೆಯ್ಯೆ ಮೃಗತೃಷ್ಣಿಕೆಯಂ ಜಳಮೆಂದು ತೃಷ್ಣೆಯಿಂ ಪಗಲಿಱಿಮನ್ನೆಗಂ ಪರಿದು ಗಂಟಲುರಂಬರಮಾಱಿ ಬೆಂದೊವಲ್ ತೆಗಳೆ ಬಿಟ್ಟೆ . . . ನಡೆಗೆಟ್ಟುವು ತೃಷ್ಣೆಯಿನಾರೋ ಬೇಯದರ್ (ಶಂಬಾಪಶಾ. ೭-೯೩) ; ತೊಡರ್ದೊಡರಾತಿ ಭೂಭುಜರ ಬೆಂದೊವಲಂ ಪೆಡಮಂಡೆಗೆತ್ತಿ ಕೂಗಿಡಸದೆ . . . ಮಾಣ್ಬನೆ ಸಮರದೊಳ್ (ಎಕ. XI, ದಾವಣ. ೩೫-೨೭ ; 1160) ; ಪಂದಲೆ, ಬೆಂದೊವಲ್ (ಶಬ್ದಸು. ೬೦ ಪ್ರಯೋ). **ಬೆಂದೊಗಲ್** : ಬೆಂದೊಗಲ್ ಪೊರೆವೊರೆಯೆದರ್ದು ಸಾಯದ ಮೃಗವ್ರಜಮಿಲ್ಲ . . . ಆ ನಿದಾಘದೊಳ್ (ಸೂಕ್ತಿಸು ೦೭-೯೫).

[ ಬೆಂ$_1$ (< ಬೆನ್) + ತೊವಲ್$_3$ (< ತೋಲ್$_1$) ]

**ಬೆಂಪೂರ್**, ಬೆಂಪೂರು (ನಾ). ಒಂದು ಊರಿನ ಹೆಸರು : ಎಱೆಯಪಂ ಮೆಚ್ಚಿ ಇರುಗಱ್ಗಿ ನಾಗತ್ತರವಟ್ಟಂಗಟ್ಟಿ ಬೆಂಪೂರ್ಪ್ಪನ್ನೆರಡುಮಂ . . . ಇತ್ತನ್ (ಎಕ. IX, ಬೆಂಗಳೂ. ೮೩-೫ ; ಸು. 890). **ಬೆಂಪೂರು** : ಬೆಮ್ಪೂರು ತೊವಗೂರು . . . ಪರವೂರು ಕೂಡಲೆ ಇನಿತುಮಂ ಪೊಲವೇರೆ ಸಹಿತ ಮಿತ್ತನ್ (ಎಕ. IX, ಬೆಂಗಳೂ. ೮೩-೬ ; ಸು. 890).

[ ? + ಊರ್ ]

**ಬೆಂಪೂರು** 'ಬೆಂಪೂರ್' ನೋ.

**ಬೆಂಬಂಪಾಟಿ್** (ನಾ). ಒಂದು ಊರಿನ ಹೆಸರು (?) : ಉತ್ತರತಃ ಬೆಪ್ಪು ವ್ಯಾಟಿ್ ಪುಣುಸೆಪಟ್ಟ ಸಹಿತಂ ಪಲ್ಲವತಟಾಕಮಿತಿಗ್ರಾಮಸ್ಯ ನಾಮಧೇಯಂ ಕೃತ್ವಾ (ಎಕ. III. ಮುಂಡ್ಯ. ೦೦೩-೩೬ ; 713). [ ? + ಪಾಟಿ್]

**ಬೆಂಬಡಿಗೆ** (ನಾ). ಬೆನ್ನಿಗೆ ಬಾರಿಸುವ ಕೋಲು, – ಬಡಿಗೆ : ಬಡದೆಮ್ಮು ಕಂಡ ಜೀವರ ಭವವ್ರಜದ ಬೆಂಬಡಿಗೆ . . . ದುರಿತವನುರುಹಿ ಸುಡುವ ಕಿಚ್ಚೆಂದೆನಿಪ ತುಂಗಭದ್ರಾನದಿಯನವನೀಶ ನೋಡು (ಹತಕ. ೩-೬೯) : ಸಂಶಯಪಿಶಾಚಕ್ಕೆ ಬೆಂಬಡಿಗೆಯಾಗಿ ಐತನ ಮನಸ್ಸು ಪ್ರಫುಲ್ಲಿತವಾಯಿತು (ಮಕಿಶು. ೨೦೦). [ಬೆಂ$_1$ (< ಬೆನ್) + ಬಡಿಗೆ$_1$]

**ಬೆಂಬಡೆ** (ನಾ). (?) : ನಡಸುವ ದತ್ತಿ ಪತ್ತಿಯ ಹೇಱು ೧೦ ಕೆ ಪಣ ೧ ಕೊಂಡಲ್ಲಿ ಹತ್ತಿ ಪಲ ೫ ಬೆಂಬಡೆಯ ಮಳೆವೆ ೧೦ ಕೆ ಪಣ ೧ (ಎಕ. IX (೩). ದೊಡ್ಡಬ. ೩೦-೩೯ ; ಶು. 1250). [ ? ]

**ಬೆಂಬತ್ತಳಿಕೆ** (ನಾ). ಬೆನ್ನಿಗೆ ಕಟ್ಟಿಕೊಳ್ಳುವ ಬಾಣದ ಕೋಶ : ತೂಣೀರ : ಕಳಚಿದನು ಸೀಸಕವ ಬೆಂಬತ್ತಳಿಕೆಯನು ಪಜಿಪ್ರಂಗಿ ಮೊಚ್ಚೆಯ ಬಿಲುಸರಳನಿಳುಹಿದನು ರಥದಲಿ ದೈತ್ಯರಿಪು ಸಹಿತ (ಕುಮ್ಯಾ.ಶ. ೦೬-೯). [ಬೆಂ$_1$ (< ಬೆನ್) + ಬತ್ತಳಿಕೆ (< ಪತ್ತಳಿಕೆ$_1$) ]

**ಬೆಂಬತ್ತು**, ಬೆನ್ನುಹತ್ತು (ಕ್ರಿ). ೧. ಹಿಂಬಾಲಿಸು ; ಅನುಸರಿಸು : ಮನವೇ ಕೂಡಲ ಸಂಗಮ ದೇವರ ಬಿಡದೆ ಬೆಂಬತ್ತು (ಬಸವ. ೨೬೬). ೨. ಓಡಿಸಿಕೊಂಡು ಹೋಗು ; ಬೆನ್ನಟ್ಟು : ಬಡಪಂ ಬೆಂಬತ್ತೆ ಮೇಪಂ ಮಱಿದು . . . ಐಂದಿರ್ದುದೋರೊಂದೆಡೆಯೊಳ್ ತಾಱಲ್ಗೆಳೊತ್ತಂಬಿಡಿದು ವ್ಯಾಗವ್ಯಾಗೀವ್ಯಂದಮೋರಂದದಿಂದಂ (ಕಂದ್ರ.ಕು. ೯-೯೬) ; ದುಶ್ಯಳೆಯೈದೆತನ ಬಯಲಾಯ್ತೆನುತ ಬೆಂಬತ್ತಿದರು ಖಳನ (ಕುಮ್ಯಾ.ಶ. ೨೨-೨೩). **ಬೆನ್ನುಹತ್ತು** : ೧. ಆಕಾಶ, ಪಾತಾಳ, ಎರಡರಲ್ಲೂ ಇಲ್ಲ ತಾಳ ಮೇಳ ಭೂಗೋಳಕ್ಕ ಬೆನ್ನುಹತ್ತಿಹುದು ಬೇತಾಳ (ನಿರಮು. ೦೩-೬) ; ಆ ಕೊರಗು ಒಂದೆರಡು ದಿನಗಳವಲ್ಲ, ವರ್ಷಗಳವಲ್ಲ ಆತನ ಬದುಕಿಗೇ ಬೆನ್ನುಹತ್ತಿದ ಮಹಾಭೂತ ಮದು (ಜಕಿತ. ೦೦೦). [ಬೆಂ$_1$ (< ಬೆನ್) + ಪತ್ತು$_1$]

**ಬೆಂಬದಿ** (ನಾ). ಹಿಂಭಾಗ ; ಹಿಂಬದಿ : ಪದದ ಘಟ್ಟನೆಯಿಂದ ಶಿಖರಗಳು ದುರಿದುವು ತರುಕೋಟಿಗಳು ಬೆಂಬದಿಯೊಳಗಿರಿದಮಬುಧಿ ಇಬ್ಬಗೆಯಾಯ್ತು (ಅಪಂರಾ. ೯-೩-೨೬). [ಬೆಂ$_1$ (< ಬೆನ್) + ಬದಿ$_1$]

**ಬೆಂಬರಂ** (ಅ). ಬೆನ್ನಿನ ವರೆಗೆ ; ಮುಡಿಯಿಂ ಬೆಂಬರಮೆಯ್ದೆ ಸೀಳ್ದ ಶಬಸಂ ಘಾತಂಗಳಂಗುಷ್ಟದಿಂ ತೊಡೆಯಿಂ ತಾಱಿಸಮೆಯ್ದೆ ಪೋಟ್ಟ ಪೆಣಗಳ್ . . . ಕರಂ ಭೀಕರಂ (೦ೀಲಾಪ. ೬-೬).

[ಬೆಂ$_1$ (< ಬೆನ್) + — ಬರಂ (< — ವರಂ)]

**ಬೆಂಬರಿ** (ಕ್ರಿ). ೧. = ಬೆಂಬತ್ತು ೧ : ಈ ಮರ್ತ್ಯದೇಹದಿ ದಿವಿಜಪತಿಯೋ ಮೇಣ್ ಜಯಂತನೊ ಇವನೆನುತ ಬೆಂಬಳಿ [ರಿ] ದು ಕಾಷ್ಠಾಂಗಾರ ಬೆಱಗಾದ (ಜೀಮಂತ. ೦೩-೦೬). ೨. = ಬೆಂಬತ್ತು ೨ : ಕುಮಾರನಾ ಮದದಾನೆಯನು ಬೆಂಬರಿದು ಮಿಗೆ ಸರದೋಱಿ ಕೇಳುತದು . . . ಘೋರಸೆ ಬಿಟ್ಟ ಕಣು ಬಿಗುಪೆಱಗದಿನಿದಿರಾಯ್ತು (ಶಾಕ್ಯಶಾ. ೦೬-೦೩). ೩. ಓಂಬರಿ ; ಹಿಮ್ಮೆಟ್ಟು : ಸೂಕರನಾ ಕರಿಗಂಜಿ ಪೊಕ್ಕು ಬೆಂಬರಿವರಿವಂತು ಪೆರ್ಬದಿರನೆತ್ತಿದೊಡಂತದು ತವಗೆ ಮೋಘಮಂ (ಸೂಕ್ತಿಸು. ೩-೬೯). [ಬೆಂ$_1$ (< ಬೆನ್) + ಪರಿ$_2$]

**ಬೆಂಬಲ**, ಬೆನ್ನುಬಲ (ನಾ). ೧. ಹಿಂದಿರುವ ಸೈನ್ಯ : ಹಿಂದೆ ಬರುವ ಪಡೆ : ಮಲಯಮಾರುತನ ಬೆಂಬಲಮುಮಂ ಚೈತ್ರಮಿತ್ರನ ಮುಂಬಲ ಮುಮಂ . . . ದರ್ಪಕನ ದರ್ಪಂಬೆರಸಟಕುಳಿಗೊಂಡು ಗಂಡೇಱಿದ ಗಂಡ ಗಾಡಿ ರೂಢಿಪಡೆಯೆ (ಅಪಂಡ. ೬-೨೨ ವ) ; ನೀ ಮುಂದಲೆಯ ಹಿಡಿದೆಳ ಕೊಂಡು ಬಾ ಬೆಂಬಲದಿ ಬಂದಿದಿರಾಗಿ ಕಾಳಗಗೊಟ್ಟು ಮಾರಾಂತ್ರು (ದೇವೀಖು. ೬-೨). ೨. (ಅಲಂ) ಸಹಾಯ ; ಆಸರೆ ; ನೆರವು : ಪಲವುಂ ಜನ್ಮದೊಳಾದ ನಿನ್ನ ಕೆಳೆಯಂ ಬಂದಪ್ಪನಾತಂಗೆ ಬೆಂಬಲಮಿನ್ನೀಂ ನಿನಗಾತಂ (ಕುಂದಶಾ. ೯-೩೩) ; ತಂಗಾಳಿಯುಂ ತಿಂಗಳುಂ ಬನಮುಂ ಬೆಂಬಲಮಾಗಿ ತೀರ್ಚಮೆ ಗಡಂ ಕೊಂಡಾಗ್ಗಿಯಂ ಸುಗ್ಗಿಯೊಳ್ (ಅಪಪು. ೬-೨೮) ; ಬೆಂಬಲಕೆ ತಾನೆಂದು ಬಯಲ ಪಿಡಂಬದಲಿ ಕಾಳಗವ ಮಸೆದರೆ ನಂಬಿ ಕೆಟ್ಟರು ಕೃಷ್ಣನನು (ಕುಮ್ಯಾ.ಆ. ೦೩೯). **ಬೆನ್ನುಬಲ** : ೨. ಬೆನ್ನುಬಲವಾಗಿ ಪರಿಯು ದ್ದರೆ ಸರ್ವ ತನ್ನಿಂದ ತಾನೇವೆ ಪ್ರಾಪ್ತವಾಗುವುವು (ಬಾಸು. ೬೬-೯).

[ಬೆಂ$_1$ ( <ಬೆನ್) + ಬಲ$_3$]

**ಬೆಂಬಲಂಬಾಯ್** (ಕ್ರಿ). ಸಹಾಯಕ್ಕೆ ಹೋಗು ; ನೆರವಿಗೆ ಧಾವಿಸು : ಪಾಂಚಾಳರಾಜತನೂಜೆಯ ಮಾತಿಂಗೆ ಬೆಂಬಲಂಬಾಯ್ವಂತೆ ಭೀಮಸೇನ ನಿಂತೆಂದಂ (ಪಂಪಭಾ. ೬-೩೨ ವ). [ಬೆಂಬಲ + ಪಾಯ್$_1$]

**ಬೆಂಬಲಿ** (ಕ್ರಿ). (ಸ್ಥಿತಿಯನ್ನು ಅನುಸರಿಸಿ) ಹೆಚ್ಚಾಗಿಸು : ವೃದ್ಧಿಯಾಗಿಸು: ಘೋರಸೆ ಬಸಿಱುಬ್ಬೆ ಕರಂ ಪೂರಿಸುಗುಮಪಾನವಾಯು ಜಠರ ಮಾನದಸಂತಾರಯ್ಯುಂ ಕಡೆಗಣ್ಣಿಂ ನೀರಂ ಬೆಂಬಲಿದು ತೋರ್ಪುದು ಮರಣಭಯಂ (ಅಶ್ವಶಾ. ೬-೩೯). [ಬೆಂ$_1$ (< ಬೆನ್) + ಬಲಿ$_1$ (< ಬಲ್$_2$)]

**ಬೆಂಬಲಿಗ** (ನಾ). ಸಹಾಯ ಮಾಡುವವನು : ನೆರವಿಗೆ ಬರುವವನು : ಅವನು ಆರಾಧಕನ ಹೃದಯದಲ್ಲಿ ನಿಂತು ಮಿತ್ರನಂತೆ ಬೆಂಬಲಿಗನಾಗಿ ಮುಕ್ತಿಪಥಕ್ಕೆ ಕರೆದೊಯ್ಯುತ್ತಾನೆ (ಶಾರದ. ೨೯೩) : ಬೆಂಬಲಿಗರ ಬಲವಿಲ್ಲದೆ ಮುನ್ನುಗ್ಗಿ ಮುಖಭಂಗಪಡಿಸಿಕೊಳ್ಳಬೇಕೇಕೆ ? (ಶಾಬಂ. ೯೯). [ಬೆಂಬಲ + — ಇಗ]

**ಬೆಂಬಲಿಸು** (ಕ್ರಿ). ೧. ಸಹಕರಿಸು; ಒತ್ತಾಸೆ ನೀಡು : ಸನ್ನದ್ಧನಾಂ ಧರ್ಮಯುದ್ಧಕೊಡೆಯಾ ! ಬೆಂಬಲಿಸು ನನ್ನನೊಡೆಯಾ ! (ಗೀಬಂ. ೬೨-೩೬). ೨. ಅನುಮೋದಿಸು: ಸಭೆಯಲ್ಲಿ ಸೇರಿದವರೆಲ್ಲರೂ ಅವನ ಮಾತನ್ನು ಬೆಂಬಲಿಸಿದರು (ರೂಢ). [ಬೆಂಬಲ + — ಇಸು$_3$]

**ಬೆಂಬಳಿ** 'ಬೆಂಬಱಿ' ನೋ.

**ಬೆಂಬಳಿಗೊಳ್** 'ಬೆಂಬಱಿಗೊಳ್' ನೋ.

**ಬೆಂಬಳಿವಿಡಿ** 'ಬೆಂಬಱಿವಿಡಿ' ನೋ.

**ಬೆಂಬಳಿಸು** (ಕ್ರಿ). ೧. = ಬೆಂಬತ್ತು ೧ : ಮಾತಾಡುವ ಅವಶ್ಯಕವಿಲ್ಲದೆ ಕಪಾಲಕುಂಡಲೆಯು ಬೆಂಬಳಿಸಿ ಬರುವುವರಲ್ಲಿ ಅದು ವ್ಯಕ್ತವಾಗುವುದು (ಕಪಾಕುಂ. ೩೯). ೨. = ಬೆಂಬತ್ತು ೨ : ಕಂರುಡನು ಕಂಡನು ಕಿವುಡನು ಕೇಳದನು ಕುಂಟನು ಬೆಂಬಳಿಸಿದನಯ್ಯ (ಪರಶ. ೩).

[ಬೆಂಬಳಿ (<ಬೆಂಬಱಿ) + — ಸು$_1$]

**ಬೆಂಬಱಿ**, ಬೆಂಬಳಿ (ನಾ). ೧. ಬೆನ್ನಿನ ಭಾಗ ; ಹಿಂಬದಿ; ಹಿಂದು : ಮುಹೂರ್ತಮಾತ್ರದೊಳ್ ಗಡ ಪದಿನೈದುಯೋಜನಮನೊರ್ವನೆ ಸಂಧಿಸಿ ಪೋದನೆಂದು ಪೇರಡವಿಯೊಳಾ ತುರಂಗಪದನರ್ಕಳ ಬೆಂಬಱಿಯುಂ ಮಹೀಭುಜಂ (ಕಾಪಂಪೂ. ೬೨೦); ಗಟಿವಟಿಯ ಪಾವಿನಂತೆ ಬೆಂಬಱಿಯಂ ತಗುಳ್ದು ಪರಿತರೆ (ಕುಕುಪಜ ೬-೫೩ ವ); ಅದೊಂದು ಕಂತುತದ ಬೆಂಬಱಿಯೊಳ್ ಪೊಳೆದಾಡೆ ಕಣ್ಬೊಣರ್ ಸುಲಲಿತೆ ಸೆಡನಾಡಿ ಮುಱುಗಾಡಿಸಿದಳ್ ಪರಿಯಂ ಸುಖಾಬ್ಧಿಯೊಳ್ (ಜಗಬ. ೫-೦೯). ೨. ಬೆನ್ನ ಹಿಂದೆಯೇ ಬರುವುದು ; ಹಿಂಬಾಲಿಸುವುದು ; ಅನುಸರಣೆ : "ಬೆಂಬಱಿ—ಹಿಂದೆ ಬರ್ಪುದು" (ಕಮುದ. ಶು. ೦); ಅತೀವಘೋರತಪದಿಂ ಯತಿಗಳ್ ಮಿಗೆ ಕಾಣದಿರ್ಪ ವಿಟ್ಟಲಿಸನಂತರೀಕ್ಷಿಸಿ ನಿಜೇಚ್ಛೆಗೆ ಬೆಂಬಱಿಯಾಗಿ ತಂವ ನಿಶ್ಚಳಮತಿ ಪುಂಡರೀಕಮುನಿ ತೀರದೊಳಿರ್ದಂ (ಪಕಶು. ೦೯-೬).

**ಬೆಂಬಳಿ** : ೧. ಆತ ಬಿಟ್ಟುವ ಬಿಡುವೆನು ಅವನ ಬೆಂಬಳಿಯ ಸಲುವೆನು (ಸಿದ್ಧವ. ೯. ೧೯೯-೬೨೯); ಸರಳುಗಳ ಬಳಿಸರಲು ಬೆಂಬಳಿಸರಳ ಹಿಂದಣ ಸರಳುಗಳ ಪಡಿಸರಳ ಸಾರದ ಸೋನೆ ಸದೆದುದು ವೈರಿವಾಹಿನಿಯ (ಕುಮ್ಯಾ.ಶ. ೨-೩೯). [ಬೆಂ$_1$ (< ಬೆನ್) + ಬಱಿ$_3$]

**ಬೆಂಬಱಿಗೊಳ್**, ಬೆಂಬಳಿಗೊಳ್ (ಕ್ರಿ). = ಬೆಂಬತ್ತು ೧ : ಬಾಳ

ಮರಾಳಮಂ ಬಟಿಸಿ ಬೆಂಬಟಿಗೊಂಡೆಡೆಯಾಡುತುಂ (ಪುಶ್ಪಪು. ೩-೯೬).

**ಬೆಂಬಳಿಗೊಳ್ :** ಆತಂಗೆ ಮುನ್ನಿತ್ತ ನಂಬುಗೆಯು ಬೆಂಬಳಿಗೊಂಡು ಪೋಗಿ ಮರ್ತ್ಯದೊಳ್ ತೊತ್ತುಗೊಂಡು . . . ಬರ್ಪೆಂ (ಶಂಬರ. ೬-೩); ತುಂಬಿ ಪುಳುವಂ ಪಿಡಿದೊಯ್ವುದೊ ತಾನೆ ಪೋದುದೋ ಬೆಂಬಳಿಗೊಂಡು (ಶಶಳ. ೪೦). [ಬೆಂಬಟ್ + ಕೊಳ್$_1$]

**ಬೆಂಬಟಿವಿಡಿ, ಬೆಂಬಳಿವಿಡಿ** (ಕ್ರಿ). ೧. = ಬೆಂಬತ್ತು ೧ : ದೇವಿಯರ್ ಬೆಸಸಿದಂತೆ ಗೆಯ್ವೆನೆಂದಾ ಕಾಂತೆಯು ಬೆಂಬಟಿವಿಡಿದು ನಡೆವ ಶಿಷ್ಯನಂತೆ ಪೋಗೆವೋಗೆ (ಕಾದಂಪೂ. ೬೯೦); ಎನಿತಾನುಮಜಿಸಿ ಕಾಣದೆ ಬೆಂಬಟಿವಿಡಿದೊಂದನುಮಾನದಿಂ ಸಹೇತುಕವನದೆಡೆಗೆ ಪಾಗುಟ್ಟು ಬಂದನಾ ವಿಜಯನೃಪಂ (ಅಶಂಪು. ೦೦-೫೪). **ಬೆಂಬಳಿವಿಡಿ :** ೧. ಮಧುರ ತಲೆಗೇಱು ಅರ್ಥ ನೀಗಾಡಿ ಆ ಕಱುವಿನ ಬೆಂಬಳಿವಿಡಿದು ಭವ ಪರಿಯಿತ್ತು (ಸುಹಾಪೇ. ೩. ೫೬-೦೯೦); ನೆಳಲಂತೆ ಬೆಂಬಳಿವಿಡಿದು ಱಡಲಿನಂತೊಳಗು ದೋಱದೆ ಬೀಂಚಿನಂತೆ ಸುಳಿದು ಸಾಮುದ್ರಿಕನಂತರ್ಥರೇಖೆಯ ತಿಳಿವುದು (ಅಂಕಿತ. ೩-೦೫೪). ೨. ಬೆನ್ನಿನ ಮಾರ್ಗವನ್ನು ಹಿಡಿ; ಹಿಂಭಾಗವನ್ನು ಅನುಸರಿಸು : ಬೆಳೆದು ಕವಲಿಱಿದು ನೀಳ್ದ ಪ್ರವಾಳಜಾಳದಂತೆ ಬೆಂಬಳಿವಿಡಿದೀದ ಕೆಂಜೆಡೆಗಳಿಂ (ಬಸವ. ೪-೦೦). [ಬೆಂಬಟಿ + ಪಿಡಿ$_1$]

**ಬೆಂಬಾಯ್** (ಕ್ರಿ). ಬೆನ್ನೇರು; ಸವಾರಿ ಮಾಡು : ದಂತವಮಂ ಮೆಟ್ಟಿ ಬೆಂಬಾಯ್ದು ತನ್ನಧಿಕಕರಣದಿಂ ಕರಿಮದವನುಡುಗಿಸಿದ ಕುವರನಂ ಖಚರನೊರ್ವಂ . . . ಜಿನಗೃಹದಲ್ಲಿ ತಂದಿರಿಸಿ ಪೋದಂ (ಜ್ಞಾಶಕಂ. ೦-೬೩). [ಬೆಂ$_1$ (< ಬೆನ್) + ಪಾಯ್$_1$]

**ಬೆಂಬಾಲಿಸು** (ಕ್ರಿ). ಹಿಂದೆ ಇದ್ದು ರಕ್ಷಿಸು; ಬೆಂಗಾವಲಾಗಿದ್ದು ಕಾಪಾಡು : ತನ್ನಿಷ್ಟದಾದರ್ಶವಂ ಪೂಜಿಸೋಲ್ದಿಸಿ ಬೆಂಬಾಲಿಪುದೊ ಲಕ್ಷ್ಮಣನ ಧರ್ಮವಾತ್ಸಲ್ಯ ತಾಂ (ಶ್ರೀರಾಮಾ. ೦೨೭-೬೪). [ಬೆಂ$_1$ (< ಬೆನ್) + ಪಾಲಿಸು]

**ಬೆಂಬಿಡಿ** (ಕ್ರಿ). = ಬೆಂಬತ್ತು ೧ : ಕುಡುಗುರುಳೆಂಬ ತಂಬೆಲರ ಬೆಂಬಿಡಿದಿಂ ಪೊಸವೇಟವೆಂಬ ಚಿಲ್ವಿಡಿದೆಳಮಾಮರಂ (ಅದಿಪು. ೦೨-೨೯); ಮನದ ಪಿಂತಣ ಧೈರ್ಯಂ ನಡೆಗೊಂಡುದು ಧೈರ್ಯದ ಬೆಂಬಿಡಿದೊರ್ವಳ ಜೀವಮಿರದೆ ಪೋಪವಾತ್ಮಾಗಳ್ (ಜಗಂ. ೫-೯೯); ಮೋಹನ ಕಲಾಪ್ರೌಢೆಯರ ಗಡಣ ಬೆಂಬಿಡಿಮ ಬರುತಿರ್ದುದಂತಾ ಪರಪೆಯೊಡನೆ (ಸೌಂದಪು. ೬-೯೬). [ಬೆಂ$_1$ (< ಬೆನ್) + ಪಿಡಿ$_1$]

**ಬೆಂಬಿಡು** (ಕ್ರಿ). ಬೆನ್ನು ಬಿಟ್ಟುಹೋಗು; ಅನುಸರಿಸದಿರು ; ಹಿಂಬಾಲಿಸದಿರು : ಮುಳಿದು ಮನಃಪ್ರಿಯಂ ಪೆಱಗುಗೆಯ್ದಿರೆ ಬೆಂಬಿಡದಪ್ಪಿಕೊಂಡ ನಲ್ಲಳ ಮೊಲೆಯೊತ್ತಿನೊಳ್ . . . ಪೋದುದು ಕೋಪಮೋಪನಾ (ಆದಿಪು. ೦೨-೦೨ ಅವ); ಬೆಂದ ಸಂಸಾರ ಬೆಂಬಿಡದೆ ಕಾಡುತ್ತಿರುವುದಯ (ಸುಹಾಪೇ. ೩. ೦೪-೦೬); ಹಿಂದೆ ಮಾಡಿದ ಕರ್ಮವೆಂದಿಗೂ ಬೆಂಬಿಡದು (ಸರ್ವಜ್ಞ. ೯೬೯). [ಬೆಂ$_1$ (< ಬೆನ್) + ಬಿಡು$_1$]

**ಬೆಂಬಿತ್ತಿಲ್** (ನಾ). ಹಿಂಭಾಗದ ಹಿತ್ತಿಲು; ಹಿಂದಿನ ಹಿತ್ತಿಲು : ಬೆಂಬಿತ್ತಿಲ ತೋಟ ಹಳುವಾದುದು (ಮೋಹತ. ೪-೫೩). [ಬೆಂ$_1$ (< ಬೆನ್) + ಪಿತ್ತಿಲ್ (< ಪಿಂತಿಲ್)]

**ಬೆಂಬಿಸಿಲ್** 'ಬಿಸುವಿಸಿಲ್' ನೋ.

**ಬೆಂಬೀವು** (ನಾ). ಬೆನ್ನಿನ ನರ, -- ಹುರಿ : ಮಿದುಳಿನ ನಡುವಿನ ಕಳಗೆ ಬೆಂಬೀವು ತಲೆಕಡೆಯಲ್ಲಿ ಮೊಂಡುಮುದ್ದೆಯಾಗಿರುವುದು (ಇಳೆಕೋ. I. ೦೪). [ಬೆಂ$_1$ (< ಬೆನ್) + ಬೀವು]

**ಬೆಂಬೀಳ್** 'ಬೆಂಬೀೞ್' ನೋ.

**ಬೆಂಬೀಳು** 'ಬೆಂಬೀೞ್' ನೋ.

**ಬೆಂಬೀೞ್, ಬೆಂಬೀಳ್, ಬೆಂಬೀಳು, ಬೆನ್ನುಬೀಳು** (ಕ್ರಿ). ೧. ಬೆನ್ನಿನ ಮೇಲೆ ಬೀಳು ; ಅಂಗಾತನಾಗು ; ಮುಖಮೇಲುಮಾಡಿ ಬೀಳು : ಅದಟಿಂ ಸಿಂಧುತನೂಭವಂ ವಿಜಯನೊಳ್ ಮಾರ್ಕೊಂಡಣಂ ಕಾದಲಾಱದೆ ಬೆಂಬಿೞ್ದೊಡೆ ಕಾದಲೆಂದು ಬೆಸನಂ ಪೂಣ್ದಂ ಗಡಂ ದ್ರೋಣಂ (ಪಂಪಭಾ. ೦೦-೫೩). ೨. ಬೆನ್ನಿಂದ ಹೊರಕ್ಕೆ ಬರು,—ಹೊರಬೀಳು : ನಲ್ಲಂಬೀದಿಸೆ ಪುಷ್ಪಬಾಣನಿರ್ದೆಯಂ ಬೆಂಬಿೞ್ದು ಬೞ್ಾಗಿ . . . ಮೆಯ್ಮಲ್ಲು ದಿಟ್ಟಗಳಾದೊಡಿಂದ್ರನೆನಿಸಲ್ಕಾರ್ಕಂ ಮಹೇಂದ್ರಾಂತಕಂ (ಕಾವ್ಯಸಾ. ೫೫೦ ಕೂಶ್ರಳ). ೩. ದೈನ್ಯದಿಂದ ಹಿಂಬಾಲಿಸು; ಶರಣಾಗತನಾಗು : ತೋರಜೞಿಕೆಯವಾಳ್ಗಳ್ ಬೞ್ಕ ಬೆಂಬೀೞ್ . . . ಬಂದುಪೋರ್ಪೊದಲೊಳ್ ಮಾವಿನ ಬೞ್ ಮಲ್ಲಿಗೆಯ ಕೋಲೆತ್ತೆತ್ತಲುಂ ಕಾವನಾ (ಕವ್ಯಕ. ೩೦೪). ೪. ಹಿಂದೆ ಬೀಳು ; ಹಿಂಜರಿ ; ಓಡು ; ಪಲಾಯನ ಮಾಡು : ನಿಚ್ಚಂ ಬೆಂಬಿರ್ದು ಚಿಂತಿಸಿ ದುಃಖದೊಳ್ ಪಿರಿದುಮಪರಿಂ ಕಣ್ಗೆಟ್ಟಂ ಭಟ್ಟಂ ನಿಕ್ಕಪ್ಪರ ದೂಸಱಿಂ (ಸಂಸುಪಾ. ೨-೯); ದನುಜಂ . . . ನೆಟ್ಟನೆ ಚಿಂತಾಗಿರಿ ಮೇಲೆ ಬೀೞ್ ಪಿರಿದುಂ ಬೆಂಬಿೞ್ದು ಬಂದೆಯ್ದಿ ಪೊಕ್ಕು ನಿಜಾವಾಸಮಂ (ಜಗಂ. ೩-೦೪); ಪುಲಿಯುಂ ಭೀಕರರೂಪದಾ ಮಱುಗಳುಂ ಬೆಂಬಿರ್ದು ಬೇಗಂ ಭಯಾಕುಲದಿಂ ಕಬ್ಬಿನ ಬಿಲ್ಲುಮಯ್ದುವರಲಂಬಾಗಿರ್ದ ವೇಂ ಚೋದ್ಯಮೋ (ಜಂಪು. ೬-೯೫). ೫. (ಆಲಂ) ಕೆಡುಕನ್ನು ಮಾಡಲು ಸಮಯವನ್ನು ಕಾಯು,—ಹೊಂಚುಹಾಕು : ಕರಂ ಬೆಂಬಿೞ್ದು ದುರ್ಯೋಕ್ತಿಯಿಂದದಯಂ ಧರ್ಮಜನಿಕ್ಕಿದಂ ಗುರುವಂ (ಪಂಪಭಾ. ೦೨-೩೫). ೬. ತಳಮಳಗೊಳ್ಳು; ದುಃಖಿಸು : ನಚ್ಚುಗೆಟ್ಟಬಡವನಂತೆ ಬೆಂಬಿರ್ದು ದೆಸೆಗೆಟ್ಟರಂತೆ ಚಿಂತಿಸಿ (ಧರ್ಮಾಮೃ. ೦-೦೬೪).

**ಬೆಂಬೀಳ್ :** ೧. ಬಾಡಿದ ಲತೆಯಂತೆ ಬೆಂಬಿದ್ದು ಪಟ್ಟರಲು (ತಿರುಂ. ದೇ. ೬-೦೬). ೪. ಹಱಿಮೆಟ್ಟಿ ನಡುಗಿ ಬೆಂಬಿರ್ದನಾ ಪಾತಕಂ (ಸಿಂದರ. ದೇ. ೬೪-೦೬); ನಂಬದಿರು . . . ಸಂಗರವೆಂಬ ಮಾತಿಗೆ ಹಂಬಲಿಸಿ ಬೆಂಬೀಳ್ದ ಬಾಹಿರರ (ಕುವ್ಯಾಳ. ೮-೯೩). **ಬೆಂಬೀಳು:** ೪. ದುರಿತಪಂಚೇಂದ್ರಿಯಂಗಳ ಬಳಿವಿಡಿದು ಭೂತಶರೀರದೊಳು ಬಿದ್ದು ಬೆಂಬೀಳುವನಲ್ಲ (ಶಿವಗೀ. ೨೭-೦೦೪); ವಿದುರ ಬೆಂಬೀಳದಿರು ಬಿಂಕದ ಹದನ ಬಲ್ಲೆನು ಭೀಮಪಾರ್ಥರ ಮುಂದವ ಬಯಸುವೆ (ಕುವ್ಯಾಸ. ೦೨-೬೪); ಅಜ್ಞಾನಿಗಳು ದಿಟ ಪರಿಭವಿಸಿದರೆ ತತ್ತ್ವವಿದ್ಯಾಪರಿಣತರು ಬೆಂಬೀಳಲರಿವರೆ (ಶಿಕಾಗ. ೫-೬-೫೭). ೬. ಪರರಿಂದ ಮಿಕ್ಕು ಬಾಳಲ್ ಬಯಸಿ ಕುದಿದು ಬೇಳಾಗಿ ಬೆಂಬೀಳುತಿರ್ದುಂ . . . ಗಾಸಿಯಾದಪ್ಪೆಂ (ರಣ್ಣಕ. ೦೦). **ಬೆನ್ನುಬೀಳು :** ೩. ನೀನು ಬಹುಶಃ ಎಣಿಸಿಕೊಂಡಿದ್ದಿರಬಹುದು . . . ನಾನೂ ಆ ಬೀದಿಯ ನಾಯಿಗಳಂತೆ ನಿನ್ನ ಬೆನ್ನುಬೀಳುತ್ತೇನೆಂದು (ಹೊಚ್ಚ. ೦೧); ನಿಮ್ಮ ವಿದ್ಯೆ ಅಪಾರವಾದುದು ಎಂತಲೇ ಜನ ನಿಮ್ಮ ಬೆನ್ನುಬಿದ್ದಿದ್ದಾರೆ (ಗಾಳಿಗು. ೦೩). ೭. (ತನ್ನ) ಬಳಿಕ ಜನಿಸು ; ಒಡಹುಟ್ಟು : ಸೃಷ್ಟಿಯಾದಿಮಾಯೆಯೆನ್ನ ಬೆನ್ನುಬಿದ್ದ ತಂಗಿಯು (ಕಹುಣ. ೦೦). [ಬೆಂ$_1$ (< ಬೆನ್) + ಬೀೞ್$_1$]

**ಬೆಂಬುಡಿಕೆ** (ನಾ). ಸಂಜೆಯ ಧೂಳು (?) : ಬಡಪಸು ನಸು ಸೋಂಕಲ್ಕಣಂ ವಿಶ್ವನಂದೀ ಕೆಡೆದೈ ಚೌವಟ್ಟದಿಂ ಬೆಂಬುಡಿಕೆಯೊಳ್ (ಶಾಂತೀಶ್ವ. ೭-೩೩). [ಬೆಂ$_2$ (< ಬಿಸಿದು) + ಪುಡಿಕೆ ?]

**ಬೆಂಬುಯ್ಯಲ್** (ನಾ). ಅಟ್ಟಿಸಿಕೊಂಡು ಹೋಗಿ ಮಾಡುವ ಕಾಳಗ; ಮೇಲೆ ಬಿದ್ದು ಮಾಡುವ ಯುದ್ಧ : ಪರಿವಿದ್ರಿಯಾದಿಗಳ ಬೆಂಬುಯ್ಯಲಂ ಪೋಪನುರವಣಿಪ ವಿಷಯಾದಿಗಳ ಬೇಂಟೆಯುಂ ಪೋಪ (ಸಿಂದರ. ದೇ. ೫೬-೦೪). [ಬೆಂ$_1$ (< ಬೆನ್) + ಪುಯ್ಯಲ್ (< ಪೊಯಲ್)]

**ಬೆಂಬೂದಿ** (ನಾ). ಬಿಸಿಯಾಗಿರುವ ಬೂದಿ; ಬೆಚ್ಚಗಿರುವ ಬೂದಿ : ಬೆನ್ನೀರ್, ಬೆಂಬೂದಿ, ಪಂದಲೆ (ಶಾಶಾಪ್ರ. ೦೪೫ ಉದಾ). [ಬೆಂ$_2$ (< ಬಿಸಿದು) + ಬೂದಿ]

**ಬೆಂಬೂರಿ** (ನಾ). ಒಂದು ಬಗೆಯ ಊದುವ ವಾದ್ಯವಿಶೇಷ :

**ಕೊಂಬು** ಕೊಳಲು ಚಿನ್ನ ಬೆಂಬೂರಿ ಹೆಗ್ಗಾಳೆ ಅಂಬಿನಾ ಹೊರೆ ಪೆಟಲಾಳು . . . ನಡೆಯಿತು ಪುರಕ್ಕಾಗಿ (ಗುಂಡುಸು. ೪). 'ಬುರುಗು$_2$' ಹೋ.
[ ? ]

**ಬೆಂಬೆಟ್ಟ** (ನಾ). ಕುದಿಯುತ್ತಿರುವ ಲಾವಾರಸವನ್ನು ಉಗುಳುವ ಬೆಟ್ಟ ; ಅಗ್ನಿಪರ್ವತ : ಸಂಜೆಯು ಓಲಗದಾಗ ಪ್ರೇಕ್ಷಕರಿಗೆ . . . ಸ್ತ್ರೀಪ್ರಪಂಚದ ಈರ್ಷ್ಯಾಸೂಯೆಗಳೆಂಬ ಬೆಂಬೆಟ್ಟಗಳನ್ನೂ . . . ಚಿತ್ರ ವಿಚಿತ್ರ ಪುಷ್ಪಮಾಲೆಗಳನ್ನೂ ಧರಯಿಸಿ ಆಳುತಿದ್ದ . . . ನಾಯಿಕೆಯಾಗಿದ್ದನು (ಮಂತ್ರಕ. ೨೮-೨೩). [(ಭೆಂ$_2$ <ಬಿಸಿದು)+ಬೆಟ್ಟ]

**ಬೆಂಬೊಳಲೆ** (ನಾ). ( ? ): ಚಕೋರಕ್ಕೆ ಮಕರಾತ—ಬೆಂಗದಿರ್, ಬೆಂಬೊಳಲೆ, ಬೆನ್ನೀರ್ (ಶಮುದ. ೧೮೨ ಪ್ರಯೋ). [ಬೆಂ$_2$ (<ಬಿಸಿದು) + ಪೊಳಲೆ ? ]

**ಬೆಕ್ಕಟ** (ನಾ). ಆಶ್ಚರ್ಯ ; ವಿಸ್ಮಯಂ : ಬೆಕ್ಕಟದಿ ನೋಡುವಿರಿ ನಿಮಗೇನಕ್ಕರವು ಅವರಲ್ಲಿ ಹೀನವು ಬಕ್ಕು (ಜನಭಾ. ೨೦-೬೩); ದನುಜೇಂದ್ರ ಬೆಕ್ಕಟದಿ ನೋಡ್ತನಗು ಪಂಜರಪಕ್ಕಿ ದನುಜರನೆಲ್ಲರನು ಹಾರಿಕ್ಕಿ ದೆಳೆಯುವನಲ್ಲವೆನುತಸುರೇಂದ್ರ ಖತಿಗೊಂಡ (ಜರಾಮಾ. ೦೨೦-೫೩). 'ಬೆಕ್ಕಟಗರೆ' ಪರಾ. [<ಬೆಕ್ಕಸ?]

**ಬೆಕ್ಕಟಗರೆ** (ಕ್ರಿ). ಆಶ್ಚರ್ಯಪಡು ; ಬೆರಗಾಗು : ಬೆಕ್ಕಟಗರೆವರೇನಂಗೇಶ ಸಾಧ್ಯಕೆ ಬರದು ನಡೆನಡೆಯೆಂದು ನಕ್ಕರು ಆಳಿರನ್ನೆಯರು (ಜನಭಾ. ೨೦-೨೭).
[ಬೆಕ್ಕಟ+ಕರೆ$_2$ (<ಕಱೆ$^3{}_1$) ]

**ಬೆಕ್ಕತ್ತು** (ನಾ). ಬೆನ್ನು ಮತ್ತು ಕತ್ತು ಸೇರುವ ಸ್ಥಳ ; ಕುತ್ತಿಗೆಯ ಹಿಂಭಾಗ : ಕಾವಿಯೊಳಗೆ ಅವಿತಿದ್ದ ಖಡ್ಗ ಹೊರಗೆ ಬಂತು. ಬೆಕ್ಕತ್ತಿಗೆ, ಬೆನ್ನಿಗೆ ಏಟುಬಿದ್ದು ಗಾಯಗಳಾದುವು (ತುಂಗಭ. ೦೦೫). 'ಹೆಕ್ಕತ್ತು' ಪರಾ. [<ಬೆನ್+ಕತ್ತು$_3$ (<ಕಬ್ಬು)]

**ಬೆಕ್ಕನೆ** (ಅ). ಒಂದು ಅನುಕರಣಾವ್ಯಯ : ನರನ ನೇಹದ ನಚ್ಚಿ ಬೆಕ್ಕನೆ ಬೆರತೆ ಪಗೆಯುವನೆಂಬುದನು ನೀನರಿಯೆ (ಅಪಂರಾ. ೫-೪-೯).
[ಬೆಕ್$_0$ + —ಅನೆ$_1$]

**ಬೆಕ್ಕರಿಸು** (ಕ್ರಿ). ೧. ಮೇಕೆಯಂತೆ ಧ್ವನಿಮಾಡು.—ಕೂಗು : "ಬೆಕ್ಕರಿಸು—ಅಜಧ್ವನೌ" (ಶಮುಧಾ); ತಾಂ ಪುರುಷನೆಂದಾಗಳೇ ಬೆಕ್ಕರಿಸುತ್ತಿಲ್ಲುತ್ತು ದಲ್ಲಕ್ಷನೆನುತಲವನಂ ತನ್ನಪೊಲ್ಮಾಡಿ ತೋದರ್ಾ ಮರುಳಾಟ ಕ್ಕೊಲ್ದುಮಾ ಗೌರವಮೆನಿಸುತ್ತಿರ್ದ ನೀಂ ವೀರಭದ್ರಾ (ವೀರಶ. ೦೦೦). ೨. ಅಹಂಕಾರಪಡು ; ಗರ್ವಿಸು ; ಬೀಗು : ಜಂಕರಿಸಂ ಕಾತರಿಸಂ ಮಾಂಕರಿಸಂ ಬೆಕ್ಕಸಂಬಡಂ ಬೆಕ್ಕರಿಸಂ (ಅಜಿತ. ೫-೮೯) ; ಆರಱಿಪಂ ಮೆಱೆದಪರಿನ್ನಾರಾರ್ ಸೌಭಾಗ್ಯಗರ್ವದಿಂ ಬೆಕ್ಕರಿಪರ್ ಮಾತಂ ಮುನಿವವರ್ದೆಯೊಳ್ ಕೂರಂಬಂ ತೆಗೆಯದೇಕೆ ಕಡೆಗಣಿಸಿರ್ಪಂ (ಲೀಲಾವ. ೪-೨೪).
[ಬೆಕ್ಕರ$_0$ + —ಇಸು$_3$]

**ಬೆಕ್ಕಸ** (ನಾ). ಆಶ್ಚರ್ಯ ; ಬೆರಗು ; ವಿಸ್ಮಯಂ : "ಬೆಕ್ಕಸಮೆಂದಾಶ್ಚರ್ಯಂ" (ಕಶಸಾ. ೫೮-೨೮೪) ; ಕರ್ಣಾದಿಗಳ್ ಕಂಡು ಬೆಕ್ಕಸಮಾಗಿರ್ದನಂ . . . ಮಾನಂ ಸಮಂತೆಚ್ಚು ಮೆಚ್ಚಿಸಿದಂ ದೇವರುಮಂ ಧನುರ್ಧರರುಮಂ ವಿದ್ವಿಷ್ಟವಿದ್ರಾವಣಂ (ಪಂಪಭಾ. ೩-೬೩); ಪೊಸ್ಕು ಬೆಕ್ಕಸ ಮಿರೆ ದೇವರುಂ ದಿವಿಜಲೋಕದೊಳರ್ವಿಸೆ (ನೇಮಿಪು. ೦೨-೨೩೭) ; ಬೆಕ್ಕಸದಿ ನೋಡುತಿರ್ದಳ್ ತರಳೆ (ಜಿತ್ರಾಂಗ. ೬-೦೬೪). 'ಬೆಱಗು' ಪರಾ.
[ದೇ.॥ ತುಳು. ಬೆಕ್ಕಸ್, ಬೆಕ್ಕಸು]

**ಬೆಕ್ಕಸಂಗೊಳ್, ಬೆಕ್ಕಸಗೊಳ್** (ಕ್ರಿ). ಆಶ್ಚರ್ಯಪಡು ; ಬೆರಗಾಗು ; ವಿಸ್ಮಯಂಹೊಂದು : ಇಂತಿಂತು ಬೀರಾಳ್ಗಳಿಲ್ಲಲ್ಲಿ ನಗೆ ನುಡಿಯುತಿರೆ ಬೆಕ್ಕಸಂಗೊಂಡಿಂದ್ರುಜಂ ಪಕ್ಕದಲ್ಲಿರ್ದನಂ ಪ್ರದ್ಯುಮ್ನನಂ ಕುರಿತು (ಜಿತ್ರಾಂಗ. ೬೮-೨೦೩೩). **ಬೆಕ್ಕಸಗೊಳ್ :** ನೋವಿನಿಂದಲುಗಾಡದಾದೆ ಬೆಕ್ಕಸಗೊಂಡು (ಕೋಗಿಲೆ. ೪-೬೪). [ಬೆಕ್ಕಸ+ಕೊಳ್$_1$]

**ಬೆಕ್ಕಸಂಬಡು, ಬೆಕ್ಕಸಬಡು, ಬೆಕ್ಕಸವಡು** (ಕ್ರಿ). =ಬೆಕ್ಕಸಂಗೊಳ್ : "ಬೆಕ್ಕಸಂಬಡು—ವಿಸ್ಮಯೇ" (ಶಮುಧಾ) ; ಬಗೆಯನುಱೆ ಸೆಱೆವಿಡಿದ ವಿದ್ಯಾಧರವಿಳಾಸಕ್ಕಂ ಬೆಕ್ಕಸಂಬಟ್ಟು (ಆದಿಪು. ೨-೪೦ ವ) ; ಲಕ್ಕಸಂಖ್ಯೆಯ ಪೊನ್ನ ರಾಶಿಗಳುಕ್ಕುತಿರೆ ಬಿಜ್ಜಳಿಸು ನೋಡುತ ಬೆಕ್ಕಸಂಬಟ್ಟು (ಜಿನಪು. ೫-೬೦). **ಬೆಕ್ಕಸಬಡು :** ಜನವು ಬೆಕ್ಕಸಬಟ್ಟು ಬೆದಱಿದುದು (ಶಾಕ್ಯಭಾ. ೩೦-೫೪) ; ಮುಱಿ ಪೊಡವಿಯಷ್ಟಗಲದ ಹಂಸ ಬಡಮ್ಮೆಯೊಳಿರ್ದುದ ನೆನೆದು ಬೆಕ್ಕಸಬಟ್ಟ ಬೆಡಗೋಯೆಂದೆನೆ ನೃಪನೆಸೆದ (ಶಠತ. ೩-೨೨). **ಬೆಕ್ಕಸವಡು :** ಮಕ್ಕಳು ಪುಟ್ಟಿದ ಪದದೊಳು ಬೆಕ್ಕಸವಟ್ಟಿರ್ದ ಮರ್ತ್ಯರಂ ಕಂಡಾಗಳ್ ಬೆಕ್ಕನೆಯವರ ಹೃದಯದೊಳಿರ್ದಕ್ಕಜಮಂ ಕಳೆದು ಕೀರ್ತಿಯಂ ಪ್ರಕಟಿಸಿದಂ (ಪುಣ್ಯಾಸ್ರ. ೦೦-೦೦) ; ಅದೆ ಅದೆ ಬಂದಂ ಜಯಜಾಯಾಪತಿಯದಟರ ದೇವನೆನುತ ತಂತಮ್ಮೊಳ್ ಬೆದರ್ದರ್ ಬೆಕ್ಕಸವಟ್ಟರ್ . . . ಪರನೃಪ ಬಲದವರು (ಜಯಕಾ. ೭-೨) ; ನಾರಾಯಣನಖಿಲಜಗತ್ಕಾರಣಂ . . . ಮನುಜಾಕಾರಮನಾಂತಿರ್ಕುಮಕ್ಕ ಬೆಕ್ಕಸವಡದಿರ್ (ಜಕಲಿ. ೬-೭೩೫).
[ ಬೆಕ್ಕಸ + ಪಡು$_1$ ]

**ಬೆಕ್ಕಸಂಬೆರಗು** ' ಬೆಕ್ಕಸಂಬೆಱಗು ' ನೋ.

**ಬೆಕ್ಕಸಂಬೆರೆ** (ಕ್ರಿ). =ಬೆಕ್ಕಸಂಗೊಳ್ : ಇದು . . . ಬೆಕ್ಕಸಂಬೆಱೆ [ರೆ] ಯದಿಕ್ಕೆಯುಂ ಸಾಸಮಿಲ್ಲದ ದೇಶಮುಂ . . . ಎನಿಸುಗುಂ (ಜಕವಂ. ೦೩೬-೬). [ ಬೆಕ್ಕಸ + ಬೆರೆ$_1$ ]

**ಬೆಕ್ಕಸಂಬೆಱಗು, ಬೆಕ್ಕಸಂಬೆರಗು, ಬೆಕ್ಕಸಬೆರಗು, ಬೆಕ್ಕಸಬೆಱಗು** (ನಾ). ಅತ್ಯಾಶ್ಚರ್ಯ ; ನಿಬ್ಬೆರಗು ; ಮಹಾವಿಸ್ಮಯ : ಒಕ್ಕಲಿಗರ್ ಸಾಕ್ಷಿಯಿಲ್ಲದೆ ಸಾಲಂಗೊಟ್ಟರಂತೆ [ಬೆಕ್ಕಸಂ]ಬೆಱಗಾಗೆ (ಧರ್ಮಾಮೃ. ೨-೬೯); ಬೆಕ್ಕಸಂಬೆಱಗಾಗಿ ಭೈರವನಕ್ಕ ತಾನಿವಳಾಗಬೇಕೆನುತಿಕ್ಕಿಲನನಾರೈವುತಂಜುತ ನೋಡಿದನು ಹನುಮ (ತೊರರಾ. ೫-೨-೩೨) ; ದೆಸೆದೆಸೆಗಳಂ ಕೆಕ್ಕರಿಸಿ ನೋಡುತ್ತೆ ಸೈಪರಿದು ಬರುತಿರಲ್ ದಿಕ್ಕುದಿಕ್ಕಿನೊಳಿರ್ಪ ರಕ್ಕಸರ್ ಕಾಣುತ್ತೆ ಬೆಕ್ಕಸಂಬೆಱಗಾದರು (ಜಿಐಪು. ೪೪-೯). **ಬೆಕ್ಕಸಂಬೆರಗು :** ಗಯ ಮರೆಹೊಕ್ಕನೆಂದೇ ಕೈವಿಡಿದು ಹರಿ ಕೇಳ ಕಳುಹಿದರೆ ಚಿಕ್ಕಮಾತುಗಳಾಡೆ ಚಕ್ರಿಕೆ ಬೆಕ್ಕಸಂಬೆರಗಾಗಿಯಗ್ರಜನೆಕ್ಕತುಳದಲಿ ತಿಳಿದು ಬಾಯೆನೆ ಬಂದೆ ನಿಮ್ಮೆಡೆಗೆ (ಕೋಗಯ. ೦೪-೩೯). **ಬೆಕ್ಕಸಬೆರಗು :** ಭಾಗಮ್ಮ ಬೆಕ್ಕಸ ಬೆರಗಾಗಿ ಕೇಳಿದಳು (ರಂಗರೋ. ೬೭) ; ಮಹಾಮಾಯೆ ಕ್ಷಣಕಾಲ ಬೆಕ್ಕಸ ಬೆರಗಾಗಿ ನಿಂತಳು (ಬಾಣಅ. ೧೦೩). **ಬೆಕ್ಕಸಬೆಱಗು :** ಹೇಳದಿರು ಮಿಕ್ಕಿಂದ್ರಗಿಂದ್ರರ ತೋಳ ಸತ್ವವನರಸ ಕೇಳಿವನೂಳಿಗವ ಹೇಳಿದರೆ ಬೆಕ್ಕಸಬೆಱಗು ನಿಮಗೆ (ತೊರರಾ. ೬-೨೭-೦೦); ಇಕ್ಕೇರಿಯ ಭೂಪ ತುರುಕರ ದಾಳಿಗೆ ಬೆಕ್ಕಸಬೆಱಗಾಗುತಾಗ ಹೊಕ್ಕನು ಮಲೆಯನು (ಕಂಪಾಪ. ೦೦-೫). [ ಬೆಕ್ಕಸ + ಬೆಱಗು$_1$ ]

**ಬೆಕ್ಕಸಗೊಳ್** ' ಬೆಕ್ಕಸಂಗೊಳ್ ' ನೋ.

**ಬೆಕ್ಕಸಬಡು** ' ಬೆಕ್ಕಸಂಬಡು ' ನೋ.

**ಬೆಕ್ಕಸಬೆರಗು** ' ಬೆಕ್ಕಸಂಬೆಱಗು ' ನೋ.

**ಬೆಕ್ಕಸಬೆಱಗು** ' ಬೆಕ್ಕಸಂಬೆಱಗು ' ನೋ.

**ಬೆಕ್ಕಸಮುಱು** (ಕ್ರಿ). = ಬೆಕ್ಕಸಂಗೊಳ್: ಕೌರವ್ಯರಂ ತಿಂದ ರಕ್ಕಸನೋ ಈತನೊ ಭೀಮಸೇನನೆನುತುಂ ಗಾಂಧಾರಿ ಬಳ್ಕುತ್ತೆ ಬೆಕ್ಕಸಮುತ್ತಳ್ ಬರೆ ಕಂಡು ಪಾಂಡವಬಲಪ್ರಾಕಾರನಾಕಾರಮಂ (ಗದಾಯು. ೬-೩೩) ; ತನ್ನಂಗಿಯ ಸಾಹಸಕ್ಕೆ ಬೆಕ್ಕಸಮುತ್ತಿರ್ದಂ (ನೇಮಿಪು. ೬-೩೨ ವ) ; ಕನ್ನಡಗಬ್ಬ ಮನೊಲ್ದು ಕೋವಿದರ್ ಬೆಕ್ಕಸಮುತ್ತು ಮಚ್ಚಿ ಪೊಗಳುತ್ತಿರೆ (ಶಬಶಂ. ೫-೬೨). [ ಬೆಕ್ಕಸ + ಉಱು ]

**ಬೆಕ್ಕಸವಡು** ' ಬೆಕ್ಕಸಂಬಡು ' ನೋ.

**ಬೆಕ್ಕು** ' ಬೆಕ್ರ್ ' ನೋ.

**ಬೆಕ್ಕುಗಣ್ಣು** (ನಾ). (ಬೆಕ್ಕಿನ ಕಣ್ಣಿನಂತೆ) ಬಣ್ಣವುಳ್ಳ ಕಣ್ಣು: ಅಕ್ಕುಳಿಸಿದ ಹೊಟ್ಟೆ ಬೆಕ್ಕುಗಣ್ಣಿನ ಮೋಟ್ ಅಕ್ಕುಳಿಯು ತುಂಬ ಕಡುಗೋಪಿ ಪುರುಷನು ಚಿತ್ರಿನಿಗೆ ಮೇಳ (ಸರ್ವಜ್ಞ. ೦೬೬೪); ಕಣ್ಣುಗುಡ್ಡೆಯು ಕರಿಯ ಭಾಗ ಬೂದುಬಣ್ಣವಾಗಿರುವ ಕಣ್ಣು, ಬೂದುಗಣ್ಣು, ಬೆಕ್ಕುಗಣ್ಣು (Grey-eye. ೩೦೪೨). [ಬೆಕ್ಕು (< ಬೆರ್ಕ) + ಕಣ್ಣು (< ಕಣ್)]

**ಬೆಕ್ಕುಮಾಳಿಗೆ** 'ಬೆಳಕುಮಾಳಿಗೆ' ನೋ.

**ಬೆಗಡಿಸು** (ಕ್ರಿ). ಹೆದರಿಸು; ಭಯಪಡಿಸು; ಅಂಜಿಸು: ಬೆಗಡಿಸಿ ತತ್ವವಿದರ ನಿಷ್ಠುರದಿಂ (ಜೋಣಾಂಬಿ. ೨-೨೨). [ಬೆಗಡು$_1$ + –ಇಸು$_3$]

**ಬೆಗಡು$_1$, ಬೆಗಳ್$_1$, ಬೆಗಟ್$_1$** (ಕ್ರಿ). ೧. ಆಶ್ಚರ್ಯಪಡು; ಬೆರಗುಗೊಳ್ಳು; ವಿಸ್ಮಯವನ್ನು ಹೊಂದು: (೬). ೨. ಅಂಜು; ಅಳುಕು; ಬೆದರು: ಹರಿ ಬೇಡೆ ಕವಚವಂ ನೀನಿರದಿತ್ತ್ಯ ಕೊಂತಿ ಬೇಡೆ ಬೆಗಡದೆ ಕೊಟ್ಟೈ ಹುರಿಗಣೆಯುಂ (ಗದಾಯು. ೫-೨೪). **ಬೆಗಳ್$_1$**: ೨. ಖಳರಳವಂ ಕಳಳ್ಚ(ಲ್ಚಿ) ನೆಜ಼್ ಕಳ್ಳರ ಕೊಳ್ಳಿಯು ಬಾಧೆಯ[ಂ] ಬಿ(ಬೆ)ಗಳ್ದಳಜ಼್ ತೆರಳ್ಚಿ . . . ನಿರ್ಮ್ಮಳತರಕೀರ್ತ್ತಿಯುಂ ಪಡೆವಳ್ (ಕಇ. IV. ೧-೫೪ ; 1204). **ಬೆಗಟ್$_1$**: ೨. ಬರೆಪದ ಜೀವಚಿತ್ರಮುಮ ನೀಕ್ಷಿಸಿ . . . ಬೆಗಟ್ಟ ಕಣ್ಗಳಂ ಬರೆತೆಗೆದಂ ನೃಪಂ ತನಗೆ ತಾಂ ಗಡ ಲಜ್ಜಿಸಿ (೦೬೮೨. ೩-೬೪); ಕನಲ್ದೊನಲ್ದು ಬೆಗಟುತ್ತು ಬೆಗಟ್ವಿಂಗೆ ಮತ್ತ [ಮಂತೆ ಸಾರಿರ್ದು] . . . ವಿಪ್ರಳಾಪಂಗೆಯ್ಯುತ್ತಂ (ಶಾಹಂ. ೦೯-೯೩).

**ಬೆಗಟ್ಟಂ**=ಹೆದರಿದವನು; ಭಯಪಟ್ಟವನು: "ಬೆಗಟ್ಟನೆ ಭೀತಿಯುಕ್ತನೊಳ್" (ಕಶಬ್ದಾ. ೨೨).

[ದೇ.॥ ತುಳು. ಬೆಗಡು; ತೆಲು. ಬೆಗಡು, ಬೆಗ್ಗಡು, ಬೆಗ್ಗಿಲು]

**ಬೆಗಡು$_2$, ಬೆಗಳ್$_2$, ಬೆಗಟ್$_2$** (ನಾ). ೧. ಆಶ್ಚರ್ಯ; ಬೆರಗು; ವಿಸ್ಮಯ: ಬೆಗಡು ಮುಸುಕಿದ ಮುಖದ . . . ಹುಯ್ಯಲುಗಾಟ ಬಹಳೋಲಗಕೆ ಬಂದನು (ಕುವ್ಯಾ. ೫-೬). ೨. ಭಯ; ಅಂಜಿಕೆ; ಅಳುಕು: "ಬೆಗಡು=ಭಯಂ" (ಕಮಿರ. ಶಂ. ೨); ಇವರ ಲೀಲಾಲಾಸ್ಯದಲಿ ನೆಲೆಯ ಕಾಣದೆಯೆ ನನ್ನ ಮತಿ ಬೆಗಡಾಗಿ ತೊಳಲುತಿಹುದು (ಒಲುಮೆ. ೨೯-೦೬). 'ಬೆಗಡುಗೊಳ್' ಪರಾ. **ಬೆಗಳ್$_2$**: ೨. 'ಬೆಗಳ್ಗೊಳಿಸು' ಪರಾ. **ಬೆಗಟ್$_2$**: ೧. "ಬಕ್ಕುಡ ಬಿಗುರ್ವಗುರ್ವು ಬೆಬ್ಬಳ ಬೆಗಟ್ ತಲ್ಲಣಂ ತಳವೆಳಗು ಮಲ್ಲಟಿಯೆನಲ್ಕೆ ಬೆಜಗಪ್ಪ ಭಾವಂ" (ಕವಿಕಾ. ೪೦). ೨. ಕನಲ್ದೊನಲ್ದು ಬೆಗಟುತ್ತು ಬೆಗಟ್ ವಿಂಗೆ ಮತ್ತ [ಮಂತೆ ಸಾರಿರ್ದು] . . . ವಿಪ್ರಳಾಪಂಗೆಯ್ಯುತ್ತಂ (ಶಾಹಂ. ೦೯-೯೩).

[<ಬೆಗಡು$_1$. / ತೆಲು. ವೆಗಟು]

**ಬೆಗಡುಗೊಳ್**, ಬೆಗಡುಂಗೊಳು, ಬೆಗಡುಗೊಳ್ಳು, ಬೆಗಟ್ಗೊಳ್ (ಕ್ರಿ). ೧. ಅಚ್ಚರಿಪಡು; ಬೆರಗುಗೊಳ್ಳು; ವಿಸ್ಮಯಪಡು: ನೆಗೆದು ರಿವಾರ್ವಾರಿನಳನುರ್ಬುಗಳಿನಲಂ ನೆಗೆದುವಹಿಮಹಿಮಕರಬಿಂಬಂ ಅಂತವಂ ಕಂಡು ಬೆರ್ಚಿ ಬೆಗಡುಗೊಂಡ ಭೋಗಭೂಮಿಜರಂ . . . ಸಂತಯಿಸಿದಂ (ಆದಿಪು. ೬-೫೨ ವ). ೨. ಅಂಜು; ಭಯಪಡು; ಹೆದರು: ಆಗಳದಂ ಕಂಡುತ್ತರನೊತ್ತರಮೊತ್ತಿದಂತೆ ಬೆರ್ಚಿ ಬೆಗಡುಗೊಂಡು (ಪಂಪಭಾ. ೯-೯೯ ವ); ನಿದ್ರೆ ತಿಳಿದು ಕಣ್ದೆಜ಼ಮ ಕಿಲಬಿಲಸಂ ನೋಡಿ ಬೆಚ್ಚಿ ಬೆಗಡುಗೊಂಡು ಅಸುಕಾಪವೇಜ಼್ (ಜಿಶರ. ೯-೨೫); ಮಗನ ಮಾತಿಗೆ ಬೆಗಡುಗೊಂಡನು . . . ಬೆದಜ಼ಿದನಸುರ (ಸಂಪಶ. ೬-೩೭). **ಬೆಗಡುಗೊಳು**: ೨. ತೆಗೆಯೆ ಬೆನ್ನಿಂದಲಗುರಕ್ಕಿ ಮೂಡಿರೆ ಕಂಡು ಬೆಗಡುಗೊಳುತೆಲ್ಲರುಂ ಮುಜುಗಿ ಮುಮ್ಮುಳಿಗೊಂಡು (ಸೌಂದರ. ದೇ. ೬೬-೦೫); ನಗರದೊಳು ದಶಮುಖನ ಕಾಣುತ ಬೆಗಡುಗೊಳುತಲಿ (ಉತ್ತರ. ೦೯-೨೮); ಬೆಗಡುಗೊಳು ಮನು ತಡವುಮಾಡದೆ ವಿಗಡನನು ಕೊಲುತ್ತೈದು ಬೇಗನೆ (ಕೃಕರ್ಣಾ. ೨-೪೩). **ಬೆಗಡುಗೊಳ್ಳು**: ೧. ರತ್ನಾಜಿಯಂಥ ಸುರಲೋಕಸುಂದರಿಯೇ ಅವನನ್ನು ನೋಡಿದಾಗ ಬೆಗಡುಗೊಳ್ಳುತ್ತಾಳೆ (ಪಂಕಾಂತ. ೧೦೦); ಅಷ್ಟು ಆರ್ಭಟ, ಅಷ್ಟು ಗದ್ದಲ, ಅಷ್ಟು ಉಪಚಾರದಿಂದ ಕೋಣನಾದರೂ ಬೆಗಡುಗೊಳ್ಳದೆ ಇರಬಹುದೆ (ಸಣ್ಣಕ. VI. ೦೦). **ಬೆಗಟ್ಗೊಳ್**: ೨. ಅಂತು ಸತ್ವಭಾವಂಗಗ್ಗಳಮಾದ ವಿರಹಪರಿತಾಪಮಂ ಕಂಡು ಬೆಗಟ್ಗೊಂಡು . . . ಇಂತೆಂದಳ್ (ಶಗಪ. ೧೦-೨೦ ವ).

[ಬೆಗಡು$_2$ + ಕೊಳ್$_1$]

**ಬೆಗಡುಗೊಳಿಸು**, ಬೆಗಳ್ಗೊಳಿಸು (ಕ್ರಿ). ೧. ಭಯಪಡಿಸು; ಹೆದರಿಸು; ಅಂಜುವಂತೆ ಮಾಡು: ನೆತ್ತಿಯ ಬಗಿದು ಕೂರಂಕುಶದಲಾನೆಯ ಬೆಗಡುಗೊಳಿಸಲು ಬೀದಿವರಿದುದು ಸುಭಟರೆದೆಯೊಡೆಯೆ (ಕುವ್ಯಾದ್ರೋ. ೩-೦೪); ಮಗಳ ಮನ ವಿಗಡಿಸಿತು ನಾಲ್ವರು ಬೆಗಡುಗೊಳಿಸಿದರು (ಪಳಕ. ೩-೬೩). ೨. (ಆಲಂ) ಭ್ರಮೆಗೊಳಿಸು: ನೋಟದಿಂದದೆಗೆ ಪುಟ್ಟಿಪರು ತಳ್ಳೆಂಅವ ಬೇಟದಿಂ ಬೆಗಡುಗೊಳಿಪರು . . . ಕುಲಟಾಜನ (ಕುರಾಣಾಂ. ೩೦-೬೦). **ಬೆಗಳ್ಗೊಳಿಸು**: ೧. ಮಹಾದಂತಿಗಳಂ ಬೆಗಳ್ಗೊಳಿಪ ಸಿಂಹಕೆ ಲಕ್ಷ್ಯಮೆ ಪುಲ್ಮಿಗಂ (ರಾಜಶೇ. ೫-೦೩೦).

[ಬೆಗಡುಗೊಳ್ + – ಇಸು$_3$]

**ಬೆಗಡುಗೊಳು** 'ಬೆಗಡುಗೊಳ್' ನೋ.

**ಬೆಗಡುಗೊಳ್ಳು** 'ಬೆಗಡುಗೊಳ್' ನೋ.

**ಬೆಗಡುವಡಿಸು** (ಕ್ರಿ). = ಬೆಗಡುಗೊಳಿಸು ೧: ರಾಜರಾಜಂ ಜೈತ್ರಯಾತ್ರೆಯೊಳ್ . . . ತಗಡೂರಂ ಬೆಗಡುವಡಿಸಿ ತಾಯೂರಂ ಬಾಯ್ವಿಡಿಸಿ . . . ಮಂಡಲಾಧಿಪತ್ಯದೊಳಿರೆ (ಶಕಪ. ೨-೨೯). [ಬೆಗಡು$_2$ + ಪಡಿಸು]

**ಬೆಗಡೊಂದು** (ಕ್ರಿ). = ಬೆಗಡುಗೊಳ್ ೨: ಲಲನೆಯಂಜುಲಿಸಲ್ಲಿಲದಿಂ ಚಪ್ಪಳಿಸುತಂ ಬೆನ್ನೊಳು ಶಿರಸಿನೊಳ್ ಜಲವನೊತ್ತುವಳಾತ್ಮಜಗೆ ಬೆಗಡೊಂದದಂತೋವಿ (ಜಿಶಪ. ೦೫-೯); ಭ್ರಮೆಯಿಂದು ಬೆಗಡೊಂದಿ ಬಲ್ಪುಡುಗಿ ಬೇಗಂ ಹವ್ವುದಂಬೋದುದೆಯ್ದೆ ಮದೇಭಾಶ್ವನರಾದಿ ಜೀವನಿವಹಂ (ನೃಪಶ. ೦೬-೯೭); ಇವಳ ವಿವಾಹವಿಷಯವಾಗಿ ಎಷ್ಟೋ ಬೆಗಡೊಂದುತ್ತಿದ್ದೇನೆ. ಆ ಬೆಗಡೆಲ್ಲವೂ ತೀರಿಹೋಗುತ್ತಿದೆ (ಲಕ್ಷ್ಮೀಶ. ೩೭).

[ಬೆಗಡು$_2$ + ಒಂದು$_1$]

**ಬೆಗಸಿಲ್** 'ಬೆಲಗಸೆ' ನೋ.

**ಬೆಗಸಿಲೆ** 'ಬೆಲಗಸೆ' ನೋ.

**ಬೆಗಳ್$_1$** 'ಬೆಗಡು$_1$' ನೋ.

**ಬೆಗಳ್$_2$** 'ಬೆಗಡು$_2$' ನೋ.

**ಬೆಗಳ್ಗೊಳಿಸು** 'ಬೆಗಡುಗೊಳಿಸು' ನೋ.

**ಬೆಗಟ್$_1$** 'ಬೆಗಡು$_1$' ನೋ.

**ಬೆಗಟ್$_2$** 'ಬೆಗಡು$_2$' ನೋ.

**ಬೆಗಟ್ಗಡೆ** (ಕ್ರಿ). = ಬೆಗಡುಗೊಳ್ ೨: ಪೊಗರ್ವೇಜ಼ಾಗಿ ಮೊಗಂ ಬೆಗಟ್ಗಡೆ ದೊತಂ ಮೆಯ್ಯುಂ ಮರಂ ಬದೋಡಂ ಬಿಗುರುತ್ತೇನಳವೊಂದಿನಿಂಥ ಳಪಚಾರಂ ಬರ್ಪುದೆಂದಾರ್ಪಿನಿಂ (ಶಕಪ. ೬-೨೩೦).

[ಬೆಗಟ್$_2$ (< ಬೆಗಡು$_2$) + ಕೆಡ್$_1$]

**ಬೆಗಟ್ಗೊಳ್** 'ಬೆಗಡುಗೊಳ್' ನೋ.

**ಬೆಗಟ್ಪು** (ನಾ). ಆಶ್ಚರ್ಯ; ಬೆರಗು; ವಿಸ್ಮಯ: "ಬೆಗಟ್ಪು ಬೆಗಡಾಯ್ತು" (ಶಂಕರಿವ. ೨೧); ಅಂತಾ ಪುರದಹಿತರ್ಗೆ ಬೆಗಟ್ಪನೀಯುತ ಗಟಿಸಿದಿರ್ಕುಂ (ಅದ್ಭುಶಿ. ೦-೯೩).

[ಬೆಗಟ್$_2$ (< ಬೆಗಡು$_2$) + – ಪ್ಪು]

**ಬೆಗುಸೆ** (ನಾ). ಒಂದಂ ಬಗೆಯ ಮರ: ಬೇವು ಬೆಲ್ಲವತ್ತ ಅರಳಿ ಅಲ ಬೆಗುಸೆಸೊಪ್ಪುಗಳಂ ನೀರೊಳು ಹಾಕಿಕಿಶುವಿಂಗೆ ಮಿಯಿಲುಲೆಜ಼ಮದು (ಶಾಂಶ. ೦೩೦-೦೯). [?]

**ಬೆಗ್ಗಾಡು** ' ಬೆಂಗಾಡು ' ನೋ.

**ಬೆಚ್ಚ$_1$** ' ಬಿಸು$_1$ ' ಪರಾ.

**ಬೆಚ್ಚ$_2$** ' ಬಿಸು$_2$ ' ನೋ.

**ಬೆಚ್ಚಂಬಿಲ** (ನಾ). ಬಿಸಿಯಾದ ಗಂಜಿ ; ಬೆಚ್ಚಗಿರುವ ಅಂಬಲಿ : ನಡನಡನೆ ನಡುಗಿ ಬೆಚ್ಚಂಬಿಲವುಮಂ ಪೊಯ್ದು ಮಿಡಮಿಡನೆ ಮಿಡುಕೆ ಪೊಕ್ಕುಳ ಬಳ್ಳಿಯಂ ಕೊಯ್ದು (ಶಿಂಷೋ:ಶ. ಹ. ೩೦೦-೨೩) ; ಬೆಚ್ಚಂಬಿಲದ ಕುಡುಗೋಲ ಕಪ್ಪಡವನರಳೆಯಂ ತೈಲವಂ ತಾ (ಸಿದ್ಧರಾ. ೨-೨).

[ ಬೆಚ್ಚ$_2$ (< ಬಿಸಿದು) + ಅಂಬಿಲ (< ಅಂಬಲಿ$_1$) ]

**ಬೆಚ್ಚಗುಟಿಗ್** (ನಾ). ಬಿಸಿಯಾದ ಅಗುಳು ; ಬೆಚ್ಚಗಿರುವ ಅನ್ನ : ಕಚ್ಚಾನೆ, ಬೆಚ್ಚಗುಟಿಗ್ (ಶಬ್ದಾ.ಮ. ೩೪೩ ಪ್ರಯೋ).

[ ಬೆಚ್ಚ$_2$ (< ಬಿಸಿದು) + ಅಗುಟಿಗ್$_4$ ]

**ಬೆಚ್ಚಗೆ** (ಅ). ಬಿಸಿಯಾಗಿ ; ಶಾಖವಾಗಿ : ಮೊಗಂ ಮೊಗದತ್ತ ಸಾರ್ಚಿ ಬೆಚ್ಚಗೆ ನಿಡುಸುಯ್ದು ನಲ್ಲಳ ಮುಖಾಂಬುಜಸೌರಭದೊಳ್ ಪೊದಟ್ದು (ಶಂಕಶಾ. ೪-೦೦೬) ; ಬೆಲೆವೆಣ್ಣುಗಳ್ಬಂದು ಪಾದಗಳಾ ಬಣ್ಣಿಸಿ ಪಿಡಿವಾಗ ಬೆಚ್ಚಗಿದ್ದುವು ಹಸ್ತ ತಣ್ಣಗಿದ್ದುವು ಚರಣಗಳು (ಶರತ. ೦೨-೦೩೦) ; ವ್ಯೆಯನ್ನು ಯಾವಾಗಲೂ ಬೆಚ್ಚಗೆ ಇಡಬೇಕು (ಮುಂಬಯಿ. ೪-೨೩).

[ ಬೆಚ್ಚ$_2$ (< ಬಿಸಿದು) + -ಅಗೆ$_3$ ]

**ಬೆಚ್ಚನೆ** (ಅ). = ಬೆಚ್ಚಗೆ : ನೀರೊಳ್ ಮುಟುಗಿದರಂತು ಮ್ಮನೆ ಬೆಮರುತ್ತುಮ್ಮಳಿಕೆವಂದು ಬೆಚ್ಚನೆ ಸುಯ್ದೊಡೆ (ಶಂಶಾ. ೪-೬೪ ವ) ; ಕಿರಾತಂ ಬೇಸತ್ತು ಬೆಚ್ಚನೆ ಸುಯ್ದು ಬದಿಯಂ ಬಯ್ದು ತನ್ನ ಮನೆಗೆ ಮಗುಟ್ದಂ (ಶಂತಂ. ೨೪೦-೦೬) ; ಬಟ್ಟಮೊಲೆಯಿಟ್ಟೆಡೆಯೊತ್ತನೆ ಪತ್ತಿಸಾರ್ದು ಬೆಚ್ಚನೆ ಬಿಗಿದಪ್ಪಿಕೊಂಡು (ಜಾರಪು. ೪-೬೪).

[ಬೆಚ್ಚ$_2$ (< ಬಿಸಿದು) + -ಅನೆ$_1$ ]

**ಬೆಚ್ಚರ$_1$**, ಬೆಚ್ಚಳ, ಬೆಜ್ಜರ (ನಾ). ೧. ಸುತ್ತುವಿಕೆ; ಭ್ರಮಣ : ಬೇಡೊಡೆಯಾ ಬೇಕೆಂಬುವ ತುಂಬಿಯು ಬೆಚ್ಚರಂ, ನೀಡೊಡೆಯಾ ಸಾಕೆಂಬುವ ತಾಪರೆಯುಚ್ಚರಂ (ಗಿಶಿಶಿಂ. ೪೦-೦೪೦). **ಬೆಚ್ಚಳ** : ೨. ದಿಗ್ಭ್ರಮೆ ; ತಬ್ಬಿಬ್ಬು : ಬಿಚ್ಚಟಿ, ಪುಚ್ಚಟಿ, ಬೆಚ್ಚಳ (ಶಬ್ದಾ.ಮ. ೩೬೪ ಪ್ರಯೋ). ' ಬೆಚ್ಚಳಿಸಂ ' ಪರಾ. **ಬೆಜ್ಜರ**: ೩. ಹೆದರಿಕೆ ; ಭಯ ; ಅಂಜಿಕೆ : ನರಕದೊಳು ಹುಟ್ಟಿಸಿ ಓರಿದು ನಿರ್ಜಾಡಿಸುವುದು ಕರ್ಮಂ ಭವಭವಕ್ಕೆಂಬ ಬೆಜ್ಜರಮುಮಂ ನೋಡದಂತಿರ್ಪುದವಗಂಗಜನ ಗೊಡ್ಡವೈಸಲ್ಲದೆ (ಸಮ್ಯಕ್. ೩-೨೩) ; ಪುಸಿ ನುಸುಳು ವೈರಮುಟ್ಟುಳಿ ತೋಹು ಬೆದಟು ಬೆಜ್ಜರ ಕಷ್ಟ ನಿಷ್ಠುರಂ . . . . ಮೊಳೆದೋಱುವು (ಕೈವಲ್ಯ. ೨-೩) ; ಬೆಜ್ಜಗಜ್ಜುಂಗೆಯ್ವನೀ ನಿನ್ನ ಬೆಜ್ಜರಕೆ (ಶ್ರೀರಾಮ. ೪೩೦-೦೬೦).

**ಬೆಚ್ಚರಾಗು** = ಸುತ್ತು ; ತಿರುಗು : ವಾಯುಸದಂತೆ ನೋಡು ಬಕದಂಶಿರೆ ಮೆಲ್ಲನೆ ಮೆಟ್ಟು ಕಚ್ಚಪೋಪಾಯದಡಗಿ ನಿಲ್ ಭ್ರಮರಿಯೊಳ್ ಭ್ರಮಿಯಾಂತಿರೆ ಬೆಚ್ಚರಾಗು (ಕಾವ್ಯಾ.ವ. ೪೦೨). **ಬೆಜ್ಜರಬೀಳು** = ಅಂಜು ; ಹೆದರು : ಆ ಶಬ್ದವನ್ನು ಕೇಳಿದವರೆಲ್ಲರೂ ಬೆಜ್ಜರಬಿದ್ದು ಹೊರಗೆ ಬಂದು ಅಪೂರ್ವವಾದ ಆ ನೋಟವನ್ನು ನೋಡಿ ತಾವೂ ಭ್ರಾಂತಿಗೊಂಡು (ವಿಜ್ಞಾ.ಶ. I, ೦೬೦).

**ಬೆಚ್ಚರ$_2$** (ನಾ). ೧. ಶೀಘ್ರತೆ ; ತ್ವರಿತತೆ : ' ಬೆಚ್ಚರಿಕೆ ' ಪರಾ. ೨. ಎಚ್ಚರಿಕೆ ; ಜಾಗರೂಕತೆ : ಬೆಚ್ಚರದಿಂ ಘಟನೆಗೆದಪೊಲಚ್ಚಿಗೆ ಸೊಬಗಿತ್ತುದಮರ್ದ ಕೆಂದೆಸೆಗೊಂಚಲ್ (ಉದ್ಭಟ. ೩-೦೮) ; ನಿದ್ದೆ ಹೋಗದಿರೆಚ್ಚರ ; ಸೂರೆ ಹೋದೀತೆಲ್ಲ ; ನೀನೇ ಸೆರೆಗೆ ಸಿಕ್ಕೀ ಬೆಚ್ಚರ ! (ಮುಳ್ಕಂ. ೬೪ ೪). 'ಚೆಚ್ಚರ' ಪರಾ. [ <ಚಚ್ಚರ ]

**ಬೆಚ್ಚರಂ** (ಅ). ಬೇಗನೆ ; ಶೀಘ್ರವಾಗಿ : " ಚಚ್ಚರಂ ಗಟಗಟನೆ ಬೆಚ್ಚರಂ . . . ಶೀಘ್ರಾರ್ಥಮಕ್ಕುಂ " (ಕವಿಕೃ. ೪೯) ; ಆ ಮಹಾದೇವಿಯರುಂದರದೊಳಂ ಬರ್ಪ ಲೋಕೇಶನಂ ಬೆಚ್ಚರಮಾ ವಿಶ್ವೇಶನಂ ಪೇಟ್ವುದು ಮೊಸೆದಱುದಿಂಗಳ್ವಶಂ (ಶಾಂತಿಪು. ೯-೦೬೨) ; ಬೆಚ್ಚರಮುದ್ಭಟನೃಪ ಪಾರ್ದಚ್ಚಂಬುಗಳ್ . . . ಪರಿದೆಣ್ದೆಸೆಗಂ ಮುಚ್ಚಿ ಮುಸುಂಕಿದುವು (ಉದ್ಭಟ. ೪-೯೦). ' ಚೆಚ್ಚರಂ ' ಪರಾ. [ < ಚಚ್ಚರಂ ]

**ಬೆಚ್ಚರಿಕೆ** (ನಾ). ೧. ಶೀಘ್ರತೆ ; ತ್ವರಿತತೆ : ಜಾಳಾಂದ್ರಗೈದಾಗ ಖತಿಮಸಗಿ ಕೈಗೈದಪೆವು ಜಯಸಿರಿಯನೆನುತೊರ್ವರೊರ್ವರೆಚ್ಚರೇ ಬೆಚ್ಚರಿಕೆಯಿಂದ (ವೆಂಕಾರಾ. ೬-೪೪-೨೦). ೨. ಚಪ್ಪರಿಸುವುದು ; ತಟ್ಟುವುದು : ಅದೂ ಸ್ವಾಭಾವಿಕವಾಗಿ ತೇಜಾದ ಕುದುರೆಯೋ. ಸ್ವಲ್ಪ ಬೆಚ್ಚರಿಕೆ ಮಾತ್ರ ಅಗಾಗ್ಗೆ ಬೇಕಾಗಿತ್ತು (ಕಂಗಾಳ್. ೩೬). [ ಬೆಚ್ಚರ$_2$ + -ಇಕೆ ]

**ಬೆಚ್ಚರು** (ಕ್ರಿ). ಬೆಚ್ಚು ; ಬೆದರು ; ಹೆದರು : ಅಪಚರಿಸಿದೆನೋ ಅತಿಥಿದೇವನಂ ಎಂದು ಬೆಚ್ಚರುತ ನಾನೊಳಪೋಗಿ ನೋಡುವೊಡೆಲ್ಲವೂ ಸಜ್ಜಿತವಾಗಿ ಹಬ್ಬದೂಲಿರೆ (ಗಡೀಶ. ೦೨-೩೦೩).

**ಬೆಚ್ಚಲ್** (ನಾ). ಬೆದರುಗೊಂಬೆ ; ಬೆಚ್ಚು : ರಕ್ಕಸರ್ ಕಳನ ಕಳಮೆಯ ಪೊಲದ ರಕ್ಷಣೆಗೆ ಮುಂದೊಡ್ಡಿಕೊಂಡು ನುಗ್ಗುತ್ತಿರ್ಪ ಈ ತೃಣದ ಬೆಚ್ಚಲ್ಗಳುಕಿ ಪಲಾಯನಪಟುಗಳಾಗುವಿರ ಮೂಢಮೃಗಪಕ್ಷಿಗಳವೋಲ್! (ಶ್ರೀರಾಮ. ೬೮೪-೦೬೮). [ಬೆಚ್ಚು$_1$ (<ಬೆರ್ಚು$_1$) + -ಅಲ್$_2$]

**ಬೆಚ್ಚಳ** 'ಬೆಚ್ಚರ$_1$' ನೋ.

**ಬೆಚ್ಚಳಿಸು**, ಬೆಜ್ಜರಿಸು (ಕ್ರಿ). ೧. ದಿಕ್ಕು ತೋರದಂತಾಗು ; ದಿಗ್ಭ್ರಮೆಗೊಳ್ಳು: "ಬೆಚ್ಚಳಿಸು—ವಿಮೋಹೇ (ದಿಕ್ಕುತೋರದಂತಾಗು)"(ಶಮದ); ದಿಕ್ಪಾಳಕಂ ಬೆಚ್ಚಳಿಸೆ ಕುಣಿದನಾನಂದದಿಂ ದೇವರಾಜು (ಶರಶಮ. ೦೨-೩೩); ಕಳ್ಳನಿವಂ ಕಡುಧೂರ್ತನೆಂದು ಶಂಕಿಸಿ ಭಯದಿಂದೆ ಬೆಚ್ಚಳಿಸಿ ಮಾನಿಸರಂ ಮೊದಲಾಗೆ ಪೊರ್ದಿ (ರಮಣೀಮ. ೬-೪೦). **ಬೆಜ್ಜರಿಸು** : ೨. ಅಂಜಿಸು ; ಹೆದರಿಸು ; ಭಯಪಡಿಸು : ರಂಭಾದಿ ಪಣ್ಯಾಂಗನಾವರವಾಟಿಯಂ ಪೊಕ್ಕು ಸತಿಯರಂ ಬೆಜ್ಜರಿಸಿ ನೆಱೆ ನಗಿಪುವಾ ಗೋತ್ರದಾನೆಗಳ್ (ಸಂಶಮಾ. ೦೦-೦೩) ; ನಿರ್ಜರರ ಸುದತಿಯರ ಗರ್ಜಿಸುತೆ ಘನರವದಿ ಬೆಜ್ಜರಿಸಿ ಪುತ್ರಿಯರನುಳಿದು ತೆರಳು (ಕವೀಶ. ೨೩-೬೨).

[ಬೆಚ್ಚಳ (<ಬೆಚ್ಚರ$_1$) + -ಇಸು$_3$]

**ಬೆಚ್ಚಿಡು** (ಕ್ರಿ). ಬೆದರುಬೊಂಬೆಯನ್ನು ನಿಲ್ಲಿಸು ; ಬೆಚ್ಚು ನಿಲ್ಲಿಸು : ದಂಡೀಯ ಮುಂಡಾಸ ಚೆಂಡ್ಜೂವಿನ ತುರಾಯಿ ದುಂದೀನ ದೊರೆ ಮಲಸಜ್ಜ ಬರುವಾಗ ಬೆಚ್ಚಿಟ್ಟಾರ ಬಾಳಿಬನದಾಗ (ಕೋಳಗೀ. ೨೦೮).

[ಬೆಚ್ಚು$_2$ (<ಬೆರ್ಚು$_2$) + ಇಡು$_1$]

**ಬೆಚ್ಚಿಸು** 'ಬೆರ್ಚಿಸು' ನೋ.

**ಬೆಚ್ಚು$_1$** 'ಬೆರ್ಚು$_1$' ನೋ.

**ಬೆಚ್ಚು$_2$** 'ಬೆರ್ಚು$_2$' ನೋ.

**ಬೆಚ್ಚು$_3$** 'ಬಿಸು$_2$' ನೋ.

**ಬೆಚ್ಚುಗೊರಳು** (ನಾ). (?): ಸಣ್ಣಗಳ ನುಣ್ಗೊರಳು ಸವಿಗಳ ಬಣ್ಣಗಳವೋ ಕಂಬುಕಂಠವೋ ಬೆಣ್ಣೆಗಳವೊ ಬೆಚ್ಚುಗೊರಳಿನ ಚೆಲುವೊ ಸವಿಗಳವೊ (ಜರಾಮ. ೦೬-೩೦). [? + ಕೊರಳು (<ಕೊರಲ್)]

**ಬೆಚ್ಚುನೀರ್**, ಬೆಚ್ಚುನೀರು (ನಾ). ಮಗುವು ಹುಟ್ಟಿದಾಗ ಅಥವಾ ಹೆದರಿಕೊಂಡಾಗ ಹೆದರಿಕೆಯನ್ನು ಹೋಗಿಸಲು ಮುಖದ ಮೇಲೆ ಎರಚುವ (ಮಂತ್ರದ) ನೀರು : ಮದದ ನೀರೊಳೆ ಲೋಕವಾರ್ತೆಗೆ ಬೆಚ್ಚುನೀರ್ದಳಿದು . . . ಮದದಂತಿದಾತದೊಳೆ ಕಟ್ಟಿದ ತೊಟ್ಟಿಲಂ ನಯದಿಂದಮೋಱಿಸೆ ಬಾಳಕಾಲದೊಳೆ ತೊಟ್ಟಿಲಿಗಂ ಗಜಪ್ರಿಯನಪ್ಪುದು ಸಲೆ ತೋಱಿದಂ (ಶಂಶಶಾ. ೦-೪೩) ; ಮಱೆಯದೆ ಬೆಚ್ಚುನೀರೆಱೆದು ತೊಟ್ಟಿಲೊಳಿಟ್ಟು . . . ತನಿವೆರ್ಚುವ ಸೈಪೆನಗೆಂದು ಸಾರ್ಗುಮೋ (ಶಂದ್ರಶ. ೩-೪೩) ; ತರುಣಗೆ ಬೆಚ್ಚುನೀರ್ಗಳೆಱೆದರು ಸರಸಿರುಹದಳಲಿತನೇತ್ರೆಯರು

(ಶ್ರೀಚಾ. ೨-೭೯). **ಬೆಚ್ಚುನೀರು :** ಮಣಿದಟ್ಟೆಯೊಳು ಮಗುವಿಟ್ಟು ಮಾಕೆ ಸಹಿತಂ ಬೆಚ್ಚುನೀರೆರೆದಿದೋತು ಲಿಂಗವ ಧರಿಸಿ ಶಿಶುವಿಗೆ (ಶುದೀಕ್ಷೆ. ೦೬-೦೯); ಬೆಚ್ಚುನೀರೆಂದರೆ, ಮಕ್ಕಳ ಮೇಲೆ ಪರಿಣಮಿಸಬಹುದಾದ ಲೋಕದ ದೃಷ್ಟಿಬಾಧೆ ಪಿಶಾಚಪೀಡೆ ವಚನದೋಷಗಳನ್ನು ಬೆಚ್ಚಿಸಿ ಹೋಗಾಡಿಸಲೆಂದು . . . ಎರಚುವ ಅದೊಂದು ಮಂತ್ರಪೂರಿತವಾದ ಬೇಳಂಬದ ನೀರು(ಚಾಡೋಣ. ೯೭). [ಬೆಚ್ಚು₂ (<ಬೆರ್ಚು₂) + ನೀರ್]

**ಬೆಚ್ಚುನೀರು** 'ಬೆಚ್ಚುನೀರ್' ನೋ.

**ಬೆಚ್ಚುರಿ** 'ಬೆನ್ನುರಿ' ನೋ.

**ಬೆಚ್ಚೋಡು** 'ಬೆನ್ನೋಡು' ನೋ.

**ಬೆಜಯಿತ್ತ** 'ಬಿಜಯಿತ' ನೋ.

**ಬೆಜಲು** 'ಬೆದ್ದಲ್' ನೋ.

**ಬೆಜ್ಜ₁** (ನಾ). ರೋಗದ ಮೂಲವನ್ನು ತಿಳಿದು ಚಿಕಿತ್ಸೆ ಮಾಡುವವನು; ವೈದ್ಯ : "ಬೆಜ್ಜನೆಂದು ವೈದ್ಯಂ" (ಶಶಸಾ. ೬೦-೩೫೦); ತನ್ನಿಚ್ಛೆಯಿಂದೆ ಕಜ್ಜಂಬೇಟ್ಟಂ ಶಚಿಸಲಿಸಲಾಚಿನಾರ್ತನ ತೆಜಿನಚಿಯದೆ ಮರ್ದುವೇಟ್ಟ ಬೆಜ್ಜನ ತೆಱದಿಂ (ಕಬಿಾ. ೩-೦೫೨); ನೊಂದ ತಮ್ಮಣುಗಾಳ್ಗಳ ಕೊಂಡಾಟ ದಾನೆಗಳ ನಚ್ಚಿನ ಕುದುರೆಗಳ ಪುಣ್ಗಳನುಡಿಯಲುಮೋವಲುಂ ಮರ್ದುಂ ಬೆಜ್ಜರುಮನಟ್ಟುತ್ತುಂ (ಕಂಶಭಾ. ೧೦-೨ ವ); ಹಿತವಿದಹಿತವೆಂದು ತಿಳಿಯದ ಶಿಶುವ್ಯಾಧಿಗಿತರವ ಮಾಳ್ಪ ಬೆಜ್ಜನೊಲು ಮತಿಹೀನನೆಮಗೆ ಸಂಸಾರ ದಾಮಯಕೆ ನೀಂ ಹಿತವೈದ್ಯ ವೀರಜಿನೇಂದ್ರ (ವರ್ಧಶ. ೦೨-೦೦೦).

[<ಪ್ರಾ. ವೆಜ್ಜ-/ಸಂ. ವೈದ್ಯ]

**ಬೆಜ್ಜ₂** 'ಬಿಜ್ಜ₂' ನೋ.

**ಬೆಜ್ಜಂಗೆಯ್** (ಕ್ರಿ). ವೈದ್ಯನ ಕೆಲಸವನ್ನು ಮಾಡು ; ಚಿಕಿತ್ಸೆ ಮಾಡು : ಒಡವಿದನಿತು ಧನಮುಮಂ ಕೊಟ್ಟು ಬೆಜ್ಜಂಗೆಯ್ಯುದು (ವೃಕಥ. ೦೦-೨೫ ವ).

[ಬೆಜ್ಜ₁ + ಕೆಯ್₁]

**ಬೆಜ್ಜಗಜ್ಜ** (ನಾ). ವೈದ್ಯನ ಕೆಲಸ ; ಚಿಕಿತ್ಸೆ : ಬೆಜ್ಜಗಜ್ಜಂಗೆಯ್ವನೀ ನಿನ್ನ ಬೆಜ್ಜರಿಕೆ (ಶ್ರೀಚಾಷಾ. ೯೫೦-೦೬೦). [ಬೆಜ್ಜ₁ + ಕಜ್ಜ₁]

**ಬೆಜ್ಜತನ** (ನಾ). ವೈದ್ಯನ ಕೆಲಸವನ್ನು ಮಾಡುವಿಕೆ; ಚಿಕಿತ್ಸೆ ಮಾಡುವಿಕೆ: ಕೋಶಮುಮಂ ಬೆಜ್ಜತನದೆಡೆಯುಮಂ ಪೆಱತುಜ್ಜುಗಮಂ ಕೊರ್ತು ವಧುಗೆ ಕೊಟ್ಟಂ ಕೆಟ್ಟಂ (ಸೂಕ್ತಿಸು. ೮-೦೦೬; ಶುದಶ. ೯-೫೯ ನೋ).

[ಬೆಜ್ಜ₁ + _ತನ]

**ಬೆಜ್ಜರ** 'ಬೆಚ್ಚರ₁' ನೋ.

**ಬೆಜ್ಜರವಡು** (ಕ್ರಿ). ಅಂಜು ; ಹೆದರು ; ಭಯಪಡು : ಇಷ್ಟು ಮಾತಿಗೆ ಬೆದರಿ ಬೆಜ್ಜರವಟ್ಟು ಬೇಗದಿ ಬಂದು ಹುತ್ತದ ಹೊಟ್ಟೆಯಲಿ ಹೊಗುತ (ಅಶಾರಾ. ೦೬-೩೯). [ಬೆಜ್ಜರ (< ಬೆಚ್ಚರ₁) + ಪಡು₁]

**ಬೆಜ್ಜರವಡೆ** (ಕ್ರಿ). ಹೆದರಿಕೆಯನ್ನು ಹೊಂದು ; ಭಯಪಡು : ಬಿದಿರೂರ್ದೊರೆ . . . ಇದಿರೊಳ್ಪಿಂತೆಡಬಲದೊಳಮಿದೆ ಚಕದೇವೇಂದ್ರನೆಂದು ಬೆಜ್ಜರವಡೆವಂ (ಅಶ್ವತ್ಥ. ೯೩-೯); ಗರ್ಜನೆಯಾಕಾಶಮಂಡಲ ತುಂಬಿತು ದಿಗ್ಪಾಲವೆಲ್ಲವ ವ್ಯಾಪಿಸಿತು ಬೆಜ್ಜರವಡೆದನು ಕಂಸನು (ಕ್ರಿಸಭಾ. ೬೦-೫).

[ಬೆಜ್ಜರ (< ಬೆಚ್ಚರ₁) + ಪಡೆ₁]

**ಬೆಜ್ಜರಿಕೆ** (ನಾ). ಹೆದರಿಕೆ; ಭಯ ; ಅಂಜಿಕೆ : ಹೆಜ್ಜೆ ಹೆಜ್ಜೆಗೆ ಶತಾಸಂತ ತಪ್ಪುಗಳನ್ನು ಬೆಜ್ಜರಿಕೆಯಿಲ್ಲದಲೆ ಆರ್ಜಿಸಿದೆನೊ (ಕೋಕ್ಷದೀ. ೦೫-೦).

[ಬೆಜ್ಜರ (< ಬೆಚ್ಚರ₁) + _ಇಕೆ]

**ಬೆಜ್ಜರಿಸು** 'ಬೆಚ್ಚರಿಸು' ನೋ.

**ಬೆಜ್ಜಲು₁, ಬೆಜ್ಜಿಲು** (ನಾ). ಒಂದು ಬಗೆಯ ಮರ : "ಪಾಂಡುರಃ — ಲೊಕ್ಕಿ, ಕೊಡಸಿಗೆ, ಅತ್ತಿ, ಬೆಜ್ಜಲು" (೬ಶಧಿ. ೯೮); ತುಪ್ಪದ ತೊಡದು ಕರಿಯೊಳಗಪ್ಪುದ ಬಿಡು ಚಿನಧಾರೆ ಬೆಜ್ಜಲು ಆಡಿನವೊಪ್ಪುತ ಹಿಕ್ಕೆಯು ಕರಿಯಂ ತಪ್ಪದೆ ಬಿಡು ಬೆನ್ನು ಪುಣ್ಣು ಬೇಗಂ ತೀರ್ಗು (ಅಶ್ವವೈ. ೦೩-೫೬); ಸಂಪಗೆ ಬೆಜ್ಜಲು ಬೆಳವ ಬಿದಿರ್ದೇವರಿಟಣ . . . ಸಸಿ ನೇಸಱವೆಳಗಿಗೆ ವೆಜ್ಜ ಗೊಡದೆ ಬೆಳೆದಿರಲು (೫ಯಚಾ. ೦೫-೨೪). **ಬೆಜ್ಜಿಲು :** "ಶಕಟಾಕ್ಷಃ— ಬೆಜ್ಜಲು" (೬ಶಧಿ. ೦೬೦) ; ಹಾಲೆ ಹಲಸು ಅತ್ತಿ ಬೇಲ ಬೆಜ್ಜಲು . . . ಆಲದ ಮರಗಳ ಸಾಲೆಸೆದಿಹವು ಅಲ್ಲಲ್ಲಿ (ಶತಾದೀಚಾ. ೦-೫೦).

**ಬೆಜ್ಜಲು₂** 'ಬೆದ್ದಲ್' ನೋ.

**ಬೆಜ್ಜಲು** 'ಬೆಜ್ಜಲು₁' ನೋ.

**ಬೆಜ್ಜು** (ನಾ). ಚಿಕಿತ್ಸೆ ಮಾಡುವಿಕೆ ; ವೈದ್ಯ : "ಬೆಜ್ಜೆಂದು ವೈದ್ಯಂ" (ಕಶ್ಬೈಕೈ. ೯೫) ; ದುರ್ಬಲಂಗಂ ಅಸಹಾಯಂಗಂ ಪ್ರತಿಕೂಲಂ ಗೆಯ್ದನಪ್ಪವಂಗವಮಾವ ಕಜ್ಜಮುಂ ಬೆಜ್ಜೆಯಿಲ್ಲದ[ ಬೆಜ್ಜಿಲ್ಲದ] [ಶಾಶಾಂ. ಬಿಜ್ಜಿಲ್ಲದ] ಬೇನೆಯಂತೆ ತೀರಲರಿಯದು (ಕಂತಕಾ. ೦೭-೦) ; ಬೆಜ್ಜುಂ ಕಜ್ಜಮುಮಾಯುಗೆ ನೆರಮಲ್ಲದೆ ಸಾವು ಬಾರಿಸಲ್ ನೆಱಗುಮೆ (೫೯ವಸಂ. ೩೬-೦೯) ; ಬೇನೆಯು ಬೆಜ್ಜಿಲ್ಲದುಬ್ಬಟವಡೊಲ್ಲದರೊಳರೇ (ಉಶಾರ. ೯೩-೨೫೭).

[ಬೆಜ್ಜ₁ + _ಉ₄]

**ಬೆಜ್ಜುಗೆಯ್** (ಕ್ರಿ). ಚಿಕಿತ್ಸೆಮಾಡು ; ವೈದ್ಯಮಾಡು : ಸಾಧ್ಯಮಸಾಧ್ಯವೆಂಬೆರಡಱೊಳಂ ಅಸಾಧ್ಯಮಂ ಬಿಸುಟ್ಟು ಸಾಧ್ಯಮಂ ಕೆಯ್ಕೊಂಡು ಬೆಜ್ಜುಗೆಯ್ಕೆ ಕುತ್ತಂ ಪೋಕುಂ (೫೯ವಸಂ. ೦೬೦-೬). [ಬೆಜ್ಜು + ಕೆಯ್₁]

**ಬೆಜ್ಜುವಡೆ** (ಕ್ರಿ). ಚಿಕಿತ್ಸೆಯನ್ನು ಪಡೆ ; ವೈದ್ಯವನ್ನು ಹೊಂದು : ಕುತ್ತವಡೆದಂ ಬೆಜ್ಜುವಡೆದು ಕೈಪೆಗಂಜಿ ಮರ್ದಂ ಕುಡಿಯದೊಡಂ . . . ಆತನ ಕುತ್ತಮುಮಿಾತನ ಕರ್ಮಮುಂ ಪತ್ತುವಿಡದು (೫೯ವಸಂ. ೫೦-೦೦).

[ಬೆಜ್ಜು + ಪಡೆ₁]

**ಬೆಜ್ಜುವೇೞ್** (ಕ್ರಿ). ಚಿಕಿತ್ಸೆಯನ್ನು ಹೇಳು ; ವೈದ್ಯ ಮಾಡು : ಕುತ್ತಮುಳ್ಳವಂ ಮರ್ದುವಡೆದವಕ್ರಿಯೆಯೊಳ್ ನೆಗೞ್ವೊಡಂ ಕರ್ಮಮುಳ್ಳಂ ಮನುಷ್ಯಭವಂಬಡೆದು ಧರ್ಮಮಂ ಮಱೆದು ನೆಗೞ್ವೊಡಂ ಬೆಜ್ಜುವೇೞಲ್ ಬಲ್ಲವರುಂ ಧರ್ಮಂಬೇೞಲ್ ಬಲ್ಲವರುಮೇಗೆಯ್ವರ್ (೫೯ವಸಂ. ೬೨-೦೯). [ಬೆಜ್ಜು + ಪೇೞ್]

**ಬೆಜ್ಜೆಗೆಯ್** (ಕ್ರಿ). (?) : ಚಂಡಭುಜಗರ್ವದಿಂದಂ ಗಂಡಂ ಮುಂದಿಟ್ಟು ಬೆಜ್ಜೆಗೆಯ್ದೆನ್ನರುಮಂ ಪೆಂಡಿರನೀಗೆಂದಟ್ಟಿದ ತೊಂಡಂ ಮರನ್ನಾವ ಕಥೆಯೊಳಂ ಕೇಳ್ದಱಿಯೆಂ (ವರ್ಧಪಾ. ೯-೦೯). [? + ಕೆಯ್₁]

**ಬೆಟ್** (ನಾ). ಒಂದು ಅನುಕರಣ ಶಬ್ದ: ಉಪನ್ಯಾಸದ ವಿನ್ಯಾಸಂ ಬಲಂ ಬೆತ್ತೆಸೆಯೆ ನೃಪಸಭಾಮಧ್ಯದೊಳ್ ಪೆರ್ಚೆ ವಾಗ್ಗುಂಫದೊಳಾಗಳ್ ಬೆಟ್ಟನಲ್ಪಿಟ್ಟನಲೆಡೆಗುಡದಾಶ್ಚರ್ಯಮಂ ತಾಳ್ದಿ ನಿಂದಂ(ಸುಕುಚಾ. ೨-೦೫).

**ಬೆಟ್ಟ, ಬೆಟ್ಟು₂, ವೆಟ್ಟ** (ನಾ). ೧. ಸುತ್ತುಮುತ್ತಿನ ಭೂಮಿಯ ಮೇಲೆ ಎತ್ತರವಾಗಿರುವ ಪ್ರದೇಶ ; ಗಿರಿ ; ಮಲೆ : "ಧರ ಮದ್ರಿಕುಧರಮದಹಾರ್ಯಂ ನಗಂ . . . ಗೋತ್ರಮೆನಲು ಬೆಟ್ಟಕ್ಕೆ ನಾಮಂ" (ಮಂಗರಾ. ೨೯-೦) ; ಅನ್ನೆ ಬನ್ನ ಬೆಟ್ಟದಾ ಮೂಡಾಯ್ (ಮೈಅಂ. ೦೯೩೭, ೬೩-೨೯ ; 550); ಬೆಟ್ಟದ ಮೇಗಣಿಂ ಪಾಯ್ವುರ್ಪ ನಿರ್ಝರ ಶೀಕರಂಗಳಿಂ ಮೆಯ್ಯಾಗ್ಯಾಯನಮಾಗಿ (ವಚ್ಚಾರಾ. ೦೦೮-೫) ; ಬಿಡವಟ್ಟು ಬೆಟ್ಟದೊಳ್ ಪೋಗಿ ತೊೞಲ್ದು . . . ಮಾತಲಿರ್ತನಿಲ್ಲಾಗಳೆ ಕೋಪವಂ ನಿನಗೆ ಸಂಚಿತಶೌರ್ಯಧನಂ ಧನಂಜಯಂ (ಕಂಶಭಾ. ೬-೯೭) ; ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದೊಡೆಂತಯ್ಯ (ವಚಾದೇ. ೨. ೪೫-೦೦೬) ; ಬೆಟ್ಟಕ್ಕೆ ಕಲ್ಲು ಹೊತ್ತ ಹಾಗೆ (ಗಾದೆ). ೨. (ಅಲಂ) ಕಷ್ಟಸಾಧ್ಯವಾದುದು ; ದುಸ್ತರವಾದುದು : ಮಡಯಂಗತ್ತಮವಿದ್ದೆ ಬೆಟ್ಟ ಕೆರುಡಂಗಂ ಮಾರ್ಗವೇ ಬೆಟ್ಟ ಕೇಳ್ ಬಡವಂ ಗೆಲ್ಲರ ವೈರ ಬೆಟ್ಟ (ಕೋಪಪೇಕ. ೯೫). **ಬೆಟ್ಟು₂:** ೧. "ಅಚಳಃ... ಅದ್ರಿಃ, ಕುಧ್ರಃ — ಈ ೧೪ ಬೆಟ್ಟು" (ಶಬಾಯು. ೨೭-೦೦) ; ಕರಮುಚ್ಚಮಪ್ಪ

ಬೆಟ್ಟುಗಳ ತಟಂಗಳಿಂ ಸುರಿವ ನಿರ್ಝರವುಂ (ಕಬಿರಾ. ೧-೦೨೪) ; ಬೆಟ್ಟು ಗಳ್ಮಾರ್ದನಿಗುಡೆ (ಕಾದಂಪೂ. ೦೬೦). **ವೆಟ್ಟ** : ೧. ಶ್ರೀಮೂಸೇನರ್ಪರವು ಪ್ರಭಾವ ರಿಷಿಯರ್ಕಟ್ಟವಿಪ್ಪಿನಾ ವೆಟ್ಟದುಳ್ ಶ್ರೀಸಜ್ಜಣಿಜ್ಜಳ್ ವೇಟ್ಟಿ ಸಿದ್ಧಸಮಾಯನನ್ನಪ್ಪಾದೆ ನೋನ್ತು (ಎಕ. II, ೨೬-೦ ; ಸು. 700).

**ಬೆಟ್ಟತಟ್ಟೆಯು** = ಬಿರುಸಾದ ತಡೆ ; ಕಠಿಣವಾದ ಅಡ್ಡಿ (?) : ಅಶುಭಸ್ಯ ಕಾಲಹರಣ ಎಂದು ದಿನವುಂ ನೂಂಕುವಂದವೈಸೆ ನಿನ್ನದೊಂದು ಮಯೆಂಬವನ ಬೆಟ್ಟತೆಟ್ಟೆಯ[ಪಾಠಾಂ. ಬೆಟ್ಟತಟ್ಟೆಯು] ಮಾತಿಗೆಂದನೆಲೆ ನೃಪತಿ ನಾನಾವ ತೆಜದಿಂ ವಿಚಾರಿಸಲವರ್ಸಿಕ್ಕಿತಿಲ್ಲಾ ಎನೆ (ಸಪ್ತಕ್ಷೇ. ೨-೯೦).

**ಬೆಟ್ಟದ ನೆಲ್ಲಿಕಾಯ್, ಬೆಟ್ಟದ ನೆಲ್ಲಿಕಾಯಿ** = ಬೆಟ್ಟದಲ್ಲಿ ಬಿಡುವ ನೆಲ್ಲಿ ಕಾಯಿ ; ಒಂದು ಬಗೆಯ ಆಮಲಕ : ಗಟ್ಟದುಪ್ಪು ಬೆಟ್ಟದ ನೆಲ್ಲಿ ಕಾಯ್ಗೆ ಸುಪ್ರಯೋಗಿಸಿದಂತೆ ಸುಗುಣಾನಿರುದ್ಧಗೆ ಕಪ್ಪುರಗಂಧಿ ಸೇರಿದಳು (ಮೋಹತ. ೪೦-೪೩) ; ಬೆಟ್ಟದ ನೆಲ್ಲಿಕಾಯಿ ಸಮುದ್ರದ ಉಪ್ಪು ಎತ್ತಣಿಂದೆತ್ತ ಸಂಬಂಧವಯ್ಯ (ಅಪಕಂ. ೦೩-೩೯) ; ಘಟ್ಟದ ಉಪ್ಪು, ಬೆಟ್ಟದ ನೆಲ್ಲಿಕಾಯಿ (ಗಾದೆ). [ದೇ.೫ ತಮಿ. ವಿಟವನ್, ವಿಣ್ಬು ; ಕೊತ. ಬೆಟ್ಟ ; ಬ್ರಾಹುಈ. ಬಿಟ್, ಬುಟ್]

**ಬೆಟ್ಟಕುಂಬಳ** (ನಾ). ಒಂದು ಬಗೆಯ ಕುಂಬಳ : "ಕೂಷ್ಮಾಂಡಕಃ . . . . ನೆಲಕುಂಬಳ, ಬೆಟ್ಟಕುಂಬಳ, ಕಿರಿಕುಂಬಳ—೬ ಜಾತಿಗಳಿಗೂ ಹೆಸರುಗಳು" (ಸಿದ್ಧೌಷ. ೦೪೬). [ಬೆಟ್ಟ+ಕುಂಬಳ]

**ಬೆಟ್ಟಗೆದಲು, ಬೆಟ್ಟಗೆದ್ದಲು** (ನಾ). ಒಂದು ಬಗೆಯ ಪ್ರಾಣಿ : "ಪುಚ್ಛಲೋಮಶಃ—ಬೆಟ್ಟಗೆದಲು" (೬ಕಂ. ೦೩೦). **ಬೆಟ್ಟಗೆದ್ದಲು** : "ಬಿಲೇಶಯಃ—ಎಯ್ಯಮೃಗ, ಬೆಟ್ಟಗೆದ್ದಲು, ಸರ್ಪ" (೬ಕಾ. ೦೦೬). [?]

**ಬೆಟ್ಟಗೆದ್ದಲು** 'ಬೆಟ್ಟಗೆದಲು' ನೋ.

**ಬೆಟ್ಟಗೊರಜಲು** (ನಾ). ಒಂದು ಬಗೆಯ ಸಸ್ಯ : ಜಾಜಿಚಕ್ಕೆ, ಬೆಟ್ಟ ಗೊರಜಲು, ಹಿರೇಮದ್ದು . . . ಪ್ರಯೋಗಿಸಲು ಶ್ವಾಸಕಾಸಗಳು, ಉದರ ರೋಗಗಳು . . . ಗುಣ ಹೊಂದುವುವು (ಸಕವೈ. ಕಂ. ೪೩೬).

[ಬೆಟ್ಟ + ಗೊರಜಲು$_1$]

**ಬೆಟ್ಟಗೋಂಟೆ** (ನಾ). ದುರ್ಗತ್ರಯಗಳಲ್ಲಿ ಒಂದು ; ಬೆಟ್ಟದ ಮೇಲಿರುವ ಕೋಟೆ ; ಗಿರಿದುರ್ಗ : ಈ 'ದುರ್ಗತ್ರಯ'ವನ್ನು 'ಬೆಟ್ಟಗೋಂಟೆ', 'ಕಡಲ್‌ಗೋಂಟೆ', 'ಪಳುಗೋಂಟೆ' ಅಥವಾ 'ನೆಲಕೋಟೆ' ಎಂದು ಹೇಳುವರು (ಕರ್ನಾಕ. ೪). [ಬೆಟ್ಟ + ಕೋಂಟೆ]

**ಬೆಟ್ಟಜೆ** (ನಾ). ಪರ್ವತರಾಜನ ಮಗಳು ; ಪಾರ್ವತಿ ; ಗಿರಿಜೆ : 'ಬೆಟ್ಟಜೆಪತಿ' ಪರಾ. [ಬೆಟ್ಟ+–ಜೆ$_0$. / P ಇಲ್ಲಿ 'ಗಿರಿಜಾ' ಎಂಬ ಶಬ್ದದಂತೆ ಸಂಸ್ಕೃತದ 'ಜಾ' ಪ್ರತ್ಯಯ ಸೇರಿದೆ]

**ಬೆಟ್ಟಜೆಪತಿ** (ನಾ). ಪಾರ್ವತಿಯ ಗಂಡ ; ಈಶ್ವರ ; ಗಿರಿಜಾಪತಿ : ಎಲೆ ಮಱಿಯ ನೀರ ಸುಟ್ಟ ಬೂದಿಯಿಂದಂ ಪೂಜಿಸಿ ಸಿದ್ಧಿಗಳ ಗುಂದ್ವಾಟ ಕ್ಕೊಳಗಾದವರ ಕಡೆಮೆಟ್ಟಿ ಬಿಟ್ಟಪ್ಪನೆ ಬೆಟ್ಟಜೆಪತಿ (ಸಿದ್ಧಚ. ೯೦-೩೪೦).

[ಬೆಟ್ಟಜೆ + ಪತಿ$_2$]

**ಬೆಟ್ಟಣುಗಿ** (ನಾ). = ಬೆಟ್ಟಜೆ : ಬೆಟ್ಟಣುಗಿಯುಗ್ಗಳದ ಪೂಜೆ . . . ತಾರಕ ನಲೆವ ಮೊಱೆ ಕೂಡಿ ಮುಪ್ಪುರಿಯೊಳೀಶನು ಸೋಂಕೆ (೬೬ಕೃಷ್ಣ. ೨-೪-೨೬); ಬೆಟ್ಟಣುಗಿಯಂಘ್ರಿಯುಗಳಾ ಬಿಸರುಹಂಗಳಿಗೆ ನೊಸಲ್ ಸಾರ್ಚಿ ವಂದಿಸಲು (ಪಶುಕೋ. ೨೯-೯೪). [ಬೆಟ್ಟ + ಅಣುಗಿ (<ಅಣುಂಗಿ)]

**ಬೆಟ್ಟಣುಗಿಯೆಱೆಯ** (ನಾ). = ಬೆಟ್ಟಜೆಪತಿ : ತುಂಬಿದೆಳಜವ್ವನದ ಬೆಟ್ಟಣುಗಿಯೆಱೆಯ ಪೊರೆ ನಂಬಿದೆಂ ಭೋಗವಲ್ಲ (ಶೇರಮ. ೬-೬೧).

[ಬೆಟ್ಟಣುಗಿ + ಎಱೆಯ]

**ಬೆಟ್ಟದಾವರೆ** (ನಾ). ಒಂದು ಬಗೆಯ ಹೂವು ; ಕೊಸಗು : "ಕೊಸಗೆಂದುಂ ಬೆಟ್ಟದಾವರೆಯೆಂದುಂ ಕರ್ಣಿಕಾರಂ" (ಕಕಾ. ೩೦-೬೦) ; ಬೆಟ್ಟದಾವ[ಪಾಠಾಂ. ಮ]ರೆಯ ಹೂವಂ ತಂದು ನೆಳಲೊಳೊಣಗಿಟ್ಟು ಚೂರ್ಣಂ ಮಾಡಿಕೊಂಡು (ಸೂಕಶಾ. ೨-೨೦) ; ಬೆಟ್ಟಜವ್ವನೆಯೊರ್ವಳಡಿಯಿಟ್ಟು ಕಾಣ್ಕೆಗೆ ಬೆಟ್ಟದಾವರೆಯ ತಂದಿತ್ತು (ಶಠತ. ೩-೩೩).

[ಬೆಟ್ಟ + ತಾವರೆ (<ತಾಮರೆ)]

**ಬೆಟ್ಟದುದಿ** (ನಾ). ಗಿರಿಯ ಶಿಖರ : ಬೆಟ್ಟದುದಿಗಳನಡರಿ ಕಂಡರು . . . ನಡೆದು ಬಹ ಪಾರ್ಥನ ಪತಾಕಿನಿಯನು (ಜೈಮಿಭಾ. ೦೬-೩೨). [ಬೆಟ್ಟ+ತುದಿ]

**ಬೆಟ್ಟನೆ** (ಅ). ೧. ಬಿರುಸಾಗಿ ; ಒರಟಾಗಿ : ಅಱಿದಂ ನೆಟ್ಟನೆ ಬೆಟ್ಟನಿಂತು ನುಡಿವೈ ನೀಂ ಕಂದ ಪೋಗಿಂದೆ ಕೆಟ್ಟಱಿದತ್ತಾಗದೆ ಸೋಮವಂಶಂ (ಕಂಕಭಾ. ೯-೮೬) ; ಎನ್ನ ಮಗಳ್ಗಾದ ಸುತರ್ ನಿನಗೆ ಕಿಂಕರರಕ್ಕುಮೆಂದು ಬೆಟ್ಟನೆ ನುಡಿಯೆ (ನೇಬಿಪು. ೩-೨೬ ವ). ೨. ರಭಸವಾಗಿ ; ವೇಗವಾಗಿ : 'ಬೆಟ್ಟನೆವೋಗು' ಪರಾ.

**ಬೆಟ್ಟವೆಟ್ಟನೆ** (ದ್ವಿರುಕ್ತಿ) : ಪಲವಂ ಪ್ರಲಾಪಿಸುತ್ತುಂ . . . ಅಡಿಗಡಿಗೆ ಕಾಲ ಮೇಲೆ ಬೀೞ್ದು ದುಃಖುವಂ ಬೆಟ್ಟವೆಟ್ಟನಿಂತೆಂದಂ (ಕಾದಂಬ.೬೪೩); ದಟಕಂಠನುದಂಚಿತಕಂಠನಾಗಿ ಬಿಟ್ಟಟ್ಟದೆ ಬೆಟ್ಟವೆಟ್ಟನುಸಿರ್ದಟ್ಟಿದೊಡಿರ್ದಪುದಲ್ತೆ ಕಾಳೆಗಂ (ಕಂದಾವಿ. ೦೧-೨೩).

[ಬೆಟ್ಟು$_4$ (<ಬೆಟ್ಟಿತು) + –ಅನೆ$_1$]

**ಬೆಟ್ಟನೆಲ್ಲಿ** (ನಾ). ಬೆಟ್ಟದಲ್ಲಿ ಬಿಡುವ ನೆಲ್ಲಿಕಾಯಿ ; ಒಂದು ಬಗೆಯ ಆಮಲಕ : ಬಾಳೇಹೂವು . . . ಪುಳ್ಳಂಪುರಚಿಯ ಸೊಪ್ಪು, ಬೆಟ್ಟನೆಲ್ಲೀ ಸೊಪ್ಪು, ಈ ಸೊಪ್ಪುಗಳನ್ನು ಒಂದು ಮಡಕೆಯಲ್ಲಿ ತುಂಬಿ. . .ಪುಟವಿಕ್ಕಿ ತೆಗೆದು ಆ ಸೊಪ್ಪುಗಳ ರಸವ ಹಿಂಡಿಕೊಂಡು ಜೇನುತುಪ್ಪವೆರಸಿ ಕುಡಿಯ ಕೊಡೆ ಶಿಶುಗಳಿಗೆ ಸರ್ವಾತಿಸಾರ ಹರ (ವೈದ್ಯಸಾ. I, ೪೬೯).

[ಬೆಟ್ಟ + ನೆಲ್ಲಿ]

**ಬೆಟ್ಟನೆವೋಗು** (ಕ್ರಿ). ರಭಸವಾಗಿ ಹೋಗು ; ವೇಗವಾಗಿ ಸಾಗು : ತೊಟ್ಟನೆ ಬೆಳ್ಕುತ್ತ ಬೆಟ್ಟನೆವೋಗಿ ತನ್ನ ಕೆಯ್ಯುಂ ಬೇಗಮುಡುಗಿಕೊಂಡು ಇದು ನಿಮಗೆನಿತು ಪೈತ್ತಿಕಜ್ವರಮಾದೊಡಮಿಂತೆನಲಕ್ಕುಮೆ ಎನೆ (ಬಂಹಂ. ೮-೩೯ ವ). [ಬೆಟ್ಟನೆ+ಪೋಗು$_1$ (<ಪೋ$_1$)]

**ಬೆಟ್ಟಬೂರುಗ** (ನಾ). ಬೂರುಗದಲ್ಲಿ ಒಂದು ಬಗೆ : "ರೋಚನಃ, ಕೂಟಶಾಲ್ಮಲೀ–೨ ಕಚ್ಚನೆ ಎಲವದ ಪೆಸರು, ಬೆಟ್ಟಬೂರುಗ, ಕೆಂಪು ಬೂರುಗ" (ಸಿದ್ಧೌಷ. ೮೨೩) [ಬೆಟ್ಟ + ಬೂರುಗ$_1$ (<ಬೂರ)]

**ಬೆಟ್ಟಬೇಸಗೆ** 'ಬೇಸಗೆ' ಪರಾ.

**ಬೆಟ್ಟಮಲ್ಲಿಗೆ** (ನಾ). ಮಲ್ಲಿಗೆಯಲ್ಲಿ ಒಂದು ಬಗೆ ; ಗಿರಿಮಲ್ಲಿಗೆ ; ಕೊಡಸಿಗೆ : "ಕುಟಜಃ, ಶಕ್ರಃ, ವತ್ಸಕಃ, ಗಿರಿಮಲ್ಲಿಕಾ—ಕೊಡಶಿನ ಹೆಸರುಗಳು, ಬೆಟ್ಟಮಲ್ಲಿಗೆ ವಿಶೇಷಗಳು" (ಸಿದ್ಧೌಷ. ೦೨೬); ಬೆಟ್ಟಮಲ್ಲಿಗೆಯ ಹೊಚ್ಚಹೂವಿನೊಡ ಕಾಲ ನೀರ ನೀಡಿ (ಮೇಘದೂ. ೨-೪) ; ಬೆಟ್ಟಮಲ್ಲಿಗೆ ಗಿಡ ಹೂವಿನಿಂದ ಮುಚ್ಚಿಹೋಗಿದೆ (ಸಿಬಂಧ. II, ೦೬೪).

[ ಬೆಟ್ಟ + ಮಲ್ಲಿಗೆ ]

**ಬೆಟ್ಟವಕ್ಕಿ** (ನಾ). ಮಲೆಯಲ್ಲಿ ವಾಸಿಸುವ ಹಕ್ಕಿ : ಮುತ್ತು ಪುಟ್ಟುವ ಕಣಿ ಬೆಟ್ಟವಕ್ಕಿಗಳ ಗೂಡೆಳನೇಸಱ ತೊಟ್ಟಿಲ್ . . . ಮಹಾರ್ಣವಂ (ಸೂಕ್ತಿಸು. ೨-೩೬). [ಬೆಟ್ಟ + ಪಕ್ಕಿ]

**ಬೆಟ್ಟವಗೆಯ, ಬೆಟ್ಟುವಗೆಯ** (ನಾ). ಮಲೆಯ ಶತ್ರು ; ಇಂದ್ರ : "ಬೆಟ್ಟವಗೆಯನೆನಲ್ಕೆ . . . ಅಮರೇಂದ್ರನಭಿಧಾನಮಕ್ಕು" (ಕಕಾ. ೬೨). **ಬೆಟ್ಟುವಗೆಯ** : "ಬರ್ದಿಲಾಣ್ಮ . . . ಸಾಸಿರಗಣ್ಣ ಬೆಟ್ಟುವಗೆಯನೆನಲ್ಕೆ ಸುರಪತಿ ನಾಮಮಕ್ಕು" (ಶಬ್ದಮಂ. ೦೦); ಬೆಟ್ಟುವಗೆಯಂ ಪಗೆಯಿನಿಟ್ಟು ಕುಳಿಸದ ಕಡಿಖಂಡದಂತೊಪ್ಪುವಚ್ಚವಳಿಕನ ಗಂಡಶೈಲದಿಂ (ರಾಜಶೇಕ. ೬೨-೫೩). 'ಅದ್ರಿಶತ್ರು' ಪರಾ. [ಬೆಟ್ಟ+ಪಗೆಯ]

**ಬೆಟ್ಟವಳಿ** (ನಾ). ಮಲೆಯ ಹತ್ತಿರ,—ಸಮೀಪ : ಕೆಡೆದ ಕರಿಗಳ

ಬೆಟ್ಟವಳಿಯ ಗುಂಡುಗಳೊಳಗೆ ಮಡಿದ ಕುದುರೆಗಳ ಪೊಡೆಗಲ್ಲ ಪೊರಳಿಗಳೊಳಗೆ . . . ಬಿಡದೆ ರುಧಿರಪ್ರವಾಹಂ ಪರಿಯೆ (ಕೃಬಿಭಾ. ೨೨-೨೬).
[ ಬೆಟ್ಟ + ಬಳಿ$_3$ (<ಬಟ್ಟಿ$_3$) ]

**ಬೆಟ್ಟವಾಟಿ$^3$** (ನಾ). ಒಂದು ಬಗೆಯ ಬಾಳೆ: "ಗುರುರಂಭಾ–ಬೆಟ್ಟವಾಟಿ$^3$" (೬ಕಂ. ೯೯). [ಬೆಟ್ಟ + ಬಾಟಿ$^3$]

**ಬೆಟ್ಟವೇಸಗೆ** 'ಬೇಸಗೆ' ಪರಾ.

**ಬೆಟ್ಟಸಱಿ** (ನಾ). ಪರ್ವತದ ಕಲ್ಲು; ಬಂಡೆ: ಏಕೆ ನಾನ್ ಈಗಳುಂ ನನ್ನನೀ ಬೆಟ್ಟಸಱಿಯತ್ತಣಿನ್ ತೂಳ್ದಿಸಮಕೊಳಬಾರದಯ್ (ಐದ್ವಶ್ರ. ೩೯-೮೩೮). [ ಬೆಟ್ಟ + ಸಱಿ$_1$ ]

**ಬೆಟ್ಟಸಾಲು** (ನಾ). ಪರ್ವತಗಳ ಪಂಕ್ತಿ; ಪರ್ವತಶ್ರೇಣಿ: ಈ ಬೆಟ್ಟಸಾಲು ಉತ್ತರಕ್ಕೆ ಹಬ್ಬಿ ಛೋಟಾನಾಗಪುರ ಪ್ರಸ್ಥಭೂಮಿಗೆ ಹೋಗುತ್ತವೆ (ಭೂಶಿಪ. ೩೫೬). [ ಬೆಟ್ಟ + ಸಾಲು$_2$ ( < ಸಾಲ್$_3$ ) ]

**ಬೆಟ್ಟಸೀಮೆ** (ನಾ). ಪರ್ವತಪ್ರದೇಶ; ಮಲೆನಾಡು: ಪೂರ್ವಘಟ್ಟಗಳ ಬೆಟ್ಟಸೀಮೆಯ ಕಾಡುಪ್ರದೇಶ (ಭೂಶಿಪ. ೩೫೮). [ ಬೆಟ್ಟ + ಸೀಮೆ ]

**ಬೆಟ್ಟಿ$_1$** 'ಭೇಟಿ' ನೋ.

**ಬೆಟ್ಟಿ$_2$** (ನಾ). (?) : ಗಗನವಾರಣಗಳುನ್ಮದದೊಗುವಿಂಗೆಯೊ . . . ಸೊಗಸಿನಲಿ ಚಾರಕದಂಬಕ ಜಗದ ಕಂಗಳಿಗಿಟ್ಟ ಬೆಟ್ಟಿಯೊ ಹಗಲು ಘಟ್ಟಿಸಿ ಬಿಟ್ಟ ಮಸಿಯೋ ಎನಿಸಿತಧಿಕತಮ (ತಿಪ್ಪುಕೃ. ೬-೯೬); "ಕಾಡಿಗೆ" (ತಿಪ್ಪುಕೃ. ಶಬ್ದ). [?]

**ಬೆಟ್ಟಿತು, ಬೆಟ್ಟಿತ್ತು** (ನಾ). ೧. ಬಿರುಸಾದುದು; ಗಟ್ಟಿಯಾದುದು: "ಬಿಱುವೆಂದು ಬೆಟ್ಟಿತು" (ಶಶಸಾ. ೬೮-೩೯೬); ಬೆಟ್ಟಿತಿದು ನಾಡೆಯುಂ ಮಣಿಕಟ್ಟುವಮತಳಂ (ಕಾದಂಪೂ. ೯೩); ಕಲ್ಲಿನ್ನಳ್ ಮುಳ್ಳಿನ್ನಳ್ ಮೆಲ್ಲಿತ್ತಿದು ಬೆಟ್ಟಿತೆನ್ನಳ್ (ಗಂಕ. ೩-೦೦೧). ೨. ಕಠಿಣವಾದುದು; ಕಠೋರವಾದುದು: ತನಿನೋಟವಂ ನೋಡಿ ಬೆಟ್ಟಿತೆಂದಂಜುತಂ ನೆನೆದುಂ ಮನಂ ಕಠಿಣಮೆಂದು ಮತ್ತಂಜುತಂ (ರುದ್ರರ. ದೇ. ೨೦೯-೦೦); ಮುರಾರಿಯ ಹೃದಯ ಬೆಟ್ಟಿತೆನುತ್ತ ಫಲುಗುಣ ತೂಗಿದನು ಶಿರವ (ಕುವ್ಯಾಉ. ೩-೨೮). ೩. ಗಾತ್ರವಾದುದು; ದಪ್ಪವಾದುದು: ಮಳಲೊಟ್ಟಿಲಂತೆ ಬೆಟ್ಟಿತಪ್ಪ ಪೊಱವಾಱುಂ (ಅಮೃತ. ೬-೨೨). ೪. ಕರ್ಕಶವಾದುದು: ಸಮಂತು ಡಕಾರಾಶ್ರಿತಮಾದ ಜಟಿನಾಮಂಗೀಕೃತ ಪದಲತ್ವಕ್ಕೆ ಬೆಟ್ಟಿತೆನಿಸಿದ ಕುಳನುಂ (ಶಮದ. ೦೬). ೫. ಉಗ್ರವಾದುದು; ಘೋರವಾದುದು: ಸೆಟ್ಟಿ ನೀನೆಮಗೆ ಕೊಟ್ಟ ಮಹಾಪದಕಂ ಕರಂ ಬೆಟ್ಟಿತಪ್ಪ ಘಣೆಯಾದುದು (ಧರ್ಮಶ. ೦೦-೬೬). ೬. ಕಷ್ಟಕರವಾದುದು; ಕ್ಲಿಷ್ಟವಾದುದು: ಕಾಲುಂ ಬಲಿಯುವು ನಡೆಯಲ್ ಬೆಟ್ಟಿತು (ಕಾದಂಪೂ. ೦೯೦); ಅರಸರೋಲಗಂ ಲೇಸು ಕಾಳೆಗಂ ಬೆಟ್ಟಿತೆಂಬಂತೆ (ಧರ್ಮಾಮೃ. ೯-೨೯); ಇಂದು ನೀನಾ ಪಾಂಡುಪುತ್ರರನಂದಗೆಡಿಸದೆ ಬಿಟ್ಟೆಯಾದೊಡೆ ಮುಂದೆ ಬೆಟ್ಟಿತು ರಾಜಕಾರಿಯವೆಂದನಾ ಶಕುನಿ (ಕುವ್ಯಾಆ. ೮-೨೦). **ಬೆಟ್ಟಿತ್ತು**: ೧. "ಪರುಷಂ, ಅಸ್ನಿಗ್ಧಂ—ಈ ೨ ಬೆಟ್ಟಿತ್ತು" (ಹಲಾಯು. ೦೭೯-೯೮); ಬಿಸಿದುಂ ಬೆಟ್ಟಿತ್ತುಮುಸಿರದೆಂ ಶೀರ್ಪವುದೇ (ಶಂಶಧಾ. ೯-೬೦); ಕಳಾಧರೆ ಮಣಿಮಯಮಾದ ಪೀಠಂ ಬೆಟ್ಟಿತ್ತೆಂಬಿಂತಿರಗಲೆ ಸೂಳಿ (ಅರ್ಕಶೀ. ೦-೦೦೦ ಪ). 'ಕಡುವೆಟ್ಟಿತ್ತು' ಪರಾ.

**ಬೆಟ್ಟಿತಾಗು, ಬೆಟ್ಟಿತ್ತಾಗು**= ೧. ಬಿರುಸಾಗು; ಕಠಿಣವಾಗು; ಒರಟಾಗು: ಒಳಗಂ ಭೇದಿಸದನ್ನಂ ಚಳಬುದ್ಧಿಗೆ ಪೊಱಗು ಬೆಟ್ಟಿತಾಗಿರ್ಕುಂ . . . ಜಿನವಚನಂ (ಸಮಶ. ೩-೨೬); ಬೆಟ್ಟಿತ್ತಾದ ಪುರುಳಂ ಮೆಲ್ಪುಡಿಯಿಂದೊರೆಯೆ ಸೌಕುಮಾರ್ಯಮೆನಿಪುದು (ಅಶ್ರತಿ. ೦೬-೮). ೨. ಕರ್ಕಶವಾಗು: ಅವಳ ಬೆಟ್ಟಿತಪ್ಪ ಬಟ್ಟಮೊಲೆಯಿಟ್ಟೆಡೆಯೊಳ್ ಶೊಟ್ಟನೆ ಸಿಲ್ಕಿದ ಕಣ್ (ಕಬ್ಬಿಗಾ. ೬೬). ೩. ಬಲವಾಗು; ದೃಢವಾಗು: ಡಕಾರಂ ಪುಟ್ಟುವ ತಾಣಮುಂ ಬೆಟ್ಟಿತ್ತಾಗುಚ್ಚರಿಸೆ ಱಟಂ ಪುಟ್ಟುಗುಂ (ಶಮದ. ೦೯ ವೃತ್ತಿ). ೪. ತೀಕ್ಷ್ಣವಾಗು; ಉಗ್ರವಾಗು: ಅತಿ ಬೆಟ್ಟಿತ್ತಾದ ಬಾಯ ಕುತ್ತವೆಂದು ಹೊಟ್ಟೆಯಂ ಹೊಸೆದು (ಧರ್ಮಾಮೃ. ೯-೦೬೩). **ಬೆಟ್ಟಿದ**= ಕಠಿಣವಾದ ಮನಸ್ಸುಳ್ಳವನು; ಕ್ರೂರಿ: ಬೆಟ್ಟಿದನಾಗಿ ತಾನೆ ವಿಧಿ ಕೊಂದಪನಾಗಳೆ ಸಾಯದಿರ್ದೊಡಂ (ಕಾದಂಪೂ. ೦೯೬); ದಿಟ್ಟತನದೊಳೆಲ್ಲರ ನಱಿಯಟ್ಟುವ ಬೆಟ್ಟಿದ ಮೋಹಾಸುರನ ಪಟ್ಟಣವೆಲ್ಲವ ಸುಟ್ಟಮರರ ಮೆಟ್ಟಿ ಕಟ್ಟಿಯಾಳದೆ ಮಾಣೆನೆಂದ (ತ್ರಿಶಂಸಾಂ. ೯-೦೦೯).
[ದೇ.॥ ತಮಿ. ವೆಟ್ಟಿತು, ವೆಟ್ಟು; ತೆಲು. ಬೆಟ್ಟ, ಬೆಟ್ಟಿದ, ಬೆಟ್ಟು]

**ಬೆಟ್ಟಿತ್ತು** 'ಬೆಟ್ಟಿತು' ನೋ.

**ಬೆಟ್ಟಿಬೆನಕ** (ನಾ). (ಉಕ) (ಮುಂಗಾರಿನ ಸಮಯದಲ್ಲಿ ಕಂಡುಬರುವ) ಅನೇಕ ಕಾಲುಗಳುಳ್ಳ, ಮುಟ್ಟಿದರೆ ಮುದುರಿಕೊಳ್ಳುವ, ಒಂದು ಬಗೆಯ ಹುಳು; ಕಪ್ಪರಚಟ್ಟೆ; ಒನಕೆಬಂಡೆಹುಳು: ಬೆಟ್ಟಿಬೆನಕವು ಸಮಸ್ಯೆಯಲ್ಲಿ ಸಿಕ್ಕಿಕೊಂಡಿತು (ದೀಕಷ್ನ. ೬೯). [ ? ]

**ಬೆಟ್ಟಿರ್** (ಕ್ರಿ). ತೀಕ್ಷ್ಣವಾಗಿರು; ಉಗ್ರವಾಗಿರು: ಬೆಟ್ಟಿಹ ಬಿಸಿಲೊಳ್ ಬೇಂಟೆಯ ನಟ್ಟಡವಿಯೊಳಾಡಿ ಬರುತ ಬಳಲಿದ ಬೇಡಂ ತುಟ್ಟಿಸಿ ನೀರಂ ನೆಳಲಂ . . . ನೋಡುತಿರಲ್ (ಪಸ್ಸಾ. ೫-೯೮).
[ ಬೆಟ್ಟು$_4$ (<ಬೆಟ್ಟಿತು) + ಇರ್$_1$ ]

**ಬೆಟ್ಟಿಸು** (ಕ್ರಿ). ನಾಟಿಸು; ಹೊಡೆಯಿಸು: ಇಱಿವಮುಱಿದಿಕ್ಕುತ್ತೇ ಕಟ್ಟಿಸೆಯುಂ ಬರೆಯಿ[ದ್ದೆ]ಸೆಯುಮುಳಿಯೊಳ್ ಬೆಟ್ಟಿಸೆಯುಂ (ಬಂಶಂ. ೦೦-೯ ರಗಳೆ); ಪಿಂತಣ ಮುಂತಣ ಕಾಲ್ಗಳಲ್ಲಿ ಬೆಟ್ಟಿಸಿ ದಸಿಯಂ (ಅಃಕೋಕ. ೩-೬೯). [ ಬೆಟ್ಟು$_1$ + – ಇಸು$_3$ ]

**ಬೆಟ್ಟು$_1$** (ಕ್ರಿ). ೧. ಕಡಿ; ಕತ್ತರಿಸು; ಸವರು: 'ಬೆಟ್ಟುಂಗಾಡು', 'ಬೆಟ್ಟುಗತ್ತಿ' ಪರಾ. ೨. (ಕೈ, ದೊಣ್ಣೆ, ಸುತ್ತಿಗೆ ಮುಂತಾದುವುಗಳಿಂದ ಮೊಳೆ, ದಸಿ ಇತ್ಯಾದಿಗಳನ್ನು) ಹೊಡೆ; ಬಡಿ: ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮನುಳಿಯನೂಱಿ ಕೊಡಂತಿಯೊಳ್ ಬೆಟ್ಟಿದಂ ತತ್ತವಿತ್ತಮುರ್ಚಿ ಪೋಗೆಯುಂ (ಶಂಶಧಾ. ೦-೦೦೯ ಪ); ಧಾತ್ರಂ ಬಲ್ಪಿಂದಳವಡೆ ಬೆಟ್ಟಿದ ಬೆಳ್ಳಿಯ ಮೊಳೆಗಳೆನಲ್ ತೊಳಗಿ ಬೆಳಗಿದುವು ತಾರಗೆಗಳ್ (ಜಗಏ. ೦೬-೯೯); ಒಡೆದ ದೂಹತ್ತಿಗೆಗೆ ಕೀಲ್ಗಳಸಡಸಿ ಬೆಟ್ಟಿದ ಗಾಲಿಗಚ್ಚನು ತೊಡಿಸುತಿರಲು (ಕುವ್ಯಾಶೀ. ೫-೩೭). ೩. ಇರಿ; ನಾಟುವಂತೆ ಮಾಡು: "ಬೆಟ್ಟು—ಗಾಢಪ್ರವೇಶೇ, ಪರ್ವತೇ ಚ" (ಶಮಧಾ); ಕಾಯ್ದ ಕಬ್ಬೊನ್ನ ಸೂಜಿಗಳಂ ಬೆರಲ್ಗಳೊಳ್ ಬೆಟ್ಟುವರುಂ (ಅದಿಪು. ೫-೯೫ ಪ); ಕೀಲಂ ಬೆಟ್ಟಿರ್ದ ಮರನಂ ಕಂಡು (ಶಂತಶಂ. ೩೦-೫); ಮಂಗಭೂಪನ ಬಾಯೊಳಗೆ ಬೆಟ್ಟಿದನು ಗದೆಯನು (ಕುವ್ಯಾದ್ರೋ. ೨-೮೨). ೪. ನಾಣ್ಯವನ್ನು ಮುದ್ರಿಸು: ಹೇಮ ರಜತಾದಿ ಕರ್ಷದಿಂ ಬೆಟ್ಟಿದ ನಾಣ್ಯ—ಕಾರ್ಷಾಪಣ, ಕಾರ್ಷಿಕ (ನಾಶರಾ. ೬). ೫. ತಳ್ಳು; ದಬ್ಬು: ಗರಮಂ ದಾನವರೂಡಿದರ್ ಬಿಗಿದು ಪಾರಾವಾರದೊಳ್ ಬೆಟ್ಟಿದರ್ (ಐಶ್ವಕೃ. ೦-೫-೨೨೩). 'ಪೆಟ್ಟು$_1$' ಪರಾ. [ದೇ.॥ ತಮಿ. ಮಲ. ವೆಟ್ಟು; ತುಳು. ಬೆಟ್ಟು; ಕೋತ. ವೆಟ್]

**ಬೆಟ್ಟು$_2$** 'ಬೆಟ್ಟ' ನೋ.

**ಬೆಟ್ಟು$_3$** 'ಬೊಟ್ಟು$_1$' ನೋ.

**ಬೆಟ್ಟು$_4$** 'ಬಿಱು$_2$' ನೋ.

**ಬೆಟ್ಟುಂಗಾಡು, ಬೆಟ್ಟುಗಾಡು** (ನಾ). ಕಾಡನ್ನು ಕಡಿದು ಬೇಸಾಯಕ್ಕೆ ಸಿದ್ಧಗೊಳಿಸಿದ ಪ್ರದೇಶ—ಭೂಮಿ: ಬೆಟ್ಟುಂಗಾಡು, ಬೆಟ್ಟುಗಾಡು (ಶಾಸಾ. ೩೭೯ ತ್ರಯೋ). **ಬೆಟ್ಟುಗಾಡು**: ಮೇಲಿನ ಪ್ರಯೋಗವನ್ನು ನೋಡಿ. 'ಬೆಟ್ಟುಗದ್ದೆ' ಪರಾ.
[ಬೆಟ್ಟು$_1$ + ಕಾಡು$_2$. / ತಮಿ. ವೆಟ್ಟುಕ್ಕಾಟು ]

**ಬೆಟ್ಟುಂಬೊಟ್ಟಿ$^3$, ಬೆಟ್ಟುವೊಟ್ಟಿ$^3$** (ನಾ). ಬೆಟ್ಟದ ಮೇಲಿನಿಂದ ಹರಿಯುವ

ಪ್ರವಾಹ,—ಹೊನಲು : ಬೆಟ್ಟುಂಬೊಟೆ³ಯೆಂಬುದು ಕೃತ್ತ್ರಿಮವಲ್ಲದಲ್ಲಿಯುಂ ಸಂದುದು (ಶಬ್ದ. ಪ. ೦೮೦ ಪ್ರಯೋ). **ಬೆಟ್ಟುವೊಟೆ³** : ಬೆಟ್ಟುಂಬೊಟೆ³, ಬೆಟ್ಟುವೊಟೆ³ (ಶಬ್ದಾ. ಸು. ೩೭೯ ಪ್ರಯೋ).
[ಬೆಟ್ಟು₂ (<ಬೆಟ್ಟ) + ಪೊಟೆ³]

**ಬೆಟ್ಟುಕಚ್ಚು** 'ಬೊಟ್ಟುಕಚ್ಚು' ನೋ.

**ಬೆಟ್ಟುಗ** (ನಾ). ಒಬ್ಬಾತನ ಹೆಸರು : ಆತನ ತಮ್ಮ ಬೆಟ್ಟುಗ ಶುಬು ಗಳೊಳ್ಳತ್ತು (ಎಕ. VII, ಶಿವಮೊ. ೨೨-೩; ೯೮೪). [?]

**ಬೆಟ್ಟುಗತ್ತಿ** (ನಾ). (ಮರ ಮುಂತಾದವನ್ನು) ಕತ್ತರಿಸುವ ಚಾಕು, ಕತ್ತಿ, ಮಚ್ಚು ಮುಂತಾದ ಸಾಧನ,-ಉಪಕರಣ : ಬೆಟ್ಟುಗತ್ತಿಯಿಂದ ಮರದ ಕೊಂಬೆಯನ್ನು ಕಡಿ (ಬೂ).
[ಬೆಟ್ಟು₁ + ಕತ್ತಿ. / ತಮಿ. ವೆಟ್ಟುಕ್ಕತ್ತಿ]

**ಬೆಟ್ಟುಗದ್ದೆ** (ನಾ). ಮರಗಳನ್ನು ಕಡಿದು ವ್ಯವಸಾಯಕ್ಕೆ ಅಣಿಮಾಡಿದ ಗದ್ದೆ : ಮನೆಗಳ ಸುತ್ತುಮುತ್ತು ಬೆಟ್ಟುಗದ್ದೆಗಳಿರುವುದೂ ಉಂಟು. ಬೆಟ್ಟುಗದ್ದೆಗಳನ್ನು ದಾಟಿದರೆ ಕುರಿಚಲುಗಿಡಗಳಿಂದ ತುಂಬಿದ ಗುಡ್ಡಗಳು (ಜಾಗಿ. ೪); ಬೈಲುಗದ್ದೆ—ಬೆಟ್ಟುಗದ್ದೆಗಳಿಂದಲೂ ಅಲಂಕೃತವಾಗಿರುವುದು (ಮೊಮದು. ೩). 'ಬೆಟ್ಟುಂಗಾಡು' ಪರಾ. [ಬೆಟ್ಟು₁+ಗದ್ದೆ(<ಗಟ್ಡೆ)]

**ಬೆಟ್ಟುಗಾಡು** 'ಬೆಟ್ಟುಂಗಾಡು' ನೋ.

**ಬೆಟ್ಟುಗೂಂಟ** (ನಾ). ನೆಡುವ ಗೂಟ : ಹೊಸೆಯಿಪ ಬಿತ್ತರಣ್ಣವಲೆಯುಂ ಸಮಕಟ್ಟುವ ಬೆಟ್ಟುಗೂಂಟಮುಂ ಬಸಿವ ಪುಳಿಂದಸಂಕುಳದ ಪೆರ್ಗಣದಿಂದೆಸೆ ದತ್ತು ಪಕ್ಕಣಂ (ಚಂದ್ರಪ್ರ. ೩-೩೯). [ಬೆಟ್ಟು₁ + ಗೂಂಟ]

**ಬೆಟ್ಟುಬ್ಬಸ** (ನಾ). ತೀವ್ರವಾದ ಸಂಕಟ,—ಸಂತಾಪ : ಬೆಟ್ಟುಬ್ಬಸ ದಿಂದ ಹಾಹಾಕಾರ ಮಾಡುತ್ತ ಸಿಂಹವಿಷ್ಟರದತ್ತಣ್ಗೆ ಧಾವಿಸಿ (ಶಬ್ದೇ. ೦೦೭-೨೯). [ಬೆಟ್ಟು₄ (<ಬೆಟ್ಟಿತು)+ಉಬ್ಬಸ]

**ಬೆಟ್ಟುಮುರಿ** 'ಬೊಟ್ಟುಮುರಿ' ನೋ.

**ಬೆಟ್ಟುಮೊಲೆ** (ನಾ). ಕರ್ಕಶವಾದ ಮೊಲೆ : ಬಟ್ಟಚಂದಿರಕಾಂತದಾ ಕಾಲಿಟ್ಟು ಮೃಗಮದಕರ್ಪೂರದ ಪುದಿವಿಟ್ಟು ಚಂದನ ತುಂಡುವಿಡಿದರೆವವರ ನಗೆವೊಗವಾ ನಟ್ಟನಿಂದುವೆಯೆಂದು ಕಲುನೀರಿಟ್ಟು ಬರೆ ಪವಗಾಣ ಗುಡಿದಿರೆ ಬೆ[ಬೆ]ಟ್ಟುಮೊಲೆ ಬಳಲುವರನಿಬರ ಪುಟ್ಟವಳ್ಳಿಯರು (ಹಾಳ್ಯಶಾ. ೨-೦೩). [ಬೆಟ್ಟು₄(<ಬೆಟ್ಟಿತು)+ಮೊಲೆ₁]

**ಬೆಟ್ಟುಮೊಳೆ** (ನಾ). (ಎರಡು ಹಲಗೆಗಳನ್ನು ಜೋಡಿಸಲು ಉಪ ಯೋಗಿಸುವ) ಬಡಿಯುವ ಆಣಿ : ಬೆಟ್ಟುಮೊಳೆಗಳ ದಾಣೆಗಳ ಬೆನ್ನಟ್ಟಿ ಮೋದುವ ಮರುಳುತಂಡದ . . . ಬಲು ಬೊಮ್ಮರಕ್ಕಸರಟ್ಟಣೆಯಲೆವೆ ಸೀಳವೊಲು ಸಂಭ್ರಮಿಸಿತಾ ದುರ್ಗ (ಕೊರಡಾ. ೬-೭-೦೨).
[ಬೆಟ್ಟು₁ + ಮೊಳೆ₂]

**ಬೆಟ್ಟುಮಗೆಯ** 'ಬೆಟ್ಟಮಗೆಯ' ನೋ.

**ಬೆಟ್ಟುವೊನಲ್** (ನಾ). ಬೆಟ್ಟದ ಮೇಲಿನಿಂದ ಹರಿಯುವ ಪ್ರವಾಹ, —ಹೊನಲು: ಇಳಿತಪ್ಪ ಬೆಟ್ಟುವೊನಲ್ಗೆಡೆಗೊಳ್ಗಿನಿಂ ಪೋಗಿ ತಿಳಿನೀರ ನೀಂಟಿ (ರೀಪಾ. ೪-೦೬). [ಬೆಟ್ಟು₂(<ಬೆಟ್ಟ)+ಪೊನಲ್]

**ಬೆಟ್ಟುವೊಟೆ³** 'ಬೆಟ್ಟುಂಬೊಟೆ³' ನೋ.

**ಬೆಟ್ಟಿ**, ಬೆರಟೆ (ನಾ). ೧. ಬಿರುಸಾದುದು ; ಕಠಿಣವಾದುದು : ಬೆಟ್ಟಿಯ ಮಾತ ನುಡಿಯಲು ಭೀಷ್ಮನಿಂತೆಂದನು (ಶೀಬುಸಂ. ೩-೩೩). ೨. ಒರಟುತನ ; ಕಠಿನತೆ ; ಕಾಠಿಣ್ಯ : ಹಿಮವಂತ ತಾನೆಮ್ಮಯ ಬಳಿಗೆ ಸಂತೋಷದಿಂ ಬಂದು ಕಾಣ್ಬನೊ ಬೆಟ್ಟಿಯ ಮುಂತೆ ಕಾಣಿಸಬೇಕೊಯೆಂದ (ಶರಶ. ೩೩-೨೩). 'ಬೆಟ್ಟಿತನ' ಹೋ. ೩. ಕಠಿಣ ವ್ಯಕ್ತಿ : "ಕರ್ಕಶಂ ಕಕ್ಕಡಂ ಕಠಿನಂ ಕಠೋರಂ ಖರಂ ಕರ ಬೆಟ್ಟಿಯುಮನಕ್ಕು" (ಚಂಗಣಾ. ೬೮-೭); ಲಟ್ಟಿಯರು ವಿಂಡರ ಬೆಟ್ಟಿಯರು . . . ವಾರಪುರಂಧ್ರಿಯರು (ಬಸಪು. ೪೦-೩೬); ಪಂಥದಿಂ ಮಚ್ಚರಿಪ ದಿಟ್ಟಿಯರ್ಬೆ [ಜಾಣಂ. ಚೆ]ಟ್ಟಿಯರ್ಗನ್ನೆಯರ್ಬಿನ್ನಣೆಯರು(ಶತಂ. ೨-೩೮). ೪. ಗಟ್ಟಿಯಾದ, ಹಸನುಗೊಳಿಸದ ಕಡಮೆದರ್ಜೆಯ ಅಡಕೆ; ಕರ್ಚಿಅಡಕೆ : ಶೇಖರಿಸಿದ್ದ ಕದರಡಕೆ ಬರಿಯ ಬೆಟ್ಟಿ, ಗೋಟು ಎಂದು ಕಂಡುಬಂದದ್ದರಿಂದ (ಮಲೆಮ. ೧೩೮); ತೋಟದಲ್ಲಿ ಎಷ್ಟು ಅಡಕೆ ಬೆಳೆದಿದೆ, ಬೆಟ್ಟಿಯೆಷ್ಟು—ಹಸ ಎಷ್ಟು (ಹೊಸಸ್ಟ. ೨೧೮) : ಬತ್ತ ಮನೆಗೆ ಬಾರದೆ ಹೋದರೂ ಬೆಟ್ಟಿಗೆ ಒಳ್ಳೆಯ ಕ್ರಯ ಇರುವುದರಿಂದ ಬದುಕಿಕೊಂಡಿದ್ದೇವೆ (ಅಳಿ. ೫೬). (ಗು). ೫. ಮಧ್ಯಮದರ್ಜೆಯ; ಕಡಮೆ ದರ್ಜೆಯ: 'ಬೆಟ್ಟಿಚಿನ್ನ' ಪರಾ. **ಬೆರಟೆ** : ೬. ಸಾಧಾರಣ ವಾದುದು ; ಕಡಮೆ ದರ್ಜೆಯದು : ಎಷ್ಟೋ ಕಸ ; ಅದರ ಮರೆಗೆ ಅಲ್ಲಿ ಇಲ್ಲಿ ಇನಿತು ರಸ. ಎಷ್ಟೊ ಒರಟು, ಎಷ್ಟೊ ಬೆರಟೆ ; ನಡುವೆ ಅಲ್ಪ ಸೊಲ್ಪ ಹಸ (ಶುಪಿಶ. ೬೦-೩).

**ಬೆಟ್ಟಿ ಮಾಡು**=ಬಲಪ್ರಯೋಗ ಮಾಡು; ಕಠಿಣವಾಗಿ ವರ್ತಿಸು : ನೆಟ್ಟಯ ತೆಗೆದೊಮ್ಮೆ ನೋಡಿರೆಯೆಂದಾಗ ಜಟ್ಟಗಳಿಗೆ ಕೈಯ ನೀಡೆ ಬೆಟ್ಟಿ ಮಾಡದೆ ಕೈಯನವರೊತ್ತಲರಸನ ಬೆಟ್ಟದ್ದುದ್ದಿನಿಸು ಸಡಿಲದೆ ನೋವಿ ಗಂಜದರಾಗುಮೊತ್ತಿ ತೆಗೆವುದೆಂದು ಭೂವರನುಸುರೆ (ಶರಶ. ೪೯-೦೦೨).
[ದೇ.॥ ತಮಿ. ವೆಟ್ಟ, ವೆಟ್ಟಿ(ಲ); ತುಳು. ಬೆಟ್ಟಿ]

**ಬೆಟ್ಟಿಗಾಣಿಸು** (ಕ್ರಿ). ಕಾಠಿಣ್ಯವನ್ನು ತೋರಿಸು : ಬೆಟ್ಟಿಗಾಣಿಸಲೇಕೆ ಹಿಮವಂತದೇವನು ಕಟ್ಟುಗ್ರುದವನಲ್ಲ ಸ್ವಾಮಿ (ಶರಶ. ೩೩-೨೬).
[ಬೆಟ್ಟಿ + ಕಾಣಿಸು]

**ಬೆಟ್ಟಿಚಿನ್ನ** (ನಾ). ಕಡಮೆ ದರ್ಜೆಯ ಚಿನ್ನ: ಅಶುದ್ಧವಾದ ಬಂಗಾರ; ಕೀಳಂಲೋಹಗಳು ಬೆರೆತ ಚಿನ್ನ : ಬೆಟ್ಟಿಚಿನ್ನವಾದರೆ ಸೆಟ್ಟಿಗೆ ಆಗವೇ ? (ಗಾದೆ). [ಬೆಟ್ಟಿ + ಚಿನ್ನ₁]

**ಬೆಟ್ಟಿನುಡಿ** (ನಾ). ಕಠಿಣವಾದ ಮಾತು ; ಕಠೋರವಾದ ನುಡಿ : ಅವರಿಗೆ ಕೊಡುವುದಕ್ಕಿಂತ ಮಾತಂಗನೆ ಸವಿನಯದಿಂದೀವೆನೆಂದು ಅವ ರೊಳು ಬೆಟ್ಟಿನುಡಿಯ ನುಡಿದಾ ಭೂಧವನು ಕಳುಹಲವರಯ್ದಿ (ಶೀಬುಸಂ. ೨೦-೨೦). [ಬೆಟ್ಟಿ + ನುಡಿ₂]

**ಬೆಟ್ಟಿಬಂಗಾರ** (ನಾ). = ಬೆಟ್ಟಿಚಿನ್ನ : ಒರೇ ಹಚ್ಚಿದರೆ ಬರೀ ಬೆಟ್ಟಿ ಬಂಗಾರದ್ಹಾಂಗೆ ಕಾಣ್ತದೆ (ಮಲೆಮ. ೬೩೩). [ಬೆಟ್ಟಿ + ಬಂಗಾರ]

**ಬೆಟ್ಟೇಱು₁** (ಕ್ರಿ). ಪರ್ವತವನ್ನು ಹತ್ತು : ತನ್ನೊಲ್ಲದನು ಕರೆದಲ್ಲ ಬೆಟ್ಟೇಱೆ ವಿಂಟ್ಟುಗರೆವಂತೀಗಳ್ (ಶಾಂತಿಪು. ೬-೮೨); ಅಸಮುಗ್ರಸರ್ಗಲ ಜಾತ್ರೆಯೋಗಿ ಭರದಿಂ ಬೆಟ್ಟೇಱಿಯುಂ ಮತ್ತೆ ಪೂಜಿಸುವರ್ (ಸಮುಶ. ೯-೯); ಬೆಟ್ಟೇಱೆ ಮೃತ್ಯುವಂ ಕರೆದುಕೊಂಡಂ ಪಾಪಿ (ಪೀಠರ. ಪ. ೯೧೩-೨೨). [ಬೆಟ್ಟು₂ (< ಬೆಟ್ಟ) + ಏಱು₁ (< ಏಱ್)]

**ಬೆಟ್ಟೇಱು₂** 'ಬಟ್ಟೇಱು' ನೋ.

**ಬೆಡಂಗ**, ಬೆಡಗ₁ (ನಾ). ೧. ಚೆಲುವ ; ರೂಪವಂತ : ಕನಕಾದಿತ್ಯಂ ಷಡ್ಗುಣಾಳಂಕಾರಂ × ಬದ ಬೆಡಂಗಂ ನುಡಿದು ತಪ್ಪದಂ (ಶಾಸನ. XI-i, ೨೨-೭; 897); ತಳರೊಳ್ ನೀನೆ ಬೆಡಂಗನ್ಯೆ ನನಗೆಳೊಳ್ ನೀಂ ನೀಟನ್ಯೆ (ಅಜಿತ. ೦೦-೯೬); ಎನಸುಂ ತಾನೇಂ ಪರಿಚ್ಛೇದಿಯೊ ತವದ ಬೆಡಂಗಂ ಗುಣವ್ರಾತತುಂಗಂ (ಸಮುಶ. ೦-೨೩). **ಬೆಡಗ₁**: ೨. ಚತುರ ; ನಿಪುಣ : "ಬೆಡಗನೆಂದರೆ ಚದುರಂ" (ಶಾಶ. ೦೦). ೩. ವಿಲಾಸಿ ; ಒನಪು ಗಾರ : (೪). [ಬೆಡಂಗು +—ಅ₁]

**ಬೆಡಂಗಡರ್** (ಕ್ರಿ). ೧. ಚೆಲುವನ್ನು ಹೊಂದು ; ಸುಂದರವಾಗು : ಏಂ ಬೆಡಂಗಡರ್ದರೋ ರುಚಿಮದ್ವಿಚಳಲ್ಲತಾಂಗಿಯರ್ (ಅಜಿತ. ೬-೨೮). ೨. ಆಶ್ಚರ್ಯರ್ಯವುಂಟಾಗು ; ಬೆರಗಾಗು : ಹೊಂಗಿ ಶಸ್ತ್ರಸಮೇತನಾಗಿ ಬೆಡಂಗಡರೆ ಮಾಹೇಶ್ವರರ ವಸ್ತ್ರಂಗಳಂ ರಜತಾದ್ರಿಯಂದದಿ ಪೊತ್ತು ನಡೆವುತ್ತ (ಬಸಪು. ೨೦-೯). [ಬೆಡಂಗು + ಅಡರ್]

**ಬೆಡಂಗಿ**, ಬೆಡಗಿ (ನಾ). ೧. ಚೆಲುವೆ ; ಸುಂದರಿ : ನಿಡುಯುಲರ್ಗಣ್ಣಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಜಿದೆ ತಡೆಯೆ ಪಗಲ್ ಪಿರಿಯವಪ್ಪುದಾ ಪುರವರದೊಳ್ (ಕಾವ್ಯಸಾ. ೧೬೮ ಹೊರತು) ; ಬೆಳಗುವ ಲಾವಣ್ಯಮಸೆಯ ಬಂದರ್ . . . ನಿಡುಗಣ್ಣಳ ಬೆಡಂಗಿಯರ್ ಕೋಮಲೆಯರ್ (ಜಗಹಿ. ೯-೦೨೯). ೨. ಒಯ್ಯಾರಿ ; ಬೆಡಗುಗಾತಿ : ಜಡೆಗಳ ಬೆಡಂಗಿ ಭಸಿತದ ಫಾಲಲೋಚನೆ ರುದ್ರಾಕ್ಷಿಯ ಭದ್ರಾಂಗಿ (ಗಿರಿಜಾ. ೯-೦೬ ಪ); ಬೇಟದ ಬೆಡಂಗಿಯಪರ್ಗಳೊಳಿಯ ಕುಸುಮವುಮಂ . . . ತಿಱಿದರ್ (ಉತ್ಸೌಟ. ೯-೫೯). **ಬೆಡಗಿ** : ೧. ಕಡುಬೆಡಗಿ ಮೇಲಲರುದು ಪುಣಂಗನು ಪಿಡಿಯೆ (ಪಾಗಹ. ೨-೯). ೨. ತರದಿರೋ ರಂಗ ಬೆಡಗಿಯ (ಪಾಹಪ. ೦೫); ಬಂದಿದ್ದ ಹೆಣ್ಣುಗಳ ಪೈಕಿ . . . ಒಬ್ಬಿಬ್ಬರು ಕಾಲೇಜು ಮೆಟ್ಟಿಲು ಹತ್ತಿದ್ದ ಬೆಡಗಿಯರೂ ಆಗಿದ್ದರು (ಕಾಗಿಹ. ೦೯೨). [ಬೆಡಂಗ + –ಇ₂]

**ಬೆಡಂಗು**, ಬೆಡಗು₁ (ನಾ). ೧. ಅಂದ ; ಸೊಬಗು ; ಸೊಗಸಂ : "ಬೆಡಂಗೆಂದು ಮನೋಹರಂ" (ಶಬ್ದಾ. ೬೯-೯೨೯) ; ಎಮ್ಮ ಕೆಲಂಗಳೊಳ್ ಮೆಱೆಯುತಿರ್ದಪುವೀ ಶ್ರುತಿಪೂರಕ್ಕರವಂ ತಮ್ಮ ಬೆಡಂಗಂ (ಕಾವ್ಯಸಾ. ೯೬೫ ಹೊರತು) : ಪೊಱಲ ಬೆಡಂಗಂ ಮೆಚ್ಚಿ ಮೆಚ್ಚಿ ನೋಡಿ (ಶಂಖಾ. ೯-೦೦ ಶಗಳ). ೨. ಒಯ್ಯಾರ; ವಿಲಾಸ; ಒನಪು : ಜವ್ವನದ ವಿಳಾಸ ದಂದದ ಬೆಡಂಗಿನ ಪೆಂಡಿರ ಪೆಂಡಿರಱಿಯಾ (ಶಂಶಕಾ. ೯-೯೫); ಮಧ್ಯಂ ಬೆಡಂಗಿನಿಂ ಬಳ್ಕಿ ಮುಡಿ ಪೂಗಳಂ ಕೆದಱೆ (ಶಂಖಕ. ೫-೦೦). ೩. ಠೀವಿ; ಗತ್ತು : ದಂಡೆಯಂ ನಿಬ್ಬುವ ಕೈ ನಡುಗದೆ ಗದೆಯಂ ಬೀಸುವ ಬೆಡಂಗು ರಂಜಿಸಿತು ಭೀಮ ದುರ್ಯೋಧನರಾ (ಗದಾಯು. ೬-೮); ನುಡಿವ ಬೆಡಂಗು ನೋಡುವ ಪರಾಕ್ರಮ ಮಾಡುವ ಸಾಹಸೋಕ್ತಿ . . . ಬಣ್ಣಿಸಲಳವಲ್ತೆ (ಶಾಸನ. IX–i, ೨೬೬–೨೯ ; 1183). ೪. ನೈಪುಣ್ಯ ; ಕೌಶಲ್ಯ : ಮೊದಲೊಳ್ ಕಲ್ತಿಂಗಲ್ಲದೆ ಪದದೊಳ್ ಜಾಣಂ ಬೆಡಂಗು ಮಕ್ಕುಮೆ ಕೃತಿಯೊಳ್ (ಶಬ್ದಾ. ೦-೯); ಪೊಸ ದೇಸೆಯಂ ಬೆಡಂಗಂ ರಸಪುಟ್ಟಿಯನರ್ಥದೃಷ್ಟಿಯಂ ಬಗೆವರೊ ಭಾವಿಸುವರೊ ಸ್ಫಾರಣೆಯಂತಿರೆ ಕಸವಂ ಪಿಡಿವರ್ ಕೆಲರ್ ಮಹಾಪುರುಷರ್ಕಳ್ (ಆಪು. ೦-೯೦); ಅಸಗನ ದೇಸಿ ಪೊನ್ನನ ಮಹೋನ್ನತಿವೆತ್ತ ಬೆಡಂಗು . . . ಶೋಭಿಸೆ ನೆಲಸಿರ್ಕೆ ಧಾರಿಣಿ ಮನಂಗೊಳೆ ಮತ್ಕೃತಿಯೊಳ್ನಿರಂತರಂ (ಧರ್ಮಾಮೃ. ೬-೩೯). ೫. ಚಮತ್ಕಾರ ; ಚಾತುರ್ಯ : ಬೆಡಂಗು[ಕಾಶಂ. ಬೆಡಗು] ಬೇಱೊಂದು ತೆಱಂ ನುಡಿಗೆನೆ ಮನಕ್ಕೆ ವರೆ ಹಳಿ ನುಡಿದಂ ಅರ್ಥಮದೊಂದು ತೆಱಂ (ಶಾಂತಿಪು. ೨-೬೯); ಸಂಗರದೊಳೀರೇಳು ಲೋಕದರಸುಗಳ ಸಪ್ತಾಂಗಮಂ ಕೊಂಬ ನಿನ್ನಂ ನುಡಿಯ ತೊಡಕಿನ ಬೆಡಂಗಿನಿಂ ಸೋಲಿಸಿ (ಹಶಕಾ. ೦೦-೦೩). ೬. [ಸಂಗೀತ] ಹಾಡುವ ರೀತಿಯ ಒಂದು ಕ್ರಮ (?): ಭಣಿತೆ ಬೆಡಂಗು ಕಾಕು ಖಚರಂ ಗಮಕಂ . . . ಪೆಲ್ಲಣೆ ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮಂ (ಜಗಹಿ. ೫-೩). **ಬೆಡಗು₁** : ೧. "ಬೆಡಗೆನೆ ರಮ್ಯಂ" (ಶಬ್ದಾ. ೮೯೦) ; ಪೊದಳ್ದುಗುರ್ ಶಕ್ರಜದ ಬೆಡಗಿಂಗೆ ಭಂಗಮಂ ಸಂಗಳಿಸೆ (ಶಬ್ದಸಾ. ೩-೨೬); ಬೆಡಗಿನ ತುಂಬು ಜವ್ವನೆ ನಾಲ್ಕುನೀರನ್ ಮಿಂದಳೊಲವಿಂದ (ಸಾಳ್ವಶಾ. ೩-೩೯). ೨. ಅಕಟಕಟಾ ಬೆಡಗು ಬಿನ್ನಾಣವೆಂಬುದೇನೋ (ಬಸವ. ೬೬); ಬಟ್ಟ ಮುಡಿಯ ಬೆಡಗಿನ ನುಡಿ ನೋಟದ . . . ದಿಟ್ಟೆಯರಿರುತಿಹರಲ್ಲಿ (ಅಂಬಿ. ೨-೦೦೯) ; ಬಾಳಿಗೆ ಕಡಗು ಸೂಳೆಗೆ ಬೆಡಗು (ಗಾದೆ). ೪. ಶಬ್ದಿಯಾಸ್ತ್ರಪ್ರಯೋಗದ ಬಲುಹನೀಕ್ಷಿಸೆ ತೆಗೆವ ಬೆಡಗನು ಕಲಿಸ ಪಾಶುಪತಾಸ್ತ್ರವೆನಗಾಯ್ತಲ್ಲಿ ವಶವರ್ತಿ (ಕುಮಾ.ದ್ರೋ. ೯-೯). ೫. ಅಡಾದನಾ ಅಜನು ಕೋಡಗಾವನು ಹರಿಯು ನೋಡಿದರೆ ಶಿವನು ನರಿಯಾದನೀ ಬೆಡಗ ರೂಢಿಯೊಳು ಬಲ್ಲ (ಸರ್ವಜ್ಞ. ೨೩೯); ಒಳ್ಳೆಣ್ಣೆ ತಂದೆನು ಕೈಯಿಣ್ಣೆಯಾಯಿತು ನಾನೇನು ಮಾಡಲಿ ಮತ್ತೆ ಸೊಸೆಯೆಂದ ಮಾತಿನ ಬೆಡಗರಿವಾಯಿತು ತಲೆದೂಗಿ ಸೈಯೆಂದಳತ್ತೆ (ತಂಜಾಶ. ೦೨೯-೩೫). ೬. ಚೋದ್ಯ; ಸೋಜಿಗ : ಅಡಿಯಿಲ್ಲದ ನಡುವಿಲ್ಲದ ಮುಡಿಯಿಲ್ಲದ ಬಯಲು ಎಡೆಯಿಲ್ಲದಿಪ್ಪುದು ತಾ ಜಗವನೊಡಗೂಡಿ ಹಿಡಿಯಲು ಬಿಡಲಿಲ್ಲದ ಬೆಡಗು (ತಿಶಾಂ. ೩೨-೦೯೫): ಸಾವಿರ ಪಡಿಯ ಹೊನ್ನಿನ ತೂಕವಂ ಕಡಿಕಡಿದು ಜಂಗಮಕೆ ಕೊಡುತಿರಲು ವಿಸ್ಮಯಾವಿದೆನುತಶಿವೆಡಗನಾ ಜಂಗಮಾವು ಬಸವನ ಎಡೆಗೆ ನಡೆತಂದಬ್ಬುಕಾತನ ಮುಂದೆ ಪಸರಿಸುತ . . . ನುತಿಸೆ (ಬಸಪು. ೩೦-೨೦). ೮. ವೈಶಿಷ್ಟ್ಯ ; ವಿಶಿಷ್ಟತೆ : ಎಸೆವ ಕರ್ಣಾಟಕದ ಬೆಡಗುಗಳ ಬಲ್ಲ ಸತ್ಕವಿಗಳೊಪ್ಪಿರ್ದರಾ . . . ವಣಿಮಯದ ಗರ್ದುಗೆಗಳಲ್ಲಿ (ಶಬಪು. ೬-೦೦). ೯. ಜಂಬ ; ದರ್ಪ ; ಸೊಕ್ಕು : ಬಾಳು ವಾಗ ಸಿರಿ ಬರುವಾಗ ತಂದೆ ಕೇಳು ಬೆಡಗು ಬೇಡೆಚ್ಚರಿಕೆ (ಶುರಂದ. ೦-೨೬೦-೩). ೧೦. ಒಳಗುಟ್ಟು ; ಮರ್ಮ ; ನಿಗೂಢತೆ : ರಹಸ್ಯ : ಬಯಲ ಬಣ್ಣವ ಮಾಡಿ ಸ್ವಯವ ನಿಲವ ಮಾಡಿ ಸುಳಿವಾತನ ಬೆಡಗ ಬಲ್ಲವರಾರೈ ರಾಮನಾಥ (ದೇವಾಪ. ೬೯-೮೩೦); ಶಿವಲಿಂಗಭಕ್ತಿಯ ಬೆಡಗನೇಕಾಂತದಲಿ ನಿಮಗೊಡಬಡಿಸಿ ಹೇಳುವೆ (ಪ್ರಭುಲಿಂ. ೦೯-೩೨); ನುಡಿದ ಮಾತ್ರದಲಿರದು ಧರ್ಮದ ಬೆಡಗು (ಕುಮಾ.ಭ. ೦೬-೦೩). ೧೧. ಒಗಟಿನ ಮಾತು ; ಚಮತ್ಕಾರದ ನುಡಿ ; ಒಡಪು ; ಹದಿರು : ನುಡಿಯಲ್ಲಿ ಎರಡಿಟ್ಟು ನುಡಿಯನು ಬೆಡಗಿನ ಗಡಣದ ಕುಲವನು ಕಂಡಱಿಯನು (ಶಿವಗೀ. ೦೨೬-೬೩೨); ಜನಪದದಲ್ಲಿ ಬೆಡಗು ಎಂದಾಗ ಇಂಥ ಗಂಭೀರತೆಗಿಂತ ಹೆಚ್ಚಾಗಿ ಚತುರ ನುಡಿ, ಚಮತ್ಕಾರದ ಮಾತು ಎಂಬ ಅರ್ಥವೇ ಬಹಳ ಮುಖ್ಯವಾಗುತ್ತದೆ (ಕಸಂಕೋ. XII, ೨೦೯) ; ಬೆಡಗು : — ಒಳಗುಟ್ಟಿನ ಒಂದು ಮಾತಿನ ರೀತಿ–ಅದಕ್ಕೊಂದು ಅನುಭವ ಸಮುದ್ರವೇ ಆಧಾರ. ಇದು ಒಂದು ರೀತಿಯ ಅಲಂಕಾರಿಕ ಸರಣಿ (ಸಾಹಿಪ. iii, ೮೫೩). ೧೨. ಅಲಂಕಾರ : ಜಲಮಣಿಯ ಬೆಡಗನಿಕ್ಕಬಹುದೆ ಬಯಲ ಬಂಧಿಸಬಹುದೆ (ಬೋಳಬಸಾ. ೦೦೮-೯೬೯). ೧೩. ಥಳುಕು ; ಹೊರಮಿಂಚು : ಉಳುವರ ಗೆಯ್ಮರ ಬೆವರಲ್ ತೊಯ್ಮರ ತವರೂರದು ಬೆಡಗುಗಳಿರದ (ಪಲ್ಲ. ೦-೬೨) : ಹೊಸ ಬಾಳಿನ ಬೆಡಗು ಸಾಕು ಬೆಳಕು ಬೇಕು ಹಾಡಿಗೆ (ಅರಳು. ೩೫೦-೦೦).

**ಬೆಡಗಿನ ವಚನ**= ವಚನಕಾರರು ತಮ್ಮ ತಾತ್ತ್ವಿಕ ಅನುಭಾವದ ತಿಳಿವನ್ನು ತಿಳಿಸಲು, ಸೂಕ್ಷವಾದ ಎಷ್ಟೋ ವೇಳೆ ಒಗಟಿನಂತಿರುವ ಸಂಕೇತ ದೃಷ್ಟಾಂತ ರೂಪಕಾದಿಗಳನ್ನು ಉಪಯೋಗಿಸಿ ರಚಿಸಿದ ವಚನಪ್ರಕಾರ : ತಾತ್ತ್ವಿಕಚಿಂತನೆಯನ್ನು ಹುರಿಗಟ್ಟಿ ಹೇಳಲು ಅನುಭಾವಿಗಳು ಈ ಪ್ರಕಾರವನ್ನು ಸಶಕ್ತವಾಗಿ ಬಳಸಿಕೊಂಡರು. ಅಲ್ಲಮಪ್ರಭು, ಚನ್ನಬಸವಣ್ಣ ಮುಂತಾದವರು ಅನೇಕ ಬೆಡಗಿನ ವಚನಗಳನ್ನು ಬರೆದಿದ್ದಾರೆ (ಕಸಂಕೋ. XII, ೨೦೯) ; ಬೆಡಗಿನ ವಚನಗಳಲ್ಲಿ ಹಲವಾರು ಪ್ರಭೇದಗಳಿವೆ. ವಿರೋಧಾಭಾಸವೇ ಅವೆಲ್ಲಕ್ಕೂ ಜೀವಾಳ (ಅವತಂ. ೦೬ ಶಿಶು).

[ದೇ.॥ ತಮಿ. ವಿಟಂಜ್ಞು ; ಮಲ. ಮೆಡಪ್ಪು ; ತುಳು. ಬೆಡಂಗ್, ಬೆಡಗ್ ; ತೆಲು. ಬೆಡಂಗು, ಬೆಡಗು, ಬೆಣಂಗು, ಬೆಳಂಗು]

**ಬೆಡಂಗುಗಂಪು** (ನಾ). ವಿಶಿಷ್ಟವಾದ ಕಂಪು ; ಅಪೂರ್ವವಾದ ಸುಗಂಧ : ಮಲ್ಲಿಕೋತ್ಕರದ ಬೆಡಂಗುಗಂಪು ಮಧುದೂತಿಯ ತಳ್ತನಿಗಂಪು . . . ಬಗೆಗೊಂಡುದು ತದ್ವನದೊಳ್ ನರೇಂದ್ರನಾ (ರಾಜಶೇ. ೦೦-೨೯).

[ಬೆಡಂಗು + ಕಂಪು]

**ಬೆಡಂಗುಗಿಡು** (ಕ್ರಿ). ಅಂದಗೆಡು ; ಚೆಲುವನ್ನು ಕಳೆದುಕೊಳ್ಳು : ನಗೆಗಣ್ ಸೋರ್ವ ಕದುಷ್ಣವಾರಿಚಯದಿಂ ಬಿಂಬಾಧರಂ ಸುಯ್ಯ ಬೆಂಕೆಗಳಿಂ ನಾಡೆ ಬೆಡಂಗುಗೆಟ್ಟಿರವಿದಿಂತೇಕಾತಣಂ (ಶಂಶಕಾ. ೯-೩೩).

[ಬೆಡಂಗು + ಕಿಡು (< ಕೆಡು₁)]

**ಬೆಡಂಗುವಡೆ** (ಕ್ರಿ). ಅಂದವಾಗು ; ಚೆಲುವನ್ನು ಪಡೆ ; ಸೊಗಸಾಗು : ಇಂತುಟಪ್ಪ ಮಯ್ವಣ್ಣಕ್ಕಿಂತೀ ಪೂವಿನೊಳೀ ತುಡುಗೆಯೊಳೀ ಪುಟ್ಟಿಗೆಯೊಳ್ ಬೆಡಂಗುವಡೆದೆಸೆದಿರ್ಕುಂ (ಶಂಶಭಾ. ೩-೪೫); ಸೊಡರಂ ಪರ್ಚಿಸಿದಂತಿರೆ ಬೆಡಂಗುವಡೆದೆಸೆವ ಮುನಿಯ ದೇಹದ್ಯುತಿಯಿಂ ಕಡುಗವಿಲಮಾಗಿ ಕಾಂಚನದಡವಿಯುನನುಕರಿಸಿ ತದ್ವನಂ ಸೊಗಯಿಸುಗುಂ (ಕಾದಂಪೂ. ೬೨೯). [ಬೆಡಂಗು + ಪಡೆ$_1$]

**ಬೆಡಂಗುವೆಱು** (ಕ್ರಿ). =ಬೆಡಂಗುವಡೆ : ಊದುವ ತೆಂಬೆಲರಿಂ ಬೆಡಂಗುವೆತ್ತು ( ಎಕ. XIII. ೩೩೦-೨೮; 929); ಭಾಸುರಚಂದ್ರಿಕಾತಿಲಕಮುಡುವರ ಕಾಂತಿಯುತಂ ಬೆಡಂಗುವೆತ್ತತ್ತಾಗಳ್ (ಅಜಪು. ೬-೩೯). [ಬೆಡಂಗು + ಪೆಱು$_1$]

**ಬೆಡಂಗೊಂದು** (ಕ್ರಿ). =ಬೆಡಂಗುವಡೆ : ಕಂದಮುಮಮುಳಿಸವೃತ್ತಮುಮೊಂದೊಂದೆಡೆಗೊಂದು ಜಾತಿ ಜಾ(ಣೆಸೆ)ಯೆ ಬೆಡಂಗೊಂದಿಪಱಿೞೊಳವುರೆ . . . ಬೆದಂಡೆಗಬ್ಬಮುದಕ್ಕುಂ (ಕವಿರಾ. ೦-೩೪). [ಬೆಡಂಗು + ಒಂದು$_1$]

**ಬೆಡಗ$_1$** 'ಬೆಡಂಗ' ನೋ.

**ಬೆಡಗ$_2$** 'ಬೆಡಗು$_2$' ನೋ.

**ಬೆಡಗ$_3$** 'ಬೆಡಗು$_3$' ನೋ.

**ಬೆಡಗಿ** 'ಬೆಡಂಗಿ' ನೋ.

**ಬೆಡಗು$_1$** 'ಬೆಡಂಗು' ನೋ.

**ಬೆಡಗು$_2$**, ಬೆಡಗ$_2$ (ನಾ). ಚಿಕ್ಕ ಚಿಕ್ಕ ಪೊದೆಗಳನ್ನು ಕತ್ತರಿಸಲು ಉಪಯೋಗಿಸುವ ಕಬ್ಬಿಣದ ಒಂದು ಸಾಧನ : ಕೃಷಿಕರಾದವರು ಹೊಲಕ್ಕೆ ಹೋಗಬೇಕಾದರೆ ತಮ್ಮ ಕೈಯಲ್ಲಿ ಗುದ್ದಲಿಯನ್ನಾಗಲಿ ಬೆಡಗನ್ನಾಗಲಿ ಕೊಡಲಿಯನ್ನಾಗಲಿ . . . ಹಿಡಿದುಕೊಂಡು ಹೋಗಬೇಕಲ್ಲದೆ ಹಾಗೇ ಹೋಗಲಾಗದು (ಕೃಶಿಕ್ಷ. ೩೦). **ಬೆಡಗ$_2$** : ಕಬ್ಬಿಣದ ಸಾಮಾನುಗಳಲ್ಲಿ ಮುಂಜ, ಬಳಿ, ಕುಡ, ಮೊಳೆ, ಕೊಡ್ಲಿ, ಗುದ್ದಲಿ, ಬೆಡಗ, ಬಾಚಿ, ಉಳಿ . . . ಮುಂತಾದ ಯಾವತ್ತು ಸಾಮಾನುಗಳು . . . ಕೈಯಲ್ಲಿ ಅನುವಾಗಿಯೂ ಇರಬೇಕು (ಕೃಶಿಕ್ಷ. ೨೦). [←ಮರಾ. ಬೇಡಗ]

**ಬೆಡಗು$_3$**, ಬೆಡಗ$_3$ (ನಾ). ಜಾತಿಯೊಳಗಿರುವ ಒಂದು ಉಪವಿಭಾಗ ; ಪಂಗಡ ; ಬಣ ; ವರ್ಗ : "ಜಾತಿ, ಬೆಡಗು, ಬಣ, ಕುಲ, ತಳಿ, ಬಳಿ" (ಕಂಪುಹು. ೮೪) ; ಈ ರೀತಿಯ ಗುಂಪುಗಳಿಗೆ ಬೆಡಗುಗಳೆಂದು ಹೆಸರು (ಮಕಂಪಿ. ೩೨) ; 'ಗುಜ್ಜಲ'ವೆಂಬುದು ಬೇಡರಲ್ಲಿ ಒಂದು ಜಾತಿಯ ಬೆಡಗು. ಗುಜ್ಜಲ ಬೆಡಗಿನ ಹೆಂಗಸನ್ನು ಕಂಪಿಲರಾಯನು ಲಗ್ನವಾಗಬೇಕಾದರೆ ಅವನೂ ಬೇಡಜಾತಿಯುವನಾಗಿದ್ದು ಬೇರೊಂದು ಬೆಡಗಿನವನಾಗಿರಬೇಕು (ಕರ್ಣಸಂ. ೨೩೬). **ಬೆಡಗ$_3$** : ರಡ್ಡೇರಲ್ಲಿ ಎಲ್ಲ ಕೂಡಿ ೩೬ ಬೆಡಗಗಳೆಂದರೆ ಮನೆತನಗಳು ಇಲ್ಲವೆ ಗೋತ್ರಗಳು ಇರುತ್ತವೆ. ಒಂದೇ ಬೆಡಗದವರಲ್ಲಿ ಹೆಣ್ಣು ಗಂಡು ಆಗುವುದಿಲ್ಲ (ಕಜಾಗ. ೦೨೪). [ ? ]

**ಬೆಡಗುಗಾತಿ** (ನಾ). ವಿಲಾಸಿನಿ ; ಬೆಡಗಿ : ಬೆಡಗುಗಾತಿಯರು ಯಿರುವ ಕಡೆ ನಡೆ (ಶಾಗಂ. ೦೯೦-೨೦) ; ಬೆಡಗುಗಾತಿ, ಈ ಯುದ್ಧಕ್ಕೂ ನಿನಗೂ ಏನು ಸಂಬಂಧ ? (ದಾಂಕ್. ೩೮೨). [ಬೆಡಗು$_1$ (< ಬೆಡಂಗು) + —ಕಾತಿ$_5$]

**ಬೆಡಗುಗಾರ** (ನಾ). ೧. ಚೆಲುವ ; ಸುಂದರ. ೨. ವಿಲಾಸಿ ; ವಿಟ : "ವಿಟಃ = ಬೆಡಗುಗಾರಂ" (ಕಾಣ್ಕೆ. ೦೬). [ಬೆಡಗು$_1$ (< ಬೆಡಂಗು) + —ಕಾರ$_1$ (< —ಕಾಱ) ]

**ಬೆಡಿ** (ನಾ). ೧. ತುಪಾಕಿಯ ಗೋಲಿ , -ಗುಂಡು : ನಾನು ಬೆಡಿ ಹೊಡೆದು ಕಿರುಬನನ್ನು ಉರುಳಿಸಿದುದು ನಿನಗೆ ನೆನಪಿದೆಯಷ್ಟೆ (ಹುಂಠಾ. ೩೬೮). ೨. ಪಟಾಕಿ ; ಗರ್ನಾಲು : 'ಬೆಡಿಕಂಬ' ಪರಾ. [ದೇ.II ತಮಿ. ವೆಟಿ ; ಮಲ. ವೆಡಿ ; ತುಳು. ಬೆಡಿ ; ಕೊಡ. ಬೊಡಿ ]

**ಬೆಡಿಕಂಬ** (ನಾ). ಒಂದು ಬಗೆಯ ಸುಡುಮದ್ದು : ಮುಂಮೆ ದಿನ ಬೆಡಿಕಂಬ, ಲಂಕಾಪಟ್ಟಣ, ಬಿರುಸು ಬಾಣಗಳನ್ನು ಸುಡಿಸಿ . . . ನೆಲ ನಡುಗಿಸಿಬಿಟ್ಟೇನು (ಮಕಮು. ೦೬೩). [ ಬೆಡಿ + ಕಂಬ$_1$ (< ಕಂಭ) ]

**ಬೆಣ**, ಬೇಣ (ನಾ). (ಕರಾ) ಸಮತಟ್ಟಾದ, ಗಿಡಮರಗಳಿಲ್ಲದ, ಬರಿದಾದ ನೆಲ : ಮರ ಫಲ ಬೆ[ಣ] ಬಳಿರು ಬೆಟ್ಟ ಬಿಟೆ ಮುಂತಾಗಿ ಸರ್ವಾಂಗೋಡು ಸಹಿತವಾದ ಯಿಂತಿವೆಲಉ (ಕಇ. III-i, ೬.೦೯; 1527); ಎರಡು ಮೈಲು ದೂರ ನಡೆದು ಹೋದ ಮೇಲೆ ಒಂದು ಚಿಕ್ಕ ಬೆಣವಿದೆ (ಮೂಕಜ್ಜ. ೫೩) ; ಅಲ್ಲೊಂದು ವಿಶಾಲ ಬೆಣವಿದೆ. ಅದರಲ್ಲಿ ಮಳೆಗಾಲದಲ್ಲಿ ಹುಲ್ಲೂ, ಚಳಿಗಾಲದಲ್ಲಿ ಕರಡವೂ ಬೆಳೆಯುತ್ತವೆ (ಸ್ವಕ್ಷಪೂ. ೦೦). **ಬೇಣ** : ನಮ್ಮ ಬೇಣವೇನೂ ಬಟ್ಟಬಯಲಿನಲ್ಲಿಲ್ಲ (ಸುಮಸಂ. ೬೩); ಅವನೂ ಮಲ್ಲೇಶ ಮೂರ್ತಿಯರೊಂದಿಗೆ ಹೊಲಗದ್ದೆ ಬಯಲು ಬೇಣಗಳಲ್ಲಿ ವಿಹರಿಸುತ್ತಿದ್ದಾನೆ (ಜಳುಮು. ೨೮೫). [ ? ]

**ಬೆಣಕಚಂಗೆಡೆ** (ಕ್ರಿ). (?) : ಬೆಣಕಚಂಗೆಡೆವರ ಮಾತಂ ಕೇಳ್ದು ದಾನಾದಿಗಳೊಳಪ್ಪರ್ಥವ್ಯಯಕ್ಕೆ ಮನದೊಳ್ ಮುಱುಗಿ ಮಾಡವೇಡ (ರಪುರಾಮ. ೬-೨೩೦). [ ? ]

**ಬೆಣಕು** 'ಬೆಳಗು$_2$' ನೋ.

**ಬೆಣಕೇಱು** (ಕ್ರಿ). ಕಾಂತಿಯುಂಟಾಗು ; ಬೆಳಕು ಹೆಚ್ಚಾಗು : ಪಣತಿವಿಡಿದು ಬತ್ತಿಯಿಂದ ತೈಲವನುಂಡು ಬೆಣಕೇಱುವಂತಗ್ನಿದೀಪ (ಶರತ. ೬೬-೦೨೬); ಕರ್ಮಾಂಧಕಾರ ಹರೆವವ್ವೋಲು ಸ್ತುತಿಯಿಂದ ಧರ್ಮದ ಬೆಣಕೇಱಿದಂತೆ (ಪೂಸ್ಮ. ೦೫-೭೦). [ ಬೆಣಕು (< ಬೆಳಗು$_2$) + ಏಱು$_1$ (< ಏಱ್$_1$) ]

**ಬೆಣಚಿಕಲ್ಲು** 'ಬೆಣಚುಗಲ್ಲು' ನೋ.

**ಬೆಣಚಿಗಲ್ಲು** 'ಬೆಣಚುಗಲ್ಲು' ನೋ.

**ಬೆಣಚು** (ನಾ). (ಹರಳಿನ ಆಕೃತಿಯಲ್ಲಿರುವ) ಹೊಳಪುಳ್ಳ ಒಂದು ಬಗೆಯ ಬಿಳಿಯ ಬಣ್ಣದ ಕಲ್ಲು : ಅಲೋಹ ಖನಿಜವಾದರೂ . . . ಅನೇಕ ವೇಳೆ ಇವು ಸಹ ಉಪಯೋಗಕ್ಕೆ ಬರುತ್ತವೆ. ಉದಾ : ಫ್ಲೂರೈಟ್ ಬೆಣಚು (ಕ್ವಾರ್ಟ್ಸ್) ವಿರೈಟ್ ಮುಂತಾದವು (ಕವಿಕೋ. I, ೨೬೮).

**ಬೆಣಚುಕಲ್ಲು** 'ಬೆಣಚುಗಲ್ಲು' ನೋ.

**ಬೆಣಚುಗಲ್ಲು**, ಬೆಣಚಿಕಲ್ಲು, ಬೆಣಚಿಗಲ್ಲು, ಬೆಣಚುಕಲ್ಲು (ನಾ). = ಬೆಣಚು : ಮೂಡ ಹೆಬೀಡ ಬೆಣಚುಗಲ್ಲು (ಎಕ. VII, ಶಿವಮೊ. ೬೪-೦೦೦ ; 1112) ; ಬೆಣಚುಗಲ್ಲಿನ ಹಾಗೆ ಸ್ವಲ್ಪ ಬೆಳ್ಳಗೆ ಇರುತ್ತದೆ (ಶುಂಬದು. ೩-೪೫) ; ಸಮುದ್ರದ ದಡದಲ್ಲಿ ಬಿದ್ದಿರುವ ಬೆಣಚುಗಲ್ಲುಗಳನ್ನು ಹೋಲುತ್ತದೆ (ಕವಿಕೋ. I, ೩೦೦). **ಬೆಣಚಿಕಲ್ಲು** : ಅವನೆದೆಯ ಯಮದೂತರತಿಕಠಿಣಬೇಟಂಗಳೊಳು ಬೆಣಚಿಕಲ್ಲುಗಳೊಳಗೆ ಎಳದು ಶೂಲಗಳಿಂದೆ ತಿವಿದು (ಕೂಲ್ಗಶಾ. ೫೦-೨) ; ಸ್ಫಟಿಕರೂಪದ ಬೆಣಚಿಕಲ್ಲಿಗೆ ಸಂಸ್ಕೃತದಲ್ಲಿ ಕಾಚಮಣಿ ಎಂದೆನ್ನುವರು (ಶುಂಬದು. ೬-೨೩೮) . **ಬೆಣಚಿಗಲ್ಲು** : ಸಾರತರ ರಂಗವಲ್ಲಿಗಳ. . . ಬೆಣಚಿಗಲ್ಲಿನ ಪಿಷ್ಟದಿಂದಾದೊಡಂ ರಚಿಪುದು (ಕಕುಪು. ೬-೪-೨೪) ; ಕಾಜು . . . ಕಲವು ಕಾಲ ಬೆಣಚಿಗಲ್ಲಿನಿಂದ ಅದನ್ನು ಮಾಡುತ್ತಿದ್ದರು (ಶುಂಬದು. ೪-೨೨೦). **ಬೆಣಚುಕಲ್ಲು** : ಹೊತ್ತಿಯ ಮರಡಿ ಎಂಬ ಬೆಣಚುಕಲ್ಲು ಮರಡಿಯನ್ನು ಬಲದಲ್ಲಿ ಹಾಯ್ಕಕೊಂಡು (ಎಕ. III, ಶ್ರೀರಂಗ. ೦೩೩-೩೯ ; 1453) ; ಬೆಂಕಿ ಹುಟ್ಟಬೇಕಾದರೆ ಬೆಣಚುಕಲ್ಲಿನಲ್ಲಿ ಮಾತ್ರ. ಬೆಣ್ಣಗಲ್ಲಿನಲ್ಲಿ ಬೆಂಕಿಯಿದ್ದರೂ ಇಲ್ಲದಂತೆ ವ್ಯರ್ಥ (ರಾಜ್ಯೋದ. ೬೦). [ಬೆಣಚು + ಕಲ್ಲು (< ಕಲ್$_3$)./ತುಳು. ಬೊಳ್ಕಲ್ಲ್]

**ಬೆಣತಿಗೆ** 'ಬೆಳಂತಿಗೆ' ನೋ.

**ಬೆಣಾಯ್ಯ** (ನಾ). ಒಬ್ಬಾತನ ಹೆಸರು : ಪೆರ್ಗ್ಗಡೆ ಬೆಣಾಯ್ಯಂ ಗಜ್ಜರಾನೆಯ ಕುಂಭಸ್ಥಳಕ್ಕೆ ಕುದುರೆಯಂ ಪಾಯ್ಸಿ ಸತ್ತೊಡೆ (ಎಕ. XII, ಮಧುಗಿ. ೬೦-೬ ; 920). [? + ಅಯ್ಯ$_1$]

**ಬೆಣೆ** (ನಾ). ಮರದ (ಬೇರೆ ಬೇರೆ ಆಕಾರದ) ಗೂಟ : ಸರ್ವಪರ್ವಂಗಳೆಂಬ ಬೆಣೆಗೀಲನಿಕ್ಕಿ ಹಿಡಿವೃತ್ತಿರ್ದ ಛತ್ರದ ನೆಳಲಿಲ್ಲದಂತೆ ಏಘಟೇಶ್ವರಲಿಂಗಕ್ಕೆ ಬಿಸಿಲು ಮಳೆಗಾಳಿಗೆ ಹೊಜಿಗಾಗಬೇಕೆಂದು (ಸರ್ವ. ೬೦-೩೨೨) ; ಪೆಟಲ ಗುಂಡಿನ್ನ ಬಲುಬಂಡಿ ಪೆಟಲ ಬೆಣೆಯು ಬಂಡಿ ಪೆಟಲುಪ್ಪಿನ ಬಂಡಿ ಕಟಕದೊಳೆಯ್ದಿದವವಳ (ಶಬರಶಾಂ. ೯೦-೪೯) ; ಪೆಜಸಾರದಂತೆವೋಲ್ ಬೆಣೆಯು ನಮರ್ಚಿ ಪೂಣ್ದಪನಿದೆಂಬಿನಮೇಂ ಬಗೆವಂದುದಿಂದು ಸಂದಣಿಸುತ್ತೆ ಗುಂಬದಂಬಟೆವುಯಿಲ್ಪಟೆಯಿಂ ಗಣಿಕಾಶದಂಬಕಂ (ಶಕಧಿ. ೬-೦೫೨) ; ಪುಟಗಳ ಮಧ್ಯೆ ಮತ್ತು ಅಂಚುಗಳಲ್ಲಿ . . . ಕಟ್ಟಿಗೆ ಮತ್ತು ಲೋಹದ ತೆರಪು ಸಾಮಾಗ್ರಿಗಳನ್ನಿಟ್ಟು ಬೆಣೆಗಳಿಂದ ಬಿಗಿಯಬೇಕು (ಮುದ್ರಶ. ೩೯).
[?./ ಮರಾ. ಬೇಣೆ]

**ಬೆಣ್ಣಗೂರ್** (ನಾ). ಒಂದು ಊರಿನ ಹೆಸರು : ಬೆಣ್ಣಗೂರ ಕವ್ವಲೆ ಬಾಣಾಸಾಮಿ ಮಗನ್ (ಎಕ. X, ಬಾಗೆಂಗ್. ೯೫-೪ ; 880).
[ ? + ಊರ್ ]

**ಬೆಣ್ಣತ್ತೂರ್** (ನಾ). ಒಂದು ಊರಿನ ಹೆಸರು : ಎಚಿಯಮ್ಮರಸರಾ ಬೆಣ್ಣತ್ತೂರಾಳ್ಗೆ (ಎಕ. X, ಗೋಲಬ. ೦೩-೬ ; 1000 ?). 'ಬೆಳತೂರ್' ಪರಾ. [ ? + ಊರ್ ]

**ಬೆಣ್ಣಮ್ಮ** (ನಾ). ಒಬ್ಬಾತನ ಹೆಸರು : ಬೆಣ್ಣಮ್ಮ ಸೋಮಯಾಜಿಗಳ ಕೊಟ್ಟ ದಾನಂ (ಇಕ. VIII, ೨೬೬-೩೯ ; ೯೭ಯ ೪೪). [ ? + ಅಮ್ಮ$_1$]

**ಬೆಣ್ಣೆ** (ನಾ). ೧. ಹಾಲು, ಮೊಸರುಗಳಿಂದ ತೆಗೆದ, ಜಿಡ್ಡಾಗಿರುವ ಬಿಳಿಯ ಪದಾರ್ಥ ; ನವನೀತ : "ದಧಿಸಾರಃ, ನವನೀತಃ—ಈ ೨ ಬೆಣ್ಣೆ" (ಹಲಾಯು. ೯೬-೦೦೯) ; ಬಿಸಿಲ ಬೆಣ್ಣೆಯಂತೆ ಕರಗಿ (ಶಾಂತಿಕೃ. ೬-೯೫ ಬ) ; ಬೆಣ್ಣೆಯಂ ತಿಂದ ಬೆಕ್ಕಿನಂತೆ ಅಜಿಯಲೀಯದೆ (ಶಂಕಶಂ. ೯೯-೨೦) ; ಬೆಣ್ಣೆಯ ನೇಮ ಬೆಲ್ಲದ ನೇಮ ಅಂಬಲಿಯ ನೇಮದವನಾರನೂ ಕಾಣೆ (ಬಸವ. ೨೩೨) ; ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣ (ಗಾದೆ). ೨. ಮೃದುವಾದುದು ; ನಯವಾದುದು : 'ಬೆಣ್ಣೆಕಾಗದ' ಪರಾ.

**ಬೆಣ್ಣೆಯ ಚಾವಡಿ** = (ಚಿಕ್ಕದೇವರಾಜಒಡೆಯರವರು ಏರ್ಪಡಿಸಿದ್ದ) ಹದಿನೆಂಟು ಬಗೆಯ ಅಧಿಕಾರಸ್ಥಾನಗಳಲ್ಲಿ ಒಂದು : ಬೆಣ್ಣೆಯ ಚಾವಡಿ—ಇದರಲ್ಲಿ ಅರಮನೆಯ ದನಕರು ಹೆಮ್ಮೆ ಕುರಿ ಮುಂತಾದ ಜೀವರಾಸಿಗಳ ವಿಚಾರಣೆ ಮಾಡಿಕೊಂಡು, ಅದರಲ್ಲಿ ಆದ ಹಾಲು, ಮೊಸರು, ಬೆಣ್ಣೆ ಮುಂತಾದವುಗಳಲ್ಲಿ ಕೆಲವು ಅರಮನೆಗೆ ಪ್ರತಿದಿನವೂ ಬರುವಂತೆಯೂ, ಕೆಲವು ಕರಗಪಡಿಸಿಹೋಗುವಂತೆಯೂ ಕಟ್ಟಳೆ ಮಾಡಿಸಿದರು (ಮಹಾಪಂ. I, ೦೯೯).

**ಬೆಣ್ಣೆ ಹಚ್ಚು** = (ಆಲಂ) ಒಳ್ಳೆಯ ಮಾತನಾಡಿ ಒಲಿಸಿಕೊಳ್ಳು ; ಅನುನಯಿಸು ; ಪುಸಲಾಯಿಸು : ಇಷ್ಟು ಬೆಣ್ಣೆ ಹಚ್ಚಲಿಕ್ಕೇನ ಇವರಿಗೆ ಬಿಡು (ಅಜೋಕ. ೦೫). [ ಬೆಳ್$_2$ + ನೆಯ್$_2$ /ತಮಿ. ವೆಣ್ಣೆಯ್, ವೆಣ್ಣೈ ; ಮಲ. ವೆಣ್ಣ ; ತುಳು. ಬೆಣ್ಣೆ, ಬೊಣ್ಣೆಯಿ ; ಕೊಡ. ಬೊಣ್ಣೆನೆಯ್ ; ತೆಲು. ವೆನ್ನ ]

**ಬೆಣ್ಣೆಅಕ್ಕಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಡಬರಗುಹುಲ್ಲು, ಬೆಣ್ಣೆಅಕ್ಕಿಹುಲ್ಲು (ವೃಶಿಗ. ೦೪-೨೯೫). [ ಬೆಣ್ಣೆ + ಅಕ್ಕಿಹುಲ್ಲು ]

**ಬೆಣ್ಣೆಕಳ್ಳ** 'ಬೆಣ್ಣೆಗಳ್ಳ' ನೋ.

**ಬೆಣ್ಣೆಕಾಗದ** (ನಾ). ಮೃದುವಾದ ಕಾಗದ ; ನಯವಾದ ಕಾಗದ : ಬೆಣ್ಣೆಕಾಗದದಲ್ಲಿ ಬರೆಯಲು ಚೆನ್ನಾಗಿರುತ್ತದೆ (ರೂಢಿ). [ಬೆಣ್ಣೆ + ಕಾಗದ]

**ಬೆಣ್ಣೆಗಡುಬು** (ನಾ). ಬೆಣ್ಣೆಯನ್ನು ಹಾಕಿ ಮಾಡುವ ಒಂದು ಬಗೆಯ ಕಡುಬು : ತಣ್ಣೀರಿನಿಂದ ತೊಳದಕ್ಕಿಯನು ಹಾಲೊಳಗೆ ಸಣ್ಣನಪ್ಪಂತಿರೆದು ಕದಡಿಯೊಲೆಯೊಳು ತೊಳಸಿ ಬೆಣ್ಣೆಯಂ ಹಾಕಿಯುಂಡಲಿಗೆವದದೊಳು ಇಳುಹಿ ಹಲ್ಲೆಗಡುಬುಗಳ ಮಾಡಿ ನುಣ್ಣನೆಸೆವಾ ಕಡುಬನೊಲೆಗೆತ್ತಿ ಕಾಯ್ದು ಕುದಿವೆಣ್ಣೆವಾಲೊಳು ಮುಳುಗಲಿಕ್ಕಿ ಬೇಯಿಸಿ ತೆಗೆದು ಬೆಣ್ಣೆಗಡುಬೆಂದು ಹೆಸರಂ ಕೊಟ್ಟು ಸಿರಿಪಚ್ಚೆ ಯಾಲಕ್ಕಿಯುಂ ತಳಿವುದು (ಸೂಪಶಾ. ೦-೬೨). [ ಬೆಣ್ಣೆ + ಕಡುಬು (< ಕಡುಂಬು) ]

**ಬೆಣ್ಣೆಗರಗ$_1$** 'ಬೆಣ್ಣೆಗರುಗ' ನೋ.

**ಬೆಣ್ಣೆಗರಗ$_2$** (ನಾ). ಒಂದು ಬಗೆಯ ಪಕ್ಷಿ : ಪೆಣ್ಣಾಗೆ ಬೆಣ್ಣೆಗರಗಂ . . . ಗಿಡುಗಂ ಸಿಂಚಾವಿನಿತುಂ ಗಮನಾಗಮನದಲ್ಲಿ ತಾಂ ಪುಗೆ ಶುಭದಂ (ಲೋಕೋಪ. ೦೨-೧೯). [ ? ]

**ಬೆಣ್ಣೆಗರುಗ, ಬೆಣ್ಣೆಗರಗ$_1$** (ನಾ). ಒಂದು ಬಗೆಯ ಸಸ್ಯ ; ಗರುಗದಲ್ಲಿ ಒಂದು ಬಗೆ : ಭಗರಕ್ತಂ ಸಡೆವೊಡೆ ಬೆಣ್ಣೆಗರುಗವಂ ನೀರೊಳಕ್ಕದಂ ದುಗ್ಧದೊಳೀಂಟುಗೆ (ಲೋಕೋಪ. ೯-೦೬೬); ಹೊತ್ತರೆ ಹಾಲಂ ಮರುಗಿಸಿಯುತ್ತರಣೆಯ ಬೆಣ್ಣೆಗರುಗವೆರಡರ ಬೇರಂ ಬಿತ್ತರದೊಳಿಕ್ಕಿ ಹೆಪ್ಪಿಟ್ಟಳ್ತಿಯೊಳಂ ಕಡೆಯೆ ಬೆಣ್ಣೆ ಮೂಡಿಯಕ್ಕುಂ (ಗೋವೈದ್ಯ. ೨೦೦-೫೯). **ಬೆಣ್ಣೆಗರಗ$_1$** : "ಹೆತ್ತುತ್ತಿ, ಹೆತ್ತುಟ್ಟಿ . . . ಚಿಟ್ಟರಳು, ಬೆಣ್ಣೆಗರಗ, ಭೇದ" (ಶಬ್ದ. ೦೨೦) ; ಅಮರದವಳ್ಳಿ, ಮೂರೆಲೆಹೊನ್ನೆ . . . ಬೆಣ್ಣೆಗರಗ ಇವಂ ಕಷಾಯಮಿಟ್ಟು ಸೇವಿಸಿದರೆ ವಾತಜ್ವರಂ ಕೆಡುಗುಂ (ಶಿವತ್ವ. ೬೫). [ ಬೆಣ್ಣೆ + ಗರುಗ ]

**ಬೆಣ್ಣೆಗಲ್ಲು** (ನಾ). ಮೃದುವಾದ ಕಲ್ಲು ; ಹಿಟ್ಟುಗಲ್ಲು : ಬೆಂಕಿ ಹುಟ್ಟಬೇಕಾದರೆ ಬೆಣಚುಕಲ್ಲಿನಲ್ಲಿ ಮಾತ್ರ. ಬೆಣ್ಣೆಗಲ್ಲಿನಲ್ಲಿ ಬೆಂಕಿ ಇದ್ದರೂ ಇಲ್ಲದಂತೆ ವ್ಯರ್ಥ (ರಾಜ್ಯೋದ. ೬೦). [ ಬೆಣ್ಣೆ + ಕಲ್ಲು (<ಕಲ್$_3$) ]

**ಬೆಣ್ಣೆಗಳವು** (ನಾ). ಬೆಣ್ಣೆಯನ್ನು ಕದಿಯುವಿಕೆ ; ಬೆಣ್ಣೆಯ ಕಳ್ಳತನ : ಬೆಣ್ಣೆಗಳವನು ಮಾಣಿಸುವೆನೀ ಚಿಣ್ಣನನು ಕಟ್ಟಿರಿಸಿ ತಾರಾ ಕಣ್ಣಗಳನೆಂದೊಬ್ಬಳೊಬ್ಬಳ ನಡುವನುಜಿ ಬಿಗಿದು (ಐಶಾಗ. ೦೦-೨೬-೨೯).
[ ಬೆಣ್ಣೆ + ಕಳವು ]

**ಬೆಣ್ಣೆಗಳೆ** (ಕ್ರಿ). ಹಾಲು, ಮೊಸರನ್ನು ಕಡೆದು, ಬೆಣ್ಣೆಯನ್ನು ಹೊರಕ್ಕೆ ತೆಗೆ : ತುಷಾರವನಳೆವ ಶಿಲೆಯೊಳಗೆ ಮುಳುಗುವ ನೀರೊಳು ಬೆಣ್ಣೆಗಳೆವಗ್ಗದ ವೇಶ್ಯಾಮಾತೆಯರನವನೀಶನೀಕ್ಷಿಸಿದ (ಜೀವಂಧ. ೦೬-೯೩).
[ ಬೆಣ್ಣೆ + ಕಳೆ$_1$ ]

**ಬೆಣ್ಣೆಗಳ್ಳ, ಬೆಣ್ಣೆಕಳ್ಳ** (ನಾ). ೧. ಬೆಣ್ಣೆಯನ್ನು ಕದಿಯುವವನು. ೨. ಕೃಷ್ಣ : ಬೆಣ್ಣೆಗಳ್ಳನ ಕೊಬ್ಬಿದುದರದೊಳ್ಪೊಚ್ಚಪೊಸ ಸುಣ್ಣಮಂ ಪೊಯ್ದು ನೀರೆಜಿದಂತೆ ಮಾಡಿ . . . ಕಾಳಗದೊಳುಬ್ಬಸವನುಜಿ ಹಣ್ಣದಲ್ಲದೆ ಮಾಣೆಂ (ಕೃಬಿಶಾ. ೬-೨೯). **ಬೆಣ್ಣೆಕಳ್ಳ** : ೨. ಬೆಣ್ಣೆಕಳ್ಳನೆ ಮುದ್ದು ಚಿನ್ನ ಕೃಷ್ಣಯ್ಯ (ಪುರಂದ. ೨-೯-೨). [ ಬೆಣ್ಣೆ + ಕಳ್ಳ$_1$ ]

**ಬೆಣ್ಣೆಗಾರಿಗೆ** (ನಾ). ಬೆಣ್ಣೆ ಹಾಕಿ ತಯಾರಿಸುವ ಒಂದು ಬಗೆಯ ಗಾರಿಗೆ : ಅಣ್ಣವಾಲೊಳು ಸೊಜ್ಜಿಗೆಯಂ ನನೆಹಿಕ್ಕಿ ಬಳಿಕ ಸಣ್ಣನ[ಪ್ಪ]ಂತೆ ಕಣಕವ ಮಾಡಿಯುದಟಿ ಸರಿ ಬೆಣ್ಣೆ ನಸುಗೆನೆಯಿಕ್ಕಿ ಗಾರಿಗೆಯ ಮಾಡಿ ಹೊಸತುಪ್ಪದೊಳು ಬೇಯಿಸಿದೊಡೆ ಬೆಣ್ಣೆಗಾರಿ[ಶಾಕಂ. ಯ]ಗೆಯೆಂಬ ಹೆಸರನುಜಿ ಪಡೆವುದು (ಸೂಪಶಾ. ೦-೨೩). [ಬೆಣ್ಣೆ + ಗಾರಿಗೆ$_1$]

**ಬೆಣ್ಣೆಗಾಸು** (ಕ್ರಿ). ಬೆಣ್ಣೆಯನ್ನು ಕಾಯಿಸಂ ; ತುಪ್ಪ ಮಾಡು : ಬೆಣ್ಣೆಗಾಸಿದಾಮೋದ ಸುಗಂಧಪರಿಮಳಂ ನಾರ್ಪ ತುಪ್ಪವುಂ . . . ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುತೆಱದ ಭಕ್ಷ್ಯರೂಪಂಗಳುಮಂ . . . ಬಡ್ಡಿಸಿದೊಡೆ (ವಜ್ರಾರಾ. ೭೮-೦೫). [ಬೆಣ್ಣೆ + ಕಾಸು$_1$]

**ಬೆಣ್ಣೆಗೇಸಿ** (ನಾ). ಒಬ್ಬಾತನ ಹೆಸರು : ಕೇಶವಯ್ಯನುಂ ಪೊಣ್ಣವೋಜರುಂ ಮಧುಕಾಮೋಜರುಂ ಬೆಣ್ಣೆಗೇಸಿಯುಂ (ಎಕ. VI, ಶಕ್ಕು. ೩-೦೦ ; 899).
[ ? ]

**ಬೆಣ್ಣೆತೆಂಗು** (ನಾ). ತೆಂಗಿನಲ್ಲಿ ಒಂದು ಬಗೆ ; ಮೃದುವಾದ ತೆಂಗು : ಬೆಣ್ಣೆತೆಂಗಿನಲ್ಲಿ ಎಣ್ಣೆ ಬಹಳವಿರುತ್ತದೆ (ರೂಢಿ). [ಬೆಣ್ಣೆ + ತೆಂಗು$_2$]

**ಬೆಣ್ಣೆದಲೆಗ** (ನಾ). ಒಂದು ಬಗೆಯ ಪಕ್ಷಿ : ಕೆಲವ ಪಾರಿವ ಗುರುಸಕ್ಕೆ

ಟಟ್ಟಭ ಬೆಣ್ಣೆದಲೆಗನು ಕಂಟಕನಲ್ಲಿಹವು (ವಾದೇಶಾಂ. ೦-೬೩). 'ಬೆಣ್ಣೆಗರಗ₂' ಪರಾ. [ ? ]

**ಬೆಣ್ಣೆದಜಗು** (ನಾ). ಬೆಣ್ಣೆ ಹಾಕಿ ತಯಾರಿಸಿದ ಒಂದು ಬಗೆಯ ಭಕ್ಷ್ಯ: ಎಣ್ಣೆವೂರಿಗೆ ಸುಫೇಣಿ ವಬುಸುಕೊಡೆ ಬೆಣ್ಣೆದಜಗು ಹಾಲುಂಡೆ ಸಕ್ಕರೆವುಂಡಗೆ . . . ಎನಿಪ್ಪವಂ . . . ಪರವೆ ಗಡಣಸಿದಳಾಗ (ಶೀರಮ.೦೦-೨೯). [ಬೆಣ್ಣೆ + ತಜಗು]

**ಬೆಣ್ಣೆಬಳಪ** (ನಾ). (ಕಪ್ಪುಹಲಗೆಯಂ ಮೇಲೆ ಬರೆಯಲು ಉಪಯೋಗಿಸುವ) ಮೃದುವಾದ ಬಳಪ : ಬೆಣ್ಣೆಬಳಪವಿದ್ದರೆ ಚೆನ್ನಾಗಿ ಬರೆಯಬಹುದು (ಕೂಡ). [ಬೆಣ್ಣೆ + ಬಳಪ]

**ಬೆಣ್ಣೆಬಿದುರು** (ನಾ). ಒಂದು ಬಗೆಯ ಸೊಪ್ಪು: "ವಿಶಲ್ಯಾ, ಅಗ್ನಿಶಿಖಾ . . . ಬೆಣ್ಣೆಬಿದುರು ಸೊಪ್ಪು, ಅಗ್ನಿಶಿಖೆ" (ಸಿದ್ಧಾಂತಿ. ೦೯೩). [←ತೆಲು. ವೆನ್ನವೆದುರು]

**ಬೆಣ್ಣೆಮಾತು** (ನಾ). (ಅಲಂ) (ಪುಸಲಾಯಿಸುವುದಕ್ಕಾಗಿ ಆಡುವ) ಮೃದುವಾದ ಮಾತು ; ನಯವಾದ ನುಡಿ : ಎದುರಿಗೆ ಮಾತ್ರ ಯಾರೂ ಏನೂ ಅನ್ನೋದಿಲ್ಲ—ಬೆಣ್ಣೆಮಾತನ್ನಾಡ್ತಾರೆ (ಶಿಂದಶಿ. ೨೨). [ಬೆಣ್ಣೆ + ಮಾತು₁]

**ಬೆಣ್ಣೆಯೂರ್** (ನಾ). ಒಂದು ಊರಿನ ಹೆಸರು : ಬೆಣ್ಣೆಯೂರ ದೇವಗಣನುಂ ಮಳ್ಳವೂರದ ಪೆರ್ಮ್ಮಾಡಿಗಾಮುಣ್ಡನುಂ (ಎಕ. VI, ತಕ್ಕಹ. ೩-೦೯ ; 899 ?). [ಬೆಣ್ಣೆ + ಊರ್]

**ಬೆಣ್ಣೆವಿಟ್ಟು** (ನಾ). ಬೆಣ್ಣೆ ಬೆರಸಿದ ಹಿಟ್ಟು : ಆ ಹಲ್ಲೆಯಂ ಸಲೆ ಸುರುಳಿಬೆಣ್ಣೆವಿಟ್ಟಂ ತೊಡೆದು ಬೆರಳುದ್ದದೊಳು ಕೊಯ್ದು ಬೆಣ್ಣೆಗಾಸಿದ ತುಪ್ಪದೊಳು ಪಾಕ ಮಾಡೆ ಗುಜ್ಜರಿವೇಣಿವೆಸರಾದುದು (ಸೂಶಾ. ೦-೯೩). [ಬೆಣ್ಣೆ + ಪಿಟ್ಟು]

**ಬೆತಿರೇಕ** (ನಾ). ವಿರೋಧ ; ವ್ಯತ್ಯಾಸ : ವ್ಯತಿರೇಕಂ—ಬೆತಿರೇಕಂ, ವ್ಯಥೆ_ಬೆತೆ (ಶಬ್ದ. ಪ. ೨೯೩ ಪ್ರಯೋ) ; ವ್ಯತಿರೇಕ, ಬೆತಿರೇಕ (ಕಾಷ. ೦೬೦ ಪ್ರಯೋ). [< ಸಂ. ವ್ಯತಿರೇಕ]

**ಬೆತೆ**, ವೆತೆ (ನಾ). ೧. ದುಃಖ; ಅಳಲು; ವ್ಯಥೆ : ವ್ಯತಿರೇಕಂ-ಬೆತಿರೇಕಂ, ವ್ಯಥೆ_ಬೆತೆ (ಶಬ್ದ. ಪ. ೨೯೩ ಪ್ರಯೋ); ವ್ಯತಿರೇಕ, ಬೆತಿರೇಕ; ವ್ಯಥಾ, ಬೆತೆ (ಕಾಷ. ೦೬೦ ಪ್ರಯೋ) ; ನೇಹಗಡಲ ತರೆಗಳೆದ್ದು ಬೆತೆಯ ಕಿಡಿಯನಳಿಸದಿರಲು ಜೀವಿಲೋಕವುಳಿವುದೆಂತು (ಕಶಾ. ೦೯-೨). ೨. ನೋವು; ಬೇನೆ: ವಿತತ ಕಷ್ಟವದಾಗೆ ಹೆರಿಗೆಯ ಬೆತೆಯ ಸೈಸದೆಯವರು (ರಾಮಾಶಂ. ೯-೨-೦೦೯).

**ವೆತೆ** : ಅವಳ ಬಾಟನ್ ಮುತ್ತಿ ಮುಸುಜಿರ್ಪ ಕೇಡುಗಳ ವೆತೆಯನ್, ಅವಳಿಂದಮ ಕೇಳ್ವಂ (ಬದ್ಧಕ್ರ. ೩೩-೬೦೩). [< ಸಂ. ವ್ಯಥಾ]

**ಬೆತೆಗೊಳಿಸು** (ಕ್ರಿ). ದುಃಖಪಡಿಸು; ವ್ಯಥೆಗೊಳಿಸು : ಗತಿರಹಿತರಿರವು ತನ್ನಂ ಬೆತೆಗೊಳಿಸಲ್ಕಾಳಲಾಜಿಮುದ್ಧರಣಾರ್ಥಂ ದ್ರುತಗತಿಯಿನವರ ನೆಲೆಗೇ ಧೃತವ್ರತಂ ನಡೆವ ಭಂಗಿಯೇನಚ್ಚರಿಯೋ (ಧರ್ಮಪ. ೭-೩೨). [ಬೆತೆ + ಕೊಳ್₁ + —ಇಸು₃]

**ಬೆತ್ತ** (ನಾ). ೧. ಬಿದಿರಿನಲ್ಲಿ ಒಂದು ಬಗೆ ; ಸಣ್ಣಬಿದಿರು : ಸತ್ತಿಗೆ ಗಗ್ಗರಂ . . . ಪಾವುಗೆ ಪಂಚಮಸ್ವನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೩೩೩ ಒಂದ್ರಕ) ; ಬೆತ್ತ ಬಿದಿರಿಡಿದಡಸಿ ಬೆಳೆವ ಮೆಳೆಗಳ ನಡುವೆ . . . ಏಕೆ ಓಯೆನ್ನೆ ಮಲ್ಲಯ್ಯ ಎಂದತ್ತನು (ಸಿದ್ಧರಾ. ೨-೬೦); ಮೆತ್ತಿದವು ಶರವಿಭವ ಮೆಯ್ಯೊಲಿ ಬೆತ್ತ ಬೆಳೆವದ್ರಿಯವೊಲಿದ್ದುದು ಮತ್ತಗಜ (ಕುಮಾರವ್ಯಾ. ೩-೩೯). ೨. (ಬಿದಿರಿನ) ಕೋಲು ; ಸೆಳೆ ; ಛಡಿ : "ಬೆತ್ತ_ವೇತ್ರ=ಕೋಲು" (ಶಬ್ದಕೋ. ೩೨); ದಂಡಿಗೆ ಬೆತ್ತ ಹಿಡಿಯುವುದಕ್ಕೆ ಮಂಡೆ ಮಾಚಿ ನಾಚುತ್ತಿದ್ದೆ (ಪುರಂದ. ೦-೯೩-೨) ; ಚಿತ್ತವರಸಿನ ಕರವ ಬೆತ್ತ ತಾ ಪಣಿದಂತೆ ಕುತ್ತ ಹೋಗುವುದು ಅರಸೊಲಿಯೆ ಮುನಿದರೆ ಕತ್ತು ಹೋಗುವುದು (ಸರ್ವಜ್ಞ. ೬೨೯). [< ಪ್ರಾ. ವೇತ್ತ, ವಿತ್ತ./ಪಾಲಿ. ವೇತ್ತ./ಸಂ. ವೇತ್ರ]

**ಬೆತ್ತದ ಬಳ್ಳಿ** (ನಾ). ಒಂದು ಬಗೆಯ ಸಸ್ಯ: ಬೆತ್ತದ ಬಳ್ಳಿ, ಹಾಲುಬೆತ್ತ, ನಾಗಬೆತ್ತ (ವೈಶಿಗ. ೦೩-೨೬೯). [ಬೆತ್ತ + ಬಳ್ಳಿ]

**ಬೆತ್ತಲಿಗ** 'ಬತ್ತಲಿಗ' ನೋ.

**ಬೆತ್ತಲೆ₁** 'ಬತ್ತಲೆ₁' ನೋ.

**ಬೆತ್ತಲೆ₂** 'ಬತ್ತಲೆ₂' ನೋ.

**ಬೆತ್ತಲೆಗ** 'ಬತ್ತಲೆಗ' ನೋ.

**ಬೆತ್ತಲೆಗಣ್ಣು** 'ಬತ್ತಲೆಗಣ್ಣು' ನೋ.

**ಬೆತ್ತವರಿಗೆ** (ನಾ). ಬಿದಿರಿನಿಂದ ಮಾಡಿದ ಗುರಾಣಿ : ಹಲಗೆ ಹಕ್ಕರಿಕೆ ಕೊಪ್ಪರಿಕೆ ಬದ್ಧರ ಭಂಡಿ ತಳಿ ಬೆ[ಪಾಠಾಂ. ವೆ]ತ್ತವರಿಗೆ ಮಜಿಯೊಳು ಬಿಲುಗಾಜರು ಕವ್ಯ ಹರಣವೆರಸು ನಿಂದು ಕಲಿರಾಮನ ಕೆಣಕಿದರು (ಕುಮಾರರಾ. ೯೩-೦೦೬). [ಬೆತ್ತ + ಪರಿಗೆ]

**ಬೆತ್ತೆಬೆಟ್ಟಾಗು** (ಕ್ರಿ). (?) : ದ್ರೋಣಾಚಾರ್ಯರ ಶಿಷ್ಯರೆಲ್ಲಂ ಬೆತ್ತೆಬೆಟ್ಟಾಗೆ ಗೂಡುಗೊಂಡು ನೋಡುತಿರ್ಪುದಂ (ರಮಾರಾಜ್ಯ. ೦೩-೩೩). [?]

**ಬೆದಂಕು** 'ಬೆದಕು₁' ನೋ.

**ಬೆದಂಡೆ** (ನಾ). [ಕಾವ್ಯವಿ] ಕಂದ, ವೃತ್ತಗಳು ಬರುವ ಒಂದು ಬಗೆಯ ಪ್ರಾಚೀನಕಾವ್ಯಪ್ರಕಾರ : "ಬೆದಂಡೆ = ವೈದಂಡಿಕಂ" (ಶಬ್ದ. ಶಂ. ೨) ; ನುಡಿಗೆಲ್ಲಂ ಸಲ್ಲದ ಕನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀಗಡಿನ ನೆಗಟ್ತೆಯ ಕಬ್ಬದೊಳೊಡಂಬಡಂ ಮಾಡಿದರ್ ಪುರಾತನಕವಿಗಳ್ (ಕವಿರಾ. ೦-೩೩); ಕೊಬಲ ಬೆದಂಡೆಯ ಪಗರಣದಟಿಗಳ ಪರದೈವ ಮಾಡುವವರ್ಗಳ ಮಾತಿಂಗುಟೆವರ ಪರಜಾತಿಯವರ್ಗಳತ್ತುಳಿಗಳ ದೆಸೆಬೋಗಲೀಯಲಾಗದು ಪಥುವಂ (ಬಸವ. ೬-೨೯); ಬೀಣೆಯ ಕೊಬಲ ಬೆದಂಡೆಯ ಗಾಣರ ಬಟವಿಡಿದು ಸುಟಾದು ಕುಂ[ದಿಂ] ಕಥಕಶ್ರೇಣಿ ಯೊಡನೆಳಸಿ ಬಟಸುವ ನಾಣಲಿಗಳನೀ ಬುಧಾಳಿಯೊಳ್ ಪುಗಿಸುವುದೆ (ಸುಕುಮಾ. ೨-೨೯) ; ದಂಡದ ಬೇಳಂಬಿಗರ ಬೆದಂಡೆಯ ತಳಿಗೆಯ ಮಹೇಂದ್ರಜಾಲಿಗಳ ಮನಂಗೊಂಡೆಸೆವ ನೆಗ[ಟ್ಸ್ತೆ]ಯ ತಂಡಗಳವಾವ ದೆಸೆಯೊಳಂ ಕಡುರಯ್ಯಂ (ಪರ್ವಪಾ. ೦೦-೨೦) ; ಬೆದಂಡೆಯೊಳಾದೊಡಂ ಪಾಡೆಂಬುದಂ . . . ಸೈರಿಸಂ (ಕಬ್ಬಿಗ. ೦೯೯) ; ಪಾಡುವರಲ್ಲಿ ಬೆದಂಡೆ ತೊತ್ತಸೆತ್ತಬಿಸುವೆನೆಂದು ಪೋಪ ನೆವಮುಂ ಸಮಕಟ್ಟುವರಲ್ಲಿ ಪಾಣ್ಬೆಯರ್ (ಸೂಕ್ತಿಸು. ೬-೬೩೯). [ ? ]

**ಬೆದಂಡೆಗಬ್ಬ** (ನಾ). = ಬೆದಂಡೆ : ಕಂದಮುಮಮಳಿನ ವೃತ್ತಮುಮೊಂದೊಂದೆಡೆಗೊಂ[ಡು] ಜಾತಿ ಜಾಣೆಸೆಯೆ ಬೆಡಂಗೊಂದಿವಟೊಳವುರೆ ಪೇಟಲ್ ಸುಂದರರೂಪಾ ಬೆದಂಡೆಗಬ್ಬಮದಕ್ಕುಂ (ಕವಿರಾ. ೦-೩೯) ; ಪಾಡುಗಳಿಂದಂ ತಜಿಸಲೆ ಮಾಡಿದುದಂ ಪಾಡುಗಬ್ಬಮೆಂದು ಬುಧರ್ ಕೊಂಡಾಡುವರದಜಿಂದಲ್ ಮೆಲ್ವಾಡುಂ ರೂಢಿಯ ಬೆದಂಡೆಗಬ್ಬಮುಮಕ್ಕುಂ (ಕಾವ್ಯಾವ. ೯೩೯). [ ಬೆದಂಡೆ + ಕಬ್ಬ₁ ]

**ಬೆದಕಾಟ** (ನಾ). ಹುಡುಕುವುದು ; ಶೋಧನೆ : ಬೆದಕಾಟ ಬದುಕೆಲ್ಲ ; ಚಣಚಣವು ಹೊಸ ಹಸಿವು (ಮಂಕುತಿ. ೨೦೯). [ ಬೆದಕು₁ + ಆಟ ]

**ಬೆದಕಿಸು** (ಕ್ರಿ). ಪರಿಶೋಧನೆ ಮಾಡು : ವೀರೇಶ ಶರಣಾಗೆನಲ್ ಪ್ರತ್ಯಕ್ಷನಾಗಿ ನೇತ್ರಾಗ್ನಿಯಿಂ ಬೇಗ ಬೆದಕಿಸಿ ಕೊಟ್ಟ ರಾಗದಿಂ ಜಯರುದ್ರದೀಪಗುಂಟೆಯ ವೀರಭದ್ರ ಕರುಣಾಸಮುದ್ರ (ಗುರುಬಾ. ೦೦-೨೩). [ ಬೆದಕು₁ + — ಇಸು₃ ]

**ಬೆದಕು₁**, ಬೆದಂಕು (ಕ್ರಿ). ೧. ಹುಡುಕು ; ಶೋಧಿಸು : "ಬೆದಕು— ಅನ್ವೇಷಣೇ (ಹುಡುಕು)" (ಶಮಣ) ; ಸರೋವರಾಂಬುವನಿತಂ ತವೆ ತುಳ್ಕಿ ರಸಾತಳಂಬರಂ ಬೆದಕಿಯುಮೆಂತುಮಪ್ಪಳಿಸಿ ಕೋದಪೆನೇಟ್ವುದಿದೇಂ

ಸುಯೋಧನಾ (ಪಂಪಭಾ. ೧೩-೮೦); ಬೆದಕದಿರು ಬೆದಕದಿರು ಬೆದಕಿದೊಡೆ ಹುರುಳಿಲ್ಲ (ಬಸವ. ೨೯). ೨. ಆಯು; ಆರಿಸು : ಪಲರುಂ ಚೀಯೆಂಬಿನಂ ಸೂಳಿದೆಂಜಲುವುಟ್ಟಗಳನಾವಗಂ ಬೆದಕಿ ತಿಂದು (ಸುಕುಮಾ. ೪-೫೭). ೩. ಎತ್ತು ; ಮೇಲಕ್ಕೆಬ್ಬಿಸು : ಕಲ್ಲ ಬೆದಕದೆ ಕಪ್ಪೆಯು ಸೋಂಕದೆ ಅಲ್ಲಿಯ ಉದಕವ ಕುಡಿಯಬಲ್ಲಡೆ ಅದು ಯೋಗ (ಅಪಸಂ. ೧೨೩-೫೭೦). ೪. ಕೆದಕು; ಕೆದರು : ಎರಡುಕಾಲೊಳ್ ನೆಲನಂ ಬೆದಕುತ್ತುಂ ನಿಲೆ (ಅಶ್ವಶಾ. ೪-೬೦) ; ಬೆಂದುದ ಬೆದಕಿ ನೋಯಿಸಬೇಡ (ಕುಮಾವ್ಯಾ. ೯-೩೦). ೫. ಪರ್ಯಾಲೋಚಿಸು ; ವಿವೇಚಿಸು : ಅವನು ಅವುಗಳ ವೈಶಿಷ್ಟ್ಯವನ್ನು ಕುತೂಹಲದಿಂದ ಬೆದಕತೊಡಗಿದ (ನಾಗಶ. ೧೯೮). **ಬೆದಂಕು :** ೧. ತನ್ನ ನಿಶಿತ ನಾರಾಚಪರಂಪರಾಭಿಘಾತದೊಳ್ ತಗ್ಗಿ ನುಗ್ಗುನುಱಿಯಾಗಿ ಕೆಡೆದ ತೇರ ಪಲಗೆಗಳೊಳ್ ಮೆಯ್ಗರೆದನ ಗೆತ್ತು ಬೆದಂಕಿ ನೋಡಿಯುಂ (ಗದಾಯು. ೬-೨೯ ವ).

**ಬೆದಕಿ ನೋಡು** = ಹುಡುಕು ; ಅನ್ವೇಷಣೆ ಮಾಡು ; ಪರಿಶೋಧಿಸು : ರಾಜಮಂದಿರದೊಳು ಬೆದಕಿ ನೋಡಿದಳು ಸರೋಜಾಕ್ಷಿ ತನ್ನ ವಲ್ಲಭನ (ಮೋಹತ. ೯-೩) ; ಮಿಗೆ ಮಡಿದ ವೇತಂಡಂಗಳಂ ನೂಂಕಿ ನೋಡಿ ರಥಸಂದೋಹದಿಡುಕಿನೊಳ್ ಬೆದಕಿ ನೋಡಿ (ಶಂಕ. ೪೦-೨೯) ; ಸುನಂದ ತನ್ನ ಹೃದಯವನ್ನು ಬೆದಕಿ ನೋಡಿದಳು (ದೂಬಟ್ಟ. ೧೧೫).

[ದೇ. ॥ ತೆಲು. ವೆದಕು, ಪೆತಕು, ವೆನಕು, ವೆದುಕು, ವೆತುಕು ; ಕುರುಖ್. ಬೆದ್ನಾ ; ಮಾಲ್ತೊ. ಬೆದೆ ]

**ಬೆದಕು₂** (ನಾ). ೧. ಕೆರೆತ ; ಗೀರುವಿಕೆ : “ನಖಘಾತದಲ್ಲಿ ಬೆದಕಕ್ಕು” (ಶಬ್ದಸಾಂ. ೯೦). ೨. ಅಪೇಕ್ಷೆಯನ್ನು ಅಧಿಕಮಾಡಿಕೊಳ್ಳುವುದು : ದ್ಯೂತದಲಿ ಮದ್ಯದಲಿ ಘನಕಂಡೂತಿಯಲಿ . . . ದುರ್ನೀತಿಯಲಿ ಪರಸತಿಯರಲಿ ಸಂಪ್ರೀತಿ ಬಲಿವುದು ಬೆದಕ ಬೆದಕಲು ರಾಯ ಕೇಳೆಂದ (ಕುಮಾವ್ಯಾ. ೪-೯೫). [ < ಬೆದಕು₁ ]

**ಬೆದಗತನ** (ನಾ). ಕಾಮುಕತೆ : ಸುದತಿಯನು ಕಂಡೊಡನೆ ಚಿತ್ತವು ಚದುರದಲ್ಲಿಯು ಸಲಸೆ ಖಲಪತಿ ಬೆದಗತನದಿಂದೌಂಕಿ ಧನುವಿಗೆ ಹೆದೆಯನೇರಿಸುವ (ರಾಮಾಸಂ. ೦-೪-೦೯). [ < ಬೆದೆ + —ತನ ]

**ಬೆದಡು** (ನಾ). (?) : ವೇದೋಕ್ತ ವೀರಶೈವ ಸರಣಿಯಂ ದುಷ್ಕೃತ್ಯ ಮೆಂಬು ಗಿಡು ಬಳ್ಳಿ ಪುಲ್ಮರ ಪೊದಱು ಕಲ್ ಮುಳ್ ಬೆದಡುಗಳೊಂದದ ವೋಲ್ ಸುಸರಮನಾಗಿಸುತೆ (ಪದ್ಮರಾ. ೪-೨೭). [ ? ]

**ಬೆದಡೆ** (ನಾ). “ಸಂಬಾಧ, ಗೊಡವೆ” (ದೀಕ್ಷಾಬೋ. ಕೋಶ) : ಇದನಱಿದು ಭಜಿಸು ಮದನನ ಮದಹರನ ನೀನು ಕುದಿಯದಿರು ದೈವಗಳ ಬೆದ [ಪಾಠಾಂ. ಗ]ಡೆಯಂ ಬಿಡು ನೀನು (ದೀಕ್ಷಾಬೋ. ೧೧-೮). [ ? ]

**ಬೆದಬೆದ** (ನಾ). ಒಂದು ಅನುಕರಣ ಶಬ್ದ : ‘ಬೆದಬೆದನೆ’ ಪರಾ.

**ಬೆದಬೆದ ಬೇ, ಬೆದಬೆದಂ ಬೇ, ಬೆದವೆದ ಬೇ** = ಅತಿಯಾಗಿ ನೋಯು, —ಸಂತಾಪಗೊಳ್ಳು : ಗುಱುಗುಮ್ಮೆಂದು ಪಸಿದಿರ್ದು ಬೆದಬೆದ ಬೆಂದಿನಿಬರ್ ಕಟ್ಟಕೊಳ್ವ ಕಣಿಯೆಂ ಪೇೞಿಂ (ಆದಿಪು. ೯-೯೦) ; ಬೆದಬೆದ ಬೇಯುತ್ತುಂ ತಪದೊಳ್ ನವೆದು (ಶಾಂತಿಪು. ೮-೧೩೦) ; ನಡುವೆ ರೋಗಗಳಾಗೆ ಬೆದಬೆದಂ [ಪಾಠಾಂ. ಬೆದಬೆದನೆ]ಬೆಂದು (ಬಿಂತೋರ. ಹ. ೫೦೨-೬) ; ಬೆದಬೆದಂ ಬೇಯ ಬೇಸತ್ತು (ಕಶಾ. I, ೪೯-೪೩ ; 1423) ; ಎನಿತಂ ಬೆದಬೆದ ಬೆಂದವಯ್ ಎನಿತಂ ಸುಡುಸುಡನೆ ಪುಗುವೆಯ್ ಜೀವನೆ . . . ಎನಿತಂ ಭವಗಹನದೊಳಗೆ ಬಟ್ಟಸೆ ಬರ್ಪಯ್ (ಅಜಿತಪು. ೨-೬೨); ಪಾರ್ವಂ ಮಲ್ಲಲನೆ ಮಱುಗಿ . . . ಬೆದವೆದ ಬೆಂದು (ಸುಕುಮಾ. ೨-೧೧).

**ಬೆದಬೆದನೆ** (ಅ). ಒಂದು ಅನುಕರಣಾವ್ಯಯ ; ಅತಿಯಾಗಿ; ಬಹಳವಾಗಿ : ಪೆಡಱು ಸಿರಿಯಾಳಂ ಹೃದಯದಲಿ ಬೆದಬೆದನೆ ಕುದಿವುತ್ತ ಶೋಕಂ ಪದುಳಿಸದೆ ತಲೆವಾಗಿ ಲಜ್ಜಿಸಿಯಳಲುತಿಂತಿರಲು (ಬಸವಪು. ೨೨-೬೬) ; ಮದಮತ್ಸರಗಳಿಂದ ಬೆದಬೆದನೆ ಬೆಂದೆನಯ್ಯ (ಸಿದ್ಧೇವ. ೪೫-೦೨೭).

[ಬೆದಬೆದ + — ಅನೆ₁]

**ಬೆದರಟ್ಟು** ‘ ಬೆದಱಟ್ಟು ’ ನೋ.

**ಬೆದರಿಕೆ** ‘ ಬೆದಱಿಕೆ ’ ನೋ.

**ಬೆದರಿಸು** ‘ ಬೆದಱಿಸು ’ ನೋ.

**ಬೆದರು₁** ‘ ಬೆದಱು₁ ’ ನೋ.

**ಬೆದರು₂** ‘ ಬೆದಱು₂ ’ ನೋ.

**ಬೆದರುಗಣ್ಣು** ‘ ಬೆದಱುಗಣ್ ’ ನೋ.

**ಬೆದರುನೋಟ** ‘ ಬೆದಱುನೋಟ ’ ನೋ.

**ಬೆದರುಬೊಂಬೆ** (ನಾ). = ಬೆದಗೊರ್ಂಬೆ : ಹೊಲದಲ್ಲಿ ಬೆದರುಬೊಂಬೆ ಇಟ್ಟಿದ್ದಾರೆ (ರೂಢಿ). [ಬೆದರು₂ (< ಬೆದಱು₂) + ಬೊಂಬೆ]

**ಬೆದರ್ಕೆ** ‘ ಬೆದಱಿಕೆ ’ ನೋ.

**ಬೆದಗೊರ್ಂಬೆ** (ನಾ). ಹೊಲ ಗದ್ದೆಗಳಲ್ಲಿ ಹಕ್ಕಿಗಳನ್ನು ಹೆದರಿಸಲು, ಹುಲ್ಲು ಮೊದಲಾದುವುಗಳಿಂದ ಮಾಡಿ ಇಡುವ ಆಕೃತಿ : ಬೆದರ್ ಗೊಂಬೆಯಂ ಕಂಡು ಹೆದರುವ ಮಕ್ಕಳೋಲಂತೆ (ಶ್ರೀರಾಮಪು. ೬೮೪-೦೬೫). [< ಬೆದರು₂ + ಗೊಂಬೆ₁]

**ಬೆದರ್ವಳೆ** (ನಾ). ಹೆದರಿಕೆಯನ್ನು ಹುಟ್ಟಿಸುವ ಮಳೆ ; ಭಾರಿಮಳೆ : ಬೆದರ್ವಳೆ ಬಿಸಿಲುಮಳೆ ಸರಿಸೋನೆ ಸಿಡಿಲಿನ ಘಸಣಿವಳೆಯಲಿ ಘಾಸಿಯಾದುದು ಜಗದ ಜನನಿಕರ (ತೊರವೆ. ೪-೬-೬).

[< ಬೆದಱು₂ + ಮಳೆ (< ಮೞೆ[3])]

**ಬೆದರ್ವುಲ್ಲೆ** (ನಾ). ಹೆದರಿದ ಜಿಂಕೆ : ಬೆದರ್ವುಲ್ಲೆಯನೇಳಿಪ ಬೆಳತಿಗೆಗಣ್ಣದಿಗೆ ಮೆಱೆಯ ಬಿಂಕಂಗೆಡಿಪಧರಂ (ಜಯನೃ. ೨-೮). [< ಬೆದಱು₁ + ಪುಲ್ಲೆ₁]

**ಬೆದಲ್** ‘ ಬೆದ್ದಲ್ ’ ನೋ.

**ಬೆದಲು** ‘ ಬೆದ್ದಲ್ ’ ನೋ.

**ಬೆದವಟ್ಟೆ** (ನಾ). (?) : ಹಡುವಣ ಮೇರೆ ಬೆದವಟ್ಟೆಯ ಹೊಲ (ಕಇಅ. ೭೬-೦೩-೫೭ ; 1170). [ ? ]

**ಬೆದಱಟ್ಟು, ಬೆದರಟ್ಟು** (ಕ್ರಿ). ಹೆದರಿಸಿ ಓಡಿಸು ; ಹೆದರಿ ಹೋಗುವಂತೆ ಬೆನ್ನಟ್ಟು: ಬಾಣವಂ ಪೊಸಮಸೆಯಂಬಿನಿಂ ಕಡಿದು ಕಟ್ಟಲೆಯಂ ಬೆದಱಟ್ಟೆ (ಶಂರಾಮಾ. ೩-೫೪) ; ಸದಾಶಿವನೆಂದರೆ ಬೆದಱಟ್ಟಿ ಸುಡುವುದು ಮಾಣ್ಬುದೆ (ಬಸವ. ೬೬೦) ; ವನಾಂತರಾಂತರದ ಕಟ್ಟಲೆಯಂ ಬೆದಱಟ್ಟುತುಂ (ಜಗನ್ನಾ. ೦೭-೦೦೦). **ಬೆದರಟ್ಟು :** ಆಗ ಕೊಟ್ಟಡಿಯ ಮೇಲುಭಾಗದಲ್ಲಿದ್ದ ಒಂದು ಕಿಟಕಿಯಿಂದ ಕಷ್ಟಪಟ್ಟು ಒಳಗೆ ನುಗ್ಗುತ್ತಲಿರುವ ಬೆಳಕನ್ನು ಒಳಗಿನ ಕತ್ತಲೆಯು ಬೆದರಟ್ಟುತ್ತಲಿರುವಂತೆ ಅವನಿಗೆ ತೋರಿತು (ರಾಜಾಮು. ೬೮).

[ಬೆದಱು₁ + ಅಟ್ಟು₂]

**ಬೆದಱಾಡಿ** (ನಾ). ಭಯದಿಂದ ಮಾತನಾಡುವವನು ; ಹೆದರಿ ನುಡಿಯುವವನು : ಕಮಲಜ ಜ್ಞಾನದೃಷ್ಟಿಲಿ ನೋಡಿ ತನ್ನವನೆಂದಱಿದು ಬೆದಱಾಡಿಗಳ ಸಂತೈಸಿ ಕಳುಹಾತ (ಕೃಷ್ಣಾಕ. ೪-೨೨).

[ಬೆದಱು₂ + — ಆಡಿ₁]

**ಬೆದಱಿಕೆ, ಬೆದರಿಕೆ, ಬೆದರ್ಕೆ** (ನಾ). ೧. ಭಯ ; ಭೀತಿ ; ಅಂಜಿಕೆ : ಹರಹಿದನು ಬೆದಱಿಕೆಯನಹುದೋ ಹಿರಿಯನೈ ನೀನಾತ ಸಾಕ್ಷಾತ್ ಪರಮಪುರುಷನು (ತೊರವೆ. ೩-೭-೪೭). **ಬೆದರಿಕೆ :** ೧. ಆದಷ್ಟುವಟ್ಟಿಗೆ ಬೆದರಿಕೆ ಯಲ್ಲಿಟ್ಟು ಗರತಿಯರ ಗುಣನಡತೆ ಕಲಿಸಿದ್ದರೆ ಹೀಗಾಗುತ್ತಿತ್ತೆ (ಮುರಳ. ೮೨). ೨. ಹೆದರಿಸುವಿಕೆ : ದಿಟ್ಟರಾದ ಹುಡುಗರು ಹುಚ್ಚನ ಬೆದರಿಕೆಗೆ ಲಕ್ಷ್ಯ ಕೊಡದೆ . . . ಹುರಿಗಳಿಂದ ಕಟ್ಟಲಾರಂಭಿಸಿದರು (ರಾಣಿ. ೨೨). **ಬೆದರ್ಕೆ :** ೧. ಬಳಿಕ ಮನದೊಳ್ಪಳಂಚುವ ಬೆದರ್ಕೆಯುಂ ಬಿಟ್ಟು (ಕೃಷ್ಣರಾ. ೨೭-೦೦).

**ಬೆದರಿಕೆ ಹಾಕು** = ಹೆದರಿಸು ; ಭಯಪಡಿಸು ; ಅಂಜಿಸು : ಸುಳ್ಳೇ

ಸುಯೋಧನಾ (ಶಂಕಗಾ. ೦೩-೮೦); ಬೆದಕದಿರು ಬೆದಕದಿರು ಬೆದಕಿದೊಡೆ ಹುರುಳಿಲ್ಲ (ಬಸವ. ೨೮). ೨. ಆಯು; ಆರಿಸು : ಪಲರುಂ ಚೀಯೆಂಬಿನಂ ಸೂಸಿದೆಂಜಲವುಟ್ಟಿಗಳನಾವಗಂ ಬೆದಕಿ ತಿಂದು (ಸುಕುಮಾ. ೪-೫೭). ೩. ಎತ್ತು : ಮೇಲಕ್ಕೆಬ್ಬಿಸು : ಕಲ್ಲ ಬೆದಕದೆ ಕಪ್ಪೆಯು ಸೋಂಕದೆ ಅಲ್ಲಿಯು ಉದಕವ ಕುಡಿಯಬಲ್ಲಡೆ ಅದು ಯೋಗ (ಅಪಕಂ. ೦೨೩-೫೬೦). ೪. ಕೆದಕು; ಕೆದರು : ಎರಡುಕಾಲೊಳ್ ನೆಲನಂ ಬೆದಕುತ್ತುಂ ನಿಲೆ (ಅಶ್ವಶಾ. ೪-೬೦); ಬೆಂದುದ ಬೆದಕಿ ನೋಯಿಸಬೇಡ (ಕುಮಾವ್ಯಾ. ೯-೩೦). ೫. ಪರ್ಯಾಲೋಚಿಸು ; ವಿವೇಚಿಸು : ಅವನು ಅವುಗಳ ವೈಶಿಷ್ಟ್ಯವನ್ನು ಕುತೂಹಲದಿಂದ ಬೆದಕತೊಡಗಿದ (ರಾಗಿಶ. ೦೬೮). ಬೆದಂಕು : ೧. ತನ್ನ ನಿಶಿತ ನಾರಾಚಪರಂಪರಾಭಿಘಾತದೊಳ್ ತಗ್ಗಿ ನುಗ್ಗುನುಱಿಯಾಗಿ ಕೆಡೆದ ತೇರ ಪಲಗೆಗಳೊಳ್ ಮೆಯ್ಗರೆದನೆ ಗೆತ್ತು ಬೆದಂಕಿ ನೋಡಿಯುಂ (ಗದಾಯು. ೬-೨೮ ವ).

**ಬೆದಕಿ ನೋಡು** = ಹುಡುಕು ; ಅನ್ವೇಷಣೆ ಮಾಡು ; ಪರಿಶೋಧಿಸು : ರಾಜಮಂದಿರದೊಳು ಬೆದಕಿ ನೋಡಿದಳು ಸರೋಜಾಕ್ಷಿ ತನ್ನ ವಲ್ಲಭನ (ಮೋಹತ. ೯-೩) ; ಮಿಗೆ ಮಡಿದ ಮೇತಂಡಂಗಳಂ ನೂಂಕಿ ನೋಡಿ ರಥಸಂದೋಹದಿಡುಕಿನೊಳ್ ಬೆದಕಿ ನೋಡಿ (ಚಂಪೃ. ೧೦-೨೮) ; ಸುನಂದ ತನ್ನ ಹೃದಯವನ್ನು ಬೆದಕಿ ನೋಡಿದಳು (ದೂಜಟಿ. ೦೦೫).

[ದೇ.॥ ತೆಲು. ವೆದಕು, ವೆತಕು, ವೆನಕು, ವೆದುಕು, ವೆತುಕು ; ಕುರುಖ್. ಬೆದ್ನಾ ; ಮಾಲ್ತೊ. ಬೆದೆ ]

**ಬೆದಕು₂** (ನಾ). ೧. ಕೆರೆತ ; ಗೀರುವಿಕೆ : "ನಖಘಾತದಲ್ಲಿ ಬೆದಕಕ್ಕು" (ಶಬ್ದಸಂ. ೮೦). ೨. ಅಪೇಕ್ಷೆಯನ್ನು ಅಧಿಕವಮಾಡಿಕೊಳ್ಳುವುದು : ದ್ಯೂತದಲಿ ಮದ್ಯದಲಿ ಘನಕಂಡೂತಿಯಲಿ . . . ದುರ್ನೀತಿಯಲಿ ಪರಸತಿಯರಲಿ ಸಂಪ್ರೀತಿ ಬಲಿವುದು ಬೆದಕ ಬೆದಕಲು ರಾಯ ಕೇಳೆಂದ (ಕುಮಾವ್ಯಾ. ೪-೯೫). [ < ಬೆದಕು₁ ]

**ಬೆದಗತನ** (ನಾ). ಕಾಮುಕತೆ : ಸುದತಿಯನು ಕಂಡೊಡನೆ ಚಿತ್ತವು ಚದುರದಲ್ಲಿಯು ನೆಲಸೆ ಖಲಪತಿ ಬೆದಗತನದಿಂದೌಂಕಿ ಧನುವಿಗೆ ಹೆದೆಯನೇರಿಸುವ (ರಾಮಾಸಂ. ೦-೮-೦೮). [ < ಬೆದೆ + —ತನ ]

**ಬೆದಡು** (ನಾ). (?) : ವೇದೋಕ್ತ ವೀರಶೈವ ಸರಣಿಯಂ ದುಷ್ಕೃತ್ಯ ಮೆಂಬ ಗಿಡು ಬಳ್ಳಿ ಪುಲ್‌ಮರ ಪೊದಱು ಕಲ್ ಮುಳ್ ಬೆದಡುಗಳೊಂದದ ವೋಲ್ ಸುಸರವನಾಗಿಸುತೆ (ಶಬ್ದರಾ. ೪-೨೭). [ ? ]

**ಬೆದಡೆ** (ನಾ). " ಸಂಬಂಧ, ಗೊಡವೆ" (ದೀಕ್ಷಾಕೋ. ಕೋಶ) : ಇದನಱಿದು ಭಜಿಸು ಮದನನ ಮದಹರನ ನೀನು ಕುದಿಯದಿರು ದೈವಗಳ ಬೆದ[ಪಾಠಾಂ. ಗ]ಡೆಯಂ ಬಿಡು ನೀನು (ದೀಕ್ಷಾಬೋ. ೦೦-೮). [ ? ]

**ಬೆದಬೆದ** (ನಾ). ಒಂದು ಅನುಕರಣ ಶಬ್ದ : 'ಬೆದಬೆದನೆ' ಪರಾ.

**ಬೆದಬೆದ ಬೇ, ಬೆದಬೆದಂ ಬೇ, ಬೆದವೆದ ಬೇ** = ಅತಿಯಾಗಿ ನೋಯು, —ಸಂತಾಪಗೊಳ್ಳು : ಗುಱುಗುಮ್ಮೆಂದು ಪಸಿದಿರ್ದು ಬೆದಬೆದ ಬೆಂದಿನಿಬರ್ ಕಟ್ಟಿಕೊಳ್ವ ಕಣಿಯೇಂ ಪೇೞಿಂ (ಆದಿಪು. ೯-೯೦) ; ಬೆದಪೆದ ಬೇಯುತ್ತುಂ ತಪದೊಳ್ ನವೆದು (ಶಾಂತಿಪು. ೮-೦೩೦) ; ನಡುವೆ ರೋಗಗಳಾಗೆ ಬೆದಬೆದಂ [ಪಾಠಾಂ. ಬೆದಬೆದನೆ]ಬೆಂದು (ಬಿಂದೋಕ. ಪ. ೫೦೨-೮) ; ಬೆದಬೆದಂ ಬೇಯ ಬೇಸತ್ತು (ಕಇ. I, ೪೯-೪೩ ; 1423) ; ಎನಿತಂ ಬೆದವೆದ ಬೆಂದಪಯ್ ಯೆನಿತಂ ಸುಡುಸುಡನೆ ಪುಗುವೆಯ್ ಜೀವನೆ . . . ಎನಿತಂ ಭವಗಹನದೊಳಗೆ ಬಟ್ಟನೆ ಬರ್ಪಯ್ (ಅಜಿಪು. ೨-೬೨); ಪಾರ್ವಂ ಮಲ್ಮಲನೆ ಮಱುಗಿ . . . ಬೆದವೆದ ಬೆಂದು (ಸುಕುಮಾ. ೨-೦೦).

**ಬೆದಬೆದನೆ** (ಅ). ಒಂದು ಅನುಕರಣಾವ್ಯಯ ; ಅತಿಯಾಗಿ; ಬಹಳವಾಗಿ : ಪೆದಱಿ ಸಿರಿಯಾಳಂ ಹೃದಯದಲಿ ಬೆದಬೆದನೆ ಕುದಿವುತ್ತ ಶೋಕಂ ಪದುಳಿಸದೆ ತಲೆವಾಗಿ ಲಜ್ಜಿಸಿಯಳಲುತಿರಲು (ಬಸಪು. ೨೨-೬೬) ; ಮದಮತ್ಸರಗಳಿಂದ ಬೆದಬೆದನೆ ಬೆಂದೆನಯ್ಯ (ಸಿದ್ಧೇವ. ೪೫-೦೨೭).

[ಬೆದಬೆದ + — ಅನೆ₁]

**ಬೆದರಟ್ಟು** 'ಬೆದಱಟ್ಟು' ನೋ.

**ಬೆದರಿಕೆ** 'ಬೆದಱಿಕೆ' ನೋ.

**ಬೆದರಿಸು** 'ಬೆದಱಿಸು' ನೋ.

**ಬೆದರು₁** 'ಬೆದಱು₁' ನೋ.

**ಬೆದರು₂** 'ಬೆದಱು₂' ನೋ.

**ಬೆದರುಗಣ್ಣು** 'ಬೆದಱುಗಣ್' ನೋ.

**ಬೆದರುನೋಟ** 'ಬೆದಱುನೋಟ' ನೋ.

**ಬೆದರುಬೊಂಬೆ** (ನಾ). = ಬೆದರ್ಗೊಂಬೆ : ಹೊಲದಲ್ಲಿ ಬೆದರುಬೊಂಬೆ ಇಟ್ಟಿದ್ದಾರೆ (ರೂಢಿ). [ಬೆದರು₂ (< ಬೆದಱು₂) + ಬೊಂಬೆ]

**ಬೆದರ್ಕೆ** 'ಬೆದಱಿಕೆ' ನೋ.

**ಬೆದರ್ಗೊಂಬೆ** (ನಾ). ಹೊಲ ಗದ್ದೆಗಳಲ್ಲಿ ಹಕ್ಕಿಗಳನ್ನು ಹೆದರಿಸಲು, ಹುಲ್ಲು ಮೊದಲಾದುವುಗಳಿಂದ ಮಾಡಿ ಇಡುವ ಆಕೃತಿ : ಬೆದರ್ಗೊಂಬೆಯಂ ಕಂಡು ಹೆದರುವ ಮಕ್ಕಳೋಲಂತೆ (ಶ್ರೀರಾಮಪ. ೬೮೪-೦೬೫).

[< ಬೆದರು₂ + ಗೊಂಬೆ₁]

**ಬೆದರ್ಮಳೆ** (ನಾ). ಹೆದರಿಕೆಯನ್ನು ಹುಟ್ಟಿಸುವ ಮಳೆ ; ಭಾರಿಮಳೆ : ಬೆದರ್ಮಳೆ ಬಿಸಿಲುಮಳೆ ಸರಿಸೋನೆ ಸಿಡಿಲಿನ ಘುಸಣಿಮಳೆಯಲಿ ಘಾಸಿಯಾದುದು ಜಗದ ಜನನಿಕರ (ತೊರರಾ. ೪-೬-೬).

[< ಬೆದಱು₂ + ಮಳೆ (< ಮೞೆ)]

**ಬೆದರ್ಪುಲ್ಲೆ** (ನಾ). ಹೆದರಿದ ಜಿಂಕೆ : ಬೆದರ್ಪುಲ್ಲೆಯನೇಳಿಪ ಬೆಳತಿಗಗಣ್ಬದಿಗೆ ಮೆಱೆಯ ಬಿಂಕಂಗೆಡಿಪಧರಂ (ಜಯನೃ. ೨-೮). [< ಬೆದಱು₂ + ಪುಲ್ಲೆ₁]

**ಬೆದಲ್** 'ಬೆದ್ದಲ್' ನೋ.

**ಬೆದಲು** 'ಬೆದ್ದಲ್' ನೋ.

**ಬೆದವಟ್ಟೆ** (ನಾ). (?) : ಹಡಪಣ ಮೇರೆ ಬೆದವಟ್ಟೆಯ ಹೊಲ (ಕಇಅ. ೭೬-೦೨-೫೭ ; 1170). [ ? ]

**ಬೆದಱಟ್ಟು, ಬೆದರಟ್ಟು** (ಕ್ರಿ). ಹೆದರಿಸಿ ಓಡಿಸು ; ಹೆದರಿ ಹೋಗುವಂತೆ ಬೆನ್ನಟ್ಟು : ಬಾಣಮಂ ಪೊಸಮಸೆಯಂಬಿನಿಂ ಕಡಿದು ಕಟ್ಟಲೆಯಂ ಬೆದಱಟ್ಟಿ (ಶಂರಾಪೂ. ೩-೫೪) ; ಸದಾಶಿವನೆಂಡರೆ ಬೆದಱಟ್ಟಿ ಸುಡುವುದು ಮಾಣ್ಬುದೆ (ಬಸವ. ೬೭೦) ; ವನಾಂತರಾಂತರದ ಕಟ್ಟಲೆಯಂ ಬೆದಱಟ್ಟುತುಂ (ಜಗಪ. ೦೭-೦೦೦). **ಬೆದರಟ್ಟು** : ಆಗ ಕೊಟ್ಟಡಿಯ ಮೇಲುಭಾಗದಲ್ಲಿದ್ದ ಒಂದು ಕಿಟಕಿಯಿಂದ ಕಷ್ಟಪಟ್ಟು ಒಳಗೆ ನುಗ್ಗುತ್ತಲಿರುವ ಬೆಳಕನ್ನು ಒಳಗಿನ ಕತ್ತಲೆಯು ಬೆದರಟ್ಟುತ್ತಲಿರುವಂತೆ ಅವನಿಗೆ ತೋರಿತು (ರಾಜಾಮ. ೬೮).

[ಬೆದಱು₁ + ಅಟ್ಟು₂]

**ಬೆದಱಾಡಿ** (ನಾ). ಭಯದಿಂದ ಮಾತನಾಡುವವನು ; ಹೆದರಿ ನುಡಿಯುವವನು : ಕಮಲಜ ಜ್ಞಾನದೃಷ್ಟಿಲಿ ನೋಡಿ ತನ್ನವನೆಂದಱಿದು ಬೆದಱಾಡಿಗಳ ಸಂತೈಸಿ ಕಳುಹಾತ (ಕೃಷ್ಣಾಕ. ೪-೨೨).

[ಬೆದಱು₂ + — ಆಡಿ₁]

**ಬೆದಱಿಕೆ, ಬೆದರಿಕೆ, ಬೆದರ್ಕೆ** (ನಾ). ೧. ಭಯ ; ಭೀತಿ ; ಅಂಜಿಕೆ : ಹರಹಿದನು ಬೆದಱಿಕೆಯನಹುದೋ ಹಿರಿಯನೈ ನೀನಾತ ಸಾಕ್ಷಾತ್ ಪರಮಪುರುಷನು (ತೊರರಾ. ೩-೭-೪೭). **ಬೆದರಿಕೆ** : ೧. ಆದಷ್ಟುಮಟ್ಟಿಗೆ ಬೆದರಿಕೆಯಲ್ಲಿಟ್ಟು ಗರತಿಯರ ಗುಣನಡತೆ ಕಲಿಸಿದ್ದರೆ ಹೀಗಾಗುತ್ತಿತ್ತೆ (ಮರಳ. ೮೨). ೨. ಹೆದರಿಸುವಿಕೆ : ದಿಟ್ಟರಾದ ಹುಡುಗರು ಹುಚ್ಚನ ಬೆದರಿಕೆಗೆ ಲಕ್ಷ್ಯ ಕೊಡದೆ . . . ಹುರಿಗಳಿಂದ ಕಟ್ಟಲಾರಂಭಿಸಿದರು (ರಾಬಿ. ೨೨). **ಬೆದರ್ಕೆ** : ೧. ಬಳಿಕ ಮನದೊಳ್ಪಳಂಚುವ ಬೆದರ್ಕೆಯಂ ಬಿಟ್ಟು (ಕೈಪಿಡಿ. ೨೭-೦೦).

**ಬೆದರಿಕೆ ಹಾಕು** = ಹೆದರಿಸು ; ಭಯಪಡಿಸು ; ಅಂಜಿಸು : ಸುಳ್ಳೇ

ಬೆದರಿಕೆ ಹಾಕುವುದರಿಂದಲೂ . . . ಬಹಳ ಹಾನಿಯಾಗುವುದು (ಘುಂಬಯು. ೪-೭೩); ಊರಿನ ಗೌಡ ಬಂದು ಬೆದರಿಕೆ ಹಾಕುತ್ತಾನೆ (ರರ್ಮಸಾ. ೬೪).
[ಬೆದಱು₂ + — ಇಕೆ. / ತುಳು. ಬೆದರಿಕೆ]

**ಬೆದಱಿಸು**, ಬೆದರಿಸು (ಕ್ರಿ). ೧. ಭಯಪಡಿಸು; ಅಂಜಿಸು: ವಾದಿನಗವಾದಿಗಜ ಪರವಾದಿತಮಸ್ತಮಮನೊಡೆವ ಬಿಡೆ ಬೆದಱಿಪ ನಿರ್ಭೇದಿಪೆಡೆ ಗಜನ ಹರಿ ದಿನಪೋದಯಮೆನಿಸಿದುದು ವಿದ್ಯೆಯೊಂದುರ್ಕವರಾ (ಅಂಕೃ. ೩-೭೩); ಮುದುಡಿಸುತಂ ಕೈರವಮಂ ಬೆದಱಿಸುತುಂ ಕೌಶಿಕಂಗಳಂ . . . ಮೂಡಿದನರ್ಕಂ (ಗಂಕ. ೩-೮); ಪೇರೊಡಲ ತೋಱಿಸಿ ಬಲವ ಬೆದಱಿಸಲಗ್ಗಳಿಕೆಯಹುದೇ (ಕುವ್ಯಾದ್ರೋ. ೦೩-೩೩). ೨. ಬೆದರಿಸು; ಹಾರಿಸು: ಜಿನಮುನಿದಾನಮೆಂಬ ಗಾಳಿಯಿಂ ಲೋಭಮೆಂಬ ಮುಗಿಲಂ ಬೆದಱಿಸದೆ (ರಡೋಕ್ಸು. ೭-೯೭); ಮಾಗಧನಾಯುಸ್ತಮಮಂ ಬೇಗಂ ಬೆದಱಿಪ ಓಮಾಂಶುರುಚಿಗಳವೆನಲಂತವಗಳೆ ದಶನೇಂದುದ್ಯುತಿಯಾಗಲೆ ಸಭೆಯೊಳಗೆ ಕೃಷ್ಣನಪರ್ಗಿಂತೆರೆದಂ (ನೇಮಿಪು. ೧೦-೧೦೭). **ಬೆದರಿಸು**: ೧. ಘುಡುಘುಡಿಸಿ ಮಾರುತಾತ್ಮಜನ ಬೆದರಿಸಿದಳೇನೆಂಬೆ (ವೆಂಕಾರಾ. ೩-೩-೩); ಮತ್ತೊಂದು ತೋಳವು ಬೆದರಿಸುತ್ತಾ ಬೊಗಳುತ್ತಾ ನಿಂತಿತು (ಕೆಂಗಾಳ್ಕ. ೯೪); ಪ್ರತಾಪಕುಮಾರಿಯು ನನ್ನ ಮೇಲೆ ಕೈಮಾಡುತ್ತೀನೆಂದು ಬೆದರಿಸಿ ಹೋಗಿದ್ದಾಳೆ (ಅರ್ಯಕ. ೨೩). [ಬೆದಱು₁ + — ಇಸು₁]

**ಬೆದಱು₁**, ಬೆದರು₁ (ಕ್ರಿ). ೧. ಭಯದ ಸೂಚನೆಯನ್ನು ಕಾಣು,— ತಿಳಿ: "ಬೆದಱು—ವ್ಯಸ್ತೇ" (ಶಮಧಾ); ಪದ್ದೆಗನ ಕೋಣೆಯು ಗಂಗನ ಬೊತ್ತಮೆಲ್ಲಮಂ ಬೆದಱುವಿಸಂ ತೆರಳ್ಚಿ (ಎಕ. II, ೦೩೮-೧೦; 940); ಪಿಂಗಳಕನಪ್ಪೊಡೆ ಮತ್ತಮಾತಂಗಯೂಥಮಂ ಬೆದಱಿ ಬೆಂಕೊಂಡು ಕೊಲ್ವ ಸಿಂಗದ (ಪಂತತಂ. ೦೯೯-೨೦); ಬೆಚ್ಚಿ ಬೆದಱುವ ಸೇನೆಗಭಯವ ಹಚ್ಚಿಕೊಟ್ಟನು (ಕುವ್ಯಾಭೀ. ೩-೯೩). ೨. ಭಯಪಡುವಂತೆ ಮಾಡು; ಹೆದರಿಸು: ಹರಿಪೋತಮಂ ಬೆದಱುತಂ ಕರಿಪೋತಮಪುಂಡುಗರ್ಚಿ ಕೇಸರಿಣಿಯು ಕೆಚ್ಚಲಂ ತುಡುಕುತುಂ ಪರಿದತ್ತು (ಪಂಪಭಾ. ೭-೬೦). ೩. ಒಂದ ಕ್ಕೊಂದು ದೂರವಾಗು: ಉಱಿಯ ತೆಱದಿರ್ಕೆಲದೊಳ್ ಮೂಡಿ ಬೆದಱಿರ್ದ ಮೊಲೆಗಳ್ ಮಾಡುಗು ಮನದಟಲನಶುಭಮಂ ದುಃಖಮುಮಂ (ಅಕ್ಕಸ. ೦-೯೦). **ಬೆದರು₁**: ೧. ಪೇರಾಳ್ಕೆವರೆ ಪೆತ್ತಣೆ ಸತ್ಯಾಂಕನ್ ಅಟ್ಟುರ್ವ ಭಟನ್ ಬೆದರೆ ಮಹೇಂದ್ರನ್ (ಪ್ರಕಂ. ೦೯೨೩, ೭೨-೨; 7ನೆಯ ೮೫); ಬೆದರಿದನಗಸ್ತ್ಯಂ (ವೆಂಕಾರಾ. ೩-೦-೨೩); ಕರಮಿರದೆ ಬೆದರುತ್ತೆ ಸಂತಸವ ನಾನುತ್ತೆ (ಮಹಾಪಿ. ೪-೩೩); ಮನೆ ಬಿಟ್ಟು ಹೊರಗೆ ಹಣುಕಿ ಹಾಸಲು ಬೆದರುತ್ತಿದ್ದಳು (ಬೀಶಹ. II, ೦೪೦).
[ದ್ರಾ.॥ ತಮಿ. ವಿತಱು, ವಿಶಿರ್, ವೆತಿರ್; ಮಲ. ವಿತುಕ್ಕು; ತುಳು. ಬೆದರು; ತೆಲು. ಬೆದರು, ಬೆದುರು]

**ಬೆದಱು₂**, ಬೆದರು₂ (ನಾ). ೧. ಭಯ; ಅಂಜಿಕೆ: ಬೆದಱಂ [ಕೆದಱಂ] ಪೆರ್ಚುರ್ಗಂ ಕುಂದುಮನಱಿದು (ಪಂಪಭಾ. ೩-೪೩ ವ); ಪದುಳದಿಂದೀ ಮನದ ಬೆದಱ ಮಾಣಿಸು ಸ್ವಾಮಿ (ಬೀಚ್ಯಾಸೋ. ೦೦೩-೮); ಬೆದಱು ತವನಿಧಿಯಾಯ್ತು ಪಟುಭಟರೆದೆಗಳಬ್ಬಿಗಿಯಾಯ್ತು (ಕುವ್ಯಾಭೀ. ೦೦-೦೩); ಕನಸು ಕಳವಳ ಬೆದಱು ಭ್ರಮೆ . . . ಸಂತೋಷ ಇನಿತು ಸಂಧಿಸಿದವನಿಪನ ಕಂಡು (ತೊರಂರಾ. ೩-೦೦-೪೩). ೨.=ಬೆದರ್ಗೊಂಬೆ: ಕೆಯಿಗೆ ಬೆಚ್ಚು ಬೆದಱ ಇಟ್ಟುವಲ್ಲಿ ಆ ಲಿಪ್ಪಕ್ಕೆ ಇಷ್ಟಲಿಂಗ ರುದ್ರಾಕ್ಷಿ ಭಸಿತ ಪಟ್ಟೆ ಕಟ್ಟಿ ಎನ್ನ ಕಿಯ್ಯ ತಪ್ಪಲಲ್ಲಿ ಕಾಪ್ಪುವ ನೆಟ್ಟು ಕಟ್ಟಿದ ಮತ್ತೆ ವಿಹಂಗಕುಲ ವ್ಯಾಗಜಾತಿ ಮುಟ್ಟಲಿಲ್ಲ (ಏಕೀಕ್ಕ. ೦೬೮). **ಬೆದರು₂**: ೧. ಮದಸಪಿತ ದಯವಿರಲು ಬೆದರುಯನ್ನೇಕೆ (ಹಮತ. ೩೮); ಬೆದರಂ ಪಾಣ್ಣೆದಂ ನಂಬು (ಗೀಟಂ. ೦೨೦-೩೩). ೨. ಹಳ್ಳಿಯ ಹೆಣ್ಣು ಗಂಡುಗಳೂ ನೀಲವ್ವನ ಕಣ್ಣಿಗೆ ಹೊಲದಲ್ಲಿಯ 'ಬೆದರು' ನಂತೆ ಜೀವವಿದ್ದು ಹೋದಾದಂತೆ ಆಕೆಗೆ ಭಾಸವಾಯಿತು (ಬರಚಾ. ೦೨೪); ರೋಗವೆಳೆದರೆ ಭಾವದಾವೇಶವಾದರೂ ಮಾತೆಂಬುದೆಂದಿಗೂ ಅರ್ಥರೂಪದ ಬೆದರು (ಅರಳು. ೦೨೦_೩); ಒಕ್ಕಲಿಗರು ತಮ್ಮ ಬೆಳೆಗಳ ರಕ್ಷಣೆಗಾಗಿ ಹೊಲಗಳಲ್ಲಿ 'ಬೆದರು' ಎಂದು ಒಂದು ಕೋಲಿಗೆ ಗಡಿಗೆಯೊಂದನ್ನು ನೇತುಹಾಕಿ ಅದಕ್ಕೆ ಸುಣ್ಣ ಬರೆಯುತ್ತಾರೆ (ಜಕ. ೦೨). ೩. ಹೆದರಿಸುವಿಕೆ: ಬಡಿಗೆಯ ಬೆದರು ಕಂಡು ಕಣ್ತೆರೆದ ಹಕ್ಕಿ ಹಾರಿ ಹೋಗಬಹುದು; ಕಣ್ಣು ಮುಚ್ಚಿಕೊಂಡು ಬೆಕ್ಕು ಹೋಗಬಹುದೇ? (ಶಿಂಶ. ೦೭೩).
[< ಬೆದಱು₁. / ತಮಿ. ವೆತಿರ್, ವಿತಱು; ತುಳು. ಬೆದರ್; ತೆಲು. ಬೆದರು]

**ಬೆದಱುಗಂಟೆ** (ನಾ). ಬೆದರುವ ಹಸು,–ದನ: ಬೆದರ್ಗ್ಗಂಟೆ, ಬೆದಱುಗಂಟೆ (ಕಟ್ಟಾನು. ೯೩ ಕ್ರಿಯೋ). [ಬೆದಱು₁ + ಗಂಟೆ₁]

**ಬೆದಱುಗಣ್**, ಬೆದರುಗಣ್ಣು, ಬೆದಱುಗಣ್ಣು (ನಾ). ಭಯಭೀತವಾದ ಕಣ್ಣು; ಅಂಜಿಕೆಯನ್ನು ಸೂಚಿಸುವ ಕಣ್ಣು: ಬೆದಱುಗಂಗಳ ಬಟ್ಟ ಮುಂಡೆಯು . . . ವರಸುದತಿ ಬಂದಳು ರಾಜಸಭೆಗೆ (ಕುವ್ಯಾಸ. ೦೪-೭೦). **ಬೆದರುಗಣ್ಣು**: ಭೂಮಿಸುತೆ ಬೆದರುಗಣ್ಣಿಂ ನೋಡಿದಳು ಜಲನಿಧಿಯ (ಶ್ರೀರಾಪಮ. ೬೬೮-೦೬); ಮಕ್ಕಳು ಅಳುಕಿ ನಿಂತು ಬೆದರುಗಣ್ಣಾಗಿ . . . ನೋಡುತ್ತಿದ್ದರು (ಪುಸರು. ೩). **ಬೆದಱುಗಣ್ಣು**: ಬೆದಱುಗಣ್ಣ ಬೆಳುವನಂತೆ ನಿನ್ನಟಲ್ಗಟಲ್ವೆ ನಾನ್ (ಅಕ್ಕಸಾ. ೭-೦೩೦).
[ಬೆದಱು₁ + ಕಣ್ಣು (< ಕಣ್)]

**ಬೆದಱುಗಣ್ಣು** 'ಬೆದಱುಗಣ್' ನೋ.

**ಬೆದಱುಗಾಗೆ** (ನಾ). ಹೆದರಿದ ಕಾಗೆ: ಬೆದರುಗಾಗೆಯ ನೋಟ ಸಾಳುವ ನೊದೆವು ಮಿಾಂಗಳ ಝಳಕೆ ಕೇಸರಿಯದಟು . . . ಒಪ್ಪಿದವರ ಯುದ್ಧದಲಿ (ಜಾಕ್ಕಭಾ. ೨೨-೭೦). [ಬೆದಱು₁ + ಕಾಗೆ]

**ಬೆದಱುನೋಟ**, ಬೆದರುನೋಟ (ನಾ). ೧. ಹೆದರಿಸುವ ನೋಟ: ಕೆದಱುದಲೆ ಕೆಮ್ಮಿಾಸೆ ಕಿಸುಗಣು ಬೆದಱುನೋಟವು . . . ಖಡೆಯ ಪೊಡೆಯುದೊಡವಿನಿಂ . . . ಬಲವಿಡಿದಿಹರು ಬೀಯದರು (ಸಾಕ್ಕಭಾ. ೩-೩). **ಬೆದರುನೋಟ**: ೨. ಭಯ ತುಂಬಿದ ದೃಷ್ಟಿ: ಬೆದರುನೋಟದ ವಿದ್ಯಾರ್ಥಿಯೊಬ್ಬ ಆ ಮುದುಕನ ಕಡೆಗೆ ದುರುಗುಟ್ಟಿಕೊಂಡು ನೋಡುತ್ತಿದ್ದನು (ಪುಸರು. ೨೩೭). [ಬೆದಱು₁ + ನೋಟ]

**ಬೆದಱುಮಾತು** (ನಾ). ಹೆದರಿಕೆಯ ಮಾತು; ಭಯದ ನುಡಿ: ನೆಗಪಿ ಝಳಪಿಸಿ ಉಳಿವಡೆಯುಲಿಗುಳಿದುದು ಬಲುಗಿಡಿಗಳನು ನಿದ್ರೆಗಳ ನಿಬಿಡಸ್ತನೆಯರೆದ್ದುದು ಬೆದಱುಮಾತಿನಲಿ (ತೊರಂರಾ. ೩-೨-೯೩).
[ಬೆದಱು₂ + ಮಾತು₁]

**ಬೆದಿಕೆರೆ** (ನಾ). ಒಂದು ಕೆರೆಯ ಹೆಸರು: ತೆಂಕಾಯ್ತುಲೆಮೊಜಡೆ ಬೆದಿಕೆರೆಯ ಮೊದಳೆಮುಡುವೆ (ಪ್ರಕಂ. ೦೪೨೭, ೦೦೬-೪೭; 726).
[ ? + ಕೆರೆ₂ ( <ಕೆಱೆ³) ]

**ಬೆದಿರೂರ್** (ನಾ). ಒಂದು ಊರಿನ ಹೆಸರು: ಹೊದಳವಿಷಯೇ ಬೆದಿರೂರ್ ಮುಯಾದತ್ತಮ್ (ಪ್ರಕಂ. ೦೯೨೩, ೦೦೩-೩೮: 634).
[ ? + ಊರ್ ]

**ಬೆದೆ** (ನಾ). ೧. ಬೀಜ ಬಿತ್ತುವುದು: ಬಿತ್ತನೆ: (೩). ೨. ಬೀಜ ಬಿತ್ತಲು ಯೋಗ್ಯವಾದ, ಮಳೆ ಬಿದ್ದ, ಭೂಮಿಯ ಹದ: ಬೀಜವಿರೆ ಬಿತ್ತರೆ ಪೇಟ್ ಬೆದೆ[ಪಾಠಾಂ. ಳೆ]ಯಾದ ಭೂಮಿಯೊಳ್ (ನೇಮಿಪು. ೦೨-೩೦); ಬೆದೆ ಬಂದ ಕಾಲದಲ್ಲಿ ಬೇಲಿಯಲ್ಲಿ ಚಲ್ಲಿದರೂ ಬೆಳೆಯುತ್ತದೆ(ಕೃಷಿಪ್ರ. ೦೬೩); ಬೆದೆಯರಿತು ಹದಮಾಡು ಹೃದಯದಿ ಹೊಲವನ್ನು (ಹಾವರ್ಷ. ೦೩-೦); ಬೆದೆ ನೋಡಿ ಬಿತ್ತು, ಹದ ನೋಡಿ ಹರಗು (ಗಾದೆ). ೩. ಬೀಜ ಬಿತ್ತಲು ಯೋಗ್ಯವಾದ ಹದವಿರುವ ಭೂಮಿ; ಬಿತ್ತನೆಗೆ ಹದ

ವಾದ ಭೂಮಿ : ಪನ್ನಿರ್ಕ್ಖಣ್ಡು ಬೆದೆನೆಲ್ಲುಮೈನ್ನೂರು (ಇಳ. V, ೧೬೭–೦೯; ೬೬೪); ಮಾಣ್ಣೆಂಬೆರ್ಖಣ್ಡುಗಂ ಬೆದೆ ಉತ್ತಮ ಕ್ಷೇತ್ರಂ (ಎಳ. IX (S), ಶಿಂಗಳೂ. ೦೩೦–೬೨; 828); ಇಕ್ಕುಳದ ಬೆದೆ ಕಾಚೆಗೌಡಿಯ ಪೊಲಯ್ಯಪುರ ಬಯಲಲು ಕೊಟ ಗದೆ (ಎಳ. VI. ಶಿಕ್ಕಮ. ೩೦–೨೭; ?). ೪. ಪಕ್ವತೆ; ಯೋಗ್ಯವಾದ ಸ್ಥಿತಿ : ಆಕಾಶಗಂಗಾತಟಾಕತೇಜಃಪುಂಜದಲ್ಲಿ ಒಳಗಿನ ಬೆದೆಗೆ ಚುಕ್ಕಿ ಹೊಳೆವಂತೆ (ಅರಳು. ೯೬–೯). ೫. ನಸೆ ; ಕಾಮೋದ್ರೇಕ : ಬೆದೆ ಬೇಟದೊಳು ಮೆರ್ಚ್ ಪೆಂಪುಗೊಂಡುರ್ಬಿ (ಗೀತಗೋ. ೩೨–೦); ಬೆದೆ ಯನು ಹೆಚ್ಚಿಸಿ ಬೇಗಾ ಪದಗುವ ಕೂಟಕ್ಕೆ ವಳಗಾಗಬೇಡೆಂಬ ಮುದಿ ಸೂಳೆಯರ ನೋಡಿದನು (ತಿಗಂಶ. ೩–೯೬); ದನ ಸಿಂಗ ಹುಲಿ ಹಕ್ಕಿ ಹಾವು ಮಾನ್‌ಗಳಿಗೆಲ್ಲ ಇನಿಸುಣಿಸು, ಬೆದೆ ಬೆದರು–ಅಷ್ಟೆ ಜೀವಿತವು (ಪಾಂಕಾಶ. ೩೯೯).

**ಬೆದೆಬೆದೆಗೊಳಿಸು** = ಕಾಮೋದ್ರೇಕಕ್ಕೊಳಗಾಗುವಂತೆ ಮಾಡು : ಮುದುಕಿಮುದುಕರೊಮ್ಮೆ ಹೊಕ್ಕರಾ ಮನೆಗಳು ಬೆದೆಬೆದೆಗೊಳಿಸಿ ಕಾಡುವುವು (ಶರಕ. ೦೩–೩೦). **ಬೆದೆಬೆದೆಗೊಳು**=ಕಾಮೋದ್ರೇಕವನ್ನು ಹೊಂದು : ಬೆದೆಬೆದೆಗೊಳುತಿರ್ದರಬಲೆಯರೆಂದಿಗೆ ಮದುವೆಯಹುದೊ ನಮಗೆಂದು (ಶರಕ. ೩೭–೨೪). **ಬೆದೆ ಮಾಡು**=ಹದಗೊಳಿಸು; ಹಸನು ಮಾಡು : ಕರುಧರೆಯಂ ನಿಜೋಗ್ರಗದೆಯೇರ್ಗಳಿನುಬ್ಬಿ ಸಮಸ್ತವೈರಿಭೂಪರ ರುಧಿರಾಂಬುವಿಂದೆ ಬೆದೆ ಮಾಡಿ . . . ಸಿತ[ಕೀರ್ತಿ]ಯೆಂಬ ಬೆಳಸಂ ಬೆಳೆದಂ (ಗದಾಯು. ೦೦–೯); ನಿಮ್ಮ ಹೃದಯವನ್ನು ಬೆದೆ ಮಾಡಿದ್ದೇನೆ (ಗುರುಕ. ೦೬). **ಬೆದೆಯಾಗು** = ಕಾಮೋದ್ರೇಕ ಉಂಟಾಗು : ಆಡಿನ ಬುಟಿಗೊಳ್ ಬಂದುದು ಪೋಂತಿನ ರೂಪು ಬಳೆ ಬಟಿಕ ಮದನೋಸ್ಮತ್ತಂ ಬೆದೆಯಾದ ತಾಯನೇಱಿದುವದರಿಸೊರ್ಕಿದ ಗೂಳಿ ತಾಯನೇಱಿತ್ತೆಂಬಂದದೆ (ಮುಕೋಶ. ೩–೩೪). [ದೇ.॥ ಮಲ. ವಿದ; ತುಳು. ಬಿತ್ತ್; ತೆಲು. ವದ]

**ಬೆದೆಕಾಜಿ** 'ಬೆದೆಗಾಜಿ' ನೋ.

**ಬೆದೆಗದ್ದೆ** 'ಬೆದೆಗಟ್ಟಿ' ನೋ.

**ಬೆದೆಗಟ್ಟಿ**, ಬೆದೆಗದ್ದೆ (ನಾ). ಸಾಗುವಳಿ ಮಾಡಲು ಹದವಾದ ಗದ್ದೆ : ಪದಿನಯ್ದು ಕೊಳಗ ಬೆದೆಗಟ್ಟಿ (ಎಳ. III (R), ಹೆಗ್ಗಡ. ೩೮–೦೬; 1021); ಕಲಂಕುಟಿಕ ಮಾಣಿಕಾಚಾರಿಗೆ ಐಗುಳಗ ಬೆದೆಗಟ್ಟಿಯು ಬೆಟ್ಟಿಲೆ ಮತ್ತರು ಎರಡು (ತಿಾರ್ಟ. IX-i, ೦೦೨–೨೬; 1053). **ಬೆದೆಗದ್ದೆ** : ಶ್ರೀಯೂರ ಚಾಮುಣ್ಡಯ್ಯನ ಭೂಮಿಯಲು ಪತ್ತುಕೊಳಗ ಬೆದೆಗದ್ದೆಯುಂ . . . ಈಶಾನ ಈಶ್ವರದಮುಡಿಯಾರ್ಗ್ಗೆ ಕೊಟ್ಟುದು (ಮೈಅಂ. ೦೯೯೬, ೨೮–೦೨; 1032); ಧಾರಾಪೂರ್ವ್ವಕಂ ಮಾಡಿ ಬಿಟ್ಟ ಎರಡು ಸಲಗೆಯ ಬೆದೆಗದ್ದೆ (ಮೈಅಂ. ೦೯೪೯, ೯೩–೦೨; 1189). [ಬೆದೆ + ಗಟ್ಟಿ]

**ಬೆದೆಗಾತಿ** (ನಾ).=ಬೆದೆಗಾರ್ತಿ ೨ : ತಳವಾಱಿಂದೆ ಬಂದರೆಂದು ಕಾತರಿಸಿ ಬೆದೆಗಾತಿಯರನು ಬಟ್ಟಗಲುವ ವಿಟರುಗಳಿದೆಗೇಡನೇನ ಬಣ್ಣಿಸುವೆ (ಮೋಹತ. ೦೬–೨೩). [ಬೆದೆ + — ಆತಿ₅]

**ಬೆದೆಗಾರ್ತಿ** (ನಾ). ೧. ಕಾಮೋದ್ರೇಕವುಳ್ಳವಳು. ೨. ಹಾದರಗಿತ್ತಿ ; ಜಾರೆ : "ಸಿತ್ತಗೆ, ಜೋಡೆ, ಪಾಣ್ಬೆ, ಬೆದೆಗಾರ್ತಿ—ಈ ೪ ಜಾರೆಗೆ ಪೆಸರ್" (ಶಶಾ. ೬೨–೩೪೬). ೩. ನಲ್ಲೆ ; ಪ್ರೇಯಸಿ : ಬೆಳ್ವಟ್ಟೆಯಂ ಪೊದೆ ದೊಡಲಿಟ್ಟಂ ತನ್ನ ಬೆದೆಗಾರ್ತಿಯ ಚೂಳಿಯ ಸಿಂಗರಕ್ಕೆಂದು ಸಮೆದು ಬೈತಿಟ್ಟ ಕುಂದಣದ ಗೊಂಡೆಯೆನೆ (ರಾಜಶಕ್ಕ. ೦೦೦–೨೬).

[ಬೆದೆಗಾಜಿ + — ತಿ₁ (< — ಆತ್ತಿ)]

**ಬೆದೆಗಾಲ** (ನಾ). ೧. ಬೀಜ ಬಿತ್ತಲು ಹದವಾದ ಕಾಲ : ನಿನ್ನ ಭೂಮಿಯೊಳ್ ಬೀಜಮಂ ಬಿತ್ತಿದೊಡೆ ಬೆಳೆ ಬಾಳ್ಕೆಗೆ ಕದನಕ್ಕೆದುವ ವೇಳೆ ಯಲ್ಲೆನಲವಂ ಮುಂದೆ ಬೆದೆಗಾಲವುಂಟೆಂದೊಡೆ (ಕೈಪಿಚಾ. ೦೦–೦೯). ೨. ಕಾಮೋದ್ರೇಕವಾದ ಕಾಲ : ಬೆದೆಗಾಲ-ಬೆದೆಯ ಕಾಲವನ್ನು ಬಳ್ಳಿ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು (ಗೋಗ್ರಾಸ. ೨೩); ಬೆದೆಗಾಲದ ಹದ್ಮೈಸಿಕೆಯೊಳಗೆ ಪೆರ್ಬಯದಂಬಾಸಂರುತಿಯೊಳಗೆ ತನ್ನ ಹೊರಗಿರುವ ಜೀವದ ನೆರವ ಆತ್ಮಸ್ವಾಸ್ಥ್ಯಕೆ ಯಾಚಿಸುತಿರುವ ಪರಿಯಿಲ್ಲ (ಗಣೇಶ. ೬೬–೩).

[ಬೆದೆ + ಕಾಲ]

**ಬೆದೆಗಾಜಿ**, **ಬೆದೆಕಾಜಿ** (ನಾ). ೧. ಕಾಮಾತುರತೆಯುಳ್ಳವನು. ೨. ಕಾಮುಕ ; ವಿಟ : 'ಬೆದೆಗಾರ್ತಿ' ಪರಾ. **ಬೆದೆಕಾಜಿ** : ೧. ಬೆದೆಕಾಜಿ ರೆರ್ದಯಂತೆ ಬೇಯುತಿರ್ದ ಪೆಣಂಗಳಿಂ (ಕಾವ್ಯಸಾ. ೩೭೯ ಶಾಪ್ರೆ).

[ಬೆದೆ + — ಕಾಜಿ]

**ಬೆದೆಗುದಿ** (ನಾ). ಸಂತಾಪ ; ಕ್ಲೇಶ ; ಬೇಗುದಿ : ಘೂ ನರರ ಬೆದೆ ಗುದಿಗೆ ಷಂಡಗಂಡಸುತನಕೆ (ಕೃಶಾಳು. ೨–೨೪). [ಬೆದೆ + ಕುದಿ₃]

**ಬೆದೆಗುದಿಗೊಳ್** (ಕ್ರಿ). ಸಂತಾಪಗೊಳ್ಳು ; ಕ್ಲೇಶಪಡು : ಭವದ ಬೆದೆ ಗುದಿಗೊಂಬ ಜೀವಜಾಲಂಗಳಿಗೆ ಶಿವವಿನಾಯಬೇಕೆಂಬುದೇ ಶಂಭುಚಿತ್ತ ದೊಳ್ ಪ್ರಣವಭ್ಯಾಗಿಹುದು (ಶತುಪು. ೬–೬–೦೨೦). [ಬೆದೆಗುದಿ + ಕೊಳ್₁]

**ಬೆದೆಗೂಡಿಸು** (ಕ್ರಿ). ಬೀಜ ಬಿತ್ತಲು ಭೂಮಿಯನ್ನು ಹದವಾಗಿಸು : ಅಂಬಿನ ಮಟಿ ರಕ್ತವಾರಿ ಬೆದೆಗೂಡಿಸೆ ಸಾಲಿಡೆ ಪೆರ್ಬಣಂ ರಣಾವನಿಕ್ಷಳ ಮಿರ್ದುದಂಕುರಿತಮಾದವೊಲೊಕ್ಕ ಕರುಳ್ವಿಣಿಲ್ಗಳಿಂ (ಪಂಪಭಾ. ೦೩–೯೯).

[ಬೆದೆ + ಕೂಡಿಸು]

**ಬೆದೆಗೂಡು** (ಕ್ರಿ). ಬೀಜ ಬಿತ್ತಲು ಹದವಾಗು,—ಯೋಗ್ಯವಾಗು : ಪಾಯ್ದೊಡೆ ಕೋಡಸೂಜ ನಡೆ ಬಿಟ್ಟ ಪುದೇಭದ ದಂತದಿಂ ಧರಂಗೆಯ್ದುಡೆ ಯುಬ್ಬಿ ಕಾಡನರುಣಾಂಬುಗಳಿಂ ಬೆದೆಗೂಡಿ ತಾಯ್ದೆನಲ್ಕೆಯ್ದಿರಲೆಂದು ಬಿತ್ತಿದುದದೊಂದು ಮೃಗಾರಿ ತದುತ್ತಮಾಂಗದಿಂ ಸಯ್ಯನೆ ಸೋರ್ವ ಮುತ್ತುಗಳೆ ಬಿತ್ತುಗಳಾಗಿರೆ ತನ್ನ ಬೀರಮಂ (ಕುಕೃಪು. ೫–೭೬).

[ಬೆದೆ + ಕೂಡು₁]

**ಬೆದೆಬೆದೆ** (ನಾ). ಒಂದು ಅನುಕರಣ ಶಬ್ದ.

**ಬೆದೆಬೆದೆ ಬೇ**=ಅತಿಯಾಗಿ ನೋಯು ; ಬಹಳ ಸಂತಾಪ ಪಡು : ಮಗನಿಲ್ಲದರ್ಥಪತಿಯಂತೆ ಬೆದೆಬೆದೆ ಬೇಯುತ್ತುಂ (ಶರ್ಮನ್ನು. ೦–೦೪೪); ಬೆದೆಬೆದೆ ಬೆಂದು ಬಾಯೆಡೆಗಳಂ ಬಸುಱಂ ಬಿಡೆ ಕೊಯ್ದುಕೊಂಡು (ಪುಣ್ಯಾಸ್ರ. ೬–೪೦); ನೊಂದು ಮನದಲಿ ಪಾರ್ಥನಾ ಸತಿಯಂದವನು ಕಾಣುತ್ತ ಬೆದೆಬೆದೆ ಬೆಂದು ಯಮರಾಜನ ಕುಮಾರನ ಮೊಗವ ನೋಡಿದನು (ಕುಪ್ರಾದ್ರೋ. ೬–೦೭).

**ಬೆದೆಮಣ್** (ನಾ). ಬೀಜ ಬಿತ್ತಲು ಯೋಗ್ಯವಾದ ಹದವಿರುವ ಭೂಮಿ ; ಬಿತ್ತನೆ ನೆಲ: ನಾಲ್ಗಣ್ಡುಗದ ಬೆದೆಮಣ್ಣನ್ ಕಾಣ್ಡನ್ನ ಗೋತ್ರದ ದೇವದತ್ತಗ್ಗೆ ಇತ್ತಾರ್ (ಎಳ. XVI, ಶಾಪಗ. ೬೦–೨; 754); ಶ್ರೀ ಜನ್ನ ಕಲ್ಲ ನಿಜಿಸಿ ಪನ್ನಿರ್ಕ್ಖಣ್ಡುಗ ಬೆದೆಮಣ್ಣೊಟ್ಟಾರ್ (ಮೈಅಂ. ೦೯೯೯, ೬–೩; 808); ಕುಪ್ಪಂ ಮಣಲಿಯುಂಳ್ ಅಯ್ಗುಳ ಬೆದೆಮಣ್ಣು ಇದನಿಟ್ಟ ಸುವಗೆ ಸಲ್ಲದು (ಮೈಅಂ. ೦೯೯೬, ೦೫–೨೩; 897). [ಬೆದೆ + ಮಣ್]

**ಬೆದೆಮತ್ತಲು** (ನಾ). ಬಿತ್ತನೆಗೆ ಹದವಾಗಿರುವ ಭೂಮಿ : ಕೋಸಿಗರಾ ಜಯಮೆಲ್ಲ ಎಪ್ಪೋನ್ ಗೋಸಾಸಿಮದಾರುಂ ಬೆದೆಮತ್ತಲುಂ ಪದಲ್ದಾ ನಮುಂ ಕೊಟ್ಟೋನ್ (ಎಳ. VIII, ಸೊರಬ. ೯೦–೩; 910).

[ಬೆದೆ+ಮತ್ತಲು (<ಮತ್ತರ್)]

**ಬೆದೆಮೆಟ್ಟೆ** (ನಾ). ಒಂದು ಊರಿನ ಹೆಸರು : ಸಿಮ್ಮನೂರ ಕಿಳ್ಳಮ್ಮನ್ ಆಣ್ಡುಗಿಯ ರಟ್ಟಗನ್ ಬೆದೆಮೆಟ್ಟೆಯಾಲಮ್ಮಾನ್ ಬಳ್ಗಿಗ್ಗಮಯ ಗಾಮುಣ್ಡನ್ (ಎಳ. VIII, ಸೊರಬ. ೦೦–೦೩; 800). [ ? ]

**ಬೆದೆಯಾಕಳ್** (ನಾ). ಕಾಮೋದ್ರೇಕಗೊಂಡಿರುವ ಹಸು ; ಬಾರಿ ಬಂದಿರುವ ಆಕಳು : "ಪ್ರಚಂಡಯೆನೆ ಬೆದೆಯಾಕಳ್" (ಪಂಗಣಾ. ೫೩–೩).

[ಬೆದೆ + ಆಕಳ್]

**ಬೆದೆಯಾವು** (ನಾ). = ಬೆದೆಯಾಕಳ್ : "ಆಚಂಡೀ, ಸುರತಾ—ಈ ೨ ಬೆದೆಯಾವು" (ಹಲಾಯು. ೯೩-೦೦೬). [ ಬೆದೆ + ಆವು ]

**ಬೆದೆವಡೆ** (ಕ್ರಿ). ೧. ಬಿತ್ತನೆಗೆ ಯೋಗ್ಯವಾಗು : ನಾಳೆ ಬಿತ್ತುವ ಬೆದೆವಡೆದ ಕೆಯಿ ಹಾಳಹುದು (ಜನಪ. ೬೦-೦೭). ೨. ಉತ್ಸಾಹಗೊಳ್ಳು : ಕೋರೇರು ನೇದಾರೊ ಕೊಡಪಾಕ್ಕ ನೂತಾರೊ ಬೆಳ್ಳಿಕಡ್ಡಿಲಿ ಬೆದೆವಡೆದು ನೇದಾರೋ ಸ್ವಾಮಿ ರೇವಯ್ಯ ಖುಷಿ ಕಂತೆ (ಹಳ್ಳಿಹಾ. ೪೮).
[ ಬೆದೆ + ಪಡೆ₁ ]

**ಬೆದೆವಾವು** (ನಾ). ತಳುಕು ಹಾಕಿಕೊಂಡಿರುವ ಹಾವು ; ಎಣೆಹಾವು : ತವಕದಿನಪ್ಪಿ ತಲ್ಲಣವೆ ಚುಂಬಿಸಿ ನಿಲ್ಲದೆ ಕೂಡಿ ತೋಡಗಲ್ವುವ ದಿವಸಾವಸಾನ ಸಮಯಕ್ಕೆ ಕನಲ್ದುರಿದೇಟ್ಟ ಸಂಜೆ ಪೊತ್ತುವ ತಮವಾತ್ರಮಿತ್ರ ಮಳಿದರ್ತ್ತಲೆ ಪೊರ್ದಿದ ಪೋಟಲೊಳ್ ಮಿಡುಂಕುವ ಬೆದೆವಾವಿ [ಪಾಠಾಂ. ಬೆಣೆವಾವಿ, ಬೆಳುಗಾವಿ] ನಂತಗಲಲಾಜಿದಗಲ್ದುವು ಜಕ್ಕವಕ್ಕಿಗಳ್ (ಸೋಕ್ತಸು. ೬-೨೮ ; ಅಂಬು. ೭-೭೦ ನೋ). [ ಬೆದೆ + ಪಾವು₁ ]

**ಬೆದೆವೆರಸು** (ಕ್ರಿ). ಕಾಮಾತುರತೆಯಿಂದ ಕೂಡು ; ಕಾಮೋದ್ರೇಕಗೊಳ್ಳು : ಎಡೆವಿಡದೆ ಬೆದೆವೆರಸಿದ ಕುರರಕೂಜಿತಂಗಳಂತೊಗೆವ ಸರಳ ಮೊಜಿವದೊಳಂ ಕೂಡೆ ವಿಂಧ್ಯಾಟವಿಯೆಲ್ಲಂ ಪ್ರಚಲಿತಮಾದಂತಾಗೆ (ಕಾದಂಬ. ೦೬೦). [ ಬೆದೆ + ಬೆರಸು₁ (< ಬೆರೆಯಿಸು) ]

**ಬೆದೆವೋಗು** (ಕ್ರಿ). ಕಾಮೋದ್ರೇಕಗೊಳ್ಳು : ಇರುಳೊಳೇಕಾಂತವಾಗಿರ್ದು ಬೆದೆವೋಡ [ಪಾಠಾಂ. ಯಾದ] ಸವಣನಡುಹುಳ್ಳ ಕಂತಿಯುನವಚಿಕೊಂಡು (ಸೋವನ. ೯-೪೩). [ಬೆದೆ + ಪೋಗು₁ (< ಪೋ₁) ]

**ಬೆದ್ದಲ್, ಬೆಜಲು, ಬೆಜ್ಜಲು₂, ಬೆದಲ್, ಬೆದಲು, ಬೆದ್ದಲು, ಬೆದ್ದಲೆ, ಬೆರ್ದಲೆ, ಬೆಟ್ದಲೆ, ಬೆಟ್ಡಲೆ** (ನಾ). ಮಳೆಯ ನೀರಿನಿಂದ ಮಾತ್ರ ಬೆಳೆ ಬೆಳೆಯುವ ಭೂಮಿ ; ಹೊಲ ; ಕಾಡಾರಂಬ : ಬೀಡಿನ ದಕ್ಷಿಣದ ಕೊಳದೊಳಗೆ ಬೆದ್ದಲ ಕಮ್ಮ ೫೦ (ಕಇ. V, ೦೯-೦೯ ; 1121). **ಬೆಜಲು** : ಬೀಜವರಿ ಖಂಡುಗ ಬೆಜಲು (ಎಕ. IX, ತನ್ಕ. ೦೬೯-೧೯ ; 1461). **ಬೆಜ್ಜಲು₂** : ಚತುಃಸೀಮೆವಳಗೆ ವುಳ್ಳ ಗದ್ದೆ ಬೆಜ್ಜಲು ತೋಟ ತುಡಿಕೆ (ಎಕ. IV, ಪಾಪುರ. ೨೬೯-೨೯ ; 1397) ; ಗದ್ದೆ ಬೆಜ್ಜಲು ತೋಟ ತುಡಿಕೆ ಕಾಲುವೆ (ಸೌಇಇ. IX-ii, ೭೦೦-೯ ; 1512). **ಬೆದಲ್** : ಅಟ್ಟವವರಾರ್ ಬೆದಲ ಧಾನ್ಯಮಂ ಧರೆ ಸುಖದಿಂದುಟ್ಟುವುದು ಕಾರ್ಗಾಲದೊಳು (ಅಭಿಸ. ಕಂ. ೪-೩೭). **ಬೆದಲು** : ಕೆಱೆಯ ಕೆಱಗೆ ಬೆದಲು ಸೂಜು ಕಂಬ (ಎಕ. VI, ಕಡೂರು. ೨-೨೦ ; 1110) ; ಗದ್ದೆ ಬೆದಲು ತೋಟ ತುಡಿಕೆ (ಪ್ರಕಇ. ೦೯೯೬, ೨೯-೦೦ ; 1530). **ಬೆದ್ದಲು** : ಆ ನಾಡು ನಟ್ಟು ಕೊಟ್ಟ ಕಲ್ಲುಗಳಿಂದೊಳಗಣ ಬೆದ್ದಲು (ಎಕ. XI, ಚಿತ್ರದು. ೦೨-೨೪ ; 1280); ಮುಗುಟಿಯ ಕಟ್ಟೆಯನು ಗದ್ದೆಯೂ ಬಟಿಯ ಬೆದ್ದಲು ಸಹಿತ . . . ಕೊಟ್ಟರು (ಪ್ರಕಇ. ೦೯೯೦, ೨-೯ ; 1300) ; ಚತುಃಸ್ಸೀಮೆಯೊಳಗಾದ ಗದ್ದೆ ಬೆದ್ದಲು ಕಟ್ಟೆ ಕಾಲುವೆ (ಎಕ. V, ಹಾಸನ. ೪-೦೬ ; 1563). **ಬೆದ್ದಲೆ** : ಒಮ್ಮರ್ತರ್ ಬೆದ್ದಲೆ (ಪ್ರಕಇ. ೦೯೯೩, ೦೦-೩ ; 11ನೆಯ ಶತ) ; ಗಳೆಯ ಮತ್ತರ್ ೩ ಬೆದ್ದಲೆ ಮತ್ತರ್ ೫ (ಎಕ. VII, ಶಿಕಾ. ೨೦-೦೩ ; 1032) ; ಆರೆಯ ಕೆಱೆಯುಮಂ ಆ ಕೆಱೆಯ ಮೂಡಣ ದೆಸೆಯಲು ಖಂಡುಗ ಬೆದ್ದಲೆ (ಎಕ. II, ೦೯೧-೬೯ ; 1130). **ಬೆರ್ದಲೆ** : ಗೊರವಂಗೆ ಬಿಟ್ಟ ಗದ್ದೆ ಕ ೧ ಕೊ ಬೆರ್ದಲೆ ಮತ್ತ ೧ (ಎಕ. XI, ಹೊಳಲ್ಕೆ. ೬೩-೦೮ ; 1051) ; ಧಾರಾಪೂರ್ವಕಂ ಮಾಡಿ ಬಿಟ್ಟ ಬೆರ್ದಲೆ ಮತ್ತ ೫ (ಸೌಇಇ. XI-i, ೦೦೪-೦೩ ; 1054) ; ಬೆಕ್ಕನ ಕೆಱೆಯ ಬೆರ್ದಲೆಯುಂ (ಎಕ. II, ೪೮೯-೪೯ ; 1185). **Δಬೆಟ್ದಲೆ** : ಏರಿಯಂ ಮಾಡ ಬೆಟ್ದಲೆ ಮತ್ತರೊನ್ದು (ಬೆಳಗಾ. ೦೯೪೩, ೦೩ನೆಪಟ್ನರ್. ೨೯-೧೦ ; 991) ; ಬೆಟ್ದಲೆ ಮತ್ತ ೪ (ಎಕ. XI, ದಾವಣ. ೨೦-೨೨೯ ; 1045) ; ದೇ[ಗು]ಲಕ್ಕೆ ಬೆಟ್ದಲೆ ಮತ್ತರು (ಎಕ. VI, ಕಡೂರು. ೦೬೦-೦೬ ; 1063). **Δಬೆಟ್ಡಲೆ** : ಕಲುಕುಟಿಗ ಮಾಣಿಕಾಚಾರಿಗೆ ಐಗಳಗ ಬೆದೆಗಟ್ಟಿಯು ಬೆಟ್ಡಲೆ ಮತ್ತರು ಎರಡು (ಸೌಇಇ. IX-i, ೦೦೨-೨೬ ; 1053) ; ಗಟ್ಡಿ ಮತ್ತಲು ೨ ಬೆಟ್ಡಲೆ ಮತ್ತಲು ೪ (ಎಕ. VII, ಶಿಕಾ. ೨೪-೦೦ ; ?).

**ಬೆದ್ದಲು** 'ಬೆದ್ದಲ್' ನೋ.

**ಬೆದ್ದಲುಕಂದಾಯ** 'ಬೆದ್ದಲುಗಂದಾಯ' ನೋ.

**ಬೆದ್ದಲುಗಂದಾಯ, ಬೆದ್ದಲುಕಂದಾಯ** (ನಾ). ಕೃಷಿಭೂಮಿಗೆ ವಿಧಿಸುವ ತೆರಿಗೆ,—ಕಂದಾಯ : ಗದ್ದೆಕರ ಬೆದ್ದಲುಗಂದಾಯ ಕಾಡಾರಂಬ ಮನೆದೆರಿಗೆ (ಕಲ್ಪಕ. ೦೩೩-೬). **ಬೆದ್ದಲುಕಂದಾಯ** : ನಿಬಂಧನೆಯ ಮೇರೆಗೆ ಅರಮನೆಗೆ ಬೆದ್ದಲುಕಂದಾಯವನ್ನು ಕೊಡುವಂತೆಯೂ ನಿಷ್ಕರ್ಷೆ ಮಾಡಿಸಿದರು (ಮಹಾಶಂ. I, ೦೦೯).
[ ಬೆದ್ದಲು (< ಬೆದ್ದಲ್) + ಕಂದಾಯ ]

**ಬೆದ್ದಲುಗಳೆ, ಬೆದ್ದಲೆಗಳೆ** (ನಾ). ಬೆದ್ದಲು ಭೂಮಿಯನ್ನು ಅಳೆಯುವ ಅಳತೆಕೋಲು : ಒಂದು ಶಾಸನದಲ್ಲಿ 'ಗದ್ದೆಗಳೆ' ಮತ್ತು ಬೆದ್ದಲುಗಳೆಗಳನ್ನು ಬೇರೆ ಬೇರೆಯಾಗಿ ಹೇಳಿದೆ (ಕಶಾಅ. ೪೯೩). **ಬೆದ್ದಲೆಗಳೆ** : ತಳವೃತ್ತಿ ಗದ್ದೆಗಳೆಯ ಮತ್ತಲು ಮೂಱು ಬೆದ್ದಲೆಗಳೆಯ ಮತ್ತಲಾಱು (ಎಕ. VII, ಶಿವಮೊ. ೯-೭೦ ; 1122).
[ ಬೆದ್ದಲು (< ಬೆದ್ದಲ್) + ಗಳೆ (< ಗಱ³) ]

**ಬೆದ್ದಲುಪೈರು** (ನಾ). ಹೊಲದ ಬೆಳೆ ; ಕೃಷಿ ಪೈರು : ನೀರು ಬಾರದ ವರ್ಷ ಆ ಭೂಮಿಯಲ್ಲಿ ಬೆದ್ದಲುಪೈರು ಮಾಡಿಕೊಂಡು, ನಿಬಂಧನೆಯ ಮೇರೆಗೆ ಅರಮನೆಗೆ ಬೆದ್ದಲುಕಂದಾಯವನ್ನು ಕೊಡುವಂತೆಯೂ, ನಿಷ್ಕರ್ಷೆ ಮಾಡಿಸಿದರು (ಮಹಾಶಂ. I, ೦೦೯).
[ ಬೆದ್ದಲು (< ಬೆದ್ದಲ್) + ಪೈರು (< ಪಯಿರ್) ]

**ಬೆದ್ದಲುಬೇಸಾಯ** (ನಾ). ಕೃಷಿ ವ್ಯವಸಾಯ ; ಕಾಡಾರಂಬ : ಇನ್ನು ಆಡೇನಹಳ್ಳಿಯ ವಿಚಾರ. ಅದು ಕುಗ್ರಾಮ. ಎಲ್ಲಾ ಬೆದ್ದಲುಬೇಸಾಯ (ಪಶ್ಚಿಮಕು. ೦೫೦).
[ ಬೆದ್ದಲು (< ಬೆದ್ದಲ್) + ಬೇಸಾಯ (< ಬೆವಸಾಯ) ]

**ಬೆದ್ದಲೆ** 'ಬೆದ್ದಲ್' ನೋ.

**ಬೆದ್ದಲೆಗಳೆ** 'ಬೆದ್ದಲುಗಳೆ' ನೋ.

**ಬೆದ್ದುಗೊಂದೆ** (ನಾ). ಒಂದು ಊರಿನ ಹೆಸರು : ಶ್ರೀವೀರಸೋಳವ್ಯಾಧಿ ರಾಜಾಧಿರಾಜಪರಮೇಶ್ವರ ಬೆದ್ದುಗೊನ್ದೆಯ ಕೆಱೆಯ ಕಟ್ಟಿಪ್ಪನ್ದು (ಸೌಇಇ. IX-i, ೦೭-೬ ; ೧ನೆಯ ಶತ). [ ? + ಗೊಂದೆ₀ (< ಕುಂದ₃) ]

**ಬೆದ್ದೊಱಗರೆ** (ನಾ). ಒಂದು ಊರಿನ ಹೆಸರು : ಶ್ರೀಮತ್ ರಕ್ಕಸ ಬೆದ್ದೊಱಗರೆಯನಾಳುತ್ತಿರೆ (ಇಆ. VI, ೦೦೨-೯ ; 777 ?). [?]

**ಬೆನ್, ಬೆಂ₁, ಬೆನು, ಬೆನ್ನು** (ನಾ). ೧. ಕುತ್ತಿಗೆಯಿಂದ ಸೊಂಟದ ವರೆಗಿನ ಶರೀರದ ಹಿಂಭಾಗ : "ಪೃಷ್ಠಂ, ಪಶ್ಚಿಮಭಾಗಃ—ಈ ೨ ಬೆನ್" (ಹಲಾಯು. ೮೭-೩೭೯) ; ಪಚ್ಚು ಪರಿಕಲಿಸಿ ಬೆನ್ನಂ ಮುಚ್ಚಿರೆ ಮುಡಿ (ಕಾವ್ಯಸಾ. ೯೭೭ ಕೂರ್ಪರ); ದೇವತೆ ನವಿಲ ರೂಪಿನಿಂದೆತ್ತಿಕೊಂಡು ಬೆನ್ನೊಳಿಟ್ಟು . . . ಲತಾಮಂಟಪದೊಳಿರಿಸಿ ಪೋದೊಡೆ (ಪಂಪಾಶ. ೧೦೬-೯); ಪಡೆಯ ಪೊಱಗಿದು ಶೇಷಂ ಪಡೆಗಳನುಡುಗುವುದುಮೆಳೆ ಬೊದಿಲ್ಲನೆ ಬಿಟ್ಟಿತ್ತಡಿಗಿತೆ ಕೂರ್ಮನ ಬೆನ್ನಂದೊಡೆದು ಸಿಡಿಲ್ದೊಡನೆ ನುಚ್ಚುನೂಱಪ್ಪಿನೆಗಂ (ಕುಶಾ. ೦೦-೬೦). **ಬೆಂ₁** : ೨. ಹಿಂದುಗಡೆ; ಹಿಂಭಾಗ: 'ಬೆಂಗಾಣಿಸು', 'ಬೆಂಗಾವು', 'ಬೆಂಗಾವಲ್' ಪರ್ಯಾ. **ಬೆನು** : ೧. ಸುರುಳ್ದ ತನು ನಳಿತ ಬೆನು ಜೋಲ್ದಪುರ್ವಿಂದೆಸೆಯೆ (ಇಆ. ವೀ. ೩೦-೦೬). **ಬೆನ್ನು** : ೧. ಹಲ್ಲು ಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೦೬೦); ಮುಖವೆಲ್ಲಂ

ಕಣ್ಣು ಬೆನ್ನೆಲ್ಲಂ ಪುಡಿ ಉರವೆಲ್ಲಂ ಮೊಲೆ (ಶಂಬರ. ೯-೩೬); ಎದೆಯು ಲೌಕಿದ ಬಾಣ ಬೆನ್ನಲಿ ತುದಿಮೊಸೆಯ ತೋಱಿದವು (ಕುಮಾ.ಕ. ೧೦-೩೪). ೨. ಪುಟದ ನಾಲ್ಕು ಪರಿಸರಗಳೂ (ಬೆನ್ನು, ಮೇಲಂಚು, ಮುನ್ನಂಚು ಮತ್ತು ಕೆಳಅಂಚು) ಕ್ರಮವಾಗಿ ಸ್ವಲ್ಪ ಸ್ವಲ್ಪ ವಿಶಾಲವಾಗಿರಬೇಕು (ಮುದ್ರಣ. ೩೯).

**ಬೆಂಗೆವರ್, ಬೆಂಗೆಬರ್**=ಬೆನ್ನನ್ನು ಹತ್ತು : ವಿಜಯಪರ್ವತ ಗಜೇಂದ್ರದ ಬೆಂಗೆವಂದು (ಆದಿಪು. ೧೪-೬ ವ) ; ನಿಜವಿಜಯಸಿಂಧುರದ ಬೆಂಗೆವಂದು (ಅಜಿಪು. ೯-೧೪ ವ); ಪಟ್ಟದಾನೆಯ ಬೆಂಗೆ ಬಂದು (ಕೃಷ್ಣಾಸ್ತ್ರ. ೨-೭೨ ವ). **ಬೆಂಗೆವಾಯ್, ಬೆಂಗೆಹಾಯ್**=ಬೆಂಗೆವರ್ : ಮದಾಂಧ ಗಂಧಸಿಂಧುರಮಪ್ಪ ಪಟ್ಟವರ್ಧನದ ಬೆಂಗೆವಾಯ್ದು . . . ಭಯಮಱಿಯದ ಕಲಿ ಸುಯೋಧನಂ ಪೊಱಮಟ್ಟಂ (ಪಂಪಭಾ. ೧೦-೨೬ ವ); ಮಂಗಳವೃನಿಮಗೆಂದು ಹಂಸೆಯ ಬೆಂಗೆಹಾಯ್ದನು ಬಳಿಕ ನಭದೊಳಭಂಗಮುನಿಯಡಗಿದನು (ಕುಮಾ.ಕ. ೦೮-೩೪). **ಬೆನ್ನಂಹತ್ತಿಸು** = ಹಿಂಬಾಲಿಸು : ಅನುಸರಿಸು : ಚೋಳೋರ್ವೀಯಂ ನಿಂನಂತಾರೊಳಪೊಕ್ಕು ಸಾಧಿಸಿದ ರಾಪಪ್ಪಾಂಡೇಶನಂ ಶೌರ್ಯ್ಯದಿಂ ಬೆಂನಂಪತ್ತಿಸಿ ಸೋದಿದೇಪಘಟೆಯುಂ ಕೈಕೊಂಡರ್ (ಎಕ. VII (R), ಶಾಗಮಂ. ೦೭೩-೩೦; 1229). **ಬೆನ್ನಂಪತ್ತು** =ಬೆನ್ನಿಗೆ ಅಂಟಿಕೊಳ್ಳು: ಬೇತಾಳನ ಬಸಿಱಾತೆ ಬೆನ್ನಂ ಪತ್ತಿದ ಬಸಿಱುಂ (ಪಂಪಶಂ. ೭೩-೭) ; ಕುಪ್ಪಸದಂತೆ ಬೆನ್ನಂಪತ್ತಿ ಕೆತ್ತುಪರ್ (ರಘುವಾಮ್ಯ. ೩-೭೩). **ಬೆನ್ನಡಿಹೋಗು** = ಬೆನ್ನಟ್ಟಿ ಹೋಗು : ಆ ವಾಲಕಾರ ಜನರು ಕಂಡು ಆ ರಾಜರ ಬೆನ್ನಡಿಹೋಗಿ ಹಿಡಿಯುವಷ್ಟರಲ್ಲಿ (ರಾಜೇಂದ್ರ. ೨೪). **ಬೆನ್ನಾಗು**=೧. ಊರೆಯಾಗು ; ಆಧಾರವಾಗು ; ಆಶ್ರಯವಾಗು : ಮದನನ ದಿಗ್ವಿಜಯದೊಳಿಂತಿದೆ ಬೆನ್ನಾಗಿರ್ದುದೆಂಬ ಚೆನ್ನಿಂದೆಸೆಗುಂ ಸುದತಿಯ ಸೊಬಗಿನ ಸರ್ವಸ್ವದ ಭಾಗಂಗೊಂಡ ಪೂರ್ವಭಾಗಾಭೋಗಂ (ಕೃಷ್ಣಕ. ೩-೩೭); ತನ್ನ ಸೆಳೆದೊಯ್ಯುವಾಗ ಬೆನ್ನಾಪರ ಕಾಣೆನೋ (ಪುರಂದ. ೦-೦೭೬-೩). ೨. ಅಂಗತ್ರನಾಗಿ ಬೀಳು : ಕೈಕಾಲುಱ ತಂಡಿಸಿ ನೊಂದು ಬೆನ್ನಾದ ದಂಡನಾಥನ ಬಲವನು ಮಗ ಹೊಯ್ಸಳ ಕಂಡನು ಕಲಹಭೂಮಿಯೊಳು (ಕುಠಾಶಾಂ. ೦೩-೯೦). **ಬೆನ್ನುಚಪ್ಪರಿಸು**=ಪ್ರೋತ್ಸಾಹಿಸು; ಹುರಿದುಂಬಿಸು; ಬೆನ್ನು ತಟ್ಟು: ಬೆನ್ನು ಚಪ್ಪರಿಸಿದರೆ ಬೆಳತನಕ ಬೇಸೂರು ಹಾಡಬಲ್ಲ (ಶಂಕು. ೨೮-೦೩). **ಬೆನ್ನುತಟ್ಟು**=ಬೆನ್ನುಚಪ್ಪರಿಸು : ಅನುವಾದಕಾರ್ಯ ವಿಳಂಬವಾಗದಂತೆ ಲೇಖಕರ ಬೆನ್ನು ತಟ್ಟಿದರು (ಕೃಷ್ಣಾಕೋ. XVI, ಸಂಪಾದಕರ ಮಾತು); ಸಂತೋಷದಿಂದ ಓಡಿ ಹೋಗಿ ಅವನ ಬೆನ್ನು ತಟ್ಟುವಂತಾಯಿತು (ಕಾರಮ. ೦೭೩). **ಬೆನ್ನುತಿರುಗಿಸು**=ವಿಮುಖವಾಗು : ನೀನು ನನ್ನ ವಿವೇಕದ ಮಾತುಗಳಿಗೆ ಕಿವಿಗೊಡದೆ ಹೋದೆ . . . ನನ್ನ ಕಡೆಗೆ ಬೆನ್ನು ತಿರುಗಿಸಿದೆ (ಹೊಸಕ್ಷ. ೦೦). **ಬೆನ್ನುತೋರಿಸು**=ಬೆನ್ನು ತಿರುಗಿಸು : ಅವರು ಯುದ್ಧದಲ್ಲಿ ಶತ್ರುಗಳಿಗೆ ಬೆನ್ನುತೋರಿಸದ ಕಲಿಗಳೂ, ಅಭಿಮಾನಧನರೂ ಆಗಿದ್ದಾರೆ (ಕಶಪ್ರ. ೫-೭೪). **ಬೆನ್ನುತೋರು**=ಬೆನ್ನುತಿರುಗಿಸು : ಶತ್ರುವಿಗೆ ಬೆನ್ನುತೋರಲಿಲ್ಲ (ಅಧಃಪತ. ೬೪). **ಬೆನ್ನುಹಾಕು**=ಹಿಂದಿರುಗು ; ಮರಳು : ಹರಿದಾಸರು ಜಯಶೀಲರಾಗದೆ ಬೆನ್ನುಹಾಕಿದರು (ಕಾವೇರಿ. ೦೪); ವಾಗ್ದೇವಿಯು ಅವನ ಪ್ರಶ್ನೆ ಹಾಳಾಗಲೆಂದು ಬೆನ್ನು ಹಾಕಿ ನಡೆದಳು (ನಾಗ್ಮೆಪ. ೦೯೦). **ಬೆನ್ನುಹಿಡಿ**=ಅನುಸರಿಸು : ಕೋಶಿಗಳು ಒಂದನ್ನೊಂದು ಬೆನ್ನು ಹಿಡಿಯುತ್ತಿವೆ, ಹೊಡೆದಾಡುತ್ತಿವೆ (ರಕ್ತಬೂ. ೦).

[ದೇ. ತಮಿ. ಪೆನ್, ವೆರಿನ್; ತುಳು. ಬೆರಿ; ಕೊತ. ಬೆನ್ನ್; ತೆಲು. ವೆನು, ವೆನ್ನು; ಕೋಡ. ಕೋಲಾ. ವೆನ್; ನಾಯ್ಕಿ. ವೆಂಕ]

**ಬೆನಕ, ಬೆನವ** (ನಾ). ೧. ಗಣಪತಿ ; ವಿನಾಯಕ : "ಹೇರಂಬಃ . . . ವಿನಾಯಕಃ, ವಿಘ್ನರಾಜಃ — ಈ ಆ ಬೆನಕನ ಪೆಸರ್" (ಶಬ್ದಮ. ೯-೦೪); ತಾಂ ತಿರಿಪ ಗೊರವಿ ಬೆನಕನುಮಂ ತಿರಿಯಿಪಳೆಂಬ ತೆಱದೆ (ಶಾಂತಿಪು. ೬-೦೩೦); ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದಱ ಗಂಜಳ ಬಿಡದಣ್ಣ (ಬಸವ. ೯೩). ೨. ಗುಂಡಾದ ಕಲ್ಲು ; ದುಂಡುಶಿಲೆ : "ಬೆನಕ–ಗುಂಡಕಲ್ಲು,ಗಣೇಶ, ಒಂದು ಸಕ್ಕರೆಯ ತಿನಿಸು" (ಜಾನಕೋ. ೨೩); ಹೊಳೆಗಳೊಳಗಿನ ಬೆನಕಗಳು ಹ್ಯಾಗೆ ದುಂಡಾಗಿರುತ್ತವೆ ನೋಡಿರಿ (ಮುಂಬಯಿ. ೯-೦೬೦); ತೀರದ ಬೆನಕಗಳ ಹಾಸಿಗೆಯ ಮೇಲೆ ಮೈಚಾಚಿ ಒರಗಿದಳು (ಅಕ್ಷ. ೩). ೩. ಒಂದು ಬಗೆಯ ಸಿಹಿತಿಂಡಿ : ಚೊಕ್ಕಟವಾದಂತ ಬೆಂಡು ಬೆನಕ ಬರ್ಪಿ ಕುಕ್ಕಡಿ ಕಲ್ಯಾಣಶಾವಿಗಳು (ಸಗೀ. ೯೬). **ಬೆನವ** : ೧. ಹಟ್ಟಿಯ ಹೊಱಗೆ ಬೆನವನ ಪೂಜೆಯ ಮಾಡಿ ತಿಪ್ಪೆಯೊಳಗೆ ಬಿಟ್ಟಂತಾಯಿತ್ತು (ತನ್ನವ. ೪. ೦೦೪-೨೩೦); ತ್ರಿಯಂಬಕ ದೇವರ ಹೆಮ್ಮಗನಪ್ಪ ತೊಱಗಲ ಬೆನವಂಗೆ ಶರಣೆಂಬೆ (ಸೊಬಸೋ. ೦-೫): ಮದಲು ನೆನೆದವೆ ಸ್ವಾಮಿ ಲಿಂಗನ ಸನುಮತ ಶಿವಗಂಗೆ ಬೆನವನ (ಜಾಶರ. ೭). [< ಸಂ. ವಿನಾಯಕ./ ತುಳು. ಬೆನಕ]

**ಬೆನವ** 'ಬೆನಕ' ನೋ.

**ಬೆನವಯ** (ನಾ). ಒಬ್ಬಾತನ ಹೆಸರು : ಕಾದೊಡೆ ಆತನ ತಮ್ಮಂ ಬೆನವಯ ಸಗ್ಗಿಯಾದಂ (ಪ್ಮಅಂ. ೦೪೨೬, ೬೩-೪; ೨ನೆಯ ಶತ). [ಬೆನವ (< ಬೆನಕ) + ಅಯ್ಯ$_1$ (< ಅಜ್ಜ$_{61}$)]

**ಬೆನು** 'ಬೆನ್' ನೋ.

**ಬೆನೆಯಿತವುರ** (ನಾ). ಒಂದು ಊರಿನ ಹೆಸರು : ಬೆಳ್ವೊಲ ವಿಷಯಾಭ್ಯನ್ತರ(ರೇ) ಬೆನೆಯಿತವುರಂ ಅಣ್ಣಿಗೆಱೆ (ಇಆ. VII, ೨೨೦-೨೮; 658). [<ಸಂ. ವಿನಯಾದಿತ್ಯಪುರ]

**ಬೆನ್ಗಲ್ಲಿ, ಬೆಂಗಲ್ಲಿ** (ನಾ). (ಬೇಟೆ ಮುಂತಾದ ಸಂದರ್ಭಗಳಲ್ಲಿ) ಬೆನ್ನಿಗೆ ಕಟ್ಟಿಕೊಳ್ಳುವ ಚೀಲ ; ಬೆನ್ನಿನ ಚೀಲ : ಪವವಿಲ್ ಕೂರಂಬು ಬೆನ್ಗಲ್ಲಿ ಕೆಯ್‌ಪೊಡೆ ಗಾಳಂ . . . ಬಡಿಕೋಲ್ಗಳೊಪ್ಪೆ ಜವದಿಂದೆಯ್ತಂದರಾ ಧೀವರರ್ (ಕಬಕಂ. ೩-೨೩). **ಬೆಂಗಲ್ಲಿ** : ಬಡಿಕೋಲು ಜಾಯಿಲಂ . . . ಬೆಂಗಲ್ಲಿ ತೊಡಕುವಲೆ ಕಂಬಿ ತಿತ್ತಿಯು ಸೋರೆಯ ಬುರುಡೆಗಳು ಬಿಲ್ಲು ಗೊಂಚಿಯು ಸರಳ್ಗಳ ಪಿಡಿದು . . . ಬೇಂಟೆಯಾಡುತ್ತಿರ್ದರು (ಕಾಶಿಕ. ೦೭-೬೭). [ಬೆನ್ + ಕಲ್ಲಿ$_1$]

**ಬೆನ್ನಂಟು** (ಕ್ರಿ). ಹಿಂದೆಹೋಗು; ಹಿಂಬಾಲಿಸು ; ಬೆನ್ನುಹತ್ತು : ಲಕ್ಷ್ಮಣದೇವಗಾಣತಿಯಿತ್ತು ನಾಂ ಬೆನ್ನಂಟಿ ಹರಿಣವನು (ರಾಮಾಸಂ. ೫-೨-೭೨); ಎನ್ನಿಂ ಧಿಕ್ಕೃತೆಯಾಗಿ ತನ್ನ ಜನಮಂ ಬೆನ್ನಂಟಲುದ್ಯುಕ್ತೆಯಪ್ಪನ್ನಂ ನಿಲ್ಲಲಗೇ ಎನುತ್ತೆ ಗುರುಶಿಷ್ಯಂ ಕೋಪದಿಂ ಗರ್ಜಿಸಲ್ (ಶಾಕುಂತ. ೮೫-೧೯೦). [ಬೆನ್ನು (< ಬೆನ್) + ಅಂಟು$_1$]

**ಬೆನ್ನಟ್ಟು** (ಕ್ರಿ). = ಬೆನ್ನಂಟು : "ಬೆನ್ನಟ್ಟೆನಲು ತಗುಳ್ವುದಕ್ಕುಂ" (ಶಬ್ದಮಂ. ೨೩೦); ಕಣ್ಗೆಡೆ ಬೆನ್ನಟ್ಟಿದನಂತು ನಮ್ಮ ಹರಿಗಂ (ಪಂಪಭಾ. ೦೦-೦೩); ಬೆನ್ನಟ್ಟಿ ಪಾರ್ಥಕುಮಾರ ಸದೆದನು ವೈರಿಮೃಗಕುಲವ (ಕುಮಾರರಾ. ೫-೭೪). [ಬೆನ್ + ಅಟ್ಟು$_2$]

**ಬೆನ್ನಡಗು** (ನಾ). ಬೆನ್ನಿನ ಮಾಂಸ : ಮುನ್ನ ಮಧುಕೈಟಭರನಾ ಹರಿ ಭಿನ್ನವಿಲ್ಲದೆ ಕೊಲ್ಲಲವದಿರ ಬೆನ್ನಡಗನೇ ನೀರಲೊರಸಲಿಕಾಯ್ತು ಮೇದಿನಿಯು (ಸಂಶಕ. ೫-೨೬). [ಬೆನ್ನು (< ಬೆನ್) + ಅಡಗು$_3$]

**ಬೆನ್ನಡರು** (ಕ್ರಿ). ಬೆನ್ನಿನ ಮೇಲೆ ಹತ್ತು; ಸವಾರಿ ಮಾಡು : ಬಂದನಾಗಸವಾರುವದ ಬೆನ್ನಡರಿದಾ ಗಜ ವಿಧಿಯ ವಶದಿಂದ (ಕೃಷ್ಣಾಕಾ. ೬-೦೪). [ಬೆನ್ನು (< ಬೆನ್) + ಅಡರು$_1$ (< ಅಡರ್)]

**ಬೆನ್ನನೆ** (ಅ). ೧. ಹಿಂದುಗಡೆ; ಹಿಂಭಾಗದಲ್ಲಿ : ಗಿಳಿಯ ಬೆನ್ನನೆ ಮೆಲ್ಲನೆ ಗದ್ಗದಸ್ವನಂ ಕಂಚುಕಿ ಬಂದು ಕಂಡನನುರಾಗದಿನಾ ಮನುಜೇಂದ್ರಚಂದ್ರನಂ (ಕಾದಂಪೂ. ೬೩); ಹೊನ್ನೆಯ ಮೊಱಡಿಯ ಬೆನ್ನನೆ ಸನ್ನಾ

ಪೂರ್ವದ ಕೂಡಿತ್ತು (ಇಅ. VIII, ೨೦೯-೪೦ ; 10ನೆಯ ಶತ). ೨. ಕೂಡಲೆ; ಹಿಂದೆಯೇ : ಉನ್ನತಗುರುಶ್ರೀಪಾದಮಂ ಮರ್ಚಿ ಬೆನ್ನನೆ ಪೋದಂತಿರೆ ಮೂರ್ಛೆವೋದನರಸಂ ವ್ಯಾಮೋಹಮೇಗೆಯ್ಯದೋ (ಅರ್ಜಪೇ. ೨-೯೬).

**ಬೆನ್ನನೆಬರ್, ಬೆನ್ನನೆಬರು** = ಅನುಸರಿಸು; ಹಿಂದೆಯೇ ಬರು : ನೀಮುಮಗಲ್ದೆಯಿನ್ನನಗೆ ಪೇೞ್ ಪೆಱರಾರೆನಗಾಸೆ ನಿನ್ನನಿನ್ನಾನುಮಗಲ್ವೆನೇ ಕೆಳೆಯ ಬೆನ್ನನೆ ಬಂದಪೆಂ (ಶಂಕರಾ. ೧೩-೩); ಮಿಂಚಿನ ಬಳ್ಳಿಯ ಪೊಱಗುಪೋಲ್ ಬೆನ್ನನೆ ಬಂದಳ್ (ಶಾಂತಿಪು. ೭-೨೮); ಬನಕೆ ಶಂಬನು ಪೋಗುತಿರೆ ಮುತ್ತಿನ ಸರವು ಹಱಿದೊಗಲು ತಾಂ ಬೆನ್ನನೆ ಬರುತ ನಿರ್ನಾಮಿಕನು ಬಿಡದಾಯ್ದುಕೊಳುತಿರಲು (ಕಾವ್ಯಶಾ. ೨೦-೬೨).

[ಬೆನ್ + — ಅನೆ$_1$]

**ಬೆನ್ನಲೆ** (ಕ್ರಿ). ಹಿಂಭಾಗದಲ್ಲಿ ತೂಗಾಡು, — ಒಲೆ : ಬಲಿದ ಮುಂಗೈ ತೊಡಯ ಬಿರುದಿನೊಳುಲಿವ ಘಂಟೆಯ ಬೆನ್ನಲಿವ ಬತ್ತಳಿಕೆಗಳಲ್ಲೈದಿತ್ತು ಬಲ್ಲಾಳುಭಯಸೇನೆಯಲಿ (ಕುಮ್ಯಾಶಿ. ೪-೧೧). [ಬೆನ್ನು (< ಬೆನ್) + ಅಲೆ$_1$]

**ಬೆನ್ನಾನ್** (ಕ್ರಿ). ಬೆನ್ನಿಗೆ ಏರಿಸಿಕೊಳ್ಳು; ಬೆನ್ನಿನಲ್ಲಿ ಹೊರು : ನಿಜವಾಗಿ ಕೆರಳದೇಕಾಯಿತಾವಡೆ ಜೀಯ ಬಿಜಯಾಡಿ ಬೆನ್ನಾಂತುಕೊಂಬೆ (ಮೋಹಕ. ೩೭-೩೭). [ಬೆನ್ನು (< ಬೆನ್) + ಆನ್$_1$]

**ಬೆನ್ನಿ** (ನಾ). [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : "ಬೆ, ಬೆನ್ನಿ, ಯಮ . . . ದಂಪತಿ ಇಂತಿನಿತುಂ ಎರ್ಕೆ ಪೆಸರು" (ವ್ಯವಹಾ. ೧೧-೧೦). [?]

**ಬೆನ್ನಿಕ್ಕು** (ಕ್ರಿ). ೧. ಬೆನ್ನಿನ ಹಿಂದೆ ಇರುವಂತೆ ಮಾಡು : ತನ್ನ ಬಲಮುಂ ಬೆನ್ನಿಕ್ಕಿಕೊಂಡು ನಿಂದಾಗಳ್ (ಅಜಿಂಪು. ೦೯-೭ ವ); ನಿನ್ನಧಿಪನ ಮಂದಿರಕ್ಕೆ ಕಱಿಪುವೆನೊಲವಿಂ ಕನ್ನೆ ನಡೆಯೆಂದು ಸತಿಯುಂ ಬೆನ್ನಿಕ್ಕಿ ಬಱಿಕ್ಕಮೊರ್ಮೊದಲ್ ನಡೆಗೊಂಡೆಂ (ದಶಕು. ೬-೦೦೦). ೨. ಬೆನ್ನು ತೋರಿಸು; ಹಿಮ್ಮೆಟ್ಟು : ಓಡಿದರು ರಿಪುಭಟರು . . . ಬೆನ್ನಿಕ್ಕಿ ಸುರಬಲಕೆ (ಜಿಹಾಗ. ೬-೦೦-೨೦). ೩. ವಿಮುಖವಾಗು : ಭಾರತವನ್ನು ಬಿಟ್ಟು ಕರ್ನಾಟಕವಿಲ್ಲ ಎಂಬ ಸತ್ಯಕ್ಕೆ ಬೆನ್ನಿಕ್ಕದೆ (ಪತ್ರಿಸ್ಮ. ೩ ಮುನ್ನುಡಿ).

[ಬೆನ್ + ಇಕ್ಕು]

**ಬೆನ್ನಿಕೆ** (ನಾ). ಒಂದು ಬಗೆಯ ತೆರಿಗೆ : ಆ ಕೆಯ್ಗೆ ಬೆನ್ನಿಕ್ಕೆಯಿಲ್ಲ ಬೆನ್ನಿಕ್ಕೆಯೆಂಬವಂ ಶ್ವಾನ ಗಾರ್ದ್ದಭ ಚಾಣ್ಡಾಳ[ಂ] (ಎಕ. XIX, ೨೦೯-೬; 1037); ಇಪ್ಪತ್ತೆರಡು ಮತ್ತರ್ಕೆಯ್ಗೆ ಬೆನ್ನಿಕೆಯಿಲ್ಲವು (ಕಇ. II, ೦೦-೨೦; 1080). [?]

**ಬೆನ್ನೀ** (ಕ್ರಿ). ೧. ಬೆನ್ನು ತಿರುಗಿಸು ; ಬೆನ್ನು ತೋರಿಸು ; ವಿಮುಖವಾಗು : ದಿವ್ಯಪುರುಷನ ಹಸ್ತಪ್ರಹಾರಮೆಂಬ ಮುದ್ಗರಪೀಡೆಯಿಂ ತ್ರಸ್ತಾಭಿಭೂತನಾಗಿ ಬೆನ್ನಿತ್ತೋಡಿದಂ (ವಡ್ಡಾರಾ. ೫೭-೧). ೨. ಪಲಾಯನ ಮಾಡು ; ಸೋತು ಓಡಿಹೋಗು : ನಿನ್ನ ತಮ್ಮನ ಕೆನ್ನೆತ್ತರ ನೀರ್ಟುವಲ್ಲಿ ಭಯದಿಂದಲ್ಕುತ್ತೆ ಬೆನ್ನಿತ್ತುದಂ ನೆನೆ (ಗದಾಯು. ೭-೩೯): ಭೀಮುಂಗಂಡ ಸುಯೋಧನಪ್ರಭೃತಿಗಳ್ ಮುನ್ನಾಂತು ಬೆನ್ನಿತ್ತವೊಲ್ (ಎಕ. XI, ಚಿತ್ರದು. ೦೩-೨೨; 1124 ?); ಬೇಡರಸು ಬೆನ್ನೀಯೆ ನೆತ್ತಿಯ ಬೀಡೆ ಬಿರಿಯಲು ಬಿದ್ದ ಲೌಡಿಗಳೀಡಱಿದವರಿಚತುರಂಗದ ಚಪಳಚೂಣಿಯಲಿ (ಕುಮ್ಯಾಕ. ೧೧-೦೦). [ಬೆನ್ + ಈ$_2$]

**ಬೆನ್ನೀರ್** 'ಬಿಸುನೀರ್' ನೋ.

**ಬೆನ್ನೀರು** 'ಬಿಸುನೀರ್' ನೋ.

**ಬೆನ್ನೀಹ** (ನಾ). ಬೆನ್ನು ತೋರಿಸುವಿಕೆ ; ಓಟ : ಪಲಾಯನ : "ಪೊಱಮಡೆಂದು ಬೆನ್ನೀಹಂ" (ಕಮುದ. ಪ. ಕಾ. ೩೭೪). [ಬೆನ್ + ಈಹ$_1$]

**ಬೆನ್ನು** 'ಬೆನ್' ನೋ.

**ಬೆನ್ನುಕಟ್ಟು** (ಕ್ರಿ). ೧. ಹಿಂಬಾಲಿಸು ; ಅನುಸರಿಸು : ಗುಡಿಗೆ ಕರೆಯೋವಾಗ ಒಲ್ಲೆ ಅಂತೇಕನಬೇಕೆಂದು ನಾನೂ ಅವನ ಬೆನ್ನುಕಟ್ಟಿದೆ (ಮುಂಗಾಪು. ೮೫). ೨. ಪಕ್ಷವಹಿಸು ; ಬೆಂಬಲವಾಗು ; ಸಮರ್ಥಿಸು : ಆಕೆ ಮಗನ ಬೆನ್ನುಕಟ್ಟಿದಳು (ಶ್ರೀಪಾತ್ರ. ೨೪೭); ನಾನು ಯಾವಾಗಲೂ ನಿರ್ಬಲರ ಬೆನ್ನುಕಟ್ಟುತ್ತೇನೆ (ಜಿಬಿಜಿಷ್ಠಾ. ೭೪); ನೀನು ಬೆನ್ನುಕಟ್ಟುವ ಬದಿ ಯಾವುದು ? (ಬಾಬಿಂ. ೭೭). [ಬೆನ್ನು (<ಬೆನ್) + ಕಟ್ಟು$_1$]

**ಬೆನು ಕೊಡು** 'ಬೆಂಗೊಡು' ನೋ.

**ಬೆನ್ನುಗಾವಲು** 'ಬೆಂಗಾವಲ್' ನೋ.

**ಬೆನ್ನುಡಬ್ಬೆ** (ನಾ). ಸೀಳಿರುವ ಬಿದಿರಿನ ಮೇಲು ಭಾಗ: (+).

[ಬೆನ್ನು (<ಬೆನ್) + ಡಬ್ಬೆ$_1$ (<ದಬ್ಬೆ$_1$)]

**ಬೆನ್ನುಫಣಿ** (ನಾ). ಬೆನ್ನಿನಲ್ಲಿ ಏಳುವ ಕುರು : ಶ್ರೀರಂಗರಾಯರಿಗೆ ಬೆನ್ನುಫಣಿ ಎಂಬ ವ್ರಣಜಾಡ್ಯವು ಸಂಭವಿಸಿ ಬದುಕುವುದು ಅಸಾಧ್ಯವೆಂದು ತೋರಿತು (ಮೈವಾಸ್ತು. ೦೨೮). [ಬೆನ್ನು(<ಬೆನ್) + ಫಣಿ$_1$]

**ಬೆನ್ನುಬಲ** 'ಬೆಂಬಲ' ನೋ.

**ಬೆನ್ನುಬೀಳು** 'ಬೆಂಬೀೞ್' ನೋ.

**ಬೆನ್ನುಮೂಳೆ** (ನಾ). ೧. ಬೆನ್ನಿನ ಎಲುಬು ; ಕಶೇರು : " ತ್ರಿಕಂ. ಪೃಷ್ಠವಂಶಾಧರೇ, ಬೆನ್ನುಮೂಳೆಗೆ ಬುಡ, ಬೆನ್ನೆಲುವಿನ ಕೆಳಗಡೆ" (ಸಿದ್ಧಾಂತಿ. ೦೯೦). ೨. (ಅಲು) ಆಧಾರ : ಹಳ್ಳಿಗಳೇ ಬೆನ್ನುಮೂಳೆಯಾದ ನಮ್ಮ ರಾಷ್ಟ್ರವು ಪ್ರಗತಿಯಾಗಬೇಕಾದರೆ ಮೊದಲು ಹಳ್ಳಿಗಳು ಪ್ರಗತಿಯನ್ನು ಹೊಂದಬೇಕಲ್ಲವೇ? (ಕನ್ನಡಾ. ೯೦). [ಬೆನ್ನು (<ಬೆನ್) + ಮೂಳೆ$_1$]

**ಬೆನ್ನುರಿ, ಬೆಚ್ಚುರಿ** (ನಾ). ಅತಿ ಬಿಸಿಯಾದ ಉರಿ : ಬೆನ್ನುರಿ, ಬೆಚ್ಚುರಿ (ಕಡ್ಡಾ. ಮ. ೩೪೩ ಪ್ರಯೋ). **ಬೆಚ್ಚುರಿ** : ಮೇಲಿನ ಪ್ರಯೋಗವನ್ನು ನೋಡಿ. [ಬೆಂ$_2$ (< ಬಿಸಿದು) ಉರಿ$_2$]

**ಬೆನ್ನುಹಂಚು** (ನಾ). ಛಾವಣಿಯ ಮೇಲ್ಭಾಗದಲ್ಲಿ ಬೋರಲು ಹಾಕುವ ಹಂಚು : ಸೂರಿಗೆ ಬೆನ್ನುಹಂಚು ಹಾಕಿದ್ದಾರೆ (ರೂಢಿ).

[ಬೆನ್ನು (<ಬೆನ್) + ಹಂಚು$_3$ (<ಪೆಂಚು$_2$)]

**ಬೆನ್ನುಹತ್ತು** 'ಬೆಂಬತ್ತು' ನೋ.

**ಬೆನ್ನುಹುಣ್ಣು** (ನಾ). = ಬೆನ್ನುಫಣಿ : ಶಿರಮಾಲೆಗೆ, ಬೆನ್ನುಹುಣ್ಣಿಗೆ, ಲೊಕ್ಕಿಯ ಹುಣ್ಣಿಗೆ, ದಂತಬೇನೆಗೆ—ಪಚ್ಚೆತುತ್ತ, ಜಾಪಾಳ, ಪಿರಿಬಿಡೆ, ನಿರ್ವಿಷವತ್ಸನಾಭಿ . . . ನುಂಗುವುದು (ವಿಶ್ವಪಿ. ೦೯೪).

[ಬೆನ್ನು (<ಬೆನ್) + ಹುಣ್ಣು (<ಪುಣ್)]

**ಬೆನ್ನುಹುರಿ** (ನಾ). ಬೆನ್ನುಮೂಳೆಯ ಸುತ್ತ ಹರಡಿಕೊಂಡಿರುವ ಹುರಿಯಂತಹ ರಚನೆ : ಈ ಆಟದಿಂದ ಹೆಣ್ಣುಮಕ್ಕಳಿಗೆ ಕಿಬ್ಬೊಟ್ಟೆ, ಯಕೃತ್ತು, ಬೆನ್ನುಹುರಿ ಮೊದಲಾದ ಅಂಗಗಳಿಗೆ ಸಾಕಷ್ಟು ವ್ಯಾಯಾಮ ದೊರೆಯುವುದು (ಕನ್ನಡಾ. ೩೯); ಅಂಗಿ ತೆಗೆಯಲು ಕೈ ಮೇಲೆ ಚಾಚುವಾಗ ಬೆನ್ನುಹುರಿಯಲ್ಲಿ ನೋವಾಯಿತು (ಕಳ್ಳರೂ. ೪೦).

[ಬೆನ್ನು (< ಬೆನ್) + ಹುರಿ$_3$ (<ಪುರಿ$_3$)]

**ಬೆನ್ನೆತ್ತು** (ನಾ). ಬೆನ್ನಿನ ಮೇಲೆ ನೊಗವನ್ನು ಹೊತ್ತು, ಉಳಲು ಸಿದ್ಧವಾದ ಎತ್ತು : ಕಱಿವ ಹಸುವ ಉಳುವ ಬೆನ್ನೆತ್ತ ಮೊಲೆವುಂಬ ಕಱುವ ಕುಱುಹಸಱಿಯದೆ ಕಾಯಬಹುದೆ (ಕುಱುಗಾ. ೩-೫).

[ಬೆನ್ನು (<ಬೆನ್) + ಎತ್ತು$_2$ (<ಎಱ್ತು$_1$)]

**ಬೆನ್ನೆಲುಬು** 'ಬೆನ್ನೆಲುವು' ನೋ.

**ಬೆನ್ನೆಲುವು, ಬೆನ್ನೆಲುಬು** (ನಾ). ೧. = ಬೆನ್ನುಮೂಳೆ ೧ : "ಕಶೇರುಕಾ—ಪೃಷ್ಠಾಸ್ಥಿ, ಬೆನ್ನೆಲುವಿನ ಹೆಸರು" (ಸಿದ್ಧಾಂತಿ. ೦೬೯); ಬದಿ ಮುಂದಲೆ ಎಡಿದು ಬಾಗಿಸಿ ಕೊಯ್ದನಾತನ ಕೊರಳನೆಡದಲಿ ಪೊಯ್ದು ಮುರಿದನು ಬರಿಯಲಪ್ಪಳಿಸಿದನು ಬೆನ್ನೆಲುವ (ಕುಮ್ಯಾದ್ರೋ. ೦೯-೨). ಬೆನ್ನೆಲುಬು : ೨.

=ಬೆನ್ನುಮೂಳೆ ೨ : ನಮ್ಮ ದೇಶದಲ್ಲಿ ಒಂದು ಆರ್ಥಿಕ ಸ್ಪರ್ಧೆಯು ಬೆಳೆದು ಬಂದು ರಾಜಕೀಯ ಚಳವಳಿಯ ಬೆನ್ನೆಲುಬಾಗಿ ಬಲಿಯಿತು (ಪ್ರಾಣ್ಣಾದ. ೯೬). [ಬೆನ್ನು (< ಬೆನ್) + ಎಲುವು (<ಎಲ್ಬು)]

**ಬೆನ್ನೇರು** 'ಬೆನ್ನೇಱು' ನೋ.

**ಬೆನ್ನೇಱು**, ಬೆನ್ನೇರು (ಕ್ರಿ). ೧. ಬೆನ್ನಿನ ಮೇಲೆ ಹತ್ತು : ಬೆನ್ನೇಱುವ ಮಗುವಿನಂತೆ (ಧರ್ಮಾಮೃ. ೯-೦೯೭ ಆಡಿಶರ್ಕ); ಭೃಂಗಕುಂತಲವನು ಬಾಗಿಸಿ ನಿಖಿಲಗೋಪಾಂಗನೆಯರು ಜಡೆವೆಣೆಯಿ ತುಂಗಸ್ತನದ ಕೊಪ್ಪರಿಗೆಯು ಕಾವ ಭುಜಂಗನವೊಲು ಬೆನ್ನೇಱಿದುವು (ಪ್ರೋಹಕ. ೦೯-೭೨). **ಬೆನ್ನೇರು** : ೨. ಅನುಸರಿಸು ; ಹಿಂಬಾಲಿಸು : ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಸಾ (ಕಾದಿಂ. ೯೯-೦); ಸೊಗದ ವಿಸಾಸೆಯ ಸರಿಯು ಮಿಗೆ ಮಾನದ್ವೆ ಸಿರಿಯು ಬಗೆಮು ಬೆನ್ನೇರಿ ವ್ಯೈಗೊತ್ತಿ ಸೊಗ ವಿಾರಿ . . . ನಗುತಲಿದೆ (ಕುಂ. ೯೨-೬). ೩. (ಅಲಂ) ಅಧಿಕಾರ ಸ್ಥಾಪಿಸು : ಹೀಗೆಯೇ ಸಲುಗೆ ಕೊಟ್ಟರೆ ಈ ಪಾದ್ರಿಯ ಮಗ ಬೆನ್ನೇರಿಯಾನು (ಭುವರು. ೨೫).
[ಬೆನ್ನು (< ಬೆನ್) + ಏಱು₁ (< ಏಱ್₁)]

**ಬೆನ್ನೋಡು**, ಬೆಚ್ಚೋಡು (ನಾ). ಬಿಸಿಯಾದ ಹೆಂಚು ; ಕಾದ ಓಡು. —ಕಾವಲಿ : ಬೆನ್ನೋಡು, ಬೆಚ್ಚೋಡು (ಕನ್ನಾಸು. ೫೯೩ ಕ್ರಿಯೋ). **ಬೆಚ್ಚೋಡು** : ಬೆಚ್ಚಡಿ, ಬೆಚ್ಚೋಡು (ಶಾಕಾಕೂ. ೦೯೩ ಉದಾ).
[ಬೆಂ₂ (< ಬಿಸಿದು) + ಓಡು₂]

**ಬೆಪೋಡು** (ನಾ). ಒಂದು ಸ್ಥಳದ ಹೆಸರು : ಪುಲ್ವಕಿನಾಡುಸಾಸಿರಮು ಬೆಪೋಡು ಸಾಸಿರಮು (ಎಕ. X. ಶ್ರೀನಿವಾ. ೫೭-೫ ; 770). [ ? ]

**ಬೆಪ್ಪ** 'ಬೆಳ್ಪ' ನೋ.

**ಬೆಪ್ಪಟ್ಟಿ** (ನಾ). ಒಂದು ಊರಿನ ಹೆಸರು ; P ಧಾರವಾಡ ಜಿಲ್ಲೆಯ ಈಗಿನ ಬ್ಯಾಹಟ್ಟಿ: ಬೆಪ್ಪಟ್ಟಿನಾಮ ಗ್ರಾಮೇ (ಎಇ. IX, ೨೦೯-೬೦ ; 750).
[? + ಪಟ್ಟಿ₁]

**ಬೆಪ್ಪತಕ್ಕಡಿ** 'ಬೆಪ್ಪುತಕ್ಕಡಿ' ನೋ.

**ಬೆಪ್ಪನೆ** (ಅ). ಸುಮ್ಮನೆ ; ತೆಪ್ಪಗೆ : ರಂಗಾ ಬೆರಗಾಗಿ ಬೆಪ್ಪನೆ ಕುಳಿತನು (ದಾಸಕು. ೯). [ಬೆಪ್ಪು (< ಬೆಳ್ಪು₂) + —ಅನೆ₁]

**ಬೆಪ್ಪಳ** 'ಬೆಳ್ಪಳ' ನೋ.

**ಬೆಪ್ಪಳಿಸು** 'ಬೆಳ್ಪಳಿಸು' ನೋ.

**ಬೆಪ್ಪಾಲೆ** (ನಾ). ಒಂದು ಬಗೆಯ ಸಸ್ಯ : ಬೆಪ್ಪಾಲೆ, ಕುಡ, ಕೊಡ್ಸೀಗೆ, ಪಾಲೆ, ಕೊಡಮುರ್ಕ (ವೃಕ್ಷಶಿ. ೬೯-೦೬೦೩) ; ಮರಗಳು : ಹೆಸವ . . . ಬಿಲ್ಲು, ಪೂವರಸಿ, ಬೆಪ್ಪಾಲೆ, ಹಾಲೆ (ಪಮ್ಮಾಸು. ೨೩೬). [ ? ]

**ಬೆಪ್ಪಿ** (ನಾ). ದಡ್ಡಿ ; ತಿಳಿಗೇಡಿಯಾದವಳು : ನೋಡಾಕ ಬೆಪ್ಪಿ ಇದ್ದಾಗ ಇದ್ದೀಯ! ಏನು ಜಾಣಮಾತು ಕಲ್ತು ಬಿಟ್ಟೀಯೆ ನೀನು ? (ಮಳಿಮು. ೨೬೨).
[ಬೆಪ್ಪ (< ಬೆಳ್ಪ) + — ಇ₂]

**ಬೆಪ್ಪು** 'ಬೆಳ್ಪು₂' ನೋ.

**ಬೆಪ್ಪುತಕ್ಕಡಿ**, ಬೆಪ್ಪತಕ್ಕಡಿ (ನಾ). ಮಂಕ ; ದಡ್ಡ ; ತಿಳಿಗೇಡಿ ; P ವ್ಯಕ್ತಿ, ವಸ್ತು ಮುಂತಾದುವುಗಳ ಬೆಲೆಯನ್ನು ತೂಗಿ ನೋಡುವ ವಿವೇಚನೆಯಿಲ್ಲದವನು : ಅವನೊಬ್ಬ ಬೆಪ್ಪುತಕ್ಕಡಿ (ಭುವರು. ೩೩೦) ; ಪರವಾಯಿಲ್ಲ. ಅಣ್ಣ ಏನೋ ಬೆಪ್ಪುತಕ್ಕಡಿ ಎಂದು ತಿಳಿದುಕೊಂಡಿದ್ದೆ (ನಾಕಸ್ತ್ರಿ. ೧೩೦) ; ನಾನೇ ತಪ್ಪುತಪ್ಪು ಊಹಿಸಿ ಬೆಪ್ಪುತಕ್ಕಡಿಯಾಗ ಬಾರದು (ಶಾಪಕ. ೬೯). **ಬೆಪ್ಪತಕ್ಕಡಿ** : ನಿಧಾನವೆಂದು ಹೇಳುವೆಯಾ ? ಬೆಪ್ಪತಕ್ಕಡಿ. ಈಗಲೇ ಸಮಯ (ಪುರಾಣಕ. ೦೨೦).
[ಬೆಪ್ಪು (< ಬೆಳ್ಪು₂) + ತಕ್ಕಡಿ₁]

**ಬೆಪ್ಪುತನ** (ನಾ). ದಡ್ಡತನ ; ತಿಳಿಗೇಡಿತನ ; ಮೌಢ್ಯ : ಮೈಸೂರು ರಸಿಕ ಜೀವಾವರೂ. . . ಪ್ರೋತ್ಸಾಹ ಯಾವ ರೀತಿಯಿಂದ ನಿರೀಕ್ಷಿಸು ವುದೂ ಬೆಪ್ಪುತನ (ಬಮ್ಸೆ. ೯೨) ; ಇಳವರಸನ ಮುಖದ ನಗೆ ಮಾಯವಾಗಿ ಬೆಪ್ಪುತನ ಮೂಡಿತು (ಹಸುಹೂ. ೩೦೦).
[ಬೆಪ್ಪು (< ಬೆಳ್ಪು₂) + — ತನ]

**ಬೆಬಡೆ** (ನಾ). ಒಂದು ಬಗೆಯ ಸಸ್ಯ : "ಕಂಡೂರೋಚಿ—ಬೆಬಡೆ, ಮಂ(ಜ)ಷ್ಠೆ" (ಶಿಕಧಿ. ೨೯) ; ಶಾವಮಂಚ . . . ಬೆಬಡೆಬೀಜ, ಮರದರಿಸಿನ, ಇವು ಪ್ರತ್ಯೇಕ ೮ ತೂಕ, ಇವೆಲ್ಲವನ್ನು ಹಾಲಲ್ಲಿ ಅರೆದು . . . ಮಂಡೆ ಗೊತ್ತಲು ಅಸ್ಥಿಯ ಕಟ್ಟೂ ವಾತಪಿತ್ತಶ್ಲೇಷ್ಮದಿಂದಾದ ಮಂಡೆಶೂಲೆ ಯೆಲ್ಲಾ ಮಾಣ್ಗುಂ (ಬಿಪ್ಪಪಿ. ೬೯). [ ? ]

**ಬೆಬ್ಬಕ್ಕಿ** (ನಾ). ಒಂದು ಬಗೆಯ ಹಕ್ಕಿ : "ಜೀವಂಜೀವಃ—ನೌಲುರಕ್ಕೀ, ಬೆಬ್ಬಕ್ಕಿ" (ಶಿದ್ಧಾಂತ. ೦೬೩). [? + ಪಕ್ಕಿ]

**ಬೆಬ್ಬನೆ** (ಅ). ಅತಿಯಾಗಿ ; ಬಹಳವಾಗಿ : ಅವರಿವರೆನ್ನದೆ ಚರಣಕ್ಕೆಱಗಲು ಅಯ್ಯತನವೇಱಿ ಬೆಬ್ಬನೆ ಬೆಱೆತವೆ ನಾಸು (ಬಸವ. ೨೫೩) : ಬೆಬ್ಬನೆ ಬೆಱೆತು ಬಬ್ಬನೆ ಬೀಗಿ ಅಹಂಕಾರಭರಿತನಾಗಿಪ್ಪವನ ಮನೆಯ ಲಿಂಗಸನುಮತರು ಹೊಗರು (ದೇವಾವ. ೨೯-೩೦). 'ಬಿಬ್ಬನೆ' ಪರಾ. [? + —ಅನೆ₁]

**ಬೆಬ್ಬರ** (ನಾ). ದಿಗ್ಭ್ರಮೆ ; ದಿಗ್ಭ್ರಾಂತಿ : ಕಾಮರಾಜನು ಅಕಸ್ಮಾತ್ತಾಗಿ ಬೆಬ್ಬರದಲ್ಲಿದ್ದ ಹುಮಾಯನನ ಪಾಳಯದ ಮೇಲೆ ಬಿದ್ದನು (ಕೋಟಿಪಾದ. ೫೭).

ಬೆಬ್ಬರ ಬೀಳು=ಬೆಚ್ಚಿ ಬೀಳು; ಮೆಟ್ಟಿ ಬೀಳು; ತಲ್ಲಣಿಸು: ಕುಮರಿ ಯವನು ರವಷ್ಟು ತೂಕಡಿಸಿ ಬೆಬ್ಬರಬಿದ್ದು ದಿಕ್ಕುಗಳು ನೋಡುತ್ತಾನೆ (ಕಥಾಮಂ. IV, ೯೫) ; ಅಫಜುಲನು ದೂರ ನಿಂತು ಬೆಬ್ಬಳುಗೊಂಡು ಬೆಬ್ಬರಬಿದ್ದಿದ್ದ ಸೈನಿಕರನ್ನು ಸಂಬೋಧಿಸಿ . . . ಹೇಳಿದನು (ಕೋಟಿಪಿಪೂ. ೦೯). 'ಬೆಳ್ಪಳ' ಪರಾ.

**ಬೆಬ್ಬರಬೆಸೆ** (ಕ್ರಿ). ಬಹಳವಾದ ಅಹಂಕಾರದಿಂದ ಕೂಡಿರು : ಮಾನಕಷಾಯಮೆಂಬುದು ತಮ್ಮಿಂದಗ್ಗಳವಿಲ್ಲೆಂದು ಬೆಬ್ಬರಬೆಸೆದರ್ಪ(ರ್ಪ) ರಿದೇನಾಶ್ಚರ್ಯಮೋ (ಜೀವಸಂ. ೦೯೫-೨೩ ವ). [ಬೆಬ್ಬರ ? + ಬೆಸೆ]

**ಬೆಬ್ಬರಿಸು** (ಕ್ರಿ). ಬೆದರು ; ಗಾಬರಿಯಾಗು : ಕುಂಗಳನ್ನು ಸದೆಬಡಿವ ದೇತರ ಬಿರುದು ಮುದಕೇಸರಿಗೆ ಬೆಬ್ಬರಿಪ ದನುಜರ ಕೊಂದಡತಿಶಯ ವೇನು (ಅನಂತಾ. ೬-೨೦-೨೯) ; ಬೆರೆದಂತೆ ಮೈಮುರಿವ ಬೆಬ್ಬರಿಸಿ ಪಲ್ಗಿರಿವ ಮರದಂತಿರುವನೊಮ್ಮೆ (ವೆಂಕಟಾ. ೨-೩೫-೨೩). 'ಬೆಳ್ಪಳಿಸು₁' ಪರಾ.
[ಬೆಬ್ಬರ + — ಇಸು₃. / ತೆಲು. ಬೆಬ್ಬರಿಲ್ಲು]

**ಬೆಬ್ಬಳ** 'ಬೆಳ್ಪಳ' ನೋ.

**ಬೆಬ್ಬಳಂಗೊಳ್**, ಬೆಬ್ಬಳಗೊಳ್, ಬೆಬ್ಬಳಗೊಳು, ಬೆಬ್ಬಳಿಗೊಳ್, ಬೆಬ್ಬಳುಗೊಳ್ಳು (ಕ್ರಿ). ೧. ಭಯದಿಂದ ಅಸ್ಥಿರವಾಗು,—ಚಂಚಲ ವಾಗು ; ಅಧೀರವಾಗು : ಇಂತು ಬೆಬ್ಬಳಂಗೊಂಡು ನಾಮೆಲ್ಲರುಂ . . . ಇವರಂ ಗೆಲ್ವುದೆಮಗರಿದೆಂದೆಣಿಸಿ ನಿಲ್ಲದೆ (ಮಲಾಶ. ೨-೯೦ ವ). **ಬೆಬ್ಬಳಗೊಳ್** : ೧. ಕಂಡವರು ಬೆಱಗಾಗಿ ಬೆಬ್ಬಳಗೊಂಡು ನೋಡುತಲಿರ್ದರು (ಶ್ರೀಕುಮಾ. ೨೨-೩೮). **ಬೆಬ್ಬಳಗೊಳು** : ೧. ಅಬ್ಬರಿಸಿ ಬೊಬ್ಬೆಯಂ ಕೊಟ್ಟಿಬ್ಬಿಸಿದೊಡೆ ಶಾಪಮಿಗಾಗುವಿಾತನೆನುತ್ತಂ ಬೆಬ್ಬಳ[ಶಾಕಾಂ. ಳಿ]ಗೊಳುತುಂ ಬ್ರಹ್ಮನೆಬ್ಬಿ ಸಲನುಮಾನಮಂ ಮನಸ್ಸಿಂ ಬಗೆದರ್ (ಧರ್ಮಾಶ. ೩-೬೯). **ಬೆಬ್ಬಳಗೊಳ್** : ೨. ಭ್ರಮೆ ಹೊಂದು : ಪತಿಯೊಲಿಯೆ ಉಬ್ಬರಿಸದೆ ಕಡುಮುಬ್ಬಿನೊಳಾಡದೆ ಬೆಬ್ಬಳಿಗೊಳ್[ಶಾಕಾಂ. ಳಿಯಾಗ]ದಳೀ ಸಾಧ್ವಿ (ಜಸವ. ೦೦-೬೩). **ಬೆಬ್ಬಳು ಗೊಳ್ಳು** : ೧. ಅಫಜುಲನು ದೂರ ನಿಂತು ಬೆಬ್ಬಳುಗೊಂಡು ಬೆಬ್ಬರ ಬಿದ್ದಿದ್ದ ಸೈನಿಕರನ್ನು ಸಂಬೋಧಿಸಿ . . . ಹೇಳಿದನು (ಕೋಟಿಪಿಪೂ. ೦೯).
[ಬೆಬ್ಬಳ (<ಬೆಳ್ಪಳ) + ಕೊಳ್₁]

**ಬೆಬ್ಬಳಂಬೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳಗೊಳ್** 'ಬೆಬ್ಬಳಂಗೊಳ್' ನೋ.

**ಬೆಬ್ಬಳಗೊಳಿಸು** (ಕ್ರಿ). ಭಯಪಡಿಸು ; ಅಂಜಿಸು : ಬೊಬ್ಬೆಯುಬ್ಬರ ದಿಕ್ಪಾಲಕರನು ಮಿಗೆ ಬೆಬ್ಬಳ [ಪಾಠಾಂ. ಬೊಬ್ಬೆ]ಗೊಳಿಸಿ ದಾನವನ ಕೊಬ್ಬಿದ ಬಲವೆಯ್ತಂದು ಮುತ್ತಿತು ರಾಮನೊಬ್ಬನನಾ ಕಳದೊಳಗೆ (ತೊರವೆರಾ. ೪೩-೯೩). [ಬೆಬ್ಬಳಗೊಳ್ (<ಬೆಬ್ಬಳಂಗೊಳ್) + _ ಇಸು$_1$]

**ಬೆಬ್ಬಳಗೊಳು** 'ಬೆಬ್ಬಳಂಗೊಳ್' ನೋ.

**ಬೆಬ್ಬಳವಾತು** (ನಾ). ದಿಗ್ಭ್ರಮೆ ಹಿಡಿಸುವ ಮಾತು: ನಾಮಿಾ ಸಬ್ಬವ ಕಾಟನ ಬೆಬ್ಬಳವಾತಿಂಗೆ ಬೆಕ್ಕಸವಡದೇತರ್ಕಾಮೆಕ್ಕತಳಂಗೊಂಬುದು (ಜಕಾ. ೬೭೭ ವ). [ಬೆಬ್ಬಳ (<ಬೆಳ್ಪಳ) + ಮಾತು$_1$]

**ಬೆಬ್ಬಳವೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳಿ** 'ಬೆಳ್ಪಳ' ನೋ.

**ಬೆಬ್ಬಳಿಗ** (ನಾ). ಹೆದರಿದವನು; ಭಯಪಟ್ಟವನು : 'ಬೆಬ್ಬಳಿಗಿತಿ' ಪರಾ. [ಬೆಬ್ಬಳಿ (<ಬೆಳ್ಪಳ) + _ ಗ$_2$]

**ಬೆಬ್ಬಳಿಗಿತಿ** (ನಾ). ಹೆದರಿದವಳು ; ಗಾಬರಿಗೊಂಡವಳು : ಅವನಿಗೆ ಕಣ್ಣೆತ್ತಲೂ ಆರದ ಬೆಬ್ಬಳಿಗಿತಿಯಾಗಿ, ಅಂತಹ ಸುಸಮಯವನ್ನು ಹಾಳೇರಿಸಿ ವ್ಯರ್ಥಮಾಡಿ ಕಳೆದೆ ! (ಮುಕ್ರಕ. ೩೬-೦೯). [ಬೆಬ್ಬಳಿಗ + _ ಇತಿ$_1$ (<— ಇತ್ತಿ)]

**ಬೆಬ್ಬಳಿಗೊಳ್** 'ಬೆಬ್ಬಳಂಗೊಳ್' ನೋ.

**ಬೆಬ್ಬಳಿತ** (ನಾ). ಅಧೀರನಾದವನು : ಒಬ್ಬಳುಂ ತಲೆಯುಡರ್ದಳೊಬ್ಬಳುಂ ತೊಡೆಯುಡರ್ದು ಕೊಬ್ಬುತ್ತಲಹರೆ ಯಿನ್ನೊಬ್ಬಳುಂ ಪಡಬಡಿಸಿಯೆಲ್ಲಿಟ್ಟು ಕೊಂಬೆಯೆನಲು ಬೆಬ್ಬಳಿತನಾಗಿ ನಿನಗೊಂದು ಲಂಚವನೀವೆ ತುಬ್ಬಸದಿಂ ಮಾತ ಭಕ್ತರೊಳಗೇದೆನುತೆ (ಕೃಶುಪು. ೯-೯೬). [ಬೆಬ್ಬಳಿ (<ಬೆಳ್ಪಳ) + _ ತ$_3$]

**ಬೆಬ್ಬಳಿಯೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳಿವೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳಿಸು** 'ಬೆಳ್ಪಳಿಸು' ನೋ.

**ಬೆಬ್ಬಳು** 'ಬೆಳ್ಪಳ' ನೋ.

**ಬೆಬ್ಬಳುಗೊಳ್ಳು** 'ಬೆಬ್ಬಳಂಗೊಳ್' ನೋ.

**ಬೆಬ್ಬಳೆ** 'ಬೆಳ್ಪಳ' ನೋ.

**ಬೆಬ್ಬಳೆಪೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳೆಯೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳೆವೋಗು** 'ಬೆಳ್ಪಳಂಬೋಗು' ನೋ.

**ಬೆಮರ್$_1$**, ಬೆಮರು$_1$, ಬೆವರು$_1$, ಬೆವೆ (ಕ್ರಿ). ಬೆಮರ್ತು, ಬೆವತು, ಬೆವರ್ತು (ಭೂತಕೃ). ೧. ಚರ್ಮರಂಧ್ರಗಳಿಂದ ಘರ್ಮಜಲ ಹೊರಸೂಸು; ಸ್ವೇದಗೊಳ್ಳು : "ಬೆಮರ್—ಸ್ವೇದಭಾವೇ" (ಶಮಧಾ); ಮಂದೆಯೊ ಪಾಂಡವರ್ದರಂತುಮ್ಮನೆ ಬೆಮರುತ್ತುಮಿರ್ದ ಕರ್ಣನಂ ದುರ್ಯೋಧನಂ ಕಂಡು (ಪಂಪಭಾ. ೨-೬೨ ವ); ಆ ರವಮಂ ನಿರ್ಜಿತಕಂಠೀ ರವರವಮಂ ನಿರಸ್ತಘನರವಮಂ ಕೋಪಾರುಣನೇತ್ರಂ ಕೇಳ್ದಾ ನೀರೊಳ ಗಿರ್ದುಂ ಬೆಮರ್ತನುರಗಪತಾಕಂ (ಗದಾಯು. ೬-೨೨). ೨. ಭಯಪಡು; ಹೆದರು : "ಸೆಡೆವಂ . . . ಬಳ್ಕಿದನೆಂದೆಡೆವಿಡದೆಯೆ ಬೆಮರ್ತನೆನಲ್ಕೊಡ ನೆಯಿ ಭಯಭ್ರಾಂತನಕ್ಕು" (ಕವಿಕಂ. ೧೧೯). **ಬೆಮರು$_1$ :** ೧. ಮೊಗ ಬೆಮರೆ ಶೀಕುತಂ ಪರಿತಂದು (ಬಸರ. ೯-೯೬); ಗಾಳಿ ಬೆಮರುವುದುಂಟೆ (ಶಿವಾನ್ಯಕ್ರೀ. ೪-೪೦); ಬೆಮರುವುಂಗ ಕಡುಗೆಂಪು ಪರಿದು ರಾಜಿಸುವಧರಗಳ ಸುರತಾಂತಶ್ರಮದಿಂದಪರಿರ್ವರು ಮೆಚ್ಚಿದರು (ಶಂಪಪ. ೦೦-೩೦); ಜಲದ ಒಳಗಿನ ಕಲ್ಲು ಸಲೆ ಬೆಮರಬಲ್ಲುದೆ (ಸರ್ವಜ್ಞ. ೦೬೦). **ಬೆವರು$_1$ :** ೧. ಒಮ್ಮೊಮ್ಮೆ ಬೆವರುತ್ತಂ ಆನಂದಜಳಮಂ ಸೂಸುತಂ . . . ಸಂಗನ ಬಸವಂ ಶರಣರ ಸಮಿಾಪಕಿರ್ದಿರ್ದು ಹರುಷದಿಂ ಪರಮಸುಖಿಯಾಗಿರ್ದಂ (ಬಸರ. ೬-೦೦೨); ಬೆವತುವು ದಿವ್ಯಲಿಂಗಗಳೆಳುಕಿ ಪರ್ವತದಂತೆ ಬಿದ್ದುದು ಶೀತ ಹೊಗೆ ಮಸಗಿ (ಶಿಶೀಂ. ೦೯-೩); ಉರಿಯುವ ಸುಡುಬಿಸಿಲಿಗೆ ಬೆವರುತ್ತ ನಡೆದೆ (ರೂಢಶಂ. ೭). **ಬೆವೆ :** ೧. ಅಂಗೈ ಅಂಗಾಲುಗಳು ಬೆವೆಯುವುದು ಅಂದರೆ ಹಸಿಯಾಗುವುದು (ಭ್ರಕ್ಷಜ. ೨೩).

**ಬೆವತು ಹೋಗು** = ೧. ಹೆದರಿಕೆ, ಅವಮಾನಗಳಿಂದ ಬೆವತು ಕೊಳ್ಳು. ೨. (ಬೆವರುವುದರಿಂದ) ಆಯಾಸ ಹೊಂದು: ಬಿಸಿಲ ಝಳಕ್ಕೆ ಮಗು ಬೆವತು ಹೋಗಿದೆ (ರೂಢಿ).

[ದೇ.॥ ತಮಿ. ವೆಯರ್, ವೇರ್, ವಿಯರ್ ; ಮಲ. ವಿಯರ್ ; ತುಳು. ಬಿಗರು, ಬಿಗಪು; ಕೊಡ. ಬೆವರ್]

**ಬೆಮರ್$_2$**, ಬೆಮರು$_2$, ಬೆವರ್, ಬೆವರು$_2$ (ನಾ). ಸ್ವೇದಜಲ; ಘರ್ಮ : ಸುರಿಯೆ ಬೆಮರ್ ಕುರುಳ್ಗಳಿಡಿದು ಮುತ್ತುಗಳಂ ಮುಚಿದುಂಬಿ ಕಾಣುವಂತಿರೆ (ಶಂಪಭಾ. ೯-೬೦); ಬೆಮರಿಂ ಮುಟುಗಿದವೇಂ ಸಂಭ್ರಮದಿಂ ಬಿದ್ದಪ್ಪಂ (ಕಾದಂಬ. ೩೭); ಕೆದಜಿದಳಕವಕ್ಕಾಡುವ ಬೆಮರ್ (ಹಕಾ. ೯-೨೯). **ಬೆಮರು$_2$ :** ಮೈಯುಲಿ ಸುರಿವ ಬೆಮರಿನ ಚರಣದೆತಹುಗಳೊತ್ತಿಗಲ್ಲುಗಳ (ಶಿವಾನ್ಯ. ೬೦೨. ೪-೦೨); ಪಣೆಯೊಳುದಿಸೆ ಬೆಮರಾತನ ರೌದ್ರಕೆ ಮಣಿವಳಂಕಿದ ಗುರುನಾಥ (ಜನಾಂಗನಾ. ೬-೩೦). **ಬೆವರ್ :** ಅಂತು ನೋಡಿ ಬೆವರೊಳ್ ಮುಟಿಂಗಿ ನಡುಗುತ್ತಂ (ಕಾದಂಬ. ೨೯೯). **ಬೆವರು$_2$ :** ಬವರವಾದರೆ ಹರನ ವದನಕೆ ಬೆವರ ತಹೆನು (ಶಿವಾನ್ಯಕ್ರೀ. ೪-೩೬); ಮೈ ಮೇಲೆ ಹೊಲಸು ಇದ್ದರೆ ಅದು ರೋಮರಂಧ್ರಗಳ ಬಾಯಿಗೆ ಕೂತು ಬೆವರಿಗೆ ಅಡ್ಡಿಮಾಡುತ್ತದೆ (ಮುಂಬಯಿ. ೪-೨೯); ನಿಮ್ಮ ಕೆನ್ನೆಯ ಬೆವರ ಒರಸಾಳೆ (ಜಾಕಪ. ೦೨೭).

**ಬೆವರಾಡು** = ಬೆವರು ಬರು ; ಸ್ವೇದಗೊಳ್ಳು : ತ್ರಿದೋಷದಲ್ಲಿ ಸಾವವನ ನಾಡಿ ಅತಿಶೈತ್ಯವಾಗಿ ತುಪ್ಪದ ತೊಡೆದ ಹಾಗೆ ನಯವಾಗಿ ಬಂಕೆ ಬೆವರಾಡುವದು (ವೈದ್ಯಸಾ. I. ೩). **ಬೆವರಿಳಿಸು** = ೧. ಕಷ್ಟಪಡು; ಶ್ರಮವಹಿಸು : ಬೆವರಿಳಿಸಿ ಸಂಪಾದಿಸಿದ ಹಣ ಕೈಗೆ ಹತ್ತುತ್ತದೆ (ರೂಢಿ). ೨. (ಅಲಂ) ಅವಮಾನ ಮಾಡು; ತೇಜೋವಧೆಗೊಳಿಸು : ಮನೆಗೆ ಬಂದ ಅವನನ್ನು ಬೆವರಿಳಿಸಿ ಕಳಿಸಿದರು (ರೂಢಿ). **ಬೆವರುಸುರಿಸು** = ೧. ಮೈಯಿಂದ ಬೆವರು ಇಳಿಯುವಂತೆ ಮಾಡು. ೨. ಕಷ್ಟಪಡು ; ಶ್ರಮಿಸು : ಬೆವರುಸುರಿಸಿ ತಂದ ಅನ್ನ (ಜಾನೋ. ೦೦). **ಬೆವರೂರು** = ಬೆವರಿನಿಂದ ನೆನೆ, — ಒದ್ದೆಯಾಗು : ಬಟ್ಟೆಬರೆಗಳೂ ಹೊರೆಯಾದುವು; ಬೆವರೂರಿತು, ವಾಕ್ಯಗಳು ಬೆನ್ನೇರಿದುವು (ಕಾರೂರ. ೦೩ ಕಥಾಸಾರ). **ಬೆವರೊಡೆ** = ಬೆವರೂರು : ರಾಮಪ್ಪನ ಮುಖ ಬೆವರೊಡೆಯಿತು (ಬಿನ್ನಾಣ. ೨೦); ಮೈತುಂಬ ಬೆವರೊಡೆದುಹೋಯ್ತು (ಇಕ್ಷಿಕ. ೨೯೭).

[< ಬೆಮರ್$_1$. / ತಮಿ. ವೆಯರ್, ವೇರ್, ವಿಯರ್ ; ಮಲ. ವಿಯರ್ಪ್ಪು, ವೇರ್; ತುಳು. ಬೆಮರ್, ಬಿಗರ್ ; ಕೊಡ. ಬೆವರ್]

**ಬೆಮರಾನ್** (ಕ್ರಿ). ಬೆವರನ್ನು ಹೊಂದು : ಮಳಲೊಟ್ಟಲನೇಱು ಪಾಱು ಗುಪ್ಪೆಯನಾಡಿ ಬಳಲ್ದುವಯವ ಬೆಮರಾಂತು ಕೆಳದಿಯು ಕೈಮುಟ್ಟಲು ಸೌಖ್ಯಂಗಳ ತಳೆದುವನೇಕ ಪುಷ್ಪಗಳು (ಪೋಹಶ. ೪-೩೬).

[ಬೆಮರು$_2$ (<ಬೆಮರ್$_2$)+ಆನ್$_1$]

**ಬೆಮರಿಡು**, ಬೆವರಿಡು (ಕ್ರಿ). =ಬೆಮರ್$_1$ ೧ : ಮೋಟಿಗಳು ಬೆಮರಿಡುತ ಹೊಯ್ಲಂ ತೋಱುತ (ಚಕ್ರ. ೩೨-೦೩); ಜಲಜಮುಖಿ ಬೆಮರಿಡಲು ಕೊರಳಿನ ಲಲಿತ ಮುಕ್ತಾಹಾರವಲ್ಲಾಡಲು ಸೆಱಗನಳವಡಿಸಿ ನಿಂದಳು ಬಳಲಿ ಬಿಸುಸುಯ್ದು (ಪಳತ. ೨-೩೪). **ಬೆವರಿಡು :** ಆ ಮಾತು ಕೇಳಿ ನನಗೆ ಬೆವರಿಟ್ಟಿತು (ರೂಢಿ). [ಬೆಮರ್$_2$ + ಇಡು$_1$]

**ಬೆಮರಿಳಿ**, ಬೆವರಿಳಿ (ಕ್ರಿ). ಬೆವರು ಸುರಿ : ಬೆಮರಿಳಿದು ಬಿಸುಸುಯ್ದು ಮುಡಿ ಬಿರ್ಚಿ ಮುನಿಸುರ್ಕಿ (ಶತ್ರುಂಗ. ೩೩-೦೯೩೦). **ಬೆವರಿಳಿ :** ಬರಿಯ

ಉದ್ವೇಗದಿಂದಲೆ ಆಯಾಸಗೊಂಡಂತೆ ಅವನ ಮುಖದ ಮೇಲೆ ಬೆವರಿಳಿಯು ತೊಡಗಿತ್ತು (ಮರಿಮ. ೦೮೩) : ಅವರೆದುರಿಗೆ ನನಗೆ ರೋಮಾಂಚವಾಗಿ ಬೆವರಿಳಿದು ಮಾತೇ ಮರೆತುಹೋಗುವುದು (ಝೂಠಾತಿ. ೨೦೩).

[ಬೆಮರ್₂ + ಇೞಿ₁ (< ಇೞಿ)]

**ಬೆಮರ್ದು₁** 'ಬೆಮರ್₁' ನೋ.

**ಬೆಮರ್ದು₂** 'ಬೆಮರ್₂' ನೋ.

**ಬೆಮರ್ಚು** (ಕ್ರಿ). ಬೆವರುವಂತೆ ಮಾಡು; ಬೆವರು ತರಿಸು: "ಬೆಮರ್ಚು—ಸ್ವೇದಕರಣೇ" (ಕಮಾ).

[ಬೆಮರ್₁ + —ಚು₁]

**ಬೆಮರ್ವಡೆ** (ಕ್ರಿ). = ಬೆಮರಾನ್ : ಕಕ್ಷಸೊನೆ ಬೆಮರ್ವಡೆದ ಸೊಗಡ ವಾಸಿಸುತ ಬಿಡೆಯುವಿಲ್ಲದ ಕುಚ ಬಿಗುಹೇೞ್ ರುತುಕಾಲವಡೆದ ಪುಷ್ಪಿಣಿಯ ರೊಪ್ಪದರು (ವೋಶತ. ೦೪–೩೨).

[ಬೆಮರ್₂ + ಪಡೆ₁]

**ಬೆಮರ್ವನಿ**, ಬೆವರುಹನಿ (ನಾ). ಬೆವರಿನ ಹನಿ; ಸ್ವೇದಜಲ: ಬೆಮರ್ವನಿ ಕೈವಿಗೆ ಲಜ್ಜಾನಮಿತಾನನೆ . . . ನೋಡಿದಳ್ (ಶಂರಾವಾ. ೬–೦೩); ನುತರೋಮಾಂಚಂಗಳೇಳಲ್ ಬೆಮರ್ವನಿ ನೆಗೆಯಲ್ ಗದ್ಗದಂ ಪೊಣ್ಮೆ (ರಣ್ಣಶ. ೩೯); ಅಮರ್ದಪ್ಪಿ ಚುಂಬಿಸಿ ನೆರೆಯೆ ಬೆಮರ್ವನಿ ತೊಟ್ಟಿಟ್ಟು ಸುಯ್ಯೆಲರುಬ್ಬಿತೆಂದಮಮ ಕೋವಿದರಾಡಬಹುದೆ (ಶರಶ. ೦೦–೦೬). **ಬೆವರುಹನಿ**: ಓಡಿಬಂದುದರಿಂದ ಅವನ ಹಣೆಯ ಮೇಲೆ ಬೆವರುಹನಿ ಸಾಲುಗಟ್ಟಿದ್ದವು (ಲೂ).

[ಬೆಮರ್₂ + ಪನಿ₂]

**ಬೆಮರ್ಸಾಲೆ**, ಬೆವರುಸಾಲೆ (ನಾ). ಬಿಸಿಲಿನ ಜಳದಿಂದ ಉಂಟಾಗುವ ಒಂದು ಬಗೆಯ ಗುಳ್ಳೆ; ಬೆವರುಗುಳ್ಳೆ: (ಸ). **ಬೆವರುಸಾಲೆ**: ಬೆವರುಸಾಲೆಯಿಂದ ಮಗುವಿಗೆ ತೊಂದರೆಯಾಗಿದೆ (ಲೂ).

[ಬೆಮರ್₂ + ಸಾಲೆ₁]

**ಬೆಮಿಸು** (ಕ್ರಿ). ಭ್ರಾಂತಿಗೊಳ್ಳು; ಭ್ರಮಿಸು: "ಬೆಮಿಸು (ಬೆಮಿಸು)—ಭ್ರಮಿಸು" (ಕನ್ನಕೋ. ೩೨); ಧುಮುಕಿ ಸರಸಿಜಲದಿ ಸೊಗದಿ ಮಿಂದು ಬೆಮಿಪವು (ಕೋಹಿಸೂ. ೧೦೨).

[< ಭ್ರಮಿಸು]

**ಬೆಮೆ** (ನಾ). ಭ್ರಾಂತಿ; ಭ್ರಮೆ: "ಬೆಮೆ (ಬೆರ್ಮೆ)—ಭ್ರಮ=ಗಲಿಬಿಲಿ" (ಕನ್ನಕೋ. ೩೨); ಸೂಡಿದ ಮುಡಿಯಿಂ ಸಡಿಗಡಿಗೆ ಸೂಸುವ ಬಿಸುಮಲ್ಲಿಗೆಯ ಕಂಪಿನೊಡವರ್ಪಳಿಗಳ್ಗೆ ನಡೆವಳ್ಳಿಯ ಬೆಮೆಯುಂ ಪುಟ್ಟಿಸಿಯುಂ (ರಾಶವಾಶ್ರ. ೫೯–೦೦); ಕೆಂದಾವರೆಯ ಕೊಳಂಗಳ್ ಬೆಳ್ದಾವರೆಯ ಕೊಳಂಗಳಿವೆನುತ್ತೆ ಬೆಮೆಯೊದವಿಸುಗುಂ (ಮಠಾಶ. ೩–೨೯); ಇಲ್ಲಿ ಯಾವು ದಾದರೂ ನಾಡಿನ ಮಹಾರಾಣಿಯವರು ಬೀಡುಬಿಡುವರೆಂದು ನಿಮಗೆ ಯಾರಾದರೂ ಬೆಮೆ ಹುಟ್ಟಿಸಿದರೋ? (ಸಪಾ. ೭೭).

[< ಭ್ರಮೆ]

**ಬೆಮೆಗೊಳ್**, ಬಮೆಗೊಳ್, ಬೆಮೆಗೊಳು (ಕ್ರಿ). ೧. ಭ್ರಾಂತಿಗೊಳ್ಳು; ಭ್ರಮಿಸು: ಮಂಗಳಾಚ್ಯುತನ ಮೂರ್ತಿಯನು ಕಂಗಳಿಂದಲೆ ನೋಡಿ ಬೆಮೆಗೊಂಡು ನವ್ಯಪುಷ್ಪಂಗಳಿಂದಿಟ್ಟರಚ್ಯುತನ (ಮೋಶತ. ೯೨–೩೭); ಸುಮಶರಂಗಳು ನಾಂಟೆ ಹೃದಯದೊಳಮಮ ಕಡುಬೆಮೆಗೊಂಡ ಕಾಮ ಶಿಯು ಕಮಲಲೋಚನೆಯೆಡೆಗೆ ಬಂದನು (ರಾಶಶಸಂ. ೩–೪–೩೩) : ಭೂಮಿ ಬರಿದೇನೆ ಕಣೊ ! ತಾಯಿಮುಡಿಲೆಂದೇಕೆ ಬರಿದೆ ಬೆಮೆಗೊಂಡಿರುವೆ? (ಶಾಂಶಿ. ೩೦–೦೭). **ಬಮೆಗೊಳ್**: ೨. ಮರುಳಾಗು; ಮನೋವಿಕಲತೆಯನ್ನು ಹೊಂದು: ಶವರ ಪಿತರ್ ಖಳರಿಕ್ಕಲ್ ಬಮೆಗೊಂಡ ನರಂಗೆ ಮಿಮಾಯಲಿಜಿಪುದು ಪಾಲಿಂ (ಜಶಪಾ. ೦೪–೬೨). **ಬೆಮೆಗೊಳು**: ೧. ಲೋಕವೆಲ್ಲವು ಛಳಿರಿನಲಾಕಾಶ ಕೂಗಲು ಸೂರ್ಯ ಬೆಮೆಗೊಳಲು (ಕೋಶಿಮ. ೦೦–೬೦).

[ಬೆಮೆ + ಕೊಳ್₁]

**ಬೆಮೆಗೊಳು** 'ಬೆಮೆಗೊಳ್' ನೋ.

**ಬೆಮ್ಮರ** (ನಾ). ೧. ಕಟ್ಟಡದ ಮೇಲ್ಛಾವಣಿಯಲ್ಲಿ ಹಾಕುವ ಮುಖ್ಯವಾದ ತೊಲೆ,—ನಡುವಿನ ತೊಲೆ: ನಂಜಿನ ಭೂಮಿಯ ಮೇಲೆ ಸಂದೇಹದ ಕವರ ನೆಟ್ಟು ಮುಂಜುಳದ ಮೂಜಿಂಗದ ಮುಂಡಿಗೆಯ ನಟ್ಟು ಸರಂಗದ ಸುವಂಶದ ಪೊಂಕಜತ ಬೆಮ್ಮರನ ಹಾಕಿ (ಸಕವ. I. ೧೩೬–೦೦೪). ೨. (?) : ಕಡಿದೊಣಗಿರ್ದ ಬೆಂದುಡಿದ ಕೊಂಬುಗಳಿಲ್ಲದ ಬಳ್ಳಿ ಸುತ್ತು ಗೊಂಡಡರಿದ ಬೆಮ್ಮರಂಗಳೊಡನೊಂದಿದ . . . ಬಂಜೆ ಕೈಪಿಮರನೊಂದದ ಬಾಧೆಗಳೊಂದುಮಿಲ್ಲದಿರ್ಪಡೆಗಳ (ಶೋಕೋಶ. ೦೨–೩೩); ಮೂಳೆಯ ಕಂಭಮಿಲ್ಲಿ ನಿಡುಯೆಲ್ವಿನ ಬೆಮ್ಮರನಂತೆ ಪತ್ರಿಕೊಂಡೋಳಿಯ ನೀಳ್ದು ನಿಂದ ಬಜಿಯಲ್ಲಗಳ್ (ಜಲಸಂ. ೦೩೦–೨೨).

[ಬೆನ್ + ಮರ₁]

**ಬೆಮ್ಮಾಡು** (ನಾ). ಹಿಂದಕ್ಕೆ ಬಾಗಿರುವ ಮಾಡು; ಒಪ್ಪಾರು: ಇದೇ ಮನೆ ಎಡಗಡೆಯದು . . . ಬೆಮ್ಮಾಡಿರುವಂಥಾದ್ದು (ರೂಶಿ. ೪).

[ಬೆನ್ + ಮಾಡು₂ (< ಮಾಡ₁)]

**ಬೆಮ್ಮಾರಲು** 'ಬೆಳ್ಮಾರಲು' ನೋ.

**ಬೆಯ್** 'ಬೇ₁' ನೋ.

**ಬೆಯು** 'ಬಿಯಂ' ನೋ.

**ಬೆಯ್ವೊಲ** (ನಾ). ಸುಟ್ಟ ನೆಲ; ಬೆಂದ ನೆಲ: ಬಚಿಯನುಬಿಯದೆ ಪರಿಯೆ ಕೆಯ್ವೊಲನುಮಂ ಬೆಯ್ವೊ[ಪಾಠಾಂ. ಬೆಳ್ವೆ]ಲನುಮಂ ಕಬುಂಬು ಮನಿಜುಂಬುಮಂ ತಾಗುವುಂ ಬಾಗುವುಂ (ಲೀಲಾವ. ೬–೨೦ ವ).

[ಬೆಯ್ (< ಬೇ₁) + ಪೊಲ]

**ಬೆರಂಜು** (ಕ್ರಿ). ಒಟ್ಟುಗೂಡಿಸು; ಕಲೆಹಾಕು: "ಬೆರಂಜು—ಚಯನೇ (ಒಟ್ಟುಗೂಡು)" (ಕಮಾ).

[?]

**ಬೆರಕಿ** 'ಬೆರಕೆ' ನೋ.

**ಬೆರಕೆ**, ಬೆರಕಿ, ಬೆರ್ಕಿ (ನಾ). ೧. ಸೇರಿರುವುದು; ಮಿಶ್ರಣ: ಪ್ರಸಾದನಿಷ್ಠೆ ಬೆರಕೆಯುಲ್ಲಿ ಬೀಯುವಾಯಿತ್ತು (ಶಶವ. ೮೬೩); ಪರಿಪರಿಯ ರನ್ನದೊಡವಿನ ಬೆರಕೆಯ ಬೆಳಗಡರೆ (ಕನ್ನಶಾ. ೦೪೬). 'ಕಲಬೆರಕೆ' ಪರಾ. ೨. ಕೂಟ; ಕೂಡುವುದು: ಬೆರಕೆಗೆ ಪೇಸುವಳ್ ಬೊಜಗರವ್ವರ ನಂಟರೊಳಂಗಹೀನರುಂ ತರುವಲಿ ಗಂಡರುಂ ಮನೆಗೆ ಬಂದೊಡೆ ನಾಣ್ಚುವಳ್ (ಲೀಲಾವ. ೨–೬೧). ೩. ಹೊಂದಾಣಿಕೆ; ಹೊಂದಿಕೆ; ಸಾಮರಸ್ಯ: ಬೆರಕೆಯೇ ಬಾಳ ಸವಿ ಬೆರಕೆಯುಲ್ಲದ ಬಾಳ್ವೆ ಹಿರಿನರಕ ಕೇಳು (ಬಾಗ. ೭೩–೨). **ಬೆರಕಿ**: ೪. (ಉಕ) ಚುರುಕಾದ ವ್ಯಕ್ತಿ; ಚಾಲಾಕಿರುವ ವ್ಯಕ್ತಿ: ಹುಚ್ಚರೇ ಆಗಲಿ . . . 'ಬೆರಕಿ'ಗಳೇ ಆಗಲಿ ಯಾರೇ ಆದರೂ ಶಿಷ್ಯೆಗಳು ಬೇಕೇ ಬೇಕು (ಶುಂಗಾಶಿ. ೬); ಇವ ಮಾತ್ರ ಬಾಳ ಬೆರಕಿ ಆಕ್ಯಾನು (ರಕ್ತಕ್ಕ. ೦೧). (ಗು). ೫. ಚಾಲಾಕಿನಿಂದ ಕೂಡಿರುವ; ಚುರುಕಾದ: ಬಲೆ ಬೆರಕಿ ಹುಡುಗಿ ಬಾಲಿ (ಮುಚ್ಚುಶಿ. ೯೩). **ಬೆರ್ಕಿ**: ೪. ಶೀನ್ಯಾ! ಬೆರ್ಕಿ! ನಮ್ಮನ್ನು ಕರಿಯದೆ ಶಾಲೆಗೆ ಬಂದೆಯಾ? (ಐರಾಶಿ. ೬೩). ೫. ಅಲ್ಲದೆ ಬೆರ್ಕಿದೇಸಾಯಿ ತನ್ನ ಸವಿ ಮಾತುಗಳ ಮೇಲೆ ತಣ್ಣೀರು ಸುರುದಿ ತಪ್ಪಿಸುವ ಸಂಭವವೂ ಉಂಟು (ಗಂಶಶಾಯು. ೨೯೦).

[ಬೆರೆ₁ + — ಕೆ./ತುಳು. ಬೆರಕೆ. ಬೆರ್ಕೆ, ಬರಕ./ ಮರಾ. ಬೆರಕಾ, ಬೆರಕೀ]

**ಬೆರಕೆಗಂಪು** (ನಾ). ಬೇರೆ ಬೇರೆ ವಸ್ತುಗಳ ಮಿಶ್ರಣದಿಂದುಂಟಾದ ಸುವಾಸನೆ; ಮಿಶ್ರಗಂಧ: ಅಂಜದೆ ಪೊಕ್ಕು ನಡುನೀರೊಳಾಡುವ ವನದೇವಿಯುತ ಸೋರ್ಮುಡಿಯಿಂ ಪರೆವರಲ ಬೆರಕೆಗಂಪಿನ ಪೊಂಪುೞಿಯೊಳ್ (ಕಾದಂಪೂ. ೦೦೭); ಮಗಮುಗಿಪ ವ್ಯಾಗಮದ ಮುಡಿದಕದಂಬ ಪ್ರಸೂನದ ಬೆರಕೆಗಂಪಿಗುರವಣಿಸಿ (೧೧೯. ೨–೦೦೫ ವ).

[ಬೆರಕೆ + ಕಂಪು]

**ಬೆರಕೆಗೂಟ್** (ನಾ). ಬೇರೆ ಬೇರೆ ಬಗೆಯ ಆಹಾರ; ಮಿಶ್ರಣವಾದ ಓಗರ: ನೀವು ಬರಲಕ್ಕಿ ನೆಜಿಯದುದಕ್ಕೆ ಮಿಕ್ಕಿ ಬಮೆಯುಕ್ಕಿಯುಂ ಕಲಸಿ ಮಾಡಿದಡುಗೆಯ ಬೆರಕೆಗೂಟನುಂಡ ಕಾರಣವಾ ಆಗುಬ್ಬಿಳಂ ಬಿಸುಟಂ (ಪುಣ್ಯಾಸ್ರ. ೬–೩೪ ವ).

[ಬೆರಕೆ + ಕೂಟ್₁]

**ಬೆರಕೆಗೆಂಪು** (ನಾ). ವಿಧವಿಧವಾದ ಬಣ್ಣಗಳು ಸೇರಿ ಆಗಿರುವ ಹೊಸ ಬಗೆಯ ಕೆಂಪುಬಣ್ಣ : ನವಮಣಿಸಂತಾನದೊಳಗೆಸೆಯೆ ಬೆರಕೆಗೆಂಪು (ಅಜಿಪು. ೧೦-೩೭) ; ಬೆರಕೆಗೆಂಪಿನ ಬಂಡಾರ ವರವನಸತಿಯ ಲಾವಣ್ಯರಸದ ಪೂರದಿಲವಾದುವಲ್ಲಿ ಕಾಸಾರ (ನೇಮಿಸಂ. ೧-೬೩). [ಬೆರಕೆ + ಕೆಂಪು$_1$]

**ಬೆರಕೆಜನ** (ನಾ). ಜಾತಿಸಂಕರವಾದ ವ್ಯಕ್ತಿಗಳ ಸಮೂಹ : ಪರಿವರಿಸ್ಸೀ ರಾರುಲಕ್ಷವು ಬೆರಕೆಜನರಾಲಯುವು ಲೆಕ್ಕನುಸರದಲಿಹವವನೀಶ ಛತ್ರದ ನೆರಳನಾಶ್ರೈಸಿ (ಐಜ್ಞಪು. ೬೬-೦೫). [ಬೆರಕೆ + ಜನ]

**ಬೆರಕೆವಣ್ಣ** (ನಾ). ಸಂಕೀರ್ಣವಾದ ಬಣ್ಣ ; ಮಿಶ್ರವರ್ಣ : ತಳಿರ ಕಳಕೆಯ ಮಿಡಿಯ ಪೂಗುಡಿಯ ಪಣ್ಣ ದೋರೆವಣ್ಣ ಬೆರಕೆವಣ್ಣದೊಳ್ದಳಿರ ಪುದುವಿನಿಂ ಬೆಡಂಗುವಡೆದು . . . ರತ್ನಮಯ ಭೂಷಣಾಂಗತರುಗಳೆಂತಿರ್ದ ಮಾಕಂದಾನೋಕಹಂಗಳುಂ (ಶಂಪ್ರಪು. ೦-೦೦೫ ವ).
[ಬೆರಕೆ + ಬಣ್ಣ]

**ಬೆರಕೆವರಲು** (ನಾ). ನಾನಾ ವಿಧವಾದ ರತ್ನಗಳ ರಾಶಿ : ವರದರುಶನ ಬೋಧಚಾರಿತ್ರವೆಂಬ ಬಂಧುರಗುಣಮಣಿಭೂಷಣವನು ಉರುಮುದದಿಂ ಕೊಟ್ಟು ತೆಗೆದನು ಮುನ್ನಿನ ಬೆರಕೆವರಲ [ಪಾಠಾಂ. ಬಿರಕೇವಲ]ಭೂಷಣವನು (ಶ್ರೀಪಾಪ. ೦೪-೫೬) ; ಬೆರಕೆವರಲ ಮೊನ್ನ ನೇವಳ ಪೊಳೆದುದು ತರುಣಿಯ ಕಟತಟಾಗ್ರದೊಳ್ (ಭರತ. ೯೦-೫೬). [ಬೆರಕೆ + ಪರಲು$_1$ (< ಪರಲ್)]

**ಬೆರಕೆವರ್ಣ** (ನಾ). = ಬೆರಕೆವಣ್ಣ : "ಸಾರಂಗಃ, ಶಬಳಃ — ಈ ೨ ಬೆರಕೆವರ್ಣಂ" (ಹಲಾಯು. ೦೨೦-೫೦). [ಬೆರಕೆ + ವರ್ಣ]

**ಬೆರಕೆವಾಸಿಗ** (ನಾ). ನಾನಾವಿಧವಾದ ಹೂವುಗಳನ್ನು ಸೇರಿಸಿ ಮಾಡಿದ ಬಾಸಿಗ,—ಮಾಲೆ : ಸುರಯಿಯ ಸುರಹೊನ್ನೆಯಲರ ಬಿರಿಮುಗುಳ ಬೆರಕೆವಾಸಿಗವಮಂ ತಲೆಸುತ್ತಿ (ಅರ್ಧನೇ. ೫-೫೫ ವ). [ಬೆರಕೆ + ಬಾಸಿಗ]

**ಬೆರಕೆವೂವು** (ನಾ). ನಾನಾ ಬಗೆಯ ಹೂವು ; ಅನೇಕ ವಿಧವಾದ ಹೂವು : ಅಸಿಯಲೊರ್ಪಳು ಪಿಡಿದೆತ್ತಿದ ಸಂಪಗೆಯೆಸಳ ಬಾಸಿಗವಾಗಳ ವಳ ಮಿಸುಪ ಕಣ್ಗದಿರ್ಗಳಿಂ ಬೆರಕೆವೂವಿನ ಪೊಚ್ಚಹೊಸಮಾಲೆಯಂತೆ ಮೆಚ್ಚಿದುದು (ಕುಮಾಸಾಂ. ೨೮-೦೯). [ಬೆರಕೆ + ಪೂವು (< ಪೂ$_2$)]

**ಬೆರಕೆವೆಳಗು** (ನಾ). ಬೇರೆ ಬೇರೆ ಬಗೆಯ ಬೆಳಕು ; ಮಿಶ್ರಕಾಂತಿ : ನವರತ್ನಕೂಟಾಗ್ರದಿನುಣ್ಮುವ ಬೆರಕೆವೆಳಗು . . . ಕಣ್ಗೆಸೆದುದು (ಶಂಪ್ರಪು. ೬-೪೫) : ಸಕಲಸೌಂದರ್ಯಮನೊಳಕೊಂಡ ಪೋಲ್ಕಟ್ಟಿನ ಬೆರಕೆವೆಳಗು ಮಂಟಪದೊಳಗಂ ಪೊಱಗಂ ತೆಕ್ಕನೆ ತೀವೆ (೧೦೪. ೧೦-೨೮ ವ) ; ನಸು ನಗೆಯ ಬೆಳುದಿಂಗಳನು ಪೊಳೆವೆಸಳುಗಂಗಳ ಬಳ್ಳಿಮಿಂಚನು ಮಿಸುಪ ತೊಡಿಗೆಯ ಬೆರಕೆವೆಳಗನು ಪಸರಿಸುತ ಬಂದು (ಶಾಲ್ಮಭಾ. ೨೬-೨).
[ಬೆರಕೆ + ಬೆಳಗು$_2$]

**ಬೆರಕೆಸೊಪ್ಪು** (ನಾ). (ಒಟ್ಟಾಗಿಯೆ ಅಡುಗೆಗೆ ಉಪಯೋಗಿಸುವ) ಬೇರೆ ಬೇರೆ ಜಾತಿಗೆ ಸೇರಿದ ಸೊಪ್ಪು : ನೂಲೆಗೆಣಸು ಉಗನಿಕಾಯಿ ಬೆರಕೆಸೊಪ್ಪು ಇತ್ಯಾದಿಗಳನ್ನು ಸಂಗ್ರಹಿಸುವಾಗಲೋ . . . ಆ ಅರಣ್ಯ ಪ್ರದೇಶ ಸುಪರಿಚಿತವಾದದ್ದೆ ಆಗಿತ್ತು (ಮಲೆಮ. ೫೬೬) ; ಬೆರಕೆಸೊಪ್ಪಿನ ಸಾರು ಚಂದ, ಸೂಳೆ ಮಕ್ಕಳು ಚಂದ (ಗಾದೆ). [ಬೆರಕೆ + ಸೊಪ್ಪು$_2$]

**ಬೆರಗಜು** (ಕ್ರಿ). ಉಪಾಯವನ್ನು ತಿಳಿ : ನೊಂದ ಸಿಂಗದ ಮೇಲೆ ಬೆರಗಜು ಯದ ಬಿಲ್ಲಾಳ್ ಪಾಯ್ವಂತೆ ಕಿಚ್ಚು ಬಾಳ್ವೆರಸು ಪಾಯ್ದುಮಂ (ಶಂಕಭಾ. ೦೦-೦೦೬ ವ). [ಬೆರಗು$_3$ + ಅಱಿ]

**ಬೆರಗು$_1$** (ಕ್ರಿ). ಆಶ್ಚರ್ಯಪಡು ; ವಿಸ್ಮಯಹೊಂದು : ಬೆರಗಾಗು : ಮುನಿಪುಂಗವರು . . . ಬೆರಗಿ ದ್ವಾರದ ಪಾಲಕರು ಋಷಿವರರ ಚರಣ ಗಳನು ವಂದಿಸಿ ಚರಿಸಿದರು ಗೃಹಮಧ್ಯದೊಳು ಗಿರಿವರಸಿಗರುಹಲ್ಕೆ (ಪಾವರ್ತ. ೬-೩೯) ; ರಾಜರು ಬೆರಗಿದರು ಲಾವಣ್ಯಲತಿಕೆಯ ರೂಪವನು ಕಂಡು (ರಶುಶಂ. ೬-೦೦). [< ಬೆಜಗು. / ತುಳು. ಬೆರಗು]

**ಬೆರಗು$_2$** 'ಬೆಜಗು' ನೋ.

**ಬೆರಗು$_3$** (ನಾ). ೧. ವೇಗ : ಶೀಘ್ರತೆ : (?). ೨. ಅಧಿಕಪ್ರಸಂಗತನ ; ಧೂರ್ತತೆ : ಬೆರಗಿನಿಂದ ಬೋಳನು ಹೀನವಚನಗಳೆಂಬ ವೇದಮಂತ್ರ ಗಳಿಂದ ಬಯ್ದು ಇದಕ್ಕೆ ಪ್ರತಿಫಲ ಕೊಡದಿರಲಾರೆನೆಂದು ಹಲ್ಲು ಕಚ್ಚಿದನು (ಕಾಲಂಶ. ೯ ಕಥಾಸಾ). ೩. ಉಪಾಯ ; ಜಾಲ : ಪಾತಕಿ ಕೊಂದಳ್ ಬೆರಗಿಂ[ಪಾಠಾಂ. ಗರದಿಂ] ಗಂಡನನಾ ಸ್ತ್ರೀಚರಿತವ್ಯದೇಂ ಕಳಿಯಲರಿದು ಪೆಂಡಿರ ಕೃತಕಂ (ಪುಶೋಕ. ೬-೨೦). ೪. ಕೌಶಲ : ಚಾತುರ್ಯ : ಬೆರ [ಪಾಠಾಂ. ಜ]ಗುಗಳವಸರಾನ್ವಿತಂಗಳು ಬಿಜುಸುಗಳುದಾಸೀನವೃತ್ತಿಗಳೆಜುವು ಗಳು ಕೇಣಂಗಳಪಹಾಸ್ಯಂಗಳಿಚ್ಚೆಗಳು (ಐಪು. ೯೦-೬೦) ; ಬೆರಗು ಚುಂಬನ ವಪ್ಪು ಸೀತ್ಕೃತವೆಱಕ ಜಾಣ್ನುಡಿ ನೋಟ ಬೇಟವು (ಶಾಲ್ಮಭಾ. ೦೭-೨೬). ೫. ವಿವೇಕ : ಒಡನೋದಿದೊಂದು ಬೆರ[ಪಾಠಾಂ. ಜ]ಗಿಂಗೆ ಕೊಲಲ್ಕೆನ ಗಾಗದು (ಶಂಕಭಾ. ೨-೫೦) : "ಉತ್ಸಾಹ" (ಶಂಕದೀ. ೬೬) ; "ಕಾರಣ" (ಶಂಕಭಾ. ಅನುಬಂಧ) ; "ದಾಕ್ಷಿಣ್ಯ" (ಶಂಕಭಾ. ಕೋಶ).
[ದೇ.॥ ತಮಿ. ವಿಲ್ಲೆವು, ವಿರಕು ; ಮಲ. ವಿರವು ; ಕೊಡ. ಬೆರಿಯ ; ತೆಲು. ವೆರವು, ವೆರುವು]

**ಬೆರಗುಗೊಳ್** 'ಬೆಜಗುಗೊಳ್' ನೋ.

**ಬೆರಗುಗೊಳಿಸು** (ಕ್ರಿ). ಆಶ್ಚರ್ಯಪಡುವಂತೆ ಮಾಡು ; ವಿಸ್ಮಯ ಪಡಿಸು : ವೈದ್ಯರನ್ನೂ ವಿಜ್ಞಾನಿಗಳನ್ನೂ ಬೆರಗುಗೊಳಿಸಿತು (ಪಸುಪೊ. ೨೧೮). [ಬೆರಗು$_2$ (<ಬೆಜಗು) + ಕೊಳ್$_1$ + — ಇಸು$_3$]

**ಬೆರಗುಬಡಿ** (ಕ್ರಿ). ಆಶ್ಚರ್ಯಪಡು ; ವಿಸ್ಮಯಹೊಂದು : (ತುಟಿಗೆ ಕೈವೆರಳಿಟ್ಟು ಬೆರಗುಬಡಿದಂತಾಗಿ) (ಶಂಪ್ರಶ. ೫-೦೮) ; ಪೀಂಚಲು ಬೆರಗು ಬಡಿದವಳಂತೆ ಗಂಡನ ಕಣ್ಣನೇ ನೋಡತೊಡಗಿದಳು (ಮಲೆಮ. ೪೬೨).
[ಬೆರಗು$_2$ (< ಬೆಜಗು) + ಬಡಿ$_1$]

**ಬೆರಗುವಡು** 'ಬೆಜಗುವಡು' ನೋ.

**ಬೆರಗುವಾರ್** (ಕ್ರಿ). ಉಪಾಯವನ್ನು ಅಪೇಕ್ಷಿಸು,—ನಿರೀಕ್ಷಿಸು (?) : ಅಳವಿಗೆ ಸಾರ್ದನೇ ಬೆರಗುವಾರ್ದನೆ ಮೆಯ್ದುಟಿಯಿಂದೆ ಪೋರ್ದನೇ ತಿಳಿವೊಡದಿಲ್ಲ . . . ಅಪ್ಪಳಿಸಿದನೆತ್ತಿಕೊಂಡು ಧರೆಗಿಕ್ಕಿದಂ . . . ನೆಗಟ್ಟಂತಕನಂ ಮುರಾಂತಕಂ (ಜಗಪು. ೭-೨೯). [ಬೆರಗು$_3$ + ಪಾರ್$_1$]

**ಬೆರಟು** 'ಬಱಟು' ನೋ.

**ಬೆರಟೆ** 'ಬೆಟ್ಟೆ' ನೋ.

**ಬೆರಣಿ** 'ಬಱಣಿ' ನೋ.

**ಬೆರಲ್, ಬೆರಲು, ಬೆರಳ್, ಬೆರಳು** (ನಾ). ೧. ಕೈ ಅಥವಾ ಕಾಲಿನ ಅಂಗುಲಿ ; ಬೆಟ್ಟು : "ಅಂಗುಲೀ, ಕರಶಾಖಾ—ಈ ೨ ಬೆರಲ್" (ಹಲಾಯು. ೮೫-೩೬೨) ; ನಾನಾಪ್ರಕಾರದ ಕಂಕಣಗಳುಮಂ ತೊಟ್ಟ ಮುಂಗೆಯ್ಯುಂ ಬೆರಲ್ಗಳುಂ . . . ಶುಭಲಕ್ಷಣಾಂಕಿತಮಾಗಿ (ವಡ್ಡಾರಾ. ೦೪೮-೦೮) ; ಬೆರಲ ಕೊರಲ ಕೂಟಂ ಬೆರಲಂ ಮಿಡಿಯಿಸಿದುದು (ಆದಿಪು. ೯-೦೦೭) ; ಬೆರಲೆರಲೊರಲ್ಗೊರಲ್ಸರಲ್ . . . ಲಾಂತಮಿದಂ ಗ್ರಾಮ್ಯ ರಜಿಯದುಚ್ಚರಿಸುವರ್ ಕುಳಾಂತಭ್ರಮೆಯಿಂ (ಶಮದ. ೨೮). ೨. ಒಂದು ಬೆರಳಿನ ಅಳತೆ : ಒಂದು ಅಂಗುಲ : ತಾನಾ ಪೇಚರೇಂದ್ರಂ ಗನೇಂ ಬೆರಲೀಂದಗ್ಗಳದಿಾವ ಕಾವ ಗುಣಮಂ ಪೂಣ್ದೆಂದಭೂಪಾಳಕ (ಎಇ. XXVII, ೭೨-೩೦ : 1114). **ಬೆರಲು** : ೧. ಕೊರಲ ಮೂರೇಖೆಯು ಮಣ್ದೊಡೆವಳು ಸಣ್ಣ ಬೆರಲ ಕೈರೇಖೆಯುಜ್ಜುವಳು (ಪೋಹಕ. ೦೭-೬೪). **ಬೆರಳ್** : ೧. ವಿರಚಿಸಿ ಸುಕುಮಾರತೆಯಂ ಪಿರಿದುಂ ಬೆರಳಿಂದವಂತಿ ನೋಡಿದನೋ . . . ಎನಲಾ ತರುಣಿಯ ಗಂಭೀರನಾಭಿಮಂಡಲ ಮೆಸೆಗುಂ (ಕಾಮಂಕಾ. ೦೦) ; ಎರಡುಂ ಮಡಂಗಳೆಡೆ ನಾಲ್ವೆರಳಂಗುಷ್ಠಂ ಗಳೆಡೆಗಳೆರಡಱಿಡೆಯೊರ್ಗೇಣಾಗಿರೆ (ಸುಕುಮಚ. ೬-೫೬) ; ನಿಡುಮೊಟ್ಟೆಸೆಯೆ

ವರ್ಧಿಕರಮತಿಶಯದಿಂ ಬೆರಳೊಳ್ ರಂಜಿಸೆ (ಧರ್ಮಾಮೃ. ೧-೯೩). **ಬೆರಳು:** ೧. ಎನ್ನ ಕಾಯುವ ದಂಡಿಗೆಯ ಮಾಡಯ್ಯ . . . ಎನ್ನ ಬೆರಳ ಕಡ್ಡಿಯ ಮಾಡಯ್ಯಾ (ಬಸವ. ೩೦೦); ಕಂಬನಿಯ ಮಿಡಿದಳು ಬೆರಳಿನಲಿ (ಪಳಕ. ೩-೧೧); ಬೆರಳು ತೋರಿಸಿದರೆ ಹಸ್ತ ನುಂಗುತ್ತಾನೆ (ಗಾದೆ). ೨. 'ಇಬ್ಬೆರಳು' ಪರಾ. ೩. (ಅಲಂ) ಸಹಾಯ: ಯಾವನೆನ್ನನು ದಿವ್ಯಗತಿಯ ಸೋಪಾನ ವನು ಜೀವಭಾವದ ಬೆರಳು ಕೊಟ್ಟು ಹತ್ತಿಸಿದನೋ (ಕೃಷ್ಣಾಕು. ೯-೬).

**ಬೆರಲಂ ಮಿಡಿಯಿಸು**= (ಅಲಂ) ಸೋಜಿಗವನ್ನು ಉಂಟುಮಾಡಂ: ಅಚ್ಚರಿಗೊಳಿಸು : ಮಿಡಿವಂ ಬೀಣೆಯನಿವನಿವಳೊಡನೆಸೆವಳ್ ಬೆರಲ ಕೊರಲ ಕೂಟಂ ಬೆರಲಂ ಮಿಡಿಯಿಸಿದುದೆನಿಸಿ (ಆದಿಪು. ೯-೧೦೬); ಬೆರಲಂ ಮಿಡಿಯುವ ಪುಲಕಾಂಕುರಮಂ ಪುಟ್ಟಿಸುವ . . . ಅರಮನೆ ಮಾಬ್ಬಿದು ಮಯಂಗತಿವಿಸ್ಮಯಮಂ (ಕಂರಾಪು. ೦-೧೨೯). **ಬೆರಲನಿತು**=ಬೆರಳಿನಷ್ಟು ಅಗಲ : ನಿರುತಿಯ ಕಂಭದಿಂದಮನಿಳಾಸೆಯೊಳಿಕ್ಕುವ ಕಂಭಮಪ್ಪುದೊರ್ವೆರಲನಿತರ್ಕೆ ತಗ್ಗಿತದಜಿಂದೆ ಹರಾಸೆಯೊಳಿರ್ಪ ಕಂಭಮಿರ್ವೆರಲನಿತರ್ಕೆ ಮತ್ತೆ ಕಿಱಿದಪ್ಪುದದರ್ಕೆ ದಲುಮ್ನಮಪ್ಪುದೊರ್ವೆರಲನಿತುಂ ಹವಿರ್ಭುಜನ ಗೊಂಟನ ಕಂಭಮದೂರ್ಜಿತಪ್ಪುದಂ (ಲೋಕೋಪ. ೩-೨೮). **ಬೆರಲ ಸೇವಗೆ**= ಕೈಬೆರಳುಗಳಿಂದ ಹೊಸೆದು ಮಾಡುವ ಸೇವಗೆ : `ವರಡಿ ಗೌವಲಿಯುಪ್ಪೆಮಣಿ ಸಣ್ಣ ಗೋಧೂಮ ಸರವಳಿಗೆ ದೊಡ್ಡಸೇವಗೆ ಕಮುಬುಪುಂಡಲಿಗೆ ಬೆರಲಸೇವಗೆಯಾದಿಯಾಗಿಯಡವಾದ ಕಜ್ಜಾಯಗಳ ತೆಗೆದು ಕೊಂಡು (ಸೂಶಾ. ೩-೬). **ಬೆರಳಬದೆಗ**=ಬೆರಳೆತ್ತಿ ತೋರಿಸಿದರೆ ಸೇವೆಗೆ ಸಿದ್ಧವಾಗಿರುವ ಸೇವಕ ; ಕೀಳಾಳು : ಆ ನೃಪಾಲರ ಮಗನೊ ಮೊಮ್ಮನೊ ನೀನವರ ಬಾಂಧವನೊ ಭೃತ್ಯನೊ ಸೂನವಕ್ಷನೊ ಬೆರಳ ಬದೆಗನೊ ಕುರುಳ ಕೋಮಳನೊ (ಕುಮ್ಮಾಕ. ೨-೬೨). **ಬೆರಳು ಕಚ್ಚಿಸು**= (ಅಲಂ) ಸೋಜಿಗಗೊಳಿಸು; ಅಚ್ಚರಿಗೊಳಿಸು: ಗರುಡ ಗಂಧರ್ವಕಿನ್ನರ ಕಿಂಪುರುಷರ ಬೆರಳು ಕ[ಶಾಕಾಂ. ಗ]ಚ್ಚಿಸಿ ಪುಲ್ಲುಮಿಡಿಸಿ ಉರಗ ಮಂಥರವೇಱಿಸಿ ನೀರ ಪೊಗಿಸಿಯೆ ತರುವನೇಱಿಸಿ ಮೇಲ್ಬಿಡುವೆ (ತ್ರಿಶಂಕಾಂ. ೭೦-೦೨೮); ಅವನ ಯುಕ್ತಿಗಳು ಬೆರಳು ಕಚ್ಚಿಸುತ್ತಿದ್ದುವು (ಶಂತೀ. ೩೩). **ಬೆರಳು ಕಚ್ಚು**= (ಅಲಂ) ಅಚ್ಚರಿಗೊಳ್ಳು; ಸೋಜಿಗಪಡು : ದಯಾಪಶಿಯ ಪುರುಷಾರ್ಥ, ಎದೆಗಾರಿಕೆಗಳನ್ನು ನೋಡಿ ಜಿಲ್ಲೆಯ ಇನ್ನುಳಿದ ಜಾಗೀರುದಾರರು ಬೆರಳು ಕಚ್ಚುತ್ತಿದರು (ಜಿಜಾಬಾ. ೦೧೩); ಪಾಂಡವರ ಆಗಿನ ದೌಲತ್ತಿಗೆ ಯಾರೂ ಬೆರಳುಕಚ್ಚುವಂತಿತ್ತು (ಸುಕ್ತುಶು. ೩).

[ದ್ರಾ.॥ ತಮಿ. ಮಲ. ವಿರಲ್; ತುಳು.ಬೆರೆಲ್, ಬಿರಲ್, ಬೆರೆಳ್; ತೆಲು. ಪ್ರೇಲು, ವೇಲು; ಕೋತ. ವೆರ್ಲ್; ತೊದ. ಪೆಳ್]

**ಬೆರಲಚ್ಚು**, ಬೆರಳಚ್ಚು (ನಾ). ೧. ಬೆಟ್ಟನ್ನು ಒತ್ತಿದ ಗುರುತು ; ಅಂಗುಲಿಮುದ್ರೆ : ನಿಜನಿಜಗೊಂಡ ಗುಣಾರ್ಣವನ ತಲೆನವಿರ್ಗಳ್ ಲಾವಣ್ಯರಸಮನಿಡಿದಿಡಿದು ಶೀವಿದ ಕಮಲಾಸನನ ಬೆರಲಚ್ಚುಗಳನ್ನ ಪಾದುವು(ಶಂಕಶಾ. ೨-೩೯ವ); ಬೆರಲಚ್ಚುಗಳಚ್ಚಿಟಿದಂತೆ ಕೊಂಕುಗಳ್ ತಲೆನವಿರೊಂದಿ ಮೂಡಲಿಸುವಂತೆವೊಲಿರ್ದುವು ನಮ್ಮ ವೀರಮಂ (ಶಂಶಶಾ. ೬-೩೭). **ಬೆರಳಚ್ಚು** : ೨. ಬೆಟ್ಟುಗಳನ್ನಾಡಿಸಿ ಅಕ್ಷರಗಳನ್ನು ಮೂಡಿಸುವ ಯಂತ್ರ; ಟೈಪ್‌ರೈಟರ್ : ಕನ್ನಡ ಬೆರಳಚ್ಚು ಈಚೆಗೆ ತುಂಬ ಜನಪ್ರಿಯವಾಗಿದೆ (ರೂಢಿ). 'ಬೆರಳಚ್ಚುಯಂತ್ರ' ಪರಾ. ೩. ಬೆರಳಚ್ಚು ಯಂತ್ರದಿಂದ ಮೂಡಿಸಿದ ಅಕ್ಷರ : ಬೆರಳಚ್ಚಿನ ಪ್ರತಿಗಳನ್ನು ಸಿದ್ಧಮಾಡಿಕೊಡು (ರೂಢಿ). [ಬೆರಲ್ + ಅಚ್ಚು$_3$]

**ಬೆರಲಾಡಿಸು** (ಕ್ರಿ). ೧. ಬೆಟ್ಟನ್ನು ಅಲ್ಲಾಡಿಸು. ೨. (ಅಲಂ) ಕಲಕು : ಕೆದಕು : ಹಿಂದಿನ ಜೀವನದ ನೆನಪು ಮೆಲ್ಲನೆ ಅವಳ ಅಂತರಾಳದಲ್ಲಿ ಬೆರಲಾಡಿಸಲಾರಂಭಿಸಿತ್ತು (ಹಾಕುಮು. ೯).

[ಬೆರಲು (< ಬೆರಲ್) + ಆಡಿಸು]

**ಬೆರಲು** 'ಬೆರಲ್' ನೋ.

**ಬೆರಲುಂಗುರ**, ಬೆರಳುಂಗುರ (ನಾ). ಬೆಟ್ಟಿನಲ್ಲಿಟ್ಟುಕೊಳ್ಳುವ ಉಂಗುರ; ಅಂಗುಳೀಯಕ : ಕೈಯುಂ ನೋಡಿ ಬೆರಲುಂಗುರಮಂ ಕಾಣದೆ ... ಅಂಜಿ ದೆಸೆಗಳಂ ನೋಬ್ಬಿನ್ನೆಗಂ (ಪದ್ಮಾರಾ. ೩-೬); ತೊಳಪ್ಪ ಬೆರಲುಂಗುರಮಿಂಚರ ಮಿಾವ ನೇವುರಂ (ಕವ್ಯಕಾ. ೩೯೦). **ಬೆರಳುಂಗುರ** : ಘಳಿಘಳಿರೆ ನಿಮ್ಮ ಹೊಳೆವ ಬೆರಳುಂಗುರ ಕಿಣಿಕಿಣಿನಾದ (ಪುರಂದ. ೦-೧೯೦-೦) ; ಕಾಲರಾಯನ ಬೆರಳುಂಗುರದೊಳು ಗಾದೆ ಮಿರುಗುವ ಹೊಸ ಹೊಚ್ಚ ಹರಳು (ಇಂಶಾಕ. ೨೨೦-೮೯). [ಬೆರಲ್ + ಉಂಗುರ]

**ಬೆರಲೆತ್ತು**, ಬೆರಳೆತ್ತು (ಕ್ರಿ).(ಅಲಂ) ಮೇಲ್ಮೆ ಅಥವಾ ಶ್ರೇಷ್ಠತೆಯನ್ನು ಸಾರು : ದೊರೆವೆತ್ತ ತರ್ಕಶಾಸ್ತ್ರದ ಪರಿಣತಿಗಂ ನೆಗಟ್ದ ಚಕ್ರವರ್ತಿಯ ಸಭೆಯೊಳ್ ಬೆರಲೆತ್ತಿದರೆಂದೊಡೆ ವಾದಿರಾಜದೇವರ ಸಮಾನಮಾರೀ ಧರೆಯೊಳ್ (ಸುಕುಮಾ. ೦-೩೯); ನನೆಯಂಬುಗಳ್ಗೆ ಬೆರಲೆತ್ತುವರಲ್ಲಿಯ ಮಾಲೆಗಾರ್ತಿಯರ್ (ಮಲ್ಲಿಪು. ೨-೩೯) ; ಬೆರಲೆತ್ತುತ್ತೆಯೆದ್ದು ಕೊಂಡಾಡಿದನವನ ಮಹಾಶೌರ್ಯಮಂ ಪಾಂಡುಪುತ್ರಂ (ಕಬಿಕಂ. ೯-೪೮). **ಬೆರಳೆತ್ತು** : ಸಕಲ ಭೂವಲಯಕೆ ಮೆಱೆಸುವಾತನೀ ಪೊಳಲಾಣ್ಮನೊರ್ವನೆ ಸಫಾಟಿಕೆಯೊಳೆಂದು ಬೆರಳೆತ್ತಿ ತೋಱಸುವಂತೆ ನೋಟಕರ ಕಣ್ಗೆ ಕಾಣಿಸಿದುವೆತ್ತಸೆಯ ಡೆಂಕಣೆಯ ಪಳವಿಗೆಗೆಯ್ಗಳು (ಕೃಮಿಶಾ. ೦೬-೯). [ಬೆರಲ್ + ಎತ್ತು$_1$]

**ಬೆರಲ್ಮಿಡಿ** (ಕ್ರಿ). ೧. ಬೆರಳುಗಳ ಮೂಲಕ ಅಭಿನಯಿಸು ; ಕರವಿನ್ಯಾಸ ಮಾಡು : ಸಭೆಯ ಶೋಭೆಯುಮಂ ಸಾಮ್ರಾಜ್ಯದುನ್ನತಿಯುಮನೆಡೆವಿಡದೆ ಬೆರಲ್ಮಿಡಿದು ಬಿಚ್ಚಳಿಸಲ್ (ವರ್ಧಪು. ೩-೯ ವ). ೨. (ಅಲಂ) ಸೋಜಿಗಗೊಳ್ಳು: ಅಚ್ಚರಿಗೊಳ್ಳು : ಸೊಡರ್ಗುಡಿಯೊಯ್ಯನಾಗೆ ... ಚಂದ್ರಿಕಾಪ್ರಭೆ ಮೊದಲ್ಗೆಡೆ ನಾಡೆ ವಿತರ್ಕದಿಂ ಬೆರಲ್ಮಿಡಿದು ಗುಣಾರ್ಣವಂ ನೆಱಿಯೆ ನಿಟ್ಟಿಸಿದಂ ಬೆಳಗಪ್ಪ ಜಾವಮಂ (ಶಂಶಶಾ. ೯-೧೦೦).

[ಬೆರಲ್ + ಮಿಡಿ$_1$]

**ಬೆರಲ್ಮಿಡಿಸು** (ಕ್ರಿ). (ಅಲಂ) ಸೋಜಿಗವನ್ನುಂಟುಮಾಡು; ಅಚ್ಚರಿಗೊಳಿಸು : ಮದನನೈದಂಬಿನೊಳುಬ್ಬುವ ಸೌಂದರ್ಯದ ಕೈಮಿಕ್ಕಿರ ಕಾಂತೆಯ ಬೆರಲ್ ಬೆರಲ್ಮಿಡಿಸುಗುಂ (ಮಲ್ಲಿಪು. ೩-೬೦).

[ಬೆರಲ್ + ಮಿಡಿಸು (< ಮಿಡಿಯಿಸು)]

**ಬೆರಸು$_1$** 'ಬೆರೆಯಿಸು' ನೋ.

**ಬೆರಸು$_2$** (ನಾ). ೧. ಸಂಬಂಧ; ನಂಟು : ಪರಶಿವನ ಸಲ್ಲೀಲೆವೆರಸಿನಿಂ ವಿಶ್ವಮಪ್ಪಿರವ ಗುರುರಾಯ ಸುಪಿವೆ ಕಗೊರೆದ (ಮಂಕೋಪ. ೩ ಸೂಚಕ). ೨. ಕೂಟ : ರತಿ : ಬೆರಸು ಬೆಲ್ಲಣಿಯಿಕ್ಕೆಯಾಶವಾಶೆಯ ದೇಶ ಚಕ್ರಮಲುಕಿನ ಜಾವಡಿ . . . ಸೈಪುದೋಱುವ ಸೂಳೆಗೇರಿ ಸೊಗಸಾದುದಲ್ಲಿ (ಸಂಬಪಾ. ೨೩-೦೬). [< ಬೆರಸು$_1$]

**ಬೆರಸಂ$_3$** (ಅ). ಸಹಿತ; ಒಡನೆ: ಸಂಗಡ : ಗಂಗಮಹಾನಾಯ್ಯಗೆ ಪೆಱ್ದುದುಂಗುಟನಿವೆರಸು ಮೂವತ್ತುಗುಳ ಅಯ್ಗಳ ಪಾಟು ಕೊಟ್ಟೋರ್ (ಎಕ. IX. ಹೊಸಕೋ. ೯೬–೩ ; ಕು.720); ಮಾಣಿಗಳ್ವೆರಸು ಪೊಱಮೊಟಲೊಳ್ ಬಟ್ಟಾಡುತ್ತಿರೆ (ಪಮ್ಪಾರಾ. ೩೬-೨೩); ಪರಿಮಿತಾಮರೇಂದ್ರಸಮಾಜಂ ಬೆರಸು ರಾಜಭವನಮಂ ಪೊಕ್ಕು (ಆದಿಪು. ೬-೧೦೮ ವ) : ಸ್ಥಾಣುವೊಲ್ ನಿಶ್ಚಲತ್ವಂ ಬೆರಸಾದಂ ಸೂರ್ಯಬಿಂಬಕ್ಕಭಿಮುಖನೆನಿಪೀ ಮೌನಿ ಕಾನಿರ್ವ ತಾಣಾ (ಶಾಕುಂತ. ೦೦೨-೦೬೯). [< ಬೆರಸು$_1$]

**ಬೆರಳ್** 'ಬೆರಲ್' ನೋ.

**ಬೆರಳಚ್ಚು** 'ಬೆರಲಚ್ಚು' ನೋ.

**ಬೆರಳಚ್ಚುಮಣೆ** (ನಾ). ಬೆರಳಚ್ಚು ಜೋಡಿಸಿರುವ ಮಣೆ; **ಬೆರಳಚ್ಚು** ಯಂತ್ರ : ಬೆರಳೊತ್ತುಮಣೆ, ಬೆರಳಚ್ಚುಮಣೆ, ಬೆರಳುಮಣೆ (Key-board. ಪತ್ರಿಕೆ. ೯೯). [ಬೆರಳಚ್ಚು (< ಬೆರಲಚ್ಚು) + ಮಣೆ$_1$]

**ಬೆರಳಚ್ಚುಯಂತ್ರ** (ನಾ). ಬೆರಳಚ್ಚಿನ ಯಂತ್ರ; ಟೈಪ್‌ರೈಟರ್: ಈಗ ಕನ್ನಡ ಬೆರಳಚ್ಚುಯಂತ್ರಗಳು ಬಹಳ ಬೇಕಾಗಿವೆ (ರಜಿ).
[ಬೆರಳಚ್ಚು (< ಬೆರಲಚ್ಚು) + ಯಂತ್ರ]

**ಬೆರಳಲುಕ** (ನಾ). ಬೆಟ್ಟನ್ನು ಅಲ್ಲಾಡಿಸುವುದು, –ಅಲುಗಿಸುವುದು: ಧರೆಯೊಳು ನಟ್ಟ ದಿಟ್ಟಿಯಲಡಿತಧರದೆ ಪೊರಳುವ ತುದಿನಾಲಗೆಯ ಬೆರಳಲುಕದೊಳಾಂದೋಳಿಪ ಮಸ್ತಕದರಳುಗಣ್ಣಬಲೆಯೊಪ್ಪಿದಳು (ಕಂಕಾ. ೯–೦೬೯). [ಬೆರಳು (< ಬೆರಲ್) + ಅಲುಕ]

**ಬೆರಳಾಣತಿ** (ನಾ). ಬೆಟ್ಟನಿಂದ ಮಾಡುವ ಅಪ್ಪಣೆ. –ಆಜ್ಞೆ: ನನ್ನಂತೆ . . . ಎಲ್ಲರೂ ಶಾಂತಲಾದೇವಿಯವರ ಬೆರಳಾಣತಿಯಲ್ಲಿ ನಡೆಯುವುದು ಒಂದು ಗೌರವ ಎಂದುಕೊಂಡಿದ್ದೇವೆ (ಶಪಶಾ. ೦೯೭).
[ಬೆರಳು (< ಬೆರಲ್) + ಆಣತಿ$_3$ (< ಆಣತಿ)]

**ಬೆರಳಿಜ** (ನಾ). ಬೆಟ್ಟನಲ್ಲಿ ಹುಟ್ಟಿದುದು; ಉಗುರು: ನಖ: ಬೆರಳಿಜದ ಕೊನೆಯಿಂ ಮಿಡಿವ ಹಿಂಸೆಗೆ ತಂತಿ ತಾಂ ಬೀಣೆಯಿಂಚರವೀಯುವಂತೆ (ಶ್ರೀರಾಮಾ. ೦೦೦–೩೦೫). [ಬೆರಳು (< ಬೆರಲ್) + –ಇಜ]

**ಬೆರಳಿಡು** (ಕ್ರಿ). (ಅಲಂ) ಗುರುತಿಸು; ನಿರ್ದೇಶಿಸು: ಪ್ರಾಚೀನ ಕನ್ನಡಸಾಹಿತ್ಯದಲ್ಲಿ ನಾಟಕವಿತ್ತೆ ಇಲ್ಲವೇ ಎಂಬ ಚರ್ಚೆಯಲ್ಲಿ ಗದಾಯುದ್ಧ ಮತ್ತು ಹರಿಶ್ಚಂದ್ರಕಾವ್ಯಗಳ ನಾಟಕೀಯತೆಯ ಕಡೆ ಬೆರಳಿಡುವುದು ಸಂಪ್ರದಾಯ (ಕೂಪ್ಕಶು. ೨೭ ಅಶು); ಸುಂದರಕೃತಿಯೊಳು ಕುಂದಿರು ವೆಡೆಯೊಳೆ ಬೆರಳಿಡುವನು ನೋಡು ಖಳನು (ಇಂಕಾಶ. ೬೭–೨೨).
[ಬೆರಳು (< ಬೆರಲ್) + ಇಡು$_1$]

**ಬೆರಳಿಸು** (ಕ್ರಿ). ಬೆಟ್ಟನಿಂದ ಬಾಜಿಸು; ಮೀಟು; ನುಡಿಸು: ಹುರುಳಿನ ಅರಳರಳಿಸಿ ಮಾಲೆ ಮಾಡಿ ಕೊರಳಿಸಿ ಹೃದಯವೀಣೆ ಬೆರಳಿಸಿ (ಅರಳು. ೦೯–೨೦). [ಬೆರಳು (< ಬೆರಲ್) + –ಇಸು$_3$]

**ಬೆರಳು** 'ಬೆರಲ್' ನೋ.

**ಬೆರಳುಂಗುರ** 'ಬೆರಲುಂಗುರ' ನೋ.

**ಬೆರಳುಕಾಪು** (ನಾ). ಕೈಬೆರಳುಗಳಿಗೆ ಅಪಾಯವಾಗದಂತೆ ಹಾಕುವ ಕೈಚೀಲ: ಅರ್ಜುನನು ಚಿನ್ನದ ಕವಚವನ್ನು ತೊಟ್ಟು ಬೆರಳುಕಾಪನ್ನು ಕಟ್ಟಿಕೊಂಡು . . . ಕಾಣಿಸಿಕೊಂಡನು (ಪಕಥಾ. ೨೩).
[ಬೆರಳು (< ಬೆರಲ್) + ಕಾಪು]

**ಬೆರಳುಮುರಿ** 'ಬೆರಳ್ಮುರಿ' ನೋ.

**ಬೆರಳೆತ್ತು** 'ಬೆರಲೆತ್ತು' ನೋ.

**ಬೆರಳ್ಮುರಿ**, ಬೆರಳುಮುರಿ (ಕ್ರಿ). (ಬೆಟ್ಟಿನಿಂದ) ನೆಟಿಕೆ ತೆಗೆ; ಲಟಿಕೆ ಮುರಿ: ಎಲ್ಲ ನಾರಿಯರ್ಕೈದೆ ಕಂಗೆಟ್ಟು ತಾವು ಕಾಣೆಯೆನುತ್ತ ಬೆರಳ್ಮುರಿವುತೆ (ಪಪಮೋ. ೦೦–೯೩). **ಬೆರಳುಮುರಿ:** ಮುದುಕಿಯು ಕಣ್ಣೀರು ಒರೆಸಿಕೊಂಡು ಜಯಂತನ ಮುಖದೆದುರು ಕೈಯಾಡಿಸಿ ಒತ್ತಿಕೊಂಡು ಬೆರಳುಮುರಿದಳು (ಜಯಂತ. ೩೨೫). [ಬೆರಳ್ (< ಬೆರಲ್) + ಮುರಿ$_1$]

**ಬೆರಿಂಕ** (ನಾ). ಒಂದು ಬಗೆಯ ಜಿಂಕೆ: ಪೊದೆ ಪೊದರುಗಳಲಿ ಮೊಲವಾಗಲಿ, ಬೆರಿಂಕವಾಗಲಿ, ನೆಗೆದು ಅದರ ಬೆನ್ನುಹಿಡಿಯಲು ಯತ್ನಿಸುವುದೂ ಉಂಟು (ಜಾಗ. ೬೭). [← ತುಳು. ಬರಿಂಕ]

**ಬೆರಿಗಿ** (ನಾ). ಪಟೇಲ ತಾನು ಅಧಿಕಾರಿಗಳ ಸತ್ಕಾರ ಮುಂತಾದುದಕ್ಕೆ ಹೆಚ್ಚಾಗಿ ವ್ಯಯಮಾಡಿದುದನ್ನು ತುಂಬಿಕೊಳ್ಳಲು ರೈತರನ್ನು ಕೇಳಿ ತೆಗೆದುಕೊಳ್ಳುವ ಒಂದು ಬಗೆಯ ತೆರಿಗೆ: ಇವು ಪೂರ್ವಕಾಲದ ತೆರಿಗೆಗಳು: ಮನೆತೆರಿಗೆ, ಹುಲ್ಲುಹಣ. . .ಬೆರಿಗಿ (ಪಟೇಲ ತಾನು ಹೆಚ್ಚಾಗಿ ತೆತ್ತುದ್ದನ್ನು ತುಂಬಿಕೊಳ್ಳಲು ರೈತರನ್ನು ಕೇಳಿ ತೆಗೆದುಕೊಂಡದ್ದು) (ಪಪ್ಪುಪ. ೨೯೩). [?]

**ಬೆರಿಯ** 'ಬೇರಿ$_1$' ನೋ.

**ಬೆರೆ$_1$** (ಕ್ರಿ). ೧. ಕೂಡು; ಸೇರು; ಮಿಶ್ರವಾಗು: ಕೃತಭವ್ಯೋತ್ಸವ ಮಾಘಶುದ್ಧದಶಮಿಪುಣ್ಯಾಹಯುಕ್ತಂ ಪ್ರಜಾಪತಿಯೋಗಂ ಬೆರೆದಂದು (ಅಶಪು. ೩–೨೨); ಹರಿಚಂದ್ರತೀರ್ಥ ಸಪ್ತತೀರ್ಥವೆಂತೆಂಬ ಹಲವು ತೀರ್ಥಂಗಳ ಬೆರೆದು (ಕಂಪಪ. ೫–೯೦); ಆಹಾರದಲ್ಲಿ ಕಬ್ಬಿಣದ ಅಂಶ ಎಷ್ಟಿದೆಯೆಂಬುದು ಮುಖ್ಯವಲ್ಲ, ರಕ್ತದೊಡನೆ ಎಷ್ಟು ಬೆರೆಯಿತೆಂಬುದು ಮುಖ್ಯ (ಅಪುಶಾ. ೫೯). ೨. ಸಂಭೋಗಿಸು; ನೆರೆ: ಬೆರೆವಂಗೆ ಭೋಗವೂ ಮೊರೆವಂಗೆ ರಾಗವೂ ಬರೆವಂಗೆ ಓದು ಬರುವಂತೆ ಸಾಧಿಪಗೆ ಬಾರದಿಹುದುಂಟೆ (ಸರ್ವಜ್ಞ. ೦೩೩೦); ಮತ್ತೊಂದು ದಿನ ರಾಯ ಅವಳಲ್ಲಿ ಹೋಗಿ ಬೆರೆದು ಬರುವಾಗ (ಬತ್ತೀಸ. ೦೨೨); ಅರೆನಿಮಿಷ ನಿನ್ನೊಡನೆ ಬೆರೆದು ಸುರವಾರಾಂಗನಾಪುರವ ನೆನೆವೆ (ವೆಂಕರಾ. ೫–೬–೫೭). ೩. ಲೀನವಾಗು; ಐಕ್ಯವಾಗು: ಉದಾತ್ತಬಸವೇಶ್ವರಾದಿಗಳವಂ ಗ್ರಹಿಸಿ ತದ್‌ವೃತ್ತಿಯಿಂ ವೀರಶೈವಪ್ರತಿಷ್ಠಾಚಾರ್ಯರೆನಿಸಿ ಶಿವನೊಳ್ ಬೆರೆವರೇ (ಶಪ್ಕಾ. ೩–೫).

**ಬೆರೆದಾಟ** = ಸಂಭೋಗ; ಕೂಟ; ರತಿಕ್ರೀಡೆ: ಕುರುಬಂಗೆ ಕುರಿಯಾಸೆ ಮರಿಗಳಿಗೆ ಮೊಲೆಯಾಸೆ ಸರುಪರಿಗೆ ಮಳೆಯು ಬರುವಾಸೆ ಸೂಳೆಗೆ ಬೆರೆದಾಟದಾಸೆ (ಸರ್ವಜ್ಞ. ೧೯೦೫).

[ದೇ. ‖ ತಮಿ. ವಿರಚು, ವಿರವು; ಮಲ. ವಿರಕು, ವಿರಕ್ಕು; ತುಳು. ಬಿರಾವು, ಬಿರಸು; ತೆಲು. ಬೆರಯು; ಕುರುಖ್. ಬಿರ್ರ್‌ನಾ; ಮಲ್ತೊ. ಬರ್ಗೆ, ಬರ್ಗ್ರೆ]

**ಬೆರೆ$_2$** 'ಬೆಱೆ' ನೋ.

**ಬೆರೆತ** (ನಾ). ಜೋಡಣೆ; ಹೊಂದಾಣಿಕೆ; ಸಂಬಂಧ: ಬಗೆಬಗೆಯ ಬೆರೆತದೊಳು ತರತರದ ರಂಜನೆಯ ಧೀರಾನುಭೂತಿಗಳ ರಸವ ತಳೆದು (ಮುರಿದೇ. ೯೦–೩). [ಬೆರೆ$_1$ + –ತ$_2$]

**ಬೆರೆಯಿಸು, ಬೆರಸು$_1$**, ಬೆರೆಸು, ಬೆಱಸು (ಕ್ರಿ). ೧. ಕೂಡಿಸು; ಮಿಶ್ರಮಾಡು: ಶುದ್ಧಮಪ್ಪ ಪೊನ್ನೊಳ್ ದುಷ್ಕರಪ್ಪವರ್ ತಮ್ಮ ಲಾಭದಾಸೆಯಿಂ ಕಿಸುಬೆಳ್ಳಿಯೆಂಬಿವಂ ಬೆರೆಯಿಸಿ ... ಪೊನ್ನೆಂದು ತೋರಿಸುವ ತೆಱದಿಂ (ಧರ್ಮಾಮೃ. ೯–೩೯); ನಿನ್ನ ಜೀವನದಲ್ಲಿ ಈ ಸುಗಂಧವನ್ನು ಯಾರು ಬೆರೆಯಿಸಿದರು (ಶ್ಯಾಮಶಾ. ೬). **ಬೆರಸು$_1$:** ೧. "ಬೆರಸು–ಸಮ್ಮಿಶ್ರೇ" (ಶಮಧಾ); ಆಗಮಕೋವಿದನಿಗದಿತಮಾರ್ಗವಿಂದಂ ಬೆರಸಲ್ಕ ಮಾಗದೀ ಸಕ್ಕದದೊಳ್ (ಕಬಾ. ೦–೫೦); ಮುತ್ತು ಪವಳಂ ಬೆರಸಿದ ಪೋ[ಲಾಯ್ತು] ಚೆನ್ನತಪಸಿಯ ಕೆಯ್ಯೊಳ್ (ಕಂಪಶಾ. ೬–೦೦); ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ (ಧರ್ಮಾಮೃ. ೦–೯೨). ೨. ಸೇರು; ಕೂಡು: ಆ ವರ ಚಕ್ರವಾಳಪುರದೊಳ್ ಕಳಭಾಷಿಣಿ ಮುಖ್ಯಮಪ್ಪ ಕಾಂತಾವಳಿಯುತ್ತರಂ ಬೆರಸಿ ತಾನಿರುತಿರ್ದ ಬಳಿಕ್ಕಂ (ಕುಸುಮಾ. ೦೫–೨೪); ಭಜಿಸಿದ್ದೆ ಭರ್ಗನನು ಶಾಂಭವಯಜನಸಾರಸಮಾಧಿ ಶಿವಪದರಜವ ಬೆರಸಿತ್ತ (ಕುಮ್ಯಾಲ. ೦೦–೨೭). ೩. ಸಂಭೋಗಿಸು; ನೆರೆ: ಪೆಂಡಿರ್ ಪೆಂಡಿರೋದೆಂತು ಬೆರಸುವರಬಲೇ (ಕಂಕಥಾ. ೦–೭೬); ಅರಸರು ಮುಟ್ಟಿಕ್ಕೆ ಬರಿಸಿ ಎನ್ನ ಬೆರಸಿದ ಬಳಿಕ ಆನಂಜುವಳೆ (ಬಸವ. ೬೩೮). ೪. ಐಕ್ಯವಾಗು; ಲೀನವಾಗು: ಸೇರಿಹೋಗು: ಬಿಚ್ಚಿ ಬೇಱಿಲ್ಲ ಬೆರಸಿ ಹೋದಲ್ಲದೆ ದ್ವಂದ್ವರಹಿತ ಸೌರಾಷ್ಟ್ರಸೋಮೇಶ್ವರಾ ನಿಮ್ಮ ಶರಣ (ಆದಯ. ೯೫–೨೩); ದರುಶನದಿಂದಮೃತಾಹಾರವಾಯಿತ್ತು ಬೆರಸಿದಡಿನ್ನೆಂತೊ ಗುಹೇಶ್ವರಾ (ಅಪಕಂ. ೦೬೬–೭೫೦); ಮಹಿಮೆಯಱಿದು ಬೆರಸುತಿರ್ಪಾದೀಶ್ವರಾಂಘ್ರಿಯುಗದ ಭಕ್ತಿಯಿಂದ ಸಂಸ್ತುತಿಗಳನೊದವುದುಮುಕ್ತಬುಧರು ಪಡೆದು (ಕಾಸಂತ. ೬–೨೩೩ ರಗಳೆ). ೫. ತಾಗು; ಘಟ್ಟಿಸು; ಸೆಣಸು: ಎರಡು ದಳ ಗಂಟಿಕ್ಕಿದುದು ನೆಲ ಬಿರಿಯೆ ಬೆರಸಿತು (ಕುಮ್ಯಾಲ. ೯–೨೯); ಅಸುರಕುಲಮಣಿ . . . ಬೊಬ್ಬಿಱಿದು ಬೆರಸಿದು ಖಾತಿಯಿಂ ಪರಬಲವನು (ತರಿಶು. ೩೯–೯)

೬. ಹಬ್ಬು ; ವ್ಯಾಪಿಸು ; ಹರಡು : ಬೀತ ಕೈದುಗಳಖಿಳದೆಳಸಂಘಾತ ವನು ಬಾಣಾಗ್ನಿ ಬೆರಸಿತು (ಕುಮಾರವ್ಯಾ. ೪೯-೩೯) ; ಹರಿದು ಬೆರಸಿತು ಬೇಡಪಡೆ . . . ಅಖಿಳದೆಸೆಗಳಲಿ (ಕೂರಿರಾ. ೩-೩-೦೩); ಏನನೆಂಬೆನು ನೃಪತಿ ಕಿಚ್ಚಿನ ಹಾನಿಯನು ಬಸದೊಳಗೆ ಬೆರಸಿತು[ಪಾಠಾಂ. ಚಲಿಸುತ] ಭಾನುಮಂಡಲವಡಗೆ ಮುಸುಕಿದ ಹೊಗೆಯ ಹೊರಳಿಯಲಿ (ಶಲ್ಯ. ೬-೬). ೭. ಗೊಂದಲಗೊಳಿಸು ; ಗೋಜುಗೊಳಿಸು : ಮುಂದೆ ಪಂಚಾಕ್ಷರಿ ಯನಕ್ಷರವಾಗಿ ಲಿಖಿಸುತ ಬೆರಸಿ[ಪಾಠಾಂ. ಸು]ಲೆಕ್ಕದ ಸರಿಗೆ ಬಂದಿರಲೋದು ವುದನಜೀಯ (ಬಸಪು. ೩೩-೭೩). ಬೆರಸು : ೨. ಪಾಪೋತ್ಕರದೊಳ್ ಬೆರಸಿದ ಜೀವೋತ್ಕರಮುಂ ನಿರ್ವೃತಿಗೆ ನೆಗೆಯಲಾರ್ಕುಮೆ ಬೇಗಂ (ರಮಾಚಾಷ್ಟ. ೯-೦೨೦); ವ್ಯಸನತೃಷ್ಣೆಯು ಕೀಳುಚಿತ್ತದ ವಿಸುನಿಯೊಳು ಬೆರೆಸಿತು ಸುಬುದ್ಧಿಯ ರಸವು ಹಾಜಿತು ಹುದಿದ ರಾಗದ್ವೇಷಮ್ಮುಯಲಿ (ಕುಮಾ.ಸ. ೦೩-೪೪). Δ ಬೆಜಿಸು : ೧. ನೊಣಂಬದಡಿಗ ರಾಚಮಲ್ಲಂ ಮಯಿನ್ದಡಿ ಗುಣ್ಡಗೆ ಗುಳ್ಳ ಎನೆಬರು ಸಮಸ್ತಬಲ ಬೆಜಿಸಿ ಬಿಟ್ಟೊಡೆ ಗೊಟಗೊಟ್ಟು ಯಿಟ್ಟಟಿವಲ್ಲಿ (ಎಇ. XXIV, ೨೬-೮ ; ಕಿ. 885).

[ಬೆರೆ₁ + — ಇಸು₃]

**ಬೆರೆವೊಡಲ್** (ನಾ). ಒಂದುಗೂಡಿದ ಶರೀರ ; ಒಂದಾದ ದೇಹ : ಐಕಿಲ್ಗಂಜಿ ನಂಜುಂಡಂ . . . ಪಣೆಯ ನಡುಗಣ್ಣ ಕಿಚ್ಚನುಜ್ಜುಳಿಸಿ ಸಜ್ಜನ ಬೆಂಬೊದಿಯ ಮೆಯ್ಗೆ ಪೂಸಿ ದಟ್ಟದೊವಲಂ ಪೊದೆದಗಜಿವೆರಸು ಬೆರೆವೊಡ ಲೊಳ್ವರ್ಗಂ (ರಾಜಶೇಖ. ೦೦೫-೬). [ಬೆರೆ₁ + ಒಡಲ್]

**ಬೆರೆಸು** 'ಬೆರೆಯಿಸು' ನೋ.

**ಬೆರ್ಕೆ** 'ಬೆರಕೆ' ನೋ.

**ಬೆರ್ಕು**, ಬೆಕ್ಕು (ನಾ). ಸಾಮಾನ್ಯವಾಗಿ ಮುದ್ದಿಗಾಗಿ ಪಳಗಿಸಿ ಸಾಕುವ, ನಾಲ್ಕು ಕಾಲುಗಳುಳ್ಳ ಒಂದು ಮಾಂಸಾಹಾರಿ ಪ್ರಾಣಿ ; ಮಾರ್ಜಾಲ : ಒಯ್ಯನೆ ಪಾಪಂಗಳಂಗೆಯ್ದವರ್... ಬೆರ್ಕುಮೊಂತಿಯುಂ ಕಪ್ಪೆಯುಂ ಮುಂಗುರಿಯುಂ ಮೊದಲಾಗೊಡೆಯ ಸ್ಥಲಚರಂಗಳುಂ . . . ಆಗಿ ತಿರಿಕಗತಿಯೊಳ್ ಪುಟ್ಟಿ (ಶಬ್ದಾರಾ. ೯೭-೬) ; ಬೆರ್ಕುಗಳದಿರೊಳಗಾಡಿ ದೊಡರ್ಕೊಳ್ದಯುಸಮುಯುಮಪ್ಪಿನಂ ಪೋಗದೆ ಮಾಣ್ದರ್ಕೆ ಪಗಲುರ್ಕೆ ಕಾದಿದೊಡಿರ್ಕಂದಿನ ದೆವಸಮೊಳ್ಪನಱಿಸುವ ಮನುಜಂ (ಲೋಕೋಪ. ೦೨-೦೩). ಬೆಕ್ಕು : "ಓತುಃ, ಬಿಡಾಳಃ, ಮಾರ್ಜಾರಃ, ವೃಷದಂಶಃ — ಈ ೪ ಬೆಕ್ಕು" (ಹಲಾಯು. ೪೦-೯೩); ಬೆಣ್ಣೆಯುಂ ತಿಂದ ಬೆಕ್ಕಿನಂತೆ ಅಜೀಯಲೀಯದೆ ಮತ್ತೆಯುಟಿದ ಮತ್ಸ್ಯಂಗಳನೀ ತಜಿದೊಳ್ ತಿನು ತಿದರ್ (ಶಂಕರ. ೬೪-೨೦) ; ಗಿಳಿಯೋದಿ ಫಲವೇನು ಬೆಕ್ಕು ಬಹುದ ಹೇಳಲಜೀಯದು (ಬಸವ. ೦೨೩); ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ (ನಾಣ್ಣು).

ಬೆಕ್ಕಿನ ಕಣ್ಣು = ಬೆಕ್ಕಿನ ಕಣ್ಣಿನಂತೆ ಕಂದುಬಣ್ಣವುಳ್ಳ ಕಣ್ಣು : ಅವಳದು ಬೆಕ್ಕಿನ ಕಣ್ಣು (ರೂಢಿ).

[ದೇ.॥ ತಮಿ. ವೆರುಕು ; ಮಲ. ಪೆರುಕು, ವಿರುಕು, ಮೆರುಕು ; ತುಳು. ಪೆರು; ಕೊಡ. ಬೆಕ್ಕೀ; ಕುರುಖ್. ಬೆರ್ಖಾ; ಮಲ್ತೊ. ಬೆರ್ಗೆ]

**ಬೆರ್ಚಪ್ಪ** (ನಾ). ಹೊಲ, ಗದ್ದೆಗಳಲ್ಲಿ ಬೆಳೆಗಾಗಿ ಬರುವ ಹಕ್ಕಿಗಳನ್ನು ಹೆದರಿಸಿ ಓಡಿಸಲು ಹಾಗೂ ಬೆಳೆದ ಬೆಳೆ, ಹೊಸಕಟ್ಟಡ ಮುಂತಾದು ವುಗಳ ದೃಷ್ಟಿನಿವಾರಣೆಗಾಗಿ ನಿಲ್ಲಿಸುವ ಹುಲ್ಲು ಮುಂತಾದುವು ಗಳಿಂದ ಮಾಡಿದ ಮನುಷ್ಯಾಕಾರದ ಬೊಂಬೆ ಅಥವಾ ಬಣ್ಣಗಳಿಂದ ರಚಿತವಾದ ಮುಖವಾಡ : ನಾನು ಗದ್ದೆಯಲ್ಲಿ ಹುಲ್ಲಿ ನಿಂದ ಬೆರ್ಚಪ್ಪನನ್ನು ಮಾಡಿ ನಿಲ್ಲಿಸಿದರೂ ಅವು ಬರುವುದನ್ನು ಬಿಡಲಿಲ್ಲ (ಪತೆಮಾ. II, ೦೦೩೮). [ಬೆಚ್ಚರ್₁ + ಅಪ್ಪ₁]

**ಬೆರ್ಚಿಸು**, ಬೆಚ್ಚಿಸು (ಕ್ರಿ). ಹೆದರುವಂತೆ ಮಾಡು; ಭಯಪಡಿಸು : "ಬೆರ್ಚಿಸು — ಭಯೇ" (ಶಬ್ದಮ) ; ಘನಸ್ತನಿತಮುಂ ಕೇಕಿಸ್ವನಮುಂ ನೀರ ಧಾರೆಯುಂ ಮನಂ ಬೆರ್ಚಿಕರ್ಪಮಿಂತೆತ್ತಂ ಘನಸ್ತನಿ (ಶಬರಾ. ೨-೦೨೦); ತಪೋವನದ ಮುನಿಜನದ ಪರಮಾನುರಾಗಮುಂ ಬೆರ್ಚಿಸಿ ಕಾಮಾನುರಾಗಮುಂ ಬೆರ್ಚಿಸಿ ತದಾಶ್ರಮದೊಳಾಶ್ರಮಕ್ಕೆ ಗುರುವಾಗಿ ಪಾಂಡುರಾಜನಿರ್ಪನ್ನೆಗಂ (ಪಂಪಭಾ. ೦-೦೦೬ ವ); ಭೂಪಾಲನ ಮೇಲೆತ್ತಿ ನಡೆದಾತನಂ ಬೆರ್ಚಿಸಿ ಕುಮಾರಿಯರಂ ಪಿಡಿದು ತರ್ಪುದುಂ (ಪುಣ್ಯಾಸ್ರ. ೩-೦೦೮ ವ). ಬೆಚ್ಚಿಸು : ಕಚ್ಚುವುವೆ ನಿಮ್ಮ ಚಿಪ್ಪಿನ ಹಲ್ಲುಗಳು ಬೆಚ್ಚಿಸು ವುವೆ ನಿಮ್ಮ ಬಚ್ಚಣೆಯ ರೂಹುಗಳು (ಬಸವ. ೫೬೨); ವಿಷದುರಿಯೂರಿ ಬೆಚ್ಚಿಸಿ ಬೆದಜಿಸಿದನತಿಬಲ ವನೇಚರರ (ತೊರೆರಾ. ೬-೩೫-೨೯).

[ಬೆಚ್ಚರ್₁ + — ಇಸು₃]

**ಬೆಚ್ಚರ್₁**, ಬೆಚ್ಚು₁, ಬೆಬ್ಬು (ಕ್ರಿ). ೧. ಹೆದರು ; ಭಯಪಡು : "ಬೆಚ್ಚರ್ — ಸಂತ್ರಾಸೇ (ಭಯಪಡು), ತೃಣಪುರುಷೇ ಚ (ದೃಷ್ಟಿಪರಿ ಹಾರಾರ್ಥವಾಗಿ ಮಾಡಿಡುವ ಬೊಂಬೆ)" (ಶಮಧಾ); ಶಾಪಮಾನೀಗು ಮೆಂದೆ ದಿಕ್ತಕ್ರಮಮುಪಾಂಜಿ ಬೆರ್ಚಿ ಬೆಸಕೆಯ್ವುದು (ಶಬ್ದಸಾ. ೧೯-೪೩); ಬಂದೆಜಗುವ ಜಿಲ್ಲಿದುಂಬಿಗೆ ಬೆರ್ಚಿ ನಿಂದು ಸೊಲ್ಲಿಪ ಪೂಮಾಲೆಗಾರ್ತಿ (ಮೋಹತ. ೩-೦೭). ಬೆಚ್ಚು₁ : ೧. ಪೆಸರ್ಗಂ ತೇಜಕ್ಕಮೊಂದೋಜಿಗ ಮಹಿತಮಹೀಪಾಳಕರ್ ಬೆಚ್ಚಿ ಬಾಯ್ಕೇಳಿಸಿ (ಆದಿಪು. ೦೪-೦೯೮); ನೊರಜಿವ ಕಳಕಳಕೆ ಕರಿ ಬೆಚ್ಚುವುದೆ (ಕುಮಾ.ಸ. ೮-೪೭): ಬೊಮ್ಮನ ಸದನಕಳಿಮುಖ ನಾದನಗ್ಗದ ತ್ರಿದಶಪತಿ ಬೆಚ್ಚಿದವು ಪಟ್ಟಣವಾ ದಿಶಾಧಿಪರ (ತೊರೆರಾ. ೬-೩೫-೪೦). ೨. ಅದುರು ; ಕಂಪಿಸು : ಗಂಡುಹುಡುಗರಬ್ಬರೂ . . . ಕೋಲಿನಿಂದ ಹೊಡೆದಾಡಿದ್ದರು. ರಾಮುವಿನ ಮೂಗು ಬೆಚ್ಚಿ ರಕ್ತ ಸುರಿಯಿತು (ಶಿಂದೂ. ೩೬). Δ ಬೆಬ್ಬು : ೧. ಬೇಡರಬ್ಬರ್ಗಿಸಿ ಕುಟುಂಬಬ್ಬೆರ್ಗಟ್ಟಿ . . . ಧರೆಗೆ ಸಸ್ದಂ ಸಿಂಹಭೂಪಾಳಕರ (ಎಕ. VIII, ಸೊರಬ. ೦೮೪-೨೦; 1033).

ಬೆರ್ಚಿಬೀಟು, ಬೆಚ್ಚಬೀಳು, ಬೆಚ್ಚುಬೀಳು = ಹೆದರಿಕೆಯಿಂದ ನಡುಗು: ಸಾರ್ದು ಬಂದತ್ತಿದೆ ಭೀಕರಾಕೃತಿಯದಾಂತಿರದೂಂದು ಕೃತಾಂತ ಮೂರ್ತಿಯೆಂದುತ್ತಮರೆಲ್ಲರಳ್ಕಲುಸುರ್ದಂ ಚರನಂದುಱ ಬೆರ್ಚಿ ಬಿಟುತುಂ (ಉದ್ಭಟ. ೪-೬೦) ; ಬೆಚ್ಚಿ ಬಿದ್ದತ್ತಿದ್ದಕ್ಕಿದ್ದಂತೆ ಮಣಿಪುರಂ ಧರೆ ಬಿರಿಯ ಲಳ್ಳಿರಿಯೆ ಶೋಕಭೇರೀರವಂ (ಜೈಮಿನಿ. ೩೮-೨೪೩೦) ; ಅವನ ಕೆಂಪೆಡೆ, ಹೊಳೆಯುವ ಕಣ್ಣು, ಕಂದುಬಣ್ಣದ ಗಡ್ಡ ಮೀಸೆಗಳು ಇವನ್ನೆಲ್ಲ ಕಂಡು ಅವಳು ಬೆಚ್ಚಿ ಬಿದ್ದು ಅವನನ್ನು ನೋಡಲಾರದೆ ಕಣ್ಣು ಮುಚ್ಚಿಕೊಂಡಳು (ಪತಪಾ. ೮); ಇದ್ದಕ್ಕಿದ್ದಂತೆಯೇ ಸ್ಪೆಯರ್ ಬೆಚ್ಚು ಬಿದ್ದ (ಕತ್ತರಿ. ೨೦).

[ದೇ.॥ ತಮಿ. ವೆರುವು; ಮಲ. ವೆರುಳು; ಕೊತ. ಬೊರಡ್, ಬೊರಟ್, ಬೊಟ್; ತೆಲು. ವೆಱ, ವೆಱಚು; ಕೋತ. ವೆರ್ಟ್, ವೆರ್]

**ಬೆಚ್ಚರ್₂**, ಬೆಚ್ಚು₂ (ನಾ). ೧. ಹೆದರಿಕೆ ; ಭಯ : ನೋಡುವರೊಳ್ ಮಾನಂ ಬಯಸುವಂತಿರೆ ನಲ್ಮೆ ತುಳುಂಕೆ ಬಿಂಕದಿಂ ನೋಡುವುದ್ಯದ ಮಾತನೊಸೆದಾಡುವರೊಳ್ ಬಗೆ ಬೆರ್ಚುದೋಱೆ ಮಾತಾಡುವುದು (ಜಗನ್ನಾ. ೦೬-೦೨೫). ೨. =ಬೆರ್ಚಪ್ಪ: "ಬೆರ್ಚು—ಸಂತ್ರಾಸೇ (ಭಯಪಡು), ತೃಣಪುರುಷೇ ಚ (ದೃಷ್ಟಿ ಪರಿಹಾರಾರ್ಥವಾಗಿ ಮಾಡಿಡುವ ಬೊಂಬೆ)" (ಶಮಧಾ); ಲೋಗರ ಕಣ್ಣಿಂಜಲ್ ತಾಗದಂತು ಬೆರ್ಚನಿಟ್ಟು ಪಕ್ಕಿಗಳಂ ಬೆದರ್ಚಲೊಡರ್ಚಿದ ತೋಂಟಿಗನೊಂದಾಯತಿಯುಂ ಕಂಡನಕ್ಕುಂ ರಾಘು (ರಾಜಶೇಖ. ೬೫ ೨೭). ೧, ೨ : ಪಕ್ಕಿಗಳ ನೆರವಿಯೊಳ್ ಬರ್ಚು ಕಕ್ಕಿಸುವ ಮಂತ್ರದೊಳೆ ಪರ್ಚು (ಬಿಂತು. ೦-೧೯ ರಗಳೆ). ೩. ಗೊಂಬೆ; ಬೊಂಬೆ : ಮುಂಬಣ ಮಹಾರಾಜರೂ ತನ್ನ ಕಯ್ವಾಟದ ಬೆರ್ಚು ಮಾತ್ರವಾಗಿರಬೇಕು (ಏನತ. ೩೩-೦೦). ಬೆಚ್ಚು₂ : ೨. ಬೆಚ್ಚಿನ [ಪಾಠಾಂ. ಬೆಬ್ಬಿನ]ಮಾಡಕೆ ಯಂತೆ ಬೆಬ್ಬಿಸಿಕೊಂಡಿದ್ದಡೇನಯ್ಯಾ (ಸಮಸವ. ೪. ೫೯೧-೦೬೫೦) ; ಈತ

ಮಧುರಕೆ ಪೊಗ್ಗಿಬಹ ಕೀರಗಳ ಬೆದರಿಸಲಗ್ಗಳದ ಬೆಚ್ಚಪುದು (ಚಿಸಸಾ. ೩೯-೬೪): ಬಳ್ಳಿಗಳ ಹಸಿರುಪೊಳಿಗಳ ನಡುವೆ ನಿಂತ ಕರಿಮುಸುಡಿಯ ಬೆಚ್ಚೊಂದು ಇವಳೆಡೆಗೇ ನೋಡುತ್ತಿತ್ತು (ಪೂರಂದಾ. ೨೮೩).

[< ಬೆಚ್ಚು$_1$./ತಮಿ. ವೆರುಟ್ಟು]

**ಬೆಚ್ಚುಗಟ್ಟು** (ಕ್ರಿ). (ಹೊಲ, ಗದ್ದೆಗಳಲ್ಲಿ ಹಕ್ಕಿ ಮೊದಲಾದವನ್ನು ಬೆದರಿಸಿ ಓಡಿಸಲು) ಮನುಷ್ಯಾಕೃತಿಯ ಬೊಂಬೆಯನ್ನು ಕಟ್ಟು: ತಾಳಗೆಯನುರ್ಚಿ ನೆತ್ತಿಯ ಗಾಳಂ ಗಗನದೊಳಿಟಲ್ವ ವಾರಿಯ ಬೀರರ್ ಪಾಳಿಯೊಳಸೆದರ್ ಪಾಪದ ಜೋಳದ ಬೆಳಸಿಂಗೆ ಬೆಚ್ಚುಗಟ್ಟಿದ ತೆಜದಿಂ (ಧುಕಿಗೀತ. ೦-೩೩).

[ಬೆಚ್ಚು$_2$ + ಕಟ್ಟು$_1$]

**ಬೆಚ್ಚುಗಣ್** (ನಾ). ಭಯದಿಂದ ಕೂಡಿದ ದೃಷ್ಟಿ; ಹೆದರಿಕೆಯ ನೋಟ: ನಡನಡನೆ ನಡುಗುತಿರ್ದಾ ಬೆಚ್ಚುಗಣ್ಣಬಲೆಯಂ ಹುಬ್ಬುಗಂಟಿಕ್ಕಿ ನೋಡಿದನ್ . . . ನಿಶಾಚರೇಂದ್ರಂ (ಶ್ರೀರಾಮಪೂ. ೨೯೬-೪೯೯).

[ ಬೆಚ್ಚು$_2$ + ಕಣ್ ]

**ಬೆರ್ದಲೆ** 'ಬೆದ್ದಲ್' ನೋ.

**ಬೆಲಂಕು**, ಬೆಲಂಗು (ಕ್ರಿ). ೧. ಎಸೆ; ಬಿಸುಡು; ಒಗೆ: "ಚೆ(ಬೆ)ಲಂಕಿದಂ= ಈಡಾಡಿದಂ" (ಶಬ್ದ. ಶಂ. ೨). ೨. (ನದಿ ಮುಂತಾದವು) ಒಣಗಿ ಹೆಕ್ಕಳಿಯುಂಟಾಗು: ಅಂಗಜರಾಗಸಾಗರಂ ಬತ್ತಿ ಬೆಲಂಕಿ [ಪಾಠಾಂ. ಗಿ] ಪೋಪುದು ಕಣ್ಗೆ ತವಂ ಕವಿದಪ್ಪುದು . . . ಏಕೆ ಕಾಡಿದಪೆಯೋ ಪಳಿ ತೋಱು ಮುಖೇಂದುಬಿಂಬಮಂ (ಲೀಲಾವ. ೧೪-೬೬). **ಬೆಲಂಗು:** ೧. ನನೆಯಂಬಂ . . . ಬಾಟಿಸ್ಸೊಂಪದೊಳ್ಸಿಕ್ಕಿ ಕೇತನಮಂ ಮಿಾಂಗೊಳದೊಳ್ ಬೆಲಂಗಿ ಮುನಿಪಾದೋಪಾಂತದೊಳ್ ಸಾಧುವೇಷನಿಷಣ್ಣಂ ರತಿಯಂ ಮರಳ್ಚಿ ಕಳೆದಂ (ಅನಂತ. ೩-೩೦). 'ಚಲಂಕು' ಪರಾ. [ ? ]

**ಬೆಲಂಗಯಿಸು** (ಕ್ರಿ). = ಬೆಲಂಕು ೧: ಆ ಮಹಾಪುದೇಭಂ . . . ಸಪ್ತಧುದಾವಸ್ಥೆಯಿಂದಾದ ಮನದ ಮಸಕದಿನಸವಸದೆ . . . ಮಂಕಡ ದಂದದಿಂ ಕಟ್ಟಿದ ಲೋಹಚರ್ಮಜಮಪ್ಪ ಮುಟ್ಟುಗಳನಿತುಮಂ ತಕ್ಕೈಸಿ ಬೆಲಂಗಯಿಸಿ ಬಿಸತಂತುವಂ ಪಱಿವಂತೆ ಪಱಿದು (ಚಂದ್ರಪ್ರಭ. ೬-೧೦೦ ವ).

[ಬೆಲಂಗು (<ಬೆಲಂಕು) + –ಇಸು]

**ಬೆಲಂಗು** 'ಬೆಲಂಕು' ನೋ.

**ಬೆಲಗ** (ನಾ). ಒಂದು ಬಗೆಯ ಸಸ್ಯ: ಹಸುರುಗನ್ನಿ, ಬೆಲಗ, ಬಿಳೀ ಬೀಟೆ, ಬೆಟ್ಟದ ಹಸುರುಗೋಣಿ (ವೃಕ್ಷಶಿ. ೨೮-೩೪೬). [ ? ]

**ಬೆಲಗಸೆ**, ಬೆಗಸಿಲ್, ಬೆಗಸಿಲೆ (ನಾ). ಬೊಗಸೆ; ಸೇರೆ; ಅಂಜಲಿ: ಬೆಲಗಸೆಯಿನಳುರ್ಕೆಯೆ ಮೊಗೆಮೊಗೆದು ನೆತ್ತರಂ ಪವನಸುತಂ ನೆತ್ತಿ ಯೊಳಿಱಿದೆಱಿದು . . . ಜಡೆಗೊಂಡಿರ್ದವೃತ್ತಕುಚಯುಗೆಯ ಕೇಶ ಮನೆತ್ತಂ ಪಸರಿಸಿದಂ (ಪಂಪಭಾ. ೦೨-೦೫೩); ಒಡವುಟ್ಟಿದರಂ ಕೊಂದಪರಡಗಂ ತಿಂದವರ ನೆತ್ತರಂ ಬೆಲಗಸೆಯೊಳ್ ಕುಡಿವೀ ನಿಸ್ತ್ರಿಂಶತೆಯಂ ಹಿಡಿಂಬಿಯಂ ಪೊರ್ದಿ ಕಲ್ತನಾಗನೆ ಭೀಮಂ (ಗದಾಯು. ೩-೨೮); ಬೆಲಗಸೆಯಿಂದವಿಾವ ಘುಸೃಣರದ ಬಾಯಿನಮೆತ್ತಿ ಪೊನ್ನ ಬಟ್ಟಲೊಳೆಱಿದೀವ ಕುಂಕುಮರಸಂ (ಪಂಪ್ರಶ್ರು. ೯-೪೬). **ಬೆಗಸಿಲ್**. **ಬೆಗಸಿಲೆ:** ಈ ಕವಿಲೆಯ ಕೊಂದು ನೆತ್ತರಂ ಬೆಗಸಿಲೆಯಿಂದಾಕಂಠಂಬೋಪ್ಪಂ ಕುಡಿದವನೀ ಕಯ್ಗುರುಪಣಮನಳಿವ ಮಾಡಿದ ಮನುಜಂ (ಕೊರ್ಲ್ಷಾಶಾ. ೧೭-೩೩; 1196).

**ಬೆಗಸಿಲದಾನಿ** = ಕೈತುಂಬ ದಾನ ಮಾಡುವವನು; ಒಂದು ಬಿರುದು: ಅವರೊಳಗೆ ನೆಗಳ್ದರಸಾಸವಾರಿಮುದನೊಗ್ರಮಹೇಶ್ವರನಾದ ಬಿಂಧಣಂ ಬೆಗಸಿಲ ದಾನಿಯಾದ ಕಡುಚಾಗಿತನಂ ಜಗದೊರ್ವ್ವ ಗಂಡನಾದಗಣಿತವಿಕ್ರಮೋಜ್ಜಿತಗುಣಂ . . . ಮಂಡಲಿಕ ಮಲ್ಲಿದೇವಂ (ಶಾ I, ೨೩-೩೩; 1186 ?).

**ಬೆಲಗು** (ನಾ). ಛಾವಣಿಗೆ ಹಾಕುವ ಅಡ್ಡತೊಲೆ: ಮಲೆನಾಡಿನಲ್ಲಿ ಮನೆಯ ಮೇಲೆ ಹಂಚಿನ ತಾಟು ಹಾಕುವರು. ಅದಕ್ಕೆ ಬೆಲಗುಗಳೂ ಎಳೆಗಳೂ ಗಳಗಳೂ . . . , ಬೇಕಾಗುತ್ತವೆ (ಮುಂಬಯು. ೪-೦೦೬). 'ತಲೆಬೆಲಗು' ಪರಾ. [← ತೆಲು. ಬೆಣುಗುಲು]

**ಬೆಲವಕ** (ನಾ). ಒಂದು ಬಗೆಯ ಸಸ್ಯ: ಬೆಳವಸಕಾಸ, ಉಡಿವಲ್ಲಿ, ಬೆಲವಕ (ಶಸ್ಯ. ೪೪). [ ? ]

**ಬೆಲೂನು** 'ಬಲೂನು' ನೋ.

**ಬೆಲೆ$_1$**, ವೆಲೆ (ನಾ). ೧. (ವಸ್ತುವಿನ) ಕ್ರಯ; ಧಾರಣೆ; ದರ; ಮೌಲ್ಯ: "ಪ್ರಕ್ರಯಃ, ಕ್ಲಿಪ್ತಕಃ—ಈ ೨ ಬೆಲೆ" (ಪಲಾಮು. ೯೪-೪೦೯); ಆವಱ ಬೆಲೆಯಂ ಬೆಸಗೊಂಡೊಡೆ ಲಕ್ಷದೀನಾರಂಗಳ್ ಬೆಲೆಯೆಂದು ಪೇಟ್ದೊಡೆ (ವಡ್ಡಾರಾ. ೨೩-೨೪); ನಾಕದ ಘನಲೋಕದಂದವ ಪೊಱಲ್ಗಳನೀ ಪೊಱಲೊಂದು ರಮ್ಯಹರ್ಮ್ಯದ ಬೆಲೆಗಂ ಬರಲ್ ನೆಱೆಯವೆಂಬಿನಂ . . . ಸಮೆದಂ ಪುರಮಂ ಪುರಂದರಂ (ಆದಿಪು. ೬-೯೯); ಬೆಲೆಯಿಂನಕ್ಕುಮೆ ಕೃತಿ ಗಾವಿಲ ಭುವನದ ಭಾಗ್ಯದಿಂದಮಕ್ಕುಂ (ಅರ್ಜನೀ. ೦-೪೩); ಕಾಡ ಕಪಿ ಬಲ್ಲುದೆ ಮಾಣಿಕದ ಬೆಲೆಯ (ಶೂರಂತ. ೨-೯೯ ಪಲ್ಲವಿ). ೨. ಸಂಬಳ; ವೇತನ: "ಭೃತಿಃ, ಭೃತ್ಯಾ, ಕರ್ಮಣ್ಯಾ, ವೇತಾ, ಮೂಲ್ಯಂ, ವೇತನಂ —ಈ ೬ ಬೆಲೆ" (ಪಲಾಮು. ೦೨೦-೯೨); ತೊಟ್ಟಿಸಂತೆ ಪೆಱರ ವಶಮಾಗದೆ ಕೂಲಿಯ ಬಂಟನಂತೆ ಬೆಲೆಯಂ ಪಾರದೆ (ಧರ್ಮಾಮೃ. ೩-೯೯). ೩. ಮಹತ್ವ; ಹಿರಿಮೆ: ಪೊಗಟ್ಟಿನ್ನಧರದ ಸುಧೆ ತಾನಿದೆ ಬೆಲೆಯಿಲ್ಲರ್ಗನುತ್ತೆ ನವಮಧುಗಂಪೂಪದಿನಲರೇಱಿಸಿ ಕೊಯ್ದಳ್ ಸುದತಿಮಣಿಯೊರ್ವಳೆಸವ ಬಕುಳದ ಪೂವಂ (ಉದ್ಭಟ. ೯-೩೩); ಸತ್ಯದೇವತೆ ಬಹು ಬೆಲೆಯವಳವಳನು . . . ರಕ್ಷಿಸಬೇಕು (ಇಂಚಾಪ. ೯೩-೦೩); ಈ ಕಾಗದದ ಬೆಲೆ ನನಗೆಷ್ಟುರ ಬಹುದೆಂಬುದನ್ನು ನೀನೇ ಊಹಿಸಿಕೊ (ಅಪಶಂ. ೦). **ವೆಲೆ:** ೧. 'ವೆಲೆಕೊಳ್' ಪರಾ.

**ಬೆಲೆತೆರು** = ದಂಡ ಕೊಡು; ನಷ್ಟವನ್ನು ತುಂಬಿಸು: ಆಕೆಯ ಅವಿವೇಕಕ್ಕೆ ಆಕೆಯೇ ಬೆಲೆ ತೆರಬೇಕು (ಗಂಪಪಾಡು. ೨೯೨).

**ಬೆಲೆ ಬಾಳು**=೧. ಕ್ರಯಕ್ಕೆ ಯೋಗ್ಯವಾಗು; ಧಾರಣೆಗೆ ಅರ್ಹವಾಗು: ಕಳಿಸಿದರೆ ಕಳಿಸು ಬೆಲೆ ಬಾಳುವಂತಹ ಸರಕು ಎಲ್ಲ ಬಂದರುಗಳಿಗೂ ಹಾದು ಬರಲಿ (ನಂದಾಯ. ೦೯-೬); ಉದ್ದವಾದ ನಾರುಗಳಿಂದ . . . ಹೆಚ್ಚು ಬೆಲೆ ಬಾಳುವ ಬಟ್ಟೆಗಳನ್ನು ತಯಾರಿಸುವರು (ಗೃಹಪ. ೬೯). ೨. ಮಾನ್ಯತೆಯನ್ನು ಪಡೆ: ಸಾಧಾರಣಜನತೆಗೆ ರುಚಿಸಲೂ ಬೇಕು, ನಿಜವಾಗಿ ಬೆಲೆಬಾಳುವಂಥದೂ ಆಗಬೇಕು (ಸಂಗೀತ. ಅಮುಖ).

**ಬೆಲೆಬೀಳು**=೧. ಕ್ರಯವು ಕಡಮೆಯಾಗು,—ತಗ್ಗು: ಬೆಲೆಬಿದ್ದ ಸರಕಿನಲ್ಲಿ ಲಾಭವುಂಟೇ ? (ಗಾದೆ). ೨. ಕ್ರಯವನ್ನು ಪಡೆ; ಧಾರಣೆ ಹಿಡಿ: ನೀನು ಮಾಡಿಸಿಕೊಂಡಿರುವ ಈ ಸರಕ್ಕೆ ಎಷ್ಟು ಬೆಲೆಬಿತ್ತು ? (ರೂಢಿ). **ಬೆಲೆ ಮಾಡು**=ಬೆಲೆ ಕಟ್ಟು; ಧಾರಣೆಯನ್ನು ನಿರ್ಧರಿಸು: ದೊರೆಯುಱಿವ ವಸ್ತುಪುರುಷರ್ಪರಿಕಿಸಿ ಬೆಲೆಮಾಡೆ . . . ಅಸರ್ಘ ರತ್ನಮಾದಂ ರತ್ನಂ (ಗದಾಯು. ೦-೪೦); ಮಧ್ಯಮನ ತಾವು ಬೆಲೆಮಾಡುವರು (ಸಂಪ್ರಶ. ಶಂ. ೦-೨೩).

[ದೇ.॥ ತಮಿ. ವಿಲೈ; ಮಲ. ವಿಲ; ತುಳು. ಬೆಲೆ, ಬಿಲೆ; ಕೊಡ. ಬೆಲೆ; ತೆಲು. ವೆಲ, ವಿಲುವ; ಕೋತ. ವೆಲ್; ತೊದ. ಪೀಲ್]

**ಬೆಲೆ$_2$** (ನಾ). ಕರ್ನಾಟಕದ ಕೆಲವು ಊರುಗಳ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ. ಉದಾ: 'ದೊಡ್ಡಬೆಲೆ', 'ಮಂಚನಬೆಲೆ', 'ಸೂಲಬೆಲೆ' ಇತ್ಯಾದಿ. [ <ಬೇಲಿ ? ]

**ಬೆಲೆಕಟ್ಟು** 'ಬೆಲೆಗಟ್ಟು' ನೋ.

**ಬೆಲೆಕೊಡು** 'ಬೆಲೆಗೊಡು' ನೋ.

**ಬೆಲೆಗಟ್ಟು**, ಬೆಲೆಕಟ್ಟು (ಕ್ರಿ). ೧. ಧಾರಣೆಯನ್ನು ನಿರ್ಧರಿಸು; ದರ

ವನ್ನು ಹೇಳು : ಆಣಿಮುತ್ತಿಗೆ ವೆಗ್ಗಳ ಬೆಲೆಗಟ್ಟುವ ವಾಣಿಜರಿರ್ದರಿಕ್ಕಿಲದಿ (ಶೋಈಹ. ೩-೨೬). ೨. ಮಹತ್ತ್ವವನ್ನು ನಿರ್ಧರಿಸು ; ಅರ್ಹತೆಯನ್ನು ತಿಳಿಯಪಡಿಸು : ಒಲಿದವರೊಲಿದರೆ ಅವನ ಸೌಭಾಗ್ಯಕೆ ಆರುಂಟು ಬೆಲೆಗಟ್ಟುವವರು (ಇಂತಾಶ. ೩೦-೪೭). **ಬೆಲೆಕಟ್ಟು :** ೧. ಕೆಲವರು ಒಂದು ತುಂಡುಬಟ್ಟೆಯನ್ನು ಮುಟ್ಟಿದ ತಕ್ಷಣವೇ ಅದರ ಸ್ಪರ್ಶದಿಂದ ಅದರ ಯೋಗ್ಯತೆ ಇಷ್ಟೇ ಎಂದು ಬೆಲೆಕಟ್ಟುವರು (ಗೃಕಾ. ೬೯). ೨. ಈ ಚೆಲುವಿಗೆ ಬೆಲೆಕಟ್ಟುವುದು ಸಾಧ್ಯವೇ ? (ಯೋಗಶೃ. ೨೬).

[ ಬೆಲೆ$_1$ + ಕಟ್ಟು$_1$ ]

**ಬೆಲೆಗಾಣು** (ಕ್ರಿ). ಕ್ರಯ ಬರು ; ಧಾರಣೆಯು ಸಿಗು : ಚಂದನದ ಕೊರಡು ಇದ್ದ ಹಾಗೆ ಹೆಚ್ಚು ಬೆಲೆಗಾಣುತ್ತದೆ (ಮುಂಜಾ. ೬. ೩-೬೯).

[ ಬೆಲೆ$_1$ + ಕಾಣು (< ಕಾಣ್ ) ]

**ಬೆಲೆಗುಡಿಸು** (ಕ್ರಿ). ಕ್ರಯವು ಸಿಗುವಂತೆ ಮಾಡು ; ಧಾರಣೆಯನ್ನು ಕೊಡಿಸು : ವ್ಯಾಧನೊಂದು ಪಕ್ಕಿಯಂ ಪಿಡಿತರೆ ಕರುಣಿಸಿ ಬೇಡಂಗೆ ಬೆಲೆಗುಡಿಸಿ ಬಿಡಿಸಿದೊಡೆ (ಶಂರಾಪು. ೮-೩೯ ವ).

[ ಬೆಲೆ$_1$ + ಕುಡಿಸು$_2$ (< ಕೊಡಿಸು) ]

**ಬೆಲೆಗುಡು** 'ಬೆಲೆಗೊಡು' ನೋ.

**ಬೆಲೆಗೆಯ್**, ಬೆಲೆಗೈ (ಕ್ರಿ). ೧. ಧಾರಣೆ ಸಿಗು ; ವಿಕ್ರಯವಾಗು : ಕಗ್ಗಲ್ಲೆನಿತು ಬಲ್ಪಾದೊಡಂ ಬೆಲೆಗೆಯ್ಗುಮೇ ರತ್ನಮಾದೊಡೆ ಬೆಲೆಗೆಯ್ಗುಂ (ಧರ್ಮಾಮೃ. ೭-೪೩). **ಬೆಲೆಗೈ :** ೨. ಮಾರು ; ಕ್ರಯಕ್ಕೆ ಕೊಡು : ತಮ್ಮಂತೆ ಬಾಳಲೆಳಸುವ ಬಾಲಕಿಯ ಬೀಳುಗುವರನಿಗೆ ಬೆಲೆಗೈದರೆಂಬುವ ಕೇಳಿ ಕಿವಿಯ ಮುಚ್ಚುವುದು (ಹರಿಬ. ೩-೦೯).

[ ಬೆಲೆ$_1$ + ಕೆಯ್$_1$ ]

**ಬೆಲೆಗೇಡು** (ನಾ). ಮೌಲ್ಯವಿಲ್ಲದುದು : ಹಿಂದಿನವರ ಅಭಿಪ್ರಾಯವು ಇಂದು ಬೆಲೆಗೇಡಾಗಿದೆ (ಕರ್ನಾಟಿ· X, ಮುಪ್ಪು೨). [ ಬೆಲೆ$_1$ + ಕೇಡು ]

**ಬೆಲೆಗೈ** 'ಬೆಲೆಗೆಯ್' ನೋ.

**ಬೆಲೆಗೊಡು**, ಬೆಲೆಕೊಡು, ಬೆಲೆಗುಡು (ಕ್ರಿ). ೧. ಕ್ರಯವನ್ನು ಕೊಡು ; ಧಾರಣೆಯನ್ನು ತೆರು : ನೋಟ್ಪಂ ಬೆಲೆಗೊಟ್ಟು ತಾರ ಮಧುವಂ ಮಲಯಾನಿಲನಂ ಮನೋಜನಂ ಕೌಮುದಿಯಂ (ಅರ್ಜನೀ. ೦-೪೩) ; ಕರದ್ವಯದ ಕಾಂತಿಯು ಮಾಲೆಗಳಂ ಪೊಸಪೂವಿನ ಮಾಲೆಗೆತ್ತು ಬೆಲೆಗೊಟ್ಟು ಕೊಂಡು ನಗಿಸಿದನೊರ್ವಂ (ಗಿಂಕ. ೨-೬೭). **ಬೆಲೆಕೊಡು :** ೨. ಮಹತ್ತ್ವವನ್ನು ಕೊಡು ; ಪ್ರಾಮುಖ್ಯತೆಯನ್ನು ನೀಡು : ಎಲ್ಲಕ್ಕಿಂತ ಮಿಗಿಲಾಗಿ ಮಾಸ್ಲೋವ ಈ ಜೀವನದೃಷ್ಟಿಗೆ ಬಹಳ ಬೆಲೆಕೊಟ್ಟಿದ್ದಳು (ಪೃಸರು. ೦೯೫). **ಬೆಲೆಗುಡು :** ೧. ಕಚಿಯದೆ ಪಾಲಂ ಬಯಸುವ ಬೆಲೆಗುಡದೆ ಬಂಡಮಂ ಬಿಸುವ (ಧರ್ಮಾಮೃ. ೧೨-೨೯) ; ಮನುಜೇಶ್ವರನೊರ್ವಂ ಮನೆಯಂ ಪೊಕ್ಕಂತಾಗದಿ ನಡೆನೋಡುತ್ತೆನ್ನಯ ಮನಮಂ ತನ್ನ ವಿಲಾಸದ ಬೆಲೆಗುಡು[ಪಾಠಾಂ. ಗೊಳು]ತಪೆ ಮಾಜುಂಗೊಂಡಂ (ಶಪುರಾ. ೯-೨೩).

[ ಬೆಲೆ$_1$ + ಕೊಡು$_1$ ]

**ಬೆಲೆಗೊಳ್**, ಬೆಲೆಗೊಳ್ಳು, ವೆಲೆಕೊಳ್ (ಕ್ರಿ). ೧. (ವಸ್ತುವನ್ನು ಮಾರಿ) ಹಣವನ್ನು ಪಡೆ : ತನ್ನ ಸುಲಿಪಲ್ಲ ಸಾಲ್ಗಳ ತೋಱಿ ಮಲ್ಲೆಯ ಸರವಿದೆ ಕೊಳ್ಳೆಂದು ಬೆಲೆಗೊಂಡು ನಿಲ್ಲದವನ ನಾಚಿಸಿದಳು (ಕಂಸವಿ. ೬-೬೯). ೨. ಕೊಂಡುಕೊಳ್ಳು ; ಕ್ರಯಮಾಡು : ಬೆಲೆಗೊಂಡ ತೊತ್ತಿನಲ್ಲ ಬೆಳೆದ ಮನೆಯುವನಾಗಿ (ಮಯೂರಚಿ. ೦೪೩). ೩. ಬೆಲೆಬಾಳು ; ಅಮೂಲ್ಯವಾಗು : ಉಸಿರು ಪರಿಮಳವಾಗಿ ಬೆಲೆಗೊಂಬ ಹೂವೇಕೆ ರಸವೆ ಸಾಧನವಾಗೆ ಧನವೇಕೆ (ಸಿದ್ಧರಾ. ೩-೦೨). **ಬೆಲೆಗೊಳ್ಳು :** ೨. ರೋಷದಿಂದ ಅವನು ಜಯಮಲ್ಲನ ತಲೆಯನ್ನು ಬೆಲೆಗೊಳ್ಳದೆ ಬಿಡನೆಂದು ಪಂತ ಮಾಡಿ ಅದರಂತೆಯೇ ಅವನನ್ನು ಕೊಂದನು (ಅಪ್ಪಾಸ್ಟ. ೨೯). **ವೆಲೆಕೊಳ್ :** ೨. ಮಟ್ಟುವರುಂ ದೇವೇನ್ದ್ರರು ವೆಲೆಕೊಣ್ಡು ವಾಣಿಗಕ್ರೊಟ್ಟಂ ತೆನ್ಕಣ್ಡಮುಂ ವಡಕಣ್ಡಮುಂ ವಿನಿತೀಶ್ವರಕ್ಕಂ ಪೊಯ್ದಾರ್ (ಎಕ. IV (R). ಶಾಮರಾ. ೦೯೭-೬ ; ಸು. 750). [ ಬೆಲೆ$_1$ + ಕೊಳ್$_1$ ]

**ಬೆಲೆಗೊಳ್ಳು** 'ಬೆಲೆಗೊಳ್' ನೋ.

**ಬೆಲೆಪಟ್ಟಿ** (ನಾ). "ಸಲ್ಲಿಸಿದ ಸಾಮಾನುಗಳ, ಅಥವಾ ಮಾಡಿರುವ ಕೆಲಸದ, ಬೆಲೆ ತೋರಿಸುವ ಪಟ್ಟಿ : ಬೆಲೆಪಟ್ಟಿ" (Bill· ೨೦೪೦).

[ ಬೆಲೆ$_1$ + ಪಟ್ಟಿ$_2$ ]

**ಬೆಲೆಯಮ್ಮ** (ನಾ). ಒಬ್ಬಾತನ ಹೆಸರು : ಈ ಕಲ್ಲ ಸಂದಿಗರ ಕುಳ × × × ಮುಂದ್ದನ್ನಿಱಿಸಿದೊಂ × × × ಬೆಲೆಯಮ್ಮನ ಮಗಂ (ಎಕ. VII, ಶಿಕಾ. ೨೦೯-೩೩ ; 918). [ ಬೆಲೆ$_1$ + ಅಮ್ಮ$_1$ ]

**ಬೆಲೆಯಿಡಿಸು** (ಕ್ರಿ). ಬೆಲೆ ಕಟ್ಟಿಸು ; ಧಾರಣೆ ಮಾಡಿಸು : ಯಶೋಭದ್ರಾಂಬಿಕೆಯುಂ ಕಂಡು ರತ್ನಕಂಬಲಮಂ ನಿಮಿರ್ಚಿ ತೋರ್ಪುದುಮ ಪೂರ್ವವಸ್ತುವಪ್ಪುದನಱಿದು ವಸ್ತುಪುರುಷರಿಂ ಬೆಲೆಯಿಡಿಸಿ . . . ಕೊಂಡಳ್ (ಸುಕುಮಾ. ೦೦-೦೦೭ ವ). [ ಬೆಲೆ$_1$ + ಇಡಿಸು$_1$ ]

**ಬೆಲೆಯಿಡು** (ಕ್ರಿ). ೧. = ಬೆಲೆಗಟ್ಟು ೧ : ಬೆಲೆಯಿಡಲಱಿವೊಡೆ ಮಂಡಲಿ ಬೆಲೆಯಿಡುಗೆಮ (ಅರ್ಜು. ೦೪-೩೦); ಬೆಲೆಯಿಡಲೀ ಹಯಕ್ಕೆ ಭುವನತ್ರಯಮುಂ ಬೆಲೆಯಲ್ತು (ಸುಕುಮಾ. ೮-೭೦). ೨. =ಬೆಲೆಗಟ್ಟು ೨: ಬಾಣಾಖ್ಯನಾತ್ಮಜೆ ಕನ್ಯಾರತ್ನಕ್ಕೆ ಬೆಲೆಯಿಡುವರಂಗಾಣೆ (ಪವಮೋ. ೨೯-೯೦).

[ ಬೆಲೆ$_1$ + ಇಡು$_1$ ]

**ಬೆಲೆವಡಿಸು** (ಕ್ರಿ). ಮೌಲ್ಯ ಬರುವಂತೆ ಮಾಡು : ತವೆ ಸ್ವಾತಿಬಿಂದುವಿಂದೊಗೆದ ಮುತ್ತಿಂಗೆ ತಿಗಮೊಗವಾವುದೆಂದೆಣಿಸರೆ ಅವ ಪರೀಕ್ಷಿಸಿ ರಂಧ್ರಗೈದು ಸರಗೊಳಿಸುತ್ತಲವನು ಬೆಲೆವಡಿಸರೆ (ಪವಮೋ. ೦-೦೬).

[ ಬೆಲೆ$_1$ + ಪಡಿಸು ]

**ಬೆಲೆವಡೆ** (ಕ್ರಿ). ಮಾನ್ಯತೆಯನ್ನು ಪಡೆ ; ಬೆಲೆ ಬಾಳು : ಜಲಬಿಂದು ಶುಕ್ತಿಕೆಯೊಳು ಬೀಳೆ ಮುತ್ತಾಗಿ ಬೆಲೆವಡೆವಂತೆನ್ನ ಬಡನುಡಿ ಬೆಲೆವಡೆಯದೆ ಮಾಣ್ಬುದೆ ನಿಮ್ಮ ಕಿವಿ ಸೋಂಕಲು (ತ್ರಿಶುಚಿ. ೦-೦೯) ; ಪಲಬಗೆಮಾತುಗಳಿಂದ ಬೆಲೆವಡೆದಿರ್ಪೆನೆಂದೆಣಿಸುವಳಲ್ಲ ನಿನ್ನೊಲವೊಂದನೆ ನಂಬಿಹೆನು (ಹರಿವಿ· ೦-೩೩). [ ಬೆಲೆ$_1$ + ಪಡೆ$_1$ ]

**ಬೆಲೆವಣಿ** (ನಾ). ಅಮೂಲ್ಯವಾದ ರತ್ನ ; ಬಹುಬೆಲೆಯ ರತ್ನ : 'ಬೆಲೆವಣಿಗಟ್ಟು' ಪರಾ. [ ಬೆಲೆ$_1$ + ಮಣಿ$_1$ ]

**ಬೆಲೆವಣಿಗಟ್ಟು** (ನಾ). ಅಮೂಲ್ಯವಾದ ರತ್ನದಿಂದ ಮಾಡಿದುದು ; ಅನರ್ಘ್ಯರತ್ನಖಚಿತವಾದುದು : ಬಾಲಕನ ಕಣ್ಗೊಂದು ಬೆಲೆವಣಿಗಟ್ಟಿನ ದೇವಾರಂ ತೋಱಿರ್ಪುದುಂ . . . ಬಳಪೊಕ್ಕಂ (ಧಾಪಚಾಕ್ಕ. ೭೬-೨೬). [ ಬೆಲೆವಣಿ + ಕಟ್ಟು$_2$ ]

**ಬೆಲೆವೆಂಡತಿ** (ನಾ). ಹಣಕ್ಕೆ ಸಿಗುವ ಹೆಣ್ಣು ; ಸೂಳೆ ; ಗಣಿಕೆ : ನೆಲಕೆಲ್ಲಮಿಟ್ಟ ಪಡಿಗಂ ನೆಲಕಲ್ಲಂ ಸಮೆದ ಪಚ್ಚವಡಮನೆ ಮಾತ್ರಂ ನೆಲನನಿತ ನಿತಱಿ ಮಯಿಲಗೆ ಬೆಲ್[ಲೆ]ವೆಂಡತಿ ಬಗೆವೊಡಿಂತು ಕಿಸುಗುಳಮುಂಟೇ (ಕಸಾರ. ೨೯೯). [ ಬೆಲೆ$_1$ + ಪೆಂಡತಿ ( < ಪೆಂಡಿತಿ) ]

**ಬೆಲೆವೆಣ್**, ಬೆಲೆವೆಣ್ಣು(ನಾ). =ಬೆಲೆವೆಂಡತಿ : "ದಾರಿಕೆ ಲಂಜಿಕೆ ಪಣವಧು ವಾರಾಂಗನೆ ಗಣಿಕೆ ವೇಶ್ಯೆಯೆನೆ ಬೆಲೆವೆಣ್" (ಪಸ್ತುಕೋ· ೩೩-೭); ಕಡುಪಿಲ್ಲದ ಕುದುರೆ ಗಾಡಿಯಿಲ್ಲದ ಬೆಲೆವೆಣ್ . . . ಮನಕ್ಕಿಡಂಬಡಂ ಮಾಟ್ಪುಮರ್ತಿಯಂ ಮಾಡುಗುಮೇ (ಅಜಿತ. ೬-೯೬) ; ತಳಿರಯ್ಯಲಾಡುತಂ ಪಾಡುತಂ ನೋಡುತಂ ಬೆಲೆವೆಣ್ಣಿಳೆಸೆದಿರ್ದರು (ಶಬ್ಧ. ೦೦-೯೦)· **ಬೆಲೆವೆಣ್ಣು :** ಶನು ಮುಟ್ಟಿ ಮನ ಮುಟ್ಟದೆ ದೂರವಾದರಯ್ಯಾ ಬೆಲೆವೆಣ್ಣಿನಂತೆ (ಶಸ್ತವ. ೯. ೩೯೭-೮೩೬) ; ಅರ್ಥಿಯಿಂ ಬೆಲೆವೆಣ್ಣ ಬಿಡುವೆಣ್ಣ ಮನೆವೆಣ್ಣ . . . ನಡಯಿಸಿದನು (ಸಪ್ತುಗ. ೦-೩೨) ; ಬೆಲೆವೆಣ್ಣು ಸೂಳೆಹೋದ

ಕೆಂದು ಅತ್ರವನು ಇವನೊಬ್ಬನೆ ಮಹಾನುಭಾವ! (ತುಂಗಳ. ೫೬).

[ಬೆಲ್$_1$ + ವೆಣ್]

**ಬೆಲೆವೆಣ್ಣು** 'ಬೆಲೆವೆಣ್' ನೋ.

**ಬೆಲ್ಲ** (ನಾ). ೧. ಕಬ್ಬಿನ ರಸವನ್ನು ಕಾಯಿಸಿ ತಯಾರಿಸಿದ (ಬೇರೆ ಬೇರೆ ಆಕಾರದ) ಸಿಹಿಯಾದ ಘನಪದಾರ್ಥ; ಗುಡ: ಅರಗು ಮೊದಲಾಗೆ ಘೃತ ಸಜ್ಜ ರಸಂ ಬೆಲ್ಲಂ ಸಣಂಬಿವೆಂಬಿವಱಿಂ ವಿಸ್ತರಿಸಿ ಸಮೆದ . . . ಅರಗಿನ ಮನೆಯಂ . . . ಪುಗಿಸೆ (ಕಂಶಭಾ. ೩-೩) : ಹಾಲ ತ್ರೊಱೆಗೆ ಬೆಲ್ಲದ ಕಸಟು ಸಕ್ಕರೆಯ ಮಳಲು ತವರಾಜದ ನೊರೆತೆರೆಯಂತೆ ಆದ್ಯರ ವಚನ (ಬಸವ. ೨೯೦) : ಹಿಪ್ಪಲಿ, ಬೆಲ್ಲ, ಅಳಲೆಕಾಯಿ ಇವನ್ನು ಬಿಸಿನೀರಿನಿಂದ ಅರೆದು ಕುಡಿದರೆ ವಾತಜ್ವರ ಪರಿಹಾರವಾಗುವುದು (ಸಕಲವೈ. ೬೩). ೨. ಮುತ್ತು; ಚುಂಬನ: ಜಾನಕಿಬಾಯಿಯು . . . ಅವನನ್ನು ಹಿಡಿದೆತ್ತಿಕೊಂಡು ಅವನ ಗಲ್ಲಕ್ಕೂ ಬೆಲ್ಲವನ್ನು ಕೊಟ್ಟರು (ಸಮಾಜ. ೬೨೯). ೩. (ಆಲಂ) ಸೋಗು; ನಟನೆ; ಕಪಟ: 'ಬೆಲ್ಲವಾತು,' 'ಬೆಲ್ಲಿಸು' ಪರಾ. ೪. ಹಿತ; ವಿಶ್ವಾಸ: ಬೆಲ್ಲವಾಗಿರಬೇಕು ಬಂಧು ಜನರೊಳಗೆ (ಪುರಂದ. ೦-೩೨-೦).

**ಬೆಲ್ಲತೂಗು** = ತೂಕಡಿಸಂ; ಜೂಗರಿಸಂ: ಲಲಿತೆಯಾಗಲೇ ಬೆಲ್ಲ ತೂಗುತ್ತಿದ್ದಳು (ಶಿಳುಮು. ೨೦೯); ಅರೆನಿದ್ದೆಯಿಂದ ಬೆಲ್ಲತೂಗುತ್ತಿದ್ದ ನಂಟನು ನಕ್ಕನು (ಮರಮು. ೦೦೬). **ಬೆಲ್ಲದ ಉಂಡೆ** = ೧. ಉಂಡೆಯಾಕಾರದ ಬೆಲ್ಲ: ಕೆಲವು ಕಡೆಗಳಲ್ಲಿ ಕಾಫಿಗೆ ಸಕ್ಕರೆಯ ಬದಲು ಬೆಲ್ಲದ ಉಂಡೆಗಳನ್ನು ಉಪಯೋಗಿಸುತ್ತಾರೆ (ರೂಢಿ). ೨. ಆಲೆಮನೆಯಲ್ಲಿ ಮೊದಲನೆಯ ಅಡಿಗೆ ಬಂದಾಗ ಅದನ್ನು ಅಚ್ಚುಗಳಿಗೆ ಸುರಿದು ಮಾಡುವ ಉಂಡೆಯಾಕಾರದ ಬೆಲ್ಲ: ಅವರು ಆಲೆಮನೆಯನ್ನು ನೋಡಲು ಬಂದ ಅತಿಥಿಗಳಿಗೆ ಕೊಪ್ಪರಿಗೆಯಿಂದ ಬಿಸಿಯಾದ ಬೆಲ್ಲದ ಉಂಡೆಗಳನ್ನು ತೆಗೆದು ಹಂಚಿದರು (ರೂಢಿ). **ಬೆಲ್ಲದಚ್ಚು** = ಅಚ್ಚಿನ ಆಕಾರದ ಬೆಲ್ಲ: ಹೊಜಗಣಿಂ ಬಂದ ಬೆಲ್ಲದ ಭಂಡಿಗೆ ಬೆಲ್ಲದಚ್ಚು ಹದಿನಯ್ದು (ಎಇ. XIII ೨೨-೫೬; 120೩). **ಬೆಲ್ಲಬೆಲಸ, ಬೆಲ್ಲಬೆಲ್ಲಸ** = ಅತಿಯಾದ ಸಿಹಿಯ ಸೇವನೆಯಿಂದ ಕಟ್ಟರೆಯಾಗುವುದು: ಫೇಡೆ ತಿಂದು ಬಾಯಿ ಬೆಲ್ಲಬೆಲಸ ಆಗಿತ್ತು (ಹೊಸಂಗಾ. ೦೬೮); ಅರುಚಿಯೇ ಅಭ್ಯಾಸವಾದ ಬಾಯಿಗೆ ಬೆಲ್ಲವೂ ಬೆಲ್ಲಬೆಲ್ಲಸಾಗಿ ಹತ್ತುವಂತೆ (ಸಿಂಹಶ. ೫೫).

[ದ್ರಾ.೫ ತಮಿ. ಮಲ. ವೆಲ್ಲಮ್; ತುಳು. ಕೊಡ. ಬೆಲ್ಲ; ತೆಲು. ಬೆಲ್ಲ. ಬೆಲ್ಲಮು, ಬೆಲ್ಲಿ]

**ಬೆಲ್ಲಂಗೋಲ್** (ನಾ). ಸಿಹಿರುಚಿಯುಳ್ಳ, ಕೋಲಿನಂತಿರುವ ಒಂದು ಬಗೆಯ ಸಸ್ಯ; ಕಬ್ಬು.

**ಬೆಲ್ಲಂಗೋಲ್ವಿಲ್ಲ** = ಕಬ್ಬಿನ ಜಲ್ಲೆಯನ್ನು ಬಿಲ್ಲಾಗಿ ಉಳ್ಳವನಂ; ಮನ್ಮಥ: ಪಲ್ಲಣಿಯ ಬೆಲ್ಲಂಗೋಲ್ವಿಲ್ಲನ ಮಲ್ಲಿಗೆಸರಲ ಜಲ್ಲಣೆಗೆ ತಲ್ಲಣಂಗೊಂಡು (ರಾಜಶೇ. ೬೩-೫). 'ಕರ್ಬುವಿಲ್ಲ' ಪರಾ. [ಬೆಲ್ಲ + ಕೋಲ್$_1$]

**ಬೆಲ್ಲಗಣಿಕೆ** (ನಾ). ಒಂದು ಬಗೆಯ ಮರ: "ಕಾಕಮಂತಾ, ಕಾಕಮಾಚಿ—ಈ ಯೆರಡುಂ ಬೆಲ್ಲಗಣಿಕೆ" (ಓಷಧಿ. ೩೦); ಪುಷ್ಯನಕ್ಷತ್ರದಲ್ಲಿ ಬೆಲ್ಲಗಣಿಕೆಯ ಬೇರನು ತಂದು ಹಾಲಲ್ಲಿ ಕನ್ಯಕೆಯ ಕೈಯಿಂದ ಅರೆಸಿ ಹಸುವಿನ ತುಪ್ಪವೆರಸಿ ಕುಡಿಯ ಕೊಡಿಸಲು ಮಹಾಉತ್ತಮವಾದ ಗರ್ಭ ನಿಲ್ಲುವುದು (ವೈದ್ಯಸ. II, ೯೯). [ಬೆಲ್ಲ$_?$ + ಕಣಿಕೆ$_4$]

**ಬೆಲ್ಲಗಾರಿಗೆ** (ನಾ). ಬೆಲ್ಲದಿಂದ ತಯಾರಿಸುವ ಒಂದು ಬಗೆಯ ಸಿಹಿಭಕ್ಷ್ಯ: ದೋಸೆಯ ಲಗ್ಗೆ ಬೆಲ್ಲಗಾರಿಗೆಯ ಬಣಬೆ ತಡೆತಡೆಯ ಪಾಯಸದ ಕಟ್ಟೆ (ಸಮ್ಮಿಳಿ. ೭-೨೫). [ಬೆಲ್ಲ + ಗಾರಿಗೆ$_1$]

**ಬೆಲ್ಲಗೂಳು** (ನಾ). ಬೆಲ್ಲವನ್ನು ಸೇರಿಸಿ ಮಾಡಿದ ಆಹಾರಪದಾರ್ಥ: ಗಂಡನಿಕ್ಕಿದ ಪಡಿಯಸೊಲ್ಲದೆ ಬೆಲ್ಲ[ಪಾಠಾಂ. ನೆಲ್ಲು]ಗೂಳಿಗಾಸೆ ಮಾಡಿ ನೆರೆಮನೆಗೆ ಹೋಗುವ ಬಲ್ಲಾಳಗಿತ್ತಿಗೆ ಪತಿಭಕ್ತಿ ಅಳವಡುವುದೆ ಅಯ್ಯ (ಶಿಪವ. ೨೦-೦೬). [ಬೆಲ್ಲ + ಕೂಳು$_3$ (<ಕೂಟ್$_1$)]

**ಬೆಲ್ಲಗೆಡ್ಡೆ** (ನಾ). ಒಂದು ಬಗೆಯ ಗೆಣಸು: ಇಬ್ಬದಿಯ ಆಡಸೋಗೆ, ನರ್ಮಲೀಗಿಡಗಳ ಬೇಲಿಗಳಿಂದ ಬೆಲ್ಲಗೆಡ್ಡೆಯ ಬಾಳಿಕ ಸುಟ್ಟ ವಾಸನೆ ಮೂಗಿಗೆ ಬಡಿಯಿತು (ಮೂರುದಾ. ೯೦). [ಬೆಲ್ಲ + ಗೆಡ್ಡೆ (<ಗಡ್ಡೆ)]

**ಬೆಲ್ಲಗೊಟ್ಟೆ** (ನಾ). ಒಂದು ಬಗೆಯ ಔಷಧೀಸಸ್ಯ: ತ್ರಿಫಲೆ, ಬೆಲ್ಲಗೊಟ್ಟೆ . . . ಶ್ವೇತಗುಂಜಿ, ಗುರುಗುಂಜಿಯನ್ನು ಚಟ್ಟೆ (ವೈದ್ಯಶಿ. ೯೨). [ಬೆಲ್ಲ$_?$ + ಕೊಟ್ಟೆ$_4$]

**ಬೆಲ್ಲಣೆ** (ನಾ). ಮೋಸ: ವಂಚನೆ; ಸೋಗು: ಲಿಂಗದೊಳು ಲಲ್ಲೆ ಬೆಲ್ಲಣೆ [ಣೆ] ಬೆಲ್ಲ ಗೆಲ್ಲ ಮಹಲಿಂಗದೊಳು ಹದಿರು ಚೆದುರುಂ ಬಿಂಕ ವಂಕ ಮಾಲಿಂಗದೊಳು ನಯವಿನಯ ಸೈಪುವೈಪುಗಳೈದೆ ಪುಟ್ಟೆ ಮನಮುಂಟ್ಟರ್ದನು (ಪಂಡಿಪುಾ. ೦೯-೬); ಬೆರಸು ಬೆಲ್ಲಣೆಯಿಂಕ್ಕೆಯಾಶೆಪಾಶೆಯ ದೇಶ ಚಕ್ಕುಮಲುಕಿನ ಚಾವಡಿ . . . ಸೈಪುದೊ ಜಾವ ಸೂಳೆಗೇರಿ ಸೊಗಸಾದುದಲ್ಲಿ (ಪಂಡಿಪುಾ. ೨೩-೦೬). [ಬೆಲ್ಲ + ಅಣೆ$_{2,?}$]

**ಬೆಲ್ಲಪತ್ರೆ** 'ಬೆಲ್ಲವತ್ತ' ನೋ.

**ಬೆಲ್ಲಬಿಲ್ಲ** (ನಾ). ಕಬ್ಬಿನ ಜಲ್ಲೆಯನ್ನು ಬಿಲ್ಲಾಗಿ ಉಳ್ಳವನು; ಮನ್ಮಥ: ಚಲ್ಲೆಗಂಗಳ ನೋಟ ಬೆಲ್ಲಬಿಲ್ಲನ ಸರಳಲ್ಲದುಳಿದ ಪರಿಯಲ್ಲ (ಅಂಜನ. ೩-೬೬). [ಬೆಲ್ಲಬಿಲ್ಲು + —ಅ$_7$]

**ಬೆಲ್ಲಬಿಲ್ಲು** (ನಾ). ಕಬ್ಬಿನ ಜಲ್ಲೆಯ ಬಿಲ್ಲು: 'ಬೆಲ್ಲಬಿಲ್ಲ' ಪರಾ. [ಬೆಲ್ಲ + ಬಿಲ್ಲು$_1$ (<ಬಿಲ್$_2$)]

**ಬೆಲ್ಲವತ್ತ, ಬಿಲ್ಪತ್ರೆ, ಬಿಲ್ಲವತ್ತೆ, ಬೆಲ್ಲಪತ್ರೆ, ಬೆಲ್ವತ್ತ** (ನಾ). ಒಂದು ಬಗೆಯ ಮರ; ಬಿಲ್ವವೃಕ್ಷ: "ಮಾಲೂರಃ, ಶ್ರೀಫಲಃ, ಬಿಲ್ವ-ಈ ೩ ಬೆಲ್ಲವತ್ತದ ಪೆಸರ್" (ಹಲಾಯು. ೩೨-೯೧); ಉತ್ತರಣೆಯ ಬೆಲ್ಲವತ್ತದ ತೊಳಂಬೆಯ ಪತ್ರೆಯನೊಂದನಿತ್ತು ಚಿಚ್ಚರಮುಮರತ್ವಮಂ ಪಡಯಿಂ (ಸಪುಶ. ೬-೦೨); ಬೆಲ್ಲವತ್ತ ಕಪಿತ್ಥ . . . ಕರ್ಪೂರಕದಳಿಗಳಲ್ಲಿ ನೋಡಿವೆ ಭೂಮಿಸುತೆ ಭೂಜಾತಸಂತತಿಯ (ತೊರಾ. ೩-೦-೨೯). **ಬಿಲ್ಪತ್ರೆ**: ಶಿವಪೂಜೆಗೆ ಬಿಲ್ಪತ್ರೆ ಸರ್ವಶ್ರೇಷ್ಠ (ರೂಢಿ). **ಬಿಲ್ಲವತ್ತೆ**: ಎತ್ತ ನೋಡಿದಡತ್ತ ಬಿಲ್ಲವತ್ತೆಯ ತರುವೊತ್ತವೆಸೆದಿಪವು (ಪೂದೇಗಾಂ. ೦-೫೨). **ಬೆಲ್ಲಪತ್ರೆ**: ಆ ಸುತನ ಮೇಲಣ ಭಸಿತಮಂ ಬೆಲ್ಲಪತ್ರೆಯನು ಓಸರಿಸದಿಕ್ಕಲಿಕೆ ನೂಂಕಿ (ಬಸಪು. ೯೮-೨೯). **ಬೆಲ್ವತ್ತ**: ಬಿಕ್ಕೆ ಕಕ್ಕೆಯು ಏಕ್ಕೆ ಲೊಕ್ಕೆ ಬೆಲ್ವತ್ತ [ಪಾಠಾಂ. ಬೆಲ್ಲವತ] ನೆಲ್ಲಿ (ಪಂಡಿಪುಾ. ೦೮-೦೨).

[<ಸಂ. ಬಿಲ್ವಪತ್ರ./ತುಳು. ಬಿಲ್ಪತ್ರೆ, ಬೆಲ್ಲಪತ್ರೆ]

**ಬೆಲ್ಲವಾತು** (ನಾ). ಸೋಗಿನ ನುಡಿ; ನಟನೆಯ ಮಾತು: ಎಲ್ಲಿಯಾನುಂ ಬಂದು ಚಲ್ಲವೊತ್ತಿಸ ಬೆಲ್ಲವಾತುಗಳಂ ಕೈಕೊಂಡು ರಾಜ್ಯಮಂ ಕಿಡಿಸಲ್ಬಗೆದುಪ್ಪೊಡದನುಪೇಕ್ಷಿಸಲ್ ಬಾರದು (ಶಂಶಕಂ. ೦೦೫-೯); (ಬೆಲ್ಲವಾತಿನಿಂದ) ನಾಸು ವೇಶ್ಯೆ (ಮಂಕ್ರಕ. ೬೦-೦೩).

[ಬೆಲ್ಲ + ಮಾತು$_1$./ತೆಲು. ಬೆಲಿಮಾಟಲು]

**ಬೆಲ್ಲವುದಿ** (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ: ಬೆಲ್ಲವುದಿ ಬೆಲ್ಲವತ್ತ ಮಾಗುಳಿ ಬಿದಿರ ಕಳಿಲೆ ಪೊಸತಮಕಂಬಟೆಯ ಕಾಯ್ಗಳಿಂದ ಸಮೆದೊಪ್ಪುವುಪ್ಪಿನ ಕಾಯ್ಗಳಿಂ ಪಾಳ್ಬುದು (ಸೂಪಶಾ. ೩-೦೬).

[ ? ]

**ಬೆಲ್ಲಾಟಿ** (ನಾ). ಒಂದು ಬಗೆಯ ಮರ: ಬೆಲ್ಲಾಟಿ—ಎತ್ತರವಾಗಿ ಬೆಳೆಯುತ್ತದೆ. ಇದರ ತೊಲೆಗಳನ್ನು ಇಮಾರತಿಗೆ ಬಹಳ ಹಾಕುವರು (ಕಶಾಗ. ೯೫).

[ ? ]

**ಬೆಲ್ಲಿಸು, ಬೆಳ್ಳಿಸು** (ಕ್ರಿ). (ಮುಖಸ್ತುತಿ ಮಾಡಿ) ವಂಚಿಸು; ಮೋಸಗೊಳಿಸು: ಬೆಲ್ಲಿಸುತೆ ಸವಿನುಡಿಗಳಿಂದ ಮಾಯುಗಳೆಸಗಿ ಮೆಲ್ಲಮೆಲ್ಲನೆ ಸಾರಿ

ಬಾಗರೆದು ಬರಿಮಾತಿನಲ್ಲಿ ನೆರೆಯುಲ್ಕೆಳಸಿ ಬಹ ಕಪಟವಿಟರುಗಳ ನಿಷ್ಪಣಬೆ ನುತ್ತವುರಿದು (ಶಂಕಣ. ೫-೬-೯೩). **ಬೆಳ್ಳಿಸು** : ಅರಿಯದ ಹುಡುಗೀನ ಬೆಳ್ಳಿಸೋಕೆ ನೋಡಿದೆಯಾ ಸುಂದರಪುರುಷ? (ಶಕರಾ. ೦೬೭).

[ಬೆಲ್ಲ + —ಇಸು$_3$./ತೆಲು. ಬೆಲ್ಲಿಂಚು]

**ಬೆಲ್ಲುಣಗಿ** 'ಬೆಲ್ಲುಣಿಗೆ' ನೋ.

**ಬೆಲ್ಲುಣಿಗೆ**, ಬೆಲ್ಲುಣಗಿ (ನಾ). ಹಪ್ಪಳ, ಚಪಾತಿ ಮೊದಲಾದುವುಗಳನ್ನು ಲಟ್ಟಿಸುವ ಸಾಧನ; ಲಟ್ಟಣಿಗೆ; ರತ್ನೂಡಿ : "ಬೆಲ್ಲುಣಿಗೆ—ಲಟ್ಟಣಿಗೆ" (ಶಾಕಕೋ. ೨೪). **ಬೆಲ್ಲುಣಗಿ** : ತಾಪಹರನಾಲಯದೆ ಬೆಲ್ಲುಣಗಿಯಂ ಕದ್ದು ಕೊಂಡೊಯ್ದು (ದುರಕು. ೨೬-೪).

[←ಹಿಂ. ಬೇಲನ; ಮರಾ. ಬೇಲಣೇ=ಲಟ್ಟಿಸು]

**ಬೆಲ್ಲೂರ್** (ನಾ). ಒಂದು ಊರಿನ ಹೆಸರು: ತುರಗ ಪ್ರಧಾವನ ನಿಷ್ಪಾದಿತ ಸೀಮಾಭ್ಯಂತರೋ ಬೆಲ್ಲೂರ್‌ನಾಮಗ್ರಾಮಃ (ಎಕ. VI, ಮೂಡಗೆ. ೩೬-೯೯; 749). [ಬೆಲ್ಲ$_7$ + ಊರ್]

**ಬೆಲ್ವತ್ತ** 'ಬೆಲ್ಲವತ್ತ' ನೋ.

**ಬೆವಕೂಫ್** 'ಬೇಕೂಫ್' ನೋ.

**ಬೆವಟಿಕ್ಕು** (ಕ್ರಿ). ೧. ಪಾತ್ರೆ ಮುರಿತಾದುವಕ್ಕೆ ಬೂದಿಯನ್ನು ಹಾಕಿ ತಿಕ್ಕು : ಹೊಳೆವ ಹೊಂಬೊಗರಿಗೆ ಬೆವಟಿಕ್ಕಿ ಕೈಯಾರ ಬೆಳಗಿದೊಪ್ಪು ವೆತ್ತಂತೆ ಅಳಲುವ ರತಿಯುರಸ್ಥಳದೆ ಭಸ್ಮಾಂಕಿತ ಕಳಶಕುಚಂಗಳೊಪ್ಪಿದುವು (ಬೋಚಕ. ೬-೨೨). ೨. (ಆಲಂ) ಅನುನಯಿಸು ; ಮರ್ಜಿ ಹಿಡಿ : ಇವನಿಗೇಕಿಷ್ಟು ಬೆವಟಿಕ್ಕಬೇಕು? ಬಂದರೆ ಬರಲಿ. ಬೇಡಾದರೆ ಬಿಡಲಿ (ರೂಾ).

[ಬೆವಟು + ಇಕ್ಕು]

**ಬೆವಟು** (ನಾ). ಪಾತ್ರೆ ಮುಂತಾದುವನ್ನು ಬೆಳಗಲು ಉಪಯೋಗಿಸುವ ಬೂದಿ ಮುಂತಾದುವು : 'ಬೆವಟಿಕ್ಕು' ಪರಾ. [ ? ]

**ಬೆವತು** 'ಬೆವರ್$_1$' ಪರಾ.

**ಬೆವರ್** 'ಬೆಮರ್$_2$' ನೋ.

**ಬೆವರಕ್ಕಿ** (ನಾ). ತೆನೆಯಿಂದ ತೆಗೆದು, ಸುಟ್ಟ ಕಾಳು ; ಕಾಚಕ್ಕಿ ; ಬೆಳಸಿ: ಹುಳೋಳೆದಿಂದ ಬೆವರಕ್ಕಿ ಮಾಡಿವೆವು (ರೂಾ). [ ? + ಅಕ್ಕಿ$_1$]

**ಬೆವರಟ್ಟೆ** (ನಾ). ಕಾಲನ್ನು ಮುಚ್ಚುವ ಪಾದರಕ್ಷೆಯ ಒಳಗೆ ಹಾಕುವ, ಬೆವರನ್ನು ಹೀರುವ ಅಟ್ಟೆ: (ಳ). [ಬೆವರು$_2$ (<ಬೆಮರ್$_2$) + ಅಟ್ಟೆ$_2$]

**ಬೆವರಿಡು** 'ಬೆಮರಿಡು' ನೋ.

**ಬೆವರಿಸು** (ಕ್ರಿ). ೧. ಬೆವರುವಂತೆ ಮಾಡು : ಸ್ವೇದಗೊಳ್ಳುವಂತೆ ಮಾಡು : ಕಷಾಯ ಲೇಹ್ಯದಿಂದಲೂ ಧೂಮಪಾನ ಅಭ್ಯಂಗನ ಮುಂತಾದುದರಿಂದಲೂ ಬೆವರಿಸುವುದರಿಂದಲೂ ಚಿಕಿತ್ಸೆಯಂ ಪ್ರಯೋಗಿಸುವುದು (ಶಕವೈ. ೨೨೪). ೨. (ಆವಿಯ) ಶಾಖದಿಂದ ನೀರೂರುವಂತೆ ಮಾಡು : ಮಡಕೆಯಲ್ಲಿ ನೀರ ಹನಿಸಿ ಒಲೆಯ ಮೇಲಿತ್ತಿ ಕಾಸಿ, ಆ ಮಡಕೆಯ ಬಾಯಿಗೆ ಪುಟ್ಟ ಪಾವಡೆಯಂ ಕಟ್ಟಿ ಅದರ ಮೇಲೆ . . . ಈ ಚೂರ್ಣವನ್ನಾಟ್ಟು ಮೇಲೆ ಮುಚ್ಚಳ ಮುಚ್ಚಿ ಬೆವರಿಸಿ (ಶಕವೈ. ೨೦೮).

[ಬೆವರು$_2$ (<ಬೆಮರ್$_2$) + —ಇಸು$_1$]

**ಬೆವರಿಳಿ** 'ಬೆಮರಿಳಿ' ನೋ.

**ಬೆವರು$_1$** 'ಬೆಮರ್$_1$' ನೋ.

**ಬೆವರು$_2$** 'ಬೆಮರ್$_2$' ನೋ.

**ಬೆವರುಗುಳ್ಳೆ** (ನಾ). ಸೆಕೆಯಿಂದ ಮೈಮೇಲೆ ಏಳುವ ಬೊಕ್ಕೆ ; ಸೆಕೆ ಗುಳ್ಳೆ : ಮಗುವಿನ ಮೈಯಲ್ಲೆಲ್ಲಾ ಬೆವರುಗುಳ್ಳೆ ಆಗಿ ಒದ್ದಾಡುತ್ತಿದೆ (ರೂಾ). [ಬೆವರು$_2$ (<ಬೆಮರ್$_2$) + ಗುಳ್ಳೆ$_1$ (<ಗುರುಳೆ)]

**ಬೆವರುಸಾಲೆ** 'ಬೆಮರ್ಸಾಲೆ' ನೋ.

**ಬೆವರುಹನಿ** 'ಬೆಮರ್ವನಿ' ನೋ.

ಬೆವಸಾಯ, ಬವಸ, ಬವಸು, ಬವಸೆ$_1$, ಬೇಸಾಯ, ಬ್ಯವಸಾಯ (ನಾ). ೧. ಉತ್ತು, ಬಿತ್ತಿ ಬೆಳೆ ತೆಗೆಯುವುದು ; ಆರಂಬ ; ಒಕ್ಕಲುತನ ; ಕೃಷಿ : ಒಬ್ಬಳೇ ಹೆಂಡತಿ ಮೂವರ್ ಪುತ್ರರ್ ಎರಡಾರ ಬೆವಸಾಯ ಹತ್ತು ಕಜ್ಜಹ (ಶಂತಕಂ. ೬೫-೦೪) ; ಬೆವಸಾಯವ ಮಾಡಿ ಮನೆಯ ಬೀಯಕ್ಕೆ ಬತ್ತವಿಲ್ಲದಿದ್ದರೆ ಆ ಬೆವಸಾಯದ ಘೋರವೇತಕಯ್ಯ (ಅವಕಂ. ೦೬-೬೫) ; ಮಗಧದೇಶದಲ್ಲೊಬ್ಬ ಶೂದ್ರನು ಬೆವಸಾಯಮಂ ಮಾಡಿಕೊಂಡು ಬದುಕುತ್ತಿರಲು (ಕೈಕಥೂ. I. ೩೦೩). ೨. ಪ್ರಯತ್ನ; ಪರಿಶ್ರಮ : ಪುಣ್ಯಮಿಲ್ಲದೆ ಬೆವಸಾಯದಿಂ ಸಿರಿಯಕ್ಕುಮೆಂಬೆಯಪ್ಪೊಡೆ ನೆತ್ತಿ ತಱಂಟಾಗೆ ಪುಳ್ಳಿಯನಡುಕವ ಬಡವರ್ಗಂ . . . ಸಿರಿಯೇಕಾಗದು (ಧರ್ಮಾಮೃ. ೬-೦೬೩). **ಬವಸ** : ೧. ''ಬವಸಂ ವ್ಯವಸಾಯ ನಾಮದೊಳ್'' (ಕರ್ಣಾಟ. ೯೨). **ಬವಸು** : ೧. ''ಬವಸು=ವ್ಯವ ಸಾಯಂ'' (ಶಬ್ದಮ. ಶಂ. ೨) ; "ಬವಸೆಂದು ವ್ಯವಸಾಯಂ" (ಕಶಬ್ದ. ೬೬-೯೬೩) ; ಬವಸಿನೊಂದು ಕಜ್ಜಮಂ ತವಿಸಿ ಬೇಸರ್ಗೆ ಕುಡಿಯರ್ . . . ಶ್ರೀರಾಮಲೀಲಾವಿನೋದಮಂ ಪಾಡುತಿರೆಯುಂ (ರಾವಹತ್ತ. ೨೨-೨೦). 'ಬವಸಿಗ' ಪರಾ. ೩. ಸಜ್ಜು ; ಸಿದ್ಧತೆ : ಕವಿದುರ್ಗ್ಗಂ ಚಾತುರಂಗು ಬವಸ ದಳವುಳಂ ಧಾಳಿ ಸೂಳೆಃಟಿನಿಪ್ಪಾಹವದೊಳ್ಬಾಹುಕ್ಕರಾಮಂ ಬೆಸಸೆ (ಎಕ. VII, ಶಿಕಾಂ. ೦೩೬-೨೭ ; 1068). **ಬವಸೆ$_1$** : ೧ ''ಬವಸೆ (ಸು)_ವ್ಯವಸಾಯ'' (ಶಬ್ದಕೋ. ೨೪). ೨. ದೇವರ್ ಬರವಿನೊಳಾದಂ ಬವಸೆಯನೆ ಮಾಟ್ಪುದು (ಅದಂಶಾ. ೩೬೦); ದಾರುಣಸಂಸರಣಮಹೋರ್ವೀ ರುಹಮಂ ಕೀಟ್ವ ಬವಸೆಯಿಂದಿರ್ದಪನೀ ಧೀರಂ (ಶಂಕತತ್ತ. ೨-೦೬). ೪. ಉದ್ಯೋಗ ; ಕೆಲಸ ; ವೃತ್ತಿ : ಎನಗೆ ಮನೋಭವನೆ ದೇವಂ ಬಸನಮೆ ಬವಸೆ ಬಲವೆ ಕುಲಧನಂ (ಶಂದ್ರಕು. ೬-೪೭ ಪ). **ಬೇಸಾಯ** : ೧. ಪಾಟುನೆಲದೊಳ್ ಬೇಸಾಯ ನೀಚಾಶ್ರಯಂ . . . ಫಲದ ಭ್ರಾಂತಿಯಂ ತೋರ್ಪುದೈ (ಸೋಮೇಶ. ೨೩) ; ಮಾನವರೆಲ್ಲರೂ ಕೂಡಿಯೆ ಬೇಸಾಯ ಸಾಗಿಸತೊಡಗಿದರು (ಶಾಶಾದ. ೬೦). **ಬ್ಯವಸಾಯ**: ೪. ಆತನ ಬ್ಯವಸಾಯ ಬ್ಯವಹಾರವೆನ್ನೆನೆ ಭಕ್ತಿಯ ಭಂಡ ಮೊದಲ್ ನಿಜಭಕ್ತಿಯೇ ಕೋಟಾನುಕೋಟಿಲಾಭಂ . . . ಕಲಿದೇವನಟ್ಟಿ ನೆಗಳ್ದಂ ಧರೆಯೊಳ್ (ಕೌಇ. IX—i, ೨೪೬-೩೯ ; 1176). [<ಸಂ. ವ್ಯವಸಾಯ]

**ಬೆವಸಾಯಂಗೆಯ್**, ಬವಸೆಗೆಯ್ (ಕ್ರಿ). ಪ್ರಯತ್ನ ಮಾಡು ; ಶ್ರಮಿಸು : ಬೆವಸಾಯಂಗೆಯುಲಿನ್ನುಮುಂಟೆಡೆ ಕೃಪಾಶ್ವತ್ಥಾಮರುಳ್ಳಂತೆ ಪಾಂಡವರಂ ಗೆಲ್ವುದಸಾಧ್ಯಮಾಯ್ತೆ (ಶಂಕಣ. ೦೩-೩೦). **ಬವಸೆಗೆಯ್** : ನಿನ್ನ ಬಡಗಡೆಯ ಗಟಿಯಿಸಲ್ ಬವಸೆಗೆಯ್ವೆನ್ (ಧರ್ಮಶ. ೦೬-೩೬೦).

[ಬೆವಸಾಯ + ಕೆಯ್$_1$]

**ಬೆವಹಾರ**, ಬೇಹರ$_2$, ಬೇಹಾರ, ಬ್ಯವಹಾರ, ಭ್ಯವಹಾರ, ವೆವಹರ, ವೆವಹಾರ (ನಾ). ೧. ಉದ್ಯೋಗ ; ಕೆಲಸ ; ವೃತ್ತಿ : ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು (ಶಶವ. ೬೦೬) ; ಬಾಲಕರ್ ಬಾಲೆಯರ್ ಕೊಯಿದು ತಿನುತಿರೆ ಮಾತ್ತಿ ಆರಂಭದೊಳ್ಕೂಡಿ ಅಲ್ಲಿಯಾಗದೆ ಪಾಬುಗಿ ದೂಷಿಸುತೆ ಬೆ[ಶಾಶಾಂ. ವ್ಯ]ವಹಾರದಲ್ಲಿ ತಿಟ್ಟನೆ ತಿರುಗಿ (ಶಿಂಕೋರ. ೨-೩). ೨. ವ್ಯಾಪಾರ ; ಹರದು : ಕರ್ಮವ ಕಳೆದು ನಿರ್ಮಲ ಭಕ್ತಿ ಸುಜ್ಞಾನ ಧರ್ಮವಾರದ ಪೇಟೆಯ ಬೆವಹಾರ . . . ಹಿಂದುದ್ಯೈವವ ಕಂಡ ಹಿರಿಯ ಪ್ರಭುಸೆಟ್ಟಿಯೊಳು ಕೊಂಡು ಕೊಟ್ಟಾಡುವ ಘನ ಬೆವಹಾರ (ಶಿವಗೀ. ೦೬೯-೯೯೩) ; ಆ ಪುರದೊಳೊರ್ವ ವರನಂ ಸಮುದ್ರಾಂತರದ್ವೀಪಂ ಗಳೊಳ್ ತನ್ನ ಬೆವಹಾರಕ್ಕೆದಲ್ (ಶಬಕು. ೩೦-೩). ೩. ವ್ಯಾಪಾರದ ವಸ್ತು ; ಸರಕು : ಆಚೆಯ ಧರೆಯ ಬೆವಹಾರವ ತಂದು ಮತ್ತೆ ಈಚೆಯಲ್ಲಿ ಕಡನ ಕೊಡಲಾಗಿ ಕೊಂಡಹ ಸತ್ತ ಕೊಟ್ಟವ ಕೆಟ್ಟ (ಶಿವಶರಣ. ೨೩೭-೮೦೪). ೪. ನಡತೆ ; ವರ್ತನೆ ; ನಡವಳಿಕೆ : ದಾಯ ನೋಡಿ

ಬೆವಹಾರ ಬೆಸನಗಳಾಯತವು ಬಳಿಕುಂಟೆ ಕೇಳಾ (ಪ್ರಭುಲೀ. ೩-೬೦). **ಬೇಹರ$_2$**: ೧. ಅಕಾರಕ್ಕೆ ಏತ್ವಂ-ವ್ಯವಹಾರ, ಬೇಹಾರ, ಬೇಹರ (ಶಬ್ದಮ. ೨೬೦ ಪ್ರಯೋ). ೨. ಎನ್ನ ಬೇಹರಕೆ ದೋಸೆಯ ಹೊಯ್ಯುತಿರೆ ಹಚಿದವು ನಿನ್ನವೆಂದು ಇರದಾಡುವವನಿತಕೆ ಪಟಿಯಿಲವೆಲ್ಲ ಶಂಕರನುಂಡು ಬಿಟ್ಟಿಯ ಪೋದ (ಶೋಕೃ. ೩-೯೦). ೪. ಆವಾವ ಹರಕೆಗಳ ಕಾಣಿಕೆಗೆ ಸಂದೆ? ಬೇಹರವನೆಲ್ಲಲ್ಲಿ ಸಲುವಳಿಗೆ ತಂದೆ? (ಗೀತಂ. ೨೯-೬೦). ೫. ಸಂಬಂಧ; **ಗೊಡವೆ**: ಬೆಟ್ಟ ಕೆರೆ ಬನ ಬಾನು ಬಯಲೆಲ್ಲವೊಂದೀಗ ನನಗಿವಕು ಮುಂದದ ಬೇಹರ ತೀರಿತೀಗ (ಗಡೀಕ. ೨೯-೦೬). **ಬೇಹಾರ**: ೧. ಬೆಳನಾದುದೇಳು ಬೇಹಾರಕೆಂದೇಬ ಕಳವಳವದೇಕೆ (ಸರ್ವಜ್ಞ. ೩೭೨); ರಾಜಾಯದೊಳ್ಸಲ್ಲ ಧನಭಾಗದಿಂದರವುನೆಯ ಬೇಹಾರವಂ ಮೊದಲಂತ ನೇಕಸಚಿವರ ಮುಖದಿಂ ನಡೆಯಿಸುತ್ತೆ (ಮಗಾತ. ೯-೬೩ ವ); ತನ್ನ ತಾಯಿ ಯೊಡನೆ ಗೃಹಕೃತ್ಯದ ಬೇಹಾರ ಸಾಗಿಸಲು ಬಂದಾಗ . . . ಪ್ರಸ್ತಾಪಿಸ ತೊಡಗಿದಳು (ಮಲೆಮ. ೭೯೦). ೨. ಬಣಂಜಿಗರೆತ್ತುಗಳೊಳು ಬೇಹಾರಕೋ ಸುಗ ಪಯಧುರೆಗಂ ಪೇಚಿಕೊಂಡೊಂದು ಘೋರಕಾಂತಾರದೊಳ್ ಪೋಗುತ್ತ ಬೀಡ ಬಿಟ್ಟರು (ಸಿದ್ಧೇಪು. ೨-೨೯); ಆಹಾರವುಳ್ಳಲ್ಲಿ ಬೇಹಾರ ಘನವಕ್ಕು ಆಹಾರದೊಳಗನಜಿದಿಪ್ಪ ಸೆಟ್ಟಿಗೆ ಬೇಹಾರವಕ್ಕು (ಸರ್ವಜ್ಞ. ೨೬೬); ಬೇಸಾಯ ಬೇಹಾರ, ನೆಯಿಗೆ ಇತ್ಯಾದಿ ಹಲವು ಉದ್ಯಮಗಳನ್ನು ಕೈಗೊಂಡು ಜನರು ಬಾಳುತ್ತಿದ್ದರು (ಧರ್ಮವು. ೬೯). **ಬ್ಯವಹಾರ**: ೨. ಆತನ ಬ್ಯವಸಾಯ ಬ್ಯವಹಾರವೆನ್ನೆನೆ ಭಕ್ತಿಯ ಭಂತ ಮೊದಲ್ ನಿಜಭಕ್ತಿಯಿ ಕೊಟಾನು ಕೋಟಲಾಭಂ ಶಿವಸದ್ಭಕ್ತಿಯು ಬೆಳಸಿ . . . ಕಲಿದೇವಸೆಟ್ಟಿ ನೆಗಳ್ದಂ ಧರೆಯೊಳ್ (ಕ್ನಾಇ. IX-i, ೨೯೬-೯೦; 1176); ಭರತಿಸೆಟ್ಟಿಯ ಮಗ ತೀಕಿಸೆಟ್ಟಿಯರು ಬ್ಯವಹಾರಮಾರ್ಗ್ಗದಿಂ . . . ಕ್ರಯಸ್ವರೂಪದಿಂ ಧಾರಾಪೂರ್ವ್ವಕವಾಗಿ . . . ಕೊಂಡ ಎರೆ ಮತ್ತರೆರಡು (ಕ್ನಾಇ. XX. ೦೯೬-೨೦; 1227). **ಭ್ಯವಹಾರ**: ೧. ನಿಂಮ ಕೆಯ್ಯ ಭಯಿರವದೇವರ ಭ್ಯವಹಾರಕ್ಕೆ ಕೊಟ್ಟ ಯಿಪತೆಯೆಂಟು ಮಂದಿ ಸ್ವಾನಿಕರು (ಎಕ. X (S). ಕೋಲಾರ. ೩೪೯-೩: 16ನೆಯ ಶಕ). **ವೆವಹರ**: ೨. 'ವೆವಹರಿಸು' ಪರಾ. **ವೆವಹಾರ**: ೧. ನರನೊಂದು ವೆವಹಾರಕೆರಡುಯಿಯವೆಯ ಲೆಕ್ಕ ಹೊರಗಣ ನುಭೋಗಕೊಂಡೊಳನೀತಿಗೊಂದು (ಮಂಕುತಿ. ೬೬೯). ೨. ಉದ್ಯೋಗ ವೆವಹಾರ ನೃಪಸೇವೆಯಾಳ್ದರು ಮಧ್ಯರಾತ್ರಿಗೆ ಬರ್ಪನಕ ನಿದ್ದೆಗೆಯ್ದಂತೆ ಮಂದಿರದೊಳು ಹಾದರವಿದ್ದೆಯಂಗನೆಗಳೊಪ್ಪಿದರು (ಪೋತಕ. ೦೯-೨೯).

**ಬೇಹಾರವಾಡು**=ವ್ಯಾಪಾರಮಾಡು: ಹಿಡಿದ ಫಲ ದೃಢದಿಂದ ಬಿಡದೆ ಬೇಹಾರವಾಡಿ ಕೊಡುವುದೊಂದು ಲಕ್ಷ ಕೊಂಬುದೊಂದು ಲಾಭ (ಶಿವಗೀ. ೯೧-೯೩೨). 'ಬೇರ$_2$' ಪರಾ. [< ಸಂ. ವ್ಯವಹಾರ]

**ಬೆವಹಾರಿ**, ಬೇಹರಿ, ಬೇಹಾರಿ (ನಾ). ವ್ಯಾಪಾರ ಮಾಡುವವನು; ವರ್ತಕ; ಹರವ: ತಂಮ ಪಟ್ಟಣವಾದ ಹೆಂಮುರಗಾಲ ಬೆವಹಾರಿ ಗಂಗರ ಮಾಧವಸೆಟ್ಟಿಯು ಮಗ ಮಸಣಾಡಿಸೆಟ್ಟಿಗೆ . . . ವರಿಷಕ್ಕೆ ಗ ೧ಬಿ ಬಡಗೆ ಸಿದ್ಧಾಯ ಗ ೧ನೆ ತೆಜುವರು (ಎಕ. III(R). ಪಂಜಿವ. ೩೨೯-೦೦; 1291); ಶ್ರೀ ಚಿಕಹರಿಹರರಾಯಪೊಡೆಯರ ಮನೆಯ ಬೆವಹಾರಿಗಳು (ಎಕ. IX(S). ಹೊಸಕೋ. ೦೭೭-೩; 1375). **ಬೇಹರಿ**: ವಾಣಿಜವರರಿಗೂ ಕ್ರಯ ವಿಕ್ರಯ ವ್ಯವಹರಣೆಯುಚಿತವದು ತರುಣಿರತ್ನವು ಸಲ್ಲದಾ ಬೇಹರಿಯ ನೀಕ್ಷಣ ಹಿಡಿದು ಬಿಟ್ಟಂಬುರುಹಮುಖಿಯನು ಸೆಳೆಯೆದಿರೆ ಹಳಿವೆವುಗೆ ಬಹುದಾ (ಜೈಮಿಂ. ೯-೨೪). **ಬೇಹಾರಿ**: ಹುಸಿಯದ ಬೇಹಾರಿಯೆ. ಇಲ್ಲ ವಾರಿ ಬೇಹಾರಿಯುಪ್ಪುದಜಿಂದೆಮ್ಮ ಜಾತಿಧರ್ಮಕ್ಕೆ ಧರ್ಮಬುದ್ಧಿ ಋಜುಧರ್ಮಬುದ್ಧಿಯಾಗಿ ಧನವಂ ಬಂಚಿಸಿಕೊಂಡೆನ್ನ ಮನೆಗುಯ್ಯಂ (ಜೀವಂ. ೦೬೬-೦೦); ಊರ ಹರದರ ಹಾರುವರ ಬೇಹಾರಿಗಳ ಬಲು ಸೂಜಿಯಾದಾಡು ಕೇರಿಕೇರಿಯಲಿ (ತೋರಣ. ೩-೯-೯); ಬಹುಬಗೆ ರೆಟ್ಟಿ ಸಕ್ಕರೆ ತುಪ್ಪಗಳ ಮೊಟ್ಟೆಗಳನು ಮಾಜುವ ಬೇಹಾರಿಗಳಿಟ್ಟಣಿಸು ತಲೈದಿದರು (ಕಂಪರ. ೦೦-೯೦). 'ಬೇರಿ$_1$' ಪರಾ. [<ಸಂ. ವ್ಯವಹಾರಿನ್]

**ಬೆವೆ** 'ಬೆವರ್$_1$' ನೋ.

**ಬೆಸ$_1$**, ಬೆಸನ್, ಬೆಸನ$_1$, ಬೆಸನು, ವೆಸ (ನಾ). ೧. ಕೆಲಸ; **ಕಾರ್ಯ**: ಪಾಂಡವರ್ ಮುನ್ನಮೆ ನಿನ್ನ ಕೆಯ್ಗೆ ವಂದರೆನಗವಾ ಬೆಸಂ ತಪ್ಪಿದುದು (ಕುಶಭಾ. ೮-೯೩ ವ): ಬೆಟ್ಟರಂ ಪುಟ್ಟಿಸುವ ಬೆಸಂ ಬಮ್ಮನದು ಸಮುನ್ನವರಂ ರಕ್ಷಿಸುವ ಬೆಸಂ ತನ್ನದು ಗಡ ನಿಸದಂ (ಎಕ. VII. ಶಿಕಾರಿ. ೧೨೩-೨೬; 1158); ನಿನ್ನ ಅಂತಃಸತ್ವಸಾರ ಆಧಾರ! ಉಳಿದೆಲ್ಲವೂ ಬೆಸಕೆ ಬರದ ಸಿಂಗಾರ! (ಥಾರಂಗ. ೩೬-೬). ೨. ಶಿಲ್ಪಿಯ ಕೆಲಸ; ಶಿಲ್ಪ ಕಾರ್ಯ; ಕಂಡರಣೆ: ಪರಮೇಶ್ವರಭಟ್ಟರ ಲಿಖಿತಂ ಚನ್ದಾರ್ಕ್ಕ ಧರಾರ್ಣ್ಣವ[೦] ನಿ[ಲ್ಕೆ] ಇನ್ದಗೋಟಿಯ ಬೆಸು (ಕ್ನಾಇ. XI-i, ೦೩-೬; 873); ಮಜ್ಜರಿವ ಬಿತ್ತುದ ರೂವಾರಿ ಮದನಮಹೇಶ ಕೇಶವದೇ(ವ) ಮಾಡಿಸಿದ ಬೆಸ (ಎಕ. V, ಬೇಲೂರು. ೩೩-೦; 1120). ೩. **ಅಪ್ಪಣೆ**; **ಆದೇಶ**: ಶ್ರೀಮತ್ ಕೊಜಿಕ್ಕೊಣಿ ಮುತ್ತರಸರಾ ಬೆಸದೆ ಕಾದುವಟ್ಟ ದಣ್ಡಿಜಿದು ತೊವಳಾಲದುಳ್ ಎಜಿದೋರ್ ಸಿಯುವಲ್ಲವರಸ (ಎಕ. IX, ಹೊಸಕೋ. ೨೦-೩; ಸು. 750); ವಿದುರಂ . . . ಧೃತರಾಷ್ಟ್ರನ ಬೆಸದೊಳ್ ವ ರಣಾವತಕ್ಕೆ ಪೋಗಿ (ಕಂಪಭಾ. ೩-೬ ವ); ಅಗ್ರಜನಿತ್ತ ಬೆಸದಿಂ ನಡೆದೆನು (ಕುವ್ಯಾಅ. ಓಂ೩. ೭-೦೦೩). 'ಬೆಸಂಬಡೆ' ಪರಾ. ೪. **ಕೇಳಂವುದು**; ವಿಚಾರಿಸಂವುದು: 'ಬೆಸಗೊಳ್' ಪರಾ. **ಬೆಸನ್**: ೧. ಎಸರನಿಡುವ ಅಕ್ಕಿಗರ್ಚುವ ಬೆಸನಂ ಕಿಯ್ಗೆಜಿವ ಕಂಚುಗರ್ಚುವ ಬೆಸನಂ ಬೆಸನಲ್ಲದೆ ಮತ್ಸ್ಯನ ಬಾಣಸಿಗಂಗಾರಿತ್ತರೆಲವೋ ನಿನಗೀ ಬೆಸನಂ (ಗದಾಯು. ೭-೩೭); ಈ ಬೆಸನಪ್ಪೊಡೆ ದೂತರ್ಗೆ ಭಟ್ಟರ್ಗೆ ಪರಿಗರ್ಗಲ್ಲದೆ ನೀಂ ಮಾಡಲ್ತಕ್ಕುದಲ್ಲ (ಕಂತಕಂ. ೯೨-೩). ೩. ಬೆಸನೇನೆಂದೊಡೆ ಪೇಟ್ವೆನೆನ್ನ ಬೆಸನಂ (ಕಂಪಭಾ. ೦-೭೬); ನಿಮ್ಮನೆಮ್ಮರಸನ ಬೆಸನಿಲ್ಲದೆ ಎಲ್ಲಿಗುಂ ಪೋಗಲೀಯೆಂ (ಅಶಪು. ೬-೦೨೦ ವ); ಏಬೆಸನೆಂದು ತನು ಕರಗಿ ಮನ ಕರಗಿ ನೋಡಿ ಮಾಡುವುದು ಭಕ್ತಿಸ್ಥಲ (ಬಸವ. ೮೬೯). **ಬೆಸನ$_1$**: ೩. ತನ್ನ ನೊಸಲ ಕಣ್ಣಿಗೆ ಬೆಸನನಿತ್ತರೆ ನಿಲಬಲ್ಲ ಗರುವರನಾರನು ಕಾಣೆ (ಸಿದ್ಧವ. ೩೩-೧೭೭); ಕಾಳರಕ್ಕಸ ನಿನ್ನ ಹಿಡಿತರೆ ಬೆಸನ ಕೊಟ್ಟಾಳನಟ್ಟಿದ ನೋಡು ಜೀಯ (ಪೋಹಕ. ೩೩-೯೦). **ಬೆಸನು**: ೨. ಖಿಣ್ಡಸ್ಪುಟಿತಂ ಮೊದಲಾಗೆಲ್ಲಾ ಬೆಸನುಮಂ ನಡೆಯಿಸುವ ರೂವಾರಿ ಮುಚ್ಚೋಜಂಗೆ ಮತ್ತರ್ಪ್ಪನ್ನೆರಡು (ಕ್ನಾಇ. IX-i, ೦೦೦-೩೩; 1045). ೩. ಅವರುಂ ಗುರುಗಳ ಬೆಸನುಮನನೇಕವ್ರತಂಗಳಂ ಕೈಕೊಣ್ಡು ತೀರ್ಥಯಾತ್ರೆಗೆ ಪೋಗುತ್ತುಂ (ಕ್ನಾಇ. XI-i, ೬೯-೨೩; 1028). **ವೆಸ**: ೨. ಈ ದೇಗುಲದ ವೆಸಕ್ಕೆ ಕಲ್ಕುಟಿಗಂ ರೇವೊಜನೊಡೆಯನಾತಂಗೆ ಗಟ್ಟಿ ಮತ್ತ ೧ (ಕ್ನಾಇ. XX, ೯೯-೬೭; 1076). ೩. ದಂಡನಾಯ[ಕ] ಕೇಸಿ ಮಯ್ಯಂಗಳ ವೆಸದಿಂ ಸಿಂದವಾಡಿಸಾಯಿರದ ಹೆಗ್ಗಡೆ ಮಗಂ ಚೀಯುಮ ರಸರಾ ನಾಡಂ ಪ್ರತಿಪಾಳಿಸಿ (ಕ್ನಾಇ. XI-i, ೨೯೦-೦೯; 1143).

**ಬೆಸಕುಡಿಕೆಯ ನೀರೆಜಿ**=ಕೊಡದಿಂದ ನೀರು ತುಂಬುವ ಕೆಲಸ ಮಾಡು: ಅತೀಂದ್ರಿಯರೆಲ್ಲರು ಮದನನ ಮನೆಯ ಬೆಸಕುಡಿ[ಕಾಕಾಂ. ಡು] ಕೆಯ ನೀರೆಜಿವುದಕ್ಕೊಳಗಾದರು (ಪಂಚಿಮಿಂ. ೯. ೬೦-೭). **ಬೆಸದವ**=**ಕೆಲಸದ** ಆಳು; ಸೇವಕ: ಬೆಸದವಂಗೆ ಅರೆ ಆಳ್ ತೆಜುವೊದು (ಪ್ರಿಅಂ. ೦೯೨೯. ೬೦-೦೦೩; 799); ಕಾಪ್ಪಕೂಟನಿಂಬ ಬೆಸದವಂ . . . ಪೊಟಲ್ಗೆ ವರ್ಧನಂ ಕಂಡು (ವಡ್ಡಾರಾ. ೭೭-೨೨); ಬೆಸದವರ್ ಬಸವಲ್ಲದವರಂತಂಜಿ ಉಟಿಯೆ (ರಾಜಶೇಖ. ೨-೬೯). **ಬೆಸವಾಳು**=ಬೆಸದವ: ಕಿಚಿಯ ಪೊನ್ನಯ್ಯ ಬಲ್ಲಹನ ಬೆಸವಾಳು ಗಜಾಂಕುಸಚೋಟನ ಮೇಗೆ ದಣ್ಡು ಪೋಗಲು (ಕ್ನಾಇ. IX-i, ೨೩-೭; 948). **ಬೆಸನಂ ಪಾರ್**=**ಅಪ್ಪಣೆಗಾಗಿ ಕಾಯು**; ಆಜ್ಞೆಯನ್ನು ನಿರೀಕ್ಷಿಸು: ಬೆಸನಂ ಪಾರ್ವುವು ಮಂತ್ರದೇವತೆಗಳ್

(ಅಂಕ. ೦-೬೯) ; ಬೆಸನಂ ಪಾರ್ದಿರೆ ಭೂಪತಿಪ್ರತತಿಗಳ್ (ನೇಮಿಪು. ೨-೯೭).
[ದೇ.॥ ತಮಿ. ವಿಯವು]

**ಬೆಸ₂** (ನಾ). ಸರಿಸಂಖ್ಯೆಯಲ್ಲದುದು ; ವಿಷಮಸಂಖ್ಯೆ : ಒಂದೆಂದಡೆ ಬೆಸ ಎರಡೆಂದಡೆ ಸರಿ (ಶ್ರೀಕೋಗ. ೪. ೩೦೦-೬೯) ; ಪೂಡುವ ಕುದುರೆ ಬೆಸಂ ಕೊಂಡೋಡುವ ತೇರ್ಗೊಂದೆ ಗಾಲಿ ಪೊಡೆವಂ ಪೆಬಿವಂ ಕೇಡಿಂಗಲಸಿ ದೊಡಕ್ಕುಮೆ ನೋಡಿರೆ ರವಿ ಕಿಡೆದನಸ್ತಗಿರಿಮಸ್ತಕದೊಳ್ (ಅರ್ಥನೇ. ೩-೦೯) ; ಋತುಮಾನ ಬೆಸವಾಗಿ ಬಿಗುವಾನ ಹಿರಿದಾಗಿ ಶಾಂತತೆಯ ತಳೆದಿರುವೆಯಾ? (ಅರಳು. ೪೯೪-೯). [<ಸಂ. ವಿಷಮ. / ತಮಿ. ವಿಯವು ; ತೆಲು. ಬೇಸಿ]

**ಬೆಸಒಕ್ಕಲು** (ನಾ). ಒಂದು ಬಗೆಯ ತೆರಿಗೆ (?) : ಅಡತೆಜಿ ಕುಂಬಾಜು ದೆಜಿ ಬಿನುಗು ಬೆಸಒಕ್ಕಲು ತಗಡೂರ ಸ್ಥಳಕ್ಕೆ ಸಲುವ ಸುಂಕ (ವ್ಯ೯೦. ೦೯೯೬, ೦೬-೨೦ ; ?). [?]

**ಬೆಸಂಗೆಯ್**, ಬೆಸಕೆಯ್, ಬೆಸಕೈ, ಬೆಸಗೆಯ್, ಬೆಸಗೈ (ಕ್ರಿ). ೧. ಕಂಡರಿಸು ; ಕೆತ್ತು : ಇವಪ್ಪುರೆದೊ ಚೋರಯ್ಯನ ಪೆರ್ಗ್ಗಡೆ ಪೊನ್ನಯ್ಯ ಕಲ್ಲಪ್ಪೆಸಂಗೆಯೊ ದಗ್ಗಾಚಾರಿ (ತಾಇ. IX-i. ೨೦-೦೨ ; ೨ನೆಯ ೫೫). **ಬೆಸಕೆಯ್** : ೨. ಹೇಳಿದ ಕಾರ್ಯವನ್ನು ನಿರ್ವಹಿಸು ; ಸೇವೆಮಾಡು : "ಪರಿವಸ್ಯಾ . . . ಆರಾಧನಃ, ಉಪಚಾರಃ- ಈ ೧೧ ಬೆಸಕೆಯ್ವುದರ್ಕೆ ಪೆಸರ್" (ಪಲಾಯು. ೨೦-೦೨೯); ಪುಣ್ಯಕ್ಷಯದೊಳ್ ತನ್ನ ವಿದ್ಯೆಗಳುಂ ತನಗೆ ಬೆಸಕೆಯ್ಮದಿರೆ (ಆದಿಪು. ೨-೦೯ ವ); ದುರ್ಯೋಧನ ನಾಳ್ಗೆ ನೆಲನಂ ಆತಂಗುಟಿದ ನಾಲ್ವರ್ಬೆಸಕೆಯ್ದು ಬಾಳ್ವರ್ (ಗದಾಯು. ೬-೬೦ ವ) ; ಮುನಿಗೆ ಬೆಸಕೆಯ್ಯುತಿರಿಯೆಂದರಸನೆಲ್ಲರ್ಗೆ ಕೈಮುಗಿದನು (ಹಕಕ. ೯-೨೦). ೩. ಅಂಕೆಗೆ ಬರು: ಬೆಸಕೆಯ್ದುತ್ತು ಸಮುದ್ರಮುದ್ರಿತ ಧರಾಚಕ್ರಂ (ಶಂಶಖಾ. ೦-೦೦೦) : ಕುವಾರನಾಡು ತಳಕಾಡುಗಳೆಂಬಿವು ಕಯ್ಗೆ ಸಾರ್ದುವತ್ತಡಿಯಿಡೆ ಮುಂಚಿ ಕಂಚಿ ಬೆಸಕೆಯ್ದುದು ವಿಷ್ಣುನೃಪಂ ಕೃಪಾಣಮುಂ ಜಡಿಯದೆ ಮುಂಡೆ ಕೊಂಗನೃಪರಿತ್ರಿಭಂಗಳನೇಂ ಪ್ರತಾಪಿಯೋ (ಎಕ. V. ಬೇಲೂರು. ೦೨೪-೨೦ ; 1133). **ಬೆಸಕೈ** : ೨. ಪಗಲ್ ಬೈಗಿರುಳೆನ್ನದೆ ಸಲೆ ಬೆಸಕೈಗುಂ ಮುನಿಗಳ್ಗೆ ನಗದ ಮರ್ಕಟನಿಕರಂ (೧೦೪. ೦-೬೩) ; ಉಳಿದ ವರ್ಣತ್ರಯಕೆ ಬೆಸಕೈಪಳತೆಯಲಿ ಶೂದ್ರನು ಕೃತಾರ್ಥನು (ಕುವ್ಯಾಪ. ೭-೦೭) ; ಅಹಿತರೇನಂಜುವರೆ ನಿರ್ಧನನಹ ನೃಪನೆಯನುಚರರು ಬೆಸಕೈದಿಹರೆ (ತಿಮ್ಮಣಾಂ. ೩-೫೭). **ಬೆಸಗೆಯ್**: ೧. ಬೆಸಗೆಯ್ದೊನ್ ಪ್ರಯೋಳವನ್ (ಎಕ. IX (8), ಹೊಸಕೋ. ೯-೦೩ ; ಸು. 875) ; ಚಾಮುಂಡಾಜಂ ಬೆಸಗೆಯ್ದಾಂ (ಎಕ. VIII, ಸೊರಬ. ೦೯೪-೩೦ ; 1033). ೨. ಸ್ವಸ್ತಿಶ್ರೀಸಾಸ್ತ್ರರಸಪೃಥುವೀರಾಜ್ಯದುಳ್ಳಿಗೆಗೆ ಬೆಸಗೆಯ್ವಲ್ಲಿ (ಎಕ. VI, ಕೊಪ್ಪ, ೩೯. ; 700) ; ಕರಮದಾರ್ಗೆ ತೊತ್ತಾಗಿ ಬೆಸಗೆಯ್ವುದು (ಪಪ್ರಾ. ೯-೪೦) ; ಬೆಸಗೆಯ್ದು ಗೀರ್ವಾಣವೃಂದವುಂ ಮನ್ನಿಸಿ ಕಳುಪಿ (ಶಂಶಖಾ. ೦೩-೪೬). **ಬೆಸಗೈ**: ೨. ತಂಗಿ ಬೆಸಗೈದಾದರಿಸಲೀ ಯತಿಪತಿಯ (ಕುವ್ಯಾಕ. ೦೯-೩೩) ; ಅಜಭವ ಶಚಿಯರಸ ಮುಖ್ಯರುಗಳೇ ಬೆಸಗೈ[ಪಾಠಾಂ. ಕೈ]ವ ಸೇವಕರು (ಕೊರಡಾ. ೬-೨೬-೩೦) ; ಭೃತ್ಯರ ಗಡಣವಿದು ಬೆಸಗೈದು ಬದುಕಲಿ (ಶಿಭಾಗ. ೪-೦೭-೨೮). [ಬೆಸ$_1$ + ಕೆಯ್$_1$]

**ಬೆಸಂಬಡೆ**, ಬೆಸವಡೆ (ಕ್ರಿ). ಅಪ್ಪಣೆಯನ್ನು ಪಡೆ.-ಹೊಂದು : ಕನ್ನಡದ ಅತ್ವದೊಳ್ ವಿಕಲ್ಪಬಿಂದುವಿಂಗೆ . . .ಬೆಸಂಬಡೆದಂ, ಬೆಸವಡೆದಂ (ಶಮದ. ೦೭೭ ಕ್ರಮೋ). **ಬೆಸವಡೆ** : ಮೇಲಿನ ಪ್ರಯೋಗವನ್ನು ನೋಡಿ. [ಬೆಸ$_1$ + ಪಡೆ$_1$]

**ಬೆಸಂಬೆಜು** (ಕ್ರಿ). = ಬೆಸಂಬಡೆ : ಪೆರ್ಮ್ಮಾನಡಿಗಳ್ ಬೆಸನೆ ಬೆಸಂಬೆತ್ತು (ಎಕ. XI, ತಳ್ಳ್ಕೆ. ೯-೨; 810); ನೆರೆದೆತ್ತಂ ಭಗಣಂ ಸಿರೀಕ್ಷಿಸೆ ಬೆಸಂಬೆತ್ತೋಜು ಚಿತ್ರೋದ್ಭವಂ ಬರೆ ಲಕ್ಷ್ಮಚ್ಛಲದಿಂದಪುಬ್ಬಪಥವೀಥೀಭಾಗದೊಳ್ (ಕುಂದ್ರಪು. ೯-೩೩). [ಬೆಸ$_1$ + ಪೆಜು$_1$]

**ಬೆಸಂಬೇಳ್** 'ಬೆಸಂಬೇಟು' ನೋ.

**ಬೆಸಂಬೇಟು**, ಬೆಸಂಬೇಳ್, ಬೆಸವೇಳ್, ಬೆಸವೇಳು, ಬೆಸವೇಟು (ಕ್ರಿ). ೧. ಅಜ್ಞಾಪಿಸು ; ಅಪ್ಪಣೆ ಮಾಡು : ಕಡಲೊಳ್ ನೀರ್ದಪ್ಪುದ ಭ್ಯಾಸಿಗಳಿವು ನೆರವಕ್ಕೆಂದು ಶತ್ರುಂ ಬೆಸಂಬೇಟ್ಕೊಡೆ ನಾನಾವರ್ಣದಭ್ರಾವಳಿ ನೆರೆದು (ಪುಕ್ಯಪು. ೦೧-೦೩). **ಬೆಸಂಬೇಳ್**: ೧. ಸಂದಾದ್ರೀಸ ಪೋಗಗ್ಗಣಿಗೆನುತೆ ಬೆಸಂಬೇಳ್ವರ್ (ಎಕ. VII, ಶಿಕಪೊ. ೩-೦೩ ; 1218). **ಬೆಸವೇಳ್** : ೧. ನೊಸಲಲಿ ಧರಿಸುವುದು ಯುವರಾಜಪಟ್ಟವನೆಂದು ಬೆಸವೇಳ್ದು (ಕೊರಡಾ. ೪-೩-೨೬); ಇದು ಚಿತ್ರಮಾದುದು ಬೆಸವೇಳ್ವುದೆನಲಾಗಿ (ಬೋಕಕ. ೩೦-೨೪). **ಬೆಸವೇಳು** : ೧. ಸಂತಸದ ಚಾರರಂ ಕರೆಸಿ ಬೆಸವೇಳಲತ್ಯಂತಪಸ್ತುಗಳ ವಿಸ್ತಾರದಿಂ ನಗರವನನಂತವಿಭವದೆ ಸಿಂಗರದಲೊಪ್ಪವಿಟ್ಟರು (ಶಿಬಪು. ೬-೩೦). **ಬೆಸವೇಟು**: ೧. ಕುಬೇರಪ್ರಿಯನಂ ಸೀನೆ ಕೊಲ್ಲೆಂದು ಪ್ರಥುವಿಂಗೆ ಬೆಸವೇಟಿ (ಜಾವುಂಶು. ೬೦); ಅರಸರ್ ಬೆಸವೇಟ್ಟರ್ ಬೇಗಂ ಕ್ಷುರಭಾಂಡಮನೀಯೆಂದು ಬೇಡಿದೊಡೆ (ಕಂಕಶಂ. ೭೬-೦೭); ಬೆಸವೇಟ್ಟಂ ಭುವನೈಕಮಲ್ಲನುದಯಾದಿತ್ಯಂಗೆ (ತಾಇ. XX. ೯೯-೦೭; 1076). ೨. (ಯುದ್ಧದ) ಕಾರ್ಯಕ್ಕೆ ನಿಯೋಜಿಸು.- ನೇಮಿಸು : ಇರುಳೊಳ್ ಬಲಂ ನಿಶಾಚರ ಬಲಕುಂಟು ಮಾಣದೆ ಘಟೋತ್ಕಚನಂ ಬೆಸವೇಟ್ಟುದು (ಶಂಶಖಾ. ೦೨-೬). [ಬೆಸ$_1$ + ಪೇಟ್]

**ಬೆಸಕ** (ನಾ). ಕೆಲಸದ ಆಳು ; ಸೇವಕ : ಈ ಗದೆಗೆ ಆರಾದರೂ ಅಳುಪಿದವರು ರಘುಪತಿರಾಜವೊಡೆಯರ ಬೆಸಕರಿಗೆ ತಂಮ ಹೆಂಡಿರ ಕೊಟ್ಟವರು (ವ್ಯ೯೦.೦೯೪೨, ೩೯-೨೩;1535). [ಬೆಸ$_1$ + -ಕ$_3$]

**ಬೆಸಕಿಲ್?** (ನಾ). ಅಗ್ಗಿಷ್ಟಿಕೆ (?) : "ಪಾವಕಿ (ಕ) ಯೆನಲ್ ಬೆಸಕಿಲಕ್ಕು [ಪಾಠಾಂ. ಬೆಸಕಯುಕ್ಕು, ಬೇಸಕೆಯುಕ್ಕು]" (ಶುಂಗರಾ. ೬೦-೨೦).

[P ಇದು 'ಬೆಸಳಿಗೆ' ಎಂಬುದರ ಅಪಲಿಖಿತವಿರಬಹುದು]

**ಬೆಸಕೆಯ್** 'ಬೆಸಂಗೆಯ್' ನೋ.

**ಬೆಸಕೆಯ್ಸು** 'ಬೆಸಗೆಯ್ಸು' ನೋ.

**ಬೆಸಕೇಳ್** (ಕ್ರಿ). ಅಪ್ಪಣೆಯನ್ನು ಕೇಳು ; ಆಜ್ಞೆಯನ್ನು ಪಾಲಿಸು : ಇತ್ತ ವಿಕ್ರಾಂತತುಂಗನುಂ ಧರ್ಮಪುತ್ರನುಂ ವಾಯುಸುತನುಂ ಪೊಡವಟ್ಟು ಬೆಸಕೇಳ್ವೆ[ಪಾಠಾಂ. ಕೆಯ್ವೆ]ನೆಂದಾಗಳ್ ಪಾಂಚಾಳರಾಜತನೂಜೆಯಿಂತೆಂದಳ್ (ಶಂಶಖಾ. ೭-೬೬ ವ); ಇಂದಜಿತು ತಪೋವನಕೆ ಪೋದನ ಧೀಶನೆ ಪೋಗೆ ಮಾಣಲಾಗಂದೊಡವೋಗಲಿರ್ದಮದಟುಂ ಬೆಸಕೇಳ್ದಪೆಂ (ಅಜಪು. ೬-೦೦೦). [ಬೆಸ$_1$ + ಕೇಳ್]

**ಬೆಸಕೈ** 'ಬೆಸಂಗೆಯ್' ನೋ.

**ಬೆಸಕೈಸು** 'ಬೆಸಗೆಯ್ಸು' ನೋ.

**ಬೆಸಕೋಲು** 'ಬೆಸಕೋಲ್' ನೋ.

**ಬೆಸಗಲಿ** (ನಾ). ಆದೇಶವನ್ನು ಕೂಡಲೆ ಪಾಲಿಸುವವನು ; ಅಪ್ಪಣೆಯಂತೆ ನಡೆಯುವವನು : ಆಳ್ದನ ಬೆಸನಂ ಮರಳಿ ಕೇಳವ ಬೆಸಗಲಿಗಳುಮಂ . . . ನೋಡಿ (ಗದಾಯು. ೯-೩೯ ವ) ; ದಾದಿಕಾಜವೆಸವಮಾರರದೇಂ ಬೆಸಗಲಿಗಳ್ ಬರ್ಪರೊ ಮಾನಸವೇಗರ್ ಪವನವೇಗರಿರುಳುಂ ಪಗಲುಂ (ಅಜಪು. ೩-೬೬). [ಬೆಸ$_1$ + ಕಲಿ$_2$]

**ಬೆಸಗುಡು** 'ಬೆಸಗೊಡು' ನೋ.

**ಬೆಸಗೆ** 'ಬಿಸುಗೆ$_1$' ನೋ.

**ಬೆಸಗೆಯ್** 'ಬೆಸಂಗೆಯ್' ನೋ.

**ಬೆಸಗೆಯ್ಸು**, ಬೆಸಕೆಯ್ಸು, ಬೆಸಕೈಸು (ಕ್ರಿ). ೧. ಕಂಡರಿಸುವಂತೆ ಮಾಡು ; ಕೆತ್ತಿಸು : ನಿಮ್ಬಿಚ್ಚರ ಬಮ(ಮ್ಮ)ಯ್ಯ ಬೆಸಗೆಯ್ಸಿದೊ ಮಾಧವಯ್ಯನ ಲಿಖಿತಂ (ಇಕ. XII, ೨೦೯-೨೨ ; 814). **ಬೆಸಕೆಯ್ಸು**: ೨. ಅಪ್ಪಣೆಯನ್ನು ಪಾಲಿಸುವಂತೆ ಮಾಡು ; ಅಂಕೆಗೆ

ತರು: ಚೆನ್ನರನಡಿಗೊತ್ತಿ ಮಾಂಡಳಿಕರಂ ಬೆಸಕೆಯ್ಸಿ ಕುಟುಂಬರಂ ನಿರಾಕರಿಸಿ (ಜಜಕ. ೬-೦೮) ; ಬೆಸಕೆಯ್ಮದ ಮಣ್ಣ [ಳ] ಮಂ ಬೆಸಕೆಯ್ಸಿದನಂಜದಿರ್ದ ರಿಪುಭೂವರನಂಜಿಸಿದಂ (ಕಣಶ. ೪-೨-೦೦೪ ; 1058). ಬೆಸಕೈಸು.

**ಬೆಸಕೆಯ್ಸಿಕೊಳ್, ಬೆಸಕೈಸಿಕೊಳ್** = ಕೆಲಸವನ್ನು ಮಾಡಿಸಿಕೊಳ್ಳು ; ಸೇವೆಯನ್ನು ಕೈಗೊಳ್ಳು : ನಿಮಗೆ ಬೆಸಕೆಯ್ವೆಮ್ಮಿಂ ಕ್ರಮದಿಂ ಬೆಸಕೆಯ್ಸಿಕೊಂಡು ನೆಲನಂ ಪೂರ್ವಕ್ರಮದಿಂದಾಳ್ವುದು (ಗದಾಯು. ೧೦-೦೬); ಅದರದಿಂ ಬೆಸಕೈಸಿಕೊಳ್ವನೊವರ್ಗದಲೊಳ್ ದೇವಸಂಕುಲಮಂ (ಧರ್ಮಾಮೃ. ೬-೦೬೨) ; ಕುಂತೀಸೂನುಗಳ ಬೆಸಕೈ[ಪಾಠಾಂ.ಗೈ]ಸಿಕೊಂಬುದು ಸೇರದೇ ನಿನಗೆ (ಕುವ್ಯಾಉ. ೦೦-೦೩). [ಬೆಸ$_1$ + ಕೆಯ್ಸು]

**ಬೆಸಗೈ** 'ಬೆಸಂಗೆಯ್' ನೋ.

**ಬೆಸಗೊಡು**, ಬೆಸಗುಡಂ (ಕ್ರಿ). ಅಪ್ಪಣೆ ಕೊಡು ; ಆಜ್ಞಾಪಿಸು : ನಿಜಪರಿವಾರಕೆ ಬೆಸಗೊ[ಪಾಠಾಂ. ಗು]ಡು ಮಂಗನೇ (ಹರಿಶ. ೦೨-೩೦೮ನೆ) ; ಜಟ್ಟಿಗಭೃತ್ಯರ್ಗೆ ಬೆಸಗೊಟ್ಟು ಹಿಡಿತರಲಟ್ಟಿದ ಖಳಕುವರನನು (ಮೋಹಶ. ೦೨-೩೩). **ಬೆಸಗುಡು** : ಬೆಸಗುಡು ದೈತ್ಯಾದೀಶ್ವರ ನೀ ನಿರೂಪಿಸಲಾನು ಮಿತಿಯ ಮಿಾಱುವೆನೆ (ಮೋಹಶ. ೩೩-೩೦). [ಬೆಸ$_1$ + ಕೊಡು$_1$]

**ಬೆಸಗೊಳ್**, ಬೆಸಗೊಳು, ಬೆಸಗೊಳ್ಳು (ಕ್ರಿ). ಕೇಳು ; ವಿಚಾರಿಸು : ಪ್ರಶ್ನಿಸು : "ಪ್ರಶ್ನಃ, ಅನುಯೋಗಃ, ಪೃಚ್ಛಾ — ಈ ಮೂಱು ಬೆಸಗೊಂಬುದಱ ಪೆಸರು" (ಪಾಠರಾ. ೯೩); ಪ್ರಿಯಕುಶಲವಾರ್ತೆಯಂ ಬೆಸಗೊಂಡು ಸ್ಥಿರವಿರ್ದು ಪ್ರಭು ನುಡಿಯೆ (ಕಬರಾ. ೨-೬) : ವಿರಾಟಂ ನಿನ್ನ ಬಣ್ಣಣಮೇನೆಂದು ಬೆಸಗೊಳೆ (ಹಂಶಚ. ೯-೩೩ವ) ; ವನಚರರು . . . ಕೌಶಿಕಮುನಿಯು ಬೆಸಗೊಂಡರು ಮಹೀಸುರವರ್ಗಸಂಗತಿಯ (ಕುವ್ಯಾಕ. ೦೭-೦೪). **ಬೆಸಗೊಳು** : ಹಸೆಯ ಮೇಲಣ ಪಾತ ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮ ಪರು (ಮಾಪಾದೇ. ೭. ೨೫-೪೮) ; ದುರ್ಯೋಧನನು ತೆಗೆದಪ್ಪಿದನು ಬೆಸಗೊಳುತಿವನ ಸಂಗತಿಯ (ಕಂಥಶ. ೦೯-೨೦); ಏನನೊ ಕೇಳುತಲಿರುವಳದೇನೆಂದು ಬೆಸಗೊಳು (ತಂಜಾಕ. ೦೬೬-೨೪). **ಬೆಸಗೊಳ್ಳು** : ಆಡುತ್ತ ಹಾಡುತ್ತ ಭಕ್ತಿಯ ಮಾಡಬಹುದು ಲಿಂಗಕ್ಕೆ ಅದು ಬೇಡದು ಬೆಸಗೊಳ್ಳದು (ಬಸವ. ೮೯೩) ; ಭೀಮ ಪಾರ್ಥರ ಬಲುಹ ಬೆಸಗೊಳ್ವ ತದೀಯಶ್ರವಣದೃಷ್ಟಿಗಳ (ಕುವ್ಯಾಕ. ೧೩-೬೦) ; ವಸುಷೇಣನು . . . ಗೃಹಮಹತ್ತರರನ್ನು ಬೆಸಗೊಳ್ಳುತ್ತಿರುವಾಗ (ಕಾವ್ಯಸ. ೬೮). [ಬೆಸ$_1$ + ಕೊಳ್$_1$]

**ಬೆಸಗೊಳು** 'ಬೆಸಗೊಳ್' ನೋ.

**ಬೆಸಗೊಳ್ಳು** 'ಬೆಸಗೊಳ್' ನೋ.

**ಬೆಸಣಿಕೆ** (ನಾ). (?) : ಅಚ್ಚು ಬೆಸಣಿಕೆ ಪೋಪರ ಸರ್ವಗತಿ ಮಂದ ಅಚ್ಚು ಕಂಪನ ಗಹಗಪಿಕೆ ಪೆಚ್ಚು ತಿವಡಿ ವಿಷಮಂಗಳೆಂಬ ಬಿಕಳಂ ಸಚ್ಚಿತಾ ಭೃಂಗಿ ನಾಟ್ಯಗಳು (ದೇಪಾಂಕು. ೫-೦೬೯). [ ? ]

**ಬೆಸದ** 'ಬೆಸ$_3$' ನೋ.

**ಬೆಸದಪ್ಪು** (ಕ್ರಿ). ಆಜ್ಞೆಯನ್ನು ಮಿಾಱು ; ಅಪ್ಪಣೆಯನ್ನು ಉಲ್ಲಂಘಿಸಿ : ಬೆಸನೆಂದು ಪೂಣ್ದು ದೇವರ ಬೆಸನಂ ಸಾಕಾರಾಪರಿನಿಪ ರಾಜಕುಮಾರರ್ ಬೆಸದಪ್ಪಿದರೆನಗನಿತೊಂದು ಸ್ಪೃಷ್ಟ ಸಮನಿಸದೆ ಬರ್ಗಕೆ ಬಂದಂ ನೃಪತೀ (ಅಜಿಪು. ೦೦-೩೨). [ಬೆಸ$_1$ + ತಪ್ಪು$_1$]

**ಬೆಸನ್** 'ಬೆಸ$_1$' ನೋ.

**ಬೆಸನ$_1$** 'ಬೆಸ$_1$' ನೋ.

**ಬೆಸನ$_2$**, ಬಸನ, ವೆಸನ (ನಾ). ೧. ಅಳಲು ; ದುಃಖ ; ವ್ಯಥೆ : "ಬೆಸನಮನೆ ವ್ಯಸನ" (ಕಶಬ್ದ. ೦೨೩) ; ಒದುಕಿನಲ್ಲಿ ಬೆಸನ ತುಂಬಿದಾಗ ತನ್ನ ಗಾಡತನದ ದೇಲೇ ಅವರಿಗೆ ಜುಗುಪ್ಸೆ ಹುಟ್ಟಿತು (ಜಗುಬ. ೨). ೨. ಆಸಕ್ತಿ ; ತತ್ಪರತೆ : ಪುಸಿಯುರಸುತನದ ಬೆಸನದೊಳ್ ತೊಡರ್ದು ಸಿರದಿರ್ದನಪ್ಪೊಡೆ ಎನ್ನ ಕೆಳೆಯನೊಳಗನಱಿವಪು (ಕಂತಕೌ. ೦೨೬-೩) ; ಬೆಸನಂ ವಶಿಹಿತದಲ್ಲಿಯೆ ಬೆಸನಂ ದ್ವಿಜದೇವಪೂಜೆಯಲ್ಲಿಯೆ ನೆಗಱ್ದ ಬೆಸನಂ ನೋಂಪಿಗಳಲ್ಲಿಯೆ ಬೆಸನಂಗಳ್ ಶಾಂತಿದೇವಿಯೊಳ್ ಪೆಱಪೊಳವೇ (ಎಕ. V, ಹಾಸನ. ೦೦೬-೩೫; 1123). ೩. (ಸಪ್ತವ್ಯಸನಗಳಿಗೆ ಸಂಬಂಧಿಸಿದಂತೆ ಉಂಟಾಗುವ) ಅಭ್ಯಾಸ ; ಚಟ : ಗೀಳು : ಬೆಸನಂಗಳ್ ತನುವಿಚ್ಚಿಗೊಯ್ವುವು (ಕಾದಂಪೂ. ೩೬೪) ; ಬೇಟೆಯುಂ ಬೆಸನಮೆಂದಾರೇಳಿ ಪರ್ ಲೋಕದೊಳ್ (ಸೂಕ್ತಿಸು. ೩-೯೬). ಬಸನ : ೧. ಆ ರಚನೆಯೊಳೇಂ ಬಸನಂ ತನಗನಿತಱ ಬೇವಸಮೇಂ (ಕಬರಾ. ೮-೦೨) ; ಬಸನಮನುಂಟು ಮಾಡದಿರು ಮಾನ್ಯರೊಳೊಪ್ಪೆ ವಿನೀತನಾಗು (ಬಂಕಾ. ೦೦-೦೯). ೨. ಬಲ್ಮೆಗಂ ಬಸನಕ್ಕಂ ಸದಿಯಪ್ಪ ಕಿಱುವೇಂಟೆಯುಂ ಪೆರ್ವೇಂಟೆಯುಂ ಮಲ್ಲದುಟೀದ ಬೇಂಟೆಯುಂ ಬೇಂಟೆಯೆನ್ನೆಂ (ಪಂಭಾ. ೫ ೪೬ ವ); ಬಸನಮಂ ಸದ್ಧರ್ಮ್ಮದೊಳ್ ತಾಳ್ದಿದಂ (ಎಇ. XIX, ೨೨೪ ೦೩ ; 1022). ೩. ಬಸನಂಗಳಲ್ಲಿ ಚಿತ್ತಂ ಬಸದಪ್ಪುಪೊಲಮಳಮಪ್ಪ ಜೈನಾಗಮದೊಳ್ ಬಸದಾಗೆ ಮರ್ತ್ಯನೇಂ ಸಾಧಿಸನೇ ನಿರ್ವಾಣಪದವಿಯಂ ಕ್ರಮದಿಂದಂ (ಸಮಶ. ೬-೩೩) ; ತನ್ನ ಗುರುಗಳ ರೂಪನೆ ಕರುವಿಡಿಸುವ ಬಡಿಯಿಸುವ ಕಂಡರಿಸುವ ಬೆಸನೆ ಬಸನವಾಗಿ (ಅರ್ಥನೇ. ೨-೩೪ ವ). ೪. ಇಂದ್ರಿಯಾಪೇಕ್ಷೆ: ಇಂದ್ರಿಯಚಾಪಲ್ಯ : ಬಸನದೊಡಂಬಡಿಂಗಲಸಿ ಮಾಣ್ಬೊಡಂ . . . ಪೇಸದಪಳ್ಗೆ ಮತ್ತಮೆಸಗಿಸುವುದೆ (ಕಂಶಚಾ. ೪-೯೨) ; ಬಸನದ ವಸದಿಂದಂ ಪುಟ್ಟಿಸಿದಂ ಜನಕನೆ (ಸಮಶ. ೪-೯೨) : ಪಱಪೆಂಡಿರೆಮ್ಮ ದಿವಸದೊಳೀತಂ ಪುಟ್ಟದೆ ಪಱಜು ಪ್ರಾಯಮುಂ ಸುಸಿಲುಂ ಬಸನಮುಂ ಬಱದೊಱ$^3$ ಯೋದುದೆನೆಯುಂ (ಅರ್ಥನೇ. ೫-೨ ವ). **ವೆಸನ** : ೧. ಹಸಿವು ವೆಸನ ತೃಷೆಯಾಲಸ್ಯ ಮೋಹಮೆಂಬೆಸಕವುಳ್ಳುದು ನರದೇಹ (ಕಂನವಿ ೦-೦೫); ವೆಸನದಿಂ ಕಂದಿ ಕಾರ್ಶ್ಯಪನಾಂತು ಸಂತತಂ ಸುಖಲೇಶಮಂ ತಿಳಿಯದೆ . . . ಜೀವಮುಂ ಧರಿಸಿರಲು ರಸೆಯೊಳೆಂತಹುದಬ್ಜನೇತ್ರ (ವಂಕಾಉ. ೫-೪-೨) ; ವೆಸನಮುಯುಸಂಸಾರದಲಿ ವಿನೋದವ ಕಾಣ್ಬ ರಸಿಕತೆಯೆ ಯೋಗವು (ಶಾಂಕುಳ. ೨೪೦). [< ಸಂ. ವ್ಯಸನ]

**ಬೆಸನಂಗೊಳ್** (ಕ್ರಿ). ಅಪ್ಪಣೆಯನ್ನು ಪಡೆ; ಅನುಜ್ಞೆಯನ್ನು ಪೊಂದು: ಚ್ಯವನಂ ತನ್ನಾಶ್ರಮಮಂ ಮಿಕ್ಕುಬಂದ ಋಷಿಗಳ್ಗೊಪ್ಪಿಸಿ ಬೆಸನಂಗೊಂಡು ತಾನುಂ ಸುಕನ್ನೆಯುಂ ವಾಯುಸುತನ ಪೆಗಲನೇಱ$^3$ (ರಾಮಾಶ್ವ. ೭೦-೦೨). [ಬೆಸನ$_1$ (<ಬೆಸ$_1$) + ಕೊಳ್$_1$]

**ಬೆಸನಭಾಷೆ** (ನಾ). ಇಂದ್ರಿಯವ್ಯಸನವನ್ನುಂಟುಮಾಡುವ ಮಾತು : ಸಸಿನೆ ಖಳನೆಡೆಗೈದಿ ಕುಸುಮಾಸ್ತ್ರಸಂಗನೆಗೆ ಬೆಸನಭಾಷೆಯನಿತ್ತು ಕರೆತಂದು ನೀನು ಮೋಹಿಸಬಹುದೆ (ಪಪು.೧೧-೧೯-೪೦). [ಬೆಸನ$_2$ + ಭಾಷೆ]

**ಬೆಸನಿ**, ಬಸನಿ (ನಾ). (ಸಪ್ತವ್ಯಸನಗಳಲ್ಲಿ ಯಾವುದಾದರೊಂದು) ಗೀಳಿರುವ ವ್ಯಕ್ತಿ ; ಚಟವುಳ್ಳ ವ್ಯಕ್ತಿ : ಪುಸಿವವರಂ ಕೊಲ್ವವರಂ ಬೆಸನಿಗಳಂ ಕಳ್ಳರಪ್ಪರಂ ಕಂಡೊಡೆ ಸಂಕಿಸುವರ್ ಪುರುಷರ್ (ಧರ್ಮಾಮೃ. ೪-೨೦); ಬೆ[ಪಾಠಾಂ. ಬ]ಸನಿಗಳ ಗೊಟ್ಟಿ ತನಗಾಗಿಸೆ ಸಂತಸದೊದವನಂತ್ರ ಮಾರ ಗೊಟ್ಟಿ ಕರಂ ಕಸಱಸಿದುದೆರ್ದೆಯನೇಂ ಸೊಗಯಿಸುಗುಮೆ ಚೋರಂಗೆ ಚಂದ್ರಿಕಾವಿಸ್ತಾರಂ (ಪರ್ಶ್ವಪು. ೨-೩೫). **ಬಸನಿ** : ಬಸನಿಯೆ ಗೆಲ್ಲಕಾಱನ ನೆಗೆಟ್ಚಿಗೆ ಕೇಳಿಗೆ ನಾಡೆ ಗೆಂಟದಂ ಬೆಸಗೊಳಮೇಡ (ಅದಿಪು. ೦೨-೦೮); ಬಸನಿಗಳೊಳ್ಗ ಬಸನಿ (ಸಮಶ. ೭-೩೪) ; ಬೇಟಕಾರ್ತಿಯುಂ ವಿಟೀಕನಿಗಳ್ ಬಸನಿಗಳ್ ಕಡುಬದ್ದೆಯರ್ (ಬಂಪು. ೩-೪೮). [ <ಸಂ. ವ್ಯಸನಿನ್ ]

**ಬೆಸನಿಗ**, ಬಸನಿಗ (ನಾ). ದುಶ್ಚಟವುಳ್ಳವನು ; ವ್ಯಸನಿ : ಅಡಗಿನ ಕಡುಬೆಸನಿಗನೊಡಲಡಗನೆ . . . ವದನದೊಳು ಗಡ ಗಿಡಿಪರ್ (ಪ್ರಾಚಾ. ೨೦-೨೦) ; ನೀಂ ಜೂದಿನ ಬೆಸನಿಗನಾತಂ ಶಿವಪೂಜಾಬೆಸನಿ (ಕಾವ್ಯದೇ. ೩-೬೬). **ಬಸನಿಗ** : ಅಡಗಿನ ಬಸನಿಗನ್ಗೆ ತಿನ್ ಒಡಿಯೆಂದವನಡಗನವನ

ಬಾಯ್ದೊಳ್ ಗಿಡಿವರ್ (ಅರಿಪು. ೩-೯೭) ; ಮಧು ಮದ್ಯದ ಬಸನಿಗ ಕುಡಿ ಮಧು ಮದ್ಯಮನೆಂದು ಸಪ್ತಧಾತುದ್ರವಮಂ ವಿಧಿಯಿಂ ತಂದೆಱೆವರ್ (ಸುಕುಮಾ. ೧೦-೪೩) ; ಅಸುಕೆಯ ಕೆಂದಳಿರುಯ್ಯಲನೊರ್ವಗಪೂರ್ವ ಯವ್ವನೋನ್ನತ್ತ್ ಬಸನಿಗನನೋಲೈಸುವ ಬೇವಸೆಯಿಂದವನ ಮನವನೇೞು ಮಂಕೇೞ್ (ಶಾರಪು. ೦೩-೭೯ ವ). [ ಬೆಸನ$_2$ + – ಇಗ ]

**ಬೆಸನಿಸು** (ಕ್ರಿ). ದುಃಖಿಪಡು : ಗಲ್ಲ ಹಿಡಿಯುವ ಕೆಲರು ಗಲ್ಲ ಹಿಂಡುವ ಕೆಲರು ಬೆಸನಿಸುವ ಕೆಲರು ಬೆದರಿಸುವ ಕೆಲರು (ಪಪ್ಲ. ೬-೨).

[ ಬೆಸನ$_2$ + – ಇಸು$_3$ ]

**ಬೆಸನೀ** (ಕ್ರಿ). ಆಜ್ಞೆಮಾಡು ; ಆದೇಶಿಸು : ಅಮಾತ್ಯರನನಿಬರಂ ಬೆಸನಿತ್ತು ಬಸವನನನುನಯದೊಳೊಡಗೊಂಡು ಬರಲೆಂದಟ್ಟಲು (ಬಸಪು. ೩-೬): ಪೋಗಿಂದ್ರಕೀಲಕ್ಕೆ ಪೆಂಪಡದುರ್ಧ್ವತ್ತಪಮಾಂಪುದೆಂದು ಬೆಸನಿತ್ತಂ ವ್ಯಾಸಂ (ಕಬಕು. ೨-೦೦೭); ಶ್ರೀರಘುಜನೆನ್ನನಡವಿಯೊಳ್ ಬಿಸುಟ್ಟುದೆಂದು ಲಕ್ಷ್ಮಣಂಗೆ ಬೆಸನಿತ್ತು ಕಳಿಪಿದನ್ಯೆ ! (ರಾಮಾಕ್ಷ. ೪೦-೨೭).

[ ಬೆಸನ$_1$ ( < ಬೆಸ$_1$ ) + ಈ$_2$ ]

**ಬೆಸನು** 'ಬೆಸ$_1$' ನೋ.

**ಬೆಸಮಗ** 'ಬೆಸವಗ' ನೋ.

**ಬೆಸಮುಟ್ಟು** (ನಾ). ಕಾರ್ಯದ ಸಾಧನ,—ಉಪಕರಣ: ಕನ್ನಡಿಯುಂ ತಂದಿತ್ತಡೆ ಮುನ್ನಾಕಾಶಕ್ಕೆ ನೆಲಕೆ ಬೆಸಮುಟ್ಟಿಂಗಂ ತನ್ನಯ ಕಟ್ಟಿದ ಸುರಿಗೆಗೆ ಮನ್ನಣೆಯಿಂ ತೋಱೆ ಬಱಿಕೆ ನೊ:ರ್ಪಮಾರ್ಘರ್ (ಕಮಹ. ೦೨-೪).

[ ಬೆಸ$_1$ + ಮುಟ್ಟು$_3$ ]

**ಬೆಸಲ್**, ಬೆಸಲು, ಬೆಸಲೆ$_1$ (ನಾ). ೧. ಹಡೆಯುವಿಕೆ ; ಹೆರಿಗೆ ; ಪ್ರಸೂತಿ: 'ಬೆಸಲಳಲ್', 'ಬೆಸಲೆ$_2$' ಪರಾ. **ಬೆಸಲು** : ೨. ಹುಟ್ಟು; ಜನನ : ನಿಶಿಯ ಬೆಸಲಿಗೆ ಸುಶಿಲ್ ಮಿಸುಕುವಂತೆ (ಗಿರಿಜಾ. ೩೭-೯).

**ಬೆಸಲೆ$_1$** : ೨. 'ಬೆಸಲೆಗೊಳ್' ಪರಾ.

**ಬೆಸಲಾಗು, ಬೆಸನಾಗು**=೧. ಹೆರು ; ಪ್ರಸವಿಸು : ಹೆತ್ತ ತಾಯಿ ಮಗನ ನುಂಗಿ ಶಿಶು ತಾಯ ಬೆಸಲಾಗಿ (ಅಪಶಂ. ೩-೦೭) ; ವಸುಧೆಗತಿಬಲ ನೊಬ್ಬ ಕಂದನ ಬೆಸಲಹೆನು (ಕಃಪ್ರಾ.ಆ. ೪-೩೬). ೨. ಈಯು ; ಕರುಹಾಕು : ಬೆಸಲಾದಾವುಗಳಿಂ ಪೆರ್ಬುಲಿಯಿಂ ಮುಸುಕುವ ಬಳ್ಳಿಡಲಿಂ . . . ದಾರುಣತರಮಪ್ಪುಪಸರ್ಗಂ ಮಾಡಿದಳು (ಇಯುಕಾ. ೦೭-೦೪); ಪಶುವೊಂದುಂ ಬೆಸಲಾಗಿ ನೋಡಿ ಕಱುವಂ ಬಾಯ್ವಿಟ್ಟು (ಶ್ರೀಕೃ. ೯-೬೮); ತುರಂಗದ ಮೊತ್ತಗಳು ತಮತಮಗೆ ಮೋಹರಿಸುತ್ತ ಬರಸಿಡಿಲಂತೆ ಗರ್ಜಿಸಿ ಪೃಥ್ವಿ ಬೆಸನಾದಂತೆ ಬರುತಿರೆ (ದೇಶೀಕೃ. ೩೮). ೩. ಬೆಳೆ ; ಫಲಬಿಡು : ನೆಲನೆಲ್ಲಂ ಬೆಸಲಾಗೆ ಧಾನ್ಯತತಿಯಂ . . . ಫಲಭಾಗ್ಯಂ ದೊರೆಗಪ್ಪುದೈ (ಸೂಪಶಾ. ೩೭). ೪. ಉತ್ಪತ್ತಿಯಾಗು; ಉಂಟಾಗು : ಬಾಪತ್ತರನಿಯೋಗಂ ಬೇಱೊಂದು ಮಾಹೇಶ್ವರ ತೇಜ[ಶ್ಯ]ಲಾಕೆ ಬೆಸಲಾದಂತಿರೆ (ನಂಜಕ. ೬-೦೬).

[ದೇ.॥ ತುಳು. ಬಿಜಿಲು, ಬಿಜೆಲು ; ಗದಬ. ಪಂಗ್]

**ಬೆಸಲಳಲ್** (ನಾ). ಹೆರಿಗೆಯ ನೋವು; ಪ್ರಸೂತಿಯ ಬೇನೆ : ತಾಯ ಮೊಗ ನೋಡೆ ಮಗು ಬೆಸಲಳಲನೋತು ಸೈರಿಸುವಂತೆ (ಗೊಲ್ಲಕಾ. ೦೨-೬೯೬); ನಿನ್ನ ನೀರಿಂದಾರ ಬೆಸಲಳಲ ತೊಳೆದೆ ? (ಗಿರಿಜಾ. ೨೯-೭೭).

[ ಬೆಸಲ್ + ಅಳಲ್$_2$ (<ಅಬಲ್$_2$) ]

**ಬೆಸಲು** 'ಬೆಸಲ್' ನೋ.

**ಬೆಸಲೆ$_1$** 'ಬೆಸಲ್' ನೋ.

**ಬೆಸಲೆ$_2$** (ನಾ). (ಮಗುವನ್ನು) ಹೆತ್ತವಳು; ಬಾಣಂತಿ : ಆ ಇರುಳೊಳರಸಿ ಬೆಸಲೆಯಾಗಿ ಮಗನಂ ಪೆತ್ತಳ್ (ವಡ್ಡಾರಾ. ೦೧೨-೬); ಡಿಂಡಿಭೆಗೆ ಗರ್ಭಂ ಪುಟ್ಟಿ ನವಮಾಸಂ ತೀವಿ ಬೆಸಲೆಯಾಗಿ ಪೆಣ್ಗೂಸಂ ಪಡೆದು (ರಾಜಕ. ೩-೩೦ ವ): ಎಲ್ಲಿ ನೋಡಿದಡಿಳೆಯ ಬೆಸಲೆಯುಂಬುಪೊಲೆಲ್ಲಿಯಾಱಂ ಪಸರಿಸಿದ ಸೈನ್ಯಮಂ ನೋಡುತ್ತ (ಜೈಮಿಭಾ. ೨೪-೨೩).

[ ಬೆಸಲ್ + – ಎ$_2$ ]

**ಬೆಸಲೆಗೊಳ್** (ಕ್ರಿ). ಹುಟ್ಟು; ಜನಿಸು : ತ್ರಿಗ್ರಹಮಲ್ಲಿರಲ್ ಬೆಸಲೆ ಗೊಂಡರ್ ಗಂಡನುಂ ಗಂಡುದೊಱೆನಿಕುಂ (ಜಾತಕ. ೨೦-೨೦).

[ ಬೆಸಲೆ$_1$ (<ಬೆಸಲ್) + ಕೊಳ್$_1$ ]

**ಬೆಸವಗ**, ಬೆಸಮಗ (ನಾ). ಒಡೆಯನ ಅಪ್ಪಣೆಯಂತೆ ನಡೆಯುವವನು; ಸೇವಿಸುವವನು : ಆ ಗೊಯ್ದಿಸೆಟ್ಟಿಯ ಬೆಸವಗಂ ಅಕ್ಕಸಾಲೆ ಚಟ್ಟೋಜನ ತಂಮ್ಮಂ . . . ಕೆಱೆಯಂ ಕಟ್ಟಿಸಿದಂ (ಎಕ. VII, ಶಿಕಾ. ೯೭-೩೯; 1172 ?); ಆತನ ಬೆಸವಗ ತಾಳಗುಪ್ಪೆಯ ನಾಯ್ಕನ ಮಗ ಚಿಕವೊಡೆಯ ತಳ್ತಿಱಿದು (ಎಕ. VIII, ಸೊರಬ. ೨೦೭-೬; 1243). **ಬೆಸಮಗ** : ಶ್ರೀ ಚಣ್ಣದ ಬೆಸಮಗಂ ಕಮ್ಮಱಬಮ್ಮರ್ಗಂ (ಎಕ. VII, ಶಿಕಾ. ೩೦೭-೪ ; 1016).

**ಬೆಸಮಕ್ಕಳ್, ಬೆಸಮಕ್ಕಳು** (ಬಹುವ) : ಇಲ್ಲಿಯ ಬೆಸಮಕ್ಕಳಾರೆಂದೊಡೆ (ಎಕ. III (R), ನಂಜನ. ೨೦೪-೬; 915); ಬಸಿವ ಸೊರ್ಕಿಂದಾನೆಗಳ ವಾಜಿವದನದಿಂದೊಸರ್ವ ಲಾಲಾಜಲದಿಂದ ಬೆಸಮಕ್ಕಳೊಗುವ ಮೈಬೆಮರಿಂದಾ ಬೀದಿ ಕೆಸರ್ವಡೆದಿಹುದನವರತ (ಕುರಾಸಾಂ. ೪-೦೦೭).

[ಬೆಸ$_1$ + ಮಗ]

**ಬೆಸವಡೆ** 'ಬೆಸಂಬಡೆ' ನೋ.

**ಬೆಸವರಿಗೆಯ್** (ಕ್ರಿ). (ಅಲಂ) ಆಲಿಂಗಿಸಲು ಮುಂದುವರಿ (?) : ಬೆಸವರಿಗೆಯ್ವ ಬೇಸ[ಱ]ಸುವಿತ್ತುದನೆತ್ತುವ ಮೇಗುದೋರ್ವ ಕಂಟಿಸುವ ಕನಲ್ವ ಕಡ್ಡಯಿಸುವೇಳಿದನಂ ತಿಳಿಪಲ್ ಮನಂಗೊಳಲ್ ಬಸಯಿಸ ಲಿಂಬುಕೆಯ್ಸಲೊಳಪೊಯ್ಸಲೊಡಂಬಡಿಸಲ್ ಪ್ರಮೋದಮಂ ಪೊಸಯಿಸ ಲಾಱಿಸಲ್ ನೆರೆದುಮೊಲ್ಲದೆ ಚಿತ್ತಮುದಾತ್ತಚಿತ್ತೆಯಾ (ಶಾಂತಿಪು. ೬-೦೦೩).

[< ಬೆಸ$_2$ + ಪರಿ$_2$ + ಕೆಯ್$_1$]

**ಬೆಸವೆಣ್**, ಬೆಸವೆಣ್ಣು (ನಾ). ಊಳಿಗದವಳು ; ದಾಸಿ ; ಸಿಂಗರಿಸುವ ಬೆಲೆವೆಣ್ಗಳ್ ಬಿನದಕ್ಕಂಗಣಮಂ ಸಾರುವ ಬಿಡುವೆಣ್ಗಳ್ ಪಿಂಗದೆ ಹಣಿಗಿ ನಡೆವ ಬೆಸವೆಣ್ಗಳ್ . . . ಸೊಗಸಿದುದು (ಇಯುಕಾ. ೦೨-೦೩); ಬೆಲೆವೆಣ್ಗಳಾಡುಂಬೊಲ ಬೆಸವೆಣ್ಗಳ ನೆಲದಾಣ (ಕುರಾಸಾಂ. ೪-೦೦೭). **ಬೆಸವೆಣ್ಣು** : ಬಿಡುವೆಣ್ಣು ಬೆಲೆವೆಣ್ಣು ಬೆಸವೆಣ್ಣು ಮನೆವೆಣ್ಣೊಡನೆಯ್ತಂದು ರಾಮನನು ಬಿಡದೆ ನೋಡಿದರು (ಕುರಾಸಾಂ. ೩೭-೭೪); ಬಿಡುವೆಣ್ಣು ಬೆಲೆವೆಣ್ಣು ಬೆಸವೆಣ್ಣುಗಳ ಮಂಗಡವಾ ಪುರದೊಳೊಪ್ಪಿದವು (ರಾಮಾಂ. ೩-೪೭).

[ ಬೆಸ$_1$ + ಪೆಣ್ ]

**ಬೆಸವೆಣ್ಣು** 'ಬೆಸವೆಣ್' ನೋ.

**ಬೆಸವೆಱು** (ಕ್ರಿ). ಕಾರ್ಯವನ್ನು ಒಪ್ಪಿಕೊಳ್ಳು ; ಕೆಲಸವನ್ನು ಕೈಗೊಳ್ಳು : ರಟ್ಟವಾಡಿಯ ಬೆಸವೆತ್ತು ಎದಿನುಪೆರ್ × × × ತುರಗ ಸಮೂಹಮಾ ಪೊಕ್ಕು (ಎಕ. X, ಗೌರಿಬಿದ. ೭೭-೪ ; ಸು. 750) : ಪಡೆವಳ್ಳಂಗೆ ರಥಾಂಗಹೇತಿ ನಡೆಯಲ್ವೇೞ್ ಬೇಗಮಾ ನಿನ್ನ ಪೆರ್ವಡೆಯಂ ನೀನೆನೆ ನಮ್ರಮೂರ್ತಿ ಬೆಸವೆತ್ತು . . . ಪಡೆಯಂ ಕೈಸನ್ನೆಗೆಯ್ದುದ್ಧತಂ ನಡೆಯಲ್ವೇೞ್ದೊಡೆ (ಶಾಂತಿಪು. ೩-೦೦೩). [ ಬೆಸ$_1$ + ಪೆಱು$_1$ ]

**ಬೆಸವೇಡು** (ಕ್ರಿ). ಅಪ್ಪಣೆಯನ್ನು ಕೇಳು : ಇಬೇಱಿದ ಕಾಳೆಗದಲು ಅಬ್ಬನ ಬೆಸವೇಡಿ ಸತ್ತಂ ಪೊನ್ನಯ್ಯ (ಕಶಿಶಾ. IX – i, ೨೩-೬ ; 948).

[ ಬೆಸ$_1$ + ಬೇಡು$_2$ ]

**ಬೆಸವೇಳ್** 'ಬೆಸಂಬೇಟಿಬ್' ನೋ.

**ಬೆಸವೇಳು** 'ಬೆಸಂಬೇಟಿಬ್' ನೋ.

**ಬೆಸವೇಟಿಬ್** 'ಬೆಸಂಬೇಟಿಬ್' ನೋ.

**ಬೆಸಸು$_1$** (ಕ್ರಿ). ಬೆಸುಗೆ ಹಾಕಿಸು : ಹೋಳಾದ ಕವಚವ ಹೊಲಿಸಿದರು ಬಾಹುರಕ್ಷೆ ಸವಗದ ಬಿರುಕ ಬೆಸಸಿದರು (ಕುಮಾ.ಭಾ. ೩-೩೬) ; ಸೋರುವ ಡಬ್ಬಿಯನ್ನು (ಬೆಸಸಿ) ದುರಸ್ತ ಮಾಡಬೇಕಾಗುತ್ತದೆ (ಮುಂಬಮ್ರ. ೨೨೯).

[ ಬೆಸೆ$_2$ (<ಬಿಸು$_1$ ) + — ಸು$_1$ ]

**ಬೆಸಸು$_2$**, ವೆಸಸು (ಕ್ರಿ). ೧. ಅಪ್ಪಣೆ ಮಾಡು ; ನಿರ್ದೇಶಿಸು ; ವಿಧಿಸು : ಸಿಯಗೆಲ್ಲರಾ ಮನೆಮಗತ್ತಿನ್ಬಲ್ಲಹನಾ ಬೆಸಸಿ ಗಜ್ಜರ ವಲ್ಲಹ ×× ಹಾನಿಜಾದು ಸತ್ತ (ಎಕ. XVI, ತುಮಕೂ. ೮೮-೬ ; ಸು. 775) ; ಆಂ ಬೆಸಕಯ್ವೆಂ ನಿನ್ನ ಬೆಸಸಿದಂದದೊಳಿರ್ಪೆಂ (ಶಂಕಥಾ. ೮-೩೭) ; ಬೆಸಸಿದೊಳಿಗವನಾ ಪಡಿಹಾಜಿರಿಂದಲೊದಗಿಸಿ (ಶಬ್ಧ. ೬-೬). ೨. (ಹಿರಿಯರು, ಅಧಿಕಾರಿಗಳೊಂದಿಗೆ ಮಾತನಾಡುವ ಸಂದರ್ಭದಲ್ಲಿ) ಹೇಳು ; ನಿರೂಪಿಸು ; ವಿವರಿಸು : ಶ್ರೀವಿದಿತಾರ್ಥಾಲಂಕಾರಾವಳಿಯಂ . . . ಭಾವಿಸಿ ಬೆಸಸಿದನಖಿಳಧರಾವಲ್ಲಭಂ (ಕವಿರಾ. ೩-೧); ಬೆಸಸಿಂ ನಿಮ್ಮೊಂದಭಿಪ್ರಾಯಮಂ (ಶಂಕಥಾ. ೧೦-೯) ; ಕನಸನೀ ಹದನಾಗಿ ಕಂಡೆನು ದನುಜಹರ ಬೆಸಸಿದಜಿ ಫಲವನು ನನಗೆ (ಕುಮಾ.ದ್ರೋ. ೯-೧೦). ೩. ನೀಡು ; ದಯಪಾಲಿಸು ; ಅನುಗ್ರಹಿಸು : ದೇವ ಬಿಜಯಂಗೆಯ್ದು ಕರುಣಮಂ ಬೆಸಸುವುದು (ತಿರುಕ. ದೇ. ೧೧-೧೧). **ವೆಸಸು :** ೧. ಬಾಯ್ಕೇಳದಿರೆ ಮುನಿದು ಕೊಪ್ಪಿಪಲ್ಲವನೊಟಿವ್ಪಂ ನೊಟಿವ್ಪುರಾದಿತ್ಯನನ್ ವೆಸಸಲ್ ಆ ಕಾಕರಾಸರುಮೆಟ್ಟು ಪೆಗ್ಗರ್ಗಂಜಿಯ ಕೋಟೆಯಾನ್ ರೋಹಿಸಿಬಿಟ್ಟು (ಎಕ. VIII, ಸೊರಬ. ೧೧-೪; ಸು. 800).

[ಬೆಸ$_1$ + — ಸು$_2$]

**ಬೆಸಳಿಗೆ, ಬಿಸಣಿಗೆ, ಬಿಸುಳಿಗೆ** (ನಾ). ೧. ಅಗ್ಗಿಷ್ಟಿಕೆ : "ಅಂಗಾರಶಕಟೀ, ಹಸಂತೀ, ಹಸಂತಿಕಾ—ಈ ೩ ಬೆಸಳಿಗೆ" (ಹಲಾಯು. ೩೨-೧೩೯). ೨. ಬಾಣಲೆ, ಓಡು, ಬೋಗುಣಿ ಮುಂತಾದ ಅಗಲವಾದ ಬಾಯುಳ್ಳ (ಹುರಿಯುವ) ಸಾಧನ : ಬೆಸಳಿಗೆಯೊಳ್ ತರಂಬಡೆಯೆ ಶಾತಚಯಂಗಳನಿಕ್ಕಿ (ನಳಚಂ. ೬೧೯); ಧರ್ಮವ್ಯಾಧಂ . . . ಬಸಿಯ ಹರವಿಯ ಸಾಲ ತೊರಳಿಗೆ ಬೆಸಳಿಗೆಯ ಕುಜಿಾದಲೆಯ ಹಂತಿಯ ಕುಸುರಿದೆಲುವಿನ ಕೋಡ ಮಿಾನಂಗಡಿಯಲ್ಲೆತಂದ (ಕುಮಾ.ಅ. ೧೩-೮); ಅದಂ ಬೆಸಳಿಗೆಯೊಳಿಂಸಿ ಮೆಣಸಿನ ಹುಡಿಯ ತಳಿದು (ಸೂಪಶಾ. ೪-೩೦). **ಬಿಸಣಿಗೆ :** ೨. ಎಳೆಯ ಬಾಳೆಯ ತೋಕೆಯನು ಬಿಸಣಿಗೆಯಲಿ ಅಂತರವಣಿಕ್ಕಿ ಬೇಯಿಸುವುದು (ಛೇಪುಸೂ. ೩೭). **ಬಿಸುಳಿಗೆ :** ೨. ತಿಳಿ ತುಪ್ಪಟ್ಟ ಬಿಸುಳಿಗೆಯೊಳಗೆ ತನ್ನ ನೆಳಲನು ನೋಡಿದನು (ಪ್ರಸಭಾ. ೧೭-೨೬).

**ಬೆಸಿಗೆ** 'ಬಿಸುಗೆ$_1$' ನೋ.

**ಬೆಸು** 'ಬಿಸು$_1$' ನೋ.

**ಬೆಸುಗಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ದಿಬಿಗರ ಬೆಸುಗಿ ಕೊಟ್ಟದು ಗೋಸಹಸ್ರ ನಾಲ್ಕು ಕೆರೆಗೆ ನೆಜಿಯೆ ಗೋಸ[ಹ]ಸ್ರಂ (ಎಕ. VII. ಶಿಕಾರಿ. ೯೩-೨೦; ಸು. 890 ?). [?]

**ಬೆಸುಗೆ** 'ಬಿಸುಗೆ$_1$' ನೋ.

**ಬೆಸುಗೆಕಾಜ** (ನಾ). ಬೆಸೆಯುವವನು : ಕೂಡಿಸುವವನು : ಸಸಿನೆ ಕಣ್ದೆಜಿದೊಲ್ದು ನೋಡೆನ್ನ ಪ್ರಾಣದ ಬೆಸುಗೆಕಾಜಾ (ಭರತ. ೧೩ ೩೦).

[ಬೆಸುಗೆ (<ಬಿಸುಗೆ$_1$) + — ಕಾಜ]

**ಬೆಸುಗೆಗಣ್** (ನಾ). ನಟ್ಟದೃಷ್ಟಿ : ಶಿವಮುಖದೊಳ್ ಬೆಸುಗೆಗಣ್ಗಳ್ ಪೆಜಿತು ಕಣ್ಬುವೇ (ಶಬಶ. ೨೦-೨). [ಬೆಸುಗೆ (<ಬಿಸುಗೆ$_1$) + ಕಣ್]

**ಬೆಸುಗೆಗಳಚು** (ಕ್ರಿ). ಕೂಡಿಕೆಯು ಬಿಟ್ಟುಹೋಗು ; ಬೇರೆಯಾಗು : ಬಿಸುಟಳೆಂದಜಾತ ಶೂರ್ಪನಖಿ ನಿವಡಿಸಿದ ಕಟ್ಟಭಿಮಾನಪಿಳಸಿತ ಬೆಸುಗೆಗಳಚಿದ ನಾಸಿಕವನಿದಿರಲಿ ಖರಾಸುರನ (ತೊರಂರಾ. ೩-೩-೩).

[ಬೆಸುಗೆ (<ಬಿಸುಗೆ$_1$) + ಕಳಚು (<ಕಟಲ್ಚು$_1$) ]

**ಬೆಸುಗೆಗಿಡು** (ಕ್ರಿ). ೧. =ಬೆಸುಗೆಗಳಚು. ೨. (ಆಲಂ) ಸಂಬಂಧವು ಕೆಡು,—ಹಾಳಾಗು : ಒಸೆದರ್ಜುನಂಗೆ ಮುಂ ಕಳಶಸಂಭವಂ [ಮಾಸ್ಯ ಪದವಿಯಂ ಮಾಡಿದೊಡಂ] ಬೆಸುಗೆಗಿಡೆ ಪಾಟಿಗಿಡೆ ತನ್ನಸುವಂ ತೆಲ್ಲಟಿಗಾಡುವ ತೆಜಿದೊಳ್ಕೊಟ್ಟಂ (ಗದಾಯು. ೨-೧೩).

[ಬೆಸುಗೆ (<ಬಿಸುಗೆ$_1$) + ಕಿಡು$_1$ (<ಕೆಡು$_1$) ]

**ಬೆಸುಗೆಗೊಳ್ಳು** (ಕ್ರಿ). ಕೂಡು ; ಜೊತೆಯಾಗು; ಸೇರು : ಅವರಿಬ್ಬರ ಹೃದಯಗಳು ಪರಸ್ಪರ ಬೆಸುಗೆಗೊಂಡಿದ್ದುವು (ಪುವಕು. ೧೯೦).

[ಬೆಸುಗೆ (<ಬಿಸುಗೆ$_1$) + ಕೊಳ್ಳು$_1$ (<ಕೊಳ್$_1$) ]

**ಬೆಸುಗೆದಟ್ಟು** (ಕ್ರಿ). =ಬೆಸುಗೆಗೊಳ್ಳು : ಹೊಸಕರ್ಮ ಮುನ್ನಿರ್ದ ದ್ರವ್ಯಕರ್ಮದೊಳು ಬಂಧಿಸುವುದಾ ದ್ರವ್ಯಕರ್ಮವದು ಒಸರುವ ಭಾವಕರ್ಮದೊಳು ಗಂಟಿಹುದದು ಬೆಸುಗೆದಟ್ಟಹುದು ಜೀವನೊಳು (ಭರಶ. ೬೮-೬೦).

[ಬೆಸುಗೆ (<ಬಿಸುಗೆ$_1$) + ತಟ್ಟು$_1$]

**ಬೆಸುಗೆಬಿಡಿ** (ಕ್ರಿ). = ಬೆಸುಗೆಗೊಳ್ಳು : ಬೆಸಸಿದೊಳಿಗವನಾ ಪಡಿಹಾಜಿರಿಂದಲೊದಗಿಸಿ ಕಾರ್ಯಭಾಗವಿಡಿದರಸನಿಚ್ಚೆಯನಜಿದು ಬೆಸುಗೆಬಿಡಿವಂತೆ ಹತ್ತಿಸಿ (ಶಬಶ. ೬-೬). [ಬೆಸುಗೆ (<ಬಿಸುಗೆ$_1$) + ಪಿಡಿ$_1$]

**ಬೆಸುಗೆಯಾನ್** (ಕ್ರಿ). =ಬೆಸುಗೆಗೊಳ್ಳು : ಕಮಲಕುಟ್ಮಲದೊಳು ಬೆಸುಗೆಯಾಂತುವು ತುಂಬಿಗಳು (ಸಂಪಶಿ. ೯-೩೯). [ಬೆಸುಗೆ (<ಬಿಸುಗೆ$_1$) + ಆನ್$_1$]

**ಬೆಸುಗೆಯೊಡೆ** (ಕ್ರಿ). =ಬೆಸುಗೆಗಳಚು : ಭೀಷ್ಮನ ಸರಳ ಗಾಳಿಗೆ ಬೆಸುಗೆಯೊಡೆದುದು ವೈರಿಬಲಮೇಘ (ಕುಮಾ.ಭೀ. ೯-೨೩); ಕುಸ್ತುಂದಜಿದವು ಜೋಡುಸೀಸಕ ಬೆಸುಗೆಯೊಡೆದುದು ಘಾಯದಲಿ ಮೈಬಸಿಯೆ ಬಿರಿದುದು ಶೌರ್ಯ ಬಿಗಿದುದು ಭೀತಿ ಭೂಪತಿಗೆ (ಕುಮಾ.ದ್ರೋ. ೧೩-೩೬).

[ಬೆಸುಗೆ (<ಬಿಸುಗೆ$_1$) + ಒಡೆ$_1$]

**ಬೆಸುಗೆವಡೆ** (ಕ್ರಿ). =ಬೆಸುಗೆಗೊಳ್ಳು: ಕಾಲ ಸಂಕಲೆ ಮುಜಿದುವೇ ಬಲು ಬೆಸುಗೆವಡೆದವು (ಶಿಶಾಗ. ೧೧-೪-೧೮). [ಬೆಸುಗೆ (<ಬಿಸುಗೆ$_1$) + ಪಡೆ$_1$]

**ಬೆಸೆ$_1$** (ಕ್ರಿ). ೧. ಗರ್ವಿಸು; ಅಹಂಕಾರಪಡು; ಬೀಗು : "ಬೆಸೆ_ಗರ್ವೇ, ಕಾರ್ಪಾಸಚಾಪೇ ಚ (ಹತ್ತಿ ಎಕ್ಕುವ ಬಿಲ್ಲು)" (ಕವಿಧಾ) ; ಮಸಗಿ ಬೆ[ಸೆದಿರ್ದು] ವಿವರಮನಸಿಯದಜಿಡೆವೊತ್ತಿ ಪೊಕ್ಕು ಕೆಲನಂ ಕೊರ್ಬುತ್ತೆ ಸೆದು ಬಿದಿರ್ದಾರ್ದುಪೋಟಿಗ್ಗೀಟಿಗ್ಗ ಸಮಂಜಸನಿಕ್ಕಿ ಮಿಕ್ಕನರಿವಾಹಿನಿಯಂ (ಕವಿರಾ. ೧-೬೬); ಕೆಮ್ಮಗೆ ಬೆಸೆವವಸರಸದೆಂತೊ ಪಗರಣಪರಸಂ (ಆದಿಪು. ೧೨-೯೯); ಸಭೆ ಬಿಲ್ಲುಂಬೆಜಗಪ್ಪಂತು ಜರ್ವಿ ಬೆಸೆದು ನುಡಿವುದುಂ (ರಾಮಾಶ್ವ. ೧೯೩-೯). ೨. ಕೋಪಿಸು ; ಸಿಟ್ಟಾಗು : ಒಸೆಯದೆ ಬೆಸೆಯದೆ ಪರಿಭಾವಿಸುತ್ತಮಿಂತಗ್ನಿನಾಮಭೂತಿಗಳ ಗುಣಕ್ಕೆ ಸಮಾನಚಿತ್ತನಾಗಿಯುಮಸಮಾನಮಾನಸ್ಯನಾದಂ (ಸುಕುಮಾ ೩-೩೮); ಒಸೆಯದೆಯುಂ ಪದಾನತರ್ಗೆ ಸೌಖ್ಯಸಮೃದ್ಧಿಯನೀವೆ ದೇವ ನೀಂ ಬೆಸೆಯದೆಯುಂ ಪಟಾನತರ್ಗೆ ದುಃಖಿಸಹಸ್ರಪನಾಪಗಂ ವಿಸರ್ಜಿಸುವೆ (ವರ್ಧಶ. ೧೬-೬೯); ಪುಸಿವ ಕುಸಿವ ಬೆಸೆಪೊಸವ ಮನಂಗುಂದುವ ಮಲೆವಲೆವೊಂದುಂ ದಂದುಗದೊಳಗೆ ಸಗನೆಲ್ಲಿಯುಂ ಮುನಿಮಾರ್ಗಂ (ಪುಷ್ಪಕ. ೧೨-೯೩). ೩. ನಿರ್ಲಕ್ಷಿಸು; ವಿಮುಖವಾಗು: ಪರಲೋಕಭಯಕ್ಕೆ ಬೆಸೆದು ಜಸನಕ್ಕೊಸೆದು ಯುಕ್ತಾಯುಕ್ತವಿವೇಕಕ್ಕೆ ಪಿಂತೆಗೆದು (ಕಾದಂಉ. ೩೬೩).

[ದೇ.॥ ತಮಿ. ವಿಚ್ಚೈ; ತುಳು. ಬೆಸಿ, ಬೆಸೆ]

**ಬೆಸೆ$_2$** 'ಬಿಸು$_1$' ನೋ.

**ಬೆಸೆ$_3$** (ನಾ). ಗರ್ವ; ಹೆಮ್ಮೆ: ಮುಂದುವರಿಪಗ್ಗಳಿಕೆ ಮುಳಿಸು ಮೂದಲೆ ಮೋಡಿ ಬಂದಿ ಭಾರಣೆ ಬಿಂಕ ಬೆಸೆ ಚಮತ್ಕಾರಂಗಳಿಂದೆ ಸಮವಾಗಿ ಕೈದೋಜಿದಂ ವೃಷಕೇಶು ಬಭ್ರುವಾಹನನ ಮೇಲೆ (ಜೈಮಿಭಾ. ೨೩-೧೩); ಬಗೆಬಗೆಯ ಬೆಡಗು ಬಿನ್ನಣ ಬೆಸೆ ಚಮತ್ಕಾರದೊಗುಮಿಗೆಯ ತೋರಿ ನೋಡಿದರು (ವೆಂಕಾಭಾ. ೩-೬-೩೬). [<ಬೆಸೆ$_1$]

**ಬೆಸ್$_4$** (ನಾ). ೧. ಅರಳೆಯನ್ನು ಹೊಡೆದು ಹಿಂಜುವ ಒಂದು ಬಗೆಯ ಬಿಲ್ಲು : ಒಳ್ಳಿಯನೇಱಿ ಪಟ್ಟು ಬೆಸೆಯಂ ಬೆಸೆದೇಱಿಸಿ ಪಾವುಗುಳ್ಳಿಯುಂ ಕೊಳ್ಳನಲೊತ್ತಿ ಪುಲ್ಲೊರಡಿಯಾವಲೆಯೊಳ್ ಸಿಲೆಯೊಂದನೆತ್ತಿ ನೀಸೊಳ್ಳಿತು ಬೀಗುವ್ಯೆ (ಪಂಪಭಾ.೦೨-೨೩೦); ಇಂತು ಬಿಲ್ ಬೆಸೆಯಾಗೆ ಕಂಡು ಶತ್ರುಹಂ ಪೆಱತೊಂದು ಬಿಲ್ಲಂ ಕೊಂಡು ಕಣೆಯುಂ ಪೂಡಿ (ರಾಮಾಶ್ವ.೦೫೭-೦೨); ಬೆಸೆಯ ಕಟ್ಟಿಗೆಯಾಗಿ ಕಾಲ್ಗಳು ಪಸಿಯ ತೊಗಲಿನ ಗಂಧ ಪೆಂಗಸು ಪಸುಧೆಯೊಳು ಹುಟ್ಟೀನು ಫಲವ್ಯೆ (ಕಕೋಳ. ೪-೨೨). 'ಬೆಸೆಕೋಲ್' ಪರಾ. ೨. ಹೊಡೆತ ; ಪೆಟ್ಟು : ಇವನೊರ್ವನಿದೆಕೋ ಬಂದನೆಂದಿಸುವ ಬೆಸೆಗಳ್ಗೆ ದೆಸೆಗೆಟ್ಟು ಸೇನೆ ಗಜಬಜಿಸೆ ಕಂಡು (ಕೃಭಾಭಾ.೨೦-೨೫).

[<ಬೆಸ್$_2$]

**ಬೆಸ್$_5$** (ನಾ). ಮೇಕೆಯ ಕರುಳಿನ ಹುರಿ : P ಇದು ಬಹಳ ಗಟ್ಟಿಯಾಗಿದ್ದು ವೀಣೆ. ಸಾರಂಗಿ ಮುಂತಾದ ವಾದ್ಯಗಳಿಗೆ ತಂತಿಗಳಂತೆ ಬಳಸುತ್ತಾರೆ : ಇದು ಬೆಸೆ. ಗೊತ್ತಿಲ್ಲವೇ ಬೆಳ್ಳಿ ? ದೇವಾಲಯಕ್ಕೆ ಕೊಡಬೇಕಲ್ಲ–ಅಲ್ಲಿಯ ವೀಣೆ ಸಾರಂಗಿ ಇವುಗಳಿಗೆಲ್ಲಾ ಬೇಕಾಗುವ ಬೆಸೆ ನಾವೇ ಕೊಡಬೇಕಲ್ಲಾ? (ಬಂಧು. ೭೦). [?]

**ಬೆಸೆಕೋಲ್**, ಬೆಸಕೋಲು (ನಾ). ಅರಳೆಯನ್ನು ಹಿಂಜಲು ಬಳಸುವ ಪಿಂಜಾರನ ಕೋಲು : ಕುಡುಪೊಡೆ ನಿಸ್ಪೃಹಂ ಕುಡುವುದೇಱಿಸಿದು ಬೆಸೆಕೋಲನೆಂದು ಪೇೞ್ ಕುಡುವುದೆ ಕನ್ನೆಯುಂ ದ್ವಿಜಕುಲಂಗೆ (ಶಂಕಭಾ. ೩-೬೬); ತಲೆಕಟ್ಟು, ಬೆಸೆಕೋಲ್ (ಶಮುವ. ೬೫ ಪ್ರಯೋ). **ಬೆಸಕೋಲು:** ಸುರಧನುವೆಂಬ ಬೆಸಕೋಲ ತುದಿಗೆ ತಳತಳಿಪ ವಿದ್ಯುಲ್ಲತೆಯ ತಿರುವನಿಟ್ಟೆಕ್ಕಿದರಲೆಯ ಪುಂಜವೆಂಬ ತೆಱದಿ ಹಳಿಹಳಿಯೊಳೇಳ್ವ ಘನತತಿ . . . ವಿರಾಜಿಸಿದುದು (ಸಮ್ಯಕೌ. ೧-೦೯); ಒಳ್ಳಿಯನಿರದೇಱಿ ಬೆಸಕೋಲ ನೇಱಿಸಿ ಗುಳ್ಳಿಯ ಕರ್ಚೆ ಪೂರೈಸಿ ಹೊಳ್ಳುಪೊರಡಿಯೆತ್ತಿದ ಬಿಲ್ಪ ತೋಱುವುದೊಳ್ಳಿತೊಳ್ಳಿತು ತುಱುಗಾಱು (ಪಂಪಶಂ. ೩೦-೩೪).

[ಬೆಸ್$_4$ + ಕೋಲ್$_1$]

**ಬೆಸೆಗಾರ** 'ಬೆಸೆಗಾಱ' ನೋ.

**ಬೆಸೆಗಾಱ**, ಬೆಸೆಗಾರ (ನಾ). ಕೊಬ್ಬಿದವನು ; ಅಹಂಕಾರಿ : ಎನ್ನಂ ಮುನ್ನಮಾರೆಂದು ಕಿಱುಕುಳನೆಂತಂತು ಬೆಸಗೊಳ್ವ ಬೆಸೆಗಾಱ ! (ರಾಮಾಶ್ವ. ೦೪೪-೨೨). **ಬೆಸೆಗಾರ:** ಕುಸುಮಾಸ್ತ್ರನ ದೆಸೆಗಾರದ ಬೆಸೆಗಾರ! (ಮುಂಪ್ರಶ. ೬೦-೫). [ಬೆಸ್$_3$ + –ಕಾಱ]

**ಬೆಸ್ತ**, ಬೆಸದ (ನಾ). ೧. ಮೀನು ಹಿಡಿಯುವವನು; ಜಾಲಗಾರ : ಕಾಲ್ಗಳಿಗೆ ಹರಹಿದ ಬೆಸ್ತನ ಜಾಲಜಾಲಗಳ ದಾಟಿ ಸಮಿಪಿಸಿದೆ ಜಲಪ್ರದೇಶ (ಪಪ್ರಧ್ಯ. ೦೦-೪); ಇವ ಬೆಸ್ತ; ಇವನ ಕೈಲಿ ಜನಿವಾರ ಮಾಡಿಸೋಕೆ ಆಗದು (ಚಿತ್ರ. ೦೦). ೨. ಮೇನೆಯನ್ನು ಹೊರುವವನು ; ಬೋಯಿ : ಬೆಸ್ತ ಬಲ್ಲನೆ ಅಂದಳ ಮೊದಲಾದ ಅಷ್ಟಭೋಗಂಗಳ (ಚನ್ನಪ. ೪. ೦೫-೩೨); ಅಂದಳದ ಬೆಸ್ತನನು ಕರೆಸಿ ಅವಗೆ ಇಂದುಧರವೇಷವನು ಧರಿಸಿ ಹೊಂದಿ ನಿಂಬವ್ವೆಯನು ಬೆರಸಿ ನೀ ಬಾರೆಂದು ಕಳುಹಿದರು ಸತ್ಕರಿಸಿ (ಶರಂ. ೨೯೬-೨). **ಬೆಸದ :** ೧. ಮಿಲ್ಲ ಬೆಸದರ ಮುರಿದು ಉತುಪುರವ ಪಾಳ್ಮಾಡಿ ಪುಲ್ಲಶರನಂ ಗೆಲಿದ ಸಿದ್ಧರಾಮೇಶನೆಮಗೀಗಿಷ್ಟ ಸಂಸಿದ್ಧಿಯಂ (ರಾಶತ. ೩-೩) ; ಮನೆಮಾರು ಮಾಡಿ ನೆಮ್ಮದಿಯಾಗಿ ಬಾಳದಿಂತಳೆವನೇತಕೆ ಬೆಸದರೊಡನೆ (ಗೂರಸ್ತಾ. ೨-೦೬). [ದೇ.॥ ತೆಲು. ಬೆಸ್ತ]

**ಬೆಳ್$_1$**, ಬೆಳು$_1$ (ಸಪೂರೂ). 'ಬಿಳಿದು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬೆಳ್ಮುಗಿಲ್', 'ಬೆಳ್ವಕ್ಕಿ' ಪರಾ. ಬೆಳು$_1$ : 'ಬೆಳುಮುಗಿಲು', 'ಬೆಳುವೆಟ್ಟ' ಪರಾ.

[ದೇ.॥ ತಮಿ. ವೆಳ್, ವೆಣ್; ಮಲ. ವೆಣ್; ತುಳು. ಬೊಳ್, ಬೊಲ್; ಕೊತ. ವೆಳ್; ಪರ್ಜಿ. ವಿಲ್]

**ಬೆಳ್$_2$**, ಬೆಳು$_2$, ಬೆಳ್ಳ$_2$ (ನಾ). ೧. ದಡ್ಡತನ ; ಮೂರ್ಖತನ: 'ಬೆಳ್ಪು$_2$'. 'ಬೆಳ್ಳ$_2$' ಪರಾ. ೨. ಭಯ; ಅಂಜಿಕೆ : 'ಬೆಳ್ಳೆರಲೆ'. 'ಬೆಳ್ಳೋಟ' ಪರಾ. ೩. ತೋರಿಕೆ ; ಹುಸಿ : 'ಬೆಳ್ಳೋಕರಿಕೆ' ಪರಾ. ೪. ಕ್ರೂರವಲ್ಲದುದು ; ಸಾಧು: 'ಬೆಳ್ಮಿಗ', 'ಬೆಳ್ಮೃಗ' ಪರಾ. ೫. ಬುದ್ಧಿಯಿಲ್ಲದವನು ; ದಡ್ಡ ; ಅಜ್ಞ: ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ ಪೂಣ್ದು ಪೇೞ್ದ ಬೆಳ್ಗಳ ಕೃತಿಬಂಧಮುಂ ಬರೆ[ಪ]ಕಾಱರ ಕೈಗಳ ಕೇಡು (ಶಂಕಭಾ. ೦-೧೨); ಚಿಂತಿಸಿ ಕಟಿಲ್ದು ಬಟಿಲ್ದು ಕನಲ್ದೊಸಲ್ದುಂ ಬೆಳ್ಳೆನಿಸುವ ಬೆಳ್ಪಬೇರನಗುಟ್ದಾಗಸಕೆತ್ತದೆ ಸೂಳೆ ಮಾಣ್ದಪೆ? (ಶಾಂತಿಪು. ೬-೯೨) ; ಒಳ್ಳೆ ಕಾಲದವರೆನ್ನ ಬೆಳ್ಳೆನ್ನದಿಹರೆ (ಕಾಶ ೩೯-೮). **ಬೆಳು$_2$** : ೧. 'ಬೆಳುಮಾತು' ಪರಾ. ೫. 'ಬೆಳುಗನ್ನಡಿಗ' ಪರಾ. ೬. ಕಪಟ ; ಸೋಗು : 'ಬೆಳುನಗೆ$_2$' ಪರಾ. **ಬೆಳ್ಳ$_2$** : ೭. ಕಪಟವಿಲ್ಲದಿರುವಿಕೆ ; ಮುಗ್ಧತೆ : ಇನ್ನು ಕೆಲವರು ಬೆಳ್ಳೆಯೋ ಕುಚೋದ್ಯವೋ ಎನ್ನುವುದು ತಿಳಿಯದ ರೀತಿಯಲ್ಲಿ ಓಗೆ ಕರೆಯುವರು (ಚಕರಾ. ೩೭). 'ಬೇಳ್$_2$' ಹೋ.

**ಬೆಳ್ಮಾಡು, ಬೆಳುಮಾಡು**=೧. ಮಂಕುಮಾಡು; ಮರುಳುಗೊಳಿಸು: ಧರೆಯಂ ಬೆಳ್ಮಾಡಿಕೊಂಡರೆಂಗುಂ ಲೋಕಂ (ಶಂರಾಮಾ. ೬-೦೪೦). ೨. ಪರವಶಗೊಳಿಸು ; ಮೋಹಿಸುವಂತೆ ಮಾಡು : "ಬೆಳ್ಮಾಡೆಂದು ಮರುಳ್ಗೊಳಿಪುದು" (ಕಕಾ. ೭೧-೬೨೭) ; ಕಾಂತಿಗೆ ಕೈಗನ್ನಡಿ ತೀರ್ಥಕರ ಕುಮಾರನ ಬೆಡಂಗು ಬೆಳ್ಮಾಡಿದಪುದಲಂಕರಿಸುವರಂ (ಅನಂಪು. ೫-೮೦) ; ಮೆಯ್ಗಣ್ಣನಂ ಪೊಸತಪ್ಪಗ್ಗದ ಗಾಡಿಯಿಂದೆ ಪಿರಿದುಂ ಬೆಳ್ಮಾಡಿ ಬೇಟ್ಟಂ ತುಟುಬ್ಬಸಮಂ ಮಾಡುವ ಬರ್ದೆಯರ್ ಪಲಬರುಂ ಕಣ್ಗಿಂ ಬೆಡಂಗಾದರೋ (ಕಬ್ಬಿಕಾ. ೧೩೪); "ಬೆಳುಮಾಡೆನಲು . . . ಮರುಳ್ಮಾಡುವುದಕ್ಕೆ ಪೆಸರ್" (ಕಈ.೮೨). **ಬೆಳ್ಳಾಗು**=೧. ಮೂಢತನದಿಂದ ಕೂಡಿರು ; ಬೆಪ್ಪಾಗು ; ಅವಿವೇಕಿಯಾಗು : ನಲ್ಲಂಬಿಂದಿಸೆ ಪುಷ್ಪಬಾಣಸೆರ್ದೆಯುಂ ಬೆಂಬಿಟ್ಟು ಬೆಳ್ಳಾಗಿ ತಕ್ಕೆಲ್ಲಂ ಕೆಟ್ಟೆರ್ದೆಗೆಟ್ಟು ಜಂಗಮಲತಾಸಲ್ಲೀಲೆಯರ್ ಬಾಲೆಯರ್ ಚೆಲ್ಲಂ ಬೇಂಟದ ತೋಟಿಯೊಳ್ ತೊಡರೆ (ಕಾವ್ಯಸಾ. ೫೫೦ ಕೂಧ್ರ೪) ; ಪೋದುದು ಜೌವನಂ ಕ್ರಮದಿನಾದುದು ಮುಪ್ಪಿನಸಾದೊಡಂ ಸ್ಮರೋನ್ಮಾದದೊಳೀ ವಿಮೋಹದೊಳದೇಕೆ ಗಡಂ ಬಗೆಯಂ ತಗುಳ್ಚಿ ಬೆಳ್ಳಾ[ಪಾಠಾಂ. ಬೇಳಾ]ದಪಂ (ಆದಿಪು. ೨-೩೫). ೨. ಹೆದರು ; ಅಂಜು : ಪೋಗೆನೆ ಪೋಪ ಬಾರೆಲವೊ ಬಾರೆನೆ ಜೀಯ ಹಸಾದವೆಂದು ಬೆಳ್ಳಾಗುತೆ ಬರ್ಪ . . . ಸೇವೆಯ ಕಷ್ಟವೃತ್ತಿಯುಂ ನೀಗಿದೆನಿಂದು ನಿಮ್ಮ ದೆಸೆಯಿಂ (ಶಂಬಾಶ. ೮೮).

**ಬೆಳ** (ನಾ). (?) : ಮೂಡಣ ಬೆಳದೊಳಾ ಗಳೆಯೊಳ್ ಅಗಲಂ ಗಳೆ ೩ ನೀಳಂ ಗಳೆ ೭ (ಇಆ. XIX, ೨೭೩-೩೯ ; 1054); ಘಣೆಕುಳಂಗಳೇ ದಾರವಾಗಿ ಬೊಕ್ಕಣ ಪೊಳವಸುಜಯಮಾಗಿ ಚಕ್ರಮೆ; ಬೆಳವಾಗಿ ಕೂರಸಿಯೇ ಮರಪುರಿಗೆಯಾಗೆ (ಎಕ. VII, ಶಿಕಾರಿ. ೦೦೮-೩೦ ; 1054). [?]

△**ಬೆಳಂಗಿಸು** 'ಬೆಳಗಿಸು' ನೋ.

△**ಬೆಳಂಗು** 'ಬೆಳಗು$_1$' ನೋ.

**ಬೆಳಂತಿಗೆ**, ಬೆಣತಿಗೆ, ಬೆಳತಿಗೆ, ಬೆಳ್ತಿಗೆ (ನಾ). ೧. ಹೊಳಪು ; ಕಾಂತಿ; ಪ್ರಕಾಶ : ಅನೇಕ ಪ್ರಕಾರ ನರನಾರೀಜನಂಗಳ್ ಬೆಳಂತಿಗೆಯುಪ್ಪಚ್ಚವೆಳ್ದಿಂಗಳೊಳನಂಗರಾಗರಸದೀಪಿತಾಂತರಂಗರಾಗಿ ನಲಿಯುತ್ತಿರ್ಪಿನಂ (ಧರ್ಮಪು. ೬-೯೫ ವ); ಕಬರೀಭಾರಾಲಸೆ ತೊಳಪ ಬೆಳಂತಿಗೆಯೆನಿಸಿಪಚ್ಚವೆಳ್ದಿಂಗಳೊಳ್ . . . ಬೀಣೆಯುಂ ಬಾಜಿಸಿದಳ್ (ಸುಕುಮಾ. ೦೦-೨೪) ; ಬಸಿಱಿಂ ಬಲಿದುಕ್ಕುವ ಮೋಹಾಮೃತರಸದ ಬೆಳಂತಿಗೆ ಪರಕಲಿಸಿದುದೋ (ಜಪುಚ. ೪-೦೮). (ಗು). ೨. ಬಿಳುಪಾದ ; ಶುಭ್ರವಾದ : ಕಾಂತಿಯೊಳೆ ಪುದಿದು ಬೆಳಪ ಬೆಳಂತಿಗೆ ಬೆಳ್ದಿಂಗಳಲರ್ದ ಪೊಸಜಾದಿ ದಿಶಾಕಾಂತೆಯ ಬೆಳ್ನಸದನದ

ದಗುಂತಿಯನೇಂ ತನಗೆ ನಾಡೆಯುಂ ಮಾಡಿದುದೋ (ಅದಿಪು. ೧೧-೯) ; ನೀಳ್ದು ಬೆಳಂತಿಗೆ ಬೆಳ್ಪನಾಳ್ದು ಪಂಕರುಹವನಾಳಿಗೊಳ್ವ ನಗೆಗಣ್ (ಅನಂಪು. ೨-೨). **ಬೆಣತಿಗೆ :** ೨. ಮುನ್ನದಿನ ರಾತ್ರಿ ಬೆಣತಿಗೆ ಅಕ್ಕಿಯ ನೆನೆಯಿಕ್ಕಿರಿಸಿ ಬೆಳಗಾಗಿ ಆ ಅಕ್ಕಿಯೊಂದುಹಿಡಿಯಂ ಮೆಲ್ಲಲು ಮೂರು ದಿನಕ್ಕೆ ಬಿಳಿಸೀರೆ ಕೆಡುವ ರೋಗಂ ನಿಲ್ವುದು (ಸಕವ್ಯ. ೦೯೬); ಒಂದಿಷ್ಟು ಬೆಣತಿಗೆ ಅಕ್ಕಿ ಕೊಟ್ಟರೆ ನಾವೇ ಬೇಯಿಸಿಕೊಳ್ಳುತ್ತೇವೆ (ಸಂಐಪಾ. ೦೯). **ಬೆಳತಿಗೆ :** ೧. ಬೆಳ್ದಿಂಗಳ ಬೆಳತಿಗೆಯಂ ಪಸೆ ಪಾಲ್ಗೆತ್ತು ಸಾರ್ದಪ್ಪುದೊ (೦೯ಣಾವ ೨-೨೨). ೨. ನಿಮ್ಮಡಿಗಳಿಂದಿನ ಬೆಳತಿಗೆ ಬೆಳ್ದಿಂಗಳೊಳು ಬಿಜಯಂಗೆಯ್ದಾ ಕನ್ನೆಯ ಮನೋರಥಮಂ ಮಾಳ್ಪುದು (ಸಂಪಿರ. ೦೦-೨೩); ಬೆಳತಿಗ[ಪಾಠಾಂ. ಯ]ಕ್ಕಿಯ ಸಣ್ಣ ಹಿಟ್ಟು ಸೋದಿಸಿ ಹುರಿದುಕೊಳುತ ಬೆಲ್ಲದ ಪಾಕದೊಳು ಪಾಕಿ ಕಲಸಿ . . . ಗಾರಿಗೆಯಡುವುದು (ಸೂಶಶಾ. ೦-೨೪). ೩. ಹೊಳೆಯುವ; ಪ್ರಕಾಶಮಾನವಾದ : ಇರುಳ ತಣ್ಬೆಸಿಲ್ ಬೆಳತಿಗೆ ಮಿಂಚಿರ್ಕಿಲ್ಲದಿಂಗಡಲ್ (ಮಲ್ಲಿಪು. ೬-೪೪). ೪. " ಬಿಳಿದಾದ ಅಕ್ಕಿ " (ಸಿಂಕೋ. ೩೯೦). **ಬೆಳ್ತಿಗೆ :** ೨. ನೀನು ಉಣ್ಣುವ ಹೊತ್ತಿಗೆ ನನ್ನ ಅನ್ನವಾಗುತ್ತದೆ. ಅದಕ್ಕೆಷ್ಟು ಹೊತ್ತು? ಬೆಳ್ತಿಗೆ ಅಕ್ಕಿ (ಕದಂಐ. ೦೦).

**ಬೆಣತಕ್ಕಿ** = ಥಳಿಸಿದ ಅಕ್ಕಿ ; ಬಿಳಿಯಕ್ಕಿ : ಬೆಣತಕ್ಕಿಯ ನೆನೆಯಿಸಿ ಸಣ್ಣವಾಗಿ ಅರೆದುಕೊಂಡು (ಐವ್ಯ.ಐ. ೭೦). [<ಬಿಳಿದು./ತುಳು. ಬೊಳ್ಂತೆ]

**ಬೆಳಂತಿಗೆಗಣ್**, ಬೆಳತಿಗೆಗಣ್ (ನಾ). ಹೊಳಪುಳ್ಳ ಕಣ್ಣು; ಕಾಂತಿಯುತವಾದ ಕಣ್ಣು : ಬೆಳಗಾಯ್ಮೊಲೆಯ ಬೆಳಂತಿಗೆಗಣ್ಗಳ ಸುಳಿನಾಭಿಯ ಸುಲಲಿತಲಲಿತಾಂಗದ . . . ಲಲನೆಯುರ ವಿಲಾಸಂ ನೃಪನಜಿತಮನೆಳಕುಳಿಗೊಳಿಸಿದುದು (ಜಯು. ೨-೩). **ಬೆಳತಿಗೆಗಣ್ :** ಮಿಂಚುಗುವ ಬೆಳತಿಗೆಗಣ್ಬೊಣರೊಜಿತೆಯ ಜಲದೊಳಗೆ ಪೊಳೆಯೆ . . . ಎಳಮೀನ್ಗಳ್ಗೆತ್ತು (ಅಜಿತಪು. ೬-೩೦); ಬೆಳತಿಗೆಗಣ್ಗಳ ಬೆಳಗಿನಬಲೆಗಿರದೊಳಗಾದುದಾ ವಿಟನಿಕರ (ಹರಿವಂಶ. ೦-೯೩); ಬೆಚ್ಚಿಸವಗಣ್ಣ ಬೆಳತಿಗೆಗಣ್ಣ . . . ಬಲ್ಬೊಗಸೆಗಣ್ಣ ಬಲೆಯರ್ . . . ಬರುತಿರ್ದರ್ (ಚಂಪು. ೩೭-೪೪). [ಬೆಳಂತಿಗೆ + ಕಣ್]

**ಬೆಳಂದಿ** (ನಾ). ಒಂದು ಬಗೆಯ ಸಸ್ಯ : ಕೆಂಪುಗಂಧಗಿರಿ . . . ಬೆಳಂದಿ, ಗಂಧಗಿರಿಗೆ (ವೃಕಿಗಿ. ೦೯-೩೪೮). [ ? ]

**ಬೆಳಕ** 'ಬೆಳಗು₂' ನೋ.

**ಬೆಳಕಂಡಿ** (ನಾ). ಬೆಳಕು ಮತ್ತು ಗಾಳಿಯು ಬರುವುದಕ್ಕಾಗಿ ಕಟ್ಟಡಗಳಲ್ಲಿ ಅಳವಡಿಸುವ ಕಂಡಿ; ಗವಾಕ್ಷ; ವಾತಾಯನ: ನೆಲನಗಲಕ್ಕೆ ತೀವಿದ ಕಟ್ಟಿಲೆಯಂ ಒಳಿಯಲ್ಕೆ ಗಗನತಳದೊಳ್ಪಲವುಂ ಬೆಳಕಂ [ಪಾಠಾಂ. ಖಂ]ಡಿಗಳಂ ಸಮೆದಂ ಜಳಜಜನೆನೆ ತೊಳಗಿ ಬೆಳಗಿದುವು ಭಗಣಂಗಳ್ (ಧರ್ಮಾಶ. ೨-೧೧). ಕೆಲವು ಕಡೆಯಲ್ಲಿ ಮಾಳಿಗೆಯಲ್ಲಿ ಬೆಳಕಂಡಿಗಳನ್ನು ಬಿಡುತ್ತಿದ್ದರು (ಕಭಾಗ. ೭೦); ಜನಕಜಾತೆಯುಂ . . . ಮೃಗಚರ್ಮದಿಂ ಸಮೆದ ತನ್ನ ಕೈಪೆಟ್ಟಿಜುಂ ತೆರೆದಯೋಧ್ಯೆಯ ಸಿರಿಗೆ ರಚಿಸಿದಳ್ ಕಿರಿದೊಂದು ಬೆಳಕಂಡಿಯಂ (ಶ್ರೀರಾಮಪಾ. ೦೩೭-೩೨೯). [<ಬೆಳಗು₂+ಕಂಡಿ₁]

**ಬೆಳಕಿಂಡಿ** (ನಾ). =ಬೆಳಕಂಡಿ : ಒಳಕೊಂಡೆಯನಿಕ್ಕಿ ಪೌಗಂಡರ ನಮ್ಮ ಬೆಳಕಿಂಡಿ ಸಿಲುಕಿಸಿ ಪುಡನೋಡಿದನೌ (ಶೃಸಶಾ. ೦೭-೬) ; ನನ್ನ ಮನದ ಬೆಳಕಿಂಡಿಯೊಳಗಿಂದ ಅಗೊ – ಕಂಡೆ ಕಾಣುವುದು ಬೆಳಕಿನಂದ (ಗು. ೨೪-೦೩). [<ಬೆಳಗು₂ + ಕಿಂಡಿ]

**ಬೆಳಕು₁** 'ಬೆಳಗು₁' ನೋ.

**ಬೆಳಕು₂** 'ಬೆಳಗು₂' ನೋ.

**ಬೆಳಕುದೋಱು** (ಕ್ರಿ). ಬೆಳಕನ್ನು ಕಾಣಿಸು : ಪರಶಿವನ ಶಶಿಸೂರ್ಯ ನೇತ್ರಂಗಳಂ ಗಿರಿಜೆ ಸರಸದೊಳ್ ಮುಚ್ಚಲ್ ತಮಂ ಪೆಚ್ಚಲ್ ಶೀಶನೆಂದುರಿಗಣ್ಣವಿಂ ಬೆಳಕುದೋಱಲು (ಚಂಪು. ೯೭-೨೪). [ ಬೆಳಕು₂ (<ಬೆಳಗು₂) + ತೋಱು ]

**ಬೆಳಕುಮಾಳಿಗೆ**, ಬೆಕ್ಕುಮಾಳಿಗೆ (ನಾ). ಬೆಳಕಂಡಿಯಿರುವ ಮಾಡ ; ಗವಾಕ್ಷವಿರುವ ಮಾಳಿಗೆ : " ತಳಗಡೆ ಇರುವ ಕೋಣೆ ಮೊದಲಾದ ಗಳಿಗೆ ಬೆಳಕು ಬೀಳುವುದಕ್ಕಾಗಿ ಮಾಡಿರುವ ಎತ್ತರವಾದ ಗವಾಕ್ಷಿ : ಬೆಳಕು ಮಾಳಿಗೆ" (Companion. ೩೦೪೬). **ಬೆಕ್ಕುಮಾಳಿಗೆ :** ಬೆಳಕು ಬರಲು ಮೇಲಿನ ಬೆಕ್ಕುಮಾಳಿಗೆಯೇ ಆಧಾರ (ಸಾಶಿತ್ರಿ. ೫೩).

[ಬೆಳಕು₂ (< ಬೆಳಗು₂) + ಮಾಳಿಗೆ₁ ]

**ಬೆಳಕ್ಕಾಲ್** (ನಾ). ಒಂದು ಪ್ರದೇಶದ ಹೆಸರು : ತೆನ್ನಣಸೀಮೆ ಬೆಳಕ್ಕಾಲ ತೆನ್ನೊಟ್ಟಿ (ಮೈಶಂ. ೦೯:೭, ೦೨೨-೩೦; 808) [? + ಕಾಲ್₂]

**ಬೆಳಗಟು** (ಕ್ರಿ). ಬೆಳಕು ಇಲ್ಲದಂತಾಗು ; ಕತ್ತಲಾಗು : "ಮಾಸಮಾಸವಾದುದೇದು ಬೆಳಗಟುದುದು" (ಕಕಶಾ. ೫೭-೨೦೭) ; '' ಬೆಳಗಟುದುದು ಮಾಸಮಾಸವಾದುದು" (ಕವ್ಯಕ್ಕೆ. ೬೯). [ಬೆಳಗು₂ + ಅಟು₁]

**ಬೆಳಗಾಯ್**, ಬೆಳಗಾಯಿ, ಬೆಳುಗಾಯ್ (ನಾ). ಬೆಳವಲದ ಕಾಯಿ ; ಬೆಲ್ಲವಪತ್ತ : ವಾರಣ ನುಂಗಿದ ಬೆಳಗಾಯಂ[ಪಾಠಾಂ. ಬೆಳಲ ಪಣ್ಣಂ, ಬೇಲದ ಪಣ್ಣಂ]ತೆ (ಕುರಾಶಾಂ. ೨೭-೨); ಜಾಣತನವು . . . ಕಾಣಿಸಬೇಕು ಕಬ್ಬದೊಳು . . . ಕರಿಯುಂಡ ಬೆಳಗಾಯಂತಲ್ಲ ಕರತಳದಾಮಳಕದಂತೆ ನಿಟ್ಟೆಪರಿಗೆ (ಕವಚ. II, ೪೩೦, ಸೂಕ್ತಸ್ವೈರಿಗೌಶನ ಚಂದ್ರ). **ಬೆಳಗಾಯಿ :** ತಾವರೆ ಮೊಗಕೆ ಬೆಳಗಾಯಿ ಮೊಲೆಗೆ ನೈದಿಲೆ ಕಣ್ಗೆ . . . ಸೋಲ್ದವಯವಂಗಳೊಳ್ನೆಲಸಿದುವು ಪೆಣ್ಗಳ್ಗೆ (ಕೈಐಶಾ. ೩೦-೪). **ಬೆಳುಗಾಯ್:** 'ಬೆಳುಗಾಯ್ಮೊಲೆ' ಪರಾ.

[< ಬೆಳಲ್ + ಕಾಯ್₄]

**ಬೆಳಗಾಯಿ** 'ಬೆಳಗಾಯ್' ನೋ.

**ಬೆಳಗಾಯಿಮೊಲೆ**, ಬೆಳುಗಾಯ್ಮೊಲೆ (ನಾ). ಬೇಲದ ಕಾಯಿ ಆಕಾರದ ಮೊಲೆ : ಬೆಳಗಾಯಿಮೊಲೆಯ ಹೊಳೆವ ಪೊಂಗಳಸಮೊಲೆಯರಲ್ಲದೆ ಬೀಳು ಮೊಲೆಗಳ ಹೆಣ್ಣಿಲ್ಲವಲ್ಲಿ (ಕಂಶಐ. ೬-೦೦೦). **ಬೆಳುಗಾಯ್ಮೊಲೆ :** ಬೆಳುಗಾಯ್ಮೊಲೆಯ ಲಸದ್ಬಿಂಬಾಧರದೆಳಜವ್ವನೆ (ಜಪುಕಾ. ೦೦-೦೩) ; ಸಿಂಗರದ ಮೊಲೆಯ ಬೆಳುಗಾ[ಪಾಠಾಂ. ಳ್ಗಾ]ಯ್ಮೊಲೆಯ ಬಟ್ಟಡಕೆಮೊಲೆಯ . . . ಬಿಣ್ಮೊಲೆಯ ಭಾವೆಯರ್ ಬರುತಿರ್ದರು (ಚಂಪು. ೩೭-೪೩).

[ಬೆಳಗಾಯಿ ( <ಬೆಳಗಾಯ್) + ಮೊಲೆ₁]

**ಬೆಳಗಾರ** 'ಬೆಳುಗಾರ ' ನೋ.

**ಬೆಳಗಿಲಿ** (ನಾ). ಬೆಳಕು ಇಲ್ಲದುದು : ' ಬೆಳಗಿಲಿಗಣ್ ' ಪರಾ.

[ಬೆಳಗು₂ + — ಇಲಿ₃]

**ಬೆಳಗಿಲಿಗಣ್** (ನಾ). ಬೆಳಕು ಇಲ್ಲದ ಕಣ್ಣು; ಕುರುಡುಗಣ್ಣು : ಲಿಕಾರಕ್ಕೆ – ಪಲ್ಲಿಲಿವಾಯ್ . . . ಬೆಳಗಿಲಿಗಣ್, ನಾಣಿಲಿವೆಣ್ (ಶಮದ. ೦೩೬ ವೃ.ಬೋ).

[ಬೆಳಗಿಲಿ + ಕಣ್]

**ಬೆಳಗಿಸು**, ಬೆಳಂಗಿಸು (ಕ್ರಿ). ೧. ಬೆಳಕಾಗುವಂತೆ ಮಾಡು ; ಪ್ರಕಾಶಗೊಳಿಸು : ಪತ್ತುದೆಸೆಯುಂ ಬೆಳಗಿಸುವೆ ಪನ್ನೆರಡುರಾಶಿಗೊತ್ತಾಸೆಯಾಗಿರ್ಪ . . . ಎಂದು ದಿನಮಣಿಯನಾ ಲವಂ ನುತಿಸಿದಂ (ಕೈಐಶಾ. ೨೦-೬೨) ; ಸೂರ್ಯ . . . ಕತ್ತಲನ್ನು ಓಡಿಸಿ, ಮನೆಯನ್ನು ಬೆಳಗಿಸಲು ಒಳಕ್ಕೆ ಪ್ರವೇಶಿಸುತ್ತಾನೆ (ಶಪಂ. ೬). ೨. ದೀಪ, ಬೆಂಕಿ ಮುಂತಾದುವನ್ನು ಹಚ್ಚಿಸು,—ಹೊತ್ತಿಸು : ಘಡಘಡರ್ಜನ ಹೋಗುಹೋಗಳ ಪಡದು ಸ್ಯಂಧವನಳಿವು ಭಾಷೆಯ ನಡಸಬಲ್ಲರೆ ಬೇಗ ಬೆಳಗಿಸು ಹವ್ಯವಾಹನನ (ಕುಮ್ಮಾದ್ರೋ. ೦೪-೩೧) ; ಹೊರಗೆ ಬಂದು ಚಾವಡಿಯ ಲೈಟು ಬೆಳಗಿಸಿದಳು (ಶಳ್ಳಹಾ. ೦೦೯). ೩. ಆರತಿ ಮಾಡಿಸು ; ನೀರಾಜನ ಎತ್ತಿಸು : ರಂಭಾಸ್ತ್ರೀಯ ಕೀಳ್ಪಡಿಸುವ ವಧುನಿಕುರುಂಬದೆ ಮುತ್ತಿನಾರತಿಯ ಮೊಂಜುಳಿವಾಣದಿಂ ಬೆಳಗಿಸಿ (ಬೋಶಚ. ೪೦-೫೩). ೪. ಶೋಭಿಸುವಂತೆ ಮಾಡು : ಜಗತ್ತನ್ನು ಬೆಳಗಿಸಲು ಒಬ್ಬ ಸೂರ್ಯ ಬೇಕು ; ಬದುಕನ್ನು ಬೆಳಗಿಸಲು ಒಂದು ಪುಸ್ತಕ ಸಾಕು! (ಪಿಶಾಕ. ೨೪) ; ಸಂಗೀತ . . . ಮದುವೆ

ಮುಂಜಗಳಲ್ಲಿ ಮಂಗಳಮಂಟಪವನ್ನು ಬೆಳಗಿಸುವುದು (ಜಗದು. ೬೨). **ಬೆಳಂಗಿಸು** : ೧. ಭೃಂಗಕುಲನೀಲಾಳಕಂಗಳ ಸಭಂಗಳ ಬೆಳಂಗಿಸುವ ಮಧುರವಚನಂಗಳರುಣಪ್ರವಾಳಂಗಳ ನಖಂಗಳ ಲತಾಂಗಿಯರೆನಿಪ್ಪ ಪಣ್ಯಾಂಗನಾಜನಮೆಸೆದುದು (ಶಕಾ. ೪-೯೦). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. [ಬೆಳಗು₂ + — ಇಸು₃]

**ಬೆಳಗು₁**, ಬೆಳಂಗು, ಬೆಳಕು₁ (ಕ್ರಿ). ೧. ಹೊಳೆ ; ಪ್ರಕಾಶಿಸು : "ಬೆಳಗು – ಕಾಂತೌ" (ಧಾತು) ; ಜಲದದ ನೆಬಲುಂ ಪರಮುಂ ವಿಲಾಸಮುಂ ಬೆಳಗುವುದಿತ ವಿದ್ಯುಲ್ಲತೆಯುಂ ನೆಲಸವು (ಕಾದಂ. ೩-೯೩) ; ಹರಿ . . . ನುಡಿದಂ . . . ಸಭಾಸದನಂ ತೊಳಗಿ ಬೆಳಗೆ ದಂತಪ್ರಭೆಗಳ್ (ಹರಿವಂ. ೯-೩೪) ; ತೊಳತೊಳಗಿ ಬೆಳಗುವ ತನುಚ್ಛವಿಯ . . . ವರಕುಮಾರನ ಕಂಡು (ಸಂಕಶ. ೧೪-೩೩). ೨. ದೀಪ, ಬೆಂಕಿ ಮೊದಲಾದುವುಗಳನ್ನು) ಹೊತ್ತಿಸು ; ಪುಟ ಮಾಡು ; ಹಚ್ಚು : ಬೆಳಗುವ ಸೊಡರೊಳ್ಪೊಡಂ ಬೆಳಗಿ ಪಲಕೊಂಡು ಪೋಗೆಯುಂ ಕುಂದದೆ ಪಜ್ಜಳಿಸುವವೊಲ್ . . . ತವದಿತ್ತು ಮೆಚ್ಚಿವನಿಚ್ಚಿವಬೆಡಂಗಂ (ಗದಾಯು. ೦-೩೦) ; ಬೆಳಗಪ್ಪ ಚಾವದಾಗಳ್ ಸೊಡರ್ಗುಡಿಗಳ ಬೆಳಗಿ ಪೊಚ್ಚಗೆಯ್ದರೆ ದೀಪಾವಳಿಯೆಂಬುದು (ಸಮಸ. ೨-೯೫). ೩. (ಆರತಿ, ನೀರಾಜನ ಮೊದಲಾದುವುಗಳನ್ನು) ಎತ್ತು ; ನಿವಾಳಿಸು : ನೋಟವೇ ಬೆಳಗಿದಾರತಿ ಶಂಕರಂಗಲ್ಲಿ (ಶಾಂಕ. ದೇ. ೨೬೨-೫) ; ಏಕಾರತಿಯ ನೋಡುವ ಬನ್ನಿ ನವ್ಮ ಲೋಕನಾಥನ ಸಿರಿಪಾದಕ್ಕೆ ಬೆಳಗುವ (ಪುರಂದ. ೦-೨೨೬ ಆಮುಖಪುಟ) ; ಓಣಿಯಿಕ್ಕೆಲದಲಿ ದೊರೆವೆಣ್ಣುಗಳು ಮುತ್ತುಮಾಣಿಕ ದಾರತಿ ಬೆಳಗಿ ಕಾಣಿಕೆಯಿತ್ತು ಕೆಯ್ಮುಗಿದರು ಹರಿನೀಲವೇಣಿಯು ಮೋಡಿ (ಮೋಹತ. ೨೯-೦೬). ೪. ಶೋಭಿಸು ; ಮೆರೆ ; ವಿಜೃಂಭಿಸು : ಬೆಳಗುವುದಿಂದ್ರಲೋಕದೊಳಗಯ್ಯನ ಮಾ[ತನಲ್]ಮ್ಮ ಸಾಹಸಂ ಬೆಳಗುವುದೀ ಧರಾವಳಯದೊಳ್ (ಶಂಖಾ. ೬-೦೯) ; ನೊಸಲೊಳಿರಿಸಿದ ವಿಭೂತಿಯ ಬೊಟ್ಟು ಬೆಳಗುತಿರೆ (ಇಹರ. ದೇ. ೩೨-೯) ; ಮುನಿವರನು ಶಾಂತಾದೇವಿ ಸಹಿತಾ ಧರಣಿಪನ ಭವನದಲಿ ಬೆಳಗಿದನಧಿಕತೇಜದಲಿ (ಕೊರಶಾ. ೦-೫-೫೯). ೫. ಪ್ರಕಟಗೊಳಿಸು ; ಪ್ರಚಾರಮಾಡು : ಬೆಳಗುವೆನ್ನಿಲ್ಲಿ ಲೌಕಿಕವುನಲ್ಲಿ ಜಿನಾಗಮುಮಂ (ಕೃಶಭಾ. ೦೯-೬೦) ; ಅತ್ತಿಮಬ್ಬೆ ಜಿನಶಾಸನಮಂ ಬೆಳಗುತ್ತ ಮಿರ್ದಪಳ್ (ಅಜಿತ. ೦-೬೯). ೬. (ಲೋಹ, ಗಾಜು, ಮುಂತಾದವುಗಳಿಂದಾದ ಉಪಕರಣಗಳನ್ನು) ಮೆರುಗು ಬರುವಂತೆ ತೊಳೆ ; ಹೊಳೆಯುವಂತೆ ಉಜ್ಜು : ಬೆಳಗಿದ ಮಣಿದರ್ಪಣಮಂ ಕಿಳದ ಸರೋವರಮುನಿಟಿಸಿ ನಿರ್ಮಳಮದೆ ನಿರ್ಮಳಿನತರಮಾಯ್ತು ಜಗತೀತಿಳಕನ ನೆಗಳ್ದ ಜಿತಜಿನನ ಚಿತ್ತಮುದಾತ್ತಂ (ಅಜಿತ. ೬-೯೬) ; ಉಪಾಧ್ಯಾಯರೋದಿಸಿ ಕೈಗನ್ನಡಿಯುಂದದಿಂ ಬೆಳಗುಗಂದಂದಿಂಗೆ ಮಚ್ಚಿತ್ತಮಂ (ಅರಸಿ. ೦-೫) ; ಹಿತ್ತಾಳೆಪಾತ್ರೆಗಳನ್ನು ಬೆಳಗುವಾಗ ಹುಣಸೆ ಹಣ್ಣನ್ನು ಉಪಯೋಗಿಸಬೇಕು (ರೂಢಿ). ೭. ತಾಪವುಂಟಾಗು ; ಬಿಸಿ ತಟ್ಟು : ಪೊಸವೇಟಕಾರ್ತಿಯರ ಬಿಸುಸುಯ್ಯೊಳ್ ಬೆಳಗಿದುದೆಂಬಿನಮಾಗಳದೇಂ ಕೊರಗಿದುದೊ ಕುಮುದಿನೀವಿಸ್ತಾರಂ (ಕಾದಂಕಾ. ೦೬೪). ೮. (ಅಲಂ) ಚುರುಕುಗೊಳಿಸು ; ತೀಕ್ಷ್ಣಗೊಳಿಸು : ಇದಿರೆನ್ನ ಹಗೆವರು ಮತಿಯ ಬೆಳಗುವರು (ಕಹೂಪ. ೬-೨೦) ; ಗ್ರಂಥಗಳು ಮನಸ್ಸಿಗೆ ಮುಟ್ಟುತ್ತವೆ . . . ಬುದ್ಧಿಯನ್ನು ಬೆಳಗುತ್ತವೆ (ಗ್ರಂಥಾಲ. ೯). **ಬೆಳಂಗು** : ೧. ಕಪೋಲಯುಗಂ ಬೆಳಂಗಿ ನುಣ್ಪಡೆ (ಚಂದ್ರಚೂ. ೯-೯). ೯. ಒಪ್ಪು ; ಅಂದವಾಗಿರು : ಪಲಉಂ ಪೂಗಿಡುಗಳಿಂ ಬೆಳಂಗುವ ಧ[ರ್ಮ] ಕೋಟವಮಂ . . . ಕೊಟ್ಟು (ಶಾಶಿ. IV. ೨೬೬-೯೦ ; 1410). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಬೆಳಕು₁** : ೧. ಘೃತವಿದ್ದಂತೆ ಉಸ್ಮತ್ತದ ರಸಕ್ಕೆ ಬಾಜು ಬಿಡುವಂತೆ ರಸವಿದ್ದಂತೆ ಬೆಳಕುವ ಕಾಶವ ಗಳಸುವನಂತೆ ಇಂತೀ ರಸಿಕವನಾರು ಬಲ್ಲರು (ಮೋಹಶೂ. ೫೯-೨೨೦). [ದೇ.॥ ತಮಿ. ವಿಳಜ್ಕು, ವಿಳಕ್ಕು ; ಮಲ. ವೆಳುಕ್ಕ, ವಿಳಕ್ಕು ; ತುಳು. ಬೆಳಗು ; ಕೊಡ. ಬೊಳೀ ; ತೆಲು. ಬೆಳಗು, ಬೆಳಂಗು, ಬೆಳುಕು, ಬೆಳ್ಕು, ವೆಲುಗು, ವೆಲುಂಗು ; ಕೋತ. ವೆಳ್ಕ್]

**ಬೆಳಗು₂**, ಬೆಣಕು, ಬೆಳಕ, ಬೆಳಕು₂ (ನಾ). ೧. ಹೊಳಪು ; ಕಾಂತಿ : "ಪ್ರಕಾಶಃ, ಆಲೋಕಃ, ಉದ್ಯೋತಃ — ಈ ೩ ಬೆಳಗು" (ಹಲಾಯು. ೦೨-೬೬) ; ತೊಟ್ಟ ಮಾಣಿಕಂಗಳ ಬೆಳಗಿಟ್ಟಳಂ ತನಗೊಡಂಬಡೆ (ಕಂಕಶಾ. ೪-೯೦). ೨. ಸೂರ್ಯೋದಯದಿಂದ ಸಾಯಂಕಾಲದ ವರೆಗಿನ ಅವಧಿ ; ಸೂರ್ಯನು ತನ್ನ ಪ್ರಕಾಶವನ್ನು ಬೀರುವ ಕಾಲ ; ದಿವಸ : ಬೆಳಗಿನೊಳಂ ಕಾಣದು ನಿಶಿಯೊಳ್ ಕಾಣ್ಬುದು ಪೆಗ್ಗಣಕ್ಕೆ (ರಘುಶ್ವ. ೦-೦೦೬) ; ಚೋರಂಗೆ ಬೆಳಗು ಗುಣವಪ್ಪುದೆ (ಹೂಶ್ಚಸಂ. ೨೬೦-೯೫). ೩. ಸೂರ್ಯ, ದೀಪ ಮುಂತಾದುವುಗಳ ಪ್ರಕಾಶ : ಅನಿತರ್ಕೆ ಬೆಳಗಿನಂಕುರವಾದುವು (ಶತ್ಕಶಾ. ೬-೨) ; ಸೊಡರು ಬೀದಿಗೆ ಸುಳಿಯಲೆಲ್ಲಿಯ ಬೆಳಗು (ಕುಮಾ.ವ್ಯಾ. ೦೩-೯೬) ; ಹುಲಿಯ ಹುಲ್ಲೆಯ ನೇಹ ಬಿಜಗತ್ತಲೆಯ ಬೆಳಗಿವ ಮೈತ್ರಿ . . . ಇರ್ದುದು ಬನದೊಳಾ ಮುನಿಯ (ಕೊರಶಾ. ೦-೫-೯೩). ೪. (ಅಲಂ) ಅರಿವು ; ಜ್ಞಾನ ; ತಿಳವಳಿಕೆ : ಬೆಳಗಿನೊಳಗೆ ಬೆಳಗಾಗುವ ಚಿನ್ಮಯ (ಉದ್ಭಟ. ೬-೦೦೦) ; ಬೆಳಗ ನುಂಗಿದ ಗುರುವಿನೊಳಗೆ ನುಂಗಿದ ಶಿಷ್ಯ (ಸರ್ವಜ್ಞ. ೦೦೬). 'ಬೆಳಗುವಡೆ' ಪರಾ. **ಬೆಣಕು** : ೧. 'ಬೆಣಕೀಬು' ಪರಾ. **ಬೆಳಕ** : ೫. ಶೋಭೆ ; ಅಂದ : ತಳಗೊಟಿದಿಂ ಬೆಳಗಿಯ್ಯಂಗಿಳವಿಂಡಿಂ ಪೂತ ಪುಜ್ಪವನದಿಂ ವನದಿಂ ತೊಳಪ ಕಲಿದೇವನಿಳೆಯುದ ಬೆಳಕದಿನೀ ಯೋರುವಾಯಿ ಸೊಗಯಿಸುತಿರ್ಕುಂ (ಶಾಶಿ. IX–i. ೩೨೨–೨೦ ; 1195). **ಬೆಳಕು₂** : ೩. ಸಂದ ನಿಶೆಯೊಳಗೂಟವೇವೆನಲಿದಕೆ ಬೆಳಕೇಕೆ ಎಸಲು (ಸಂಕಶ. ೦೭-೦೦೬) ; ಅವರು . . . ತೆರಳಿದರು ಕಪ್ಪೊಗುವ ಕತ್ತಲೆಯೊಳಗೆ ಕೈಗೊಳ್ಳಿಗಳ ಬೆಳಕಿನಲಿ (ಕೊರಶಾ. ೩-೦೦-೩೦) ; ಜ್ಞಾನದೀಪದ ಬೆಳಕಿಲಿ ಓಡಾಡಬೇಕು (ಪುರಂದ. ೦-೦೬೯-೫). ೬. ದೀಪ ; ಹಣತೆ : "ಬೆಳಕಿನೆ ದೀಪಂ" (ರಸ್ಪಕಂ. ೫).

ಬೆಳ್ಳಂಬೆಳಗು, ಬೆಳ್ಳಂಬೆಳಕು (ದ್ವಿರುಕ್ತಿ) : ಮಬ್ಬುಗತ್ತಲೆಯಾಗಿದ್ದರೂ ಕೂಟದ ತುಂಬೆಲ್ಲ ವಿದ್ಯುದ್ದೀಪದ ಬೆಳ್ಳಂಬೆಳಗು ಪಸರಿಸಿತ್ತು (ಮುಂಗಾರು. ೦೦೦) ; ಇಲ್ಲದಕೆ ಅಳತೆ ಬೆಳ್ಳಂಬೆಳಕು ಮುಸ್ಸಕಿತ್ತು ಗುಪ್ತವಿರಿಸಿ (ಅರಳು. ೨೨೬-೦೨). **ಬೆಳಕಿಗೆ ತರು** = ಪ್ರಕಾಶಕ್ಕೆ ತರು ; ಪ್ರಸಿದ್ಧಪಡಿಸು : ನಮ್ಮನು ತಂದೆ ಬೆಳಕಿಗೆ ತಂದವರು ಮುಂದೆ (ಇಂಡಾಶ. ೨೨-೯೬). **ಬೆಳಕು ಚೆಲ್ಲು** = ೧. ಪ್ರಕಾಶವನ್ನು ಬೀರು, — ತುಂಬು : ಆ ದೀಪವು ಕೋಣೆಯ ತುಂಬ ಬೆಳಕು ಚೆಲ್ಲಿದೆ (ರೂಢಿ). ೨. ಸ್ಪಷ್ಟಗೊಳಿಸು ; ಸ್ಪಷ್ಟೀಕರಿಸು : ಇಲ್ಲಿ ಕೊಡುಸಿರುವ ಘಟನಾವಳಿಗಳೂ ದಂತಕಥೆಗಳೂ ಈ ಸಂಗೀತರತ್ನಗಳ ಹಿರಿಮೆ . . . ಇವುಗಳ ಬಗ್ಗೆ ಬೆಳಕು ಚೆಲ್ಲುತ್ತವೆ (ಸಂಗೀತ. VI. ೩೬೦೯). **ಬೆಳಕು ಬೀರು** = ಬೆಳಕು ಚೆಲ್ಲು ೨ : ಈತನ ಕಡೆಯ ಕಾಲದ ವರೆಗಿನ ಶಾಸನಗಳೆಲ್ಲವೂ ಕೇವಲ ದಾನದತ್ತಿಗಳನ್ನು ನಿರೂಪಿಸುತ್ತವೆಯೇ ಹೊರತು ಈತನ ರಾಜಕೀಯಚರಿತ್ರೆಯ ಮೇಲೆ ಬೆಳಕುಬೀರುವುದಿಲ್ಲ (ಹೊಯ್ಸಳ. ೫೬). **ಬೆಳಕು ಹರಿ** = ಬೆಳಗಾಗು ; ಸೂರ್ಯೋದಯವಾಗು : ಬೆಳಕುಹರಿ ದೊಡನೆಯೇ . . . ಅವರೆಲ್ಲರೂ ಹೊರಟುಹೋದರು (ಯೋಧ. ೬೩). **ಬೆಳಗಿನ ಜಾವ** = ಬೆಳಗಿನ ಸಮಯ ; ಪ್ರಾತಃಕಾಲ : ಬೆಳಗಿನ ಜಾವ ಪೂರಾ ಚಳಿ ಆಗ್ತದೆ (ಹುಳಿಹು. ೨೫೫). **ಬೆಳಗು ಮಾಡು** = ಶುಭ್ರಗೊಳಿಸು ; ಸ್ವಚ್ಛ ಮಾಡು : ದರ್ಪಣ ನಸುಮಾಸೆ ಬೆಳಗಿ ಬೆಳಗುವಾಡ ನೇರ್ಪುವಡಿಸಿ ನೋಡುವಂತೆ ಒಪ್ಪುವ ಸುಕವಿಗಳಿದಚ್ಚೊಳಗೊಂದರತಪ್ಪಿರೆ ತಿದ್ದಿ ಮೆಚ್ಚುವರು (ವರ್ಧಮಾ. ೦-೯೦). **ಬೆಳ್ಳಂಬೆಳಗೂ** = ರಾತ್ರಿಯೆಲ್ಲಾ ;

ಬೆಳಗಾಗುವ ವರೆಗೂ : ತಲೆನೋವಿನಿಂದ ಬೆಳ್ಳಂಬೆಳಗೂ ನಿದ್ರೆಯೇ ಬರಲಿಲ್ಲ (ರೂಂ). [< ಬೆಳಗು$_1$. / **ತಮಿ.** ಮಲ. ವಿಳಕ್ಕು; **ಕೊಡ.** ಬೊಳ್ಕೀ ; **ತೆಲು.** ಬೆಳುಕು, ಬೆಳ್ಕು, ವೆಲುಗು ; **ಕೋತ.** ವೆಳ್ಕ್]

**ಬೆಳಗುಂಬೊಳ್ತು**, ಬೆಳಗುಪೊಳ್ತು (ನಾ). ಬೆಳಗಿನ ಕಾಲ ; ಪ್ರಾತಃ ಕಾಲ : ಇಂದು ಬೆಳಗುಂಬೊಳ್ತು . . . ನನ್ನಗ್ರಜಂ ನಿನ್ನನ್ನರುಹಿದನ್ ನನಗೆ (ಪಶ್ರಾಂಗ. ೨೪-೬೪೩). **ಬೆಳಗುಪೊಳ್ತು :** ಮನೋಹರಂ ಮೋಹನ ಮಯೂರಮಿಥುನಂ ಬೆಳಗುಪೊಳ್ತಿನೊಳೆ . . . ಪಾರಿದಪವೊಲ್ಮೆ ಪೊಯ್ಮಾರದಿಂ ಗಿರಿನೆತ್ತಿಗೆ (ಪಶ್ರಾಂಗ. ೩೩-೧೪೩೯). [ಬೆಳಗು$_2$ + ಪೊಳ್ತು (< ಪೊಟ್ತು)]

**ಬೆಳಗುಜಾವ** (ನಾ). = ಬೆಳಗುಂಬೊಳ್ತು : ಬೆಳಗುಜಾವದ ಬಲುನಿದ್ರೆಗೆ ಮನವೊತ್ತೆಳೆದು ಕೊಲುವರನರಿಯದೆ (ಕುಮಾ. ೧೩-೯) ; ಗುರುಸಮರ್ಚನೆ ಗರಲ್ದರಲೆಂದು ಕುಸುಮಕರಂಡಕವಂ ಕೊಂಡು ಬೆಳಗುಜಾವದೊಳೆಳ್ದು ಜವದಿಂ ನಡೆತರ್ಪರ್ಗಳ್ (ವೃಕಾ. ೨೬-೩೩ ವ) ; ಬೆಳಗುಜಾವ ಎದ್ದಾಗ . . . ಮನಕೊಂದು ಪ್ರಸನ್ನತೆ ಬಂದಿತ್ತು, ಅವಳಿಗೆ (ಶಿಂಶ. ೩೨).

[ಬೆಳಗು$_2$ + ಜಾವ$_1$]

**ಬೆಳಗುಪೊಳ್ತು** 'ಬೆಳಗುಂಬೊಳ್ತು' ನೋ.

**ಬೆಳಗುಪಡೆ** (ಕ್ರಿ). ಜ್ಞಾನವನ್ನು ಪಡೆ ; ಅರಿವನ್ನು ಹೊಂದು : ಬೆಳಗುಪಡೆಯಲೊಡಂ ಕಾಣ್ಬ ನಿರ್ಮಲದೃಷ್ಟಿಯಂತೆ (ಚ್ರಪಶಾ. ೧೦೩-೬).

[ಬೆಳಗು$_2$ + ಪಡೆ$_1$]

**ಬೆಳಗೆಯರ್** 'ಬೆಳಗೆಯರ್' ನೋ.

**ಬೆಳಗ್ಗೆ** 'ಬೆಳಗೆಯರ್' ನೋ.

**ಬೆಳಗ್ಗೆ**, ಬೆಳಿಗ್ಗೆ, ಬೆಳಿಗ್ಯೆ (ಅ). ಮುಂಜಾವಿನಲ್ಲಿ ; ಪ್ರಾತಃಕಾಲದಲ್ಲಿ : ಬೆಳಗ್ಗೆ ಹೊಲೆಯರೆಲ್ಲಾ ಹೊರಟು . . . ಮನೆಮನೆಗೆ ಹೋಗಿ ರಾಗಿ ಬತ್ತ ವಸೂಲು ಮಾಡುತ್ತಾರೆ (ಜನ್ಪರು. ೬೬). **ಬೆಳಿಗ್ಗೆ :** ಒಂದು ದಿನ ಬೆಳಿಗ್ಗೆ, ಒಂದು ದಿನ ಸಂಜೆಗೆ . . . ಹೀಗೆ ಅನಿಯಮಿತವಾಗಿ ಊಟ ಮಾಡಬಾರದು (ಮುಂಬಯ. ೪-೩೩). **ಬೆಳಿಗ್ಯೆ :** ಆ ಬೆಳಿಗ್ಯೆ ಅರುಣೋದಯದ ಸಮಯದಲ್ಲಿ (ರಾಕೇಂದ್ರ. ೪). [<ಬೆಳಗು$_1$. ಈ ಶಬ್ದವು 'ಬೆಳಗಿಗೆ' ಎಂಬ ಚತುರ್ಥಿ ವಿಭಕ್ತ್ಯಂತ ರೂಪದಿಂದ ಸಂಕ್ಷಿಪ್ತಗೊಂಡು ಅವ್ಯಯವಾಗಿದೆ]

**ಬೆಳಚವಾಡಿ** (ನಾ). ಒಂದು ಊರಿನ ಹೆಸರು : ಅರಸ ಸಿರೆ ನಾಡೊಳೆ ಬೆಳಚವಾಡಿಯ ಮಹಾಜನಕ್ಕೆ ನೆಲ್ಲಕ್ಕಿಯ ಬಿಟ್ಟನ್ (ಎಕ. III (R), ಗುಂಡ್ಲು. ೪೩-೬; 10ನೆಯ ಶತ). [ಬೆಳಚ$_0$ + <ಪಾಡಿ$_2$]

**ಬೆಳಡಕಿಲು** (ನಾ). ಒಂದು ಬಗೆಯ ಸಸ್ಯ : "ಕುಮಾರಿ_ಲೋಯಿಸರ. . . ಬೆಳಡಕಿಲು". (ಒಕಾ. ೩೩). [ಬೆಳ್$_1$ (< ಬಿಳಿದು) + ಅಡಿಕಿಲು$_2$]

**ಬೆಳತಿಗೆ** 'ಬೆಳಂತಿಗೆ' ನೋ.

**ಬೆಳತಿಗೆಗಣ್** 'ಬೆಳಂತಿಗೆಗಣ್' ನೋ.

**ಬೆಳತಿಗೆವಡೆ** (ಕ್ರಿ). ಹೊಳಪನ್ನು ಪಡೆ ; ಕಾಂತಿಯನ್ನು ಹೊಂದು : ಎಳೆವಸಿಜೆಸಿಕದಿ ಪಾಡಿವದೆಳೆವೆಜೆಯಂ ತಾಳ್ದ ಗಗನಲಕ್ಷ್ಮಿಯ ತಿಲದಿಂ ತಿಳಿಕಾಪಶಿ ಸೊಗಸಿರ್ದಳು ಬೆಳತಿಗೆವಡೆದಿರ್ದ ಮೆಯ್ಯ ಚೆಲುವಿಂದಾಗಳ್ (ಕುಶಾಸ್ತ್ರ. ೩-೩). [ಬೆಳತಿಗೆ (<ಬೆಳಂತಿಗೆ) + ಪಡೆ$_1$]

**ಬೆಳತಿಗೆವೆಳಗು** (ನಾ). ಉಜ್ವಲವಾದ ಬೆಳಕು ; ಬೆಳ್ಳನೆಯ ಬೆಳಗು : ಇದೆಲ್ಲಿಯುತ್ಕಟವ ಕಂಪಿದೆಲ್ಲಿಯ ಬೆಳತಿಗೆವೆಳಗಿದೆಲ್ಲಿಯಚ್ಚರಿಯಾನಂದಂ ಬಂದು ನಿಂದಪುದು (ಸಂಬರ. ೦೨-೦೦೩) ; ತಿಂಗಳ ಬೆಳತಿಗೆವೆಳಗಿನೊಳಂ ಗಡಲೆಸೆವಂತೆ (ಧರ್ಮನಾ. ೧-೪೯). [ಬೆಳತಿಗೆ (<ಬೆಳಂತಿಗೆ) + ಬೆಳಗು$_2$]

**ಬೆಳತೂರ್** (ನಾ). ಒಂದು ಊರಿನ ಹೆಸರು : ಇದರ್ಕೆ ಸಾಕ್ಷಿ ಬೆಳತೂರಾ ಮಹಾಜನವುಂ (ಎಕ. X, ಕೋಲಾರ. ೦೦-೦೦ ; 753) ; ಕಟಲೆನಾಡ ಬೆಳತೂರ ಪಡುವಣದೆಸೆಯ ಪೊಜಡಿಯೊಳ್ (ಎಕ. III, ಮಂಡ್ಯ. ೪೦-೧೦; 950).

[ಬೆಳತ$_0$ + ಊರ್]

**ಬೆಳದಲೆ** (ನಾ). ಒಂದು ಬಗೆಯ ಸಸ್ಯ : ಜ್ವರಾತಿಸಾರಕ್ಕೆ ಬೆಳವಲೆಯನಕ್ಕೆ ಮೇಣರಿದಳಮಂ ನೀರಕ್ಕಿಗಟ್ಟಿ ನಿಂದರೆ ಕಳಿದೊಳ್ಕಳೆಗಂ ಉಚ್ಚುವ ಜ್ವರಮಂ ಘಳಿಲನೆ ತಾನೆರೆಯಲಾಕ್ಷಣ ಉಪಶಮನಂ (ಗೋವೈದ್ಯ ೦೯೯-೩).[?]

**ಬೆಳದಿಂಗಳು** 'ಬೆಳ್ದಿಂಗಳ್' ನೋ.

**ಬೆಳಪ** 'ಬೆಳರ್$_1$' ಪರಾ.

**ಬೆಳಪು** 'ಬೆಳ್ಪು$_1$' ನೋ.

**ಬೆಳಬೆಂಜನ** (ನಾ). (?) : ಸುದತಿಯನೇಗೆಯ್ದುಂ ಬಿಡಲಾಜದೆ ನೀಂ ಬೆಳಬೆಂಜನನಾಗಿ ಭೋಗಿಸುವೆನೆಂದು ಕೊಕ್ಕಬಗುದಿಪ್ಪೆ (ಧರ್ಮಾಮೃ. ೬-೨೨೯) ; ವಿಜ್ಞಾನಹೀನರುಂ ದುರ್ಗತಿಭಾಜನರುಂ ಅಘುಸಮೇತರುಮವಿಚಾರಿಗಳು ಮಪ್ಪ ದುರ್ಮತಿಗಳಂ ಕಂಡು ಬೆಳಬೆಂಜನನಾಗಿ (ಧರ್ಮಾಮೃ. ೦೦-೩೩). [?]

**ಬೆಳರ್$_1$** (ಕ್ರಿ). ಬೆಳಪ (ವರ್ತಕೃ). ೧. (ರಕ್ತಹೀನತೆಯಿಂದ) ಬೆಳ್ಳಗಾಗು : ಬಿಳಿಚಿಕೊಳ್ಳು : "ಬೆಳರ್_ಧಾವಲ್ಯೇ (ಬಿಳುಪಾಗು, ಕಾಂತಿಯಾಗು)" (ಶಮ್ರಾ) ; ಸುಕರ್ಮಚಾಮರಾಳಿಗುರಳ್ ನಸುಸುಕ್ಕಿದ ಕುಚಚೂಚುಕಂ ಬೆಳರ್ತಧರಂ (ಆದಿಪು. ೦೦-೦೪೩) ; ಶಶಿಕಾಂತಮುಕುರದಂತಿರೆ ಶಶಿಮುಖಿಯ ಕದಂಪುಗಳ್ ಬೆಳರ್ತುವು (ಶಂರಾಪಾ. ೪-೩); ನೀರುಣದೆ ಮುಗಿಲ್ಗಳ್ ಬೆಳರ್ತು ಬೆಂಡಾದುವು (ರಾಮಾಶ್ವ. ೬೩-೦೨). ೨. ಬೆಳಕು ಬೀರು ; ಪ್ರಕಾಶವನ್ನುಂಟುಮಾಡು : ದೀವಳಿಗೆಯ ಕಟ್ಟಲೆಯೊಳ್ ದೀವಿಗೆಗಳ್ ಬೆಳಪ ತೆಱದೆ . . . ಬೆಳಗುತಿರ್ಪರ್ಜೈನರ್ (ಸಮಶ. ೬-೯೯) ; ಸುಲಲಿತಮಾಗಿ ನೀಳ್ದ ತುಱುಗಿರ್ದಮೆಗಳ್ ತಮಮಂ ಬೆಳರ್ಪ ಕಣ್ಮಲರ್ಗಣೆಯಂದಮಂ ನೆಱೆಯೆ ಪೋಲ್ತಿರೆ (ಧರ್ಮಾಮೃ. ೬-೧೪೬). ೩. ಬೆಳ್ಳಗಾಗಿಸು ; ಬಿಳುಪೇರಿಸು : ಮಲ್ಲಿಗೆವಳ್ಳಿಗಳ್ ಲಸನ್ಮಂಜರಿಯಂ ಬೆಳರ್ತೆಸೆದು ಬಂದುದು ಚೈತ್ರಂ (ಉದ್ಭಟ. ೯-೩). ೪. ಹೊಳೆ; ಮಿಂಚು : ಅಲರ್ದ ಸಂಪಗೆಯರಲಂತೆ ಬೆಳರ್ತ ಬಣ್ಣಂ ಗುಣಾರ್ಣವಂಗೆ ಮಾಡಿದ ಬಣ್ಣದಂತೆ ಸೊಗಯಿಸಿ ಬಳೆದು (ಪಂಪಭಾ. ೧-೦೪೩ ವ).

[ದೇ.॥ ತಮಿ. ವೆಳಿಱು ; ಮಲ. ವಿಳರ್ ; ತುಳು. ಬೊಳಿರು, ಬೊಳೆರು ; ತೆಲು. ವೆಲರು]

**ಬೆಳರ್$_2$** (ನಾ). ಬಿಳಿಯ ಬಣ್ಣ ; ಬಿಳುಪು : ಬೆಳರಂ ಪೊಸಕಿಸುವಂ ಕರ್ಪಂ ಪೊನ್ಪೊಳಪಂ ಪಳುಕಂ ಪಾಳಿಪ ನಿಮ್ಮಳತನುಮಿನುಗಿಂದುಜ ದೆಳಸುವ ಮೊಗಪ್ಪೈದುಂ (ಅಜಿತದೇ. ೬-೩). 'ಬೆಳರ್ವಣ್ಣ' ಪರಾ. ೨. ಹೊಳಪು ; ಕಾಂತಿ ; ಪ್ರಕಾಶ : ಕಿವಿಮುಗಿಲ ಸೊಂಪಡರ್ದ ಸೋಮರ್ಡಿ . . . ಕೂರ್ಮಚರಣಾಗ್ರಿಮ ಬೆಳಮರ್ಸುಂಕಿದ ಸೆಳ್ಳು ಗುಮರ್ನೋಹರಮಾಗೆ ಪರವೆಯೆಸೆದಳು (ಕಾಂಧ್ಯ. ೬-೦೦); ಬೆಳರ ಬೀಱುತಿಹ ದುಂಡುಮುತ್ತಿನ ಚೌಕುಳಿ (ಶೃಶುಪು. ೬-೭೯).

**ಬೆಳರ್ಮಾಡು** = ಬಿಳಿಚಿಕೊಳ್ಳುವಂತೆ ಮಾಡು ; ನಿಸ್ತೇಜಗೊಳಿಸು : ವೈರಿವಾರವನಿತಾವದನಾಂಬುರುಹಂಗಳಂ ಬೆಳರ್ಮಾಡದೆ . . . ಸಂಧಿ ಮಾಡುವನೆ ಪಾಂಡವರೊಳ್ ಫಣಿರಾಜಕೇತನಂ (ಗದಾಯು. ೩-೪೯).

[< ಬೆಳರ್$_1$./ತಮಿ. ವೆಳಿಱು ; ತುಳು. ಬೊಳ್ಪರೆ; ತೆಲು. ವೆಲರು]

**ಬೆಳರಿಸು** (ಕ್ರಿ). ಬಿಳುಪಾಗಿಸು ; ಬೆಳ್ಳಗೆ ಮಾಡು : ಸಿರಿವನೆಯಂ ಸೊದೆಯ ತೊಡೆಪದಿಂ ಬೆಳರಿಸಿ ಚಪ್ಪರಮಂ ಬೆಳ್ವಟ್ಟೆಗಳಿಂ ಪರು ಶವಿಸಿದರಚ್ಚಮುತ್ತಿನೊಳ್ಗುಚ್ಚುಗಳಿಂ (ಪಕಂ. ೪-೨೬).

[ಬೆಳರ್$_2$ + — ಇಸು$_3$]

**ಬೆಳರ್ಗಣ್** (ನಾ). ಬಿಳುಪಾದ ಕಣ್ಣು ; ಶುಭ್ರವಾದ ಕಣ್ಣು : ಬೆಳರ್ಗಣ್ಣಿಂಪಡರ್ದಶ್ರುಗಳೆಳತರ್ಪವೊಲೆಸಗೆ ಕಂಡು (ವೃಕಾ. ೦೦-೦೦೩).

[ಬೆಳರ್$_2$ + ಕಣ್]

**ಬೆಳರ್ಗೆಂಪು** (ನಾ). ಕಾಂತಿಯುಕ್ತವಾದ ಕೆಂಬಣ್ಣ ; ಕಡುಗೆಂಪು : ಕಣ್ಗಳೊಳ್ ಕಲಂಕಿದ ಬೆಳರ್ಗೆಂಪು ಕಣ್ಗವರೆ (ಆದಿಪು. ೦೨-೨೬); ವಕ್ತ್ರ

ಬಿಂಬಾಧರಂ ಬೆಳರ್ಗೆಂಪಂ ಸ್ಮಿತಕಾಂತಿಯಿಂ ತಳೆದುದಿಲ್ಲ (ಮಲ್ಲಿಪು. ೪-೪); ಕಳಂತಳದ ಕಾಂತಿ . . . ಬೆಳರ್ಗೆಂಪಿನುಗುರ್ವೆರಲ ಕಾಂತಿಗಳ್ ತಿಂತಿಣಿಸಿ (ಕನ್ನಗಾ. ೩-೩). [ಬೆಳರ್$_2$ + ಕೆಂಪು$_1$]

**ಬೆಳರ್ಚು** (ಕ್ರಿ). (ಆಲಂ) ಶೋಭೆಗೊಳಿಸು : ಈ ಜಗತಿಯನಾಳ್ವ ರಾಜನ್ಯಪನೊಳ್ಪಸದಿಂ ಜಗಮಂ ಬೆಳರ್ಚಿದಂ (ಕಳಶ. ೨-೬೦). [ಬೆಳರ್$_2$ + -ಚು$_1$]

**ಬೆಳರ್ದುಟಿ** (ನಾ). ಬೆಳ್ಳಗಾದ ತುಟಿ ; ಬಿಳಿಚಿಕೊಂಡ ತುಟಿ : ಬೆಳ [ಕಾಂ. ಳು]ರ್ದುಟಿ . . . ಅಳವಳಿದಂಗವೆಸೆಯೆ ಸುರತಾಂತದ ನಳಿನಾಕ್ಷಿಯೊರ್ವಳೆಸೆದಳು (ಸುರಾಸಾಂ. ೨೮-೯೦). [ಬೆಳರ್$_2$ + ತುಟಿ]

**ಬೆಳರ್ಪು** (ನಾ). ಬಿಳಿಯ ಬಣ್ಣ ; ಬಿಳುಪು : ಪುಳಿಂದರಾಜಸುಂದರಿಯರ ನೆಲೆಮೊಲೆಯ ಸಿರಿಕಂಡದಣ್ಪಿನಿಂ ಪೊರೆದು ಬೆಳರ್ಪನಾಂತ ತೆರೆಗಳೊಳಂ . . . ರಂಜಿಸುವುದು (ಕಾದಂಪೂ. ೦೦೬); ಕುಸುಮಶರನ ಪೊಸಜಸದ ಬೆಳರ್ಪು ಮುಸುಂಕಿದುದು (ಜಗುಕಾ. ೪-೦೬). [ಬೆಳರ್$_2$ + -ಪು$_3$]

**ಬೆಳರ್ವೇಱು** (ಕ್ರಿ). ಬಿಳಿಚಿಕೊಳ್ಳು ; ಮ್ಲಾನವಾಗು : ಬೆಳರ್ವೇಱಿದಾ ಸ್ತೋಜ್ಜ್ವಲಪದ್ಮಂ . . . ತಾಪದಿಂದಿರ್ಪಟಿದಾ ಬಿಂಬಾಧರಂ (ಕುಸುಮಾ. ೦೩-೬೬). [ಬೆಳರ್ಪು + ಏಱು$_1$ (<ಏಱ್$_1$)]

**ಬೆಳರ್ಮಣ್** (ನಾ). ಬಿಳಿಯ ಮಣ್ಣು : ಬೆಳರ್ಮಣ್ಣ ಪೊಸಕಡಾಯದೊಳ್ ತುಂಬಿದ ನೀಲಿಯ ತನಿರಸಮೆಂಬಂತಿರೆ ಕಳಿಂದಜೆಯ ಕರ್ಮಡುವಿನೊಂದು ಪೂಳಿಪಿಂ . . . ಕೊಳಂ . . . ಸೊಗಯಿಸಿದತ್ತು (ರಾಜಶೇಖ. ೩೨-೫೦). [ಬೆಳರ್$_2$ + ಮಣ್]

**ಬೆಳರ್ವಕ್ಕಿ** (ನಾ). ಬಿಳಿಯ ಹಕ್ಕಿ ; ಹಂಸ : ಬಾಣಾನಿರುವ್ಧರು ಸಿರಂ ಬಾಗಿ ವಂದಿಸಲು ಪಿಡಿದೆತ್ತಿ ಪಸುತ್ತ ಬೆಳರ್ವಕ್ಕಿಯುಮುಯುಯಡರ್ದು (ಹರಿವೋ. ೨೯-೬೬). [ಬೆಳರ್$_2$ + ಪಕ್ಕಿ]

**ಬೆಳರ್ವಡು** (ಕ್ರಿ). ಬೆಳ್ಳಗಾಗು ; ಬಿಳುಪೇರು : ಅಡರೆ ಕವಿಲ್ಸುದೊಂದೆಡೆ ಮೃಗೋದ್ಭವದಿಂ ಬೆಳರ್ವಟ್ಟು ನಿಂದುದೊಂದೆಡೆ ಮಲಯೋದ್ಭವಪ್ರಸರದಿಂ ಕಡಿಂ . . . ಸರಸೀವಿಭಾಗದೊಳ್ (ಶಾಂತಿಪು. ೬-೨೯). [ಬೆಳರ್$_2$ + ಪಡು$_1$]

**ಬೆಳರ್ವಣ್ಣ** (ನಾ). ೧. ಬಿಳಿಯ ಬಣ್ಣ ; ಶ್ವೇತವರ್ಣ : "ಬೆಳರ್ವಣ್ಣಮೊಂದು ಧವಳಂ" (ಕಕಾ. ೦೦-೨೨೦); ಮೂವಣ್ಣಂ ಬರಿಸಿದುವರಲ್ದ ಸುತ ಹೊನ್ನೆಯ ಪೊಂಬಣ್ಣದ ಬೆಳರ್ವಣ್ಣದ ಕೆಂಬಣ್ಣದ ಕೇಸರವಮುಮೆಸಟ್ಟಳುಂ ಕರ್ಣಿಕೆಯುಂ (ಮಲ್ಲಿಪು. ೫-೦೬); ಇಳದತ್ತಂಸಂ ಕಪೋಲಂ ಕಡುಬಡವೆಸಿಕುಂ . . . ಬೆಳರ್ವಣ್ಣಂ ಮೆಯ್ಗೆ ಕೀಳಿತ್ತು (ಜಾಕುಂತ. ೩೫-೬೦). ೨. ಶಿವ ; ರುದ್ರ : "ಬೆಳರ್ವಣ್ಣಂ ನೆತ್ತಿಗಣ್ಣ . . . ಸ್ಮರಹರಂಗೆ ನಾಮ" (ಕಶಿಂ. ೦೮). [ಬೆಳರ್$_2$ + ಬಣ್ಣ]

**ಬೆಳರ್ವಾಯ್** (ನಾ). ೧. = ಬೆಳರ್ದುಟಿ : ನಡು ಪುರ್ವು ಬಾಸಿ ಕಣ್ಗೊಗೆಸಗೆಯುನುಂಟುಮಾಡ್ಟ ಜಘನಂ ಬೆಳರ್ವಾಯ್ ಮೊಲೆಗಳ್ ಕದಂಪು ಗುರ್ವಸಿಜನೆ ನೋಡೆ(ಕುಕಥಾ. ೪-೬೨); ಪೀರೆ ಪೊದಟ್ಟು ಪೊಂಗಿ ಬೀಗಿದ ಬೆಳರ್ವಾಯ್ . . . ತನ್ನೊಳೊಪ್ಪೆ ಸುರತಾಂತ್ಯದೊಳ್ (ರಸರ. ೦-೩೩). ೨. (ರದನಕಾಂತಿಯಿಂದ) ಚೆಲುವಾದ ಬಾಯಿ : ನಾಸಿಕದ ನೀಱಿಗೆ ಬೆಳರ್ವಾಯ ಭಾಗ್ಯನಿಧಿಗೆ (೧೦ಳ. ೩-೯೦ ಐ). [ಬೆಳರ್$_2$ + ಬಾಯ್]

**ಬೆಳಲ್**, ಬೆಳಲ, ಬೆಳಲು, ಬೆಳವಲ$_1$, ಬೇಲ. ಬೇಳ$_1$, ಬೇಳಲು (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಕಪಿತ್ಥ : ಆಮ್ರಂ ಬೆಳಲಿಂಗುಳಂ ಪನಸು ನಿಂಬಂ (ಕಾವ್ಯಸಾ. ೦೦೯೦ ಕೂಪ್ರಳ); ಗುಡದಿಂ ಬೆಳ್ಳಣ್ಣೆಯನರೆಗುದಿಸುಸಿ ಬೆಳೆದಿರ್ದ ಬೆಳಲ ತಿರುಳೊಳ್ ಬಟಿಕಂತದಜಿ ಸಮನಾಪ್ಯಮಂ ಕೂಡಿದೊಡದು ಲೇಸಪ್ಪ ತುಪ್ಪವಾಪ್ಪುದು ಪುಸಿಯೇ (ಲೋಕೋಪ. ೬-೪೨); ಬೆಳಲನೆಟಲೊಳ್ಪಱಿದುಂಪೋಗಲ್ಕೆ ಸಲ್ಲ (ಸವುಕ. ೦೦-೬೮) ; ಅರನೇಱಿಲು ಬಿಕ್ಕ ಬೆಳಲ್ ತಳಿರ್ತ ನಾನಾ ತರು (ದಶಕು. ೦೨-೬೪). **ಬೆಳಲ** : ಬೆಳಲ ಗರುಗು ಹಾರಿವಾಳ . . . ಪತ್ರೆಗಳ ನರ್ಪಿಸು ಲಿಂಗಕೆ (ಗುರುಚಾ. ೬-೦೩). **ಬೆಳಲು** : "ಕಪಿತ್ಥಮೆನೆ ಬೆಳಲುಂ" (ಪುಂಗಾಂ. ೩೫-೦೩); ಕದಸಿಗೆಯ ಸೊಕ್ಕನಟಿಸಿಗುಂ ಪೊಡವಿಯ ಬೆಳಲಿಂಗೆ ತೊಳಸಿ ಗುಗ್ಗುಳು ಮರಿ(ಚ)ಗಳ್ (ಐಮಟ. ೨-೯೬) ; ಕರಿಗೊಂಡ ಬೆಳಲ ಹಣ್ಣಂತೆ ಗುರುಬೋಧೆ ನೆರೆಗೊಳ್ಳಬೇಕು (ಸರ್ವಜ್ಞ. ೬೬). **ಬೆಳವಲ$_1$**: ಬೆಳವಲವು ಖರ್ಜೂರ ದಾಡಿಮ ನಿಂಬೆ (ಸವಸೋ. ೨೪-೫೦). **ಬೇಲ**: ಆಲಂ ಚಿಂಚ ಬೇಲಂ . . . ಬೃಹತ್ತ್ವವೃಕ್ಷಂ ಕಱಿಕೆ ತಱಿಯಿಂದೊಪ್ಪುತಿರ್ದತ್ತರಣ್ಯಂ (೧೦ಳ. ೦-೬೨); ಬೇಲ ಸೆಳ್ಳು . . . ಪಾದರಿಯಾದಿಯಾದ ಪೆರ್ಮರಗಳ ಕಾಡೊಳ್ಳಿತರುತರ್ಪಿರ್ಪರು (ಪುಣ್ಯಾಸ್ರ. ೩-೬೩); ಪರಿಪಕ್ವದ ಪಣ್ಣಳನಾಂತು ತುಂಗದ ಬೇಲಗಳಿಪುವು (ಕಂಪಾ. ೫-೮೮). **ಬೇಳ$_1$** : "ಗಂಧಫಲಾ—ಬೇಳ, ಬೆಲ್ಲವತ್ತ, ಸಂಪಗೆ" (ಓಶಂ. ೯೬); ಕವ್ಮಿತರಂತೆ ಬೇಳಂ ಭೂಮಿ ಪ್ರರ್ವದಂತೆ ಸೀಗೆ . . . ಮತ್ತಮೆನಿತಾನುಂ ತೆಱದ ಮರದುಱುಗಲ್ (ಬಿಂಹಂ. ೨-೩೮ ಐ). **ಬೇಳಲು**: "ಕಪಿತ್ಥ—ಬೇಳಲು, ಸಿವನ್ನಿ" (ಓಕಧಿ. ೨೦). [ದೇ.॥ ತಮಿ. ವಿಳವು, ವಿಳಾ, ವೆಳ್ಳಿಲ್; ಮಲ. ವಿಳಾ; ತೆಲು. ವೆಲಗ./ಸಂ. ಬಿಲ್ವ]

**ಬೆಳಲ** 'ಬೆಳಲ್' ನೋ.

**ಬೆಳಲು** 'ಬೆಳಲ್' ನೋ.

**ಬೆಳವ$_1$** 'ಬೆಳುವ$_1$' ನೋ.

**ಬೆಳವ$_2$** 'ಬೆಳುವ$_2$' ನೋ.

**ಬೆಳವಡಿಚ** 'ವೇಳೆವಡಿಚ' ನೋ.

**ಬೆಳವಣಿಗೆ**, ಬೆಳವಳಿಗೆ, ಬೆಳೆವಣಿಗೆ, ಬೆಳೆವಳಿಗೆ (ನಾ). ೧. (ಮನುಷ್ಯ, ಪ್ರಾಣಿ ಮುಂತಾದುವುಗಳ) ಅಂಗಾಂಗಗಳು ಬಲಿತು ಬೆಳೆಯುವಿಕೆ : ಗಂಡಕಕ್ಕೆ ಸರ್ತಿಗೆ ಒಂದೇ ಮರಿ ಹುಟ್ಟುವುದು . . . ಅದರ ಬೆಳವಣಿಗೆ ಪೂರ್ಣವಾಗಲಿಕ್ಕೆ ಐದುವರ್ಷ ಹತ್ತುವುದು (ಪ್ರಾಂಂಜ. ೪-೯೮). ೨. ಏಳಿಗೆ; ಅಭಿವೃದ್ಧಿ : ಭಾಗವ್ವ ಮಗನ ಬೆಳವಣಿಗೆಯಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸಿದ್ದಳು (ರಂಗರಹೋ.೦೬). ೩. ಹೆಚ್ಚಳ ; ವೃದ್ಧಿ : ಇಂತಹ ಕೊಳಚೆ ನೀರು ಸೊಳ್ಳೆಗಳ ಬೆಳವಣಿಗೆಗೆ ಎಡೆಕೊಡುವುದು (ಆರುಶಾ. ೪೦). **ಬೆಳವಳಿಗೆ** : ೧. ನಲವಿಂದ ತಮ್ಮ ತಮ್ಮ ಮೊಲೆಗಳ ಉಂಡಲ್ಲದೆ ಬೆಳವಳಿಗೆಯಿಲ್ಲ (ಮಹಾಗುಂ.೪. ೨೫೬-೯೩); ಹರಿಯಂಘ್ರಿಯುಗ್ರತರ ಬೆಳವಳಿಗೆಗಂ ಸಪ್ತಗಿರಿ ಚೂರ್ಣವಾಗೆ (ಐಕೋಪು ೦೨-೩೬). **ಬೆಳೆವಣಿಗೆ** : ೨. ಅಭಿವೃದ್ಧಿ, ವಿಕಾಸ, ಬೆಳವಣಿಗೆ (Development ಶಶ್ರಿ. ೩೦). **ಬೆಳೆವಳಿಗೆ** : ೪. ವಿಕಾಸ : ಈ ದರ್ಶನಗಳ ಬೆಳೆವಳಿಗೆಯಲ್ಲಿ ಅನಂತರ ಉದಿಸಿದ ಪರಿಷ್ಕಾರಯುಗವೇ ಪ್ರಸ್ತುತ ಲೇಖನದ ವಿಷಯ (ತತ್ತ್ವಪ್ರಾ.೨೪೨); ಆರಂಭಕಾಲದಿಂದಲೂ ಸಂಸ್ಕೃತನಾಟಕವು ಮಂಗಳಾಂತದ ನಿಯಮಕ್ಕೆ ಸೆರೆಸಿಕ್ಕಿದ್ದರಿಂದ ಈ ಬಗೆಯ ಬೆಳೆವಳಿಗೆಯನ್ನು ಕಳೆದುಕೊಂಡಿರಬಹುದೇ? (ಕಾವ್ಯಸ.೪). [ಬೆಳೆ$_1$ + — ವಣಿಗೆ]

**ಬೆಳವಲ$_1$** 'ಬೆಳಲ್' ನೋ.

**ಬೆಳವಲ$_2$** 'ಬೆಳ್ವೊಲ' ನೋ.

**ಬೆಳವಳಿಗೆ** 'ಬೆಳವಣಿಗೆ' ನೋ.

**ಬೆಳವಾರ** (ನಾ). ಜಾತಿಗೆಟ್ಟವನು : ಪಟಿವನ್ನಾಯುವ ನೋಡದನ್ನರೊಳೆ ಪೂಜಿಪ್ಪೆಲ್ಲರಂ ಬಾಧಿಪಾ ತಳವಾಱಂ ಬೆಳವಾರನ್ನೆ (ಸೋಮೇಶ.೬೬).

[ದೇ.॥ ತಮಿ. ವೆಳಿಯಾರ್=ಅಪರಿಚಿತರು; ತೆಲು. ಬೆಳರಿ=ಅವಿವೇಕಿ]

**ಬೆಳವಿಗೆ** (ನಾ). ಏಳಿಗೆ; ಅಭಿವೃದ್ಧಿ : ಬಸವಣ್ಣಾ ನೀವು ಮರ್ತ್ಯಕ್ಕೆ ಬಂದು ನಿಂದರೆ ಭಕ್ತಿಯ ಬೆಳವಿಗೆ ದೆಸದೆಸೆಗಲ್ಲ ಪಸರಿಸಿತಯ್ಯಾ (ಚಕಸಂ. ೩೬೨-೨೩); ತರುಣಸಿತಕರನ ಬೆಳವಿಗೆ ಪಿರಿದುಂ ಕುಂದಲ್ಕಿವಿತ್ತಮೆಂದೇಳಿಪುದಾ

ಕುರುಪ್ಯಪಕುಮಾರಕ ನಿರಂತರವರ್ಧನದೆಸಕವುಪ್ಪ ಬೆಳವಿಗೆ ನಿಸದಂ (ಶಾಂತೀಶ್ವ. ೧೫-೨); ಸಾಲದೆ ಭರತಕುಲದಲಿ ನಿನ್ನ ಬೆಳವಿಗೆ (ಕುಮ್ಯಾರಭ್ರೀ. ೫-೧೮). [ ಬೆಳವು + —ಇಗೆ$_4$ ]

**ಬೆಳವಿನಮರ** (ನಾ). ಒಂದು ಬಗೆಯ ಮರ : ಬಿಲ್ವಪತ್ರೆ, ಬಿಲ್ವ, ಬೆಳವಿನಮರ (ಪ್ರಾಣಿ. ೬-೪೭). [ ? + ಮರ$_1$ ]

**ಬೆಳವು** (ನಾ). = **ಬೆಳವಿಗೆ :** ಭಕ್ತಿಯ ಬೆಳವಿಂಗೆ ಬಸವಣ್ಣನೇ ಕಾರಣಿಕನಾದ ಅಱುವಿನ ಬೆಳವಿಂಗೆ ಚೆನ್ನಬಸವಣ್ಣನೇ ಕಾರಣಿಕನಾದ (ಮಹಿಪು. ೭೬-೪೩); ಮೋಕ್ಷದ ಬೆಳವನಿದಱೊಳು ಪಡೆಯಲೆಂದಾರ್ಜಿಸಿ (ಶಿಭಾಗ. ೫-೬-೨೭). [ಬೆಳ್$_1$ + — ವು./ತಮಿ. ವಿಳೈವು; ಮಲ. ವಿಳವು ]

**ಬೆಳಸಾಲು** 'ಬೆಳಿಸಾಲು' ನೋ.

**ಬೆಳಸಿ** 'ಬೆಳುವಸೆ' ನೋ.

**ಬೆಳಸು$_1$** 'ಬೆಳಿಯಿಸು' ನೋ.

**ಬೆಳಸು$_2$** (ನಾ). ೧. ಬೆಳೆದುದು ; ಬೆಳೆ ; ಫಸಲು ; ಪೀಕು (ಉಕ) : "ಅಚಱಂಗಳಲ್ಲಿ ಬೆಳೆದುದು ಬೆಳಸೆನಿಕ್ಕುಂ" (ಶಂಜೀಕ. ೨೭); ನಾಡ ಕಾಡ ಬೆಳಸಿಂಬೆಳಸಾ ವಿಷಯಾಂತರಾಳದೊಳ್ (ಶಂಕಥಾ. ೧-೩೪); ಆರಾಧನೆಯ ಮಾಡಿದಡೆ ಅಮೃತದ ಬೆಳಸು ವಿರೋಧಿಸಿದಡೆ ವಿಷದ ಬೆಳಸು (ಬಸವ. ೪೨೦); ಫಲಿಸಿತರಸಾ ನಿನ್ನ ಭಾಗ್ಯದ ಬೆಳಸು (ಕುಮ್ಯಾರಭ್ರೀ. ೦೫-೩). ೨. ಕೆನೆ ; ಕಾಳು : ಸಸಿಯೊಳ್ ಬೆಳಸಂ ಕೊಳ್ವವೋಲಸಾರದೊಳ್ ಸಾರವುಮಂ ಮಹೀಪತಿ ಕೊಂಡಂ (ಶಾಂತಿಪು. ೬-೦೨೫); ಜಿನಭಕ್ತಿಯೆಂಬ ಬೆಳಸಿನ ರಾಶಿಯಂ ತೋರ್ಪಂತೆ ಪಾಲ ಸಮುದ್ರದ ನೀರಿಂದಭಿಷೇಕಂ ಮಾಡಿ ಪೂಜಿಸಿ (ಧರ್ಮಾಪ್ಯು. ೮-೨೭೩). [ ಬೆಳ್$_1$ + — ಸು$_3$ ]

**ಬೆಳಸೆ** 'ಬೆಳುವಸೆ' ನೋ.

**ಬೆಳಹು$_1$** (ಕ್ರಿ). ವೃದ್ಧಿಪಡಿಸು ; ಬೆಳೆಸು : ಮುಂದಿನ್ನು ವೀರ ಶೈವಾಗಮದ ನಡವಳಿಯ ಕುಡಿವರಿಸಿ ಬೆಳಹುವನೆನಿಪ್ಪಂತೆ ನಿಡುಗೇಸ ಕವಲಿಱದು ಬೆಳೆದುದು (ಸೌಂದಪು. ೨-೩೦).

[ ಬೆಳ್$_1$ + — ಹು$_1$ (< —ವು$_1$ ) ]

**ಬೆಳಹು$_2$** (ನಾ). = ಬೆಳವಣಿಗೆ : ತುಂಬಿನಲಿ ಕತ್ತರಿಸಿದೆಡೆಯಲಿ ಬೆಳಹಿನಲಿ ಈ ಪರಿಯ ದೋಷವು ದಂಡಿನಲಿ ತರುದೋಷ (ಶಾಳ್ಯಾ. ೦೮-೦೦).

[ ಬೆಳ್$_1$ + — ಹು$_2$ (< — ವು$_2$) ]

**ಬೆಳಾಕರಣ** (ನಾ). ಒಂದು ಬಗೆಯ ತೆರಿಗೆ : ಎಱದುಕೊಟ್ಟ ಸ್ಥಳಂಗಳಿಗೆ ತೆಱು ಮುಡಗಡಿ . . . ಬೆಳಾಕರಣ . . . ವತ್ತುಗಾಯಿ ಮೊದಲಾಗಿ (ಕೆಇ. 1, ೫೪-೪; 1433 ?). [ ಬೆಳ್$_?$ + ಆಕರಣ ]

**ಬೆಳಾಕರಣೆ** (ನಾ). = ಬೆಳಾಕರಣ : ಗುತ್ತಗೆ ಕಾಣಿಕೆ. ಖಿಡ್ಡಾಯ ಬೆಳಾಕರಣೆ ಬೆಳುದಂಡ (ಸೌಇಇ. XV, ೨೪೭-೨೭; 1433).

[ ಬೆಳ್$_?$ + ಆಕರಣೆ$_1$ ]

**ಬೆಳಾವಡಚ** 'ವೇಳೆವಡಿಚ' ನೋ.

**ಬೆಳಿಗಾರ** 'ಬೆಳುಗಾರ' ನೋ.

**ಬೆಳಿಗೆ** (ನಾ). ಬೆಳವಣಿಗೆ ; ವಿಕಾಸ : ಅದರಿಂದ ಬೆಳಿಗೆ ಕಡಿಮೆಯಾಗುತ್ತದೆ (ಮುಂಬಜಾಂ. ೬-೨೬೨) : ಈಗ ನಾವು ವಿಲಕ್ಷಣವಾದ ಬೆಳಿಗೆಯನ್ನು ಕಾಣುತ್ತೇವೆ (ಮಹಂಪ. ೫೦). [ <ಬೆಳ್$_1$ + —ಇಗೆ$_0$ ]

**ಬೆಳಿಗ್ಗ** 'ಬೆಳಗ್ಗ' ನೋ.

**ಬೆಳಿಗ್ಗೆ** 'ಬೆಳಗ್ಗ' ನೋ.

**ಬೆಳಿಯಕ್ಕಿ** (ನಾ). ತಳಿಸಿದ ಅಕ್ಕಿ ; ಬಿಳಿಯಕ್ಕಿ : × × × ನ್ನಿಲ್ಲಿಲಗೆ ದಯೆಗೆಯ್ದ ಸ್ಥ × × ಸೊಪ್ಲಗೆಯ ಬೆಳಿಯಕ್ಕಿಯೆಮ್ಬುದಿಲ್ಲ ಎಲ್ಲ ಕೂಟಣ ಉಣ್ಬೂದು (ಎಕ. VI (R). ಶ್ರೀರಂಗ. ೯೪-೦೭ ; ಸು. ೯೫೦ದು ೫೫).

[ ಇದು 'ಬಿಳಿಯಕ್ಕಿ' ಎಂಬುವರ ಅಪಲಿಖಿತ]

**ಬೆಳು$_1$** 'ಬೆಳ್$_1$' ನೋ.

**ಬೆಳು$_2$** 'ಬೆಳ್$_2$' ನೋ.

**ಬೆಳುಕ** (ನಾ). ೧. ಬೆಳ್ಳಗಿರುವವನು : ಅಬ್ಬಿಕಂ, ಬೆಳುಕರಿ, ತೊಳಕಂ (ಶಮದ. ೨೦೫ ಪ್ರಯೋ). ೨. ಬಿಳಿದು ; ಬಿಳುಪಾದುದು : ಆ ಕೆಚ್ಚಿಂಗೆ ಕಿಚ್ಚನಿಕ್ಕಿ ಸುಟ್ಟು ಬೆಳು [ಪಾಠಾಂ: ಳ್ಳು] ಕನ ಮಾಡಿ ಬೆಳುಗಾರದಂತೆ ಮಾಡು (ಬಸವ. ೨೫೩) ; ಪಳಿಕಿನಂತೆ ಬೆಳುಕನಾಗಿ ಸಹಜೋಚಿತ ರುಚಿಯ ನಿಲೆ (ವರ್ಧಪು. ೦೦-೪೭ ಪ). ೩. (ಅಲಂ) ಸ್ಪಷ್ಟವಾದುದು ; ನಿಚ್ಚಳವಾದುದು : ಶ್ರುತಿಯವಿಳಶಾಸ್ತ್ರಾರ್ಥವತಿಬೆಳುಕನಾಗಿ ಸಂತತವೊತ್ತವೆಣ್ಣಳಂತಿರ್ಪವೆಂದುಂ ಜಿತಪುರನ ವಿದ್ಯೆ ಸಂತತಪತಿವ್ರತೆಯಂತೆ ಕ್ಷಿತಿಯೊಳತಿಗೋಪ್ಯವೆಂದಾ ಸ್ಕಂದವಂ (ಶಾಸಂಕ. ೩-೪).

[ ಬೆಳು$_1$ ( <ಬಿಳಿದು ) + — ಕ$_3$ ]

**ಬೆಳುಕರಿಸು** 'ಬೆಳ್ಕರಿಸು' ನೋ.

**ಬೆಳುಕು** (ಕ್ರಿ). ಮಿಟುಕಿಸು : ವಿಜನವುಷ ಠಾವಿನೊಳ್ಕುಳ್ಳಿರ್ದು ಬೆಳುಕದವೆಗಳವುಭಯದಿಟ್ಟಿಗಳ ನಾಸಾಗ್ರದಲ್ಲಿ ನೆಲೆಗೊಳಿಸೆ (ಪಂಚಾರಾ. ೨-೦೦-೨೨).

[ ←ತೆಲು. ಬೆಳಕು=ಚಲಿಸು ]

**ಬೆಳುಗತ್ತೆ** 'ಬೆಳ್ಗಟ್ಟೆ' ನೋ.

**ಬೆಳುಗದಿರ** 'ಬೆಳ್ಗದಿರ' ನೋ.

**ಬೆಳುಗದಿರು** 'ಬೆಳ್ಗದಿರ್' ನೋ.

**ಬೆಳುಗನ್ನಡ** 'ಬೆಳ್ಗನ್ನಡ' ನೋ.

**ಬೆಳುಗನ್ನಡಿಗ** (ನಾ). ಅಜ್ಞನಾದ ಕನ್ನಡಿಗ : ಎಲೆ ನಲ್ಲಳೆ ಸಕ್ಕಜವಿನ್ನಿಸಜೀವನ ಬಳಕೆಯ ಬೆಳುಗನ್ನಡಿಗನ ಹೊಲಬಲ್ಲ ಕೃತಿಯಿದು (ಸೊಬಗೋ. ೦-೨೩).

[ ಬೆಳು$_2$ (< ಬೆಳ್$_2$) + ಕನ್ನಡಿಗ ]

**ಬೆಳುಗವತೆ** (ನಾ). ಬೆಳಗಿನಲ್ಲೇ ಮಾಡುವ ಲೂಟಿ ; ಹಗಲುದರೋಡೆ: ಬೆಳುಗವ [ಪಾಠಾಂ. ವಿ]ತೆಯನ್ಯಾಯ ಪರಿಭವ ಠಕ್ಕು . . . ನಿನ್ನೊಳಿಲ್ಲಲೆ (ಕುಮ್ಯಾಸ. ೦-೪೫) ; ಠಕ್ಕು ವಳಿವು ಬೆಳುಗವತೆ ದುರ್ವ್ಯಸನಂ . . . ಚೆನ್ನಬಸವನಿಹ ರಾಜ್ಯದೊಳ್ ವಿಸುಕವೆ (ಚೆಬಪು. ೬-೪೦).

[ ಬೆಳು$_1$ (< ಬಿಳಿದು) + ಕವತೆ$_1$ (< ಕವರ್ತೆ$_1$) ]

**ಬೆಳುಗಾಯ್** 'ಬೆಳಗಾಯ್' ನೋ.

**ಬೆಳುಗಾಯ್ಮೊಲೆ** 'ಬೆಳಗಾಯಿಮೊಲೆ' ನೋ.

**ಬೆಳುಗಾರ, ಬೆಳಗಾರ, ಬೆಳಿಗಾರ** (ನಾ). ಖನಿಜಲವಣ; ಟಂಕಣ ; ಪಟಿಕ : "ಟಂಕಣಂ—ಬೆಳುಗಾರ" (ಚಿಕಧಿ. ೬೪) ; ಬೆಳುಗಾರವ ಬೆರಸಿ ಬೆಚ್ಚ ಬಂಗಾರಕ್ಕೆ ಸಂದುಂಟೆ ಹೇಳಾ (ಶಿವಶಂ. ೨೨೭-೦೦೨೪); ಹಿಪ್ಪಲಿ ಗುಳ್ಳ ಬೆಳುಗಾರ ಹೊಮ್ಮುಗುಳ್ಗಳ ಸಲೆಯುವಂ ಮಧುವಿಂದೆ ಕಲಸಿ (ಜವಾ. ೦೩-೪೭); ಅಲಂಪಿನ ಬೆಳುಗಾರವುನಿಟ್ಟುರುಪಿ ರತೋದ್ದೀಪನದುರಿಯಿಂ (ಜಯುಕಾ. ೮-೪೭). **ಬೆಳಗಾರ :** ಆ ಕೆಚ್ಚಿಂಗೆ ಕಿಚ್ಚನಿಕ್ಕಿ ಸುಟ್ಟು ಬೆಳ್ಳುಕನ ಮಾಡಿ ಬೆಳ[ಪಾಠಾಂ.ಳು]ಗಾರದಂತೆ ಮಾಡು (ಬಸವ. ೨೫೩) ; ಶರಣನಾದಡೆ ಮುರಿದ ಬಂಗಾರವ ಬೆಳಗಾರದಲ್ಲಿ ಬೆಚ್ಚಂತಿರಬೇಕು ಲಿಂಗದಲ್ಲಿ (ಅಬಂದೇ. ೨೯೫ ೬೭). **ಬೆಳಿಗಾರ :** ಕಕ್ಕೆ ಹಗಿನು ಬೆಳಿಗಾರ ಜೇನುತುಪ್ಪ ಇವಂ ಮರ್ದಿಸಿ ಲಿಂಗಲೇಪನಗೈದು ರತಿಗೈಯೆ ಸ್ತ್ರೀಯರು ಸಂತೋಷಪಡುವರು (ಕಾಮಶಾ. ೩೬೦) ; ಕಲಬಾಗ್‌ನಲ್ಲಿ ಉಪ್ಪುಬೆಟ್ಟಗಳ ಬಳಿ, ಪಟಿಕವು (ಬೆಳಿಗಾರ) ವಿಶೇಷವಾಗಿ ತಯಾರಾಗುತ್ತದೆ (ಭೂಗೋಳ ೬೦). 'ಬಿಳಿಗಾರ' ಪರಾ. [ ದೇ. ॥ ತಮಿ. ವೆಳ್ಳೈಕ್ಕಾರಮ್; ಮಲ. ವೆಳ್ಳಿಕ್ಕಾರಮ್; ತುಳು. ಬೆಳಕಾರ; ತೆಲು. ವೆಲಿಗಾರಮು]

**ಬೆಳುಗಾಲ** (ನಾ). ಆಕಾಶವು ಶುಭ್ರವಾಗಿರುವ ಕಾಲ ; ಶರತ್ಕಾಲ : ಮಳೆಗಾಲ ಹೋದುದು ಬೆಳುಗಾಲ ಬಂದುದು ದಳ ನಡೆವುದಕಿನ್ನು ಚೆನ್ನು (ಭರತ. ೨೨-೬). [ಬೆಳು$_1$(<ಬಿಳಿದು) + ಕಾಲ]

**ಬೆಳುಗುಳ** 'ಬೆಳ್ಗುಳ' ನೋ.
**ಬೆಳುಗೊಡೆ** 'ಬೆಳ್ಗೊಡೆ' ನೋ.
**ಬೆಳುಗೊಳ** 'ಬೆಳ್ಗೊಳ' ನೋ.
**ಬೆಳುಜೊನ್ನ** (ನಾ). ಶುಭ್ರವಾದ ಬೆಳುದಿಂಗಳು : ಸಂಜೆಯೊಳು ಶಶಿಯು ಬೆಳುಜೊನ್ನವಿರೆ ಸೊಡರಿಗೆಳಸರೇ (ಅಮಸಾ. ೧-೨-೦೪).
[ಬೆಳು$_1$ (<ಬಿಳಿದು)+ಜೊನ್ನ]
**ಬೆಳುದಂಡ** (ನಾ). ಒಂದು ಬಗೆಯ ಆದಾಯ ; ದಂಡರೂಪದಿಂದ ಬರುವ ಆದಾಯ : ನೊಗಹಣವೊಕ್ಕಲು ಗುತ್ತಿಗೆ ಕಾಣಿಕೆ ಬಿಡ್ಡಾಯ ಬೆಳಾಕರಣೆ ಬೆಳುದಂಡ ಎಸೆ ಒಸಗೆ (ಶಾಇ. XV. ೨೯೬-೨೭; 1433).
[ಬೆಳು$_2$+ದಂಡ]
**ಬೆಳುದಿಂಗಳ್** 'ಬೆಳ್ದಿಂಗಳ್' ನೋ.
**ಬೆಳುದಿಂಗಳು** 'ಬೆಳ್ದಿಂಗಳ್' ನೋ.
**ಬೆಳುದುರೆ** (ನಾ). ಒಂದು ಬಗೆಯ ಸಸ್ಯ : ಉಡೀ, ಬೆಳುದುರೆ, ನೀರುದುರೆ (ವೈನಿಘ. ೩೨-೬೦೦). [ಬೆಳು$_1$ (<ಬಿಳಿದು)+ಉದುರ್$_2$]
**ಬೆಳುನಗೆ$_1$** 'ಬೆಳ್ನಗೆ' ನೋ.
**ಬೆಳುನಗೆ$_2$** (ನಾ). ಕಪಟದಿಂದ ಕೂಡಿದ ನಗು ; ಸೋಗಿನ ನಗು : ಅಸವಳದ ಬಡಗಣಿಯ ಬೆಳುನಗೆಯ ವಕ್ರವಾಕ್ಯಸಮೂಹದವಗುಣಂಗಳ ಸಂಗದಿಂ ಕುಲಂ ಹಸಗೆಟ್ಟನಾಮಿಕೆಯರಾದರಲ್ಲದೆ ಸಂಗವಾರ ಕುಲವಂ ಕೆಡಿಸದು (ಜಶಾ. ೬-೩). [ಬೆಳು$_2$ (<ಬೆಳ್$_2$)+ನಗೆ]
**ಬೆಳುನಗೆವೆಱು** (ಕ್ರಿ). ಮೆಲುನಗೆಯಿಂದ ಕೂಡಿರು ; ಮಂದಹಾಸ ದಿಂದಿರು : ಬೆಳುನಗೆವೆತ್ತನ್ನ ರಂಗ ಬಾರೆಂಬ ಕೋಮಳೆಯ ಕೋಱಿಕೆ ಯೆಂದಾದಪುದೊ (ಕಕಾಂ. ೨೨-೯). [ಬೆಳುನಗೆ$_1$ (<ಬೆಳ್ನಗೆ)+ಪೆಱು$_1$]
**ಬೆಳುನುಡಿ** 'ಬೆಳ್ನುಡಿ' ನೋ.
**ಬೆಳುನೆಲ್ಲಿ** (ನಾ). ಒಂದು ಬಗೆಯ ನೆಲ್ಲಿ : ಎಲವ ಮುತ್ತುಗ ಪಾಲೆ ಯಳನೇಱಲು . . . ಬೆಳುನೆಲ್ಲಿ (ಶಾಕೃಶಾ. ೫-೩).
[ಬೆಳು$_1$ (< ಬಿಳಿದು ) + ನೆಲ್ಲಿ ]
**ಬೆಳುನೊರೆ** 'ಬೆಳ್ನೊರೆ' ನೋ.
**ಬೆಳುಪು** 'ಬೆಳ್ಪು$_1$' ನೋ.
**ಬೆಳುಮಣ್ಣು** 'ಬೆಳ್ಮಣ್' ನೋ.
**ಬೆಳುಮತ್ತಿ** (ನಾ). ಬಿಳಿಯ ಮಚ್ಚೆ : ಬೆಳುಮತ್ತಿ ಕಾರೆಳ್ಳು ಸುಪ್ರದಕ್ಷಿಣ ವಾಮ ಸುಳಿ . . . ಎಸೆದುವು ಚಕ್ರಧರಗೆ (ಶರಕ. ೬-೭೦).
[ ಬೆಳು$_1$ (< ಬಿಳಿದು ) + ಮತ್ತಿ$_1$ (< ಮಚ್ಚೆ$_1$) ]
**ಬೆಳುಮಾತು** (ನಾ). ದಡ್ಡತನದ ಮಾತು ; ಅವಿವೇಕದ ಮಾತು : ಕಲೆಹಂತರೊಲ್ಲು ಕೂಡಿದರೆಸೆ ಸಾಕು . . . ಸಳೆನಡು ತೊಡೆ ತೋಳು ಮೊಗಗಳೊಂದಿದುವೆಂದು ಬೆಳುಮಾತನಾಡಲದೇಕೆ (ಶರಕ. ೧೦-೦೨೩).
[ಬೆಳು$_2$ (<ಬೆಳ್$_2$ +) ಮಾತು$_1$]
**ಬೆಳುವಿಮಾನ** (ನಾ). ಬೆಳಗುವ ನಕ್ಷತ್ರ ; ಮಿನುಗುವ ತಾರೆ : ಪ್ರಾರ್ಥ ಕೋಟಿ ಬೆಳುವಿಮಾನ ಮಿಂಚುತಿವೆ ಬಾನಿನೊಡಲಿನಲ್ಲಿ (ಪ್ರದಶ. ೫೨-೫).
[ಬೆಳು$_1$ (<ಬಿಳಿದು) + ವಿಮಾನ]
**ಬೆಳುಮುಗಿಲು** 'ಬೆಳ್ಮುಗಿಲ್' ನೋ.
**ಬೆಳುವ$_1$**, ಬೆಳವ$_1$ (ನಾ). (ಅಪಶಕುನ ಸೂಚಕವೆಂದು ಭಾವಿಸುವ) ಒಂದು ಬಗೆಯ ಪಕ್ಷಿ ; ಕಾಡುಪಾರಿವಾಳ : "ಪಿಂಗಂ ಬೆಳುವಮೆನಿ ಸಿಕ್ಕು" (ಮಂಗರಾ. ೫೨—೦೦) ; ಬೆಳುವ ಬೆಂಚೆಗ ಬೆಕ್ಕು ಬಕ ಮಿಾಸ್ಬಲಿಗ . . . ಮಡಗೊಳಲೆ ಮುಖ್ಯವಿಹಂಗನಿವೆ ವೈದೇಹಿ ನೋಡು (ತೊರರಾ. ೩-೦-೩೩) ; ಬೆದಱುಗಣ್ಣ ಬೆಳುವನಂತೆ ನಿಸ್ಸಟಲ್ಲಿ ಬಿಲ್ವೆನಾಣ್ (ಅಶ್ವಶಾ. ೬-೦೩೦). **ಬೆಳವ$_1$** : ಗೂಬೆ, ಕಾಗೆ, ಬೆಳವ (ಒಂದು ಬಗೆಯ ಪಾರಿವಾಳ) ಗಳ ವಿಷಯದಲ್ಲಿ ಈ ಮೂಢನಂಬಿಕೆ ಬಂದಿದೆ (ಕಶ್ಳಿ. ೩೨) ; ಹಾಡುವ ಬೆಳವ ; ಹಾರುಳ ಪಾರಿವಾಳ ; ಬೊಗಳುವ ನಾಯಿ . . . ಮುಂತಾದ ದಿನದ ಸಂಸಾರದಲ್ಲಿ ಕಾಣಬರುವ ವಿಷಯಗಳನ್ನೆತ್ತಿ ಅವುಗಳಲ್ಲಿ ವೈರಾಗ್ಯ ಸಂಪತ್ತನ್ನು ತುಂಬಿ ಸೂರೆಗೊಂಡಿದ್ದಾರೆ (ಶಂಶ. ೬೮ ಕಂಕಾಳ್ಯಶಂಕರು).
[ದೇ.॥ ತೆಲು. ಬೆಳವ]
**ಬೆಳುವ$_2$**, ಬೆಳವ$_2$ (ನಾ). ಒಂದು ಬಗೆಯ ಮರ ; ಬಿಳಿಧೂಪದ ಮರ : ನಿಮಿತ್ತ ಲಗ್ನ ಮಾಯಾ ಮಾರವಳಿ ಬೆಳುವ ಮೂಲಿಕೆಯಿಂದ ಕಡೆಯೆ ನಿನ್ನ ಇರವು (ಮರೇವ. ೨೭೯-೪೭). **ಬೆಳವ$_2$** : ಮಾವು ಹಲಸು ಬೆಳವ[ಶಾಕಾಂ.ಲ] ದಾಡಿಮವಣ್ಣಾದಿಯಾದಾ ವೃಕ್ಷಫಲದೊಳಗೆ ಕಲಸಿ (ಸೂಶಶಾ. ೨-೩೬) ; ಮತ್ತಿ ಮಧುಕಂ ಮಂಗಾರೆ ಪಚ್ಚಾರಿದಿಂಡಲವಾಲಂ ಬೆಳವಿಂಗಳಂ ಪುಣಿಸೆ (ರಾಜಶೇ. ೫-೩೬). [?]
**ಬೆಳುವಟ್ಟೆ** 'ಬೆಳ್ವಟ್ಟೆ' ನೋ.
**ಬೆಳುವಣ್ಣ** (ನಾ). ಬಿಳಿಯ ಬಣ್ಣ : "ಬೆ[ಶಾಕಾಂ.ಬಿ]ಳುವಣ್ಣವೆನೆ ಬಿಳಿದು" (ಕಶ್ಮಸಂ.೬೯). [ಬೆಳು$_1$ (< ಬಿಳಿದು) + ಬಣ್ಣ]
**ಬೆಳುವರಿ** (ಕ್ರಿ). ಬೆಳ್ಳಗಾಗು ; ನರೆ : ಜಗುಳಿದ ಹಲ್ಲುಗಳ ಬೆಳುವರಿದ ರೋಮಾವಳಿಯೊಳೈತರುತಿರಲಾ ಪುರಜನ ನೋಡಿತಾ ವೃದ್ಧನನು (ಕಾಪಂಶ. ೦೯-೦೪). [ಬೆಳು$_1$ (<ಬಿಳಿದು) + ಪರಿ$_2$]
**ಬೆಳುವಲ** 'ಬೆಳ್ವಲ' ನೋ.
**ಬೆಳುವಲು** 'ಬೆಳ್ವಲ' ನೋ.
**ಬೆಳುವಲೆ** 'ಬೆಳ್ವಲೆ' ನೋ.
**ಬೆಳುವಲ್ಲು** 'ಬೆಳ್ವಲ್' ನೋ.
**ಬೆಳುವಸದನ** 'ಬೆಳ್ವಸದನ' ನೋ.
**ಬೆಳುವಸದನಂಗೆಯ್** 'ಬೆಳ್ವಸದನಂಗೆಯ್' ನೋ.
**ಬೆಳುವಸೆ**, ಬೆಳಸಿ, ಬೆಳಸೆ (ನಾ). (ಇನ್ನೂ ಬಲಿಯದ) ಹಾಲು ತುಂಬಿ ಬೆಳ್ಳಗಿರುವ ಕಾಳು; ಸಿಹಿತೆನೆ; "ಬೆಳುವಸೆ ದುಗ್ಧಕಾಖ್ಯಮುಕ್ಕಂ" (ಮಂಗರಾ.೦೦೦-೬). **ಬೆಳಸಿ** : ಸುಟ್ಟ ಬೆಳಸಿಯು ಲೇಸು ಅಟ್ಟ ಬೋನವು ಲೇಸು (ಸರ್ವಜ್ಞ.೦೦೦೬); ಬೆಳಸಿಯು ಹೊರೆ ತಂದು ಇಳುಹಿದನು (ಸಿದ್ಧಕೃ. ೩-೬೬). **ಬೆಳಸೆ** : ಮಲ್ಲನು ಸುಟ್ಟು ಕೊಟ್ಟ ಬೆಳಸೆಯನ್ನು ತಿಂದು (ಪಿಶಂ. ೨೩). [ಬೆಳು$_1$ (<ಬಿಳಿದು) + ಪಸೆ$_1$ (<ಪಸಿ$_3$) ]
**ಬೆಳುವಾಲ**, ಬೆಳುವಾಲಿ (ನಾ). ಒಂದು ಬಗೆಯ ಸಸ್ಯ: "ದೇವಲಾಂಗ ಲಿಕಾ—ಬೆಳುವಾಲ" (ಓಷಂ.೮೦) ; ಅಣಲೆ ಬೆಳುವಾಲಕುವವಿಷಮೆಣಿಸಲದೇಂ ಹೊನ್ನೆಗಭ್ರನಾದಿಯೆ (ಜಮಂದ.೨-೯೬). **ಬೆಳುವಾಲಿ** : "ಭೂರಿರುಕ್ಕಾ— ಬೆಳುವಾಲಿ" (ಓಷಂ. ೦೦೨). [ ? ]
**ಬೆಳುವಾಲಿ** 'ಬೆಳುವಾಲ' ನೋ.
**ಬೆಳುವೆ** 'ಬೇಳ್ವೆ$_2$' ನೋ.
**ಬೆಳುವೆಟ್ಟ** 'ಬೆಳ್ವೆಟ್ಟ' ನೋ.
**ಬೆಳುವೆಳಗು** 'ಬೆಳ್ವೆಳಗು' ನೋ.
**ಬೆಳುವೆಳ್ಳಿ** (ನಾ). ಹೊಳೆಯುವ ಬೆಳ್ಳಿ; ಶುದ್ಧಬೆಳ್ಳಿ : ಕಳೆಯಿ ಕ್ಷತೆಗಳರ್ಚನೆ ತಾಯಿಗೊಮ್ಮೆ ಮತ್ತೆಳೆಮುತ್ತಿನಕ್ಷತೆಯೊಮ್ಮೆ ತಳಿರುತಾವರೆ ಮೊಲ್ಲೆ ಮೊದಲಾದ ಪೂಪೊಮ್ಮೆ ಬೆಳುವೆಳ್ಳಿಮಿಸುನಿಪೂವೊಮ್ಮೆ (ಶರತ. ೦೯-೦೦೯). [ ಬೆಳು$_1$ (<ಬಿಳಿದು) + ಬೆಳ್ಳಿ ]
**ಬೆಳುಸರಿ** 'ಬೆಳ್ಸರಿ' ನೋ.
**ಬೆಳುಹದಿಯ ಮರ** (ನಾ). ಒಂದು ಬಗೆಯ ಮರ: ಆ ಕೆಱೆಯ ಕೂಡುವ ನೀರೊತ್ತು ಮೇರೆಯು × × × ಮೇರೆಯಾಗಿ ಅಲ್ಲಿಂ ಮೂಡ ಬೆಳುಹದಿಯ ಮರ (ಶಾಇ. IX-i, ೨೯೭-೯೬; 1147). [ ? + ಮರ$_1$]
**ಬೆಳುಹು** 'ಬೆಳ್ಪು$_1$' ನೋ.

**ಬೆಳುಹೂಲಿ** (ನಾ). ಒಂದು ಬಗೆಯ ಸಸ್ಯ; ಬಿಳಿಯ ಹೂಲಿ ಗಿಡ : ನೆಲ್ಲಿ ಬೆಳುಹೂಲಿಗಳ ಬೇರಿಲ್ಲಣ ಮುಳುಗೊಗ್ಗಿಯೆಂಬನಿತ್ತಱ ಪುಡಿಯಂ ಚೆಲ್ಲನೆ ಮೂಗಿನೊಳೂಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ (ಖಮದ· ೭-೫೩). [ಬೆಳು$_1$ (< ಬಿಳಿದು) + ಹೂಲಿ$_1$ (< ಪೂಲಿ$_1$)]

**ಬೆಳೆ$_1$**, ವೆಳೆ$_1$ (ಕ್ರಿ). ೧. ಮನುಷ್ಯ, ಪ್ರಾಣಿ, ಪಕ್ಷಿ ಮುಂತಾದುವು ಶಾರೀರಕವಾಗಿ, ಮಾನಸಿಕವಾಗಿ ಅಥವಾ ವಯಸ್ಸಿನಲ್ಲಿ ವೃದ್ಧಿ ಹೊಂದು : ಆತಂ ಕ್ರಮಕ್ರಮದಿಂ ಸುಖದಿಂ ಬೆ[ಶಾಶಾಂ. ಬ]ಳೆದು ನವ ಯೌವನನಾಗಿರ್ಪನ್ನೆಗಂ (ವಡ್ಡಾರಾ. ೬೦-೨೯); ಹುಟ್ಟಿದೆ ಶ್ರೀ ಗುರುವಿನ ಹಸ್ತ ದಲ್ಲಿ ಬೆಳೆದೆನು ಅಸಂಖ್ಯಾತರ ಕರುಣದಲ್ಲಿ (ಪ್ರಭುದೇ· ಬ· ೫೯-೦೪೮); ಅಂದಿಳೆ ಯನಳೆದಾ ತ್ರಿವಿಕ್ರಮನಂದಕಿವ್ಮಿಗಿಲೆನಲು ಬೆಳೆದನು (ತೊರರಾ. ೪-೧೨-೨೬). ೨. ಗಿಡ, ಮರಗಳು ವೃದ್ಧಿಯಾಗು ; ಸಸ್ಯಗಳು ಬೆಳೆ : "ಬೆಳೆ— ಸಸ್ಯವೃದ್ಧೌ" (ಶಮಧಾ); ಪೂರ್ವಸ್ಯಾಂ ದಿಶಿ ನೊಲಿ ಬೆಳೆದಾ ಬೆಳ್ಗಲ್ಮೊ ಜಡಿ (ಎಕ. VII (R), ಶಾಗಮಂ· ೦೪೯-೬೦ ; 776); ಬೆಳೆದೊಱಗಿದ ಕಱಮೆ ಗಳುಂ ತಿಳಿಗೊಳದೊಳಗಲರ್ದ ಸರಸಿಜವ್ರತತಿಗಳುಂ ಕಳಹಂಸೆಗಳ್ಗೆ ಕೋಮಳವಿಳಾಸವತಿಗಳ್ಗೆ ಪಡೆಗುಮೊಸಗೆಯನಾಗಳ್ (ಕಬರಾ. ೩-೦೬೬); ಬೆಳೆದು ಮುಗಮುಗಿಪ ಗಂಧಶಾಳಿಯಿಂದಲ್ಲಿ ಸುಱಿವ, ಗಿಳಿವಿಂಡಿನೋಳಿಯಿಂ . . . ನೆಱೆಯೆ ಸೊಗಯಿಪ (ಶಂಕರಾ. ೩-೨೨ ರಗಳೆ); ಮೆತ್ತಿದವು ಶರವಿಭದ ಮೆಯ್ಯಲಿ ಬಿತ್ತ ಬೆಳೆದದ್ರಿಯವೊಲಿದ್ದುದು ಮತ್ತಗಜ ನೊಂದಱಿಯದನಿಬರ ಬಾಣಹತಿಗಳಲಿ (ಕುಮಾರವ್ಯಾ. ೩-೩೯). ೩. ಮೊಳೆ ; ಮೂಡು ; ಹುಟ್ಟು ; ಅಂಕುರಿಸು : ಮದವನ್ಮಾತಂಗಕಪೋಲದಿನೊಱೆದೊಱತೆ ಯೊಳೆ ಬೆಳೆದುದೆಂಬಿನಮೆತ್ತಂ ಮದಗಂಧಮೊದವೆ ಕತ್ತಲಿಪುದು ಪುದಿದೇಲಾ ಲತಾವನೋಪೋದ್ಯಾನಂ (ಕಾದಂಪೂ· ೪೮); ಬೆಳೆದವೋ ಕೈಕಾಲು ನೀಲಾಚಲಕ ಹೇಳಿನೆ ಮುಗಿಲ ತುಡುಕುವ ತಲೆಯ ತೋಳೆಯ ತೋರಪತ್ತನ ಕಂಡು ಕುರುಸೇನೆ ಕಳವಳಿಸಿದರು (ಕುಮಾರವ್ಯಾ. ೦೫-೫೦). ೪. (ಕೂದಲು, ಉಗುರು ಮುಂತಾದುವು) ನೀಳವಾಗು ; ಉದ್ದವಾಗು : ಬೆಳೆವ ತುಪ್ಪುಳುಮೀಸೆ ಹಳಹಳನೆ ನಳನಳಿಸೆ (ಇಹನ. ದೀ. ೩೨-೧೨); ಆ ವಿಮಲ ಯತಿರೂಪವನು ಬಹಿರಾವರಣನಭಕೊತ್ತಿ ಲಯದಿನದಾ ವಿರೂಪಾಕ್ಷಂಗೆ ಪಡಿಯೆನೆ ಬೆಳೆದನಾ ಹನುಮ (ತೊರರಾ. ೪-೦-೦೮). ೫. ಮೇಲಕ್ಕೆ ಚಾಚು,—ನೀಡು : ಆ ಮಹಾಗಹನಮಧ್ಯದೊಳಂಬರವರೆಗಂ ಬೆಳೆದ ಮರದುಱುಗಲ ನಡುವೆ ನೀಳ್ದೊಪ್ಪಿ ದಿವಕ್ಕೆ ಪೋಪ ಬಟ್ಟೆಗೆ ಸೋಪಾನಂ ಗಟ್ಟಿದಂತೆ ತೆಱತೆಱದಿಂ ನೆಗೆದೊಗೆವ ಪೊಗೆಯುಂ ಕಂಡು (ಶಂಕರಾ· ೦೦೬-೫): ಬೇಗಿ ಬೆಳೆದು ನಭಕಡರ್ದೊಡೆ ದೇವರ್ಕಳಾರೋಗಿಪ ಸವಿಗಾಣರ್ ಪೋಗಿ ಮಾಡುವುದೇನೆನುತ ಲಜ್ಜಿಸಿ ತಲವಾಗಿದಂತಿಹುದು ರಾಜಾನ್ನ (ಮೋಹತ. ೨-೪೦). ೬. ಪೈರಿನಿಂದ ತುಂಬು ; ಸಸ್ಯಸಮೃದ್ಧವಾಗು : ಅಳುರದು ಕಿರ್ಚು ಮುಟ್ಟದು ವಿಷಾಹಿ ಮಹಾಸತಿಯಿರ್ದ ಮಂಡಲಂ ಬೆಳೆ ವುದು ಬೇಡಿದಂತೆ ಮಱಿ ಕೊಳ್ವುದು (ಅಜಿಪು. ೧-೬೫); ಬೆಳೆದುದು ಬಿತ್ತ ದೆಮ್ಮುಂ ಭೂವಳಯಂ ರವಿ ಬಿಸುಪನುಱಿದು ಸೊಗಯಿಸೆ ಜಗಮಂ ಬೆಳ ಗಿದನೇನೆಂಬುದೊ ಚಕ್ರಲಾಂಛನನ ಪುಣ್ಯದೊದವುಮಂ ತೇಜಮುಮಂ (ಗರ್ಣಪು· ೬-೬೬). ೭. ಫಸಲನ್ನು ಕೊಡು ; ಫಲ ಬಿಡು : ಅಱು ವತ್ತುದಿಸಕ್ಕೆ ಬೆಳೆವ ಷಷ್ಟಿಕಗದ್ದೆ ಷಾಷ್ಟಿಕ್ಯಮೆಂಬುದು (ಹಲಾಯು. ೨೬—೮). ೮. ಉತ್ಪತ್ತಿ ಮಾಡು ; ಒದಗಿಸು : ಜಳನಿಧಿ ಮೇರೆಯಂ ಮಿಗದೆ ನ್ನಿಂದುದು ಧಾರುಣಿ ಧಾನ್ಯವರ್ಗಮಂ ಬೆಳೆವುದು . . . ನಿರ್ಮಳ ಗುಣ ಜೈನಯೋಗಿಗಳ ನಿಶ್ಚಳವೀರತಪಃಪ್ರಭಾವದಿಂ (ಸಮಶ· ೭-೪೪). ೯. ಮರ, ಗಿಡ ಮುಂತಾದುವುಗಳನ್ನು ಬೆಳೆಯುವಂತೆ ಮಾಡು ; ಬಳೆಸು : ಕುರುಧರೆಯಂ ನಿಜೋಗ್ರಗದೆಯೋರ್ಗಳನುತ್ತು . . . ತಾರ ಭೂಧರಸತ[ಕೀರ್ತಿ]ಯೆಂಬ ಬೆಳಸಂ ಬೆಳೆದಂ ಪರಸೈನ್ಯಭೈರವಂ (ಗದಾಯು. ೧೦-೪) : ಭಿತ್ತಿಯಿಲ್ಲದೆ ಬರೆಯಬಹುದೆ ಚಿತ್ತಾರವ ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ (ಬಸವ. ೩೯೨) ; ಬೆಂದುದನು ಬಿತ್ತಿ ಬೆಳೆವಂದಿರನು ನಾ ಕಾಣೆ ಬೆಂದುದನು ಬಿತ್ತಿ ಬೆಳೆದುಂಬ ದಾಸೋಹಿ ಇಂದು ಧರನಕ್ಕು (ಸರ್ವಜ್ಞ. ೬೦೦). ೧೦. ಹೆಚ್ಚಾಗು ; ಅಧಿಕವಾಗು : ಉಕ್ಕಿ ಶೋಕದ ಕಡಲು ಪಾರ್ಥನ ಮುಕ್ಕುಳಿಸಿತಾ ಶೋಕಶರಧಿಯ ಹೊಕ್ಕು ಬೆಳೆದುದು ಕೋಪಶಿಖಿ ವಡಬಾಗ್ನಿಯಂದದಲಿ (ಕುಮಾರವ್ಯಾ. ೮-೦೫). ೧೧. ಏಳಿಗೆಹೊಂದು : ಪ್ರಗತಿಯನ್ನು ಪಡೆ: ಅಱಿನ ಪಾಳಿಯುಮಂ ಪುದುಂಗೊಳಿಸಿಕೊಂಡೀ ಭೂಮಿಯಂ ಭೂಮಿಪರ್ ನೆಱೆಯಾಳ್ಗೆಂದು ಮಿಳಾತಳಂ ಬೆಳೆಯುತಿರ್ಕೆ (ಛಂದೋಂಬು· ೬-೨೬೮) ; ಸಕಲಮಹೀತಳಂ ಬೆಳೆಗೆ (ಜಾತಕ. ೨೪-೪೫) ; ಶಂತನುವಿನ ಸಂತತಿ ಬೆಳೆಯಬಲ್ಲಂಥ, ಕ್ಷತ್ರಿಯರಿಗೆ ಉಚಿತವಾದಂಥ, ಧರ್ಮವನ್ನು ನಾನು ಹೇಳುತ್ತೇನೆ (ವತಭಾ. ೬). ೧೨. ತಾರುಣ್ಯಕ್ಕೆ ಕಾಲಿಡು ; ಪ್ರಾಯಕ್ಕೆ ಬರು : ಅವರ ಮಗಳು ಬೆಳೆದಿದ್ದಾಳೆ, ವರನನ್ನು ಹುಡುಕುತ್ತಿದ್ದಾರೆ (ರೂಢಿ). ೧೩. (ಪ್ರಯಾಣವು) ತೊಡಗು; ಆರಂಭವಾಗು: ಕಾಶಿಗೆ ಅವರ ಪ್ರಯಾಣ ಬೆಳೆಯಿತು (ರೂಢಿ). ೧೪. ಜರುಗು ; ನೆರವೇರು : ತೊಳಪ ಕಂಬೆಳಗಿಂದ ನೈದಿಲ ಬಳಗವನು ಸಾಲಿಡುತ ನೋಳ್ಪರ ಬೆಳೆದ ಕಂಗಳ ಹಬ್ಬ ವೆಸಲಮರಿಯರು ಸೊಗಯಿಪರು (ಸಾಳ್ವಭಾ. ೩೨-೦೬) ; ಉಪನಯನ ಬೆಳೆಯಿತು. ಬಂದ ನಂಟರೆಲ್ಲಾ ಅವರವರ ಊರಿಗೆ ಪ್ರಯಾಣ ಮಾಡಿ ದರು (ಮುಸುಗ. ೪). ೧೫. ಬಾಗು ; ಎರಗು : "ಬೆಳೆಮುದೆನಲ್ಕೆಱ ಗಿದುಮು" (ರನ್ನಕಂ. ೦). ೧೬. (ಆಲಂ) ತೀರು ; ಮುಗಿ : ಮನೆ ಯಲ್ಲಿ ಅರಿಸಿನ ಕುಂಕುಮ ಬೆಳೆದಿವೆ. ಅಂಗಡಿಯಿಂದ ತರಿಸಬೇಕು (ರೂಢಿ). **ವೆಳೆ$_1$**: ೨. ಇದಾನ್ ಕೊಳೆ ಈರೆಬ್ಬಿತ್ತಱುಳವರ್ ಒಕ್ಕಲ್ತನವರ್ ಕಯ್ವೊನಾ ವಿಶ್ತಿದಲ್ಲಿ ವೆಳೆಯಾದೆ ಕೆಡುಗೆ (ಇಕ. XIX, ೦೪೫-೦೬ ; 680). ೬. ನೆಲನುಂ ವೆಳೆಗೆ ಪಾರ್ವ್ವರು[ಮ್] ಪ್ರಜೆಯುಮ್ ತಣಿಗೆ (ಇಕ. XIX, ೦೪೫-೦೮ ; 680).

**ಬೆಳೆವೆಳೆ, ಬೆಳೆಬೆಳೆ** (ದ್ವಿರುಕ್ತಿ) : ದೇವ ನೀಂ ಕೊಟ್ಟ ಕನ್ನೆ ಬೆಳೆ ವೆಳೆಯೆ ನಾಯಾಯ್ತು (ಧರ್ಮಾಮೃ· ೫-೪೨) ; ವಿಪಿನಪರಿವೃತ ವಿಪುಲ ವಿಸ್ತರದ ಗದ್ದೆಕೋಗಿನಲಿ, ಹಳದಿಯ ಪೈರು ಬೆಳೆಬೆಳೆದು ಪಬ್ಬಿಯಿರೆ (ಚಿತ್ರಾಂಗ· ೫೨-೦೪೬೨) ; ಬೆಳೆಬೆಳೆಯುತ್ತ ಮಕ್ಕಳ ಪುಣ್ಯ (ಗಾದೆ).

[ದೇ. ‖ ತಮಿ. ವಿಳೈ ; ಮಲ. ವಿಳ ; ತುಳು. ಬುಲೆ, ಬುಳೆ, ಬೊಳೆ; ಕೊಡ. ಬೊಳೆ ; ತೆಲು. ಬೆಲಯು ; ಕೋತ. ವೆಳ್ ; ತೊದ. ಪೆಳ್]

**ಬೆಳೆ$_2$** (ನಾ). ೧. ಬೆಳೆಮುದು; ಮರ, ಗಿಡ, ಪೈರು ಮುಂತಾದ ಬೆಳಸು: ಪಱಿಯೋ ಸರ್ವಜನಾಶ್ರಯಂ . . . ಬೆಳೆಯೋ ಸರ್ವರ ಜೀವನಂ (ಸೋಮೇಶ. ೦೪) ; ಎಮ್ಮ ಪುಣ್ಯದ ಬೆಳೆಗಳೊಣಗಿದಡೆಮ್ಮ ಮಾಡುವುದೇನು (ಕುಮಾರ. ೦-೨೬) ; ಬೆಳೆಯ ಗುಣ ಮೊಳೆಯಲ್ಲಿ ಕಾಣು (ಗಾದೆ). ೨. ಬೆಳೆಯುವಿಕೆ ; ಬೆಳವಣಿಗೆ ; ಅಭಿವೃದ್ಧಿ : ತಿಳಿಯಲ್ಬರ್ಪುದು ಬೆಳೆ ಬಳವಿಗಳೆಂಬ ಭಾವವಚನದ್ವಯದೊಳ್ (ಶಮದ· ೨೦೮) ; ಬೆಳೆಯ ನ್ನದರಿದೆಂದು ಬೆಳೆಯ ಕಂಡವರೆಲ್ಲ ಮೊಳೆಯಲ್ಲಿ ಸಸಿಯನಱಿತು ತಾಂ ಮಾಳಿಯನು ತಿಳಿವವರು ಅಱಿಗು (ಸರ್ವಜ್ಞ. ೦೨) ; ನಮ್ಮ ಪ್ರಾಚೀನ ಸಂಪ್ರದಾಯದ ವೃಕ್ಷದ ಬುಡಕ್ಕೆ ಪಾಶ್ಚಿಮಾತ್ಯ ಸಂಸ್ಕೃತಿಯ ಕೊಡಲಿ ಪೆಟ್ಟು ಬೀಳುತ್ತಿದೆ (ಭಾರದ· ೫೩೪). [< ಬೆಳೆ$_1$. / ತಮಿ. ವಿಳೈ ; ಮಲ. ವಿಳ ; ತುಳು. ಬುಲೆ, ಬುಳೆ ; ಕೊಡ. ಬೊಳೆ ]

**ಬೆಳೆಕಾಣಿಕೆ** (ನಾ). ಬೆಳೆಯು ಕೊಯ್ಲಿಗೆ ಸಿದ್ಧವಾದಾಗ, ಕೊಯ್ಲು ಮಾಡಲು ಅನುಮತಿ ಪಡೆಯಲು ಗುತ್ತಿಗೆದಾರನು ಭೂಮಾಲೀಕನಿಗೆ ಒಪ್ಪಿಸುವ ಹಣ್ಣು, ತರಕಾರಿ ಮೊದಲಾದ ಕಾಣಿಕೆ : (ಕಿಸಂಗ್ರಾ· ೦೬).
[ ಬೆಳೆ$_2$ + ಕಾಣಿಕೆ ( < ಕಾಣ್ಕೆ ) ]

**ಬೆಳೆಕಟು** 'ಬೆಳ್ಗಟು' ನೋ.

**ಬೆಳೆಗಾಡು** (ನಾ). ಮರ, ಗಿಡಗಳು ದಟ್ಟವಾಗಿ ಬೆಳೆದಿರುವ ಕಾಡು : ಹೊದಱು ಬೆಳೆಗಾಡು ಗುಂಡು ಗುಗ್ಗರಿಗಲ್ಮೊರಡಿಗಳ ಬಳಗದಿಂ ಮೆಱೆದುದಾ ವಿಪಿನ (ಕುರಾಸಾಂ. ೯-೨). [ಬೆಳ್$_1$ + ಕಾಡು$_2$]

**ಬೆಳೆಗಾರ** 'ಬೆಳೆಗಾಱ' ನೋ.

**ಬೆಳೆಗಾಱ, ಬೆಳೆಗಾರ** (ನಾ). ೧. ಉಕ್ಕುವಂತೆ ಮಾಡುವವನು ; ವೃದ್ಧಿಗೊಳಿಸುವವನು : ಶರಧಿಯ ಬೆಳೆಗಾಱ ನಿಯ್ದಿಲ ನನೆಗಾಱ ವಿರಹದುಬ್ಬಟೆಗಾಱ ಜೊನ್ನ ಹರವರಿಗಾಱ ಕಾವನ ಗೆಲ್ಲಗಾಱ ಚಂದಿರನುದಿಸಿದ ಮಾೞ್ಪದಸೆಯಿ (ಪರ್ವತ. ೬-೭). **ಬೆಳೆಗಾರ :** ೨. ಸಸ್ಯಾದಿಗಳನ್ನು ಬೆಳೆಯುವವನು ; ಬೇಸಾಯಗಾರ ; ಕೃಷಿಕ : ಕಬ್ಬಿನ ಬೆಳೆಗಾರರಿಗೆ ಈ ವರ್ಷ ಒಳ್ಳೆಯ ಆದಾಯವಾಗುವ ನಿರೀಕ್ಷೆಯಿದೆ (ರೂಢಿ).

[ಬೆಳ್$_1$ + — ಕಾಱ]

**ಬೆಳೆಗೆಯ್,** ಬೆಳಗೆಯ್, ಬೆಳಗ್ಗೈ, ಬೆಳೆಗ್ಗೈ (ನಾ). ಪೈರು ಬೆಳೆದು ನಿಂತ ನೆಲ ; ಸಸ್ಯಸಮೃದ್ಧವಾದ ಭೂಮಿ : ಅತಿಸಿಸ್ನಿಗ್ಧ ಸೌಮ್ಯದಾಯಿ ಪೋಕ್ಷದ ಬೆಳೆಗೆಯ್[ಶಾಶಾಂ. ಯಿ] ಜನಪದರ್ವಿಪೊಂದು ಬಣ್ಣಿಪುದು ಜಗಂ (ಸಮುಚ. ೦೩-೨); ಬೆಳೆಗೆಯ್ಯಿಂದೆಸೆಗುಂ ಕಳಿಂಗವಿಷಯಂ (ಶೇಬುಕು. ೩-೬೯) : ಪೂದೋಟಗಳಿಂ ತೋಟಗಳಿಂ ರಸದಾಳಿಯ ಬೆಳೆಗೆಯ್ಗಳಿಂ ಮೆಱೆವುದಾ ದೇಶ (ಶಾಂಸಾಂ. ೦-೩೦). **ಬೆಳಗೆಯ್ :** ಬೆಳಗೆಯ್ಯಿಂ ಪೊಗಣಿಯಿಂ ಫಲತರುವಿಂದೊಳ್ವಿಯಂಗಳಿಂ ಕುಸುಮಾರಾಮನಿಳನಿಂ ಪಗಲೆಯ ಪರಿಯಿಂ ತಳರದ ಸಿರಿ ಬಲ್ಲಕುಂದೆನಾಳ್ಕೆಸೆದಿರ್ಕುಂ (ಕಾಇಇ. IX–i, ೨೯೯–೦೩ ; 1147) ; ಬೆಳ[ಶಾಶಾಂ. ಳೆ]ಗೆಯ್ಯೊಳ್ಗಂ ಫಲಶಾಲಿಯಿಂದೊಡೆಪೊಗಬ್ಬಿದವಂ(ಕಮಚ. ೬೯ ಕ್ರ.ಪೊ.; ಕಾವ್ಯಾವ. ೯೦ ನೋ). **ಬೆಳಗ್ಗೈ :** ನೆಲವಡಲಿಗೆಗಳೊಳ್ ನೆಲೆವಡೆದೆಳವಳಿಸುವೆಳವಚ್ಚೆಯ ಬೆಳಗ್ಗೈಯಂತೆ ಬೆಳ್ದಳಗಾಗಿ ಬಳ್ವಳಂ ಬಳೆದು ಪೊಸವಳರ ಪೊಸಸಿರಿಯ ಭಾರದಿಂ ಜೋಗಂಬೋದಂತೆ ಮಲಂಗಿದ ಜಾಗಂಗಳುಮಂ (ಲೀಲಾವ. ೦೦-೩೬ ವ). **ಬೆಳೆಗ್ಗೈ :** ಪುಳಕದ ನೆವದಿಂದ ಪೊಣ್ಮುವ ಹರ್ಷದ ಬೆಳೆಗ್ಗೈಗೆ ನೀರೆಱೆವಂತೆ ತುಳುಕುವ ಸೊಗದಾಲಿನೀರ್ವೊರೆಯನು ತಂದಿಳುಪುತವನ ನಿಟ್ಟಿಪಳು (ತಂಬ. ೬-೧೯). [ಬೆಳ್$_2$ + ಕೆಯ್$_4$]

**ಬೆಳೆಗೆಯ್ದೆರಿಗೆ** (ನಾ). ಬೆಳೆಯುವ ಜಮೀನಿಗಾಗಿ ಕೊಡುವ ತೆರಿಗೆ : ನಮ್ಮ ರಾಜಋಷಿಯರು ಆಳುತ್ತಿದ್ದ ಆಗ—ಯಾವ ಗದ್ದೆಗೆ ನಾನು ಎಷ್ಟುವರೆ ಹಣವನ್ನು ಬೆಳೆಗೆಯ್ದೆರಿಗೆಯಾಗಿ ಕೊಡುತ್ತಿದ್ದೆನೋ, ಅದಕ್ಕೇ ನಾನು ಈಗ ಉಣ್ಣೆಯಾಗಿ ಎರಡು ದುಪ್ಪಟ್ಟವರಹಗಳನ್ನು ತೆರುತ್ತಿದ್ದೇನೆ (ವಿನಿಕ. ೩೯-೭). [ಬೆಳೆಗೆಯ್ + ತೆರಿಗೆ (<ತೆಱಿಗೆ)]

**ಬೆಳೆಗೆಯ್ವೊಲ** (ನಾ). = ಬೆಳೆಗೆಯ್ : ಕನ್ನೀರ್ಜಲ ಪೆಣ ಬಿತ್ತು ನೆಣ ವೊಳೆಯಾಗೆ ರಣಭೂಮಿ ಕಾಲನ ಬೆಳೆಗೆಯ್ವೊಲದ ಸಂದಣಿಯಂತೆ ಕಣ್ಗೆ ಮೆಱೆದುದು (ಕುರಾಸಾಂ. ೧೨-೬೩). [ಬೆಳ್$_2$ + ಕೆಯ್ವೊಲ]

**ಬೆಳೆಗೇಡು** (ನಾ). ಬೆಳೆಯು ಕೆಟ್ಟು ಹೋಗುವುದು ; ಫಸಲು ಸರಿಯಾಗಿ ಬರದೆ ಹಾನಿಯಾಗುವುದು : ಈ ಜಿಲ್ಲೆಯೊಳಗಿನ ತೀರ ಬೆಳೆಗೇಡಾದ ಒಕ್ಕಲಿಗನನ್ನು ಸಮೃದ್ಧಿಯಾಗಿ ಬೆಳೆಹೊಂದಿದ ಕೊಂಕಣದೊಳಗಿನ ಒಕ್ಕಲಿಗನು ಸಂಗಟ್ಟಲಾರನು (ಪ್ರಾಬಂಧ. ೩-೦೯೩) ; ಈ ಪರುಷ ಬೆಳೆಗೇಡಾಗಿ ಬಹಳ ನಷ್ಟಕ್ಕೆ ಒಳಗಾಗಿರುವೆ (ಜಯಂತ. ೯೩೩).

[ಬೆಳ್$_2$ + ಕೇಡು]

**ಬೆಳೆಗ್ಗೈ** 'ಬೆಳೆಗೆಯ್' ನೋ.

**ಬೆಳೆಗೊಡು** (ಕ್ರಿ). ಫಲವನ್ನು ಕೊಡು; ಫಲಕಾರಿಯಾಗು : ಈ ಪರೀಕ್ಷಿತನ ಒಲಿಯಿಕೊಂಡಿರ್ದವನ ಸಂತಾನಕೆ . . . ಬೆಳೆಗೊಡುಗು (ಕ.ರಂಗ. ೯೨-೦೯).

[ಬೆಳ್$_2$ + ಕೊಡು$_1$]

**ಬೆಳೆತ** (ನಾ). ಬೆಳೆಯುವುದು ; ಬೆಳವಣಿಗೆ : ಬೆಳೆತ ; ಅಭಿವೃದ್ಧಿ : ವೃದ್ಧಿ (Growth. ಇಂಕಸಿ). 'ಬೆಳೆತಾಯ' ಪರ್ಯಾ. [ಬೆಳ್$_1$ + — ತ$_2$]

**ಬೆಳೆತಾಯ** (ನಾ). ವೃದ್ಧಿ ; ಹೆಚ್ಚಳ : ಈ ಅತಿರಿಕ್ತಮೌಲ್ಯವು ಕ್ರಯದ ಹಣದ ಬೆಲೆಯ ಬೆಳೆತಾಯವೂ ಅಲ್ಲ . . . ಅದೊಂದು ಸಾಮುದಾಯಿಕ ಸಾಮಾಜಿಕ ಘಟನೆ (ಪಾಚಾವ. ೧೦೯). P 'ಉಳಿತಾಯ', 'ಮುಗಿತಾಯ' ಎಂಬ ಶಬ್ದಗಳ ಸಾಮ್ಯದಿಂದ ಮಾಡಿಕೊಂಡ ರೂಪವಿದು.

[ಬೆಳೆತ + ಆಯ$_4$]

**ಬೆಳೆದಾಳ್ದು** (ಕ್ರಿ). ಬೆಳೆಯನ್ನು ಹೊಂದು; ಸಸ್ಯಸಮೃದ್ಧವಾಗು : ಶರದಂ ಬರಲೊಡನೆ ಮೊಳೆಪೋದತ್ತಬ್ಬಕಂದಂ ಕೋಳದೊಳೆ ಬೆಳೆದಾಳ್ದತ್ತಿಳಾ ಮಂಡಳಂ (ರಾಜಶೇ. ೬-೨). [ಬೆಳ್$_2$ + ತಾಳ್ದು$_1$]

**ಬೆಳೆನೀರು** (ನಾ). ಬೆಳೆಗೆ ಬೇಕಾದ ನೀರು; ಪೈರಿಗೆ ಹಾಯಿಸುವ ನೀರು: ಜಡೆಗಳೇ ಬೇರುಗಳು ಗಂಗೆಯ ಮುಡುಪೆ ಬೆಳೆನೀರಂಗವೇ ತರು . . . ಎನಲ್ಕಾ ಮೃಡನೆನಿಪ ಮೂಲಾತ್ಮವೃಕ್ಷಮಾ ವಿರಾಜಿಸಿತು (ಶ್ರೀರಾಂ. ೨-೦೯). [ಬೆಳ್$_2$ + ನೀರು$_1$ (< ನೀರ್)]

**ಬೆಳೆನೆಲ** (ನಾ). ಬೆಳೆಯಲು ತಕ್ಕುದಾದ ಭೂಮಿ; ಸಾಗುವಳಿಜಮೀನು: ಬೆಳೆನೆಲನೊಂದು ಮೆಟ್ಟಿನೆಡೆಯುಂ ಬಿಡಲಿಲ್ಲದನೇಕಧಾನ್ಯಸಂಕುಳ ಬಹುವರ್ಣಪೂರ್ಣಕಣಿಶಾವಳಿಯಿಂ ನಿಪರತ್ನರಾಶಿಯಿಂ ಬೆಳೆದವೊಲಿರ್ಪುದು (ಅಸಂಪು. ೦-೬೬). [ಬೆಳ್$_1$ + ನೆಲ]

**ಬೆಳೆಬಡ್ಡಿ** (ನಾ). ವೃದ್ಧಿಯಾಗುವ ಬಡ್ಡಿ ; ಚಕ್ರಬಡ್ಡಿ : ಬೆಳೆಬಡ್ಡಿಯಲು ವರುಷಕ್ಕೆ ಗದ್ಯಾಣಂ ಮೂವತನುಮಾ ಕಱಿಗೆ ಆ ತುಂಬಿಂಗೆ . . . ಆ ಮಹಾಜನಂಗಳು ನಡೆಸುತೆ ಬಪರು (ಎಕ. VI, ಕಡೂರು. ೯೨-೦೯ ; 1259 ?). [ಬೆಳ್$_1$ + ಬಡ್ಡಿ$_2$]

**ಬೆಳೆಯಿಡಿಸು** (ಕ್ರಿ). ಭೂಮಿಯಲ್ಲಿ ಬೆಳೆ ಬರುವಂತೆ ಮಾಡು : ಕ್ಷೇತ್ರಾಜೀವಃ, ಕರ್ಷಕಃ, ಕೃಷಿಕಃ, ಕೃಷೀವಲಃ—ಳ ಹೊಲಗದ್ದೆ ಮುಂತಾದ ಭೂಮಿಯ ಬೆಳೆಯಿಡಿಸಿ ಜಿದುಕುವವನ ಪೆಸರು (ನಿಘಂ.ಶಿ. ೨೬೩).

[ಬೆಳ್$_2$ + ಇಡಿಸು$_1$]

**ಬೆಳೆಯಿಸು,** ಬೆಳಸು$_1$, ಬೆಳೆಸು (ಕ್ರಿ). ೧. ಗಿಡ ಮರಗಳು ವೃದ್ಧಿಯಾಗುವಂತೆ ಮಾಡು ; ಸಸ್ಯಾದಿಗಳನ್ನು ಬಳೆಸು : ಅನಿಬರುಂ ನಿತಂಬಿನಿಯರ್ . . . ಪೊಂ ನೀರೆಱೆದು ನತಪಿ ಬೆಳೆ[ಶಾಶಾಂ. ಬಳೆ]ಯಿಸಿದ ಬಾಳಾಶೋಕಪಾದಪಾದಿಗಳ್ಗೆ ಮುಕುಳಿತಾಂಜಲಿಯರಾಗಿ (ಆಪು. ೬-೦೧೦ ವ); ಜಿತರಿಪುಸುರೇಂದ್ರಮನ್ನುಕ್ಷಿತಿಪತಿ ರಿಪುನೃಪಕುಳಾಂಗನಾಜನ ಮನೂಜ್ಞದ ತಬಾಷ್ಪಸಲಿಲಧಾರಾಪ್ರತಾನದಿಂ ಕೀರ್ತಿವಲ್ಲಿಯಂ ಬೆಳೆ[ಶಾಶಾಂ. ಬಳೆ] ಯಿಸಿದಂ (ಶಂರಾವಾ. ೦-೦೬೭) ; ಕುದ್ದಾಲಹತಿಯನುಱ ತಾಳ್ದಿಮ್ಮನಿನ್ನೆಗಂ ಮುದ್ದುಗೈದೀ ವಸುಧೆಬೆಳೆಯಿಸಿದಳು (ಕ್ರ.ಶಿಖಾ. ೩-೩೦). ೨. ಅಭಿವೃದ್ಧಿಗೊಳಿಸು ; ಏಳಿಗೆಹೊಂದುವಂತೆ ಮಾಡು : ಉತ್ತರ ಕರ್ನಾಟಕದಲ್ಲಿ ಅಚ್ಚಗನ್ನಡತನವನ್ನು ಬೆಳೆಯಿಸಲು ದುಡಿದವರಲ್ಲಿ ಪ್ರಮುಖ ಲೇಖಕರೊಬ್ಬರು (ಕಗದ್ಯ. ೩೯). **ಬೆಳಸು$_1$ :** ೧. ಕಂದುಗೊರಲನೊಳು ಕಾದಲ್ಕೆ ಸ್ಮರ ತನ್ನದೊಂದು ಬಿಲ್ಲದು ಸಾಲದೆಂದು ತಂದಿಲ್ಲಿ ಬೆಳಸಿದನೆಂಬಂತೆ ಬೆಳ್ಗರ್ಬು ಸಂದಣಿಸಿತು ಬನಬನದಿ (ವೋಹಕ. ೨-೯೭) ; ಅಲರುವಿಲ್ಬಿಷ್ಟ ಬಾಣಗಳತಿವ್ಯಂದುವದಟುಕರು ಜಪರೆಂದು ಚಂದ್ರ ಅಳಿಯನ ಬಿಲ್ಗೆ ಬೆಳಸಿದಂತೆ ಧವಳೇಕ್ಷುಗಳ್ ಗದ್ದೆ ರಾಜಿಸುತಿಹುವು (ಕಂಪಪ. ೩-೭೯). ೩. ಪೋಷಿಸು ; ಸಾಕು : ಮೇದಿನಿಯೊಳವ್ವೆವ್ವೆ ತಾಯೋಪಾದಿಯಲಿ ವೊಲಿಯೂಡಿ ಬೆಳ [ಶಾಶಾಂ. ಳೆ] ಸಲು ಬೆಳೆದೆ ವಂಗನಾಗಿ (ಶಿಸಪು. ೨೩-೭). ೪. ಹೆಚ್ಚಿಸು; ಅಧಿಕಗೊಳಿಸು : ಪರಿಯ ಪಿಸುಣಿಕೆಯವರ ಚಿತ್ತವ ಬೆರಸಿ ವೈರವ ಬೆಳಸಿ ಬಂದರು ಧರೆಯ ಭಾಗವ ಬೇಡಿ ಕದನವ ಮಸೆದರೆವೊಡನೆ (ಕುಮಾವ್ಯಾಭಾ. ೧ ೦೯) ; ನೀನಿಂದು ಮುಳಿದು ಮದಗೊಬ್ಬಿನಲಿ ವೈರವ ಬೆಳಸಿ

ಕೆಣಕಿದೊಡಾ ನೃಪಾಲಕತಿಲಕ ತ್ರೆಕ್ಕುವನೇ (ತೊರರಾ. ೩-೭-೪೦). ೫. ಉಂಟು ಮಾಡು ; ಹುಟ್ಟಿಸು : ಸಲಿಸಿದವನೋ ಮುನ್ನ ನೀನೆನ್ನವರ ಸಲಿಗೆಗಳ ನಿಲಿಸಿದವನೋ ನೆಲೆಗೆ ಸೇರಿಸಿ ಬೆಳೆ[ಶಾಕಾಂ. ಳೆ]ಸಿದವನೋ (ಏಸತ್ರ. ೪೦-೪೦). ೬. ಚಾಚು; ನೀಡು ; ನೀಳವಾಗಿಸು : ಪವನಾಭ್ಯಾಸಂಗಳಿಂದಭ್ಯಾಸಯೋಗಕ್ರಮಕ್ರಮಂಗಳಿಂ ಜಿಹ್ವೆಯು ಬೆಳಸಿ ಪಠಸಮ್ಮಿಶ್ರದಿಂ ಷಡಾಧಾರದ ಪಶ್ಚಿಮದ ಪಥವಿಡಿದು ಪ್ರಾಣಪವನನ ಮಸ್ತಕಕ್ಕೇಱಿಸಿ . . . ಮುಕ್ತ್ಯಂಬಿಕೆಯೊಡಗೂಡುವುದು ಲಂಬಿಕಾಯೋಗ (ಆವಪ. ೨೯-೮೭); ಉಱುವ ಬಾಲವ ಬೆಳಸಿ ದಾರಿಯು ತೆಱಹುಗೊಡದೆಡೆಯೊಡ್ಡಿ ಮನುಜನ ಮುಱುಕವನು ತಾ ಕಾಂಬೆನಿನ್ನೆನುತಿರ್ದನಾ ಹನುಮ (ಕುವ್ಯಾಅ. ೬೦೩. ೦೧-೦೪). ೭. [ಗಣಿತ] ಗುಣಾಕಾರಮಾಡು ; ಗುಣಿಸು : ತಿವಿಪೊಯ್ ಪೆರ್ಚಿಸು . . . ಬಳಯಿಸು . . . ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಪೆಸರು (ವ್ಯಪಾ. ೦೧-೦೦). **ಬೆಳೆಸು :** ೧. ಮೂರಡಿ ತೂಮಂ ದೇವಭೋಗದಿಮಾ ಕಱನಿ ಫಲಮಾ **ಕೊಣ್ಡು** ಬೆಳೆಸಿ ನಾಗೊಮ್ಮೆಯುಂ ಸಾಲೆ ಊಳುವದು (ಎಕ. X, ಕೋಲಾರ. ೦೦-೯ ; ಸು. 753) ; ಇಳೆಯೊಳದಂಕುರಿಸಿ ಹರಿತ್ಕುಳದೊಳ್ ವರ್ಧಿಸಿಯೆ ನೀಳ್ದು ಗಗನಕ್ಕಸುಪೃತ್ಕುಳನಾರೀ[ನಯನಾಂ]ಬುವೆ ಬೆಳಸಿದುದೆನೆ ಕೀರ್ತಿವಲ್ಲಿಯುಂ ಸತ್ತಿಗನಾ (ಗದಾಯು. ೦೦-೭); ತಿಳಿದ ಮಾತೆ ಹೊಳಸಿದಂತೆ ಎದೆಯು ಬೀಜ ಬೆಳಸಿದಂತೆ ಭಾವನಾದದಂತೆವೋಲ್ (ಸೂರ್ಯಶ. ೭೦-೦೫). ೪. ಆನೆಗೊಂದಿ ವೆಂಕಟಪತಿರಾಯರು ಈ ರಾಜಒಡೆಯರವರ ಸಂಗಡ ಸ್ನೇಹವಂ ಬೆಳಸಬೇಕು (ಮೈಶಾಸಂ. I, ೨೩). [ಬೆಳ್$_1$ + – ಇಸು$_3$]

**ಬೆಳೆವಣಿಗೆ** 'ಬೆಳವಣಿಗೆ' ನೋ.

**ಬೆಳೆವತ್ತರ್** (ನಾ). ಬೆಳೆಯುವ ಭೂಮಿ : ಊರೂರ್ಗಳ್ದಪ್ಪದೆ ಮಾದಾಳಂ ಬೆಳೆವತ್ತರಂ ಪಡಲ್ವಾಣಮನಾಹಾರಮಸಾರ್ವಣೆಯುಮನೀ ವಾರಿತಮೂರ್ತೀವರೆಂದುಮಾ ನಾಡವರ್ಗಳ್ (ವರ್ಧಮಾ. ೦೦-೮). P ಈ ಪದ್ಯದ ಅರ್ಥ ಕ್ಲಿಷ್ಟವಾಗಿದೆ. [ಬೆಳ್$_1$ + ಪತ್ತರ್ (< ಪತ್ತಲ್) ]

**ಬೆಳೆವಳಿಗೆ** 'ಬೆಳವಣಿಗೆ' ನೋ.

**ಬೆಳೆವೊಲ,** ಬೆಳೆಹೊಲ (ನಾ). ಬೆಳೆದ ಹೊಲ ; ಪೈರಿನಿಂದ ತುಂಬಿದ ಭೂಮಿ : ಬೆಳೆವೊಲನೆತ್ತಲುಂ ಕಿಱಿದೆ ಪರ್ವಿದ ಪರ್ವಟಿ (ಶಬ್ದ. ಪ. ೭೭ ಪ್ರಯೋ); ಅಳಿಯನ ಪಡೆಮು ನಾಲ್ವತ್ತೆಂಟುಗಾವುದದಳತೆಯೊಳೊಡ್ಡಿ ರತ್ನಗಳ ಬೆಳೆವೊಲದಂತೆ ಸಿಂಗರಿಸಿರ್ದ ಕಟಕಗ್ಗದಳವ ಕಂಡತ್ತ ಬೀಗಿದಳು (ಶಠಷ. ೪೯-೮೫); ಬೆಳೆವೊಲಂ ಗೆಯ್ಮೆಯುಂ ಗಾಳಿಯುಂ ತೂಗುತಿರೆ ಗಿಳಿವಳಗ ಮೆಲ್ಲುಲಿಯು ಒಸಗೆಯೆನೆ ಬರಲು (ಕಾಲೂರ. ೫೭-೯೨). **ಬೆಳೆಹೊಲ :** ಕೆಳಗೆ ಬೆಳೆಹೊಲ ಕಪ್ಪು, ಮೇಲೆ ಬಾಂಬೊಲ ಕಪ್ಪು, ಬೆಟ್ಟಗಳು ಕಪ್ಪು (ಹೊಂಗಳ. ೦೫-೨೨). [ಬೆಳ್$_2$ + ಪೊಲ]

**ಬೆಳೆಸಾಲು,** ಬೆಳಸಾಲು (ನಾ). ಪೈರಿನ ಸಾಲು . **ಬೆಳಸಾಲು :** (ಃ).

**ಬೆಳೆಸಾಲ ಕುಂಟೆ, ಬೆಳಸಾಲ ಕುಂಟೆ**= ಪೈರಿನ ಸಾಲುಗಳ ನಡುವೆ ಹರಗಿ, ಕಳೆಯನ್ನು ತೆಗೆಯಲು ಉಪಯೋಗಿಸುವ ಒಂದು ಬಗೆಯ ಸಾಧನ ; ಎಡೆಕುಂಟೆ : (ಃ). [ಬೆಳ್$_2$ + ಸಾಲು$_2$ (< ಸಾಲ್$_3$) ]

**ಬೆಳೆಸು** 'ಬೆಳೆಯಿಸು' ನೋ.

**ಬೆಳೆಹೊಲ** 'ಬೆಳೆವೊಲ' ನೋ.

**ಬೆಳೊಡಕಿಲು** 'ಬೆಳ್ಳಡಕಿಲ್' ನೋ.

**ಬೆಳ್ಕನೂರ್** (ನಾ). ಒಂದು ಊರಿನ ಹೆಸರು : ದಕ್ಷಿಣಸ್ಯಾಂ ದಿಶಿ ಬೆಳ್ಕನೂರ್ ಗ್ರಾಮು (ಇಅ. VII, ೦೦೫-೨೭; ೦೦ನೆಯ ಶತ). [? + ಊರ್]

**ಬೆಳ್ಕರಿಸು,** ಬೆಳುಕರಿಸು (ಕ್ರಿ). ೧. ಬಿಳುಪಾಗು; ಬಿಳಿಯ ಬಣ್ಣವನ್ನು ಹೊಂದು : ನೊಸಲೊಳಿಕ್ಕಿದ ಮುಂದವಪ್ಪ ಚಂದನದಣ್ಪಿನಿಂ ಪತ್ತಿ ಪಗಲ್ಬತ್ತ ಬೆಳ್ಕರಿಸಿದಳಕನಿಕರಮುಂ . . . ಎನ್ನೊಳೆಳವಡೆ (ಕಾದಂಪೂ. ೮೯೦); ಮುರಿದ ತೊಡಂಬೆಯೊಳ್ಮೊನಸಿ ತೋರ್ಪ ಪಸುರ್ಪನೆ ಪೋಗೆ ಬೀಗಿ ಬೆಳ್ಕರಿಸಿದ ಮೊಗ್ಗೆ ಕೂಡೆ ಬಿಳಿದಾದ ಮುಗುಳ್ (ಮಲ್ಲಪು. ೩-೪೭) ; ಬೆಳ್ಳಿಕಟ್ಟು ಬೆಳ್ಕರಿಪುದು ಕಿಮ್ಮನೆಂದು ರಜತಾದ್ರಿಯಿನಿಳಿಯೆ ಬಂದು ನಿಲ್ವಿನಂ ಗಿರಿಪತಿ ಶಂಭುಮಂದಿರಮನೆತ್ತಿಸಿದಂ ಗುಣಿಕೂಸಚಟ್ಟಿಯಂ (ಎಕ. V, ಬೇಲೂರು. ೦೯೩-೯೩; 1161). **ಬೆಳುಕರಿಸು :** ೧. ನರೆ ನೆಗೆದು ಬೆಳುಕರಿಸಿ ತಲೆಗೆ ತಲೆದೋಱುತಿರೆ ಪರಕರಿಸಿ ಹಂಜೆಯಂ ಹಂಜರಿಸಿ (ಬಂಡೋರ. ೨-೦೦). ೨. ನಿಸ್ತೇಜವಾಗು ; ಬಿಳಿಚಿಕೊಳ್ಳು : ಹೊಳೆವ ಮೊಗ ಬೆಳುಕರಿಸದೆನೆ ಕೋಮಲೆ ತಳೆದ ಗರ್ಭವದು ವಸುಧಾತಳದೊಳತಿ ಸೋಜಿಗವು ಭಾವಿಸುವೊಡೆ ಜಿನಾಂಬಿಕೆಯಾ (ಸಾಳ್ವಭಾ. ೩೨-೫೯).

[ < ಬೆಳ್$_1$ + – ಇಸು$_3$ ]

**ಬೆಳ್ಕಾಡು** 'ಬೆಂಗಾಡು' ನೋ.

**ಬೆಳ್ಕು$_1$,** ಬಳುಂಕು, ಬಳುಕು$_1$, ಬಳ್ಕು$_1$ (ಕ್ರಿ). ೧. ಅಂಜು ; ಹೆದರು. P 'ಬೆಳ್ಕು' ಎಂಬುದಕ್ಕೆ ಕ್ರಿಯಾರ್ಥದಲ್ಲಿ ಕನ್ನಡದ ಪ್ರಯೋಗ ಸಿಕ್ಕಿರುವುದಿಲ್ಲ. 'ಬೆಳ್ಕುಱು' ಎಂಬ ಶಬ್ದದಲ್ಲಿ ನಾಮಾರ್ಥದಲ್ಲಿ 'ಬೆಳ್ಕು' ಎಂಬುದು ಉಪಲಬ್ಧವಾಗಿರುವುದರಿಂದ ಕ್ರಿಯಾರ್ಥದಲ್ಲಿಯೂ ಇದು ಪ್ರಯೋಗದಲ್ಲಿದ್ದಿರಬಹುದು ಎಂಬ ಆಧಾರದ ಮೇಲೆ ಇದನ್ನು ಮುಖ್ಯೋಲ್ಲೇಖ ಮಾಡಲಾಗಿದೆ. **ಬಳುಂಕು :** ೨. ಬಾಗು; ಬಗ್ಗು : ಕೊರಲೊಳ್ ತಳ್ತಗ್ಗಳಂ ತೊಂಗಲ ಪೊರಜೆವೊಲಿಂ ಬಾಗೆ ಬಾಲಂ ಬಳುಂಕುತ್ತಿರೆ ಗಾತ್ರಂ ನೆತ್ತಿಯೊಳ್ ನಟ್ಟುಗುರುಗಿಯೆ (ಲೀಲಾವ. ೮-೨೪); ಉಲಿಯೆ ಕಲಕಾಂಚಿ ಮುಡಿಯಿಂದಲರುಗೆ ಬಡನಡು ಬಳುಂಕೆ (ರಾಜಶೇ. ೦೦-೭). P ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಬಳುಕು$_1$ :** ೧. ಬಾಡುತಂ ಬಳುಕುತಂ ಪೆಱಮೆಟ್ಟಿ ಭೀತಿಯಿಂ ಕೆಲಸಾರ್ದು (ತಿರುಚ. ದೇ. ೦೫-೨೦); ಅಳುಕುತ್ತ ಬಳುಕುತ್ತ ತಂದೆ ಕರುಣಿಸು ವಿಶಾಪವನೆಂದು (ಸಿದ್ಧರಾ. ೦-೨೫); ದೋಸಮಂ ಕಂಡೊಡಾಂ ಬಳುಕುವೆಂ (ಶಾಪಶಂ. ೪-೦೦). ೨. ಲಲನೆ ಸುಳಿದಳು ಕುಚದ ಭಾರಕೆ ಬಳುಕೆ ನಡು . . . ಸುಳಿಗುರುಳೊಲೆಯಲಾ ಕಲಿಭೀಮ ನಿದಿರಿನಲಿ (ಕುವ್ಯಾಅ. ೯-೦೪); ನಡು ಬಳುಕಲ್ ಕುಚಂ ಕುಣಿಯೆ. . . ರಾಜಶೇಖರಗೆಣ್ಣೆಯನೊಲ್ದು ಪೂಸಿದಳ್ (ಕಾವ್ಯಸಾ. ೬೩೦). ೩. ತೊನೆದಾಡು; ಒಲೆದಾಡು : ಭೂವನಿತೆಗೆ ವಂದಿಸುವ ತೆಱದಿಂದ ಬಾಗಿ ಬಳುಕುವ ತೆನೆಗಳಿಂದ (ಸಿದ್ಧರಾ. ೨-೨೩) **ಬಳ್ಕು$_1$:** ೧. ಭಾನುಮತಿ. . . ಲಂಬಣಾ ಪಱಿಯೆ ಮುತ್ತಿನ ಕೆಡನೆ ನೋಡಿ ನೋಡಿ ಬಳ್ಕುತ್ತಿರೆ (ಶಂಕಭಾ. ೯-೬೯); ಗಾಂಧಾರಿ ಮನದೊಳ್ಳ್ಕಿ ಬಳ್ಕಿ ನನೆಕೊನೆವೋಗಿ (ಗದಾಯು. ೩-೭೭ ವ). ೨. "ಬಳ್ಕು_ನಮನೇ" (ಶಮಧಾ); ತುಡಿ[ಸದೆ] ಪಾರಮಂ ಮೊಲೆಯ ಬಿಣ್ಪನೊಳಂ ನಡು ಬಳ್ಕಿದಪ್ಪುದು (ಶಂಶಭಾ. ೩-೪೭); ಬಲ್ಪೊಂಬಳೆಯಿಂ ಬಳ್ಕಿತ್ತು ಕೌಂಗು (ಕಾದಂಬು. ೭೭೮); ಜಂಬುಕನ ಕೋಪದೊಳ್ ಬಾರಣದ ರೋಮಂಗಳೇಂ ಬಳ್ಕಿದಪ್ಪುವೆ (ಜಬಪು. ೨೦-೭).

[ದೇ.॥ ತಮಿ. ವೆಳ್ಕು; ತುಳು. ಬಳಕು, ಬಳುಕು, ಬೊಳಕು; ತೆಲು. ಪಡಕು. ವಣಕು]

**ಬೆಳ್ಕು$_2$,** ಬಳುಕು$_2$, ಬಳ್ಕು$_2$ (ನಾ). ೧. ಹೆದರಿಕೆ; ಅಂಜಿಕೆ: ಭಯ : 'ಬೆಳ್ಕುಱು$_1$' ಪರಾ. **ಬಳುಕು$_2$ :** ೨. ಒಲೆದಾಟ; ತೊನೆತ : ಗಿಡಬಳ್ಳಿಗಳ ಬಗೆಬಗೆಯ ಬಳುಕು. . . ಒಂದು ಬಗೆಯ ರೂಪರುಚಿಯನ್ನುಂಟುಮಾಡಿವೆ (ಸೌಂದಸ. ೨). **ಬಳ್ಕು$_2$:** ೧. 'ಬಳ್ಕುಱು' ಪರಾ. ೩. ನಡುಕ; ಕಂಪನ : 'ಬಳ್ಕುವೋಗು' ಪರಾ.

**ಬೆಳ್ಕನೆವೋಗು**= ಅಂಜು ; ಹೆದರು : ನಾಕಚ್ಯುತಿಯನಾಗಳಱಿದು ಮನದೊಳಳ್ಕಿ ಬೆಳ್ಕನೆವೋಗಿ (ಆದಿಪು. ೩-೩ ವ). [<ಬೆಳ್ಕು$_1$]

**ಬೆಳ್ಕುತ್ತ** 'ಬೆಳ್ಕುಱು$_1$' ಪರಾ.

**ಬೆಳ್ಕುತ್ತು** 'ಬೆಳ್ಕುಱು$_1$' ಪರಾ.

**ಬೆಳ್ಕುರು** 'ಬೆಳ್ಕುಱು$_2$' ನೋ.

**ಬೆಳ್ಕುಱು$_1$**, ಬಳ್ಕುಱು (ಕ್ರಿ). ಬೆಳ್ಕುತ್ತ (ಭೂತಕೃ), ಬೆಳ್ಕುತ್ತು (ಭೂತನ್ಯೂ). ೧. ಭಯಪಡು; ಅಂಜು; ಹೆದರು : "ಬೆಳ್ಕುಱು–ಭಯೇ" (ಶಬ್ದಾ. ೫); ಮತ್ತನೆಯನರಸನನುಜನ ಸಕ್ತಬಲಂ ನಿನ್ನೊಳ್ ಜಸಲೆಂದಿರ್ದಂ ಬೆಳ್ಕತ್ತಿರ್ದನಪ್ಪುಡೇತೊದಳೆತ್ತಣ ದಿನನಾಥನಿತ್ತ ಮೂಡುಗುವಲ್ತೇ (ಕ.ಚಕ್ರ. ೧೨-೧೭೯); ಅಱಪಿದುದು ರೌದ್ರರಸವಂ ನಿಱಿಸಿದ ಕುಡುವುರ್ವು ಕರ್ಚಿದೌಡುರ್ಚಿದ ಬಾಳ್ ಇಱಿಯಲನುಗೆಯ್ದ ಕೈ ಬೆಳ್ಕುಱೆ ಬಿಟ್ಟನೆ ಬಿಟ್ಟ ಕಣ್ಗಳಾರೋಹಕರಾ (ಗದಾಯು. ೪-೨೭); ಗೋಪಾಲಕರ್ ಬೆಳ್ಕುಱೆ ದೈತ್ಯರ್ ಪೋಗೆ ಕೃಷ್ಣಂ ರಿಪುಕರಿಗಿನಿಸಂ ಗೆಲ್ಲವೀವಂತೆ ಪೋರ್ದಂ (ಜಗ೦. ೬-೫೨). ೨. ನಡುಗು; ಕಂಪಿಸು : ತನುವಂ ತೀವ್ರಾನಿಳೋಗ್ರಾಸಿ ಭೇದಿಸೆ ಬೆಳ್ಕುತ್ತೆ ವಿಶೀರ್ಣ ಧೈರ್ಯಕವಚರ್ (ವರ್ಧಪು. ೧೧-೯೦); ಅಳ್ಕದೆ ಚಿತ್ತದೊಳ್ ಬೆದಱೆ ಬೆಳ್ಕದುಗ್ರತಪೋನುತಾಪದಿಂ ಬಳ್ಕದೆ ನೋಂಪಿಯಿಂ ಗೊಱಗೆ ವಂದ ಶರೀರಗುಣಾನುರೋಧದೊಳ್ ತಳ್ಕದಿರ್ದ ಜೀವಶರವಂ ಬಿಡೆ ಧಾರ್ಮಿಕಚಕ್ರವರ್ತಿ (ಅನಂಪು. ೪-೩೮). **ಬಳ್ಕುಱು** : ೧. ಕಿಂಪುರುಷರಾವ ಭುಜಬಲದ ಸೊರ್ಕಿಂ ಪುರುಷಸಿಂಹನೊಳ್ ಪೋಣರ್ವಮೆಂದು ಬಳ್ಕುಱೆ ಯುಂ (ಜಗ೦. ೦೩-೬೬, ೫); ಎಱಗುವ ತುಂಬಿವಿಂಡಗಿಯೆ ಬಗ್ಗಿಪ ಕೋಗಿಲೆ ಕೊಂಬುಗೊಂಡು ಬಳ್ಕುಱೆ . . . ಬಾಂದೊಱೆದಲೆಯಂ ಕನಲ್ದು ನಡೆತಂದು ಬಸಂತನ ಸೊರ್ಕು ಸೋರ್ವಿನಂ ಮುಂದೆ ನಿಂದು (ಅಭ್ಯಿನ. ೩೨೦). 'ಅಳ್ಕುಱು' ಪರಾ. [ ಬೆಳ್ಕು$_2$ + ಉಱು ]

**ಬೆಳ್ಕುಱು$_2$**, ಬೆಳ್ಕುರು (ನಾ). ಅಂಜಿಕೆ ; ಹೆದರಿಕೆ ; ಭಯ : ಕಟುಕನ ಬಂದಿಯೊಳಾದ ಆವಿನಂತಿರೆ ಮುನಿಕಾಂತೆ ಬೆಳ್ಕುಱಿಂ ಸಿಡಿಮಿಡಿಗೊಂಡು ದೆಸೆಗೆಟ್ಟು ಬಾಯ್ಬಿಟ್ಟು ಬಿಂದೆಸೆಯನೆ ನೋಡಿನೋಡಿ . . . ಕೇಱಿದಳ್ (ರಾಜಶೇಖ. ೬೪-೨೮). **ಬೆಳ್ಕುರು** : ಅಳ್ಕೆಯಿನ್ನೆಲ್ಲಿರ್ಪುದಬ್ಬಾಳ್ಗಳ್ ಕೈತರಲ್ ಬೆಳ್ಕುರೇಂ ಬಡಿದಿಕ್ಕ ನಿಮ್ಮದೇನೊಸಗೆ ಆಳ್ವಾಳ್ಗೆ ಮುಂದೆಲ್ಲಿ ಬಾಳ್ಕೆಯಿರ್ಪುದು ! ತಡೆಗೆ ! (ಶಾಂತೀಶ. ೦೭೦-೩೫೫). [ <ಬೆಳ್ಕುಱು$_1$ ]

**ಬೆಳ್ಗಂಗೆ** (ನಾ). ಶುಭ್ರವಾದ ಗಂಗಾನದಿ : ಸಿರಿಬಾಣೆಯ ಪೆತ್ತ ಸೊದೆಗಡಲಿಳೆಯ ತಾತ್ಪರಿಯದಿ ನೋಡಬಂದಂತೆ ಮುರಿಮುರಿದುರ್ವಿಯಾ ತಳದಲ್ಲಿ ಮುಂಕೊಂಡು ಪರಿದಳು ತುಂಗ ಬೆಳ್ಗಂಗೆ (ಸೋಹಶ. ೬-೩೫).

[ ಬೆಳ್$_1$ ( < ಬಿಳಿದು ) + ಗಂಗೆ$_2$ ]

**ಬೆಳ್ಗಂಡ** (ನಾ). ತಿಳಿವಳಿಕೆಯಿಲ್ಲದವನು ; ಮೂಢ : ತಪೋಧನರೆಂಬ ಮತಾಸಮುದ್ರಮುಮಂ ಶೋಷಿಸುವ ಕಲಿಕಾಲರಾಜನ ಮಹಾ ಪ್ರತಾಪಾಗ್ನಿ ಗೃಹಸ್ಥರೆಂಬ ಬೆಳ್ಗಂಡರುಮನುಱಿಪುಲೀಗುವೆ (ಕೀಪಸಂ. ೦೦೨-೨೦). [ ಬೆಳ್$_2$ + ಗಂಡ$_1$ ]

**ಬೆಳ್ಗಡಲ್** (ನಾ). ಬಿಳಿಯ ಕಡಲು; ಶ್ವೇತಸಮುದ್ರ: ಬಳ್ವಳ ನೀಳ್ದ ಕಣ್ಮಲರ ತಳ್ತಮೆಯಿಂ ಕರೆಗಣ್ಮ ಬೆಳ್ಗಡಲ್ಗಳ್ವರಿಯಲ್ಕಮಾಟಿಸಿದೊಡೊಯ್ಯನೆ ಮಂಗಳ [ಭಂಗ]ಭೀತಿಯಂ ತಳ್ವದೆ ಮಾಡೆ ಬಾಷ್ಪಜಳಮಂ ಕಳೆದಟ್ಟಿಬಿ ನೀಯೆ (ಶಂಕಚ. ೭-೬೮). [ ಬೆಳ್$_1$ ( < ಬಿಳಿದು ) + ಕಡಲ್$_2$ ]

**ಬೆಳ್ಗತ್ತೆ** 'ಬೆಳ್ಗಟ್ಟಿ' ನೋ.

**ಬೆಳ್ಗದಿರ್**, ಬೆಳುಗದಿರು (ನಾ). ಚಂದ್ರನ ಬಿಳಿಯದಾದ ಕಿರಣ : ದೆಸೆಯಂ ಬಾಸಣಿಸುತ್ತೆ ಬೆಳ್ಗದಿರಿನಿಂ ಪಣ್ಯಾಂಗನಾವೀಧಿಯೊಳ್ . . . ತಾರಾಳಿದೀಪಂಗಳಿಂ ಹಸನಾಯಿತ್ತು ಪುರಂ ಗೃಹಾಂಗನೆಯರಿಂ ಚಂದ್ರೋದಯಾನಂದದೊಳ್? (ಸೊಕ್ತಿಸು. ೬-೨೩೭); ಈಶ್ವರಮಾತಸುಧಾಬ್ಧಿ ವರ್ಧಿಸೆ ಕರಮೆಸೆದುದು ತಸ್ಮಿಬೇಂದು ನಗೆವೆಳ್ಗದಿರಿಂ (ಕೃಕಶ. ೩೭-೭೮). **ಬೆಳುಗದಿರು**: 'ಬೆಳುಗದಿರ' ಪರಾ. [ ಬೆಳ್$_1$ ( < ಬಿಳಿದು ) + ಕದಿರ್$_2$ ]

**ಬೆಳ್ಗದಿರ**, ಬೆಳುಗದಿರ (ನಾ). ಬಿಳಿಯ ಕಿರಣಗಳನ್ನುಳ್ಳವನು ; ಚಂದ್ರ : "ಜೊನ್ನೊಡಲಂ . . . ಬೆಳ್ಗದಿರಂ, ಇರುಳರಸಂ, ಚಂದಿರಂ . . . ತಿಂಗಳ್ ಈ ೨೦ ಚಂದ್ರನ ಪೆಸರ್" (ಕಚಾ. ೪೮-೨೩); ಸಿರಿಗೆ ಮನ್ಮಥ ಸರಿತ್ಪತಿಯು ದರದಲಿ ಬೆಳ್ಗದಿರ (ರುಕ್ಮಾಂಗ. ೪-೭). **ಬೆಳುಗದಿರ** : ಕಾಯಘನಕಟ ನಡಸಿದ ವಿಚಾರಣೆಯ ಕಟ್ಟನೀತಿಗೆ ಹೇಸಿ ಬೆಳುಗದಿರನಿಳಿವೋಗೆ (ಗೂಳಿಕ್ಷಾ. ೦-೯).

[ಬೆಳ್ಗದಿರ್ + —ಅ$_7$]

**ಬೆಳ್ಗನ್ನಡ**, ಬೆಳುಗನ್ನಡ (ನಾ). ಶುದ್ಧವಾದ ಕನ್ನಡ ಭಾಷೆ; ಅಚ್ಚಗನ್ನಡ: ಅಪ್ಪನ ಹೆಸರು ಕನ್ನಡವೆಂದಷ್ಟೆ . . . ಅವನ ಹಿಂದಿನವನದು ಬೆಳ್ಗನ್ನಡವೆಂದಾಗಿರಬಹುದಂತೆ (ಪಡಿಮ. 1, ೪೯೫). **ಬೆಳುಗನ್ನಡ** : ಒಳುಗನ್ನಡ ಬೆಳುಗನ್ನಡ ಪಳೆಗನ್ನಡ ದೇಶೀಯಂಗಳಾ ಕನ್ನಡಮಂ ತಿಳಿ ಸಕ್ಕದಗನ್ನಡ ಮುಮಮಿಳೆಯೊಳ್ಕವಿತಾಮಹಾತ್ಮೆಯಂ ಪೊಱಿವ ನರಂ (ಶಬ್ದ. ೪-೨); ನಿಜಗುಣಶಿವಯೋಗಿ ಬೆಳುಗನ್ನಡಮಾದ ವಚನರಚನೆಗಳಿಂ ವಿವೇಕಚಿಂತಾಮಣಿಯೆಂಬ ಪ್ರಕರಣಮಂ ಪೇಳ್ದನು (ವಿವೇಚ. ೧).

[ಬೆಳ್$_1$ (<ಬಿಳಿದು) + ಕನ್ನಡ$_1$]

**ಬೆಳ್ಗಬ್ಬು** 'ಬೆಳ್ಗಬ್ಬು' ನೋ.

**ಬೆಳ್ಗರು** (ನಾ). (ಚದುರಂಗದಾಟದಲ್ಲಿ ಬಳಸುವ ಆನೆ, ಕುದುರೆ ಮುಂತಾದ) ಬಿಳಿಯ ಬಣ್ಣದ ಕಾಯಿ : ಒದವಿದ ತಾರಗೆಗಳ್ ನಿಲ್ಲದವೆಲ್ಲಂ ಪರೆದು ಪೋಗೆ ಬೆಳಗಪ್ಪಾಗಳ್ ಚದುರಂಗದ ಬೆಳ್ಗರುವುಡುಗಿದ ನೀಲದ ಮಣೆ[ಕೆ]ಯ ಮಾಟಿಕೆಯಾಯ್ತಾಕಾಶಂ (ಸೂಕ್ತಿಸು. ೯-೬).

[ಬೆಳ್$_1$ (<ಬಿಳಿದು) + ಕರು$_2$]

**ಬೆಳ್ಗರೆ** (ಕ್ರಿ). (ದಿಗ್ಭ್ರಮೆಯಿಂದ) ಕೂಗಿಕೊಳ್ಳು; ಆಕ್ರಂದನ ಮಾಡು; ಚೀರು : ಇಟ್ಟಣಿಸಿದ ಕೋಪದಿಂದ ಬಿಲ್ಲೊಳು ಶರದೊಟ್ಟಾಮಿಗಗಳನೆಸಲು ತೊಟ್ಟನೆ ಬೆಳ್ಗರೆವುತ ತಮ್ಮಸುವನು ಬಿಟ್ಟು ನೆಲಕೆ ಬೀಳ್ದುದಾಗ (ಪೇಋಸಂ. ೬-೦೮); ಬೆಬ್ಬಳಿಪಸು ಬೆಳ್ಗರೆವ ಕೊರಲು ಮೆಯ್ಯ ಹಬ್ಬಿದ ನಡುಕ ಹೊಮ್ಮಳ್ಳಿ ದಬ್ಬುದಲೆಯ ಮಾತು ದುಱುದುಱುಗಣ್ಣೆಂದುಬ್ಬಸಗೊಳುತಿದ್ದನವನು (ಶ್ರೀಹಾಂ. ೮-೬೨); ಮಱುಗಿ ಬಾಯ್ಬಿಟ್ಟು ಬೆಳ್ಗರೆದು ತುಱುಗಿದ ನೋವಿನೊಳಗೆ ಸಾವುತಿರ್ಪನ ನೆಱೆ ಕಂಡು ಮಱುಗರಯ್ಯಯ್ಯೊ (ಅಪಂಚ. ೦೨-೦೨೬). [ಬೆಳ್$_2$ + ಕರೆ$_1$]

**ಬೆಳ್ಗಬ್ಬು**, ಬೆಳ್ಗಬ್ಬು (ನಾ). ಬಿಳಿಯ ಬಣ್ಣದ ಒಂದು ಬಗೆಯ ಕಬ್ಬು; ರಸದಾಳಿ : ಬೆಳ್ಗಬ್ಬಿನ ಮೆಲ್ಬಿಲ್ಲೀವುದೊಗೆದ ಕಾಮನ ಬಿಲ್ಲುಳ್ಳೊಡೆನುತ್ತೆ ಕಂತು ಮುಯ್ಯಾಂತಿರ್ಪಂ (ಶಂಭ್ರಕು. ೪-೯೩); ಕಂದು ಗೊರಲನೊಳು ಕಾದಲ್ಕೆ ಸ್ಮರ ತನ್ನದೊಂದು ಬಿಲ್ಲದು ಸಾಲದೆಂದು ತಂದಿಲ್ಲಿ ಬೆಳಸಿದನೆಂಬಂತೆ ಬೆಳ್ಗಬ್ಬು ಸಂದಣಿಸಿತು ಬನಬನದಿ (ಮೋಹಶ. ೨-೯೭). **ಬೆಳ್ಗಬ್ಬು** : ಗಿಣ್ಣುಗೊಳ್ಳದ ಬೆಳ್ಗಬ್ಬಿನ ರಸದಂತೆ ಬಣ್ಣಿಸುವೆನು ಕಥಾಮೃತವ (ಪೋಹಶ. ೯-೨).

[ ಬೆಳ್$_1$ (<ಬಿಳಿದು) + ಕಬ್ಬು (<ಕರ್ವು$_1$) ]

**ಬೆಳ್ಗಲ್** (ನಾ). ೧. ಬಿಳುಪಾದ ಕಲ್ಲು. ೨. ಒಂದು ಸ್ಥಳದ ಹೆಸರು : ಅನ್ತೆ ಬನ್ದು ಬೆಳ್ಗಲ್ಪೊಱಡೆ ತೆಂಕಾಯ್ನೋಡಿಂ ಕೊಳ್ಳುರಿಪುಣಸೆ (ಎಕ. VI (R), ಶ್ರೀರಂಗ. ೬೭-೨೪; ಸು. 800); ಚಂಚರಿವಳ್ಳದ ತಿ(ತೀ)ರವೊ ಸನ್ದಾ ಬೆಳ್ಗಲ ಸರಡೆ ಅನವಂಗೆಱೆಯ ಉತ್ತರಶೃಂಘ(ಗ)ದ × × × (ಇಕ. VIII, ೨೦೩-೨೭; 10ನೆಯ ಶತ). [ಬೆಳ್$_1$ (<ಬಿಳಿದು) + ಕಲ್$_3$]

**ಬೆಳ್ಗಲಿ** (ನಾ). ಒಂದು ಸ್ಥಳದ ಪೆಸರು : ಶ್ರೀಮತ್ ಬಂಕೆಯರಸರ(ರ್) ಬನವಾಸಿಪನ್ನಿರ್ಚ್ಛಾಸಿರಮುಮಾನ್ಬೆಳ್ಗಲಿಮೂನೂಱುಮಾಂ . . . ಆಳುತ್ತಿರೆ (ಎಇ. VII, ೨೦೩-೬; 874); ಶ್ರೀಮಾತ್ ಸತ್ಯವಾಕ್ಯಬೀರ ಪೆಮ್ಮಾನಡಿಯ ಗೊಟ್ಟ ಕಲ್ನಾಟು ಬೆಳ್ಗಲಿಯ ನಿಗ್ಗುಂದ ಜಗ್ಗಿಯರಸರ್ಗೆ ಕೊಟ್ಟರ್ (ಎಕ. V, ಅರಕ. ೬೦-೯; ೯೭೦). [ ? ]

ಗಳುಡಿದು ಬಿದ್ದವು ಕೇಣವಿಲ್ಲದೆ ತಱಿದನರಿಬಲವ (ಕುಣ್ಣಾಶೀ. ೯-೦೨).
[ ಬೆಳ್$_1$ (<ಬಿಳಿದು) + ಕೊಡ್$_2$ ]

**ಬೆಳ್ಗೊಳ**, ಬೆಳುಗುಳ, ಬೆಳುಗೊಳ, ಬೆಳ್ಗುಳ, ಬೆಳ್ಳುಗೊಳ, ವೆಳ್ಗೊಳ (ನಾ). ಒಂದು ಊರಿನ ಹೆಸರು ; ■ ಈಗಿನ ಹಾಸನ ಜಿಲ್ಲೆಯ ಶ್ರವಣಬೆಳಗೊಳ ; ಪ್ರಸಿದ್ಧವಾದ ಗೊಮ್ಮಟೇಶ್ವರನ ಪ್ರತಿಮೆಯುಳ್ಳ, ಜೈನರ ಪವಿತ್ರಕ್ಷೇತ್ರ : ಬೆಳ್ಗೊಳನಿವಾಸಿಗಳಪ್ಪ ಶ್ರೀ ವೀರಸೇನಸಿದ್ಧಾಂತದೇವರ ಪರಶಿಷ್ಯಂ ಶ್ರೀ ಗೊಣಸೇನಪಣ್ಡಿತ ಭಟ್ಟಾರರ ಪರಶಿಷ್ಯರ್ ಶ್ರೀಮತ್ ಅನಂತವೀರ್ಯ್ಯಯ್ಯಂಗಳ್ ಪೇರ್ಗ್ಗಡೂರುಂ ಪೊಸವಾಡಗವುನನಭ್ಯಂತರಸಿದ್ಧಿಯಾಗೆ ಪಡೆದರ್ (ಎಕ. VI. ೦೦೫-೯ ; 777). ; ರಣಪಾರಗಾವುಣ್ಣರುಂ ಅನ್ದಮಾಸಲಉತ್ತಮಗಾವುಣ್ಣರುಂ ನವಿಲೂರ ನಾಟ್ಟಾವುಣ್ಣರುಂ ಬೆಳ್ಗೊಳದ ಗೋವಿಂದಪಾಡಿಯು ಉxxಳ್ವಮಂದು ಬೆಳ್ಗೊಳದಾವಟಿ ಗೋವಿಂದಪಾಡಿಗೆ ಕೊಟ್ಟದು (ಎಕ. II. ೩೩-೬ ; ಸು. ೬೦೦). **ಬೆಳುಗುಳ** : ಶ್ರೀ ತಿರುಮಲೆಯ ತಾತಯ್ಯಂಗಳು ಸಮಸ್ತರಾಜ್ಯದ ಭವ್ಯಜನಂಗಳ ಅನುಮತದಿಂದ ಬೆಳುಗುಳದ ತೀರ್ಥದಲ್ಲಿ ವೈಷ್ಣವ ಅಂಗರಕ್ಷೆಗೋಸುಕ ಸಮಸ್ತರಾಜ್ಯದೊಳಗುಳ್ಳಂತಹ ಜೈನ[ರು] ಬಾಗಿಲುಗಟ್ಟಳೆಯಾಗಿ ಮನೆಮನೆಗೆ ವರ್ಷಕ್ಕೆ ೧ ಹಣಕೊಟ್ಟು (ಎಕ. II (R). ೯೬೩-೨೨ ; 1368) ; ಗ್ರಾಮೋತ್ತಮಂ ಬೆಳುಗುಳಾಖ್ಯಮ್ ದತ್ತಧೀರೈಃ (ಎಇ. VIII. ೨೦-೦೦೦ ; 1422). **ಬೆಳುಗೊಳ** : ಹಡುವಲು ಬೆಕ್ಕನೊಳಗೆಱೆಯ ಮಾವಿನ ಕೆಱೆಯ ಗತ್ತಿಯೊಳಗಾಗಿ ಬೆಳುಗೊಳಕ್ಕೆ ಹೋದ ಬಟ್ಟೆ (ಎಕ. II(R). ೯೨-೯೯ ; 1118). **ಬೆಳ್ಗುಳ** : ನಿರ್ಮ್ಮಳಿನಂ ಘನಪುಷ್ಪವೃಷ್ಟಿ ಬಂದೆಱಗಿದುದಭ್ರದಿಂ ಧರೆಗದಭ್ರತರಾದ್ಭುತ ಹರ್ಷಕೋಟಿ ಕಣ್ದೆಱೆದಿರೆ ಸಂದ ಬೆಳ್ಗುಳದ ಗೊಂಮಟನಾಥನ ಪಾದಪದ್ಮದೊಳ್ (ಎಕ. II. ೨೩೯-೩೭ ; 1180). **ಬೆಳ್ಳುಗೊಳ**: ಅಳಕೆಱೆಯ ವೀರ ವೀರಪಲ್ಲವರಾಯನ ಮಕಂ ಕೆದೆ ಸಂಖಿರ ನಾಯಕಂ ಬೆಳ್ಳುಗೊಳಘ×ಯೆಚ್ಚ ಬೆಳ ಬಡಿಗರ ಬೆಟಕೆ (ಎಕ. II, ೪೩೩-೩ ; 13ನೆಯ ಶತ). **ವೆಳ್ಗೊಳ** : ಶ್ರೀ ಭದ್ರಬಾಹು ಸಚನ್ದ್ರಗುಪ್ತಮುನೀನ್ದ್ರಯುಗ್ಮದಿನೊಪ್ಪೆ ವಲ್ ಭದ್ರಮಾಗಿದ ಧರ್ಮ್ಮಮನ್ದುವಱಿಕ್ಕೆವನ್ದನಿಸಳ್ಕಲೋವಿದ್ರುಮಾಧರ ಶಾನ್ತಿಸೇನ ಮುನೀಶನಾಕ್ಕಿ ಎ ವೆಳ್ಗೊಳ ಅದ್ರಿಮೇಲಶನಾದಿವಿಟ್ಟು ಪುನರ್ಭವಕ್ಕೆಱೆ ಆಗಿ× (ಎಕ. II, ೪೦-೩ ; ಸು. 650).
[ ಬೆಳ್$_1$ (<ಬಿಳಿದು) + ಕೊಳ್$_2$ ]

**ಬೆಳ್ಛಾಯ** (ನಾ). ಬಿಳಿಯ ಛಾಯೆ ; ಬಿಳಿಚಿಕೊಂಡ ಬಣ್ಣ : ಸಂಚಲಿಸದೆ ಮರುಳಾಗಿ ಮಿತಿ ಮೀಱಿಮದು ಮನ್ಮಥಪರವಶನಾಗಿ ಬೆಳ್ಛಾಯ ವೇಱಿ ಮೌನವಾಗಿದ್ದರೂ ಆಕಾರದಿಂದಲೆ ವಿರಹವೇದನೆಯ ಹೇಳುತ್ತ. . . ಇರುವ ಬಗೆಯನು ಕಂಡು (ವಚನ. ೨೬). [ಬೆಳ್$_1$ (<ಬಿಳಿದು) + ಛಾಯ]

**ಬೆಳ್ಜಸ** (ನಾ). ಶುಭ್ರವಾದ ಕೀರ್ತಿ ; ನಿರ್ಮಲವಾದ ಯಶಸ್ಸು : ಪುಣ್ಯದ ಪುಂಜದಂತೆ ಶಿವನ ಸದ್ಗುಣರಾಶಿಯಂತೆ ಭಕ್ತರ ಬೆಳ್ಜಸದಂತೆಸವ . . . ವೃಷಭೇಶ್ವರನಂ ಕಂಡು (ಹರಿಶ್ಚ. ೩-೯ ವ) ; ಬಳಿಯಾಳ್ಗಳ್ಗೊಡನೆ ನಿಸದಂ ಓಮುಶ್ವಸನ ರಥಮೇರಿ ದಾಳಿಟ್ಟು ವಸುಧೆಯು ನಡುಗಿಸಿದ ಹೇಮಂತನೃಪನ ಬೆಳ್ಜಸದಪೋಲಾಗಳ್ಸವಳ್ತಡಂ ಮಂಜು ದೆಸೆದೆಸೆಯನಾವರಿಸಿರ್ದುದು (ಶೀಶರಾ. ೨೩-೦೦) ; ನಿನ್ನಯೆ ಓರಿಯರಿಂತು ಬೇಳ್ದು ಬೆಳ್ಜಸದಿಂದೆಸೆವೆಂಡಿರ್ಗೆ ಪಸದನಂಗೈದುಂ ಬರ್ದಿಲವೆಣ್ಗಳಂ ತೊಟ್ಟುಗೊಂಡರ್ (ರಾಮಾಶ್ವ. ೧೯-೨೬). [ ಬೆಳ್$_1$(<ಬಿಳಿದು) + ಜಸ$_1$ ]

**ಬೆಳ್ಜ್ಯೋತಿ** (ನಾ). ಉಜ್ವಲವಾದ ಕಾಂತಿ ; ನಿರ್ಮಲವಾದ ಹೊಳಪು : ಚಾರುವೃದಯಾದ್ರಿಪನ ನಿಟಿಲದಿ ವಿರಾಜಿಸುವ ಶ್ರೀಭಸಿತದ ನಡುವೆ ಮೆರೆವ ವಾರಿಜಾಂಡದ ನಿಳಯ ಕತ್ತಲೆಯೊಳಂ ಬೆಳಪ ತೋಱ ಬೆಳ್ಜ್ಯೋತಿಯೋ (ನವಮೋ. ೦೭-೩೦). [ಬೆಳ್$_1$ (< ಬಿಳಿದು) + ಜೋತಿ]

**ಬೆಳ್ತನ** (ನಾ). ೧. ದಡ್ಡತನ; ಪೆದ್ದುತನ; ಮೌಢ್ಯ : "ಗಾಂಪು ಠಕ್ಕುತನವುಂ ಬೆಳ್ತನಂ" (ಸಂಜೀವ. ೨೭); ಸತ್ತರನೆ ಸಾಯದರಂತೆಣಿಸುತ್ತುಮಿರ್ಪ ಬೆಳ್ತನದವನಿತಲ್ಲದಾ ಮರನನಾ ದವದಗ್ನಿ ಬರ್ದುಂಕಲೀಗುಮೇ (ಆದಿಪು. ೯-೩೯) ; ತ್ರಿಭುವನವಿಜಯಿಯ ವೀರಮುಂ ಚಕ್ರವರ್ತಿತ್ವಮನೆಯ್ದಿದನ ವಿದ್ಯೆಯುಮುಂ ಬೆಸಗೊಂಬವನ ಬೆಳ್ತನದಂತೆ (ಧರ್ಮಾಮೃ. ೨-೦೩೩); ಅವನ ಬೆಳ್ತನಕ್ಕೆ ಬೆಕ್ಕಸಂಬಟ್ಟು ಘನಸಂಭ್ರಮ ಮೇನಿದು ಪೇಳ್ವನಕ ನಿಜಸ್ಥಿತಿಯನೆಂದು ಬೆಸಗೊಳೆ ಬಸವಂ (ವೃಷಭ. ೩-೩೦ ವ). ೨. ಮೋಸಗಾರಿಕೆ ; ವಂಚನೆ : "ಗಾಂಪು ಠಕ್ಕುತನವುಂ ಬೆಳ್ತನಂ" (ಸಂಜೀವ. ೨೭). [ ಬೆಳ್$_2$ + — ತನ ]

**ಬೆಳ್ತಿಗೆ** 'ಬೆಳಂತಿಗೆ' ನೋ.

**ಬೆಳ್ತಿರು** (ಕ್ರಿ). ಬೆಳ್ಳಗಾಗು ; ಬಿಳುಪೇರು : ಉದುರಲಿಹ ತರಗೆಲೆಯು ಅದುರಿ ಬೆಳ್ತಿರುವಂತೆ (ಚಿನಗೀ. ೭-೦೯). [■ 'ತಳ್ತಿರು', 'ಬೆಳರ್ತಿರು' ಎಂಬ ಶಬ್ದಗಳ ರೂಪಸಾಮ್ಯತೆಯ ಮೇಲೆ ಈ ಸಬ್ದದ ಬಳಕೆಯಾಗಿರಬಹುದು]

**ಬೆಳ್ದಾವರೆ** (ನಾ). ಬಿಳಿಯ ತಾವರೆ; ಪುಂಡರೀಕ : ಮಂಡಳಿಸಿದತ್ತು ನಿಜರುಚಿಮಂಡಲವಾಗಸದೊಳೆಂಬಿನಂ ಬೆಳ್ಗೊಡೆ ಕಣ್ಗೊಂಡು ಪರಿಭವಿಸಿದುದು ಶಶಿಮಂಡಳಮಂ ಬಂದು ಕಂಡ ಬೆಳ್ದಾವರೆಯುಂ (ಶಂರಾವಿ. ೦೨-೨೯); ಬೆಳೆಯುವ ಪೊಲಂಗಳಂ ಬೆಳ್ದಾವರೆಗಳಲರ್ದಳೆಯದ ಕೊಳಂಗಳಂ . . . ಮನಕನವರತಸುಖಂ ಮೊಳೆಯದ ಜನಂಗಳಂ ಮುಳಿದಱಿಸಲಾಂ ಕಾಣೆನಾ ಮಹೀಮಂಡಲದೊಳು (ಕೃಷ್ಣರಾ. ೩-೯).
[ ಬೆಳ್$_1$ (< ಬಿಳಿದು) + ತಾವರೆ (< ತಾಮರೆ) ]

**ಬೆಳ್ದಾಳೆ** (ನಾ). ಬಿಳಿಯ ತಾಳೆ ; ಶ್ವೇತವರ್ಣದ ಕೇದಗೆ : ನೆರೆಮುಳ್ಳ ತುಂಟವೆಸರ ಬಂಡುಗರೆವ್ಮ ಪೊರೆಯೊಳಗಿರಬೆ ಡವೆಂದು ವರವನಪುಷ್ಪಗಳ್ಪೊಱಿಡಿಸೆ ಬೆಳ್ದಾಳೆಯರಲೊಪ್ಪಿದುವು ವನತಟದಿ (ಕಂಸವಿ. ೩-೯೮). [ ಬೆಳ್$_1$ (< ಬಿಳಿದು) + ತಾಳೆ$_1$ (< ತಾೞ್) ]

**ಬೆಳ್ದಿಂಗಳ್**, ಬೆಳದಿಂಗಳು, ಬೆಳುದಿಂಗಳ್, ಬೆಳುದಿಂಗಳು, ಬೆಳ್ದಿಂಗಳು (ನಾ). ೧. ಚಂದ್ರನ ಬೆಳಕು,—ಕಾಂತಿ ; ಚಂದ್ರಿಕೆ : "ಚಂದ್ರಿಕಾ, ಕೌಮುದೀ, ಜ್ಯೋತ್ಸ್ನಾ, ಚಂದ್ರಾತಪಃ—ಈ ೪ ಬೆಳ್ದಿಂಗಳ ಪೆಸರ್" (ಕರಾಮು. ೬-೯೯) ; ಅಂಗಲತಾಲಾಲಿತ ಸಾಂದ್ರಚಂದನರಸಂ ಬೆಳ್ದಿಂಗಳೆಂಬೊಂದು ಪಂಬಲ ಬಂಬಲ್ಗಡೆಯಾಗೆ ಬೆಳ್ಪಸದನಂ ಕಣ್ಗೊಪ್ಪಿತಾ ಕಾಂತೆಯಾ (ಶಂಕರಾ. ೦-೦೩೭); ಚಂದ್ರಕಾಂತಪೊಸವರ್ಣಶಿರೆ ಗೋರಿಕಲ್ಲೊಸರ್ದುಮೇ ಬೆಳ್ದಿಂಗಳೊಳ್ (ಜಗಶಿ. ೦-೦೩). ೨. ಬಿಳುಪಾದ ಚಂದ್ರ ; ಶೋಭಿಸುವ ಚಂದ್ರಬಿಂಬ : ಬೆಳ್ದಿಂಗಳನಂಗಭವಂ ನೀಳ್ದರೆ ಪೊರೆಯೆತ್ತಿ ರತಿಯ ಮುಖಗಂಧಮನಂತಾಳ್ದಿರೆ ತೊಯ್ದುಪೊಲೊಳ್ವಂ ತಾಳ್ದುದುವೀ ಸುರಭಿಕೇತಕೀಕುಸುಮಂಗಳ್ (ಚಾರ್ಕೃಷ್ಣ. ೯-೭೦). **ಬೆಳದಿಂಗಳು** : ೧. "ಚಂದ್ರಿಕಾ, ಕೌಮುದೀ, ಜ್ಯೋತ್ಸ್ನಾ—ಇ ಬೆಳದಿಂಗಳ ಪೆಸರುಗಳು" (ಸಿದ್ಧಾಂತ. ೪೦) ; ಮೇಘವೆ ಜಡೆ ಬೆಳದಿಂಗಳೇ ವಿಭೂತಿ ಪರ್ವತಂಗಳೆ ರುದ್ರಾಕ್ಷಿ (ಆಪವ. ೦-೩); ವೀರರಂಗವನೆತ್ತ ಬಲ್ಲರು ಹಾರುವರು ಬೆಳದಿಂಗಳಿನ ಬಿಱಾಸಾರ ಸುಡುವುದು ಕೈದು ಓಡಿದರೆ ಕಲಿಗಳೇ ದ್ವಿಜರು (ಕುಮಾ.ದ್ರೋ. ೩-೪೬) ; ನಂದಿತು ಬೆಳದಿಂಗಳ ಕಿಚ್ಚು ಪಾಪಿಷ್ಠಚಂದ್ರಮ ನಸ್ತಮಿಸಿದನು ಕಂದಿತು ನಕ್ಷತ್ರಮುಖಕಾಂತಿ ಬೆಳಗಾಗ ಬಂದಿತು ಬೆದಱಿದಿರವ್ವ (ಮೋಹತ. ೨೭-೬೯). **ಬೆಳುದಿಂಗಳ್** : ೧. ದೆಸೆಯೊಳುರುಪುವ ದಾವಶಿಖಿ ಬೆಳುದಿಂಗಳಾಗಿರ್ಕು (ಬಸವು. ೬-೨೩). **ಬೆಳುದಿಂಗಳು** : ೧. "ಜೊನ್ನ ಬೆಳುದಿಂಗಳಕ್ಕುಂ" (ಕಬ್ಬಿಗ. ೦೦) ; ಸುಳಿದು ಬೀಸುವ ಗಾಳಿ ಉರಿಯಾಯಿತ್ತಪ್ಪ ಬೆಳುದಿಂಗಳು ಬಿಸಿಲಾಯಿತ್ತು ಕೆಳದಿ (ಮಹಾದೇ.ವ. ೯೩-೦೦೦) ; ಬೆಳುದಿಂಗಳಿಂದ ಮಾಡಿದ ಮೂರ್ತಿಯಂದದಿಂ ಬೆಳಗು ಬೆಲುವಾಕಾರವಾದರಿ

**ಬೆಳ್ಗವಡೆ** (ನಾ). ಬಿಳಿದಾದ ಕವಡೆ : ಭಾಸುರಶಿರಃಕಂಠಕರ್ಣಾಂಗಗಳೊಳ್ ಶಿಖಿಗಳೊಳ್ ಪಾದಯುಗ್ಮಂಗಳಲ್ಲಿ ಕರವೆಸೆವ ಘೋಣಾಗ್ರದೊಳಗೆ ಬೆಳ್ಗವಡೆಗಳ ಧರಿಸಿ ಕಣ್ಣಡಕಂಗಳಂ ತಾಳ್ದು . . . ಒರ್ವ ಶೋಭಿಸುವ ಭೃಂಗಿಯ ತೆಜದೆ ಮಲೆಯಪತ್ತ ಪೊಕ್ಕಂ (ಅಂಜ. ೫-೮-೩೯).

[ಬೆಳ್$_1$ (<ಬಿಳಿದು) + ಕವಡೆ]

**ಬೆಳ್ಗವಿ** (ನಾ). ದಡ್ಡನಾದ ಕವಿ : ಒಳ್ಗವಿ, ಬೆಳ್ಗವಿ, ಅಜಗವಿ (ಶಾಶಾಕೂ. ೦೩೩ ಉದಾ). [ಬೆಳ್$_2$ + ಕವಿ]

**ಬೆಳ್ಗಱಿ** (ನಾ). ೧. (ಹಕ್ಕಿಯ) ಬಿಳುಪಾದ ರೆಕ್ಕೆ,—ಪುಕ್ಕ : ಪೊಸ್ಸ ಕಡಿವಾಣದ ರಸ್ನ ಪೆಗಣಿಂಬದ ಕಿವಿಯ ಚಾಮರದ ಸುತ್ತುರುಳ್ಗಳಲ್ಲಿರಿಯ ನೆತ್ತಿಯ ಬೆಳ್ಗಱಿಯ . . . ತುರಗಸಂಘಾತದಿಂ (ರಾಜಶೇ. ೬-೦೦ ವ). ೨. ಬಾಣದ ಹಿಂಭಾಗದಲ್ಲಿರುವ ಬಿಳುಪಾದ ಗರಿ : ನಿನಿರ್ದಲರ್ಗಣ್ಣ ನುಣ್ಪೆಳಗಡರ್ವ ಕೂರಲಗಾ ಸಿಕೋಪಾಲಾಂಗವೆ ಶರಯಷ್ಟಿ ತೊಟ್ಟಲರ ಪಚ್ಚವೆ ಬೆಳ್ಗಱಿಯಾಗೆ ಕಾಮಿನೀಸಮಿತಿ ವಿರಾಜಿಸಿರ್ದುದು (ಶುಸುಪರಾ. ೫ ೦೨೯). [ಬೆಳ್$_1$ (<ಬಿಳಿದು) + ಗಱಿ]

**ಬೆಳ್ಗಟ್ಟಿ**, ಬೆಳುಗತ್ತೆ, ಬೆಳ್ಗತ್ತೆ (ನಾ). ಬಿಳಿಯ ಬಣ್ಣದ ಕತ್ತೆ : ಆದಿತ್ಯನಸ್ತಮಾನಕ್ಕೆ ಸಲ್ವುದುಮಂ . . . ಬೆಳ್ಗಟ್ಟಿ ಪೂಡಿದ ಪೊಸ್ನ ರಥಮಂ ಬೆಳ್ಗಟ್ಟಿಯನಸರಸರ್ಕಳೇಱುವುದುಮಂ ಇಂತೀ ಪದಿನಾಱು ಕನಸುಗಳಂ . . . ಕಂಡಂ(ವಡ್ಡಾರಾ. ೯೫-೩೦). **ಬೆಳುಗತ್ತೆ** : ಪರದಾಯುಷ್ಯಮುಂ . . . ಹಯುಕ್ಕೆ ಮೂವತ್ತೆರಡುವೃತ್ತಯ್ದು ಬೆಳುಗ[ಶಾಶಾಂ. ಬೆಳ್ಗ]ತ್ತೆಗೂ ಕರಭಸ್ಯಂ (ಜಾತತಿ. ೬–೦೦) ; ಬಳಿಕ ಹುಳಿತು ನಾತು ಕೊಳೆತು ಸತ್ತು . . . ಬೆಳುಗತ್ತೆಯಾಗಿ ಸಂಜನಿಸಿ (ಧಃಖಸಂ. ೩೩-೨೫). **ಬೆಳ್ಗತ್ತೆ** : ನಾಗಶರ್ಮಂ ಬೂದಿವೂಸಿದ ತಪೋಧನನಂತೆಯುಂ ಪುಡಿಯೊಳ್ ಪೊರಳ್ದ ಬೆಳ್ಗತ್ತೆಯಂತೆಯುಂ . . . ಮಠದಿಂ ಪೊಱಮಟ್ಟು ನಿಂದ ಛಾಂದಸ ಬ್ರಾಹ್ಮಣನಂ ಕಂಡು (ಶಂಕಶಂ. ೦೮೬-೦೭) ; ಬಡತನದೊಡೆಸಿ ಬಳಮಟೀದು ಪುಟೀತು ನಮೆದು ಸತ್ತುಮಾ ಕೌಶಂಬೀಪುರದೊಳ್ ಬಹುಕರ್ಮಿಯೆಂಬ ದೊಂಬನ ಮನೆಯೊಳ್ ಸ್ತ್ರೀ ವೇದದಿಂ ಬೆಳ್ಗತ್ತೆಯಾಗಿ ಪುಟ್ಟ (ಸ್ವಸುಪರಾ. ೫-೦೨ ವ). [ಬೆಳ್$_1$ (< ಬಿಳಿದು) + ಕಟ್ಟಿ]

**ಬೆಳ್ಗಾಡು** (ನಾ). (ಅಲಂ) ಬಿಳಿಯ ಹೂವುಗಳಿಂದ ತುಂಬಿದ ಕಾಡು : ನಾಡುಗಳರಸನಿದೆಂಬೊಂದಾಡಂಬರದಿಂದೆ ಸತ್ತಿಗೆತ್ತಿರುವೆಸೆ ಕಣ್ಗಾಡುಂ ಬೊಲನಾದುವು ಬೆಳ್ಗಾಡಿನೊಳಲರ್ದೆಸೆವ ಬಯಲ ಬೆಳ್ದಾವರೆಗಳ್ (ಸಂತ್ರಕು. ೦-೬೮). [ಬೆಳ್$_1$ (< ಬಿಳಿದು) + ಕಾಡು$_2$]

**ಬೆಳ್ಗುಂಜಿ** (ನಾ). ಬಿಳಿಯ ಗುಲಗಂಜಿ : ಕೇಸುರಿಯಸುಗಾಳ್ಪ ಕಣ್ಗಳ . . . ಭಾಸುರದ ಬೆಳ್ಗುಂಜಿದೊಡವುಗಳ ಮೂಡಿಗೆ ಶರಾಸನದ ಕಿಱಿಯ ಕಿಗ್ಗಟ್ಟಿನ ಕಠಾರಿಯ ಮಹಾಶಬರರೂಪದಿಂ ಶಂಕರಂ ಸುಳಿದನಾ ಸೌಂದರೇಶ್ವರನದಿರೊಳು (ಸೌಂದಪು. ೦೮-೩೫).

[ಬೆಳ್$_1$ (< ಬಿಳಿದು) + ಗುಂಜ]

**ಬೆಳ್ಗುಂದೂರು** (ನಾ). ಒಂದು ಊರಿನ ಹೆಸರು : ಇದಕ್ಕೆ ಸಕ್ಕಿಳೆ ಬೆಳ್ಗುನ್ದೂರುಂ ಕಿಱುಪೆಳ್ಗುನ್ದೂರುಂ ಸತ್ತಿಯೂರುಂ ಸಿಂಗೂರು ನಗರಲ ಪನ್ನಿರ್ವ್ವರು ಮಹಾಪರಿಷೆಯು ಎಡೆನಾಡ ಮಾವನ್ನಾರ್ಗಟ್ಟಾಮುಣ್ಡುಗಳುಂ ಸಕ್ಕಿ (ಎಕ. III (R). ಪಂಚಿನ. ೨೩೯-೬; ಸು. 10 ನೆಪು ಶತ).

[ಬೆಳ್ಗುಂದ$_0$ + ಊರು$_3$ (<ಊರ್)]

**ಬೆಳ್ಗುಂಬಳ** (ನಾ). ಒಂದು ಬಗೆಯ ಕುಂಬಳ; ಬಿಳಿಯ ಕುಂಬಳ; ಬೂದುಗುಂಬಳ : ನಿಂಬದ ಬಸುಬಾಂಗಳನೌದುಂಬರಪಂಚಕದುಸಂತೆ ನವನೀತಮುನಾಣಂಬೆಯನಸಾರತಂ ಬೆಳ್ಗುಂಬಳಮಂ ಗಿಣ್ಣಸುಣ್ಣಿದಿರ್ಪುದುದರೋಘಂ (ಸುಕುಪರಾ. ೬-೯೩); ಇರುಳೂಟಂ ಕೊಲೆಯುಯ್ದು ಪಾಳ್ಮರದ ಪಣ್ಣಾಣಂಬೆ ಬೆಳ್ಗುಂಬಳಂ [ಶಾಶಾಂ. ಪಣ್ಣು ಬೆಣ್ಣಿ ಗಿಣ್ಣಲಿದೀ, ಪಣ್ಣಾ ಣಂಬೆ ಬೆಳಗುಂಬಳ] ಪರದ್ರ್ವ್ಯ ಸ್ತುತಿ ಕಳ್ಳು . . . ಜೂದಕಿಕಾಂಕ್ಷೆಯೆಂಬಿವಿನಿತುಂ ಜೈನಂಗೆ ಮೂಲವ್ರತಂ (ಶಶಾರ. ೩೦೯).

[ಬೆಳ್$_1$ (<ಬಿಳಿದು) + ಕುಂಬಳ]

**ಬೆಳ್ಗುಡಾರ** 'ಬೆಳ್ಗೂಡಾರ' ನೋ.

**ಬೆಳ್ಗುದುರೆ** (ನಾ). ಬಿಳಿಯ ಕುದುರೆ ; ಶ್ವೇತಾಶ್ವ : ಬೆಳ್ಗುದುರೆ ಹಗಲು ಕಡೆಗೆದ್ದು ಬಂದಿಳಿಯೆಲ್ಲ ಚೆಲ್ವಿನಲಿ ಬೆಳಗೆ (ಶಾರಶಿ. ೦೫-೩೫೨).

[ಬೆಳ್$_1$ (<ಬಿಳಿದು) + ಕುದುರೆ]

**ಬೆಳ್ಗುಹೆ** (ನಾ). ಒಂದು ನಾಡಿನ ಹೆಸರು : ಶ್ರೀಮತ್ಸಾನ್ತಿಪರ್ವ ಬೆಳ್ಗುಹೆಯೆಪ್ಪತ್ತೆಡೆ ನಾಡೆಪ್ಪತ್ತು ತಂದವೂರ ಪನ್ನೆರಡು . . . ಸಾಸ್ತಳಿಗೆ ಸಾಯಿರದುಮುವಂ ದುಷ್ಟಾಟವಿಕ ನಿರ್ಮೂಳನಂವೃದ್ಧಾದಿ ಸುಖದಿಂ ರಾಜ್ಯಂಗೆಯ್ಯುತ್ತಿಪ್ಪು (ಎಕ. VIII, ಸೊರಬ. ೪೭೬-೦೨; 991). [ಬೆಳ್? + ಗುಹೆ]

**ಬೆಳ್ಗುಳ** 'ಬೆಳ್ಗೊಳ' ನೋ.

**ಬೆಳ್ಗೂಡಾರ**, ಬೆಳ್ಗುಡಾರ (ನಾ). ಬಿಳಿಯ ಬಣ್ಣದ ಗುಡಾರ; ಬಿಳುಪಾದ ಡೇರೆ : ಅಂತಹ ಒಂದು ಬೆಳ್ಗೂಡಾರದೊಳಗೆ ಸೆಟ್ಟಿಯ ಕೊಳ್ಕೊಡೆಯ ನಾಯಕತ್ವವಿಲ್ಲದೆ ಹಾಳ್ಗರೆಯುತ್ತಿರುವ ಅಂಗಡಿಯಲ್ಲಿ . . . ಬಲ್ಲಪ್ಪನೂ ಬೋರೆಯೂ ಕಿತ್ತಲಗಿನ ಕಡುಗಾವಲ್ಗುಡುತ್ತಿರುವರು (ಶಿಬುಗಂ. ೦೨-೮). **ಬೆಳ್ಗುಡಾರ** : ಮುಸುಕಿರ್ಪ ಮಂಜಿನಿಂ ಬೆಳ್ಗುಡಾರಂಗಳಂತೆಸೆಯೆ ಶೈಲಂಗಳಲ್ಲಲ್ಲಿ ಶೈವಲಿನಿಗಳ್ಪೊಸರಾಯವೀಥಿಗಳ ಪಾಂಗಿನಿಂ ಕಂಗೊಳಿಸೆ (ಕೇಶರಾ. ೨೩-೦೦).

[ಬೆಳ್$_1$ (< ಬಿಳಿದು) + ಗುಡಾರ]

**ಬೆಳ್ಗೂಳು** (ನಾ). ಬಿಳಿಯ ಅನ್ನ ; ಬಿಳುಪಾದ ಅನ್ನ : ಮಲ್ಲಿಗೆ ಮುರಳಂತೆ ಬೆಳ್ಗೂಳು ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು ಬೆಳ್ಪೊಂಬರಿವಾಣಗಳ ತುಂಬಿ ಸುಳಿಹತ್ತಿ ಚೆಲ್ಲಿಸಿದಳು ದೆಸೆದೆಸೆಗೆ (ಮೋಹತ. ೩೦-೩೬).

[ಬೆಳ್$_1$ (<ಬಿಳಿದು) + ಕೂಳು$_1$ (<ಕೂೞ್)]

**ಬೆಳ್ಗೆಱೆ**, ಬೆಳೆಕೆಱೆ, ಬೆಟ್ಗೆಱೆ (ನಾ). ಒಂದು ಸ್ಥಳದ ಹೆಸರು : ರಾಚಮಲ್ಲಗಾಮುಣ್ಡನು ಸಿಱಿನಂ ಗಂಗಗಾಮುಣ್ಡನುಂ ಮಾರೆಯನುಂ ಬೆಳ್ಗೆಱೆಯೊಡೆಯರುಂ ಮೊದಭಾಗೆ ಎಟ್ಟದಿಂಬರುಂ ಕುನಂಗಿಲ ಯ್ಯೂರ್ವರುಂ ಸಾಕ್ಷಿಯಾಗೆ ಕೊಟ್ಟತ್ತು (ಎಕ. XII, ಗುಬ್ಬಿ. ೩೦-೯೬ ; 812). **ಬೆಳೆಕೆಱೆ** : ಅನ್ತೆ ಬನ್ದು ನಗರವಳ್ಳದಿ ಘೂಡಣ ಬೇಲಿಯಿಂ ಅನ್ತೆ ಬನ್ದು ಬೆಳೆಕೆಱೆಯ ಪಡುವಣ ಕಡೆಯಿಂ (ಎಕ. III (R), ಪಂಚಿನ. ೨೦೯-೦೭ ; 915). Δ **ಬೆಟ್ಗೆಱೆ** : ಮಣಲ್ದೂರ ರಡ್ಡವಣ್ಡುಕ ಬರಳಿಯ ಬೆಟ್ಗೆಱೆ ಎಮ್ಮಗೆ ಕೇಟ್ಟು ಯಬವರಿದು ಕಳಿಂಕ್ಕಿಸಿದ (ಎಕ. XII, ತಿಪಟೂ. ೩೬-೫ ; 961). [ಬೆಳ್$_1$ (<ಬಿಳಿದು) + ಕೆಱೆ]

**ಬೆಳ್ಗೊಡೆ**, ಬೆಳುಗೊಡೆ (ನಾ). (ದೇವರು, ರಾಜ, ಇವರಿಗೆ ಹಿಡಿಯುವ) ಬಿಳಿಯ ಕೊಡೆ ; ಶ್ವೇತಚ್ಛತ್ರ : ಗುಡಿ ಶಂಖಂ ಚಾಮರಂ ಬೆಳ್ಗೊಡೆ (ಎಕ. XIII, ೩೩೬-೦೩ ; 929) ; ಪೇಱಿಜ್ ದಾಗನೆ ಬೆಳ್ಗೊಡೆಯಲ್ಲಿ ದುದೆತ್ತ ಪೋಯ್ತು ಸುತ್ತಿಱಿದ ಚತುರ್ಬಲಂ ನಿನಗಮಿಯರವಾದುದೆ ವೈರಿಭೂಪರಿಂ (ಶಂಕಶಾ. ೦೩-೬೯) ; ಬೆಳ್ಗೊಡೆಯ ವೀರಚ್ಛಾಯೆಯೊಳ್ ವಜ್ರಪುಂ ಪಿಡಿದೈರಾವತವೋಱಿ ನಿಂದನವನಿಂದ್ರಂ ಕೇಳ್ ದನುಪ್ರೋದ್ಭವಾ (ಗಂಚ. ೬-೩೭) ; ಸೀಗುರಿಯ ಚಾಮರದ ಮೇಗಪ್ಪ ಬೆಳ್ಗೊಡೆಯ ಭೋಗ ಹಡಪಿಗರ ಪಡೆಯುವಡೆ ದಾಸವನು ಬೇಗ ಮಾಡುವವು (ಸರ್ವಜ್ಞ. ೩೫೦). **ಬೆಳುಗೊಡೆ** : ಭೇರಿಯ ಮುದ್ದಳೆಯಾಗೆ ಬೆಳುಗೊಡೆ [ನೆ]ಳಲಾಗೆ ನೆಲಂ ಕಳನಾಗೆ . . . ನರರೊಳು ತುಂಬುಲಿಗರ್ಜ್ಜಿಸಂಜಡವಾ ವಿಸ್ವಂಭರಾಭಾಗದೊಳ್ (ಸೌತಿಇ. XX, ೦೦೨-೩೭ ; 1144?) ; ಸಂದಣಿಸ ಕೆಲಬಲದ ಬೆಳಗೊಡೆಗಳೊಪ್ಪಿರಿಸೆ ಹಿಂದೆ ನಿಸ್ಸಾಳಭೇರಿರವಂ ಸಂದಣಿಸೆ (ಬಶರ. ೫-೦೭೫) ; ಮಾಡ ಮಾಱಿದು ನುಗ್ಗಾಯ್ತು ರಥ ಬೆಳುಗೊಡೆ ಪತಾಕಾದಂಡ ಚಮರಿ

ಹಂಶಿದಪ್ಪ ತಾಜಿಂಬಟೀಯುಂ ತೆರಳ್ದ ಕುರುಳ್ (ತಂತ್ರಶು. ೬-೭೨); ಜಡಗ್ರಾಹಿಯಾನಾದೆನೆನುತ್ತಂ ಚಿಂತೆಯಿಂ ಬೆಳ್ಪಡರ್ದುದೆನೆ ತದಬ್ಧಂ ಶರನ್ಮೇಘವಿರ್ಕುಂ (ರಾಜಶೇ. ೬-೪). **ಬೆಳ್ಪಡರು :** ನಡು ಪೊದಳ್ದವು ವರವಳಿತ್ರಯುವಡಗಿದವು . . . ಬೆಳ್ಪಡರಿ[ಶಾಕಾಂ. ಸಿ]ದವು ಮುಖ ಮಂಡಲಗಳಾ ಮಾನಿನೀತ್ರಯದ (ಕೂರಲಾ. ೦-೬-೩); ಶಿಶು ಗರ್ಭದೊಳ್ಗೊಳಗೆ ಕೂಡಿರ್ದ ಚಂದ್ರಿಕೆವೊಲಿಂಗರುಚಿ ಬೆಳ್ಪಡರಲೊಳ್ಪಿನಿಂದೊಪ್ಪಿದರ್ಗಳುತ್ಪಲಾಕ್ಷಿ (ಕೃಬಿಶಾ. ೦೬-೩೭). [ ಬೆಳ್ಪ್$_1$ + ಅಡರ್ ]

**ಬೆಳ್ಪಡರು** 'ಬೆಳ್ಪಡರ್' ನೋ.

**ಬೆಳ್ಪಡಸು** (ಕ್ರಿ). =ಬೆಳ್ಪಡರ್: ನಡು ಪೊವಳ್ದವು ವರವಳಿತ್ರಯುವಡಗಿದವು . . . ಬೆಳ್ಪಡಸಿ[ಶಾಕಾಂ. ರಿ]ದವು ಮುಖಮಂಡಲಗಳಾ ಮಾನಿನೀತ್ರಯುವ (ಕೂರಲಾ. ೦-೬-೩). [ ಬೆಳ್ಪ್$_1$ + ಅಡಸು ]

**ಬೆಳ್ಪರಿಗೆ** (ನಾ). ಹೊಳೆಯುವ ಗುರಾಣಿ : ಅರ್ಲ್ರೊಸಿನ್ ಬಂದೊಸನ್. ತಲೆಯಿಂದೆ ಕಾಲ್ವರಮ್ ಮೆಯ್ಯ್ ಜೋಡ ತೊಟ್ಟನನ್, ಕಯ್ಯ ಬೆಳ್ಪರಿಗೆಯುನ್ ಪಿಡಿದು ಮೇಲ್ವಾಯ್ದನನ್, ಬೆನ್ನಿತ್ತು ಪೋದನನ್, ದೂಡುತ್ತುಮಟ್ಟದಯ್ ಕಡಿವಾಣವೊತ್ತಿ ನಿಟ್ಟೋಟದಿನ್ ಪರಿಯೆ (ಅಂತಿಗೂ. ೩-೯೦). [ಬೆಳ್$_1$ (< ಬಿಳಿದು ) + ಪರಿಗೆ]

**ಬೆಳ್ಪಳ**, ಬೆಪ್ಪಳ, ಬೆಬ್ಬಳ, ಬೆಬ್ಬಳಿ, ಬೆಬ್ಬಳಂ, ಬೆಬ್ಬಳೆ, ಬೆಳ್ಪಡ್$_2$, ಬೆಳ್ಪಳೆ (ನಾ). ೧. ಭಯ; ಹೆದರಿಕೆ; ಗಾಬರಿ : ತೋಳ್ಪಿರಿದೆಂದು ತಾಯುನುಚಿಯಪ್ಪಿ ಕೊಳಲ್ಬಗೆವಂಗೆ ಲೋಕದೊಳ್ಬೆಳ್ಪಳವಿಲ್ಲದಂತೆ ನಿಲಲಾರ್ಪಳೆ ಲಕ್ಷ್ಮಿಯುಮಾಮಹೇಶ್ವರಾ (ಉಮಾಶ. ೬೭). ೨. ಚಂಚಲತೆ; ಸಂಚಲನ : "ಬೆಳ್ಪಳಂ ಸಂಚಳಂ" (ಕಮದ. ಕಂ. ೨); ಗಳೆಯಾದತ್ತುರು ಮಂದರಂ ಕನಕಶೈಲಂ ಚಾಪಮಾದತ್ತು ಬೆಳ್ಪಳವಂ ತಾಳ್ದಿದುದೆಯ್ದೆ ರೌಪ್ಯನಗಂ (ಶೀರವಿ. ೨-೭). **ಬೆಪ್ಪಳ :** ೧. 'ಬೆಪ್ಪಳಿಸು' ಪರಾ. **ಬೆಬ್ಬಳ :** ೧. " ಅಗುರ್ವು . . . ಬೆಬ್ಬಳಂ, ಅಳಲು, ಪೆಳಲು, ಮಲ್ಲಟಿ, ತಲ್ಲಣಂ, ಅದಿರ್ಪು—ಈ ೧೦ ಭಯಂ" (ಶಕಶಾ. ೩೭-೨೨೩). ೩. ಬೆರಗು; ಆಶ್ಚರ್ಯ; ಸೋಜಿಗ: "ಐಕ್ಕಡಿ ಬಿಗುರ್ವಗುರ್ವು ಬೆಬ್ಬಳ . . . ಮಲ್ಲಟಿಯೆನಲ್ಕೆ ಬೆಜಗಪ್ಪ ಭಾವಂ" (ಕಲ್ಯಕ. ೯೦); "ತಲ್ಲಣಂ . . . ಬೆಬ್ಬಳಂ ತಳಮಳವೆನಲ್ಕೆ ಸೊಲ್ಲಿಪುದು ಬೆಜಗಪ್ಪ ಭಾವದೊಳು" (ಶಬ್ದವಂ. ೩೦). ೪. ದಿಕ್ಕುತೋಚದಿರುವಿಕೆ; ದಿಗ್ಭ್ರಾಂತಿ : "ಬೆಬ್ಬಳ ಮೆಂದೆನೆ ವಿಕಳತ್ವಮೆಂದು ತಿಳಿಗೆ ವಿದಗ್ಧರ್" (ಶಾರು. ೩೨); ಮೂಜಗದೊಬ್ಬ ವೀರನು ಕಂಡು ಬೆಜಗಿನ ಬೆಬ್ಬಳದಲೇಜಿದನು ಮಣಿಮಯ ದಿವ್ಯ ಪುಷ್ಪಕವ (ತೊರಲಾ. ೬-೩೭-೪); ತಬ್ಬಿಬ್ಬುವಾತಿನಿಂ ಪೆಜಗುರ್ಬ್ಬೆಗಮಂ ನೆಗಬ್ಬಿ ಬಜೀಯ ಬೆಬ್ಬಳಮುಲ್ಮೊಳ್ಗಬ್ಬಿಗರನುಗೊಳಿಸಿದ ಪೊಸ ಕಬ್ಬದ ಪವಣಂತುಟ್ಟವನ ಸಬ್ಬವನುಡಿಗಳ್ (ತಕಪಿ. ೬-೦೦೯). ೫. ದಿಗ್ಭ್ರಾಂತಿಯನ್ನು ಹೊಂದಿದವನು; ದಿಕ್ಕೆಟ್ಟವನು : ಜನಕ ನುಡಿದ ಮಾತ ಕೇಳ್ದು ಕಂಗೆಟ್ಟನಾ ತನುಜ ಬೆಬ್ಬಳನಾದ ಕೂಡೆ (ಶಾಗಳು. ೩೨-೦೦೯). **ಬೆಬ್ಬಳಿ:** ೪. ಅದ್ಭುತವಾದ ಕನಸ ಕಂಡು ರಾಯನು ಉಬ್ಬಿ ಪೆದಜಿ ಕಣ್ಣ ತೆಜಿದು ಬೆಬ್ಬಳಿಯಾಗಿ ನೋಡಲು ನಾಲ್ಕುದೆಸೆಯನು (ಪಂಶಾಂ. ೨೯-೨೦). **ಬೆಬ್ಬಳು :** ೧. 'ಬೆಬ್ಬಳುಗೊಳ್ಳು' ಪರಾ. **ಬೆಬ್ಬಳೆ :** ೪. ಕುಸಿಯದೆ ಕೊಡದರ್ಚಿಸದೆ ಬೆಬ್ಬಳೆಯಾಗದೆ (ಬೊಂಕಶಾ. ೦೯೩೩, ಹಾವೇಂ. ೩೭-೪೦; 1136); ಕುದುರೆ ರಥ ಗಜ ಪತ್ತಿ ನಿರ್ಘೋಷದಲಿ ಬೆಬ್ಬಳೆಯಾಯ್ತು ಬೇಳಂಬದ ವಿಘಾತಿಗೆ ಸಿಲುಕಿ ತೆತ್ತುದು ಸಕಲವಸ್ತುಗಳ (ಕುವ್ಯಾಕ. ೩-೩೩). **ಬೆಳ್ಪಡ್$_2$ :** ೧. 'ಬೆಳ್ಪಡಂನುಡಿ' ಪರಾ. **ಬೆಳ್ಪಳೆ :** 'ಬೆಳ್ಪಳೆವೋಗು' ಪರಾ.

**ಬೆಳ್ಪಳಂಬೋಗು**, ಬೆಬ್ಬಳಂಬೋಗು, ಬೆಬ್ಬಳವೋಗು, ಬೆಬ್ಬಳಿಯೋಗು, ಬೆಬ್ಬಳಿವೋಗು, ಬೆಬ್ಬಳೆಪೋಗು, ಬೆಬ್ಬಳೆಯೋಗು, ಬೆಬ್ಬಳೆವೋಗು, ಬೆಳ್ಪಳೆವೋಗು (ಕ್ರಿ). ಭಯಪಡು; ಗಾಬರಿಪೊಂದು; ಗಾಬರಿಯಿಂದ ದಿಕ್ಕುತೋಚದಂತಾಗು,–ದಿಙ್ಮೂಢನಾಗು: ಬೆಳ್ಪಳಂಬೋದಂ, ಬೆಳ್ಪಡಂನುಡಿದಂ (ಶಬ್ದಾಸು. ೨೦ ವ್ಯಾಖ್ಯ). **ಬೆಬ್ಬಳಂಬೋಗು :** ತ್ರಿಜಗದ್ಭೂಷಣ ಗಜಂ ಕ್ರೋಧಿಯುಂಬ ಮದದೊಳ್ ಮತ್ತನಾಗಿ . . . ಕಟ್ಟುಪಂಜರದಿಂ ಪೊಱಮಟ್ಟು ಬರುತ್ತಬ್ಬರಿಸುವಾರಿಕಾರರ ಬೊಬ್ಬೆಗಳಿಗೆ ಬೆಬ್ಬಳಂಬೋ[ಶಾಕಾಂ. ಪೊ, ಬೊ]ಗದೆ (ಧೃಶಾ್ಯಸ್ರ. ೨-೭ ವ); ಕಾಮದೇವಂ . . . ಉಬ್ಬಟೆಯ ಬಾಣಮಂ ತೊಟ್ಟು ತೆಗೆದಾಕರ್ಣಪೂರಕ್ಕೆ ನಿಲಿಸಿ ಬಿಡಲು ಪಬ್ಬಿದುದು ಬಾಣ ಪರಿದರ್ಧದಾರಿಯೊಳೆ ತಾಂ ಬೆಬ್ಬಳಂಬೋಗಿ ತಿರುಗುತ್ತಿರಲ್ಕದ ಕಾಣುತಬ್ಬರಿಸಿ ಮತ್ತೊಂದ ಹೊಡಿದಂ (ಅಶಜಂ. ೦೯-೩೦). **ಬೆಬ್ಬಳವೋಗು :** ನಿಲಲ್ಬಾರದೆನಿಸುವ ನೋವಿಂಗೆ ಬೆಬ್ಬಳವೋಗಿ . . . ಪೊನ್ನ ಮೋಹಕ್ಕೆ ಮನವಂ ಬಲ್ವಿಡಿದು (ರಪಾರ್ಶ್ವ. ೦-೧೯೪) ; ಕಾಣುತ ಮಣಿಮಯಗೋಪುರದೊಳಗಿದ್ದ್ದೀಶಾಂಕನಿಭವದನೆಯುರು ಪ್ರಾಣವಳಿದ ದೇಹದಂತೆ ಬೆಬ್ಬಳವೋಗಿ ತ್ರಾಣವಡಗಿ ಮಜಿಗಿದರು (ಶ್ರೀಜಾಂ. ೬-೩೭) ; ಲಕ್ಷ್ಮಣನೀಗಳೆ ಉಟಿದು ಪೋಪಿನಂ ಕಾಡಿಂಗೆ ಕೋಳ್ವೋದೆನೆಂಬೊಂದು ಭೀತಿಯಿಂ ಬೆದಜಿ ಬೆಬ್ಬಳವೋಗಿ . . . ಮಜಿಗುತ್ತಿರ್ದಪೆ (ರಾವಾಶ್ವ. ೪೦-೨೯). **ಬೆಬ್ಬಳಿಯೋಗು :** ಭಯದೊಳಂ ತನು ಬೆವರ್ತಳುಕಿ ಬೆಬ್ಬಳಿಯೋಗಿ ದಯೆಗೆಟ್ಟು ನಿಂದವಂ ಸೆಡೆದು ಸಂಚಳನಾಗಿ (ಸೇದರ. ದೇ. ೬೯-೦೭) ; ಸವಣರೆಲ್ಲಂ ಬುದ್ಧಿಗೆಟ್ಟು ಬೆಬ್ಬಳಿಯೋಗೆ [ಶಾಕಾಂ. ಯಾಗೆ] ತಪತಪಗೆ ಸುಯ್ದು ಮನವುಕ್ಕಿ ನೆಜಿ ಮರುಳಾಗೆ (ವಾಗೀರ. ದೇ. ೨೩೭-೦೦) . **ಬೆಬ್ಬಳಿವೋಗು :** ಅರಸಂ. . . . ಕೆಲದೊಳಿರ್ದ ನಾನಾದೇಶೀಯ ಬಹುಲಿಪಿವಿಚಕ್ಷಣರಾದ ಕರಣಕರು ಕರೆದ ಮಂದಿರ ಕರಾಗ್ರದೋಲೆಯುಲೊಡನಾ ಲೇಖನಮನವರುಮೋದಲಜಿಯದೆ ಬೆಜಗಾಗಿ ಬೆಬ್ಬಳಿ[ಶಾಕಾಂ. ಳೆ]ವೋಗಿ (ವ್ಯಸರಿ. ೩-೨೯ ವ). **ಬೆಬ್ಬಳೆಪೋಗು :** ಘಾಯವಡೆದನು ದ್ರುಪದಸುತ ಪೂರಾಯದೇಜಿನಲೊಡಿದರು ಮೂದ್ರೇಯರುಬ್ಬಟೆ ಮಜಿದು ಬೆಬ್ಬಳೆಪೋ[ಶಾಕಾಂ. ವೋ]ದನವನೀಶ (ಕುವ್ಯಾಕ. ೨-೩೯). **ಬೆಬ್ಬಳೆಯೋಗು :** ಸೌಂದರನುಂ ತುಂಬುರನುಂ ಬೆಗಡುಗೊಂಡು ಬೆಬ್ಬಳೆಯೋ [ಶಾಕಾಂ. ಳಿಯಾ, ಳೆಯಾ, ಳೆವೋ]ಗಿ ನಡುಕದ ಮೇಳ ಕಜಿದು . . . ಕೌತುಕರಸದೊಳವಗಾಹಪಿರ್ದು (ಸಂಬರ. ೦೬-೪೩) ; ಗುರುಪಯೋಧರಿಯನೆಳೆವೇಡಿತಿಯನೊರ್ವಳಂ ಕಂಡೊರ್ವ ಶಬರನತನುವಿನೆಸುಗೆಗೆ ಧರಿಸಿರ್ದ ಬಿಲ್ಲಂಬುಗಳ ಬಿಸುಟು ಹೆಪ್ಪಳಿಸಿ ಕರತಳವನೊಡ್ಡಿ ಬೆಬ್ಬಳೆಯೋದನಾ ವನದೊಳೆ (ಸೌಂದಪು. ೦೬-೩೦). **ಬೆಬ್ಬಳೆವೋಗು :** ಹೊಡಿಮಂಬಿನ ತೋಳ ತೆಗಹಿನ ಬಾಡಿದುತ್ಸಾಹದ ವಿತಾಳದ ಬೀಡಿಕೆಯ ಬೇಳುವೆಗೆ ಬೆಬ್ಬಳೆವೋದನಾ ಪಾರ್ಥ (ಕುವ್ಯಾಕ. ೦೪-೦೦); ಗೃಹದೊಳಿರ್ದಕ್ಷಯನಿಧಿ ತಕ್ಷಣದೊಳಡಂಗೆ ಕಂಡು ಬೆಬ್ಬ [ಶಾಕಾಂ. ಬ್ಬು]ಳೆವೋಗಿ ತಳಮಳಗುಗೊಂಡು ಕಳವಳಿಪ ನಿಜಪತಿಯಂ ನೋಡಿ ದುರ್ಗಾಂಬೆಯಿಂತೆಂದಳ್ (ವೃಷವಿ. ೦೩-೩೩ ವ). **ಬೆಳ್ಪಳೆವೋಗು :** ಆಗಮಿಸುತ್ತಿರಲೆಲ್ಲರ್ ಬೇಗದೆ ನಡೆತಂದು ಪೆಳರ್ದು ಬೆಳ್ಪಳೆವೋಗುತ ಸಾಗಿ ವರಮೂಲಲಿಂಗದ ಸೋಗಿನ ದೇಗುಲ ಪನೆಯ್ದಿಜಗಿ . . . ಬೇಡಿಕೊಳಲೊಡಂ (ಶಾಲಾಕ್ಷ. ೦-೦೪-೦೬). [ಬೆಳ್ಪಳ + ಪೋಗು$_1$ (<ಪೋ$_1$)]

**ಬೆಳ್ಪಳಿಸು**. ಬೆಪ್ಪಳಿಸು. ಬೆಬ್ಬಳಿಸು (ಕ್ರಿ). ೧. ಹೆದರು : ಭಯಪಡು: ಬೆರ್ಚಿ ಬೆಳ್ಪಳಿಸಿ ಬಂದಂ ಫಲ್ಗುಣನಲ್ಲಿ (ಕಮುದ. ೦೦ ಕ್ರಯೋ); ಚಿಂತಾತುರನಾಗಿ ಬೆಳ್ಪಳಿಸಿ ಬೇಪಸವಂ ತಳೆದಂ ಧನಂಜಯಂ (ಕಪಶಂ. ೪-೦೦೩). **ಬೆಪ್ಪಳಿಸು :** ೧. ಬೆಪ್ಪಳಿಸದಿರು ತಾತ ತೆಪ್ಪಗಿಹೆ ನಾ ನೋಡ (ಹಪ್ಪರ. ೩೩-೦೬೦); ತೆಪ್ಪತ್ತು ತಲೆಯೊತ್ತಿ ಹೊತ್ತಿಕ್ಕೆ ಜೊಂಗುಳಿಗೆ ಬೆಪ್ಪಳಿಸುವಾಸರಿಂ ಬೆಳ್ಪು ಬರುತಿಪಳು (ಕಾಂತರ. ೦೭೭-೩೭೩). **ಬೆಬ್ಬಳಿಸು :** ೧. ಅಳವಳಿಸಂ ಬೆಬ್ಬಳಿಸಂ ಕಳವಳಿಸಂ . . . ತಳವಳಿಸಂ ಬೇಸಜಿಯ್ದ್ವ ಬೆಳ್ಗಾಗದಿನಿರಂ

F–6

(ಅಜಿತ· ೫-೯೦). ೨. ದಿಕ್ಕುತೋಚದಂತಾಗು ; ತಬ್ಬಿಬ್ಬುಗೊಳ್ಳು : "ಬೆಬ್ಬಳಿಸು ವಿಮೋಹೇ (ದಿಕ್ಕುತೋರದಂತಾಗು)" (ಶಬ್ದಾ): ಮುನಿಪಾಳಕಂ ವಿಷವೇಱ ಸತ್ತರಸುಪುತ್ರನಂ ಏಳೀಳು ಲೋಹಿತಾಶ್ವಾಂಕ ಎನೆ ಬೆಬ್ಬಳಿಸು ತೆದ್ದನು (ಹರಿಶ್ಚ. ೧೯-೬); ಮದನನಿದೆ ಬಂದನೇಳೇಳೆಂದು ಕಣ್ಗೆಟ್ಟು ಬೆದಱ ಕೈಕಾಲ್ಗೆಟ್ಟು ಕಳವಳಿಸಿ ಬೆಬ್ಬಳಿಸಿ ಕುದಿದೋಡಿದರ್ ತಾಪಸರ್ (ಅಜಿತ. ೬೫-೦೩). ೨. ಭ್ರಾಂತಿಗೊಳ್ಳು; ಭ್ರಮೆಯನ್ನು ಹೊಂದು: ಅರಸಿಯರಾತ್ಮವಲ್ಲಭನ ಮೇಲೆ ತುಳುಂಕೆ ತದಂಬು ಮೇದಿನೀಶ್ವರನತ ಪಾದಪಂಕಜನ ಪೂಸಿದ ಚಂದನಪಂಕದೊಳ್ ಸವಿಸ್ತರಮೊಡಗೂಡಿ ಚೆಲ್ವುವಡೆದೊಪ್ಪುವುದದ್ಭುತವಾಗೆ ಮೌಕ್ತಿಕಾಭರಣಮಿದೆಂದು ಬೆಬ್ಬಳಿಸಿ ನೋಡುವ ನೋಟಕರುಂ ನರೇಂದ್ರರುಂ (ಧರ್ಮಾಮೃ. ೧೯-೦೬). ೪. ಆಶ್ಚರ್ಯಪಡು; ಬೆರಗಾಗು: ಸೋಜಿಗಗೊಳ್ಳು: ಸಭಾಸ್ತಾರರೆಲ್ಲರು ಮಿದೇನೆಂದು ಬೆಬ್ಬಳಿಸೆ ರಘುವೀರನಚ್ಚರಿಗೊಂಡದೇನದೇನೊಲ್ಲು ತಿಳಿಪುವುದೆಂದು ಬೆಸಗೊಂಡನು (ತೊರವೆ. ೫-೦೦). ೫. ಭ್ರಾಂತಿಗೊಳಿಸು: ಮರುಳುಗೊಳಿಸು: ಪಾನಪಾರಾರನು ತಿಂದು ತೇಗದು ಬಜೆಯ ಸಂದೇಹದಿಂ ಬಲ್ಲೆನೆಂದವರ ಬೆಬ್ಬಳಿಸಿ ಕಾಡುತಿಹುದು (ಮನೋಲಿ. ೧-೩೯). 'ಪೆಳ್ಪಳಿಸು' ಪರಾ. [ಬೆಳ್ಪಳ + — ಇಸು$_3$]

**ಬೆಳ್ಪಾಲು** (ನಾ). ಶುದ್ಧವಾದ ಹಾಲು ; ನಿರ್ಮಲವಾದ ಕ್ಷೀರ : ಇದೊ ತಂದೆ ತನಿಗಳನು, ನನ್ನ ಮಗನಯ್ಯಂಗೆ, ಪಿತೃಗಳಿಗೆ, ತನಿಯೆರೆಯೆ:_ಅಚ್ಚಹಸು ಕರೆದ ಈ ಇನಿದಾದ ಬೆಳ್‌ಪಾಲು, ಹೂಗೆಲಸಿ ಚಿಟ್ಟಜೇನಿಳಿಸಿದೀ ಬಿಂಜೇನು (ಶ್ರಾರಸಿ. ೨೩೫-೧೯).

[ಬೆಳ್$_1$ (<ಬಿಳಿದು) + ಪಾಲು$_1$ (<ಪಾಲ್$_1$)]

**ಬೆಳ್ಪಿಲ** (ನಾ). ಮೂರ್ಖತನದಿಂದ ಕೂಡಿದುದು; ದಡ್ಡತನವುಳ್ಳುದು: ಇದು ತಲೆಗೊಯ್ಯದತ್ತು ಮಾಡಿಯಲ್ ನೆಱ ಕಲ್ಲದು ಬೇಕುಬೇಕಿದೆಂದದೆ ತನುವೆಲ್ಲಮಂ ಕಿಡಿಸಿಕೊಂಡು ಮಾಡಲ್ ನೆಱ ಕಲ್ಲದಾಯ್ತು ಬೇಂಟದೊಳಿದು ಬೆಳ್ಪಿಲಂ ಕಿಱಯರಾರೊಳಲ್ಲದು ನೋಡ ಬಂದ ಕಾಲದ ಪರಿಯುಂ ಮುಗುಳ್ವೊಲೆಯ (ಮುಕುಲಮುಪಾಡುವುದಕ್ಕೆ ಗೋಪ್ಯಮಂ ?) (ಸೂಕ್ತಿಸು. ೬-೪೨೫). [ಬೆಳ್ಪು$_2$ + — ಇಲ]

**ಬೆಳ್ಪು$_1$**, ಬೆಳಪು, ಬೆಳುಪು, ಬೆಳುಹು (ನಾ). ೧. ಬಿಳುಪು ; ಬಿಳಿಯ ಬಣ್ಣ ; ಶ್ವೇತವರ್ಣ ; ಧವಳತೆ: ಹಿಮಧವಳಾತಪತ್ರಮನೆ ಪೋಲೆ ಮುಖೇಂದುವ ಬೆಳ್ಪು (ಶಂಖಾ· ೦-೧೨೦) ; ಕಳಿದುದು ಮಾಗಿ ಕೂಗಿದುದು ಕೋಗಿಲೆ ಪಲ್ಲವಿಸಿತ್ತು ಮಾಮರಂ . . . ತಂಪದೆ ನಿಂದ ನೆದಾನಂ ತಳೆದುವು ಕೂಡೆ ಕೆಂಪಿನ ಪಸುರ್ಪಿನ ಕರ್ಪಿನ ಬೆಳ್ಪಿನಂದಮಂ (ಗಿರಿಜಾ. ೬-೩೯); ಕಂಪನ ಮೃಗಧರಕೆ ಬೆಳ್ಪು ಕಡೆಗಣ್ಗೆ ಕೆಂಪಡರಿದುದು (ಧರ್ಮ-೦೦-೦೦೨). ೨. ಕಾಂತಿ ; ಹೊಳಪು : ಪೊಸತಲರ್ದೊಂದು ತಾವರೆಯ ಗೆತ್ತು ಮುಖಾಬ್ಜಮನೊಂದು ತುಂಬಿ ಚುಂಬಿಸೆ ಸತಿ ಬೆರ್ಚಿ ಪೆಳ್ಪಳಿಸಿ ನೋಟ್ಟುದುಮಾಕೆಯ ಕಣ್ಣ ಬೆಳ್ಪುಗಳ್ ಪಸರಿಸೆ ತುಂಬಿಗಳ್ ಕುವಲಯಂಗಳೆಲ್ದುವೆ ಗೆತ್ತು ಮತ್ತೆಯುಂ ಮುಸುಱುವುದುಂ (ಶಂಕಚಾ· ೫-೬೩) ; ಪೊಳೆವಲರ್ಗಂಗಳಿಂ ಮಿಳಿರ್ಪ ಬೆಳ್ಪು ರಸಾತ್ಮಕಮಾಗಿ ಗಂಡಮಂಡಳತಳದೊಳ್ ದಮುಂಬಿಟ್ಟಿಯುತಿರ್ದುದೆನಲ್ ನ ಯ ನಾ ಂ ಬು ಲೋಚನಂಗಳಿಕದಾಗಸ್ಟ್ (ಕಾದಂಬ. ೬೯೯) ; ತರಳ ವಿಶಾಲಲೋಚನದ ಬೆಳ್ಪು ಕುರುಳ್ಗಳ ಚೆಲ್ವು ಭೂಷಣೋತ್ಕರದ ಬೆಡಂಗು . . . ಕಣ್ಗೆ ಪೆದಿರೆ (ಧರ್ಮಾಮೃ. ೫-೪೯). ೩. ಶುಭ್ರವಾಗಿರುವಿಕೆ ; ನಿರ್ಮಲತೆ : ಸ್ವಚ್ಛತೆ: ಶುಭ್ರತೆ : "ಬೆಳ್ಪು-ನಿರ್ಮಳಿಕೆ" (ಶಬ್ದಮ. ಶು· ೨) ; "ಬೆಳ್ಪೆಂದು ನಿರ್ಮಲಂ" (ಅಭಿಧಾ· ೩೬). ೪. ಹೊಳಪು ; ಕಾಂತಿ : "ಬೆಳ್ಪುವಡೆ" ಪರಾ. ೫. [ಛಂದ] ಉಚ್ಚಾರಣೆಗೆ ಒಂದು ಹ್ರಸ್ವಾಕ್ಷರದಷ್ಟು ಕಾಲವನ್ನು ತೆಗೆದುಕೊಳ್ಳುವ ಅಕ್ಷರ ; ಲಘು : ಮೊದಲೊಳ್ ಛಂದದೀಯೆಡೆಯ ಲೆಕ್ಕದೆ ಕಟ್ಟುದು ವೃತ್ತಮೆಂದು ಪೇಟ್ಟುದು ಬಗೆಪಂ ದೊಡಾಗಳವಱಂಕಮನರ್ಧಿಸಿ ಬೆಳ್ಪನಿಟ್ಟುಕೊಳ್ವುದು ಸಮಭಾಗಮಿಾಯು ದೊಡೆ ರೂಪಯುತಾರ್ಧದೆ ಬಿಣ್ಪನಿಟ್ಟುಕೊಳ್ವುದಿ ಗಡ ಸೂತ್ರಮಿಾ ತೆಱದೆ ಕಾಣ್ಬುದು ನಷ್ಟಮಂ (ಛಂದೋಂಬು. ೬-೨೬೨). 'ಬಿಣ್ಪು' ಪರಾ. **ಬೆಳಪು** : ೨. ಒಳಗುಳ್ಳೋವಣಮುಮರ್ದಿರೆ ಚಳನು ಪೊಱಗೆಸೆಯೆ ಬೆಳಪನೆಯ್ದುವ ಬೆಳಗಂ ಪೊಳೆವ ಸುಲಿಪಲ್ಲ ಮಸುಳಿಸೆ ವಿಳಾಸದಿಂ ದರ್ಭ ಶಾಸ್ತ್ರನತಳಗತನಾದಂ (ಕಾವ್ಯಾವ. ೨೪೬) ; ಕಡೆಗಣ್ಣ ಪೊಳಪು ಸುಲಿಪಲ್ಬೆಳ ಪುಟಾಭರಣಗಡಣದ ಮರೀಚಿ ಮಾಣಿಕ್ಯಮಯುದಿಮ್ಮರವ ಸೊಡರುಗಳ ದೇದೀಪ್ಯದೀಪ್ಯಾಯಮಾನದಿಂ ಶೋಭಿಸಿದವು (ನವಮೋ· ೨೦-೬). **ಬೆಳುಪು**: ೧. ಬೆಳುಪಂ [ಪಾಠಾಂ· ಬೆಳ್ಪಂ] ಬೆಳಗುಮನಾಗಸಕ್ಕೆ ನಿಜಮಲಿನತೆಯು ಮುಂ ಬಿಡಿಸಿ ಮತ್ತನಂಗನುಮಂ ಬೇಱ ಜನಕ್ಕೆ ತೋಱದುದು ಬೆಳ್ದಿಂಗಳ್ (ಚಂದ್ರ ಪ್ರ. ೬-೪೨) ; ಅಳಿಯೆಱಗದನಿಲನಲುಗದ ರವಿಕರಂ ಪುಗದ ಸುಳಿ ಗೊಂಡು ದಳವೇಱ ಹಸುರಳಿದು ಬೆಳುಪುಳಿದ ಸುರಚಿರಮೆನಿಪ್ಪ ವಿಾಸಲ ಮೊಗ್ಗೆಯುಂ ಕೊಂಡು (ಐಶರ. ೩-೨೦) ; ಬೆಳುಪು ನೆಱೆಯದ ಕಿಱುವೆಸಳ ನೆಯ್ದಿಲುಗಳೀ ಮಡದಿಯ ಕುಡಿತೆಗಂಗಳಿಗೆ ಪಡಿಯಲ್ಲ (ಐಸಪ್ರ. ೪-೨೫). ೨. ತತ್ ಕರಸ್ಥಳ ನವಿರನೀರವದು ಪುದಿದಡರ್ದಿರೆ ಥಳಥಳಿಸಿ ಬೆಳುಪೊದಗಿ ಬೆಳ್ಳಿಯ ಬಳ್ಳಿಗಳ ಛಂದದಿ ಬೆಳೆದು ಮೇಲ್ದೆಸೆಗೆ ಪಸರಿಸಿ ಸಲೆ ಬೆಳಗುತಿರಲು (ಐಸಪ್ರ. ೩೪-೫). **ಬೆಳುಹು** : ೧. ನೇಹವೆಳದಾಯಿತ್ತಾಗಿ ನೋಟ ವಿಪುಳ ವಾಯಿತ್ತು ಕಂಡೆ ಅಂಗದ ಕಳೆ ಕಂಗಳ ಮೋಹ ಎವೆಗವೆ ಸೈರಿಸದು ಬೆಳುಹಿನ ಮೇಲ ಕೆಂಪಡರಿತ್ತು (ಸಕವ, II· ೦೪೪-೫೦೦). [ಬೆಳ್$_1$ (< ಬಿಳಿದು) + — ಪು$_2$]

**ಬೆಳ್ಪು$_2$**, ಬೆಪ್ಪು (ನಾ). ೧. ದಡ್ಡತನ; ಬುದ್ಧಿಹೀನತೆ; ಮೌಢ್ಯ; ಮಂಕುತನ : ಇನಿತೆನಗಿಂಬುಕೆಯ್ದನಿತು ಬೆಳ್ಪನಿತೊಳ್ದಿಳಿದೆನ್ನನಿನ್ನು ಮೊರ್ವನೊಳಿವಳಿಂದೊಡಂಬಡುವಳೆಲ್ಲಿಯು ಬಾಟನಗೆಂಬ ಪಂಬಲಿಂ ಮಾನದೊಳಟಲ್ದು ಚಿಂತಿಸಿ ಕಟಲ್ದು ಬಟಲ್ದು ಕನಲ್ದೊನಲ್ದು ಬೆಳ್ಳನಿಸುವ ಬೆಳ್ಳ ಬೇರನಗುಟ್ಟಾಗಸಕೆತ್ತದೆ ಸೂಳೆ ಮಾಣ್ಗುಮೇ (ಶಾಂತಿಪು. ೬-೯೯). 'ಬೆಳ್ಪ' ಪರಾ. **ಬೆಪ್ಪು** : ೧. ಬೆಪ್ಪಿನ ಲೆಪ್ಪ ಗೊಂಡಂತಿದ್ದ ಕಣ್ಣು, ಆ ಮುಖಮಂಡಲದ ಚೆಲುವನ್ನು ಮಾಸಲು ಗೊಳಿಸಿತ್ತು (ಕಾದೋಟ. ೩೬೯); ಮುಖವೆಲ್ಲ ಒಣಗಿ ವಿವರ್ಣವಾಗಿ ತುಟಿಗಳು ಅದುರುತ್ತಲಿವೆ, ಕಣ್ಣುಗಳಲ್ಲಿ ಬೆಪ್ಪೂ ಅಲ್ಲ, ಭಯವೂ ಅಲ್ಲ, ಏನೋ ಒಂದು ಬಗೆಯ ನೋಟ (ಬಿಕಳ. ೦೬); ಹುಚ್ಚಲ್ಲ, ಬೆಪ್ಪಲ್ಲ, ಶಿವಲೀಲೆ (ಗಾದೆ). ೨. ಬೆಪ್ಪನಾದವನು ; ದಡ್ಡ ; ಮಂಕ : ಮೂರ್ಖತೆಯೊಳ್ಪರದ ಸೊಲ್ಲು ಗಳಾಡುತಿರ್ಪ ನಿಜಶೌರ್ಯಗಳ ಬಳಕೆಯುಂ ಮರೆದು ಬೆಪ್ಪೇ (ವೆಂಕಾಚಾ. ೬-೨೬-೭೧) ; ನಾನು ಅಂಥ ಬೆಪ್ಪು ಎಂದು ತಿಳಿದುಕೊಂಡಿದ್ದೀಯೇನು ! (ಮುಣಾಗ· ೯) : ಮಡಲ್ ಹೊಡೆಯೋ ಭೂಪನೆಂದರೆ ಸಾಮಾನ್ಯವೇನೋ ಬೆಪ್ಪೇ ? (ನಡಿದಾ. II· ೯೨೯). [ಬೆಳ್$_2$ + — ಪು$_2$]

**ಬೆಳ್ಪುಗಣ್** (ನಾ). ಬಿಳುಪಾದ ಕಣ್ಣು : ಬಿಳಿಚಿಕೊಂಡ ಕಣ್ಣು : ಕಾಣಲೊಡಮುಯ್ಯನೊಡಲಂ ತಬ್ಬಿ ಬಿಗಿದಪ್ಪಿ ಬಾಳ್ಗೆ ಜೇನಂ ಸೂಸು ವೊಡಲಿಚಂ ಬೆಳ್ಪುಗಣ್ ಪೆಳ್ಪಳಿಸೆ, ಬೆರ್ಚಿ ನಿಂದನ್ ಬರ್ದುಂಕೆ ಬೆಬ್ಬಳಿಸಿ (ಶ್ರೀರಾಮಾ. ೦೧೬-೧೭೦). [ಬೆಳ್ಪು$_1$ + ಕಣ್]

**ಬೆಳ್ಪುದೋಱು** (ಕ್ರಿ). ಬಿಳಿಯ ಬಣ್ಣವನ್ನು ಹೊಂದು ; ಬಿಳುಪೇರು : ನೆಱ ಹಸುರಿರಲು ಮುತ್ತಜನದು ಮುಖಂ ಬೆಳ್ಪುದೋಱರೆ ಬೊಲ್ಲನಕ್ಕು ಕಾಲ್ಮೊಗವೆಯ್ದೆ ಬೆಳ್ಪುದೋಱರೆ ಮಂಗಳಂ . . . ಸಿಲ್ಕಾದ ಕುಮರ ಸೂಸಳನೆನಿಕ್ಕುಂ (ಮಂಗರಾ. ೬೨-೦೫). [ಬೆಳ್ಪು$_1$ + ತೋಱು]

**ಬೆಳ್ಪುವಡೆ** (ಕ್ರಿ). ಕಾಂತಿಯನ್ನು ಹೊಂದು ; ಹೊಳೆ : ಅಪ್ಪುವ ನಳಿತೋಳ್ಗಳಲ್ಲಿ . . . ಬೆಳ್ಪುವಡೆವ ಸೆಳ್ಳುಗುರ್ಗಳ ತೋಱಂದು ನೆಬ್ಬಿ ನೊಳ್ ಬೆದಕಿ ನೋಡಿದಳು (ಮೋಹತ. ೬-೦೪). [ಬೆಳ್ಪು$_1$ + ಪಡೆ$_1$]

**ಬೆಳ್ಪುವೆಱು** (ಕ್ರಿ). ಬಿಳುಪನ್ನು ಹೊಂದು ; ಬಿಳಿಯ ಬಣ್ಣಕ್ಕೆ ತಿರುಗು : ತೊಂಗಲ್ಗೊಂಡಿರ್ದ ಕೆಂಪಾದಸುಗೆಯ ತಳಿರು . . . ಸೊಂಪಿನಿಂ ಬೆಳ್ಪುವೆತ್ತಿರ್ದಿಂಗೋಲಂ ಪಣ್ತ ದಾಳಿಂಬಗಳನೊಲವಿನಿಂ ತೋಂಟಿಗಂ ಕೊಟ್ಟು ಸೊರ್ವಂ (ಕಬ್ಬಿಗ. ೯೯). [ಬೆಳ್ಪು$_1$ + ಪೆಱು$_1$]

**ಬೆಳ್ಪಿಸೆ** (ಕ್ರಿ). ಬಿಳಿಯ ಬಣ್ಣದಿಂದ ಶೋಭಿಸು,—ಪ್ರಕಾಶಿಸು : ಪಸುರಿಸೆದುದು ಪದ್ಮಿನಿ ಬೆಳ್ಪಿಸೆದುದು ಕುಮುದಿನಿ ನಿಶಾಮುಖಂ ನಸುಗರ್ಪಂದೆಸೆದುದು ಪಡುವಣದೆಸೆ ಕೆಂಪೆಸೆದುದು ದಿವಸಾವಸಾನಮಪ್ಪುದು ಮಾಗಳ್ (ಕಾದಂಬ. ೦೩೯) ; ನೆಲನಂ ಘಟ್ಟಿಸೆ ಶಬ್ದಮುಬ್ಬರಿಪೊಡಂ ಮೇಣ್ ಮಿಂಚುವೆತ್ತಿರ್ಪೊಡಂ ಶಿಲೆಗಳ್ ಬೆಳ್ಪಿಸೆದಿರ್ಪೊಡಂ . . . ನಿಶ್ಚಯಂ ಜಲಮಕ್ಕುಂ ಪುರುಷದ್ವಯಪ್ರಮಿತದೊಳ್ (ಲೋಕೋಪ. ೫–೦೩).

[ಬೆಳ್ಪು$_1$ + ಎಸೆ$_2$]

**ಬೆಳ್ಪೇರು** 'ಬೆಳ್ಪೇಱು' ನೋ.

**ಬೆಳ್ಪೇಱು, ಬೆಳ್ಪೇರು** (ಕ್ರಿ). ೧. ಬಿಳಿಯ ಬಣ್ಣಕ್ಕೆ ಬರು : ತುಱುಗಿದಲರಿಂ ಬೆಳ್ಪೇಱಿದ ಬಕುಳಂಗಳೊಳಂ ಬಿನದಕ್ಕೆ ಪಕ್ಕಾದ ಬನಮಂ ನೋಡಲ್ವೇಟ್ಪು ದೇಟಿಂದೆಂಬುದುಂ (ಕಬ್ಬಿಗ. ೯೯). ೨. ಬಿಳಿಚಿಕೊಳ್ಳು; ಮ್ಲಾನವಾಗು: ಬಸಿಱ ತೆಳ್ಪುಱಿದತ್ತೆ ಮೊಗಂ ಬೆಳ್ಪೇಱಿದುದೇ . . . ಚೋದ್ಯಮಿದೆಂದು ಮಗುೞ್ದು ಬಣ್ಣಿಸಿದರಿಂದ್ರನ ಕಾಂತೆಯರಂತರ್ವತ್ನಿಯನಾ ನೃಪಪತ್ನಿಯಂ (ಆದಿಪು. ೬–೩೦); ಗಣಕರು ಲೆಕ್ಕಿಸಲಾಱದೆ ಬೆಱಗಾಗೆ ಪರಸಮಯಿಗಳ ಮೊಗಂ ಬೆಳ್ಪೇಱೆ ಬಿಜ್ಜಳನ ಮೊಗಂ ಲಜ್ಜೆಯೇಱೆ ಶರಣರ ಮೊಗಂಗಳು ಹರುಷವೇಱೆ (ಬಸವ. ೮–೦೨೮). **ಬೆಳ್ಪೇರು** : ೧. ಅಳಿಗಳಂ ಪಾರುತಿಮೆ ಪವಳ ಬೆಳ್ಪೇರುತಿಮೆ (ಪಂಪಾಶ. ೫–೬–೬೧); ಸಣ್ಣದೊಂದು ನಕ್ಷತ್ರದ ಸಮೀಪದಲ್ಲಿ ಪ್ರಕಾಶವುಳ್ಳುದಾಗಿ ಬೆಳ್ಪೇರಿ ಮಂಕಾಗಿರುವ ಜಾಲವೊಂದು ಗೋಚರವಾಗುತ್ತದೆ (ಜ್ಯೋತಿರ್. ೩೦).

[ಬೆಳ್ಪು$_1$ + ಏಱು$_1$ (< ಏಱ್$_1$)]

**ಬೆಳ್ಪೊಡೆ** (ನಾ). (ವಿಭೂತಿಯನ್ನು ಧರಿಸಿರುವುದರಿಂದ) ಬಿಳಿದಾದ ದೇಹ : ದಿಟ್ಟನೊಂದಾನೊಂದು ದಿನದೊಳು ಮುಟ್ಟಬರೆ ಯಾದವರ ಮನೆಗಳವಟ್ಟ ಭಸಿತ[ತ]ದ ಬೆಳ್ಪೊಡೆಯ ಕೆಂಜಡೆಯ ಸುಳಿಪಲ್ಲ (ಬಾವೇಪು. ೩೭–೬). [ಬೆಳ್$_1$ (< ಬಿಳಿದು) + ಪೊಡೆ$_3$]

**ಬೆಳ್ಪೊಱಸು** (ನಾ). ೧. (ಅನಿಷ್ಟಕಾರಕವೆಂದು ನಂಬಲಾದ) ಒಂದು ಬಗೆಯ ಪಕ್ಷಿ ; ಬಿಳಿಯ ಪಾರಿವಾಳ : ನರೆಯ ಜೊಂಜಂಗಸುಮಾಸುಂ ನೆರೆದಿರ್ದೊಡೆ ನೆರೆದು ಬಸದಿಂ ನೋೞ್ಪ ಪರಿನ್ನರಗಿಳಿಯುಂ ಬೆಳ್ಪೊಱಸುಂ ನೆರೆದುಂದಮನಱಿಸಿಕೊಳ್ವರೆಪ್ಕೊಳಮೋಘಂ (ಸೂಕ್ತಿಸು. ೮–೪೦೮). ೨. (ಆಲಂ) ಅನಿಷ್ಟಕಾರಕ ವ್ಯಕ್ತಿ : ಎನಿತಾನುಮಂದದಿಂ ಜೂದನಿಕ್ಕಿಯುಂ ದ್ರುಪದಸುತೆಯನೆೞೆದುಯ್ಯುಮಿಂತಿನಿತೊಂದಾದುದು ದುಶ್ಶಾಸನನಿಂದಂ ಶಕುನಿಯೆಂಬ ಬೆಳ್ಪೊಱ[ಪಾಠಾಂ.ಬೆಳ್ಪರ]ಸಿಂದಂ (ಪಂಪಭಾ. ೭–೨೦); ಮುಱುಕಿಸುವ ಧರ್ಮಮೊಂದೊಡೆ ಗುಱುಗುಱಿಸುವ ಗಂಡನಿದಿರೊಳೆದ್ದಾಡುವ ಬೆಳ್ಪೊಱಸುಗಳಂ ಕಿಸುಗುಳಿಯುರಱಿವೊಡೆ ಪೋಲಿಪುದೆ ಧರ್ಮರತ್ನಾಕರಿಯುಂ (ಧರ್ಮಾಮೃ. ೦೦–೭೮). [ಬೆಳ್$_1$ (< ಬಿಳಿದು) + ಪೊಱಸು]

**ಬೆಳ್ಬಳೆ** 'ಬೆಳ್ಬಳ' ನೋ.

**ಬೆಳ್ಬಳೆವೋಗು** 'ಬೆಳ್ಬಳಂಬೋಗು' ನೋ.

**ಬೆಳ್ಮಂಜು** (ನಾ). ಬಿಳಿದಾಗಿರುವ ಮಂಜು ; ಶುಭ್ರವಾದ ಹಿಮ : ಅಱಲ ಪಱಯುಟ್ಟಿರುಳ್ ಪೊಗಸಿಂಗೆ ಮುಸುಕಿಟ್ಟಿದು ಬರ್ಕೆಂದು, ಬೆಳಗಿನೊಳ್ ಬೆಳ್ಮಂಜ ಕಿದಱುತೆ ನೇಸಱೆಟ್ಟಿರ್ಕೆಂದು, ಪಾರ್ದು ಪಂಬಲಿಸು ಮಯ್ ನೀನ್ (ಬಿರ್ಕ್ರ. ೨–೨೮). [ಬೆಳ್$_1$ (< ಬಿಳಿದು) + ಮಂಜು$_1$]

**ಬೆಳ್ಮಡಿ** (ನಾ). ಶುಭ್ರವಾದ ಬಟ್ಟೆ, ವಸ್ತ್ರ, ಸೀರೆ ಮುಂತಾದುವು : ಕೆಂಪಿನ ಪಸದನಮಂ ಕಳೆದು ಪಲ್ಲಂ ಸುಲಿದು ತಲೆನೀರ್ ಮಿಂದು . . . ಬೆಳ್ಮಡಿಯನುಟ್ಟು ಬಳಪದೋಲೆಯನಿಟ್ಟು ಶ್ವೇತಮಾಲೆಯನೆಟಲೆ ಬಿಟ್ಟು ಕೈಗೈಯೆ (ಲೀಲಾವ. ೬–೫೩ ವ). [ಬೆಳ್$_1$ (< ಬಿಳಿದು) + ಮಡಿ$_2$]

**ಬೆಳ್ಮಣ್, ಬೆಳುಮಣ್ಣು** (ನಾ). ೧. ಬಿಳಿಯ ಮಣ್ಣು : ಬೆಳ್ಮಣ್ಬೆರಸಿದ ಮಹೀಪ್ರದೇಶಂ ನಿರಂತರಂ ಪಾಂಡುಭೂಮಿ (ವಸ್ತುಕೋ. ೨೬–೪). **ಬೆಳುಮಣ್ಣು** : ೨. ಗೋಪೀಚಂದನ : ಸಣ್ಣದಂಡಿನ ಜೀರ್ಣಕಂತೆಯ ಥಣ್ಣಗಿಹ ದೇಹದ ನೊಸಲ ಬೆಳುಮಣ್ಣ ಪಟ್ಟೆಯ ತಕ್ಕ ಮಂಡಲ ತೋರ ಜಪಮಣಿಯ . . . ಮುನಿ ರಂಜಿಸಿದ (ಭಾಗ. ೦೦–೨೯–೨೩).

[ಬೆಳ್$_1$ (< ಬಿಳಿದು) + ಮಣ್]

**ಬೆಳ್ಮಣೆ** (ನಾ). ಒಂದು ಸ್ಥಳದ ಹೆಸರು : ಕುಸ್ತಗೆಸೆವೆ ಕಲಿಯುಮ್ಮ ಬೆಳ್ಮಣೆಯ ಪದುಮಣ್ಣನ್ ಕರ್ಬುರಸೋಮ . . . ಇನ್ತೀ ಎನೆಬರು ಶ್ರೀಕರಣ ಸಹಿತ ಬಿಟ್ಟಾರ್ (ಎಕ. VIII, ಸೊರಬ. ೦೦–೦೨ ; ಸು. ೮೦೦).

[ಬೆಳ್$_1$ + ಮಣೆ$_3$]

**ಬೆಳ್ಮಸೆ** (ನಾ). ೧. ಬೆಳ್ಳಗಾಗುವಂತೆ ಉಜ್ಜಿದ ಸಾಣೆ; ಚೆನ್ನಾಗಿ ಹರಿತ ಮಾಡಿದ ಸಾಣೆ : ಬೆಳ್ಮಸೆಯಂಬಿನ ಸರಿಮೊನೆಯಂಬಿನ ಸೋನೆ ಪಾರೆಯಂಬಿನ ತೇದಲ್ ಘನಮಾದುದಲ್ಲಿ (ಪಂಪಭಾ. ೦೨–೬೦); ಪೊದಟ್ಟ ಬೆಳ್ಮಸೆವಿಸಿಲ್ ರಣದೇವತೆಯಟ್ಟಹಾಸದಂತೊಗೆಯೆ . . . ಪಾಯ್ದುವಂಬುಗಳ್ (ಜಗ. ೬–೭೮). ೨. ನುಣುಪಾಗಿ ಹೊಳೆಯುತ್ತಿರುವ ಭಾಗ : ಕನ್ನಡಿಯಿರ್ದಪೊಲ್ಪೊಳಪ ಚಕ್ರದ ಬೆಳ್ಮಸೆಯಲ್ಲಿ ನೋಡುವಳ್ತನ್ನ ಮುಖಾಬ್ಜಮಂ (ಅಸಂಪು. ೦೨–೭೬). [ಬೆಳ್$_1$ (< ಬಿಳಿದು) + ಮಸೆ$_2$]

**ಬೆಳ್ಮಳಲ್** (ನಾ). ಬಿಳಿಯ ಮರಳು; ಬೆಳ್ಳಗಿರುವ ಉಸುಕು : ನೀರ್ತಗೆಯಲ್ಕೆ ಬೆಳ್ಮಳಲ್ದೆರೆಗಳನಪ್ಪಕೆಯ್ಕೆ ತೊಱೆ . . . ಬಂದುದತಿನಿರ್ಮಲನೀರದವಪ್ಪ ಶಾರದಂ (ಕಾದಂಬ. ೬೩೨); ಭೃಗುದೇವತಾಪ್ರಹಾಸಮರೀಚಿಪ್ರಕರಮೆನೆ ಬೆಳ್ಮಳಲ್ ಪುದಿದು ಕರಂ ಕಣ್ಗೆಸೆದುದಸದಳಂ ಶ್ರಮಕುಟಿಯೊಳ್ (ಕುಸುಮಾ. ೭–೭೦).

[ಬೆಳ್$_1$ (< ಬಿಳಿದು) + ಮಳಲ್ (< ಮಣಲ್)]

**ಬೆಳ್ಮಳೆ** (ನಾ). ಬಿಳಿಯದಾದ ನೀರಿನ ಧಾರೆ : ನೇಸರಿಂದೊ ತಣ್ಬಿಸಿಲ ಬೆಳ್ಮಳೆಯ ಕರೆಯುತಿದೆ (ಹಕ್ಕಿಹಾ. ೫–೭೬).

[ಬೆಳ್$_1$ (< ಬಿಳಿದು) + ಮಳೆ (< ಮೞೆ)]

**ಬೆಳ್ಮಾದೆಂಗ** (ನಾ). ಒಬ್ಬಾತನ ಹೆಸರು : ಪೊಱ್ಯಕ್ನ ಬೆಳ್ಮಾದೆಙ್ಗಂ ಶ್ರೀಕಂಚಿಶಾಯಿ ನರಸಿಗಮಙ್ಗಲದ ತೊಱುಗಳೊಳ್ಸತ್ತವ್ (ಎಕ. X, ಕೋಲಾರ್. ೪೨–೩; ಸು. ೯೨೦).

[ಬೆಳ್$_?$ + ಮಾದೆಂಗ (< ಮಾದಿಗ)]

**ಬೆಳ್ಮಾನಿಸ** (ನಾ). ಹೇಡಿ; ಅಂಜುಬುರುಕ : ಪುಲ್ವಿಡಿದಱ ಮುಣ್ಮೆಳಿಯನು ಮಾಳ್ಪುದಱ ಭೀಱುತೆಯುಂ ಬೆಳ್ಮಾನಿಸರಪ್ಪವರ್ಗೆ ಮಱಿಪೊಕ್ಕವರ ಕಾಯುದು . . . ತುಂಳಿಲಾಳ್ಗದು ನೆಱಿವಳಿಗೆಯ ಲೋಕವಱಿಯ (ಶ್ರೀಪಾಂ. ೮–೬೭). [ಬೆಳ್$_2$ + ಮಾನಿಸ$_1$ (< ಮಾನುಸ)]

**ಬೆಳ್ಮಾರಲ, ಬೆಮ್ಮಾರಲು, ಬೊಮ್ಮರಲು** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು : ಮುಳ್ ಪೊದೆಯ ಬೆಳ್ಮಾರಲಂ ಕಾಯ್ ತುಂಬಿ ಹಣ್ಣನಕೆ ಹಾರೈಸುತ್ತಿರ್ದುದು ಹೊಸಮಳೆ ಹರಕೆಗಾಗಿ (ಶ್ರೀರಾಮಾ. ೩೪೦–೦೦). **ಬೆಮ್ಮಾರಲು** : ದೂರದಲ್ಲಿ . . . ಬೆಮ್ಮಾರಲ ಮಟ್ಟುಗಳೂ ಅರಮರಲ ಗಿಜರುಗಳೂ ಇದ್ದುವು (ಮಲೆಮ. ೦೩೦). **ಬೊಮ್ಮರಲು** : ಬೊಮ್ಮರಲು, ಬಿಳಿಸುರಿಮುಳ್ಳು, ಸಣ್ಣಗುರಕಿ (ವೃಕ್ಷಶಿ. ೭೯–೧೬೩೦). 'ಅರಮರಲು' ನೋ. [ಬೆಳ್$_1$ (< ಬಿಳಿದು) + ಮಾರಲ ?]

**ಬೆಳ್ಮಾಳ** (ನಾ). ಬಿಳಿಯ ಮಣ್ಣಿನ ಜಾಗ : ನೀರ್ದಣದೆಡೆಗಳೊಳ್ ಕಾಟಗಳಪ್ಪೆಡೆಗಳೊಳ್ ಬೆಳ್ಮಾಳ[ಪಾಠಾಂ. ಬೆಳುಮಾನ]ದೆಡೆಗಳೊಳ್ ಭೀತಂಗಳಾಗಿಯುಂ (ಅಭಿಷು. ೩–೨). [ಬೆಳ್$_1$ (< ಬಿಳಿದು) + ಮಾಳ$_2$]

**ಬೆಳ್ಮಿಂಚು** (ನಾ). ೧. ಬಿಳಿಯ ಬಣ್ಣದ ಮಿಂಚು; ಥಳಥಳಿಸುವ ಮಿಂಚು : ಬಲಾಹಕಂ ತಾಳ್ದ ಬೆಳ್ಮಿಂಚಿನೊಬ್ಬುಳಿಯೊ ಪೊಸತೆನೆ ಘಟೋತ್ಕಚತನಯನು ಬಾಹುಬಲದಿಂದೆಡದ ಕಕ್ಷದೊಳಿಱುಂಕಿದ ಮಹಾ ಹಯಂ ಗಗನಮಾರ್ಗದೊಳ್ಕೈದುತಿರೆ (ಜೈಮಿಭಾ. ೯-೦೩); ಬಜಿಕ್ಕೆ ಬೆಳ್ಮಿಂಚು, ಲೋಕನಾಶಕ್ಕೆ ಕಪ್ಪಿಯ ಚಂಡಿಕೆ, ಬಿಱುಮಿಸಿಲ್ಗೆ ಕೆಮ್ಮಿಂಚು (ಕಬ್ಬಿಸು. ೨೦೮ ಪ್ರಯೋ); ಬೆಳ್ಮಿಂಚು ಮುಂಚುತಿರೆ ಸೊಡರ ಕಣ್ವೆಳಗಿನಿಂ (ಕಾಬೂರ. ೦೨೫-೨೬೫). ೨. ಬಿಳಿಯ ಬಣ್ಣದ ಕಾಂತಿ,—ಪ್ರಕಾಶ : ಶ್ವೇತಚ್ಛತ್ರದ ಕೆಳಗೆ ಬೆಳ್ಮಿಂಚಿನ ದುಕೂಲದ ಸಜ್ಜೆ ಕವುಳುಡೆ ಗಳನ್ನುಳ್ಳುದೂ ಆದ ಬೆಳ್ಳಿಯ ಭದ್ರಾಸನವನ್ನು ಬಳಸುಗಟ್ಟಿ (ಚಿಟ್ಟಿ. ೩೦-೦೫). [ ಬೆಳ್$_{1}$ (<ಬಿಳಿದು) + ಮಿಂಚು$_{2}$ ]

**ಬೆಳ್ಮಿಗ** (ನಾ). ೧. ಸಸ್ಯಾಹಾರಿಯಾದ ಸಾಧುಪ್ರಾಣಿ; ಕ್ರೂರ ವಲ್ಲದ ಪ್ರಾಣಿ : ಬೆಳ್ಮಿಗಂ ಪಜ್ಜೆ ದಲೆಂಬುದನೆರಡುಮಾಸಱಿ ವಾತನೆ ಚದುರಂ (ಶಂಶಭಾ. ೫-೯೫); ಕತ್ತಲಿಸಿರ್ದ ಪೇರಡವಿಯೊಳ್ ಸಲೆ ಕೋಟ್ಮಿಗ ಬೆಳ್ಮಿಗಂಗಳಂ ಮಿತ್ರುವಿನಂದದಿಂ ತವಿಸಿ (ದಶಕು. ೨-೦೦೯). ೨. ಒಂದು ಬಗೆಯ ಜಿಂಕೆ; ಚಿಗರೆ : ''ಕೃಷ್ಣಸಾರಂ ಮಾತ್ರ ಪ್ರಮಿಯೆನೆ ಬೆಳ್ಮಿಗ" (ಶಬ್ದಕೋ. ೯೦-೬); ಎಮ್ಮ ಪಾಸಿದ ಚಿತ್ರಪಟಮೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಮಿಗಂಗಳುಗಳೆ ತೊಡರ್ಗುಂ (ಆದಿಪು. ೩-೯೯ ವ); ಬರಬಿಯೆಂಬ ಬೆಳ್ಮಿಗಂಗಳನಳುರ್ದ ಕಾಚ್ಚಿಕಿಚ್ಚಿನಂತೆ ಕಂಕ ಮಾದ ಕಂಕೇಳೀಕುಜಂಗಳೊಳಂ (ಮಲ್ಲಿಪು. ೨-೩೩). 'ಕೋಟ್ಮಿಗ' ಪರಾ.
[ ಬೆಳ್$_{2}$ + ಮಿಗ ]

**ಬೆಳ್ಮುಗಿಲ್**, ಬೆಳುಮುಗಿಲು, ಬೆಳ್ಮುಗಿಲು (ನಾ). ಬಿಳಿಯ ಬಣ್ಣದ ಮೋಡ : ಬೆಳ್ಮುಗಿಲಿಂದಂ ಮುಸುಕಿದ ಬಾಳಾರ್ಕಬಿಂಬಮಿರ್ಪಂತಿರ್ದಂ (ಆದಿಪು. ೬-೯೨); ಮಿಸುಗುವ ಬೆಳ್ಮುಗಿಲೊಳಗುದಯಿಸುವಿನಬಿಂಬದ ವೊಲೆಸೆವ . . . ಬಾಲನಂ ನೃಪಾಲಂ ಕಂಡಂ (ಕುಸುಮಾ. ೬-೮೭). **ಬೆಳು ಮುಗಿಲು :** ದಟ್ಟೈಸಿ ಬಳೆದ ಬೆಳುದಿಂಗಳಿಂ ಬೆಳುಮುಗಿಲ ಮೆಟ್ಟಿರ್ದ ಚಂದ್ರಕಳೆಯೆಂದೆಂಬ ಭಾವವಳವಟ್ಟು ಬಿಳಿಯುಪ್ಪರಿಗೆಯುಗ್ರದೊಳು ನಿಂದೊರ್ವ ಸತಿ ಕಣ್ಗೆ ಸೊಗಯಿಸಿದಳು (ಹತಕಾ. ೪-೮). **ಬೆಳ್ಮುಗಿಲು :** ತಾಪ ವೆಗ್ಗಳಿಸಿದುದವನೀಕಾಂತಗೆ ನಾ ಪರಿಹರಿಸುವೆನೆಂದು ತಾ ಪನ್ನೀರ ಬೆಳ್ಮುಗಿಲು ತುಳುಕಿದವೊಲಾ ಪರಿ ಬೆಳ್ಸರಿಯಾಯ್ತು (ಪರ್ದೇಶ. ೩-೦೦); ತೊಳಪ ಬೆಳ್ಮುಗಿಲ ಮೊಗ್ಗರದಂತೆ . . . ತೇಜಿಯ ಬಳವೊಪ್ಪಿದುವು (ಕಂಪರಿ. ೨-೫೫); ಕೆಳಗಿನ ಪ್ರದೇಶ ಮೊಸರಿನ ಸಮುದ್ರದಂತೆ ಬೆಳ್ಮುಗಿಲು ಗಳಿಂದ ಸಂಪೂರ್ಣ ತುಂಬಿಕೊಂಡಿತ್ತು (ಅಬೂರಿ. ೦೨೮).
[ಬೆಳ್$_{1}$ (<ಬಿಳಿದು) + ಮುಗಿಲ್ ]

**ಬೆಳ್ಮುಗಿಲು** 'ಬೆಳ್ಮುಗಿಲ್' ನೋ.

**ಬೆಳ್ಮುಗುಳ್** (ನಾ). ಬಿಳಿಯ ಬಣ್ಣದ ಮೊಗ್ಗು; ಬಿಳಿಮೊಗ್ಗು : ಮದನಂ ಬೆಳ್ಮುಗುಳ್ಚಿನಿಂದಿಸೆ ಜಗಿಲ್ತಿರ್ದಂಬುಗಳ್ ಚಿತ್ತದೊಳ್ ಮೊದೆಯುಂ ಬೈತವೊಲಾಗೆ (ಕಾವ್ಯಸಾ. ೫೮೮ ಪೂರ್ವ); ನಗೆಯ ಬೆಳ್ಮುಗು ಳೊಂದು ತೊಂಡೆವಣ್ಣುಟಿಗಳಿನಿಯೊತ್ತಿನಿಂದರಳುತಿರೆ (ಪಶ್ಚಾಂಗ. ೩೩-೯೯೨).
[ ಬೆಳ್$_{1}$ (<ಬಿಳಿದು) + ಮುಗುಳ್$_{2}$ ]

**ಬೆಳ್ಮುನಿಸು** (ನಾ). ಹುಸಿಮುನಿಸು; ಸುಳ್ಳು ಕೋಪ : ಬೆಳುಕ್ಕೆ ಬೆಳ್ಮುನಿಸು ಕೈತವಮುಂ ಕನಸಿನೊಳ್ ನೆನೆಯದೆ (ಪರಿಶಾ. ೬೮).
[ ಬೆಳ್$_{2}$ + ಮುನಿಸು$_{2}$ ]

**ಬೆಳ್ಮೃಗ** (ನಾ). = ಬೆಳ್ಮಿಗ ೧ : ''ಬೆಳ್ಮೃಗಮುಂ ಮೃಗಾಪ್ಯೆ'' (ವಾಪಾರ. ೮೨); ಬೆಳ್ಮೃಗರಾಜಿಯಿಂ ಪ್ರಚುರಪಕ್ಷಿಗಣಸಂತತಿಯಿಂ ನಿರಂತರಂ ಬಾಳ್ಕೊದಲಾಗಿ ಗಾಧ್ರತೆಗೆ ತೋರ್ಪುದು ರಮ್ಯಕಮೆಂಬ ಕಾನನಂ (ಪುಣ್ಯಾಸ್ರ. ೭-೬೯). [ ಬೆಳ್$_{2}$ + ಮೃಗ ]

**ಬೆಳ್ಮೊಗ** (ನಾ). ಬಿಳಿಚಿಕೊಂಡ ಮುಖ; ವಿವರ್ಣವಾದ ಮುಖ : ಪದಂಗಳೊಳೊಗದಾ ಪುಳಕಚಯಂಗಳ್ ಕಳೆದುವು ಮುಳಿಸಂ ನಲ್ಲಳ್ಗೆ ಬೆಳ್ಮೊಗಂಗೆಯ್ದುರೆಯುಂ (ಕಬಿಕಾ. ೩-೦೦೮) ; ಅತಿಬೆಳ್ಮೊಗದಿಂದಮಾವ ಮುಮ್ಮಲ ಮಱುಗುತ್ತುಮಾವ ಕಡುಲೋಭಕ ದಾನಗುಣಂಗಳಂ ಪಟುಚಲೆ ದಪುದಾತರ್ಗೆ ಕೂರ್ತರ್ಗೆ ಪಿರಿದೀವ ಗುಣಂ ಗುಣದಂಕಕಾರ್ತಿಯಾ (ಆದಿಪು. ೦೨-೦೭); ದೀರ್ಘನಿಶ್ವಾಸವನ್ನು ಬಿಟ್ಟು ಬೆಳ್ಮೊಗವನ್ನೆತ್ತಿ ಸುತ್ತ ನೋಡಿ ಹತಾಶನಾಗಿ ಬಾಗಿ (ಸುಗುಗಂ. ೮-೫).
[ ಬೆಳ್$_{1}$ ( < ಬಿಳಿದು ) + ಮೊಗ ]

**ಬೆಳ್ಮೋರೆ** (ನಾ). =ಬೆಳ್ಮೊಗ : ಬೆಳ್ವರಲ ಪಲ್ಗಳಿಂ ಬೆಳ್ಮೋರೆಯಿಂದಂ . . . ಬೆಳ್ಳಿ ಬೀರ್ದಳು ಬೆಳ್ಳಿಹೂಮರವದೊಂದು (ಕಾಬೂರ. ೦೨೫-೨೬೫).
[ ಬೆಳ್$_{1}$ ( < ಬಿಳಿದು ) + ಮೋರೆ ( < ಮೋಱೆ$^{3}$ ) ]

**ಬೆಳ್ವಕ್ಕ** (ನಾ). (ಅಮಾವಾಸ್ಯೆಯ ಅನಂತರ) ದಿನದಿನಕ್ಕೆ ಬೆಳಕು ಹೆಚ್ಚಾಗುವ ದಿನಗಳು ಮತ್ತು ಆ ದಿವಸಗಳ ಕಾಲ; ಶುಕ್ಲಪಕ್ಷ : ☞ ಇದು 'ಶುಕ್ಲಪಕ್ಷ' ಎಂಬ ಶಬ್ದದ ಕನ್ನಡೀಕರಣ : "ಬೆಳ್ವಕ್ಕಮೆಂದು ಶುಕ್ಲಪಕ್ಷಂ" (ಕಶಶಾ. ೫೬-೨೯೮); ಬೆಳ್ವಕ್ಕದೊಳ್ ತೊಳಗಿ ಬೆಳಗುವ ಸುಧಾಸೂತಿ (ಶಬಿಪು. ೩೯-೫); ಮಕ್ಕಳು ಬೆಳ್ವಕ್ಕದ ಎಳವೆರೆಯನೋಪಾದಿ ಯಲ್ಲಿ ಬೆಳೆಯುತ್ತಾ ತಾಯ್ತಂದೆಯರ ಮನಸ್ಸಿಗೆ ಸಂತೋಷವನ್ನುಂಟು ಮಾಡಿದರು (ಮುಡಿಗ. ೬೦). [ಬೆಳ್$_{1}$ ( < ಬಿಳಿದು ) + ಪಕ್ಕ]

**ಬೆಳ್ವಕ್ಕಿ**, ಬೆಳ್ಳಕ್ಕಿ (ನಾ). ೧. ಬಿಳಿಯ ಬಣ್ಣದ ಒಂದು ಬಗೆಯ ಜಲಚರ ಪಕ್ಷಿ; ಬಲಾಕ ಪಕ್ಷಿ: ಬಗೆಯೊಳ್ ಬೆಳ್ವಕ್ಕಿ [ಪಾಠಾಂ. ಬೆಳ್ಳಕ್ಕಿ]ಯ ಪಿಂಡಿಂಗ ವಂದಿರಂ ಸರಿಗಂಡಂ (ಶಂಕಾಪೂ. ೯-೫೮) ; ತರದೆ ಪಾಱಿದುವು ಬೆಳ್ವಕ್ಕಿ ನೂಲ್ಗಿಗೆದಂತೆ ನೆರೆದ ಕಾಮನ ಬಿಲ್ಗೆ ಬಿಳಿಯದಿರು ಬಿಗಿದಂತೆ (ಅನಂಪು. ೯-೦೭ ರಗಳೆ); ಬೆಳ್ವಕ್ಕಿಯ ಬಿಗುರ್ಪಿಂ ನೀರೊಳೊಳಗೊಳಗೆ ಮೈಗರೆವ ಮೀನಂಗಳಂ . . . ಕಾಲ್ಪರಿವ ತೆರೆಯಿನೊಂದು ಕೊಳಂ ಪಗಲ್ವಣ್ಣ ಕೈಪಿಡಿ ಯೆಯಂತಿರೆ ಸೊಗಯಿಸಿವತ್ತು (ರಾಮಾಶ್ವ. ೫೨-೨೯). **ಬೆಳ್ಳಕ್ಕಿ :** ೧. "ಬಲಾಕಾ, ಬಿಸಕಂಠಿಕಾ — ಈ ೨ ಬೆಳ್ಳಕ್ಕಿ " (ಹಲಾಯು. ೯೨-೯೭); ಬಸವನಂ ಬೆಳ್ಳಕ್ಕಿಯು . . . ತುಂಬಿಯುಂ ತಿಳಿಯಲ್ ಸ್ವಪ್ನದಿ ಲೇಸು (ಸೋಮೇಶ. ೬೯) ; ಸಲೆ ಸಾಳುವನ ವೈರದಲಿ ಬೆಳ್ಳಕ್ಕಿಯ ಬಳಗ ಮಾಳ್ಪುದುಬ್ಬುಗವೇನು (ಕಂಪರಿ. ೦೨-೬೦); ಜಗನ್ಮಾತೆಯ ಆಶೀರ್ವಾದದ ಬಾನಕ್ಷತೆ ಈ ಬೆಳ್ಳಕ್ಕಿ (ಅಬಿಕೇ. ೯೬-೨). ೨. ಒಂದು ಬಗೆಯ ಪಕ್ಷಿ; ಬಕ : "ಬಕೋಟಃ — ಬೆಳ್ಳಕ್ಕಿ, ಬೋದನಹಕ್ಕಿ " (ಒಶಂ. ೦೦೫); ಬೆಳ್ಳಕ್ಕಿಯಂತೆ ಮಾಯಾಮಾರ್ಗನುಂ ಪುಲಿಯಂತೋಜಾಯಿಲನುಂ . . . ಆಗಿ ಕೆಲವು ದಿವಸಮಿರ್ಪುದುಂ (ಧರ್ಮಾಮೃ. ೬-೬೨). ೩. (ಆಲಂ) ಆಡಂಬರದ ವ್ಯಕ್ತಿ; ಪ್ರದರ್ಶನದಲ್ಲಿ ಆಸಕ್ತಿಯಿರುವ ವ್ಯಕ್ತಿ : ನಾವು ಒಳ್ಳೇ ಆಸ್ತಿವಂತರು, ಆಸ್ತಿಗೆಲ್ಲಾ ನಾನೊಬ್ಬನೇ ಮಗ, ತಕ್ಕಮಟ್ಟಿಗೆ ವಿದ್ಯಾವಂತ. ಸರಿ ಪೇಟೆ ಪಟ್ಟಣಗಳಿಂದ ಬೆಳ್ಳಕ್ಕಿಗಳು ಬಂದಿಳಿಯಲಾರಂಭಿಸಿ ದುವು (ಹುಪಸಂ. ೯೧). [ ಬೆಳ್$_{1}$ ( < ಬಿಳಿದು ) + ಪಕ್ಕಿ ]

**ಬೆಳ್ವಟ್ಟೆ**, ಬೆಳುವಟ್ಟೆ, ಬೆಳ್ಳುಂಬಟ್ಟೆ (ನಾ). ಬಿಳಿಯ ಬಣ್ಣದ ವಸ್ತ್ರ; ಬಿಳಿಯ ಬಟ್ಟೆ : ಬಳ್ಳಿವೆಳಗಂ ಕಱಿವ ಬೆಳ್ವಟ್ಟೆಯ [ಪಾಠಾಂ. ಬೆಳ್ಳುಂ ಬಟ್ಟೆಯ] ನೀಲದ ನಿರ್ಮಲೋದಕದ . . . ಬೆರಕೆವೆಳಗು ಮಂಟಪ ದೊಳಗಂ ಪೊಱಗು ತೆಕ್ಕನೆ ತೀವೆ (೧೦ಶ. ೦೦-೨೮ ವ); ಪರಸ್ನಾನವಂ ಮಾಡಿ ಬೆಳ್ವಟ್ಟೆಯ ಧೋತ್ರಮುಂ ತೆಗೆದುಟ್ಟು (ಉದ್ಭಟ. ೩-೦೦೨ ವ) ; ಬೆಳ್ವಟ್ಟೆ ಅಂಚಿದುಪ್ಪುಳ್ವಾಸಿನ ಮೇಲೆ ಸತಿಗೂಡಿ ಪಚಾಸ್ತು ಕುಳಿತನುತ್ಸ ವದಿ (ಪೋಪಶ. ೦೬-೦೮). **ಬೆಳುವಟ್ಟೆ :** ಕಟ್ಟಿದ ಬೆಳುವಟ್ಟೆಯ ಮೇಲ್ಕಟ್ಟಿನೊಳಂ . . . ಪರಿಮಳಕ್ಕೆಱಗಿ ಮುಸುಱುವ ಮಱಿದುಂಬಿಯ ಬಂಬಲಿಂ (ಕಾದಂಬ. ೬೦); ಉಟ್ಟು ಹೊಸ ಬೆಳುವಟ್ಟೆಯೊಮ್ಮೆಱಿ ಮುಟ್ಟು

ಏಸೆ ಪೊಂಬಣ್ಣವಾದುದು (ಕೊರಲಾ. ೩-೮-೩೦); ತಂದು ಕೊಟ್ಟರು ಬೆಳುವಟ್ಟೆಯ ಸುರಳಿಯನಂದು ರಾಯನ ಹಸ್ತದಲ್ಲಿ (ಭರತ. ೩-೬೦). **ಬೆಳ್ಳಂಬಟ್ಟೆ :** ಬೆಳ್ಮುಗಿಲನುಟ್ಟ ಬೆಳ್ವೆಟ್ಟದಂತೆ ಬೆಳ್ಳಂಬಟ್ಟೆಯನುಟ್ಟು (ಲೀಲಾವ. ೦೨-೩೭ ವ); ಮುಕ್ತಾವಳಿಗಳೆಂಬ ಬೆಳ್ನರಿಯುಂ ಸುರಿವ ಶರದದ ಮುಗಿಲ ತೆಗಳಿಗೆಯಿಪದೆನಿಪ ಮೇಲ್ಕಟ್ಟಿನ ಬೆಳ್ಳಂಬಟ್ಟೆಯುಂ (ಚಂದ್ರ ಕೃ. ೦೨-೦೦ ವ); **ಳೆಳಾರಕ್ಕೆ :** ಬೆಳ್ಳಂಬಟ್ಟೆ (ಕಮುದ. ಪ. ೦೮೩ ಪ್ರಯೋ).

[ಬೆಳ್$_1$ ( < ಬಿಳಿದು ) + ಬಟ್ಟೆ$_2$ ]

**ಬೆಳ್ವಣಗೆ** (ನಾ). ಒಂದು ಊರಿನ ಹೆಸರು : ಭಟ್ಟಾರಕರಾಜ್ಯಮುತ್ತರೋತ್ತರಾಭಿವೃದ್ಧಿ ಸಲುತ್ತಿರೆ [ಬೆಳ್ವ]ಣಗೆ ಪನ್ನೆರಡು ಮ × ಳ್ಕೆಯಾಗೆಯಾಳೆ (ಸೌಇಇ. XI-i, ೨೯-೩; 912); ಬೆಳ್ವಣಗೆಗೊಳೊನ್ದು ಮಟವಿಜ್ಜಿ . . . ಒನ್ದು ಗದ್ಯಾಣವದಿತ್ಯಜ್ಜಿ ಕೊಟ್ಟ (ಸೌಇಇ. XI-i, ೩೩-೮; 933). [?]

**ಬೆಳ್ವಯಲ್** (ನಾ). (ಬಿಸಿಲಿನ ಝಳದಲ್ಲಿ) ಬೆಳ್ಳಗೆ ಕಾಣಿಸುವ ಬಯಲುಪ್ರದೇಶ : ಬಂದುದು ಬೇಸಗೆಕಾಲಂ . . . ತೋಜಿಗಳ್ ಪರಿಗೆಟ್ಟುವು ಬೆಳ್ವಯಲೊಳ್ ಸರಳಿಸಿದವು ಮರುಮರೀಚಿಕಾವಾಹಂಗಳ್ (ಶಂಖಾಪಶಾ. ೬-೯೬); ಬೆಳ್ಮುಗಿಲ್, ಬೆಳ್ವಲ್, ಬೆಳ್ವಯಲ್ (ಕಮುದ. ೦೭೯ ಪ್ರಯೋ). [ಬೆಳ್$_1$ (< ಬಿಳಿದು) + ಬಯಲ್ (< ಪಯಲ್) ]

**ಬೆಳ್ವಲ್, ಬೆಳುವಲ್ಲು** (ನಾ). ೧. ಬೆಳ್ಳಗಿರುವ ಹಲ್ಲು ; ಬಿಳಿಯ ಹಲ್ಲು : ಬೆಳ್ಮುಗಿಲ್, ಬೆಳ್ವಲ್, ಬೆಳ್ವಯಲ್ (ಕಮುದ. ೦೭೯ ಪ್ರಯೋ). **ಬೆಳುವಲ್ಲು :** ೧. ಮುಂಡೆ ಹಾರುವಿತಿಯಂತೆ ಬೆಳುವಲ್ಲ ಮಾಡಿಕೊಂಡು (ಶಶಪ. ೩೩-೨೩). ೨. (ಆಲಂ) ಉಜ್ವಲದ ಪಲ್ಲು (?) : ಬೆಳುವಲ್ಲ ಮಲಿನದೇಹದ ಲೋಚುಗೆಯ್ದು ಬೋಳ್ದಲೆಯ . . . ಪಿಶಾಚರು ನೀಚರೆಂದೆನಿಸುವವಿಚಾರ ಜಿನಗುರುಗಳೆಲ್ಲ ನೆರೆದು ಪೊಳಲನೊಳಪುಗಬಹುದೆ (ಸೌಂದಕೃ. ೦೨-೩೮). 'ಕೀನಿವಲ್' ಪಠಾ. [ಬೆಳ್$_1$ (< ಬಿಳಿದು) + ಪಲ್]

**ಬೆಳ್ವಲ** 'ಬೆಳ್ಬೊಲ' ನೋ.

**ಬೆಳ್ವಲೆ, ಬೆಳುವಲೆ** (ನಾ). ಮೋಸದ ಬಲೆ : ಬೆಳೆಗೆಜಿಗುವ ಗಿಳಿಗಳ ಬೆದಜಿಸಲೆಂದು ತಳುವದೆ ನೋಳ್ಪ ಗೋಪಿಯರ ತೊಳಪ ಕಣ್ಗದಿರ ಬೆಳ್ವಲೆಗಳೆಂದವು ಮಡಗಿಳಿಯಲಮ್ಮದೆ ಬಾನೊಳಿಪವು (ಕುರಾಶಾಂ. ೨೩-೭). **ಬೆಳುವಲೆ :** ಆರರಿತಂ ಹಾಳಾಗದು . . . ಆರಾಯತಿಗೆಡರಿಂ ನಾರಿಯ ಬೆಳುವಳಿ[ಲೆ]ಗೆ ಸಿಲುಕೆ (ಶೀತಸಾ. ೭೯೦). [ಬೆಳ್$_2$ + ಬಲೆ$_1$]

**ಬೆಳ್ವಸದನ, ಬೆಳುವಸದನ** (ನಾ). ಶುಭ್ರವಾದ ಹಾಗೂ ಕಾಂತಿಯುಕ್ತವಾದ ಬಿಳಿಯ ಬಣ್ಣದ ಉಡುಗೆ,–ತೊಡುಗೆ : ಜೀರಸಿರಿಯ ಬೆಳ್ವಸದನದ ಬೆಳಗಿನಂತೆ ದಂತಕಾಂತಿ ಪಸರಿಸೆ (ಕುರಾಪಶಾ. ೦೨-೯೯ ವ); ಸೊಗಯಿಪ ಬೆಳ್ವಸದನಮಂ ಮೃಗನಾಭವಿಶಾಲನೇತ್ರೆ ಕೈಕೊಂಡಾಗಳ್ (ಜಾರಕೃ. ೬-೦೦೦); ಪೊಸಮುತ್ತುದೊಡಿಗೆಗಳಿಂ ತೋರಮಲ್ಲಿಗೆಮಾಲೆಯಿಂ ಸುಕುಮಾರಿ ಬೆಳ್ವಸದನಮನಾಂತಾ ವಾರಿಜಾಸನ ಸೂಳ್ಗವಂದಳದೊಂದು ಲೀಲೆಯಲಿ (ಸಾಳ್ವಶಾ. ೨೭-೭). **ಬೆಳುವಸದನ :** ಚೆನ್ನೆಯನು ಕಾಲೋಚಿತಕೆ ತಕ್ಕನ್ನವಹ ವಸ್ತ್ರಾದಿಯಿಂ ಸುರಕನ್ನೆಯರು ಬೆಳುವಸದನಂಗೊಳಿಸಿದರ್ ಸೊಬಗಾಗಿ (ಸಾಳ್ವಶಾ. ೩೨-೯೩). [ಬೆಳ್$_1$ (< ಬಿಳಿದು) + ಪಸದನ]

**ಬೆಳ್ವಸದನಂಕೊಳ್** 'ಬೆಳ್ವಸದನಂಗೊಳ್' ನೋ.

**ಬೆಳ್ವಸದನಂಗೆಯ್, ಬೆಳುವಸದನಂಗೆಯ್** (ಕ್ರಿ). ಶುಭ್ರವಾದ ಹಾಗೂ ಕಾಂತಿಯುಕ್ತವಾದ ಬಿಳಿಯ ಬಣ್ಣದ ಉಡುಗೆ, ತೊಡುಗೆಗಳಿಂದ ಸಿಂಗಾರಗೊಳ್ಳು : ಬಿಸಿಲಂ ಕಳೆದು ಬೆಳುದಿಂಗಳಂ ತೊಡುವ ಗಗನಲಕ್ಷ್ಮಿಯಂತೆ ಕೆಂಪಿನ ಪಸದನಮಂ ಕಳೆದು ತಲೆನೀರ್ಮಿಂದು ಬೆಳ್ವಸದನಂಗೆಯ್ದು (ಅರ್ಹನೀ. ೨-೦೩ ವ). **ಬೆಳುವಸದನಂಗೆಯ್ :** ಅಂತಾ ಪಟ್ಟದರಸಿ ಪೊಸತಾಗಿಯತಿಶಯದಿಂ ಬೆಳುವಸದನಂಗೆಯ್ದನಂತರಂ (ಜಾರಕೃ. ೬-೦೦೦ ವ). [ಬೆಳ್ವಸದನ + ಕೆಯ್$_1$]

**ಬೆಳ್ವಸದನಂಗೊಳ್, ಬೆಳ್ವಸದನಂಕೊಳ್** (ಕ್ರಿ). ಶುಭ್ರವಾದ ಹಾಗೂ ಕಾಂತಿಯುಕ್ತವಾದ ಉಡುಗೆ, ತೊಡುಗೆಗಳಿಂದ ಸಿಂಗರಿಸಿಕೊಳ್ಳು : ತಂದೆಯ ರಾಜಮಂದಿರದೊಳಗಣ ತನ್ನ ಕನ್ನೆಮಾಡದೋವರಿಯೊಳೊಂದು ದೆವಸಂ ಬೆಳ್ವಸದನಂಗೊಂಡು ಸುಖಸುಪ್ತೆಯಾಗಿರೆ (ಜಗರಿ. ೦೭-೦೦೩ ವ); ಮುತ್ತಿನಾಭರಣಂ ಚಂದನವಣ್ಪು ಕಂಪಲರ್ದ ಮಲ್ಲೀದಾಮಮೆಂಬೀ ಮನೋಹರವಸ್ತೂತ್ಕರದಿಂದೆ ಬೆಳ್ವಸದನಂಗೊಂಡೊಪ್ಪಿದಳ್ ದೇವಿ (ಪರ್ಶಕೃ. ೦೩-೩೮). **ಬೆಳ್ವಸದನಂಕೊಳ್ :** ಮತ್ತೊಂದು ದಿವಸಂ ಋತುಮತಿಯಾಗಿ ಚತುರ್ಥಸ್ನಾನಾನಂತರಂ ಬೆಳ್ವಸದನಂಕೊಂಡು ತಲ್ಪತಲದೊಳ್ ಧನಪಾಲನೊಡನೆ ಸುಖಸುಪ್ತೆಯಾಗೆ (ಧರ್ಮಾಮೃ. ೦೨-೦೩ ವ).

[ಬೆಳ್ವಸದನ + ಕೊಳ್$_1$]

**ಬೆಳ್ವಳಿ** (ನಾ). ನಿರ್ಮಲವಾಗಿರುವಿಕೆ ; ಸ್ವಚ್ಛತೆ ; ಶುಭ್ರತೆ : "ಬೆಳ್ವಳಿಯೆನಲ್ಕೆ ನಿರ್ಮಲಮಕ್ಕು" (ಕಶರ. ೯೨).

[ಬೆಳ್$_1$ (< ಬಿಳಿದು) + – ವಳಿ$_3$]

**ಬೆಳ್ವಳಿಸು** (ಕ್ರಿ). ೧. ಬೆಳ್ಳಗೆ ಹೊಳೆ ; ಸ್ವಚ್ಛವಾಗಿರು : ತೊನೆಯುತ್ತಿರೆ ತಾರಹಾರಮುಜ್ವಳಿಸೆ ಮೊಗಂ ವಿಳಾಸಮನೆ ತೋಜಿ ವಿಲೋಚನಕಾಂತಿ ನೀಳ್ದು ಬೆಳ್ವಳಿಸೆ ... ಉಯ್ಯಲಾಡಿದಳ್ (ಶಾಂತೀಶ್ವ. ೦೦-೩೭). ೨. (?) : ಸಕಳಜಳಚರಮನೊಳಕೊಣ್ಡು ಕರಂ ಬೆಳ್ವಳಿಸಿಡೆಗಳ ಮೂರ್ತಿಯುಳಕೆ ಕುಳಮುಮೊಪ್ಪಲ್ ಅತಿಭುಂಭುಕಮೆನಿಸಿದ ಕೋಷ್ಟಕೋಟಿವಿಧದಿಂದೆಸೆಗುಂ (ಎಇ. XIII, ೩೩೦-೩೭ ; 929) ; ಎತ್ತಲುಂ ಮಿಳಿರ್ದ ಕೇತನರಾಜಿ ಕರಂ ವಿರಾಜಿಸಲ್ ಬಳಸಿದ ದೇವಾಲಯಮುಂ . . . ಬೆಳ್ವಳಿಸಿಟ್ಟ ಶಾಸ್ತ್ರದಾನಮುಮುಳವಟ್ಟೆವೊ ಕಾಡಿಯಊರೊಳಾರನ್ನೋಡುವಡೆ (ಎಇ. XIII, ೩೩೨-೪೦ ; 929). [ಬೆಳ್ವಳಿ + – ಇಸು$_3$]

**ಬೆಳ್ವಾಗಲ್** (ನಾ). ಬಿಳಿಯ ಹಾಗಲಕಾಯಿ : ಮಂಡಲಮಾರಿ ಸುವಾರುಣಿ ಮಂಡಿತಮೆಂದೆನಿಸಿ ತೋರ್ಪ ಬೆಳ್ವಾಗಲಿವಂ ಕೊಂಡರೆದು ಪೂಸೆ ಕುಡಿಸಲ್ಕಂಡಲೆವುದೆ ಕೊಟಿತ ಪಾವಿನುಗ್ರೋಗ್ರವಿಷಂ (ಖವುದ. ೦೦-೬೨).

[ಬೆಳ್$_1$ (< ಬಿಳಿದು) + ಪಾಗಲ್$_1$]

**ಬೆಳ್ವಾಯ್** (ನಾ). ಬಿಳಿಚಿಕೊಂಡ ತುಟಿಯುಳ್ಳ ಬಾಯಿ ; ಬಣ್ಣಗುಂದಿದ ಬಾಯಿ : ಎತ್ತಂ ಬಿಸುಸುಯ್ವ ಬೆಂಕೆಯುಲೆಪಿಂ ಪಳ್ವಿರ್ದ ಬೆಳ್ವಾಯ ದರ್ದುಜಿಮೇಂ ಮಾಣ್ದುದೆ (ಲೀಲಾವ. ೨-೬೩).

[ಬೆಳ್$_1$ (< ಬಿಳಿದು) + ಬಾಯ್]

**ಬೆಳ್ವಾಳ** (ನಾ). ಬಿಳಿಯ ಲಾವಂಚ : ಕರಮೆಸೆದವು ಲತೆಗಳನೆಟ್ಟರದಿಂ ಪಚ್ಚೆಲೆಯ ಹೊದಕೆ ಬೆಳ್ವಾಳದ ಬೇರ್ ಸಿರಿಖಂಡದ ವಳಯುಂ (ಸೂಕ್ತಿಸು. ೦೦-೭೦). [ಬೆಳ್$_1$ (< ಬಿಳಿದು) + ಬಾಳ$_2$]

**ಬೆಳ್ವಿಟ್ಟು** (ನಾ). ಬಿಳಿಯದಾದ ಧೂಳು,–ಪುಡಿ : ಪಿಟ್ಟೆಂಬ ಪೆಸರ್ ಕಳವೆಯ ಪಿಟ್ಟಿಂಗಂ ಭೂತಳಾಗ್ರದೊಳ್ಪಾವಿಸೆ ಬೆಳ್ವಿಟ್ಟಿಂಗಮಕ್ಕುಮಾದೊಡೆ ಪಿಟ್ಟಿನೊಳಿರ್ಪೊಂದು ರುಚಿಯುಸದು ತಳೆದವುದೇ (ರಸರ್ಣಾಮ್ಮ. ೦-೦೮೯); ಪರದನ ಪೆರ್ಮನೆಯೊಳ್ ರಪ್ಪುರಮಂ ಬೆಳ್ವ[ಳ್ವಿ]ಟ್ಟೆದೆಂದು ಚೇಟಿಕೆಯರ್ ಕತ್ತುರಿಯಂ ಹರಿನೀಲ ಮನೋಹರ ಕುಟ್ಟಿಮರಜಮಿದೆಂದು ಪೊಜಗುಗುತಿರ್ಪರ್ (ಅರ್ಹನೀ. ೩-೯೮).

[ಬೆಳ್$_1$ (< ಬಿಳಿದು) + ಪಿಟ್ಟು]

**ಬೆಳ್ವಿತ್ತು** (ನಾ). ಬಿಳಿಯ ಬಣ್ಣದ ಬೀಜ : ಕಾಮದೇವನ ಜಸವಳ್ಳಿಯ ಬೆಳ್ವಿತ್ತುಗಳ ವಿಸರವೊ ಮೇಣೆನಲೆಸೆದವು ಕರ್ಪೂರಮಸರಗಳಾ ಪುರದೊಳಗೆ (ಕುರಾಶಾಂ. ೩-೮೨). [ಬೆಳ್$_1$ (< ಬಿಳಿದು) + ಬಿತ್ತು$_2$ (< ಬಿಟ್ಟು)]

**ಬೆಳ್ವೆಟ್ಟ, ಬೆಳುವೆಟ್ಟ** (ನಾ). ಬೆಳ್ಳಿಯ ಬೆಟ್ಟ ; ರಜತಗಿರಿ ; ಕೈಲಾಸ ಪರ್ವತ : ನೀವೆನ್ನ ಬಿಟ್ಟು ಬೆಳ್ವೆಟ್ಟಕೆಯ್ದುವೆವೆಂಬ ಮಾತ ಬಿಟ್ಟೆನ್ನ ರಕ್ಷಿಸಬೇಕೆಂದು ತೆಗೆದೆತ್ತಿ ಕಟ್ಟಕ್ಕರಿಂದಪ್ಪಿಕೊಂಡ (ಭರತ. ೯೩-೩೩)

**ಬೆಳುವೆಟ್ಟು :** ಬೆಳುವೆಟ್ಟದೊಳು ಬ್ರಾಹ್ಮಿ ಸೌಂದರಿಯರ ಪಕ್ಕದೊಳು ತೆಜಪಾಯ್ತೆಂದೆರೆಮಗೆ (ಶಕಶ. ೩೨-೯೦). 'ಬೆಳ್ಪಿವೆಟ್ಟ' ಪರಾ.
[ಬೆಳ್$_1$ (< ಬಿಳಿದು) + ಬೆಟ್ಟು]

**ಬೆಳ್ವೆಳಗು,** ಬೆಳುವೆಳಗು (ನಾ). ಹೊಳೆಯುವ ಬೆಳಕು; ಧವಳಕಾಂತಿ : ದೆಸೆಯೆಲ್ಲಂ ಚಂದನಾಸಾರದಿಂ ಮುಸುಕಿತ್ತೆಂಬನಮೊಂದು ಬೆಳ್ವೆಳಗು ಪರ್ಬಿತ್ತೆಯ್ದೆ ರೋದೋಂತಮಂ (ಕಾದಂಣ. ೦೦೩) ; ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ ಸುಲಿಪಲ್ಲ ಮಿಂಚಿನಿಂ . . . ಚಕ್ಕೋಳಿಸಿದಳಾಕೆ ಪಾಲ್ಗಡಲ ಪೆರ್ದೆರೆಯೊಳ್ ಸಿರಿ ನಿಂದಳೆಂಬಿನಂ (ಕಾವ್ಯಾ. ೭೭); ಪಿರಿಯ ಬೆಳಕಿದು ನನಗೆ, ಅರಮನೆಗೆ, ಕಾಂರಿರುಳಿನಲ್ಲಿ ಬೆಳ್ವೆಳಗು (ಕಾರಶಿ. ೦೪-೭೦೪). **ಬೆಳುವೆಳಗು :** ಹೊಳೆವ ನಿಡುನಿಗ್ಗವದ ಬೆಳುವೆಳಗು ಕುಡಿಮಿಂಚುಗಳ ಬಳಗ (ಸೌಂದ. ೩-೮೪); ಲೋಚನ ದೀಧಿತಿಯ ಬೆಳುವೆಳಗು . . . ತನುವೆಳಗೆಸೆಯೆ ಬೆಳಗಿನ ದೇವಿಯೆನಿಸಿದಳು (ಶಾಳ್ವಭಾ. ೩೨-೪೪). [ಬೆಳ್$_1$ (<ಬಿಳಿದು) + ಬೆಳಗು$_2$]

**ಬೆಳ್ವೊಗರ್** (ನಾ). = ಬೆಳ್ವೆಳಗು : ಬೆಳ್ವೊಗರ್ ಕೋಮಲಾಂಗದೊಳ್ ಬಿಡದೆ ಪಸರಿಸೆ ಚಂದ್ರಕಾಂತದಿಂ ನಿರ್ಮಿಸಿದ ಪುತ್ಥಳಿಪೊಲವಳೆಸೆದಳು (ಕೈಬಿಭಾ. ೦೦-೦೦). [ಬೆಳ್$_1$ (<ಬಿಳಿದು) + ಪೊಗರ್]

**ಬೆಳ್ವೊನಲ್** (ನಾ). ಬೆಳ್ಳಗೆ ಹೊಳೆಯುವ ಪ್ರವಾಹ,—ಹರಿವು : ಪಡುವಣ ಕಡಲ್ಗಾಗಿ ಪರಿವ ಬೆಳ್ದಿಂಗಳ ಬೆಳ್ವೊನಲೊಳುರ್ವಿದ ಬೊಬ್ಬುಳಿಕೆಗಳಂತೆ ತಾರಕೆಗಳ್ ತಲೆಗರೆಯೆ (ಕಾದಂಬ. ೪೨೪) ; ಸಂತತಮಾ ಸುರಾಪಗೆಯ ಬೆಳ್ವೊನಲಂ ಪದೆಪಿಂದುಗುಳ್ದ ಹೇಮಂತನಗೇಂದ್ರಮುಂ ನೆನೆಯಿಸುತ್ತುಮುದಂಚಿತ ದಂತಧಾಮವೋರಂತೊಗೆಯುತ್ತಿರಲ್ (ಕುಸುಮಾ. ೦೫-೩೦); ಅನ್ನೆಗಂ ಜಾನಕಿಯ ಕಣ್ಗೆ ತೋಱಿತು . . . ಪೆಂಪೊವವಿ ಪರಿವ ಬೆಳ್ವೊನಲ್ ದಿವಿಜನದಿಯ (ಕೃಬಿಭಾ. ೦೯-೯).
[ಬೆಳ್$_1$ (<ಬಿಳಿದು) + ಪೊನಲ್]

**ಬೆಳ್ವೊಲ,** ಬೆಳವಲ$_3$, ಬೆಳುವಲ, ಬೆಳುವಲು, ಬೆಳ್ವಲ, ಬೆಟ್ವಲ (ನಾ). ಒಂದು ನಾಡಿನ ಹೆಸರು ; P ಈಗಿನ ಧಾರವಾಡ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶ : ಶ್ರೀ ಬೆಳ್ವೊಲ ವಿಷಯಾಭ್ಯನ್ತರ(ರೇ) (ಇಆ. VII, ೨೨೦-೨೮ ; 658) ; ದೇವಣ್ಣಯ್ಯ[೦] ಬೆಳ್ವೊಲ ಮೂನೂಱು ಮನಾಳುತ್ತುಮನ್ನಿಣ್ಣ (?) ಗೆಱೆಯಳ್(ಲ್)ಇರೆ (ಇಆ. XII, ೨೦೯-೦೯; 814); ಶ್ರೀಮತ್ಪೆಮ್ಮಾ‍ನಡಿಗಳ್ . . . ಬೆಳ್ವೊಲ ಮೂನೂಱುಮುಂ ಕಿಸುಕಾಡೆಪ್ಪತ್ತುಮಂ [ಬಾಗಡೆ]ಯೆಪ್ಪತ್ತುಮಂ ನಿರಾಕುಳಮಾಳುತ್ತಿರೆ (ಸೌಇಇ. XI-i, ೯೦-೯ ; ೯೦೦). **ಬೆಳವಲ$_3$ :** ಜೋಳದ ಬೋನಕ್ಕೆ ಬೇಳೆಯ ತೊಗೆಯಾಗಿ ಕಾಳೆಮ್ಮೆ ಕರೆದ ಹಯನಾಗಿ ಬೆಳವಲ ಮೇಳ ನೋಡೆಂದ (ಸರ್ವಜ್ಞ. ೦೬೦೭) ; ಈ ಸೀಮೆಗೆ ಕರಿನಾಡು ಎಂತಲೂ ಬೆಳವಲ ಎಂತಲೂ ಅನ್ನುವುದುಂಟು (ಕರ್ನಾಇ. ೬) · **ಬೆಳುವಲ :** ಸ್ವಸ್ತಿಶ್ರೀ ಬೆಳುವಲ×× [ನಾ]ಗಿಯುಮ್ಮ (ಸೌಇಇ·XI-i, ೦೨-೨೩ ; 868) ; ಉದಧಿವ್ಯತೋರ್ವಿಗೆ ಮುಖಮೆನಿಸಿದ ಬೆಳುವಲನಾಡಿಗೆ ತಿಲಕದಂದದ ನಱುಗುಂದದ ವಿಪ್ರಕುಲೋತ್ತಮನಭ್ಯುದಿತಯಶಂ ಶ್ರೀಧರಂ (ಜಾತಕ. ೦-೯); ಪಲಸಿಗೆ ಬೆಳುವಲಮೊಪ್ಪುವ ಹುದಿಗೆಱೆಯಾ ಲೊಕ್ಕಿಗುಂಡಿ ಪೆದ್ದೊರೆವರೆಗಂ ಕಲಿಗಳನೆ ತಗುಳ್ದು ವಿಕ್ರಮಬಲದಿಂ ಕೈಕೊಂಡ ವಿಷ್ಣು ಭೂಪಮಂಡಲಮುಂ (ಎಕ. XVI, ತಿಕ್ಕನಾ. ೬೨-೨೨ ; 1212) ; ಆಕೆ ಬೆಳುವಲ ನಾಡಿನಾಕೆ (ಪುಕರ್ನಾ. ೦೯೬). **ಬೆಳುವಲು :** ಆದರೂ ಚಿಕ್ಕೋಡಿಯ ತಾಲೂಕಿನೊಳಗಿನ ಪೂರ್ವದ ಅರ್ಧಭಾಗವು ಬೆಳುವಲೆಂದು ಹೇಳಬಹುದು (ಮುಂಬಯಿ. ೩-೦೯೮); ಪೈಲುಶೀಮೆ ಅಥವಾ ಬೆಳುವಲು (ಕೆಶಾಸ. ೯). **ಬೆಳ್ವಲ :** ವಿಜಯಾದಿತ್ಯ ಶಾಸನಾತ್ ಬೆಳ್ವಲವಿಷಯೇ (ಎಇ. II, ೩-೨೦; 754); ಮಾರಸಿ[೦]ಗ್ಗ(ಳ)ದೇವ[೦] . . . ಪುರಿಗೆಱೆ ಮೂನೂಱು(ಱು)ಮುಂ ಬೆಳ್ವಲ ಮೂನೂಱುಮುಮಂ ಸುಖದಿಜಿನಾಳುತ್ತುಮಿರೆ (ಇಆ. XII. ೨೩೬-೦೨ ; 971) ; ಕುಂತ್ತಳದೇಸಕ್ಕಳವಟ್ಟ ಚಿನ್ನಪೂವಿನೆ ಬೆಳಗಿದುದೊಳ್ವಲಮೆನಿಪ್ಪ ಬೆಳ್ವಲದೇಶಂ (ಕಇ. I, ೨೯-೮; 1148). **Δಬೆಟ್ವಲ :** ಮಲೆಯೆಂಬುದೇಸದಂ ಬೆಟ್ವಲಮಾಗೆ ಮುಂತುಳಿದನಲ್ಲವೆ ಲಕ್ಷ್ಮಣನೆಂಬ ರಾವಣಂ (ಎಕ. VII, ಶಿಕಾ. ೦೪೩-೨೭; 1068). [ಬೆಳ್$_1$(< ಬಿಳಿದು ) + ಪೊಲ]

**ಬೆಳ್ವೊಳೆ** (ನಾ). ಶುಭ್ರವಾದ ನೀರಿನ ನದಿ ; ಧವಳವರ್ಣದ ಹೊಳೆ : ಬೆಳ್ವೊಳೆಯು ಕಪ್ಪೊಳೆಯು ಕೆಂಪೊಳೆಯು ಕೂಡಲ ತೆಱದಿ ಬೆರಕೆವೆಳಗ ಒಳಕೊಂಡು ದಿಟ್ಟಿಗತಿವಿಸ್ಮಯವನೀವುತಿರಲು (ಸೌಂದಪು. ೬-೩೦).
[ಬೆಳ್$_1$ (< ಬಿಳಿದು) + ಪೊಳೆ$_3$ (< ಪೊೞೆ)]

**ಬೆಳ್ವೊಟಲ್** (ನಾ). ಒಂದು ಊರಿನ ಹೆಸರು : ಸವುಳಙ್ಗದ ಮೆಣ್ಣೆಗಾವುಣ್ಡನು ಬೆಳ್ವೊಟಲ ಬಿಸಮ್ಮನು ಬಿತ್ತುವಟ್ಟ ಕೆಱೆಗೆ ಕೊಡಱ್ಗ್ಗಿಯುಮುಂಬೆಕ್ಕಿ ಸಮ್ಮಮುಂಮ (ಎಕ. V, ಹಸ್ಸನಾ. ೨೭೦-೦೪; ಸಂ. ೯೭೨). [ಬೆಳ್$_1$ (<ಬಿಳಿದು) + ಪೊಟಲ್]

**ಬೆಳ್ಸರಿ,** ಬೆಳುಸರಿ (ನಾ). ಬಿಳಿಯ ಧಾರೆಯಂತಿರುವ ಮಳೆ; ಧವಳವರ್ಣದ ವೃಷ್ಟಿ : ಸುರಿದಪುದು ಮುಗಿಲ ಮುತ್ತಿನ ಸರಿ ಗಗನದಿನೆನಿಸಿ ಪೊಳೆವುವೆಳಮಿಸಿಲೊಳ್ ಬೆಳ್ಸರಿ (ಆದಿಪು. ೦೦-೬); ಸೌಧಂಗಳ ಬೆಳ್ಪು ಪರ್ಬಿದುವು ಬೆಳ್ಪಿನ ಬೆಳ್ಸರಿಯಿಂ ಸುಧಾಂಶುವಾ (ಲೀಲಾವ. ೨-೨೦); ಸೋನೆಯ ಕೆಸರ್ಗಳಲರ್ದಲರ ಬೆಳ್ಸರಿ (ಕಮಲ. ೬೮ ಪ್ರಹ್ಲೋ). **ಬೆಳುಸರಿ :** ಹಂಸಕುಳಮಾ ಪ್ರೀತಿಯಾನಂದಾಂಬುಮೆಂಬಂತೆ ಬೆಳುಸರಿಯಿಂ ಭೂತಳಕೆ ಭೋರ್ಗರೆಯೆ (ಶಾಳ್ವಭಾ. ೨೬-೨೨). [ಬೆಳ್$_1$ (<ಬಿಳಿದು) + ಸರಿ$_2$]

**ಬೆಳ್ಸುಟಿ** (ನಾ). ೧. ಬಿಳಿಯ ಸುಳಿಯೆಲೆ : ಬೆಳ್ಸುಟಿ ಪುಟ್ಟೆ ಪುಟ್ಟೆ ಕೆವದಗೆಗಳ ಸೊರ್ಕು ಪೇಕಳಿಸೆ ಚಾದಗೆಗಂ ಚಿರಮಾಗೆ ರಾಗಮಂಬೆಗೆ . . . ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ (ಕಂಡಾವಿ. ೬-೦೩೯). ೨. ನೀರಿನ ಸುಳಿ; ಜಲಾವರ್ತ : ತೋಳ್ಗೆ ದಂತದ ಬಳೆಯಂತಿರಲ್ ಸುಳಿದು ಸುತ್ತುವ ಬೆಳ್ಸುಟಿಯೆಂಬ ಚಂದ್ರಬಿಂಬದ ಕರೆಯಂತೆ ತೋಱಿದುದು ಕುಂತಳಮಾಗಳನಂತನಾಥನಾ (ಅನಂಪು. ೯-೨೫).
[ಬೆಳ್$_1$ (<ಬಿಳಿದು) + ಸುಟ್ಟು$_2$]

**ಬೆಳ್ಸಲೆ** (ನಾ). ಬಿಳಿಯ ಕಲ್ಲು : ಎಸೆದಿರೆ ನಾಯುತ್ತಿಯು ಸಂಧಿಸಿ ಸರ್ಪನ ಗೃಹಮುಮಾಗೆ ಪಡುವಣದೆಸೆಯೊಳ್ ನಿಸದಂ ಪುರುಷತ್ರಯ ದೊಳೊಸಗರ್ಗಂ ಜಲಮಲ್ಲಿ ಕೂಪೆ ಬೆಳ್ಸಲೆ ನೆಗೆಗುಂ (ರೂಕ್ಷಮಾಕ. ೩-೨೦).
[ಬೆಳ್$_1$ (<ಬಿಳಿದು) + ಸಲೆ$_3$ (< ಸಿಲೆ$_1$)]

**ಬೆಳ್ಳ$_1$** (ನಾ). ೧. ಬಿಳಿಯ ಬಣ್ಣ ; ಧವಳವರ್ಣ : 'ಬೆಳ್ಳಂಗಡೆ' ಪರಾ. ೨. (ನದಿಯ) ನೆರೆ; ಪ್ರವಾಹ; ಪೂರ : ಬೆಳ್ದಿಂಗಳ ಬೆಳ್ಳದೊಳಗೆ ಬಿನದದಿ ತೇಂಕುವ ಕುಸುಮಾಯುಧನೋ (ಕಮಲಾ. ೦೦-೬೨); ಜೋಕೆ, ಬೆಳ್ಳ ಆಳ ಇದ್ದೀತು ! ಮಿಾನು ಕಡಿಯುವ ಹುಚ್ಚಿನಲ್ಲಿ ಮಡುವಿನ ಆಳಕ್ಕೆ ಇಳಿಯದಿರಿ (ಪಶಸ. II, ೦೦೨೩). ೩. ನೊರೆ; ಫೇನ (?) : ಉದಿರ್ದೀ ಲೋಕವಿಯತ್ಪಯಾಳದಲರ್ಪೊಲ್ ನೀರೋಡಿ ಬಾಡಲ್ಕೆ ಬಂದುದು ನಕ್ಷತ್ರದ ಬಣ್ಣವಟ್ಟಬಾಯುದೊಲ್ಟಾಸಂದದಿಂ ಪೀರ್ದು ತೀವಿದ ಬೆಳ್ಳಂ ಕಿಳಿದಿರೆ ಸಾರ್ಚಿದ ಚಕೋರೀಚಂದ್ರಿಕಾಪಾನಪಾತ್ರದವೊಲ್ಕಾಂತಿ ಕಬ್ಬುಳ್ದು ಸಾರ್ದನಪರಾಶಾದ್ರೀಂದ್ರಮಂ ಚಂದ್ರಮಂ (ಅನಂಪು. ೬-೬೦).
[ದೇ.॥ ತಮಿ. ಮಲ. ವೆಳ್ಳ; ತುಳು. ಬೊಳ್ಳ, ಬೊಳ್ಳೊ; ತೆಲು. ವೆಲ್ಲಿ, ವೆಲ್ಲಿಕ, ವೆಲ್ಲುಂಕ, ವೆಲ್ಲುವ]

**ಬೆಳ್ಳ$_2$** (ನಾ). ೧. ಬುದ್ಧಿಯಿಲ್ಲದವನು ; ದಡ್ಡ ; ಮೂರ್ಖ: ಸತ್ತು ಹೊತ್ತ ಕಣ್ಣಱಿಯದ ಬೆಳ್ಳನಲ್ಲೆನಳಿ ದೆಂ ಧವಳಾಕ್ಷಿಯ ನೋಟಮಂದಮಂ (ಕಂಡಾ. ೯-೬೬). ೨. ಏನೂ ಅರಿಯದವನು ; ನಿರಪಾಯಕರನಾದವನು; ಮುಗ್ಧ : ಹಾದಿಯ ಬೆಳ್ಳನ ಕಳ್ಳರು ತಾಗಿದಡೆ ಇನ್ನಾರಿಗೆ ಮೊರೆಗೊಡುವ (ಸರ್ವ. ೨೬-೦೨೨); ಕಳ್ಳರುಂ ಕರುಣಾಕಟಾಕ್ಷದಿ ಬೆಳ್ಳರಾಗಿರ

ನೋಡಿ ಬಸವಂ ಸಲ್ಲಲಿತಕಾಮಿತಫಲಂಗಳನಿತ್ತವರ್ಗಳನು ಸಲ್ಲ ಭಕ್ತರನಾದು ಮಾಡಿದನೆಲ್ಲರುಂ ಕೊಂಡಾಡುತಿರಲ್ (ಬಸವ. ೯-೦೯); ಕಳ್ಳನ ಬಾಧೆಗೆ ಸಿಕ್ಕಿದ ಬೆಳ್ಳನವೊಲು ಹಲವ ಹಲುಬಿ ಹಂಬಲಿಸುತ್ತಂ (ಹಂಸರಾ. ೩೯). ೩. ಒಬ್ಬಾತನ ಹೆಸರು: ಇದಕ್ಕೆ ಸಕ್ಕಿ ಮುಂದಿರೆ ಬೂವಯ್ಯ ಬೆಳ್ಳನ ಕರಕುಡಿಬಾರದರೆಜೀಯುಮ್ಮ ಕೆದಜೀಯು ರಯ್ಯಪ (ಎಕ. IV. ಹುಣಸೂ. ೯೨-೦೦ ; ಸು. 920). [ಬೆಳ್$_2$ +– ಅ$_7$./ತಮಿ. ವೆಳ್ಳರ್=ಮುಗ್ಧರು; ತೆಲು. ಬೇಲ, ಬೇಲು. /ಸಂ. ಭೇಲ]

**ಬೆಳ್ಳಂಗ** (ನಾ). ಒಂದು ಮನೆತನದ ಹೆಸರು (?) : ಕಯ್ಯೋಗೆವಡೆಯು ಬೆಳ್ಳಜ್ಜರ ದಸವಯ್ಯಗಾಯಿಗ ತಾಗರತಿಯು ಮಹಾಜನಕ್ಕೆ ಸುವರ್ಣ್ನದನ ಮುಜಿಕ್ಕೊಟ್ಟು (ಎಕ. VIII. ತೀರ್ಥ. ೫೬೨-೨೦; 951). 'ಬಿಳ್ಳ'ಪರಾ [?]

**ಬೆಳ್ಳಂಗೆಡೆ** (ಕ್ರಿ). ೧. ಬೆಳ್ಳಗೆ ಹರಡು: ಧವಳವರ್ಣವಾಗಿ ವ್ಯಾಪಿಸು : ಇಂಗಡಲೆ ಎಡಲ್ಗಳ್. . . ಗಂಗೆಯ ತೊಜೆಗಳಿನಲ್ ಬೆಳ್ಳಂಗೆಡೆದುದು ಕುಮುದವನದ ಸಿರಿ ಬೆಳ್ದಿಂಗಳ್ (ಮಲ್ಲಿಪು. ೬-೯೨); ಜಗದ ಧೀವರೆಯರ್ಕಳ ಕಣ್ಣ ಬೆಳ್ಪು ಬೆಳ್ಳಂಗೆಡೆವತ್ತೊ ಪೇಟಿಪೆನೆ ನಿರ್ಮಲವಾದುದು ನೀರಜಾಕರಂ (ಅರ್ಧನೇ. ೩-೧೦೦). ೨. ಪ್ರವಾಹವಾಗಿ ಸುರಿ,–ಬೀಳು: ಅಂತು ವೀರರಸದ ತೊಜೆಯುಂ ನೆತ್ತರ ತೊಜೆಯುಮೊಡನೊಡನೆ ಬೆಳ್ಳಂಗೆಡೆದು ಪರಿಯೆ (ಶಂಕರಾ.೦೨-೦೬ ಕ); ಇಂತು ಮುಂಗಾರ್ ತಲೆದೋಜಿ ತಿರವೆಣ್ಗೆ ಮುಗಿಲ್ಗೊಂದಿಯೊಳ್ ಬಳ್ಳಿವರಿವ ನೇಹದಿಂ ಬೆಳ್ಳಂಗೆಡೆವ ಸೊಗದಾಲಿನೀರನೆ ಪೊಚ್ಚಂ ಪರ್ಚಿ ಪರಿದುದು (ರಾಮಚ. ೩-೦೯) ; ನೆಗೆದು ಬೆಳ್ಳಂಗೆಡೆವ ನೀರ ಬೀಳ ಬೆಳ್ಪು (ಹೊಂಗಳು. ೦೬-೩). [ ಬೆಳ್$_{\cdot 1}$ + ಕೆಡೆ$_1$ ]

**ಬೆಳ್ಳಂಬರ** (ನಾ). ಬಿಳಿಯ ಬಟ್ಟೆ ; ಶ್ವೇತಾಂಬರ : ಸಂಪೂರ್ಣರಾಜಿತ ವದನೆ ಕ್ಷೀರಾಬ್ಧಿವೀಚಿ ಬೆಳ್ಳಂಬರದ ದಿವ್ಯಾಂಗಿ (ಪವಮೋ. ೦೯-೦೭).

[ಬೆಳ್$_1$ (<ಬಿಳಿದು) + ಅಂಬರ]

**ಬೆಳ್ಳಂಬರಿ** (ಕ್ರಿ). ಪ್ರವಾಹವಾಗಿ ಹರಿ; ಕೋಡಿ ಹರಿ: ಕಂಡೆಯ! ಈ ಕಟ್ಟುರ್ಬಿನ ಬೇಸಗೆಯ ಬೇಗೆಯೊಳಂ ಬತ್ತದೆ ತುಂಬಿ ಬೆಳ್ಳಂಬರಿವ ಬೆಂಚೆಯುಂ (ರಾಮಚ. ೩೯-೩೦). [ಬೆಳ್$_{\cdot 2}$ + ಪರಿ$_2$]

**ಬೆಳ್ಳಂಬೆಳಕು** 'ಬೆಳಗು$_2$' ಪರಾ.

**ಬೆಳ್ಳಂಬೆಳಗು** 'ಬೆಳಗು$_2$' ಪರಾ.

**ಬೆಳ್ಳಂವಾಡಿ** (ನಾ). ಒಂದು ಸ್ಥಳದ ಹೆಸರು : ಬೆಳ್ಳಂವ್ವಾಡಿಯ ಗೊಟ್ಟ ವಾಡಿಯ . . . ನಾಟ್ಟಾಮುಣ್ಣಾಗಳ್ಗಂ ತಂಭುಲಶ್ರಾವಣಗೆಯ್ದು ಒಡಂಬಡಿಸಿ ಕೊಣ್ಣುದು (ಎಕ. III (R). ಶಂಜಪ. ೯೦೨-೯೬ ; 904).

[ಬೆಳ್? + ವಾಡಿ$_1$ (<ಪಾಡಿ$_2$)]

**ಬೆಳ್ಳಕ್ಕರಿಗ** (ನಾ). ವ್ಯವಹಾರಜ್ಞಾನವಿಲ್ಲದ ಪಂಡಿತ ; ಅಕ್ಷರಜ್ಞನಾದ ಮೂರ್ಖ: "ಕಾಲುರಿಚನೆಂದುಂ, ಬೆಳ್ಳಕ್ಕರಿಗನೆಂದುಂ ಗ್ರಾಮ್ಯಂ" (ಕಕಾ. ೬೦-೩೩೬); ಇರು ಮರುಳೆ ಶುಷ್ಕವೈಯಾಕರಣಂಗಂ ಶುಷ್ಕ ತಾರ್ಕಿಕಂಗಂ ಬೆಳ್ಳಕ್ಕರಿಗಂಗು ವಿಷಯುಮೆ ಕಾವ್ಯರತ್ನಮತಿಚತುರಕವಿ ಕದಂಬಕವಿಷಯುಂ (ಅರ್ಜು. ೦-೨೯); ಗುಟಲೊಡೆದೋಗುವಿನಂ ಬಾಯ್ಬಾಟ್ಟ ರೇಕೆ ಬೆಳ್ಳಕ್ಕರಿಗರ್ (ಚೀಲಾಪ. ೦-೧೬) ; ಅಟಿಗಬ್ಬಂ ಬೆಳ್ಳಕ್ಕರಿಗರೊಳ್ ಪಟಿಗಜ್ಜಂ ಪಟ್ಟಸಾಲಿಗರೊಳ್ . . . ಪಾವರಿ ಬಸದೊಳಲ್ಲದಿಲ್ಲಂ (ರಾಮಚ. ೬-೨೯). [ಬೆಳ್$_2$ + ಅಕ್ಕರಿಗ]

**ಬೆಳ್ಳಕ್ಕಿ** 'ಬೆಳ್ವಕ್ಕಿ' ನೋ.

**ಬೆಳ್ಳಕ್ಕೆ** (ನಾ). ಹುಸಿ ಅಳು; ಕಳ್ಳಳು: ಮುಳಿಸು ಬೆಳ್ಳಕ್ಕೆ ಮೈಸಿಮುಳಿ ಪುಜಿ ಮಾಮಾಯೆ . . . ಎಂಬಿವು ಗಣಿಕಾಳಿಗೆ ಬಳಗವೆನುತ್ತಬಲೆ ಶರಳೆಗೋದಿಸುತಿರ್ದಳ್ (ವೀರಭ. ೬-೦೨೬) ; ಮುಳಿಸು ಬೆಳ್ಳಕ್ಕೆ ಪುಸಿಯೊಲುಮೆ ನಸುವೇಂಟ ಲಲ್ಲೆಗಳೆಂಬಿವು ಜೆಲೆವೆಣ್ಣುಗಳಗತುಳಬಲವು (ಗುರುಚ. ೬-೩೯). [ಬೆಳ್$_2$ + ಅಕ್ಕೆ$_1$ (<ಅಟ್ಟಿ$_4$)]

**ಬೆಳ್ಳಗಸೆ** (ನಾ). ಬಿಳಿಯ ಬಣ್ಣದ ಅಗಸೆ ಮರ : ಬೆಳ್ಗಾಸೆ, ಬೆಳ್ಳಗಸೆ (ಕಬ್ಬ.ಮ. ೩೩೬ ಪ್ರಯೋ). [ಬೆಳ್$_1$ (< ಬಿಳಿದು)+ಅಗಸೆ$_2$]

**ಬೆಳ್ಳಗೆ** (ಅ). ಬಿಳುಪಾಗಿ; ಬೆಳ್ಳಗಾಗಿ : ಗಲ್ಲ ಬೆಳ್ಳಗೆ ಹುಡುಗಿ ಬಿಳಿಹೂವ ಮುಟ್ಟಿಸಿದೆ ನನ್ನ ತುಟಿಗೆ (ಕಲಾಂ. ೬೨-೯) ; ಮೈ ಬೆಳ್ಳಗಾದವನ ನೆರಳು ಬೆಳ್ಳಗೆಯೇ ? (ಗಾದೆ).

**ಬೆಳ್ಳಂಬೆಳ್ಳಗೆ** (ದ್ವಿರುಕ್ತಿ) : ಕೇಳಿದ ಮಾತುಗಳಿಂದ ಒಂದು ಮಾತ್ರ ತಿಳಿಯುತ್ತದೆ : ನಾವು ಎಲ್ಲ ಬೆಳ್ಳಂಬೆಳ್ಳಗೆ ಎಂದು ನಂಬಿದಲ್ಲೂ ಏನೋ ಕಪ್ಪು ಇದೆ ಎನ್ನುವುದು (ಮೂರುದಾ. ೦೩೯).

[ಬೆಳ್$_1$ ( < ಬಿಳಿದು ) + –ಅಗೆ$_3$]

**ಬೆಳ್ಳಚ್ಚರಿ** (ನಾ). ದಿಗ್ಭ್ರಮೆಯನ್ನು ತರುವ ಆಶ್ಚರ್ಯ : ಉರಿಯ ಊರ್ವಶಿಯೆನಲ್ಕಾ ಕಾಡುಗಿರ್ಚಿನಿಯೆ, ನಿಟ್ಟಿಸಿದರಾ ಚೆಲ್ವನೆಳಮಕ್ಕಳೋಲಂತೆ ಬಾಯ್ದೆರೆದ ಬೆಳ್ಳಚ್ಚರಿಗೆ ಮನಂ ಮಾರ್ಪೋದವೋಲ್! (ಶ್ರೀರಾಮಾ. ೦೯೬-೦೩೯). [ಬೆಳ್$_2$ + ಅಚ್ಚರಿ$_3$]

**ಬೆಳ್ಳಟ್ಟೆ** (ನಾ). ಒಂದು ಬಗೆಯ ಸಸ್ಯ : ಸಾಲಬಾಗೆ, ಬೆಳ್ಳಟ್ಟೆ, ಬಿಕುಲ್ (ವೈಶಿಗ. ೯-೬೭). [ಬೆಳ್$_1$ (< ಬಿಳಿದು) + ಅಟ್ಟೆ$_?$]

**ಬೆಳ್ಳಡಕಿಲ್**, ಬೆಳೊಡಕಿಲು, ಬೆಳ್ಳಡಕಿಲು, ಬೆಳ್ಳಡಿಕಿಲು (ನಾ). ಒಂದು ಬಗೆಯ ಸಸ್ಯ : "ವೈಶಾಕಮಂದ–ಗಣಜಿಲೆ, ಮೂಕೊರತಿ, ಬೆಳ್ಳಡಕಿಲ್" (೬ಕಧಿ. ೦೩೬) ; ನಿಡುಮೆಯ್ಯಂ, ಬೆಳ್ಳಡಕಿಲ್ (ಕಬ್ಬ.ಮ. ೩೩ ಪ್ರಯೋ). **ಬೆಳೊಡಕಿಲು:** ಬಹುಮೂತ್ರವಾಗಿ ಇರುವಂಥವರುಗಳಿಗೆ . . . ಕೊಡುವಂಥಾ ಮೇಲೋಗರಗಳು—ಗಣಜಿಲೆಸೊಪ್ಪು, ಬೆಳೊಡಕಿಲಸೊಪ್ಪು, ಮುಳ್ಳಿಯ ಸೊಪ್ಪು, ಮಜ್ಜಿಗೆ (ಪಥ್ಯಾ. ೦೩೬). **ಬೆಳ್ಳಡಕಿಲು :** "ಬೆಳ್ಳಡಕಿಲು ವಿಶಾಲಂ ಕಠಿಲ್ಲಕಮೆನಿಕ್ಕು" (ಮುಂಗರಾ. ೯೦-೩೦) ; ಬೆಳ್ಳಡಕಿಲ ಬೇರಂ ಅಕ್ಕಿಯನು ಕೂಡ ಕುಟ್ಟಿ ಹಿಟ್ಟು ತೊಳಸಿ ಸಪ್ಪೆ ತುಪ್ಪದಿಂದುಣಲು ಪೆನ್ನೆತ್ತರು ಪರಿಹರ (ಸಕಲ. ೮೯೬). **ಬೆಳ್ಳಡಿಕಿಲು :** "ದ್ವಿಪುನರ್ನವಾ–ಗಜಪಿಪ್ಪಲಿ, ಬೆಳ್ಳಡಿಕಿಲು" (೬ಕಧಿ. ೭೬).

[ಬೆಳ್$_1$ (<ಬಿಳಿದು) + ಅಡಕಿಲ್$_?$]

**ಬೆಳ್ಳಡಕಿಲು** 'ಬೆಳ್ಳಡಕಿಲ್' ನೋ.

**ಬೆಳ್ಳಡಿ** (ನಾ). ೧. ಬೂದಿ ಬಳಿದ ಪಾದ : ಬೆಳ್ಳಡಿಯ ಬೆಳ್ಳಡಿಗೆ ವಿಸುನಿವಾವುಗೆಯನೊಪ್ಪಿಸಿ . . . ಕಳಿಪುವುದು (ರಾಮಾಶ. ೦೩೦-೦೩). ೨. ಬೆಳ್ಳಗಿರುವ ಪಾದವನ್ನು ಹೊಂದಿದವನು ; ಶಿವ : "ಬೆಳ್ಳಡಿಯೆಂದು ಗೊರವಂ" (ಕಕಾ. ೬೯-೯೩೬) ; ಬಲ್ಲಿದನಪ್ಪನೇ ರಣಕೆ ಬಂದನೆ ಬೆಳ್ಳಡಿಯುಂದು ಹಾಸ್ಯದಿಂ ಸೊಲ್ಲಿಸಿದಂ (ವೀರಭ. ೦೦-೨೯). ೩. ಒಂದು ಬಗೆಯ ಪಕ್ಷಿ : ಗೊರವ. ೨, ೩ : ಸುರಪತಿಯು ಬೆಳ್ಳಡಿಯ ರಥಚರಣದ ಪಾವಕನ ಮುನಿಯು . . . ಪೆಸರ ಖಗಕುಳಂ ಕರಮೆಸಗುಂ (ರಾಜಶೇ. ೩-೩೦).

[ಬೆಳ್$_1$ (<ಬಿಳಿದು) + ಅಡಿ$_1$ ]

**ಬೆಳ್ಳಡಿಕಿಲು** 'ಬೆಳ್ಳಡಕಿಲ್' ನೋ.

**ಬೆಳ್ಳಡಿಯ** (ನಾ). ಬಿಳಿಯ ಬಣ್ಣದ ಪಾದವುಳ್ಳವನು ; ಬಿಳುಪಾದ ಪಾದವನ್ನು ಹೊಂದಿದವನು ; ಶಿವ : "ಬಿಜಿತಿನಿಯಣ್ಣ . . . ಸಾಂತ ಬೆಳ್ಳಡಿಯನೆನೆ ಶಿವಗೆ ಪೆಸರ್" (ಕಬ್ಬಿಕ. ೩). [ಬೆಳ್ಳಡಿ + –ಅ$_7$]

**ಬೆಳ್ಳನೆ** (ಗು). ಬೆಳ್ಳಗಿರುವ ; ಬಿಳುಪಾಗಿರುವ : ಅಲ್ಲದ ರಸಮೆಕ್ಕೆಯ ಕಾಯಿಯ ರಸ ಬೆಳ್ಳನೀರುಳ್ಳಿಯ ರಸವು (ಶಾಳಿಸಾಂ. ೦೬) ; ನಡೆದಳಾಹವ ದೆಡೆಗೆ ಕವಚಗವಚಂ ಕತ್ತಿಗತ್ತಿಗಳನೊಂದುಮಂ ಕೈಕೊಳ್ಳದೆ , ಕೊರಳ ಜಪಮಣಿಮಾಲೆ ವೇಣಾಟ್ಟ ನಾರು ಬೆಳ್ಳನೆ ಸೀರೆಯಲಿ ! (ಕಾಶ್ರಾಂಗ. ೯೩-೨೩೯೦) ; ಕನ್ನೆದಿಲೆರೆಯನು ಬಂದನು ಕನ್ನೆಯ ಕನ್ನೆಯ ಬೆಳ್ಳನೆಯವನು (ಇಂತಾಪ. ೦೦೦-೩೯).

[ಬೆಳ್$_1$ (< ಬಿಳಿದು) + – ಅನೆ$_2$ (< – ಅನೆಯ$_2$)]

**ಬೆಳ್ಳಬ್ಬಟೆ** (ನಾ). ಹುಸಿಯ ಆರ್ಭಟ ; ಮೃಗಗಳನ್ನು ಹೆದರಿಸುವುದಕ್ಕಾಗಿ ಉಂಟುಮಾಡುವ ಕೂಗಾಟ,—ಕಿರುಚಾಟ : ದೀಪದ ಗಿಡಗ ಹುಲಿ ಕೂಳಿಗಾಣಗಳ ಮಂತಣಗಳಿಂದೆ ಬೆಳ್ಳಬ್ಬಟೆಯನೆಸಗಿ ಮಬ್ಬಿನ ಪುತ್ತಳಿಗಳಂದದೆ (ಸಿದ್ಧೇಶ. ೯-೩); ತರದೆ ಬೆಳ್ಳಬ್ಬಟೆಯ ಗೈದು ಬಲೆಗಳನೆಲ್ಲ ಹರಹಿ . . . ಬೇಂಟೆಯಾಡುತ್ತಿರ್ದನಾ ವನದೊಳಗೆ ಮದನಮದದಲ್ಲಣಂ (ಸಿದ್ಧೇಶ. ೧೨-೯). [ಬೆಳ್$_2$ + ಅಬ್ಬಟೆ$_0$]

**ಬೆಳ್ಳಲರ್** (ನಾ). ಬಿಳಿಯ ಬಣ್ಣದ ಹೂವು ; ಬಿಳುಪಾದ ಪುಷ್ಪ : ಬೆಳ್ಳಲರವೊಲಿರ್ದಳಂದು ಗಿರಿರಾಜತನೂಭವೆ (ಉದ್ಭಟ. ೬೮). [ಬೆಳ್$_1$ (<ಬಿಳಿದು) + ಅಲರ್$_2$]

**ಬೆಳ್ಳವರೆ** (ನಾ). (?) : ಬೆಳ್ಳವರೆ ಕದಿರ್ವೊರ್ಚಱಂ ಮೊಗಹಿಯೆಂಬಪನರ್ಚಿಸಿ ಕೂಡೆ ದೈವಮಂ ವಿರಚಿಸಿ ಪೇೞ್ದ ನಾಡ ದುಱದುಂಬಿಯರೆಂದುದನೆಂದವಂದಿರೊಳ್ ನೆಱೆದೊಡಗೂಡಿ ಕಳ್ಗುಡಿಪ ಪಂಬಗಿದೊತ್ತಿರನಾರು ಬಾರಿಪರ್ (ಕಾರ. ೪೬೬). [ ? ]

**ಬೆಳ್ಳವಾಸ** (ನಾ). [ಜೈನ] ಚಳಿಗಾಲದಲ್ಲಿ ಮೊಳಕಾಲುದ್ದದ ಪ್ರವಾಹದ ನೀರಿನ ನಡುವೆ ನಿಂತುಕೊಳ್ಳುವುದು ಮತ್ತು ಹಾಗೆ ನಿಂತು ಮಾಡುವ ತಪಸ್ಸು : ತನು ಪಂಜಿವೊಲ್ ಬೆಳರ್ತಿರ್ಪಿನೆಗಂ ಹಿಮಮೆಕ್ಕಿದರಲೆವೋಲ್ ಪುದಿದಿರೆಯುಂ ತನು ತನಗಲ್ತೆಂದೇಕಾಂತ ನಿವಾಸದೊಳಿಂತು ಬೆಳ್ಳವಾಸದೊಳಿರ್ದಂ (ಆದಿಪು. ೬-೩೩): ಯೋಗವಶೀಕೃತಾಂ[ಗ]ಕಂ ಬೆಳ್ಳವಾಸದೊಳ್ ಮೇಘರಥಮುನೀಂದ್ರಂ ನಿಂದಂ (ಶಾಂತಿಪು. ೯-೧೦೬): ಪಳ್ಳಿರಿವೊಳೇೞ್ವ ಬಿಸಿಲ್ ಹಿಮಪುಂಜಮಂ ಮುಸುಂಕಿದ ತೆಱನಾಗೆ ತನ್ಮುನಿಗೆ ಕಲ್ಮಿಳೆಯಲ್ಲಿದು ಬೆಳ್ಳವಾಸಮೆಂಬುದ ನೆಸಗಿತ್ತು ಬೇಸಗೆಯ ಬೆಟ್ಟದ ಕಲ್ಮಿಲೆ ನಿಂದ ಗೌರವಂ (ಅನಂತಪು. ೪-೧೮). [ ಬೆಳ್ಳ$_2$ + ವಾಸ$_2$ ]

**ಬೆಳ್ಳಹೋಗು** (ಕ್ರಿ). ಪ್ರವಾಹದಲ್ಲಿ ಕೊಚ್ಚಿ ಹೋಗು.— ತೇಲಿ ಹೋಗು : ತ್ಯಾಂಪಣ್ಣನು ಆ ಹೊಳೆಯಲ್ಲಿ ಬೆಳ್ಳಹೋದನು (ಈಳಕ. ೩೮). [ ಬೆಳ್ಳ$_2$ + ಹೋಗು$_1$ (<ಪೋ$_1$) ]

**ಬೆಳ್ಳಾನೆ** (ನಾ). ಬಿಳಿಯ ಬಣ್ಣದ ಆನೆ; ಐರಾವತ : ಅಂತು ಬೆಳ್ಳಾನೆ ಬೆಳಗೆಯ್ಯಂ ಪೊರ್ಕುಂತಿರಾಂತ ಬಲಮಂ ಪಡಲ್ವಡಿಸೆ (ನೇಮಿಪು. ೧೪-೯೩೮); ಇಂದ್ರನ ಬೆಳ್ಳಾನೆಯುಂ ಬಿದಿಯ ಹಂಸೆಗಳ ವೃಂದಮುಂ . . . ಪಿಂದುಗಳೆವಮಳಧವಲಾಂಗದಿಂ ಸೊಗಯಿಸುವನಂ ದಿವ್ಯಧರ್ಮಸ್ವರೂಪನಂ ಭಜಿಸುವೆಂ (ಉದ್ಭಟ. ೧-೧೨) ; ತುಂಬು ಬೆಳ್ಳಾನೆಯ ಸುರಾಧಿಪನೆಂಬ ಮೊತ್ತಿಗೆ ತಂದು ಪೊಱಗಪನು (ಜಾಳ್ಕಾ. ೨-೧೧). [ಬೆಳ್$_1$ (<ಬಿಳಿದು) + ಆನೆ$_1$]

**ಬೆಳ್ಳಾಯ** (ನಾ). ಒಂದು ಬಗೆಯ ತೆರಿಗೆ.–ಸುಂಕ : ಕುಮರಿಯ ಪೆಜ್ಜುಂಕದಲು × × × ಪಡ್ಡರಾವುಳದಲು ಬಿ× × × ಜ್ಜುಂಕದ ಬೆಳ್ಳಾಯದಲು × × × ದ್ರಮ್ಮ ೧ (ಸೌಇಇ. XX, ೬೬-೯; 1118); ಪೆಜ್ಜುಂಕದ ಬೆಳ್ಳಾಯದಲು ದ್ರಮ್ಮ ೧ (ಶೋಳಶಾ. ೦೯೩೮, ೩೦೩. ೨-೮; ?). [ ಬೆಳ್? + ಆಯ$_7$]

**ಬೆಳ್ಳಾರ$_1$**, ಬೆಳ್ಳಾಲ$_2$ (ನಾ). (ಪಕ್ಷಿ, ಪ್ರಾಣಿ ಮೊದಲಾದುವುಗಳನ್ನು ಹಿಡಿಯಲು ಬಳಸುವ) ಒಂದು ಬಗೆಯ ಬಲೆ,–ಜಾಲ : "ಮೃಗಜಾಲಿಕಂ ವಾಗುರಂ ಬೆಳ್ಳಾರವೆನಿಸಿಕ್ಕು" (ಮಂಗರಾ. ೧೧೨-೩) ; ಬೆಳ್ಳಾರ ಬಗಿ ಪೊದಱ ಹೊದ್ದಿಸುವ್ದಪನೇಱು ಸನ್ನದೋಱು . . . ಎಂದೊಬ್ಬರೊಬ್ಬರ ನಾಡುವಬ್ಬರದ ಬೊಬ್ಬೆ ಹಬ್ಬಿತ್ತಡಪಿಯ (ಹರಿಶ್ಚ. ೩-೨೩) ; ಯಮನ ಪಳಕಿಪ ಜೂಬು ಯಮಮೃಗದ ಬೆಳ್ಳಾರವದುವು ಯಮ ಹರಿಣಿಗಿಕ್ಕಿದ ಬೆಚ್ಚಿದು (ಜಾನಂತ. ೦-೪೨); ತರಳಾಪಾಂಗಮರೀಚಿಗಳ್ ಕಳಮಕೇದಾರಕ್ಕೆ ಬೆಳ್ಳಾರದೋಲಿರೆ . . . ಪಾಂಥರ್ ಬಲಪಂದು ಬೆಳ್ಳುಗದವೊಲ್ ಸಾರ್ತಂದು ಬೆಳ್ಳಾಗೆ ಪಾಮರಿಯರ್ ಕಾಮನ ಬೇಂಟೆಗಾರ್ತಿಯರೆನಿಪ್ಪಾ ಶಂಕೆಯಂ ಮಾಡುವರ್ (ಸೂಕ್ತಿಸು. ೪-೬೬). **ಬೆಳ್ಳಾಲ$_2$** : ಬೆಳ್ಳಾಲಂ ಗಾಳದ ಕಟ್ಟಿಗೆ ಕೌಳೇಯಕವಿತತಿ ಸೆಂಡು ಕೋಲಸಿ ಚಕ್ರಂ ಮತ್ತಂ ಪಲವು ಚಂದದ ಬಲೆಗಳ್ವೆರಸು ಬೇಂಟೆಗೆ . . . ಪೊಱಮಟ್ಟು (ಪಾರ್ಶ್ವಪು. ೧೨-೬೩).

**ಬೆಳ್ಳಾರ$_2$** (ನಾ). ಬಿಳಿಯ (ಮುತ್ತಿನ) ಹಾರ : ಆರೆಣೆಯೆಂಬೆನಳುಂಬದ ಬೀರಮನೀ ಜಗಮನಾವಗಂ ಸುತ್ತಿದ ಮುನ್ನೀರೆಂಬುದು ಬಿರುದಿನ ಬೆಳ್ಳಾರೆನಿಸಿದುದದಟರಾಯ ಕೋಳಾಹಳನಾ (ಯುಶೋಚ. ೦-೦೩). [ಬೆಳ್$_1$ ( <ಬಿಳಿದು) + ಆರ$_2$]

**ಬೆಳ್ಳಾರಬಲೆ** 'ಬೆಳ್ಳಾರವಲೆ' ನೋ.

**ಬೆಳ್ಳಾರವಲೆ**, ಬೆಳ್ಳಾರಬಲೆ, ಬೆಳ್ಳಾಲವಲೆ (ನಾ). = ಬೆಳ್ಳಾರ$_1$ : ಪ್ರಮುಖಮೃಗ ಕಾಲವುರುಚಿ ಬಿದ್ದುವು ಧಳ್ಳುರಿಯ ಬೆಳ್ಳಾರವಲೆಗಳಲಿ (ಕುಮಾ.ಆ. ೨೦-೩೦) ; ಹೇಳು ಹೇಳೇನೆಲವೊ ತೆಗೆ ಬೆಳ್ಳಾರವಲೆಯನ್ನು ಹಂದೆಯವೆ ನಾನಾಳುತನವೆನಗಿಲ್ಲ (ಶಿಶಾಗ. ೨-೯-೦) ; ಮುನಿಮೃಗಾವಳಿಯ ಜಂಗುಳಿಗೊಡ್ಡಿದ ಬೆಳ್ಳಾರವಲೆಯೆನೆ ಕಂಗೊಳಿಸಿತು ಸೂಳೆಗೇರಿ (ಕಂಪಿ. ೬-೯೦). **ಬೆಳ್ಳಾರಬಲೆ** : ಬೆಳ್ಳಾರಬಲೆಗಳ ಹರಪಿ ಸೊಪ್ಪಿನ ತೋಹಿನಲಿ ಸಿಲುಕಿಸಿದರಾ ಮೃಗವ (ಕುಮಾ.ಆ. ೨೩-೧೦) ; ಪರಿಪರಿಪ ಕಾಳ್ಕಿಚ್ಚು ಮುಂದುಗಡೆ ಕಾಲ್ಸುರಿಗೆ ಕಪ್ಪು ಬಲಗಡೆ ಬಿಟ್ಟ ಬೆಳ್ಳಾರಬಲೆ ಯೆಡಗಡೆ (ಸಮ್ಯಕ್. ೨-೪೬): ಬೆಳ್ಳಾರಬಲೆಯ ಗುದಿಯ ಸಬಳದ ಕವಲ್ಗೋಲ ಅಡಿಕಲ್ಗೊಡೆಯ ನೇಣ ಕಡಿಗತ್ತಿಯ ಬಿಲ್ಲಂಬುಗಳ ಬಲೆವ್ವಱಿವೊತ್ತು . . . ಬೇಡರ್ ಕಾಡು ಮುತ್ತಿಯುಂ (ರಾಮನಾಥ. ೮೩-೨೩). **ಬೆಳ್ಳಾಲವಲೆ** : ಕಾಲುಗಣ್ಣಿಯ ಹೆಬ್ಬಲೆಯ ಬೆಳ್ಳಾಲವಲೆಗಳ [ಪಾಠಾಂ. ಹೊಱೆಗಳ] . . . ಬೇಟೆಗಾಱರು ಬಳಸಿದರು ಶಿವನ (ಕುಮಾ.ಆ. ೩-೩೩). [ಬೆಳ್ಳಾರ$_1$ + ಬಲೆ$_1$]

**ಬೆಳ್ಳಾರ್ಪಟ** (ನಾ). = ಬೆಳ್ಳಾರ ೧ : ಬೆಳ್ಳಾರ್ಪಟಮೆಂಬಲೆಗಳ್ . . . ದೀಪದ ಪುಲಿ ನಿರಿತಾಸ್ತ್ರಂಗಳುಗ್ರತ್ವಮಂ ಸಂಗಡಿಸುತ್ತಿರ್ದೊಪ್ಪೆ ವಿಂಧ್ಯಾಟವಿಗೆ ನಡೆದುದುದ್ವೃತ್ತಕಿರಾತಪ್ರಜಾತಂ (ಗಂಕ. ೦-೬೯); ತಡಿಕೆ ಗಳ ಬಲೆ ಗಾಣ ಕೂಳಿ ಬಿಲು ಸರಳು ನಾಯರ್ ಗಿಡುಗ ನೆರೆಮುಡ್ಡ ಬೆಳ್ಳಾರ್ಪಟಂ ತೋಱೆತ್ತು . . . ಪ್ರಕರವೆರಸಿ ಬೇಡರು ನಡೆದರು (ಹರಿಶ್ಚ. ೩-೯) ; ಹಿಡಿಯೆಲಳ್ ಬೆಳ್ಳಾರ್ಪಟಂಗಳು ಸರಳಿನ ಮೂಡಿಗೆಗಳೆಯ್ದುತಾ ನೃಪನಿದಿರೊಳ್ (ನಷ್ಟಚ. ೪-೨೨). [ಬೆಳ್ಳಾರ$_1$ + ಪಟ]

**ಬೆಳ್ಳಾಲ$_1$** (ನಾ). ಬಿಳಿ ಆಲದ ಮರ : ಮಾಮರಳಿ ಬೆಳ್ಳಾಲ ಸಂಪಗೆ . . . ಪೊನ್ನೆಯದ ಮರನಾ ವನದೊಳಾಮೆಮೊಳಾವಗ ತೀವಿಕೊಂಡಿಹುವು (ಶಿವ್ಯ.ಆ. ೬-೨೦); ಬದರಿ ಬಂಗರಳಿ ತಂಡಸ ತಡಸು ಬೆಳ್ಳಾಲ ಚದುರ ಚಂಪಸಗಳಿಂದ (ಶುರಚ. ೧-೨೬). [ಬೆಳ್$_1$ (<ಬಿಳಿದು) + ಆಲ$_1$]

**ಬೆಳ್ಳಾಲ$_2$** 'ಬೆಳ್ಳಾರ$_1$' ನೋ.

**ಬೆಳ್ಳಾಲವಲೆ** 'ಬೆಳ್ಳಾರವಲೆ' ನೋ.

**ಬೆಳ್ಳಾಲೆ** (ನಾ). ಬಿಳಿಯ ಬಣ್ಣದ ಹಾಲೆಮರ : ಕೆಲವು ಕಡೆಗಳಲ್ಲಿ ತೇಗ, ಸಂದಿ . . . ಬೆಳ್ಳಾಲೆ . . . ಗಂಧಗರಗೆ ಮುಂತಾದ ಗಗನಚುಂಬಿತ ವೃಕ್ಷಗಳು (ಕಂಜಕಂ. ೨). [ಬೆಳ್$_1$ (<ಬಿಳಿದು) + ಆಲೆ$_2$ (<ಪಾಲೆ$_3$)]

**ಬೆಳ್ಳಾಳ್**, ಬೆಳ್ಳಾಳು (ನಾ). ೧. ತಿಳಿವಳಿಕೆಯಿಲ್ಲದವನು; ಅವಿವೇಕಿ ; ಮೂರ್ಖ : ಪೆದ್ದ : ಕೃಷ್ಣೋರಗನು ಪಿಡಿದ ಬೆಳ್ಳಾಳಂತಾಮ್ಮನೆ ಬೆಮರುತ್ತುಮಿರ್ದ ದುಶ್ಶಾಸನನುಮಂ . . . ಕಂಡು (ಕಂಕಥಾ. ೬-೩ ವ); ಧರಣೀಸಾಮ್ರಾಜ್ಯಮಿರ್ದಂತೆ ಬಂದಾಳಾಗಿರ್ಪ ವಿಭೂತಿಯಂ ಬಿಸುಟ್ಟು ಭೈಕ್ಷ್ಯಂಗೊಂಡು ತಾನುಣ್ಬ ಬೆಳ್ಳಾಳಂ ಪೋಲನೆ ಮಂತ್ರವೈದ್ಯದಳಿಪಿಂ ಕೇಡಯ್ದಿಪಂ ಧರ್ಮಮಂ (ಧರ್ಮಾಮೃ. ೪-೪೮); ಬೆಳ್ಳಾಳೆಡೆಗೊಂಡನೊದಱಿ ಭಟ್ಟನೊಳೊವಜಂ (ಕಮು. ೮೮೦ ಕ್ರಪೂ). ೨. ಹೇಡಿ : ಅಂಜುಬುರುಕ; ಪುಕ್ಕಲ : ಬೆಳ್ಳಾಳ್ಗೆ ಪೋಳ್ವುದೋಱುವುದೊಳ್ಳಾಳ್ಗೆ ಪೊಡರ್ಪ

ದೋರ್ಪುದು (ಶಂಕಪಾ. ೦೨-೧೨); ಒಳ್ಳಾಸೆಗೋಡಲರಿಯದ ಬೆಳ್ಳಾಳ ಪೊಲಗಿದು ಕಂಡು ಲಾವಣ್ಯರಸಂ ತಳ್ಳಂಕುಗುಟ್ಟೆ ಮಿಳ್ಳಿಸಿ ದಳ್ಳಿಱಿದಾಡುವ ಜಿನೇಂದ್ರಶಿಶುವಂ (ಶಾಂತಿಪು. ೦೦-೮); ನೀಂ ಕಳ್ಳರಂ ಕಂಡ ಬೆಳ್ಳಾಳಂತೆ ಬೆದಱಿಯೆನಗಂ ಪೇೞದೆ ಪೆಱಗಂ ನೋಡದೋಡಿ ಬಂದೆಯದೇಂ ಕಾರಣ ಮೆನೆ (ಶಂಕಶಂ. ೨೬೩-೨೩). **ಬೆಳ್ಳಾಳು : ೨.** ಕುದುರೆಯ ಚದುರೆಯು ಪದಿರೆರಡು ಒಂದಯ್ಕ ಚದುರನೇಱಿದರೆ ಕಾಣಿಯುವದು ಬೆಳ್ಳಾಳ ಬದಿರಿ ಹಾಕುವದು (ಸರ್ವಜ್ಞ. ೦೬೬೭). [ ಬೆಳ್$_2$ + ಆಳ್$_3$ ]

**ಬೆಳ್ಳಾಳು** 'ಬೆಳ್ಳಾಳ್' ನೋ.

**ಬೆಳ್ಳಾಟ** (ನಾ). ಒಂದು ಬ್ರಾಹ್ಮಣ ಪಂಗಡದ ಹೆಸರು : ಬೆಳ್ಳಾಟ ಕುಲ ಬ್ರಾಹ್ಮಣೈರ್ಶ್ಚ (ಎಇ. XIII, ೧೯೩-೦೨; 902).

[ **ದೇ.॥ ತಮಿ.** ವೆಳ್ಳಾಳ, ವೆಳ್ಳಾಟ, ವೇಳಾಳ; **ಮಲ.** ವೆಳ್ಳಾಳ ]

**ಬೆಳ್ಳಿ** (ನಾ). ೧. ಒಂದು ಬಗೆಯ ಹೊಳೆಯುವ ಬಿಳಿಯ ಲೋಹ; ರಜತ : ''ರಜತಂ, ಕಳಧೌತಂ, ರೂಪ್ಯಂ, ತಾರಂ — ಈ ೪ ಬೆಳ್ಳಿ'' (ಕಠಾಮು. ೨೯-೦೯); ಬೆಳ್ಳಿಯ ನಾಲ್ಕು ಗೋಪುರಂಗಳಿಂದೊಪ್ಪ ವಳಯಾಕೃತಿಯಾಗಿ ಬಳಸಿದ . . . ಮಧ್ಯಪ್ರದೇಶಮುಮಂ (ಆದಿಪು. ೦೦-೩೨ ವ); ಸಾಸಿರಮ್ ಕವಿಲೆಯ ಕೋಡುಮಮ್ ಕೊಳಗ(ಗುಮುಮ್) ಪೊನ್ನುಂ ಬೆಳ್ಳಿಯುಮಂ ಕಟ್ಟಿ ಸಾಯಿ(ಸಿ)ರ್ಬ್ಬರ್ಪ್ಪಾರ್ವರ್ಗ್ಗೆ ದಾನಂಗೊಟ್ಟ ಫಲಂ (ಸೌಇಇ. XI-i, ೩೯-೦೭ ; 951); ಪುಂಡರೀಕದೆಸಳ ಬೆಳ್ಳಿಯ ಸಿಂಪಿಂ ಪರಿಮಳದ ರಸಮನೆಱೆದು ಪರಾಗದ ತಿಲಕಮನಿಕ್ಕಿ (ಗಿಂಕ. ೨-೭೧ ವ). **೨.** ಬೆಳ್ಳಿಯಿಂದ ಮಾಡಿದ (ಮೂರಾಣೆಯ ಬೆಲೆಯ) ನಾಣ್ಯ.—ಹಣ : ಅಲ್ಲಿ ಇಲ್ಲಿ ಗಂಡಿನ ಕಡೆಯವರೂ ಹೆಣ್ಣಿನ ಕಡೆಯವರೂ ಬೆಳ್ಳಿ (ಮೂರಾಣೆ) ಹಂಚಿದರು (ಗ್ರಾಂಕಿತು. ೦೩). **೩.** ನವಗ್ರಹಗಳಲ್ಲಿ ಒಂದು ; ಶುಕ್ರ : ಉಷೆಯ ಭಾಳದಲಿ 'ಬೆಳ್ಳಿ' ಯೊಂದೆಯೆ ಮಿರುಗುವಂದದಲಿ . . . ಹಣೆಯಲ್ಲಿ ಚಂದ್ರ ಕುಂಕುಮ ಬಿಂದುವನಿಟ್ಟು (ತಪ್ಪಂಗ. ೦೯-೩೦೨); ಉಷೆಯ ಹಣೆಗೆ ಬೆಳ್ಳಿ ಶುಕ್ರ ತಿಲಕವಸಿಡಲಿ (ಸೂರ್ಯಪಾ. ೨೪-೦೦). **೧, ೩ :** ಗಗನವಂತು ಬೆಳ್ಳಿಯಿಂ ಮೆಱೆದುಂ, ಕೆಯ್ದೊಲದಂತು ಕರ್ಪೂರನ್ನಿಂ ರಂಜಿಸಿಯುಂ . . . ದಿಟ್ಟಿಯ ಬಟ್ಟೆಗೈತರ್ಪ ಲೋಹಕಾರರ ಮನೆಯಿಂ (ರಾಷಾಶ. ೦೦೩-೦೦). **೪.** ಬೆಳ್ಳಿಯ ಬಣ್ಣ; ಬಿಳುಪು; ಶ್ವೇತವರ್ಣ : ''ಬೆಳ್ಳಿಬಳ್ಳಿಯುಂ ಶ್ವೇತಮೆಂಬುದು'' (ಹಲಾಯು. ೦೩೦-೩); ಮುಗಿಲ ಬೆಳ್ಳಿಯ ಪೊರೆಯ ಹೊದೆದು ಸೊಗಸು ಕನಸನು ಕಾಣುವಂದದಿ ನಗುವ ಚಂದ್ರನ ಬೆಳಕಿನೊಳಗೆ ಕಂಡೆ ತಪ್ಪಲಿ ಪರಿಯನು (ಗಷೀಕ. ೪೦-೦೩). **೫.** ಒಂದು ಬಗೆಯ ಔಷಧೀಸಸ್ಯ: ''ನೀಲಮಲ್ಲಿಕಃ—ಬೆಳ್ಳಿ, ಬೆಲ್ಲವತ್ತ'' (ಓಷಧಿ. ೬೯).

**ಬೆಳ್ಳಿಯ ಕಟ್ಟು** = ರಜತದ ಚೌಕಟ್ಟು.—ಅಣಸು : ಚಿನ್ನದ ಹರಡೆ ಬೆಳ್ಳಿಯ ಕಟ್ಟು ಮುತ್ತುಗಳುನ್ನತ ಕಂಚಿನಸಿಟ್ಟಿಗಳ್ ಸನ್ನಾಹದ ಬಲುಭಟರು ಕೋಟೆಯುನತ್ಯುನ್ನತವಲಿ ಕಾದಿಹರು (ಕಂನವ. ೦೦-೦೯೩). **ಬೆಳ್ಳಿಯ ನಾಣ್ಯ** = ಬೆಳ್ಳಿನಾಣ್ಯ : ಸಾಮಾನ್ಯವಾಗಿ ಬೆಳ್ಳಿಯ ನಾಣ್ಯ ಚಲಾವಣೆಯಲ್ಲಿ ಉಳಿದುಕೊಂಡು ಚಿನ್ನದ ನಾಣ್ಯ ಮಾಯವಾಗುವುದು (ಹಣಶ್ರ. ೨೪). **ಬೆಳ್ಳಿಯ ಬೆಟ್ಟ**=ರಜತದ ಬೆಟ್ಟ ; ಕೈಲಾಸಪರ್ವತ: ಗಗನದಿಂ ನವಲೋಹಿತವೃಷ್ಟಿಗಳ್ ಪಲವೊಮ್ಮೆ ಕೊಳೆ ನಾಂದು ಕೆಂಪೆಸೆದು ತೊಟ್ಟನೆ ಬೆಳ್ಳಿಯ ಬೆಟ್ಟಮಲ್ತು ಜಾದಿನ ನಗಮೆಂಬ ಶಂಕೆಯುನೆ ಮಾಡಿ ದುದಾ ವಿಜಯಾರ್ಧಪರ್ವತಂ (ಶಾಂತಿಪು.೪-೩೩); ಪಟ್ಟಣದ ನಡುವೆ ಬೆಳ್ಳಿಯ ಬೆಟ್ಟಂಗಳನಿಳಿಪ ಜೈನನಿಳಯಂಗಳನೀ ಸೃಷ್ಟಿಯೊಳೆ ಕೂಡೆ ಮಾಡಿದ ರಟ್ಟಂ ಶುಭಾವನೀಶನನೆನ್ತೆ ಪೊಗಳದರಾರ್ (ಸಮಶ.೦-೩೬); ಗಂಗೆ ಬಟಲ್ದೊಲ್ನಿಲಕೆ ಬೆಳ್ಳಿಯ ಬೆಟ್ಟದ ಬಳ್ಳಿವೆಳ್ಪು ಬೆಳ್ಳಂಗೆಡೆದೊಪ್ಪೆ (ಅರ್ಜಸೀ. ೨-೭೦). **ಬೆಳ್ಳಿಯರ್**=ಬೆಳ್ಳಿ ಕೆಲಸ ಮಾಡುವವನು ; ಅಕ್ಕಸಾಲಿಗ : ನಗರೂರ ಬೆಳ್ಳಿಯರುಂ ಮರವೂರ ವಣ್ಣಾಕರುಂ (ವೆಬ್ಲಿಂ. ೦೯೨೭, ೧೦೯-೪೩ ; 726) ; ಬೆಳ್ಳಿಯರ ಕುಲತಿಲಕ ಧಮ್ಮಗವುಡಂಗೆಯುಂ ಬೊಂವ್ವಗವುಂಡಿಗೆಯುಂ ಪುಟ್ಟಿದ ಸುಪುತ್ರ ಕುಲದ್ದೀಪಕ ಚಿಟಿಗವುಂಡ (ಎಕ. VI(R). ಕೃಕ್ಕರಾ. ೬೯-೦೨; 1242) . **ಬೆಳ್ಳಿಯ ಹಬ್ಬ** = ಯಾವುದಾದರೂ ಸಂಘ, ಸಂಸ್ಥೆಗಳಿಗೆ ಇಪ್ಪತ್ತೈದು ವರ್ಷ ತುಂಬಿದ ಸಂದರ್ಭಗಳಲ್ಲಿ ಆಚರಿಸುವ ಸಮಾರಂಭ ; ರಜತಮಹೋತ್ಸವ : "ಇಪ್ಪತ್ತೈದನೆಯ ವಾರ್ಷಿಕೋತ್ಸವ; ರಜತಮಹೋತ್ಸವ, ಪಂಚವಿಂಶತಿ ಪೂರ್ತಿ ; ಬೆಳ್ಳಿಯ ಹಬ್ಬ" (Silver Jubilee. ಇಂಕಿಂ) ; ಶಿಕ್ಷಣವೃತ್ತಿಯೊಳೀ ವರ್ಷವೆನಗಿದು ಬೆಳ್ಳಿಯ ಹಬ್ಬದ ವರ್ಷ (ಇಂಚಾಕ. ೫೬-೭೦). **ಬೆಳ್ಳಿಯುತ್ತರಿಗೆ**=ಬೆಳ್ಳಿಯ ಜರಿಯ ಮೇಲುಹೊದಿಕೆ, — ಉತ್ತರೀಯ : ವರಕಮಂಡಲಮೊಪ್ಪೆ ಹಸ್ತದೊಳೋಜೆಮೆತ್ತಿರೆ ಬೆಳ್ಳಿಯುತ್ತರಿಗೆ ಜನ್ನಿವರಂ ಬೆಡಂಗಳವಟ್ಟು ಬಾಲದಿನೇಶನಂತಿರೆ (ರವರ್ಷಮ್ಮ. ೩-೨೦೭). **ಬೆಳ್ಳಿಯೊಸಗೆ** = ಬೆಳ್ಳಿಯ ಹಬ್ಬ : ಬೆಳ್ಳಿಬೆಟ್ಟದೊಡತಿ, ಗೌರಿ, ಬೆಳ್ಳಿಯೊಸಗೆಗೊಸಗೆ ಬೀರಿ ಕಾಯಿ ಕೃಷ್ಣನ (ಹೂಂಗಳು. ೯-೪). [ **ದೇ.॥ ತಮಿ. ಮಲ.** ವೆಳ್ಳಿ ; **ಕೊಡ. ತುಳು.** ಬೊಳ್ಳಿ ; **ತೆಲು.** ವೆಂಡಿ]

**ಬೆಳ್ಳಿಂದ** (ನಾ). ಒಂದು ಊರಿನ ಹೆಸರು : ಸ್ವಸ್ತಿ ಮಜ್ಜಿಗಳ ಬೆಳ್ಳಿನ್ದ ಗುಪ್ತ ನೂರೆತ್ತಱಿಪಾಱಿತಿ ಪ್ರಸಿದ್ಧಾ ಗ್ರಾಮಾಃ (ಇಇ. XII, ೦೭-೪; 813).

[?]

**ಬೆಳ್ಳಿಗೆ** (ನಾ). ಬಿಳಿಯ ಬಣ್ಣದ ಹಸು : ಬೆಳ್ಳಿಗೆಯಾಕಳವೆಂದರೆ ಬಳ್ಳವಾಲ ಕಱೆವವೇ ಮರುಳೆ (ಅಶಕಂ. ೨೨೩-೦೦೦೦) ; ಬೆಳ್ಳಿಗೆಯಾವಿನ ಕಱುವೆಂದೊಡೆ ಬಳ್ಳವಾಲ ಕಱೆವುದೆ (ಬಸವ. ೩೨೭) ; ಕಾಳಿಯ ಕಡೆಗಣ್ಣ ಕಿತ್ತು ಏಡಿಯ ಸರ್ವಾಂಗವ ಸೀಳಿ ಅಚ್ಚ ಬೆಳ್ಳಿಗೆಯ ಹಾಲ ನಿಶ್ಚಯದಲ್ಲಿ ತೆಗೆದು ತೃಪ್ತಿಯಾಗಿ ಕೊಳ್ಳಬಲ್ಲಡೆ ಅತನೆ ಸದಾಶಿವಮೂರ್ತಿಲಿಂಗವು (ಸಕಪ. I. ೦೩೦-೦೭೮). [ಬೆಳ್ಳಿ + — ಗೆ./**ಕೊಡ.** ಬೊಳ್ಳಿಗೆ = ಹಸು]

**ಬೆಳ್ಗೊಡೆ** (ನಾ). ರಜತದ ಛತ್ರಿ ; ಬೆಳ್ಳಿಯ ಕೊಡೆ : ಸಂಗಡಿಸೆ ತನ್ನೊಳರುಣ ಪಿಶಂಗ ಸಿತದ್ಯುತಿಗಳೆಂಬನುಕ್ರಮರುಚಿ ಶಕ್ರಂಗೆತ್ತಿದ ಮಾಣಿಕಗೊಡೆ ಪೊಂಗೊಡೆ ಬೆಳ್ಗೊಡೆಯೆನಿಸಿದುದು ವಿಧುಬಿಂಬಂ (ಜಗಾ. ೦೬-೦೦೭). [ಬೆಳ್ + ಕೊಡೆ$_2$]

**ಬೆಳ್ಳಿನಾಣ್ಯ** (ನಾ). ಚಲಾವಣೆಗಾಗಿ ಆಡಳಿತದ ಮುದ್ರೆಯೊತ್ತಿ ತಯಾರಿಸಿದ ರಜತದ ಬಿಲ್ಲೆ ; ಬೆಳ್ಳಿಯ ಹಣ : ಹೊರದೇಶಗಳಿಂದ ಆಮದಾಗುವ ವಸ್ತುಗಳಾವುವೆಂದರೆ : ಮಾದಕ ಪಾನೀಯ . . . ಚಿನ್ನ ಮತ್ತು ಬೆಳ್ಳಿನಾಣ್ಯ (ಶ್ರವಾಇ. I, ೯೩) ; ಚಿನ್ನ ಬೆಳ್ಳಿನಾಣ್ಯವನ್ನು ಕರಗಿಸಿದರೆ ಸ್ವಲ್ಪವಾದರೂ ಲೋಹದ ಬೆಲೆಯಷ್ಟು ಮೂಲ್ಯ ದೊರೆಯುತ್ತದೆ (ಹಣಶ್ರ. ೨೭). [ಬೆಳ್ಳಿ + ನಾಣ್ಯ (<ನಾಣಯ)]

**ಬೆಳ್ಳಿಬೆಟ್ಟ** 'ಬೆಳ್ಳಿವೆಟ್ಟ' ನೋ.

**ಬೆಳ್ಳಿಮಲೆ** (ನಾ). ರಜತಗಿರಿ ; ಕೈಲಾಸಪರ್ವತ : ಗಂಗೆಯಂ ಬೆಳ್ಳಿಮಲೆಯಂ . . . ಹಿಂದುಗಳೆಪಮಳ ಧವಲಾಂಗದಿಂ ಸೊಗಯಿಸುವನಂ ದಿವ್ಯಧರ್ಮಸ್ವರೂಪನಂ ಭಜಿಸುವೆಂ (ಅನ್ವರೀ. ೦-೦೦).

[ ಬೆಳ್ಳಿ + ಮಲೆ$_4$ ]

**ಬೆಳ್ಳಿಮಾಣೆ** (ನಾ). ಒಂದು ಸ್ಥಳದ ಹೆಸರು : ಭೀಮಗಾವುಂಡ್ರುಂ ಬೆಳ್ಳಿಮಾಣೆಯ ಶ್ರೀಯ ಗಾವುಂಡ್ರುಂ . . . ರಿಷ್ಪರಾಮಗಾವುಂಡನುಂ ಎನೆಪ್ಪರುಂ ಸರಸಾಕ್ಷಿಯಾಗೆ ಪಡೆದಾವ್ (ಎಕ. VI(R). ಶ್ರೀಂಗ. ೬೭-೦೯; ಕ್ರಿ. 800). [?]

**ಬೆಳ್ಳಿಯುಗ** (ನಾ). ' ಬೆಳ್ಳಿಯುಗ (ಮನುಷ್ಯನ ಇಳಿಗತಿಯಲ್ಲಿ ಚಿನ್ನ, ಬೆಳ್ಳಿ, ಹಿತ್ತಾಳೆ, ಕಬ್ಬಿಣ ಎಂಬ ನಾಲ್ಕು ಯುಗಗಳಲ್ಲಿ ಎರಡನೆಯದು)'' (The Silver age. ಇಂಕಿಂ). [ ಬೆಳ್ಳಿ + ಯುಗ ]

**ಬೆಳ್ಳಿಲಿ** (ನಾ). ಒಂದು ಬಗೆಯ ಇಲಿ ; ಬೆಳ್ಳಗಿರುವ ಇಲಿ ; ಬಿಳಿಯ ಇಲಿ : "ಉಂದುರುಃ – ಬೆಳ್ಳಿಲಿ" (ಒಶಧಿ. ೯೩); ಬೆಳ್ಳಿಲಿಯ ಬಿಲದೊಳ್ ನೀರ್ಪೊಕ್ಕಂತೆ (ರರ್ಮಾಶ್ವ. ೨-೬೦); ಬಿಸಿನೀರ ಪೊಕ್ಕ ಬೆಳ್ಳಿಲಿವಿಂದು ಬಿದರ್ದಂತೆ (ಶೀಖಿಸಂ. ೩೦-೦೩); ನಲ್ಲ ದೇವಸಾಲೆ ಪುಲ್ಲೆಗೊಂಬತ್ತು ಮುಖ ಬೆಳ್ಳಿಲಿಗೆ ನಾಲ್ಕು ತನಿಗೋಡು ಮೂಡಿದ್ದನಿಲ್ಲಿಯೇ ಕಂಡೆ (ಸರ್ವಜ್ಞ. ೨೦೬೯). [ಬೆಳ್$_1$ (<ಬಿಳಿದು) + ಇಲಿ$_1$./ತಮಿ. ವೆಳ್ಳೆಲಿ; ತೆಲು. ವೆಲ್ಲೆಲುಕ]

**ಬೆಳ್ಳಿವಕ್ಕರಿಕೆ** (ನಾ). ಕುದುರೆ, ಆನೆ ಮೊದಲಾದುವುಗಳಿಗೆ ಹಾಕುವ ಬೆಳ್ಳಿಯ ರಕ್ಷಾಕವಚ. – ಮೈಜೋಡು : ಬಳಸಿದ ಬೆಳ್ಳಿವಕ್ಕರಿಕೆಯ ಕುದುರೆಗಳು (ಷರ್ಶ. ೬-೬೩). [ಬೆಳ್ಳಿ + ಪಕ್ಕರಿಕೆ]

**ಬೆಳ್ಳಿವಕ್ಕರೆ** (ನಾ). = ಬೆಳ್ಳಿವಕ್ಕರಿಕೆ : ಬೆಳ್ಳಿವಕ್ಕರೆಯ ತೇಜಿಯುವ ನಾರಿವನೆಳೆವಳ್ಳಿಯಂತೆಸೆವ ಮೆಯ್ಯುವನು (ಕುಮಾರಾ. ೨೦-೯೨).
[ಬೆಳ್ಳಿ + ಪಕ್ಕರೆ$_1$]

**ಬೆಳ್ಳಿವಟ್ಟಲ್** (ನಾ). ರಜತದ ಸಣ್ಣ ಪಾತ್ರೆ ; ಬೆಳ್ಳಿಯ ಬಟ್ಟಲು : ಕಳ್ಳ ಬೆಳ್ಳಿವಟ್ಟಲ್ ಬಾಯೊಳ್ ಬೆಚ್ಚಂತಿರೆ ಸತಿ ಶಶಿಯುಂ ಕಚ್ಚಿ ನೆಲಕ್ಕಿಱಿದ ರಾಹುವಂ ನೆಱೆ ಪೋಲ್ತಲ್ (ಕಾವ್ಯಾ. ೯೬೬ ಸೂತ್ರ); ಕರತಳಕಳಶೋದಕದೊಳ್ ಸುರುಚಿರ ಚಂದ್ರಮನ ನೆಳಲನೂನಂ ತೋಱುತ್ತಿರೆ ಬೆಳ್ಳಿವಟ್ಟಲೆಂದಾ ತರುಣಿ ಕರಂ ತೆಗೆದು ತೆಗೆದು ಬೆಱಗಾಗಿರ್ದಳ್ (ಗಿರಿಜಾ. ೪-೦೨೮).
[ಬೆಳ್ಳಿ + ಬಟ್ಟಲ್]

**ಬೆಳ್ಳಿವಾಡ** (ನಾ). ರಜತದ ಸೌಧ ; ಬೆಳ್ಳಿಯ ಉಪ್ಪರಿಗೆ : ಬೆಳ್ಳಿವಾಡಂಗಳೊಳೊಲ್ದು ಸತ್ಕವಿತೆಗೂಡಿ ಸುಧರ್ಮನರೇಂದ್ರನೊಪ್ಪಿದಂ (ಅದ್ಭುತ. ೬-೯೩). [ಬೆಳ್ಳಿ + ಮಾಡ$_1$]

**ಬೆಳ್ಳಿವೆಟ್ಟು, ಬೆಳ್ಳಿಬೆಟ್ಟು, ಬೆಳ್ಳಿವೆಟ್ಟು** (ನಾ). ರಜತಾಚಲ ; ಕೈಲಾಸ ಪರ್ವತ : "ಓಜರಿವೆಟ್ಟೆಂದು ಬೆಳ್ಳಿವೆಟ್ಟಂ" (ಕಬಿಸಾ. ೯೯-೯೩); ಬೆಳ್ಳಗಿಲನುಟ್ಟ ಬೆಳ್ಳಿವೆಟ್ಟದಂತೆ ಬೆಳ್ಳಂಬಟ್ಟೆಯನುಟ್ಟು (ಅಜಿತಪು. ೦೨-೮೬ ವ); ಬೆಳ್ಳಿವೆಟ್ಟಕ್ಕೆ ನಿಚ್ಚಂ ಪಡಿಯೆನಿಸುವುದೆತ್ತಂ ರನ್ನಗಲ್ಲೆಂಬ ಬೆಟ್ಟಂ (ಕಬ್ಬಿಗಾ. ೨೪೩). **ಬೆಳ್ಳಿಬೆಟ್ಟು** : ಬೆಳ್ಳಿಬೆಟ್ಟದೊಡತಿ, ಗೌರಿ, ಬೆಳ್ಳಿಯೊಸಗೆಗೊಸಗೆ ಬೀರಿ ಕಾಯಿ ಕೃಷ್ಣನ (ಹೊಂಗಳು. ೪-೪). **ಬೆಳ್ಳಿವೆಟ್ಟು** : "ಬೆಳ್ಳಿವೆಟ್ಟು ಓಜರಿವೆಟ್ಟು ಪೊಗರಪ್ಪ ರಜತಾದ್ರಿಗಕ್ಕು" (ಕಬ್ಬಸಂ. ೦೦); ಬೆಳ್ಳಿವೆಟ್ಟಂಗ ವರನನುಜ್ಜೆಯನೆಳ್ನಿತ ಮೊಗದೊಯ್ದು . . . ಸದ್ವೃತ್ತಪತ್ಸಲನಲ್ಲವೆ (ಸುರೇಪು. ೬-೩) ; ಇದೆ ಕೊಳಾ ತೋರ್ಪುದಾಕೋರ್ಪುದೊಂದು ದೇಗುಲಂ ಬೆಳ್ಳಿವೆಟ್ಟನ ಪಾಂಗಿಂ (ರಾಜಶೇಖ. ೩೩-೨). [ಬೆಳ್ಳಿ + ಬೆಟ್ಟ]

**ಬೆಳ್ಳಿವೆಟ್ಟು** 'ಬೆಳ್ಳಿವೆಟ್ಟ' ನೋ.

**ಬೆಳ್ಳಿವೆಸ** (ಕ್ರಿ). ೧. ಬೆಳ್ಳಿಯ ಕೆಲಸ. ೨. ಬೆಳ್ಳಿಯಿಂದ ಮಾಡಿದುದು. – ತಯಾರಿಸಿದುದು : ಭೂಪಾಲನ ಸಚ್ಚರಿತ್ರಾಗ್ರುದೊಳಿರ್ದುದು ಭೀರಮೆನಿಸುವ ಬೆಳ್ಳಿವೆಸದ ಸಂಕಲೆಯಾಗಳ್ (ಧರ್ಮ. ೬-೩೩).
[ಬೆಳ್ಳಿ + ಬೆಸ$_1$]

**ಬೆಳ್ಳಿಸು** 'ಬೆಲ್ಲಿಸು' ನೋ.

**ಬೆಳ್ಳಿಹಬ್ಬ** (ನಾ). ಯಾವುದಾದರೂ ಸಂಘ, ಸಂಸ್ಥೆಗಳಿಗೆ ಇಪ್ಪತ್ತೈದು ವರ್ಷ ತುಂಬಿದ ಸಂದರ್ಭಗಳಲ್ಲಿ ಆಚರಿಸುವ ಸಮಾರಂಭ ; ರಜತ ಮಹೋತ್ಸವ : ಕನ್ನಡಸಾಹಿತ್ಯಪರಿಷತ್ತಿನ ಬೆಳ್ಳಿಹಬ್ಬ ವಿಜೃಂಭಣೆಯಿಂದ ನಡೆಯಿತು (ರೂಢಿ). [ಬೆಳ್ಳಿ + ಹಬ್ಬ (< ಪರ್ವ)]

**ಬೆಳ್ಳುಂಬಟ್ಟೆ** 'ಬೆಳ್ವಟ್ಟೆ' ನೋ.

**ಬೆಳ್ಳುಗೊಳ** 'ಬೆಳ್ಗೊಳ' ನೋ.

**ಬೆಳ್ಳುಚಿ** (ನಾ). ಒಂದು ಬಗೆಯ ಸಸ್ಯ : "ಗೂಡೆ ಬೆಳ್ಳುಚಿ [ಪಾಠಾಂ. ಬೆ]ಯರ್ಣೆಯವನಿಯೆನೆ ಕರಿಬೇವು" (ಪಂಚಗಣ. ೪೦-೩೨). [?]

**ಬೆಳ್ಳುಚ್ಚೆ** 'ಬೆಳ್ಳುರ್ಚೆ' ನೋ.

**ಬೆಳ್ಳುಡೆ** (ನಾ). ಬಿಳಿಯ ಬಣ್ಣದ ಉಡುಪು ; ಬಿಳುಪಾದ ವಸ್ತ್ರ : ಹೊಸವಸ್ತ್ರ ಉಡುವಲ್ಲಿ ಹರಿಯ ಬೆಳ್ಳುಡೆಯೆನ್ನಿ (ಕೃಕಂಚ. ೦-೭೦-೨) ; ಉರವು ಪೊರೆಯನು ಕಳಚುವುದಾದರೆ ಉರಗವು ಪೊರೆ ಬಿಡುವ ಹಾಗೆ ಬೆಳ್ಳುಡೆಯಾಗುತಲಿದ್ದವು ಸತಿಯರ ನೀರಾಟವಾಡುವ ಪ್ಯೆಗೆ (ಇಂಚಾತ. ೦೪೪-೬). [ಬೆಳ್$_1$ (< ಬಿಳಿದು) + ಉಡೆ$_2$]

**ಬೆಳ್ಳುಪ್ಪರಿಗೆ** (ನಾ). ಅಮೃತಶಿಲೆಯ ಉಪ್ಪರಿಗೆ ಅಥವಾ ಬಿಳಿಯ ಬಣ್ಣದ ಸೌಧ : ಮಿಸುಪ ಬೆಳ್ಳುಪ್ಪರಿಗೆಗಳೊಳು ಪಚ್ಚೆಯ ಪೊಸತಾದ ಪಟಗಳೊಪ್ಪಿರಲು (ಕಂಸಾ. ೬-೩); ವರ ಮುನಿಪ ನೋಡಿದಾ ಸ್ಫಟಿಕಮಯ ಭಿತ್ತಿಯೊಳು ಸ್ಫುರಿಸುತೊಪ್ಪಿರ್ಪ ಬೆಳ್ಳುಪ್ಪರಿಗೆಗಳನು (ರಾಘಶ. ೬-೬೯).
[ಬೆಳ್$_1$ (< ಬಿಳಿದು) + ಉಪ್ಪರಿಗೆ]

**ಬೆಳ್ಳುರ್ಚೆ, ಬೆಳ್ಳುಚ್ಚೆ** (ನಾ). ಬುದ್ಧಿಯಿಲ್ಲದವನು ; ಬುದ್ಧಿಗೇಡಿ (?) : ನಚ್ಚುವುದೀಯರಸನನುಮುಚ್ಚಂ ಮಿಗಿಲಂಜಿ ತನುಜನಂ ತಟನಿಯೊಳಂದಚ್ಚರಿಯಾಗಿಕ್ಕಿದ ಬೆಳ್ಳುರ್ಚೆಯನಿವನಿರಲಿ ಹರಿಯ ಸಿರಿ ಬೆಳೆಯದುದೇಂ (ಶೀಖಿಪು. ೦೦-೦೦೨). **ಬೆಳ್ಳುಚ್ಚೆ** : ಜರ್ಚಿಸಿ ಪಂಡಿರರ್ಚನೆಯನಾಡಿಸಲಷ್ಟಲೊಡರ್ಚುತಿರ್ಪ ಬೆಳ್ಳುಚ್ಚೆಗೆ ಮತ್ತೆ ಜೈನತನಮೇಕೆವುದವಂ ಜಿನಧರ್ಮ ದೂಷಕಂ (ಧರ್ಮ. ೯೩೯). [< ಬೆಳ್$_2$ ?]

**ಬೆಳ್ಳುಳ್ಳಿ** (ನಾ). (ಸಂಭಾರಪದಾರ್ಥವಾಗಿ ಅಡಿಗೆಯಲ್ಲಿ ಬಳಸುವ) ಬಿಳಿಯ ಬಣ್ಣದಿಂದ ಕೂಡಿದ, ಈರುಳ್ಳಿಯ ಜಾತಿಯ ಒಂದು ಬಗೆಯ ಗಡ್ಡೆ : ಲಶುನ : "ಮಹೌಷಧಂ, ಲಶುನಂ . . . ರಸೋನಕಃ —ಈ ೬ ಬೆಳ್ಳುಳ್ಳಿ" (ಶಾಶರಾ. ೦೦೨) ; ನೋಡಿ ಕನಲ್ದು ಕೆಂಡದ ಮೇಲೆ ಪಟೆಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ (ಶಂಕರಾ. ೦೩-೬೦ ವ); ಅಲ್ಲಮುಸಿನಂ ಶುಣ್ಠಿ ಬೆಳ್ಳುಳ್ಳಿ . . . ಎಂಬಿವು ಮೊದಲಾಗಿ ತೂಗಿ ಮಾಱುವ ಭಣ್ಣಂಗಳ್ಗೆ ಹೇಱಂಗಯ್ದಲಂ (ಎಇ. XIX. ೩೩-೨೯ ; 1135) ; ಬೆಳ್ಳುಳ್ಳಿಯನ್ನು ಸಾಧಾರಣವಾಗಿ ಒಗ್ಗರಣೆ ಚಟ್ನಿಗಳಿಗೆ ಉಪಯೋಗಿಸುತ್ತಾರೆ (ಕಜಿ. ೩೩).
[ಬೆಳ್$_1$ (< ಬಿಳಿದು) + ಉಳ್ಳಿ$_1$./ ತಮಿ. ವೆಳ್ಳುಳ್ಳಿ ; ತುಳು. ಬೊಳ್ಳುಳ್ಳಿ ; ತೆಲು. ವೆಲ್ಲುಲ್ಲಿ]

**ಬೆಳ್ಳೆ$_1$** (ನಾ). ದನಗಳಲ್ಲಿ ಒಂದು ಬಗೆ ; ಬಿಳಿಯ ಬಣ್ಣದ ರಾಸು : ಎಡಗೋಲಿನಲ್ಲಿ ಕಾರಿಯ ಹೂಡಿ ಬಲಗೋಲಿನಲ್ಲಿ ಬೆಳ್ಳೆ [ಪಾಠಾಂ. ಬೆಳ್ಳಿ]ಯ ಹೂಡಿ ಅಡಿಗೆತ್ತುವಂತೆ ಛಾಯೆಂದು ಹೊಡೆಯಲಾಗಿ ಭೂಮಿಯೊಡಗೂಡಿ ಸವೆಯಿತ್ತು (ಸರ್ಪಶ. ೦೦೩-೩೬೬); ಬೆಳ್ಳೆವಿಂದು [ಪಾಠಾಂ. ಬೆಳ್ಳಿಹಿಂಡು]ಗಳಂದ್ರುದೇಶದಿಂ ಹೇಱು ಬಂದೆಳ್ಳ ರಾಸಿಗಳ ತಳ್ಳಿಗರೊಯ್ದು ಗಾಣವಾಡೊಳ್ಳೆತೆನಿಸಿದ ತೈಲ ಕುಂಭಕೋಟಿಗಳ ತಕೆದರು (ಸಿದ್ಧರಾ. ೬-೩೦) ; ಮಲೆವ ಪುಲ್ಲೋರಿ ಬೆಚ್ಚುವ ಬೆಳ್ಳೆ ಬೆದಱಿಸುವ ಚೆಲುವ ಪೈಲ್ಲೋರಿ . . . ನಾನಾಪರಿಯ ಕಬ್ಬಸಿಗಳೊಳಗಾದ ಪಲವು ಪರಿಯೆತ್ತು ತೊಂಭತ್ತಾಱು ಲಕ್ಷ ಮೇಳೈಸಿ ಓಡಿದುವು ಗಲ್ಲಿಕೆ (ಸಿಂಗಿರಾ. ೩೩-೬) ; ಬಟ್ಟಗಡಸು ಕೆಂಡ ಹೂರಿಗ ಕಾರಿಯು ಬೆಳ್ಳೆ . . . ಎಸೆದವು ಪಟ್ಟಿಯ ಸೀರೆಯಂದದಲಿ (ಪಾರದೇಶಾಂ. ೦-೪೦).
[ಬೆಳ್$_1$ (<ಬಿಳಿದು) +–ಎ$_1$. / ತಮಿ. ವೆಳ್ಳೈ ; ತುಳು. ಬೊಳ್ಳೆ]

**ಬೆಳ್ಳೆ$_2$** 'ಬೆಳ್$_2$' ನೋ.

**ಬೆಳ್ಳೆ$_3$** (ನಾ). ಬುದ್ಧಿಯಿಲ್ಲದವಳು ; ದಡ್ಡಹೆಣ್ಣು : ಸಿತಗೆ, ಚದುರೆ . . . ಕಳ್ಳಿ, ಬೆಳ್ಳೆ, ಹೆಡ್ಡೆ, ಎಗ್ಗೆ (ಕಬ್ಬಿಪ. ೦೯೬ ಪ್ರಯೋ).
[ಬೆಳ್$_2$ + –ಎ$_1$]

**ಬೆಳ್ಳೆದೆ** (ನಾ). ಅಂಜುವ ಹೃದಯ ; ಬೆದರುವ ಹೃದಯ : ಪಡೆಯಿಲರ್ . . . ದಡಿಗಳಿಂ ಬರಲು ಬೆಳ್ಳೆದೆಗಳಕ್ಕಾಡೆ (ಶಾಂತೀಶ. ೦೩೬-೩೪೬). [ಬೆಳ್$_2$ + ಎದೆ (< ಎರ್ದೆ)]

**ಬೆಳ್ಳಿಮಣಿಯು** (ನಾ). ಒಬ್ಬಾತನ ಹೆಸರು: ಬಾಣಗುನ್ದೂರಾ ದೇವಡಿಗಳುಂ ಕುನ್ದಡಿಗಳುಂ . . . ಗಣಿಗೂರಾ ನರವೆವರುಂ ಬೆಳ್ಳಿಮಣಿಯರುಂ ಸನ್ದಿಗಾಲಾ ಪುಜ್ಜಿರುಂ ಬಳ್ಳವರುಂ ಪಸುಂಗಾಯ ಕಟ್ಟಾತರು ಬಿರದರುಂ ಇ ಪೊಲನಂ ನಡಯಿಸಿದೋರ್ (ಎಕ. XVI, ಗುಬ್ಬಿ. ೬೩-೩೯; 733). [?]

**ಬೆಳ್ಳಿರಲೆ, ಬೆಳ್ಳಿರಳೆ** (ನಾ). ೧. ಹೆದರಿಕೆಯಿಂದ ಕೂಡಿದ ಜಿಂಕೆ; ಹೆದರಿದ ಮೃಗ : ರಾಜಸುತಸಂದೋಹಂ ಗಱಿ ಸೋಂಕದೆ ಬೆಳ್ಳಿರಲೆಗೆ ಗಱಿಮೂಡಿದ ತೆಱದಿನೋಡಿ ಪೋದತ್ತಾಗಳ್ (ಕಂಠಾಬು. ೩-೫೬); ಪರದೇಶಾಧೀಶ್ವರರೆಮ್ಮರಸನ ಪೆಸರ್ಗೊಂಡೊಡಳ್ಕಿ ಭಯದಿಂದಂ ಬೆಳ್ಳಿರಲೆವೊಲೋಡುವರ್ (ರಣ್ಣಕು. ೪-೨೦೮); ಚಿಲಾತಾಪುತ್ರಂ ಪೊಱಮಟ್ಟುಬ್ಬೆಗದಿಂ ಬೆಳ್ಳಿರಲೆಗೆ ಗಱಿಮೂಡಿದಂತೆವೋಡಿದನಾಗಳ್ (ವೃದ್ಧಾರ. ೩-೨೩). **ಬೆಳ್ಳಿರಳೆ**: ೧. ಪೊಣರ್ದೊಂದೆ ಬಿಲ್ಗೆ ಸಲೆ ಕೊಂಕಣಿಗರು ಬೆಳ್ಳಿರಳೆಯಂತೆ ಬಿಱುತೋಡಲು (ಕಇ. I, ೨೩-೯೭ : 1186); ಕಡುಗರ್ವವೆತ್ತು ಬಿತ್ತರಿಪ ದೀವದೆರಳೆಗಳುಂ ಬೆಳ್ಳಿರಳೆಗಳೆನಿಸಿಯುಂ . . . ಪಳಚ್ಚನೆ ಪಜ್ಜಳಿಪ ಸಾಂದ್ರಚಂದ್ರಾತಪಾಡಂಬರದೊಳ್ (ಶಾಂತೀಶ. ೦೦-೯೭ ವ). ೨. (ಅಲಂ) ಹೇಡಿ; ಅಂಜುಬುರುಕ : ಬೆಳ್ಳಿರಳೆಗಳಪ್ಪ ಲೋಕದ ಜಡಾತ್ಮರನಂಜಿಪನೆಂದು ಧಾರಿಣೀವರವಧು ಕಾಮನಂ ನಗುವ ಭಂಗಿಯೊಳಿರ್ದುವು ವಾರಿಜಾಕರಂ (ರಣ್ಣಕು. ೦೩-೨೩). [ಬೆಳ್$_2$ + ಎರಲೆ]

**ಬೆಳ್ಳಿರಳೆ** 'ಬೆಳ್ಳಿರಲೆ' ನೋ.

**ಬೆಳ್ಳೆರ್ದೆ** (ನಾ). ಬಿಳಿಯ ಬಣ್ಣದ ಎದೆ,– ವಕ್ಷ : ಬೆಳ್ಳೆರ್ದೆಯುಂ ವಾಜಿಯುಂ ಮಣಂ ಸಳ್ಳಸಿತ ಪಾಂಡುರಗಳಂ . . . ಇದುವೆಯುಬ್ರ್ಬು ಧನದಂ (ಜಾತಕ. ೪-೦೦-೦೦೬). [ಬೆಳ್$_1$ (<ಬಿಳಿದು) + ಎರ್ದೆ]

**ಬೆಳ್ಳೆಲೆ** (ನಾ). ೧. ಬಿಳಿಯ ಬಣ್ಣದ ಎಲೆ; ಬಿಳುಪಾದ ಎಲೆ : ವಲ್ಕಲದಿಂ ಸುಂದರಿಯ ತನು ತನ್ನ ಕಾಂತಿಯ ಪೊರೆಯದು ಬೆಳ್ಳೆಲೆಯ ಮರೆಯ ಕುಸುಮದ ತೆಱದಿಂ (ಶಕುಂತ. ೯-೦೯). ೨. (ಉತ್ತಮ ದರ್ಜೆಯ ಒಂದು ಬಗೆಯ ಬಿಳುಪಾದ ವೀಳೆಯದೆಲೆ ; ಬಿಳಿಯೆಲೆ : ಕುಂದಣದಗಡಿನಂತಿರ್ಪ ಬೆಳ್ಳೆಲೆಗಳನೊಂದಱೊಳೊಂದ ಕೇವಣಿಸಿ ಹೊಂದಾವರೆಯಂತ ಪಾಮುಹಸ್ತದೊಳಾಂತ ಚೆಂದವನೇನ ಬಣ್ಣಿಸುವೆ (ವೀರಭದ್ರ. ೦೬-೩೦); ಬೆಳ್ಳೆಲೆಯುಂ ಮಡದೀವ ದಿವ್ಯ ಚಾಮರವನೆ ಬೀಸುವಗ್ಗದ ವಿದಗ್ಧೆಯರೊಪ್ಪಿರೆ ದೇವಿ ರಂಜಿಪಳ್ (ರಾಜಶೇ. ೪-೪೦); ಎಲೆಗೆ ಬೆಲೆಗೆಯ್ಯುದದು ಬೆಳ್ಳೆಲೆಯೋ ಮಾಱೂಳವೆಣ್ಣ ಮಱೆಯೇನುಸಿರಾ (ಶಬ್ದ. ೬-೩೪). [ಬೆಳ್$_1$ (< ಬಿಳಿದು) + ಎಲೆ$_1$./ತಮಿ. ವೆಳ್ಳಿಲೈ]

**ಬೆಳ್ಳೆಲೆಗ** (ನಾ). ಉತ್ತಮವಾದ ಬಿಳಿಯ ವೀಳೆಯದೆಲೆಯನ್ನು ಮಾರುವವನು, — ವಿಕ್ರಯಿಸುವವನು : ಖಗರಾಜನೆಱಕೆಯಕ್ಕೆಲದ ಕೊಟ್ಟಿಗೆ ಕಾಮಾಟಕ್ರಮುಕ ಬೆಳ್ಳೆಲೆಗರು ಜಟ್ಟಿಗ ಗೀತಪಾಠಕರು ಸಟ್ಟಿಗ ಬಲು ಚಿನ್ನವರದರು ಘಟ್ಟಿಪ ಕಟ್ಟಿಗೆಕಾಱರೇಱಿದರು (ವೀರಭದ್ರ. ೩೬-೪೩).
[ಬೆಳ್ಳೆಲೆ + – ಗ$_2$]

**ಬೆಳ್ಳೆಲೆಗವಳ** (ನಾ). ಬಿಳಿಯೆಲೆಯ ತಾಂಬೂಲ : ಪವಡಿಸಿ ಮುಸುಕಿಕ್ಕಿ ಕೈನೀಡಿ ಬೆಳ್ಳೆಲೆಗವಳವ ಕೊಡುತಿಂತು ನುಡಿದ (ಭರತ. ೦೦-೯೩).
[ಬೆಳ್ಳೆಲೆ+ಕವಳ$_2$ (= ಕವಲ)]

**ಬೆಳ್ಳೇಡಿ** (ನಾ). ಏಡಿಯಲ್ಲಿ ಒಂದು ಬಗೆ : ಆ ಗೊರಬುಗಳು ನಾಗಕ್ಕ ಕೂತಿದ್ದ ಪಾಸರೆಯಿಂದಲೆ ಹೊರಟಿದ್ದುವು. ಬೆಳ್ಳೇಡಿ ಹಿಡಿಯು ವುದಕ್ಕೆ! (ಕುಲಶು. ೬೩೩). [ಬೆಳ್$_1$ (<ಬಿಳಿದು) + ಏಡಿ$_1$]

**ಬೆಳ್ವೊಡಲ** (ನಾ). (ವಿಭೂತಿಯನ್ನು ಧರಿಸಿದುದರಿಂದ) ಬಿಳುಪಾದ ದೇಹವುಳ್ಳವನು; ಶಿವ: ಬೆಳ್ವೊಡಲ ಸದ್ಭಕ್ತವತ್ಸಲನಲ್ಲವೆ (ಸುದೇಶ. ೬-೩); ಹರಿಯಿಂದರ್ಚಿಲದೆಲೆ ಬೆಳ್ವೊಡಲನಲ್ಲವೆ ಕೇಳೊಡಂಬಡಿಸುವೆ ಶ್ರುತಿಗಳಿಂದೆ (ಶಿವದಾ. ೦೦-೬೯). [ಬೆಳ್$_1$ (<ಬಿಳಿದು) + ಒಡಲ್ + —ಅ$_7$]

**ಬೆಳ್ವೊರೆ** (ನಾ). ಮೌಢ್ಯದ ಮಾತು : ಇರುಳಿನೂಟಂ ಜೇನು ಮಾಂಸಂ ಸುರೆ ಪರಾಂಗನೆಯಣಬೆ ಕೊಲೆ ಬೆಳ್ವೊರೆ ಮಹಾಮಿಥ್ಯಾಪದಂ ಪರಪೀಡೆ ಜೂಜು . . . ಗಿಣ್ಣಾತ್ಕರದ ದಾನಂ ಬೇಂಟೆ ಪೂವಿನ ಶಾಕ ಮೂಲವ್ರತಂ (ಶಂಕರಾ. ೦೩-೩೦). [ಬೆಳ್$_2$ + ಒರೆ$_4$]

**ಬೆಳ್ವೊಲೆ** (ನಾ). ಒಂದು ಊರಿನ ಹೆಸರು : ಬೆಳ್ವೊಲೆಯ ಬಟ್ಟೆಯು ಪೇರಾಟಿಚ್ಚಿ ಪಳ್ಳಂಬಿಡಿದು ಪೋಗಿ ಪಿರಿಯ ಪಳ್ಳದಳ್ಕೂಡಿ (ಸೌಇಇ. IX-i, ೩೯-೨ ; 10ನೆಯ ಶತ). [ ? ]

**ಬೆಳ್ವೋಕರಿಕೆ** (ನಾ). (ಬಸಿರಿಯರಿಗೆ ಪ್ರಾರಂಭದಲ್ಲಿ ತೋರುವ) ಹುಸಿಯ ಓಕರಿಕೆಯ ಅನುಭವ : ಭುವನದ ವಿಚಾರಕ್ಕೆ ಕೊಕ್ಕರಿಸುವ ಮಹಾದೇವಿಯನು ಬಸುಱೊಳ್ತವೆ ತಳೆದ ದೂಸಱೊಳು ಬೆಳ್ವೋಕರಿಕೆ ತೋಱಿದುದು (ಮದೇಶ. ೦೬-೮). [ಬೆಳ್$_2$ + ಓಕರಿಕೆ]

**ಬೆಳ್ವೋಟ** (ನಾ). ಅಂಜಿಕೆಯಿಂದ ಓಡುವ ಓಟ : ಅಂತು ಬಿಱುತು ಬೆಳ್ವೋಟಮೋಡುವಶನಿಘೋಷನ ಭಯಾತಸಮುಂ (ಶಾಂತಿಪು. ೬-೪೦ ವ); ಅಳ್ಳೊಡೆ ನರನ ಕೂರ್ಗಣೆಯಳ್ಳೇಱಿಂಗಳ್ಕಿ ಬಳ್ಕಿ ಕುರುಬಲಮೆಲ್ಲಂ ಬೆಳ್ವೋಟವೋಡೆ (ಗದಾಯು. ೨೨೪). [ಬೆಳ್$_2$ + ಓಟ]

**ಬೆಱಂಟು** 'ಬಱುಂಟು' ನೋ.

**ಬೆಱಗಾಗುಹ** (ನಾ). ೧. ವಿಸ್ಮಯವಾಗುವಿಕೆ ; ಆಶ್ಚರ್ಯವಾಗುವುದು : "ತಳವಾಳಗು–ಬೆಱಗಾಗುಹಂ" (ಕಬಿರ. ಕಂ. ೨). ೨. ದಿಗಿಲು; ತಳಮಳ : "ತಳವಳವೆನಲ್ಕೆ ತಾಂ ಬೆಱಗಾಗುಹಂ" (ಕಬ್ಬಿಗ. ೬೯).
[ಬೆಱಗು + ಆಗುಹ]

**ಬೆಱಗಿಡು** (ಕ್ರಿ). ಆಶ್ಚರ್ಯಪಡು ; ಬೆರಗಾಗು : ಸುರರು ಬೆಱಗಿಡೆ ದಾಟಿತಲ್ಲಿಂ ಮೇಲೆ ಮೆಲ್ಲನೆ ಜೀವವಾ ಖಳನ (ಕುಮಾರ. ೩-೬-೦೯).
[ಬೆಱಗು + ಇಡು$_1$]

**ಬೆಱಗು**, ಬೆರಗು$_2$ (ನಾ). ೧. ಬಿಗಿದುಕೊಂಡಿರುವಿಕೆ ; ಸೆಡೆತ : ಸುರಭಿಯ ತೊರೆದ ಕುಚಂಗಳ ಬೆಱಗಂ ಬೆರಲೀಸೆ ಪರಮಹಸ್ತಪುಟಾಂತರದೊಳಮೃತಮೆನೆ ಕಱೆದಾ ವರವಧು ಪುತ್ರಾರ್ಥಿ ಪಾತ್ರಶೇಷಮನುಣ್ಬಳ್ (ಧರ್ಮಾಮೃ. ೩-೦೦೯). ೨. ದೇಹವು ಸೆಟೆಯುವಂತೆ ಮಾಡುವ ಒಂದು ಬಗೆಯ ರೋಗ; ಮೂರ್ಛೆರೋಗ : ಕುಷ್ಠ, ಅಪಸ್ಮಾರ, ಬೆಱಗು, ಮಹೋದರ, ಕಾಮಿಲೆ, ಇವಕ್ಕೆ ಆದಿಯಲ್ಲಿ ದಿನಸಾಮ್ಯವಿಲ್ಲದೆ ಶೀಘ್ರದಲ್ಲಿಯೇ ಪ್ರತೀಕಾರ ಮಾಡುವದು (ಕೃದ್ಯಾ. I, ೨೬). ೩. ನಿಶ್ಚೇಷ್ಟತೆ; ಸ್ತಂಭನ : 'ಬೆಱಗುವಡು' ಪರಾ. ೪. ಆಶ್ಚರ್ಯ; ವಿಸ್ಮಯ : "ವಿಸ್ಮಯಃ, ಅದ್ಭುತಂ, ಆಶ್ಚರ್ಯಂ, ಚಿತ್ರಂ-ಈ ೪ ಬೆಱಗಿನ ಪೆಸರು" (ನಾಚಿರಾ. ೯೭); ಬಱಿದೆ . . . ಬೊಗಳುವ ಉನ್ನಿಗಳ ನೋಡಿ ಎನ್ನ ಮನ ಬೆಱಗು ನಿಬ್ಬೆಱಗು ಆಯಿತ್ತಯ್ಯ (ಮಹಾದೇ. ವ. ೯೮-೨೨೩); ಜೋಡರ ಧುರಚಮತ್ಕೃತಿ ಬೆಱಗನಿತ್ತುದು ದೇವಸಂತತಿಗೆ (ಕುಮಾ.ಶ. ೪-೯೬). ೫. (ಮನಸ್ಸಿನ) ಗಲಿಬಿಲಿ; ದಿಗ್ಭ್ರಮೆ; ಗಾಬರಿ : ಆತನ ಪ್ರಾಣೇಶ್ವರಿ ವಜ್ರಮಾಳಿನಿ . . . ನಿಶಿತಾಸಿಧೇನುವಂ ಕಿಟ್ಟು ಬೆನ್ನಟ್ಟಿ ಮುಟ್ಟಿ ಬೆ[ಱ]ಗಿಲ್ಲದಾತನ ಬೆನ್ನಂ ಜನ್ನಿವರವಿಕ್ಕಿದಂತಿರೆ ಪೊಯ್ಯೆ (ಶಾಂತಿಪು. ೪-೯೬ವ) ; ನೇಹದೊಳು ಕೋಪವಂ ನೆನಹಿನೊಳ್ ಬೆಱಗುವಂ ತನುವಿನೊಳ್ಪುಸುಪ್ಪುಮಂ ಬಯ್ತ್ತಿಡುತ ಬಂದು (ಶಿರಾಶ. ದೇ. ೬-೦೦); ಮೋನದೊಳಿರದಿರೆನ್ನಾಣೆನಲು ಬೆಱಗಿನ ಗರದ ಗಾಹಿನಲದ್ದು ಮೋನದೊಳಿದ್ದನಾ ಪಾರ್ಥ (ಕುಮಾ.ಶ. ೦೬ ೬). ೬. ಅಂಜಿಕೆ; ತಲ್ಲಣ; ಭೀತಿ; ತಳಮಳ : ಹೊತ್ತ ದುಗುಡದ ನಿಡುಮುಸುಕುಗಳ ಬಿಗಿದ ಬೆಱಗಿನ ಬಿಟ್ಟ ಕಣ್ಣುಗಳ ಒಡೆಯನಿದಿರಲಿ . . . ಮಿಡುಕದಿರ್ದುದು ರಾಯನೋಲಗದೊಳಗೆ ಪರಿವಾರ (ಕುಮಾ.ಶ. ೨-೦೯); ತಲ್ಲಣಂ ತಳವೆಳಗು . . . ತಳಮಳವೆನಲ್ಕೆ ಸೊಲ್ಲಿಪುದು ಬೆಱಗಪ್ಪ ಭಾವದೊಳು

(ಶಬ್ದಸಂ. ೩೦). **ಬೆರಗು₂:** ೨. ಅಪಸ್ಮಾರ, ಬೆರಗು, ಮಹೋದರ, **ಕಾಮಾಲೆ** ಮುಂತಾದ ರೋಗಗಳು ಕಾಣಿಸಿದಲ್ಲಿಯೇ . . . ಪ್ರತೀಕಾರವಂ ಮಾಡಬೇಕು (ಸಕವ್ಯ. ೨೨). ೪. "ಸೋಜಿಗ, ಬೆರಗು, ಬೆಕ್ಕಸ. . . ಚೋದ್ಯ" (ಶಂಸುತು. ೯೦); ಈ ಸವಿಾಪಸ್ಥ ವಸ್ತುಗಳ ನಡುವೆ ಎಷ್ಟೋಂದು ದೂರವಿದೆಯಲ್ಲ ಎಂಬ ಬೆರಗು ನನಗೆ ಉಂಟಾಗುತ್ತದೆ (ಮೂಕಜ್ಜ. ೧೭).

**ಬೆಱಗಾಗು, ಬೆರಗಾಗು** = ೧. ವಿಸ್ಮಯಪಡು; ಆಶ್ಚರ್ಯವನ್ನು ಹೊಂದು : ತಾರದಿಂ ಮೊಗವುನಿತ್ತೆನುತುಂ ಬೆಱಗಾಗೆ ಕೂಡಿದಳ್ (ಕಾವ್ಯಸಾ. ೯೯೪ ಶೂದ್ರಕ); ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ ದೇಸಿಗಂ ಕಂಡು ಬೆಱಗಾಗಿ (ವಡ್ಡಾರಾ. ೭೬-೧೪); ಘೋರರಕ್ಕಸರೂಪ ನಿಟ್ಟಿಸುತ ಬೆರಗಾದನು (ವೆಂಕಾರಾ. ೩-೦-೩೭); ಮಣಿಪುರದ ಸಿರಿಗೆ ಬೆರಗಾಗಿ ಕೇಳಿದನಂದು ಹಂಸಧ್ವಜನ ಕುರಿತು ನಾಡಿನರಸಾರೆಂದು (ಜೈಮಿನಿ. ೭೨-೧೯೭೪). ೨. ದಿಗ್ಭ್ರಮೆಯಾಗು : ನೋಡಿದೊರೆ ನುಗ್ಗಿದೆವು; ಬೆಱಗಾಗದುಂ ಬೇಂಟೆ ಮುತ್ತಿದೆವು (ಅಂತಿಗೂ. ೨೦-೪೦೭).

**ಬೆಱಗಿನ ರೋಗ** = ದೇಹವು ಸೆಡೆಯುವ ರೋಗ ; ಮೂರ್ಛೆ : ಅಷ್ಟಮದದಿಂದಲಿ ಬೆಱೆತಿರುವಗೆ ಬೆಱಗಿನ ರೋಗ ಬಟ್ಟೆಯಲಿ ಮುಳ್ಳು ಹಾಕಿದವಗೆ ನೇತ್ರವ್ಯಾಧಿ (ಕವಕ. ೧೯೨-೪).

[<ಬೆಱ³./ತಮಿ. ವಿಱೈಪ್ಪು, ವಿಱುಮ್ಮು, ವೆರುವು, ಪೆಱುಪ್ಪು; ತುಳು. ಬೆರಗು; ತೆಲು. ವೆಱಂಗು, ವೆರಂಗು, ವೆರಗು, ವೆರಪು; ಕುೞ. ಬ್ರಾ]

**ಬೆಱಗುಗೊಳ್, ಬೆರಗುಗೊಳ್** (ಕ್ರಿ). ವಿಸ್ಮಯಪಡು; ಆಶ್ಚರ್ಯ ಹೊಂದು; ಬೆರಗಾಗು ; ಇಱಿಯಲೆತ್ತಿದ ಕೈಗಳೆಲ್ಲವ ತಱಿದು ಬಿಸುಟನು ಮರಳಿ ಹುಟ್ಟಲು ಬೆಱಗುಗೊಂಡನು ರಾಮ (ತೊರವೆ. ೪೨-೨); ಗಂಡರು ಬೆಱಗುಗೊಳೆ ಮೊಱೆಯಿಡುತ ಬಾಲೇರು ಬೆದಱಲು ಕೇರಿಕೇರಿಯಲಿ (ಜೈಮಿನಿ. ೩೦-೩೭). **ಬೆರಗುಗೊಳ್ :** ವೀರವಲ್ಗುತವೆತ್ತೆಸೆದ ಬಭ್ರು ವಾಹನನ ಕಂಡು, ಪೋಲ್ವೆಗೆ ಬೆರಗುಗೊಂಡರು ಸೇನೆಯಲಿ ಪಳಬರಾದ ವರೆಲ್ಲರುಂ (ಜೈಮಿನಿ. ೬೦-೨೨೦೭). [ಬೆಱಗು + ಕೊಳ್₁]

**ಬೆಱಗುವಡು, ಬೆರಗುವಡು** (ಕ್ರಿ). ೧. ನಿಶ್ಚೇಷ್ಟತೆಯನ್ನು ಹೊಂದು; ಸ್ತಂಭಿತವಾಗು: ಮನಮುಂ ಒಲೆಯುಂ ತವಕಮುನಿನಿಯನ ಲಾವಣ್ಯಮೂರ್ತಿ ಯೊಳ್ಬೆಚ್ಚು ತದಂಗನೆ ಬೆಱಗುವಟ್ಟು ನಿಲ್ತವಳೆನೆ ರುಚಿರಸ್ತಂಭಭಾವಮಂ ಕಂಡಾಗಳ್ (ಉದ್ಭಟ. ೬-೯೭); ಶಾಂತರಸದೆರೆದಿಂ ಸಮೆದ ಪುತ್ಥಳಿಯೆನ ಲ್ಬೆಱಗುವಟ್ಟಂತಮಿರ್ಪಸಾಕ್ಷಿಯುಗದಿಂ ಮಿಳಿರ್ವ ಶಿವಯೋಗಿಯಂ ಕಂಡು (ಕದ್ಯರಾ. ೩-೩೦). ೨. = ಬೆಱಗುಗೊಳ್ : ತನುವಿನೊಳಿಂಗುವ ಪನ್ನೀರ್ವನಿಯುಂ ಕಂಡಾಳಿಯರ್ಬೆಱಗುವಟ್ಟು . . . ಶಿಶಿರೋಪಚಾರಮಂ ವಿರಚಿಸಿದರ್ (ಉದ್ಭಟ. ೭-೪೮); ಅನಿಮಿತ್ತಬಂಧುವ ನೋಡಿ ಬೆಱಗುವಟ್ಟೇ ನೆಂದಱಿಯದೆ (ಶತ್ಯರಾ. ೦೦-೭೯); ಬೆಱಗುವಟ್ಟಳು ಸೀನದಾರೆಲೆ ಕಿಱುವಾಗಳೆ ಯೆನೆ (ಜೈಮಿನಿ. ೩೦-೩೪). **ಬೆರಗುವಡು :** ೨. ಒಂದು ಮಟ್ಟದ ಓದುಗರು ಈ ಬೃಹದಾಕಾರದ ಕೃತಿಯ ಕಾಲ್ಪನಿಕತೆಯ ನೈಪುಣ್ಯದಿಂದ ಬೆರಗುವಟ್ಟು ಪರವಶರಾಗುತ್ತಾರೆ (ಪ್ರಬುದ್ಧ. XXIV, ಸಂಚಿಕೆ); ಅದನ್ನು ಕೇಳಿ ಶೂದ್ರಕನು ಬೆರಗುವಟ್ಟು ತನ್ನ ಪ್ರಕ್ಕೆ ಅಂದನು (ತಪಶಿ. ೪೭).

[ಬೆಱಗು + ಪಡು₁]

**ಬೆಱಗುವಡೆ** (ಕ್ರಿ). = ಬೆಱಗುಗೊಳ್ : ಬೆಱಗುವಡೆದರು ಪಾಂಡವಾದಿ ಗಳುರುಮುದವಸಾರೆ ತಳೆದು (ಜೈಮಿನಿ. ೩೭-೭೭). [ಬೆಱಗು + ಪಡೆ₁]

**ಬೆಱಗುವೆಱು** (ಕ್ರಿ). ಆಶ್ಚರ್ಯಪಡು; ವಿಸ್ಮಯ ಹೊಂದು : ಭೂವಳ ಯಾಧಿಪಂ ಬೆಱಗುವೆತ್ತು ಮುದಂ ಪೆಱಪಿಂಗಿ ಪಂದೆಯುಂ ಪಾವಡರ್ದಂತೆ ತೊಟ್ಟನೆ ಕಟಲ್ದು (ಧರ್ಮಾ. ೦೦-೦೦೦); ಅರ್ಜುನನು ಬೆಱಗುವೆತ್ತೋದಳವಡದ ಮಟುವಿನಂತಿರ್ದನಾಹವದೊಳು (ಕೃಷ್ಣಾ. ೦೩-೦೪). [ಬೆಱಗು + ಪೆಱು₁]

**ಬೆಱಗೊಂದು** (ಕ್ರಿ). = ಬೆಱಗುಗೊಳ್ : ಸಾಂಗದಿಂ ಮಾಡಿದ ಬಹು ಪದಾರ್ಥಂಗಳಂ ಹಿರಿದೋಗರಂಗಳ ಹಾಂಗೆ ಸಮೆಯಲು ಗೌರಿಯಚ್ಚರಿವಟ್ಟು ಬೆಱಗೊಂದಿ (ಬಸವಪು. ೬-೪೪). [ಬೆಱಗು + ಒಂದು₁]

**ಬೆಱಟೆ** 'ಬಱಟೆ' ನೋ.

**ಬೆಱಟು₁** 'ಬಱುಂಟು' ನೋ.

**ಬೆಱಟು₂** (ನಾ). ಬೆರಳಿನಿಂದ ಕೆದಕಿ ನೋಡುವಿಕೆ : ಕೈಯೊಳಗಣ ಬೆಱಟು ನಿಲ್ಲದನ್ನಕ್ಕ ಹೃದಯದ ಕಾಮ ಉಡುಗದನ್ನಕ್ಕ ವಿರಕ್ತಿಕೆ ಎಲ್ಲರಿಗೆಲ್ಲಿ ಯದೋ (ಮಹಾದೇ. ಐ. ೧೩೩-೩೦೬). [<ಬಱುಂಟು]

**ಬೆಱಟುಗೊಳ್** (ಕ್ರಿ). ಬೆರಳಿನಿಂದ ಕೆದಕು : ಗೋರಿಕಲ್ಲೊಳಗೆ ಚಿಂತಾ ಮಣಿಯನಱಸಿ ಬೆಱಟುಗೊಂಡವನಂತೆ (ಅದವ. ವು. ೬೪-೧೩೭).

[ಬೆಱಟು₁ ( < ಬಱುಂಟು) + ಕೊಳ್₁ ]

**ಬೆಱಣೆ** ' ಬಱಟೆ ' ನೋ.

**ಬೆಱಣೆ** ' ಬಱಟೆ ' ನೋ.

**ಬೆಱತ** ' ಬೆಱ³ ' ಪರಾ.

Δ**ಬೆಱಸು** ' ಬೆರೆಯಿಸು ' ನೋ.

**ಬೆಱಳಿ** ' ಬಱಟೆ ' ನೋ.

**ಬೆಱಳಿವಲ್** (ನಾ). (ಆಲಂ) (ಬೆರಣಿಯಂತೆ) ಅಗಲವಾದ ಹಲ್ಲು : ದೊಡ್ಡ ಹಲ್ಲು : ಬಿಡುವಾಯ್ ಮಿಱ್ಕುದ್ದಮೂಗಿರ್ಪೊಸಡು ಬೆಱಳಿವಲ್ ಕೊಂಕುಮೂಗಬ್ಬಿ ಕಣ್ಗಳ್ . . . ಅಸಿಯ ಕುಱುನೊಸಲ್ ಕೂಡೆ ನಿರ್ಭಾಗ್ಯಯಕ್ಕುಂ (ಲೋಕೋಪ. ೦೧-೩೬). [ಬೆಱಳಿ (<ಬಱಟೆ) + ಪಲ್]

**ಬೆಱ³, ಬಿಱು₁, ಬೆರೆ₂** (ಕ್ರಿ). ಬೆಱತ (ಭೂತಕೃ)ಬಿಱಿತು, ಬಿಱುತು, ಬಿಱುತ್ತು, ಬೆಱೆತು (ಭೂತನ್ಯೂ) ೧. (ಚಳಿ, ಗಾಳಿ, ಮಳೆ, ಸಾವು ಇತ್ಯಾದಿಗಳಿಂದ ದೇಹವು) ಸೆಡೆದುಕೊಳ್ಳು; ಮರಗಟ್ಟು; ಬಿಗಿದು ಕೊಳ್ಳು : ದಕ್ಕ ನುಂಗಿದಂತೆ ಬೆಱೆತುಕೊಂಡರಬೇಡ (ಬಸವ. ೦೯೯); ದೇವಾ ಲಯದೊಳಗೆ ಬಡತಪಸ್ವಿಯು ಬೆಱತ ಪೆಣನದೆ ಕೆಡೆದು ಬಾತಿದ್ದುದು (ಬಸವ. ೩೨-೩೨); ತಾಪಸಂ ಬೆಱೆತು ಬಿದ್ದಿಹ ತಂದೆ ಮಕ್ಕಳಂ ಕಂಡು ಹಮ್ಮೈಸಿ ವಿಸ್ಮಿತನಾದನು (ಕೃಷ್ಣಾ. ೩೦-೭೩). ೨. ಕಂಗಾಲಾಗು ; ಕಂಗೆಡು : ಬೆಱೆತುಱಿದೆನಾಗಿಯುಂ ತನು ಕಿಱಿದಾಗಿಯುಂ ಮಾತ್ರವಾಯು ಮುಂಟಾಗಿಯುಂ ಬೇಣಾಱಿಯುಂ ಕಣಂ ತಂದೆಯು ಗಱಿಯೊಳಗಿರ್ದ ವನೆನೆನ್ನ[ನಂದು ನೃಶಂಸಂ] (ಕಾದಂಪೂ. ೧೯೩); ಬೆಱೆತು ಬಿಬ್ಬೆಱಗಾದ ಕೈಯುಂ ಕಾಲುಮನುಡುಂಗಿ ಕುಸುಂಗಿ ಕುಳ್ಳಿರ್ದ ಕಿರಾತನನಾ ಮರ ದೊಳಿರ್ಪ ಕಪೋತಶಿಖಾಮಣಿ ಕಂಡು (ಶಂಕಕಂ. ೨೪೩-೦೩). ೩. ಜಂಬ ಪಡು ; ಸೊಕ್ಕು ; ಗರ್ವಿಸು : "ಬೆಱ³_ಅಹಂಕಾರಭಾವೇ (ಗರ್ವಪಡು)" (ಶಮ); ಜಂಗಮವ ಮುಂಚೆದೆ ದಿಟ್ಟತನದಲ್ಲಿ ಬೆಱೆತು ನಿಂದಿರ ಲಮ್ಮೆನು (ಬಸವ. ೩೯೭); ತಾಗುಂದಟ್ಟಿನ ದಾಮಂಪಱಿಯದೆ ನಿನ್ನ ಕರೆವರೆ ಕೃಷ್ಣ ಬೆಱತೆಯಾಲ (ಕುಮಾರ. ೬-೩೨); ಇಂತು ರನ್ನಬಂಡಾರಿಯನೆ ಆಯೊದ್ದಬಿಲ್ದು ಬೆರೆದು ಬೆಱೆದಿರ್ಪ ನೀರವಣ್ಣ ಕಡುಬಿಸ್ಮೆಗೆ ಸೋಜಿಗಂ ಗೊಂಡು (ರಾಜಶೇಖ. ೬೦-೨೨). **ಬಿಱು₁ :** ೨. ಎರ್ದೆಗೆಟ್ಟರಣ್ಯದೊಳ್ ತಿರ ತರುತಿರ್ದ ಕಣ್ಬಡಿಗರಿನ್ ಮಗುಟ್ದುಂ ಬಿಱುತೋಡಿ ಬೇಡರೊಳ್ ನೆರೆದಿರಲಲ್ಲದೊಡ್ಡಯಿಸಿ ರಾಜ್ಯದೊಳೇಂ ನೆರೆಯಲ್ಕೆ ತೀರ್ಗುವೋ (ಶಬರ. ೬-೬೩); ಕೆಲವು ಪಾಯಸಂಗಳ್ ಬಿಱೆತೋಡಿ ಕಾಡೊಳ್ಕೊಡಿದರ್ವೆಲ್ಲಂ ಬಂದು (ಶಾಂತಿ. ೨೦೩-೦೭) ; ಚಾಪವುಂ ಪಾಱುಗಳಪ್ಪ ಭೂಪರಂತರದೆತ್ತುತೆ . . . ನೆತ್ತರಂ ಕಾಱ ಬಿಱುತ್ತು ಪೋಗೆ (ಚಂದ್ರಪ್ರ. ೬-೪೭) ; ಜಗಜ್ಜನದ ಜಾಡ್ಯತಮಂ ಬಿಱೆತೋಡೆ . . . ಉದಯ ಶೈಲಮನೇಱಿದನಂಬುಜಪ್ರಿಯಂ (ಚಕೇಶ. ೭-೦೦೬). **ಬೆರೆ₂ :** ೩. ಸೀಳು ದಾರಿಯ ಶಾಸ್ತ್ರವಿಚಯದ ಬೇಳುವೆಗೆ ಬೆರೆಯದೆ . . . ಷಟ್ಟಮಾಧಿಯ

ನ್ನೆದಿ ಬದುಕು (ಗಗಣ. ೦೨-೬); ಎಲೆ ಕಾಲುರಿಚ ಬೆರೆಯದಿರು (ಉಜಕಾ. ೦೯-೨). [ದೇ.॥ ತಮಿ. ವಿಱ್ಱೈ; ಮಲ. ವಿಱು]

**ಬೆಱ್ತು** ' ಬೆಱ್ ' ಪರಾ.

**ಬೆಱಿಪು** (ನಾ). ಸೆಕೆ : ತೊರೆವುಗುವ ಬಾಷ್ಪವಾರಿಯಿನೆಱಂಕೆಗಳ್ ನಾಂದು ಮಗುಟ್ ವಿರಹಾನಲನಿಂ ನೆಱ್ ಬೆಱಿಪು ಪಾಱ್ ಪಡನೇಸಱೊಳಿರ್ದು ವಗಲ್ದು ಚಕ್ರವಾಕದ್ವಂದ್ವಂ (ಕಶ್ಮಾಕು. ೦೯೦ ಕೃಯೋ).
[ ಬೆಱ್ + -ಪು₂./ತಮಿ. ವಿಱ್ಪ್ಪು ]

**ಬೆಟಂಬಳ್ಳಿ** (ನಾ). ಒಂದು ಊರಿನ ಹೆಸರು : ಪುತ್ತೂರ ಕೊಙ್ಗಣಿ ಸಾಮಿಯಗೆ ಬೆಟಪ್ಪಳ್ಳಿಯೊಳ್ ರಾಜಮಾನ ಮೂಗಣ್ಣುಗಂ (ಎಕ. X, ಮುಳಬಾ. ೦೦೨-೬; ಸು. 880). [? + ಪಳ್ಳಿ₁]

**ಬೆಟಸು** (ಕ್ರಿ). (?) : ಕೆಡೆ ಬೆಟಸುವೇಟ್ದೋರುಂ ಕಿಡಿಸಿದೋನುಕ್ಕೊಟಿ ×× ಬಾರಣಕಾಸಿಯುಂ ಳ್ಳಾಸಿರ್ಪ್ಪಪಾರ್ಪ್ಪರುಂ ಸಾ ××× ಕವಿಲೆಯುಂ ಕೊನ್ದ ಕೊಲೆವಯ್ದುಗೆ (ಎಕ. VI, ಕಡೂರು. ೦೯೩-೯ ; ಸು. 750). [ ? ]

Δ**ಬೆಟ್ಗೆಱ್** 'ಬೆಳ್ಗೆಱ್' ನೋ.

Δ**ಬೆಟ್ಟು** 'ಬೆರ್ಚು₁' ನೋ.

**ಬೆಟ್ರ** (ನಾ). (?) : ಬೆಟ್ರಯ ಛತ್ರದೊಳ್ ನೂಱುಛತ್ರಮುಮಂ ... ಬಿಟ್ಟರ್ (ಎಕ. I (R), ೯೬-೯ ; 890).
[P ಇದು 'ಬೆಳ್ಳಿಗೆ' ಎಂಬುದರ ಅಪಲಿಖಿತವಿರಬಹುದೆ ?]

Δ**ಬೆಟ್ದಲೆ** 'ಬೆದ್ದಲ್' ನೋ.

Δ**ಬೆಟ್ದಲೆ** 'ಬೆದ್ದಲ್' ನೋ.

**ಬೆಟ್ಟು** (ನಾ). ವಂಶ; ಕುಲ : ತಳ್ಳಿಱಿದಸುಂಗೊಳ್ವನ್ನೆಗಂ ಕಾದಿ ತಾಂ ಬೆಟ್ಟುಂ ಕೆಟ್ಟಿಕೆ ಸೆಸ್ಸದಕ್ಕೆ ರಣದೊಳ್ಪಾಸಿರ್ಪ್ಪರು ಕೊಂಗನಾಡೆಟ್ಟುತ್ತುಂ ವಯಗೆಯ್ದುಂ (ಎಕ.V(R), ಕೃಕೃಪ. ೪೧-೯ ; ಸು. (10ನೆಯ ಶತ).
[←ತಮಿ. ವಿಟುಪ್ಪು]

Δ**ಬೆಟ್ವಲ** ' ಬೆಳ್ವಲ ' ನೋ.

**ಬೇ₁**, ಬೆಯ್, ಬೇಯು (ಕ್ರಿ). ಬೆಂದ (ಭೂತಕೃ), ಬೇವ (ವರ್ತಕೃ). ಬೆಂದು (ಭೂತನ್ಯೂ). ೧. ಸುಡು ; ದಹಿಸು : "ಬೇ – ದಾಹೇ (ಸುಟ್ಟುಹೋಗು)" (ಶಮಧಾ) ; ಬೇವ ಶವಸಂಘಾತಂಗಳಂ ಚಕ್ಕು ಮೊಕ್ಕೊಂಪಾಗಳ್ ಕಡಿದುಗ್ರಭೂತನಿಕರಂ ಕೆಯ್ ಬೇಯೆ ಬಾಯ್ ಬೇಯೆ ತಿಂಬಂದಂ ತನ್ನ ಮನಕ್ಕಗುರ್ವಿಸುವಿನಂ ದುರ್ಯೋಧನಂ ನೋಡಿದಂ (ಕಂಪಭಾ. ೦೩-೬೦) ; ಬೆಂದ [ಪಾಠಾಂ. ಹುರಿದು ಬಿತ್ತಿದ] ಬೀಜಂ ಪುಟ್ಟದು (ಕಂಶತಂ. ೬೩-೯). ೨. ಕುದಿದು ಪಕ್ವವಾಗು : ಅಕ್ಕಿಗಚ್ಚಂ ಬಸಿದು ತಿಳಿನೀರನೊಲಿಗೆತ್ತಿ ಕಳಸಿಯಕ್ಕಿಯ ಹಾಕಿ ಬೇವಾಗ ಕಳಿಯುನೆಱಿದು ಬಳಿಕ ಬೇವಾ ಗಂಜಿಯ ಬಸಿದುಕೊಂಡು ಮುಚ್ಚುಳನಿಕ್ಕಿ . . . ಹೊಂಗಿಸಿ ಕೊಂಡು ಮೃದುವಾಗಿ ಮಾಡಿದುದು ತಾ ಶುದ್ಧ ಪುಪ್ಪೋದನಂ (ಸೂಶಚ. ೩-೨). ೩. (ಅಲಂ) ಸಂಕಟಪಡು ; ಯಾತನೆಪಡು ; ನರಳು : ಮರ ವಟ್ಟು ಉಡದೆ ಕಲ್ಪಮಹೀಜಂ ನಿಂದಪು ಜಠರಾನಲನಿಂ ಬೆಂದುವು ತನು ಬಾಟ್ಟುಪಾಯವಾಪುದು ದೇವಾ (ಆಪು. ೬-೬೪) ; ಅಳುರುತ್ತು ಮಿರ್ಪ ಮದನಾನಳನಿಂದೆತಂತು ಬೇವುದನಿತಂತತಿನಿರ್ಮಳಮುಪ್ಪುದು ಲಾವಣ್ಯಂ (ಕಾವಂಲು. ೩೨೭) ; ರಾಜೆಯೊಳ್ಬೇವಂಗೆ ದಿವ್ಯೌಷಧಂ . . . ಗಡ ಕೈಸಾರ್ದೊಡೆ ಭಾವಿಪಂದವನೆ ಧನ್ಯಂ (ರಶೂರಾಮು. ೩-೦೭) ; ಬೆಂದೊಡಲ ಹೊರೆವುದಕ್ಕೆ ನಾನಾಱ್ (ಪಂಹುರೇ. ಐ. ೦೩-೦೬). ೪. ನಾಶವಾಗು ; ಹಾಳಾಗು ; ಅಳಿವನ್ನು ಹೊಂದು ; ಅಳಿ : ನೆನಹು ಸತ್ತಿತ್ತು ಭ್ರಾಂತು ಬೆಂದಿತ್ತು (ಶಿವಶಂ. ೬೮-೨೯೯) ; ಬೆಂದುದೊಳತೋಟಿಯಲಿ ಕೌರವವೃಂದ (ಕುವ್ಯಾದ್ರೋ. ೦೫-೦೦) ; ಇಂದು ನಿಮ್ಮಂಘ್ರಿಯ ಕಂಡು ಮದ್ಭವಬೀಜ ಬೆಂದುದೇವರು ದ್ವಿಜೋತ್ತಮರು (ಷೋಪಕ. ೪೧-೬೦).
**ಬೆಯ್** : ೧. ವಿರಹಾನಲನಳುರೆ . . . ಕಾಯ್ಪಿಂದುರಿಯುತ್ತುಂ ಬೆಯ್ದು ಶೈಲಮಿರ್ಪಂತಿರ್ದಂ (ರಶೂರಾಮು. ೩-೩೨). ೩. ದಿವದೊಳ್ ಭೋಗಿಸೊಡಂ ಮಹಾನರಕದೊಳ್ ದುಃಖಾಗ್ನಿಯಿಂ ಬೆಯ್ವೊಡಂ . . . ಒರ್ವನೆ ಬೆಯ್ಯುಗುಂಬ ಜನರ ಶ್ರೀವಾಕ್ಯಮಂ ನಂಬಿದೆಂ (ರಶೂರಾಮು. ೩-೬೦).
**ಬೇಯು** : ೧. ಉರಿಯೊಳಗೆ ಪತ್ರಂಗಳಂ ಹಾಯ್ಕಿ ಕರವನೆತ್ತದ ಮುನ್ನ ಬೆಂದಿತ್ತು (ಐಸಪು. ೫೦-೩೬) ; ನಿದಾಘಸಮಯದ ಬಿಸಿಲ ಬೇಗೆಗೆ ಬೆಂದು ನೆಲನುಸ್ಸಿ ಸಿತಲ್ಕೆ ಕಡುಗಾದ ಕಾವಲಿಯಂತೆ (ಕೂಕರಾ. ೨-೪-೦೫). ೨. ಪಾತ್ರೆ ತುಂಬ ನೀರಿಟ್ಟು ಅಕ್ಕಿ ಹಾಕಿ ಬೆಂದ ಅನಂತರ ನೀರನ್ನೆಲ್ಲ ಬಸಿದು ತೆಗೆಯುವುದು ಸಾಮಾನ್ಯವಾಗಿ ಅನ್ನ ತಯಾರಿಸುವ ವಿಧಾನವಾಗಿದೆ (ಅಡುಗೆ. ೭೪).
[ದೇ.॥ ತಮಿ. ಮಲ. ವೇ ; ತುಳು. ಬೇಯು ; ಕೊಡ. ಬೆಯ್ ; ತೆಲು. ವೇಗು ; ಕೋತ. ವೆಯ್ ; ತೊದ. ಪೊಯ್ ; ನಾಯ್ಕಿ. ವೀ ; ಪರ್ಜಿ. ವೆಪ್ ; ಕುಇ. ವೇವ ; ಕುರುಖ್. ಬೇಯಿನಾ]

**ಬೇ₂** (ಕ್ರಿ). ಬೇತು₁ (ಭೂತನ್ಯೂ). ದೈನ್ಯದಿಂದ ಅಥವಾ ಆರ್ತತೆಯಿಂದ ಬೇಡು: ಕೇಳುವನಿಯಲಿ, ಬೇತು, ಬಿಸುಸುಯ್ಯುತ, ಇನ್ನೊಬ್ಬ ನೊಲುಮೆಯನು ನಾನು ಹಾಡಿದ ಬಗೆಮ ನನ್ನೊಲುಮೆಬೇಗೆಯನು ತೆರೆದರುಹಿತು (ಇಂಗೀತ. ೪೩-೦೦).
**ಬೇತುಕೊಳ್ಳು**=ದೈನ್ಯದಿಂದ ಕೇಳಿಕೊಳ್ಳು : "ಸ್ವಾಮಿ, ಸ್ವಾಮಿ, ದಿನಾಲೂ ಒಂದು ಗಂಟೆಯಾದರೂ ಪ್ರಾಕ್ಟೀಸು ಮಾಡಿಕೊಳ್ಳೋ" ಎಂದು ರಾಜಂ ಅವನನ್ನು ಬೇತುಕೊಂಡ (ಶ್ರಾಬಸ್ಸೇ. ೦೬೬). [ ? ]

**ಬೇ₃**— (ಉಪ). ಇಲ್ಲದುದು ಎಂಬ ಅರ್ಥವನ್ನು ಕೊಡುವ ಒಂದು ಉಪಸರ್ಗ : 'ಬೇದಿರುಸು' ಪರಾ. [← ಪಾರ. ಹಿಂ. ಬೇ]

**ಬೇಅಬರು** (ನಾ). ಅವಮರ್ಯಾದೆ ; ತಿರಸ್ಕಾರ : " ಅವಮಾನ " (ಜಾಪಕೋ. ೨೯) : ಕಾಟಪ್ಪನವರ ಒಬ್ಬ ಸಭ್ಯಗೃಹಸ್ಥನ ಬೇಅಬರು ಮಾಡ್ತಾ ಇದ್ದೀರಿ ನೀವು (ಜಾಂಜಾಮು. ೬೯).
[← ಪಾರ. ಹಿಂ. ಬೇಆಬರೂ; ಮರಾ. ಬೇಅಬರೂ, ಬೇಅಬ್ರೂ]

**ಬೇಅಸಲ್** (ನಾ). ಆಧಾರವಿಲ್ಲದುದು ; ಸುಳ್ಳು : ಇಂಗ್ರೇಜಸರಕಾರದ ಸೀಮೆ, ಮೈಸೂರುಅರಸಿನ ಸೀಮೆ ಜಾಗದಲ್ಲಿ ಇದ್ದು, ನಿಮ್ಮ ಸೀಮೆಗೆ ಸಮೀಪವಾಗಿ ಇದ್ದರೆ, ತಮ್ಮ ಮನಸ್ಸಿನ ಅಂದೇಶ ಭಾವನೆ ಬೇಅಸಲ್ ಆಗುತ್ತಿತ್ತು (ರಾಕೇಂದ್ರ. ೦೯೪) ; ಮೈಸೂರುಅರಸಿನ ಸೀಮೆ ಜಾಗಾದಲ್ಲಿ ಇಂಗ್ರೇಜಬಹಾದ್ದೂರಕುಂಪನಿಸರಕಾರದ ಸೀಮೆ ಆಗಿ ಇದ್ದರೆ, ತಮ್ಮ ಯೋಚನೆಗೆ ಬೇಅಸಲ್ ಆಗುತ್ತಿತ್ತಷ್ಟೆ (ರಾಕೇಂದ್ರ. ೦೯೫).
[←ಹಿಂ. ಬೇಅಸಲ್]

**ಬೇಇಮಾನ**, ಬೇಮಾನ (ನಾ). ನಂಬಿಕೆಗೆ ಅರ್ಹನಲ್ಲದವನು ; ಅಪ್ರಮಾಣಿಕ : ಕಾಲಗತಿಯಿಂದ ಸಂಭಾಜಿಯು ವಧೆಯ ನಂತರ ಸೂರ್ಯಾಜಿ ಬೇಇಮಾನನಾದ (ಪಂಶಾ. ೦೦). **ಬೇಮಾನ** : ನೀವಾದರೆ ಮುಸಲ್ಮಾನಪಾದುಷಹರು ಹೀಗೆ ಹಿಂದೂ ಬೇಮಾನನೊಂದಿಗೆ ಸೇರುವುದು ಸರಿಯಲ್ಲ (ಬಕೈರು. ೯).
[ ←ಪಾರ. ಹಿಂ. ಬೇಈಮಾನ್ ; ಮರಾ. ಬೇಇಮಾನ್ ]

**ಬೇಂಕು** 'ಬ್ಯಾಂಕು' ನೋ.

**ಬೇಂಗಪಲ್ಲಿ** (ನಾ). ಒಂದು ಬಗೆಯ ದೊಡ್ಡಹುಲಿ : ಒಳೆದ ತಿಂಗಳಲ್ಲಿ ಒಂದು ಅಡ್ಡಬಲಿಪ್ಪನೋ, ಬೇಂಗಪಲ್ಲಿಯೋ ಒಬ್ಬ ಗೌಡನ ತೋಳನ್ನು ಕಚ್ಚಿ ಹರಿದುಬಿಟ್ಟಿತಲ್ಲ (ಬಟ್ಟಿಜೀ. ೨೨). P ಇದು ತಮಿಳಿನ 'ವೇಙ್ಕೈ' ಎಂಬ ಶಬ್ದಕ್ಕೆ 'ಪುಲಿ' ಎಂಬುದು (ಒಂದೇ ಅರ್ಥದ ಎರಡು ರೂಪಗಳು) ಸೇರಿ ಉಂಟಾದ ಶಬ್ದರೂಪವಿರಬಹುದು.
[ದೇ.॥ ತಮಿ. ವೇಙ್ಕೈ ; ಮಲ. ವೇಙ್ಙ ; ತೆಲು. ವೇಗಿ. /ಸಂ. ವ್ಯಾಘ್ರ]

**ಬೇಂಟ**, ಬೇಟ (ನಾ). ೧. ಹೆಣ್ಣುಗಂಡುಗಳಲ್ಲಿ ಪರಸ್ಪರ ಉಂಟಾಗುವ ಮೋಹ; ಪ್ರಣಯ ; ಪ್ರೀತಿ : ಆ ಸ್ವಯಂಪ್ರಭೆ ಲಲಿತಾಂಗನಳ್ದೆರ್ಗೆ ತೊಟ್ಟನೆ ಬೇಂಟಮೆ [ಪಾಠಾಂ. ಬೇಟಮೆ] ಪುಟ್ಟೆ ಪುಟ್ಟಿದಳ್ (ಆದಿಪು. ೨-೬೩); ಜವ್ವನೆಯ ಮೊಲೆಯಂತೆ ಬೇಂಟದ ಕೊಂಡಾಟದಂತೆ ಮಧ್ಯಾಹ್ನದರ್ಕನಂತೆ . . . ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೬-೦೨೨) ; ರೂಪಂ ಕರಂ ಮೆಚ್ಚುಯುಂ ತಲೆಯಂ ತೂಗದೆ ಪಾಂಥರೀಂಟೆ ವಿಕಸತ್ತೃಷ್ಣಾತುರರ್ ಚಿತ್ರಭೂತಲದೊಳ್ ನಾಂಟಿದ ಬೇಂಟಮೋಂ ಬಗೆಗೆ ನೀರ್ವೊಯ್ವಂತೆ ಭೃಂಗಾರಶೀತಲತೋಯಂ ಗಳನಾಂತು ಪಾಣಿತಳದೊಳ್ ಪೊಯ್ವರ್ ಪ್ರಪಾಕಾಂತೆಯರ್ (ಲೀಲಾವ. ೬-೦೨೯). **ಬೇಟ** : ೧. ಬಗೆಯೋಳ್ಪೇಟದ ಬೀಜಮಂ ತಳಿದು ನೀರ್ವೊಯ್ವಂದದಿಂ ತೋಳ ಸುಣ್ಣೊಗರ್ಗಳ್ಸೋರ್ಚಿನಪೊತ್ತಿ ತಣ್ಗಳಸಮಂ ನೀರ್ವೊಯ್ವುದುಂ (ಮಲ್ಲಿಪು. ೨-೨೯) ; ನೋಟ ಪತ್ತಲು ಮನದ ಬೆಸುಗೆಯು ಬೇಟವಿತ್ತಲು . . . ನೋಟಕರಿಗರಿದಾಯ್ತು ಭಾವಿಸೆ ಬೆಡಗು ಮಾಯೆಯಲಿ (ತ್ರಿಶಂಕು. ೬-೨೪) ; ನೆಲನ ಬೇಟವ ಬಿಸುಟು ಜೀವದಲುಳಿದೆ ತೊಲಗೆನೆ ಪವನಸುತ ಕಳಕಳಿಸಿ ನಗುತವೆ ಕೌರವೇಂದ್ರಂಗೆಂದನುತ್ತರವ (ಕುಮಾವ್ಯಾ. ೩-೦೨). ೨. ಆಕರ್ಷಣೆ; ಸೆಳೆತ : ಬೇಟವಿಲ್ಲದ ಬೆಲೆವೆಣ್ಗಳಿಲ್ಲ (ಕನ್ನಡಿಗ. ೨೬); ನೋಟದಲಿ ಮಾತಾಡಿ ಪುರ್ಬಿನ ಬೇಟದಲಿ ಬಳ್ಕಾಡಿ . . . ಸರ್ವಸ್ವವನು ನೆಱೆ ಕಪರಿ ಗೋಟುಗೊಳಿಸುವ . . . ಬೇಟಕಾತಿಯರೊಪ್ಪಿದರು (ಕೊರಟಾ. ೧-೩-೩೦) ; ಕಡೆಗಣ್ಣು ಸವಿನುಡಿ ನಿಡುಹುಬ್ಬಿನ ಬೇಟ ಬಡನಡು ಕಡುನಿತಂಬಗಳ . . . ಮುದ್ದುಮಡದಿರನ್ನೆಯುರ್ಕೆದಿದರು (ಕಂಸವ. ೨೦-೬೩). ೩. ಆಸೆ ; ಬಯಕೆ: ಬೇಟಂ ಲೇಸು ಕಾಡುವುದರಿದೆಂಬಂತೆ ಕೊಲೆ ಲೇಸು ಕಾವುದರಿದೆಂಬಂತೆ . . . ಸಂಸಾರದ ಸುಖಂ ಲೇಸು ಮೇಗಣ ನರಕದುಃಖಂಗಳರಿಯವು (ಧರ್ಮಾಮೃ. ೮-೬೦). [ದೇ.॥ ತಮಿ. ವೇಟ, ವೇಟ್ಕೈ, ವೇಟ್ಪು; ಮಲ. ವೇಳ್]

**ಬೇಂಟಂಗೊಳ್**, ಬೇಟಗೊಳ್ (ಕ್ರಿ). ಹೆಣ್ಣುಗಂಡು ಪರಸ್ಪರವಾಗಿ ಪ್ರೀತಿಯನ್ನು ಹೊಂದು ; ಪ್ರಣಯದಲ್ಲಿ ಉತ್ಸಾಹವನ್ನು ಹೊಂದು : ಆನೋರ್ವಳ್ಗೆ ಬೇಂಟಂಗೊಂಡಿರ್ದೆಂ (ವಡ್ಡಾರಾ. ೦೩೦-೦೦). **ಬೇಟಗೊಳ್** : ಸ್ಮರಿಸಿ ಹಲವುಕಾಲ ಬೇಟಗೊಂಡಳಲನೊಂದಿರುಳ ಭೋಗದೊಳು ತೀರ್ಚಿದರು (ಭಾಷ. ೪೦-೦೬೯) ; ತಳೆದುತ್ಕಲಿಕೆಯನಾದಂ ಬೆಳತರ್ಕದುಬೇಟಗೊಂಡಳಂತೆಸೆವುದ್ಯಾನಲತೆಯನೀಕ್ಷಿಸಿ ನಾಂ ಪಾಟಲವರ್ಣಾಂಗ್ಯೆವೆನಿಂದು ದೇವಿಯ ಮೊಗಮಂ (ಶೃಂಗಾರಶೋ. ೮೩). [ಬೇಟ+ಕೊಳ್$_1$]

**ಬೇಂಟಗಾಱ**, ಬೇಟಕಾರ, ಬೇಟಕಾಱ$_1$ (ನಾ). ೧. ಪ್ರಣಯಾಸಕ್ತನಾದವನು ; ಪ್ರಣಯಿ. ೨. ಕಾಮುಕ : ಜಾರೆಯ ಮಾತಂ ನಂಬಿ ತನ್ನ ಪೆಂಡತಿಯಂ ಬಿಡುವ ಬೇಂಟಗಾಱನುಮಂ (ಧರ್ಮಾಮೃ. ೬ ೩೦). **ಬೇಟಕಾರ** : ೧. ಬೇಟಕಾರ ಬಂದ ಮಾದ, ಹಹ್ಹ! ಏನು ಬೇಟವೋ ! (ಇಂಗ್ಲಿತ. ೩೯-೦). **ಬೇಟಕಾಱ$_1$** : ೧. ಇದಂ ಪುಗಲಿಂ ಗಡಮೆಂದು ಬೇಟಕಾಱನಿರದೂಱೆ ಸಾಱೆ ಜಡಿವಂತೆಸೆಗುಂ ಸಹಕಾರಕೋಮಳಾಂಕುರಪರಿತುಷ್ಟಪುಷ್ಟ ಪರಪುಷ್ಟಗಳಧ್ವನಿ ನಂದನಂಗಳೊಳ್ (ಶಂಖಚಾ. ೨-೦೩) ; ಕರುಣಿಸದೆ ಬೇಟಕಾಱರ ಶಿರಮಂ ಕೊಳ್ಳೆಂದು ಕಾತು ಮಧುಪಂಗಟ್ಟಿರ್ ಪರೆದಲೆಗೊತ್ತಿದರ್ಣಂಡಿಗೆಯುರಗನೆ ಪೋಲ್ದತ್ತು ಶೀತಕರನ ಕಳಂಕಂ (ಸೂಕ್ತಿಸು. ೮-೨೩೩). [ಬೇಂಟ +—ಕಾಱ]

**ಬೇಂಟಿಗ** (ನಾ). ಬೇಟೆಯಾಡುವವನು ; ಬೇಡ; ಶಬರ : ಇಡುವಲೆ ಸಿಡಿವಲೆ . . . ಬಿಡುವಲೆಗಳೆನಿಪ್ಪವೆಸೆದುವಾ ಬೇಂಟಿಗರೊಳ್ (ಬಬಶಂ. ೩-೨೪). [ಬೇಂಟೆ +—ಇಗ]

**ಬೇಂಟೆ**, ಬೇಟೆ (ನಾ). ೧. ಕಾಡುಪ್ರಾಣಿಗಳನ್ನು ಕ್ರೀಡೆಗಾಗಿಯೋ ಆಹಾರಕ್ಕಾಗಿಯೋ ಹಿಂಬಾಲಿಸಿ ಹಿಡಿಯುವುದು ಅಥವಾ ಕೊಲ್ಲುವುದು; ಶಿಕಾರಿ; **p** ಸಪ್ತವ್ಯಸನಗಳಲ್ಲಿ ಒಂದು: "ಆಖೇಟಸಂ. ಮೃಗಯಾ, ಮೃಗವ್ಯಂ, ಪಾಪರ್ಧಿಃ, ಆಖೇಟಕಃ—ಈ ೫ ಬೇಂಟೆ" (ಹಲಾಯು. ೬೦-೨೮೦); ಅವರ ತಪೋಮಹಾತ್ಮ್ಯದಿಂ ಲಲಿತಘಟಿಗೊಂದುವಿಂಗ, ಮಪ್ಪೊಡಂ ಬೇಂಟೆ ಸಮನಿಸದೆ (ವಡ್ಡಾರಾ. ೯೩-೨೩); ನಾಮಿದನಱಿಯುದಂತು ಬೇಂಟೆಯು ನೆವದೊಳ್ ಬಟ್ಟೆಗಳಂ ಸೋದಿಸುವಂ (ಶಂಖಚಾ. ೩-೪ ವ); ಜವ್ವನದಿ ಬೇಂಟೆಗೆನುತಾಕೆ ಕಾಡೊಳಗಲೆಯುತಿರಲೊರ್ವ ಗೈರಿಕವಸನವೇಷಿ ಸುರಪುರುಷನೈತರಲ್ (ಶತ್ರುಂಗ. ೬೩-೦೯೩). ೨. ಬೇಟೆಗೆ ಸಿಕ್ಕಿ ಬೀಳುವ ಪ್ರಾಣಿ ; ಈಡುಮೃಗ : ದೇವರ ಧರ್ಮದೊಳೊಂದು ಬೇಂಟೆ ದೊರೆಕೊಂಡರೆ ಕೂಡಲಸಂಗಮದೇವಂಗರ್ಪಿತವ ಮಾಡುವೆ (ಬಸವ. ೯೦೬). ೩. (ಆಲಂ) ಅನಾಯಾಸವಾಗಿ ದೊರಕಿದುದು ;ಲಭ್ಯವಾದುದು : ಮೇಧಾವಿನಿಯು ಪುಣ್ಯದಿಂದೆಂತಪ್ಪ ಬೇಂಟೆ ದೊರೆತುದಿಂದು ! (ತಂದ್ರಸ. ೩೯-೨೩). **ಬೇಟೆ** : ೧. ಖೇಳಮೇಳದ ಬೇಟೆಗಳ ಷೈಹಾಳಿಗಳ ಜೂಜಿನ ಸಮಂಜಸಲೀಲೆಗಳ ಕೇಳಿಯಲಿ ಕಳೆವರು ಪಂಚವರ್ಷಗಳ (ಸಂಭಪ. ೩೩-೦); ಗಾನವೆಲ್ಲಕೆ ಹಿತವಹುದದು . . . ಪುಣ್ಯಹೀನಸತಿಯರಾಟ ಬೇಟೆ ಕಾಳಗ ಬಾದರೇನೆನ್ನಬಹುದದು ಪಾಪ (ಭಕತ. ೧-೬೯) ; ಎಮ್ಮೆಯು ಬೇಟೆಯನ್ನೇ ಇಚ್ಛಿಸುವ ಅವರು ನಮಗೆ ಕಷ್ಟ ಕೊಡಲಿಕ್ಕಿಲ್ಲ (ಬಂಗಾಪ.೬೦). ೨. ಸಿಕ್ಕ ಬೇಟೆಯನ್ನು ಎಲ್ಲರೂ ಸರಿಯಾಗಿ ಹಂಚಿಕೊಳ್ಳಬೇಕು (ಮುಂಬಯಿ. ೪-೦೦); ಬಿಡದಿರು ನೀನಿಂದು ಹಿಡಿದೊಂದು ಬೇಟೆಯ ಕೈಯೊಳಗಿರು ವೊಂದು ಮೊಲವ (ಇಂತಾಪ. ೦೩೩-೦೪). ೩. ಬೇಟೆ ಬಲೆಯೊಳಗಿಂದ ಪಾರಾಗಿ ಹೋದುದಷ್ಟೇನು ಬಲ್ಲೆಳು (ಮಾರಿಶೇ. ೬೯). ೪. ಹುಡುಕಾಟ ; ಅರಸುವಿಕೆ : ಎರಡನೆಯ ಹೆಂಡತಿ ತೀರಿಕೊಂಡು ಆರೇಳು ತಿಂಗಳಾಗಿದ್ದವಂತೆ. ಅಷ್ಟೆ ! ಈಗ ಇನ್ನೊಂದಕ್ಕಾಗಿ ಬೇಟೆಯಂತೆ (ಕಬ್ಬಿ.ಡಿ. ೩೩).

**ಬೇಂಟೆಯನ್**=ಬೇಟೆಗಾರ ; ಬೇಡ ; ಶಬರ : ತೊಟ್ಟೆಕ್ಕಮಡಂ ಮರವಿಲ್ ಕಟ್ಟಿದ ಪಣೆಕಟ್ಟು . . . ತನ್ನೊಳಮರೆ ಬೇಂಟೆಯನೊರ್ವಂ ಬಂದು ಪೊಡಮಟ್ಟು ಕರಿಡಿಂತೆಂದಂ (ಶಂಖಚಾ. ೩-೩೬).

[ದೇ.॥ ತಮಿ. ವೇಟ್ಟೆ, ವೇಟ್ಟು, ವೇಟ್ಟಲ ; ಮಲ. ವೇಟ್ಟ; ತುಳು. ಬೇಂಟೆ, ಬೇಟೆ, ಬೊಂಟೆ ; ಕೊಡ. ಬೋಟೆ ; ತೆಲು. ವೇಂಟ, ವೇಟ ; ಕೋತ.ವೆಟ್ ; ತೊದ. ಪೆಟ್ ; ನಾಯ್ಕಿ. ವೇಟ]

**ಬೇಂಟೆಕಾಱ** 'ಬೇಂಟೆಗಾಱ' ನೋ.

**ಬೇಂಟೆಗ**, ಬೇಟೆಗ (ನಾ). ಶಿಕಾರಿಯಾಡುವವನು : ಬೇಡ ; ಶಬರ; ವ್ಯಾಧ : ಒಂದೆ ಪುಲ್ಲೆ ಬೇಂಟೆಗರ ಕೆಯ್ಯೊಳಾದಂತೆ (ಶಬಶಂ. ೦೪-೨೬ ವ); ಪಸಿವಿಂದಂ ಬೇಂಟೆಗಂ ನಟ್ಟಡವಿಗೆ ನಡೆತಂದು (ಶಂಖಾಕ. ೦೩) ; ದೀವದ ಹೋರಿಯಂ ಕಟ್ಟಿ ಬೇಂಟೆಗಂ ಮರಸು ಕುಳಿತಿರೆ ಮರದ ತುದಿಮಂಚಿಗೆಯ ಮೇಲೆ (ಶ್ರೀರಾಮಪ. ೩೦೦-೨೮೦). **ಬೇಟೆಗ** : ಬೇಹಿನ ಸಿಂಗ ಬೇಡರ ಪೆಮ್ಮ ಬೇಟೆಗ[ಪಾಠಾಂ. ಬೆಟ್ಟಿಗ, ಬೇಟೆಯ]ಚೋಹದ ಹರಿಗೆಯ ಲಿಂಗ ಸೋಹಿನ ಪೆನ್ನಸವರ ಕಳುಹಿದನಂದಾ ಹುಯ್ಯಲಿಗೆ (ಕುಮಾಕಾಂ. ೦೯-೬೯).

[ಬೇಂಟೆ + — ಗ$_2$]

**ಬೇಂಟೆಗಾರ್ತಿ** (ನಾ). ಬೇಡಿತಿ : ಶಬರಿ : ಪಾಂಥರ್ ಬಲವಂದು ಬೆಳ್ಮೃಗದವೊಲ್ ಸಾರ್ತಂದು ಬೆಳ್ಕಿಗೆ ಪಾಪುರಿಯರ್ ಕಾಮನ ಬೇಂಟೆಗಾರ್ತಿಯರೆನಿಪ್ಪಾಶಂಕೆಯಂ ಮಾಡುವರ್ (ಸೂಕ್ತಿಸು. ೪-೬೬) ; ಯುವಪೋಸ್ಮೃಗಮಂ ಕಱತ್ತು ಕೋಲೆತ್ತುವ ಬೇಂಟೆಗಾ [ಪಾಠಾಂ. ಕಾ]ರ್ತಿಯುರಪೋಲೆಸೆದರ್ ವಿಗೆ ಮಾಲೆಕಾರ್ತಿಯರ್ (ಗಿಂಕ. ೨-೮೮).

[ಬೇಂಟೆಗಾಱ+ — ತಿ$_1$ (<— ಇತ್ತಿ)]

**ಬೇಂಟೆಗಾಱ**, ಬೇಂಟೆಕಾಱ, ಬೇಟೆಕಾಱ, ಬೇಟೆಗಾರ. ಬೇಟೆಗಾಱ (ನಾ). ಶಿಕಾರಿಯಾಡುವವನು ; ಬೇಡ ; ಶಬರ : ಕ್ರೂರತರಪ್ಪ ಬೇಂಟೆಗಾಱರೊಳ್ಕೂಡಿ . . . ಬೇಂಟೆಗೆ ಪೋಪ ರೌದ್ರಾತ್ಮರ ನೆಗೞ್ತಿಯಿಂ ನರಕಗಮನ

ಮನಜಿ಼ಪುಗುಂ (ಧರ್ಮಾಮೃ. ೬-೬೩) ; ಅಂತೊರ್ವ ಬೇಂಟೆಗಾಱಿಂ ಬಂದು ರಾಜಹಂಸಂಗೆ ಪೊಡೆವಟ್ಟು ಇಂತೆಂದಂ (ದಕಶು. ೨-೧೦೨ ವ). **ಬೇಂಟೆಕಾಱ :** ನೋಡಿದ ಪೆಂಡಿರೆಲ್ಲಂ ಕಾಮದೇವನೆಂಬ ಬೇಂಟೆಕಾಱಂಗೊಡ್ಡಿದ ಪುಲ್ಲೆಗಳಂತರಲಂಬಿನ ಮೊನೆಗೆ ಪೂಣೆ ಪೊತ್ತು ಪಕ್ಕಾಗಿರೆ (ಶಂಶಭಾ. ೪-೩೯ ವ) ; ಬೇಂಟೆಕಾಱನಂತೆ ಅಡಿವಜ್ಜೆಯನಱಸಿಯುಂ (ಗದಾಯು. ೬-೨೯ ವ); ಘೇರಿಟ್ಟ . . . ಕವಲಂಬುಸಹಿತಂ ಭೋರನೆ ನೆರೆದತ್ತು ಬೇಂಟೆಕಾಱರ ತಂಡಂ (ಪಶತಂ. ೬೯). **ಬೇಟೆಕಾಱ :** ಬೇಟೆಕಾಱನು ಮೃಗವನಟ್ಟ ಮೃಗ ಗೋರಿಗೊಳಗಾಗದಯ್ಯಾ (ಬಸವ. ೯೩೩) ; ಚರರು ಮಲ್ಲರು ಬೇಟೆಕಾಱ[ಪಾಠಾಂ. ಬೇಂಟೆಗಾಱ]ರು ಪರಿಜನಾವಳಿಸಹಿತ . . . ಪಯಣವಲರಸನೈತಂದ (ಶಬ್ದಾ.೮. ೧೬-೩೨). **ಬೇಟೆಗಾರ :** ಲಕ್ಕೂರಿಗೆ ಮೂಡಲ ಆಗ್ನೇಯ ದಿಕ್ಕಿನಲ್ಲಿ ಬೇಟೆಗಾರನ ಆಲದ ತಾಳಿನಲ್ಲಿ ನೆಟ್ಟ ಕಲ್ಲು ೧ (ಎಕ. III, ಮೈಸೂರು. ೧೦೬-೪೦ ; 1664) ; ಬೇಟೆಗಾರನಿಂದ ತಪ್ಪಿಸಿಕೊಂಡು ಓಡುವ ಮೃಗಗಳು ವೇಗದಿಂದ ಪೊದೆಯಲ್ಲಿ ಪ್ರವೇಶಿಸುವಂತೆ ಇವು ಅಗ್ನಿಯನ್ನು ಪ್ರವೇಶಿಸುತ್ತವೆ (ಸುಣ್ಣರ. ೨೦೦). **ಬೇಟೆಗಾಱ :** ಬೆಟ್ಟದ ನವಿಲಿಗೆ ಕಣ್ಣೀರು ಬಂದರೆ ಬೇಟೆಗಾಱಗೆ ದಯ ಪುಟ್ಟೀತೆ (ಪುರಂದ. ೦-೦೩೬-೨).

**ಬೇಟೆಗಾರನ ಹಕ್ಕಿ**=ತನ್ನ ಆಹಾರವನ್ನು ಬೇಟೆಯಾಡಿ ದೊರಕಿಸಿಕೊಳ್ಳುವ ಹಕ್ಕಿ; ವಿಷ್ಣುಚುಳ್ಳಿ: (+). **ಬೇಟೆಯ ರಾಯ** = ಒಂದು ದೇವತೆಯ ಹೆಸರು : ಸಕಲಜನಪರಿಗಿಷ್ಟಾರ್ಥಪ್ರದಾಯಕ ಭಕ್ತ ವತ್ಸಲನು ತಾನಾಗಿ ಅಕಳಂಕಮೂರ್ತಿ ಬೇಟೆಯ ರಾಯನಾ ಗಿರಿಶಿಖರದೊಳಗೆ ನೆಲಸಿಪನು (ಕಂಪಿಲ. ೩-೯). [ಬೇಂಟೆ+ — ಕಾಱ]

**ಬೇಂಟೆಗೊಳವಿ** (ನಾ). ಶಿಕಾರಿಗೆ ಉಪಯೋಗಿಸುವ ತುಪಾಕಿ,– ಬಂದೂಕು : ತಮ್ಮ ನೇಹಿಗರ್ವೆರಸು ಬೇಂಟೆಗೊಳವಿಗಳಂ ತಳೆದು ಪೊಱಮಟ್ಟು ದೇಗುಲದ ಗೋಪುರಪ್ರಾಕಾರ ಮಂಟಪ ವಿಮಾನಂಗಳೊಳ್ ನೆಲಸಿರ್ದ ಕಿಱುವಕ್ಕಿಗಳನೂದಿ ಮೊಂಟೆಗಳಿಂದಿಟ್ಟು ಕೆಡಪಿ (ತಕವಂ. ೬-೯). [ಬೇಂಟೆ + ಕೊಳವಿ (< ಕೊಟಿವಿ)]

**ಬೇಂಟೆಗೋಲ್** (ನಾ). ಶಿಕಾರಿಯಲ್ಲಿ ಬಳಸುವ ಕೋಲು, – ಬಡಿಗೆ : ಪುಳಿಂದರ ಬೇಂಟೆಗೋಲ್ಗಳಂ ಬಡಿಯೆಂಬರ್ . . . ಅಡಿಯೆಂಬರಂಘ್ರಿಗಳನಲ್ಲದೀ ನುಡಿಗಳಂ ನುಡಿಯರಾ ಜನಪದದೊಳು (ಕುಶ. ೬-೪೯). [ಬೇಂಟೆ + ಕೋಲ್$_1$]

**ಬೇಂಟೆನಾಯ್**, ಬೇಟೆನಾಯಿ (ನಾ). ಇತರ ಪ್ರಾಣಿಗಳನ್ನು ಶಿಕಾರಿಯಾಡುವ ನಾಯಿ ; ಶಿಕಾರಿಯ ತರಬೇತು ಹೊಂದಿರುವ ನಾಯಿ : ಕಂಪುವಿಡಿದಿಂತು ಬಿಕರ್ಣಂ ಬಿಡದೆ ಬೇಂಟೆನಾಯ್ (ಅಶ್ವಶಾ. ೧-೮೦). **ಬೇಟೆನಾಯಿ :** ಕ್ರಮೇಣ ಟೈಗರು ಸೊಗಸಾದ ಬೇಟೆನಾಯಿಯಾಯಿತು (ಕಾಡಿನರ. ೦೬೪); ಬೇಟೆಯಾಡುವುದಕ್ಕೆ ಕಲಿತ ಮಲ್ಲ ಬೇಟೆನಾಯಿಯ ಜೊತೆ ಮರಿದ (ಗಾಣ). [ಬೇಂಟೆ + ನಾಯ್]

**ಬೇಂಟೆಪಜ಼ಿ$^3$** 'ಬೇಂಟೆವಜ಼ಿ$^3$' ನೋ.

**ಬೇಂಟೆಪುಲಿ** (ನಾ). ೧. (ಆಲಂ) ಮೃಗಗಳನ್ನು ಬೇಟೆಯಾಡುವುದಕ್ಕೆ ಉಪಯೋಗಿಸುವ ಪಳಗಿಸಿದ ನಾಯಿ. ೨. ಪ್ರಾಣಿಗಳನ್ನು ಬೇಟೆಯಾಡುವುದರಲ್ಲಿ ಹುಲಿಯಂತಿರುವವನು ; ಕಲಿ; ಪರಾಕ್ರಮಿ; P ಬೇಟೆಯಾಡುವ ನಾಯಿಗಳಿಗೆ ಮತ್ತು ಪರಾಕ್ರಮಿಗಳಿಗೆ, ಅವರ ಶಕ್ತಿಯ ಹೆಚ್ಚಳದ ಗುರುತನ್ನು ಸೂಚಿಸಲು ಬಳಸುವ ಪದ: ಬೇಂಟೆಪುಲಿಗಳಿರ, ಕಲಿಯರಿರ, ನಿಮ್ಮೊಳಂ, ಅವನೊಳಂ, ಈ ಅಬ್ಬಿಜಿ಼ನ ಪೊಜ಼ಿಯನ್ ಇಟ್ಟಿನ್ (ಅಶ್ವಶಾ. ೨೩-೪೬೦). [ಬೇಂಟೆ + ಪುಲಿ]

**ಬೇಂಟೆಯಾಡು**, ಬೇಟೆಯಾಡು (ಕ್ರಿ). ಪ್ರಾಣಿಗಳನ್ನು ಹಿಂಬಾಲಿಸಿ ಹಿಡಿ ಅಥವಾ ಕೊಲ್ಲು ; ಶಿಕಾರಿಯಾಡು: ಬೇಂಟೆಯಾಡುವರುಂ ಮಧುಮದ್ಯಮಾಂಸಂಗಳಂ ಸೇವಿಸುವರುಂ . . . ನಾರಕರಾಗಿ ಪುಟ್ಟಿ . . . ದುಃಖಂಗಳನನುಭವಿಸುವರ್ (ವಡ್ಡಾರಾ. ೯೬-೨೦); ನೀನುಂ ತಾನುಮೊರ್ಮೆ ಗಂಗಾನದೀತೀರದೊಳ್ ಬೇಂಟೆಯಾಡುವಲ್ಲಿ . . . ದಿವ್ಯಜ್ಞಾನಿಗಳಂ ಕಂಡು ಪೊಡೆವಟ್ಟು (ಶಂಶಭಾ. ೯-೬೬ ವ); ದುಷ್ಟಮೃಗಗಳ ಬೇಂಟೆಯಾಡಿ . . . ಸುಜನರರಿಷ್ಟವನು ಪರಿಹರಿಸುತ್ತೈತಂದನು ಸರಾಗದಲಿ (ಶಬ್ದಾ.೬. ೦-೧೦). **ಬೇಟೆಯಾಡು :** ತುಱುಪಳ್ಳಿಗಳ ನೋಡಿ ವನಾಳಿ ತಪ್ಪದೆ ಬೇ[ಪಾಠಾಂ. ಬೇಂ]ಟೆಯಾಡಿ ಸಮಸ್ತಬಲಸಹಿತ . . . ನೃಪ ಬಿಡಿಸಿದನು ಪಾಳಯವ (ಶಬ್ದಾ.೮. ೦೯-೦) ; ಬೇಟೆಯಾಡುತ ಬಂದ ಸ್ವಾಮಿ ಬೆಟ್ಟದ ಮೇಲೆ ನಿಂದ (ಪುರಂದ. ೦-೬೬-೨); ಅಂದು ಬೇರೆ ಬೇಟೆಯು ಸಿಕ್ಕಲೂ ಇಲ್ಲ . . . ಬೇಟೆಯಾಡುವ ಮನಸ್ಸೂ ಇರಲಿಲ್ಲ (ಶ್ರೀರಾಯ. ೩೬). [ಬೇಂಟೆ + ಆಡು$_1$]

**ಬೇಂಟೆವಸದನಂಗೊಳ್** (ಕ್ರಿ). ಶಿಕಾರಿಯ ವೇಷವನ್ನು ಹಾಕಿಕೊಳ್ಳು,– ತೊಟ್ಟುಕೊಳ್ಳು: ಬೇಂಟೆವಸದನಂಗೊಂಡು [ಕ]ಂಡಿಯ ಬಾಗಿಲೊಳು ದಾತ್ತನಾರಾಯಣನುಂ ನಾರಾಯಣನುಮಿರ್ದು ಪುಗಿಲ ಪುಲ್ಲೆಯ ಮೊದಲು ರಮುಂಪುಂ . . . ಎಚ್ಚು ಬಿಲ್ಲ ಬಲ್ಮೆಯುಂ ಮೆಱೆವು (ಶಂಶಭಾ. ೩-೯೭ ವ). [ಬೇಂಟೆ + ಪಸದನ + ಕೊಳ್$_1$]

**ಬೇಂಟೆವಜ಼ಿ$^3$**, ಬೇಂಟೆಪಜ಼ಿ$^3$ (ನಾ). ಶಿಕಾರಿಯ ತಮಟೆ,– ಡೋಲು,– ಹರೆ : ತೊಟ್ಟಿಕ್ಕವಡಂ ಮರವಿಲ್ ಕಟ್ಟಿದ ಪಣೆಸಟ್ಟು ಬೇಂಟೆವಜ಼ಿ$^3$ . . . ತನ್ನೊಳಮರೆ ಬೇಂಟೆಯನೊರ್ವಂ ಬಂದು ಪೊಡವಟ್ಟು (ಶಂಶಭಾ. ೩-೩೬); ಪರೆಪೊತ್ತಜ಼ಿಳಿದ್ದು ಬೇಂಟೆವಜ಼ಿಯುಂ ಪೊಯ್ವರ್ (ಸಮಶ. ಆಮಬಂ. I. ೩೯೨-೩೯); ಅಬ್ಬರಿಸಿದುದು ಬೇಂ[ಪಾಠಾಂ. ಬೇ]ಟೆವಜ಼ಿ$^3$ (ಶಬರಶಾ. ೩-೩-೦೦); ಬೇಂಟೆವಜ಼ಿಯಬ್ಬರಮುಣ್ಮಿತು ತದ್ವನಾಂತರದೊಳ್ (ತ್ರಿಪುರ. ೨೬-೪೯). **ಬೇಂಟೆಪಜ಼ಿ$^3$:** ಪಂಚಮಹಾಶಬ್ದಮನೊಲ್ಲದೆ ಬೇಂಟೆಪಜ಼ಿಯುಂ ಪೊಯ್ಸಿ (ಧರ್ಮಾಮೃ. ೬-೬೩); [ಬೇಂಟೆ + ಪಜ಼ಿ$^3_1$]

**ಬೇಂಟೆವೋಗು** (ಕ್ರಿ). ಮೃಗಗಳನ್ನು ಹಿಡಿಯಲು ಹೋಗು : ಶಿಕಾರಿ ಮಾಡಲು ಹೋಗು : ಬೇಂಟೆಯ ನೆವದೊಳ್ ಬೆಟ್ಟಗಳಂ ಸೋದಿಸುವೆಮೆಂದು ನಿಚ್ಚಂ ಬೇಂಟೆವೋಗೆ (ಶಂಶಭಾ. ೩-೪ ವ); ಆತನೊಂದು ದೆವಸಂ ಬೇಂಟೆವೋಗಿ ವಯೋಽಧಿಕನಪ್ಪದೊಂದು ಪುಲಿಯಂ ಕಂಡು (ಶಂಶತಂ. ೦೦೬-೦೪). [ಬೇಂಟೆ + ಪೋಗು$_1$ (< ಪೋ$_1$)]

**ಬೇಂಟೆಸೋವು** (ನಾ). ಬೇಟೆಯನ್ನು ಅಟ್ಟಿಸಿಕೊಂಡು ಹೋಗುವುದು: ಅಟ್ಟಿದುದು ಸೆರೆಯಾಡಗಿತೀ ಬೇಂಟೆಸೋವು ನೆಟ್ಟಗಾಗದೆ ಪೋಯ್ತು, ಬಜ಼ಿಯ ಮಯ್ಯೋವು! (ಅಶ್ವಶಾ. ೩೬-೬೯೩). [ಬೇಂಟೆ + ಸೋವು$_2$ (< ಸೋವು$_1$)]

**ಬೇಕ** (ನಾ). ೧. ಕಪ್ಪೆ. ೨. (ಆಲಂ) ಪುಕ್ಕಲುಮನುಷ್ಯ ; ಭೀರು ; ಹೇಡಿ : ನೀರ ತಡಿಯಲಿ ಕಾಲಿಯವಗಂಜಿ ಗುಜ್ಜುಹೊಗುವುದು ಹಂಗಳದಿರಿಲಿ ಲಜ್ಜೆದೊಱೆವುದು ಕೀಳುಬೇಕರ ಬಜ್ಜಿಸುವುದಿದು ನಿನ್ನ ಪೌರುಷವೆನುತ ತೆಗದೆಚ್ಚ (ಕೃಶಾ.ತ. ೦೩-೬೦). [<ಸಂ. ಭೇಕ]

**ಬೇಕರಿ** (ನಾ). ರೊಟ್ಟಿ, ಬಿಸ್ಕತ್ತು ಮುಂತಾದುವುಗಳನ್ನು ತಯಾರಿಸಿ ಮಾರುವ ಅಂಗಡಿ : ಪ್ರತಿದಿನ ಬೆಳಗಾದೊಡನೆ 'ಬೇಕರಿ'ಗೆ ಹೋಗಿ ಬ್ರೆಡ್ ತೆಗೆದುಕೊಂಡು . . . 'ಸಾಹೇಬರುಗಳಿಗೆ' ಮೋಟಾರುಗಳ ಮೂಲಕ ಕಳಿಸುವುದೂ ಅವುಗಳಲ್ಲೊಂದು ಕೆಲಸ (ಪಾಪೋಲಿ. ೦೩೬). [← ಇಂ. Bakery]

**ಬೇಕರಿಗೊಳ್** (ಕ್ರಿ). ಬೆಂದು ಕರಿಕಾಗು ; ಸೀದು ಹೋಗು ; ಸೀಯು : ಎಲ್ಲಿ ಉಡುಗಿದೆ ಎಲ್ಲಿ ಬೆಂದೆ ಎಲ್ಲಿ ಬೇಕರಿಗೊಂಡೆ ನೀನು ಎಲ್ಲಿ ಹೋದೆ (ಸಶವ. ೪. II, ೩೮-೯೯). [ಬೇ$_1$ + ಕರಿಗೊಳ್]

**ಬೇಕರಿವೋಗು** (ಕ್ರಿ). = ಬೇಕರಿಗೊಳ್ : ಬರಿಯಲ್ವೇಱೆಬ್ಬ ಕಂಕಾಳಕ್ಕೆ ಪೆಡತಲೆಯೊಳ್ ಪೊಕ್ಕ ಕಣ್ಸೋರ್ವ ಕೆಯ್ಕಾಲ್ಸಿರೆ ಪಾತಾಳಕ್ಕೆ ಪತ್ತಿದೋಣ

ಪಸಿಬುಡುಗಿರ್ದೊಂದುರಂ ಪೂಟ್ದು ಬಾಯ್ಬೇಕರಿ [ತಾಕಾಂ. ಬೊಕರಿ, ಬೆಕ್ಕರಿ] ಪೋದಂತಿರ್ದ ಬಾನಂಗುಳಿ ಗಿಟಗಿಟಜಂತ್ರಂಬೊಲಾಗಿರ್ದ ಮೆಯ್ ಮೆಯ್ಸಾರಿ ಚಿದ್ರೂಪಕ್ಕೆ ಪಕ್ಕಾಗಿರೆ ಚರಿಗೆಗುಣಲ್ಬಂದನೊರ್ವಂ ಮುನೀಂದ್ರಂ (ಆರ್ದಶೀ. ೬-೨; ಕಶರ. ೪-೨೦೨ ನೋ); ಪಾದಿಗಳೆರ್ದೆಗಳಿಂತು ಬೆಂದು ಬೇಕರಿ ವೋಗದಿರವೆಂದು ತೋರ್ಪಂತೆ ತಂದ ವಿತಾನಾಂಬರಂದೋಜ ತತ್‌ತಥನ ಚೆಲ್ಲವಂ ವಿಜ್ಞಾಪಿಸೆ (ಶತ್ವಗಾ. ೩-೦೬). [ಬೇ$_1$ + ಕರಿವೋಗು]

**ಬೇಕಾಯದೆಶೀರ, ಬೇಕಾಯಿದೇಶೀರ, ಬೇಕಾಯ್ದೆಶೀರ** (ಗು). ೧. ಕಾನೂನುಬಾಹಿರವಾದ; ಅಕ್ರಮವಾದ : ನನ್ನಗೂಡ ಬೇಕಾಯದೆಶೀರ ಸಂಬಂಧ ಇಟ್ಕೊಂಡಿದಿ ಅಂತ. ಅದನ್ನ ಮುಚ್ಚಿಗೊಳ್ಳಾಗ ಪಸ್ತಾ ಪಡವಿ ಅಂಟಿಸತಿ (ಕಳ್ಳ. ೦೨೦); ಆದರೆ . . . ಬೇಕಾಯದೆಶೀರ ಮಗು. ಅಂದರೆ ಒಂದು ಸಮಸ್ಯೆಯಾಗುವುದು (ಕುಂತ್. ೯೩). (ನಾ). ೨. ಕಾನೂನುಬಾಹಿರವಾದುದು; ಅಕ್ರಮ. **ಬೇಕಾಯಿದೇಶೀರ :** ೨. ಧರ್ಮ ಶಾಲೆಯ ಕೋಣೆಯನ್ನು ಬಾಡಿಗೆಯಿಲ್ಲದೇ ಆರು ತಿಂಗಳಗಟ್ಟಲೆ ಒಬ್ಬ ಲಫಂಗ ಹುಡುಗನಿಗೆ ಇರಲು ಕೊಟ್ಟಿದ್ದು 'ಬೇಕಾಯಿದೇಶೀರ' ಆಗುವು ದೆಂದೂ . . . ಅವರಿಗೆ ತಿಳಿಸಿದರು (ಗಂಗಾಸಾ. ೦೦೪). **ಬೇಕಾಯ್ದೆಶೀರ :** ೨. ಕಾಂಗ್ರೆಸ್ ಕಮಿಟಿಗಳು ಬೇಕಾಯ್ದೆಶೀರ ಎಂದು ನಿಶ್ಚಯಿಸಲ್ಪಟ್ಟವು (ಕಾಂಗ್ರೆ. ೨೬). [← ಮರಾ. ಬೇಕಾಯದೇಶೀರ್]

**ಬೇಕಾಯಿದೇಶೀರ** 'ಬೇಕಾಯದೆಶೀರ' ನೋ.

**ಬೇಕಾಯ್ದೆಶೀರ** 'ಬೇಕಾಯದೆಶೀರ' ನೋ.

**ಬೇಕಿ** (ನಾ). ೧. ಹೆಣ್ಣು ಕಪ್ಪೆ. ೨. ಕಪ್ಪೆಯ ಮರಿ ; ಸಣ್ಣ ಕಪ್ಪೆ : ಈ ಕಥೆ ಸಜ್ಜನರಿಗೆ ಕರ್ಣಾಮೃತ ಕಾಕುಪುರುಷರ್ಗೆತಿವಿಷವು ಬೇಕಿ ತಾವರೆಯೊಳು ಬಿದ್ದ ರೀತಿಯೊಳು ಮತ್ತಾ ಕುಜನರು ದೂಷಿಪರು (ಪೂಜ್ಯತ. ೦-೩೬) [<ಸಂ. ಭೇಕೀ]

**ಬೇಕು$_1$** (ನಾ). ಅವಶ್ಯಕತೆ; ಅಗತ್ಯ : ತೇಗದ ಉಪಯೋಗ ಹೆಚ್ಚಾಯಿತು; ಜನದ ಬೇಕುಗಳೂ ಅಧಿಕರಿಸಿದವು (ಹಸುಹೂ. ೨೪೦) : ಹೊಸ ಹೊಸ ರುಚಿ ಗಳೂ ಬೇಕುಗಳೂ ಕೊನರಿದಂತೆಲ್ಲ ಸಸ್ಯಸಂಬಂಧವಾದ ಉದ್ಯಮಗಳೂ ಕಸುಬುಗಳೂ ಏರ್ಪಡುವುದು ಅನಿವಾರ್ಯವಾಯಿತು (ಕಾಸಗಿ. ೬೦). [<ಬೇಕು$_2$]

**ಬೇಕು$_2$** (ಅ). ಇಷ್ಟವನ್ನಾಗಲೀ ಅಗತ್ಯವನ್ನಾಗಲೀ ಸೂಚಿಸುವ ಒಂದು ಅವ್ಯಯ : ಇತ್ತುದನೆ ಕೊಂಡು ತಣಿಯದೆ ಮತ್ತಿನ್ನುಂ ಬೇಕುಮೆಂದು ಪಾಯ್ದುಪರ್ಮೊರ್ಥರ್ (ಕವುಶ. ಅಸುಬಂ. I, ೩೪೦-೨೬); ಬೇಕು ತನಗೊಂದ ವಳಿಯೆಂದಳು ನೋಡಿ ಸುರಗಣವ (ಸಂಭಶ: ೦೩-೮೮); ಹತ್ತೀಬೆಳೆಗೆ ಉಷ್ಣ ಹವೆ ಬೇಕು (ಕುಂಬಯು. ೪-೨೬); ತಾಯಿ ಬೇಕು ಇಲ್ಲವೆ ಬಾಯಿ ಬೇಕು (ಗಾದೆ).

**ಬೇಕಾಬಿಟ್ಟಿ** = ೧. ಇಷ್ಟವಿಲ್ಲದೆ; ಮನಸ್ಸಿಲ್ಲದೆ: ಅಂಥ ಬೇಕಾ ಬಿಟ್ಟಿ ಕೆಲಸವನ್ನು ಮಾಡಿದವಳೂ ಅಲ್ಲ (ಶಂವಕೋ. ೨೨೯); ಅವನದು ಏನೋ ಬೇಕಾಬಿಟ್ಟಿ ಪಾಠ ಹೇಳುವ ವಿಧಾನವಾಗಿರಲಿಲ್ಲ (ರಾಗಿಹ. ೩೩). ೨. ಸುಲಭವಾಗಿ ; ಅನಾಯಾಸವಾಗಿ : ಬೇಕಾಬಿಟ್ಟಿ ಬಂದುಬಿಡುತ್ತೆ ಅಂದುಕೊಂಡಿದ್ದೀಯೇನು? ಕಷ್ಟಪಟ್ಟರೆ ಫಲವುಂಟು (ಸ್ವಾಮಿಸ್ನೇ. ೦೬೯). [< ಬೇಡು$_1$]

**ಬೇಕೂಪ** 'ಬೇಕೂಫ್' ನೋ.

**ಬೇಕೂಫ್, ಬೆವಕೂಫ್, ಬೇಕೂಪ, ಬೇಕೂಫ, ಬೇವ್‌ಕೂಫ್** (ನಾ). ಅವಿವೇಕಿ; ತಿಳಿಗೇಡಿ; ಮೂರ್ಖ: ರೊಕ್ಕವಿಲ್ಲದಿದ್ರ ಮೋಟಾರ ತರಬಂತ ಯಾವ ಹೇಳಿದ್ನೋ ನಿನಗೆ ಬೇಕೂಫ್ (ಪುಗಿಪು. ೩). **ಬೆವಕೂಫ್ :** ಬೆವಕೂಫ್ ಲಂಚಗುಂಡಿ ಚೋರರು ಬಹಳ ಜನಯಿಧಾರೆ (ಹೈದರ. ೩೦). **ಬೇಕೂಪ :** ಇವನೂ, ಈ ಬೇಕೂಪ ನಮ್ಮ ಟ್ರಾನ್ಸ್‌ಪೋರ್ಟ್‌ನಾಗೆ ಹೆಂಗೆಂಗೆ ಕಾಲಿಕ್ಕಿದ . . . ನನಗೆ ಗೊತ್ತಿಲ್ವಾ (ರಂಗಬ. ೨೬). **ಬೇಕೂಫ :** ನೀನೆ ಕಿತ್ತು ನಿನ್ನ ಜುಟ್ಟಿನಲ್ಲಿ ಸಿಕ್ಕಿಸಿಕೊಂಡೆಯೇನೋ ಬೇಕೂಫ (ಹಸುಹೂ. ೨೦೬). **ಬೇವ್‌ಕೂಫ್:** ಯೆಲೋ ಬೇವ್‌ಕೂಫ್ ಅನಾವಶ್ಯಕ ತಲೆದಿಲ್ಲಾ ಪರಟಬೇಡ (ದೇಶಕು. ೦೯). [←ಪಾರ. ಬೇವಕೂಫ್; ಹಿಂ. ಬೇಕೂಫ್, ಬೇವಕೂಫ್; ಮರಾ. ಬೇಕೂಬ್, ಬೇವಕೂಫ್, ಬೇವಕೂಬ್]

**ಬೇಕೂಫ** 'ಬೇಕೂಫ್' ನೋ.

**ಬೇಕೊಂಡಿ** (ನಾ). ಒಂದು ಬಗೆಯ ಔಷಧೀಸಸ್ಯ : ಬೇಕೊಂಡಿಯ ಸೊಪ್ಪಂ ಹಳೇಎಣ್ಣೆಯಲ್ಲಿ ಕಾಸಿ ಬಿಡಲು ಕಿಂಬರವು ಮಾಣ್ಗುಂ (ವಿಶ್ವಚಿ. ೩). [?]

**ಬೇಕೋಲು** (ನಾ). (ಉಕ) ಒಂದು ಬಗೆಯ ಕೋಲು; ಕವೆಗೋಲು (?) : ಹೊಲ ಮಾಡುವವರು ಸಹ ತಮ್ಮ ತಮ್ಮ ಈಟಿ ಬೇಕೋಲು ಮುಂತಾದ ಆಯುಧಗಳನ್ನು ತೆಗೆದುಕೊಂಡು ಅವರಿಗೆ ಬೆನ್ನಾಸರೆಯಾಗಿ ಬಂದರು (ಇಂಗ್ಲಂಡ. ೨೩). [ ? + ಕೋಲು$_1$ ( < ಕೋಲ್$_1$) ]

**ಬೇಗ$_1$** (ನಾ). ೧. ತ್ವರೆ; ತೀವ್ರತೆ ; ರಭಸ : ಯುವತಿ ಹಿಮೋಪಲ ಪ್ರತಿಮೆಯುಂ ನಳಿತೋಳ್ಗಳಿನಾಗಳಾಗಳಪ್ಪುವ . . . ಶಶಿಕಾಂತ ಪುತ್ರಿಕೆಯ ಮೇಲೆ ನಿಜಾಂಘ್ರಿಯುನಾಗಳಾಗಳಿಕ್ಕುವ ಪಿರಿದಪ್ಪ ಬೇವಸ ದೊಳು ತಡೆದಿರ್ದಳದೊಂದು ಬೇಗವುಂ (ಕಾದಂಅ. ೨೨೬); ಗರ್ವ ಪರ್ವತಾರೂಢನಾಗಿ ಪರ್ವತಮಂ ತಾಗೆ ಬೇಗದೊಳ್ ಕೆಡೆಪ ಕೋಡುಂ ಗಲ್ಗಳಂ ಕೋಡೊಳಾಂತು (ಹಂಪಕಂ. ೪೬-೦೦) ; ಬೇಗದಿಂ ಬರಿಯಿ ನೀಂ ಪೋಪೋಗು (ಕಬ್ಬಿಗಾ. ೩೩); ಕಂಚನನಿಬರ ಕಾಲ ಬೇಗವುಂ ಕರುಣ ದಿಂದಂಡಲೆಯಬಾರದೆಂದೆನುತೆ (ಕಬಿತ. ೩೨-೪೩). ೨. ವೇಳೆ; ಸಮಯ; ಹೊತ್ತು : ಗೋವರ್ಧನಭಟ್ಟಾರರ್ ಪಿರಿದುಂ ಬೇಗಂ ನೋಡುತ್ತಿರ್ದಿಂ ತೆಂದುದ್ದೇಶಂಗೆಯ್ದೊರ್ (ವಡ್ಡಾರಾ. ೬೪-೩) ; ಆ ಮದಮುಪರ್ಗಂತ್ರೇ ನೇತಜಿಳಾಬ್ದುದನಿಸಾನುಂ ಬೇಗದೊಳೆ ಕಳೆದು ತೋಜಿನೆ ರಣದೊಳ್ (ಅಜಿತ. ೦೪-೨೩); ಕಿಜಿದಾನುಂ ಬೇಗಕ್ಕೆ ಭೋಂಕನೆ ಪೊಣ್ಮಿದ ಭಯಂಕರಧ್ವಾನಮುಂ ಕೇಳ್ದು (ಹಂಪಕಂ. ೪೦-೬). [< ಸಂ. ವೇಗ]

**ಬೇಗ$_2$** 'ಬೇಗಂ$_1$' ನೋ.

**ಬೇಗಂ$_1$, ಬೇಗ$_2$** (ಅ). ತ್ವರೆಯಾಗಿ ; ಶೀಘ್ರವಾಗಿ; ಜಾಗ್ರತೆಯಾಗಿ : ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಜಪೋಲ್ಮಂಜುಪೋಲ್ಪೋಜ ಬೇಗಂ ಪಿರಿಗುಂ (ಎಕ. II (R). ೯೮-೨; 7ಹೆಯ ಶಶ); ವಿಷಧರ ನೀಂ ವಿಷಧರ ನಾಗದೆ ಬೇಗಂ ವಿಷಯಾಮಿಷವಿಷಮನುಗುಟ್ದು ನಿರ್ವಿಷನಾಗಾ (ಅಜಿತ. ೨-೦೬); ಮಾನವಲ್ಲದ ಮನದೊಳಗ್ಗವಣೆಹೂಗಳಂ ಬೇಗಂ ತಂದಂತಂತೆ ಪೂಜೆಗೆಯ್ದಾರೋಗಣೆಗಿತ್ತು (ಬಸರ. ೪-೪೦). **ಬೇಗ$_2$:** ತಾಯ್ಗಳುಮ್ಮಳಿಸ ಲಾಗದು ಕಜುಗಳಂ ಬಿಡಿರೆ ಬೇಗ ಮೊಲೆತೊರೆದು ಮಜುಗುವವು ಕಜುವುಂ ಬಿಡಿರೆ (ಬಸರ. ೯-೦೦೬); ಉದಯವಾಗದ ಮುನ್ನ ಕಳನೊಳು ಹೊದಜುಗಟ್ಟಿದರೀ ತ್ರಿಗರ್ತರು ಕದನಕಿಮ್ಮೊಳಗಳವಿಗೊಡುವುದು ಬೇಗ ಬಹುದೆಂದು (ಕುಮಾವ್ಯದ್ರೋ. ೨-೦೩); ಕಡಿದು ರಿಪುಗಳ ಶಿರವನಾನೆಕುದುರೆಯ ಗಡಣಗಳನು ಬೇಗ ಪಿಡಿದು . . . ಒಪ್ಪಿಸುವೆವೆಂಬ ಮನ್ನೆಯರೆಡೆವಿಡ ದೆಸೆದರಂ (ಕಂಪರ. ೯-೩೯).

**ಬೇಗಬೇಗಂ, ಬೇಗಬೇಗ** (ದ್ವಿರುಕ್ತಿ) : ಕೈಯ ಕುಂಚವುಂ ಬೇಗಬೇಗಂ ಬೀಸಲೊಡನೆ (ಕಬ್ಬಿಗಾ. ೨೬೪); ಬೇಗ ಬೇಗ ಅರ್ಚನೆ ಪೂಜನೆಯ ಮಾಡು ವುದು (ಬಸವ. ೧೬೩). [<ಬೇಗ$_1$]

**ಬೇಗಂ$_2$** (ನಾ). ನವಾಬನ ಹೆಂಡತಿ; ದೊರೆಸಾನಿ; ರಾಣಿ : ನೀನೇ "ಬೇಗಂ" ಎಂಬ ಹೆಸರನ್ನು ಧಾರಣೆಮಾಡುವುದಿಲ್ಲವೇಕೆ ? ಕುಮಾರ ಸಲೀಮನು ನಿನ್ನನ್ನು ವಿವಾಹಮಾಡಿಕೊಂಡು ಖಾಸಾಬೇಗಮಾಗಿ ಮಾಡಿಕೊಳ್ಳುವನೆಂದು ಕೇಳಿದೆನು (ಕಬಾಕು. ೬೩).

[ ←ತುರ್ಕಿ . ಹಿಂ. ಮರಾ. ಬೇಗಮ್]

**ಬೇಗಡ$_1$** (ನಾ). [ಸಂಗೀತ] ಒಂದು ರಾಗದ ಹೆಸರು: ನಾಗಧ್ವನಿಯೆಂಬಿವು ಗಳು ಉಪಾಂಗಗಳು; ನಂತರ ಭಾಷಾಂಗಲಕ್ಷಣದವುಗಳು (ಹೆಸರಿಸಲ್ಪಡುತ್ತವೆ): ಬಿಲಾಹುರೀ, ಬೇಗಡ, ನಂತರ ಪೂರ್ಣಚಂದ್ರಿಕಾರಾಗ (ಸಸುಕ್ರ. ೦೯೦). 'ಬೇಗಡೆ$_1$' ಪರಾ. [ಸಂ. ಬೇಗಡಾ]

**ಬೇಗಡ$_2$**, ಬಿಗಡ$_1$, ಬೇಗಡೆ$_3$ (ನಾ). (ವಜ್ರ, ರತ್ನ ಮುಂತಾದುವುಗಳಿಗೆ ಮಾಡುವ) ತೂತು; ರಂಧ್ರ : "ಬೇಗಡಮೆನೆ [ಪಾಠಾಂ. ಡೆಯೆನೆ] ಬೆಜ್ಜಮೆಂದು ತಿಳಿಗೆ ವಿದಗ್ಧರ್" (ಛಾಕಿಪಿ. ೦೬) ; ರತ್ನದ ಪುಂಜವ ಬೇ [ಪಾಠಾಂ. ಬೆ]ಗಡವನಿಕ್ಕುವಲ್ಲಿ ಮೊನೆ ಮುಂದೆ ಸವೆದ ಮತ್ತೆ ಪೂರ್ವಕ್ಕೆ ಉತ್ತರವಿಲ್ಲ (ಸಶವ.ಕ. II, ೯೯೦-೦೯೦೦). **ಬಿಗಡ$_1$** : ರತ್ನ ಮುತ್ತು ಬಿಗಡವ ನಿಕ್ಕಿದಲ್ಲಿ ಉದುರಿದ ಚೂರ್ಣದಲ್ಲಿ ಕಳೆ ಕಾಂತಿ ಇಲ್ಲ (ಮೋಕ್ಷಪಾ. ೧೯೨-೬೬). **ಬೇಗಡೆ$_3$** : ಈಗಲೀ ಕದನದಲಿ ವಜ್ರಕೆ ಬೇಗಡೆಯ ಮಾಡಿದನದಾವನು (ಶಾಬ್ದಸೂತ್ರ. ೦-೦೦); ಪರ್ವತವ ಬೇಗಡೆಯ ಕಳೆಯಲು ಸಾರ್ವ ತೆಬದ ಪಿಪೀಲಿಕಂಗಳು ಗರ್ವಿತಾಧಿಕಕರಗಳೆಪ್ಪಿದವಿಭದ ಕಾಯದಲಿ (ತಿಪ್ಪು. ೮-೬೬). [ ? / ಹಿಂ. ಬೇಗಡೀ=ರತ್ನದ ಕೆಲಸ ಮಾಡುವವನು]

**ಬೇಗಡವಸ**, ಬೇಗಡೆವಸ (ನಾ). (ವಜ್ರ ಅಥವಾ ರತ್ನಗಳಿಗೆ) ವೆಜ್ಜ ಮಾಡುವ ಅಥವಾ ರಂಧ್ರ ಕೊರೆಯುವ ಕೆಲಸ : ಕಡಪದ ಕಂಡರಣೆಯ ಬೇಗಡವಸದ ಬೆಡಂಗು . . . ಜಡಜಜವಾಯ ಸುರವರ್ಧಕಿಗೊಡರಿಸುವುವು ಕರ್ಮಕೌಶಳದ ಕೌತುಕವಂ (ಶುಕಾಸೇ. ೧-೮೩) ; ಕಡಪದ ಕಂಡರಣೆಯ ಬೇಗಡವೆಸದ ವಿಚಿತ್ರವಪ್ಪ ಕೆಲಸದ ಗತಿಯಂ ನಡೆ ನೋಡಿ(ಜಾಧಪು. ೦-೦೩೬). **ಬೇಗಡೆವಸ** : ಕಡಪದ ಕಾಂತಿ ಕಂಡರಣೆಯುನ್ನತಿ ಚಿತ್ರದ ಚಿತ್ರವೃತ್ತಿ ಬೇಗಡೆವಸದೇಟಿಗೆಯಲ್ಲಿ ಪೊಸತಾದುದು (ಶಂಪ್ರಪು. ೦-೦೯೯).
[ಬೇಗಡ$_2$ + ಬೆಸ$_1$]

**ಬೇಗಡಿಸು** (ಕ್ರಿ). (ವಜ್ರ, ರತ್ನ ಮುಂತಾದುವುಗಳಿಗೆ) ವೆಜ್ಜ ಮಾಡು; ರಂಧ್ರಮಾಡು ; ತೂತುಕೊರೆ: ಪುಂಜವ ಬೇ[ಪಾಠಾಂ. ಬೆ]ಗಡಿಸುವ ವಜ್ರದ ಮೊನೆಯಂತೆ ಲಿಂಗದ ಭೇದಗೂಡಿಯೆ ಅಂಗ ನಿರ್ಯಾಣವಾದಲ್ಲಿ ಅದು ಲಿಂಗಾಂಗಿಯ ಸ್ಥಲ (ಸಶವ.ಕ. II, ೦೦-೨೦). [ಬೇಗಡ$_2$ + —ಇಸು$_3$]

**ಬೇಗಡೆ$_1$** (ನಾ). [ಸಂಗೀತ] ಒಂದು ರಾಗದ ಹೆಸರು : ೨೯ನೇ ಮೇಳಕರ್ತ, ಧೀರಶಂಕರಾಭರಣದಲ್ಲಿ ಜನ್ಯ . . . ವೀರರಸಪ್ರಧಾನರಾಗ (ಸಂಗೀತಂ. ೧೯೩); ಬೇಗಡೆರಾಗದ 'ತ್ಯಾಗರಾಜಾಯ ನಮಸ್ತೆ' . . . ಗರುಡಧ್ವನಿ ರಾಗದ 'ಆನಂದಸಾಗರಮೀ'—ಈ ಕೆಲವು ಕೃತಿಗಳನ್ನು ಮಾತ್ರ ಅವರು ತಮ್ಮ ಕಚೇರಿಗಳಲ್ಲಿ ಹಾಡುತ್ತಿದ್ದರು (ಸಂಗೀಕ. ೩).
[ಸಂ. ಬೇಗಡಾ]

**ಬೇಗಡೆ$_2$** (ನಾ). ೧. (ಅಲಂಕಾರಕ್ಕಾಗಿ ಬಳಸುವ) ಹೊಳಪಿನ ತಗಡು; ತಷರದ ರೇಕು : ಮಾಣಿಕ್ಯಮಿರ್ದಂತೆ ಗಾಜಂ ಕಟ್ಟುವರೆ ಬಂಗಾರ ಮಿರ್ದಂತೆ ಬೇಗಡೆಯಂ ತೊಡುವರೆ (ಕ್ರಿಪುಪಿ. ೨೯-೨೦ ಪ); ಆ ಕಂಭಗಳಿಗೆ ಸುತ್ತಿದ್ದ ಕೆಂಪು ಬಿಳಿಯ ಬಟ್ಟೆಯ ಪಟ್ಟಿಗಳನ್ನೂ ಹೊಳೆಯುತ್ತಿದ್ದ ಬೇಗಡೆಯ ಕಾಗದದ ಹೂವು ಮೊದಲಾದ ಅಲಂಕಾರಗಳನ್ನೂ . . . ನೋಡಿದರು (ಮಲಿಪು. ೬೪೩). ೨. (ಅಲಂ) ಡೌಲು ; ಆಡಂಬರ : ವೈಭವ : ಇಂಗ್ಲೆಂಡ್‌ನಗರದ ಯಾವ ವಿಲಾಸ ವಿಭ್ರಮಗಳೂ ಬೆಡಗು ಬೇಗಡೆಗಳೂ ಅವರ ಬಳಿಗೆ ಬರಲಾರದಾಗಿದ್ದುವು (ರಾಜಪ. ೨೯); ಮುಂಬರುವ ವಿಲಾಪದಲ್ಲಿ ತಾಯಿಗರುಳಿನ ಸಹಜವಾದ ಮೊರೆಯಿದೆ, ಅಲಂಕಾರಗಳ ಬೇಗಡೆಯಿಲ್ಲ (ಕಸಾಕ. ೪೩೦).

[←ಮರಾ. ಬೇಗಡ, ಬೇಂಗಡ. / ತೆಲು. ವೇಗಡ=ಕಾಗೆಬಂಗಾರ]

**ಬೇಗಡೆ$_3$** 'ಬೇಗಡ$_2$' ನೋ.

**ಬೇಗಡೆಗಳೆ** (ಕ್ರಿ). ೧. = ಬೇಗಡಿಸು: ಬೇಗಡೆಗಳೆಯದ ರತ್ನವೃಷ್ಟಿಯ ವೀತರಾಗದಾ ನೃಪನೆಸಗಿದನು (ಕರಕ. ೬೩-೬೦). ೨. ತೂತು ಕೊರೆ ; ಛಿದ್ರಿಸು : ಹಳಚಿದನು ದಳಪತಿಯನವನಿಪತಿಲಕನೆಚ್ಚನು ನೂಜು ಶರದಲಿ ಕಳಚಿ ಕಯ್ಯೊಡನೆಚ್ಚು ಬೇಗಡೆಗಳೆದನವನಿಪನ (ಕುಪ್ಪಾಕ. ೨-೩೦).
[ಬೇಗಡೆ$_3$ (< ಬೇಗಡ$_2$) + ಕಳೆ$_1$]

**ಬೇಗಡೆವಸ** 'ಬೇಗಡವೆಸ' ನೋ.

**ಬೇಗನೆ** (ಅ). ತ್ವರೆಯಾಗಿ; ಶೀಘ್ರವಾಗಿ : ರಾಯರು ತಮ್ಮ ಕಾರ್ಯವನ್ನು ಇಷ್ಟು ಬೇಗನೆ ಪ್ರಾರಂಭಿಸಿಬಿಡುವರೆಂದು ನಾನು ಕನಸಿನಲ್ಲಿಯೂ ಊಹಿಸಿರಲಿಲ್ಲ (ರಾಯುಕ. ೩೨); ಬೇಗನೆ ಆಗಲೆಂದು ಹಾರೈಸುವುದರ ಹೊರತಾಗಿ ಹೆಚ್ಚು ಹೇಳಲು ಸಾಧ್ಯವಿಲ್ಲ (ದ್ರಾಪಿಪಿ. ೬೬).
[ ಬೇಗ$_1$ + — ಅನೆ$_1$ ]

**ಬೇಗಯ್ಕೆ** (ನಾ). ವೇಗ ; ಶೀಘ್ರತೆ (?) : ಕಡುಗೆಯ್ಯನಾಗಿ ಶೀಘ್ರಸಂಧಾನವಿಸುವಶ್ವಗ್ರೀವನ ತಕ್ಕುಂ ಬೇಗಯ್ಕೆಯುಂ ಕಿಡೆ (ಶಾಂತಿಪು. ೩-೬೦ ಪ). [ < ಬೇಗ$_1$ ]

**ಬೇಗವಣಿತು** (ನಾ). [ಸಂಗೀತ] ಒಂದು ಮುಖ್ಯಠಾಯ ; ಏರುವ ಇಳಿಯುವ ಸ್ವರಗಳ ಬೆರಕೆಯಲ್ಲಿ ಸ್ವರಗಳನ್ನು ಸ್ಥಿರವಾಗಿ ಕಂಪಿಸುವುದು (?) : ನಿಸ್ಸರಡೆ ರಂಗರಕ್ತ ಬೇಗವಣಿತು ತರಹರಂ ಸುರಿವೊಟ್ಟಜಿದಾಳವಾಳಂ ಪದಿಪೊಂಜೆ ಕೊಂಕು ಕಮ್ಮಣೆಪಸರಂ ಬೆಡಂಗುವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೦೬-೬೬ ಪ). [ ? ]

**ಬೇಗಾರ್**, ಬೇಗಾರ, ಬೇಗಾರಿ (ನಾ). ೧. (ಸರ್ಕಾರದವರು) ಕೂಲಿಯಿಲ್ಲದೆ ಮಾಡಿಸಿಕೊಳ್ಳುವ ಕೆಲಸ ; ಬಿಟ್ಟಿಕೆಲಸ : ಬೇಗಾರ್ ಮತ್ತು ಅದೇ ರೂಪದ ಇತರ ಬಲಾತ್ಕಾರ ದುಡಿಮೆಯನ್ನು ಪ್ರತಿಷೇಧಿಸಲಾಗಿದೆ (ಭಾಧಾನ. ೦೩). **ಬೇಗಾರ** : ೨. ಬಿಟ್ಟಿಯಾಗಿ ಕೆಲಸ ಮಾಡುವವನು ; ಬಿಟ್ಟಿಚಾಕರ : ಯಿ ಗ್ರಾಮದ ಪಣಕಟ್ಟು ಆಯಗಾರು ಶಾನಬೋಗ ಪುಟರಂಗಪ ತಳವಾರಪೋಬಾ ಬೇಗಾರ ದಾನ ತಿಮ್ಮ (ಎಕ. XI, ಹಿರಿಯೂ. ೪೬-೦೮; 1533?) ; ಗ್ರಾಮದ ಬೇಗಾರರು (ಮಾದಿಗರು) ಖಾಸಾಕುದುರೆಗೆ ದಿನ ೧ಕ್ಕೆ ಹಸಿಹುಲ್ಲು ೧೦ ಹೊರೆ ಪ್ರಕಾರ ಸರದೀ ಮೇರೆ ತರಬೇಕು (ಕಕ್ರುಪಾ. ೯೯) ; ಒಂದೆರಡು ಸಲ ಬೇಗಾರರಿಗೆ ಕಷ್ಟವಾಗಿದ್ದಾಗ ನಾಟಕ ಆಡಿ ಒದಗಿಸಿಕೊಟ್ಟೆವು (ಮುಕಿ. ೬೩). ೩. ಒಂದು ಬಗೆಯ ತೆರಿಗೆ : ಹೊನ್ನ ತೆತ್ತಲ್ಲದೆ ಹೊಲ ಮಾಡಬಾರದು ಬಿಟ್ಟಿ ಬೇಗಾರವಿಲ್ಲದೆ ಊರೊಳಗಿರಬಾರದು (ವಚಸಂ. ೭೦-೬೦); ಆ ಪೊಸಲ ಕಯಲೂ ಮನೆದೆರೆ ಬಿಟಿ ಬೇಗಾರ ಕಾಣಿಕೆ ಕಡಾಯ ಏನನೂ ನಾಉ ಕೊಳ ಸಲ್ಲದು (ಎಕ. X, ಮುಳಬಾ. ೦೭-೦೯; 1496). **ಬೇಗಾರಿ**: ೨. ಚಿತ್ರದುರ್ಗ ಮೊದಲಾದ ಪ್ರಾಂತಗಳಲ್ಲಿ ಬೇಗಾರಿಗಳು ಎಂಬ ಸಂಸ್ಥೆ ಇದೆ (ಜಾಕಗಾ. ೩೩). ೩. ಯಿ ಗ್ರಾಮದ ರೈತರಿಗೆ ಕಾಲ್ವೆಕೆಲಸ ಹೊರ್ತು ಕಡಮೆ ಬಿಟ್ಟಿ ಬೇಗಾರಿ ಮುಂತಾದ ವುಪದ್ರವಯಿಲ್ಲದ ಹಾಗೆ ನಡುವಂತೆಯೂ (ಮೈಕಾ. ೦೯೩೯, ೯೨-೦೦೮; 1825); ಆದವಾನಿಯಂಥಾ ಬಸಾಲತ್ ಜಂಗನ ರಾಜಧಾನಿಯಲ್ಲೂ ತಹಸೀಲಿನ ಬಿಟ್ಟಿಬೇಗಾರಿಗಳಿಗೆ ವಿಚಿಯಿರಲಿಲ್ಲ (ಕಥಪಿ. ೩೬೩). [←ಪಾರ. ಹಿಂ. ಬೇಗ್ಯಾರ್, ಬೇಗಾರಿ ; ಮರಾ. ಬಿಗಾರ್, ಬಿಗಾರೀ, ಬೇಗಾರ್, ಬೇಗಾರೀ]

**ಬೇಗಾರ** 'ಬೇಗಾರ್' ನೋ.

**ಬೇಗಾರಿ** 'ಬೇಗಾರ್' ನೋ.

**ಬೇಗು** (ಕ್ರಿ). ಅತಿ ಆಸೆಪಡು ; ದುರಾಸೆಪಡು : ಪಥೀ ನಿನ್ನ ಹೊಟ್ಟೆ ಕಡಿಯಾ! ಏನು ಬೇಗ್ತದೋ ಪಡಬೇಗುಟ್ಟಿದ್ದು! (ಮಲಿಪು. ೨೦). [ ? ]

**ಬೇಗುದಿ$_1$** (ಕ್ರಿ). ೧. ತೀವ್ರವಾಗಿ ಕುದಿ ; ಚೆನ್ನಾಗಿ ಬೇಯು. ೨. (ಅಲಂ) ಸಂತಾಪಗೊಳ್ಳು; ತಪಿಸು : ಆ ದೈತ್ಯನು ತಾಗಿ ಹೊದಕುಳಿಗೊಂಡು ಬೇಗುದಿದುದ್ದೈ ವ್ಯೋಮಗಾಮಿಗಳ ಮೇಣ್ ಕಾಮರೂಪಿಗಳ ಕತಬಲಿಯು ಭೀಮಸೇನಾಬ್ಧಿ (ಶ್ರೀರಾಮಪಾ. ೬೪೨-೦೮). [ಬೇ$_1$ + ಕುದಿ$_1$]

**ಬೇಗುದಿ$_2$** (ನಾ). ೧. ತೀವ್ರವಾದ ಬೇಗೆ; ಅತ್ಯುಷ್ಣ: ಇಂತಪ್ಪ ಬೇಸಗೆಯೊಳ್ ಬೇಗುದಿಯಪ್ಪ ಮಹಾರಣ್ಯದೊಳ್ (ಕಮಪಾ. ೪-೯೭ ವ). ೨. (ಆಲಂ) ಸಂತಾಪ; ದುಃಖ; ತಳಮಳ : "ಬೇಗುದಿ, ಉಬ್ಬೆಗಂ, ಅದವಟಲ್— ಈ ೩ ಸಂತಾಪಂ" (ಕಶಾ. ೩೬-೨೨೬); ವೈರಾನುಬಂಧದ ಬೇಗುದಿಯ ದುಮ್ಮಾನ ದಳವೇಱಿದುದು ಪೇೞಿತು ಭೀತಿ ಭೂಪತಿಗೆ (ಕುವ್ಯಾಗ. ೧-೬೨) ; ಯಾರ ಸಾಹಚರ್ಯದಿಂದಲೂ ಅವನ ಬೇಗುದಿ ಆರುವಂತಿರಲಿಲ್ಲ (ಕೂಶಕ. ೩೦೯). [ < ಬೇಗುದಿ$_1$ ]

**ಬೇಗುದಿಗೊಳ್**, ಬೇಗುದಿಗೊಳು, ಬೇಗುದಿಗೊಳ್ಳು (ಕ್ರಿ). ೧. (ಬಿಸಿಲಿನ ತಾಪ ಅಥವಾ ಜ್ವಾಲೆಗಳಿಂದ) ಬೇಗೆ ಹೊಂದು; ಬಳಲು : ಬಿಸಿಲೊಳ್ ಬೇಗುದಿಗೊಂಡವಂ ತಣ್ಗೊಳನಂ ಪೊಕ್ಕಂತೆಯುಂ . . . ಪಿರಿದಪ್ಪ ಸಂತಸಮನೆಯ್ದಿ (ಕಬ್ಬಿಕಾ. ೩೨೧). ೨. ಸಂತಾಪವನ್ನು ಹೊಂದು; ತಳಮಳಿಸು : ಸಹೋದರನದೇನೆಂದಪನೊ ಹಾಯೆಂದು ಲಕ್ಷ್ಮಣಂ ಬೆಂದು ಬೇಗುದಿಗೊಂಡನು (ತ್ರೈರಾಕಾ. ೦೯-೦೩). **ಬೇಗುದಿಗೊಳು :** ೨. ಓ ರೂಪಸೌಂದರ್ಯವೇ ! ಇಳೆಯೊಳಗೆ ಕಳವಳಿಸಿ ಕುದಿದು ಬೇಗುದಿಗೊಳುವ ನನ್ನ ಜೀವದ ಧೈರ್ಯವೇ ! (ಕಯುಜ. ೭೦-೩). **ಬೇಗುದಿಗೊಳ್ಳು :** ೨. ದಾಸರು ಆತ್ಮೀಯತೆಯ ತೀವ್ರ ಸೆಳೆತಕ್ಕೆ ಸಿಕ್ಕಿ ತೊಳಲಾಡುತ್ತಾ ಹೇಗೆ ಮುಂದುವರಿಯಬೇಕೆಂದರಿಯದೆ ಬೇಗುದಿಗೊಂಡರು (ಐದುಪ್ರ. ೧೨೯) ; ಅಪರಿಚಿತ ಮಲ್ಲನೊಬ್ಬನಿಂದ ತಮಗೆ ಪರಿಭವ ಒದಗಿತಲ್ಲ ಎಂದು ಅವರ ಚಿತ್ತ ಬೇಗುದಿಗೊಂಡಿತು (ಹಾಂಪಾ. ೨೪೩). [ಬೇಗುದಿ$_2$ + ಕೊಳ್$_1$]

**ಬೇಗುದಿಗೊಳು** 'ಬೇಗುದಿಗೊಳ್' ನೋ.

**ಬೇಗುದಿಗೊಳ್ಳು** 'ಬೇಗುದಿಗೊಳ್' ನೋ.

**ಬೇಗುದಿಸು** (ಕ್ರಿ). ಬೇಯುವಂತೆ ತಾಪವನ್ನುಂಟುಮಾಡು : ಸುಡುವ ಬೇಗೆಗಳಲ್ಲಿ ತುಪಿಡಿಯುವೆ ಕೊರೆವ ಚಳಿನಡುಗಿಸಲಿ ಬೇಗುದಿಸುವೆ (ದ್ರಾಕ್ಷದಾ. ೯-೨೨). [ಬೇ$_1$ + ಕುದಿಸು (<ಕುದಿಯಿಸು)]

**ಬೇಗುರಿಕ** (ನಾ). ಬೇಗುದಿಗೊಂಡವನು; ಅಸೂಯೆ ಹೊಂದಿದವನು: 'ಬೇಗುರಿಕತನ' ಪರಾ. [ಬೇಗೆ + ಉರಿಕ]

**ಬೇಗುರಿಕತನ** (ನಾ). ಬೇಗುದಿಗೊಳ್ಳುವುದು ; ಅಸೂಯೆಪಡುವಿಕೆ: ಅಸುರಾರಾತಿ ಅರಸನ ಬೇಗುರಿಕತನವಱಿದು ಶೀಘ್ರದಿನಾಗಲಾಕ್ಷಣದಲೊಂದು ಭೀಮನ ರೂಪವನು ರಚಿಸಿ ಸಾಗಿ ಬಂದಾಯೆಂಧನೃಪನೆದುರಾಗಿ ನೂಕಲ್ಕೆ (ಹಮ್ಮಸ್ತ್ರೀ. ೨-೪೭). [ಬೇಗುರಿಕ + —ತನ]

**ಬೇಗೂರ್** (ನಾ). ಒಂದು ಊರಿನ ಹೆಸರು : 'ತುಯ್ಯಲಬೇಗೂರ್' ಪರಾ. [? + ಊರ್]

**ಬೇಗೆ** (ನಾ). ೧. ಬೆಂಕಿ ; ಕಿಚ್ಚು : ಘೋರಕಾಂತಾರಮನೊಂದು ಬೇಗೆ ಪರಿವಂತು ರಥಂ ಪರಿವತ್ತು (ಕಂಶಕಾ. ೬-೯೬) ; ಕಾನನವಂಜುವುದು ಬೇಗೆಗಯ್ಯಾ (ಬಸವ. ೭೩) ; ಶ್ರೀಗಂಧ ಧೂಪಾರ್ತಿ ಮಹಾರಣ್ಯದ ಬೇಗೆವೊಲ್ ಪೊಗೆ ಮುಸುಕಿದುದು (ಪೋಹಶ. ೯೨-೩೦). ೨. ಉರಿ ; ಜ್ವಾಲೆ : ಮನ್ಮಥಾನಳಶಿಖಿ ಬೇಗೆಯಾಗೆ ಮದನಾಟವಿಯಂತೆವೊಲೊಪ್ಪಿ ತೋಱಿದಳ್ (ಕಾವ್ಯಗಾ. ೬೦೨ ಕೂರ್ಮ್ರ); ಅಭ್ರಕ್ಕರುಗಳರ ಬೇಗೆಯೊಳಗಣ ವಿಷಮುಚಿಗಳ ತೆಱದಿ ವ್ಯಕ್ತ ಉರಿದೇ ಹೋಹಿರಿ (ಬಸವ. ೫೭-೨೯). ೩. ಕಾವು ; ತಾಪ ; ಶಾಖ : ವಿಳಯಕಾಳದ ಕಾಟ್ಕಿರ್ಚಿನ ಬೇಗೆ ಸಾರ್ವಂಶಿರ್ವಲದಳವುಂ ಕಿರ್ಚುಂ ಕಿಡಿಯುವಮಾಗೆ ತಾಗಿದಾಗಳ್ (ಕಂಶಕಾ. ೦೦-೭೬ ವ) ; ಕಿಚ್ಚಿಲ್ಲದ ಬೇಗೆಯುಲಿ ಬೆಂದೆನವ್ವ (ಮಹಾದೇ. ಬ. ೩೨-೬೯); ವಿರಹತಾಪದ ಬೇಗೆ ಭೂಮಿಾಶ್ವರನ ಮುಸುಕಿತು (ಕಂಭಶ. ೦೩-೨೯). ೪. (ಆಲಂ) ಸಂಕಟ ; ತಳಮಳ ; ದುಃಖ : ತಂದೆ ಕಟಿದಟಲ ಬೇಗೆಯೊಳಂ ದೂರದೆ ಬೆರ್ದೊಂದು ಕಡುಸೇದೆಯೊಳಂ ಬಂದೆನ್ನಂ ಪರವಶತೆಯೊಳೊಂದಿಸಿದತ್ತಾಗಳಾ ಪಿಪಾಸೋದ್ರೇಕಂ (ಕಾದಂಪೂ. ೦೮೯); ವಿರಹಿಗೆ ಬೇಗೆಯುಂ ಪ್ರಿಯರ್ಗೆ ರಾಗಮುನಾಗಿಸುಗುಂ ಬಸಂಗಳೊಳ್ ಪೊರೆವ ಮದಾಳಿ . . . ಕೂಡುವ ತುರಂಗಮು " ಘುಮ್ಮೆನುತಿರ್ಪ ಪಾರಿವಂ (ಕೂಕ್ತಕು. ೯-೪೦); ತನ್ನ ಒಡಲ ಬೇಗೆಯನ್ನು ತೀರಿಸಿಕೊಳ್ಳಬೇಕೆಂದು ಅರ್ಜುನನು ಅವನನ್ನು ಬೆನ್ನಟ್ಟಿ ಹೋಗಿ . . . ಎಳೆದು ತಂದನು (ಶೀಗಟ್ಟು. ೫೦). [ಬೇ$_1$ + —ಗೆ]

**ಬೇಗೆಗಣ್** (ನಾ). ಕೆಂಡಗಣ್ಣು: ಅಗ್ನಿನೇತ್ರ: ಈಶ ಬೇಗೆಗಣ್ಣಿಂದ ದಹಿಸದೆ ಬಿಡನು (ಪಪಪೂ. ೯-೨೦). [ಬೇಗೆ + ಕಣ್]

**ಬೇಗೆಗಿಚ್ಚು**, ಬೇಗೆಗಿರ್ಚು (ನಾ). ಬೆಂಕಿಯ ಜ್ವಾಲೆ : ವಿಮಳತಮೆತ್ತ ನೀರ್ವೊಟಿಯ ತೀರದೆ ಚಾರುಸಿಕುಂಜಪಂಕ್ತಿಯೊಳ್ ಸಮನಿಸೆ ಬೇಗೆಗಿಚ್ಚ ಕುರ್ವ ಕೇಸುರಿಯಾಸಾರವಾಗೆ (ರಕರ. ಶಂ. ೦-೦೦೯). **ಬೇಗೆಗಿರ್ಚು :** ಬೇಗೆಗಿರ್ಚಿನೊಳ್ ಬೇವವೊಲಿರ್ದುವಿರ್ಪಲದ ಬಿಲ್ಲಣಿಗಳ್ ರಣರಂಗಭೂಮಿಯೊಳ್ (ಕಂರಾವಾ. ೦೩-೯೮) ; ಬೆಟ್ಟವೇಸಗೆಯ ಬೇಗೆಗಿರ್ಚಿನ ಬಳಸಿಂಗೊಳಗಾದ ಸಿಂಗದ ಸಂಗಡದಂತೆಯುಂ (ಕುಶ್ವಪ್ರ. ೩-೦೭೬ ವ). [ಬೇಗೆ + ಕಿಚ್ಚು]

**ಬೇಗೆಗಿರ್ಚು** 'ಬೇಗೆಗಿಚ್ಚು' ನೋ.

**ಬೇಗೆಗೊಳ್** (ಕ್ರಿ). ಬೇಯು ; ಸುಡು : ಅಂಬುಚರಮೆಲ್ಲಂ ಬೇಗೆಗೊಂಡತ್ತು ಬಾಂಬೊಳೆ ಬತ್ತಿತ್ತು ಮರೀಚಿ ಪೊಣ್ಮಿದುದರಣ್ಯಂ ಬೇದುದಾಗ್ರೀಷ್ಮದೊಳ್ (ರಾಜಶೇ. ೫-೩೭). [ಬೇಗೆ + ಕೊಳ್$_1$]

**ಬೇಗೆಪತ್ತು** (ಕ್ರಿ). ಬೆಂಕಿಯುಂಟಾಗು ; ಕಿಚ್ಚು ಹತ್ತು : ಬೇಗೆಪತ್ತಿದ ಬೆಟ್ಟಂ ಪೊಣರ್ವಂತೆ ಪೋರ್ದುವು ಗಜವ್ಯೂಹಂ ಗಜವ್ಯೂಹದೊಳ್ (ಅಜಿಪು. ೦೯-೩). [ಬೇಗೆ + ಪತ್ತು$_1$]

**ಬೇಗೆಯಾಱು** (ಕ್ರಿ). ಕಿಚ್ಚು ಇಲ್ಲದಂತಾಗು ; ಬೆಂಕಿ ಆರು : ಬೇಗೆಯಾಱುವೊಡಾಱು ತಿಂಗಳು ತಡವುಂಟು ಹೋಗಬಹುದು ಮುಂದೆ ಮತ್ತೆ ಈಗ ನೀವೆರಡುಬಂಡದ ಮ್ಲೇಚ್ಛದವರುಕ್ಕನೀಗಾಡಿ ತಹುದಿಲ್ಲಿಗೆ (ಭರತ. ೩೦-೩). [ಬೇಗೆ + ಆಱು$_1$]

**ಬೇಗೆವಡೆ** (ಕ್ರಿ). ತಾಪವನ್ನು ಹೊಂದು ; ಸುಡು : ಸುಡುವ ಕನ್ನಡಿಯೊಳಿದೊರ್ಡೆ ನಿಜಾಸ್ಯಂ ಬೇಗೆನಡೆಯದು (ಅಮಾಶಾ. ೨-೭-೫). [ಬೇಗೆ + ಪಡೆ$_1$]

**ಬೇಗೆವರಿ** (ನಾ). ತಾಪವು ಹೆಚ್ಚಾಗುವಿಕೆ ; ಶಾಖವು ಹರಡುವಿಕೆ : ಬೇಗೆವರಿ ಬೆಳುದಿಂಗಳಲಿ ನವಮಗೀನ ತೋಱಿತಲಾ (ಕುಮ್ಯಾಕ. ೦೨-೨೮). [ಬೇಗೆ + ಪರಿ$_3$]

**ಬೇಗೆವೋಗು** (ಕ್ರಿ). ಸುಟ್ಟುಹೋಗು ; ದಹಿಸಿಹೋಗು : ಬೇಗೆವೋದ ಬೆಟ್ಟದಂತೆ ಮೆಯರ್ ಬಿಸುಪನಾಗೆ (ಧರ್ಮಾಮೃ. ೦೦-೩೩) ; ಪಟು ಬೇಗೆವೋಗೆ . . . ಬಸವಱಿದುಮು ಬೇಸಗೆಯ ಬಿಸಿಲೊಳೊಂದಿಭಕಳಭಂ (ಚಂಪ್ರಪು. ೯-೭೪). [ಬೇಗೆ + ಪೋಗು$_1$ (< ಪೋ$_1$)]

**ಬೇಚರಾಕ** 'ಬೇಚಿರಾಖು' ನೋ.

**ಬೇಚರಾಕು** 'ಬೇಚಿರಾಖು' ನೋ.

**ಬೇಚರಾಖು** 'ಬೇಚಿರಾಖು' ನೋ.

**ಬೇಚಿರಾಕ** 'ಬೇಚಿರಾಖು' ನೋ.

**ಬೇಚಿರಾಕು** 'ಬೇಚಿರಾಖು' ನೋ.

**ಬೇಚಿರಾಖ** 'ಬೇಚಿರಾಖು' ನೋ.

**ಬೇಚಿರಾಖು**, ಬೇಚರಾಕ, ಬೇಚರಾಕು, ಬೇಚರಾಖು, ಬೇಚಿರಾಕ, ಬೇಚಿರಾಕು, ಬೇಚಿರಾಖ (ನಾ). ನಿರ್ಜನವಾದ ಭೂಮಿ ; ಪಾಳುಭೂಮಿ ; ಬೀಳು : ಒಂದು ಹಳ್ಳಿಯಲ್ಲಿ ಕೂಡ ಜನವಸತಿಯು ಉಳಿಯದಂತೆ ಬೇಚಿರಾಖು ಮಾಡಿದರು (ಕಶ್ಯಾಡಿ. ೦೦೭). **ಬೇಚರಾಕ :** ಆ ಹಳ್ಳಿ ಬೇಚರಾಕವಾಗಬೇಕೆ ? (ಮುಕ್ತಾಮು. ೦೦೫). **ಬೇಚರಾಕು :** ಅನಾದಿ ಬಂಜರುಭೂಮಿಯು ಬೇಚರಾಕಾಗಿರುವ ಭೂಮಿ ಸಹ ಎಷ್ಟು ಇದೆಯೋ

ಚನ್ನಾಗಿ ನೋಡಿ . . . ಸಾಗುವಳಿ ಮಾಡಬೇಕು (ಮಹಾಮ. II, ೬೦); **ಜೋಗಿಪುರ ಆಗಲೇ ಬೇಚರಾಕು** ಆಗುತ್ತಾ ಬಂದಿತ್ತು (ನನ್ನೂರು. ೦೫೦).
**ಬೇಚರಾಖು :** ಕಸವಗಟ್ಟಿಯೆಂಬ ದಿನ್ನೆ . . . ಬೇಚರಾಖು ಬಿದ್ದು ಇದೆ (ಮಹಾಮ. II, ೬೯). **ಬೇಚಿರಾಕ:** ವಾಡೇ ಮತ್ತು ಮಠ ಇವೆರಡೂ ಹೀಂಗ ಹಾಳಾದರ, ಪಾದಳ್ಳಿ ಬೇಚಿರಾಕ ಆದ್ಹಾಂಗ (ಗ್ರಾಮಾಯ. ೬೯). **ಬೇಚಿರಾಕು :** ಹಳೇಆಲೂರು ಒಂದು ಬೇಚಿರಾಕುಗ್ರಾಮ (ಮ್ಯಾಸ್ತು. ೯೬). **ಬೇಚಿರಾಖು :** ಗ್ರಾಮಗಳು ಇನಾಮಿ ಬೇಚಿರಾಖು ಸಹಿತ (ಳಭಾಗ. ೨).

[← ಪಾರ. ಹಿಂ. ಬೇಚಿರಾಗ್; ಮರಾ. ಬೇಚಿರಾಖ್, ಬೇಚಿರಾಗ್]

**ಬೇಜಮಿ, ಬೇಜಿಮೆ** (ನಾ). ಅಗತ್ಯದ ಪೂರೈಕೆ.—ವ್ಯವಸ್ಥೆ : ಇವೊತ್ತಿನ ಬೇಜಮಿ ಇವತ್ತು ಮಾಡಿಕೊಳ್ಳದಿದ್ದರೆ (ಮಿಂಚುಹು. ೫೫); ಪಗಾರ ಬರೂತನಕ ನಾ ಹೆಂಗರ ಬೇಜಮಿ ಮಾಡತೀನಿ (ಅನ್ನ. ೦೨೦). **ಬೇಜಿಮೆ :** ಕ್ಷೀರ_ದಧಿ ಸುಭೃತದ ಬೇಜಿಮೆಯಾಗುತ್ತಿತ್ತು (ದೀಪಹ. I, ೭೦); ಅಮೇರಿಕೆಯಲ್ಲಿ ವಿದ್ಯಾರ್ಥಿಗಳು ಕೂಲಿ ಮಾಡಿ ದುಡಿದು ವರ್ಷದ ಖರ್ಚಿನ ಬೇಜಿಮೆ ಮಾಡುವರು (ಅಮೇಪ. ೦೨).

[← ಮರಾ. ಬೇಜಮಿ, ಬೇಗಮಿ]

**ಬೇಜವಾಬುದಾರಿ,** ಬೇಜವಾಬ್ದಾರಿ (ಗು). ೧. ಜವಾಬ್ದಾರಿ ಇಲ್ಲದ; ಹೊಣೆಗೇಡಿತನದ : ಈ ರೀತಿ ಬೇಜವಾಬುದಾರಿ ಮಾತನಾಡುವುದು ಸರಿಯಲ್ಲ (ಬಿಮಾ೫. ೦೫೪) ; ನೀವು ಮಾಡುತ್ತಿರುವ ಬೇಜವಾಬುದಾರಿ ಕೆಲಸದ ಬಗ್ಗೆ ಊರಲ್ಲಿ ಈಗಾಗಲೇ ಗುಲ್ಲು ಎದ್ದಿದೆ (ರಂಗರೋ. ೬೯). (ನಾ). ೨. ಜವಾಬ್ದಾರಿ ಇಲ್ಲದಿರುವಿಕೆ ; ಹೊಣೆಗೇಡಿತನ : ಬೇಜವಾಬುದಾರಿಯಿಂದ ಇಂಥ ಕೃತಿಯನ್ನು ಮುಂದುವರಿಸುವುದೂ . . . ಅಥವಾ. . .ಯಾವುದಾದರೊಂದು ಕಾಲ್ಪನಿಕ ಅಕ್ಲಿಷ್ಟ ಸುಖದೊಳಗೆ ತನ್ಮಯನಾಗಿರುವುದು (ಕೃಶಂಠ. ೦೪). **ಬೇಜವಾಬ್ದಾರಿ :** ೧. ಬೊಂಬಾಯಿಗೆ ಹೋಗಿ ಬೇಜವಾಬ್ದಾರಿ ಬೇವರ್ಸಿಯ ಹಾಗೆ ಅಲೆದು 'ಫ್ಲೂ' ತಂದುಕೊಂಡ ನನಗೆ ಮೈಸೂರಿನಿಂದ ಟೆಲಿಗ್ರಾಂ ಬಂತು (ಹೊಸಕ್ಷಿ. ೦೨೪).

[← ಮರಾ. ಬೇಜಬಾಬ್‌ದಾರ್]

**ಬೇಜವಾಬ್ದಾರಿ** 'ಬೇಜವಾಬುದಾರಿ' ನೋ.

**ಬೇಜಾರು** (ನಾ). ಉತ್ಸಾಹವಿಲ್ಲದಿರುವಿಕೆ ; ನಿರುತ್ಸಾಹ ; ಬೇಸರ : ಅವನನ್ನು ಕೋರ್ಟಿನಲ್ಲಿ ಹಾಜರುಪಡಿಸುವ ವಿಷಯದಲ್ಲಿ ನಿಮಗೆ ಬೇಜಾರು ಬೇಡ! (ಧೂಮಕು. ೪೪) ; ಬಲದೇವನಿಗೆ ಶಾಲೆಗೆ ಹೋಗಲು ಬೇಜಾರು (ಳಶಾಸಾ. ೨೬). 'ಬೇಸಱಿಂ$_2$' ಪರಾ.

**ಬೇಜಾರುಗೊಳ್ಳು** = ನಿರುತ್ಸಾಹಪಟ್ಟುಕೊಳ್ಳು ; ಬೇಸರಿಸು : ಕೊನೆಗೊಮ್ಮೆ ಬೇಜಾರುಗೊಂಡು ವಿನೋದ ತನ್ನ ತಾಯಿಗೆ ಹೇಳಿಯೇ ಬಿಡುತ್ತಿದ್ದ (ಘಾರಹ. ೦). **ಬೇಜಾರುಪಡು** = ಬೇಜಾರುಗೊಳ್ಳು : ಬೆಂಗಳೂರಿನಿಂದ ಯಾರು ಬಂದರೂ ನಮ್ಮ ಕಡೆ ಪೆಚ್ಚಿಗೆ ದಿನವಿರಲು ಬೇಜಾರುಪಟ್ಟುಕೊಳ್ಳುತ್ತಾರೆ (ಕೂಪಸೇ. ೦೬).

[← ಪಾರ. ಹಿಂ. ಮರಾ. ಬೇಜಾರ್. / ತಮಿ. ವೇಜಾಱು ; ತುಳು. ಬೇಜಾರ್; ಕೊಡ. ಬೇಜಾರ]

**ಬೇಜಿಮೆ** 'ಬೇಜಮಿ' ನೋ.

**ಬೇಜ್ಯಾ** (ನಾ). ಉಪಯೋಗವಿಲ್ಲದುದು; ನಿಷ್ಪ್ರಯೋಜಕವಾದುದು: ಹಾಲಪ್ಪನಾಯ್ಕನ ಮಾತಿನ ಮೇಲೆ ಬಂದದ್ದು ಬೇಜ್ಯಾ ಆಯಿತ್ತು. ಇನ್ನಾಮೇಲೆ ನಾವು ಖಾಮುಷು ಇದ್ದರೆ ಪರಿಣಾಮ ಆಗೋದಿಲ್ಲ (ಮಂದತ. ೦೬-೯). [←ಹಿಂ. ಮರಾ. ಬೇಜಾನ್=ಸತ್ತ್ವವಿಲ್ಲದುದು]

**ಬೇಟ** 'ಬೇಂಟ' ನೋ.

**ಬೇಟಕಾರ** 'ಬೇಂಟಗಾಱ' ನೋ.

**ಬೇಟಕಾರ್ತಿ** (ನಾ). ೧. ಪ್ರಣಯಲಾಲಸೆಯುಳ್ಳವಳು. ೨. ವೇಶ್ಯೆ, ಗಣಿಕೆ : ಮತ್ತೊರ್ವ ಬೇಟಕಾರ್ತಿ ತಾಯ ಕಣ್ಣಂ ಬಂಚಿಸಿ ತನ್ನ ಮೋಹಿ ನಾಕೆಯ ಮನೆಗೆ ಪೋಪ ಬೇಟದಾಣ್ಮನಂ ಪಿಡಿದು (ಶಂಶಭಾ. ೪-೯೮ ವ); ಬೇಟಕಾರ್ತಿಯರಿವರೀಕೆಗಳ್ ಬಸನಿಗಳ್ ಕಡುಬದ್ದೆಯರೆಂದುಮಿಾ ಲತಾಂಗಿಯರೆನಿಸಿರ್ದರಂ ನಯದೆ ನೋಡಿದನಪ್ರತಿವೈಶ್ಯಸಂಭವಂ (ಬಂಹಂ. ೩-೪೮); ಸರ್ವಸ್ವವನು ನೆಱೆ ಕವರಿ ಗೋಟುಗೊಳಿಸುವ ಬಲ್ಮೆಗಳ ಬಲ್ಲಾಟವಿತ ಬಹುವಿಧದ ಮಾಯೆಯ ಬೇಟಕಾರ್ತಿ[ಕಾಕಾಂ. ತಿ]ಯರೊಪ್ಪಿದರು (ತೊರರಾ. ೧-೫-೩೦). [ ಬೇಟಕಾಱ$_1$ (< ಬೇಂಟಗಾಱ) + — ತಿ$_1$ (< — ಇತ್ತಿ )]

**ಬೇಟಕಾಱ$_1$** 'ಬೇಂಟಗಾಱ' ನೋ.

**ಬೇಟಕಾಱ$_2$** (ನಾ). ಬೇಟೆಯಾಡುವವನು (?) : ಕೊಂಕಣಗ ಬೇಟಕಾಱ ಮಲೆಯ ತಾತಳತು × × × ಮಚತಿಸುವರಮಂ ತಳಸಾಲ ಹಸುವ ಗಂಟಿಲ ಗಾಳ (ಎಕ. VIII, ಸಾಗರ. ೬೭-೦೦; 1107).

[P ಇದು 'ಬೇಟೆಕಾಱ' ಎಂಬುವರ ಅಪಲಿಖಿತವಿರಬಹುದು]

**ಬೇಟಗೊಳ್** 'ಬೇಂಟಂಗೊಳ್' ನೋ.

**ಬೇಟಮರುಳು** (ನಾ). ಪ್ರಣಯಲಾಲಸೆ.

**ಬೇಟಮರುಳಾಗು** = ಪ್ರಣಯಲಾಲಸೆಯಿಂದ ಮರುಳಾಗು : ನಿನ್ನನು ಬಿಡದೆ ನೋಡಿದ ಜವ್ವನಿಗರು ಬಡವಾಗವೆ ಬೇಟಮ [ಕಾಕಾಂ. ಮ]ರುಳಾಗದಿರ್ಪರೆ ಬಡನಡುವಿನ ಬಿಂಕಕಾರ್ತಿ (ಶಂರಾಸಾ. ೨೪-೫೬). [ ಬೇಟ (< ಬೇಂಟ) + ಮರುಳು ( < ಮರುಳ್$_2$) ]

**ಬೇಟವಾತು** (ನಾ). ಪ್ರೇಮದಿಂದ ಕೂಡಿದ ಮಾತು ; ಲಲ್ಲೆಯ ನುಡಿ : ನಲ್ಲಳ ಬೇಟವಾತೋ ಶುಕಚಾರುನಿನಾದಮೊ . . . ವಿಬುಧಾನುರಾಗಮೊ (ಉದ್ಭಟ. ೦-೩೩). [ ಬೇಟ ( < ಬೇಂಟ ) + ಮಾತು$_1$ ]

**ಬೇಟವೆಣ್** (ನಾ). ಪ್ರಣಯಲಾಲಸೆಯುಳ್ಳವಳಂ ; ನಲ್ಲೆ : ವಿರಹದಿಂ ಪ್ರಿಯಾತಮಸಮಾಗಮಪ್ರತ್ಯಾಶೆ ಹೃದಯಮಂ ಬೇಯಿಸಲ್ಕಾ ಬೇಟವೆಣ್ ಸೋಗೆ ನವಿಲುಕಲ್ಲಿಗೆ ಮರಳಿ ಬಂದು ಕರೆವುದು ಕೇಗಿ ತನ್ನೆರೆಯನಂ (ಚಿತ್ರಾಂಗ. ೫೫-೦೫೦೨). [ ಬೇಟ (< ಬೇಂಟ) + ಪೆಣ್ ]

**ಬೇಟವೆಳಸು** (ನಾ). ಪ್ರಣಯದ ವೃದ್ಧಿ ; ಪ್ರೇಮದ ಆಧಿಕ್ಯ.- ಹೆಚ್ಚಳ : ಕಾಮಿನಿ ಹುಲಿಸಾದ ಬೇಟವೆಳಸಂ [ಸಿಂ] ಕಡುಸಂತಸದಂತ ಮೆಯ್ದಿದಳ್ (ಸೂಕ್ತಿಸು. ೦೪-೮೪). [ಬೇಟ (< ಬೇಂಟ) + ಬೆಳಸು$_2$]

**ಬೇಟಹೂಡು** (ಕ್ರಿ). ಪ್ರಣಯದಲ್ಲಿ ತೊಡಗು : ಇನಿಯಳೊಡನೆ ಪಾರಿವಾಳ ಬೇಟಹೂಡಿದೆ (ಮೂಂದೀ. ೦೦-೮).

[ ಬೇಟ ( < ಬೇಂಟ ) + ಹೂಡು$_1$ ( < ಪೂಡು )]

**ಬೇಟೆ** 'ಬೇಂಟೆ' ನೋ.

**ಬೇಟೆಕಾತಿ** (ನಾ). = ಬೇಂಟೆಗಾರ್ತಿ : ಚಾಳವಣೆಗಳ ಬಲೆಯ ಠಕ್ಕಿನ ಠೌಳಿಗಳ ತೋಹುಗಳ ನಗೆಗಳ ಮೇಲುಮುದ್ದಿನ ಬೇಟೆಕಾತಿಯರೈದಿದರು ವನವ (ತೊರರಾ. ೦-೫-೩೯); ವಿಟರಕ್ಷಿಮೃಗಂಗಳ . . . ತುಂಗಕುಚಗಳೆಂಬ ಬಿನಲಿ ಸಿಲುಕಿಪರನಂಗನ ಬೇಟೆಕಾತಿಯರು (ಳುನಪ. ೨೦-೬೬).

[ ಬೇಟೆ ( < ಬೇಂಟೆ ) + — ಕಾತಿ$_5$ ]

**ಬೇಟೆಕಾಱ** 'ಬೇಂಟೆಗಾಱ' ನೋ.

**ಬೇಟೆಗ** 'ಬೇಂಟೆಗ' ನೋ.

**ಬೇಟೆಗಾರ** 'ಬೇಂಟೆಗಾಱ' ನೋ.

**ಬೇಟೆಗಾರಿಕೆ** (ನಾ). ಬೇಟೆಯಾಡುವಿಕೆ ; ಶಿಕಾರಿ : ಹಿಂದಿನ ಬೇಟೆಗಾರಿಕೆ ದನಕಾರಿಕೆಗಳು ಬಿಟ್ಟು ಹೋದುವು ಎಂದಲ್ಲ (ಸಾಹಿಸ. ೦೩೦).

[ ಬೇಟೆಗಾರ ( < ಬೇಂಟೆಗಾಱ) + — ಇಕೆ ]

**ಬೇಟೆಗಾಱ** 'ಬೇಂಟೆಗಾಱ' ನೋ.

**ಬೇಟೆನಾಯಿ** 'ಬೇಂಟೆನಾಯ್' ನೋ.

**ಬೇಟೆಯೂಡು** ' ಬೇಂಟೆಯಾಡು ' ನೋ.

**ಬೇಟೆರಾಯ** (ನಾ). ಒಂದು ಕ್ಷುದ್ರದೇವತೆಯ ಹೆಸರು ; ಹಿಂದೆ ಬೇಟೆಗೆ ಹೋಗುತ್ತಿದ್ದ ಜನರು, ಮೊದಲು ಈ ದೇವತೆಯನ್ನು ಪೂಜಿಸುತ್ತಿದ್ದಿರಬಹುದು : ನಗಧರ ತಿರುಮಲೇಶ್ವರ ಬೇಟೆರಾಯರು ವಿುಗೆ ಕಾದಿಹರು ಪಟ್ಟಣವ (ಕಂಸಪ. ೬-೧೧೨).

[ ಬೇಟೆ ( < ಬೇಂಟೆ ) + ರಾಯ ]

**ಬೇಟೆವೆಸ** (ನಾ). ಶಿಕಾರಿಯ ಹವ್ಯಾಸ.—ಉದ್ಯೋಗ : ಪೊಗಸಿನೊಳ್ ಪೊಗಸಿ ಪೈಗುವರೆಗಂ ಬೇಟೆವೆಸದಿನಸುವರೆಯಾಗಿ . . . ಬೇಸಱಿಸಿದ ಪುಳಿಂದಿನಿಯರ ಮನದೊಳೊಂದಿನಿಸು ಸಂದಿಸಿಯುಂ (ತಂಪ್ರಪು. ೯-೪೭).

[ ಬೇಟೆ ( < ಬೇಂಟೆ ) + ಬೆಸ$_1$ ]

**ಬೇಡ$_1$** (ನಾ). ೧. ಬೇಟೆಯನ್ನು ವೃತ್ತಿಯಾಗಿ ಉಳ್ಳವನು : ಬಿಲ್ಲರ ಜಾತಿಗೆ ಸೇರಿದವನು ; ಶಬರ : "ವನಚರ ಕಿರಾತ ಧಾನುಷ್ಕ ನಿಷಾದ ಪುಲಿಂದ ಶಬರ ಭಿಲ್ಲಾಖ್ಯಂ ಬೇಡನಪಂ" (ಪಕ್ಕೋ. ೬೬-೯೮) ; ಕಾಡೊಳ್ ಬೇಡರಂತೆ ತೊಟಲ್ವ ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡು ಪುದುಂ (ಕಂಶಿಶಾ. ೬-೩೨ ವ) ; ಇರುಳು ಹಗಲೆನ್ನದೆ ಪ್ರಾಣಘಾತಕವ ಮಾಡಿದ ಬೇಡನ ಕೈಲಾಸಕೊಯ್ದೆಯಯ್ಯಾ (ಬಸವ. ೬೩); ವಿಟರುಗಳ ಕರಣವೆಂಬ ಮಿಗವಿಂಡನುಱ ಬಂಧಿಸುವ ಮುಗುಳೆಂಬ ಬೇಡನ ಜಾಲ ದೊಲ್ ಸೂಳೆಯುರಗುಣಿತಗೃಹಗಳೊಪ್ಪಿಹುವು (ಕಂಸಪ. ೨-೯೮).

[ದೇ॥. ತಮಿ. ವೇಟನ್. ವೇಟ್ಟುವನ್; ಮಲ. ವೇಟನ್; ತುಳು. ಬೇಡವ]

**ಬೇಡ$_2$** (ನಾ). ಹೆದರುವವನು ; ಭೀರು ; ಹೇಡಿ : "ಬೇಡನೆನೆ ಭೀತಚಿತ್ತಂ" (ಶಸಂ. ೧೫೩); ಕನ್ನಡದೊಳ್ ಬೇಡರೆಂದು ಭೀತರ್ಗೆ ಪೆಸರ್ (ಅಕ್ರಚಿ. ೦೨೯-೩). ' ಪೇಡ ' ನೋ.

[ < ಪ್ರಾ. ಭೇಡ./ಮರಾ. ಭೇಡ್=ಭಯ ]

**ಬೇಡ$_3$** (ಅ). ಸಲ್ಲದು, ಬೇಕಾಗಿಲ್ಲ, ಅಪೇಕ್ಷೆಯಿಲ್ಲ ಮುಂತಾದ ಅರ್ಥಗಳನ್ನು ಸೂಚಿಸುವ ಒಂದು ನಿಷೇಧಾರ್ಥಕ ಅವ್ಯಯ : ಬೇಡ ವಿರೋಧಮೆಂತುಮರಿಕೇಸರಿಯೊಳ್ ಸಮಸಂದು ಸಂಧಿಯುಂ ಮಾಡು (ಕಂಶಶಾ. ೧೩-೫೪); ಒಲೆಯು ಬೂದಿಯು ಬಿಲಿಯಲು ಬೇಡ (ಬಸವ. ೧೧೪): ರಣದಲಿ ಶೂಲಿಯನೆಚ್ಚೈಸಿದರೆ ಹಿಡಿವೆನು ಬೀತೆ ಬೇಡಿದಕೆ (ಕುವ್ಯಾದ್ರೋ. ೪-೯).

**ಬೇಡಬೇಡ, ಬೇಡಬೇಡ** (ದ್ವಿರುಕ್ತಿ) : ಅಮರಾಪಗಾಸುತ ಕೃಪ ದ್ರೋಣಾದಿಗಳ್ ಬೇಡವೇಡೆನೆಯುಂ ಮಾಣದೆ . . . ದುಶ್ಶಾಸನಂ . . . ಸೆಗೆದಂ ಧಮ್ಮಿಲ್ಲಮಂ ಕೃಷ್ಣೆಯಾ (ಕಂಪಭಾ. ೬-೫) ; ಇದೇಕೆ ಬೇಡ ವೇಡನೆಯುಂ ಕಿವಿಯೊಳ್ ತೊಡರ್ಚಿ ಪೋದಳೀ ಕುಸುಮಾಮುಂಜರಿಯುಂ (ಕಾದಂಪು. ೬೬೮); ಗಾಡಿಗನನಿರಲೀಸಲಾಗದು ಬೇಡಬೇಡಾವಂದರಿಂದೀ ಬೀಡಿನಲಿ ಪೊಱಪಡಿಸಿಯುತ್ತಲೆ ತಗುಳುವುದು ಮಂತವು (ಬಸಪು. ೪೨-೫೨) : ಬೇಡಬೇಡಾ ಸಾಹಸಂ, ದೇವಿ ; ಬೇಡುವೆನು (ತಶ್ರಾಂಗ. ೩೬ ೧೯೪೯).

**ಬೇಡನ್**=ಬೇಡವಾದವನು ; ಅನರ್ಹನಾದವನು : ಪೊಪೋತ್ತಮಂ ಬಿಸುಟ್ಟಿರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ (ಕಂಪಭಾ. ೯-೬೯) : "ಬೇಡನಲ್ಲನೇ—ಯಾರಿಗೂ ಬೇಡವಾದವನಲ್ಲವೇ, ಅಥವಾ ಕಿರಾತನಾಗುತ್ತೇನಲ್ಲವೇ ?" (ಕಂಪದೀ. ೩೨೯). [ದೇ.॥ ತಮಿ. ವೇಣ್ಟಾವ್; ಮಲ. ವೇಣ್ಟ]

**ಬೇಡಕೊಟ್ಟ** ' ಬೇಡಗೊಟ್ಟ ' ನೋ.

**ಬೇಡಗೊಟ್ಟ, ಬೇಡಕೊಟ್ಟ** (ನಾ). ಶಬರರ ವಾಸಸ್ಥಾನ : ಬೇಡರ ಪಳ್ಳಿ : ಬೇಡಗೊಟ್ಟಮೂರಾಗಿಯುಂ ಪಟ್ಟಣಮಾಗದಂತೆ . . . ದೂರ ಭವ್ಯರುಮಭವ್ಯರುಂ ಶ್ರಾವಕರಾಗಿಯುಂ ಬ್ರಾಹ್ಮಣರಾಗಿಯುಂ ಮೋಕ್ಷಗಾಮಿಗಳಲ್ಲರ್ (ವಡ್ಡಾರಾ. ೧೦-೧೯೬). **ಬೇಡಕೊಟ್ಟ** : ಧನ್ವಂತರಿಯುಮಂತೆ ನಾಲ್ವರುಂ ಕರೆದು ನೀವೀ ಬೇಡಕೊಟ್ಟದೊಳ್ ಮಾಂಸಮಂ ತನ್ನಿಮೆಂದಟ್ಟುವುದುಂ (ವಡ್ಡಾರಾ. ೨-೧೯೯). [ಬೇಡ$_1$ + ಕೊಟ್ಟ$_4$]

**ಬೇಡತಿ** ' ಬೇಡಿತಿ ' ನೋ.

**ಬೇಡಪಡೆ** ' ಬೇಡವಡೆ ' ನೋ.

**ಬೇಡಬಲೆ** (ನಾ). ಶಬರರು ಬೇಟೆಯಲ್ಲಿ ಬಳಸುವ ಬಲೆ.—ಜಾಲ : ಬೆಕ್ಕುಗಳ್ ನುಂಗಿದುವೊ ಪೋಣ್ ಬೇಡಬಲೆಗಳೊಳ್ ಸಿಕ್ಕಿದುದೊ . . . ಠಕ್ಕಿಗೊಳಗಾದುದೋ (ತಬಪು. ೪೬-೫). [ಬೇಡ$_1$ + ಬಲೆ$_1$ ]

**ಬೇಡರಸ** (ನಾ). ಶಬರರ ಮುಖಂಡ : ಕಿರಾತರ ಒಡೆಯ ; ಬೇಡರ ನಾಯಕ : ನಾಡರಸಂ ತಗುಳ್ದು . . . ನಾಡನವಂ ಕಡಿದಿಕ್ಕಿ ಮೆಚ್ಚಿದಂ ಬೇಡರಸಂ ತರಂಗತಮನಾನಿರೆ ಬೇಡರಸೆಂಬ ಗರ್ವದಿಂ (ಕಂರಾವಾ. ೪-೩೪): ತಮ್ಮಾಳ್ದನಪ್ಪ ಬೇಡರಸಂಗೆ ದೇವತೆ ಬಂದು ಭೀಮವನದೊಳಿರ್ದಳಲ್ಲಿಗೆ ಪೋಗಿ ನಿಮ್ಮ ಬೇಟ್ಟ ವರಮಂ ಬೇಡಿಕೊಳ್ಳಿಮೆಂದು ಬಿನ್ನಪಂಗೆಯ್ದುದುಂ (ವಡ್ಡಾರಾ. ೩-೯೩). [ಬೇಡ$_1$ + ಅರಸ$_1$ ]

**ಬೇಡವಟ್ಟ** (ನಾ). ಶಬರರ ನಾಡು.—ಊರು : ಅನಂತೆ ಪೋಗೆವೋಗೆ ಪೊಲಸಿನ ಗಂಧಮುಂ ಪೊತ್ತು ಕಿಱುಕವ್ವರೆಗೊಳ್ವ ಕಾರ ಪೊಗೆಯಿನಱಿಯಲಾದ ಬೇಡವಟ್ಟಮಂ ಕಂಡಂ (ಕಾದಂಬ. ೬೪೫). [ಬೇಡ$_1$ + ಪಟ್ಟ$_3$]

**ಬೇಡವಟ್ಟು** (ನಾ). = ಬೇಡವಟ್ಟ: ಆ ಪಕ್ಷಿಯುಪಶಮಕ್ಕೆ ಪಕ್ಕುಗೊಟ್ಟು ನುವಂ ಬಿಟ್ಟು ಬೇಡವಟ್ಟಂಗೊಡೆಯನಾದುದು (ಕಂರಾಕಥಾ. ೯-೫೪ ವ) ; ಅಗುರ್ವುವೆತ್ತಱಿಕೆಯ ಬೇಡವಟ್ಟುಗಳ . . . ಕಡಿಸಲಂತದ ಮುನ್ನಿನ ಚಕ್ರವರ್ತಿಗಳ್ ಪೆಱರಳವಲ್ಲುಮಂ ಕಡಿಸಿತೊಟ್ಟಜೆ ತ್ರೈಲಪಚಕ್ರವರ್ತಿಯಾ (ಕಾವ್ಯಾವ. ೨೦೨); ಓಡವ ಬೇಡವಟ್ಟು ಪೋಗವ ಕಲಿಗೋಂಟೆ ಸಿಲ್ಕದ ವಿರೋಧಿಕುಟುಂಬಿಮಿಱುಂಬಿಗೊಡಡಂಜದ ಬಳರನ್ಯಮಂಡಳದೊಳಿಲ್ಲ (ಪುಷ್ಪಪು. ೫-೫೫). [ಬೇಡ$_1$ + ಪಟ್ಟು$_4$]

**ಬೇಡವಡೆ, ಬೇಡಪಡೆ** (ನಾ). ಶಬರರ ದಳ : ಕಿರಾತರ ಸೈನ್ಯ : ಬೇಡವಡೆ ಮುಸುಱಕೊಂಡೇಸಾಡೆ ಸುರುಳ್ದಿಗದು ಕೊಡೆಯ ಚರ್ಮದ ಮಱಿಯೊಳ್ ಗೂಡುಗೊಳುತಿರ್ದ ಶೌರ್ಯಕ್ರೀಡೆಯ ದಿಗ್ವಿಜಯ ಮೆಸೆದುದು (ಆದಿಪು. ೦೪-೬೨); ಅಂತಂತ್ಯಾತವೇತಾಳವಡೆಯಂತೆ ಭಯಂಕರಾಕಾರಮಾದ ಬೇಡವಡೆಯ ನಡುವೆ . . . ಬಂದಂ ಪುಳಿಂದಪ್ರಕರಬಹುಳ ಸೇನಾಪರೀತಂ ಕಿರಾತಂ (ಕಾದಂಪೂ. ೦೬೫) ; ತಡಿಕೆವಲೆ ತಟ್ಟವಲೆ . . . ಮುಖಿವಲೆ ಮಂದಸಿನವಲೆಯ ಹೊಱಗಳ ಬೇಡವಡೆ ನೆರೆದುದು (ಹಶಕಾ. ೫-೮). **ಬೇಡಪಡೆ** : ಒರ್ವ ಬೇಡಪಡೆಯೊಡೆಯನೊಂದು ಕಡೆಯೊಳ್ಬೇಂಟೆ ಯಾಡುತ್ತಮೆಸೆದಿರ್ದಂ (ಉದ್ಭಟ. ೨-೪೬ ವ); ಮರೆ ಲಲಾಯ . . . ಕರಿ ಕಳಭ ವಿಶ್ವಪ್ರತಾನದ ಮೋಹುಗಾಡಿನಲಿ ಹರಿದು ಬೆರಸಿತು ಬೇಡಪಡೆ (ತೊರರಾ. ೩-೩-೦೩). [ಬೇಡ$_1$ + ಪಡೆ$_2$]

**ಬೇಡವಣ್ಣ** (ನಾ). ಕಿರಾತನ ಬಣ್ಣ ; ಕಪ್ಪುವರ್ಣ : ಬೇಡವೆಂದರು ಬೇಡ ಕಳುವದ ಬಿಡುವನೆ ಬೇಡವಣ್ಣದ ತುಂಬಿವಿಂಡು ಬೇಡವೆಂದರು ಬರುತಿರ್ದುದು ತ್ಯಾಗಿಯ ಬೇಡುವ ಯಾಚಕರಂತೆ (ಶರತ. ೩-೦೫).

[ ಬೇಡ$_1$ + ಬಣ್ಣ ]

**ಬೇಡವಳ್ಳಿ** (ನಾ). ಶಬರರು ವಾಸಿಸುವ ಹಳ್ಳಿ ; ಕಿರಾತರು ನೆಲಸಿರುವ ಗ್ರಾಮ : ಉಪಶ್ರೇಣಿಕಂ ಬೇಂಟೆಯಾಡಲ್ವೋಗಿ . . . ವಿಂಧ್ಯಾಟವಿಯ ನಟ್ಟನಡುವೆ ಸುರಮ್ಯಮೆಂಬ ಬೇಡವಳ್ಳಿಯ ಸಾರೆ (ವಡ್ಡಾರಾ. ೦೬೨-೦೯) : ಕಾಱೂರ್ಗೆ ಮೆಱಸು ಬೆಲ್ಲಮೆಂಬಂತೆ ಬೇಡವಳ್ಳಿಗೆ ಪಂದಿ ಮದ್ದಾನೆಯೆಂಬಂತೆ (ವಡ್ಡಾರಾ. ೬-೨೨೯) ; ಬಲೆದೊಡಚುವ ಬಿಲ್ಲನೊಱೆದಂಬುದಿರ್ದುವ ಗೊತೆಗಟ್ಟುವ . . . ಬೇಡವಳ್ಳಿಯನಲಘುವಿಕ್ರಮಿ ಕಂಡನಾಗ (ಶ್ರೀಪಾಂ. ೬-೩೦).

[ ಬೇಡ$_1$ + ಪಳ್ಳಿ$_1$ ]

**ಬೇಡವೆಣ್** (ನಾ). ಶಬರಸ್ತ್ರೀ ; ಕಿರಾತೆ ; ಬೇಡಿತಿ : ಬಿಲ್ಲೋಲಾಂತು ನಿಂದುದು ಬೇಡವೆಣ್ಗಳ ಕಣ್ಗೆ ರಮಿಸಿ (ವೀಶಚ. ೦೪-೬೦) : ಬೋತು ಪಾಱುಂ ಕೆಱೆದೇಡಿಪ ಕ್ರೋಡಗಂಗಳಂ ನೀಡುಂ ನೋಡಿ ನಗೆಗವಲೊಳೋ

ಲಾಡುವ ಬೇಡವೆಣ್ಗಳಿಂ . . . ವಿಜೃಂಭಿಸಿ (ರಾಜಶೇ. ೩-೩೩ ವ).

**ಬೇಡವೆಂಡಿರ್** (ಬಹುವ) : ನಿಚ್ಚಮುಂ ಬೆಜಿಂದೆ ಮುಳಿದು ತಿಳಿಪೆ ತಿಳಿದು ನೆರೆವ ಬೇಡವೆಂಡಿರಿಂ (ಕಬ್ಬಿಗ. ೨೦೯). [ ಬೇಡ₁ + ಪೆಣ್ ]

**ಬೇಡಾಧಿಪತಿ** (ನಾ). = ಬೇಡರರಸ : ಹಿರಣ್ಯಧನ್ವನೆಂಬ ಬೇಡಾಧಿಪತಿಯ ಮಗನಾದ ಏಕಲವ್ಯನೆಂಬವನು (ಕೃಷಾಚ. ೨೯೭). [ ಬೇಡ₁ + ಅಧಿಪತಿ ]

**ಬೇಡಿ** (ನಾ). ಕಾನೂನಿನ ಅಧಿಕಾರಿಗಳು ಅಪರಾಧಿಗಳನ್ನು ಬಂಧಿಸಿ ಅವರ ಕೈಕಾಲುಗಳಿಗೆ ಹಾಕುವ ಲೋಹದ ಸಂಕೋಲೆ ; ಕೋಳ : ಅಡಿಯ ಬೇಡಿ ಒಡೆಯಲಿಲ್ಲ ; ದುಡಿವ ದಾಸ್ಯ ಬಿಡಲೆ ಇಲ್ಲ ! (ಜಾಂತಿಜ. ೩೯-೧೦) ; ನಮ್ಮೆಲ್ಲರ ಕೈಕಾಲುಗಳಲ್ಲಿಯೂ ಬೇಡಿಗಳು ಬಿದ್ದವು ! (ಶೃಶಾಕ. ೩೯).

**ಬೇಡಿ ಹಾಕಿಸು** = ಸಂಕೋಲೆಯನ್ನು ತೊಡಿಸುವಂತೆ ಮಾಡು : ಬಂಧಿಸುವಂತೆ ಮಾಡು : ಒಂದು ದಿವಸ ಆ ತುಂಟನು ಸರಹದ್ದಿನ ಒಳಗೆ ಬಂದಲ್ಲಿ ಅವನನ್ನು ಹಿಡಿದು . . . ಅವನ ಕಾಲಿಗೆ ಬೇಡಿ ಹಾಕಿಸಿ (ರಾಜೇಂದ್ರ. ೨೦೭) ; ನಿನ್ನ ಕೈಗೆ ಬೇಡಿ ಹಾಕಿಸ್ತೀನಿ (ಮಂಗಮಾ. ೨೭).

[ ← ಹಿಂ. ಮರಾ. ಬೇಡೀ ]

**ಬೇಡಿಕೆ** (ನಾ). ೧. ಬೇಡಿಕೊಳ್ಳುವಿಕೆ ; ಯಾಚನೆ ; ಕೋರಿಕೆ : ಇಳೆಯ ರಾಯರಿಗಾಯ್ತು ಬೇಡಿಕೆ ವಿಪ್ರರಂದದಲಿ (ಸಂಶಜ. ೨೩-೧೦) ; ಅವಳ ಕಣ್ಣನಲ್ಲಿ ಬೇಡಿಕೆಯಿತ್ತು (ಮರಳ. ೧೩೨). ೨. ಬೇಕಾದುದು ; ಅಗತ್ಯವಾದುದು : ಇವರಿಗೆ ವೇಳೆಯ ಅಭಾವದಿಂದಾಗಲಿ, ಇತರ ಕಾರ್ಯಣದಿಂದಾಗಲಿ, ತಮ್ಮ ಬೇಡಿಕೆಗಳನ್ನು ತಾವೆ ಕೊಂಡು ತರಲಿಕ್ಕೆ ಸಹಜ ವೆನಿಸುವುದಿಲ್ಲ (ತಕ್ಕಿ. ೯೬).

**ಬೇಡಿಕೆ ನೀಡಿಕೆ** = ಅಗತ್ಯ ಮತ್ತು ಅದರ ಪೂರೈಕೆ : ಪ್ರಪಂಚದ ವಿವಿಧ ಭಾಗಗಳೂ ಸಹ 'ಬೇಡಿಕೆ—ನೀಡಿಕೆ' (Demand–Supply)ಗಳ ತಾಕಲಾಟದಿಂದ ಹೊಂದಿಕೊಂಡು ಒಂದೇ ಆರ್ಥಿಕಕ್ಷೇತ್ರವಾಯಿತು (ಅಂತಸಂ. ೭). [ ಬೇಡು₁ + —ಇಕೆ ]

**ಬೇಡಿಗೆ** (ನಾ). ಒಂದು ಬಗೆಯ ತೆರಿಗೆ,— ಸುಂಕ : ೯(೦)ವ್ಮಟೇಸ್ವರ ದೇವರ ನಂದಾದೀವಿಗೆಗೆ ಬಿಟ್ಟ ದತ್ತಿ ಬೇಡಿಗೆಯ ಕಮ್ಮಟದಲು ದಳಕ ವಿಸ ಒಂದು (ಸೌಇಇ. IX-i, ೨೬೨-೧೭ ; ಸು. 1155) ; [ಆರತಿ] ಕಾಣಿಕೆ ಬೇಡಿಗೆ ಯನೂ ಬಿಟ್ಟು ದೇವರ ಗ್ರಾಮದಲಿ ಬಿಟ್ಟಿವಾಗಿಯೇನನು ಮಾಡಲಿಲ್ಲ (ಸೌಇಇ. IX-ii, ೩೭೦-೨೩ ; 1535). 'ಬೇಡು₄' ಪರಾ.

[ ಬೇಡು₄ + —ಇಗೆ./ ತೆಲು. ಬೇಡಿಗ]

**ಬೇಡಿತಿ, ಬೇಡತಿ** (ನಾ). ಬೇಡರ ಹೆಂಗಸು ; ಕಿರಾತೆ : ಸೂರ್ಯಾಸ್ತ ಮಯದೊಳ್ ಪಾರ್ವರನೊಡಿ ನಿಷಾದಿತಿಯೆಂಬ ಬೇಡಿತಿಗಮೆಯ್ದುರ್ ಮಗುಂದಿರ್ಗಮುಣಲಿಕ್ಕಿದೊಡೆ ತಣಿಯುಂಡು ಬೆಂಡುಮರಲ್ದು ಮಱಸುಂದಿದರ್ (ಸಂಶಜಾ. ೩-೯ವ) ; ಗೌರೀಪತಿಯ ಬನದಕ್ಕೆ ಭೂಭೃತ್ಸುತೆ ಬೇಡಿತಿಯಾದ ತೆಜನನನುಕರಿಸಿರ್ದಳ್ (ಕಾರಂಪೂ. ೯೦) ; ಅಲರ್ಗಣ್ ಪೊಂಗಿದ ಲೋಳಿವಾಯ್ ನಗೆಮೊಗಂ . . . ಬಿಲ್ವಾಗಿರೆ ನಿಂದ ಬೇಡಿತಿಯುರಂ ಕಂಡಂ ಮಹೀವಲ್ಲಭಂ (ಕಾವ್ಯಾವ. ೨೦೭). **ಬೇಡತಿ :** ಛತ್ರ(ಕಚ್ಛ) ಪುರದೊಳ್ ದಾರುಣನೆಂಬ ಬೇಡಂಗಂ ಮಾಂಗಿ (ಮಾಂಗಿಲಿ) ಯೆಂಬ ಬೇಡ [ಜಾಕಾಂ. ಡಿ]ತಿಗಂ ಅತಿದಾರುಣನೆಂಬ ಮಗನಾಗಿ ಪುಟ್ಟಿರ್ಪನಂ (ಶಾಪುಂಪು. ೧೭೦) ; ವಾಗುರೆಯೊಡನಾಡುವ ಬೇಡತಿಯರ್ವೀರೆಗೆಡೆದು ಕಂಡಂ ನೀನುಂ ನಿನ್ನ ಗಂಡನುಂ ಪುಲಿಯಂತಿರ್ದು ನರಿಯಂತಿರೇಕಿರ್ದಪಿರೆನೆ (ಅಭಿಸೇ. ೩-೭೯ ವ) ; ಪಂಚಪುತ್ರಿಕೆಯೆಂದು ಬೇಡತಿಯೊಬ್ಬಳಿದ್ದಳು ಸಂತರು ಸಹಿತಲಿ (ಶಿವಾನ್ನಿ. ೬-೯೭). [ಬೇಡ₁ + —ಇತಿ₁ (< —ಇತ್ತಿ)]

**ಬೇಡಿತು, ಬೇಡಿತ್ತು, ಬೇಡಿದು** (ನಾ). ಯಾಚಿಸಿದುದು ; ಕೇಳಿದುದು ; ಬೇಡಿದುದು : ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಜನದ ಕಸವರಗಲಿಗಳುಮಂ . . . ನೋಡಿ ರುದ್ರಾವತಾರಂ . . . ಹಿಮವತ್ಪರ್ವತಕ್ಕೆ ಪೋಪುದುಂ (ಗದಾಯು. ೯-೩೯ ವ) ; ತುಡಿಸುವುದೇಕೆ ನಿಲ್ಲ ಪಲವುಂ ಬಳೆಯುಂ ಬಳೆಗಾಜ ನಿನ್ನ ಕಾಲ್ವಿಡಿದಪೆನಿತ್ತಪೆಂ ನಿನಗೆ ಬೇಡಿತಂ (೮೬ಲಾವ. ೨-೭೦) ; ಬೇಡಿತನೀಯದಾಕ್ರಮಿಸಿ ಚಕ್ರಧರಂಗಿದಿರಾಂಪರಾರ್ (ಪಾರ್ಶ್ವಪು. ೦೦-೭೩). **ಬೇಡಿತ್ತು :** ಈ ಕುಮಾರನನೆತ್ತಿದಂಗೆ ಬೇಡಿತ್ತಂ ಕುಡುವೆಂ (ಸಂವತಂ. ೦೦೩-೦೩) ; ಧರೆಗಿಪ್ಪತ್ತಗೆಯಾಂಡನೇಜ ನಾಮದಿನೆಸೆದು ಶರಣರ್ಗೆ ಬೇಡಿತ್ತನಿಲ್ಲೆನ್ನದಂತೊಸೆದು ಕೊಡುತಲಿಪ್ಪಂ (ಇಹರ. ದೀ. ೨೯-೦೦) ; ಬೇಡಿತ್ತನೀವೆನೆಂದೆಂಬ ಪರಶಿವನಮಲಚರಣಾಂಬುಜಕ್ಕೆ ಶರಣು (೮೩ಸಂ. ೦೦-೦೦). **ಬೇಡಿದು :** ಬೇಡಿದನೀವ ಭುವನೋದ್ದಂಡದೈವದ ದೃಷ್ಟಿ ಪಥಕಿದಿರಾಗಿ ವೈನಪುಗಿ ತಂಡತಂಡವಲೆದ್ದು ನಮರರ ತಂಡ (ಶಿರಾಗ. ೯-೮-೦೯).

**ಬೇಡಿದಂ** = ಯಾಚಿಸಿದವನು ; ಯಾಚಕ : ಶ್ರೀವಿಜಯಂ ವಿವಾಹಮನೊಡಂಬಡೆ ತಂಗೆಗೆ ಮಾಡಿ ಬೇಡಿದಂಗೀವುದನಿತ್ತು . . . ಮೆಜಿದಂ ನೆರೆವನ್ನಯದೊಂದು ಮೈಮೆಯುಂ (ಶಾಂತಿಪು. ೭-೦೯) ; ಬೇಡಿದ ನಿಷ್ಟಮಂ ಸಲಿಪುದುಂ ಕರ್ಣಂಗೆ ಜನ್ಮವ್ರತಂ (ಕವಿರ. ೭೨ ಪ್ರಯೋ).

**ಬೇಡಿದರ್** (ಬಹುವ) : ಬೇಡಿದರ್ಗೀಯದೆ ಮಱಗೆ ವಂದರಂ ಕಾಯದೆ ನೀಳ್ದೊದವಿದ ಜಸಮನುಪಾರ್ಜಿಸದಧಮನದೇತರ್ಕೆ ಬಾರ್ತೆ ಜೀವನ್ಮೃತಕಂ (ಅದಿಪು. ೦೨-೯೭) ; ಬೇಡಿದರ್ಗಿಲ್ಲೆಂಬುದುಂ ಕಾದಿ ಸೋಲ್ವುದುಂ ಪೆಜವೆಣ್ಣಂ ಪೀಡಿಸುವುದುಂ ಕನಸಿನೊಳಪ್ಪೊಡಮಿಲ್ಲಂ (ಗದಾಯು. ೨-೭ ವ).

[ < ಬೇಡು₁ ]

**ಬೇಡಿತ್ತು** 'ಬೇಡಿತು' ನೋ.

**ಬೇಡಿದು** 'ಬೇಡಿತು' ನೋ.

**ಬೇಡಿಸು** (ಕ್ರಿ). ಯಾಚಿಸುವಂತೆ ಮಾಡು ; ಬಯಸುವಂತೆ ಮಾಡು : ಬೇಡಿಸುವಪ್ಪುಗಳೊರೆವ ಲಲ್ಲೆಯ ಮೆಲ್ನುಡಿಗಳ್ಗೆ ಕೂಡೆ ನಾಣೂಡಿದ ಕೆಂದುಗಳ್ಗೆ ಬಗೆಗೊಂಡಿನಿಸಂ ತಲೆದೂಗುವಂತೆವೋಲ್ . . . ಅಳ್ಳಾಡುವುದಾಯ್ತು . . . ತತ್ಸುರತಮಂದಿರದುಜ್ವಳದೀಪಿಕಾಂಕುರಂ (ಸಂಶಜಾ. ೩-೯೩). [ ಬೇಡು₁ + —ಇಸು₃ ]

**ಬೇಡು₁** (ಕ್ರಿ). ಬೇಪ, ಬೇರ್ಪ, ಬೇಪ, ಬೇಳ್ಪ₁, ಬೇಳ್ವ₁, ಬೇಟ್ಟಿ (ಭೂತಕೃ). ೧. ಬಯಸು ; ಇಚ್ಛಿಪಡು ; ಆಶಿಸು : "ಬೇಡು—ಯಾಚ್ಞಾಯಾಂ, ಶಬರಸಮೂಹೇ ಚ" (ಶಮಣ) ; ಭೀಮನಕುಳ ಸಹದೇವರ್ಗಳ್ಗೆ ದುರ್ಯೋಧನನ ತಮ್ಮನಪ್ಪ ಯುಯುತ್ಸುಗಮವರ್ ಬೇಡಿದ ನಾಡುಗಳನೆ ಕುಡಿಸಿ ಸಂತಸಂಬಡಿಸೆ (ಸಂಶಜಾ. ೧೯-೩೭ ವ) ; ಬಗೆಯಂ ಬೇರ್ಪರ್ತ್ಥಮಂ ವಾಂಛೆಯಂ (ಎಕ. VII, ಶಿಮೊ. ೬೯-೮೦ ; 1112) ; ಬೇಹ ವರವನು ಬೇಡಿಕೊಳ್ಳು (ಸೌಶಿರಾ. ೧೯-೩೯) ; ಈ ಮಯೊಳಾ ಸುಗ್ಗಲಾಬೆಗೆ ಬೇಪನಿತು ಬೋಧಿಸಲು (ದೇವಪು. ೦೭-೨) ; ತಲೆಗೆ ಎಣ್ಣೆ ಇಲ್ಲ, ತನು ಮೃಗನಾಭಿ ಬೇಡಿತು (ಗಾದೆ). ೨. ಕೇಳು ; ಯಾಚಿಸು : ಬೇಡುವೆನರ್ಥಸಂಚಯುಮಂ (ಕಬಿರಾ. ೨-೦೦೨) ; ನೀಂ ಬಾ ಪೋಪಮೆಂದಂಗೆ ಮೆಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ ಎಂಬುದುಂ (ಸಂಶಜಾ. ೦-೭೦) ; ಅಶೇಷ ಭೂಭುವನಮಂಡಲವಲ್ಲಭನಾದ ದೇವನೀಗಾಪಗಮೆಮ್ಮ ಬೇಟ್ಟ ವರ ದುನ್ನತಿಯಂ ಸುರೇಂದ್ರವಲ್ಲಭಂ (ಶಂದೋಂಬು. ೦-೦) ; ಬೇಳ್ವರ್ತ್ಥಿಜನಕ್ಕೆ ದಾನಮಣಿ (ಎಕ. VIII, ಶಿಮೊ. ೦೦-೦೨ ; 1085) ; ಜನಮಂ ಬೇಳ್ವಸೆಯಂ . . . ಬಿಟ್ಟು ನಿಮ್ಮಂ ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೨೦).

**ಬೇಡಿಕೊಳ್, ಬೇಡಿಕೊಳು, ಬೇಡಿಕೊಳ್ಳು** = ಕೇಳಿಕೊಳ್ಳು ; ಯಾಚಿಸು: ನಿನಗೊಸೆದೆಂ ಬೇಡಿಕೊಳ್ ನಿನ್ನ ಬೇಡಿದುದೆಲ್ಲಮಂ ಕುಡುವೆಂ

(ವಡ್ಡಾರಾ. ೦೨೮-೫) ; ಧರಿತ್ರಿಯುಂ ಜೀಯೆನೆ ಬೇಡಿಕೊಳ್ಳದೆ ವಿರೋಧಿ ನರೇಂದ್ರರನೊತ್ತಿಕೊಂಡುಂ (ಶಂಶಚ. ೦-೧); ಎನ್ನನೊಡಗೊಂಡು ಮುದದೆ ಪೋಪಂತನುಗ್ರಹಿಸೆಂದವಂ ಬೇಡಿಕೊಳಲೊಪ್ಪಿದಂ (ಕೈಶುಚಾ. ೪-೬೫); ಸ್ವಪ್ರಶಿಷ್ಟೆಯು ಮತ್ತು ಆತ್ಮಸ್ತುತಿಯು ಒಂದು ಶಬ್ದವೂ ನನ್ನ ಬಾಯಿಯಿಂದ ಹೊರಬೀಳದಿರಲೆಂದು ದೇವರನ್ನು ಬೇಡಿಕೊಳ್ಳುತ್ತೇನೆ (ಶ್ಯಾಮುಚಾ. ೫). **ಬೇಹವಳು, ಬೇಹೆಳು** = ಇಷ್ಟವಾದವಳು ; ಬೇಕಾದವಳು : ಕಮಲ ಮುಖಿಯನು ಬೇಹವಳನೊಯ್ದುಮಳಗುಣನಿಧಿ ಕೂಡಲೆಂದರು (ಶಿವಾಗ. ೦೦-೦೦೨-೨೭) ; ದೇಹವೆರಡಕೊಂದಸುವೆಂಬಂದದಿ ಬೇಹಳ ಮಾಡಿಕೊಂಡರ್ದ ಆ ಹೂಗಣೆಯು ನೃಪವರನರ್ದಂತೆಲೆ ಭಾವಕಿ ಕೆಟ್ಟೆನೆಸುವರೆ (ಕೃಶಂಚ. ೨-೯೭) ; ಬೇಹಳಂ[ಶಾಕಾಂ.ರಂ] ಮನ್ನಿಪಂತಬುಜವನಬರಿಸುತುವಿನನು ದಯಗಿರಿಯುನಡರ್ದಂ (ಶಾವಚಂ. ೬-೩೪). **ಬೇಹುದು. ಬೇಳ್ಪುದು, ಬೇಟ್ಪುದು**=೧. ಬೇಕಾಗಿರುವುದು ; ಅಗತ್ಯವಾದುದು : ಶಿವಗಣ ದ್ರೋಹದ ವಚನವದು ಕಿವಿಗೆ ಸಿಲುಕಿದ ಮಾತ್ರದಲಿ ಹಗೆಯುವ ನನವಿಚಾರದೊಳಿರಿಸಲ್ ಬೇಹುದು (ಬಸಪು. ೬೦-೦೪); ಸತಿಯರ್ಗೆ ಧೈರ್ಯಂ ಬೇಳ್ಪುದು (ನಂಜರ. ೦೬-೩೭) ; ಆನೆ ರಿಪುಸೇನೆಗೆ ಸಾಲ್ವೆನವೂಂಕೆ ಪೇಡಿ ಪಾಡಿಗಟ್ಟಿಚಿವೆಡಗೈಯು ಕೈಯುಂಗುರೆ ಸಾಲದೆ ನಚ್ಚಿನ ಕೈದುವೇಟ್ಪುದೇ (ಶಾವ್ಯಸಾ. ೪೦೦ ಊಪ್ರ೪). ೨. ಬೇಡಿಮುದು ; ಬಯಸಿದುದು : ಬೇಟ್ಪುದಂ ಪಾಟ್ಟಿ ಕಲ್ಪದ್ರುವಿತಾನಂ . . . ವ್ಯೋಮವಿಭಾಗವ್ಯಾಪ್ತಿಯು ಪ್ಪುನ್ನತತನುವಿನಿತುಂ ನಿಶ್ಚಯಂ ವ್ಯರ್ಥಮಲ್ತೇ (ಕಂಪ್ರಪು. ೩-೪೦). **ಬೇಹೊಡೆಯ**=ಬೇಕಾದ ಒಡೆಯ ; ಇಷ್ಟವಾದ ಸ್ವಾಮಿ : ಬೇಹೊಡೆಯು ನಾನಿರಲು ಮಾಜಾದವನಂ ಕೇಳ್ದೆ ಸಾಹಸವ ನೋಡು (ಹಚಕಾ. ೦೦-೧೦). **ಬೇಟ್ಪಂ**=ಬೇಡುವವನು ; ಯಾಚಿಸುವವನು ; ಯಾಚಕ : "ಬೇಡುವಂ ಬೇಟ್ಪಂ" (ಸಂಶೀಚ. ೨೦) ; ಬೇಟ್ಪನ ಬೇಟ್ಪ ವಸ್ತು ಕಾಂಚನಗಿರಿಯಿಂದಮುಗ್ಗಳಂ (ಶಂಶಚಾ. ೫-೬೭). **ಬೇಟ್ಪರ್, ಬೇರ್ಪರು, ಬೇಹವರು, ಬೇಳ್ಪರ್, ಬೇಳ್ಪವರ್** (ಬಹುವ) : ೧. ಬೇಕಾದವರು ; ಆತ್ಮೀಯರು : ಅರಸಿಯರಜಣುಗರಂ ಬೇಟ್ಪರುಮಂ ಮೊನೆಗಾಜರಂ . . . ಚೌಪಳಿಗೆಗಳೊಳ್ ಬಳ್ಳಿರಿಸಿದರ್ (ಶಂಶಚಾ. ೨-೬೭); ನುಸುಳು ಗಂಡಿಯೊಳುರವಣಿಸಿದರು ಕರ್ಣ ಕೃಪ ಮೊದಲಾದ ಬೇಹವರು (ಕುವ್ಯಾದ್ರೋ. ೯-೫೩). ೨. ಬೇಡುವವರು ; ಯಾಚಕರು : ಬೇಪ್ಪರಿಗಾರ್ತ್ತೀವ . . . ಪರಹಿತಕಾರ್ಯ್ಯತತ್ಪರನುದಾರಗುಣಾನ್ವಿತಂ (ಎಕ್ರಿಇ. XI-ii, ೦೩೮-೨೪; 1093) ; ಮದನಜೀದಾಸೆದಪ್ಪಿಸದೆ ಬೇಳ್ಪರ ಬೇಳ್ಪುದನಿತ್ತು ಸದ್ಗುಣಾಸ್ಪದನೆನಿಸಲ್ಕೆ ನಿನ್ನ ಪೆಸರೇಂ ಗಳ ಹೊಯ್ಸಳಗೌಣ್ಡನೆಮ್ಬುದೇ (ಎಕ. VI, ಕಡೂರು. ೬೯-೨೬; 1160); ಬೇಳ್ಪವರ್ಗೆ ಬೇಡಿದ ಮರಿಯಲೀವುತ ಪಾಪಿ ಕೋಪದಿ ಹೋಮಿಸಿದನಂದು (ಶಾಶ್ವಚಾ. ೦೯-೦೪).

[ದೇ.॥ ತಮಿ. ವೇಣ್ಟು; ತುಳು. ಬೇಡು; ತೆಲು. ವೇಡು]

**ಬೇಡು₂** 'ಬೇಳ್₁' ನೋ.

**ಬೇಡು₃** (ನಾ). ಬೇಡರ ಸಮೂಹ ; ಶಬರರ ಗುಂಪು : "ಬೇಡು— ಯಾಚ್ಞಾಯಾಂ, ಶಬರ ಸಮೂಹೇ ಚ" (ಶಮಣ). [<ಬೇಡ₁]

**ಬೇಡು₄** (ನಾ). ಒಂದು ಬಗೆಯ ತೆರಿಗೆ : ಬೇಡು ಬಿಟ್ಟು . . . ಸುಂಕ ಸಾದಿಲ × × × ಮೊ[ದ]ಲಾಗಿ ಆವುದೊಂದುಯಿಲ್ಲದೆ (ಎಕ್ರಿಇ. IX-ii, ೪೦೬-೪೦; 1364); ಯಿಾ ಕ್ಷೇತ್ರಕ್ಕೆ ತೆಜು ದೇಸವ್ವ ಅನಾಯ ನಟ್ಟೂ ಬೇಡು ಅಳುದೂ ಯಿಲ್ಲಾ (ಎಕ್ರಿಇ. IX-ii, ೪೨೭-೨೭; 1402); ತುಳುವದ ಶಾಸನ ಗಳಲ್ಲಿ ಬರುವ ತೆರುವಣಗಳು :— ತೆರು . . . ಅರವಸ್ತು, ಬೇಡು, ಅಪ್ಪಣೆ (ತುಳುಶಾ. ೨೭೦). 'ಬೀಡು₂', 'ಬೇಡಿಗೆ' ಪರಾ. [ ? ]

**ಬೇಡುಂಗೊಳು** (ನಾ). ಒಂದು ಬಗೆಯ ತೆರಿಗೆ : ಸುಂಕದ ಬೇಡುಂಗೊಳು ನಲ್ಲೆತ್ತು ಪರಿಹಾರ ಪಗ್ಗಡೆ ಗದ್ಯಾಣ (ಎಕ. XI, ಕೊಡಗು. ೩೩-೮; 1115 ?); ವೃತ್ತಿ(ವೃತ್ತಿ)ಗಳೆನ್ನು ನಿಧಿನಿಕ್ಷೇಪಸಹಿತವಾಗಿ ಸಿದ್ಧಾಯ ಮ (ಒ)ಸಗೆ ಕಾಣಿಕೆ ಬೇಡುಂಗೊಳು ಅಕರ ಸರ್ವ್ವಬಾಧಾಪರಿಹಿ[ಹ್ರ]ತವಾಗಿ . . . ಧಾರಾಪೂರ್ವ್ವಕವಾಗಿ ಕೊಟ್ಟರು (ಎಇ. XXVII, ೦೬೨-೬೫; 1256).

[ <ಬೇಡು₄]

**ಬೇಡುಗ** (ನಾ). ಯಾಚಿಸುವವನು; ಬೇಡುವವನು : ತಾ ಮಾಡಿದೆನೆಂದಡೆ ತನ್ನ ಕೆಳಗಣವೆ ಆಣವ ಮಾಯಿಕ ಕಾರ್ಮಿಕಮಲಂಗಳು ಇವ ಕೊಂದೆನೆಂದು ಮನಕ್ಕೆ ತೋಜಿದಡೆ ತನ್ನ ಕೆಳಗಣ ಬೇಡುಗರೆ ಈ ಮೂವರು (ಪೋಕಾವಚಾ. ೩೩-೦೩೭); ರಾಮರಾಯರು . . . ಬಾಗಿಲಿಗೆ ಬಂದ ಬಡ ಬೇಡುಗರನ್ನು ಬರಿಗೈಯಿಂದ ಎಂದೆಂದೂ ಮರಳಿಸುತ್ತಿರಲಿಲ್ಲ (ಸಂತಕ್ರ. ೨೩).

[ಬೇಡು₁ + —ಗ₂]

**ಬೇಡುಗಣ್ಣು** (ನಾ). ಯಾಚಿಸುವಿಕೆಯನ್ನು ವ್ಯಕ್ತಪಡಿಸುವ ಕಣ್ಣು ; ಬೇಡುವ ನೋಟ : ಭಾರತಿ ಗಂಡನ ಕಡೆ ಬೇಡುಗಣ್ಣುಗಳಿಂದ ನೋಡು ತ್ತಿದ್ದಳು (ಸೋತುಗ. ೫೦). [ಬೇಡು₁ + ಕಣ್ಣು (<ಕಣ್)]

**ಬೇಡುಹ** (ನಾ). ಯಾಚಿಸುವಿಕೆ; ಯಾಚನೆ : " ಅಧ್ಯೇಷಣಾ . . . ಅರ್ಥನಾ—ಈ ೬ ಬೇಡುಹ" (ಹಲಾಯು. ೫೯-೨೦೫).

[ಬೇಡು₁ + —ಹ₂ (< —ಪ್ಪ₂)]

**ಬೇಣ** 'ಬೆಣ' ನೋ.

**ಬೇತಾಳ** (ನಾ). ಭೂತ; ಪಿಶಾಚಿ : ತಾಳತರುವಿತತಿಯೊಳ್ ಬೇತಾಳಂಗಳ್ ಪೊಜೆದು. . . ತಳತಾಳಲಯಕ್ರಮದೆ ಕುಣಿಯೆ ಭಯಮಯನಾದಂ (ಕಬಿರಾ. ೩-೦೯೩); ಆ ಜಿನಭವನದೊಳ್ ವಸಿಯಿಸುವ ದೇವತೆಗಳೆಲ್ಲ ಮಿವರಲ್ಲದುದಂ ನೆಗಟ್ಟಿಪ್ಪರೆಂದಗುರ್ವಾಗೆ ಬೇತಾಳರೂಪುಗಳಂ ವಿಗುರ್ವಿಸಿ ಪರಿತಂದು (ಶಂರಾಮಚಾ. ೦೪-೪೦ ವ); ಬೆನ್ನು ಹತ್ತಿದ ಬೇತಾಳ (ಗಾದೆ).

[< ಸಂ. ವೇತಾಲ]

**ಬೇತು₁** 'ಬೇ₂' ಪರಾ.

**ಬೇತು₂** (ನಾ). ೧. ಹಂಚಿಕೆ; ಯುಕ್ತಿ ; ಉಪಾಯ. ೨. ಉದ್ದೇಶ ; ಧ್ಯೇಯ : ಕೆಟ್ಟಿಗೆ ಮಗಳನ ಕೊಟ್ಟು ಅವನ್ನ ದತ್ತಕ ತೊಗೊಳ್ಳೊ ಬೇತು ಇದ್ದ ಹಂಗ ಕಾಣಸತದ (ಗಂಪಮಾಯ. ೦೦೬). ೩. ಸಿದ್ಧತೆ ; ತಯಾರಿ : ಜನರೆಲ್ಲ ದಿಕ್ಕುಗೆಟ್ಟು ಕಣ್ಣು ತಿಕ್ಕಿಕೊಳ್ಳುತ್ತ ಚೆಲ್ಲಾಪಿಲ್ಲಿಯಾಗುವ ಬೇತಿನಲ್ಲಿದ್ದಾರೆ (ಹೂಸಕ್ಕಿ. ೨೦೭); ಈ ಮನೆಯಲ್ಲಿ ನಿಂತು ಅವಳಿಗೆ ಬೇಸರ ಪೆನಿಸಿರಬೇಕು. ಕಾಲು ಕಿತ್ತುಕೊಂಡು ಪಲಾಯನ ಬೆಳೆಸುವ ಬೇತಿನಲ್ಲಿ ಇರಬೇಕು (ಗೀತುಗ. ೪೫). ೪. (ಆಲಂ) ಅಂದಾಜು ; ಊಹೆ: ಮುಂದೆ ಯಾವ ಕಡೆಯಿಂದಲೂ ಹರಗಿದರೆ ಬರುವ ಹಾಗೆ ಮಾಡಿ ಬೇತಿನ ಮೇಲೆ ಯಾಸಿಯಾಗದೆ ಯಾವ ಕಡೆಗೆ ನೋಡಿದರೂ ಸಾಲುಗಳೇ ಕಾಣುವ ಹಾಗೆ ಮಾಡಿ (ಕೃಷಿಕ್ರ. ೬೦).

**ಬೇತು ನೋಡು**=ಅಂದಾಜು ಮಾಡು : ಮುಂದೆ ಆ ಗಿಡಗಳ ಮಧ್ಯ ದಲ್ಲಿ ಸಣ್ಣ ಕುಡಗಳಿಂದ ಎಡೆಯ ಹರಗುವದಕ್ಕೆ ಅಡಚಣೆಯು ಆಗದ ಹಾಗೆ ಮೊದಲೇ ಬೇತು ನೋಡಿ. . . ಗಟ್ಟಿಯಾಗಿ ಕೂಡ್ರಿಸಬೇಕು (ಕೃಷಿಕ್ರ. ೬೦). **ಬೇತು ಹಾಕು**=ಯೋಜನೆ ಹಾಕು : ಇನ್ನ ಪೋಲಿಸರ ಕೈಯೊಳಗ ಕೊಡೋದು ಅಂತ ಇವರಿಬ್ಬರೂ ಬೇತು ಹಾಕಿದ್ದರು (ಹೂಸಂಗಾ. ೦೨೯).

[←ಮರಾ. ಬೇತ್]

**ಬೇದ** (ನಾ). ವೇದ ; ಪ್ರಾಚೀನವಾದ ನುಡಿ : "ಓದು, ಪಟಿಪಾತು, ಬೇದಂ, ಸುತಿ—ಈ ೪ ವೇದಂ" (ಕಚಾ. ೫೭-೨೪೨). 'ಬೇದಕ್ಕರಿಗ' ಪರಾ.

[<ಸಂ. ವೇದ]

**ಬೇದಕ್ಕರಿಗ** (ನಾ). ವೇದಾಭ್ಯಾಸ ಮಾಡಿದವನು; ವೇದಾಧ್ಯಯನ ಮಾಡಿದವನು : ಬೆದಕ್ಕರಿಗರ ಜಪಶಾಲೆ ಸೊಕ್ಕಾನೆಕದುರೆಯ ವೈಹಾಳಿಯುಂ ಕಣದಿಕ್ಕೆ ಕಣ್ಮನಕೆ ರಂಜಿಸಿತು (ವೀಚಹಕ. ೨-೫೫). [ಬೇದ + ಅಕ್ಕರಿಗ]

**ಬೇದನೆ** (ನಾ). ಸಂಕಟ ; ವೇದನೆ: "ವೇದನೆಯಿ ಬೇದನೆಯಿ" (ಶಬ್ದಾರ. ೬) ; ಪತ್ನಕ್ಕೆ ಬತ್ವಂ . . . ವೇದನಾ—ಬೇದನೆ (ಕಬಿರ.೨೫೬ ಕ್ರ.ಯೋ).
[<ಸಂ. ವೇದನಾ]

**ಬೇದಬಿಜ್ಜೆ** (ನಾ). ವೇದವಿದ್ಯೆ : 'ಬೇದಬಿಜ್ಜೆಗ' ಪರಾ.
[<ಸಂ. ವೇದವಿದ್ಯಾ]

**ಬೇದಬಿಜ್ಜೆಗ** (ನಾ). ವೇದವಿದ್ಯೆಯನ್ನು ತಿಳಿಸಿಕೊಟ್ಟವನು : ಬ್ರಹ್ಮ : "ಪೊಂಬಸಿಱ ನುಡಿವೆಣ್ಣಾಣ್ಮಂ ಬೊಮ್ಮಂ ಬೇದಬಿಜ್ಜೆಗಂ. . . ನಾಲ್ಮೊಗನೆ ನಲಜನೆಂಬ ಪೆಸರ್" (ಶಕುಂ. ೫) ; ಇರ್ವರುಂ ಬೇದಬಿಜ್ಜೆಗಂಗೆ ಸರಿಮಿಗಿ ಲೆನಿಪರ್ (ಅದ್ಭು.ಕ. ೧೦-೦೫). [ ಬೇದಬಿಜ್ಜೆ + —ಗ$_2$ ]

**ಬೇದಮ್ಮ** (ನಾ). ಒಬ್ಬಾತನ ಹೆಸರು : ಇಂತಿವಕ್ಕ ಕಾಸಂಬಾಟ ಕಂಫ ಯ್ಯನುಂ ಆ ಸಾಗೊರೆಕ ಕನ್ನನುಂ ಪೊಸಪೂರ ಬೇದಮ್ಮನುಂ ಕನ್ನರನುಂ. . . ಸಾಕ್ಷಿ (ಎಪಿ. XI, ಚಿತ್ರದು. ೬೪-೨೬; ೨೦೨). [ಬೇದ + ಅಮ್ಮ$_1$]

**ಬೇದಾದ** (ಗು). ವ್ಯವಸ್ಥೆಯಿಲ್ಲದ; ಅವ್ಯವಸ್ಥೆಯಿಂದ ಕೂಡಿದ: ಸಬ್ ರಿಜಿಸ್ಟ್ರಾರ ಅಥವಾ ನೋಂದಣಿಕಚೇರಿಯೆಂದರೆ ಮೊಗಲಾಯಿಯ ಒಂದು ಬೇದ್ಯಾದ ಕಚೇರಿಯೇ ಎಂದೆನ್ನಲು ಏನೂ ಅಡ್ಡಿ ತೋರುವುದಿಲ್ಲ (೦೦ತ.೦೦).
[←ಪಾರ. ಹಿಂ. ಬೇದಾದ್ = ಅನ್ಯಾಯ, ಅತ್ಯಾಚಾರ]

**ಬೇದಿರುಸು, ಬೇದಿರ್ಸ್** (ನಾ). ಅಧಿಕಾರದ ಪ್ರತೀಕವಾಗಿ ಧರಿಸಬೇಕಾದ ಉಡುಪನ್ನು ಬಿಟ್ಟು ಇತರರಂತೆ ಧರಿಸುವ ಸಾಧಾರಣವಾದ ಉಡುಪು : "(ಅಧಿಕಾರದ ಉಡುಪು ಧರಿಸಲುಳ್ಳವನು ತೊಡುವ) ಸಾದಾ ಉಡುಪು; ಬೇದಿರುಸು" ( Mufti, ಇಂಕಿಶ ). ಬೇದಿರ್ಸ್ : ಒಬ್ಬ ಸಿಐಡಿ ಬೇದಿರ್ಸಿನಲ್ಲಿ ಬಂದು ವಿಷಯಸಂಗ್ರಹ ಮಾಡಲೆತ್ನಿಸಿದ (ಹುಚ್ಚು. ೪೮).
[ಬೇ$_3$— + ದಿರುಸು (<ದಿರಸು)]

**ಬೇದಿರ್ಸ್** 'ಬೇದಿರುಸು' ನೋ.

**ಬೇದು** (ನಾ). ಶಾಖೆ ಬರುವಂತೆ ಕಟ್ಟುವ ಕಟ್ಟು; ಪೋಲ್ಟೀಸು (?): ಹುಲಿಗಿಲು ಹುಣಿಸೆಯು ಸೊಪ್ಪೊಂದೆಲಗಂ ಭೂತಾಂಶಿ ಕರಣೆಯೆಂಬಿನಿತ ಜೊಳಂದವಲಸದೆ ಬೆರಸಂಕೋಲೆಯುನೊಲವಿಂದಂ ಬೇದುಗಟ್ಟಲಖಿಳವಿಷಘ್ನಂ (ಖಚುದ. ೦೦-೩೬); ನೆಗ್ಗಿಲ್ ತಗಚೆ ನಿದಿಗ್ಧಿಕೆ ತಗ್ಗಿಯುಪಾಮಾರ್ಗದೊಡನೆ ಬೆರಸಿದುದಂ ತಾಂ ಕೊಗ್ಗಿ ಕುಮಾರಿಗಳಂ ಕುಡಿಸೊಗ್ಗಿಸಿವಂಬಿಲದೆ ಬೇದು ಗಟ್ಟು ವಿಷಘ್ನಂ (ಖಚುದ. ೦೬-೬೪). [ < ಬೇ$_1$ ]

**ಬೇನಾಮಿ, ಬಿನಾಮಿ, ಬಿನಾವಿಾ, ಬಿನಾಮೆ** (ಗು). ೧. ಹೆಸರಿಲ್ಲದ ; ಅನಾಮಧೇಯವಾದ : (ಪ್ರುಗಿತ. IV, ೩೬೪). ೨. ತನ್ನ ಹೆಸರನ್ನು ಬಿಟ್ಟು, ಬೇರೆಯವರ ಹೆಸರನ್ನು ಹೊಂದಿರುವ. (ನಾ). ೩. ಹೆಸರಿಲ್ಲದುದು ; ಅನಾಮಧೇಯವಾದುದು : ಇಂದಿನ ಹಗರಣಕ್ಕೆಲ್ಲ ಕಾರಣವಾದ ಪತ್ರ ಬೇನಾಮಿಯಾದುದು (ರಜಿ). ೪. ತನ್ನ ಹೆಸರನ್ನು ಬಿಟ್ಟು ಬೇರೆಯವರ ಹೆಸರನ್ನು ಹೊಂದಿರುವುದು. **ಬಿನಾಮಿ** : ೧. "ಓದಿ ನೋಡಿ" ಎಂದು ಆ ಬಿನಾಮಿ ಅರ್ಜಿಯನ್ನು ಅವನ ಕೈಗೆ ಕೊಟ್ಟರು (ಪುಣಗಿಯು. ೨೬೬). ೪. ಜಮೀನನ್ನು ಹರಾಜಿಗೆ ತಂದು, ಹರಾಜಿನಲ್ಲಿ ಬಿನಾಮಿಯಾಗಿ ಕೊಳ್ಳಿಸಿ ಅನಂತರ ಆಸ್ತಿಯನ್ನು ತಮ್ಮ ಹೆಸರಿಗೆ ಮಾಡಿಸಿ ಕೊಳ್ಳುವುದು ಶಾನುಭೋಗರಿಗೆ ಚೆನ್ನಾಗಿ ಗೊತ್ತಿತ್ತು (ಪಷ್ಮಾರು. ೦೪೮). **ಬಿನಾವಿಾ** : ೧. ಈ ಬಿನಾವಿಾ ಹುಂಡಿಯನ್ನು ಈತ ಲಪಟಾಯಿಸಲೆಂದು ನಮ್ಮ ಅಂಗಡಿಗೆ ತಂದಿರುತ್ತಾನೆ (ಪೋಚಕ. ೯೫). **ಬಿನಾಮೆ** : ೨. ನನ್ನ ಮತ್ತು ಭಾವ ಕೃಷ್ಣರಾಯನ ಅನ್ಯೋನ್ಯತೆ ದೃಢಮೂಲವಾಗಿದ್ದುದರಿಂದ ಆತನ ಹೆಸರಿನಲ್ಲಿ ಬಿನಾಮೆ ಪ್ರೋನೋಟೊಂದನ್ನು ಸಿದ್ಧಪಡಿಸಿದೆನು (ಕುಕುಣಾ. ೦೦). [ ← ಹಿಂ. ಬೇನಾಮ್; ಪಾರಾ. ಬಿನಾಮಿ]

**ಬೇನೆ** (ನಾ). ೧. ರೋಗ ; ಜಾಯಿಲೆ ; ವ್ಯಾಧಿ : ಉಟ್ಟುದಂ ಕಳೆಯದಿ ರಿಂದು ಬೇನೆ ಕೆಳರ್ದಪ್ಪುದು (ಶಾಕ್ತಖ. ೯೯೯ ಕೂರ್ಮ್ರ) ; ದುರ್ಬಲಂಗಂ ಅಸಹಾಯಂಗಂ ಪ್ರತಿಕೂಲಂಗೆಯ್ದುನಪ್ಪವಂಗಮಾವ ಕಜ್ಜಮುಂ ಬೆಜ್ಜೆ ಯಿಲ್ಲದ ಬೇನೆಯಂತೆ ತೀರಲರಿಯದು (ಕಂಚಿಕಂ. ೬೬-೨) : ಅವಳ ಪರಕೆಯ ನೋಂಪಿಯೆಂದು ಪಡೆದಬ್ಬೆಗೆ ಪರ್ಬಿದ ಬೇನೆಯೆಂದು . . . ಒರೆಯುಂತೆ (ಚಕಪ. ೬-೯೨). ೨. ನೋವು ; ಯಾತನೆ : ಅಚ್ಚಿಕಚ್ಚೆ ದುಕ್ಕಾಣಿ—ಚಣ್ಣ ಬಸಿಱ ಬೇನೆಗಳುಮೆಂದಿವು ಮೊದಲಾಗೊಡೆಯ (ಚಕ್ರಾತಿ. ೩೬-೬); ಬೇನೆಗಳೊಳ್ ಮೊಗಂಗಳಂ ಬಿನ್ನಗೆ ಮಾಡದಿರ್ದರಳವಚ್ಚರಿಯಾಗೆ ಕೆಲರ್ ಮಹಾರಥರ್ (ಕಂಚಿಖ. ೦೦-೩) ; ರೋಮರೋಮಂದಪ್ಪದೆ ಸರ್ವಾಂಗಮುಂ ವೃಶ್ಚಿಕಸಹಸ್ರಗಳೊಡನೆ ಮಿಡಿದಂತಪ್ಪ ಬೇನೆಗಮನಂತ ಗುಣಮೆನಿಸಿಪ ದೇಹವ್ಯಥೆಯನೊದವಿಸುತ್ತುಂ (ಪರ್ಗಿಳು. ೦೦-೦೫ ಪ). ೩. (ಹೆರಿಗೆಯ ಸಮಯದಲ್ಲಿ ಉಂಟಾಗುವ) ನೋವು : ಶೂಲೆ : ಬಂಜೆ ಬೇನೆಯನಜಿಯಳೆ (ಮಹಾದೇ. ಬ. ೦೯೦-೩೦೯) ; ಬೇನೆಯಿಂಸಕ್ಕಿಗಳ್ ನಸು ಮುಗುಳ್ಚಿರೆ . . . ತಟಭುಜದೊಳೊಂದು ಕರೇಣು ಸೂಲಿಸುತ್ತೀನಿಣವಲ್ಲಿ ಮಾಡಿದುದು ಬೇಡರೊಳಂ ಕರುಣಾನುಭಾವಮಂ (ಪುಷ್ಪಪು. ೩-೯೨) ; ಸುಖಪ್ರಸೂತಿಯೊಪ್ಪಿರೆ ಪಡೆದಳ್ ಭಯಂ ಗಡ ನಯಂ ಗಡ ಬೇನೆಯು ಸೂಟಿಲ್ ಗಡೆಂದು ತತ್ಪುರದ ಪುರಂಧ್ರಿಯರ್ ಸತಿಗೆ ತೂಪಿಱದರ್ ಸ್ವಗೃಹಾಂತರಂಗದೊಳ್ (ಸೂಕ್ತಿಸು. ೬-೩೪). ೪. ಅಡಚಣೆ; ಕಷ್ಟ ; ತೊಂದರೆ : "ವೇದನಾಯಾಂ, ಬೇನೆಯೊಳ್" (ಶಬ್ದಮ. ೦೭); ಕಾನನದೊಳು ಕಡುಕಷ್ಟಪಡೆದು ನೋವು ಬೇನೆಗಳಿಗೆ ಬೇಸಱದೆ ಸಾನುರಾಗ ದೊಳನುಸರಿಸಿ ತನ್ನಿನಿಯನ ಜಾನಕಿ ಜಸವ ಪಡೆದಳು (ಕವಿರಾ. ೩-೯೭) ; ಪರರ ಬೇನೆಯಲ್ಲಿ ಮನ ಹಿಗ್ಗುವಾತನ ಹೊಲೆಯ (ಗೀವಿಂ. ೦೬-೫).

**ಬೇನೆಬೀಳು**=ರೋಗಕ್ಕೆ ಗುರಿಯಾಗು, - ಈಡಾಗು ; ಜಾಯಿಲೆ ಬೀಳು : ಬೇನೆ ಬಿದ್ದರೆ ಪೇಸದೆ ಬೇಸಱದೆ ಸನ್ಮಾನದೊಳುಪಚರಿಸುವುದು (ಹರಿಂ. ೪-೦೪) ; ಅವಳು ಬೇನೆ ಬಿದ್ದು ಬಹಳ ದಿನಗಳಾದವು (ರಂಕು. ೦).

**ಬೇನೆಗುದಿ** (ಕ್ರಿ). ಪ್ರಸೂತಿಯ ನೋವಿನಂತಹ ನೋವನ್ನು ಅನುಭವಿಸು : ಬಾಳ್ಗಬ್ಬದೊಳ್ ಕರುಣೆ ತಾಂ ಬೇನೆಗುದಿದೊಡವಲ್ತೆ ಮೆರೆದಪುದು ಪೊರಪೊಣ್ಮುತಾ ಮಹಾಕಾವ್ಯಶಿಶು ತಾಂ (ಶ್ರೀರಾಮಾ. ೨-೦೦).
[ಬೇನೆ + ಕುದಿ$_1$]

**ಬೇನೆಬಡಿಸು** (ಕ್ರಿ). ನೋವನ್ನುಂಟುಮಾಡು ; ಯಾತನೆಯನ್ನು ಅನು ಭವಿಸುವಂತೆ ಮಾಡು : ಜ್ಞಾನಾವರಣೀಯ ದರ್ಶನಾವರಣೀಯ ಬೇನೆ ಬಡಿಪ ವೇದನೀಯಾ ಹೀನದ ಮೋಹನೀಯಾಯುಷ್ಯನಾಮಗೋತ್ರಾ ನುಗದಂತರಾಯಗಳು ಇವು ಕರ್ಮವೆಂಟು (ರರತ. ೩೩-೦೦೭).
[ಬೇನೆ + ಪಡಿಸು]

**ಬೇನೆಯ?** (ನಾ). ಒಂದು ಸ್ಥಳದ ಹೆಸರು (?) : ಕೌಣ್ಡಿಲ್ಯಗೋತ್ರ ಬನ್ನ ಪೆಜಿನ ಮಗಂ ಬೇನೆಯ ಸೋಮೇಜಿ ಬೇನೆಯ ಸೋಮೇಜಿಯ ಮಗ[ಂ] ಮಾ[ರಂಮಭ]ಟ್ಟರ ಮಗಂ ಗೋಲಿಯಭಟ್ಟಮ್ ಸೂರ್ಯ್ಯಗ್ರಹಣ ದೊಳ್ಮೊಂಲಾಪುರುಷವಿಪ್ರ್ರ [ತ]ತ್ಕಾಲದೊಳ್ವಣಿಗಾರ್ಹಣ[ಂ]ಗೆಯ್ದು (ಎಇಇ. XI — i, ೯-೮ ; 862). [ ? ]

**ಬೇನೆಯಱಿ** (ಕ್ರಿ). ೧. ಹೆರಿಗೆಯ ನೋವನ್ನು (ಅನುಭವದಿಂದ) ತಿಳಿ.— ಅರ್ಥಮಾಡಿಕೊಳ್ಳು : ಬಂಜೆ ಬೇನೆಯಱಿಯದವೊಲೀ ನುಡಿಯುಂಟೆ (ಬಸವ. ೯-೦೬೦). ೨. (ಕಾವ್ಯರಚನೆಯ) ಕಷ್ಟವನ್ನು ತಿಳಿ. — ಅರ್ಥ ಮಾಡಿಕೊಳ್ಳು : ಬೇನೆಯಱಿಯದ ನೀರಸರನೇಕ ಪುಟ್ಟಿಸಿದನಜುಜ ಭವನು (ಹತಕಾ. ೦-೨೩). [ಬೇನೆ + ಅಱಿ]

**ಬೇನೆಯುಟಿ** (ಕ್ರಿ). ರೋಗವನ್ನು ಗುಣಪಡಿಸು ; ಜಾಯಿಲೆಯನ್ನು ವಾಸಿಮಾಡು: ಕೊಲುತಿರ್ಪಯ್ಯಗಳೋದು ಬೇನೆಯುಟಿವಾ ಶೀಕ್ಷ್ಣಾಷಧಂ . . . ಬೇಪಾರವಿಂತೆಲ್ಲ ಮುಂ ಪಲಕಷ್ಟಂ ಕಡೆಗೊಳ್ಳಿತ್ತೈ (ಸೋಮೇಶ. ೯೬).
[ಬೇನೆ + ಅಟು$_1$]

**ಬೇನೆಯೆತ್ತು** (ಕ್ರಿ). ಹೆರಿಗೆಯ ನೋವನ್ನು ಅನುಭವಿಸು, –ತಿನ್ನು : ಮಡದಿಗೆ ನವಮಾಸ ತುಂಬಿತು ಶಿವಯೋಗದೆಡೆಯೊಳು ಬೇನೆಯೆತ್ತಿದಳು (ಅಶ್ವಊ. ೨–೯೦). [ಬೇನೆ + ಎತ್ತು$_1$]

**ಬೇಪ** 'ಬೇಡ್ಸು$_1$' ಪರಾ.

**ಬೇಪತ್ತೆ** (ನಾ). ಸುಳಿವು ಇಲ್ಲದಿರುವಿಕೆ; ನಾಪತ್ತೆ : ನಿನ್ನೆ ರಾತ್ರಿ ಕೇಬಿನ್ನಿಗೆ ಯಾವಾಗ ತಿರುಗಿ ಬಂದಳೋ ನನಗೆ ಗೊತ್ತಿಲ್ಲ. ಮುಂಜಾನೆ ಯಿಂದ ಮಾತ್ರ ಬೇಪತ್ತೆ (ಹೊಸಕ್ಷ. ೦೯೦); ಬೇಪತ್ತೆಯಾದ ನಮ್ಮ ಬಾಜೀರಾಯ ಇನ್ನೂ ಮನೆಗೆ ಬಂದಿರಲಿಲ್ಲ (ಹುಚ್ಚರುದಾ. ೬೮). 'ನಾಪತ್ತೆ' ಪರಾ. [ಬೇ$_3$ — + ಪತ್ತೆ$_2$]

**ಬೇಪರವಾಯಿ**, ಬೇಪರ್ವಾ (ನಾ). ೧. ಪರಿವೆ ಇಲ್ಲದಿರುವಿಕೆ; ನಿರ್ಲಕ್ಷ್ಯ : ಹೀಗೆ ತಿಳಿಸುವದು ಕೆಲಕೆಲವರಿಗೆ ಬೇಪರವಾಯಿಯ ಲಕ್ಷಣವೆಂದು ಕಂಡುಬಂದಾಗ್ಯೂ, ಸ್ವಲ್ಪ ವಿಚಾರ ಮಾಡಿದರೆ . . . ಫಾಯದೆಯ ಸಂಗತಿಯೆಂದು ಕಂಡುಬಂದೀತು (ಹುಂಬಿಶ್ಯ. ೨೦೯). **ಬೇಪರ್ವಾ :** ೨. ಲಕ್ಷ್ಯವಿಲ್ಲದ ವ್ಯಕ್ತಿ; ಸ್ವೇಚ್ಛಾಚಾರಿ : ಅಂತೂ ಅಡ್ಡಿಯಿಲ್ಲ. ತಾಯಿ ಹಾಂಗ ಮಗಳು ಬೇಪರ್ವಾಯಿಲ್ಲ (ಶಾಂತಾಹು. ೩೬). [←ಪಾರ. ಬೇಪರವಾ, ಬೇಪರವಾಹ್, ಬೇಪರವಾಹೀ, ಬೇಪರ್ವಾ; ಹಿಂ. ಬೇಪರವಾ, ಬೇಪರವಾಈ, ಬೇಪರವಾಹ್, ಬೇಪರವಾಹೀ; ಮರಾ. ಬೇಪರವಾ, ಬೇಪರವಾಈ, ಬೇಪರ್ವಾ, ಬೇಪರ್ವಾಈ]

**ಬೇಪರ್ವಾ** 'ಬೇಪರವಾಯಿ' ನೋ.

**ಬೇಪಾರ** (ನಾ). ಕೊಳ್ಳುವ, ಮಾರುವ ವ್ಯವಹಾರ; ವ್ಯಾಪಾರ : "ಬೇಪಾರ–ವ್ಯಾಪಾರ" (ಶಬ್ದಕೋ. ೩೨); ಆ ಪರಮವಿರಾಗಿಯ ಸುಜ್ಞಾನದ ಬೇಪಾರದ ಬೆಳವಿಗೆಗಂಡೆಙಗಿನ್ನೇಪರಿಯುಪಬೋಧೆಗಳೇಕೆಂದು ಪೊಗಳ್ದರ್ತಮ ತಮಗೆ (ಸುರೇಶು. ೨೬–೩೬); ನಾವ್ ಸಚ್ಚಾ ಬೇಪಾರ ಮಾಡತಾವ್ (ಪೋಚಹಿ. ೯೦). 'ಬೇರ$_2$' ಪರಾ. [←ಹಿಂ. ಮರಾ. ಬೇಪಾರ್. / ಸಂ. ವ್ಯಾಪಾರ]

**ಬೇಪಾರಿ** (ನಾ). ವ್ಯಾಪಾರವನ್ನು ಮಾಡುವವನು; ವ್ಯಾಪಾರಸ್ಥ; ವ್ಯಾಪಾರಿ : ಕರಿ ತುರಗದ ಬೇಪಾರಿಗಳಾಶ್ರಯದಿರವ . . . ಸಿರಿಯ ಪರ್ಣಗಳ ವಿಕ್ರಯಿಪರ ರನ್ನದೋವರಿಗಳ ನೋಡುತ್ತೇಳ್ತಂದ (ಸುರೇಶು. ೨೦–೦೮). [←ಹಿಂ. ಮರಾ. ಬೇಪಾರೀ./ಸಂ. ವ್ಯಾಪಾರಿನ್]

**ಬೇಫಾಮು** (ನಾ). ಎಚ್ಚರಿಕೆ ತಪ್ಪುವಿಕೆ; ಅಲಕ್ಷ್ಯ; ನಿರ್ಲಕ್ಷ್ಯ : ಗದ್ದೆ ವಗೈರೆ ಸ್ಥಳದಲ್ಲಿ ಪೆಟಿ ಮುಂತಾದ್ದರಲ್ಲಿ ದವಸವಿಟ್ಟು ಬೇಫಾಮಿ ನಿಂದ ನೋಡದೆ ದವಸವನ್ನು ಕೆಡಿಸಿದರೂ . . . ಅದರ ಜವಾಬು ಅಮಿಲನ್ನು ಕೊಡಬೇಕಾದೀತು (ಪುಹಾಪಂ.II, ೬೩) [←ಮರಾ. ಬೇಫಾಮ್]

**ಬೇಫಿಕರ್** 'ಬೇಫಿಕೀರ' ನೋ.

**ಬೇಫಿಕೀರ**, ಬೇಫಿಕರ್, ಬೇಫೀಕೀರ (ಗು). ೧. ಯೋಚನೆಯಿಲ್ಲದ; ನಿಶ್ಚಿಂತೆಯಿಂದ ಕೂಡಿದ : ಬೇಫಿಕೀರ ವೃತ್ತಿಯಿಂದ ಕೋಣೆಯ ಬಾಗಿಲು ದೂಡಿ . . . ವಿಶ್ವಾನ ಕಣ್ಣಿಗೆ ಕತ್ತಲೆ ಬರುವ ಧರ್ತಿಯಲ್ಲಿ ಹೋಗಿ ಎದುರು ನಿಂತ (ದೀಪಹ. II, ೩೩೩). (ನಾ). ೨. ನಿಶ್ಚಿಂತೆಯಿಂದ ಕೂಡಿದುದು; ಯೋಚನೆಯಿಲ್ಲದುದು : ವಿಧೀ ಅನ್ನರಿ, ದೈವ ಅನ್ನರಿ . . . ಅದೆಷ್ಟು ಬೇಫಿಕೀರ ಆದ ನೋಡ್ರೀ (ದೀಪಹ. I, ೬೮). ೩. ನಿಶ್ಚಿಂತೆ; ಆರಾಮ. **ಬೇಫಿಕರ್ :** ೩. ನನ್ನ ಜೇಬಿನಲ್ಲಿದ್ದ ಪಿಸ್ತೂಲನ್ನು ನೆನೆದು ನನಗೆ ಎಷ್ಟೋ ಬೇಫಿಕರ್ ಆಯಿತು (ಕಂಪ. ೦೦೩). **ಬೇಫೀಕೀರ:** ೧. ಮುಂಚೆ ಒಮ್ಮೆ ಎಲ್ಲವನ್ನೂ ಕಳೆದುಕೊಂಡುದಕ್ಕಾಗಿ ಈಗ ಬೇರೆ ಉಪಾಯವಿಲ್ಲ ಎಂಬುವದಕ್ಕಾಗಿ ಈ 'ಬೇಫೀಕೀರ' ವೃತ್ತಿಯೆ ? (ತ್ರಿರುಪಾ. ೦೩೩). [←ಪಾರ. ಬೇಫಿಕ್ರ್; ಹಿಂ. ಬೇಫಿಕರಾ, ಬೇಫಿಕ್ರ್; ಮರಾ. ಬೇಫಿಕಿರ್, ಬೇಫಿಕೀರ್]

**ಬೇಫೀಕೀರ** 'ಬೇಫಿಕೀರ' ನೋ.

**ಬೇಬಂದಶಾಹಿ** (ಗು). ಅವ್ಯವಸ್ಥೆಯಿಂದ ಕೂಡಿದ; ಕ್ರಮ ತಪ್ಪಿದ; ಗೊಂದಲಮಯವಾದ : ಏನು ಬೇಬಂದಶಾಹೀರಾಜ್ಯವಿದು ? (ಹುತ್ತಾಳಿ. ೬೩). [← ಮರಾ. ಬೇಬಂದಶಾಹೀ, ಬೇಬಂದಶಾಈ]

**ಬೇಬಂದು** (ನಾ). ಕ್ರಮವಿಲ್ಲದುದು; ವ್ಯವಸ್ಥೆಯಿಲ್ಲದುದು; ಅವ್ಯವಸ್ಥೆ : (ಶ). [←ಪಾರ. ಮರಾ. ಬೇಬಂದ್]

**ಬೇಬಾಕ್** 'ಬೇಬಾಕಿ' ನೋ.

**ಬೇಬಾಕಿ**, ಬೇಬಾಕ್, ಬೇಬಾಕು (ನಾ). ಬಾಕಿಯಿಲ್ಲದಿರುವಿಕೆ; ತೀರ್ವೆ : ರಾಮಕೃಷ್ಣಗೌಡನು . . . ಕಂದಾಯ, ಕೌಳಿ ಮೊದಲಾದವುಗಳನ್ನು ನೋಡಿಕೊಂಡು ಎಲ್ಲವೂ ಬೇಬಾಕಿಯಾದ ಮೇಲೆ ಹಿಂತಿರುಗುವನು (ಶಾಲೀಮು. ೩). **ಬೇಬಾಕ್ :** ಕಳೆತ ಜಾಗದಲ್ಲಿಯೇ ನನ್ನ ದರ್ಪದಿಂದ ಕಂದಾಯ ಬೇಬಾಕ್ (ಶಿತ್ತಶಿ. ೨೨). **ಬೇಬಾಕು :** ನಾಳೆ ಲೆಕ್ಕಾಚಾರ ನೋಡಿ ಎಲ್ಲಾ ಬೇಬಾಕು ಮಾಡ್ತೀನಿ (ಪಲಿಹ. ೯೬೬); ಏನು ಲೆಕ್ಕ ಆದರೂ ಈ ಸುಗ್ಗಿಗೆ ಅದಷ್ಟು ಮಾಡಿ ಬೇಬಾಕ ಆಗೋ ಹಾಂಗ ಮಾಡತೀನಿ (ಶೀಳಾ. ೩೩). [←ಪಾರ. ಹಿಂ. ಮರಾ. ಬೇಬಾಕೀ, ಬೇಬಾಕ್]

**ಬೇಬಾಕು** 'ಬೇಬಾಕಿ' ನೋ.

**ಬೇಮನ** (ನಾ). ಮನಸ್ಸಿಲ್ಲದಿರುವಿಕೆ; ನಿರಾಸಕ್ತಿ; ನಿರುತ್ಸಾಹ : ಇನ್ನೊಂದು ಕಡೆಯೊಳಗೆ ಕಾವಿಗಳಿಂದು ತಾಪದಿಂದಡಿಗಡಿಗೆ ಚೆಂಸಿ ಬೇಮನದಿ (ಸಾಪಂಗ. ೯). [←ಹಿಂ. ಬೇಮನ್]

**ಬೇಮಾನ** 'ಬೇಇಮಾನ' ನೋ.

**ಬೇಮಾಲುಮ್** 'ಬೇಮಾಲೂಮ್' ನೋ.

**ಬೇಮಾಲೂಮ್**, ಬೇಮಾಲುಮ್ (ನಾ). ಯಾರಿಗೂ ತಿಳಿಯದಂತಿರುವುದು; ಗುಟ್ಟು; ರಹಸ್ಯ : ಬೇಮಾಲೂಮ್ ಮಾತ್ ಆಗಿದಾವ್ (ಪೋಚಹಿ. ೯೦). **ಬೇಮಾಲುಮ್ :** ನಾನೀ ಕೊಲೆಗಳನ್ನು ಇಷ್ಟು ಬೇಮಾಲುಮ್ ರೀತಿಯಿಂದ ಮಾಡುತ್ತಿರುವೆನೆಂಬುದು ನನ್ನ ಹೊರತು ಪ್ರತ್ಯಕ್ಷ ಅಂತಃಕರಣಿಗಾದರೂ ಗೊತ್ತಿದೆಯೋ ಇಲ್ಲವೋ ಹೇಳಲಾರೆನು (ಅಂದಿ. ೨೯). [←ಹಿಂ. ಮರಾ. ಬೇಮಾಲೂಮ್]

**ಬೇಯಿತಬಾರಿ** (ಗು). ನಂಬಿಕೆಗೆ ಅರ್ಹವಲ್ಲದ; ವಿಶ್ವಾಸಕ್ಕೆ ಯೋಗ್ಯವಲ್ಲದ : ಪ್ರಾಕಿನ ಬಾಕೀದಾರ ನಾದಾರ್ ಬೇಯಿತಬಾರಿ ಜನಕ್ಕೆ ಸಹ ಯಿಜಾರೆ ಕೊಡ ಕೆಲಸವಿಲ್ಲ (ಪುಹಾಪಂ.II, ೬೦). [←ಪಾರ. ಹಿಂ. ಬೇಏತಬಾರೀ]

**ಬೇಯಿಸು**, ಬೇಸು (ಕ್ರಿ). ೧. (ನೀರು ಅಥವಾ ನೀರಿನ ಅಂಶದೊಂದಿಗೆ ಆಹಾರಪದಾರ್ಥಗಳನ್ನು) ಕುದಿಸು; ಪಕ್ವಮಾಡು; ಅಡು : ಮಾರು ಕಟ್ಟೆಯಿಂದ ತಂದ ತರಕಾರಿಗಳನ್ನು ಮೊದಲು ತೊಳೆದು, ಅನಂತರ ಅವುಗಳನ್ನು ಬೇಕಾದಂತೆ ಕತ್ತರಿಸಿ, ಕೊನೆಗೆ ಬೇಯಿಸುವುದಷ್ಟೆ (ಅಡುಗೆ. ೦೨); ತರಕಾರಿ ಕೊಡಿ ಮೊದಲು; ಏನಾದ್ದಾದರೂ ಬೇಯಿಸ್ತೀನಿ (ಹಪ್ಪೊಂದು. ೯೦). ೨. (ಬೆಂಕಿಯ ಮೇಲೆ ಪದಾರ್ಥಗಳನ್ನು ನೇರವಾಗಿ) ಸುಡು; ಕಾಯಿಸು : ಹೊತ್ತದಂಬದೊಳು ಕೆಂಡದೊಳಿರಿಸಿ ಮೊಜಿದಿಂದ ಮತ್ತದಂ ಬೀಸಿ ಬೇಯಿಸಿ ತೆಗೆದುಕೊಂಡಾಙಿಸುತ್ತ ತಿಳಿದುಪ್ಪ ಸಕ್ಕರೆಯ ಕಲಸಿ ಮುಚ್ಚುಳರೊಟ್ಟಿಪೆಸರಂ ಪಡೆದುವು (ಸೂಪಶಾ. ೦–೦೦); ಕುಂಬಾರ ಮಡಿ ಹುಬ್ಬಿಕ್ಕಿ ಬೇಕಾದ ಹೊಸ ಮಡಕೆಗಳನ್ನು ಬೇಯಿಸಿ ಮಿಣಿಮಿಣಿ ಅನ್ನುವಂತೆ ಮಾಡಿರುತ್ತಾನೆ (ಹಪ್ಪೊಕು. ೯೮). ೩. (ಆಲಂ) ನೋಯಿಸು; ಹಿಂಸಿಸು; ತಾಪಕ್ಕೆ ಒಳಗು ಮಾಡು : ಕಂದರ್ಪನ ಸುಟ್ಟ ಪಣೆಗಣ್ಣು ಮುಚ್ಚಿದೆಂದಾದೊಡೆ ಮತ್ತೆ ತೆಱೆದು ಬೆಂದ ಪಾಪಿಯ ಬೇಯಿಸಬೇಡವೆಂದು ಸುಗಂಧಾಕ್ಷತೆಯ ಮೆತ್ತಿದನು (ಪ್ರೀಹಕ. ೨೦–೨೮); ಬಿಚ್ಚು ವೆಣೆವಕ್ಕಿಗಳ ಹೃದಯಮಂ ಬೇಯಿಸುವ ಪೊಚ್ಚಪೊಸ ಕೆಂಡಂಗಳೆನೆ . . . ಸಂಜೆದಾರೆ

ಗಳೆಸೆದುವು (ಕೃಷ್ಣಾ. ೬-೪೭); ನಿನ್ನಿಂದಲ್ಲವೆ ಎನಗೀ ಪಾಪವು ಹೃದಯವ ಬೇಯಿಪ ಸಂಕಟವು ! (ಕೀರ್ತನೆ. ೩೦-೦೮). **ಬೇಸು :** ೧. ಓರಿಮದ್ದಿನ ಬೇರು ಹಾಲಿನಲ್ಲಿ ಬೇಸಿ ನೆರಳಿನಲ್ಲಿ ಒಣಗಿಸಿ ಪುಡಿಮಾಡಿ . . . ತೆಗೆದು ಕೊಳ್ಳುವುದು (ಶಾಕುಶಾ. ೨೬೩). ೨. ತಿನ್ನುವುದಕ್ಕೆ ಬಿಸಿಬಿಸಿ ರೊಟ್ಟಿಗಳನ್ನು ಬೇಡುತ್ತಿ; ಬೇಸುವುದಕ್ಕೆ ತಿಳಿಯಲಿಲ್ಲ ಯಾಕೆ ? (ಮುಂಬಯಿ. ೩-೦೬೭). ೪. ಉರಿದು ಹೋಗುವಂತೆ ಮಾಡು; ದಹಿಸು : ಬೀಸದು ಬಿಱುಸುಗಾಳಿ ಬಿಸಿಯು ಬಿಸಿಲವನಿಯಂ ಕಾಸದು ದವಾಗ್ನಿ ಪುಲ್ಗಳೊಳೊಂದನಾದೊಡಂ ಬೇಸದು (ಕೃಷ್ಣಾ. ೦೩-೦೭). [ಬೇ$_1$ + — ಇಸು$_3$]

**ಬೇಯು** 'ಬೇ$_1$' ನೋ.

**ಬೇರ್$_1$**, ಬೇರು, ವೇರ್ (ನಾ). ೧. ಸಸ್ಯವನ್ನು ಭೂಮಿಯಲ್ಲಿ ಹಿಡಿದಿಟ್ಟು ಅದಕ್ಕೆ ಭೂಮಿಯಿಂದ ಪೋಷಣೆಯನ್ನು ಒದಗಿಸುವುದಕ್ಕೆ ಸಹಾಯಕವಾದ, ಭೂಮಿಯ ಕೆಳಗಡೆಯಿರುವ ಸಸ್ಯದ ಭಾಗ ; ಮರ, ಗಿಡ ಮುಂತಾದುವುಗಳ ಅಡಿಭಾಗ, —ಮೂಲ : "ಪಾದಪಂಸೆ ಮೂಲಮೆನೆ ಪಸರಿಸಿದ ಬೇರಕ್ಕುಂ" (ಮಂಗರಾ. ೬೨-೨); ಭೀಮನುಮೊತ್ತಿ ಕಿಱು ಬೇರೊಡನೆ ಮಹೀಜಮೊಂದನಿಡೆಯುಂ (ಪಂಪಭಾ. ೩-೦೭); ಬೇರನಱಿದವರ್ಗೆಲೆಯಂ ತೋಱದರೆಂಬಂತೆ (ಧರ್ಮಾಮೃ. ೬-೬೪). ೨. ಬುಡ; ತಳಭಾಗ: 'ಬೇರೇಟು', 'ಬೇರ್ಬಿಡಿಸು' ಪರಾ. ೩. (ಆಲಂ) ಮೂಲ ಸತ್ತ್ವ; ನೆಲೆ : ತನ್ನ ಸುತನಬಲೊಳರ್ಜುನನೆನ್ನುದಯಮನೆಯ್ದೆ ಪಾರ್ಥಿವಾಗಳ ಬೇರೊಳ್ ಬೆನ್ನೀರನೆಱೆಯದಿರಂ (ಪಂಪಭಾ. ೧೦-೧೩೨); ಕರ್ಮದ ಬೇರ್ಗಳಂ ಪಱಿವವೊಲ್ ನೀಲಾಳಿ ಮಾಲಾವಿಲಾಸಿಗಳಂ ಕೇಶಸಮೂಹಮಂ ಪಱಿವುದುಂ (ಆದಿಪು. ೬-೧೨೪); ಮೂಲದ್ವಾರದ ಬೇರೆ ಮೆಟ್ಟಿ ಭೂಮಂಡಲವನೇಱಿದ ಆಚಾರದ ಬೇರ ಹಿಡಿದು ಐಕ್ಯದ ತುದಿಯನೇಱಿದೆ (ಮಹಾದೇ. ೩. ೦೦೩-೩೬೪). ೪. (?) : ಸವಿ ಸಮನಾಗೆ ಸುತ್ತಿಟಿದ ತೋಳ್ ಸತವಾದೆರ್ಡೆಯಿಂಪಲಂಪನಪ್ಪುವ ಬಗೆ ಬೀಗಿ ಬಾಯೊಳಗೆ ಸಿಲ್ಕಿದ ಬಾಯ್ ಬೆಱಗಾದ ಬೇರ್ಗೆ ನೋಡುವ ಜವಪೋಡಿದಚ್ಚರತದಚ್ಚುಡಿದಂತಿರೆ ಕಾಮಸೌಖ್ಯದಿಂ ಸವೆದವೊಲಿರ್ಪವಲ್ಲಿ ಗಗನೇಚರದಂಪತಿಗಳ್ ರತಾಂತದೊಳ್ (ಅೀಶಾಪು. ೯-೪೭). **ಬೇರು :** ೧. ಪನ್ನೆರಡುವರ್ಷಂ ಬೇಡರಂತಡವಿಯೊಳ್ ನಾರ ಸೀರೆಯನುಟ್ಟು ಬೇರುಮಂ ಬಿಕ್ಕೆಯುಮಂ ತಿಂದು ಕಂದಿ ಕುಂದಿ (ಪಂಚತಂ. ೩೦೬-೦೩); ನೀರಿಲ್ಲದ ನೆಳಲಿಲ್ಲದ ಬೇರಿಲ್ಲದ ಗಿಡು ಹುಟ್ಟಿತ್ತು (ಅಪಶಂ. ೦೨೩-೩೬೦); ಬೇರು ಹೋದ ಮೇಲೆ ಮರದ ಯೋಚನೆ ಯಾಕೆ? (ಗಾದೆ). ೨. ಕೋಪಮನುಱಿ ಜಱಿದಾ ಮೋಹಮಂ ದಾಂಟಿ ಲೋಭತ್ವದ ಬೇರಂ ಕಿಳ್ತು (ರತ್ನಾಕ. ೭೪); ಆತ್ಮಕೇಶಾಳಿಗಳನಘದ ಬೇರಂ ತೀರೆ ಕೀಳ್ವಂತೆ ಕಿೞ್ತುಂ (ಪುಷ್ಪಪು. ೦೩-೧೦೦); ಹುರಿದುದು ಭವಬೀಜದುಷ್ಕರ್ಮದಂಕುರ ಪಱಿದುದು ಕಪಟದ ಬೇರು ಸುರಿದುದಾನಂದಾಶ್ರು ಕೃಷ್ಣನಂಘ್ರಿಯ ಕಂಡು ಪುರದವರ್ ಪುಣ್ಯವೊಂದಿದರು (ಮೋಹಪ. ೪೨-೩೦). ೫. ಕೆಳಭಾಗದ ತಂದಿ,—ಕೊನೆ: ನೀರಿನಲಿ ಮಟ್ಟಿಯನು ಕಲಸಿ ಬರೆಯುತ ಮೂಗ ಬೇರನ್ನು ಪಿಡಿದು ಮುಸುಕಿಕ್ಕಲೇನುಂಟು (ಕುರಂದ. ೦-೪೪-೦). **ವೇರ್:** ೨. ಪಾಣ್ಡ್ಯನಂ ಮಿಣ್ಣಿಸಲ್ ಚೋಳನ ವೇರಂ ಕಿತ್ತುರ್ಗೆ ನೀರೊಳ್ಗಲುಗಲ ಸಲೆಯಲ್ಬಂದನಾ ಬಂದನಾ ಬಂದನೇ ತಾನೆಂಬಂತೆ ಬಂದಂ ನಿಜವಿಜಯಭ × × ಸೊಳಂಬಸೊಳಂ (ಸೌಇಇ. XX. ೪೯-೨೦; 1076?).

**ಬೇರುಮುಟ್ಟ ಕೀಳು** = ಮೂಲೋತ್ಪಾಟನ ಮಾಡು; ಪೂರ್ತಿಯಾಗಿ ಕೀಳು : ಆ ಕೆಟ್ಟ ಚಾಳಿಯನ್ನು ಬೇರುಮುಟ್ಟ ಕೀಳುವುದು ಕಷ್ಟ (ಕಿಶರು.೨೨೮). **ಬೇರೊಳ್ಪಿಸಿನೀರಂ ಪೊಯ್** =(ಆಲಂ) ನಾಶಮಾಡು; ಹಾಳುಮಾಡು: ಚಲದಿಂ ಮಣ್ಣಾಳಿಸರ್ಗೆ ಬೇರೊಳ್ಬಿಸಿನೀರಂ ಪೊಯ್ದಂ (ಎಕ. XI. ದಾವಣ. ೪೨-೬೨; ಶ. 1168). [ದ್ರಾ. ತಮಿ. ಮಲ. ನಾಯ್ಕ್ಯ. ಗಡಬ. ವೇರ್; ತುಳು. ಬೇರು; ತೆಲು. ವೇರು]

**ಬೇರ್$_2$** 'ಬೇಱು' ನೋ.

**ಬೇರ$_1$**, ವಯಿರ(ನಾ). ೧. ಹಗೆತನ; ವೈರ; ಶತ್ರುತ್ವ: ಒಟ್ಟೈಸಿದುರ್ವೀಶರ ಬೇರಂ ಬೇರದಿಂ ಕಿತ್ತುರ್ಗಲಿತನನುಪಮಂ ವಿಕ್ರಮಾದಿತ್ಯದೇವಂ (ಎಕ. XVI. ೩೮-೦೦; 1107) ; ಕೂರಸಿಯಿಂದಿವನ ತಲೆಯನರಿಯೆಂದೊರ್ಬಂ ಕ್ರೂರಾತ್ಮನ ಕಯ್ಗೆನ್ನಂ ಬೇರದೊಳಿತ್ತವರ್ಗಳತ್ತ ಪೋದರ್ (ದಶಕು. ೯-೪೭); ಪಿಂತಣ ಬೇರಮನೆಣಿಸದೆ ಸಂತತಮುಂ ಮಱಕಮೆರಸಿ ಮನ್ನಿಪುದೆನ್ನಂ (ಶಕಬ. ೫-೨೯). **ವಯಿರ:** ೧. ಶ್ರೀ ಪಲ್ಲವಕುಲತಿಲಕನ್ ವಯಿರಮೆ ಕಟ್ಟಿ ಎಱಿದು ಸಗ್ಗಾಲಯಕ್ಕೇರಿದನ್ (ಪ್ರಕಶಿ. ೦೯೨೪, ೪೭-೨; ?). ೨. ಹಗೆಯಾದವನು ; ಶತ್ರು; ವೈರಿ : ತನಗೆಯಿದಿರಾದ ವಯಿರರಯಿಱಿದು ರಣಖಂಡಿತವಂ ಮಾಡಿ (ಕಇ. I. ೫೭-೦೩ ; 1438).

[ < ಸಂ. ವೈರ ]

**ಬೇರ$_2$**, ಬ್ಯಾರ (ನಾ). = ಬೇಪಾರ: "ಬೇರ—೧ ವ್ಯಾಪಾರ, ೨ ವೈರ" (ತದ್ಭಕೋ. ೩೨) ; ತಾರವನು ನೀನಿತ್ತು ಬೇರವನು ಬಿಟ್ಟಿಹುದು ನೀಱಿಯವಳೆಂದು ಪರವಧುವ ಸಾರಿದರೆ ಮಾರಿ ಬಂದಿಹುದು (ಸರ್ವಜ್ಞ. ೦೭೯೫) ; ಬೇರದವಸರದಿಂ ಮೆಯ್ದೆಗೆದು ಬಣಂಜಿಗರ ನೆರವಿ ಕಮಂತವಾಗೆ ಪೊಸವರದಿನೆಣಿಕೆಯೊಳಿರೆಯುಂ (ರಾಮಾಶ್ವ. ೨೨-೦೮). **ಬ್ಯಾರ :** ಕೆಲವು ಪ್ಯಾಟಿಗಳೊಳ್ ಬಗೆಬಗೆಯಾದ ಪೈರುಗಳಂ ತಂದು ತುಂಬಿ ಬ್ಯಾರವಂ ಮಾಡುವ ಬೆರಿಯರು ಬಣಜಿಗರು . . . ನಾನಾಜಾತಿಯವರಿಗೆ ಬೇರ್ಬೇರೆ ಬೀದಿಗಳಂ ಹಂಚಿ (ತ್ರಿಗಂಧಿ. ೦೩೫-೫). [< ಸಂ. ವ್ಯಾಪಾರ]

**ಬೇರ$_3$** (ನಾ). ೧. ಶರೀರ: 'ಉಜ್ಜ್ವಳಬೇರ', 'ಕುಂಕುಮಬೇರ' ಪರಾ. ೨. ವಿಗ್ರಹ; ಪ್ರತಿಮೆ : ರುಕ್ಮಿಣೀಸತ್ಯಭಾಮಾಸಮೇತ ಪ್ರಸನ್ನಕೃಷ್ಣಸ್ವಾಮಿಯವರಂ ಪಂಚಬೇರಯುಕ್ತವಾಗಿ ಪ್ರತಿಷ್ಠೆಯಂ ಗೈದು (ಎಕ. XIV. ಮೈಸೂರು. ೩೧-೨೭; 1828). 'ಮೂಲಬೇರ' ಪರಾ.

[< ಸಂ. ವೇರ]

**ಬೇರಯಿಸು** (ಕ್ರಿ). ಬೇರೆಯಾಗಿಸು ; ಬದಲಾಯಿಸು : ಬೇರಯಿಸಿ ನಿಮಿಷನಿಮಿಷಕವೊಡಲ ಬಣ್ಣಗಳ ತೋರಿಪ ಪೊಸರವಳ್ಳಿಯಂತೇನು ಬೊಮ್ಮ ? (ಮಂಕುತಿ. ೩೮). [ಬೇರೆ$_1$ ( <ಬೇಱು$^3_1$) + — ಇಸು$_3$]

**ಬೇರಾಗ** (ನಾ). ಸರಿಯಾದ ರಾಗವಲ್ಲದುದು; ಅಪಸ್ವರದಿಂದ ಕೂಡಿದುದು : ನಿನ್ನ ದನಿಯ ಸವಿರಾಗದಲ್ಲಿ ಬೇರಾಗ ಮರೆಸಿ ಮರೆವೆ (ಮುಳ್ಳುಕಂ. ೨೪-೮). [ಬೇ$_3$ —+ ರಾಗ]

**ಬೇರಿ$_1$**, ಬೆರಿಯು, ಬ್ಯಾರಿ (ನಾ). ೧. ವ್ಯಾಪಾರ ಮಾಡುವವನು; ವರ್ತಕ ; ವೈಶ್ಯ : ಊರಪ್ಯಃ . . . ಭೂಮಿಸ್ಬರ್ಕ್, ವಿಟ್—ವೈಶ್ಯರ ಹೆಸರುಗಳು, ಬೇರಿಯವರು, ನಗರ್ತರು, ಕೋಮಟಿಗಳು ಮುಂತಾಗಿ (ಸಿದ್ಧಾಂಶಿ. ೨೭೩). **ಬೆರಿಯ :** ೧. ಕೆಲವು ಪ್ಯಾಟಿಗಳೊಳ್ ಬಗೆಬಗೆಯಾದ ಪೈರುಗಳಂ ತಂದು ತುಂಬಿ ಬ್ಯಾರವಂ ಮಾಡುವ ಬೆರಿಯರು ಬಣಜಿಗರು . . . ನಾನಾಜಾತಿಯವರಿಗೆ ಬೇರ್ಬೇರೆ ಬೀದಿಗಳಂ ಹಂಚಿ (ತ್ರಿಗಂಧಿ. ೦೩೫-೫). **ಬ್ಯಾರಿ :** ೨. ಕೇರಳದಲ್ಲಿರುವ ಮಹಮ್ಮದೀಯರ ಗುಂಪಿಗೆ ಸೇರಿದವನು ; ಮಾಪಿಳ್ಳೆ : ಇಬ್ಬರೂ ಮಾಪಿಳ್ಳೆ, ಲಬ್ಬೆ, ಬ್ಯಾರಿ ಮೊದಲಾದ ಮಲೆಯಾಳಿಗಳು ಉಡುವಂತೆ . . . ಅಡ್ಡಪಂಚೆ ಸುತ್ತಿ ಉದ್ದುದ್ದ ಬನೀನು ಹಾಕಿದ್ದರು (ಮರಳು. ೪೩೨) ; ಬ್ಯಾರಿಗಳೆಲ್ಲ ಬರಿ ಸೈಕಲ್ಲಿನಲ್ಲೆ ಹಿಂತಿರುಗಿದರು (ಹೊಸಕ್ಷಿ. ೪೮).

[ < ಸಂ. ವ್ಯಾಪಾರಿನ್. / ತುಳು. ಬ್ಯಾರಿ]

**ಬೇರಿ$_2$** (ನಾ). ಒಂದು ಬಗೆಯ ಚರ್ಮವಾದ್ಯ; ಭೇರಿ; ನಗಾರಿ : "ಬೇರಿ — ಭೇರಿ = ನಗಾರಿ" (ತದ್ಭಕೋ. ೩೦); ಭಕಾರಕ್ಕೆ ಬಕಾರಂ_ ಆರಂಭ—ಆರಂಬ . . . ಭೇರಿ—ಬೇರಿ (ಶಬ್ದಮ. ೨೫೫ ಪ್ರಯೋ).

[ < ಸಂ. ಭೇರಿ ]

**ಬೇರಿಗ$_1$** (ನಾ). ಹಗೆ; ವೈರಿ; ಶತ್ರು : ಅರವಾಗಂ . . . ಈ ತೇರೇವು ದಂದು ನೆಲಕಿಟ್ಟುತಂದು ಬೇರಿಗನನಪ್ಪಳಿಸುವೆನೆಂದು ಕೋಲ್ಗಳಿಂ ತಿರು ವಾಯ್ಗೆ ಪೂಡಿ ಕಾದಿದಂ (ರಾಘುಕ್ಯ. ೦೨೮-೨೮). [ಬೇರ$_1$ + — ಇಗ]

**ಬೇರಿಗ$_2$** (ನಾ). ವ್ಯಾಪಾರ ಮಾಡುವವನು ; ವರ್ತಕ; ವ್ಯಾಪಾರಸ್ಥ : ಸಂದ ಭಕ್ತಿಯೊಳ್ ಬೇರವನುಳಿದ ಬೇರಿಗರ ವೃಂದಂ . . . . ಅಂದು ಕಾಣಿಸಿತು ರಕ್ಕಸವಗೆಯಗೆ (ಶ್ರೀರಾಮ. ೯-೫೬).

[ಬೇರ$_2$ + — ಇಗ]

**ಬೇರೀಜ್** 'ಬೇರೀಜು' ನೋ.

**ಬೇರೀಜು, ಬೇರೀಜ್** (ನಾ). ೧. ಕೂಡುವಿಕೆ; ಸಂಕಲನ : ಗಣಿತದ ಚತುರೋಪಾಯಗಳಾದ ಬೇರೀಜು, ವಜಾಬಾಕಿ, ಗುಣಾಕಾರ, ಭಾಗಾಕಾರ ಗಳನ್ನು ನಾನು ಸಲೀಸಾಗಿ ಕೈಕೊಳ್ಳಬಲ್ಲೆನಾದರೂ ಕ್ರಿಯೆ ಸದೋಷ ವಾಗುತ್ತದೆ (ಗಾಳಿ. ೦೬೯); ಮೊದಲು ಬೇರೀಜು, ಮುಂದೆ ವಜಾಬಾಕಿ, ಆಮೇಲೆ ಗುಣಾಕಾರ ಮತ್ತು ಕಡೆಗೆ ಭಾಗಾಕಾರ ಹೀಗೆ ಸಾಮಾನ್ಯ ಪದ್ಧತಿಯಿರುವುದು (ಕೃಷ್ಣಾ. ೬೩). ೨. ಒಟ್ಟು ಮೊತ್ತ : ಅಲ್ಲಿರುವ ಒಟ್ಟು ಮನೆಗಳ ಬೇರೀಜು ಮೂವತ್ತಕ್ಕೆ ಮಿಕ್ಕುವುದು ಕಷ್ಟ (ಹರಾಪ. ೦೬); ಎಲ್ಲದರ ಬೇರೀಜು ಶೂನ್ಯ (ಮುಕ್ತ. ೦೬೨). ೩. ಒಟ್ಟು ಕಂದಾಯದ ಮೊಬಲಗು : ಗ್ರಾಮದ ಬೇರೀಜು ಸಾಗವಳೀ ಬರದಂನ್ನು ಪರಾಂಮರಿಸಿ ಸರ್ವಮಾಂನ್ಯವಾಗಿ ಅಪ್ಪಣೆ ಕೊಟ್ಟಿರುವ ವಿವರಾ (ಪ್ರಕಾ. ೦೯೩೯, ೯೨-೯೨; ೨೩೩೬) ; ಈ ಏರ್ಪಾಡಿನಿಂದ ಜನಗಳಿಗೆ ಸೌಲಭ್ಯವು ಹೆಚ್ಚಿ, ಆ ರಾಜ್ಯದ ಬೇರೀಜು ಒಂದಕ್ಕೆ ಎರಡಾಯಿತು (ಕಾಮಹಂ. ೩೩೯) ; ಕಂದಾಯು ಮಾಫೀ ಮಹಾ ಜಾತಾ ಐನು ಬೇರೀಜು ಎಷ್ಟು ಅಂತ ಹಾಕುವುದಕ್ಕೆ ಕೈಬರುತ್ತಲೇ ಇರಲಿಲ್ಲ (ಕಷ್ಟ್ಕು. ೦೫೩). **ಬೇರೀಜ್** : ೧. ನಮ್ಮ ಭಾಷೆಯಲ್ಲಿ ಶೀರ ಹೊಂದಿಕೊಂಡು ಹೋದ ಮತ್ತು ಅನ್ಯದೇಶೀಯವೆಂದು ಗುರುತಿಸಲಾಗದ ಶಬ್ದಗಳೆಂದರೆ—ಕಚೇರಿ (ಕಚ್ಚೂರಿ) . . . ದರವಾಜೆ, ಬೇರೀಜ್, ಮುಜುರೆ (ಶಾಕಾಶಾ. ೦೬೬).

[←ಪಾರ. ಬರೀಜ್ ; ಹಿಂ. ಬೇರಿಜ್ ; ಮರಾ. ಬೇರೀಜ್]

ಬೇರು 'ಬೇರ್$_1$' ನೋ.

ಬೇರುಂಗಾಲ್ (ನಾ). **ದೊಡ್ಡ ಕಾಲುವೆ** : ಬಳಿಕೆಱೆಯ ಕೀೞೇರಿಯ ಬೇರುಂಗಾಲಮೊಕ್ಕೆಲೊಳೊನ್ದು ಪೊಱೆಯುಂ ಕೆಯುಂ ಪದಿಕ್ಕೊರ್ಳಮ್ ವತಮುಂ ಮಿಾಸಲುಂ ಬಳಿವತ್ತಮುಂ ಸಲ್ವದು (ಎಕ. III, ಹಂಶಪ. ೦೩೩-೨೦ ; ೯೭೭). [☞ ಇದು 'ಪೇರುಂಗಾಲ್' ಎಂಬುವರ ಅಪಲಿಖಿತವಿರ ಬಹುದು. / ತಮಿ. ಪೆರುಙ್ಕಾಲ್]

ಬೇರುಗ (ನಾ). ಔಷಧದ ಗಿಡಮೂಲಿಕೆಗಳ ವ್ಯಾಪಾರ ಮಾಡುವವನು; ಔಷಧದ ಬೇರುಗಳನ್ನು ಮಾರುವವನು : ಉಗ ಪ್ರತ್ಯಯಕ್ಕೆ— ನಾರುಗಂ, ಬೇರುಗಂ, ಊರುಗಂ (ಶಮದ. ೨೦೯ ಪ್ರಯೋ).

[ಬೇರ್$_1$ + — ಉಗ]

**ಬೇರುಗಾಣ್** (ಕ್ರಿ). (ಆಲಂ) ಅಂತರಂಗವನ್ನು ಅರಿತುಕೊಳ್ಳು : ಭಂಡಾರ ಬೊಕ್ಕಸ ಮನೆಗಳ ನೋಳ್ಪನಾ ಭಂಡಾರಿಗಳು ನೋಡುವಂತೆ ಕಂಡವರೆಲ್ಲರೀ ನೃಪನವೆಂಬರು ಬೇರುಗಂಡೆಣಿಸುವನು ತಾನೊಳಗೆ (ಜೈಮಿ. ೬೩-೩೩). [ಬೇರು (<ಬೇರ್$_1$) + ಕಾಣ್]

**ಬೇರುಗಿ** (ನಾ) ಔಷಧದ ಗಿಡಮೂಲಿಕೆಗಳ ವ್ಯಾಪಾರ ಮಾಡುವವಳು : ನಾರುಗಿ, ನಾರುಗಿತಿ ; ಬೇರುಗಿ, ಬೇರುಗಿತಿ (ಶಬ್ದಮ. ೦೯೩ ಪ್ರಯೋ).

[ಬೇರುಗ + — ಇ$_2$]

**ಬೇರುಗಿಡಿಸು** (ಕ್ರಿ). ಬುಡ ಅಥವಾ ಮೂಲವನ್ನು ಕೆಡಿಸು,—ಹಾಳು ಮಾಡು : ಈ ಮಹಾರಾಜನಿಗೂ ಇವನ ಹಿಂದಣವರಿಗೂ ಆವರಿಸಿಕೊಂಡು ಬೇರುಗಿಡಿಸಲೇಬೇಕಾಗಿದ್ದ ಕುರುಡತನವನ್ನು . . . ತಪ್ಪಿಸಿ ಕಾಪಾಡಿಕೊಂಡು ಬರುತ್ತ . . . ಪಾವನರಾಗಿರುವ ಶೂರರ ಮನೆತನದವರು ನೀವು (ಹುಂಕೃಶ. ೫೦-೦೫). [ಬೇರು$_1$ (<ಬೇರ್) + ಕಿಡಿಸು (<ಕೆಡಿಸು$_1$)]

**ಬೇರುಗಿತಿ** (ನಾ). = ಬೇರುಗಿ : ನಾರುಗಿ, ನಾರುಗಿತಿ, ಬೇರುಗಿ; ಬೇರುಗಿತಿ (ಶಬ್ದಮ. ೦೯೩ ಪ್ರಯೋ).

[ಬೇರುಗ + — ಇತಿ$_1$(< — ಇತ್ತಿ)]

**ಬೇರುಗೊಲೆ** 'ಬೇರ್ಗೊಲೆ' ನೋ.

**ಬೇರುಡಿ** (ಕ್ರಿ). ಬೇರುಸಹಿತ ಮುರಿದು ಕೊಳ್ಳು; ಬುಡ ಕಿತ್ತುಬರು : ತೀರೆ ಗಿರಿ ಮುಟ್ಟೆಸೆ ಭುಜದಲಿ ಬೇರುಡಿಯೆ ಬೆಳಲತ್ತ . . . ಹುಣಿಸೆ ನಾನಾ ಭೂರಿಭೂಜಗಳಿಂದ ಹೊಯ್ದಾಡಿದರು ಸರಸದಲಿ (ಕೊರಟಾ. ೯-೯-೨೩). [ಬೇರು$_1$ (< ಬೇರ್) + ಉಡಿ$_1$]

**ಬೇರುಬಿಡು** 'ಬೇರ್ಬಿಡು' ನೋ.

**ಬೇರುವರಿ** 'ಬೇರ್ವರಿ' ನೋ.

**ಬೇರೂರಿಸು** (ಕ್ರಿ). (ಆಲಂ) ಸ್ಥಿರಪಡಿಸು ; ನೆಲೆಗೊಳಿಸು : ಈ ಶ್ಲೋಕದ ಚಾರಿತ್ರಿಕತ್ವವನ್ನು ಸಿದ್ಧಾಂತಿಸಲಿಕ್ಕಾಗಲಿ, ಉತ್ತರಭಾಗವನ್ನು ಆ ಕಾಳಿದಾಸನೇ ಬರೆದಿರಬೇಕೆಂಬುದನ್ನು ಬೇರೂರಿಸಲಿಕ್ಕಾಗಲಿ ನಾವು ಹವಣಿಸುವುದಿಲ್ಲ (ಕಾವ್ಯಶಿ. ೩೯೯).

[ಬೇರೂರು (< ಬೇರೂಱು) + — ಇಸು$_2$]

**ಬೇರೂರು** 'ಬೇರೂಱು' ನೋ.

**ಬೇರೂಱು, ಬೇರೂರು** (ಕ್ರಿ). ೧. (ಸಸ್ಯಗಳಿಗೆ ಸಂಬಂಧಿಸಿದಂತೆ) ಭೂಮಿಯ ಕೆಳಗಿರುವ ಮೂಲದ ಬೇರೆಬೇರೆ ತುದಿಗಳು ಇನ್ನೂ ಕೆಳಕ್ಕೆ ಬೆಳೆಯುತ್ತಾ ಹೋಗು,- ಭದ್ರವಾಗಿ ನಿಲ್ಲು ; ಬೇರು ಬಿಡು : ಹಾರುವನ ಭಕ್ತಿ ಓಡಿನೊಳಗಗೆಯು ಹೊಯಿದಂತೆ ಕೆಳಯಿಂಕೆ ಬೇರೂಱದು ಮೇಲೆ ಫಲವಾಗದು (ಬಸವ. ೫೯೩). ೨. (ಆಲಂ) ನೆಲೆನಿಲ್ಲು; ತಳವೂರು : ನಭೋಭಾಗದಿನಿಂದ್ರ ಚಾಪಮನಿತುಂ ಭೂಭಾಗದೊಳ್ ಬಂದು ತೊಟ್ಟನೆ ಬೇರೂಱಿದವೋ . . . ಎಂಬಿನಮೇಂ ನಾಡೆ ಬೆಡಂಗನಾಳ್ದುದೊ ವಿಯುದ್ದಿಗ್ಭೂವಿಭೂಮಂಡಲಂ (ಅದಿಪು. ೬-೨೯) ; ಇಂತು ತಪೋಬೀಜಂ ಚಿತ್ತಭೂಮಿಯೊಳ್ ಬೇರೂಱಿಯಹಂಕಾರದೊಳಂಕುರಿಸಿ (ಗಿರಿಜಾ. ೩-೧೨ ಪ) ; ಬೇಸಱಿಕೆ ಬೇರೂಱಿದುದು ಜಯದಾಸೆ ಜಾಱಿತು (ಕುಮಾ. ೨-೦೦೯). **ಬೇರೂರು** : ೨. ಈ ದೇಶದಲ್ಲಿ ಮಹಮ್ಮದೀಯಮತವು ಬೇರೂರಿ ಬೆಳೆಯಲು ಸಾಧ್ಯವಾಯಿತು (ರಾಜ. ೫೬); ನೈತಿಕ ಮತ್ತು ದೈವಿಕಭಾವನೆಗಳು ಬೇರೂರುವುದು ಈ ಕಾಲದಲ್ಲೇ (೨ಸ್ವರ. ೦೦೫). [ಬೇರ್$_1$ + ಊಱು$_1$]

**ಬೇರೆ$_1$** 'ಬೇಱೆ$_1$' ನೋ.

**ಬೇರೆ$_2$** 'ಬೇಱೆ$_2$' ನೋ.

**ಬೇರೇಳ್** (ಕ್ರಿ). ಬುಡಸಹಿತ ಕಿತ್ತು ಬರು : ಭೂತಳಂ ನಡುಗೆ ಶೈಲಶ್ರೇಣಿ ಬೇರೇೞೆ ವಿಶ್ವಜಗತ್‌ಕ್ಷೋಭಕರಸ್ವಭಾವಗತಿಯಿಂ ಬಂದಂ ವಿಹಂಗಾಧಿಪಂ (ಜಗ. ೦೩-೩೬). [ಬೇರ್$_1$ + ಏೞ್$_1$]

**ಬೇರೊಡೆ** (ಕ್ರಿ). ಬೇರು ಹರಡು ; ಮೂಲ ವಿಸ್ತರಿಸು : ಎಳು ಫಲುಗುಣ ಹರಿ ವರೂಥದ ಮೇಲೆ ಬಿಜಯಂಗೈವ ಬಹಳ ಫಲಾಳಿಯಿದೆಲಾ ನಿನ್ನ ಪುಣ್ಯದ್ರುಮದ ಬೇರೊಡೆದು (ಕುಮಾ. ೬-೦೫). [ಬೇರ್$_1$ + ಒಡೆ$_1$]

**ಬೇರ್ಕೆ$_1$** (ನಾ). ಬೇರೆಬೇರೆ ಮಾಡುವಿಕೆ ; ಬೇರ್ಪಡಿಸುವಿಕೆ ; ವಿಂಗಡಣೆ : 'ಬೇರ್ಕೆಗೆಯ್' ಪರಾ.

[ಬೇಱ್ (< ಬೇಱೆ$_1$) + — ಕೆ]

**ಬೇರ್ಕೆ$_2$** (ನಾ). (?) : ಪುರಿದ ಮಣಲೊಳಂ ಪೂಣಿಸಿದ ಗಾಣದೊಳಂ ಬಿರ್ಚಿದ ಬೇರ್ಕೆಯೊಳಂ . . . ಮೊನೆಯುಂ ಪೂಣಿಸಿದ ಕೊಂಕದೊಳಂ ಕೈಗೆಯ್ದು (ಅಪಂಪು. ೦೦-೬೫ ಪ). [?]

**ಬೇರ್ಕೆಗೆಯ್** (ಕ್ರಿ). ಬೇರ್ಪಡಿಸು ; ವಿಂಗಡಿಸು ; ಪ್ರತ್ಯೇಕಿಸು : ಅರ್ಕಕೀರ್ತಿಗೆ ರಾಜ್ಯವಿರಲೆಂದು ಮಂತ್ರಿಗೆ ತೋರ್ಕೆಗೊಟ್ಟೈದಲೊ ತಪಕೆ ಮರ್ಕಟವೈರಾಗ್ಯವೆಂಬುದು ಜಗವೆಂದು ಬೇರ್ಕೆಗೆಯ್ದೊ [ಪಾಠಾಂ. ಗೈದೊ]ಳಗೆ ಚಿಂತಿಸುವ (ಭರತ. ೩೨-೧೧೪). [ಬೇರ್ಕೆ$_1$ + ಕೆಯ್$_1$]

**ಬೇರ್ಕೆಯ್**, ಬೇರ್ಕೈ, ಬೇಱುಕೆಯ್ (ಕ್ರಿ). =ಬೇರ್ಕೆಗೆಯ್ : ಮನೋವಾಕ್ಕಾಯವೃತ್ತಿಯಿಂ ನೆರಪಿದ ಕರ್ಮವಂ ಬೇರ್ಕೆಯ್ಕಲೆನಗೆಂತಕ್ಕುಮೆಂಬ ಸಂಕಲ್ಪಂ ಪ್ರಥಮಧರ್ಮಂ (ಆಕೃ. ೮-೨೬ ವ); ನಿನಗೆ ಕರ್ಮಬಂಧಮಪ್ಪ ಜೀವಮನೆಂತು ಬೇರ್ಕೆಯ್ದು ತೋಱಲ್ಬರ್ಪುದು (ರಜಾಶೇಖ. ೯-೧೨೦); ತನ್ನಂ ಬೇರ್ಕೆಯ್ದು ಮೆಯ್ಯಂ ಪಗಲಿದಿರುಳದೆಂಬೀ ವಿಭೇದಂ ದಲೇನುಂ ಕೆನ್ನಂ ಮೆಯ್ದೋಱಿತಿಲ್ಲಂ (ಶಾರಶ. ೩-೪೩). **ಬೇರ್ಕೈ** : ಅರ್ಕನಂತ್ರಸೆವಾತ್ಮಯೋಗವಿಂತಿಹುದೆಂದು ಬೇರ್ಕೈದು ಪಚನಿಸಲರಿದು (ಭರತ. ೨-೯೦); ಖಡ್ಗದಿಂ ಮಸ್ತಕಮನರಿದು ಬೇರ್ಕೈವದಂ [ಪಾಠಾಂ. ಬೇರ್ಕೆಯ್ದುದಂ] ಮುಂಡಮಂ ಸೀಳ್ದು (ಕೃಕಂ. ೧೪-೪೬); ಗಂಗೆಯಲಿ ಬಂದು ತಾನಾಗಿ ಹರಿದಿಹವು ಪತ್ತು, ನೀರು ಬೇರ್ಕೈವುದೆಂತು ಬಿಸಿಲಲ್ಲಿ ಬೆರೆತ ತಮದೊಂದು ಏರುಪೇರು ? (ಮುಕ್ತಕಂ. ೦೬-೧೧). **ಬೇಱುಕೆಯ್** : ಇಂತಹ ಪ್ರಳಯ ಹದಿನೆಂಟು ಕೂಡಿ ಮಹಾಂಧಕಾರ ಸಂದಿತ್ತು, ಇಂತಹ ಅಂಧಕಾರ ಸಂದಿಲ್ಲದೆ ತಿರುಗುವಲ್ಲಿ ಬಯಲು ಬೇಱುಕೆಯ್ಕಿತ್ತು (ಪೋಶಚಾ. ೩-೧೪). [ಬೇಱ್ ( < ಬೇಱ$_1$) + ಕೆಯ್$_1$]

**ಬೇರ್ಕೈ** ' ಬೇರ್ಕೆಯ್ ' ನೋ.

**ಬೇರ್ಗೊಲೆ**, ಬೇರುಗೊಲೆ (ನಾ). ೧. ಮೂಲವನ್ನು ಕಿತ್ತು ನಾಶಮಾಡುವುದು. ೨. (ಅಲಂ) ಸಂಪೂರ್ಣವಾಗಿ ಇಲ್ಲದಂತೆ ಮಾಡುವುದು : ಅರಿನ್ನು ಗತಿ ನಿನಗೆ ಸಂಬಂಧಿ ಬಾಣನಂ ಹಾರೈಸುವೊಡೆ ನಿನ್ನ ಬೇರ್ಗೊಲೆಗೆ ಶಿವನಪ್ಪ ಕಾರಣಮನಂಗತ್ತಮೇ ಪ್ರಾಪ್ತಮೆಂದು ಹರಿ ತನ್ನ ಸುತನಂ ಜಱಿದನು (ಕೃಬಾಣ. ೭-೪೦). **ಬೇರುಗೊಲೆ** : ೨. ನಾರಿಯರು ಮಱುಗಿದರೇಟ ಮುದಿಹಾರುವನ ತನಿಬೇಂಟೆ ನಮ್ಮಯ ಬೇರುಗೊಲೆಯಾಗಿರ್ದುದೇ ಹಾಯೆನುತ ಬಿಸುಸುಯ್ದು (ಕುವ್ಯಾಕ. ೪-೨೬); ದುರಾತ್ಮರು ಬೇರುಗೊಲೆಗಂಗೈಸಿವರು ಕುರುವಂಶಸುರಕುಜದ (ಜೈಭಾಗ. ೩-೧-೧೧). [ಬೇರ್$_1$ + ಕೊಲೆ$_2$]

**ಬೇರ್ಗೊಳ್** (ಕ್ರಿ). ೧. ಬೇರುಬಿಡು. ೨. ಬೇರಿನಿಂದ ಪ್ರಾರಂಭಿಸು : ಬೇರ್ಗೊಂಡು ಪಣ್ತು ಪಲಸೆಳನೀರ್ಗಾಯಂ ತಳೆದ ತೆಂಗು . . . ನೇರ್ಗಿಱಿಯವು ಕಲ್ಪತರುಗೆ ಸಿರಿಯಿಂದೆನಿಕುಂ (ಚಂದ್ರಪ್ರ. ೦೫-೨೬). [ಬೇರ್$_1$ + ಕೊಳ್$_1$]

**ಬೇರ್ನುಡಿ** (ನಾ). ಅನ್ಯಮಾತು ; ಬೇರೆಯ ನುಡಿ : ಸಿದ್ಧನ್ನಮ ಎಂಬ ವಾಕ್ಯಮಿರೆ ಬೇರ್ನುಡಿಯೇಕೆ (ಅತಶ. ೦೯). [ಬೇಱ್ (< ಬೇಱ$_1$ ) + ನುಡಿ$_2$]

**ಬೇರ್ನೆಲೆವೋಗು** (ಕ್ರಿ). ಬೇರೆಯ ಸ್ಥಳಕ್ಕೆ ಹೋಗು ; ಅನ್ಯಪ್ರದೇಶಕ್ಕೆ ನಡೆ : ಕಾರ್ಯಾಂತರದೆ ಬೇರ್ನೆಲೆವೋದ ನಲ್ಲನ ಪಿಂಬಡಿಯೊಳ್ ಪಂಬಲಿಸುತಿರ್ದ ಬಿಂಬಫಲದಶನವಸನೆ (ಅಶಂಪು. ೬-೨೦ ವ). [ಬೇಱ್ (< ಬೇಱ$_1$) + ನೆಲೆ$_1$ + ಪೋಗು$_1$ (< ಪೋ$_1$) ]

**ಬೇರ್ಪ** ' ಬೇಡು$_1$ ' ಪರಾ.

**ಬೇರ್ಪಡಿ** (ನಾ). ಬೇರೆಯಾದ ಭೋಜನಸಾಮಗ್ರಿ,—ಎಡೆ : ಷಡುಖಂಡಪದವ ನಿಟ್ಟಿಸುವನು ಪುಣ್ಯ ಸಂಗಡಿಸೆ ಜಾತ್ರೆಯ ನೋಡುವಂತೆ ಅಡುಗೂಲಿಮನೆಯಲ್ಲಿ ಮಿಂದುಂಬನಂತೆ ಬೇರ್ಪಡಿ ನೋಡಿ ಭೋಗಿಸುತಿರ್ದ (ಭರತ. ೬೩-೩೪). [ಬೇಱ್ ( < ಬೇಱ$_1$ ) + ಪಡಿ$_1$]

**ಬೇರ್ಪಡಿಕೆ** (ನಾ). ಬೇರೆಯಾಗಿ ಮಾಡುವಿಕೆ ; ಪ್ರತ್ಯೇಕಿಸುವಿಕೆ ; ವಿಂಗಡಣೆ : ಅನೇಕ ಜೀವಾತ್ಮರುಗಳ ಸೃಷ್ಟ್ಯುತ್ಸರ್ಗವನ್ನು ' ವಿಯೋಗ' ಎಂದೂ ಕರೆಯುವುದುಂಟು. ಎಂದರೆ, ಬೇರ್ಪಡಿಕೆಯ ಕೆಲಸ ಎಂದು (ತತ್ವಪ್ರಾ. ೩೬೮). [ಬೇರ್ಪಡು + — ಇಕೆ]

**ಬೇರ್ಪಡಿಸು** (ಕ್ರಿ). ಬೇರೆಯಾಗಿಸು ; ಪ್ರತ್ಯೇಕಿಸು : ಒಡಲ ಬಳಿನೆಳಲಿಂಗೆ ಗತಿ ಬೇರ್ಪಡಿಸಿಹುದೆ (ಕುವ್ಯಾಕ. ೧-೯) ; ಕುಂದಣವನು ರಸಗೆಯ್ದೊಡಾಕ್ಷಣ ಕರುವಿಂದೆ ಬೇರ್ಪಡಿಸಿ ಪುತ್ಥಳಿಯ ತಂದಡರ್ಚಿದರು (ಪೋಶಚ. ೨೭-೩೮) ; ಟೊಮೆಟೊವನ್ನು ಸುಲಿದು ಬೀಜ ಮತ್ತು ತಿರುಳನ್ನು ಬೇರ್ಪಡಿಸಿರಿ (ಅಡುಗೆ. ೧೧೨). [ಬೇರ್ಪಡು + —ಇಸು$_3$]

**ಬೇರ್ಪಡಿಸುಹ** (ನಾ). ವ್ಯತ್ಯಾಸವನ್ನುಂಟುಮಾಡುವಿಕೆ : "ಬೇರ್ಪಡಿಸುಹ=ಭೇದ, ಅಂತರ" (ನಾಶಶಾ. ೬).
[ಬೇರ್ಪಡಿಸು + —ಹ$_2$ (< —ಪ$_2$)]

**ಬೇರ್ಪಡು**, ಬೇಱುಪಡು (ಕ್ರಿ). ಬೇರೆಯಾಗು ; ಪ್ರತ್ಯೇಕವಾಗು : "ಬೇರ್ಪಡು —ವಿವಿಕ್ತೇ, ವಿವರೇ ಚ" (ಕವಾಥಾ. ವ) ; ಕೊರಲೊಳ್ ಯಜ್ಞೋಪವೀತಂ ಪೊಳೆಯೆ ಬರಿಗಳೊಳ್ ತೋಱುತಿರ್ಪೆಲ್ಗಳೊಳ್ ಪಂಜರಿಸಿರ್ದಂತೆಯೆದ್ದು ಬೇರ್ಪಟ್ಟಿರೆ ತೆರೆದುಱುಗಲ್ ಗಾಳಿಯಿಂದಾಡೆ ಯೋಗೀಶ್ವರಂ . . . ಎಸೆವ ಗಂಗಾಪ್ರವಾಹುಬೊಲಿರ್ದಂ. (ಜಾದಂಪು. ೨೪೦): ಉದ್ಯೋತಂ ಶ್ವೇತಕೃಷ್ಣಂಗಳನಱಪುವವೊಲ್ಪುಣ್ಯಪಾಪಂಗಳಂ ಸ್ಯಾದ್ವಿದ್ಯಾವಾದಂಗಳಿಂ ಭವ್ಯರ ಬಗೆವುಗುವನ್ನಂ ದಯಾಮೂಲಮಂ ಸಾವದ್ಯವ್ಯಾಪಾರಮಂ ಬೇರ್ಪಡೆ ತಿಳಿಪುವುಪಾಧ್ಯಾಯರಾಧೇಯರೆಮ್ಮೊಳ್ (ಮಲ್ಲಿಪು. ೧-೯). ೨. ಹರಡಿರು ; ಬಿಚ್ಚಿರು : "ಬೇರ್ಪಡು —ವಿವಿಕ್ತೇ, ವಿವರೇ ಚ" (ಕವಾಥಾ. ವ). ೩. ಬೇರೆ ರೀತಿಯಾಗು; ವ್ಯತ್ಯಾಸಗೊಳ್ಳು : (೬). **ಬೇಱುಪಡು** : ೧. ಬೆಸುಗೆಯಾದಂತಿದ್ದು ಬೇಱುಪಟ್ಟಿಹನಾತ್ಮ (ಶರತ. ೩-೪೬). [ಬೇಱ್$_1$ (<ಬೇಱ) + ಪಡು$_1$]

**ಬೇರ್ಪಾಟು** 'ಬೇರ್ಪಾಡು' ನೋ.

**ಬೇರ್ಪಾಡು**, ಬೇರ್ಪಾಟು (ನಾ). ೧. ಬೇರೆಯಾಗುವುದು ; ಪ್ರತ್ಯೇಕಗೊಳ್ಳುವುದು. ೨. ವ್ಯತ್ಯಾಸ ; ಅಂತರ : ಇಲ್ಲಿ ಶಿಶಿರ ವಸಂತಗಳೆಂಬ ಬೇರ್ಪಾಡಿಲ್ಲ, ಇಲ್ಲಿರುವುದು ಒಂದೇ ಋತು – ನಿತ್ಯನಡುಬೇಸಗೆ (ಹಸುಹೂ. ೨೬೪). **ಬೇರ್ಪಾಟು** : ೨. ಮನಸ್ಸಿನ ಬೇರ್ಪಾಟಿನಿಂದಲೇ ಲೋಕದಲ್ಲಿ ಕಲಹವುಂಟಾಗುವುದು (ಪ್ರಾಸೂ. ೧೧೧). [< ಬೇರ್ಪಡು]

**ಬೇರ್ಬಡಪ** (ನಾ). ಬೇರೆಯಾದ ಮಳೆ,—ಧಾರಾವರ್ಷ : ಎಲೆಗಳಿಱುಂಬಿನೊಳ್ ಮರದ ತೂಱಲುಗೊಂಬಿನ ನೀಡನೀಡದೊಳ್ ತೊಲಗದೆ ನಿಂದಣಂ ನಡುಗುತುಂ ತನು ಕೂಡೆ ಕುಸುಂಗೆ ಕಂಠಕಂದಲ ಭರಮುಟ್ಟೆ ಪೋಲ್ ಕುಸಿದು ಪಕ್ಷಿಗಳಿರ್ದುವೆಱುಂಕೆಯುಗ್ರದಿಂ ಜಲಲವಬಿಂದುಗಳ್ ಸುರಿಯೆ ಬೇರ್ಪ[ರ್ಬ]ಡಪಂ ಬಿಡೆ ಸೋರ್ವಗುರ್ವಿನೊಳ್ (ಕುಸುಮಜಾ. ೬-೩೭). [ಬೇಱ್ (<ಬೇಱ$_1$) + ಬಡಪ]

**ಬೇರ್ಬಿಡಿಸು** (ಕ್ರಿ). ಬುಡವು ಕಿತ್ತುಬರುವಂತೆ ಮಾಡು : ರಜತಶೈಲಮುಂ, ಶಿವ ಶಿವಾಣಿಯರೊಡನೆ, ಬೇರ್ಬಿಡಿಸುತಳ್ಳಾಡಿ ನೆಗಹಿದೀ ದೈತ್ಯರ ದೊರೆಯ ತೋಳ್ ಸ್ಥಿರಾತ್ಮಜೆಯ ಹೃದಯಾದ್ಯಾನದೊಳ್ ಉದಿರ್ದೊಂದು ಪೂವೆಸಳ ಪೊರೆಗುರುಳ್ವುದು (ಶ್ರೀರಾಮಾ. ೬೦೯-೩೯). [ಬೇರ್$_1$ + ಬಿಡಿಸು]

**ಬೇರ್ಬಿಡು**, ಬೇರುಬಿಡು (ಕ್ರಿ). ೧. ಮರಗಿಡಗಳ ಬೇರು ಭೂಮಿಯಲ್ಲಿ ಬೆಳೆಯುತ್ತಾ ಹೋಗು,—ವಿಸ್ತಾರವಾಗಿ ಹರಡು : ತಾಪಾರ್ತಜನಕೆ ನೆರಳಾಗಿ ನೀಡಿ ವಟವೃಕ್ಷವಾದ ಜೀವ ; ತತ್‌ಬೃಹ್ಮದಲ್ಲಿ ಬೇರ್ಬಿಟ್ಟು ಇಳಿದ ಅಶ್ವತ್ಥದಂಥಭಾವ (ಹೃದಸ. ೧೦-೦೪). **ಬೇರುಬಿಡು** : ೧. ಬೀಜಗಳು ಹೊಸಭೂಮಿಯಲ್ಲಿ ಮೊಳೆತು ಜನಸಂಚಾರದೊಂದಿಗೆ ಕಲೆತು ಅಲ್ಲಲ್ಲಿ ಬೇರುಬಿಟ್ಟವು (ಜಾಕಗ. ೩೯). ೨. (ಅಲಂ) ತಳವೂರು ; ಸ್ಥಿರವಾಗಿ ನಿಲ್ಲು ; ಬೇರೂರು : ಆ ತಂತ್ರಗಳು ಪುರಾತನಕಾಲದಿಂದ

ಸಮಾಜದಲ್ಲಿ ಬೇರುಬಿಟ್ಟಿವೆ (ಶುನಶು. ೨೪೩); ವೈದಿಕಧರ್ಮದಲ್ಲಿ ಬೇರುಬಿಟ್ಟ ಅಪ್ಪ ಯಾಕೆ ಹೀಗೆ ಬದಲಾದ ? (ಹೊಕ್ಷ. ೨೩೦).

**ಬೇರುಬಿಟ್ಟುಕೊಳ್ಳು**=ಶಕ್ತಿಯುತವಾಗು; ಪ್ರಬಲವಾಗು; ಸ್ಥಿರವಾಗಿ ನಿಲ್ಲು : ಪಾಂಡವರು ಇನ್ನೂ ಬೇರುಬಿಟ್ಟುಕೊಳ್ಳುವುದಕ್ಕೆ ಮುಂಚೆಯೇ ಅವರನ್ನು ಪರಾಕ್ರಮದಿಂದ ಅದುಮಿಬಿಡಬೇಕು (ಪಕಥಾ. ೬೩). [ಬೇರ್$_1$ + ಬಿಡು$_1$]

**ಬೇವರ್ಮನೆ** (ನಾ). ೧. ಬೇರೆಯ ಮನೆ; ಪ್ರತ್ಯೇಕ ಗೃಹ. ೨. ಮದುವೆಯ ಸಂದರ್ಭದಲ್ಲಿ ವರನ ಕಡೆಯವರನ್ನು ಇಳಿಸುವ ಮನೆ; ಬಿಡದಿಮನೆ : ಹೋಗಿ ಬಡಬಡ ಬೇವರ್ಮನೆ (ವರನಿರುವ ಮನೆ)ಯಿಂದ ಮದಲಿಂಗನನ್ನು ಕರಕೊಂಬರ್ರಿ . . . ಬೇವರ್ಮನೆಯಿಂದ ಮೆರವಣಿಗೆಯಲ್ಲಿ ಬರುವ ಮದಲಿಂಗನನ್ನು ನೋಡುವುದಕ್ಕೂ ಪುಣ್ಯ ಬೇಕು (ಸುವಕಂ. ೫೩). ೩. ಮದುವೆಯ ನಂತರ ವಧೂವರರಿಗೆ ಏರ್ಪಡಿಸುವ ಮನೆ; ಪ್ರಸ್ಥದ ಕೋಣೆ : ಮದುವೆಯ ಶಾಸ್ತ್ರಗಳೆಲ್ಲ ಮುಗಿದು ಮದುಮಕ್ಕಳನ್ನು ಬೇವರ್ಮನೆಗೆ ಕಳುಹಿಸುವ ವೇಳೆಗೆ ತುಂಬ ತಡವಾಯಿತು (ರೂಶಿ). [ಬೇರ್$_2$ (<ಬೇಱ್$_1$) + ಮನೆ]

**ಬೇರ್ಮೆಯ್** (ನಾ). ಅನ್ಯಶರೀರ ; ಅನ್ಯದೇಹ : 'ಬೇರ್ಮೆಯ್ವೊಗು' ಪರಾ. [ಬೇಱ್ (<ಬೇಱ್$_1$) + ಮೆಯ್$_2$]

**ಬೇರ್ಮೆಯ್ವೊಗು** (ಕ್ರಿ). ಅನ್ಯಶರೀರವನ್ನು ಹೊಗು.– ಪ್ರವೇಶಿಸು: ಪರಕಾಯಪ್ರವೇಶ ಮಾಡು : ಇದು ಬೇರ್ಮೆಯ್ವೊಕ್ಕ ಯೋಗೀಂದ್ರನ ತನುವಿನವೊಲ್ ಮುನ್ನಿನಂತಿರ್ದುದು (ಕಾದಂಉ. ೬೦೨). [ಬೇರ್ಮೆಯ್ + ಪೊಗು]

**ಬೇರ್ವರಿ, ಬೇರುವರಿ** (ಕ್ರಿ). ಶಾಶ್ವತವಾಗಿ ನಿಲ್ಲುವಂತೆ ಹಬ್ಬು,– ಹರಡು : ಅಳಂಕರಣವಿಳಾಸಮಂ ಮೆಱೆವ ಮೇಳಿಸುವಂದಿನ ರೂಪು ಶಾಸನಂಬರೆದುದು ಬಱಸಿತ್ತಮರ್ದದಬ್ದದಳಂಕಿದುದುರ್ಚಿ ಪೊಕ್ಕು ಬೇರ್ವರಿದುದು ಬೆಚ್ಚುದಚ್ಚಿಱಿದುದೆನ್ನೆರ್ದೆಯೊಳ್ ಲಲಿತಾಂಗದೇವನಾ (ಅದಿಪು. ೩-೪೩) ; ಶಿವನಿಷ್ಠೆ ಚಿತ್ತದೊಳು ಬೇರ್ವರಿದವರ್ಕೆಲರು (ತಿರುಶ. ದೇ. ೦೪-೦೬). **ಬೇರುವರಿ** : ಊರೊಳೀ ಕಪಿವಾರ್ತೆಯಾಗಲಿಕೆ ಬೇರು ವರಿದುದು (ತೊರರಾ. ೫-೫-೦); ಚಾರುತರ ಪರಿಮೂರ್ತಿಯಲಿ ಮನ ಬೇರುವರಿದಡಿಗಡಿಗೆ ಓರಗುತ . . . ಪರಮಭಕುತಿಯ ಸಾರಸಾಮ್ರಾಜ್ಯದಲಿ ಮೆಱೆವುದು (ಶಿಕಾಗ. ೩-೦೩-೪೬). [ಬೇರ್$_1$ + ಪರಿ$_2$]

**ಬೇರ್ವರೆ** (ಕ್ರಿ).=ಬೇರ್ವರಿ : ಶಿವತತ್ತ್ವಮದು ಬೇರ್ವರೆಯಲಜ್ಞಾನ ಕೂಪ ನೆಲೆಗೆಟ್ಟುದೆನೆ ನಾಭಿ ನಿಮ್ನವನುಳಿದುದು (ಚೆಬಪು. ೪-೦೩). [ಬೇರ್$_1$ + ಪರೆ$_1$]

**ಬೇರ್ವೆರಸು** (ಅ). ೧. ಬೇರು ಸಹಿತವಾಗಿ; ಬುಡ ಸಮೇತ : ಅರ್ಜುನನಾಗಳ್ ಬೇರ್ವೆರಸು ಕಿೞ್ತೆ ಬಗೆಯೆ ಸುರರೆಡೆವೊಕ್ಕರ್ (ಶಂಶಥಾ. ೦೦-೨೩); ಬೇರ್ವೆರಸು ಕಿೞ್ತು ಪಲವುಂ ನೀರ್ವೂಗಳನೊಟ್ಟಿಕೊಂಡು ಬರ್ಪ ಗಜೇಂದ್ರಂ . . . ಸುರಕರೀಂದ್ರಮೆನಿಸಿದುದಾಗಳ್ (ಕಾವ್ಯಾವ. ೬೦). ೨. ಬುಡದಿಂದ ಓಡಿದು : ಬೇರ್ವೆರಸಿ ತುದಿವರಂ ಕಾಯ್ತು ಪನಸಂಗಳೆಳನೀರ್ವೊನಲುಮಂ ಕರೆವ ತೆಂಗು ಕಿಸುವಣ್ ಮುಸುಕಿ ತೋರ್ಪ ನಾರಂಗ ಜಂಬೀರಮಿನಿತುಂ ನಾಡೆ ಸಾರ್ವಕಾಲಂ ಕುಂದವು (ಚಬಪು. ೦೧-೨೨). [ಬೇರ್$_1$ + ಬೆರಸು$_3$]

**ಬೇಲ** 'ಬೆಳಲ್' ನೋ.

**ಬೇಲಾಯಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ತುಳಜಾ ಭವಾನಿ ಬೆಲ್ಲದ ಬೇಲಾಯಿ . . . ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು (ಶಿಕಾಶು. ೫೮-೨). 'ಜೋಗಾಯಿ' ಪರಾ. [ ? + ಆಯಿ$_2$]

**ಬೇಲಾಶಕ್, ಬೇಲಾಷಕ್** (ಅ). ನಿಸ್ಸಂಶಯವಾಗಿ; ನಿಸ್ಸಂದೇಹವಾಗಿ; ಖಾತ್ರಿಯಾಗಿ : ಬೇಲಾಶಕ್ ! ದೇಶದಾಗಿನ ಪ್ರತಿಯೊಬ್ಬರ ಸೇವಾ ಮಾಡೋದು ಕಾಂಗ್ರೆಸ್‌ಭಕ್ತನ ಧರ್ಮ ಅದ (ಜಾಫಾಂ. ೦೫); ಬಾಜಾರದಾಗ ಬೇಕಾದ ಹೊತ್ತಿನಾಗ ಬೇಕಾದ ಮಾಲು ಬೇಕಾದಟು ಕೇಳಿರಿ, ಬೇಲಾಶಕ್ ಸಿಗತದ (ಅಸ್ತ. ೨೫೩). **ಬೇಲಾಷಕ್** : ಬೇಲಾಷಕ್ ಹೋಗರಿ (ದಾಂಡಾಯ. ೨೫); ಬೇಲಾಷಕ್ ನೀ ಹೇಳಿದ ಕಿಮ್ಮತ್ತ್ ಕೊಡತಾವ್ (ಪೋಟಿಶಿ. ೬೮). [← ಅರ. ಮರಾ. ಬೇಲಾಶಕ್]

**ಬೇಲಾಷಕ್** 'ಬೇಲಾಶಕ್' ನೋ.

**ಬೇಲಿ, ವೇಲಿ** (ನಾ). ೧. ಹೊಲ, ತೋಟ ಮೊದಲಾದುವುಗಳ ರಕ್ಷಣೆಗಾಗಿ ಸುತ್ತಲೂ ಹಾಕುವ ಪೊದೆ, ಮುಳ್ಳು, ಮುಳ್ಳುತಂತಿ ಮುಂತಾದುವುಗಳ ಆವರಣ,— ಸುತ್ತುಗೋಡೆ : "ಆವೇಷ್ಟಕಃ, ವೃತಿಃ — ಈ ೨ ಬೇಲಿ" (ಹಲಾಯು. ೪೮-೧೩೫) ; ಪನಿಯಾಲ ಕಾಲ ಬಡ (ಗ)ಣ ಬೇಲಿಯುಂ ಅನ್ತೆ ಬನ್ದು (ಎಕ. III, ತಂಶಿನ. ೦೩೪-೦೬; 915 ?); ಕಾವ ಬೇಲಿ ಎದ್ದು ಹೊಲವ ಮೇದ ಮೇಲಿನ್ನೇನಿನ್ನೇನು (ಪುರಂದ. ೨-೩೬-೪). ೨. ವನ್ಯಮೃಗಗಳನ್ನು ಬೇಟೆಯಾಡಲು ದೀಪದ ನೆರವಿನಿಂದ ಆಕರ್ಷಿಸುವ ಸ್ಥಳ : "ಬೇಲಿ ತೋಹತ್ತು" (ಮುಂಗರಾ. ೦೦೨-೫); ಆ ನಾರಾಯಣನುಂ ತಾನುಮಂತಃಪುರಪರಿವಾರಂಬೆರಸು ಬೇಂಟೆಗೆ ಪೊಱಮಟ್ಟು ಪರಿಯ ಶಾಣಕ್ಕೆ ವಂದು ಬೇಲಿಯ ಕೆಲದೊಳಲ್ಲದೆ ಪೆಱಗಣಾಲಿಪಿಂಗಮುಳ್ಳೊಳಕ್ಕಂ ಗೆಂಟಾಗಿ ಬೀಡು ಬಿಡಿಸಿ (ಶಂಶಥಾ. ೫-೪೬ ವ). ೩. ಭೂಮಿಯ ಒಂದು ಅಳತೆ : ಪರಸುರಾಮದೇವರ್ಗ್ಗೆ ನಿವೇದ್ಯಕಂ ಒನ್ದು ನನ್ದಾದೀವಿಗೆಗಂ ಬಿಟ್ಟ ಭೂಮಿ ದೇವಡುವಿನ್ದ ಮೂಡಲು ಒನ್ದು ಬೇಲಿ (ಎಕ. III (R), ತಂಶಿನ. ೩೨೨-೦೬: 1148); ಆ ಭೂಮಿಯೊಳಗೆ ಅಲ್ಲಿಯ ಮೂಲಸ್ಥಾನದೇವರಿಗೆ ಬಿಟ್ಟ ಮಣ್ಣು ಬೇಲಿಯೊಂದು (ಎಕ. III (R), ಗುಂಡ್ಲುಪೇ. ೪೬-೦೩; 1171). ೪. ಎಲ್ಲೆ; ಸೀಮೆ : ಕಾಡ ಬೇಲಿಯುಂ ಮಾರ್ಕಾಡನಱಿಯುಲುಂ . . . ಪಡೆ ಮೆಚ್ಚೆ ನೀಂ ಬಲ್ಲೆ ನೀಂ ಮೆಚ್ಚೆ ಹರಿಗ ಕೇಳಾನೆ ಬಲ್ಲೆಂ (ಶಂಶಥಾ. ೫-೪೧). **ವೇಲಿ** : ೧. ಬಡಗಲು ವೇಲಿವಿದಿರುಂ ಈಶಾನ್ಯದೊಳ್ ಕಪಾಳೇಶ್ವರಂ ಕಲ್ಗೊಟ್ಟ ಪೊಲದ ಸೀಮೆ (ಸೌಇಇ. IX-i, ೦೨೦-೪೪; 1057). [ದೇ.॥ ತಮಿ. ಮಲ. ವೇಲಿ ; ತುಳು. ಬೇಲಿ; ಕೊಡ. ಬೆಲಿ; ತೆಲು. ವೆಲುಗು ; ಗೊಂಡಿ. ವೆಲ್ಲುವ್]

**ಬೇಲಿಫ, ಬೇಲೀಫ** (ನಾ). ನ್ಯಾಯಾಸ್ಥಾನದ ಅನುಜ್ಞೆಗಳನ್ನು ಜಾರಿಗೆ ತರುವ, ಸ್ವತ್ತು ಜಪ್ತಿ ಮಾಡುವ, ತಕ್ಸೀರುದಾರನನ್ನು ಹಿಡಿಯುವ ಅಧಿಕಾರವುಳ್ಳ, ಜಮೀನುದಾರನ ಕಂದಾಯ ಮುಂತಾದುವುಗಳನ್ನು ವಸೂಲುಮಾಡುವ ಕೋರ್ಟಿನ ಅಮೀನ ; ಬೇಲಿಫರು ನಿನ ಚರ-ಸ್ಥಿರ ಆಸ್ತಿಗಳ ಜಪ್ತಿಯನ್ನು ಮಾಡಿಕೊಂಡು ಹೋಗುವಾಗ್ಗೆ ನೀನು ನಿನ್ನ ಮಾನಕ್ಕೆ ಹ್ಯಾಗೆ ಹೆದರುತ್ತಿದ್ದಿಲ್ಲ ? (ಪೋಟಿಶಿ. ೦೩೦). **ಬೇಲೀಫ** : ಬೇಲೀಫ ತಲೆಬಾಗಿಲಿಗೆ ಬಂದು ನಿಂತಾಗ ಗಂಡ ಘಾಬರ್ಯಾಗಿ ಕೂತ (ಗಂಪತಾಯಿ. ೪೮); ಸಾಲ್ಕಾರುಜನ ಬೇಲೀಫರು ಆತನ ಹಾದಿಯನ್ನು ನೋಡುತ್ತ ನಿಂತಿದ್ದರು (ಜೀವಕ್ರ. ೦೬). [← ಇಂ. Bailiff]

**ಬೇಲಿಯಿಕ್ಕು** (ಕ್ರಿ). ಹೊಲ, ತೋಟ ಮೊದಲಾದುವುಗಳಿಗೆ ಪೊದೆ, ಮುಳ್ಳು ಮುಂತಾದುವುಗಳ ಆವರಣವನ್ನು ಹಾಕು; ಬೇಲಿ ಹಾಕು : ಕೆಯ್ಯಿಲ್ಲದೆ ಬೇಲಿಯಿಕ್ಕುವೆನೆಂಬ ಬಾಗಿಲಿಲ್ಲದೆ ಪೊಗುವೆನೆಂಬ . . . ಪಚ್ಚೆಪಸಿಯೆಗ್ಗನಂ ಪೋಲ್ತುಂ (ಧರ್ಮಾಮೃ. ೦-೬೬). [ಬೇಲಿ + ಇಕ್ಕು]

**ಬೇಲಿವಳ್ಳಿ** (ನಾ). ಸುತ್ತಲೂ ಬೇಲಿಯಿರುವ ಚಿಕ್ಕಹಳ್ಳಿ : ಡಳ್ಳಿಯ ಕೊಳ್ಳಿಗೊಂಡವೆಮಗಿಲ್ಲಿದಿರೆಲ್ಲಿಯುಮೆಂದು ಬಂದೆಮೀ ಕಳ್ಳಿಯ ಬೇಲಿವಳ್ಳಿಯೊಳಗಳ್ಳಿಱಿದಾತುತೆ ಜಳ್ಳುವೋದೆವು (ಅಪ್ರತಿ. ೦೪-೦೦). [ಬೇಲಿ+ಪಳ್ಳಿ$_1$]

**ಬೇಲಿವೀಡು** (ನಾ). ಬೇಲಿಯಿರುವ ಸ್ಥಳ : ಬೇಲಿವೀಡಂ ಪೋಲ್ತು ಸವಿಾಪವರ್ತಿಗಳಾಗಿ ಪೊರ್ದಿಯೋಲಗಿಸುವರ್ ಪಾರಿಷತ್ಯರುಸುರರು (ಪಂಪಾರ. ೦೮೮). [ಬೇಲಿ + ಬೀಡು₂]

**ಬೇಲಿಸೌತೆ** (ನಾ). ಬೇಲಿಯ ಮೇಲೆ ಹಬ್ಬುವ ಒಂದು ಬಗೆಯ ಸೌತೆ ಬಳ್ಳಿ ಮತ್ತು ಅದರ ಕಾಯಿ : "ಮೃಗೋರ್ವಾರುಃ – ಬೇಲಿಸೌತೆ" (೬೭೨೦. ೦೨೮); "ಮೃಗಾದಿನೀ–ಹಾವುಮೆಕ್ಕೆ, ಬೇಲಿಸೌತೆ" (೬೭೨೦. ೦೨೮). [ಬೇಲಿ + ಸೌತೆ (< ಸವುತೆ)]

**ಬೇಲೀಫ** 'ಬೇಲಿಫ' ನೋ.

**ಬೇಲು₁** (ನಾ). ಕಟ್ಟು ; ಹೊರೆ ; ಪಿಂಡಿ : ಯಾವುದೋ ರೈಲ್ವೇ ರಶೀದಿ ತೆಗೆದುಕೊಂಡು ಕಾಗದದ 'ಬೇಲು' ಗಳನ್ನು ತರಲು ರೈಲ್ವೆಸ್ಟೇಷನ್ನಿಗೆ ಹೋಗಿದ್ದರೇದು ತಿಳಿಯಿತು (ಅವಶಂ. ೦೫೩). [← ಇಂ. Bale]

**ಬೇಲು₂** (ನಾ). ಚಿತ್ರಗಳ ಸುತ್ತ ಇರುವ ಅಲಂಕಾರಪಟ್ಟಿಕೆ (?) : ರುಪ್ಯದಲಿ ತಿದ್ದಿದ ಲೋಹಿನಗಳು ರಜತದಲಿ ಮಾಡಿದ ಹಂಸೆಗಳು ಕಂಸ್ಯವು ಗಳಿಂದಲೊಪ್ಪುವ ಬೇಲುಗಳು (ಕರಿಂ. ೬೬೩) : ಗೂಡುಗಳಿಗೆ ಬುಡದಿಂದ ಆನೆ, ರಾವುತರು, ಗೋಪುರಗಳುಳ್ಳ ಕಂಬಗಳು, ಬೋಂಬೆಗಳುಳ್ಳ ಬೇಲು ಈ ರೀತಿಯಾಗಿ ಚಿತ್ರದ ಸಾಲುಗಳಿವೆ (ವ್ಯವಾಸ್ತು. ೦೦೦). [?]

**ಬೇಲೂರ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬೇಲೂರರಾ ಮಗ ವಾಘ × × × ಸತ್ತನ್ (ಎಕ.X, ತಂತಾಮ. ೦೬೮–೦; ಸು. 900 ?). [?]

**ಬೇಲೆ** (ನಾ). (ಸಮುದ್ರದ) ತೀರ ; ದಡ : ಪಡುವಲು ಸಮುದ್ರದ ಬೇಲೆ ಬಡಗಲು ಆ ಗದ್ದೆ ಹಿತ್ತಿಲು ಇಂತೀ ನಾಲ್ಕು ಗಡಿ (ಕಇ. I, ೩೩–೦೦; 1433). [< ಸಂ. ವೇಲಾ]

**ಬೇವ್‌ಕೂಫ್** 'ಬೇಕೂಫ್' ನೋ.

**ಬೇವ** 'ಬೇ₁' ಪರಾ.

**ಬೇವರ್ಸಿ** 'ಬೇವಾರ್ಸಿ' ನೋ.

**ಬೇವಸ** (ನಾ). ೧. ಚಿಂತೆ ; ದುಮ್ಮಾನ ; ಉಮ್ಮಳ : "ಬೇವಸಂ, ದುಮ್ಮಾನಂ, ಉಮ್ಮಳಂ—ಈ ೩ ಚಿಂತೆ" (ಕರಶಾ. ೩೬–೨೨೭) ; ತನಗಿನಿತಱ ಬೇವಸಮೇಂ ಕವರ್ದವರುಮೊಳರೆ ಕವಿಯಲ್ಲದರಂ (ಕವಿರಾ. ೦–೧೨) ; ಮತ್ತಾ ಗ್ರನ್ಥಕಥಾವಳಿಯೊಲ್ಲಮಂ ಬಗೆದು ನೋವೆನಗಾದುದು ನೋವಂ ತಂತೆನಗಾವುದು ಬೇವಸಂ (ಅಜಿಪು. ೩–೩೩) ; ಏಱುವನು ಬೇವಸದ ಬೇಳಂಬದಲಿ ಬೇಸಱುತವನ ಮಣಿರಥವ (ಕೀರರಾ. ೩–೭–೫೦). ೨. ಅತಿಯಾದ ಇಚ್ಛೆ ; ಉತ್ಕಟವಾದ ಬಯಕೆ : ಆವ ಕಾರ್ಯವು ಎನಗಿಲ್ಲ ನಿಮ್ಮನು ಕಾಣ್ಬ ಬೇವಸದಿಂ ಬಂದೆನು (ಅಂಶತ. ೯–೦೫). [ <ಬೇ₁·/ತಮಿ. ವೇಪವರ್]

**ಬೇವಸಂಗೊಳ್**, ಬೇವಸಗೊಳ್, ಬೇವಸಗೊಳು (ಕ್ರಿ). ಚಿಂತೆಯನ್ನು ಹೊಂದು ; ದುಮ್ಮಾನಗೊಳ್ಳು : ಅನೇಕಕಾಲಂ ವೃದ್ಧೋರಗನಾ ನದ್ಧರ್ಾರಂಗಳಂ ಪೊತ್ತು ತಿರುಗಿ ಬೇವಸಂಗೊಂಡೊಂದುದಿವಸಂ ತನ್ನಿರ್ದ ಪುತ್ತಿಂಗೆ ವರ್ಪುದುಂ (ಕಂತತಂ. ೭೦–೦೮). **ಬೇವಸಗೊಳ್** : ಭೂತಳದ ಪೊಕ್ಕದಱಿಕೋಳಿರ್ಪ ಮಾನುಷ್ಯಸಂಘಾತ್ರಮಂ ಕಂಡು ಬೇವಸಗೊಂಡು ತಿರುಗಿದಂ (ಜನ್ನಪು. ೦–೯೯). **ಬೇವಸಗೊಳು** : ತಳವಳಗೊಂಬ ಪೌರರು ಬಲುಬೇವಸಗೊಳುವ ಬಂಧುಗಳು . . . ತೀವಿದುದಾ ಪೊಳಲೊಳಗೆ (ಕ್ರಿಜಾಂ. ೯–೨೫) ; ಹಿಂದು ಮುಂದನಾರಯ್ಯದೆ ಜಡಜ ಬೇವಸಗೊಳದೆ ಮುಂದೆ ಪರಿದಿನಿಯನೊಳು ಮೋಹವಹದು (ನೀಕನೋ. ೦೯–೯). [ಬೇವಸ + ಕೊಳ್₁]

**ಬೇವಸಂಬಡಿಸು** (ಕ್ರಿ). ವ್ಯಥೆಗೊಳಿಸು ; ದುಃಖಪಡಿಸು : ಬೆವಱಿಸಿ ಬೇವಸಂಬಡಿಸಿ ಬೇಬಿಹವೆದ್ದು ವಿಡಂಬಿಸುತ್ತ ಸುತ್ತಿನ ಭವಪಾಶದಿಂ ಪಱಿದು (ಎಂಕಕ. XVI ೬೬೬೮). [ಬೇವಸಂಬಡು + –ಇಸು₁]

**ಬೇವಸಂಬಡು** (ಕ್ರಿ). ದುಃಖವನ್ನು ಹೊಂದು ; ತಳಮಳಗೊಳ್ಳು : ಪ್ರಚಂಡಕಿರಣಾತಪಸಹಸ್ರಂಗಳುಮಂ ಸೈರಿಸುವ ಸರಸಿಜಂಗಳುಮಾಕೆಯ ಮೆಯ್ ಸೋಂಕಿದನಿತಱೊಳೆ ಕಱಂಗಿ ಕರಿಯುಪ್ಪುವದುಕಾರಣದಿನಕಾರಣ ದಾರುಣನಪ್ಪ ಮನ್ಮಥನಿನೆಡೆವಿಡದೆ ಬೇವಸಂಬಡುತಿರ್ದಳ್ (ಕಾದಂಬ. ೩೭೯). [ಬೇವಸ + ಪಡು₁]

**ಬೇವಸಂಬಡೆ**, ಬೇವಸವಡೆ (ಕ್ರಿ). = ಬೇವಸಂಬಡು : ಅಲರ್ಗೊಂಚಲಂ ಚಂಚರೀಕಶಾಬಕಂ ಕಾಣದುದ್ದೇಶಕ್ಕೆ ಬಯಲೊಳೆಱಗಿ ಬಱದೆ ಬೇವಸಂಬಡೆಯೆಯುಂ (ವರ್ಧಪು. ೬–೪೪ ೮) ; ಬೇವಸಂಬಡೆದು ಕಂಗೆಡುತೆ ಮುಂದೇಗೈಯಲೆಂದೆಣಿಸುತಿರಲು (ಕವಿಕಾ. ೪೬–೩). **ಬೇವಸವಡೆ** : ರಸಿಕಶಿರೋಮಣಿಯಾತಂ . . . ತಾನಸುಮಂ ಬಿಟ್ಟುದರಿಂ ಬೇವಸವಡೆ ಯುದಬಾರ್ಗುಣಜ್ಞರಾಗಿಪ ವಿಬುಧರ್ (ಕಾಳಿಂಕ. ೨೨ ಅಭಿಪ್ರಾಯಗಳು). [ಬೇವಸ + ಪಡೆ₁]

**ಬೇವಸಗೊಳ್** 'ಬೇವಸಂಗೊಳ್' ನೋ.

**ಬೇವಸಗೊಳಿಸು** (ಕ್ರಿ). =ಬೇವಸಂಬಡಿಸು : ಶಶಿಧರಂ ಜಂಗಮಾಕಾರದಿಂ ಬಂದು ಸಂತಸದೆ ಕಪ್ಪರವಿಟ್ಟು ನೃತ್ಯಮಂ ಮಾಡಿ ಬೇವಸಗೊಳಿಸಲ್ . . . ಮಿಸುಪ ಕೊಳದೊಳ್ಮುಳುಗಿ ಪೊಸಪರೆಯುಮಂ ತಾಳ್ದನಸಮ ತಿರುನೀಲಕಂಠನೆನಿಪ್ಪ ಶರಣನು (ಶಾಕೋಪು. ೦೩–೯೭). [ಬೇವಸಗೊಳ್ (< ಬೇವಸಂಗೊಳ್) + –ಇಸು₃]

**ಬೇವಸಗೊಳು** 'ಬೇವಸಂಗೊಳ್' ನೋ.

**ಬೇವಸದಾಳು** (ಕ್ರಿ). = ಬೇವಸಂಬಡು : ಭೂವರವಾಸವ ಮುಸುಕಿತು ಬಲದೆಲ್ಲ ಬೇವಸದಾಳೆ ಸಜ್ಜನರು (ಶಿವಂಕಾ. ೩–೪೭). [ಬೇವಸ + ತಾಳು₁ (< ತಾಳ್₁)]

**ಬೇವಸವಡೆ** 'ಬೇವಸಂಬಡೆ' ನೋ.

**ಬೇವಾರಸಿ** 'ಬೇವಾರ್ಸಿ' ನೋ.

**ಬೇವಾರಸಿಮಾಲು**, ಬೇವಾರಸುಮಾಲು (ನಾ). ಒಡೆಯರಿಲ್ಲದ ವಸ್ತು; ವಾರಸುದಾರರಿಲ್ಲದ ಪದಾರ್ಥ : ಬೇವಾರಸಿ (ಮಾಲು), ಅಸ್ವಾಮಿಕ (ವಸ್ತು) (waif. ಇಂಕಾ). **ಬೇವಾರಸುಮಾಲು**: (೧೨) ಬೇವಾರಸುಮಾಲಿನ ವಿಲೆವಾರಿ . . . (೧೫) ನಾದಾರುಕುಳಕ್ಕೆ ತಕಾವಿ ಕೊಡುವುದು (ಮಹಾವಂ. II, ೫೬); ಹರೇಕೃಷ್ಣನ ಪಾತ್ರೆ ಪರಟ ಮೊದಲಾದವುಗಳನ್ನು ಬೇವಾರಸು ಮಾಲೆಂದು ವಶಪಡಿಸಿಕೊಂಡನು (ಶಿಂಕಮ. ೦೦೭). [ಬೇವಾರಸಿ (<ಬೇವಾರ್ಸಿ) + ಮಾಲು₃]

**ಬೇವಾರಸು** 'ಬೇವಾರ್ಸಿ' ನೋ.

**ಬೇವಾರಸುಮಾಲು** 'ಬೇವಾರಸಿಮಾಲು' ನೋ.

**ಬೇವಾರ್ಸಿ**, ಬೇವರ್ಸಿ, ಬೇವಾರಸಿ, ಬೇವಾರಸು (ಗು). ೧. ಯಾರೂ ದಿಕ್ಕಿಲ್ಲದ ; ವಾರಸುದಾರರಿಲ್ಲದ ; ಅನಾಥವಾದ : ಬೇವಾರ್ಸಿ ಹೆಣಕ್ಕೆ ರಣಹದ್ದು ಮುತ್ತಿದ ಹಾಗೆ (ಗಾಳಕ. ೨೮) ; ಬೇವಾರ್ಸಿ ಹೆಣದ ಹೊತ್ತರು (ಕಂಗೂಂ. ೫). (ನಾ). ೨. ಯಾರೂ ದಿಕ್ಕಿಲ್ಲದ ವ್ಯಕ್ತಿ ; ಅನಾಥ ವ್ಯಕ್ತಿ : ನಾನು ನಿನ್ನ ಬೇವಾರ್ಸಿಯಾಗಿ ಮಾಡಿದೆ! (ಮಹಕಶಾ. ೦೨) ; ನೀವು ಸಂಸಾರವಂದಿಗರು. ನನ್ನಂಥ ಬೇವಾರ್ಸಿಗಳಲ್ಲ (ಅನಾಕ. ೧೫೨). ೩. ಕೆಟ್ಟುದು, ಕೆಟ್ಟವ್ಯಕ್ತಿ ಎಂಬ ಹೀನಾರ್ಥದಲ್ಲಿ ಪ್ರಯೋಗವಾಗುವ ಒಂದು ಬಯ್ಗುಳ : ನಮ್ಮ ಪಾಡಿಗೆ ನಾವು ರಾಜ್ಯ ಆಳೋಕೆ ಬಿಡೋಲ್ಲ ಬೇವಾರ್ಸಿ (ವೃದ್ಧಪಿ. ೫೪); ಬೇವಾರ್ಸಿ . . . ಈ ಮನೆಗೆ ಕಾಲಿಟ್ಟರೆ ಜೋಕೆ (ಬಾಕ್ಸಲ್ಲಿ. ೨೬೦). **ಬೇವರ್ಸಿ** : ೨. ಸಂಬಳದ ಬಾಕಿ ಇಟ್ಕೊಂಡಿರೋವಲ್ಲ ಬೇವರ್ಸಿಗಳ ಹಾಗೂ ಹದ್ದುಗಳ ನೋಡೋ ಈ ಗುರುಸಿದ್ದೇಶ ನಾಟಕಮಂಡಲಿಗೆ ನಮೋನ್ನಮಃ (ಮಾಮಿಡ. ೨೫). **ಬೇವಾರಸಿ** : ೧. 'ಬೇವಾರಸಿಮಾಲು' ಪರಾ. **ಬೇವಾರಸು** : ೧. 'ಬೇವಾರಸು

ಮಾಲು ' ಪರಾ. ೨. ಹರೇಕೃಷ್ಣನು ಬೇವಾರಸು ಅಲ್ಲ, ಕಲ್ಕತ್ತೆಯಲ್ಲಿ ಅವನ ಮಗಳಿದ್ದಾಳೆ (ಜಂಕಜು. ೦೦೬).

[ ← ಮರಾ. ಬೇವಾರಶೀ. ಬೇವಾರಸಾ, ಬೇವಾರೀಸ್ ]

**ಬೇವಿಗೆ** (ನಾ). ಒಂದು ಊರಿನ ಹೆಸರು : ಶ್ರೀಬೇವಿಗೆ ಮುತ್ತರಸರ ಮಗನು ಪೊಲೆಯಮ್ಮನ್ನದಕರಿಲ್ಲನಾಳುತ್ತುಮಿರೆ (ಎಕ. XI, ತಳ್ಳಿ. ೩೩-೨೦ ; ಸಂ. 805). [?]

**ಬೇವು₁** (ನಾ). ಔಷಧೀಯಗುಣವುಳ್ಳ ಕಹಿರುಚಿಯ ಎಲೆಗಳನ್ನು ಹೊಂದಿರುವ ಒಂದು ಬಗೆಯ ಮರ ; ನಿಂಬ ; ಅರಿಷ್ಟ : " ನಿಂಬ ಮರಿಷ್ಟಂ ಪಿಚುಮಂದಂ ಬೇವು " (ವಸ್ತುಕೋ. ೩೧-೦೦); ಬೇವಿನ ಗೊಟ್ಟೆಯೊಳಿನಿವರ್ಕರ್ಸೊಳ್ ತಂಪು . . . ಅಜಿಸಿ ತೊಟಲುವಾತನೆ ಗಾಂಪಂ (ರಸರತ್ನ. ೩-೦೬೦) ; ಬೇವಂ ಮೆಚ್ಚಿದ ಕಾಗೆಗೆ ಮಾವಿಟಿದಪ್ಪಂತೆ ಪತಿಯೊಳಿಟಿದಾಯ್ತು ಮನಂ (ಯಶೋಚ. ೨-೪೫); ಬೇವು ತಾ ಪರಿಪಕ್ವವಾದರೆ ಹಾವುಮೆಕ್ಕೆಗೆ ಸಾಕ್ಷಿ (ಕುವ್ಯಾಅ. ೦೬-೦೫).

**ಬೇವಿನೆಣ್ಣೆ** = ಪಿಚುಮಂದದ ಬೀಜದಿಂದ ತೆಗೆಯಲಾದ (ಔಷಧಿಗೆ ಉಪಯೋಗಿಸುವ) ಎಣ್ಣೆ : ಕನಲ್ವ ಕೆಂಡದ ಮೇಲೆ ಪಟಿಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ . . . ಬೇವ ಪೆಣಂಗಳ ಕ[೦]ಪು ನಾಱುವುದಕ್ಕೆ ಸೈರಿಸಲಾಱದೆ (ಕಂಪಿಶಾ. ೦೩-೭೦ ಪ). **ಬೇವು ಇಳಿಸಿಕೊಳ್ಳು** = ದೇಹಕ್ಕೆ ಉಂಟಾಗಿರುವ ವಿಷಪೂರಿತವಾದ ರೋಗಗಳನ್ನು ಬೇವಿನಿಂದ ನಿವಾರಿಸಿಕೊಳ್ಳು ; P ಅರೆದ ಬೇವಿನ ಸೊಪ್ಪನ್ನು ನೀರಿನೊಡನೆ ಮಿಶ್ರಮಾಡಿ ದೇವರ ವಿಗ್ರಹವನ್ನು ಮಿಮಾಯಿಸಿ ರೋಗಪರಿಹಾರಕ್ಕೆಂದು ಆ ನೀರನ್ನು ಮೈಮೇಲೆ ಹಾಕಿಕೊಳ್ಳುವಿಕೆ, ಮೈಮೇಲೆ ದೇವರು ಬಂದಿರುವ ಸಮಯದಲ್ಲಿ ದೇವರನ್ನು ಶಾಂತಗೊಳಿಸಲೆಂದು ಬೇವಿನ ಸೊಪ್ಪಿನಿಂದ ನಿವಾಳಿಸುವಿಕೆ ಮುಂತಾದುವು ಕೆಲವು ದೇವಾಲಯದ ಸ್ಥಳಗಳಲ್ಲಿ ಇರುವ ನಂಬಿಕೆ ಮತ್ತು ಪದ್ಧತಿ : ಆ ನಾದದಲ್ಲಿ ಪೈಪಾರೆತ ಅವರಿಗೆ . . . ಪಟ್ಟದ ಕಲ್ಲಿನ ಜನಸಮಾಜ ' ಬೇವು ' ಇಳಿಸಿಕೊಳ್ಳುತ್ತಿರುವ ಜೋಗಿತಿ ' ಯದನಿ ಕೇಳಿದಾಗಲೇ ಅವರಿಗೆ ಈ ಲೋಕದ ಸ್ಮೃತಿ ಬಂದುದು (ಐಪಸಿ. ೬೫). **ಬೇವು ಬೆಲ್ಲ** = ಬೇವು ಮತ್ತು ಬೆಲ್ಲ; P ಬೇವಿನ ಹೂವು, ಚಿಗುರುಗಳನ್ನು ಬೆಲ್ಲದ ಜೊತೆಗೆ ಮಿಶ್ರ ಮಾಡಿ ಸೇವಿಸುವುದು ಯುಗಾದಿ ಹಬ್ಬದ ಒಂದು ಆಚರಣೆ. ಬೇವು ಮತ್ತು ಬೆಲ್ಲಗಳ ಕಹಿ ಸಿಹಿಗಳಂತೆ ಬದುಕಿನ ಸುಖ ದುಃಖಗಳಲ್ಲಿ - ಸಮಾನಭಾಗಿಗಳಾಗಬೇಕೆಂಬ ತತ್ತ್ವವನ್ನು ಈ ಆಚರಣೆ ತಿಳಿಸುತ್ತದೆಂಬ ನಂಬಿಕೆಯಿದೆ : ಬೆಳ್ಳಿತಟ್ಟೆಯಲ್ಲಿ ಬೇವುಬೆಲ್ಲ, ಮಾವಿಗಳ ಮೇಲೆ ಅದರ ಪ್ರಭಾವ, ಇವೆಲ್ಲ ಕಣ್ಣಿಗೆ ಕಟ್ಟಿದುವು (ನಾಕಹೊ. ೪೫); ಬೇವು ಬೆಲ್ಲದ ಯುಗಾದಿಯ ಹಬ್ಬದ ಬಾಹ್ಯಾಚರಣೆಗಳವು (ಶಾಪ್ರ್ಯಾ. ೬೦). [ ದ್ರಾ.॥ ತಮಿ. ಮಲ. ವೇಮ್ಬು ; ತುಳು. ಬೇವು ; ತೆಲು. ವೇಪ, ವೇಮು ; ಕೋತ. ವೆಪ್ ; ಕುವಿ. ವೇಪ ]

**ಬೇವು₂** ' ಬೇಮು ' ನೋ.

**ಬೇಶ್**, ಬೇಷ್, ಭೇಷ್ (ನಾ). ಲೇಸು, ಒಳಿತು, ಸರಿಯಾದುದು, ಒಳ್ಳೆಯದು ಎಂಬ ಅರ್ಥವನ್ನೊಳಗೊಂಡ ಒಂದು ಕೊಂಡಾಟದ ಮಾತು : ಅವನು ಎಲ್ಲರಿಂದಲೂ ಬೇಶ್ ಎನ್ನಿಸಿಕೊಳ್ಳಬೇಕೆಂಬ ಆಸೆಯಿಂದ ಈ ಸಾರಿ ಚೆನ್ನಾಗಿ ಓದುತ್ತಿದ್ದಾನೆ (ರೂಢಿ). **ಬೇಷ್** : ಆ ಚಿಕ್ಕ ಹುಡುಗಿ ಎಲ್ಲಾ ಉಪಾಧ್ಯಾಯರಿಂದಲೂ ಬೇಷ್ ಎನಿಸಿಕೊಂಡಿದ್ದಳು (ರೂಢಿ). **ಭೇಷ್** : ಹಿರಿಯರಿಂದಾಗಲಿ, ಅಕ್ಕಸಾಲರಿಂದಾಗಲಿ ಒಂದು ಬಾರಿಯಾದರೂ ಭೇಷ್ ಎನಿಸಿಕೊಂಡುದಿಲ್ಲ (ಅಂಹೊ. ೩೬); ಹುಡುಗರುಗಳು ಚಪ್ಪಾಳೆಗಳನ್ನು ತಟ್ಟಿ . . . ಭೇಷ್ ಬಲದೇವ್ ಭೇಷ್" ಎಂದೂ ಕೂಗಿದರು (ಕಣಾಹ. ೪೫). [←ಪಾರ. ಮರಾ. ಬೇಶ್]

**ಬೇಷ್** ' ಬೇಶ್ ' ನೋ.

**ಬೇಸಗೆ**, ಬೇಸಿಗೆ, ವಯಿಸಾಖ, ವೈಶಾಗ (ನಾ). ೧. ಸೆಕೆಗಾಲ : ಬಿಸಿಲುಕಾಲ : "ನಿದಾಘಃ, ಗ್ರೀಷ್ಮಃ — ಈ ೨ ಬೇಸಗೆ" (ಅಭಿಧಾಮ. ೨೦-೦೦೬); ಎಡ್ಡೆಗಳಿಂದವೆ ಬೇಸಗೆಯನೆ ಮುಟಿಗಾಲಂ ಮಾಡಿ . . . ಕೊಟಿಲಂ ಪೊಱಮಟ್ಟು (ವಡ್ಡಾರಾ. ೦೩೯-೩); ನರನಾರಾಯಣರಿರ್ವರುಂ . . . ಬೇಂಟೆಯನಾಡಿ ಬಳಲ್ದು ಬೇಸಗೆಯ ನಡುವಗಲೊಳ್ ವನಕ್ರೀಡೆಗಂ ಜಲಕ್ರೀಡೆಗವಾಸಕ್ತರಾಗಿ ಯಮುನಾನದೀತಟನಿಕಟವರ್ತಿಗಳಾದರ್ (ಕಂಪಿಶಾ. ೩-೩೦ ಪ). **ಬೇಸಿಗೆ** : ೧. ಜವನಿಕೆಯಾಗಳೋಸರಿಸೆ ಬೇಸಿಗೆಯಂತೆ ಪಯೋಧರಂ ಸಭೋವಿಪರ್ಯವಾನೆಯ್ದೆ ತೀವೆ. . .ನರ್ತಕಿ ನೀಡುಪೊಪ್ಪಿದಳ್ (ಶಾರ್ಙ್ಗವು. ೦೨-೨೪) ; ಉಗಟಬ್ಬಿದು ಕೆಂಗಿಡಿಯುಂ ಬೇಸಿಗೆ ಬಿಸಿಪೊಯ್ಲ್ಗೆ ನರ್ಕಮಣಿಗಣಮಾಗಳ್ (ಅನ್ನಪು. ೯-೬೫) : ಧ್ವನಿಯು ಸಣ್ಣದಾಗಿತ್ತು . . . ಬೇಸಿಗೆಯ ನದಿಯಂತೆ ಕೃಶವಾಗಿದ್ದರೂ ನಿರ್ಮಲವಾಗಿತ್ತು (ಮಹಾಶಾ. ೦೪). **ವಯಿಸಾಖ** : ೨. ಒಂದು ತಿಂಗಳಿನ ಹೆಸರು : ವೈಶಾಖಮಾಸ : ಸಕವರುಷ ೧೨೮೦ನೆಯ ಕೀಲಕಸಂವತ್ಸರದ ವಯಿಸಾಖ ಬ ೩೦ ಸೋಮವಾರ . . . ದೇವರ ಪ್ರತಿಷ್ಠೆಯನೂ ಮಾಡಿ ( ಪ್ಯಶಾಂ. ೧೯೨೯, ೦೦೬-೦೦ ; 1368). **ವೈಶಾಗ** : ೧. ಏಕಾರಕ್ಕೆ ಗಕಾರ—ಮುಖ—ಮೊಗ; ವೈಶಾಖ—ವೈಶಾಗ (ಶಮದ. ೨೩೬ ವೃಮೋ).

**ಬಿಟ್ಟಬೇಸಗೆ**, ಬಿಟ್ಟಬೇಸಗೆ = ೧. ತೀಕ್ಷ್ಣವಾದ ಸೆಕೆಗಾಲ ; ಉಗ್ರವಾದ ಬೇಸಗೆ : ಬಿಟ್ಟವೇಸಗೆಯ ಬಿಸಿಲ್ಗೆ ತೀಡುದುದು ತಣ್ಣನೆ ಪಣ್ಣನೆ ಪಕ್ಷಿಮಾನಿಳಂ (ಕಂಪಿಪ. ೬-೦೩೯) ; ಒದವಿದ ಬಿಟ್ಟಬೇಸಗೆಯ ಕರ್ಪುರಿಸಿಲರ್ವಿನೆ ಬಿರ್ಬ ವಾಯುವೇಜಿದ ಪರಿಣಂ ಸಮುತ್ಪ್ಲುತದಿ ನಿಂದುಪಬಿಜುವ ನೋಡಿ ಪೊಕ್ಕು . . . ನೆಲಕುರ್ವುದು (ಚಂದ್ರಪ್ರ. ೯-೬೬); ಕಾನನಮುರಿದುದು ರವಿಕಾಂತಾಸಳನಿಂ ನಗದ ಶಿಖರಮೊಡೆದುದು . . . ಬಿಟ್ಟಬೇಸಗೆ ಬಿಸಿಲೊಳ್ (ಸುಕುಸು. ೦೦-೯೯). ೨. ಸೆಕೆಗಾಲದ ಅತಿಯಾದ ತಾಪ : ಬಿಟ್ಟದೊಂದುಂಗಳ ಬಿಟ್ಟಬೇಸಗೆ ಸುರಾಗರಸಂಗಳ ಕಾರ ಮುಂಬು ತತ್ಪುರವರದಲ್ಲಿ ಸಾತ್ವಿಕದ ವೈನಡುಂಗಳ ಮಾಗಿಯೂಗಳುಂ (ಅರ್ಜನಚ. ೦-೬೮).

[<ಸಂ. ವೈಶಾಖ. / ತುಳು. ಬೇಸಿಗೆ; ತೆಲು. ವೇಸಂಗಿ, ವೇಸಗಿ]

**ಬೇಸಗೆಗಾಲ**, ಬೇಸಿಗೆಕಾಲ (ನಾ). ಸೆಕೆಯ ಕಾಲ ; ಗ್ರೀಷ್ಮಋತು : ನೀರಸವಾಗೆ ಬಳ್ಳಿಗಿಡು ಪರ್ವತಗಳ್ ಕರಯಂತ್ರನಾಳದಿಂ ಘೂರಸಮಲ್ಲಮುತೆಗೆಯೆ ಭಾನು . . . ಬಂದುದು ಬೇಸಗೆಗಾಲಂ (ಕಂಪಿವಪ. ೬-೬೫); ಬೇಸಗೆಗಾ[ಶಾಕಂ. ಕಾ]ಲಮೆಂಬುವೆ ಬಿಟ್ಟುಗಳೆಂಬೊಲೆಗಲ್ಗಳಲ್ಲಿ . . . ದೋಸೆಯನಟ್ಟವೋಲ್ ಮಳಲುರಾಶಿಗಳೊಪ್ಪಮನಾಳ್ದುವು(ಶಾಕಶ.೯-೬೮); ಭರದ ಬೇಸಗೆಗಾ[ಶಾಕಾಂ. ಕಾ]ಲದೊಣಗಿಲುಮರನ ವಿಪಿನದೊಳೆವ್ವ ವೈಶ್ವಾನರನವೋಲು ಕೋಪದಲಿ ಕಿಡಿಕಿಡಿಯೋಗಿ ಕಲಿಹನುಮ ಧರೆಗೆ ಧುಮ್ಮಿಕ್ಕಿದನು (ತೊರರಾ. ೩-೬-೦೨). **ಬೇಸಿಗೆಕಾಲ** : ಕಳೆದ ಸಲದ ಬೇಸಿಗೆಕಾಲ ಬಹಳ ತಾಪದಿಂದ ಕೂಡಿತ್ತು (ರೂಢಿ).

[ ಬೇಸಗೆ + ಕಾಲ ]

**ಬೇಸಗೆರಜ**, ಬೇಸಿಗೆರಜ, ಬೇಸಿಗೆರಜೆ (ನಾ). ಶಾಲೆ, ಕಾಲೇಜು ಮೊದಲಾದುವುಗಳಿಗೆ ಸೆಕೆಗಾಲದಲ್ಲಿ ಕೊಡುವ ಬಿಡುವು, — ರಜೆ : ಕಂದನು ಹಿರಿಯರನೊಮ್ಮೆ ನಾ ಮೊದಲಿಗೆ ಹೋದಾಗ ಬೇಸಗೆರಜಕೆ (ಇಂತಾಕ. ೦೬-೩೯). **ಬೇಸಿಗೆರಜ** : ಈಗ ಶಾಲೆಗಳಿಗೆ ಬೇಸಿಗೆರಜ ಬಂದಿದೆ (ರೂಢಿ). **ಬೇಸಿಗೆರಜೆ** : ಅವನು. . . ವರುಷಕ್ಕೆ ಒಂದು ಸಾರಿ ಬೇಸಿಗೆರಜೆಗೆ ಮನೆಗೆ ಬರುತ್ತಿದ್ದ (ಗಂಧಾ. ೬೨). [ ಬೇಸಗೆ + ರಜ₂ ( < ರಜಾ₂ ) ]

**ಬೇಸತ್ತ** ' ಬೇಸಱು₁ ' ಪರಾ.

**ಬೇಸತ್ತು** ' ಬೇಸಱು₁ ' ಪರಾ.

**ಬೇಸನ್,** ಬೇಸಿನ್ (ನಾ). ಕಡಲೆಯ ಹಿಟ್ಟು. **ಬೇಸಿನ್.**

**ಬೇಸನ್ ಉಂಡೆ** = ಕಡಲೆಹಿಟ್ಟಿನಿಂದ ಮಾಡುವ ಒಂದು ಬಗೆಯ ಸಿಹಿ ತಿಂಡಿ.–ಉಂಡೆ : ಮೆಲ್ಲನೆ ಒಂದೆರಡು ಬೇಸನ್ ಉಂಡೆಗಳನ್ನು ಎತ್ತಿಕೊಂಡು ಬಾಯಾಡಿಸಿದರೆ ಯಾರಿಗೂ ಕಾಣುವಂತಿರಲಿಲ್ಲ (ಕೃಶಿ. ೧೦). **ಬೇಸನ್‌ಲಾಡು, ಬೇಸಿನ್ ಲಾಡು** = ಬೇಸನ್‌ಉಂಡೆ : ಏನು ಕೊಡಲಿ ಸಾರ್. ಜಾಮೂನ್, ಜಲೇಬಿ, ದಂರೋಟ್, ಬಾದಾಮಿಹಲ್ವ, ಬೇಸನ್ ಲಾಡು (ಕುಹಾಂ. ೯೬); ಅವನ ಹೆಂಡತಿ ಮಾಡಿಕೊಟ್ಟಿದ್ದ ತೇಂಗೊಳಲು, ಚಕ್ಕುಲಿ ಮತ್ತು ಬೇಸಿನ್‌ಲಾಡುಗಳು ಅದರಲ್ಲಿದ್ದುವು (ರಂಗಳ. ೬೦).

[←ಹಿಂ. ಮರಾ. ಬೇಸನ್]

**ಬೇಸರ** ‘ಬೇಸಱು₂’ ನೋ.

**ಬೇಸರಗೊಳಿಸು** (ಕ್ರಿ). ಬೇಜಾರುಹೊಂದುವಂತೆ ಮಾಡು ; ಜುಗುಪ್ಸೆಯನ್ನು ಹುಟ್ಟಿಸು : ನಿಮ್ಮನ್ನು ಬೇಸರಗೊಳಿಸುವಂತೆ ಉಪನ್ಯಾಸ ಮಾಡುವ ಅಭ್ಯಾಸವು ನನಗೆ ಇಲ್ಲವೇ ಇಲ್ಲವೆಂದು ಎದೆ ತಟ್ಟಿ ಹೇಳುತ್ತೇನೆ (ರಾಮುಕ. ೪೭).

[ಬೇಸರ (<ಬೇಸಱು₂) + ಕೊಳ್₁ + — ಇಸು₃]

**ಬೇಸರಗೊಳ್ಳು** ‘ಬೇಸಱುಗೊಳ್’ ನೋ.

**ಬೇಸರಿ,** ಬೇಸ್ರಿ (ನಾ). ಹೆಂಗಸರು ಮೂಗಿನಲ್ಲಿ ಧರಿಸುವ, ಅನೇಕ ಹರಳುಗಳುಳ್ಳ ಒಂದು ಬಗೆಯ ಆಭರಣ : ಕಿವಿಯ ಓಲೆ ಮೂಗಿನ ಬೇಸರಿಯನ್ನು ಬಿಟ್ಟರೆ ಮೈಮೇಲೆ ಬೆಲೆ ಬಾಳುವ ಯಾವ ಒಡವೆಯೂ ಇರಲಿಲ್ಲ (ರಹುಂಕ್ಕಿ. ೩೯) ; ಮೂರುಹರಳಿನ ಬೇಸರಿ ಫಣಕ್, ಫಣಕ್ ಎಂದು ಮಿನುಗುತ್ತಿತ್ತು ಅವಳ ನಾಸಿಕದಲ್ಲಿ (ಕುಂಣಾಶ. ೦೩). **ಬೇಸ್ರಿ:** ಎಳಸಾದ ಮೂಗಿಗೆ ಒಪ್ಪೋಂಥ ಸೀಮೆಕಮಲದ ಬೇಸ್ರಿ (ಶಾಗಿಶ. ೦).

[←ಹಿಂ. ಮರಾ. ಬೇಸರ್. / ತಮಿ. ಪೇಚರಿ ; ತೆಲು. ಬೇಸರಿ]

**ಬೇಸರಿಕೆ** ‘ಬೇಸಱಿಕೆ’ ನೋ.

**ಬೇಸರಿಸು** ‘ಬೇಸಱಿಸು’ ನೋ.

**ಬೇಸರು₁** ‘ಬೇಸಱು₁’ ನೋ.

**ಬೇಸರು₂** ‘ಬೇಸಱು₂’ ನೋ.

**ಬೇಸರುಗೊಳ್ಳು** ‘ಬೇಸಱುಗೊಳ್’ ನೋ.

**ಬೇಸರ್ನುಡಿ** (ನಾ). ಬೇಜಾರಿನಿಂದ ಕೂಡಿದ ಅಥವಾ ಬೇಜಾರನ್ನು ತರುವ ಮಾತು.–ನುಡಿ : ರೇಫಕ್ಕೆ–ಕಿಸರ್ವುಲ್ಲಿಗೆ, ನೇಸರ್ವುಯಂ, ಬೇಸರ್ನುಡಿ (ಶಬರ. ೦೮೪ ಪ್ರಯೋ); ಬೇಸಱ್+ನುಡಿ, ಬೇಸರ್ನುಡಿ (ಶಬ್ದಾಮ. ೬೨ ಪ್ರಯೋ).

[ಬೇಸಱ್ (<ಬೇಸಱು₂) + ನುಡಿ₂]

**ಬೇಸಱ್** (ಸಪೂರೂ). ‘ಬೇಸಱು’ ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : ‘ಬೇಸರ್ನುಡಿ’ ಪರಾ. [<ಬೇಸಱು₂]

**ಬೇಸಱ** ‘ಬೇಸಱು₂’ ನೋ.

**ಬೇಸಱಿಕೆ,** ಬೇಸರಿಕೆ (ನಾ). ಆಸಕ್ತಿಯಿಲ್ಲದಿರುವಿಕೆ ; ಜುಗುಪ್ಸೆ ; ಬೇಜಾರು : ಎನ್ನ ಚಿತ್ತದ ಬೇಸಱಿಕೆ ಬಯಲಾಯ್ತು (ಶಬ್ದಾಊ. ೪–೩೯); ದೇವಾರ್ಚನೆಯ ಮಷಾಡಿದೆನಿನ್ನು ಸಾಕೆಂದೆನುತ ಬೇಸಱಿಕೆಯಲಿ ನುಡಿದಳು ವಿಮಲೆಗಾ ಮಾಯೆ (ಪ್ರಶುಂ. ೭–೦೪) ; ಘಾಸಿಯಾದರು ಬಂದ ಬಟ್ಟೆಯ ಮೈಸಿರಿಯ ಪಥವಱಿಯದಗ್ಗದ ಬೇಸಱಿಕೆಯಲಿ (ತೊರೆರಾ. ೪–೦೦–೨೪). **ಬೇಸರಿಕೆ :** ಮುಂರ್ಛಾಪದಿಂದ ಕೆಲಸಮಾಡಿ ಬೇಸರಿಕೆ ಮತ್ತು ಆಯಾಸದಿಂದ ಮನೆಗೆ ಹೊರಡಲುದ್ದೇಶಿಸಿ . . . ಗ್ರಾಮಾಭಿಮುಖವಾಗುವುದು ಸಹಜ (ಭೂಪಾಊ. ೨೯) ; ಹಾಳುಸುರಿಯುತ್ತಿದ್ದ ಬೇಸರಿಕೆಯನ್ನು ನೀಗುವ ಸಲುವಾಗಿ ಯಾವುದಾದರೂ ಆಶ್ರಮಗಳು ನಡೆದಾವೆಯೆಂದು ಜಾಗರೂಕರಾಗಿದ್ದರು (ಕೃಸರು. ೦೮೨).

[ ಬೇಸಱು₂ + —ಇಕೆ ]

**ಬೇಸಱಿಸು,** ಬೇಸರಿಸು (ಕ್ರಿ). ೧. ಆಸಕ್ತಿಯನ್ನು ಕಳೆದುಕೊಳ್ಳು ; ಬೇಜಾರು ಪಟ್ಟುಕೊಳ್ಳು; ಬೇಸರಪಡು : ಧುರದ ಶಪಥದೊಳರ್ಜುನನ ಸಂಗರಕೆ ಬೇಸಱಿಸಿದ ಪರಾಕ್ರಮಪರಿಗತರು ಪವಡಿಸಿದರಂದು ಧನಂಜಯಾಸ್ತ್ರದಲಿ (ಕುಮ್ಯಾಗ. ೨–೨೦) ; ಮೆಲ್ಲನೆ ಒತ್ತಿದಂತಾಯ್ತುವಗೆ ಕನವರಿಸುತ್ತ ಖಳ ಸುಖಿಸುಪ್ತನಾದನು ಸೇನೆ ಬೇಸಱಿಸೆ (ಕೌರಾ. ೨೪–೬). ೨. ಆಸಕ್ತಿಯನ್ನು ಕುಗ್ಗಿಸು ; ಜುಗುಪ್ಸೆಗೊಳ್ಳುವಂತೆ ಮಾಡು ; ಬೇಸರಪಡಿಸು : ಈತನ ಕಟಕಕ್ಕೆ ನಿತ್ಯಕ್ಷಯವ್ಯಯ ಪ್ರತ್ಯವಾಯಂಗಳಂ ಮಾಡಿ ಬೇಸಱಿಸಿ ನೆಲದಿಂ ತೆರಳ್ಚುವಂ (ಆದಿಪು. ೦೪–೩೭ ವ) ; ಏರಿದುಂ ಬೇಸಱಿಸಿದುವು ಬರಯಿಯುಂ ಜಳದಂಗಳ್ (ಚಂದ್ರಪು. ೪–೩೪). ೩. ದಣಿಯುವಂತೆ ಮಾಡು ; ಬಳಲಿಸು ; ಆಯಾಸಪಡಿಸು : ಬಱಸಿಡಲಾಗಿ ಪೊಯ್ದು . . . ಕಟ್ಟಿಲೆಯಾಗಿ ಮುತ್ತಿ ಬೇಸಱಿಸುವಗುರ್ವ ಪರ್ವಿ ಕವಿದರ್ದನುಜಾರಿಗತರ್ಕ್ಯವಿಕ್ರಮರ್ (ಅಸಂಪು. ೦೪–೪); ಬಿದ್ದ ವರನೊಡೆ ತುಳಿದು ಮೇಲುಬ್ಬೆದ್ದು ಕವಿಕವಿದಾಳು ಕುದುರೆಯ ಬಿದ್ದಿನಲಿ ಬೇಸಱಿಸಿದನು ಪಿತೃಪತಿಯ ಪರಿಜನವ (ಕುಮ್ಯಾಕ. ೦೦–೩೬). **ಬೇಸರಿಸು :** ೧. ಸುಂದರರಾಯರು ಇನ್ನೂ ಮಲಗಿರುವುದಕ್ಕಾಗಿ ಬೇಸರಿಸಿಕೊಂಡು ತಾನೇನು ಮಾಡಲೂ ತೋರದೆ ಬಚ್ಚಲುಮನೆಗೆ ಹೊರಟಳು (ಐದುಶ್ಯ. ೯). ೪. ವ್ಯಸನಹೊಂದು ; ಕನಿಕರಪಡು : ನೀನು ಕ್ಷೀಣಿಸಿರುವುದನ್ನು ಕಂಡು ಬೇಸರಿಸುತ್ತಾರೆ (ಶತಂಗ. ೦೬). [ಬೇಸಱು₁ + —ಇಸು₃]

**ಬೇಸಱು₁,** ಬೇಸರು₁ (ಕ್ರಿ). ಬೇಸತ್ತ (ಭೂತಕೃ). ಬೇಸತ್ತು (ಭೂತನ್ಯೂ). ೧. ಬೇಜಾರುಪಡು; ಜುಗುಪ್ಸೆಯನ್ನು ಹೊಂದು; ಆಸಕ್ತಿಯನ್ನು ಕಳೆದುಕೊಳ್ಳು : ದೋಸಮಿನಿತೆಂದು ಬಗೆದುದ್ಭಾಸಿಸಿ ತಱಿಸಂದು ಕನ್ನಡಂಗಳೊಳೆಂದುಂ ವಾಸುಗಿಯುಮಱಿಯಲಾಱದೆ ಬೇಸಱುಗುಂ ದೇಶಿ ಬೇಱಿವೇಱಪ್ಪುದಱಿಂ (ಶಂರಾ. ೧–೪೬) ; ಅವರುಂ ತಮ್ಮ ಕಂಡುಮಂ ಪೇಟಿಸ್ಸೊಡೆ ಬೇಸಱದೆ ದಿವಸಕ್ಕಂ ಚರಿಗೆವೊಗುವುದೆಂದು ಭಟ್ಟಾರರ್ ಕಲ್ಪಿಸಿದೊಡೆ (ವಡ್ಡಾರಾ. ೯೯–೦೦) ; ಲಲಿತಾಂಗಿಯ ಶಂಕೆಯುಂ ಭಯಂಬೆರಸಿದ ನಾಣುಮಂ ಕ್ರಮಾದೆ ಪಿಂಗಿಸು ಬೇಸಱದಿರ್ ಗುಣಾರ್ಣವಾ (ಪಂಪಭಾ. ೩–೭೭) : ಕೊಲೆಗೆ ಬೇಸಱಿವರು ಸಾವುದಕಳುಕದವದಿರು (ಕುಮ್ಯಾಕ. ೪–೦೭). ೨. ಆಲಸ್ಯವನ್ನು ಹೊಂದು ; ದಣಿ ; ಬಳಲು : “ ಬೇಸಱು – ಆಲಸ್ಯೇ ” (ಕಮುಠ); ಏಱುದಿವಸಮುಂ ಬಿಡದಡವಿಗೆ ಬೇಂಟೆಯಾಡಲ್ ಪೋಗಿ ಒಂದು ಮೃಗಮುಮಪ್ಪೊಡಂ ಸಮನಿಸದೆ ಬೇಸತ್ತಬಿಲ್ದು ಪೊಟಲ್ಗೆವೋಗಿ (ವಡ್ಡಾರಾ. ೯೩–೨೩) ; ಕೞಹದೊಳು ಕರಿಘಟೆಯ ಹೊಯ್ಲ್ ಹೊಯ್ದುಲಸಿ ಕೌರವನನುಜನನು ಮುಂಕೊಳಿಸಿಕೊಳ್ಳದೆ ಕಳುಹಿ ಬೇಸಱುತನಿಲಸುತ ಮಸಗಿ (ಕುಮ್ಯಾಲ. ೩–೬). **ಬೇಸರು₁:** ೧. ಉರುತರಶ್ರಮದಿಂದ ನಿಶೆಯೊಳೇ ನಗರಿಯೊಳ್ ತಿರುತಿರುಗಿ ಬೇಸರದೆ ನೋಡಿ ನಿಷ್ಫಲಮಾಯ್ತು (ವೆಂಕಾರಾ. ೩–೩–೪) ; ಅಪತ್ಸಮುದ್ರದಲ್ಲಿ ಮುಳುಗುತ್ತಿರುವ ಸ್ನೇಹಿತನಿಗೆ ಬೇಸರದೆ ಮತ್ತು ಮತ್ತು ವಿವೇಕವನ್ನು ಹೇಳುತ್ತ (ಕೃವಾಲು. ೨೨೨) ; ಈ ಮಗಳ ಮೂರ್ಖತನಕ್ಕೆ ನಾನು ಬೇಸತ್ತಿದ್ದೇನೆ (ಐವಿಪಾ. ೦೭೪).

[ ದೇ.॥ ತಮಿ. ವೇಚಱು ; ತೆಲು. ವೇಸರು]

**ಬೇಸಱು₂,** ಬೇಸರ. ಬೇಸರು₂, ಬೇಸಱ (ನಾ). ೧. ಆಸಕ್ತಿಯಿಲ್ಲದಿರುವಿಕೆ ; ಬೇಜಾರು ; ಜುಗುಪ್ಸೆ : ಒಂದೆಡೆಯೊಳ್ . . . ಅಟ್ಟುವೆತ್ತ ಪೊಳೆವುಲ್ಲೆ ಯುಳ್ಳೆಯಾದ ಮಾತಂ ತನ್ನ ಸೂಳೆಯ ಬೇಸಱಿಂ ಕೆಳೆಯಂಗಿಂತೆಂದಂ (ಆದಿಪು. ೦೨–೩೮ ವ); ನಿಮ್ಮಡಿಗಳಂ ಕಾಣದಿಪ್ಪ ಕಡುಬೇಸಱಿಂದಿರೆ ಹರಂ ಮಾಹೇಶ್ವರಪ್ಪರವನಟ್ಟಿದಂ (ಸಂಶರ. ೧೭–೦೦೪); ಘನಸಂಗರಕೆ ಬೇಸಱು ತೋಱಿತೇ ತನ್ನಾಣೆ ಹೇಳು (ಕುಮ್ಯಾದ್ರೋ. ೩–೩೩). ೨. ಆಯಾಸ ; ಬಳಲಿಕೆ ; ದಣಿವು : ಆ ಸುದತಿಯ ಮೃದುಪದವಿನ್ಯಾಸಮುಮಂ

ಕೇಷನಾನಲಾಜಿದೆ ಸುಯ್ದ್ವಂ ಬೇಸಱೆನೆಂದೊಡೆ ಗರ್ಭದ ಕೂಸಿನ ಬಳಿದಳವಿಯುಳವನಳಿವರುಮೊಳರೇ (ಕಂಕಥಾ. ೧-೧೨೬). **ಬೇಸರ :** ೧. ಪೊಲೆ ಪೊರ್ದ್ದಲ್ ಪೇಸಿ ಬೇಸರದಿವಳಿದ ಮಹೀಕಾಂತೆಯುಂ ರಕ್ಷಿಸಲ್ (ಎಕ. VII, ಶಿಕಪು. ೩-೯ ; 1218) ; ಮಂಡಲಿಯಲ್ಲಿದ್ದವರಿಗೆಲ್ಲರಿಗೂ ಅವನನ್ನು ಕಂಡರೆ ಬೇಸರ (ಬಾಇಕ. ೩೦೬); ಮನೆಕೆಲಸವನ್ನು ಮಾಡುವುದಕ್ಕೆ ಅವಳಿಗೆ ಬೇಸರವಿಲ್ಲ (ಮಹಾಶ್ವೇ. ೩೦). ೨. ವ್ಯಸನ ; ಕನಿಕರ : ಅವಳ ದೀನಸ್ಥಿತಿಯನ್ನು ಕಂಡು ತುಂಬ ಬೇಸರವಾಯಿತು (ಕೂಅ). **ಬೇಸರ್ಗು:** ೧. ನಿಮಗೆ ಬೇಸರಾಗುವ ಕೆಲಸಾ ನಾವು ಹೇಳಲಾರೆವು (ಕುಂಬಿಬು. ೩-೦೩೪); ಈ ಜನರಿಗೆ ನೌಕರಿಯು ಬೇಸರಾಯಿತು (ಸ್ವಾಂಬಿ. ೨೨೬) ; ಬೇಸರಿಗೆಂತ ಹೇಸರಕತ್ತೆ ಆಡಿಸಿದ (ಗಾದೆ). **ಬೇಸಱ :** ೧. ವನಜವದುಬಿ. . . ಸಖಿಯರ ಮನ್ನಣೆಗೆ ಮೈಗೊಡಳು ಬಲುಬೇಸಱಿದಿ ಬಳಲುವಳು (ವಳಕ. ೦-೩೮). 'ಬೇಜಾರು' ಪರಾ. [<ಬೇಸಱು$_1$. / ತುಳು. ಬೇಸರ್]

**ಬೇಸಱುಗೊಳ್**, ಬೇಸರಗೊಳ್ಳು, ಬೇಸರುಗೊಳ್ಳು (ಕ್ರಿ). ಆಸಕ್ತಿಯನ್ನು ಕಳೆದುಕೊಳ್ಳು; ಬೇಜಾರುಪಡು ; ಜುಗುಪ್ಸೆಯನ್ನು ಹೊಂದು: ಬೇಸಱುಗೊಂಬ ತತ್ಕುವರಿಯು ಮನದೊಳಗಾಸಱು ಬಹಳ ವೆಗ್ಗಳಿಸಿ ಈಸಱಿಂದಿನ್ನು ಕಾಡುವುದೊಳ್ಳಿತಲ್ಲೆಂದು ನೇಸಱು ತಲೆಯ ತೋಱಿಸಿತು (ಪೊಳಕ. ೨೭-೬೩). **ಬೇಸರಗೊಳ್ಳು :** ಅವಳು ಎಷ್ಟೇ ಪ್ರಯತ್ನಿಸಿದರೂ ಕೆಲಸ ಸಿಗಲಿಲ್ಲವೆಂದು ಬಹಳ ಬೇಸರಗೊಂಡಿದ್ದಳು (ಕೂಅ). **ಬೇಸರುಗೊಳ್ಳು:** ತನ್ನ ಉದ್ದೇಶವನ್ನು ಸಿದ್ಧಿಗೆ ಒಯ್ಯಬೇಕಾದರೆ ಎಷ್ಟೋ ಸಂಕಟಗಳು ತಟ್ಟಿದರೂ ಬೇಸರುಗೊಳ್ಳುತ್ತಿದ್ದಿಲ್ಲ (ಕುಂಬಿಬು. ೩-೨೦೬).

[ಬೇಸಱು$_2$ + ಕೊಳ್$_1$ ]

**ಬೇಸಱೆಯ್ದು** (ಕ್ರಿ). =ಬೇಸಱುಗೊಳ್: ಆ ರಾಜಸುತಂ. . . ಅಳವಳಿಸಂ ಬೆಬ್ಬಳಿಸಂ ಕಳವಳಿಸಂ . . . ಬೇಸಱೆಯ್ದಿ ಬೆಳ್ಮೊಗದಿನಿರಂ (ಅಜಿಪು. ೩-೯೦).

[ಬೇಸಱು$_2$ + ಎಯ್ದು]

**ಬೇಸಾಯ** 'ಬೆವಸಾಯ' ನೋ.

**ಬೇಸಾಯಗಾರ** (ನಾ). ವ್ಯವಸಾಯವನ್ನು ಮಾಡುವವನು : ರೈತ; **ಒಕ್ಕಲಿಗ :** ಅರಸುಕುಲದವನಿಗೆ ಬೇಸಾಯಗಾರನ ಹೆಣ್ಣನ್ನು ತರುವುದೇ? (ಹಾಕುತ್ತ. ೯೭); ಆ ಊರಿನ ಮುಖ್ಯನ ಮನೆಯೇ ತನ್ನ ಮೂರುಲೋಕ ಗಳೆಂದು ತಿಳಿದುಕೊಂಡಿದ್ದ ಕೊರಗು ಎಂಬ ಬೇಸಾಯಗಾರನಿದ್ದನು (ನಾಬಿಕರ. ೭ ಕಥಾಸಾರ).

[ಬೇಸಾಯ (< ಬೆವಸಾಯ) + — ಗಾರ (<— ಕಾಱ)]

**ಬೇಸಿಗೆ** 'ಬೇಸಗೆ' ನೋ.

**ಬೇಸಿಗೆಕಾಲ** 'ಬೇಸಗೆಗಾಲ' ನೋ.

**ಬೇಸಿಗೆರಜ** 'ಬೇಸಗೆರಜ' ನೋ.

**ಬೇಸಿಗೆರಜೆ** 'ಬೇಸಗೆರಜ' ನೋ.

**ಬೇಸಿನ್** 'ಬೇಸನ್' ನೋ.

**ಬೇಸಿಸ್ತು** (ನಾ). ಶಿಸ್ತು ಇಲ್ಲದಿರುವಿಕೆ : ಬಹಾಳ ಬೇಸಿಸ್ತ ಮಾಡಿದಳವಾ ಇದೊಂದು ರುಕ್ಕಾಣಿಬಾಯಿ (ಪಕುಮ. ೭೭). [←ಪಾರ. ಮರಾ. ಬೇಶಿಸ್ತ್]

**ಬೇಸು** 'ಬೇಯಿಸು' ನೋ.

**ಬೇಸುರೆ**, ಬೇಸೂರ, ಬೇಸೂರು (ನಾ). ೧. [ಸಂಗೀತ] ಅಪಸ್ವರ. ೨. (ಅಲಂ) ಅಸಂಬದ್ಧವಾದುದು : ಪ್ರಳಯ ಪೂರ್ವದ ರಾದ್ಯ, ಸದ್ದಿಲ್ಲದೀ ಸಂಚು ಯುದ್ಧಬಡುಕರ ಶುದ್ಧಶಾಂತತಾ ಪಾದದೊಲು ಪರಿಣಾಮ ಬೇಸುರವಲಾ (ಕೂರ್ಮಾ. ೦೦೦-೦೦). **ಬೇಸೂರ :** ೧. ಬೇಸೂರ ಹಾಡಿಕೊಂತ ತೇಲಗಣ್ಣು, ಮೇಲಗಣ್ಣು ಹಾಕತಾವು (ಗ್ರಾಮಾಹು. ೦೧೩). **ಬೇಸೂರು :** ೧. ಬೆನ್ನು ಚಪ್ಪರಿಸಿದರೆ ಬೆಳತನಕ ಬೇಸೂರು ಹಾಡಬಲ್ಲ (ಕಿಂಪು. ೨೮-೦೩). [←ಹಿಂ. ಬೇಸುರ್; ಮರಾ. ಬೇಸೂರ್]

**ಬೇಸುರಿ** (ನಾ). ತೀವ್ರವಾದ ತಾಪ : ಬೇಸುರಿ, ಬೇಸೋಡು (ಕಪ್ರಾಸು. ೩೪೩ ಕ್ರಮೋ) ; ನಿಟ್ಟುಸುರಿನ ಬೇಸುರಿಯಲಿ ಜೀವ ಬಿಡುಕುತಿರುವುದು (ಶಾರಂಗ. ೩೨-೬). [< ಬಿಸಿದು + ಉರಿ$_2$]

**ಬೇಸೂರ** 'ಬೇಸುರ' ನೋ.

**ಬೇಸೂರು** 'ಬೇಸುರ' ನೋ.

**ಬೇಸೋಡು** (ನಾ). ಬೆಚ್ಚಗಿರುವ ಕಾವಲಿ ; ಕಾಯ್ದ ಹೆಂಚು : ಬೇಸುರಿ, ಬೇಸೋಡು (ಕಪ್ರಾಸು. ೩೪೩ ಕ್ರಮೋ).

[< ಬಿಸಿದು + ಓಡು$_2$]

**ಬೇಸ್ತು** (ನಾ). ೧. "ಒಂದು ತೆರದ ಇಸ್ಪೀಟಾಟ ; 'ಬೇಸ್ತು' ಆಟ" (Baste. ಇಂಕಿ). ೨. ಇಪ್ಪತ್ತೆಂಟರ ಇಸ್ಪೀಟಾಟದ ಮೂರು ಹಂತ ಗಳಲ್ಲಿ ಆಗುವ ಸೋಲು : ಇದು ಮೂರನೇ ಬೇಸ್ತು. ಕಡೆಯ ಆಟ (ಜಾವಗೀ. ೦೦). ೩. (ಅಲಂ) ಮೋಸ : 'ಬೇಸ್ತುಬೀಳು' ಪರಾ.

[← ಇಂ. Baste]

**ಬೇಸ್ತುಬೀಳಿಸು** (ಕ್ರಿ). ಮೋಸಹೋಗುವಂತೆ ಮಾಡು ; ಪೆಚ್ಚು ಬೀಳಿಸು : ಆದಕ್ಕೇ ಮತ್ತೆ ನಮ್ಮ ಮುಳ್ಳುಮುಖದ ಸಂಪತ್ತು ಅವರಿಗೆ ಹಾಗ ಬೇಸ್ತು ಬೀಳಿಸಿದ್ದು (ಅಂಹೂ. ೨೯).

[ಬೇಸ್ತುಬೀಳು + —ಇಸು$_3$]

**ಬೇಸ್ತುಬೀಳು** (ಕ್ರಿ). ಮೋಸಹೋಗು ; ಪೆಚ್ಚುಬೀಳು : 'ಬೇಸ್ತು ಬಿದ್ದ' ಗಂಡನನ್ನು ಕಂಡು ಚಂಪಾವತಿಗೆ ಮೋಜೆನಿಸಿತು (ರಂಗಪ. ೨೬೬); ಎಂದೂ ತಂತ್ರಿಯವರು ಅಷ್ಟು ಬೇಸ್ತು ಬಿದ್ದಿರಲಿಲ್ಲ (ಹದ್ದಸ. ೨೩೪).

[ಬೇಸ್ತು + ಬೀಳ್$_1$ (< ಬೀೞ್$_1$) ]

**ಬೇಸ್ರಿ** 'ಬೇಸರಿ' ನೋ.

**ಬೇಹ** 'ಬೇಡ್ಕು$_1$' ಪರಾ.

**ಬೇಹಕ್ಕುದಾರ** (ನಾ). ಹಕ್ಕುಬಾಧ್ಯತೆಗಳಿಲ್ಲದವನು ; ಹಕ್ಕುದಾರನಲ್ಲ ದವನು : ಇಂತಹ ಬೇಹಕ್ಕುದಾರರಿಂದ ಪಟೇಲರು ಶಾನುಭೋಗರುಗಳು ಕಂದಾಯದ ಹಣಗಳನ್ನು ತೆಗೆದುಕೊಳ್ಳಕೂಡದು (ಗ್ರಾಮಾಕ. ೬೯).

[← ಅರ. ಬೇಹಕ್‌ದಾರ್]

**ಬೇಹಣ** (ನಾ). ಬೇಯುವಿಕೆ ; ಬೆಂಗುಹೋಗುವಿಕೆ : ಲೋಹಕುಂಭ ದೊಳೆಣ್ಣೆಯುಂ ಪೊಯ್ದು ಪಾಪಿಗಳನೋರೋ ತುಂಬುತ್ತ ಮುಚ್ಚಳ ವನಿಟ್ಟಿಳೆಗಿಚ್ಚನಾ ಹದಂತಪ್ಪದಂದದೆ ಬೆಳಗಿ ಬೇಯಿಸಲು ನೂಱುಸಾವಿರ ವತ್ಸರಂ ಬೇಹಣಲ್ಲದೆ ಸಾಯಲಿಲ್ಲ (ಜೀಕೃಪು. ೪-೦೯-೪೦).

[< ಬೇ$_1$ + — ಅಣ]

**ಬೇಹಣಗಾಣ** (ನಾ). ಗಾಯಂಕರಲ್ಲಿ ಒಂದು ವರ್ಗ (?) : ಆರಯ್ದು ಕೊಟ್ಟ ಶ್ರುತಿಯ ಹವಣಂ ತೊಟ್ಟು ಕೈಕೊಂಡೆಡಬಲನ ಬೇಹಣಗಾಣರ್ ಮಿನುಕಸಿವ ಮಿಸುನಿಯುಂ ಸರಿಗೆದೆಗೆದಂತೆ ಮಱಿದುಂಬಿಗಳ ಮಣ್ಚರಮಂ ಸೂಱೆಗೊಂಡಂತೆ ಶಾರವಿಸುತಿರೆಯುಂ (ಶಾಂತೀಶ್ವ. ೭-೯೩ವ).

[ಬೇಹಣ$_1$ + ಗಾಣ$_3$]

**ಬೇಹರ$_1$** 'ಬೇಹುರ' ನೋ.

**ಬೇಹರ$_2$** 'ಬೆವಹಾರ' ನೋ.

**ಬೇಹರದರ** (ನಾ). (?) : ಬೆಲ್ಲ ಹುಣುಸೇಹಣ್ಣು ಬೇವಿನ ಫಲವ ಎಲ್ಲ ಬೇಹರದರವ ಬಲ್ಲನೊಬ್ಬ ಜಾಣ ಮಲ್ಲಿಕಾರ್ಜುನಸೆಟ್ಟಿ ಮನದೊಡೆಯ (ಶಿವಗೀ. ೦೯೦-೬೩೨). [ ? ]

**ಬೇಹರಿ** 'ಬೆವಹಾರಿ' ನೋ.

**ಬೇಹರಿಸು**, ಬೆವಹರಿಸು (ಕ್ರಿ). ವ್ಯಾಪಾರ ಮಾಡು : ಆ ಸೆಟ್ಟಿ ಬೇ [ಪಾಠಾಂ. ಬ್ಯವ]ಹರಿಸಿ ಬಹುಧನಮಂ ಪಡೆದು (ಧರ್ಮಾಮೃ. ೦೦-೭೬ ವ) ; ಕಡಲೊಳ್ಕಣ್ಗೊಳಿಸುವ ಪೆರ್ವಡಗುಗಳಿಂ ಬಂದ ದೀವದೀವದ ಮೇಲಾ

ದೊಡಮೆಗಳಂ ಬೇಹರಿಸಲ್ಗಡಣಿಪ ವಣಿಜರುಲಿವಬ್ಧಿರವವುಂ ಪಳಿಗುಂ (ಮಲಾಕ. ೬-೨೫). **ವೆವಹರಿಸು :** ಇವನೆನ್ನಂ ಬಿಟ್ಟು ಪೋಪನನಲ್ಲ ನಾನಾವಾವದೇಶಕ್ಕೆ ವೆವಹರಿಸಲ್ ಪೋದಡಿವನೆನ್ನ ಕಡೆಯ ಬಾಗಿಲ ಕಾಪಾಗಿಪ್ಪಂ (ಪನ್ನಕಾ. ೩-೬೮). [ಬೇಹರ$_2$ (< ಬೆವಹಾರ) + — ಇಸು$_3$]

**ಬೇಹಾಗ್**, ಬೇಹಾಗು (ನಾ). [ಸಂಗೀತ] ಒಂದು ರಾಗದ ಹೆಸರು : ಅವರು ಬೇಹಾಗ್‌ರಾಗದಲ್ಲಿ ಹಾಡಿದ ತಿಲ್ಲಾನ ತುಂಬ ಸೊಗಸಾಗಿತ್ತು (ರೂಢಿ). **ಬೇಹಾಗು :** ಯಮುನಾಕಲ್ಯಾಣಿ, ಹುಸೇನಿ, ಬೇಹಾಗು, ಹಮೀರು, ನವರೋಜು ಮುಂತಾದ ರಾಗಗಳು ಹಲವು ನಮ್ಮಲ್ಲಿ ನೆಲೆಗೊಂಡು ಕರ್ನಾಟಕ ಗೌರವವನ್ನು ಪಡೆದಿರುವುದು ಈ ಮಾರ್ಗದಿಂದಲೇ (ಗಾನಕ. ೫೫).

[← ಹಿಂ. ಮರಾ. ಬಿಹಾಗ್./ಸಂ. ಬಿಹಾಗ್]

**ಬೇಹಾಗು** 'ಬೇಹಾಗ್' ನೋ.

**ಬೇಹಾರ** 'ಬೆವಹಾರ' ನೋ.

**ಬೇಹಾರಿ** 'ಬೆವಹಾರಿ' ನೋ.

**ಬೇಹಾರಿಗ** (ನಾ). ವ್ಯಾಪಾರ ಮಾಡುವವನು ; ವ್ಯಾಪಾರಿ ; ವರ್ತಕ : ಅಂಗಡಿಯೊಳು ಮಾಜುತಿಹ ಬೇಹಾರಿ [ಪಾಠಾಂ. ವ್ಯವಹಾರಿ]ಗಳ್ ಕಂಗೊಳಿಸಿದರು ಒಂದೆಸೆಯ (ಅಭ್ಯುದ. ೩-೬೬) ; ಸಂಜಶೆಟ್ಟಿ-ಮಹೀಶೂರಪುರದ ಬೇಹಾರಿಗ (ಬಸವಗಂ. ೧೧-೨). [ಬೇಹಾರ (< ಬೆವಹಾರ) + — ಇಗ]

**ಬೇಹಿಗ** (ನಾ). **ಗೂಢಚಾರ ;** ಬೇಹುಗಾರ : ಹೊತ್ತಿಳಿಯೆ ಮನೆ ದೀಪದಂತೆ ಕಣ್ಣು ಪೆರತಂ ಕಾಣೆಪಾತೆ, ನಿನ್ನನನಿತೇಂ ತೋರದಂತೆ? ನಿನ್ನ ಬೇಹಿಗನೇನಿದು ? (ಗಳವಿ. ೬೫-೬೪). [ಬೇಹು + — ಇಗ]

**ಬೇಹು**, ಬೇವು$_2$ (ನಾ). ಗುಪ್ತಚರ್ಯೆ ; ಗೂಢಚರ್ಯೆ: ಬಟ್ಟೆಯ ಬಡಿವ ಕಳ್ಳಂಗೆ ಬೇಹುಸಂದು ಕಳವು ದೊರಕಿದಂತಾಯಿತ್ತು (ಅವಚಂ. ೨೦೯-೯೪೦) ; ವನಚರರು ಬೇಹಿನಲಿ ಭೂಸುರಜನವ ಬೆಂಬತ್ತಿದರು (ಕುಮಾವ್ಯ. ೦೬-೧೪) ; ಕಟ್ಟಿತು ನನ್ನನು ಮುಕ್ತಿಯ ರಾಹು ಬಾಳಿನ ಬೆನ್ನೊಳೆ ಸಾವಿನ ಬೇಹು ! (ಪಾಂಚಜ. ೫೮-೨೩). **ಬೇವು$_2$:** ಕೆಲವು ಬೇವಿನ ಜನರನ್ನು ಟೀಪುಸುಲ್ತಾನರ ಸೀಮೆ ವಳಗೆ ಕಳುಹಿಸಿ (ರಾಜೇಂದ್ರ. ೬೮).

**ಬೇವು ಸೋವು** = ಗುಪ್ತವಾಗಿ ಹುಡುಕಿ ತೆಗೆಯುವಿಕೆ ; **ಗೂಢಚರ್ಯೆಯಿಂದ ಶೋಧಿಸುವಿಕೆ :** ಜಮೇದಾರ ಪಡೂರ ಬೈರೆಗೌಡ ಸಹಾ . . . ಆ ಕಳ್ಳನನ್ನು ಬೇವುಸೋವಿನಿಂದಾ ಪತ್ತೆ ಹತ್ತಿಸಿ ಹಿಡಿಯುವಂತೆ ಅಪ್ಪಣೆ ಕೊಟ್ಟು, ಗರವಲೆಗೆ ಕಳುಹಿಸಿಕೊಟ್ಟರು (ರಾಜೇಂದ್ರ. ೨೬೬). **ಬೇಹಿನ ಚಾವಡಿ** = (ಮೈಸೂರುಸೀಮೆಯಲ್ಲಿ ಚಿಕ್ಕದೇವರಾಜಒಡೆಯರು ಏರ್ಪಡಿಸಿದ್ದ ಎಂಭತ್ತ ನಾಲ್ಕು ಜಿಲ್ಲೆಗಳ) ಗುಪ್ತಚರ್ಯೆಯ ಕೆಲಸದ ಮೇಲ್ವಿಚಾರಣೆ ಮಾಡುತ್ತಿದ್ದ ಇಲಾಖೆ : ಬೇಹಿನ ಚಾವಡಿ—ಇವರಲ್ಲಿ . . . ಅರಮನೆಯಿಂದ ಗಡಿಗಳಿಗೆ ಬರೆಸಿದ ನಿರೂಪವನ್ನು ಕಳುಹಿಸುವಂತೆಯೂ ಕಟ್ಟಳೆಯನ್ನು ಮಾಡಿದರು (ಮಹಾಮಂ. I, ೦೯೯). **ಬೇಹಿನ ಜನ** = ಗೂಢಚರ್ಯೆಯ ಕೆಲಸಕ್ಕಾಗಿ ನೇಮಿಸಲಾದ ಜನ; ಗೂಢಚಾರರು ; ಗುಪ್ತಚಾರರು : ಫಣಿತನಯ ಗಜಬೇಂಟೆಯೊಳು ಬಹುದಣಿದು ಬಂದಪ ಸಮಯಮೆಸ್ನುತ ಕ್ಷಣದಿ ಬೇಹಿನ ಜನ [ಪಾಠಾಂ. ಚರ]ರು ಪೇಳಲು (ಪಾಗಜ. ೦೦-೬೯). **ಬೇಹಿನವ** = ಗೂಢಚಾರ; ಗುಪ್ತಚಾರ ; ಬೇಹುಗಾರ : "ಹೇರಿಗಂ = ಬೇಹಿನವಂ" (ಕಮಿದ. ಶಂ. ೨); ಕೃಷ್ಣನು . . . ದ್ವಾರಕಾಪಟ್ಟಣಕ್ಕೆ ಹೋದ ವೃತ್ತಾಂತವನ್ನೂ ಪಾಂಡವರ ಸಮಾಚಾರವನ್ನೂ ಬೇಹಿನವರ ದೆಸೆಯಿಂದ ಕೇಳಿ (ಕೃಪಾಉ. ೬) ; ವಿವಾಹಸನ್ನಾಹಂ ಮೆರೆಯುತ್ತಿರ್ದಾ ಮಾರನಾಯಕಂ ಬೇಹಿನವರಿಂ . . . ಸುದ್ದಿಯಂ ಕೇಳ್ದು (ಮರಾತ. ೧-೩೩).

[ದ್ರಾ. ॥ ತಮಿ. ವೇ, ವೇವು ; ಮಲ. ವೇವು ; ತುಳು. ಬೇಪು ; ತೆಲು. ವೇಗು]

**ಬೇಹುಕಾತಿ** (ನಾ). ಗುಪ್ತಚರ್ಯೆ ಮಾಡುವವಳು ; **ಗೂಢಚಾರಿಣಿ :** ಈ ಸಮಯದಲ್ಲಿ ದೇವತೆಗಳ ಬೇಹುಕಾತಿಯಾದ ರಂಭೆಯಿಂದ ಸ್ವರ್ಗಕ್ಕೂ ಭೂಮಿಗೂ ನಿಕಟಸಂಬಂಧವೊದಗುತ್ತದೆ (ಅಹಲ್ಯ. XI, ಪ್ರಸ್ತಾವನೆ).

[ಬೇಹು + — ಕಾತಿ$_1$]

**ಬೇಹುಕಾರ** 'ಬೇಹುಗಾಜಿ' ನೋ.

**ಬೇಹುಕಾಜಿ** 'ಬೇಹುಗಾಜಿ' ನೋ.

**ಬೇಹುಗಡಿ** (ನಾ). ಗೂಢಚರ್ಯೆಯನ್ನು ನಡೆಸುವ ಸೀಮಾ ಪ್ರದೇಶ ; ಬೇಹಿನ ಎಲ್ಲೆ : ಇರ್ದುದು ಮಹೇಂದ್ರಾಚಲಂ ದಕ್ಷಿಣಾಂಬುಧಿಗೆ ಬೇಹುಗಡಿಯಂ ಕಟ್ಟಿ (ಶ್ರೀರಾಮಪ. ೩೬೩-೩೦). [ಬೇಹು + ಗಡಿ$_1$]

**ಬೇಹುಗಾರ** 'ಬೇಹುಗಾಜಿ' ನೋ.

**ಬೇಹುಗಾರಿಕೆ** (ನಾ). ಗೂಢಚಾರನ ಕೆಲಸ ; ಗೂಢಚರ್ಯೆ : ಅಗ್ರಚಾರ . . . ಬೇಹುಗಾರಿಕೆಯಲ್ಲಿ ವಿಶೇಷವಾದ ಶಿಕ್ಷಣವನ್ನು ಪಡೆದ ಕಾರಣ ಆತನನ್ನು ಶತ್ರುವಿನ ಸಮಾಚಾರ ಸಂಗ್ರಹಿಸುವ ಕಾಲಕ್ಕೆ ಆಯ್ದುಕೊಳ್ಳುತ್ತಾರೆ (ಕಟಿಕೋ. I, ೦೮೬).

[ಬೇಹುಗಾರ (< ಬೇಹುಗಾಜಿ) + — ಇಕೆ]

**ಬೇಹುಗಾಜಿ**, ಬೇಹುಕಾರ, ಬೇಹುಕಾಜಿ, ಬೇಹುಗಾರ (ನಾ). ಗೂಢಚರ್ಯೆಯನ್ನು ಮಾಡುವವನು ; ಗೂಢಚಾರ : ಜೂಜುಗಾಜಿಂ ಬೇಹುಗಾಜಿಂ (ಶಾಶಾಭೂ. ೦೯೨ ಪ್ರಯೋ); ಬೇಹುಗಾಜಿರ ಮೊಗದಿಂದರಿ ರಾಯರ ಗಾಹುಗದುಕುಗಳನಜಿತು (ಕುಮಾರಾಮ. ೩೦-೩೫). **ಬೇಹುಕಾರ :** ಬೇಹುಕಾರನ ತೆರದಿ ಬೆಳ್ಳಿ ಮೂಡಿದುದು (ಸಾರಂಗ. ೩೨); ಬೇಹುಕಾರರು ಬಂದು ಹಿಂದಿನ ಮೊಕ್ಕಾಮಿನಲ್ಲಿಯೇ ಈ ಆತಿಥ್ಯದ ಸಿದ್ಧತೆಯನ್ನು ಸೇನಾಪತಿಗಳಿಗೆ ಅರಿಕೆ ಮಾಡಿದರು (ದಾಂಡೇಲ್. ೫೫). **ಬೇಹುಕಾಜಿ :** ಎಲ್ಲಿಂದ ಬಂದೆಯೆಂಬರೊ ಕೊಲ್ಲಿವನಂ ಬೇಹುಕಾಜಿನೆಂಬರೊ . . . ಎಂದು ಚಿಂತಿಸುತಿರ್ದಂ (ದಶಕು. ೨-೦೩೬); ನಳಿನಮಿತ್ರನ ಬೇಹುಕಾಜಿರ ಸುಳಿವೊ ತಿಮಿರದ ಪ್ರಳಯಮೋಯೆನೆ ನಿಳಯನಿಳಯದ ಸೊಡರು ತಳಿತುದು ಕೂಡೆ ನಗರಿಯಲಿ (ಸಂಭಶ. ೩೨-೦೬). **ಬೇಹುಗಾರ :** ಸುಮತಿಯು ಬೇಹುಗಾರರ ಗೊತ್ತುಗಾರನಂ ನೋಡಿ (ಸೌಗಂಧಿ. ೦೩೩-೪) ; ಘಾತುಕರನ್ನೂ ಬೇಹುಗಾರರನ್ನೂ ಒಳಗೇ ಸಂಚುಮಾಡಿ ಕಳುಹಿಸಿರತಕ್ಕದ್ದೂ . . . ಗೊತ್ತಾಗಿತ್ತು (ಮುಸಗ. ೦೫೨). [ಬೇಹು + — ಕಾಜಿ]

**ಬೇಹುಗುಟ್ಟು** (ಕ್ರಿ). ಗುಪ್ತವಾಗಿ **ಮಾತನಾಡು,— ಹೇಳು :** ಜನಾನ್ತಿಕದಲ್ಲಿ ಸೈನ್ಯಾಧಿಪತಿಗೆ ಕ್ಷೀಣಸ್ವರದಿಂದ ಬೇಹುಗುಟ್ಟಿ, ವೀರವನ್ನದ ಮಾಡಿ ಹೊರಟುಹೋಗುವನು (ಬಸುಗಂ. ೨೬-೫). [ಬೇಹು + ಕುಟ್ಟು$_1$]

**ಬೇಹುಬರ್** (ಕ್ರಿ). ಬೇಹುಗಾರಿಕೆಯನ್ನು ನಡೆಸಲು ಬರು : ಪೊಲಗಾಪಿನವರ್ ಕಾಣುತೆ ಪಲರುಂ ಪರಿತಂದು ಬೇಹು ಬಂದವನಿವನಂ ಕೊಲೆಗೆಯ್ದಪಿ ಮಿನ್ನೆಂದೊಡೆ (ಜೀವಸಂ. ೫೮-೩೯) ; ನೀವ್ ತೊಲಗಿ ಭೀಮನ ಬೇಹು ಬಹುದಿರಬೇಡ ನೀವೆಂದ (ಕುಮಾವ್ಯ. ೪-೪೦). [ಬೇಹು + ಬರ್ (< ವರ್)]

**ಬೇಹುರ**, ಬೇಹರ$_1$ (ನಾ). ೧. ಗುಪ್ತಚಾರ ಜನ ; ಗೂಢಚಾರಮಂದಿ : ಏನು ಮಜುಗಿದೊಡೇನು ಪಾಂಡವಮಾನನಿಧಿಗಳ ಪುಣ್ಯದನುಸಂಧಾನ ಬೇಹುರದಲ್ಲಿ ಬೈಚಿಡು ದೇವಲೋಕದಲಿ (ಸಂಭಶ.೦೮-೦೦೬). **ಬೇಹರ$_1$ : ೧.** ಹರಣದಾಸೆಯಸುಳಿದು ಹರಿದೋಡುವಹಿತಮೋಹರದೊಳಗೆ ಬೇಹ ಬೇಹರ ರೈದೆ ಸೆಣಸಿ ಸಂಹರಣಕಾಲದ ಕಾಲಹರನ ಕೋಪದೊಳಿಜಿವ ಹರಹನೇಂ ಬಣ್ಣಿಸುವೆನು (ಕಬಿಕ್ಷ.೨೫-೧೦). ೨. ಬಹಳ ಬುದ್ಧಿವಂತನಾದವನು,— ಬುದ್ಧಿಶಾಲಿ : "ಬೇಹರಮೆ [ನೆ] ನೆ ಭೂರಿ ಬುದ್ಧಿಬಲಯುತನಕ್ಕುಂ" (ಶಾರದಿ. ೩೦). [< ಬೇಹು]

**ಬೇಹುವಳ** (ನಾ). ಗೂಢಚರ್ಯೆಗಾಗಿ ನಿಯಮಿತನಾದವನು,—ನೇಮಿಸಲ್ಪಟ್ಟವನು : ನಿಮ್ಮ ದ್ರೋಹದ ಗೆಯ್ಮೆಗಳನ್ನೆಲ್ಲಾ ವಿಚಾರಿಸಿ ವಿವರ

ಗಳನ್ನು ಮಹಾಸ್ವಾಮಿಯವರ ಒಳಹೊಲಗದ ಪರಿಶೀಲನಕ್ಕೊಪ್ಪಿಸಲು ಶ್ರೀಮನ್ನರು ಅಧಿಕಾರಗೊಟ್ಟಿರುವ ಹೊಸ ಬೇಹುವಳ (ಚಿಲ್ಪಿಕ. ೫೦-೦೪).

[ ಬೇಹು + –ವಳ ]

**ಬೇಹುಪಾರಿ** 'ಬೇಹುಪಾರು' ನೋ.

**ಬೇಹುಪಾರು, ಬೇಹುಪಾರಿ** (ಗು). ೧. ಎಚ್ಚರಿಕೆಯಿಲ್ಲದ ; ನಿರ್ಲಕ್ಷ್ಯತನದ. (ನಾ). ೨. ಜಾಗರೂಕತೆ ಇಲ್ಲದಿರುವಿಕೆ ; ಎಚ್ಚರಗೇಡಿತನ ; ನಿರ್ಲಕ್ಷ್ಯ : ಅವನ ಕೂಡ ಹರಟುತ್ತ ಹರಟುತ್ತ ನಾನು ಬೇಹುಪಾರಾದೆ (ತಂಗೂಂ. ೯೨). **ಬೇಹುಪಾರಿ** : ೧. ಬೇಹುಪಾರಿ ಪೋಲೀಸರಿಂದ ಉಂಟಾದ ಕಳ್ಳತನದ ನಷ್ಟವನ್ನು ನಷ್ಟ ಹೊಂದಿದವರಿಗೆ ತಪ್ಪಿತಸ್ಥರಿಂದ ವಸೂಲುಮಾಡಿ ಕೊಡುತ್ತೇವೆ (ಘುರಾಜ. ೯೬). ೨. ನಾನೇನು ಅಷ್ಟು ಬೇಹುಪಾರಿ ಮಾತನಾಡಿದ್ದಾ (ಪಮ್ಪುಶ್ರೈ. ೨೩).

[ ← ಪಾರ. ಮರಾ. ಬೇಹುಶಾರ್, ಬೇಹುಶಾರೀ ]

**ಬೇಹೈಸು** (ಕ್ರಿ). ಬೇಕೆನಿಸು; ಬಯಸು; ಅಪೇಕ್ಷಿಸು : ತಾಪದಲಿವಾಬಳಲುತ್ತ ಬೇಹೈಸಿಯಂದುದುಃಖಮಂ ಕಾಡಿಯುಲು (ಸಿದ್ಧರಾ. ೯-೨೯).

[ <ಬೇಡು₁ + –ಇಸು₃ ]

**ಬೇಳ್₁, ಬೇಡು₂, ಬೇಳು₁** (ಕ್ರಿ). ಬೇಳ್ದ (ಭೂತಕೃ), ಬೇಳ್ದು (ಭೂತನ್ಯೂ), ಬೇಳ್ವ₂ (ವರ್ತಕೃ), ಬೇಳ್ಪ₂ (ಭವಿಕೃ). ೧. ಹೋಮವನ್ನು ಮಾಡು ; ಹವಿಸ್ಸನ್ನು ಅರ್ಪಿಸು; ಯಜ್ಞಮಾಡು : "ಬೇಳ್‌–ಹವಿಃಪ್ರಧಾನೇ (ಅಹುತಿ ಕೊಡು), ನಿವೃದ್ಧೌ ಚ (ಬೆಳವಣಿಗೆ ಇಲ್ಲದಿರು)" (ಕಶಬ್ದಾ); ಮಹಾಸದಮಲಸರ್ವಕ್ರತುಗಳನುದಾರ[ತ]ರಮಾಗೆ ಬೇ[ಳ್ಪ] ವಿಪ್ರೋತ್ತಮರಂ ಕರೆಯಿಸಿ (ಶಾಶ್ವ. XI-i, ೦೪-೦೬; 872) ; ರಾಜಸೂಯಮೆಂಬ ಯಾಗಮಂ ಬೇಳ್ವಂತೆ ಮಾಡಿ ಬನ್ನಿಂ (ಶಂಕರಾ. ೬-೦೭ ಪ) ; ಹೋಮಸ್ತೋಮಧೂಮಂ ನೆಗೆದುದು ಮುನಿಗಳ್ ಬೇಳ್ವ ಮಂತ್ರಾಗ್ನಿಯಿಂದಂ (ಗಂಕ. ೦-೬೬) . ೨. ಆಹುತಿಯಾಗು ; ಆಹುತಿಗೊಳ್ಳು : ಮಾರಿ ಹೊಡೆದುಣ್ಗೆ ಕನ್ನೆ ಕುಮಾರಿಗೆ ಕೂಪಿಯಾಗಿ ಬೇಳ್ಗೆ ಸಿಡಿಲೆಜಿಗೆ . . . ಮುಂದುಗುಂಟಣೆಯುಂ (ಸೂಕ್ತಿಸು. ೯-೩೯೦) ; ಸಚ್ಚಿದಗನಿಂ ಬೋಳನೆಳೆದು ಕಯ್ ಸುಗಿದಂ ಬಯ್ದು ಹನಸುಗಳಿಂದ ಬೇಳ್ದಬಗೆ ದಳ್ಳಿಸಲ್ (ಕಾಂಕಪ. ೦೩೦-೨೭೬). **ಬೇಡು₂** : ೧. ಜಗದಾಶ್ಚರ್ಯದ ರಾಜಸೂಯಮಖಮಂ ಬೇಡಲ್ಕಹಾತ್ಯರ್ಥವಾವಗೆಮೆಯ್ದು × × × ವಿಭೀಷಣನ ಮೇಗಾಕ್ಷೇಪದಿಂ ಪೋಗಿ ವಸ್ತುಗಳಂ ಕಪ್ಪಮನಲ್ಲಿ ಕೊಣ್ಡು (ಎಕ. VII, ಶಿಕಾಂ. ೦೨೭-೩ ; 1036). **ಬೇಳು₁** : ೧. ಬೇಡಿತಂ ಕೊಡಬಲ್ಲ ಶೂಲಿ ಬಂದಿರೆ ಬಗೆಯುದಕಟಕಟ ಬೂದಿಯೊಳು ಬೇಳುವಂತ ಧರ್ಮದೈವವ ಮಾಡಿದಪರೆಂದು ಹೊಜಿವಂಟ ನಿಜಗೃಹವನು(ಸಿದ್ಧರಾ. ೩-೩೫); ಐನೆಂಬಿನಾ ಹೋಮದ ಬೇಳುವೆಡೆಯೊಳು ಸಾನುರಾಗದೆ ಲಾಜೆಯನು ಭೂಸುತವೆನೆ ಬೇಳುತಿರೆ ಚಟಚಟರೆಂಬ ಧ್ವಾನವೆಸೆದುದು (ಅಂಶತ. ೫-೨೨೭); ಬೇಳುತಿರ್ಪಾಹುತಿಯನಿಟ್ಟು ಷಟ್ಕರ್ಮಮಂ ಬಿಟ್ಟು ನೆಜಿ ಬೆಜಿಗಾಪಟ್ಟು (ತರಿತ್ತ. ೨೦-೨೯). ೩. ಸುಟ್ಟುಹಾಕು ; ನಾಶಪಡಿಸು ; ನಾಶಮಾಡು : ಒಂದುಮುಖದಲಿ ಜಗವ ಹೂಡುವನೊಂದುಮುಖದಲಿ ಜಗವ ಸಲಹುವನೊಂದುಮುಖದಲಿ ಬೇಳುವನು ನಯನಾಗ್ನಿಯಲಿ ಜಗವ (ಕುವ್ಯಾಕೀ. ೭-೩೨) ; ಮುಕ್ತಿ ರಾಹು ಪ್ರೇಮಜ್ವಾಲೆ ವೃಷ್ಟಿಯ ಸೃಷ್ಟಿಗೆ ಬೇಳುವ ಲೀಲೆ (ಕಾಂತಃ. ೩೩-೦೪). ೪. ಆಹುತಿಯಾಗಿ ಪಡೆ ; ಆಹುತಿ ತೆಗೆದುಕೊಳ್ಳು : ಹರಿಯ ಬಾಣವು . . . ತ್ರಿಶಿರದೂಷಣರ ಖರನ ತಲೆಗಳ ಬೇಳಿದುದು (ಕಾಶಿರಾ. ೦೬-೩೫).

[ ದೇ.॥ ತಮಿ. ವೇಳ್; ತೆಲು. ವೇಲು ]

**ಬೇಳ್₂, ಬೇಳು₂** (ನಾ). ೧. ದಿಗ್ಭ್ರಾಂತಿ; ಕಕ್ಕಾಬಿಕ್ಕಿ : (ಕ). ೨. ಮೋಹ; ಮರುಳು : 'ಬೇಳ್ಪೆ', 'ಬೇಳ್ವ₂' ಪರಾ. ೩. ಬೆಪ್ಪುತನ; ದಡ್ಡತನ. ೪. ಮೂರ್ಖನಾದವನು: ಅವಿವೇಕಿ ; ದಡ್ಡ : ಅಮರೇಂದ್ರೋನ್ನತಿ ಖಚರೇಂದ್ರವಿಭವಂ ಭೋಗೇಂದ್ರಭೋಗಂ ಮಹೇಂದ್ರ ಮಹೈಶ್ವರ್ಯಮಿವೆಲ್ಲಮಧ್ರುವಮಿವಂ ಬೇಚ್ಚಿಂತಂ ಬೇಳ್ಗೆನಿಸುತ್ತಮು ದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾಭಮಿಮೋಘಂ ದೊರೆಕೊಳ್ವುದಕ್ಕುಂ (ಆದಿಪು. ೦೦-೬೦); ಬೇಳೆನಿಸಿ ನೆಗಟ್ಟಿಗೆ ಬೆಂಬೀಟದೆ ತಲ್ಲಣಿಸದಾರ್ತ್ರ ಕೂರ್ತವಯವದಿಂ ಕೇಳ ಪ್ರಭಾವನಾಂಗಮನೇಳಿಸ ದಟ್ಟಿತ್ರ ತಾಳ್ದವೆಟ್ಟುದು ಭವ್ಯಂ (ಧರ್ಮಾಮೃ. ೯-೦೯೬). ೫. ದುಃಖ : ಕಳವಳ : 'ಬೇಳ್ಗರೆ' ಪರಾ. **ಬೇಳು₂** : ೨. "ಬೇಳೆಂದೆನೆ ಮರುಳು" (ಕಶಕಂ. ೨೪೪). ೫. 'ಬೇಳುಗೊಳ್' ಪರಾ. 'ಬೆಳ್₂' ಹೋ.

**ಬೇಳಾಗು**=೧. ಕಕ್ಕಾಬಿಕ್ಕಿಯಾಗು; ತಬ್ಬಿಬ್ಬಾಗು : ಹರಿ ವಿರಿಂಚ್ಯಾದಿಗಳ್ ಬೇಳಾದರೀಶ್ವರನ ನಿಲವನಜಿಯದೆ (ಅಶಂ. ೦೩-೦೦). ೨. ಹುಚ್ಚಾಗು; ಮರುಳಾಗು: ಮೋಹಗೊಳ್ಳು: ಆ ಕಾಂತೆ ಬೇಳಾದಳವನ ಚೆಲ್ವಿಕೆಗಂಡು (ತ್ರಿಶತಿ. ೨೦-೩೦); ಕುಮಾರರಾಮಗೆ ರತಿ ಬೇಳಾದಳು (ಕ.ರಾಕಾಂ. ೨೬-೦೫). ೩. ಮೂರ್ಖನಾಗು ; ಅವಿವೇಕಿಯಾಗು : ಪಿರಿದೊಂದಜ್ಞಾನದಿಂ ಯೌವನವಿಕಳತೆ ಮೈದೋಜಿ ಕಾಂತಾನಿವಾಸಾಂತರದೊಳ್ ಶ್ವಾನಂಗೆ ಓಹಂದಿಗೆ ಕಪಿಗೆಣೆಯಾಗಿರ್ದು ಬೇಳಾ[ಕಾಣಂ. ಬೇಳ್ಪಾ] ಗುತಂ (ರತ್ನಾಕ. ೫) ; ಗುಣದ ಕಣ ದೇವೇಂದ್ರಚಿಂತಾಮಣಿಯೆನುತ ಕಾಲ್ಗೆಡದು ಬೇಳಾದೆಣಿಕೆ ಸಾಕೆಂದನಘಚರಿತೆಯನುಸುರಲೊಡರಿಸಿದೆ (ಕ್ಷತ್ರ. ೦-೪೦) ; ಈಶಭಕ್ತಿಲಸತ್ಪುರಸುಧಾಬ್ಧಿಯಂ ತೊಜಿದು ದಲ್ಬೇಳಾಗದಿರ್ಪಜೀದೆಂ (ಶೃತಮ. ೨೯-೯೨). ೪. ತಳಮಳಗೊಳ್ಳು; ಕಳವಳಿಸು : ಪಾಂಚಾಳನಂದನೆಯಂ ಕಾಣದೆ . . . ನರಂ ಧೈರ್ಯಮಂ ಸೊಕ್ಕು ಪವ್ರ ಹೃದಯಂ ಬೇಳಾದಂ (ಸಿಬುಕೃ. ೦೦–೯೨) ; ಎಸೆವ ಪುರಜನವೆಲ್ಲ ಗೋ ಳಿಡುತ ಬೇಳಾಗಿ (ವಿಜಿಕ. ದೀ. ೬೫-೨೦) ; ಶರಣಜನವಿಯೋಗವ್ಯಥೆಗೆ ಬೆಂಬೀಳ್ದು ಬೇಳಾಗಿ ಹಂಬಲಿಸಿ ಹರಹರಾ ವಿಶ್ವನಾಥಾಯೆನುತ್ತಿಂ (ಹಮ್ಮರಾ. ೬-೦೦); ಈ ದುರಂತದ ಚಿಂತೆಯುಲಿ ಬೇಳಾದುದೆನ್ನಯ ಚಿತ್ತವದ್ದೆನು ಖೇದ ಪಂಕದೊಳು (ಕುವ್ಯಾಕ. ೦೦-೭). **ಬೇಳ್ಮಾಡು, ಬೇಳುಮಾಡು**=ಮರುಳಾಗಿಸು ; ಮರುಳುಮಾಡು: ಎಡಗಾಲೊಳ್ ತೊಡರಿಂ ತೊಡರ್ಚಿ ಪತಿಯುಂ ಬೇಳ್ಮಾಡಿ ನಿನ್ನೊಂದು ಪಿಂಬಡಿನೊಳ್ ನಿಲ್ಪವಳಲ್ಲೆನೆಂದು . . . ಅನ್ಯಕಾಮಿನಿಯರಂ ಜಿೋಡಾಡುವಂತಿಕ್ಕಿದಳ್ ತೊಡರಂ ಸುಗ್ಗಲದೇವಿ (ಎಕ. V, ಚೆಂರಾಯ. ೦೦೨-೯೦; ಸು. 1220); ದೇವ ನೀಮಲ್ಲಿಗೆ ಪಡೆದು ಬರಲ್ ತೋರ್ಪೆನೆಂದಂತವಳ್ ತಾಪಸನಂ ಬೇಳ್ಮಾಡಿ ಬೇಗಂ ನಲವಿನೊಳೊಡಗೊಂಡುಯ್ದಳ್ (ದಕಳು. ೯-೫೭); ಜಾಲೆಗಾರನ ಕೈಯ ಮಾಣಿಕ್ಯ ಸಿಕ್ಕದೆ ಅಳಿಗೊಂಡಿತು ಜಗವ ಬೇಳು ಮಾಡಿ (ಸರ್ವಶ. ೯೪-೪೯೩).

[ದೇ.॥ ತೆಲು. ಬೇಲ, ಬೇಲಂ./ಸಂ. ಭೇಲ]

**ಬೇಳ್₁** 'ಬೆಳಲ್' ನೋ.

**ಬೇಳ್₂** (ನಾ). ೧. ಸ್ಪರ್ಶ ; ಸೋಂಕು : ಚಂಡಾಳಿಗಳ ಬೇಳಮಾಂತಶೌಚಂಗಳೆಡೆಗೊಂಡ ತಾಣಮದಲ್ತು ಸುರಭಿಯುಂತಮಾಗಿಸಾಮಿಂಡಲಾಶ್ರಯ ಮಲ್ಲಿದೆನೆ ರಂಜಿಸಿತ್ತು ತತ್ಸರಸಿ (ಕೂಟ್ಟಾಯ. ೦೩-೯೦). ೨. (?) : ಚಂದ್ರಾದಿತ್ಯರ್ಕ್ಕಳಣಸಾಗೆಯುಂ ಚಕ್ರ ದು ಬೇಳಮಾಗೆಯುಂ ವಪು ಕಪಚಿಮ ಕಂಚುಳಿಕೆಯಾಗೆಯುಂ . . . ಬಸೂರ್ಬ[ರು]ಸ್ವಾಮಿಗಳ್ಗೆ ಸಾಷ್ಟಾಂಗಮರಗಿ ಪೊಡವಟ್ಟು (ಈಇ. IV. ೫೫-೦೩ ; 1000 ?). [?]

**ಬೇಳ್₃** 'ಬೇಳು₃' ನೋ.

**ಬೇಳಂಬ** (ನಾ). ೧. ವಿಡಂಬನೆ ; ಅಣಕ : 'ಬೇಳಂಬಿಗ' ಪರಾ. ೨. ಕೇಡು ; ವಿಪತ್ತು : ಒಗೆದುದೀ ಬೇಳಂಬ ಹಸ್ತಿನನಗರಿಯಲಿ ತತ್ಪೌರಜನ ಮಾನವೃಗಿದು ಬಿದ್ದುದು ಶೋಕವಂಯುಸಾಗರದ ಮಧ್ಯದಲಿ (ಕುವ್ಯಾಕ. ೬-೯೦) ; ಕೇಳು ಧೃತರಾಷ್ಟ್ರಾವನಿಪ ನೀ ಕೋಳು

ವೋಪರೆ ಶೋಕದುಱುಬೆಗೆ . . . ಬೇಳುವೆಯು ಬೇಳಂಬವದ ನಱದಾಳು (ತಿಪ್ಪುಸ್ತ್ರೀ. ೧-೩೪); ಏಳುನೆಲೆ ಉಪ್ಪರಿಗೆಯೆತ್ತ್ರೀ ಕೀಳುದಿಪ್ಪ ಯಿದೆತ್ತ ಕರ್ಮವು ಮೇಳಿಸಿದ ಬೇಳಂಬವಲ್ಲದೆ ಬೇಱೆ ಪೆಱತಲ್ಲ (ಸಾಳ್ವಭಾ. ೦೬-೩೪). ೩. ಗೊಂದಲ; ಗಲಿಬಿಲಿ: ಒಚ್ಚತ ಮಾಡಿ ಮಾಣ್ಬನ ಱಯೆಂ ಮತ್ತಾ ಪುರಂ ಚಿಲ್ವನಾ ಪುರಮಿಂಬಾ ವುರಮೊಳ್ಳಿತಾ ಪುರಮುದಂ ತಿಂತೆಂಬ ಬೇಳಂಬಮಂ (ಅಜಿತ. ೧-೧೨೦). ೪. ಮರುಳು; ಆಕರ್ಷಣೆ; ಮೋಹ: ಧರೆ ವನಿತೆಯರ ಬೇಳಂಬಕೊಳಗಾಗದೆ ಜನಾರ್ದನನ ನೆನೆಯೆ ಬೇಡಿದನೀವ (ಕೃಷ್ಣಾತ. ೬-೬೬). ೫. ಮೋಸ; ವಂಚನೆ: ಪಾಡುವ ರಾಗದಂತೆ ಬೇಳಂಬದ ಪರ್ವದಂತೆ . . . ಕಡೆಯೊಳ್ ಪೇಸುಪಥಮುಮ ಶೋಭೆಯುಮಾಗದೆ ಪೋಗದು (ಧರ್ಮಾಮೃ. ೬-೧೨೨); ಸೋಲದ ಗೆಲ್ಲದ ಪಡೆಮಾತುಗಳುಮಂ ಬೇಳಂಬಾದಿ ಪುಸಿಗಳುಮಂ ರಾಗಿಸಿ ತಾಂ ಕೇಳ್ವುದು ಪರರ್ಗೆ ಪೇಳ್ವುದು ಮೊದಲಾದುವೆಲ್ಲಂ ದುಃಶ್ರುತಿಯೆಂಬ ನಾಲ್ಕನೆಯನರ್ಥದಂಡಮಕ್ಕುಂ (ರತ್ನಕ. ೦೩೦). 'ಬೇಳ್$_2$' ನೋ.

[< ಪ್ರಾ. ವೇಲಂಬ. / ಸಂ. ವಿಡಂಬ]

**ಬೇಳಂಬಿಗ** (ನಾ). (ಹಾಸ್ಯಪರವಾದ) ಚಮತ್ಕಾರಗಳನ್ನು ಮಾಡುವವನು; ವಿದೂಷಕ: ದಂಡದ ಬೇಳಂಬಿಗರ ಬೆದಂಡೆಯು ತಳಿಗೆಯ ಮಹೇಂದ್ರಜಾಲಿಗಳ ಮನಂಗೊಂಡಿಸುವ ನೆಗ[ಟ್ಟಂಬೆ]ಯು ತಂಡಂಗಳವಾವ ದೆಸೆಯೊಳಂ ಕಡುರಯ್ಯಂ (ಧರ್ಮಪ. ೧೧-೨೦).

[< ಪ್ರಾ. ವೇಲಂಬಗ. / ಸಂ. ವಿಡಂಬಕ]

**ಬೇಳಕೆ** (ನಾ). ಒಂದು ಬಗೆಯ ಸಸ್ಯ: "ಮಾಲೂರಃ—ವಿರಾವಾಲುಕ, ಬೇಳಕೆ, ಬೆಲ್ಲವತ್ತ" (೬ಕಂ. ೨೨೪). [ ? ]

**ಬೇಳಲು** 'ಬೆಳಲ್' ನೋ.

**ಬೇಳಾವನ** (ನಾ). ಸಮುದ್ರತೀರದಬಳಿಯ ಅರಣ್ಯ,—ಕಾಡು: ಬೇಳಾವನಪರಿವೃತಚತುರದಧೀವಳಯುವಳಯಿತಜಂಬೂದ್ವೀಪದ ಭರತಕ್ಷೇತ್ರದ ವಿನೀತಾಖಂಡದೊಳೆ ಮಗಧೆಯೆಂಬುದು ವಿಷಯಂ (ಶಂಕಂ. ೧-೦೬ ಶ). [< ಸಂ. ವೇಲಾವನ]

**ಬೇಳಿ** 'ಬೇಟಿ' ನೋ.

**ಬೇಳಿಡು** (ಕ್ರಿ). (ಹಸು ಮುಂತಾದ ಪ್ರಾಣಿಗಳು) ಅರಚು; ಕೂಗು: ಘೀಳಿಡುತುರುಳ್ವ ಮೃಗರಾಜಯಿಂ ವಾಜಿಯಿಂ ಬೇಳಿಡುತೆ ಬೀಳ್ವ ಕಾಳ್ವಸುಗಳಿಂ ಮುಸುಗಳಿಂ . . . ಪಾಳಾದ ಸಕಲಲೋಕಂಗಳಿಂ ಕಂಗಳಿಂ ನೋಡಲುಱಿ ಘನಮಾದುದು (ಕಂಠೀ. ೪೬-೨೬). [ಬೇಳ್$_2$ + ಇಡು$_1$]

**ಬೇಳಿಸು** (ಕ್ರಿ). ೧. ಹೋಮ ಮಾಡು; ಯಜ್ಞ ಮಾಡು: ಅವನಿಪತಿ ತುಪ್ಪದಿಂ ಸಾಸಿವೆಯಿಂ ಪಾಲ್ಮರನ ಸಮಿಧೆಯಿಂ ಹುತವಹಮಂತ್ರ ವಿಧಾನದೆ ಬೇಳಿಸಿ ಕುಡೆ ಸುವರ್ಣಮಂ ದ್ವಿಜರ್ಗೆ (ಲೋಕೋಪ. ೪-೪೬). ೨. ಸುಡು: ಪಗೆಯ ಏಳಿಸುವೆನದಟರಂ ಸೀಳಿಸುವೆನಂಗಮಂ ಬೇಳಿಸುವೆನಗ್ನಿಯೊಳ್ ತಾಳಿ ಸುರರೆಂದು . . . ಹರಿ ನಡೆದನು (ಕಂಠೀ. ೫೦-೩೩). ೩. (ಆಲಂ) ವಶಪಡಿಸಿಕೊಳ್ಳು; ಅಂಕಿತಗೊಳಿಸು: ತಂಜಿಯ ದೊರೆ ವೇದೋಜಿಯುಮಂ ಜಗದೊಳ್ ತನಗೆ ಸಾಟಿಯಿಲ್ಲೆಂಬಾರ್ಪಿಂ ತಂಜಾವೂರಂ ಮಧುರೆಯನಂಜಿಪ ದಾಮರ್ಲದೊರೆಯುಮಂ ಬೇಳಿಸಿದಂ (ಕಳದಿ. ೩-೩೯).

[ಬೇಳ್$_1$ + —ಇಸು$_3$]

**ಬೇಳು$_1$** 'ಬೇಳ್$_1$' ನೋ.

**ಬೇಳು$_2$** 'ಬೇಳ್$_2$' ನೋ.

**ಬೇಳು$_3$, ಬೇಳ$_3$** (ನಾ). ಒಂದು ಬಗೆಯ ಸಸ್ಯ: "ಶ್ಲೇಷ್ಮಾತಕಃ—ಬೇಳು, ನರುವಲು" (೬ಕಂ. ೦೬೦). **ಬೇಳ$_3$**: "ಬೇಳ ಪುಂಗಳ ತಿಳುವನಿಯೆನಿಕ್ಕು" (ಶುಂಗಣ. ೪೦-೫೦). [ ? ]

**ಬೇಳುಗರೆ** 'ಬೇಳ್ಗರೆ' ನೋ.

**ಬೇಳುಗೊಳ್**, ಬೇಳುಗೊಳ್ಳು (ಕ್ರಿ). ತಾಪಕ್ಕೆ ಒಳಗಾಗು: ಸಂಕಟಪಡು; ವ್ಯಸನಪಡು: ಮಡದಿ ಕಾರುಣ್ಯದೆ ಮೇಳಸಹಿತ ಬಂದೆನ್ನ ತಾಳದೆ ತಕ್ಕಿಸಲುಳಿವೆನಲ್ಲದೊಡಾನು ಬೇಳುಗೊಂಡಳಿವೆ ನಿಶ್ಚಯುವು (ಅಜಿತ. ೦೬-೧೧೧). **ಬೇಳುಗೊಳ್ಳು**: ಈ ನಡೆಗೋಳದಲಿ ನೀ ಸಿಲುಕಿ ಬಱದೇ ಬೇಳುಗೊಳ್ಳದಿರೆಂದು ಬೋಧಿಸಿದಳು ನಿಜಾತ್ಮಜನ (ಶಿಶಾಗ. ೯-೦೮-೦೨).

[ಬೇಳು$_2$ (< ಬೇಳ್$_2$) + ಕೊಳ್$_1$]

**ಬೇಳುಗೊಳ್ಳು** 'ಬೇಳುಗೊಳ್' ನೋ.

**ಬೇಳುನುಡಿ** (ನಾ). ಮರುಳು ಮಾಡುವ ಮಾತು: ಆ ಬೇಳುನುಡಿಗೇಳ್ದು ಕೆಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ (ಶಂಕಥಾ. ೬-೨೪).

[ಬೇಳು$_2$ (< ಬೇಳ್$_2$) + ನುಡಿ$_2$]

**ಬೇಳುಮಾತು** (ನಾ). =ಬೇಳುನುಡಿ: ಬೇಳುಮಾತಿದು ಕುವರಿಯ ಜನಗೀವುದು ಕಾಲಹರಣ ಲೇಸೆಂದು (ಅಜಿತ. ೬-೬೪).

[ಬೇಳು$_2$ (< ಬೇಳ್$_2$) + ಮಾತು$_1$]

**ಬೇಳುರಿ** (ನಾ). ಹೋಮದ ಉರಿ,—ಜ್ವಾಲೆ: ಜನ್ನಗೊಂಡದ ಬೇಳುರಿ ಚಟುಚಟಿಸಿ ಕಿಡಿಕಿಡಿವೋಪುದುಂ (ರಾಮಾಶ್ವ. ೪೩-೨).

[ಬೇಳು$_1$ (< ಬೇಳ್$_1$) + ಉರಿ$_2$]

**ಬೇಳುವಡು** (ಕ್ರಿ). ಕಳವಳ ಪಡು; ತಳಮಳ ಹೊಂದು: ನೃಪತಿ ವಿಸ್ಮಯುವಟ್ಟು ಮರಪಟ್ಟು ಬೇಳುವಟ್ಟತಿಶಯ ಭಯುವಟ್ಟು ಕೇಳಲದಱ ವೃತ್ತಾಂತವನು (ತ್ರಿಶುತಿ. ೨೬-೦೪). [ಬೇಳು$_2$ (< ಬೇಳ್$_2$) + ಪಡು$_1$]

**ಬೇಳುವಡೆ** (ಕ್ರಿ). =ಬೇಳುವಡು: ಹೇಳಿದಾ ಕಪ್ಪವನು ತೆತ್ತೀ ತಲೆಯನುಳುಹಿಕೊಳು ಬೇಳುವಡೆಯದಿರೆಂದು ದೂತನು ಹೇಳೆ (ಸಾಳ್ವಭಾ. ೦೯-೦೦). [ಬೇಳು$_2$ (< ಬೇಳ್$_2$) + ಪಡೆ$_1$]

**ಬೇಳುವೆ$_1$** 'ಬೇಳ್ವೆ$_1$' ನೋ.

**ಬೇಳುವೆ$_2$** 'ಬೇಳ್ವೆ$_2$' ನೋ.

**ಬೇಳುವೆಗೊಳ್**, ಬೇಳುವೆಗೊಳ್ಳು (ಕ್ರಿ). ಕಳವಳಪಡು; ತಳಮಳಿಸು: ಊಳಿಗದಂಗರಕ್ಷಕರು ತಾಳದೆ ತಲೆನವಿರ್ಗೆದಱ ಗೋಳಿಡುತಂದು ಬೇಳುವೆಗೊಂಡಯ್ದಿದರು (ಅಜಿತ. ೦೬-೯೩). **ಬೇಳುವೆಗೊಳ್ಳು**: ಕಾಲಕಾಲನ ಬಲೆಯೊಳಗೆ ಸಿಕ್ಕಿ ಬೇಳುವೆಗೊಳ್ಳುತಿದೆ ಜಗವೆಲ್ಲ (ಪತರ. ೪೩).

[ಬೇಳುವೆ$_2$ (< ಬೇಳ್ವೆ$_2$) + ಕೊಳ್$_1$]

**ಬೇಳುವೆಗೊಳ್ಳು** 'ಬೇಳುವೆಗೊಳ್' ನೋ.

**ಬೇಳುವೆದಳೆ** (ಕ್ರಿ). = ಬೇಳುವೆಗೊಳ್: ಕಳೆದು ಕೆಲಹೊತ್ತಿನ್ನು ನಿದ್ರಾಲಲನೆ ಬೇಳುವೆದಳೆಯುಲದ ಪದಗೊಳಿಸಲಾರದೆ (ಶಬರ. ೨೩-೬೦).

[ಬೇಳುವೆ$_2$ (< ಬೇಳ್ವೆ$_2$) + ತಳೆ$_1$]

**ಬೇಳುವೆಬೂದಿ** (ನಾ). ಮಂತ್ರಿಸಿದ ಬೂದಿ; ಮರುಳು ಮಾಡುವ ಬೂದಿ; ಮಂಕುಬೂದಿ: ಹಾಲ ಚೆಲ್ಲಿದ ಚಂದದೊಳು ಪುಷ್ಪಬಾಣನ ಬೇಳುವೆಬೂದಿಯ ತೆರದಿ . . . ತೋರಿತು ಮೇಲಾದ ಬೆಳುದಿಂಗಳಾಗ (ಸೌಗಂಧ. ೩-೪೩). [ಬೇಳುವೆ$_2$ (< ಬೇಳ್ವೆ$_2$) + ಬೂದಿ]

**ಬೇಳುವೆಮಾತು** 'ಬೇಳ್ವೆಮಾತು' ನೋ.

**ಬೇಳೆ$_1$** (ನಾ). ೧. (ಕಡಲೆ, ಹೆಸರು, ಉದ್ದು ಇತ್ಯಾದಿ) ದ್ವಿದಳ ಧಾನ್ಯದ ಹೋಳು,—ಭಾಗ: ಕಾಳಾಗ್ನಿರುದ್ರನ ಮೇಳಾಪವನಱಿಯದಪರು ಕಾಳು ಬೇಳೆಯೆನುತಿಪ್ಪರಯ್ಯಾ (ಬಸವ. ೨೨೬); ಬಂದಿಸಿದ ಕಣಿಕ ದುಂಡೆಗಳನೊಂದೊಂದ ತೆಗೆದೊಂದಕ್ಕೆ ಬೆಂದ ಕಡಲೆಯ ಬೇಳೆಗಳನು ಮತ್ತೊಂದಕ್ಕೆ ಸೊಜ್ಜಿಗೆಯನು . . . ಇಕ್ಕಿ (ಸೂಪಶಾ. ೦-೫೦); ದ್ವಿದಳ ಧಾನ್ಯಗಳನ್ನು ಇಡಿಯಾಗಿ ಅಥವಾ ಬೇಳೆ ಮಾಡಿ ಉಪಯೋಗಿಸಬಹುದು (ಅತುಶಾ. ೬೩). ೨. ತೊಗರಿಬೇಳೆ: ಆ ವೇಳೆಗೆ ಬೇಳೆ ನುಣ್ಣಗಾದದ್ದರಿಂದ ಅದನ್ನು ಕೆಳಗಿಳಿಸಿ ಅನ್ನಕ್ಕೆ ಎಸರಿಟ್ಟಳು (ಮುಕ್ತ್ಯರ. ೨೩). ೩. ಭಾಗ;

F-8 *

ಹಿಳುಕು : ಅಗಳುರುಂಠಿ . . . ನಾರಂಬೇಳಿಯ ಬೇರು. ಬೆಳ್ಳುಳಿ.ಯ ಸುಲಿದ ಬೇಳೆ ಇವು ಪ್ರತ್ಯೇಕ ೧೦ ಹಲವು ನಾಗಳ ನೀರಿನಲ್ಲಿ ಹಾಕಿ, ಕಷಾಯ ವಿಕ್ಕಿ (ಸಕವೈ. ೩೪೪). ೪. (ದ್ರವಪದಾರ್ಥಗಳನ್ನು ಅಳೆಯುವ, ಸುಮಾರು ಆರು ಸೇರುಗಳ) ಒಂದು ಅಳತೆ,—ಪ್ರಮಾಣ : ಒಳ್ಳೆಯ ಒಂದು ಬೇಳೆ ತೆಂಗಿನೆಣ್ಣೆಯಿದೆ. ಕೊಟ್ಟು ಹೋಗುವ ಎಂದು ಬಂದೆ (ಮುಕಕ್ಕ. ೩೫). ೫. ಒಂದು ನಾಣ್ಯ; ಹಾಗದ ಅರ್ಧಭಾಗ : "ಸಿಕ್ಕಿಸಲ್ಪೇಳೆಯೆರಡನೊಂದು ಪಾಗಂ" (ಪಂಗಣಿ.. ೦೦೪-೧೦); ಅಯ್ವಾದಿಂ ಬರು ಸಾಸಿರ್ವರ(೦) ವಿರ್ದು ಬಾರಿಕೇಚಂಗೆ ಕೊಟ್ಟರು [ಪೂ] ಕ್ಕಲಲುಂ ಹಾಗ ತಲೆವೊಡೆಗೆ ಬೇಳೆ (ಶಾಇಇ. IX-i, ೭೭-೨೨; 991); ಹಣವಿಗೊಂದೀಸ ವಿಷ್ಪಣಕೊಂದು ಬೇಳೆಯನು ತ್ರಿಣಯನ ಮಕುಟವಾದರೂ ಅಕಸಾಲಿ ಟೊಣೆಯದೆ ಬಿಡನು (ಸರ್ವಜ್ಞ. ೦೪೦೦೦). ೬. (ಅಲಂ) ಉಪಾಯ; ಯುಕ್ತಿ; ತಂತ್ರ : ಲೇ ನಿನ್ನ ಕಣವೆ ಕೆಳಗಿನ ಬೇಳೆ ಇಲ್ಲಿ ಬೇಯೊಲ್ಲವೇ ! (ಪಕಿರಾ. I, ೩೦೫).

ಬೇಳೆಬೇಯಿಸು=೧. ತೊಗರಿಬೇಳೆಯನ್ನು ಪಕ್ವವಾಗುವಂತೆ ಮಾಡು : ಬೇಳೆಬೇಯಿಸುವಾಗ ಅದು ಬೇಗ ಬೇಯಲೆಂದು ಅಡುಗೆ ಸೋಡವನ್ನು ಬೇಳೆ ಎಸರಿಗೆ ಹಾಕುವರು (ಗೃಪಾ. ೫೦). ೨. (ಅಲಂ) ಯುಕ್ತಿ ಸಫಲವಾಗುವಂತೆ ಮಾಡು : ಈಗ ನನ್ನ ಮಾತೊಂದು ನಡೆಯ ಲ್ಲಿಲ್ಲ. ಅವಳು ತನ್ನದೇ ಬೇಳೆ ಬೇಯಿಸಲು ಪ್ರಾರಂಭಿಸಿದಳು (ಭೂವಿಪಾ. ೬೪). ಬೇಳೆ ಬೇಯು = (ಅಲಂ) ಯುಕ್ತಿ ಸಫಲವಾಗು ; ಕಾರ್ಯ ಸಾಧನೆಯಾಗು ; ಪೋರ್ಚುಗಲ್‌ನವರು ಇಲ್ಲಿಗೆ ಬಂದ ಮೇಲೆ ತಮ್ಮ ಬೇಳೆ ಬೇಯದೆ ಹೋದ್ದರಿಂದ ಈ ರಾಜ್ಯವನ್ನು ಬಿಟ್ಟು ಒಪ್ಪೊಬ್ಬರಾಗಿ ಹೊರಟು ಹೋದರು (ಪ್ರಪಾಇ. II. ೩೩೩); ಅವನ ಮುಂದೆ ಅವರ ಬೇಳೆ ಬೇಯುಲಿಲ್ಲ (ಶಿಸುಶ. ೦೧). ಬೇಳೆಯ ಕಾಳು=ಎರಡು ಭಾಗವಾಗು ವಂತಹ ಕಾಳು; ದ್ವಿದಳಧಾನ್ಯ : ಬೇಳೆಯ ಕಾಳುಗಳು : ಕಡಲೆ, ಬಟ್ಟಗಡಲೆ, ತೊಗರಿ, ಚನ್ನಂಗಿ, ಉದ್ದು, ಹೆಸರು, ಅಲಸಂದಿ, ಅವರೆ (ಸಸ್ಯಶಾ. ೦೨೪). ಬೇಳೆಯ ಮಣಿ = ಬೇಳೆಮಣಿ : ನನ್ನ ಬೇಳೆಯ ಮಣಿಯೊಳಗಿನ ಬಂಗಾರವಲ್ಲವೆ ನೀನು ? (ಉದ್ಯಾಕ. ೯೪-೬).

[ದೇ.॥ ಕೊಡ. ತುಳು. ಬೇಳೆ; ತೆಲು. ಬೇಡಲು]

ಬೇಳೆ₂ (ನಾ). ಒಂದು ಬಗೆಯ ಔಷಧೀಸಸ್ಯ: "ಬೇಳೆಯೆನೆ ಮಜಿಪ ನಾಜಿಪವೃಪಥ" (ಚತುಶಿ. ೧೩೪); ಬೇಳೆಯ ಪತ್ರಂಗಳೊಳಂ ಬೇಳೆ [ಪಾಠಾಂ. ಬಾಳೆ]ಯ ಗೆಡ್ಡೆಯನೆ ಕೂಡಿ ಮರ್ದಿಸಿ ಕುಡಲೇಂ ಪೇಟಲರಿ ದೆಂಬ ಕೊಳಕನ ಬೇಟನ ಪಾವರಣೆಯುಗ್ರವಿಷಮನದಟಿಗುಂ (ಖಪುದ. ೦೦-೭೪). 'ನಾಜಿಂಬೇಳೆ' ಪರಾ. [ದೇ.॥ ತಮಿ. ವೇಳ್ಳೈ; ಮಲ. ವೇಳ]

ಬೇಳೆಕಾಳು (ನಾ). ೧. ತೊಗರಿ ಮುಂತಾದ ದ್ವಿದಳಧಾನ್ಯಗಳ ಹೋಳು—ಭಾಗ. ೨. (ಅಲಂ) ಶಕ್ತಿ; ಸಾಮರ್ಥ್ಯ : "ನಾಳೆ ಗೊತ್ತಾಗುತ್ತದೆ ನಿನ್ನ ಬೇಳೆಕಾಳು" ಎಂದು . . . ಹೇಳಿ, ತಮ್ಮ ಮನೆಯ ಕಡೆ ತಿರುಗಿ ಆ ಮಬ್ಬುಗತ್ತಲಲ್ಲಿ ಕರಗಿ ಹೋದರು ಪಟೇಲರು (ಮುಗವಾಂ. ೨೪). [ಬೇಳೆ₁ + ಕಾಳು₂ (< ಕಾಟ್ಟು₂)]

ಬೇಳೆಗೆಯ್ (ಕ್ರಿ). ಒಡೆದು ಭಾಗ ಮಾಡು,—ಚೂರು ಮಾಡು : ಒಗುಮಿಗೆ ಬೇಳೆಗೆಯ್ದು ಮೆಳಸಂ ತಳಿವಲ್ಲದ ಚಲ್ಲಯಂ ಪವಣ್ಬಿಗೆ ಕಲಸಿರ್ದ ತಣ್ಣಲಸುಗೂಬನಿಳಾಪತಿಗಿತ್ತನಟ್ಟಿಯಿಂ (ಲೀಲಾವ. ೫-೬೨).

[ಬೇಳೆ₁ + ಕೆಯ್₁]

ಬೇಳೆಮಣಿ (ನಾ). ತಾಳಿಯ ಜೊತೆಗೆ ಹಾಕಿಕೊಳ್ಳುವ, ಬೇಳೆಯಾಕಾರದ ಚಿನ್ನದ ಮಣಿ: ತಾಳದೋಲೆಯನಿಟ್ಟು ಬೇಳೆಮಣಿಯನು ಕಟ್ಟಿ ಪೇಳೆಯನು ಅಜಿತು ನಡೆವವಳು ದೊರಕುವುದು ಶೂಲಿಯ ಕರುಣ (ಸರ್ವಜ್ಞ. ೦೬೭೭).

[ಬೇಳೆ₁ + ಮಣಿ₃]

ಬೇಳ್ಕಟ್ಟೆ (ನಾ). ಬಲಿಪೀಠ ; ಪಶುವನ್ನು ಬಲಿಕೊಡಲು ರಚಿಸಿರುವ ಜಗಲಿ : ಸಲ್‌ಬೆಂಕೆಯುರಿವ ಬೇಳ್‌ಕಟ್ಟೆಯೊಳ್ ಪರಿಕಿಸಲ್ ಬೇಳ್ವೆ ಯಿನ್, ಕೊಟ್ಟ ಬಲಿಯಿಂದ ಬೆಳಗಿದನ್ನಿಲ್ಲ ತಾನ್ ಅಗ್ನಿದೇವನ್ (ಅಂತಿಗೂ. ೯೨-೬೨೮) ; ಅದುವರಂ ಶೂನ್ಯಾರ್ಥಮಾಗಿರ್ದ ಬೇಳ್‌ಕಟ್ಟೆಯುರಿಗಳ್ಗೆ ಸೂಚ್ಯಾರ್ಥಂಗಳನ್ ಸುಸ್ಪಷ್ಟಗೊಳಿಸಿದೆನ್ ಅವರ್ಗ (ಐಶ್ವತ್ವ. ೨೬-೩೩೩).

[ಬೇಳ್₁ + ಕಟ್ಟು₁]

ಬೇಳ್ಕೆ (ನಾ). ಬೇಡುವಿಕೆ ; ಕೋರಿಕೆ (?) : ಮೃಡನುಡುರಾಜ ಪನ್ನಗ ವಿರಾಜಿ . . . ಸುರಾಸುರ ಕದಂಬಕಸೇವ್ಯಪದಾಂಬುಜದ್ವಯಂ ಅಡರೆ ಮೃಡಾನಿಗನ್ಯ ಕುಳಕ್ಕೆಳಕುಳಂಗಳ್ ನಾಡೆ ರಯ್ಯುಮಪ್ಪೆಡೆಗಳನೆಲ್ಲಮಂ ನೆಜಿಯೆ ತೋರ್ಪುದು ಬೇಳ್ಕೆಯ ಬಂದನೀಶ್ವರಂ (ಕಾವ್ಯಾವ. ೯೩೬) : ಕೇಳುವರ ಗೊಂದಣಕೆ ಶಿಷ್ಯನ ಮೇಲುವಾಕಿನ ಬೇಳ್ಕೆಗೊಡನನುಕೂಲವಾದುತ್ತರವ ವಿಂಗೆ ಗುರುಸೂಕ್ತಿಯಿಲ್ಲದಿರೆ (ವಿವೇಕ. ೩-೦೨). [< ಬೇಡು₁ + —ಕೆ]

ಬೇಳ್ಗರೆ. ಬೇಳುಗರೆ (ಕ್ರಿ). ೧. ಅರಚುವಂತೆ ಮಾಡು ; ಆಕ್ರಂದನ ಮಾಡಿಸು (?) : ನೆರೆದು ನಾಲ್ದೆಸೆಯಂಬುವಾಯ ಮುಯಗರೆದು ಬತ್ತೀ ಸಾಯುಂಥರ[ದೆ] ಬೇಳ್ಗರೆದು ಮುತ್ತಿದರರಸ ಚತ್ತೈಸಾಗ ಬರ್ಬರನ (ಶಕುಭಾ. ೬-೪೪). ಬೇಳುಗರೆ : ೨. ಆಕ್ರಂದನ ಮಾಡು : ಬೋಳೆಯಂಬನ ಗಾಯದ ಬಾಯ್ದೆರೆಯಿಂದ ಬೀಳುತ ಗೋಣ್ಮುರಿಗೊಂಡು ಬೇಳುಗರೆವ ಹಸುಳೆಯ ನೆಕ್ಕುವ ಹುಲ್ಲೆಯೋಳಿಯುಳಿದವವರೊಳಗೆ (ಪೇಪಿಸಂ. ೨-೩೩) ; ಒಬ್ಬೊಬ್ಬರು ಒಂದೊಂದು ಹುಲ್ಲೆಮರಿಯನ್ನು ಹಿಡಿದುಕೊಂಡು ಬಂದರು. ಅವುಗಳು . . . ತಮ್ಮ ತಾಯಿಗಳನ್ನು ಕಾಣದೆ ಬೇಳುಗರೆಯುತ್ತಿದ್ದವು (ಕಂಗಾಳ್ಳ. ೪೨೩). [ಬೇಳ್₂ + ಕರೆ₁]

ಬೇಳ್ಪ₁ 'ಬೇಡು₁' ಪರಾ.

ಬೇಳ್ಪ₂ 'ಬೇಳ್₁' ಪರಾ.

ಬೇಳ್ಪೊಲ (ನಾ). (?) : ಈಶಂಗೆ ಬೇಳ್ಪೊಲನಾವಂ ಶಿವಭಕ್ತನಾತನಲೆ ಸದ್ವೃತ್ತಂ (ಕಂಕಾಕ. ೩೪). 'ಬೆಳ್ಪೊಲ' ಹೋ. [? + ಪೊಲ]

ಬೇಳ್ಮೆ (ನಾ). ·ಮರುಳುಮಾಡುವಿಕೆ ; ಮೋಸಗೊಳಿಸುವಿಕೆ : 'ಬೇಳ್ಮೆ ಮಾತು' ಪರಾ. [ಬೇಳ್₂ + —ಮೆ₃]

ಬೇಳ್ಮೆಮಾತು (ನಾ). ಮರುಳುಮಾಡುವ ನುಡಿ : ನೀಚರ ಬೇಳ್ಮೆ ಮಾತನ್ನು ಕೇಳಿ ಕೆಡತಕ್ಕದ್ದೇ ಹೆಂಗಸರ ಹಣೆಯಲ್ಲಿ ಬರೆದಿದೆ (ಅದೂಟ. ೦೬೩). [ಬೇಳ್ಮೆ + ಮಾತು₁]

ಬೇಳ್ವ₁ 'ಬೇಡು₁' ಪರಾ.

ಬೇಳ್ವ₂ 'ಬೇಳ್₁' ಪರಾ.

ಬೇಳ್ವೆ₁, ಬೇಳುವೆ₁ (ನಾ). ೧. ಹೋಮ ; ಯಜ್ಞ : ಸೊಗಯಿಸುವ ಗಂಗಾದ್ವಾರದೊಳ್ ಮುನಿಜನಂಗಳ ಬೇಳ್ವೆಗಳ್ಗೆ ಪದ್ರವಂಗಯ್ವ ನಿಶಾಟ ಕೋಟಿಯಂ ನಿಶಿತಶರಕೋಟಿಯಿಂದಮಟ್ಟಾಟಿಸಿ (ಶಂಕಭಾ. ೯-೮೩ ವ). ೨. ಆಹುತಿ ; ಬಲಿ : ಪೊಬಿಲ ಬೇಳ್‌ಕಟ್ಟೆಗಳ್ ಮನೆಯ ಬೇಳ್‌ಕಟ್ಟೆಗಳ್, ಎಲ್ಲಮುಮವ್ ಪೊಳೆಗಲಸಿಯಿರ್ದತ್ತು . . . ದೇವತೆಗಳದಟಿಂದವಿನ್ ಕೊಳ್ಳರೆವಿತ್ತು ಬೇಳ್ವೆಯನ್ (ಅಂತಿಗೂ. ೯೩-೯೯೦). ಬೇಳುವೆ₁ : ೧. ಬೇಳುವೆಯ ನೋಡೆನುತ ಮುನಿಗಳತಿಕೋಪದಿಂ ಸರ್ಪಹೋಮವನು ಮಾಡೆ (೦೩ತಂ. ೨೦-೯) ; ಅಶ್ವಮೇಧದ ಬೇಳುವೆಯ ಸಂಭ್ರಮದ ಧಾಳಾ ಧೂಳಿಯಲಿ ತಿವಿದಾಡಿದವು ಜಿಹ್ವೆಗಳು ಹುತವಹನ (ತೊರಣಿ. ೦-೭೪೯); ಬೇಳುವೆಗಳ ಭಸ್ಮದ ಕೊಪ್ಪರಿಗೆಯ ಸಾಲೊಪ್ಪಿದುವು ದುರ್ಗದೊಳಗೆ (ಕಂಪಿಪ. ೦೦-೦೩೪). [ಬೇಳ್₁ + —ವೆ]

ಬೇಳ್ವೆ₂, ಬೆಳುವೆ, ಬೇಳುವೈ (ನಾ). ೧. ಮರುಳು ; ಮಾಯೆ ; ಮಾಟ : ತಲೆದೂಗಿ ಕೈರವಶ್ಯಾಮಳಂ ಬೇಳ್ವೆಯಿಂದಳವ್ವದೊರದೆ ಮತ್ತೆ ನಮ್ಮನೇ ನುತಿಗೈದು ಸಳಿನು ತಳ್ಕೈಸುತ್ತೆ ಮಾತ್ರದಂ ಮರಸಿದಂ (ಶಬಪ. ೦೯-೨೦).

**ಬೆಳುವೆ :** ೧. ವಿಲಾಸದ ನಿವಾಸವು ಬೆಳುವೆಯ ಬೆಳಸಿರಿ . . . ಎನಿಪ ಬೆಲವೆಣ್ಣಳ್ತಂದರು (ಸೌಂದಪು. ೬-೩೦). ▶ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಬೇಳುವೆ$_2$:** ೩. ವಶೀಕರಣಮಾಡುವ ಉಪಾಯ,–ಸಾಧನ : ವೀಳೆಯದೊಳಗೆ ಮದ್ದುಂಟೊ ನಿನ್ನರಸನಾ ತೋಳೊಳುಂಟೊ ವಶ್ಯಯಂತ್ರ ಬೇಳುವೆಯುಂಟೊ ತಿಲಕದೊಳಲ್ಲದರಿಂತು ಬೇಳಾಗಿ ನೀನು ಸಿಕ್ಕುವೆಯ (ಭರತ. ೯-೦೦೦) ; ತಾಳಿ ಹೊನ್ನುಂಗುರದವ ಬರೆ ಮೋಹದ ಬೇಳುವೆಯನು ನೀ ತಳಿದು ಮೇಲಾದೊಡಪ್ಪೆಯ ಸೆಳೆ ಕೊಂಡಾತನ ಚಾಳಿಸಿ ಬಿಡು ನೀ ಮಗಳೆ (ಕಂಪರಾ. ೬-೦೩೬). ೪. ದಡ್ಡತನ; ಬೆಪ್ಪುತನ ; ಮೂರ್ಖತನ : ಸದ್ಗುರುಪುಂಖವನಱಿಯದಿಹ ಬೇಳುವೆಯ ಬುದ್ಧಿಯುಲಿ . . . ಖಳ ತನ್ನೋಲಗಕೆ ನಡೆತಂದು ಮಂತ್ರಿ ಪ್ರಕರಕಿಂತೆಂದ (ಅಕ್ರೂಚ. ೬-೮). ೫. ಮೋಸ; ವಂಚನೆ : ಹೇಳುವೆನು ಕರ್ಣಂಗೆ ಶಕ್ರನ ಬೇಳುವೆಗೆ ಸಿಲುಕದ ಪರಿಯನೆಂದಾಲಿಸುತ ರವಿಯಿದ್ದ ನಿತ್ತಲು (ಕುಮ್ಯಾಅ. ೬೦೩. ೨೩-೨); ಬಲಿಭೂಪತಿಯಾಳುವ ನಾಡೊಳೆಲ್ಲಿಯುಂ . . . ಬೇಳುವೆ ಕೈತವಂ ಕಳವು ಹಾದರವಿಲ್ಲನೃತಂಗಳಿಲ್ಲ (ದಶಾವ. ೬-೮೬); ಪುಲಿಕೇಶಿಯು . . . ಲಾಟರ ಅಟವನ್ನು ನಿಲ್ಲಿಸಿ ಮಾಳವರ ಬೇಳುವೆಯನ್ನು ಮುರಿದು ಗುರ್ಜರರನ್ನು ಜರ್ಜರ ಮಾಡಿದನು (ಕಕ್ಕೋಶ. ೦೨೨). ೬. ಮೈಮರೆವು ; ಎಚ್ಚರವಿಲ್ಲದಿರುವಿಕೆ: ಅವುಗಿದೇವಯ್ಯನರಸಿ ರುದ್ರಮ್ಮಗೆ ಕವಿದುದು ನಿದ್ರೆ ಬೇಳುವೆಯು (ಅಮುಗಾಂ. ೪-೩೬). ೭. ಕಳವಳ ; ಸಂತಾಪ : 'ಬೇಳುವೆಗೊಳ್' ಪರಾ. ೮. ಹಿಂಸೆ ; ಕಾಟ ; ಪೀಡೆ: ಕಾಮನ ಬೇಳುವೆಗೆ ಬೆಂಡಾದುದಿಬ್ಬರ ಧೈರ್ಯವಡಿಗಡಿಗೆ (ಕುಮ್ಯಾಅ. ೯-೩೬).

**ಬೇಳುವೆಮಾಡು**=ಮಾಟಮಾಡು : ತೋಳ ಮೇಲೆಸೆವ ನರ್ತಕಿ ಸಹಸ್ರಗಳಾಗೆ ಬೇಳುವೆ ಮಾಡಿ ನೋಟಕರ ತಾಳದಾಡಿದನಾ ಶಕ್ರನ ವಿಕ್ರಿಯದಾಳಾಪವೇನ ಪೇಳುವೆನು (ಅನಂತ. ೬-೦೬೭). **ಬೇಳ್ವೆಯ ಬೂದಿ** = ಬೇಳುವೆ ಬೂದಿ : ಅರಲ ಪರಾಗವೆಂಬ ಪೊಸ ಬೇಳ್ವೆಯ ಬೂದಿಯನಿಟ್ಟು ಮಲ್ಲಿಕಾತರುಣಿಯ ಭೃಂಗನೀಲಮಣಿಮಾಲೆಯನೊಯ್ವುಲರೆಂಬ ಚೋರನಂ ಪರಭೃತನಂದು ಕಂಡು (ರಾಜಶೇ. ೦೦-೨೩). [ಬೇಳ್$_2$ + –ವೆ]

**ಬೇಳ್ವಮಾತು, ಬೇಳುವೆಮಾತು** (ನಾ). ಮರುಳಂ ಮಾಡುವ ಮಾತು; ಬಣ್ಣದ ಮಾತು : ಅವರ ಬೇಳ್ವಮಾತಿಗೆ ಮರುಳಾಗಿಬಿಟ್ಟು, ಆ ಹೆಳವೀನೇ ಹೆಂಡತೀಂದುಕೊಂಡುಬಿಟ್ಟರೆ, ನನ್ನ ಮನೆ ಹಾಳಾಗಿಹೋಗಿ ಬಿಡುತ್ತಲ್ಲಯ್ಯಾ! (ಉಷಾಶ. ೬೨) ; ಸಾವಿತ್ರಮ್ಮ ಏನೂ ಅರಿಯದವರು. ಬೇಳ್ವಮಾತಿಗೆ ಬಹಳ ಬೇಗ ಮೋಸಹೋಗುತ್ತಾರೆ (ತಾಯಿಳ. ೩೨). **ಬೇಳುವೆಮಾತು :** ಈ ಬೇಳುವೆಮಾತಿಗೇನಂತೆ ? ನೀನು ಮಾಟರ್ಮಾಡಿದರೆ ಅವಳಿಗೆ ಸೊನ್ನೆ ಬಿದ್ದಿಗೆ? (ತುರಾಯು. ೬).

[ಬೇಳ್ವ$_2$ + ಮಾತು$_1$]

**ಬೇಳ್ಬೊಲ** (ನಾ). (ಯಜ್ಞಭೂಮಿಯಂತಿರುವ) ಮಟ್ಟಸವಾದ ಭೂಮಿ (?) : ಅಳ್ವಲಮುಳ್ಳೊಡಶ್ವಬಲಮಿಲ್ಲ ಭಟಾಶ್ವಬಲಂಗಳುಳ್ಳೊಡಂ ತೋಳ್ವಲಮಿಲ್ಲ . . . ಆಳ್ವಿಸಗೆಯ್ಯದೇಕೆ ಬಲಿವರ್ ಮಲೆಪರ್ ಮಲೆಯೆಂಬುದೇನದಂ ಬೇಳ್ಬೊಲಮಾಗೆ ಮುಂ ತುಱಿದನಲ್ಲನೆ ಲಕ್ಷ್ಮಣನೆಂಬ ರಾವಣಂ (ಎಕ. VII, ಶಿಕಾ೦. ೦೩೬-೨೭; ?; ಶಾಶಮಂ. ೮೮ ನೋ). 'ಬೇಳ್ಬೊಲ' ನೋ. [ಬೇಳ್$_1$ + ಪೊಲ]

**ಬೇಱು, ಬೇರ್$_2$, ಬೇಱು** (ಸಪೂರೂ). 'ಬೇಱ$^3$' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬೇಱೂರ್', 'ಬೇರ್ಕೆಯ್' ಪರಾ. **ಬೇರ್$_2$ :** 'ಬೇರ್ವಡೆ' ಪರಾ. **ಬೇಱು :** ಒಂದಱಲ್ಲಿ ಒಂದು ಬಿಚ್ಚಿ ಬೇಱುಮಾಡಬಾರದಾಗಿ ಪ್ರಾಣಲಿಂಗ ಒಂದೆ ಉಪದೇಶವೊಂದೆ ಕ್ರಿಯಾಕರ್ಮ ಒಂದೆ ನೀವಿನ್ನಾವುದ ಬೇಱುಮಾಡಿ ನುಡಿವಿರಯ್ಯಾ (ಶಿವ್ನಶ. ೯. ೨೦-೯೬); ಕುವಲಯವೈರಿ ಪಂಕರುಹಮಿತ್ರನ ಶೇಷರಸಾಪಹರ್ತರ್ ಎಂದವನಿಜನಂ ಪಿಸುಣ್ಗೆಡೆವೆಲೇ ಜಗದಂಬಿಕೆ ಬೇಱುಮಾಡಿದರ್ (ಅಪಂಪು. ೯-೦೦೬). 'ಬೇಱುದೋಱು', 'ಬೇಱುಪಡು' ಪರಾ.

[< ಬೇಱ$^{3}_{1}$. / ತಮಿ. ಮಲ. ವೇಱು; ತೆಲು. ವೇರು. ವೇಱು; ಕೋತ. ವೆರ್]

**ಬೇಱಿರಿಸು** (ಕ್ರಿ). ಪ್ರತ್ಯೇಕವಾಗಿ ಇರಿಸು ; ಬೇರೆಯಾಗಿರಿಸು : ವ್ರತಹೀನರನನಿಬರುಮಂ ಕ್ಷಿತಿಪತಿ ಬೇಱಿರಿಸಿ ಮಾನ್ಯರಂ ಮನ್ನಿಸೆ (ಆದಿಪು. ೧೩-೦೩); ಕರಗಿ ಕಾಸಿದ ವಿದ್ಯೆಯನು ಬೇಱಿರಿಸಿ ಶುದ್ಧಬ್ರಹ್ಮವನು ಕಂಡರಿಸಿದಂತಿರಲೆಸೆವ ಶಿವನನು ಕಂಡನಬುಜಭವ (ಕುಮ್ಯಾಕ. ೬-೦೬); ಸರ್ವಜ್ಞ ಸರಸಿಜೋದರ ಕಂತುರತಿಗೆ ಗಾಂಧರ್ವವಿವಾಹವ ಮಾಡಿ ನಿವಾರ್ಣಗೊಟ್ಟು ಬೇಱಿರಿಸೆಂದು ಮುನಿ ಗರ್ವದಿಂ ಬಿನ್ನಯಿಸಿದನು (ಮೋಹತ. ೦೩-೬೨). [ಬೇಱ$^{3}_{2}$ + ಇರಿಸು]

**ಬೇಱು** 'ಬೇಱು' ನೋ.

**ಬೇಱುಕೆಯ್** 'ಬೇರ್ಕೆಯ್' ನೋ.

**ಬೇಱುಗಾಣ್** (ಕ್ರಿ). ಬೇರೆಯಾಗಿ ಕಾಣು ; ಪ್ರತ್ಯೇಕವಾಗಿ ಗಣಿಸು : ಭಂಡಾರ ಬೊಕ್ಕಸ ಮನೆಗಳ ನೋಳ್ಪನಾ ಭಂಡಾರಿಗಳು ನೋಡುವಂತೆ ಕಂಡಪರೆಲ್ಲರೀ ನೃಪನದೆಂಬರು ಬೇಱುಗಂಡೆಣಿಸುವನು ತಾನೊಳಗೆ (ಭರತ. ೭೩-೩೩). [ಬೇಱು (< ಬೇಱ$^{3}_{1}$) + ಕಾಣ್]

**ಬೇಱುದೋಱು** (ಕ್ರಿ). ಬೇರೆಯಾಗಿ ತೋರು,— ಕಾಣಿಸು ; ಪ್ರತ್ಯೇಕವಾಗಿ ನಿಲ್ಲು : ಗುರುಮಹಾತ್ಮೆಯೊಳಗೆ ಶಿಷ್ಯ ಬೆರಸಿ ಬೇಱುದೋಱದೆ ಗುರುವೆ ಶಿಷ್ಯ ಶಿಷ್ಯನೆ ಗುರುವಾದ ನಿತ್ಯಸೇವ್ಯನು (ಶಿವಗೀ. ೯೬-೪೬೭).

[ಬೇಱು (< ಬೇಱ$^{3}_{1}$) + ತೋಱು]

**ಬೇಱುನುಡಿ** (ಕ್ರಿ). ಪ್ರತ್ಯೇಕವಾಗಿ ಹೇಳು ; ಬೇರೆಯಾಗಿ ಹೇಳು : ಬೇಱುನುಡಿವೆಡೆಯೊಳಾ ವ್ಯತಿಪೃಥಗ್ವಿನಾಂತರವೆಂಬ ಪೆಸರ್ಗಳಕ್ಕುಂ (ಮಂಗರಾ. ೦೩೩-೬೦). [ಬೇಱು (< ಬೇಱ$^{3}_{1}$) + ನುಡಿ$_1$]

**ಬೇಱುಪಡು** 'ಬೇರ್ಪಡು' ನೋ.

**ಬೇಱುವೋಗು** (ಕ್ರಿ). ಪ್ರತ್ಯೇಕವಾಗಿರು : ಬೇಱುಮನವಾದೀತಂದು ಬೇಱುವೋದಳು ನೋಡಾ ಅವ್ವಾ ಕಪ್ಪುರಿವಱವಳು ನೋಡಾ ಅವ್ವಾ (ಸಳವ. II, ೨೦೨-೩೬). [ಬೇಱು (<ಬೇಱ$^{3}_{1}$)+ಪೋಗು$_1$ (< ಪೋ$_1$)]

**ಬೇಱೂರ್** (ನಾ). ಅನ್ಯಸ್ಥಳ; ಪರವೂರು : ಸೋಂಬನಂ ಮೆಚ್ಚಿ ಬೇಱೂರ್ಗೆ ಪೋದ ಸೂಳೆಯಂತುಯ್ಯಲಾಡುವ ರಣದೇವತೆಯರಿಂ (ಕಾವ್ಯಸಾ. ೩೨೯ ಶೂದ್ರಕ) ; ಬೇಱೂರ್ಗೆ ಪೋದ ನಲ್ಲರ ನೆನೆದು ದೂಱುಸುವ ನೀಱೆಯರ ನಿಡುಸುಯ್ಯ ಗಪಣದಿಂ (ಕಬ್ಬಿಗಾ. ೩೯); ಮಗಳ್ಗೆ ಬುದ್ಧಿ ಪೇಳ್ದು ನಿಜರಮಣವೆರಸಿ ಬೇಱೂರ್ಗವಂ ಪೋದಾಗಳ್ (ವೃಷಭ. ೯-೬೦ ವ).

[ಬೇಱು + ಊರ್]

**ಬೇಱ$^{3}_{1}$, ಬೇರೆ$_1$** (ನಾ). ೧. ಪ್ರತ್ಯೇಕವಾದುದು ; ಸಂಬಂಧವಿಲ್ಲದುದು: ದೂಱಲಱಿಯೆನು ಸುಭಟರಿಗೆ ಮನ ಬೇಱ ನುಡಿ ಬೇಱಾಯ್ತು ಸಮರದೊಳು (ಕುಮ್ಯಾಶ. ೬-೮). ೨. ವಿಶಿಷ್ಟವಾದುದು : ಆ ಕಾಂತೆಗಂದು ನಯಂ ಬೇಱ ಬೆಡಂಗು ಬೇಱ ಪೊಳೆವಂಗಚ್ಛಾಯೆಯುಂ ಬೇಱ ತೊಟ್ಟನೆ ಮೆಯ್ಯೊಳ್ ಬೇಱ (ಆದಿಪು. ೬-೨೩) : ಸಿರಿ ಗಿರಿಜಾತೆ ಶಾರದೆ ಶಚಿಮುಖ್ಯರು ಸರಿಯಲ್ಲವಿವಳಚ್ಚು ಬೇಱ (ಮೋಹತ. ೦೦-೩). ೩. ಇನ್ನೊಬ್ಬ ವ್ಯಕ್ತಿ; ಅನ್ಯವ್ಯಕ್ತಿ : ನೀಂ ಬೇಱಮಗೆ ಸುಯೋಧನನೇಂ ಬೇಱೆಯೆ (ಶಂಶಶಾ. ೬-೬೩) ; ಇವಳೆನ್ನ ಶರೀರದಿಂ ಬೇಱಲ್ಲಳ್ (ಕಾದಂಪೂ. ೮೦೬) ; ನೀಂ ಬೇಱಾಂ ಬೇಱೆಂಬ ಭಿನ್ನಬುದ್ಧಿ ನಿನಗಂ ನನಗಂ ಬೇಡ (ಶಂಶಶಂ. ೦೨೩-೪). (ಗು). ೪. ಪ್ರತ್ಯೇಕವಾದ : ಮರಕತಮಣಿವಿರಚಿತ ವಿಮಲಭಿತ್ತಿ ಪೊಗಟಲ್ಕರಮರಿದಟು ಬೇಱ ಭಿತ್ತಿ (ಆದಿಪು. ೯-೩೦ ರಗಳೆ) ; ಬೆಡಂಗುಗಳ ಬೇಱ ಭಂಗಿಗಳ ಲಳಿಗಳ ದೇಂ ಕಡುಜಾಣೆನೆ

(ಎಕ. II· ೦೪೩-೦೦೬; ೧೪೩); ಆನು ಚೆನ್ನಮಲ್ಲಿಕಾರ್ಜುನಂಗೆ ಮದುವಳಿಗೆ ಎನಗೆ ಬೇಱು ಶೃಂಗಾರವೇಕೆ (ಶುಶಾದೇ. ೩. ೩೭-೭೩); ದೇಹಚ್ಛಾಯೆ ಗುಂಟೇ ಬೇಱು ಬೇಷ್ಟೆ (ಶುಣ್ಯಾ.ಸ. ೦೨-೯೪)· **ಬೇರೆ₁ : ೪.** ಮಹತ್ ವರ್ಗದಲ್ಲಿ ಮೊದಲಿನಿಂದಲೂ ಮೆರೆಯುತ್ತಿದ್ದ ಪ್ರತ್ಯಯಗಳನ್ನು ಹಾಗ ಬಿಟ್ಟು ಬೇರೆಡೆಗೆ ಹೋಗುವಂತೆ ಮಾಡಿತು ! (ದ್ಯಾಶಿ. ೨೬೬); ನೋಟಗಳ ಕಗ್ಗಟ್ಟು ಬಿಚ್ಚಿದಂತಾಗಿ ಮೇಣ್ ಆಟವಾಡುತಲಿಹುದು ಬೇರೆಡೆಯು ಬಿಗಿದು (ಶಾರಪರ. ೯೩-೩೩).

**ಬೇಱುವೇಱು, ಬೇರೆಬೇರೆ, ಬೇಱುಬೇಱು** (ದ್ವಿರುಕ್ತಿ) : ವಾಸುಗಿಯುಂ ಮಱಿಯಲಾಱದೆ ಬೇಸಱುಗುಂ ದೇಶಿ ಬೇಱುವೇಱುವ್ಪದಱಿಂ (ಶಂಶಾ. ೦-೯೬); ದ್ವಾರವತಿಯಲ್ಲೂ ಜೋಡಿದೇವಾಲಯಗಳು ಕಟ್ಟಲ್ಪಟ್ಟವೆ. ಆದರೆ ವೇಲಾಪುರಿಯಲ್ಲಿದ್ದಂತೆ ಬೇರೆಬೇರೆಯಾಗಿರದೆ, ಒಂದನ್ನೊಂದು ಅಂಟಿ ಇದ್ದವೆ (ಶಾಂತಶಾ. ೦೩೪); ಪಂಚೇಂದ್ರಿಯಪ್ರವೃತ್ತಿಗಳೆ ಬೇಱುಬೇಱು ರೂಪಂದಳೆದುವೆನಿಪಂಗುಳಿಗಳಿಂ ಮನಂಗೊಳಿಸುವ ಕರಕಮಲಂಗಳು ಚಂದ್ರಾಪೀಡಂ ನೀಡೆ (ಕಾದಂಶಾ. ೩೪).

[ದೇ.॥ ಕೊಡ. ಬೋರೆ ; ತೆಲು. ವೇರೆ]

**ಬೇಱು₃, ಬೇರೆ₂ (ಅ).** ೧. ಪ್ರತ್ಯೇಕವಾಗಿ : ಪದಿನೆಂಟುಕೋಟಿರಥಂ ಬೆರಸು ಬೇಱೊಡ್ಡಿ ನಿಂದರ್ (ಶಂಶಶಾ. ೦೦-೩೬ ಪ) ; ಎನಗೆ ಭೀಮಾರ್ಜುನರವೊಲು ನೀನನುಜನಲ್ಲದೆ ಬೇಱು ನಿನ್ನಲಿ ಮನವಿಭೇದವ ಬಲ್ಲೆನೇ (ಕುವ್ಯಾ.ಶೀ. ೨-೩೯); ಕಟ್ಟೆಂಬ ನುಡಿ ಮಾಲೆಗಾರ್ತಿಯರೊಳು . . . ಕುಟ್ಟೆಂಬ ನುಡಿ ವ್ರೀಹಿಯೊಳಲ್ಲದೆ ಬೇಱು ದಿಟ್ಟಸಲಾ ನಾಡೊಳಿಲ್ಲ (ಕೆಂಪಶಾ. ೨-೦೩)· **ಬೇರೆ₂ : ೨.** ಕೂಡ ; ಜೊತೆಗೆ : ಅರ್ಯಕ :— ಅಯುಧಪಾಣಿಗಳು ಬೇರೆ (ಅರ್ಯಕ. ೦೩). [<ಬೇಱು₁]

**ಬೇಟ್ ?** (ನಾ)· (?) : ಸುಗವಳ್ಳಿಯಾಯ್ಯುಯ್ಯಗಾವುಣ್ಣ ಗೋಸಾಸ ವಿಬ್ಬಂ ಅಮಿರ್ತ್ಯರಸಿಗೆ ಬೇಟಂ ಕಾಲ ಕಟ್ಟಿ ಕೊಟ್ಟರ್ (ಪ್ಯಶಿ. ೦೯೪೨, ೬೦-೦೨ ; 1002). [ ? ]

**ಬೇಟು, ಬೇಳಿ (ನಾ).** ೧. ಹೇಡಿ ; ಅಂಜುಪುರುಕ : ಕಾಳಾಂತಕನಂತೆ ನಾಡೆ ಹಳಿಯುಂ ಹರಿಯುಂ ಕಡುಕೆಯ್ದು ಪಾಯ್ದು ಮೂಜಾಂತಿಱು ವಲ್ಲಿ ಬೇಟು ಭಯದಿಂ ಬಿಱಿತೋಡ[ನೆ] ನಿನ್ನಧೀಶ[ನುಂ](ಪರಶಶಾ. ೯-೨೪). **ಬೇಳಿ : ೨.** ನಪುಂಸಕ ; ಷಂಡ : ಖೂಳನಂ ಮೂಳನಂ ಮೋಟನಂ ಮುಕ್ಕನಂ ಕೀಳಜಾತಿಯನು ಪುರುಳಿಲ್ಲದ ಮೆಯ್ಯಾದೊಡಂ ಬೇಳಿ ಬೆಳಿ ಯಿತ್ತೊಡವನಂ ಕಾಮನೆಂಬ ದುಶ್ಶೀಲೆಯರು ಕಣ್ಗೆಸೆದರು (ಹಶಳ. ೯-೯೪).

[<ಪೇಡ₁]

**ಬೇಟೂರ್ (ನಾ).** ಒಂದು ಊರಿನ ಹೆಸರು : ಬೇಲೂರರಾ ಮಗಂ ಮಾವಪ್ಪನ್ ಪ್ರಭುಗೌಡಿ ಬೇಟೂರಾ ಎಮ್ಮೆಯ ತೊಳಲೊಳ್ ಗುದ್ದಿ ಅನ್ನಿಱಿದು ಸತ್ತನ್ (ಎಕ. X, ಕೋಲಾರ. ೨೨೬-೨ ; ಸು. 950?).

[ ? + ಊರ್]

**ಬೇಟ್ಟು** 'ಬೇಡ್ದು₁' ಪರಾ.

**ಬೈ₁** 'ಬಯ್₁' ನೋ.

**ಬೈ₂** 'ಬಯ್₂' ನೋ.

**ಬೈ₃** 'ಬಯ್₃' ನೋ.

**ಬೈ₄ (ನಾ).** (ಬತ್ತದ) ಒಣಹುಲ್ಲು : 'ಬೈಸೂಡಿ', 'ಬೈಹುಲ್ಲು' ಪರಾ. [←ತುಳು. ಬೈ, ಬಯಿ]

**ಬೈಂಡು (ನಾ).** ಪುಸ್ತಕಕ್ಕೆ ಹೊದಿಸಿದ ರಟ್ಟು,— ಮೇಲುಹೊದಿಕೆ : ಬಂಗಾರದಂಚು ಮೊರೊಕೊ ಬೈಂಡು (ಅರಶೋ. ೩೩). [← ಇಂ. Bind]

**ಬೈಂದವ (ಗು).** ೧. ಬಿಂದುವಿಗೆ ಸಂಬಂಧಿಸಿದ. (ನಾ). ೨. [ಶೈವ] ನಿರ್ಮಲತೆ ; ಶುದ್ಧತೆ : ಷಡಧ್ವಾತೀತವಾದ ನವಚಕ್ರೋರ್ಧ್ವಭಾಗದ ಪರಿಗ್ರಹಶಕ್ತಿಯ ಮಸ್ತಕಾಗ್ರದಲ್ಲಿ ನಿರ್ಮಲ ಪರಿಪೂರ್ಣ ಪರಪ್ರಕಾಶಮಹಾ ಶಕ್ತ್ಯವಿನಾಭೂತ ನಿಜವಸ್ತುವಿನಲ್ಲಿ ಬೈಂದವಾನಂದಾದಿ ವಿಲಕ್ಷಣೆಯಿಂದಾದ ನಿಜಶಿವಾಭಿವ್ಯಕ್ತಿಯಿಂದಾದ (ಶಿಶಶ. ೦-೨); ಪರಮನಾದಾಕ್ಷರದಿ ವಿಕಲಸ್ವರಗಳಡಗಿ ಕರ ರಂಜಿಸದೆಯರ್ಧ ಮಾತ್ರೆಯಿಂ ಬೈಂದವಂ ಪರಬಿಂದುಮಾಧ್ಯದೊಳಡಂಗಿವಂದದಿ (ಅಕೆಶಾಪು. ೦೬-೯೩). 'ಬೈಂದವ ಶರೀರ' ಪರಾ. [ಸಂ.]

**ಬೈಂದವಶರೀರ (ನಾ).** [ಶೈವ] ಮಲರಹಿತವಾದ ಶರೀರವುಳ್ಳವನು ; ನಿರ್ಮಲದೇಹಿ : ಒಂದಾಣವದ ಮಲವನುಳ್ಳ ವಿಜ್ಞಾನಕಲರೆಂದೆರಡು ಮಲದಿನಾ ಪ್ರಳಯಾಕಲರು ಕೇಳ ಕಂದಾ ತ್ರಿಮಲದ ಸಕಲಾಕಲರು ಮೂವರಿವರೊಳಗೆ ವಿಜ್ಞಾನಕಲರೂ ಬೈಂದವಶರೀರರುಮನಾದಿಮುಕ್ತರು ಶಿವನೊಳೊಂದಿ ಶಿವಸಮದ ಸಾಯುಜ್ಯಪದವಮಂ ಪಡೆವುತೇಂದೆಂದು ದುಃಕರ್ಪರದೂರರಾಗಿರ್ಪರೈ (ಶೀಕ್ಷಿಕ್ರಿ. ೩-೩-೭೦) ; ಪ್ರಥಮವರ್ಗದಲ್ಲಿ ರುವವರು ಪರಿಪಕ್ವಮಲರಾದರೆ ಬೈಂದವಶರೀರವೆಂಬ ಶುದ್ಧಸೃಷ್ಟಿಶರೀರ ವನ್ನು ಕೆಲವರಿಗೆ ಕೊಟ್ಟು . . . ಮಂತ್ರಕೃತ್ಯಾಧಿಕಾರ ಮೊದಲಾದುವುಗಳನ್ನು ಅನುಗ್ರಹಿಸುವನು (ಶಿಂವಶಾ. ೨೯೯)· [ಸಂ.]

**ಬೈಕ (ನಾ).** ತಿರುಪೆ ; ಯಾಚನೆ ; ಭಿಕ್ಷೆ : "ಭೈಕ್ಷದೊಳ್ ಬೈಕಂ" (ಶಶಾಶಿ. ೩೮); ಅವಜ್ಞೆಗೆಯ್ದು ನಾಯ್ಗುಗದೆಡೆಯೊಳ್ಲವಂ ಪುಗಿಸಿ ಬಯ್ಕ[ಬೈಕ]ದ ಭಾಜನಮಾಗೆ ಮಾಡಿ ತೊಟ್ಟಗೆ ವಿಘು ಸಾಯೆ ಪೊಯ್ದು ಕಿವಿಯಂ ಪಿಡಿದೂಡಲೊಡರ್ಚಿ ಬಂದನೇ (ಸುಕುಮಾ. ೨-೬೩). 'ಬೈಕಂಗುಳಿ', 'ಬೈಕಂದಿರಿ' ಪರಾ. [< ಸಂ. ಭೈಕ್ಷ]

**ಬೈಕಂಗುಳಿ (ನಾ).** ಭಿಕ್ಷೆ ಬೇಡುವುದೇ ವೃತ್ತಿಯಾಗುಳ್ಳವನು; ತಿರುಕ; ಯಾಚಕ : ಈತಂ. . . ಬೈಕಂಗುಳಿ ಬೇಡಿ ಪೊಱಲೆಲ್ಲವಂ ತೊಟಲ್ದು ಬಸಿಱಂ ಪೊರೆವೊಂ (ಶಶ್ಯಾರಾ ೯೬-೭); ಕಿಸುಗುಳನಪ್ಪ ಬೈಕಂಗುಳಿ [ಪಾಠಾಂ. ಬಯ್ಕಂಗುಳಿ, ಬೆಸನಂಗುಳಿ, ಬೈಸಂಗುಳಿ]ಯುಮಂ ಕಟ್ಟಪಟ್ಟ ಕಳ್ಳನುಮಂ ಕಂಡಿದು ಮುನ್ನಿನ ಪಾಪದ ಫಲಮಿದೀಗಳಿನ ದೋಷದ ಫಲಮೆಂದು ಬಗೆದಱಿದು ನೆಗಟ್ದುದು ಗಹನಮೆ (ಶೀಲಸಂ. ೯೪-೩).

[ಬೈಕ +—ಕುಳಿ₃]

**ಬೈಕಂಗೊಳ್ (ಕ್ರಿ)·** ಭಿಕ್ಷೆಯನ್ನು ಪಡೆ : ಮುಂದಿಟ್ಟು ಚಿತ್ರಮಂ ತಿರಿತಂದುದುಮಂ ಪಾಳಮಿರ್ದು ಬೈಕಂಗೊಳ್ವೊಂದದದೆ ಕೊಂಡುದು ಮನದೇನೆಂದುನ್ನತಿ ಮಾಡಿ ಪೊಗಟ್ದೆ (ಅಂಕು. ೦೯-೬೬); ತಿರಿವುದು ಬೈಕಂಗೊಳ್ವುದು ಮೊರೆವುದು ಮಱುದುಂಬಿಯುಲ್ಲಾ (ಕಾವ್ಯಾ.ಶ. ೩೯೩).

[ಬೈಕ + ಕೊಳ್₁]

**ಬೈಕಂದಿರಿ (ಕ್ರಿ)·** ತಿರುಪೆಗಾಗಿ ಸುತ್ತು ; ಭಿಕ್ಷೆಗಾಗಿ ಅಲೆದಾಡು : ಇರ್ದರುಂ. . . ಕಪ್ಪಡಮುಟ್ಟು ಬೈಕಂದಿರಿದಿನ್ನಪ್ಪೊಡಮೋದುವವಂದು ಶಾಯ್ಗೆ ನುಡಿದೊಡಂ (ಶಶ್ಯಾರಾ. ೩-೦). [ಬೈಕ + ತಿರಿ₁]

**ಬೈಕಂಬೇಡು (ಕ್ರಿ)·** ಭಿಕ್ಷೆಕೇಳು; ಯಾಚಿಸು : ಓದಿದ ರಾಳಂ ಕಿವಿವಿಡಿದಾಡಿದ ಚೋಳಂ ವಿಸಷ್ಟರಾಜ್ಯಂ ಬೈಕಂಬೇಡಿದ ಕಳಂಗು (ಎಕ. VII, ಶಿಕಾರಿ. ೦೪೭-೨೦; 1114); ಕೆಲರ್ . . . ಪೆಱರ ಮನೆಗಳಂ ಪೊಕ್ಕುಯ್ಯೋಯೆಂದು ಬಯ್ಕಂ[ಬೈಕಂ] ಬೇಡಿ ಇಕ್ಕದ ಮನೆಯಂ ಬಯ್ದು . . .ಸತ್ತು ದುರ್ಗತಿಗಳ್ಗೆ ಸಲುವರ್ (ಕಶಾರ. ೧೯೨). [ಬೈಕ + ಬೇಡು₁]

**ಬೈಕೆ** 'ಬಯ್ಕೆ₁' ನೋ.

**ಬೈಕೆಗೊಡು (ಕ್ರಿ).** ನಿಕ್ಷೇಪವಾಗಿಡು; ನ್ಯಾಸವಾಗಿರಿಸು : ನ್ಯಾಸಾಪಹಾರ ಬೈಕೆಗೊಟ್ಟರ್ಥಪ್ರಮಾಣಮಂ ಮಱಿದು ಕಿಱಿದಂ ಪೇಟ್ದಡನಿತೆಯೆಂಬುದು (ಕಸಪುಶ್ಯ. ೨೩೬) ; ಏನಂ ಬೇಡುವೆನೆಂದಬ್ಜಾನನೆ ಬಗೆ ಬೆದಱು ಬಗೆಗೆ ಬಂದೊಡವೆಮೆಯನೊಲ್ದಾನೆರೆದಾಗಳೆ ಕುಡಿಮೆಂದಾ ನೃಪತಿಗೆ ಕೈಕೆ ಬೈಕೆ ಗೊಟ್ಟಳ್ ಮೆಚ್ಚಂ (ಶಂರಾಶಶಾ. ೩-೬೬). [ಬೈಕೆ (<ಬಯ್ಕೆ₁) + ಕೊಡು₁]

**ಬೈಗಳು** 'ಬಯ್ಗುಳ್' ನೋ.

**ಬೈಗು** 'ಬಯ್ಗು' ನೋ.

**ಬೈಗುಂಬೊಟ್ಟು** 'ಬಯ್ಗುಂಬೊಟ್ಟು' ನೋ.

**ಬೈಗುಗಪ್ಪು** (ನಾ). ಸಾಯಂಕಾಲದ ಮಬ್ಬುಗತ್ತಲೆ; ಸಂಜೆಗತ್ತಲು: ಮತ್ತೊರ್ದಿನಂ, ಬೈಗುಗಪ್ಪೆಳೆಯುತ್ತಿರೆ ಸೀತೆ ಮರ್ಬಿನೊಳ್ ಕಂಡಳಾ ರಸೊ ಕಲ್ಲ ನೆತ್ತಿಯೊಳ್ (ಶ್ರೀರಾಮಾ. ೦೯೩-೦೦೬); ಆ ವೇಳೆಗಾಗಲೆ ಬೈಗುಗಪ್ಪು ಪಸರಿಸುತ್ತಿತ್ತು (ಮುಬ್ಬ.ಹ. ೪೦).
[ ಬೈಗು (< ಬಯ್ಗು) + ಕಪ್ಪು₄ (< ಕರ್ಪು₁) ]

**ಬೈಗುಗೆಂಪು** 'ಬಯ್ಗುಕೆಂಪು' ನೋ.

**ಬೈಗುದಂಪು**: (ನಾ). ಸಂಜೆಯ ತಂಪು,— ಶೈತ್ಯ: ಬೈಗುದಂಪೆಲರ್ಗೆಳಸಿ ಸೊಗಸಿ, ಮಲೆವಲೆಗೋಡಿನೊಂದರೆಯ ತುದಿಗೇರಿ ಕುಳಿತು ವಿಶ್ರಮಿಸಿಕೊಳುತಿರ್ದೊರ್ವಿರ್ಳಾಪ್ರಿಯಂ ಬೆರಗಾದನೊಂದದ್ಭುತವನನು ಭವಿಸಿ (ಶ್ರೀರಾಮದ. ೨೦೪-೨೬೬).
[ ಬೈಗು (< ಬಯ್ಗು) + ತಂಪು₂ (< ತಣ್ಪು₂) ]

**ಬೈಗುಮುರ್ಬು** (ನಾ). = ಬೈಗುಗಪ್ಪು: ವ್ಯಾಘ್ರಮುಂ . . . ನೋಡು ತಿರೆಯಿರೆ ಬೈಗುಮುರ್ಬು ತೀವ್ರತ್ತಿರ್ದ ದೃಶ್ಯವಿಸ್ತೀರ್ಣಮಂ, ಕಂಡು ದೇನನೋ! (ಶ್ರೀರಾಮಾ. ೦೯೩-೯೩).
[ ಬೈಗು (< ಬಯ್ಗು) + ಮುರ್ಬು (< ಮುರ್ಬ್₂) ]

**ಬೈಗುಮಲ್ಲಿಗೆ** (ನಾ). ಸಂಜೆಯಲ್ಲಿ ಮಾತ್ರ ಅರಳುವ ಒಂದು ಬಗೆಯ ಮಲ್ಲಿಗೆ; ಸಂಜೆಮಲ್ಲಿಗೆ: ಕಾಂತಾಜನಂ . . . ಅಲರ್ದ ಬೈಗುಮಲ್ಲಿಗೆಯ ಚೊಲ್ಲೆಯಂತ ತುಱುಬಿಂ ಕಣ್ಗೆ ಡ್ಡಮಾದುದು (ರಾಜಶೇ. ೩೨-೦೦).
[ ಬೈಗು (< ಬಯ್ಗು) + ಮಲ್ಲಿಗೆ./ತುಳು. ಬೈಯಮಲ್ಲಿಗೆ ]

**ಬೈಗುವೊಳ್ತು** 'ಬಯ್ಗುಂಬೊಟ್ಟು' ನೋ.

**ಬೈಗುಳ್** 'ಬಯ್ಗುಳ್' ನೋ.

**ಬೈಗುಳ** 'ಬಯ್ಗುಳ್' ನೋ.

**ಬೈಗುಳು** 'ಬಯ್ಗುಳ್' ನೋ.

**ಬೈಗೆ₁** 'ಬಯ್ಗು' ನೋ.

**ಬೈಗೆ₂** (ನಾ). ಒಂದು ಬಗೆಯ ಮೀನು: ಮಾರ್ಕೆಟ್ಟಿನಲ್ಲಿ ನದಿಯ ಮೀನು ಅಲ್ಲದೆ ಸಮುದ್ರದ ಕಾಣೆ, ಕುರ್ಚ್, ಬೈಗೆ, ಬೂತಾಯಿ ಎಲ್ಲ . . . ತಂದಿದ್ದರು (ಹೊಸಕ. ೩೮). [ ? ]

**ಬೈಜರು** (ನಾ). (?): ಗಂಧದ ಮಡುವಿನೊಳ್ಮಿಟ್ಟ ಕೈ ಹಗರ ನೊಳ್ಗಂಧಿಸಿ ತಾಂಬೂಲಬೆಂಡ ತುಂಬು ಬಾಳೆಗಳಿಕ್ಕಿ ಕುಚಗಿರಿಗೊಯ್ಯಾಗ ನಿಂದು ಬೈಜರಿಗೆ ನೂಕುವರು (ಅಮಲಾ. ೩-೬೪). [ ? ]

**ಬೈಜಿಕ** (ಗು). ಬೀಜದಿಂದ ಉಂಟಾದ; ರೇತಸ್ಸಿನಿಂದ ಹುಟ್ಟಿದ: 'ಬೈಜಿಕದೋಷ' ಪರಾ. [ಸಂ.]

**ಬೈಜಿಕದೋಷ** (ನಾ). "ಗರ್ಭಾಧಾನಾದಿ ಸಂಸ್ಕಾರಗಳಿಂದ ಗರ್ಭ ಮತ್ತು ಬೀಜಸಂಬಂಧವಾದ ದೋಷಗಳ ನಿವಾರಣವಾಗಿ ಜೀವನು ಪಾಪವಿಮುಕ್ತನಾಗುತ್ತಾನೆ. ಬೀಜವೆಂದರೆ ಶುಕ್ಲ ಶೋಣಿತಗಳು. ತತ್ಸಂಬಂಧವಾದ ನಿಷಿದ್ಧಕಾಲಮೈಥುನಾದಿ ಪ್ರಯುಕ್ತವಾದ ದೋಷವೇ ಬೈಜಿಕದೋಷ" (ಕಾರಡ. ೩೩): ಕುಲೀನಮನೆತನದ ಹೆಣ್ಣುಮಕ್ಕಳ ಜೀವನವನ್ನು ಹಾಳುಮಾಡುವಲ್ಲಿ ನಿಮ್ಮ ತಂದೆಯು ನಿಷ್ಣಾತನು . . . ಈ ಬೈಜಿಕದೋಷದ ಪರಂಪರೆಯನ್ನು ನಾನು ತಡೆಯಲೇ ಬೇಕು (ಸಂಕ್ರಾ. ೬೩). [ ಸಂ. ]

**ಬೈಟಕ್ಕು** 'ಬೈಠಕು' ನೋ.

**ಬೈಠಕ್** 'ಬೈಠಕು' ನೋ.

**ಬೈಠಕ್ಕೋಣೆ** 'ಬೈಠಕಕೋಣೆ' ನೋ.

**ಬೈಠಕ್ಖಾನೆ** 'ಬೈಠಕುಖಾನೆ' ನೋ.

**ಬೈಠಕ್ಮುಷ್ಕರ** (ನಾ). ಯಾವುದಾದರೊಂದು ಕೋರಿಕೆಯ ಪೂರೈಕೆಗಾಗಿ ನೆಲದ ಮೇಲೆ ಪಟ್ಟುಹಿಡಿದು ಕುಳಿತು ಮಾಡುವ ಸಂಪು: "ಧರಣಿಸಂಪು, ಬೈಠಕ್ಮುಷ್ಕರ" (stay-in-strike. ಆಶ್ರೀ. ೬೮).
[ಬೈಠಕ್ (< ಬೈಠಕು) + ಮುಷ್ಕರ]

**ಬೈಠಕ** 'ಬೈಠಕು' ನೋ.

**ಬೈಠಕಕೋಣೆ**, ಬೈಠಕ್ಕೋಣೆ (ನಾ). ಮನೆಗಳಲ್ಲಿ ಅತಿಥಿಗಳನ್ನು ಕೂರಿಸುವ ಸ್ಥಳ; ದಿವಾನಖಾನೆ: ನನ್ನನ್ನು ಬೈಠಕಕೋಣೆಗೆ ಪುನಃ ಎಳೆದುಕೊಂಡು ಹೋದಳು (ಹೂಬಾಳ. ೦೨೦). **ಬೈಠಕ್ಕೋಣೆ**: ಬೈಠಕ್ಕೋಣೆಗಳಲ್ಲಿ ನಿಲುಗನ್ನಡಿಗಳೂ ಪಠಗಳೂ ಇಟ್ಟಿವೆ (ದಾರಿ. ೦೦೬).
[ಬೈಠಕ (< ಬೈಠಕು) + ಕೋಣೆ₂ (< ಕೋಣ್)]

**ಬೈಠಕಖಾನೆ** 'ಬೈಠಕುಖಾನೆ' ನೋ.

**ಬೈಠಕಿ** 'ಬೈಠಕು' ನೋ.

**ಬೈಠಕು**, ಬೈಟಕ್ಕು, ಬೈಠಕ್, ಬೈಠಕ, ಬೈಠಕಿ (ನಾ). ೧. ಕುಳಿತು ಕೊಳ್ಳುವಿಕೆ; ಕೂರುವಿಕೆ: ಅರಸುಗಳ ಬೈಠಕಿಗೆ, ಇನ್ನೊಂದು ಎತ್ತರವಾದ ಮಂಚವಿಡುತ್ತಾರೆ (ಯುಗ. ೩೯). ೨. ಕುಳಿತುಕೊಳ್ಳುವ ಜಾಗ,— ಸ್ಥಳ. ೩. (ಸಂಘ, ಸಮಿತಿ ಮುಂತಾದುವುಗಳ ಸದಸ್ಯರು ಸೇರುವ) ಸಭೆ; ಅಧಿವೇಶನ: ಗಜೇಂದ್ರಸಿಂಹನ ಬೈಠಕಿನಲ್ಲಿ ಇಂದು ಮುಂಜಾನೆಯಿಂದ ಯುದ್ಧಸಮಿತಿಯ ಬೈಠಕು ನಡೆದಿದೆ (ಕಲಾಪ. ೦೪೦). ೪. (ಸಂಗೀತ, ನೃತ್ಯ ಮುಂತಾದುವುಗಳ) ಕಚೇರಿ; ಗೋಷ್ಠಿ: ಸುಂದರ್‌ಪ್ರಸಾದಿಯ ಮನೆಯಲ್ಲಿ ಚಿಕ್ಕ ಬೈಠಕು ಕೂಡ ಆಗಿ ವಸಂತನು . . . ಐದುರೂಪಾಯಿನೋಟನ್ನು ಆಕೆಯ ಕೈಗೆ ಹೊಡೆದನು (ಗಂಹಾದು. ೨೦೬); ಆಕೆ ಅನೇಕ ಕಡೆ ಸಂಗೀತಬೈಠಕುಗಳಿಗೆ ಹೋಗಬೇಕಾಗುತ್ತಿತ್ತು (ಸಾಹಿಗೆ. ೨೯). **ಬೈಟಕ್ಕು**: ೪. ವೇಷ ಭೂಷಣಗಳಿಲ್ಲದೆ ಒಬ್ಬೊಬ್ಬರು ಒಂದೊಂದು ಪಾತ್ರವನ್ನು ವಹಿಸಿ ಕುಳಿತ ಎಡೆಯಲ್ಲಿಯೇ ಈ ಪ್ರಸಂಗವನ್ನು ವಾಚನ ಮಾಡಬಹುದು . . . ಇದಕ್ಕೆ 'ಬೈಟಕ್ಕು' ಎಂದೂ ಹೆಸರಿದೆ (ಯಕ್ಷಗಾ. ೦೬); ನನ್ನ ಸರಿಸಮನಾಗಿ ಹಾಡಬಲ್ಲವನು ನಿಮ್ಮಲ್ಲಿ ಯಾರಿದ್ದಾರೆ . . . ಎಂದು ಗಂಭೀರವಾಗಿ ಹೇಳಿ ಅಲ್ಲೇ ಬೈಟಕ್ಕಿಗೆ ಕುಳಿತ (ಕನ್ನಡ. I, ೨೩೦). **ಬೈಠಕ್**: ೪. ಅನೇಕ ಉತ್ತರಾದಿ ಗಾಯಕರು, ತಮ್ಮ 'ಬೈಠಕ್' (ಕಚೇರಿ)ನಲ್ಲಿ, ತ್ಯಾಗರಾಜರ ಮತ್ತು ಪುರಂದರದಾಸರ ಕೃತಿಗಳನ್ನು ಹಾಡಲು ಮೊದಲುಮಾಡಿದ್ದಾರೆ (ಸಂಗೀತಂ. ೦೬೩); ಪೆಟ್ಟಿಗೆಯನ್ನು . . . ನಾನಾಸಾಹೇಬರು ಬೈಠಕಿನ ರೀತಿಯಲ್ಲಿ ಕುಳಿತು ಬಾರಿಸಲಿಕ್ಕೆ ಪ್ರಾರಂಭಿಸಿದರು (ಸಂದುಬ. ೯೯). **ಬೈಠಕ**: ೩. ಅ.ಭಾ.ರಾಷ್ಟ್ರೀಯಸಮಿತಿಯ ೧೯೨೧ ರ ನವೆಂಬರದಲ್ಲಿ ದಿಲ್ಲಿಯಲ್ಲಿ ಕೂಡಿದ ಬೈಠಕದಲ್ಲಿ . . . ಬಾರ್ಡೋಲಿ ಇದು ಒಂದು ವಿಶಿಷ್ಟ ತಾಲೂಕ ಎಂದು ನಿಶ್ಚಯಿಸಲ್ಪಟ್ಟಿತು (ಕಾಂಗ್ರೆಸ. ೦೬). ೪. ಅವರು . . . ಹಾಡುವ ಸಮಾರಂಭಕ್ಕೆ ಬೈಠಕಯೆಂದನ್ನುತ್ತಾರೆ (ಕಲಾಗ. ೦೯೬); ಅವನ ಒಂದು ಬೈಠಕನ್ನು ಎಲ್ಲರೂ ಕೇಳಲು ಸಾಧ್ಯವಿಲ್ಲ (ಬಾಲಶ್ರ. II, ೦೦೦೩). ೫. ಬಿಡಾರ; ಠಿಕಾಣೆ; ಮೊಕ್ಕಾಂ: ಶ್ಯಾಮರಾಯ ಊರಿಗೆ ಬಂದು ವಾಡೆಯಲ್ಲಿ ಬೈಠಕ ಹಾಕಿದ ದಿನವೇ, ರಾಚಪ್ಪ ತನ್ನ ಕಚೇರಿಯನ್ನು . . . ಸ್ಥಳಾಂತರಿಸಿದ (ರೀಶತ. II, ೯೬). **ಬೈಠಕಿ**: ೩. ಇಂದಿನ ಬೈಠಕಿಯಲ್ಲಿ ಇದೇ ವಿಷಯದ ಚರ್ಚೆಗೆ ಆರಂಭವಾಗಿತ್ತು (ಶಾಲಾಜ. ೨). [ ←ಹಿಂ. ಮರಾ. ಬೈಠಕ್ ]

**ಬೈಠಕುಖಾನೆ**, ಬೈಠಕ್ಖಾನೆ, ಬೈಠಕಖಾನೆ (ನಾ). ಸಮಾರಂಭ, ಸಭೆ ಮುಂತಾದುವುಗಳನ್ನು ನಡೆಸಲು ಅನುಕೂಲವಾಗಿರುವ

ವಿಶಾಲವಾದ ಹಜಾರ.– ಪಡಸಾಲೆ ; ದಿವಾನಖಾನೆ : ಮೆಹರ ಉನ್ನೀಸೆಯು ತನ್ನ ಸ್ವಂತ ಬೈಠಕುಖಾನೆಯಲ್ಲಿ ಕುಳಿತುಕೊಂಡು ಚಿತ್ರಪಟಗಳನ್ನು ಬರೆಯುತ್ತ ತಾಂಬೂಲಚರ್ವಣವನ್ನು ಮಾಡುತ್ತಿದ್ದಳು (ಕಹಾಕುಂ. ೬೩). **ಬೈಠಕ್‌ಖಾನೆ:** ತಮ್ಮ ಬೈಠಕ್‌ಖಾನೆಯಾದ ಮಟಮಂಟಪದೊಳಗೆ ಆದರದಿಂದ ಕರೆದೊಯ್ದು ದಿವ್ಯಾಸನದಲ್ಲಿ ಕುಳ್ಳಿರಿಸಿ ಕುಶಲಪ್ರಶ್ನೆಗಳನ್ನು ಮಾಡಿದರು (ಶ್ರೀರಾಚ. ೨೮); ಅತಿಥಿಗಳೆಲ್ಲರೂ ಬೈಠಕ್‌ಖಾನೆಯಲ್ಲಿ ಸೇರಿದಾಗ ಆ ಬೇಹಾಗ್ ಹಾಡನ್ನು ಹಾಡುವಂತೆ ನನ್ನನ್ನು ಕೇಳಿಕೊಳ್ಳುತ್ತಿದ್ದಳು (ಹಂಸರ. II, ೮೩). **ಬೈಠಕಖಾನೆ :** ಎರಡು ಅಂತಸ್ತಿನ ಬೈಠಕಖಾನೆ ; ದೊಡ್ಡ ದೇವರ ಮನೆ (ದೇವೀಸ್. ೪) ; ಡಾಕ್ಟರ ರಂಗಣ್ಣನ ಮನೆಯ ಬೈಠಕಖಾನೆ (ಹೊಸಂಸಾ. ೧೪೦).

[ ಬೈಠಕು + ಖಾನೆ. / ಹಿಂ. ಬೈಠಕ್‌ಖಾನಾ ]

**ಬೈತ** 'ಬಯ್$_1$' ಪರಾ.

**ಬೈತಲಿಕ್ಕು** (ಕ್ರಿ). ಬೈತಲೆ ತೆಗೆ : ಬೈತಲಿಕ್ಕಿದೆನು ನಾನೆ ನಸ್ನ ಕೈಯಾರ (ಅರಳು. ೨೯೨-೩). [ ಬೈತಲೆ ( < ಬಯ್ತಲೆ ) + ಇಕ್ಕು ]

**ಬೈತಲೆ** 'ಬಯ್ತಲೆ' ನೋ.

**ಬೈತಲೆದೆಗೆ** 'ಬಯ್ತಲೆದೆಗೆ' ನೋ.

**ಬೈತಲೆಬಟ್ಟು**, ಬೈತಲೆಬೊಟ್ಟು (ನಾ). ಬೈತಲೆಗೆ ಧರಿಸುವ ಆಭರಣ ; ಬೈತಲೆಮಣಿ : ಜಡೆಬಿಲ್ಲೆ ಬೈತಲೆಬಟ್ಟು (ಸಿದ್ಧಸಾ. ೦೦-೦೩). **ಬೈತಲೆ ಬೊಟ್ಟು :** ಮಂದಗಮನೆಗೆ ಮಂದಾರದ ಬೈತಲೆಬೊಟ್ಟಂ . . . ಸಮೆದು ಸಿಂಗರಿಸಲೊಡಂ (ರಾಜಶೇ. ೦೫೦-೦೦).

[ ಬೈತಲೆ ( < ಬಯ್ತಲೆ ) + ಬಟ್ಟು ]

**ಬೈತಲೆಬಟ್ಟೆ** 'ಬೈತಲೆವಟ್ಟೆ' ನೋ.

**ಬೈತಲೆಬೊಟ್ಟು** 'ಬೈತಲೆಬಟ್ಟು' ನೋ.

**ಬೈತಲೆಮಾವು** (ನಾ). ಒಂದು ಬಗೆಯ ಮಾವು : ಪುಳಿಮಾವು ಭಾವಿಸ ಲಡಕಿಮಾವು ಗಿಳಿಮಾವು ಬೈತಲೆಮಾವು (ಶಬವನೋ. ೨೯-೯೯).

[ ಬೈತಲೆ ? + ಮಾವು ]

**ಬೈತಲೆವಟ್ಟೆ**, ಬೈತಲೆಬಟ್ಟೆ (ನಾ). ಬೈತಲೆ ತೆಗೆದಿರುವ ಸ್ಥಳ : ಪ್ರಸರಿಸಿದುನ್ನತತಿಮಿರಪ್ರಸರದೊಳೆಡೆಸಿಲ್ಕಿ ಮಿಂಚುವ ಕಿಸುಸಂಜೆಯವೋಲ್ ಮಿಸುಗುವ ಬೈತಲೆವಟ್ಟೆಯೊಲೆಸೆದುದು ಸಿಂದೂರಲೇಖೆ ತಮ್ಮಾಲಿಕೆಯಾ (ಉದ್ಭಟ. ೩-೯೩). **ಬೈತಲೆಬಟ್ಟೆ :** ತೊಲಗದ ಕತ್ತಲೆಯಂ ಪೊಕ್ಕಲೆವಿಂದು ಮರೀಚಿಯಂತೆ ತತ್ಕಾಂತೆಯ, ಬೈತಲೆಬಟ್ಟೆಯೊಳೆಸೆದುದು ಕೋಮಲೆ ಯೊರ್ವಳೆಮರ್ಚಿದೆಳೆಯ ಮುತ್ತುಮಣಿಯ ಸಾಲ್ (ಉದ್ಭಟ. ೮-೨೮).

[ ಬೈತಲೆ ( < ಬಯ್ತಲೆ ) + ಬಟ್ಟೆ$_1$ ]

**ಬೈತಲೆವಣಿ** 'ಬಯ್ತಲೆವಣಿ' ನೋ.

**ಬೈತು** 'ಬಯ್$_1$' ಪರಾ.

**ಬೈತ್ರ** 'ಬಹಿತ್ರ' ನೋ.

**ಬೈದಿತಿ** (ನಾ). ಗಿಡಮೂಲಿಕೆಯ ಔಷಧಿಯನ್ನು ಕೊಡುವವಳು : ದೇಯಿಬೈದಿತಿಯು ಕೂಡಲೆ ಎದ್ದು ತಾನು ತಂದಿದ್ದ ಔಷಧದ ಪೊಟ್ಟಳವನ್ನು ಬಿಚ್ಚಿ ಅಮ್ಮಣ್ಣನು ಮೊದಲು ಹಚ್ಚಿದ್ದ ಮದ್ದನ್ನು ತೊಳೆದು ತೆಗೆದಳು (ಕೋಟಿಚೆ. ೩). [< ಬೈದ್ಯ + –ಇತಿ$_2$ (<–ಇತ್ತಿ)]

**ಬೈದೆ** 'ಬೈದ್ಯ' ನೋ.

**ಬೈದ್ಯ**, ಬೈದೆ, ವಯಿದ್ಯ (ನಾ). ೧. ವೈದ್ಯ; ಡಾಕ್ಟರು : ವೈದ್ಯವೆಂಬುದರ ರೂಪವೇ ಬೈದ್ಯ (ತುಳುನಾ. ೨೨೨); ತಿಮ್ಮಣ್ಣ ಬೈದ್ಯನ ಮನೆಯೊಳಕ್ಕೆ ಹೋದನು (ಕಸ್ತ್ಯ. ೬೩). ೨. ಒಂದು ಜಾತಿಯ ಹೆಸರು ಮತ್ತು ಆ ಪಂಗಡದವರು ತಮ್ಮ ಹೆಸರಿನ ಕೊನೆಯಲ್ಲಿ ಸೇರಿಸಿಕೊಳ್ಳುವ ಶಬ್ದ : ಬಿಲ್ಲವರನ್ನು ಬೈದ್ಯ ಎಂದೂ ಕರೆಯುತ್ತಾರೆ (ತುಳುನಾ. ೨೨೨); ಅವಳಿಗೆ ಏಳು ವರ್ಷ ವಯಸ್ಸು ಎಂದಾಗ ಪಂಜದಲ್ಲಿನ ಪಯ್ಯ ಬೈದ್ಯನಿಗೆ ಕೈ ಹಿಡಿಸಿ ಕೊಟ್ಟುಬಿಟ್ಟದ್ದೇವೆ (ಕೋಟಿಚೆ. ೩). **ಬೈದೆ :** ೧. ಇವರು . . . ಗಿಡಮೂಲಿಕೆಯ ಔಷಧಿಗಳನ್ನು ಕೊಡುವ ಉದ್ಯೋಗವನ್ನು ಮಾಡುತ್ತಿದ್ದುದರಿಂದಲೂ ಬೈದ್ಯ(ಬೈದೆ) ಎಂದು ಕರೆಯಲ್ಪಟ್ಟರು (ತುಳುನಾ. ೨೨೩). **ವಯಿದ್ಯ :** ೨. ವಾಸ್ತೇವವಯಿದ್ಯ ನಾರನವಯಿದ್ಯ . . . ಯಿಂತಿನಿಬರು . . . ಕೊಟ ಶಾಸನದ ಕ್ರಮವೆಂತೆಂದರೆ (ಸೌಇಇ. IX–ii, ೪೩೦-೦೬ ; 1406); ನಾರಣವಯಿದ್ಯನ ಹಾಳಿಯ × × × (ಎಕ. VIII, ತೀರ್ಥಹ. ೦೬೩-೦೦ ; 1424).

[ < ಸಂ. ವೈದ್ಯ./ತುಳು. ಬೈದ್ಯ ]

**ಬೈನಾಡು** (ನಾ). ಬಯಲುಸೀಮೆ,–ಪ್ರದೇಶ ; ಪಾಂಡಿ, ಕೊಂಗು, ವಯನಾಡು, ತುಳು ಮತ್ತು ಪುನ್ನಾಡು ಎಂಬ ಕೇರಳದ ಐದು ಸೀಮಾಪ್ರದೇಶಗಳಲ್ಲಿ ಒಂದು; ಈಗಿನ ವೈನಾಡು : ಬೈನಾಡ ಸೀಮೆ ತಮ್ಮ ಅಧೀನ ಎಂದು, ತಾವು ಫಿರಿಯಾದಿ ಮಾಡಿದ್ದು ನಾವು ವಿಚಾರಣೆ ಮಾಡಿದ್ದರಲ್ಲಿ. . . ನಕಲು ನಮಗೆ ಬಂದು ಸೇರಿತು (ರಾಜೇಂದ್ರ. ೦೬೦).

[←ಮಲ. ವಯನಾಡು]

**ಬೈನಿ** 'ಬಯಿನೆ' ನೋ.

**ಬೈನೆ** 'ಬಯಿನೆ' ನೋ.

**ಬೈಪಣೆ** (ನಾ). ಕೊಟ್ಟಿಗೆಯಲ್ಲಿ ದನಕರುಗಳಿಗೆ ಮೇವು ಹಾಕುವುದಕ್ಕಾಗಿ ಕಟ್ಟಿರುವ ತೊಟ್ಟಿ; ಗೋದಲೆ; ಗೊಂತು : ದನಗಳ ಮೋರೆ ಎಟುಕುವಲ್ಲಿ ನೆಲವನ್ನು ಮಣ್ಣಿನಿಂದ ಏರಿಸಿ ಬೈಹುಲ್ಲು ಹಾಕಲು ಬೈಪಣೆ ಮಾಡಿರುವರು (ಬಾಳಿಗ. ೪೦). [←ತುಳು. ಬೈಪಣೆ]

**ಬೈಬಲ್** 'ಬೈಬಲ್ಲು' ನೋ.

**ಬೈಬಲ್ಲು**, ಬೈಬಲ್ (ನಾ). ಕ್ರೈಸ್ತರ ಧರ್ಮಗ್ರಂಥ : ಪೂರ್ವೋತ್ತರಮೀಮಾಂಸೆಗಳೆರಡೂ. . . ಬೈಬಲ್ಲಿನ ಓಲ್ಡ್ ಟೆಸ್ಟ್‌ಮೆಂಟ್ ಮತ್ತು ನ್ಯೂ ಟೆಸ್ಟ್‌ಮೆಂಟ್ ಇದ್ದ ಹಾಗೆ (ಶಾರದ. ೦೬೦) ; 'ಶತ್ರುವು ಬಲದ ಗಲ್ಲದ ಮೇಲೆ ಹೊಡೆದರೆ ಎಡಗಲ್ಲವನ್ನೂ ಮುಂದು ಮಾಡಿ'ಯೆಂದು ಬೈಬಲ್ಲು ಹೇಳುತ್ತದೆ (ಧರ್ಮಸಾ. ೦೪೮). **ಬೈಬಲ್ :** ಕ್ರೈಸ್ತರ ಒಂದು ಸಾಂಪ್ರದಾಯ . . . ಬೈಬಲ್‌ವಾಕ್ಯವನ್ನು ಪ್ರಮಾಣವಾಗಿ ತೋರಿಸಿ ಸ್ತ್ರೀಯರಲ್ಲಿ ಆತ್ಮವಿಲ್ಲವೆಂದು ವಾದಿಸುತ್ತಾರೆ (ಕಾಪಾತ್ಯ. ೦೯೩). [←ಇಂ. Bible]

**ಬೈಮಾತು** (ನಾ). ಬಯ್ಯುವ ಮಾತು; ತೆಗಳಿಕೆ; ನಿಂದೆ : ಕನ್ನಡದಲ್ಲಿರುವ ನಮ್ಮ ಬೈಮಾತುಗಳನ್ನು ನೋಡು. ತೀರಾ ಮಿದು, ಸಪ್ಪೆ, ನೀರಸ, ನಿಷ್ಪ್ರಯೋಜಕ (ಸಹಲ. II, ೮೬೩).

[ಬೈ$_2$ (<ಬಯ್$_2$) + ಮಾತು$_1$]

**ಬೈಮೂಗ** 'ಭೈಮೂಗು' ನೋ.

**ಬೈಯ** 'ಬಯ್$_3$' ನೋ.

**ಬೈಯು** 'ಬಯ್$_2$' ನೋ.

**ಬೈರ** 'ಬೈರವ' ನೋ.

**ಬೈರಗ** (ನಾ). ಒಂದು ಬಗೆಯ ಪಕ್ಷಿ : ಆ ಪನಂಗಳೊಳು ಶುಕ. . . ಬೈರಗ . . . ವಾಸಕ ಮೊದಲಾದ ಚಿತ್ರರೂಪಪಕ್ಷಿಗಳುಳ್ಳ ಪಕ್ಷಿಕುಲಂಗಳುಂ (ಶಿವೇಕ. ೨೨೨). 'ಭೈರಿ' ಪರಾ. [ ? ]

**ಬೈರಗಿ** 'ಬೈರಿಗೆ' ನೋ.

**ಬೈರಗಿಬೀಟ್** (ಕ್ರಿ). (ರಂಧ್ರಮಾಡುವ ಸಾಧನದಿಂದ ಕೊರೆದಂತೆ) ತೂತು ಬೀಳು ; ರಂಧ್ರವಾಗು : ಧಾರಾವಾದದಿಂದೆ ನೆಲಂ ಬೈರಗಿ ಬೀಟ್ಟಂದದಿಂದೆ ಬಿಡುತಪ್ಪ ಮಹಾವಾರಣಘಟೆಯಿಂ ನಿಚ್ಚಂ ಕಾರಂ ಕೈಕೊಂಡು ಮೆಚಿಳ್ವುದಾತನ ರಾಜ್ಯಂ (ಸೂಕ್ತಿಸು. ೩-೮).

[ಬೈರಗಿ (<ಬೈರಿಗೆ) + ಬೀಟ್$_1$]

**ಬೈರವ**, ಬೈರ (ನಾ). ೧. ಶಿವ; ಈಶ್ವರ: ಭಕಾರಕ್ಕೆ ಬಕಾರಂ. . . ಭೈರವ ಬೈರವ, ಭೋಗ—ಬೋಗ (ಶಮದ. ೨೫೫ ಪ್ರಯೋ). **ಬೈರ:** ೨. ಒಬ್ಬಾತನ ಹೆಸರು: ಕಿಬ್ಬಂ ಬನ್ದನ ಬೈರನಯ್ದ ಜಯುಮಂ...ಮಾಟ್ಬಿಂ (ಎಪಿ. IV (R). ಕೃಕ್ಕ.ವ. ೪೦–೬; ೨೦೦). 'ಬೈರವೋಜ' ಪರಾ. [<ಸಂ. ಭೈರವ]

**ಬೈರವಾಸ** 'ಬೈರಾಸು' ನೋ.

**ಬೈರವೋಜ** (ನಾ). ಒಬ್ಬಾತನ ಹೆಸರು: ಗೋಪಾಲದೇವನ ಮಗ ಗಯುಂಣನು ಬೈರವೋಜಂಗೆ . . . ಕೊಟ್ಟ ಭೂಮಿಯು ಕ್ರಮ (ಎಕ. VII, ಶಿಕಮೊ. ೯೪–೩: ?). [ಬೈರ (<ಬೈರವ) +ಓಜ$_1$ (<ಒವರ್ಜು)]

**ಬೈರಾಗಿ** (ನಾ). ಸಂಸಾರದಲ್ಲಿ ಆಸಕ್ತಿಯನ್ನು ಕಳೆದುಕೊಂಡವನು ; ವಿರಕ್ತ; ವಿರಾಗಿ: "ಬೈರಾಗಿ—ವೈರಾಗಿನ್" (ಶಬ್ದಕೋ. ೩೨); ಕೆಲ ಬೈರಾಗಿಗಳೂ ಮಾಂತ್ರಿಕರೂ ನಾವು ಚಿನ್ನವನ್ನು ಮಾಡಬಲ್ಲೆವೆಂದು ಹೇಳುತ್ತಾರೆ (ಮುಂಬಯಿ. ೪-೦೦೬) ; ಬೈರಾಗಿಯು ಮಂಟಪದಲ್ಲಿ ಯೋಗಪಟ್ಟವನ್ನು ಹಾಕಿಕೊಂಡು ಕುಳಿತಿದ್ದನು (ಶ್ರೀರಾಮ. ೯೨). [<ಸಂ. ವೈರಾಗಿನ್]

**ಬೈರಾಗಿಣಿ** (ನಾ). ವಿರಕ್ತೆ; ವಿರಾಗಿಣಿ : ಬೈರಾಗಿಣಿಯೂ ನಾನೂ ನಾಳೆ ನಗರಕ್ಕೆ ಹೊರಡುತ್ತೇವೆ (ರಾಂಅ. ೦೦೦). [< ಸಂ. ವೈರಾಗಿಣೀ]

**ಬೈರಾಗಿತನ** (ನಾ). ವಿರಕ್ತಿ; ವೈರಾಗ್ಯ: ಬೈರಾಗಿತನಕ್ಕೆ ಮರುಳಾದವರಿಗೆ ಮನೆಯು ಹೆಂಗಸಿನ ಹಂಗೆ ? (ಶಿರಾಶ. ೫೯). [ಬೈರಾಗಿ + — ತನ]

**ಬೈರಾವಳಿ** (ನಾ). ಒಂದು ಬಗೆಯ ಬಟ್ಟೆ : ಕೊಡಗು ಮಳಲಕಂತೆ ಹರಹಿನ ಡಣ್ಣಗಳೊಡನೊಪ್ಪುತಿಹ ಬೈರಾವಳಿಯು ಕಡುಸೊಬಗಾಂತಿಹ ಚಂದ್ರೋದಯುಶಾಲಿಯೆಡೆವಿಡದೆಸೆಯುವರ್ತಿಯುಲಿ (ಕಂಪಾ. ೫–೬೦). [ ? ]

**ಬೈರಾಸ** 'ಬೈರಾಸು' ನೋ.

**ಬೈರಾಸು**, ಬೈರವಾಸ, ಬೈರಾಸ, ಬೈರ್ವಾಸ (ನಾ). ೧. ಮೈಮೇಲೆ ಹೊದೆಯುವ ವಸ್ತ್ರ ; ಉತ್ತರೀಯ: ಕತ್ತಿ, ಎಲೆಅಡಿಕೆ ಚೀಲ, ಒಂದು ಬೈರಾಸು. ಇಷ್ಟನ್ನು ತಾನೇ ಹುಡುಕಿ ತೆಗೆದುಕೊಂಡು ಗುಡಿಸಲಿನಿಂದ ಹೊರಬಿದ್ದ (ಕುಡಿಕೂ. ೦೨೬). ೨. ನೀರು ಹೀರಲು ಅನುಕೂಲವಾಗಿರುವಂತೆ ಜಾಳುಜಾಳಾಗಿ ಹೆಣೆದ ವಸ್ತ್ರ; ಪಾಣಿಪಂಚೆ : ತಲೆಯೊರಸಲು ಬೈರಾಸನ್ನು ಹುಡುಕಿ ತಂದಿಟ್ಟು . . . ಕರೆಯುವಾಗ ಪಂಡಿತರು ಬಚ್ಚಲು ಮನೆಯೊಳಗೆ ಬಂದಿದ್ದರು (ಅನುಕ. ೪೦); ಮೊಳಕೈವರೆಗೆ ಒಂದು ಅಂಗಿ. ಆರೇಳು ಮೊಳದ ಒಂದು ಚುಂಗು ಪಂಚೆ . . . ಹೆಗಲ ಮೇಲೊಂದು ಬೈರಾಸು (ಟಾವೆಲ್) (ಹಕ್ಕಿನೋ. ೦೫). **ಬೈರವಾಸ** : ೧. ಬಿದ್ದ ದೋತ್ರವನ್ನೂ ಬೈರವಾಸವನ್ನೂ ಎತ್ತಬೇಕು (ಪಗಗ. ೬೭). **ಬೈರಾಸ** : ೧. ಸನ್ನ ಮೈಯನ್ನು ಒಂದು ಬೈರಾಸದಿಂದ ಮುಚ್ಚಿಕೊಂಡೆ (ಬಟ್ಟಚಿ. ೬೪); ಸೇವಕ ಕಿರುಪಂಚೆ ಮತ್ತು ಬೈರಾಸಗಳನ್ನು ತಂದು ಪ್ರಭುಗಳಿಗೆ ಕೊಟ್ಟ (ಹುಂಿಹಾ. ೫೬). **ಬೈರ್ವಾಸ** : ೨. ಹಚ್ಚಡ ಚೆಂದಿಕುಪ್ಪಸಗಳನಿಂಬಿಟ್ಟು ಸ್ವಚ್ಛದ ಬೈರ್ವಾಸದೊಡನೆ ಬೆಚಚ್ಚದೆ ಮಿಂದರು (ಮೋಹಕ. ೩–೪೩).

[ < ಸಂ. ಬಹಿರ್ವಾಸಸ್ . / ತುಳು. ಬೈರಾಸ್, ಬಯಿರಾಸ್; ತೆಲು. ಬೈರವಾಸ, ಬಯಿರವಾಸ]

**ಬೈರಿ**, ಭೈರಿ$_2$ (ನಾ). ಒಂದು ಬಗೆಯ ಮರ : ಅಜ್ಜನ ಪಟ್ಟೆ, ಅರಂಜೆ, ಬೈರಿ, ಜಾಗುರಿ, ವಿಷವೃಕ್ಷ (ವೃಶಿಗ. ೭–೦೨೫). **ಭೈರಿ$_3$** : "ಅಜ್ಜನ ಪಟ್ಟೆ, ಅರಣ್ಯಪಟ್ಟೆ, ಅರಣ್ಯ, ಅರಂಜೆ, ಭೈರಿ . . . ವಿಷವೃಕ್ಷ" (ಸಸ್ಯಪ. ೦೩). [ ? ]

**ಬೈರಿಗೆ**, ಬೈರಗಿ (ನಾ). ೧. (ಭೂಮಿ, ಮರ ಮುಂತಾದುವುಗಳನ್ನು) ತೂತು ಕೊರೆಯಲು ಬಳಸುವ ಒಂದು ಬಗೆಯ ಉಪಕರಣ : ಬೈರಿಗೆ . . . ಮರದ ಒಳಕ್ಕೆ, ಹೋಗುವ ಆಯುಧ (ಪಮ್ಮಮು. ೦೦೫); ಇದನ್ನು ಭೂಮಿಯಲ್ಲಿ ಸಾವಿರಾರು ಅಡಿಗಳ ಆಳಕ್ಕೆ ಕಂಡಿಗಳನ್ನು ಕೊರೆಯುವುದಕ್ಕಾಗಿ ತಯಾರು ಮಾಡುವ ಬೈರಿಗೆಗಳಿಗೆ ಉಪಯೋಗಿಸುವರು (ವಿಜ್ಞಾಪ. ೩೬). ೨. (ಆಲಂ) ಬೇಸರ ತರಿಸುವುದು; ತಲೆಚಿಟ್ಟು ಹಿಡಿಸುವುದು : ಅವನ ಬೈರಿಗೆ ಪ್ರಾರಂಭವಾಗಿ ಆಗಲೇ ತುಂಬಾ ಹೊತ್ತಾಯಿತು (ರೂಢಿ). ೩. ತಲೆಚಿಟ್ಟು ಹಿಡಿಸುವವನು ; ಬೇಸರವನ್ನುಂಟು ಮಾಡುವವನು : ಅವನೊಬ್ಬ ಬೈರಿಗೆ. ಅವನ ಸಹವಾಸ ಎಲ್ಲರಿಗೂ ಸಾಕಾಗಿದೆ (ರೂಢಿ). **ಬೈರಗಿ** : ೧. ಚಂಡಬಲ ನುಗ್ಗಾಯ್ತು ಬಲ ಮುಂಕೊಂಡು ಬರೆ ಬೈರಗಿಯಿನರೆದಂತಾಯ್ತು (ಸಂಭಶ. ೭–೩೬). 'ಬೈರಗಿಬೀಟಿ' ಪರಾ.

[ದೇ. ‖ ತುಳು. ಬೈರಿಗೆ, ಬೈರಯಿ, ಬೈರವು]

**ಬೈರಿಗೆಕೊರೆ** (ಕ್ರಿ). ೧. ರಂಧ್ರ ಮಾಡುವ ಸಾಧನದಿಂದ ತೂತು ಕೊರೆ : ಅವನು ಬಾಗಿಲಿಗೆ ಬೈರಿಗೆಕೊರೆದು ಅಗುಳಿಯನ್ನು ಆಳವಡಿಸಿದನು (ರೂಢಿ). ೨. (ಆಲಂ) ಇರಿ ; ಚುಚ್ಚು: ಬಾಲಕರೆಲ್ಲರ ಮನದಲ್ಲೂ ಭೀತಿ ಬೈರಿಗೆ ಕೊರೆಯುತ್ತಿತ್ತು (ಪದೀಶ. ೦೬). [ಬೈರಿಗೆ + ಕೊರೆ$_1$ (< ಕೊಜ್$_1$)]

**ಬೈರೂಪ** (ನಾ). ೧. ನಾನಾ ಬಗೆಯ ರೂಪ,—ವೇಷ,—ಸೋಗು ; ಬಹುರೂಪ : ಗಡ್ಡ ಜಡೆ ಕಂಥೆ ಲಾಂಛನವ ತೊಟ್ಟಿರುವ ಬೈರೂಪದಂತೆ (ಗಣಶಾ. ೨೮೦–೨) ; ಬಹುಬಗೆಯಿಂದ್ರಜಾಲಿಗಳ್ಬೈರೂಪದವರು ತಾಳ ಮುದ್ದಳಿಗರಿಗಳೆವ ಪಡಿಯ ರತ್ನಕೀಲಿತಗೃಹಗಳೊಪ್ಪಿದುವು (ಕಂಪಾ. ೨೦–೪೯) ; ತಮ್ಮ ಧರ್ಮದಲ್ಲಿನ ಉತ್ತಮಾಂಶಗಳನ್ನು ಹುಡುಕಿ ತೆಗೆಯುವುದಕ್ಕೂ ಅದರ ಅಸಹ್ಯ ಬೈರೂಪಗಳನ್ನು ಬಿಸುಡುವುದಕ್ಕೂ ಇದು ಹಿಂದುಗಳನ್ನು ಉತ್ತೇಜಿಸಿತು (ಕಕ್ಕಶಾ. ೫೭೬). ೨. ಸೋಗು ಹಾಕುವವನು ; ವೇಷಧಾರಿ : ಉಟ್ಟರೆ ತೊಟ್ಟರೇನಯ್ಯ ನಟ್ಟುವರಂತೆ ಕೊಟ್ಟರೆ ಕೊಂಡರೇನಯ್ಯ ವೇಶಿಯರಂತೆ ಬಿಟ್ಟರೆ ಕಟ್ಟಿದರೇನಯ್ಯ ಬೈರೂಪನಂತೆ (ಪಶಸಂ. ೨೫೯–೫೯).

**ಬೈರೂಪದಾಟ** = ಬಗೆಬಗೆಯ ವೇಷಗಳನ್ನು ಹಾಕಿಕೊಂಡು ಮಾಡುವ ಪ್ರದರ್ಶನ; ವೇಷದಾಟ : ಒಂದು ದೆಸೆಯೊಳಿಂದ್ರಜಾಲವ ತೋರುವ ಮಂದಿ ಬೈರೂಪದಾಟಗಳ ಸಂದಣಿ ಹಾಸ್ಯರಸಗಳಿಂದ ಮೆರೆದುದಂದಿನ ಸಭೆಯಾರ್ತಿಯುಲಿ (ಕಂಪಾ. ೨೧–೦೦೭). [<ಸಂ. ಬಹುರೂಪ]

**ಬೈರ್ವಾಸ** 'ಬೈರಾಸು' ನೋ.

**ಬೈಲ**, ಬಯಿಲ (ನಾ). ಒಂದು ಬಗೆಯ ಬತ್ತ: "ಸಿತಶಾಲಿ ಕೆಂಗಬವೆ ಕೆಂಬತ್ತಿರಾಜಾನ್ನಮವು ಬೈಲವೆಂದಿವು ನೆಲ್ಲ ಭೇದಂಗಳಕ್ಕು" (ಜುಂಗಶಾ. ೦೦೦–೪). **ಬಯಿಲ:** (೬).

**ಬೈಲಾಟ** 'ಬಯಲಾಟ' ನೋ.

**ಬೈಲು** 'ಬಯಲ್' ನೋ.

**ಬೈಲುಕಡೆ** 'ಬಯಲ್ಕಡೆ' ನೋ.

**ಬೈಲುಗಂಬಾರ** 'ಬೈಲುಗಮ್ಮಾರ' ನೋ.

**ಬೈಲುಗದ್ದೆ** (ನಾ). ಸಮತಟ್ಟಾದ ಪ್ರದೇಶದಲ್ಲಿರುವ ಗದ್ದೆ ; ಬಯಲುನಾಡಿನಲ್ಲಿರುವ ಗದ್ದೆ : ಬೈಲುಗದ್ದೆ, ಬೆಟ್ಟುಗದ್ದೆ, ಕಾಡು ಬೀಡು ಎಲ್ಲ ಕೂಡಿ ಅಷ್ಟಾಗುತ್ತದೆಯಾ ? (ಬಾಳಿಗ. ೦೫).

[ ಬೈಲು (<ವಯಲ್) + ಗದ್ದೆ (<ಗಟ್$_2$) ]

**ಬೈಲುಗಮ್ಮಾರ**, ಬೈಲುಗಂಬಾರ (ನಾ). (ಜೀವನನಿರ್ವಹಣೆಗಾಗಿ ಊರಿಂದೂರಿಗೆ ಅಲೆಯುತ್ತ) ಊರಿನ ಹೊರಭಾಗದಲ್ಲಿ ಬೀಡು ಬಿಡುವ ಕಮ್ಮಾರರ ವರ್ಗ ಮತ್ತು ಆ ವರ್ಗಕ್ಕೆ ಸೇರಿದ ವ್ಯಕ್ತಿ: ಆ ನರಿಯು ತಿರುಗಾಡುತ್ತ, ಊರ ಮುಂದೆ ಇರುವ ಬೈಲುಗಮ್ಮಾರನ ಗುಡಸಲೊಳಗೆ ಹೊಕ್ಕಿತು (ಮುಂಬಯಿ. ೨–೧೪). **ಬೈಲುಗಂಬಾರ** : ಬೈಲುಗಂಬಾರರು ಹೋರೆ ಹುಡುಕುತ್ತ ಊರಿಂದೂರಿಗೆ ತಿರುಗುತ್ತಿರುತ್ತಾರೆ. ಹೋದಲ್ಲಿ ಊರ ಹೊರಗೆ ಗುಡಾರ ಹೊಡಕೊಂಡು ಹೋರೆ ದೊರೆಯುವವರೆಗೆ ನಿಲ್ಲುವರು (ಕಠಾಗ. ೦೫೭).

[ ಬೈಲು (<ವಯಲ್) + ಕಮ್ಮಾರ(<ಕಮ್ಮಜ) ]

**ಬೈಲುಭೂಮಿ** (ನಾ). ಬಯಲಿನಿಂದ ಕೂಡಿದ ಪ್ರದೇಶ : ಮಂಡಲಾಕಾರವಾಗಿ ಸವ್ಯಾಪಸವ್ಯವಾಗಿ ತಿರುಗಾಡುತ್ತ, ನದೀತಟಂಗಳಂ ಹಾರುತ್ತ, ಬೈಲುಭೂಮಿಯೊಳು ಘಾಳಿಯಂತೆ ಧಾಳಿಯಂಗೈಯುತ್ತ (ಕಣಂ. ೩೦೭-೭).

[ಬೈಲು (< ಬಯಲ್) + ಭೂಮಿ]

**ಬೈಶಣಿಗೆ** 'ಬಯಿಸಣಿಗೆ' ನೋ.

**ಬೈಸ** (ನಾ). ೧. ಚತುರ್ವರ್ಣಗಳಲ್ಲಿ ಒಂದು : ವೈಶ್ಯ: 'ಬೈಸಕುಳ'. 'ಬೈಸಾನ್ವಯ' ಪರಾ. ೨. ವೈಶ್ಯ ಮತ್ತು ಕುಡಿಯರ ಸಂಬಂಧದಿಂದಾದ ವಂಶ.—ಮನೆತನ : ವರವೈಶ್ಯರೊಳೊರ್ವ್ವಂ ಕುಡಿಯರ ಕೂಸಂ ಮದುವೆಸಿಲ್ದೊಡಾ ದಂಪತಿಗಾದರದಿಂ ಪುಟ್ಟಿದ ಸುತರಂ ಧರೆ ಬೈಸರೆನಲ್ಕೆ ಬೈಸರೆನಿಸಿದರವರ್ಗಳು (ಕಇ. I, ೨೩-೪೯; 1180).

[< ಸಂ. ವೈಶ್ಯ./ಹಿಂ. ಬೈಸ]

**ಬೈಸಕುಳ** (ನಾ). ವೈಶ್ಯರ ವಂಶ; ವೈಶ್ಯಕುಲ : ಬೈಸಕುಳಕಮಳ ಮಾರ್ತ್ತಣ್ಡರು ಬೈಸಕುಳಾನ್ವಯರಪ್ಪ ತೋಜಿಗಲಿಯ ಭೂತರಸರುಂ ಮಲ್ಲಿಗೆಯರಸರುಮಿರ್ದು ಬಿಟ್ಟ ಧರ್ಮ್ಮಂ (ಕಇ. XI-ii. ೦೩೬-೪೭; 1109).

[ಬೈಸ + ಕುಳ (= ಕುಲ)]

**ಬೈಸಣಿಗೆ**$_1$ (ನಾ). ೧. [ಸಂಗೀತ] ವೀಣೆಯ ಬುರುಡೆಯ ಮೇಲ್ಭಾಗದಲ್ಲಿ ತಂತಿಗಳನ್ನು ಹಿಡಿದಿಟ್ಟಿರುವ (ಸೇತುವೆಯಂಥ) ಎತ್ತರವಾದ ಭಾಗ: ದಂಡ ಜಾತಿ ಮುಖ್ಯ ಬೈಸಣಿಗೆ ಮುಂತಾದವಂ ಪ್ರಮಾಣಿಸಿ . . . ತಂತ್ರಿಗಳಂ ಕಳಿಯೋಜಿಸಿ (ಬಪೀಕ. ೨೩೭); ಅದಜಲ್ಲಿ ದಂಡ ಜಾತಿ ಮುಖಿ ಬೈಸಣಿಗೆ ಮುಂತಾದವಂ ಪ್ರಮಾಣಿಸಿ ಆಯಾ ರಾಗಾನುಗುಣ್ಯಮಾಗಿ ಮೇಳೈಸಿ (ಶೃರಕು. ೩-೩ ಶ). ೨. ಒಂದು ರಾಗದ ಹೆಸರು (?): ಇವಜ ಕಾಯುವ ಮಾಡುವಲ್ಲಿ ಮಸರದೊಳು ಹುಟ್ಟುವುದದೇ ಭ್ರಾಮಕಂ ಗೀತವಾಣಿತಿಯು ಸಂಭವದೀರ್ಘತಾಳದೊಳು ಲಲಿತಯಾಣಿತಿ ಗುರುತ್ವಂ ನುಡಿವ ಬೈಸಣಿಗೆಯುಂ (ಬೀಕ್ಮಕ. ೬-೦-೩೩).

[←ತುಲು. ಬೈಸಣ, ಬಯಿಸಣ]

**ಬೈಸಣಿಗೆ**$_2$ 'ಬಯಿಸಣಿಗೆ' ನೋ.

**ಬೈಸನಿಗೆ** 'ಬಯಿಸಣಿಗೆ' ನೋ.

**ಬೈಸರು, ಬೈಸಾರಿ, ಬೈಸಾರು, ಬೈಸಾರೆ** (ನಾ). ಸಂಜೆಯ ಸಮಯ; ಸಾಯಂಕಾಲ; ಇಳಿಹೊತ್ತು : ನಿನ್ನೆ ಸಾಯಂಕಾಲ ಬೈಸರ್ನಾಗ ಇಲ್ಲಿಗೆ ಹತ್ರ ಇರೋ ಊರಿಗೆ ತಪಾಲುಬಸ್ನಾಗ ಬಂದೆ (ಋಶಿಮು. ೭). **ಬೈಸಾರಿ** : ಸೂತಕ ನಿವಾರಣೆಯಾಗುವವರೆಗೂ ಪರ ಊರಲಿರಲಿಕ್ಕೆ ಮನಸ್ಸಿಲ್ಲದೆ ಅವನು ಬೈಸಾರಿ ಸಮಯ ಗುರುದರ್ಶನಕ್ಕೆ ಹೊರಟನು (ವಾಗ್ಲೆ. ೬೪). **ಬೈಸಾರು** : ಈಗ ಮಂಗಳೂರಿಗೆ ಮೋಟಾರಿನಲ್ಲಿ ಹೊರಟದ್ದೇ ಆದರೆ ಬೈಸಾರಿಗೆ ಕಾಂಚನಕ್ಕೆ ಹೋಗುವ ಮೋಟಾರು ಸಿಕ್ಕೀತು (ಹೂಕಕ್ಷಿ. ೯೩). **ಬೈಸಾರೆ** : ಹೊತ್ತಾರೆ ಹೋದವರೇತಕೆ ಬಾರರು ಬೈಸಾರೆಯಾದರು ಇವರು (ತಂತ್ರಬೀ. ೦೦೯-೩೬). [ ? ]

**ಬೈಸಾನ್ವಯ** (ನಾ). = ಬೈಸಕುಳ : ಶತ್ಪಾದಪದ್ಮೋಪಜೀವಿ ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತಂ ಸಮರವಿಜಯಲಕ್ಷ್ಮೀಕಾನ್ತ ಬೈಸಾನ್ವಯಸರೋಜವನಮಾರ್ತ್ತಣ್ಡಂ (ಕಇ. XX. ೦೬-೮ : ೮೮೦).

[ಬೈಸ + ಅನ್ವಯ]

**ಬೈಸಾರಿ** 'ಬೈಸರು' ನೋ.

**ಬೈಸಾರು** 'ಬೈಸರು' ನೋ.

**ಬೈಸಾರೆ** 'ಬೈಸರು' ನೋ.

**ಬೈಸಿಕಲ್ಲು, ಬೈಸ್ಕಲ್ಲು** (ನಾ). ಕಾಲುಗಳನ್ನು ಪೆಡಲುಗಳ ಮೇಲೆ ಒತ್ತಿ ನಡೆಸುವ ಎರಡು ಚಕ್ರಗಳ ವಾಹನ: ಸೈಕಲ್ಲು; ರಂಗಣ್ಣ ಬೈಸಿಕಲ್ಲಿಂದ ಇಳಿದು ನಡೆದುಕೊಂಡು ಹೊರಟನು (ರಂಗಕ. ೨೭). **ಬೈಸ್ಕಲ್ಲು** : ಬೂಟನ್ನು ಗಳನ್ನು ಎಡಗೈಯಲ್ಲಿ ಹಿಡಿದೆತ್ತಿಕೊಂಡು ಬಲಗೈಯಿಂದ ಬೈಸ್ಕಲ್ಲನ್ನು ತಳ್ಳಿಕೊಂಡು ನೀರಿನೊಳಕ್ಕೆ ರಂಗಣ್ಣ ಇಳಿದನು (ರಂಗಕ. ೨೮).

[← ಇಂ. Bicycle]

**ಬೈಸಿಕೆ, ಬಯ್ಸಿಕೆ. ಬಸಿಗೆ. ಬಸ್ಕಿ. ಬೈಸಿಗೆ** (ನಾ). ೧. ಮಂಡಿಯೂರಿ ಕುಳಿತುಕೊಳ್ಳುವುದು : ಅಳಿದೊಡೆಯನಾ ಕಂಡಾನೆ ಬೈಸಿಕೆಯಿಂದ ತೋಳೆತ್ತಿ ಕೊಡುತ ಸಲ್ಲಾಮ (ಕಂಠೀ. ೩-೬೦). ೨. ಕುಳಿತುಕೊಳ್ಳುವ ಭಂಗಿ—ರೀತಿ : ಯಮನಿಯಮ ನಿಷ್ಠೆಯಲಿ ಬೈಸಿಕೆ ಕಮಲಸಂಜ್ಞಕದೆನಲು ಪವನಕ್ರಮವನಳವಡಿಸದನು ಮೂಜು ತದಂಗವಿಧಿಗಳಲಿ (ಚಿಾಚ. ೪-೦೩-೯೦). ೩. ಎರಡು ಕಾಲುಗಳ ಮೇಲೆ ಭಾರ ಬಿಟ್ಟು ಕುಳಿತು-ನಿಂತು ಮಾಡುವುದು; ಊಟಬೈಸು : (೯). ೪. ಕುದುರೆ ಸವಾರಿಯಲ್ಲಿಯ ಒಂದು ಪ್ರಕಾರ; ಸವಾರಿಯಲ್ಲಿ ಎದ್ದು, ಕುಳಿತು ಮಾಡುವುದು : ಹಯಶಿಕ್ಷಾಕ್ರೀಡೆಯುಂ ತೋಜುವ ಹರಿಸುತನೋ ತಾನೆನಿಪ್ಪಂದದಿಂ ಪನ್ನಿಯ ಸೋಂಕುಂ ಬಿಂಕಮುಂ ಬೈಸಿಕೆಯ ನಿಜಗೆಯುಂ ನಿಶ್ಚಲತ್ರಾಣಮುಂ . . . ಪೊವಟ್ಟೊಪ್ಪಿ ದಲ್ ನಾಡೆಯುಮಾ ಕಂದರ್ಪದೇವಂ ಸುರುಚಿರ ತುರಗಾರೂಢಿಯೊಳ್ ಪ್ರೌಢನಾದಂ (ಕುಸುಚ. ೬-೭೩). ೫. ವ್ಯಾಪಿಸಿರುವ ಎಡೆ : ಆ ನೆಲದೊಳೆರೆಂಟುಸಾವಿರದ ಯೋಜನಮದಾ ನಿರಂತರವು ಸುರಗಿರಿಯ ಬೈಸಿಕೆಯಾಯ್ತು (ಬಿತಿಃ. ೨೬-೪೭). ೬. ದೃಢತೆ; ಅಚಲತೆ : ತೂಜಾದರೆ ತನಿಪೊಟ್ಟು ಗಾಳಿಗೆ ಹಾಜುತ್ತಿಹ ಬಲಗಿರಿಯ ಬೈಸಿಕೆ ಜಾಜುವುದೆ (ಕುಬ್ಬಧ್ರೀ. ೦೩-೪೪); ಕಳಚಿತರಸನ ಮನದ ಧೈರ್ಯಾಚಲದ ಬೈಸಿಕೆ (ಕೂರಣ. ೦-೦೭-೩). ೭. [ನಾಟ್ಯ] (ನೃತ್ಯ. ಅಭಿನಯ ಮುಂತಾದುವುಗಳಲ್ಲಿ ಕುಳಿತಂತೆ ನಟಿಸಿ ಮುಂದೆ ಸಾಗುವ) ಒಂದು ಬಗೆಯ ಭಂಗಿ : ಸುತ್ತುವಳೆಯಂ ತಿರುಪು ಚಾರಿ ಬೈಸಿಕೆ ಪುಟವದೊತ್ತಿ ತೋಜುವ ಪಚ್ಚೆಯನಿಕ್ಕು (ಋಂಗಚ. ೨೩-೯). ೮. [ಸಂಗೀತ] ವಾದ್ಯಗಳನ್ನು ಬಾರಿಸುವ ಅಥವಾ ರಾಗಗಳನ್ನು ಹಾಡುವ ಒಂದು ಬಗೆ : ಕಾಳಿಸಿ ಬೈಸಿಕೆ ಪಟ್ಟ ಕಾಂತಿ . . . ಬೆಲ್ಲಕೆ ಕಳೆಯೆಂಬಿವಂ ಮೆಜೆದು ಬಾಜಿಸಿದಂ ಮುರವೈರಿ ಹಾಸಮಂ (ಜಗಂ. ೩-೩); ಕಬ್ಬದ ನಿರ್ವಾಹದ ಮೇಲೆ ಬೈಸಿಕೆ ಬೆಡಂಗಂ ಬೀಜ್ ನಿಂದೊರ್ಮಳೋದಿದ ಳಾಂದೋಳದ ಪಲ್ಲವಾಧರೆ ವಸಂತೋತ್ಸದ್ಯವಂ ಗದ್ಯಮಂ (ಅಕಂಕು. ೬-೭೦); ಬೈಸಿಕೆ ಸ್ಥಾಯಿ ಘನಸಂಚಾರಿ ಮುಂತಾದೆಲ್ಲ ಭಾವಗಳನ್ನು ತೋರುತ್ತವೆ . . . ಬಾಜಿಪರಾರು ಮತ್ತವನಂತೆ (ಜಾಗಜ. ೨೨-೪೩). **ಬಯ್ಸಿಕೆ** : ೪. ಮಾಮರಾಜಪ್ರಿಯತನೂಜಾತ ರೂಪರೇಖೆ ಥಾಪನೆ ಬಯ್ಸಿಕೆ ತೊಡೆ ಮಡ ಕಯ್ತುನಿಯೆಂಬ ಚಡಾಯುತಿಕಗಾಯತಿಕವಡೆದಾ ರೂಢವಿದ್ಯಾವಿಳಾಸ (ಕಇ. IX-i, ೩೪೩-೨೦ ; 1226). ೮. ಠಾಯದೊಳಂ ನಿರ್ವಹಿಸಿ ನೆಲೆಗೊಳಿಸಿ ಬಯ್ಸಿಕೆ [ಪಾಠಾಂ. ಬಯಿಸಿಕೆ] ಮಹಾಚಾಳಿಯಂದಲ್ಲಿ ಪೂರ್ತಿವಡೆದುದು ರಾಗಂ (ಋಕೂತ. ೨-೨೯). **ಬಸಿಗೆ** : ೩. ಸ್ಥಿರಬುದ್ಧಿಯೆಂದೆಂಬ ಸಮನಾದ ನೆಲದೊಳು ಗುರುಬೋಧೆಯೆಂಬ ದಂಡೆಗಳನೊತ್ತಿ ಪರತತ್ತ್ವ ವಿವರದ ಬಸಿಗಗಳನೆ ಹಾಸುತಜ್ಞಮೆಂಬ ಕೋಣತವನೊತ್ತಿ ಕಟ್ಟಿ (ಕೃಕಪ. ೪-೦೩-೧). **ಬಸ್ಕಿ**: ೩. ವೆಂಕಟರಮಣದಾಸರು . . . ದಿನವೂ ತಪ್ಪದೆ ಬಸ್ಕಿಗಳನ್ನೂ ದಂಡೆಗಳನ್ನೂ ಹಾಕುತ್ತಿದ್ದರು (ಸಂಗೀತ. ೬೬). **ಬೈಸಿಗೆ** : ೮. ಅಪೂರ್ವ ಲಾಲಿತವ್ಯಾಪ್ತಿಯಿಂ ಕೂಟಮಾನಮನೆಸೆವ ಚಾಲಿಯಂ ಬೈಸಿಗೆಯನೆತ್ತಿ ಬಾಜಿಸುವ ಮದ್ದಳಿಗನಂ ಮನ್ನಿಸುತ್ತುಂ (ಕದ್ಯಾ. ೩-೬೧).

ಬೈಸಿಗೆ ಒತ್ತು = ಊಟಬೈಸು ಹಾಕು : ರಾಮಲಿಂಗಾಚಾರಿಯು ಗರಡಿಮನೆಯಲ್ಲಿ ದಂಡಹೊಡೆಯುವುದು, ಬೈಸಿಗೆಒತ್ತುವುದು, ಕುಸ್ತಿಮಾಡುವುದು ಮುಂತಾದ. . .ವ್ಯಾಯಾಮವನ್ನು ಮಾಡಿಸುವನು (ತಂಗಕ್ಕ. ೯೨). **ಬೈಸ್ಕಿ ಹೊಡೆ, ಬಸಿಗೆ ಹೊಡೆ** ಬೈಸಿಗೆ ಒತ್ತು : ನೋಡಿದವರು ಬೈಸ್ಕಿ

ಹೊಡೆಯಬೇಕಾಗುತ್ತದೆ (ಕುಕೋ. I, ೩೦೬): ಬೇಗ್ಗೆ ನಾಲ್ಕಕ್ಕೆ ಎದ್ದರೆ ಸಾವಿರಕ್ಕೆ ಕಡಿಮೆ ಇಲ್ಲದಷ್ಟು ದಂಡ, ಬಸಿಗೆ ಹೊಡೆಯಬೇಕು (೮೮ಕುಕಾ. ೨೦).
[ ← ಮರಾ. ಬೈಸಕ್, ಬೈಸಕಾ ]

**ಬೈಸಿಗೆ** 'ಬೈಸಿಕೆ' ನೋ.

**ಬೈಸಿಗದೆಗೆ** (ಕ್ರಿ). ಮಂಡಿಯೂರು; ವೀರಮಂಡಿ ಹಾಕು: ಹೂಡಿದ ಸರಳ ಕಿವಿವರೆಗುಗಿದು ಬೈಸಿಗದೆಗೆದು [ಜಾಂ. ಗೆಯ್ದು, ಗೈದು] ಕಾಣದಲಿ ಪರಿವಿಡಿಯನಾರೈದು ಗರುಡಿಯ ಗುರುವ ನೆನೆದನು (ಕುಭ್ಯಾ. ೨೦-೦೨). [ ಬೈಸಿಗೆ (<ಬೈಸಿಕೆ) + ತಗೆ$_1$ ]

**ಬೈಸು$_1$** 'ಬಯ್ಯಿಸು' ನೋ.

**ಬೈಸು$_2$** (ನಾ). ಕುಳಿತುಕೊಳ್ಳುವಿಕೆ.

**ಬೈಸು ಮಾಡು** = ಕುಳಿತುಕೊಳ್ಳುವಂತೆ ಮಾಡು; ಕುಳ್ಳಿರಿಸು: ಸಂಪರಣೆಗಳನ್ನು ಮಾಡುವುದಕ್ಕೋಸ್ಕರ ಆನೆಗಳನ್ನು ಬೈಸು ಮಾಡುತಲಿರುವ ಮಾವುತರ ಹದರಿಕೆ ಮಾತುಗಳು (ಶ್ಯಜಾಲ. ೦೦೮).
[←ಮರಾ. ಬೈಸ್ = ಕುಳಿತುಕೊಳ್ಳು; ಹಿಂ. ಬೈಸನಾ=ಕುಳಿತುಕೊಳ್ಳು]

**ಬೈಸೂಡಿ** (ನಾ). ಒಣಹುಲ್ಲಿನ ಕಂತೆ, —ಹೊರೆ, —ಕಟ್ಟು: ಗಾಡಿಯ ಮೇಲೆ ಇರಿಸಿದ್ದ ಬೈಸೂಡಿಗಳನ್ನು ಎಳೆದು ತಂದು, ಬಿಚ್ಚಿ, ಅವುಗಳ ಮುಂದೆ ಹರಡಿದ (ಶ್ಯಹಿಕಾ. ೦).
[ಬೈ$_4$ + ಸೂಡಿ$_2$ (< ಸೂಡ್ಕು) ]

**ಬೈಸ್ಕಲ್ಲು** 'ಬೈಸಿಕಲ್ಲು' ನೋ.

**ಬೈಹುಲ್ಲು** (ನಾ). ಒಣಗಿದ ಹುಲ್ಲು: ದನಗಳ ಮೇರೆ ಎಟಕುವಲ್ಲಿ ನೆಲವನ್ನು ಮಣ್ಣಿನಿಂದ ಏರಿಸಿ ಬೈಹುಲ್ಲು ಹಾಕಲು ಬೈಪಣೆ ಮಾಡಿರುವರು (ಜಾಗ. ೪೦); ಎರಡೆರಡು ಸೂಡಿ ಬೈಹುಲ್ಲನ್ನು ಬಿಡಿಸಿ ಹಾಕಿ ಅವುಗಳ ಬೆನ್ನು ಚಪ್ಪರಿಸಿದರು (ಒತ್ತಿಕಾ. ೬೭). [ಬೈ$_4$ + ಹುಲ್ಲು (< ಪುಲ್)]

**ಬೊಂಕ** 'ಬಂಕೆ$_1$' ನೋ.

**ಬೊಂಕು$_1$** (ಕ್ರಿ). ೧. ಸುಳ್ಳಾಡು; ಸುಳ್ಳುಹೇಳು: ಸಮಯ ನೋಡಿ ಕೋಡು ನಂಬಿಕೆ ಹುಟ್ಟುವಂತೆ ಬೊಂಕಿ ಎಷ್ಟು ಕೆಲಸ ಸಾಧ್ಯವೋ ಅಷ್ಟು ಮಾಡಿಕೊಂಡು ಬರಬೇಕು (ಕಕಾ. ೩೨೮); ಈ ನಿಜಾಂಶವನ್ನು ನಿಸ್ಸಂಕೋಚವಾಗಿ ಹೇಳದೆ ಮೋಹನೆಯು ತನ್ನೊಡನೆ ಬೊಂಕುತ್ತಿರುವಳೆಂತಲೂ ಲೀಲಾವತಿಯ ಮನಸ್ಸಿಗೆ ತೋರಿತು (ಕಕಾರ. ೪೩). ೨. ಹೇಳು; ನುಡಿ: ಲೋಕದ ಕೊಂಕನು ಬೊಂಕಿವೆ-ಭಲೆ ಲೋಕದ ಕೊಂಕನು ಬೊಂಕದಲೆ ನಾವೇಕಾಂತದೊಳದ ನಗುವೆವು (ಗೋಕುಲ. ೩೯-೨೯). ೩. ಜಂಬದಿಂದ ಹೇಳಿಕೊಳ್ಳು; ಜಂಬ ಕೊಚ್ಚು: ಈ ಯುಗದೊಳಿನಗಾರು ಸರಿಸಹ ರಾಯರುಂಟಾ ಬೊಂಕಿ ನುಡಿದ ವಿಡಾಯನೆಂಬುದನರಿಯ ಪಾಂಡವರಿಂದ ಮುಂದೇನು (ಕಕಾ. ೬೩-೪೦); ಅವಳು ಬೊಂಕುವಂತೆ ಮದುವೆಗೆ ಮುಂಚೆ ಅವನನ್ನು ಕಂಡಿದ್ದರೂ ಅವನನ್ನು ಅವಳು ಮದುವೆ ಮಾಡಿಕೊಳ್ಳುತ್ತಿರಲಿಲ್ಲ (ಬಂಕಿಕು. ೨೩೬).
[ದೇ.॥ ತುಳು. ತೆಲು. ಬೊಂಕು]

**ಬೊಂಕು$_2$** (ನಾ). ೧. ಬಡಾಯಿ; ಜಂಭ: ಅವರು ನಕ್ಕರು ಅಂತ ಇವರ ಬೊಂಕು ಹೆಚ್ಚು. ಇವರು ಬೊಂಕಿದರು ಅಂತ ಅವರ ನಗು ಹೆಚ್ಚು (ಕಕಾ. ೩೩೦). ೨. ಭ್ರಾಂತಿ; ಭ್ರಮೆ: 'ಬೊಂಕುದೀವಿಗೆ' ಪರಾ.
[<ಬೊಂಕು$_1$./ತಮಿ. ಪೊಕ್ಕಮ್; ತೆಲು. ಬೊಂಕು]

**ಬೊಂಕುದೀವಿಗೆ** (ನಾ). ಭ್ರಾಂತಿಯನ್ನುಂಟುಮಾಡುವ ದೀಪ; ಸಂಪೂರ್ಣ ಬೆಳಕು ಹರಡದ ದೀಪ: ಶಂಕೆಸೆಡೆಯಿರದು ಕತ್ತಲೆಯಿ ಜಗವನು ಕವಿಯಿ ಬೊಂಕುದೀವಿಗೆ ತಂಟೆ (ಕುಂಕುಕ. ೪೩).
[ಬೊಂಕು$_1$ + ದೀವಿಗೆ]

**ಬೊಂಕೆ** 'ಬಂಕೆ$_1$' ನೋ.

**ಬೊಂಕೆಮಣ್ಣು** (ನಾ). ಜಿಗುಟುಮಣ್ಣು; ಜೇಡಿಮಣ್ಣು: "ಮತ್ತಾ, ಮೃತ್ತಾ-೨ . . . ಕಮ್ಮಣ್ಣು, ಬೊಂಕೆಮಣ್ಣು" (ಸಿದ್ಧಾಂತಿ. ೯೨).
[ಬೊಂಕೆ (< ಬಂಕೆ$_1$) + ಮಣ್ಣು (< ಮಣ್)]

**ಬೊಂಡ** (ನಾ). ೧. ಎಳೆಯ ತೆಂಗಿನಕಾಯಿ; ಸೀಯಾಳ: ಕನಕಮ್ಮ ನವರೊಡನೆ ಮಾತಾಡಿ ಅವರಿಗೆ ಬೊಂಡ ಕೊಟ್ಟೇ ಹೋಗಬೇಕೆಂದು ಕಾಡಿಕ್ಕಕ್ಕೆ ಬಂದ (ಹಕಕ. ೦೦೬); ಮರ ಹತ್ತಿ ಬೊಂಡ ಇಳಿಸುವುದಕ್ಕೆ ಜನವಿದೆ (ರೇಕಹೊ. ೮೬೦). ೨. ಎಳೆಯ ಕಾಯಿ: 'ಹನೆಬೊಂಡ' ಪರಾ.
[ದೇ.॥ ತುಳು. ಬೊಂಡ; ತೆಲು. ಬೊಂಡ, ಬೊಂಡಾ, ಬೊಂಡಲ, ಬೊಂಡ್ಲ]

**ಬೊಂಡುಲ**, ಬೊಂಡುಳ (ನಾ). ಒಂದು ಬಗೆಯ ಸಸ್ಯ: ಬೊಂಡುಲ ಗಿಡ (ಶ್ಯುಶಿಗ. ೬೦-೦೨೯೬); ಬೊಂಡುಲ ಗಿಡ (ಸಸ್ಯಶಿ. ೦೦೫). ಬೊಂಡುಳ: (ಕಿ).
[←ತುಳು. ಬೊಂಡಲ, ಬೊಂಡೊಲಿ]

**ಬೊಂಡುಳ** 'ಬೊಂಡುಲ' ನೋ.

**ಬೊಂತೆ**, ಬೊಂದು (ನಾ). ೧. ಚಿಂದಿಬಟ್ಟೆಗಳನ್ನು ಹೊಲಿದು ಮಾಡಿದ ಹಚ್ಚಡ; ಕವುದಿ: ಕಂತೆ ಬೊಂತೆಯ ಜಂಗಮ ಬಂದರೆ ಹೀನವೆಂದು ಕಂಡನಾದರೆ ಪಂಚಮಹಾಪಾತಕ (ಬಕಕ. ೪೦೦); ಬೊಂತೆಯಂ ಕಚ್ಚುಟವನಾತನು ಮುಂತೆ ಬೇಡಲು ಮುನ್ನ ಮಡಗಿದ ಬೊಂತೆಯಂ ಕಚ್ಚುಟವನುಚಿಯು ಕಾಣದುಮ್ಮಳಿಸಿ (ಬಕ್ಕಿ. ೨೬-೯೩); ಬೊಂತಾದೇವಿ ಬೊಂತೆಯಂ ಕೊಡಹುತಲನೇಕ ಹೊನ್ನಳನೀಯುಳೇ (ಶ್ರುಕಕಿ. ೭-೨೯೩). ೨. ಗುಂಜಾದುದು; ಗೋಜಾದುದು: ಕಾಯಿ ಬಲಿತು ಮಾಗಿದಾಗ ಹಣ್ಣಿನ ಗಾತ್ರ ಕಿರಿದು . . . ಗಲ್ಲದ ದಾಡಿಯಂತೆ ನಾರಿನ ಬೊಂತೆ (ಹಸುಹೊ. ೩೦೬). 'ಬೊಂತೆಕಟ್ಟು' ಪರಾ. ೩. ಗುಚ್ಛ; ಕಟ್ಟು: ಹೂವನ್ನು . . . ಕೆಂಪೀನೇ ಒಂದು ಬೊಂತೆ ಕೂದಲು ಎತ್ತಿ ಅದರೊಳಗೆ ಭದ್ರವಾಗಿ ಸಿಕ್ಕಿಸಿಕೊಂಡಳು (ಪಮ್ಮರು. ೨೬೪); ಬೀಟಿಯ ಕಂತೆಗಳು, ಹಳೆಯ ವರ್ತಮಾನ ಪತ್ರಿಕೆಗಳ ಬೊಂತೆಗಳು (ಹಸುಹೊ. ೨೪೦); ಕಂತೆಗೆ ತಕ್ಕ ಬೊಂತೆ (ಗಾದೆ). ಬೊಂದು: ೧. 'ಬೊಂದುಂಕ$_1$' ಪರಾ.
[ದೇ.॥ ತಮಿ. ಪೊನ್ತ್ಯ; ತೆಲು. ಬೊಂತ]

**ಬೊಂತೆಕಟ್ಟು** (ಕ್ರಿ). ಜಡೆಗಟ್ಟು; ಗಂಟಾಗು; ಗೋಜಲಾಗು: ಬೊಂತೆ ಕಟ್ಟಿ ಹೋಗಿದ್ದ ನಿನ್ನ ತಲೆ, ಮಾಸಲು ಚಿಂದಿಯ ಬಟ್ಟೆಯನ್ನು ನೋಡುತ್ತಿದ್ದಾಗಲ್ಲ ಪಪ್ಪ ಹೊಟ್ಟೆ ಉರಿದು ಹೋಗುತ್ತಿತ್ತು (ಕಃಪಹ. ೪೦).
[ಬೊಂತೆ + ಕಟ್ಟು$_1$]

**ಬೊಂತೆಕಳ್ಳಿ** 'ಬೊಂತೆಗಳ್ಳಿ' ನೋ.

**ಬೊಂತೆಗ** (ನಾ). ಕೌದಿಯನ್ನು ಹೊದ್ದಿರುವವನು: ಗ ಪ್ರತ್ಯಯಕ್ಕೆ: ಮಾತಂಗಂ, ಬೂತುಗಂ, ಕಂತಗಂ, ಬೊಂತೆ[ಶಾಕಾಂ. ದಿ]ಗಂ (ಶಬ್ದ. ಶ. ೨೦೨ ಕೃಯೋ). [ಬೊಂತೆ + — ಗ$_2$]

**ಬೊಂತೆಗಳ್ಳಿ**, ಬೊಂತೆಕಳ್ಳಿ (ನಾ). ಒಂದು ಬಗೆಯ ಕಳ್ಳಿ ಗಿಡ: ಬೊಂತೆಗಳ್ಳಿ, ಚದರಗಳ್ಳಿ (ಶ್ಯುಶಿಗ. ೩೫-೬೬೦). ಬೊಂತೆಕಳ್ಳಿ: "ಬೊಂತೆಕಳ್ಳಿ, ಚದರಗಳ್ಳಿ, ಜಡೆಗಳ್ಳಿ, ಮುಂಡುಗಳ್ಳಿ" (ಸಸ್ಯಶಿ. ೩೬).
[ಬೊಂತೆ + ಕಳ್ಳಿ$_3$]

**ಬೊಂತೆಮೀಸೆ** (ನಾ). ಗುಂಜುಮೀಸೆ; ಜುಂಗುಜುಂಗಾದ ಮೀಸೆ: ವಿಷಣ್ಣವದನದ ಬೊಂತೆಮೀಸೆಯ . . . ಸೇವಕನೊಬ್ಬನು ಮಂದಿರವನ್ನು ಪ್ರವೇಶಿಸಿದನು (ಪುಕು. ೨೦). [ಬೊಂತೆ + ಮೀಸೆ]

**ಬೊಂದಬಾಳೆ** (ನಾ). ಒಂದು ಬಗೆಯ ಮರ: ಬೊಂದಬಾಳೆ(ಪಡವಳೆ)— ಮಧ್ಯಮ ಆಕಾರದ್ದು. ಕಟ್ಟಿಗೆ ಇಮಾರತಿಗೆ ಬರುತ್ತದೆ (ಕಭಾಗ. ೯೬). [ ? ]

**ಬೊಂದರಿಗೆ** (ನಾ). ಗೌಸು; ಮೇಲುಹೊದಿಕೆ: ಇಕ್ಕಿದ ಪಟ್ಟೆಯ ಸುಖಾಸನಂಗಳೊಳು ಕಟ್ಟಿದ ಚೆನ್ನದ ಬೊಂದರಿಗೆಯೊಳಮೆಸೆದಿರ್ದ ಪಚ್ಚೆಪಾಯಂಬೀಜದೊಳೊಡನೇಜಿ (ಶಂಕರಾ. ೯-೯೩ ಕ); ಸಿಂಹಾಸನ

ದೆರತೋಳಿಯೊಳಂ ಸಾರ್ಚಿದ ಲೋಹಾಸನದೊಳ್ ಕಟ್ಟಿದ ದೇವಾಂಗದ ಬೊಂದರಿಗೆಯೊಳವಿಟ್ಟ ನೇರಾಣಿಯ ಪಡಿಗಂಗಳೊಳಂ (ಶಾಂತಿಪು. ೩-೫೦ಪ).

[ ? ]

**ಬೊಂದಿ₁** (ನಾ). ದೇಹ; ಶರೀರ : "ಬೊಂದಿ=ಶರೀರಂ" (ಶಮದ. ಶಂ.೨); ತನ್ನ ಬೊಂದಿಯೊಳಿರ್ದ ಹಂಸನ ನೋಡುತಿರಲವನೆಂದೆದು ಸುಖಿ (ಶರಶ. ೩೨-೬೭) ; ದೆಸೆದೆಸೆಯ ಕಟ್ಟಲೆಯ ಬಿಂದವೊಂದುಗೂಡಿ ಗುಂಡು ಗೊಂಡು ತಮ್ಮ ಪಗೆಯಂ ಬೆಂಗದಿರನ ಬೊಂದಿಯುಂ ಬಂದಿವಿಡಿವೊಂದು ರವಣೆಯಿಂ ಬಾಂದಳಮನೇಱಿ ಪೋಪುವೆನೆ . . . ನೀಲಪರ್ವತಂ . . . ವಿರಾಜಿಸಿದತ್ತು (ರಾಮಾಶ್ವ. ೬೨-೦೫). 'ಗೊಂದೆಬೊಂದಿ' ಪರಾ.

[ದೇ.॥ ತಮಿ. ಪೊನ್ದು; ತೆಲು. ಬೊಂದಿ./ಪ್ರಾ. ಬೋಂದಿ]

**ಬೊಂದಿ₂** (ನಾ). ಕಾತಿ, ನಾರು, ಹಗ್ಗ, ಮೊದಲಾದುವುಗಳ ಪೆಂಡಿ.- ಕಟ್ಟು : (?). [ದೇ.॥ ತೆಲು. ಬೊಂದು]

**ಬೊಂದಿಗೆ** (ನಾ). ಬೀಗ ; ಕೀಲಿ (?) : ಮಱಿಹೊಕ್ಕರೆ ಕಾವ ತೊಡರ್ದರ ಡೊಂಕೆ ಬಿರಿದರ ಬಾಪು ಬೊಂದಿಗೆ ಮಿಸೆಯರ ಗಂಡರ ಗಂಡ ಮಾದಿಗದೇವ (ಎಕ. IX, ಕಾಸಣ. ೦೦೬-೫; 1203). [ ? ]

**ಬೊಂದಿಗೆವಾಯ್** (ನಾ). (?) : ಬಿದಿರಿದ ಮುತ್ತುವಲ್ಲ ಮುಂಜು -ಮೂಗಿನ ಬೊಂದಿಗೆವಾಯ ಪೊಂಗುಗಲ್ಲದ ಪಸುರ್ಗಣ್ಣ ಕೆಂದಲೆಯ ಕಾಳಿಗವರ್ಣದ ಬೀಡೆಗಾಲ . . . ಪೇರುರದ ಲುಬ್ಧಕರಿರ್ದರಲಬ್ಧ ಮಾರ್ದವರ್ (ಕುಕ್ಕಪು. ೫-೮೯). 'ಬಂದುಗೆವಾಯ್' ಹೋ.

[ಬೊಂದಿಗೆ? + ಬಾಯ್]

**ಬೊಂದು** 'ಬೊಂತೆ' ನೋ.

**ಬೊಂದುಕ₁** (ನಾ). ಚಿಂದಿಯಾದ ಕೌಕಕುಬಟ್ಟೆಯನ್ನು ತೊಡು ವವನು ; ಬೊಂತೆಯನ್ನು ಧರಿಸುವವನು : ಉಕ ಪ್ರತ್ಯಯಕ್ಕೆ . . . ಬೊಂದುಕಂ, ದಿಂಡುಕಂ (ಶಮದ. ೨೦೩ ಶ್ರದೋ) ; ಸಣ್ಣುಕಂ, ಬೊಂದುಕಂ, ದಿಂಡುಕಂ (ಶಬ್ದಾಮ. ೪೪೦ ಪ್ರದೋ).

[ಬೊಂದು (< ಬೊಂತೆ) + – ಉಕ (< – ಉಗ)]

**ಬೊಂದುಕ₂** 'ಬಂದುಕ' ನೋ.

**ಬೊಂದುಗೆ** (ನಾ). (?) : ಕೆಂದಳದೊಳಮರ್ಚಿ ಬಾರಿಸುತೆ ಬೊಂದುಗೆಯಂ ಕುಱುಪಿಂಗೆ ಪೊದಳವ್ವಳಿಸುತವಮಾಗಳೊರ್ವಳಭಿಸಾರಿಕೆ ವೀರವಿಡಂಬ ಯಾಸದಿಂ (ಸೂಕ್ತಿಸು. ೮-೦೫೨). [ ? ]

**ಬೊಂದೆ** (ನಾ). ಕುಣಿ ; ಕುಳಿ : ಶಿಶುವಳಿಯೆ ಬೊಂದೆಯೊಳಗಿಕ್ಕಿ ಮಣ್ಣಂ ಮುಚ್ಚಿ ಬಂದಯ್ಯಗೆಱಗೆ ದಂಪತಿಗೆಂದನು ಕಂದನಂ ಬಿಟ್ಟು ಬರುವರೆ ಬೇಗ ತಾ ಹೋಗಿರಿ (ಗುರುರಾ. ೦೯-೩೯).

[ದೇ.॥ ತಮಿ. ಪೊನ್ದು=ಬಿಲ ; ತೆಲು. ಬೊಂದ]

**ಬೊಂಪು₁** 'ಬಂಪು₁' ನೋ.

**ಬೊಂಪು₂** 'ಬಂಪು₂' ನೋ.

**ಬೊಂಬಡ** 'ಬೊಮ್ಮಡಿ' ನೋ.

**ಬೊಂಬಲ್** 'ಬಂಬಲ್₁' ನೋ.

**ಬೊಂಬಲಮರ** (ನಾ). ಒಂದು ಬಗೆಯ ಮರ : ಬೊಂಬಲಮರದ ನೆರಳೊಳು ಕುಳಿತಂತೆ ಮರ್ಕಟಕ್ಕೆ ಮಂತ್ರಿತನ ಕೊಟ್ಟಂತೆ (ಉದ್ಭಟಶೃ. ೬-೯೨-೩). [ಬೊಂಬಲ೦ + ಮರ₁]

**ಬೊಂಬಳ** 'ಬೊಂಬಾಳ₁' ನೋ.

**ಬೊಂಬಾಳ₁**, ಬಾಂಬೋಳ, ಬೊಂಬಳ (ನಾ). [ಸಂಗೀತ] ನಾಲ್ಕು ಧ್ವನಿಭೇದಗಳಲ್ಲಿ ಒಂದು : ತಾಳಲಯ ಬೊಂಬಾಳ ಮಿಶ್ರದ ಮೇಳವದು ತಾ ರಾಗಶುದ್ಧದ ಸಾಳಗದ ಸಂಕೀರ್ಣ ದೇಸಿಯ ವಿವಿಧ ರಚನೆಗಳ . . . ಲಯಮಾನವಱಿವವನೆ ಗಾಯಕನು (ಶಬ್ದಾಸ. ೬೦೩- ೦-೯೭); ಕಾವ್ಯಳ ಬೊಂಬಾಳ [ಪಾಠಾಂ. ಬಬ್ಬೋಳ]ನಾರಾಟ ಮಿಶ್ರಿತಮೆಂಬ ಚತುರ್ವಿಧಸ್ವರಂಗಳಂ ಪರುಠವಿಸಿ (ವಿವೇಕ. ೮೯೯). **ಬಾಂಬೋಳ :** ಅನೇಕ ರಾಗಗಳಿಂದೆ ಸವಿಯಿಂಪು ಸೊಂಪು ಬಾಂಬೋಳ ಮಧುರಂ ಮಂದ್ರ ವಿವಿಧ ಸುಸ್ಥಾನಮಾನಂಗಳಿಂ ಪಾಡಲುಗ್ಘಡಿಸಿದರು ತಾಳಜ್ಞರು (ಶ್ರಶಪು. ೨-೬೭). **ಬೊಂಬಳ :** ಖಾವ್ಯಳ ಬೊಂಬಳ ನಾರಾಟ ಮಿಶ್ರಮೆಂಬ ನಾಲ್ಕುಂ ಧ್ವನಿಯ ಭೇದಮನಱಿದು . . . ಬಾಜಿಸುತ್ತಿರೆಯುಂ (ಶಾಂತೀಶ್ವ. ೦೬-೬೭ ಪ). [ ? ]

**ಬೊಂಬಾಳ₂** 'ಬಂಬಾಳ' ನೋ.

**ಬೊಂಬಾಳ₃** (ನಾ). ಒಂದು ಬಗೆಯ ಅಂದಣ : 'ಚಿವರಬೊಂಬಾಳ' ಪರಾ. [ ? ]

**ಬೊಂಬಾಳದೀಪ** (ನಾ). ಪ್ರಖರವಾಗಿ ಉರಿಯುವ ಪಂಜು.- ಹಿಲಾಲು : ಇಸನಂದನನು ಬೊಂಬಾಳದೀಪದ ಸಂದಣಿಗಳಲಿ . . . ಕುರುಭೂಮಿಗೈತಂದ (ಕುಮ್ಮಾದ್ರೋ. ೦-೦೯); ಬೆಳಗಿದುವು ಬೊಂಬಾಳ ದೀಪಾವಳಿಗಳಿದ್ದೆಸೆಗಳಲಿ (ತೊರರಾ. ೫-೩-೩೦).

[ ಬೊಂಬಾಳ₂ (<ಬಂಬಾಳ) + ದೀಪ₂ ]

**ಬೊಂಬಾಳದೀಪ್ತಿ** (ನಾ). ಪ್ರಖರವಾದ ಕಾಂತಿ.- ಪ್ರಕಾಶ: ತೋಱುತಿಹ ಬೊಂಬಾಳದೀಪ್ತಿಯ ಚಾರುಶಸ್ತ್ರಪ್ರಭೆಯಲಾ ಮುರವೈರಿ ಯೋಲಗಸಾಲೆ ನೆಱೆ ರಂಜಿಸಿತು ನೋಳ್ಪರಿಗೆ (ಕೋಗಮ. ೩-೪೭).

[ಬೊಂಬಾಳ₂ (<ಬಂಬಾಳ) + ದೀಪ್ತಿ]

**ಬೊಂಬಾಳದೀವಟಿಗೆ** (ನಾ). = ಬೊಂಬಾಳದೀಪ : ತರುಣಿಯರುಗಳ ಹಸ್ತದಲಿ ಮಿಱುಪ ಮಿಸುನಿಯ ಬೊಂಬಾಳದೀವಟಿಗೆಗಳ್ಸುರುಚಿರಪ್ರಭೆಯ ಸೂಸಿದುವು (ಕಂಶಪ. ೬-೨೩). [ಬೊಂಬಾಳ₂(<ಬಂಬಾಳ) + ದೀವಟಿಗೆ]

**ಬೊಂಬಾಳದೀವಿಗೆ** 'ಬಂಬಾಳದೀವಿಗೆ' ನೋ.

**ಬೊಂಬಾಳಿಸು** 'ಬಂಬಲಿಸು' ನೋ.

**ಬೊಂಬಿಡು** 'ಬೊಬ್ಬಿಡು' ನೋ.

**ಬೊಂಬು₁**, ಬಂಬು₁ (ನಾ.) ಪೊಳ್ಳಾದ ದಪ್ಪನೆಯ ಬಿದಿರು.-ಗಳು : ಹೇಗೆ ಒಂದು ವಂಶ ಅಥವಾ ಬೊಂಬಿನಲ್ಲಿ ಹಲವು ಪರ್ವಗಳಿರುತ್ತವೋ ಹಾಗೇ ಈ ಗ್ರಂಥದಲ್ಲಿ ಹದಿನೆಂಟು ಪರ್ವಗಳಿವೆ (ಕಾರಪ. ೯೩); ಬೊಂಬು ಗಳನ್ನು ತೆಗೆದುಕೊಂಡು ಹೋಗಿ ಕಾಡಿನಲ್ಲಿ ಒಂದು ಮರಕ್ಕೆ ಅಟ್ಟ ಕಟ್ಟುವಂತೆ ಆಜ್ಞಾಪಿಸಿದರು (ರಾಮಚ. ೦೯). **ಬಂಬು₁ :** ಮೊದಲು ಮೊದಲು ಜೋಡು ಬಂಬುಗಳಿಂದ ನಿರ್ಮಿತವಾಗಿದ್ದು ಅನಂತರ ಮರದಿಂದ ಕಟ್ಟಡಗಳು ಕಟ್ಟಲ್ಪಟ್ಟಿರಬೇಕು (ಪ್ರ.ಪಾಸ್ತು. ೨೨); ಬಂಬು ಹೊರುವವನ ಸಂಗಡ ಹಂಬಲಿಸಿದರೆ ಇಂಬು ಸಿಕ್ಕೀತೆ (ಗಾದೆ).

[ದೇ.॥ ತಮಿ. ಮಮ್ಬು; ಮಲ. ಮಮ್ಬು; ತುಳು. ಬಂಬು]

**ಬೊಂಬು₂** 'ಬಂಬು₂' ನೋ.

**ಬೊಂಬುಜ** (ನಾ). ಒಂದು ಬಗೆಯ ವಾದ್ಯ : ಬೊಂಬುಜದ ವಾಯುಜದ ಡೋಳಿನ ಬೆಂಬಳಿಯಲಿಹೀನಾಗಸರದಿಂತೆಂಬ ನಾನಾವಾದ್ಯರಸ ತುಂಬಿತು ದಿಶಾವಳಿಯ (ಕೇಶೀಮ.೨-೮೯). 'ಬೊಂಬುಳಿ₂' ಹೋ. [?]

**ಬೊಂಬುಳಿ₁** (ನಾ). ಹೆಚ್ಚಳ; ಆಧಿಕ್ಯ : ಚದುರ ಪೊದಟ್ಕೆ ಸಂಪದದ ಬೊಂಬುಳಿ ಸತ್ವದ ಬಿತ್ತರಂ. . . ವಿಳಾಸದ ದೇಸೆ ಕೂಡೆ ಭೋಗದ ಕಣ್ಣಯಾಯ್ತು ತಾಂ ತನಗೆ ಪೌರಜನಂ (ಜಗಪ. ೯-೦೦೬).

[ದೇ.॥ ತಮಿ. ಪೊಮ್ಮಲ್; ತುಳು. ಬೊಂಬುಳಿ]

**ಬೊಂಬುಳಿ₂**, ಬೊಬ್ಬುಳಿ₃ (ನಾ). ಒಂದು ಬಗೆಯ ಚರ್ಮವಾದ್ಯ : "ಪಣವ—ಬೊಂಬುಳಿಯ ಪೆಸರು" (ನಾತರಾ. ೯೭); ಕೋಟಿಹೆಗ್ಗಾಳೆ ಗಳು ಚಿನ್ನತಿತ್ತಿರಿ ಬೊಂಬುಳಿ ಬಡಿಸಿಕೊಂಡವು (ಹತಕಾ. ೩-೦೯); ಕೊಂಬು ಡಮರುಗ ಡೌಡೆ ಸೆಂಬಕ ಕಹಳೆ ಢಕ್ಕೆ ಬೊಂ[ಪಾಠಾಂ.ಬೊಂ]ಬುಳಿ ಕರಡೆ

ಜಗ್ಗುಟಿ ಜರ್ಝರಂಗಳಿಂ (ಕುಮುರಾ. ೭-೫೩). **ಬೊಬ್ಬುಳಿ**$_3$ **:** ಪಟಹದ ಢಕ್ಕೆಯ ಧವಳಶಂಖದ ಜವಳಿಗಾಳೆಯ ತಿತ್ತಿರಿಯ ಕಿನ್ನರಿಯ ಹೊನ್ನ ಬೊಬ್ಬುಳಿ[ಪಾಠಾಂ. ಬೊಂಬುಳಿ]ಯ . . . ಕೋಳಾಹಳಂ ನೆಗಳೆ (ಗಿರಿ. ೩-೭೭ ವ) ; ಬೊಬ್ಬುಳಿ ಘಂಟೆ ರಣವಱೆವೊಱಲುತಿರಲಂದು ಮಱುಗಿ ಲಂಕಾನಗರಿ ಗೋಳಿಟ್ಟೊಱಲುವಂತಿರೆ ತಿರುಗಿ ನೋಡಿದ ಸಿರಿಯ ಹಿಂದಕೆ ಬೀಳುಗೊಟ್ಟನೊಯೆಂಬ ತೆಱನಾಯ್ತು (ಕೌಶಿರಾ. ೪೦-೦೩) [ ? ]

**ಬೊಂಬೆ,** ಬೊಮ್ಮೆ (ನಾ). ೧. ಗೊಂಬೆ; ಮೂರ್ತಿ; ಪ್ರತಿಮೆ ; ನೆಲದ ಬೊಂಬೆಯ ಮಾಡಿ ಜಲದ ಬಣ್ಣವನುಡಿಸಿ . . . ಆಡಿಸುವ ಯಂತ್ರವಾಹಕನಾರೋ (ಅಪತಂ. ೫-೦೨); ಪಾಱುದಲ್ ಪೊಳೆದು ಪೋಚರಿ ಮಿಂಚಿನ ಬೊಂಬೆಯೆಂಬಿನಂ (ಅರ್ಜನೀ. ೩-೦೭) ; ಮಾಯೆಯಾಡಿಸುವ ಮಣ್ಣ ರೂಪು ಕಪ್ಪಡದ ಹಾಹೆ ಕಲ್ಲ ಜಂತ್ರ ಹುಲ್ಲ ಬೊಂಬೆ (ಬಸರ. ೬-೧೩೯); ನಾನಾ ಜನ್ಮದಿ ಬಂದ ನಾಟಕದ ಬೊಂಬೆ ಯಿದು (ಕಪಕ. ೧೮೨-೩). ೨. ಕಣ್ಣುಗೊಂಬೆ ; ಕನೀನಿಕೆ : ಅಂಬರ ವಧೂಟಿಗಾ ಪಾಪುರಿಯಲರ್ಗಣ್ಣ ಬೊಂಬೆಗಳ್ ಮನವೊಸೆದು ಪಾಗುಡ ವನಟ್ಟಿದಸಿತಾಂಬರವದೆಂಬಂತೆ ತತ್ಕಳಮೆಗಳ ತೆಸೆಯ ಪಾಲುಣಲ್ಕೆಂದೆಱ ಗುವಾ ಕೆಂಬಿಲ್ಲ ಪಕ್ಕಿಗಳುಮಂ ಸೋವುತ (ಸಮ್ಯಕೌ. ೧-೨೯) ; ಅಲರ್ಗಣ್ಣಳ ಬೊಂಬೆಯ ಪಡಿನೆಳಲೆಂಬಾ ಚಾರುವಿಚಿತ್ರಾಂಬರಮಂ ಪೊದೆಯಿಸಿ . . . ಮನೋರಮಣನನುಪಚರಿಸಿದಳಂಗನೆಯಾ ನವಸುರತದೊಳು (ಜಯುಕಾ. ೯-೫೭). ೩. ಆಕೃತಿ ; ರೂಪು : ಚಿತ್ರದ ಬೊಂಬೆಗಳಿದ್ದ ಮನೆ ಕಿಚ್ಚಿದ್ದು ಬೇವಲ್ಲಿ ಬೊಂಬೆಯ ಹೊತ್ತಿದ ಕಿಚ್ಚು ಚಿತ್ರವಾಗಿ ಉರಿವುದೆ (ಸಕಪ ೪. I, ೪೦೦-೯೧) ; ಭಿತ್ತಿಭಿತ್ತಿಯೊಳ್ ಬರೆದ ನಾನಾ ತೆಱದೊಳೆಸೆವ ಬೊಂಬೆಗಳಿಂದೆ . . . ಕರಂ ಚೆಲ್ವಾದುದು (ತಿಂತ್ರು. ೫-೫೦). 'ಗೊಂಬೆ$_1$' ಪರ್ಯಾ. **ಬೊಮ್ಮೆ :** ೩. ಆ ಬೊಮ್ಮೆಯಂತೆ ಈ ಬೊಮ್ಮೆ (ಸುನೀತ. ೦೯).

**ಬೊಂಬೆಯ ಬಣ್ಣ** = (ಬೊಂಬೆಯ) ಚಿತ್ರಗಳುಳ್ಳ ಸೀರೆ : ಹಳದಿ ಪೊಪ್ಪಳಿ ಚಂದ್ರಗಾವಿ ಬೊಂಬೆಯ ಬಣ್ಣ ಸುಲಿಪಲ್ಲು ಪೊನ್ನ ತಗಡಿನ ಬಿಳುಪಟ್ಟೆ ನಾನಾವರ್ಣದ ಜವಳಿಯ ಮಳಿಗೆಗಳೆಸೆದುವು (ಕುಂಪಬಿ. ೬-೭೦).

[ ದೇ.॥ ತಮಿ. ಪೊಮ್ಮೈ, ಪೊಮ್ಮಲ್ ; ಮಲ. ಬೊಮ್ಮ ; ತುಳು. ಬೊಂಬೆ ; ತೆಲು. ಬೊಮ್ಮ, ಬೊಮ ; ಕೋಲಾ. ಕುವಿ. ಬೊಮ್ಮ ]

**ಬೊಂಬೆಗಣ್ಣೆ** (ನಾ). ಒಂದು ಬಗೆಯ ಸೀರೆ : ಚಾಪಗಂಟೆಯು ಬೊಂಬೆ ಗಣ್ಣೆ ಚಿತ್ರಾವಳಿಯು . . . ಮಿರುಪ ನೇತ್ರಾವಳಿಯು ಮುಖ್ಯ ನಾನಾ ವಿಧದ ಸೀರೆಗಳ ಚಿನ್ನದೆಳೆವೊಗ್ಗ ಕಂಚುಕವ ಬೇಹನಿತ ತಗದು (ನವಮೋ. ೦೭-೬೦). [ ಬೊಂಬೆ + ? ]

**ಬೊಂಬೆಯಾಟ** (ನಾ). ೧. ಮಕ್ಕಳು ಗೊಂಬೆಗಳನ್ನಿಟ್ಟುಕೊಂಡು ಆಡುವ ಆಟ : ಮಗುವುತನದಲಿ ಬೊಂಬೆಯಾಟಕೆ ಮಗುವನೇ ತಹೆ ನೆಂದು ಬಂದಳು (ಕುಮ್ಮಳ. ೩-೦೭). ೨. ಸೂತ್ರದಿಂದ ಗೊಂಬೆ ಗಳನ್ನು ಕುಣಿಸಿ ತೋರಿಸುವ ಆಟ. 'ಗೊಂಬೆಯಾಟ' ಪರ್ಯಾ. [ ಬೊಂಬೆ + ಆಟ ]

**ಬೊಕಸ** 'ಬೊಕ್ಕಸ' ನೋ.

**ಬೊಕ್ಕ** 'ಬಕ್ಕ$_1$' ನೋ.

**ಬೊಕ್ಕಣ**$_1$, ಬಂಕಣ, ಬಕ್ಕಣ$_1$ (ನಾ). ೧. ಚೀಲ ; ಸಂಚಿ : ಘಣಿ ಕುಳಂಗಳೀ ದಾರವಾಗಿ ಬೊಕ್ಕಣವೊಳವಸುಂಬೆಯಾಗಿ (ಎಕ. VII, ಶಿಕಾ. ೦೦೮-೩೦ ; 1054) ; ಪಿಸುಣಾಂ ಪೇಟೆಯ್ದೊಡದೇವುದೊ ಕಿಸುಜಡೆಯುಂ ಬೂದಿ ಕಚ್ಚಟಂ ಬೊಕ್ಕಣಮುಂ . . . ಪಿಸುಣರ ದೇವಗೆ ನಾರದಂಗಿದು ಸಹಜಂ (ಜಗದಿ. ೫-೫೩) ; ಬೊಕ್ಕಣದ ಬೂದಿಯನುಗ್ಘೆಸುತೂದಿ ಮೂಗಿನೊಳ್ ಪೊಕ್ಕೊಡೆ ಸೀಂತು . . . ಪೂರ್ಣಿಕ್ಯುವ ಮರ್ಕಟಂ ನಗದ ತಾಪಸರಂ ನಗಿಸಿತ್ತರಣ್ಯದೊಳ್ (ಕಾವ್ಯಸಾ. ೧೦೦೮). ೨. ಕುದುರೆಯ ಬಾಯಿಗೆ ಕಟ್ಟುವ ಚೀಲ ; ತೋಬರಿ : ದುತ್ತೂರದೆಲೆಯನಿಕ್ಕಿಯೆ ಕಟ್ಟುತ ಯಿರದೀಕ್ರಮ ದಶದಿನಮಂತರಿಸದೆ ಬೊಕ್ಕಣಮನಿಕ್ಕಿ (ಅಶ್ವವೈ. ೦೭-೬೦); ಜ್ಞಾನವೆಂಬುದು ಬೀದಿಯ ಪಸಾರವೆ ? ಬೊಕ್ಕಣದೊಳಗಣ ಹುರುಳಿಯೆ ? (ಶರಣ.೪೭೯). ೩. ಜೇಬು ; ಕಿಸೆ : ಲೆಕ್ಕದ ಪಟ್ಟಿ ಅವನ ಬೊಕ್ಕಣದಲ್ಲಿ ಸದಾ ಹಸಿರು ಬಾಯ್ತೆರೆದಿತ್ತು (ಮರಿಮ. ೩೩೩); ಲೆಕ್ಕದ ಪುಸ್ತಕದೊಳಗೆ ಅಂಕಿ ಬಿದ್ದಷ್ಟು ರೊಕ್ಕ ಆ ಬ್ಯಾರಿಸ್ಟರಿನ ಬೊಕ್ಕಣ ದಲ್ಲಿ ಬೀಳುತ್ತಿದ್ದಿಲ್ಲ (ಇಶ್ಯಕ. ೪೦೦). **ಬಂಕಣ :** ೩. ತನ್ನ ಹೊಲಸಾದ 'ಬಂಕಣ'ದೊಳಗೆ ಕೈಯಿಕ್ಕಿ ಎಲೆ–ಅಡಿಕೆ–ತಂಬಾಕುಗಳನ್ನು ಹೊರಗೆ ತೆಗೆದು ಒಂದೊಂದಾಗಿ ಬಾಯಲ್ಲಿ ಹಾಕಿಕೊಂಡ (ಗಂಗಾಗೌ. ೮೯). **ಬಕ್ಕಣ**$_1$ **:** ೨. ಕುದುರೆ ಒಡಲೆಯನು ಸಲೆ ತಿಂದು ಬಕ್ಕಣವನೊದಱ ಬಿಟ್ಟಂತೆ (ಸರ್ವಜ್ಞ. ೦೮೨೮). ೩. ತಮ್ಮ ಬಕ್ಕಣದಲ್ಲಿ ಕಾಸು ಕಪರ್ದಿಯಿಲ್ಲ ದಿದ್ದರೂ ಬಾಯಲ್ಲಿ ಬಕ್ಕಳ ಮಾತಿದ್ದರೆ ಸಾಕೆಂಬ ಸಂತೋಷದಿಂದ, ಜನರು ಕಾಲ ಕಳೆಯುತ್ತಿದ್ದರು (ಶ್ರೀಮಬಿ. ೭೪).

[ ದೇ.॥ ತಮಿ. ಮಲ. ಪೊಕ್ಕಣ ; ತುಳು. ಬೊಕ್ಕಣ ; ತೆಲು. ಬೊಂಗಣ, ಬೊಂಗನ, ಬೊಕ್ಕಣ, ಬೊಕ್ಕನ. /ಸಂ. ಬೋಕ್ಕಾಣ ]

**ಬೊಕ್ಕಣ**$_2$ 'ಬಕ್ಕಣ$_2$' ನೋ.

**ಬೊಕ್ಕಣಿಕೆ,** ಬೊಕ್ಕಳಿಕೆ (ನಾ). ಒಂದು ಬಗೆಯ ಔಷಧೀಸಸ್ಯ : ನೆಲ್ಲಿಚಟ್ಟು, ಬೊಕ್ಕಣಿಕೆಕಾಯಿ, ಶುಂಠಿ . . . ಸಮಾಂಶವಾಗಿ ಅರೆದು ಕೊಡಲು ಶ್ಲೇಷ್ಮಜ್ವರ ಬಿಡುವುದು (ಸಕವೈ. ೯೭). **ಬೊಕ್ಕಳಿಕೆ :** ಹುರಿಗಿಲುಂ ಕುರುಟಿನೆಲಾವ ಬೊಕ್ಕಳಿಕೆಯಿಂತಿನಿತಂ ತುಳಿದಿಟ್ಟು (ಅಶ್ವವೈ. ೯-೫೩). [ ? ]

**ಬೊಕ್ಕತಲೆ** 'ಬಕ್ಕದಲೆ' ನೋ.

**ಬೊಕ್ಕದಲೆ** 'ಬಕ್ಕದಲೆ' ನೋ.

**ಬೊಕ್ಕನೆ** (ಅ). ಒಂದು ಅನುಕರಣಾವ್ಯಯ; ಒಮ್ಮೆಲೇ; ಇದ್ದಕ್ಕಿದ್ದಂತೆ: ದಿಕ್ಕಿಲ್ಲದ ಪಶು ಕೆಸಱೊಳು ಬೊಕ್ಕನೆ ಬಿದ್ದಂತೆ ಬಿದ್ದೆ ನಾಂ ದಂದುಗ ದೊಳು ಹೊಕ್ಕು ತೆಗೆವವರ ಕಾಣೆಂ ಅಕ್ಕಟ ಶಿವನೇ (ಕಂಕಕು. ೬೫).
[ಬೊಕ್$_0$ +— ಅನೆ$_1$]

**ಬೊಕ್ಕನೆತ್ತಿ** 'ಬಕ್ಕನೆತ್ತಿ' ನೋ.

**ಬೊಕ್ಕಬಾಯಿ** (ನಾ). ಬೋಡುಬಾಯಿ ; ಹಲ್ಲಿಲ್ಲದ ಬಾಯಿ ; ಬಚ್ಚಬಾಯಿ : (ಶ). [ಬೊಕ್ಕ (<ಬಕ್ಕ$_1$)+ಬಾಯಿ$_1$ (<ಬಾಯ್)]

**ಬೊಕ್ಕಬೋರಲು** 'ಬಕ್ಕಬೋರಲು' ನೋ.

**ಬೊಕ್ಕರಿಸು** (ಕ್ರಿ). ಮಗುಚಿಹಾಕು ; ಎತ್ತಿಹಾಕು (?) : ಮದಜಳದ ಕಡಂ ಕದರಿ ಕೆದಱುವ ಕರ್ಣಚಾಮರದ ಕತ್ತಲೆ ಸಿರ್ಪಿನ ಬಾಹರಕ್ಕೆಯುಂ ಬೊಕ್ಕರಿಸಿದ ತೋರಹತ್ತದಿನವನೀತಳಮುಂ ಕವಳಮಂ ಕೊಳಲೆಂದು (ಅನಂತು. ೦೪-೭ ವ) ; ತೆಕ್ಕೆಯಿಂದಮಚುತ್ತ ಗಿರಿಯಂ ಬೊಕ್ಕರಿಸಿ ಹೂಕರಿಸು ತಿತ್ತಲು ಲೆಕ್ಕವಿಲ್ಲದ ಲೋಗಗಳು ಗಡಗಡನೆ ಉರುಳುತಿರೆ (ದೇವಮು. ೫-೨೪).
[ ? +— ಇಸು$_3$ ]

**ಬೊಕ್ಕಸ,** ಬೊಕಸ, ಬೊಕ್ಸ (ನಾ). ಹಣದ ಭಂಡಾರ ; ಕೋಶ ; ಖಜಾನೆ : ವ್ರತಸ್ಥನಾಗಿ ಭವಿಗಳ ಕೆಳಗೆ ಬೊಕ್ಕಸ ಭಂಡಾರ ಅಸಿ ಕೃಷಿ ವಾಣಿಜ್ಯ ಮುಂತಾದ ಕಾಯಕವ ಬಿಟ್ಟು ತನ್ನ ಸ್ವಕಾಯದಿಂದ ಬಂದು ಒದಗಿದ ದ್ರವ್ಯವ ಒಡೆಯನ ಮುಂದಿಟ್ಟು (ಸಕಪ. I, ೪೩೮-೪೭) ; ಬೊಕ್ಕಸದ ಸೇನಬೋವ ಜನ್ನಯ್ಯನ ನರಸಿಂಹದೇವನ ಬರಹ (ವ್ಯಾಆ. ೦೯೨೮, ೪-೦೯ ; 1369). **ಬೊಕಸ :** ಪೈದರಲ್ಲಿ ಬಹದರನು ಬೊಕಸಕೆ ಪಟ್ಟಿಸ್ತನಾದ (ಸೌಇಬು. ೦೯೩೪, ಸಂ೦೦. ೦೫೫-೦೯; 1759). **ಬೊಕ್ಸ :** ಅವರಿಗೆ ಸಕಲ ಸಾಂಬ್ರಾಜ್ಯವಾಗಬೇಕೆಂದು ಅವರ ಬೊಕ್ಸದ ದಿವಾನ ತಿಂಮಪ್ಪನು ಕನ್ನೆರ ಸಟ್ಟಿಯ ನಿಲಿಸಿದನು (ಎಕ. XI. ಹೊಳಲ್ಕೆ, ೧೨೦-೫೦; 1522); ದೇವರ ಬೊಕ್ಸಕೆ ಪಾಲು ೧ (ಸೌಇಇ. IX-ii. ೬೦೭-೯ ; 1543).

**ಬೊಕ್ಕಸಗೊಲ್ಲ**—ಖಜಾನೆಯ ಕಾವಲುಗಾರ : (ಶಾಸ. xx. ೩).
[ದೇ.॥ ತಮಿ. ಪೊಕ್ಕಿಶಮ್ ; ತುಳು. ತೆಲು. ಬೊಕ್ಕಸ]

**ಬೊಕ್ಕಳಿಕೆ** 'ಬೊಕ್ಕಣಿಕೆ' ನೋ.

**ಬೊಕ್ಕಿ** (ನಾ). ಬೋಡುಬಾಯಿಯವಳು ; ಹಲ್ಲಿಲ್ಲದವಳು ; ಬಚ್ಚಬಾಯಿಯವಳು : (೬). [ಬೊಕ್ಕ (<ಬಕ್ಕ₁) + —ಇ₂]

**ಬೊಕ್ಕುಬೋರಲು** 'ಬಕ್ಕಬೋರಲು' ನೋ.

**ಬೊಕ್ಕೆ₁** (ನಾ). ೧. (ಚರ್ಮದ ಮೇಲೆ ಏಳುವ, ಕೀವಿರುವ ಅಥವಾ ಇಲ್ಲದಿರುವ) ಸಣ್ಣ ಊತ,—ಉಬ್ಬು; ಗಂಧೆ : ಹಲವು ಹರಳೊತ್ತಿ ಬೊಕ್ಕೆಗಳು ಮೂಡಿ ನಡೆಗೆಟ್ಟ ವಲ್ಲಡಿಯ ನಿಜವನಿತೆಯಂ ನೋಡಿ (ಹಣ. ೯-೨೯); ನಾಲಗೆಯ ಮೇಲೆ ಬೊಕ್ಕೆಗಳೆದ್ದು ಹಳದಿವರ್ಣವಾಗಿ ಕಪ್ಪುಗೂಡಿದರೆ ಅಸಾಧ್ಯವೆಂದರಿವುದು (ಕಶ್ಯ. ೦೯); ರಾಣಿಯವರು ಬೊಕ್ಕೆಯ ಮೇಲೆ ಬರೆಯಳೆಯುತ್ತಿದ್ದಾರೆ (ಹುಂಜಾ. ೦೦೪). ೨. (ಸುಡುವುದು ಮುಂತಾದುವುಗಳಿಂದ ಚರ್ಮದ ಮೇಲೆ ಉಂಟಾಗುವ) ಗುಳ್ಳೆ; ಬೊಬ್ಬೆ: ವಡಬಾನಳನುರಿಯ[ಳ್]ಜುಡೊಡಲೆಲ್ಲಂ ಬೆಂದು ಬೊಕ್ಕೆ ನೆಗೆದವೊಲೊಳಗಿಂ ದಡಕೊತ್ತಿ ಮುತ್ತುಗಳ್ ನೆಗೆದೊಡೆವವೊಲಾ ಕಡಲ ಬುದ್ಬುದಂ ಕಣ್ಗೆಸೆಗುಂ (ಹೊಸ.ಸು. ೨-೬); ಕರಿಯನ ವಸ್ತ್ರದಲ್ಲೆಲ್ಲ ಬೆಂಕಿಯ ಕಿಡಿ ಹಾರಿ ತೂತು ಬಿದ್ದಿತ್ತು. ಅವನ ಎರಡು ಕಾಲುಗಳಲ್ಲೂ ಬೊಕ್ಕೆ ಎದ್ದಿತ್ತು (ಕಳ್ಳರೂ. ೩೮).
[ದೇ.॥ ತುಳು. ಪೊಕ್ಕೆ, ಭೊಕ್ಕೆ, ಬೊಕ್ಕೆ ; ತೆಲು. ಪೊಕ್ಕು]

**ಬೊಕ್ಕೆ₂** (ನಾ). ಬಿಲ; ಕುಳಿ; ಹೋರು : ಮೊಗಸದಾದನು ಶಾಪದಿಂದಲಿ ಪೊಗಲಿ ಬೊಕ್ಕೆಯನು (ಉತ್ತ.ಕ. ೧೨-೦೯); ಈಗವನನ್ನು ಬಡಿದು ಬೊಕ್ಕೆಯಲ್ಲಿ ಹಾಕಬೇಕೆಂದಿದ್ದಾನೆ (ಹಂಕು. ೯೦); ಲೋಕಕ್ಕಾದರೋ, ನೆಲದಲ್ಲಿ ಬೊಕ್ಕೆಗಳನ್ನು ತೋಡಿ ಅಲ್ಲೇ ವಾಸಮಾಡುವ ಸುಂಡಿಲಿಗಳಂತೆ, ಕಾಲಹರಣ ಮಾಡಿದರೆ ಸಾಕು . . . ಅದರಲ್ಲೇ ತಣಿವೆ ! (ಕ್ಯಾಲಿರ. ೫೦).
[ದೇ.॥ ತಮಿ. ಪೊಕ್ಕು ; ತೆಲು. ಬೊಕ್ಕ ; ಕೋಲಾ. ಪೊಕ್ಕ, ಬೊಗ್ಗ; ನಾಯ್ಕಿ. ಪೊಕ್ಕ]

**ಬೊಕ್ಕೆಯೊಡೆ** (ಕ್ರಿ). ಗುಳ್ಳೆಯೇಳು ; ಬೊಬ್ಬೆಯೇಳು : ಮೊತ್ತ ಹೊಜೆಗಳಿಂದ ನೆತ್ತಿ ಬೋರೆಯು ಹರಳೊತ್ತಿ ಪಾದವು ಬೊಕ್ಕೆಯೊಡೆದು ಹುಕ್ಕೆ ದಾವತಿಯಿಲ್ಲವೆಂದೆನಲಾಗ ಮತ್ತೆ ಬಂದಿದಕೊ ಮಾಮಾರಿ (ಅಬುಜಾಂ. ೬-೬).
[ಬೊಕ್ಕೆ₁ + ಒಡೆ₁]

**ಬೊಕ್ಸ** 'ಬೊಕ್ಕಸ' ನೋ.

**ಬೊಗದೆ** (ನಾ). ಬೆಟ್ಟಗಳಲ್ಲಿ ಕೊರೆದ ಸುರಂಗಮಾರ್ಗ: ಪ್ರಭಾ . . . ಖಂಡಾಳೆಘಟ್ಟದ ಆ ಬೊಗದೆಗಳನ್ನು ಸಾರಿಸಾರಿ ತೋರಿಸಿದಳು (ಕಹಾರ. ೦೦೯). [← ಮರಾ. ಬೋಗದಾ]

**ಬೊಗರಿ** 'ಬವರಿ' ನೋ.

**ಬೊಗರಿಗಡ್ಡ** 'ಬವರಿಗಡ್ಡ' ನೋ.

**ಬೊಗರಿದಿರುಗು** 'ಬವರಿದಿರುಗು' ನೋ.

**ಬೊಗರಿಮೊಲೆ**, ಬುಗುರಿಮೊಲೆ (ನಾ). (ಆಕಾರದಲ್ಲಿ) ಬುಗುರಿಯಂತೆ ಇರುವ ಮೊಲೆ : ಬೊಗರಿಯಂತೊಲೆದಾಡುವಳು ನಿಲುವಳು ಹೊನ್ನ ಬೊಗರಿಮೊಲೆಯ ಮೋಹನಾಂಗಿ (ಶಶ. ೦೨-೬೯); ಬೊಗರಿಮೊಲೆಯ ಚೆಲ್ವು ಗಾಡಿಕಾತಿಯರ್ಕಿದಿದರು (ಕಂಹು. ೬-೬೦); ಬೊಗರಿಮೊಲೆಗಳಿಗೆ ಕರುಗುರು ತಾಗಿದವು (ಕಂಶ. ೩೩-೩). **ಬುಗುರಿಮೊಲೆ:** ನಗೆಮೊಗದ ಪೊಂಬೊಗರ ಮಿಂಚಿನ ಬುಗುರಿಮೊಲೆ[ಪಾಠಾಂ. ಬೊಗಸಗಂ]ಗಳ ಸೆಳೆನಡುವ ಸೆಳ್ಳುಗುರ ಬೆಡಗಿನ ಕಾಂತೆ ರಂಜಿಸುತಿರ್ಪಳಾ ಪುರದಿ (ಶಶ. ೨-೨೪).
[ಬೊಗರಿ (<ಬವರಿ) + ಮೊಲೆ₁]

**ಬೊಗರೆ** 'ಬವರಿ' ನೋ.

**ಬೊಗಸೆ₁** 'ಬಗಸೆ' ನೋ.

**ಬೊಗಸೆ₂** (ನಾ). ಕೆಲಸ; ಉದ್ಯೋಗ : ಸೊಗಸುಬಾರುವ ಲೇಸು ಬೊ[ಪಾಠಾಂ. ಬ]ಗಸೆಯುಳ್ಳವರ ಕೆಳೆ ಲೇಸು (ಸರ್ವಜ್ಞ. ೦೦೯೨). [ ? ]

**ಬೊಗಸೆಗಣ್** 'ಬಗಸೆಗಣ್' ನೋ.

**ಬೊಗಸೆಗಣ್ಣು** 'ಬಗಸೆಗಣ್' ನೋ.

**ಬೊಗಳಿ**, ಬಗಳಿ (ನಾ). ಕಷ್ಟ; ತೊಂದರೆ ; ಬವಣೆ : 'ಏನಾ ಬೊಗಳಿ ಬಂತವಾ' ಎಂದು ಸುಂದರಕ್ಕ . . . ಕಣ್ಣೀರು ಒರೆಸಿಕೊಳ್ಳುತ್ತಿದರು (ಕೃಶಿ. ೩೯೬). **ಬಗಳಿ :** ನಮ್ಮ ಬಗಳಿ ನಿನಗ್ಯಾಕ ? (ಭೂಶಾಕ. ೬೩). [?]

**ಬೊಗಳು** 'ಬಗುಳ್₁' ನೋ.

**ಬೊಗಳೆ** 'ಬಗುಳೆ' ನೋ.

**ಬೊಗಾಟಬುಗರಿ**, ಬಗಾಟಬಗರಿ (ನಾ). ಇಬ್ಬರು ಎದುರುಬದುರಾಗಿ ನಿಂತು ಕೈಹಿಡಿದು, ಹಿಂದಕ್ಕೆ ಬಾಗಿ ದುಂಡಗೆ ಸುತ್ತುವ ಹೆಣ್ಣು ಮಕ್ಕಳ ಒಂದು ಬಗೆಯ ಆಟ; ಗಿರಿಗಟ್ಟಲೆ ಆಟ : ಸಾಬಿಯು ಬೊಗಾಟಬುಗರಿ ಆಡುವಾಗ ತನ್ನ ಒಡನಾಡಿಯನ್ನು ತಿರುಗಣೆ ಮಡುವಿನಲ್ಲಿ ಸಿಕ್ಕ ತೊಪ್ಪಲದಂತೆ ತಿರುಪುವವನು ಅವಳ ತಾಯಿಯು . . . ನೋಡುತ್ತಿದ್ದಳು (ಪಾಕು. ೯). **ಬಗಾಟಬಗರಿ :** ಇಬ್ಬರು ಪ್ರತಿಸ್ಪರ್ಧಿಗಳು ಕೈಕೈಹಿಡಿದು ಪಾದಕ್ಕೆ ಪಾದ ತಾಗಿಸಿ ಗರಗರನೆ ತಿರುಗುವುದುಂಟು . . . ಅದು ಹೆಣ್ಣು ಮಕ್ಕಳಾಡುವ 'ಬಗಾಟಬಗರಿ' ಲೀಲೆಯಂತೆ ಕಂಡಿತು (ಮಲ್ಲಿ. ೦೦೯).
[ ಬೊಗಾಟ ? + ಬುಗರಿ (< ಬವರಿ) ]

**ಬೊಗುಳ್** 'ಬಗುಳ್₂' ನೋ.

**ಬೊಗುಳಾಟ** 'ಬಗುಳಾಟ' ನೋ.

**ಬೊಗುಳಿಸು** 'ಬಗುಳಿಸು' ನೋ.

**ಬೊಗುಳು₁** 'ಬಗುಳ್₁' ನೋ.

**ಬೊಗುಳು₂** 'ಬಗುಳು₂' ನೋ.

**ಬೊಗುಳುಸನ್ನಿ** 'ಬಗುಳುಸನ್ನಿ' ನೋ.

**ಬೊಗ್ಗಡ** 'ಬಗ್ಗಡ' ನೋ.

**ಬೊಗ್ಗನೆ** (ಅ). ಒಮ್ಮೆಲೆ ; ಕೂಡಲೆ : ವೆಗ್ಗಳ ಬಲದೆ ವೇದೋಜ ಬೊಗ್ಗನೆತ್ತೆಂದು ಭಂಗಕೆ ಬಂದು ಮನನೊಂದು ಸಿಗ್ಗಾಗಿ ತೆರಳಿದನಾಗ (ಕಂಪ. ೦೩-೬೬); ಮಾಯಿಯು ಕಂಡು_ಕಾಮಭಯದಿಂ ಬೊ[ಪಾಠಾಂ. ಬ]ಗ್ಗನೋಡುವ ಮುನಿಚಯಕೆ ಪ್ರಭು ಪ್ರತ್ಯಕ್ಷ ವೆಗ್ಗಳದೊಳದಂತ ಸಕಲ ಕರ್ಮಂಗಳಂ ನುಗ್ಗುಮಾಡಿ (ಕಂಪ. ೨-೦೩). 'ಬಗ್ಗನೆ' ಪರಾ.

**ಬೊಗ್ಗು** (ನಾ). ೧. (ಕಹಳೆಯಂತಹ) ಒಂದು ಬಗೆಯ ರಣವಾದ್ಯ : ವೀರಬೊಂಬುಳಿಯ ಬೊಗ್ಗಿನೊಗ್ಗುಗಳ ನೆಜ್ ಕುಂಬಿಡುವೆ ಕೊಂಬುಗಳ. . . ಲಗ್ಗೆವಜ್ಜೆಗಳ ರಭಸವಡಸಿ (ಸೋಮಕ. ೩-೩೨); ಲಗ್ಗೆ ಮುಸಗಿತು ಸೂಳು ಪೊಯಿಲಿನ ಬೊಗ್ಗಿನೆಲಿ (ಕುಮ್ಮಾಕೀ. ೯-೯); ಗಗ್ಗರವಜ್ ಗಿಡಿಬಿಡಿ ತೂಳು ವಜ್ ಚೆನ್ನ ಬೊಗ್ಗಿನ ಹಜ್ ಜನಗಹಳೆ (ಕುಮಾರಾಂ. ೯೦-೬೬). ೨. (ಅಲಂ) (ಜಾತಕನಿಗೆ ವಕ್ರನಾದ) ಶನಿಗ್ರಹ; ಶನಿ : ನಮ್ಮ ಗ್ರಹಚಾರ ಬಂದಾಗ ಬೊಗ್ಗು ಎದುರಾದ (ಪಾಕಿ. ೨೬). [ ? ]

**ಬೊಗ್ಗೇಳು** (ಕ್ರಿ). ಉಬ್ಬು ; ಊದು (?) : ಹುಗ್ಗಿ. . .ಸೂಸಲುಂಡಲಿಗೆ ಬೊಗ್ಗಿದ್ದ ರೊಟ್ಟಿಯಿದ್ದಲಿಗೆ ದೋಸೆಯು ಸಬ್ಬಲಗ್ಗೆಯಾಹುತಿಯೊಪ್ಪಿತಲ್ಲಿ (ಶಶ. ೨೦-೦೨೬). [ಬೊಗ್ಗು + ಏಳು₁ (<ಏೞ್₁)]

**ಬೊಚ್ಚು₁** (ನಾ). (ಕೂದಲಿಗೆ ಸಂಬಂಧಿಸಿದಂತೆ) ದಟ್ಟವಾದುದು : ಐದುರಿಗೆ ಎಂಟನೆಯ ತಿಂಗಳಲ್ಲಿ ಮೆಯ್ಯ ಕೂದಲುಗಳು ಬೊಚ್ಚಾಗಿ ಉದ್ದವಾಗಿ ಕಾಣಿಸುವುವು (ಅಶ್ವಶಾ. ೨೨-೨).
[ದೇ.॥ ತಮಿ. ಪೊಚ್ಚು = ಕೂದಲಿನ ರಾಶಿ ; ತೆಲು. ಬೊಚ್ಚು = ಸವಿರಾದ ಕೂದಲು]

**ಬೊಟ್ಟು ಕಚ್ಚು, ಬೆಟ್ಟುಕಚ್ಚು** = (ಅಲಂ) ಆಶ್ಚರ್ಯಪಡು ; ಬೆರಗಾಗು ; ವಿಸ್ಮಯವನ್ನು ಹೊಂದು : ಕಟ್ಟಿದ ಮನೆಯಿದ್ದು ಬಿಟ್ಟಿಗೆಯರ ಬಟ್ಟು ಹುಟ್ಟಿದ ಶಿಶುಗಳನುಳಿದು ಕಟ್ಟಿವಿಲ್ಲಿಗೆ ಬಂದು ಬಿಟ್ಟಿಯಾಳುಗಳೆಂದು ಬೊಟ್ಟು ಕಚ್ಚಿದರು ಕಾಯೆನುತ (ಅಮುಸಾಂ. ३-೬೦); ಇದನ್ನು ಕಂಡು ಬೇರೆ ಕೆಲವು ರಾಷ್ಟ್ರಗಳು ಬೆಟ್ಟುಕಚ್ಚಿಕೊಂಡರೆ ಅದರಲ್ಲಿ ಆಶ್ಚರ್ಯವಿಲ್ಲ (ರಾಜಕ. ೬೩).

**ಬೊಟ್ಟು₂** 'ಬಟ್ಟು' ನೋ.

**ಬೊಟ್ಟು₃** (ನಾ). [ಸಂಗೀತ] ಮದ್ದಳೆ ಬಾರಿಸುವುದರಲ್ಲಿ ಒಂದು ರೀತಿ (?): ಅಚ್ಚು ವೈಶಿಕ ನೇಮು ವ್ಯಾಪ್ತಿ ಬೊಟ್ಟು ಮೋಹರ ಅರಿದೆಂಬ ವಂಕದಿರಾ ಎಂಬ ಕೂಚು ತಪ್ಪದೆ ಶುದ್ಧಭಾರಿತವಹೆಯೆಂಬ ಮದ್ದಳೆಗಳಂ ಬಾರಿಸುವ ಮದ್ದಳೆಕಾಜರಿಂ (ಚಕಾವ. ३-೦೦ ವ).

[ ← ತೆಲು. ಬೊಟ್ಟು = ಗಾನವಿಶೇಷ ]

**ಬೊಟ್ಟುಗ.** (ನಾ). ಮೈಮೇಲೆ ಚುಕ್ಕೆಗಳುಳ್ಳ ಪ್ರಾಣಿ ; ಚಿರತೆ : ಪಚ್ಚೆವರ್ಣದ ಬೊಟ್ಟುಗ ಅಚುವರ್ಣದ ಅಳಗ ಐದುವರ್ಣದ ಸಂಚಿಗ ಇವಳೊಳಗಾದ ನಾನಾವರ್ಣದ ಅಜಕುಲ ಕುಜುವರ್ಗ ಕೊಲುವ ತೋಳನ ಕುಲ ಮುಂತಾದ ತ್ರಿವಿಧದ ಬಟ್ಟೆಯ ಮೆಟ್ಟಿದೆ (ಸರ್ವಪ. ೬३-೪೩३).

[ ಬೊಟ್ಟು₂ ( < ಬಟ್ಟು) + – ಗ₂ ]

**ಬೊಟ್ಟುಗೊಳ್** (ಕ್ರಿ). ದುಂಡಾಗು ; ವೃತ್ತಾಕಾರವಾಗು : ಮೊಳೆತುವ ಬೊಟ್ಟುಗೊಂಡುವು ಪೊಗರೆದ್ದುವು ನಳಿನಕುಟ್ಮಲಗಳೆಂಬಂತೆ ಬೆಳೆವುತಿರ್ದುವು ಮೊಲೆಗಳು ಪೊಂಗಳಸವ ಗೆಲುವಂತಾ ಕೋಮಲೆಯ (ಶಾಗಳು. ०३-೪).

[ಬೊಟ್ಟು₂ ( < ಬಟ್ಟು ) + ಕೊಳ್₁]

**ಬೊಟ್ಟುತೋರಿಸು** 'ಬೊಟ್ಟುದೋಱಿಸು' ನೋ.

**ಬೊಟ್ಟುದೋಱಿಸು, ಬೊಟ್ಟುತೋರಿಸು** (ಕ್ರಿ). ೧. ಬೆರಳಿನಿಂದ ತೋರಿಸು ; ಬೆರಳು ಮಾಡು. ೨. (ಅಲಂ) ಸ್ಪರ್ಧೆಗಾಗಿ ಬೆರಳೆತ್ತು,—ತೋರಿಸು : ನೀನೆ ಬಲ್ಲಿದನೆಂಬರ್ ನೇಮಿಕುಮಾರಂ ಬೊಟ್ಟುದೋಱುವ ಬಾ (ಬಂಶಂ. ०४-०೯ ವ). **ಬೊಟ್ಟುತೋರಿಸು** : ೧. ಹುಡುಗ ಓಡುತ್ತಲೆ ತನ್ನ ಕುರಿಗಳತ್ತ ಬೊಟ್ಟುತೋರಿಸಿ . . . ಹೊರಟುಹೋದನು (ಮೂರ್ಗಿದ. ೩೭). [ಬೊಟ್ಟು₁ + ತೋಱಿಸು]

**ಬೊಟ್ಟುಮುರಿ, ಬೆಟ್ಟುಮುರಿ** (ಕ್ರಿ). (ಅಲಂ) (ಬೆರಳು ಮುರಿದು) ಶಪಿಸು ; (ನೆಟಿಗೆ ಮುರಿದು) ಶಾಪಹಾಕು : ನೀನು ನನಗೆ ಬೊಟ್ಟು ಮುರಿದು ಶಾಪಳಿಸುತ್ತ ನನ್ನನ್ನು ಮನಸೋಕ್ತ ಬೈಯಬಹುದು (ವೋಚಿವ. ೦೩೬) ; ಏನಾಗೇದ ವಸಂತಗ, ನೀವೆಲ್ಲಾ ಇಷ್ಟು ಬೊಟ್ಟುಮುರಿಯಲಿಕ್ಕ ? (ಹಂ. ೯). **ಬೆಟ್ಟುಮುರಿ** : ಅವರನ್ನು ಕಂಡರೆ ಆಗದವರು ಲಟ ಲಟನೆ ಬೆಟ್ಟುಮುರಿದು ತೃಪ್ತಿಪಟ್ಟುಕೊಂಡರು (ಕಂಠಿ)

[ಬೊಟ್ಟು₁ + ಮುರಿ₁]

**ಬೊಟ್ಟುವೋರಿಸು** (ಕ್ರಿ). ೧. ಒಂದು ಬಗೆಯ ಆಟ ಆಡು (?) : ಶಿಜುಕಲ್ಲಾಡುವ ಬೊಟ್ಟುವೋರಿಸುವ ಸೆಂಡಂ ಪೊಯ್ವ ಬಾದಿಂಗ ಕೈನಿಜಿದೆರ್ದಾಡುವ . . . ನಾನಾಕ್ರೀಡೆಯಿಂದಿರ್ಪರುಂ ತಜಿಸಂದುದ್ಧತ ಭಾವದುಬ್ಬರದಿನೇನುವ್ಯತ್ತರಾಗಿರ್ದರೋ (ಸಂಸುಪು. ३-೬). ೨. ಸ್ಪರ್ಧೆಗೆ ಆಹ್ವಾನಿಸು ; ಪಂಥಾಹ್ವಾನ ನೀಡು (?) : ಪೆಜರೊಳು ಪೊರ್ಚಳಿಯಿಕ್ಕುತ್ತಂ ಮಿಯ್ಯೊರಿಸುತ್ತ ಬೊಟ್ಟುವ [ ವೋ ] ರಿಸುತ್ತುಮಿವು ಮೊದಲಾದ ಪೆಜವುಂ ರಾಗದ್ವೇಷಹೇತುಗಳಪ್ಪುವಂ ಮಾಡುತ್ತಿರ್ಪುದುಂ ವಂಚನೆ ಮೊದಲಾದ ಕ್ಷುದ್ರಿಕೆಗಳನುಪದೇಶಂಗೆಯ್ವುದಾರಂಭಕೋಪದೇಶ ಮಕ್ಕುಂ (ಕಸಾರ. ೪೦೩). 'ಬೊಟ್ಟುದೋಱಿಸು' ಪರಾ. [ ? ]

**ಬೊಟ್ಟೆತ್ತು** (ಕ್ರಿ). ಬೆರಳೆತ್ತಿ ಹೇಳು ; ಕೈಯೆತ್ತಿ ಸ್ಪಷ್ಟ ಪಡಿಸು, – ನಿರ್ದೇಶಿಸು : ಧರಣೀಪಾಳರ್ಕಳುಂ ಮಂತ್ರಿಗಳು ವಿತರರಿಲ್ಲೆಂದು ಬೊಟ್ಟೆತ್ತಿದಂ ರಾಯರೊಳೆಂತಾ ನಾರಸಿಂಹಂ ಸಚಿವ ರೊಳೆಸಕಂವೆತ್ತ ಪೊಲಾಳ್ವನೀಯಿರ್ಬ್ಬರೆ . . . ಹೊಯ್ಸಳನ ಸಕಳ ಸಾಮ್ರಾಜ್ಯಮಂ ಕಾದರಿತ್ತಲ್ (ಎಕ. XI, ದಾವಣ. ೨೩-೩೬ ; ೧೭೨೪) ; ಉತ್ತಮದೇವಿ ನೀನೆ ಮೊಲೆವೊತ್ತರೊಳೆಂದು ಜಗತ್ರಯಕ್ಕೆ ಬೊಟ್ಟೆತ್ತಿದ ಮಾಟಕ್ಕಿಯಿಂದೆ ಗುಡಿಗಟ್ಟಿ . . . ಉನ್ಮತ್ತಗಜೇಂದ್ರಮಿರ್ದೊಡೆ ಗಜೇಂದ್ರ ಮಮಾಲಸಯಾನೆ ನೋಡಿದಳ್ (ಅಕುಪು. ೪-೦೦೦) ; ಭಟ್ಟರ ಗುರು ಗಳೆಂದೆನಿಸಿ ಕುಮಾರನ ಬೊಟ್ಟೆತ್ತಿ ಪೊಗಳ್ದ ಲುಬ್ಧಕರು ಕೊಟ್ಟರೊಂ ದೊಂದು ಕೂರ್ಗಣೆಗಳು ಬಿದ್ದು ಪೆರ್ಬಟ್ಟಕಿ ವಿಗಿಲಾದುದೆನಿಸಿ (ಪೋಚಕ. ೦೯-೩೮). [ಬೊಟ್ಟು₁ + ಎತ್ತು₁]

**ಬೊಡ್ಡಣ** (ನಾ). ಸೋಪಾನಗಳಿಂದ ಕೂಡಿದ, ಜಲಕ್ರೀಡೆಯಾಡುವ ಪುಷ್ಕರಿಣಿ,—ಕೊಳ : ಬಾ ನಾಮಿಾ ಬಾವಿಯೊಳ್ ಜಲಕ್ರೀಡೆ ಯಾಡುವಂ ಎಂದೊಡಗೊಂಡೊಯ್ವಾತನಂ ಬೊಡ್ಡಣದ ಬಾವಿಯೊಳಗೆ ಪುಗುವಂತೆ ಗೆಯ್ದು (ಜೀವಸಂ. ೦೯೯-೦೭). 'ಬೊಡ್ಡಣವಾವಿ' ಪರಾ. [?]

**ಬೊಡ್ಡಣಬಾವಿ** 'ಬೊಡ್ಡಣವಾವಿ' ನೋ.

**ಬೊಡ್ಡಣವಾವಿ, ಬೊಡ್ಡಣಬಾವಿ** (ನಾ). = ಬೊಡ್ಡಣ : ಅಲ್ಲಿಯ ಕೆಜೆಗಳೆಲ್ಲಂ ಬೆಳೆಗೆಯ್ಗಳೆ ಕೊಳಂಗಳೆಲ್ಲಂ ಪೂಗೊಳಂಗಳೆ ಬಾವಿಗಳೆಲ್ಲಂ ಬೊಡ್ಡಣವಾವಿಗಳೆ (ಬಂಶಂ. ೦-३೦ ವ) ; "ವರ್ಧನವಾಪಿ, ತುಂಬಿದ ಬಾವಿ" (ಬಂಶಂ. ಕೋಶ). **ಬೊಡ್ಡಣಬಾವಿ** : ಸುವರ್ಣಮೆಂಬ ಮಣಿ ಕುಟ್ಟಿಮಮಪ್ಪ ಬೊಡ್ಡಣಬಾವಿಯೊಳ್ . . . ಜಲಕ್ರೀಡೆಯಂ ಮನಕ್ಕೆ ಮಂದರಸಿಯರ್ಕಳೊಡನೆ ನೀಡುಂ ಬೇಗಮಾಡುತ್ತಿರ್ಪನ್ನೆಗಂ (ವಡ್ಡಾರಾ. ०४೬-३३) ; "ಬೊಡ್ಡಣಬಾವಿಯೊಳ್–ದೊಡ್ಡಬಾವಿಯಲ್ಲಿ, ಕೊಳದಲ್ಲಿ (?), (ಸಂ ) ವರ್ಧನವಾಪಿ (?) . . . ಇಂಥ ಬಾವಿಗೆ ನೀರನ್ನು ತುಂಬಬಹುದು, ಕೆಳಗಿರುವ ತೂಬಿನಿಂದ ನೀರನ್ನು ಹೊರಕ್ಕೆ ಬಿಡಬಹುದು, ಇದನ್ನು ಜಲಕ್ರೀಡೆಗೂ ಮಿಾಯುವುದಕ್ಕೂ ಉಪಯೋಗಿಸುತ್ತಿದ್ದರು" (ವಡ್ಡಾರಾ. ಕೋಶ) ; ರಸ್ತಮುಂ ಪೋಲ್ವ ಲಾಕ್ಷಾದ್ರವದೊಳು ಬೊಡ್ಡಣ ಬಾವಿಯುಂ ತೀವಿದೊಡದಜೊಳೋಲಾಡಿ ಮುಕ್ಕುಳಿಸಿ ನೋಡಿ ಕೃತಕ ರುಧಿರಮಪ್ಪುದನಜೀದು (ಜಾಪುಂಕ. ०९) ; ತುಂಬಿದ ಬೊಡ್ಡಣಬಾವಿಯ ತೂಂಬಂ ತಡವರಿಸಿ ಕಂಡದಂ ಕಳೆದಲ್ಲಿಂದಂ ಬೇಗಂ ಪೊಱಮಡೆ (ಜೀವಸಂ. ೦೯೯-೩೯) ; ಅರಸನೊಸದು ಜಲಕ್ರೀಡೆಯಾಡಲ್ ಬಗೆದು . . . ಪಂಚರತ್ನ ಶಿಳಾಖಚಿತಮಪ್ಪ ಬೊಡ್ಡಣಬಾವಿಯುಂ ವನಿತಾಜನಸಹಿತಂ ಪೊಕ್ಕಾಗಳ್ (ಬಂಶಂ. ०४-४ ವ). [ಬೊಡ್ಡಣ + ಬಾವಿ./ ತೆಲು. ಬೊಡ್ಡನಬಾವಿ]

**ಬೊಡ್ಡಿ** 'ಪೊಡ್ಡಿ' ನೋ.

**ಬೊಡ್ಡಿತನ** (ನಾ). ಸೂಳೆತನ ; ಜಾರತನ : ಮನುಕುಲದೆ ಪುಟ್ಟಿ ನಿಟ್ಟುರದ ಬೊಡ್ಡಿತನಮಿಂತೇಂ ಸೂಟನಾಯ್ದು ಬಾಟ್ದಿ ನೀಂ ಮಗಳೇ ! (ರಾಮಚಕ. ೬೦-೩). [ಬೊಡ್ಡಿ (< ಪೊಡ್ಡಿ) + –ತನ]

**ಬೊಡ್ಡಿಮಗ** 'ಪೊಡ್ಡಿ' ಪರಾ.

**ಬೊಡ್ಡು** 'ಬಡ್ಡು' ನೋ.

**ಬೊಡ್ಡೆ** (ನಾ). ೧. (ಗಿಡ, ಮರ ಮೊದಲಾದುವುಗಳ) ಬುಡ ; ತಳ ; ಕೆಳಭಾಗ : ಆ ಬೇವಿನ ಮರದ ಬೊಡ್ಡೆಯು ಅವನಿಗೊಂದು ಆಸರವಪ್ಪ (ಜಿವರಂ. ೦೦); ಅವರೆಲ್ಲರೂ ಬಂಡೆಯ ಬೊಡ್ಡೆಯಲ್ಲಿ ನಿಂತು ಎದುರ್ರು ಮಲೆಯ ಮೇಲಿನ ಬಾಹುಬಲಿಯತ್ತ ನೋಡಿದರು (ಸವಕಿ. ೦೦೯). ೨. ಮೊದಲು ; ಆರಂಭ : ಬೊಡ್ಡೆಯಲ್ಲಿಯೇ ಅವನೊಂದು ದೊಡ್ಡ ತಪ್ಪನ್ನು ಮಾಡಿರುವನು (ಹುರುಂ. ೯೩). 'ಬುಡ' ಪರಾ.

**ಬೊದಡೆ, ಬೋದಡೆ** (ನಾ). ದಪ್ಪ ಹಾಗೂ ಒರಟಾದ ಹಚ್ಚಡದಂತಹ ಹೊದಿಕೆ : ಬೋಳು ಜಡೆಮುಡಿ ಲೋಚುಮಂಡೆಗಳ ಸಿತಭಸಿತಭಾಳ ಭಸ್ಮಾಂಗಮುದ್ಧೂಳಿತಂ ರುದ್ರಾಕ್ಷಿಮಾಲೆ ಕಂಬಳಿ ಜಾಡಿ ಬೊಂತೆ

ಬೊವಡೆಯು ಕೌಪು ನಿರ್ವಾಣ ಕಾಶಾಂಬರ (ಗುರುಚ. ೩-೫೬); ಕಾವಿ ಕಾಷಾಯಾಂಬರವು ಕಂತೆ ಜಾಡಿಯು ಬೊದಡೆ ತೀವಿ ಮೈಯೊಳು ಭಸಿತ ದೇವಗಣ ನಡೆಯೆ (ಶರಲೀ. ೧೬೯-೫). **ಬೋದಡೆ** : ತಳೆದ ಒಡಲ ಬೂದಿಯು ಕಚ್ಚುಟದ ಕೈದಡಿಯು ನೆತ್ತಿಯ ಜಡೆಯು ಬೋದಡೆಯು ಮಡಿಯುರೆತ್ತ ಮಣಿಮಯಾಸನವೆತ್ತ ನೋಡು (ಮಂದೇಶು. ೭-೫೭).

[← ಮರಾ. ಬೋಜಡ, ಬೋದಡ]

**ಬೊದಿಲ್** (ನಾ). ಒಂದು ಅನುಕರಣ ಶಬ್ದ : ಸೂತನೆಂಬವಂ ಕಂಡು . . . ಬೊದಿಲ್ಲೆನೆ ಪಾಯ್ದು ನೀರೊಳಾ ಬಾಳಸನಾದಮಾದರದೆ ಕಂಡೊಸೆದಂ ನಿಧಿಗಂಡಸಂತೆವೋಲ್ (ಕಂಕಥಾ. ೦-೯೬) ; ಎಳೆ ಬೊದಿಲ್ಲೆನೆ ಬಿಟ್ಟಿತ್ತು (ಕಂಕಥಾ. ೧೦-೭೦).

**ಬೊನೆಗಾರೆ** 'ಬೋನಂಗಾರೆ' ನೋ.

**ಬೊಪ್ಪ** 'ಬಪ್ಪ₂' ನೋ.

**ಬೊಪ್ಪಡೆ** (ನಾ). ಒಂದು ಬಗೆಯ ತೆರಿಗೆ : ಸಂಕರದಾಸಿವ ಕೊಟ್ಟದಾಸಿಗ ಸುಂಕದ ಪೆಗ್ಗಡೆ ಬೊಪ್ಪಡೆ ಒಳಗಾಗಿ ಸುಂಕ ಆಯದಾಯ . . . ಧಾರಾಪೂರ್ವಕ ಮಾಡಿ ಬಿಟ್ಟರು (ಎಕ. V(R), ಮೈಸೂರು. ೨೦೫-೦೪; 1175).

[ ? ]

**ಬೊಪ್ಪಯ** (ನಾ). ತಂದೆ; ಜನಕ : ಬೊಪ್ಪಯ, ಮುಚ್ಚುವಿರೆ ನನಗೆ ನಿಮ್ಮಾತ್ಮಮಂ ಸುಡುತ್ತಿರ್ಪಳಲ ಬೇಗೆಯಂ (ಶ್ರೀರಾಮಾ. ೪೬೨-೪೬೫).

[ಬೊಪ್ಪ (<ಬಪ್ಪ₂) + ಅಯ್ಯ₁ (<ಆಯ್ಯ₆₁)]

**ಬೊಪ್ಪಿ** (ನಾ). (ಸಾಮಾನ್ಯವಾಗಿ ಶೂದ್ರವರ್ಗಕ್ಕೆ ಸೇರಿದ) ಗ್ರಾಮ ದೇವತೆಯ ಅರ್ಚಕ : (ಕ). [ ← ಮರಾ. ಭೋಪೀ, ಭೋಪ್ಯಾ ]

**ಬೊಪ್ಪಿಬೋಯ** (ನಾ). ಒಬ್ಬಾತನ ಹೆಸರು : ಬೊಪ್ಪಿಬೋಯಸ್ಯ ಕಾಶ್ಯಾ(ಶ್ಯ)ಪಗೋತ್ರ ಕುಮಾರಶರ್ಮಣ (ಇಆ.VII, ೦೯೯-೪೨ ; 668).

[ ಬೊಪ್ಪಿ? + ಬೋಯ]

**ಬೊಬ್ಬರ** 'ಬಬ್ಬರ' ನೋ.

**ಬೊಬ್ಬರ್ಯ** (ನಾ). (ಕರಾ) ಒಂದು ಕ್ಷುದ್ರದೇವತೆಯ ಹೆಸರು : ನಿದ್ರೆಯಲ್ಲಿ ಜಟ್ಟಿಗ, ಬೊಬ್ಬರ್ಯ ಬಂದ ಹಾಗೆ ಕಾಣಿಸಬಹುದು (ಸ್ವಕ್ಷಮೊ. ೮) ; ಆ ಬೊಬ್ಬರ್ಯ ನಿಮಗೆ ಕಾಣಿಸಿತ್ತೆ ? (ರೇವಹೆಂ. ೫೫).

[← ತುಳು. ಬಬ್ಬರ್ಯ ]

**ಬೊಬ್ಬಾಟ**, ಬಬ್ಬಾಟ (ನಾ). ೧. (ಆನಂದ, ಆವೇಶ, ರೋಷ ಮುಂತಾದುವುಗಳಿಂದ ಮಾಡುವ) ಕೂಗಾಟ ; ಚೀರಾಟ ; ಅರಚುವಿಕೆ : ಬೊಬ್ಬಿಡದಾರುಮೀ ಬೊಬ್ಬಾಟಮೇತಕ್ಕೆ (ಬಸಪು. ೫೭-೦೬); ನಿಜಪದಾತಿಯ ಬೊಬ್ಬಾಟ . . . ತ್ರಿಜಗಕ್ಕೆ ಭಯವ ಬೀಜಿದುವು (ಕುಸವಿ. ೦೫-೨೦). ೨. ದೊಡ್ಡ ಶಬ್ದ ; ಗಟ್ಟಿಯಾದ ಧ್ವನಿ : ದಿವಿಜರ ಥಟ್ಟಿನಲಿ ಬೊಬ್ಬಾಟವಾಯ್ತು ಗಭೀರಭೇರಿಗಳು (ಕುವ್ಯಾಆ. ೦೨-೨೫) ; ಅಸುರರ ಬೊಬ್ಬಾಟ ಹಯದುರುಹೇಷಿತಧ್ವನಿ ಕರಿಯ ಬೃಂಹಿತ ಘೋಷ . . . ಅಸುರದಿ ಬೆದಜಿಸಿತು ರಾಮಸುವಾಸಿನಿಯನು (ತೊರರಾ. ೩-೬-೨೮). ೩. ಅಬ್ಬರ ; ಆರ್ಭಟ : ಆಟವಾರಂಭಿಸದು ಬಟು ಬೊಬ್ಬಾಟವೇತಕೆ ವಿಜಯಿಸಿದಿ ವಾಚಾಟರಿಗೆ ಮೆಚ್ಚುವಳೆ (ಕುವ್ಯಾಸ. ೧೩-೪೭); ಭಂಡ ಬೊಬ್ಬಾಟವನು ಬಿಡು ಕೈಕೊಂಡು ನೋಡಿದನುಳಿದ ಗೋಪರ ತಂಡವನು ಬಳಿಕಾಹುತಿಯ ಮಾಡಾಪಡೆ (ಶಿಭಾಗ. ೧೦-೩೨-೦೨); ತನ್ನ ಗಂಡನ ಬೊಬ್ಬಾಟ ರಾಧಾಬಾಯಿಗೂ ತುಸು ವಿಚಿತ್ರವಾಗಿಯೇ ತೋರಿರಬೇಕು (ವಾತ್ಸಲ್ಯ. ೭೩). ೪. ಗಲಾಟೆ; ಗಲಿಬಿಲಿ; ಗೊಂದಲ : ಅರಮನೆಯಲಾ ಬೊಬ್ಬೆ ಹಸ್ತಿನಪುರದಲೀ ಬೊಬ್ಬಾಟವಿನ್ನುಳಿದರಸುಗಳ ಪಾಡಾವುದು (ಕುವ್ಯಾಸ. ೭-೬) ; ಇರುಳು ಬೊಬ್ಬಾಟದಲಿ ನಿದ್ದೆಗೆಟ್ಟ ನೆರೆಯವರಾಸಿನಲಿ ಹೆಸರೊಂದನಿಟ್ಟೆ (ನಡೆದಾ. I, ೪೪೨). ೫. ತಕರಾರು ; ತಗಾದೆ ; ವರಾತ : ಈ ಪ್ರಕಾರದ ಬೊಬ್ಬಾಟಗಳು ಪತ್ರದ್ವಾರದಿಂದ ನೇಹಮಿ ನಡದಿರುತ್ತವೆ (ಮುಂಬವ್ಯಾ.೮ ಪ್ರಶ್ನಾವಳಿ). ೬. ಗುಲ್ಲು; ವ್ಯಕಾರು: ನೀ ಅದು ಮಾಡುತೀ ಇದು ಮಾಡುತೀ ಅಂತ ಊರೆಲ್ಲಾ ಬೊಬ್ಬಾಟ ಆಗೈತವ್ವಾ (ಮಣ್ಣುಹ. ೧೦೦): ರಾಚಪ್ಪ ನಿನ್ನ ಕೈಹಿಡಿದು ಕೇಳಿದಾ ಅನ್ನೂದರ ಬೊಬ್ಬಾಟ ಮಾಡಿದವ ಶ್ಯಾಮರಾಯ (ದೀಕಹ. II, ೦೯೭). **ಬಬಾಬ್ಬಟ** : ೬. ಸ್ವಲ್ಪದರ ಮಾತು, ಯಾತಕ್ಕ ಬಬ್ಬಾಟ ಮಾಡೋದು (ಧಮಂಚ. ೩೪): ಈಗ ಇಲ್ಲದ ಬಬ್ಬಾಟ ಮಾಡೂ ಹಂಗಿಲ್ಲ. ಯಾರೆದುರೂ ಹೇಳದ ಸುಮಾಕ ಇರೂದ ಪಾಡ (ಗ್ರಾಮಾಯ. ೪೮).

[ಬೊಬ್ಬೆ₂ + ಆಟ./ತುಳು. ತೆಲು. ಬೊಬ್ಬಾಟ]

**ಬೊಬ್ಬಿ** 'ಬೊಬ್ಬೆ₃' ನೋ.

**ಬೊಬ್ಬಿಕ್ಕು**, ಬೊಬ್ಬೆಯಿಕ್ಕು (ಕ್ರಿ). ೧. ಕೂಗು ; ಅರಚು : ಲಂಘಿಸುತ ಕಾಡೆಮ್ಮೆಗಳ ತೆಕ್ಕೆಯೊಳು ಕೋಣನಿರೆ ಕಂಡು ಶಬರಿಯರು ಬೊಬ್ಬಿಕ್ಕಿ ಮುಗುಳ್ನಗೆಲಿಸಿದರು(ಹಕಣಾ. ೫-೩೪). ೨. ಗರ್ಜಿಸು; ಅಬ್ಬರಿಸು: ರಕ್ಕಸಿಯ ಕೊಂದತುಳಪರುಷದ ಹರವರಿಯುಲುಜಿ ಬೊಬ್ಬಿಕ್ಕಿ ಬಾಹಪ್ಪಳಿಸಿ ಘಟನೆಗೆದಂಬರಸ್ಥಳಕೆ . . . ಹಾಜಿದನು (ತೊರರಾ. ೫-೦-೨೪); ಶಿವ ನೀನಾದ ಕಾರಣದಿಂದೆ ಬಂದಾಹವದೊಳು ಬೊಬ್ಬಿಕ್ಕಬಹುದು (ಷೋಹಕ. ೩೪-೨೬). **ಬೊಬ್ಬೆಯಿಕ್ಕು** : ೧. ತಬ್ಬಿಬ್ಬಿಯಾಗದೆ ತಳ್ಳಂಕಗೊಳ್ಳದೆ ಬೊಬ್ಬೆಯಿಕ್ಕದೆ ಜೋಕೆಯಜೀದು ಒಬ್ಬರಿಬ್ಬರು ಮೂವರೊಂದೊಂದು ಕಲೆಯು ಮೈಯುಬ್ಬುವೊಲು ಕೇಳಿಸಿದರು (ಭರತ. ೦-೭೦). [ ಬೊಬ್ಬೆ₂ + ಇಕ್ಕು ]

**ಬೊಬ್ಬಿಡಿಸು** (ಕ್ರಿ). ಬಹಳ ಶಬ್ದ ಮಾಡಿಸು : ಮೂಗಿನಲಿ ಹಲವು ಕುಟಿಕೋಣಗಳ ಹೊಗಿಸುವುದುಲಿವ ಹೆಬ್ಬಟಿಗಳನು ಕಿವಿಗಳ ಬಳಿಯ ಬೊಬ್ಬಿಡಿಸುವುದು (ತೊರರಾ. ೬-೨೬-೨೩). [ಬೊಬ್ಬಿಡು + — ಇಸು₃]

**ಬೊಬ್ಬಿಡು**, ಬೊಂಬಿಡು, ಬೊಬ್ಬೆಯಿಡು (ಕ್ರಿ). ೧. (ಆನಂದ, ರೋಷ, ಆವೇಶ ಮುಂತಾದುವುಗಳಿಂದ) ಕೂಗು ; ಅರಚು : ಭಿಲ್ಲಪ್ರಕರಮಡಸಿ ಕೂರ್ನಾಯ್ಗಳಂ ಬಿಟ್ಟು ಬೊಬ್ಬಿಟ್ಟು (ಗಂಕ. ೦-೧೦೧); ಸೈನ್ಯಂ ನಡೆಯಲ್ ಬೊಬ್ಬಿಟ್ಟು ಕೋಲಂ ತುಡುಕೆ (ದಕಕು. ೭-೭೦); ಬೀಳುಬೀಳಭಿಮನ್ಯುವಿವ ವಧೆ ಬಾಳಲೀವುದೆ ನಿನ್ನನೆನುತುಬ್ಬಾಳುತನದಲಿ ಪಾರ್ಥ ಬೊಬ್ಬಿಡೆ (ಕುವ್ಯಾದ್ರೋ. ೦೪-೪೦). ೨. ಗಟ್ಟಿಯಾಗಿ ಹೇಳು ; ಧ್ವನಿಮಾಡಿ ಹೇಳು; ಉದ್ಘೋಷಿಸು : ಬೇಡಿ ಕರುಣವನೀಯೆನುತ್ತಂ ಕೂಡೆ ಬೊಬ್ಬಿಡುತಾರು ತಾಣತಿಗೂಡಿ ತಾರ್ಕ್ಯಸುತ್ತಂ . . . ತಾಂಡವಮನಾಡುವೆನು (ಬಸಪು. ೦೭-೨೦); ಶ್ರೀ ರುದ್ರವೇದ ಬೊಬ್ಬಿಡುತ್ತಿದೆ (ಗಣಭಾ. ೨೪೫-೧) ; ಕಟ್ಟಿಗೆ ಗಾಜಿರನೇಕವುಗ್ಗಡೆ ಬೊಬ್ಬಿಟ್ಟುದು ರಾಯನೇಳ್ಗೆಯಲಿ (ಷೋಹಕ. ೨೦-೫೮). ೩. ಆಕ್ರಂದನ ಮಾಡು ; ಮೊರೆಯಿಡು : ಚಂದ್ರಂಗೆ ರಾಹು ಅಡ್ಡ ಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೆ (ಬಸವ. ೨೫) ; ಹದ್ದು ಕಾಗೆಯ ಮನೆಗೆ ಬಾಣಸವಿದ್ದುದೋ ಗಜವೆನುತ ಬೊಬ್ಬಿಡುತಿದ್ದುದರಿಬಲ (ಕುವ್ಯಾದ್ರೋ. ೩-೪೩); ಬಾಲೆಯುರುಗಳು ಬೊಬ್ಬಿಡಲು ಗೋಪುರದಗ್ರಶಾಲೆಯ ರೋದನಗೇಳ ಲೀಲೆಗಾಜಿನ ಕೊಲ್ಲುವಿಲ್ಲೆಂದು ದುಃಖದ ಶೀಲೆಗೆ ಮಾತನಟ್ಟದನು (ಷೋಹಕ. ೩೫-೫೨). ೪. ಅಧಿಕವಾಗಿ ಧ್ವನಿಮಾಡು,— ಶಬ್ದ ಮಾಡು : ನಡೆವೆಡೆಯೊಳಗುರ್ಬಿಂ ಬೊಬ್ಬಿಡುವಂದುಗೆ ಗೆಜ್ಜೆ ಸಜ್ಜನೆಗೆ ಸೊಗಯಿಸುಗುಂ (ಗಂಕ. ೩-೯೪); ಕಾಡಿಕಾಡಿದು ಬೊಬ್ಬಿಟ್ಟಾಡುತಿರ್ದವು ಸಾಂದ್ರ ಚಂದ್ರಿಕೆಯಲಿ ಚಕೋರಿಗಳು (ಕುವ್ಯಾದ್ರೋ. ೦೭-೦೪). **ಬೊಂಬಿಡು** : ೪. ರಂಭೆಗಳ್ ಬೊಂಬಿಡಲ್ . . . ನಡೆದಂ ಮರುಳುಸಿದ್ಧಾಂತ ವೃದ್ಧಂ (ಚತುಪು. ೩-೦-೮). **ಬೊಬ್ಬೆಯಿಡು** : ೧. ಮಾಧವನು ತನ್ನ ಜನರನ್ನು ಗಟ್ಟಿಯಾಗಿ ಬೊಬ್ಬೆಯಿಡುವಂತೆ ಹೇಳಿದನು (ಬಂಕಿಮ. ೩೪).

[ಬೊಬ್ಬೆ₂ + ಇಡು₁]

**ಬೊಬ್ಬಿರಿ** 'ಬೊಬ್ಬಿಱಿ' ನೋ.

**ಬೊಬ್ಬಲಿ** (ನಾ). ಸ್ತ್ರೀಯರು ಕಾಲಿನ ಹೆಬ್ಬೆರಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ : ಮುತ್ತಿನ ಗೆಜ್ಜೆಗಳಿಂ ಕೂಡಿದ ವೀರಮುದ್ರಿಕೆ ಕಿರುಪಿಲ್ಲಿ ಬೊಬ್ಬಲಿಗಳನಿಟ್ಟು (ಸೌಗಂಧಿ. ೨೧೨-೩).
[← ತೆಲು. ಬೊಬ್ಬಲಿ]

**ಬೊಬ್ಬಿಱು, ಬೊಬ್ಬಿರಿ** (ಕ್ರಿ). ೧. (ಆನಂದ, ರೋಷ, ಆವೇಶ ಇತ್ಯಾದಿಗಳಿಂದ) ಕೂಗು ; ಅರಚು : ಶಾನಂ ಓಡಿಂಬೆಯುಂ . . . ಕೆನ್ನೆತ್ತರೊಳೊರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ . . . ಆಡುವಾಗಳ್ (ಪಂಪಭಾ. ೧೨-೧೫೮ ವ); ಬೇಡಪಡೆ ಬೊಬ್ಬಿಱಿದಾಡಿದುದು (ರಾಜಶೇ. ೨-೦೧೯); ಆಯೆನುತ ಬೊಬ್ಬಿಱಿದು ವಿಪ್ರನಿಕಾಯ ಕುಣಿದುದು . . . ಪರುಷದಲಿ (ಕುಮಾವ್ಯಾ. ೧೫-೩೦). ೨. ದೊಡ್ಡಧ್ವನಿ ಮಾಡು ; ಗಟ್ಟಿಯಾಗಿ ಧ್ವನಿ ಮಾಡು ; ಉದ್ಘೋಷಿಸು : "ಬೊಬ್ಬಿಱು (ಬೊಬ್ಬೆ + ಇಱು) — ಮಹಾರವೇ" (ಶಮದ); ಸೂಳವಿಸಿ ಬೊಬ್ಬಿಱಿದವುರುನಿಸ್ಸಾಳಚಯವದ್ರಿಗಳ ಹೆಡತಲೆ ಸೀಳೆ ಸಿಡಿಲೇಳಿಗೆಯುಲಿದ್ದವು ವಿವಿಧವಾದ್ಯರವ (ಕುಮಾವ್ಯಾದ್ರೋ. ೦-೯೪) ; ಬೊಬ್ಬಿಱುವುದು ಕೀರ್ತಿಡಿಂಡಿಮಮುಖಿಂ ಜಗದೊಳು ವಿಜಯ ಕ್ಷಿತೀಂದ್ರನಾ (ಎಕ. XI. ಚಿತ್ರದು. ೩-೭; ೯) ; ನಿಮ್ಮಸುಗಳು ಶರೀರವ ನೀಗಿ ಕಳೆಯಲಿ ಎಂದು ಬೊಬ್ಬಿಱಿದೆಚ್ಚನತಿರಥರ (ಕುಮಾವ್ಯಾದ್ರೋ. ೦೫-೬೩). ೩. ಆಕ್ರಂದನಮಾಡು ; ಮೊರೆಯಿಡು : ಬೊಬ್ಬಿಱಿವಿನಮಾಂತಿಱಿದನೊರ್ವ ಭಟನರಿಭಟರಂ (ಪರ್ಶಪು. ೯-೩೦); ರಥ ಕಡಿವಡೆದುದಿನ್ನೆಂತೊದಗುವನೊ ಸುಕುಮಾರ ತಾನೆನುತ ಪಡೆ ಬಿಡದೆ ಬೊಬ್ಬಿಱಿಯೆ (ಕುಮಾವ್ಯಾದ್ರೋ. ೬-೩೬). **ಬೊಬ್ಬರಿ** : ೧. ಬಣ್ಣ ಹಚ್ಚಿದವನು ಚಿತ್ರಕಾರ, ಬೊಬ್ಬರಿದವ ಗವಾಯಿ, ಕಾಗದ ಕಪ್ಪು ಮಾಡಿದವ ಕವಿ ಎಂಬ ದೃಷ್ಟಿಯೋ ? (ಒಂಬಿದ. ೬೩); "ಇದೇನು ನಿನ್ನಲ್ಲಿ ಗಂಡಸುತನ ?" ಎಂದು ಬಲವಾಗಿ ಬೊಬ್ಬರಿದು ಕೇಳಿದಳು (ಹಳ್ಳಿಹಾ. ೦೦೬). ೨. ಕಬ್ಬಿಲರು ಕಬ್ಬಿಗರು ತಾವೆನುತಬ್ಬರಿಸಿ ಬೊಬ್ಬರಿಯೆ ಕಬ್ಬವಾದುದೆ ? (ಕೋಗಿಲೆ. ೦೬-೩೯).
[ಬೊಬ್ಬೆ₂ + ಇಱು₁]

**ಬೊಬ್ಬಿಱಿತ** (ನಾ). ಅಬ್ಬರ; ಆರ್ಭಟ; ಗರ್ಜನೆ : ಇಱಿತ ಮುನ್ನವೊ ಸುಭಟರಿಗೆ ಬೊಬ್ಬಿಱಿತ ಮುನ್ನವೊ (ಕುಮಾವ್ಯಾಕ.೦೦-೯೬); ಬಲು ಬೊಬ್ಬಿಱಿತ ಕಸುರನ ಧೈರ್ಯ ಕಾಲನ ಮಱಿಯ ಹೊಕ್ಕುದು ಹೊರಳಿಯೊಡೆದುದು ವಿಸ್ಕ ರಕ್ತಸರ (ತೊರವೆರಾ. ೩-೭-೩೦). [ಬೊಬ್ಬಿಱು + —ತ₂]

**ಬೊಬ್ಬುಲಿ** 'ಬಬ್ಬುಲಿ' ನೋ.

**ಬೊಬ್ಬುಳಿ₁** 'ಬಬ್ಬುಲಿ' ನೋ.

**ಬೊಬ್ಬುಳಿ₂** (ನಾ). ೧. (ನೀರಿನ) ಗುಳ್ಳೆ; ಬುದ್ಬುದ : ಇಬ್ಬರು ಗಳೊಂದಾಗಿ ಕೂಡಿಯೆ ಬೊಬ್ಬುಳಿಯನೊಡೆವಂತೆ ಕೊಂದರು ಹಲವು ಮಲ್ಲರನು (ಕುಮಾವ್ಯಾವಿ. ಓಂಇ. ೪-೦೦) ; ಬೊಬ್ಬುಳಿಯ ಬೆಸನೊರೆಗಳೊಟ್ಟಲಿನೊಬ್ಬುಳಿಯನಬ್ಬರಿಸುತರವಣಿಗೊಬ್ಬಿಸಲಿ ಮದವೇಱಿ ಪಾಲ್ಗಡಲೆಸೆದುದಿದಿರಿಸಲಿ (ತೊರವೆರಾ. ೦-೬-೯೩): ನೀರ ಬೊಬ್ಬುಳಿಯಂತೆ ತೋಱುತಿಹ ದೇಹದ ಸಾರವಱಿಯದಲೆ ಸುಖಿಪುದಜ್ಞಾನದ ದಾರಿಯಹುದು (ಸರ್ವಜ್ಞ. ೯೦೬). ೨. (ಗರ್ಭಾಶಯದಲ್ಲಿರುವ) ಐದನೆಯ ದಿವಸದ ಗರ್ಭಪಿಂಡ : ಪ್ರಥಮದಿನ ಕಲಲವೆಸರಂ ಪಡೆವಸವನೈದುದಿನಕೆ ಬೊಬ್ಬುಳಿಯೆನಿಸಿದಪನೇಳುದಿನದವಂ ಜನನಿಗರ್ಭದ ಮಾಂಸಪೇಸಿಯೆಂದೆನಿಪವು (ಶಾಸಂತ. ೯-೯೬).
[<ಸಂ. ಬುದ್ಬುದ./ಪ್ರಾ. ಬುಬ್ಬುಅ./ತುಳು.ಬೊಬ್ಬುಳಿ]

**ಬೊಬ್ಬುಳಿ₃** 'ಬೊಂಬುಳಿ₂' ನೋ.

**ಬೊಬ್ಬುಳಿಕೆ** (ನಾ). ೧. = ಬೊಬ್ಬುಳಿ₂ ೧ : ಬೆಳಗುವ ತಾರಕಾನಿಕರಮಾಕಡಲೊಳ್ ನಸುತೇಲ್ವಕಾದೇಂಕೆ ಬೊಬ್ಬುಳಿಕೆಗಳಂತೆ ತೋಱಿದುವು (ಅದಿಪು. ೬-೯೬); ತನುವಪ್ಪೊಡೆ ನಿಲ್ಲದು ಜವ್ವನವಪ್ಪೊಡೆ ನೀರ ಬೊಬ್ಬುಳಿಕೆ (ಧರ್ಮಾಮೃ. ೯-೨೬೮) ; ನೀರ ಬೊಬ್ಬುಳಿಕೆಗೆ ಕರ್ಬುನದ ಕಟ್ಟ ಕೊಟ್ಟು ಸುರಕ್ಷಿತವ ಮಾಡುವ ಭರವ ನೋಡಾ (ಬಸವ. ೦೬೨). ೨. = ಬೊಬ್ಬುಳಿ₂ ೨: ಪಿಂಡಮಯವಾದ ಪುರುಷನ ವೀರ್ಯ ಸ್ತ್ರೀರಕ್ತದೊಡವೆರೆದೊಂದು ದಿನಕ್ಕೆ ಕಲಲವಹುದು ಐದುದಿನಕ್ಕೆ ಬೊ[ಪಾಠಾಂ.ಬ]ಬ್ಬುಳಿಕೆಯಹುದು (ವಿವೇಕ. ೨೩೩) ; ಮಾತೆಯ ರಜಸ್ಸು ಪಿತೃವೀರ್ಯಂಗಳೊಂದಾಗಿ ಸಾತಿಶಯದಿಂ ಪ್ರಥಮದಿನದಲ್ಲಿ ಕಲಲಮಹುದಾ ತೆಱದೊಳೈದುರಾತ್ರಿಗೆ ಬೊ[ಪಾಠಾಂ. ಯೊ]ಬ್ಬುಳಿಕೆ (ತಿಂಪು. ೩೮-೩). [ಬೊಬ್ಬುಳಿ₂ + —ಇಕೆ]

**ಬೊಬ್ಬುಳಿಸು** (ಕ್ರಿ). ಗುಳ್ಳೆಯೇಳು ; ಬುದ್ಬುದವುಂಟಾಗು : ಕೆಸಱುರ್ಬರ್ಜೆಱಿ ನೀಬೊರ್ಬುಳಿಸಿ ಬುಳುಬುಳುಂದೇಂಕೆ ಮಂದೆದ್ದು ಕಂಪಂ ಮಸಗುತ್ತುಂ ಬತ್ತೆ (ಶಗಶಿ. ೦೬-೬೪). [ಬೊಬ್ಬುಳಿ₂ + —ಇಸು₃]

**ಬೊಬ್ಬೆ₁** (ನಾ.) ಸುಡುವುದರಿಂದ ಚರ್ಮದ ಮೇಲೇಳುವ ಗುಳ್ಳೆ, ಬೊಕ್ಕೆ : ದೇಹದ ಮೇಲೆ ಏಳುವ ಬೊಬ್ಬೆಗಳು ದೊಡ್ಡವಾಗಿ ಅಥವಾ ಸಣ್ಣವಾಗಿ ಇರುವುದುಂಟು (ಬಾಶಿ. ೩೦) : ಅಡವಿಯಲ್ಲಿ ನನ್ನ ಸ್ಥಿತಿಗತಿಗಾಗಿ ಯಾರೂ ಅಳಲಿಲ್ಲ. ಗೋಳಾಡಿ ಅತ್ತವರೆಂದರೆ ನನ್ನ ಕಾಲ ಬೊಬ್ಬೆಗಳು (ಉದ್ಯಾಪಾ. ೦೦೬) ; ಬೊಬ್ಬೆ ಬಂದು ಕೈ ನೋಯಲಾರಂಭಿಸಿತು (ಪುಲ್ಲಿಸ. ೧೯).
[ದೇ.॥ ತೆಲು. ಬೊಬ್ಬ]

**ಬೊಬ್ಬೆ₂** (ನಾ). ೧. (ಆನಂದ, ರೋಷ, ಆವೇಶ, ಮುಂತಾದ ಕಾರಣಗಳಿಂದ ಮಾಡುವ) ಆರ್ಭಟ ; ಕೂಗಾಟ : ಅರಚುವಿಕೆ : "ಬೊಬ್ಬೆಯೆನಲ್ ಭಟಗರ್ಜನೆ" (ಶಬರಿ. ೩೨) ; ಬೇಡರ ಬೊಬ್ಬೆಯಿಂದಡವಿ ಗೋಳಿಟ್ಟುದು (ಹರಿಶ. ೩-೨೩) ; ಕಳವಳಿಸಿತರಿಸೇನೆ ಬೊಬ್ಬೆಯೊಳುಲಿದುದೀ ನಮ್ಮವರು (ಕುಮಾವ್ಯಾಕ. ೨೦-೨೯) ; ಇಷ್ಟು ಪೌರುಷದ ಬೊಬ್ಬೆಯ ಕೇಳ್ದು . . . ಯಾವವರ್ ತಱುಬಿದರ್ (ಪೋಪಚ. ೩೯-೧೬). ೨. ದೊಡ್ಡ ಶಬ್ದ ; ಮಹಾಧ್ವನಿ : "ಕೋಲಾಹಲಃ, ಕಲಕಲಃ — ಈ ೨ ಬೊಬ್ಬೆಯ ಪೆಸರು" (ನಾಚಿರಾ. ೯೬) ; ಅಬ್ಬರಿಸಿ ಬೊಬ್ಬೆಯುಂ ಕೂಟ್ಟಿಬ್ಬಿಸಿದೊಡೆ ಶಾಪ ವಿಸಾಗುವಿಸಾತಂ (ಧರ್ಮಶ. ೩-೭೯); ಮೆಲುನುಡಿಗೆ ಗಣೆ ಹೊದ್ದಿದವು ಸರದುಲಿಗೆ ಕೋಗಿಲೆಯೌಕಿದವು . . . ನೇವುರದ ಬೊಬ್ಬೆಗೆ ಸಿಲುಕಿದವು ಹಂಸೆಗಳು ಕಮಲಾನನೆಯ ಕೆಳದಿಯರ (ಕುಮಾವ್ಯಾಆ. ೯-೭೦). ೩. ಆಕ್ರಂದನ ; ಪ್ರಲಾಪ : ಅರಮನೆಯಲಾ ಬೊಬ್ಬೆ ಹಸ್ತಿನಪುರದಲೀ ಬೊಬ್ಬಾಟ ವಿಸ್ಮಳಿದರಸುಗಳ ಪಾಡಾವುದು (ಕುಮಾವ್ಯಾಶ. ೦-೬) ; ಬೊಬ್ಬೆಯಾದುದು ಬಳಿಕ ಸುಮನಸರೊಬ್ಬುಳಿಯ ಜೋಣಿಯಲಿ ಮುನಿಗಳು ಬೆಬ್ಬಳಿಸಿದರು (ತೊರವೆರಾ. ೦-೦೦-೯). ೪. ಗುಲ್ಲು ; ಪುಕಾರು : ಒಂದು ದೊಡ್ಡ ಪಾಪುಜೋರರ ಗ್ಯಾಂಗು . . . ಬ್ಯಾಂಕು ಕಳವುಗಳನ್ನು ನಡೆಸುತ್ತಿದೆ ಎಂದು ಬೊಬ್ಬೆ ಎದ್ದು (ವಠದಾ. 11, ೬೩೯).

**ಬೊಬ್ಬೆಕಾಯಕ** = ಮುಳ್ಳುಗಳ ಮೇಲೆ ನಿಂತು, ಮೈಗೆ ಕತ್ತಿ ತಿವಿದುಕೊಂಡು, ಗದ್ದಲವೆಬ್ಬಿಸಿ ಭಿಕ್ಷೆಯೆತ್ತುವ ಕಾಯಕ. (ಕ). **ಬೊಬ್ಬೆಹಾಕು** = ಕೂಗಾಡು ; ದೊಡ್ಡದಾಗಿ ಅರಚು : ಸತ್ಯ, ಅಹಿಂಸೆ ಎಂದು ಬಾಯಲ್ಲಿ ಬೊಬ್ಬೆಹಾಕುತ್ತಾರೆ (ಕುರುಕ್ಷೇತ್ರ. ೬೩) ; ಹುಡುಗರು ಒಂದೇ ಸಮನೆ ಬೊಬ್ಬೆಹಾಕುತ್ತಾರೆ (ಕಾವೇಂ. ೯೨). **ಬೊಬ್ಬೆ ಹೊಡೆ** = ಬೊಬ್ಬೆ ಹಾಕು : ಕಾಂಗ್ರೆಸ್ಸೆಂದು ಬೊಬ್ಬೆಹೊಡೆದರೆ ಹೊಟ್ಟೆ ತುಂಬಲಿಕ್ಕಿಲ್ಲ (ಕುರುಕಾ.೧೩೮). [ದೇ.॥ ತುಳು. ಬೊಬ್ಬೆ ; ತಮಿ. ಬೊಬ್ಬ]

**ಬೊಬ್ಬೆ₃, ಬೊಬ್ಬಿ** (ನಾ). ಒಂದು ಬಗೆಯ ಹೊನ್ನೆಮರ; ಕಲ್ಹೊನ್ನೆ : ಹೊಳೆಹೊನ್ನೆ. ಶ್ರೀಹೊನ್ನೆ. ಕೂವೆ, ಬೊಬ್ಬೆ (ವೃಕ್ಷಗ. ೦೬-೨೮೩). ಬೊಬ್ಬಿ: ಬೊಬ್ಬಿ (ಇದಯ) — ನೀರಿನ ಆಸರಕ್ಕೆ ಎತ್ತರವಾಗಿ ಬೆಳೆಯುತ್ತದೆ (ಕಪಾಗ. ೯೬) ; ಮರಗಳು . . . ಮುಳ್ಳಾಳಿ. ಕೂವೆ. ಬೊಬ್ಬಿ. ದೇವದಾರು. ಅಡವಿಗೋರಂಟೆ (ಪಶ್ಚಿಘ. ೨೩೬).

**ಬೊಬ್ಬೆಯ ತಿಂದಾಗ** = ಹೊನ್ನೆಮರದಿಂದ ಮಾಡಿದ ಅಳೆಯುವ

ಸಾಧನದಿಂದ ಅಳತೆಮಾಡಿದ ಧಾನ್ಯದ ಖಂಡುಗಪ್ರಮಾಣ (?) : ಅಮೃತಪಡಿಗೆ ಭತ್ತ ಬೊಬ್ಬೆಯ ಖಂಡುಗ × × ಮಧ್ಯಾಂನದ ಪೂಜೆಗೆ ಬಿತ್ತ ಬೊಬ್ಬೆಯ ಖಂಡುಗ ೧೫ ದಿನ ೧೬ ಅಕ್ಕಿ ಹಾ ಲೆಕ್ಕದಲು ಅಕ್ಷತೆಗೆ ವರುಷಕ್ಕೆ ಬೊಬ್ಬೆಯ ಖಂಡುಗ ೩॥ (ಎಕ. VIII, ಸಾಗರ. ೦೬೩-೬೪ : 1488).

**ಬೊಬ್ಬೆಗುಟ್ಟು** (ಕ್ರಿ). ಕೂಗಾಡು ; ಗದ್ದಲವೆಬ್ಬಿಸು : ದುರ್ಗಕ್ಕಡರದ ರೆಂದೊದಱ ಬೊಬ್ಬೆಗುಟ್ಟಿವರದಟಂ (ಹರಿಶ್ಚಂ. ೩-೬). [ಬೊಬ್ಬೆ₂ + ಕುಟ್ಟು]

**ಬೊಬ್ಬೆಗುಡು** 'ಬೊಬ್ಬೆಗೊಡು' ನೋ.

**ಬೊಬ್ಬೆಗೊಡು,** ಬೊಬ್ಬೆಗುಡು (ಕ್ರಿ). ದೊಡ್ಡಧ್ವನಿಯಿಂದ ಕೂಗು; ಅರಚು : ಒದಱ ನೋಡಿದಳು ಬೊಬ್ಬೆಗೊಟ್ಟಾರಿ ನೋಡಿದಳಾವ ತೆಱದಿ ನೋಡಿದಡೇಂ ವಿಚಾರಿಸದೆ ಲೆಕ್ಕಿಸದೆ ಹೋಗುತಿರೆ ಕಂಡವಂ ಹೆದಱನೇಗುವೆನೆಂದಳು (ಒಧ್ಯರಾ. ೬-೨); ಅಡುಗಬ್ಬುಗಳಿಗುರಿ ಹಬ್ಬಿಸುತ ಕೈದೀವಿಗೆಗಳಂತೆಬ್ಬಿಸಲು ಪ್ರಭೆ ದೆಸೆಯೊಳಾವರಿಸಲ್ಕೆ ನಿರ್ಭರದ ಬೊಬ್ಬೆ ಗೊಟ್ಟಾಲುತ್ತ. . .ಬರುತಿರಲು (ಐಸಕೃ. ೦೬-೨೦) ; ಬಲುಮೆರಡಾಗಿ ಪೆರ್ಮೆವಡೆದೊಡ್ಡಿ ವಿಳಾಸದೆ ನಿಂದು ಬೊಬ್ಬೆಗೊಟ್ಟು . . . ಪಳಂಚಿದುದು (ರಾಜಶೇ. ೦೩-೯೩). **ಬೊಬ್ಬೆಗುಡು :** ಬೊಬ್ಬೆಗುಡುತುಂ ಬಂದರ್ ಪಲರ್ ಧೀವರರ್ (ಉದ್ಭಟ. ೨-೩೦); ತಡೆ ನಿಲ್ಲು ಜಡಿ ಬೊಬ್ಬೆಗುಡು ಪೊಡ ಱಿಸೊಳಡಗು (ಕೃಷ್ಣಾ. ೨೬-೪೩). [ಬೊಬ್ಬೆ₂ + ಕೊಡು₁]

**ಬೊಬ್ಬೆಗೊಳ್** (ಕ್ರಿ). ಗರ್ಜಿಸು ; ಅಬ್ಬರಿಸು ; ಆರ್ಭಟಿಸು : ಬೊಬ್ಬೆಗೊಂಡಿರ್ದರುಂ ತಗುಳ್ದೊದಱ ಸಾರ್ದು (ಅನಂತಪು. ೩-೦೪). [ಬೊಬ್ಬೆ₂ + ಕೊಳ್₁]

**ಬೊಬ್ಬೆಯಿಕ್ಕು** 'ಬೊಬ್ಬಿಕ್ಕು' ನೋ.

**ಬೊಬ್ಬೆಯಿಡು** 'ಬೊಬ್ಬಿಡು' ನೋ.

**ಬೊಮಟಿ** 'ಬೊಮ್ಮಟಿ' ನೋ.

**ಬೊಮ್ಮ,** ಬಮ್ಮ, ಬರವು, ಬರುಮ, ಬರ್ಮ, ಬೊರ್ಮ (ನಾ). ೧. ಪರಾತ್ಪರವಸ್ತು ; ಪರಬ್ರಹ್ಮ : ಬೇಟದಲಿ ಘೂವಣ್ಣ ದಾಬೆಯ ಕೂಟದಲಿ ಕುಱುಹಾಗಿ ಮಿಗೆ ನಿರ್ಲೋಟಿಸುವ ನಿಜ ದಿಟ್ಟ ಬೊಮ್ಮವಿದು (ಕುವ್ಯಾಸ. ೯-೦೬) ; ಬಳಸಬಾರದ ಬಱಯ ಬೊಮ್ಮದ ಹೊಳಹು ಸಾಕ್ಷಾತ್ಕರಿಸಿ ನೆಱೆ ನಿರ್ಮಲತಪೆತ್ತಾ ರುದ್ರನಿರುತಿರ್ದನು ವಿನೋದದಲಿ (ಕೃಶುಂ. ೨-೯); ಬೊಮ್ಮವನು ಅಱದಿಹರೆ ಸುಮ್ಮನಿದ್ದರ ಬೇಕು ಬೊಮ್ಮವನಱದು ಉಸುರಿದರೆ ಕಳಪೋಗಿ ಕೆಮ್ಮಿ ಸತ್ತಂತೆ (ಸರ್ವಜ್ಞ. ೩೯೬). ೨. ತ್ರಿಮೂರ್ತಿಗಳಲ್ಲಿ ಒಬ್ಬ ; ಸೃಷ್ಟಿಕರ್ತನಾದ ಬ್ರಹ್ಮ : "ಅಜಂ [ಬೊಮ್ಮಂ]" (ಕರ್ಣಾಟ. ೯) ; ಒಡೆಗುವಱಾಂಡ ಮಿಣ್ಣನಿಸು ಜೀವೊತವಾಗಳೆ ಬೊಮ್ಮನುಂ ಮಾನಂಗಿಡುಗುಂ (ಶಂಕರಶಾ. ೨-೬೬) ; ಬೊಮ್ಮದೇವನ ಮೊಮ್ಮಂ ಶ್ರುತಿವಿಹಿತ ಕರ್ಮಾನುಷ್ಠಾನ ನಿಷ್ಠನಪ್ಪ ರಾವಣಂ (ಕಂತರಂ. ೦೬೪-೦೬) ; ಕಯ್ಯ ಬೊಮ್ಮನ ಶಿರದ ಪರಬೊಮ್ಮನೊಪ್ಪಿದಂ (ವಾಣೀ. ದೇ. ೨೬೦-೦೯). ೩. ಧರ್ಮಬೋಧೆ; ವೇದಾಂತ: ಕೇಳುತಿರ್ದ್ದ ಕರ್ಣ ಬೊಮ್ಮವ ಕೇಳ ಬಂದವೆ ನಾವು ನಾಳಿನ ಕಾಳಿಗವ ಜಯವುಱದ ಬೆಸಗೊಳ ಬಂದೆವು (ಕುವ್ಯಾದ್ರೋ. ೮-೬೪). ೪. ಬ್ರಹ್ಮಾಂಡ ; ವಿಶ್ವ : ತಾಂಡವಗೈಯುವ ಭೈರವ ನಾನು! ಬೊಮ್ಮ ವನೊಡೆಯುವ ಬರಸಿಡಿಲಾನು (ಪಾಂಚಜ. ೦೩-೦೦). ೫. ಬ್ರಾಹ್ಮಣ : ಕಮ್ಮನೆ ತುಪ್ಪ ಕಜ್ಜಾಯ ಪಾಯಸದಿಂದೆ ಪಮ್ಮನೆ ತಣಿದೆನೆಂದೆನುತ ಬೊಮ್ಮರ ಸಂತತಿ ನುಡಿಯುತೆ ಸಾರ್ದರು (ಪೋಹತ. ೩-೩೪). ❖ ಸಾಮಾನ್ಯವಾಗಿ ಈ ಶಬ್ದವು ಈ ಅರ್ಥವಲ್ಲಿ ಏಕವಚನದಲ್ಲಿ ಪ್ರಯೋಗವಾಗಿಲ್ಲ. **ಬಮ್ಮ :** ೬. ಒಬ್ಬಾತನ ಹೆಸರು : ಶ್ರೀ ಬಮ್ಮ (ಎಕ. II, ೯೦ ; ಸು. 900) ; ಪುರಿಕರನಗರದ ಬಮ್ಮಂ ಸರಸ್ವತೀಗಣದ ದಾಸಿ ಕ [ಣ.]× × × ನಿರುತಯತಿ [ಸಟಂ] ಖಣ್ಡರಿಸಿದಂ ನಾಗವರ್ಮನ ಪ್ಪಾತ್ರ[ಿ] (ಕೊಇಇ. XI-i, ೯೬-೯೮ ; 1062). **ಬರವು :** ೨. ತರುಣಿಯನೊಂದನೆ ಅದಕುಪಕರಣಂಗೊಂಡೊಡನೆ ತನ್ನ ಪೊಡೆಯು ಲರ್ವುಡಿಯಿಂ ಬರವುನನೊಗೆಯಿಸಿಯುವನೊಳೆ ಪುರುಳ್ಗೆಳವಂತೂರೆದ ನೊಸೆದು ನಿಗಮದ ನೆಲೆಯಂ (ಚಕಂ. ೦-೬೦). **ಬರುಮ :** ೬. ಪಲ್ಲ ವರಸ ದೇವಯ ಮೊಡಲ ಗೋವನ್ ಬರುಮನಟ್ಟಿದ × × × ಆಗಳು ಪಾಣ್ಣಿಯನ ಮೇಗೆಟ್ಟು ಮಱಿಯಱಱದೊ (ಎಕ. X. ಶ್ರೀನಿವಾ. ೩೦-೬ ; ಸು. 800 ?). **ಬರ್ಮ :** ೧. ನಾಲ್ಮೊಗಗಂಡನಾದ ಖಳದಕ್ಷನ ಮೇಳದೆ ಕೆಟ್ಟವೀಗಳೀ ಕಲ್ಮಷಕರ್ಮವಂ ಬಳಿಕೆ ಬರ್ಮವೆನುತ್ತವೆಯುಧ್ಧ ರಾಂತಕಾ (ವೀರಶಿ. ೦೨-೯೬). ೨. ಮಾರ್ನ್ನುಡಿವವನೇಂ ಚತುರ್ಭುಜನೆ ಮಚ್ಚರಿಪಣ್ಣಲೆ ಬರ್ಮನೊಳ್ ಬರಂಬಿಡಿವನೆ ಮಿಱೆ ಬಾಳ್ದಡವನೇಂ ಜವನೇ . . . ಕಲಿ ಗೋನಭೂಪನೊಳ್ (ಎಕ. VIII, ಸಾಗರ. ೦೦೯-೩೬ : 1042) ; ಬರ್ಮನುಮಾ ವಿಶ್ವಕರ್ಮನುಂ ಶೋಭೆಯಂ ನಿರ್ಮಿಸಲೆಂದು ವಧೂವರರೂಪಾಗಿ ನಿರ್ಮಿಸಿದಂತೆ ಮಿಸುಗಿತ್ತು (ಲೀಲಾವ. ೦೦-೩೨). **ಬೊರ್ಮ :** ೭. ಕ್ಷುದ್ರದೇವತೆ: ಗಾಳಿಗರುಂ ನೆಲಮುಂಕ್ಕ ಜಕ್ಕಿಯುಂ ಬೊರ್ಮನುನೆಂದು ಜೀವವಧೆಗೈದರೆ. . .ನಾರಕದುಃಖಮನೈದದಿರ್ಪರೇ (ಶ್ರಾಕ್ಕಾವ್ಯಮಾಲಿಕೆ. ಪದ್ಮಶಾಸ್ತ್ರಸಾರ. ೪. ೦೨೬೯).

**ಬೊಮ್ಮಜಟ್ಟಿಗ** = ಒಂದು ಕ್ಷುದ್ರದೇವತೆ : ತಾವ್ಯಾಡಿ ಬೇಡಿ ಹೆಮ್ಮರಂಗಳ ಪಿಡಿದು ಬಾಧಿಸುವುದ ಕಂಡು ಬೊಮ್ಮಜಟ್ಟಿಗನ ಶಿರವರಿ ದಂತರಾತ್ತು (ಕವಳ. ೦೨೪-೪). **ಬೊಮ್ಮಜೆಟ್ಟಿ** = ಒಂದು ಕ್ಷುದ್ರದೇವತೆ : ಬೊಮ್ಮಜೆಟ್ಟಿ ಮಾಡಿದೆವಮ್ಮ ಒಮ್ಮೆಗಿಷ್ಟೆಲ್ಲವಾಯಿತಮ್ಮ (ಜಾಎಕೀ. ೯೩-೩).

**ಬೊಮ್ಮನ ಸತಿ** = ಬ್ರಹ್ಮನ ಪತ್ನಿ ; ಸರಸ್ವತಿ : ರತಿಯ ಚೆಲುವಕಿತಿರಲಿ ಸಿರಿ ಪಾರ್ವತಿಯ ರೂಪಂತಿರಲಿ ಬೊಮ್ಮನ ಸತಿಯ ಸೊಬಗಂತಿರಲಿಯಾ ಬಾಲಕಿಯ ರೂಪಿಂಗೆ ಪ್ರತಿಯ ಕಾಣೆನು (ಕುವ್ಯಾಶ. ೨-೦೦); ಬೊಮ್ಮ ನಿರ್ಮಿಪನೆಂಬ ದುರ್ಮತಿಯೆ ನೀ ಕೇಳು ಬೊಮ್ಮನ ಸತಿಗೆ ಮೂಗಿಲ್ಲವಾ ಮೂಗ ನಿರ್ಮಿಸನದೇಕೆ (ಸರ್ವಜ್ಞ. ೨೦೦). [<ಪ್ರಾ. ಬಮ್ಹ./ಸಂ. ಬ್ರಹ್ಮನ್]

**ಬೊಮ್ಮಚರಿ** (ನಾ). ಬ್ರಹ್ಮಚರ್ಯವನ್ನು ಪಾಲಿಸುವವನು ; ಬ್ರಹ್ಮಚಾರಿ : ಪೊಡವಿಜೆಯ ಹೋಗಾಡಿ ರಾಘವ ಹಿಡಿವನ್ನ ಬಲು ಬೊಮ್ಮಚರಿಯುವ ಕೊಡುವರಿಲ್ಲದಱಂದ ನೀ ಹೊಸ ಬೊಮ್ಮಚರಿಯಾದೆ (ಕೌಶಿರಾ. ೨೨-೦೪). [ < ಸಂ. ಬ್ರಹ್ಮಚಾರಿನ್ ]

**ಬೊಮ್ಮಚರಿಯ,** ಬೊಮ್ಮಚರಿಯೆ (ನಾ). ಇಂದ್ರಿಯನಿಗ್ರಹ ; ಬ್ರಹ್ಮ ಚರ್ಯೆ : ಜಡೆಯ ಮುಡಿಯೇ ಮಕುಟ . . . ಸೊಪ್ಪು ಸೆಳೆಮಂಚ ಮಡದಿಯಿಲ್ಲದೆ ಬೊಮ್ಮಚರಿಯವು (ಕೌಶಿರಾ. ೨೨-೪೨); ಲಲನೆಯೊಬ್ಬಳ ವ್ರತವವಗೆ ಗಡ ಹಳುವದಿರವಿಗೆ ಬೊಮ್ಮಚರಿಯದ ಬಳಿಕೆ ಗಡ ನಿಮಗಲೆ ನಪುಂಸಕರೆಂದಳಾ ಕಾಂತೆ (ತೊರವೆರಾ. ೩-೪-೨೦). **ಬೊಮ್ಮಚರಿಯೆ :** ನಿಲ್ಲಿಸುತ ಷಣ್ಮುಖಗಳರವನು ಬಲ್ಲವನು ಗಜಮುಖವನಳ್ಗಿಸಿ ಸೊಲ್ಲಿಸ ಲಧಶ್ಯಾಯಿಯೊಪ್ಪಿದ ಬೊಮ್ಮಚರಿಯೆಯುಲಿ (ಅರಾಪಶಾ. ೨-೯-೪೪). [ < ಸಂ. ಬ್ರಹ್ಮಚರ್ಯ ]

**ಬೊಮ್ಮಚರಿಯೆ** 'ಬೊಮ್ಮಚರಿಯ' ನೋ.

**ಬೊಮ್ಮಟಿ,** ಬೊಮಟಿ (ನಾ). ೧. ಎಳೆಯ ಮಗು; ಹಸುಗೂಸು : ಆ ತಿಂಗಳ ಬೊಮ್ಮಟಿಯನ್ನು ಮುತ್ತಿಟ್ಟುಕೊಂಡು ಮಡದಿಯ ಕೈಗೆ ಕೊಟ್ಟು (ಪಂಪ್ಕ. ೦೬); "ನಿನ್ನ ಮಾವನನ್ನು ನೋಡು ಪಾಪ" ಎಂಬು ಮೊರದಲ್ಲಿ ಮಲಗಿದ್ದ . . . ತನ್ನ ಎಳೆಯ ಬೊಮ್ಮಟಿಗೆ ಹೇಳಿದಳು (ರವೀಂದ್ರ. ೦೬೬). ೨. ಕೋಮಲವಾದುದು ; ಎಳೆಯದು : ರಾಜಮ್ಮ ಎಮ್ಮ ಮಗುವಿನ ಬೊಮ್ಮಟಿಯಾದ ಕೆನ್ನೆಗೆ ನಯವಾಗಿ

ಮುದ್ದಿಟ್ಟಳು (ಜೀಮು. ೨೩೯). **ಬೊಮಟೆ :** ೧. ಬೊಮಟೆಯ ಅಳು ವಿನ ಧ್ವನಿ ಕೇಳಿಸಿತು (ಪಾಶ್ಚ. ೧೦೨); ಗೌಡನ ಹೆಂಡತಿಯು ಆ ಬೊಮಟೆ ಯನ್ನು ತಬ್ಬಿಕೊಂಡು . . . ಕಾಡಿನಲ್ಲೆಲ್ಲ ಅಲೆದಳು (ದೇಶಾಂತ. ೬೧).

**ಬೊಮ್ಮಡ** 'ಬೊಮ್ಮಡಿ' ನೋ.

**ಬೊಮ್ಮಡಿ,** ಬಮ್ಮಡಿ, ಬೊಂಬಡ, ಬೊಮ್ಮಡ (ನಾ). ೧. ಬೊಬ್ಬೆ: **ಕೂಗಾಟ :** ಸಂಪುಮಾಡುತ್ತಿದ್ದವರ ಬೊಮ್ಮಡಿ ಜೋರಾಯಿತು (ಕೂ೨). **ಬಮ್ಮಡಿ. ಬೊಂಬಡ :** ೨. ಸದ್ದು ; ಶಬ್ದ : 'ಜರ-ಜರೋ', ಹುಯ್ಯುವ ಮಳೆ . . . ಕಿವಿ ಕರಗುವ ಬೊಂಬಡವನ್ನು ಪ್ರತಿಪ್ರತಿ ಧ್ವನಿಸಿ ನುಗ್ಗುವುಗ್ಗಲಾದ ಮಲೆನಾಡಿನ ಬೆಟ್ಟಗಳು! (ಏಮಕ. ೪೯). **ಬೊಮ್ಮಡ.**

ಬಮ್ಮಡಿ ಬಜಾಯಿಸು, **ಬೊಂಬಡ ಬಜಾಯಿಸು** = ಬೊಬ್ಬೆಹಾಕು : **ಕೂಗಾಡು :** ಆದವಾನಿ ಕಂಪೆನಿಯವರು ಬಮ್ಮಡಿ ಬಜಾಯಿಸುತ್ತಿದ್ದಾರೆ (ಅಶ್ವಮಾ. ೧೩) ; ಅದೇಕೆ ಬೊಂಬಡ ಬಜಾಯಿಸುತ್ತಿರುವೆ ? ಸ್ವಲ್ಪ ಇರು (ಕೂ೨). **ಬೊಮ್ಮಡಿಹೊಡೆ. ಬೊಮ್ಮಡಹೊಡೆ** = ಬಮ್ಮಡಿ ಬಜಾಯಿಸು : ರೈತರೆಲ್ಲಾ ಬೊಮ್ಮಡಿ ಹೊಡೆದುಕೊಳ್ಳಾ ಅವರೆ (ಹಂಗಾಳ್ಮ. ೨೩೭) ; ಗಿರಾಕಿಗಳು ಬೊಮ್ಮಡ ಹೊಡೆದಾರು (ಸರಸ. ೨೨).

[ದೇ.॥ ತೆಲು. ಬೊಮ್ಮಿಡಿ = ಒಂದು ಬಗೆಯ ವಾದ್ಯ. / ಮರಾ. ಬೋಂಬ್ = (ದುಃಖ, ಸಂಕಟ ಇತ್ಯಾದಿಗಳಿಂದ) ಬಾಯಿ ಬಡಿದುಕೊಳ್ಳು ವುದು. ಶಂಖವಾದ್ಯ]

**ಬೊಮ್ಮತಿ** 'ಬೊಮ್ಮಹತಿ' ನೋ.

**ಬೊಮ್ಮದಂಡೆ** 'ಬ್ರಹ್ಮದಂಡೆ' ನೋ.

**ಬೊಮ್ಮಪಾಸ,** ಬೊಮ್ಮಹಾಸ (ನಾ). ೧. ಬ್ರಹ್ಮನನ್ನು ಅಧಿದೇವತೆ ಯಾಗಿ ಪಡೆದ ಅಸ್ತ್ರ; ಬ್ರಹ್ಮಶಕ್ತಿಯ ಪಾಶ ; ಬ್ರಹ್ಮಪಾಶ. ೨. (ಅಲಂ) ಸುಲಭವಾಗಿ ಬಿಡಿಸಿಕೊಳ್ಳಲಾಗದಂತಹ ಬಂಧನ,– ಕಟ್ಟು : ಆಕೆಯ ಹಾಸವೊ ಬೊಮ್ಮಪಾಸವೋ ತರುಣಿಯ ತೋಳೊ ಬಾಳೊ ಸುಡು ಸೂಳೆಯ ಕೂಟವೊ ಕಾಳಕೂಟವೋ (ಲೀಲಾವ. ೨-೧೧೧). **ಬೊಮ್ಮಹಾಸ :** ೧. ತರತರದ ಸಪುರವಸ್ತ್ರಂಗಳಂ ಮೇಲಿರಿಸಿ ಬೊಮ್ಮಹಾಸದ ಕೆಲವ ಕೊಂಡಿಗಳೊಳಗೆ ಬಿಗಿದು ಅಮ್ಮಮ್ಮ ಪಾಶಮಂ ಕೈಕೊಳಿಸಿ ಬರೆತೆಗೆದು. . . ಕೊರಲೊಳವತರಿಸಿಕೊಂಡಂ ಬೊಮ್ಮ ಪಾಸಮಂ (ಕೊಂಗುರ. ೭೯. ೧೩೭-೭). [<ಸಂ. ಬ್ರಹ್ಮಪಾಶ]

**ಬೊಮ್ಮಬರೆಹ** (ನಾ). ಬ್ರಹ್ಮಲಿಖಿತ ; ವಿಧಿಲಿಖಿತ ; ಹಣೆಬರಹ: ಬೊಮ್ಮಬರೆ[ಪಾಠಾಂ. ರ]ಹ ಚಿತ್ರದ ವಿಸ್ತಾರವಮ್ಮ ಲೋಕದೊಳು (ಶರತ. ೩-೪೮). [ಬೊಮ್ಮ + ಬರೆಹ (< ಬರೆಪ)]

**ಬೊಮ್ಮಬೋಧೆ** (ನಾ). ಪರಬ್ರಹ್ಮದ ಬಗೆಗಿನ ಜ್ಞಾನ,—ತಿಳಿವಳಿಕೆ : ಬೊಮ್ಮಬೋಧೆಯ ಹೇಳಿ ಕೇಳಿಯೂ ಸುಮ್ಮನಿಹ ನೃಪಕನವು ಬಂದಿರೆ ಹೆಮ್ಮೆಯಲಿ ಹಿರಿದಾಗಿ ಕಡುವರು ಪಿತರು ಹೇಳಿದರೆ ಒಮ್ಮೆ ಕೇಳರು (ಸಂಭಹ. ೩-೦೨). [ಬೊಮ್ಮ + ಬೋಧೆ]

**ಬೊಮ್ಮಯ,** ಬಮ್ಮಯ್ಯ (ನಾ). ೧. ಒಂದು ಕ್ಷುದ್ರದೇವತೆ : ಲಡ್ಡುಗೆಯುಂ ಬೆನಕಂಗೆ ಹೊಡಮಂ ಮಾರಿಗೆ ಬೊಮ್ಮಯಂಗೆ ಚರುವಂ ಪದೆದೆತ್ತುಮೆ (ಸೂಕ್ತಿಸು. ೬-೮೪). **ಬಮ್ಮಯ್ಯ :** ೨. ಒಬ್ಬಾತನ ಹೆಸರು : ನಿಮ್ಮಿಬ್ಬರ ಬಮ್ಮಯ್ಯ ಬೆಸಗೆಯ್ವುದೊ (ಇಂ. XII. ೨೦೯-೨೨; 814).

[ ಬೊಮ್ಮ + ಅಯ್ಯ$_1$ (< ಅಯ್ಯ$_{61}$ ) ]

**ಬೊಮ್ಮರಕ್ಕಸ** (ನಾ). ೧. ಧರ್ಮಭ್ರಷ್ಟನಾಗಿ ಬ್ರಾಹ್ಮಣರ ಧನ, ಪರ ಪತ್ನಿಯರನ್ನು ಅಪಹರಿಸಿದ ನೀಚಬ್ರಾಹ್ಮಣನಿಗೆ ಮರಣಾನಂತರ ಬರುವ ಪಿಶಾಚಜನ್ಮ ಮತ್ತು ಹಾಗೆ ಜನ್ಮತಾಳಿದವನು ; ಬ್ರಹ್ಮ ರಾಕ್ಷಸ : ಮಹಾರಣ್ಯದೊಳಗೆ ಬರ್ಪನನೊರ್ವ ಬೊಮ್ಮರಕ್ಕಸಂ ಕಂಡು ಪಿಡಿದು ತಿನಲೆಂದು ತೆಗೆವುದುಂ (ಕಂತಹ. ೧೩೨-೮) ; ಇಂದು ಮೊದಲಾಗಿ ನಿನ್ನೊಡವಂದಿರ್ಪಂ ಬೊಮ್ಮರಕ್ಕಸಂ ಮತ್ತಾರಂ ಕಂಡೆಜೆದು ನೋಡಲೀಸಂ (ದಶಕು. ೪-೧೦೦) ; ನಮ್ಮೊಳೊಬ್ಬನ ಕೊಡದೆ ಕಾದಿರಿ . . ಬೊಮ್ಮರಕ್ಕಸ ಗೀವರೇಯಿಸಾ ಹೆಮ್ಮಗನ (ಸಂಭಹ. ೨೩-೪೮). ೨. ಬ್ರಾಹ್ಮಣ ತಂದೆ ಮತ್ತು ರಾಕ್ಷಸ ತಾಯಿಯಿಂದ ಜನಿಸಿದ ವ್ಯಕ್ತಿ: ದಶರಥರಾಮಂ . . . ರಾವಣ ಕುಂಭಕರ್ಣರ್ ಮುಂತಪ್ಪ ಬೊಮ್ಮರಕ್ಕಸರಂ ಕೊಂದು ಬಂದೊಂದು ಬೊಮ್ಮೇತಿಯ ಶಾಂತಿಗೆಂದು ಮುನಿಯಾಜ್ಞೆಯಿಂ ಜನ್ನಮಂ ಕೈಕೊಂಡು (ರಾಮಾಶ್ವ. ೧೨೪-೨೦). [< ಸಂ. ಬ್ರಹ್ಮರಾಕ್ಷಸ]

**ಬೊಮ್ಮರಲು** 'ಬೆಳ್ಮಾರಲ' ನೋ.

**ಬೊಮ್ಮರಸ** (ನಾ). ಒಬ್ಬಾತನ ಹೆಸರು : ಬೊಂಮರಸಗೌಡರ ಮಕ್ಕಳು (ಎಕ. VII. ಶಿಕಾ. ೦೦೪-೦೩ : 950). ೨. 'ಚತುರಾಸ್ಯನಿಘಂಟು' ಎಂಬ ಕೋಶವನ್ನು ಬರೆದ ಒಬ್ಬ ಕನ್ನಡಕವಿಯ ಹೆಸರು : ಕರ್ಣಾಟಕಸರಸ ಕವೀಂದ್ರರ್ಕಳೊಳ್ಳಿ ತಾಮದೆನಲ್ ಬಿತ್ತರಿಸಿದನೊಲವಿಂ ಕವಿ ಬೊಮ್ಮರಸಂ (ಚತುರ. ೧೩೭). [ಬೊಮ್ಮ + ಅರಸ$_1$ ]

**ಬೊಮ್ಮವಿದ** (ನಾ). ಬ್ರಹ್ಮವಿದ್ಯೆಯನ್ನು ಬಲ್ಲವನು ; ವೇದಾಂತ ರಹಸ್ಯವನ್ನು ತಿಳಿದವನು ; ಬ್ರಹ್ಮಜ್ಞಾನಿ : ಈ ಪೃಥೂನ್ನತಿ ಬೊಮ್ಮ ವಿದರಿಗುಂಟೆ ತನಗಾ ಬ್ರಹ್ಮವಿದ್ಯೆಯನಿತ್ತು ರಕ್ಷಿಸುವುದು (ಚಿಕಾಗ. ೯-೦೯-೨೭).

[<ಸಂ. ಬ್ರಹ್ಮವಿದ್]

**ಬೊಮ್ಮವಿದ್ಯೆ** (ನಾ). ವೇದಾಂತರಹಸ್ಯ ; ಬ್ರಹ್ಮತತ್ತ್ವ: ದಕ್ಷ ಹರಹರಿ ಪರಿ ತನ್ನ ಬಿಬವನು ಹರಿದನೋ ಹರಿಯಶ್ವ ಸಬಳಾಶ್ವರೊಳೊಬ್ಬರನುಳಿ ಯಲೀಸದೆ ಬೊಮ್ಮವಿದ್ಯೆಯನು ತಿರುಕುಳಿಗಳನು ಮಾಡಿದನಲಾ ಗೊರವನಾ ತನ್ನಂತೆ ಭಾಷಿನ್ನರಸುಮಕ್ಕಳನೀವೆನಾನಿದಕೆಂದು ಬಿಸುಸುಯ್ವ (ಚಿಕಾಗ. ೬-೩-೩೩). [< ಸಂ. ಬ್ರಹ್ಮವಿದ್ಯಾ]

**ಬೊಮ್ಮವೊಲೆಯ** (ನಾ). ಆಚಾರಗೆಟ್ಟ ಬ್ರಾಹ್ಮಣ ; ಬ್ರಾಹ್ಮಣಾಧಮ: ನೀಲಾಚಲಂ . . . ಪಟುನುಡಿಯಂ ಪಟದು ವಿಪ್ರಜನಂಗಳನುಚಿದ ಬೊಮ್ಮವೊಲೆಯಂಗೆ ಬೆಸಲಾದ ಮಡದಿಯಂ ಬಡಿವ ಮಾನಸರಕ್ಕಸಂಗೆ ಕಣ್ಗೆ ಕಾಣಲ್ಬಾರದೊಂದು ಮೈಮೆವೆತ್ತು ನಿಂದಿರ್ದಂ (ರಾಮಾಶ್ವ. ೬೪-೯). [ಬೊಮ್ಮ + ಪೊಲೆಯ]

**ಬೊಮ್ಮಶಿರೋಸ್ತ್ರ** (ನಾ). ಒಂದು ಬಗೆಯ ಮಂತ್ರಾಸ್ತ್ರ : ಸಲಿಸು ಪಾಶುಪತಾಸ್ತ್ರವನು ವೆಗ್ಗಳದ ಬೊಮ್ಮಶಿರೋಸ್ತ್ರವನು ಕೈಗೊಳಿಸುವುದು ಕೃಪೆಯುಳ್ಳೊಡೆ (ಕುಮಾ. ೪. ೬-೯೭). [< ಸಂ. ಬ್ರಹ್ಮಶಿರೋಸ್ತ್ರ]

**ಬೊಮ್ಮಹತಿ,** ಬಮ್ಮೇತಿ. ಬೊಮ್ಮತಿ. ಬೊಮ್ಮೇತಿ. ಬ್ರಮಾತಿ. ಬ್ರಹ್ಮತಿ. ಬ್ರಹ್ಮಾತಿ. ಬ್ರಹ್ಮೇತಿ (ನಾ). ೧. ಬ್ರಾಹ್ಮಣನ ಕೊಲೆ: ಪಂಚಮಹಾಪಾತಕಗಳಲ್ಲಿ ಒಂದಾದ ಬ್ರಹ್ಮಹತ್ಯೆ: ಹೇಳಲೇನದ ಹೇಸುವುದು ಮನ ಬೊಮ್ಮಹತಿಗಾಗಿ (೪೫ಶಾ. ೨೭-೧೨). **ಬಮ್ಮೇತಿ:** ೧. ಕೊಂದವರುಂ . ಕೊಲಿಸಿದವರುಂ ಬಮ್ಮೇತಿಯನೆಸಗಿದಂಥಾ ಮಹಾಪಾತಕಿ ಗಳೆನಿಸುವರು (ಭಾರತಾಂ. ೬೩-೦೪). ೨. ಬ್ರಹ್ಮಹತ್ಯೆ ಮುಂತಾದುವು ಗಳಿಂದ ಉಂಟಾದ ದೋಷ.–ಪಾಪ : ಭೀತನುಮಂ ಖಳ ಕೃಪಣ ಕಪ್ಪೋತನುಮಂ ಪಡೆದು ಲೋಕಮಂ ಕಿಡಿಸಿದ ಬಮ್ಮೇತಿಯುಳಿಯದೊಡೆ ಮೊಗದೊಳಗೇತರ್ಕೆ ಪಿಶಾಮಹಂ ಚತುರ್ಮುಖನಾದಂ (ಲೀಲಾಶ. ೦-೩೩) ; ನಿನಗೆ ಬಮ್ಮೇತಿಯಾಗೆ ಸಾವೆನೆಂದು ಅವರ ಕಾಣ್ಬಲ್ಲಿಯೊಂದು ಮರದೊಳ್ ಬಳ್ಳಿಯಂ ಕಟ್ಟಿ ಕೊರಲೊಳ್ ಸುತ್ತಿ ನೇಲ್ದು ಸತ್ತಳ್ (ಜೀಶಸಂ. ೦೬೦-೦೦). **ಬೊಮ್ಮತಿ :** ೨. ಧರ್ಮವೆಂದೆಸಗೆ ಹಸುಕರ್ಮ ಬೊಮ್ಮತಿಯಾಯ್ತು (ಶಾಸಂತ. ೪-೨೩೦) **ಬೊಮ್ಮೇತಿ :** ೨. ಕೇಳಬಾರದ ಬೊಮ್ಮೇತಿಯ ನೆಗಳ ಪೇರಾಳ ಪಾತಕಭೂಭುಜನ ತೋಳಡವಿಯಾ ತಱಿದೊಟ್ಟದೆಲಾ ಮುಂದಿ ಪಾಳಿವ ತೋಜು ತನ್ನೊಡನೆ (ವೋಳಹಕ. ೯೦-೨೪) : ರಾವಣ ಕುಂಭಕರ್ಣರ್

ಮುಂತಪ್ಪ ಬೊಮ್ಮರಕ್ಕಸರಂ ಕೊಂದು ಬಂದೊಂದು ಬೊಮ್ಮೆತಿಯ ಶಾಂತಿಗೆಂದು ಮುನಿಯಾಜ್ಞೆಯಿಂ ಜನ್ನಮಂ ಕೈಕೊಂಡು (ರಾಜಶೇ. ೦೨೯-೨೨). ಬ್ರಮಾತಿ : ೨. ಧರ್ಮ್ಮವನಾವನಾನುಮಳಿವರಪ್ಪಡೆ ಗಂಗೆಯ ಬಣವೊಸಿಯೊಳೆ ಅಳಿದ ಬ್ರಮಾತಿ (ಎಕ. XIV, ಶ್ರೀರಂಗ. ೩೪-೦೪; 1027). ಬ್ರಹ್ಮತಿ : ೩. (ಅಲಂ)ಕಷ್ಟ; ಸಂಕಟ: ತ್ರೇತೆಯಲಿ ರಘುರಾಮನಾವಮದಿ ಸೀತೆಯಂ ಹೋಗಾಡಿ ದಶಶಿರಘಾತನಿಂ ಬ್ರಹ್ಮತಿಗೆ ಸಿಕ್ಕಿ ತೊಳಲ್ದುಜಿಸುತಿರನೇ (ಬಸವ. ೩೪-೩೮). ಬ್ರಹ್ಮಾತಿ : ೨. ಸಾಸಿರ್ಬ್ಬರು[ಂ]ಪಾರ್ವ್ವರನಳಿದ ಬ್ರಹ್ಮಾತಿಯ (ಎಕ. XII, ೨೨೫-೦೩; 916); ಸಾಸಿರವೇದಪಾರಗರುಮನಳಿದ ಬ್ರಹ್ಮಾತಿಯಕ್ಕು (ಕಶಿ. ೦೦೬-೨೨-೩೪; 1073). ಬ್ರಹ್ಮೆತಿ : ೧. ಕುಲದಲ್ಲಿ ಹಾರುವನು ಬ್ರಹ್ಮೇತಿಗೆ ಸಾರುವನು (ಬಸವ. ೩೬೪). ೨. ದೇವ ನಿನ್ನಾಜ್ಞೆಯಿಂ ನಾಂ ಬ್ರಹ್ಮರಂ ಪಲವು ಸಾವಿರವನೊಂದೊಂದು ದಿನದಲ್ಲಿ ಕೊಲ್ವೆನೆನಗಾವ ಪ್ರಕಾರದಿಂ ಬ್ರಹ್ಮೇತಿಯಿಲ್ಲ ಗಡ (ಜೈಮಿ. ೨-೩. ೩೫); ಕಾಳ್ಗಳಧನ ಮಡುಹುವ ಬರಲೆನ್ನ ಗಾತ್ರಕಿಂದೀಗಳುಂ ಬ್ರಹ್ಮೇತಿ (ಪದಸು. ೨೬-೦೨); ದೇವತೆಗಳೆಲ್ಲರೂ . . . ಅಶ್ವಮೇಧಯಾಗ ಮಾಡಿಸಲು ಅವನಿಗೆ ಹಿಡಿದಿದ್ದ ಬ್ರಹ್ಮೇತಿ ಹೋಯಿತು (ವಶಚಾ. ೨೪೦). (ಗಂ). ೪. (ಅಲಂ) ಅತ್ಯಧಿಕವಾದ : ಅಗಾಧವಾದ : ಜಾನಕಿಬಾಯಿಯವರಿಗೆ ಬ್ರಹ್ಮೇತಿ ಸಿಟ್ಟು ಬಂದಿತು (ಸವಾಚೀ. ೨೨); ಬೇಡವೆಂದಿದ್ದರೂ ನೀರಿಗೆ ಹೋದಳೆಂದು ಅವಳ ಮೇಲೆ ಅವನಿಗೆ ಬ್ರಹ್ಮೇತಿ ಸಿಟ್ಟು ಬಂದಿತ್ತು (ಬಾಳಿನ. ೩೭). 'ಬ್ರಹ್ಮಹತಿ' ನೋ. [< ಸಂ. ಬ್ರಹ್ಮಹತ್ಯಾ]

**ಬೊಮ್ಮಹಾಸ** 'ಬೊಮ್ಮಪಾಸ' ನೋ.

**ಬೊಮ್ಮಾಂಡ** (ನಾ). ವಿಶ್ವ; ಜಗತ್ತು: ನಾನು ಬೆಳೆದೊಡೆ . . . ಬೊಮ್ಮಾಂಡ ಕುಸಿಯುವುದು (ಕೌತಿಜ. ೯೦-೩); ಆರು ಸರಿ ನಿನಗೆ ಬೊಮ್ಮಾಂಡದೊಳಗೆ (ಶ್ರೀರಂಗ. ೨-೬೩ ಪಲ್ಲವಿ) ; ಬೊಮ್ಮಾಂಡವಾ ಬಾಣನ ಪುರವನೆ ಕಾಯ್ದು ಕೊಂಡಿಹವು (ನೇಮಿಶ. ೨೦-೨೦). [<ಸಂ. ಬ್ರಹ್ಮಾಂಡ]

**ಬೊಮ್ಮಾರ** (ನಾ). ಬ್ರಾಹ್ಮಣರ ಅಗ್ರಹಾರ : ದೇವಾರ ಬೊಮ್ಮಾರಮಂ ನೆಗೞುತ್ತುಂ ಪೊಱೆದಪ್ರತೀಪ ಬರುವರ್ ಸದ್ಧರ್ಮಸತ್ಯಾನ್ವಿತರ್ (ಪ್ರೌಸೂಮ. ೬-೨೦೬). [ಬೊಮ್ಮ + < ಅಗ್ರಹಾರ]

**ಬೊಮ್ಮಿ** (ನಾ). ಒಂದು ಬಗೆಯ ವನಸ್ಪತಿ ; ಬ್ರಾಹ್ಮಿ : ಸುರವಾರುಣಿ ಲೊಕ್ಕಿ ಬೊಮ್ಮಿ ಬೇವಿಂಗು ವಿಳಂಗ . . . ತಕ್ರ ಲವಣಂಗಳುಮಂ ತುಱುಮೊಂದುಮಾಡಿ ಸುಸ್ತಂಗಱಿದಿಕ್ಕೆ ಪೊರ್ದವುವಂ ರುಜೆಗಳ್ (ಲೋಕೋಪ. ೯-೨೨೦); ಬೊಮ್ಮಿಯು ಸೊಪ್ಪನೊಪ್ಪದಿಂ ಗಜಬಜೆಯಿಲ್ಲ ದಂತಳೆದು ತಪ್ಪುಸದಿಂದುಱಿ ಮಾಡಿ ಸಸ್ಯಮಂ ಪ್ರಜಿಸಿಪರಂ ವಿಪಘ್ನಿಂ (ಜಮಿಶ. ೬-೦೩). [ < ಸಂ. ಬ್ರಾಹ್ಮೀ ]

**ಬೊಮ್ಮೆ** 'ಬೊಂಬೆ' ನೋ.

**ಬೊಮ್ಮೇತಿ** 'ಬೊಮ್ಮಹತಿ' ನೋ.

**ಬೊಮ್ಮೇತಿಗಾಱ**, ಬ್ರಹ್ಮತಿಕಾಱ, ಬ್ರಹ್ಮೇತಿಕಾಱ (ನಾ). ೧. ಬ್ರಾಹ್ಮಣ ವಧೆಯನ್ನು ಮಾಡಿದವನು ; ಬ್ರಹ್ಮಹತ್ಯೆಯ ದೋಷವನ್ನು ಹೊಂದಿದವನು : ಈತಂ ಮುನ್ನಮೊರ್ವನಂ ಪಾರ್ವನಂ ಕೊಂದ ಬೊಮ್ಮೇತಿಗಾಱಂ ಈಗಳಿದೆ ಎರೆಯಾದಂ ( ರಾಜಶೇ. ೦೦೬-೨೫ ). ಬ್ರಹ್ಮತಿಕಾಱ : ೧. ಇವನಾವನಱಿದನಱಿವವಂ ಕೆಱೆಯುಮಾರವೆಯುಂ ವಾರಣಾಸಿಯುಂ ಕವಿಲೆಯನಱಿದ ಬ್ರಹ್ಮತಿಕಾಱಂ (ಎಕ. IV, ಎಳಂದೂ. ೧೦-೩. ೯೫೨). ಬ್ರಹ್ಮೇತಿಕಾಱ : ೨. (ಅಲಂ) ಬ್ರಹ್ಮಹತ್ಯೆಯ ದೋಷವು ಬರುವಂತೆ ಮಾಡುವವನು : ಈ ವೃದ್ಧಬ್ರಾಹ್ಮಣನನೀ ಮುಪ್ಪಿನ ಮಱುಳನನೀ ಗೌತಮನ ಗೋವನೀ ಬ್ರಹ್ಮೇತಿಕಾಱನನಾರ್ ಪೊಗಿಸಿದರ್ಪಾರ್ ಕಣರ್ (ಸುಕುಮಾ. ೬-೩೨).

[ಬೊಮ್ಮೇತಿ (<ಬೊಮ್ಮಹತಿ)+ —ಕಾಱ]

**ಬೊಮ್ಮೋಪದೇಶ** (ನಾ). ೧. ಬ್ರಹ್ಮವಿದ್ಯೆಯನ್ನು ಹೇಳಿಕೊಡುವುದು; ವೇದಾಂತರಹಸ್ಯದ ಉಪದೇಶವನ್ನು ಮಾಡುವುದು : ಇಪಪರವ ಕೆಡಿಸಿವನು ಸುತರಿಗೆ ವಿಹಿತಕರ್ಮವ ಮಾಡಲೀಸದೆ ಕುಹಕಮುನಿ ಬೊಮ್ಮೋಪದೇಶವ ಮಾಡಿವಡದಹುದೇ (ಜಿಹಿಗ. ೬-೩-೩೬ ). ೨. ಉಪನಯನ ; ಬ್ರಹ್ಮೋಪದೇಶ. [< ಸಂ. ಬ್ರಹ್ಮೋಪದೇಶ]

**ಬೊರಗೆ** (ನಾ). ಬಿಲ ; ಹೋರು : ಕರಡಿ ಕಳವಳಿಸೆ ಗೋಮಾಯು ಗೊಂದಿಯೊಳಣಗೆ ಬೊರಗೆಯ ಮೊಲಂಬೊಗುತ್ತಿರಲು . . . ಲುಬ್ಧಕ ಸಮೂಹ ಬೆದಕಿದುದು ಘೋರಾರಣ್ಯವ (ಪಂಪಿಪಾ. ೦೩-೩೨). [<ಪೋರ್ $_8$]

**ಬೊರ್ಮ** 'ಬೊಮ್ಮ' ನೋ.

—**ಬೊಲ್** ' —ವೊಲ್' ನೋ.

**ಬೊಲ್ಲ** $_1$ (ನಾ). ಮುಖವು ಬೆಳ್ಳಗಿರುವ ಒಂದು ಬಗೆಯ ಕುದುರೆ : "ಮುಖಂ ಬೆಳ್ಪುದೋಱಿರೆ ಬೊಲ್ಲನಕ್ಕು" (ಮಂಗರಾ. ೯೨-೦೩) ; ಚೆನ್ನ ಚೇರಮರ ಬಂಟ ನಾನಯ್ಯ ಎನ್ನ ಹಾಗು ಬೊಲ್ಲನ ಕಾಪ ಗೋವನೆಂಬರು (ಬಸವ. ೩೩೭) ; ತನ್ನ ಬೊಲ್ಲನ ಕೂಡೆ ಮಂಗಳನಂ . . . ವಾಹಕರಿರಾ ನೀವು (ಬಸವು. ೫೯-೯೦) ; ಥಳಥಳಿಸಿ ಪೊರೆದು ಮುಖದೊಳ್ ತೂಳಗುವ ಬೆಳ್ಪಿನಿಯಿ ಬೊಲ್ಲಂ[ಬಾಹಾಂ. ಬೋಟುಂ] (ಅಶ್ವಶಾ. ೨-೦೨).

[ ದೇ.॥ ತೆಲು. ಬೊಲ್ಲಿದು ]

**ಬೊಲ್ಲ** $_2$, ಬೊಲ್ಲು (ಅ). ಮೆಚ್ಚುಗೆಯನ್ನು ಸೂಚಿಸುವ ಒಂದು ಭಾವ ಸೂಚಕಾವ್ಯಯ : ಸಭೆಯೊಳನ್ನ ಪೊಣ್ಮಿತ್ತು ಜಾಂಗು ಬೊಲ್ಲ ಶುಭ ಬೊಲ್ಲ ಮಾಂಗಳಿಕ ಬೊಲ್ಲಮೆಂಬೀ ರವಂ (ಜಗಾ. ೦೦-೭೦); ನೆರೆದ ಜನ ವೆಲ್ಲಾರ್ಭೇ ಜಾಂಗು ಬೊಲ್ಲೆನುತಿರಲು (ಶಂಪರ. ೩-೬೫). **ಬೊಲ್ಲು :** ಸೊಲ್ಲಿಸಿದರು ಜಾಗು ಬೊಲ್ಲು ಶಬ್ದದ ಕೆಂಬಲ್ಲ ತಳಿಗೊತ್ತಿಯರು (ಪೋಶಕಶ. ೦೫-೩೭).

**ಬೊಲ್ಲವಣೆ** (ನಾ). [ಸಂಗೀತ] ಯಾವುದಾದರೂ ಚರ್ಮವಾದ್ಯಗಳಲ್ಲಿ ನುಡಿಸುವ ಪಾಟವಿನ್ಯಾಸ; P 'ಬೊಲ್ಲಾವಣಿ' ಎಂದರೆ ಒಂದು ಪಾಟವಿನ್ಯಾಸವನ್ನು ಏರ್ಪಡಿಸಿ ಅದರ ಮೊದಲು, ಮಧ್ಯ ಮತ್ತು ಕೊನೆಗಳಲ್ಲಿ ಹುಡುಕ್ಕಾ, ಪಟಹ, ಮೃದಂಗ, ಢಕ್ಕಾ, ಕರಟಾ ಇತ್ಯಾದಿ ವಾದ್ಯಗಳಿಗೆ ಪ್ರಧಾನವಾದ ಪಾಟಾಕ್ಷರವನ್ನು ಬಹುವಾಗಿ ಪ್ರಯೋಗಿಸುವುದು ; ಇಂತಹ ಖಂಡವನ್ನು ಎರಡು ಸಲ ನುಡಿಸು ವುದು ಎಂದು ಸಂಗೀತವಿದ್ವಾಂಸರು ಅಭಿಪ್ರಾಯಪಡುತ್ತಾರೆ : ಬಹುರೇಚಿಯ ಚಾರಣೆಯ ಧಿಕ್ಕವಣೆಯ ಸೇವಣೆ ಬೊಲ್ಲವಣೆಯ ಬೆಡಂಗು ಬಿತ್ತರಿಕೆಯಂ ಬೀಱಿ ಬಾಜಿಸುತ್ತಿರೆಯುಂ (ಶಾಂತೀಶ್ವ. ೭-೯೩ ವ).

[ ?. / ತೆಲು. ಬೊಲ್ಲಾವಣಿ=ಒಂದು ಬಗೆಯ ನಾಟ್ಯಬಂಧ]

**ಬೊಲ್ಲಿ** (ನಾ). ಕಥೆ ; ಹೇಳಿಕೆ ; ಉಕ್ತಿ : ಭಾರತಕಥೆಯ ಟೀಕು ಸಹಾ ವ್ಯಾಖ್ಯಾನಿಸಿದ ಜಕಣನಾಯಕನ ಬೊಲ್ಲಿ (ಮಡಿಕ್ಕಾ-I, ೨೨೦); ಇವನ ಗ್ರಂಥ : ಪಂಚಪರಮೇಷ್ಠಿಗಳ ಬೊಲ್ಲಿ (ಕವಿಚ. I, ೯೩೪); ಪಂಚಪರಮೇಷ್ಠಿಗಳ ಬೊಲ್ಲಿಯನ್ನು ಬರೆದು . . . ಗತಿಸಿದ ಬಾಳಚಂದ್ರಪಂಡಿತನು ಮಾಘ ಣಂದಿಯ ಶಿಷ್ಯರ ಶಿಷ್ಯ (ಜಾಹಿಕ. ೦೪೦). [<ಪ್ರಾ. ಬೋಲ್ಲಿಅ]

**ಬೊಲ್ಲು** 'ಬೊಲ್ಲ $_2$ ' ನೋ.

**ಬೊಲ್ಲೆ** (ನಾ). ಅಸತ್ಯ ; ಸುಳ್ಳು : ಬಲ್ಲಿದ ವಾಚಾಳಿ ನಾರದಮುನಿ ನಿನ್ನ ಬೊಲ್ಲೆಯ ಮಾತದುತಿರಲಿ ಎಲ್ಲಿಂದ ಬಂದೆ ಸುದ್ದಿಯ ಪೇಳ್ಳುದು (ನೇಮಿಶ. ೩೭-೦೪). [←ತೆಲು. ಬೊಲ್ಲು]

**ಬೊಲ್ವ** (ನಾ). ಒಬ್ಬಾತನ ಹೆಸರು : ಕೋಗಟಿಯ ಒಕ್ಕಲ್ ಶ್ರೀ ಎರ್ಮ್ಮೆಯರ ಮಗ ಬೊಲ್ವ ಗಂಗಗಾವುಣ್ಣಾನಿಱಿದು ಬಿಟ್ಟನ್ (ಎಕ. X, ಬಾಗಿಂಗ್. ೦೩-೪; ಸು. ೮೯೦). [ ? ]

**ಬೊಹರಿ** 'ಬವರಿ' ನೋ.

**ಬೊಳ್ಳುಮರ** (ನಾ). ಟೊಳ್ಳಾದ ಮರ ; ಪೊಳ್ಳುಮರ : ನೋಡಲು ಇಷ್ಟು ದೊಡ್ಡದಾಗಿ ಕಂಡರೂ ಒಳಗೇನಿದೆ? ಬೊಳ್ಳುಮರವಿದ್ದ ಹಾಗೆ! (ಚಾಳಿ. ೯೯). [ ?. / ತುಳು. ಬೊಳ್ಳುದಮರ]

**ಬೊಳ್ಳಿಡು** 'ಬಳ್ಳಿಡು' ನೋ.

**ಬೊಳ್ಳು** 'ಬಗುಳ್ಳು$_2$' ನೋ.

**ಬೊಳ್ಳುಗರೆ** 'ಬಳ್ಳುಗರೆ' ನೋ.

**ಬೊಳ್ಳೆ** (ನಾ). ಹುರುಳಿಲ್ಲದಿರುವಿಕೆ; ತಿರುಳಿಲ್ಲದಿರುವಿಕೆ; ಹೊಳ್ಳುತನ: 'ಒಳಬೊಳ್ಳೆ' ಪರಾ. [<ಪೊಳ್ಳು]

**ಬೋ** (ಅ). (ಸಾಮಾನ್ಯವಾಗಿ ಗೌರವಾರ್ಹರಾದವರನ್ನು ಸಂಬೋಧಿಸುವಾಗ ಪ್ರಯೋಗಿಸುವ) ಒಂದು ಅವ್ಯಯ: ನಿಮಿಷದ ನಿಮಿಷಂ ಬೋ ಕ್ಷಣದೊಳಗರ್ಧಂ ಬೋ. . . ನೀ ಮಾಡಿದ ಮಾಯಂ ಬೋ ಅಭ್ರಚ್ಛಾಯೆಯಂ ಬೋ (ಬಸವ. ೦೬೮). [< ಭೋ]

**ಬೋಂಡ** (ನಾ). ಕಲಸಿದ ಕಡಲೆಹಿಟ್ಟಿನಲ್ಲಿ ಪಲ್ಯವನ್ನು ಉಂಡೆಮಾಡಿ ಅದ್ದಿ, ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ತಿಂಡಿ: ಕಡಲೆಬೇಳೆಯ ಹಿಟ್ಟನ್ನು ಬಜೆ ಮತ್ತು ಬೋಂಡಕ್ಕೆ ಅದ್ದಿಟ್ಟಾಗಿಯೂ ಸಿಂತಿಂಡಿಗಳನ್ನು ತಯಾರಿಸುವುದಕ್ಕೂ ಉಪಯೋಗಿಸುತ್ತಾರೆ (ಅಡುಗೆ. ೬೩); ನನಗೆ ಎರಡು ಬೋಂಡ, ಅವನಿಗೆ ಎರಡು ಬೋಂತ ತಂದಿರಿಸಿದ ಹುಡುಗ (ಅಂಜೂ. ೫೬). [ ?. / ಮರಾ. ಬೋಂಡ]

**ಬೋಕಾಣಗಿತ್ತಿ** (ನಾ). (ಉಕ) ಮನಸ್ಸಿನ ವಿಚಾರವನ್ನು ಹೊರಗೆ ತೋರ್ಪಡಿಸದವಳು; ಗುಮ್ಮನ ಗುಸಕಿ: ಏ ಬೋಕಾಣಗಿತ್ತಿ, ಸುರುವೊ ಆಕೇನು? (ಸವತಿ. ೬೪); ಈ ಬೋಕಾಣಗಿತ್ತಿಯನ್ನು ಹೊರಗೆ ಹಾಕದಿದ್ದರೆ ಈ ಹಾರೆಯಿಂದಲೇ ತಲೆ ಜಜ್ಜಿಕೊಳ್ಳುತ್ತೇನೆ (ತಂತ್ರಕಾ. ೨೩). [<ಬೋಕಾಣ+ –ಗಿತ್ತಿ]

**ಬೋಕಾಣಿ** (ನಾ). = ಬೋಕಾಣಗಿತ್ತಿ : ಏ ಬೋಕಾಣಿ ಮುಂಜಾನೆ ಹೊತ್ತು ಎಲ್ಲಿ ಹೋಗಿದ್ದಿ ? (ಬಾಂಧವ್ಯ. ೩೦) ; ನನ್ನ ಎರಿಯ ಮಾಯಿಲ ಪತ್ತಲವನ್ನು ಆ ಬೋಕಾಣಿಯೇಕೆ ಉಟ್ಟುಕೊಂಡು ಮೆರೆದಾಡುವಳು? (ಪುತ್ರಿ. ೩೯). [ ? ]

**ಬೋಕಿ** (ನಾ). ೧. ಒಡೆದ ಮಡಕೆಯ ಚೂರು : ಪ್ರೀತಿಯಿಂದ ಆದರಣೆ ಮಾಡದೆ ಒಡೆದ ಮಡಕೆಯ ಬೋಕಿಯಲ್ಲಿ ನಿತ್ಯವೂ ಗಂಜಿ ಹೊಯ್ಯುತ್ತಾ ಇದ್ದನು (ಕಥಾಸಂ. IV, ೯) ; ಆ ಪದಾರ್ಥಗಳನ್ನು ತುಂಬುವುದಕ್ಕೆ ಹಳೆ ಮಡಿಕೆಯಾಗಲಿ, ಮಡಕೆಬೋಕಿಯಾಗಲಿ ಉಪಯೋಗಿಸಬೂಡದು (ಗ್ರಾಮಾಳ. ೫೬) ; ೨. (ಆಲು) ಭಿಕ್ಷಾಪಾತ್ರೆ: ನೂಕೋನ ಮನೆ ಊಟಕ್ಕಿಂತ ಬೋಕಿಯ ಊಟ ಲೇಸು (ಗಾದೆ). 'ಬಕ್ಕರೆ' ಪರಾ. [ದೇ.॥ ತೆಲು. ಬೋಕಿ]

**ಬೋಗ** (ನಾ). ಸುಖಾನುಭವ ; ಭೋಗ : ಭಕಾರಕ್ಕೆ ಬಕಾರಂ . . . ಭೋಗ–ಬೋಗ (ಶಬ್ದ. ೨೫೫ ವೃತ್ತಿ). 'ಮೆಯ್ಯೋಗ' ಪರಾ. [< ಸಂ. ಭೋಗ]

**ಬೋಗಣಿ** 'ಬೋಗುಣಿ' ನೋ.

**ಬೋಗನ್‌ವಿಲ್ಲ, ಬೋಗೇನವೆಲಿಯ** (ನಾ). ಒಂದು ಬಗೆಯ (ಅಲಂಕಾರ) ಸಸ್ಯ ಮತ್ತು ಅದರ ಹೂವು : ಬೋಗನ್‌ವಿಲ್ಲ, ಕೆಂಪುಗೊಂಡೆ (ವೃಕಿಗಿ. ೦೬–೨೪೦). **ಬೋಗೇನವೆಲಿಯ** : ತೊಳಗುತಿವೆ ತೋಟದಲ್ಲಿ ತರತರ ಗುಲಾಬಿ ಹೂ, ಡ್ಯಾಲಿಯಾ, ಬೋಗೇನವೆಲಿಯ (ಸುಶೀಲ. ೬–೩). [←ಇಂ. Bougainvilaea]

**ಬೋಗರ** (ಗು). (ಆಲು) ನಿಜವಾದ ; ದಿಟವಾದ : ನೀನು ಬರೇ ಮಾತಿನಲ್ಲೇ ಮುಗಿಸಿದೆ. ಅಪ್ಪು ಬೋಗರದುಃಖವಿದ್ದವಳು ಬಟ್ಟಲು ಹಿಡಿ, ನೋಡೋಣ (ಚಾಳಿ. ೯೬). [← ತುಳು. ಬೋಗರೆ=ಸುಳ್ಳು]

**ಬೋಗಯ್ಯ** ? (ನಾ). (?) : ಶ್ರೀಗಾಶ್ರಯವೆನೆ ತೇಜಕ್ಕಾಗರವೆನೆ ನೆಗಟ್ದ ಗಂಗವಜ್ರನ ಲೆಂಬ್ಬೋಗಯ್ಯನೆಂಬರವರೊಳ್ಬೋಗೆಯು ಮಾಪ್ರ್ವಡೆಗೊಬಿಂಣ್ಣನ ಬಂಟ (ಎಕ. II., ೦೩೨–೨, ೪೧೦). [ ? ]

**ಬೋಗಾರ$_1$** 'ಬೋಗಾಬಿ' ನೋ.

**ಬೋಗಾರ$_2$** (ನಾ). ಒಂದು ಬಗೆಯ ವನಸ್ಪತಿ : ಬೋಗಾರ ಜಾಯಿಫಲ ಸೈಂಧವ . . . ಇವನ್ನು ಸಮಾನಂಗೊಂಡು ಚೂರ್ಣಮಂ ಮಾಡಿ . . . ಮೆಲ್ಲಲು ವೀರ್ಯವರ್ಧನಮಕ್ಕು (ಖಗ. ೬೪). [ ? ]

**ಬೋಗಾರ$_3$** (ನಾ). ಒಂದು ಬಗೆಯ ಪಕ್ಷಿ: ಅರಸಿ ನೋಡೀಟಿಯುಲಿ ಹುದುಗಿದ ಹರಡೆ ಹಂಗ ಮಯೂರ ಟಿಟ್ಟಿಭ ಗೊರವ ಗೀಜಗ ಲಾವುಗೆ ಬುಬ್ಬುಲಿ ಬೋಗಾರ . . . ಇತ್ತಲಿಪೆಯಿಂದ (ಕೋರಿಣ. ೩-೦-೩೨). [ ? ]

**ಬೋಗಾಬಿ, ಬೋಗಾರ$_1$** (ನಾ). ಲೋಹದ ಕೆಲಸ ಮಾಡುವವನು ; ಲೋಹಕಾರ ; ಕಂಚುಗಾರ : "ಪ್ಯೋಕಾರಃ, ಲೋಹಕಾರಃ — ಈ ೨ ಬೋಗಾಜಂ" (ಪಠಾಮು. ೯೬-೪೬೪) ; ಬೋಗಾಜಿ ದೇವಿಸೆಟ್ಟಿ ಗ೦ ಬೋಗಾಬಿ ಬಾಣಾಸೆಟ್ಟಿ ಗ೦ (ಎಕ. XV, ಬೇಲೂರು. ೩೪೩–೮೦ ; 1265) ; ಹುಸಿದು ಮಾಡುವನ ಶಿವಪೂಜೆ ಬೋಗಾಜಿ ಹಸರಮಟ್ಟಂತೆ (ಸರ್ವಜ್ಞ. ೦೭೦). **ಬೋಗಾರ$_1$**: ಕಂಚುಗಾರರು ಬೋಗಾರರು ಸಹ ಗುಡಾರ ೧ಕ್ಕೆ ವರ್ರುಷ ೧ ಕೆಲ್ ೧ ಹಣಪ್ರಕಾರ ಸಡಿಸಿಕೊಡಲುಳ್ಳವರು (ಎಕ. XII, ಮಧುಗಿ. ೩೦–೯೯; 1656); ತಾಮ್ರ ಹಿತ್ತಾಳೆಗಳ ಪಾತ್ರೆಗಳನ್ನು ಮಾರುವ ಜೈನರಿಗೆ ಕಾಸಾರರೆಂತಲೂ, ಜೋಗಾರರೆಂತಲೂ, ತಾಂಬಟಗಾರರೆಂತಲೂ ಅನ್ನುವರು (ಕರ್ಣಾ. ೦೩೩); ಗಂದಿಗರು, ಬೋಗಾರರು . . . ಮೊದಲಾದ ಜಾತಿಯವರೂ ಅಲ್ಲಿ ವಾಸಿಸುತ್ತಿದ್ದರು (ಕರ್ಣಾಟ. ೦೫೭). [< ಸಂ. ವ್ಯೋಕಾರ./ತುಳು. ಬೋಗರೆ]

**ಬೋಗಾಬಿದೆಜಿಗೆ** (ನಾ). ಲೋಹಕಾರರ ಮೇಲೆ ವಿಧಿಸುತ್ತಿದ್ದ ತೆರಿಗೆ : ಬೆಟ್ಟದ ಕಾವಲು ಬೋಗಾಬಿದೆಜಿಗೆ ಗಣಾಚಾರಿದೆರಿಗೆ ಕೋಜಂಗಳ ತೆಜಿಗೆ (ಎಕ. III (R), ಗುಂಡ್ಲು. ೦೩೬–೦೭; 1513). [ಬೋಗಾಬಿ + ತೆಜಿಗೆ]

**ಬೋಗಾಬಿದೆಜಿ$^3$** (ನಾ). = ಬೋಗಾಬಿದೆಜಿಗೆ : ಬೆಟ್ಟದ ಕಾವಲು ಬೋಗಾಬಿದೆಜಿ$^3$ ಗಣಾಕಾರತೆಜಿ$^3$ಗೆ . . . ಸಲಿಯೂರವೆತ್ತನೆ ಮುಂತಾದ ಸರ್ವ್ವತೆಜಿ$^3$ಗೆ ಕಾಲುವಳಿಯ ಗ್ರಾಮಗಳು (ಎಕ. III (R), ಗುಂಡ್ಲುಪೇ. ೦೩೪–೦೬ ; 1311). [ಬೋಗಾಬಿ + ತೆಜಿ$^3_3$]

**ಬೋಗಾಬಿಕೆ** (ನಾ). = ಬೋಗಾಬಿದೆಜಿಗೆ: ಬೋಗಾಬಿಕೆ ಮಾದಲಿಕೆ ಮುಂತಾದ ಏನುಳ್ಳ ಸುಲಿಸ್ವಾಮ್ಯವನು ಅಗುಮಡಿ ನಂಜುಡೇಶ್ವರದೇವರ ಬಂಡಾರಕ್ಕೆ ಸಲಿಸುವಂತೆ ಸರ್ವಮಾನ್ಯದ ಧರ್ಮಶಾಸನ (ಎಕ. III (R), ಗುಂಡು ಪೇ. ೩೯–೬; 1507). [ಬೋಗಾಬಿ + –ಇಕೆ]

**ಬೋಗಿ$_1$** (ನಾ). ಸುಖವನ್ನು ಅನುಭವಿಸುವವನು ; ಸುಖಿ : ಭಕಾರಕ್ಕೆ ಬಕಾರಂ . . . ಭೋಗಿ–ಬೋಗಿ (ಶಬ್ದ. ೨೫೫ ವೃತ್ತಿ); ಚೀಳೆಯ ಪುಷ್ಪ ಮುಂತಾದ ಪರಿಮಳಕೆ ಬೋಗಿಯಾಗಿರುವವನು (ಶಕ್ತಕೂ. ೩–೨೦). [<ಸಂ. ಭೋಗಿನ್]

**ಬೋಗಿ$_2$** (ನಾ). ರೈಲುಗಾಡಿಯ ಬಿಡಿಗಾಡಿ,— ಡಬ್ಬಿ : ನೆಕ್ಲುದೋವನಿಗಾಗಲಿ ಇತರರಿಗಾಗಲಿ ಬೋಗಿಗಳ ಬಳಿ ಹೋಗಲು ಅವಕಾಶ ದೊರೆತಿರಲಿಲ್ಲ (ಪುನರು. ೯೫೩). [←ಇಂ. Bogie]

**ಬೋಗುಡಿಚೆ** (ನಾ). ಒಂದು ಬಗೆಯ ಔಷಧೀ ಸಸ್ಯ : ವ್ಯೈಲತುತ್ತಮಂ ಬೋಗುಡಿಚೆಸೊಪ್ಪಿನ ರಸದಲ್ಲಿ ತೇದು ಹೊರವೊಳೆಗೆ ತೊಡೆಯೆ ಪೊಳೆ ಮಾಣ್ಬುದು (ಕಲ್ಯ. ೨೯೩). [ ? ]

**ಬೋಗುಣಿ, ಬೋಗಣಿ, ಬೋಗುನಿ, ಬೋಗೋಣಿ** (ನಾ). ತಳಭಾಗವು ಗುಂಡಾಗಿದ್ದು, ಅಗಲವಾದ ಬಾಯುಳ್ಳ ಲೋಹದ ಪಾತ್ರೆ : ಏಳೆನ್ನ ಮನವನ್ನೆ ! ನೋಡು, ಪೊಳ್ತರೆ ಬಂದು ನಿಶಿಯ ಬೋಗುಣಿಯೊಳಕೆ

ಹೊಂಬುಗುರಿಬೆಸದು ತಾರೆಯರಳುಗಳನಲ್ಲಿಂದೆ ಚೆಲ್ಲಾಡಿಪನು (ಉಷರ.೦); ಒಲೆಯ ಬಳಿ ಒಂದು ಬೋಗುಣಿಯಲ್ಲಿ ಕಳೆದ ರಾತ್ರಿ ಉಳಿದಿದ್ದ ಅನ್ನವನ್ನು ನಾಯಿಗಳಿಗಾಗುತ್ತದೆ ಎಂದು ಸುಬ್ಬಮ್ಮ ಇಟ್ಟಿದ್ದಳು (ಶಾಪೂರು. ೫೬). ಬೋಗಣಿ : ಒಂದು ಬೋಗುಣಿಗೆ ನೀರು ಸುರಿದು ಅವನ್ನೆಲ್ಲ ಸುರುವಿದೆ (ಹುಳಿಕ್ಕ. ೬೬) ; ಅವಲಕ್ಕಿಯನ್ನು ತೊಳೆದು ನೆನೆಯಿಸಿ ಅರ್ಧ ಬೋಗಣಿ ದೊಸರಿನೊಂದಿಗೆ ಚೆನ್ನಾಗಿ ಬೆರೆಯಿಸಿ . . . ಉಪಹಾರಕ್ಕೆ ಕುಳಿತಿದ್ದರು (ಕನ್ನ.ಸ.೯). ಬೋಗುನಿ : ಈ ಸೇವಕರು ಚಿನ್ನದ ಪಾತ್ರೆಗಳನ್ನು ಅಂದರೆ ದೊಡ್ಡ ದೊಡ್ಡ ಬೋಗುನಿಗಳನ್ನು . . . ಹೊತ್ತು ಬರುತ್ತಿದ್ದರು (ಕೃಪಾಕ. ೧, ೬೮). ಬೋಗೋಣಿ : ಬೋಗೋಣಿಯಲ್ಲಿ ಸವಿನೀರು ಕಾಯಲಿಕ್ಕೆ ಇಟ್ಟು ನೀರು ಹೊಯ್ದಾಡುವಾಗ ಈ ತೊಪ್ಪಲವನ್ನು ಹಾಕಿ ಅದರ ಎಸರನ್ನು ಬಸಿದುಕೊಂಡು ಬಿಳೀಸಕ್ಕರೆಯನ್ನು ಹಾಲನ್ನು ಹಾಕಿ ತೆಗೆದುಕೊಳ್ಳುತ್ತಾರೆ (ಕೃಷಿಶ. ೨೦೦) ; ಬೋಗೋಣಿಯೊಳಗಿನ ನೀರು ಹೊರಸೂಸಿ ಪರಾತದೊಳಗೆ ಬೀಳುತ್ತದೆ (ಮುಂಬಯಿ. ೫-೬೫).

[←ಮರಾ. ಬೋಗಣೇ, ಬೋಗಾಣೇ, ಬೋಘಣೇ, ಬೋಘಾಣೇ. /ತಮಿ. ಪೋಕಣಿ, ಪೋಕಿಣಿ; ತುಳು. ಬೋಗಾಣಿ]

**ಬೋಗುನಿ** 'ಬೋಗುಣಿ' ನೋ.

**ಬೋಗೇನವಿಲಿಯ** 'ಬೋಗನ್‌ವಿಲ್ಲ' ನೋ.

**ಬೋಗೋಣಿ** 'ಬೋಗುಣಿ' ನೋ.

**ಬೋಚಿ** (ನಾ). (ಮಕ್ಕಳ ಮಾತಿನಲ್ಲಿ) ಮೊಲೆ ; ಸ್ತನ : ಬಾಚಿ ತಬ್ಬುತಲೆನ್ನ ವುಬ್ಬಿಯಿರುತಿರ್ಪ ಬೋಚಿಯನ್ನು ಕುಡಿಯುಪ್ಪ (ಪಮಿತ. ೦೫೬). 'ಪಾಚಿ₂' ಪರಾ.

**ಬೋಚಿಗ** (ನಾ), ಒಬ್ಬಾತನ ಹೆಸರು : ಸ್ವಸ್ತಿಶ್ರೀ ಗೊಗ್ಗಿಯ ಮನೆಮಗತಿ ಬೋಚಿಗಧರ್ಮ್ಮಸೆಟ್ಟಿ ಉತ್ತಮಗಳ್ಳಂಕ್ರ ?ದೊಳೆ ನಿಲೆ ಎದೆಮ ಊರ ಮಳಿವ [ಲಿ] ಸತ್ತಂ (ವ್ಯಳಾ. ೦೯೩೬, ೯೦-೨ ; ಸಾ. ೯೦೦).

[?]

**ಬೋಜ** (ನಾ). ಒಂದು ಬಗೆಯ ಹೆಂಡ : ಇವರು ಜೋಳದೊಳಗೆ ಅಮೃತಬಳ್ಳಿ, ಭಂಗಿ, ಕುಂಚಲಿ, ಅಂದರೆ ವಿಷಮುಷ್ಟಿಯ ಬೀಜ, ಇವುಗಳನ್ನು ಹಾಕಿ ಕುದಿಸಿ ಬೋಜವೆಂಬ ಸರಾಯಿಯನ್ನು ಮಾಡಿ . . . ಮಾರುವರು (ಕಜಾಗ. ೨೯೩). 'ಅಕ್ಕಿಬೋಜ' ಪರಾ.

[←ಪಾರ. ಬೋಜಾಪ್; ಹಿಂ. ಬೋಜಾ; ಮರಾ. ಬೋಜಾ, ಬೋರ್ಝಾ]

**ಬೋಜಗಾರ** (ನಾ). ಬೋಜವೆಂಬ ಹೆಂಡವನ್ನು ತಯಾರಿಸುವವನು : ಬೋಜಗಾರರು ಇವರು ಹಲವು ಹಿಂದೂಜಾತಿಗಳ ವಂಶದವರೆಂದು ತೋರುತ್ತದೆ (ಕಜಾಗ. ೨೯೩). [ಬೋಜ + — ಕಾರ₁ (<—ಕಾಜ)]

**ಬೋಜಾ** 'ಬೋಜೆ' ನೋ.

**ಬೋಜುಕಾರ** (ನಾ). ಮದುಮಗನ ಜೊತೆಯಲ್ಲಿರುವ ಚೆಲುವ.– ಸುಂದರ : ಬೋಜುಕಾರನಾದ ಕರುಂಬಯ್ಯ ಚೆಂಗುಮಣಿಯ ಕೈಹಿಡಿದು ಶಯ್ಯಾಗೃಹದ ಬಾಗಿಲಿಗೆ ಕರೆದುಕೊಂಡು ಬಂದ (ಹುಂಹಾ. ೨೩೨).

[←ಕೊಡ. ಬೋಜಕಾರ]

**ಬೋಜುಗಾರ್ತಿ** (ನಾ). ಮದುಮಗಳ ಜೊತೆಯಲ್ಲಿರುವ ಚೆಲುವೆ,– ಸುಂದರಿ : ಯಾವಳೋ ಒಬ್ಬ ಬೋಜುಗಾರ್ತಿ ಬಾಲ್ಯಕಾರ್ತಿಯ ಕಣ್ನೋಟದ ಗಾಳಕ್ಕೆ ಚೆಂಗುಮಣಿ ಸಿಕ್ಕಿ ಬಿದ್ದಿರಬೇಕು (ಹುಂಹಾ. ೦೦೩); ನೀನು ನನ್ನ ಬೋಜುಗಾರ್ತಿ ಹೆಣ್ಣನ್ನು ಎಲ್ಲಿ ಕಂಡೆನೆಂಬುವನ್ನು ಎಂದೆಂದಿಗೂ ಮರೆಯಲಾರೆ (ಪತಿಪಾ. II, ೦೦೨೯). [←ಕೊಡ. ಬೋಜಕಾರ್ತಿ]

**ಬೋಜೆ**, **ಬೋಜಾ** (ನಾ). ಭಾರ ; ಹೊರೆ : ಸಕರಿನ ಕರಾಯಿಯ ಬೋಜೆಯು ಸಂಪೂರ್ಣವಾಗಿ ಅನಾಮಿಗಳ ಮೇಲೆ ಬೀಳುತ್ತದೆ (ಮುಂಬಯಿ. ೯೦); ಈಗ ನನ್ನ ಮೇಲೆ ಒಂದು ಬೋಜೆ ಬಂದಿದ್ದು ಆ ಬೋಜೆಯನ್ನು ನೀವೇ ಸ್ವಂತ ಖುಷಿಯಿಂದ ಹೊತ್ತಿದ್ದೀರಿ (ಗಂಪಾಣ. ೨೦೦). **ಬೋಜಾ** : ನಿಮ್ಮ ಮ್ಯಾಲ ಪ್ರಪಂಚದ ಬೋಜಾ ಭಾಳ ಅದ (ಸಪುಪಾ. ೦೫೬); ನಾಳೆ ಮನೀ ಬೋಜಾ ಅವರ ಮ್ಯಾಲೀ ಅಲ್ಲ (ದೀಪಾ. ೯೩).

[←ಹಿಂ. ಬೋರ್ಝ್; ಮರಾ. ಬೋಜಾ, ಬೋರ್ಝಾ]

**ಬೋಟಿ** 'ಬೋಟು₃' ನೋ.

**ಬೋಟು₁** (ನಾ). ಒಂದು ಬಗೆಯ ಆದಾಯ : ಸ್ಥಳದ ಪೂರ್ವದ ಮಾನ್ಯ ಆಯ ಸ್ವಾಮ್ಯ ಬಾಟು ಬೋಟು ಸಹ ತೋಗರಿಗಟ್ಟಕೆ ಸಲುವ ಉಪಗ್ರಾಮ (ಎಕ. XII, ಕುಣಿಗ. ೯೩-೬; 1634 ?).

**ಬೋಟು₂** (ನಾ). ಹುಣಿಸೆಹಣ್ಣಿನ ಸಿಪ್ಪೆ,–ಗೋಟು.–ಗೊಳಲೆ (?) : ಸ್ವಾತಿನೀರಿಂ ಮುತ್ತು ಜನಿಸಿ ಶೋಭಿಪುದೈಸೆ ಬೋಟ ತೋಯದಿ ಮೌಕ್ತಿಕ ಫಲಗಳಹುದೆ (ಹಸುರು. ೨೦). 'ಬೊಟ್ಟು' ಪರಾ. [ ? ]

**ಬೋಟು₃**, **ಬೋಟಿ** (ನಾ). ನಾವೆ ; ಹರಿಗೋಲು : ಬಂದರಗಳಲ್ಲಿ ಅಲೆದಾಡುವ ಸಣ್ಣ ಪುಟ್ಟ ಮಾಲುಬೋಟುಗಳು. ಇವುಗಳ ಹೊರತು ಆ ಸಮುದ್ರದಲ್ಲಿ ಬೇರೆ ಯಾವ ಸುಳಿದಾಟವೂ ಕಾಣುತ್ತಿರಲಿಲ್ಲ (ಬರುಗಾ. ೯). **ಬೋಟಿ**: ಕತ್ತಲಲ್ಲಿ ಬೋಟಿಯ ದೀಪಗಳು ಮಾತ್ರ ಕಾಣಿಸುತ್ತವೆ (ಮಾರಮ. ೨೦೦); ಕುಮಟೆಯ ಕಡೆಗೆ ಹೋಗುವ . . . 'ಬೋಟಿ' ಸಿದ್ಧವಾಗಿ ನಿಂತಿತ್ತು (ಮುರುದಾ. ೩). [←ಇಂ. Boat]

**ಬೋಟೆ** (ನಾ). (?): "ಕೂಟದಾಸಿ ಬೋಟೆಯನಿಕುಂ" (ಪಕ್ರಿ. ೫೬-೨೬).

[ ? ]

**ಬೋಡ**, **ಬೋಳ₂**, **ಬೋಟ₂** (ನಾ). ೧. ಹಲ್ಲಿಲ್ಲದವನು; ಬೊಚ್ಚುಬಾಯಿಯವನು : "ಅದ್ವಿಜಾ ಬೋಡನಕ್ಕುಂ" (ಶಂಗರಾ. ೦೦೫-೬); ಅಡಿಗಟ್ಟಣವೇಕೆ ಬೋಡಂಗೆ ಕಬ್ಬೇಕೆ (ಸರ್ವಜ್ಞ. ೦೩೬೪). ೨. ಕೂದಲನ್ನು ತೆಗೆಸಿಕೊಂಡವನು; ಬೋಳಿಸಿಕೊಂಡವನು. ೩. ತಲೆಯಲ್ಲಿ ಕೂದಲಿಲ್ಲದವನು. ೪. ದರಿದ್ರ : ಬೋತ . . . ಗಂಟಿಲ್ಲದವ ; ದಿವಾಳಿಖೋರ " (ಜಾನಕೋ. ೨೫). ೫. (ಕರಾ). ಪೆದ್ದ; ದಡ್ಡ; ಬುದ್ಧಿಹೀನ. **ಬೋಳ₂**: ೩. ಬೋಳನಿಗೇಕೆ ಬಾಚಣಿಗೆ (ಇಂಪಾಪ. ೬೮-೬೮); ೬. ಕೊಂಬುಗಳಿಲ್ಲದ ಎತ್ತು : ನಿಲುವ ಸಂಪನು ಬೋಳ ಬಟ್ಟ ಕರಿಮಾಸ ಮುಂದೊಲೆವ ನಾನಾಪರಿಯ ಕಬ್ಬಸಿಗಳೊಳಗಾದ ಪಲವು ಪರಿಯೆತ್ತು ತೊಂಭತ್ತಾಱುಲಕ್ಷ ಮೇಳೈಸಿ ಪಿಡಿದುವು ಗೆಲ್ಲಕೆ (ಸಿಂಗರಾ. ೩೫-೬); ಕೊರಗುತಿರ್ದನು ಹೇರಿ ಹಾಕಿದ ಬೋಳನಂದದಲಿ (ಅಂಬಿಗ. ೨೫-೯೦). ೭. (ಆಲು) ಸಂನ್ಯಾಸಿ; ವ್ರತಿ: ನಿನ್ನ ಸಂಚದ ಪರಿ ಬ್ರಹ್ಮಾದಿಗಳರಿಯರು .... ಜಡೆಯ ಮುಡಿಯ ಬೋಳರಱಿಯರು (ಸರ್ವಪ. ೩೦_೦೫೯). **ಬೋಟ₂** : ೨. "ಮುಂಡಃ, ಮುಂಡಿತಃ —ಈ ೨ ಬೋಟನು" (ಶಾಪರಾ. ೦೦೯). ೭. ನಾರಂದಂ . . . ಸೀತೆಯಿರ್ದ ಕನ್ಯಾಮಾಡಕ್ಕೆಯ್ತಪ್ಪುದಲ್ಲಿ ವಿಳಾಸಿನಿಯರಾ ಬೋಟನಂ ಕಾಣುತ್ತಾಳಿಗೊಂಡು ನೆತ್ತಿಯಂ ಹಸ್ತದಿಂ ಪೊಯ್ಯೆ (ಪುಣ್ಯಾಸ್ರ. ೫-೬೦ ಪ). [ಬೋಡು + — ಅ₇./ತೆಲು. ಬೋಡ]

**ಬೋಡಿ**, **ಬೋಳಿ** (ನಾ). ೧. ಹಲ್ಲಿಲ್ಲದವಳು; ಬೊಚ್ಚುಬಾಯಿಯವಳು: ಕುಂಟಣಿಯಜ್ಜಿ ಬೋಡಿಯನು ನೋಡಗ್ರುಕೆ (ಜನಪು. ೦೦-೬); ಮಂಗಳಿಗು ಸುರಿದಳು ಬಹುಯುಕ್ತಿಯಂ ಬೋಡಿ ಪಿಸುಣತೆಯ ಹೂಡಿ (ಅಂಗಪ. ೨೫-೩೮). ೨. ತಲೆಯಲ್ಲಿ ಕೂದಲಿಲ್ಲದವಳು: (ಕ). **ಬೋಳಿ** : ೩. ತಲೆಯ ಕೂದಲನ್ನು ತೆಗೆಸಿಕೊಂಡವಳು; ಕೇಶಮುಂಡನ ಮಾಡಿಸಿಕೊಂಡವಳು: ಕೂಳಿಗೆ ಬಿದ್ದಿರುವ ಬೋಳಿಗೆ ನಿನಗಿಷ್ಟು ಗಯ್ಯಾಳಿತನವೇಕೆ (ಪುರಂದ. ೩-೩೦ ಪಲ್ಲವಿ) ; ಬೋಳಿ ತುರುಬು ನೆನೆಸಿಕೊಂಡ ಹಾಗೆ (ಗಾದೆ). ೪. ಒಂದು ಬಯ್ಗುಳು.

**ಬೋಳೀಮಗ** = ಮುಂಡೆಯ ಮಗ : ಒಂದು ಬಯ್ಗುಳು :

ಥೂ ಎಷ್ಟು ಪೊತ್ತಾಯ್ತು ? ಎತ್ತ ಸತ್ತ ಈ ಬೋಳೀಮಗ? (ಪುಲಿಮ. ೬೩೪). [ಪೋಡ + — ಇ₂./ತುಳು.ಬೋಳಿ]

**ಬೋಡು**, ಬೋಳು, ಬೋಟು (ನಾ). ೧. ಬಾಯಿಯಲ್ಲಿ ಹಲ್ಲಿಲ್ಲದ **ಸ್ಥಿತಿ** ; ಬಾಯಿ ಬರಿದಾಗಿರುವಿಕೆ : (೬). ೨. (ತಲೆಯಲ್ಲಿ) **ಕೂದಲಿಲ್ಲದ ಸ್ಥಿತಿ**; ಬೊಕ್ಕು. ೩. ಬರಿದಾಗಿರುವಿಕೆ ; ಖಾಲಿಯಾಗಿ **ರುವಿಕೆ**. (ಗು). ೪. ಹಲ್ಲಿಲ್ಲದ ; ಬಾಯಿ ಬರಿದಾದ : 'ಬೋಡುವಾಯ್' ಪರಾ. **ಬೋಳು** : ೨. ಆತನಿರವು **ತುಱುಬೋ** ಜಡೆಯೋ ಬೋಳೋ ಅಱಿಯಬಾರದಣ್ಣಾ (ಪೋಳಿವಾ. ೨೦೪-೬೩೨); ಮಂಡೆ ಬೋಳಿನ ಕರಕಮಂಡಲ ದಂಡಧೋತ್ರದ ಕಾಸೆ ವೇಷದ **ಲಂಡಸಂನ್ಯಾಸಿಯಾಸು** ಹಿರಿಯರೆನುತ್ತ ಭಿಕ್ಷವನು ಕೊಂಡು ನೀಡಿದರೆ (ಕೌಶಿಕ. ೬-೩೦). ೫. ಕೂದಲಿಲ್ಲದ ; ಬೊಕ್ಕಾದ: 'ಬೋಳುದಲೆ' ಪರಾ. ೬. ಬರಿದಾದ; ಖಾಲಿಯಾದ : 'ಬೋಳುಗೈ' ಪರಾ. **ಬೋಟು** : ೨. ನಾವಿದಂ ಕನ್ನೆಯ ಪುರ್ವುಂ ನೊಸಲುಮಂ ಸಮಱಿ ದಾಗಳಾ ಪುರ್ವುಂ ಬೋಟಿ ಪುರ್ವಾಗೆ ನೊಸಲುಂ ತಱಿಟುವಂತಾಗೆ (ಬಂಹಂ. ೪-೬ ಪ). ೫. 'ಬೋಟುಮಂಡೆ' ಪರಾ.

**ಬೋಡಾಗು, ಬೋಳಾಗು, ಬೋಟಾಗು** = ೧. ಹಲ್ಲಿಲ್ಲದಾಗು; ಬೊಚ್ಚು ಬಾಯಾಗು : ಹಲ್ಲುಗಳುದುರಿ ಬಾಯಿ ಬರಿ ಬೋಡಾಗಿಹುದು (ಅಚುಶಂ. ೦೦-೦೮). ೨. ಬರಿದಾಗು; ಖಾಲಿಯಾಗು: ಒಂಟಿಕೊಪ್ಪಲಿನಾಚೆ ಬೋಡಾದ ಭೋರೆಯಂ . . . ಕುರಿತ್ತುಲಿವ ಗತಿಯಾಯ್ತು (ಕೋಗಿಲೆ. ೦೬-೩೬): ಮಂಡೆ ಬೋಳಾದರೇನೋ ಹುಟ್ಟು ಬೋಳಾಗದನ್ನಕ್ಕರ (ಅದವ. ೪-೦೫); ಹೂವಿಲ್ಲದ ಹೆರಳು, ಹಾರವಿಲ್ಲದ ಕೊರಳು, ಬರಿಗೈ, ಬೋಳಾದ ಹಣೆ (ಐಶಂ. ೦೩೦). ೩. ಅಸಹಾಯಕವಾಗು ; ನಿಸ್ಸತ್ತ್ವ ವಾಗು : ವೀರರ ಭೂಪರ ಬಾರಿಗೆ ಬಿರ್ದು ಬೋಡಾಗಿ ನಾಯಾಗಿ ತೇಜಂಗೆಟ್ಟು (ಧರ್ಮಸಂ. ೦೩-೦೮೫) ; ಉದಿತಾತ್ಯುಗ್ರಭುಜಪ್ರತಾಪದ ಪೊಡವ್ವರ್ಗಂ ಕಂಡು . . . ಪೊಡವ್ವರ್ಡುಗರಾರಾನ್ಸೋಡಿ ಬೋಡಾಗಿ ಪೋಗದರಾರ್ (ಎಕ. XX, ೧೨-೬ ; 1187). ೪. ಕೂದಲಿಲ್ಲವಾಗು ; ಬೊಕ್ಕವಾಗು : ಮಂಡೆ ಬೋಳಾದರೇನೋ ಹುಟ್ಟು ಬೋಳಾಗದನ್ನಕ್ಕರ (ಅದಕ. ೪-೦೫) ; ಲಲಿತಾಂಗಿಯರೊಳ್ ರಾಗದೆ ನಲಿದಾಡುವ ವಯಸ ದಂದು ಮಾಡದೆ ತಪಮಂ ಸಲೆ ಮಾಟ್ಕಿ ದೈವದಿಂದಂ ತಲೆ ಬೋಟಾಯ್ತು ನಿಪ ಮುಪ್ಪಿನೊಳ್ಕರನೆಂಬರ್ (ಕಮಕ. ೬-೪೦) ; ಬೋಟಾದ ತಲೆಯ ರೋಮಂ . . . ಬಳಿಪ ತೆಱದಿಂ ಕೋಲಾಹಲಮಿಲ್ಲದೊದವುತಿರ್ಕುಂ ಪಾಪಂ (ಧರ್ಮಾಮೃ. ೪-೪೦). ೫. (ಆಲಂ) ಸಂನ್ಯಾಸಿಯಾಗು : ಹೊನ್ನಿನ ಆಪ್ಯಾಯನಕ್ಕೆ ಬೋಳಾದವನಲ್ಲ . . . ಕೂಡಲಸಂಗಮ ದೇವರಲ್ಲಿ ಎನಗಾರು ಇಲ್ಲವೆಂದು ಬೋಳಾದನೆನ್ನ ಪ್ರಭುದೇವರು (ಬಸವ. ೪. ೪೮೬-೦೦೬೦). **ಬೋಟದಲೆ** = ಬೋಳಿಸಿದ ತಲೆ ; ಕೂದಲಿಲ್ಲದ **ತಲೆ** : ಕರಿಯ ಕಚ್ಚುಟಮನುಟ್ಟು ಮೆಯ್ಯೆಲ್ಲಂ ಮಸಿಯಂ ಪೂಸಿ ಬೋಟದಲೆವೆರಸು ಬಾಯೊಳ್ ಕವಡಿಕೆಗಳಂ ಪಲ್ಗಳಂತೆ ಮಾಡಿ (ವಡ್ಡಾರಾ. ೦೦೪-೦೬). **ಬೋಟಮಂಡೆ** = ಬೋಟಿದಲೆ : ಕಚ್ಚುಟಂ ಗುಂಡಿಗೆ ಬೋಟಮಂಡೆ ಮಣಿದಂಡಮಿಂವೀಕ್ಷಣಸೌಖ್ಯಹೇತುವೇ (ಶಂರಾಮಾ. ೪-೬೦) ; ಕೆರಕಿಂ ತುಱಿಯಿಂ ತೀವಿದ ಕರಚರಣಂ ಬೋಟಮಂಡೆ ಕುಗ್ಗಿದ ದೇಹಂ (ಧರ್ಮಾಮೃ. ೬-೨೨೪).

[ದೇ.॥ ತಮಿ. ಪೊಟು ; ತುಳು. ಬೋಳು, ಬೋರು ; ಕೊಡ. ಕೋತ. ಬೋಳ್; ತೆಲು. ಬೋಡು]

**ಬೋಡುಕಡಲೆಸೊಪ್ಪು** (ನಾ). ಒಂದು ಬಗೆಯ ಔಷಧೀಸಸ್ಯ : ಮೂಡುಗಟ್ಟಿನ ಗಿಡ, ಬೋಡುಕಡಲೆಸೊಪ್ಪು, ಕರಂಡೆ, ಮುಂಡಿಗಿಡ (ಮೈಶಿಗಿ. ೬೦-೦೪೬೦) : ಮೂಡುಗಟ್ಟಿನ ಸೊಪ್ಪು, ಬೋಡುಕಡಲೆಸೊಪ್ಪು, ಗರುಗಲು (ನಮ್ಮಸು. ೨೩೮). 'ಬೋಟಿಗಡಲೆ' ಪರಾ.

[ಬೋಡು ? + ಕಡಲೆ + ಸೊಪ್ಪು₁]

**ಬೋಡುಗೈ** (ಕ್ರಿ). ಬರಿದುಗೊಳಿಸು ; ಬೋಳುಮಾಡು : ದಂತಿ ಮೃಗಪತಿಯ ದಾಡೆಯ **ಬೋಡುಗೈವುದೆ** ಶಕುಂತೇಶನಂ ದಂದಶೂಕ ನುಂಗುವುದೆ (ಪುದೇಪು. ೨೪-೦೦). [**ಬೋಡು** + ಕೈ₁ (< ಕಯ್₁)]

**ಬೋಡುಬಾಯ್** 'ಬೋಡುವಾಯ್' ನೋ.

**ಬೋಡುಬಾಯಿ** 'ಬೋಡುವಾಯ್' ನೋ.

**ಬೋಡುವಾಯ್**, ಬೋಡುಬಾಯ್, **ಬೋಡುಬಾಯಿ** (ನಾ). ಹಲ್ಲಿಲ್ಲದ ಬಾಯಿ : ಬೊಚ್ಚು ಬಾಯಿ : ಆನೆದಲೆಯ ನೆತ್ತರ್ ಪುದಿದ ಮುತ್ತಂ ದಾಳಿಂಬಬೀಜಂಗೆತ್ತೆತ್ತಿ ಕಳ್ಕನೆ ಮುಕ್ಕಲೊಡನೆ ಪಲ್ಗಳ್ ಮುಕ್ಕುವೋಗೆ ನೋಡಿಮೆಂಬಂತೆ ಬೋಡುವಾಯುಂ ತೆಱೆದೇಡಿಪ ಕೋಡ ಗಂಗಳಂ ನೀಡುಂ ನೋಡಿ (ರಾಜಶೇ. ೫-೩೩ ಪ) ; ಶೈಲವೃದ್ಧನ ಬೋಡು ಬಾಯಂತೆ ಗವಿ ಮೆರೆದುದು (ಕುಪಾಪು. ೪-೦೪೪). **ಬೋಡುಬಾಯ್** : ನೆರೆದಲೆಗೆ ಮಸಿದೊಡೆದು ತೆರೆಗೊಂಡೊಡಲನು ಕತ್ತಲೆಯ ಮಱೆಗೆಯ್ದು ಬೋಡು[ಪಾಠಾಂ. ಬೊಗಡು]ಬಾಯಿಂದಲೂಳುತ್ತ . . . ಹಣ್ಣು ಮುದುಕಿ ಸೂಳೆಯರೆಸೆದರು (ಕಿಅಪು. ೦೦-೬೬). **ಬೋಡುಬಾಯಿ** : ಒತ್ತುಗಲ್ಲದ ಬೋಡುಬಾಯಿಗಳ ನೆತ್ತಿ ತರಟಿನ ಸೂಳೆಯರು ಮನವರ್ತಿಯಲಿ ತಿರುಗಿದರು ಶತವೃದ್ಧ ರಸಮೇಳದೊಳು (ಕೊಡ್ಡ. ೨೦೪).

[ಬೋಡು + ಬಾಯ್]

**ಬೋಣಿ₁** (ನಾ). ಚೆಲುವು ; ಸೌಂದರ್ಯ : 'ಚಿಗುರುಬೋಣಿ' ಪರಾ. [ ← ತೆಲು. ಪೋಡಿ, ಪೋಣಿ]

**ಬೋಣಿ₂** (ನಾ). (ವ್ಯಾಪಾರಿಯು **ಮಾಡುವ**) ದಿನದ ಮೊದಲನೆಯ ನಗದುವ್ಯಾಪಾರ, — **ರೋಖುವ್ಯಾಪಾರ** : ನಮ್ಮ ಸಮರಕೆ ಖಾದುಮೇ ಬೋಣಿ ಕೊಂಬೆವು ಭಟರ ತಲೆ ಕೇಣಿ (ಕೃಕಾಪಾ. ೬-೩೬); ಆ ಬಕಪಕ್ಷಿಗೆ ನಮ್ಮ ಬೋಣಿ ಆಗ್ಲಿ (ಬದುಕ್ಕ. ೪೨).

**ಬೋಣಿ ಮಾಡು** = ನಗದಾಗಿ ಮೊದಲನೆಯ ವ್ಯಾಪಾರ ಮಾಡು : ಬೋಣಿಮಾಡೀ ತಾಯಿ (ಪ್ರಕೃಪ. ೦೨೪) ; ಕೊಸರಾಡದೆ ಬೋಣಿ ಮಾಡಿ (ನಡಗಾ. II, ೪೩೨). **ಬೋಣಿಯಾಗು** = ನಗದಾಗಿ ಮೊದಲನೆಯ ವ್ಯಾಪಾರವಾಗು : ಬೋಣಿಯಾಗದೆ ಕಡ ಕೊಡುವುದು ಹ್ಯಾಗೆ (ವಾಗ್ದೇಪ. ೦೬೩); ಮಾಣಿ ಬೋಣಿಯಾಗಲಿಲ್ಲವೆಂದು ತಕರಾರು ಮಾಡಿದ್ದರಿಂದ ಹೋಟಲಲ್ಲಿ ಜಗಳ ಕಾಯಬೇಕಾಯಿತು (ಹೊಸಕ್ಕ. ೬೮).

[← ಮರಾ. ಬೋಣಿ, ಬೋಹಣಿ. ಬೋಹನೀ; ಹಿಂ. ಬೋಹನೀ. ತಮಿ. ಪೋಣಿ ; ತುಳು. ಬೋಣಿ, ಬೋನಿ; ತೆಲು. ಬೋಣಿ]

**ಬೋದ₁** (ನಾ). ಉಬ್ಬಿರುವುದು ; ಊದಿರುವುದು ; ಬಾತಿರುವುದು.

**ಬೋದಬೋಟೆಯಾಗು** = ಉಬ್ಬು ; ಉಬ್ಬರಿಸಿಕೊಳ್ಳು ; ಊದಿಕೊಳ್ಳು : ಹೊಟ್ಟೆಯುಬ್ಬರಿಸುವುದೇ ವಿಷ್ಕಂಭವೆನಿಸಿಕೊಳ್ಳುವುದು. ದಿನದಿನವಲ್ಲಿಯೂ ಬೋದಬೋಟೆಯಾಗಿ ಹೊಟ್ಟೆಹೋಗುತ್ತ ಇರುವುದೇ ವಿಷ್ಕಂಭವೆನಿಸಿಕೊಂಬುದು (ಸಳವ್ಯ. ೩೩೬).

[ದೇ.॥ ತಮಿ. ಪೋನ್ತು ; ತುಳು. ಬೋದೆ ; ಬೋಂದೆ = ಸ್ಥೂಲ ಕಾಯದ ವ್ಯಕ್ತಿ ; ತೆಲು. ಬೋದ, ಬೋದೆ]

**ಬೋದ₂** (ನಾ). ಒಂದು ಬಗೆಯ ಹಕ್ಕಿ : "ಬಕೋಟಃ —ಬೆಳ್ಳಕ್ಕಿ, ಬೋದನ ಹಕ್ಕಿ" (ಓಷಧಿ. ೦೦೫).

[ ದೇ.॥ ತಮಿ. ಪೋತಾ ; ತೆಲು. ಬೋದ = ಹಕ್ಕಿಯ ಮರಿ]

**ಬೋದ₃** (ನಾ). ೧. ತಿಳಿವಳಿಕೆ ಕೊಡುವುದು ; ಉಪದೇಶ ; ಬೋಧನೆ : ತಡೆಯದೆ ಮುಂಕಿರಿದ ಶಿರಂ ಜಡೆಗಟ್ಟಲ್ಪಾರದೆಂದು ಬೋಟಿಸಿ ಬೋದಂ ಕುಡೆ ಕೊಂಡಸವಂ ತಪಮಂ ಗೆಡೆಗೊಂಡಿರೆ

ದಂಡು ಬೂದಿ ಸೂರೆ ರುದ್ರಾಕ್ಷಂ (ಕಣ್ಣಾ.ಕು. ೦೨೦ ವ್ಯಾಖ್ಯಾ). ೨. (?) : ಬೋದಂ ಮೋದಗೆಗೊಂಡುದೆಂಬ ನಗೆಯುಂ ನೀಂ ಮಾಡದಿರ್ ಜೀವನೇ (ಜಸಕಂ. ೦೬೦-೦೯). [ < ಸಂ. ಬೋಧ ]

**ಬೋದಣೆ** 'ಬೊವಣೆ' ನೋ.

**ಬೋದಣಿಗೆ** (ನಾ). (?) : ಮೊದಲೊಳ್ ತಂಬೆಲರ್ಗಾನೆ ಬೋದಣಿಗೆಗಂಪಂ ಬೀಱಿದಂ ಸುಗ್ಗಿ ಬರ್ಪುದನೀ ನಂದನಕಾನನೆ ಮುಂದುದೆಗೆದಂ (ಜಗಹ. ೦೯-೬೩). [ ? ]

**ಬೋದನ** (ನಾ). ಒಂದು ಊರಿನ ಹೆಸರು ; P ಪಂಪನಿಗೆ ಆಶ್ರಯ ದಾತನಾಗಿದ್ದ ಅರಿಕೇಸರಿಯ ರಾಜಧಾನಿ. ಈಗಿನ ಆಂಧ್ರಪ್ರದೇಶ ಕರೀಂನಗರ ತಾಲ್ಲೂಕಿನ ಬೋಧನ: ಅಂತಾ ನೃಪತಿ ನಿಚ್ಚಲಯ್ಯೂ ಜಾನೆಯುನವಗಾಹಮಿಂಸುವಂ ಬೋದನದೊಳ್ (ಪಂಪಭಾ. ೦-೦೭) ; ಬೋದನ ೭೦೦ಜಜಿ ಬಳಿಯ ಕಂಪಣ ೨ಳಿಐ ಮೊದಲ ಬಾಡಂ (ಪಾಂಡೀಶ. ೦೯-೪ ; 1115). [?./ P ಮಹಾಭಾರತದಲ್ಲಿ ಬರುವ 'ಪೌದನ್ಯ' ಎಂಬ ನಗರದ ಹೆಸರಿನ ಸಾಮ್ಯವಿರುವುದು ಪರಿಶೀಲನಾರ್ಹವಾದುದು]

**ಬೋದಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮಂತು ಬೋದಯ್ಯ ಗಣ್ಣಾಗೋವ ಪುಟವರ ಶೂಲ (ಎಕ. VIII. ಸೊರಬ. ೪೦೩-೬ ; 986).

[ ಬೋದ? + ಅಯ್ಯ$_{1}$ ]

**ಬೋದಿಗೆ**, **ಬೋದು$_1$**, **ಬೋದುಗೆ** (ನಾ). ಕಂಬದ ಮೇಲೆ ತೊಲೆ ಯನ್ನು ನಿಲ್ಲಿಸಲು ಅನುಕೂಲವಾಗುವಂತೆ (ಮರದಿಂದ ಅಥವಾ ಕಲ್ಲಿನಿಂದ) ಸಿದ್ಧಪಡಿಸಿದ ಸಾಧನ : ಪವಳದ ಜಂತೆಯೊಳಂ ಪದ್ಮ ರಾಗದ ಬೋದಿಗೆಯೊಳಂ . . . ಒಪ್ಪುವ ವಿವಾಹಗೇಹಮಂ ಸಮೆಯಿಸಿ (ಕಂಕಾಅ. ೩-೬೪ ವ) ; ಕಿಸುಗಲ್ಲ ಬೋದಿಗೆ ನವಮರಕತರತ್ನತೋರಣಂ ಪ್ರಾಕಾರಂ (ಸುಕುಮಚ. ೦೦-೯೫) ; ಚಂದ್ರಕಾಂತದ ಬೋದಿಗೆಗಳಂ ಇಂದ್ರ ನೀಲದ ನಾಗವಟ್ಟಿಗೆಯುಂ. . .ಮಾಣಿಕದ ಪ್ರತಿಮೆಗಳಿಂದೊಪ್ಪುವ ಕೃತ್ರಿಮ ಚೈತ್ಯಾಲಯಂಗಳಂ ಕಣ್ಣಾಣೆವಿನಂ ನೋಡುತ್ತುಂ (ಧರ್ಮಾಮೃ. ೨-೦೯೩). **ಬೋದು$_1$**: ರತ್ನರಾಜಿಯ ಕೆಲಸದಿಂದ ರಾಜಿಪ ಕಂಬ ಬೋದು ತೊಲೆ ಪಲಗೆ ಸೂಸಕ ಲೋವೆಯಿಂದೊಪ್ಪೆ (ಶ್ರೀಕಣ. ೦೯-೩೨) ; ವಜ್ರದ ಬೋದು ರನ್ನದೊಲೆ ಕುಟ್ಟಿಮನೀಲದ ಕೋಟಿಪಚ್ಚೆಯ ಪಜ್ಜಳಿಪಿಂದುಕಾಂತ ಫಲಕಂ (ಶ್ರೀರಘು. ೦-೬೩). **ಬೋದುಗೆ** : ಇಂದ್ರನೀಲದ ಕಂಭ ವಜ್ರದ ಬೋದುಗೆ ಇಂದುಕಾಂತದ ಭಿತ್ತಿಯೊಳೆ . . . ಸುಂದರವಡೆಯ ಚಪ್ಪರವು (ಜಸಜಗಾಂ. ೦೭-೦೯) ; ಲಲಿತಪಚ್ಚೆಗಳ ತೊಲೆ ರನ್ನ ಬೋದುಗೆಗಳ ಪ್ರವಾಳಗಳಿಂದೆ ಮೇಲೆಸೆವ ಜಂತೆಗಳ್ . . . ಪೊಂಗದಂಗಳಂ ಪೇಳಲಚ್ಚರಿ ಯಾದುದರಮನೆ (ತತ್ವಕ್ಕು. ೩-೯೬). [ದೇ.॥ ತಮಿ. ಪೋತಿಕೈ ; ಮಲ. ಪೋತಿಕ ; ತುಳು. ಬೋದಿಗೆ ; ತೆಲು. ಬೋದಿಯ, ಬೋದೆ]

**ಬೋದು$_1$** 'ಬೋದಿಗೆ' ನೋ.

**ಬೋದು$_2$** 'ಪೋದೆ' ನೋ.

**ಬೋದು$_3$**, ಬೋದೆ (ನಾ). ಒಂದು ಬಗೆಯ ಅಪ್ರಯೋಜಕವಾದ ಹುಲ್ಲು : ಬೋದು ಬೆಳೆದ ಹೊಲ ಹಾದೀಲಿದ್ದರೇನು, ಬೇದೀಲಿದ್ದರೇನು? (ಗಾದೆ). **ಬೋದೆ** : 'ಬೋದೆಸರ' ಪರಾ. [ ? ]

**ಬೋದುಗೆ** 'ಬೋದಿಗೆ' ನೋ.

**ಬೋದೆ** 'ಬೋದು$_3$' ನೋ.

**ಬೋದೆಸರ** (ನಾ). ಒಂದು ಬಗೆಯ ಜೊಂಡು : ಅಂಟುಕಾಮಿನಿಗಿಡ, ಬೋದೆಸರ (ಕೃಷಿ. ೬೨-೦೯೬೦). [ ← ತೆಲು. ಬೋದಸರ, ಬೊದ್ದಸರ ]

**ಬೋಧ** (ನಾ). ೧. ಕಲಿಸುವಿಕೆ ; ಬೋಧಿಸುವಿಕೆ. ೨. ಎಚ್ಚರ : ಸ್ಮೃತಿ : ಮುದುಕನನ್ನು ಸ್ವಲ್ಪ ತಂಪು ಮಾಡಿರಿ. ಅಂದರೆ ಬೋಧ ಬರುತ್ತದೆ (ತಡಾಕ. ೦೫೩) ; ರಾತ್ರಿಯಾಗುವಾಗ ಮತ್ತೆ ಬೋಧ ತಪ್ಪಿತು (ರೀಕಠ. ೦೨೯). ೩. ಅರಿವು : ಜ್ಞಾನ ; ತಿಳಿವಳಿಕೆ : ಸರ್ವಾರ್ಥ ಸಿದ್ಧಿಯೊಳ್ ತೊಡರ್ದು ಬೋಧಂ ಭವ್ಯಸಂಸೇವ್ಯಮಾಯ್ತು (ಶ್ರೀಕೃಪು. ೦-೨೯); ಭರದಿಂದ ದೇಶಾವಧಿ ಬೋಧ ಪುಟ್ಟಿತು ಭರತೇಶ್ವರನ ಪುಣ್ಯ ಕೆಣೆಯ (ಗೊಡಮದೇ. ೦೩-೨೯). ೪. ವಿಚಾರ ; ಆಲೋಚನೆ. ೫. ಅರಳು ವಿಕೆ ; ವಿಕಾಸ. ೬. [ಕಾವ್ಯಮಿ] ಸಂಚಾರಿಭಾವಗಳಲ್ಲಿ ಒಂದು : ಮತಿ ಲಜ್ಜೆ . . . ಬೋಧ . . . ಅಪಸ್ಮಾರಗಳೆಂಬ ೩೩ಮವತ್ತುಮೂಱು ಸಂಚಾರೀಭಾವಗಳಂ ಪರಿವರ್ಧಿಸಿ (ಪಿಪೀಸ. ೩೨೭). ೭. [ಛಂದ] ಒಂದು ಗಣದ ಹೆಸರು : ಮೂರು ಗುರು (— — —)ಇರುವ ಗಣ; ಮಗಣ: ಗುರುವೆರಡಾಗಿರೆ ದರ್ಪನ ಮೂಱುಗಲ್ ಬೋಧ ನಾಲ್ಕುಮಾಗಲು ಚರಿತಂ (ಛಂದಶ್ಯಾ. ೩-೦೦.) [ಸಂ.]

**ಬೋಧಕ** (ನಾ). ಕಲಿಸುವವನು ; ತಿಳಿವಳಿಕೆಯನ್ನು ನೀಡುವವನು ; ಶಿಕ್ಷಕ : ಮೊದ್ದ ಸಂಗಕೆ ಸಲ್ಲ ಸದ್ದು ಧ್ಯಾನಕೆ ಸಲ್ಲ ಜದ್ದು ಬೋಧಕನಿಗೆ ಸಲ್ಲ (ಇಂಚಾಶ. ೦೭೦-೪೩). [ಸಂ.]

**ಬೋಧದೃಷ್ಟಿ** (ನಾ). ಜ್ಞಾನದೃಷ್ಟಿ : ಜಗಮೆಲ್ಲಂ ನಿಜ ಬೋಧದೃಷ್ಟಿ ಯೊಳೆ ಕಾಣಲ್ ಬಂದುದು (ಜಗಹ. ೦-೬೩). [ಸಂ.]

**ಬೋಧನೆ**(ನಾ). ೧. ಕಲಿಸುವುದು ; ಹೇಳಿ ಕೊಡುವುದು : ಆ ಹಿರಿಯರ ಬೋಧನೆ ಮಕ್ಕಳ ಮೇಲೆ ಒಳ್ಳೆಯ ಪರಿಣಾಮ ಬೀರಿತು (ರೂಢಿ). ೨. (ಆಲಂ) ದುಷ್ಕಾರ್ಯಕ್ಕೆ ಚಿತಾವಣೆ ಮಾಡುವಿಕೆ ; ಕೆಟ್ಟ ಕೆಲಸವನ್ನು ಮಾಡುವಂತೆ ಪ್ರೇರಿಸುವಿಕೆ : ಆ ದುಷ್ಟನ ಬೋಧನೆಯಿಂದ ಅರಿಯದ ಹುಡುಗರು ದುರ್ಮಾರ್ಗಕ್ಕೆ ಇಳಿದರು (ರೂಢಿ). [ಸಂ. ಬೋಧನ]

**ಬೋಧಾಳ** (ನಾ). (ಕರಾ) ಏನೂ ತಿಳಿಯದವನು ; ಮುಗ್ಧ : ಪ್ರಾಯ ದಲ್ಲಿ ಹಿರಿಯನು ; ಮಕ್ಕಳಂತೆ ಬೋಧಾಳನು (ಕೋಟದಂಶ. ೪೩); ಒಬ್ಬ ಮಗನಿದ್ದಾನೆ ಅವನಿಗೆ— ಬೋಧಾಳ ಶಂಕರ (ಕಂಬಹು. ೨೫).

[ ಬೋಧ + ಹಾಳು (< ಪಾೞ್) + – ಅ$_7$ ]

**ಬೋಧಾಳು** (ನಾ). ಬುದ್ಧಿವಂತ : ನಾಡೆ ಮತ್ಸ್ವಾಮಿ ನಿನ್ನೊಳತಿಪ್ರೇಮ ಮನಪ್ಪುಕೆಯ್ವನದಱಿಂದಾನುಯ್ವೆನಾ [ತಾಣಕೀ]ಗಳೆನುತ್ತುಂ ನುಡಿದಂ ಮನಂಬುಗುವಿನಂ ಬೋಧಾಳು ಮೇಧಾವಿಳಂ (ಕುಸುಮಾ. ೦೩-೬೭).

[ ಸಂ. ಬೋಧಾಲು]

**ಬೋಧಿ** (ನಾ). ೧. ಶ್ರೇಷ್ಠವಾದ ಅರಿವು ; ದಿವ್ಯಜ್ಞಾನ : ಉತ್ತಮ ದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾಭಮಮೋಘಂ ದೊರೆಕೊಳ್ವುದಕ್ಕೆ ಮಗೆ (ಅದಿಪು. ೦೦-೬೦) ; ತಪದೊಳ್ ತನುವಂ ನಿಱಿಸಲಱಿದೆನಿಸುವಱಿತಮೆ ಪೆಱತಲ್ಲದುಮಲ್ತೆ ತಾನೆ ಬೋಧಿಯುಮು [ಶಾಕಾಂ. ಮೆಯು]ಕ್ಕುಂ (ಅಜಪು. ೬-೬೦) ; ದೀಕ್ಷೆಗೆ ಸುತವಂ ಫಲಮೆನೆ ನೆಗಱ್ದುದದೆ ಬೋಧಿ ಮಲಂ (ಪುಶ್ಯಕ. ೦೩-೩೯). ೨. ಗೌತಮಬುದ್ಧನಿಗೆ ಉಂಟಾದ ಜ್ಞಾನೋದಯ : ಸಿದ್ಧಾರ್ಥನು ಬೋಧಿಯನ್ನು ಸಾಕ್ಷಾತ್ಕಾರ ಮಾಡಿಕೊಂಡು . . . ರಾಜಗೃಹಕ್ಕೆ ಬಂದನು (ಹಚ್ಚುಕು. ೬೪) ; ಬೋಧಿ ಯನ್ನು ಪಡೆದ ಬುದ್ಧನ ಕಣ್ಣಿಗೆ ಮನುಷ್ಯಜೀವಿತವೂ ಮನೋಹರವಾಗೇ ಕಂಡಿತು (ಶಾಂಪಕ. ೦೨೦) ; ಬೋಧಿಯಾದ ನಂತರ ಸಿದ್ಧಾರ್ಥನು ವೃಕ್ಷದಡಿ ಯಲ್ಲಿ ಏಳುದಿವಸ ಚಲಿಸದೆ ಕುಳಿತಿದ್ದನು (ಕೃಪಾಜ. 1. ೨೩೩). ೩. ಒಂದು ಬಗೆಯ ಮರ ; ಅರಳಿ ; ಅಶ್ವತ್ಥ ; P ಈಗಿನ ಪಾಟ್ನಾನಗರದ ಬಳಿಯಿರುವ 'ಬುದ್ಧಗಯಾ' ಎಂಬಲ್ಲಿರುವ ವೃಕ್ಷ. ಗೌತಮಬುದ್ಧನು ಇದರ ಕೆಳಗೆ ಜ್ಞಾನೋದಯವನ್ನು ಪಡೆದನೆಂಬ ನಂಬಿಕೆಯಿದೆ : ''ಶ್ರೀವೃಕ್ಷಃ, ಪಿಪ್ಪಲಃ, ಅಶ್ವತ್ಥಃ, ಬೋಧಿಃ — ಈ ೪ ಅರಳಿ'' (ಹಲಾಯು. ೩೩-೯೩) ; ಸಿದ್ಧಾರ್ಥನು ಈ ಮರದಡಿಯಲ್ಲಿ ತಪಸ್ಸು ಮಾಡಿ ಯಲ್ಲವೇ ಬುದ್ಧನಾದದ್ದು ? ಮರಕ್ಕೂ ಬೋಧಿಯೆಂಬ ಹೆಸರು ಬಂದದ್ದು ? (ಶಾಸಗ. ೪೨). 'ಬೋಧಿವೃಕ್ಷ' ಪರಾ. [ಸಂ.]

**ಬೋಧಿದುರ್ಲಭಾನುಪ್ರೇಕ್ಷೆ** (ನಾ). [ಜೈನ] ಹನ್ನೆರಡು ಬಗೆಯ ಅನುಪ್ರೇಕ್ಷೆಗಳಲ್ಲಿ ಒಂದು : ದುರ್ಲಭಬೋಧಿಯನಱಿದು ದೃಢಧರ್ಮ ರಾಗಲವೇಟ್ಕುಮೆಂಬ ಚಿಂತೆ ಬೋಧಿದುರ್ಲಭಾನುಪ್ರೇಕ್ಷೆ (ಜ್ರಿತಿ. ೧೯೭-೧೮). 'ದ್ವಾದಶಾನುಪ್ರೇಕ್ಷೆ' ಪರಾ.

[ಸಂ. ಬೋಧಿದುರ್ಲಭಾನುಪ್ರೇಕ್ಷಾ]

**ಬೋಧಿವೃಕ್ಷ** (ನಾ). = ಬೋಧಿ ೩ : ರಾಜನು. . .ಬೋಧಿವೃಕ್ಷದ ಬಳಿಗೆ ಆಗಾಗ ಹೋಗಿ ಅಲ್ಲಿ ತನ್ನ ತಪ್ಪಿಗಾಗಿ ಪರಿತಾಪ ಪಡುತ್ತಿದ್ದ (ಕೃ ಬಾ೩. I, ೦೬೬). [ಸಂ.]

**ಬೋಧಿಸತ್ತ್ವ** (ನಾ). ೧. ಬುದ್ಧ. ೨. [ಬೌದ್ಧ] ''ಅರ್ಹತನು ನಡೆಸ ಬೇಕಾದ ಶೀಲಗಳನ್ನು ಕಾಪಾಡಿಕೊಂಡು, ಮುಂದಿನ ಜನ್ಮಗಳಲ್ಲಿ ಬುದ್ಧನಾಗುವ ಯೋಗ್ಯತೆಯನ್ನು ಸಂಪಾದಿಸಿ, ಬುದ್ಧನಾಗುವ ಸತ್ತ್ವವುಳ್ಳವನು'' (ಬುದ್ಧ ಕ. ಕೋಶ. ೨೦೯) : ಆ ಸಮಯದಲ್ಲಿ ಬೋಧಿ ಸತ್ತ್ವನು ಅವನಿಗೆ ಧರ್ಮ ಅರ್ಥಗಳನ್ನು ಬೋಧಿಸುತ್ತಿದ್ದನು (ಬುದ್ಧ ಕ. ೩೩); ಅರ್ಹತರಾಗುವುದು ಎಲ್ಲರಿಗೂ ಸುಲಭವಲ್ಲ. ಆದರೆ ಬೋಧಿಸತ್ತ್ವ ನಾಗುವುದು ಎಲ್ಲರಿಗೂ ಸುಲಭ. ಬೋಧಿಸತ್ತ್ವನಾಗಿ ಲೋಕದ ದುಃಖ ವನ್ನು ತಾನು ಪರಿಹರಿಸುವುದಕ್ಕೆ ಎಲ್ಲರೂ ಯತ್ನಿಸಬಹುದು (ಶಾರದ. ೨೦೫).

[ಸಂ.]

**ಬೋಧಿಸತ್ವ** (ನಾ). = ಬೋಧಿಸತ್ತ್ವ ೨ : ಚೈತ್ಯಗಳಲ್ಲಿ ಸೊಗಸಾದ ಬುದ್ಧನ ಮತ್ತು ಬೋಧಿಸತ್ವನ ಪ್ರತಿಮೆಗಳಿವೆ (ಶಾರದ. ೯೯೬) : ರಥದ ನಾಲ್ಕು ಕಡೆಯೂ ನಾಲ್ಕು ಗೂಡುಗಳನ್ನು ಮಾಡಿ ಅವುಗಳಲ್ಲಿ ಬೋಧಿಸತ್ವ ನಿಂದ ಸೇವೆಯನ್ನು ಕೈಗೊಳ್ಳುತ್ತಾ ಕುಳಿತಿರುವಂತಹ ಬುದ್ಧನ ವಿಗ್ರಹ ಗಳನ್ನು ಇಡುತ್ತಾರೆ (ಕೃ ಬಾ೩. I, ೦೬೨).

[ <ಸಂ. ಬೋಧಿಸತ್ತ್ವ. / ಪಾಲಿ. ಪ್ರಾ. ಬೋಧಿಸತ್ತ]

**ಬೋಧಿಸು** (ಕ್ರಿ). ಕಲಿಸು ; ಹೇಳಿಕೊಡು : ಸರ್ವಗುಪ್ತಮುನಿಗಳಂ ಕಂಡು . . . ಸಂಸಾರಶರೀರಭೋಗನಿರ್ವೇಗಮಂ ಬೋಧಿಸೆ (ಶಾಂತಿಪು. ೯-೬೩ ವ) ; ಸನ್ಮಾರ್ಗದಿಂ ಸಲ್ವ ಸಾಧುಗಳೆಮ್ಮಂ ದಯೆಯಿಂದೆ ಬೋಧಿಸು ತಮಿರ್ಕೆಂಮುಂ ಜನೇಂದ್ರೋಕ್ತಿಯುಂ (ಸುಕುಮಾ. ೦-೫) ; ಹಡೆದುಂಬ ಸೂಳೆಯಂತೆ ಧನವುಳ್ಳವರನಱಿಯಱಿಸಿ ಬೋಧಿಸಲು ಮುನ್ನ ನಾನಱಿಯೆನಯ್ಯಾ (ಬಸವ. ೯೦೨). [ಬೋಧೆ + —ಇಸು₃]

**ಬೋಧೆ** (ನಾ). ೧. ತಿಳಿಯುವಿಕೆ ; ಅರಿಯುವಿಕೆ. ೨. ಜ್ಞಾನ ; ಅರಿವು ; ತಿಳಿವು : ನಿಷ್ಠುರಗಾದಿಯೊಳಗಿಹರಿಂಗೆ ಪೇಳದಿರಾದಿಗಗನಾನಂದ ಬೋಧೆಯಿಂದ (ಗಗತಾ. ೩-೨). ೩. ಬುದ್ಧಿ ; ತಿಳಿವಳಿಕೆ. ೪. ಆಲೋಚನೆ. ೫. ಅರಳುವಿಕೆ ; ವಿಕಸನ. ೬. ಎಚ್ಚರ ; ಸ್ಮೃತಿ ; ಜಾಗೃತಿ : ಸಂಕಣ್ಣನಿಗೆ . . . ಒಂದೆರಡು ದಿನಗಳಲ್ಲಿ ಜ್ವರ ಬರತೊಡಗಿತು. ಬೋಧೆಯೇ ಇಲ್ಲವೆನ್ನುವಷ್ಟು ಜ್ವರ (ಯುಮುದೂ. ೬೦). ೭. ಚೈತನ್ಯ. ೮. ಕಲಿಸುವಿಕೆ ; ಶಿಕ್ಷಣ ; ಬೋಧನೆ : 'ಬೋಧಿಸು' ಪರಾ.

[ಸಂ. ಬೋಧ]

**ಬೋನ₁**, ಬೋಹಣ (ನಾ). ೧. ಅನ್ನ ; ಆಹಾರ : ಪೊನ್ನ ಮಡಕೆ ಯೊಳ್ ಬೋನಮನೊಡ್ಡಿ (ವಡ್ಡಾರಾ. ೬೯-೧೩) : ಎತ್ತಿದ ಬೋನದೊಳ್ ಕಲ್ಯಾಣಾಮೃತಾಹಾರಮನಾರೋಗಿಸಿ (ಪಂಪಭಾ. ೩-೭೯ ವ) : ನಿನ್ನ ಪಾಱಿಡಲ ನೆತ್ತರ್ ಪಿರಿತಿನಿವಡೆಗೆ ಪಗಲ ಬೋನದೊಂದು ಕಟಕ್ಕಂ (ರಾಪವಾಶ್ಯ. ೮೬-೨೦). ೨. ಅಡುಗೆ ಮಾಡುವಿಕೆ : 'ಬೋನಗಾಱ' ಪರಾ. ೩. ನೈವೇದ್ಯ ; ಎಡೆ : ಉಂಬ ಜಂಗಮ ಬಂದಡೆ ನಡೆಯೆಂಬರು ಉಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯ (ಬಸವ. ೦೯೪) ; ವೇಲಾಪುರಿಯ ಶ್ರೀಚೆಂನೆಯನ ಬೋನದ ಅವಸರದ ಹರಿವಾಣದ ನಯಿವೇದ್ಯಕೆ (ಎ ಕ ೫೦. ೦೯೩೪. ೯-೬; 1432). ೪. ಪಿಂಡ್ಡ ; ಮುದ್ದೆ : ಅನ್ನ ಬೇಂದದ್ದು ಹೆಚ್ಚಾಗಿ ಬೋನವಾಗಿದೆ (ಮರಕು. ೨೨). ೫. ರಾಶಿ ; ಸಮೂಹ : ಸಣ್ಣಸೇವಗೆಯ ಮೆದೆ ಎರೆಯುಪ್ಪದಡಕಿಲಿಡ್ಡಲಿಗೆಗಳ ಬೋನ ದೋಸೆಯು ಲಗ್ಗೆ (ಜಟ್ಟಿಗೆ. ೬-೨೫). ೬. (ಚೆನ್ನಾಗಿ ನಾದ ಕೊಡುವುದಕ್ಕಾಗಿ) ತಬಲ ಅಥವಾ ಮದ್ದಳೆಯ ಚರ್ಮದ ಮೇಲೆ ದುಂಡಾಗಿ ಬಳಿಯುವ ಸರಿ : ಎರಡು ಕಡೆಗೂ ಚರ್ಮದ ಪೊರೆಗಳನ್ನು . . . ಬಿಗಿದು, ಎಡಕ್ಕೆ ಬೋನವನ್ನೂ, ಬಲಕ್ಕೆ ಕರಣೆಯನ್ನೂ ಹಾಕಿ ನುಡಿಸುತ್ತಾರೆ (ಸಂಗೀತ೩೦. ೦೨೦) ; ಯಕ್ಷಗಾನದ ಮದ್ದಲೆಯು ಗಾತ್ರದಲ್ಲಿ ಇನ್ನೂ ಚಿಕ್ಕದು. ಇದರ ತೊಗಲಿಗೆ ನಿತ್ಯವೂ ನಿತ್ಯ 'ಬೋನ' ವನ್ನು ಹಚ್ಚಬೇಕು (ಯಕ್ಷಬ. ೦೦೦). **ಬೋಹಣ :** ೬. ಚಂದ್ರಮಂಡಳದ ಕಳಂಕಮನುದ್ಧುವಂತ ಲೋಹ ಚಕ್ರದಿಂ ಪಱಿಯ ಬೋ[ಪಾಠಾಂ. ಬಾ]ಹಣಮನುದ್ದಿ ಭಾರತಿಯ ಮುಖಕಮಲದೊಳ್ ಕತ್ತುರಿಯ ಬೊಟ್ಟನಿಡುವಂತೆ ಪೊಸ ಬೋಹಣಮಂ ಪತ್ತಿಸಿ (ಧರ್ಮಾಮೃ. ೨-೨೩ ವ) ; ಮಣೆದೆತ್ತಿ ನೋಡಿ ಬಾರಿಯ ಕಣ್ಣನೆಡಕೆ ಬೋಹಣದ ಹದನಱಿದಿಕ್ಕಿ (ಶೀಲಮ. ೦೦-೩೫). [<ಸಂ. ಭೋಜನ./ತಮಿ. ಪೋಣಮ್, ಪೋನಕಮ್; ತುಳು. ಬವಸ, ಬೋನ : ತೆಲು. ಬೋನ./ ಮರಾ. ಬೋನ, ಬೋವಣ, ಬೋಹಣ]

**ಬೋನ₂** (ನಾ). ಅಡುಗೆ ಮಾಡಲು ಬಳಸುವ ಒಂದು ಬಗೆಯ ಪಾತ್ರೆ : (+). 'ಬೋಸಿ' ಪರಾ. [ ? ]

**ಬೋನಂಗಾರೆ**, ಬೊನೆಗಾರೆ, ಬೋನಗಾರೆ (ನಾ). ಒಂದು ಬಗೆಯ ಕಾರೆಗಿಡ : ಲವಣಂ ಪಿಪ್ಪಲಿ ಬಜೆ ಸಾಸಿವೆ ಬವ(ಬೋ)ನಂಗಾರೆ ಶುಂಠಿ . . . ಎನಿಪ್ಪಿವಱಿಂದಂ ನಸ್ಯವನಶ್ವಾವಳಿಗೆ ಮಾಡಿ (ಲೋಕೋಪ. ೯-೨೨೮). **ಬೊನೆಗಾರೆ :** "ಮಗ್ಗೆ, ಬೊನೆಗಾರೆ, ಬೂದುಕಾರೆ" (ಸಸ್ಯ ವಿ. ೬೪) ; ಬೊನೆಗಾರೆ, ಬುಡುಕಾರೆ, ಮಗ್ಗೆ (ವೈಶಿಗ. ೩೯-೬೬೪). **ಬೋನಗಾರೆ :** ಉಪ್ಪು, ಹಿಪ್ಪಲಿ, ಬಜೆ, ಸಾಸಿವೆ, ಬೋನಗಾರೆಯ ಕಾಯ್, ಶುಂಠಿ. . . ಇವಂ ಚೂರ್ಣಮಂ ಮಾಡಿ . . . ಕಲಸಿ ನಸ್ಯಂ ಮಾಡುವುದು (ಲೋಕೋಪ. ೯-೨೨೮ ಟೀಕು) ; ಬೋನಗಾರೆಬೇರಂ ತುಪ್ಪದಿಂದ ಅರೆದು ನುಂಗಲು ಮುಟ್ಟುಕಟ್ಟು ಗುಣವಾಗುವುದು (ಶಿವ್ಯವಿ. ೦೦೬). [ಬೋನ$_0$+ಕಾರೆ$_1$]

**ಬೋನಗಾರ** 'ಬೋನಗಾಱ' ನೋ.

**ಬೋನಗಾರೆ** 'ಬೋನಂಗಾರೆ' ನೋ.

**ಬೋನಗಾಱ**, ಬೋನಗಾರ (ನಾ). ಅಡುಗೆ ಮಾಡುವವನು; ಬಾಣಸಿಗ : 'ಬೋನಗಾರ್ತಿ' ಪರಾ. **ಬೋನಗಾರ :** ದೇಸಾಯರ ಅಡಿಗೆಗಾಗಿ ಒಬ್ಬ ಬೋನಗಾರನೂ ಬಂದಿದ್ದಾನೆ (ಜನಪ. ೦೯೨).

[ಬೋನ₁ + —ಕಾಱ]

**ಬೋನಗಾರ್ತಿ** (ನಾ). ಅಡುಗೆ ಮಾಡುವವಳು; ಬಾಣಸಗಿತ್ತಿ : ನಾನಾಭಕ್ಷ್ಯ ಭೋಜ್ಯಂಗಳಧಿಕವಾಗಿ ಬೋನಗಾರ್ತಿಯರ ಕೈಯಿಂದೆ ಭೂನಾಥಗುಣಬಡಿಸಿ (ಪೋಹಕ. ೦೦-೯೯) ; ಮಾರುವದು ನಿನ್ನ ಬೋನಗಾರ್ತಿಯರಿಗೆ ಮಾರುವದು ನಿನ್ನ ನೀರ ಪೊತ್ತವರಿಗೆ (ಪೋಕ್ಷರ. ೬೦-೬).

[ಬೋನಗಾಱ + —ತಿ₁ (<—ಇತ್ತಿ)]

**ಬೋನಗಿತ್ತಿ**, ಬಾನಗಿತ್ತಿ (ನಾ). = ಬೋನಗಾರ್ತಿ : ಭರದ ಜವ್ವನದತಿ ವಿಲಾಸದ ಬೋನಗಿತ್ತಿಯರು ಮರಕಟಾಕ್ಷದ್ಯುತಿಯ ಪಸರಿಸುತುತುಮುದದಿ ಸದ್ಯೋಘೃತವನಭಿಗರಿಸುತಿರ್ದರು (ಸವತ್ಸು. ೦೪-೬) ; ಕೆತ್ತಿದ ರತ್ನಾಭರಣ ಭೂಷಿತ ಬೋನಗಿತ್ತಿಯರ್ಸರ್ವ್ವರಿಗಳಿಗೆ ಅತ್ಯಧಿಕಾರದಿ ನೀನಿರ್ಪುದು (ಪೋಹಕ. ೦೦-೯೨); ಅಷ್ಟರಲ್ಲಿ ಬೋನಗಿತ್ತಿ ಮಣೆಹಾಕಿ ಬಂಗಾರದ ಹರಿವಾಣವನ್ನು ಇಟ್ಟು ಸುತ್ತಲು ನಾಲ್ಕು ಬಂಗಾರದ ಬಟ್ಟಲುಗಳನ್ನು ಇಟ್ಟಳು (ಯುರುರಾ. ೦೯೪). **ಬಾನಗಿತ್ತಿ :** ಲಗ್ನ ಆದಾಗಿನಿಂದ ಬಾನಗಿತ್ತೀ ಹಾಂಗ ದುಡದು ದುಡದು ಸತ್ತೆ (ಬಾಂತಾಡು. ೫); ಭಲರೇ ಬಾನಗಿತ್ತಿ ಯೆಂದರೆ ಪೈಯೆಲ್ಲಾ ಮುಸಿಮಾಡಿಕೊಂಡಳು (ಗಾದೆ). [ಬೋನ₁ + - ಗಿತ್ತಿ]

**ಬೋನಗುಡಿಕೆ** (ನಾ). ಆಹಾರವನ್ನು ತುಂಬಿದ ಪಾತ್ರೆ : ಬೋನ ಗುಡಿಕೆಗಳಾ ಮುದ್ರೆಯಿಕ್ಕಿದ ಚೀರಗಟ್ಟುಗಳ . . . ಹೊಱೆಯನು ಹೆಗಲೊಳಗಿಕ್ಕಿ ನಡೆವರೊಪ್ಪಿದರು (ಶ್ರೀಪಾಂ. ೦೩-೮೮) ; ಮದನನೃಪಗೆಂದು ಸೇರಿಸಿ ಬಯ್ತ ಬೋನಗುಡಿಕೆಯ ತೆಱದಿ ಸಾಲ್ವಿಡಿದ ಪನಸತತಿ ಮೆಱೆದವು (ತೀರಥು. ೭-೧೦) ; ಮಾನಿನಿಯರಿಗಾತನನುಜನ ಸತಿಯರ್ಗೆ ಬೋನಗುಡಿಕೆಗಳೆಯ್ದಿದುವು (ಶರತ. ೪೦-೨೩). [ಬೋನ$_1$+ಕುಡಿಕೆ$_1$]

**ಬೋನಗೋಂಟಿಗೆ** (ನಾ). ಅಡುಗೆಯ ಕೋಣೆ : ನೀಗುತ್ತಮಾಗಿಂದಣದ ಭಾರದೋಲಟ್ಟಿ ಸಾಗಿಸಿದ ಬೋನಗೋಂಟಿಗೆಗಾಗ ರಣದೇವಿಗಾಗುತಿಹ ಭಕ್ಷರಸರುಧಿರಸ್ಥಿಖಂಡಕಂ ತಲೆಗಳೊಲೆಗುಂಡುಗಳನು (ಜನಮು. ೦೨-೨೦). [ಬೋನ$_1$+<ಗೊಂಟು]

**ಬೋನಮಿಡು** (ಕ್ರಿ). ಊಟವನ್ನು ಬಡಿಸು : ಪುಟ್ಟಂ ಸಟ್ಟುಗಮಂ ಕೊಂಡಟ್ಟಾಱಿಸಿ ಬೋನಮಿಟ್ಟು ಬಂದೆಯೊ (ಗದಾಯು. ೭-೩೬). [ಬೋನ$_1$+ಇಡು$_1$]

**ಬೋನವಟ್ಟಿಗೆ** (ನಾ). ಊಟಕ್ಕೆ ಕುಳಿತುಕೊಳ್ಳುವ ಮಣೆ,-ಪೀಠ (?): ಒಡನೆ ನಾಕೆರಡೆತ್ತು ಕುದುರೆಯ ಮಡಕೆ ಚರುವಿಗೆ ಬೋನವಟ್ಟಿಗೆ ನಿಡಿಯ ಹರಿವಾಣಗಳ (ಕೊರಾ.ತ. ೨೦೬). [ಬೋನ$_1$+ಪಟ್ಟಿಗೆ]

**ಬೋನವೆತ್ತು** (ಕ್ರಿ). ಆಹಾರವನ್ನು ಸಿದ್ಧಪಡಿಸು ; ಊಟವನ್ನು ಸಿದ್ಧಗೊಳಿಸು : ಮಡದಿಗೆ ಬೋನವೆತ್ತುವೆಡೆಯಾಡುವ ಬಡ್ಡಿಪ . . . ವೀಳೆಯಮಂ ತೆಗೆದೀವ ದಂದುಗಂ ತೊಡರೆ ಮನಂಗೊಳಲ್ ನೆರೆದರಿಂದ್ರ ಲತಾಂಗಿಯರನ್ನಪಾಸದೊಳ್ (ಕೃಷ್ಣಕ. ೯-೮೬). [ಬೋನ$_1$+ಎತ್ತು$_1$]

**ಬೋನವೇಳಿಗೆ** (ನಾ). ಅಡುಗೆಮಾಡುವ ಪದಾರ್ಥಗಳು ತುಂಬಿರುವ ಬುಟ್ಟಿ : ಅನ್ನಗಂ ಭೀಮಸೇನನುಂ ಬೋನವೇಳಿಗೆಯುಂ ಸಟ್ಟುಗಮುಂ ಮನೊರ್ವ ಪರಿಚಾರಕನಿಂ ಪಿಡಿಯಿಸಿಕೊಂಡು ಬಂದು (ಪಂಪಭಾ. ೮-೫೩ ವ). [ಬೋನ$_1$+ಪೇಳಿಗೆ (<ಪೆಟ್ಟಿಗೆ)]

**ಬೋನಸ್ಸು** (ನಾ). ಸಾಮಾನ್ಯವಾಗಿ ಕೈಗಾರಿಕೋದ್ಯಮಗಳಲ್ಲಿ ಲಾಭದ ಗಳಿಕೆ ಹೆಚ್ಚಾದಾಗ ಕೆಲಸಗಾರರಿಗೂ ಶ್ರಮಜೀವಿಗಳಿಗೂ ವೇತನದ ಜೊತೆಗೆ ಉಚಿತವಾಗಿ ಕೊಡುವ ಲಾಭದ ಒಂದು ಭಾಗ,-ಅಂಶ : ಆತನು ಸತ್ತುಹೋಗಿದ್ದಲ್ಲಿ ಅಂಥಾ ಬೋನಸ್ಸಿಗೆ ಬಾಧ್ಯರೆಂದು ಆತನು ನೇಮಿಸಿದವರಿಗೆ . . . ಸಂದ ಯಾವುದಾದರೂ ಬೋನಸ್ ಮೊಬಲಗು (ಗ್ರಾಕಾಶ. ೩೬) ; ಮೂರು ತಿಂಗಳ ಬೋನಸ್ಸು ಸಿಗಲೇಬೇಕು (ಕೃಡಾಶ. ೦೪). [← ಇಂ. Bonus]

**ಬೋನಾಶಿ** 'ಬವನಾಶಿ' ನೋ.

**ಬೋನಾಸಿ** 'ಬವನಾಶಿ' ನೋ.

**ಬೋನಿಕ್ಕು** (ಕ್ರಿ). ಪ್ರಾಣಿಗಳನ್ನು ಹಿಡಿಯುವ ಸಾಧನವನ್ನು ಒಡ್ಡು : ಮಂಗ ಹೌದಲ್ಲ, ಒಡೆಯರೆ. ಮಂತ್ರಕ್ಕೆ ಬರದೇ ಇದ್ದರೆ ಬೋನಿಕ್ಕೋದು (ಜಕರಾ. ೩೬೮). [ಬೋನು+ಇಕ್ಕು]

**ಬೋನಿಗ** (ನಾ). ಪ್ರಾಣಿಗಳನ್ನು ಹಿಡಿಯುವ ಸಾಧನವನ್ನು ಒಡ್ಡುವವನು : ನೆಲೆಯುನಂಬಿಗ ಬಲ್ಲ ಬಲೆಯ ಬೋನಿಗ ಬಲ್ಲ (ಸರ್ವಜ್ಞ. ೦೯೦೨). [ಬೋನು +-ಇಗ]

**ಬೋನು** (ನಾ). ೧. ಪ್ರಾಣಿಗಳನ್ನು ಹಿಡಿದಿಡುವ ಸಾಧನ; ಪಂಜರ; ಗೂಡು : ಕಸ್ತೂರಿಮೃಗಂಗಳಂ ವಿಸ್ತಾರವಾಗಿ ಪಿಡಿದು ಬೋನುಗಳಂ ಕೂಡುತ (ಶಾಗಂಧಿ. ೩೩-೦೩); ಅನೇಕ ನಮೂನೆಯ ಇಲಿ ಹಿಡಿಯುವ ಬೋನುಗಳಿವೆ (ಅಡುಶಾ. ೪೮). ೨. (ಆಲಂ) ಇತರರನ್ನು ಪೇಚಿಗೆ ಸಿಕ್ಕಿಸುವ ಉಪಾಯ : ತಾನು ಒಡ್ಡಿದ ಬೋನಿಗೆ ಸುನಂದ ಬಿದ್ದಿದ್ದಾಳೆ (ದೂಪಟ್ಟಿ. ೦೦೭).
[ದೇ.॥ ತಮಿ. ಪೋನ್; ತುಳು. ಬೋಣ, ಬೋನು; ತೆಲು. ಬೋನು]

**ಬೋಬಾಟ** 'ಬೋಭಾಟೆ' ನೋ.

**ಬೋಭಾಟೆ**, ಬೋಬಾಟ (ನಾ). ತಕರಾರು ; ಬೊಬ್ಬಾಟ : ಇನ್ನು ಮುಂದೆ ಇಂಥಾ ಪ್ರಕಾರದ ಬೋಭಾಟೆಗಳು ಬರಲಿಕ್ಕಿಲ್ಲವೆಂದು ನಾವು ಬಹಳ ಹವಣಿಸುತ್ತೇವೆ (ಮುಂಬಪ್ರಾ. ೯೩). **ಬೋಬಾಟ** : ನಮ ಮನಿಗಿ ಬಂದ್ರ ಬೋಬಾಟ ಆಗುದು ತುರ್ತ (ಕನ್ನಜಾ. ೯೨). 'ಬೊಬ್ಬಾಟ'ಹೋ. [←ಮರಾ. ಬೋಭಾಟ. ಬೋಭಾಟಾ]

**ಬೋಯ**, ಬೋಯಿ, ಬೋವ. ಬೋವಿ$_1$, ಬೋವು$_1$ (ನಾ). ೧. (ಇತರರಿಗಾಗಿ ಅಡುಗೆ ಮಾಡುವುದು, ಸಾರಥ್ಯಮಾಡುವುದು ಇತ್ಯಾದಿ) ಸೇವೆ ಮಾಡುವವನು ; ಸೇವಕ ; ಪರಿಚಾರಕ : ಅಲ್ಲಿ ಬಸದಿಯ ಕಸಂಗೆ(ಗ)ಳೆವ ಬೋಯ[ಪ]ದ್ದಂಗೆ ಪಾಗವೊಂದು (ಎಇ. IX, ೨೬೩-೦೦೨; 1117). 'ಬಂಡಿ$_1$' ಪರಾ. ೨. ಬೆಸ್ತ ; ಮೀನುಗಾರ : ಬೆಸ್ತ, ಭಾದೆಲ, ಬೋಯ (ತುಳುನಾ. ೦೬೩); ಬಲೆಯನ್ನು ಬೀಸಿ ಮೀನು ಹಿಡಿದರೆ "ಲೊ ಬೆಸ್ತ, ಲೊ ಬೋಯಿ" ಎಂದು ಅವನನ್ನು ಅವಮಾನ ಪಡಿಸುತ್ತಿದ್ದರು (ಹುಟ್ಟಹ. ೨೦). ೩. ಕೆಲವು ವ್ಯಕ್ತಿಗಳ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ; P ಇದು ಸಂಸ್ಕೃತದ 'ಭೋಜಕ' ದಿಂದ ಬಂದಿದ್ದು, 'ಬ್ರಾಹ್ಮಣ' ಎಂಬ ಅರ್ಥವಿದೆಯೆಂದು ಕೆಲವು ವಿದ್ವಾಂಸರ ಅಭಿಪ್ರಾಯವಿದೆ. ತೆಲುಗಿನಲ್ಲಿ ಈ ಶಬ್ದಕ್ಕೆ 'ಬ್ರಾಹ್ಮಣ' ಎಂಬ ಅರ್ಥವಿದ್ದು, ಶಾಸನಗಳಲ್ಲಿ ಪ್ರಯೋಗವಾಗಿದೆ ಎಂಬ ಸೂಚನೆಯೂ ಇದೆ : ಸಿಂಗಬೋಯಂ ಮಾಡಿದ ಅಗ್ರುಂ ಒನ್ದು (ಕಇ. III-i, ೧-೭; ಸು. 1200). 'ಬೊಪ್ಪಬೋಯ', 'ಮಂದುಬೋಯ' ಪರಾ. ೪. ಕಲ್ಲುಕುಟುಕರ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ : (೬). **ಬೋಯಿ** : ೫. ಪಲ್ಲಕ್ಕಿಯನ್ನು ಹೊರುವವನು : ಭರತಚಕ್ರಿಯ ಪೊತ್ತ ಬೋಯಿಗಳಿಗೆ ಸ್ವರ್ಗ (ಶರತ. ೭೭-೦೩೩); ನಿಮಗೆ ಪಾಲ್ಕಿ, ಬೋಯಿಗಳನ್ನು ಕರೆಯಿಸಿ ಕೊಟ್ಟು ಕಳುಹುವೆನು (ದೇಪೀಠ. ೧೩೭). **ಬೋವ** : ೧. ಲಂಚಮಿತ್ತುಂ ಪಿರಿದುಂಬರು ಬೆಸದ ಬೋವರಟ್ಟಡುಗೆಗಳಂ (ಸಮುಶ. ಅಮುಬಂ. I, ೦೪-೨೪); ದೇವರಿಗೆ ಬಿಟ್ಟ[ಸೀಮೆ]ಸರ್ವ್ವಮಾನ್ಯವಾಗಿ ಬೋವಂಗೆ ಬಿಟ್ಟ ಮತ್ತ ೨ (ಶಾಇ. XX, ೬೭-೦೮; 1107) ೨. ಬೋವರ್ಕಳಿಂದಿವರ ಮದವ ಮುಱಿಸುವೆವೆಂದು ಆಪೂರ ನೆರೆಹೊರೆಯ ಒಬ್ಬಿಲರನೊಡಗೂಡಿ. . . ಕಳುಹಿದ ರಥಮರು (ಸಿದ್ಧರಾ. ೩-೦೨). 'ಬಂಡಿ$_1$' ಪರಾ. **ಬೋವಿ$_1$** : ೫. ಪಲ್ಲಕ್ಕಿ ಹೊರುವ ಉದ್ಯೋಗದಿಂದ ಬೋವಿ ಎಂಬುದಾಗಿಯೂ ಕರೆಯಲ್ಪಡುತ್ತಾರೆ (ತುಳುನಾ. ೨೨೪); ಈ ಬಡ ಬೋವಿಗಳು ಬಿಟ್ಟಿಯ ಹಿಡಿದು ದಮ್ಮು ಹತ್ತುವಂತೆ ಓಡಿಸುತ್ತಿರಲು (ಶಾಮ್ಯಕ. ೦೯೩). ೬. ಹರಿಗೋಲನ್ನು ನಡೆಸುವವನು; ಅಂಬಿಗ : ಹರುಗೋಲು ಹಾಯುವ ಬೋವಿಗಳಿಗೆ (ಎಕ. VIII, ತೀರ್ಥಹ. ೦೩೭-೨೦೦; 1702). **ಬೋವು$_1$** : ೧. ತಿಱುವಂಗಡಿ ೧ ಮತ್ತಮಂಗಡಿಗಳೊಳ್ಪಣ ೧ . . . ಜಗತಿಯ ಬೋವುಗಳೊಳ್ಪಣ ೧ (ತಇ. V. ೩೪೩-೩೨; 1093).
[ದೇ.॥ ತಮಿ. ಪೋಯಿ, ಪೋಕಿ; ಮಲ. ಬೋಯರ್ ; ತುಳು. ಬೋಯಿ, ಬೋವಿ; ತೆಲು. ಬೋಯಿ./ಮರಾ. ಭೋಈ]

**ಬೋಯಿ** 'ಬೋಯ' ನೋ.

**ಬೋಯಿಕೆ** (ನಾ). (ಸಾರಥ್ಯ ಮಾಡುವುದು ಮುಂತಾದ) ಸೇವೆ ಮಾಡುವಿಕೆ; ಪರಿಚಾರಿಕೆ. 'ಬಂಡಿ$_1$' ಪರಾ. [ಬೋಯ +-ಇಕೆ]

**ಬೋಯಿಗ** (ನಾ). ಒಬ್ಬಾತನ ಹೆಸರು : ಕೋಣಿಯ ಗಂಗನ ಮೊತ್ತ ಮೆಲ್ಲಮಂ ಬೆದಱುವಿನಂ ಕೆರಳ್ಚಿ ತ.ಟಾಲಾಳ್ಗಳನಿಕ್ಕಿ . . . ಅದಟ ನಳುಕ್ಕೆಯುಂ ಮೆಱೆದು ಸಾವುದು ಬೋಯಿಗನನ್ತೆಳಾಗ್ರದೊಳ್ (ಎಕ. II, ೦೩೮-೦೪ ; ಸು. ೭೪೦). [ ? ]

**ಬೋಯಿತಿ,** ಬೋವಿತಿ (ನಾ). ಅಂಬಿಗರ ಜಾತಿಗೆ ಸೇರಿದವಳು: ವ್ಯಾಸ ಬೋಯಿತಿಯ ಮಗ (ಜಸವ. ೫೯೦). **ಬೋವಿತಿ :** ಜನಿಸಿದನು ಬೋವಿತಿಯಲ್ಲಿಯಾ ವ್ಯಾಸನಾಮದಿಂದ (ಐಕ್ಯಶೃ. ೩-೧೧-೩೪).
[ ಬೋಯ + –ಇತಿ$_1$ (< –ಇತ್ತಿ) ]

**ಬೋಯ್ಗವರ್ಮ** (ನಾ). ಒಬ್ಬಾತನ ಹೆಸರು : ಶ್ರೀ ಮದಾಳು ವರ[ಸ]ರ್ ಬೋಯ್ಗವರ್ಮರ ನಾಟು ಮುದಿಮೆಯು[ಳ್] . . . ಸುಂಕಮರ್ದ್ಧದಾಸ ಕಾದರ್ (ಎಇ. IX, ೭೧-೫; ೪೦೦).
[ಬೋಯ್ಗ ? + ವರ್ಮ$_1$ ]

**ಬೋರ್** (ಅ). ಒಂದು ಅನುಕರಣಾವ್ಯಯ : 'ಬೋರಾಡು' ಪರಾ.

**ಬೋರ$_1$** (ನಾ). ೧. ಮಾಸಲುಗೆಂಪು ಬಣ್ಣ : 'ಬೋರಗುದುರೆ' ಪರಾ. ೨. ಮಾಸಲುಗೆಂಪುಬಣ್ಣದ ಕುದುರೆ : "ತುರಗವರ್ಣಂ . . . ಬಿಳಿದುವಾಗೊರೆದ ಕೆಂಪಿರೆ ಜನ್ನನದು ಮಾಸೆ ಬೋರನರುಣಂ ಮಾಸೆ ಚೀರನಕ್ಕುಂ " (ಮಂಗರಾ. ೯೧-೦೪) ; ತನ್ನಿ ಬೊಲ್ಲನ ಕೂಡೆ ಮಂಗಳನನಿರದೆ ಕೊಂಗನನಸಮನಂ ತನ್ನಿ ಬೋರನನಿರಿಸದಿರಿ ವಾಹಕರಿರ ನೀವು (ಜಸಪು. ೫೯-೪೦); ಸಮಸ್ತಶರೀರದ ರೋಮಗಳಲ್ಲಿಯೂ ಕೆಂಪುವರ್ಣವುಳ್ಳ ಶುಭ್ರ ರಕ್ತವರ್ಣಗಳು ಮಿಶ್ರವಾಗಿ ಮುಖದಲ್ಲಿ ಕಾಲು ಬಾಲಗಳಲ್ಲಿ ಕೆಂಪುವರ್ಣವುಳ್ಳ ಕುದುರೆಯು ಬೋರನೆಂದು ಪೇಳಲ್ಪಡುವುದು (ಅಗಂಧಿ. ೩೦೦-೬). 'ಬೋರೆ$_2$' ಪರಾ. [ದೇ.॥/ಮರಾ. ಬೋರ ]

**ಬೋರ$_2$, ಬೋರೆ$_3$** (ನಾ). ದಿವಾಳಿಯಾದವನು : ಇಂಥ ಅಪರಿಚಿತನಿಗೆ ಕೆಲಸ ಕೊಟ್ಟು ತಾನು ಬೋರನಾಗುವುದನ್ನೂ ಬಯಸಲಿಲ್ಲ (ಜಾಬಿ. ೯೪). **ಬೋರೆ$_3$ :** ತಾನು ಪೂರ್ಣ ಬೋರೆಯಾಗಿ ದಾನ ಮಾಡುವುದು ದುಃಖಮೂಲ (ಅರಗ. ೧೩೬). [←ಮರಾ. ಬೋರಾ ]

**ಬೋರಂಗಿ,** ಭೋರಂಗಿ (ನಾ). ೧. ಬಣ್ಣ ಬಣ್ಣದ ರೆಕ್ಕೆಗಳುಳ್ಳ ಒಂದು ಬಗೆಯ ಹುಳು; ಜೀರುದುಂಬಿ; **ಜೀರುಂಡೆ :** ಗುಲಾಬಿ ಗಿಡಕ್ಕೆ ಮುತ್ತುವ ಹಸುರು ಬಣ್ಣದ ಅಥವಾ ತಾಮ್ರವರ್ಣದ ಜೀರುಂಡೆ: ಗುಲಾಬಿಜೀರುಂಡೆ :—ಬೋರಂಗಿ (Rose-chafer. ಇಂಕಪ) ; ಏರಬಾರದ ಗುಡ್ಡ ಹ್ಯಾಂಗೇರಿದಿ ಬಸವಣ್ಣ ಬೋರಂಗಿ ಪಕ್ಕ ಸರಜಂಗು ಕಟ್ಟಿಗೊಂಡು (ಜಪಗೀ. ೦೬). ೨. (ಆಲಂ) ಒಯ್ಯಾರಿ; ಬೆಡಗಿ : ಏ ಬೋರಂಗಿ, ವ್ಯೆ ತೊಳಕೊಳ್ಳಲಿಲ್ಲೇನಿನ್ನು ? (ನಾಂಜಾದು. ೫೪). **ಭೋರಂಗಿ :** ೧. ಮಳೆ ಬಂದು ನಿಂತಾಗ . . . ಗಿಡದಿಂದ ಗಿಡಕ್ಕೆ ಭೋರಂಗಿಗಾಗಿ ಅಲೆದಾಡುವುದು (ಸುತ್ತುಹು. ೯); ಭೋರಂಗಿಯ ಒಂದು ಹಸಿರುಪಕ್ಕ ಶಾಪಗ್ರಸ್ತದೇವತೆಯಂತೆ ಇವನ ಸೆರೆಗೆ ಸಿಕ್ಕಿದೆ (ಗಾಳಪ. ೬೪). [<ಬೋರ್]

**ಬೋರಂಟಿ,** ಭೋರಂಗ (ನಾ). ಹಾರುವಾಗ ಶಬ್ದ ಮಾಡುವ, ಬೇರೆ ಬೇರೆ ಆಕಾರದ ಒಂದು ಬಗೆಯ ಗಾಳಿಪಟ : ಆ ಹುಡುಗನು ಬೋರಂಟಿ ಹಾರಿಸುತ್ತಿದ್ದಾನೆ (ಕೂಶ). **ಭೋರಂಗ :** ಭೋರಂಗ ಆಡಿಸಲು ಬೇಕಷ್ಟು ? ನೂಲಿನ ಎಳೆಯೊಂದು ಸಾಕಿಲ್ಲವೇ ? (ಸಪೀಗೀ. ೨೯-೩೨೯). [ < ಬೋರ್ ? ]

**ಬೋರಗುದುರೆ** (ನಾ). ಮಾಸಲುಗೆಂಪು ಬಣ್ಣದ ಕುದುರೆ : ಮಾರುವದ ಬೋರಗುದುರೆಗಳೊಳ್ ಪೂಡಿದ ಪಸುರ್ಪೊನ್ನ ರಥಮನೇಱಿ (ಶಂಪಥಾ. ೧೨-೫೩ ವ). [ ಬೋರ$_1$ + ಕುದುರೆ ]

**ಬೋರಮಾಳ,** ಬೋರಮಾಳು (ನಾ). (ಎಲಚಿಹಣ್ಣಿನ ಆಕಾರದ ಚಿನ್ನದ ಗುಂಡುಗಳಿಂದ ಮಾಡಿದ) ಒಂದು ಬಗೆಯ ಸರ : ನನ್ನ ಕೊರಳೊಳಗೆ ಬೋರಮಾಳಾ ಇಲ್ಲ, ಕೈಯೊಳಗೆ ಬಿಲವಾರ ಇಲ್ಲ ! (ಜಾರುಪ. ೩೨). **ಬೋರಮಾಳು :** ಕಾಸಿನ ಸರ, ಗುಂಡಿನ ಸರ . . . ಬೋರಮಾಳು, ನೆಲ್ಲಿಕಾಯಿಸರ, ಗೋಧಿಸರ (ಕಪಕೋ. I, ೮೨೦).
[ ←ಮರಾ. ಬೋರ್‌ಮಾಳ್ ]

**ಬೋರಮಾಳು** 'ಬೋರಮಾಳ' ನೋ.

**ಬೋರಲಿಡು** (ಕ್ರಿ). ಮಗುಚಿ ಹಾಕು; ತಳ ಮೇಲುಮಾಡು : ಬೋರಲಿಟ್ಟ ಬಟ್ಟಲಿನಂತಿರುವ ನೀಲದಿಗಂತ (ಪಸುಸೂ. ೨೪೪).
[ ಬೋರಲು + ಇಡು$_1$ ]

**ಬೋರಲು** (ನಾ). ತಲೆಕೆಳಗು ; ಬುಡಮೇಲು : ಆ ಪಾತ್ರೆಗಳನ್ನು . . . ಅಲ್ಲೇ ಬೋರಲು ಹಾಕು (ಊರುಳ. ೨೩) ; ಕಂಬಳಿಯ ಮೇಲೆ ಬೋರಲಾಗಿ ಅಪೂರ್ವ ಬಿದ್ದಿದ್ದ (ಘಾರತಿ. ೦೩೪). 'ಬೋರಲಿಡು' ಪರಾ.
[ದೇ.॥ ತೆಲು. ಬೋರ್ಲ]

**ಬೋರಾಡು** (ಕ್ರಿ). ೧. ಸಂಭ್ರಮಗೊಳ್ಳು : ಸಡಗರಪಡು : ಬೋರಾಡಿ ಸಾಬವನು ಹಾಱಾಡಿ ಒಯ್ಯುವನು (ಸರ್ವಜ್ಞ. ೧೩೯೬) ; ಎಕ್ಕೆಯ ಗಿಡದಾಗ ಹಕ್ಕಿ ಬೋರಾಡಿದಂಗ (ಲೋಕಗೀ. ೬೧) ; ಹಕ್ಕಿಯಲ್ಲಿ ಕಪಿ ಮಾಡಿದ ನಾಲ್ಕು ಹೋರೆಗಳೂ, ಬೋರಾಡಿ ಓಡುವ ಮೂರು ಆಕಳುಗಳೂ, ಎರಡು ಎಮ್ಮೆಗಳೂ ಮುಸುಗುಟ್ಟುತ್ತವೆ (ಕುಂಬೀ. ೦). ೨. ಧ್ವನಿಯೇರಿಸು ; **ದೊಡ್ಡಧ್ವನಿ ಮಾಡು :** ಮಗು ಅನ್ನ ಪೂರ್ಣಿಯರೂ ಬೋರಾಡಿಕೊಂಡು ಅಳತೊಡಗಿದರು (ಎಠಸ. ೦೪೮) : ಇವನು ಮರಣ ಹೊಂದಲು ಅಕಬರನು ಬೋರಾಡಿ ಅತ್ತನು (ಹಿಂಮುಚ. ೦೦೪). 'ಭೋರಾಡು' ಪರಾ. [ಬೋರ್ + ಆಡು$_1$]

**ಬೋರಿ** 'ಬೋರೆ$_2$' ನೋ.

**ಬೋರಿಗೆ** 'ಬೋಪರಿಗೆ' ನೋ.

**ಬೋರಿಯ** (ನಾ). ರಂಗುರಂಗಿನ ಚಿತ್ರಗಳುಳ್ಳ, ನೆಲಕ್ಕೆ ಹಾಸುವ ಹಾಸು ; ಜಾಜಮು : ಪೊಂಬಟ್ಟೆಯ ಬೋರಿ[ಪಾಠಾಂ. ರೆ]ಯದೊಳ್ ತುಂಬಿದ ಬಿಡುಮುತ್ತಿನಕ್ಕಿಯುಂ ಮೆಟ್ಟಿದಂದೇಂ ಬಗೆವುಗಿಸಿದುದೋ ಹೇಮಾಂಬುಜದ ಮರಾಳಮಿಥುನಮಂ ತನುಮಿಥುನಂ (ಅಪುಂಪು. ೬-೫೫).
[?./ಮರಾ. ಬೋರಿಯಾ]

**ಬೋರಿಸರ** (ನಾ).=ಬೋರಮಾಳ : ಕುತ್ತಿಗೆಯಲ್ಲಿರುವ 'ಬೋರಿಸರ' ಕೂಡಾ ಗುಂಡುಗುಂಡಾದ ಮಣಿಗಳಿರುವ ಪಳ್ಳಿಯ ಮಾದರಿಯದು (ಕಶಿ. ೦೫). [ಬೋರಿ (<ಬೋರೆ$_2$) + ಸರ$_3$]

**ಬೋರು$_1$** 'ಪೋರೆ' ನೋ.

**ಬೋರು$_2$** (ನಾ). (?) : ಅಣಲೊಳು ಗುಡಿ[ಪಾಠಾಂ. ಮಡು]ಗಟ್ಟಿದ ಬೋರು ಕೊಬ್ಬಿದ ನೆಣ ಬಾಯೊಳು ಪೊಱಮಡುವ ಹೆಣದಿನಿ ದಡಿಗ ದೈತ್ಯೇಯರು ಹೆಣ್ಗಂಡು ನೊಣ ಹಾಯಗುಡದೆ ನುಂಗುವರು (ಮೋಹತ. ೩೨-೫). [ ? ]

**ಬೋರೆ$_1$** 'ಪೋರೆ' ನೋ.

**ಬೋರೆ$_2$, ಬಾರೆ, ಬೋರಿ** (ನಾ). ೧. ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಎಲಚಿ : "ಬದರೀ, ಕುವಲೀ, ಕರ್ಕಂಧೂ — ಈ ೩ ಬೋರೆಗಿಡದ ಪೆಸರ್" (ಹಠಾಪು. ೩೨-೪೦) ; ಕಾರೆ ಬೋರೆ ಗುಳವತ್ತಿ ತುಂಬುರು ನಗರೆ ಮುಂತಾದ ಪಣ್ಗಳ ತಂದರಾಳ್ದನ ಬಳಿಗೆ (ಪೋಪಕ. ೦೯-೫೬) ; ಗೇರು ಕಾರೆ ಬೋರೆಗಳೆಸೆದವು (ಹಂಪಪಾ. ೦೩-೦೩). ೨. ಎಲಚಿ ಹಣ್ಣಿನ ಬಣ್ಣ ; ಮಾಸಲುಗೆಂಪುಬಣ್ಣ : (+). **ಬಾರೆ :** ೧. ಧರೆಯೊಳೆಸೆವುದಾ ಕಾಳಹಸ್ತೀಶ್ವರಮೆನಿಪ್ಪೊಂದು ಪೆಸರಾಂತು ಭೂಮಿಧರವು ದರಲ್ಲಿ . . . ಮಾಮಂಬಟೆಯು ಬಾರೆ ನೆಲ್ಲಿ . . . ಬಿಲ್ವಾದಿ ಬಹುವೃಕ್ಷಂಗಳಿಂದೆ ತುಂಬಿ ಘೋರತರ ಕಾಂತಾರಮಿಹುದು (ಶುಪಾಪಿ. ೭-೦೮). **ಬೋರಿ :** ೧. 'ಬೋರಿಸರ' ಪರಾ.
[<ಪ್ರಾ. ಬೋರ್, ಬೋರೀ. / ಸಂ. ಬದರೀ./ಹಿಂ. ಬೇರ್, ಬೋರ್; ಮರಾ. ಬೋರ್, ಬೋರೀ]

**ಬೋರೆ$_3$** 'ಬೋರ$_2$' ನೋ.

**ಬೋರ್ಗರೆ** (ಕ್ರಿ). 'ಬೋರ್' ಎಂದು ಶಬ್ದಮಾಡು : 'ಬೋರ್ಗರೆಯಿಸು' ಪರಾ. [ಬೋರ್ + ಕರೆ$_1$]

**ಬೋರ್ಗರೆಯಿಸು** (ಕ್ರಿ). ಬೋರ್ ಎಂದು ಶಬ್ದಮಾಡು ; ಅಬ್ಬರಿಸು : ಪ್ರಳಯದ ದಾವಾಗ್ನಿಯ ಕುಡಿನಾಲಗೆಯುಳಿವೆನೆ ಬೋರ್ಗರೆಯಿಸುತ ಮುಳಿದು ಬಾಣದ ಸುಭಟರು ಮುಂದುವರಿದಾಗ ಸಲೆ ತುರುಕರನಟ್ಟಿದರ್ (ಕಂಶವಿ. ೦೯-೩೩). [ಬೋರ್ಗರೆ + — ಇಸು$_3$]

**ಬೋರ್ಗಲ್ಲು** (ನಾ). (ಉಕ) ಒರಟಾಗಿ, ಉಬ್ಬಿರುವ ಕಲ್ಲು : ಅವಳ ಈ ಎಲ್ಲ ಉಪಾಯಗಳೂ ಬೋರ್ಗಲ್ಲ ಮೇಲೆ ಮಳೆಗರೆದಂತಾದುವು (ಕಂಡೀ. ೦೯) ; ಫಕೀರ ಹೇಳಿಕೊಂಡುದೆಲ್ಲ ಬೋರ್ಗಲ್ಲ ಮೇಲೆ ನೀರು ಸುರುವಿದಂತಾಯಿತು (ಹಾಡುಹ. ೬೨). 'ಗೋರ್ಕಲ್ಲು' ಪರಾ.
[< ಬೋರೆ$_1$ (<ಪೋರೆ) + ಕಲ್ಲು (< ಕಲ್$_3$)]

**ಬೋರ್ಡು** (ನಾ). ೧. ಸೀಮೆಸುಣ್ಣದಿಂದ ಬರೆಯಲು ಬರುವಂತೆ ಸಿದ್ಧಪಡಿಸಿದ ಕರಿಯ ಬಣ್ಣದ ಫಲಕ ; ಕಪ್ಪುಹಲಗೆ : ರಂಗಣ್ಣನು ಬೋರ್ಡಿನ ಹತ್ತಿರ ಹೋಗಿ 'ಶತ್ರು' ಎಂದು ಸರಿಯಾಗಿ ಬರೆದು (ರಂಗಳ. ೦೩೯). ೨. ಹೆಸರು, ವಿಳಾಸ ಮೊದಲಾದುವುಗಳನ್ನು ಬರೆದು ಪ್ರದರ್ಶಿಸುವ ಫಲಕ ; ನಾಮಫಲಕ : ರಾಯರ ಮನೆಯ ಮುಂದಿರುವ ಒಂದು ಬೋರ್ಡಿನ ಜೊತೆಗೆ ಇನ್ನೊಂದು ಬೋರ್ಡು ಇಳಿಬೀಳಬೇಕೆಂದು ರಾಜಮ್ಮನವರ ಹೆಬ್ಬಯಕೆ (ರಾದುಳ. ೯೩). ೩. ಸಮಿತಿ; ಮಂಡಲಿ : ಪರೀಕ್ಷಾಬೋರ್ಡುಗಳು ಪ್ರಾದೇಶಿಕವಾಗಿದ್ದರೆ ಅನರ್ಥ ಕಡಿಮೆ (ಶಿಕ್ಷದ ೩೬೯). [← ಇಂ. Board]

_ಬೋಲ್ '– ವೋಲ್' ನೋ.

**ಬೋಲಬಗರಿ** (ನಾ). (ಉಕ) ಕೊಬ್ಬರಿಬಟ್ಟಲಿನಲ್ಲಿ ತೂತುಕೊರೆದು ದಾರ ಸೇರಿಸಿ. ತಿರುಗಿಸುವ ಒಂದು ಬಗೆಯ ಆಟಿಕೆ : ಕಾರಹುಣ್ಣಿವೆ ಕರಿ ಹರಿದು ಮಣ್ಣೆತ್ತು ನೀರನು ಕುಡಿದವು. ಬಂತು ಪಂಚಮಿ ಬೋಲಬಗರಿಗೆ, ಹೆಣ್ಣು ತವರಿಗೆ ಮಿಡಿದವು (ಕಂಶು. ೦೨-೯). [ ? ]

**ಬೋಲಿಯಕ್ಕ** (ನಾ). ಒಬ್ಬಾಕೆಯ ಹೆಸರು : ಪಾಟಿಯಕ್ಕಂ ಬೋಲಿಯಕ್ಕಂ ಪುತ್ರುಣಕ್ಕೆಯ್ಯಂದಿರ್ಕ್ಕಂಡುಗ ಬಿತ್ತುವುದಂ ಕೊಟ್ಟಳ್ (ಎಕ. VIII, ಸಗರ. ೯೩–೧೦ ; ೭೮೦). [? + ಅಕ್ಕ$_1$]

**ಬೋಲು** (ನಾ). [ಸಂಗೀತ] ತಾಳವಾದ್ಯಗಳ ಲಯಬದ್ಧವಾದ ನುಡಿತ : ಸ್ವರಪಾತ ಮುಗಿದ ಮೇಲೆ ನಾಗಪ್ಪ ಮೃದಂಗವನ್ನು ಕೈಗೆತ್ತಿಕೊಂಡು . . . ಆದಿತಾಳದ ಕೆಲವು ಬೋಲುಗಳನ್ನು ಸಾಂಬನಿಗೆ ಅಭ್ಯಾಸ ಮಾಡಿಸಿದ (ಮುಖ್ಯ. ೬೩); ಅದರ ಹೆಜ್ಜೆ, ವಿನ್ಯಾಸಗಳನ್ನು ಲೆಕ್ಕಕ್ಕೆ ಸರಿಯಾಗಿ, ತಬಲ ಮೃದಂಗಗಳ ಬೋಲಿಗೆ ಸರಿಯಾಗಿ ಕಟ್ಟಲು ಬರುವಂತಿಲ್ಲ (ಬಾಲಕೃ. II, ೯೯೦). [← ಹಿಂ. ಬೋಲ್]

**ಬೋವ** 'ಬೋಯಂ' ನೋ.

**ಬೋವಗಾಜಿ** (ನಾ). ಪರಿಚಾರಕರ ಮುಖಂಡ : 'ಬೋವಗಾಜಿಕೆ' ಪರಾ. [ಬೋವ (< ಬೋಯ) + —ಕಾಜಿ]

**ಬೋವಗಾಜಿಕೆ** (ನಾ). ಪರಿಚಾರಕರ ಮುಖಂಡತ್ವ.—ನಾಯಕತ್ವ : 'ಬೋವಗಾಜಿಕೆತನ' ಪರಾ. [ಬೋವಗಾಜಿ + —ಇಕೆ]

**ಬೋವಗಾಜಿಕೆತನ** (ನಾ). =ಬೋವಗಾಜಿಕೆ : ಮಾಯೆ . . . ಬಳಿಕಿಂತಿ ಕೊಡಳು ನಾಗವಾಸದ ನೆರವಿ ಬಂದದ ಬೋವಗಾಜಿಕೆತನದಲಲ್ಲಮನ (ಶ್ರಪುರಾ. ೩-೦೭). [ಬೋವಗಾಜಿಕೆ + —ತನ]

**ಬೋವಿ$_1$** 'ಬೋಯ' ನೋ.

**ಬೋವಿ$_2$** 'ಬೋವು$_2$' ನೋ.

**ಬೋವಿತಿ** 'ಬೋಯಿತಿ' ನೋ.

**ಬೋವು$_1$** 'ಬೋಯ' ನೋ.

**ಬೋವು$_2$**, ಬೋವಿ$_2$ (ನಾ). ಒಂದು ಬಗೆಯ ಮರ : ಕಿರಲ್‌ಬೋಗಿ, ಬೋವುಮರ, ಹಿರಿಬೋಗಿ, ಕರ್ಮಲ, ಕಲ್‌ಬಾಗೆ, ಶಮಿವಲೆಭೋಗಿ, ಸಣ್ಣೆಲೆಭೋಗಿ (ಪ್ರಮಿಶಿ. ೯೯-೬೭೩). ಬೋವಿ$_2$ : ಬಿಳಿಬಸುರಿ, ಬೋವಿಯ ಮರ (ಪ್ರಮಿಶಿ. ೩೭-೭೩೦); ಹೆಬ್ಬಲಸಿನ, ಬೋವಿನ, ಸಾಗವಾನಿಯ ಮತ್ತು ಅನೇಕತರದ ಮರಗಳು (ಗಂಗಕವ. ೩೩). [← ತುಳು. ಬೋವು]

**ಬೋಸ$_1$** (ನಾ). ೧. ಹಲ್ಲಿಲ್ಲದವನು : "ಬೋಡಃ — ಬೋಸಂ" (ಕಾಕಕೃ. ೨೩೦). ೨. (ಕರಾ) ಬೆಪ್ಪ; ಪೆದ್ದ [ಬೋಸು + —ಅ$_7$]

**ಬೋಸ$_2$** (ನಾ). ಒಡವೆ ; ಆಭರಣ : ಅಲಂಕಾರ : ಕೈಲಿ ಕಾಸಿಲ್ಲ ಮೈಲಿ ಬೋಸಿಲ್ಲ (ಬೋಸ=ಭೂಷಣ) ಹೋಗೊ ಸೂಳೆ ಕಂಡು ಕುಮ್ಮಳಿಸಿ ಬಿದ್ದನಂತೆ (ಮಾಮುರಾ. ೦೩೨). [< ಸಂ. ಭೂಷಾ]

**ಬೋಸಡಿ** 'ಭೋಸಡಿ' ನೋ.

**ಬೋಸರ** (ನಾ). ವಂಚನೆ ; ಕಪಟ : " ಬೋಸರಂ ಕಪಟಾದರಂ " (ಕರ್ನಾಟ. ೩೯): ನಿಚ್ಚ ಬೋಸರದ ಗರುಡಿ ವಂಚಕುತನ ಹೆಚ್ಚಿ ಬೆಳೆವ ಬಲು ನೆಲನು (ರಾಮುವಿ. ೩-೬೬); ಬೋಸರದಿಂದ ಕಯ್ಯುಗಿದು (ವಚ್ಚಿಶ. ೦೯೦–೨೦).

**ಬೋಸರಗಿತ್ತಿ** (ನಾ). ವಂಚಕಿ : ಮೋಸಗಾತಿ : ಒಬ್ಬರ ಕೈವಿಡಿದು ಒಬ್ಬರಿಗೆ ಮಾತುಗೊಟ್ಟು ಮತ್ತೊಬ್ಬರಿಗೆ ಸನ್ನೆಯ ಮಾಡುವ ಬೋಸರ [ಪಾಠಾಂ. ಪಾದರ]ಗಿತ್ತಿಯಂತೆ . . . ಕೋಟಲೆಗೊಳಲೇತಕ್ಕೆ (ಪನ್ನವ. ೯. ೦೦೦-೨೩೨) ; ವಂಚಕಿ ಬೋಸರಗಿತ್ತಿ ವಂಶವರ್ಜಿತೆ . . . ತೇಜಹೊಡ ನಾಡಿದ ಪೆಂಡತಿಗುಂಟೆ ಸಜ್ಜನಂ (ಮುಪ್ಪಿ. ೦೩-೭). [ಬೋಸರ + —ಗಿತ್ತಿ]

**ಬೋಸರಣೆ** (ನಾ). ಮೋಸ ; ವಂಚನೆ : ಠಕ್ಕು ಧಾಳಕತನ ಬಟು ಬೋಸರಣೆ ಬೇಳಕ್ಕೆ ವೈರಿಗಳೆಂಬಿವಕೆ ಸಿಕ್ಕುವರೇ ಕೋವಿದರು (ಕುರಾಸಾಂ. ೨೬-೭೦); ಬಾಳಿದ ಬೀಳರ್ಪ ಬುದ್ಧಿ ಬೂತಾಟವುಂ ಬೇಳಿಗೆಪ್ಪಿಗಳ ಬೋಸರಣೆ ಚಾಳವೆತ್ತರ ಭಕ್ತರೆಂದು ಬಣ್ಣಿಸಿ ಬರ್ಪುದೇಳಿಗೆಯೆಂತೊ (ಕಕಸಾಂ. ೭೩-೯೦). [ ಬೋಸರ + — ಅಣೆ$_4$ ]

**ಬೋಸರಿಗ** (ನಾ). ಮೋಸಗಾರ ; ವಂಚಕ : ಕಾಮದೇವಂಗೆ ಬೋಸರಿಗಂ ನಿಂದುಬಿಯೆಂಬರಾ ಪುರದ ವೇಶ್ಯಾವಾಟದೊಳ್ ಜೇಟಿಯರ್ (ಸೂಕ್ತಿಸು. ೯-೦೩೩); ನೀನಲ್ಲದೆಯುನ್ನಿಗರೆನ್ನ ತಾಯ ಸಮಾನವೆನುತ ಭಾಷೆಯ ಮಾಡಿ ಮಾನಿನಿಗೊರ್ವ ಬೋಸರಿಗನಾಣೆಯನಿತ್ತು ತಾನಂದು ಪೊಜಿಮಟ್ಟನಾಗ (ಶ್ರೀಬಾಂ. ೦೩-೭೦); ಕೊಡದೆ ಬೂಟಕವಾತಿನಲಿ ಮನ್ಮಥ ಕೇಳಿಗೊಡನ್ನೆದುವ ಬೋಸರಿಗನ ನಡೆ ನಾಳೆ ಕರೆವೆನೆಂದೆಬ್ಬಿಸಿ ಪೊನ್ನೀವ ಕಡುದಾತನ ಕರೆ ಮಗಳೆ (ಕಂಶವಿ. ೬-೦೯೭). [ಬೋಸರ + —ಇಗ]

**ಬೋಸರಿಗತನ** (ನಾ). ಮೋಸ ; ವಂಚನೆ : ಬೋಸರಿಗತನದಿಂದ ಒಡಲ ಹೊರವಳಂತೆ ವಾಗಾದ್ವೈತದಿಂದ ಒಡಲ ಹೊರವ ಶಬ್ದಬೋಧಕರಿಗೆ ನಿಜಗುರುಭೋಗೇಶ್ವರಶರಣರ ಪದವೆಂತು ದೊರಕೊಂಬುದೊ (ಸಕವ. III, ೨೦೨-೩೭೨) ; ಮತ್ತೀ ದುಷ್ಟತನದ ಬೋಸರಿಗತನವೇಕೆ (ಪಕಸಾ. ೬-೯) ; ನನಗೆ ಬೋಸರಿಗತನವುಂ ನುಡಿದು . . . ನಿನಗೆದೇಹಾರವುಂ ಮಾಡಿಪಳಿಗೆ ತಕ್ಕುಪಾಯಮುಂ ಬಲ್ಲೆ ನಾನು (ಸಮ್ಯಕ್. ೩-೨೩).
[ ಬೋಸರಿಗ + — ತನ ]

**ಬೋಸರಿಗೆ** (ನಾ). = ಬೋಸರಿಗತನ : ಹಾಸ್ಯರಸದ ಬಲ್ಲವಗರಸಿಚ್ಛೆಯ ಬೋಸರಿಗೆಗೆಯುಪಮಾನ ದಾಸಿಯ ಬಿಟ್ಟು ಕಠಿಣತನವಾತಂಗೆ ಲೇಸು ಸೇವೆ (ತರ್ಕಶಾ. ೦೭-೨೯). [< ಬೋಸರ ]

**ಬೋಸರಿಸು** (ಕ್ರಿ). ೧. ವಂಚಿಸು ; ಮೋಸಗೊಳಿಸು : ವಿತಕಿಲೆ ದಸು ಜಾರಿ ಠಕ್ಕಿನ ಮಾತಿನಲಿ ಬೋಸರಿಸಿ ನಮ್ಮನು ಬೂತು ಮಾಡದೆ ಹೋಗು (ಅಕ್ರೂಕ. ೯-೬೦); ಸವಿನುಡಿಯಿಂ ಬೋಸರಿಸಿ ಮಾಯೆಗೈವರ್ (ರಾಮಾಶ್ವ. ೪೦-೦೩). ೨. ಸುಳ್ಳು ಆದರವನ್ನು ತೋರಿಸು ; ಪ್ರೀತಿಸುವಂತೆ ನಟಿಸು : " ಬೋಸರಿಸು – ಮಿಥ್ಯಾದರೇ (ಕಪಟಮರ್ಯಾದೆ ಮಾಡು) "

(ಶಮರಾ); ನೆರೆದ ಮಿಂಡರೊಳಧಿಕನೆಂದೊಡಲಿಕ್ಕಿ ಬೋಸರಿಸಿಕೊಳ್ವೊತ್ತೆಯಂ (ಹಕಶಾ. ೪-೨೦). ೩. ಪ್ರೋತ್ಸಾಹಿಸು ; ಉಬ್ಬಿಸು : ವರ ಹರಿಶ್ಚಂದ್ರ ಸತ್ಯಂಗೆಡದಿರೆಂದು ಬೋಸರಿಸುವಂತಾಗಿ (ಹಕಶಾ. ೨-೩೦) ; ಅಸುರದೆಡೆಯೊಳಿರಿಸಬಾರದು ಬೋಸರಿಸಿ ನಂಬಿಸಿ ನಮಿಸಿ ಕೊಂಡಾಡಿ ಮುಂಡಾಡಿ (ಬಸಪು. ೧೮-೬); ಮಾಯೆ ನಿನ್ನನಗಲಿರಬಲ್ಲಳೇ ಎಂದು ಬೋಸರಿಸುತಂ (ಶ್ರಶುಪು. ೫-೯೪). [ ಬೋಸರ + — ಇಸು$_3$ ]

**ಬೋಸಿ$_1$** (ನಾ). ಹಲ್ಲಿಲ್ಲದವಳು : "ಬೋಡೀ = ಬೋಸಿ" (ಶಾಶಕ್ಯ. ೨೩೦). [ ಬೋಸು$_1$ + — ಇ$_2$ ]

**ಬೋಸಿ$_2$** (ನಾ). ಅಗಲವಾದ ಬಾಯುಳ್ಳ ಲೋಹದ ಗುಂಡನೆಯ ಪಾತ್ರೆ : ಬಚ್ಚಲಿನ ಜಗಲಿಯ ಮೇಲೆ ತಾಮ್ರದ ಬೋಸಿ, ಮರದ ಮೊರಗೆಯಲ್ಲಿ ನೀರು ಬೆರಸಿದ ಸೀಗೇಪುಡಿ (ಬಾಳಹೊ. ೧೦೫); ಗಡಿಗೆ, ಬೋಸಿ . . . ಬಾಸದ ಸಾಲು ಇವುಗಳನ್ನು ಜಾಗ್ರತೆಯಾಗಿ ಮತ್ತು ಸೂಕ್ಷ್ಮವಾಗಿ ಪರಿಚಯ ಮಾಡಿಕೊಂಡು ಹೊರಗೆ ಬರುತ್ತಾಳೆ (ಸನ್ಮೂರು. ೧೦೦). [ ? ]

**ಬೋಸು** (ನಾ). ಹಲ್ಲಿಲ್ಲದಿರುವಿಕೆ : "ಬೋಡು = ಬೋಸು" (ಶಾಶಕ್ಯ. ೨೩೦). 'ಬೋಸುವಾಯ್' ಪರಾ. [ ದೇ.॥ ತೆಲು. ಬೋಸಿ = ಹಲ್ಲಿಲ್ಲದ ]

**ಬೋಸುಡಿ** 'ಭೋಸಡಿ' ನೋ.

**ಬೋಸುವಾಯ್** (ನಾ). ಹಲ್ಲಿಲ್ಲದ ಬಾಯಿ ; ಬೋಡುಬಾಯಿ : ಪಲ್ಗಳುದುರಿದ ಬೋಸುವಾಯಿಂದರಮನೆಯ ಮುಂಬಾಗಿಲೊಳು ನಿಂದ (ಶಂಕರಾ. ೭-೬೫). [ ಬೋಸು$_1$ + ಬಾಯ್ ]

**ಬೋಹಣ** 'ಬೋನ$_1$' ನೋ.

**ಬೋಹಣಿಸು** (ಕ್ರಿ). ಸರಿಯನ್ನು ಬಳಿದು ಮದ್ದಳೆಯನ್ನು ಸಿದ್ಧಪಡಿಸು : ಬೋಹಣಿಸಿ ಮದ್ದಳೆಗಳಂ ಶ್ರುತಿಮೋಹಿ ಸಂಧಿಸಿಕೊಂಡು ನಿಲ್ಲಿರೆ ಬೇಹವರು ನೀಮಿದಕೆ ಗುಡ್ಡಾದೇವಿ ಮಹದೇವಿ (ಬಸಪು. ೧೨-೪೦). [ ಬೋಹಣ (< ಬೋನ$_1$ ) + — ಇಸು$_3$ ]

**ಬೋಹರಿಗೆ,** ಬೋರಿಗೆ (ನಾ). ಕಸಬರಿಗೆ ; ಪೊರಕೆ : ಕೈಯ ಬೋಹರಿಗೆ ಮಂಡೆಯ ಮೇಲೆ ಸಿಂಬಿ (ಬಸವ. ೩೫೪) ; ಒಂದು ಬೋಹರಿಗೆಯಂ ಕೊಂಡು ಬೋಹರಿಸಿ ತಂದು ಗೋಮಯದಿಂದೆ ಹೇವರಿಸಿ ಸಾರೈಸಿ (ಕಣ್ವ.ರ. ದೀ. ೧೩೪-೩) ; ಸಂತಸದಿಂ ಬೋಹರಿಗೆಯಾಂತು ಮಠಮಂ . . . ನಿರ್ಮಳವ ಮಾಡುತ್ತೆ (ರಾಶತ. ೧೪-೧೧೨). **ಬೋರಿಗೆ :** ಕಸಕುಪ್ಪೆ ಕಿರು ತಿಪ್ಪೆ ತಿಪ್ಪೆ ಬೋರಿಗೆಯಿಂದ ಕೊಡುವನು (ವಿಶಾಸು. ೬೫-೪) ; ಕೈಯಲ್ಲಿ ಬೋರಿಗೆಯನ್ನು ಕೊಟ್ಟು . . . ಕಸವ ಬಳಿಯಲಿಕ್ಕೆ ಹಚ್ಚುವನು (ಕೃಷಿಶ್ರ. ೨೮೮). [ ದೇ.॥ ತೆಲು. ಬೋರಿಗ. / ಪ್ರಾ. ಬೋಹಾರೀ ]

**ಬೋಹರಿಸು** (ಕ್ರಿ). ಗುಡಿಸು ; ಕಸತೆಗೆ ; ಸ್ವಚ್ಛ ಮಾಡು : ದೇವರಾಜ ನಿಮ್ಮ ಸತ್ತಿಗೆಯ ಹಿಡಿವ ವಾಯು ನಿಮ್ಮ ಅಂಗಳವ ಬೋಹರಿಸುವ (ಶದಗೋ. ೧೮೦-೧೦) ; ಒಂದು ಬೋಹರಿಗೆಯಂ ಕೊಂಡು ಬೋಹರಿಸಿ ತಂದು ಗೋಮಯದಿಂದೆ ಹೇವರಿಸಿ ಸಾರೈಸಿ (ಕಣ್ವ.ರ.ದೀ. ೧೩೪-೩) ; ರಾಜಾಂಗಳವ ಬೋಹರಿಸುವ ದಾಸಿಗೆಯುಮ್ಮಾಸಕ್ಕೆ (ಎಕ. VI, ಕಡೂರು. ೪೮-೬೪; 1201). [ < ಬೋಹರಿಗೆ + — ಇಸು$_3$ ]

**ಬೋಳ$_1$** 'ಬೋಟಿ$_1$' ನೋ.

**ಬೋಳ$_2$** 'ಬೋಡ' ನೋ.

**ಬೋಳ$_3$** 'ಬೋಟಿ$_3$' ನೋ.

**ಬೋಳಂಗಡಲೆ** 'ಬೋಟಗಡಲೆ' ನೋ.

**ಬೋಳಂದರು** (ನಾ). ಒಂದು ಬಗೆಯ ಮರ : ನಂದಿ, ಬೋಳಂದರು ಬೆಲ್ಪತ್ರಿ (ವೃಶಿಗ. ೪೪-೯೬೪). [ ? + ತರು$_2$ ]

**ಬೋಳಕ** 'ಬೋಳುಕ' ನೋ.

**ಬೋಳಕ್ಕಾರು** (ನಾ). (ಕರಾ) ಹಣ್ಣಿನ ಪ್ರಾರಂಭದ ಸ್ಥಿತಿ ; ದೋರೆ : ನಿನ್ನೆ ನೋಡಿದಾಗ ಕಾಯಿ ಬೋಳಕ್ಕಾರು ಆಗಿತ್ತು. ತೆಗೆಯಲಿಕ್ಕೆ ಹೇಳಬೇಕಂತ ಇದ್ದೆ (ಮೊಮುಗು. ೬೩). [ ← ತುಳು. ಬೊಳಕರ್ ]

**ಬೋಳಗಡಲೆ** ' ಬೋಟಗಡಲೆ ' ನೋ.

**ಬೋಳತರ** ' ಬೋಟಿತ್ರರ ' ನೋ.

**ಬೋಳತರಗ** ' ಬೋಳದರಗ ' ನೋ.

**ಬೋಳದರಗ,** ಬೋಳತರಗ (ನಾ). ಒಂದು ಬಗೆಯ ಔಷಧೀಸಸ್ಯ : ಗಂಡಮಾಲೆ ಒಡೆಯಬೇಕಾದರೆ ಬೋಳದರಗನ ಬೇರ ನೀರಿಂದ ಅರೆದು ಲೇಪಿಸಲು ಅವಶ್ಯ ಒಡೆವದು (ವೈದ್ಯಸಾ. II. ೦೬೨); ಕೊತ್ತುಂಬರಿ, ಬೋಳದರಗನ ಬೇರು, ಸೂರ್ಯಭಕ್ತನ ಬೇರು . . . ಪ್ರಾತಃಕಾಲದಲ್ಲಿ ಗಳತೂಕವಂ ಸೇವಿಸುವುದು (ಸಶಪ್ರ. ೨೦೮). **ಬೋಳತರಗ :** ಹಿಪ್ಪಲಿ, ಬೋಳತರಗ, ಹಾವುಮೆಕ್ಕೆಯ ಬೇರು ಇವಿಷ್ಟನೂ ಸಮಾನವಾಗಿ ತೆಗೆದುಕೊಂಡು ನಿಂಬೇಹಣ್ಣಿನ ರಸದಲ್ಲಿ ಅರೆದು ಕುಡಿಸಲು ವಿಷಾನು ಕಚ್ಚಿದ ವಿಷ ಶಮನವಹುದು (ವೈದ್ಯಸಾ. II. ೨೨೦). ' ಬೋಟಿತ್ರರ ' ಪರಾ. [ ? ]

**ಬೋಳಮಟಿ** (ನಾ). ಒಂದು ಬಗೆಯ ಸಸ್ಯ : " ಅರೆನೆಲ್ಲಿ . . . ಗೊದ್ದನ ಮರ, ಬೋಳಮಟಿ, ಹಾಲಉಲಿಗೆ, ಗಾಂಗೇರುಕ, ಕಾಷ್ಠನೆಲ್ಲಿ, ಬಾಲಿಗೆ" (ಸಸ್ಯಸಿ. ೬೪); ಗೊದ್ದನ ಮರ, ಹಾಲಬಲಗೆ, ಬೋಳಮಟಿ (ವ್ಯಶಿಗ. ೩೯-೬೬೫). [ಬೋಳ$_?$ + ಅಮಟೆ$_1$ (< ಅಂಬಟೆ)]

**ಬೋಳಯಿಸು,** ಬೋಳಯ್ಸು, ಬೋಳವಿಸು, ಬೋಳೈಸು (ಕ್ರಿ) ಪ್ರಸನ್ನಗೊಳಿಸು ; ಉತ್ತೇಜಿಸು ; ಸಮಾಧಾನ ಮಾಡು ; ಸಂತೈಸು : ಸಜ್ಜೀವನೆಗುಯ್ದು ಸಜ್ಜನಸ್ನೇಹದಿಂ ಸಾಗಿಸಿ ನೋಡಿ ಭೋಗದೊಳ್ ಬೋಳಯಿಸಿ ರಾಗದಿಂ ಮೇಳಯಿಸಿ (ಗಿಂಶ. ೨-೦೦೫ ವ) ; ಬೋಳಯಿಸುತ್ತುಮಾ ತುರಗಮಂ . . . ಉಜ್ಜ್ವಲರತ್ನಕುಂಡಲಾಂದೋಳಕಪೋಲಭಿತ್ತಿಯುಗನಿಂತೆಸೆದಂ ಬರುತ್ತುಂ ಧರಾಧಿಪಂ (ಕುಸುಮಾ. ೩-೩೨) ; ತುರಗವನು ಬೋಳಯಿಸಿ ವಾಘೆಯ ತಿರುಹಿ . . . ಕೃಷ್ಣ ಪಾರ್ಥನ ರಥವ ಲುಳಿವಡೆದ (ಕುಪ್ರಾಭೀ. ೩-೨). **ಬೋಳಯ್ಸು :** ಹರುಷ ಮಿಗೆ ಮುದ್ದಾಡಿ ಬೋಳಯ್ಸಿದ ನಿಜಾರ್ಭಕನ (ಕೌಶಿರಾ. ೩-೨೬). **ಬೋಳವಿಸು :** ಬೇಗದೊಳಾದಂ ಮನವಿಾಯೆ ಬೋಳವಿಸುತ್ತುಂ (ಕುಸುಮಾ. ೮-೭೦); ತೋಳ ಹಿಡಿದೆಳೆದಪ್ಪಿ ಪಾರ್ಥನ ಬೋಳವಿಸಿದನು . . . ಅರಸ ಮುಂಡಾಡಿದನು ಫಲುಗುಣನ (ಕುಪ್ರಾಅ. ೦೦-೩೨) ; ಬೋಳವಿಸಿದನು ಸಕಲಸಮರ ಭಟಾಳಿಗಳ ಸನ್ಮಾನದಲಿ (ತೊರರಾ. ೬-೨೦-೨೬) ; **ಬೋಳೈಸು :** ಪಾರ್ವತೀಪತಿ ಹರಿಶ್ಚಂದ್ರನಂ ತಲೆದಡವಿ ಬೋಳೈಸಿ ಕೌಶಿಕಂಗಿಂತೆಂದನು (ಹಕಶಾ. ೦೪-೦೦); ನಂಬುಗೆಯ ನುಡಿಯಲಿ ಭಾನುಮತಿಯರ ಬಗೆಯ ಸಂತೈಸೆಂದು ಬೋಳೈಸಿದನು ಸಂಜಯನ (ಕುಪ್ರಾಗ. ೩-೩೬); ಆ ನೃಪಾಲಕಂ ಸೋದರರವೆಹರಸಿ ಮುನಿವರನ ಪದಕೆಱಗಿದೊಡೆ ಮಣಿದೆತ್ತಿ ಬೋಳೈಸಿ ಪರಸಿ ಮಂತ್ರಾಕ್ಷತೆಯನಿತ್ತು (ಕೃಪಿಂಶಾ. ೨-೦೪). [? + — ಇಸು$_3$. / ತುಳು. ಬೋಳೈಸು]

**ಬೋಳಯ್ಸು** ' ಬೋಳಯಿಸು ' ನೋ.

**ಬೋಳರೆ** (ನಾ). ಚಪ್ಪಟೆಯಾದ ಕಲ್ಲು : ತಮಟಗಲ್ಲು ತೋರುವ ಬಾಣಗಲ್ಲುಗಳು ಪೋರಂತೆ ದೊಡ್ಡ ಬೋಳರೆ ಹಿಂಡುಗಲ್ಲೆಂದು ಸಾರುತಿಹರು ಬಲ್ಲವರು (ಕುಜ್ಞಶ. ೦-೭೫). [ಬೋಳು (< ಬೋಡು) + ಅರೆ$_2$ (<ಅಜ$^3_4$)]

**ಬೋಳವಿಸು** ' ಬೋಳಯಿಸು ' ನೋ.

**ಬೋಳಹ** (ಅ). 'ಹೋಗು' ಎಂಬ ಅರ್ಥದ ಒಂದು ಕೂಗು : ತೊಟ್ಟಿಲೊಳಿರ್ದವ್ಯಕ್ತ ಕಿಱುಗೂಸು ಬೋಳಹ ಬೋಳಹ ಭಟ್ಟಾರಾ ಎಂದತ್ತಾ

ಗಳ್ (ಪಶ್ಚಾ.ಶಾ. ೮೩-೧೪); "ಬೋಳಹಬೋಳಹ—ಗಚ್ಛಗಚ್ಛ, ಹೋಗಂ ಹೋಗು <ಪ್ರಾ. ವೋಲ" (ಪಶ್ಚಾ.ಶಾ. ಟಿಪ್ಪಣಿ. ೨೩೩). 'ದೇಹಿ₂' ಹೋ.
[<ಪ್ರಾ. ವೋಲ, ವೋಲಿಅ]

**ಬೋಳಾಮಸ್ತಕಿ** (ನಾ). ಒಂದು ಬಗೆಯ ಸಸ್ಯ: ಕುಷ್ಮಕೈ :—ಬೋಳಾಮಸ್ತಕಿ, ಬಂಗಾಳಪಚ್ಚೆ, ಪಚ್ಚೆತುತ್ತ ಇಷ್ಟು ವರಹ ತೂಕ . . . ತೊಡೆಯ ಗುಣ (ವಿದ್ಯಾ.ವಿ. ೦೦೯). [ ? ]

**ಬೋಳಿ** 'ಬೋಡಿ' ನೋ.

**ಬೋಳಿಸು** 'ಬೋಟಿಸು' ನೋ.

**ಬೋಳು** 'ಬೋಡು' ನೋ.

**ಬೋಳುಕ**, ಬೋಳಕ (ನಾ). ೧. ಊಳಿಗದವನು; **ಸೇವಕ**: ಚಿನ್ನದ ಬೆಳ್ಳಿಯ ಹಾಸದ ಬಿರುದಿನ ಕುನ್ನಿಗಳನು ಬೋಳು[ಪಾಠಾಂ. ಳ]ಕರು ಮನ್ನೆಯ ಮಿಗವೇಟೆಕಾರರು ಕಂಪಿಲನ ಕೈಸನ್ನೆಯುಳ್ಳವು ನಿಲಿಸಿದರು (ಕುಂರಾಸಾಂ. ೨೬-೯೦); ಮುಟ್ಟೂಳಿಗದ ಬೋಳುಕರನೆಲ್ಲರ ಬೀಳುಕೊಟ್ಟೋಳ ಪೊಕ್ಕನುತ್ಸವದಿ (ಪೋಟಪತ. ೨೦-೬೨). **ಬೋಳಕ** : ೧. ನಿಖಿಳ ಬೋಳಕರ ಕಟ್ಟೆಗೆಗಾಬರನೇಕವೃಗ್ಗಡೆ ಬೊಬ್ಬಿಟ್ಟುದು ರಾಯನೇಳ್ಗೆಯಲಿ (ಪೋಟಪತ. ೨೦-೩೮). ೨. ಕಲ್ಬುರ್ಗಿಯ ಸುರಪುರ ತಾಲ್ಲೂಕಿನ ಕೊಡೆಕಲ್ಲಿನಲ್ಲಿ ಇರುವ ಮುಸಲ್ಮಾನ್‌ಗೋರಿಗೆ ಪೂಜೆಮಾಡುವ, ಜಾಡರ ಜಾತಿಯ, ಹಿಂದೂವ್ಯಕ್ತಿ: ಈ ಜಾಡರಲ್ಲಿ ಒಂದು ಕುಟುಂಬದವನು ಇದರ ಪೂಜಾರಿ. ಈ ಕುಟುಂಬದವರಿಗೆ ಬೋಳಕರೆಂದು ಹೆಸರು (ಕರ್ನಾಗಸಂ. ೦೯೦). [ ? ]

**ಬೋಳುಗರೆ** 'ಬಳ್ಳುಗರೆ' ನೋ.

**ಬೋಳುಗೈ** (ನಾ). (ಬಳೆಗಳು ಮುಂತಾದ ಆಭರಣ, ಅಲಂಕಾರಗಳಿಲ್ಲದ) ಬರಿದಾದ ಕೈ,—ಖಾಲಿಯಾದ ಕೈ : ಬಳೆಯೊಡೆದ ಬೋಳುಗೈ! ತೈಲವಿಲ್ಲದ ವೇಣಿ ಪೊದರಾಗಿಹುದು ಬಿಣಿಲ್ಗೊಂಡು! (ಶ್ರೀರಾಪಾ. ೬೬೦-೮೩೬). [ಬೋಳು (<ಬೋಡು)+ಕೈ₂ (<ಕಯ್₂)]

**ಬೋಳುತಲೆ** 'ಬೋಳುದಲೆ' ನೋ.

**ಬೋಳುದಲೆ**, ಬೋಳುತಲೆ (ನಾ). ಕೂದಲಿಲ್ಲದ ತಲೆ; ಬೊಕ್ಕತಲೆ: ಸಿಡಿಲು ಹೊಡೆದಂತಸುರಸಭೆ ಬಂಗೆಡಲು ಮೆರೆದುದು ಬೋಳುದಲೆಗಳು (ಕೌಶಿರಾ. ೦೬-೩೩); ಬೋಳುದಲೆಯು ಬಂದಿಯೊಡನೆ ಅವನು ಹುಚ್ಚುಬಟ್ಟೆ ಕೂಗಾಡುತ್ತಿದ್ದನು (ಕೃವರು. ೦೮೬). **ಬೋಳುತಲೆ** : ಒಂದು ತಟ್ಟೆನ ತುಂಬ ಬೋಳುತಲೆಯ ಜಾರ್ಜರಾಜನ ರೂಪಾಯಿಗಳು (ಕಂಬಹು. ೨೦); ಬೋಳು ತಲೆಯನ್ನು ನಿಧಾನವಾಗಿ ಒರೆಸಿಕೊಳ್ಳುತ್ತ . . . ಕಣ್ಣನ್ನು ಅರಳಿಸಿದರು (ಪಾಳಪೊ. ೨). [ಬೋಳು (<ಬೋಡು) + ತಲೆ₁]

**ಬೋಳುಮಂಡೆ** 'ಬೋಟಿಮಂಡೆ' ನೋ.

**ಬೋಳೆ₁** 'ಬೋಟಿ' ನೋ.

**ಬೋಳೆ₂** (ನಾ). (ಕರಾ) ಗಿಡ, ಮರಗಳಿಲ್ಲದ ಬೋರೆ; ಬೋಳುಗುಡ್ಡ : ಹುಲ್ಲುಬೋರೆ: ದನಕರುಗಳೆಲ್ಲ ಬೋಳೆಗೆ ಮೇಯಲು ಹೋಗುತ್ತವೆ (ಕೂಂ). 'ಬೋರೆ₁' ಪರಾ. [<ಬೋಡು]

**ಬೋಳೆ₃** 'ಭೋಳೆ' ನೋ.

**ಬೋಳೆಯ₁** 'ಬೋಟಿಯ' ನೋ.

**ಬೋಳೆಯ₂** 'ಭೋಳೆ' ನೋ.

**ಬೋಳೆಯತನ** 'ಭೋಳೆತನ' ನೋ.

**ಬೋಳೈಸು** 'ಬೋಳಯಿಸು' ನೋ.

**ಬೋಟಿ₁**, ಬೋಳೆ₁ (ನಾ). ೧. ಸಾವು; ಮೃತ್ಯು : "ಬೋಟಿಂ=ಮಿಟ್ಟು; ಮುಂಡಂ; ಬಂಪೌಷಧಂ" (ಕಮುದ. ಶಂ.೦). **ಬೋಳೆ₁** : ೧. "ಬೋಳೆಯೆನಲ್ ಮೃತ್ಯು" (ಶಾರಂಅ. ೨೬). ೨. ಅಪಾಯ; ಗಂಡಾಂತರ; ವಿಪತ್ತು: ಒಂದು ಬೋಳಕ್ಕೆ ಬದುಕಿದೆ ತಂದೆ ಸಾಲ್ಲೆಯ್ಯ (ಹುಪ್ಪಕ. ಪೇ. ೨೧೨-೧೯); ಹರಹರ ಮಹಾದೇವೊಂದು ಬೋಳಕೆ ಬದುಕಿದೆನು (ಕುಪ್ಪಾ.ಶೀ. ೩-೨೯); ಶಿರವ ತಡವರಿಸುತ ಮಹಾದೇವರಿಯ ಬವರದ ಬೋಳಕೊವ್ಯೆಗೆ ಹರಣವುಳಿದುದೆಯೆನುತ ರವಿಸುತನೇಜಿದನು ಗಿರಿಯಿ (ಕೊರರಾ. ೪-೩-೦೬).

**ಬೋಟಿರ್**=ಸಾಯುವವರು; ಮರ್ತ್ಯರು : ಈ ಬಾನ ಬನ್ನದ ಕುನ್ನಿ ಮೂಟಿರ್ ಬೋಟಿರ್! (ರಾಮಾಶ್ವ. ೭೩೩-೪).

**ಬೋಟಿ₂** 'ಬೋಡ' ನೋ.

**ಬೋಟಿ₃**, ಬೋಳೆ₃ (ನಾ.). ಒಂದು ಬಗೆಯ ಔಷಧೀಸಸ್ಯ: "ಬೋಟಿಂ= ಮಿಟ್ಟು; ಮುಂಡಂ; ಬಂಪೌಷಧಂ" (ಕಮುದ. ಶಂ. ೧). ಸಕಪಾಯ ಕುಜಂಗಳ ದಂತಕಾಷ್ಠದೊಳ್ ಬೋಟಿ ಕೌಂಗು . . . ತೊಯ್ದುಕೊಂಡು ಪಲ್ಸುಲಿಯೆ ದಂತ ಬಳಮುಂ ಪಡೆಗುಂ (ಲೋಕೋಪ. ೭-೩); ಉಪ್ಪಂ ಬೋಟಿಮುಮಂ ಸಮನಪ್ಪಂತಿರೆ ಕೂಡಿ ಪುರಿದು. . . ಪೂಸುವುದು ಬಜ್ಜಿ ದುಷ್ಟವ್ರಣದೊಳ್ (ಅಶ್ವಶಾ. ೦೨-೧೯). **ಬೋಳೆ₃** : "ಇಕ್ಷುಪತ್ರಕಂ—ಬೋ(ಟಿ)ಳ" (೬ಪಂ. ೦೪); ವಿಷಮಜ್ವರಕ್ಕೆ ಕಷಾಯ :—ಬೇವಿನ ಒಳ ನಾರು, ಅಮರದವಳ್ಳಿ, ಬೋಳ, ಕಹಿಪಡವಲ ಇವ ಕಷಾಯವ ಮಾಡಿ . . . ಕುಡಿಸಲು ಬಹುದಿನಗಳಿಂದ ಇರುವ ವಿಷಮಜ್ವರ ಮಾಣುವುದು (ವಿದ್ಯಾ.ವಿ. ೦೩೯). 'ಬಾಳ₂' ಪರಾ.

[ದೇ.॥ ತುಳು. ಬೋಳ; ತೆಲು. ಬೋಳ, ಬೋಲ./ ಮರಾ. ಬೋಳ]

**ಬೋಟಿಗಡಲೆ**, ಬೋಳಂಗಡಲೆ, ಬೋಳಗಡಲೆ (ನಾ). ಒಂದು ಬಗೆಯ ಔಷಧೀಸಸ್ಯ : "ಅಮೃತ—ಬೋಟಿಗಡಲೆ, ಹಂದಿಗಡ್ಡೆ" (೬ಪಂ. ೪). **ಬೋಳಂಗಡಲೆ** : ಶುಂಠಿ . . . ಬೋಳಂಗಡಲೆಬೇರು ಇವುಗಳನ್ನು ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಶೀತಜ್ವರಂ ಗುಣಮಕ್ಕು (ಸಕವೈ. ೬೬). **ಬೋಳಗಡಲೆ** : "ದ್ವಿಬಲಾ—ಕಳ್ಳಂಗಡಲೆ, ಬೋಳಗಡಲೆ" (ಶಾಹಟೀ. ೨-೨-೮ ಪ); ಬೋಳಗಡಲೆಯ ರಸವಲ್ಲಿ ಒಂದು ಗುಳಿಗೆಯ ಕೊಡಲು ಸರ್ವಜ್ವರ ಮಾಣ್ಗುಂ (ವಿದ್ಯಾ.ವಿ. ೩೫). 'ಬೋಟಿತರ' ಪರಾ.

[ಬೋಟಿ₃ + ಕಡಲೆ]

**ಬೋಟಿತರ**, ಬೋಳತರ (ನಾ). ಒಂದು ಬಗೆಯ ಔಷಧೀಸಸ್ಯ: "ಬೋಟಿತರಮದು ಪತಂ ಮುಂಡಿ ಭಿಕ್ಷುಮೆಂದೆನಿಸಿಕ್ಕು" (ಮಂಗರಾ. ೩೯-೨೮); ಅಳೆಯೊಳ್ ಬೋಟಿತರಂ ಸಿತಾಜ್ಯದೊಳಮಂಗುರ್ ಬೆಲ್ಲದೊಳ್ ನಾಗರಂ . . . ಆಯುಷ್ಯಕರಂ (ಲೋಕೋಪ. ೯-೪೩); ಜೀರಿಗೆಯುಪ್ಪು ಬೋಟಿತರಂ . . . ಇಕ್ಕುವುದು ವಾಜಿಗೆ ಸರ್ವರುಜಾಪಹಾರಕಂ (ಅಶ್ವಶಾ. ೭-೩೦). **ಬೋಳತರ** : "ಮುಂಡಿ=ಬೋಳತರಂ" (ಶಾಕಶ್ಯ. ೨೬); ಬೆಲ್ಲಪತ್ರಂ . . . ಬನ್ನಿ ಗೌರೀದರ್ಭೆ ಬೋಳತರ ನೇತ್ರಮೋಹನದಪವಿಡವನ ಗರುಗಂ ಪಾರಿವಾಳ ನೇಜಿಲಪಲ್ಲವಾ ಇವು ಪತ್ರೆಗಳೊಳುತ್ತಮಂ (ವೀಶೈಕೃ. ೬-೦೦-೩೫); ಇಂಗು, ಸೈಂಧವ, ಶುಂಠಿ. . . ಬೋಳತರಂ, ವಾಯುವಿಳಂಗ ಇವಂ ಗೋಮೂತ್ರದಲ್ಲರೆದು ಕುಡಿಯ ಕೊಡಲು ಹೃದ್ರೋಗಂ ಕೆಡುಗುಂ (ಸಕವೈ. ೨೬೮). 'ಬೋಳದರಗ' ಪರಾ. [ದೇ.॥ ತೆಲು. ಬೋಡತರ]

**ಬೋಟಿಸು**, ಬೋಳಿಸು (ಕ್ರಿ). ೧. ಕೂದಲನ್ನು ತೆಗೆ; ಕ್ಷೌರ ಮಾಡು : ತಲೆ ಬೋಟಿಸಿ ಹೋತಂ ಮಿಡಿದಲೆಗುಡುವರ್ (ಸಮಪ. ೯-೦೨೦); ಕಿಡೆ ಮೂಗೋಜಿಂ ಬೋಟಿಸಿ ನಡುದಲೆಯೊಳ್ ಮೆಟಿಸನೊಡೆದು (ಕಮಿತ. ೧೮೮ ಕ್ರಯೋ); ಜಡೆಗಟ್ಟಿಲ್ಬಾರದೆಂದು ಬೋಟಿಸಿ (ಕವ್ಯಾಮ. ೧೨೦ ಕ್ರಯೋ). **ಬೋಳಿಸು** : ೧. ಅನು ನಿಮ್ಮ ಶರಣರಿಗೆ ಮಂಡೆಯ ಬೋಳಿಸಿಕೊಂಡು ಗಂಡುದೊತ್ತಾದೆನಯ್ಯಾ (ಬಸವ. ೩೩೬); ಮಂಡೆಯುಂ ನುಣ್ಣೇಳೆ ಬೋಳಿಸಿ (ಬಸಪು. ೩೯-೦೪); ದೀರ್ಘಕುಂತಳವ ಬೋಳಿಸುವಾಗ ಕಂಡು ಕೆಲದೊಳಿರ್ದವರು ಗೋಳಿಡರೆ (ಶರತ. ೬೬-೦೨೫). ೨. (ಅಲಂ) ನಿಶ್ಶೇಷವಾಗಿಸು; ಇಲ್ಲದಂತೆ ಮಾಡು; ನಷ್ಟ ಮಾಡು : ಹಣ್ಣು ಕಾಯಿಗಳೆಲ್ಲವನ್ನೂ ಬೋಳಿಸಿದರು (ಕಪಾಪೊ. ೨೯೮).

ಬೋಳಿಸಿಕೊಳ್ಳು=(ಆಲಂ)ಕಳೆದುಕೊಳ್ಳು; ನಷ್ಟಮಾಡಿ ಕೊಳ್ಳು: ಒಂದೆರಡು ಲಕ್ಷ ರೂಪಾಯಿಗಳನ್ನು ಬೋಳಿಸಿಕೊಳ್ಳಲು ಸಿದ್ಧನಾಗಿರುವ ಒಬ್ಬ ನಿರ್ಮಾಪಕ ಸಿಕ್ಕರೆ ಇಂತಹ ಚಿತ್ರಗಳನ್ನು . . . ತಯಾರಿಸಬಹುದು (ಚಾಂಗೇ. ೩೮). [ಬೋಳು (< ಬೋಳು) + –ಇಸು$_3$]

**ಬೋಳಿಸುಹ** (ನಾ). ಕೂದಲು ತೆಗೆಯುವಿಕೆ; ಕ್ಷೌರ: "ಕ್ಷೌರಂ, ಭದ್ರಾಕರಣಂ, ಮುಂಡನಂ, ವಪನಂ — ಈ ೪ ಬೋಳಿಸುಹ" (ಹಲಾಯು. ೦೦೯–೩೬). [ಬೋಳಿಸು + –ಹ$_2$ (<–ಪ$_2$)]

**ಬೋಳು** 'ಬೋಳು' ನೋ.

**ಬೋಳುಮಂಡೆ**, ಬೋಳುಮಂಡೆ (ನಾ). = ಬೋಳುದಲೆ: ಕರದ ಕಮಂಡಲಂ ಕಿಱಿಯ ಚಂಡಿಕೆ ಮಿಂಚುವ ಬೋಳುಮಂಡೆ (ಶಾಂತೀಶ. ೭–೯೩). **ಬೋಳುಮಂಡೆ**: ಒಬ್ಬರು ಬೋಳುಮಂಡೆ ಅರಸರಿದ್ದರು ನಮಗೆ (ಸ್ವಕೃಷೂ. ೦೬). [ಬೋಳು (< ಬೋಳು) + ಮಂಡೆ]

**ಬೋಳಿ$^3$**, ಬೋಳಿ$_1$ (ನಾ). ಒಂದು ಬಗೆಯ ಹರಿತವಾದ ಬಾಣ: "ಬೋಳಿ — ಒಂದಂಬಿನ ಭೇದಂ" (ಶಮದ. ೫೨. ೦); ಬೋಳಿಯಂಬಿನ ಸೂಚ್ಚುರಿ, ನಿಡುಗಲ್ಲ ಮೊಲ್ಸರಿ, ಬಡಿಗೋಲ ಜಡಿ (ರಾಮಾಶ್ವ. ೦೯೩–೨೯). **ಬೋಳಿ$_1$**: "ಬೋಳಿಬೆನಲ್ ಶರಭೇದಂ" (ಶಾರಾ. ೨೭); ಹಿಳಿಕು ಕವಲಂಬು ಬೋಳಿವಿದಿರೆಲೆ . . . ನವಿವಾಯನೆಂಬ ನಾನಾ ಸರಳನು ಸೆಳೆದು (ಸೋಮುತ. ೩–೨೭); ಗಱಿಯೊಂದವರಲ ಸರಲನ ಮಸೆದ ಮುಮ್ಮೊನೆಯ ಬೋಳಿಯೋ . . . ಎನಿಸಿ ಕಣ್ಗೆಡ್ತುವಾಗೆ (ಶಲ್ಯಾ. ೩–೩೨); ದುರಿಯೋಧನನ ಮೆಯ್ಯಲಿ ಮೆತ್ತಿದನು ಮುಮ್ಮೊನೆಯ ಬೋಳಿಗಳ (ಕುಮಾರವ್ಯಾ. ೦೯–೩೦).

**ಬೋಳಿಯ**, ಬೋಳಿಯ$_1$ (ನಾ). ದೇವತೆ; ಅಮರ: "ಅಮರ್ಗಣೆಗಳ್, ಕನಸಿಲ್ಲವರ್ . . . ಬೋಳಿಯರ್—ಈ ೯ ದೇವರ್ಕಳ ಪೆಸರ್" (ಅಭಿರಾ. ೪೮–೦೯); ಇಂದ್ರನೀತನೆ ಮತ್ತಮಿವರ್ ದಿಕ್ಪಾಳರೆ ಬೋಳಿಯರ್ ಚಂದ್ರವಕ್ತ್ರಿಯರಗ್ಗದ ದೇವಸ್ತ್ರೀಯರೆ . . . ಎಂದಿಂದ್ರಜಾಲಮನೀಕ್ಷಿಸಿ ಚೋದ್ಯಂಬಟ್ಟುದು ಭೂಪಸಭಾಜನಂ (ಲೀಲಾವ. ೯–೦೩೭); ದೇಸಿಗರಂ ದೇವರ್ಕಳ್ಗೊಡೆಯರ್ ಮಾಬ್ಬಿರೆ ನೀಱ್ಕರಿಸದೆ ನಿಮ್ಮ ದೊರೆಗೆ ಬೋಳಿಯರೊಳರೇ (ಶಮದ. ೨೪ ಶ್ರ ಯೋ); ಪೊಂಬೆಟ್ಟಂ . . . ಬೋಳಿಯರ್ಗೆ ವೋಳದಡೆಯುಮೆನಿಸಿ ಕಣ್ಗೊಳಿಕುಂ (ರಾಮಾಶ್ವ. ೭–೬). **ಬೋಳಿಯ$_1$**: ವಾಳದಂಡದ ಬೋಳಿಯಂಗೆ ಬಸವಣ್ಣಂ ಮುಯ್ಯಿಕ್ಕಿ ಕಾಳ್ಗೆದರ್ (ಬಸರ. ೪–೭೦); ನೀನಲ್ಲದೆ ಕೂರ್ತುದ್ ಪಾಲಿಸಿದ ಬೋಳಿಯರಾರ್ (ಶಂಕಶಿ. ೮೮).

**ಬೋಳಿಯರರಸ**=ದೇವತೆಗಳ ಒಡೆಯ: ದೇವದಾನಿಗಳರಸ . . . ದೇವ ಬೋಳಿಯರರಸ (ಬಂತೋಶ. ಪ. ೩೦೯–೦೦); ನೆನೆವರಿಗೆ ತನ್ನನು ತೆತ್ತು ಬದುಕುವೆನೆಂಬ ಬೋಳಿಯರರಸ ನಡೆತಂದ (ಕುಮಾರ. ೦೦–೩೨). **ಬೋಳಿಯರೆಱೆಯ**=ಬೋಳಿಯರರಸ: ಸುಕಸ್ತಂಗಳನಿತ್ತಂ ಹರ್ಷದಿಂದೆ ಬೋಳಿಯರೆಱೆಯಂ (ಪೀರವ. ೦೨–೦೨೦). **ಬೋಳಿಯರೋಜ**, ಬೋಳಿಯರೋಜ=ದೇವತೆಗಳ ಗುರು; ಬೃಹಸ್ಪತಿ: "ಗುರುವಿನಲ್ಲಿ ಬೋಳಿಯರೋಜನೆಂದು" (ಕಬ್ಬಮಂ. ೦೮); ಬೋಳಿಯರೋಜನ ಜಾಣ್ಮೆ . . . ತನ್ನೊಳೊದವೆ ಮನುವಿನ ಮಾರ್ಗದೆ ನಡೆಯುತ್ತೆ (ರಾಮಾಶ್ವ. ೦೦೯–೦೦); "ಬೃಹಸ್ಪತಿಗೆ ಪೆಸರೊರೆಗು ಬೋಳಿಯರೋಜನೆಂದು" (ಕಶರ. ೬೯).

**ಬೌಂಡರಿ** (ನಾ). ೧. ಎಲ್ಲೆ; ಮೇರೆ; ಸರಹದ್ದು. ೨. ಕ್ರಿಕೆಟ್ ಆಟದಲ್ಲಿ ಚೆಂಡನ್ನು ಹೊಡೆದಾಗ ಅದು ಮೈದಾನದ ಎಲ್ಲೆಯನ್ನು ದಾಟಿ ಹೋಗುವುದು; P ಇದಕ್ಕೆ ನಾಲ್ಕು ಓಟಗಳ ಬೆಲೆಯಿದೆ: ಒಂದು ಮ್ಯಾಚಿನಲ್ಲಿ ರಾಂ ಎಂಬರು ಬಾಲನ್ನು ಬೌಂಡರಿಗೆ ಕಳುಹಿಸಿದರು. ಆದರೆ ಅದು ಬೌಂಡರಿ ಗೆರೆ ದಾಟಲಿಲ್ಲ. ಈ ಕಾರಣದಿಂದ ಅಂಪೈರ್ ಅದನ್ನು ಬೌಂಡರಿ ಅಂತ ಹೇಳಲಿಲ್ಲ (ಮಾಂಗೇ. ೦೩೦).

[←ಇಂ. Boundary]

**ಬೌದ್ಧ** (ಗು). ೧. ಬುದ್ಧಿಗೆ ಸಂಬಂಧಿಸಿದ; ಬೌದ್ಧಿಕವಾದ. ೨. ಬುದ್ಧನಿಗೆ ಸಂಬಂಧಿಸಿದ: 'ಬೌದ್ಧಮತ' ಪರಾ. (ನಾ). ೩. ವಿಷ್ಣುವಿನ ದಶಾವತಾರಗಳಲ್ಲಿ ಒಂಬತ್ತನೆಯದು: "ಆ ಮತ್ಸ್ಯನಾ ಕೂರ್ಮ... ಬೌದ್ಧನಾ ಕೃಷ್ಣನೆಂದಾತನವತಾರ ಹತ್ತನಿಕ್ಕುಂ" (ಮಂಗರಾ. ೬–೦೯); ರಾಮನಾಮ ರತ್ನಹಾರ ದೊರಕಿತು ಎನಗೆ . . . ಬೌದ್ಧನೆಂಬೋ ಅತಳಗಳ ಬಿಗಿದಿತ್ತು ಬಹು ಬಗೆದಂತಿತ್ತು (ಪುರಂದ. ೫–೭೪–೩); ಬೌದ್ಧ ಒಂಭತ್ತನೆಯ ಅವತಾರ (ಗಗಶಾ. ೦೯–೪೩). ೪. ಬುದ್ಧನ ಮತಾನುಯಾಯಿ; ಬುದ್ಧನಿಂದ ಪ್ರವರ್ತಿತವಾದ ಮತದ ಅನುಯಾಯಿ: ನರಪತಿಯು ಹೊರೆಗಾ ಸಮಯದಲಿ ನೆರೆದು ಜೈನರು ಬೌದ್ಧರುಂ ಧಿಕ್ಕರಿಸಿ ಬಂದಿಂತೆಂದು ಹೇಳಿದರಾ ಮಹೀಶಂಗೆ (ಬಸಪು. ೫೦–೨೦). [ಸಂ.]

**ಬೌದ್ಧಮತ** (ನಾ). ಬುದ್ಧನಿಂದ ಪ್ರವರ್ತಿತವಾದ ಮತ: ಬೌದ್ಧಮತದ ನಾಶದೊಂದಿಗೆ ಬೌದ್ಧಗ್ರಂಥನಾಶವೂ ಆಯಿತು (ಕಶಾ. ೦೨೭); ಬೌದ್ಧಮತವೆಲ್ಲಾ ಒಂದೆಂದು ತಿಳಿದು ಶೂನ್ಯವಾದವೂ ವಸ್ತುವಾದವೆಂದು ಭ್ರಾಂತಿಗೆ ಅವಕಾಶವಾಗುವುದು (ಹಿಂದಸಾ. ೪೩). [ಸಂ.]

**ಬೌದ್ಧಾವತಾರ** (ನಾ). ವಿಷ್ಣುವಿನ ಒಂಬತ್ತನೆಯ ಅವತಾರ: ಬತ್ತಲೆ ನಿಂತಗೆ ಬೌದ್ಧಾವತಾರಗೆ . . . ಮುತ್ತೈದೆಯರಾರತಿಯೆತ್ತಿರೆ (ಪುರಂದ. ೪–೨೦೩–೩). [ಸಂ.]

**ಬೌದ್ಧಿಕ** (ಗು). ಬುದ್ಧಿಗೆ ಸಂಬಂಧಿಸಿದ: ಮುಕ್ತಾಯಕ್ಕ . . . ಬೌದ್ಧಿಕಅಜ್ಞಾನವನ್ನು ತನ್ನಲ್ಲೂ ಕಂಡುಕೊಂಡಿದ್ದಾಳೆ (ಕೂಪ್ವಳು. ೦೦೯); ವಿಶ್ವದ ಸಮಸ್ತ ಬೌದ್ಧಿಕ ವ್ಯಾಪಾರಗಳಿಗೆಲ್ಲ ಮನುಷ್ಯನೇ ಕೇಂದ್ರಬಿಂದು (ಗ್ರಂಥಾಂ. ೦). [ಸಂ.]

**ಬೌದ್ಧಿಕತೆ** (ನಾ). ಬುದ್ಧಿಯ ಪ್ರಧಾನತೆ: ಪಾತ್ರರಚನೆಯ ದೃಷ್ಟಿಯಿಂದ ಎಡ್ವಿನ್ ವ್ಯಕ್ತಿತ್ವದಲ್ಲಿ ಕತೆಯ ಬೌದ್ಧಿಕತೆಯನ್ನು ತೂಗಿಸಿಕೊಂಡು ಹೋಗುವ ನಿರ್ಲಿಪ್ತತೆ ಇಲ್ಲ (ಹೊಸಕ್ಷಿ. ೨೪೦). [ಸಂ. ಬೌದ್ಧಿಕತಾ]

**ಬೌಬೌ** (ನಾ). ಒಂದು ಅನುಕರಣ ಶಬ್ದ: ಬೌಬೌ ಎಂದು ನಾಯಿ ಬೊಗಳುತ್ತಲೇ ಇತ್ತು (ರೂಢಿ).

**ಬೌಲಿ**, ಬೌಳಿ (ನಾ). [ಸಂಗೀತ] ಒಂದು ರಾಗದ ಹೆಸರು: ಘನರಾಗಗಳು; ನಾಟಿ, ಗೌಲ, ವರಾಲೀ ಅಂತೆಯೇ ಬೌಲಿ, ಶ್ರೀರಾಗ (ಕತುಶ್ರ. ೦೩೦). **ಬೌಳಿ**: ಬೌಳಿ ... ೧೫ನೇ ಮೇಳಕರ್ತ ಮಾಯಾಮಾಳವಗೌಳದಲ್ಲಿ ಜನ್ಯ . . . ಬೆಳಗಿನ ಜಾವದಲ್ಲಿ ಹಾಡಬೇಕಾದ ರಾಗ (ಸಂಗೀಸಂ. ೦೨೯). 'ಭೌಳಿ' ಪರಾ [<ಸಂ. ಬೌಲೀ]

**ಬೌಳಿ** 'ಬೌಲಿ' ನೋ.

**ಬ್ಯತಿಪಾತ** 'ಬ್ಯತೀಪಾತ' ನೋ.

**ಬ್ಯತೀಪಾತ**, ಬ್ಯತಿಪಾತ (ನಾ). [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಪದಿನೇಳನೆಯದು: ಸೂರ್ಯಗ್ರಹಣ ಸಂಕ್ರಾಂತಿ ಬ್ಯತೀಪಾತಗಳೆಂಬ ಸಕಳಪುಣ್ಯದಿನಂ ದೊರೆಕೊಂಡಂದು (ಎಕ. XII, ಗುಬ್ಬಿ. ೦೦–೪೩; 1226). **ಬ್ಯತಿಪಾತ**: ಉತ್ತರಾಯಣ ಸಂಕ್ರಾಂತಿ ಬ್ಯತಿಪಾತದಂದು . . . ಧಾರಾಪೂರ್ವ್ವಕಂ ಮಾಡಿ ಬಿಟ್ಟ ಗದ್ದೆ (ಎಕ. VI, ಕಡೂರು. ೦೬–೩೪; 1171). [<ಸಂ. ವ್ಯತಿಪಾತ, ವ್ಯತೀಪಾತ]

**ಬ್ಯವಸಾಯ** 'ಬೆವಸಾಯ' ನೋ.

**ಬ್ಯವಹಾರ** 'ಬೆವಹಾರ' ನೋ.

**ಬ್ಯಾಂಕ್** 'ಬ್ಯಾಂಕು' ನೋ.

**ಬ್ಯಾಂಕು, ಬೇಂಕು, ಬ್ಯಾಂಕ್** (ನಾ). ಹಣಕಾಸಿನ ವ್ಯವಹಾರದ ಒಂದು ಸಂಸ್ಥೆ ; ಖಾತೆದಾರರ ಹಣವನ್ನು ಭದ್ರವಾಗಿ ಇಟ್ಟುಕೊಂಡು ಬೇಕಾದಾಗ ಹಿಂದಿರುಗಿಸುವುದು, ಅದರ ಮೇಲೆ ಬಡ್ಡಿ ಕೊಡುವುದು ಮತ್ತು ಈ ವ್ಯವಸ್ಥೆಯಿಂದ ತನ್ನಲ್ಲುಳಿದ ಹಣವನ್ನು ಸಾಲಕೊಟ್ಟು ಲಾಭ ಸಂಪಾದಿಸುವುದು ಮುಂತಾದ ಅನೇಕ ಏರ್ಪಾಡುಗಳನ್ನುಳ್ಳ ಸಂಸ್ಥೆ : ಬ್ಯಾಂಕಿನ ಮೂಲಕ ಹಣಕಾಸಿನ ವ್ಯವಸ್ಥೆ ಮಾಡುವುದೂ ಮಾಡಿಸುವುದೂ ಅನುಕೂಲವೆಂದು ತಿಳಿದು ಬಂದಿದೆ (ಹಣಶ್ರ. ೬೭) ; ಮಗನೆನಗೋಲೆಯು ಬರೆದರೆ ಬೇಕೆಸಗರ್ಥಕೆ ಬ್ಯಾಂಕಿನ ನಂಟು (ಇಂಜಾಕ. ೧೬-೩೪). **ಬೇಂಕು** : ಬೇಂಕಿನಲ್ಲಿ ಇಟ್ಟ ಹಣವೆಲ್ಲ ವೆಚ್ಚವಾಗುತ್ತ ಬಂತು (ಶಿಧಿಸ್ಮೆ. ೦೬೮). **ಬ್ಯಾಂಕ್** : ಅಂದು ಬ್ಯಾಂಕ್ ಇದ್ದುದರಿಂದ . . . ಬೇಸರ ಮರೆಯಲು ಸಾಧ್ಯವಾಯಿತು (ಕಾಯಿಳ. ೦೦೦). [← ಇಂ. Bank]

**ಬ್ಯಾಂಡು** (ನಾ). (ಸಾಮಾನ್ಯವಾಗಿ ಪಾಶ್ಚಾತ್ಯಪದ್ಧತಿಯ) ವಾದ್ಯ ಮೇಳ : ಒಂದು ಜೋಡು ಕರಡೀಮಜಲು, ಒಂದು ಜೋಡಿ ಬ್ಯಾಂಡು (ತಿಮುಗು ೩೪) ; ಎಲ್ಲಕ್ಕೂ ಮುಂದೆ ಬ್ಯಾಂಡು _ ಬಜಂತ್ರಿಯವರು (ಕಾರುಕ. ೧). [← ಇಂ. Band]

**ಬ್ಯಾಂಡೇಜ್** 'ಬ್ಯಾಂಡೇಜು' ನೋ.

**ಬ್ಯಾಂಡೇಜು, ಬ್ಯಾಂಡೇಜ್** (ನಾ). (ಔಷಧಿ ಹಾಕಿ ಗಾಯಗಳಿಗೆ ಕಟ್ಟುವ) ಬಟ್ಟೆಯ ಪಟ್ಟಿ, -ಕಟ್ಟು : ಕಂಪೌಂಡರರು ಬಂದು ಗಾಯ ತೊಳೆದು ಬ್ಯಾಂಡೇಜು ಕಟ್ಟುತ್ತಿದ್ದರು (ಮುಂಗಾಮು. ೦೦೩);ಬ್ಯಾಂಡೇಜನ್ನು ಬಿಚ್ಚಿ ಮಾಯುತ್ತಿದ್ದ ಗಾಯಗಳಿಗೆ ಮುಲಾಮು ಹಾಕುತ್ತಿದ್ದಳು (ಬೆಂಗಬಿ. ೨೨೬). **ಬ್ಯಾಂಡೇಜ್** : ಹೊಕ್ಕುಳದ ಮೇಲೆ ಬಿಗಿಯಲು ಬ್ಯಾಂಡೇಜ್ . . . ಇವುಗಳನ್ನು ಸಿದ್ಧಮಾಡಿಕೊಳ್ಳಬೇಕು (ಗೃಹವಿ. ೦೦೨). [← ಇಂ. Bandage]

**ಬ್ಯಾಕೀರ್ಣ** (ಗು). ಹರಡಿದ; ಚೆಲ್ಲಿದ : ದಿವಿಜದನುಜನಾಗೇಂದ್ರಭಾಸ್ವತ್ಕಿರೀಟಸ್ತೋಮಬ್ಯಾಕೀರ್ಣ್ನ ನಾನಾಮಣಿಕಿರಣಸಮಾವೇಷ್ಟಪಾದಾರವಿಂದಂ (ಕಇಅ. ೩೨-೦೨-೬೮ ; 1124). [< ಸಂ. ವ್ಯಾಕೀರ್ಣ ]

**ಬ್ಯಾಕ್ಟೀರಿಯಾ** (ನಾ). "ಕೊಳೆಯುವ ಸಸ್ಯಜನ್ಯ ಅಥವಾ ಪ್ರಾಣಿಜನ್ಯ ದ್ರವ್ಯಗಳಲ್ಲಿ ಉತ್ಪತ್ತಿಯಾಗಿ, ರೋಗಜನಕವೂ ಜೀವಿಸಹಾಯಕವೂ ಆಗಿ ಸೂಕ್ಷ್ಮದರ್ಶಕೀಯವೂ ವಿವಿಧಾಕಾರವೂ ಆದ ಏಕಾಣುಜೀವಿಗಳ ಜಾತಿಯಲ್ಲಿ ಒಂದು : ಏಕಾಣುಜೀವಿ" (Bacterium. ಇಂಕಬ) : ನಮ್ಮ ಕಣ್ಣಿಗೆ ಕಾಣದೆ ನಮ್ಮ ಸುತ್ತಲು ಲೆಕ್ಕವಿಲ್ಲದಷ್ಟು ಅಣುಜೀವಿಗಳು ಆವರಿಸಿಕೊಂಡಿವೆ. ಇವುಗಳನ್ನು ಬ್ಯಾಕ್ಟೀರಿಯಾ (Bacteria) . . . ಮೈಕ್ರೋಬ್ಸ್ (Microbes) ಎಂಬ ಅನೇಕ ಹೆಸರುಗಳಿಂದ ಕರೆಯುತ್ತಾರೆ (ಸಸ್ಯಶಾ. ೦೩೮) ; ರೋಗರುಜಿನಗಳಿಗೆ ಕಾರಣವಾದಂಥ ಜೀವಿಗಳಲ್ಲಿ ಮೊದಲು ಬ್ಯಾಕ್ಟೀರಿಯಾ ವೈರಸ್‌ಗಳನ್ನು ಪರಿಶೀಲಿಸಿದರೆ, ಇವು . . . ನಮ್ಮ ಮನೆಯನ್ನು ಹೊಕ್ಕು ಮಲಿನ ಮಾಡುವುವು (ಗೃಹವಿ. ೦೮೨).
[← ಇಂ. Bacteria. / **P** ಇಂಗ್ಲಿಷ್‌ನಲ್ಲಿ ಇದು 'Bacterium' ಎಂಬುದರ ಬಹುವಚನರೂಪ]

**ಬ್ಯಾಖ್ಯಾನ** (ನಾ). ವಿಸ್ತಾರವಾದ ನಿರೂಪಣೆ : ಭವ್ಯಶ್ರವ್ಯಕಾವ್ಯನಾಟಕಾಖ್ಯಾಯಿಕಾಖ್ಯಾನಾದಿ ಬ್ಯಾಖ್ಯಾನವ್ಯಾಪಾರಾವ್ಯಪತನು ಶ್ರೀಹರ್ಷಶರಸಶ್ರುತೀಶ್ವರಶ್ರವಣ ಪುಟಪೇಯಗೇಯಾಮೃತರಸಾಸ್ವಾದಸಂಜನಿತ ಸಂತತೋದ್ಧಷ್ಟ (ಎಕ. XI, ದಾವಣ. ೪೦-೬೭; 1148). [<ಸಂ. ವ್ಯಾಖ್ಯಾನ]

**ಬ್ಯಾಗು** (ನಾ). ಚೀಲ; ಸಂಚಿ : ಇದೋ ನಿಮ್ಮ ಬ್ಯಾಗು. ನಿಮ್ಮ ಹಣ (ಏಲಬೀ. ೦೨). [← ಇಂ. Bag]

**ಬ್ಯಾಟರಿ** (ನಾ). ೧. ಒಣ ವಿದ್ಯುತ್‌ಕೋಶಗಳಿಂದ ಬೆಳಗಿಸಬಲ್ಲ ಸಣ್ಣ ಬಲ್ಬಿನ ದೀಪ; ಟಾರ್ಚು: ಅಲ್ಲೊಬ್ಬರು ಇಲ್ಲೊಬ್ಬರು ತಮ್ಮ ಕೈಯಲ್ಲಿದ್ದ 'ಬ್ಯಾಟರಿ'ಯನ್ನು ಹುಡುಗಿಯ ಕಡೆ ತಿರುಗಿಸಿ ಬೆಳಕು ಚೆಲ್ಲಿದರು (ಅರಸೂ. ೦೦); ಉಪಮೆ ಈ ದೃಷ್ಟಿಯಿಂದ ಕತ್ತಲಿದ್ದಲ್ಲಿ ಬೆಳಕು ಚೆಲ್ಲುವ ಬ್ಯಾಟರಿ (ಶಿಕಾಮು. ೦೪೬). ೨. ಒಣ ವಿದ್ಯುತ್‌ಕೋಶಗಳ ಶ್ರೇಣಿ : ಇನ್ನೆರಡು ವಿದ್ಯುತ್ತನ್ನು ಸೃಜಿಸುವ ಬ್ಯಾಟರಿ ಎಂಬ ಪೆಟ್ಟಿಗೆಗಳಿಗೆ ಹೋಗಿವೆ (ಮನಶ. ೬೭). ೩. ತುಪಾಕಿದಳ; ತುಪಾಕಿ ಸೈನಿಕರ ತುಕಡಿ : ನಮ್ಮ ಬ್ಯಾಟರಿಯ ಸರದಿ ಬಂದಾಗ ರಣಭೂಮಿಗೆ ಹೋಗಲೇ ಬೇಕಲ್ಲ ? (ಶ್ರಬಸ. ೫೯). 'ಬತೇರಿ' ನೋ. [← ಇಂ. Battery ]

**ಬ್ಯಾದ, ಬಿಯದ, ಬಿಯ್ಯದ, ಬೀಯದ** (ನಾ). ಬೇಡ ; ಶಬರ : ಶೃಗಾಳಮಂತನೆಂಬೊಂ ಬ್ಯಾದರಾಜಂ ಧನಮಿತ್ರನೆಂಬ ಸೆಟ್ಟಿಗೆ ತಂದು ಕೊಟ್ಟೊಡೆ (ಶಾಪುಂಶ್ರೀ. ೦೫೮). **ಬಿಯದ** : "ಬಿಯದರೆಂದುಂ, ಬಿಲ್ಲರೆಂದುಂ ವ್ಯಾಧರ್" (ಶಶಸಾ. ೫೨-೦೦೩); ಜೇಡಿದೊಡೀಯದ್ದೆಡೆ ಬಿಯದರ್ ಮೃಗಮಾಂಸವ (ಕಾದಂಪೂ. ೦೬೬); ಮುನ್ನೋರ್ವ ಬಿಯದ ಪುಲ್ಲೆಯ ಬಡಲು ಮಜೀ ಗುಣಿಸಿ ಮರಳಿ ತಾ ಬರಲಿಲ್ಲವೇ (ಶ್ರೀಶಬಾ. ೮-೪೫). **ಬಿಯ್ಯದ** : ಪಂಕ್ತಿಗೆಯನು ಮಾಡಿದರು ಮೃಗಂಗಳ ಮೊತ್ತವನಲ್ಲಿ ಬಿಯ್ಯದರು (ಕುಮಾರಾ. ೨೬-೬೧). **ಬೀಯದ** : ಸಿಂಗಮಿಭಕುಂಭಂಬೊಯ್ವುದಂ ಕಾಣುತ್ತುಂ ನಡುಕಂ ಕೆಮ್ಮಿಗೆ ಬೀಯದುಂ ಭರದೆ ನೋಡುತ್ತೊಂದು ಪಾಟಿಪ್ಪವಿಯೊಳ್ ಕೆಡೆದಾಗಳ್ ( ಶಸರ. ೪-೨೨೬ ); ಬೆದಱೆ ಶಬರಿಯ ರಕ್ಷಿಪರು ಬೀಯದರನರೆಬರು ಮರನನೇಱಿದರು (ಕಾಳ್ವಶಾ. ೫-೩೨ ).
**P** ಬಿಯ್ಯದ, ಬೀಯದ—ಇವು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪಗಳಿರಬಹುದು. [< ಸಂ. ವ್ಯಾಧ ]

**ಬ್ಯಾದಿ, ಬಿಯದಿ**$_2$ (ನಾ). ರೋಗ ; ವ್ಯಾಧಿ : ಸೊಡರಂ ನೋಡಿದಾಗಳ್ ಕಣ್ಣೀರ್ಗಳ್ ಸುರಿವುದುಮಂ ಕಂಡೀಗಳೀತಂಗೆ ಬ್ಯಾದಿಗಳೆಂದು ಬಗೆದಿರ್ಪಿನಂ (ವಡ್ಡಾರಾ. ೨೬-೦೭). **ಬಿಯದಿ**$_2$ : ವ್ಯಾಧಿ–ಬಿಯದಿ (ಕಮುದ. ೨೩೪ ಪ್ರಯೋ) ; ವ್ಯಾಧಿ, ಬಿಯದಿ (ಕಪ್ಪಾಮ. ೦೬೦ ಪ್ರಯೋ); ಗೋಮಾಪಾತ್ಮ್ಯಯಂ ಬಣ್ಣಿಪೊಡೆನಗಮಳವೆ ! . . . ಶೃಂಗಂಗಳೆಡೆಯಂ ತುಱಿಪ, ಮನುಜಂಗೆ ಬಂದ ಬಿಯದಿ ತಪ್ಪುಗುಂ (ರಾಮಾಶ್ವ. ೦೦೫-೦೫).
[<ಸಂ. ವ್ಯಾಧಿ]

**ಬ್ಯಾಪ್ತ** (ಗು). ಆವರಿಸಿದ ; ತುಂಬಿದ ; ವ್ಯಾಪ್ತವಾದ : ಕೀರ್ತಿಬ್ಯಾಪ್ತದಿಶಂ ನಾಗತಿನೃಪಾಳನಿಂದುದಯಿಸಿದಂ (ಎಕ. XI, ದಾವಣ. ೩೨-೩೪ ; 1171).
[< ಸಂ. ವ್ಯಾಪ್ತ]

**ಬ್ಯಾಪ್ತಿ** (ನಾ). ವಿಸ್ತಾರ; ಹರಹು : ಇಂದ್ರತ್ವಮಂ ವಜ್ರಿಗೆ ದಿಮಸ್ತರಂಗಾದಿನಬ್ಯಾಪ್ತಿಯ ಕೊಟ್ಟು (ಸೌಇಇ. XX, ೦೦೫-೦ ; 1146).
[< ಸಂ. ವ್ಯಾಪ್ತಿ]

**ಬ್ಯಾಬ್ಯಾ** (ನಾ). ಒಂದು ಅನುಕರಣ ಶಬ್ದ : ಒಮ್ಮೊಮ್ಮೆ ಕಳ್ಳ ಕೊದಾರಿಯೊಂದು ಮಂದೆಯಿಂದ ತಪ್ಪಿಸಿಕೊಂಡು . . . 'ಬ್ಯಾ ಬ್ಯಾ' ಎನ್ನುತ್ತಾ ರೊಪ್ಪದ ಕಡೆ ಕತ್ತಲೆಯಲ್ಲಿ ಓಡಿ ಬರುವುದನ್ನು ಕೇಳಬಹುದು (ಸಸ್ಸೂರು.೦೮).

**ಬ್ಯಾಮೋಹ** (ನಾ). ಅತಿಶಯವಾದ ಆಕರ್ಷಣೆ : ಕಾಮಬ್ಯಾಮೋಹವಿನಿಮುರ್ಕ್ತರು . . . ಮುಕ್ತ್ಯಂಗನಾರಾಧಕರ್ (ಎಕ. XI, ದಾವಣ. ೦೫೦-೩೦; 1101). [<ಸಂ. ವ್ಯಾಮೋಹ]

**ಬ್ಯಾರ** 'ಬೇರ$_2$' ನೋ.

**ಬ್ಯಾರಿ** 'ಬೇರಿ$_1$' ನೋ.

**ಬ್ಯಾಲ, ಬಿಯಳ** (ನಾ). ೧. ಪಳಗದಿರುವ ಆನೆ ; ಕಾಡಾನೆ ; ಉಗ್ರವಾದ ಆನೆ : ಭಾಳಲೋಚನ ವಾಹನೋಗ್ರಬ್ಯಾಲನಂ ತನ್ನಿ ಪ್ರಬಲಶುಂಡಾಲವಿಭುವಂ ತನ್ನಿ (ಬಸವು. ೫೯-೩೩). **ಬಿಯಳ** : ೧. ವ್ಯಾಳ_ಬಿಯಳ (ಕಮುದ. ೨೩೪ ಪ್ರಯೋ.). ೨. ಒಬ್ಬಾತನ ಹೆಸರು : ನಾಟ್ಯಾಮುಣ್ಣ ಬಿಯಳನುಂ ಪಿರಿಯ ಮುಗುಳಿಯ ಕೊಮಾರಯ್ಯನುಂ

(ಎಕ. VI. ಕಳ್ಮ. ೩-೧೩ ; 899 ?) ; ಜಕ್ಕಬೆಯ ಮಗಂ ಬಿಯಳ (ಮೈಅಅ. ೧೯೨೯, ೩೩-೭; 1019). [<ಸಂ. ವ್ಯಾಲ]

**ಬ್ಯಾಲೆ** (ನಾ). ಮಾತುಗಳಿಲ್ಲದೆ, ಕೇವಲ ನರ್ತನದಿಂದಲೆ ಅಭಿನಯಿಸುವ ನಾಟಕ ; ನೃತ್ಯನಾಟಕ : ಶ್ರೀ ಉದಯಶಂಕರರು . . . 'ಬ್ಯಾಲೆ' ಪದ್ಧತಿಯನ್ನು ನಮ್ಮಲ್ಲಿ ಆಚರಣೆಗೆ ತರಲು ಮುನ್ನಡೆ ಕೈಕೊಂಡರು (ಭಾರದ. ೩೬೩); ತಮ್ಮ ಗೆಲುವನ್ನು ಗಾಳಿಯಲ್ಲಿ ರೂಪಿಸುತ್ತ, ಬ್ಯಾಲೀ ಹುಡುಗಿಯರ ಹಾಗೆ ಹಗುರವಾಗಿ ತೇಲುತ್ತ . . . ನೆಲಕ್ಕೆ ಬಿದ್ದ ಎಲೆಗಳ ಮೇಲೆ ಎಡ್ವಿನ್ ಹೆಜ್ಜೆಯಿಟ್ಟ (ಹೊಕಕ್ಷಿ. ೨೬೭).

[← ಇಂ. Ballet]

**ಬ್ಯಾವರ್ಣಿಸು** (ಕ್ರಿ). ಬಣ್ಣಿಸು ; ವರ್ಣಿಸು : ಸಮಸ್ತಸಾರಸೌಖ್ಯಫಲಮುನಲ [ಘು]ವಾಕ್ಯಂಗಳಿಂ ಬ್ಯಾವರ್ಣ್ನಿಸಿ ದತ್ತಚಿತ್ತೆಯಾಗಿ (ಸೌಇಇ. XX. ೨೦೩-೨೮; 1247). [<ವ್ಯಾವರ್ಣಿಸು]

**ಬ್ಯೋಮ** (ನಾ). ಆಕಾಶ ; ಗಗನ : ಸೋಮಸುತಂ ಗೌಡಬಲ ಬ್ಯೋಮಾಂಕಂ ಸೂರನನ್ನೆ ವರ್ತಿಸುತಿರ್ಪ್ಪಂ (ಎಕ. XI. ದಾವಣ. ೧೩-೫೩; 1271). [< ಸಂ. ವ್ಯೋಮನ್]

**ಬ್ರಜ** (ನಾ). ಗುಂಪು ; ಸಮುದಾಯ ; ಸಮೂಹ : ಪರಸಾಮನ್ತ ಕುರುಬ್ರಜೋಗ್ರ ನಿಧನಪ್ರೋದ್ಭೀಮನಂ . . . ಧರೆ ಕೀರ್ತ್ತಿಪ್ಪುದೆ (ಎಕ. XI, ಚಿತ್ರದು. ೩೬-೩೦; 1199). [< ಸಂ. ವ್ರಜ]

**ಬ್ರಣ, ರಣ**$_1$ (ನಾ). ಹುಣ್ಣು ; ವ್ರಣ : ನೊಣನೊಲ್ವುದೆ ಚಂದನಮಂ ಬ್ರಣದೊಳ್ಮಗ್ನತೆಯನುಳಿಗುಮೆ ಮಾಚಿದೆಂದುಂ (ಉಕಾರ. ೮೬). **ರಣ**$_1$ : "ರಣ–ವ್ರಣ = ಹುಣ್ಣು" (ತದ್ಭಕೋ. ೩೭). [< ಸಂ. ವ್ರಣ]

**ಬ್ರತ, ಬತ**$_1$ (ನಾ). ನೋಂಪಿ; ನಿಯಮ ; ವ್ರತ : ಧಾರಿಣಿಮಹಾದೇವಿ . . . ಗುರುಭಕ್ತಿಗೆಯ್ದು ಬಂದಿಸಿ ಶ್ರಾವಕಬ್ರತಂಗಳನೇಱಿಸಿಕೊಂಡು ಬಱಿಕಿಂತೆಂದಳ್ (ವಡ್ಡಾರಾ. ೮೦-೧೮); ತನುವಂ ತೆಯ್ದಪ್ಪಳಕ್ಕ ಬ್ರತದೊಳೆನುತೆ ಕನ್ಯಾಬ್ರತಕ್ಕಂತೆ ಪೂಣ್ದರ್ದಂ (ಕಾದಂಅ. ೬೯); ಬಾರದು ಬಾರದು ವಿಷಯಂಗೆ ಪಶುಪತಿಯ ಬ್ರತವು (ಬಸವ. ೬೬೦). **ಬತ**$_1$ : ಇಂತಿದೇ ಬತವಿದೇ ಮತವಿಂತಿದೆ ಕಜ್ಜದುಜ್ಜುಗಂ (ವೃಕವಿ. ೩೬-೬೦).

[< ಸಂ. ವ್ರತ]

**ಬ್ರತಿ** (ನಾ). ವ್ರತನಿಷ್ಠನಾದವನು ; ಮುನಿ ; ಯತಿ : ಇದು ವಿದ್ಯಾದಾನಂ ದೇವಾರಂಗೆಯ್ವ ಬ್ರತಿಗಳುಣ್ಬನ್ (ಎಕ. III, ನಂಜನ. ೧೩೩-೦; ಸು. 970 ?); ಶ್ರೀಮತ್ಸುರೇಶ್ವರಬ್ರತಿ ಸೋಮೇಶ್ವರಚರಣಯುಗಳಸರಸಿಜ ಭೃಂಗಂ (ಎಇ. XXVIII, ೩-೬; 1082) ; ಬ್ರತಿಗಳಿರ್ಪ ಮನೆ ಮಠವೆಂಬುದು (ಶಬ್ದಮ. ೩೦-೦೯೩). [<ಸಂ. ವ್ರತಿನ್]

**ಬ್ರಧ್ನ** (ನಾ). ೧. ಸೂರ್ಯ. ೨. ಮರದ ಬೇರು. ೩. ದಿನ; ದಿವಸ. ೪. ಎಕ್ಕದ ಗಿಡ. ೫. ಸೀಸ. ೬. ಕುಮರೆ. ೭. ಶಿವ. ೮. ಬ್ರಹ್ಮ. ೯. ಬಾಣದ ಮೊನೆ. ೧೦. ಒಂದು ರೋಗದ ಹೆಸರು. [ಸಂ.]

**ಬ್ರಮಾತಿ** 'ಬೊಮ್ಮಪತಿ' ನೋ.

**ಬ್ರಯು** 'ಬಿಯು' ನೋ.

**ಬ್ರಶ್ಯು, ಬ್ರಷ್ಷು** (ನಾ). (ಹಲ್ಲುಜ್ಜಲು, ಬಣ್ಣಬಳಿಯಲು, ದೂಳು ಹೊಡೆಯಲು, ಚಿತ್ರಬರೆಯಲು ಇತ್ಯಾದಿಯಾಗಿ ಅನೇಕ ರೀತಿಯಲ್ಲಿ ಉಪಯೋಗಿಸುವ) ಬಿರುಗೂದಲು, ಸಣ್ಣತಂತಿ ಮುಂತಾದುವು ಗಳಿಂದ ಮಾಡಿದ ಕುಂಚ : ಹುಲ್ಲುಜ್ಜುವ ಬ್ರಶ್ಯು ಮತ್ತು ಸಾಬೂನಿನ ಪೆಟ್ಟಿಗೆ ಕೈಸೇರಿತು (ಬಕಾಂಗಿ. ೦೦೦). **ಬ್ರಷ್ಷು** : ಬ್ರಷ್ಷಿಗೆ ಪೇಸ್ಟ ಅಂಟಿಸುತ್ತಿದ್ದಂತೆ . . . ಹೊತ್ತಲ್ಲದ ಹೊತ್ತಿನಲ್ಲಿ ಯಾವ ಮುಸಕು ಮುಸಕು ಏನು ಅಸ್ಪಷ್ಟವಾಗಿ ಆಡಿತು ಎಂದು ಹುಡುಕತೊಡಗಿದ (ಶ್ರೀಕ್ಷ. ೪).

[← ಇಂ. Brush]

**ಬ್ರಷ್ಷು** 'ಬ್ರಶ್ಯು' ನೋ.

**ಬ್ರಹ್ಮ** (ನಾ). ೧. ಸಕಲಸೃಷ್ಟಿಗೂ ಮೂಲಕಾರಣವಾದ, ಗುಣಾತೀತವಾದ ಪರಾತ್ಪರ ತತ್ತ್ವ ; ಪರಮಾತ್ಮ : ಬ್ರಹ್ಮವೆನಲದಱಿಂದಧಿಕವೇನಿಲ್ಲವದು ತನ್ನಿಂದ ತಾನೆ ತೋಱುತಿರ್ಪುದು (ಅಮೃತ. ೦-೦೪); ಚೈತನ್ಯಸ್ವರೂಪನಾದ ಬ್ರಹ್ಮನೆಂಬ ವಸ್ತು ಪರಬ್ರಹ್ಮ, ಅಪರಬ್ರಹ್ಮನೆಂದು ಎರಡು ವಿಧ (ಹಿಂದಗಾ. ೨೦೦) ; ಸತ್ಯವೆಂದರೂ ಜ್ಞಾನವೆಂದರೂ ಅನಂತವೆಂದರೂ ಬ್ರಹ್ಮವೆಂದರೂ ಒಂದೇ (ಭಾರತ. ೦೦೮). ೨. ವೇದಮಂತ್ರ. ೩. ವೇದಗಳು. ೪. ಆಗಮಗ್ರಂಥ ಸಮೂಹ. ೫. ಓಂಕಾರ; ಪ್ರಣವ. ೬. ಚತುರ್ವರ್ಣಗಳಲ್ಲಿ ಮೊದಲನೆಯದು ; ಬ್ರಾಹ್ಮಣ ವರ್ಣ. ೭. ವ್ರತಯೋಗ ; ತಪಸ್ಸು. ೮. ಬ್ರಹ್ಮಚರ್ಯ. ೯. ಮೋಕ್ಷ ; ಮುಕ್ತಿ : "ಕೈವಲ್ಯಮಪುನರ್ಭವಂ ಬ್ರಹ್ಮಮಕ್ಷರಂ . . . ಎನೆ ಮೋಕ್ಷಕ್ಕೆ ಪೆಸರೆನಿಕ್ಕುಂ" (ಮಂಗರಾ. ೮-೨೬). ೧೦. ವೇದವೇದಾಂತ ಜ್ಞಾನ : ತತ್ತ್ವಜ್ಞಾನ. ೧೧. ಬ್ರಹ್ಮನನ್ನು ಅರಿತವನು ; ಬ್ರಾಹ್ಮಣ : ಬ್ರಹ್ಮವಿದನಾದವನೇ ಬ್ರಹ್ಮನನ್ನು ಬಲ್ಲವನೇ ಬ್ರಹ್ಮನಾಗುತ್ತಾನೆ (ಭಾರದ. ೦೨೦). ೧೨. ಆತ್ಮ. ೧೩. ಗಾಯತ್ರೀಮಂತ್ರ. ೧೪. ಸೋಮಯಾಗದ ಹೋತೃ, ಉದ್ಗಾತೃ, ಬ್ರಾಹ್ಮ ಮತ್ತು ಬ್ರಹ್ಮ ಎಂಬ ನಾಲ್ವರು ಋತ್ವಿಜರಲ್ಲಿ ಒಬ್ಬ : ಅಗಸ್ತ್ಯಂ ಬ್ರಹ್ಮನಿರ್ದಂ . . . ಋಷಿಗಳ್ ಅಧ್ವರ್ಯೂದ್ಗಾತೃ ಹೋತಾರರುಂ ಋತ್ವಿಜರುಂ ಸಾಮಾಜಿಕರುಮಾಗೆಸೆದರ್ (ರಾಮಾಶ್ವ. ೪೬-೨೩) ; ಯಾಗದಲ್ಲಿ ನಾಲ್ಕು ಋತ್ವಿಕ್ಕುಗಳು ಮುಖ್ಯವಾಗಿರಬೇಕು. ಹೋತನೆಂಬವನು ಋಗ್ವೇದವನ್ನು ಹೇಳುತ್ತಾನೆ . . . ಬ್ರಹ್ಮನೆಂಬವನು ಅಥರ್ವಣವೇದವನ್ನು ತಿಳಿದವನು, ಸರ್ವಜ್ಞನಾಗಿ . . . ತಪ್ಪಿದುದನ್ನು ತಿದ್ದುತ್ತ ಯಾಗವನ್ನು ಮುಖ್ಯವಾಗಿ ಪೂರ್ತಿಮಾಡಿಸುವವನು (ಹಿಂದಗಾ. ೮೩೬). ೧೫. ತ್ರಿಮೂರ್ತಿಗಳಲ್ಲಿ ಒಬ್ಬ; ಸೃಷ್ಟಿಕರ್ತ ; ಪಿತಾಮಹ : "ಬ್ರಹ್ಮಾ, ಸೃಷ್ಟಾ, ಧಾತಾ . . . ಕಮಲಾಸನಃ — ಈ ೨೦ ಬ್ರಹ್ಮನ ಪೆಸರ್" (ಶಬ್ದಮ. ೨-೬) ; ವಿಷ್ಣುಗೆಱಗಿ ನುಡಿದಂ ಬ್ರಹ್ಮಂ (ಜಗವಿ. ೦-೩೪). ೧೬. ಬ್ರಹ್ಮಲೋಕ : ಆತ್ಮದ ಬಯಕೆವಳ್ಳಿ ದಾಂಗುಡಿ ದಾಂಟಿ ಕಾಲದೇಶಾಂಡವ ನೊಡೆದು ಮಿಾಂಟಿ ಬ್ರಹ್ಮಮಂ ತಬ್ಬುವುದು (ಶತ್ರಾಂಗ. ೬೩-೦೭೬೮). ೧೭. ಬ್ರಹ್ಮಾಸ್ತ್ರ. ೧೮. ಐಶ್ವರ್ಯ ; ಸಂಪತ್ತು. ೧೯. ಆಹಾರ. ೨೦. ದಿಟ ; ಸತ್ಯ. ೨೧. ಬ್ರಾಹ್ಮಣತ್ವ. ೨೨. ಬೃಹಸ್ಪತಿ. ೨೩. ಸೂರ್ಯ. ೨೪. ಏಳುಜನ ಪ್ರಜಾಪತಿಗಳು. ೨೫. ರುದ್ರ. ೨೬. ಇಂದ್ರ. ೨೭. ಚಂದ್ರ. ೨೮. ಅಗ್ನಿ. ೨೯. ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಒಂದು. ೩೦. ಬುದ್ಧಿಜೀವಿ. ೩೧. ಒಂದು ಭೂತ ; ಕ್ಷುದ್ರದೇವತೆ : ಅಂದಿನ ಮಲೆನಾಡಿನಲ್ಲಿ ಭೂತ, ಪ್ರೇತ, ಪಿಶಾಚಿ . . . ಜಟಿಗ, ಬ್ರಹ್ಮ, ಕಲ್ಲುಕುಟಿಗ ಮುಂತಾದ ಹಲವು ಹೆಸರಿನ ಹಲವು ಜಾತಿಯ ದೆವ್ವಗಳಿದ್ದವು (ಕಂಜಕಂ. ೨). ೩೨. [ಛಂದ] ಅಂಶಗಣಗಳಲ್ಲಿ ಒಂದು ; ಎರಡು ಅಂಶಗಳ ಗಣ : 'ಬ್ರಹ್ಮಗಣ' ಪರಾ. ೩೩. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಒಂದು : ವಿಷ್ಕಂಭ . . . ಬ್ರಹ್ಮ . . . ವೈಧೃತಿಗಳೆಂಬ ಇಪ್ಪತ್ತೇಳುಯೋಗಂಗಳುಂ (ಬವೇಕ. ೨೬೨).

**ಬ್ರಹ್ಮಶೌಚ**=(ಆಲಂ) ಅತಿವಿಳಂಬವಾಗುವ ಶೌಚಕ್ರಿಯೆ : ಆವನ ಬ್ರಹ್ಮಶೌಚ ಮುಗಿಯುವವರೆಗೆ ನನಗೆ ಅವನನ್ನು ಕಾಯುವ ತಾಳ್ಮೆಯಿಲ್ಲ (ರಜಿ). [ಸಂ. ಬ್ರಹ್ಮನ್]

**ಬ್ರಹ್ಮಕಂಬಿ** 'ಬ್ರಹ್ಮಗಂಬಿ' ನೋ.

**ಬ್ರಹ್ಮಕರ್ಮ** (ನಾ). ೧. ಯಾಗದಲ್ಲಿ ಋತ್ವಿಜನಾದ 'ಬ್ರಹ್ಮ'ನು ಮಾಡುವ ಕಾರ್ಯ : ಉನ್ನತತಪಂ ಬ್ರಹ್ಮಕರ್ಮಂ ಬೆಳೆದ ಪುಣ್ಯ

ವೊಳಗಾದನಂ ತೊಱೆದು ಕಳೆದು . . . ತೆಂಕಮುಖನಾಗಿ ಪೋಪಂ (ಹಕಹಾ. ೨-೨೨). ೨. ಬ್ರಾಹ್ಮಣನು ಮಾಡುವ ಧಾರ್ಮಿಕ ಕ್ರಿಯಾಚರಣೆ. [ಸಂ. ಬ್ರಹ್ಮಕರ್ಮನ್]

**ಬ್ರಹ್ಮಕಲ್ಪ,** ಬ್ರಹ್ಮಕಲ್ಪ (ನಾ). ೧. ಬ್ರಹ್ಮನ ವಯಸ್ಸು,-- ಆಯುಃಕಾಲ. ೨. [ದ್ವೈತ] ಸೃಷ್ಟಿಕಾಲದ ಒಂದು ಭಾಗ : ಸೃಷ್ಟಿಕಾಲದಲ್ಲಿ ಮಹಾಕಲ್ಪ ಮತ್ತು ಬ್ರಹ್ಮಕಲ್ಪವೆಂದು ಎರಡು ವಿಧ . . . ಪ್ರತಿಬ್ರಹ್ಮಕಲ್ಪದಲ್ಲೂ ಸಕಲ ಬದ್ಧಜೀವರುಗಳಿಗೂ ಸೃಷ್ಟಿಯುಂಟು (ಹಿಂದತಾ. ೨೬೪). ೩. [ಜೈನ] ಹದಿನಾರು ಕಲ್ಪಗಳಲ್ಲಿ ಒಂದು ; "ಬ್ರಹ್ಮ ಎಂಬ ಹೆಸರಿನ ಸ್ವರ್ಗ" (ಕೈಪಕೋ. ೦೮೬) : ದೀಕ್ಷೆಗೊಂಡು ಗೋಗ್ರುತಪಂಗೆಯ್ದು ಬ್ರಹ್ಮಕಲ್ಪಕ್ಕೆ ಪೋಗಿ ಬಂದೀಗಳ್ ರಾವಣದೇವ ನಾದಂ (ಕಂಠಾವತಾ. ೦೬-೩೭ ವ). **ಬ್ರಹ್ಮಕಲ್ಪ :** ೨. ಬ್ರಹ್ಮಕಲ್ಪ ನಿಳಯರಾದಿತ್ಯಾದಿಗಳಪ್ಪ ಲೋಕಾಂತಿಕರ್ . . . ಬಂದು (ಶಾಂತಿಪು. ೯-೧೦೭ ವ). [ಸಂ.]

**ಬ್ರಹ್ಮಕವಿ** (ನಾ). "ಬ್ರಾಹ್ಮಣ ಕವಿ : ಸಕಳಕಳಾಬ್ರಹ್ಮಂ ಶಾಬ್ದಿಕಶಿಳಕಂ ಬ್ರಹ್ಮಕವಿಚೂಡಾಮಣಿ . . . [ಸಂ]ಧಿವಿಗ್ರಹಿ ಪದ್ಮರಸಂ ಸಿವಪಾದಶೇಖರಂ (ಕಶಿಶಾ. XI-i, ೫೦-೨ ; 1005). [ಸಂ.]

**ಬ್ರಹ್ಮಕಲ್ಪ** 'ಬ್ರಹ್ಮಕಲ್ಪ' ನೋ.

**ಬ್ರಹ್ಮಕಾಂತ** (ನಾ). [ವಾಸ್ತು] ಕಂಬದ ಪ್ರಭೇದಗಳಲ್ಲಿ ಒಂದು : ಶಿಲ್ಪಶಾಸ್ತ್ರದಲ್ಲಿ ಬ್ರಹ್ಮಕಾಂತ, ವಿಷ್ಣುಕಾಂತ, ರುದ್ರಕಾಂತ ಇತ್ಯಾದಿ ಸ್ತಂಭಪ್ರಭೇದಗಳು ಉಕ್ತವಾಗಿವೆ (ಹೊಯ್ಸಳ. ೨೭). [ಸಂ.]

**ಬ್ರಹ್ಮಗಂಟು** (ನಾ). ೧. ಯಜ್ಞೋಪವೀತವನ್ನು ಧರಿಸುವಾಗ ಅದಕ್ಕೆ ಹಾಕುವ ವಿಧ್ಯುಕ್ತವಾದ ಗಂಟು,-ಪವಿತ್ರದ ಗಂಟು ; ವೇದೋಕ್ತದಿಂ ಬ್ರಹ್ಮಗಂಟಿಕ್ಕಿ ಪರಸುತಲಿ (ನವಮೋ. ೩೪-೨೦) ; ನಾನು ಜನಿವಾರದ ಬ್ರಹ್ಮಗಂಟನ್ನು ಚೆನ್ನಾಗಿ ಬಲಗೈಯಲ್ಲಿ ಹಿಡದುಕೊಂಡು ಗಾಯತ್ರೀಮಂತ್ರವನ್ನು ಜಪಿಸುತ್ತ ಓಡಿ ಬಂದೆ (ತತಕ. ೨೭). ೨. (ಅಲಂ) ಶಾಶ್ವತವಾದ ಸಂಬಂಧ : ಮದಿವಿ ಅಂದ ಮ್ಯಾಲೆ ಬ್ರಹ್ಮಗಂಟದು (ವೃಸಿ. ೦೭೬). ೩. ಬಿಡಿಸಲಾಗದ ಸಮಸ್ಯೆ : ಆ ಸಂಸಾರದ ಸಮಸ್ಯೆ ಒಂದು ಬ್ರಹ್ಮಗಂಟು (ರೂಢಿ). [ಬ್ರಹ್ಮ + ಗಂಟು]

**ಬ್ರಹ್ಮಗಂಬಿ,** ಬ್ರಹ್ಮಕಂಬಿ (ನಾ). ೧. ಧೋತ್ರದ ಕೊನೆಯಲ್ಲಿ ಇರುವ ಜುಂಗುಗಳನ್ನು ಕೂಡಿಸಿ ಸಣ್ಣ ಸಣ್ಣ ಗಂಟುಗಳಾಗಿ ಮಾಡಿ ಬಟ್ಟೆ ಹರಿಯದಂತೆ ಕಟ್ಟುವ ಕುಚ್ಚು. ೨. (ಅಲಂ) ಬ್ರಾಹ್ಮಣನಿಗೆ ಅನೂಚಾನವಾಗಿ ಬಂದಿದ್ದ ಬಡತನವನ್ನು ಸೂಚಿಸುವ ಒಂದು ಪದ ; P ಇದು ಅವನ ಹರುಕಲುಬಟ್ಟೆ ಹೊಲಿದಿರುವುದನ್ನು ಸೂಚಿಸುತ್ತದೆ : ಈ ಬ್ರಹ್ಮಗಂಬಿಯನ್ನು ಹೊದೆದು ದೊಡ್ಡವರ ಹತ್ತಿರ ಹೋಗಬೇಕೆಂದರೆ ನಾಚಿಕೆಯಾಗುತ್ತದೆ (ರೂಢಿ). **ಬ್ರಹ್ಮಕಂಬಿ :** ೨. ಹೊದಿ ಯುವುದಕ್ಕೆ ಬ್ರಹ್ಮಕಂಬಿಯ ಹರಕುಬಟ್ಟೆ ಹೊರತು ಬೇರೆಯಿಲ್ಲ (ಅದೂಟಿ. ೩೯). [ಬ್ರಹ್ಮ + ಕಂಬಿ₁]

**ಬ್ರಹ್ಮಗಣ** (ನಾ). [ಛಂದ]ಎರಡು ಅಂಶಗಳಿಂದಾದ ಗಣ : ಅವಱೊಳಗೆ ಬ್ರಹ್ಮಗಣವೆಂತೆಂದೊಡ ಬ್ರಹ್ಮಂ ದುರ್ಹಿಣಂ ಧಾತೃ ಸುರಪ (ಛಂದೋಂಬು. ೫-೨೧೦ ವ) : ಬ್ರಹ್ಮಗಣ ೪ ಬಗೆ, ವಿಷ್ಣುಗಣ ೮ ; ರುದ್ರಗಣ ೧೬ (ಕೃತಿಚಿ. ೦೦೯); ಬ್ರಹ್ಮಗಣ ೩ ರಿಂದ ೪ ರವರೆಗೆ ಮಾತ್ರೆಗಳನ್ನು ಒಳ ಗೊಳ್ಳುತ್ತದೆ (ಕಂಡೋಉ. ೩೩). [ಸಂ.]

**ಬ್ರಹ್ಮಗ್ರಂಥಿ** (ನಾ). = ಬ್ರಹ್ಮಗಂಟು ೧. [ಸಂ.]

**ಬ್ರಹ್ಮಚಕ್ರ** (ನಾ). ೧. ಬ್ರಹ್ಮಾಂಡ. ೨. ಮಂತ್ರವಾದಿಗಳು ಹಾಕುವ ಒಂದು ರೇಖಾವಿನ್ಯಾಸ,-ಮಂಡಲ. ೩. [ಯೋಗ] ಸ್ಥೂಲಶರೀರದ ಮಧ್ಯದ ಸ್ಥಾನ : ಸ್ಥೂಲದ ತನುವಿದು . . . ಅನುವಿನಿಂದಿಹುದದರ ಮಧ್ಯದವನೆ ತ್ರಿಕೋಣಾಕಾರದಿಂದಲ್ಲಿರುವುದದುವೆ ಬ್ರಹ್ಮಚಕ್ರವು ಯೋಗಿ ತನುಮಧ್ಯ (ಗಗಅ. ೯-೬). [ಸಂ.]

**ಬ್ರಹ್ಮಚರ್ಯ** (ನಾ). ೧. ಇಂದ್ರಿಯನಿಗ್ರಹ : ತಪಂ ಛಲಮಕಿಂಚನ್ಯಂ ನಯಂ ಬ್ರಹ್ಮಚರ್ಯಮೆ ಮನೋನ್ನತಿ ವರ್ಧಮಾನಮುನಿಗಳ್ಗಂ ಪೆಱರ್ಗಕ್ಕುಮೇ (ಸುಕುಮಾ. ೦-೨೬) ; ಹೃದಯ ವಾಕ್ಕು ನೇತ್ರ ರೇತಸ್ಸು ಅಂಗಗಳು ಪರಸ್ತ್ರೀವಿಷಯದೊಳುಂ ಸ್ವಸ್ತ್ರೀ ವಿಷಯದೊಳಶಾಸ್ತ್ರೀಯ ವಾಗಿಯುಂ ಚಲಿಸದಂತೆ ನಿಗ್ರಹಿಸಿರುವುದೇ ಬ್ರಹ್ಮಚರ್ಯವೆನಿಸುವುದು (ಒವೇಶ. ೧೯೬); ಬದುಕಿಂದ ತೊಲಗೆ ನೀ ಬ್ರಹ್ಮಚರ್ಯದ ಧರ್ಮ ಶುದ್ಧಿ ಸದ ಮಂನ್ನ (ವೃಶಾವಿ. ೬೩-೦೩). ೨. ಚತುರಾಶ್ರಮಗಳಲ್ಲಿ ಮೊದಲನೆ ಯದು; ಇಪ್ಪತ್ತೈದನೆಯ ವಯಸ್ಸಿನವರೆಗೆ ಇರುವ ವೇದಾಧ್ಯಯನ ಮಾಡುವ ಕಟ್ಟುನಿಟ್ಟಾದ ಇಂದ್ರಿಯನಿಗ್ರಹದ ಕಾಲ : ಮೊದಲಲ ಮಳಬ್ರಹ್ಮಚರ್ಯವು ಮದುವೆಯಾದುದು ಬಳಿಕ ವನವಾಸದಲಿ ವಾನಪ್ರಸ್ಥ ವೆಂಬಾಶ್ರಮಮಮವನಳವಡಿಸಿ ತುದಿಗೆ ತಾ ಸಂನ್ಯಾಸವನು ಮಾಡಿದನು (ಕುವ್ಯಾಉ. ೨-೩೯). ೩. ಬ್ರಹ್ಮಚಾರಿಯಾದ ಶಿಷ್ಯ. [ಸಂ.]

**ಬ್ರಹ್ಮಚರ್ಯೆ** (ನಾ). ೧.=ಬ್ರಹ್ಮಚರ್ಯ ೧. ೨.=ಬ್ರಹ್ಮಚರ್ಯ ೨. ೩. [ಜೈನ] ಅಯ್ವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಜೈನಸಂಪ್ರದಾಯದಂತೆ ಮಾಡುವ ಬ್ರಹ್ಮಚರ್ಯಾನುಷ್ಠಾನ : ಬ್ರಹ್ಮ[ಕಾಕಾಂ. ವ್ರತ]ಚರ್ಯೆಯುಂ ವ್ರತಾವತರಣಮುಂ . . . ಅಪ್ಪಯ್ವತ್ತುಮೂಱುಗರ್ಭಾನ್ವಯಕ್ರಿಯೆಯೊಳ್ (ಶಾಪುಂಪು. ೨೦೨) : ಏಳನೆಯ ನೆಲೆಯ ಶ್ರಾವಕನು ವಿವಾಹಿತಸ್ತ್ರೀಯಲ್ಲಿಯೂ ಕಾಮವಾಸನೆ ಯನ್ನು ತ್ಯಜಿಸಿ ಪೂರ್ಣಬ್ರಹ್ಮಚರ್ಯೆಯನ್ನು ಪಾಲಿಸುತ್ತಾನೆ (ಕಾರಧ. ೦೮೪). [ಸಂ. ಬ್ರಹ್ಮಚರ್ಯಾ]

**ಬ್ರಹ್ಮಚಾರಿ** (ನಾ). ೧. ಬ್ರಹ್ಮಚರ್ಯವನ್ನು ಪಾಲಿಸುವವನು: ಸ್ತ್ರೀನಿಕರ ಸರ್ವಾಂಗರಾಗಿಯುಂ ಬ್ರಹ್ಮಚಾರಿಗಳು (ಹಕಹಾ. ೬-೩೬); ಮನೋವಚನಕಾಯ ಪೂರ್ವಕವಾಗಿ ಸ್ತ್ರೀಸಂಗವನ್ನು ತ್ಯಾಗಮಾಡಿದವನೇ ಬ್ರಹ್ಮಚಾರಿ (ಕಾರಧ. ೦೮೯). ೨. ಬ್ರಹ್ಮಚರ್ಯಾಶ್ರಮದಲ್ಲಿರುವವನು : ಚತುರಾ ಶ್ರಮಶುದ್ಧಿಯೆಂಬುದಾರ್ಹತದೊಳು . . . ಬ್ರಹ್ಮಚಾರಿಯುಂ ಗೃಹಸ್ಥನುಂ ವಾನಪ್ರಸ್ಥನುಂ ಭಿಕ್ಷುಕನುಮೆಂದು ನಾಲ್ವರಪ್ಪರ್ (ಶಾಪುಂಪು. ೨೨೭). ೩. ಮದುವೆಯಾಗದವನು ; ಅವಿವಾಹಿತ ಪುರುಷ : ಇಬ್ಬರೂ ಧೀರರು ಸುಂದರರು ; ಇಬ್ಬರೂ ಬ್ರಹ್ಮಚಾರಿಗಳು (ಮರಿನಾ. ೦೯೪). ೪. ಶಿವ ; ಈಶ್ವರ. ೫. ಸ್ಕಂದ ; ಷಣ್ಮುಖ. [ಸಂ. ಬ್ರಹ್ಮಚಾರಿನ್]

**ಬ್ರಹ್ಮಚಾರಿಣಿ** (ನಾ). ೧. ಬ್ರಹ್ಮಚರ್ಯವನ್ನು ಪಾಲಿಸುವವಳು : ನಲ್ಲನಿಗಾಗಿ ಆಕೆ ಆಜನ್ಮಬ್ರಹ್ಮಚಾರಿಣಿಯಾಗಿಯೇ ಉಳಿದಳು (ಕೂಬಿತಾ. ೦೦೬). ೨. ದುರ್ಗಾದೇವತೆ. [ಸಂ. ಬ್ರಹ್ಮಚಾರಿಣೀ]

**ಬ್ರಹ್ಮಜಾತಿ** (ನಾ). (ರತ್ನಗಳಿಗೆ ಸಂಬಂಧಿಸಿದಂತೆ) ಅತ್ಯುತ್ತಮ ವರ್ಗ; P ರತ್ನಶಾಸ್ತ್ರದಲ್ಲಿ ವಜ್ರದ ಬೆಲೆಕಟ್ಟುವಾಗ ಈ ಜಾತಿಗಳನ್ನು ಪರಿಶೀಲಿಸುತ್ತಾರೆ : ಅರುಂಧತಿಯು . . . ಬ್ರಹ್ಮಜಾತಿಯ ವಜ್ರದ ಓಲೆಗಳನ್ನಿಟ್ಟು . . . ಮೆರೆಯುತ್ತಿದ್ದಾಳೆ (ಮಸಾಶ. ೪೨). [ಸಂ.]

**ಬ್ರಹ್ಮಜಿಜ್ಞಾಸೆ** (ನಾ). ಬ್ರಹ್ಮವನ್ನು ತಿಳಿಯುವ ಬಯಕೆ ; ಬ್ರಹ್ಮಜ್ಞಾನದ ಕುತೂಹಲ : ಬ್ರಹ್ಮಜಿಜ್ಞಾಸೆಗೂ ಮೊದಲೇ ಯಾವುದು ಆಗಿರಬೇಕೆಂದು ಅವಶ್ಯವಾಗಿ ಬೇಕಾಗುವುದೋ ಅದನ್ನು ಹೇಳಬೇಕಾಯಿತು (ಬ್ರಿಸೂಶಾ. ೦೦) ; ಬ್ರಹ್ಮಜಿಜ್ಞಾಸೆಯಲ್ಲಿ ಆಸಕ್ತರಾಗಿರು ವವರಿಗೆ ಅಶ್ವತ್ಥವು ಸತ್ಯವನ್ನು ಅರಿಯುವ ಸಂಕೇತವೂ ಸಾಧನವೂ ಆಗಿರುವಂತೆಯೇ ಜನಸಾಮಾನ್ಯಕ್ಕೆ ಜನ್ಮಸಾರ್ಥಕ್ಯದ ಕುರುಹಾಗಿದೆ (ಹಸುಪೂ. ೩೭೬). [ಸಂ. ಬ್ರಹ್ಮಜಿಜ್ಞಾಸಾ]

**ಬ್ರಹ್ಮಜ್ಞ** (ನಾ). ೧. ಬ್ರಹ್ಮತತ್ತ್ವವನ್ನು ತಿಳಿದವನು ; ಪರಬ್ರಹ್ಮವನ್ನು ಅರಿತವನು : ಸರ್ವಸಮರ್ ವಿನೋದಿಪರವರ್ ಬ್ರಹ್ಮಜ್ಞರೆಲ್ಲಿಲ್ಲಿಯುಂ (ವ್ಯಸೂವಿ. ೩-೧೮೬); ಬ್ರಹ್ಮಜ್ಞನಾದ ಆತನಿಗೆ ವ್ಯಥೆಯೆಲ್ಲಿಂದ ಬರಬೇಕು ? (ಮುಹಾಭ. ೦೦೯). ೨. ಕಾರ್ತಿಕೇಯ ; ಸ್ಕಂದ. ೩. ವಿಷ್ಣು. [ಸಂ.]

**ಬ್ರಹ್ಮಜ್ಞಾನ** (ನಾ). ಬ್ರಹ್ಮತತ್ತ್ವದ ಜ್ಞಾನ ; ಪರಬ್ರಹ್ಮದ ಅರಿವು : ಎಲೆ ಮನವೇ ನಿನ್ನ ನಿಜವನಱಿಯಬಲ್ಲಡೆ ಅದೇ ಬ್ರಹ್ಮಜ್ಞಾನ ಅದೇ ಕೇವಲ ಮುಕ್ತಿ (ವಚಸಂ. ೬೩೬-೦೦೪); ಬ್ರಹ್ಮನಾದವನಿಗೇ ಬ್ರಹ್ಮಜ್ಞಾನ, ಬ್ರಾಹ್ಮೀಪ್ರಜ್ಞೆ ಅಳವಡುತ್ತದೆ (ಶಾರದ. ೦೦೦). [ಸಂ.]

**ಬ್ರಹ್ಮಜ್ಞಾನಿ** (ನಾ). ಬ್ರಹ್ಮಜ್ಞಾನವನ್ನು ಪಡೆದವನು ; ಬ್ರಹ್ಮಸ್ವರೂಪವನ್ನು ತಿಳಿದವನು : ಈ ನಿಮಿತ್ತಾದಿಗಳು ಬ್ರಹ್ಮಜ್ಞಾನಿಗಳ ನಳಲಿಸದು (ಗಗಶಾ. ೦೬-೩೨). [ಸಂ. ಬ್ರಹ್ಮಜ್ಞಾನಿನ್]

**ಬ್ರಹ್ಮಜ್ಯೋತಿ** (ನಾ). ೧. ಬ್ರಹ್ಮನ ಪ್ರಕಾಶ,—ತೇಜಸ್ಸು : ಸರ್ವವ್ಯಾಪ್ತವಾದಂಥಾ ಯಾವ ಬ್ರಹ್ಮಜ್ಯೋತಿವುಂಟೋ, ತತ್—ಆ ಬ್ರಹ್ಮಜ್ಯೋತಿಯು, ಪ್ರತಿಷ್ಠಿತಂ—ಪ್ರಕಾಶಿಸುತ್ತದೆ (ಉತ್ತಬೀ. ೨೬-೧೦). ೨. ಶಿವ ; ಈಶ್ವರ. [ಸಂ. ಬ್ರಹ್ಮಜ್ಯೋತಿಸ್]

**ಬ್ರಹ್ಮಣಸ್ಪತಿ** (ನಾ). ೧. ವಿಷ್ಣು ; ನಾರಾಯಣ : ವಾಕ್ಪತಿಯು ಕೃಪೆ ಮಾಡಲಿ. ಬ್ರಹ್ಮಣಸ್ಪತಿಯು ದಯೆ ಮಾಡಲಿ (ಮುಹಾಭ. ೦೦೨). ೨. ಬೃಹಸ್ಪತಿ. [ಸಂ.]

**ಬ್ರಹ್ಮಣ್ಯ** (ಗು). ೧. ಬ್ರಹ್ಮತತ್ತ್ವಕ್ಕೆ ಸಂಬಂಧಿಸಿದ. ೨. ಸೃಷ್ಟಿಕರ್ತನಾದ ಬ್ರಹ್ಮನಿಗೆ ಸಂಬಂಧಿಸಿದ. ೩. ಬ್ರಾಹ್ಮಣನಿಗೆ ಯೋಗ್ಯವಾದ. (ನಾ). ೪. ವೇದಗಳನ್ನು ಚೆನ್ನಾಗಿ ಅಧ್ಯಯನ ಮಾಡಿದವನು. ೫. ಬ್ರಾಹ್ಮಣಪ್ರಿಯನಾದವನು : ವಿನಯಶ್ರೀನಿಧಿಯಂ ವಿವೇಕನಿಧಿಯುಂ ಬ್ರಹ್ಮಣ್ಯನಂ ಪೂರ್ಣಪುಣ್ಯನನುದ್ದಾಮಯಶೋತ್ಪತ್ತಿಯುಂ . . . ಮನುಜೇಶರ್ ಮಲೆರಾಜರಾಜನನದೇಂ ಬಲ್ಲಾಳನಂ ಪೋಲ್ವರೇ (ಎಕ. V. ಅರಸೀ. ೦-೦೬; 1169). ೬. ವಿಷ್ಣು. ೭. ಕಾರ್ತಿಕೇಯ. ೮. ಹೂವರಿಸೆ ಮರ : "ತೂದಃ, ಪೂಗಃ, ಕ್ರಮುಕಃ, ಬ್ರಹ್ಮಣ್ಯಃ, ಬ್ರಹ್ಮದಾರು, ತೂಲಂ – ೬ ಹುವ್ವರಿಸೆ ಗಿಡ . . . ಕಾಡಡಿಕೇಮರವೆಂದು ಕೆಲವರನ್ನುವರು" (ಸಿದ್ಧಾಂತಿ. ೦೨೦). ೯. ಒಂದು ಬಗೆಯ ಹುಲ್ಲು ; ಮುಂಜಹುಲ್ಲು. ೧೦. ತಾಡವೃಕ್ಷ. ೧೧. ಹತ್ತಿಗಿಡ. ೧೨. ಹಿಪ್ಪನೇರಳೆ ಗಿಡ. ೧೩. ಶನಿಗ್ರಹ. ೧೪. ಬ್ರಾಹ್ಮಣರಿಗೆ ಹಿತಕಾರಿಯಾದುದು : "ಬ್ರಹ್ಮಣ್ಯಂ, ಬ್ರಾಹ್ಮಣೇಹಿತಂ – ಈ ೨ ಬ್ರಾಹ್ಮಣರ್ಗೆ ಒಳ್ಳಿತೆಯ್ದುದು" (ಹಲಾಯು. ೬೬-೨೩೨). 'ಬ್ರಹ್ಮದಾರು' ಪರಾ. [ಸಂ.]

**ಬ್ರಹ್ಮತತ್ತ್ವ** (ನಾ). ಪರಬ್ರಹ್ಮಜ್ಞಾನ ; ಮೋಕ್ಷತತ್ತ್ವ : ಬ್ರಹ್ಮಸಭೆ ನೆಱೆದಲ್ಲಿ ಬ್ರಹ್ಮವಿತ್ತುಗಳು ಬ್ರಹ್ಮತತ್ತ್ವಪಡೆದು ತಮ್ಮ ವಚನಬ್ರಹ್ಮರೆನಿಸಿಕೊಂಡು ನೆಮ್ಮಿಪರು ವಿಷ್ಣುವನು (ಐಸವ. ೩೮೩). [ಸಂ.]

**ಬ್ರಹ್ಮತಿ** 'ಬೊಮ್ಮಹತಿ' ನೋ.

**ಬ್ರಹ್ಮತಿಕಾಟಿ** 'ಬೊಮ್ಮೇತಿಗಾಟಿ' ನೋ.

**ಬ್ರಹ್ಮತೇಜ** (ನಾ). ಬ್ರಾಹ್ಮಣತ್ವದ ತೇಜಸ್ಸು, – ಕಾಂತಿ : ವಿಮಲಕ್ಷತ್ರದೊಳು ತಾ ವಿದಿತವಿಮಲಬ್ರಹ್ಮತೇಜವಿದೆಂದನರ್ಜುನಗೆ (ಸಂಭಪ. ೨೯-೩೬); ಬ್ರಹ್ಮತೇಜ ಆ ಮೊಗದಲ್ಲಿ ಉಕ್ಕುತ್ತಿರುವುದನ್ನು ಅವರು ಹಾಗೆಯೇ ನೋಡನೋಡುತ್ತಿದ್ದಂತೆ ಅವನೇ ನುಡಿದಿದ್ದ (ಹೊಸಕ್ಷೆ. ೩೩). [ಸಂ. ಬ್ರಹ್ಮತೇಜಸ್]

**ಬ್ರಹ್ಮತೇಜಸ್ಸು** (ನಾ). ೧. ಬ್ರಹ್ಮನ ತೇಜಸ್ಸು, – ಕಾಂತಿ. ೨. ಬ್ರಹ್ಮಜ್ಞಾನವನ್ನು ಪಡೆದ ವ್ಯಕ್ತಿಗೆ ಇರುವ ದೇಹಕಾಂತಿ : ಇರ್ದಂ ಜಗತ್ಪತಿಯೊಡ್ಡೋಲಗದೊಳ್ ಚತುರ್ಮುಖನತರ್ಕ್ಯಬ್ರಹ್ಮತೇಜಸ್ಕಮುಖ (ಜಗಪ.೦-೨೬) : ಬ್ರಹ್ಮತೇಜಸ್ಸು ಎಲ್ಲ ತೇಜಸ್ಸುಗಳಿಗಿಂತ ಹಿರಿಯದು (ಮುಹಾಭ. ೪೩). [ಸಂ. ಬ್ರಹ್ಮತೇಜಸ್]

**ಬ್ರಹ್ಮತ್ತಿ** (ನಾ). ಒಂದು ಬಗೆಯ ಅತ್ತಿಮರ : ಆಲವು ಅತ್ತಿ ಹೊರತ್ತಿ ಕಲ್ಲತ್ತಿ ವೇದಿನಿ ಬ್ರಹ್ಮತ್ತಿ ಮತ್ತಿ (ದೇಜಾಂಕೃ. ೯-೨೭೦). [ಬ್ರಹ್ಮ೪ + ಅತ್ತಿ$_1$]

**ಬ್ರಹ್ಮತ್ವ** (ನಾ). ೧. ಪರಬ್ರಹ್ಮದಲ್ಲಿ ಲೀನವಾಗುವಿಕೆ ; ಮೋಕ್ಷ : "ಬ್ರಹ್ಮಭೂಯಂ, ಬ್ರಹ್ಮತ್ವಂ, ಬ್ರಹ್ಮಸಾಯುಜ್ಯಂ –೨ ಬ್ರಹ್ಮಸ್ವರೂಪವಾಗುವಿಕೆ, ಜೀವ ಬ್ರಹ್ಮೈಕ್ಯಸ್ವರೂಪವಾದ ಸ್ಥಿತಿ . . . ಮೋಕ್ಷ" (ಸಿದ್ಧಾಂತಿ. ೨೩೦). ೨. ಬ್ರಹ್ಮಪದವಿ. ೩. ಬ್ರಾಹ್ಮಣನಾಗಿರುವಿಕೆ; ಬ್ರಾಹ್ಮಣತ್ವ. ೪. ಯಾಗದಲ್ಲಿ ಬ್ರಹ್ಮನೆಂಬ ಋತ್ವಿಜನಾಗಿರುವಿಕೆ. [ಸಂ.]

**ಬ್ರಹ್ಮದಂಡ** (ನಾ). ೧. ಬ್ರಾಹ್ಮಣನ ಶಾಪ ; ಮಹಾಶಾಪ. ೨. ಬ್ರಾಹ್ಮಣನಿಗೆ ಅರ್ಪಿಸುವ ಧನರೂಪವಾದ ಗೌರವ. ೩. ಶಿವ ; ಈಶ್ವರ. ೪. ಋಷಿಗಳ ಕೈಯಲ್ಲಿರುವ ಯೋಗದಂಡ : ಆ ವಿವಿಧ ಮಂತ್ರಾಸ್ತ್ರವನು ಶತಸಾವಿರವನಾ ಬ್ರಹ್ಮದಂಡದ ಥಾಪರದಲೇ ಗೆಲಿದನೊಬ್ಬ ವಸಿಷ್ಠಮುನಿ (ಕುವ್ಯಾಆ. ೦೦-೪೩) ; ಆಕೆಯು . . . ಅಥರ್ವಣದಲ್ಲಿರುವ ಕೆಲವು ಋಕ್ಕುಗಳನ್ನು ಆರಿಸಿಕೊಂಡು ಸಾಮವಾಗಿ ಹಾಡಿ ಬ್ರಹ್ಮದಂಡವನ್ನು ಉಪಬೃಂಹಣ ಮಾಡಿದಳು (ಮುಹಾಭ. ೪೩). ೫. ಬ್ರಹ್ಮಾಸ್ತ್ರ. ೬. ಬೆನ್ನೆಲುಬು : ದೇಹದ ಹಿಂಭಾಗವನ್ನು ಆಶ್ರಯಿಸಿಕೊಂಡು ಇರುವ ಯಾವ ಅಸ್ಥಿ ಉಂಟೋ ಆ ಅಸ್ಥಿಯು, ಬ್ರಹ್ಮದಂಡೇತಿ ಬ್ರಹ್ಮ ದಂಡವೆಂದು, ಕಥ್ಯತೇ– ಹೇಳಲ್ಪಡುತ್ತದೆ (ಉತ್ತಬೀ. ೩೬-೩). [ಸಂ.]

**ಬ್ರಹ್ಮದಂಡಿ** (ನಾ). ೧. ಒಂದು ಬಗೆಯ ಔಷಧೀಸಸ್ಯ ; ಅಜದಂಡಿ : ಬ್ರಹ್ಮದಂಡಿಯ ಬೇರನು ಅಕ್ಕಿಗಚ್ಚಿನಿಂದ ಅರೆದು ಗಂಡಮಾಲೆಗೆ ಲೇಪಿಸಲು ತತ್‌ಕ್ಷಣದಲ್ಲಿಯೇ ಒಡೆವದು (ವೈರ್ಯಶಾ. II, ೦೬೨). ೨. ಒಂದು ನಾಡಿನ ಹೆಸರು : ಬ್ರಹ್ಮೈಕಪ್ರತಿಪಾದಕವಾದ ಸುಷುಮ್ನಾನಾಡಿಗೆ ಆಧಾರವಾದ್ದರಿಂದ ಬ್ರಹ್ಮದಂಡಿಯೆಂದು ಹೇಳಲ್ಪಡುತ್ತದೆ (ಉತ್ತಬೀ. ೩೬-೩). 'ಬ್ರಹ್ಮನಾಡಿ' ಪರಾ. [ಸಂ. ಬ್ರಹ್ಮದಂಡೀ]

**ಬ್ರಹ್ಮದಂಡೆ, ಬೊಮ್ಮದಂಡೆ** (ನಾ). = ಬ್ರಹ್ಮದಂಡಿ ೧ : ಬ್ರಹ್ಮದಂಡಿ —ಬ್ರಹ್ಮದಂಡೆ (೬ಶಧಿ. ೦೦೬) ; ಪದನಱಿದು ಪುರಿದು ತಿಲತೈಲದೆ ನಿಶೆ ಪೆಡೆಯಕ್ಕಿಯೆಂಬಿವಂ ಮೇಣ್ ಗೋಮೂತ್ರದೆ ಹಾವುಮೆಕ್ಕೆಯುಂ ಬ್ರಹ್ಮ-ದಂಡೆಯುಮನರೆದು ಪೂಸೆ ಪುಣ್ಗಳ್ ಕಿಡುಗುಂ (ರೋಕೋಶ. ೯-೬೦) ; ಬ್ರಹ್ಮದಂಡೆಯ ಬೇರಂ ಆ ಕಾಲಲ್ಲಿಕ್ಕಿ ಅಡಿಸಿ ಕೊಂಡರೆ ಗುರುಗುರು ಹರ × × × ಹುಣಸೇಗೊಟ್ಟೆಯಷ್ಟು ಬಾಯಲ್ಲಿರಲು ಉರಿಕೆಯು ಹರ (ಶಿವ್ಯಶಿ. ೦೯೩). **ಬೊಮ್ಮದಂಡೆ** : ಮುಂಗುರು ಬೊಮ್ಮದಂಡೆ [ಪಾಠಾಂ. ಬೋನಗಾರೆ] ಭಾಸ್ಕರ. . . ಎನಿಪ್ಪವೆಲ್ಲಮಂ ಬೆರಸಿರೆ (ಐಮುದ. ೦೩-೦೩೩) ; ಬೇವು ಕನ್ನೆ ಕುಮಾರಿಯಿಾಶ್ವರಿ ಬೊಮ್ಮದಂಡೆ ನಿಶಾಯುತಂ (ಶಾಳ್ಮಶಾಂ. ೨೬). [<ಸಂ. ಬ್ರಹ್ಮದಂಡೀ]

**ಬ್ರಹ್ಮದರ್ಭೆ** (ನಾ). ಅಜವಾನ ; ಓಮ : "ಅಜಮೋದಾ, ಉಗ್ರಗಂಧಾ, ಬ್ರಹ್ಮದರ್ಭಾ, ಯವಾನಿಕಾ — ೪ ಅಜಮೋದದ ಹೆಸರುಗಳು, ಓಮುಕಾಳು" (ಸಿದ್ಧಾಂತಿ. ೦೯೩). [ಸಂ. ಬ್ರಹ್ಮದರ್ಭಾ]

**ಬ್ರಹ್ಮದರ್ಶಿ** (ನಾ). = ಬ್ರಹ್ಮಜ್ಞಾನಿ : ಆಹ, ಏನು ಕಲೆ ನಿನ್ನದಯ್ : ವಿಶ್ವತಾಸಂಸ್ಪರ್ಶಿ, ಮೇಣ್ ಬ್ರಹ್ಮದರ್ಶಿ ! (ಅಗ್ನಿಹಂ.೬೦-೦). [ಸಂ. ಬ್ರಹ್ಮದರ್ಶಿನ್]

**ಬ್ರಹ್ಮದಾಯ** (ನಾ). ೧. ವಂಶಪಾರಂಪರ್ಯವಾಗಿ ಬ್ರಾಹ್ಮಣನಿಗೆ ಬಂದ ಬ್ರಹ್ಮಜ್ಞಾನ. ೨. ವೇದಾಧ್ಯಯನವು ಪೂರ್ಣವಾದ ನಂತರ ರಾಜನು ಬ್ರಾಹ್ಮಣನಿಗೆ ಕೊಡುತ್ತಿದ್ದ ಧನ ಮತ್ತು ಭೂರೂಪ

ವಾದ ಆಸ್ತಿ : ದೇವದಾಯ ಬ್ರಹ್ಮದಾಯ ಸೀಮೆಗಳಲ್ಲಿರುವ ದೇವರುಗಳ ವಸ್ತ್ರಾಭರಣಗಳನ್ನು ತೆಗೆದುಕೊಂಡು ಆ ದೇವರುಗಳ ಅಂಗಭಂಗಗಳನ್ನು ಮಾಡಿ ಗುಡಿಗೋಪುರ . . . ಮುಂತಾದ ಅನೇಕ ಧರ್ಮಕಾರ್ಯಗಳನ್ನು ನಾಶಮಾಡಿದನು (ಪುಹಾಪಂ. I. ೨೩೩). [ಸಂ.]

**ಬ್ರಹ್ಮದಾರು** (ನಾ). ೧. ಹೂವರಿಸೆ ಮರ : "ತೂದಃ, ಪೂಗಃ, ಕ್ರಮುಕಃ, ಬ್ರಹ್ಮಣ್ಯಃ, ಬ್ರಹ್ಮದಾರು, ತೂಲಂ —೬ ಹುವ್ವರಿಸೆ ಗಿಡ" (ಸಿದ್ಧಾಂತಿ. ೧೨೦). ೨. ಅಡಿಕೆಮರ : ಅಡಕೆ ಬಹುಕಾಲದಿಂದಲೂ ನಮಗೆ ಪರಿಚಿತವಾಗಿರುವ ಸಾಮಗ್ರಿ. ಇದಕ್ಕೆ ಸಂಸ್ಕೃತದಲ್ಲಿ ರೂಢಿಯಾಗಿರುವ ಹೆಸರುಗಳು ಅನೇಕ : ಕ್ರಮುಕ . . . ಬ್ರಾಹ್ಮಣ್ಯ, ಬ್ರಹ್ಮದಾರು ಇತ್ಯಾದಿ (ಜನುಜೂ. ೪೮೦). ೩. ಹಿಪ್ಪನೇರಳೆ. ೪. ಅರಳಿಮರ; ಅಶ್ವತ್ಥವೃಕ್ಷ: (೪). P ಈ ಪದದ ಅರ್ಥಗಳನ್ನು ಕೊಡುವಲ್ಲಿ ಕೋಶಕಾರರಲ್ಲಿ ಗೊಂದಲವಿರುವಂತಿದೆ. [ಸಂ.]

**ಬ್ರಹ್ಮದೇಯ** (ನಾ). ೧. = ಬ್ರಹ್ಮದಾಯ ೨: ಬ್ರಹ್ಮದೇಯ ಕೊಟ್ಟರ್ಮ್ ಅರ್ಪ್ಪೋಟಿ ಒಡೆಯ ಕೌಶಿಕಗೋತ್ರಂ ಪೊನ್ನಡಿಗೆ (ಎಕ. VI(R), ಶ್ರೀರಂಗ. ೦೬೬-೦೫ ; ಸು. ೬೦೦) ; ಆದನ್ನು ಬ್ರಹ್ಮದೇಯದಾನವಾಗಿ ಕೊಟ್ಟ ಸಂದರ್ಭದಲ್ಲಿ ಆ ಭೂಮಿಯ ಮೇರೆಗಳನ್ನು ಕುರಿತ ವಿವರ ಹೀಗಿದೆ (ಜಾಕಗ. ೬). ೨. ಬ್ರಾಹ್ಮ, ಪ್ರಾಜಾಪತ್ಯ, ಆರ್ಷ, ದೈವ, ಗಾಂಧರ್ವ, ಆಸುರ, ರಾಕ್ಷಸ ಮತ್ತು ಪೈಶಾಚಗಳೆಂಬ ಎಂಟು ವಿವಾಹ ಪ್ರಕಾರಗಳಲ್ಲಿ ಒಂದು ; ಬ್ರಾಹ್ಮಣರೀತಿಯ ವಿವಾಹ. [ಸಂ.]

**ಬ್ರಹ್ಮದ್ವೇಷ** (ನಾ). ಬ್ರಾಹ್ಮಣರನ್ನು ದ್ವೇಷಿಸುವುದು : ಕಾಲಪ್ರೇರಿತರಾಗಿ ಜನರು ಬ್ರಹ್ಮದ್ವೇಷವನ್ನು ಅವಲಂಬಿಸಿ ತಾವೂ ಕೆಟ್ಟು ಇತರರನ್ನೂ ಕೆಡಿಸುತ್ತಿರುವರು (ಪುಹಾಪ. ೩೯). [ಸಂ.]

**ಬ್ರಹ್ಮದ್ವೇಷಿ** (ನಾ). ಬ್ರಾಹ್ಮಣರನ್ನು ದ್ವೇಷಿಸುವವನು : ಖರನು ಧನುರ್ವಿದ್ಯೆಯಲ್ಲಿ ನಿಪುಣನಾಗಿ ಬ್ರಹ್ಮದ್ವೇಷಿಯೂ ಮಾಂಸಾಹಾರಿಯೂ ಆಗಿ ಸಿದ್ಧರಿಗೆ ವಿಘ್ನ ಮಾಡುತ್ತಿದ್ದನು (ವಚಭಾ. ೧೦೩).
[ಸಂ. ಬ್ರಹ್ಮದ್ವೇಷಿನ್]

**ಬ್ರಹ್ಮಧರ್ಮ** (ನಾ). ಬ್ರಹ್ಮನ ಸ್ವಭಾವ; ಬ್ರಹ್ಮನ ಗುಣ: ಅನಿರ್ವಚನೀಯ ವಸ್ತುಗಳು ಸತ್ತಾಸ್ವರೂಪನಾದ ಬ್ರಹ್ಮನಲ್ಲಿ ಆರೋಪಿತ, ಕಲ್ಪಿತ, ಅಧ್ಯಸ್ತವಾದುದರಿಂದ ಬ್ರಹ್ಮಧರ್ಮವಾಗಿ ತೋರಿ ಬರುವ ಸತ್ತ್ವವೇ ಗವಾದಿವಸ್ತುಗಳಲ್ಲೂ ಸತ್ತಾದಾತ್ಮ್ಯವೆಂಬ ನಾಮಧೇಯದಿಂದ ಇರುವುದು (ಹಿಂದಸಾ. ೦೯೯). [ಸಂ.]

**ಬ್ರಹ್ಮನಂದನ** (ನಾ). ಬ್ರಹ್ಮನ ಮಗ ; ನಾರದ : ಬ್ರಹ್ಮನಂದನನಾನಂದದಿ ನಾಡೆಯುಂ ನೆಗಬ್ದುದಂದಾ ಭೌಮ ಕೃಷ್ಣಾಹವಂ (ಜಗಪು. ೦೨-೬೮). [ಸಂ.]

**ಬ್ರಹ್ಮನಾಡಿ** (ನಾ). ಸುಷುಮ್ನಾನಾಡಿಯ ಮಧ್ಯಭಾಗ : ಸುಷುಮ್ನಾ ನಾಡಿಯ ಹಿಂಭಾಗಕ್ಕೆ 'ವಜ್ರಿಕೆ' ಎಂದು ಹೆಸರು. ಎಡಭಾಗಕ್ಕೆ 'ಆರ್ಯಾ' ಎಂದು ಹೆಸರು. ಮುಂಭಾಗಕ್ಕೆ 'ಪ್ರಕಾಶಿನೀ' ಬಲಭಾಗಕ್ಕೆ 'ವೈದ್ಯುತಾ' ಎಂದು ಹೆಸರುಗಳು. ಮಧ್ಯಭಾಗಕ್ಕೆ 'ಬ್ರಹ್ಮನಾಡೀ' ಎಂದು ಹೆಸರು (ಹಸಾರ. ೬-೩ ೬೯೬). [ಸಂ. ಬ್ರಹ್ಮನಾಡೀ]

**ಬ್ರಹ್ಮನಾರಾಯಣ** (ನಾ). ಶತೋಪನಿಷತ್ತುಗಳಲ್ಲಿ ಒಂದು : "ಬ್ರಹ್ಮನಾರಾಯಣ ಹಂಸ . . . ಮುಂಡಕವೆಂಬಿವು ಮೊದಲಾದವೇ ಶತೋಪನಿಷತ್ತುಗಳು (೬ವೇಕ. ೩). [ಸಂ.]

**ಬ್ರಹ್ಮನಾಳ** (ನಾ). = ಬ್ರಹ್ಮನಾಡಿ : ಬ್ರಹ್ಮನಾಳದ ಗೊತ್ತು ಒಮ್ಮೆಲೇ ದೊರೆಯುವುದೆ (ಸರ್ವಜ್ಞ. ೩೬೭). [ಬ್ರಹ್ಮ + ನಾಳ$_1$ (= ನಾಲ$_1$)]

**ಬ್ರಹ್ಮಪಟ್ಟ** (ನಾ). ಬ್ರಹ್ಮನ ಪದವಿ, —ಅಧಿಕಾರ : ಆನಂದವರ್ಧನ ಕವಿಗೆ ಬ್ರಹ್ಮಪಟ್ಟವನ್ನೇ ಕಟ್ಟಿಬಿಟ್ಟಿದ್ದಾನೆ (ಭಾರದ. ೪೪೩). [ಸಂ.]

**ಬ್ರಹ್ಮಪಾಶ** (ನಾ). ೧. ಬ್ರಹ್ಮಾಸ್ತ್ರ: ಬ್ರಹ್ಮಪಾಶ ವಿಷ್ಣುಮಾಯವನತಿಗಳೆದ ಛಲದಲ್ಲಿ ಏನೆಂದಚ್ಯುಯದಿದ್ದೆ ನಾನು (ಅವತಂ. ೨೩೩-೦೦೬೯). ೨. (ಅಲಂ) ದೊಡ್ಡ ಬಂಧನ : ಇವರ ಹೇಳಿಕೆ ಪ್ರೇಮಶಂಕರರಿಗೆ ಬ್ರಹ್ಮಪಾಶವಾಗುತ್ತದೆಂದು ನಂಬಿದ್ದರು ಪೋಲೀಸರು (ಕ್ರೀಚಾಕ್ರ. ೦೩೬). [ಸಂ.]

**ಬ್ರಹ್ಮಪಿಶಾಚಿ** (ನಾ). ಬ್ರಾಹ್ಮಣನಾಗಿದ್ದವನ ಪಿಶಾಚಿ ; P ಬ್ರಾಹ್ಮಣನಾದವನನ್ನು ಯಾರಾದರೂ ಕೊಂದರೆ ಕೊಂದ ನಂತರ ಅವನು ವ್ಯಂತರನಾಗಿ ಕೊಂದವರನ್ನು ಹಿಂಸೆಪಡಿಸುವನೆಂಬ ನಂಬಿಕೆಯಿದೆ : ಆ ದೊಡ್ಡಮರದಲ್ಲಿ ಬ್ರಹ್ಮಪಿಶಾಚಿಯಿದೆ ಎನ್ನುತ್ತಾರೆ (ಕೂಶಿ). [ಸಂ.]

**ಬ್ರಹ್ಮಪುತ್ರ** (ನಾ). ೧. ಬ್ರಹ್ಮನ ಮಗ ; ನಾರದ : ತರ್ಳದನಘಲತಾ ದಾತ್ರನಾ ಬ್ರಹ್ಮಪುತ್ರಂ (ಜಗಪು. ೨-೪೪). ೨. ಬ್ರಹ್ಮನ ಹತ್ತು ಮಂದಿ ಮಾನಸಪುತ್ರರು. ೩. ರುದ್ರ. ೪. ಭಾರತದ ಈಶಾನ್ಯದಿಂದ ಹರಿದು ಬಂದು ಬಂಗಾಲ ಉಪಸಾಗರವನ್ನು ಸೇರುವ ಒಂದು ಹೊಳೆ ; P 'ಗಂಡುಹೊಳೆ.' 'ನದ' ಎಂದು ಹೆಸರಾಗಿರುವ ಹೊಳೆಗಳಲ್ಲಿ ಇದೊಂದು. ೫. ಒಂದು ಬಗೆಯ ವಿಷ : "ಕಾಕೋಲಃ, ಕಾಲಕೂಟಃ, ಹಾಲಾಹಲಃ, ಸೌರಾಷ್ಟ್ರಿಕಃ, ಶೌಕ್ಲಿಕೇಯಃ, ಬ್ರಹ್ಮಪುತ್ರಃ, ಪ್ರದೀಪನಃ, ದಾರದಃ, ವತ್ಸನಾಭಃ — ೯ ವಿಷಭೇದಗಳು ಅಂದರೆ ಒಂಭತ್ತು ಬಗೇ ವಿಷಗಳು" (ಸಿದ್ಧಾಂತಿ. ೬೩). [ಸಂ.]

**ಬ್ರಹ್ಮಪುರ** (ನಾ). ೧. ಬ್ರಹ್ಮನ ನಿವಾಸಸ್ಥಾನ. ೨. ಬ್ರಾಹ್ಮಣರ ಕೇರಿ; ಅಗ್ರಹಾರ : ವಿಳಸದು ಬ್ರಹ್ಮಪುರಂಗಳಿಂ ವಿವಿಧ ಕೂಟೋತ್ತುಂಗ ದೇವಾಲಯಂಗಳಿನತ್ಯಾಯುತರಮ್ಯಹರ್ಮ್ಯತತಿಯಿಂ ... ಅವಗಂ ಸೊಗಯಿ[ಸಿರ್ಕುಂ] ತತ್ಪುರಾಭ್ಯಂತರಂ (ತೌಇ. IV, ೬೯೬.೦೯ ; 1208). [ಸಂ.]

**ಬ್ರಹ್ಮಪುರಾಣ** (ನಾ). ಹದಿನೆಂಟು ಪ್ರಸಿದ್ಧವಾದ ಪುರಾಣಗಳಲ್ಲಿ ಒಂದು : ಬ್ರಹ್ಮಪುರಾಣ, ಪದ್ಮಪುರಾಣ, ವೈಷ್ಣವಪುರಾಣ . . . ಗಾರುಡಪುರಾಣ, ಬ್ರಹ್ಮಾಂಡಪುರಾಣವೆಂಬವೇ . . . ಹದಿನೆಂಟು ಮೂಲ ಪುರಾಣಂಗಳು (೬ವೇಕ. ೬). [ಸಂ.]

**ಬ್ರಹ್ಮಪುರಿ** (ನಾ). ೧. ಬ್ರಹ್ಮಲೋಕದಲ್ಲಿಯ ಬ್ರಹ್ಮನ ನಿವಾಸಸ್ಥಳ : ಆ ಸೌಂದರ್ಯ . . . ಈ ದೇಹವನ್ನು ಪಾಪದೇಹವನ್ನಾಗಿಸದೆ 'ಬ್ರಹ್ಮಪುರಿ'ಯನ್ನಾಗಿಸುತ್ತದೆ (ಸೌಂದಸ. ೦೦೩). ೨. ಬ್ರಾಹ್ಮಣರಿಗೆ ಮೀಸಲಾದ ಕೇರಿ; ಅಗ್ರಹಾರ : ಪುಲಿಗೆಱೆಯ ಒಬ್ಬೆಗ ಬ್ರಹ್ಮಪುರಿಯೆಂದು ಪೆಸರ್ (ಎಇ. XV, ೬೩-೯; ಸು. ೯೦೦); ಪ್ರತಿಪತ್ತಿವೆರಸು ಬ್ರಹ್ಮಪುರಿಗೆ ಕೇರಿಯುಂ [ಕೆ]ಯ್ಯುಮುಮಂ ಶ್ರೀ[ಗು]ಣದಬ್ಬೇಶ್ವರಂ ಶ್ರೀಸೋಭನೇಶ್ವರ ಮನ್ನೆರಡುಂ [ಪುರದ] ಸಾಸಿರ್ವ್ವರುಂ ಪುರಸ್ಸರರಾಗಿ ಪಡೆದು (ತೌಇ. XI-i, ೬೪-೦೯; 1028); ವಿಪ್ರಜನಾಳೀವಿಸರದ್ವೇದಸ್ವರದಿಂದೆಸೆದಿರ್ಕುಂ ಬ್ರಹ್ಮಪುರಿಯ ಸೌಧಸಮೂಹಂ (ಜಗಪು. ೯-೦೦೪). [ಸಂ. ಬ್ರಹ್ಮಪುರೀ]

**ಬ್ರಹ್ಮಪ್ರಾಪ್ತಿ** (ನಾ). ಬ್ರಹ್ಮಜ್ಞಾನದ ಗಳಿಕೆ ; ಪರಬ್ರಹ್ಮದಲ್ಲಿ ಐಕ್ಯವಾಗುವಿಕೆ : ನಾನು ಆ ಸಾಧನವನ್ನು ಬ್ರಹ್ಮಪ್ರಾಪ್ತಿಗೆ ಉಪಯೋಗಿಸುತ್ತಿರುವೆನು (ಪುಹಾಪ. ೬೩). [ಸಂ.]

**ಬ್ರಹ್ಮಬಂಧು** (ನಾ). ಬ್ರಾಹ್ಮಣೋಚಿತವಾದ ಆಚಾರವಿಲ್ಲದೆ, ಹೆಸರಿಗೆ ಮಾತ್ರ ಬ್ರಾಹ್ಮಣನಾಗಿರುವವನು ; ಬ್ರಾಹ್ಮಣಾಧಮ : "ಬ್ರಹ್ಮಬಂಧುಃ, ದ್ವಿಜಾಧಮಃ —ಈ ೨ ದ್ವಿಜಾಧಮಂ" (ಹಲಾಯು. ೬೬-೨೩೦); ಇಂತು ತನ್ನೊಂದಿರವಂ ಕೇಳಿಸಿದ ಬ್ರಹ್ಮಬಂಧುವಂ ರನ್ನಗೊರಲಂ ಮತ್ತಮಂದೊರ್ವ ಲೇಸುಲೇಸರ್ಯ . . . ಆ ಕ್ಷೇತ್ರಮನೆಮಗಂ ತೋಱ ಎಂಬುದುಂ (ರಾಮಾಶ್ವ. ೬೬-೨೦). [ಸಂ.]

**ಬ್ರಹ್ಮಬಿಂದು** (ನಾ). ೧. ಶತೋಪನಿಷತ್ತುಗಳಲ್ಲಿ ಒಂದು : ಬ್ರಹ್ಮಬಿಂದು ಆರುಣಿ . . . ಮುಂಡಕವೆಂಬಿವು ಮೊದಲಾದವೇ ಶತೋಪನಿಷತ್ತುಗಳು (೬ವೇಕ. ೩). ೨. (ಅಲಂ) ವೇದಪಾಠ ಮಾಡುವಾಗ

ಬ್ರಾಹ್ಮಣರ ಬಾಯಿಂದ ಹೊರಸೂಸುವ ಉಗುಳಿನ ಬಿಂದು,- ಹನಿ : "ಬ್ರಹ್ಮಬಿಂದುಃ— ವೇದಪಾಠಸಮಯದಲ್ಲಿ ಬಾಯಿಂದ ಹೊರಡುವ ತುಂತುರುಗಳ ಹೆಸರು" (ಸಿದ್ಧಾಂತಿ. ೨೨೭). [ಸಂ.]

**ಬ್ರಹ್ಮಬ್ರುವ** (ನಾ). ಹೆಸರಿಗೆ ಮಾತ್ರ ಬ್ರಾಹ್ಮಣನಾಗಿರುವವನು; ಅಯೋಗ್ಯನಾದ ಬ್ರಾಹ್ಮಣ : "ಬ್ರಹ್ಮಬ್ರುವಂ ಪಾರ್ವನೆನೆ ತನ್ನ ಜಾತಿಯಂ ತೋಱಿ ಬಾಳ್ವಂಗೆ ನಾಮಂ" (ಮಂಗರಾ. ೬೫-೭). [ಸಂ.]

**ಬ್ರಹ್ಮಮಾರ್ಗ** (ನಾ). ಮೋಕ್ಷಮಾರ್ಗ; ಅಧ್ಯಾತ್ಮಮಾರ್ಗ : ಬ್ರಹ್ಮಮಾರ್ಗಕೆ ನಡಿಸಿದನು ವಾಯುವ ಪರಬ್ರಹ್ಮವ ಕಂಡ ತನ್ನೊಳಗೆ (ಭರತ. ೫-೧೧೩); ಹಾದಿಗಳನಾರೈದು ಯಾತ್ರೆಯನ್ನೈದುವರ ಮಾಳ್ಕೆಯಲಿ ಮೆಲ್ಲನೆ ಸಾಧನದೊಳಲ್ಲದೊಡೆ ಮೆರೆಯದು ಬ್ರಹ್ಮಮಾರ್ಗವಿದು (ಗಗಶ. ೧೩-೨೭); ಯೋಗಭ್ರಷ್ಟನಾಗಿ ಬ್ರಹ್ಮಮಾರ್ಗವಲ್ಲಿ (ಹಾದಿ) ತಪ್ಪಿದವನು . . . ಉಭಯಭ್ರಷ್ಟನಾಗಿ ನಾಶವನ್ನು ಹೊಂದುವುದಿಲ್ಲವಷ್ಟೆ ? (ಅನಾಸ. ४೦). [ಸಂ.]

**ಬ್ರಹ್ಮಮೀಮಾಂಸೆ** (ನಾ). ಬ್ರಹ್ಮಸ್ವರೂಪವನ್ನು ಕುರಿತು ಜಿಜ್ಞಾಸೆ ಮಾಡುವ ಬಾದರಾಯಣಸೂತ್ರ ಅಥವಾ ಬ್ರಹ್ಮಸೂತ್ರ; ವೇದಾಂತ ಶಾಸ್ತ್ರ; ಉತ್ತರಮೀಮಾಂಸೆ : ಜೈಮಿನಿಸೂತ್ರಕ್ಕೆ ಪೂರ್ವಮೀಮಾಂಸೆ. ಧರ್ಮಮೀಮಾಂಸೆಯೆಂದೂ, ಬಾದರಾಯಣಸೂತ್ರಕ್ಕೆ ಉತ್ತರಮೀಮಾಂಸೆ. ಬ್ರಹ್ಮಮೀಮಾಂಸೆಯೆಂದೂ ವ್ಯವಹಾರ (ಹಿಂದಶಾ. ೦೬४). [ಸಂ. ಬ್ರಹ್ಮಮೀಮಾಂಸಾ]

**ಬ್ರಹ್ಮಯಜ್ಞ** (ನಾ). ೧. ಪಂಚಮಹಾಯಜ್ಞಗಳಲ್ಲಿ ಒಂದು ; ಪ್ರತಿನಿತ್ಯ ಮಾಡುವ ವೇದಪಠಣ,— ವೇದಾಧ್ಯಯನ : ವೇದಾಧ್ಯಯನರೂಪ ಬ್ರಹ್ಮಯಜ್ಞ ಅಗ್ನಿಹೋತ್ರರೂಪ ದೇವಯಜ್ಞ ಅತಿಥಿಪೂಜಾರೂಪ ಮನುಷ್ಯಯಜ್ಞ ಪಿತೃತರ್ಪಣರೂಪ ಪಿತೃಯಜ್ಞ ಭೂತಬಲಿರೂಪ ಭೂತಯಜ್ಞ ಎಂಬೀ ಪಂಚಮಹಾಯಜ್ಞಂಗಳಂ ನಡೆಸುತ್ತೆ (ವಿವೇಕ. ೦೨೦); ಬ್ರಹ್ಮಯಜ್ಞ, ಪಿತೃಯಜ್ಞ, ದೈವಯಜ್ಞ, ಭೂತಯಜ್ಞ, ಮನುಷ್ಯಯಜ್ಞ—ಈ ೫ ಮಹಾಯಜ್ಞಗಳು, ವೇದಾಧ್ಯಯನವು ಬ್ರಹ್ಮಯಜ್ಞವು (ಆರ್ಯಧ. ೦೬೭). ೨. ವೇದಗಳನ್ನು ಹೇಳಿಕೊಡುವಿಕೆ ; ವೇದಾಧ್ಯಾಪನ. [ಸಂ.]

**ಬ್ರಹ್ಮಯೋಗ** (ನಾ). ೧. ಮೋಕ್ಷಸಾಧನೆಯ ಉದ್ಯೋಗ, — ಪ್ರಯತ್ನ : ಬ್ರಹ್ಮಿಯೆಂದೆಂಬ ಮುಹೂರ್ತ ಸನ್ನಿಧಿಯದು ಬ್ರಹ್ಮಯೋಗಕೆ ತಕ್ಕ ಕಾಲ (ಭರತ. ೧೫-೦೦೩). ೨. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಒಂದು : ಬರೆ ಚೈತ್ರಂ . . . ಅತಿಶುಭದಂ ಬ್ರಹ್ಮಯೋಗಂ ಮನಂಗೊಂಡಿರೆ ಭಾಸ್ವನ್ನಾಭಿರಾಜಾಂಗನೆ ವಿಶದಯಶೋಭಾಗಿಯಂ . . . ಪುತ್ರನಂ ಪೆತ್ತಳ್ (ಅಜಿಪು. ೭-೩೭) ; ಬ್ರಹ್ಮಯೋಗಕ್ಕೆ ಸಾಲ ೩.೭ ಗಳಿಗೆ ಮೇಲೆ ತ್ಯಾಜ್ಯಾ (ಭಾಸ್ಕರ. ೭೧-೭). [ಸಂ.]

**ಬ್ರಹ್ಮರಂಧ್ರ** (ನಾ). ೧. ನೆತ್ತಿಯ ಮಧ್ಯದಲ್ಲಿರುವ ಸೂಕ್ಷ್ಮವಾದ ರಂಧ್ರ ; ಗರ್ಭದಲ್ಲಿ ಶರೀರ ರಚನೆಯೆಲ್ಲ ಆದ ಮೇಲೆ ಚೈತನ್ಯವು ಈ ಮಾರ್ಗದಿಂದ ಪ್ರವೇಶಿಸುವುದೆಂದೂ ಸಾಯುವಾಗ ಈ ಮಾರ್ಗದಿಂದ ಜೀವ ಹೋದವರಿಗೆ ಬ್ರಹ್ಮಲೋಕಪ್ರಾಪ್ತಿಯೆಂದೂ ಐತರೇಯ ಮತ್ತು ಕಠಶ್ರುತಿಗಳಲ್ಲಿ ಹೇಳಿದೆ : ಬಿಟ್ಟ ಕಣ್ಣು ಬಿಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಇಟ್ಟು ಗುಡಿದು (ಬಸವ. ೬೦४) ; ಬ್ರಹ್ಮರಂಧ್ರದ ಗೊತ್ತು ಒಮ್ಮೆಲೇ ತಿಳಿವುದೇ (ಸರ್ವಜ್ಞ. ೫३४) ; ಯೋಗ ಸಂಪ್ರದಾಯದಂತೆ ಮತ್ತು ತಾಂತ್ರಿಕರ ಸಮ್ಮತಿಗೆ ಅನುಸಾರವಾಗಿಯೂ ತಲೆಯಲ್ಲಿ ಬ್ರಹ್ಮರಂಧ್ರವಿದೆ (ಭಾರಧ. ೦೫೩). ೨. ನಡುನೆತ್ತಿ : ಪುಣೆಸುಚಿಕ್ಕೆ ಬೂದಿಯನ್ನು ಬ್ರಹ್ಮರಂಧ್ರದ ಮೇಲೆ ಇಟ್ಟು ನಿಂಬೆಹುಳಿಯನ್ನು ಹಿಂಡುವುದು (ಸಳಪ್ರ. ४೨೮ ಶಂ) ; ಕಟ್ಟಿದರೆ ಬ್ರಹ್ಮರಂಧ್ರಕ್ಕೆ ಏರುವಂಥ ಮಾದುಮೀಳಿತವಾದ ಹುಳಿ (ಹಸುಸೂ. ३೦೭). [ ಸಂ. ]

**ಬ್ರಹ್ಮರಶ್ಮಿ** (ನಾ). ಬ್ರಾಹ್ಮಣನಲ್ಲಿರಬೇಕಾದ ತೇಜಸ್ಸು : ಕುಂತೀನಂದನರು ಸುಕ್ಷಾತ್ರತೇಜೋವೃಂದವನು ಮುಸುಕಿದರು ವಿಮಲಬ್ರಹ್ಮರಶ್ಮಿಯಲಿ (ಕುವ್ಯಾ೦. ೦೨-೨). [ ಸಂ. ]

**ಬ್ರಹ್ಮರಾಕ್ಷಸ** (ನಾ). ಧರ್ಮಭ್ರಷ್ಟನಾಗಿ ಬ್ರಾಹ್ಮಣರ ಧನವನ್ನೂ ಪರಪತ್ನಿಯರನ್ನೂ ಅಪಹರಿಸಿದ ನೀಚಬ್ರಾಹ್ಮಣನಿಗೆ ಮರಣಾನಂತರ ಬರುವುದೆನ್ನಲಾದ ಪಿಶಾಚಜನ್ಮ ಮತ್ತು ಹಾಗೆ ಜನ್ಮ ತಾಳಿದವನು : ಸಂಗರಾರ್ಜುನಂ ಸಿದ್ಧನಂತಾ ಸಿದ್ಧಕ್ಷೇತ್ರಮಂ ಪುಗುತಂದನದೆಂತಪ್ಪುದೆಂದೊಡೆ . . , ನಾರಾಯಣನಂತೆ ಬಲಿಯಂ ಬೇಡುವ ಬ್ರಹ್ಮರಾಕ್ಷಸರಿಂ . . . ಅತಿಭಯಂಕರಾಕಾರಮಪ್ಪುದು (ಕಾವ್ಯಸಾ. ೫೨४ ಪೂರ್ವ४); ವೇದೋಹೋತನೆಂಬವಂ ದಾನವೇಂದ್ರಂಗೆ ಪೌರೋಹಿತ್ಯಮಂ ಮಾಡುವಂ ಬ್ರಹ್ಮರಾಕ್ಷಸಂ ಕಂಡು ಪಾರ್ಥನ ಹಯವನು ಊಹಿಸಿದನು (ಕೃವಿಃಚ.೦೭-೨३) ; ಯಾರೋ ಅನ್ನುತ್ತಿದ್ದರು ಗುಡಿಯಲ್ಲಿ—ಕವಿತ್ತಿಯವರ ಮಗ ಸತ್ತ ಮೇಲೆ ಬ್ರಹ್ಮರಾಕ್ಷಸ ಆಗಿದ್ದಾನೆ ಎಂದು (ದೇವಪಂ. ೧೦೭). 'ಬೊಮ್ಮರಕ್ಕಸ', 'ಬ್ರಹ್ಮಪಿಶಾಚಿ' ಹೋ. [ ಸಂ. ]

**ಬ್ರಹ್ಮರ್ಷಿ** (ನಾ). ಬ್ರಹ್ಮವನ್ನು ಅರಿತು ಆ ತಿಳಿವಿನಿಂದ ಋಷಿಯಾದವನು ; ಬ್ರಹ್ಮಜ್ಞನಾದವನು : ಬ್ರಹ್ಮರ್ಷಿ ಗುರುವಸಿಷ್ಠಂ ಬಂದು ತಾಮ್ಯನಕೆ ಪೇಳ್ದನಿಂತೆಂದು ಸಂತೈಕೆಯಂ (ಶ್ರೀರಾಮಾ. ೦೬-४७६) ; ಇವೊತ್ತು ನಾವು ಸೇರಿರುವುದು ತಪೋಬಲದಿಂದ ಬ್ರಾಹ್ಮಣ್ಯ ಸಾಧಿಸಿ ಬ್ರಹ್ಮರ್ಷಿಯಾಗಿರುವ ವಿಶ್ವಾಮಿತ್ರರ ಬ್ರಹ್ಮರ್ಷಿತ್ವವನ್ನು ಒಪ್ಪಿಕೊಳ್ಳುವುದಕ್ಕೆ (ಮಹಾಪ. ೨೨೦). [ ಸಂ. ]

**ಬ್ರಹ್ಮರ್ಷಿತ್ವ** (ನಾ). ಬ್ರಹ್ಮರ್ಷಿಯಾಗಿರುವಿಕೆ ; ಬ್ರಹ್ಮರ್ಷಿಪದವಿ : ಬ್ರಹ್ಮರ್ಷಿತ್ವವು ಒಬ್ಬರ ಇಬ್ಬರ ಅಭಿಮಾನದಿಂದ ಬರುವ ಪದವಿಯಲ್ಲ (ಮಹಾಪ. ೨೨೦). [ ಸಂ. ]

**ಬ್ರಹ್ಮಲಿಖಿತ** (ನಾ). ಹಣೆಯ ಬರೆಹ ; ವಿಧಿಲಿಖಿತ ; P ಮಾನವರ ಹಣೆಯಲ್ಲಿ ವಿಧಿಯು ಬರೆದಿರುವುದು ಮತ್ತು ಯಾರಿಂದಲೂ ಅದನ್ನು ಅಳಿಸಲು, ಬದಲಾಯಿಸಲು ಸಾಧ್ಯವಿಲ್ಲ, ಹಾಗೆಯೇ ನಡೆಯುವುದು ಎಂದು ನಂಬಲಾದ ಲೇಖ,—ಬರೆಹ : ಬ್ರಹ್ಮಲಿಖಿತವ ಮೀಱಿ ಬಾಳ್ವರುಂಟು ನಿರ್ಮಳದಿ ವೈಷ್ಣವರ ಮನವುಟ್ಟಿ ಭಜಿಸಿ (ಕವಳ. ೨೫ ಪಲ್ಲವಿ); ಬರೆದದ್ದೆಲ್ಲ ಬ್ರಹ್ಮಲಿಖಿತವೆಂದೂ ಸಾಹಿತಿಗಳೂ ತಿಳಿಯುವ ಕಾರಣವಿಲ್ಲ (ಸಾಹಿವಿ. ೭). [ಸಂ.]

**ಬ್ರಹ್ಮಲಿಪಿ** (ನಾ). ೧. = ಬ್ರಹ್ಮಲಿಖಿತ : ಬ್ರಹ್ಮಲಿಪಿ ಬೇರೆಯಲ್ಲ, ಪಿಶಾಚಪರಿವಾರದವರ ಆದೇಶ ಬೇರೆಯಲ್ಲ (ಶಿಶಾಕ. ೦೦೨); "ನಿಮಗ ಒಂದು ಗಂಡುಮಗ ಹುಟ್ಟಲಿ" ಅಂತ ಆವಾಗ ಅಂದೇ ಅಂದ್ರು ಬ್ರಹ್ಮಲಿಪಿ ಅಂತ ತಿಳಿರಿ! (ಸಮಶೀ. ೦೫೦). ೨. (ಆಲಂ) ಓದಲು ಬಾರದ ಲಿಪಿ : ಆ ಪುಣ್ಯಾತ್ಮನ ಬರವಣಿಗೆ ಬ್ರಹ್ಮಲಿಪಿ (ರೂಢಿ). [ಸಂ.]

**ಬ್ರಹ್ಮಲೋಕ** (ನಾ). ೧. ಸೃಷ್ಟಿಕರ್ತನಾದ ಬ್ರಹ್ಮನಿರುವನೆಂದು ನಂಬಲಾದ ಲೋಕ ; ಸತ್ಯಲೋಕ : ನಾನು . . . ಇನ್ನೊಂದು ರೂಪದಿಂದ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಬ್ರಹ್ಮನೊಡನೆ ಈ ವಿಚಾರವಾಗಿ ಮಾತನಾಡಿ ಗೊತ್ತು ಮಾಡಿರುವೆನು (ಮಹಾಪ. ೦೦४). ೨. [ಜೈನ] ಹದಿನಾರು ಕಲ್ಪಗಳಲ್ಲಿ ಒಂದು ; ಲೋಕಾಂತಿಕದೇವರ ನಿವಾಸ : ಬ್ರಹ್ಮಲೋಕನಿಳಯರಪ್ಪ ಲೋಕಾಂತಿಕರುಂ (ಶಾಂತಿಪು. ೦೨-४३ ವ). [ಸಂ.]

**ಬ್ರಹ್ಮವಂತ** (ನಾ). ವೇದಾಧ್ಯಯನಸಂಪನ್ನನಾದ ಬ್ರಾಹ್ಮಣ : "ಬ್ರಾಹ್ಮಣಂ . . . ಬ್ರಹ್ಮವಂತಂ ಸೋಮಪಂ ವಿಪ್ರನೆಂದೆನಲು ಬ್ರಾಹ್ಮಣನ ಪೆಸರಕ್ಕುಂ" (ಮಂಗರಾ. ೬३-೧). [ ಸಂ. ಬ್ರಹ್ಮವತ್ ]

**ಬ್ರಹ್ಮವರ್ಚಸ** (ನಾ). ೧. ವೇದಾಧ್ಯಯನದಿಂದ ಉಂಟಾಗುವ ಅಭಿವೃದ್ಧಿ,—ತೇಜಸ್ಸು : "ಆಚಾರದ ಓದಿನ ನೆಜ್ಜಿಪನೆಗೆ ಬ್ರಹ್ಮವರ್ಚಸ

ವೆಂಬುದು" (ಪಠಾಯು. ೬೬-೨೯೩); "ಬ್ರಹ್ಮವರ್ಚಸಂ ವೃತ್ತಸ್ವಾಧ್ಯಾಯಸರ್ಧಿಃ —ಒಳ್ಳೇ ನಡತೆ, ಅಧ್ಯಯನ, ವೇದಪಾಠ ಈ ಎರಡರ ಶುದ್ಧಿ, ಅಭಿವೃದ್ಧಿಗೆ ಹೆಸರು" (ಸಿದ್ಧಾಂತ. ೨೨೬). ೨. ಬ್ರಹ್ಮವರ್ಚಸ್ಸನ್ನು ಪಡೆದವನು : "ಆಚಾರಮಾರ್ಗ ತಂತುವನಚ್ಛಿನ್ನನಾವನೊರ್ವಂ ಬ್ರಹ್ಮ ವರ್ಚಸನಕ್ಕುಂ"(ಪಂಗರಾ. ೬೪-೦). [ಸಂ.]

**ಬ್ರಹ್ಮವರ್ಚಸ್ಸು** (ನಾ). ಬ್ರಹ್ಮತೇಜಸ್ಸು; ಬ್ರಹ್ಮಬಲ : ಋಷಿಗಳು ಈ ಪವಿತ್ರ ಕಾರ್ಯಗಳನ್ನೆಸಗುತ್ತಿದ್ದುದರಿಂದಲೇ ದೀರ್ಘಾಯುಸ್ಸು, ಪ್ರಜ್ಞೆ, ಕೀರ್ತಿ ಮತ್ತು ಬ್ರಹ್ಮವರ್ಚಸ್ಸುಗಳನ್ನು ಪಡೆದಿದ್ದರು (ಭಾರದ. ೩೦). [ಸಂ. ಬ್ರಹ್ಮವರ್ಚಸ್]

**ಬ್ರಹ್ಮವಾದಿ** (ನಾ). ವೇದಗಳನ್ನು ಕಲಿಸುವವನು; ವೇದಾರ್ಥವನ್ನು ವಿವರಿಸುವವನು; ವೇದವಿದ : ಬ್ರಹ್ಮವಾದಿಗಳೆಲ್ಲ ಓದಿಯಣ್ಣ ತಂದೆ ಗೆಣೆಯೆನ್ನುವರು (ಶಾಸಸಾ. ೮). [ಸಂ. ಬ್ರಹ್ಮವಾದಿನ್]

**ಬ್ರಹ್ಮವಾದಿನಿ** (ನಾ). ೧. ವೇದಾಂತ ತತ್ತ್ವವನ್ನು ಪ್ರತಿಪಾದಿಸುವವಳು; ವೇದಾಂತಪ್ರವೀಣೆ : ದನುಜೇಜ್ಯ ಕುಜಾಂಗಿಗರ್ ಸಮವಿಲಗ್ನಕ್ಷೇತ್ರ ದೊಳ್ ಬಾಲ್ಯರಾಗಿ ನಿರಾಬಾಧೆಯಿನಿರ್ದೊಡಾ ಸಕಲಶಾಸ್ತ್ರೋಪೇತೆಯುಂ ಬ್ರಹ್ಮವಾದಿನಿಯುಂ ಖ್ಯಾತೆಯುಮಕ್ಕುಂ (ಜಾತಕ. ೨೨-೨೩); ಸ್ತ್ರೀಯರು ಬ್ರಹ್ಮವಾದಿನಿಗಳು, ಸದ್ಯೋವಧುಗಳು ಎಂದು ಎರಡು ಬಗೆ, ಬ್ರಹ್ಮ ವಾದಿನಿಗಳಿಗೆ ಉಪನಯನ ವೇದಾಧ್ಯಯನ ಮೊದಲಾದ ನಿಯಮಗಳು . . . ಎಂದು ವಿಧಿಸಿರುವರು (ಒಂದಸಾ. ೦೩೯). ೨. ಗಾಯತ್ರೀದೇವಿ. [ಸಂ. ಬ್ರಹ್ಮವಾದಿನೀ]

**ಬ್ರಹ್ಮವಿತ್ತು** (ನಾ). =ಬ್ರಹ್ಮಜ್ಞಾನಿ : ನಿಷಿದ್ಧ ಕರ್ಮಗಳನ್ನು ತ್ಯಜಿಸಿ . . . ತೀವ್ರಮುಮುಕ್ಷುಗಳಾಗಿ ಬ್ರಹ್ಮವಿತ್ತುಗಳಲ್ಲಿ ಉತ್ತಮನಾದ ಗುರುವರ್ಯನ ಅಡಿದಾವರೆಗಳನ್ನಾಶ್ರಯಿಸಿ ವೇದಾಂತಶ್ರವಣ ಮಾಡಬೇಕು (ಭಾರದ. ೨೩೮). [ಸಂ. ಬ್ರಹ್ಮವಿದ್]

**ಬ್ರಹ್ಮವಿದ** (ನಾ). =ಬ್ರಹ್ಮಜ್ಞಾನಿ : ಬ್ರಹ್ಮವಿದನಾದವನೇ, ಬ್ರಹ್ಮನನ್ನು ಬಲ್ಲವನೇ ಬ್ರಹ್ಮನಾಗುತ್ತಾನೆ. ಬ್ರಹ್ಮನಾದವನಿಗೇ ಬ್ರಹ್ಮಜ್ಞಾನ, ಬ್ರಾಹ್ಮೀ ಪ್ರಜ್ಞೆ ಆಳವಡುತ್ತದೆ (ಭಾರದ. ೦೦೦). [ಸಂ.]

**ಬ್ರಹ್ಮವಿದ್ಯೆ** (ನಾ). ವೇದಾಂತ ವಿದ್ಯೆ ; ಮೋಕ್ಷಸಾಧಕವಾದ ವಿದ್ಯೆ ; ಮೋಕ್ಷಜ್ಞಾನ : ಕೋಳುಗೊಂಡುದು ಬ್ರಹ್ಮವಿದ್ಯೆಯ ಮೂಲಧನವಂ ತವ ಭಕುತಿ (ಗಗಸಾ. ೦೩-೪); ಭಕ್ತಿಯೆಂದರೆ . . . ಪರಮಪುರುಷನ ಪಾದಾರ ವಿಂದಗಳ ಧ್ಯಾನ, ಅರ್ಚನೆ, ಪ್ರಣಾಮ ಮೊದಲಾದುವು. ಇವೇ ಉಪನಿಷತ್ತು ಗಳಲ್ಲಿ ವೇದನ, ಉಪಾಸನ, ಬ್ರಹ್ಮವಿದ್ಯಾ ಮೊದಲಾದ ಶಬ್ದಗಳಿಂದ ಹೇಳಲ್ಪಡುವುವು (ಒಂದಸಾ. ೨೫೩) [ಸಂ. ಬ್ರಹ್ಮವಿದ್ಯಾ]

**ಬ್ರಹ್ಮವೀಣೆ** (ನಾ). ಒಂದು ಬಗೆಯ ವೀಣೆ : ವಿಪಂಚಿಕೆ ಚಿತ್ರಿಕೆ . . . ಬ್ರಹ್ಮವೀಣೆ ಸಾರಂಗವೀಣೆ ಸರವೀಣೆ ಆಕಾಶವೀಣೆ ಅಂತರ್ವೀಣೆ ರುದ್ರ ವೀಣೆಯೆಂಬ ಇಪ್ಪತ್ತೆರಡು ತೆಱನ ತಂತ್ರೀವಾದ್ಯಕ್ರಮಮೆಂಬುದು (ಬಿಪೀಕ. ೧೯೦) ; ಆತನು ಬ್ರಹ್ಮವೀಣೆಯನ್ನು ಬಾರಿಸುವುದರಲ್ಲಿಯೂ ತಾಳ ವಿದ್ಯೆಯಲ್ಲಿಯೂ ಪ್ರವೀಣನಾಗಿದ್ದನು (ಕಬಿಂಶ. ೯೮). [ಸಂ. ಬ್ರಹ್ಮವೀಣಾ]

**ಬ್ರಹ್ಮವೃಕ್ಷ** (ನಾ). ೧. ಅತ್ತಿಮರ. ೨. ಮುತ್ತುಗ ; ಪಲಾಶ: "ಬ್ರಹ್ಮವೃಕ್ಷಂ ಪಲಾಶಂ ಮುತ್ತುಗಂ" (ಪಂಗರಾ. ೩೩-೧೩). [ಸಂ.]

**ಬ್ರಹ್ಮವೇತ್ತ** (ನಾ).= ಬ್ರಹ್ಮಜ್ಞಾನಿ : ಬ್ರಹ್ಮವೇತ್ತರು ದುರಿಳಕರ್ಮವ ನೆನೆವರೇ (ಗಗಸಾ. ೦೩-೨೦). [ಸಂ. ಬ್ರಹ್ಮವೇತ್ತೃ]

**ಬ್ರಹ್ಮವೈವರ್ತ** (ನಾ). ಪ್ರಸಿದ್ಧವಾದ ಹದಿನೆಂಟು ಪುರಾಣಗಳಲ್ಲಿ ಒಂದು : ಬ್ರಹ್ಮಪುರಾಣ ಪದ್ಮಪುರಾಣ. . .ಬ್ರಹ್ಮವೈವರ್ತಪುರಾಣ . . . ಬ್ರಹ್ಮಾಂಡಪುರಾಣವೆಂಬವೇ . . . ಹದಿನೆಂಟು ಮೂಲಪುರಾಣಂಗಳು (ಬಿಪೀಕ. ೬); ಕ್ರಮವಾಗಿ ಹದಿನೆಂಟುಪುರಾಣಗಳ ಹೆಸರುಗಳು:– (೧) ಬ್ರಹ್ಮ (೨) ಪದ್ಮ (೩) ವಿಷ್ಣು. . . (೧೦) ಬ್ರಹ್ಮವೈವರ್ತ . . . (೧೮) ಬ್ರಹ್ಮಾಂಡ (ಭಾರದ. ೧೩೬). [ಸಂ. ]

**ಬ್ರಹ್ಮವ್ರತ** (ನಾ). [ಜೈನ] ಬ್ರಹ್ಮಚರ್ಯವನ್ನು ಪಾಲಿಸುವ ವ್ರತ : ಪಂಚವಿಧಂ ಬ್ರಹ್ಮವ್ರತಂ ಜಿನೇಶ್ವರಮತದೊಳ್ (ಶಾಂತಿಪು. ೬-೩೪). [ಸಂ.]

**ಬ್ರಹ್ಮಶಿರ** (ನಾ). ಒಂದು ಬಗೆಯ ಮಂತ್ರಾಸ್ತ್ರ ; P ಬ್ರಹ್ಮನ ಸಕಲ ಶಕ್ತಿಗಳನ್ನು ಹೊಂದಿರುವುದೆಂದು ನಂಬಲಾದ ಅಸ್ತ್ರ: ದ್ರೋಣನು... ತನ್ನ ಮೆಚ್ಚುಗೆಯನ್ನು ತೋರಿಸಲು ಅವನಿಗೆ ಬ್ರಹ್ಮಶಿರವೆಂಬ ಒಂದು ವಿಶಿಷ್ಟರೀತಿಯ ಅಸ್ತ್ರವನ್ನು ಕೊಟ್ಟು . . . ಅಲ್ಪಬಲವುಳ್ಳವನ ಮೇಲೆ ಪ್ರಯೋಗಿಸಿದರೆ ಅದು ಪ್ರಪಂಚವನ್ನೇ ಸುಟ್ಟುಹಾಕಿಬಿಡುತ್ತದೆ ಎಂದನು (ಭತಕಾ. ೨೨). [ಸಂ. ಬ್ರಹ್ಮಶಿರಸ್]

**ಬ್ರಹ್ಮಶಿವ** (ನಾ). ೧. ಒಬ್ಬಾತನ ಹೆಸರು : ಬ್ರಹ್ಮಶಿವಬಟರರು ಪುಸಂಗೂರ ಆಳೆ (ಎಕ. X. ಶಿಡ್ಲ. ೩೯-೩ ; ಸು. ೯೦೦). ೨. 'ಸಮಯ ಪರೀಕ್ಷೆ' ಎಂಬ ಕಾವ್ಯವನ್ನು ಬರೆದ ಒಬ್ಬ ಕನ್ನಡಕವಿಯ ಹೆಸರು : ಈತನು ಹರಲೀಲೆಯೆಂಬ ಸಾವಿರ ವೃತ್ತವುಳ್ಳ ಒಂದು ಕಾವ್ಯವನ್ನು ಬರೆದು ದಾಗಿ ಬ್ರಹ್ಮಶಿವನ ಸಮಯಪರೀಕ್ಷೆಯಿಂದ ತಿಳಿಯುತ್ತದೆ (ಕಚ. I. ೨೩೨). [ಸಂ.]

**ಬ್ರಹ್ಮಸಂಕಲ್ಪ** (ನಾ). ವಿಧಿಯ ನಿಯಮ : ದೇಸಾಯರು ಬ್ರಹ್ಮ ಸಂಕಲ್ಪ ವನ್ನು ಒಂದು ನಿಮಿಷವಾದರೂ ತಿದ್ದಲು ಪ್ರಯತ್ನಿಸಿದರು (ಸಮತೀ. ೨೦೩). [ಸಂ.]

**ಬ್ರಹ್ಮಸಭೆ** (ನಾ). ೧. ಬ್ರಹ್ಮನ ಸಭೆ. ೨. ಬ್ರಾಹ್ಮಣರ ಸಮುದಾಯ: ಶೀನಪ್ಪಯ್ಯನವರ ಶೀವಿಯನ್ನು ಕಂಡೇ ಪಡುಮುನ್ನೂರಿನವರು ಮುನ್ನೂರು ಸೀಯಾಳ ಇಳಿಸಿ, ಬ್ರಹ್ಮಸಭೆಗೆ ಕುಡಿಸಿದರು (ಮರಳು. ೦೩೬). ೩. ಬ್ರಹ್ಮವಾದಿಗಳ ಸಭೆ ; ಬ್ರಹ್ಮಜಿಜ್ಞಾಸುಗಳ ಸಭೆ : ಆ ಬ್ರಹ್ಮ ಸಭೆಯ ಇದಿರಿನಲ್ಲಿ, ಮಿತಪರಿವಾರದ ನಡುವೆ, ಜನಕರಾಜ ವ್ಯಾಘ್ರಾಜಿನದ ಮೇಲೆ ಕುಳಿತದ್ದಾನೆ (ಪಕಂಪಾ. ೦೯೦). [ಸಂ. ಬ್ರಹ್ಮಸಭಾ]

**ಬ್ರಹ್ಮಸಮಾಜ** (ನಾ). ೧. ಬ್ರಾಹ್ಮಣರ ಸಮುದಾಯ. ೨. ಬಂಗಾಲ ದಲ್ಲಿ ಆರ್ಯಧರ್ಮದ ಪುನರುತ್ಥಾನಕ್ಕಾಗಿ ಕೇಶವಚಂದ್ರಸೇನರು ಸ್ಥಾಪಿಸಿದ ಒಂದು ಧರ್ಮಪಂಥ : ಚಾರುಬಾಲೆಯ ಮನೆಯವರು ಬ್ರಹ್ಮಸಮಾಜಕ್ಕೆ ಸೇರಿದವರು (ಶಂಚೀ. ೧೬); ಬ್ರಹ್ಮಸಮಾಜವು ವಿಗ್ರಹಾ ರಾಧನೆ, ಅವತಾರವಾದ, ಜನ್ಮಾಂತರ ಮುಂತಾದುವನ್ನು ಖಂಡಿಸುತ್ತಿತ್ತು (ಭಾರದ. ೩೨೨). [ಸಂ.]

**ಬ್ರಹ್ಮಸಾಕ್ಷಾತ್ಕಾರ** (ನಾ). ಬ್ರಹ್ಮೈಕ್ಯ ; ಮುಕ್ತಿ ; ಮೋಕ್ಷ ; ಬ್ರಹ್ಮ ಸಾಕ್ಷಾತ್ಕಾರವೇ ಮಾನವನ ಚರಮಗುರಿಯಾದರೆ ಲೋಕಸೇವೆಯೇ ಆದಕ್ಕೆ ಮುಖ್ಯಸಾಧಕ (ಮುಕ್ತಾರ. ೬೩ ಬೀಳಿ). [ಸಂ.]

**ಬ್ರಹ್ಮಸಾಯುಜ್ಯ** (ನಾ). ಬ್ರಹ್ಮನಲ್ಲಿ ಐಕ್ಯವಾಗುವಿಕೆ ; ಮುಕ್ತಿ : "ಬ್ರಹ್ಮಭೂಯಂ, ಬ್ರಹ್ಮತ್ವಂ, ಬ್ರಹ್ಮಸಾಯುಜ್ಯಂ—೩ ಬ್ರಹ್ಮಸ್ವರೂಪ ವಾಗುವಿಕೆ . . . ಮೋಕ್ಷ" (ಸಿದ್ಧಾಂತ. ೨೪೦); ಜ್ಞಾನಿಗಳು ಮಾತ್ರ ಬ್ರಹ್ಮ ಸಾಯುಜ್ಯವನ್ನು ಹೊಂದುತ್ತಾರೆ (ಮುಕ್ತಾರ. ೨೮೨). [ಸಂ.]

**ಬ್ರಹ್ಮಸಾವರ್ಣಿ** (ನಾ). ಹದಿನಾಲ್ಕು ಜನ ಮನುಗಳಲ್ಲಿ ಒಬ್ಬನು ; ಹತ್ತನೆಯ ಮನ್ವಂತರದ ಅಧಿಪತಿ : ಹದಿನಾಲ್ಕು ಮನುಗಳೊಳಗೆ ಧರ್ಮಸಾವರ್ಣಿಯೇ ವಿಷ್ಣುಸಾವರ್ಣಿಯೆಂತಲೂ, ದಕ್ಷಸಾವರ್ಣಿಯೇ ಬ್ರಹ್ಮಸಾವರ್ಣಿಯೆಂತಲೂ . . . ನಾಮಾಂತರಮುಂಟಾಗಿ (ಬಿಪೀಕ. ೨೦೪). 'ಚತುರ್ದಶಮನು' ಪರ್ಯಾ. [ಸಂ.]

**ಬ್ರಹ್ಮಸೂತ್ರ** (ನಾ). ೧. ಜನಿವಾರ ; ಯಜ್ಞೋಪವೀತ : "ಜನ್ನಿವಾರಂ ಬ್ರಹ್ಮಸೂತ್ರಮುಪವೀತಮೆನಿಕುಂ" (ಪಂಗರಾ. ೬೩-೮) ; ಅವರವರ ನೆಲೆಗಳೊಳ್ ಬ್ರಹ್ಮಸೂತ್ರಾಭಿಧಾನ ಯಜ್ಞೋಪವೀತದಿಂ ಪವಿತ್ರಗಾತ್ರ

ಮಾಡಿ (ಆದಿಪು. ೦೩-೦೦ ವ); ದೇವ ವನವಮಾಲಾಸ್ಫುರದ್ ಬ್ರಹ್ಮಸೂತ್ರ ಜಯ ನಮಸ್ತೇ (ಜಗಂ. ೩-೦೦೪ ರಗಳೆ). ೨. ಬಾದರಾಯಣ ಮುನಿಯು ರಚಿಸಿದ **ವೇದಾಂತಸೂತ್ರ** : ಬ್ರಹ್ಮಸೂತ್ರಕ್ಕೇ ಬಾದರಾಯಣ ಸೂತ್ರ, ವೇದಾಂತಸೂತ್ರ, ಶಾರೀರಕಮೀಮಾಂಸಾ, ಬ್ರಹ್ಮಮೀಮಾಂಸಾ ಎಂಬ ಹೆಸರುಗಳು ಬಂದಿವೆ (ಶಾರದ. ೨೬೦). [ಸಂ.]

**ಬ್ರಹ್ಮಸ್ಥಾನ** (ನಾ). ೧. ಬ್ರಹ್ಮನ ಸ್ಥಾನ. ೨. [ವಾಸ್ತು] ದೇವಾಲಯ ದಲ್ಲಿ ಮೂರ್ತಿಯನ್ನು ಸ್ಥಾಪನೆ ಮಾಡಬೇಕಾದ ಸ್ಥಳ ; ವಾಸ್ತು ಮಂಡಲದ ಮಧ್ಯಭಾಗ : ಬೇರದ ಪಿಂಡಿಕೆ (ಪೀಠ)ಯನ್ನು ಸ್ಥಾಪಿಸು ವುದಕ್ಕೆ ಮುಂಚೆ ವಾಸ್ತುಮಂಡಲದ ಮಧ್ಯಭಾಗವಾದ ಬ್ರಹ್ಮಸ್ಥಾನದಲ್ಲಿ ಬೀಜಾವಾಪನ ಶಂಕುಸ್ಥಾಪನ ಮುಂತಾದುವನ್ನು ಮಾಡಿ . . . ರಹಸ್ಯವಾಗಿ ಮುಚ್ಚಬೇಕೆಂದು ಆಗಮಗಳಲ್ಲಿ ಹೇಳಿದೆ (ಹೊಯ್ಸವಾ. ೦೯). [ಸಂ.]

**ಬ್ರಹ್ಮಸ್ವ** (ನಾ). ಬ್ರಾಹ್ಮಣನ ಆಸ್ತಿ.— ಸ್ವತ್ತು. [ಸಂ.]

**ಬ್ರಹ್ಮಸ್ವರೂಪ** (ನಾ). ಮೋಕ್ಷ ; ಮುಕ್ತಿ : ಮೋಕ್ಷಕ್ಕೆ ತದ್ಭಾವಾಪತ್ತಿ ಎಂದೂ ಬ್ರಹ್ಮಸ್ವರೂಪಲಾಭ ಎಂದು ಹೆಸರುಗಳೂ(ಶಾಕತ . ೬೯೩). [ಸಂ.]

**ಬ್ರಹ್ಮಹತಿ** (ನಾ). ಪಂಚಮಹಾಪಾತಕಗಳಲ್ಲಿ ಒಂದು ; ಬ್ರಾಹ್ಮಣ ನನ್ನು ಕೊಲ್ಲುವುದು ; ಬ್ರಾಹ್ಮಣವಧೆ : ರಾಘವಂ . . . ರಾವಣವಧೆ ಯೊಳಂದು ಬಂದಾ ಬ್ರಹ್ಮಹತಿ ತನ್ನನ್ನು ಅಪಗಡಿಸಲದಕೆ ನಿಷ್ಕೃತಿ ಯಾವುದೆಂದು ಸಾರುವ ನಿಗಮದಥರ್ಮಂ ತಿಳಿದು ಹಯಮೇಧಮಂ ತವೆ ನೆಗಳ್ಚುವನಾಗಿ ನಿಶ್ಚೈಸಿ ಕರೆಸಿದಂ ವರವಸಿಷ್ಠಾದಿಗಳನು (ಜೈಮಿಭಾ. ೨೦-೨); ಓನ್ನಮಶ್ಶಿವಾಯಾಯೆಂಬ ಮಂತ್ರವನು ಸ್ಮರಿಸಿದೊಡೆ ಬ್ರಹ್ಮಹತಿ . . . ಪಾತಕವೆನಿಪ್ಪ ತೃಣವಾ ಪುರುಷಿ . . . ಸಾಯುಜ್ಯಪದವಿಯ ಪಡೆವರು (ಶಪಮೋ. ೨೦-೯೩). [ಸಂ.]

**ಬ್ರಹ್ಮಹತ್ಯ** (ನಾ). = ಬ್ರಹ್ಮಹತಿ : ಎಲವೊ ಎಲವೋ ಬ್ರಹ್ಮಹತ್ಯವ ಮಾಡಿದವನೇ ಒಪ್ಪೆ ಶರಣೆನ್ನೆಲವೋ (ಬಸವ. ೬೨೧); ಅವರಿಗೆ ಮೊದಲು ಅವರು ಕೇಳಿದ ವರವನ್ನು ಕೊಟ್ಟು ಅನಂತರ ಬ್ರಹ್ಮಹತ್ಯದ ಪಾಲನ್ನು ಕೊಡಬೇಕು (ವಚನಾ. II. ೦೩೯೬). [ಸಂ. ಬ್ರಹ್ಮಹತ್ಯಾ]

**ಬ್ರಹ್ಮಹತ್ಯೆ** (ನಾ). = ಬ್ರಹ್ಮಹತಿ : ಇವರಿಬ್ಬರನ್ನೂ ಕೊಂದದ್ದರಿಂದ ಇಂದ್ರನನ್ನು ಬ್ರಹ್ಮಹತ್ಯೆಯು ಮೆಟ್ಟಿಕೊಂಡಿತು (ಶಶಭಾ. ೨೩೦); ಅಂತೂ ನನ್ನ ಪಾಲಿಗೆ ಬ್ರಹ್ಮಹತ್ಯೆ ತಪ್ಪಿದುದಲ್ಲ ಇನ್ನು (ವಚನಾ. II. ೦೩೯೯). [ಸಂ. ಬ್ರಹ್ಮಹತ್ಯಾ]

**ಬ್ರಹ್ಮಹರಣ** (ನಾ). ಬ್ರಾಹ್ಮಣನ ಆಸ್ತಿಯ ಅಪಹರಣ : ಆ ದುರಾತ್ಮನಾ ಮಹಾತ್ಮನ ಧನಮಂ ಕೊಂಡು ಬ್ರಹ್ಮಹರಣಮಂ ಸುವರ್ಣ ಹರಣಮಂ ಗೆಯ್ದು (ಶರತಕಂ. ೬೦-೦೮). [ಸಂ.]

**ಬ್ರಹ್ಮಾಂಜಲಿ** (ನಾ). ವೇದಪಠನದ ಸಮಯದಲ್ಲಿ (ಗೌರವದಿಂದ) **ಕೈ ಮುಗಿದುಕೊಂಡಿರುವಿಕೆ** : “ಬ್ರಹ್ಮಾಂಜಲಿ:—ವೇದಪಾಠಸಮಯ ದಲ್ಲಿ ದೇವರಿಗೂ ಗುರುಗಳಿಗೂ ನಮಸ್ಕಾರ ವಿನಯಭಾವಗಳನ್ನು ತೋರಿಸುವುದಕ್ಕೋಸ್ಕರ ಮುಗಿದ ಕೈಗಳ ಸೇರಿಗೆ ಹೆಸರು, ಬೊಗಸೆ ಹಿಡಿದ ಹಾಗೆ ಕೈಮುಗಿಯುವಿಕೆ” (ಸಿದ್ಧಾಂತ. ೨೨೬). [ಸಂ.]

**ಬ್ರಹ್ಮಾಂಡ** (ನಾ). ೧. ವಿಶ್ವ; ಜಗತ್ತು : ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮಕುಟ (ಬಸವ. ೬೯೪); ವಿವಿಧ ಬ್ರಹ್ಮಾಂಡಂ ಮಾಧವ ನಿನ್ನವಕಾಶಂ (ಜಗಂ. ೪-೦೦೬); ಬ್ರಹ್ಮಾಂಡ ಶತದಲಿ ಹೊಲಬುಗೆಡೆ ಹೊಕ್ಕಳಲಿ ಬ್ರಹ್ಮನನೀತನುಗುಳಿದನು (ಕುವ್ಯಾಉ. ೯-೩೩). ೨. ಹದಿನೆಂಟು ಪ್ರಸಿದ್ಧವಾದ ಪುರಾಣಗಳಲ್ಲಿ ಒಂದು : ವಾಮನ ಗಾರುಡ ಬ್ರಹ್ಮಾಂಡ . . . ಸಾಂಗದಿಂ ದಷ್ಟಾದಶ ಪುರಾಣಂಗಳೊಳ್ (ಬಸಪು. ೯೪-೬೬). ೩. [ದ್ವೈತ] ಇಪ್ಪತ್ತು ದ್ರವ್ಯ ಗಳಲ್ಲಿ ಒಂದು : ಪರಮಾತ್ಮ, ಲಕ್ಷ್ಮೀ . . . ಬ್ರಹ್ಮಾಂಡ, ಅವಿದ್ಯೆ, ವರ್ಣ . . . ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಹಿಂದಶಾ. ೨೬೩). ೪. (ಆಲಂ) ಅತ್ಯಧಿಕವಾದುದು; ಅತಿಶಯವಾದುದು : ಹಾಸ್ಟೆಲಿನಲ್ಲಿ ದುಡ್ಡು ಬ್ರಹ್ಮಾಂಡ ಖರ್ಚಾಗುತ್ತೆ (ವಃಹಾಗ. ೩೩೩); ವಸಂತನಿಗೆ ಬ್ರಹ್ಮಾಂಡ ಸಿಟ್ಟು ಬಂದಿತು (ಗಂಪತಾಬು. ೬೬). [ಸಂ.]

**ಬ್ರಹ್ಮಾಂಡದಾನ** (ನಾ). ಹದಿನಾರು ಮಹಾದಾನಗಳಲ್ಲಿ ಒಂದು : (೧) ತುಲಾಪುರುಷದಾನ, (೨) ಹಿರಣ್ಯಗರ್ಭದಾನ, (೩) ಬ್ರಹ್ಮಾಂಡದಾನ . . . (೧೬)ಮಹಾಭೂತಘಟದಾನ; ಈ ಮೇರೆಗೆ ಷೋಡಶ ಮಹಾದಾನ ಗಳನ್ನು ಶಾಸ್ತ್ರಕ್ಕೆ ಸ್ವಲ್ಪವೂ ನ್ಯೂನತೆ ಇಲ್ಲದಂತೆ ಮಾಡಿ ಸತ್ಕೀರ್ತಿಯಂ ಪಡೆದರು (ಮಹಾವಂ. I. ೦೦೦). [ಬ್ರಹ್ಮಾಂಡ ? + ದಾನ]

**ಬ್ರಹ್ಮಾಂಡಪುರಾಣ** (ನಾ). ಹದಿನೆಂಟು ಪ್ರಸಿದ್ಧವಾದ ಪುರಾಣಗಳಲ್ಲಿ ಒಂದು : ಬ್ರಹ್ಮಪುರಾಣ ಪದ್ಮಪುರಾಣ ವೈಷ್ಣವಪುರಾಣ . . . ಗಾರುಡ ಪುರಾಣ ಬ್ರಹ್ಮಾಂಡಪುರಾಣವೆಂಬವೇ . . . ಹದಿನೆಂಟು ಮೂಲಪುರಾಣಂ ಗಳುಂ (ಐವೇಕ. ೯). [ಸಂ.]

**ಬ್ರಹ್ಮಾಂಭ** (ನಾ).ಗೋಮೂತ್ರ: ‘ಬ್ರಹ್ಮಾ [ಹ್ಮಾಂ] ಭಃ—ಬ್ರಹ್ಮಾಂಬು? [ಬ್ರಹ್ಮಾಂಬು], ಗೋಮೂತ್ರ’’ (ಓಕಂ. ೦೦೬). [ಸಂ. ಬ್ರಹ್ಮಾಂಭಸ್]

**ಬ್ರಹ್ಮಾಣಿ** (ನಾ). ೧. ಬ್ರಹ್ಮನ ಹೆಂಡತಿ ; ವಾಗ್ದೇವತೆ ; ಸರಸ್ವತಿ : ಶರಣೆಂಬೆ ವಾಣಿ ಪೊರೆಯೋ ಕಲ್ಯಾಣಿ ವಾಗಭಿಮಾನಿ ವರ ಬ್ರಹ್ಮಾಣಿ ಸುಂದರವೇಣಿ ಸುಚರಿತ್ರಾಣಿ (ಕೀರಂದ. ೩-೬-೧). ೨. ದುರ್ಗಾದೇವತೆ. ೩. ರೇಣುಕೆಯೆಂಬ ಸುಗಂಧದ್ರವ್ಯ. ೪. ಒಂದು ಬಗೆಯ ಹಿತ್ತಾಳೆ. [ಸಂ. ಬ್ರಹ್ಮಾಣೀ]

**ಬ್ರಹ್ಮಾತಿ** ‘ಬೊಮ್ಮಹತಿ’ ನೋ.

**ಬ್ರಹ್ಮಾದಾಯ** (ನಾ). ಬ್ರಾಹ್ಮಣನಿಗೆ ದಾನವಾಗಿ ಕೊಟ್ಟ ಭೂಮಿ : ಹಿಂದಿನ ಮಹಾಸ್ವಾಮಿಗಳು ಕೊಟ್ಟ ಬ್ರಹ್ಮಾದಾಯವನ್ನು ತಾವು ಈಗ ನಾಶಪಡಿಸುತ್ತೀರಿ (ಕಲಿಪ. ೨೩೯). [ಸಂ.]

**ಬ್ರಹ್ಮಾದೇಯ** (ನಾ). = ಬ್ರಹ್ಮದಾಯ ೨. : ಕೆಸುಗೊಳಮೊಡೆಯ ಬನಾ ಮ್ಮಜಿಗ್ಗ ಧಣ್ಣಗವಾಡಿಯುಂ ಬ್ರಹ್ಮಾದೇಯಂಗೊಟ್ಟಮ್ (ಎಕ. IV. ಹೆಗ್ಗಡ. ೪-೯ ; ಸು. 750) : ಕೆಸುಗೊಳಮೊಡೆಯ ಮಹಾಜನಕ್ಕೆ ಪೆರ್ಮ್ಬಟ್ಟಯೂರುಂ ಮದ್ದೂರುಮುಂ ಬ್ರಹ್ಮಾದೇಯಂ ಪೊಯ್ದಂ (ಎಕ. IV. ಹೆಗ್ಗಡ. ೪-೨೦ ; ಸು. 750). [P ಇದು ‘ಬ್ರಹ್ಮದೇಯ’ ಎಂಬುದರ ಅಪಲಿಪಿತವಿರಬಹುದು]

**ಬ್ರಹ್ಮಾನಂದ** (ನಾ). ೧. ಬ್ರಹ್ಮಸಾಕ್ಷಾತ್ಕಾರದಿಂದ ಉಂಟಾಗುವ ಆನಂದ : ಕರಣೇಂದ್ರಿಯಂಗಳನಿಂದು ಬ್ರಹ್ಮಾನಂದಘನಸೌಖ್ಯದಲಡಂಗಿ ಸುತ (ಗಗಶಾ. ೦೬-೩೦); ಆಸ್ತಿಕನಿಗೆ ನಿರ್ಗುಣವಾದ ದೈವೀತೇಜಸ್ಸು ಸಗುಣರೂಪದಲ್ಲಿ ಮೂರ್ತೀಭವಿಸಿದಾಗ ಆಗುವ ಆನಂದ ಬ್ರಹ್ಮಾನಂದ ವೆನಿಸುವುದು (ಶಾರದ. ೯೦). ೨. ನಿದ್ರೆಯಲ್ಲಿ ವ್ಯೈಮರೆತು ನಿರ್ವಿಕಾರ ವಾಗಿರುವ ಸುಖ : ವಿಷಯಾನಂದ ಬ್ರಹ್ಮಾನಂದ ಮುಖ್ಯಾನಂದ ವಾಸನಾನಂದ ನಿಜಾನಂದ ಆತ್ಮಾನಂದ ಅದ್ವೈತಾನಂದ ವಿದ್ಯಾನಂದ ವೆಂಬವೇ ಆನಂದದಷ್ಟಭೇದಂಗಳವಱಲ್ಲಿ . . . ನಿದ್ರಾಸಮಯದಲ್ಲಿ ತೋರ್ಪುದೇ ಬ್ರಹ್ಮಾನಂದವೆನಿಸುವುದು (ಐವೇಕ. ೨೪); ಸುಷುಪ್ತಿಕಾಲದಲ್ಲಿ ಪ್ರಪಂಚವೇನು ತೋರದೆ ಸುಖದಲ್ಲಿರ್ಪುದೇ ಬ್ರಹ್ಮಾನಂದವೆನಿಸುವುದು (ವಾಣಾಗು. ೨೬-೬). ೩. (ಆಲಂ) ಅತಿಶಯವಾದ ಸಂತೋಷ : ಮುದುಕಿಗಂತೂ ಬ್ರಹ್ಮಾನಂದವಾಯಿತು (ಕೊಗ್ಗು. ೧೬). [ಸಂ.]

**ಬ್ರಹ್ಮಾನುಸಂಧಾನ** (ನಾ). ಪರಬ್ರಹ್ಮತತ್ತ್ವದ ಧ್ಯಾನ : ಯಮಗಳಲ್ಲಿ . . . ನಾಲ್ಕನೆಯದು ಬ್ರಹ್ಮಚರ್ಯ. ಇದು ವಿಶ್ವಾತ್ಮಕವಾಗಿರುವ ಬ್ರಹ್ಮಾನುಸಂಧಾನವನ್ನು ಒಳಗೊಂಡಿರುತ್ತದೆ (ಶಾರದ. ೨೬೪). [ಸಂ.]

**ಬ್ರಹ್ಮಾಮ್ಲಿಕ** (ನಾ). ಒಂದು ಬಗೆಯ ಸಸ್ಯ : ಮಾಗಿಮಾವು, ಆನೆಹುಣಿಸೆ, ಬ್ರಹ್ಮಾಮ್ಲಿಕ, ಬೇಯೋಬಾಬ್ (ವೃಕಿಗ. ೩-೩೬).
[ಬ್ರಹ್ಮ + ಆಮ್ಲಿಕ₀]

**ಬ್ರಹ್ಮಾಯು** (ನಾ). ೧. ಬ್ರಹ್ಮನ ಆಯುಸ್ಸು ; ೪ ನಾಲ್ಕುಯುಗಗಳು ಸಾವಿರ ಬಾರಿ ಬಂದರೆ ಬ್ರಹ್ಮನ ಒಂದು ದಿನದಷ್ಟು ಕಾಲವೆಂಬ ನಂಬಿಕೆಯಿದೆ. ೨. (ಆಲಂ) ದೀರ್ಘಾಯುಸ್ಸು : ಜೀಯ ಶತ್ರು ಪ್ರತತಿಸಂಹಾರಕ ಸಮಸ್ತಕ್ಷಿತಿಪತಿ ಬ್ರಹ್ಮಾಯುರಸ್ತುವೆನುತ್ತ ಕೈ ನೆಗಹಿ ನುತಗುಣನ ಬಿರುದಾವಳಿಯ ಸಂಗತಿಯನಭಿವರ್ಣಿಸುವ ಸಮಯೋಚಿತದ ಮನ್ನಣೆವಡೆದು ಮೆಱೆದುದು ಭಟ್ಟಸಂದೋಹ (ಶಂಪ್ರಾ. ಉ. ೮-೩೯).
[ಸಂ. ಬ್ರಹ್ಮಾಯುಸ್]

**ಬ್ರಹ್ಮಾರ್ಪಣ** (ನಾ). ೧. ಬ್ರಹ್ಮವಿದ್ಯೆಯ ಬೋಧನೆ. ೨. ಮಾಡಿದ ಕರ್ಮಗಳನ್ನು ಪರಮಾತ್ಮನಲ್ಲಿ ಅರ್ಪಿಸುವುದು. ೩. ಪರಬ್ರಹ್ಮ ವಸ್ತುವಿಗೆ ತನ್ನನ್ನೇ ಅರ್ಪಿಸಿಕೊಳ್ಳುವಿಕೆ. ೪. ಬ್ರಹ್ಮಕ್ಕೆ ಅರ್ಪಿಸುವ ಹವಿಸ್ಸು. ೫. ಒಂದು ಬಗೆಯ ಮಂತ್ರ. ೬. ಪಿಂಡ ಪ್ರದಾನವಿಲ್ಲದೆ ಮಾಡುವ ಶ್ರಾದ್ಧ. ೭. ಶ್ರಾದ್ಧದ ಅಂತ್ಯದಲ್ಲಿ ಹೇಳುವ ಎಲ್ಲವೂ ಬ್ರಹ್ಮನಿಗೆ ಅರ್ಪಿತವಾಗಲಿ ಎಂಬರ್ಥದ ಮಂತ್ರ. [ಸಂ.]

**ಬ್ರಹ್ಮಾವರ್ತ** (ನಾ). ಹಸ್ತಿನಾಪುರದ ವಾಯವ್ಯಕ್ಕೆ ಇದ್ದ ಸರಸ್ವತೀ ಹಾಗೂ ದೃಷದ್ವತೀ ಎಂಬೆರಡು ನದಿಗಳ ನಡುವಿನ ಪ್ರದೇಶ : ಸರಸ್ವತೀ ದೃಷದ್ವತೀ ನದಿಗಳ ನಡುವೆ ಇದ್ದ ತಪೋವನಗಳ ಪ್ರದೇಶವು ಅತಿಪವಿತ್ರವೆನಿಸಿ ಬ್ರಹ್ಮಾವರ್ತವೆಂಬ ಹೆಸರನ್ನು ಪಡೆದಿತ್ತು (ಭಾಇಶ್ರ. ೫೬); ಬ್ರಹ್ಮಾವರ್ತದಲ್ಲಿ ನೆಲೆಸುತ್ತಿದ್ದ ಅವನ ದತ್ತಕಮಗ ನಾನಾಸಾಹೇಬನಿಗೆ . . . ವಾರ್ಷಿಕವೆನ್ನಾಸು ೮ ಲಕ್ಷ ರೂಪಾಯಿಗಳನ್ನು ಬ್ರಿಟಿಷರು ನಿಲ್ಲಿಸಿ ಬಿಟ್ಟಿದ್ದರು (ಕ್ರಜಂರ. ೫೬). [ಸಂ.]

**ಬ್ರಹ್ಮಾಸನ** (ನಾ). [ಯೋಗ] ಧ್ಯಾನಮಾಡುವುದಕ್ಕೆ ಯೋಗ್ಯವಾದ ಯೋಗಾಸನ: "ಬ್ರಹ್ಮಾಸನಂ_ಧ್ಯಾನಯೋಗಾಸನೇ—ಸ್ವಸ್ವರೂಪವನ್ನಾಗಲೀ ಉಪಾಸ್ಯದೇವತಾಮೂರ್ತಿಯನ್ನಾಗಲಿ ಭಾವಿಸುವುದಕ್ಕೋಸ್ಕರ ಸ್ವಸ್ತಿಕ, ಪದ್ಮ ಮುಂತಾದ ಯೋಗಾಸನಗಳ ಹೆಸರು" (ಸಿದ್ಧಾಂತಿ. ೨೨೬).
[ಸಂ.]

**ಬ್ರಹ್ಮಾಸ್ತ್ರ** (ನಾ). ೧. ಬ್ರಹ್ಮನು ಅಧಿದೇವತೆಯಾಗಿರುವ ಮಂತ್ರಾಸ್ತ್ರ : ಇಂದ್ರಜಿತುವಿನುರು ಬ್ರಹ್ಮಾಸ್ತ್ರದಂಕೆಯಿಂ ನಿಂದು . . . ಬಂದೊಸಗೆವೇಳ್ದನಿಲಜನನಸುರಾರಿ ಮನ್ನಿಸಿದನು (ಕೈಬಿಭಾ. ೦೯-೩); ಅರ್ಜುನನು ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಬಿಟ್ಟನು (ವನಭಾ. ೨೯೯). ೨. (ಆಲಂ)ಮಹಾ ಉಪಾಯ; ಅತ್ಯಂತ ಬಲಿಷ್ಠವಾದ ಉಪಾಯ: ಬಿನ್ನಾಣದ ಮಾತುಗಳನ್ನು ಅವಳು ಆಡಿದಾಗಲೇ ಒಳಗೆ ಬ್ರಹ್ಮಾಸ್ತ್ರವನ್ನು ಸರಿಪಡಿಸಿಕೊಳ್ಳುತ್ತಿದ್ದಾಳೆ ಎಂದು ಅಂದುಕೊಂಡ (ಮಹಾಗ. ೦೬೬). [ಸಂ.]

**ಬ್ರಹ್ಮಿ₁** (ನಾ). ೧. ಒಂದು ಬಗೆಯ ಸಸ್ಯ ; ಹೊನ್ನಗನ್ನೆ : "ಮತ್ಸ್ಯಾಕ್ಷೀ—ಬ್ರಹ್ಮಿ, ಹೊನ್ನಗನ್ನೆ" (೬೫೦. ೦೦೬); ಅಳಿಲೆಕಾಯಿ, ತಾರೆಕಾಯಿ . . . ಬ್ರಹ್ಮಿ ಇವುಗಳನ್ನೆಲ್ಲಾ ಚೂರ್ಣಿಸಿ ಸಕ್ಕರೆ ಬೆರಸಿ ಹಸುವಿನ ತುಪ್ಪ, ಜೇನುತುಪ್ಪದಿಂದ ಕಲಸಿ ಸೇವಿಸಲು ಸ್ವರಭಂಗ ಪರಿಹಾರವಾಗುವಾಗುವುದು (ಸಕವೈ. ೦೨೨). ೨. ಒಂದು ಬಗೆಯ ಮೀನು.
[ಸಂ. ಬ್ರಹ್ಮೀ]

**ಬ್ರಹ್ಮಿ₂** (ಗು). ೧. ಬ್ರಹ್ಮನಿಗೆ ಸಂಬಂಧಿಸಿದ. (ನಾ). ೨. ವಿಷ್ಣು. ೩. ಬ್ರಹ್ಮವಾದಿ : ಉತ್ಪತ್ತಿಯೆಂಬ ಬ್ರಹ್ಮನ ಬಲೆಯಲ್ಲಿ ಸಿಲುಕಿ ಮುಳುಗಿದರು ಬಲ್ಲೆನೆಂಬ ಬ್ರಹ್ಮಿಗಳು (ಮೋಕ್ಷಮಾ. ೦೯೮-೬೦೮).
[ಸಂ. ಬ್ರಹ್ಮಿನ್]

**ಬ್ರಹ್ಮೇತಿ** 'ಬೊಮ್ಮಹತಿ' ನೋ.

**ಬ್ರಹ್ಮೇತಿಕಾಟ** 'ಬೊಮ್ಮೇತಿಗಾಟ' ನೋ.

**ಬ್ರಹ್ಮೈಕ್ಯ** (ನಾ). ಮೋಕ್ಷ ; ಮುಕ್ತಿ : ಅವಿರಳದ ನಿಜವೇದವೇದಾಂತಾದಿ ಶಾಸ್ತ್ರಗಳ ಗುರುಕರುಣಾಕಟಾಕ್ಷದಳಿದು ತಾವಾಗಿರುಪರಿಗೆ ತಾನವಿರಳ ಬ್ರಹ್ಮೈಕ್ಯಪದ ಪ್ರಾಪ್ತಿಯದು (ಗನಶಾ. ೯-೬೬). [ಸಂ.]

**ಬ್ರಹ್ಮೈಕ್ಯತೆ** (ನಾ). = ಬ್ರಹ್ಮೈಕ್ಯ : ಬ್ರಹ್ಮೈಕ್ಯತೆಯ ಸದ್ಭಾವಭರಿತರ ಪದವನುಸುರುವೊಡೆ ಶಕ್ಯವೆಂತು (ಗನಶಾ. ೦೪-೩೦). [ಸಂ. ಬ್ರಹ್ಮೈಕ್ಯತಾ]

**ಬ್ರಹ್ಮೋತ್ತರ** (ನಾ). [ಜೈನ]ಹದಿನಾರು ಕಲ್ಪಗಳಲ್ಲಿ ಒಂದು: ಮುರಿದೆಱೆದುಯ್ದಂ . . . ಆಯುಷ್ಯದಂತ್ಯದೊಳ್ ಕೊಲೆಗೆ ಮೊಗಂ ಮುರಿಯಂ ಬ್ರಹ್ಮಬ್ರಹ್ಮೋತ್ತರಕಲ್ಪಾಮರರನೇಂ ಜವಂ ಜಿಟ್ಟಿಗನೋ (ಮಲ್ಲಿಪು. ೦೩-೦೦೨). [ಸಂ.]

**ಬ್ರಹ್ಮೋತ್ಸವ** (ನಾ). ತಿರುಪತಿ, ಮೇಲುಕೋಟೆ ಮುಂತಾದ ಪವಿತ್ರ ಸ್ಥಳಗಳ ದೇವಾಲಯಗಳಲ್ಲಿ ಅತಿವಿಜೃಂಭಣೆಯಿಂದ ಆಚರಿಸುವ ಸಕಲಪೂಜೆಗಳಿಂದ ಕೂಡಿದ ಸೇವೆ : ಮೇಲುಕೋಟೆ ಚಲುವರಾಯಸ್ವಾಮಿಯವರಿಗೆ . . . ಬ್ರಹ್ಮೋತ್ಸವಕಾಲದಲ್ಲಿ ವಯಿರಮುಡಿಯಂ ಧರಿಸಿ ತೆಗೆದ ನಂತರ (ಮಹಾವಂ. I. ೪೦) ; ಗೋಪಾಲದಾಸರು . . . ಪ್ರತಿವರ್ಷವೂ ಬ್ರಹ್ಮೋತ್ಸವಕಾಲದಲ್ಲಿ ತಿರುಪತಿಗೆ ಹೋಗಿ ಬರುವುದರ ವಿನಾ ಮತ್ತೆಲ್ಲೂ ವಿಶೇಷಸಂಚಾರ ಮಾಡುತ್ತಿರಲಿಲ್ಲ (ಕಕಂ. ೪೩೯). [ಸಂ.]

**ಬ್ರಹ್ಮೋಪದೇಶ** (ನಾ). ೧. ವೇದಮಂತ್ರಗಳನ್ನು ಹೇಳಿಕೊಡುವುದು ; ವೇದಾಧ್ಯಾಪನ. ೨. ಬ್ರಹ್ಮವಿದ್ಯೆಯನ್ನು ಕಲಿಸುವುದು; ಬ್ರಹ್ಮತತ್ತ್ವವನ್ನು ಹೇಳಿಕೊಡುವುದು : ಅವರಿವರುಗಳ ಮುಖದಲಿದು ಸಂಭವಿಸುವುದೆ ಬ್ರಹ್ಮೋಪದೇಶದ ಹವಣ ಬಲ್ಲವನಾವನ್ಯ (ಶಂಪ್ರಾ. ಉ. ೪-೨). ೩. ಉಪನಯನ ಮತ್ತು ಆ ಕಾಲದಲ್ಲಿ ಮಾಡುವ ಗಾಯತ್ರೀಮಂತ್ರೋಪದೇಶ : ನಾಳೆ ಕುವರವಿಷ್ಣುವಿನ ಬ್ರಹ್ಮೋಪದೇಶಮಹೋತ್ಸವಕ್ಕೆ ಸತಿ ಮಾಚಿಕಬ್ಬೆಯನ್ನೂ ಮಗಳು ಶಾಂತಲೆಯನ್ನೂ ತಪ್ಪದೆ ಕರೆತರಬೇಕು (ಶಾಂತಲಾ. ೪) ; ಆ ರಾಮಭಟ್ಟರು ಅಂದೇ ಬೇಸಗೆಯೊಳು . . . ಬ್ರಹ್ಮೋಪದೇಶವನಿತ್ತರಾದರವೊಳು ವಿಧ್ಯುಕ್ತ ರೀತಿಯೊಳೆನಗೆ (ಇಂತಾಶ. ೦೯ ೬೩). [ಸಂ.]

**ಬ್ರಾಂದಿ** (ನಾ). "(ದ್ರಾಕ್ಷಾರಸದಿಂದ ಬಟ್ಟಿಯಿಳಿಸಿ ತೆಗೆದ) ತೀಕ್ಷ್ಣ ಮದ್ಯ" (Brandy. ಇಂಕನ್ನ) : ನೆಕ್ಲುದೋವ್ ತನ್ನ ಚಿಕ್ಕಮ್ಮಂದಿರೊಡನೆ ಒಂದು ಲೋಟ ಬ್ರಾಂದಿಯನ್ನೂ ಸ್ವಲ್ಪ ದ್ರಾಕ್ಷಾರಸವನ್ನೂ ಸವಿದನು (ಪುನರು. ೬೩). [← ಇಂ. Brandy]

**ಬ್ರಾತ** (ನಾ). ಸಮೂಹ ; ಸಮುದಾಯ : ಜಿನಚೈತ್ಯಬ್ರಾತಮಂ ಬಂದಿಸು (ಅರಿಪು. ೩-೭) ; ಈತನೇ ಪ್ರತ್ಯಕ್ಷಶಿವನೆಂದೋತು ಮನುಜ ಬ್ರಾತವದುಭುತಜಾತಮಾನಸರಾಗಿ ಪೊಗಳಲು (ಬಸಪು. ೫೨-೪೬).
[< ಸಂ. ವ್ರಾತ]

**ಬ್ರಾಹ್ಮ** (ಗು). ೧. (ಸೃಷ್ಟಿಕರ್ತನಾದ) ಬ್ರಹ್ಮನಿಗೆ ಸಂಬಂಧಿಸಿದ : "ಬ್ರಾಹ್ಮಂ —ಬ್ರಹ್ಮಸಂಬಂಧವಾದ ತೀರ್ಥವು" (ಸಿದ್ಧಾಂತಿ. ೨೩೦). ೨. ಪರಬ್ರಹ್ಮವಿಷಯಕವಾದ. ೩. ಬ್ರಾಹ್ಮಣನಿಗೆ ಸಂಬಂಧಿಸಿದ. ೪. ಆಗಮಗಳು ಮೊದಲಾದುವುಗಳಿಗೆ ಸಂಬಂಧಿಸಿದ ; ವೇದ ಸಂಬಂಧವಾದ. ೫. ವೇದಗಳಲ್ಲಿ ನಿರೂಪಿತವಾದ ; ವೇದೋಕ್ತವಾದ. ೬. ಪವಿತ್ರವಾದ ; ದೈವಸ್ವರೂಪದ ; ದೈವಿಕ. ೭. ಅಸ್ತ್ರ, ಮುಹೂರ್ತ ಇತ್ಯಾದಿಯಾಗಿ ಬ್ರಹ್ಮನನ್ನು ಅಧಿದೇವತೆಯಾಗಿ ಉಳ್ಳುದು. ೮. ಬ್ರಹ್ಮಲೋಕಕ್ಕೆ ಸಂಬಂಧಿಸಿದ. (ನಾ). ೯. ಬ್ರಾಹ್ಮಣ ; ವಿಪ್ರ : ಆ ಬ್ರಾಹ್ಮರೊಳು ಕಮ್ಮೆ ಮೊದಲಾದೆಂಟು ಕುಲವಕ್ಕು (ಮಂಗರಾ. ೬೩-೭) ; ಗೋ ಬ್ರಾಹ್ಮರಂ ನಾಡೆ ರಕ್ಷಿಸದಿರ್ದನ್ನತ

ಪಾಪಿಗೆ (ಶಾವಶ. ೯೮) ; ಒಮ್ಮನದಿ ದೇವ ಬ್ರಾಹ್ಮರ ಪೂಜೆ ಸಂತರ್ಪಣಂಗೈವುತ (ನವಮೋ. ೨-೩೯). ೧೦. ನಾರದ. ೧೧. ಕೈ ಹೆಬ್ಬೆರಳಿನ ಬುಡದ ಕೆಳಗಿರುವ ಭಾಗ. ೧೨. ಒಂದು ಪುರಾಣದ ಹೆಸರು. 'ಅಷ್ಟಾದಶ ಪುರಾಣ' ಪರಾ. ೧೩. ಎಂಟು ಬಗೆಯ ವಿವಾಹಪದ್ಧತಿಗಳಲ್ಲಿ ಒಂದು ; ವರನಿಂದ ಏನನ್ನೂ ಪಡೆಯದೆ ಸಾಲಂಕೃತ ಕನ್ಯಾದಾನಮಾಡುವ ವಿಧ್ಯುಕ್ತವಿವಾಹ. ೧೪. [ಜ್ಯೋತಿ] ಒಂದು ಮುಹೂರ್ತದ ಹೆಸರು : ಬೆಳಗಪ್ಪ ಜಾವದ ಬ್ರಾಹ್ಮಮೆಂಬ ಮುಹೂರ್ತದೊಳ್ (ಶಾಂತಿಪು. ೯-೨೦೩ ವ). ೧೫. [ನಾಟ್ಯ] ಇಪ್ಪತ್ತು ಮೂರು ದೇಶೀಯಸ್ಥಾನಕಗಳಲ್ಲಿ ಒಂದು ; P "ಒಂದು ಕಾಲನ್ನು ಸಮನಾಗಿರಿಸಿ ಇನ್ನೊಂದು ಕಾಲನ್ನು ಕುಂಚಿತಮಾಡಿ ಮೊದಲ ಕಾಲಿನ ಮೊಳಕಾಲಿಗೆ ಸಮನಾಗುವಂತೆ ಹಿಂದುಗಡೆ ಮೇಲಕ್ಕೆತ್ತುವುದು" (ಅಸ್ಕರಂ. ೩೩೦ ಗದ್ಯಾನುವಾದ) : ಒಂದು ಪದಂ ಸಮದಿಂ ಮತ್ತೊಂದು ಪದಂ ನಿಂದ ಪದದ ಮೊಳಕಾಲ್ಗಂ ಸಮದಂದಂಬಡೆದುಂ ಮಡಿದುಂ ನಿಂದುದು ಕುಂಚಿತನುದಾಗೆ ಬ್ರಾಹ್ಮಮೆನಿಕ್ಕುಂ (ಅಸ್ಕರಂ. ೬-೯೩). [ಸಂ.]

**ಬ್ರಾಹ್ಮಣ** (ಗು). ೧. ಬ್ರಾಹ್ಮಣನಿಗೆ ಸಂಬಂಧಿಸಿದ. ೨. ಬ್ರಾಹ್ಮಣನಿಗೆ ಯೋಗ್ಯವಾದ. ೩. ಬ್ರಾಹ್ಮಣನು ಕೊಟ್ಟಿರುವ; ಬ್ರಾಹ್ಮಣನಿಂದ ಬಂದ. (ನಾ). ೪. ಬ್ರಹ್ಮನನ್ನು ಅರಿತವನು ; ಬ್ರಹ್ಮಜ್ಞಾನಿ : ಬ್ರಾಹ್ಮಣರು ಎಂಬ ಮಾತಿನಿಂದ ಬ್ರಹ್ಮಜ್ಞಾನಿಗಳು ಎಂದರ್ಥ (ಹಚಾರ. ೬-೦೮ ತಾತ್ಪರ್ಯ). ೫. ಚತುರ್ವರ್ಣಗಳಲ್ಲಿ ಮೊದಲನೆಯ ವರ್ಣ: 'ಬ್ರಾಹ್ಮಣ' ಎಂಬ ವರ್ಗದ ಎಲ್ಲರೂ ಮೂಲತಃ 'ಸ್ಮಾರ್ತರೇ' (ಕರ್ನಾಟಿ. ೨೩೨). ೬. ಚತುರ್ವರ್ಣಗಳಲ್ಲಿ ಮೊದಲನೆಯ ವರ್ಣಕ್ಕೆ ಸೇರಿದವನು; ವಿಪ್ರ: "ಬ್ರಾಹ್ಮಣಂ ಬಾಡಬಂ ಭೂಮಿದೇವಂ ದ್ವಿಜಂ" (ಮಂಗರಾ. ೬೩-೦); ಗುರುಕ್ಷೇತ್ರದೊಳು ಸಹಸ್ರಬ್ರಾಹ್ಮಣರ್ಗೆ ಸಹಸ್ರಕವಿಲೆಯುಂ ದಾನಂಗೊಟ್ಟ ಫಲ (ಸೌಇಇ. IX-i, ೦೬೨-೦೬ ; 1093); ಮುಳಿಯದಿರಿನ್ನುಮೆಂಬ ಮಾತಿಗೆ ತಿಳಿದು ನೋಡಲು ಬ್ರಾಹ್ಮಣರೆ ನೀವಿಳೆಯೊಳಂ (ಜಸಪು. ೩೩-೩೯). ೭. ಸಂಹಿತೆ, ಬ್ರಾಹ್ಮಣ ಮತ್ತು ಆರಣ್ಯಕ ಎಂಬ ವೇದಗಳ ಮೂರು ವಿಭಾಗಗಳಲ್ಲಿ ಒಂದು ; ವೇದಗಳ ವ್ಯಾಖ್ಯಾನ ರೂಪವಾದ ಗದ್ಯಭಾಗ : ವೇದಗಳಲ್ಲಿ ಸಂಹಿತೆ, ಬ್ರಾಹ್ಮಣ, ಆರಣ್ಯಕವೆಂದು ಮೂರು ಭಾಗಗಳಿರುವುವು. ಪದ್ಯಗದ್ಯರೂಪಗಳಾದ ಮಂತ್ರಭಾಗಕ್ಕೆ ಸಂಹಿತೆಯೆಂದೂ, ಅವುಗಳಿಗೆ ವ್ಯಾಖ್ಯಾನರೂಪವಾದ ಗ್ರಂಥಗಳಿಗೆ ಬ್ರಾಹ್ಮಣವೆಂದೂ, ಅರಣ್ಯದಲ್ಲಿರುವ ಋಷಿಗಳು ನಿಯಮಪೂರ್ವಕವಾಗಿ ಕಲಿಯುತ್ತಿದ್ದ ರಹಸ್ಯವಾದ ಭಾಗಕ್ಕೆ ಆರಣ್ಯಕವೆಂದೂ ವ್ಯವಹಾರ (ಹಿಂದಸಾ. ೦೯೩); ಪ್ರಜಾಪತಿಯಾದ ಬ್ರಹ್ಮನನ್ನೇ ವಿಶ್ವಕರ್ಮನೆಂದು ಬ್ರಾಹ್ಮಣಗಳಲ್ಲಿ ಕರೆಯಲಾಗಿದೆ (ಸೌಂದಸ. ೦೦೬). [ಸಂ.]

**ಬ್ರಾಹ್ಮಣಗೇರಿ** (ನಾ). ಬ್ರಾಹ್ಮಣರು ವಾಸಿಸುವ ಪ್ರದೇಶ; ಅಗ್ರಹಾರ: ಭೂರಿಭೂಪೋತ್ತಮರಲ್ಲದೆ ಬ್ರಾಹ್ಮಣಗೇರಿ ಕಣ್ಮನಕೆ ರಂಜಿಸಿತು (ವೀರಹಕ. ೩-೩೩). [ಬ್ರಾಹ್ಮಣ + ಕೇರಿ]

**ಬ್ರಾಹ್ಮಣತ್ವ** (ನಾ). ಬ್ರಾಹ್ಮಣನ ಧರ್ಮ: ಜ್ಞಾನ ದಯೆ ದಾಕ್ಷಿಣ್ಯ ಮೊದಲಾದ ಕಲ್ಯಾಣಗುಣಗಳು ಬ್ರಾಹ್ಮಣತ್ವ (ಹಿಂದಸಾ. ೦೫೬). [ಸಂ.]

**ಬ್ರಾಹ್ಮಣಬ್ರುವ** (ನಾ). =ಬ್ರಹ್ಮಬ್ರುವ : "ಜಾತಿಮಾತ್ರದನೆ ತೋಜಿಬಾಳ್ವ ಪಾರ್ವನಂ ಬ್ರಾಹ್ಮಣಬ್ರುವನೆಂಬುದು" (ಹರಿಹರ. ೬೭-೨೫೨). [ಸಂ.]

**ಬ್ರಾಹ್ಮಣಯಷ್ಟಿಕೆ** (ನಾ). ಒಂದು ಬಗೆಯ ಮೂಲಿಕೆ; ಗಂಟುಭಾರಂಗಿ: "ಹಂಜಿಕಾ . . . ಬ್ರಾಹ್ಮಣಯಷ್ಟಿಕಾ, ಅಂಗಾರವಲ್ಲೀ, ಬಾಲೇಯಶಾಕಃ, ಬರ್ಬರಃ, ಪದ್ಮಕಃ_೯ ಭಾರಂಗೀ ಹೆಸರುಗಳು. ಗಂಟುಭಾರಂಗೀ ಎಂಬುವ ಗ್ರಂಥಿಕದ್ರವ್ಯವು ಪ್ರಸಿದ್ಧವಾದದ್ದು" (ಸಿದ್ಧಾಂತಿ. ೦೩೨). [ಸಂ. ಬ್ರಾಹ್ಮಣಯಷ್ಟಿಕಾ]

**ಬ್ರಾಹ್ಮಣವಾಡ** (ನಾ). ಬ್ರಾಹ್ಮಣರ ನೆಲೆ,– ಕೇರಿ: ಮಂತಸಾಲೆಯ ಸೀಮೆಯೊಳಗಣ ಬ್ರಾಹ್ಮಣವಾಡದ ಹೊಲ್ಲ ಸರುಹಿನ ಗ್ರಾಮ (ಎಇ. VIII, ತೀರ್ಥಹ. ೫೬-೧೦; 1631); ಬ್ರಾಹ್ಮಣವಾಡದಿಂದಲು ಗದೆ ತ್ತೋಟ ಸಹಾ (ಮೈಆಂ. ೦೯೩೩, ೨೬-೨೦; 1632). [ಬ್ರಾಹ್ಮಣ + ವಾಡ]

**ಬ್ರಾಹ್ಮಣಾರ್ಥ** (ನಾ). ಶ್ರಾದ್ಧದ ಕರ್ಮ ಮತ್ತು ಪೂರ್ವಪಂಕ್ತಿ: ಬ್ರಾಹ್ಮಣಾರ್ಥದಿಂದಲೇ ಜೀವನ ನಡೆಯಬೇಕಾಗಿದ್ದು, ಭೋಜನವೆಂದರೆ ಹತ್ತು ಮೈಲಿ ಎಗ್ಗಿಲ್ಲದೆ ತಾಳಿ ಹಿಡಿದು ನಡೆದುಬಿಡುತ್ತಿದ್ದ ದಾಸಾಚಾರ್ಯ ತನ್ನ ಕಷ್ಟವನ್ನು ತೋಡಿಕೊಂಡ (ಸಂಸ್ಕಾರ. ೦೦); ಜಡ್ಡಿಗಳು ಬ್ರಾಹ್ಮಣಾರ್ಥದವರಂತೆ ಗಡದ್ದು ತಿಂದು, ನಾಲ್ಕು ಬೊಂಬಾಯಿಬೋಂಡ ಎರಡು ಚಿರೋಟಿ ನುಂಗಿದ್ದರು (ಮಹೋದಂ. ೦೨೯). [ಸಂ.]

**ಬ್ರಾಹ್ಮಣಿ** (ನಾ). ೧. ಬ್ರಾಹ್ಮಣ ವರ್ಣದ ಸ್ತ್ರೀ : ಮಹಾದೇವ ಪಣಂಗಿಯರು ಬ್ರಾಹ್ಮಣಿ ಕಂಚಿಕಬ್ಬೆಗೆ [ತಂಪು] ಪಡುವಣ ಮಧ್ಯದ ಮನೆಯ . × × × ಬಿಟ್ಟರು (ಸೌಇಇ. XX, ೮೨-೦೫ ; 1122). ೨. ಬ್ರಾಹ್ಮಣನ ಹೆಂಡತಿ : ಶ್ರೀಪತಿನಾಯಕರ ಬ್ರಾಹ್ಮಣಿ ಚಾಮಿಕಬ್ಬೆಗಳು . . . ಶ್ರೀ ಮೂಲಸ್ಥಾನದೇವರ ನಿವೇದ್ಯಕ್ಕೆ . . . ಬಿಟ್ಟ ಮತ್ತರು ೧ (ಶಾಸಕ. ೫೯). ೩. ಬ್ರಹ್ಮನ ಹೆಂಡತಿ. ೪. ಬುದ್ಧಿ. ೫. ಒಂದು ಬಗೆಯ ಸಸ್ಯ ; ಗಂಟುಭಾರಂಗಿ : "ಹಂಜಿಕಾ, ಬ್ರಾಹ್ಮಣೀ. . . ಪದ್ಮಕಃ – ೯ ಭಾರಂಗೀ ಹೆಸರುಗಳು" (ಸಿದ್ಧಾಂತಿ. ೦೩೨). ೬. ಒಂದು ಬಗೆಯ ಹಿತ್ತಾಳೆ. ೭. ಒಂದು ಬಗೆಯ ಹಲ್ಲಿ. ೮. ಒಂದು ಬಗೆಯ ಕಣಜ, – ಕಡಜೀರಿಗೆ ಹುಳು. [ಸಂ. ಬ್ರಾಹ್ಮಣೀ]

**ಬ್ರಾಹ್ಮಣಿಕೆ** (ನಾ). =ಬ್ರಾಹ್ಮಣತ್ವ : ಬ್ರಾಹ್ಮಣಿಕೆಗೆ ನೆಲೆಗಟ್ಟಾವುದೆಂಬುದು ಬಲ್ಲಡೆ ನೀವು ಹೇಳಿರೆ (ಉಂಶಿ. ೪. ೦೬೦-೨೦೬) ; ಪ್ರಾಚೀನಕಾಲದಲ್ಲಿ ಸತ್ಕಾರ್ಯಗಳನ್ನಾಚರಿಸಿ ಶೂದ್ರನು ಬ್ರಾಹ್ಮಣಿಕೆಯನ್ನು ಪಡೆಯಲ್ಕು ಅಭ್ಯಂತರವಿರಲಿಲ್ಲ (ಭಾರವ. ೬). [ಬ್ರಾಹ್ಮಣ + – ಇಕೆ]

**ಬ್ರಾಹ್ಮಣಿತಿ** (ನಾ). ಬ್ರಾಹ್ಮಣ ಜಾತಿಯವಳು : ಜಾತಿ ಶಬ್ದಾದಿತಿ: – ಬ್ರಾಹ್ಮಣಿತಿ, ಶೂದ್ರಿತಿ (ಶಬ್ದಾನು. ೨೮ ಪ್ರಯೋ). [ಬ್ರಾಹ್ಮಣ + – ಇತಿ$_1$ (<– ಇತ್ತಿ) ]

**ಬ್ರಾಹ್ಮಣೇತರ** (ಗು). ೧. ಬ್ರಾಹ್ಮಣನಿಗೆ ಸಂಬಂಧವಿಲ್ಲದ. (ನಾ). ೨. ಬ್ರಾಹ್ಮಣನಲ್ಲದವನು : ತಮಿಳುದೇಶದ ಆಳ್ವಾರರು . . . ಇವರಲ್ಲಿ ಬ್ರಾಹ್ಮಣೇತರರೂ ಇದ್ದರು (ಭಾರದ. ೨೯೫). [ಸಂ.]

**ಬ್ರಾಹ್ಮಣ್ಯ** (ನಾ). ೧. ಬ್ರಾಹ್ಮಣತ್ವ ; ಬ್ರಾಹ್ಮಣನಾಗಿರುವಿಕೆ : ನಿಮಗೆ ತಾಂ ಬ್ರಾಹ್ಮಣ್ಯವೆಲ್ಲಿಯದು (ಬಸಪು. ೫೫-೩೯); ಅಶ್ವತ್ಥಾಮನ ಬ್ರಾಹ್ಮಣ್ಯವೂ, ಗೌರವವೂ, ಮಣಿಯೂ ಹೋಗಿ ಅವನ ದೇಹ ಮಾತ್ರ ಉಳಿದಿದೆ ! (ವಚಶಾ.೩೨೦); ಬ್ರಾಹ್ಮಣ್ಯಕ್ಕೆ ಬೇಕಾದಷ್ಟು ಗೌರವವಿದ್ದ ಕಾಲ ಅದು (ಹೊಸಕ್ಷಿ. ೩೩). ೨. ಬ್ರಾಹ್ಮಣರ ಸಮುದಾಯ : "ಬ್ರಾಹ್ಮಣ್ಯಂ, ಬಾಡಭ್ಯಂ . . . ಬ್ರಾಹ್ಮಣರ ಗುಂಪು" (ಸಿದ್ಧಾಂತಿ. ೩೬೦). ೩. ಶನಿಗ್ರಹ. [ಸಂ.]

**ಬ್ರಾಹ್ಮಧರ್ಮ** (ನಾ). ವೈದಿಕಧರ್ಮ: ಆದ್ದರಿಂದಲೇ ಹೇಳುತ್ತೇನೆ . . . ಬ್ರಾಹ್ಮಧರ್ಮದಿಂದಾಗಿ ಜಗತ್ತು ಭಾರತವರ್ಷಕ್ಕೆ ತುಂಬಾ ಋಣಿ ಎಂದು (ಬಿವಾಂರ. I, ೨೦). [ಸಂ.]

**ಬ್ರಾಹ್ಮಮುಹೂರ್ತ** (ನಾ). [ಜ್ಯೋತಿ] ಬೆಳಗಾಗುವುದಕ್ಕೆ ಮುಂಚೆ ಬರುವ ಒಂದು ವಿಶಿಷ್ಟವಾದ ಶುಭಮುಹೂರ್ತ : ಬ್ರಾಹ್ಮಮುಹೂರ್ತವೆಂದರೆ ಸೂರ್ಯೋದಯಕ್ಕೆ ಪೂರ್ವ ೪ ಗಳಿಗೆಗೆ ಆರಂಭವಾಗುವ ಮುಹೂರ್ತವು (ಆರ್ಯಧ. ೯೨). [ಸಂ.]

**ಬ್ರಾಹ್ಮಿ** (ನಾ). ೧. ಬ್ರಹ್ಮನ ಪರಾಶಕ್ತಿ ; ಆದಿಶಕ್ತಿ. ೨. ವಾಗ್ದೇವತೆ; ಸರಸ್ವತಿ : "ಬ್ರಾಹ್ಮೀ, ಭಾರತೀ, ಭಾಷಾ, ಗೀಃ, ವಾಕ್, ವಾಣೀ, ಸರಸ್ವತೀ . . . ವಚಃ – ೧೩ ಮಾತಿನ ಹೆಸರುಗಳು . . . ಇವುಗಳಲ್ಲಿ ಬ್ರಾಹ್ಮೀ ಶಬ್ದವು ಮೊದಲುಗೊಂಡು ಸರಸ್ವತೀ ಶಬ್ದದವರೆಗೂ ೭ ಸರಸ್ವತಿಯ ಹೆಸರುಗಳಾಗಿವೆ" (ಸಿದ್ಧಾಂತಿ. ೪೮) ; ವರಪದ್ಮಾಸನದೊಳ್ ಕನನ್ಮಣಿಮಯಂ ಸಿಂಹಾಸನಂ ಬ್ರಾಹ್ಮಿಯೊಳ್ ಪರಮಶ್ರೀ ಗಣನಾಕ್ಷ ಸೂತ್ರಮಣಿಯೊಳ್ ರತ್ನೋಜ್ವಲಂ ಭೂಷಣಂ ದೊರೆಯಾಗಿರ್ಪಿನಂ. . . ಜಗದ್ಗುರುವಾದಂ ನಮಗೀಗೆ ಬೇಟ್ಟ ವರಮಂ ಶ್ರೀರಾಜಕಂಜಾಸನಂ (ಗದಾಯು.೦.೩). ೩. ಮಾತು ; ನುಡಿ ; ವಾಕ್ಶಕ್ತಿ. ೪. ಬ್ರಾಹ್ಮರೀತಿಯಲ್ಲಿ ವಿವಾಹವಾದ ಸ್ತ್ರೀ. ೫. ಬ್ರಾಹ್ಮಣನ ಹೆಂಡತಿ. ೬. ಒಂದು ಬಗೆಯ ಸಸ್ಯ ; ಹೊನ್ನಗನ್ನೆ : "ಬ್ರಾಹ್ಮೀ, ಮತ್ಸ್ಯಾಕ್ಷೀ, ವಯಸ್ಥಾ, ಸೋಮವಲ್ಲರೀ _ ೪ ಹೊನಗೊನೇಸೊಪ್ಪು" (ಸಿದ್ಧಾಂತಿ. ೦೪೪). ೭. ಸಪ್ತಮಾತೃಕೆಯರಲ್ಲಿ ಒಬ್ಬಳ ಹೆಸರು : "ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಮಾಹೇಂದ್ರೀ, ಚಾಮುಂಡಾ _ ಈ ೭ ಸಪ್ತಮಾತೃಕೆಯರ ಹೆಸರ್" (ಹದಾಯು. ೪-೦೭). ೮. ಒಂದು ಬಗೆಯ ಹಿತ್ತಾಳೆ. ೯. ಒಂದು ನದಿಯ ಹೆಸರು. ೧೦. ಒಂದು ಬಗೆಯ ಲಿಪಿ: 'ಬ್ರಾಹ್ಮೀಲಿಪಿ' ನೋ. [ಸಂ. ಬ್ರಾಹ್ಮೀ]

**ಬ್ರಾಹ್ಮೀಮುಹೂರ್ತ** (ನಾ). = ಬ್ರಾಹ್ಮಮುಹೂರ್ತ : ಬ್ರಾಹ್ಮೀ [ಹಾಶಾಂ. ಹ್ಮ]ಮುಹೂರ್ತವೆಂಬ ಪೂಜಾಮುಹೂರ್ತದಲ್ಲಿ ಹಿಮಸಂಮಿಶ್ರಾಂಬುವಿಂ ಮಜ್ಜನಮನೊಲವಿನಿಂ ಮಾಡಿ (ರಾಜಶೇ. ೧೨-೦ ವ) ; ಬ್ರಾಹ್ಮೀಮುಹೂರ್ತದಲ್ಲಿ ಎದ್ದು ಶೌಚವಿಧಿ ತೀರಿಸಿಕೊಂಡು ಶುಚಿಯಾಗಿ ಸ್ವಸ್ಥಾನನಾಗಿ ಕುಳಿತುಕೊಂಬುದು (ಸಕಲ್ಪ. ೨೮); ಇನ್ನೇನು ಅರುಣೋದಯವಾಗುವುದರಲ್ಲಿದೆ. ಬ್ರಾಹ್ಮೀಮುಹೂರ್ತವಿದು (ಮುಹಾಣ. ೪೦). [ಸಂ.]

**ಬ್ರಾಹ್ಮೀಲಿಪಿ** (ನಾ). ಈಗ ಬಳಕೆಯಲ್ಲಿರುವ ಭಾರತದ ಅನೇಕ ಲಿಪಿಗಳಿಗೆ ಮೂಲವೆನಿಸಿದ ಒಂದು ಪ್ರಾಚೀನ ಲಿಪಿ ; ᑭ ಇದು ಅತಿ ಪ್ರಾಚೀನವೆಂಬುದನ್ನು ಸೂಚಿಸಲು, ಬ್ರಹ್ಮನಿಂದಲೇ ಉತ್ಪತ್ತಿಯಾಯಿತೆಂದು ಕೆಲವು ವಿದ್ವಾಂಸರ ವಾದವಿದೆ : ಭಾರತೀಯಭಾಷೆಗಳಲ್ಲಿರುವ ಅಕ್ಷರಸಂಜ್ಞೆಗಳಿಗೆ "ಬ್ರಾಹ್ಮೀಲಿಪಿ" ಮೂಲವೆಂದು ನಿರ್ಣಯವಾಗಿದೆ (ಸಂಕೋಶ. ೩). [ಸಂ.]

**ಬ್ರಾಹ್ಮೀಸ್ಥಿತಿ** (ನಾ). ೧. ಬ್ರಹ್ಮಾನಂದವನ್ನು ಹೊಂದಿದ ಸ್ಥಿತಿ ; ಸಮಾಧಿಸ್ಥಿತಿ : ತಾವು ಸದಾ ಬ್ರಾಹ್ಮೀಸ್ಥಿತಿಯಲ್ಲಿದ್ದು ಕೇವಲ ಲೋಕರಕ್ಷಣಕ್ಕಾಗಿ ಬಹಿರ್ಮುಖರಾಗುವ ಮಹಾನುಭಾವರು (ಮಹಾಡ. ೫೪) ; ಬ್ರಾಹ್ಮೀಸ್ಥಿತಿಯನ್ನು ಮುಟ್ಟದ ಯೋಗಿ ಕೂಡ ಕರ್ಮವನ್ನಾಚರಿಸಲೇಬೇಕು (ಕರ್ಮಗಾ. ೦೩೯). ೨. (ಅಲಂ) ಮಂಕುಬಡಿದ ಸ್ಥಿತಿ : ತಿಪ್ಪನನ್ನು ರಮಿಸಿ ಅವನ ಹೃದ್ಗತವನ್ನು ತಿಳಿಯುವ ಹೊರತು ಅವನ ಈ ಬ್ರಾಹ್ಮೀಸ್ಥಿತಿಯು ರಹಸ್ಯವಾಗಿಯೇ ಉಳಿಯುವುದು (ಸಮಾಜ. ೪೬೩). [ಸಂ.]

**ಬ್ರಾಹ್ಮ** (ಗು). ೧. ಬ್ರಹ್ಮನಿಗೆ ಸಂಬಂಧಿಸಿದ : ಪರಮಬ್ರಾಹ್ಮಪ್ರಭಾವಂ ಮನುಜ ಪರಿವೃಢಾಕಾರಮಂ ತಾಳ್ದಿತು (ಎಕ. V. ಬೇಲೂರು. ೦೭-೫೬ ; 1136). ೨. ಪರಬ್ರಹ್ಮವಸ್ತುವಿಗೆ ಸಂಬಂಧಿಸಿದ. ೩. ಬ್ರಾಹ್ಮಣನಿಗೆ ಸಂಬಂಧಿಸಿದ ; ಬ್ರಾಹ್ಮಣನಿಗೆ ಸೇರಿದ. (ನಾ). ೪. ಬ್ರಾಹ್ಮಣಿಕೆ ; ಬ್ರಾಹ್ಮಣತ್ವ : ತೋಜಪಟ್ಟ ಬ್ರಾಹ್ಮವೆಂಬುದು ಬೇಡ ದರ್ಶನವೀಶಭಕ್ತಿಯುಂ ಬೇಡಯಿಂತಿದನೆರಡುಮಂ ನೀ ಕೂಡಿ ನುಡಿಯದಿರು (ಬಸವ. ೩-೬೨). ೫. = ಬ್ರಹ್ಮಪುರಾಣ : ಪರಮ ಶೈವಸ್ಕಂದ ಲೈಂಗ್ಯಾದಿರಳ ನಾರದ . . . ಬ್ರಾಹ್ಮ ಬ್ರಹ್ಮವೈವರ್ತ ಸಾಂಗದಿಂದಷ್ಟಾದಶ ಪುರಾಣಂಗಳೊಳು (ಬಸವ. ೪೩-೬೬). [ಸಂ.]

**ಬ್ರಿಹವಾರ, ಬ್ರೈಹವಾರ** (ನಾ). ಬೃಹಸ್ಪತಿವಾರ ; ಗುರುವಾರ : ಸುಭಾನುಸಂವತ್ಸರದ ಕಾರ್ತಿಕಶುದ್ಧ ೫ ಬ್ರಿಹವಾರದನ್ದು ಲಿಂಗಪ್ರತಿಷ್ಟೆಯಂ ಮಾಡಿ (ಎಕ. VII, ಶಿವಮೊ.೦೪-೦೦ ; 1103) ; ಶುಭಾನುಸಂವತ್ಸರದ ಪುಶ್ಯ ಸುದ್ಧದಮವಾಸೆ ಬ್ರಿಹವಾರದಂದು . . . ಧಾರಾಪೂರ್ಬ್ಬಕಂ ಮಾಡಿ ಕೊಟ್ಟರು (ಎಕ. XI, ದಾವಣ. ೪೩-೦೦೭ ; 1164). **ಬೈಹವಾರ** : ಶ್ರೀಜಯ ಸಂವತ್ಸರದ ಫಾಲ್ಗುಣ ಸುದ್ಧ ಪವುರ್ನ್ನಮಿ ಬ್ರೈಹವಾರದಲಿ . . . ಧಾರೆಯ ಯೆರೆದು ಕೊಟ ಶಾಸನ (ಎಕ. IX, ಕೊಡಗು. ೬೫-೩ ; 1174?). [<ಸಂ. ಬೃಹಸ್ಪತಿವಾರ]

**ಬ್ರೀಡ್ಯತ್ವ** (ನಾ). (?) : ಬಳವದ್ವಿದ್ವಿಷ್ಟಭೂಪಾಳಕರಡಿಗೆಱಗಿ ಶರಣಂಬೋಗೆ ದುರ್ವ್ವಾರ ಬಾಹಾಬಳಮಂ ಮಾಣ್ಬಂಧು(ದ)ದಂ ತೊತ್ತಳುಕಿ ಬಳುಕಿ ಬ್ರೀಡ್ಯತ್ವಮಂ ಪೂಣ್ದರ್ (ಎಇ. XVI, ೬೦-೨೨ ; 1074). [ ? ]

**ಬ್ರುಂಹಿತಾತ್ಮ** (ನಾ). ಪರಮಾತ್ಮ : ಬಿಂದುಸ್ವರೂಪನೇ ಕೋಟ್ಯಂಶ ಶುದ್ಧನೇ ತಂದೆಯಾ ಬ್ರುಂಹಿತಾತ್ಮನೆ . . . ಸದಾಶಿವ ಪಂಚವಕ್ತ್ರನೇ . . . ನಿನಗೆ ವಂದಿಸುವೆವೆನುತಿರ್ದರು (ವೀಕೃಷು. ೫-೨-೯). [< ಸಂ. ಬೃಂಹಿತಾತ್ಮನ್]

**ಬ್ರುಸಿ** (ನಾ). ಯತಿಗಳ ಪೀಠ : ಅಲ್ಲಿ ಸಂಶ್ರಿತಬ್ರುಸಿಗಳಿಂ ರಿಸಿಗಳಿಂ (ಶೀಷರಾ. ೯೦-೬೦) ; ಒಸೆದು ಕರೆದುಯ್ದಾವರಂ ಮಿಗೆ ಬ್ರುಸಿಯ ನೊಲಿದಿತ್ತುಪಚರಿಸಿ ಲಾಲಿಸಿ (ಸಂಠಾಣ. ೨೪೧). [< ಸಂ. ಬೃಸೀ]

**ಬ್ರೆಡ್ಡು** (ನಾ). " (ಧಾನ್ಯದ ಹಿಟ್ಟನ್ನು ಕಲಿಸಿ, ನಾದಿ, ಸಾ. ಉದುಗು ಹಾಕಿ, ಒಲೆಯಲ್ಲಿಟ್ಟು ಸುಟ್ಟ) ರೊಟ್ಟಿ" (Bread. ಇಂಕಂ) : ಬ್ರೆಡ್ಡಿಗೆ ಬೆಣ್ಣೆಯು ಸಾಲದೆಂದಳುವಳು (ಸಂದ್ರಶೀ. ೯೯-೫೩). [← ಇಂ. Bread]

**ಬ್ರೈಹವಾರ** 'ಬ್ರಿಹವಾರ' ನೋ.

**ಬ್ರೇಕು** (ನಾ). ಚಕ್ರದ ಚಲನೆಯನ್ನು ತಡೆಯಲು ಉಪಯೋಗಿಸುವ ಸಲಕರಣೆ ; ಬಿರಿ ; ತಡೆ : ರಸ್ತೆಯಲಿ ಬದಿಗೆ ನಡೆದವರ ಮೇಲೆಯೇ ಕಾರು ಹಾಯಿಸಬಲ್ಲ ; ಅವಕೆ ಬ್ರೇಕಿಲ್ಲ (ಚಂಪು. ೨೯-೬). [← ಇಂ. Brake]

**ಬ್ರೇಲ್** (ನಾ). "ಕುರುಡರು ಕೈಆಡಿಸಿ ಓದುವುದಕ್ಕೆ ಅನುಕೂಲಿಸುವಂತೆ ರಚಿಸಿದ ಉಬ್ಬು ಬರವಣಿಗೆ ಅಥವಾ ಮುದ್ರಣ : ಬ್ರೇಲ್ ಲೇಖನ, ಮುದ್ರಣ (ಈ ಉಪಾಯವನ್ನು ಕಂಡು ಹಿಡಿದಾತನ ಹೆಸರಿನಿಂದ)" (Braille. ಇಂಕಂ). [← ಇಂ. Braille]

**ಬ್ರೋಚು** (ನಾ). ಸಾಮಾನ್ಯವಾಗಿ ಹೆಂಗಸರು ತಮ್ಮ ಕತ್ತಿನ ಬಳಿಯ ಉಡುಪಿನ ಭಾಗವನ್ನು ಭದ್ರಪಡಿಸುವುದಕ್ಕಾಗಿ ಉಪಯೋಗಿಸುವ ಮತ್ತು ಹುಡುಗಿಯರು ತಲೆಯಲ್ಲಿ ಧರಿಸುವ ಪಿನ್ನಿನಂತಹ ಒಂದು ಆಭರಣ : ಯಮುನೆಗೆ ಏನಾದರೂ ರಿಬ್ಬನ್ನೋ ಬ್ರೋಚೋ ತಂದುಕೊಡುತ್ತಿದ್ದೆ (ಅಂಹೂ. ೪೦). [← ಇಂ. Broach]

**ಬ್ಲೇಡು** (ನಾ). ೧. ಹರಿತವಾದ ಅಂಚು, — ಅಲಗು. ೨. ಚಪ್ಪಟೆಯಾಗಿರುವ ಎರಡೂ ಬದಿಗಳಲ್ಲಿ ಹರಿತವಾದ ಅಲಗುಳ್ಳ ಲೋಹದ ತೆಳುವಾದ ಒಂದು ಸಾಧನ : ಬ್ಲೇಡು ಹಿಡಿದ ಕೈಗೆ ಬೇಡಿ ಬೀಳುವುದು ತಡವೆ ? ಜೇಬು ಕತ್ತರಿಸಿದ, ಜೇಲು ಕಂಡ (ಸಂಗಬ. ೫೭). [← ಇಂ. Blade]

**ಬ್ಲೌಜು** 'ಬ್ಲೌಸು' ನೋ.

**ಬ್ಲೌಸು, ಬ್ಲೌಜು** (ನಾ). (ಹೆಂಗಸರ) ಕುಪ್ಪಸ ; ರವಿಕೆ : ಇದಕ್ಕೆ ಮ್ಯಾಚು ಆಗೋ ಬ್ಲೌಸುಪೀಸು ತಂದುಕೊಡಿ (ಅಪ್ಪ್ಯಾಶ. ೬೦). **ಬ್ಲೌಜು** : ತರತರದ ಬ್ಲೌಜುಗಳನ್ನು ಹಾಕುತ್ತಿದ್ದಳು (೭೦ಸಂ. ೨೮). [← ಇಂ. Blouse]

*

**ಭ** (ನಾ). ೧. ಕನ್ನಡವರ್ಣಮಾಲೆಯ ನಲವತ್ತುನಾಲ್ಕನೆಯ ಅಕ್ಷರ. ೨. ನಕ್ಷತ್ರ; ತಾರೆ : ''ಭಂ, ನಕ್ಷತ್ರಂ . . . ಉಡು – ಈ ೯ ನಕ್ಷತ್ರದ ಪೆಸರ್'' (ಹಲಾಯು. ೧೧-೩೦). 'ಭಗಣ' ಪರಾ. ೩. ಶುಕ್ರಗ್ರಹ. ೪. ಪ್ರಕಾಶ ; ಕಾಂತಿ. ೫. ಭ್ರಮೆ ; ಭ್ರಾಂತಿ. ೬. ಸಾಮ್ಯ ; ಹೋಲಿಕೆ. ೭. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : ''ಘ ಢ ಭ ವಂ ನೆಟ್ ನಾಲ್ಕು'' (ಪಾಂಗರಾ. ೦೦೪-೧೦). ೮. ಇಪ್ಪತ್ತೇಳು ಎಂಬ ಸಂಖ್ಯೆಯ ಸಂಕೇತ. ೯. [ಛಂದ] ಆದಿಯಲ್ಲಿ ಗುರುವೂ ಅನಂತರ ಎರಡು ಲಘುಗಳೂ (– ᴗᴗ) ಇರುವ ಮೂರು ಅಕ್ಷರಗಳ ಒಂದು ಗಣ : ನಭಭರಂಗಳುವೊಂದಿರೆ ಪಾದದೊಳ್ . . . ದ್ರುತಪೂರ್ವ ವಿಲಂಬಿತಂ (ಛಂದೋಂಬು. ೨-೧೨೩).

**ಭಂಗ** (ನಾ). ೧. ಮುರಿಯುವಿಕೆ ; ಚೂರುಮಾಡುವಿಕೆ. ೨. ಭಾಗ ಮಾಡುವಿಕೆ ; ಪಾಲುಮಾಡುವಿಕೆ : 'ಭಂಗಂಬಡೆ' ಪರಾ. ೩. ಮುರಿದುದು ; ಮುರಿದು ಬಿದ್ದುದು : ತುಂಗವನ್ಯಮತಂಗಜದಂತಾಘಾತನಿಪಾತಿತಸಲ್ಲಕೀಭಂಗವಮಂ . . . ನೃಪನೆಯ್ದಿದನುದ್ಯಚ್ಛೃಂಗಮನಾಶತಶೃಂಗಮಂ (ಶಂಶಭಾ. ೦-೦೦೩). 'ಭಂಗಂಬಡು' ಪರಾ. ೪. ತುಂಡು; ಚೂರು. ೫. ಭಾಗ ; ಪಾಲು. ೬. ಬಿರುಕು ; ಒಡಕು ; ಛಿದ್ರ. ೭. ನಾಶ ; ಹಾಳು : ಈ ಪರಿ ಕೊಲೆಗೆ ಭಂಗಕೆ ನಿನ್ನ ಬಿರುದರು ಬಂದುದಿಲ್ಲ (ಕುಮಾರವ್ಯಾ. ೦೬-೦೬) ; ಪಂಗುವಾದರೂ ಲಿಂಗಪೂಜೆ ಇದ್ದರೆ ಭಂಗವಾಗ (ಗಾದೆ). ೮. ಸೋಲು ; ಪರಾಜಯ : ಭಂಗಮನಾಳ್ದುವೀಕೆಯರ ಕುಂತಳವೆಂಬುದದಿರ್ಕೆ ತುಂಬಿಗಳ್ ಭಂಗಮನಾಳ್ದುವೀ ಮುನಿವಧೂಟಿ ಕುರುಳ್ಗಳವೆಂದು ಭಂಗಿಸಲ್ (ಜಗನ್ನಾ. ೦೬-೩೪) ; ತುಂಬುರಂ ಬಂದು ಸೌಂದರನಡಿಗೆ ಬಳಲುತ್ತವೆಜಿಗಿದಂ ನಿಂದು ಬಿನ್ನೈಸಿದಂ ತನ್ನ ಭಂಗಮನದಂ (ಸಂಬಿರ. ೦೩-೯೪) ; ಕುರುಬಲಜಾಲದಲಿ ಜಳ್ಳಗರು ಬಿದ್ದುದು ಭಂಗ ಶರಧಿಯಲಿ (ಕುಮಾಶ. ೨೪-೯೩). ೯. ಮಾನಹಾನಿ ; ಅಪಮಾನ ; ತೇಜೋಹಾನಿ : ಭರತಾವನೀಶ್ವರಂ ಗುರು ಪಿರಿಯಣ್ಣಂ ಚಕ್ರವರ್ತಿ ಮಹಿಮಾಕರನೀ ದೊರೆಯನುಮಳವಟ್ಟಿಯೆ ವಸುಂಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ (ಆದಿಪು. ೦೪-೦೦೨) ; ಅಂಕ ಓಡಿದರೆ ತೆತ್ತಿಗಂಗೆ ಭಂಗವಯ್ಯಾ (ಬಸವ. ೨೯೯); ಎಲೆಲೆ ದೊಡ್ಡಗರೇಕೆ ಕೊಬ್ಬಿದರಳವಳಿಯದೆ ನುಗ್ಗು ಮುಟ್ಟಿದರೆ ದಳದ ದೊರೆಗದು ಭಂಗವೇ (ಕುಮಾರವ್ಯಾ. ೦೭-೨೯). ೧೦. ತೊಂದರೆ; ಕಷ್ಟ; ಕ್ಲೇಶಕರವಾದುದು : ದೂರ ದುರ್ಜನರ ಸಂಗ ಭಂಗವಯ್ಯಾ (ಬಸವ ೦೩೪) ; ಸಂಗದಿಂ ಕೆಳೆಯಿಲ್ಲ ಭಂಗದಿಂ ಮೊಟ್ಟೆಯಿಲ್ಲ ಗಂಗೆಯಿಂದಧಿಕ ನದಿಯಿಲ್ಲ (ಸರ್ವಜ್ಞ. ೨೩೦); ಸಹ್ಯವಲ್ಲದ ದುರದೃಷ್ಟವೆಂದೆನುವುದು ಅದು ನಮಗೆಂದಿಗು ಬರದು ಈಯೊಂದು ಭರವಸೆಯೊಳು ನಾವು ನಡೆದಂದು ನಮಗಾವ ಭಂಗವು ಇರದು (ಇಂಡಾಕ. ೦೪೦-೯೨). ೧೧. ಅಲೆ ; ತೆರೆ : " ವೀಚೀ, ಭಂಗಃ, ತರಂಗಃ – ಈ ೩ ತೆರೆ " (ಹಲಾಯು. ೦೦೮-೩೧); ಅಕಳಂಕ ರತ್ನಂಗಳೋಳಿಯಿಂದೈತಪ್ಪ ಸ್ಥಲಭಂಗ [ಪಾಠಾಂ. ಭೋಗದ]ಸುಳಿಯ ಸವ್ವಳಿಗಳಿಂದೆ . . . ಕಡಲ್ ಕಣ್ಗೆಸೆದುದು (ಶಬಪು. ೨-೩); ಭೃಂಗದ ಸಂಗೀತದ ಭಂಗಂಗಳು ಸುಳಿವವು ಸುಳಿಗಾಳಿಯನೇರಿ (ಕರುಣಾ. ೩೪-೨೩). ೧೨. ಕುಂದು; ದೋಷ. ೧೧, ೧೨ : ಕಾವ್ಯಮನಿಸಿರ್ದು ವಿಬುಧಸುಸೇವ್ಯಂ ಘನರಸವಿದೆನಿಸಿ ಭಂಗವಿರಹಿತಂ . . . ಮಣ್ಯೃತಿ ಚಮತ್ಕೃತಿಪ್ರದಮಲ್ತೇ (ರಾಜಶೇ. ೦-೯೦). 'ಭಂಗಸಮಿತಿ' ಪರಾ. ೧೩. ನಿರಾಶೆ. ೧೪. ಬಾಗು; ತಿರುವು. ೧೫. ಬಾಗುವಿಕೆ; ಸಂಕೋಚಗೊಳ್ಳುವಿಕೆ. ೧೬. ಹಾರುವಿಕೆ. ೧೭. ಚಲನೆ; ಅಲುಗಾಟ: 'ಭಂಗಂಬೆಜು' ಪರಾ. ೧೮. ಕೊಂಕು ; ವಕ್ರತೆ; ಮಣಿತ : ಭಂಗಮನಾಳ್ದುವೀಕೆಯರ ಕುಂತಳವೆಂಬುದದಿರ್ಕೆ ತುಂಬಿಗಳ್ ಭಂಗಮನಾಳ್ದುವೀ ಮುನಿವಧೂಟಿ ಕುರುಳ್ಗಳವೆಂದು ಭಂಗಿಸಲ್ (ಜಗನ್ನಾ. ೦೬-೩೪); ಭಂಗಮನುಂತುಂ ತಳೆದ ಲತಾಂಗಮನಿಂ ನಿನ್ನ ಕೋಪಮಾಂಗದ ಚೆಲ್ವಂ ಗೆಲ್ದು (ಚಂದ್ರಪು. ೭-೭೩). 'ಭ್ರೂಭಂಗ' ಪರಾ. ೧೯. ಬಟ್ಟೆಯ ಮಡಿಕೆ. ೨೦. ಕಪಟ; ಮೋಸ: 'ಭೃಂಗಗಾಜಿ' ಪರಾ. ೨೧. [ಗಣಿತ] ಒಂದು ಬಗೆಯ ಗಣಿತ ; ವಿಕಲ್ಪಗಣಿತ : " ವಿಕಲ್ಪ " ಅಥವಾ " ಭಂಗ " ಎಂಬ ಗಣಿತಶಾಖೆಯ ವಿಷಯವಾಗಿ ಸ್ವಲ್ಪ ವಿಸ್ತರಿಸಿ ಹೇಳುವುದು ಆವಶ್ಯಕವಾಗಿದೆ (ಗಣಿತ. ೨೦೮). ೨೨. [ನಾಟ್ಯ] ದೇಹವನ್ನು ನಿಲ್ಲಿಸುವ ರೀತಿ ; ಭಂಗಿ : " ಭಂಗ " ಎಂದರೆ ಶರೀರವನ್ನು ನಿಲ್ಲಿಸುವ ರೀತಿ. ಶರೀರವು ಸಮರೇಖೆಯಲ್ಲಿ ಇದ್ದರೆ ಸಮಭಂಗವೆನಿಸುವುದು (ಶಾಂಕ್ರ. II, ೬೩೪). 'ತ್ರಿಭಂಗ' ಪರಾ. [ಸಂ.]

**ಭಂಗಂಬಡು**, ಭಂಗಪಡು, ಭಂಗಬಡು, ಭಂಗವಡು (ಕ್ರಿ). ೧. ಅವಮಾನಕ್ಕೊಳಗಾಗು ; ಅಪಮಾನ ಹೊಂದು : ತಾರಕನಿಂದ ಭಂಗಂಬಟ್ಟು ದೇವೇಂದ್ರತ್ವವೇಕೆಮಗೆ (ಬಸಪು. ೦೬-೨೨). **ಭಂಗಪಡು** : ೧. ತುಂಗಬಲಸೌವಿತ್ರಿಯಿಂದುಜ್ ಭಂಗಪ[ಪಾಠಾಂ. ಬ]ಟ್ಟ ಮಹೋಗ್ರರಜನಿ ಚರಾಂಗನೆಯ ದೂಟ್ನಲಿ ಖರನೈತಂದನಾಹವಕೆ (ತೊರರಾ. ೩-೩ ಸೂಚನೆ) ; ಅವರು ಗಂಡನ ಮನೆಗೆ ಹೋಗಬಾರದೇಕೆ ? ಇಷ್ಟೊಂದು ಭಂಗಪಟ್ಟುಕೊಂಡೂ ಇಲ್ಲೇ ಇರಬೇಕೆಂದೇನು ? (ಕುಸುಸಂ. ೯೩). ೨. ಕಷ್ಟಕ್ಕೆ ಗುರಿಯಾಗು; ತೊಂದರೆಗೊಳಗಾಗು : ಅಂಗಭೋಗಕೆ ಮೆಚ್ಚಿ ಲಿಂಗಭಕ್ತಿಯ ಮರೆದು ಭಂಗಪಡುತಿಹೆನು (ಸರ್ವಜ್ಞ. ೦೦೩); ಭ್ರಮರ ಭ್ರಮಿಸಿ ಬೇಗೂ ಭಂಗಪಟ್ಟ ಹಾಗೆ (ಗಾದೆ). **ಭಂಗಬಡು** : ೧. ಹಂಗಿನರಮನೆಯಿಂದ ಹಿಂಗಡದ ಗುಡಿ ಲೇಸು ಭಂಗಬಟ್ಟುಂಬ ಬಿಸಿಯನ್ನಕ್ಕಿಂತಲು ತಂಗುಳವೆ ಲೇಸು (ಸರ್ವಜ್ಞ. ೦೩೩೪). ೩. ಮುರಿದು ಹೋಗು; ಚೂರಾಗು : ಲೋಕದೊಳು ಮುಂಗೈಯ ಕಂಕಣಕೇಕೆ ಕನ್ನಡಿ ಭಂಗಬಟ್ಟ ಜಿನಾಕೃತಿಯೆ ತಾಂ ಸಾಕ್ಷಿಯಲ್ಲಾ (ಬಸಪು. ೩೦-೬೩). **ಭಂಗವಡು** : ೨. ವಿಷ್ಣು ಬಲ್ಲಿದನೆಂಬೆನೆ ದಶಾವತಾರದಲ್ಲಿ ಭಂಗವ[ಪಾಠಾಂ. ಬ]ಟ್ಟುದಕ್ಕೆ ಕಡೆಯಿಲ್ಲ (ಬಸವ. ೩೩೨). [ಭಂಗ + ಪಡು₁]

**ಭಂಗಂಬಡೆ**, ಭಂಗವಡೆ (ಕ್ರಿ). ೧. ಸೋಲು ; ಪರಾಜಯಗೊಳ್ಳು : ಯಮಕಿಂಕರರು ಭಂಗಂಬಡೆದು ಹರಿಕಿಂಕರರ ಕೈಯಲಿ ಬಿಸುಟಜಾಮಿಳನನು ವಿಷಾದದಲಿ ಮರಳಿ ಹೋದವರೇನನೆಂದರು (ಭಾಗ. ೬-೩-೦). **ಭಂಗವಡೆ:** ೧. ಲೋಕಮಾನ್ಯನು ಕರ್ಣ ಕುರುಬಲದ್ಧಾಕವಾಳನು ಭಂಗವಡೆದುದೆ ಸಾಕು ನೀ ಸಾರೆಂದು ಭೀಮನ ನೂಕಿದನು ಶಲ್ಯ (ಕುಮಾಶ. ೦೨-೩೦) ; ಸಿಂಗಾಡಿಯಂಬಿನ ಮಳೆಯುಜುಬಿಗೆ ಬಲ ಕಂಗೆಟ್ಟು ದೆಸದೆಸಗೋಡಿ ಭಂಗವಡೆಯೆ (ಕಂಸಬಿ. ೦೦-೬೦). ೨. ವಿಭಾಗ ಹೊಂದು ; ಬೇರೆ ಬೇರೆಯಾಗು : ಭಂಗವಡೆದೆಸಗುಮವರ ಗೃಹಂಗಳ್ ಮಾಣಿಕದ ಸಂಜೆಯುಂ ನೀಲದ ಕರ್ದಿಂಗಳಿನೆಳಮುತ್ತಿನ ಬೆಳ್ದಿಂಗಳಿನುಜ್ವಲಿಸಿ ಪೊಳೆವ ವಜ್ರದ ಬಿಸಿಲಿಂ (ಸೂಕ್ತಿಸು. ೪-೦೩೦). [ಭಂಗ + ಪಡೆ₁]

**ಭಂಗಂಬೆಱು** (ಕ್ರಿ). ಅಲುಗಾಡು ; ಚಂಚಲತೆಯನ್ನು ಹೊಂದು ; ಸ್ಥಿರತೆಯಿಲ್ಲದಾಗು : ಪಿರಿದುಮೆರ್ದೆಡವಕೆ ವಾಜಿಸುತಿರೆ ಭಂಗಂಬೆತ್ತು ಹಾರಲತೆ ಘನಕುಚದೊಳ್ ಕರವಿಕ್ಷೇಪದೆ ನರ್ತಿಸೆ ಸರೇಂದ್ರನಂದನನ ನೆೞಲ್ದು ನೋಡಿದಳೊರ್ವಳ್ (ಕಾದಂಪೂ. ೪೮೦). [ಭಂಗ + ಪೆಱು$_1$]

**ಭಂಗಗಾಱ** (ನಾ). ನಂಬಿಕೆಗೆ ದ್ರೋಹ ಬಗೆಯುವವನು ; ವಿಶ್ವಾಸ ಘಾತುಕ ; ವಂಚಕ : ಲಿಂಗವ ತೋಱಿ ಉದರವ ಹೊರೆವ ಭಂ[ಪಾಠಾಂ. ಬಂ]ಗಗಾಱ ನಾನು ಕೂಡಲಸಂಗಮದೇವಾ (ಬಸವ. ೩೦೬) ; ಹಿಂದಾದ ಮುಕ್ತಿಯ ಮಾಱಿಕೊಂಡುಂಬ ಭಂಗಗಾಱರ ತೋಱದಿರಾ (ಚನ್ನವ. ೪. ೦೨೦-೩೬೦). [ಭಂಗ + –ಕಾಱ]

**ಭಂಗಗೊಳು** (ಕ್ರಿ). ಕಷ್ಟಕ್ಕೆ ಗುರಿಯಾಗು ; ತೊಂದರೆಗೊಳಗಾಗು : ಕೆಡಕು ಕೂಡುವದೆಂದು ಅಡವಿಗೋಡಲು ಬೇಡ ಕಡುಭಯದಿ ಭಂಗ ಗೊಳಬೇಡ ವಿಧಿಯಱಿಯದವರಿಯೊಂದುಂಟೆ (ಸರ್ವಜ್ಞ. ೬೬೬). [ಭಂಗ + ಕೊಳು (<ಕೊಳ್$_1$)]

**ಭಂಗಚಿಕಿತ್ಸೆ** (ನಾ). ಅವಮಾನವನ್ನು ಹೋಗಲಾಡಿಸಲು ಮಾಡುವ ಪರಿಹಾರೋಪಾಯ : ಭಂಗಚಿಕಿತ್ಸೆಗೆಯ್ದು ಪುವೆಸಲ್ ದುರಿತಾಪಹಮಪ್ಪ ಹೋಮಧೂಮಂಗಳ ಕಂಪನುಣ್ಬವಳರಾಜ್ಗಗಳಾ ಮುನಿಗೇಹರಾಜಿಯೊಳ್ (ಜಗನ್ನಾ. ೦೬-೫೪). [ಭಂಗ + ಚಿಕಿತ್ಸೆ]

**ಭಂಗತಾಳ** (ನಾ). [ಸಂಗೀತ] ತಾಳದಲ್ಲಿ ಒಂದು ಪ್ರಭೇದ : ಭಂಗತಾಳ ಉಪಭಂಗತಾಳ ವಿಭಂಗತಾಳ ವಿತಾಳ ಶುದ್ಧತಾಳ ಅನಂತಾಳ ಮೆಂಬಾಱು ವರ್ಗಸಂಖ್ಯಾಭೇದವಾಗಿಹವೆಂದು ಪೇಳ್ವ ಭರತಶಾಸ್ತ್ರ ಪ್ರವೀಣರಪ್ಪ ತಾಳಧಾರಿಗ್ಗಳಿಂ (ಶಿವತ. ೨೩೬). [ಸಂ. ಭಂಗತಾಲ]

**ಭಂಗಪಡಿಸು** 'ಭಂಗವಡಿಸು' ನೋ.

**ಭಂಗಪಡು** 'ಭಂಗಂಬಡು' ನೋ.

**ಭಂಗಬಡಿಸು** 'ಭಂಗವಡಿಸು' ನೋ.

**ಭಂಗಬಡು** 'ಭಂಗಂಬಡು' ನೋ.

**ಭಂಗವಡಿಸು**, ಭಂಗಪಡಿಸು, ಭಂಗಬಡಿಸು (ಕ್ರಿ). ೧. ಸೋಲಿಸು; ಪರಾಜಯಗೊಳಿಸು : ಹಿಂಗದೆ ಕಾದಿದ ಕೆಂಗ ಹನುಮನನು ಭಂಗವಡಿಸಿ ಸೆಱೆವಿಡಿದು (ಕಂಪರಾ. ೦೬-೨೯). **ಭಂಗಪಡಿಸು** : ೨. ಉಲ್ಲಂಘಿಸು; ಅತಿಕ್ರಮಿಸು : ಉಲ್ಲಂಘಿಸು ; ಭಂಗಪಡಿಸು (violate. ಚಿತ್ರಿ. ೮೬). **ಭಂಗಬಡಿಸು**: ೩. ಅವಮಾನಗೊಳಿಸು: ಹೆಂಗುಸಿವಳವಳಸುವನುಚ್ಚುವು ದಂಗವೇ ಕ್ಷತ್ರಿಯರಿಗೆ . . . ಭಂಗಬಡಿಸಿಯೆ ಬಡುವುದೇ ಭಟರಂಗ (ತೊರವೆ. ೦-೦೦-೯). [ಭಂಗವಡು (<ಭಂಗಂಬಡು) + –ಇಸು$_3$]

**ಭಂಗವಡು** 'ಭಂಗಂಬಡು' ನೋ.

**ಭಂಗವಡೆ** 'ಭಂಗಂಬಡೆ' ನೋ.

**ಭಂಗವಾದ** (ನಾ). [ಜೈನ] ಜೈನ ಸಿದ್ಧಾಂತದಲ್ಲಿ ಪ್ರತಿಪಾದಿತವಾಗಿರುವ ಪ್ರಧಾನತತ್ತ್ವ; ಏಳುಬಗೆಯ ಭಂಗವನ್ನು ವಿವರಿಸುವ ತತ್ತ್ವ; ಸಪ್ತಭಂಗಿ ; ಸ್ಯಾದ್ವಾದ: ಸ್ಯಾದ್ವಾದವು ಅನೇಕ ವಿರೋಧಿವಾದ ಗಳನ್ನು ಸಮನ್ವಯ ಮಾಡುವಾಗ ಅದರಲ್ಲಿ ನಯವಾದ ಭಂಗವಾದಗಳು ತನ್ನಿಂದ ತಾನೇ ರೂಪಗೊಳ್ಳುತ್ತವೆ (ಕೈಸಹ. ೨೨೨). [ಸಂ.]

**ಭಂಗವ್ಯಾಕುಳಿತ** (ನಾ). ೧. ನಾಶದಿಂದ ಕಳವಳಗೊಂಡಿರುವುದು. ೨. ಅಲೆಗಳಿಂದ ಅಸ್ತವ್ಯಸ್ತವಾಗಿರುವುದು. ೧, ೨: ಆ ಮಹಾರ್ಣವಂ ಸಮುದ್ರಮಾಗಿಯುಂ ಅಪಾರವಿಸ್ತಾರಿಯುಂ ಭಂಗವ್ಯಾಕುಳಿತಮಾಗಿಯು ಮಚ್ಯುತಪ್ರಭಾವಭಾಸುರಮುಂ . . . ಎನಿಸಿರ್ದುದು (ಜಗನ್ನಾ. ೦-೪೪ ವ). [ಸಂ. ಭಂಗವ್ಯಾಕುಲಿತ]

**ಭಂಗಶ್ಲೇಷ** (ನಾ). [ಕಾವ್ಯಮೀ] ಒಂದು ಬಗೆಯ ಶಬ್ದಾಲಂಕಾರ: ಒಂದು ಪದವನ್ನು ಬೇರೆ ಬೇರೆ ರೀತಿಯಲ್ಲಿ ವಿಭಾಗ ಮಾಡಿದರೆ ಬೇರೆ ಬೇರೆ ಅರ್ಥವು ಹೊರಡುವ ಪದಸಂಯೋಜನೆ: ಪದವರ್ಣ ವಿಭಕ್ತಿವಿಭಾಗದಿಂ ದ್ವಿಧಾರೂಪವಿಷ್ಟಮಕ್ಲಿಷ್ಟಂ ಶಬ್ದದೊಳಾಗಿ ತೋಱು ವಂದಂತದು ಭಂಗಶ್ಲೇಷಮೆಂದು ಪೇೞಲ್ಪಡೆಗುಂ (ಕಾವ್ಯಾವ. ೬೬೯). ಉದಾ: 'ಕಡಲಂ ಮಿಗೆವಂದಮರಗಜೇಂದ್ರಂ ಸೊಗಯಿಸುವುದು ದಾನವಾರಿಲೇಖಾನುಗತಂ' ಈ ಪದ್ಯಭಾಗದಲ್ಲಿ 'ಅಮರಗಜೇಂದ್ರವು (ಐರಾವತ) ಕಡಲಂ ಮಿಗೆವಂದು ಸೊಗಯಿಸುವುದು' ಎಂದು ಕಡಲಿಗೂ ಐರಾವತಕ್ಕೂ ಹೋಲಿಸುವಾಗ 'ದಾನವಾರಿಲೇಖಾನು ಗತಂ' ಎಂಬ ಪದವನ್ನು 'ದಾನ+ವಾರಿ+ಲೇಖಾ+ಅನುಗತಂ' ಎಂದು ಒಡೆದರೆ, 'ಮದೋದಕದ ಗೆರೆಯಿಂದ ಕೂಡಿಕೊಂಡಿರುವ' ಎಂದು ಐರಾವತಕ್ಕೆ ಅನ್ವಯವಾಗುತ್ತದೆ. ಅದೇ ಪದವನ್ನು 'ದಾನವ+ಅರಿ+ಲೇಖ+ಅನುಗತಂ' ಎಂದು ಒಡೆದರೆ 'ರಾಕ್ಷಸರ ಶತ್ರುಗಳಾದ ದೇವತೆಗಳಿಂದ ಆಶ್ರಯಿಸಲ್ಪಟ್ಟುದು' ಎಂದು ಕಡಲಿಗೆ ಅನ್ವಯವಾಗುತ್ತದೆ. ಇದಕ್ಕೆ ಭಂಗಶ್ಲೇಷವೆಂದು ಹೆಸರು. [ಸಂ.]

**ಭಂಗಸಮಿತಿ** (ನಾ). ೧. ಅಲೆಗಳ ಸಮೂಹ. ೨. ಕುಂದುಗಳ ಸಮೂಹ. ೧, ೨: ಕುಮುದದಿಂ ಪ್ರತಿಕೂಲದಿಂ ವಿಜಾತಿಗಳ ಸಂಗಮದಿಂದ ಜಡಜೀವನೋಪಾಯದಿಂ ಭಂಗಸಮಿತಿಯಿಂದಿರ್ಪ ತಾವರೆಗೊಳಂ (ಭಾವತಂ. ೩-೪೫). [ಸಂ.]

**ಭಂಗಾರ** 'ಬಂಗಾರ' ನೋ.

Δ**ಭಂಗಾಱ** 'ಬಂಗಾರ' ನೋ.

**ಭಂಗಿ$_1$**, ಬಂಗಿ (ನಾ). ೧. ಸೇವಿಸಿದರೆ ಅಮಲೇರಿಸುವ ಒಂದು ಬಗೆಯ ವನಸ್ಪತಿ; ಗಾಂಜಾ : ಎಲ್ಲಾ ಬಿಟ್ಟು ಭಂಗೀ ನಟ್ಟ (ಗಾದೆ). ೨. ಗಾಂಜಾ ದಿಂದ ತಯಾರಿಸಿದ ಮಾದಕವಸ್ತು: ಅಡಗ ತಿಂಬರು ಕಣಕವಡಿಗೆ ಇರಲ್ಕೆ ಸುರೆಯ ಕುಡಿವರು ಹಾಲಿರಲ್ಕೆ ಮುಕ್ಕುವರು ಭಂಗಿಯ ಸಕ್ಕರೆ ಇರಲ್ಕೆ (ದೇವಾವ. ೩೩-೩೮); ಇದುವೆ ಪಿತ್ತದ ವಿಕಳವೋ ಮದ್ಯದ ವಿಕಾರವೊ ಭಂಗಿ ತಲೆಗೇಱಿದುದೊ (ಕುವ್ಯಾಸ. ೨-೬೦); ಭಂಗಿಯನು ಸೇದುವನ ಭಂಗವನು ಏನೆಂಬೆ ಭಂಗಿಯ ಗುಂಗು ತಲೆಗೇಱಲಾಡುತಿಹ ಮಂಗನಂತಿಹನು (ಸರ್ವಜ್ಞ. ೦೩೦೫). **ಬಂಗಿ** : ೧. ''ವಿಜಯಿಯೆನೆ ಬಂ[ಪಾಠಾಂ. ಭಂ]ಗಿ'' (ಮಂಗರಾ. ೩೫-೦೫). ೨. ಒಳ್ಳೆ ಬಂಗಿ ನುಗ್ಗೆ ಉಳ್ಳಿ ಮೊದಲಾದ ಇವನೆಲ್ಲವ ಬಿಡಬೇಕು (ಐರೇಶ್ಮ. ೬೪) ; ಹೇಸರಗತ್ತೆಯ ಮೇಲೆ ಬಂಗಿಯ ಹೇಱು ಸಾಸಿರ ಗಂಗ ಸಾರಗಳ ಸೂಸುವ ಸಾರಾಯದ ಪೀಪಗಳ ಲೆಕ್ಕವಿಲ್ಲೆಂದು ಪೇಳ್ವರಾರದನು (ಕಂಪರಾ. ೦೦-೩೮); ಅಂಗಿ ಕೊಟ್ಟು ಬಂಗಿ ಸೇದಿ ಮಂಗನಾದ (ಗಾದೆ). ೩. ಗಾಂಜಾಸೊಪ್ಪಿನಿಂದ ಮಾಡುವ ಪಾನೀಯ, —ಮದ್ಯ : (+). ೪. ಗಾಂಜಾ ಸೇದುವ ಚಟಕ್ಕೆ ಬಿದ್ದವನು ; ಗಾಂಜಾ ಕುಡಿಯು ವವನು : ಶುದ್ಧ ಬಂಗಿಯ ಹಾಗೆ ಆಡುತ್ತೀಯಲ್ಲ (ರೂಢಿ).

**ಭಂಗಿಪುಡಿ** = ಗಾಂಜಾ ಸೊಪ್ಪನ್ನು ಒಣಗಿಸಿ ಮಾಡಿದ ಪುಡಿ,–ಚೂರ್ಣ : ಅರಳಂ ಸೂಸಲುಮಂ ಸಮಂತಪಿನಿಯಂ ಭಂಗೀಪುಡೀ ಬೆಲ್ಲಮಂ ಬೆರಸಿರ್ದಾ ತಿಲಪಿಷ್ಟಮಂ . . . ಮಾಱುವರ್ ಪ್ರತಿದಿನಂ ಮದ್ಯಾರ್ಥಿಗಳ್ ಸಂತತಂ (ದಕಾವ. ೫-೬೨). **ಭಂಗಿಸೊಪ್ಪು**, **ಬಂಗಿಸೊಪ್ಪು** = ಗಾಂಜಾಗಿಡದ ಸೊಪ್ಪು : ಉಮ್ಮತ್ತದ ಸೊಪ್ಪಿನ ರಸದಲ್ಲಿ ಒಂದು ಮರ್ದನೆ, ಭಂಗಿಸೊಪ್ಪಿನ ರಸದಲ್ಲಿ ಒಂದು ಭಾವನೆ (ವಿಷ್ಯವಿ. ೨೫); ಪಂಚಕೋಲಗಳು, ತಪಸಿ, ಕೊಮ್ಮೆ . . . ಗುಗ್ಗುಳ, ವಿಜಯಾ (ಭಂಗಿಸೊಪ್ಪು) . . . ಪ್ರಯೋಗಿಸಲು ಶ್ವಾಸಕಾಸಗಳು . . . ಗುಣಹೊಂದುವುವು (ಸಳವ್ಯ. ಶಂ. ೪೩೮); ಬಂಗಿಸೊಪ್ಪಿನಿಂದ ಮದ್ಯ ತಯಾರಿಸುತ್ತಾರೆ (ರೂಢಿ). [<ಪ್ರಾ. ಭಂಗೀ, ಭಂಗಾ./ ಸಂ. ಭಂಗಾ./ ತೆಲು. ಭಂಗಿ, ಬಂಗಿ./ ಹಿಂ. ಮರಾ. ಭಾಂಗ್]

**ಭಂಗಿ$_2$** (ನಾ). ೧. ಮುರಿಯುವುದು ; ಸೀಳುವುದು. ೨. ಒಡೆತ ; ಸೀಳು ; ಬಿರುಕು. ೩. ಬಾಗು ; ತಿರುವು : ನೆಲೆನೆಲೆ ಭಂಗಿ ಭಂಗಿ ಪದವಣ್ ಬೆಳರ್ವಾಯ್ ಪೆಱತಲ್ಲಿದೆಂತೊ ಕೋಮಲಲತೆ ಪೇೞ್ ಮೆನ್ನಿನಿಯಳಂ ಮಾಱ್ಗೊಂಡುದೊ ಸೂಱ್ಗೊಂಡುದೋ (ಶಂಶಥಾ. ೫-೧೨). ೪. ಅಸ್ಥಿರತೆ ; ಭಂಗುರತೆ. ೫. ಡೊಂಕಾದ ದಾರಿ.—ಹಾದಿ. ೬. ಅಲೆ ; ತೆರೆ. ೭. ಮೋಸ ; ವಂಚನೆ. ೮. ನೆಪ ; ವ್ಯಾಜ. ೯. ಬಗೆ ; ವಿಧಾನ ; ರೀತಿ : "ವ್ಯಾಕೂ(ಕ್ರ)ತಿಃ, ಭಂಗಿಃ —ಈ ೨ ಪರಿ" (ಹಲಾಯು. ೧೨೫-೬೬) : ಆವ ಭಂಗಿಯಿಂ ನೋಡುವೊಡೆನ್ನೊಳಿಲ್ಲ ಗುಣಲೇಶಮುಮಿಾ ತೆಱದಿಂದನುಗ್ರಹಂಮಾಡು ವುದರ್ಕೆ ದೇವಿಯರದೊಂದು ಋಜುತ್ವಮೆ ಮುಖ್ಯಕಾರಣಂ (ಕಾದಂಉ. ೦೫೧) ; ಜೋಲ್ದುಗುವ ಕುರುಳಂ ತಿದ್ದುತ್ತುಮಿಂತೆಂದಳಂದಿನ ಭಂಗಿಯಿಂ (ದುಕೋತ. ೨-೬೧). ೧೦. ದೇಹದ ನಿಲುವು.—ವಿನ್ಯಾಸ : ಅಂಗೋಪಾಂಗದೊಳ್ ಸಂಗಳಿಸುವ ಪಲವುಂ ಭಂಗಿಯಿಂ . . . ಎಸೆದುದು ಭರತಾಂತಃಪುರಸ್ತ್ರೀಸಮೂಹಂ (ಆದಿಪು. ೧೦ ೦೨೫) ; ಪೊಸಬಿಸುಸುಯ್ಯ ಪಾಡಱಿದ ಮೆಯ್ಯ ಕದಂಪಿನ ಕೆಯ್ಯ ಭಂಗಿ ಕಣ್ಗೆಸೆಯೆ (ಶಾಂತಿಪು. ೮-೮೮) ; ಮುರಿಮುರಿದು ನೋಟ್ಟ ಭಂಗಿಯಿಂ ತಮ್ಮ ಕೊನೆಗಣ್ಗಳ ಕಾಂತಿಯಿಂ ದೆಸೆಯನೆತ್ತಂ ಬೆಳಗಿಯುಂ (ರಾಮಾಶ್ವ. ೫೯-೦೪). ೧೧. ಚರ್ಯೆ ; ಅಭಿವ್ಯಕ್ತಿ : ನಿಲುವಿನಲಿ ಸ್ವಸ್ಥಾನದಲಿ ಕೈಚಳಕದಲಿ ಭಂಗಿಯಲಿ ಭರದಲಿ . . . ಶ್ರಮವನು ತೋಱಿದನು ಪಾರ್ಥ (ಕುವ್ಯಾಆ. ೬-೪೧) ; ಕಾಗದ ಕತ್ತರಿಸುವ ಚಾಕನ್ನು ತೆಗೆದುಕೊಂಡು ಅಲ್ಲಾಡಿಸುತ್ತ, ಹೀಗೆ ನಾನಾ ವಿಧವಾದ ಭಂಗಿಭಣತಿಗಳಿಂದ ಮಾತಿನ ವೈಖರಿಯನ್ನು ತೋರಿಸುತ್ತಿದ್ದನು (ಪುಸರು. ೩೬). ೧೨. ಪ್ರಕಾರಾಂತರದಿಂದ ಹೇಳುವ ಮಾತು ; ಉಕ್ತಿವೈಚಿತ್ರ್ಯ : ಅಪ್ರಸಿದ್ಧ ಮಾತುಗಾರಿಕೆಗಳನ್ನೂ ಮಾತಿನ ಭಂಗಿಗಳನ್ನೂ ವಿದಗ್ಧರ ಗೋಷ್ಠಿಗಳಲ್ಲಿ ನಾವು ನೋಡಿಲ್ಲವೇ ? (ಧ್ವನ್ಯಾಲೋ. ೨೦೪). ೧೩. ಬೆಡಗು ; ಒನಪು ; ಒಯ್ಯಾರ : ನಿಲ್ಮಿವು ರಸಂಗಳಿಲ್ಲಿ ಮಡಲ್ತೆನೆ ಭಂಗಿಯೊಳನಂಗಸಂಗಮಲತೆಪೊಲ್ ನಿಲ್ಪು (ಆದಿಪು. ೯-೨೦) ; ಸುತ್ತುವ ಸೋಗೆಯ ಸುತ್ತಿನೊಳಾಡುವ ಕೇಕಿಯ ಭಂಗಿ ಲೋಕಮಂ ಸೋಲಿಸುಗುಂ (ಯಶೋಚ. ೩-೩೬). ೧೪. ಠೀವಿ ; ಗತ್ತು : ಭಂಗಿ ಮನಸಿಜನ ಗಾಡಿಗೆ ಭಂಗಮನೊಡರಿಪೆ . . . ವಿದ್ಯಾದಂಗಂ ಬಂದಂ (ಶಂಗಾಪೂ. ೬-೬೪). ೧೫. (?) : ಸ್ವಯಂಭುದೇವರ ಸ್ಥಾನಾಧಿಪರಪ್ಪ ದೇವರಾಸಿಜೀಯ್ಯರ ಸಿಷ್ಯಂ ವಾಮದೇವ ಭಂಗಿಯಿನಿನ್ನೊಳಗುಳ್ಳಂಗನೆಯರ ಪುತ್ರಂ (ಸೌಇಇ. XX, ೨೪-೨೩ ; 1034). [ಸಂ.]

**ಭಂಗಿ$_3$** (ನಾ). ಬೀದಿಯ ಕಸ ಗುಡಿಸುವ ವೃತ್ತಿಯವನು; ಜಲಗಾರ ; ಜಾಡಮಾಲಿ : ಭಂಗಿಗಳು ಅಥವಾ ಹಲಾಲಖೋರರು . . . ಪಾಯಖಾನೆಗಳಲ್ಲಿಯ ಮಲವನ್ನು ತೆಗೆದು ಸ್ವಚ್ಛಮಾಡುವರು (ಕಲಾಗ. ೨೨೦) : ಮ್ಯುನಿಸಿಪಾಲಿಟಿಯ ಭಂಗಿಗಳು ಅದೇ ರಸ್ತೆಯನ್ನು ಗುಡಿಸಿ ಹೋಗಿದ್ದರು (ಮೂರುದಾ. ೦೩೬) ; ಈ ಇವೂರತಿಯನ್ನು ಒಬ್ಬ ಭಂಗಿಯು ಕಟ್ಟಿಸಿದನೆಂತಲೂ ಕೆಲವರು ಹೇಳುತ್ತಾರೆ (ಎಪರ್ಣ. ೨೨).

[ ← ಹಿಂ. ಮರಾ. ಭಂಗೀ ]

**ಭಂಗಿಗ** (ನಾ). ಗಾಂಜಾ ಸೇದುವ ಚಟವುಳ್ಳವನು : ಜವುೞಗ ಭಂಗಿಗ ಕಳುಗುಡಿ ಜೂಜಿಗ ಸುಂಕಿಗ ತಲೆಬೋಳಿಸಿ ಭಾಷೆಮಾಡೆ ನಿರ್ಧರವಿಲ್ಲ (ಕಂಶ. ೧೦೪-೦೦). [ ಭಂಗಿ$_1$ + —ಗ$_2$ ]

**ಭಂಗಿತ** (ನಾ). ೧. ಅಪಮಾನಕ್ಕೆ ಒಳಗಾದ ವ್ಯಕ್ತಿ : ಒಲ್ಲೆನು . . . ಸಂಗನ ಶರಣರನಱಿಯದ ಉಳಿದ ಭಂಗಿತರ (ಬಸವ. ೬೩೫) : ಅಂಗದಾಪ್ಯಾಯನಕ್ಕೆ ಲಿಂಗವನಱಿಸುವ ಭಂಗಿತರನೇನೆಂಬೆ (ಅವಸಂ. ೩೩-೦೪೨) ; ವಾದದಲಿ ತಲೆವಾಗಿ ಭಂಗಿತರಾದ ಜೈನರು ಮತ್ತೆಯುಂ ಸಂವಾದಿಸಿದರೀಯೂಲವೊಂದಿದ್ದಿಹುದು . . . ಎನಲು (ಬಸಪು. ೫೦-೬೬). ೨. ಸೋತು ಹೋದವನು ; ಪರಾಜಿತ : ಇನ್ನು ಹುಟ್ಟದೆಯಿರಲಿ ನಾರಿಯರೆನ್ನವೊಲು ಭಂಗಿತರು ಭುವನದೊಳಿನ್ನು ಜನಿಸಲು ಬೇಡ ಗಂಡರು ಭೀಮಸನ್ನಿಭರು (ಕುವ್ಯಾವಿ. ೩-೫೬). [ಸಂ.]

**ಭಂಗಿಪಟ್ಟಿ** (ನಾ). ಭಂಗಿಗಳಿಗೆ ವೇತನ ನೀಡಲು ವಸೂಲು ಮಾಡುವ ಸುಂಕ,—ತೆರಿಗೆ : ಜಕಾತಿ, ಭಂಗೀಪಟ್ಟಿ, ಮಾರ್ಕೇಟ್ ಫೀ, ಛಕಡೀಪಟ್ಟಿ ಇವೇ ಆದಾಯದ ಮುಖ್ಯಬಾಬುಗಳು (ಕಲಾಗ. ४೯३).

[ ಭಂಗಿ$_3$ + ಪಟ್ಟಿ$_2$ ]

**ಭಂಗಿಭಾಷಿತ** (ನಾ). ಪ್ರಕಾರಾಂತರದಿಂದ ಹೇಳುವ ಮಾತು ; ಉಕ್ತಿವೈಚಿತ್ರ್ಯ : ಭಂಗಿಭಾಷಿತದಿನಾತನಂ ಪ್ರೀತನಂ ಮಾಡಿ (ಕೃಷ್ಣಕ. ೬-೯೯ ವ).

[ಸಂ.]

**ಭಂಗಿಮುಕ್ಕ.** ಬಂಗಿಮುಕ್ಕ (ನಾ).= ಭಂಗಿಗ : ಲಿಂಗಲಿಂಗದೊಳಗಿರುವ ಚಿನ್ಮಯವ ತಿಳಿಯದೆ . . . ಜಂಗಮ ಸ್ಥಾವರದ ಭಾವವನು ತಿಳಿಯದೆ ಭಂಗಿಮುಕ್ಕಗಳೆಲ್ಲ ಲಿಂಗವಂತರಹರೆ (ಕವಶ. ೦೨೬-೩). **ಬಂಗಿಮುಕ್ಕ** : ನಾವು ಹೇಳಿ ಕೇಳಿ ಸೆರೆಗುಡುಕರು.ಬಂಗಿಮುಕ್ಕರು ! (ಕಲಕು. ೦೫).

[ ಭಂಗಿ$_1$ + ಮುಕ್ಕ$_1$ ]

**ಭಂಗಿವಡೆ** (ಕ್ರಿ). ಬೆಡಗನ್ನು ಹೊಂದು ; ವಿಲಾಸವನ್ನು ಪಡೆ : ಲತಾಂಗಿ ಭಂಗಿವಡೆದಿರ್ದಳ್ ಬೇಂಟವೆಂಬೊಂದು ಬಳ್ಳಿಗೆ ಪೊಯ್ಮಾರೆಱೆ ವಂದದಿಂ (ಜಗವ. ೧೦-೧೦) ; ಭಂಗಿವಡೆವಿನೆಗವೋದಿನ ಪಾಂಗೆಸೆವಾರ ಭಟಿಯಲ್ಲಿ . . . ಮಂಗಳಪಾಠಕತೆವೆತ್ತರರೆಬರಮರ್ತ್ಯರ್ (ವರ್ಧಪು. ೦೪-೯).

[ ಭಂಗಿ$_2$ + ಪಡೆ$_1$ ]

**ಭಂಗಿವೆಱು** (ಕ್ರಿ).=ಭಂಗಿವಡೆ : ಸುಳಿಗುರುಳೋಳಿ ಕಣ್ಗವರೆ ನೀಳ್ದಲರ್ಗಣ್ಕಡುರಯ್ಯಮಾಗೆ ಕೋಮಳತನು ಭಾಗಿವೆತ್ತೆಸೆಯೆ (ಧರ್ಮಾಮೃ. ೬-೦೬೯) : ದೇವಗಜದಂಗಮರೀಚಿಯ ಭಂಗಿವೆತ್ತಿರಲ್ ಬಗೆಗೊಳಿಸಿತ್ತು ಚಂದನರಸಂದೊಡೆದಂದದೆ ಪೂರ್ವದಿಙ್ಮುಖಂ (ಜಗವ. ೦೬-೦೦೩).

[ ಭಂಗಿ$_2$ + ವೆಱು$_1$ ]

**ಭಂಗಿಸು** (ಕ್ರಿ). ೧. ಮುರಿ; ಒಡೆ : ಬಂಡಿಯಂ ಭಂಗಿಸಿದ ಬಲ್ಪಿಂದೆ . . . ಬೆಱ್ತಿರ್ದೊಡೆ ಸಂಗರದೊಳಾಳಹನೆ (ಜೈಮಿಭಾ. ೬-೫೯). ೨. ಧ್ವಂಸಗೊಳಿಸು ; ಹಾಳುಮಾಡು : ಬೆಂಗಳೂರವನ ಪರಾಕ್ರಮವನು ಬೇಗ ಭಂಗಿಸಿ ಬಿಡುವೆನು (ಕಂಸವಿ. ೧೦-೫೬) ; ಭಂಗಿಸಿತು ಭರತನಳುವ ಸುಯ್ಯುಸಿರೊಂದೆ ಆ ವನ್ಯನೀರವತೆಯಂ (ಶ್ರೀರಾಮಾ. ೦೬೨-೫೪೦). ೩. ಸೋಲಿಸು ; ಪರಾಭವಗೊಳಿಸು : ಸಂದ ಕಾಮದೇವನುಮಂ ರೂಪಿನೊಳಾದಂ ಭಂಗಿಸಿ (ಧರ್ಮಾಮೃ. ४-೨೦೬) ; ಇಂತು ಸಕಲಭುವನವಂ ಭಂಗಿಸುವ ಚತುರಂಗಸೇನೆಯ ನಡುವೆ ಕಡುಪಿಂ ನಡೆತಂದು (೧೦ಶ. ೮-೮ ವ); ಕದನದೊಳಿವನ ಭಂಗಿಸಿ ಬಿಡುವೆನು (ಕುವ್ಯಾದ್ರೋ. ೫-४೯). ೪. ತಡೆಗಟ್ಟು; ನಿಗ್ರಹಿಸು : ಭಂಗಿಪೊಡವೊಗೆದು ಸೂಸುವ ಶೃಂಗಾರರಸಕ್ಕೆ ಸೇತುಗಟ್ಟಿವವೋಲ್ ಚಿತ್ತಂಗೊಳಿಪ ರತ್ನಕಾಂಚಿಯನಂಗನೆಯ ನಿತಂಬದೊಳ್ ತೊಡರ್ಚಿದಳೊರ್ವಳ್ (ಶಾಂತೀಶ್ವ. ४-೨೩೨). ೫. ಅವಮಾನಗೊಳಿಸು : ನೀನೇಸು ಪರಿಯಲಿ ಬಯ್ದು ಭಂಗಿಸಿ ನಮ್ಮ ದೂಱಿದಡೆ ಆ ಸಿತಾಶ್ವನ ಬಿಲ್ಲನೊದೆದಾಕಾಕಶವ್ವಳಿಸುವ ಶರೌಘಕೆ ಮಿಾಸಲೞಿಯಾ ಕರ್ಣ ನಿನ್ನೊಡಲು (ಕುವ್ಯಾಕ. ೯-೨೪) ; ಜನಕನ ನಂದನೆಯ ಹಂಬಲನು ಬಿಟ್ಟರು ನೆರೆದಿಳಾಮಂಡಲದ ರಾಯರು ಬೈದು ಭಂಗಿಸುತಾ ವಿದೇಹಜನ (ತೊರರಾ. ೧-೦೫-೨೯) ; ಸಲೆ ನಾಚಿಕೆಯನು ತೊಱೆದು ಬಲಗೈ ಬೆರಳನೊರ್ವನಿಗಿತ್ತೆ ಪೊಣ್ಣಿಯೆಂದುಲಿದು ಭಂಗಿಸರೆ ಕಂಡವರು (ಕಂಸವಿ. ೬-೧೮४). ೬. ಕಾಡು; ಹಿಂಸಿಸು : ಬಲುಬಿಸಿಲೊಂದು ಚಿಡಾಳಿಕೆ ಜಗವ

ಭಂಗಿಸಿತು (ವೋಃಶತ. ೦೯-೪೬) ; ಏನೊಂದು ಸಡಗರದಿಂದಲೈತರುವಳು ಹೊಸಸುಗ್ಗಿ ವಧುವಿನ ಹಾಗೆ ಎಷ್ಟೊಂದು ವಿಧದಿಂದಲವಳ ಭಂಗಿಸುವಳು ಮಳೆಗಾಲ ಅತ್ತೆಯ ಹಾಗೆ (ಇಂಕಾಶ. ೨೨೦-೯೦). [ಭಂಗ + –ಇಸು₃]

**ಭಂಗುರ** (ಗು). ೧. ಸುಲಭವಾಗಿ ಮುರಿದುಹೋಗುವ,– ಒಡೆದು ಹೋಗುವ : ಚಳದನಿಳಾಹತಕ್ಷುಭಿತಭಂಗುರತುಂಗತರಂಗಮಾಳಿಕಾವಳಿನ ಸಮುಚ್ಚಳನ್ಮಣಿಗಣಾತ್ತ . . . ಜಳಮಂ ಮನಂ ಬಯಸಿ ನೋಡಿದನರ್ಣವಮಂ ಗುಣಾರ್ಣವಂ (ಕಂಕಶಾ. ೪-೨೫). ೨. ಕ್ಷಣಿಕವಾದ; ಚಂಚಲವಾದ ; ಸ್ಥಿರವಲ್ಲದ : ಭಂಗುರಮಿಥ್ಯಾಜ್ಞಾನಂ ಪಿಂಗಲೊಡಂ ಹೃದಯದಮಳಸಮ್ಯಗ್‌ಜ್ಞಾನಂ ಕಂಗೊಳಿಸುವಂತಿರಿರ್ದಂ . . . ವೀರನಳ ಭೂಪಾಲಂ (ವಳಕಂ. ೪೦೪) ; ಮಾಯೆಯೆಂದು ಅಥವಾ ಪ್ರಭುವಿನ ಭಂಗುರಲೀಲೆಯೆಂದು ಈ ಜಗತ್ತನ್ನು ಅವು ಅಲ್ಲಗಳೆದುಬಿಟ್ಟವು (ಮಹಾಜೋ. ೨೩೪). ೩. ಕೊಂಕಿದ ; ಬಾಗಿದ :ಭಂಗುರ ಕರಾಳದಂಷ್ಟ್ರಂ ಪಿಂಗಳನಯನಂ ಮತಂಗಜಂಗಳ ಮಿದುಳಂ ನುಂಗಿ ನಲಿಗೆದಜೆ ಶಿಖಿಗೆ ಲಂಘಿಸುತಿರೆ ಸಿಂಗಮಂ ಜಿನಾಂಬಿಕೆ ಕಂಡಳ್ (ಸೂಕ್ತಿಸು. ೬-೩೮). ೪. ಗಂಟುಹಾಕಿದ ; ಗಂಟಿಕ್ಕಿದ : ಭಂಗುರಭೀಷಣಭ್ರುಕುಟಿದಂಷ್ಟ್ರಂ . . . ಪಿಂಗಳಿಸಿಂ ಮೃಗೇಂದ್ರನೊಸೆದಿರ್ಪುದತರ್ಕ್ಯಪರಾಕ್ರಮಕ್ರಮಂ (ಶಂಶಕಂ. ೨೫-೦೩). ೫. ಮೋಸದ ; ವಂಚನೆಯ. (ನಾ). ೬. ಚಂಚಲವಾದುದು: ಇಂದ್ರಿಯಸಂಗದುರುಳುಗಳು ಭಂಗುರಂಗಳಸಂಗನೊಳುಪಾಶಂಗಳು . . . ಪೆಣ್ಗಳ ಕಂಗಳವು ಮತ್ತೆ (ಬಸವು. ೪೦-೫೯). ೭. ಕ್ಷಣಿಕವಾದುದು; ನಶ್ವರವಾದುದು : ಕರ್ಮಂಗಳತ್ತಣಿಂ ದೊರೆಕೊಳ್ವ ಸುಖಂ ಭಂಗುರಮಲ್ತೆ (ರಾಮಾಶ್ವ. ೧೪೦-೯). ೮. ಕತ್ತರಿಸುವುದು; ನಾಶಮಾಡುವುದು : ಸಂಗತನಿಜಹಸ್ತ ಕನಿಷ್ಠಾಂಗುಲಿಧೃತಮಂ ಪ್ರಿಯಾಮನಃಖೇದಲತಾ ಭಂಗುರಮಂ ರವಿಮಂಡಳದಂಗುರಮಂ ರಘುಜನಿತ್ತನಣಾಪನ ಕೆಯ್ಯೊಳ್ (ಕಾವ್ಯಾವ. ೯೪೬). ೯. ನದಿಯ ಬಾಗು,—ತಿರುವು. ೧೦. ಬಾಗಿದುದು : "ವಕ್ರಂ, ವೃಜಿನಂ, ಭಂಗುರಂ . . . ಊರ್ಮಿಮತ್—ಈ ೧೨ ಕೊಂಕಿದುದು" (ಹಲಾಯು. ೧೦೬-೦೦). [ಸಂ.]

**ಭಂಗುರಕೇಶಿ** (ನಾ). ಗುಂಗುರು ಗುಂಗುರಾದ ಕೂದಲುಳ್ಳವಳು : ಭಂಗುರಕೇಶಿ ನಲ್ಲನ ತಳಂಗಳೊಳೊಯ್ಯನೆ ಮೆಯ್ಯನಿಕ್ಕಿ (ಕಾವ್ಯಾವ. ೯೪೫). [ಸಂ. ಭಂಗುರಕೇಶೀ]

**ಭಂಗುರವೇಣಿ** (ನಾ). ಕೊಂಕಿದ ಕೂದಲು ; ಗುಂಗುರು ಕೂದಲು : ಭಂಗುರವೇಣಿಯೆಂಬ ಬಂಧುರನದಿ ರಂಜಿಸಿತ್ತು ಮಹಿಕಾಂತೆಯ ಭಂಗುರವೇಣಿಯೆಂಬಿನಂ (ಪುಶ್ಚಪು. ೬-೯). [ಸಂ.]

**ಭಂಗುವಕಲ್ಲು ?** (ನಾ). (?) : ಚೋಗಗ್ಯ ನೆಲಮಂಕಿ ಅಭ್ಯಂತರ ಸಿದ್ಧಿ ಆಳುತ್ತಿರೆ ಜೋರಯ್ಯನ ವೆಸದಿ ಭಂಗುವಕಲ್ಲು ಈ ಕಲ್ಲ ಮಜೆಪೊಕ್ಕರ ಕೊಲಲಾಗದು (ವೃಅರ. ೧೯೨೮, ೩೩-೪ 900). [ ? ]

**ಭಂಗ್ಯ** (ನಾ). ಗಾಂಜಾ ಅಥವಾ ಸೆಣಬಿನ ಗಿಡಗಳು ಬೆಳೆಯಲು ಯೋಗ್ಯವಾದ ಭೂಮಿ : ''ಭಂಗ್ಯಂ, ಭಾಂಗೀನಂ – ಈ ೨ ಸೆಣಬಿನ ಕೆಯ್'' (ಹಲಾಯು. ೨೬-೮). [ಸಂ.]

**ಭಂಜಕ** (ನಾ). ೧. ಮುರಿಯುವಂತಹುದು. ೨. ಮುರಿಯುವಿಕೆ. ೩. ನಾಶಪಡಿಸುವಂತಹುದು : ಅವರ ವಾದವೇ ಅವರ ಸಿದ್ಧಾಂತಕ್ಕೆ ಭಂಜಕ (ಶಾಶತ್ರ. ೪೨೩). ೪. ನಾಶಪಡಿಸುವವನು : ಸಾರಥಿಗಳೊಳಗೆನಿಸಿದನು ಭೂಭಾರಭಂಜಕನಸುರಹರನು (ಕುವ್ಯಾಗ. ೯-೨೪). [ಸಂ.]

**ಭಂಜಣಿಗೆ** (ನಾ). [ಅಶ್ವಶಾ] ಕುದುರೆಯ ನಡಗೆಗಳಲ್ಲಿ ಒಂದು ಪ್ರಕಾರ ; ಮಂದಗತಿ ; ಮೆಲುನಡೆ : ಭಂಜಣಿಗೆಯಲಿ ಮೆಲ್ನಡೆಯ ವರಮರಾಳನ ಪೋಲ್ತುದೋಡೆನೆ . . . ಜಾತ್ಯಶ್ವಸಂಕುಳವೆಸೆದು ಪೊಗ್ಗಿನಲಿ (ಜೀಪಂಕ. ೨-೫೦). [←ತೆಲು. ಭಂಜಳಿಕ]

**ಭಂಜನ** (ಗು). ೧. ಮುರಿಯುವ. ೨. ತಡೆಯುವ ; ನಿಗ್ರಹಿಸುವ. ೩. ಹಿಂಸಿಸುವ ; ಬಾಧಿಸುವ. (ನಾ). ೪. ಹಾಳುಮಾಡುವುದು : ನಾಶಪಡಿಸುವುದು. ೫. ಹಾಳು ; ನಾಶ : ಆರ ನೆರವಿಯೊಳಂಧಕಾರದ ಭಾರವನು ರವಿ ಗೆಲುವ ನಿನ್ನೀ ವೈರಿಬಲಭಂಜನಕೆ ಗುರು ಹಂಗಹನೆ (ಕುವ್ಯಾದ್ರೋ. ೦೬-೪೮). ೬. ದೂರಮಾಡುವುದು. ೭. ಪೀಡಿಸುವುದು. ೮. ನಾಶಪಡಿಸುವವನು : ಅಂತು ಸಮದಕುಂಜರಘಟಾಪುಂಜ ಭಂಜನಂ ಮೃಗಾಧಿರಾಜಂ ಕೈನೀಡಿ ... ಬಟಿಕ್ಕಿಂತೆಂದಂ (ಶಂಶಕಂ. ೫೬-೧೮) ; ಪದಿಮೂಱುಂ ಪ್ರಕೃತಿಗಳುಮೊರ್ಮೆಯೆ ನಿರ್ಮೂಲಮಾಗೆ ಸಕಲಸಂಸಾರ ಭಾರದುಃಖಿಭಾರಭಂಜನನುಂ ನಿರಂಜನನುಮಾಗಿ (ಶಂಚಾಪು. ೦೬-೯೦ ವ); ಜೈನಮಾರ್ಗ್ಗರಾದ್ಧಾಂತಪಯೋಧಿಗಳ್ ವಿಷಯಮೈರಿಗಳುದ್ಧತಮಾರ್ಗಭಞ್ಜನರ್ . . . ಶುಭಚಂದ್ರದೇವಸಿದ್ಧಾಂತಮುನೀಂದ್ರರಂ ಪೊಗಳ್ವುದು (ಎಕ. II, ೦೦೬-೦೦೯ ; 1123). [ಸಂ.]

**ಭಂಜನಿ** (ನಾ). [ಜೈನ] ಒಂದು ಬಗೆಯ ವಿದ್ಯೆ ; ಬೇರೆಯವರನ್ನು ಸೋಲಿಸುವ ವಿದ್ಯೆ : ಅಮಿತತೇಜನುಂ . . . ಪ್ರಜ್ಞಪ್ತಿ ಕಾಮರೂಪಿಣಿ . . . ಭಂಜನಿ . . . ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಶಾಪುಂಪು. ೦೯೬). [ಸಂ. ಭಂಜನೀ]

**ಭಂಜನೆ₁** (ನಾ). ೧. ಸೋಲಿಸುವಿಕೆ : ಅಡಗಿಸುವಿಕೆ : ಭಂಜನೆಗೆ ಬಲುಹುಳ್ಳಡೆಯು ನಿಮಗಂಜುವರು ಗುರುಭೀಷ್ಮರಾ ಪರಿರಂಜಕರು ತಾವಲ್ಲೆನುತ ತಾಗಿದನು ಭೂಪತಿಯ (ಕುವ್ಯಾಶ. ೦೦-೪೨). ೨. ನಾಶ : ಧ್ವಂಸ : ನಂಜಿನಂತಹ ಲೋಕಕಂಟಕರ ಭಂಜನೆಯೆ ನಾವ್ಪೊಲಿದ ಕರ್ತವ್ಯ (ಜಕ್ಯಾಂಗ. ೦೩-೩೩೮). [ಸಂ. ಭಂಜನ]

**ಭಂಜನೆ₂** (ನಾ). ವಿವರಣೆ : ಬಹುಲ ಭಂಜನೆ ಬೇಡ ಮಾಡಲೊಂದು ಪ್ರತಿಜ್ಞೆಯನರ್ಜುನಂ ನಿನ್ನ ಮುಂದೆ ಸೈರಿಸುವುದು (ಕೈಬಿಶಾ. ೦೩-೨೯). [ಸಂ. ಭಂಜನಾ]

**ಭಂಜವಣೆ** (ನಾ). ೧. ಬಾಗು ; ವಕ್ರತೆ: ಕಂಗಳಲಿ ಕುಡಿಮೇಳ ಹುಬ್ಬಿನ ಹೊಂಗಿನಲಿ ಭಂಜವಣೆ ಭಾವದ ಭಂಗಿಯಲಿ ಪತಿಕರಣೆ . . . ದ್ರೌಪದಿಯ (ಕುವ್ಯಾಅ. ೦೩-೨೫). ೨. ತಿರಸ್ಕಾರ ; ಹೀಯಾಳಿಕೆ : ಅಂಜುವರೆ ನಿಲು ಜೂಜುಗಾಜಿರ ಭಂಜವಣೆಗೊಳಗಹರೆ ಬಾ ನೃಪರೆಂಜಲಿಸಿ ಬಿಡಬಹುದೆ ಪರಮದ್ಯೂತರಸಸುಧೆಯ (ಕುವ್ಯಾಸ. ೦೬-೫೦). [ಭಂಜಿಸು + – ಅಣೆ₁]

**ಭಂಜಳಿ** (ನಾ). = ಭಂಜಣಿಗೆ : ಭಂಜಳಿ ಮುರಳಿ ರಘುಳಂಪಿ ವಾಜಿಣಿ ರೂಪು ರಂಜಿಪ ರೇಬೆಯೆಂದೆಂಬ ಮಂಜುಳವಾದ ಪಡಂಗದೊಳಾ ಹಯ ರಂಜನೆವಡೆದುದು (ಶ್ರೀಶಾಂ. ೮-೧೨). [←ತೆಲು. ಭಂಜಳಿ]

**ಭಂಜಿ** (ನಾ). ಒಂದು ಬಗೆಯ ಸಸ್ಯ : ''ತತ್ಕಾಲೀ – ನರುವಲು, ಭಂಜಿ, ಕುಂಬಳಿ'' (ಬಿಸಂ. ೬೫). [ ? ]

**ಭಂಜಿಕೆ** (ನಾ). ಮೂರ್ತಿ ; ವಿಗ್ರಹ : ಆ ತುರಂಗದ ಖುರಂ ಕೀಲಿಸಿತು . . . ನಿಜತನುವಿನ ಲೀಲೆಯಡಗಿರ್ದುದಾಕೃತಿಯ ಭಂಜಿಕೆಯೆನಲ್ (ಕೈಬಿಶಾ. ೧೦-೦೦). [ಸಂ. ಭಂಜಿಕಾ]

**ಭಂಜಿತ** (ಗು). ೧. ಅವಮಾನಗೊಳಿಸಲ್ಪಟ್ಟ: ಕೀಳುಮಾಡಲ್ಪಟ್ಟ: ತರ್ಜಿತವೀಣಾಶಿಂಜಿತಂ ಭಂಜಿತರತಿರಮಣೀರತ್ನಕಾಂಚೀಪ್ರಣಾದಂ . . . ಆ ಕನ್ನಿಕೆಯ ಮಧುರಸಪ್ತಸ್ವರೋತ್ತಾನಗಾನಂ (ಶಂಚಾಪು. ೦೦-೦೦೦); ವಿಕ್ರಮಬಳದಿಂ ತಾಂ ಬಳೆಯಲ್ಕೆ ಭಂಜಿತಮಹಾಮಂತ್ರಿಕ್ರಮಂ ತ್ರಿಕ್ರಮಂ (ಅರ್ಜನೇ. ೬-೨೯). (ನಾ). ೨. ಅವಮಾನಕ್ಕೊಳಗಾದವನು ; ತಿರಸ್ಕೃತ : ಆ ನೃಪತಿ ಭಂಜಿ [ಶಾಶಂ.೧]ತನಾಗಿ ಬರುತೆ ನಾರದಮುನಿಪನಂ ಕಂಡನು (ಕೈಬಿಶಾ. ೫-೨೫). ೩. ಒಡೆಯಲ್ಪಟ್ಟುದು; ಭಗ್ನವಾದುದು ;

ಇನ್ನೊಂದಿದೋ ! ಬುಧನ ಜೊತೆಗೆ ಬಾಳಬಲ್ಲ ಗ್ರಹವು ! ಅದರ ಪ್ರಭೆಯೊಳೆಂಥ ಚಲುವಮೂರ್ತಿಯು_ಭಂಜಿತವು (ತಂಶಸ. ೫೨-೦೦). [ಸಂ.]

**ಭಂಜಿಸು** (ಕ್ರಿ). ೧. ಒಡೆ ; ಮುರಿ : (ಕ). ೨. ಕೀಳುಮಾಡು; ಅವಮಾನಗೊಳಿಸು: "ಭಂಜಿಸು_ಅಪಮಾನೇ" (ಶಬ್ದಾ): ಕೋಟಿಶಶಿಕಾಂತಿಯಂ ರಂಜಿಸುತೆ ಭಂಜಿಸುತೆ (ಇಹರ. ದೀ. ೪೪-೦೦). ೩. ದಂಡಿಸು ; ಶಿಕ್ಷಿಸು: ಜಂಗಮಪ್ರಾಸಾದದೂಷಕರ ಭಂಜಿಸುತ (ಬಸಪು. ೫೬-೨೨) ; ಕರೆಯುವನ ಮಗನನು ಭಂಜಿಸುವುದಿಲ್ಲಕಟ ಭೀಮಧನಂಜಯರು ಕೊಟ್ಟಭಯವೆಂದನು ನಗುತ ಮುರವೈರಿ (ಕುವ್ಯಾಸ. ೨-೦೭೨). ೪. ಸೋಲಿಸು ; ಪರಾಜಯಗೊಳಿಸು: ಸುರಾಯರ್ ರ್ಭುಜರ್ಭುಜರೆನೆ ಬಳಸಿ ಭಂಜಿಸುವ ಐರಾವತಂ ಮಲ್ಲವೇಷದೊಳಿರಾದೊಡು . . . ಡೊಕ್ಕರಿಸಿ ಪಿಡಿವರಿಬಿರುದಿನ ಕಲ್ಲ ಮಾನಸರಂತಿರ್ಪ ಮಲ್ಲರ ನೆರವಿಗಳೊಳು (೧೮ಕ. ೨-೦೦೫ವ); ಶಿಷ್ಟರುಗಳಂ ಕೃಪೆಮಾಡಿ ಸಲಹಲು ದುಷ್ಟರುಗಳಂ ಕಾದಿ ಭಂಜಿಸಲು (ಬಸಪು. ೩೬-೪೩); ನಿನಗಾಂತ ರಿಪುಗಳ ಭಂಜಿಸುವ ಸಾಮರ್ಥ್ಯದನುವನು ತಳೆದು ರಂಜಿಸುವ ಅಂಜನಾಸ್ತ್ರವನಿತ್ತೆ (ಕುವ್ಯಾರಿ. ೬-೦೦೫). ೫. ಧ್ವಂಸಗೊಳಿಸು ; ನಾಶಮಾಡು : ರಂಜಕದ ಮಾತಲ್ಲ ನಿನ್ನನು ಭಂಜಿಸಲು ಬಂದವನನಟ್ಟುವೆ ನಿನ್ನ ರಕ್ಷಿಸುವೆ (ಕೋಗಪು. ೦೦-೪೬) ; ಅಂಜದಿರಿ ಚಕ್ರದಲಿ ಅಸುರರ ಭಂಜಿಸುವೆನು (ಉತ್ತಕ. ೫-೫೬). ೬. ತುಂಡರಿಸು : ಕತ್ತರಿಸು : ಕರ್ಣಕುಮಾರನತಹಾಯಿದನು ಭೀಮನ ಭೂರಿಬಾಣದ ಪಂಜರವ ಭಂಜಿ [ಪಾಠಾಂ. ಖಂಡಿ] ಸುತ ಪಚಿಲದಲಿ (ಕುವ್ಯಾಕ. ೦೦-೪೮). [ಭಂಜನ + —ಇಸು₃]

**ಭಂಟ** 'ಬಂಟ₁' ನೋ.

**ಭಂಟಾಕಿ** (ನಾ). ಒಂದು ಬಗೆಯ ಬದನೆಗಿಡ ಮತ್ತು ಅದರ ಕಾಯಿ: ಮುಳ್ಳುಗಾಯಿ ; ಮುಳ್ಳುಬದನೆ : "ವಾರ್ತಾಕೀ, ಹಿಂಗುಳೀ, ಸಿಂಹೀ, ಭಂಟಾಕೀ, ದುಷ್ಪ್ರಧರ್ಷಿಣೀ_ಐ ಬದನೇಗಿಡವಲ್ಲಿ ಮುಳ್ಳುಜಾತಿ. ಗುಳ್ಳ, ವಾದಿರಾಜಗುಳ್ಳ" (ಸಿದ್ಧಾಂತಿ ೦೩೮). [ಸಂ. ಭಂಟಾಕೀ]

**ಭಂಡ₁** (ನಾ). ಕ್ಷೌರಿಕ ; ನಾಪಿತ : ಕಮಠನಂ ಪಿಡಿತರಿಸಿ ಭಂಡರಿಂ ಮಂಡೆಯು ಕೀಚಿಸಿ ಕತ್ತೆಯನೇರಿಸಿ . . . ಪುರಮಂ ಪೊಱಮಡಿಸಿ (ಧರ್ಮಾಸ್ತ್ರ. ೯-೪೦ ವ). [ < ಪ್ರಾ. ಭಂಡ=ಬೋಳಿಸುವಿಕೆ, ಬೋಳಿಸುವ ಕತ್ತಿ]

**ಭಂಡ₂** (ನಾ). ೧. ಮಾರುವ ವಸ್ತು ; ಸರಕು ; ಸಾಮಾನು : ಧನದೇವಂ ಪರದರ್ಗೆಂದು ಪಿರಿದುಂ ಸಾರಮಪ್ಪ ಭಂಡಮಂ ತೀವಿಕೊಂಡು. . . ದಕ್ಷಿಣಮಧುರೆಗೆ ಪೋದೊಡೆ (ವಡ್ಡಾರಾ. ೬೦-೦೮); ಮಂಜಿನ ಮಡಕೆಯೊಳಗೆ ರಂಜನೆಯ ಭಂಡವ ತುಂಬಿ ಅಂಜದೆ ಪಾಕವ ಮಾಡಿಕೊಂಡು ಭಂಡವ ಮಾಱುತಿಪ್ಪರು ನೋಡಾ (ಅವಚಂ. ೦೦೩-೪೬೬); ಮಾಱಿದ ತಲೆಯು ಭಂಡವ ಹೊತ್ತಿರದೆ ಕೈಕೊಳಲಿ ಕರ್ಣಾದಿಗಳು (ಕುವ್ಯಾದ್ರೋ. ೫-೯). ೨. ಅಸಲು ; ಮೂಲಧನ ; ಭಂಡವಾಳ : "ಭಂಡ (ಬಂಡ) –ಭಾಂಡ=ಭಂಡವಾಳ" (ಶಬ್ದಕೋ. ೩೩); ಭಕ್ತಿಯು ಭಂಡ ಮೊದಲ್ ನಿಜಭಕ್ತಿಯೆ ಕೋಟಾನುಕೋಟಿ ಲಾಭಂ (ಸೌಇಇ. IX-i, ೨೯೬-೪೦; 1176). ೩. ಪ್ರಯೋಜನ ; ಲಾಭ : 'ಪಿಭಂಡ' ಪರಾ. ೪. ವಿದೂಷಕ ; ಹಾಸ್ಯನಟ. ೫. ನಾಚಿಕೆ ; ಲಜ್ಜೆ: 'ಭಂಡಗೇಡು', 'ಭಂಡತನ' ಪರಾ. ೬. ಮಾನವಿಲ್ಲದವನು ; ನಾಚಿಕೆಗೆಟ್ಟವನು ; ಲಜ್ಜೆಗೇಡಿ : ವಿಕೃತ ವೇಷಧಾರಿಯಾನು ಭಂಡನು ಲಜ್ಜೆಭಂಡನು (ಬಸವ. ೩೩೦): ಭಂಡರ ಬೈದು ಫಲವೇನು (ಕುವ್ಯಾದ್ರೋ. ೫-೩೯) ; ಭಂಡನಾದೆನು ನಾನು ಸಂಸಾರದಿ ಕಂಡು ಕಾಣದ ಹಾಗೆ ಇರಬಹುದೆ ಹರಿಯೆ (ಪುರಂದ. ೦-೩೫-೦). ೭. ಮೊಂಡುವಾದ ಮಾಡುವವನು : ಕೊಳಚೆನೀರೊಳಗಾಳುತೇಳುತ ಜಲಧಿ ಕಾಲ್ಗೊಳಿಯೆಂಬ ಭಂಡರ ಮುಳಿದು ಮಾಡುವುದೇನು (ಕುವ್ಯಾದ್ರೋ. ೫-೪೪). ೮. ಯಾವ ಕೆಲಸಕ್ಕೂ ಹೇಸದವನು ; ನೀಚ; ಅನ್ಯಾಯ ಮಾಡುವವನು : ಊರಿಗೆ ದ್ರೋಹ ಬಗೆದ ಈ ಭಂಡನಿಗೆ ನೆನಪಳಿಯುವಂತೆ, ಇನ್ನೊಬ್ಬರು ಊರ ಒಕ್ಕಟ್ಟಿಗೆ ಕೊಡಲಿ ಏಟು ಹಾಕದಂತೆ, ಮಾಡಿರಿ (ಮನಬಿ. ೦೦೫). [ಸಂ.]

**ಭಂಡಗೇಡು** (ನಾ). ನಾಚಿಕೆಗೇಡು ; ಲಜ್ಜೆಗೇಡು: ಕಂಡಕಂಡಲ್ಲಿ ಎನ್ನ ಗಂಡನಂದದಲಿ ನೋಡಿ ಭಂಡಗೇಡು ಮಾಡಿದನು ಪುಂಡ ನಿನ್ನ ಮಗನಮ್ಮ (ಪುರಂದ. ೩-೦೮೮-೪). [ಭಂಡ₂ + ಕೇಡು]

**ಭಂಡಣ** 'ಬಂಡಣ' ನೋ.

**ಭಂಡಣಾಜಿರ** (ನಾ). ಯುದ್ಧರಂಗ ; ರಣಭೂಮಿ: ಭರದಿಂ ರಾವಣಸೇನೆಯಂ ತವಿಸಿ ಗೆಲ್ದಾ ಗಣ್ಡರುಂ ಭಣ್ಡಣಾಜಿರದೊಳ್ ಕೌರವಸೇನೆಯಂ ತುಳಿದು ಗೆಲ್ದಾ ಗಣ್ಡರುಂ (ಸೌಇಇ. XI.-I, ೫೨-೦೨; 1008). [< ಸಂ. ಭಂಡನಾಜಿರ]

**ಭಂಡತನ** (ನಾ). ೧. ನಾಚಿಕೆಯಿಲ್ಲದಿರುವಿಕೆ ; ನಿರ್ಲಜ್ಜೆ : ಉಂಡು ಮೇಣುಟ್ಟೊಲಿದು ಬದುಕುವ ಭಂಡತನವೆನಗಿಲ್ಲ (ಕುವ್ಯಾವಿ. ೬-೨೫); ಕಂಡು ಸೈರಿಸಿ ಬಿಡುವುದಕಟಾ ಭಂಡತನ ಬಲುವೀರರಿಗೆ (ಕೊರರಾ. ೫-೬-೩೫) ; ಇದು ಭಂಡತನವೆ ಮಗ್ಗುಲೊಳಿದ್ದವನ ಕೊಟಕೊದಗಲಾಱದೆ ನಿದ್ದೆಗರೆದು ವದನಕ್ಕೆ ಮಸಿ ಸುಣ್ಣವ ಬರೆಯಿಸಿಕೊಂಡ ಚದುರೆವೆಣ್ಣಲ್ಲವೆ ನೀನು (ಕಂಸವ. ೬-೦೮೬). ೨. ಅನ್ಯಾಯ : ನೀವು ವಂಚನೆಯಿಂದ ಅಪಹರಿಸಿದ ರಾಜ್ಯವನ್ನು ಕೊಡದೇ ಭಂಡತನವನ್ನು ಮಾಡುತ್ತಲಿರುವಿರಿ (ಕೃಪಾಲು. ೪೨). ೩. ಬೂಟಾಟಿಕೆ ; ಮೋಸ; ಕಪಟ : ರಾಜ್ಯಯಂತ್ರವನ್ನು ಹೇಗೆ ಸಾಗಿಸಬೇಕೆಂಬ ಬಗೆಗೆ ಭಂಡತನದ ಉದ್ದಂಡಲೇಖನಗಳನ್ನು ಬರೆಯಲಾಗುತ್ತಿದೆ (ಶ್ರಬಂಧ. ೨೮). ೪. ಹಟಮಾರಿತನ : ನಮ್ಮೊಡನೆ ಭಂಡತನವನ್ನು ಮಾಡಬೇಡ. ನಮ್ಮ ಯೋಗ್ಯತೆಯನ್ನು ನೀನರಿಯೆ (ರಾಜಶೂ. ೦೯). ೫. ಕೆಟ್ಟನಡತೆ ; ಅಸಂಸ್ಕೃತಿ : ಈ ಗಂಡಸರ ಭಂಡತನದಿಂದಾಗಿ ವಾಣಿಗೆ ಸ್ವತಂತ್ರವಾಗಿ ಓಡಾಡಲೂ ಆಸ್ಪದವಿರಲಿಲ್ಲ (ಸೋತುಗೆ. ೩೬). [ಭಂಡ₂ + —ತನ]

**ಭಂಡನ** (ನಾ). ೧. ಕಾಳಗ ; ಯುದ್ಧ : ಸುರರಾಜ ಕಳುಪಿರ್ದ ಶರಚಾಪರಥಗಳಂ ದಯದಿಂದ ಕೈಕೊಂಡು ಭಂಡನವನೆಸಗು ಜಿಯ್ಯಾ (ವೆಂಕಾರಾ. ೬-೫೩-೫೬) ; ಚಂಡಭಂಡನಕಂದರಿರಾಜರೊಳೆತ್ತಿ ನಡೆವ ಗಂಡುಗಲಿಯಂ ಕುಳ್ಳಿರಿಸಿ ಕೊಂಡುಯ್ವ ಸೈಪುಳ್ಳಂಗೆ ನಿನಗಿಂದು ಪೆಣ್ಣಂ ಪೆಣ್ಗೊಲೆಗೆಂತಂತುವನಕೆ ಕೊಂಡುಯ್ಯುದಾಯ್ತೇ ? (ರಾಮಾಶ್ವ. ೨೮-೬೦). ೨. ಕವಚ ; ಚಿಲಖತ್ತು. ೩. ತುಂಟತನ ; ದುಷ್ಟತನ. [ಸಂ.]

**ಭಂಡಬಾಳು** (ನಾ). ಹೀನವಾದ ಬದುಕು ; ಕೀಳುಮಟ್ಟದ ಜೀವನ ; ಅವರ ಕೃಪಾಪುಷ್ಟಿಯಲ್ಲಿ ಹಲವು ಜೀವಗಳು ಭಂಡಬಾಳು ಬಾಳುತ್ತಿರುವ ನಿದರ್ಶನಗಳು ಅನೇಕವಿವೆ (ಹೇಮಕೂ. ೦, ಮುನ್ನುಡಿ) ; ಭಂಡಬಾಳು ಬಾಳೊಂತೀಯಾ ? (ಪತದಾ. II, ೦೦೬೦). [ಭಂಡ₂ + ಬಾಳು₂ (<ಬಾೞ್₂)]

**ಭಂಡವಲ** 'ಬಂಡವಾಳ' ನೋ.

**ಭಂಡವಲು** 'ಬಂಡವಾಳ' ನೋ.

**ಭಂಡವಾನೆ** ? (ನಾ). ಸರಕು ; ಸಾಮಾನು ; ಮಾರಾಟದ ವಸ್ತು (?) : ನಕರಂಗಳ್ ಪತ್ತಿ ಪಂನಿರ್ಧ್ವಾನ್ಯ ಸಮಸ್ತಭಂಡವಾನೆ ಮಾಣಿಕವೊಳಗಾಗಿ ತಾವು ಮಾಱುಗೊಂಡಂತಪ್ಪ ಭಂಡಕ್ಕೆ ಹೊಂಗರ ವೀಸಮಂ ಕೊಟ್ಟರು (ಎಇ. V. ೦೯-೬೫ ; 1165). [ ? ]

**ಭಂಡವಾಳ** 'ಬಂಡವಾಳ' ನೋ.

**ಭಂಡವಾಳಗಾರ** 'ಬಂಡವಾಳಗಾರ' ನೋ.

**ಭಂಡವಾಳಶಾಹಿ** 'ಬಂಡವಾಳಶಾಹಿ' ನೋ.

**ಭಂಡವಾಳಿಗ** 'ಬಂಡವಾಳಿಗ' ನೋ.

**ಭಂಡವಾಳು** 'ಬಂಡವಾಳ' ನೋ.

**ಭಂಡವಾಳುಗಾರ** 'ಬಂಡವಾಳಗಾರ' ನೋ.

**ಭಂಡವಿಕ್ರಯ** (ನಾ). ಸರಕಿನ ಮಾರಾಟ : ಚಾರುದತ್ತಂ . . . ಶಬರ ಶಿಬಿರದೊಳ್ ಕಾಚಮಯ ಭಂಡವಿಕ್ರಯಮಂ ಮಾಡಿ (ವೀಬುಕ್ಕೆ. ೯-೯೬ ವ). [ಸಂ.]

**ಭಂಡವಿದ್ಯೆ** (ನಾ). ವಂಚನೆ ; ಕಪಟ : ತಾನೆ ತನ್ನನೆ ಹೊಗಳಿಕೊಂಬರೆ ಮಾನನಿಧಿಯಾದವರು ಸಾಕೀ ದಾನವರ ಗರುವಾಯಿ ಭಾರಿಯ ಭಂಡವಿದ್ಯೆಗಳು (ಕುವ್ಯಾದ್ರೋ. ೦೬-೩೩). [ಸಂ. ಭಂಡವಿದ್ಯಾ]

**ಭಂಡಸಾಲೆ** (ನಾ). ವಸ್ತುಗಳನ್ನು ಸಂಗ್ರಹಿಸಿಡುವ ಸ್ಥಳ : ಉಗ್ರಾಣ ; ಕೋಠಿ : ಹುಲಿವರದ ಭಂಡಸಾಲೆಯ ಮಲ್ಲಿಸೆಟ್ಟಿ (ಕೌಇಇ. XX, ೦೦೦. ೩೯ ; 1129); ಭಂಡಸಾಲೆಯಲು ನಾಗೆಂಡುಗದಲು ಭತ್ತಮೂಡೆಯೆಪ್ಪತ್ತು ಅಳಗೆ × × × ಜಿಸಿ ಕೊಂಡಲ್ಲಿ (ಕೌಇಇ. IX-ii, ೪೦೬-೦೯; 1367) ; ಇಂಗ್ಲಿಷರು . . . ಭಂಡಸಾಲೆಗಳ ಸುತ್ತು ಕೋಟೆಗಳನ್ನು ಕಟ್ಟಿಸಿದರು (ವಾಂಕ್ರ. III, ೦೩೫೨). [<ಸಂ. ಭಂಡಶಾಲಾ]

**ಭಂಡಾಟ** (ನಾ). ೧. ನಾಚಿಕೆಯಿಲ್ಲದಿರುವಿಕೆ ; ಲಜ್ಜೆಗೇಡು : ಭಂಡಾಟದಿ ಮೈಗೊಟ್ಟ ಗೋಪಿಯರು ಪಾವನ ನಿನ್ನಿಂದೈ (ಕೃರಂಶ. ೦-೦೬೩-೦) ; ದೊಡ್ಡವನಾಡಿದ್ದೇ ಆಟ ಬಡವನಾಡಿದ್ದೇ ಭಂಡಾಟ (ಗಾದೆ). ೨. ಬೂಟಾಟಿಕೆ ; ಆಡಂಬರ : ಜೂಟಕದ ಮಾತುಗಳ ನುಡಿದೇ ನಾಟಕವ ನಟಿಸುವ ಕಣಾ ಭಂಡಾಟವಿದು ಗುಣವಲ್ಲ (ಕೋಗಡು. ೨೨-೯೦). ೩. ಕಷ್ಟ ; ತೊಂದರೆ ; ತಾಪತ್ರಯ : ಶಿವಪಥದ ತ್ರಿಪುಂಡ್ರವಂ ಬಿಟ್ಟು ವಣ್ಣಿಟ್ಟು ಕಟ್ಟು ಕೊಂಡಾಡುತಿರೆ ಜಗದ ಭಂಡಾಟವಂ ಮನಂಗೊಂಡ ಬ್ರಹ್ಮಾಂಡಪೌರಾಣಾದಿಯಂ (ಸಾಸಂಕ. ೩-೦೨೬) ; ವೃಥಾ ಸಂಭ್ರಮಿತರಿರ ಭಂಡಾಟವೇತಕೆ ರಣಕೆ ಹೆಜಿತೆಗೆಯಿ (ಕುವ್ಯಾದ್ರೋ. ೦-೬೦) ; ಉಂಡು ಕೆಂಡವ ಕಾಸಿ ಉಂಡು ಶತಪದ ನಡೆದು ಉಂಡೆಡದ ಮಗ್ಗುಲಲಿ ಮಲಗೆ ವೈದ್ಯನ ಭಂಡಾಟವಿಲ್ಲ (ಸರ್ವಜ್ಞ. ೨೦೦೪). [ಭಂಡು + ಆಟ]

**ಭಂಡಾರ,** ಬಂಡಾರ, ಬಂಡಾಟ (ನಾ). ೧. ಬೆಲೆಬಾಳುವ ವಸ್ತುಗಳನ್ನು ಸಂಗ್ರಹಿಸಿಡುವ ಸ್ಥಳ ; ಬೊಕ್ಕಸ ; ಖಜಾನೆ : "ಭಂಡಾರವೆಂದು ಕೋಶಗೃಹಂ" (ಕಚಕಾ. ೬೦-೩೦೬) ; ಮೇರು[ವ]ಪೊನ್ . . . ವರುಸವೇದಿಯ ಕಣಿ ಭಂಡಾರದೊಳುಂಟಿನೆ ಕುಡುವನಿವಾರಿತದಾನಕ್ಕೆ ಪೊಲ್ವರಾರ್ ಬದ್ದೆಗನಂ (ಶಂಕಶಾ. ೦-೨೮) ; ವಾಗ್ದೇವಿಯ ಭಂಡಾರದ ಮುದ್ರೆಯ ನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ (ಗದಾಯು. ೦-೩೮) ; ಶೂರಸೇನನ ಸವದು ನೆಜಿ ಭಂಡಾರವೆಲ್ಲವ ಕೊಂಡು . . . ಮುಂದೆ ನಡೆದನು (ಕುವ್ಯಾಸ. ೩-೨). ೨. ಖಂಡೋಬಾ, ಎಲ್ಲಮ್ಮ ಮುಂತಾದ ದೇವತೆಗಳ ಪೂಜೆಮಾಡಿದ ಮೇಲೆ ಪ್ರಸಾದರೂಪವಾಗಿ ಹಂಚುವ ಅರಿಸಿನ, ಕುಂಕುಮ ಮುಂತಾದುವು : "ಭಂಡಾರಂ=ಹೊನ್ನ ಸಂಚಯಂ, ಅರಿಸಿನದ ಪುಡಿಯುಂ" (ಕಾಕಕ್ಕ. ೨೭೦) ; ಧೂಳಿಯ ಭಂಡಾರ ಹಣೆಯೊಳಗಿತ್ತೋ (ನಾವಲೀ. ೩೯-೦೮) ; ಅವರ ಹಣೆಗೆ ಭಂಡಾರ, ಅಂದರೆ ಕುಂಕುಮ ಹಚ್ಚಿ, ತೀರ್ಥವನ್ನು ಮುಖಕ್ಕೆ ಮೂರುಸಲ ಎರಚುತ್ತಿದ್ದ (ಪಮ್ಮರು. ೩೨). **ಬಂಡಾರ:** ೧. "ಬಂಡಾರಮನೆ ಕೋಶಮಕ್ಕು" (ಕವಿಶ. ೬೩) ; ಅವನಾನೆ ಕುಮಾರೆ ಪೆಣ್ಬರ್ ಬಣ್ಣಾರಮುಮ್ ಕೊಣ್ಡು (ಪ್ರಿಂಓ. ೦೯೨೮, ೩೦-೩; 1056) : ಅರಸನುಂ ಸಕಲಪರಿಜನಂ ಬೆರಸು ಪೂಜಿಸಿ ಬಂಡಾರದ ಪೊನ್ನೆಲ್ಲಮಂ ಮುಂದೆ ರಾಸಿಮಾಡುವುದುಂ (ಧರ್ಮಾಮೃ. ೩-೨೦೩) ; ಬಂಡಾರ ತುಂಬಿ ನೀ ಬಂಡಿಯಲಿ ಹೇಜುವರೆ ಮಂಡಲವನಾಳಿ ಮೆಜಿಯುವರೆ ಒಕ್ಕಲಸು ಕೊಂಡಾಡಬೇಕು (ಸರ್ವಜ್ಞ. ೬೭೪). ೨. (ಎಕವ್ಯ. XIX. ೪). ೩. ಮೊಟ್ಟೆಯ ಒಳಗಿರುವ ಹಳದಿಬಣ್ಣದ ಲೋಳೆ: ಅಂಡಗಳ ಬೆಳವಣಿಗೆ ಪಕ್ಕದ ಪೋಷಣೆ ಜೀವರಣಗಳು ಬಂಡಾರವನ್ನು (Yolk) ಪ್ರವೇಶಿಸುವುದರಿಂದ ಸಾಧ್ಯವಾಗಿದೆ (ಕಾಟಿಕ. ೬೨). △ ಬಂಡಾಟ : ೧. 'ಬಂಡಾಜಿಕಾಟ' ಪರಾ.

ಭಂಡಾರ ಒಡೆ= ಭೀಮನ ಅಮಾವಾಸ್ಯೆಯಂದು ಪೂಜೆಯ ನಂತರ ಹೊಸ್ತಿಲ ಪೂಜೆ ಮಾಡಿ, ಹೂರಣದೊಂದಿಗೆ ನಾಣ್ಯವನ್ನಿಟ್ಟು ಕರಿದ ಪೂರಿಯಂತಹ ಭಕ್ಷ್ಯವನ್ನು ಮೊಳಕೈಯಿಂದ ಒಡೆ, — ಮುರಿ : ನನ್ನ ತಪ್ಪು ಈ ಸಾರಿ ಭಂಡಾರ ಒಡೆಯಲು ಊರಿನಿಂದ ಬಂದಿದ್ದಾನೆ (ರೂಢಿ). ಭಂಡಾರದ ಪೆಟ್ಟಿಗೆ = ಅರಿಸಿನ ಪುಡಿ, ಕೋಲು, ಗಂಟೆ ಮುಂತಾದುವುಗಳನ್ನು ತುಂಬಿದ ಪೆಟ್ಟಿಗೆ (ಎಕವ್ಯ. IX, ೦೦). ಭಂಡಾರದಾಟ=ಅರಿಸಿನ ವನ್ನು ಎರಚುತ್ತಾ ಸ್ತುತಿಸುವುದು : ಸುರಭಿಯಭಿಷೇಕದಲಿ ದೇವಿಯು ವರಮಂತಸಬಡಿಸಿ ಪೂಜಿಸಿ ಹರಿಹರರು ಭಂಡಾರದಾಟದಿ ಸುರರು ಕುಣಿಸಿದರು (ಅಂಬಿಕಾ. ೪೩ ಸೃಪ್ಟ).

[< ಪ್ರಾ. ಭಂಡಾರ, ಭಂಡಾಅರ, ಭಂಡಾಗಾರ. / ಸಂ. ಭಾಂಡಾರ]

**ಭಂಡಾರಕ** (ನಾ). ಬೊಕ್ಕಸದ ಮುಖ್ಯಾಧಿಕಾರಿ : ತಪಸೀರಾಯನ ಭಂಡಾರಕ ಶ್ರೀಮನ್ ಮಹಾನಾಯಕಾಚಾರ್ಯ ಬಯಲ ಹುಲಿ ಅವರೆಗೆಜಿಯ ಗಿರಿಯಂಣನಾಯಕರ ಮಕ್ಕಳು ವಿರುಪಂಣನಾಯಕರು ಕೊಟ್ಟ ಧರ್ಮಶಾಸನದ ಕ್ರಮವೆಂತೆಂದರೆ (ಎಕ. VII (R), ನಾಗವಂ. ೦೯೩-೨ ; 1529). [ಭಂಡಾರ + — $ಕ_3$]

**ಭಂಡಾರಗರಣತನ** (ನಾ). ಬೊಕ್ಕಸದ ಅಧಿಕಾರ ; ಖಜಾನೆಯ ಮುಖ್ಯಾಧಿಕಾರಿಯ ಹುದ್ದೆ, — ಪದವಿ : ಜಯಸಿಂಘಭೂಪನನ್ ತನ್ನಯದೊಂದುಪಧಾವಿಶುದ್ಧಿಯಿಂ ಮೆಚ್ಚಿಸಿ ತದ್ದಯೆಯಿಂ ಪಡೆದೊಂ ನೆಗಟ್ಟಕ್ಷಯನಿಧಿಭಂಡಾರಗರಣತನದಾಸ್ಪದಮಂ (ಎಇ. XII, ೨೦೦-೦೯೬; 1077). [ಭಂಡಾರ + ಕರಣ + —ತನ]

**ಭಂಡಾರಗವಿಟ್ಟಗೆ** (ನಾ). ಒಂದು ಊರಿನ ಹೆಸರು: ಭೀಮರಥೀನದ್ಯುತ್ತರ ತಟಸ್ಥ ಭಣ್ಡಾರಗವಿಟ್ಟಗೆನಾಮಗ್ರಾಮಂ (ಎಇ. V, ೨೦೯-೬೩; ಸು. 757). [ ? ]

**ಭಂಡಾರಸದನ** (ನಾ). ನಿಧಿಯನ್ನಿಡುವ ಸ್ಥಳ ; ಭಂಡಾರ ; ಖಜಾನೆ : ಧರಣಿಪತಿಯೆನಿತ ಪ್ರದೇಶದ ಧರಣಿಸುತರಿಂಗಿತ್ತು ಸಂತತವಿರಿಸುವನು ಬಚಿಗ್ಗೆಯಲಾ ಭಂಡಾರಸದನವನು (ಸಂಶಕ. ೨೫-೩೮). [ಭಂಡಾರ + ಸದನ]

**ಭಂಡಾರಾಲಯ** (ನಾ). =ಭಂಡಾರಸದನ : ನಾನಾಪ್ರಕಾರ ರತ್ನವಿತಾನಂಗಳ ಬಹಳರಾಶಿಯಿಂ ತುಂಬಿ ಕರಂ ಭೂನುತಭಂಡಾರಾಲಯಮಾ ನರಪ ನಿವಾಸದಲ್ಲಿ ರಂಜಿಸುತಿರ್ಕುಂ (ಪಾರ್ಥ. ೦-೦೬೪);ಭಂಡಾರಾಲಯದೊಳುಳ್ಳ ಮಣಿಮೌಕ್ತಿಕಜಾಳಗೆಯ ಪೆಟ್ಟಿಗೆಯೊಳಾಯಿಸು ವರಸುರತ್ನಗಳ (ಕುವ್ಯಾಉ. ೬-೦೬). [ಭಂಡಾರ + ಆಲಯ]

**ಭಂಡಾರಿ,** ಬಂಡಾರಿ (ನಾ). ೧. ಖಜಾನೆಯ ಮುಖ್ಯಾಧಿಕಾರಿ; ಖಜಾಂಚಿ; ಕೋಶಾಧಿಕಾರಿ : ಕೂಡಲಸಂಗನ ಮಹಾಮನೆಯೊಳು ಧರ್ಮಸಂತಾನ ಭಂಡಾರಿ ಬಸವಣ್ಣನು (ಬಸವ. ೩೪೬) ; ಶಿವಪಾದಪಂಕಜಭಕ್ತಿಯುಕ್ತನು ಮೇದಿನೀಶ್ವರ ಬಿಜ್ಜಳನ ಭಂಡಾರಿ ಬಲದೇವ (ಬಸಕ್ಕೆ. ೩-೬೩) ; ಎಲ್ಲರಿಗು ಸುಗುತ ಬರುವ ಭಂಡಾರಿಯ ಸೊಲ್ಲ ಕೇಳಿದ ಬಸವಣ್ಣ (ಶಿತಾಂ. ೦೩-೦೩೩). ೨. (ಕೊಚ್ಚಿಯ ರಾಜರ ಮತ್ತು ದೇವಸ್ಥಾನಗಳ) ಕೆಳದರ್ಜೆಯ ಸೇವಕವರ್ಗ : ಬಸ್ತಿಯಲ್ಲಿ ಊಳಿಗ ನಡಿಸುವ ಭಂಡಾರಿಗಳ ಜನ ೨ ಕೆ . . . ಅಕ್ಕಿ ಮು ೨೦ (ಕಇ. III-i, ೦೬-೬೦; 1556). **ಬಂಡಾರಿ :** ೧. ಇಂತಪ್ಪುದಕ್ಕೆ ಸಾಕ್ಷಿಗಳು ಅತಿಕಾಬಿ ಕಾಂತಸೆಟ್ಟಿ . . . ಬಂಡಾರಿ ಬರಂಸಾವಣ (ಎಇ. XX, ೯. ೬೦; 1556).

[< ಪ್ರಾ. ಭಂಡಾರಿ, ಭಂಡಾಗಾರಿ./ ಸಂ. ಭಾಂಡಾಗಾರಿನ್]

**ಭಂಡಾರಿಗ,** ಬಂಡಾರಿಗ (ನಾ). = ಭಂಡಾರಿ ೧ : ಕಾಮವೃಷ್ಟಿಯೆಂಬ ಭಂಡಾರಿಗನುಂ . . . ಪದಿನೆಣ್ಬಾಸಿರಮ್ಲೇಚ್ಛರಾಜರುಮಾತ್ಮೀಯಸಾಮ್ರಾಜ್ಯ

ಪರಿಚ್ಛೇದವಾಗೆ (ಆದಿಪು. ೦೫-೩ ವ); ಭಂಡಾರಿಗರ್ ವಿವಿಧಪಟಳಕಂಗಳೊಳ್ ತಂದು ಮುಂದಿಟ್ಟಾಡಿದ ಸುಗಂಧಾನುಲೇಪನಕುಸುಮವಸನಭೂಷಣಂಗಳಿನರಸಿಯುಂ ತಾನುಂ ಶೃಂಗಾರಂಗೆಯ್ದು (ಚಂದ್ರಪ್ರ. ೬-೦೯೯ ವ); ಬಾಗಿಲಿಗಂ, ದ್ವಾರಿಗಂ, ಭಂಡಾರಿಗಂ (ಶಬ್ದಾ.ಸು. ೧೦೮ ಕ್ರಿಯೋ). **ಬಂಡಾರಿಗ :** ಬಂಡಾರಿಗರ್ಪೊನ್ನಂ ಪರೀಕ್ಷಿಸುವಂತೆ (ಧರ್ಮಾಮೃ. ೬-೬೩). [ಭಂಡಾರ + —ಇಗ]

**ಭಂಡಾರಿಸು, ಬಂಡಾರಿಸು** (ಕ್ರಿ). ೧. ಆಯುಧವನ್ನು ಒರೆ, ಕೋಶ ಮುಂತಾದುವುಗಳ ಒಳಗಿಡು,–ಮುಚ್ಚಿಡು,–ಸೇರಿಸು: ಕಡುಮುನಿದು ಕೂರಲಗ ಭಂಡಾರಿಸಿ ಸಮಂತೆಂದಿನಂತೆ ಪ್ರದಕ್ಷಿಣವನು ನೆನೆದು ಬರುತಿರ್ಪ ಸಿದ್ಧನ ಪದಾಬ್ಜದ ಮೇಲೆ . . . ಕೃಷ್ಣಶುನಕಂ ಬಿರ್ದುದು (ಸಿದ್ಧರಾ. ೬-೯೩); ಧುರವಿಲ್ಲದನು ಮಾರುತಿ ಭಂಡಾರಿಸು ಭರದಿನೆನುತ ಜಯಜಾಯೆ ಅರಗಿನ ಮುದ್ರೆಯಿಟ್ಟಂತಾ ಗದೆಯೊಳು ಪೊರೆದ ರಕ್ತಾಂಬುವೊಪ್ಪಿದುದು (ಜೈಮಿನಿ. ೩೦-೦೨೩). ೨. ಆಯುಧವು ಒರೆ, ಕೋಶ ಮುಂತಾದುವುಗಳ ಒಳಗಿರು,–ಉಪಯೋಗವಿಲ್ಲದಾಗು : ಮನುಕುಲಾಚಿಪ್ಪ ಚಕ್ರ ಭಂ[ಪಾಠಾಂ. ಬಂ]ಡಾರಿಸಿತು ಮುನ್ನಿನ ಜವ್ವನದ ಬಲ ಮಸುಳಿತು (ಕುಮಾ.ಅ. ೦-೩೯): ಎನ್ನುದಯವಿಡಿದಿಲಿತನಕ ಸಮಬಲರ ಕಾಣದೆ ಕಲಹ ನೆಱ ಭಂಡಾರಿಸಿರ್ದುದು (ತೊರರಾ. ೬-೬-೩೯). ೩. ಮುದುರು; ಸಂಕೋಚಗೊಳಿಸು: ಕಾಯ್ದೋದು ದಂತಾವಳಂ ತೋರದದೆ ಮುಱಿಯೆ ಮೊದಲ ವಾರಣಮಂ ಪೋಲ್ತುದದಸಿ ನಿಡುಗಯ್ಯಂ ಭಂಡಾರಿಸಿ ಮೊಡಱದ ತಱಯುಂ ಬಾರಿಯುಮಂ ಮುಱಿಯೆ ಪೊಯ್ದು ಪೊಱಮಡುವಿಭವಂ (ಅರ್ಜನ. ೫-೦೦೩). **ಬಂಡಾರಿಸು :** ೧. ತನ್ನೆಡಗೆಯ್ಯನೆಡೆಗೊಂಡ ಬ್ರಹ್ಮನ ಶಿರಃಕಪಾಲವಾಲ್ಲಿ ಬಂಡಾ[ಪಾಠಾಂ. ಡಿ]ರಿಸಿ (ಬಸವಪು. ೩-೪೯).

[ಭಂಡಾರ + — ಇಸು$_3$]

**ಭಂಡಿ$_1$** 'ಬಂಡಿ$_1$' ನೋ.

**ಭಂಡಿ$_2$** (ನಾ). ನಾಚಿಕೆಯಿಲ್ಲದವಳು; ನಾಚಿಕೆಗೇಡಿ: ಗಂಡನಂ ವಂಚಿಸುವ ಮಿಂಡಿಯೊಳು . . . ಉಣಲಿಕ್ಕಿ ಹಂಗಿಸುವ ಭಂಡಿಯೊಳು ಸವತಿಯುಂ ಮಲಮಕ್ಕಳು ಬಳಲಲಂಡಲಿಪಳೊಳು ಕುಟಿಲೆಯೊಳ್ಕುಹಿತೆಯೊಳ್ಪುಟ್ಟಲುಂಟಿವಿಂಗೆ ಕಾರುಣ್ಯವು (ಮಲ್ಲಿಕ. ೨-೨೮); ನೀನು ಭಂಡಿ, ಜಗಭಂಡಿ! (ಮಲೆಮ. ೬೬೦).

[ಭಂಡ$_2$ + — ಇ$_2$./ಪ್ರಾ. ಭಂಡೀ = ಕುಲಟೆ]

**ಭಂಡಿಕಾರ** 'ಬಂಡಿಕಾಱ' ನೋ.

**ಭಂಡಿಕಾಱ** 'ಬಂಡಿಕಾಱ' ನೋ.

**ಭಂಡಿತೆ** (ನಾ). ತುಚ್ಛಳಾದ ಹೆಂಗಸು ; ಮಾನಗೇಡಿ : ಶತದಿಕ್ಕೆಯುರು ಭಂಡಿತಿ[ತೆ][ಪಾಠಾಂ. ಬಂಡಿತೆ]ಯರಾಗಳು ಕೊಂಡೆಗಿತ್ತಿಯರು (ಬಸವಪು. ೫೦-೩೨). [ಸಂ. ಭಂಡಿತಾ]

**ಭಂಡಿದೆಱೆ** (ನಾ). ಗಾಡಿಗಳ ಮೇಲೆ ಹಾಕುವ ತೆರಿಗೆ : ಕುಂಬಾಱದೆಱೆ ಅಸಗದೆಱೆ ತೊತ್ತುದೆಱೆ ಭಂಡಿದೆಱೆ . . . ಇನ್ನಿನಿಸಱ ತೆಱೆಯನು ಧಾರಾಪೂರ್ವಕಂ ಮಾಡಿ ಬಿಟ್ಟರು (ಎಕ. IV (R), ಹುಣಸೂ. ೨೯-೪೦; 1162). [ಭಂಡಿ$_1$ (< ಬಂಡಿ$_1$) + ತೆಱೆ$_3$]

**ಭಂಡಿಲ** (ನಾ). ೧. ಅದೃಷ್ಟ. ೨. ದೂತ; ಚಾರ. ೩. ಶಿಲ್ಪಿ. ೪. ಒಂದು ಬಗೆಯ ಮರ; ಬಾಗೆ; ಶಿರೀಷ. [ಸಂ.]

**ಭಂಡಿವಟ್ಟೆ** (ನಾ). ಗಾಡಿಗಳು ಹೋಗಲು ಅನುಕೂಲವಾಗಿರುವ ದಾರಿ; ಗಾಡಿರಸ್ತೆ : ಮಣಿಯೆರೆಯಿಂ ಪಡುವಲಡ್ಡವಿಟ್ಟವನ ಕೆಱೆಯಿಂ ಬಡಗ ಬರೆ ನೀರ್ಗುಂದದ ಭಣ್ಡಿವಟ್ಟೆಯಿಂದಾನೆದೊಱೆವಿಡಿದಂತೆ ನಾರಣೋರ್ಪುರ ಕೆಱೆಯ ಮೂಡಣ ಕೋಡಿಯಿಂ ಕೂಡಿತ್ತು (ಶಾಸಸ. IX-i, ೬೦-೩೦:1018).

[ಭಂಡಿ$_1$ (< ಬಂಡಿ$_1$) + ಬಟ್ಟೆ$_1$]

**ಭಂಡಿಸು** (ಕ್ರಿ). ೧. ಅವಮಾನಪಡಿಸು ; ಹೀಗಳೆ : ಭಂಡಿಸಿ ಬೈದ ಬೈಗುಳನೆ ಲಾಲಿಸಿ (ಜಾವಪು. ೧೫-೯೬); ಗ್ರಹ ಹೊಡೆದ ಕೋತಿಯಂತೆ ದೆಸೆದೆಸೆಗೆ ತಿರುಗಿ ಭಂಡಿಸುವನ್ಯಮಿಳಿವಮಾನಿಸರೊಳಾಡಿ ಸ್ನೇಹಮಂ ಮಾಳ್ಪೆನು (ಕೇರಮ. ೦-೨೩). ೨. ನಾಚಿಕೆಗೊಳ್ಳುವಂತೆ ಮಾಡು : ಕಂಡು ಸಶ್ರಾರ್ಜಿತ ತಾಂಬೂಲಪಿಂಡವ ಕೊಂಡು ಸುಗಂಧವಿದೆಂದು ಉಂಡೆಯಲೊರೆಸಲುಪೇಂದ್ರನು ಹಾಸ್ಯದಿ ಭಂಡಿಸುತ ನುಡಿದನು ನಕ್ಕು (ಕಾಮಚ. ೦-೫೦). ೩. ಬಯ್ಯು; ತೆಗಳು : ಮಿಂಡವೊಂಗಳನಗಲಿದ ಚದುರರು ತಮ್ಮ ದಂಡಿಪ ಸ್ಮರಚಾಪವೆಂದು ಭಂಡಿಪ[ಪ] ಗೂಗೆಡುಗೋಲುಗಳಿಂದ ಲಡೆಗಿಕ್ಕಿ ಮಿಂಡಿಸುವರು ಕಬ್ಬುಗಳನು (ಪೋಚತ. ೨-೯೯). 'ಬಂಡಿಸು' ಪರಾ.

[ಭಂಡ$_2$ + — ಇಸು$_1$]

**ಭಂಡೀರ** (ನಾ). ೧. ಆಲದ ಮರ; ವಟವೃಕ್ಷ. ೨. ಒಂದು ಬಗೆಯ ಸಸ್ಯ; ಮಂಜಿಷ್ಠೆ : "ಭಂಡೀರಃ–ಮಂಡೂಕಪರ್ಣಿ" (ಓಷಧಿ. ೦೦೦). [ಸಂ.]

**ಭಂಡೀರಿ** (ನಾ). = ಭಂಡೀರ ೨ : "ಮಂಜಿಷ್ಠಾ . . . ಭಂಡೀರೀ, ಛಾಂಡೀ, ಯೋಜನವಲ್ಲೀ–ಇ ಮಂಜಿಷ್ಠೇ ಪೆಸರುಗಳು. ಇದು ಗ್ರಂಥಿಕ ದ್ರವ್ಯವು" (ನಿಘಂಟು. ೧೪೨). [ಸಂ. ಭಂಡೀರೀ]

**ಭಂಡೀಲ** (ನಾ). = ಭಂಡಿಲ ೪ : "ಶಿರೀಷಃ, ಕಪೀತನಃ, ಭಂಡೀಲಃ–ಇ ಬಾಗೇಮರದ ಹೆಸರು" (ನಿಘಂಟು. ೧೨೬). [ಸಂ.]

**ಭಂಡು** (ನಾ). ೧. ಅವಮಾನ : ಸಿಗ್ಗು : ಎಲೆ ಹೆಣ್ಣೆ . . . ದಂಡಿಗೆಯು ತಲಿಸಿ ಕೊಂಡೊಯ್ವೆ ನಮ್ಮರಮನೆಗೆ ಭಂಡು ಜನದೊಳು ಬೇಡ ಬೇಗ ನಡೆ (ಹರಿಶ್ಚಂ. ೦೩-೦೭). ೨. ಅವಮಾನಕರವಾದ ಕೆಲಸ; ನಾಚಿಕೆಗೇಡಿನ ಕೆಲಸ : ಪೆಂಡಿರ ಪಿಡಿದನನಿದಿರ್ಗೊಂಡು ಕೊಲಲಣ್ಮದಂಡಿಸಿ ಮಱೆಯೊಳು ಕೊಲುವ ಭಂಡು ಬೇಡೆನಗೆ (ಭರತಾನಾಂ. ೪೩-೯೮). ೩. ಬೂಟಾಟಿಕೆ; 'ಭಂಡಾಟ' ಪರಾ. (ಗ್ರಾ). ೪. ಅಶ್ಲೀಲವಾದ : ಭಂಡು–ಕವನಗಳನ್ನು ಹಾಡುವ ಹವ್ಯಾಸ ಅವರಿಗಿರುವುದೇನೊ ನಿಜ (ಜನಪ. II, ೮೬೫).

**ಭಂಡಾಗು** = ನಾಚಿಕೆಯಿಲ್ಲದಿರು ; ಲಜ್ಜಾಹೀನವಾಗು : ನನ್ನಯ ಹವಣನಱಯದೆ ತೊಡಚಿ ನೀ ಭಂಡಾದೆ ಲೋಕದಲಿ (ಕಾಶಿರಾ. ೮೨-೬).

**ಭಂಡುಮಾಡು** = ಅವಹೇಳನ ಮಾಡು ; ನಾಚಿಕೆಗೊಳ್ಳುವಂತೆ ಮಾಡು : ನಿಜಮನವ ಮುಂಕೊಂಡೆಡೆಯನು ತೊಲಗಿಸಿಯೆ ಭಂಡುಮಾಡಿ ಭ್ರಮೆಗೊಳಿಸುವೆವು (ಶ್ರೀಕೃಷ್ಣಸಾಂ. ೦೫-೦೬೯) ; ಭಂಡುಮಾಡದೆ ನನ್ನನಿಂತು ನಿಮ್ಮಯ ಏರಿಯ ಹೆಂಡತಿಯ ದೆಸೆಯಿಂದಂ (ಸಾಳ್ವಭಾ. ೨೬-೦೦).

[ ಭಂಡ$_2$ + — ಉ$_4$ ]

**ಭಂಡುಗೆಯ್** (ಕ್ರಿ). ಅವಮಾನ ಮಾಡು ; ಅವಹೇಳನ ಮಾಡು : ಎಮ್ಮ ವನಿತೆಯರ . . . ಲಜ್ಜೆಯ ಬಿಡಿಸಿ ಭಂಡುಗೆಯ್ವವನನಿಕ್ಕುವೆವು (ಸಾಸೋಮ. ೦೦-೦೮೬). [ಭಂಡು + ಕೆಯ್$_1$]

**ಭಂಡೆ$_1$** 'ಬಂಡೆ$_1$' ನೋ.

**ಭಂಡೆ$_2$** (ನಾ). = ಭಂಡಿ$_2$ : ಭಂಡೆಯರಂ(ದು)ಡಮಿಂಡರುಧಿರಾದಿಗಳಂ ಬೆರಸಿಕ್ಕೆ ಭೋಜ್ಯದೊಳ್ ಕೊಂಡಿರದಾಗಳಂತೆ ತಲೆಗೇಱದೊಡಂ . . . ನೀಲಿಯ ರಸಂಗಳನೊತ್ತುವುದು (ಜವುದ.೦೪-೬೩); ಭಂಡೆ, ಮುಂಡೆ, ತುಂಟಿ (ಶಬ್ದಾ.ಮ. ೦೯೭ ಕ್ರಿಯೋ); ಒರ್ವನ ಟಿರಿದಿರ್ವರ್ಗೆ ಕವನವ ಬಱಸಿದ ಗಂಟಿಕ್ಕಿದ ಭಂಡೆ (ಕಂಸವ. ೬-೦೮೩). [ಭಂಡ$_2$ + — ಎ$_1$]

**ಭಂಭಾ** (ನಾ). ಒಂದು ಬಗೆಯ ಚರ್ಮವಾದ್ಯ ; ಭೇರಿ ; ನಗಾರಿ : ಪಟುಪಟಹ ತುಣವ ಭಂಭಾ ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶವೀಣಾಸ್ವರಂಗಳೆಸೆಯೆ (ಶಬ್ದಾ.ರಾ. ೬೩-೨೮). [ಸಂ.]

**ಭಂಭಾರವ** (ನಾ). ನಗಾರಿಯ ಸದ್ದು ; ಭೇರಿಯ ಶಬ್ದ : ರಾಮ ಲಕ್ಷ್ಮಣರುಂ ಪೊಸ್ಕರಯೋಧ್ಯೆಯಂ ಪುದಿವಿನಂ ಗಂಭೀರಭಂಭಾರವಂ (ಕಂಠಾಪಠ. ೦೫-೨೮) ; ಭಟರ ಬಾಹಾರವಂ ವಳದ ಭಂಭಾರವಂ ರಣಕಲಕಲಾರವಂ . . . ಕಿವಿಗಳ ಕಠೋರವಂ ತೀವಿತಂದು (ಕೈವಲ್ಯ ೨೨-೯). [ಸಂ.]

**ಭಂಳಿ ?** (ನಾ). (?) : ಬಾಡದ ಮಹಾಜನಂ ಖಿರಿಯ ಕೆಱೆಗೆ ಬಿಟ್ಟ ಧರ್ಮ್ಮ ಮೆನ್ತೆಂದಡೆ ಗ್ರಾಮದ ಆವುದೊಂದು ಪ್ರಾಯಶ್ಚಿತ್ತ ದಣ್ಡದೋಷ ತಪ್ಪುಕಾರಿ ತಪ್ಪುದಾಯ ಸ ತಿಪ್ಪೆಸುಂಕವಿನಿತುಂ ಕೆರೆಯ ಭಂಳಿಗೆ ಬಿಟ್ಟ ಧರ್ಮ್ಮ (ಎಕ. XI, ದಾವಣ. ೧೯೨-೦೨ ; ?). [ ? ]

**ಭಕಾರ** (ನಾ). 'ಭ' ಎಂಬ ಅಕ್ಷರ : ಭಕಾರಕ್ಕೆ ಬಕಾರಂ—ಆರಂಭ—ಆರಂಬ (ಶಬ್ದಮ. ೨೫೫ ಪ್ರಯೋ). [ಸಂ.]

**ಭಕ್ಕರಿ, ಬಕ್ಕರಿ, ಭಾಕರಿ** (ನಾ). (ಉಕ) ಜೋಳ, ಸಜ್ಜೆ ಮೊದಲಾದುವು ಗಳ ಹಿಟ್ಟಿನಿಂದ ಮಾಡುವ ರೊಟ್ಟಿ : ಜಿಕ್ಕು ಭಕ್ಕರಿ ಮಾಡ್ವುದ ಕಂಡೆ (ಕುರಂದ. ೩-೦೫೯-೦); ಅಕ್ಕಿಯ ಭಕ್ಕರಿ ಮಾಡುವುದು ನನಗೆ ಅದೇ ಮೊದಲ ಪ್ರಸಂಗ (ಸ್ವತಿತ. ೫೦). **ಬಕ್ಕರಿ** : ಉಣ್ಣುವಾಗ ಬರೀ ಅನ್ನವನ್ನಾಗಲಿ ಬರೀ ಬಕ್ಕರಿಯನ್ನಾಗಲಿ ಮೊದಲಿನಿಂದ ಕಡೆಯ ತನಕ ತಿಂದರೆ ನಮಗೆ ಸಮಾಧಾನವಾಗುವುದಿಲ್ಲ (ಪತುಂಬಿಡು. ೫-೨೪೬); ಬಕ್ಕರಿಗಳನ್ನು ಸುಡುವ ಕೆಲಸ ಸಾವಿತ್ರಿಯದು (ಚಿಪಂ. ೦೬). **ಭಾಕರಿ** : ಎರಡು ಭಾಕರಿಗಳನ್ನು ಸುಡುತ್ತೇನೆ (ಖಿವ್ಸ. ೦). [← ಮರಾ. ಭಾಕರೀ, ಭಾಕರ]

**ಭಕ್ತ**$_1$ (ಗು). ೧. ಹಂಚಿಕೊಟ್ಟ ; ಭಾಗಮಾಡಿಕೊಟ್ಟ. ೨. ಪಾಲು ಮಾಡಿದ ; ವಿಭಾಗಿಸಲ್ಪಟ್ಟ. ೩. ಭಕ್ತಿಯಿಂದ ಕೂಡಿದ ; ಶ್ರದ್ಧೆ ಯುಳ್ಳ. ೪. ಆಸಕ್ತಿಯುಳ್ಳ ; ಮಗ್ನವಾದ. (ನಾ). ೫. ಪೂಜಿಸು ವವನು ; ಆರಾಧಕ : ತಂದೆಯ ಭಕ್ತಂ [ಬುಧಜನ]ವೃಂದಾರಕನೆನಿಪ ನಾಪೊನಾತನ ತಮ್ಮಂ . . . ನೆಗಟ್ಟಂ (ಶಾಂತಿಪು. ೦೨-೬೨) ; ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ (ಬಸವ. ೨೪೯); ಕೆಲವು ದಿನಂಗಳಲಿ ಮನ ವಲರಿ ಬಸವನದೊಂದು ಗೀತವನೊಲಿದು ಬೆಸಸಲು ಕಲಿತು ಭಕ್ತರು ತಮ್ಮೆಡೆಗೆ ಬಂದು (ಬಸವು. ೨೨-೪೬) ; ನಕ್ಕನು ಶಂಭು ಭಕ್ತನ ಮನದ ಧೃತಿ ಯನು . . . ಪಾರ್ವತಿಗೆ ತೋಱಿಸುತ (ಕುಮಾರ. ೬-೨). ೬. ಅಕ್ಕಿ ಯಿಂದ ಮಾಡಿದ ಅನ್ನ: "ಅಂಧಃ, ಕೂರಂ, ಭಕ್ತಂ . . . ಆಹಾರಃ —ಈ ೯ ಕೂಬ್" (ಹಲಾಯು. ೫೩-೦೬೪) ; "ಭಿಸ್ಸಾ, ಭಕ್ತಂ, ಅಂಧಃ, ಅನ್ನಂ, ಓದನಃ, ದೀದಿವಿಃ — ೬ ಅನ್ನದ ಹೆಸರು, ಬೋನ" (ಸಿದ್ಧಾಂತ. ೨೯೯). ೭. [ವೀಶೈ] ಮುಕ್ತಿಸಾಧಕವಾದ ಆರುಸ್ಥಲಗಳಲ್ಲಿ ಮೊದಲನೆ ಯದಾದ ಭಕ್ತಿಸ್ಥಲವನ್ನು ಸಾಧಿಸಿದವನು : ಆಚಾರಲಿಂಗಭಕ್ತ ನಾದೊಡೆ ಸ್ವಕಾಯಕದಲ್ಲಿರಬೇಕು (ಆದಪ. ೬-೦೨); ಭವಿ ಭಕ್ತರೊಳಗೆ ಕೊಡು ಕೊಳೆಯುಂಟೆ (ಪ್ರಭುಲಿ. ೦೩-೦೦) ; ಶುದ್ಧಾಂತಕರಣನಾದ ಜೀವನು ಶಿವನ ಉಪಾಸನೆ ಮತ್ತು ಧಾರಣೆಗಳಿಗೆ ಅರ್ಹತೆಯನ್ನು ಪಡೆದು ಭಕ್ತ ನೆನಿಸುವನು (ಕಲ್ಪ. ೬೨). [ಸಂ.]

**ಭಕ್ತ**$_2$ (ನಾ). ಅಕ್ಕಿಯನ್ನು ಕೊಡುವ ಒಂದು ಬಗೆಯ ಧಾನ್ಯ; ನೆಲ್ಲು : ಎರಡುಗದ್ಯಾಣಂ ಪೊನ್ನು ಇರ್ಪತ್ತುಗಣ್ಡುಗಂ ಭಕ್ತಮುಂ ಇರ್ಕೋದಿ ಕೆಱೆಗೋಡು ಪುಟ್ಟಿಗೆಯುಂ ತಸ್ಕ ಸೀಮಾನ್ತರಂ (ಎಕ. XVI, ಗುಬ್ಬಿ. ೬೫-೪೯; 733); ಮೂರ್ಕ್ಕಣ್ಡುಗ ಭಕ್ತ ಪೋಲಿಯ ಕೊಣ್ಡುಟ್ಟುವೊನ್ ಈ ಧರ್ಮ್ಮ (ಎಕ. X, ಕೋಲಾರ. ೬-೯; 753); ಎಡೆಬಾವಿಗೆ :—ಕಿಱುಕು ಸಾಲೆ, ಭಕ್ತಕಾಳು, ಅಂಬಿಲದೊಳಗಣ ಅಕ್ಕಿ, ಹೊಸ ಪಂಚು ಇವನ್ನರೆದು ಪೂಸಲು ಎಡೆಬಾವು ಮಾಣ್ಗುಂ (ಐವ್ಯ. ೬೯).

[p ಇದು 'ಭತ್ತ' ಎಂಬುದರ ಅಪಲಿಖಿತ]

**ಭಕ್ತಕವಿ** (ನಾ). ತನ್ನ ಕಾವ್ಯದ ಮೂಲಕ ಭಕ್ತಿಯನ್ನು ಬೋಧಿಸು ವವನು ; ಸಂತಕವಿ : ಭಕ್ತಕವಿಗಳಲ್ಲಿ ಮೊಟ್ಟಮೊದಲನೆಯವನು ಕಬೀರ್ (ಭಾರದ. ೪೫೯). [ಸಂ.]

**ಭಕ್ತಕುಟುಂಬಕ** (ನಾ). ತನ್ನ ಭಕ್ತರನ್ನೇ ಸಂಸಾರವಾಗುಳ್ಳವನು : ಪರಮಭಕ್ತಕುಟುಂಬಕನು ನೀ ಕರುಣಿಯಲ್ಲದೊಡೀ ಕುಟುಂಬಕ ಶರಣ ದಾರೈ ಕೃಷ್ಣ (ಕುಮಾರ. ೦೪-೦೨೦). [ಸಂ.]

**ಭಕ್ತಕುಟುಂಬಿ** (ನಾ). = ಭಕ್ತಕುಟುಂಬಕ : ನಂಬಿದವರಿಗೆ ತನ್ನ ತೆತ್ತಿಹ ನೆಂಬ ಬಿರುದನು ಮೆಱೆದು ಭಕ್ತಕುಟುಂಬಿ ಸಾರಥಿಯಾದನೊಲಿದರ್ಜುನಗೆ ಮುರಧ್ವಂಸಿ (ಕುಮಾರ. ೦ ಸೂಚನೆ); ಭಕ್ತಕುಟುಂಬಿ ಭಕ್ತಜನವತ್ಸಲ . . . ಪೊರೆ (ಕಬಕಂ. ೫-೦೬). [ಸಂ. ಭಕ್ತಕುಟುಂಬಿನ್]

**ಭಕ್ತತೆ** (ನಾ). ಭಕ್ತಿ ; ಶ್ರದ್ಧೆ : ಭುವನದೊಳೆಲ್ಲಿಯುಂ ಭವಿಗೆ ಭಕ್ತತೆಯಿಲ್ಲ ಬಿಡಾ (ಕತಳ. ೮೪). [ಸಂ. ಭಕ್ತತಾ]

**ಭಕ್ತಪರಾಧೀನ** (ನಾ). ಭಕ್ತರಿಗೆ ಅಧೀನನಾಗಿರುವವನು ; ಭಕ್ತರ ವಶವರ್ತಿ : ಭಕ್ತಪರಾಧೀನನಾದ ನಾನೆ ಭಕ್ತರ ಭಕ್ತಿಯಿಂದ ಸಂತುಷ್ಟ ನಾಗಿ ಸರ್ವವನ್ನೂ ಮಾಡುವೆನು (ಅರ್ಜವಾ. ೬೬) ; ದೈವವನ್ನು ಭಕ್ತ ಪರಾಧೀನ ಎಂದು ಹೊಗಳಿದ ಮೇಲೆ ಕಂಡ ಮೇಲೆ ಅದನ್ನು ಅನುಭವಿಸಿ ತೋರಿಸಬೇಡವೆ ಭಕ್ತನಾದವನು (ಭಾರದ. ೨೯೪). [ಸಂ.]

**ಭಕ್ತವತ್ಸಲ, ಭಕ್ತವತ್ಸಳ** (ನಾ). ಭಕ್ತರಲ್ಲಿ ವಾತ್ಸಲ್ಯವುಳ್ಳವನು : ಓಹಿಲನ ಮೆಱೆದ ಸೌರಾಷ್ಟ್ರವೆಂಬ ಮಂಡಲದಲ್ಲಿ ಕೂಡಲಸಂಗಮದೇವ ಭಕ್ತವತ್ಸಲನಾಗಿ (ಬಸವ. ೬೮೩); ದೈತ್ಯಪ್ರಳಯಪಾವಕ ಭಕ್ತವತ್ಸಲ ಭಕ್ತಸುರಧೇನು. . . ಕೇಶವ ಕರುಣಿಸೆನಗೆ (ಕುಮಾರ. ೩-೬೯); ಭಕ್ತವತ್ಸಲ ಕೃಪಾಕರ ಮಹಾಭಯನಿವಾರಣ ನೃಸಿಂಹ ತ್ರಾಹಿ (ಕೃಬಿಭಾ. ೦೦-೩೬). **ಭಕ್ತವತ್ಸಳ** : ಭಕ್ತವತ್ಸಳಂ [ಪಾಠಾಂ. ಭಕ್ತಜನವತ್ಸಳಂ] ಮಗನ ಮಾತಂ ಮನ್ನಿಸಿ ಮಹಾಮಹಿಮನೊಂದು ಗುಪ್ತವೇಷಮಂ ಕೈಕೊಂಡಧ್ವರಕ್ಕೆ ನಡೆತಪ್ಪಾಗಳ್ (ಜಂಬರ. ೦೬-೦೩೨). [ಸಂ.]

**ಭಕ್ತವತ್ಸಲತೆ** (ನಾ). ಭಕ್ತರ ಮೇಲಿರುವ ಪ್ರೀತಿ,– ವಾತ್ಸಲ್ಯ : ಆತನ ಕೋಪಮಂ ನೆನೆಯದಾದಂ ಕೀರ್ತಿಸುತ್ತಿರ್ದನೀಶ್ವರಿಯೊಳ್ ಶಂಭುಗೆ ಭಕ್ತವತ್ಸಲತೆ ಸಲ್ವುಂ ಮೇಣ್ ಪೆಱರ್ಗಕ್ಕುಮೇ (ಕಬಕಂ. ೪-೬೦).

[ಸಂ. ಭಕ್ತವತ್ಸಲತಾ]

**ಭಕ್ತವತ್ಸಲೆ** (ನಾ). ಭಕ್ತರಲ್ಲಿ ವಾತ್ಸಲ್ಯವುಳ್ಳವಳು : ಎಲೆ ಮಾತೆ ! ನೀಂ ಭಕ್ತವತ್ಸಲೆ ಸಾಜಂ ! (ದಾವಣಕ. ೬೨-೦೦). [ಸಂ. ಭಕ್ತವತ್ಸಲಾ]

**ಭಕ್ತವತ್ಸಳ** 'ಭಕ್ತವತ್ಸಲ' ನೋ.

**ಭಕ್ತವಾತ್ಸಲ್ಯ** (ನಾ). = ಭಕ್ತವತ್ಸಲತೆ : ಒಂದು ವೇಳೆಯಾದರು ಮಾತನಾಡು, ನಿನ್ನ ಭಕ್ತವಾತ್ಸಲ್ಯವನ್ನು ತೋರು (ಶತಳ. ೩೭). [ಸಂ.]

**ಭಕ್ತವ್ಯಸನ** (ನಾ). ಭಕ್ತರ ಮೇಲೆ ಇಟ್ಟಿರುವ ಅತ್ಯಾಸಕ್ತಿ,–ಮಮತೆ : ಕುಶಲರನಿಬರು ಜೀಯ ಭಕ್ತವ್ಯಸನಭಾರವು ನಿಮ್ಮಲಿರೆ ಜೀವಿಸುವುದರಿದೇ ಪಾಂಡುನಂದನರು (ಕುಮಾರ. ೦೦-೩೦). [ಸಂ.]

**ಭಕ್ತವ್ಯಸನಿ** (ನಾ). ಭಕ್ತರ ಮೇಲೆ ಬಹಳ ಆಸಕ್ತಿಯುಳ್ಳವನು,– ಮಮತೆಯುಳ್ಳವನು : ನಳಿನನಾಭ ಮುಕುಂದ ಮಂಗಳನಿಳಯ ಭಕ್ತವ್ಯಸನಿ. . . ಕರುಣಿಸೆನಗೆ (ಕುಮಾರ. ೩-೬೯). [ಸಂ. ಭಕ್ತವ್ಯಸನಿನ್]

**ಭಕ್ತಸ್ಥಲ** (ನಾ). [ವೀಶೈ] ಷಟ್ಸ್ಥಲಗಳಲ್ಲಿ ಮೊದಲನೆಯದು ; ಮುಕ್ತಿಸಾಧನೆಯ ಹಂತಗಳಲ್ಲಿ ಮೊದಲನೆಯದು : ಗುರುಲಿಂಗದಲ್ಲಿ ಕ್ರಿಯಾಶಕ್ತಿಯ ಪ್ರಭಾವದಿಂದ ಆಚಾರಲಿಂಗದುದಯವಾದುದು ಅದಱ ಉಪಾಸನೆಗಾಗಿ ಭಕ್ತಸ್ಥಲವುಂಟಾದುದು (ಶಿವಾನು. ೪೪-೪೨); ಪಿಂಡಸ್ಥಲ ಪಿಂಡಜ್ಞಾನಸ್ಥಲ . . . ಸಹಜಮಾಟಸ್ಥಲ ಈ ೧೫ ಭಕ್ತಸ್ಥಲಂಗಳು (ಅಬಂದೆ. ೨೫೦-೦೦೪); ಭಕ್ತಸ್ಥಲದಿಂದ ಐಕ್ಯಸ್ಥಲಕ್ಕೆ ದ್ವೈತಭಾವನೆಯಿಂದ ಅದ್ವೈತಸಿದ್ಧಿಗೆ ಮುಂದುವರಿಯುವುದೇ ಸಾಧನೆ (ಚೂವ್ಯಕು. ೭ ಹಿನ್ನೆಲೆ).

[ಸಂ.]

**ಭಕ್ತಾದಾಯ** (ನಾ). ಭತ್ತದ ಮೇಲೆ ಹಾಕುವ ತೆರಿಗೆ : ಸಕಲ ಸುವರ್ಣಾದಾಯ ಭಕ್ತಾದಾಯಯೇನುಂಟಾದ ಸಾಮ್ಯವನು ಆಗುಮಾಡಿ ಕೊಂಡು ತೆಱುವ ಗುತ್ತಿಗೆಯ ಹೊಂನು ಗ ೩೦ (ಎಕ. III (R), ನಂಜನ. ೩೮೪-೦೦; 1502). [ಭಕ್ತ$_2$ + ಆದಾಯ]

**ಭಕ್ತಾನುಕಂಪಿ** (ನಾ). ಭಕ್ತರಲ್ಲಿ ಕನಿಕರವುಳ್ಳವನು,– ದಯೆಯಿರುವವನು : ಭಕ್ತಾನುಕಂಪಿ[ಶಾಕಾಂ. ಭಕ್ತಾನುಕಂಪ] . . . ಪರವೆಯರ ಮುನಿಸ ತಿಳಿಪುತ್ತಿರ್ದಂ (ಸಂಐರ. ೦೬ ಸೂ೫೫).
[ಸಂ. ಭಕ್ತಾನುಕಂಪಿನ್]

**ಭಕ್ತಿ** (ನಾ). ೧. ಭಾಗಮಾಡುವಿಕೆ. ೨. ಪಾಲು ; ಪಿಸ್ಸೆ ; ಭಾಗ. ೩. ದೇವರು, ತಾಯಿ, ತಂದೆ, ಗುರು ಮೊದಲಾದವರಲ್ಲಿ ತೋರುವ ನಿಷ್ಠೆ,-ಶ್ರದ್ಧೆ,—ಪೂಜ್ಯಭಾವನೆ : ಸಿದ್ಧಭಕ್ತಿಪೂರ್ವಕಂ ತ್ರಿಜಗದ್ಗುರುವೆನಿಸಿದಸ್ಮದ್ಗುರುವೇ ಗುರುವೆಂದು ತತ್ಪದಸರಸಿಜಧ್ಯಾನಪರಾಯಣನಾಗಿ (ಅಧ್ಯ. ೦೬-೬೨ ಪ); ದೇವರೊಳಂ ಗುರುಗಳೊಳಮಾಗಮದೊಳಂ ನಂಬುಗೆಯುಂ ನಲ್ಮೆಯುಂ ಭಕ್ತಿಯುಂಮಸೂನವಾಗೆ ಘೋರವೀರತಪೋನಿಯಮನಿಷ್ಠಿತನಾಗಿ (ಸುಕುಮಾ. ೩-೪೬ ವ); ಭಕ್ತಿಯೆಂಬುವ ಮಾಡಬಾರದು ಕರಗಸದಂತೆ ಹೋಗುತ್ತ ಕೊಚಿಯುವುದು ಬರುತ್ತ ಕೊಯ್ವುದಕು (ಬಸವ. ೨೦೨). ೪. ಸೇವೆ; ಉಪಚಾರ : "ಪರಿಪಸ್ಯಾ . . . ಭಕ್ತಿಃ . . . ಉಪಚಾರಃ – ಈ ೧೧ ಬೆಸಕೆಯ್ವುದರ್ಕೆ ಪೆಸರ್" (ಪಲಾಮು. ೨೦-೦೨೯). ೫. [ತತ್ತ್ವಶಾ] ವ್ಯಂಗ್ಯಾರ್ಥವಿಲ್ಲದಿದ್ದರೂ ಹೇಳಬೇಕಾದುದನ್ನು ಬೇರೆ ರೀತಿಯಿಂದ ಹೇಳುವುದು; ಔಪಚಾರಿಕ ಪ್ರಯೋಗ; ಗೌಣ ಮತ್ತು ಲಾಕ್ಷಣಿಕ ಪ್ರಯೋಗ; ಆಲಂಕಾರಿಕ ಪ್ರಯೋಗ ; ಉ 'ಊಟ ಮಾಡಿಲ್ಲವೆಂಬುದನ್ನು ನಿನ್ನ ಮುಖವೇ ಹೇಳುತ್ತದೆ' ಎಂಬ ವಾಕ್ಯದಲ್ಲಿ 'ತಿಳಿಸುತ್ತದೆ' ಎಂಬ ಅರ್ಥದಲ್ಲಿ 'ಹೇಳುತ್ತದೆ' ಎಂಬ ಪದವಿದೆ. 'ನನ್ನ ಮನಸ್ಸನ್ನು ಸೂರೆಗೊಂಡಿರುವೆ' ಎಂಬಲ್ಲಿ 'ವಶಪಡಿಸಿಕೊಂಡಿರುವೆ' ಎಂಬ ಅರ್ಥದಲ್ಲಿ 'ಸೂರೆಗೊಂಡಿರುವೆ' ಎಂಬ ಪದವು ಪ್ರಯೋಗಿಸಲ್ಪಟ್ಟಿದೆ. ಇದಕ್ಕೆ ಭಕ್ತಿಯೆಂದು ಹೆಸರು : "ಭಕ್ತಿ"ಯೇ ಧ್ವನಿಯೆಂದು ಹೇಳಲಾದ ಪೂರ್ವಪಕ್ಷಕ್ಕೆ ಕೆಳಗಿನ ಕಾರಿಕೆಯಲ್ಲಿ ಸಮಾಧಾನ ಹೇಳುತ್ತಾನೆ (ಧ್ವನ್ಯಾಲೋ. ೪೦) ; ಪದಪದಾರ್ಥಗಳ ಸಂಬಂಧ ಶಕ್ತಿ, ಭಕ್ತಿಯೆಂದು ಎರಡು ಪ್ರಕಾರ. ಶಕ್ತಿ ಸಾಕ್ಷಾತ್ಸಂಬಂಧ. ಭಕ್ತಿ ಪರಂಪರಾಸಂಬಂಧ. ಭಕ್ತಿಯೆಂದರೆ ಭಾಗವೆಂಬ ಏಕದೇಶದಲ್ಲಿರುವುದೆಂದರ್ಥ (ಹಿಂದಶಾ. ೨೪೯). ೬. [ಜೈನ] ಸಮ್ಯಕ್ತ್ವದ ಎಂಟು ಗುಣಗಳಲ್ಲಿ ಒಂದು. [ಸಂ.]

**ಭಕ್ತಿಕ** (ಗು). ಭಕ್ತಿಗೆ ಸಂಬಂಧಿಸಿದ : ಆಗ ಸಂಗಮದೇವರಲ್ಲಿಗೆ ಹೋಗಿ ಬಸವಣನಸಮುಖ[ಶಾಕಾಂ. ಭಾ]ಕ್ತಿಕಜೋಗನಂ ಕಾಣುತ ನಮಿಸಿ ಬಿನ್ನೈಸಿದರು ಮುಂದೆ (ಬಸಪು. ೫-೬). [ಸಂ.]

**ಭಕ್ತಿಕಂಪಿತ** (ನಾ). ಭಕ್ತರ ಭಕ್ತಿಗೆ ಮಾರುಹೋಗುವವನು,-ಪರವಶನಾಗುವವನು : ಭಕ್ತಿಕಂಪಿತ ನಮ್ಮ ಕೂಡಲಸಂಗಮದೇವ (ಬಸವ. ೨೦೪). [ಸಂ.]

**ಭಕ್ತಿಕಾಂಡ** (ನಾ). ಭಕ್ತಿಯನ್ನು ಮೈಗೂಡಿಸಿಕೊಳ್ಳುವ ಘಟ್ಟ, — ಸ್ಥಿತಿ : ಕರ್ಮಕಾಂಡ ಭಕ್ತಿಕಾಂಡ ಜ್ಞಾನಕಾಂಡ ಇಂತೀ ತ್ರಿವಿಧದಲ್ಲಿ ಪಂಚಕನಾದರೆ ಈಸು ವಿಧದೊಳಗೆ ಅಂಗವಿಲ್ಲ (ಬಸವ. ೬೮೮) ; ಕರ್ತೃತ್ವ ಸಾಕ್ಷಿತ್ವಾಭಿಮಾನಗಳನ್ನು ಬಿಟ್ಟಿರುವುದೇ ಭಕ್ತಿಕಾಂಡವು (ಶಿವಾನು. ೦೨೯ ಅಡಿಟಿ).
[ಸಂ.]

**ಭಕ್ತಿಕಾಂಡಿ** (ನಾ). ಭಕ್ತಿಕಾಂಡದಲ್ಲಿ ಸಿದ್ಧಿಯನ್ನು ಪಡೆದವನು ; ಭಕ್ತಿಯನ್ನು ಸಾಧಿಸಿದವನು : ಉತ್ಪತ್ತಿ ಸ್ಥಿತಿ ಭೋಗ ಭಕ್ತಿಕಾಯವುಳ್ಳನ್ನಕ್ಕ ಭಕ್ತಿಕಾಂಡಿಯಲ್ಲ (ಬಸವ. ೬೪೮) ; ಸಕಲಕ್ರಿಯೆಗಳನೀಶ್ವರಾರ್ಪಣಂಗೈವಾತನೇ ಭಕ್ತಿಕಾಂಡಿಯೆನಿಸುವನು (ಏಷಿಕ. ೦೬).
[ಸಂ. ಭಕ್ತಿಕಾಂಡಿನ್]

**ಭಕ್ತಿಗೀತ** (ನಾ). ಭಕ್ತಿಭಾವವೇ ಪ್ರಧಾನವಾದ ಹಾಡು ; ಭಗವಂತನ ಮಹಿಮೆ ಮೊದಲಾದುವನ್ನು ಕೊಂಡಾಡುವ ಹಾಡು ; ದೇವರನಾಮ : ಎಂದಿನಂತೆ ಇಂದಾದರೂ ಆಕೆ ಕಟ್ಟಳೆ ಪ್ರಕಾರ ತನ್ನ ಭಕ್ತಿಗೀತವನ್ನು ಹಾಡಿದ್ದಳು (ಹಳ್ಳಿಕಾ. ೬೪) ; 'ಗೀತಾಂಜಲಿ'ಯು ಭಕ್ತಿಗೀತಗಳ ಸಂಗ್ರಹ (ಧರ್ಮಸಾ. ೫೯). [ಸಂ.]

**ಭಕ್ತಿತ್ರಯ** (ನಾ). [ವೀಶೈ] ಗುರು, ಲಿಂಗ ಮತ್ತು ಜಂಗಮರಿಗೆ ಸಲ್ಲಿಸಲಾಗುವ ಭಕ್ತಿ : ಲೋಕಮೋಹನಶೀಲ ಭಕ್ತಿತ್ರಯವಿಲೋಲ ವಿಧೂತಭವಜಾಲ (ಬಸಪು. ೨೦-೨). [ಸಂ.]

**ಭಕ್ತಿದಾಸೋಹ** (ನಾ). ಭಕ್ತಿಯಿಂದ ಮಾಡುವ ಸೇವೆ : ಭಕ್ತನಾಯಿತ್ತೆ ಭಕ್ತಿದಾಸೋಹಯುಕ್ತನಾಯಿತ್ತೆ ಯುಕ್ತಿದಾಸೋಹ . . . ಈ ದಾಸೋಹದ ಅನುವ ಕೂಡಲಸಂಗಯ್ಯ ತಾನೇ ಬಲ್ಲ (ಬಸವ. ೯೩೫).
[ಭಕ್ತಿ + ದಾಸೋಹ]

**ಭಕ್ತಿಪಂಥ** (ನಾ). ಭಗವಂತನ ಅನುಗ್ರಹಕ್ಕೆ ಭಕ್ತಿಯೇ ಮುಖ್ಯ ಸಾಧನವೆಂದು ನಂಬಿರುವ ಸಂಪ್ರದಾಯ ; ರಾಮದಾಸ, ತುಕಾರಾಮ ಮೊದಲಾದ ಸಂತರಿಂದ ಪ್ರವರ್ತಿತವಾದ ಸಂಪ್ರದಾಯ : ಭಕ್ತಿಪಂಥ ಬಹಳ ಹಳೆಯದು. ಭಗವದ್ಗೀತೆಯಲ್ಲಿ ಅದರ ಸ್ವರೂಪವನ್ನು ಚೆನ್ನಾಗಿ ವಿವರಿಸಿದೆ (ಧಶಾ. ೩೨); ಸುಸಂಸ್ಕೃತರು ಆತ್ಮಶಕ್ತಿಯನ್ನು ಮರೆತು ಪೂರ್ಣವಾಗಿ ದೈವವನ್ನೇ ನಂಬಬೇಕಾಯಿತು. ಈ ಸನ್ನಿವೇಶವೇ ಭಕ್ತಿಪಂಥಕ್ಕೆ ಪ್ರೇರಕವಾಯಿತು (ಮುಕ್ತ್ಯರ. ೦೦೦ ಟಿ೬೪). [ಸಂ. ಭಕ್ತಿ 'ಪಂಥಾ]

**ಭಕ್ತಿಪಥ** (ನಾ). ಪರಲೋಕಸಾಧನೆಗಾಗಿ ಹೇಳಿರುವ ಕರ್ಮಮಾರ್ಗ, ಭಕ್ತಿಮಾರ್ಗ, ಜ್ಞಾನಮಾರ್ಗಗಳೆಂಬ ಮೂರುಪ್ರಕಾರಗಳಲ್ಲಿ ಒಂದು; ಭಗವಂತನ ಭಕ್ತಿಯಿಂದ ಆತ್ಮಕಲ್ಯಾಣವನ್ನು ಸಾಧಿಸಿಕೊಳ್ಳುವ ರೀತಿ : ಅಂಗದ ಮೇಲಣ ಲಿಂಗವ ಹಿಂಗಿ ಬಂದ ಸುಖವನಾರಿಗರ್ಪಿಸುವೆ ಹಿಂಗಲಾಗದು ಭಕ್ತಿಪಥಕ್ಕೆ ಸಲ್ಲದಾಗಿ (ಬಸವ. ೬೪೩). [ಸಂ.]

**ಭಕ್ತಿಪೂರ್ವಕ** (ನಾ). ಭಕ್ತಿಯಿಂದ ಕೂಡಿಕೊಂಡಿರುವುದು ; ಭಕ್ತಿಯುಕ್ತವಾದುದು : ತತ್ಪುರಾಧೀಶಂ ದೃಢ(ಧೃತ)ಸೇನಂ ನಿಲಿಸಿ (ನಿಜಿಸಿ) ಭಕ್ತಿಪೂರ್ವಕದಿಂದಮಾಹಾರಂಗುಡೆ (ಶಾಂತಿಪು. ೯-೨೦ ವ) ; ಅವರಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತೇನೆ (ಸಂಕೋಲ. v. ೮೦೪). [ಸಂ.]

**ಭಕ್ತಿಭಂಡಾರ** (ನಾ). ಅತ್ಯಧಿಕವಾದ ಭಕ್ತಿ ; ನಿರತಿಶಯವಾದ ಭಕ್ತಿ : ಸಂಗನ ಶರಣರ ಭಕ್ತಿಭಂಡಾರವು ಎನಗೆಂತು ಸಾಧ್ಯವಪ್ಪುದು ಹೇಳೆನ್ನ ತಂದೆ (ಬಸವ. ೩೦೬). [ಭಕ್ತಿ + ಭಂಡಾರ]

**ಭಕ್ತಿಭಾವ** (ನಾ). ಭಕ್ತಿಯಿಂದ ಕೂಡಿದ ಮನೋವೃತ್ತಿ ; ಭಕ್ತಿಯಿಂದ ಪರಿಪೂರ್ಣವಾದ ಮನಸ್ಸು : ಮಸಟಿಕ್ಟಜಿಗಿ ವಿನಿರ್ಮಲ ಭಕ್ತಿಭಾವದಿಂ ಸಾಂಜಲಿನಿಟಿಲಂ ನಿಗಮವಂದ್ಯನಂ ಕೀರ್ತಿಸಿದಂ (ಕಶಶಂ. ೯-೨೦೦); ಅವರಿಬ್ಬರೂ ಪರಮಾತ್ಮನ ಬಗೆಗೆ ಉತ್ಕಟವಾದ ಭಕ್ತಿಭಾವವನ್ನು ತಳೆದಿದ್ದರು (ಶಶ. ೬). [ಸಂ.]

**ಭಕ್ತಿಮಾರ್ಗ** (ನಾ). = ಭಕ್ತಿಪಥ : ಭಕ್ತಿಮಾರ್ಗವಿದೆಮ್ಮ ಸೊಮ್ಮು ದ್ಮುಕ್ತಿವಂ ತಾನಿನ್ನು ಮಹಾನತ್ಯಕ್ತನಾಗದು ಪ್ರಿತವೆಮಗೆ (ಬಸಪು. ೪೬-೩೬); ಪೂಜ್ಯರಂ ತಿರಸ್ಕರಿಸದೆ ಭಕ್ತಿಮಾರ್ಗದೊಳೆ ಸಂಚರಿಸುತ್ತ (ಅಮಶ. ೩); ಎಲ್ಲ ಸಂಸ್ಕೃತಿಗಳೂ ಇಂಥ ಆಧ್ಯಾತ್ಮಜ್ಞಾನದೆಡೆಗೇ ನಮ್ಮನ್ನು ಕರೆದುಕೊಂಡು ಹೋಗುತ್ತವೆ. ಅವುಗಳಲ್ಲಿ ಮುಖ್ಯವಾದವು ಮೂರು : ಜ್ಞಾನಮಾರ್ಗ, ಭಕ್ತಿಮಾರ್ಗ, ಕರ್ಮಮಾರ್ಗ (ಧರ್ಮಸಾ. ೨೦). [ಸಂ.]

**ಭಕ್ತಿಯುಗ** (ನಾ). ಭಕ್ತಿಯೇ ಹೆಚ್ಚು ಪ್ರಚಾರದಲ್ಲಿದ್ದ ಯುಗ : ವಿದೇಶೀಯರ ಆಕ್ರಮಣದಿಂದ ಭಾರತಜನತೆಗೆ ಇಂಥ ಪರಿಸ್ಥಿತಿಯುಂಟಾದಾಗಲೇ " ಭಕ್ತಿಯುಗ " ಆರಂಭವಾಯಿತು (ಕಾರದ. ೯೫೬). [ಸಂ.]

**ಭಕ್ತಿಯೋಗ** (ನಾ). ಭಗವಂತನಲ್ಲಿ ಎಡೆಬಿಡದೆ ಭಕ್ತಿಯನ್ನು ಹೊಂದಿರುವುದು : ವ್ಯಾಘ್ರಪಾದನು ನಂದನಗೆ ಕರಾಗ್ರವರ್ತಿಯ ಹೇಳ್ದ ವೇದಾಗ್ರ

ದೊಳಗಿಹ ಭಕ್ತಿಯೋಗವನೊರಿದು ಷಣ್ಮುಖಿಗೆ (ಶ್ಯಾಮಸಿಂ. ೦೬ ಸೂತಕ); ನವವಿಧವಾದ ಭಕ್ತಿಯೋಗಮಾರ್ಗವ ಬೋಧಿಸಿದನಾ ಗಗನಸದ್ಗುರು (ಗಗನಾ. ೩ ಸೂತಕ) ; ಗೀತೆಯಲ್ಲಿಯ ಮೊದಲಿನ ಆರು ಅಧ್ಯಾಯಗಳನ್ನು ಕರ್ಮಯೋಗ, ನಡುವಣ ಆರು ಅಧ್ಯಾಯಗಳನ್ನು ಭಕ್ತಿಯೋಗ . . . ಹೀಗೆ ವಿಂಗಡಿಸಬಹುದು (ಧರ್ಮಸಾ. ೦೦೫). [ಸಂ.]

**ಭಕ್ತಿಯೋಗಿ** (ನಾ). ಭಕ್ತಿಯೋಗದಲ್ಲಿ ನಿರತನಾದವನು ; ಭಕ್ತಿಯೋಗ ಸಾಧಕ : ಸತ್ಯಲೋಕಾಧಿಪನವಿಡಿದು ಶತಸ್ಥದೇವಗಣಾಂತ ಎಲ್ಲರು ಭಕ್ತಿ ಯೋಗಿಗಳೆಂದು ಕರೆಸುವರಾವ ಕಾಲದಲಿ (ಹಜಾರ. ೨೩-೦೦). [ಸಂ. ಭಕ್ತಿಯೋಗಿನ್]

**ಭಕ್ತಿರತಿ** (ನಾ). ಭಕ್ತಿಯಲ್ಲಿ ತೋರುವ ಆಸಕ್ತಿ, — ವ್ಯಾಮೋಹ : ಭಕ್ತಿರತಿಯ ವಿಕಳತೆಯ ಯುಕ್ತಿಯನೇನ ಬೆಸಗೊಂಬಿರಯ್ಯಾ ಕಾಮಿಗುಂಟೆ ಲಜ್ಜೆ ನಾಚಿಕೆ (ಬಸವ. ೫೦೬); ಮಾಟಕೂಟವೆರಡಱುವುಮಂತದಿಂದವೆ ಭಕ್ತಿರತಿ ಯಯ್ಯಾ ಕೂಡಲಚೆನ್ನಸಂಗಮದೇವಾ (ಚನ್ನಬ. ೦೬-೩). [ಸಂ.]

**ಭಕ್ತಿರಸ** (ನಾ). = ಭಕ್ತಿಭಾವ : ವಿಷಯಾದಿಹಿತನ ಮಾಡಿ ಭಕ್ತಿರಸವ ದಣಿಯೆ ಮೇಯಿಸಿ ಸುಬುದ್ಧಿಯೆಂಬುದಕವನೆಱೆದು ನೋಡಿ ಸಲಹಯ್ಯಾ (ಬಸವ. ೫೦); ಭಕ್ತಿರಸಂ ಮುಸುಕುವುದನುರಕ್ತಿರಸರಿ ಮುಸಗಿಪರ್ಪುದೇತೆಱದಿರ್ಪಂ (ಚಳಿ. ೬-೨೪೦). [ಸಂ.]

**ಭಕ್ತಿಸಾರಾಯ** (ನಾ). ೧. ಭಕ್ತಿಯ ಸಾರಾಂಶ, — ತತ್ತ್ವ : ಏನೆಗೆ ನಿನ್ನ ರೂಪು ನಿರೂಪಾದ ಬಳಿಕ ಭಕ್ತಿಸಾರಾಯದ ಪಥವನೊಲ್ಲೆನಯ್ಯ (ಶೀಲವ. ೩೪-೩೪). ೨. ಭಕ್ತಿಯ ರಹಸ್ಯವನ್ನು ತಿಳಿದುಕೊಂಡಿರುವವನು : ಭಕ್ತಿತತ್ತ್ವವನ್ನು ಆಳವಾಗಿ ಅಭ್ಯಾಸಮಾಡಿರುವವನು : ಭಾವ ಸಾರಾಯರ ಭಕ್ತಿಸಾರಾಯರ ತೋಱಯ್ಯಾ ನಿಮ್ಮ ಧರ್ಮ (ಬಸವ. ೫೦೩). [ಭಕ್ತಿ + ಸಾರಾಯ₂]

**ಭಕ್ತಿಸ್ಥಲ** (ನಾ). = ಭಕ್ತಸ್ಥಲ : ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ . . . ತನು ಕರಗಿ ಮನ ಕರಗಿ ನೋಡಿ ಮಾಡುವುದು ಭಕ್ತಿಸ್ಥಲ (ಬಸವ. ೯೬೪); ಗುರುವಿಂಗೆ ತನು ಲಿಂಗಕ್ಕೆ ಮನ ಜಂಗಮಕ್ಕೆ ಧನವ ಕೊಟ್ಟೆನೆಂಬನ್ನಕ್ಕ ಭಕ್ತಿಸ್ಥಲ (ಷಡಗೋ. ೨-೦೦೮). [ಸಂ.]

**ಭಕ್ತಿಹೀನ** (ನಾ). ಭಕ್ತಿಯಿಲ್ಲದವನು : ಭಕ್ತಿಹೀನನ ದಾಸೋಹವ ಸದ್ಭಕ್ತರು ಸವಿಯರು (ಬಸವ. ೬೦೮) ; ದೇವ ಇಂತಹ ಭಕ್ತಿಹೀನನ ಬಸುಱೊಳೆನ್ನುವನು ನೀವು ಹುಟ್ಟಿಸಲಹುದೆ (ಬಸವು. ೫೦-೬೪). [ಸಂ.]

**ಭಕ್ತಿಹೀನತೆ** (ನಾ). ಭಕ್ತಿಯಿಲ್ಲದಿರುವಿಕೆ : ಅಕ್ಕಟಾ ಮೆಚ್ಚುವನೆ ಇಂತಹ ಠಕ್ಕರಿಗೆ ಕಲಿನಾಥನಿದನೆಂತಕ್ಕೆ ಕೇಳ್ದಿವೆ ಭಕ್ತಿಹೀನತೆಯಾದ ವಾರ್ತೆಯನು (ಬಸವು. ೩೬-೦೬). [ಸಂ. ಭಕ್ತಿಹೀನತಾ]

**ಭಕ್ತೆ** (ನಾ). ಭಕ್ತಿಯುಳ್ಳವಳು ; ಭಕ್ತಿಯಿಂದ ಕೂಡಿರುವವಳು : ಗಂಡ ಶಿವಲಿಂಗದೇವರ ಭಕ್ತ ಹೆಂಡತಿ ಮಾರಿಮಸಣೆಯ ಭಕ್ತೆ (ಬಸವ. ೦೦೪); ಅವಳು ಭಕ್ತೆ (ಬಸವು. ೧೦-೪). 'ಪತಿಭಕ್ತೆ' ಪರಾ. [ಸಂ. ಭಕ್ತಾ]

**ಭಕ್ಷ** (ನಾ). ೧. ತಿಂಡಿ ; ಭಕ್ಷ್ಯ : "ತೈಲಾದಿ ತುಪ್ಪದೊಳ್ ತಾಳಿಸಿದು ವೈದೆ ಭಕ್ಷಮೆನಿಕ್ಕು" (ಶಬ್ದಮಣಿ. ೬೪-೩); ಹಱಿದ ಭಕ್ಷವನುಂಡು ಕೇರಿಗೆ ಮಣ್ಣನು ಪೊಱುವರ ಕಾಡಿ ಕರಿಕಾಲಚೋಳ ಭರದಲ್ಲಿ ಪೊಯ್ಯಲು ಹರಿ ದಾಡಿವಂದದಿ ಕರುಣದಿ ಕಾಣ ನೀ (ಕೊಡಚ. ಅಮಬಂ. ೨೦-೦೦೦); ಪಕ್ಷವಿಲ್ಲ ದಿದ್ದರೂ ಭಕ್ಷಕ್ಕೆ ಕಡಿಮೆಯೆ ? (ಗಾದೆ). ೨. ಆಹಾರ; ಉಣಿಸು : ನಿಡಿಯರ್ ಬಲ್ಲಾಯದ ಬಲ್ದಡಿಗರ್ ಪಂದಿರ್ದರಯ್ವರಾಲದ ಕೆಟಿಗಿಂ ತೊಡರ್ದರ್ ನಮ್ಮಯ ಭಕ್ಷದೊಳ್ (ಪಂಕಪಾ. ೩-೦೨); ಊಳಿಗಾಳಿಯ ರೆರಡುಸಾಸಿರದಾಳು ಗೈವರು ಭಕ್ಷಗಳನಾ ಕೂಳ ಬಡಿಸುವಳೋರ್ವಳ್ (ಜಿಕ್ಕ್ಯ ಪು. ೭೪-೦೬). [ಸಂ.]

**ಭಕ್ಷಕ** (ಗು). ೧. ತಿನ್ನುವ; ಕಬಳಿಸುವ. (ನಾ). ೨. ತಿನ್ನುವವನು ; ಕಬಳಿಸುವವನು : 'ನರಭಕ್ಷಕ' ಪರಾ. ೩. ಹೆಚ್ಚು ತಿನ್ನುವ ಸ್ವಭಾವದ ವನು ; ಹೊಟ್ಟೆಬಾಕ : "ಭಕ್ಷಕಃ, ಘಸ್ಮರಃ, ಅದ್ಮರಃ—ಈ ೩ ತಿನ್ಬಾಳಿ" (ಹಲಾಯು. ೫೮-೦೯೫). [ಸಂ.]

**ಭಕ್ಷಕಾರಿ** (ನಾ). = ಭಕ್ಷಕ ೩ : "ಅದ್ಮರಂ ಘಸ್ಮರಂ ಭಕ್ಷಕಾರಿ ತಿನ್ಬಾಳಿಯುಕ್ಕುಂ" (ಪಂಗಿರಾ. ೬೮-೦೦). [ಸಂ. ಭಕ್ಷಕಾರಿನ್]

**ಭಕ್ಷಣ** (ನಾ). ೧. ತಿನ್ನುವುದು. ೨. ಆಹಾರ : "ವಲ್ಭನಂ . . . ಭಕ್ಷಣಂ . . . ಸ್ವದನಂ—ಈ ೧೧ ಊಟಂ" (ಹಲಾಯು. ೫೪-೦೬೦). ೩. ಲಾಡು ಮೊದಲಾದ ಭಕ್ಷ,—ತಿಂಡಿ. [ಸಂ.]

**ಭಕ್ಷಣೆ** (ನಾ). ೧. = ಭಕ್ಷಣ ೨ : ಎಲ್ಲಿಗೆಲವೋ ಹೋಗದಿರು ಕಪಿ ನಿಲ್ಲು ಬಂದವಳಾವಳೆಂಬುದ ಬಲ್ಲವಿಕೆಯಲಿ ನೋಡು ಭಕ್ಷಣೆಗಾದೆ ನೀನೆನಗೆ (ತೊರರಾ. ೫-೦-೨); ಹಸಿವಾತ ರಾಕ್ಷಸಿಯ ಭಕ್ಷಣೆಗೆ ಹೊರಗಾಗಿ ತೃಪ್ತಿ ಯಲಿ ಕಳೆದಿರುವೆಯಾ ? (ಅರಳು. ೪೪೪-೦೦); ದಾಕ್ಷಿಣ್ಯವಂತನು ದಕ್ಷಿಣಕ್ಕೆ ಹೋದರೆ ಭಕ್ಷಣೆ ಸಿಕ್ಕೀತೇ ? (ಗಾದೆ). ೨. ಆಹಾರವನ್ನು ರುಚಿಕರ ವಾಗಿ ಮಾಡುವ ವ್ಯಂಜನ : "ಉಪದಂಶಃ, ಅವದಂಶಃ, ಭಕ್ಷಣಂ— ಈ ೩ ಕುಡಿವುತ್ತೆ ಬಾಡಿಸುವುದು" (ಹಲಾಯು. ೫೪-೦೬೩). [ಸಂ. ಭಕ್ಷಣ]

**ಭಕ್ಷಿ** 'ಬಕ್ಷಿ' ನೋ.

**ಭಕ್ಷಿತ** (ಗು). ೧. ತಿನ್ನಲ್ಪಟ್ಟ ; ನುಂಗಿದ : ದಕ್ಷಮುಖಿಕ್ಷಯುಕ್ಷವ ಭಕ್ಷಿತಕ್ಷ್ವೇಡ . . . ಅಕ್ಷಯ ರಕ್ಷಿಸೆಮ್ಮುವನು (ಬಸವು. ೬೦-೯೩). (ನಾ). ೨. ತಿಂದುದು : "ಭಕ್ಷಿತಂ, ಚರ್ವಿತಂ . . . ಭುಕ್ತಂ— ೧೪ ಭುಜಿಸಲ್ಪಟ್ಟದ್ದು" (ಸಿದ್ಧಾಂತಿ. ೩೫೨). [ಸಂ.]

**ಭಕ್ಷಿಸು** (ಕ್ರಿ). ತಿನ್ನು; ಕಬಳಿಸು; ಸೇವಿಸು : ನೀವು ಮಾಡಿದ ಬಯಲು ಭಕ್ಷಿಸಿತ್ತು ಅನಂತ ಹಿರಿಯರನು (ಬಸವ. ೬೫೭); ತಾನೇಂ ಮಾನಿಸರನು ಭಕ್ಷಿಸಲು ರಾಕ್ಷಸನೇ (ಬಸವು. ೨೫-೦೬); ರಕ್ತಬೀಜಾಸುರನಂ ಭಕ್ಷಿಸುವದಕ್ಕೆ ಬಾಯ್ದೆಱೆದಿರ್ದಾ ಪರದುರ್ಗಿಯ ಪಲ್ಗಳಪೊಲ್ ಪಿರಿದಾಪ್ಪರಗೆಲಂಟೆದೆನೆಗಳೊಪ್ಪಿದವು (ಹರಿಶ್ಚ. ೦-೬೦). [ಭಕ್ಷಣ + — ಇಸು₃]

**ಭಕ್ಷೀಸ್** 'ಬಕ್ಷೀಸು' ನೋ.

**ಭಕ್ಷೀಸು** 'ಬಕ್ಷೀಸು' ನೋ.

**ಭಕ್ಷ್ಯ** (ಗು). ೧. ತಿನ್ನಬಹುದಾದ ; ತಿನ್ನತಕ್ಕ. (ನಾ). ೨. ತಿನ್ನಲು ಯೋಗ್ಯವಾದುದು; ತಿನ್ನತಕ್ಕುದು : ಗುರುಶಿಷ್ಯ ಪಾತ್ರಾಪಾತ್ರ ಪೇಯಾಪೇಯ ಭಕ್ಷ್ಯಾಭಕ್ಷ್ಯ ಗಮ್ಯಾಗಮ್ಯ ವಧ್ಯಾವಧ್ಯಾದಿ ವಿಭಾಗ ವಿಚಾರಮನೊಡಂಬಡದೆ (ಕಸಾರ. ೦೦೦). ೩. ತಿಂಡಿ; ತಿನಿಸು; P "ಭಕ್ಷ್ಯ-೫ : (ಅ) ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಪಾನೀಯ (ವಿದ್ಯಾಕ. ೫೦). (ಆ) ಅತಿರಸ, ಹೋಳಿಗೆ, ಲಡ್ಡು, ಜಿಲೇಬಿ, ಅಪೂಪ (ಅಪ್ಪಂ) (ಸಾಂಖ್ಯಿ. ೫೫)" (ಶ್ರೀವತ್ಸ. ೩೦೦): ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ ನಾನಾಪ್ರಕಾರದ ಪಾನಂಗಳುಮಂ ಭಟ್ಟಾರ್ಗೆ ಬಡ್ಡಿಸಿ (ವಡ್ಡಾರಾ. ೭೮-೦೬) ; ಭಕ್ಷ್ಯಾದಿಗಳಂ ಬೇಡುವ ಮಕ್ಕಳ ಬಾಳ ಕ್ರೀಡೆಗಳಂ ನೋಡುತಿರ್ಪುದೊಂದಿರವಲ್ತೇ (ಸುಕುಮಾ. ೯-೦೦೦); ನಳನಳಿಪ ಬಹುವಿಧದ ಭಕ್ಷ್ಯಾವಳಿಯ ಹೆಡೆಗೆಗಳೋರಣಿಸಿ ಮಂಡಳಿಸಿ (ಕುಮಾ್ಯಾಸ. ೦೦-೨೫). ೪. ಲಾಡು, ಹೋಳಿಗೆ ಮುಂತಾದ ಸಿಹಿತಿಂಡಿ : ಸಾಮಾನ್ಯವಾಗಿ ದೇವರ ಸಮಾರಾಧನೆಯಂದು ಭಕ್ಷ್ಯಕ್ಕೆ ಹೋಳಿಗೆಯನ್ನು ಮಾಡುತ್ತಾರೆ (ರೂಢಿ). [ಸಂ.]

**ಭಕ್ಷ್ಯಕಾರ** (ನಾ). ಸಿಹಿತಿಂಡಿಯನ್ನು ಮಾಡುವವನು ; ಭಕ್ಷ್ಯವನ್ನು ಮಾಡುವವನು : "ಅಪೂಪಿಕಃ, ಕಾಂದವಿಕಃ, ಭಕ್ಷ್ಯಕಾರಃ—೩ ಬಜ್ಜಾಯ ಮುಂತಾದ ಭಕ್ಷ್ಯಗಳನ್ನು ಮಾಡುವವನಿಗೂ ಹೆಸರುಗಳು" (ಸಿದ್ಧಾಂತಿ. ೨೬೨). [ಸಂ.]

**ಭಗ** (ನಾ). ೧. ಸೂರ್ಯ : "ಆದಿತ್ಯ: . . . ಭಗ: . . . ತ್ರಯೀತನು:— ಈ ೪೭ ಆದಿತ್ಯನ ಪೆಸರ್" (ಅಭಿಧಾ. ೬-೪೩); ಬೆಳ್ಳಿ ಕರಗಿ ಬೆಳಗಾಯ್ತು ಏಳು ಹಗಲಾಗಿ ಭಗನೆ ಸುಡನೆ ? (ಅಕಾ. ೧೦೦-೪). ೨. ದ್ವಾದಿಶಾದಿತ್ಯರಲ್ಲಿ ಒಬ್ಬ : ಅನಲನ ಭುಜಂದಱಿದು ಜಿಹ್ವೆಯಂ ಕೊಯ್ದು ಪೂಷನ ಪಲ್ಗಳನುದಿರ್ಚಿ ಭಗನ ಕಣ್ಣಂ ಕಳೆದು . . . . ನೋಯಿಸೆ (ಶಬ್ದಾ. ೦೦-೨೪೦) ; ಭಗನ ಕಣ್ಣಂ ಕಿಳ್ತನೆಂದು ಪೇಳ್ಗಂ ಮತ್ತೆ ಭಗನೇತ್ರ ಎನುತುಂ (ಅಶಾ. ೩-೦೬_೦೬). 'ಭಗಘ್ನ' ಪದಾ. ೩. ಕೀರ್ತಿ; ಯಶಸ್ಸು : ಪೊಗಟ್ ಜಗತೀಚಕ್ರಂ ದಿಕ್ಚಕ್ರದೊಳ್ [ಭ]ಗಮಾವಾಗಂ ನೆಗಟ್ ವಿಜಯೋಜ್ಯೋಗವ್ಯಾಭಾಸಮಾನಮಹೋದಯುಂ ಮಗುಟ್ದ್ದು (ಪರ್ವಶಾ. ೨-೩೦). ೪. ಸ್ತ್ರೀಯ ಗುಹ್ಯ; ಯೋನಿ : "ಭಗ:, ಯೋನಿ:, ಉಪಸ್ಥ:, ವರಾಂಗಂ, ಸ್ಮರಮಂದಿರಂ—ಈ ೫ ಉಪಸ್ಥಂ" (ಪಠಾಯು. ೬೩-೩೬೦); ಭಗಮಲರ್ದ ಕೆತ್ತುಗುಂ ಗುದಮಾಗಿಗುಂ ತೊಡೆ ನಡುಗುಗುಂ ಲತಾಂಗಿಗೆ (ಮದಶಾ. ೦೦-೩೭) ; ಬಿಸುನೀರಿಂ ಪೂಸುಗೆ ತಾಂ ಕಿಸುಗುಳಿಯಪ್ಪವಳ ಭಗದ ಗಂಧಂ ಕಿಡುಗುಂ ( ಕೊಕಶಾಕ. ೪-೦೩೨ ) . ೫. ಜನ್ಮಾಂತರಗಳಲ್ಲಿ ಮಾಡಿರುವ ಪಾಪ ಪುಣ್ಯ ಪುಣ್ಯಕಾರ್ಯಗಳ ಪರಿಣಾಮ,— ಫಲ. ೬. ಭಾಗ್ಯ; ಅದೃಷ್ಟ. ೭. ಸಂಪತ್ತು; ಐಶ್ವರ್ಯ. ೮. ಏಳಿಗೆ; ಅಭ್ಯುದಯ. ೯. ಘನತೆ; ಹಿರಿಮೆ. ೧೦. ಉತ್ಕೃಷ್ಟತೆ; ಶ್ರೇಷ್ಠತೆ. ೧೧. ಬಲ; ಶಕ್ತಿ; ಸಾಮರ್ಥ್ಯ. ೧೨. ಮಹಾತ್ಮೆ. ೧೩. ಪ್ರಯತ್ನ; ಸಾಹಸ. ೧೪. ತೇಜಸ್ಸು; ಕಾಂತಿ. ೧೫. ಒಲುಮೆ ; ಪ್ರೀತಿ. ೧೬. ಪವಿತ್ರತೆ ; ಪರಿಶುದ್ಧತೆ. ೧೭. ಅರಿವು ; ಜ್ಞಾನ. ೧೮. ಧರ್ಮ. ೧೯. ವಿರಕ್ತಿ; ವೈರಾಗ್ಯ. ೨೦. ಸಂಯಮಿ; ಯತಿ. ೨೧. ಮುಕ್ತಿ; ಮೋಕ್ಷ. ೨೨. ಜಪ; ಸ್ತುತಿ. ೨೩. ಭವಿತವ್ಯ. ೨೪. ದೇವತೆ : "ಸೂರ್ಯನೊಳು ಧರ್ಮದೊಳು ಯೋಗಿಯೊಳು ಯಶದೊಳೈಶ್ವರ್ಯದೊಳು ಜ್ಞಾನದೊಳು ವೈರಾಗ್ಯದೊಳು ದೇವವೀರ್ಯದೊಳು ಮುಕ್ತಿಯೊಳು ಶ್ರೀಯೊಳು ಮಹಾತ್ಮ್ಯೆಯೊಳು ಭರ್ಗನೊಳು ಭಗಮೆನಿಕ್ಕುಂ" (ಮಂಗರಾ. ೦೩೦-೫೧); "ತಪನಂ ಸಂಯುಮಿ ಧರ್ಮ ಕೀರ್ತಿ ವೈರಾಗ್ಯ ಜ್ಞಾನಮೈಶ್ವರ್ಯ ಯೋನಿ ಪವಿತ್ರಂ ಭವಿತವ್ಯ ಶಕ್ತಿ ಕಿರಣಂ ಗೀರ್ವಾಣರುಂ ಮುಕ್ತಿಯುಂ ಜಪ ಮಾಹಾತ್ಮ್ಯಂಗಳುಂ ಭಗಾಖ್ಯಂ" (ಶಾಶಾರ. ೩೩). [ಸಂ.]

**ಭಗಂದರ** (ನಾ). ೧. ಗುಹ್ಯಪ್ರದೇಶದಲ್ಲಿ ಉಂಟಾಗುವ ಒಂದು ಬಗೆಯ ವ್ರಣರೋಗ : "ಭಗಂದರ:—ಶಿಶ್ನೋಪಸ್ಥಗಳ ಬಳಿಯಲ್ಲಿ ಹುಟ್ಟುವ ಹುಣ್ಣು" (ಸಿದ್ಧಾಂತಿ. ೦೬೪) ; ಪಿಟಕಂ ಶೂಲ ಭಗಂದರಂ ಕುಷ್ಠ ಕ್ಷಯ ಗಂಡಶಿರೋವೇದನೆ ಮೊದಲಾಗೊಡೆಯವೇಟಿನೂಱುವ್ಯಾಧಿಗಳೊರ್ಮೊದಲೆ ಮೆಯ್ಯೊಳ್ ಪುಟ್ಟಿದೊಡೆ (ಪದ್ಮಾಶಾ. ೬೪-೦೦) ; ಸತಿಯಂ ವಿಚಾರಿಪಾಗಳು ಋತಿಗಂಗೆಯೊಳವನಿಪತಿ ಭಗಂದರದೊಳು ಮುಂ ಪ್ರತಿದಿನಮಿಟ್ಟನ್ನಮ ನುಂಡ ತೆಱಂ ತನಗಕ್ಕುಂ (ಮುದಶಿ. ೯-೨೦) ; ಬಾಯಿಂದ ಬಂತು ಭಗಂದರ (ಗಾದೆ). ೨. ಒಬ್ಬ ಋಷಿಯ ಹೆಸರು. [ಸಂ.]

**ಭಗಘ್ನ** (ನಾ). ಭಗನೆಂಬ ಆದಿತ್ಯನನ್ನು ಅಡಗಿಸಿದವನು ; ವೀರಭದ್ರ : ರತ್ನಮಯದಂಡಮಂತದನೆಯ್ದೆ ಪಿಡಿದು ಬರಲಾ ಭಗಘ್ನಂ . . . ನಡೆದ ಸಭವಂ (ವೀಶ್ವಕೃ. ೨-೩-೪೩). [ಸಂ.]

**ಭಗಣ** (ನಾ). ೧. ನಕ್ಷತ್ರಗಳ ಗುಂಪು, — ಸಮೂಹ : ಭಗಣದ ಲೆಕ್ಕಮಂ ಮಟಿಯ ನೀರ್ವನಿಯಂ . . . ಪವಣಿಸಲ್ ಬಗೆದರ್ವನೆ ಗಾಂಪನಾಗನೇ (ಶಂಶಾಪಾ. ೦೩-೦೦); ನೆಗಟ್ದ್ದ ದ್ವೀಪದ ಮಧ್ಯದಲ್ಲಿ ಕಲಶಂ ಚಂಡಪ್ರಭಂ ಪಂಜರಂ ಭಗಣಂ . . . ಗಗನಚ್ಛತ್ರದ ಹೇಮದಂಡಮೆನಿಸಲ್ ಸಾಲ್ದತ್ತು ಹೇಮಾಚಲಂ (ಜಗಶಿ. ೦-೨೩) ; ಮುತ್ತಿನ ಬಿಂಬದ ಜಾಳದೆ ಮುತ್ತಿನ ವಿಭ್ರಮದಿನೆಸೆವ ಬೆಳ್ಗೊಡೆ ಭಗಣಂ ಸುತ್ತಿರೆ ಮಿಸುಗುವ ಶಶಿಯೆನಿಸುತ್ತಿರೆ (ಕುಶಕೃ. ೦೦-೨೩). ೨. [ಛಂದ] ಮೊದಲನೆಯ ಅಕ್ಷರ ಗುರುವೂ ಉಳಿದೆರಡು ಲಘುಗಳೂ ಆಗಿರುವ (–UU) ಒಂದು ಅಕ್ಷರಗಣ : ಆದಿ ಗುರುವಾಗೆ ಭಗಣಂ (ಛಂದೋಂಬು. ೦-೪೪ ಅತಿಶಯ). [ಸಂ.]

**ಭಗಣಮಂಡಲ** (ನಾ). ನಕ್ಷತ್ರಗಳ ಗುಂಪು ; ತಾರಾಮಂಡಲ : ಒಡಿದು ಸರ್ಪನೆ ತಿರುಹಲಮರರು ನಡುಗಿ ಕಂಗೆಟ್ಟೋಡಿತತ್ತಲು ಬಿಡದೆ ಸುಂಟರಗಾಳಿಯುಟ್ಟಿತು ಭಗಣಮಂಡಲಕೆ (ಕೌಶಿಶಾ. ೨೩-೪೩). [ಸಂ.]

**ಭಗದಾಳ**, ಬಗದಳ, ಬಗದಾಳ (ನಾ). = ಭಗಂದರ ೧ : ಹೆಗ್ಗಳ್ಳದ ಬೇರು ತೂಕ ೭, ಅರಿಯುಉಮ್ಮತ್ತಿಯ ಎಲೆ ತೂಕ ೭, ತುಪ್ಪ ತೂಕ ೭ ಇವ ಅರೆದು ಪೂಸೆ ಭಗದಾಳ ಮಾಣ್ಗುಂ (ಏಷ್ಯಾ. ೬೩). **ಬಗದಳ** : ಕರಸ್ಥಲವೆಂಬುದು ಕೈಕೆಟ್ಟ ಹುಣ್ಣು ಅಮಳೋಕ್ಯವೆಂಬುದು ಬಾಯ ಬಗದಳ ಅಂಗಸೋಂಕೆಂಬುದು ಪಾಪದ ತಮರ್ಮನೆ (ಅಪಶಂ. ೦೦೪-೪೭೪) ; ಬಾಯೊಳಗಣ ಬಗದಳಕ್ಕೆ ಎನ್ನ ಕೇಳಬೇಡ (ಸಶವ. III. ೬೩-೦೩೨) ; ಶರಣರ್ಗೆ ಸರಿ ಸುರನರರೊಳಿಲ್ಲೆನಲು . . . ಸರಿಯೆಂಬ ಬಾಯ್ಗೆ ಬಗದಳ ವೋಗದಿರ್ಪುದೇ (ಶಂಶಪ. ೦೭-೦೯೨). **ಬಗದಾಳ** : ಬಾಯಿಗೆ ಬಂತು ಬಗದಾಳ ಬೆನ್ನಿಗೆ ಬಂತು ಭೇತಾಳ (ಗಾದೆ).

[←ಮರಾ. ಭಗದಳ, ಭಗದಡ, ಭಗದಾಡ. /ಪ್ರಾ. ಭಗಂದಲ]

**ಭಗಭಗ** (ನಾ). ಒಂದು ಅನುಕರಣ ಶಬ್ದ : ಅವರು ಮಾಡಿದ ಅನ್ಯಾಯ ನೆನೆಸಿಕೊಂಡರೆ ಹೊಟ್ಟೆ ಭಗಭಗ ಎಂದು ಉರಿದುಹೋಗುತ್ತೆ (ರೂಢಿ).

**ಭಗರ** (ನಾ). (ಉಪವಾಸದ ದಿನ ಅಲ್ಪಾಹಾರಕ್ಕೆ ಬಳಸುವ) ಒಂದು ಬಗೆಯ ತೃಣಧಾನ್ಯ : ಅಳಿಯುವ ಆ ಘರ್ಯಾದ ಖಂಡಗದ ಮೇಲೆ ಧಾರಣಿ. ಇರತಕ್ಕ ಜೀನಸುಗಳು ೧. ಹವೀಜ ; ೨. ಅವಲಕ್ಕಿ; ೩. ಭಗರ (ವರಯುದ ಅಕ್ಕಿ) (ಮುಂಬಿಪ್ರಾ. ೦೩೦). [←ಮರಾ. ಭಗರ]

**ಭಗರಿ** 'ಬವರಿ' ನೋ.

**ಭಗವ** (ನಾ). ವೈಷ್ಣವ ಸಂನ್ಯಾಸಿ : ಭಗವರೊಳಂ ಗೊರವರೊಳಂ ಸುಗತರೊಳಂ ಋಷಿಯರೊಳಮಾದೆಂದುಂ ಪಾಷಂಡಿಗಳಿಂದೆ ನೆಚ್ಚರುಂ ನಲ್ಕೆ ಗಳವರಾದನೆಂದುಮಿಲ್ಲ ಪಾರ್ವರಿಗೆಂದುಂ (ಕಶಾ:ಶ. ಅಸಂಶಿಂ. I. ೦೦-೩೪).

[<ಸಂ. ಭಗವತ್?]

**ಭಗವಂತ** (ನಾ). ೧. ದೇವರು ; ಪರಮಾತ್ಮ : ಭಗವಂತನೆ ಕವಿ ಸಹೃದಯ ನಾಂ (ಅಶೀ. ೩೦-೨) ; ಈ ಈಶ್ವರನು ಮಹದೈಶ್ವರ್ಯಗುಣ ಪೂರ್ಣನಾದ ಭಗವಂತನು ; ಏಮೇವಾದ್ವಿತೀಯನು (ಶಾರದ. ೦೫೭) ; ಅರ್ಜುನನು ಮಹಾಸಂಗ್ರಾಮಕ್ಕೆ ಅಣಿಯಾಗುತ್ತಾನೆ. ಹೀಗೆ ಭಗವಂತನ ಕಾರ್ಯ ಫಲಿಸುತ್ತದೆ (ಶಮಗಾ. ೦೩೬). ೨. ವಿಷ್ಣು. ೩. ಶಿವ ; ಈಶ್ವರ. ೪. ಜಿನ ; ಅರ್ಹಂತ. ೫. ಗೌತಮ ; ಬುದ್ಧ ; ಆನಂದನವರನೆಬ್ಬಿಸುತೊಡನೆ ಮರಳಿ ಬರೆ, ಭಗವಂತ ಮೆಲ್ಲನೀತಂದ (ವೃಶಾಶಿ. ೬೩-೩); ಭಗವಂತನು ಒಂದು ಸಲ ಶ್ರಾವಸ್ತಿಯ ಜೇತವನದಲ್ಲಿ ಅನಾಥಪಿಂಡಿಕನ ಆರಾಮದಲ್ಲಿ ತಂಗಿದ್ದನು (ಬುದ್ಧಕ. ೦೩೩). ೬. ಪೂಜ್ಯರನ್ನು ಉದ್ದೇಶಿಸುವಾಗ ಬಳಸುವ ಶಬ್ದ : ಅಜ್ಞಾನಾಚಾರ್ಯ ಭಗವನ್ತರಾಸ್ಥಾ ಸಮಾನ್ ದೇವಾಚಾರ್ಯಭಗವನ್ತರ್ಗ್ಗೆ ಕೊಟ್ಟು (ಎಶಿ. X, ೦೬೩-೩; 733). [ ಸಂ. ಭಗವತ್ ]

**ಭಗವತಿ** (ನಾ). ೧. ಗೌರಿ ; ಪಾರ್ವತಿ : ''ರುದ್ರಾಣೀ . . . ಭಗವತೀ, ದುರ್ಗ . . . ಮೇನಕಾತ್ಮಜಾ—ಈ ೨೧ ಗೌರೀದೇವಿಯ ಪೆಸರ್'' (ಪಠಾಯು. ೪-೦೩); ಮರಿಯಸೆಯೊಳ್ ಭಗವತಿಯಂ ಪದಿಷ್ಠೆಗೆಯ್ಸಿದೊಡೆ (ಪ್ರಅಂ. ೦೪೨೪, ೩೬-೩; ೩ಪಡು ೬೩) ; ಆ ಭಗವತಿ ಕೊರ್ತು ಬೀರಸಿರಿಯಿವಾಗೆ ಭುಜಾಸಿಗೆ ನಾಗವರ್ಮನಾ (ಛಂದೋಂಬು. ೦-೪). ೨. ಲಕ್ಷ್ಮಿ, ಸರಸ್ವತಿ ಮೊದಲಾದ ಸ್ತ್ರೀದೇವತೆ. ೩. ತಪಸ್ವಿನಿ, ಋಷಿಪತ್ನಿ, ಮೊದಲಾದ ಪೂಜ್ಯಸ್ತ್ರೀಯರನ್ನು ಕುರಿತು ಹೇಳುವಾಗ ಬಳಸುವ ಪದ : ಎಲಾ

ಭಗವತಿಯರಿರಾ, ಮಹಾದೇವಿಯರಿರಾ ಇತ್ತ ಕಡೆಗೆ ಬರಬೇಕು (ಅರಾಹ. ೯-೩ ವ).

**ಭಗವತಿಅಂಕಕಾಱ** = ದೇವಿಯ ಭಕ್ತನೆಂದು ಪ್ರಸಿದ್ಧನಾದವನು; ಒಂದು ಬಿರುದು : ಸ್ವಸ್ತಿಶ್ರೀಮನುಮಹಾಮಂಡಳೇಸ್ವರಂ ಚೋಳರ ಭೀಮ ಚೋಳನಾರಾಯಣ ಭಗವತಿಅಂಕಕಾಱ ನಾಗರಸನ ಕುಮಾರವೀರ ಬೊಂಮರಸಂಗೆ ಬಸುರುಕೋಡನು . . . ಕೊಟ್ಟನು (ಎಇ. IX–i, ೩೭೭–೦೨; 1278). **ಭಗವತಿಯೇಱು** = ದುರ್ಗೆಯ ಯುದ್ಧ : ದೇವೀಸಂಗರ : ಭಗವತಿಯೇಱುವೇಟ್ವ ತೆಱದಿಂ ಕಥೆಯಾಯ್ತು ಮಱೇಱು (ಶಂಶತಾ. ೦೦–೧೬); ಗಣ್ಡವಾತುಗಿಬಗಿ ಕೀರ್ತಿಕಾಪ್ಪ ಉಱಿಮುತ್ತರು ಮೂದಲೆ ಪೆಂಪು ವಿಕ್ರಮಂ ಭಗವತಿಯೇಱು ಶೌಚಗುಣಮತ್ತಿಯ ಪೆಣ್ಣನಿಪೇಳ ಪುಣ್ಣರಂ ತೆಗಳ್ದುದುದ್ವಾರಚಾರುಚರಿತಪ್ರಭೆಯಿಂ ಪಡೆವಳ್ಳ ತೈಲನ (ಎಇ. XI–i, ೩೨–೩೪; ತು. 1007); P 'ಭಗವತಿ'ಯು ಪರಾಶಕ್ತಿಯ ಒಂದು ಸ್ವರೂಪ. ಪಾರ್ವತಿಯಾಗಿ, ದುರ್ಗೆಯಾಗಿ ಅವಳು ದುಷ್ಟಶಕ್ತಿಯನ್ನು ನಾಶಮಾಡಿದ ಕಥೆ ಪ್ರಸಿದ್ಧ. ಆದುದರಿಂದ **ದೇವಿಯ ಯುದ್ಧ**, **ದೇವೀಸಂಗರ**, ಭಗವತಿಯೇಱು ಎಂಬ ಪದಗಳಲ್ಲಿ ಈ ದೇವಿಯು ಮಾಡಿದ ಯುದ್ಧದ ಕಥೆ ಅಥವಾ ಪುರಾಣದ ಕಥೆ ಸೂಚಿತವಾಗುತ್ತದೆ. [ ಸಂ. ಭಗವತೀ ]

**ಭಗವತ್ಪಾದ** (ನಾ). ಮತಾಚಾರ್ಯರೇ ಮೊದಲಾದ ಪೂಜ್ಯರನ್ನು ಸಂಬೋಧಿಸುವಾಗ ಹೇಳುವ ಒಂದು ಗೌರವಾರ್ಥಕಶಬ್ದ : ಶಂಕರಭಗವತ್ಪಾದರು ಜಗನ್ಮಿಥ್ಯಾವಾದಿಗಳಾದರೂ ಅವರ 'ಮಿಥ್ಯಾ' ಪದ ಪ್ರಯೋಗದ ಅರ್ಥವೇ ಬೇರೆ (ಶಾರದ. ೦೨೨ ಅಶಲ). [ ಸಂ. ]

**ಭಗವತ್ಪಾದಿ** (ನಾ). (ವಿಷ್ಣುವಿನ ಪಾದದಿಂದ ಹುಟ್ಟಿದುದೆಂದು ಹೇಳುವ) ಗಂಗಾನದಿ : ಸುತ್ತ ಬಳಗದ ಕೂಡೆ ಕುಳಿತು ಭಗವತ್ಪಾದಿ ಪೆತ್ತ ದೇವನ ಸ್ಮರಣೆಮಾಡಿಕೊಳ್ಳುತ (ಐದಾಕ್ಯ. ೩೨–೦).
[ < ಸಂ. ಭಗವತ್ಪದೀ ]

**ಭಗವದಿಚ್ಛೆ** (ನಾ). ದೈವೇಚ್ಛೆ ; ಈಶ್ವರಸಂಕಲ್ಪ : ಪ್ರಕಟಣೆಗಾಗಿ ಒಂದೆರಡು ಪ್ರಯತ್ನಗಳು ನಡೆದುವಾದರೂ ಪ್ರಕಟವಾಗಲಿಲ್ಲ. ಭಗವದಿಚ್ಛೆ ಹಾಗಿತ್ತು (ಸಪಹ. XV, ಶ್ರೀನಾ. ತಪ) ; ಭಗವದಿಚ್ಛೆಯಿದ್ದರೆ ಶಿಕ್ಷೆ ರದ್ದಾಗುತ್ತದೆ (ಪುಪರು. ೨೫೬). [ ಸಂ. ಭಗವದಿಚ್ಛಾ ]

**ಭಗವದ್ಗೀತೆ** (ನಾ). ಹಿಂದುಗಳ ಸುಪ್ರಸಿದ್ಧವಾದ ಧರ್ಮಗ್ರಂಥ: ಮಹಾಭಾರತದ ಭೀಷ್ಮಪರ್ವದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶ ಮಾಡಿದ ತತ್ತ್ವವನ್ನು ವಿವರಿಸುವ ಹದಿನೆಂಟು ಅಧ್ಯಾಯಗಳನ್ನೊಳಗೊಂಡ ಗ್ರಂಥಭಾಗ : ವೇದಗಳ ಸಾರಸರ್ವಸ್ವ ಉಪನಿಷತ್ತುಗಳಾದರೆ, ಉಪನಿಷತ್ತುಗಳ ಸಾರಸರ್ವಸ್ವ ಭಗವದ್ಗೀತೆ (ಶಾರದ. ೦೦೯); ಉತ್ತಮಸಂದೇಶವನ್ನು ನೀಡುವ ಭಗವದ್ಗೀತೆಯೊಡನೆ ಕೂಡಿದ ಮಹಾಭಾರತವು ಪಂಚಮವೇದವೆನ್ನಿಸಿಕೊಂಡಿತು (ಪುಣ್ಯರ. ೦೦೨ ಶೀಲಿ). [ಸಂ. ಭಗವದ್ಗೀತಾ]

**ಭಗವನ್** 'ಭಗವಾನ್' ನೋ.

**ಭಗವಾ** (ಗು). ಕಾವಿ ಬಣ್ಣದ : ತಿರಿದುಂಬುವ ಕಾಯಕಕ್ಕೊ, ವೇದಾಂತ ಮಾರ್ಗದ ಹೆಸರಿನಲ್ಲಿ ಗುಂಪುಕಟ್ಟಿಕೊಂಡು ತಿರುಗುವ ಭಗವಾ ವೇಷ ಭೂಷಣವಲ್ಲಿರುವ ಗಾಂಜಾಮೇಳದವರಿಗೂ ಸೇರುತ್ತಿರಲಿಲ್ಲ (ಶಂಕಶ. ೬೩ ಕರಿಗಾಷ್ಟಕಂಶಯು) ; ದುಡ್ಡಿನ ಅಭಾವದಿಂದ ಟಿಳಕರು ಭಗವಾಕಪನಿ ಧರಿಸ ಹತ್ತಿದರು (ಸ್ವಾತಿಶ. ೯೩೩) ; ಭಗವಾ ಝೆಂಡಾ ಸುಟ್ಟು ಬೂದಿಯಾಯಿತು (ಶಾರಸಂ. ೨೦). [←ಹಿಂ. ಮರಾ. ಭಗವಾ]

**ಭಗವಾನ್**, **ಭಗವನ್** (ನಾ). ೧. ಗುರುಹಿರಿಯರನ್ನು ಸಂಬೋಧಿಸುವಾಗ ಬಳಸುವ ಗೌರವಸೂಚಕವಾದ ಒಂದು ಶಬ್ದ : "ತತ್ರಭವಾನ್, ಭಗವಾನ್—(ಇವೆರಡುಂ) ಈ ೨ ಪೂಜಾವಚನಂ" (ಶಬ್ದಯು. ೨೩–೦೩೪). ೨. ಬುದ್ಧ: "ಸರ್ವಜ್ಞಸ್ಸುಗತಃ, ಬುದ್ಧಃ, ಧರ್ಮರಾಜಃ, ತಥಾಗತಃ, ಸಮಂತಭದ್ರಃ. ಭಗವಾನ್. . . ಮುನಿಃ—೧೮ ಬುದ್ಧದೇವರ ಹೆಸರುಗಳು" (ಸಿದ್ಧಾಂತಿ. ೦೬). **ಭಗವನ್**, ೧. ಭಗವನ್, ನಾನು ಮಿಗಾರ (ಹತ್ತುಕು. ೯೯). [<ಸಂ. ಭಗವತ್]

**ಭಗಾಂಕುರ** (ನಾ). "ಗಂಡಸಿನ ಶಿಶ್ನಕ್ಕೆ ಸರಿಹೋಲುವ ಹೆಂಗಸಿನ ಜನನೇಂದ್ರಿಯ ಭಾಗ; ಭಗಾಂಕುರ" (Clitoris. ೩೦೯೦). [ಸಂ.]

**ಭಗಿನಿ** (ನಾ). ೧. ಒಡಹುಟ್ಟಿದವಳು; ಸಹೋದರಿ : "ಭಗಿನೀ, ಜಾಮಿಃ, ಸ್ವಸಾ — ಈ ೩ ಒಡಹುಟ್ಟಿದವಳ್" (ಶಬ್ದಮ. ೬೯–೩೩೩) ; ೩ನೆಯ ಮಾಧವನು ಅಶ್ವಮೇಧಯಾಜಿಯಾದ ಕದಂಬಕೃಷ್ಣವರ್ಮನ ಭಗಿನಿಯನ್ನು ವಿವಾಹ ಮಾಡಿಕೊಂಡಿದ್ದನು (ಕರ್ನಾಟ. ೨೦). ೨. ಮಹಿಳೆಯರನ್ನು ಸಂಬೋಧಿಸುವಾಗ ಬಳಸುವ ಒಂದು ಶಬ್ದ: ಭಗಿನಿಯರೆ, ನಿಮ್ಮ ಸಮಾಜಕ್ಕೆ ನನ್ನನ್ನು ಆಹ್ವಾನಿಸಿ ಗೌರವಿಸಿದುದಕ್ಕೆ ನಾನು ಕೃತಜ್ಞನಾಗಿದ್ದೇನೆ (ಹೂಂ). ೩. ಪುಣ್ಯವಂತೆ; ಭಾಗ್ಯವಂತೆ. [ಸಂ. ಭಗಿನೀ]

**ಭಗಿನಿಜ** (ನಾ). ಸೋದರಿಯ ಮಗ ; ಸೋದರಳಿಯ : "ಭಗಿನಿಜಂ ಸ್ವಸ್ರೀಯ ಸೋದರಳಿಯಂ" (ಮಂಗರಾ. ೯೩–೦೯). [<ಸಂ. ಭಗಿನೀಜ]

**ಭಗನೀಪತಿ** (ನಾ). ಸೋದರಿಯ ಗಂಡ; ಅಕ್ಕ ಅಥವಾ ತಂಗಿಯ ಗಂಡ. [ಸಂ.]

**ಭಗೀರಥ** (ನಾ). ಸ್ವರ್ಗಲೋಕದಲ್ಲಿದ್ದ ಗಂಗಾನದಿಯನ್ನು ತನ್ನ ಅಸಾಧಾರಣ ಪ್ರಯತ್ನದಿಂದ ಭೂಮಿಗೆ ತಂದನೆಂದು ನಂಬಲಾದ ಸೂರ್ಯವಂಶದ ಒಬ್ಬ ಚಕ್ರವರ್ತಿ: ದೀಕ್ಷಾಗ್ರಹಣಮನೋರಥಂ ಮಹಾರಥಂ ಭಗೀರಥಂಗೆ ಸಾಮ್ರಾಜ್ಯಪದವಿಯಂ ದಯೆಗೆಯ್ದು (ಅಜಿತ. ೦೦–೦ ವ); ಇದು ಭಗೀರಥರಥದ ಬೆಂಕೊಂಡು ಪರಿವ ಸುರನದಿಯ ಪ್ರವಾಹಮೆನಲ್ . . . ಐತಪ್ಪ ಚತುರಂಗದ ಪದಹತಿಗೆ ಧರೆ ನಡುಗುತಿರೆ (ತ್ರಿಲಿಪ್ರಾ. ೪–೨೮).

**ಭಗೀರಥಪ್ರಯತ್ನ** = ವಿಶೇಷವಾದ ಪ್ರಯತ್ನ : ಗಾನಯೋಗದಾದ್ಯಂತಮಂ ಅಹಂಕೃತಿಗೊಡರ್ಮದಲ್ಲಂ. . . ಭಗೀರಥಪ್ರಯತ್ನಕಮೊಳಗಾಗದು (ಅದ್ಭುತ. ೨೮–೦೨); ಆ ಹುಡುಗಿಗೆ ಗಂಡು ಗೊತ್ತುಮಾಡುವುದಕ್ಕೆ ಭಗೀರಥಪ್ರಯತ್ನ ಮಾಡಬೇಕಾಯಿತು (ರೂಢಿ). [ಸಂ.]

**ಭಗ್ಗನೆ** (ಅ). ಒಂದು ಅನುಕರಣಾವ್ಯಯ ; ಕೂಡಲೆ ; ತಟ್ಟನೆ : ಒಗ್ಗೊಡೆಯದೊತ್ತಿ ನಡೆತಹನು ಭಟರೆದೆನಡುಗಿ ಝುಗಿದರು ಹಿಂದೆ ಹಿಂದೆ ನಿಂದೆ ಸೈನ್ಯ ಭಗ್ಗನೊಡೆದುದು (ಶಾಂಡಕ. ೯೦–೦೭). [ಭಗ್$_0$+—ಅನೆ$_1$]

**ಭಗ್ನ** (ಗು). ೧. ಮುರಿದ; ಒಡೆದ : ಈ ಭಗ್ನಜೋಪಡಿಯು ನಿನ್ನದೇ (ಪವೃಕ್ಷ. ೬೭). ೨. ಸೋತ; ಸೋಲಿಸಲ್ಪಟ್ಟ. ೩. ಹಾಳುಮಾಡಲ್ಪಟ್ಟ; ನಾಶಗೊಂಡ. ೪. ಎದೆಗುಂದಿದ ; ನಿರಾಶೆಗೊಂಡ. (ನಾ). ೫. ಮುರಿದಿರುವುದು : ನಂದಗೋಪಂ ಪೊಱವೊಟಲಿಂ ಬಂದು ಭಗ್ನವಾಗಿರ್ದ ಮಹಾಸ್ಕಂಧಶಾಖಾರ್ಜುನವಿಟಪಿಯುಮಂ. . . ಕಂಡು (ಜಗದ. ೩–೩೯ ವ); ೬. ಎರಡಾಗಿ ಒಡೆದುದು ; ಹೋಳಾದುದು : "ಭಿನ್ನಂ ಭಂಗುರ ಭಗ್ನಂ . . . ಛಿತಮಾಕ್ಯಂ" (ಪತ್ತುಕೋ. ೦೦೬–೯೮); ಭಗ್ನವಾದ ಮೂರ್ತಿಗೆ ಭಂಗಾರದ ಗುಡಿಯಿಂದೇನು ? (ರತ್ನರ್ಪ. ೨೫೭). [ಸಂ.]

**ಭಗ್ನಪಾಠ** (ನಾ). ಪ್ರಾಚೀನಗ್ರಂಥಗಳಲ್ಲಿ ಕಂಡುಬರುವ ತ್ರುಟಿತ ಭಾಗ ; ನಷ್ಟಪಾಠ : ಭಗ್ನಪಾಠಕ್ಕಂತ ತಾತ್ಕಾಲಿಕಪಾಠವೇ (stop gap) ಉತ್ತಮ ಎಂಬುದು ಅವರ ನೀತಿ (ಶಾರಶ. ೯೯). [ಸಂ.]

**ಭಗ್ನಮಂದಿರ** (ನಾ). ಮುರಿದು ಬಿದ್ದ ಮನೆ ; ನೆಲಸಮವಾದ ಮನೆ : ಆ ಭಗ್ನಮಂದಿರವನ್ನು ಜೀವಪೂರ್ಣದೇಗುಲವನ್ನಾಗಿಸುವ ಕೆಲಸ ಹರೆಯಕ್ಕೆ ಬಂದ ಮಗ ಈರನದಾಗಿತ್ತು (ಮಂಗಾಮು. ೬೯). [ಸಂ.]

**ಭಗ್ನಮನ** (ನಾ). ನಿರಾಶೆಗೊಂಡ ಮನಸ್ಸು : ಭಗ್ನಮನಮಲ್ಲದಚಲಿತ ಲಗ್ನವೃತೆಯಾಗಿ . . . ಪಂಚಾಗ್ನಿಯ ನಡುವಗಡೆ ವಿಪುಳತಪದೊಳ್ ನಿಂದಳ್ (ಗಿರಿಜಾ. ೯-೯). [ಸಂ. ಭಗ್ನಮನಸ್]

**ಭಗ್ನಮನೋರಥ** (ನಾ). ಕೈಗೂಡದ ಆಸೆಯುಳ್ಳವನು ; ನಿರಾಶನಾದವನು : ಭಗ್ನಮನೋರಥಂ ರತಿಸುಖಾಸವಸೇವೆಗೆ ಪಂಚಬಾಣ ಪಂಚಾಗ್ನಿ ತಪಕ್ಕೆ ನಿಲ್ವ ವಿರಹಾತುರನಂತಿರೆ (ಅರ್ಧನೇ. ೯-೦೨೮) ; ಅರಮನೆಗೆ ನಡೆಯೆನಲು ತಂದೆಯು ಪರಮವಚನವಲಂಘ್ಯವೆನೆ ಕಾತರಿಸಿ ಭಗ್ನಮನೋರಥನು ಮರಳಿದನು ಮಂದಿರಕೆ (ಕುಮಾ. ೩-೨೩). [ಸಂ.]

**ಭಗ್ನಲತಾವೇಷ್ಟನ** (ನಾ). [ಕಾಮಶಾ] ಆಲಿಂಗನದಲ್ಲಿ ಒಂದು ಪ್ರಕಾರ: ನಿಂದಿರ್ದ ಪುರುಷನ ಮುಂದಲೆಯ ಹೆಡಗಯ್ಯಂ ಬರಸೆಗೆದು ಅತ್ಯಂತ ಬಾಗಿಸಿ ಆತನ ಕೊರಳು ಬೆನ್ನಂ ತೊಡೆಗಳಿಂದಾಲಿಂಗಿಸಿ ಆತನ ಶಿಕದಲ್ಲಿ ಕಪೋಲಗಳನ್ನಿಕ್ಕಿಕೊಂಡುಯಿಂತಿಪ್ಪಳು. ಆತನ ಕೈಗಳಿಂದೆರಡುತೊಡೆಗಳಂ ಪಿಡಿದು ಇರುತಿರ್ಪನು. ಇದು ಭಗ್ನಲತಾವೇಷ್ಟನವೆಂಬುವರಿದು (ಕಾಮಶಾ. ೨೨೩). [ಸಂ.]

**ಭಗ್ನಾಂಗ** (ನಾ). ೧. ಮುರಿದ ಅವಯವ. ೨. ಅಂಗವಿಕಲನಾದವನು : ರಿಕ್ತಕುಂಭಂ ವಿಲಾಪಿಪ ಭಗ್ನಾಂಗನ ಕುಷ್ಠಿಯುಂ ವಿಧವೆಯುಂ ಕೊಂದಾಟವುಂ ಧೂಮಮುಂ ನಿಪುಣರ್ ಕಂಡರೆ ಪೋಗರ್ಪೆ (ಸೋಮೇಶ. ೬೮). [ಸಂ.]

**ಭಗ್ನಾವಶೇಷ** (ನಾ). ಬಹು ಭಾಗ ಹಾಳಾಗಿ, ಉಳಿದಿರುವ ಅಂಶ : ನಮ್ಮ ಸುತ್ತಮುತ್ತಲೆಲ್ಲಾ ಹಳೇ ಸಂಪ್ರದಾಯದ ಭಗ್ನಾವಶೇಷವನ್ನೇ ನೋಡುತ್ತಿದ್ದೇವೆ (ಶಾರದ. ೫೬೯). [ಸಂ.]

**ಭಗ್ನಿಸು** (ಕ್ರಿ). ಮುರಿ ; ಭೇದಿಸು : ಭಗ್ನಿಸಿ ಜೀವನಬಾವು ಬೆಳಗೆನೆ ಮೂಲು ನಗ್ನಾತ್ಮನೆಂಬಾಗಳೊಂದೆ (ಶರಶ. ೬೬-೮೭). [ಭಗ್ನ + —ಇಸು₃]

**ಭಗ್ನೋತ್ಸಾಹ** (ನಾ). ಉತ್ಸಾಹವನ್ನು ಕಳೆದುಕೊಂಡವನು : ನಿರುತ್ಸಾಹಿ : ಕ್ಷುತ್ಪಿಪಾಸಾಶೀತಾತಪ ಪ್ರಮುಖಪರೀಷಹಂಗಳಂ ಸೈರಿಸಲಾಱದೆ ಭಗ್ನೋತ್ಸಾಹರುಂ ದೂರೋತ್ಸಾರಿತಾಭಿಮಾನಿಗಳುಮಾಗಿ (ಆದಿಪು. ೯-೮೮ವ). [ಸಂ.]

**ಭಚಕ್ರ** (ನಾ). ನಕ್ಷತ್ರಮಂಡಲ : ಗ್ರಹಗಳ ಚಾರವನ್ನು ನಿರ್ದಿಷ್ಟವಾಗಿ ಮಾಡಲು ಅವು ಭೂಮಿಯ ಸುತ್ತಲೂ ತಿರುಗುವ ಹಾಗೆ ಕಾಣುವ ಭಚಕ್ರವನ್ನು (zodiac) ಹನ್ನೆರಡುರಾಶಿಗಳಾಗಿ (ಮೇಷ, ವೃಷಭ ಇತ್ಯಾದಿ) ವಿಂಗಡಿಸಿದರು (ಶಿಲ್ಪಶಾ. ೪೦). [ಸಂ.]

**ಭಚಲ** (ನಾ). (?) : ಕುಡುಕೂರ ಭಚಲ ದೋರಯ್ಯನ ಮಗಂ ಮಾರಯ್ಯಂ ಬಿನವಾರನೊ × × × ಳ್ದಿಯ ಪೆಳ್ಳಿಯೂರಬಾವಿನೊಳ್ಸತ್ತಾ (ಎಕ. IV, ಹುಣಸೂ. ೫೦-೯; 997). [ ? ]

**ಭಜಕ** (ನಾ). ಪೂಜಿಸುವವನು ; ಭಕ್ತ ; ಉಪಾಸಕ : ಭಜಕಂ ದೈವದ ಭಕ್ತಿಯುಳ್ಳೊಡೆ ಭಟಂ ನಿರ್ಭೀತ ತಾನಾದವಂ (ಸೋಮೇಶ. ೯); ಹೊಲಬುಗೆಡಿಸಿದನಖಿಳನಿಗಮಂಗಳನು ತನ್ನಟೀಕೆಯಲಿ ಭಜಕಂಗೊಲಿದು ತಾನ್ಯೆತರಲು ಕರುಣದ ಘನತೆಯೆನೆ ಲೋಕ (ಕುಮಾ. ಅ. ೬-೦೯). [ಸಂ.]

**ಭಜನ** (ನಾ). ೧. ಭಾಗ ಮಾಡುವಿಕೆ. ೨. ಆರಾಧನೆ ; ಉಪಾಸನೆ ; ಪೂಜೆ. ೩. ಭಕ್ತಿ. ೪. ಸೇವೆ ; ಉಪಚಾರ ; ಶುಶ್ರೂಷೆ. ೫. ಹೊಂದುವುದು ; ಪಡೆಯುವುದು. ೬. =ಭಜನೆ ೩. ೭. [ಗಣಿತ] ಭಾಗಹಾರ : (೬). [ಸಂ.]

**ಭಜನೆ** (ನಾ). ೧. ಪೂಜೆ ; ಆರಾಧನೆ : ಅಹುದಹುದು ಭಕ್ತಿಭಾವದ ಭಜನೆ ಎಂತೆಂತಹುದೊ (ಅವತ. ೨೦೮-೯೬೮) ; ಪರಶಿವನ ಭಜನೆಯಿಲ್ಲದನಾಮಿಕರುಗಳಿರಾ (ಬಸವು. ೫೦-೪೮) ; ಕಣ್ಬೇಟವೇ ಕಂಜಾಕ್ಷ ಕಾಮಾರಿಗಳ ಭಜನೆಯಲಿ (ಕೊರಾ. ೦-೫-೪೪). ೨. ಸೇವೆ; ಉಪಚಾರ; ಶುಶ್ರೂಷೆ : ದುರುಳ ಮದಕರಿಗಾತು ಮಡಿವೆನೊ ಗುರುಭಜನೆಯಿಲ್ಲದಕೆ ಶಾಂತಿಯ ದಾವುದವಧರಿಸಿ (ಬಸವು. ೬೦-೫೮). ೩. ದೇವರ ನಾಮ, ಸ್ತೋತ್ರ ಮೊದಲಾದುವನ್ನು ತಾಳ, ಮದ್ದಳೆ ಮೊದಲಾದ ವಾದ್ಯಗಳೊಂದಿಗೆ ಸಂಗಡಿಗರೊಂದಿಗೆ ಹಾಡುವುದು : ಭಜನೆಯ ಮಾಡಿ ಬಾಗಿಲ ಬಂದು ಕಾದಿಹ ದ್ವಿಜರನುಮತವ ಕೇಳಿಸದ ನಿಜಲೋಭಿಶತವೆಂಬಂದದಿ ಸಾಲ್ಗಟ್ಟಿ ಕುಜವಿರ್ದುದಾ ಬನಬನದಿ (ಮೋಹಕ. ೨೪-೪೮). ೪. ಸ್ತೋತ್ರರೂಪವಾದ ಹಾಡು: ಭೋಜನವಿಲ್ಲದಿದ್ದರೂ ಭಜನೆ ಇರಬೇಕು (ಗಾದೆ). ೫. ಆಶ್ರಯ ; ಆಸರೆ: 'ಭಜನೆಗೆಡಿಸು', 'ಭಜಿಸು' ಪರಾ.

**ಭಜನೆಮನೆ**=ಅನೇಕರು ಒಟ್ಟಾಗಿ ಒಂದೆಡೆ ಸೇರಿ ದೇವರ ಭಜನೆ ಮಾಡುವ ಸ್ಥಳ : ರಾಮನವಮಿಯಾದುದರಿಂದ ಅಂದು ಭಜನೆಮನೆಯಲ್ಲಿ ಬಹಳ ಜನ ಸೇರಿದ್ದರು (ರೂಢಿ). **ಭಜನೆಮಾಡು**=ದೇವರನ್ನು ಕುರಿತು (ಗುಂಪಾಗಿ) ಹಾಡು.—ಸ್ತೋತ್ರ ಮಾಡು ; (ಸಾಮೂಹಿಕವಾಗಿ) ಸ್ತುತಿಸು : ಊರ ಹುಡುಗರು ಮತ್ತು ಹೆಂಗಸರು ಗಂಡಸರು ಆದಷ್ಟು ಹೊತ್ತು ಭಜನೆಮಾಡುತ್ತಾರೆ (ವಚನ್ನಕು. ೪೨). [ಸಂ. ಭಜನ]

**ಭಜನೆಗೆಡಿಸು** (ಕ್ರಿ). ಆಶ್ರಯವಿಲ್ಲದಂತೆ ಮಾಡು ; ನೆಲೆಗೆಡಿಸು : ಭಜನೆಗೆಡಿಸಿದನಧುರರನು ಸೂರ್ಯಜನ ಸರಿಭಟನಾವನಿಲ್ಲೆಂದಜಸುರರು ಕೊಂಡಾಡೆ (ಕೋಗದು. ೨೨-೬೪). [ಭಜನೆ + ಕೆಡಿಸು₁]

**ಭಜನೆವಂತ** (ನಾ). ದೇವರ ಭಜನೆಯಲ್ಲಿ ತೊಡಗಿದವನು: ತ್ರಿಸಂಧ್ಯಾಕಾಲದ ಭಜನೆವಂತರೆಲ್ಲರು ಪುರಾಣದ ಪುಣ್ಯವಂತರು (ಸೋಮೇಶಬಾ. ೦೦೬-೪೨೬). [ಭಜನೆ + —ವಂತ]

**ಭಜಾವಳಿ** (ನಾ). "ಹೆಚ್ಚು ದೀರ್ಘಸ್ವರಗಳಿಂದಲೂ ಕೆಲವೇ ಹ್ರಸ್ವಸ್ವರಗಳಿಂದಲೂ ಕೂಡಿ, ಪ್ರತಿಸ್ಥಾಯಿಯಲ್ಲೂ ತಾನ ಪ್ರಾರಂಭ ಮತ್ತು ಮುಕ್ತಾಯವಾಗುವಿಕೆ" (ಸಂಗೀಶಂ. ೮೮). [ ? ]

**ಭಜಿ**, **ಬಜ್ಜಿ₁**, **ಬಜ್ಜಿ₂** (ನಾ). ಕಲಸಿದ ಕಡಲೆಹಿಟ್ಟಿನಲ್ಲಿ ತರಕಾರಿ ಬಿಲ್ಲೆಗಳನ್ನು ಅದ್ದಿ ಕರಿದು ಮಾಡುವ ಒಂದು ಬಗೆಯ ಭಕ್ಷ್ಯ : ಕರಿದ ಎಣ್ಣೆಯಲ್ಲಿಯೇ ಕರಿದರೂ ಬಾಯಿಗೆ ನವೋನವವಾದ ರುಚಿಕೊಡುವ ಆ ಭಜಿ . . . ಸವಿಯಬೇಕೆಂಬ ಲವಲವಿಕೆಯಾಗುತ್ತದೆ (ಹುಂಗಾಪು. ೫೬). **ಬಜ್ಜಿ₁** : ಕಡಲೆಬೇಳೆಯ ಹಿಟ್ಟನ್ನು ಬಜಿ ಮತ್ತು ಬೋಂಡಕ್ಕೆ ಅದ್ದಿಟ್ಟಾಗಿಯೂ . . . ಉಪಯೋಗಿಸುತ್ತಾರೆ (ಅಡುಗೆ. ೭೬); ಆ ದಿನದ ಬಜಿ ದಿವ್ಯವಾಗಿತ್ತು (ದೇಶಕು. ೮೪) **ಬಜ್ಜಿ₂** : ಏನು ಕೊಡಲಿ ಸಾರ್, ಜಾಮೂನ್ . . . ಬೋಂಡಾ, ಬಜ್ಜಿ (ಮಹಾಂ ೪೬). [←ಮರಾ. ಭಜೇ]

**ಭಜಿಕೆ** (ನಾ). ಒಂದು ಬಗೆಯ ವನಸ್ಪತಿ : "ಭಜಿನಕಾ—ಭಾರಂಗಿ" (ಓಷಂ. ೦೦೦). [ ? ]

**ಭಜಿಯಿಸು** 'ಭಜಿಸು' ನೋ.

**ಭಜಿಸು**, **ಭಜಿಯಿಸು** (ಕ್ರಿ). ೧. ಪೂಜಿಸು ; ಆರಾಧಿಸು : ತಂದೆ ಕೇಳೀರೇಳು ಲೋಕದ ತಂದೆಯುಂ ಭಜಿಸದೆ ರತೀಶನ ತಂದೆಯುಂ ಬಿದಿ ರವಿ ಶಿಖಿಗಳುಂ ಭಜಿಸಿ ಕರ್ಮಕ್ಕೆ ತಂದೆ (ಬಸವು. ೩-೮೦); ಮಹಿಮಾರ್ಣವನನೇಸು ಭವಂಗಳಲಿ ಭಜಿಸಿದರೊ ನಿನ್ನವರು (ಕುಮಾ. ಅ. ೦೬-೩೦); ಇಭಮುಖಂಗೆ ಗುಣಾವಶ್ಯವಂ ಕೊಟ್ಟು ನಿನ್ನ ಭಜಿಸಿದರಿಷ್ಟಮಹುದೆಂದು ವರವನಿತ್ತು . . . ವಿರೂಪಾಕ್ಷನೊಪ್ಪಿದಂ (ಶಬಪು. ೨೮-೩೬). ೨. ಸೇವಿಸು ; ಆಶ್ರಯಿಸು: ಶಾಸ್ತ್ರ ಘನವೆಂಬೆನೆ ಕರ್ಮವ ಭಜಿಸುತ್ತಿದೆ (ಬಸವ. ೨೦೮); ಅಗಣಿತ ಧುರವಿಜಯ ದೋರ್ಬಲರು ಮಣಿಮಯಮಕುಟವರ್ಧನರು ಚರಣಕಾನತರಾಗಿ ಸಳ ಭೂಪರನ ಭಜಿಸುತಲಿರ್ದರು (ನಳಚ. ೦-೨೬); ಪತಿಯನೆ ಪರದೇವತೆಯೆಂದು ಭಜಿಸುವ ಸತಿಯರ ಸನ್ನುತಿಸುವೆನು (ಹರಿಶ. ೨-೩). ೩. ಧ್ಯಾನಿಸು ; ಚಿಂತಿಸು : ಭಜಿಸು ನಿತ್ಯಾನಿತ್ಯವಸ್ತುವ ವಿಜಯನಹೆ ಇಹಪರಕೆ ತತ್ವದ ನಿಜವಿದೆಲೆ (ಕುಮಾ. ಅ. ೪-೦೦) ; ಆ ಯದುಕುಲೇಂದ್ರನಂ

ಭಜಿಸುವೆಂ ಚಿತ್ತಶುದ್ಧಿಯೊಳರಣ್ಯದೊಳು (ಕ್ಕಶಿಣಾ. ೨-೦೯). **ಭಜಿಯಿಸು:** ೧. ಭಜಿಯಿಪೆನೆನ್ನ ಸತ್ಕೃತಿಗೆ ಸತ್ಕೃತಿಸಾಧನಮೆಂದು ನಾಂದಿಯೊಳ್ ನಿಜಕವಿತಾನುಕೂಲಗುಣಭದ್ರನಂ (ಧರ್ಮನಾ. ೧-೨೦) ; ಕದಿರ ರೇಮನಾ ಗುರುಪದಮಂ ಭಜಿಯಿಸುತೇಳುಂ ದಿನವಿರ್ದು (ಕೃಷಿ. ೩೩-೨೫) ; ಮಂತ್ರಜಪಂಗಳಿಂದೆ ಸಂಭಾವಿಪರಾವನಂ ಭಜಿಯಿಪರ್ ಮುನಿಗಳ್ ಮನುಗಳ್ (ಶಶಿಂ. ೯-೦೦೭). ೨. ಆ ಭುಜದೊಳೆ ಶಂಖಚಕ್ರನಳಿನೀಗದೆಗಳ್ ಕೊಡರ್ದಂತೆ ಸೌಷ್ಠವಂ ಭಜಿಯಿಸಿದತ್ತು (ಜಗಿಂ. ೫-೬೮). ೪. ಹೊಗಳು ; ಸ್ತುತಿಸು : ಭಜಿಯಿಸುವ ಪುಣ್ಯಪಾಠಕರ ಪರಕೆಗಳೊಳಗೆ ಬರುತಿರ್ದನಪ್ರತಿಮಸುಕುಮಾರಶೇಖರಂ (ವಂಶರ. ೩-೮೦). ೫. ಅನುಸರಿಸು; ಪಾಲಿಸು : ಆದಿಯ ಚಕ್ರವರ್ತಿಗಳ್ ಭಜಿಯಿಸಿದೀ ಪದಂ ಮಸುಳ್ಗುಂ (ಶಾಂತಿಪು. ೦೦-೬೭).
[ ಭಜನ + — ಇಸು$_3$]

**ಭಜ್ಜಿಸು,** ಬಜ್ಜಿಸು (ಕ್ರಿ). ೧. ಕಾಳು ಮೊದಲಾದುವನ್ನು ಹುರಿ. ೨. ನಾಶಪಡಿಸು ; ತಲೆಯೆತ್ತದಂತೆ ಮಾಡು : ಸಜ್ಜಿಸಿದನು ಸಕಲರು ಈಕ್ಷಿಸುತಿರೆ ಭಜ್ಜಿಸಿದನು ಎರಡು ತುಂಡುಮಾಡಿ (ಕೃಸಪ. ೬೦-೯ ). **ಬಜ್ಜಿಸು :** ೨. ಗುಜ್ಜುಹೊಗುವುದು ಹೆಂಗಳಿದಿರಲಿ ಬಜ್ಜದೊರೆವುದು ಕೀಳುಬೇಕರ ಬಜ್ಜಿಸುವುದಿದು ನಿನ್ನ ಪೌರುಷವೆನುತ ತೆಗೆದೆಚ್ಚ (ಕೃಶಾ.ತ. ೦೫-೬೦).

[ಭರ್ಜನ$_0$ ( P ← ಪ್ರಾ. ಭಜ್ಜಣ. / ಸಂ. ಭರ್ಜನ) + — ಇಸು$_3$ ]

**ಭಟ$_1$** 'ಬಂಟ$_2$' ನೋ.

**ಭಟ$_2$** (ನಾ). ೧. ಯುದ್ಧದಲ್ಲಿ ಕಾದುವವನು ; ಸೈನಿಕ ; ಬಂಟ : ನಿರ್ಧರದ ಭಟ ಜೀವಗಳನಲ್ಲಿ ಅದ್ದಲಿಸಿಕೊಂಬನೇ (ಕರ್ಣಪ. ೦೨೦-೬೨೦) ; ಭಟರಶ್ವಮನಶ್ವಂ ಗಜಘಟೆಯಂ ಗಜಘಟೆ ತೆರಳ್ದು ರಥಮಂ ರಥಮುತ್ಕಟ ಭಯದಿಂದೋಡಿ ದಿಶಾತಟಮಂ ಮಚಿಗೊಳೆ ಹಲಾಯುಧಂ ತಳ್ತಿಜಿದಂ (ಜಗಂ. ೬-೬೦); ರ್‍ಝಳಪಿಸಿ ಪೊಯ್ಯೆ ಖಡ್ಗಲತೆ ಮಿಂಚು ಭಟರ್ಕಳ ಬೊಬ್ಬೆಯಬ್ಬರಂ ಮೊಳಗು (ಚಕಶು. ೨-೨೨). ೨. ಪರಾಕ್ರಮಶಾಲಿ; ಶೂರ : " ವೀರಃ, ಶೂರಃ, ವಿಕ್ರಾಂತಃ, ಭಟಃ, ಚಾರುಭಟಃ — ಈ ೫ ಕಲಿ" (ಶಲಾಯು. ೫೮-೦೯೯) ; ಭಟನಲ್ಲದಿರ್ದಡೆ ಬಾಣನಂದನೆಯು ಲಂಪಟಿಕೊರ್ಪಸಂಘೈಸುವರೆ (ಮೋಹಕ. ೩೯-೦೨). ೩. ಬೇಡ ; ಕಿರಾತ : "ಕಿರಾತಃ, ಶಬರಃ . . . ಭಟಃ, ಮಾಳಃ, ಮ್ಲೇಚ್ಛಃ — ಈ ೮ ಬೇಡ ಮೊದಲಾಗುಳ್ಳಂತ್ಯಜಾತಿಗಳ್" (ಶಲಾಯು. ೯೮-೯೯೫). ೪. ಸೇವಕ ; ದೂತ : 'ಭಟಾಳಿ' ಪರಾ. [ಸಂ.]

**ಭಟಕ** (ನಾ). ಸೇವಕ ; ಆಳು : ಬಡಿಮುತಲಹರೆ ನಿನ್ನಯ ಭಟಕರುಗಳು ಬಡಿಸೆಂದು ತಮಮೈತಂದು (ಜ್ಞಾ.ಪಶ. ೩೮-೬೬). [ಸಂ.]

**ಭಟಕಟಾಹ** (ನಾ). ಸೈನಿಕರ ಗುಂಪು,— ಸಮೂಹ : ಸ್ಯತಿರು ನೀನಾಗರ್ಿದು ತನ್ನಂ ನುಡಿದು ಭಟಕಟಾಹಕ್ಕೆ ಚಣ್ಣಿಂದೆ ಸೂಸುತ್ತುರಿಯಂ ಕಲ್ಪಾಂತದುಗ್ರಾಂತಕನ ಮುಸಕಮಂ ತಾಳ್ದಿದಂ ರಾಜಪುತ್ರಂ (ಶಂಪ್ರಥ. ೫-೦೨೬). [ಸಂ.]

**ಭಟಗುತಿಗೆ** (ನಾ). ಸೈನಿಕರಿಗಾಗಿ ಕೊಡುವ ದವಸ ಧಾನ್ಯ ಮೊದಲಾದುವು : ನಾಲು ತೆಜುವಂತಾ ಭಟಗುತಿಗೆಯು ಸುಂಕವನೂ ಸರ್ವಮಾನ್ಯವಾಗಿ ಬಿಟೆಉ (ಎಕ. XI, ಹಿರಿಯೂ. ೯೫-೮೯ ; ?). [ಭಟ$_2$ + <ಗುತ್ತಗೆ]

**ಭಟಮಾನ್ಯ,** ಬಟಮಾನ್ಯ (ನಾ). ವಿದ್ವಾಂಸನಾದ ಬ್ರಾಹ್ಮಣನಿಗೆ ರಾಜನು ಕೊಡುತ್ತಿದ್ದ ತೆರಿಗೆ ಇಲ್ಲದ ಭೂಮಿ ; ಉಂಬಳಿ : ಮಹಾಮಾತೋಶ್ರೀಯುವರು ಕೊಟ್ಟ ಆನಂದೂರು ಭಟಮಾಂನ್ಯ ೧ ಪ್ರತಿ ೧ ಸಹ ಅನುಭವಿಸಿಕೊಂಡುಯಿರುವಲ್ಲಿ (ಎಕ. V (R), ಮೈಸೂರು. ೫-೯; 1843) ; ಧರ್ಮಾದೀಕ್ಷಿತರ ಭಟಮಾನ್ಯದ ಹೊಲ (ಎಕ. IX, ಬೆಂಗಳೂ. ೩-೮ ; 1855); ಅನೇಕ ದೇವಃದಾಯ ಬ್ರಹ್ಮಾದಾಯ ಭಟಮಾನ್ಯಗಳನ್ನು ಬಹಲ್‌ಮಾಡಿ (ಮುಜಾಪಂ. II, ೩೩). **ಬಟಮಾನ್ಯ:** ಅದಕ್ಕೆ ಮೊದಲು ಬಟಮಾನ್ಯವೆಂದು ಬೆಳೆದದ್ದರಲ್ಲಿ ಅರ್ಧದಿನಸಿಯು ವೃತ್ತಿವಂತರಿಗೆ ಬರುತ್ತಿತ್ತು (ಸುಬ್ಬಿಪ. ೩).
[ < ಭಟ್ಟಮಾನ್ಯ ]

**ಭಟರಾಜು** (ನಾ). (ಹಿಂದೆ ಮೈಸೂರುಮಹಾರಾಜರ ದರ್ಬಾರು ಸಂದರ್ಭದಲ್ಲಿ) ಬಿರುದುಗಳನ್ನು ಹೇಳಿ ಹೊಗಳುತ್ತಿದ್ದ ಒಂದು ಜನವರ್ಗ : ಭಟರಾಜು ಎಂದು ಕರೆಸಿಕೊಳ್ಳುತ್ತಿದ್ದವರ ವಂಶಸ್ಥರು ಇಂದಿಗೂ ಮೈಸೂರಿನಲ್ಲಿ ಇದ್ದಾರೆ (ರೂಢಿ).
[ಭಟ$_1$ (< ಬಂಟ$_2$) + ರಾಜು$_0$. / ತೆಲು. ಭಟ್ರಾಜು]

**ಭಟರಿ** 'ಭಟಾರಿ' ನೋ.

**ಭಟಸಂಘ** (ನಾ). = ಭಟಕಟಾಹ : ಭಟಸಂಘಕ್ಕದಟೆಂತುಟಂತುಟೆ . . . ದರ್ಶನಂ ಸಕಲಧರ್ಮಕ್ಕಂ (ಧರ್ಮಾಮೃ. ೦-೬೨). [ಸಂ.]

**ಭಟಹ** (ನಾ). (?) : ನರಿದಾವಿ[ಳೆ]ನಾಡುಳ್ ಮೃಗೇಶನಾಗೇನ್ದ್ರಾಭೀಳಭೃಟಹರಪ್ಪೊರ್ ಶ್ರೀಮೃಗೇಶನಾಗಾಹ್ವಯರಿರ್ವ್ವರ್ (ಮೈ.ಆಂ. ೦೯೩೬, ೦೬-೯; 450). [?]

**ಭಟಾಂಗ** (ನಾ). ಹೊಗಳಿಕೆ; ಪ್ರಶಂಸೆ : ಅಖಿಳವೀರರೊಳಿಲ್ಲ ಸರಿದೊರೆ ನಿನಗೆ ಬಾಯಲಿ ಬಲ್ಲದನು ನೀನಹೆ ಭಟಾಂಗದ ಮಾತದಂತಿರಲಿ (ಕುಮಾರವ್ಯಾ. ೫-೫೩); ಹಿಂದೆ ಹಿಂದೆ ತಿಂಪು: ತಿಂಮನ ಕೈಯಲ್ಲಿ ಚಾಮರ, ಬಾಯಲ್ಲಿ ಭಟಾಂಗ (ಗಪ್ಪುಂದ. ೬೩). 'ಭಟ್ಟಂಗಿ' ಪರಾ.
[ಭಟ$_1$ (< ಬಂಟ$_2$) + ಅಂಗ$_?$]

**ಭಟಾಗ್ರಣಿ** (ನಾ). ಬಹಳ ಪರಾಕ್ರಮವುಳ್ಳವನು; ಶೂರಾಗ್ರೇಸರ : ಅರರೆ ಧಾವುರೆ ಕರ್ಣ . . . ಭಟಾಗ್ರಣಿ ನಿನ್ನ ಸರಿದೊರೆಯರಡುಯುಗದಲಿ ಕಾಣೆನು (ಕುಮಾವ್ಯ. ೨೬-೨೦). [ಸಂ.]

**ಭಟಾರ,** ಬಟಾರ$_1$, ಬಳಾರ, ಭಟ್ಟೋರ, ಭಳಾರ, ಭಟಾರಿ (ನಾ). ೧. ಪೂಜ್ಯವ್ಯಕ್ತಿ; ಗೌರವಾನ್ವಿತ ; ಮಾನ್ಯ. ೨. ಯತಿ; ಗುರು : ಗಾವುಣ್ಡ ಪ್ರಜೆರ್ ಸಕ್ಷಿಪೋವ ಕಾವಾಳಿಗಭಟಾರರ್ ಪಡೆದೋರ್ ಮಣ್ಣಮ್ (ಎಕ. XI, ಚಿತ್ರದು. ೨೯-೨; ಸು. 500?); ಎನ್ನಂ ಜ್ಯೋತಿಷಮಂ ಕಲ್ಪಿಪ್ಪುದೆಂದೊಡೆ ಭಟಾರರೆಂದರ್ (ವಡ್ಡಾರಾ. ೫-೨೬). ೩. ಒಡೆಯ ; ರಾಜ : ಸ್ವಸ್ತಿ ಕೀರ್ತ್ತಿವರ್ಮ್ಮ[ಸತ್ಯಾ]ಶ್ರಯ ಶ್ರೀಪೃಥು[ವೀವಲ್ಲಭ] ಮಹಾರಾಜಾಧಿರಾಜ ಪರಮೇಶ್ವರಭಟಾರರ ರಾಜ್ಯಮೊಂದುತ್ತರವಾಭಿವೃದ್ಧಿಸಲ್ (ಎಇ. XXI, ೩೯-೩; 751); ಶ್ರೀಅಕಾಲವರಿಷಭಟಾರರ್ ಪೃಥುವಿರಾಜ್ಯಂಗೆಯೆ (ಎಇ. VI, ೦೬೦-೦; 765) ; ಅಮೋಘವರ್ಷ ಶ್ರೀಪೃಥುವಿವಲ್ಲಭಮಹಾರಾಜಾಧಿರಾಜಪರಮೇಶ್ವರಭಟಾರರ್ (ಎಇ. VII, ೨೦೨-೨ ; ಸು.874). **ಬಟಾರ$_1$:** ೩. ತ್ರಿಭುವನಕರ್ತ್ತಾರ ಬಟಾರರ್ತ್ರಪರಾಜ್ಯಂಗೆಯ್ಯುತ್ತಿರೆ (ಎಕ. X (S), ಮುಳಬಾ. ೩೦೬-೨ ; ಸು. 950). **ಬಳಾರ:** ೧. ಉರಗನ ಜೊಂಪದಂತೆ ಸುರಿಯುತ್ತಿರೆ ಪೆರ್ಮ್ಬ . . . ಕಲ್ಲಬಳಾರನಪ್ಪೊಲ್ ತಪೋಧನಂ ಮರವೊದಲಿರ್ದನೆನ್ನದೊಡಲೆನ್ನದೊಡಂಬಡೆ ಮೇಘಕಾಲದೊಳ್ (ಆದಿಪು. ೯-೦೯). **ಭಟ್ಟೋರ :** ೩. ಶ್ರೀಮತ್ಕದಂಬಪನ್ನಾಗಸಂಪನ್ನಕುಲಭೋರ[ನಾ]ಅರಿ ಕಕುಸ್ಥಭಟ್ಟೋರನಾಳೆ (ಮೈ.ಆಂ. ೦೯೩೬, ೦೬ —೩ ; ಸು. 450). **ಭಳಾರ :** ೨. ಕೇಶವನನ್ದಿ ಅಷ್ಟೋಪವಾಸಿ ಭಳಾರರ ಬಸದಿಗೆ ಪೂಜಾನಿಮಿತ್ತದಿಂ (ಕಇ. IV, ೦೮೦-೦೯ ; 1048) ; ಭಾವಶಿವಭಳಾರರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕ ಸರ್ಬ್ಬನಮಸ್ಯವಾಗಿ . . . ಕೊಟ್ಟ ಗದ್ದೆ (ಮೈ.ಆಂ. ೦೯೯೨, ೬೯-೦೨; ಸು. 1076). **ಭಟಾರಿ :** ೨. ಅವರ ತಮ್ಮೋಅಮ್ಮಯ್ಯಂ ದೇಗುಲಮಂ ಮಾಡಿಸಿ ಭಟಾರಗ್ಗೆ ಊರಮುಣ್ಡಣ ಕಿಳಾರ ಕೆಯ್ಯೊಳ್ . . . ಬಿ × × ಟ್ಟು (ಎಕ. VIII, ತೀರ್ಥಹ. ೨೬-೦೨; ೯೨೯); ಭುವನಶಕ್ತಿ ಭಟಾರರ್ (ಎಕ. IX (S), ಕನ್ನಕ. ೨೮೨-೭; 10ನೆಯ ಶತ).
[< ಸಂ. ಭಟ್ಟಾರ]

**ಭಟಾರಕ** (ನಾ). = ಭಟಾರ ೨: ಲೋಕಾಖ್ಯಾಳರಸರ್ತ್ರ್ವ್ವಾ ವರ್ಷ ನಕ್ಕಾತ್ತಿಗೆ ಕಪುಲಿಕ್ಕುಬಂಕಿ ಭಟಾರಕ ಪೊಯ್ದು ಪೊನ್ನೂ ಬಗದ್ಯಾಣಮೆ (ಎಕ. X. ಕೋಲಾರ. ೦೦-೪; ಸು. 753). [< ಸಂ. ಭಟ್ಟಾರಕ]

**ಭಟಾರಿ, ಬಟರಿ, ಬಟಾರಿ, ಬಲಾರಿ₁, ಬಳರಿ, ಬಳಹರಿ, ಬಳಾರಿ, ಭಟರಿ, ಭಲಾರಿ, ಭಳಾರಿ, ಭಟಿರಿ** (ನಾ). ೧. ಒಂದು ದೇವತೆಯ ಹೆಸರು : ಮಾರಕಬ್ಬೆ ಭಟಾರಿಗೆ ಮತ್ತರ್ಪ್ಪಣ್ಣೆರಡು ಮನೆಯೊಂದು ನ್ಯಾಸಂ (ಎಇ. XX. ೬-೨೩; 1012) ; ಪಸಾಯಮನಿತ್ತ ಮಂಕುಟದ ಮುಕುಳ ಮನಾ ಕುಮಾರಿ ಮುಡಿಯೊಳಿಟ್ಟು ಭಟಾರಿ [ಪಾಠಾಂ. ಭಟ್ಟಾತ್ತಿ, ಭಟ್ಟರಿ]ಗೆ ಪೊಡೆವಟ್ಟು (ಅರ್ಜುನ. ೬-೦೬ ವ); ಈಶಾನ್ಯಾಂದಿಶಿ ಭಟಾರಿಕ್ಷೇತ್ರಂ (ಸೌಇಇ. XX. ೩-೦೦; ?) . **ಬಟರಿ :** ೨. ಒಂದು ಮನೆತನದ ಹೆಸರು ( ? ) : ಬಟರಿಕುಲಾಮಲವ್ಯೋಮ ಶಾರಾಧಿನಾಥನ್ (ಶ್ರ.ಶಾ. ೦೯೩೬. ೦೩-೩ ; ಸು. 450). **ಬಟಾರಿ :** ೨. ಬಟಾರಿಕುಲದೊಳಳು ಕದಮ್ಪುನ್ನಲ್ಲೋನ್ ಮಹಾಮಾತಕನ್ (ಶ್ರ.ಶಾ. ೦೯೩೬. ೦೬-೦೩; ಸು. 450). **ಬಲಾರಿ₁ :** ೧. ಬೆನಕ ಕಾರ್ತಿಕೇಯ ಭಗವತಿ ಬಲಾರಿ ಕಾಳಿ ಮಾಕಾಳಿ (ಪ್ರಾಕ್ಕಾವ್ಯಮಾಲೆ. ೦೨೫೯ ಶಾಸ್ತ್ರಸಾರ). **ಬಳರಿ :** ೧. "ಬಳರಿಯ ಮಾಕಾಳಿ" (ಶಕುಂ. ೦೧೩); ಬಳರಿಯ ಸೋಂಪಿಗೆ ಬೀದಿಗೆ ಮುಳಿವರ ಮನೆಗಳ್ಗೆ ಮದ್ಯಪಿಗಳ್ಗೆಲ್ಲಿಗೆ ಕೋಮಳೆಯಂ ಪೋಗಲ್ಕಿತ್ತಡೆ ಬಳರಿಗೆ ಪೂಯಿ ವಿಡ ಹೋದ ಕಂಜುಯಂತಕ್ಕುಂ (ಮಂದಾ. ೬-೨೩) ; ಕೂಸಿಂಗೆ ಕುತ್ತ ವಾದೊಡೆ ದೇಶದ ಬಳರಿಯರ್ಗೆ ಕಂಡುಮರೊಳ್ವರ್ಚನೆಯಂ (ಸಮುಕ. ೩-೦೦೦); ಬಳರಿಯ ಬನದಿಂ ಪೊಣಮಟ್ಟಂ ಚಂಡಕರ್ಮನೆಂಬ ತಳಾಱಂ (ಯಶೋಧ. ೦-೯೩). **ಬಳಹರಿ :** ೧. ದಿಟ್ಟಿ ಬಳಹರಿ ಮಾರಿ ಬತ್ತವ ಕೊಟ್ಟಣಂಗಟ್ಟಲು (ಶಿತೃ. ೨೩-೦೯); ತಮ್ಮಯ ಬಲ್ಲತನವನೇ ಮೆಚ್ಚಿ ವಣ್ಣಂಗಳ ಬಲ್ಲತನದ ಬಾಯೊಳು ಬಳಹರಿ ಬಲ್ಮುನಿಸುದಲೆದು ಹೊಗಲಿ (ಜಡುಶಾ. ೦-೦೭). **ಬಳಾರಿ :** ೧. ದುಷ್ಟಬುದ್ಧಿ ತನ್ನ ತಂದೆಯಂ . . . ಬಳಾರಿಯ ಮನೆಯಂ ಪಡಿಕೆಯ ಕಂಜುಯಂ ಪುಗಿಸುವಂತೆ . . . ಪುಗಿಸಿ (ಶಂಕಶಂ. ೦೬೩-೦೦) ; ಕರೆಯದೆ ಬಾಡಿ ಕಂಟಿಸುವ ಕೂಟಣಿಯಂ ಸೊಣಗಷ್ಟ ತಿಂಗೆ ಬೆಂಗುದುಟಿ ಬಳಾರಿ ಬಾಡಿಸುಗೆ ಚಂಡಿಕೆ ನುಂಗುಗೆ (ಅಜಶ. ೨-೦೦೩); ಬಳಾರಿ ನೀನಿತ್ತ ಕೂಸಂ ನಾಳೆ ರಕ್ಕಸಂ ಕೊಲಲೆಂದಿರ್ದಪಂ (ಅವಶಂ. ೩೯-೨೬ ವ). **ಭಟರಿ:** ೧. ಭಟರಿಯ ದೇಗುಲ ವಿನಕನ ದೇಗುಲ ಮಟವವು [ದೇ]ರ ದೇಗುಲವ ಕೇಸವಾದಿಶ್ವರ ದೇಗುಲ (ಸೌಇಇ. XI-i, ೩೩-೩; 933). ೨. ಶೌಯ್ಯೋರ್ಜಿದ್ಯಮಭೂತೋ[ನ್ನಾವ]ಪಶುಪತಿಯೆನ್ದು ಪೊಗಟಿಪ್ಪೊಟ್ಟಣ ಪಶುಪತಿನಾಮಧೇಯನಾಸರಕ್ಕೆಲ್ಲ ಭಟರಿಯಾ ಪ್ರೇಮಾಲಯ ಸುತನ್ಗೆ (ಶ್ರ.ಶಾ. ೦೯೩೬. ೬೬-೯; 450). **ಭಲಾರಿ :** ೧. ಭಲಾರಿ ಭೂಮಿಗದ್ದೆ ೫೦೦ (ಐಇ. VIII. ೯೩ ; 444); ಭಲಾರೀ ಭೂಮಿ ೨೦೦ (ಐಇ. XIV. ೦೯೦-೨೯; ೧೨ಶತಮಾನ). **ಭಳಾರಿ :** ೧. ತೆಂಕಣಕೋಡಿಯಾಮೂಳಗಣ ಭಳಾರಿಯಾಲ ವಂತೆ ಹಡುವಲು ನಡೆದು (ಎಕ. VI. ಶೃಂಕು. ೦೬೦-೯೩; 1137). **ಭಟಿರಿ :** ೧. ಅರಸಂ ಬನ್ದು ನೋಡಿ ಭಟಿರಿಗೆ ಬಿಟ್ಟ ಕೆಮ್ಮತ್ತಲೆರಡು (ಎಕ. VIII. ಸೊರಬ. ೯೯-೦೦; 971). [ < ಸಂ. ಭಟ್ಟಾರಿಕಾ ]

**ಭಟಾಳಿ** (ನಾ). ೧. ಯೋಧರ ಗುಂಪು. – ಸಮೂಹ : ಸ್ವಾಮಿ ಕಾರ್ಯದ ಪೊಜಗೆಯುಳ್ಳ ನವಾಯ ಬಿರುದಿನ ಮುಜುಮುಳ್ಳ ಭಟಾಳಿ ನಿಲುವುದು ಕಡೆವುದರಿಭಟರ (ಕುಮಾ.ರಾ. ೨೨-೨೬) . ೨. ಊಳಿಗವವರ ಗುಂಪು ; ಸೇವಕರ ಸಮೂಹ : ಸಲ್ಪ ಭಟಾಳಿ ತಂದುಕೊಡೆ ಧೂಪವ ಸೊಲ್ದಿಮಗಿತ್ತು (ಉದ್ಭಟ. ೦೦-೬೦). [ ಸಂ. ಭಟಾಲಿ ]

**ಭಟಿತ್ರ** (ನಾ). ಸಲಾಕೆಯ ತುದಿಯಲ್ಲಿ ಚುಚ್ಚಿ ಸುಟ್ಟ ಮಾಂಸ : "ಶೂಲ್ಯಂ, ಭಟಿತ್ರಂ – ಈ ೨ ಸುಂಟಗೆ" (ಹಲಾಯು. ೩೯-೦೬೬); "ಶೂಲಾಕೃತಂ, ಭಟಿತ್ರಂ, ಶೂಲ್ಯಂ – ೩ ಉಡುಗೋಲಿಗೆ ಚುಚ್ಚಿ ಪಕ್ವ ಮಾಡುವ ಭಕ್ಷ್ಯಕ್ಕೂ, ಸುಟ್ಟು ನಂಚಿಕೊಳ್ಳುವ ಪದಾರ್ಥಕ್ಕೂ ಪೆಸರು ಗಳು" (ಸಿದ್ಧಾಂತಿ. ೨೬೭). ] [ ಸಂ. ]

**ಭಟ್ಟ** (ನಾ). ೧. ಅನೇಕ ಶಾಸ್ತ್ರಗಳಲ್ಲಿ ಪಾರಂಗತನಾದವನು ; ವಿದ್ವಾಂಸ : ಚಾಣಾಕ್ಯನೆಂಬ ಭಟ್ಟನಂ ನಂದಂ ಪರಿಭವಿಸಿ (ವಡ್ಡಾರಾ. ೬೩-೭); ಆ ಭಟ್ಟನೀ ದುಷ್ಟಂಗೆ ಮಜುಮಾತುಗೊಟ್ಟೊಡೇನಪ್ಪುದೆಂದು ಸಿರದೆ ನಡೆವುದುಂ (ಶಂಕಶಂ. ೦೯೬-೦೫); ವೇದಶಾಸ್ತ್ರದ ನಿಪ್ಪನೇ ಭಟ್ಟನ್ನೆ (ಚೆನ್ನಬ. ೬-೨-೦೬). ೨. ವೈದಿಕಬ್ರಾಹ್ಮಣ ; ಸಂಪ್ರದಾಯಸ್ಥ ಬ್ರಾಹ್ಮಣ : ಕರಿಮರಿನಾಯಿ ಕುಂಯಿಗುಡುತಿತ್ತು ಭಟ್ಟರ ಬಾಯಿ ಒಟ ಗುಡುತಿತ್ತು (ಗಂ. ೯೯-೨); ಪಟ್ಟೀವೀಳ್ಯವಾದರೆ ಭಟ್ಟರಿಗಾಗದೇ? (ಗಾದೆ). ೩. ರಾಜರು ಮೊದಲಾದವರನ್ನು ಹೊಗಳುವ ಊಳಿಗದವನು; ಸ್ತುತಿಪಾಠಕ; ಭಟ್ಟಂಗಿ : ಗಾಣರ ಭಟ್ಟರ ಗೃಹವೀಧಿಗಳನಾ ಪುರಂ ರಂಜಿಸುಗುಂ (ಉದ್ಭಟ. ೦-೬೦); ಕೈನೆಗಹಿ ನುತಗುಣನ ಬಿರುದಾವಳಿಯ ಸಂಗತಿಯನಭಿವರ್ಣಿಸುವ ಸಮಯೋಚಿತದ ಪುಣ್ಯಶ್ರವಣದ ಮೆಚ್ಚಿದುದು ಭಟ್ಟಸಂದೋಹ (ಕುಮಾ.ರಾ. ೬-೩೯); ಭಟ್ಟಡೊಂಬರಿಗಿತ್ತು ಕೆಟ್ಟು ಪೋಗಲಿಬೇಡ ಸೃಷ್ಟೀಶ್ವರನ ಶರಣರಿಗೆ ಕೊಟ್ಟಪರೆ ಶ್ರೇಷ್ಠಪದವಕ್ಕು (ಸರ್ವಜ್ಞ. ೬೬೦). ೪. ವಾರ್ತಾವಾಹಕ; ದೂತ : ಕೌರವರಾಯನಲ್ಲಿಗೆ ಕಾಳೆಗದ ಕಾಹರಿಗರಿವರಟ್ಟಿದರು ಭಟ್ಟರನು (ಕುಮಾ.ಭಾ. ೦-೦); ಬರಹೇಳೆಂದು ಭಟ್ಟರನಟ್ಟಿದನು ಪಾಂಡವರ ಪಾಳೆಯಕೆ (ಕುಮಾ.ದ್ರೋ. ೯-೨೬). ೫. ದೇವಸ್ಥಾನದ ಪೂಜಾರಿ,–ಅರ್ಚಕ : ಭಟ್ಟರು ದೇವರಿಗೆ ಮಂಗಳಾರತಿಯನ್ನು ಮಾಡಿದರು (ರೂಢಿ). ೬. ಅಡುಗೆ ಮಾಡುವ ವೃತ್ತಿಯನ್ನು ಅವಲಂಬಿಸಿರುವವನು ; ಬಾಣಸಿಗ : ಪುಕ್ಕಾತ್ತ ಅಡಿಗೆಭಟ್ಟನಿನ್ನೂ ಬಂದಿರಲಿಲ್ಲ (ಅಕಥ. ೬೬) ; ಕಾಫಿಹೋಟಲಿನಲ್ಲಿ ಗಿರಾಕಿಯಂತೂ ಯಾರೂ ಇಲ್ಲದಾಗ ಭಟ್ಟರು "ನರ್ಸಿ ಹೇಗಿದ್ದೀಯಾ?" ಎಂದರು (ಹೊಸಕ್ಕೆ. ೩೮) ; ಭಟ್ಟರು ಎಲ್ಲರಿಗೂ ಬಡಿಸಿ ಹೊರಟು ಹೋದರು (ದೂಲಪ್ಪ. ೯೬). ೭. ಕೆಲವು ಬ್ರಾಹ್ಮಣರು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳುವ ಪರಂಪರಾಗತವಾದ ಉಪಪದ : ಕೂಸುಗಳ್ ಸೋಮಶರ್ಮಭಟ್ಟಂಗೆ ನಿಮ್ಮ ಮಗಳ್ ರಿಸಿಯರ ಪಕ್ಕದೆ ಶ್ರಾವಕವ್ರತಂಗಳಂ ಕೈಕೊಂಡು ಬಂದಳೆನೆ (ವಡ್ಡಾರಾ. ೦೩-೦೭) ; ಈ ಪರಿಯಲಾ ಶುಕ್ರಭಟ್ಟರು ತಾ ಪರೀಕ್ಷಿಸಿಯವರ ಶಿಷ್ಯಗೆ ವ್ಯಾಪಿಸಿದ ವರತತ್ತ್ವಬೋಧೆಯುಸಾರದುನ್ನತಿಯು (ಸಂಅಶ. ೮-೩೯) ; ಜೈಮಿನೀಯ ಮೀಮಾಂಸಾಶಾಸ್ತ್ರಕ್ಕೆ ಪ್ರಮುಖ ಪ್ರಚಾರಕನು ಕುಮಾರಿಲಭಟ್ಟ (ಶಾಕಅ. ೦೨೯). ೮. ಒಬ್ಬ ಪ್ರಸಿದ್ಧ ಮೀಮಾಂಸಕನ ಹೆಸರು : 'ಭಟ್ಟದರ್ಶನ', 'ಭಟ್ಟಮತ' ಪರಾ. [ಸಂ.]

**ಭಟ್ಟಂಗಿ** (ನಾ). ಹೊಗಳುಭಟ್ಟ; ಸ್ತುತಿಪಾಠಕ : ಈ ಭಟ್ಟಂಗಿಗಳ ಬಳಗದಿಂದ ಜಗತ್ತಿಗೆ ಆಗಬೇಕಾದುದಾದರೂ ಏನು (ಶುಕ್ಲಮು. ೨೬೬); 'ಭಟ್ಟಂಗಿಗಳು ನಾವೂ' ಎಂದುಕೊಂಡು ಹೊಗಳಿ ಹೊಗಳಿ ಭಿಕ್ಷವೆತ್ತುವ ಒಂದು ಬಗೆಯ ಭಿಕ್ಷುಕರು 'ಮಂತ್ರ ಹೇಳಿದ ಹಾಗೆ' ನುಡಿಯುವ ಪದಗಳು ಹಲವು (ಶಾಕಅ. ೦೩೩). [<ಭಟ್ಟ]

**ಭಟ್ಟಂಗಿತನ** (ನಾ). ಹೊಗಳುವ ಕೆಲಸ : ಸಾಕು ನಿಮ್ಮ ಈ ಬಡತನದ ಭಟ್ಟಂಗಿತನ (ಕೂಸಂಶಾ. ೯). [ಭಟ್ಟಂಗಿ + –ತನ]

**ಭಟ್ಟಗುತ್ತ** (ನಾ). ( ? ) : ಮುನಿದೊಡೆ ಭಟ್ಟಗುತ್ತನ ಟಟಾರದ ಪೊರ್ ನೆಚ್ ತನ್ನ ಕಯ್ದು ತನ್ನನೆ ತಜದೊಟ್ಟಿ ದಾನವಧರಾತಳವಲ್ಲಭನಂ ಚತುರ್ಭುಜಂ (ಅನಂಪು. ೦೯-೨೦); ಮುದ್ರೆಯ ಪೋಲಗಕ್ಕೆ ಗದ್ಯಾಣಂ ಹನ್ನೆರಡು ಭಂಡಾರದೋಲಗಕ್ಕೆ ಗದ್ಯಾಣಂ ಹನ್ನೆರಡು ಭಟ್ಟಗುತ್ತರ್ಗ ಎರಡಕ್ಕಂ ಗದ್ಯಾಣಂ ಇಪ್ಪತ್ತು ಕರ್ಪೂರದಾರತಿಯವರು ಎರಡಕ್ಕಂ ಗದ್ಯಾಣಂ ಪದಿನಾಱು (ಎಕ. III. ತಿನಪು. ೯೭-೬೨; 1270). [ ? ]

**ಭಟ್ಟಗುತ್ತಿಕೆ** (ನಾ). = ಭಟಗುತಿಗೆ : ಆ ಮಹಾಜನಂಗಳು ಆ ಚಕ್ರವರ್ತಿ ದಂಣ್ಣಾಯ್ಕರಿಗೆ ಕೊಟ್ಟ ದೇವರ ಭಟ್ಟಗುತ್ತಿಕೆಯ ನಿಯೋಗ ೧ ಕೆ ಜೀವಿತ ಗ ೫ (ಎಕ. VII (R). ಶಾಗನು. ೬೩-೯೯ ; 1284). [<ಭಟಗುತಿಗೆ]

**ಭಟ್ಟಗೆಯಿ** (ನಾ). ವಿದ್ವಾಂಸರಿಗೆ ಮಾನ್ಯವಾಗಿ ಕೊಟ್ಟ ಭೂಮಿ : ಭಟಾರಿಗೆ ಮತ್ತ ೬ ಭಟ್ಟಗೆಯಿ ೬ ಚಟ್ಟಗೆಯಿ ಮತ್ತ ೭ (ಸೌಇಇ. IX-i, ೩೪-೬; 981). [ಭಟ್ಟ + ಕೆಯಿ (<ಕೆಯ್₄)]

**ಭಟ್ಟಗ್ರಾಮ** (ನಾ). ಇನಾಮು ಗ್ರಾಮ; ಜಾಗೀರು : ಬಾಳ್ಗುೞ ಕಾರಿಟ್ಟಗೆ ಮೊದಲಾಗೆ ಪಲವುಂ ಭಟ್ಟಗ್ರಾಮಂಗಳುಮಂ (ಎಇ. XV. ೯೯-೨೦; 1060). [p ಇದು 'ಭತ್ತಗ್ರಾಮ' ಎಂಬುದರ ಅಪಲಿಖಿತ]

**ಭಟ್ಟತನ** (ನಾ). (?) : ಇಷ್ಟಲಿಂಗ ನಿದ್ರೆಯಲ್ಲಿ ಸೃಷ್ಟಿಯ ಮೇಲೆ ಬಿದ್ದು ಹೊರಳುವಾಗ ನಿಷ್ಠೆವಂತರೆಂತಾದಿರೋ . . . ಹೀಗಲ್ಲದೆ ಭಟ್ಟತನಕ್ಕೆ ಪೋರುವ ಭ್ರಷ್ಟಭಂಡರನೇನೆಂಬೆ (ಪೋಶಬಾ. ೦೬-೭೦); "ಶ್ರೇಷ್ಠತನ, ಗೆಲುವು" (ಪೋಶಬಾ. ೯೩೩). [ಭಟ್ಟ₁ + —ತನ]

**ಭಟ್ಟದರ್ಶನ** (ನಾ). ಕುಮಾರಿಲಭಟ್ಟನೆಂಬ ವಿದ್ವಾಂಸನು ಪ್ರತಿಪಾದಿಸಿರುವ ತತ್ತ್ವ; ಭಾಟ್ಟಮತ : ಭಟ್ಟದರ್ಶನನ್ಯಾ [ಸ] ಪ್ರಭಾಕರವ್ಯಾಖ್ಯಾತೃಗಳ್ಗೂಮಗ್ಗರ್ಗಂ . . . ಸರ್ವ್ವನಮಸ್ಯಮಾಗಿ ಕೊಟ್ಟ ಕೆಯ್ (ಕಇಕ. ೬-೨-೦೯೩; 1068). [ಸಂ.]

**ಭಟ್ಟಬಾಣ** 'ಬಟ್ಟಬಾಣ' ನೋ.

**ಭಟ್ಟಮಂಡಪ** (ನಾ). ವಿದ್ವಾಂಸರು ಸಭೆ ಸೇರುವ ಮಂಟಪ : ಶ್ಲೋಕಾರ್ಥಮಂ ಮನದೊಳ್ ಬಗೆದು ಸಖಾಯನುಂ ಪೆತ್ತನೆಂದೊಸೆದುಮಾತನ ಬುದ್ಧಿಯಂ ಪರೀಕ್ಷಿಸಲ್ವೇಡಿ ಭಟ್ಟ[ಶಾಕಾಂ.ಟ್ಟ]ಮಂಡಪದೊಳ್ ಶ್ಲೋಕಮಂ ಬರೆದು ಪೋದಂ (ವಡ್ಡಾ. ೦೯೪-೯) ; "ರಾಜನ ಸಭಾಮಂದಿರ" (ವಡ್ಡಾರಾ. ಟಿಪ್ಪಣಿ. ೨೯೦). [ಸಂ.]

**ಭಟ್ಟಮತ** (ನಾ). =ಭಟ್ಟದರ್ಶನ : ''ವ್ಯವಹಾರೇ ಭಟ್ಟನಯಃ" ಎಂದು ವ್ಯವಹಾರದಲ್ಲಿ . . . ಭಟ್ಟಮತಪ್ರಕಾರ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿಯೆಂದು ಆರು ಪ್ರಮಾಣಗಳು (ಹಿಂದಾ. ೨೦೦). [ಸಂ.]

**ಭಟ್ಟಮಾನ್ಯ** (ನಾ). = ಭಟಮಾನ್ಯ : ಹಳೆಆಲಗೂಡುಗ್ರಾಮದಲ್ಲಿ ಭಟ್ಟಮಾಂನ್ಯದ ತೆಂಗಿನಕಾಳು ಹೊಲ ೧ (ಎಕ. V (R). ತಿರುಪು. ೦೪೦-೩೬; 1855) ; ಪೂರ್ವದಿಂದ ನಡೆದು ಬರುತ್ತಿರುವ ದೇವದಾಯ ಬ್ರಹ್ಮದಾಯ ಧರ್ಮದಾಯ . . . ಸರ್ವಮಾನ್ಯ ಭಟ್ಟಮಾನ್ಯ ಉಂಬಳಿ ರಕ್ತ ಕೊಡಗೆ ಮುಂತಾದುವೇನೂ ಹೆಚ್ಚು ಕಡಮೆಯಾಗದಂತೆಯೂ. . . ಎಚ್ಚತ್ತಿರಬೇಕು (ಶಿರುಗಂ. ೩೬-೨೦). [ಸಂ.]

**ಭಟ್ಟವೃತ್ತ** (ನಾ). (?) : ದುರ್ವ್ವಿನೀತಅರಸರಾ ದಣ್ಣನಾಯಕರು ಭಟ್ಟವೃತ್ತರ್ ಸಾಸಿರ್ವ್ವರು ಒಲೆಯ ಅಯ್ನೂರ್ವ್ವರು ಬೆಯ ಮುನೂರ್ವರುಂ ಮಿ × × × ತಣ್ಣಿಯ ಮಹಾಜನಕ್ಕೆ ಧರ್ಮ್ಮನಿಮಿತ್ತ ಕೊಟ್ಟ ಸ್ಥಿತಿಯ ಕ್ರಮ ಅವುದೆನ್ನಡೆ (ಎಕ. XVI, ತುಮಕೂ. ೯೦-೯; 903). [ ? ]

**ಭಟ್ಟವೃತ್ತಿ** (ನಾ). = ಭಟಮಾನ್ಯ : ಮಾರಕಬ್ಬೆ ಭಟಾರಿಗೆ ಮತ್ತರ್ಪನ್ನೆರಡು ಮನೆಯೊಂದು ನ್ಯಾಸಂ ಪ್ರಭಾಕರಮುಮಂ ಪಕ್ಕಾಣಿಸಿ ಗುಣಶಾಸನದ ಸಣ್ಣ ಭಟ್ಟವೃತ್ತಿ ಮತ್ತರೈಮತ್ತು (ಎಇ. XX. ೬-೨೪; 1012); ಬಾಲಶಿಕ್ಷೆಗಂ ನ್ಯಾಸದ ಪಕ್ಕಾಣಕ್ಕಂ ವೃತ್ತಿಯ ಭೂಮಿಯೊಳಗೆ ಬಿಟ್ಟ ಭಟ್ಟವೃತ್ತಿಯೊಂದು (ಸೌಇಇ. XX, ೯೩-೬೦; ?); ಪ್ರೌಢ ಉಪಾಧ್ಯಾಯರ ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು ಭಟ್ಟವೃತ್ತಿ ಎಂದು ಕರೆದರೆ, ಪ್ರೌಢ ವಿದ್ಯಾರ್ಥಿಗಳ ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು ಚಟ್ಟವೃತ್ತಿ ಎಂದು ಕರೆದಿದ್ದಾರೆ (ಕಶಾಂ. ೨೨೯). [ಸಂ.]

**ಭಟ್ಟವ್ರಿತ್ತಿ** (ನಾ). = ಭಟಮಾನ್ಯ : ಎಟ್ಟಿತ್ತು ಗಂಳ ಗಟಿ ಭಟ್ಟವ್ರಿತ್ತಿ ಚಾವಯ್ಯ × × × ಇದನಟೀವೆನ್ನವ ವಾರಣಸಿಯುವ ಕವಿಲೆಯುವ ನಟಿದೊ (ಎಕ. V (R). ತಿರುಪು. ೪೭-೪; ಸು. ೧೫ನೆಯ ಶತ). [ಭಟ್ಟ + ವ್ರಿತ್ತಿ]

**ಭಟ್ಟಾರ** (ನಾ). =ಭಟಾರ ೩ : ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀಪೃಥಿವೀವಲ್ಲಭ ಮಹಾರಾಜಾಧಿರಾಜಪರಮೇಶ್ವರಭಟ್ಟಾರರ್ (ಎಇ. III. ೩೬೦-೨ ; 740); ಸ್ವಸ್ತ್ಯಮೋಘವರ್ಷಪೃಥುವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಭಟ್ಟಾರರ್ ರಾಜ್ಯಾಭಿವೃದ್ಧಿಯೊನ್ದುತ್ತರಂ ಸಲೆ (ಎಇ. XXVI, ೪-೮ ; 906); ನಾಗಶ್ರೀಯುಂ ... ತನ್ನ ಮುನ್ನಿನ ಪೊಲತಿಯಾಗಿ ಪುಟ್ಟಿದ ಭವಮನಱಿದು ಭಟ್ಟಾರರ ಕಾಲ್ಗೆಱಗಿ ಪೊಡಮಟ್ಟು ಕುಳ್ಳಿರ್ದಾಗಳ್ (ವಡ್ಡಾ. ೦೨-೨೪). [ಸಂ.]

**ಭಟ್ಟಾರಕ** (ನಾ). ೧. ರಾಜ, ಗುರು, ಹಿರಿಯರ ಹೆಸರುಗಳ ಕೊನೆಯಲ್ಲಿ ಗೌರವಾರ್ಥವಾಗಿ ಸೇರಿಸುವ ಒಂದು ಶಬ್ದ : ''ಪಾದಃ, ದೇವಃ, ಭಟ್ಟಾರಕಃ — ಈ ಮೂಱುಂ ಪೆಸರ ಕಡೆಯೊಳ್ ಪೂಜಾಮ(ಚ)ನಂ'' (ಕಶಾಶು. ೨೫-೦೫೪); ಶಿವಗುಪ್ತಭಟ್ಟಾರಕರ್ಗಾಂ ಪಾರಣೆಯಂ ಮಾಡುವೆಂ (ವಡ್ಡಾ. ೭೮-೩); ತನ್ನಂಶಮನಾಕೆಯ ಗರ್ಭದೊಳವತರಿಸಿ ಯಮಭಟ್ಟಾರಕನಂತರ್ಧಾನಕ್ಕೆ ಸಂದಂ (ಶಂಕಶಾ. ೦-೦೦೯ ವ); ವಿಜಯಾಂಬಿಕೆ ಪಡೆದಳಜಿತಭಟ್ಟಾರಕರಂ (ಶಂರಾಪು. ೦೦-೭೪). ೨. ಚಾಲುಕ್ಯರ ಬಿರುದುಗಳಲ್ಲಿ ಒಂದು ಭಾಗವಾಗಿ ಬರುವ ವಿಶೇಷಣ : ಸ್ವಸ್ತಿ ನಿತ್ಯವರ್ಷ ದೇವ ಶ್ರೀಪೃಥುವೀವಲ್ಲಭ ಮಹಾರಾಜಾಧಿರಾಜ ಪರಮೇಸ್ವರ ಪರಮಭಟ್ಟಾರಕ (ಸೌಇಇ. IX-i, ೫೬-೨; 922). [ಸಂ.]

**ಭಟ್ಟಿ₁** 'ಬಟ್ಟಿ₂' ನೋ.

**ಭಟ್ಟಿ₂, ಬಟ್ಟಿ₃** (ನಾ). ೧. ಮದ್ಯ ಮೊದಲಾದಂಥವುಗಳ ಅರ್ಕವನ್ನು ತಯಾರಿಸಲು ಬಳಸುವ ಒಂದು ಬಗೆಯ ಹಬೆಯ ಸಾಧನ : ನೀರು ಹಾಕಿದ್ದರಿಂದ ಭಟ್ಟಿಯೊಳಗಿಂದ ಆ ಹರಳಿನಲ್ಲಿ ಸೇರಿ ಗುಪ್ತವಾಗಿದ್ದ ಅನನುಭೂತೋಷ್ಣತೆಯ ಅನುಭವವಾಯಿತು (ಕುಂಇಯು. ೩-೦೩೬) ; ಈ ಪೀಡಾಮನುಷ್ಯನನ್ನು ಭಟ್ಟಿಯಲ್ಲಿ ಹಾಕಿ ತೆಗೆದು, ಒಂದು ಫುಟ್‌ಬಾಲ್ ಮಾಡಬೇಕು (ದೀಕಕ್ಕ. ೩೦). ೨. ಕಡಲೆ, ಪುರಿ, ಅವಲಕ್ಕಿ ಮುಂತಾದುವುಗಳನ್ನು ಹುರಿಯುವ ಸ್ಥಳ : ಚಹದಂಗಡಿ, ವಿಶನಾಥಶೆಟ್ಟರ ಚುರುಮುರಿಯ ಭಟ್ಟಿಗಳನ್ನು ದಾಟಿ ಅವನು . . . ಸಂಕವನ್ನು ಸಮೀಪಿಸಿದ್ದ (ಮೂರುದಾ. ೯೦). ೩. ಹಬೆಯ ಯಂತ್ರದಲ್ಲಿ ಕಾಯಿಸಿ ತೆಗೆದ ದ್ರವವಸ್ತು,— ಸಾರ : ವಿವಿಧರಸಗಳ ಭಟ್ಟಿ, ಸೌಂದರ್ಯಕಾಮೋಷ್ಟಿ ಕವಿಜಗತ್ಸೃಷ್ಟಿಯದು (ಕುಂಕುಕ. ೪೭೦) ; ಒಡಲ ನರಕದ ಭಾಂಡ ಕುದಿಸಿ ಭಟ್ಟಿಯ ತೆಗೆದ ಮೋಹಿನಿಯ ಕಣ್ಣೀರ ಗುಟುಕನೆಷ್ಟೋ ಕುಡಿದೆ (ಶಿಂಶು. ೯೩-೦). ೪. (ಆಲಂ) ಹದ ; ರೀತಿ ; ರಚನಾಕ್ರಮ : ನಿನ್ನ ಪರಾಕ್ರಮಕ್ಕೆ ಇದು ಹೊತ್ತಲ್ಲ. ನಮ್ಮ ಕೆಲಸದ ಭಟ್ಟಿ ಕೆಟ್ಟೀತು (ಶಿಶಾ. ೦೦) ; ಭಟ್ಟಿ ಕೆಟ್ಟಿಲ್ಲವೆಂದು ಅವರ ಆಸೆ ಚಿಗುರಿತು (ಶ್ರೀಪಾಕ್ರ. ೨೦೩) ; ಒತ್ತಾಯದಿಂದ ಎಬ್ಬಿಸುತ್ತಿದ್ದರು. ಭಟ್ಟಿ ಕೆಟ್ಟದ್ದೆ ಅಲ್ಲಿ (ಗಾಶಶ. ೮೬೨). **ಬಟ್ಟಿ₃** : ೧. ಸುಣ್ಣದ ಹರಳುಗಳನ್ನು ತಂದು ಬಟ್ಟಿಗೆ ಹಾಕಿ, ಅವನ್ನು ಸುಟ್ಟು ಸುಣ್ಣ ಮಾಡಬೇಕು (ಕುಂಇಯು. ೪-೦೪೬) ; ಒಬ್ಬ ರೊಟ್ಟಿಗಾರನ ಬಟ್ಟಿಯು ಮಿತಿಮೀರಿ ಕಾದದ್ದೇ ಈ ಅಗ್ನಿಸಪ್ಪಕ್ಕೆ ಕಾರಣವಾಯಿತು (ಇಂಗ್ಲಂಡ. ೦೬೪) ; ಬಟ್ಟಿ ಸುಟ್ಟು ಹೋಯಿತೆಂದರೆ ಸೆಟ್ಟಿ ಬಿಟ್ಟಾನೇ ? (ಗಾದೆ). ೨. ಅಲ್ಲಿ ಅವನ ಅವಲಕ್ಕಿಯ ಬಟ್ಟಿಯಿದ್ದಿತು (ಶಿಕಕ. ೨).

**ಭಟ್ಟಿಯಿಳಿಸು ; ಬಟ್ಟಿಯಿಳಿಸು**=೧. (ಬೇರು, ಎಲೆ ಮುಂತಾದುವುಗಳಿಂದ) ಸಾರವನ್ನು ತೆಗೆ : ಜೀವಕನು ಒಂದು ರಾಶಿ ಅದು ಇದು ಬೇರುಗಳನ್ನು ತಂದು ಭಟ್ಟಿಯಿಳಿಸಿ . . . ಔಷಧವನ್ನು ಪಕ್ವಮಾಡಿದನು

(ತತ್ತ್ವಪ್ರ. ೧೦೩) ; ಬಿತ್ತಬಿತ್ತದ ರಸವ ಸವಿದು ಸವಿದಾಕ್ಷಣದಿ ಆಯುಷ್ಯ ಸಾರವನು ಬಟ್ಟಿಯಿಳಿಸುವ ತೆರದಿ . . . ಆವರ್ತಿ ಚೋದಿಸಿತು ? (ಸೌಂದರ. ೩೩). ೨. (ಆಲಂ) ನಕಲುಮಾಡು ; ಕಾಪಿಹೊಡೆ : ಆ ಮೂಲಗ್ರಂಥವನ್ನೇ ಇವರು ಭಟ್ಟಿಯಿಳಿಸಿದ್ದಾರೆ (ರೂಢಿ).

[← ಹಿಂ. ಮರಾ. ಭಟ್ಟೀ. / ಸಂ. ಭೃಷ್ಟಿ=ಹುರಿಯುವಿಕೆ]

**ಭಟ್ಟಿಗೆ** (ನಾ). (?) : ಇಟ್ಟ ಕಲ್ಲದೆ ಬಿಟ್ಟಿಯನು ಮಾಡುವಾಳಾದೆ ಭಟ್ಟಿಗೆ ಬಜಾಬ[ಪಾಠಾಂ. ಬಟ್ಟಿಗರುಬನು] ನಾನಾದೆ ಕೊಟ್ಟಣವನು ಇನ್ನು ಬಟ್ಟಿ ಕೊಟ್ಟರೆ ನನಗಿಟ್ಟಿಕೆ ಭವಣೆ ಬರುವದು (ಅಮರಕಾಂ. ೩-೯೯). 'ಬಟ್ಟಿಗೆ' ಪರಾ. [ ? ]

**ಭಟ್ಟಿಗೆಯ್** (ಕ್ರಿ). ಭಟ್ಟಿ ಇಳಿಸು ; ಕರಗಿಸಿ ಶುದ್ಧಗೊಳಿಸು : ವಜ್ರ ಮೂಷೆಯೊಳಿಕ್ಕಿ ಭಟ್ಟಿಗೆಯ್ವಂತೂದಿ ಕರಗಿಪ್ಪುದುಂ (ಶಾಂತೀಶ. ೯-೧೦೦ ವ).

[ಭಟ್ಟಿ$_2$ + ಕೆಯ್$_1$]

**ಭಟ್ಟಿನಿ** (ನಾ). ೧. ಒಡತಿ ; ಯಜಮಾನಿತಿ. ೨. [ಕಾವ್ಯಮೀ] ನಾಟಕಾದಿ ರೂಪಕಗಳಲ್ಲಿ ಚೇಟಿ ಮೊದಲಾದವರು ಪಟ್ಟದ ರಾಣಿಯನ್ನು ಬಿಟ್ಟು ಇತರ ರಾಜಪತ್ನಿಯರನ್ನು ಸಂಬೋಧಿಸುವಾಗ ಬಳಸುವ ಶಬ್ದ : "ಕೃತಾಭಿಷೇಕಾ, ಮಹಿಷೀ—ಈ ೨ ಪಟ್ಟದರಸಿಯರ್. ಭಟ್ಟಿನೀಯೆಂಬುದುಟಿದರಸಿಯರ್" (ಶಬ್ದಮ. ೬೯-೩೨೬). ೩. ಪೂಜಾರಿಯ ಹೆಂಡತಿ : ಇದು ತನ್ನ ಧಂದೆಗೆ ಸುಖಕರವಲ್ಲವೆಂದು ತಿಳಿದನೋ ಏನೋ, ಅಂತೂ ಈ ಭಟ್ಟಿನಿಯ ತಳ್ಳಿ ಬಿಟ್ಟುಬಿಟ್ಟ (ಪುನರುದಾ. ೧೫೨).

[ಸಂ. ಭಟ್ಟಿನೀ]

**ಭಟ್ಟಿಸುಂಕ, ಬಟ್ಟಿಸುಂಕ** (ನಾ). ಭಟ್ಟಿಯಿಳಿಸುವ ಸಾರಾಯಿ ಮೊದಲಾದ ಮಾದಕಪದಾರ್ಥಗಳ ಮೇಲೆ ಹಾಕುವ ತೆರಿಗೆ ; ಅಬ್ಕಾರಿ : (ಕೃಸಗ. II, ೩೯೯). ಬಟ್ಟಿಸುಂಕ: (ಕಸಂಗ್ರ. ೦೩೦). [ಭಟ್ಟಿ$_2$+ಸುಂಕ$_1$]

**ಭಟ್ಟೋಪಾಧ್ಯಾಯ** (ನಾ). ವಿದ್ವಾಂಸನಾದ ಉಪಾಧ್ಯಾಯನ ಹೆಸರಿನ ಮುಂದೆ ಸೇರುವ ಒಂದು ಉಪಪದ: ಜನ್ನಯಭಟ್ಟೋಪಾಧ್ಯಾಯರ್ಗ್ಗೆ ಕಾಲ ಮತ್ತರು ೫೦ (ಕಇಶ. ೯-೩-೩೦೯ ; 1062) ; ಮನೆವೆರ್ಗ್ಗಡೆ ದಣ್ಣನಾಯಕ ಭಾಸ್ಕರಭಟ್ಟೋಪಾಧ್ಯಾಯ ಲಾಳ ಮಾಳವ ಸೌರಾಷ್ಟ್ರಗೌಡ ವಿಷಯಂ ಮೊದಲಾಗಿಯುತ್ತರದಿಶಾವರದರಸುಮಕ್ಕಳೆಲ್ಲರುಮಾ ಶ್ರೀಮದ್ಭುವನೈಕಮಲ್ಲದೇವರ ಶ್ರೀಪಾದಾರಾಧನದೀಕ್ಷೆಯ ಕೈಕೊಳ್ದುಸ (ಸೌಇಇ. XX, ೯೭-೩೬; 1072). [ಸಂ.]

**ಭಟ್ಟೋರ** 'ಭಟಾರ' ನೋ.

**ಭಡಕ್ಕನೆ** (ಅ). ಒಂದು ಅನುಕರಣಾವ್ಯಯ ; ತಟ್ಟನೆ ; ಕೂಡಲೆ: ಅವನ ಉಗ್ರಸ್ವರೂಪ ಕಣ್ಣ ಮುಂದೆ ನಿಂತಂತಾಗಿ ಬೆಚ್ಚಿಬಿದ್ದು ಭಡಕ್ಕನೆ ಕುಳಿತಲ್ಲಿಂದ ಎದ್ದು ನಿಂತ (ಪುನರುದಾ. ೦೮೨) ; ಅಂದ್ರ ವಸಂತಿ ಒಮ್ಮೆ ಭಡಕ್ಕನ ಹೇಳಿಬಿಡು (ಹೊಸಂಶಾ. ೦೬೪). [ಭಡಕ್$_0$ + —ಅನೆ$_1$]

**ಭಡವ** (ನಾ). ೧. ವ್ಯಭಿಚಾರಕ್ಕಾಗಿ ಗಂಡು ಹೆಣ್ಣುಗಳನ್ನು ಹೊಂದಿಸುವವನು ; ತಲೆಹಿಡುಕ ; ಕುಂಟಣಿಗ. ೨. ಒಂದು ಬೈಗುಳು : ಆ ಭಡವ ತುಂಬ ಚೇಷ್ಟೆ ಮಾಡುತ್ತಿದ್ದಾನೆ (ರೂಢಿ).

[← ಹಿಂ. ಭಡುಆ ; ಮರಾ. ಭಡವಾ, ಭಡುವಾ]

**ಭಡಾಭಡಾ** (ಅ). ವೇಗವನ್ನು ಸೂಚಿಸಲು ಬಳಸುವ ಒಂದು ಅನುಕರಣಾವ್ಯಯ : ಏ ಸುಮ್ನಾ, ದವ್ನಾ ಏಳ್ರೀ ಭಡಾಭಡಾ (ಅಮೂಶಿ. ೭೯); ಭಡಾಭಡಾ ಊರು ಬಿಡಬೇಕ (ಹುಚ್ಚಾಟಿ. ೮೮).

**ಭಣಗುಟ್ಟು** (ಕ್ರಿ). ಬಿಕೋ ಎನ್ನು; ಬರಿದಾಗಿ ಕಾಣು : ಅವರೆಲ್ಲ ತೆರಳಿದ ಮೇಲಂತೂ ಇಡೀ ಮನೆಯೇ ಭಣಗುಟ್ಟುತ್ತಿರುವಂತೆ ಅವರಿಗೆ ಭಾಸವಾದುದಿದೆ (ವಾತ್ಸಲ್ಯ. ೦೩೦); ಆಕೆಗೆ . . . ಮನೆ ಬರಿದಾಗಿ ಭಣಗುಟ್ಟುವಂತೆ ಭಾಸವಾಗುತ್ತಿತ್ತು (ಬರಹಾ. ೪೯). [ಭಣ$_0$ + ಕುಟ್ಟು$_1$]

**ಭಣಗುಡು** (ಕ್ರಿ). =ಭಣಗುಟ್ಟು: ಒಂದು ದಿನ ಆಕಸ್ಮಿತ್ತಾಗಿ ಕುಮಾರಿ ಪಂಡಿತಳು ಕಾಣದೆ ಹೋದರೆ ಅಂದು ಇಡೀ ದಿನವೆಲ್ಲ ಅವನ ಮನಸ್ಸು ಭಣಗುಡುತ್ತಿತ್ತು (ನಮಜೀ. ೪೦೯); ನಮ್ಮನ್ನಿಳಿಸಿದ ಮನೆ ಭಣಗುಡುತ್ತಿರಬಹುದು (ವೈಶಿ. ೪೦). [ಭಣ$_0$ + ಕುಡು$_1$ (<ಕೊಡು$_1$) ]

**ಭಣಭಣ** (ನಾ). ಬೇಸರ, ಉತ್ಕಂಠೆ ಮೊದಲಾದ ಭಾವಗಳನ್ನು ತಿಳಿಸುವಾಗ ಬಳಸುವ ಶಬ್ದ : ಇಂದು ಏಕೆ ಭಣಭಣ ? (ನಡೆಂ. ೮-೦೭); ಅವರಿಗೊಂದು ಚಟುವಟಿಕೆ ಇಲ್ಲವಾಗಿ ಭಣಭಣ ಎನಿಸಬಹುದು (ದೇಕನ್ನ. ೯೯).

ಭಣಭಣವೆನಿಸು=ಶೂನ್ಯವಾದಂತಾಗು; ಬಿಕೋ ಎನ್ನು: ಮಂಟಪ, ಅವಕ್ಕೆ ಕಟ್ಟಿದ ಬಾಡಿದ ತೋರಣಗಳೆಲ್ಲ ಈಗ ಭಣಭಣವೆನಿಸತೊಡಗಿದುವು (ಅಟೋಳ. ೦೮). ಭಣಭಣಸುರಿ=ಹಾಳು ಸುರಿ; ಶೂನ್ಯವಾಗು : ಅವರಿಲ್ಲದ ಸಾಲೆ ಭಣಭಣ ಸುರಿಯುವತ್ತಿತು (ರಂಗರೋ. ೧೬೯) ; ಖಾನಾವಳಿಯು ಭಣಭಣ ಸುರಿಯುತ್ತಿತ್ತು (ರಕ್ತರ. ೦೦೮).

**ಭಣಭಣಗುಡು** (ಕ್ರಿ). =ಭಣಗುಟ್ಟು : ಮಕ್ಕಳಿಲ್ಲದೆ ಭಣಭಣಗುಡುತ್ತಿದ್ದ ಪಾರ್ವತಮ್ಮನ ಮನೆಯನ್ನು ನೆರೆ ಡಿದ್ದ ಹಳ್ಳಿಯ ಇತರ ಹೆಂಗಸರೂ. . . ಒಪ್ಪಿಕೊಳ್ಳುತ್ತಿದ್ದರು (ಸರ್ವಮಂ. ೯). [ಭಣಭಣ+ಕುಡು$_1$(<ಕೊಡು$_1$) ]

**ಭಣಿತ** (ಗು). ೧. ಉಚ್ಚರಿಸಿದ ; ಹೇಳಿದ ; ಮಾತನಾಡಿದ. (ನಾ). ೨. ಹೇಳಿಕೆ; ಮಾತು; ವಚನ : ಪ್ರಶಸ್ತಕರ್ಸಂಗಳ್ಗೆ ಚತುಸ್ಸ್ಥಾನಾಸು ಭಾಗಮನಂತಗುಣಿತ್ರಮಾಗಿ ಕಟ್ಟುಗುಂ ಇಂತನುಭಾಗಬಂಧಂ ಭಣಿತಮಾಯ್ತು (ಕ್ಷಪಣ. ೩-೦೭) ; ಕಣ್ಮಣಿತಕೆ ನಗೆ ಭಣಿತಕೆ ಮನೆ ಹೋಯಿತು ನಡುಗಿ (ಅರಳು. ೩೩೭-೦೪). [ ಸಂ. ]

**ಭಣಿತಿ** (ನಾ). ೧. ಮಾತು; ವಚನ : ನುಡಿದ ವಕ್ರಭಣಿತಿಗಳಾಶ್ಚರ್ಯಮಂ ಪುಟ್ಟಿಸೆ (ಜಗನ. ೮-೦೦೭ ವ) ; ದಣಿಯೆ ಭೂಸುರರನ್ನ ಪಾನದಿಂ ದಾನದಿಂ . . . ಭಣಿತಿಗಳ ಮೃದುಮಧುರಗಾನಸನ್ಮಾನದಿಂ ಭೂಭುಜರ್ ಸಂಭ್ರಮಿಸಲು (ಪಂಕಾರಾ. ೦-೮.೦೪) ; ಭಣಿತಿ ಭಂಗಿಗಳಲ್ಲಿ ಮುಗಿದು ಕುಂಠಿತ ಮತಿಯು ಮತ್ತೆ ತಲೆಯೆತ್ತಿ ನಿಂತಿಹುದು ದಿಠಿಸಂತತಿಯು (ಸೂರ್ಯಶಾ. ೯೪-೧೩). ೨. ವಾಕ್ಯರಚನೆ ; ವಾಗ್ಗುಂಫ : ಸಾಂಗತ್ಯದ ಇತರ ಕೃತಿಗಳಲ್ಲಿ ಚಿರಪರಿಚಿತವಾದ ಗಾದೆಗಳು, ಮಾತಿನ ಭಣಿತಿಗಳು ಧಾರಾಳವಾಗಿ . . .ಜಾನಪದಪ್ರಪಂಚಕ್ಕೆ ನಿಕಟವಾಗಿ ಸಂಬಂಧಿಸಿದಂತಿವೆ (ಸುವರ್ಣ.೦೦೭).

[ ಸಂ. ]

**ಭಣಿತೆ** (ನಾ). ೧. ಮಾತು ; ವಚನ : ಸಕಲಸುರಾಳಿ ಭಣಿತೆಯಿಂ ಜಯಜಯ ಸ್ವಾಮಿಯುಪಧಾರೆಂಬುದೆಣಿಸಲೇನದಜನೀಶಂಗಜಹರಿಮುಖಾಖಿಲಂ ಮಕ್ಕಳಾಟದಂತೆ (ಶಬ್ದರಾ. ೦೦-೩೦) ; ರಣಮುಖದೊಳೇ ಕ್ಷತ್ರಧರ್ಮದ ಕುಣಿಕೆ ತಪ್ಪದೆ ವೇದಶಾಸ್ತ್ರದ ಭಣಿತೆ ನೋಯದೆ ವೀರವೃತ್ತಿಯ ಪದವ ಪಾಡಜಿದು . . . ಜೀವದಾಸೆಗೆ ಮಣಿಯದೆಳದುವನೆಲ್ಲ ಬಲ್ಲರು (ಕುವ್ಯಾಗ. ೮-೪೦); ಪ್ರಣುತಿಸಿದುವಲ್ಲಿದು ಯಥಾರ್ಥದ ಭಣಿತೆಯಹುದು (ಶಿವ್ಯಶಾಂ. ೦೦-೭೮). ೨. ಚಮತ್ಕಾರವಾದ ಮಾತು ; ವಕ್ರೋಕ್ತಿ : ಲಾಲಿತ್ಯದ ರಮಣೀಯ ರಸಗಳ ಸೂಳುನುಡಿಗಳ ಸಡಗರಂಗಳ ಸಾಲ ಭಣಿತೆಯ ಬಂಧದೋಜೆಯ ಕಥೆಯ ಪ್ರಥುಲತೆಯ . . . ಬಣ್ಣಿಸುವೆ (ಸೌಶಿರಾ. ೦-೩); ಹಲವು ಜನ ಸಾಧಕರನ್ನೂ ಸಿದ್ಧಂಪುಸ್ಸರನ್ನೂ ತನ್ನ ಬೆಳಕಿನ ತುಣುಕಿನ ಭಣಿತೆಗಳಿಂದ ಉದ್ದೀಪಿಸಿ . . . ಚಿತ್ರಿಸಿರುವ ಅಪೂರ್ವ ಕೃತಿಯಿದು ( ಅವತಂ. ೦೯ ೭೭೦೪ ). ೩. ರೀತಿ ; ಭಂಗಿ : ದೇವ ನೀನೀ ಪರಿಯ ಜಂಗಮಭಾವಭಣಿತೆಯ ಧರಿಸಿ ಬಂದರೆ ಗಾವಿಲರು ತಾವೆತ್ತ ಬಲ್ಲೆವು ನಿಮ್ಮ ಮಹಿಮೆಯನು ( ಪ್ರಭುಲಿ. ೦೩-೪೦ ) ; ಜಗಳದಾಟದ ಭೈರವನ ಭಣಿತೆಗಳಲ್ಲಿರ್ದನು ಭಯರಸದ ಸೋನೆಗಳ ಸೂಸುತ ನಿಮ್ಮ ರಘುಪತೀಂದ್ರ ಸೇನೆಯಲಿ (ತೊರರಾ.೭-೩೩-೭); ಅಪರಿಮಿತ ಬಲ ಭೂಸುರ

ಮಹಾವಾರ್ಧಿ ಭಣಿತೆಯುಲಿ ಕುಣಿಕುಣಿವ ಬಗೆಗಾಕ್ಷಣದೊಳಚ್ಚರಿಪಟ್ಟುದ್ರೈ (ಕೋಗಯು. ೦೬-೬೬). ೪. ಚಟುವಟಿಕೆ; ಕೈಚಳಕ : ಹೊಣಕೆಯಿಂ ಘನವಲ್ಲರಂತೆಳ್ದು ಧನುಗಳಂ ಭಣಿತೆಯಿಂದಾಂತು ಜೀವಜದ ರಭಸಕ್ಕರರೆ ಪೆಣದ ಪೋಲ್ ಜೀವಿಗಳ್ ನಿರ್ಜೀವವಾಗೆ (ತಕುಪು. ೯-೨-೬). ೫. ಸ್ಪಷ್ಟತೆ : ಭಣಿತೆಯ ನುಡಿಯುಂದ ಗುಣವಣ ಪೇಳೀಗ ಮಣಿಮೂಗುತಿ ಯದೆಲ್ಲಿಯೆಂದ (ಮೂಗುತಿ. ೨೨-೦೦೬). ೬. [ಸಂಗೀತ] ವಾದನ ಗಾಯನ ಗಳಲ್ಲಿಯ ಒಂದು ರೀತಿ (?) : ಭಣಿತ ಬೆಡಂಗು ಕಾಕು ಖಚರಂ ಗಮಕಂ . . . ದೇಸೆ ಪೆಲ್ಲಣೆ ಕಳೆಯೆಂಬಿವಂ ಪೊಚಿಸಿದು ಬಾಜಿಸಿದಂ ಮುರವೈರಿ ವಾಸವಮಂ (ಜಗಂ. ೫-೩); ಪೊಸ ಭಣಿತೆ ಬೆಡಗು ಮಧುರಂ ನಯುಂಗಳೊಳ್ ಶೋಭಿಸುವ ಕಾನಂಗಳೊಳ್ ಸಕಲರಾಗಂಗಳಿಂದೊಸೆದು ತುಂಬುರ ನಾರದರ್ ಪಾಡುತಿರ್ದರೊಂದೆಸೆಯೊಳತಿವಿಭವದಿಂದೆ (ತಂಪು. ೨-೨೯). [ಸಂ. ಭಣಿತ]

**ಭತ್ತ₁** 'ಬತ್ತ' ನೋ.

**ಭತ್ತ₂** 'ಬತ್ತಾಯ' ನೋ.

**ಭತ್ತಗಾವೆ** (ನಾ). ಇನಾಮುಗ್ರಾಮ ; ಜಹಗೀರು : ಮದನಾವ ತಾರಮಂ ಕನಕದಂಡ ಚಾಮರಮಂ . . . ಭತ್ತಗಾವೆಯುಂ ಪಡೆದುದಾತ್ತ ಕವಿತಿಲಕನೆನಿಸಿದಂ ಕವಿರತ್ನಂ (ಅತಪು. ೦೨-೫೦) ; ಶ್ರೀಮನ್ಮಹಾಸಾಹಣಾದಿ ಪತಿ[ಸೌ]ಚಯನಾಯ್ಕರ್ ಬೆಳ್ವೊಲ ಮೂನೂಱಱೊಳಗಣ ಭತ್ತಗಾವೆ ಎಲೆಯ ಪಸುನ್ನೆಯುಂ ದುಷ್ಟನಿಗ್ರಹ ವಿಶಿಷ್ಟಪ್ರತಿಪಾಳನದಿನಾಳ್ದು ಸುಖ ದಿನಿರೆ (ಕಇ. XI-i, ೬೩-೯; ಸು. 1026) ; ದಣ್ಣಾಯಕ ಲಕ್ಕರಸಂ ಬತ್ತಪ್ಪಿತ್ತಿ ಭತ್ತಗಾವೆಯೊಳಗಾಗಿ ಬೆಳ್ವಲವೆರಡಱುನೂಱುಮಮ್ . . . ಆಳುತ್ತಮಿರ್ದ್ದ (ಎಇ. XVIII. ೦೯೦-೫; 1104).

[ಭತ್ತ₂ (<ಬತ್ತಾಯ) + ಗಾವೆ (<ಗ್ರಾಮ)]

**ಭತ್ತಗ್ರಾಮ** (ನಾ). =ಭತ್ತಗಾವೆ : ಜಯಸಿಂಹದೇವರು. . .ಮಣ್ಣಳಿಸಾಸಿ ರಮುಮಂ ಪದಿನೆಣ್ಬು ಭತ್ತಗ್ರಾಮಗಳಂ ಬೆಳ್ವಲಮೂನೂಱು [ಪು]ಲಿಗೆಱೆ ಮೂನೂಱುಮಂ. . .ಅರಸು[ಗೆ]ಯುತ್ತಮಿರೆ (ಶ್ವೆಇಂ. ೦೯೩೦, ೬೬-೯ ; 1080). [ಭತ್ತ₂ (<ಬತ್ತಾಯ) + ಗ್ರಾಮ]

**ಭತ್ತವಟ್ಟ** (ನಾ). (?) : ಮತ್ತಂ ಭತ್ತವಟ್ಟಯುಂ ಗಡಿಯ ನವಿರಂಗಳು ತಮ್ಮಂಗಡಿಯುಲು ವರ್ಷಂಪ್ರತಿ ಚೈತ್ರಕ್ಕೆ ಹಾಗ ಮತ್ತಂ ಪೈತ್ರಕ್ಕೆ ಹಾಗಮುಂ ಬಿಟ್ಟರ್ (ಕಇ. XV, ೦೩೫-೫೯; 1179). [?]

**ಭತ್ತಾದಾಯ** (ನಾ). ಬತ್ತದ ಬೆಳೆಯಿಂದ ಬರುವ ಆದಾಯ : ಉತ್ಪನ್ನ: ಕೆಱೆಯ ತೆಂಕಣ ಕೋಡಿವೊ[ಳ]ಗಣ ಭತ್ತಾದಾಯ (ಎಕ. IX, ಬೇಮಂ. ೫೩-೨೫;1374); ಸಕಲ ಭತ್ತಾದಾಯ ನಿಧಿ ನಿಕ್ಷೇಪ ಜಲಪಾಷಾಣ. . . ಬಿಟ್ಟುಕೊಟ್ಟ ಧರ್ಮ (ಎಕ. XI, ಹರ್ರು. ೯೫-೦೯; 1538). 'ಬತ್ತಾಯ' ಪರಾ. [ಭತ್ತ₁ (<ಬತ್ತ) + ಆದಾಯ]

**ಭತ್ತಾಯ** 'ಬತ್ತಾಯ' ನೋ.

**ಭತ್ತೆ** 'ಬತ್ತಾಯ' ನೋ.

**ಭತ್ಯ** 'ಬತ್ತಾಯ' ನೋ.

**ಭತ್ವ** (ನಾ). 'ಭ' ಎಂಬ ಅಕ್ಷರ: "ಭತ್ವಕ್ಕೆ ಹ ಪ ಪಮುಮಕ್ಕುಂ" (ಕಮಾದ. ೨೬೨). [ಸಂ.]

**ಭದಂತ** (ನಾ). ೧. ಪೂಜ್ಯ; ಶ್ರೇಷ್ಠ. ೨. ಗೌತಮ ಬುದ್ಧ. ೩. ಬೌದ್ಧ ಭಿಕ್ಷುಗಳನ್ನು ಸಂಬೋಧಿಸುವಾಗ ವಿಶೇಷವಾಗಿ ಬಳಸುವ ಶಬ್ದ : ಭದಂತನು ಮನವಾರೆ ಮಾತನಾಡಲಿ (ಬುದ್ಧ ಕ. ೩೯ ಬಿಂಬ). [ಸಂ.]

**ಭದ್ರ** (ಗು). ೧. ಮಂಗಳಕರವಾದ ; ಶ್ರೇಯಸ್ಕರವಾದ. ೨. ಶ್ರೇಷ್ಠ ವಾದ ; ಉತ್ತಮವಾದ : ದ್ವಿಜವರ್ಗ ರಚಿಸಿದ ತಳಿರ ಗುಡಿಗಳ ಪರ್ಣ ಶಾಲೆಯ ಭದ್ರಭವನಿಕೆಯ . . . ಓಲಗಶಾಲೆ ಮೆಱೆದುದು ಧರ್ಮನಂದನನ (ಕುವ್ಯಾ. ೦-೩೫) ; ಕ್ಷಮೆಯಲ್ಲಿ, ಸತ್ತ್ವದಲಿ, ಶಾಂತಗಾಂಭೀರ್ಯದಲಿ, ಭದ್ರರೂಪದಲಿ, ತನುಕಾಂತಿಯುಲಿ ಮೆರೆದನಾ ಶ್ರೀರಾಮಚಂದ್ರಂ (ಶ್ರೀರಾಮಪ. ೨೬-೬೦). ೩. ಅಂದವಾದ; ಚೆನ್ನಾದ. (ನಾ). ೪. ಕ್ಷೇಮ; ಸುಖ ; ಶ್ರೇಯಸ್ಸು : "ಶ್ವಃ(ಸ್ವ)ಶ್ರೇಯಸಂ . . . ಭದ್ರಂ, ಮಂಗಳಂ ಈ ೧೧ ಒಳ್ಳಿತರ್ಕೆ ಪೆಸರ್" (ಹಲಾಯು. ೨೦-೦೨೨) : ಮತ್ಕಾವ್ಯಮಂ ಮೆಚ್ಚಿ ಕೇಳ್ವ ಗುಣಂಗೊಳ್ವ ಜನಕ್ಕಮಕ್ಕೆ ವಿಭವಂ ಭದ್ರಂ ಶುಭಂ ಮಂಗಳಂ (ಅತಪು. ೦೨-೨೭) ; ಸಮಸಂದಿಷ್ಟಾರ್ಥಮಂ ಮಾಟ್ಕೆ ಕಾಂತನ್ನಲೋಕಸ್ತುತ ನಿನ್ನೊಳಿಂದು ವಿಜಯಂ ಭದ್ರಂ ಶುಭಂ ಮಂಗಳಂ (ಪುಸ್ಕಪು. ೮-೬೯) ; ಎಲೈ ಭೂಮಿಪತಿಯೆ ನಿನಗೆ ಭದ್ರಮಾಗಲಿ (ಗಸವು. ೯-೨೫). ೫. ಜೋಪಾನ ; ಸುರಕ್ಷಿತ ; ಅಭೇದ್ಯ : ಭದ್ರಮೆನಿಸಿರ್ದ ಕುಸುಮಲಸದ್ರಸಮಂ ಪೀರ್ವ ಪದದೊಳೊಪ್ಪಿತು . . . ಅಳಿನಿಕುರುಂಬಂ (ಗಂಕ. ೨-೬೫); ಉಮ್ಮತ್ತೂರಿನ ಐಶ್ವರ್ಯನಿಧಿ ಭಂಡಾರಗಳು ಭದ್ರವಾಗಿವೆ (ಶ್ರೀರಾಮು. ೦೯೯); ಭದ್ರಾ ಮಾಡಿ ವಷ್ಪೂ ನಿದ್ರೆ ಬಿಡುವುದಿಲ್ಲ (ಗಾದೆ). ೬. ದೃಢ ; ಗಟ್ಟಿ : ಎಳೆಗಳನ್ನು ಸುಲಿದು ಭದ್ರವಾದ ದಾರಗಳನ್ನಾಗಿ ಮಾಡುತ್ತಾರೆ (ಗೃಪಶ. ೬೨); ಕೇಶವ ರಾಯನಿಗೆ ಸೆರೆಕುಡಿಯಲು ಕಲಿಸಿದುದು ಈ ಸೂರಪ್ಪನೇ ಎಂಬುದು ಸಿದ್ದಣ್ಣನ ಭದ್ರವಾದ ನಂಬಿಕೆ (ವಂಗಂ. ೬). ೭. ಶುಭಲಕ್ಷಣಗಳುಳ್ಳ ಒಂದು ಜಾತಿಯ ಆನೆ: "ಭದ್ರಃ, ಮಂದಃ, ಮೃಗಃ—ಎಂದಿಂತು ಆನೆಗಳ್ ಮೂಱು ತೆಱನಕ್ಕುಂ" (ಹಲಾಯು. ೩೬-೬೨) : ನಯನಿಪುಣಸೂತ್ರ ಧಾರರ್ ನಿಯಮಿಸುವರ್ ಭದ್ರಮಂದಮೃಗಸಂಕೀರ್ಣಾನ್ವಯದ ನೃಪಕರಿಗಳಂ (ಪುಸ್ಕಪು. ೨-೩೭). ೪, ೭: ಉನ್ನತವಂಶನುತ್ಸವರೋತ್ತಮ ಭದ್ರಗುಣಾನ್ವಿತಂ ಜಗತ್ಸನ್ನುತದಾನಯುಕ್ತವಿಭವಂ . . . ವನಗೀತನೆ ನಚ್ಚಿನ ಪಟ್ಟದಾನೆಯೆಂದೇಂ ನೆಱೆ ನಚ್ಚಿ ಮಾಡಿದನೊ ವಿಷ್ಣುನೃಪಂ ಧ್ವಜಿನೀಪತಿತ್ವಮಂ (ಎಕ. VI, ತಕ್ಕಮ. ೦೬೦-೯೩; 1103 ?) ; ಕರಿಯಿಂ ಭದ್ರಯುತಂ ಸರೋಜದೆ ಗುಣಾಧಾರಂ ವೃಷಾಧೀಶನಿಂ ಹರಭಕ್ತಂ . . . ಕುಮಾರಂ ಪುಟ್ಟುವಂ ನಿಶ್ಚಯಂ (ರಾಜಶೇ. ೯-೨೯). ೮. ದೊಡ್ಡದು : "ಬೃಹತ್ . . . ವಿಪುಲಂ, ಭದ್ರಂ, ವರಿಷ್ಠಂ—ಈ ೧೨ ಪಿರಿದು" (ಹಲಾಯು. ೦೦೬-೦೯). ೯. ಬಂಗಾರ; ಚಿನ್ನ. ೧೦. ಉಪ್ಪರಿಗೆ; ಮಹಡಿ : ಆಗಳ್ ದ್ರುಪದಂ ಪಚ್ಚೆಯ ನೆಲಗಟ್ಟಿನೊಳಂ . . . ಇಂದ್ರನೀಲದ ಭದ್ರ ದೊಳಂ . . . ಚಂದ್ರಕಾಂತದ ಚಂದ್ರಶಾಲೆಯೊಳಮೊಪ್ಪುವ ವಿವಾಹ ಗೇಹಮಂ ಸಮೆಯಿಸಿ (ಪಂಪಭಾ. ೩-೬೯ ವ); ಕಾಂತೆ ಮಾಳಿಗೆಯ ಭದ್ರದ ಬಯಲೊಳಾಡಿದಳು ಪೊಡೆಸೆಂಡನು (ಹದಶಾ. ೯-೦೨) ; ಮೇಲುಗುಡಿಗಳ ಭದ್ರದುಪ್ಪರಶಾಲೆಗಳ . . . ರಾಜಾಲಯವನನುಕರಿಸಿದರು ಕುಂತೀ ಕುಮಾರರಿಗೆ (ಕುವ್ಯಾಆ. ೦೦-೯೯). ೧೧. ಪ್ರಮಾಣಕ್ಕೆ ಅನುಸಾರವಾಗಿ ವಿಂಗಡಿಸಿರುವ ಐದು ಪ್ರಕಾರದ ಮನುಷ್ಯಜಾತಿಗಳಲ್ಲಿ ಒಂದು : ವರಾಹಮಿಹಿರನು ಮನುಷ್ಯರನ್ನು ಶರೀರದ ಆಳತೆ ಆಕಾರದ ಮೇಲೆ ಐದು ಜಾತಿಗಳನ್ನಾಗಿ ವಿಂಗಡಿಸುತ್ತಾನೆ : ಹಂಸ, ಶಶ, ರುಚಕ, ಭದ್ರ, ಮಾಲವ್ಯ ಎಂಬುವೇ ಈ ಐದು ಜಾತಿಗಳು (ಶಾರರ. ೫೦೭). ೧೨. ಎತ್ತು; ಗೂಳಿ ; ವೃಷಭ : "ಉಕ್ಷಾನ್, ಭದ್ರಃ . . . ಗೌಃ— ೯ ಎತ್ತುಗಳ ಹೆಸರು" (ಸಿದ್ಧಾಂತಿ. ೨೯೦). ೧೩. ಒಂದು ಪರ್ವತದ ಹೆಸರು: ಬಳಿಕ ಸುಗಂಧಶಿಖ . . . ಭದ್ರ. . . ಪಾರಿಜಾತಮೆಂಬ ಹದಿನಾಲ್ಕು ಕುಲಾಚಲಂಗಳೇ ಪೂರ್ವೋತ್ತವಿಪುಳಮೆಂಬ ಕೀಲಕಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿಹವು (ಖವೇಕ. ೨೦೫). ೧೪. ಉತ್ತಮವಾದ ಪೀಠ; ಸಿಂಹಾಸನ: ವಿದುರ ಧೃತರಾಷ್ಟ್ರರು ಸಹಿತ ಸುರನದಿಯ ಮಗನೈತಂದು ನವಭದ್ರದಲಿ ಕುಳ್ಳಿರ್ದನು ಪಸಾಯಿತ ಸಚಿವಜನಸಹಿತ (ಸಂಶಕ. ೬-೦೭). ೧೫. [ಜ್ಯೋತಿ] ಕರಣಗಳಲ್ಲಿ ಏಳನೆಯದು : ಬವ ಬಾಲವ ಕಾಲವ ತೈತುಲ ಗರಜ ವಣಿಜ ಭದ್ರಂಗಳೆಂ ಬೇಳು ಚರಕರಣಂಗಳುಂ (ಲವೀಕ.೩೨೦). ೧೬. ಕತ್ತರಿಸುವುದು ; ಛೇದನ :

"ಅಲಘು ಮದೇಭ ಪುಂಗವ ಸುಮಂಗಳ ಭೇದನ ಭದ್ರವಾಚಕಂ" (ಪಾಪಾರ. ೦೦೦). [ಸಂ.]

**ಭದ್ರಕ** (ಗು). ೧. ಶ್ರೇಯಸ್ಕರವಾದ ; ಮಂಗಳಕರವಾದ. ೨. ಅಂದವಾದ ; ಚೆನ್ನಾದ. ೩. ಪುಣ್ಯಕರವಾದ. (ನಾ). ೪. ಒಂದು ಬಗೆಯ ಮರ; ದೇವದಾರು. ೫. [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಒಂಭತ್ತನೆಯದಾದ ಬೃಹತಿ ಛಂದಸ್ಸಿನ ಒಂದು ವೃತ್ತ: ರೌದ್ರಮನ್ಮಸುರಪಾವಕಂ ಕ್ಷುದ್ರಮಲ್ಲದಿರೆ ನಾಮದಿಂ ಭದ್ರಕಂ ಸರಸಿಜಾನನೇ ಸದ್ರಸಂ ಲಯಪದ ಕ್ರಮಂ (ಛಂದೋಂಬು. ೨-೦೦೪).

**ಭದ್ರಕವಿದ್ರಾವಣ** = ಚಾಳುಕ್ಯರಾಜನಾದ ಆಹವಮಲ್ಲನ ಒಂದು ಬಿರುದು : ಸಮಸ್ತಭುವನಾಶ್ರಯಂ . . .ಭದ್ರಕವಿದ್ರಾವಣಂ ಕೊಂಕಣ ಭಯಂಕರಂ ಉಭಯಬಲದಲ್ಲಣಂ (ಗದಾಯು. ೬-೭ ವ). [ಸಂ.]

**ಭದ್ರಕಾಲಿ, ಭದ್ರಕಾಳಿ** (ನಾ). ೧. ಶಕ್ತಿದೇವತೆ; ದುರ್ಗೆ. **ಭದ್ರಕಾಳಿ:** ೧. ನೋಡು ಬರುತಲಿರುವಳದೋ ರುದ್ರಭದ್ರಕಾಳಿಯು ! ದೇವಿ. ಚಂಡಿ. ಚಾಮುಂಡಿ, ರಕ್ತರುಂಡಮಾಲಿಯು ! (ಜಾಂಡಕ. ೯-೨). ೨. ದಕ್ಷನ ಯಾಗವನ್ನು ನಾಶಪಡಿಸಲು ಪರಮೇಶ್ವರನು ವೀರಭದ್ರನ ಸಹಾಯಕ್ಕಾಗಿ ಸೃಷ್ಟಿಸಿದ ಸ್ತ್ರೀದೇವತೆ : ಹಸ್ತದ ಹಲಗೆ ಖಂಡೆಯವನಿರದೆ ಝಳಪಿಸುತೆ ತೇರಿಂದಿಳಿದು ಸಲೆ ಭದ್ರಕಾಳಿ ಸಹಿತೆ ಗಂಡುಗಲಿವೀರಂ . . . ಬರುತಿರ್ದಂ (ತಬಪು. ೩೨-೪೩). [ ಸಂ. ಭದ್ರಕಾಲೀ ]

**ಭದ್ರಕಾಳಿ** 'ಭದ್ರಕಾಲಿ' ನೋ.

**ಭದ್ರಕುಂಭ** (ನಾ). ಮಂಗಳಕಲಶ ; ಪೂರ್ಣಕುಂಭ : "ಭದ್ರಕುಂಭಃ. ಪೂರ್ಣಕುಂಭಃ—೨ ಅರಮನೆಯ ಬಾಗಿಲು ಮುಂತಾದವುಗಳಲ್ಲಿ ಮಂಗಳಕರವಾಗಿ ಇರಿಸತಕ್ಕ ಪೂರ್ಣ ಕಲಶಗಳ ಹೆಸರುಗಳು" (ಸಿದ್ಧಾಂತಿ. ೨೪೩). [ ಸಂ. ]

**ಭದ್ರಗಜ** (ನಾ). = ಭದ್ರ ೭ : ಅಂತಿರ್ದ ಸಕಲಶುಭಲಕ್ಷಣಾಕಾರಮುಮತ್ಯಂತಕರಮುಮಿಂದ್ರನೀಲಚ್ಛಾಯಮುಂ ಮಹಾಕಾಯಮುಮಪ್ಪ ಭದ್ರಗಜಮಂ ಕಂಡು (ಶಂರಾಪಾ. ೦೦-೦೫೯ ವ) ; ಭದ್ರಗಜ ಆಜಕಾಲದಲ್ಲಿ ಘರ್ಜಿಸಿ ಕೊಂಬುದೇ (ಸರ್ವಜ್ಞ. ೬೨೦) ; ಅಳಿದುದ್ಯೆ ಸೂಜಿರಸುಗಳು . . . ಸುಗ್ಗಾದು ದೊಂಬೈಸೂಜು ಭದ್ರಗಜ (ಕುಮಾರರಾ. ೦೦-೨೦). [ಸಂ.]

**ಭದ್ರತಂತ್ರ** (ನಾ). ಆಗಮಗಳಲ್ಲಿ ಒಂದು ; ವೀರಾಗಮದ ಹದಿಮೂರು ಭೇದಗಳಲ್ಲಿ ಒಂದು : ಪ್ರಸ್ತರತಂತ್ರ . . . ಭದ್ರತಂತ್ರ ವೀರತಂತ್ರವೆಂದು ವೀರಾಗಮದ ಹದಿಮೂಜು ಭೇದಂಗಳು (ಏವೇಕ. ೬೦). [ಸಂ.]

**ಭದ್ರತಾಮಂಡಲಿ** (ನಾ). [ರಾಜನೀ] ಪ್ರಪಂಚದ ವಿವಿಧರಾಷ್ಟ್ರಗಳ ನಡುವೆ ಸಂಭವಿಸಬಹುದಾದ ಯುದ್ಧಗಳನ್ನು ತಪ್ಪಿಸಿ ಜಗತ್ತಿನಲ್ಲಿ ಶಾಂತಿಯು ನೆಲಸುವಂತೆ ಮಾಡಲು ಸ್ಥಾಪಿತವಾಗಿರುವ ವಿಶ್ವಸಂಸ್ಥೆಯ ಒಂದು ಅಂಗಸಂಸ್ಥೆ ; ದೇಶದೇಶಗಳ ವಿವಾದಗಳನ್ನು ಚರ್ಚಿಸಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರವುಳ್ಳ ಸಮಿತಿ : (Security council. ಪತ್ರಿಕೆ.೬೩); ಭದ್ರತಾಮಂಡಲಿಯಲ್ಲಿ ರಷ್ಯ ಖಾಯಂ ಸದಸ್ಯರಾಷ್ಟ್ರವಾಗಿದೆ (ರೂಢಿ). [ಸಂ. ಭದ್ರತಾಮಂಡಲೀ]

**ಭದ್ರತಾಸಮಿತಿ** (ನಾ). = ಭದ್ರತಾಮಂಡಲಿ : ಸಾರ್ವತ್ರಿಕಸಭೆ (General Assembly) ಭದ್ರತಾಸಮಿತಿ (Security Council) . . . ಇವು ವಿಶ್ವಸಂಸ್ಥೆಯ ಆರು ಪ್ರಧಾನಅಂಗಗಳಾಗಿವೆ (ಅಂತಸಂ. ೦೭). [ಸಂ.]

**ಭದ್ರತೆ** (ನಾ). ಈತಿಬಾಧೆಗಳಿಲ್ಲದೆ ಸ್ವಸ್ಥವಾಗಿರುವಿಕೆ ; ಸುರಕ್ಷತೆ; ಕ್ಷೇಮ : ಅನೇಕ ಸಣ್ಣ ಸಣ್ಣ ರಾಷ್ಟ್ರಗಳ ಭವಿಷ್ಯ ಆರ್ಥಿಕ ಬೆಳವಣಿಗೆ ಹಾಗು ಭದ್ರತೆಯು ಇಂತಹ ಆರ್ಥಿಕ ಒಕ್ಕೂಟಗಳ ಸ್ಥಾಪನೆಯನ್ನೇ ಅವಲಂಬಿಸಿರುವುದೆಂದು ಹೇಳಬಹುದು (ಅಂತಸಂ. ೨೪೦). [ಸಂ. ಭದ್ರತಾ]

**ಭದ್ರದಂತಿ** (ನಾ). = ಭದ್ರ ೭ : ಎಣಿಕೆಯಿಲ್ಲದೆ ಕುಂಭಕರ್ಣನು ರಣಕೆ ನೂಕಿದ . . . ಭದ್ರದಂತಿಯನೆಂಟುಕೋಟಿಯನು (ತೊರಾ. ೨೫-೪). [ಸಂ. ಭದ್ರದಂತಿನ್]

**ಭದ್ರದಾರು** (ನಾ). ಒಂದು ಬಗೆಯ ಮರ ; ದೇವದಾರು : "ಚಕ್ರಪಾದಪಃ, ಪಾರಿಭದ್ರಕಃ, ಭದ್ರದಾರುಃ, ದ್ರುಕಿಲಿಮಂ, ಪೀತದಾರು, ದಾರು, ಪೂತಿಕಾಷ್ಠಂ—೭ ದೇವದಾರುವೃಕ್ಷದ ಹೆಸರು" (ಸಿದ್ಧಾಂತಿ. ೦೨೪). [ಸಂ.]

**ಭದ್ರಪದೆ** (ನಾ). [ಜ್ಯೋತಿ] ಪ್ರಸಿದ್ಧವಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಇಪ್ಪತ್ತೈದು ಮತ್ತು ಇಪ್ಪತ್ತಾರನೆಯ ನಕ್ಷತ್ರಗಳು ; ಪೂರ್ವಾಭಾದ್ರೆ ಮತ್ತು ಉತ್ತರಾಭಾದ್ರೆ ನಕ್ಷತ್ರಗಳು. [ಸಂ. ಭದ್ರಪದಾ]

**ಭದ್ರಪರ್ಣೆ** (ನಾ). ಒಂದು ಬಗೆಯ ಸಸ್ಯ : "ಗಂಭಾರೀ, ಸರ್ವತೋಭದ್ರಾ, ಕಾಶ್ಮರೀ, ಮಧುಪರ್ಣಿಕಾ, ಶ್ರೀಪರ್ಣೀ, ಭದ್ರಪರ್ಣೀ, ಕಾಶ್ಮರ್ಯಃ—೭ ಶೀವನೆಯ ಮರದ ಹೆಸರು" (ಸಿದ್ಧಾಂತಿ. ೦೨೦): "ಭದ್ರಪರ್ಣೀಗುಳ್ಳ (ಗೂಳ?)" (೬೫೦. ೦೦೦). [ಸಂ. ಭದ್ರಪರ್ಣೀ]

**ಭದ್ರಪೀಠ** (ನಾ). ೧. ಶ್ರೇಷ್ಠವಾದ ಪೀಠ ; ಸಿಂಹಾಸನ : "ಸಿಂಹಾಸನಂ ಭದ್ರಪೀಠಂ" (ಮಂಗರಾ. ೬೮-೦). ೨. (ಪ್ರತಿಮೆಗಳ ಸ್ಥಾಪನೆಯಲ್ಲಿ) ಒಂದು ವಿಶೇಷ ರೀತಿಯ ಪೀಠ,-ಆಸನ : ಆ ಶಿವಾರ್ಚನೆಗುಪಯುಕ್ತವಾಗಿ ಅನಂತಪೀಠ ಕಮಠಪೀಠ . . . ಭದ್ರಪೀಠ ಭಾವನೆಯೆಂದುಪಕಲ್ಪಿತಮಾದ ದಿವ್ಯಮಂಟಪಮಧ್ಯಗತ ಸಿಂಹಾಸನಕ್ಕೆ (ಏವೇಕ. ೦೦೪) ; 'ಮಯಮತ' ಎಂಬ ಗ್ರಂಥದಲ್ಲಿ ಪ್ರತಿಮೆಗಳಿಗೆ ಬೇಕಾದ ಪೀಠಗಳು ಅನೇಕ ವಿಧವೆಂದೂ, ಅವುಗಳಲ್ಲಿ ಮುಖ್ಯವಾದುವು ಭದ್ರಪೀಠ, ಪದ್ಮಪೀಠ . . . ಶ್ರೀಕಾಮ್ಯವೆಂದೂ ಹೇಳಿದೆ (ಶಾರದ. ೫೦೭). [ಸಂ.]

**ಭದ್ರಬಲೆ** (ನಾ). ಒಂದು ಬಗೆಯ ಸಸ್ಯ; ಸಾರಣೆ ಗಿಡ : "ಸಾರಣೀ, ಪ್ರಸಾರಣೀ, ಕಟುಂಭರಾ, ರಾಜಬಲಾ, ಭದ್ರಬಲಾ — ೫ ಕಿರಿಯ ಹಸಾರಣೆ ಗಿಡ, ಸಾರಣೀಗಿಡ" (ಸಿದ್ಧಾಂತಿ. ೦೪೭). [ಸಂ. ಭದ್ರಬಲಾ]

**ಭದ್ರಬಾಹು** (ನಾ). [ಜೈನ] ಐದನೆಯ ಶ್ರುತಕೇವಲಿ; ಚಂದ್ರಗುಪ್ತನ ಜೊತೆಯಲ್ಲಿ ಉತ್ತರಭಾರತದಿಂದ ಶ್ರವಣಬೆಳಗೊಳಕ್ಕೆ ಬಂದನೆಂದು ಹೇಳಲಾದ ಜೈನಮುನಿ : ಗೋವರ್ದ್ಧನ ಭದ್ರಬಾಹು ವಿಶಾಖ ಪ್ರೋಷ್ಠಿಲ ಕೃತ್ತಿಕಾರ್ಯ . . . ಮಹಾಪುರುಷಸನ್ತತಿಸಮವದ್ಯೋತಿತಾನ್ವಯ ಭದ್ರಬಾಹುಸ್ವಾಮಿನಾ (ಎಕ. II, ೧-೪; ಸು. ೬೦೦) ; ಇಂತು ಪದಿನಾಱುಂ ಕಂಡ ಕನಸುಗಳ ಫಲಂಗಳಂ ಸಂಪ್ರತಿ ಚಂದ್ರಗುಪ್ತಮಹಾರಾಜಂಗೆ ಭದ್ರಬಾಹುಭಟ್ಟಾರರ್ ಪೇೞ್ದು (ವಡ್ಡಾರಾ. ೬೭-೦೮). [ಸಂ.]

**ಭದ್ರಮಂಟಪ** (ನಾ). ೧. ಮದುವೆ ಮುಂತಾದ ಮಂಗಳಕಾರ್ಯಗಳನ್ನು ನಡೆಸುವ ಮಂಟಪ; ಶುಭಕಾರ್ಯಕ್ಕಾಗಿ ಕಟ್ಟಿದ ಮಂಟಪ: ಪಾಂಚಾಲೆ ಪೊಕ್ಕಳು ಭದ್ರಮಂಟಪಶಾಲೆಯನು (ಕುಮಾರ. ೦೪-೧); ದಂಡಿಗೆಯನಿಳಿದನಾರತಿಗಳ ನಿವಾಳಿಯಿಂ ಚಂದ್ರಹಾಸಂ ಭದ್ರಮಂಟಪದೊಳು (ಜೈಮಿನಿ. ೩೦-೦೪): ಅನಂತರಮಮಂಬೆರಸಲ್ಲಿಂ ಸಲ್ಲೀಲೆಯಿಂದೇಳ್ತಂದು ಭದ್ರಮಂಟಪದ ಮುಂದಣ ಮುತ್ತಿನ ಮೊಗಸಾಲೆಯೊಳ್ . . . ಓಲಗಂಗೊಟ್ಟು (ರಾಜಶೇ. ೦೩-೬೦ ವ). ೨. ಅತ್ಯುತ್ತಮವಾದ ವಿಶ್ರಾಂತಿಗೃಹ : ಕರುಮಾಡ ಭದ್ರಮಂಟಪ ರಮ್ಯಭವನದೊಳುರುತರನಾಟ್ಯಶಾಲೆಗಳು . .. ಎಸೆಗು (ವರ್ಧಮಾ. ೦-೨೩). [< ಸಂ. ಭದ್ರಮಂಡಪ]

**ಭದ್ರಮುಸ್ತಕ** (ನಾ). ಒಂದು ಬಗೆಯ ಔಷಧಿಮೂಲಿಕೆ ; ಕೊನ್ನಾರಿ ಗೆಡ್ಡೆ: "ಭದ್ರಮುಸ್ತಕಃ, ಗುಂದ್ರಾ — ೨ ಕೆಂಪುಭಾಯೋ ಭದ್ರಮುಸ್ತಗಳು. ದೊಪ್ಪಾನೇ ಭದ್ರಮುಸ್ತಗಳು" (ಸಿದ್ಧಾಂತಿ. ೦೪೯). [ಸಂ.]

**ಭದ್ರಮುಸ್ತೆ** (ನಾ). = ಭದ್ರಮುಸ್ತಕ : "ಮುಸ್ತಕಃ, ಕುರುವಿಂದಃ, ಭದ್ರಾ, ಜಳದಃ–ಈ ೪ ಭದ್ರಮುಸ್ತೆ" (ಪಠಾಯು. ೦೦೨–೪೬೮); ಭದ್ರಮುಸ್ತೆ . . . ತಾವರೆಬಳ್ಳಿ ಇವಿಷ್ಟನ್ನು ಆಡಿನ ಹಾಲಿಂದ ಅರೆದು ಕುಡಿಯ ಕೊಡಿಸಲು ಕತ್ತೆ ಮೊದಲಾದುವುಗಳ ವಿಷ ಪರಿಹರವಹುದು (ವೈದ್ಯಸಾ. II. ೨೦೩); ಕೋಷ್ಟಂ ಪದ್ಮಕಂ ಕರ್ಪೂರ ಬಾಳದ ಬೇರು ಪುಷ್ಕರಂ ಭದ್ರಮುಸ್ತೆ ಯಿವಂ ಸರಿಗೂಂಡು (ಕಾಮಶಾ. ೨೬೩). [ಸಂ. ಭದ್ರಮುಸ್ತಾ]

**ಭದ್ರಯವ** (ನಾ). ಕೊಡಸಿಗೆಯ ಹಣ್ಣು : "ಕಳಿಂಗಂ, ಇಂದ್ರಯವಂ, ಭದ್ರಯವಂ . . . ಕೊಡಶಿನ ಹಣ್ಣಿನ ಹೆಸರುಗಳು" (ಸಿದ್ಧಾಂತಿ. ೦೨೭). [ಸಂ.]

**ಭದ್ರಯ್ಯ** (ನಾ). ಒಬ್ಬಾತನ ಹೆಸರು : ಮತ್ತಲೆರಡು ಸ್ಥಾನವಂಗೊಟ್ಟೆ ಗಡಿಯ ಭದ್ರಯ್ಯನ ಕಲ ಕನ್ನಯ್ಯ ಕಟ್ಟಿಸಿದ (ಎಕ. VIII. ಸೊರಬ. ೪೪–೧೦; ೭71). [ಭದ್ರ + ಅಯ್ಯ$_1$]

**ಭದ್ರಲಕ್ಷಣ** (ನಾ). ೧. ಮಂಗಳಕರವಾದ ಗುರುತು,– ಚಿಹ್ನೆ : ಶೂದ್ರ ರೈಸಿರಿ ವೇಶಿಯರುಳುಹ ಭದ್ರಲಕ್ಷಣವವರ ಕೇರಿಲಿ ವಿದ್ರುಮದ್ವಾರ ಲಾಯಂಗಳು (ಬಸ.ಪು. ೨೦–೨೪). ೨. ಭದ್ರವೆಂಬ ಜಾತಿಗೆ ಸೇರಿದ ಶ್ರೇಷ್ಠವಾದ ಆನೆಯ ಗುರುತು, – ಚಿಹ್ನೆ. ೧, ೨: ದಾನದಿಂ ದೊಡಂಬಟ್ಟಿರೆ ಭದ್ರಲಕ್ಷಣಗುಣಾನ್ವಿತನಪ್ಪನ ಗಂಧವಾರಣಂ ಪುಟ್ಟೆ ನರೇಂದ್ರ ರಾಜ್ಯಮುದಿತೋದಿತಮಾಹವಮಲ್ಲದೇವನಾ (ಗದಾಯು ೦–೦೦); ವರದಾನೋನ್ನತ ಭದ್ರಲಕ್ಷಣಪದಂ ಪದ್ಮಾನುಷಂಗಿತ್ವಮಾಗಿರೆ ಪೆಂಪಚ್ಚರಿ ಯಾದ ದೇವಗಣಮಂ ರಕ್ಷಿಕ್ಕೆ ಭೂಚಕ್ರಮಂ (ಜಗ. ೦–೩). ೩. ಉಪ್ಪರಿಗೆ ಯಂ ಮನೆಯ ಲಕ್ಷಣ. – ಸ್ವರೂಪ. ೧, ೩ : ಅದು ಬೀರಸಿರಿಯ ಕರುಮಾಡದ ತೆಜದಿಂ ಭದ್ರಲಕ್ಷಣೋಪೇತಂ (ತಂಪ್ರಪು. ೪–೦೦೦). [ಸಂ.]

**ಭದ್ರವಾಹು** (ನಾ).=ಭದ್ರಬಾಹು : ಶ್ರೀ ಭದ್ರವಾಹುಸಚಂದ್ರಗುಪ್ತ ಮುನೀನ್ದ್ರಯುಗ್ಮದಿನೊಪ್ಪೆ (ಎಕ.II. ೩೦–೦; ಕಾ. 650). [<ಭದ್ರಬಾಹು]

**ಭದ್ರಶಾಲ, ಭದ್ರಶಾಳ** (ನಾ). ೧. ಅರಮನೆ ಮೊದಲಾದ ದೊಡ್ಡ ಭವನಗಳಲ್ಲಿರುವ ಶ್ರೇಷ್ಠವಾದ ಭಾಗ ; ತೊಟ್ಟಿ. ೨. [ಜೈನ] ಮೇರುಪರ್ವತದ ತಳಭಾಗದಲ್ಲಿರುವ ಭದ್ರಶಾಲ, ನಂದನ, ಸೌಮ ನಸ ಮತ್ತು ಪಾಂಡುಕವೆಂಬ ನಾಲ್ಕು ವನಗಳಲ್ಲಿ ಒಂದು : ನಿಜಪರಿಜನಕೆಲ್ಲಂ ಪೊಣ್ಮುತ್ತುಂ ಭದ್ರಶಾಲದಿಂ ತಗುಳ್ದು ಪಾಂಡುಕವನಂಬ ರಮುವಜ ನೆಲೆಯೊಳಿರ್ಪ ಕೃತ್ರಿಮಚೈತ್ಯಾಲಯಂಗಳಂ . . . ಅರ್ಚಿಸಿ (ಆದಿಪು. ೨–೩೨ ವ); ಮಂದರಶೈಲಮಂ ದಿವಿಜನಾಯಕನೆಯ್ತರೆ ಭದ್ರಶಾಲದಿಂ . . . ಆ ಗಿರಿರಾಜವಿಲಾಸಮುಟ್ಟೆಯುಂ ತಂದುದು (ಶಾಂತಿಪು. ೩–೨).
**ಭದ್ರಶಾಳ** : ೨. ಘನತರಭದ್ರಶಾಳದಿನಿನಿತ್ತೆಡೆವಾಡದೆ ನಂದನಕ್ಕೆ ನಂದನ ದಿನದೊಂದು ಬೇಗದೊಳೆ ಸೌಮನಸಕ್ಕೆ ತಗುಳ್ದು (ತಂಪ್ರಪು. ೦೨–೦೦೪). [ಸಂ. ಭದ್ರಶಾಲಾ]

**ಭದ್ರಶಾಲೆ** (ನಾ).=ಭದ್ರಶಾಲ ೧ : ಜಿನಪೂಜೆಗೈದಾತ್ಮಯೋಗವ ಮಾಡಿ ಮೋಹನದ ಶೃಂಗಾರಾಂಗನಾಗಿ ಮನೆಯೊಳಗಣ ಭದ್ರಶಾಲೆಯ ಸಿಂಹಾಸನ ದಲ್ಲಿ ಕುಳಿತನೆಯ್ತಂದು (ಶಠಕ. ೪೨–೩). [ಸಂ. ಭದ್ರಶಾಲಾ]

**ಭದ್ರಶಾಳ** 'ಭದ್ರಶಾಲ' ನೋ.

**ಭದ್ರಶಿರಿ** (ನಾ). ಗಂಧದ ಮರ; ಚಂದನವೃಕ್ಷ: 'ಗಂಧಸಾರಃ, ಮಲಯಜಃ, ಭದ್ರಶ್ರೀಃ, ಚಂದನಃ –೪ ಚಂದನದ ಗಿಡ " (ಸಿದ್ಧಾಂತಿ. ೨೦೬). [ಸಂ.]

**ಭದ್ರಹಸ್ತಿ** (ನಾ). ಶುಭಲಕ್ಷಣಗಳುಳ್ಳ ಒಂದು ಜಾತಿಯ ಆನೆ : ಎಂಭತ್ತುನಾಲ್ಕುಲಕ್ಕೆ ಗಂಧಸಿಂಧುರಂಗಳಪ್ಪ ಭದ್ರಹಸ್ತಿಗಳುಂ (ಆದಿಪು. ೦೩–೩ ವ). [ಸಂ. ಭದ್ರಹಸ್ತಿನ್]

**ಭದ್ರಾಂಗಿ** (ನಾ). ಸುಂದರವಾದ ದೇಹವುಳ್ಳವಳು ; ಮಂಗಳಾಂಗಿ : ರುದ್ರಾಕ್ಷಿಯ ಭದ್ರಾಂಗಿಗೆ ವಿಭೂತಿಯ ವಿಳಾಸನಿಧಿಗೆ . . . ಪಶುಪತಿಯ ಪಟ್ಟದ ಮಹಾದೇವಿಗೆ (ಗಿಂಕ. ೩–೪೦ ವ). [ಸಂ. ಭದ್ರಾಂಗೀ]

**ಭದ್ರಾಕರಣ** (ನಾ). ಕ್ಷೌರ ; ಮುಂಡನ : "ಕ್ಷೌರಂ, ಭದ್ರಾಕರಣಂ, ಮುಂಡನಂ, ವಪನಂ–ಈ ೪ ಬೋಳಿಸುಹ" (ಪಠಾಯು. ೦೪೪–೩೬); ಭದ್ರಾ ಕರಣ ಮಾಡಿಕೊಂಡರೆ ಭದ್ರವಾದೀತೇ ? (ಗಾದೆ). [ಸಂ.]

**ಭದ್ರಾಕಾರ** (ನಾ). ೧. ಭವ್ಯವಾದ ಆಕಾರ,–ಸ್ವರೂಪ. ೨. ಭವ್ಯವಾದ ಆಕಾರವುಳ್ಳವನು : ಭದ್ರಾಕಾರನುಂ ಕಾಂತಿಮಂತನುಂ ಮಭಿರೂಪನುಮಾದ ನೀತಂಗಿನಿತು ವಿಭವಮುಮೆಂತಾದುದು (ಶಾಂತಿಪು. ೪–೬೩ ವ); ಭದ್ರಾ ಕಾರನೀತಂಗಳುಂಕುವುದು ಧನು (ಕುಮಾವ್ಯಾ. ೦೩–೦೪). ೩. 'ಭದ್ರ'ವೆಂಬ ಆನೆಯ ಲಕ್ಷಣ. ೧,೩ : ಕುಂಭಕುಚದಿಂದೆ ಜವ್ವನದ ಮದದಿಂದೆ ಭದ್ರಾ ಕಾರದಿಂದೆ . . . ಎಸೆವ ಪೆಣ್ಗಳಾನೆಗಳ ಮೇಳೈತುವರವರಾಯತುಗಳಿಂದೆ (ಕೈಮಶಾ. ೦೩–೩). [ಸಂ.]

**ಭದ್ರಾಕ್ಷ** (ನಾ). ೧. ರುದ್ರಾಕ್ಷಿಮರದ ಜಾತಿಗೆ ಸೇರಿದ ಒಂದು ಬಗೆಯ ಮರ : ರುದ್ರಾಕ್ಷ ಭದ್ರಾಕ್ಷ . . . ಶಿರೀಷಾದಿ ಲತಾಗೃಹಂಗಳುಂ (ವಿವೇಕ. ೨೦೦). ೨. ಒಂದು ಬಗೆಯ ಉತ್ತಮಜಾತಿಗೆ ಸೇರಿದ ಕುದುರೆ : ಸತ್ವಯುತಂ . . . ಅತಿಸತ್ವನರತ್ನಾಸಿಕಂ ಹಯಂ ಭದ್ರಾಕ್ಷಂ (ಅಶ್ವಶಾ. ೩–೪೦). [ಸಂ.]

**ಭದ್ರಾಕ್ಷಿ** (ನಾ). =ಭದ್ರಾಕ್ಷ ೧. ಭದ್ರಾಕ್ಷಿಮರ, ಜೇನುಮರ, ರುದ್ರಾಕ್ಷಿಮರ (ವೃಕ್ಷಶಿ. ೪೧–೬೦೦) : ಸಟ್ಟಗದ ಬೀಜವನ್ನು ಕೆಲವರು ಭದ್ರಾಕ್ಷಿಯೆಂದೂ ಕರೆಯುವುದುಂಟು (ಹಸುಕೊ. ೬೨). [< ಸಂ. ಭದ್ರಾಕ್ಷ]

**ಭದ್ರಾತಕ** (ನಾ). ಒಂದು ಬಗೆಯ ಗೆಡ್ಡೆ ; ಭದ್ರಮುಸ್ತೆ : "ಮುಸ್ತಕಂ ಮುಸ್ತೆ ಭದ್ರಾತಕಂ" (ಮಂಗರಾ. ೪೦–೩೬). [ ? ]

**ಭದ್ರಾರಮಣ** (ನಾ). ಗೋವುಗಳ ಪ್ರೀತಿಗೆ ಪಾತ್ರನಾದವನು ; ಕೃಷ್ಣ : ನಿದ್ರಾರಹಿತ ಭದ್ರಾರಮಣ ನಿರ್ವಿಕಾರ ಚಿನ್ಮೋಹ ಸರ್ವಕಾಲ ಸುಂದರಸಾರ (ವಿದಾಕೃ. ೦೪–೦). [ಸಂ.]

**ಭದ್ರಾಸನ** (ನಾ). ೧. =ಭದ್ರಪೀಠ ೧ : "ಸಿಂಹಾಸನಂ, ಭದ್ರಾಸನಂ–ಈ ೨ ಸಿಂಹಾಸನಂ"(ಪಠಾಯು. ೬೦–೨೬೪); ನೃಪೇಂದ್ರಂ ಭದ್ರಾಸನಮನಿಕ್ಕಿಸೇಟಿ ಕುಳ್ಳಿರ್ದು ವಿಜಯಾರ್ಧಕುಮಾರಾ (ಆದಿಪು.೦೩–೦೪ವ); ಗಿರಿಪತಿಯುಂ ಸತಿಯುಂ ವರಮುನಿಗತಿವಿನತರಾಗಿ ಭದ್ರಾಸನದೊಳ್ ಭರದಿಂ ಕುಳ್ಳಿರಿಸುತ್ತುಂ (ಗಿಂಕ. ೪–೩೪); ಕುಳ್ಳಿರ್ದಪನಂದುರು ಭದ್ರಾಸನದೊಳಗಾದರದಿಂ ಮಾನು ರಾಜನತುಳನತಸುರಭೂಜಂ (ಹರಿಶ್ಚ. ೨–೨೮). ೨. ಧ್ಯಾನ ಮಾಡು ವಾಗ ಕುಳಿತುಕೊಳ್ಳುವ ಒಂದು ವಿಶಿಷ್ಟ ಭಂಗಿ : (೪). [ಸಂ.]

**ಭದ್ರಿಸು** (ಕ್ರಿ).೧. ಕ್ಷೌರಮಾಡು ; ಮುಂಡನ ಮಾಡು : " ಭದ್ರಿಸು_ ಮುಂಡನಕ್ರಿಯಾಯಾಂ " (ಶಮದಾ). ೨. ಸಂರಕ್ಷಿತವಾಗಿರುವಂತೆ ಮಾಡು : ವನವಾಸದಲ್ಲಿ ಪಿಂದೈತಂದ ಸಕಲಪುರಜನವ ದೀಕ್ಷಿತರ . . . ಅನುವಿನಿಂದಿರಿಸಿ ಭದ್ರಿಸಿ (ಲಕ್ಷ್ಮೀಶಾ. ೦–೪). ೩. (ಅಲಂ) ಹೋಗಲಾಡಿಸು; ನಿವಾರಿಸು : ಮುದ್ರಿಸೋ ಮಂದರವನಹಿಯಲಿ ಭದ್ರಿಸೋ ಭಯರಸವ ನೆನಂತುಬ್ಬೆದ್ದುದದ್ಭುತಸಿಂಹನಾದದಲುಭಯಬಲನಿಕರ (ಶಿವಾಗ. ೬–೭–೦೩). [ ಭದ್ರ + – ಇಸು$_1$ ]

**ಭದ್ರೆ** (ನಾ). ೧. ಮಂಗಳರೂಪಳಾದವಳು ; ಮಂಗಳಾಂಗಿ : ಭದ್ರೆ ನೀನು ಭಯಾವೃತಳಾಗಿದ್ದೀಯೆ (ಶಾಂತಲಾ. ೦೬೩). ೨. ಹಸು ; ಆವು: 'ಭದ್ರಾರಮಣ' ಪರಾ. ೩. ದೇವಗಂಗೆ. ೪. ಕರ್ನಾಟಕದಲ್ಲಿರುವ ಒಂದು ನದಿಯ ಹೆಸರು : ಪರಾಹಪರ್ವತದ ಗಂಗಾಮೂಲದಲ್ಲಿ ಉಗಮಿಸುವ ತುಂಗಾ ಮತ್ತು ಭದ್ರಾ ನದಿಗಳು . . . ಕೂಡಲಿಯ ಬಳಿ ಒಂದಾಗುತ್ತವೆ (ಕರ್ಕೋ. IX, ೩೦೩). ೫. = ಭದ್ರಮುಸ್ತಕ : " ಮುಸ್ತಕಃ, ಕುರುವಿಂದಃ, ಭದ್ರಾ, ಜಳದಃ – ಈ ೪ ಭದ್ರಮುಸ್ತೆ " (ಪಠಾಯು. ೦೦೨–೪೬೮). ೬. [ಜ್ಯೋತಿ] ಹನ್ನೊಂದು ಕರಣಗಳಲ್ಲಿ ಏಳನೆಯದು : ಕರಣವೇಕಾದಶಗಳಲಿ ಚರಕರಣ ಶಕುನಿ ಚತುಷ್ಪ . . .

ಭದ್ರೆಯೆನಿಸುವ ಕರಣವಾರು ಶುಭಂಗಳು (ಗಗಚಿ. ೪-೭೦). ೭. ಚಾಂದ್ರಮಾಸದಲ್ಲಿ ಉಭಯಪಕ್ಷಗಳ ಎರಡು, ಏಳು ಮತ್ತು ಹನ್ನೆರಡನೆಯ ತಿಥಿಗಳು ; ಬಿದಿಗೆ, ಸಪ್ತಮಿ ಮತ್ತು ದ್ವಾದಶಿತಿಥಿಗಳು : ನಂದೆಯನು ಭದ್ರೆಯನು ಒಂದಾಗಿ ಅರ್ಥಿಸಲು ಅಂದಿನ ತಿಥಿಗೆ ಸವನಾಗೆ ಗ್ರಹಣ ತಾ ಮುಂದೆ ಬಂದಕ್ಕು (ಸರ್ವಜ್ಞ. ೦೩೭೦); ೩೦ ತಿಥಿಗಳಲ್ಲಿ ನಂದಾ, ಭದ್ರಾ, ಜಯಾ, ರಿಕ್ತಾ, ಪೂರ್ಣಾ ಎಂಬ ಸಂಕೇತವು ಪಾಡ್ಯ ಮೊದಲು ಪಂಚಮಿವರೆಗೂ ಆಗುವುವು (ಹಸಾರ. ೬-೨೮ ಟಿಳು). P ಇನ್ನೂ ಅನೇಕ ಬಗೆಯ ಸಸ್ಯಗಳಿಗೂ ದೇವತೆಗಳಿಗೂ ಈ ಹೆಸರುಂಟು. [ಸಂ. ಭದ್ರಾ]

**ಭಪ** (ನಾ). ನಕ್ಷತ್ರಗಳ ಅಧಿಪತಿ ; ಚಂದ್ರ : ಗಗನ ಮಂದಿರದಲ್ಲಿಯ ರೌಪ್ಯಘಂಟೆಯೋ ಮತ್ತಿಕುಂದಪುಷ್ಪಕೃತತುಂಡಳಿಶಾಂಗಜಚಾಪಮೋ ಭಪಂ (ಹವ್ಯಾರ. ೨-೩೭). [ಸಂ.]

**ಭಪ್ಪರೆ** 'ಬಾಪ್ಪುರೆ' ನೋ.

**ಭಬ್ಯ** (ಗು). ಶ್ರೇಷ್ಠವಾದ : ಭಬ್ಯ ಶ್ರಾವ್ಯ ಕಾಬ್ಯ ನಾಟಕಾಖ್ಯಾಯಿಕಾಖ್ಯಾನಾದಿ ಬ್ಯಾಖ್ಯಾನ ವ್ಯಾಪಾರಾ × × × ತನಬ್ಯ ಶ್ರೀಹರ್ಷ (ಎಕ. XI, ದಾವಣ. ೪೦-೭೭; 1148). [<ಸಂ. ಭವ್ಯ]

**ಭಮ್ಮನ್** (ನಾ). ಒಂದು ಅನುಕರಣ ಶಬ್ದ : ಅಜಿಯದೆ ಬಂದವು ಕಿಮ್ಮನ್ ಪರಿಹರಿಸಬ್ಬ ಭ[ಪಾಠಾಂ. ಭಿ]ಮ್ಮನ್ (ಭರಂಡ. ೨-೭೭ ಪಲ್ಲವಿ). 'ಕಿಮ್ಮನ್' ಪರಾ.

**ಭಯ** (ನಾ). ೧. ಹೆದರಿಕೆ ; ಅಂಜಿಕೆ ; ಭೀತಿ : "ಆತಂಕಃ . ಭಯಂ . . . ಸಾಧ್ವಸಂ – ಈ ೬ ಭಯಂ" (ಹಲಾಯು. ೦೨೦-೪೦) ; ಭಯಮಜಿಯದ ಕಲಿಯುಂ ಚಾಗಿಯುಮೆನಿಸದೆ ನಾಡೆ ಲೋಭಿಯು ಪಂದೆಯುಮಾಗಿಯೆ ಬಾಟ್ಟಂಗಲ್ಲದೆ ಸೂಳೆಯ ಕಣ್ ಪಾಸಗೆಯ ಕಣ್ಣುಮೇನುಜುಗುಗುವೇ (ಶಂಶಚಾ. ೬-೭೩) ; ಅನೃತಂ ಲೋಭಂ ಭಯಮೆಂಬಿನಿತುಂ ನೀನಿರ್ದ ನಾಡೊಳಿರ್ಕುಮೆ ರವಿನಂದನ ನನ್ನಿ ಚಾಗಮಣ್ಮೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾವಯ್ (ಗದಾಯು. ೩-೦೭); ಭಯದಿಂದ ಭಕ್ತಿ, ನಯದಿಂದ ಯುಕ್ತಿ (ಗಾದೆ). ೨. ಭೀತಿಯನ್ನುಂಟುಮಾಡುವಂತಹುದು ; ಭಯಾನಕವಾದುದು : ಮುನ್ನಿನವರು ಹೋದ ದಾರಿ ಭಯ ಕಾನನಣ್ಣಾ (ಬಸವ. ೦೪೭). ೩. [ಕಾವ್ಯಮೀ] ಸ್ಥಾಯಿಭಾವಗಳಲ್ಲಿ ಒಂದು; ಭಯಾನಕ ರಸದ ಸ್ಥಾಯಿಭಾವ : "ರತಿಃ . . . ಭಯಂ, ಜುಗುಪ್ಸಾ, ವಿಸ್ಮಯಃ, ಶಮಃ – ಈ ೯ ಸ್ಥಾಯಿಭಾವಂಗಳ್" (ಹಲಾಯು. ೦೩-೪೦); ರತಿಪರಿಹಾಸಂ . . . ವಿಸ್ಮಯಾಶಯತ್ವಂ ಪ್ರತಿನಿಯತ ಸ್ಥಾಯಿಭಾವಮಿವು ತಾಮುಕ್ಕುಂ (ಕಾವ್ಯಾವ. ೭೯೪); ರತಿ ಹಾಸ . . . ಭಯ . . . ಶೃಂಗಾರಾದಿ ನವರಸಂಗಳಿಗೆ ಬೀಜಭೂತಂಗಳಾದ ಸ್ಥಾಯಿಭಾವಂಗಳು: (ವಿವೇಕ. ೨೨೭) ; ಈ ಸ್ಥಾಯಿಭಾವಗಳು ಎಂಟು (ಅಥವಾ ಒಂಭತ್ತು) ಅವು ಯಾವುವೆಂದರೆ:– ರತಿ . . . ಭಯ, ಜುಗುಪ್ಸೆ (ಅಸಹ್ಯತೆ), ವಿಸ್ಮಯ (ಆಶ್ಚರ್ಯ), ಶಮ (ಶಾಂತಿ) (ಕೈಪಿಡಿ. ೦೮೭). ೪. [ನಾಟ್ಯ] ಮೂವತ್ತಾರು ದೃಷ್ಟಿಭೇದಗಳಲ್ಲಿ ಒಂದು; ಭಯಾನಕರಸಕ್ಕೆ ಸ್ಥಾಯಿಭಾವವಾದ ಅಂಜಿಕೆಯನ್ನು ಅಭಿನಯಿಸುವ ದೃಷ್ಟಿ : ಅಜಿಗಡಿಗೆಯುಲರ್ವ ಪುಂಗುಳ್ವಾ ಸಡಗರದಿಂ ಭೀತಿಸುತ್ತೆ ಚಲನಂಬೆತ್ತುಂ ಬಿಡದಾಲಿ ಬೀಳ್ವ ತೆಜನಿಂ ಗಡಣಿಸಿದೊಡೆ ಭಯಮೆನಿಪ್ಪ ನೋಟಮದಕ್ಕುಂ (ಬಾಸ್ಕಂ. ೩-೨೩).

**ಭಯ ಭಕ್ತಿ**=೧. ಹೆದರಿಕೆ ಮತ್ತು ಶ್ರದ್ಧೆ : ಅವಳು ಸೋಮವಾರ ವ್ರತವನ್ನು ಭಯ ಭಕ್ತಿಗಳಿಂದ ಆಚರಿಸುತ್ತಿದ್ದಾಳೆ (ರೂಢಿ). ೨. ಹೆದರಿಕೆಯಿಂದ ಕೂಡಿದ ಶ್ರದ್ಧೆ : ಭಯಭಕ್ತಿಯಿಂದ ತೋಜುವೆ ಮನದಲ್ಲಿ ವಂಚನೆಯಿಲ್ಲದೆ ಭಾವಶುದ್ಧಪೂಜೆಯ ಮಾಡುವೆ (ಬಸವ. ೭೭೪) ; ಅಂಭೋಜಾಯತಾಕ್ಷನ ಖ್ಯಾತಿಯನು ಗಾಂಗೇಯ ಭಯಭಕ್ತಿಯಲಿ ಗೆಲಿದನು ವರಸುದರ್ಶನವ (ಕುವ್ಯಾಭೀ. ೬ ಸೂಚನೆ). [ಸಂ.]

**ಭಯಂಕರ** (ಗು). ೧. ಭಯವನ್ನುಂಟು ಮಾಡುವ ; ಉಗ್ರವಾದ ; ಘೋರವಾದ : ಕುಮುದವನಾಭಿರಾಮೆ ಪರಚಕ್ರಭಯಂಕರಶೀಲೆ ವಾಹಿನೀರಮಣಸಮೃದ್ಧಿಸಲ್ಲಲಿತೆ ರಾಜ್ಯರಮಾವಧು ಮಂದು ಲೀಲೆಯಿಂ (ಕುಸ್ವಕ. ೪-೮೭); ಭೀಕರ ಕಾಡು, ಭಯಂಕರ ಗರ್ಜನೆ (ಕುಂದ್ರಪಾ. ೨೦-೦೪). ೨. ಅತಿಶಯವಾದ ; ಮೇಲುಮಟ್ಟದ ; ಹೆಚ್ಚಾದ : ಭಯಂಕರ ಭ್ರಮೆಗೊಂಡಿತ್ತು ಮಂತ್ರತಂತ್ರ (ಬಸವ. ೮೦); ಭಯಂಕರ ಸಂತೋಷವೊಂದು ಅವರ ಮನಸ್ಸಿನಲ್ಲಿ ನರ್ತಿಸುತ್ತಿತ್ತು (ಮುಹಾಪ. ೦೭). (ನಾ). ೩. ಭಯವನ್ನುಂಟುಮಾಡುವಂತಹುದು ; ಹೆದರಿಕೆಯನ್ನುಂಟುಮಾಡುವಂತಹುದು : ಬವರದೊಳು ಹರಿಪಾಂಚಜನ್ಯದ ರವ ಭಯಂಕರವಾಯ್ತು (ಕುವ್ಯಾದ್ರೋ. ೦೦-೧) ; ಒಂದು ಸ್ಟೇಷನ್ನಿನಲ್ಲಿ ಪೋಸ್ಟ್‌ಮಾಸ್ಟರು ಅದೇ ರಸ್ತೆಯಲ್ಲಿ ಆಗತಾನೇ ನಡೆದಿದ್ದ ಭಯಂಕರವಾದ ಕೊಲೆ ಒಂದನ್ನು ಕುರಿತು ಹೇಳಿದನು (ಮಲೆನಾ. ೦೭); ಹುಲಿಯ. . . ಪಳದಿವರ್ಣದ ದೊಡ್ಡದೊಡ್ಡ ಕಣ್ಣುಗಳೂ ಮೊನೆಯಾದ ಕೋರೇಹಲ್ಲುಗಳೂ ಭಯಂಕರವಾಗಿ ತೋರುವವು (ಮುಂಬಯಿ. ೪-೩೩). ೪. ಬಹಳ ಸಮರ್ಥನಾದವನು ; ಸಾಹಸಿ : ಶರ್ಮ ಕಡಿಮೆ ಅಸಾಮಿ ಅಂತ ತಿಳಿದೀರೇನು ನೀವು ? ಭಯಂಕರ ಆದ್ಮೀ ಅವರು. ಭಯಂಕರ ಆದಾರ (ರೂಪಕ. ೮೭). ೫. = ಭಯಂಕಾರಿ : "ವೀರಂ ಭಯಂಕರಂ [ಪಾಠಾಂ. ಕಾರಿ] ದಕ್ಷಾರಿ ಶರಭನೆನೆ ವೀರಭದ್ರನೆನಿಕ್ಕು" (ಮಂಗರಾ. ೩-೦೩). [ಸಂ.]

**ಭಯಂಕಾರಿ** (ನಾ). (ದಕ್ಷನಿಗೆ) ಭಯವನ್ನುಂಟು ಮಾಡಿದವನು ; ವೀರಭದ್ರ : "ವೀರಂ ಭಯಂಕಾರಿ [ಪಾಠಾಂ. ಕರಂ] ದಕ್ಷಾರಿ ಶರಭನೆನೆ ವೀರಭದ್ರನೆನಿಕ್ಕು" (ಮಂಗರಾ. ೩-೦೩). [ಸಂ. ಭಯಂಕಾರಿನ್]

**ಭಯಂಕೃತಿ** (ನಾ). ಭಯ : ಅಂಜಿಕೆ : 'ಭಯಂಕೃತಿಗೆಯ್' ಪರಾ. [ಸಂ.]

**ಭಯಂಕೃತಿಗೆಯ್** (ಕ್ರಿ). ದಿಗಿಲನ್ನುಂಟು ಮಾಡು ; ಹೆದರಿಸು : ಶರನಿಕರ ಮಹಾಭೀಂಕೃತಿ ನೋಳ್ಪಮರರ್ಗೆ ಭಯಂಕೃತಿಗೆಯ್ದುದು (ರಾಜಶೇ. ೬-೪೭). [ಭಯಂಕೃತಿ + ಕೆಯ್$_1$]

**ಭಯಂಗೊಳ್**, ಭಯಗೊಳ್ (ಕ್ರಿ). ಅಂಜು ; ಹೆದರು : ಪೊಗಿಂ ಕಡಂಗಿ ಬೀರದೊಳೆ ಬೀಗುವ ನಿನ್ನಣುಗಾಳೆ ನೋಡೆ ನಿನ್ನಂಗನೆಯರ್ ತೊವಲ್ಗೊಳೆ ಭಯಂಗೊಳೆ ಕೋಡಗಗಟ್ಟುಗಟ್ಟಿ ಚಿತ್ರಾಂಗದನುಯ್ದ (ಶಂಶಚಾ. ೯-೩೪); ಸರ್ಪನಂ ಮೆಟ್ಟಿದರಂತೆ ಭಯಂಗೊಂಡು (ರಪೂರ್ಣಪು. ೦-೦೭೮); ಗಜಜಿನಲಿ ಗಿರಿ ಬಿರಿಯೆ ದಿವಿಜವ್ರಜ ಭಯಂಗೊಳೆ (ಕುವ್ಯಾದ್ರೋ. ೦೩-೦೩). **ಭಯಗೊಳ್** : ಪಾಣ್ಡ್ಯಂ ಭಯಗೊಣ್ಡನತ್ತ ಸಮುದ್ರಂ ಬುಗಿಲೆಂದು ತಲ್ಲಳಿಸಿದಂ ಚೋಳಂ ಭಯಭ್ರಾನ್ತಿಯಿಂ (ಶಾಇ. XX, ೪೯-೦೮; 1076 ?); ಬಲವಲ್ಲಿ ಭಯಗೊಳೆ ದ್ರೋಣ ಹೊಕ್ಕನು ರಾಯ ಮೋಹರವ (ಕುವ್ಯಾದ್ರೋ. ೨-೩೪) ; ಸಂತೈಸಿದರು ಭಯಗೊಂಡಿಹ ನೃಪಾಲಕನ (ಪಳಕ. ೩-೪೭). [ಭಯ + ಕೊಳ್$_1$]

**ಭಯಂಗೊಳಿಸು**, ಭಯಗೊಳಿಸು (ಕ್ರಿ). ಹೆದರಿಕೆಯನ್ನುಂಟು ಮಾಡು; ಭಯಪಡಿಸು : ತೊಳಗುವ ದಿವ್ಯಾಸ್ತ್ರಮುಮರ್ದ ಕೋದಂಡಮುಮಂ ಗೊಳಿಸೆ ಮನಂಗೊಳಿಸೆ ಭಯಂಗೊಳಿಸೆ ಸಭಾಸದರನುಜಿದೆ ಕರ್ಣಂ ಬಂದಂ (ಶಂಶಚಾ. ೨-೭೮) ; ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂಗೊಳಿಸಿದುದುತ್ಕಕೀರಮದಕೋಕಿಲಗರ್ಜಿತತರ್ಜಿತಂಗಳಿಂ (ಅಜಪು. ೬-೨೩). **ಭಯಗೊಳಿಸು** : ಮಜೆತ ಧೃಷ್ಟದ್ಯುಮ್ನನನು ಭಯಗೊಳಿಸಿ ಸೋಮಕ ಸೃಂಜಯರನಪ್ಪಳಿಸಿದನು (ಕುವ್ಯಾಶ. ೩-೩೭). [ಭಯಂಗೊಳ್ + – ಇಸು$_3$]

**ಭಯಂದೋಱು** (ಕ್ರಿ). ಭಯವನ್ನುಂಟುಮಾಡು; ಹೆದರಿಸು; ಅಂಜಿಸು: ಪೆಱೆಯಂತೆ ವಕ್ರನಾಗದೆ ಸಿಡಿಲಂತೆ ಭಯಂದೋಱದೆ[ಶಾಂತಂ ಮೇದನಂತೆ ಸೀಳ್ತಿರ್ದೆ] (ಶಬರಾಸ್ತು. ೧-೦೬೩). [ಭಯ + ತೋಱು]

**ಭಯಂಬಡು**, ಭಯಪಡು (ಕ್ರಿ). = ಭಯಂಗೊಳ್: ಈ ಸಂಜೀವಕ ನೆಂಬೆತ್ತು ಕೆಲೆದೊಡಾ ಧ್ವನಿಗೊಂದಂ ಭಾವಿಸದೆ ನೀಂ ಭಯಂಬಟ್ಟೀ ವನಮಂ ಬಿಟ್ಟು ಪೋಪೆನೆಂಬುದುಂ (ಪಂತಕಂ. ೯೨-೬); ಮೃಡವಜ್ರ್ಯಾ ಮರರುಂ ಭಯಂಬಡುವಿನಂ . . . ಆರಭಟೆಯಿಂದಿರ್ದಂ ನಿಕುಂಭಾಸುರಂ (ಜಗಂ. ೦೫-೩೨). **ಭಯಪಡು**: ಬಲವಿದ್ದದ್ದು ಲಯವಾದ ಮೇಲೆ ಭಯ ಪಡುವುದೇ ಸರಿ (ಗಾದೆ). [ಭಯ + ಪಡು$_1$]

**ಭಯಂಬಡೆ** (ಕ್ರಿ). = ಭಯಂಗೊಳ್: ಕಡೆಗಣ್ಣ ಕುಡಿವೆಳಗೆಂಬ ಬಳ್ಳಿ ಮಿಂಚಿಂಗೆ ಭಯಂಬಡೆದು ಪೆಡಂವೆಟ್ಟುವ ರಾಜಹಂಸಸಮಾಜಮನೋ ಜೆಯಿಂ ಕರೆದು (ರಾಜಶೇ. ೫-೦೯ ವ). [ಭಯ + ಪಡೆ$_1$]

**ಭಯಂಬೆರಸು$_1$** (ಕ್ರಿ). ಭಯದಿಂದ ಕೂಡಿರು; ಹೆದರು: ಅಲಿತಾಂಗಿಯು ಶಂಕೆಯಂ ಭಯಂ ಬೆರಸಿದ ನಾಣುಮಂ ಕ್ರಮದೆ ಪಿಂಗಿಸು ಬೇಸಱದಿರ್ ಗುಣಾರ್ಣವಾ (ಶಂಕರಾ. ೩-೬೭).
[ಭಯ + ಬೆರಸು$_1$ (< ಬೆರೆಯಿಸು) ]

**ಭಯಂಬೆರಸು$_2$** (ಅ). ಹೆದರಿಕೆಯಿಂದ ಕೂಡಿ: ಮೊದಲೊಳೆ ಕೆತ್ತಿದತ್ತು ಬಲಗಣ್ಣೆನಗೇನನೊಪರ್ಚಲಿರ್ದುದೋ ಬಿದಿಯೆನುತುಂ ಭಯಂಬೆರಸು ಮುನ್ನಮೆ ಶಂಕಿಸುತಿರ್ದಂ (ಕಾದಂಪೂ. ೬೯೯). [ಭಯ + ಬೆರಸು$_3$]

**ಭಯಗೊಳ್** ' ಭಯಂಗೊಳ್ ' ನೋ.

**ಭಯಗೊಳಿಸು** ' ಭಯಂಗೊಳಿಸು ' ನೋ.

**ಭಯಗ್ರಸ್ತ** (ನಾ). ಹೆದರಿದವನು; ಭೀತ: ಚಿಟ್ಟಿಯೂರರು ಭಯ ಗ್ರಸ್ತರಾಗಿ ಕುಕ್ಕುರಿಸಿ ಬಿಟ್ಟರು (ಪಟಿಸಾ. ೭೬೫).

**ಭಯಗ್ರಹಣಿ** (ನಾ). ಒಂದು ಬಗೆಯ ರೋಗ: ಪೊಂಗೆತೊಕ್ಕು, ತಪಸಿ ತೊಕ್ಕು . . . ಸೇವಿಸಲು ವಾತಗ್ರಹಣಿ, ಪಿತ್ತಗ್ರಹಣಿ, ಶ್ಲೇಷ್ಮಗ್ರಹಣಿ, ಭಯಗ್ರಹಣಿ, ಶೋಕಗ್ರಹಣಿ . . . ಮುಂತಾದ ಸಕಲರೋಗಗಳೂ ಗುಣಮಕ್ಕುಂ (ಸಪ್ವ. ೩೯೦). [ಸಂ.]

**ಭಯಚಕಿತ** (ಗು). ೧. ಹೆದರಿಕೆಯಿಂದ ಚಕಿತಗೊಂಡ,–ಬೆರಗಾದ: ಮಾಸ್ಟೋವಾ ಸರ್ಕಾರಿವಕೀಲನ ಕಡೆಗೆ ಭಯಚಕಿತನೇತ್ರಿಯಾಗಿ ಎವೆಯಿಕ್ಕದೆ ನೋಡಿದಳು (ಕುಪರು. ೯೯). (ನಾ). ೨. ಹೆದರಿದವನು; ಗಾಬರಿ ಗೊಂಡವನು: ಶ್ರೀಪತಿದಣ್ಣಾಧಿನಾಥನೆಸೆದಂ ಧರೆಯೊಳ್ . . . ಬಂದು ಮಾರ್ಕೊಳ್ಗೆರಿಭೂಪರ್ಬ್ಬೆ[ಪ್ಪೆಬಿಜ್ಜೆಡೆ]ಗಳಭಯಚಕಿತರ್ಕ್ಕಟಿಗ್ಗೆ ಬೆನ್ನಟ್ಟಿ ಕೊಲ್ಲುಗಂ ಕರೆದೀಗಂ (ಶಾಇಇ. XX, ೬೪-೬; 1112). [ಸಂ.]

**ಭಯಜ್ವರ** (ನಾ). ಬಹಳ ಹೆಚ್ಚಾದ ಹೆದರಿಕೆಯಿಂದ ಬರುವ ಜ್ವರ: ಆಹವದೊಳರಾತಿಸೇನೆಗೆ ಭಯಜ್ವರಮೊರ್ಮ್ಮೆಯೆ ಪುಟ್ಟೆ ತೋರ್ಪ್ಪಂ (ಶಾಇಇ. XX, ೬೭-೩೨; ೪); ಹಿಂದಿನ ದಿನ ತಾನು ಮಾಡಿದ್ದೆಲ್ಲವನ್ನು ನೆನೆಸಿ ಕೊಂಡಾಗ, ಅವನು ಭಯಜ್ವರಪೀಡಿತನಾದನು (ಕುಪರು. ೨೨೨). [ಸಂ.]

**ಭಯಪಡಿಸು** (ಕ್ರಿ). ಹೆದರಿಸು; ಗಾಬರಿಗೊಳಿಸು: ಸುಮ್ಮನೆ ಭಯ ಪಡಿಸಿದರೆ ಕೆಲಸವಾಗುವುದಿಲ್ಲ (ರೂಂ).
[ಭಯಪಡು (<ಭಯಂಬಡು) + –ಇಸು$_3$]

**ಭಯಪಡು** 'ಭಯಂಬಡು' ನೋ.

**ಭಯರಸ** (ನಾ). ೧. ಹೆದರಿಕೆ; ಭೀತಿ: ಅಂತು ಬಿಱುತು ಬೆಳ್ಕೊಟ್ಟ ಮೋಡುವರನಿಘೋಷನ ಭಯರಸಮುಂ ಕರುತ್ತು ನಟ್ಟು ಬೆನ್ನಟ್ಟುವ ಗಗನ ಚರೇಂದ್ರನ ರೌದ್ರರಸಮುಂ . . . ಮಾಣ್ಬುದುಂ (ಶಾಂತಿಪು. ೬-೯೦ ವ): ಪಾರ್ವತೀದೇವಿಗೆ ಕೌತುಕರಸದೊಳಾನಂದಂ ಪುಟ್ಟೆ ಭಯರಸದೊಳ್ ಭಕ್ತಿಯುಣ್ಮೆ (ಗಿರಿ. ೫-೯೨ ವ). ೨. [ಕಾವ್ಯಮೀ] ನವರಸಗಳಲ್ಲಿ ಒಂದು; ಭಯಾನಕ ರಸ: ಒಮ್ಮೆ ಇವ್ವೆ ಕೂಡಿ ಒಲ್ಮೆಯಿಂ ಸೊಗಸು ಪುಟ್ಟುವವರಿಂ ಭಯರಸಮಪ್ಪುದು. ಅದರಿಂ ಭೀತಿಭಾವಮಪ್ಪುದು (ಕಾವಿಚಾ. ೨೩೨). [ಸಂ.]

**ಭಯರಸಕ** (ನಾ). = ಭಯರಸ ೧: ಕಸವರದ ಸವಿಯುಮಂ ಭಯರಸಕದ ಸವಿಯುಮನದೆಂತುಮಾನಱಿಯದುದಂ ಪಸುವಂತಿಯುಱಿವುದು (ಕುಶಲಾ. ೦೨-೦೬೦). [ಸಂ.]

**ಭಯವಿಹೀನ** (ನಾ). ಹೆದರಿಕೆಯಿಲ್ಲದುದು; ಭಯವಿಲ್ಲದುದು; ನಿರ್ಭಯ: ಕೌರವರೊಳಗೆ ಹಗೆಯಾಗಿಹನು ಕೀಚಕ ಬಲ ವಿರಾಟನಿಗವನ ದೆಸೆಯಿಂ ಭಯವಿಹೀನವದು (ಕುಮ್ಮಾಭಿ. ೦-೪). [ಸಂ.]

**ಭಯವಿಹ್ವಲ**, ಭಯವಿಹ್ವಳ (ಗು). ಹೆದರಿದ; ಗಾಬರಿಗೊಂಡ: ಲಯಾಂತಕಘೋಷಭೀಷಣಂ ಪುರದೊಳಗುಣ್ಮಿದತ್ತು ಭಯವಿಹ್ವಲವೀರ ಕೃತಂ ಮಹಾರುತಂ (ಕಂಪ್ರಪು. ೯-೬೪). **ಭಯವಿಹ್ವಳ**: ಭಯವಿಹ್ವಳ ಸಿಂಹಳನಾ ಕೊಳುಗುಳದಿಳೆಯಿಂ ಬೆಂಗೊಟ್ಟು ಜಗುಳ್ದನತಿಜವದಿಂದಂ (ರಾಜಶೇ. ೬-೦೦೦). [ಸಂ.]

**ಭಯವಿಹ್ವಳ** 'ಭಯವಿಹ್ವಲ' ನೋ.

**ಭಯವೊಂದು** (ಕ್ರಿ). = ಭಯಂಗೊಳ್: ಶ್ರಾವಕರು ಭಯವೊಂದಿ ಯುಭಯವನೀವುದೆನುತಡಿಗಡಿಗೆ ಹೊಡಪಡಲು (ಬಸಪು. ೫೦-೬೩).
[ ಭಯ + ಪೊಂದು$_1$ ]

**ಭಯಸ್ಥ** (ನಾ). ಭೀರು; ಭಯಪ್ರಕೃತಿಯವನು: "ಭೀರು ಕರಂ ಕಾತರಂ ಭಯಸ್ಥಂ ತ್ರಸ್ತಂ" (ವಸ್ತುಕೋ. ೦೦೦-೦೨); ಆ ಹುಡುಗ ಬಹಳ ಭಯಸ್ಥ (ರೂಂ). [ಸಂ.]

**ಭಯಸ್ಥೆ** (ನಾ). ಭಯಗೊಂಡವಳು; ಹೆದರಿದವಳು: ಆ ದುರ್ನಯಕ್ಕೆ ಸೀತೆ ಭಯಸ್ಥೆಯಾಗಿ ಗೃಹಮಹತ್ತರನಂ ಕರೆದಾರೇನಂ ಬೇಡಿದೊಡವರ್ಗದಂ ಕುಡುವುದೆಂದು ಪೇಳ್ದು (ಕಂರಾಪು. ೦೫-೬೫ ವ). [ಸಂ. ಭಯಸ್ಥಾ]

**ಭಯಾಕುಳ** (ಗು). ಹೆದರಿಕೆಯಿಂದ ಕೂಡಿದ; ಅಂಜಿದ: ಇನ್ನದಱ ಮೇಲೆ ಭಯಾಕುಳಲೋಲನೇತ್ರ ನೀಲಾಂಬುಜಲಕ್ಷ್ಮಿಯಿಂ ಕದಱ ಮಾಣವು ಕಾಣಗೆ ಮಾಯ್ದು ತುಂಬಿಗಳ್ (ಶಾಂತಿಪು. ೬-೯೭). [ಸಂ. ಭಯಾಕುಲ]

**ಭಯಾನಕ** (ಗು). ೧. ಭಯವನ್ನುಂಟುಮಾಡುವ; ಭಯಂಕರವಾದ: ವಿಷ್ಣೋ ಜನ ಶ್ರದ್ಧಾವಂತರು . . . ಜೀವನದ ಅತಿದುರ್ಭರಕಷ್ಟಗಳನ್ನೂ ಭಯಾನಕ ಹಿಂಸೆಗಳನ್ನೂ ಅನುಭವಿಸಿದ್ದಾರೆ (ವೀರಯೋ. ೦೭). (ನಾ). ೨. ಭಯವನ್ನುಂಟುಮಾಡುವುದು; ಭಯಂಕರವಾದುದು; ಘೋರ: ಅಂತೆ ಮೇಣ್ ಇರುಳೊಳುಂ ಘೋರಾಂಧಮದ್ಯಮಂ ಪೀರ್ದು ಬಾರ್ಗೆ ಸಂದ ಮನೋವಮತಿಸಿಪ್ಪುರಂ, ಕಠಿನಂ, ಭಯಾನಕಂ (ಶ್ರೀರಾಮಾ. ೯೯-೨೯೩); ಈ ಎರಡನೆಯ ವಿಚಾರವು ರಾಘಪ್ಪನಿಗೆ ಭಯಾನಕವಾಗಿ ತೋರುತ್ತಿತ್ತು (ಗಂಪಮಾರು. ೨೦೫). ೩. ಒಂದು ನರಕದ ಹೆಸರು: ದಹನ . . . ಮಹಾಸಂವರ್ತಕವೆಂಬೈದು ಮಂತ್ರಿಸರಕಂಗಳೊಡಗೂಡಿ ಭಯಾನಕವೆಂಬರಸುನರಕವಿಹುದು (ವಿವೇಕ. ೧೬೦). ೪. [ಕಾವ್ಯಮೀ] ನವರಸಗಳಲ್ಲಿ ಒಂದು; ಭಯವೆಂಬ ಸ್ಥಾಯಿಭಾವದಿಂದ ಉಂಟಾ ಗುವ ರಸ: "ಶೃಂಗಾರಃ . . . ಭಯಾನಕಃ, ಬೀಭತ್ಸಃ, ಅದ್ಭುತಃ, ಶಾಂತಃ — ಈ ೯ ರಸಂಗಳ್" (ಹಲಾಯು. ೦೬-೯೨); ಸತತಂ ಭಯಾನ ಕೋದ್ಯತ್ಪುರಸಂ ಕರಂ ವಿಷಮಬಂಧನದಿಂ . . . ಊರ್ಜಿತೋಕ್ತಿಗಳಿನಕ್ಕಿ ರೌದ್ರರಸಂ ರಸಾವಹಂ (ಕವಿರಾ. ೨-೦೦೦); ನಿಗ್ರಹಶಂಕಾಭರಾತಂಕಿತ ಹೃದಯರಾದ ಅಂಗ ವಂಗಕಳಿಂಗ . . . ಮರುಪ್ರಭೃತಿಭೂಪಾಲಕರಿಂ ಭಯಾನಕರಸಮಂ . . . ನೆಗಟುತ್ತುಮಿರೆಯುರೆ (ಜಗಂ. ೨-೩೯ ವ); ಹಱಿದ ಹೊಟ್ಟೆಯ ಹೊಡೆಮರಳಿದಾಳಿಗಳ ತೋಳಿನ ಕಡಿಕುಗಳ ರಣಮಹಿ ಭಯಾನಕರಸಕೆ ಗುಱಿಯಾಯ್ತು (ಕುಮ್ಮಾಭೀ. ೮-೦೮). [ಸಂ.]

**ಭಯಾರ್ತಿ** (ನಾ). ಹೆದರಿಕೆಯಿಂದ ಉಂಟಾದ ಕಷ್ಟ. —ನೋವು : 'ಭಯಾರ್ತಿಗೊಳ್' ಪರಾ. [ಸಂ.]

**ಭಯಾರ್ತಿಗೊಳ್** (ಕ್ರಿ). ಹೆದರು; ಅಂಜು : ಮಂಜಿನ ಪುಂಜವೊತ್ತರಿಸಿ ಮುತ್ತಿ ಮುಸುಂಕೆ ಭಯಾರ್ತಿಗೊಳ್ವನೇ ಕಂಜಸಖಂ (ಕಬಕಂ. ೯-೪೪). [ಭಯಾರ್ತಿ + ಕೊಳ್$_1$]

**ಭಯಾವಹ** (ನಾ). ಭಯಂಕರವಾದುದು ; ಘೋರವಾದುದು : "ಘೋರಂ, ಪ್ರತಿಭಯಂ, ಭೀಮಂ, ದಾರುಣಂ, ಭಯಾ(ನಕಂ)ವಹಂ . . . ಭಯಾ(ವಹಂ)ನಕಂ — ಈ ೧೦ ಭಯಂಕರಂ" (ಕಅಭಿಧಾ. ೦೦೬-೨೦). [ಸಂ.]

**ಭಯಿಮೂಗ** 'ಭೈಮೂಗು' ನೋ.

**ಭಯೋತ್ಕಟ** (ನಾ). ೧. ಭೀತಿಯ ಆಧಿಕ್ಯ. —ಅತಿಶಯ. ೨. ಒಂದು ನರಕದ ಹೆಸರು : ನಿರುಚ್ಛ್ವಾಸ ಸುದೀರ್ಘ ಕೂಟಶಾಲ್ಮಲಿ ಅರಿಷ್ಟ ಸುಮುಸವೆಂಬೈದು ಮಂತ್ರಿಸರಕಂಗಳೊಡನೆ ಭಯೋತ್ಕಟವೆಂಬರಸುನರಕ ವಿಹುದು (ಶಿವೇಶ. ೦೩೦). [ಸಂ.]

**ಭಯ್ಯಾ** (ನಾ). ೧. ಒಡಹುಟ್ಟಿದವನು ; ಸಹೋದರ. ೨. ಆಳು : ಸೇವಕ : ಅವರು ಸಾವಕಾಶ ಮೆಲಕಾಡಿಸುತ್ತಿರುವಂತೆ ನೀರಿನ ಭಯ್ಯಾ ಬಂದು ಎರಡು ಗ್ಲಾಸುಗಳನ್ನು ಅವರೆದುರಿಗೆ ಇಟ್ಟು (ಎಚತ. ೨೪). ೩. ಚಿಕ್ಕವರು ಮತ್ತು ಸರೀಕರನ್ನು ಕರೆಯುವ ಒಂದು ಶಬ್ದ. [← ಹಿಂ. ಭಯ್ಯಾ, ಭೈಯಾ ; ಮರಾ. ಭಯ್ಯಾ]

**ಭರ್** (ನಾ). ವೇಗವನ್ನು ಸೂಚಿಸುವ ಒಂದು ಅನುಕರಣ ಶಬ್ದ : ಗಾಳಿ ಭರ್ ಎಂದು ಬೀಸುತ್ತಿದೆ (ಲೂ).

**ಭರ** (ಗು). ೧. ಹೊರುವ ; ನಿರ್ವಹಿಸುವ. ೨. ಪೋಷಿಸುವ : ಆಶ್ರಯವನ್ನು ಕೊಡುವ ; ಬೆಂಬಲವನ್ನು ನೀಡುವ. (ನಾ). ೩. ತೆಗೆದುಕೊಳ್ಳುವುದು ; ಹೊತ್ತುಕೊಳ್ಳುವುದು. ೪. ಕಳ್ಳತನ ; ಕಳವು ; ಅಪಹರಣ. ೫. ಹೊರೆ ; ಭಾರ ; ತೂಕ : ಆಸೆಗೆ ಹುಟ್ಟಿದ ಪ್ರಾಣಿ ಆಸೆಯನೆ ಕಲಿತು ಪುಣ್ಯಪಾಪದಿಯ ಬಯಸಿದರೆ ಭವಪಾಲೆಯು ಭರವು ತಪ್ಪದು (ಐಕಪ. ೦೨೬). ೬. ಹೊಣೆ ; ಜವಾಬ್ದಾರಿ : ನಗರೇಶ್ವರದೀ ಮಠಮೊಪ್ಪಿ ತೋಱುಗುಂ ನರಲೋಕದೊಳೆಂನಿಲ್ಲಿಯ ಭರವಂ ತಾಳ್ದಿಂತು ಪೆಱಗೆ ಗುರುಕುಳತಿಳಕಂ ಪರಮಗುರು ಬಿಸಸಿ (ಎಕ್ರಿ. XI-i, ೯೭ ೩೬ ; 1062) ; ಸೇನೆಯ ಸುತ್ತುವಳಯದ ಭರವ ಕೈಕೊಂಡೊಡ್ಡ ಮೆಱೆದನು ಗರುಡಿಯಾಚಾರ್ಯ (ಕುವ್ಯಾದ್ರೋ. ೯-೦೬); ಧರಿಸು ಲೋಕದ ಭರವ ಪರಮಾರ್ಥವನು ಬಿಡದೆ ಹೊರಡು ಕರೆ ಬರಲ್ ಅಳದೆ (ಶುಂಕಳ. ೩೦೦). ೭. ಹೆಚ್ಚಳ ; ಅತಿಶಯ ; ಆಧಿಕ್ಯ : "ಅತಿಶಯಃ, ಭರಃ . . . ದೃಢಃ — ೧೪ ಅತಿಶಯದ ಹೆಸರುಗಳು" (ಶಿಪ್ಯಾಂ. ೨೩) ; ಸಿರಿಯ ಭರವುಳ್ಳಾಗ ಮಱೆಯದಿರುವವ ಜಾಣ ಕೊಱತೆಯಾದಾಗ ಕೊಡಲು ತನಗಲ್ಲೆಂದು ಮಱುಗುವವನೆಗ್ಗ (ಸರ್ವಜ್ಞ. ೬೯೬) ; ಕಡುಸುಗ್ಗಿಯ ಭರಕೆ ಕೈಮಂದು ಕೊನೆವೆರ್ಚುವ ಮಾಮರನಂತೆ . . . ಕಂಪಿರಂ . . . ಸೊಗಯಿಸಿದನಪ್ಪುದುಂ (ರಾಜಶ್ವ. ೦೦೬-೬). ೮. ಆಸಕ್ತಿ ; ತತ್ಪರತೆ : ನೀರ ಬೊಬ್ಬುಳಿಕೆಗೆ ಕಬ್ಬಸದ ಕಟ್ಟ ಕೊಟ್ಟು ಸುರಕ್ಷಿತದ ಮಾಡುವ ಭರವ ನೋಡಾ (ಬಸವ. ೦೬೨) ; ಎರಡು ಬಲವನು ಮುಸಿದು ಕೊಲಿಸುವ ಭರವೆಯಾದವನದು (ಕುವ್ಯಾ. ೯-೪೦) ; ೯. ಉದ್ರೇಕ ; ಆವೇಶ ; ಆವೇಗ : ಶರಹರವ ನಾ ಕಾಣೆನೋ ಪೋಪರಕೆ ಗತಿಯೇನೆನುತ ಭರದಲಿ ಕಱಿದು ತೋಱಿದನಾ ಕೃಪಾಚಾರ್ಯರ್ಗೆ ಕಲಿ ದ್ರೋಣ (ಕುವ್ಯಾದ್ರೋ. ೫-೪೩) ; ಸಿಟ್ಟಿನ ಭರದಲ್ಲಿ ಏನೇನಸ್ತೋ ಮಾತಾ ಡಿದ್ದರು (ಅಭ್ಯ. ೬೬). ೧೦. ರಭಸ ; ಚುರುಕು ; ವೇಗ : ಭರದಿಂದಂ ತುಳುಂಕಿದ ನೀರುರದೊಳ್ ತಾರಾಂಕುರಂಬೆಯನಿರ್ಕುಟಿಗೊಳೆ (ಅಭಿಪು. ೦೪-೦೦೬) : ತಿರುನೀಲಕಂಠಾ ಎಂದ ಸರವನೊಳಗಿರ್ದ ನಾಯಕಿ ಕೇಳಿ ಭರದಿಂದ ಎದ್ದು (ತಿರುನೀ. ೬-೦೪) ; ರಾಜಂ ಚಿತ್ರಾಂಬರಯುಕ್ತನಾಗಿ ಬಂದಂ ಭರದಿಂ (ಪಂಪಾಶ. ೩-೦೬) : ಭರದಿಂದ ಹೋಗುವವನ ಸಂಗಡ ಹೊರೆ ಹೊತ್ತೀಯಾ ಅಂದ (ಗಾದೆ). ೧೧. ಭರಾಟೆ ; ಏರಿಕೆ : ೩ ರಿಂದ ೫ನೇ ವರ್ಷದ ವರೆಗೆ ಬಳ್ಳಿಯು ಭರವು ಇರುತ್ತದೆ ; ಆರನೆ ವರ್ಷ ಆ ಭರ ಕುಂದುವುದು (ಕುಂಬಾರು. ೩-೨೦೬). ೧೨. ನೆರೆ ; ಭರ್ತಿ : ಸಿರಿ ಬಂದ ಕಾಲದೊಳಾಗದು ಉಬ್ಬುವುದೆಂತುದುದಳಿವುದು ಕೊನೆಗೆ ಭರ ಬಂದ ಕಾಲಕೆ ಬಂದಿಪುದೆಲ್ಲವು ಹೋಗುವುದೀತದ ಜೊತೆಗೆ (ರಾಜಾಕ. ೨೦೬-೨೨). ೧೩. ಹಿಂದಿನ ಇಪ್ಪತ್ತು ತೊಲೆಯಷ್ಟು ತೂಕ. [ಸಂ.]

**ಭರಂಗೆಯ್**, ಭರಗೈ (ಕ್ರಿ). ೧. ತವಕಿಸು : ಆಂತೊಂದು ವರ್ಷಂಬರಂ ಭರಂಗೆಯ್ದು ನೋಂತು (ಶಂಕರಾ. ೧-೦೩೬೩). ೨. (ಕಾರ್ಯಭಾರವನ್ನು) ವಹಿಸಿಕೊಳ್ಳು ; ಹೊಣೆಹೊರು : ಧೃತರಾಷ್ಟ್ರಂ ನುಡಿದಾತರ್ನೇ ಹರಿ ಭರಂಗೆಯ್ವಾತರ್ನೇ ನೀಂ ಪೃಥಾಸುತರಂ ನೋಯಿಸಲಾಗದೆಂದು ನುಡಿದೇನಾ ಪಾರ್ತೆಮೇ (ಶಂಕರಾ. ೦೦-೦೦). ೩. ಅರ್ಭಟಿಸು ; ಜೋರುಮಾಡು : ಎಸ್ಸನುಜನಾ ಪಾಂಚಾಲಿಯುಂ ಪಂಚವಲ್ಲಭೆಯುಂಪೋದೆಯುಮಲ್ಲಿ ಮಿಳ್ಳಿ ಳನೆನೋಡುತ್ತಿರ್ದ ಬಲ್ಲಾಳ್ಗಳಿಲ್ಲಿ ಭರಂಗೆಯ್ವ ಪರ್ (ಗದಾಯು. ೩-೩೬). ೪. ಧಾಳಿಮಾಡು ; ಆಕ್ರಮಿಸು ; ಮೇಲೆ ಬೀಳು : ಭೋಂಕೆನೆ ಸಿಂಹಧ್ವನಿಯಿಂದೆ ಗರ್ಜ್ಜಿಪ ಸಭಾಸೂರರ್ವ್ವೈರಂಗೆಯ್ದುವಯಾದಿತ್ಯಂಗೆ ಬಯಲ್ಗೆ ಪಪ್ಪುರೊಳಳರೇ ವಿಶ್ವಂಭರಾಚಕ್ರದೊಳ್ (ಎಕ XI, ೩೩ದು ೩೪-೨೦; 1123) ; ಈ ವೀರರನೊಳ್ . . . ಚಲದೆ ಮುಲೆವರಿನ್ನಾರ್ ಭರಂಗೆಯ್ವರಿನ್ನಾರ್ . . . ಎಂಬೊಂದೆಸಕದೆಸೆಯೆ ಬಂದಂ ಜರಾಸಂಧಭೂಪಂ (ಜಗಾ. ೬-೯೩). **ಭರಗೈ** : ೪. ತೊಳಪ ಬಿಡುಗದ ಕೊಂತ ಸಬಳ ಗದೆ ಶಕ್ತಿಗಳ ಮುಸಕದಲಿ ಭರಗೈದರ್ಕೈ (ಕಾಳ್ಯಾ. ೨೩-೦೬). [ಭರ + ಕೆಯ್$_1$]

**ಭರಂಗೊಳ್** (ಕ್ರಿ.) ಚುರುಕಾಗು : ಪೊಳೆವಲ್ಲಂ ಪೇಱು ಮಾಧ್ಯಂದಿನದ ಬಿಱುಬಿಸಿಲ್ಪಾಗೆ ಬೆನ್ನಂ ಭರಂಗೊಂಡೆಳಸುತ್ತಂ . . . ಕಾಡೊಳೊಪ್ಪಂವಳಿ ದಿರ್ದತ್ತುಭ್ರಕಾಯಂ ಪೃಥುನುಹಿಷನಿಕಾಯಂ (ರಾಜಶೇ. ೫-೬೮). [ಭರ + ಕೊಳ್$_1$]

**ಭರಂಬಡು** (ಕ್ರಿ). = ಭರಂಗೊಳ್ : ಒಂದುದಿವಸಂ ಮಧ್ಯಾಹ್ನಸಮಯ ಮಪ್ಪನ್ನೆಗರ ಭರಂಬಟ್ಟು ಕಿಲಸಂಗೈದು (ಕಂತಕಂ. ೨೯-೦೪). [ಭರ + ಪಡು$_1$]

**ಭರಕತ್ತು** 'ಬರಕತ್ತು' ನೋ.

**ಭರಕಾಸ್ತು** 'ಬರಖಾಸ್ತು' ನೋ.

**ಭರಖಾಸ್ತು** 'ಬರಖಾಸ್ತು' ನೋ.

**ಭರಗಚ್ಚು** (ನಾ). ಯಥೇಚ್ಛ ; ಹೇರಳ : ಫಲ, ಶ್ರೀಖಂಡ . . . ಒಂದೆರಡು ಪಲ್ಯ ಇತ್ಯಾದಿಯಿಂದ ದೊಡ್ಡ ಬಾಳೆಯೆಲೆ ಭರಗಚ್ಚಾಗಿ ತುಂಬಿದ್ದವು (ಅನ್ಯ. ೨೩೬). [← ಮರಾ. ಭರಗಚ್ಚ]

**ಭರಗೆಡು** (ಕ್ರಿ). ತಡಮಾಡು ; ವಿಳಂಬಮಾಡು : ಭರಗೆಡದೆ ನೀನೊಂದು ಗುಂಡನು ಬಿರಿಯ ಬಳ್ಳಿಗೆ ಸೇದಿ ಕೊಡು (ಕಾಳ್ಯಾ. ೦೭-೬೩). [ಭರ + ಕೆಡು$_1$]

**ಭರಗೈ** 'ಭರಂಗೆಯ್' ನೋ.

**ಭರಡಾ** 'ಬರಡಾ' ನೋ.

**ಭರಡಿ** (ನಾ). ೧. ನುಚ್ಚು ; ತರಿ. (ಗು). ೨. (ಅಲ್ಲ) ಅಲ್ಪ ; ತುಚ್ಛ : ಹುರುಡಿಗೆ ಮಾಡುವ ಹುರುಳಿಲ್ಲದ ದಾಸ . . . ಎರಡು ಕಡೆ ಕೆಟ್ಟ ಭರಡಿ ದಾಸನು ನಾನು (ಪೊಕ್ಕಿ. ೨೬-೯). [← ಮರಾ. ಭರಡೀ]

**ಭರಣ$_1$** (ನಾ). ೧. ಹೊರುವುದು ; ಧರಿಸುವುದು ; ವಹಿಸುವುದು. ೨. ಪೋಷಣೆ ; ರಕ್ಷಣೆ ; ಪರಿಪಾಲನೆ : ಮುತ್ತಯ್ಯನು ನಾರಣೋಜರು ಯಿಂತೀ ಮುವತ್ತಿರ್ವ್ವರ ಭರಣಾ (ಎಕ. IX-i, ೨೮ ೦೦ ; ೯೩೪);

ತೋಱುತ್ತಿರ್ಪ್ಪಮಾದಂ ಹರಣಭರಣಚಾತುರ್ಯಮಂ ಚಾತುರಂಗಂ (ಚಂದ್ರಪ್ರ. ೧೧-೩೦) ; ಮರನನೇಱಿದರೊಳಗೆ ಪಾಂಡವರಿರಿಸಿ ಹೋದರು ಕೈದುಗಳ ಮಿಗೆ ಹರಣಭರಣಕ್ಷಮೆಗಳಲಿ ನೀನೆನಗೆ ನೀಡೆನಲು (ಕುಮಾ.ಭಾ. ೬-೩೨). ೩. ಜೀವನಕ್ಕೆ ಬೇಕಾದ ಗ್ರಾಸ ; ಜೀವಿಸಲು ಬೇಕಾದ ಅನ್ನಾಹಾರ : ವಿಶಾಲಾಕ್ಷಿಯೆಂಬವಳು ಪುರುಷನಿಲ್ಲದೆ ಪ್ರಥಮ ಋತುಗಾಣೆ ಪಿತಮಾತೆ ಮಱುಗಿ ಭರಣವನಿಟ್ಟು ಕಾಳಹಸ್ತೀಶ್ವರನ ವನದಲ್ಲಿ ಬಿಟ್ಟುಬರಲು (ಶ್ರೀಕಾ. ೧೧-೨). ೪. ಸಂಬಳ ; ಕೂಲಿ ; ವೇತನ : "ಕರ್ಮಣ್ಯಾ . . . ಭರಣಂ, ಮೂಲ್ಯಂ, ನಿರ್ವೇಶಃ, ಪಣಃ – ೧೧ ಕೂಲಿಯ ಪೆಸರುಗಳು" (ನಿಘಂ.ಶಿ. ೩೧೭). ೫. (ತೆರಪಾದ ಸ್ಥಳವನ್ನು) ತುಂಬುವುದು ; ಭರ್ತಿಮಾಡುವುದು. ೬. ತುಂಬುವ ವಸ್ತು,– ಪದಾರ್ಥ. ೭. ಭೂಮಿಯ ಒಂದು ಅಳತೆ ( ? ) : ತೋಟದ ಸ್ಥಳದಲ್ಲು ಭರಣ ೬೦ಕೆ ಹಕಿದ ಅಡಕೆಮರ ೧೪೫೦೦ಕೆ ಗ ೨೫೩ (ಮೈ.ಅಂ. ೧೯೩೭, ೭೭-೧೯; 1679).

**ಭರಣದ ಕೋಲ್** = ಒಂದು ಅಳತೆಯ ಕೋಲು (?) : ಗೋವಣ ಪೊಲದೊಳಗೆ ಧಾರಾಪೂರ್ವ್ವಕಂ ಮಾಡಿ ಭರಣದ ಕೋಲೊಳ್ ಸರ್ವ್ವನಮಸ್ಯಂ ಬಿಟ್ಟ ನೆಲ ಮತ್ತರು ೬೦ (ಸೌಇಇ. XX, ೧೯-೩೯ ; 1015); ಭರಣದ ಕೋಲ ಪರಿಸಂಕಿನ ಮತ್ತರು ೩ (ಕೊಲ್ಲಾ.ಶಾ. ೦೪-೯೮ ; 1170). [ಸಂ.]

**ಭರಣ$_2$** (ನಾ). (?) : ಕಡೆವಡೆವೇೞ್ವಡಂ ಪಡುವಡಂ ಭರಣಂ ತಿಣ್ಣುತ್ತಮಿಪ್ಪಡಂ ಚರಣವನಾವಗಂ ಬಡಿವಡಂ ಪೆಱತೆನಿತು ಕೂಲೆ ತೋಱುತೆಂದಱಿದು (ಅಕ್ಷಪ್ರ. ೧೭-೯೭). [ ? ]

**ಭರಣಂಗೆಯ್** (ಕ್ರಿ). ಕಾಪಾಡು ; ರಕ್ಷಿಸು : ಕುಱೆ ಪಡೆದಾಯೂರನಾ ಶ್ರೀಧರಭಟ್ಟರ್ ಸೂಱಿನಾಲ್ವರ್ಮ್ಮಹಾಜನಕೆ ಭರಣಂಗೆಯ್ದು ತವಗಂ ಮಹಾಜನಕ್ಕಂ ಪ್ರಜೆಗಂ ಮಾಡಿದ ವ್ಯವಸ್ಥೆಯುಂ(ಎಇ. XX, ೭೭-೦೪; 1012); ಜಗಮೆಲ್ಲಮುಮಂ ವಿಷ್ಣುವೆ ಮಿಗೆ ಭರಣಂಗೆಯ್ಯುತಿರ್ಕುಂ (ವಿಶ್ವಪು. ೦೭-೯೭). [ ಭರಣ$_1$ + ಕಯ್$_1$ ]

**ಭರಣಿ** (ನಾ). ೧. (ಒಡವೆ, ವಸ್ತು ಮೊದಲಾದುವುಗಳನ್ನು ಇಡುವ, ಮುಚ್ಚಳವಿರುವ) ಸಂಪುಟ ; ಕರಂಡ; ಡಬ್ಬಿ : ಮನಸಿಜನನರ್ಘ್ಯಸಂಮೋಹನದ ಮರ್ದ ಮಣಿಯ ಭರಣಿಯೊಳ್ ತೀವಿಯಿ ನಟ್ಟಿನ ನಿಧಿಯ ಮೊಗದೊಳಿರಿಸಿದನೆನಲ್ಕೆ ಮಧುರಾಧರಂ ಮನೋಹರಮವಳಾ (ಶಾಂತಿಪು. ೩-೯೭); ತರಿಸಿದನು ಚಂದನದ ಸಾದಿನ ಭರಣಿಗಳ (ಕುಮಾ.ಕ. ೨-೯೦); ಕತ್ತಲೆ ಲೋಕವನು ಮುಸುಕಿದುದು ಭರಣಿಯ ಮುಚ್ಚು ಮಂಪದಲಿ (ಹರಿಶ. ೫-೦೪). ೨. [ಜ್ಯೋತಿ] ಯಮನು ಅಧಿದೇವತೆಯಾಗಿರುವ, ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಎರಡನೆಯದು: ಭರಣಿ ಮಘೆ ಪೂರ್ವೆ ಕೃತ್ತಿಗೆ . . . ಪೈಶಾಚರಮಂಡಳಮೆಂಬ ನಾಮಮಂ ತಳೆದಿರ್ಕುಂ (ಲೋಕೋಪ. ೯-೬೦) ; ಭರಣಿ ಯಾಮ್ಯಭಂ ಯಾಮ್ಯಂ, ಅಂತಕಂ ಯಮತಾರಕಂ ಈ ೫ ಭರಣಿನಕ್ಷತ್ರಕ್ಕೆ ಪೆಸರು (ಶಾಸ್ತ್ರ. ೬೨-೪) ; ಪೀಳೆಯೆಲೆಯ ಬದನೆಕೆಯುಂ ಭರಣಿನಕ್ಷತ್ರದಲ್ಲಿ ತಂದು ಕೈಗೆ ಕಟ್ಟುವುದು (ಸಕಪ್ಪ. ೨೨೦) ; ಭರಣಿಯಲ್ಲಿ ಹುಟ್ಟಿದವನು ಧರಣಿ ಆಳುವನು (ಗಾದೆ). ೩. ಭರಣಿನಕ್ಷತ್ರದಲ್ಲಿ ಬರುವ ಮಳೆ : ಮರೆಯ ದೀಪದಂತೆ ಭರಣಿಯಾ ರಸದಂತೆ ಅರಿವ ರತುನ ಧಾಣಿ ಸ್ವರ್ಗವು ಸ್ಥಿರದಿ ಕಾಣಿಸಿದಂತೆ (ತತ್ತ್ವಕೋ. ೫-೯).

**ಭರಣಿಯ ಮಳೆ** = ಸಾಮಾನ್ಯವಾಗಿ ಏಪ್ರಿಲ್ ಕೊನೆ, ಮೇ ಆರಂಭದಲ್ಲಿ, ಸೂರ್ಯನು ಭರಣಿನಕ್ಷತ್ರದಲ್ಲಿ ಸಂಚರಿಸುವಾಗ ಬರುವ ಮಳೆ: ಭರಣಿಯ ಮಳೆ, ಧರಣಿಯ ಬೆಳೆ (ಗಾದೆ). [ಸಂ. ಭರಣೀ]

**ಭರಣಿಗ** (ನಾ). ಸಾಗುವಳಿದಾರ : ಕೇರಿಯ ಮಹಾಜನಕ್ಕೆ ಮಾಡಿದ್ದ ಸಮೆಯಮೆಂತೆನೆ ಇಲ್ಲಿಯ ಕೆಯ್ಯುಂ ಮನೆಯುಂ ಜೇಷ್ಠನೊರ್ವ್ವನೊಡವೆ ಮಿಕ್ಕುದೆಲ್ಲಂ ಮೂವತ್ತಿರ್ಚ್ಛಾಸಿರ ಸಮೆಯಂ ಪೂರ್ವದ ಭರಣಿಗರ ಸನ್ತತಿಯಲ್ಲದೆ ಪೆಱರ್ಗ್ಗೆ ಕೆಯ್ಮನೆಯುಂ ಮಾಱಲಾಗದು (ಸೌಇಇ. XI-i, ೬೪-೩೪ ; 1028). [ ಭರಣ$_1$ + –ಇಗ ]

**ಭರಣಿಗೆ** (ನಾ). ಒಂದು ಬಗೆಯ ಸಸ್ಯ : ನವುಲಾದಿ, ಪ್ಯಾರೊಳೆ, ಭರಣಿಗೆ (ಮೈ.ಶಿಗ. ೭೮-೦೫೯೭). [ ? ]

**ಭರಣ್ಯ** (ನಾ). = ಭರಣ$_1$ ೪ : "ಕರ್ಮಣ್ಯಾ . . . ಭರಣ್ಯಂ, ಭರಣಂ, ಮೂಲ್ಯಂ, ನಿರ್ವೇಶಃ, ಪಣಃ –೧೧ ಕೂಲಿಯ ಪೆಸರುಗಳು" (ನಿಘಂ.ಶಿ. ೩೧೭). [ಸಂ.]

**ಭರತ$_1$** (ನಾ). ೧. ಅಭಿನಯಿಸುವವನು; ನಟ: "ಶೈಲಾಲೀ . . . ಭರತಃ, ನಟಃ — ಈ ೮ ನಟ್ಟುವಿಗಂ" (ಹಲಾಯು. ೯೭-೪೩೯) ; 'ನಟ' ಎಂದರೆ ಕುಣಿಯುವವನು ಎಂದು ಅರ್ಥ. ಇವರಿಗೆ ಭರತರು, ಶೈಲೂಷರು ಮುಂತಾದ ಹೆಸರೂ ಉಂಟು (ಕಂನಾಟ. ೨೮). ೨. ನಾಟ್ಯಶಾಸ್ತ್ರ ; ಅಭಿನಯ ಕಲೆ : ಭರತಂಗೆ ಭರತಮುಮನರ್ಥಶಾಸ್ತ್ರಮುಮಂ . . . ಉಪದೇಶಂಗೆಯ್ದು (ಆದಿಪು. ೮-೭೦ ವ) ; ಭರತ ಛಂದೋವ್ಯಾಕರಣ ಸಂಗೀತ ಸಾಹಿತ್ಯ . . ಸ್ಮರಿಸಲೊಡನೆ ಮುಖೋದ್ಗತಂ ಬಸವಂಗೆ (ಬಸಪು. ೩-೪೨); ಕವಚಾಗಮ . . . ಸಂಗೀತ ಭರತ ಆತೋದ್ಯವೆಂದು ಪ್ರೋದ್ಗೀತಾಗಮದ ಷೋಡಶಭೇದಂಗಳು (ಬಸವ. ೬೧). ೩. ನಾಟ್ಯಶಾಸ್ತ್ರವನ್ನು ಬರೆದ ಮುನಿಯ ಹೆಸರು : ಆ ಮುನಿಪ ಭರತನೊಲವಿಂ . . . ಗಂಧರ್ವಮರತತಿಗಿತ್ತನೊಲ್ದು ನಾಟ್ಯಶ್ರುತಿಯಂ (ರಾಜ್ಯಶೇ. ೧-೧೧); ಭರತ ಮುನಿಪ್ರೋಕ್ತವಾದ ಭರತನಾಟ್ಯವನ್ನು ಸಂಪ್ರದಾಯಶುದ್ಧವಾಗಿ ಕಾಪಾಡಿಕೊಂಡು ಬಂದಿರುವ ನಾಟ್ಯಪದ್ಧತಿಗೆ ಭರತನಾಟ್ಯ ಎಂದು ಹೆಸರುಬಂದಿದೆ (ಭಾರತ. ೫೭೪). ೪. ಭಾರತವನ್ನಾಳಿದ ಒಬ್ಬ ಸುಪ್ರಸಿದ್ಧ ಚಕ್ರವರ್ತಿ : ಭರತನ ವಂಶದೊಳ್ ನೆಗೞ್ದ ಪಾಂಡುಗೆಪುಟ್ಟಿಯುಂ . . . ನೀಮುಮಿಮಾರದಡಿಯೊಳ್ ಶಿವಾಶಿವರವಂಗಳನೆಟ್ಟಿಱುಮಂತುಟಾದುದೇ (ಪಂಪಭಾ. ೩-೧೧) ; ಬಾಳಿಕೆಯನನುಜರಿಂದೊಡಗೂಡಿ ಧರ್ಮಜಂ ತಾಳಿದಂ ಭರತ ನಳ ನಹುಷಾದಿ ರಾಜರಂ ಪೇಳುವೊಡವರ್ಗೆನಿತು ಗುಣಮಿಲ್ಲವೆಂದು ಭೂಮಂಡಲಂ ಕೊಂಡಾಡಲು (ಜೈಮಿಭಾ. ೨-೪) ; ನಿನ್ನೀ ಕುಮಾರಂ ನೃಪೋತ್ತಮ ಭೂರಕ್ಷಣದತ್ತಣಿಂ ಭರತನಾಮಂದಾಳ್ದು ತಾಂ ಬಾಳುವಂ (ಶಾಕುಂತ ೧೧೪-೦೯೭). ೫. ದಶರಥನ ನಾಲ್ಕು ಮಕ್ಕಳಲ್ಲಿ ಒಬ್ಬ ; ರಾಮನ ತಮ್ಮ : ಶುಭದಿನ ಮುಹೂರ್ತದೊಳ್ ಸುಮಿತ್ರೆ ಲಕ್ಷ್ಮಣನಂ ಕೈಕೆ ಭರತನಂ ಸುಪ್ರಭೆ ಶತ್ರುಘ್ನನಂ ಪಡೆವುದುಂ (ಪಂಪರಾ. ೩-೦೩೩ ವ) ; ಅರಸುತನಕೊಡಬಡದೆ . . . ನೇಮವ ಧರಿಸಿ ಮರಳಿದು ಭರತ ನಂದಿಗ್ರಾಮಕೈತಂದ (ತೊರೆರಾ. ೨-೭ ಸೂಚನೆ) ; ತೊಳೆದು ಜನನಿಯ ಜಠರವಂ ಜನಿಸಿ ಭವನದೊಳ್ಬೆಳೆದು ಲಕ್ಷ್ಮಣ ಭರತ ಶತ್ರುಘ್ನರೊಡಗೂಡಿ (ಜೈಮಿಭಾ. ೦೮-೨). ೬. ಪರಮಜ್ಞಾನಿಯಾದ ಒಬ್ಬ ಮಹರ್ಷಿ ; ಜಡಭರತ : ಉತ್ತಮದ್ವಿಜಕುಲದಲುದಿಸಿ ದಲುತ್ತಮೋತ್ತಮನಾತ್ಮವಿದ್ಯೆಯ ಪುತ ಳಿಯುಪೊಲಭಿಳಮಾಯಾವಿರತನಾ ಭರತ (ಭಾಗ. ೫-೭ ಸೂಚನೆ). ೭. ಭಾರತದೇಶ ; ಇಂಡಿಯಾ ; P ಸುಪ್ರಸಿದ್ಧನಾದ ಭರತ ಚಕ್ರವರ್ತಿಯು ಆಳಿದುದರಿಂದ ಈ ನಾಡಿಗೆ ಭರತವೆಂಬ ಹೆಸರಂ ಬಂದಿತೆಂದು ಪ್ರಾಚೀನರ ಅಭಿಪ್ರಾಯ : ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ ಹೈಮವತ . . . ಐರಾವತಂಗಳೆಂಬೇೞುಂ ಜನಪದಂಗಳಿಂದಂ . . . ಎಸೆದು(ಆದಿಪು. ೧-೯೮ ವ); ನಾನಾಕ್ಷೇತ್ರದೊಳುತ್ತಮಂ ಭರತಮಾ ಭೂಭಾಗದೊಳ್ (ಸೌಇಇ. XX, ೯೭-೦೩; 1074); ಭರತಾರ್ಧಕ್ಕಧಿರಾಜನಪ್ಪ ಸುನನಂ ಪೆತ್ತಪ್ಪೆ ತನ್ನಂಗಿ (ಶಬರಪಿ. ೨೦-೧೯೦). ೮. [ಜೈನ] ಆದಿತೀರ್ಥಂಕರನಾದ ವೃಷಭ

ದೇವನ ಹಿರಿಯ ಮಗ; ಪ್ರಥಮಚಕ್ರವರ್ತಿ : ಪುರುಪರಮೇಶ್ವರ ಪುತ್ರಂ ಚರಮಾಂಗಂ ಚಕ್ರವರ್ತಿಯೆಂದೊಡೆ ಪೇಟಲ್ ದೊರೆ ಪೆಜಿರಾರ್ ಭರತನೊಳೆನೆ (ಆದಿಪು. ೧೨-೧೧೯); ಭರತಂ ಮುನ್ನಾದಿತೀರ್ಥೇಶ್ವರನ ಚರಣಮಂ . . . ಪೂಜಿಸಿದಂ (ಅಜಿಪು. ೮-೨೩); ಭರತನನಳ್ಕಿ ಬಾಹುಬಲಿ ತುಳ್ಕಿ ಮರಳ್ಚಿದ ಪೂಗೊಳಂ (ಅನಂಪು. ೧೧-೧೯). [ಸಂ.]

**ಭರತ₂** 'ಭರತಿ' ನೋ.

**ಭರತಕಟ್ಟಳೆ** (ನಾ). ನಾಟ್ಯಶಾಸ್ತ್ರದ ನಿಯಮ : ಪರಿ ಪಟಹಮಂ ಝಲ್ಲರಿ ಝಲ್ಲರೆಂದು ಬಾಜಿಸಲು . . . ಭರತಕಟ್ಟಳೆಗೆ ಕುಣಿದನೀಶಂ (ಗುರುಬಾ. ೦-೧೯). [ಭರತ₁ + ಕಟ್ಟಳೆ₁]

**ಭರತಕಳಾವಿದ** (ನಾ). ಭರತನಾಟ್ಯಶಾಸ್ತ್ರವನ್ನು ತಿಳಿದಿರುವವನು : ನೆರೆದೇಳ್ತಂದಿದ್ದರ್ದಾಸ್ಥಾನದೊಳಮುಮ . . . ಭರತಕಳಾವಿತ್ಕುಳಂ (ರಾಜಶೇ. ೦೨-೪೬). [ಸಂ. ಭರತಕಲಾವಿದ್]

**ಭರತಕುಲ,** ಭರತಕುಳ (ನಾ). ೧. ಭರತಚಕ್ರವರ್ತಿಯ ವಂಶ: ಪಾಂಡವ, ಕೌರವರು ಹುಟ್ಟಿದ ರಾಜವಂಶ : ಭರತಕುಲಗಗನ ದಿನಕರಂ . . . ಗರ್ಭೋದಯಮಾದ್ರಿಯಾದುದುದಯಿಸಿದಂ (ಶಂಪಕಾ. ೦-೪೩); ಭರತಕುಲೇಂದುಕಲಂಕಂ. . . ಕುರುಕೇತುವೆಲ್ಲಿದಂ (ಗದಾಯು. ೬-೩೦). ೨. ಭರತಖಂಡದ ಜನತೆ,—ಪ್ರಜಾವರ್ಗ : ಶಿವನ ತಪಸ್ಸಿಗೆ ಭಂಗ ಬಂದರು ನವಕುಮಾರನ ಸಂಭವ ತಾರಕಾಸುರವಧೆಯು ಕಾದಿದೆ ಭರತಕುಲ ವಿಜಯಾಭವ (ಶಂಮು. ೪೮-೦೨). **ಭರತಕುಳ :** ೧. ಭರತಕುಳ ತಿಳಕರಿರ್. . . ನೆರೆದಿನಿಬರುಮೀ ಲಕ್ಷ್ಯಮನಿರದಕ್ಕಟ ಸರದೆ ತೆಗೆಯಲಾರ್ತಿರುಮಿಲ್ಲಾ (ಶಂಕಕಾ. ೨-೩೨). [ಸಂ.]

**ಭರತಕುಳ** 'ಭರತಕುಲ' ನೋ.

**ಭರತಕ್ಷೇತ್ರ** (ನಾ). ಭಾರತವರ್ಷ; ಭರತಭೂಮಿ : ಜಿನೇಂದ್ರಪಾದನಾ ಭಕ್ತಿಯಿಂ ಪೋದಲ್ಲಿ ಭರತಕ್ಷೇತ್ರದೊಳೀ ಯುಗದೊಳ್ ತೀರ್ಥಂಕರರುಂ ಚಕ್ರವರ್ತಿಗಳುಮಪ್ಪರೆಂದು ಸರ್ವಜ್ಞರ್ ಬೆಸಸೆ (ಆದಿಪು. ೦೨-೦೦೩ ವ); ಮನೋಹರಮುಮೆನಿಸಿದ ಭರತಕ್ಷೇತ್ರದ ಮಧ್ಯದೊಳ್ ಮಧ್ಯದೇಶಮುಂಟು (ಜಗಂ. ೨-೦ ವ). [ಸಂ.]

**ಭರತಖಂಡ** (ನಾ). = ಭರತಕ್ಷೇತ್ರ : ನಮ್ಮ ಪ್ರಾಚೀನಗ್ರಂಥಗಳಲ್ಲಿ ಈ ದೇಶಕ್ಕೆ ಭರತಖಂಡ ಇಲ್ಲವೆ ಭರತವರ್ಷ ಎಂಬ ಹೆಸರು ಕೊಡಲ್ಪಟ್ಟಿದೆ (ಜಯಂತಿಯು. ೪-೦೦೦). [ಸಂ.]

**ಭರತಜ** (ನಾ). ಭರತವಂಶದಲ್ಲಿ ಹುಟ್ಟಿದವನು : ಭರತಜರೊಳ್ಮುನ್ನಿಲ್ಲದ ಪರಿಭಾಷೆಯನುಂಟುಮಾಡಿ ಪೆಜಗಡಿಲುಂಟ್ಟಂ ಕುರುರಾಜಂ (ಗದಾಯು. ೬-೩೯). [ಸಂ.]

**ಭರತಜ್ಞ** (ನಾ). ಭರತಪ್ರಣೀತವಾದ ನಾಟ್ಯಶಾಸ್ತ್ರವನ್ನು ಬಲ್ಲವನು; ನಾಟ್ಯವಿದ್ವಾಂಸ : ಸ್ವರಮನಱಿಗೆ ತಾಂ ಭರತಜ್ಞನಂದದಿಂದಾನನ ಮನಱಿಗೆ ಜಾತ್ಯಶ್ವದಂತೆ (ಪುರಶ. ೦೦-೬೩); ಲಲಿತತತವಿತತಾದಿ ವಾದ್ಯಾಕಲಿತ ಭರತಜ್ಞರಿಗೆ . . . ಭಂಡಾರಿಗಳಿಗೆಱಿದು (ಬಸವ. ೩೯-೨೯); ಭರತಜ್ಞರ್ ಭಯಕಾಱ ನರ್ತಕ ನಟರ್ . . . ಒಪ್ಪುಗುಂ (ರಾಸ್ವರಂ. ೦-೩೩). [ಸಂ.]

**ಭರತನಾಟ್ಯ** (ನಾ). ಭರತಮುನಿಯಿಂದ ನಿರೂಪಿತವಾದ ನಾಟ್ಯ : ಭರತಮುನಿಪ್ರೋಕ್ತವಾದ ಭರತನಾಟ್ಯವನ್ನು ಸಂಪ್ರದಾಯಶುದ್ಧವಾಗಿ ಕಾಪಾಡಿಕೊಂಡು ಬಂದಿರುವ ನಾಟ್ಯಪದ್ಧತಿಗೆ ಭರತನಾಟ್ಯ ಎಂದು ಹೆಸರು (ಶಾರದ. ೩೩೪). [ಸಂ.]

**ಭರತನಿಪುಣ** (ನಾ). =ಭರತಜ್ಞ : ಸರಸಕವಿಗಳು ತಾರ್ಕಿಕರು ವರಭರತ ನಿಪುಣರು ಗಾಯಕರು . . . ವೈತಾಳಿಕರು ರಂಜಿಸಿತು (ಕುಮಾರ. ೨-೨೬). [ಸಂ.]

**ಭರತಪಕ್ಷಿ** (ನಾ). ಒಂದು ಬಗೆಯ ಹಕ್ಕಿ ; ನೀರುಕಾಗೆ: "ದಾತ್ಯೂಹಃ, ಕಾಲಕಂಟಕಃ-೨ ಭರತಪಕ್ಷಿಯ ಹೆಸರು" (ಸಿದ್ಧಂಶ. ೦೩೯). [ಭರತ₁ + ಪಕ್ಷಿ]

**ಭರತಪತಿ** (ನಾ). =ಭರತ ೮ : ಭರತಪತಿಯ ಶೋಕಾವೇಗಮಂ ವೃಷಭಸೇನಗಣಾಗ್ರಣಿಗಳಿಂತೆಂದಾಱಿಸಿದರ್ (ಆದಿಪು. ೦೬-೩೪ ವ). [ಸಂ.]

**ಭರತಭೂಮಿ** (ನಾ). =ಭರತಕ್ಷೇತ್ರ : ಭರತಭೂಮಿ ನನ್ನ ತಾಯಿ, ನನ್ನ ಪೊರೆವ ತೊಟ್ಟಿಲು (ಕೋಗಿಲೆ. ೩೪_೦). [ಸಂ.]

**ಭರತಮಂಡಲ** (ನಾ). =ಭರತಕ್ಷೇತ್ರ : ಅಂತು ಭರತಂ ಭರತಮಂಡಲ [ಕಾಶಾಂ, ೪]ಮನೇಕಚ್ಛತ್ರಚ್ಛಾಯೆಯಿಂದಂ ಪ್ರತಿಪಾಲಿಸುತ್ತಮಿರೆಯಿರೆ (ಆದಿಪು. ೦೩-೪ವ). [ಸಂ.]

**ಭರತಯ್ಯ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಭರತಯ್ಯನ ದಿವ್ಯಲಿಕಿತ (ಎಕ. VIII, ಸೊರಬ. ೨೦೬-೧೪ ; ೪೦3). [ಭರತ₁ + ಅಯ್ಯ₆₁]

**ಭರತರ್ಘು** 'ಬರತರಘು' ನೋ.

**ಭರತವರ್ಷ** (ನಾ). =ಭರತಕ್ಷೇತ್ರ : ನಮ್ಮ ಪ್ರಾಚೀನಗ್ರಂಥಗಳಲ್ಲಿ ಈ ದೇಶಕ್ಕೆ ಭರತಖಂಡ ಇಲ್ಲವೆ ಭರತವರ್ಷ ಎಂಬ ಹೆಸರು ಕೊಡಲ್ಪಟ್ಟಿದೆ (ಜಯಂತಿಯು. ೪-೦೦೦). [ಸಂ.]

**ಭರತವಾಕ್ಯ** (ನಾ). ೧. [ಕಾವ್ಯಮೀ] ನಾಟಕವೇ ಮೊದಲಾದ ರೂಪಕಗಳ ಕೊನೆಯಲ್ಲಿ ನಟನು ಬಂದು ಮಾಡುವ ಮಂಗಳಾಶಂಸನೆಯ ಶ್ಲೋಕ,—ಶುಭದ ಕೋರಿಕೆ : ಪೂಜ್ಯರು ಅನುಗ್ರಹಿಸುವುದಾದರೆ ಈ ಭರತವಾಕ್ಯವು ನೆರವೇರಿಸಲ್ಪಡಲಿ (ಜಾಳಂಧ. ೦೦೩-೨೮) ; ಭರತವಾಕ್ಯಮೀ ಐಹಿಕದ ನಾಟಕಕೆ ತಾನಾದೊಡಂ ವ್ಯುತ್ಕ್ರಮ ತಾಂ ನಾಂದಿಯೈಸಲೆ (ಶ್ರೀರಾಮಾ. ೦೦೯-೨೦೪) ; ಭರತವಾಕ್ಯದೊಂದಿಗೆ ನಾಟಕ ಮುಗಿಯುತ್ತದೆ (ರಂಗಸಾ. ೬೩). ೨. (ಅಲಂ) ಕೊನೆಯ ಮಾತು : ಅವರು ಈ ವಿಷಯಕ್ಕೆ ಸಂಬಂಧಪಟ್ಟಂತೆ ಭರತವಾಕ್ಯ ಹೇಳಿಬಿಟ್ಟರು (ರೂಢಿ). [ಸಂ.]

**ಭರತವಿದ್ಯೆ** (ನಾ). ನಾಟ್ಯವಿದ್ಯೆ ; ನಾಟ್ಯಕಲೆ : ಆತನ ಮಹಿಮೆಯಂ ಪೇಳ್ವಡೆ . . . ಸಕಳಭರತವಿದ್ಯಾಹೃದ್ಯ ಗಂಭೀರಭಾವೋವಿಪುಳವಿಜಯಲಕ್ಷ್ಮೀವಲ್ಲಭೋ ವಿಷ್ಣುದೇವಃ (ಎಕ. V (R), ತಿರುಪು. ೪೦-೦೦ ; 1180); ಭರತವಿದ್ಯಾವಿಷಯದಲಿ ಪರಿಚರಿಯತನ ನಮಗಲ್ಲದೀ ಸಂಗರದ ಸಾರಥಿತನವ ಮಱಿದೆವು ಹಲವು ಕಾಲದಲಿ (ಕುಮಾರ. ೩-೪೦). [ಸಂ. ಭರತವಿದ್ಯಾ]

**ಭರತಶಾಸ್ತ್ರ** (ನಾ). =ಭರತವಿದ್ಯೆ : ಭಾವಂ ವಿಭಾವಮೆಸೆವನುಭಾವಂ . . . ಅಱಿಗೆ ಭರತಶಾಸ್ತ್ರಕ್ರಮದಿಂ (ಕಾವ್ಯಾವ. ೬೯೮) ; ಭರತಶಾಸ್ತ್ರಾಂಭೋಧಿಚಂದ್ರಂ . . . ಎಸೆದಂ (ಎಕ. II (R), ೪೪೪-೪೦ ; 1181) ; ಭರತಶಾಸ್ತ್ರದೊಳು ನಾಟಕದೊಳು . . . ನುಡಿದರು (ಭರತ. ೪೩-೭೮). [ಸಂ.]

**ಭರತಾಗಮ** (ನಾ). =ಭರತವಿದ್ಯೆ : ಭರತಾಗಮದೊಳ್ ಮೂವತ್ತೆರಡೆನೆ ನೆಗಟ್ದಂಗಹಾರಮುಂ (ಆದಿಪು. ೪-೨೯) ; ಭರತಾಗಮಲಕ್ಷ್ಮಿಗೆ ನಿಜಕರಣಮಳಂಕರಣಮಂಗಹಾರಂ ಹಾರಂ (ಶಂಪ್ರಕು. ೦೨-೦೬೯) ; ಪರಮಭರತಾಗಮೋಚಿತಪರಿವರ್ತನೆಯಿಂದೆ ನಾಟ್ಯದಂತರ್ಭೇದದ ಪರಿಯಂ ಪೇಳು (ರಾಸ್ವರಂ. ೦-೩೪). [ಸಂ.]

**ಭರತಾತ್ಮಜ** (ನಾ). ಭಾರತದಲ್ಲಿ ಹುಟ್ಟಿದವನು ; ಭಾರತೀಯ : ಸೋದರರೆಂಬಾ ಭಾವನೆ ಸರ್ವರೊಳಿರಿಸು. ಭರತಾತ್ಮಜನೆನ್ನಿಸು, ಕಂದಾ ! (ಕಬಿಪು. ೭-೪). [ಸಂ.]

**ಭರತಾನ್ವಯ** (ನಾ). ಭರತವಂಶ : ಸತ್ಯನೆಂಬವಂಗೆ ಭರತನೆಂಬವನಾದಂ ಆತನಿಂ ಬಱಿಕ ಭರತಾನ್ವಯಮೆಂಬುದಾದುದು (ಗದಾಯು. ೩-೪೪ ವ). [ಸಂ.]

**ಭರತಾನ್ವಾಯ** (ನಾ). = ಭರತಾನ್ವಯ : ಭರತಾನ್ವಾಯದೊಳಂದಿನಿಂದುವರೆಗಂ ಸಾಪತ್ನರೊಳ್ ಬದ್ಧಮತ್ಸರದಿಂದೆಮ್ಮನಕಾರಣಂ ಕದಡಿದ್ಯೆ (ಗದಾಯು. ೭-೪). [ <ಸಂ. ಭರತಾನ್ವಯ ]

**ಭರತಿ**, ಬರತ$_1$, ಭರತ$_2$, ಭರತೆ, ಭರ್ತಿ(ಗು). ೧. ತುಂಬಿದ; ಸಂಪೂರ್ಣವಾದ: ಅಲ್ಲಿ ತೊಗಲ ಬಾವಲೀ ಚೀರತಾವ ಭರತಿ ಹಗಲಿನೊಳಗ (ಗಂಗಾತ. ೯೬-೦೪). ೨. ಅಧಿಕವಾದ; ಹೆಚ್ಚಾದ: ಒಂದುಸಲ ಆಕೆಗೆ ಭರತಿ ನೆಗಡಿ ಬಂದು ಬಿಟ್ಟಿತು (ದೀಕ್ಷ. ೦೬). ೩. ಇಡಿಯಾದ; ಪೂರಾ. ೪. ಮಾಜಭೂತಾದ; ಕಟ್ಟುಮಸ್ತಾದ. (ನಾ). ೫. ಸಮುದ್ರ ಅಥವಾ ನದಿಯಲ್ಲಿ ಏಳುವ ಅಲೆಗಳ ಉಬ್ಬರ: ಭರತಿ ಅಂದರೆ ಏರುವುದು ಅಥವಾ ಉಕ್ಕುವುದು; ಓಹೋಟಿ ಅಂದರೆ ಇಳಿಯುವುದು (ಮುಂಬಯಿ. ೬-೪೬೨); ಚಿನ್ನಿಸಕ್ಕರೆಯು ಬೆರೆಯೆ ಭರತಿ ಉಕ್ಕುವುದು ಕ್ಷೀರಸಿಂಧು (ಸೂರ್ಯಶಾ. ೪೮-೦೦); ನಮ್ಮ ಸಾಹೇಬದಂಪತಿಗಳಿಗೆ ಯಾರೋ ಭರತಿ ಬರುವುದು ಎರಡು ಗಂಟೆಗೆ ಎಂದು ಹೇಳಿದ್ದರಿಂದ ಅವರು ಅದನ್ನೇ ನೆಚ್ಚಿಕೊಂಡಿದ್ದರು (ಸ್ವತಿತ. ೯೬೮). ೬. ಹೆಚ್ಚಳ; ಅತಿಶಯ; ಆಧಿಕ್ಯ: ದುಃಖದ ಭರತಿ ಇಳಿಯುತ್ತ ಬಂತು (ಅಶೋಕ. ೦೯೬). ೭. ಜೋರು; ಭರಾಟೆ: ಸವಣೂರ ನವಾಬನು ಹೋಗುತ್ತಿದ್ದಾಗ ಜಾತ್ರೆಯು ವೈಳಿತವಾಗಿ ಆಗುತ್ತಿತ್ತು; ಆದರೆ ಈಗ ಅದರ ಭರತಿಯು ಮೊದಲಿನಷ್ಟು ಇರುವುದಿಲ್ಲ (ಕಶಾಗೆ. ೪೦೬); ಜಾತ್ರೆ ಮುಗಿದು ಶಿವರಾತ್ರಿಯಾಯ್ತು ಶ್ರಾವಣಕೆ ತುಂಬು ಭರತಿ (ಪಂಶು. ೪೩-೨೦). ೮. (ತೆರಪಾದ ಸ್ಥಳವನ್ನು) ತುಂಬುವುದು: ಸ್ಥಳಗಳ ಭರತಿಯ ಕಾಲಕ್ಕೆ ಅವಳು ನನಗೆ ಪ್ರತಿಸ್ಪರ್ಧಿಯಾಗಿ ಬರುವಳೆಂದು ನಾನು ಎಣಿಸಿರಲಿಲ್ಲ (ಹೀಪಂತ. ೨೬೬); ನಾನು ನನ್ನ ಶಾಲೆಯ ಭರತಿಗಾಗಿಯೇ ಎಂದು ನಾಲ್ಕಾರು ಮಕ್ಕಳನ್ನು ಒಟ್ಟುಮಾಡಿ ತಂದದ್ದುಂಟು (ಸ್ವಸ್ವಪೂ. ೬). **ಬರತ$_1$**: ೫. ನೀರು ಅಷ್ಟೊಂದು ಇಳಿದಿರಲಿಲ್ಲ . . . ಬರತದ ನೀರೂ ಸೇರಿರಬೇಕು (ಮರಕು. ೪೨); ಈ ಖಾರಿಯು ಮುನ್ನೂರು ನಾನ್ನೂರು ಗಜ ಉದ್ದಗಲವಾದ ಹರಹು. ಬರತದ ನೀರಿಗೆ ತುಂಬಿದ ಜಲಾಶಯವಾಗುತ್ತದೆ (ಜಾರುದಾ. ೪೦). **ಭರತ$_2$**: ೫. ಓಟ ಭರತದ ಭರವಸದ ಹೊಯ್ಲಾಟದುರು ಲಹರಿಗಳ. . .ರೌದ್ರದಿಂದ ಸಮುದ್ರ ರಂಜಿಸಿತು (ತೊರದಾ. ೯-೦೨-೨); ನಾವಿಕರು ದಿಗ್ನಿರೂಪಣೆ ಮಾಡಲಸಮರ್ಥರಾಗಿ ಭರತವನ್ನು (Tide) ಬಿಟ್ಟು ಬಹಳ ದೂರ ಹೊರಟು ಹೋಗಿದ್ದರು (ಕಶಾಕಂ. ೧). **ಭರತೆ**: ೫. ಒಂದೊಂದು ಕ್ರಾಂತಿಯು ಕಾವ್ಯೋದಧಿಯಲ್ಲಿಯ ಭರತೆಯಿದ್ದಂತೆ (ಪಶ್ಯಕಾ. ೨೬). **ಭರ್ತಿ**: ೩. ಅಬ್ಬಾ ಚಂಡಿಯೇ! ಭರ್ತಿ ಒಂದು ತೆಂಗಿನಮರದಷ್ಟು ಎತ್ತರವಿರುವ ಹಾಗೆ ಕಾಣಿಸಿದಳು (ಸ್ವಸ್ವಪೂ. ೯೨). ೪. ಏನು ಗಟ್ಟಿಮುಟ್ಟಾಗಿದ್ದಾನೆ! ತುಂಬು ಗಲ್ಲ, ಬಾರೀಕ ಮೀಸೆ, ಭರ್ತಿ ಆಳು, ನನಗಂತೂ ಸುಬ್ಬನೇ ಏಂದಂತಾಯಿತು (ಹೂಸ್ಪ. ೭೯). ೮. ಸೈನ್ಯಕ್ಕೆ ಭರ್ತಿಯ ಕೆಲಸ ಪ್ರಾರಂಭವಾಯಿತು (ಕೂಡಿ). ೯. ರಂಗು; ಏರಿಕೆ: ಆಟ ಒಳ್ಳೆ ಭರ್ತಿಗೆ ಬಂದಾಗ ಅಳಲಿಕ್ಕ ಹತ್ತಿದಿ (ಅಮೂಶಿ. ೮೪).

**ಭರತ ಇಳಿತ** = ಸಮುದ್ರದ ಉಬ್ಬರ ಮತ್ತು ಇಳಿತ: (೯). **ಭರತವೇಳು** = ಸಮುದ್ರವು ಉಬ್ಬರಗೊಳ್ಳು. — ಉಕ್ಕೇರು: ಭರತಚಕ್ರಿಯ ಪುತ್ರರಲ್ಲವೆ ನುಡಿದರು ಭರತವೆದ್ದಂತೆ ಕ್ಷೀರಾಬ್ಧಿ (ಶರತ. ೯೪-೬೮). **ಭರತಿ ಆಗು, ಭರ್ತಿಯಾಗು** = ಪೂರ್ಣವಾಗು; ತುಂಬು: ಒಂದು ಗೋಡೆಗೆ ಹಚ್ಚಿಟ್ಟಿದ್ದ ಭಾರಿ ಸೆಲ್ಫು ಫಲಾಹಾರದ ಡಬ್ಬಿಗಳಿಂದ ಭರತಿ ಆಗಿತ್ತು (ವೈಶಿ. ೦೦); ಉತ್ತರಕಡೆ – ಘೋಲರ – ಎಂಬ ಬಂದರುಪಟ್ಟದಿಂದ ಹಡಗುಗಳಿಗೆ ವಿಶೇಷವಾಗಿ ಹತ್ತಿಯು ಭರ್ತಿಯಾಗುತ್ತದೆ (ಭೂಗೋಳ. ೬೯); ರಾಯರ ಮನೆಯ ದೊಡ್ಡ ಹಾಲೆಲ್ಲಾ ಜನರಿಂದ ಭರ್ತಿಯಾಗಿತ್ತು (ರಾಯಕ. ೩೨). **ಭರತಿ ಓಹಟ, ಭರತಿಓಹೋಟ** = ಭರತ ಇಳಿತ: ಭರತಿ ಓಹಟಿಯ, ಕ್ಷಯವ ವೃದ್ಧಿಯನು ಅರಿಯದೆನ್ನ ಓಗ್ಗು (ಅರಳು. ೪೯೨-೦೪); ಸಮುದ್ರದ ನೀರು ಸ್ಥಿರವಾಗಿ ನಿಲ್ಲುವುದಿಲ್ಲ. ಸರ್ವಕಾಲವೂ ಹಿಂದಕ್ಕೆ ಮುಂದಕ್ಕೆ ಹೊಯಿದಾಡುತ್ತದೆ. ಇದಕ್ಕೆ ಭರತಿ ಓಹೋಟಗಳೆಂತಲೂ ಏರಿಳಿತಗಳೆಂತಲೂ ಅನ್ನುವರು (ಮುಂಬಯಿ. ೬-೪೬೨). **ಭರತಿ ಮಾಡು, ಭರ್ತಿ ಮಾಡು** = ತುಂಬು; ಪೂರ್ಣಮಾಡು: ಹುಂಡಿಗಳು ತೋರಿಸಿ ಲಾಗು ಮಾಡುವುದು ಮತ್ತು ಭರತಿ ಮಾಡುವುದು (ಮುಂಬಪ್ಯಾ. ೨೬೯); ಹೀಗೆ ಹೊರ ಹೋದ ನೀರಿನ ಬದಲಿಗೆ ಬೇರೆ ನೀರನ್ನು ಆಗಾಗ ಭರ್ತಿ ಮಾಡುತ್ತಿರಬೇಕು (ಆದುಗ. ೬೬); ರಾಜಾದಾಯವನ್ನು ಹೆಚ್ಚಿಸಿ ಬರಿದಾಗಿದ್ದ ಬೊಕ್ಕಸವನ್ನು ಭರ್ತಿ ಮಾಡಿದನು (ಕೃದೇವ. ೦೨). **ಭರತಿ ಹಾಕು** = ತುಂಬು; ಭರ್ತಿ ಮಾಡು: ನಮಗೂ ನಿಮಗೂ ನಡುವೆ ಬಿದ್ದಿರುವ ಈ ಕೊರಕಲಕ್ಕೆ ಭರತಿ ಹಾಕುವಂತಾಗಬಹುದು (ಸಂಸ್ಕಾರ. ೨ ಒಳಪುಟ). [←ಹಿಂ. ಮರಾ. ಭರತೀ]

**ಭರತೆ** 'ಭರತಿ' ನೋ.

**ಭರತೋರ್ವಿ** (ನಾ). = ಭರತಕ್ಷೇತ್ರ: ಅವ್ವನೆಯಂ ತಜ್ಜನಚಕ್ರವರ್ತಿ ಜಿನನಾಥಂ ಷೋಡಶಂ ಧರ್ಮಚಕ್ರನಿಯುಕ್ತಂ ಭರತೋರ್ವಿಗಿಾತು ಸಲೆ ನೋಂತಂ ಶಾಂತಿತೀರ್ಥೇಶ್ವರಂ (ಶಾಂತಿಪು. ೦.೦೬). [ಸಂ. ಭರತೋರ್ವೀ]

**ಭರದಂಡು**, ಬರ್ದಂಡು, ಭರದಾಂಡ್, ಭರದಾಂಡು, ಭರ್ದಂಡು (ಗು). ೧. ಭರದಿಂದ; ಪೂರ್ಣವೇಗದಿಂದ. ೨. (ಅಲಂ) ಅತಿಶಯವಾದ. (ನಾ). ೩. ಬಹಳ ವೇಗದ ಓಟ; ರಭಸವಾದ ಓಟ: ರಥ್ಯಃ . . . ಭರದಂಡು ಕುದುರೆ (ಸಿದ್ಯಾಂತಿ. ೨೩೦). **ಬರ್ದಂಡು**: ೨. ಎಂಥಾ ಆಳು ಅಂತೀರೀ ? ಬರ್ದಂಡಾಳು ! ಅವರನ್ನ ಕಂಡ್ರೇ ಹುಲಿ ನಡುಗಬೇಕು (ಮಲಿಮ. ೪೦೦). ೩. ಗುಡ್ಡವಿಳಿದು ದೊಳ್ಳನೇನೊ ಬರ್ದಂಡು ಓಡಿದನು (ಮಲಿಮ. ೯೯೮). **ಭರದಾಂಡ್**: ೩. "ಧೋರಿತಕಂ—ಬಿರುನಡೆ. ಭರದಾಂಡ್" (ಸಿದ್ಯಾಂತಿ. ೨೩೦). **ಭರದಾಂಡು**: ೩. ಆ ಗುಂಪು ಭರದಾಂಡು ಬಿಟ್ಟುಕೊಂಡು ಹೊರಟುಹೋಯಿತು (ಸಪಿದಾ. II. ೮೩೪). **ಭರ್ದಂಡು**: ೩. ಭರ್ದಂಡು ಹೋಗಿ ಬಂದುಬಿಡ್ತೀನಿ, ಒಂದು ಎಲೆಡಕೆ ಹಾಕೋ ಹೊತ್ತಿನಲ್ಲಿ! (ಮಲಿಮ. ೬೬೬). [←ಮರಾ. ಭರದವಡ, ಭರದೌಡ]

**ಭರದಾಂಡ್** 'ಭರದಂಡು' ನೋ.

**ಭರದಾಂಡು** 'ಭರದಂಡು' ನೋ.

**ಭರದ್ವಾಜ** (ನಾ). ೧. ಒಂದು ಜಾತಿಯ ಹಕ್ಕಿ; ಹೆಗ್ಗಾರ: "ಹೆಗ್ಗಾರಂ ಭರದ್ವಾಜಮೆಂದೆನಿಕ್ಕುಂ" (ಮಂಗರಾ. ೩೦-೯); ಗಿಡಗಂ ಚಕೋರ ಸರಸ ಭರದ್ವಾಜಾಳಿಗಳ್ . . . ಚಾತಕಮಾವಿಕರ್ಣಂ ತತ್ತ್ರರುವ್ರಾತದೊಳ್ (ಹೊಂದಕಂ. ೯-೯೬); ಮರುದಿನಂ ಕೋಕಿಲ ಭರದ್ವಾಜ ಬರ್ಹಿಕೇಕಾ ಧ್ವನಿಗಳೊಡನೆ ಮೊಗದೋರುತಿರೆ. . . ಗುಹಂ ತರಿಸಿದನು ನಾವೆಯಂ (ಶ್ರೀರಾಮಾ. ೯೮-೩೪೯). ೨. ಒಬ್ಬ ಋಷಿಯ ಹೆಸರು: ಭರದ್ವಾಜಂ ದ್ರೋಣಂಗೆ ಕೃಪನ ತಂಗೆಯಪ್ಪ ಶಾರದ್ವತೆಯಂ ತಂದು ಮದುವೆಯಂ ಮಾಡಿದೊಡೆ (ಪಂಪಭಾ. ೨-೯೪ ವ); ಆ ಭರದ್ವಾಜನು ನಿಜೋನ್ನತವೈಭವದಿನಾ. . . ಸುರರ ಸುಖಾಭಿಲಾಷೆಯ ಬಿಡಿಸಿದನು ವಿವಿಧೋಪಚಾರದಲಿ (ತೊರದಾ. ೨-೬-೦೩); ವಿದ್ವತ್ಸಭಾವಲಯಮಂಜಿಯೆ ವಿರಚಿಸಿದಂ ಭರದ್ವಾಜಗೋತ್ರಭವನಣ್ಣಮಾಂಕನ ಸುತಂ (ಕೈಮಿಕಾ. ೦-೦೦). [ಸಂ.]

**ಭರಪೂರ** (ಅ). ೧. ಸಂಪೂರ್ಣವಾಗಿ; ಪೂರ್ತಿಯಾಗಿ: ಒಬ್ಬರ ಕಂಡರ ಒಬ್ಬರ ಮನಸು ಅಬ್ಬರ ತುಬ್ಬರ ಆಗತೈತಿ ಇಬ್ಬರ ಕೂಡಿ ಬದುಕಿನ ಹಬ್ಬ ಮಾಡಿಲ್ಲ ಭರಪೂರಾ (ಅರಳು. ೨೯೦ ೯); ಕರಡಿಗಳು ಚಳಿಗಾಲದ ಆರಂಭದಲ್ಲಿ ಒಮ್ಮೆ ಹೊಟ್ಟೆಯನ್ನು ಭರಪೂರ ತುಂಬಿಕೊಂಡು ಗವಿಯೊಳಗೆ ಹೋಗಿ ಬಿದ್ದವೆಂದರೆ ನಾಲ್ಕು ತಿಂಗಳು ಸ್ಥಳ ಬಿಟ್ಟು ಕದಲುವುದಿಲ್ಲ (ಮುಂಬಯಿ. ೩-೦೬೮). ೨. ಯಥೇಚ್ಛವಾಗಿ; ಬೇಕಾದಷ್ಟು: ಸುರೇಶ, ಸತೀಶ, ಕಿಶೋರರಿಗೆ ಭರಪೂರ ಅರಿವೆ-ಅಂಚಡಿ ಇದ್ದವು (ದೀಶಹ. II. ೨೦೪).

[←ಹಿಂ. ಮರಾ. ಭರ್‌ಪೂರ್]

**ಭರಭರ** (ನಾ). ಒಂದು ಅನುಕರಣ ಶಬ್ದ : ಅಪ್ಪಾ ಭರಭರ ಬಡಿಸು. ನಾನು ಪೋಲೀಸ ಕಚೇರಿಗೆ ಹೋಗಬೇಕು (ರಕ್ತರ್ಶ. ೨೯೦).

**ಭರಭರನೆ** (ಅ). ಒಂದು ಅನುಕರಣಾವ್ಯಯ; ಬಹಳ ವೇಗವಾಗಿ; ಬಹುಚುರುಕಾಗಿ : ಭರಭರನೆ ಹೋಗಿ ಭೈರವದೇವರ ಸಂಗಡ ಭೈರವಾಸ ಕೇಳಿದ (ಗಾದೆ). [ಭರಭರ + — ಅನೆ$_1$]

**ಭರಭರಾಟಿ, ಭರಭರಾಟೆ** (ನಾ). ೧. ಏರಾಟ ; ಏರಿಕೆ ; ಜೋರು : ಈ ಅವಧಿಯಲ್ಲಿ, ಹಿಂದುಸ್ಥಾನದಲ್ಲಿ ಮುಂಚಿನಿಂದಲೂ ಭರಭರಾಟಿಯಲ್ಲಿ ನಡೆಯುತ್ತ ಬಂದ ಅನೇಕ ಉದ್ಯೋಗಗಳು ನಾಶವಾದವು (ಮುಹಾದೋ. ೦೧); ವ್ಯವಸಾಯವು ಭರಭರಾಟಿಯಿಂದ ಬೆಳೆಯಿತು (ಕೊತಣ. ೭೧). ೨. ಸಡಗರ : ಕೃಷ್ಣಪ್ಪ ಭರಭರಾಟಿಯಿಂದ ಪೂರ್ತಿ ಸೂಟಿನಲ್ಲಿ ಬರುತ್ತಿದ್ದರು (ಕೆಂಮುಬಿ. ೫೬). ೩. ಆಧಿಕ್ಯ; ಹೆಚ್ಚಳ : ಹವೆಯ ಭರಭರಾಟಿಯು ಕಡಿಮೆಯಾಗತೊಡಗಿತು (ನಾಕಥ. ೩೮). **ಭರಭರಾಟೆ :** ೧. "ಭರಭರಾಟೆ= ಏರಿಕೆ" (ಜಾನಕೋ. ೨೫). [←ಮರಾ. ಭರಭರಾಟ]

**ಭರಭರಾಟೆ** 'ಭರಭರಾಟಿ' ನೋ.

**ಭರಭರಿ** (ನಾ). = ಭರಭರಾಟಿ ೧ : ಇಲ್ಲಿಯ ವ್ಯಾಪಾರವು ಒಳ್ಳೇ ಭರಭರಿಯಲ್ಲಿ ಇರುವುದರಿಂದಲೂ . . . ಇದೇ ಮೊದಲನೇ ಪಟ್ಟಣವಾಗಿರುತ್ತದೆ (ಮುಂಬಯಿ. ೬-೦೨೬). [ ← ಮರಾ. ಭರಭರ ]

**ಭರಭಾರ** (ನಾ). ರಕ್ಷಣೆಯ ಹೊರೆ; ಕಾಪಾಡುವ ಹೊಣೆಗಾರಿಕೆ : ತಂಗೆವಿರ ಭರಭಾರಕ್ಕಮುಡಿಸಿದ ಬಡತನಕ್ಕಮೆಡರ್ಗಮಳ್ಕದೆ ನೀಂ ಪೊತ್ತು ನಿತ್ತರಿಸುತ್ತುಮಿರೆ (ಶಾಂತಿಪು. ೪-೬೬ ವ); ಗುರುವೆ ಭರಭಾರವನು ಹೊಚಿಸಲು ಕರುಣವಿಲ್ಲವೆ ನಿನಗೆ (ಪ್ರಭುಲಿ. ೦೬-೬); ಎನ್ನ ಭರಭಾರ ನಿಮ್ಮದು ಹಾನಿವೃದ್ಧಿಯು ನಿಮ್ಮದು (ಸಿದ್ಧವ. ೨೪-೬). [ಸಂ.]

**ಭರಭಾರಿ** (ನಾ). ಪೋಷಣೆಯ ಭಾರವನ್ನು ಹೊತ್ತಿರುವುದು : ಬೆಳೆಸಿರಿಯ ಭರಭಾರಿ ತುಂಗಭದ್ರಾಸಂಘವೈರಿ . . . ಕಾವೇರಿ ಭೋರ್ಗರೆದೆಸೆವುದು (ಕಾವೆರಿ. ೨-೭). [ ಸಂ. ಭರಭಾರಿನ್ ]

**ಭರವ್** 'ಭರಮು' ನೋ.

**ಭರಮು, ಭರವ್, ಭರಾಮು** (ನಾ). ೧. ಮನ್ನಣೆ; ಗೌರವ : ನಮ್ಮ ಪತಾರದಲ್ಲಿ ಅಜ್ಜನ 'ಭರಮು' ದಿನೇ ದಿನೇ ಹೆಚ್ಚುತ್ತಿದ್ದರೂ ತಂದೆಯ ಕಾರ್ಯಕ್ಕೆ ನೆರವಾಗಿರಬೇಕು (ಜಾತಕ. ೪); ಮೂಮುಂಜಿ ತನ್ನ ಮಾತಿಗೆ ಭರಮು ಬಾರದೆಂದು ತಿಳಿದು, ಜತೆಗೆ ಬೇರೆ ಯಾರೋ ಗುರುತದವರನ್ನು ಕೊಟ್ಟಿದ್ದ (ಮುಗಿದುಮು. ೨೯೩). **ಭರವ್ :** ೧. ಸರಕಾರದವರು ಆಯಾಯ ಗ್ರಾಮುವಲ್ಲಿರುವ ವ್ಯಾಪಾರಿಗಳಲ್ಲಿ ಸ್ವಲ್ಪ 'ಭರವ್' ಉಳ್ಳವರನ್ನು ಆರಿಸಿ ಅವರ ಮುಖೇನ ಕೊರತೆಯ (ಹಸುಗೆಯ) ಸಾಮಾನುಗಳ ಬಟವಾಡೆ ಮಾಡಿಸುತ್ತಿದ್ದರು (ರಾತಂಪ್ರ. ೯). **ಭರಾಮು :** ೧. ಆ ಗ್ರಾಮದಲ್ಲಿ ತಹಶೀಲದಾರರ ಭರಾಮನ್ನು ನಾನು ಗಳಿಸಿಕೊಂಡೆ (ಮ್ಯೇವಸಾ. ೫೦); ನನ್ನ ಮಾತಿಗೊಂದು ಭರಾಮು ಬಂದೀತೆ ? (ಕಟುಕ. ೪೯). ೨. ಯೋಗ್ಯತೆ : ಭಟ್ಟರ ಭರಾಮಿಗೆ ಒಂದು ಮೊಲೆಯುರ ಬಟ್ಟುಂಬವನ್ನು ಅನ್ನ ಹಾಕಿ ಸಾಕಿಕೊಂಡು ಹೋಗುವುದು ಯೋಗ್ಯವಾದ ಮಾತಾಗಿತ್ತು (ಬಂಬಿನಾ. ೦೦).

**ಭರಾಮಿನವರು** = ಗೌರವಸ್ಥರು; ದೊಡ್ಡಮನುಷ್ಯರು : ಅಧ್ಯಕ್ಷರು ಬೇಕು. ನಿಜ, ಭರಾಮಿನವರು ಬೇಕೆಂಬುದೂ ನಿಜ (ಮುಗಿದುಮು. ೮೬).

[ ← ಮರಾ. ಭರವ್ ]

**ಭರವಶ** (ನಾ). ೧. ಬಹಳ ಚುರುಕು ; ಅತಿ ವೇಗ : ಸುಂದರಂ ಗಾಂಪನೆಬೆಳ್ಳಿರಲೆಗೆ ಗಜಮೂಡಿದವೋಲ್ ಭರವಶದಿಂ ಪೊಕ್ಕನೋಡಿ ಲಂಕಾಪುರಮಂ (ಬಂರಾಮಾ. ೯-೦೪೦) ; ಪುಣ್ಯದೇವತೆಯುರುತರದಿ ತದ್ಧಾತ್ರಿ ವೇಪದಿ ಬರಲು ಕಂಡಬಲೆ ಭರವಶದಿ ಕೊಂಡುಯ್ದು ತಪವಾಚರಿಪ ಮುನಿಗಳ ಸನ್ನಿಧಿಯೊಳೊಲಿದಿರಿಸಿ (ತುಳಸಂತ. ೫-೪೩). ೨. ಸ್ಪಷ್ಟ; ಖಚಿತ : ಹರನಯನ ಪೊನ್ನಿಗರ್ಗಂ ಭರವಶದಿಂ ಮೂವದಂ ಯಿದು ಖಂಡಾಗಮಾಗಲುಂ ಇರದೆ ಶರಾದ್ರಿ ಪೊನ್ನಿಗೆ ಭರವಶದಿಂ ತ್ರಿಳಿಯ ಪೇಳು ಗಣಿತ ವಿಳಾಸ (ಭಾಸ್ಕರ. ೦೯-೧). [ಸಂ.]

**ಭರವಸ, ಬರವಸ, ಭರವಸೆ, ಭರೋಸ**(ನಾ). ೧. ನಂಬಿಕೆ: ವಿಶ್ವಾಸ : ಕಂಬಿಸುಂ ಪೊತ್ತುನ್ನತೋತ್ಸುಕವೆತ್ತು ಭರವಸದಿಂ ನಡೆತರಲು (ಬಸವು. ೪೩-೨೬); ಕರುಣಾಕರ ನೀನೆಂಬುವುದೇತಕೊ ಭರವಸವಿಲ್ಲೆನಗೆ (ಪುರಂದ. ೨-೭೧ ಪಲ್ಲವಿ) ; ಭರವಸವಿಲ್ಲದ ಮಾತು ಕೇಳಿ ಬಂಡವಾಳ ಕಳಕೊಂಡ (ಗಾದೆ). ೨. ಅಪೇಕ್ಷೆ; ಆಕಾಂಕ್ಷೆ : ಅದಜಿಂ ನಿಮ್ಮಂ ಪರಿವರ್ತಿವೆರಸು ನೋಡುವ ಭರವಸದಿಂ ಪಾಂಡ್ಯದೇಶದಿಂದಂ ಬಂದೆಂ (ರಘಾಶಮ್ಮ. ೫-೦೬೦); ಪರಮಸಾಹಸನಾಗಿಯಿಂತಿಪ ಗಿರಿಯೊಳೆಮ್ಮಂ ನೋಡಲೆಂತ್ಯೆ ಭರವಸದೊಳೆಯ್ತಂದಿರಿ (ಬಸವು. ೨೦-೬). ೩. ಆಸರೆ : ಅವಲಂಬನೆ : ಅರಸನ ಸಭೆಯೊಳಗೆ ಕುಜಿತು ಆಡಲು ಬೇಡ ಸರಸ ನಿಂದೆಯಲಿ ಇರಬೇಡ ಒರ್ವರಲಿ ಭರವಸವು ಬೇಡ (ಸರ್ವಜ್ಞ. ೭೪೩). ೪. ರಭಸ ; ವೇಗ ; ಚುರುಕು : ಉಸುರ್ದ ಪಡಿಯಂ ಬೇಡಲೊಲ್ಲದೆ ಸಸಿನೆ ತನ್ನೊಡತಿಯ ಮನೆಗೆ ಭರವಸದೊಳೆಯ್ತಂದಿಂದುಮುಖಿಗಿಂತೆಂದಳಾ ದಾಸಿ (ಬಸವು. ೦೦-೨೦); ಗುರುಸುತನನೊಟ್ಟೈಸಿ ಶಲ್ಯನ ಭರವಸವ ನಿಲಿಸಿದನು (ಕುಮಾರವ್ಯಾ. ೫-೨೬); ಅಸುರಬಲ ವಾನರರ ಕುಸುರಿದಜಿಯಲು ಭರವಸದಿಂದ ಸಂಜೀವಿನಿಯ ತಂದು (ಪುರಂದ. ೨-೬೫-೩). **ಬರವಸ:** ೪. ದುರುಳಂ ಪ್ರಹಾರವರ್ಮಂ ಪರನೃಪತಿಯ ಕಯ್ಗೆ ಸಿಕ್ಕಿದಂ ರಾಜ್ಯಕ್ಕಾನರಸೆಂದು ವಿಕಟವರ್ಮಂ ಬರವಸದಿಂ ಪಟ್ಟಬದ್ಧನಾದಂ (ದಶಕು. ೨-೦೩೦). ೫. ಉದ್ದೇಶ : ಸಂಕಲ್ಪ : ಭರವಲ್ಯೆತಂದು ಶುಕ್ರಾಚಾರ್ಯರು ಕಾಣುತಿವಲವರುಮತಿಥಿಪೂಜೆಯ ಮಾಡಿ ನೀ ಬಂದ ಬರವಸವದೇನೆಂದು ಕೇಳಲ್ಕೆ (ತುರಂಗ. ೯-೦೦). **ಭರವಸೆ :** ೧. ಈಯೊಂದು ಭರವಸೆಯೊಳು ನಾವು ನಡೆದಂದು ನಮಗಾವ ಭಂಗವು ಇರದು (ಇಂತಾಪ. ೦೪೦-೯೨); ನನ್ನ ದುಃಖಕ್ಕೆ ಕಿವಿಗೊಟ್ಟು ಮರುಗಿದ್ದೀರಿ ಎಂಬ ಭರವಸೆಯಿಂದಲೇ ಬರೆಯುತ್ತಿದ್ದೇನೆ (ಕಮುನ. ೨೩೦). ೬. ಆಶ್ವಾಸನೆ : ನಿಮ್ಮಿಂದ ಸಹಾಯದ ಭರವಸೆ ಬೇಕು (ಮುಕಿದೆ. ೮೫). ೭. (?) : ಭೂಮಿಯ ಹೊಜೆಯನಿಳುಹುವೆನೆಂದು ಬಂದವನಜಿಸಿ ಕಾಂಬುವುದಿದಾವ ಭರವಸೆ ಕಾದ ಬರಹೇಳು (ಕೌಶಿಕಾ. ೨೭-೬). **ಭರೋಸ :** ೧. ನಾಯಕರಿಗೆ ನಿಮ್ಮ ಮಾತಿನ ಮ್ಯಾಲ ಸಂಪೂರ್ಣ ಭರೋಸಾ ಅದ (ಭಾಗ್ಯಶ್ರೀ. ೨೫); ಅವಂದ್ಯಾನ ನನಗ ಭರೋಸ ಇಲ್ಲ ತಗೀರಿ (ಪರಟಾ I. ೨೬೫).

**ಭರವಸೆ ಕೊಡು** = ಆಶ್ವಾಸನೆ ನೀಡು; ಮಾತು ಕೊಡು : ತಂದೆ ಭರವಸೆ ಕೊಟ್ಟರು (ಪತಟಾ. II. ೦೦೦೪); ಮಂಜೂರು ಮಾಡಿಸಿ ಬಿಡುತ್ತೇನೆ ಎಂದು ಭರವಸೆ ಕೊಟ್ಟು ಹೋದ (ಹಸುಹೂ. ೩೨೦). **ಭರವಸೆ ನೀಡು** = ಭರವಸೆ ಕೊಡು : ಆಗಾಗ ಸರ್ಕಾರದವರು ತಕ್ಕ. . . ಭರವಸೆ ನೀಡುತ್ತಿದ್ದರೂ ಸಮಸ್ಯೆ ಮಾತ್ರ ಎಂದಿನಂತೆ ಬಗೆಹರಿಯದೆ ನಿಂತಿದೆ (ಶಿಕ್ಷರ. ೭೬೬). **ಭರವಸೆಯಿಡು** = ನಂಬು; ವಿಶ್ವಾಸವಿಡು : ನಿನ್ನಲ್ಲಿ ಭರವಸೆಯಿಟ್ಟು ಒಂದು ಮಾತು ಹೇಳುತ್ತೇನೆ (ವಕಟಾ. ೬).

[ ← ಹಿಂ. ಭರೋಸಾ; ಮರಾ. ಭರಂವಸಾ, ಭರೋಸಾ ]

**ಭರವಸಿಕೆ** (ನಾ). ೧. ನಂಬಿಕೆ : ಗಿರಿಯ ತಜಿವರೆ ಶಕ್ರನಲ್ಲದೆ ನೆರೆದ ದಿವಿಜನಸಮೂಹ ಮಾಡುವ ಭರವಸಿಕೆ ತಾನೇನು (ಕುಮಾರವ್ಯಾ. ೩-೨೨); ಅಹಿತರಲಿ ಭಯವನು ಕಾಣದಣ್ಣನ ಭರವಸಿಕೆ ತಾನೆಲ್ಲಿಗೆ (ತೊರಟಾ. ೩-೮-೩೬). ೨. ಅಪೇಕ್ಷೆ; ಆಸೆ: ಧುರದ ಭರವಸಿಕೆಯೊಳ್ಳಾನಿಹೆನು (ತುರಂಗ. ೫೫-೪೧). ೩. ಚುರುಕು ; ವೇಗ : ಅರಿ ಶಿಬಿಂಡಿಸು ಕೈಚಳಕ ಕಾಹುರವಲೇ

ಲೇಸಾಯ್ತು ಬಲ್ಲಿನ ಭರವಸಿಕೆಯಹುದೆನುತ ಕೈಕೊಂಡೆಚ್ಚನಾ ದ್ರೋಣ (ಕುವ್ಯಾದ್ರೋ. ೨-೪೦). [ಭರವಸ + — ಇಕೆ]

**ಭರವಸಿಗ**, ಬರವಸಿಗೆ (ನಾ). ೧. ನಂಬಿಕೆಯನ್ನು ಇಟ್ಟುಕೊಂಡಿರುವವನು : ದೇವರೊಳ್ ಭರವಸಿಗನಂತೆ! ಕಾಂಬೆವು ದೇವರೀತನಂ ರಕ್ಷಿಸಲಿ! (ಗೊರೂರು. ೦೨-೩೦೩). ೨. ಕಾರ್ಯ ಮಾಡುವವನು ; ಕೆಲಸಗಾರ : "ಕ್ರಿಯಾವಾನ್, ಉದ್ಯುಕ್ತಃ —ಈ ೨ ಭರವಸಿಗಂ" (ಶಬ್ದ. ೬೩-೨೨೮); "ಭರವಸಿಗನುದ್ಯುಕ್ತನಕ್ಕು" (ಹುಂಗರಾ. ೬೮-೯). **ಬರವಸಿಗ** : ೧. ಬರವಸಿಗರೇ ನಮ್ಮನ್ನು ಸಾರ್ಥಕಪಡಿಸಿಕೊಳ್ಳಬೇಕೆಂದು ಪ್ರಾರ್ಥಿಸುವೆವು (ವಂಕ್ರಕ. ೦೨೩-೨೩). [ಭರವಸ + — ಇಗ]

**ಭರವಸೆ** 'ಭರವಸ' ನೋ.

**ಭರವಹನ** (ನಾ). ಭಾರವನ್ನು ಹೊರುವಿಕೆ : ಸಮರ್ಥಮಾಯ್ತು. . . ಭರವಹನಕ್ಕೆ ಮುಂದುವರಿದೀಯುಭಯಪ್ರವಹಸ್ತವೊಂದು (ವಶ್ವಸಂ. ೦-೩). [ಸಂ.]

**ಭರಷಣ**. ಬರಷಣ. ಬರ್ಷಣ (ನಾ). ಅಹಿತ; ಅಪಥ್ಯ : ಅವರು—ಶುದ್ಧ ನಾಸ್ತಿಕರು. ಹಳೆಯ ದೇವರೆಂದರೆ ಅವರಿಗೆ ಭರಷಣ (ಪಂಚ. ೬೩). **ಬರಷಣ** : ಇದೆಲ್ಲ ಶ್ಯಾಮರಾಯನಿಗೆ ಬರಷಣವೇ ಆಗಿತ್ತು (ದೀಕ್ಷ. II, ೦೦೦); ಅವರಿಗೆ ಈತನ ಹೊಸಮಾತುಗಳು ಬರಷಣವಾಗಿ ಆವರಿಂದ ಇವನ ಮೇಲೆ ಬಹಳ ಅತ್ಯಾಚಾರಗಳು ನಡೆಯಬಹುದೆಂದು ತೋರುತ್ತಿತ್ತು (ಕಾಳಂ. ೨೦). **ಬರ್ಷಣ** : ಲೆಕ್ಕಪತ್ರ ಕೇಶವನಿಗೆ ಬರ್ಷಣವಾಗಿತ್ತು (ಕಮಲ. ೬೪೦). [ ← ಹಿಂ. ಭರ್‌ಸನ್. / ಸಂ. ಭರ್ತ್ಸನ]

**ಭರಸಹ** (ನಾ). ಹೊರೆಯನ್ನು ತಾಳುವ ಸಾಮರ್ಥ್ಯವುಳ್ಳದು : ಅರಮೆ ಮತ್ತವೇಂ ಭರಸಹಂಗಳೊ ಜಂಘೆಗಳಾಂತುವೀ ಕಟೀಭಾರಮಂ (ಕಂಪ್ರಕ್ರ. ೩-೦೦೯). [ಸಂ.]

**ಭರಾಟೆ**, ಭರಾಟೆ (ನಾ). ೧. ವೇಗ; ರಭಸ; ಆತುರ : ಇನ್ನು ಗ್ರಂಥ ಕರ್ತರಲ್ಲಿರಡು ಜಾತಿ . . . ತವುಗನಿಸಿದ್ದನ್ನು ಬರೆಯುವ ಭರಾಟೆಯಲ್ಲಿ ತಮ್ಮ ಬಗ್ಗೆ ಇತರರಿಗೇನು ಎನಿಸುತ್ತದೆಂಬುದನ್ನು ಮರೆಯುವ ಇನ್ನೊಂದು (ಹುಚ್ಚು. ೬೩); ಓದಿನ ಭರಾಟೆಯಲ್ಲಿ ಬಿಡುವಿಲ್ಲದೆ ಬರೆಯುದಿರಬಹುದು. ಅಷ್ಟಕ್ಕೇ ನೀವು ಹೀಗೆಲ್ಲಾ ಆಲೋಚಿಸುತ್ತೀರಲ್ಲ ! (ಕುಸುಮ. ೦೯೬). ೨. ಹೆಚ್ಚಳ; ಅತಿಶಯ; ಸಮೃದ್ಧಿ : ಅವುಗಳ ದೃಶ್ಯ, ಸ್ಪರ್ಶ, ಗಂಧಗಳ ಭರಾಟೆಯಿಂದ ಪರವಶನಾದ ನನ್ನ ಅಡಿಗೆಯವನು (೯೮೩. ೦೯೬); ಆಗ ನಮ್ಮ ಹೊಲದಲ್ಲಿ ಸೊಪ್ಪಿನ ಕಡ್ಲೆ ಬಹಳ ಭರಾಟೆ ಯಾಗಿ ಬೆಳೆದಿತ್ತು (ವೃಕ್ಷ. ೬೬). **ಭರಾಟೆ**: ೧. ನನ್ನ ತಂಗಿಯರಿಗೆ ಓದಿನ ಭರಾಟೆಯಲ್ಲಿ ಮನೆಗೆಲಸಕ್ಕೆ ಬಿಡುವಾಗಲೊಲ್ಲದು (ಅಶಾಪಿ. ೦೪); ಸಂಜೆಯಲ್ಲಿ ಭರಾಟೆಯಿಂದ ಆಡಿದ ಮೇಲೆ ದಣಿವಾಗದೆ ಇರುತ್ತದೆಯೇ ? (ಶ್ಯಾಮಸ್ತೀ. ೦೯೪). ೩. ಜೋರು ; ಜರಬು : ಡೆವ್ಹುಟ ಕಮಿಷನರ್ ಗಾರ್ಡನ್ನನ ಅಡಳಿತವು ಭರಾಟೆಯಿಂದ ಸಾಗಿತು (ಶುರಾಜಿ. ೦೬೬); ಹೌದಯ್ಯ ಮಿತ್ರ ನನ್ನ ಭರಾಟೆಯ ಕಾಲದಲ್ಲಿ ನನ್ನನ್ನು ನೀನು ನೋಡಲಿಲ್ಲ (ಮರಿಣಾ. ೬೪); ಹಿಂದಿನ ಕೆಲಸದ ಭರಾಟೆ ಈಗಿಲ್ಲ (ಕುರಾಮು. ೦೦). [← ಮರಾ. ಭರಾಟಾ]

**ಭರಾಟೆ** 'ಭರಾಟೆ' ನೋ.

**ಭರಾಣ್ಮೌಲಿ** (ನಾ). ಚಂದ್ರಶೇಖರ ; ಶಿವ : ಚಕ್ರಧರನೇತ್ರವನವಿಕ್ರಮ ಭರಾಣ್ಮೌಲಿ . . . ವರಚನ್ನವೀರೇಶ ರಕ್ಷಿಸುವದು (ಮಾರ್ಪು. ೨೩-೦). [ಸಂ.]

**ಭರಾಭರಿ** 'ಬರಾಬರಿ$_1$' ನೋ.

**ಭರಾಭರಿಗೊಡು** (ಕ್ರಿ). ಓರಣವಾಗಿ ನಿಂತು ಮುಜರೆ ಮಾಡು : ವ್ಯವಸ್ಥೆಯಿಂದ ನಿಂತು ಗೌರವ ಸೂಚಿಸು : ಸೇತುಗಟ್ಟಾಗಿ ಭರಾಭರಿಗೊಟ್ಟು ಪದಾತಿಯು ಪದು ಗಜ ರಥಪಾ ಘೋತನಾಥನು ನೋಡುತ (ಶರತ. ೨೩-೩೯); ಪಟ್ಟಗದ್ದುಗೆಗಳ ಕೊಡಿಸಿ ಕುಳ್ಳಿರಲರ್ತಿಪಟ್ಟು ಚಕ್ರೇಶನೊತ್ತಿನೊಳು ನಿಟ್ಟಿಸಿ ಕೈಮುಗಿದೊಡನೆ ಭರಾಭರಿಗೊಟ್ಟು ನಿಂದುದು ಸುರಸೇನೆ (ಶರತ. ೩೪-೨೮). 'ಭಾರಿ ಮಾಡು' ಪರಾ. [ಭರಾಭರಿ (< ಬರಾಬರಿ$_1$) + ಕೊಡು$_1$]

**ಭರಾಮು** 'ಭರಮು' ನೋ.

**ಭರಾಯಿಸು**, ಬರಾಯಿಸು (ಕ್ರಿ). ಭರ್ತಿಮಾಡು; ತುಂಬು : ಪರೀಕ್ಷಾ ಬಂದ ಕಾಲಕ್ಕೆ ಎಲ್ಲಾ ಗೋಲೇ ಮಾಡಿ ಪೇಪರಿನಾಗ ಭರಾಯಿಸಿ! (ಕಮಲ. ೦೩೩). **ಬರಾಯಿಸು** : ಅವರ ಹೇಳಿಕೆಯಂತೆ ಅರ್ಜಿ ಬರಾಯಿಸಿ ಅವರ ಮೂಲಕವೇ ತಹಶೀಲ್ದಾರರಿಗೆ ಕಳುಹಿಸಿದನು (ಹಕ. ೬೦). [ಭರ್ಾ$_0$ (ಪ ← ಹಿಂ. ಭರಾಈ) + — ಇಸು$_3$]

**ಭರಿ** (ನಾ). ಆನೆಯ ಸೊಂಡಿಲು : ಲಿಂಗಪ್ರಾಣ ಪ್ರಾಣಲಿಂಗವಾದ ನಿರಂಗನಿರವು ಹೇಗಿರಬೇಕಂದಡೆ ಉಡಿಯೊಳಗಣ ಮಣಿಸರದಂತೆ . . . ಕರಿಯೊಳಗಣ ಭರಿಯಂತೆ ಮಣಿಯೊಳಗಣ ವಿವರವಂತೆ (ಪೋಲಿಪಾ. ೦೬೩-೬೦೬). [?]

**ಭರಿಕರ** (ನಾ). ಆನೆಯ ಸೊಂಡಿಲು : ಭರಿಕರ ಭರಿಕರದೊಳು ಕೊಂಡು ಕೊಂಡಿಲಿ ಶಿರ ಶಿರದೊಳು ತಾಗೆ ವೈರಿಗಳು ಪೊಣರ್ದವು ಮಾವಟಿಗರು ಮೇಲೆ ಶರವಾಳುಗಳೊಳು ಪೊಯ್ದಾಡೆ (ಪರಿಕ. ೬-೦೦೬). [ಭರಿ + ಕರ$_3$]

**ಭರಿಕೆಯ್**, ಬರಿಕೆಯ್, ಬರಿಕ್ಕೆ$_2$, ಭರಿಕ್ಕೆ (ನಾ). = ಭರಿಕರ : ನೀರಡಿಕೆ ನೆರೆದೊಳಗುದೋಜಿ ಬಾಯೊಳ್ ಭರಿಕೆಯ್ಯನಿಟ್ಟೊಡಲೊಳಗೆ ಪೂಜಿ ಪಾಜಿ ಬೆಂದ ಪುಷ್ಕರಮಂ ಭೋಂಕನೆ ತೆಗೆದು (೧೦೪. ೯-೨೭ ವ); ನಿಡಿದಪ್ಪ ಕದಳಿಯ ಕಂಬ ಪೊಡವಿಯನಿದಿರಿಜಿದಾನೆಯ ಭರಿಕೆ[ಪಾಠಾಂ. ಕ]ಯ್ಯ ಪಡಿಯೆನೆ ರಂಜಿಸಿತು (ಶ್ರೀಪಾ. ೬-೨೨); ಭರಿಕೆಯ್ಯೊಳಪಸಿ ಕುದುರೆಯ ಹಿಂಡುಹಿಂಡನಿಟ್ಟೊರಿಸಿ . . . ಹೊಡೆಕೆಂಡರಾಡುತಿರ್ದಂ ಗಜಾಸುರಂ ಸಂಗರದೊಳು (ತಂಕ್ರ. ೨೮-೨೩); ಇಂತಿದು ಭ [ಪಾಠಾಂ. ಬ] ರಿಕೆಯ್ಯನಾನದ ಮಹಾಗಜದಾನವನೋ . . . ಪೇಜಿನೆ ತೋಜಿದುದಾ ವರಾಹಕಂ (ಶಂಕಂ. ೯-೩). **ಬರಿಕೆಯ್** : ಬರಿಕೆಯ್ಗ [ಪಾಠಾಂ. ಬರಿಕ್ಕೆ]ಗ್ಗಳಂ ನೀಡಿ ಪಣ್ಣಾಯ್ದು ಲರ್ಗಳಂ ದಂತಿಗಳ್ಕಡುತಿರ್ಪುವು . . . ತಪೋವನದೊಳಾವಾಸವಾಗಿರ್ಪ ವರ್ಗೆ (ಕೃಪಾ. ೦೩-೨೦). **ಬರಿಕ್ಕೆ$_2$** : ಎಲವೊ ಸಾತ್ಯಕಿ . . . ಪೋಗೆನುತ ಪೆಡತಲೆಯನೊದೆದನು ನಿಂದು ಬರಿಕ್ಕೆ ಮುಜಿದ ಗಜದಂತೆ (ಕುವ್ಯಾದ್ರೋ. ೦೯-೨೦); ಇರದೆ ಕಿರಾತರಾರ್ದಿಸುವಿನು ಬರಿಕ್ಕೆ ಪರಿದಾರ್ಕನಿಂದೆ ಸಂಚರಿಸುವ ಮತ್ತವಾರಣಸಮೂಹವೊ (ಭರಪ. ೪-೯೪). **ಭರಿಕ್ಕೆ** : ಸದಮದ ಭರಿಕ್ಕೆಯೊಳಗೆ ಈರೇಳುಭುವನವನು ಒವಜಿ ಹಾಯ್ಕಿ ತಾನೆ ನಿಂದುದಲ್ಲಾ (ಚನ್ನವ. ೪. ೩೯೬-೦೩೩೨); ಕಳಚಿದನು ದಾಡೆಗಳ ಭರಿಕ್ಕೆಗಳನು ತುಂಡಿಸಿ ವಾಲಧಿಯ ಬರಸೆಳೆದು ಕೊಸೆಹಿದನಾನೆಗಳ (ಕುವ್ಯಾಗ. ೦-೩೮); ನೆಗಪಿ ಭರಿಕ್ಕೆಯೂಸಬ್ಬಾಂಬುಗಳಂ ಬರೆ ಪೀರ್ದು ಕರ್ಣಚಾಲನದಿನವಂ ಬೀಗೆ ಪರಿಯಿಪ ಮದಕರಿಗಳ್ಪಗೆಗೊಂಡೊಡನೊಡ್ಡಿ ನಿಂದುವೆರಡುಂ ಬಲದೊಳ್ (ರಾಜಶೇ. ೬-೬೦). [ಭರಿ + ಕೆಯ್$_2$]

**ಭರಿಕೆಯ್ಬಿಲ** (ನಾ). ಸೊಂಡಿಲಿನ ತೂತು,— ರಂಧ್ರ : ನೀಡಿದ ಭರಿಕೆಯ್ಬಿಲದೊಳ್ ಕಾದೊಡೆಯುಂ ಪೊಡೆದ ಬಾಣವಿಃಭರಮಸ್ತಕದೊಳ್ ಮೂಡಿದುವು (ಶಬಕಂ. ೩-೩೮). [ಭರಿಕೆಯ್ + ಬಿಲ]

**ಭರಿಕ್ಕೆ** 'ಭರಿಕೆಯ್' ನೋ.

**ಭರಿತ** (ಗು.) ೧. ತುಂಬಿರುವ; ಪೂರ್ಣವಾಗಿರುವ : ಸ್ಫುರಿಯಿಸದೆ ದರಸವಸನಾಂತರಂ . . . ಭರಿತಭ್ರೂಕುಟಿಕಲಪಾಗಿರದೆ ಮುಖಿಂ ಗಲ್ಲ ನಿಂತುವರಿಸೃಪಬಲಮಂ (ಕಬರಾ. ೩-೦೨೨) ; ಭರಿತ ನವಯೌವನಶ್ರೀ ತರುಣಿಯ ಕೇಳೀವಿಲಾಸಳ್ಳಿಕದ್ವಯುಮಂತಿರೆ . . . ಎಸೆದತ್ತು ಕೋವಿಮಳೆಯ ಕುಚಯುಗಗಳ (ಕಾಂತೀಶ್ವ. ೧೩-೦೯೨) ; ಭರಿತಸರಸಾನಂದಲೋಚನಶರಧಿ

ಮೇಲ್ವರಿದೊತ್ತಿ ಪಸರಿಸೆ (ಬಸವು. ೩೦–೬೦). ೨. ಪೋಷಿಸಲ್ಪಟ್ಟ; ರಕ್ಷಿಸಲ್ಪಟ್ಟ. ೩. ಭಾರವನ್ನು ಹೊತ್ತಿರುವ. ೪. ಹಸುರಾದ. (ನಾ). ೫. ತುಂಬಿರುವುದು; ಪರಿಪೂರ್ಣವಾಗಿರುವುದು: "ಆಚಿತಂ . . . ಭರಿತಂ, ಪೂರ್ಣಂ — ಈ ೯ ಸಂದಣಿ" (ಹಲಾಯು. ೧೦೬-೦೭); ಬಲ್ಸರಿಗಳ ಭರಿತಂ ಸರಿಗಳ ಕಲ್ಲೋಲಕುಲಂ ಸರಿಗಳ ಘೂರ್ಣಿತದಿಂದಂ ಶರನಿಧಿ ಕವಿದಂತೆ ಕಜ್ಜಿದುದಿಳೆಯೊಳ್ ವರ್ಷಂ (ಗಿರಿಳ. ೯-೩೦); ಧನಧಾನ್ಯ ಗೋಧನ ಸಂಪದಾದಿಗಳ್ ಭರಿತವಾಗಿಹವಾ ಮುನಿಪನಿಹ ಧರಣಿಯಲಿ (ತೊರವೆ. ೧-೩-೬೦). ೬. ಹಸುರಿನಿಂದ ಕೂಡಿದುದು: ಭರಿತವಹ ಪೆರ್ಗಾನು . . . ನೋಟಕೆ ಶರಧಿ ತಾನೆಂಬಂತೆ ಪೆರ್ಗಾನೆಸೆವುದು (ಮಹಾಬಿ. ೧೩-೬). [ಸಂ.]

**ಭರಿತಬೋನ** (ನಾ). ದೇವತಾಪ್ರಸಾದವೆಂದು ಸೇವಿಸುವ ಆಹಾರ,– ಪ್ರಸಾದ: ಭರಿತಭೋನ ಭರಿತಬೋನವೆಂದು ಭ್ರಮೆಗೊಂಡು ಭ್ರಮಿತರಾದಿರಿ ಲೋಕವೆಲ್ಲ ಭರಿತಬೋನವೆ ದಿಟವಾದರೆ ಮರ್ತ್ಯದಲ್ಲಿ ಸಾಯಲುಂಟೆ (ಅಪವಂ. ೨೪೯-೧೧೩೦). [ಭರಿತ + ಬೋನ$_1$]

**ಭರಿತಾರ್ಪಣ** (ನಾ). ಪರಿಪೂರ್ಣವಾದ ಸಮರ್ಪಣೆ; ಎಲ್ಲವನ್ನೂ ದೇವರಲ್ಲಿ ಅರ್ಪಿಸುವುದು: ಇಂತೀ ಭರಿತಾರ್ಪಣವನಂಗೀಕರಿಸಿದ ಸರ್ವವ್ಯವಧಾನಿಯ ಎಚ್ಚರಿಕೆಯು ಮುಟ್ಟು (ಸರ್ವವ. ೧೩೦- ೬೩೬): ಬಂದುದ ಸಾಕೆನ್ನದೆ ಬಾರದು ತಾಯೆನ್ನದೆ . . . ಲಿಂಗಕ್ಕೆ ಬಂದು ಸಂದುದ ಆನಂದದಿಂದ ಸ್ವೀಕರಿಸಿ ನಿಂದುದೆ ಭರಿತಾರ್ಪಣ (ಬಲೀಶ್ವ. ೧೪೨). [ಸಂ.]

**ಭರಿಸು** (ಕ್ರಿ). ೧. ತಾಳು; ಸಹಿಸು: ಯೌವನದಲ್ಲಿ ಬಹಳ ಕಷ್ಟವನ್ನು ಭರಿಸಲಾರದೆ ಕಾರ್ಖಾನೆಯಲ್ಲಿ ಸಿಗುವ ಸಣ್ಣ ಕೂಲಿಗೆ ಆಸೆಪಟ್ಟು ನಗರಕ್ಕೆ ತೆರಳಿದರು (ಅವ್ವಾವ. ೧೯); ಆ ಸಂತೋಷವನ್ನು ಭರಿಸಲಾಗದೆ, ಆ ಭಾವವನ್ನು ಭರಿಸಲಾಗದೆ . . . ಬಳುಕುತ್ತಿವೆ (ಬೆಂಕಿಬಾ. ೬೦). ೨. ಹೊರು; ವಹಿಸು; ನಿರ್ವಹಿಸು: ವಿಶ್ವಸತ್ತ್ವದ ಲಹರಿ ನಮ್ಮ ಹೊರಗೊಳಗುಗಳಲಿ ಸಂತತ ನೆರೆದು ಹರಿಯುತ್ತ ಭರಿಸುತಿರುವುದು ಬಾಳ (ಕುಂಕುಳ. ೨೨೩). ೩. ಹೊಂದು; ಪಡೆ: ನೂರಿಂಥ ಕಾಯ ಭರಿಸಿದರು ನಿನ್ನಂಥ ತಾಯಿ ಸಿಕ್ಕಾಳೇ? (ಅರಳು. ೪೩೪-೧೩). [<ಭರಣ$_1$ + – ಇಸು$_3$]

**ಭರೂಟಕ** (ನಾ). ಕರಿದ ಮಾಂಸ: "ತಾಳಿಸಿದಡಗು ಭರೂಟಕವೆಂಬುದು" (ಹಲಾಯು. ೩೪-೧೬೮). [ಸಂ.]

**ಭರೋಸ** 'ಭರವಸ' ನೋ.

**ಭರ್ಗ** (ನಾ). ೧. ಕಾಂತಿ; ಶೋಭೆ. ೨. ಶಿವ; ಪರಮೇಶ್ವರ: "ಈಶಾನಃ . . . ಭರ್ಗಃ, ಕೃತ್ತಿವಾಸಾಃ . . . ನೀಲಲೋಹಿತಃ — ಈ ೪೫ ಮಹಾದೇವರ ಪೆಸರ್" (ಹಲಾಯು. ೩-೧೨); ಆನೊಂದು ಯಾಗಮನೊಡರ್ಚಿದಪೆನಲ್ಲಿಯುಗ್ರಪೂಜೆಗೆ ಭರ್ಗನಂ ಬಿಜಯಂಗೆಯ್ಸಿ ಕೊಡಲ್ವೇಳ್ಪುದು (ಸಂಬಿರ. ೧೬-೨೨೦); ಪೂಜಾಗಾರದೊಳ್ ಪೂಜಿಸಿದನಮಮ ಸದ್ಭಕ್ತಿಯಿಂ ಭರ್ಗನಂ (ರಾಜಶೇ. ೧೨-೧೧೬). [ಸಂ.]

**ಭರ್ಚಿ** 'ಬರ್ಚಿ' ನೋ.

**ಭರ್ಜಕ** (ನಾ). ವಡೆ, ಚಕ್ಕುಲಿ, ಮಾಂಸ ಮೊದಲಾದುವನ್ನು ಕರಿದು, ಮಾರಿ ಜೀವಿಸುವವನು: ತೈಲಿಕರು ಹಂಚುರಿಯ ಮೂಲದಿ ಜೀವಿಸುವ ಭರ್ಜಕರು ಕಟುಕರು (ಬಿವೇಶ. ೮-೬೪). [ಸಂ.]

**ಭರ್ಜನ** (ನಾ). ೧. ಹುರಿಯುವುದು; ಬಾಡಿಸುವುದು. ೨. ಕರಿಯುವುದು: ಕ್ಷಾರತಪ್ತತೈಲಾವಸೇಚನಾಯಃಕುಂಭೀಪಾಕಾಂಬರೀಷಭರ್ಜನ [ವೈತರಣೀ ಮಜ್ಜನ] ಯಂತ್ರನಿಷ್ಪೀಡನಾದಿಗಳಿಂ ನಾರಕರ್ಗೆ ಸಂಕ್ಲಿಷ್ಟಾಸುರರ್ ದುಃಖಮಂ ಪುಟ್ಟಿಸಿದೊಡಂ (ತತ್ತ್ವಸೂ. ೧೨೩). ೩. ಹುರಿಯುವ ಓಡು.– ಹಂಚು. ೪. ನಾಶಮಾಡುವುದು; 'ಭರ್ಜಿಸು' ಪರಾ. [ಸಂ.]

**ಭರ್ಜರಿ** (ಗು). ೧. ಸಂಪೂರ್ಣವಾಗಿ ಜರಿಯಿಂದ ಕೂಡಿದ: ಸರಸಿಜಾನನೆ ಕುಚಭರದಿಂ ಜಾರುವ ಭರ್ಜರಿ ಶೆರಗಂ ಸೇರಿಸಿ ತನ್ನ ವರಜಾಣತನವ ತೋರಿ (ಸೌಗಂಧಿ. ೯೩-೩). ೨. ಶ್ರೇಷ್ಠವಾದ; ಭಾರಿ: ರಾಮಮಂದಿರದಲ್ಲಂತೂ ಭರ್ಜರಿ ಕಚೇರಿಗಳಾಗುತ್ತಿದ್ದವು (ರಾಗಿಣಿ. ೯೬); ಭರ್ಜರಿ ವಸ್ತ್ರಗಳನ್ನು ಉಟ್ಟುಕೊಂಡು ಬಂದ ಹುಡುಗಿಯರು ಆ ದಿನ ಅಪೂರ್ವವಾಗಿ ಶೋಭಿಸಿದರು (ರಂಗರೋ. ೧೧೪). (ನಾ). ೩. ಅದ್ದೂರಿ; ಆಡಂಬರ; ಜೋರು: ಭರ್ಜರಿಯಾಗಿ ಮುಗಿದ ಮದುವೆ ಬೀಗರಲ್ಲಿ ಬಹಳ ತೃಪ್ತಿಯನ್ನುಂಟುಮಾಡಿತು (ಮಣ್ಣಿನ. ೧೩); ಯಾರು ಯಾರಲ್ಲಿಗೇ ಹೋಗಲಿ–ಅತಿಥಿದೇವರಿಗೆ ಆಗತಕ್ಕ ಅನನ್ಯ ಉಪಚಾರಗಳು ಭರ್ಜರಿಯಿಂದ ನಡೆಯುತ್ತಿದ್ದವು (ಕಂಬಹು. ೨). [←ಮರಾ. ಭರ್ಜರೀ]

**ಭರ್ಜಿ** 'ಬರ್ಜಿ' ನೋ.

**ಭರ್ಜಿಸು** (ಕ್ರಿ). ನಾಶಮಾಡು; ಧ್ವಂಸಗೊಳಿಸು: ದುಷ್ಟತಾರಕನಂ ಭರ್ಜಿಸಿದೀಶ್ವರನ ಕುಮಾರಕನಂ . . . ತುತಿಪೆಂ (ಉದ್ಭಟಕಾ. ೧-೧೧).
[ಭರ್ಜನ + – ಇಸು$_3$]

**ಭರ್ತ$_1$** (ನಾ). ನಾಟ್ಯ; ಅಭಿನಯ: 'ಭರ್ತಶಾಸ್ತ್ರ' ಪರಾ. [<ಸಂ. ಭರತ]

**ಭರ್ತ$_2$** (ನಾ). ೧. ಗಂಡ; ಪತಿ: "ಕಾಂತಃ . . . ಭರ್ತಾ . . . ಅನುಕಃ — ಈ ೧೪ ಗಂಡಂ" (ಹಲಾಯು. ೯೨-೩೪೩); ಭರ್ತನ್ಯೆ [ಪಾಠಾಂ. ಕರ್ತನೆ] ತರೆ ಕಾಣುಂತಾ ಸತಿ ಕೂರ್ತಡಿಗಳಂ ಕರ್ಚೆ (ಬಸವು. ೩೦-೦೩); ವಧುಗಳಿಗೆ ಅಂದು ಪ್ರಾಣವಷ್ಟೆ ಪ್ರಿಯರಾದ ಭರ್ತ- ಭ್ರಾತೃ ಇಬ್ಬರೂ ದೊರಕಿದರು (ಶಾಂತಲಾ. ೧೧೧). ೨. ಒಡೆಯ; ಪಾಲಕ; ಪೋಷಕ: "ಭರ್ತ (ಭರ್ತಾ)_ ಭರ್ತೃ – ರಕ್ಷಕ" (ಕರ್ನಾಕೋ. ೩೩); ಸರ್ವಕ್ಕೆ ಭರ್ತನು ಹರ್ತನುಂ ಪರಮೇಶನಲ್ಲದೆ ಭರ್ತ ಬೇಱುಂಟೇ (ಬಸವು. ೩೪-೮). [ಸಂ. ಭರ್ತೃ]

**ಭರ್ತಶಾಸ್ತ್ರ** (ನಾ). ನಾಟ್ಯವಿದ್ಯೆ; ನಾಟ್ಯಕಲೆ: ನರ್ತಕಿಯರು ನಾಟ್ಯಶಿಕ್ಷಕ ಗಾಯಕ ಭರ್ತಶಾಸ್ತ್ರಾದಿ ಪರಿಣತರು (ಅಬ್ಬಲೂ. ೩-೦೨೬).
[ಭರ್ತ$_1$ + ಶಾಸ್ತ್ರ]

**ಭರ್ತಾರ** (ನಾ). ೧. ಗಂಡ; ಪತಿ: ಆಂ ಮುನ್ನಿನ ಜನ್ಮದೊಳ್ ಮನೋವೇಗೆಯೆನೆಂಬ ವಿದ್ಯಾಧರಿ ಎನ್ನಂದಿನ ಭರ್ತಾರಂ ಮಣಿಚೂಳನೆಂಬೊಂ ವಿದ್ಯಾಧರಂ (ವಡ್ಡಾರಾ. ೩೩-೨); ಆಕೆಯು ಭರ್ತಾರಂ ನಿಜಮಂದಿರಕ್ಕೆ ಬಂದು (ಕಂಠೀರವ. ೬-೧೨೩ ವ); ಸಾರಿದಳು ಸರಸಿಜವದನೆ ಭರ್ತಾರನನು (ಭಾವ್ಯಾಳ. ೦೯-೬೮). ೨. ಒಡೆಯ; ಯಜಮಾನ: ಭರ್ತಾರಂ ನೀನೆ ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೯೯). [ಸಂ. ಭರ್ತೃ]

**ಭರ್ತಾರಿ** (ನಾ). ಹೆಂಡತಿ: ಎನ್ನ ಭರ್ತಾರಿಯು ಮಾವಿನ ಪಣ್ಣನೇಕೆ ಬಯಸಿದಳ್ (ಧರ್ಮಾಮೃ. ೮-೪೩). [ಭರ್ತಾರ + –ಇ$_2$]

**ಭರ್ತಿ** 'ಭರತಿ' ನೋ.

**ಭರ್ತೃ** (ನಾ). ೧. ಗಂಡ; ಪತಿ: ಪ್ರಮದೋತ್ತಮೆಗಾಣ್ಮನ ದೆಯ್ವಮೆ ದೆಯ್ವಂ...ಭರ್ತೃವ ತತ್ತ್ವಮೆ ತತ್ತ್ವಂ (ಶಾಂತಿಪು. ೯-೧೯); ಆವಿರೆಯಿರೆ ಭರ್ತೃತಪಃಶ್ರೀವಧುಗೆಳಸಿರ್ದಂ (ಪುಷ್ಪದ. ೧೩-೯೪); ಪಲತೆಱದ ಭರ್ತೃದೈನ್ಯವ ನೋಡಿ ಪೆಣ್ನುಡಿದುದೂ (ಜಗ್ರಿಕಾ. ೪-೩೭). ೨. ಒಡೆಯ; ಸ್ವಾಮಿ; ಯಜಮಾನ: 'ಭರ್ತೃನಿಂದಕ' ಪರಾ. ೩. ರಕ್ಷಕ; ಪಾಲಕ. [ಸಂ.]

**ಭರ್ತೃದಾರಕ** (ನಾ). ೧. ದೊರೆಯ ಮಗ; ರಾಜಪುತ್ರ. ೨. [ಕಾವ್ಯಮೀ] ನಾಟಕಾದಿಗಳಲ್ಲಿ ರಾಜಸೇವಕರು ರಾಜಪುತ್ರನನ್ನು ಸಂಬೋಧಿಸುವಾಗ ಬಳಸುವ ಶಬ್ದ: "ನಾಟ್ಯದಲ್ಲಿಯರಸಿಯರಂ ದೇವಿಯೆಂಬುದು ಕುಮಾರನು ಭರ್ತೃದಾರಕನೆಂಬುದು" (ಹಲಾಯು. ೦೭-೯೮): "ನರ್ತನದ ಸತಿ ದೇವಿಯಕ್ಕುಮಾ ನಂದನಂ ಭರ್ತೃದಾರಕನಕ್ಕುಂ" (ಮಂಗರಾ. ೨೩-೧೦). [ಸಂ.]

**ಭರ್ತೃದಾರಿಕೆ** (ನಾ). ೧. ಅರಸನ ಮಗಳು; ರಾಜಪುತ್ರಿ. ೨. [ಕಾವ್ಯಮೀ] ನಾಟಕಾದಿಗಳಲ್ಲಿ ಸೇವಕರು ರಾಜನ ಮಗಳನ್ನು

ಸಂಬೋಧಿಸುವಾಗ ಬಳಸುವ ಶಬ್ದ : "ನಂದನಂ ಭರ್ತೃದಾರಕನಕ್ಕು ಮಲ್ಲಿಯ ಸಹೋದರಿ ಭರ್ತೃದಾರಿಕೆಯಕ್ಕು" (ಮಂಗರಾ. ೨೫-೦೦); "ಭರ್ತೃದಾರಿಕಾ, ತತ್ಸುತಾ ಅಂತಾ ಅರಸಿನ ಮಗಳ ಹೆಸರು"(ಸಿದ್ಧಾಂತಿ. ೯೦)· [ಸಂ. ಭರ್ತೃದಾರಿಕಾ]

**ಭರ್ತೃನಿಂದಕ**(ನಾ). ಒಡೆಯನನ್ನು ದೂಷಿಸುವವನು; ಸ್ವಾಮಿದ್ರೋಹಿ: ದಳಿತಮರ್ಯಾದನ ಕೃತಘ್ನನ ಭರ್ತೃನಿಂದಕನ . . . ವಿಳಿಳವ್ರತನ ಲೋಕಾವಳಿಗಳಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ (ಕುಮಾ.ವ್ಯಾ. ೮-೩೩). [ಸಂ.]

**ಭರ್ತ್ಸನ** (ನಾ). ೧. ಹೆದರಿಸುವುದು ; ಬೆದರಿಸುವುದು. ೨. ಹೆದರಿಕೆ ; ಭಯ ೩. ತೆಗಳಿಕೆ; ನಿಂದೆ; ಬಯ್ಗುಳ : "ಭರ್ತ್ಸನಂ, ಅಪಕಾರಗೀ:— ಪರನಿಗೆ ಅಂಜಿಕೆಯನ್ನುಂಟುಮಾಡುವ ಅಪಕಾರವಾಕ್ಯದ ಹೆಸರು, ಬೆದರಣೆ ಸೊಲ್ಲು" (ಸಿದ್ಧಾಂತಿ. ೩೩); ಭರ್ತ್ಸನ . . . ದುರ್ಭೋಗ್ಯ ನಾನಾ ವಿಧಾಸಂಭ್ರಾತತೀವ್ರ ವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷಾಲೇಶಮೊಂದೆನಿಸಿ (ವಿವೇ. ೦೬೦). 'ಭರ್ತ್ಸನಂಗೆಯ್' ಪರಾ. ೪. ಶಾಪ. [ಸಂ.]

**ಭರ್ತ್ಸನಂಗೆಯ್** (ಕ್ರಿ). ಹೆದರಿಸು ; ಬೆದರಿಸು : ನೆಗಳ್ದವಳ ಕೌಟಿಲವಿದು ತನಗೆ ತಕ್ಕುದಂ ನೆಗಳಿದೊಡೆ ತಾನೆ ತೋಱುವಳೆಂದು ರಯದಿಂದೆ ಭುಗಿಲೆನುತ್ತಾ ವಿಪ್ರರುಂತ ಸೂರಾಂಬಿಕೆಯು ಭರ್ತ್ಸನಂಗಯ್ದುರೆದ್ದು (ಅರಾಕ. ೦-೬-೩೪). [ಭರ್ತ್ಸನ + ಕೆಯ್$_1$]

**ಭರ್ತ್ಸನೆ** (ನಾ). ತೆಗಳಿಕೆ; ನಿಂದೆ : ಶ್ರೋತ್ರಿಯರ ಮಾತಿನಲ್ಲಿ ಭರ್ತ್ಸನೆಯ ಧ್ವನಿಯಿರಲಿಲ್ಲ (ಮಕವ್ಯ. ೦೯೦) ; ಆ ದನಿಯಲ್ಲಿ ನೋವು ತುಂಬಿತ್ತು, ಭರ್ತ್ಸನೆಯಿರಲಿಲ್ಲ (ಮಹಾಪ. ೬೨). [ಸಂ. ಭರ್ತ್ಸನ]

**ಭರ್ದಂಡು** 'ಭರವಂಡು' ನೋ.

**ಭರ್ಮ** (ನಾ). ೧. ಆಧಾರ ; ಬೆಂಬಲ. ೨. ವೇತನ ; ಕೂಲಿ; ಸಂಬಳ. ೩. ಬಂಗಾರ; ಚಿನ್ನ: "ಹೇಮ, ಸ್ವರ್ಣಂ, ಜಾತರೂಪಂ, ಸುವರ್ಣಂ, ಭರ್ಮಂ . . . ತಪನೀಯಂ—ಈ ೨೫ ಹೊನ್ (ಪೊನ್)" (ಹಲಾಯು. ೨೧-೦೯); ಜನಪ್ರಶಸ್ತಿಯುತ ಭರ್ಮಚಿತಮರ್ಮಾಪಿಶಾಸನಂಬೊಲಂಜ್ವಳಿಪುದು . . . ಪೂರ್ವಮಂದರಂ (ಕಂದ್ರಪ್ರ. ೦-೬೧). 'ಭರ್ಮಾಂಬರ' ಪರಾ. ೪. ಚಿನ್ನದ ನಾಣ್ಯ. ೫. ಹೊಕ್ಕುಳು. ೬. ಹೊರೆ; ಭಾರ. ೭. ಮನೆ. [ಸಂ. ಭರ್ಮನ್]

**ಭರ್ಮಕರ್ಮ** (ನಾ). ಚಿನ್ನದ ಕೆತ್ತನೆಯ ಕೆಲಸ : ಭರ್ಮಕರ್ಮದ . . . ನಾನಾಯುಧಂಗಳ ಓನತ್ಕನಿಃಕಾಂತಿಯಿಂ, ದಿವಿಜದೃಷ್ಟಿಗುಮೊಂದು ಪರ್ವಮಾದುದು (ತತ್ವಾಂಗ. ೮೦-೨೨೪೨). [ಸಂ. ಭರ್ಮಕರ್ಮನ್]

**ಭರ್ಮಹರ್ಮ್ಯ** (ನಾ). ಚಿನ್ನದ ಉಪ್ಪರಿಗೆ ಮನೆ: ಆ ಪುರಭರ್ಮಹರ್ಮ್ಯರುಚಿ ಪೊಂಬಿಸಿಲುತಿರ (ರಾಜಶೇ. ೨-೮೯). [ಸಂ.]

**ಭರ್ಮಾಂಬರ** (ನಾ). ೧. ಚಿನ್ನದ ಜರಿಯುಳ್ಳ ವಸ್ತ್ರ ; ಪೀತಾಂಬರ ; ಜರಿಬಟ್ಟೆ. ೨. ಚಿನ್ನದ ಬಣ್ಣದ ಬಟ್ಟೆಯುಳ್ಳವನು; ಕೃಷ್ಣ : ನಿರ್ಮತ್ಸರದೋಳ್ ಕೃತಿಯು ಕೇಳ್ದವರಿಗೆ ಧರ್ಮಾರ್ಥಕಾಮಮೋಕ್ಷಗಳ ಭರ್ಮಾಂಬರನೀವ (ಜೋಹಕ. ೧೨-೭೭). [ಸಂ.]

**ಭರ್ಮ್ಯ** (ಗು). ೧. ಚಿನ್ನದಿಂದ ಮಾಡಿದ : ಆ ದಿವ್ಯ ಭರ್ಮ್ಯಹರ್ಮ್ಯದೊಳು ಸುರಸತಿಗೆ ಸಮವಾದ ಸ್ತ್ರೀಯರ ಸುರತಕೇಳಿಯೊಳು ಸೈತಿರ್ಪನೊಂದರಳ ಶಿವಗರ್ಭಸೆ (ಗುರುತಾ. ೬-೦೪); ಪಟುವೆತ್ತು ಕಾಯ್ದು ಧರ್ಮೋದಕವ ಭರ್ಮ್ಯತಂಬುಗೆಗಳಲಿ ಪೊಗೆದೆರೆವುತೆ (ಶಶಪೊ. ೧೩-೯೨). (ನಾ). ೨. ಚಿನ್ನ ; "ಭಂಗಾರ" (ಶತುಶ. ೩. ೧· ೬೭). [ಸಂ.]

**ಭರ್ರನೆ** (ಅ). ಒಂದು ಅನುಕರಣಾವ್ಯಯ; ವೇಗವಾಗಿ; ಶೀಘ್ರವಾಗಿ : ಸರ್ರನೆ ಹೋಗವ್ವಾ ಭರ್ರನೆ ಬಾರವ್ವಾ (ಕನ್ನಜಾ. ೬೦). [ಭರ್ + — ಅನ್$_1$]

ಭಲ 'ಭಲಾ' ನೋ.

**ಭಲರೆ** (ಅ). ಮೆಚ್ಚುಗೆಯನ್ನು ಸೂಚಿಸುವ ಒಂದು ಭಾವಸೂಚಕಾವ್ಯಯ : ಅಪ್ಪಾ ಬಾಪ್ಪು ಭಲರೇ ಎನೆ ಸ್ಪಂದನಿಳಾತಳಾಗ್ರದೊಳ್ (ಎಇ. XV. ೩೨೦-೨೩; 1172); ಭಲರೆ ನೃಪೇಂದ್ರಾ ದಯೆಯೊಳ್ ನೆಲೆಗೊಳಿಸಿದೆ ಮಸವಂ (ಮುಕೋಕ. ೦-೬೮); ಎಲೆಲೆ ಕವಿಕವಿ ಬೆರಸು ಬೆರಸಟ್ಟಳಿಸು ತಿವಿತಿವಿ ಭಲರೆ. . . ಹೊಯ್ ಹೊಯ್ ಚೂಣಿಗರನು (ಬನ್ನಾಶೀ. ೪-೩).

**ಭಲರೆಭಲರೆ, ಭಲಭಲರೆ** (ದ್ವಿರುಕ್ತಿ) : ಭಲರೆಭಲರೇ ತ್ಯಾಗಿ ಯಾಚಕ ಕುಲಕೆ ನೀನೊಬ್ಬನೆಯಲಾ (ಬಸಪು. ೨೨-೩೪); ಭಲಭಲರೆ ಗುರುಭಕ್ತಿ ತಿಲಕ (ಬಸಪು. ೪೩-೩೦). [<ಭಲಾ]

**ಭಲಾ, ಭಲ, ಭಲೆ** (ಅ). = ಭಲರೆ : ಹೊಲೆಯ ಮಾದಿಗ ಭಕ್ತನಾದಡೆ ಆತನ ಮನೆಯ ಸೊಣಗಂಗೆ ಪಂಚಮಹಾವಾದ್ಯದಲ್ಲಿ ಸನ್ಮಾನವ ಮಾಡೆನೆ ನೆಲನನುಗ್ಗಡಿಸಿ ಉಘೇ ಚಾಂಗು ಭಲಾ ಎಂದು (ಬಸವ. ೮. ೫೯೩) ; ಘೇ ! ಉಘೇ ! ಭಲಾ ! ಬಾಪ್ಪುರೇ ! (ಕಂದ್ರಸ. ೪೩-೦೬); ಭಲಾ ಜಟ್ಟಿ ಎಂದರೆ ಕಪ್ಪಣ್ಣು ಮುಕ್ಕಿದ (ಗಾದೆ). ಭಲ : "ಭಲ—ಅಖಂಡನೇ, ಮೆಚ್ಚಿನೊಳ್" (ಕಾಕಕ್ಕ. ೨೬೩); ಭಲ ಹೊತ್ತಿಗೆ ಮುಂಚೇನೇ ಬಂದೆನಲ್ಲ (ಮುಂಜಾ. ೬). **ಭಲೆ :** ಉಘೆ ಚಾಂಗು ಭಲೆಯೆಂ[ಪಾಠಾಂ. ಲ 'ಎಂ]ದು ನೆಗೆವ ರಭಸಂಗಳೊಳು . . . ಶ್ರೀಗುರು ಪ್ರಭು ಬಂದ ಪುಣ್ಯದಿಂ (ಬೀಜ್ಞಾಶೋ. ೩೩-೦೦೪೭). ಭಲೆ! ಚೆನ್ನಾಗಿ ಹೇಳಿದೆ. ಇನ್ನೇನು ಕೇಳಿದಳು ? (ಶಾಂತಲಾ. ೯) ; ಈ ಚಪ್ಪರದ ಸೌಂದರ್ಯವನ್ನು ಕಂಡು ಮುಂದಾಳುಗಳು 'ಭಲೆ' ಎಂದರು (ಹಳ್ಳಿ. ೯೯). [← ಮರಾ. ಭಲ್ಲಾ./ತೆಲು. ಭಳಾ]

**ಭಲಾರಿ** 'ಭಟಾರಿ' ನೋ.

**ಭಲೆ** 'ಭಲಾ' ನೋ.

**ಭಲ್ಕ** 'ಬಲ್ಲೆಯ' ನೋ.

**ಭಲ್ಲ** (ನಾ). ೧. ಅರ್ಧಚಂದ್ರಾಕಾರವಾದ ತುದಿಯುಳ್ಳ ಒಂದು ಬಗೆಯ ಬಾಣ : ಭಲ್ಲದಿನೆಚ್ಚಾಟಿ ಖಂಡಿಸಿ ಬಿಲ್ಲಂ ಪ್ರತ್ಯೇಕಮಂತೆ ಕುಂಡಲಕೋಟೀರೋಲ್ಲಸಿತರಥಿಶಿರಂಗಳನೆಲ್ಲವನೊರ್ಮೊದಲೆ ಶಾರ್ಙ್ಗಿ ಪಡೆವಿನಮೆಚ್ಚಂ (ಜಗಂ. ೧೨-೨೩); ಕರಯುಗ್ಮದಿಂ ಕಚಿದ ಭಲ್ಲದ ಸೆಲ್ಲವ ಪಿಂಡಿವಾಳದಿಟ್ಟಿಯು . . . ಸರಿಯಿಂ ಶರಾನಿಳವಿಘಾತದೆ ತೂಳ್ದದನಾಗಳ ಚ್ಯುತಂ (ಶರ್ಮಪು. ೮-೩೩)· ೨. ಒಂದು ಬಗೆಯ ಆಯುಧ ; ಈಟಿ; ಭರ್ಜಿ : ಮುಸುಂಡಿ ಭಿಂಡಿವಾಳ ಶೂಲ ಭಲ್ಲ ಪತಾಕ (ಚಾರಶಂ. ೩-೮ ವ); ಗಜಹಯವರೂಥಾದಿ ರೋಷಕರ ಸಂದಣಿಯ ಬಾಯ ಭಲ್ಲಗಳ ಪಿಡಿದಿರ್ಪವರನಿಂಗ್ಲೀಷು ವಾದ್ಯದವರ (ಪರ್ಮವ. ೩-೯೬)· ೩. ಕರಡಿ; ಭಲ್ಲೂಕ : "ಋಕ್ಷಃ, ಅಚ್ಛಃ, ಭಲ್ಲಃ, ಭಾಲ್ಲೂಕಃ, ಭಲ್ಲೂಕಃ — ಈ ೫ (ಕರಡಿ)" (ಹಲಾಯು. ೩೮-೬೩); ಅಳಿ ನಿಜಾಸ್ಯದಿಂ ನಿಮಿರೆ ಪುತ್ತಿನ ಬಾಯ್ದಲೆಯೊಳ್ ಪಿಪೀಲಿಕಾಮಾಳೆಗೆ ಪಾಸಿ ನಾಲಗೆಯ ನೊಂದು ಭಯಂಕರ ಭಲ್ಲಮುಲ್ಲಸದ್ಭಾಳತಮಾಳಗುಲ್ಮದೊಳಗಿರ್ಪುದುಂ (ಪ್ರಶ್ನಪು. ೩-೬೨) ; ಘೋರಾಟವಿಯೊಳ್ ಭಲ್ಲ ವ್ಯಾಘ್ರಕ್ರೋಷಿಸಿ ಒಲ್ಲೆರ್ದೆಯಿಂ ತನ್ನನುಬ್ಬಿದು ಪೋಪುದು ಗುಣವೇ (ಪರಶಂ. ೫೯೪). [ಸಂ.]

**ಭಲ್ಲಾತ** (ನಾ). = ಭಲ್ಲಾತಕ: "ಭಲ್ಲಾತಮರುಷ್ಕಂ" (ಪಸ್ತುಕೋ. ೩೪ ೯). [ಸಂ.]

**ಭಲ್ಲಾತಕ** (ನಾ). ಗೇರುಮರ ಮತ್ತು ಅದರ ಫಲ : "ಭಲ್ಲಾತಕಂ ಗೇರು" (ಮಂಗರಾ. ೩೩-೦೩); ತಿಲ ಭಲ್ಲಾತಕವಂ ಮೇಣ್ ನೆಲದಾಟು ಮಸಲ್ಲದಂದು ಚಿತ್ರಕವಂ ಗೋಜಲದೊಳ್ ಬಾಡಿದಳೆಗೊಟ್ಟಿಣ ಕೆಲವುಂ ದೆವಸಕ್ಕೆ ಕಿಡುಗುಮುರುಸೆಯು ಮೊಳೆಗಳ್ (ಲೋಕೋಪ. ೯-೦೯೩); ತಿಲಂ ಮಾಷಮುಂ ಪರಭಲ್ಲಾತಕದಿಂದೆ ತೋಪರಿ ಕಟುಂಕೆಯ್ವೋದಮಂ . . .

ಬೆಳೆಯಿಕುಂ ಜೋಳಂ ಮಹೀಭಾಗದೊಳ್ (ಅಭಿಪು. ೯-೧೦). [ಸಂ.]

**ಭಲ್ಲಾತಕಿ** (ನಾ). = ಭಲ್ಲಾತಕ: "ವೀರವೃಕ್ಷಃ, ಅರುಷ್ಕರಃ, ಅಗ್ನಿಮುಖೀ, ಭಲ್ಲಾತಕೀ – ೪ ಗೇರುಮರದ ಹೆಸರುಗಳು" (ಸಿದ್ಧಾಂತ. ೦೨೦); ಒಳಪುಗದರಿವಿನೊಳೊಂದಿ ಭಲ್ಲಾತಕಿಫಳಬೀಜದಂದದಿಂದೆಸೆವನು (ಶರಶೋ. ೦-೭-೦); ನೆಲ್ಲಿ ಪೇರಿಲು ಮಾವು ಬದರಿ ಬಸರೀಗಿಡಂ ಭಲ್ಲಾತಕೀ ಪೂಗ ತ್ಯಾಗ (ಸಿದ್ಧಕಾ. ೬-೦೭). [ಸಂ. ಭಲ್ಲಾತಕೀ]

**ಭಲ್ಲಾಸನ** (ನಾ). ಬಿಲ್ಲು: ಪಂಚಸಪ್ತತ್ಯುತ್ತರಶತಶ್ರತಭಲ್ಲಾಸನೋತ್ಸೇಧನುಂ ಪದ್ಮಾಂಗಪ್ರಮಿತಜೀವಿತನುಮಪ್ಪ ಎಂಟನೆಯ ಮನು ಪುಟ್ಟಿ (ಅಂಪು. ಬ. ೬-೩೮ ವ). [ಸಂ.]

**ಭಲ್ಲುಂಕಿದಂಡ** (ನಾ). ನರಿಯ ಚಿಹ್ನೆಯುಳ್ಳ ದಂಡ (?); ಕರಡಿಯ ಕೂದಲನ್ನು ಕಟ್ಟಿರುವ ದಂಡ (?); P ಇದು ಪ್ರಾಚೀನ ಕರ್ನಾಟಕದ ವರ್ತಕಶ್ರೇಣಿಯು ತಮ್ಮ ಗುರುತಿಗಾಗಿ ಹಿಡಿಯುತ್ತಿದ್ದ ದಂಡವಿರಬಹುದೇ? : ವೀರಬಣ್ಣಂಜುಧರ್ಮ್ಮರುಂ . . . ಭಲ್ಲುಂಕಿದಂಡಹಸ್ತರುಮಪ್ಪ . . . ಜಯಪತಿಸೆಟ್ಟಿ ಮುಖ್ಯಮಾಗಿ (ಎಇ. XIII. ೨೦-೯೬ : 1024); ಭಗವತೀದೇವಿಲಬ್ಧವರಪ್ರಸಾದರುಂ ಸಮಸ್ತಭಲ್ಲುಂಕಿದಣ್ಡಹಸ್ತರಪ್ಪ ತೆಂಕಕಂಚಿಬಡಗ ಹಿಮಸೇತುವಾದಿಯಾಗಿ ಸಮಸ್ತನಾನಾದೇಸಿಗಳುಂ ಸೆಟ್ಟಿಯರುಂ ಸೆಟ್ಟಿಗುತ್ತರು(c) (ಕ್ಶಇ. IX-i. ೨೨೩-೯೨; 1127). [ಭಲ್ಲುಂಕಿ$_0$ (P ← ಪ್ರಾ. ಭಲ್ಲುಂಕೀ) + ದಂಡ]

**ಭಲ್ಲುಕ** (ನಾ). ಒಂದು ಬಗೆಯ ಕಾಡುಪ್ರಾಣಿ; ಕರಡಿ: "ಭಲ್ಲುಕಃ . . . ಭಾಲ್ಲೂಕಃ – ೪ ಕರಡಿಯ ಹೆಸರುಗಳು" (ಸಿದ್ಧಾಂತ. ೦೫೩); ಒಳ್ಳೆ ಹೆಬ್ಬಾವಹುದೆ ರಾತ್ರಿಯ ಕಳ್ಳ ವೀರನೆ ಗಡ್ಡ ಬೆಳೆದರೆ ಭಲ್ಲುಕನು ಪಂಡಿತನೆ (ಕೌಶಿಕ. ೨೨-೯೦); ತೃಪ್ತಜಠರದ ಭೀಮಭೀಷ್ಮಭಲ್ಲುಕವೊಂದು ಚರಿಸುತ್ತಿತಂದು (ಶಿವ್ಯಾಂಗ. ೦೫-೩೯೯). [ಸಂ.]

**ಭಲ್ಲೂಕ** (ನಾ). = ಭಲ್ಲುಕ: "ಋಕ್ಷಃ, ಅಚ್ಛಃ, ಭಲ್ಲಃ, ಭಾಲ್ಲೂಕಃ, ಭಲ್ಲೂಕಃ –ಈ ೫ (ಕರಡಿ)" (ಹಲಾಯು. ೩೯-೬೩); ಕಾಳ್ಗೋಣ ಕಂಟಕನೆಂಬ ಭಲ್ಲೂಕಮಲ್ಲನೆಂಬ . . . ಪರಿಪರಿಯ ಬಿರುದುಲಿವ ಬಾವುಲಿಯ ಕುನ್ನಿಗಳು ನೆರೆದವಂದವನೀಶನೋಲಗದೊಳು (ಹಕಲ. ೫-೬); ಉಗ್ರಭಲ್ಲೂಕವೃಕಾದಿ ದುಷ್ಟಮೃಗಸಂಕುಲದಿಂ . . . ಪುದಿದರಣ್ಯವನೆಯ್ದಿದನುರ್ವರಾಧಿಪಂ (ಹಕಸಂ. ೩೨೦); ಎತ್ತಲುಂ ಮೊಳಗಿವ ಸಿಂಹ ಶಾರ್ದೂಲ ಭಲ್ಲೂಕ ವೃಕ ಸೂಕರಾದಿ ದುಷ್ಟಮೃಗಂಗಳ ನಿಷ್ಠುರಧ್ವನಿಗೆ ಅಳ್ಕುವೆನಯ್! (ರಾಮಾಶ್ವ. ೩೯-೩). [ಸಂ.]

**ಭಲ್ಲೆ** (ನಾ). ೧. ಈಟಿ; ಭರ್ಜಿ: ಆನೆ . . . ತನ್ನ ಮೇಲೆ ಕುಳಿತಿರುವವನಿಗೆ ಪೆಟ್ಟು ಬೀಳದಿರಲೆಂದು ಶತ್ರುವು ಎಸೆದ ಭಲ್ಲೆಗೆದುರಾಗಿ ತನ್ನ ಪಾದವನ್ನು ಒಡ್ಡಿ ಮೇಲೆ ಕುಳಿತಿರುವವನನ್ನು ರಕ್ಷಿಸುತ್ತದೆ (ಶ್ರವಾ. II, ೦೩೦); ಬಿಲ್ಲ ಬಾಗಿಸಲಹುದು. ಭಲ್ಲೆ ಬಾಗಿಸಬಹುದೆ? (ಹಿಪ್ಪರ. ೫-೭೦). ೨. ಭಲ್ಲೆಯಂತೆ ನೀಳವಾದ ಜೋಳದ ಕಡ್ಡಿ, – ಕಾಂಡ: ಮುಂಜಾವಿನಿಂದಲೂ ಮಕ್ಕಳಲ್ಲಿ ಭಲ್ಲೆಯ ಬಗ್ಗೆ ಮೇಲಾಟ ನಡೆದಿದೆ. ಒಬ್ಬರಿಗಿಂತಲೂ ಒಬ್ಬರು ದೊಡ್ಡ ಭಲ್ಲೆಯನ್ನು ತಮ್ಮ ಹೊಲಗಳಿಂದ ತರುತ್ತಿದ್ದಾರೆ (ಕಹಿಗ. ೦೫). [ಸಂ. ಭಲ್ಲ]

**ಭಲ್ಲೆಯ** 'ಬಲ್ಲೆಯ' ನೋ.

**ಭಲ್ಲೆಹ** 'ಬಲ್ಲೆಯ' ನೋ.

**ಭವ** (ನಾ). ೧. ಇರುವಿಕೆ; ಇರವು; ಅಸ್ತಿತ್ವ. ೨. ಹುಟ್ಟು; ಉತ್ಪತ್ತಿ: "ಭವವೆನೆ ಪುಟ್ಟುವುದು" (ಚಾರಿತ. ೨೩); ಅಜ್ಞಾನದಿಂದ ಜನನಿಯ ಜಠರದಲ್ಲಿ ಬಾರದ ಭವಂಗಳಲ್ಲಿ ಬರಿಸಿದೆ ತಂದೆ (ಬಸವ. ೨೦). ೩. ಹುಟ್ಟಿನಿಂದ ಸಾವಿನ ವರೆಗಿನ ಅವಧಿ; ಜೀವಿತಕಾಲ: ಎನಿತೆನಿತು ಕಟಿದ ಭವವಂ ನೆನೆವಪೆಯನಿತೆನಿತು ಭವದ ಬಂಧುಗಳಂ ನೀಂ ನೆನೆದಪೆ (ಅನಪು. ೨-೬೦); ಪೋದ ಭವಂಗಳೊಳ್ ನೆರಪಿದೊಂದು ತಪಂ ಫಲಮಾಯ್ತು (ಜಗಿ. ೬-೮೪); ಬಂದ ಭವದ ಬವಣೆಯೊಂದದಂತು ಮುಂದಣ ಭವದ ಭಾವಂ ಬಾರದಂತು ತಡೆಗೆಯ್ವುದೇ ಮೇಲ್ (ರಾಮಾಶ್ವ. ೭೩-೨). ೪. ಸಂಸಾರ; ಪ್ರಾಪಂಚಿಕ ವ್ಯವಹಾರ: ಕೂಡಲ ಸಂಗನ ಶರಣರ ಅನುಭಾವದಿಂದ ಎನ್ನ ಭವದ ಕೇಡು ನೋಡಯ್ಯಾ (ಬಸವ. ೯. ೮೯೦); ರತ್ನಧಾರಾಪರಮತೀರ್ಥಸ್ನಾನ ತೊಳೆವುದು ಭವದ ಕಿಲ್ಬಿಷವ (ಶಿವ್ಯಾರತ್ನಾ. ೦೫-೨೦); ಸಮತೆ ಸಂಯಮಶಮಗಳಿಂ ಭವವನೋಲಗಿಸೆ ಸಮನಿಪುದು ಮತಿಯ ಪದವಾತ್ಮಾನುಭವಕೆ (ಮಂಕುತಿ. ೭೦೯). ೫. ಪ್ರಪಂಚದ ಉತ್ಪತ್ತಿಗೆ ಕಾರಣನಾದವನು; ಶಿವ; ಪರಮೇಶ್ವರ: "ಈಶಾನಃ . . . ಭವಃ ಭೂತೇಶಃ . . . ನೀಲಲೋಹಿತಃ – ಈ ೪೫ ಮಹಾದೇವರ ಪೆಸರ್" (ಹಲಾಯು. ೩-೧೦); ಭವಲಲಾಟವಿಲೋಚನಾಗ್ನಿಶಿಖಿಯಿಂ ಬೆಂದಳ್ಕಿ ಮತ್ತಂ ಮನೋಭವನೆಟ್ಟಿತ್ತೊಡೆ (ಮುಕಥಾ. ೬-೨೪); ಚಂಡಾಂಶು ಶುಭ್ರಾಂಶುಗಳ್ ಭವನೇತ್ರಂ (ಸೋಮೇಶ. ೯೬); ಭವನ ಶಕ್ತಿಗೆ ಮಿಗಿಲು ರಾವಣನೆನುತ ನಡೆತಂದ (ತೊರವೆ. ೨೨-೦೯). ೬. ಸಂಸಾರವುಳ್ಳವನು: ಪರನಪರಂ ಭವಸಭವಂ . . . ಕ್ಷರನಕ್ಷರನೆನಿಪಗಣಿತವಿರುದ್ಧಗುಣ ನಿನ್ನ ನಿಜವದೇಂ ಕೇವಳಮೋ (ಜಗಿ. ೩-೯೭). ೭. ಮರುಹುಟ್ಟು; ಪುನರ್ಜನ್ಮ: "ಮರಳಿ ಹುಟ್ಟುವುದಕ್ಕಿಲ್ಲ ಭವಮೆಂಬುದಕ್ಕುಂ" (ಮಂಗರಾ. ೦೯೦-೧೦); "ಪುನರ್ಭವದೊಳ್ ಶಿವನೊಳ್ ಭವಾಹ್ವಯಂ" (ನಾಚಿರಾ. ೦೦೫). ೮. ಕ್ಷೇಮ; ಸೌಖ್ಯ: "ಆ ಭವಂ ಭದ್ರಮೆಂಬುದು" (ಮಂಗರಾ. ೦೪೯-೫). ೯. [ಜೈನ] ಜಿನ; ತೀರ್ಥಂಕರ: ಭವನ ತನು ಭಾಳಮಂಡವ ನವಮಂಡನದಿಂದಮೊಪ್ಪೆ (ಶಾಂತಿಪು. ೦೦-೬೦). ೧೦. ೧೦ತ ವಿಧ ಸಂಸಾರಗಳಲ್ಲಿ ಒಂದು: ಅವಱೊಳ್ ದ್ರವ್ಯಕ್ಷೇತ್ರುಕಾಲ ಭವಭಾವಭೇದದಿಂ ಪಂಚವಿಧಂ ಸಂಸಾರಂ (ಅಂಪು. ೦೦-೬೩ ವ). ೧೧. [ಛಂದ] ಗುರುವಿನ ಸಂಕೇತ: ನನ ಭವಮುಂತದಿಂ ಪನರುಹುವವನೇ . . . ಜನನುತ ಸುಲಭಂ (ಛಂದೋಂಬು. ೨-೬೦); ದಿವಿಜಪುರಯುಗಯುಗದೆ ನಿಲಲನಿಲಂ ಶೀತಕರತ್ರಿತಯಂ ಕಡೆಯೊಳ್ ಭವನಿರೆ ಕರಿಗಿರಿ ಗಣನೆಗಳೋಳಂ ತಟ್ಟಿಸೆಗಂ ಪದವಿಶ್ರಮಣಂ ಭುವನದೊಳತಿಶಯಮುತ್ತರಮಿದು . . . ಹಂಸಪದಂ (ಛಂದೋಂಬು. ೨-೦೯೬). [ಸಂ.]

**ಭವಂಗಬೀಜ** (ನಾ). ಒಂದು ಬಗೆಯ ವನಸ್ಪತಿ: ಟೀಗೊಸ್ಸಿ. ಭವಂಗ ಬೀಜ, ಗಂಗುಂಗಪಂಬು, ಕಂಗೋಂದಿಬಿಳ್ಳಿ, ಗವನಗೊಂಗೆ (ಬ್ಯಾಶಿಂ. ೦೯-೩೨೦). [? + ಬೀಜ]

**ಭವಂಗಳೆ** (ಕ್ರಿ). ಸಂಸಾರವನ್ನು ಪರಿಹರಿಸು, – ನೀಗು: ಎನ್ನಯ ಹಿಂದಣೆಸ್ತಜನ್ಮ ಕರುಣದಿಂ ಮುಂದಣ ಭವಂಗಳೆವ ತಂದೆ ನೀನಿರಲಿಲ್ಲವ ದಂದುಗವಮದಿಲ್ಲ (ಸಂಪು. ೬-೯). [ಭವ + ಕಳೆ$_1$]

**ಭವಂಗಿಡಿಸು** 'ಭವಗೆಡಿಸು' ನೋ.

**ಭವಂತಿ, ಬಾವಂತಿ** (ನಾ). ಮನೆಯ ನಡುವೆ ಇರುವ ಅಂಗಳ; ತೊಟ್ಟಿ: ನಡುಮಣ ಭವಂತಿಗಂ ಪಚ್ಚೆಯರಳೆಲೆಸಾಲನೊಡರಿಚಿಯ (ಪಪಮೋ. ೨೦-೦೬); ವೇಣುಪುರದರಮನೆಯಂ ರಾಜನ ಭವಂತಿ ಪೊಸಭವಂತಿ ಐದಂಣಮುಪ್ಪರಿಗೆ ವಸಂತಮಹಲ್ ಚಂದ್ರಮಹಲ್ಗಳೆಂಬೀ ಸ್ಥಾನಗಳಂ ವಿಸ್ತಾರಂಗೆಯ್ಸಿ (ಕೆಳನೃ. ೦೦-೯೫). **ಬಾವಂತಿ**: ನಾಯಕರ ಮನೆಯ ದನಗಳನ್ನು ಕಾದುದಕ್ಕೆ . . . ಅವರ ಬಾವಂತಿಮನೆಯ ಒಂದು ಮೂಲೆಯಾದರೂ ಆಸರೆಯಾಗಿತ್ತು ಇವನಿಗೆ (ಶಿಲಬು. ೨).

[←ತೆಲು. ಭವಂತಿ, ಬವಂತಿ]

**ಭವಕರ್ಮ** (ನಾ). ಸಂಸಾರಕ್ಕೆ ಕಾರಣವಾದ ಕರ್ಮ: ನಿಮ್ಮ ಮಾಣದೆ ನೆನೆವಂಗೆ ಭವಕರ್ಮವೆಲ್ಲಿಯದೊ ಕೂಡಲಸಂಗಯ್ಯಾ (ಬಸವ. ೮೬೦). [ಸಂ. ಭವಕರ್ಮನ್]

**ಭವಕ್ಷಯ** (ನಾ). ೧. ಸಂಸಾರದ ನಾಶ. ೨. ಸಂಸಾರವನ್ನು ನಿವಾರಿಸುವವನು : ದಕ್ಷಮಖಕ್ಷಯಾಯ ಭವಕ್ಷಯಾಯ ನಮೋ (ಬಸಪು. ೬೦-೪೬). [ಸಂ.]

**ಭವಗೆಡಿಸು, ಭವಂಗಿಡಿಸು** (ಕ್ರಿ). ೧. ಸಂಸಾರದಿಂದ ಬಿಡುಗಡೆಮಾಡು.– ಮುಕ್ತಗೊಳಿಸು : ಸಮ್ಯಜ್ಞಾನವೆಂಬ ದಳ್ಳುರಿ ಸೌರಾಷ್ಟ್ರಸೋಮೇಶ್ವರನ ತೋಱ ಭವಗೆಡಿಸಿತ್ತು (ಅರವ. ೩೩-೯೬). ೨. ಹಾಳುಮಾಡು ; ನಾಶಗೊಳಿಸು : ತಾವೆ ಪಡೆದ ಮಕ್ಕಳನು ಭವಗೆಡಿಸಲೆಂದೇ ನಿಖಿಳಗೋಕುಲವ (ಜಿಣಾಗ. ೦೦-೮-೨೩). **ಭವಂಗಿಡಿಸು** : ೧. ಭವಂಗಿಡಿಸುವೋಲಗಕ್ಕಭವಬೇಸಱೀಂ ಪೋಕೆ ಪೋ ಭವಂ ಭವದುಪಾಂತದಲ್ಲಿಯೆ ಮನೋಭವಧ್ವಂಸಕಾ (ಆರಪು. ೦೩-೯೬). [ಭವ + ಕೆಡಿಸು₁]

**ಭವಗೆಡು** (ಕ್ರಿ). ೧. ಸಂಸಾರಬಂಧನದಿಂದ ಮುಕ್ತವಾಗು ; ಹುಟ್ಟುಸಾವುಗಳಿಂದ ಪಾರಾಗು : ಗುಹೇಶ್ವರನೆಂಬ ಲಿಂಗವ ಪೂಜಿಸಿ ಭವಗೆಟ್ಟೆ ನಾನಯ್ಯಾ (ಅವತಂ. ೯೯-೩೯೬); ಸೋಂಕದ ಮುನ್ನವೆ ಸುಭಿಧಾನಪ್ರಸಾದಿ ಅರ್ಪಿಸದ ಮುನ್ನವೆ ಅವಧಾನಪ್ರಸಾದಿ ಅಜಿವಜಿತು ಭವಗೆಟ್ಟ ಪರಿಣಾಮಪ್ರಸಾದಿ (ಅವವ. ೨೪-೬೬). ೨. ಸಾಂಸಾರಿಕಕ್ಲೇಶಗಳಿಂದ ತಪ್ಪಿಸು : ಕಾಯದ ಕರದಲ್ಲಿ ಲಿಂಗವ ಹಿಡಿದು ಬಾಯಾಚಿ ಭವಗೆಟ್ಟು ನಾಣುಗೆಟ್ಟು ನಾನಾರೆಂಬುದನಱಿಯದೆ . . . ಜೀವರ ಬೇಡುವ ಜಾರರಿಗೆಲ್ಲಿಯದೋ ಸಿ ಕಳಂಕಮಲ್ಲಿಕಾರ್ಜುನಾ (ಮೋಲಿವಾ. ೨೪-೯೩); ಭವಗೆಟ್ಟು ಬಂದ ಮಗಳೆಂದು ಕರುಣದಿಂ ತೆಗೆದು ಬಿಗಿಯಪ್ಪಿದರೆ ಚೆನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗಿದೆನು (ಮಹಾದೇ. ಬ. ೬೬-೧೯೩) ; ಕುಲಗೆಟ್ಟೆನು ಛಲಗೆಟ್ಟೆನು ಸಂಗಾ ನಿಮ್ಮ ಪೂಜಿಸಿ ಭವಗೆಟ್ಟೆನು ನಾನಯ್ಯಾ (ಬಸವ. ೫೨೨). [ಭವ + ಕೆಡು₁]

**ಭವಗೇಡಿ** (ನಾ). ೧. ಸಂಸಾರದಿಂದ ನಿವೃತ್ತನಾದವನು; ಸಂಸಾರವನ್ನು ತೊರೆದವನು : ಭಕ್ತನಾಗಿ ಭವಗೇಡಿಯಾಗಬೇಕು ಇದು ಗುಱಿ ಭವಗೇಡಿಯಾಗದವ ಬುದ್ಧಿಗೇಡಿ (ಬಸವ. ೯೭೩). ೨. ಸಂಸಾರಬಂಧನವನ್ನು ಹಾಳುಮಾಡುವವನು ; ಮೋಕ್ಷವನ್ನು ಕೊಡುವವನು : ಬೇಡಿಕೊಂಡುಣ ಹೋದೆ ನಿನಗುನೂಡಿ ಮಾಡಿದುದೆಯ್ದದೇ ಭವಗೇಡಿ ಮಗನೇ (ಬಸಪು. ೦೫-೨೮). [ಭವ + ಕೇಡಿ₁]

**ಭವಚಾತುಷ್ಟಯ** (ನಾ). [ಜೈನ] ದೇವ, ಮನುಷ್ಯ, ತಿರ್ಯಕ್ ಮತ್ತು ನರಕಗಳೆಂಬ ನಾಲ್ಕುಬಗೆಯ ಗತೀ–ಸಂಸಾರ : ಕಷ್ಟತರವಂ ಕಷಾಯಚತುಷ್ಟಯದೆಡೆಗಿಡಿಸಿ ದೇವ ಕಿಡಿಸಿದೆ ಭವಚಾತುಷ್ಟಯಮುಮಂ (ಅಜಪು. ೬-೭೩). [ಸಂ.]

**ಭವತಾರಿಣಿ** (ನಾ). ಸಂಸಾರದಿಂದ ಪಾರು ಮಾಡುವವಳು : ಪರಮೇಶ್ವರಿ : ತಮಸ್ಸಿನ ಕಡಲಿನಲ್ಲಿ ಜಡವಾಗಿ ಬಿದ್ದಿದ್ದ ಸಮಾಜಪುರುಷನನ್ನು ಎಚ್ಚರಿಸಲು ಭವತಾರಿಣಿಯೇ ಬೇಕಾಗಿತ್ತು (ರಾಜ್ಯೋದ. ೯೬). [ಸಂ. ಭವತಾರಿಣೀ]

**ಭವತಿ** (ನಾ). ಗೌರವಾನ್ವಿತಳಾದ ಮಹಿಳೆ ; ಪೂಜ್ಯೆ : ಭುಜಗಪಕ್ಷಪುರಗಣಭುಜದೊಳಾಜಿಕೊಳಪ್ಪುದಜಗಣೀಳೆ ಭವತೀ (ಛಂದೋಂಬು. ೬ ೩-೩೦೬); “ಭವತಿ ಭಿಕ್ಷಾಂದೇಹಿ” ಎಂಬುದಿದುವೆ ಬಬ್ಬಿಗರ್ಗೆ ಸಿದ್ಧಿಸಿದ ಪರ್ಮೆಯ ಸಮ್ರಾಕ್ಷರೀಮಂತ್ರಂ (ರಾಮಾಶ್ವ. ೦೦೯-೦೯). [ಸಂ. ಭವತೀ]

**ಭವತ್ಕಾಲ** (ನಾ). [ವ್ಯಾಕ] ಈಗ ನಡೆಯುತ್ತಿರುವ ಕಾಲ ; ವರ್ತಮಾನ ಕಾಲ : ಭಾವಿ ಭವತ್ಕಾಲಂಗಳೊಳಾ ವಿಹಿತವಿಭಕ್ತಿಯಾದಿಗಳೊಳಾಗಮದ್ವಿತಾಪೊಲ್ವರ್ ಕೆಲಬರ್ ಭಾಷಾವಿದರುದ್ವಾದಿಯುಕ್ಕಿಮದುಮಂ ಪ್ರಾಯಂ (ಶಾಬ್ದ್ಯಾಮ. ೩೯೦). [ಸಂ.]

**ಭವದೀಯ** (ಗು). ನಿನಗೆ ಸಂಬಂಧಿಸಿದ ; ನಿನ್ನ : ಭವದೀಯ ವದನವ್ಯಾಲೋಲವಿಲೋಚನಮುದಿತರಾಗಮಣಿವಿಲಸಿತಮಂ . . . ಪೋಲ್ಗುಂ (ಕಬಿರಾ. ೩-೯೩) ; ಬಂದು ತಂದೆಯಂತಿರೆ ಪದೆದಾ ಮಹಾಪುರುಷನಾಱಿಸಿದಂ ಭವದೀಯ ಶೋಕಮಂ (ಕಾದಂಪೂ. ೯೪೪); ಭವದೀಯ ಮನೋಹರಬಾಲ್ಯವಿನೋದಾಮೃತದೊಳಿದ್ದು ತೀವಿದ ಮತ್ತಾನ್ವಂತಿಪನಿಂತೀ ವಿಪದಿಂ ತೀವುವುದೇ (ಜಗಪು. ೩-೯೩). [ಸಂ.]

**ಭವದೂರ** (ನಾ). ೧. ಸಂಸಾರದಿಂದ ದೂರವಾಗಿರುವವನು; ಪ್ರಾಪಂಚಿಕ ವ್ಯವಹಾರಗಳನ್ನು ತೊರೆದಿರುವವನು ; ವಿರಕ್ತ : ಪೊರೆವುದೆಮ್ಮನು ದುರಮುಪಿಮಾಗಾರ ಬಸವಕುಮಾರ ಭವದೂರ (ಬಸಪು. ೦-೬). ೨. ಶಿವ : ಸೋಮಧರ . . . ಅನತಕಲ್ಪಭೂಮಿರುಹ ಭವದೂರ (ಚೆನ್ನಬಸ. ೩-೦). [ಸಂ.]

**ಭವನ** (ನಾ). ೧. ಇರುವಿಕೆ ; ಅಸ್ತಿತ್ವ. ೨. ಹುಟ್ಟು ; ಜನನ. ೩. ವಾಸಿಸುವ ಸ್ಥಳ ; ಮನೆ ; ಗೃಹ : “ಆವಾಸಃ, [ಅ]ವಸಥಂ, ಗೃಹಂ, ಭವನಂ . . . ಆಲಯಃ — ಈ ೩೧ ಮನೆ” (ಬಾಲಾಮ. ೪೯-೦೩೬). ೪. ದೊಡ್ಡಮನೆ ; ಪ್ರಾಸಾದ ; ಸೌಧ : ಧನದ ಭವನಮೆನಿಪ ಸಿರಿಯ ಬಚ್ಚರಾಪಣಂಗಳಿಂ (ಶಂಪಶಾ. ೦-೩೩ ರಗಳೆ); ವಸುಧೆಗೆ ಗುಡಿಕವಿದಂತೆಸೆದಿರೆಸೆಯಂ ಬಾಸಣಿಸಿ . . . ಎಸೆದುದು ಭುವನೈಕಭವನದಂತಾ ಭೋಜಂ (ಜಗಂ. ೪-೯೬); ಓರಿಯ ಭವನದ ಸುತ್ತುವಳಿಯದ ಮುರುಹಿನಲಿ ಮನೆಮನೆಗಳು (ಕುಮ್ಯಾಳ. ೬-೬೦). ೫. ಸ್ಥಳ ; ಜಾಗ. ೬. ಹೊಲ : ಕ್ಷೇತ್ರ. ೭. [ಜ್ಯೋತಿ] ಗ್ರಹಗಳಿರುವ ಮೇಷ ಮೊದಲಾದ ದ್ವಾದಶ ರಾಶಿ : ಭವನಂ ದ್ವಾದಶಭಾಗಂ ನವಾಂಶಕಂ . . . ಇನಿತುಂ ಷಡ್ವರ್ಗಮೆಂಬ ಪೆಸರಿಂ ಪ್ರವರ್ತಿಕುಂ (ಜಾತಕ. ೦-೪೩). [ಸಂ.]

**ಭವನಮಹತ್ತರದೇವ** (ನಾ). = ಭವನವಾಸಿ : ವಿವಿಧಾರ್ಥ್ಯಕರರ್ಕಱಾಸ್ಫುಜ್ಜಗದಿಂ ಭವನಮಹತ್ತರದೇವರ್ ಕ್ರಮದಿಂ ಬರೆ (ಶಂಪ್ರಪು. ೪-೬೩ ರಗಳೆ). [ಸಂ.]

**ಭವನವಾಸಿ** (ನಾ). [ಜೈನ] ದೇವತೆಗಳ ಒಂದು ಪಂಗಡ ; P ಇವರಲ್ಲಿ ಅಸುರಕುಮಾರರು, ನಾಗಕುಮಾರರು, ಸುಪರ್ಣಕುಮಾರರು, ದ್ವೀಪಕುಮಾರರು, ಉದಧಿಕುಮಾರರು, ವಿದ್ಯುತ್ಕುಮಾರರು, ಸ್ತನಿತಕುಮಾರರು, ದಿಕ್ಕುಮಾರರು, ಅಗ್ನಿಕುಮಾರರು ಮತ್ತು ವಾತಕುಮಾರರು ಎಂಬ ಹತ್ತು ವರ್ಗಗಳಿವೆ : ದೇವಾಃ — ದೇವರ್ಕಳ್, ಚತುರ್ನಿಕಾಯಾಃ — ಭವನವಾಸಿ ವ್ಯಂತರ ಜ್ಯೋತಿಷ್ಕ ವೈಮಾನಿಕ ಭೇದದಿಂ ಚತುಃಸಂಘಾತಮನುಳ್ಳರಪ್ಪರ್ (ತತ್ತ್ವಸೂ. ೦೭೯). [ಸಂ. ಭವನವಾಸಿನ್]

**ಭವನವಾಸಿಕ** (ನಾ). [ಜೈನ] ಭವನವಾಸಿ ದೇವತೆಗಳಿಂ ವಾಸಿಸುವ ಲೋಕ : ಸುರನಿಳಯವು ಮೇಲೆ ಮನುಜರುಮಧ್ಯದಿ ಉರಗರು ಭುವನವಾಸಿಕ [ಕಾಲಾಂ.ಗ]ದಿ ಉರು ದಹಿಪಿಪಡುವನಾರಕರು ಕಳಗೆಯೆಂದು ಪರಮಾಗಮದಿ ಪೇಳುವದು (ಅನಂತ. ೦-೫೨). [ಸಂ. ಭವನವಾಸಿಕಾ]

**ಭವನವಾಸಿಗ** (ನಾ). = ಭವನವಾಸಿ : ಅಲ್ಲಿ ದೇವಗತಿ ನಾಲ್ಕಕ್ಕುಮೆಂತೆನೆ ಭವನವಾಸಿಗ ವಾನವ್ಯಂತರ ಜ್ಯೋತಿಷ್ಕ ಕಲ್ಪವಾಸಿ ಭೇದಭಿನ್ನತ್ವದಿಂ (ಶಾಂತಿಪು. ೦೨-೬ ವ) ; ಅಸುರ ನಾಗ ವಿದ್ಯುತ್ ಸುಪರ್ಣ ಅಗ್ನಿ ವಾತ ಸ್ತನಿತ ಉದಧಿ ದ್ವೀಪ ದಿಕ್ಕುಮಾರ ದಶವಿಧ ಭವನವಾಸಿಗರುಂ (ಕೃತಿಶಾ. ೬-೪). [ಭವನವಾಸಿ + –ಗ]

**ಭವನಾಂಗ** (ನಾ). [ಜೈನ] ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; ಮನೆಗಳನ್ನು ಕೊಡುವುದೆಂದು ನಂಬಲಾದ ವೃಕ್ಷ : ಭವನಾಂಗಂ ಕಲ್ಪಭೂಜಂ ಸಮೆದ ಬಹುವಿಧೋತ್ತುಂಗಹರ್ಮ್ಯಾವಳೀ ಗರ್ಭವಿಲಾಸಾವಾಸದೊಳ್ (ಶಂಪ್ರಪು. ೩-೩೪). [ಸಂ.]

**ಭವನಾಂಗಭೂಜ** (ನಾ). = ಭವನಾಂಗ : ಸನ್ನಿದಮಾದ ಭೋಗಭೂಮಿಯ ಭವನಾಂಗಭೂಜದ ವಿಗುರ್ವಣೆ ಸಂಶಯಮೇವುದೆಂಬ ನಿಶ್ಚಯಮನೊಡರ್ಚಿ (ಪುಣ್ಯಾಶ. ೨-೬೩) [ಸಂ.]

**ಭವನಾಮರ** (ನಾ). = ಭವನವಾಸಿ : ವಿಮಾನಾರೂಢಕಲ್ಪಜಜ್ಯೋತಿಷ್ಕ ವಾನವ್ಯಂತರ ಭವನಾಮರನಿಕಾಯಪರಿವೇಷ್ಟಿತಶೋಭಿತಮತಿರುಚಿರ ನಿಜಾಂಗರುಚಿಗಳೊಳಂ (ಅಂಕು. ೦೦-೦೬ ವ) ; ಚಮರವೈರೋಚನಪ್ರಮುಖ ರಪ್ಪ ಭವನಾಮರರುಮಂ . . . ಸಿರವಿಸಿ (ಚಂದ್ರಪು. ೦೨-೦೦೩ ವ). [ಸಂ.]

**ಭವನಾಶಿ** 'ಬವನಾಶಿ' ನೋ.

**ಭವನಿಕೆ** (ನಾ). ಅರಮನೆ ; ಪ್ರಾಸಾದ : ಅವನಿಪತಿ ಮಜುದಿವಸ ಬೀಡೆತ್ತುವ ನಿಧಾನವನಜುದು ರಾಯನ ಭವನಿಕೆಯ ಹೊಱಬಾಹೆಯಲಿ ದಂಡಿಗೆಯನವನಿಳಿದ (ಕುಮಾ.ಸ. ೦೩-೨೭). [ಸಂ. ಭವನಿಕಾ]

**ಭವನಿರ್ಲೇಪ** (ನಾ). ಸಂಸಾರದಲ್ಲಿ ಆಸಕ್ತಿಯಿಲ್ಲದವನು ; ವಿರಕ್ತ : ತಾಪಸರು ಬಳಿವಿಡಿದು ಬರೆ ಬಳಿಕಾ ಪುರವ ಹೊಱವಂಟು ಭವನಿರ್ಲೇಪ ಭೀಷ್ಮ ದ್ರೋಣರನು ಕಳುಹಿಸಿದನು ಮನೆಗಳಿಗೆ (ಕುಮಾ.ಕ. ೦೩-೮). [ಸಂ.]

**ಭವನಿವಾರಣ** (ಗು). ೧. ಸಂಸಾರವನ್ನು ಪರಿಹರಿಸುವ ; ಪ್ರಾಪಂಚಿಕ ಕ್ಲೇಶಗಳನ್ನು ನಿವಾರಿಸುವ : ಭವನಿವಾರಣ ಭಾವಮೋಹನ ಭಾವನ ಭೂಷಣ ರಾಮಕಥೆಯಿಂದ ಕವಿಕುಲೋತ್ತಮ ಹೊಗಳಿದನು ವಾಲ್ಮೀಕಿ ಮುನಿರಾಯ (ತೊರಾ. ೦-೧೧). (ನಾ). ೨. ಸಂಸಾರವನ್ನು ಪರಿಹರಿಸು ವಂಥದು : ನೈಜವಪ್ಪುಸಾರಿವೇಷವು ಭವನಿವಾರಣವು (ಬಸಪು. ೩-೬೮). [ಸಂ.]

**ಭವಪರಿಣತಿ** (ನಾ). ಮತ್ತೆ ಮತ್ತೆ (ರೂಪಾಂತರದಿಂದ) ಹುಟ್ಟುವಿಕೆ ; ಜನ್ಮಪರಿವರ್ತನೆ : ದಯಿತಾಸಂಬಂಧಬಂಧಂ ಭವಪರಿಣತಿ ತನ್ಮೂಲಮಿಾ ಬೇಷಸಂ ನಿಶ್ಚಯಂ (ಶಾಂತಿಪು. ೯-೦೯). [ಸಂ.].

**ಭವಪರಿಣಾಮ** (ನಾ). = ಭವಪರಿಣತಿ : ಸಂಜಯನೆಂಬೊಂ . . . ಕಾದಿ ಸತ್ತು ಭವಪರಿಣಾಮಪರಾವರ್ತನದಿಂ ಬಂದು (ಶಾಂತಿಪು. ೯-೪೦ ವ). [ಸಂ.]

**ಭವಪರಿವರ್ತನ** (ನಾ). = ಭವಪರಿಣತಿ : ಚತುರ್ಗತಿಗಳೊಳಂ ಸರ್ವ ಜಘನ್ಯಮಪ್ಪಾಯುಷ್ಯದೊಳ್ ತೊಡಗಿ ಸಮಯಾದಿಕಾನುಕ್ರಮದಿಂದನೇಕ ಭವಪರ್ಯಾಯಪರಿಭ್ರಮಣದಿಂ ಬಂದು ಪುಟ್ಟುತ್ತುಂ ಕಡೆಯೊಳುತ್ಕೃಷ್ಟಾ ಯುಷ್ಯಮನೆಯ್ದಿ ನೆಱೆಯಿಸುವ ನೆಱವಿ ಭವಪರಿವರ್ತನಮೆಂಬುದು (ಸುಕುಮಾ. ೬-೬ ವ). [ಸಂ.]

**ಭವಪಾಶ** (ನಾ). ಸಂಸಾರ ಬಂಧನ ; ಪ್ರಾಪಂಚಿಕ ಬಂಧನ : ಭವ ಬಂಧನ ಭವಪಾಶವಾದ ಕಾರಣವೇನಯ್ಯಾ (ಬಸವ. ೭) ; ಬಿಡಿಸಿ ವಧೂ ಜನಮನೊಡಂಬಡಿಸಿ ಪಿತೃದ್ವಯಮನಖಿಳವಿಷಯಸುಖಕ್ಕೋಗಡಿಸಿ ಭವ ಪಾಶಮುಂ ಪಱಿಪಡಿಸಿ (ಧನ್ಯಪು. ೦೩-೭೩) ; ವಿರೋಧಿ ಷಡ್ವರ್ಗದ ವಿಕಾರವ್ಯಾಧಿಯಲಿ ಬೆಂಡಾಗಿ ಭವಪಾಶದಲಿ ಬಿಗಿವಡೆದು (ಕುಮಾ.ಕ. ೬-೨೧). [ಸಂ.]

**ಭವಪ್ರತ್ಯಯಜ್ಞಾನ** (ನಾ). [ಜೈನ] "ಕಾಲ ದೇಶಗಳು ಎಷ್ಟೇ ದೂರವಾಗಿದ್ದರೂ ಅಲ್ಲಿನ ವಿಷಯಗಳನ್ನು ತಿಳಿಯುವುದು ; ಹಿಂದೆ ನಡೆದ, ಮುಂದೆ ನಡೆಯುವ ಸಂಗತಿಗಳನ್ನು ಇದರಿಂದ ತಿಳಿಯ ಬಹುದು ; ದ್ರವ್ಯಕ್ಷೇತ್ರ ಕಾಲಭವಗಳನ್ನು ಅವಧಿಮಾಡಿಕೊಂಡು ಇಂದ್ರಿಯಗಳಿಗೆ ಅಗೋಚರವಾದ ವಿಷಯಗಳನ್ನು ತಿಳಿಯುವ ದಿವ್ಯಜ್ಞಾನ. ಇದು ದೇವ ನಾರಕರಿಗೆ ಸಹಜವಾಗಿರುತ್ತದೆ. ಹೀಗೆ ಸಹಜವಾಗಿ ಬರುವ ಅವಧಿಜ್ಞಾನಕ್ಕೆ 'ಭವಪ್ರತ್ಯಯಜ್ಞಾನ' ಎಂದೂ ಹೆಸರು" (ಕೈಪಿಡಿ. ೨೩) : ಭವಪ್ರತ್ಯಯಜ್ಞಾನಂ ತೊಟ್ಟನೆ ಪುಟ್ಟೆ ಪೂರ್ವಭವದೊಳ್ ತೊಟ್ಟೊಂದು ವೃತ್ತಾಂತಮಂ ನೆಱೆಯಱಿದು (ಅಂಕು. ೨-೬೬) ; ಪುಟ್ಟಿತ್ತಾ ನಾಕೇಂದ್ರಂಗೆ ನಿವ್ರ್ಯಾಕುಲಮಪ್ಪಳಭವ ಪ್ರತ್ಯಯಜ್ಞಾನಮಾಗಳ್ (ಸುಕುಮಾ. ೯-೨೩) ; ಅಂತು ಪಲಕಾಲ ಮೇನಾನುಮಂ ಮಾಡಿ ಮಱೆದವಂಗೆ ನೆನವಿ ಪುಟ್ಟುವಂತೆ ಪುಟ್ಟಿದ ಭವಪ್ರತ್ಯಯಜ್ಞಾನಪ್ರಭಾವದಿಂದಂ (ಚಂದ್ರಪು. ೯-೬೩ ವ). [ಸಂ.]

**ಭವಬಂಧ** (ನಾ). = ಭವಪಾಶ : ಪೂರ್ವಜನ್ಮನಿವೃತ್ತಿಯಾಗಿ ಗುರುಕರುಣ ವಿಡಿದಂಗೆ ಬಂಧನವೆಲ್ಲಿಯದೊ ಭವಬಂಧ[ಪಾಠಾಂ. ಬಂಧನ]ವೆಲ್ಲಿಯದೊ (ಬಸವ. ೯೬೦); ಎನ್ನದಾನೆಂಬೆರಡಱಿಂದವೆ ಬನ್ನಬಡುವನು ಜೀವನಲ್ಲದೆ ಮುನ್ನವಿನ್ನೆಂದೆಂದಿಗಾತ್ಮಂಗಿಲ್ಲ ಭವಬಂಧ (ಕುಮಾ.ವ್ಯಾ. ೭-೨೮). [ಸಂ.]

**ಭವಬಂಧನ** (ನಾ). ೧. = ಭವಪಾಶ : ಭವಬಂಧನ ಭವಪಾಶವಾದ ಕಾರಣವೇನಯ್ಯಾ (ಬಸವ. ೭); ಲಿಂಗಪರಾಙ್ಮುಖರನಾಗಳು ಭಜಿಸಿ ಭವ ಬಂಧನಕ್ಕೊಳಗಾಗದೆಂತಿಹರು (ಬಸಪು. ೬೦-೫೦) ; ಕರ್ಮದಿಂದಲ್ಲವೇ ಜೀವಿಯು ಬದ್ಧನಾಗಿ ಭವಬಂಧನದಲ್ಲಿ ಬಿದ್ದು ಒದ್ದಾಡುತ್ತಿದ್ದಾನೆ ? (ಶಾರದ. ೦೦೩). ೨. ಸಂಸಾರದಲ್ಲಿ ಸಿಕ್ಕಿ ಬಿದ್ದವನು : ಆಶೆಯೆಂಬ ಪಾಶದಲ್ಲಿ ಭವಬಂಧನನಾಗಿರ್ದೆನಯ್ಯಾ (ಬಸವ. ೬೯). [ಸಂ.]

**ಭವಬಡು** (ಕ್ರಿ). ಹುಟ್ಟು ಸಾವುಗಳ ಕಷ್ಟವನ್ನು ಅನುಭವಿಸು : ಅಶುಭಕರ್ಮಕೆ ಶುಭಕರ್ಮಕೆ ಸರ್ವರು ವಶರಾಗಿ ಭವಬಡುತಿಹರು (ಶಠಕ. ೬೮-೦೦೨). [ಭವ + ಪಡು₁]

**ಭವಬದ್ಧವೈರ** (ನಾ). ಜನ್ಮಾಂತರದಲ್ಲಿ ಉಂಟಾದ ಮತ್ಸರ; ಜನ್ಮಾಂತ ರೀಯ ದ್ವೇಷ : ಪುಟ್ಟಲೊಡಮಱಿದು ಮೊದಲೊಳ್ ಪುಟ್ಟಿದ ಭವಬದ್ಧ ವೈರದಿಂ ದಿಶಿಸುತನನ್ನುಟ್ಟಾಗೆ (ಶಾಂತಿಪು. ೯-೧೯); ಭವಬದ್ಧವೈರವುಂ ತಿಳಿದು ವಿಭಂಗಜ್ಞಾನದಿಂದೆ . . . ನವಖಂಡಮಾಗೆ ಪೊಟ್ಟಿರ್ ನವನಾರಕರಂ ಪುರಾಣನಾರಕರಾಗಳ್ (ಪದ್ಮಪು. ೦೩-೦೬೩). [ಸಂ.]

**ಭವಬಾಧೆ** (ನಾ). ಸಂಸಾರದ ತೊಂದರೆ,-ತಾಪತ್ರಯ : ಬೋಧ ನಿರಾಕೃತಿಯಿಂ ಭವಬಾಧಾಪೀಡಿತಶರೀರಿಯಾದೈ (ಸುಕುಮಾ. ೩-೨೬). [ಸಂ. ಭವಬಾಧಾ]

**ಭವಭೋಗ** (ನಾ). ಸಂಸಾರಸುಖ ; ಇಹಲೋಕದ ಸುಖ : ಅಪಾರ ಭವಭೋಗಮನಿಂತಿರೆ ಪತ್ತುವಿಟ್ಟು ಕಾನನದೊಳೆ ನಟ್ಟು ನಿಂದು (ಜಾದಂಪು. ೯೬೦). [ಸಂ.]

**ಭವಭ್ರಮಣ** (ನಾ). ಜನ್ಮಚಕ್ರದಲ್ಲಿ ಸುತ್ತುವುದು ; ಮತ್ತೆಮತ್ತೆ ಹುಟ್ಟಿ ಸಾಯುವುದು : ಇದನಾದಿಪ್ರಭವಂ ಭವಭ್ರಮಣದುಃಖೋಗ್ರಾಗ್ನಿ ಯೊಳ್ ಮಗ್ನಿದಪ್ಪುದು ಜೀವಂಗಳನೆಂಬಿನಂ (ಅಂಕು. ೦೩-೦೯). [ಸಂ.]

**ಭವಮಥನ** (ನಾ). ಜನ್ಮಕರ್ಮವನ್ನು ನಾಶಮಾಡುವವನು; ಮುಕ್ತಿ ದಾಯಕ : ಭವಗಹನದುಪದ್ರವಮಂ ಕಿಡಿಸು ಭವಾಂತಕಭವನಕ್ಕುಯ್ ತಡೆಯದೆನ್ನ ನೀಂ ಭವಮಥನಾ (ಅಂಕು. ೦೦-೩೬). [ಸಂ.]

**ಭವಮಾಲೆ** (ನಾ). ಹುಟ್ಟು ಸಾವುಗಳ ಪರಂಪರೆ; ಜನ್ಮಚಕ್ರ : ಆಸೆಗೆ ಹುಟ್ಟಿದ ಪ್ರಾಣಿ ಆಸೆಯನೆ ಕಲಿತು ಪುಣ್ಯಪದವಿಯ ಬಯಸಿದರೆ ಭವ ಮಾಲೆಯ ಭವವು ತಪ್ಪದು (ಬಸವ. ೦೨೯); ವಿವೇಕಶೂನ್ಯನು ತಿರುಗುವನು ಭವಮಾಲೆಯಲಿ ಮೋಕ್ಷವನಪೇಕ್ಷಿಸದೆ (ಅಮೃತ. ೦-೩೯) ; ಭವಮಾಲೆ ಸಗಱದು ಸುಖಿಸುವೊಡೆ ಆವ ಸದಾಶಿವನು ತಾನಕ್ಕು (ಸರ್ವಜ್ಞ. ೩೦೩). [ಸಂ. ಭವಮಾಲಾ]

**ಭವಮುಕ್ತ** (ನಾ). ಸಂಸಾರದಿಂದ ಬಿಡುಗಡೆ ಹೊಂದಿದವನು : ಶಿವ ಭಕ್ತಿಯುಳ್ಳಾತ ಭವಮುಕ್ತನಾದಾತ (ಸರ್ವಜ್ಞ. ೨೬೯). [ಸಂ.]

**ಭವರಮ್ಮ** (ನಾ). ಪಾರ್ವತಿಯ ಹೆಸರುಗಳಲ್ಲಿ ಒಂದು ; ಭ್ರಮರಾಂಬ : ಅಮ್ಮ ಅಮ್ಮ ಎಂದು ಭವರಮ್ಮನ ಕರೆವನು ಯಾವ ನೆವ ಎನಗೆ ಹೇಳದಿರು ನಿಮ್ಮಾಗಲಿ ಜೀವ ಬೇಸರಾಯ್ತು ಹಡೆದವ್ವ (ಸಿದ್ಧಪು. ೩-೮೩). [< ಸಂ. ಭ್ರಮರಾಂಬಾ]

**ಭವರಾಟಳ** 'ಭವಜಾಟಣ' ನೋ.

**ಭವರಿಪು** (ನಾ). ೧. ಸಂಸಾರಕ್ಲೇಶವನ್ನು ನಿವಾರಿಸುವವನು ; ಪರಮಾತ್ಮ. ೨. [ಜೈನ] ಅರ್ಹಂತ ; ಜಿನ : ಇಂದ್ರ ಭವರಿಪುವಂ

ಸ್ತುತಿಯಿಸಿ ಮುಕುಟವಿಘಟ್ಟಿತಪಾದನಾದನನುನಯದಿಂದಂ (ಕೃಷ್ಣಕು. ೦೦-೩೮). [ಸಂ.]

**ಭವರುಜೆ** (ನಾ). ರೋಗದಂತೆ ಕ್ಲೇಶವನ್ನುಂಟುಮಾಡುವ ಸಂಸಾರ ; ಐಹಿಕವ್ಯಾಪಾರ : ನಾನಾಭವರುಜೆಯೊಳು ಬಿದ್ದೆಂ ತೊಳಲ್ದೆಂ ಬಳಲ್ದೆಂ (ಕಂಕಕ. XVII. ೬೬೩೪). [ಸಂ. ಭವರುಜಾ]

**ಭವರೋಗ** (ನಾ). = ಭವರುಜೆ : ಭವರೋಗವ ಗೆಲುವ ಪರಿಯ ನೋಡಾ (ಬಸವ. ೬೩೩); ಭವರೋಗಕ್ಕಿದು ಭೇಷಜಂ (ಶೃಕು. ೨೭-೨೩). [ಸಂ.]

**ಭವರೋಗವೈದ್ಯ** (ನಾ). ಸಂಸಾರದ ತಾಪತ್ರಯಗಳನ್ನು ಪರಿಹರಿಸುವವನು; ಪರಮೇಶ್ವರ : ಭವರೋಗವೈದ್ಯನೆಂದು ನಾ ನಿಮ್ಮ ಮರೆಹೊಕ್ಕೆ (ಬಸವ. ೯೬೨); ಪವಡಿಸು ಪರಮಾತ್ಮನೆ ನೀನು ಭವರೋಗ ವೈದ್ಯ ಭಕ್ತರ ನಿಧಿಯೆ (ಪುಕಂದ. ೩-೦೩೦ ಪಲ್ಲವಿ); ಮುಂದೇನು ತೋರದೆ ದೈವವೆ ಶರಣೆಂದೆ ಭವರೋಗವೈದ್ಯನ ನೆನೆದೆ (೯೦ತಾಹ. ೯೯-೩೯). [ಸಂ.]

**ಭವರೋಗಿ** (ನಾ). ಸಾಂಸಾರಿಕ ಕಷ್ಟಗಳನ್ನು ಅನುಭವಿಸುತ್ತಿರುವವನು : ರಾಗದಿಂದುರಿದೇಳುತಿಹ ಭವರೋಗಿ ನಿನ್ನಲಿ ಮಾತನಾಡಲಿಕಾಗದು (ಶೃಕುಲೀ. ೦೩-೨೯). [ಸಂ. ಭವರೋಗಿನ್]

**ಭವಸ್ಮರಣೆ** (ನಾ). ಹಿಂದಿನ ಜನ್ಮದ ನೆನಪು ; ಜನ್ಮಾಂತರದ ಸ್ಮೃತಿ : ಮಱೆಯಂಚಿಯ ಮುದ್ದುಗೆಯ್ವುಮುಸುನಂಚೆವಾಳತಿಯಾ ಮಱೆಯೊಳಾ ದೆಱಕಮುಮಂ ಕಂಡೆನಗೆ ತೋಱುತ್ತುಂ ಭವಸ್ಮರಣೆ ತೊಟ್ಟನೆ ಪುಟ್ಟಿ (ಪಂಪು. ೪-೨೩). [ಸಂ. ಭವಸ್ಮರಣ]

**ಭವಸ್ಮೃತಿ** (ನಾ). = ಭವಸ್ಮರಣೆ : ವೇದನಿವಹಸ್ಮೃತಿಶಾಸ್ತ್ರ ಕಳಾಕಳಾಪಸಂಪನ್ನತೆಯೆಂತು ಬಂದುದು ಭವಸ್ಮೃತಿ ಪುಟ್ಟಿತೊ ಮೇಣ್ ವರಪ್ರಸಾದೋನ್ನತಿಯಾದುದೋ (ಕಾದಂಪೂ. ೯೦). [ಸಂ.]

**ಭವಹರ** (ನಾ). ಸಂಸಾರದ ದುಃಖವನ್ನು ನಾಶಮಾಡುವವನು : ನತವಿನೇಯವ್ರಾತ ಚೇತಸ್ಸರೋಹರನಾಗಿರ್ದುದಱಿಂ ಹರಂ ಭವಹರಂ ಮಾಣಿಕ್ಯದೇವಂ (ಅರಕು. ೦೩-೬); ಭವಹರ ನಿರೀಕ್ಷಿಸು ರಕ್ಷಿಸೆನ್ನನೆನುತ ಹೊರಳಿದನು (ಕುಮಾರಾ. ೩-೭೩). [ಸಂ.]

**ಭವಹರೆ** (ನಾ). ಸಂಸಾರದ ದುಃಖವನ್ನು ದೂರಮಾಡುವವಳು ; ಮುಕ್ತಿದಾಯಿನಿ : ಶ್ರೀಮತ್ಪ್ರಾಲೇಯಶೈಲೋದ್ಭವೆ ಶಿವೆ . . . ಭವಹರೆ ಶರ್ವಾಣಿ (ರಾಜಶೇ. ೬-೦೩೮). [ಸಂ. ಭವಹರಾ]

**ಭವಜೂಟಣ,** ಭವರಾಟಳ, ಭವಜೂಟಳ, ಭವಜೂಟಾಳ (ನಾ). ಪುನಃಪುನಃ ಹುಟ್ಟುವುದು ; ಜನ್ಮಚಕ್ರ : ಭವಭವದಲ್ಲೆನ್ನ ಮನವು ಸಿಲುಕದೆ ಭವಜೂಟಣ [ಪಾಠಾಂ-ಟಳ, ಟಾಳ]ದೊಳು ತುಂಬಿದೆ (ಬಸವ. ೬೮). ಭವರಾಟಳ : ಬೋಧಿವುರದ ಅಡಿಯಲ್ಲಿ ಭವರಾಟಳದ ಕಾರಣಗಳ ಕುಣಿಕೆಯನ್ನು ಕಂಡುಕೊಂಡನು (ತೀನಾಶ್ರೀ. ೦೦೨). **ಭವಜೂಟಳ** : ಮೇಲಿನ 'ಬಸವ' ಪ್ರಯೋಗದ ಪಾಠಾಂತರವನ್ನು ನೋಡಿ. **ಭವಜೂಟಾಳ** : ಅಱುಹು ಆಚಾರಹೀನವಾದ ಗುರುಲಿಂಗಜಂಗಮವ ದೇವರೆಂದು ಪೂಜಿಸುವ ಭಕ್ತಂಗೆ ಭವಜೂಟಾಳದಲ್ಲಿ ಸತ್ತುಸತ್ತು ಹುಟ್ಟಿ ಬಪ್ಪುದು ತಪ್ಪದಯ್ಯ (ಅಲಂದೇ. ೦೩೭-೦೦೬). [ಭವ + ಜೂಟಣ]

**ಭವಜೂಟಳ** 'ಭವಜೂಟಣ' ನೋ.

**ಭವಜೂಟಾಳ** 'ಭವಜೂಟಣ' ನೋ.

**ಭವಾಂತಕ** (ನಾ). ಸಂಸಾರದ ಕೋಟಲೆಗಳಿಗೆ ಯಮಸ್ವರೂಪನಾದವನು; ದೇವರು : ಅಂತ್ಯರಹಿತನನಪ್ರಮೇಯನನನಂತರೂಪನನಂಬುಜಭವಭವಾಂತಕನನುದ್ದಂಡದೈವವ ಕಂಡನಬುಜಭವ (ಕುಮಾಳ. ೬-೦೬). [ಸಂ.]

**ಭವಾಂತರ** (ನಾ). ಬೇರೆಯ ಹುಟ್ಟು ; ಜನ್ಮಾಂತರ : ನೆನೆದಂ ವಿಭಂಗದಿನತೀತಭವಾಂತರಭೂರಿವೈರಮಂ (ಶಾಂತಿಪು. ೭-೦೦೯); ಈಗಳಾಗಿಯುಂ ನೆನೆದು ನಿರಾಕುಳಂ ಬಗೆದು ಭಾವಿಸು ನಿನ್ನ ಭವಾಂತರಂಗಳಂ (ಸುಕುಮಾ. ೩-೨೯) ; ಪ್ರಥಮ ಭವಾಂತರದಲ್ಲಿ ಶಿಲಾದನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಭೃತ್ಯನ ಮಾಡಿಯೆನ್ನನಿರಿಸಿಕೊಂಡಿರ್ದಿರಯ್ಯಾ (ಬಸವ. ೪); ಕಣ್ಣಾಱೆಯದೊಡಂ ಕರುಳಱಿಯದೆ ಮಱುಗಿಸದಿರ್ಪುದೆ ಭವಾಂತರವ್ಯಾಮೋಹಂ (ಧರ್ಮನಾ. ೩-೯೪). [ಸಂ.]

**ಭವಾದ್ರಿ** (ನಾ). ಶಿವನು ವಾಸಮಾಡುವ ಬೆಟ್ಟ ; ಕೈಲಾಸಪರ್ವತ : ಮನುಜನನ್ನನೀಕ್ಷಿಸಿ ಭವಾದ್ರಿಯನೇಱಿದೆ . . . ನಭಕ್ಕೊಗೆದಾಗಳೆ ಪೋಗದಿರ್ದೊಡೊಯ್ಯನೆ ಬೆಸಗೊಳ್ಳೆಂ (ಕಾದಂಪೂ. ೬೩೩). [ಸಂ.]

**ಭವಾನಿ** (ನಾ). ಶಿವನ ಹೆಂಡತಿ ; ಪಾರ್ವತಿ : "ರುದ್ರಾಣೀ, ಶರ್ವಾಣೀ, ಕಾಳೀ, ಕಾತ್ಯಾಯನೀ, ಭವಾನೀ . . . ಮೇನಕಾತ್ಮಜಾ—ಈ ೨೧ ಗೌರೀದೇವಿಯ ಪೆಸರ್" (ಶಬ್ದಮ. ೯-೦೫); ಎಲ್ಲಿ ನದೀನದಾಳಿ ತಾನಲ್ಲಿ ಭವಾನಿ ಭಕ್ತಿ ಮಿಗೆ ಭಾವಿಸಿ ಭರ್ಗನನೊಲ್ದು ಪೂಜಿಪಳ್ (ಗಿರಿಜಾ. ೩-೮೨); ಪಾಲಿಸೆನ್ನಂ ಭೀಮಾಘಮರ್ದಿನಿ ಭವಾರ್ದಿನಿ ನೀಂ ಭವಾನೀ (ರಾಜಶೇ. ೯-೦೨೫). [ಸಂ. ಭವಾನೀ]

**ಭವಾನೀಧವ** (ನಾ). ಪಾರ್ವತಿಯ ಪತಿ ; ಪರಮೇಶ್ವರ : "ಭವನೀಶಂ . . . ಭವಾನೀಧವನುಗ್ರಂ . . . ವಾಮದೇವಂ ವೃಷಾಂಕಂ" (ಅಭಿ. ಕೋ. ೩-೦೩); ಇದು ಕೈಲಾಸಂ ಭವಾನೀಧವನ ನೆಲೆ (ಶಂಕರಾ. ೬-೭೯). [ಸಂ.]

**ಭವಾರಿ** (ನಾ). ೧. ಸಂಸಾರಕ್ಕೆ ಶತ್ರುವಾದವನು ; ಸಾಂಸಾರಿಕ ಕ್ಲೇಶಗಳನ್ನು ನಿವಾರಿಸುವವನು : ಶಿವ : ಭದ್ರಾರೂಢ ಭವಾರಿ ಭರ್ಗ ವೃಷಭನಂ . . . ನಾಡೆ ನೆನೆದಂ (ಹರಿಶ್ಚಂ. ೨-೭). ೨. ಶಿವನ ಶತ್ರು; ಮನ್ಮಥ : ಮುರಜನ್ನಾರಾಯಣರ್ಗಂ ಸಿರಿಗಂ ಶ್ರೀರಾಮೆಗಮತನುಗಂ ಭವಾರಿಗಮೈಕ್ಯಂ (ಕಾವ್ಯಾ. ೯೦೬). [ಸಂ.]

**ಭವಾರ್ದಿನಿ** (ನಾ). ಜನನಮರಣರೂಪವಾದ ಸಂಸಾರಬಂಧವನ್ನು ನಾಶಗೊಳಿಸುವವಳು ; ಪಾರ್ವತಿ : ಪಾರ್ವತಿ ಪಾಲಿಸೆನ್ನಂ ಭೀಮಾಘಮರ್ದಿನಿ ಭವಾರ್ದಿನಿ ನೀಂ ಭವಾನೀ (ರಾಜಶೇ. ೯-೦೨೫). [ಸಂ. ಭವಾರ್ದಿನೀ]

**ಭವಾವಳಿ** (ನಾ). = ಭವಮಾಲೆ : ಅರಸಂ . . . ನಾಲ್ವರ ಭವಾವಳಿಯಂ ಬೆಸಗೊಳೆ (ಆದಿಪು. ೩-೨ ವ); ಕತೆ ಕಿಡದೆಯುಂ ಭವಾವಳಿ ತಡಮಾಗದೆಯುಂ . . . ಆ ಜಿನಚಂದ್ರಂ ಇಂತೆಂದಂ (ಶಾಂತಿಪು. ೩-೦೦); ಹಸ್ತಿಯ ತನ್ನ ಮುನ್ನಿನ ಭವಾವಳಿಯೆಲ್ಲವನೆಯ್ದೆ ಪೇಳ್ದೆ (ಕಂದಪುರಾ. ೦೫-೩೩). [ಸಂ. ಭವಾವಲಿ]

**ಭವಾಳಿ** (ನಾ). = ಭವಮಾಲೆ : ಅದು ನಮ್ಮನಿಬರ ಭವಾಳಿಯಿಂದೆ ನವಾಗನು ಭೂತಪೂರ್ವಂ (ಆದಿಪು. ೦೩-೩೭ ವ); ಅಂತು ಭವಾಳಿಯನೋಳಿಯೆ ಪೂರ್ವಾಪರಪರಾಮರ್ಶಗೆಯ್ದು (ಶಾಂತಿಪು. ೩-೭ ವ). [ಸಂ. ಭವಾಲೀ]

**ಭವಿ** (ಗು). ೧. ಬದುಕಿರುವ; ಜೀವದಿಂದಿರುವ. (ನಾ). ೨. ಸಂಸಾರಬಂಧನಕ್ಕೊಳಗಾದವನು. ೩. [ವೀಶೈ] ವೀರಶೈವದೀಕ್ಷೆಯನ್ನು ಪಡೆಯದವನು : ತನು ಭಕ್ತನಾಯಿತ್ತು ಎನ್ನ ಮನ ಭವಿ ಕೂಡಲಸಂಗಮದೇವಾ (ಬಸವ. ೨೬೪); ಭವಿ ಮುಟ್ಟಬೇಡ ಬೇಡೆಂದು ಮಾಣಿಸುತ ಮಿರೆ (ಪಾಲ್ಕುರಿ. ದೇ. ೨೭೦-೬); ಆದಿಶಿವಭಕ್ತಂಗೆ ಮದುವೆಯಾಧಾರದಿ ನಾ ಮಾಳ್ಪೆನಲ್ಲದೆ ಈ ದುಹಿತೆಯಂ ಭವಿಗೆ ಕೊಡೆನು (ಬಸವಪು. ೩-೬೬); ಭಕ್ತರಿಗೆ ಭವಿಗಳಿಗೆ ಯುಕ್ತಿಯುತರವಕ್ಕು ಭಕ್ತ ತಾ ಮುಕ್ತನಾಗಿಹರೆ ಭವಿ ಭವವ ಸುತ್ತುತ್ತಲಿಹನು (ಸರ್ವಜ್ಞ. ೨೬೦). [ಸಂ. ಭವಿನ್]

**ಭವಿಕ** (ಗು). ೧. ಹಿತಕರವಾದ. ೨. ಯುಕ್ತ; ಯೋಗ್ಯ. ೩. ಸಮೃದ್ಧ. (ನಾ). ೪. ಒಳ್ಳೆಯದು : "ಶ್ವಃ(ಸ್ವ)ಶ್ರೇಯಸಂ . . . ಭವಿಕಂ, ಭಾವುಕಂ, ಶ್ರೇಯಃ, ಭವ್ಯಂ, ಭದ್ರಂ, ಮಂಗಳಂ—ಈ ೧೧ ಒಳ್ಳಿತರ್ಕೆ ಪೆಸರ್" (ಶಬ್ದಮ. ೨೦-೦೨೨). ೫. ಶುಭ ; ಮಂಗಳ. ೬. ಏಳಿಗೆ;

ಅಭಿವೃದ್ಧಿ. ೭. ಸುಖ ; ಸಂತೋಷ : ಎಲೆಯಕ್ಕ ತವೆದಿಂದಲ್ಲಮಾಗೆ ವಸ್ಕದ ಸುಮರ್ದಿಕ್ಕೆ ಭವಿಕದಿಂದವ ನಿನ್ನ ತಕ್ಕೆಯೊಳಗಿರುವ ಮಾಳ್ಕೆಯು ಮಾಳ್ಪೆನು (ಪ್ರಶುಪು. ೩-೯೧); ಶಿವಪ್ರಿಯನಾಚಿಯೆಂದೆಂಬ ಗಣಿಕಾಂಗನೆಯುಂ ಶಿವನ ವಾರಂ ಕುಲಶ್ಚರಿಯರಂ ಕರೆವುತಂ ಭವಿಕದಿಂ ರತಿಸೆಸಲ್ (ಪ್ರಶುಪು. ೩-೧೩೪). ೮. ಐಶ್ವರ್ಯ ; ಸಂಪತ್ತು : ಅವರೆಷ್ಟು ಧನವಂತರ್, ಇವರೆಷ್ಟು ಬಲವಂತರ್, ಅವರೆಷ್ಟು ಯುತವಂತರ್ ಎನುವ ಕರುಬಿನಲಿ ಭವಿಕ ನಿನಗೆಷ್ಟಿಹುದೊ ಮರೆತು ನೀಂ ಕೊರಗುವುದು ಶಿವನಿಗೆ ಕೃತಜ್ಞತೆಯೆ ? (ಮಂಕುತಿ. ೭೯೭). [ಸಂ.]

**ಭವಿತನ** (ನಾ). ಭವಿಯಾಗಿರುವಿಕೆ ; ಶಿವಭಕ್ತನಲ್ಲದಿರುವ ಸ್ಥಿತಿ : ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ ಆ ಭವಿಸಂಗ ಭಂಗವೆಂದರಿಪುದು ನೋಡಾ (ಶವ್ಯಶ. ೩-೦) ; ಭವಿತನಂ ತೊಲಗಿ ಸದ್ಭಕ್ತಿಯಿಂಬಾಗಿ ಇರೆ (ಬಸರ. ೯-೬೭). [ಭವಿ + —ತನ]

**ಭವಿತವ್ಯ** (ನಾ). ೧. ಮುಂದೆ ಆಗಬೇಕಾದುದು,— ನಡೆಯತಕ್ಕದು. ೨. ಹಿಂದೆ ಮಾಡಿದ ಪಾಪಪುಣ್ಯಗಳ ಫಲ,_ಪರಿಣಾಮ : "ಧರ್ಮ ಮೆನೆ ಪುಣ್ಯಮಕ್ಕು ಭವಿತವ್ಯಮೆನಲು ಆ ವಿಪಾಕಂ" (ಮಂಗರಾ. ೯-೨೯): ಎನ್ನ ಭಾಗ್ಯಕ್ಕಂ ಭವಿತವ್ಯಕ್ಕಂ ಅನುಸಾರಿಗಳೆ ಸಹಾಯರಾದರಿವರ ಮೇಲೆ ದೋಷಮಿಲ್ಲಂ (ಕಂತಕಂ. ೦೯೦-೨೦) ; ಅಂಡಜ ಸ್ವೇದಜ ಉದ್ಭಿಜ ಜರಾಯುಜರೆಂಬ ಪ್ರಾಣಿಗಳಿಗೆ ಭವಿತವ್ಯವ ಕೊಟ್ಟವರಾರೋ (ಬಸವ. ೨೨೩). ೩. ಉತ್ತರಕಾಲ ; ಭವಿಷ್ಯ : ಈಗಲೂ ಹಿಂದೂಸಮಾಜವು ಎಚ್ಚೆತ್ತು ಕೊಳ್ಳದಿದ್ದರೆ ಭವಿತವ್ಯದಲ್ಲಿ ಹಿಂದೂ ಎಂಬುದು ಕೇವಲ ಐತಿಹಾಸಿಕಅಂಶ ವಾಗಿ ಉಳಿದೀತೇ ವಿನಾ ಜೀವಂತವಾಗಿ ಬದುಕುವ ಜನಾಂಗವಾಗಿ ಮುನ್ನಡೆಯುವುದಿಲ್ಲ (ಧರ್ಮಶ್ರೀ. ೩೩೭) ; ಭವಿತವ್ಯದ ತೆರೆಯನ್ನು ಓಸರಿಸಿ ನೋಡುವೆಯೇನು ? (ಮುಹಾಡ. ೩೦). [ಸಂ.]

**ಭವಿತವ್ಯತೆ** (ನಾ). ೧. = ಭವಿತವ್ಯ ೨ : "ಭಾಗಧೇಯಂ, ಭಾಗ್ಯಂ, ವಿಪಾಕಃ, ಭವಿತವ್ಯತಾ—ಈ ೪ ಭಾಗ್ಯದ ಪೆಸರ್" (ಹಲಾಯು. ೨೦-೦೨೭); ನಿಶ್ಚಲವಾದಂಥ ಭವಿತವ್ಯತೆಯನುಂತೆ ಓಡಿ ತಪ್ಪಿಸಿಕೊಳ್ಳಲರಿದು (ಇಂಪಾಶ. ೦೨೭-೦೭). ೨. = ಭವಿತವ್ಯ ೩ : ಮಾರ್ಕ್ಸನ ಮತ ಒಂದೇ . . . ಜನತೆಯು ಸರ್ವಾಂಗಸುಂದರವಾದ ಸ್ವಾತಂತ್ರ್ಯದ ಭವಿತವ್ಯತೆಯ ಗುರಿಯನ್ನು ತೋರಿಸಿ ದಾರಿಯನ್ನು ತೆರೆಯಬಲ್ಲುದು (ಮಾಪಾದ. ೦೭೧). [ಸಂ. ಭವಿತವ್ಯತಾ]

**ಭವಿಷಿಯ** (ನಾ). = ಭವಿಷ್ಯ ೧ : ದಿವಸದಿಂ ದಿವಸಕ್ಕೆ, ನಿಮಿಷದಿಂ ನಿಮಿಷಕ್ಕೆ, ಭವಿಷಿಯವ ಚಿಂತಿಸದೆ ಬದುಕ ನೋಕುತಿರು (ಮಂಕುತಿ. ೬೮೨). [< ಸಂ. ಭವಿಷ್ಯ]

**ಭವಿಷ್ಯ** (ನಾ). ೧. ಮುಂದೆ ನಡೆಯುವುದು ; ಮುಂದಿನ ಸ್ಥಿತಿಗತಿ : ಎನ್ನಾಯುಷ್ಯ ಭವಿಷ್ಯ ಎನ್ನ ಭಕ್ತರು ಕಂಡಯ್ಯಾ ಎನ್ನಾಯುಷ್ಯ ಭವಿಷ್ಯ ಎನ್ನ ಪ್ರಮಥರು ಕಂಡಯ್ಯಾ (ಬಸವ. ೪೦೯); ಗೊತ್ತಿಹುದೆಲ್ಲರಿಗೆಮ್ಮ ಭವಿಷ್ಯವು ನಾಳೆಗೆ ಮಣ್ಣಾಗಲಿಹೆವು (ಇಂಪಾಶ. ೦೩೩-೬೩); ತಮ್ಮ ಮನೆಯ ಭವಿಷ್ಯವೇನು ? (ಶಧ್ಯಸ. ೨೦೦). ೨. ಮುಂದೆ ಬರುವ ಕಾಲ; ಭವಿಷ್ಯತ್ಕಾಲ: ಭೂತಕಾಲದಲ್ಲಿ ಅನೇಕ ವಿಷಯಗಳು ನಮ್ಮ ಗಮನಕ್ಕೆ ಬಂದಿವೆ, ವರ್ತಮಾನಕಾಲದಲ್ಲೂ ಬರುತ್ತಿವೆ; ಭವಿಷ್ಯದಲ್ಲೂ ಬರತಕ್ಕವಿವೆ (ಶಿಕ್ಷದ. ೩೨೩). ೩. ಜೋಯಿಸರು ಜಾತಕ ಅಥವಾ ಪ್ರಶ್ನಲಗ್ನಕಾಲ ಮೊದಲಾದ ಆಧಾರದಿಂದ ಹೇಳುವ, ಮುಂದೆ ನಡೆಯುವ ವಿಷಯ : ನಮ್ಮ ಜೋಯಿಸರು ಹೇಳಿದ್ದ ಭವಿಷ್ಯ ಅಕ್ಷರಶಃ ಸತ್ಯವಾಯಿತು (ರೂಢಿ). [ಸಂ.]

**ಭವಿಷ್ಯಂತಿ** (ನಾ). [ವ್ಯಾಕ] ಮೂರು ಕಾಲಗಳಲ್ಲಿ ಒಂದು; ಭವಿಷ್ಯತ್ಕಾಲ: ಭೂತವತಿ ವರ್ತಮಾನಾ ಖ್ಯಾತ ಭವಿಷ್ಯಂತಿ ಸರ್ವಸಾಧನಿಯೆಂಬಾಖ್ಯಾತ ವಿಭಕ್ತಿಗಳಕ್ಕುಮತೀತ ಭವದ್ಭಾವಿಕಾಲ ವಿಧ್ಯಾದಿಗಳೊಳ್ (ಶಾವ್ಯಾವ. ೩೭೪): ಪ್ರಥಮಪುರುಷದ ವರ್ತಮಾನ ಭವಿಷ್ಯಂತಿಗಾದ 'ಗುಂ' ಎಂಬುದು ಪರಮಾದೊಡಂ ಕ್ರಿಯಾಪದದೊಳ್ ಶಿಥಿಲತ್ವಮುಂಟು (ಶಮದ. ೯೪ ವೃತ್ತಿ). [ಸಂ. ಭವಿಷ್ಯಂತೀ]

**ಭವಿಷ್ಯತ್ಕಾಲ** (ನಾ). =ಭವಿಷ್ಯತ್ತು ೩: ಭೂತ=ಭೂತಕಾಲದ, ಭವಿಷ್ಯತ್=ಭವಿಷ್ಯತ್ಕಾಲದ, ಕ್ರಿಯೆಗಳ್=ಕ್ರಿಯಾಪದಂಗಳ್ (ಶಮದ. ೭೩ ವೃತ್ತಿ); ಭವಿಷ್ಯತ್ಕಾಲದಲ್ಲಿ : (i) ಈ ಪ್ರತ್ಯಯವು ವ ಆಗುತ್ತದೆ (ಕ್ಯಬಿಡ. ೯೩) ; 'ಹೊರಡುವನು' ಎಂಬುದು ಮುಂದೆ ಬರುವ ಕಾಲದಲ್ಲಿ ಎಂದರೆ ಭವಿಷ್ಯತ್ಕಾಲದಲ್ಲಿ ಕ್ರಿಯೆ ನಡೆಯುವುದನ್ನು ತಿಳಿಸುತ್ತದೆ (ಶುಧ್ಯಮ. ೬೨). [ಸಂ.]

**ಭವಿಷ್ಯತ್ತು** (ಗು.). ೧. ಮುಂದೆ ಆಗಲಿರುವ,—ಜರುಗುವ : ಅಂತು ಭವಿಷ್ಯದ್ದ್ವಿಜನ್ಮವರ್ಣಾಧ್ಯಯನಾಧ್ಯಾಪನ ದಾನಪ್ರತಿಗ್ರಹಯಜನಯಾಜನ ವಿಶಿಷ್ಟವೃತ್ತಿಯುಮಂ . . . ನಿಜಿಸಿ (ಆದಿಪು. ೬-೭೩ ವ). (ನಾ.) ೨. ಬರಲಿರುವ ಕಾಲ ; ಮುಂದಿನ ಕಾಲ : ಭವಿಷ್ಯತ್ತಿನಲ್ಲಿ ಏನಾಗುವುದೋ ಯಾರಿಗೆ ಗೊತ್ತು ? (ರೂಢಿ). ೩. [ವ್ಯಾಕ] ವರ್ತಮಾನ, ಭೂತ ಮತ್ತು ಭವಿಷ್ಯತ್ತು ಎಂಬ ಮೂರುಕಾಲಗಳಲ್ಲಿ ಒಂದು : ಭವಿಷ್ಯತ್ಕಾಲ : ದವಪವಕಾರಂಗಳ್ ಮೂಲದೊಳಕ್ಕುಂ ಭೂತವರ್ತಮಾನ ಭವಿಷ್ಯದ್ವಿದಿತ ವಿಭಕ್ತಿ ತ್ರಿತಯಕ್ಕದೆಲ್ಲ ವಚನಂಗಳೊಳವಿಭಾಗಮಪ್ಪಕ್ಕುಂ (ಶಾವ್ಯಾವ. ೩೯೭); ನವನಾಗಿ ಭೂತದೊಳ್ ಲಿಂಗವಚನದೊಳ್ ತಳ್ತು ವರ್ತಮಾನ ಭವಿಷ್ಯದ್ವ್ಯಾಪೃತಿಗಳ ಗುಂ ಕುಂ ಸಲ್ವುವು ತಾವನೈಕವಚನದೊಳ್ ನೆಲಸಿರ್ದುಂ (ಶಮದ. ೨೨೭). [ಸಂ. ಭವಿಷ್ಯತ್]

**ಭವಿಷ್ಯತ್ಪುರಾಣ** (ನಾ). ಪ್ರಸಿದ್ಧವಾದ ಹದಿನೆಂಟು ಪುರಾಣಗಳಲ್ಲಿ ಒಂದು ; P ಇವರಲ್ಲಿ ಹದಿನಾಲ್ಕುಸಾವಿರದ ಐನೂರು ಶ್ಲೋಕಗಳಿವೆಯೆಂದು ಹೇಳಲಾಗಿದೆ : ಬ್ರಹ್ಮಪುರಾಣ . . . ಭವಿಷ್ಯತ್ಪುರಾಣ. . . ಬ್ರಹ್ಮಾಂಡಪುರಾಣವೆಂಬಿವೇ ನಾಲ್ಕುಲಕ್ಷಗ್ರಂಥಸಂಖ್ಯೆಯುಳ್ಳ ಹದಿನೆಂಟು ಮೂಲಪುರಾಣಂಗಳ್ (ಬಿವೇಕ. ೭). [ಸಂ.]

**ಭವಿಷ್ಯನಿಧಿ** (ನಾ). ಉದ್ಯೋಗಸ್ಥರಿಗೆ ಮುಂದೆ ಸಹಾಯವಾಗಲೆಂಬ ದೂರದೃಷ್ಟಿಯಿಂದ ಪ್ರತಿ ತಿಂಗಳ ಸಂಬಳದಲ್ಲೂ ಸ್ವಲ್ಪ ಸ್ವಲ್ಪ ಹಣ ಹಿಡಿದು ಆಡಳಿತದವರೂ ತಮ್ಮ ವಂತಿಗೆಯನ್ನು ಸೇರಿಸಿ ನಿವೃತ್ತರಾದ ಮೇಲೆ ಒಟ್ಟಿಗೆ ಕೊಡಲು ಕೂಡಿಡುವ ಹಣ : "ಕ್ಷೇಮನಿಧಿ" (Provident Fund. ಶಬ್ದಾ. ೬೩): ನಿವೃತ್ತಿವೇತನ . . . ಅವರಲ್ಲಿ ಹಾಗೆ ಸಲ್ಲಬೇಕಾದ ಸೇವಾನಿವೃತ್ತಿವೇತನವೂ ಹಾಗೆ ಸಲ್ಲಬೇಕಾದ ಉಪದಾನವೂ ಮತ್ತು ಭವಿಷ್ಯನಿಧಿಗಾಗಿ ಕೊಟ್ಟ . . . ಮೊತ್ತಗಳೂ ಸೇರಿರುತ್ತವೆ (ಘಾರಾವ. ೨೨೦). [ಸಂ.]

**ಭವಿಷ್ಯಪುರಾಣ** (ನಾ). =ಭವಿಷ್ಯತ್ಪುರಾಣ : ಪದ್ಮ, ಸ್ಕಾಂದ ಮತ್ತು ಭವಿಷ್ಯಪುರಾಣಗಳು . . . ತೀರ್ಥವ್ರತಗಳ ಒಂದು ಸಂಪುಟವಾಗಿ ಪರಿಣಮಿಸಿವೆ (ಭಾರದ. ೦೩೭). [ಭವಿಷ್ಯ + ಪುರಾಣ]

**ಭವಿಷ್ಯಶಾಸ್ತ್ರ** (ನಾ). ಗ್ರಹಗತಿ ಮೊದಲಾದ ಸಾಧನಗಳಿಂದ ಮುಂದೆ ಆಗುವ ಫಲವನ್ನು ತಿಳಿಸುವ ಜ್ಯೋತಿಷ್ಯಶಾಸ್ತ್ರದ ಒಂದು ಭಾಗ : ಪ್ರಶ್ನಭಾಗ : ಭವಿಷ್ಯಶಾಸ್ತ್ರವು ಅವರಿಗೆ ಮುಖಪಾಠವಾದಂತೆಯಾಗಿತ್ತು (ಹೇಮಂತ. ೯). [ಸಂ.]

**ಭವಿಸು** (ಕ್ರಿ). ಹುಟ್ಟು ; ಜನಿಸು : ಜನಹೃದಯದೊಳ್ ಭಕ್ತಿಯಿಂ ಭವಿಸಿದುದು ನವಚೇತನಂ (ಶಂಧ್ರಸ. ೬೦-೩); ರಾಮನಾಲೈಸಿದನು ಲೋಕರೋಮಾಂಚಕರವಾಣಿಯುಂ ಭವಿಸಿದಾ ಧರ್ಮದಾಮೋದಮಂ ! (ಶ್ರೀರಾಮಾ. ೦೬೯-೯೭೯). [ಭವ + — ಇಸು]

**ಭವೋತ್ತಾರಣ** (ಗು). ಸಂಸಾರದಿಂದ ಪಾರುಗಾಣಿಸುವ : ಭವೋತ್ತಾರಣ ಪಂಚವಕ್ತ್ರನೆಸದಂ ಕನಕಾದ್ರಿಯೊಳದ್ರಿಜಾನ್ವಿತಂ (ರಾಶಿಲೀ. ೩-೦೦೩). [ಸಂ.]

**ಭವ್ಯ** (ಗು). ೧. ಮುಂದೆ ಆಗುವ ; ಆಗಲಿರುವ. ೨. ಸರಿಯಾದ ; ಯೋಗ್ಯವಾದ; ಅರ್ಹವಾದ. ೩. ಮಂಗಳಕರವಾದ; ಶುಭವಾದ. ೪. ಶ್ರೇಷ್ಠವಾದ ; ಲೋಕೋತ್ತರವಾದ : ಭವ್ಯಗುಡಿಯೊಳಗಿನ ದಿವ್ಯಲಿಂಗದ ಮುಂದೆ ಅವ್ವ ಕರೆದೊಯ್ದು ತೋರಿದರು (ಸಿದ್ಧ. ೫-೬೫); ಜಗದೀಶ್ವರನ ಮಹಿಮೆ ಸಂವೇದ್ಯವಹುದಿಲ್ಲಿ ಭವ್ಯಸೌಂದರ್ಯಶೀಲದ ವಸ್ತ್ಯ ಶಾಂತಿಯಲಿ (ಶ್ರೀರಾಮಾ. ೬೬-೧೧೭). (ನಾ). ೫. ಮುಂದೆ ಆಗಬೇಕಾದುದು ; ಆಗಲಿರುವುದು : ವಸ್ತುವನ್ನು ಭೂತ, ಭವ್ಯ (ಇರುವುದು, ಇನ್ನು ಮುಂದೆ ಆಗಬೇಕಾದ್ದು) ಎಂದು ಎರಡು ಬಗೆಯಾಗಿ ವಿಂಗಡಿಸುವರು. ಧರ್ಮಾಧರ್ಮಗಳು ಕರ್ಮವನ್ನು ಮಾಡಿದ ಮೇಲೆ ಆಗತಕ್ಕವುಗಳಾದ್ದರಿಂದ ಅವುಗಳು ಭವ್ಯವೆನಿಸುವುವು (ಪ್ರಶ್ನೋ. ೨೨ ೮೩೬). ೬. ಒಳ್ಳೆಯದು ; ಮಂಗಳ ; ಶುಭ : "ಶ್ವಃ(ಸ್ವ)ಶ್ರೇಯಸಂ. ಕಲ್ಯಾಣಂ. ಶ್ವೋವಶೀಯಂ, ಶಿವಂ, ಶುಭಂ, ಭವಿಕಂ, ಭಾವುಕಂ, ಶ್ರೇಯಃ, ಭವ್ಯಂ. ಭದ್ರಂ, ಮಂಗಳಂ – ಈ ೧೧ ಒಳ್ಳಿತರ್ಕೆ ಪೆಸರ್" (ಪದ್ಯಾಯು. ೨೦-೧೨೨) : ಭವ್ಯಕ್ಕೆ ಹದ್ದಿಲ್ಲ ಸಿದ್ಧನಾಗೆಲ್ಲಕಂ (ಮಂಕುತಿ. ೭೮೩). ೭. ದೊಡ್ಡದು : ವಿಶಾಲವಾದುದು : ಗ್ರಂಥಗಳು ವಾಸವಾಗಿರಬೇಕಾದ ಭವನವು ಭವ್ಯವೂ ಭದ್ರವೂ, ಮನೋಹರವೂ ಆಗಿರಬೇಕು (ಗ್ರಂಥಾಲ. ೫). ೮. ಅದ್ಭುತ : ಸೌಂದರ್ಯಮೀಮಾಂಸೆಯಲ್ಲಿ ಚರ್ಚೆಗೆ ಅರ್ಹವಾದ ಮತ್ತೊಂದು ವಿಚಾರವೆಂದರೆ . . . ಭವ್ಯ ಮತ್ತು ಕ್ಷುದ್ರಗಳ (Rediculous) ಪರಸ್ಪರ ಸಂಬಂಧ ಮತ್ತು ಅವುಗಳ ವಿವರಣೆ (ಸೌಂದರ. ೩೪). ೯. ವಿದ್ವಾಂಸ ; ಪ್ರಾಜ್ಞ : ಭವ್ಯರ್ ಸತ್ಕೃತಿವೇಳ್ದರ್ ಕಾವ್ಯಾಲಾಪಂಶ್ಚ ವರ್ಜಯೇದೆಂಬುದಸತ್ಕಾವ್ಯನಿಬಂಧನು (ರಾಜಶೇ. ೧-೩೪). ೧೦. ಅತರ್ಕ್ಯವಾದುದು; ಗೆಲಲಾರದುದು : "ಕಲ್ಯಾಣಮತರ್ಕ ಮೋಕ್ಷಗತಜೀವಿಗಳೆಂತಿವು ಭವ್ಯವಾಚಕಂ" (ನಾಣಾರ. ೯೦). ೧೧. [ಜೈನ] ಮೋಕ್ಷಕ್ಕೆ ಅರ್ಹತೆಯನ್ನು ಹೊಂದಿರುವ ಸಂಸಾರಿಯಾದ ಜೀವ; ಸಮ್ಯಗ್ದರ್ಶನ ಮೊದಲಾದ ಭಾವಗಳನ್ನು ಪ್ರಕಟಿಸುವ ಯೋಗ್ಯತೆಯುಳ್ಳವನು : ಆನೋನೊ ಭವ್ಯರೆನೊ ಅಭವ್ಯರೆನೊ ಎಂದು ಬೆಸಗೊಂಡೊಡೆ (ವಡ್ಡಾರಾ. ೧೦೦-೨೪) ; ನೀಂ ಭವ್ಯನೆಯುಜ್ಞಾನಿಯುಮೊಲ್ ನಿನ್ನಂ ಮಱೆದೇನೀ ವಿಷಯದ ಸುಖಕ್ಕೆ ಲಂಪಟನಪ್ಪೋ (ಆದಿಪು. ೩-೭೬) ; ಈ ಶುಭಕಥನಮನತ್ಯಾನಂದದಿಂ ಕೇಳ್ದ ಭವ್ಯಪ್ರಭುಸಭೆಗೆಸೆದಿರ್ಕೆಂ ಮಂಗಳಶ್ರೀವಿಲಾಸಂ (ಧರ್ಮಾಮೃ. ೦-೬೨).

**ಭವ್ಯಚಿಂತಾಮಣಿ** = ಭವ್ಯರ ಇಷ್ಟಾರ್ಥಗಳನ್ನು ನೆರವೇರಿಸುವವನು. ಗುಣದೊಂಟುಂ ಬಂದು ತನ್ನೊಳ್ ಪೆಱದಿರೆ . . . ಭವ್ಯಚಿಂತಾಮಣಿಯುಂ ತಾನಾಗಿ (ಆದಿಪು. ೦೬-೫೦): ಭವ್ಯಚಿನ್ತಾಮಣಿ ಸಕಳಕಳಾಕೋವಿದಂ ಕಾವ್ಯಕಳ್ಪಾಸನನೆನ್ದಿಸನ್ಪದಿಂದಂ ಪೊಗಳೆ ನೆಗಳ್ದನೀ ಗೋಪಣಾನ್ದಿ ಬ್ರತೀಂದ್ರಂ (ಎಕ. II, ೬೯-೬೫; ಸು. 1100). [ಸಂ.]

**ಭವ್ಯಜನ** (ನಾ). [ಜೈನ] ಮುಮುಕ್ಷುಗಳ ಸಮೂಹ : ಲಸದ್ರತ್ನತ್ರಯಂಗಳ್ಸುಖೋಪಾಯಂಗಳ್ ಗಡಮೆಂದು ಭವ್ಯಜನಮಂ ಕಣ್ಣಾಱೆ ಕಲ್ಪಿಪ್ಪ ಪಾಧ್ಯಾಯಜ್ಯೋತಿಸುಗೆಮ್ಮ ಚಿತ್ತಗೃಹದೊಳ್ರತ್ನತ್ರಯಜ್ಯೋತಿಯಂ (ಆದಿಪು. ೦-೪): ಭವ್ಯಜನಹೃದಯಾನಂದರುಂ ಕೊಣ್ಡಕುಂದಾನ್ವಯಗಗನ ಮಾರ್ತ್ತಣ್ಡರುಂ (ಎಕ. II, ೬೬-೬೬ ; 1176). [ಸಂ.]

**ಭವ್ಯಜೀವ** (ನಾ). ಮೋಕ್ಷಕ್ಕೆ ಯೋಗ್ಯವಾದ ಜೀವ : ಭಟ್ಟಾರಾ ಅದೇಂ ಭವ್ಯಜೀವನೊ ಅಭವ್ಯಜೀವನೊ ಎಂದು ಬೆಸಗೊಂಡೊಡೆ (ವಡ್ಡಾರಾ.೧೦-೯). [ಸಂ.]

**ಭವ್ಯತೆ** (ನಾ). ೧. ಹಿರಿಮೆ ; ಶ್ರೇಷ್ಠತೆ : ಶೂನ್ಯಸಂಪಾದನೆ ಮತ್ತು ಪ್ರಭುಲಿಂಗಲೀಲೆಗಳಲ್ಲಿ ಬರುವ ಅಲ್ಲಮನ ಚಿತ್ರ ಹೆಚ್ಚು ಕಡಿಮೆ ಒಂದೇ. ಅದೇ ಭವ್ಯತೆ, ಅದೇ ಔನ್ನತ್ಯ ಎರಡರಲ್ಲೂ (ಶೂನ್ಯಸಂ. ೦೬೯); ಆ ಶಿವನ ಸೃಷ್ಟಿಯಲ್ಲಿ ಭವ್ಯತೆ, ಎಷ್ಟು ಇರುವುದೋ ವೈವಿಧ್ಯತೆಯೂ ಅಷ್ಟೇ ಇರುವುದು (ಬಂಗಾರ. ೨೦). ೨. [ಜೈನ] ಮೋಕ್ಷಕ್ಕೆ ಅರ್ಹತೆಯನ್ನು ಪಡೆಯುವಿಕೆ; ರತ್ನತ್ರಯಪ್ರಾಪ್ತವಾಗುವ ಯೋಗ್ಯತೆ : ಇಂತು ಭವ್ಯತೆ ಜಗತ್ಕಾಶ್ಚರ್ಯಮಾಯಿತ್ತೆನಲಾ (ಆದಿಪು. ೦೬-೭೬) ;ಅಮರೇಂದ್ರನುಂ ಶಚಿಯುಮಿಂತು ಮರಣಾನಮಗಾದೊಡಲ್ತೆ ಭವ್ಯತೆ ಬಳೆದಿರ್ಕುಮೆಂದು ಬಯಸುತ್ತಿರೆ (ಶಾಂತಿಪು. ೭-೪೦) ; ಆ ಮುನೀಂದ್ರರ್ ನಾಗಶರ್ಮನ ಭವ್ಯತೆಯ ಕಾಲಲಬ್ಧಿಯುಮನಲ್ಲಿಯ ವಿನೇಯಜನಂಗಳೆಲ್ಲಮಿಂತಲ್ಲದೆ ಸದ್ಧರ್ಮಕ್ಕೆ ಬಾರರೆಂಬ ಮಾರ್ಗಪ್ರಭಾವಮುಮಂ ದಿವ್ಯಜ್ಞಾನದಿಂದ ಮುಪಲಕ್ಷಿಸಿ (ಸುಕುಮಾ. ೭-೩೯ ವ). [ಸಂ. ಭವ್ಯತಾ]

**ಭವ್ಯತ್ವ** (ನಾ). ೧. ಹಿರಿಮೆ; ಔನ್ನತ್ಯ. ೨. = ಭವ್ಯತೆ ೨ : ಷಡ್ವಿಧಲೇಶ್ಯಮುಂ ದ್ವಿವಿಧ ಭವ್ಯತ್ವಮುಂ . . . ದ್ವಾದಶವಿಧೋಪಯೋಗಮುಂ ಎಂಬಿಪ್ಪತ್ತು ಪ್ರರೂಪಣೆಗಳುಮಂ . . . ಪೇಳ್ದು (ಚಾವುಂಪು. ೩೯೪) : ಜೀವತ್ವಮುಂ ಭವ್ಯತ್ವಮುಂ ಅಭವ್ಯತ್ವಮುಂ ಎಂಬ ಪಾರಿಣಾಮಿಕ ಭಾವತ್ರಯಂ ಜೀವಸ್ವಭಾವಮಕ್ಕುಂ (ತತ್ತ್ವಸೂ. ೮೪). [ಸಂ.]

**ಭವ್ಯಪ್ರಬೋಧಬೋಧಿ** (ನಾ). [ಜೈನ] ದ್ವಾದಶಾನುಪ್ರೇಕೆಗಳಲ್ಲಿ ಒಂದು ; ಬೋಧಿದುರ್ಲಭ : ಅಭಿವಿನುತಧರ್ಮರತಿಯು ಸ್ವಭಾವ ವೈರಾಗ್ಯಭಾವಮುಂ ಸರ್ವಭವಾನುಭವವಿರಕ್ತತೆಯುಂ ದುರ್ಲಭಮದು ಭವ್ಯಪ್ರಬೋಧಬೋಧಿಯೆನಿಕ್ಕುಂ (ಸುಕುಮಾ. ೧೨ ೩೭). 'ದ್ವಾದಶಾನುಪ್ರೇಕ್ಷೆ' ನೋಡಿ. [ಸಂ.]

**ಭವ್ಯಮಾರ್ಗಣೆ** (ನಾ). [ಜೈನ] ಹದಿನಾಲ್ಕು ಮಾರ್ಗಣಾಸ್ಥಾನಗಳಲ್ಲಿ ಒಂದು ; ಭವ್ಯಜೀವರನ್ನು ಹುಡುಕುವುದು : ಗತೀಂದ್ರಿಯ ಕಾಯ ಯೋಗ ವೇದ ಕಷಾಯ ಜ್ಞಾನ ಸಂಯಮ ದರ್ಶನ ಲೇಶ್ಯಾ ಭವ್ಯ ಸಮ್ಯಕ್ [ಕ್ತ್ವ] ಸಂಜ್ಞಾಹಾರಿಗಳೆಂಬ ಚತುರ್ದಶಮಾರ್ಗಣೆಗಳೊಳಂ . . . ಚತುರ್ಗತಿಗಳೊಳಂ ಸುಟಿಪ ಜೀವಂಗಳೆಲ್ಲಂ ಸಂಸಾರಿಜೀವಂಗಳೆಂಬುದಕ್ಕುಂ (ಜೀವಸಂ. ೩-೭ ವ) : ಭವ್ಯಮಾರ್ಗಣೆಯೊಳು ಬಂದ ಯೋಗ್ಯ ಪ್ರಕೃತಿಗಳು ೧೧೭ ಮಿಥ್ಯಾದೃಷ್ಟಿಗುಣಸ್ಥಾನಂ ನಿಯಮದಿಂದಮೊಂದಕ್ಕುಂ (ಗೊಮ್ಮಟಸಾ. ೨೦-೭). 'ಚತುರ್ದಶ ಮಾರ್ಗಣೆ' ನೋಡಿ. [ಸಂ. ಭವ್ಯಮಾರ್ಗಣ]

**ಭವ್ಯಾವಲಿ, ಭವ್ಯಾವಳಿ** (ನಾ). [ಜೈನ] ಭವ್ಯರ ಸಮೂಹ,–ಗುಂಪು : ತ್ರಿದಶಸ್ತುತ್ಯಮಿದಾದಿದೇವಚರಿತಂ ಕರ್ಣಾವತಂಸಂದಿಯಕ್ಕಿದು ಭವ್ಯಾವಲಿ [ಶಾಕಾಂ. ೪] ಗೆಂದು ಪೇಟಿಸೆ ಬುಧರ್ . . . ಪೇಟ್ದಂ . . . ಸಂಸಾರಸಾರೋದಯಂ (ಆದಿಪು. ೦೬-೭೮). **ಭವ್ಯಾವಳಿ** : ಜನಪತಿಗಳ್ಭವ್ಯಾವಳಿಗೆ ಚತುರ್ವಿಂಶತಿ ದೇವರ್ದಯೆಗೆಯ್ಗೆ ವಿಮಳರತ್ನತ್ರಯಮಂ (ಚಾವುಂಪು. ೦) ; ಅಂತೇವಾಸಿ ಭವ್ಯಾವಳಿಗತುಳತಪಃಶೀಲಮಂ ಮಾಡೆ ಲೋಕೋತ್ತರದಾಚಾರ್ಯರೆಮ್ಮಂ ನಿಯಮಿಸುಗೆ (ಧರ್ಮಾಮೃ. ೦-೩). [ಸಂ.]

**ಭವ್ಯಾವಳಿ** 'ಭವ್ಯಾವಲಿ' ನೋ.

**ಭವ್ಯಾಳಿ** (ನಾ). = ಭವ್ಯಾವಲಿ : ನೆಗಬ್ದಜಿತನಜೇಯಂ . . . ಜಿನಶ್ರೀಸೇವ್ಯನಪ್ಪಂದು ಭವ್ಯಾಳಿಗೆ ಹಿತಕರನಾದಂ (ಅಜಿತ. ೦-೧೦) ; ಅನವದ್ಯರ್ ದಯೆಗೆಯ್ವರಕ್ಕೆ ದಯೆಯಿಂ ಭವ್ಯಾಳಿಗೆ (ಶಂಖಾಭ್ಯು. ೦-೩). [ಸಂ. ಭವ್ಯಾಲೀ]

**ಭವ್ಯೋತ್ಸವ** (ನಾ). ೧. ಅತ್ಯುತ್ತಮವಾದ ಸಂತೋಷ ; ಲೋಕೋತ್ತರವಾದ ಆನಂದ. ೨. [ಜೈನ] ಮುಮುಕ್ಷುಗಳ ಸಂತೋಷ,–ಆನಂದ. ೧ , ೨ : ಆಚಾರ್ಯಪರಂಪರೆಯ ಕಡೆಗೆ ಭವ್ಯೋತ್ಸವಮು (ಅಜಿತ. ೦-೦೨) ; ಶ್ರೀಯುಂ ತಳೆದಂ ತ್ರಿಜಗಜ್ಜ್ಯಾಯಂ . . . ಭವ್ಯೋತ್ಸವದಾಯಿನಿಯುಂ ಜೈನಜನಮನೋಹರಚರಿತಂ (ಚಂದ್ರಪ್ರ. ೦೬-೧). [ಸಂ.]

**ಭಷಕ** (ನಾ). ಬೊಗಳುವ ಪ್ರಾಣಿ ; ನಾಯಿ : "ಕೌಲೇಯಕಃ, ಸಾರಮೇಯಃ, ಶುನಕಃ, ಶ್ವಾ, ಕುಕ್ಕುರಃ, ಭಷಕಃ, ಮೃಗದಂಶಃ, ಶಾಲಾ

ವೃಕಃ—ಈ ೮ ನಾಯಿ"(ಯ)" (ಹಲಾಯು. ೬೭-೦೨೬); ಬಳಕೆಯ್ಕೊಳ್ದು ಪಲ್ಲಿ [ಲ್ಗಿ] ಜಾದೊಳವಾಲಂಗೊಂಡು ಮೊಱೆವ ಭಷಕನ ತೆಱದಿಂದೊಳಪೊಕ್ಕ ದುರ್ಗಮುಂ ಸಂಚಳಚಿತ್ತಂ ನುಡಿಗುಮೆಮಗೆ ಬಲ್ಗಂಡಿಕೆಯುಂ (ಶಾಪ್ಕಾ.ವ. ೨೯೯); ವಿಷವಮೃತವಾಗದಿಹುದೇ ಶಿವನ ಭಕ್ತರಿಗೆ ಭಷಕನಂ ಕರೆತಂದು ವೇದವೋದಿಸರೆ (ಏಕಿಅಂ. ೩೬-೯೬); ಕರಿ ಮಕರಂ ನಕುಲಮಾಮ ಭಷಂ . . . ಪಂಚನಖಂಗಳ್ (ವಿಷ್ಣುಪು. ೦-೦-೨೦೦). [ಸಂ.]

**ಭಷಣ** (ನಾ). ೧. ನಾಯಿಯು ಬೊಗಳುವಿಕೆ. ೨. ನಾಯಿ; ಶ್ವಾನ. [ಸಂ.]

**ಭಸಣಗೆ** 'ಬಯಿಸಣಗೆ' ನೋ.

**ಭಸಿತ** (ನಾ). ೧. ಬೂದಿ; ಭಸ್ಮ: "ಭೂತಿಃ, ಭಸಿತಂ, ಭಸ್ಮ, ಕ್ಷಾರಂ, ರಕ್ಷಾ — ಈ ೫ ಬೂದಿ" (ಹಲಾಯು. ೦೩-೬೯); ನಾನೊಮ್ಮೆ ಬೇಂಟೆಯ ಪೋದರೆ ಭಸಿತಕ್ಕಾಹುತಿಯನಿಕ್ಕಿಹೆನೆಂದು ಸಾಸಿರವೇಳುನೂಱುವರುಷ ಒಬ್ಬ ರಾಜನ ಕೊಂದೆನು (ಬಸವ. ೯೩೨). ೨. ಗೋವಿನ ಸಗಣಿಯನ್ನು ಸುಟ್ಟು ಶಿವಭಕ್ತರು ಹಣೆ ಮೊದಲಾದ ಅಂಗಗಳಲ್ಲಿ ಧರಿಸುವ ಭಸ್ಮ; ವಿಭೂತಿ: ಅಂಗಸಂಗತಲಸದ್ಭಸಿತಂ . . . ಫಣಿವಿಭೂಷಣಮಾಗೆ . . . ನೆಗಟ್ದುದಾರಮಹೇಶ್ವರನೀಗೆ ಭೋಗಮಂ (ಶಂಶಿಪಾ. ೦-೨); ಆದ ನಿರೋಧದ ನಿಂದೆಯನಾದರಿಸದೆ ಭಸಿತದಿಂದೆ ವಿಪ್ರನನಿಡೆ ತಾಂ ಪೋದುದು ವಟುವೇಷಂ (ಗಿರಿಕ. ೯-೦೦೬); ಪಾರ್ವತಿಗೆ ಶಿವನಿಂದೆಯನ್ನು ಕೇಳಿ ಮನಸ್ಸು ನೊಂದಿತು . . . ಭಸಿತದಿಂದ ಈ ವಿಪ್ರನನ್ನು ಹೊಡೆದಳು (ಅಸಂಕ. ೦೬). [ಸಂ.]

**ಭಸಿತಧರ** (ನಾ). ವಿಭೂತಿಯನ್ನು ಧರಿಸಿರುವವನು; ಪರಮೇಶ್ವರ: ಕರಿಗೊರಲನು ಬಂದ ಭಸಿತಧರನು ಬಂದ ರಕ್ತಜಟಾಜೂಟ ಬಂದ (ಇಂಶಾಕ. ೦೨೯-೦೦). [ಸಂ.]

**ಭಸಿತವಿಲೇಪನ** (ನಾ). ವಿಭೂತಿಯನ್ನು ಬಳಿದುಕೊಳ್ಳುವುದು: ಭಸ್ಮವನ್ನು ಧರಿಸುವುದು; ಭಸ್ಮಧಾರಣೆ: ಭಸಿತವಿಲೇಪನಪ್ರಿಯನದೆಂತು ಮೃಗೋದ್ಭವಪಂಕಮಾಂಪು (ಶೃಷಾ. ೨೮-೯೦). [ಸಂ.]

**ಭಸಿತಾಂಗ** (ನಾ). ೧. ವಿಭೂತಿಯ ಲೇಪನವುಳ್ಳ ಶರೀರ; ಭಸ್ಮವನ್ನು ಧರಿಸಿರುವ ದೇಹ: ಸಂಗಮೇಶ್ವರಂ ಬಸವನ ಚಿತ್ತಮಂ ಪರೀಕ್ಷಿಪೆನೆಂದು ಕೆಂಜೆಡೆ ಕುಂಡಲಂ . . . ಪುಲಿದೊವಲು ಭಸಿತಾಂಗಂ ಸಮುದಾಯವಾಗಿ ಗಳಗಳನೆ ನಡೆತಂದು (ಬಸರ. ೦೨-೨೦). ೨. ವಿಭೂತಿಯನ್ನು ಮೈಗೆ ಲೇಪಿಸಿಕೊಂಡವನು; ಶಿವ: ಪಂಪಾಪುರದ ಲಿಂಗ ಭವಭಸಿತಾಂಗ ಸಂಪುಲ್ಲೇಕ್ಷಣನ ತೋರೋ ಭಕ್ತಕೃಪಾಂಗ (ವಿದಾಕ್ಕ. ೬೯ ಪಲ್ಲವಿ). [ಸಂ.]

**ಭಸಿತೋದ್ಧೂಳಿತ** (ಗು). ವಿಭೂತಿಯನ್ನು ಧರಿಸಿದ: ಭಸಿತೋದ್ಧೂಳಿತ ತನುವಿಂ . . . ಏಣಾಧಿನಾಥನಿರದೆಳ್ತಂದಂ (ಶ್ರೀಶೈಪ. ೨೩-೨೦): ಮಾಗೆಯ ಬೆಳ್ಳಿಗಿಲಾಗಸದಂತಿರೆ ಭಸಿತೋದ್ಧೂಳಿತಲಸಿತಲಲಾಟಂ ಟಣ್ಣೊಳಿಸೆ (ರಾಮಾಕ್ಕ. ೯೦-೦೮). [ಸಂ. ಭಸಿತೋದ್ಧೂಲಿತ]

**ಭಸ್ತ್ರ** (ನಾ). ಚರ್ಮದ ಚೀಲ: ನೆಲದೊಳ್ ಬಿದಾರ್ಕ್ಷಣದೊಳೆ ಭಸ್ತ್ರಮಂ ಕೊಯ್ದು ಪೊಱಮಟ್ಟೊಂದು ಕಾಸಾರದೊಳ್ ಶರೀರಪ್ರಕ್ಷಾಲನಮಂ ಮಾಡಿ . . . ಚಾರಣಮುನೀಂದ್ರರಂ ಕಂಡು (ಮಹಾಪೇ. ೯-೦೩೨ ವ). [ಸಂ. ಭಸ್ತ್ರಾ]

**ಭಸ್ತ್ರಿ** (ನಾ). ೧. ಚರ್ಮದ ತಿದಿ: ಭಸ್ತ್ರಿಯ ತೆಱನಂತಲಸದೆ ಕಹಳೆಯ ನೊತ್ತುವ ಜಾವದ ಹೊಲೆಯನ ಪರಿಯಿಂ ತೊತ್ತಿಸಿ (ಕಲ್ಯಾಕೀ. ೫೯). ೨. ಚರ್ಮದ ಚೀಲ. [ಸಂ.]

**ಭಸ್ತ್ರಿಕೆ** (ನಾ). ೧. ಚರ್ಮದ ಚೀಲ: ಚಪಳಕಪಿ ವನಮದಾನೇಕಪಕ್ಕಪಕ್ಕಾಗೆ ಪೊಕ್ಕು ತಾಂ ಭಸ್ತ್ರಿಕಮೆಂದವಹಸ್ತವಿಱಿಯೆ ಕೈಪಿಡಿಗೆ ಪೊತ್ತ ಗುಬ್ಬಿವೊಲುರುಳ್ದು ನಗಿಪುದು ನಗದೊಳ್ (ಶಾಂತಿಪು. ೨-೦೦೦). ೨. ಚರ್ಮದ ತಿದಿ; ತಿತ್ತಿ. ೩. ಚರ್ಮದ ಜಲಪಾತ್ರೆ. [ಸಂ. ಭಸ್ತ್ರಿಕಾ]

**ಭಸ್ತ್ರಿಕೆ** (ನಾ). ೧. = ಭಸ್ತ್ರಿಕ ೨: ಈ ಭಾನುಬಿಂಬಮಂ ಲೀಲಾಭಸ್ತ್ರಿಕೆಯೆಂದು ಪೊಯ್ವವೊಲ್ ನಿಳ್ಕುವ ಹಸ್ತಾಭೋಗದಿನೆಸೆದತ್ತುಚಲಾಭಂ ತಾನೆನಿಪ ಕುವಲಯಾಪೀಡೇಭಂ (ಜಗಂ. ೬-೯೯). ೨. [ಯೋಗ] ಅಷ್ಟವಿಧವಾದ ಕುಂಭಕಗಳಲ್ಲಿ ಒಂದು: ಸೂರ್ಯಭೇದನ ಉಜ್ಜಾಯಿ ಸೀತ್ಕಾರಿ ಸೀತಳ ಭಸ್ತ್ರಿಕೆ ಭ್ರಮರಿ ಮೂರ್ಛೆ ಕೇವಲವೆಂಬ ಅಷ್ಟಕುಂಭಕಪ್ರಕಾರಂಗಳಂ (ಏಪೀಕ. ೦೬೦). [ಸಂ. ಭಸ್ತ್ರಿಕಾ]

**ಭಸ್ತ್ರೆ** (ನಾ). ೧. ತಿದಿ; ತಿತ್ತಿ: "ಭಸ್ತ್ರಾ, ಚರ್ಮಪ್ರಸೇವಿಕಾ — ೨ ತಿದಿಯ ಪೆಸರು" (ಸಿದ್ಧಾಂತಿ. ೩೦೬). ೨. ಚರ್ಮದ ಚೀಲ. [ಸಂ. ಭಸ್ತ್ರಾ]

**ಭಸ್ಮ** (ನಾ). ೧. = ಭಸಿತ ೧: "ಭೂತಿಃ, ಭಸಿತಂ, ಭಸ್ಮ, ಕ್ಷಾರಂ, ರಕ್ಷಾ — ಈ ೫ ಬೂದಿ" (ಹಲಾಯು. ೦೩-೬೯); ಅಯ್ದುದೇ ಕಾಮನ ಸುಟ್ಟ ಭಸ್ಮ ಮೈಯಲ್ಲಿ ಮುಖಮೂದಲೆ ಏಕಯ್ಯಾ (ಬಸವ. ೩೩೮). ೨. = ಭಸಿತ ೨: ಭಸ್ಮ ಮತ್ತು ರುದ್ರಾಕ್ಷಿಗಳನ್ನು ಧರಿಸುವುದರಲ್ಲೆ ಅವರಿಗೆ ಒಂದು ಆನಂದ (ರೂಢಿ). ೩. [ವೈದ್ಯಶಾ] ಸುವರ್ಣ ಮೊದಲಾದ ಧಾತುಗಳನ್ನು ಪುಟಕ್ಕೆ ಹಾಕಿ ತಯಾರು ಮಾಡುವ ಒಂದು ಬಗೆಯ ರಾಸಾಯನಿಕ ಪುಡಿ, — ಔಷಧ: ಹತ್ತಿಕಾಯಿರಸ ಅರ್ಧಸೇರಿನಲ್ಲಿ ಬಳಿಗಾರದ ಭಸ್ಮ ಗದ್ಯಾಣ ೩ ತೂಕ, ಸೌತೆಬೀಜ ಗ ೨ ತೂಕ, ಸಹ ಕೂಡಿಸಿ ಕೊಡಲು ಮೂತ್ರವಿಸರ್ಜನೆಯಾಗುವುದು (ಸಕಲ್ವೈ. ಶಂ. ೯೯೩); ಆಗ ಒಗ್ಗಾಲಿ ಒಂದು ಭಸ್ಮವನ್ನು ಎಲ್ಲರಿಗೂ ಒಂದೊಂದು ಸಾಸಿವೆಯ ಕಾಳಿನಷ್ಟು ಪ್ರಮಾಣದಲ್ಲಿ ತನ್ನ ಸಂಗಡಿಗರಿಗೆ ಕೊಟ್ಟು . . . ಹೇಳಿದ್ದು—ಆ ಮುದುಕನ ಕಿವಿಗೆ ಬಾಣದಂತೆ ಹೋಗಿ ನಟ್ಟಿತು (ಕೆಂಬಹು. ೦೬).

**ಭಸ್ಮವಾಗು** = ಸುಟ್ಟು ಬೂದಿಯಾಗು; ಸಂಪೂರ್ಣವಾಗಿ ಸುಟ್ಟು ಹೋಗು; ನಾಶವಾಗು: ಇದ್ದಿದ್ದಹಾಗೆ ಭಸ್ಮವಾಗೆನೇ, ಇದ್ದ ನೆಲನೊಳಕೊಳ್ಳದೇ ಜೀರ್ಣವಾಗೆನೇ (ತಿರುರ. ದೇ. ೨೦-೩); ಉರಿ ಹತ್ತಿ ತರಿಯಮಭಟ್ಟರಪ್ಪಣ್ಣಗಳ ಮನೆಯುಂ ಭಸ್ಮವಾಯಿತ್ತು (ಬಸಪು. ೫೬-೩೯); ಸುಟ್ಟ ಸಗಣಿ ಶುದ್ಧವಾಗಿ ಭಸ್ಮವಾಗುತ್ತದೆ (ಕರ್ನಾಟರ. ೦೮-೦). [ಸಂ. ಭಸ್ಮನ್]

**ಭಸ್ಮಕ** (ನಾ). ೧. ಜಠರಾಗ್ನಿಯು ತೀವ್ರವಾಗುವುದರಿಂದ ತಿಂದುದೆಲ್ಲ ಭಸ್ಮವಾಗಿ, ಯಾವಾಗಲೂ ಅತಿಯಾದ ಹಸಿವಾಗುವ ಮತ್ತು ತಿಂದ ಆಹಾರ ಮೈಗೆ ಹತ್ತದ ಒಂದು ಬಗೆಯ ವ್ಯಾಧಿ: ಭಸ್ಮಕರೋಗ ಮುನಿಗಾವರಿಸೆ ಕಪಟದ ತಪವ ಸುಡುಸುಡಲೆಂದು ಬಿಸುಸುಯ್ದು (ಜೀವಂಚ. ೫-೩೮); ಅಂತವಗೆ ದುಃಕರ್ಮೋದಯದಿಂದ ಪರಿತಂದು ಭಸ್ಮಕವ್ಯಾಧಿ ಭರದಿಂದಡಸಲು ನಾಲ್ಕುವರ್ಣದೊಳುಂಡು ತಿರುಗುತಿರ್ದನು ಲೋಕದಲಿ (ಜೀವಂಸಾಂ. ೬-೯೩). ೨. ಒಂದು ಬಗೆಯ ಕಣ್ಣಿನ ವ್ಯಾಧಿ. [ಸಂ.]

**ಭಸ್ಮಗಂಟಿಕೆ** (ನಾ). ವಿಭೂತಿಯಿರುವ ಜೋಳಿಗೆ (?): ಶಿರದಲ್ಲಿ ಜಟಾಬಂಧವಿಲ್ಲ ಕಕ್ಷೆಯಲ್ಲಿ ಭಸ್ಮಗಂಟಿಕೆ [ಪಾಠಾಂ. ಗುಂಡಿಗೆ] ಇಲ್ಲ (ಮೋಳಿಪತಾ. ೦೫೫-೫೮೩). [<ಸಂ. ಭಸ್ಮಗ್ರಂಥಿಕಾ]

**ಭಸ್ಮಗಂಧಿನಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರಿಂದ ತಯಾರಿಸುವ ಪರಿಮಳದ್ರವ್ಯ: "ದ್ವಿಜಾ . . . ಭಸ್ಮಗಂಧಿನೀ—೬ ರೇಣುಕ ಎಂಬುವ ಗ್ರಂಥ್ಯದ್ರವ್ಯದ ಹೆಸರು" (ಸಿದ್ಧಾಂತಿ. ೧೯೦). [ಸಂ. ಭಸ್ಮಗಂಧಿನೀ]

**ಭಸ್ಮಧಾರಿ** (ನಾ). ವಿಭೂತಿಯನ್ನು ಧರಿಸಿರುವವನು: ಕೂಡಲಸಂಗಮದೇವ ಭಸ್ಮಧಾರಿಯಾದ (ಬಸವ. ೯೩೦). [ಸಂ. ಭಸ್ಮಧಾರಿನ್]

**ಭಸ್ಮಪುಟ** (ನಾ). [ವೈದ್ಯಶಾ] ಸುವರ್ಣ ಮೊದಲಾದುವುಗಳ ಭಸ್ಮವನ್ನು ಮಾಡುವುದಕ್ಕಾಗಿ ಅಗ್ನಿಯನ್ನು ಅಳವಡಿಸುವುದು: ವೈದ್ಯರು ಸುವರ್ಣಭಸ್ಮವನ್ನು ತಯಾರಿಸಲು ಭಸ್ಮಪುಟ ಹಾಕಿದ್ದಾರೆ (ರೂಢಿ). [ಸಂ.]

**ಭಸ್ಮರಸ** (ನಾ). [ವೈದ್ಯಶಾ] ಪಾದರಸದ ಭಸ್ಮ, — ಪುಡಿ (?): ಪೊಸತಪ್ಪ ಸುಣ್ಣಮಂ ಸೋದಿಸಿ ಕಿಱಿದಂ ಕೊಂಡು ಭಸ್ಮರಸದೊಳದಂ ಯೋಜಿಸಿ (ಅಶ್ವಶಾ. ೦೨-೮). 'ರಸಭಸ್ಮ' ಪರಾ. [ಸಂ.]

**ಭಸ್ಮಸ್ನಾನ** (ನಾ). ವಿಭೂತಿಯ ಲೇಪನ : ಲಿಂಗಧ್ಯಾನದಿಂದಲಿ ಭಸ್ಮಸ್ನಾನವ ಮಾಡುವುದು ಜ್ಞಾನಪಾದೋದಕವು (ಮ್ಮಿಣರ. ೬೩-೨೬೬). 'ಆಗ್ನೇಯ ಸ್ನಾನ' ಪರಾ. [ಸಂ.]

**ಭಸ್ಮಾಭ್ಯಂಗ** (ನಾ). ವಿಭೂತಿಯನ್ನು ಲೇಪಿಸಿಕೊಂಡಿರುವವನು; ಶಿವ: ಭಸ್ಮಾಭ್ಯಂಗ ಉರಿಲಿಂಗ ಸುಜನಸಂಗ . . . ಪಾರ್ವತೀಶ ಪಾಲಿಪುದೆನ್ನ (ಶ್ರೀಶರಾ.೦೬-೦). [ಸಂ.]

**ಭಸ್ಮಾವಶೇಷ** (ನಾ). ೧. ಉಳಿದಿರುವ ಬೂದಿ: ಮೇಣೆನ್ನ ಭುಜಪರಾಕ್ರಮ ತೀರ್ಥದಲಿ ನಿನ್ನ ಭಸ್ಮಾವಶೇಷಮಂ ತೊಳೆಯಲೆಂದಿರ್ದೆನ್ನನಾ ಬೋಳೈಸಿದಳ್ ತಾಯಿ! (ಶಕ್ರಾಂಗ. ೬೯-೨೦೬೬). ೨. ಭಸ್ಮವಾಗಿ ಮಾತ್ರ ಉಳಿದಿರುವುದು: ಮಹಾತ್ಮರ ದೇಹ ಭಸ್ಮಾವಶೇಷವಾಯಿತು (ರೂಶಿ). [ಸಂ.]

**ಭಸ್ಮೀಕರಣ** (ನಾ). ಬೂದಿ ಮಾಡುವುದು ; ಸುಟ್ಟು ಹಾಳುಮಾಡುವುದು: ಮುಷ್ಕರ ಮಾಡಲಿ, ದೇಶದ ಆಸ್ತಿಯಾದ ವಾಹನಗಳ ಭಸ್ಮೀಕರಣ ಮಾಡಬಹುದೇ? (ರೂಶಿ). [ಸಂ.]

**ಭಸ್ಮೀಕರಿಸು** (ಕ್ರಿ). ಸುಟ್ಟುಹಾಕು ; ನಾಶ ಮಾಡು : ಹಿಂದಣ ಹಿತತನದಿಂದೀ ವಿರಹದೊಳೊಂದಿದ ಬಲ್ಗಿಚ್ಚಿಗೆ ವೇದನೆಯಂ ತಂದೆನ್ನಂ ಭಸ್ಮೀಕರಿಸದೆ ತಾಂ ನಿರ್ನೆರಮಿಹುದಲ್ಲ (ಶಮುಚ. ೪-೩೦). [ಭಸ್ಮೀಕರಣ + – ಇಸು$_3$]

**ಭಸ್ಮೋದಕ** (ನಾ). ಭಸ್ಮದಿಂದ ಕೂಡಿರುವ ಉದಕ: ವಿಭೂತಿಯನ್ನು ಕದಡಿರುವ ನೀರು–ಜಲ: ವಲಿದು ಭಸ್ಮೋದಕವ ಮಂತ್ರವಾರಿಯ . . . ಇಂತಿಯಪ್ಪಪರಿಯಾ ಜಲದ ಪೂಪಾತ್ರೆಯಿಂ (ಪಪಪೋ. ೦೯-೯೧). [ಸಂ.]

**ಭಸ್ಮೋದ್ಧೂಳ** (ನಾ). ವಿಭೂತಿಲೇಪನ ಮಾಡಿಕೊಂಡಿರುವವನು ; ಭಸ್ಮಧಾರಿ : ಮಹಾವೀರಭಟರು ಭಸ್ಮೋದ್ಧೂಳರೆಸೆವ ಜಡೆಯಧಟರ್ಕಳು (ಶೀಶ್ರಿಪು. ೪-೬-೦೦). [ಸಂ. ಭಸ್ಮೋದ್ಧೂಲ]

**ಭಸ್ಮೋದ್ಧೂಳಿತ** (ಗು). ವಿಭೂತಿಯನ್ನು ಬಳಿದುಕೊಂಡ,–ಲೇಪನ ಮಾಡಿಕೊಂಡ : ಪಾದಪ್ರಕ್ಷಾಳನಂಗೆಯ್ದು ಭಸ್ಮೋದ್ಧೂಳಿತಗಾತ್ರನಾಗಿ ದೇವತಾಸಮಾರಾಧನೆಗೆ ಕುಳ್ಳಿರ್ದು (ಶಂತಶಂ. ೭೦-೩). [ಸಂ. ಭಸ್ಮೋದ್ಧೂಲಿತ]

**ಭಸ್ಪುಟಿ** (ನಾ). (?) : ಕಡುಭಯಂಕರವೆಸರು ಭಸ್ಪುಟಿ[ಶಾಕಾಂ. ಬೋಸರಿ, ಭಸ್ಪಟ, ಭುಸ್ಪಟಿ] ಕಡೆಗೆ ರಕ್ಕಸರಿವದಿರುಚಿ ಕಳುಗುಡುಹಿಗಳಲಾಯೆನುತ ತಿವಿದನು ಮತ್ತೆ ರಕ್ಕಸನ (ತೊಶರಾ. ೬-೩೩-೨೨). [ ? ]

**ಭಳರಿಯೂರ್** (ನಾ). ಒಂದು ಊರಿನ ಹೆಸರು: ಆಸ್ಥಾನದಮುಂ ಭಳರಿಯೂರಂ ಬನ್ದಸಿಳಕೆಬ್ಬೆಯುಂ ಚಿಕ್ಕೇಶ್ವರಕ್ಕೆ ಈಶಾನ್ಯದ ಪೊಳೆಯುಂ ಪದಿರ್ಕೊಳಂ ಭತ್ತಮುಂ ವಿೂಸಲುಂ ಬಳಿವತ್ತಮುಂ ಸಲ್ವದು (ಎಕ. III, ಶಂಶಪ. ೦೬೩-೯; 977). [ ? + ಊರ್ ]

**ಭಳಾರ** 'ಭಟಾರ' ನೋ.

**ಭಳಾರಿ** 'ಭಟಾರಿ' ನೋ.

**ಭಳರೆ** (ಅ). ಮೆಚ್ಚುಗೆಯನ್ನು ಸೂಚಿಸುವ ಒಂದು ಭಾವಸೂಚಕ ಅವ್ಯಯ : "ಅರರೆ ಧಣಾ ಭಾಪು ಭಳರೇ ಧಿರುರೇ . . . ಸುಂಪುರೆಯೆನೆ ಕೊಂಡಾಟದ ನುಡಿ" (ಶಾರಶ. ೯೭); ಗಾಯಕರು ಪಾಠಕರಿಗೊಡವೆಯ ಬೀಯಮಾಡಿದು ಭಳರೆ ಭಾಪೆಂದಾಯತಿಕೆ ರಾವವೆನ್ನುತುಬಿಜುಬಿದನು ಕಲಿಭೀಮ (ಕುವ್ಯಾದ್ರೋ. ಶಂ. ೨೯೩) ; ಧರಣಿಪಾಲಕ ಕಂಡು ಮೆಚ್ಚುತ ವರವನೀವೆನು ಭಳರೆ ಮೆಚ್ಚಿದೆನರಸಿ ಬೇಡೆನಲು (ಕೌಶಿರಾ. ೦-೨೭). 'ಭಲರೆ' ಪರಾ.

**ಭಳಭಳರೆ** (ದ್ವಿರುಕ್ತಿ): ಘುಲುಘುಲುಘುಲು ಗೆಜ್ಜೆಯ ನಾದ ಭಳಭಳರೆ ನಿಮ್ಮ ಹೊಳೆವ ಬೆರಳುಂಗುರ ಕಿಣಕಿಣಿನಾದ (ಪುಶಂದ. ೦-೦೯೦-೦). [ ? ]

**ಭಟರಿ** 'ಭಟಾರಿ' ನೋ.

**ಭಟಾರ** 'ಭಟಾರ' ನೋ.

**ಭಾಂಕರಿಸು** (ಕ್ರಿ). ಭಾಂ, ಭಾಂ ಎಂಬ ಧ್ವನಿಯನ್ನು ಮಾಡು ; ಗದ್ದಲ ಮಾಡು ; ಕೋಲಾಹಲ ಮಾಡು : ನನಗೆ ನೆಗಡಿ ಹಿಡಿದಾಗ ಭಾಂಕರಿಸುವ ಸೀನುಗಳ ಲೆಕ್ಕ ಇದು ! (ಶಂಟಿರು. ೩೩). [ಭಾಂಕರಣ$_0$ + – ಇಸು$_3$ ]

**ಭಾಂಕಾರ** (ನಾ). ಭಾಂ, ಭಾಂ ಎಂಬ ಧ್ವನಿ ; ಗಲಾಟೆ ; ಗದ್ದಲ; ಕೋಲಾಹಲ : ಆ ಪ್ರಯಾಣಭೇರೀಭಾಂಕಾರಮೆಂಬ ಹೂಂಕಾರದೊಳೆ . . . ಪುರಬಹಿರ್ವಣದ ಪರಿಸರಪ್ರದೇಶದೊಳ್ ಎಡದೊಳ್ಬಂಗಲಿ ಮಟ್ಟು ಮೇಲ್ವಬೀಡುದುದು (ಅಪಂಪು. ೦೩-೭೩ ಪ); ಆಗಳ್ ಶತ್ರುಘನ ಸೇನೆಯೊಳ್ ಹಾಹಾಕಾರಂ ಪರಬಲದೊಳ್ ಭಾಂಕಾರಮುಂಚೆ ಪೆರ್ಚಲೊಡಂ (ರಾಪಶಾಕ್ಕ. ೦೩೦–೨೩). [ಸಂ.]

**ಭಾಂಕಾರುಗುಡು** (ಕ್ರಿ). ಭಾಂಕಾರ ಮಾಡು; ಆರ್ಭಟಿಸು; ಕೋಲಾಹಲ ಮಾಡು : ಸಂಗರಾರ್ಜುನಂ ಸಿದ್ಧನಂತಾ ಸಿದ್ಧಕ್ಷೇತ್ರಮಂ ಪುಗುತಂದನದೆಂ ತಪ್ಪದೆಂದೊಡೆ . . . ಭೈರಪನಂತೆ ಭಾಂಕಾರಗುಡುತಿರ್ಪ ಸಾಧಕರಿಂ ಗೋದಾಮೆಯಂತೆ ಬಗೆದ ಬಣ್ಣಮಪ್ಪ ರಣಜೆಟ್ಟಿಗರಿಂ . . . ಅತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೯ ಶೂದ್ರಕ). [ ಭಾಂಕಾರ + ಕುಡು$_1$ (<ಕೊಡು$_1$) ]

**ಭಾಂಕಿ** (ನಾ). ಕಹಳೆಯಂತಹ ಒಂದು ಬಗೆಯ ವಾದ್ಯ : ನಗಾರಿ ಭಾಂಕಿ ತುತ್ತೂರಿ ಶಂಖ ಜಾಗಟೆ ಇವುಗಳ ವಾದ್ಯಗಳೊಡನೆ ಐರಣಿ (ಐದು ಕಲಶಗಳು) ಮೆರವಣಿಗೆಯಾಗುತ್ತವೆ (ಹಣ್ಣಶಾ. ೩೬); ದಾಸನ ಸರಕುಗಳು . . . ಕಡಾಸು, ಬನವಾಸಿ, ತುತ್ತೂರಿ, ಭಾಂಕಿ, ಹೃದಯದಲ್ಲಿ ಆಂಜನೇಯನ ವಿಗ್ರಹ (ಗರುಡಾ. ೦೦ ಪೀಠಿಕೆ); ದಾಸಯ್ಯನೂ ಅವನ ನಾಲ್ಕಾರು ಜನ ಅನುಚರರೂ ನಗಾರಿ, ಭಾಂಕಿ, ತುತ್ತೂರಿ, ಶಂಖ, ಜಾಗಟೆ ಧ್ವನಿಗಳಿಂದ . . . ಧ್ವನಿಮಾಡುತ್ತಾ ಬರುವರು (ಕುಶ್ಯಿಹ. ೯). [←ಹಿಂ. ಬಾಂಕಿಯಾ ; ಮರಾ. ಬಾಂಕಾ]

**ಭಾಂಗಣ** (ನಾ). ನಕ್ಷತ್ರಗಳು ಇರುವ ಸ್ಥಳ,– ಪ್ರದೇಶ ; ಆಕಾಶ ; ಮಂಗಲಾಕ್ಷತೆಯನಣ್ಣನಿಗಿಟ್ಟು . . . ಭಾಂಗಣದೊಳು ಪೋದರಾಣ್ಣರೊಡನೆ ಸಿಂಧುಗಂಗಾದೇವಿಯರತ್ತ (ಭರಪ. ೪೪–೨೯). [ಸಂ.]

**ಭಾಂಗಿ**, ಬಾಂಗಿ (ನಾ). ೧. ಅಂಚೆಯ ಮೂಲಕ ಕಳುಹಿಸುವ ಗಂಟು ; ಪಾರ್ಸಲ್ಲು : ಒಂದು ದಿನ ಆ ಬಾಲಿಕೆಗೆ ಅಂಚೆಯಲ್ಲಿ ಭಾಂಗಿ ಬಂದಿತು (ಶಾಂಕ್ರ. II, ೬೨೮); ಕರುಣಾರತ್ನೆಯಿಂದ ರಾಯರ ವಿಳಾಸಕ್ಕೆ ಒಂದು ರಿಜಿಸ್ಟರ್ ಭಾಂಗಿ ಬಂದಿತು (ಶಂಕಪ್ಪ. ೭೦) ; ಯುದ್ಧಕಾಲಗಳಲ್ಲಿ ತಮಗೆ ಬರತಕ್ಕ ಭದ್ರವಾಗಿರುವ ಭಾಂಗಿಗಳೊಳಗೆ ಅಪಾಯಕರವಾದ ಸಿಡಿಮದ್ದಿನ ಗುಂಡುಗಳು . . . ಇರುವವೋ ಎಂಬುದನ್ನೂ ಎಕ್ಸರೇ ಮೂಲಕ ಪರೀಕ್ಷಿಸಿ ನೋಡುವರು (ಎಕ್ಸರೇ. ೩೬). ೨. ಮೂಟೆ ; ಹೊರೆ : ಇಷ್ಟು ಸಾಮಗ್ರಿಗಳನ್ನೂ . . . ಕಟ್ಟಿದಾಗ ಸುಮಾರು ನೂರು ದೊಡ್ಡ ಭಾಂಗಿಗಳಾದುವು (ಹಸುಹೊ. ೦೦೩). **ಬಾಂಗಿ** : ೧. ಈಗ ತಾನೆ ಅಚ್ಚಕ್ಕನ ಕಡೆಯಿಂದ ಪುಟ್ಟದೊಂದು ಬಾಂಗಿ ಬಂತು (ಪಕಾಶ್ಕಿ. ೪೩). [←ಹಿಂ. ಬಹಂಗೀ ; ಮರಾ. ಬಂಗೀ, ಬಹಂಗೀ ]

**ಭಾಂಗೀನ** (ನಾ). ಸೆಣಬಿನ ಹೊಲ : "ಭಂಗ್ಯಂ, ಭಾಂಗೀನಂ – ಈ ೨ ಸೆಣಬಿನ ಕೆಯ್" (ಶಬಾಯು. ೨೭-೬). [ಸಂ.]

**ಭಾಂಡ** (ನಾ). ೧. ವಸ್ತುಗಳನ್ನು ತುಂಬಲು ಮತ್ತು ಅಡಿಗೆ, ಊಟ ಮೊದಲಾದ ಎಲ್ಲ ರೀತಿಯ ಕೆಲಸಗಳಿಗೆ ಉಪಯೋಗಿಸುವ ಮಣ್ಣು, ಲೋಹ, ಮರ ಮುಂತಾದುವುಗಳ ಪಾತ್ರೆ,– ಭಾಜನ : "ಸ್ಥಾಲಿ ಭಾಂಡಂ ಮಡಕೆಯೆಂದೆನಿಕ್ಕುಂ" (ಮಂಗರಾ. ೬೨-೨೨) ; ಚಂಡಾಲ

ಭಾಂಡದಿಂ ಭೂವಿಪತಿತವಾದಂಬುವುಂ ಪವಿತ್ರಮೆಂಬುದುಂಟು (ಶಾದಂಉ. ೭೩೩); ಪಾಕಮಾಡುವ ಭಾಂಡ ಸೊಣಗನ ಡೊವಿಗೆಯಯ್ಯಾ (ಬಸವ. ೬೦೪); ಭಾಂಡ ತುಂಬಿತು ಮತ್ತೆ ನಲಿಯುತ ಚಂಡಹೃದಯನ ನುಡಿಯ ವಿಷವನು ಖಂಡಿಸಿದೆಲಾಯೆನುತ ಕೊಂಡಾಡಿದನು ಕೋಮಲೆಯ (ಕುವ್ಯಾಅ. ೬೦೩ . ೧೭–೪೦). ೨. ಸಲಕರಣೆ ; ಉಪಕರಣ. ೩. ಒಂದು ಬಗೆಯ ವಾದ್ಯ. ೪. ಕುದುರೆಯ ಸಜ್ಜು, —ಅಲಂಕಾರ : "ಭಾಂಡಂ – ೧ ಕುದುರೆಗೆ ಅಲಂಕರಿಸುವ ವಡವೆ" (ಸಿದ್ಧಾಂತಿ. ೩೮೪). ೫. ಒಡವೆ ; ಆಭರಣ. ೬. ಅಸಲು ; ಮೂಲಧನ. ೭. ನದಿಯ ಪಾತ್ರ. ೮. ಸಾಮಾನು, ಸರಂಜಾಮು ಮೊದಲಾದ ಸಾಮಗ್ರಿ. ೯. ಸರಕುಗಳ ಗಂಟು,–ಮೂಟೆ. ೧೦. ವ್ಯಾಪಾರಿಗಳ ಸರಕು,— ದಾಸ್ತಾನು. ೧೧. ಭಂಡಾರ; ನಿಧಿ. ೧೨. ಹಾಸ್ಯ; ಸಕಲಿ.

**ಭಾಂಡ ಭಾಜನ** = ಪಾತ್ರೆಪರಟೆ : ಭಾಂಡಭಾಜನ ಶುದ್ಧವಿಲ್ಲದವರ ಭಕ್ತಿ ಹೆಂಡದ ಮಡಕೆಯ ಹೊಜಗೆ ತೊಳೆದಂತೆ ಕೂಡಲಸಂಗಮದೇವಾ (ಬಸವ. ೦೦೪). [ ಸಂ. ]

**ಭಾಂಡಕ** (ನಾ). ೧. ಸಣ್ಣಪಾತ್ರೆ. ೨. [ನಾಟ್ಯ] ನೃತ್ಯದ ಒಂದು ಭಂಗಿ (?) : ಭರತಮಾತಂಗದ ತಿರುಪು ಭಾಂಡ [ಶಾಕಾಂ. ಡು]ಕ ಕುಹಳರ [ದ]ಪರಿಯಿಂದಾಡುತಿರಲು . . . ಸುಂದರ್ಪೂರ್ವಮಳೆಯ ನಿರ್ಜರರು (ಕೃರಪೇ. ೦–೩೯೩). [ ಸಂ. ? ]

**ಭಾಂಡಕರ್ಪೂರ** (ನಾ). ಒಂದು ಬಗೆಯ ಕರ್ಪೂರ : ವಿಕ್ರಮರಾಯನು ದೊರೆಯ ಹೆಸರಿನಲ್ಲಿ ಒಂದು ಸುಳ್ಳುರಾಯಸವನ್ನು ಸೃಷ್ಟಿಸಿ ಅದರ ಬಲದಿಂದ ದಳವಾಯಿಯನ್ನು ಬಂಧಿಸಿ, ಅವನಿಗೆ ಭಾಂಡಕರ್ಪೂರದ ಶಿಕ್ಷೆಯನ್ನು ವಿಧಿಸುವನು (ಕಂಕಳ. ೦೦೪); ರಾಜರು . . . ಅವರನ್ನು ಕರೆಯಿಸಿ, ಕಣ್ಣಿಗೆ ಭಾಂಡಕರ್ಪೂರವನ್ನು ಕಟ್ಟಿಸಿ ಕಣ್ಣುಗಳನ್ನು ಕೀಳಿಸಿ . . . ಕಠೋರವಾಗಿ ನುಡಿದು ಬಿಟ್ಟರು (ಒಡಳ. ೩೪). [ಭಾಂಡ$_{0}$ + ಕರ್ಪೂರ]

**ಭಾಂಡವಲ** 'ಬಂಡವಾಳ' ನೋ.

**ಭಾಂಡವಲದಾರ** 'ಬಂಡವಾಳದಾರ' ನೋ.

**ಭಾಂಡವಲಶಾಹಿ** 'ಬಂಡವಾಳಶಾಹಿ' ನೋ.

**ಭಾಂಡವಲು** 'ಬಂಡವಾಳ' ನೋ.

**ಭಾಂಡವಳು** 'ಬಂಡವಾಳ' ನೋ.

**ಭಾಂಡಸಂಕರ** (ನಾ). ಪಾತ್ರೆಗಳನ್ನು ಅಪವಿತ್ರಗೊಳಿಸುವುದು; ಮಡಿಪಾತ್ರೆಗಳನ್ನು ಮೈಲಿಗೆ ಮಾಡುವುದು : ಅದು ಗಂಡು ನೆರೆದುಕೊಂಡು ತುಡುಗುಣಿಯಾಗಿ ಭಾಂಡಸಂಕರಂಗೆಯ್ಯುತ್ತಿರ್ಪುದುಂ (ಕಂತಕಂ. ೨೬೦–೨೦). [ ಸಂ. ]

**ಭಾಂಡಾಗಾರ** (ನಾ). ಉಗ್ರಾಣ; ಭಂಡಾರ; ಕೋಶ : ಶ್ರೀಗಂ ರಾಜ್ಯವಿಭೂತಿಗಂ ನೆಲೆಯನಿಪ್ಪಾತ್ಮೀಯಮಾಣಿಕ್ಯಭಾಂಡಾಗಾರಂ ಮೊದಲಾಗೆ ಮಿಕ್ಕ ಬೆಸನಂ ತ್ರೈಲೋಕ್ಯಮಲ್ಲಂ ಜಯಶ್ರೀಗೇಹಂ ಕುಡೆ (ಶಾಂಪೇಡ. ೩–೦೨; 1047). [ ಸಂ. ]

**ಭಾಂಡಾರ** (ನಾ). = ಭಾಂಡಾಗಾರ : ಚಾರು ತನ್ನ ಸೆರಗಿನ ತುದಿಯಿಂದ ಭಾಂಡಾರದ ಕೀಲಿಯ ಕೈಗೊಂಚಲನ್ನು ಬಿಚ್ಚಿ . . . ಒಗೆದು ಬಿಟ್ಟಳು (ಇಶ್ವಕ. ೨೬೩); ಮಹಾನುಭಾವರಾದ ನಮ್ಮ ಪೂರ್ವಜರೂ, ಪುರಾಣದ ವಿಭೂತಿಗಳೂ ಯಾವ ಶಕ್ತಿಸಾರದ ಭಾಂಡಾರವಾಗಿದ್ದರೋ, ಅದರ ಲವಲೇಶವನ್ನಾದರೂ ಉಳಿಸಿಕೊಳ್ಳಲಾರದ ಅವಿವೇಕಿಗಳೆಂದು ನಮ್ಮನ್ನು ತೆಗಳುವುದಕ್ಕೆ ಪ್ರತಿಯೊಬ್ಬ ಪ್ರವಚನಕಾರನೂ ಸಮಯ ನೋಡುತ್ತಿರುತ್ತಾನೆ (ದೇಆಪ್ರ. ೪೦). [ ಸಂ. ]

**ಭಾಂಡಿ** 'ಭಾಂಡೆ' ನೋ.

**ಭಾಂಡಿಕ$_{1}$** (ಗು). ನಗೆಗೀಡಾದ ; ಹಾಸ್ಯಾಸ್ಪದವಾದ : ಸುರಪಗಾ ಮುನೀಶನ ಪತ್ನಿಗಳುಪೆ ಭಾಂಡಿಕದೇಹಮಾಯಿತು (ಭಾಪಜಂ. ೬–೦೮); P ಇಂದ್ರನು ಗೌತಮಮುನಿಯ ಶಾಪದಿಂದ ವೃಷಣರಹಿತನಾದನೆಂದು ಪುರಾಣಕಥೆಯಿದೆ. [ <ಸಂ. ಭಂಡ]

**ಭಾಂಡಿಕ$_{2}$** (ನಾ). ಕ್ಷೌರಿಕ ; ನಾಯಿಂದ ; ನಾಪಿತ. [ ಸಂ. ]

**ಭಾಂಡೀರ** (ನಾ). ೧. ಆಲ, ಗೋಣಿ ಮುಂತಾದ ಜಾತಿಗೆ ಸೇರಿದ ಒಂದು ಬಗೆಯ ಮರ : ಪಣ್ಗಳ ಕೆಂಪಿಂ ಸೊಗಯಿಸಿತುದ್ದಂಡಕಾಂಡಭಾಂಡೀರವಟಂ (ಜಗು. ೪–೪೩); ಆ ಭಾಂಡೀರಮೆಂಬ ಮಹಾವಟವಿಟಪಿಯೊಳ್ (ಜಗು. ೪–೯೬ ವ). ೨. ಒಂದು ಪ್ರಾಚೀನ ಭಾಷೆ : ಸಂಸ್ಕೃತ ಪ್ರಾಕೃತ ಪೈಶಾಚಿಕ ಮಾಗಧ ಶೌರಸೇನ ಭಾಂಡೀರ ಅಪಭ್ರಂಶ ವೈಕೃತ ಶುದ್ಧ ಮಿಶ್ರಾದಿ ಭಾಷಾಭೇದಗಳಿಂ ಪೇಳ್ದ ಲಾಕ್ಷಣಿಕರಪ್ಪ ಕವಿಗಳಿಂ (ಅಪೇಳ. ೨೪೨). [ ಸಂ. ]

**ಭಾಂಡು** (ನಾ). (ಉಕ) (ಕಡಮೆ ಬೆಲೆಯ) ನೂಲಿನ ಸೀರೆ : ಬರಿಯ 'ಭಾಂಡು' ಗಳೇ ನಿತ್ಯದ ಉಡಿಗೆಯಾಗಿದ್ದ ಅವರು ಅಂದು ಮೈಸೂರು ಮಾದರಿಯ ಸೀರೆಯೊಂದನ್ನುಟ್ಟು ಅದಕ್ಕನುರೂಪವಾದ ಕುಪ್ಪಸವನ್ನು ತೊಟ್ಟರು (ಸಮಜೀ. ೨೩೮); ಬೆಳೆದ ಮಗಳು ಲಕ್ಷಣವಾಗಿ ಕಾಣಬೇಕೆಂದು ಭಾಗೀರಥಿ ತನ್ನ ಜೀವವನ್ನೇ ಒತ್ತೆ ಇಟ್ಟು ಒಳ್ಳೆಯ ಭಾಂಡನ್ನು ಉಡಿಸಿದರೆ ಅದಕ್ಕೊಂದು ಬೇರೆ ಭಾಷ್ಯವನ್ನೇ ಬರೆಯುತ್ತಿತ್ತು ಸಮಾಜದ ಜನ (ಭಾರಥಿ. ೦೦೮); ನಮ್ಮ ಅವ್ವನಿಗೆ ಇರಲೆಂದು, ರಂಗಕ್ಕ ಎರಡು ಭಾಂಡು ಕೊಡಿಸಿ ಕೊಟ್ಟರು (ದೀಪಹ. II, ೪೩). [ ← ಮರಾ. ಬಾಂಡ್ ]

**ಭಾಂಡೆ, ಭಾಂಡಿ** (ನಾ). (ಉಕ) ಪಾತ್ರೆ ; ಭಾಜನ : ಭಾಂಡೆಗಳು ಒಂದಕ್ಕೊಂದು ಹೊಂದಿಕೆಯಾಗುವಂತಹ ಬೇರೆ ಬೇರೆ ಗಾತ್ರದವು ಇರಬೇಕು (ಅಡುಗೆ. ೩೩). **ಭಾಂಡಿ** : ಬಾಯಿಯು ಒಮ್ಮೆ ಪಾತ್ರೆ ತಿಕ್ಕಿ ಹೋದಳು. ಎರಡನೆಯ ಸಲ ಬಂದು ಭಾಂಡಿ ತಿಕ್ಕಲು ಬರಲಾರೆ ಎಂದು ಹೇಳಿ ಹೋದಳು (ಸ್ತ್ರೀತಿಜ. ೨೩೬) ; ಹತ್ತು ಹೊಡೆದರೂ ಭಾಂಡಿ ತಿಕ್ಯಾಕ ಬರೂಹಾಗಿಲ್ಲ (ಕುಂಕುಮ. ೦೪) ; ಸತ್ಯನಾರಾಯಣನನ್ನು ಕೂಡಿಸಿ ಎರಡೂ ಕಡೆಗೆ ತುಪ್ಪದ ದೀಪಗಳನ್ನು ಹಚ್ಚಿದ್ದಾರೆ. ಬೆಳ್ಳಿಯ ಭಾಂಡಿಗಳು ಎಲ್ಲ ಕಡೆಗೆ ಲಕಲಕಿಸುತ್ತವೆ (ಅಷ್ಟ. ೪೩). [←ಮರಾ. ಭಾಂಡೇ. / ಸಂ. ಭಾಂಡ]

**ಭಾಕರಿ** 'ಭಕ್ಕರಿ' ನೋ.

**ಭಾಕ್ತ** (ಗು). ೧. ತಿನ್ನಲು ಯೋಗ್ಯವಾದ ; ತಿನ್ನತಕ್ಕ. ೨. ಆಶ್ರಿತವಾದ ; ಪರಾಧೀನವಾದ. ೩. ಗೌಣವಾದ ; ಅಪ್ರಧಾನವಾದ : ಮುಕ್ತಿಸುಖವಾಂತರಿಕವದು ನಿರವಧಿಸುಖ ಭಾಕ್ತಪ್ರಪಂಚ ಸುಖವೆಂತಪರಿಮಿತವಹುದು (ಮಂಕುಳ. ೮೩೩). (ನಾ). ೪. ಅನ್ನ ; ಆಹಾರ : ಭಾಕ್ತವಾರಾರ ದುಡಿತದಿನೊ ನಿನಗಾಗಿಹುದು ಗುಪ್ತಗಾಮಿನಿಯೊ ಋಣ (ಮಂಕುಕ. ೮೪೦). ೫. ಆಶ್ರಿತವಾದುದು ; ಪರಾಧೀನವಾದುದು. ೬. ಮುಖ್ಯವಲ್ಲದುದು ; ಅಪ್ರಧಾನವಾದುದು. ೭. [ಕಾವ್ಯಮೀ] ಗೌಣವಾದುದು ; ಲಾಕ್ಷಣಿಕ ; ಔಪಚಾರಿಕ ; P ಯಾವುದಾದರೊಂದು ಪದವು ತನ್ನ ಮುಖ್ಯಾರ್ಥವನ್ನು ಬಿಟ್ಟು ಬೇರೊಂದು ಅರ್ಥದಲ್ಲಿ ಸಂದರ್ಭಾನುಸಾರವಾಗಿ ಪ್ರಯೋಗಿಸಲ್ಪಟ್ಟಿದ್ದರೆ ಅದು ಭಾಕ್ತವೆನಿಸುವುದು. "ಬಿಸಿನೀಪತ್ರದ ಶಯ್ಯೆ ತಾನೆ ತರುಣೀಸಂತಾಪಮಂ ಪೇಳುಗುಂ" ಎಂಬಲ್ಲಿ 'ಪೇಳುಗುಂ' ಎಂಬುದು ಭಾಕ್ತಪದ. ಏಕೆಂದರೆ ಅಚೇತನವಾದ ಶಯ್ಯೆಯು ಮಾತನಾಡುವುದಿಲ್ಲ. ಆದುದರಿಂದ 'ಪೇಳುಗುಂ' ಎಂದರೆ 'ಸ್ಪಷ್ಟಪಡಿಸುತ್ತದೆ' ಎಂದು ಅರ್ಥ. ಇಲ್ಲಿ ಮುಖ್ಯಾರ್ಥವನ್ನು ಬಿಟ್ಟು ಬೇರೊಂದು ಅರ್ಥವನ್ನು ಹೇಳಿದಂತಾಯಿತು : 'ಧ್ವನಿ' ಯೆಂದು ಕಾವ್ಯದ ಆತ್ಮವನ್ನು ವಿದ್ವಾಂಸರು ಹಿಂದೆಯೇ ಹೇಳಿದ್ದರಷ್ಟೆ . . . ಮತ್ತೆ ಕೆಲವರು ಅದನ್ನು 'ಭಾಕ್ತ' ( = ಲಾಕ್ಷಣಿಕ ) ವೆಂದರು (ಧ್ವನ್ಯಾಲೋ. ೪). [ಸಂ.]

**ಭಾಕ್ತಿಕ** (ಗು). ೧. ಭಕ್ತಿಯಿಂದ ಕೂಡಿದ; ಶ್ರದ್ಧಾವಂತನಾದ: ಇದನೋದುವ ಕೇಳ್ವ ಕಲ್ವ ಭಾಕ್ತಿಕಜನಕಾಗಳುಂ ಸಮನಿಸರ್ಕೆ ಮನೋರಥ ಕಾರ್ಯಸಿದ್ಧಿ (ಜಾತಿ. ೨೮-೪೩). (ನಾ). ೨. ಭಕ್ತ; ಆಶ್ರಿತ: ಭಾಕ್ತಿಕನ ಪೊಲ್ ಬಲವಂದುದು ಪಕ್ಷಿ (ಅಷಂಕೃ. ೩-೩). [ಸಂ.]

**ಭಾಗ** (ನಾ). ೧. ಪೂರ್ಣವಾದ ಒಂದು ಪದಾರ್ಥದ ಭಿನ್ನಭಿನ್ನವಾದ ಅಂಶ.—ಪಾಲು: ಕ್ರಮದಿಂ ದ್ವಾದಶಭಾಗವೊಂದು ಗೃಹಕಕ್ಕುಂ (ಜಾತಿ. ೦-೨೬); ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದನಿತಿಲ್ಲ (ಬಸವ. ೩೬೩). ೨. ಹಂಚಿಕೆ; ವಿಭಾಗ; ಹಿಸ್ಸೆ: ಅವರು ತಮ್ಮ ಮಕ್ಕಳಿಗೆ ಆಸ್ತಿಯನ್ನು ಭಾಗ ಮಾಡಿಕೊಟ್ಟರು (ರೂಢಿ). ೩. ಕರ್ತವ್ಯ; ಹೊಣೆ: ಅಪಾಯಕರವಾದ ಕೆಲಸವನ್ನೇ ನಿನ್ನ ಭಾಗಕ್ಕೆ ಆರಿಸಿಕೊಂಡಿದ್ದೀಯೇ (ಕಸಂಪ. II, ೯೦೩). ೪. ದೆಸೆ; ದಿಕ್ಕು: ಪೆರ್ಗ್ಗಾಗಾಮಾಸಿಗ್ರಾಮ ಪಶ್ಚಿಮಭಾಗ ಕೃತಾಕೃತಕ್ಷೇತ್ರಂ (ಎಕ. XI, ದಾವಣ. ೬೬-೩೦; 694); ದಕ್ಷಿಣದಿಶಾಭಾಗದೊಳ್ಗೋನಸಮುದ್ರದ ಕೃತ್ರಿಮಪರ್ಬ್ಬತಮೆನಿಸಿದೇರಿ (ಎಕ. VIII, ಶಿಗಸ. ೦೦೯-೬೦; 1079). ೫. ಕೆಲವು ಗ್ರಾಮಗಳ ಗುಂಪು; ಪ್ರಾಂತ; ಆಡಳಿತಕ್ಕಾಗಿ ಮಾಡಿರುವ ನಾಡಿನ ವಲಯ: ವನವಾಸಿ ಪಣ್ನಿಲೇ ಎಡೆವೊಳಲ್ಗೆ ಕಿಟುಕಾಗಾಮಾಸಿ ನಾಮಗ್ರಾಮ (ಎಕ. XI, ದಾವಣ. ೬೬-೨೩; 694). ೬. ಅದೃಷ್ಟ; ಭಾಗ್ಯ; ಸುದೈವ. ೭. ಒಂದು ವಸ್ತುವಿನ ನಾಲ್ಕನೆಯ ಒಂದು ಅಂಶ; ಪಾದಾಂಶ; ಕಾಲುಭಾಗ. ೮. ಸ್ಥಳ; ಅವಕಾಶ; ಸ್ಥಾನ. ೯. [ಗಣಿತ] ಒಂದು ಅಪೂರ್ಣ ಸಂಖ್ಯೆಯ ಅಂಶ. ೧೦. ಭಾಗಲಬ್ಧ. ೧೧. [ರೇಖಾಗ] ಒಂದು ವೃತ್ತದ ಸುತ್ತಳತೆಯಲ್ಲಿ ಮುನ್ನೂರ ಅರವತ್ತನೆಯ ಒಂದು (೧/೩೬೦); ಅಂಶ ಒಂದು ಡಿಗ್ರಿ. ೧೨. [ಜ್ಯೋತಿ] ಒಂದು ರಾಶಿಯ ಮೂವತ್ತನೆಯ ಒಂದು (೧/೩೦) ಅಂಶ. [ಸಂ.]

**ಭಾಗಂಗೊಳ್**, ಭಾಗಂಗೊಳು (ಕ್ರಿ). ಭಾಗವಡು; ವಿಭಾಗಿಸು: ಮಧ್ಯಮಪದಾಕ್ಷರಸಂಖ್ಯೆಯಿಂ ಆ ನಿಖಿಲಶ್ರುತಾಕ್ಷರಂಗಳಂ ಭಾಗಂಗೊಂಡೊಡಂಗಪೂರ್ವಪದಂಗಳಪ್ಪುವು (ಕನ್ನ. ಶ್ರು. ೬೬); ಭಾಗಂ ಎಂಬುದಕ್ಕೆ ಪೆಸರು—ತವಿಸು, ಭಾಗಿಸು, ಉಗಿ, ಎತ್ತು . . . ಭಾಗಂಗೊಂಬುದಕ್ಕೆ (ವ್ಯವಹಾ. ೦೨-೦೨). **ಭಾಗಂಗೊಳು**: "ಭಾಗಂ ಎಂಬುದಕ್ಕೆ ಪೆಸರು — ತವಿಸು ಭಾಗಿಸು. . . ಭಾಗಂಗೊಳು ಸೆಳೆ. . . ಇಂತಿನಿತುಂ ಭಾಗಂಗೊಂಬುದಕ್ಕೆ ಪೆಸರು" (ವ್ಯವಹಾ. ೦೨-೦೨). [ಭಾಗ + ಕೊಳ್$_1$]

**ಭಾಗಂಗೊಳು** 'ಭಾಗಂಗೊಳ್' ನೋ.

**ಭಾಗಂಬೋಗು** (ಕ್ರಿ). ಭಾಗವನ್ನು ಹೊಂದು: ಭಾಗಂಬೋಗದೆ ಉಳಿದಕ್ಕರಂಗಳೆಲ್ಲಂ ಪ್ರಕೀರ್ಣಕಪ್ರಮಾಣಮಕ್ಕುಂ (ಕನ್ನ. ಶ್ರು. ೬೬).
[ಭಾಗ + ಪೋಗು$_1$ (< ಪೋ$_1$)]

**ಭಾಗಧೇಯ** (ನಾ). ೧. ಪಾಲು; ಅಂಶ; ಭಾಗ. ೨. ಭಾಗ್ಯ; ಅದೃಷ್ಟ: "ಭಾಗಧೇಯಂ, ಭಾಗ್ಯಂ, ವಿಪಾಕಃ, ಭವಿತವ್ಯತಾ—ಈ ೪ ಭಾಗ್ಯದ ಪೆಸರ್" (ಕರಾಡು. ೨೦-೦೨೬); ಅಗಣಿತ ಭಾಗದೇಯಕೃತ ಮೂಲಗುಣಂಗಳನಂದಣು ಬ್ರತಾದಿಗಳನನಾಕುಲಂ ಬೆಸಸಿದಂ ಮುನಿಪುಂಗವಂ (ಸುಕುಮಾ. ೩-೯೬); ಭರತಕುಲದಲಿ ಭಾಗಧೇಯಸ್ಫುರಣಹೀನರನೆಮ್ಮನುಜ ಧಿಕ್ಕರಿಸಿದಾದಡೆ ಮುನಿದು ಮಾಡುವುದೇನು ವಿಧಿಯೊಡನೆ (ಕುಮ್ಮಾ. ಕ. ೦೬-೪೦); ಭವ್ಯವಿದ್ವನ್ನಿಮಹ್ಮಾನಂದದಿಂದಂ ಪಸುಮಸನಮಣಿಶ್ರೇಣಿಯುಂ ಮಾಣದೀವುತ್ತಮನಿರ್ದ್ದಂ . . . ಭಾರತೀಭಾಗಧೇಯಂ (ರಾಜಶೇ. ೭-೦೦೩); ತಮ್ಮ ಭಾಗಧೇಯವೇ ತಮ್ಮನ್ನು ರಕ್ಷಿಸಿರುವುದು (ಬಿಶಾ. ೦೩೨). ೩. ಆಸ್ತಿ; ಐಶ್ವರ್ಯ. ೪. ಸುಖ; ಸೌಖ್ಯ. ೫. ತೆರಿಗೆ; ಸುಂಕ: "ಅರ್ಥಾಗಮಃ, ಆಯಃ, ಭಾಗಧೇಯಂ, ಕರಃ, ಬಲಿಃ—ಈ ೫ ಸಿದ್ದಾಯಂ" (ಕರಾಡು. ೬೦-೨೬೯). ೬. ಹಕ್ಕುದಾರ; ಬಾಧ್ಯಸ್ಥ. ೭. ಅದೃಷ್ಟವುಳ್ಳ ವ್ಯಕ್ತಿ; ಭಾಗ್ಯವಂತ: ಕುಮಾರಿಗುಚಿತೋದ್ವಾಹವೈಭವದ ಸ್ವಯಂವರಕೆ ಭೂರಿ ಭುವನದ ಭಾಗಧೇಯರ ಭೂರಮಣರನು ಬರಿಸಿದನು (ತೊರವ. ೧-೦೨-೨೮)
[ಸಂ.]

**ಭಾಗಲಬ್ಧ** (ನಾ). [ಗಣಿತ] ಒಂದು ಸಂಖ್ಯೆಯನ್ನು ಮತ್ತೊಂದು ಸಂಖ್ಯೆಯಿಂದ ಭಾಗಿಸಿದರೆ ಉತ್ತರರೂಪವಾಗಿ ಬರುವ ಸಂಖ್ಯೆ: ಭಾಜ್ಯವು ಭಾಜಕದಿಂದ ಕಡಮೆಯಾದಲ್ಲಿ, ಮೊದಲನೆಯ ಭಾಗಲಬ್ಧವನ್ನು ಎಂದು ತೆಗೆದುಕೊಳ್ಳಬೇಕು (ಗಣಿತ. ೨೯೭). [ಸಂ.]

**ಭಾಗಲಾಂಬಿಕೆ** (ನಾ). ಒಬ್ಬಾಕೆಯ ಹೆಸರು: ಕಾರ್ತ್ತವೀರ್ಯ್ಯಾಗ್ರ ಕಾನ್ತಯಾ ಶ್ರೀ ಭಾಗಲಾಂಬಿಕಾ ದೇವ್ಯಾ (೧) ನಮಸ್ಕಂ ಕೃತಮುಣ್ನಾ ಸಾ (ಕೌಇ. XX. ೦೩-೨೦; 875). [<ಬಗಲೆ ? + ಅಂಬಿಕೆ]

**ಭಾಗವಂತ** (ನಾ). ಪಾಲುದಾರ; ಹಿಸ್ಸೆದಾರ: ಎನ್ನ ಸುಖದುಃಖಕ್ಕೆ ಭಾಗವಂತರು ನೀವಲಾ (ವೀರಶೈಕೃ. ೩-೨೦-೨೦). [ಸಂ. ಭಾಗವತ್]

**ಭಾಗವಡೆ** (ಕ್ರಿ). ಬೇರ್ಪಡು; ಬೇರೆಯಾಗು: ಆ ಗಿರಿಯೆಂಬ ದೇವನ ಪಜ್ಜೆಯಂತೆರಡಾಗಿ ತಾ ನದಿಯಿಂದ ಭಾಗವಡೆದು ಪೂರ್ವವಿದೇಹಮಿಹುದಾ ಶ್ರೀಗೆ ನಿವಾಸಮೆಂದೆನಿಸಿ (ಕ್ರಿಪಾಂ. ೦-೪೯). [ಭಾಗ + ಪಡೆ$_1$]

**ಭಾಗವತ** (ಗು). ೧. ಭಗವಂತನಿಗೆ ಸಂಬಂಧಪಟ್ಟ; ದೇವರಿಗೆ ಸಂಬಂಧಿಸಿದ. ೨. ವಿಷ್ಣುವಿಗೆ ಸಂಬಂಧಿಸಿದ. (ನಾ). ೩. ದೇವಭಕ್ತ; ಹರಿದಾಸ; ಕೃಷ್ಣಭಕ್ತ: ಕೌರವಭವನವನು ಹೊಜವಂಟು ವರಭಾಗವತಮಸ್ತಕರತ್ನ ವಿದುರನ ಮನೆಗೆ ನಡೆತಂದ (ಕುಮ್ಮಾ. ಉ. ೬-೪); ಪೋಗದಿರೆಲೊ ರಂಗ ಬಾಗಿಲಿಂದಾಚೆಗೆ ಭಾಗವತರು ಕಂಡರತ್ತಿ ಕೊಂಡೊಯ್ವರೊ (ಪುರಂದ. ೨-೦೦೦ ಅನುಕ್ರಮ); ಯದುವೃಷ್ಣಿಪ್ರಮುಖನೆ ಭಾಗವತಮಸ್ತಕಮಣಿ ಬೃಂದಾರಕೋಪಮಂ ಸತ್ಯಸಂಧಂ ಭೀಷ್ಮಂ (ಕೃಷ್ಣರಾ. ೯-೬೦). ೪. ಪುರಾಣದ ಕತೆಗಳನ್ನು ಯಕ್ಷಗಾನ, ಬಯಲಾಟ ಮೊದಲಾದ ನಾಟಕರೂಪಗಳಿಗೆ ಅಳವಡಿಸಿ ಆಡಿಸುವವನು ಮತ್ತು ಹಿಮ್ಮೇಳವನ್ನು ಹಾಡುವವನು: ಹಳೇಕಾಲದಿಂದ ಹಳ್ಳಿಗಳಲ್ಲಿ ಆಟ ಕಲಿಸುವ ಯಜಮಾನನಿಗೆ ಭಾಗವತನೆಂದು ಹೆಸರು (ಹುಟ್ಟಿದ. ೮೨); ರಂಗಸ್ಥಳಕ್ಕೆ ಬರುವವರೆಲ್ಲರೂ ಭಾಗವತರನ್ನೂ ರಂಗಸ್ಥಳವನ್ನೂ ವಂದಿಸಿ ಕಾಲನ್ನಿರಿಸಬೇಕು (ಯಕ್ಷಕ. ೩೪); ಯಕ್ಷಗಾನದಲ್ಲಿ . . . ಭಾಗವತನು (ಹಾಡುಗಾರನು) ಅದನ್ನು . . . ಎಲ್ಲ ತಾಳಗಳಲ್ಲಿಯೂ ಸಂದರ್ಭವರಿತು ಹಾಡುತ್ತಾನೆ (ಸಂಕೀರ. ೦೩೬). ೫. ಕೆಲವರು ಕೀರ್ತನಕಾರರು, ಸಂಗೀತಗಾರರು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳುವ ಪದ: ಅನಂತರಾಮಭಾಗವತರಿಗೆ ಮಧುರವಾದ ಮನಮುಟ್ಟುವಂತಹ ಶಾರೀರಸಂಪತ್ತು ದೈವದತ್ತವಾಗಿ ಬಂದಿತ್ತು (ಸಂಗೀತ. ೬೦); ಇವನು ಸಂಗೀತ ಕಲಿತಿದ್ದು ಯಾವ ಭಾಗವತರಲ್ಲಿ? (ಜಾನಗೀ. ೦೮೨). ೬. ಪ್ರಸಿದ್ಧವಾದ ಹದಿನೆಂಟು ಪುರಾಣಗಳಲ್ಲಿ ಒಂದು: ಭಾಗವತ ಪುರಾಣ . . . ಬ್ರಹ್ಮಾಂಡ ಪುರಾಣ ವೆಂಬಿವೇ . . . ಹದಿನೆಂಟು ಮೂಲ ಪುರಾಣಂಗಳು (ಶಿವೀಕ. ೬); ವಿಷ್ಣು, ಭಾಗವತ, ನಾರದ, ಗಾರುಡ ಈ ನಾಲ್ಕು ಪುರಾಣಗಳು ವೈಷ್ಣವಗಳು (ಕಾರಿದ. ೦೩೬).

**ಭಾಗವತರ ಆಟ** = ಯಕ್ಷಗಾನ, ಬಯಲಾಟ ಮೊದಲಾದ ನಾಟಕ ರೂಪ: ಕರ್ಣಾಟಕದ ಬಯಲಾಟ ಇಲ್ಲವೆ ಭಾಗವತರ ಆಟಗಳೂ ತಿದ್ದಿದ ನರ್ತನಕಲೆಗಳೇ (ಬಾಂಕ್ರ. II, ೯೨೦). [ಸಂ.]

**ಭಾಗವತಧರ್ಮ** (ನಾ). ಭಗವಂತನಾದ ವಿಷ್ಣುವೇ ಪರದೈವ ಮತ್ತು ಅವನಲ್ಲಿಡುವ ನಿರತಿಶಯವಾದ ಭಕ್ತಿಯೇ ಮೋಕ್ಷಕ್ಕೆ ಕಾರಣವೆಂದು ಬೋಧಿಸುವ ಮತ; ವೈಷ್ಣವಮತ: ಇದೇ ಭಗವದ್ಗೀತೆ ಮೊದಲಾದ ಶಾಸ್ತ್ರಗಳಲ್ಲಿರುವ ಭಾಗವತಧರ್ಮ, ವಿಶಿಷ್ಟಾದ್ವೈತಸಿದ್ಧಾಂತ (ಹಿಂದಸಾ. ೨೩೯); ಈ ನಾರಾಯಣನ ಆರಾಧಕರ ಒಂದು ಪಂಥವೇ ಬೆಳೆದು

ಮುಂದೆ ಅದು ಭಾಗವತಧರ್ಮದಲ್ಲಿ ಒಂದಾಗಿ ಬೆರೆತಿರುವುದು ಗೋಚರವಾಗುತ್ತದೆ (ಕಾರಿಡ. ೨೯೩). [ಸಂ.]

**ಭಾಗವತ ಸಂಪ್ರದಾಯ** (ನಾ). ವಿಷ್ಣುವೇ ಸರ್ವೋತ್ತಮನೆಂದು ಪ್ರತಿಪಾದಿಸಲು ಹೊರಟ ವೈಖಾನಸ, ಪಾಂಚರಾತ್ರ, ಭಾಗವತಸಂಪ್ರದಾಯವೆಂಬ ಮೂರು ಆಗಮಶಾಖೆಗಳಲ್ಲಿ ಮೂರನೆಯದು; ೬ 'ಶಕ್ತಿಭಾಗವತ', 'ಶಿವಭಾಗವತ' ಮುಂತಾದ ಸಂಪ್ರದಾಯಗಳೂ ಇವೆ: ಶ್ರೀಶುಕಭಾಷ್ಯಾನುಸಾರಿಯಾದ ದರ್ಶನದ ಅನುಯಾಯಿಗಳಾಗಿ ಶ್ರೀಗೋಪಿಚಂದನದಿಂದ ಊರ್ಧ್ವಪುಂಡ್ರಾದಿಗಳನ್ನೂ ಧರಿಸಿ ಉಪಾಸಿಸುವ ವೈದಿಕಸಂಪ್ರದಾಯವು "ಭಾಗವತಸಂಪ್ರದಾಯ"ವೆಂದೂ . . . ಆಚರಣೆಯಲ್ಲಿದೆ (ಛಾರಿಡ. ೬೬); ಅವರ ಮನೆತನದವರೆಲ್ಲ ಭಾಗವತಸಂಪ್ರದಾಯಕ್ಕೆ ಓಲುತ್ತಿದ್ದುದರಿಂದ ಎಲ್ಲರಿಗೂ ಸಂಗೀತದಲ್ಲಿ ಸಾಮಾನ್ಯವಾದ ಜ್ಞಾನವಿದ್ದೇ ಇತ್ತು (ಸಂಗೀತ. ೯೬). [ಸಂ.]

**ಭಾಗವತಿಕೆ** (ನಾ). ಯಕ್ಷಗಾನ, ಬಯಲಾಟ ಮುಂತಾದುವುಗಳನ್ನು ಕಲಿಸುವಿಕೆ: ಸಂಖ್ಯ್ಯಭಾಗವತರೆಂಬುವರು . . . ಭಾಗವತಿಕೆಗೂ ಅಸಮರ್ಥರಾಗಿ ಆ ಉದರಶೂಲೆಯಿಂದಲೇ ಪರಲೋಕವಾಸಿಗಳಾದರು (ಶಾಶೀಸು. ೬). [ಭಾಗವತ+—ಇಕೆ]

**ಭಾಗವಹಿಸು** (ಕ್ರಿ) ಸೇರು; ಭಾಗಿಯಾಗು; ಪಾಲುಗೊಳ್ಳು: ಇಂದಿನ ಕವಿಗೋಷ್ಠಿಯಲ್ಲಿ ನಾಡಿನ ಹೆಸರಾಂತ ಕವಿಗಳು ಭಾಗವಹಿಸಿದ್ದರು (ರೂಢಿ). [ಭಾಗ+ವಹಿಸು]

**ಭಾಗಶಃ** (ಅ). ಕೆಲವು ಭಾಗ ಮಾತ್ರ; ಭಾಗಭಾಗವಾಗಿ; ಅಸಂಪೂರ್ಣವಾಗಿ: ಸಾಮಾನ್ಯವಾಗ ಮಾನವಕೋಟಿಯ ಜೀವನವೂ ಜೀವನವ್ಯವಹಾರಗಳೂ ಭಾಗಶಃ ಸ್ವಂತ ಅಭಿಪ್ರಾಯಗಳಿಂದಲೂ ಭಾಗಶಃ ಪರರ ಅಭಿಪ್ರಾಯಗಳಿಂದಲೂ ರೂಪುಗೊಳ್ಳುತ್ತವೆ (ಕೃಪರು. ೪೯೪). [ಸಂ.]

**ಭಾಗಸ** (ನಾ). ಹಣ; ಧನ; ದ್ರವ್ಯ: ನಿನಗಾನಾಟಿಸಿದೆನೆನಗೆ ನೆಟಿಯ ತುಡುಗೆಯುಂ ಮಾಡಿಸಲ್ ಭಾಗಸ[ಪಾಠಾಂ. ಭಾಗವಸ]ಮುಳ್ಳೊಡೆ ನಿನಗಾಂ ಪೆಂಡತಿಯೆಂ (ಶಬ್ದಾ.ರಾ. ೦೭-೦೯); ಕೋವಣಕ್ಕಪ್ಪೊಡಂ ಭಾಗಸಮಿಲ್ಲದೊಂ (ಶಬ್ದಾ.ರಾ. ೯೬-೮). [<ಸಂ. ಭಾಗಸ್ವ ?]

**ಭಾಗಸ್ತ** (ನಾ). = ಭಾಗಸ್ಥ ೧: ಆ ನಿಮ್ಮ ಭಾಗಸ್ತರೇನಾದರು? (ಐದುಶ್ಚ. ೦೩೦). [<ಸಂ. ಭಾಗಸ್ಥ]

**ಭಾಗಸ್ಥ** (ನಾ). ೧. (ಔದ್ಯೋಗಿಕ ಉದ್ಯಮ ಮೊದಲಾದುವುಗಳಲ್ಲಿ ಬಂಡವಾಳವನ್ನು ಹಾಕಿ) ಲಾಭನಷ್ಟಗಳಲ್ಲಿ ಸಮಾನಾಧಿಕಾರವುಳ್ಳವನು; ಪಾಲುಗಾರ: ಆ ಇಬ್ಬರು ಶೆಟ್ಟರೂ ವ್ಯವಹಾರದಲ್ಲಿ ಭಾಗಸ್ಥರು (ರೂಢಿ). ೨. ಪಿತ್ರಾರ್ಜಿತವಾದ ಆಸ್ತಿಯಲ್ಲಿ ಮಗ, ಸಹೋದರ ಮೊದಲಾಗಿ ಪಾಲಿಗೆ ಅರ್ಹನಾದವನು; ದಾಯಾದ: "ದಾಯಾದಃ— ೩ ಮಗನು, ಬಂಧು, ಭಾಗಸ್ಥ" (ಸಿದ್ಧಾಂಶಿ. ೩೯೬). [ಸಂ.]

**ಭಾಗಹಾರ** (ನಾ). [ಗಣಿತ] ಒಂದು ಸಂಖ್ಯೆಯನ್ನು ಮತ್ತೊಂದು ಸಂಖ್ಯೆಯಿಂದ ಭಾಗ ಮಾಡುವುದು,—ಭಾಗಿಸುವುದಂ: ಈ ಮಾರ್ಗದಿಂ . . . ಭಾಗಹಾರಂ ಹೇಳಲ್ಪಟ್ಟುದು (ವ್ಯವಹಾ. ೦೨-೩೪); ಭಾರತೀಯವಿಧಾನಗಳು ಸಾಮಾನ್ಯವಾದ ಗುಣಕಾರ ಭಾಗಹಾರಗಳ ಆಧಾರದ ಮೇಲೆ ಇದ್ದು, ಹೈಸ್ಕೂಲು ವಿದ್ಯಾರ್ಥಿಗಳಿಂದ ಅರ್ಥಮಾಡಿಕೊಳ್ಳಲು ಸಾಧ್ಯ (ಗಣಿತ. ೨೯೩). [ಸಂ.]

**ಭಾಗಾಕಾರ** 'ಭಾಗಾಹಾರ' ನೋ.

**ಭಾಗಾದಿ** (ನಾ). ೧. ಪಾಲುಗಾರ; ಭಾಗಸ್ಥ: ಅವನ ಗೊಡವೆಯೇಕೆ ಅವನಾರು ನೀನಾರು ಅವನ ಪಾಪಕ್ಕೆ ನೀ ಭಾಗಾದಿಯೆ (ಶಿದಾಶ್ಕ. ೩೬-೦). ೨. ದಾಯಾದಿ: ಭಾಗಾದಿ ಬಲಕಿರಲಿ ವೈರಿ ತಾ ಎಡಕಿರಲಿ . . . ಬಲಭೀಮದೇವ ನಿನ ಮ್ಯಾಲ ದಯವಿರಲಿ (ಗರತಿ. ೦೦೩); ಮಲಸಂಬಂಧದ ಭಾಗಾದಿ ಹದ್ದಿಗೆ ಹಳೆಹಾದಿ (ಜಾಪಲ. ೨೯-೦೭). ೩. (ಆಲಂ) ಶತ್ರು; ದ್ವೇಷಿ: ಯಾರೋ ಸುಳ್ಳು ಹೇಳಿದ್ದಾರೆ ನಮ್ಮ ಭಾಗಾದಿಗಳು (ಜಾಶೋಲ. ೨೦೬); ಹುಟ್ಟುತ್ತಾ ಬಂಧು ಬೆಳೆಯುತ್ತ ಭಾಗಾದಿ (ಮಾರಪ. II, ೩೨). [ಸಂ. ಭಾಗಾದಿನ್]

**ಭಾಗಾರ** 'ಭಾಗಾಹಾರ' ನೋ.

**ಭಾಗಾರ್ಹ** (ನಾ). ೧.ಭಾಗವನ್ನು ಪಡೆಯಲು ಅರ್ಹನಾದವನು; ವಾರಸುದಾರ; ಉತ್ತರಾಧಿಕಾರಿ. ೨. ಹಂಚಬೇಕಾದುದು; ಭಾಗಮಾಡಬೇಕಾದುದು. [ಸಂ.]

**ಭಾಗಾವಳಿ** (ನಾ). ಪಾಲು; ಭಾಗ: ಮಂಚಗಾವುಂಡನ ಕುಲಸ್ತ್ರೀ ಸಾನ್ತಿಅಬ್ಬೆಗಾಡಿ ಸ್ವರ್ಗಸ್ತೆಯಾದಾಗಳುಂ ನೆಲ್ಲೂರ ಭೂಮಿ ಆಕಲಗೌನಸೋಮಯನ ಭಾಗಾವಳಿ ಕೊಟ್ಟಲ್ಲಿ ಕಳಗುಂದಣೆ ಭೀಮಯ ಪರಿಅಸೆ (ಎಕ. VIII, ಸೊರಬ. ೪೭೨_೦೦; 1188). [<ಭಾಗ + — ವಳಿ$_3$]

**ಭಾಗಾಹಾರ**, ಬಾಗಾರ, ಭಾಗಾಕಾರ, ಭಾಗಾರ (ನಾ). [ಗಣಿತ] ಒಂದು ಸಂಖ್ಯೆಯನ್ನು ಮತ್ತೊಂದು ಸಂಖ್ಯೆಯಿಂದ ಭಾಗಿಸುವುದು; ಭಾಗಹಾರ: ಶಾಲೆಯಲ್ಲಿ ಇಂದು ಉಪಾಧ್ಯಾಯರು ಭಾಗಾಹಾರದ ಲೆಕ್ಕಗಳನ್ನು ಕೊಟ್ಟಿದ್ದರು (ರೂಢಿ). **ಬಾಗಾರ**: ಗಣಿತ ಬಾಗಾರಗಳ ಲೆಕ್ಕವ ಗುಣಿಸಿ ಭಾಗಿಸಿ ಹೇಳದರೆ ಲೆಕ್ಕಣಿಕೆಯನು ಪಿಡಿವಜನ ತಂದೆಯ ರೂಪವನು ಬರೆದು ಮಣಿವನು (ಕೃಷ್ಣಾ.ಪ. ೭_೨). **ಭಾಗಾಕಾರ**: ಪ್ರತಿವಿನ್ಯಾಸವನ್ನೂ ಬರೆಯುತ್ತ ಹೋಗಿ ಉತ್ತರ ಪಡೆಯುವ ಭಾಗಾಕಾರ; ದೀರ್ಘಭಾಗಾಕಾರ (Long-division. ಇಂಕಪ); ಭಾಗಾಕಾರ ತಿಳಿಯದಿದ್ದರೂ ಹಾಗದ ಲಕ್ಷಣ ತಿಳಿಯದೆ? (ಗಾದೆ). **ಭಾಗಾರ**: ಆಳು ಭಾಗಾರ ವಿಷಮಭಾಗಾರ . . . ಇವು ಮೊದಲಾದ ಲೆಕ್ಕಾಚಾರಗಳು (ಜಾತ್ಯರ. ೦-೩). [< ಸಂ. ಭಾಗಹಾರ]

**ಭಾಗಿ** (ನಾ). ೧. ಭಾಗಕ್ಕೆ ಪಾತ್ರನಾದವನು; ಪಾಲುದಾರ; ಹಿಸ್ಸೆದಾರ. ೨. ಯಾವುದಾದರೂ ಫಲವನ್ನು ಪಡೆಯುವವನು: ಅಕ್ಷಯಕೀರ್ತಿತುನ್ತಕದ ವಾರ್ಧಿಯ ಮೇಲದು ನೋನ್ತು ಭಕ್ತಿಯಿಂ ಅಕ್ಷಿಮಣಕ್ಕೆ ರಮ್ಯಸುರಲೋಕಸುಕಕ್ಕೆ ಭಾಗಿ (ಎಕ. II, ೨೦-೪; ಸು. 700). ೩. ಪುಣ್ಯವಂತ; ಅದೃಷ್ಟಶಾಲಿ; ಭಾಗ್ಯಶಾಲಿ. ೪. ಸಮಾನವಾದ ಉತ್ತರಾಧಿಕಾರವುಳ್ಳವನು; ಸಮಭಾಗಿ; ದಾಯಾದ. ೫. ಸ್ವಾಮ್ಯವನ್ನು ಪಡೆದವನು; ಮಾಲೀಕ; ಒಡೆಯ. ೬. ಯಾವುದಾದರೂ ಕಾರ್ಯಭಾರ, ಸಮಾರಂಭ, ಸಾರ್ವಜನಿಕಕಾರ್ಯಗಳಲ್ಲಿ ಸೇರಿರುವವನು,— ಮಿಳಿತನಾಗುವವನು: ಆ ಉತ್ಸವದಲ್ಲಿ ನಾನೂ ಭಾಗಿಯಾಗಿದ್ದೆನು (ರೂಢಿ). [ಸಂ. ಭಾಗಿನ್]

**ಭಾಗಿತ್ವ** (ನಾ). ಭಾಗಿಯಾಗುವಿಕೆ; ಭಾಗವಹಿಸುವುದು; ಪಾಲುಗೊಳ್ಳುವುದು: ಒಂದು ಅಕಾರ್ಯದಲ್ಲಿ ಭಾಗವಹಿಸುವುದು; ಭಾಗಿಯಾಗುವುದು, ಭಾಗಿತ್ವ (Complicity. ಇಂಕಪ). [ಸಂ.]

**ಭಾಗಿನೇಯ** (ನಾ). ೧. ಅಕ್ಕ ಅಥವಾ ತಂಗಿಯ ಮಗ; ಸಹೋದರಿಯ ಪುತ್ರ; ಸೋದರಳಿಯ: "ಸ್ವಸ್ರೀಯಃ, ಜಾಮೇಯಃ, ಭಾಗಿನೇಯಃ — ಈ ೩ ಒಡಹುಟ್ಟಿದವಳ ಮಗಂ" (ಹಲಾಯು. ೯೪-೩೩೩); ನಿನ್ನ ನಲ್ಲನೆಗಡಂ ಮದ್ಭಾಗಿನೇಯಂ (ಅಂಪು. ೩-೯೪); ತ್ವದೀಯ ಭಾಗಿನೇಯಂ ಮುನ್ನಮುಳ್ಳ ಭಾಗಾಂಶಮೆಲ್ಲಮಂ ತ್ಯಾಗಭೋಗೋಪಭೋಗಾದಿ ವ್ಯಸನಕ್ಕೆ ಸದ್ವ್ಯಯಂ ಮಾಡಿ ಕಿಡಿಸಿಯುಂ (ಸುಕುಮಾ.೨-೩೨ ವ). ೨. ದಾಯಾದಿ (?): ಶತಕ್ರತು ಮುಕುಳಿತಾಂಜಲಿಪುಟನಾಗಿ ಚಿನ್ನಪಂ ಜಗನ್ನಾಥ ಪಾಂಡವಮಧ್ಯಮನರ್ಜುನನೆಂಬನೆನಗತಿಪ್ರಿಯತನಯಂ ದುರ್ಯೋಧನಂಗೆ ಭಾಗಿನೇಯಂ ನಿನಗೆ ಮೈದುನನುಮಪ್ಪಂ . . . ಎನೆ (ಜಗದಿ. ೪-೦೦೮ ವ). [ಸಂ.]

**ಭಾಗಿಸು** (ಕ್ರಿ). ೧. ಪಾಲುಮಾಡು ; ಭಾಗಮಾಡು ; ವಿಭಾಗಿಸು : ಭಾವಿಸಿದಂ, ಭಂಗಿಸಿದಂ, ಭಾಗಿಸಿದಂ (ಶಮದ. ೬೪ ಶ್ರ ಯೋ). ೨. [ಗಣಿತ] ಭಾಗಾಹಾರ ಮಾಡು: ಭಾಗಂ ಎಂಬುದಕ್ಕೆ ಪೆಸರು—ತವಿಸು, ಭಾಗಿಸು, ಉಗಿ (ವ್ಯವಹಾ. ೦೨-೧೨) ; ಧನದ ಗುಣಕಾರ ಭಾಗಹಾರಂಗಳನಪವರ್ತಿಸಿ ಭಾಗಿಸಿ (ಗೊಮ್ಮಸಾ. ೪೬-೦೦) ; ೧೨೦ನ್ನು ಎರಡರಿಂದ ಭಾಗಿಸಬೇಕು (ಶಾಲೆಮ. ೦೦೫).

**ಭಾಗಿಸಿಕೊಳ್ಳು** = ಹಂಚಿಕೊಳ್ಳು ; ಪಾಲು ಮಾಡಿಕೊಳ್ಳು : ಇಬ್ಬರೂ ಒಂದೇ ಹೊಟ್ಟೆಯ ರಕ್ತಮಾಂಸಗಳನ್ನು ಭಾಗಿಸಿಕೊಂಡು ಬೆಳೆದವರಾಗಿರುವಾಗ ಪ್ರೇಮಾತಿಶಯವು ಅವರಿಬ್ಬರಲ್ಲಿ ತೋರದೆ ಮತ್ತೆಲ್ಲಿ ತೋರೀತು ! (ಹೀಗಟ್ಟ. ೯೦). [ಭಾಗ + –ಇಸು$_3$]

**ಭಾಗಿಸುಹ** (ನಾ). [ಗಣಿತ] ಭಾಗಿಸುವುದು ; ಭಾಗಾಹಾರ : ಎತ್ತು ತೆಗೆಯೆನಲು ಭಾಗಿಸುಹವಾಕ್ಯಂ (ಮಂಗರಾ. ೦೦೪-೧೦).

[ಭಾಗಿಸು + — ಹ$_2$ (< — ವ$_2$)]

**ಭಾಗೀದಾರ, ಭಾಗೇದಾರ** (ನಾ). ಪಾಲುಗಾರ; ಭಾಗಸ್ಥ . ಈ ಕಂಪನಿಗಳು ಭಾಗೀದಾರರಿಗೆ ವರ್ಷಕ್ಕೆ ಶೇಕಡಾ ೬ ರೂಪಾಯಿಯಂತೆ ಲಾಭವನ್ನು ಸರಾಸರೀಮಾನದಿಂದ ಕೊಡುತ್ತವೆ (ಕಭಾಗ. ೩೦೩) : ಭಾಗೀದಾರರು ಪ್ರಾರಂಭದ ಬಂಡವಲಕ್ಕೆ (Paid-up Capital) ಹಣವನ್ನು ಪೂರೈಸಿದವರು (ಬ್ಯಾಂಕಿಕ್. ೭). **ಭಾಗೇದಾರ** : "ಭಾಗೇದಾರ—ಪಾಲುಗಾರ" (ಶಾಪಕೋ. ೨೫). [← ಮರಾ. ಭಾಗೀದಾರ್]

**ಭಾಗೀರಥಿ** (ನಾ). ಭಗೀರಥನೆಂಬ ಮಹಾರಾಜನಿಂದ ಭೂಮಿಗೆ ಇಳಿದು ಬಂದುದೆಂದು ಹೇಳಲಾದ ನದಿ ; ಗಂಗಾನದಿ : "ಭಾಗೀರಥೀ, ಸುರಸರಿತ್, ವಿಷ್ಣುಪದೀ, ಜಾಹ್ನವೀ, ಗಂಗಾ—ಈ ೫ ಗಂಗೆ" (ಹಲಾಯು. ೦೦೦-೫೦) ; ಬಾರಪ್ಪ ಭಾಗೀರಥಿ ತೋಜಿವ್ವ ಜನರಿಗೆ ನಾ ಸ್ನಾನ ಮಾಡುವುದು ತೋಜಿವ್ವ ಜನರಿಗೆ (ಪುರಂದ. ४-೨೨ ಪಲ್ಲವಿ); ಕೆರಳ್ದು ಭಾಗೀರಥಿ ಸಮಸ್ತನೃಪಬೃಂದದೊಳ್ತನ್ನ ಮಗನುದ್ದಾಮನಾಗಿರ್ಪನೆಂದುಮಾಳಿಪ ನಲ್ಲಮ. . . ನೀನೆನಗೆ ಸುತರಿಲ್ಲೆನಲ್ಬಹುದೆ ಪೋಗೆಂದೊಡೆ (ಕೈವಲ್ಯ. ४-೩೦); ಭಗೀರಥ ಯತ್ನಮಾಡಿ ಭಾಗೀರಥಿ ತಂದ. ನಗರದವ ಯತ್ನ ಮಾಡಿ ನಗಾ ಕಳಕೊಂಡ (ಗಾದೆ).

**ಭಾಗೀರಥೀನಂದನ**=ಗಂಗೆಯ ಮಗ; ಗಾಂಗೇಯಂ; ಭೀಷ್ಮ: ಸಾರಿದನು ಶರಮಂಚವನು ಭಾಗೀರಥೀನಂದನನು (ಕುಮಾ.ದ್ರೋ. ೦೬-೫೬).

[ಸಂ. ಭಾಗೀರಥೀ]

**ಭಾಗುರೆ** (ಅ). ಮೆಚ್ಚುಗೆಯನ್ನು ಸೂಚಿಸುವ ಒಂದು ನಿಪಾತಾವ್ಯಯ: ಜಯ ಮಱೆಯ ಭಾಪುರೆ ಭಾಗುರೆ ರಾಉತೊ ರಾಉತೊ. . . ಕಂಬಸಿಂಗ ಬೋಳೆಯನಾಯಂ (ಎಕ. VIII. ಸಾಗರ. ೩೨-೦೩ ; 1307). [ ? ]

**ಭಾಗೆ** (ನಾ). ೧. ಪಾಲು; ಭಾಗ; ಅಂಶ: ಹೋದ ಮೃಗಮಂ ಕಂಡೊಡೆನಗೆ ನೀನೊಳ್ಳಿದಂ ಆದಲ್ಲಿ ಭಾಗೆಯಂ ಮಂಚಿಸೆಂ ಕೊಳ್ಳದಂ (ಕಬ್ಬಿಗ. ದೇ. ೦೩೦-४); ಅಕ್ಷರಂ ಧರೆಯೊಳೊಬ್ಬರ ಭಾಗೆಗೆ ಬಂದುದಲ್ತು (ವಚನ. ೭); ಇನಿತುವಂ ಮೂಱುಭಾಗೆಯ ಮಾಡಿ ಕುಡುವುದು (ಸೌಂದಪು. ೧೬-೬). ೨. ಹಂಚಿಕೆ ; ವಿಭಾಗಿಸುವಿಕೆ ; ವಿಂಗಡಣೆ : ಮೂವರಿಗಿಂತು ನಾಲ್ಕುಜಿ ಪರಿಗಣಿತ ಪರಮಾನ್ನ ಸಂಘಟಿಸಿದುದು ಭಾಗೆಯುಲಿ (ತೊರರಾ. ೦-೭-೫೮). ೩. ಐಶ್ವರ್ಯ; ಸಂಪತ್ತು: ಭಾಗೆ ಉಳ್ಳವರ ಮನಿಯಾಗ ಶುಭಕಾರ್ಯ ಆಗ ಹುಟ್ಟಿ ಆಗ ಬೆಳದಾವ (ಕನ್ನಜಾ.೬೬). ४. ಎಡೆ; ಸ್ಥಳ: ಪಂಕಭಾಗೆಯೆಂಬತ್ತುನಾಲ್ಕುಸಾಸಿರಯೋಜನಂ ಬಾಹುಲ್ಯಮುಮಕ್ಕುಂ (ಶಾಸ್ತ್ರ. ೩೨-೦೦) ; ಗುರುರವಿಗಳುತ್ತುಂಗಭಾಗೆಯುಲಿರಲು . . . ಪುತ್ರೋದಯಗಳಾದವು ಭೂಪ ದಶರಥಗೆ (ತೊರರಾ. ೦-೬೬).

**ಭಾಗೆ ಮಾಡಿಕೊಳ್** = ಹಂಚಿಕೊಳ್ಳು: ಅಮೃತಮಥನಮಂ ಮಾಡುತ್ತೀ ತ್ರಿದಶಾಳಿಗಳ್ ನುಡಿದರಲ್ಲಿ ಪುಟ್ಟಿದ ವಸ್ತು ಮೊದಲಾದುದನು ಭಾಗೆ ಮಾಡಿಕೊಂಡರ್ ತಮ್ಮೊಳಗೆ ತಾವೆ ನಿಮಗೆನ್ನದೆ (ಲಕಶಂ. ೦೨-೦೨). [ಸಂ. ಭಾಗ]

**ಭಾಗೆಕಾಱ** (ನಾ). ಭಾಗವಹಿಸುವವನು; ಪಾಲುಗೊಳ್ಳುವವನು; ಭಾಗಿ: ಆಗದಿರದೀಯುಬ್ಬರವು ಕಿವಿಮೂಗು ಮಸುಳಿಸಿದವಳ ಬವರದ ಭಾಗೆಕಾಱರ ಬರವು ಭರತಾವತಜ ನೋಡೆನಲು (ತೊರರಾ. ३-೫-೧೦). [ಭಾಗೆ+—ಕಾಱ]

**ಭಾಗೆಗೊಡು** (ಕ್ರಿ). ಭಾಗವನ್ನು ಕೊಡು ; ಪಾಲುಕೊಡು: ಪಿತನಳಿದೊಡನುಜಂಗೆ ಭಾಗೆಗೊಟ್ಟುಳಿದರ್ಥತತಿಯೊಳನುಜೆಯ ಜಂಗಮಾರ್ಚನೆಯ ಮಾಡೆಂದು ಸಿತಗಳನ ವಶಕೆತ್ತು ಪಡಗೇಱುತಗ್ರಜಂ ಶರಧಿಯೊಳು ಮಡಿಯೆ (ಬಾಪಟಂ. ೬-೬). [ ಭಾಗೆ + ಕೊಡು$_1$ ]

**ಭಾಗೇದಾರ** 'ಭಾಗೀದಾರ' ನೋ.

**ಭಾಗ್ಯ** (ನಾ). ೧. ಶುಭಾಶುಭಕರ್ಮಗಳ ಫಲ ; ವಿಧಿ ; ಹಣೆಬರಹ : "ಭಾಗಧೇಯಂ, ಭಾಗ್ಯಂ, ವಿಪಾಕಃ, ಭವಿತವ್ಯತಾ—ಈ ४ ಭಾಗ್ಯದ ಪೆಸರ್" (ಹಲಾಯು. ೨೦-೦೨೬); ಎಮಗೆ ತಂದೆಯಿತ್ತವನಿತಳಂ ಪೊರೆಯುಂಟೆ ತನಗೆ ಭಾಗ್ಯಾನುರೂಪದಿಂ ಬಾಟ್ಟಿಮೆಱಗಮೆಂಬತಿ ಮದದಿಂ ನಿನ್ನನುಜರನಿಬರುಂ ಮಾನೋನ್ನತರಣಮೆಱಗರ್ (ಆದಿಪು. ೦४-೦೬) ; ಬಗೆದೆಗೆಯದೆ ತನ್ನ ಭಾಗ್ಯದ ಫಲವೆಂದು ಬಗೆದು ಭಕ್ತಿಯೊಳೆಸಗುವುದು (ಹರಿಶ. ३-೯); ಪಳಿಯುತೆ ನಿಜಭಾಗ್ಯವನಾಯೆಳೆಯಳ್ ತೋಳೆತ್ತಿ ಗೋಳಿಡಲ್ಕುಜ್ಜುಗಿಸಲ್ (ಶಾಕುಂತ. ೬४-೦३೦). ೨. ಅದೃಷ್ಟ; ಸುದೈವ : ನಾರಿಯರಿರವ ಪುರುಷನ ಭಾಗ್ಯದೇವತೆಯೊಲಿವ ಕಾಲವನು . . . ವಿರಚಿಸುವೊಡೆ ವಿಧಾತೃಗಳವಲ್ಲ (ಕುಮಾ.ಅ. ३-೬३); ಇದು ಭಾಗ್ಯವಿದು ಭಾಗ್ಯವಿದು ಭಾಗ್ಯವಯ್ಯ ಪದುಮನಾಭನ ಪಾದಭಜನೆ ಸುಖವಯ್ಯ (ಪುರಂದ. ೦-೦३೨ ಪಲ್ಲವಿ); ನಮ್ಮ ಭಾಗ್ಯವಶದಿಂದ ನೀನು ಬಂದು ಮಾನ ಉಳಿಸಿದೆ (ವಕಶಾ. ೨४). 'ಭಾಗ್ಯವಂತ' ಮರಾ. ೩. ಸುಖ; ಶ್ರೇಯಸ್ಸು. ४. ಸಿರಿ ; ಐಶ್ವರ್ಯ ; ಸಂಪತ್ತು : ರತಿಯಿಂ ಸೌಂದರ್ಯಸೌಭಾಗ್ಯಮನೊಸಗೆ[ಯ] ಪೌಲೋಮಿಯಿಂ ಭಾಗ್ಯಮಂ ಭಾರತಿಯಿಂ ನಾನಾಕಳಾಕೌಶಲಮನತಿಶಯಂಬೆತ್ತಿರಲ್ . . . ಮಹಾದೇವಿ ಕಣ್ಗೆಡ್ಡಮಾದಳ್ ( ಪುಷ್ಪಕ. ३-೨೫ ); ಭಾಗ್ಯದ ಲಕ್ಷ್ಮೀ ಬಾರಮ್ಮ ನಮ್ಮಮ್ಮ ನೀ ಸೌಭಾಗ್ಯದ ಲಕ್ಷ್ಮೀ ಬಾರಮ್ಮ (ಪುರಂದ. ೦-೨೦೦ ಪಲ್ಲವಿ); ಯೋಗ್ಯತೆಯನೆಣಿಸುವೊಡೆ ನಿಜವೈರಾಗ್ಯದಿಂದಾಧಿಕ್ಯಮೆನಿಸುವ ಭಾಗ್ಯವಿರದೈ ಕಂದ ( ಗಗಶಾ. ೦೬-೨೯ ); ಭಾಗ್ಯ ಬರುವಂಥಾದ್ದು ಭಾಗಮ್ಮ ತಡೆದಾಳೇ ? (ಗಾದೆ). [ಸಂ.]

**ಭಾಗ್ಯದೈವ** (ನಾ). ಅದೃಷ್ಟವನ್ನು ಕೊಡುವ ದೈವ; ಭಾಗ್ಯದೇವತೆ : ಕಾಯೆ ಪಳಿಯ ಭಾಗ್ಯದೈವ ಗೆಲುವ ಸಿರಿಯ ಪಡೆಯನು (ಶಾರಸಿ. ೯-೧೯೦).

[ ಸಂ. ]

**ಭಾಗ್ಯಲಕ್ಷ್ಮಿ** (ನಾ). ೧. ಭಾಗ್ಯವನ್ನು ಕೊಡುವ ದೇವತೆ ; ಧನಲಕ್ಷ್ಮಿ. ೨. ಐಶ್ವರ್ಯ ; ಸಿರಿ; ಸಂಪತ್ತು : ಸೇರಲ್ ಬರೆ ಭಾಗ್ಯಲಕ್ಷ್ಮಿ ಬಿಡುವನೆ ಬಡವಂ (ಶಾಕುಂತ. ३೭-೬೫). [ ಸಂ. ಭಾಗ್ಯಲಕ್ಷ್ಮೀ ]

**ಭಾಗ್ಯವಂತ** (ನಾ). ೧. ಪುಣ್ಯವಂತ; ಅದೃಷ್ಟಶಾಲಿ : ಯೋಗ್ಯರಾಗಿ ಭೋಗ್ಯರಾಗಿ ಭಾಗ್ಯವಂತರಾಗಿ ನೀವು (ಪುರಂದ. ೦-೭೯ ಅನುಪಲ್ಲವಿ); ಅವರು ತುಂಬ ಭಾಗ್ಯವಂತರು, ಒಳ್ಳೆಯ ಕೆಲಸ ಸಿಕ್ಕಿದೆ (ರೂಢಿ). ೨. ಸಿರಿವಂತ ; ಐಶ್ವರ್ಯವಂತ : ಇವಳು ಭಾಗ್ಯವಂತರ ಮಗಳೆ? (ಶಾಂತಲಾ. ೬).

[ ಸಂ. ಭಾಗ್ಯವತ್ ]

**ಭಾಗ್ಯವಂತೆ** (ನಾ). ೧. ಪುಣ್ಯವಂತೆ; ಅದೃಷ್ಟಶಾಲಿನಿ : ಅನ್ತನಿಸಿದಾಚ ಭೂಪನ ಕಾನ್ತೆ ದಯಾವಂತೆ ಭಾಗ್ಯವಂತೆ ನಿಶಾಂತಂ ಶಾನ್ತೆ . . . ಮಹಾದೇವಿಯೆಂಬ ಪೆಸರಿಂದೆಸೆವಳ್ (ಎಕ. XX. ೦೨-೦೫; 1167); ಆ ಗುಣಶಾಲಿಯ ಕೈಹಿಡಿಯುವ ಹುಡುಗಿ ತುಂಬ ಭಾಗ್ಯವಂತೆ (ರೂಢಿ). ೨.

ಸಿರಿವಂತೆ; ಧನವಂತೆ : ಆ ಬಡಹುಡುಗಿ ಸಿರಿವಂತರ ಹುನೆಗೆ ಸೇರಿ ಭಾಗ್ಯವಂತೆಯಾದಳು (ಲೋಕ). [ ಭಾಗ್ಯವಂತ + — ಎ₂ ]

**ಭಾಗ್ಯಶಾಲಿ** (ನಾ). = ಭಾಗ್ಯವಂತ ೧ : ಎಲೆಲೆ ಬಕುತರ ಭಾಗ್ಯಶಾಲಿಯ ಬೆಳಗಳವೆಲಾ ಶಿವಯೆನುತ ವದನಳನಯುಗಳದಲೊಡಲನೀಡಾಡಿದನು ಹರುಷದಲಿ (ಶುಪ್ಪ. ಉ. ೬–೧೦). [ಸಂ. ಭಾಗ್ಯಶಾಲಿನ್]

**ಭಾಗ್ಯಹೀನ** (ನಾ). ಅದೃಷ್ಟವಿಲ್ಲದವನು; ದುರದೃಷ್ಟಶಾಲಿ; ನಿರ್ಭಾಗ್ಯ: ಅವನು ಯಾರ ಪ್ರೀತಿ ವಿಶ್ವಾಸಗಳೂ ಇಲ್ಲದ ಒಬ್ಬ ಭಾಗ್ಯಹೀನ (ಲೋಕ). [ ಸಂ. ]

**ಭಾಗ್ಯಾಧೀನ** (ನಾ). ಹಿಂದಿನ ಜನ್ಮದ ಪುಣ್ಯಕ್ಕೆ ಅನುಸಾರವಾಗಿ ನಡೆಯುವುದು ; ದೈವೇಚ್ಛೆ; ದೈವಾಯತ್ತ : ಪಂಡಿರೊಳ್ ಸರಿಗಂಡೀಕೆಯ ನೀಂ ಬರ್ದುಂಕಿಪುದು ಭಾಗ್ಯಾಧೀನಂ (ಜಾತುಂತ. ೩೬–೯೩). [ಸಂ.]

**ಭಾಗ್ಯೋದಯ** (ನಾ). ಅದೃಷ್ಟ; ಸುದೈವ : ಭಾಗ್ಯೋದಯವಿಹೀನನು ತಾನೆನುತ ಕುರುರಾಯು ಬಿಸುಸುಯ್ದು (ಕುಪ್ಪ. ಶ. ೦–೨೪). [ಸಂ.]

**ಭಾಜಕ** (ಗು). ೧. ಭಾಗ ಮಾಡುವ; ವಿಭಾಗಿಸುವ : 'ಸಮಭಾಜಕ ವೃತ್ತ' ಪರಾ. (ನಾ). ೨. ಭಾಗಮಾಡುವವನು. ೩. [ಗಣಿತ] ಒಂದು ಸಂಖ್ಯೆಯನ್ನು ಯಾವುದರಿಂದ ಭಾಗಿಸಬೇಕೋ ಆ ಸಂಖ್ಯೆ : ಮೇಲಿನ ಉದಾಹರಣೆಯಲ್ಲಿ ೧೦೦ ಭಾಜ್ಯವೆಂದೂ ೬೩ ಭಾಜಕವೆಂದೂ ಕರೆಯಲ್ಪಡುತ್ತದೆ (ಗಣಿತ. ೨೯೬). [ ಸಂ. ]

**ಭಾಜನ** (ನಾ). ೧. ಭಾಗಿಸುವುದು ; ವಿಭಾಗ ಮಾಡುವುದು. ೨. ತಟ್ಟೆ, ಬಟ್ಟಲು ಮುಂತಾದ ಯಾವುದೇ ಪಾತ್ರೆ ; ಭಾಂಡ : "ಅಮತ್ರಂ, ಭಾಜನಂ, ಪಾತ್ರಂ, ಸ್ಥಾಲಂ — ಈ ೪ ತಳಿಗೆ" (ಕಣಾಯು. ೩೪–೦೭೨) ; ಇದಿರೊಳ್ ಸೂಸುವ ಹೇಮಭಾಜನಚಯಕ್ಕತ್ಯಂತ ವಸ್ತುಕ್ಕೆ ಮೆಚ್ಚಿದನರ್ಘ್ಯಾಭರಣಕ್ಕ ಲೆಕ್ಕಮಣವಿಲ್ಲ (ಆದಿಪು. ೪–೩೩) ; ಮೂಜಗದೆಲೆಯುನ ಕಾಲ್ದೊಳೆದಳು ಹೊನ್ನ ಭಾಜನ ಗಂಧವಾರಿಯಲಿ (ಪೋಪಕಥ. ೪–೨೪) ; ಪರಿಮಳಪ್ರಕರಪರಿಮಿಳಿತಭಾಜನಂಗಳನೋಜೆಯಿಂ ಪಿಡಿದು . . . ಬರ್ಪ ಮಡದಿಯರಿಂದತಿಸಂಭ್ರಮಂ ನೆಗಳೆ (ರಾಜಶೇ. ೬–೩೬ ಪ). ೩. ಪಾತ್ರನಾದವನು ; ಅರ್ಹ : ಮನುಜು ವಜ್ರಸಮುದ್ಭವಂ ಶಿಶುತೆಯೊಳ್ ವೃದ್ಧತ್ವದೊಳ್ ಸೌಖ್ಯಭಾಜನನಕ್ಕುಂ . . . ಸ್ವಲ್ಪಸೌಖ್ಯಕ್ಕೆ ಭಾಜನನಕ್ಕುಂ ಬಹುಯೋಗದೊಳ್ ನೆಗಟ್ಟ ವಾಪೀಯೋಗದೊಳ್ ಪುಟ್ಟಿದಂ (ಜಾತಕ. ೦೩–೦೭) ; ಪುಣ್ಯಾತ್ಮರಿರ್ವರಿಗಿಂ ರಾಜ್ಯಕ್ಕಮೊಪ್ಪೆ ಭಾಜನಮಪ್ಪುದರು (ಎಕ. V, ಹಾಸನ. ೦೦೬–೦೦ ; 1123) ; ಅನಾಕುಲೋಜ್ವಲಭಾಗ್ಯಸಂಗ್ರಹಂ ಗೃಹಮಖಿಲಸುಖಭಾಜನಂ ಜನಂ ತದ್ದೇಶದ (ಶಬ್ದಮ. ೬–೦೬) ; ಭರತಂ ಮಾಹಾತ್ಮನೆನೆದನು . . . ಬಾಲ ಋಷಿಯೆಂಬಂತೆ ಭಾಜನನಾಗಿ ರಾಮಗೌರವಕೆ (ಶ್ರೀರಾಮಪ. ೨೬–೬೯೯).

**ಭಾಜನವಾಗು** = ಈಡಾಗು ; ಗುರಿಯಾಗು ; ಪಕ್ಕಾಗು : ನರನ ಪಾಶಿಗೆ ದ್ರೌಪದಿಯ ತೊತ್ತಿರುಗಳುಪಹಾಸ್ಯಕ್ಕೆ . . . ಭಾಜನವಾದೆನ್ನೈ (ಕುಪ್ಪ. ಶ. ೦೨–೯). [ಸಂ.]

**ಭಾಜನಾಂಗ** (ನಾ). [ಜೈನ] ಹತ್ತುಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; ಅತ್ಯಮೌಲ್ಯವಾದ ಪಾತ್ರೆಗಳನ್ನು ಕೊಡುವ ಮರ : ಭಾಜನಾಂಗ ತರುವಂ ಪೋಲ್ತಂ ಸುರಾಧೀಶ್ವರಂ (ಆದಿಪು. ೭–೯೬) ; ಬಹುಭಾಜನಂಗಳಂ ನಿರ್ವಹಿಸುವುದವರವರ್ಗೆ ಭಾಜನಾಂಗಮಹೀಜಂ (ಶಾಂತಿಪು. ೬–೦೦೪) ; ಭಾಜನಾಂಗವೆಂಬುದು ಕನತ್ಕನಕಮಣಿಖಚಿತ ವಿವಿಧಭಾಜನವಿಶೇಷಂಗಳ ನೀವುದು (ಜಾವುಂಪು. ೯). [ಸಂ.]

**ಭಾಜ್ಯ** (ನಾ). ೧. ಭಾಗಮಾಡಬೇಕಾದುದು ; ಭಾಗ ಮಾಡಲ್ಪಡುವುದು ; ಹಂಚಲ್ಪಡುವುದು : ಏಕಪ್ರದೇಶಾದಿಷು ಲೋಕಾಕಾಶೈಕ ಪ್ರದೇಶಾದಿಗಳೊಳ್ ಭಾಜ್ಯಃ ಪಸರಿಸಲ್ಪಡುವುದು (ತತ್ತ್ವಸೂ. ೨೪೬). ೨. (ಪಿತ್ರಾರ್ಜಿತವಾದ ಭೂಮಿ ಮೊದಲಾದುವುಗಳ) ಪಾಲು ; ಭಾಗ. ೩. [ಗಣಿತ] ಭಾಗಿಸಲ್ಪಡುವ ಅಂಕಿ, — ಸಂಖ್ಯೆ : ಮೇಲಿನ ಉದಾಹರಣೆಯಲ್ಲಿ ೧೦೦ ಭಾಜ್ಯವೆಂದೂ ೬೩ ಭಾಜಕವೆಂದೂ ಕರೆಯಲ್ಪಡುತ್ತದೆ. ಭಾಜ್ಯವು ಭಾಜಕದಿಂದ ಕಡಮೆಯಾದಲ್ಲಿ, ಮೊದಲನೆಯ ಭಾಗಲಬ್ಧವನ್ನು ೦ ಎಂದು ತೆಗೆದುಕೊಳ್ಳಬೇಕು (ಗಣಿತ. ೨೯೬). [ಸಂ.]

**ಭಾಟ₁** (ನಾ). ೧. ಕೂಲಿ ; ಮಜೂರಿ. ೨. ಮನೆ ಮೊದಲಾದುವುಗಳ ಬಾಡಿಗೆ. [ಸಂ.]

**ಭಾಟ₂** (ನಾ). ಹೊಗಳುಭಟ್ಟ ; ಸ್ತುತಿಪಾಠಕ : ವೈಭವವು . . . ಉತ್ಸಾಹಿಯ, ಉದ್ಯೋಗಿಯ ಮುಂದೆ, ಭಾಟನಂತೆ ಸ್ತುತಿಪಾಠವನ್ನು ಹಾಡುತ್ತ ಸಿಂಹಾಸನದ ಹಾದಿಯನ್ನು ತೋರಿಸುವುದಿಲ್ಲವೇ? (ಉದಕ್ಕ. ೬೩) ; ಈ ಭಾಟನ ಮಾತುಗಳನ್ನು ದಿಙ್ಮೂಢರಂತೆ ತನ್ನ ಪತಿದೇವರು ಕೇಳುತ್ತ ಕುಳಿತದ್ದು ವೇಣೂಬಾಯಿಗೆ ಸಹನವಾಗಲಿಲ್ಲ (ಗಂಡಾಯ. ೦೦೩).
[ ← ಹಿಂ. ಭಾಟ್ ; ಮರಾ. ಭಾಟ./ಸಂ. ಭಟ್ಟ./ಪ್ರಾ. ಭಟ್ಟ ]

**ಭಾಟಕ** (ನಾ). ಬಾಡಿಗೆ : "ಭಾಟಕಃ, ಅವಕ್ರಯಃ — ಈ ೨ ಬಾಡಗೆ" (ಹಲಾಯು. ೯೪–೪೦೯). [ಸಂ.]

**ಭಾಟಾ**, ಬಾಟಾ, ಬಾಟೆ, ಭಾಟೆ (ನಾ). ದಾರಿ ; ಮಾರ್ಗ ; ರಸ್ತೆ : 'ಭಾಟಾಮಾರ್ಗ' ಪರಾ. **ಬಾಟಾ** : 'ಬಾಟಾಮಾರ್ಗ' ಪರಾ. **ಬಾಟೆ** : ಆ ಭಾರಕ್ಕೆ ಮುರಿಯದಂತಹ ಬಲವಾದ ಶಕಟವಾಗಬೇಕು. ಹಳ್ಳ ತಿಟ್ಟುಗಳಲ್ಲಿ ಚಕ್ರಗಳೂ ಅಚ್ಚುಗಳೂ ಮುರಿಯದಂತಹದೃಢವಾದ ಬಾಟೆಯನ್ನು ನಿರ್ಮಿಸಬೇಕಾಗುವುದು (ಶಾಂತಲಾ. ೨೦೬). **ಭಾಟೆ** : 'ಭಾಟೆಮಾರ್ಗ' ಪರಾ. [ ← ತೆಲು. ಬಾಟ. /ಸಂ. ವಾಟ. /ಹಿಂ. ಬಾಟ್ ]

**ಭಾಟಾಮಾರ್ಗ**, ಬಾಟಾಮಾರ್ಗ, ಭಾಟೆಮಾರ್ಗ (ನಾ). ಹೆದ್ದಾರಿ; "(ದೇಶದ) ಮುಖ್ಯರಸ್ತೆ ; ಭಾಟಾಮಾರ್ಗ" (Trunk-Road ಇಂಕಂ): ಕುಡುಕನಿಗಿರುವ ಲೈಸನ್ಸ್ ಯಾರಿಗಿದೆ ? . . . ಬಟ್ಟೆಯ ಪರಿವಿಲ್ಲದೆ ಭಾಟಾಮಾರ್ಗಗಳಲ್ಲಿ ಅಲೆಯುತ್ತಾನೆ (ಕಸಬಂ. ೦೨); ಸಂಚಾರ ಮಾಡುವುದಕ್ಕೆ ಭಾಟಾಮಾರ್ಗವಾದ್ದರಿಂದ. . . ಚತ್ರವನ್ನೂ ಏರ್ಪಡಿಸಿದರು (ಮಹಾಪಂ. II, ೦೩೪). **ಬಾಟಾಮಾರ್ಗ** : ದಾರೀನು ಬಾಟಾ ಮಾರ್ಗವಾ ? ಕಾಡುದಾರಿ (ಕಂಗಾಳ. ೨೩೦); ಶಾನುಭೋಗರು . . . ಬಾಟಾಮಾರ್ಗದಲ್ಲಿ ಅವರ ಊರಾದ ತಳ್ಳೂರಿಗೆ ಹೋಗುತ್ತಿದ್ದರು (ಪಪ್ಪುರು. ೦೫೦). **ಭಾಟೆಮಾರ್ಗ** : ಭಾಟೆಮಾರ್ಗಕ್ಕೆ ಪಾರ್ಶ್ವದಲ್ಲಿ ದುರ್ಗಾದಾಸನು ಮಾರ್ಗಾಯಾಸದಿಂದ ಕ್ಲಾಂತನಾಗಿ ಮಲಗಿಕೊಂಡು ನಿದ್ರೆಹೋಗುತ್ತಿದ್ದನು (ಕೋಟಿಹಿಡಿ. ೨೩). [ ಭಾಟಾ + ಮಾರ್ಗ ]

**ಭಾಟಿ** (ನಾ). ೧. ಕೂಲಿ ; ಮಜೂರಿ. ೨. ಬಾಡಿಗೆ. ೩. ವೇಶ್ಯೆಯು ಸಂಪಾದಿಸುವ ಹಣ. [ಸಂ.]

**ಭಾಟಿಗೆ** 'ಭಾಷ್ಟಿಗೆ' ನೋ.

**ಭಾಟೆ** 'ಭಾಟಾ' ನೋ.

**ಭಾಟೆಮಾರ್ಗ** 'ಭಾಟಾಮಾರ್ಗ' ನೋ.

**ಭಾಟ್ಟ** (ಗು). ೧. ಕುಮಾರಿಲಭಟ್ಟನಿಗೆ ಸಂಬಂಧಿಸಿದ : 'ಭಾಟ್ಟಮತ' ಪರಾ. (ನಾ). ೨. ಕುಮಾರಿಲಭಟ್ಟನ ಅನುಯಾಯಿ. [ಸಂ.]

**ಭಾಟ್ಟದರ್ಶನ** (ನಾ). ಕುಮಾರಿಲಭಟ್ಟನು ಪ್ರತಿಪಾದಿಸಿದ ಮೀಮಾಂಸಾ ತತ್ತ್ವ : ಆ [ಹೊ]ಲಂ ನಾಗಮಾವಿಯ [ದಿ]ಗ್ಗವಿಗೆಯು ಆಬಲೂರ ಎಡೆವಾ ಆನದ [ಕೆ][ರೆ]ಗೆ ಭಾಟ್ಟದರ್ಶನವ್ಯಾಖ್ಯಾತೃಗೆ ಮತ್ತರು ೩೫ (ಕಳಕ. ೬–೨–೨೦೪ ; 1058). [ ಸಂ. ]

**ಭಾಟ್ಟಮತ** (ನಾ). ಕುಮಾರಿಲಭಟ್ಟನೆಂಬ ಮಹಾವಿದ್ವಾಂಸನಿಂದ ಪ್ರಚುರವಾದ ಮತ; ಪೂರ್ವಮೀಮಾಂಸಾಶಾಸ್ತ್ರದ ಒಂದು ಅವಾಂತರಭೇದ : ಶಿವನಿಗೆ ಕರ್ಮಾಧಿಕಾರಂ ಭಾವಮೆಂಬುದು ಭಾಟ್ಟ

ಮತವು (ಏವೇಶ. ೯-೭); ಜೈಮಿನೀಯಮೀಮಾಂಸಾಶಾಸ್ತ್ರಕ್ಕೆ ಪ್ರಮುಖ ಪ್ರಚಾರಕನು ಕುಮಾರಿಲಭಟ್ಟ . . . ಇವನ ಮತಕ್ಕೇ ಭಾಟ್ಟಮತವೆಂದು ಹೆಸರು (ಭಾರದ. ೦೨೯). [ಸಂ.]

**ಭಾಡಿಗೆ** 'ಬಾಡಗೆ' ನೋ.

**ಭಾಣ** (ನಾ). [ಕಾವ್ಯಮೀ]ದಶರೂಪಕಗಳಲ್ಲಿ ಒಂದು; ಏಕಪಾತ್ರಾಭಿನಯದಿಂದ ಕೂಡಿರುವ, ವಿಟನಿಂದ ವರ್ಣಿಸಲ್ಪಡುವ ಧೂರ್ತಚರಿತ್ರೆ,–ಏಕಾಂಕರೂಪಕ : ವ್ಯಾಕರಣಕ್ಕೆ ಭಾಣಕ್ಕೆ ಪ್ರಹಸನಕೆ ನವರಸಗಳಿಗೆ ತನ್ನೊಳು ಧಿಕ್ಕರಿಪ ಕವಿಯಿಲ್ಲದಿರೆ ನೋಡಿ ಮರ್ತ್ಯಲೋಕಕ್ಕಿವನೆ ಕವಿಶರಭಭೇರುಂಡನೆಂದು ಪೆಸರಿಕ್ಕಿ ಕರೆನುದು ಕವಿನಿಕರವು (ರಾಘಶ. ೨–೩೬); ಇದರಲ್ಲಿ ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ—ಎಂಬ ಹತ್ತು ವಿಧಗಳಿವೆ (ಜಾಂಶ್ರ. I, ೩೨೬); ಭಾಣ —ಕಲ್ಪಿತ; ಕಳ್ಳಕಾಕರ ಧೂರ್ತಚರಿತ್ರೆ (ಕೃಖಿಡ. ೨೦೯). [ ಸಂ. ]

**ಭಾಣಸವೆರ್ಗಡೆ** 'ಬಾಣಸವೆರ್ಗಡೆ' ನೋ.

**ಭಾಣಸಿಗೆ** 'ಬಾಣಸಿಗೆ' ನೋ.

**ಭಾಣಸುವೆರ್ಗಡೆ** 'ಬಾಣಸವೆರ್ಗಡೆ' ನೋ.

**ಭಾತಿ** (ನಾ). ಬೆಳಕು ; ಪ್ರಕಾಶ; ಕಾಂತಿ : ಭಾತಿ ಮಿಗೆ ಉತ್ತುಂಗವೃಷಭ ಸಮೇತವಾಗೆಸೆವ ಕೇತನಾನೀಕಪ್ರಕೀರ್ಣದೊಳು . . . ರಾಜಿಸಲು (ಬಸಪು. ೩-೨೦) ; ಜ್ಯೋತಿ ಕತ್ತಲೆಯಲ್ಲಿ ಭಾತಿಯಿಂದುರಿವಂತೆ ಪ್ರೀತಿಯಿಂದೆಸೆವ ಶಿವಯೋಗಿ ಜಗಕೆಲ್ಲ ಜ್ಯೋತಿ ತಾನಕ್ಕು (ಸರ್ವಜ್ಞ. ೩೯೦); ಬಸವ ಶರಣನೆ ಪಾಪವಳಿವುದು . . . ಬಸವ ಶರಣನೆ ಪರಮಪಾವನಭಾತಿ ಸಂದಿಸುಗು (ಆವಕ. ೩-೦). [ಸಂ.]

**ಭಾತಿಸು** (ಕ್ರಿ). ಶೋಭಿಸು; ಪ್ರಕಾಶಿಸು: ಈ ತೆರದೊಳಾ ಕಾಶಿ ಸಾತಿಶಯದಿಂದ ಭಾತಿಸುತಲಿರುತಿರಲು (ಹಮಕ. ೭೬). [ಭಾತಿ + —ಇಸು₃]

**ಭಾತು** (ನಾ). ೧. ಭತ್ತ; ನೆಲ್ಲು : (ಕ). ೨. ಕುದುಪಲಕ್ಕಿ; ಕುಸುಬಲಕ್ಕಿ: (ಕ). ೩. ಅನ್ನ; ಬೋನ; ಆಹಾರ. ೪. ವಿಶೇಷವಾಗಿ ಕೇಸರಿಭಾತು, ವಾಂಗೀಭಾತು ಮುಂತಾಗಿ ತುಪ್ಪ, ಸಕ್ಕರೆ ಅಥವಾ ತರಕಾರಿ, ಮಸಾಲೆ ಮುಂತಾದ ರುಚಿಕರವಾದ ಪದಾರ್ಥಗಳಿಂದ ಸಂಸ್ಕರಿಸಿದ ಅನೇಕ ಬಗೆಯ ಕಲಸನ್ನಗಳ ಹೆಸರಿನ ಕೊನೆಯಲ್ಲಿ ಸೇರುವ ಪದ : ಇಂದು ಊಟಕ್ಕೆ ಯಾವುದಾದರೂ ಭಾತು ಮಾಡಬೇಕು (ರೂಢಿ). 'ಬತ್ತ₁' ಪರಾ. [← ಹಿಂ. ಮರಾ. ಭಾತ್. /ಸಂ. ಭಕ್ತ./ಪ್ರಾ. ಭತ್ತ]

**ಭಾತ್ಕೃತಿ** (ನಾ). ಭಾ ಭಾ ಎಂಬ ಧ್ವನಿ ; ಭಯಂಕರ ಧ್ವನಿ ; ಗರ್ಜನೆ: ಜರದಜಗರಘೂತ್ಕೃತಿ ಕೇಸರಿಭಾತ್ಕೃತಿ . . . ವಿಹಗಸಮುತ್ಕರಚೀತ್ಕೃತಿ ತೀವಿ ವಿಪಿನದೊಳ್ ಬಿಡದೆಸೆಗುಂ (ರಾಜಶೇ.೩-೬೨). [ಸಂ.]

**ಭಾದು** (ನಾ).=ಭಾದ್ರಪದ : "ನಭಸ್ಯಃ, ಪ್ರೌಷ್ಠಪದಃ, ಭಾದ್ರಃ, ಭಾದ್ರಪದಃ – ಈ ೪ ಭಾದ್ರಪದಮಾಸದ ಹೆಸರುಗಳು" (ಸಿದ್ಧಾಂಶಿ. ೪೦). [ಸಂ.]

**ಭಾದ್ರಪದ** (ನಾ). ಚಾಂದ್ರಮಾನದ ಹನ್ನೆರಡು ತಿಂಗಳುಗಳಲ್ಲಿ ಆರನೆಯದು : "ಭಾದ್ರಪದಮಾಸಮಂ ನಭಸ್ಯವೆಂಬುದು" (ಹಲಾಯು. ೦೯-೦೦೪) ; ಸ್ಥಿರಭಾದ್ರಪದಸಿತಾಷ್ಟಮಿಗಿರದೊಪ್ಪಿರೆ . . . ಪುಷ್ಪದಂತ ಜಿನಪತಿ ಪರಮಶ್ರೀಮುಕ್ತಿಲಕ್ಷ್ಮಿಯುಂ ಕಯ್ಕೊಂಡಂ (ಪುಷ್ಪಪು. ೦೪-೩೩); ಪಂಚಾಕ್ಷರಾದಿಯುಲಿರುವಖಿಳಮಂತ್ರಗಳ ಜಪ . . . ಸ್ತುತಿ ಸುಡುವುದು ಭಾದ್ರಪದದಲಿ (ಗಗತಾ. ೪-೬೪); ಒಂದು ಕಡೆಯಿಂದ 'ಚೈತ್ರ. . . ಭಾದ್ರಪದ . . . ಫಾಲ್ಗುಣ' ಎಂದು ಒಬ್ಬೊಬ್ಬರನ್ನಾಗಿ ತೋರಿಸಿದರು (ಕಂಶಪ. ೨೨). [ಸಂ.]

**ಭಾದ್ರಪದೆ** (ನಾ). ಪೂರ್ವಾಭಾದ್ರಪದೆ ಮತ್ತು ಉತ್ತರಾಭಾದ್ರಪದೆಗಳೆರಡನ್ನೂ ಕುರಿತಂತೆ ಒಟ್ಟಿಗೆ ಸೇರಿಸಿ ಹೇಳುವ ಶಬ್ದ ; ಇಪ್ಪತ್ತೈದು ಮತ್ತು ಇಪ್ಪತ್ತಾರನೆಯ ನಕ್ಷತ್ರ. [ಸಂ. ಭಾದ್ರಪದಾ]

**ಭಾನ** (ನಾ). ೧. ಕಾಣಿಸುವುದು ; ಗೋಚರಿಸುವುದು ; ಭಾಸವಾಗುವುದು : ಭಾಳದೊಳಮಳಭೂತಿಯ ಭಾನಾ ಪೊಲಗೆಯೊಳು ನಾಮಾಮೃತಪಾನಾ (ಅವಧೂ. ೬೭); ಮಾನಸವ ಚಿಂತೆವಿಡಿದಂದೊರ್ವನೆರಡಾಗಿ ತಾನದಾರೊಳು ವಾದಿಸುವನಂತೆ ಬಾಯಿಂದೇನನೋ ನುಡಿಯುತ್ತ ಕೈಸನ್ನೆಗೈಯುವನು ಭಾನವೊಂದರೊಳೆರಡು (ಮಂಕುಕ. ೮೩). ೨. ಅರಿವು ; ಜ್ಞಾನ ; ತಿಳಿವಳಿಕೆ. ೩. ಪರಿವೆ; ಪ್ರಜ್ಞೆ : ಸೂನುಗಳ ಗಾನವನು ಕೇಳುತೆ . . . ಸಭಿಕರು ಭಾನವನು ಮರೆತಂದದಿಂ ಕಣ್ಣೀರ ಸುರಿಸಿದರು (ರಘುವಂ. ೦೫-೬೭); ಜೋಶಿಯವರು ಸಿಟ್ಟಿನ ಭರದಲ್ಲಿ ಮೈಮೇಲಿನ ಭಾನವನ್ನೇ ಮರೆತಂತಿತ್ತು (ಮಾಧುರುದಾ. ೪೦); ದಾದಲ್ಯಾ . . . ಭಾನರಹಿತಶಿಲಾಪ್ರತಿಮೆಯಾಗಿದ್ದ (ದೀಕಹ. II, ೨೮೨). ೪. ನೆನಪು; ಜ್ಞಾಪಕ; ಸ್ಮರಣೆ: ಕಾನನದೆ ತಮಗಾದ ದುಃಖದ ಭಾನವದು ಮಾನಿನಿಗೆ ಮೇಣಾ ಜ್ಞಾನಿವರನಿಗೆ ಪರಮ ಹರುಷವೆ ಯುಂಟು ಮಾಡಿಹುದು (ರಘುವಂ. ೦೩-೨೫). ೫. ಹೊಳಪು ; ಪ್ರಕಾಶ.

**ಭಾನತಪ್ಪು** = ಜ್ಞಾನತಪ್ಪು; ಪ್ರಜ್ಞಾಹೀನನಾಗು ; ಮೈಮರೆ : ಅವನ ತಂದೆ, ಅಜ್ಜ ಎಲ್ಲ ಕಳ್ಳು ಕುಡಿಯುವುದರಲ್ಲಿ ಭಾರೀ ಹೆಸರು ಹೋದವರು, ಎಷ್ಟು ಕುಡಿದರೂ ಭಾನತಪ್ಪುವರಲ್ಲ (ಶೇರು. ೯೩). [ಸಂ.]

**ಭಾನಗಡಿ**, ಬಾನಗಡಿ (ನಾ). ೧. ತೊಡಕು ; ಗೊಂದಲ ; ಜಟಿಲತೆ : ಅಲ್ಲಿಂದ ಪತ್ರಗಳು ಯಾವಾಗ ಬರತೊಡಗಿದವೋ ಆಗ ನಮಗೆ ಈ ಭಾನಗಡಿ ಲಕ್ಷ್ಯಕ್ಕೆ ಬಂತು (ಸ್ಮೃತಿಚಿ. ೧೪೩). ೨. ಅಚಾತುರ್ಯ ; ಮಾಡಬಾರದ ಕಾರ್ಯ ; ದುರ್ಘಟನೆ : ಬೆಳೆದ ಹೆಣ್ಣನ್ನು ಮನೆಯಲ್ಲಿಟ್ಟುಕೊಂಡು ಕುಳಿತರು. ನಾಳೆ ಏನಾದರೂ ನಿಸ್ತರಿಸಲು ಬಾರದ ಭಾನಗಡಿಯಾದರೆ ? (ದೀಕಹ. ೧೫); ಮತ್ತೇನರೆ ಭಾನಗಡಿ ಮಾಡಿರುವರೇನು ? (ಕಾಗೆಳ. ೭೬); ಯಾಕಪ್ಪಾ ಸುರುಮಾಡಿದೆ ಭಾನಗಡಿ – ಕಾಮಿನಿಯ ಜೊತೆಗೆ ? (ಮುಕ್ತ. ೭). ಬಾನಗಡಿ : ೩. ಕುತಂತ್ರ ; ಕಿತಾಪತಿ : ನೀಲೀದೇ ಏನಾದ್ರೂ ಬಾನಗಡಿ ಇದ್ದಿರಬೇಕು (ಕಮ್ಮಟಿ. ೦೬); ಅವನು ದಂಬನನ್ನು ತನ್ನ ಕ್ರಿಶ್ಚಿಯನ್ ಜಾತಿಗೆ ಸೇರಿಸಲು ನಡಸಿರುವಂಥ 'ಬಾನಗಡಿ'ಗಳೆಲ್ಲ ಭಟ್ಟರಿಗೆ ಹೊಸವಲ್ಲ (ದಂಬಸಾ. ೫೦). [←ಮರಾ. ಭಾನಗಡ]

**ಭಾನಗೇಡಿ** (ನಾ). ಬುದ್ಧಿ ಇಲ್ಲದವನು ; ಅವಿವೇಕಿ : 'ಭಾನಗೇಡಿತನ' ಪರಾ. [ಭಾನ + ಕೇಡಿ₁]

**ಭಾನಗೇಡಿತನ** (ನಾ). ವ್ಯವಹಾರಜ್ಞಾನವಿಲ್ಲದಿರುವಿಕೆ ; ಅವಿವೇಕ : ಹೆಚ್ಚಿನ ಕೈಚಳಕ ಉಪದೇಶನಿಗೆ ಬಾರದಿದ್ದರೂ ನ್ಯಾಯಾನ್ಯಾಯವನ್ನು ತಿಳಿದು ಹಟಮಾರಿಯಾಗಿ ಸತ್ಯವನ್ನೇ ಸಾಧಿಸಲು ಮಾತ್ರ ಕಲಿತಿದ್ದನು. ಇವನ ಈ ಭಾನಗೇಡಿತನವೇ ಭಟ್ಟರಿಗೆ ಗಂಟಲ ಗಾಣವಾಗಿದ್ದಿತು (ದಾಕೂಬಿ. ೩೬). [ಭಾನಗೇಡಿ + — ತನ]

**ಭಾನವ** (ಗು). ೧. ಸೂರ್ಯನಿಗೆ ಸಂಬಂಧಿಸಿದ. (ನಾ). ೨. ಸೂರ್ಯನ ಮಗ. ೩. ಶನಿ : ಭಾನವನುಂ ಮಾಹೇಯನುಂ ತಮೋಗ್ರಹಮೆನಿಪರ್ (ಜಾತತಿ. ೪-೦). [ಸಂ.]

**ಭಾನವಿ** (ನಾ). ೧. ಸೂರ್ಯನ ಮಗ. ೨. ಶನಿ : ಆದಿತ್ಯನಿಪ್ಪತ್ತು ಭಾನವಿಯಯ್ವತ್ತು ನಿಸರ್ಗಭಾವದ ದಶಾಸಂವತ್ಸರಕ್ಕೀಶರಪ್ಪವರ್ (ಜಾತತಿ. ೯-೦೪). [ಸಂ.]

**ಭಾನಾಭಿ** (ನಾ). ತೇಜಸ್ಸಿಗೆ ಕೇಂದ್ರವಾಗಿರುವವನು ; ತೇಜೋನಿಧಿ : ನಯನಂ ನೀಲಸರೋಜಮಂ ಸೆಣಸುಗುಂ . . . ಊನಮ್ಮಾಡುಗುಂ ಜಾನು ಬಾಚಿಯ ಕಂಭಂಗಳನೆಂದೊಡೇವೊಗಟ್ಟೆನೋ ಭಾನಾಭಿಯುಂ ನಾಭಿಯುಂ (ಶಂಖಾವಪಾ. ೧-೯೫). [ಸಂ.]

**ಭಾನಾಮತಿ** (ನಾ). ಯಕ್ಷಿಣಿ, ಮಾಟ ಮೊದಲಾದ ತಾಂತ್ರಿಕವಿದ್ಯೆ ; ಜಾದೂಗಾರಿಕೆ : ಗುಲ್ಬರ್ಗಜಿಲ್ಲೆಯಲ್ಲಿ ಭಾನಾಮತಿ ತಾಂತ್ರಿಕವಿದ್ಯೆ ಅಷ್ಟೇನೂ ಹೊಸವಿಷಯವಲ್ಲ (ಉಪ). ☞ ವಿಕ್ರಮಾದಿತ್ಯರಾಜನ ಹೆಂಡತಿಯಾದ 'ಭಾನುಮತಿ' ಎಂಬವಳು ಪ್ರಸಿದ್ಧ ಜಾದೂಗಾರಿಣಿ ಯಾಗಿದ್ದಳೆಂಬ ಐತಿಹ್ಯವಿದೆ.

[← ಹಿಂ. ಭಾನಮತೀ, ಭಾನುಮತೀ = ಜಾದೂಗಾರಿಣಿ ; ಮರಾ. ಭಾನಾಮತೀ, ಭಾನುಮತೀ]

**ಭಾನು** (ನಾ). ೧. ಹೊಳಪು ; ಪ್ರಕಾಶ. ೨. ರಶ್ಮಿ ; ಕಿರಣ : "ಉಸ್ರಃ . . . ಭಾನುಃ, ಕರಃ, ಪಾದಃ, ವಿರೋಕಃ, ಗೌಃ – ಈ ೩೨ ರಶ್ಮಿಗಳ ಪೆಸರ್" (ಹಲಾಯು. ೬–೩೯); ಮಡದೀ ನೀಂ ಪಡೆವಾ ಸುತಂ . . . ಬಿಡಿಕುಂ ತನ್ನಯ ತೇಜದಿಂದೆ ಮಿಗುವುದ್ಯದ್ಭಾನುವಂ ಭಾನುವಂ (ಜಗಾ. ೨–೯೫). ೩. ಸೂರ್ಯ ; ಆದಿತ್ಯ : "ಆದಿತ್ಯಃ, ಸವಿತಾ . . . ಭಾನುಃ, ಬ್ರಧ್ನಃ . . . ತ್ರಯಾತನುಃ – ಈ ೪೭ ಆದಿತ್ಯನ ಪೆಸರ್" (ಹಲಾಯು. ೭–೩೭); ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ ಅಂಬುಜಕೆ ಭಾನುವಿನುದಯದ ಚಿಂತೆ (ಬಸವ. ೩೬೪); ಭಾನು ಶಶಿಕೋಟಿತೇಜೋಗಾತ್ರ ತ್ರ್ಯನೇತ್ರ (ಶ್ರೀಶರಾ. ೨–೯೩); ಪೊಡವಿಗೆ ಮಂಗಳಂ, ಬಾಂಗೆ ಭಾನು ಪುಟ್ಟಿ ದಂತಿರೆ ದಶರಥಂ ಪುಟ್ಟಿ (ರಾಮಾಶ್ವ. ೭–೧೧). ೪. ರಾಜ ; ಚಕ್ರವರ್ತಿ. ೫. [ಗಣಿತ] ಹನ್ನೆರಡಂ ಎಂಬ ಸಂಖ್ಯೆಯ ಸಂಕೇತ : ಭಾನು ಲಘುಗಳೆಸೆವ ಚರಣ ತಾನವೆರಡಕ್ಕು . . . ಭೋಗನಾಮ ಸಾನುರಾಗ ಮಪ್ಪದಿಂದು (ಛಂದೋಂಬು. ೪. ೫–೩೨೭); ಆ ನಿಕೇತನ ಸುತ್ತ ದ್ವಾರವು ಭಾನುಸಂಖೆಯೊಳಿಹವು (ಜೈಕೃ. ೨–೩೩). ೬. [ಛಂದ] ಎರಡು ಲಘುಗಳ ಮಧ್ಯೆ ಒಂದು ಗುರುವಿರುವ ಗಣ ; ಜಗಣ (⏑ – ⏑) : ವ್ಯೋಮದ್ವಯಂ ಭಾನುಕಪರ್ದಿಯುಗ್ಮಂ ಶಾವಾಗಿರಲ್ಕೆ (ಛಂದೋಂಬು. ೨–೧೧೩). [ಸಂ.]

**ಭಾನುಜ** (ನಾ). ೧. ಸೂರ್ಯನ ಮಗ. ೨. ಶನಿ. ೩. ಯಮ : ಆ ಭಾನುಜನೊಳು ಉಮೇಶನೊಳು ಒರೆದಜನೊಳು ಮೃತ್ಯುವಿನೊಳಂ ಕಾಲ ನಾಮಮಕ್ಕುಂ (ಮಂಗರಾ. ೧೪೭–೩೮). ೪. ಸುಗ್ರೀವ. ೫. ಕರ್ಣ : ವೀರರಿನಿಬರು ನೆರೆದು ರಿಪುವಿಗಂ ಭಾನುಜನ ಸೂರೆಗೊಟ್ಟರು (ತುರಂಗ. ೬೩–೧೩). [ಸಂ.]

**ಭಾನುಜೆ** (ನಾ). ಸೂರ್ಯನ ಮಗಳು ; ಯಮುನೆ : ಜಿತಭಾನುಜೆ ಗೋಮತಿ ಧೂತಪಾಪೆ ಭಾಸುರತರ ಲೋಕಪಾವನೆ . . . ಕವೇರಕನ್ಯೆ (ರಾಜಶೇ. ೨–೭). [ಸಂ. ಭಾನುಜಾ]

**ಭಾನುತನುಜ** (ನಾ). ೧. ಸೂರ್ಯನ ಮಗ. ೨. ಕರ್ಣ. ೩. ಸುಗ್ರೀವ. [ಸಂ.]

**ಭಾನುತನೂಜ** (ನಾ). ೧. ಸೂರ್ಯನ ಮಗ. ೨. ಕರ್ಣ : ನೀನು ಕೈಕೊಡುಂಟು ಬೆಳ್ಗೊಡೆ ನೀನಿಲ್ಲದಿವೆಲ್ಲಮೊಳವೆ ಭಾನುತನೂಜಾ (ಕಮುದ. ೧೨೭ ಕ್ರಮೋ). [ಸಂ.]

**ಭಾನುದಾಸ** (ನಾ). ಒಬ್ಬಾತನ ಹೆಸರು: ಆಳು ಎಱದು ಸತ್ತೊನ್ ಭಾನು ದಾಸನ್ ಜಯಮಿತ್ರನ್ (ವ್ಯಾಆಂ. ೧೯೩೯,೨೨–೭ ; ಸು. 760). [ಸಂ.]

**ಭಾನುನಂದನ** (ನಾ). ೧. ಸೂರ್ಯನ ಮಗ. ೨. ಸುಗ್ರೀವ : ಆ ಭಾನು ನಂದನ ಕವಿದು ಹಳಚಿದ ದಾನವರ ಪಡೆಯ (ತೊರಾ. ೩೭–೨೫). ೩. ಶನಿ : ಭಾನುನಂದನ ಬುಧ ಮಂಗಳರಾ ಬಲವು ತಪ್ಪಿದರೇನು ದೀನನಾಥ ಶ್ರೀ ಪುರಂದರವಿಠಲನ ಧ್ಯಾನವುಳ್ಳ ಹರಿದಾಸರಿಗೆ (ಪುರಂದ. ೧–೧೩೮–೩). [ಸಂ.]

**ಭಾನುಬಿಂಬ** (ನಾ). ಸೂರ್ಯಮಂಡಲ : ಉದ್ಗತಭಾನುಬಿಂಬಮಂ . . . ನಿಜಮುಖದೊಳ್ ಪುಗುವ ಮತಂಗಜಪತಿವೆರಸಿಂತು ಕನಸು ಪದಿನಾಱು ಮನಂಬುಜವದನೆ ಕಂಡಳ್ (ಶಿಶುಕೃ. ೯–೯೯); ಭಾನುಬಿಂಬವ ಮೊಗೆವ ಲೌಡೆಯ ಮಾನಸದ ಧಕ್ಕಡರು ಕಲಿ ಪವಮಾನತನಯನ ಮುತ್ತಿಕೊಂಡರು ರಾಯರಾವುತರು (ಕುವ್ಯಾಕ. ೧೯–೧೩). [ಸಂ.]

**ಭಾನುಮಂತ** (ನಾ). ಕಿರಣಗಳುಳ್ಳವನು ; ಸೂರ್ಯ : ಮಾನವಮಾನಸ ಕಂಜ ಭಾನುವ[ಮ]ತ್ಪ್ರಭೆಯನೋತ್ಪಲೇಂದುಕಿರಣಪ್ರಭೆಯಪ್ಪುದು ತಪ್ಪದೊಪ್ಪುಗುಂ (ಶಾಂತಿಪು. ೫–೧೭). [ಸಂ. ಭಾನುಮತ್]

**ಭಾನುಮತಿ** (ನಾ). ೧. ತೇಜಸ್ಸುಳ್ಳವಳು ; ಕಾಂತಿವಂತೆ. ೨. ದುರ್ಯೋಧನನ ಹೆಂಡತಿ,—ರಾಣಿ : ನೆತ್ತಮನಾಡಿ ಭಾನುಮತಿ ಸೋಲ್ವೊಡೆ ಸೋಲಮನೀವುದೆಂದು ಕಾಡುತ್ತಿರೆ ಲಂಬಣಂ ಪಱಿಯೆ (ಪಂಪಭಾ. ೯–೬೯); ನೀನೊಲಿದು ಸಲಹೆಂದು ಮುದದಲಿ ಭಾನುಮತಿ ವೈಯಿಕ್ಕಿದಳು ಮುರಹರನ ಚರಣದಲಿ (ಕುವ್ಯಾಉ. ೯–೬೭).

[ಸಂ. ಭಾನುಮತೀ]

**ಭಾನುಮೊಮ್ಮ** (ನಾ). ಸೂರ್ಯನ ಮೊಮ್ಮಗ ; ಕರ್ಣನ ಮಗನಾದ ವೃಷಸೇನ : ಪುರುಹೂತಸುತ ಭಾನುಮೊಮ್ಮನ ತರುಬಿ ನಿಲ್ಲಲಾಗು ಸುರಿದಂ ವೃಷಸೇನನು (ತುರಂಗ. ೩೭–೧೫). [ಭಾನು + ಮೊಮ್ಮ]

**ಭಾನುರಿಪು** (ನಾ). ಸೂರ್ಯನ ಶತ್ರು ; ರಾಹು : " ಭಾನುರಿಪು ಸಿಂಹಿಕಾಪ್ರಿಯಸೂನು ತಮಂ ರಾಹು ಗಗನಚರಭುಜಗಂ ಸ್ವರ್ಭಾನು ವಿಧುಂತುದನಂತದು ತಾನಕ್ಕುಂ" (ವಸ್ತುಕೋ. ೦೩–೭೫). [ಸಂ.]

**ಭಾನುರೋಚಿ** (ನಾ). ಸೂರ್ಯನ ಪ್ರಕಾಶ,– ಕಾಂತಿ : ಭಾನು ರೋಚಿಯಿಂ ಬಸವಳಿದೀ ಧರಾಂಗನೆಗೆ ಚಂದನಲೇಪನಮಾದುದು . . . ಕಾಂತಿ ಸುಧಾಮಯೂಖಿನಾ (ರಾಜಶೇ. ೧೧–೭೫). [ಸಂ.]

**ಭಾನುವಂಶ** (ನಾ). ಸೂರ್ಯನಿಂದ ಪ್ರವೃತ್ತವಾಯಿತೆಂದು ಹೇಳ ಲಾದ ಒಂದು ರಾಜಮನೆತನ,– ರಾಜಕುಲ; ರಾಮನು ಅವತರಿಸಿದ ವಂಶ : ವರಭಾನುವಂಶಲಲಾಮ ನೀ ರಾಮಂಗೆ ಸರಿಯೇಂದ (ಕುವ್ಯಾಕಾ. ೧೧–೯). [ಸಂ.]

**ಭಾನುವಾರ** (ನಾ). ಒಂದು ವಾರದ ಏಳು ದಿನಗಳಲ್ಲಿ ಮೊದಲನೆಯ ದಿನ ; ಸೂರ್ಯನು ಅಧಿಪತಿಯಾಗಿರುವ ವಾರ; ಆದಿತ್ಯವಾರ : ದೇವರಾಜನನ್ನು ಕರೆದುಕೊಂಡು ಮುಂದಿನ ಭಾನುವಾರ ಧಾತುಪುರಿಗೆ ಹೋಗಬೇಕು (ಕಂಗಾಳ್ವ. ೭). [ಸಂ.]

**ಭಾನುಸುತ** (ನಾ). ೧. ಸೂರ್ಯನ ಮಗ. ೨. ಕರ್ಣ : ಪೃಥಿವಿಪತಿ ಮಾದ್ರೇಶನನು ಸಾರಥಿಯ ಮಾಡಿದನೊಲವು ಮಿಗಲತಿರಥಭಯಂಕರ ಭಾನುಸುತನಾಹವಕೆ ನಡೆತಂದ (ಕುವ್ಯಾಕ. ೮ ಸೂಚನೆ). [ಸಂ.]

**ಭಾನೆ** 'ಬಾನಿ[2]' ನೋ.

**ಭಾಪು** 'ಬಾಪ್ಪು' ನೋ.

**ಭಾಪುಗೊಳ್** (ಕ್ರಿ). ಮೆಚ್ಚಿಕೆಯನ್ನು ಪಡೆ : ಕವಿಯಂ ಮೆಚ್ಚಿಸಿ ಭಾಪುಗೊಳಲೆ ಬಾಳ್ವಂ (ಸಂಶಕ. ೩೭–೧೧).

[ಭಾಪು (<ಬಾಪ್ಪು) + ಕೊಳ್[1]]

**ಭಾಪುರೆ** 'ಬಾಪ್ಪುರೆ' ನೋ.

**ಭಾಪ್ಪು** 'ಬಾಪ್ಪು' ನೋ.

**ಭಾಮ** (ನಾ). ೧. ಹೊಳಪು; ಪ್ರಕಾಶ. ೨. ಸೂರ್ಯ; ರವಿ. ೩. ಸಿಟ್ಟು; ಕೋಪ; ಭಾವೋದ್ರೇಕ. ೪. ಸಹೋದರಿಯ ಗಂಡು ; ಭಾವ. [ಸಂ.]

**ಭಾಮಂಡಲ**, ಭಾಮಂಡಳ (ನಾ). ೧. ಬೆಳಕಿನ ವಲಯ; ತೇಜೋ ಮಂಡಲ. ೨. [ಜೈನ] ಅರ್ಹಂತನಿಗಿರುವ ಅಷ್ಟಪ್ರಾತಿಹಾರ್ಯ ಗಳಲ್ಲಿ ಒಂದು ; ಪ್ರಭಾವಲಯ : ಇರೆ ಭಾಮಂಡಲದೀಪ್ತಿಯ ಪರೆಪುಂ . . . ದಿವಾಕರಹಿಮಕರಕರನಿಕರಪ್ರಚುರರುಚಿಗಳಂ ಮಸುಳಿಸುಗುಂ (ಆದಿಪು. ೧೧–೩೯) ; ಪೂಮಟಿ[3] ಕೇಸರಿಪೀಠಂ ಭಾಮಂಡಲ [ಶಾಕಾಂ. ೪]

ಮೆಸೆಯೆ ನೆಗಟ್ದನೊಸೆದಾದಿಜಿನಂ (ಶಾಂತಿ. ೧) ; ಭೂಮಂಡಲದೊಳ್ ನಿನ್ನಿಂ ಭಾಮಂಡಲಮೆಸೆದು ಪಸರಿಸಿರೆ (ಅಜಿತ. ೬-೧೨). **ಭಾಮಂಡಳ** : ೨. ಸುರಭೇರೀಭೂರಿ ಭಾಮಂಡಳಸ್ತೋಮಂ ಭಾಸ್ವದನಂತಬೋಧ ಬಳ ದೃಕ್ಸೌಖ್ಯತ್ವ ಲಕ್ಷ್ಮೀಸಮುದ್ಧಾಮಂ ಮಾಟ್ಕೆಮಗಟ್ಕುಱಿಂ ಶುಭಮಂ ಶ್ರೀವರ್ಧಮಾನಂ ಜಿನಂ(ವರ್ಧ. ೧-೧). 'ಪ್ರಾತಿಹಾರ್ಯ' ಪರಾ. [ಸಂ.]

**ಭಾಮಂಡಳ** 'ಭಾಮಂಡಲ' ನೋ.

**ಭಾಮಟ್ಕ** 'ಭಾಮಟ್ಕಾ' ನೋ.

**ಭಾಮಟ್ಕಾ**, ಭಾಮಂಟ್ಕ (ನಾ). (ಉಕ) ಮೋಸಗಾರ ; ವಂಚಕ; ಧೂರ್ತ : ಇವನು ಯಾವನೋ ಪರಿಚಯದ ಭಾಮಟ್ಕಾ ಇರಬೇಕು (ಸ್ವಪ್ನ. ೨೬೩). **ಭಾಮಟ್ಕ** : ನೀ ಒಬ್ಬನ ಸಭ್ಯಗೃಹಸ್ಥ.. ನಾವೇನು ಭಾಮಟ್ಕರಿದ್ದೀವೇನು ! (ಬಾಂಡಾಯ. ೭೦). [←ಮರಾ. ಭಾಮಟ್ಯಾ]

**ಭಾಮಿನಿ** (ನಾ). ೧. (ಕೋಪಸ್ವಭಾವದ) ಸುಂದರ ಸ್ತ್ರೀ : "ಕೋಪ ವೆರಸಿರ್ದ ಸ್ತ್ರೀ ಭಾಮಿನಿಯೆನಿಸುವಳು" (ಶಾಶರಾ. ೦೦೬) ; ಜಡೆಮುಡಿಯ ಜಾಣೆಗೆ ಭಾಳತಳದ ಭಾಮಿನಿಗೆ ತ್ರಿಲೋಚನದ ಲಲನೆಗೆ . . . ರಕ್ಷಣಾರ್ಥಂ ತಂದೆ ನಿಯಾಮಿಸಿಕೊಟ್ಟ . . . ಷೋಡಶಸಹಸ್ರವಿಳಾಸಿನಿಯರ್ವೆರಸು ನಡೆತಂದು (ಗಿರಿಜಾ. ೩-೯೦ ವ) ; ಭಾಮಿನಿ ಕೇಳ್ಸೌರಾಷ್ಟ್ರದ ಸೋಮೇಶನ ಭಕ್ತ ನಿರ್ಪನೊಹಿಲನು (ಶೃಬಸ. ೨೯-೩೯) ; ತಿಂಗಳಾರಕೆ ಮರಳಿ ಬಹೆನೆಂಬ ಭಾಷೆಯುಂ ಭಾಮಿಸುತೆ ಭಾಮಿನಿ ಸಮಾಧಾನಬುದ್ಧಿಯಿಂ ಮೇಳೀಳುತಲ್ಲಿಂ ನಡೆದು (ಜೈಮಿ. ೩೬-೦೩೩). ೨. ಹೆಂಗಸು ; ಸ್ತ್ರೀ ; ಮಹಿಳೆ : "ರಾಮಾ, ವಾಮಾ . . . ಭಾಮಿನಿ, ಕಾಮಿನೀ . . . ಯುವತಿಃ — ಈ ೨೮ ಸ್ತ್ರೀಯರ್" (ಹಲಾಯು. ೭೯-೩೨೭). ೩. = ಭಾಮಿನೀಷಟ್ಪದಿ : ಶರ ಕುಸುಮ ಭೋಗ ಭಾಮಿನಿ ಪರಿವರ್ಧಿನಿ ವಾರ್ಧಕಗಳೆಂಬಾಱು ತೆಱಂ. . . ಷಟ್ಪದಿ ನಡೆಗುಂ (ಛಂದೋಂಬು. ೩-೩೯ ಅವ) ; ಭೂವಿನುತ ಜೀವಂಧರನ ಚರಿತವನು ವೇದಿಸುವೆನುರು ಭಾಮಿನಿಯ ಷಟ್ಪದದಿಂ ಕನ್ನಡದೊಳೊಲಿದು (ಜೀವಂಧ. ೧-೩೪); ಇದು ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ ಎಂದಾರು ವಿಧವು (ಕಬಿಷ. ೯೫). [ಸಂ. ಭಾಮಿನೀ]

**ಭಾಮಿನಿವೃತ್ತ** (ನಾ). = ಭಾಮಿನೀಷಟ್ಪದಿ : ಈ ತೆಱದೊಳಚ್ಯುತನ ನಾಮದ ನೂತನದಿ ವಸುಧಾತಳದ ವಿಖ್ಯಾತಿ ಬಯಸದೆ ಬಣ್ಣಿಸಿದೆ ಭಾಮಿನಿ ವೃತ್ತದಲಿ ನಾನು (ಹಂಶಾ. ೦೦೩). [<ಸಂ. ಭಾಮಿನೀವೃತ್ತ]

**ಭಾಮಿನೀದೀರ್ಘದ್ವಿಪದಿ** (ನಾ). [ಛಂದ] ಭಾಮಿನೀಷಟ್ಪದಿಯ ಲಯವನ್ನು ಅನುಸರಿಸಿ ರಚಿಸುವ ಎರಡು ಸಾಲಿನ ಪದ್ಯ : ಭಾಮಿನೀ ದೀರ್ಘದ್ವಿಪದಿಯ ಬಂಧ ಸಾಧ್ಯ (ಛಂತೋಲ. ೨೬೬). [ಸಂ ]

**ಭಾಮಿನೀವೇದ** (ನಾ). [ಜೈನ] ಪುರುಷವೇದ, ಸ್ತ್ರೀವೇದ ಮತ್ತು ನಪುಂಸಕವೇದವೆಂಬ ಮೂರು ಬಗೆಯ ವೇದಗಳಲ್ಲಿ ಒಂದು ; ಸ್ತ್ರೀವೇದ ; ಚಾರಿತ್ರ್ಯಮೋಹನೀಯಕರ್ಮವಿಶೇಷ : ಅಭಿಭವಿಸಿ ನಪುಂಸಕವೇದ ಭಾಮಿನೀವೇದಯುಗಳದೊಡನೊಡನೆ ಜಗದ್ವಿಭು ಹಾಸ್ಯರತ್ಯರತಿಶೋಕಭಯಜುಗುಪ್ಸೆಗಳನಾಱುಮಂ ಬೆಂಕೊಂಡಂ (ಪುಷ್ಪದ. ೦೪-೬೪) [ಸಂ.]

**ಭಾಮಿನೀಷಟ್ಪದಿ** (ನಾ). [ಛಂದ] ಆರು ಬಗೆಯ ಷಟ್ಪದಿಗಳಲ್ಲಿ ಒಂದು; ಪ್ರತಿಪಾದದಲ್ಲಿ ಹದಿನಾಲ್ಕು ಮಾತ್ರೆಗಳಿರುವ ಆರು ಸಾಲಿನ ಮಾತ್ರಾಗಣ ಛಂದಸ್ಸು ; ᴘ "ಮೂರು ಮಾತ್ರೆಯ ಗಣದ ಮುಂದೆ ನಾಲ್ಕು ಮಾತ್ರೆಯ ಗಣವು ಬರುವ ಹಾಗೆ ಈ ಗಣಗಳು ಒಂದೆರಡು ನಾಲ್ಕೈದನೆಯ ಪಾದಗಳಲ್ಲಿ ಎರಡೆರಡೂ ಮೂರಾರನೆಯ ಪಾದಗಳಲ್ಲಿ ಮೂರು ಮೂರೂ ಒಂದು ಗುರುವೂ ಇರುವುದು ಭಾಮಿನೀ ಷಟ್ಪದಿ ಎನಿಸುವುದು" (ಕಬಿಷ. ೯೭) : ಸಾಜಕವಿ ಕರ್ಣಾಟಲಕ್ಷಣ ದೋಜೆಗನು ಕವಿಸಾಳ್ವನಿಂ ಜಿನರಾಜಚರಿತೆಯ ಭಾಮಿನೀಷಟ್ಪದಿಯಬಂಸು ರೆಂದು . . . ಬೆಸಸಿದನು (ಸಾಳ್ವಭಾ. ೦-೩೪) ; ಕುಮಾರವ್ಯಾಸಭಾರತ ಮತ್ತು ತೊರವೆರಾಮಾಯಣಗಳು ಭಾಮಿನೀಷಟ್ಪದಿಯಲ್ಲಿ ರಚಿತವಾಗಿವೆ (ರೂಢಿ). [ಸಂ. ಭಾಮಿನೀಷಟ್ಪದೀ]

**ಭಾಮೆ** (ನಾ). ೧. ಕೋಪಸ್ವಭಾವದ ಹೆಂಗಸು. ೨. ಹೆಂಗಸು ; ಮಹಿಳೆ : "ಭಾಮಾ, ಭಾಮಿನೀ, ಈ ೨ ಪೆಣ್" (ಶಾಶಕ. ೦೦೮). ೩. ಸುಂದರಿಯಾದ ಸ್ತ್ರೀ : ಸ್ವಾಮಿ ಸದ್ಗುರು ಸಾಂಪ್ರದಾಯದ ಭಾಮೆಯರು ಶ್ರೀಪರ್ವತಂ ಮೊದಲೀ ಮಹಿಯೊಳೊಳರು (ಚಸಪು. ೦೨-೩೨) ; ಚೋಳಧರಾಭಾಮಾಧಿಪತಿ ಮನೋಜ್ಞಶ್ರೀಮಹಿತಂ ಪೃಥುಳ ಭಾಗ್ಯಮುಂ ಪದೆದಿತ್ತಂ (ರಾಜಶೇ. ೩-೨೫) ; ಬೆರಗು ಹೊಡೆದರ್ಜುನಂ ನೋಡುತಿರಲಾ ಭಾಮೆ ಬಂದವೊಲೆ ಹಿಂದಿರುಗಿ ನಿಬಿಡಕಾಂತಾರದಲಿ ತರುಗುಲ್ಮಪರ್ಣಗರ್ಭಂಬೊಕ್ಕು . . . ಮರೆಯಾದಳಿರದೆ (ಜೈಮಿ. ೩೪-೯೦೮). ೪. ಹೆಂಡತಿ ; ಪತ್ನಿ : ಈ ಭೂಮಿ ಈ ಭಾಮೆ ಈ ಭೋಗ ಈ ರಾಗ ಬಾರವು ಜತೆಯೊಳು ಬಲ್ಲೆ (ಬಂಕಾಪ. ೨೪೨-೦೦೦). ೫. ಕೃಷ್ಣನ ಪತ್ನಿಯರಲ್ಲಿ ಒಬ್ಬಳು ; ಸತ್ಯಭಾಮೆ : ಇಂತಾ ಭಾಮೆಯು ದುಃಖಿವನಾಂತಿರೆ ಕಂಡು . . . ಪೇಳ್ದಳು (ಶ್ರೀಕೃಪಾ. ೮). [ಸಂ. ಭಾಮಾ]

**ಭಾಯಿ** (ನಾ). ಭ್ರಾತೃಭಾವನೆಯಿಂದ ಒಬ್ಬರನ್ನೊಬ್ಬರು ಸಂಬೋಧಿಸುವ ಶಬ್ದ : ಸಮಾಜವಾದಿಗಳು ತಮಗೆ 'ಭಾಯಿ' ಎಂದು ಕರೆದುಕೊಳ್ಳುತ್ತಾರೆ (ಶಾರಸಂ. ೮) ; ಭಾಯಿಸಾ, ಇಂದೋ ನಾಳೆಯೋ ನಿಮ್ಮ ಬಿಡುಗಡೆಯಾಗಬಹುದು (ಅಶ್ವತ್ಥ. ೦೯೦).

[ ← ಹಿಂ. ಮರಾ. ಭಾಈ./ಪ್ರಾ. ಭಾಇ./ಸಂ. ಭ್ರಾತೃ]

**ಭಾರ** (ನಾ). ೧. ಹೊರೆ; ತೂಕ : "ತಿಣ್ಣಮೆಸಲ್ಭಾರಂ" (ಶಶಬ್ದ. ೩೦); ಮಾತಿಂದ ಬರ್ಕು ಭವಭಾರಘೋರ (ಬಸವ. ೯೨೪); ಭೂಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮಂ (ಜಗನ್ನಾ. ೦-೦) ; ಆ ಹೂಹಗರು ಶಿಶುವಿದ್ದಕಿದ್ದಂತೆ ಗಿರಿಭಾರವಾಗಿ ಬರೆ (ಶ್ರೀರಾಮ. ೦೮-೪೬೨) ; ಇರುವೆ ಭಾರ ಇರುವೆಗೆ, ಆನೆ ಭಾರ ಆನೆಗೆ (ಗಾದೆ). ೨. ತಲೆ, ಹೆಗಲು ಮೊದಲಾದವುಗಳ ಮೇಲೆ ಹೊರುವ ಹೊರೆ; ಮೂಟೆ ಮೊದಲಾದುವು: "ವಿವಿಧಃ, ವೀವಧಃ, ಭಾರಃ, ಪರ್ಯಾಹಾರಃ— ಈ ೪ ತಲೆಹೊಱೆ" (ಹಲಾಯು. ೦೨೫-೬೨). ೩. ಹೊಣೆಗಾರಿಕೆ; ಜವಾಬ್ದಾರಿ; ಕರ್ತವ್ಯ : ಅಂಜದಿರು ಅಳುಕದಿರು ಪರದೈವಕ್ಕೆ ಬಿಗದಿರು ಕೂಡಲಸಂಗನ ಕೈಯಲು ಈಸುವುದೆನ್ನ ಭಾರ (ಬಸವ. ೬೨೨); ಮಳೆ ಬಹಳವಾಗಿ ಕೆಱೆ ತುಂಬಿ ವೊಡದರು ಎಂದೆಂದೂ ಕೆಱೆ ನಿಂಮ ಭಾರವಾಗಿ ಕಟ್ಟಿಕೊಂಡು ಮಾನ್ಯಗದ್ದೆಯನೂ ಬಿತ್ತಿ ಬೆಳೆಮುಕೊಂಬುದು (ಎಕ. X(೩), ಕೋಲಾರ. ೩೦೦-೦೪ ; 17ನೆಯ ಶತ); ರತ್ನಾವಳೀನಾಟಕದ ಅಭಿನಯದ ಭಾರ ನನ್ನ ಮೇಲೆ ಬಿತ್ತು (ಬಾಜಿಲ. ೩೯೬). ೪. ಕಷ್ಟಕರವಾದುದು ; ಕಠಿಣವಾದಂದು : ಈ ತೀರ್ಥಕ್ಕೆ ಅನೇಕ ಕೋಟಿ ಉಪಪಾಪಗಳು ಪರಿಹರಿಸುವದು ಯೇನು ಭಾರವಾದೀತು (ಅರ್ಧಪು. ೨೨). ೫. ಮಹತ್ವ ; ಗುರುತ್ವ ; ಪ್ರಾಮುಖ್ಯತೆ : ಧೀರ ಬಿನ್ನವಿಸಿದನು ಕಾರ್ಯದ ಭಾರವನು (ಕುಮಾವ್ಯಾ. ೪-೩೦). ೬. ಅಧಿಕವಾದುದು ; ಹೆಚ್ಚಾದುದು ; ಗುರುತರವಾದುದು : ಕದಳಿದಲೆಗಳ ತೋರಭಾರದ ಮದದ ಮೈಯುಬ್ಬುಗಳ ಮಿಳಿರದ್ದುದು (ಕೊರಗಾ. ೩-೭-೮) ; ಭಾರವಾದ ಪಾಪಕ್ಕೆ ಘೋರವಾದ ನರಕ (ಗಾದೆ). 'ಭಾರಸಂಖ್ಯೆ' ಪರಾ. ೭. ಪ್ರಭಾವ ; ವರ್ಚಸ್ಸು. ೮. ಪಂಗು ; ಖಂಡಿ. ೯. ಹೊರೆಯನ್ನು ಹೊರಲು ಉಪಯೋಗಿಸುವ ಕೋಲು,— ಅಡ್ಡೆ. ೧೦. [ಗಣಿತ] ಇಪ್ಪತ್ತು ತೊಲೆಗಳ ತೂಕ : "ತೊಲೆಯುಂತಿವಿಪ್ಪತ್ತಿರಲ್ಕೆ ಭಾರಂ" (ಶುಂಗರಾ. ೦೦೪-೧೦); ಭಾರಕ್ಕೆ ಪತ್ತು ತೊಲೆಯುಂ ಭಾರಕ್ಕಂ ನೂಱುಸಂಖ್ಯೆ ಬೀಸಗೆಯುಕ್ಕುಂ

ಭಾರಕ್ಕೆ ಮಣವು ಹತ್ತುಂ ಭಾರಕ್ಕಂತಾಗ ದಡೆಯು ತಪ್ಪದು ಗಣಕ ಭಾರಕ್ಕೆರ್ಧಸಿರ ತೊಲೆಯುಂ ಭಾರಕ್ಕಂ ಕರುಷಮೆಂಟುಸಾಸಿರಮಕ್ಕುಂ ಭಾರಕೆ ಶಾಲ್ಕರುಷ ಬತ್ತಿಸಾವಿರ ಭಾರಕ್ಕಂ ಮೂವತೆರಡು ಸಹಸ್ರಪೊನ್ನಿನ ತೂಕಂ ಭಾರಕ್ಕೆ ತೊಲೆಯ ವಿಂಶತಿ (ವ್ಯವಹಾ. ೨-೧೦); P 'ವ್ಯವಹಾರ ಗಣಿತ' ದ ಈ ಭಾಗದಲ್ಲಿ 'ಭಾರ' ಕ್ಕೆ ಅಸ್ಪಷ್ಟವಾದ ಅನೇಕ ತೂಕದ ಅರ್ಥಗಳನ್ನು ಹೇಳಿದೆ : ಇಪ್ಪತ್ತು ತೊಲೆಗಳಕ್ಕುಂ ಭಾರಂ (ವ್ಯವಹಾ. ೪-೨೩); ಪೂಜಿಸುತ್ತಿರಲು ದಿನದಿನದಲೆಂಟೆಂಟು ಭಾರದ ಕನಕವನು ಮಣಿ ಕೊಡುವುದು (ಶಿಶಾಗ. ೧೦-೬೬-೬); ಆ ವಿಪ್ರರನ್ನು ಪೂಜಿಸಿ . . . ಒಂದೊಂದು ಭಾರ ಹೊನ್ನನ್ನು ಕೊಡಬೇಕು (ಐಮುಕ. ೪). ೧೧. ಒಂದು ರೂಪಾಯಿಯ ತೂಕ ; ಒಂದು ತೊಲ : (೪).

**ಭಾರ ಬರು** = (ಉಕ) ದೆವ್ವಹಿಡಿ ; ಭೂತಾವೇಶವಾಗು : ತುಸ ಹೊತ್ತಿನ ಮೇಲೆ ನನ್ನ ಮಾತು ಪೂರ ಕೇಳಿಕೊಳ್ಳುವ ಮೊದಲೇ ಭಾರ ಬಂದವರ ಹಾಗೆ . . . ಒದರಾಡಿದರಂತೇ (ಪ್ರಯುಜು. ೬೩). **ಭಾರವಾಗು** = ಹೊರೆಯಾಗು ; ಒಜ್ಜೆಯಾಗು : ಮಕ್ಕಳು ಮರಿಗಳು ಚಿಕ್ಕ ವರಿರುವಂದು ಸೊಂಟಕೆ ಭಾರವಾಗುವರು (ಇಂಕಾಶ. ೨೨೪-೬) ; ನಾನಾ ಬಗೆಯ ವಾಸನೆಗಳು ಹುಟ್ಟಿದ ಜಾಗಗಳಲ್ಲಿಯೇ ಭಾರವಾಗಿ ಕುಳಿತವು (ಹಸುಹೂ. ೪೦೦). **ಭಾರಹಾಕು** = ಜವಾಬ್ದಾರಿಯನ್ನು ಹೊರಿಸಂ ; ಹೊಣೆಯನ್ನು ಒಪ್ಪಿಸು : ದೇವರ ಮೇಲೆ ಭಾರಹಾಕಿ ನಿಶ್ಚಿಂತೆ ಯಿಂದಿರುವುದು ಅವರ ಸ್ವಭಾವ (ಲೂಂ). [ಸಂ.]

**ಭಾರಂಕ** (ನಾ). ೧. ಘೋರವಾದ ಯುದ್ಧ ; ಭಯಂಕರವಾದ ಕಾಳಗ : "ಭಾರಂಕಮೆನಲ್ಕೆ ದಂಡಿ" (ಛಾರಂ. ೩೯) ; ಕದನವಿದ ಭಾರಂಕವಾರಭ್ಯುದಯ ತಲೆದೋಱುವುದೊ ನಮಗೇಕಿದಱ ಚಿಂತೆ ಮುರಾರಿ ಬಲ್ಲನು (ಕುಮ್ಯಾಭಾ. ೨-೨೦) ; ಭರದನ್ಯೆ ಭಾರಂಕದಾಳಿವ ತರಳನೇ ಸುರ ಗಿರಿಯನಾನುವ ಕೊರಳ ಸತ್ವವೆ ಶಿವಶಿವೆಂದುದು ಮೇಲೆ ಸುರಕಟಕ (ಕುಮ್ಯಾಭಾ. ೨೦-೬೩). ೨. ವೀರಯೋಧ,— ಸೈನಿಕ : ವೀರ ರಾವಣಿ ಕುಂಭ ತಿಶ್ರಿರನು . . . ಚೂರಿಸುವ ಖಡ್ಗಮುದ ಕಡುಹಿನ ಭಾರಣೆಯ ಭಾರಂಕಿದ್ದುದು ಭೂರಿಭೂಷಣಾಭರಿತ ವೀರಾವೇಶದುಬ್ಬಿನಲಿ (ತೊರವೆ. ೬-೦೦-೬). [<ಸಂ. ಭಾರಾಂಕ]

**ಭಾರಂಗಿ** (ನಾ). ಒಂದು ಬಗೆಯ ಗ್ರಂಥಿಕದ್ರವ್ಯವನ್ನು ಕೊಡುವ ವನಸ್ಪತಿ : "ಹಂಜಿಕಾ, ಬ್ರಾಹ್ಮಣೀ, ಪದ್ಮಾ, ಭಾರ್ಗೀ, ಬ್ರಾಹ್ಮಣ ಯಷ್ಟಿಕಾ, ಅಂಗಾರವಲ್ಲೀ, ಬಾಲೇಯಶಾಕಃ, ಬರ್ಬರಃ, ವಂದಕಃ— ೯ ಭಾರಂಗೀ ಹೆಸರುಗಳು, ಗಂಟುಭಾರಂಗೀ ಎಂಬುವ ಗ್ರಂಥಿಕದ್ರವ್ಯವು ಪ್ರಸಿದ್ಧವಾದದ್ದು, ಕಿರುದೇಗುಗಿಡವೆಂದು ಕೆಲವರೆನ್ನುವರು, ನಾಯಿ ತ್ಯಾಗದ ಮರ" (ಸಿದ್ಧಾಂತಿ. ೦೩೩) ; ಪಲಸಾಲಂ . . . ಭಾರಂಗಿ ನೇಳಲೆರಂ ಪಾದರಿ ತಾಱಿತಂಡಸು (ಶಾರ್ಙ್ಗಧ. ೦೨-೩೬).

**ಭಾರಂಗ್ಯಾದಿ ಕಷಾಯ** = ಒಂದು ಬಗೆಯ ಕಷಾಯ: ಭಾರಂಗ್ಯಾದಿ ಕಷಾಯ, ಗಂಟುಭಾರಂಗಿ, ಪುಷ್ಕರಮೂಲ . . . ನೀರಿನಲ್ಲಿ ಕಷಾಯ ವಿಕ್ಕಿ ಅಷ್ಟಾವಶೇಷವಾಗಿ ಕುಸಿ ಕುಡಿಯೆ ತಾಂದ್ರಿಕಸನ್ನಿ ಗುಣಮಕ್ಕುಂ (ಸಳವ್ಯ. ೦೫೭). [ಸಂ. ಭಾರಂಗೀ]

**ಭಾರಕ** (ನಾ). ೧. ಭಾರವನ್ನು ಹೊರುವ ವ್ಯಕ್ತಿ : ಕೆಲರು ಚತುರ್ವೇದ ಭಾರಕರಾದರು (ಅದಪ. ಹು. ೯೬-೦೬೨) ; ಮನುಜನಾಯಕನಾ ನಿಧಾನದ ಕನಕಗಳನೆಲ್ಲವನು ಭಾರಸಜನದ ಶಿರದಲಿ ಹೊಱಿಸಿ ನಡೆಸಿದನದನು ರಕ್ಷಿಸುತ (ತಮ್ಮಕೃ. ೪-೨೯). ೨. ಹೊಣೆಯನ್ನು ಹೊತ್ತವನು ; ಹೊಣೆಗಾರ : ಧರ್ಮಜನ ಪರಮುಖಿದನು ನಿಂದು ಮಾಡಿಸುವ ಭಾರಕ ನಸುರಹರನಾ ಮುಕುಂದನಂ ಕಾಣ್ಬುದುಳ್ಳೊಡೆ ತನ್ನ ಕೂಡೆ ನೀಂ ಬಂದು ಸೇವಿಪುದು (ಕೃಷ್ಣಬಾ. ೪-೬೪). ೩. ಹೊರೆ ; ಭಾರ. ೪. ಭಾರ ವಾದವನು ; ಹೊರೆಯಾದವನು : ನಿನ್ನ ಮರೆದಜ್ಞತೆಯುಂ ಚರಿಸುತ್ತ ಗರ್ವವಾಂತಾ ಮಹಿತಾತ್ಮರಂ ಜರಿದು ಭೂಮಿಗೆ ಭಾರಕನಾದೆನಕ್ಕಟ (ಅಮುಹ. ೫೦). ೫. ಸೈನಿಕ ; ಯೋಧ : ಊರೊಳೀ ಕಪಿವಾರ್ತೆಯಗಲಕೆ ಬೇರುವರಿದುದು ಬೆಱಗುಬಿಂಕದ ಭಾರಕರು ಭಾರಿಸಿತು ಕೋಟಾವಳಯುದ ಗ್ರುದಲಿ (ತೊರವೆ. ೩-೩-೦). [ಸಂ.]

**ಭಾರಕರ್ತ** (ನಾ). (ಜಗತ್ತಿನ) ಹೊಣೆಯನ್ನು ನಿರ್ವಹಿಸುವವನು ; ದೇವರು ; ಭಗವಂತ : ಭಾರಕರ್ತನು ನೀನು ಬಹುಸಂಸಾರಿಯೆಂಬುದ ನಿಗಮತತಿ ಕೈವಾರಿಸುತ್ತಿದೆ (ಹಂಸಾ. ೩೩). [ಸಂ. ಭಾರಕರ್ತೃ]

**ಭಾರಕಾರಕ** (ಗು). ತೂಕವನ್ನುಂಟುಮಾಡುವ ; ಭಾರವನ್ನುಂಟು ಮಾಡುವ : ಈ ಸಾಂದ್ರತೆಯು ನೀರಿನ ಸಾಂದ್ರತೆಯನ್ನು ತುಸು ಮಿಗುವ ತನಕ, ನೀರು ಭಾರಕಾರಕ ಟಾಂಕಿಗಳ ಒಳಗೆ ಬರುತ್ತಲೇ ಇರುವುದು (ವಿಜ್ಞಾ.ಪ. ೦೦೭). [ಸಂ.]

**ಭಾರಕ್ಷಮ** (ನಾ). ಭಾರವನ್ನು ಹೊರಲು ಶಕ್ತವಾದುದು,— ಸಮರ್ಥವಾದುದು: "ಧೂರ್ವಹಃ, ಧುರ್ಯಃ, ಧೌರೇಯಃ ಧುರೀಣಃ, ಧುರಂಧರಃ— ಭಾರಕ್ಷಮಗಳಾಗಿ ಹೇಳುವ ಎತ್ತು" (ಅಮರ. ೪). [ಸಂ.]

**ಭಾರಣೆ**₁ 'ಭಾರವಣೆ' ನೋ.

**ಭಾರಣೆ**₂ (ನಾ). ಮಾಟ ; ಮೋಡಿ ; ವಶೀಕರಣವಿದ್ಯೆ : ನೀವೇ ಲಿಂಗಜಂಗಮವಾಗಬಲ್ಲಡೆ ನಾನಾರೆಂಬುದ ವಿಚಾರಿಸಿಕೊಳ್ಳಿರಣ್ಣಾ . . . ಪೂಜೆಯ ಮಾಡುವ ಭಕ್ತಂಗೆ ಭಾರಣೆಯ ವಿದ್ಯೆ ವ ಹೊತ್ತ ವಿಧಾತನಂತಿರ ಬೇಱ (ಪ್ರೋಳವಚ. ೦೯೩-೭೩೬); ಭಾರಣೆ ಪರನಾಳಿ ಕಡಲೋಟ ಮುಂತಾದ ಚಾರುಕೌಶಲ್ಯವಿದ್ಯೆಗಳ . . . ಪೇಳ್ದೀಲಾಚಾರ್ಯರ ಚಾರುಚರಣ ಶರಣೆನಗೆ (ಬಾಗಳು. ೦-೧೨) ; ಚಾರಣೆಯು ವಿದ್ಯೆಯುಂ ಸಮರದೊಳ್ ತೋಱಿದೊಡೆ ಧೀರರೇಂ ಮೆಚ್ಚುವರೆ (ಕಬಿತ್ತ. ೨೩-೨೬). 'ಭಾನುಮತಿ' ಪರಾ. [← ಮರಾ. ಭಾರಣೇ=ವಶೀಕರಣವಿದ್ಯೆ ; ಭಾರಣೇ=ಮಂತ್ರಮಾಟ ಗಳಿಂದ ವಶಪಡಿಸಿಕೊಳ್ಳು]

**ಭಾರತ** (ನಾ). ೧. ಭರತವಂಶಕ್ಕೆ ಸಂಬಂಧಪಟ್ಟದು : ಚಾರುಚರಿತ್ರಂ ಭರತನಪಾರಗುಣಂ ತನ್ನ ಪೆಸರೊಳಮರ್ದೆಸೆಯೆ ಯಶೋಭಾರಂ ಬಲಮುಂ ಕಥೆಯುಂ ಭಾರತಮೆನೆ ನೆಗಟ್ದಂ (ಪಂಪಭಾ.೦-೬೩). ೨. ಭರತ ವಂಶದಲ್ಲಿ ಹುಟ್ಟಿದವನು. ೩. ಹಿಂದೂದೇಶ ; ಭರತಖಂಡ ; ಭಾರತವರ್ಷ : ಭಾರತಕ್ಕೆ ಒಂದು ಸ್ಪಷ್ಟ ವ್ಯಕ್ತಿತ್ವವಿದೆ ; ತನ್ನದೇ ಎನ್ನುವ ಶ್ರೇಷ್ಠವಾದ ಸಂಸ್ಕೃತಿ ಇದೆ (ಭಾರಚ. ೮) : ಭಾರತದ ರೈಲುದಾರಿ ಬೇರೆಬೇರೆ ಅಳತೆಯವು (ಕೂಅವ. ೨೦೩). ೪. ಭರತವಂಶಕ್ಕೆ ಸೇರಿದ ಪಾಂಡವ ಕೌರವರ ಚರಿತ್ರೆ ಮತ್ತು ಅದನ್ನು ವರ್ಣಿಸುವ, ಸಂಸ್ಕೃತ ಭಾಷೆಯಲ್ಲಿ ವ್ಯಾಸಮಹರ್ಷಿಗಳಿಂದ ರಚಿಸಲ್ಪಟ್ಟ ಸುಪ್ರಸಿದ್ಧವಾದ ಇತಿಹಾಸಮಹಾಕಾವ್ಯ ; ಮಹಾಭಾರತ : ಒಳಪೊಕ್ಕು ನೋಡೆ ಭಾರತ ದೊಳಗಣ ಕಥೆಯೆಲ್ಲಮಿಾ ಗದಾಯುದ್ಧದೊಳಂತೊಳಕೊಂಡತ್ತೆನೆ ಸಿಂಹಾ ವಲೋಕನಕ್ರಮದಿನಱಿಪಿದಂ ಕವಿರನ್ನಂ (ಗದಾಯು. ೦-೯೫) ; ಭಾರತ ವನ್ನು ಬರೆಯಬೇಕೆಂದು ವ್ಯಾಸರಿಂದ ಪ್ರಾರ್ಥಿಸಲ್ಪಟ್ಟ ಗಣೇಶನು . . . ನಿಬಂಧನೆಯನ್ನು ಮಾಡಿದನು (ಭಾರಚ. ೯೩). ೫. ಹಳಗನ್ನಡದಲ್ಲಿ ಪಂಪಕವಿಯು ರಚಿಸಿದ 'ವಿಕ್ರಮಾರ್ಜುನವಿಜಯ'ವೆಂಬ ಚಂಪೂ ಕಾವ್ಯ ; ಪಂಪಭಾರತ : ಚಲದೊಳ್ ದುರ್ಯೋಧನಂ ನನ್ನಿಯೊಳಿನ ತನಯಂ . . . ಧರ್ಮದೊಳ್ ನಿರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಿ ವರ್ಗಳಿನೀ ಭಾರತಂ ಲೋಕಪೂಜ್ಯಂ (ಪಂಪಭಾ. ೦೪-೬೪). ೬. ಕನ್ನಡ ಭಾಷೆಯಲ್ಲಿ ಗದುಗಿನ ನಾರಣಪ್ಪನೆಂಬ ಕವಿಯಿಂದ ರಚಿತವಾದ, ಮಹಾಭಾರತದ ಕಥೆಯನ್ನು ವಿವರಿಸಿರುವ ಪ್ರಸಿದ್ಧವಾದ ಷಟ್ಪದೀ ಕಾವ್ಯ; ಕರ್ಣಾಟಭಾರತಕಥಾಮಂಜರಿ : ಕಾವ್ಯಕೆ ಗುರುವೆನಲು ರಚಿಸಿದ

ಕುಮಾರವ್ಯಾಸ ಭಾರತವ (ಕುವ್ಯಾ.ಆ.೦-೦೯). ೭. ಕುರುಕ್ಷೇತ್ರದಲ್ಲಿ ಕೌರವ ಪಾಂಡವರಿಗೆ ನಡೆದ ಯುದ್ಧ ; ಮಹಾಭಾರತಯುದ್ಧ : ಮಿಕ್ಕ ತೋಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ ಭಾರತಂ ಕಲಹಮಿದಿರ್ಚುವಂ ಹರಿಗನಪ್ಪೊಡೆ ಪೋಕ್ಕಳಪೋಕ ನೀಂ ಪಳಂಚಲೆದಪೆಯಣ್ಣ (ಪಂಪಭಾ. ೧೧-೨೩) ; ಮಾರಿಗೌತಣವಾಯ್ತು ನಾಳಿನ ಭಾರತವು . . . ರಣದಲಿ ಸುಭಟಕೋಟಿಯನು ತೀರಿಸಿಯೆ ಪತಿಯವಸರಕ್ಕೆ ಶರೀರವನು ನೂಕುವೆನು (ಕುವ್ಯಾ.ಉ. ೧೧-೨೦). ೮. ಮಹಾಭಾರತಯುದ್ಧವು ನಡೆದ ಪ್ರದೇಶ ; ಭರತಕ್ಷೇತ್ರ ; ಕುರುಕ್ಷೇತ್ರ : ಅಂತು ಭಾರತಂ ಸಮರಭಾರಾವತಾರಮಾಗೆ (ಗದಾಯು. ೯-೩೭ ವ). ೯. ಭರತಮುನಿಯಿಂದ ರಚಿತವಾದ ನಾಟ್ಯಶಾಸ್ತ್ರ. ೧೦. ನಟ : "ಶೈಲಾಲೀ, ಶೈಲೂಷಃ . . . ಭಾರತಃ, ನಟಃ — ೬ ನಟ್ಟುವನ ಹೆಸರು" (ಸಿದ್ಧಾಂತಿ. ೩೦೦) ; ಭಾರತನಿಯೋಗಾಳಿ ಜನಪದಪಾರವಿಭವಗಳಿಂದ ಪಾರಾವಾರ ಗಂಭೀರಗಳೆಸೆವ ನೃಪಸಭೆ ಮೆಚ್ಚಿವುತಿರಲು (ಬಸವ. ೭೦-೨೯). ೧೧. [ದ್ವೈತ] ವಾಯು : ಭ—ಅಂದರೆ ಪರಮಾತ್ಮ, ಅವನಲ್ಲಿ ರತರಾಗಿರುವುದರಿಂದ ಭಾರತಯೆಂದು ವಾಯುದೇವರಿಗೆ ಹೆಸರು (ಹಕಾರ. ೬-೬ ತಾತ್ಪರ್ಯ).

**ಭಾರತದ ಹುಣ್ಣಿಮೆ** = ಭಾರತಹುಣ್ಣಿಮೆ : ಈ ಆಳ್ವಿಕೆಯಲ್ಲಿ ಅದನ್ನು ತಪ್ಪಿಸಿ ಆ ಸ್ಥಳಕ್ಕೆ ಭಾರತದ ಹುಣ್ಣಿಮೆಯಲ್ಲಿ ಹೋಗಲು ಆರಂಭ ಮಾಡಿದರು (ತತ್ತ್ವಜ್ಞಾ. ೯೮). [ಸಂ.]

**ಭಾರತವರುಷ** (ನಾ). = ಭಾರತವರ್ಷ : ಹಿಮದ ಹೊಯ್ಲಿನ ಸರಸಿಜಕರವಿಯಂತೆ . . . ಸುರವಿಮಾನಶ್ರೇಣಿಗಳ ನಮಪರಿಮಳದ ಪೂರದಲಿ ಭಾರತವರುಷಕೀವನು ಪಾರ್ಥ ಬಂದನು ಧರ್ಮಜನ ಹೊರೆಗೆ(ಕುವ್ಯಾ.ಆ. ೧೧-೦೯). [ <ಸಂ. ಭಾರತವರ್ಷ ]

**ಭಾರತವರ್ಷ** (ನಾ). ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ವ್ಯಾಪಿಸಿರುವ ಹಿಂದೂದೇಶ ; ಭಾರತ ; ಇಂಡಿಯಾ : ವಿಷ್ಣುಪುರಾಣದಲ್ಲಿ ಪ್ರಶಂಸಿತವಾಗಿರುವ 'ಭಾರತವರ್ಷ'ದ ಪ್ರಭಾವ ಕಾಂಭೋಜಾದಿ ಪ್ರದೇಶಗಳಿಗೂ ಪ್ರಸರಿಸಿತು (ಪುಣ್ಯಾರ. ೧೦೯ ಟಿಪ್ಪಣಿ). [ಸಂ.]

**ಭಾರತಹುಣ್ಣಿಮೆ, ಭಾರತಹುಣ್ಣಿವೆ** (ನಾ). ಮಾಘಮಾಸದ ಹುಣ್ಣಿಮೆ; ವ್ಯಾಸಪೌರ್ಣಿಮೆ: ಆ ದಿವಸ ಭಾರತಹುಣ್ಣಿಮೆ. ಇನ್ನು ಫಾಲ್ಗುಣದ ಆರಂಭ ಆಗಲಿದೆ (ಅಕ್ಕ. ೯೦೬). **ಭಾರತಹುಣ್ಣಿವೆ** : ಭಾರತಹುಣ್ಣಿವೆ ಓರಣದಲಿ ಮಿಂದು ಹೂರಣದಾರತಿ ಮನೆಯೊಳಗೆ (ತಿರಂದ.ದಾ. ೩-೧೨೭-೮); ಸಿಕ್ಕಾಗ ಶಿವರಾತ್ರಿ ಇದ್ದಾಗ ಯುಗಾದಿ ಬಂದಾಗ ಭಾರತಹುಣ್ಣಿವೆ (ಕನ್ನಡಗಾ. ೩೮೩) ; ಮಾಘಶುದ್ಧ ೧೫ನೆಯ ದಿವಸ ಭಾರತಹುಣ್ಣಿವೆ. ವ್ಯಾಸರಚಿತವಾದ ಮಹಾಭಾರತದ ಪೂಜಾ—ಪಠನಗಳೂ ವ್ಯಾಸಮುನಿಪೂಜೆಯೂ ಈ ದಿವಸ ದೇವಾಲಯಗಳಲ್ಲಿ ನಡೆಯುತ್ತವೆ. ಈ ಕಾರಣದಿಂದ ಇದು ಭಾರತಹುಣ್ಣಿವೆ (ದಾಹವ್ಯ. ೦೭೫).

[ ಭಾರತ + ಹುಣ್ಣಿಮೆ (<ಪೂರ್ಣಿಮೆ) ]

**ಭಾರತಹುಣ್ಣಿವೆ** 'ಭಾರತಹುಣ್ಣಿಮೆ' ನೋ.

**ಭಾರತಾಹವ** (ನಾ). ಮಹಾಭಾರತದ ಯುದ್ಧ : ವಾರಣದ ಕುಂಭಸ್ಥಳಂಗಳ ಚಾರುಮೌಕ್ತಿಕನಿಕರಮೋ ಮೇಣ್ ಭಾರತಾಹವ ಕೌತುಕೋದಯರಸಕೆ ನೆಲೆಯಾಯ್ತೊ (ಕುವ್ಯಾ.ಭೀ. ೯-೬೭). [ಸಂ.]

**ಭಾರತಿ** (ನಾ). ೧. ಭಾಷೆ ; ಮಾತು ; ನುಡಿ. ೨. ವಾಣಿ; ಸರಸ್ವತಿ : "ವಾಕ್(ಗ್), ವಾಣೀ, ಭಾರತೀ, ಭಾಷಾ, ಗೌಃ, ಗೀಃ, ಬ್ರಾಹ್ಮೀ, ಸರಸ್ವತೀ ಈ ೮ ಸರಸ್ವತಿಯ ಪೆಸರ್" (ಹಲಾಯು. ೩-೮) ; ರತಿಯಂ ಕಳೆಗುಂದಿಪ ಭಾರತಿಯಂ ಜಾಣಿಂದೆ ಪಳಿವ . . . ಅಗ್ಗದ ಸತಿಯರ್ (ಜಗನ್ನಾ. ೨-೩೦); ಪೌಲೋಮಿಯಿಂ ಭಾಗ್ಯಮಂ ಭಾರತಿಯಿಂ ನಾನಾಕಳಾಕೌಶಲಮಂ ಪತಿಶಯಂ ಬೆತ್ತಿರಲ್ . . . ಮಹಾದೇವಿ ಕಣ್ಗೆಡ್ಡಮಾದಳ್ (ಶಬ್ದಮ. ೩-೨೫) ; ಭಾರತಿಯ ಪದ್ಮಪೀಠಂಬೋಲ್ ಮುಖಕಮಲಮೊಪ್ಪಿರೆ . . . ವಾಲ್ಮೀಕಿ ತಾನಾ ಬಟ್ಟೆಯೊಳೆ ಬರುತುಮಿರ್ದಂ (ರಾಮಾಶ್ವ. ೪೦-೨೩೭). ೩. ಪಂಡಿತ; ವಿದ್ವಾಂಸ : "ಭಾರತಿಯೆನಲ್ಕೆ ವಿದ್ವಾಂಸನೆನಿಸಿಕ್ಕು" (ಮಂಗರಾ. ೩೭-೨). ೪. ಆದಿಶಂಕರಾಚಾರ್ಯರ ಪರಂಪರೆಗೆ ಸೇರಿದ ಕೆಲವು ಜಗದ್ಗುರುಗಳು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳುವ ಉಪಪದ: ಶೃಂಗೇರಿಯ ರಾಮಚಂದ್ರಭಾರತಿ ೧೫೦೮ ರಿಂದ ೧೫೬೦ರ ವರೆಗೆ ಪಟ್ಟದಲ್ಲಿದ್ದಂತೆ . . . ತೋರುತ್ತದೆ (ಕವಿಚ. II. ೨೦೦). ೫. ಒಂದು ಬಗೆಯ ಸಸ್ಯ ; ಒಂದೆಲಗ ; ಬ್ರಾಹ್ಮೀ. ೬. [ಕಾವ್ಯಮೀ] ನಾಟಕಲಕ್ಷಣ ಪ್ರಕರಣದಲ್ಲಿ ಹೇಳಿರುವ ನಾಲ್ಕು ವೃತ್ತಿಗಳಲ್ಲಿ ಒಂದು : ಭಾರತಿ ಸಾತ್ವತಿ ಕೈಶಿಕೆಯಾರಭಟಿಯುಮೆಂಬ ವೃತ್ತಿಯೊಳ್ ರಸಮಂ ಸಂಚಾರಿಸುವ ಭಾವಮಂ ವಿಸ್ತಾರಿಸುವ ಬೆಡಂಗು ಬೇಜಿತ್ ನೀಲಾಂಜನೆಯಾ (ಆದಿಪು. ೯-೨೬); ಭಾರತಿ ಸಾತ್ವತಿ ಕೈಶಿಕೆಯಾರಭಟಿಯೆನಿಪ್ಪ ವೃತ್ತಿಗಳ್ ನಾಲ್ಕಕ್ಕಂ (ಕಾವ್ಯಾವ. ೬೩೭) ; ವೃತ್ತಿ ಎಂದರೆ ನಾಟಕದಲ್ಲಿ ಅಭಿನಯಿಸತಕ್ಕ ವಿಷಯಗಳ ಸ್ವರೂಪ ವಿಶೇಷ ; ಇದು ಕೈಶಿಕೀ, ಸಾತ್ವತೀ, ಆರಭಟೀ, ಭಾರತೀ ಎಂದು ನಾಲ್ಕು ವಿಧ (ಸಂಶಾಟಿ. ೦೩). ೭. [ಸಂಗೀತ] ತಂತ್ರೀವಾದ್ಯಗಳಲ್ಲಿ ಒಂದು : ತಂತ್ರೀವಾದ್ಯಂಗಳು :—ಏಳಿಕ ವಿಪಂಚಿಕೆ . . . ಬ್ರಹ್ಮವೀಣೆ ಸ್ವರವೀಣೆ ಭಾರತಿ ಅಲಾಬುವಲ್ಲಕಿ ಆಕಾಶವೀಣೆ . . . ಎಂಬ ಮೂವತ್ತುಮೂಱು ತಂತ್ರೀವಾದ್ಯಂಗಳಲ್ಲಿ (ಶಿವತ. ೨೩೭). ೮. [ದ್ವೈತ] ಮುಖ್ಯಪ್ರಾಣದೇವರ ಪತ್ನಿ ; ವಾಯುದೇವರ ಪತ್ನಿ : ಶರಣು ಭಾರತಿದೇವಿಗೆ ಶರಣು ವಾಯುರಮಣಿಗೆ (ಪುರಂದ. ೦-೦೮೯ ಪಲ್ಲವಿ) ; ಭಾರತಿ ವಾಣಿ ಈರ್ವರಿಗೆ ಮರುತ ಬ್ರಹ್ಮರು ಉತ್ತಮರು (ಹರಿಕ. ೨೫-೧೧).

**ಭಾರತೀಕರ್ಣಪೂರ** = ೧. ಸರಸ್ವತಿಯ ಓಲೆ. — ತಾಟಂಕ. ೨. ಕವಿ ನಾಗಚಂದ್ರನ ಒಂದು ಬಿರುದು : ಆನಂದಾಶ್ರುವಂ ತಾಳ್ದಿದನ ಮಲಯಶಂ ಭಾರತೀಕರ್ಣಪೂರಂ (ಪಂಪಾರಾ. ೨-೭೭). **ಭಾರತೀಭಾಗಧೇಯ** = ಸರಸ್ವತಿಯಂ ಭಾಗ್ಯದಂತಿರುವವನು ; ಸರಸ್ವತಿಯನ್ನು ಅಭಿವೃದ್ಧಿ ಪಡಿಸುವವನು ; ವಿದ್ವಾಂಸ : ದಾನೋತ್ಕರದೊಳ್ಮಿಂದಾತ ಮೆಂತಂತೆಸೆದನಭಿನವಂ ಭಾರತೀಭಾಗಧೇಯಂ (ರಾಜಶೇ. ೯-೦೨೯). **ಭಾರತೀಭಾಳನೇತ್ರ** = ವಿದ್ಯೆಯಲ್ಲಿ ಪರಮೇಶ್ವರನಂತಿರುವವನು ; ಉದ್ದಾಮ ಪಂಡಿತ : ನಂದನಂ ತದ್ಧರಣೀಶಾವಾಸದೊಳ್ ಶೋಭಿಸುತಿರೆ ಒಸೆದಂ ಭಾರತೀಭಾಳನೇತ್ರಂ (ಚಂದ್ರಪ್ರ. ೩-೦೦೯). [ಸಂ. ಭಾರತೀ]

**ಭಾರತಿಕ** (ಗು). ೧. ಭರತಮುನಿಗೆ ಸಂಬಂಧಪಟ್ಟ ; ಭರತಮುನಿಯಿಂದ ಪ್ರವೃತ್ತವಾದ : 'ಭಾರತಿಕವಿದ್ಯೆ' ಪರಾ. (ನಾ). ೨. ನಾಟ್ಯಕಲಾವಿದ ; ನಟ : ಬೆಸಸಿಂ ಭಾರತಿಕಂಗೆ ನಾಟ್ಯಘಟನಪ್ರಸ್ತಾವನಾಟೋಪಮಂ (ಆದಿಪು. ೯-೦೨) ; ಗೀರ್ವಾಣಪಂಗಳಗಾಯಕರೆ ಸಂಗೀತಗಾಯಕರಾಗೆ ನಿಳಿಂಪ ಭಾರತಿಕರೆ ನಟ್ಟುವರಾಗೆ ಸನ್ಮಾರ್ಗನಾಟಕಾರಂಭಪ್ರಸ್ತುತಪವಿತ್ರಸೂತ್ರಧಾರನೆ ಮುಂದೆ ನಿಂದು ಪುಷ್ಪಾಂಜಲಿಯಂ ಕೆದಱಿ (ಶಾಂತಿಪು. ೧೧-೬೦ ವ) ; ಭಾರತಿಕನಾಗೆ ಮಂದಸಮೀರಂ ಕೈನಿಜಾದುಮುತ್ಸವಧ್ವಜತತಿಗಳ್ (ಪಂಪಾರಾ. ೯-೨೬). [ಸಂ.]

**ಭಾರತಿಕವಿದ್ಯೆ** (ನಾ). ಭರತಮುನಿಯಿಂದ ಪ್ರವೃತ್ತವಾದುದೆನ್ನಲಾದ ವಿದ್ಯೆ ; ನಾಟ್ಯಶಾಸ್ತ್ರ ; ನಾಟ್ಯಕಲೆ : ಭಾರತಿಕವಿದ್ಯೆಯೊಳ್ ತೌರ್ಯತ್ರಿತಯಮಾಧುರ್ಯಮಾನಭಾವಭಂಗಿಯುಮಂ ನೀತಿಶಾಸ್ತ್ರದೊಳ್ ಧರ್ಮಾರ್ಥಕಾಮೋಪಲಬ್ಧಿತಾತ್ಪರ್ಯಮುಮಂ ಪ್ರತ್ಯೇಕಮಭಿವ್ಯಂಜನಮುಮಂ ಮಾಡ್ಪಂ (ಅಪಂಪು. ೬-೯ ವ). [ಸಂ. ಭಾರತಿಕವಿದ್ಯಾ]

**ಭಾರತೀಪತಿ** (ನಾ). ಸರಸ್ವತಿಯಂ ಗಂಡ ; ಬ್ರಹ್ಮ : ಭಾರತೀಪತಿ ಚತುರಪರಿಮಿತೋದಾರ ಗಂಭೀರಭಾಷಿತಂಗಳಿಂ ಬಿನ್ನವಂಗೆಯ್ಯೆ (ಜಗನ್ನಾ. ೨-೭೭ ವ). [ಸಂ.]

**ಭಾರತೀಯ** (ಗು). ೧. ಭಾರತಕ್ಕೆ ಸಂಬಂಧಪಟ್ಟ; ಭಾರತದೇಶಕ್ಕೆ ಸೇರಿದ: 'ಭಾರತೀಯ ಸಂಪ್ರದಾಯ' ಪರಾ. (ನಾ). ೨. ಭರತಖಂಡದಲ್ಲಿ ಹುಟ್ಟಿದವನು; ಭಾರತರಾಷ್ಟ್ರದ ಪ್ರಜೆ: ಭಾರತವೆಲ್ಲ ಒಂದೇ ದೇಶ, ಭಾರತೀಯರೆಲ್ಲ ಒಂದೇ ಜನಾಂಗವೆಂಬುದು ಈ ದೇಶದಲ್ಲಿ ಈ ಜನದಲ್ಲಿ ಒಂದೇ ಸಂಸ್ಕೃತಿ ಇರುವುದರಿಂದ ಇದಕ್ಕೆ ಸಂದೇಹವೇ ಇಲ್ಲ (ಭಾರದ. ೪); ಪ್ರಾಚೀನಭಾರತೀಯರ ತತ್ತ್ವವಿಚಾರಗಳ ಭಾಷಾಂತರ ಅಥವಾ ಸಂಗ್ರಹವು ಸ್ವಾಭಾವಿಕವಾಗಿಯೇ ಬಹು ವ್ಯುತ್ಪಾದಕವಾಗಿರಬಹುದು (ಭಾತತ್ತ್ವ. ೧೦ ಮುನ್ನು೨). [ಸಂ.]

**ಭಾರತೀಯತೆ** (ನಾ). ಭಾರತೀಯನಾಗಿರುವಿಕೆ; ಭಾರತೀಯತ್ವ: ಈ ತೆರನಾದ ದೇಶಪ್ರೇಮ ಮತ್ತು ಭಾರತೀಯತೆ ಆತನ ವೇಷಭೂಷಣದಲ್ಲಿಯೂ . . . ಎದ್ದು ಕಾಣುತ್ತಿದ್ದವು (ನಸ್ಮಕ. ೧೩೦).
[ಸಂ. ಭಾರತೀಯತಾ]

**ಭಾರತೀಯತ್ವ** (ನಾ). = ಭಾರತೀಯತೆ: ಒಮ್ಮೆಗೇ ಪಾತಿವ್ರತ್ಯ, ಉದ್ದೀಪನ, ಮೃದುತ್ವ – ಲಕ್ಷಣಗಳನ್ನು ವ್ಯಕ್ತಪಡಿಸುವ ಅಜಂತಾ ಹೆಣ್ಣುಗಳಲ್ಲಿ ಒಂದು ವಿಶಿಷ್ಟ ಭಾರತೀಯತ್ವವನ್ನು ಕಾಣಬಹುದು (ಭಾರದ. ೩೨೬). [ಸಂ.]

**ಭಾರತೀಯಸಂಪ್ರದಾಯ** (ನಾ). ಭರತಖಂಡದಲ್ಲಿ ಅನೂಚಾನವಾಗಿ ನಡೆದುಕೊಂಡು ಬಂದಿರುವ ನಡವಳಿಕೆ, – ಪದ್ಧತಿ, – ಆಚಾರ: ಸಂಸ್ಕೃತಿಯ ದೃಷ್ಟಿಯಿಂದ ಹಿಮವತ್ಸೇತುಪರ್ಯಂತ ಒಂದೇ ವಿಧವಾದ ಭಾರತೀಯಸಂಪ್ರದಾಯ ಸ್ಥಿರವಾಯಿತು (ಮುಕ್ಕಾರ. ೧೨೮ ಟೀಕೆ). [ಸಂ.]

**ಭಾರತೀಯಸಂಸ್ಕೃತಿ** (ನಾ). ಭರತಖಂಡದ ಜನತೆಯ ಮಾನಸಿಕ ಸಾಧನೆ; ಭಾರತೀಯರ ಬೌದ್ಧಿಕಸಿದ್ಧಿ: ಭಾರತೀಯಸಂಸ್ಕೃತಿಯನ್ನು ವೈದಿಕಸಂಸ್ಕೃತಿ ಎಂದು ಹೇಳುವುದರಲ್ಲಿ ಔಚಿತ್ಯವಿದೆ (ಮುಕ್ಕಾರ. ೯೭ ಟೀಕೆ).
[ಸಂ.]

**ಭಾರತೇಯ** (ನಾ). = ಭಾರತೀಯ ೨: ಪ್ರಾಣಿಮಾತ್ರದಲ್ಲಿ ಜೀವವನ್ನು ಆದಿಯಿಂದ ಒಪ್ಪಿಕೊಂಡು ಬಂದಿರುವವರು ಭಾರತೇಯರು (ಜೀವಾತ್ಮ.೦೯೧).
[ಸಂ.]

**ಭಾರದಡಿ** (ನಾ). (ಉಕ) ದೊಡ್ಡತನ; ಗೌರವ: ಸಾಮಂತನು ಏನಾದರೂ ಕೃಷ್ಣತನಯನ ಮೇಲೆ ಅವಲಂಬಿಕೆ ಮಾಡತಕ್ಕ ಮನುಷ್ಯನೇ ಇದ್ದಿಲ್ಲ. ಮೇಲಾಗಿ ಆವರ ತಾಯಿಯು 'ಭಾರದಡಿ'ಯ ಹೆಣ್ಣುಮಗಳು (ಶಿವಭಾ. ೧೦೨).
[←ಮರಾ. ಭಾರಧಡೀ = ಭಾರವಾದ ವಸ್ತು; ದೊಡ್ಡಸಾಮಾನು]

**ಭಾರದ್ವಾಜ** (ನಾ). ೧. ಭರದ್ವಾಜನೆಂಬ ಮಹರ್ಷಿಗೆ ಸಂಬಂಧಿಸಿದುದು: ಭಾರದ್ವಾಜವಿಶಾಲಗೋತ್ರಮನುದಂಚದ್ಭರತಕ್ಷೇತ್ರಮಂ . . . ಸಾರಂಚಿತ್ರಿಸೆವಂತಲಂಕರಿಸಿತಂಬಾಗಳ್ (ರಪುರಾ. ೧-೮೦). ೨. ಭರದ್ವಾಜಮುನಿಯಿಂದ ಪ್ರವೃತ್ತವಾದ ಗೋತ್ರದಲ್ಲಿ ಹುಟ್ಟಿದವನು. ೩. ಭರದ್ವಾಜನ ಮಗ; ದ್ರೋಣ: ಅಂತು ಭಾರದ್ವಾಜನಾಗಾಮಿಕ ಸಂಗ್ರಾಮರಂಗಕ್ಕೆ ಪಾತ್ರಂಗಳಂ ಸಮೆಯಿಸುವ ಸೂತ್ರಧಾರನಂತೆ ಶಸ್ತ್ರವಿದ್ಯಾಭ್ಯಾಸಂಗೆಯ್ಸುತ್ತಿರೆ (ಪಂಪಭಾ. ೨-೩೯ ವ); ಓಜಂ ಗಡ ಚೀ ಭಾರದ್ವಾಜಂ ಗಡ ಬಿಲ್ಲ ಬಲ್ಮೆಯುಂ ಕಲಮುಂ ನಿರ್ವ್ಯಾಜಂ ಮಸುಳ್ದುವು ಪಾಂಡುತನೂಜರ ಪಕ್ಕದೊಳೆ ಪಾಟಿಗಿಡೆ ನೆಗಟ್ದುದಱಿಂ (ಗದಾಯು. ೨-೦೮); ನೃಪಾಲಶ್ರೇಣಿಯನು ಶಸ್ತ್ರಾಸ್ತ್ರ ಕಳೆಯಲಿ ಜಾಣರನು ಮಾಡಿದನು ಭಾರದ್ವಾಜಮುನಿಯಂದು (ಕುವ್ಯಾಆ. ೬-೨೨). ೪. ಸಪ್ತರ್ಷಿಗಳಲ್ಲಿ ಒಬ್ಬ; ಭರದ್ವಾಜ. ೫. ಒಂದು ಬಗೆಯ ಹಕ್ಕಿ; ಹೆಗ್ಗಾರ: ಪಲಿಯ ಭಾರದ್ವಾಜ ಪಿಕ ಪಿಂಗಲಿ . . . ಶಿಖಿ ಮಡಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡೆಂದ (ತೊರರಾ. ೩-೧-೩೩); ಹರಿಣ ಭಾರದ್ವಾಜ ಹಂಗಂಗಳು ತಡೆಯೆ ನರಿ ನವಿಲು ನಕುಳ ವಾಯಸಂಗಳು ತಿರ್ದೆ ಶುಭಶಕುನಂಗಳು (ಐದೆಲೆ. ೦೨೫); ಕಂಗೊಳಿಪ ಕೊಂಚೆ ಭಾರದ್ವಾಜ ಚೆಂಬೋತ . . . ಪಿಂಗಳಿಕ ಸಾಲ್ವ "ನರಳಿಗನಸುಗವಕ್ಕಿಗಳ ಸಂಗಮೊಪ್ಪಿರ್ದವಲ್ಲಿ (ರುಕ್ಮಾಂಗ. ೧೦-೫). ೪, ೫: ಬಂಧುರ ಭಾರದ್ವಾಜ ಶಾಂಡಿಲ್ಯಕ ಶುಕ ವಿಮದಾಗಸ್ತ್ಯಕಂ ತಾಪಸಪ್ರೋತ್ಕರಮಂ ಸೋಮಾರ್ಕರುಕ್ಷಾಂಚಿತಮದು ನಭಮಂ ಪೋಲ್ತು ಚೆಲ್ವಾಯ್ತುರಣ್ಯಂ (ರಾಜಶೇ. ೫-೭೫). ೬. ಅಗಸ್ತ್ಯ. ೭. ಅಂಗಾರಕಗ್ರಹ. [ಸಂ.]

**ಭಾರದ್ವಾಜತನೂಜ** (ನಾ). ಭಾರದ್ವಾಜಋಷಿಯ ಮಗ: ದ್ರೋಣ: ಭಾರದ್ವಾಜತನೂಜಂ ಚಾರುಗುಣಂ ದ್ರೋಣನೆಂಬಂ. . . ಜನವಿನುತ ಚಾಪವಿದ್ಯಾಧಾರಂ (ಬಂಹಂ. ೦೦-೩೩). [ಸಂ.]

**ಭಾರದ್ವಾಜಿ** (ನಾ). ಕಾಡುಹತ್ತಿಗಿಡ: "ಆ ಹತ್ತಿಯ ಗಿಡು ಅಡವಿಯಲ್ಲಿ ಹುಟ್ಟಿದರೆ ಭಾರದ್ವಾಜಿಯೆನಿಸುಗು" (ಶಾಶರಾ. ೦೦೦). [ಸಂ. ಭಾರದ್ವಾಜೀ]

**ಭಾರಯಷ್ಟಿ** (ನಾ). ಭಾರವನ್ನು ಹೊರುವ ಕಂಬಿ,–ಅಡ್ಡೆ: "ಭಾರಯಷ್ಟಿಃ, ವಿಹಂಗಿಕಾ—ಈ ೨ ಕಾ(ಚಿ)ಸಿನ ಕಂಬಿ" (ಪರಾಯು. ೦೨೫-೬೩).
[ಸಂ.]

**ಭಾರಯಿಸು** 'ಭಾರಿಸು' ನೋ.

**ಭಾರವಡ್ಡಿಗೆ** 'ಬಾರವಟ್ಟಿಗೆ' ನೋ.

**ಭಾರವಣೆ**, ಭಾರಣೆ$_1$ (ನಾ). ೧. ಹೊರೆ; ತೂಕ; ಭಾರ. ೨. ಹೆಚ್ಚಳ; ಆಧಿಕ್ಯ; ಅತಿಶಯ: ಶಿವನರ್ಚನೆಯ ಹರಿವರಿಯ ಶರಣರ ತಿರತಿಣಿಯ ಭಾರವಣೆಯ ಮೇಲೆ ಮೆಲ್ಲನೆ ನರ್ತನದ ನಟನೆ ಮೈಸಂದು ಕೈವೀಸಿ ನಡೆದು ಬರೆ (ಕೇಶಿರ. ೦೦೦-೦); ಯುಧಿಷ್ಠಿರ ವೀರನಿಂದಿವ್ಮಡಿಯ ನೇಹದ ಭಾರವಣೆ ತೋಱುವುದಿದೇನೈ ಕರ್ಣನಾರೆಂದ (ಕುವ್ಯಾಕ. ೨೬-೨೪); ಬರುತ ಕಂಡನು ತೊಳಗಿ ತೋಱುವ ಶಿರದ ಸಿರಿಪಾದುಕೆಯ ಪುಳಕಾಂಬರದ ಭಾರವಣೆಯಲಿ ಬಳುಕುವ ಭದ್ರಕಾಯನನು (ಐಭಾಗ. ೩-೦-೩೬). ೩. ಹಿರಿಮೆ; ಪೆಂಪು; ಘನತೆ; ಠೀವಿ: ಕಡುಮನದ ಕಲಿ ರಾಜಪುತ್ರರ ನಡುವೆ ಮೈಪರಿಮಳದಿ ದೆಸೆ ಕಂಪಿಡಲು ಭಾರವಣೆಯಲಿ ಬಂದನು ಕರ್ಣನೋಲಗಕೆ (ಕುವ್ಯಾದ್ರೋ. ೧-೦೪). ೪. ಆಡಂಬರ; ಆಟಾಟೋಪ; ಕೋಲಾಹಲ: ಬವರಿಯಲಿ ಪಯಪಾಡಿನಲಿ ಮೈಲವಣೆಯಲಿ ಬಿನ್ನಾಣದಲಿ ಭಾರವಣೆಯಲಿ. . . ಕೌರವಮಹೀಪತಿ ತೋಱಿದನು ಶ್ರಮವನು ಕಠಾರಿಯಲಿ (ಸಂಶಪ. ೦೮-೪೯); ಪ್ರತಿಭಟನಭಾರವಣೆ ಲೇಸೈ ಕರ್ಣ (ಕುವ್ಯಾವಿ. ೮-೦೩).

**ಭಾರಣೆ$_1$**: ೧. "ಭಾರಣೆಯೆನೆ ಬಲುಭಾರಂ" (ಶಾರಹ. ೩೯); ಸಾರಪರಿಮಳವಸ್ತುಗಳ ಬಲುಭಾರಣೆಯ ಪೆಟ್ಟಿಗೆಗಳೊಟ್ಟಿತು (ಕುವ್ಯಾವಿ. ೦೭-೨೮); ಜಗತಿ ಜರಿದುದು ರಣದ ಹೆಣವೆಟ್ಟುಗಳ ಭಾರಣೆಗೆ (ತೊರರಾ. ೬-೧೫-೨); ಭಾರಣೆಯ ಗಂಡಶೈಲಗಳೆಲ್ಲ ಗಮನದುರು ಮಾರುತನ ಗತಿವಿಡಿದು ಪಡಿಬಲವು ಮುಂಕೊಂಡು ಧಾರಿಣೀಶನ ಸುತ್ತಿ ಪೋಪಂತದೇಂ ಬೆಡಗ ತೋರುವುದೊ ತತ್ಸಮಯದಿ (ವೆಂಕಾರಾ. ೫-೦-೨೦). ೨. ಕುಣಿವ ಕುದುರೆಯ ಮದದ ಬಲುಭಾರಣೆಯಲೊಲೆವಾನೆಗಳ. . . ತಿವಿದಗಿವ ಭಟರೊಡ್ಡಣೆ ಸಘಾಡಿಸಿತೆರಡು ಬಲದಲಿ (ಕುವ್ಯಾಶೀ. ೨-೫); ಅಧಿಕಭೀತಿಯ ಭಾರಣೆಯಲಿರಲುರಿ ಛಡಾಳಿಸಿ ಭೋರೆನುತ ಹಬ್ಬಿದುದು (ತೊರರಾ. ೬-೩೭-೦೦); ಭಾರಣೆಯ ಬಲದೊಡನೆ ಕುದುರೆಗಾವಲೊಳಿರ್ದ ವೀರತಾಮ್ರಧ್ವಜನ ಮಂತ್ರಿ ನಕುಲಧ್ವಜಂ ದೂರದೊಳ್ ಕಂಡನು (ಜೈಮಿಭಾ. ೨೫-೯). ೩. ಅದಟನೊಳ್ವೀರದೊಳ್ಭಾರಣೆಯೊಳು . . . ಕಾಣೆನ ವರಿರ್ವರ್ಗೆ ಸಮರಾದ ಕಲಿಗಳಂ (ಜೈಮಿಭಾ. ೨೨-೦೨); ವಿಚಾರವಳಿದಾರೂಢಯೋಗಿಯ ಭಾರಣೆಯಲಕ್ರೂರನೆಸೆದನು ಭಕ್ತಕೇಳಿಯಲಿ (ಅಕ್ರೂಚ. ೨-೫೭). ೪. ಭೈರವನ ಭಾರಣೆ ರಕ್ಕಸರುರ್ಕು ಮಿಱು ಮೊತ್ತಂ ಗಣನಾತಿರೇಕಮೆನಸಲೊಪ್ಪುವವೋಲ್ ನೆರೆದಿರ್ದುದಾಕ್ಷಣಂ ಸಂಗರದುಜ್ಜುಗಕ್ಕೆ ಚತುರಂಗಬಲಂ

(ದಕಳು. ೬-೯೯); ಕಾಳಗದೊಳಿದಿರಾರು ಭೀಮಾರ್ಜುನರ ಭಾರಣೆಗೆ (ಕುಮ್ಯಾಸ. ೩-೯೦) ; ಆರು ಮುಂರಹರನಲ್ಲದಸುವನು ಹೀರುವರು ಪೂತನಿಯು ಶಕಟನನಾರೊದೆದು ಹುಡಿಹುಡಿಯು ಮಾಳ್ಪರು ಮಾರುತಾಸುರನ ಭಾರಣೆಯು ಬಜಗ್ಗೈವ ವೀರರದಾರು (ಶಿಭಾಗ. ೨-೩-೦೭). ೫. ಹೊಣೆಗಾರಿಕೆ ; ಕಾರ್ಯನಿರ್ವಹಣೆಯ ಜವಾಬ್ದಾರಿ :. ತಿಳಿಯಲಟ್ಟದ ಸಾತ್ಯಕಿಗೆ ಕೊಳುಗುಳದ ಭಾರಣೆಯಾಯ್ತು (ಕುಮ್ಯಾದ್ರೋ. ೦೨-೩) ; ಊರ ನೇಣುಗಳು ದರವೇಷ್ಟನಭಾರಣೆಗೆ ಬಾರದುದನೊಂದೇ ಸೇರಿದುದನರ್ಜುನ ಮಹಾ ವಿಟಪಿಗಳನೀ ಧರೆಗೆ ಬೇರುಸಹಿತೆಡಗೆಡಹುವುದ . . . ನೆಟ್ ಕಂಡೆ ನಾನೆಂದ (ಶಿಭಾಗ. ೦೦-೩೨-೨೮).

[<ಸಂ. ಭಾರ. /ಮರಾ. ಭಾರಾವಣೇ=ಬಹಳ ಭಾರವಾಗು]

**ಭಾರವಹ** (ನಾ). ೧. ಹೊರೆಯನ್ನು ಹೊರುವವನು. ೨. ಹೊಣೆಯನ್ನು ಹೊರುವವನು ; ಹೊಣೆಗಾರ : ತುರಗವಾರಗಜಶಿಕ್ಷಾಭಾರವಹರಿಂ ವಿಾಳದಪಾರಧನರಿಂ ಮೆರೆಗುವಮಾ ರುಚಿರಪಟ್ಟಣಮಿಳಾರಮಣಯುಕ್ತಂ (ರಾಜಶೇ. ೨-೯೦). [ಸಂ.]

**ಭಾರವಾಸಿ** (ನಾ). ಹೆಚ್ಚು ಭಾರ ; ಅಧಿಕವಾದ ತೂಕ : ಪಾರಜಾಗೀರು ಹೊನ್ನಿನ ಚೀಲಚೀಲುಗಳು ಭಾರವಾಸಿಯು ಸ್ವರ್ಣರಜತದಿಂ ಅಂಬಾರಿಸಹ ಅಶ್ವಗಜಸಮೂಹ . . . ಧವಳಛತ್ರಗಳನಾರಾರಿಗೀವುದೀವೃತ್ತಿರಲು ರಾಜಚೂಡಾಮಣಿಯ ಸಭೆಯೊಳೊಲವಿಂ (ಕೃಕ್ಕಪಿ. ೩-೩೩). [ಭಾರ + ವಾಸಿ$_1$]

**ಭಾರವಾಹ** (ನಾ). ಭಾರವನ್ನು ಹೊರುವವನು ; ಹೊರೆಯಾಳು : "ಭಾರವಾಹಃ, ಭಾರಿಕಃ—೨ ಹೊರೆ ಹೊರುವವನ ಪೆಸರು" (ಸಿದ್ಯಾಂಶಿ. ೩೦೨). [ಸಂ.]

**ಭಾರವಾಹಕ** (ನಾ). = ಭಾರವಾಹ : ಯುವರಾಜಂಗರಸಂ ರಾಜ್ಯವಿಳಾಸಮನಿತ್ತು . . . ಭಾರವಾಹಕಂ ಪೊರೆಯನಿಟ್ಟಿಳಿದಂತೆವೊಲಾದಂ (ಪುಲ್ಪ್ಪ. ೯-೦೩೦). [ಸಂ.]

**ಭಾರವಾಹಿ** (ನಾ). = ಭಾರವಾಹ : ಕರ್ತೃಶಾಲಿಯಾದ ಪುರುಷನು, "ಯಃಕ್ರಿಯಾವಾನ್ ಸ ಪಂಡಿತಃ", ಉಳಿದವರೆಲ್ಲರೂ ಭಾರವಾಹಿಗಳು (ಶ್ರೀಕೃಶೀ. ೦೨೭). [ಸಂ. ಭಾರವಾಹಿನ್]

**ಭಾರವಿಸು** 'ಭಾರಿಸು' ನೋ.

**ಭಾರಸಂಖ್ಯೆ** (ನಾ). ಅಧಿಕ ಸಂಖ್ಯೆ ; ಬಹುಸಂಖ್ಯೆ : ಮರಕತದ ಮಧುಪಾತ್ರ ನೀಲದ ಕರಗ ವೈಡೂರಿಯದ ಪಡಿಗವ ಚರರು ತಂದೊಟ್ಟಿದರು ಬಂಡಿಗೆ ಭಾರಸಂಖ್ಯೆಯಲಿ (ಕುಮ್ಯಾಗ. ೪-೦೩) ; ತಂದು ಬಳಿಕೊಟ್ಟಿದರು ಪರಿಮಳಚಂದನದ ನೀರಸಕುಜಂಗಳನಂದಮಿಗೆ ಮಾಧ್ಯದಲಿ ಸುರಿದರು ಭಾರಸಂಖ್ಯೆಯಲಿ ಒಂದು ತಾಳುತ್ಸೇಧದಲಿ ಹಳುಕೊಂದಿದುತ್ತಮಕರ್ಪೂರವನು (ತೊರಲಾ. ೬-೩೩-೮೯). [ಸಂ. ಭಾರಸಂಖ್ಯಾ]

**ಭಾರಾಂಕ** (ನಾ). ೧. ಅತಿಶಯವಾದ ಯುದ್ಧ, -ಕದನ : ಬವರದೊಳು ಹರಿಪಾಂಚಜನ್ಯದ ರವ ಭಯಂಕರವಾಯ್ತು ಬಹಳಾಹವದೊಳಗೆ ಪಾರ್ಥಂಗ ಬಿದ್ದುದು ಭಟರ ಭಾರಾಂಕ (ಕುಮ್ಯಾದ್ರೋ. ೧೦-೦). ೨. ಯೋಧ ; ಪರಾಕ್ರಮಿ: ನೀರಜಭವನ ಮಾನಸಪುತ್ರ ನೀನಲ್ಲದಾರಾದೊಡೀ ಮಾತುಗಳ ಭಾರಾಂಕನಾಗಿಯೆಸ್ನೊಡನೆ ಪೇಳ್ದೊಡೆ ಸೀಳಿ ತೋರಣಗಟ್ಟಪೆನೆಂದ (ಪೊಃಹಶ. ೦೨-೩೦). [ಸಂ.]

**ಭಾರಾಮಾರ್ಗ** 'ಬಾರಾಮಾರ್ಗ' ನೋ.

**ಭಾರಾವತಾರ** (ನಾ). ಹೊರೆಯನ್ನು ಇಳಿಸುವಿಕೆ ; ಕಷ್ಟವನ್ನು ಪರಿಹರಿಸುವಿಕೆ : ಮುನ್ನಂ ಕೃತಯುಗದೊಳ್ . . . ನೆಗಟ್ತೆಯ ದೈತ್ಯರೆಲ್ಲಮೆನ್ನ ಚಕ್ರಘಾತದೊಳಟ್ಗಿ ಮಟ್ಗಿದಂತಾದರದೊಂದು ಧರಾವನಿ[ತೆ]ಯ ಭಾರಾವತಾರದೊಳೆನಿತಾನುಂ ಘಸಣೆ ಪೋದುದು (ಕಂಪಭಾ. ೬-೨೯ ವ).

[ ಸಂ. ]

**ಭಾರಾಳಸ** (ನಾ). ಭಾರದಿಂದ ಉಂಟಾಗುವ ಆಲಸ್ಯ; ತೂಕದಿಂದ ಉಂಟಾಗುವ ಜಡತ್ವ : ತನ್ನ ನಡೆಯಿಂ ನಡೆಗಲ್ತೊಡವರ್ಪ ಕೇಳಿಹಂಸಾಳಿಯ ಬೆನ್ನೊಳ್ಕೈದೆ ಪಡೆಯಲ್ ಬಸವಲ್ಲದೆ ನಿಂದು . . . ಭಾರಾಳಸದಿಂದವಾದ ಗಮನಾಲಸವೃತ್ತಿಯನೇನನೆಂದಪೆಂ (ಜಗಪಿ. ೨-೯೭).

[ಸಂ. ಭಾರಾಲಸ]

**ಭಾರಿ$_1$** (ಗು). ೧. ಹೆಚ್ಚಾದ ; ಅತಿಶಯವಾದ ; ಅಧಿಕವಾದ : ಭಾರಿ ಧನವನು ತಂದು ಧರೆಗಿಳುಹಿದರು (ಕುಮ್ಯಾಆ. ೦೯-೩); ನನಗೆ ಬಲು ಭಾರಿ ದಾನ ಮಾಡಿದಿ (ಮುಖಪಾ. ೨೯). ೨. ದೊಡ್ಡದಾದ ; ಗಾತ್ರವಾದ : ಜಾಲಿ ಜೇನೊಡವಿಪ್ಪ ಪಿಪ್ಪಲಮಾಲೆಯಿವ ಸೋಡಬಲೆ ಲತೆಗಳ ಮೇಲು ಹೊದಕೆಯ ಬಂದಣಿಕೆಗಳ ಭಾರಿಪೊಟ್ಟೆಗಳಲಿ (ತೊರಲಾ. ೩-೦-೨೮). ೩. ಕಟ್ಟುಮಸ್ತಾದ; ಸ್ಥೂಲವಾದ : ಅವರು ಭಾರಿ ಆಳುಗಳಾಗಿದ್ದಾರೆ (ದೇಶೀಚಾ. ೪೦). ೪. ಬೆಲೆ ಬಾಳುವ ; ಅತಿ ಬೆಲೆಯ : ಆಕೆ ದಿನವೂ ಭಾರಿ ಸೀರೆಯನ್ನೇ ಉಡುತ್ತಾರೆ (ರೂಢಿ). ೫. ತೀವ್ರವಾದ; ಅತಿಯಾದ : ಮೈಯಲ್ಲಿ ಭಾರಿ ಜ್ವರ. ಪೂರಾ ನಿಶ್ಶಕ್ತಿ (ವಾಕ್ಪೋಲಿ. ೦೦೩). ೬. ಭಯಂಕರವಾದ; ಭೀಕರವಾದ: ಭಾರಿಯಾಹವವಾದೆಡೆಗೆ ನಿಮ್ಮನಿದಾರು ಬಿಟ್ಟರುಪಾಯದಲಿ (ಕುಮ್ಯಾಶ.೪-೦೧). ೭. ಐಶ್ವರ್ಯವುಳ್ಳ; ಸಿರಿಯುಳ್ಳ: ಆತ ಹಲವಾರು ಜನರನ್ನು ತನ್ನ ಕೈಕೆಳಗೆ ಸಂಬಳಕ್ಕಿಟ್ಟುಕೊಳ್ಳಬಹುದು ಎನ್ನುವಷ್ಟು ಭಾರಿ ಮನುಷ್ಯ (ರೂಢಿ). (ನಾ). ೮. ಭಾರವಾದುದು; ತೂಕವಾದುದು. ೯. ದೊಡ್ಡದಾದುದು ; ಗಾತ್ರವಾದುದು : ಭಾರಿಯ ತಲೆವರಿಗೆಗಳಲೊತ್ತಿದರು ಹೊಗಿಸಿದರು ದುರ್ಗವನು (ಕುಮ್ಯಾಸ. ೩-೩೦); ಭಾರಿಯ ದಂತಿ ಮಹದಾಹವದೊಳಳಿದುದು (ಕುಮ್ಯಾದ್ರೋ. ೩-೦೦). ೧೦. ಹೆಚ್ಚಾದುದು ; ಅತಿಶಯವಾದುದು : ಭಾರಿಯ ಭಟರ ಗಡಣದಲಿ ಭಾರಣೆಯಲೈತಪ್ಪ ನಿಜಪರಿವಾರವನು ಬೋಳೈಸಿ (ಕುಮ್ಯಾದ್ರೋ. ೦೦-೪); ಬಳಿಕಲಾ ದಮಯಂತಿ ಭಾರಿಯ ಬಳಲಿಕೆಯನನುಭವಿಸಿ ತಂದೆಯ ನಿಳಯವನು ಸಾರಿದಳು (ತೊರಲಾ. ೩-೨-೦೩). ೧೧. ದಪ್ಪವಾದುದು ; ಸ್ಥೂಲವಾದಂದು : ಕರವ ನೊಸಲಲಿ ಚಾಚಿ ಭಾರಿಯ ಭುಜವನೊದಟಿಸುತ ಅರಸಗಭಿವಂದಿಸುತ (ಕುಮ್ಯಾದ್ರೋ. ೪-೩೦). ೧೨. ಪ್ರಶಸ್ತವಾದುದು ; ಶ್ರೇಷ್ಠವಾದುದು : ಇತ್ತ ಭೂರಿಶ್ರವನು ಭಾರಿಯ ಹತ್ತುಸಾವಿರರಥ ಸಹಿತ ಕೈಗುತ್ತಿದನು ರಣವಿಜಯಲಕ್ಷ್ಮಿಯ ಲಲಿತಃಬರಿಯಲಿ (ಕುಮ್ಯಾದ್ರೋ. ೦೪-೦); ಈರೇಳುಲೋಕದ ಪರಗಂಡನೆಂದೆಂಬ ಭಾರಿಯ ಬಿರುದಿನ ಕಡೆಯ ವೀರದಾನವನೆಡಗಾಲಿನೊಳಗೆ . . . ಒಪ್ಪುತಿಹುದು (ಶ್ರೀಕೃಗಾಂ. ೬-೬೩).

**ಭಾರಿಯಾಳು** =ಮಹಾಶೂರ; ಅತಿ ಪರಾಕ್ರಮಿ; ಶ್ರೇಷ್ಠ ಯೋಧ: ಭಾರಿಯಾಳ್ಗೆ ದ್ರೋಣನಾತನು ತೀರಿದನು (ಕುಮ್ಯಾದ್ರೋ. ೦೬-೩೬); ವೀರವಿಕ್ರಮ ಶೌರ್ಯದಾಗರ ಭಾರಿಯಾಳಭಟುಗಳ ಬಂಟಂ . . . ಮಾರಿಮುಖನೆಂಜವನು ಬಂದವ ರಾವಣನ ಮಂತ್ರಿ (ತೊಶಿರಾ. ೩೩-೦೦).

[< ಸಂ. ಭಾರ. / ತೆಲು. ಭಾರೀ. / ಹಿಂ. ಮರಾ. ಭಾರೀ]

**ಭಾರಿ$_2$** (ನಾ). ಸಿಂಹ.

**ಭಾರಿನಿಗಳಾಂಕ**=ಸಿಂಹಕ್ಕೆ ಬೇಡಿಯನ್ನು ಹಾಕಿದವನು ; ಮದಕರಿ ನಾಯಕನ ಒಂದು ಬಿರುದು : ಆಗ ಭಟರು "ಮಹಾರಾಜ ಛತ್ರಪತಿ ಖಡೆಯಶೋವಂತ . . . ಅರಿಕಲಭಕಂಠೀರವ ವೀರಮದಕರಿರಾಜ ಭಾರಿ ನಿಗಳಾಂಕ ಜಯ ಜಯ" ಎಂದು ಹೊಗಳಿದರು (ಚಿತ್ರಶಾ. ೯೮). [ಸಂ.]

**ಭಾರಿಕ** (ನಾ). ಹೊರೆಯನ್ನು ಹೊರುವವನು : "ಭಾರವಾಹಃ, ಭಾರಿಕಃ —೨ ಹೊರೆ ಹೊರುವವನ ಪೆಸರು " (ಸಿದ್ಯಾಂಶಿ. ೩೦೨.) [ಸಂ.]

**ಭಾರಿಮಾಡು** (ಕ್ರಿ). (ವ್ಯವಸ್ಥೆಯಿಂದ ನಿಂತು) ಮುಜರೆ ಮಾಡು ; ಗೌರವ ಸೂಚಿಸು : ಕರಿಯ ಕುಂಭಸ್ಥಳಕಂಕುಶಗಳನೊತ್ತಿ ಭರದಲಿ ನಡಿಸಿ ತಂದಾಗ ನರಸೇಂದ್ರನಂಘ್ರಿಗೆ ನಮಿಸಿ ಜೋದರುಗಳು ಹರುಷದ

ಭಾರಿಮಾಡಿದರು (ಕಂಹ. ೨೦-೩೩); ತುರಗಾರೋಹಕರ್ಕೈತಂದು ಕುದುರೆಯ ಬಿರುದಿನೇಱಾಟವ ತೋಱಿ ದೊರೆರಾಯ ಕಂಠೀರವಗೆ ಕೈಮುಗಿದಾಗ ಹರುಷದೆ ಭಾರಿಮಾಡಿದರು (ಕಂಹ. ೨೦-೩೩). 'ಬರಾಬರಿ₁', 'ಭರಾಭರಿ ಗೊಡು' ಪರಾ.　　[ ಭಾರಿ ? + ಮಾಡು₁ ]

**ಭಾರಿಸು, ಭಾರಯಿಸು, ಭಾರವಿಸು, ಭಾರ್ೈಸು** (ಕ್ರಿ). ೧. ಭಾರವಾಗು; ಹೊರೆಯಾಗು; ತೂಕವಾಗು. ೨. ಜಡವಾಗು; ಚೈತನ್ಯಹೀನವಾಗು; ಚಟುವಟಿಕೆಯಿಲ್ಲದಾಗು : ಭಾರಿಸಿತು ಮೈ ಮುಖ್ಯದಲಿ ಲಾಳಿ ಸಾರತರ ಲಂಬಿಸಿತು (ಕುವ್ಯಾದ್ರೋ. ೦೦+೨೩). ೩. ಹೊರೆಯನ್ನು ಹೇರು; ಭಾರವನ್ನು ತುಂಬು : ಭಾ[ಹಾಕಾಂ. ಬಾ]ರಿಸಿದ ಬಲುಹೊಱೆಯ ಭಂಡಿಗಳೊರಲಿಸಿದವು ಪಯಣದಲಿ (ಕೂರಚ. ೦-೩-೩). ೪. ಹೆಚ್ಚಾಗು; ಅಧಿಕವಾಗು: ನಮಗೀಯರಿಯ ಭಯ ಭಾರಿಸಿತಿದೇನು ನಿಮಿತ್ತವಿದಕೆನಲು (ಕುವ್ಯಾಗ.೬-೩೦):ಘುಡುಘುಡಿಪ ಕೋಪದಲಿ ದುರ್ಗದ ಹೆಡಕುಪರಿಯಂತೇಱಿ ಪುರ ಗಡಬಡಿಸಿ ಬೆಚ್ಚಿತು ಭಾ[ಹಾಕಾಂ. ಬಾ]ರಿಸಿತು ಭಯವಿನತನೂಜಂಗೆ (ಕೂರಚ. ೪-೩-೨೦) ; ಕೌರವಂ ಮುನ್ನಿರ್ದ ಸರಸಿಗೈತಂದು . . . ಭಾರಿಸಿದ ಬಳಲಿಕೆಯ ನೀಗಿ ಸರಸಿಯಲಿ (ತುರಂಗ. ೭೩-೨೦). ೫. ಗುಂಪುಗೂಡು ; ಸೇರು ; ನೆರೆ : ಊರೊಳೀ ಕಪಿವಾರ್ತೆಯಗಲಕೆ ಬೇರುವರಿದುದು ಬೆಱಗುಬಿಂಕದ ಭಾರಕರು ಭಾರಿಸಿತು ಕೋಟಾವಳಿಯದಗ್ರದಲಿ (ಕೂರಚ. ೩-೩-೦); ಭಾರಿಸಿದುದೆಡಬಲಕೆ ಸಾಂಬಾಕ್ರೂರ ಸಾತ್ಯಕಿ . . . ಪ್ರವೀರಕರು (ಹಿಹಾಗ. ೦೦-೬೦-೨೮). ೬. ಹರಡು ; ವ್ಯಾಪಿಸು : ಶಿಮಶಿವೆಂದುದು ನಿಖಿಳಜಗ ಕೌರವರು ಕಂಪಿಸಿ ಘಟ್ಟುಗೆಡೆದರು ಭುವನದಲಿ ಭಾರಿಸಿತು ಜಯಜಯ ಜಯ ಮಹಾಧ್ವಾನ (ಕುವ್ಯಾಈ. ೬-೩೩) ; ಫಲುಗುಣಂ ಬಿದ್ದನೆಂದು ಭಾರಿಸಿತು ವಾರ್ತೆಗಳ್ಪುರದೊಳಗೆ ದಳದೊಳಗೆ (ತುರಂಗ. ೬೨-೨೧). **ಭಾರಯಿಸು** : ೨. ಕುರುಬಲದ ಹತ್ತಿರಕ್ಕೆ ನಡೆದಂತೆಲ್ಲ ಕುಮಾರನಿಗೆ ತನು ಭಾರಯಿಸಿತು (ಕಕಾತ. ೮೯) ; ಹೃದಯ ನರ್ತಿಸುವುದಿಲ್ಲ –ಭಾರಯಿಸಿದೆ. ಇನ್ನೂ ಭಾರಯಿಸುತ್ತದೆ (ಶಿಂಠ-II. ೦೬೪). ೭. ತೀವ್ರವಾಗು; ಅತಿಶಯವಾಗು: ಇದೆತ್ತಣ ವಾದ್ಯ ಇದೆತ್ತಣ ಗಾನ ಎನ್ನುವಂತೆ ನೃತ್ಯರಸಾನುಭವ ಭಾರಯಿಸಿತು (ಹಾಪುಕ. ೦೦೮). **ಭಾರವಿಸು**: ೧. ನೆಲ ಭಾರವಿಸಿತಹಿಪನ ಶಿರಕೆ (ಕೂರಚ. ೬-೩೬-೦೪). ೪. ಅವನಿಯೆಡೆಗೆಡೆ ಭಂಡಿಗಳು ಭಾರವಿಸಿ ನೂಕಿತು (ಹಿಹಾಗ. ೦೦-೩೪-೪೪). ೮. ಒಟ್ಟುಗೂಡಿಸು; ಸೇರಿಸು : ಕ್ರೂರಕರ್ಮರು ತುಡುಕಿ ದ್ರೌಪದಿಯನಾ ವೇಣಿಕೆ ಭಾರವಿಸಿ ಬಿಗಿದು ಕಟ್ಟಿದರಾಗಲು (ತಹಂಗ. ೪೩-೬೨). **ಭಾರ್ೈಸು** : ೨. ಹರನ ಕರುಣಾಕ್ಕೆ ಹಾರ್ೈಸಿ ಭಕ್ತಿಭರದಿಂ ಭಾರ್ೈಸಿ ಮನದ ಮೊನೆಯಂ ಕೋರ್ೈಸಿ (ಅಕ೨. ೪-೬೦); ಮಾರವಿಜಯನ ಕಾಣುತ ಭಕ್ತಿ ತಲೆಗೇಱಿ ಭಾರ್ೈಸಿ ಬೀಳುವುದದೊಳು ಧಾರಣಿಯೊಳು ಸಾಷ್ಟಾಂಗನಮಿತನಾದನಾ ರಾಯುರ ದೇವನಂದು (ಶ್ರೀಕಾಭ. ೬-೬೨). ೪. ಮೇರೆಯಿಲ್ಲದ ರಾಜ್ಯ ಮಗನೆ ನಿನಗೆ ವ್ರತಭಾರವಗ್ಗಳವೆಂಬ ಚಿಂತೆ ಭಾರ್ೈಸಿ ನವಗಿದ್ದುದಿಂದು ಹೋಯ್ತೆಂದು ಕುಮಾರನ ಕೂಡೆ ನುಡಿದಳು (ಶರಕ. ೦೯-೦೦೪); ನುಡಿ ಮೆಲ್ಲನಾಗೆ ಬಡನಡು ದೊಡ್ಡಿತಾಗೆ ತವೆ ಬಿಡುವ ನಿಟ್ಟುಸಿರು ಭಾರ್ೈಸೆ (ತ್ರಿಶರಾ. ೪-೪೩); ತನ್ನ ಕೆಲಸವೆ ತನಗೆ ಭಾರ್ೈಸಿ, ಅಕಳಿಕೆ ಪ್ಯೆಮುರಿತವೆಡೆಗೊಳಲು (ರಾಕ್ಷಕು. ೪೪). ೯. ದೊಡ್ಡದಾಗು ; ದಪ್ಪವಾಗು : ಸಾರಿ ಸಂಸರ್ಗಪೂಜೆಯ ನನುಗೊಳಿಸೆ ಮಾತ್ತಾ ರಾಯ ಕೈಕೊಳುತಿರ್ದ ಭಾರ್ೈಸಿ ಬೆಳೆದೊಂದು ಕುರುವನತ್ತಿತ್ತೊತ್ತಿ ಧೀರನೊಬ್ಬನು ಸೋರಿಪಂತೆ (ಧಕ. ೭೩-೬೩).

[ಭಾರ + — ಇಸು₂]

**ಭಾರುಂಡ** (ನಾ). ಒಂದು ಬಗೆಯ ಕಾಲ್ಪನಿಕ ಪಕ್ಷಿ; ಎರಡು ತಲೆಯುಳ್ಳ ಹಕ್ಕಿ ; ಗಂಡಭೇರುಂಡ : 'ಭಾರುಂಡವನ', 'ಭೇರುಂಡ' ಪರಾ.

[ಸಂ.]

**ಭಾರುಂಡವನ** (ನಾ). ೧. ಭಾರುಂಡ ಪಕ್ಷಿಗಳು ವಿಶೇಷವಾಗಿ ವಾಸಿಸುವ ಕಾಡು,–ಅರಣ್ಯ. ೨. ಒಂದು ಅರಣ್ಯದ ಹೆಸರು : ಗಂಗಾಸರಸ್ವತಿಗಳ ಪೊಲಬುಂಟುಂತುತ್ತರದ ವೀರಮತ್ಸ್ಯಾದಿಗಳ ಚೆಲುವ ಭಾರುಂಡವನ ಮಂಸಿಯ ಕುಳಿಂಗಾಖ್ಯ ಲಲಿತಹ್ಲಾದಿನೀಶೈಲಯುತಮಾದ ಕಾಳಿಂದಿಯೆಡೆಗೈತಂದನು (ವಂಕಾರಾ. ೨-೨೪-೪೪).　[ಸಂ.]

**ಭಾರ್ೈಸು** 'ಭಾರಿಸು' ನೋ.

**ಭಾರೋಪಜೀವಿ** (ನಾ). ಹೊರೆಯನ್ನು ಹೊತ್ತು ಜೀವಿಸುವವನು ; ಭಾರವಾಹ : "ಭಾರೋಪಜೀವಿ = ಹೊರೆಯನ್ನು ಹೊತ್ತು ಜೀವಿಸುವವನು" (ಶಾಶಾರ. ೩೭ ೬೬೪೭).　[ಸಂ. ಭಾರೋಪಜೀವಿನ್]

**ಭಾರ್ಗವ** (ನಾ). ೧. ಭೃಗುಮಹರ್ಷಿಯ ಮಗ ; ಚ್ಯವನಮಹರ್ಷಿ : ಭಾರ್ಗವನು ನಾಮ. ಚ್ಯವನನೆಂದು ಕರೆಯುವರು (ಪಕಶ. II. ೬೪೪೩). ೨. ಶುಕ್ರಾಚಾರ್ಯ : "ಉಶನಾ, ಶುಕ್ರಃ, ಕಾವ್ಯಃ, ದೈತ್ಯಗುರುಃ, ಭಾರ್ಗವಃ, ಕವಿಃ, ಧಿಷ್ಣ್ಯಃ – ಈ ೭ ಶುಕ್ರನ ಪೆಸರ್" (ಹಲಾಯು. ೯-೪೮); ಪೋದುದು ಬೊಮ್ಮಂಗೆ ಶಿರಸ್ಸು ಭಾರ್ಗವನು ಕಣ್ಣಾಣಂ . . . ವಿಧಿಯಂ ಮಾಱುವನಾವನ್ನೆ (ಕೋಪುಕ. ೨೭). ೩. ಶುಕ್ರಗ್ರಹ : ದಿವಸಕರಂಗೆ ಭಾರ್ಗವ ದಿನೇಶಸುತರ್ . . . ಪಗೆವರ್ ನಿರಂತರಂ (ಕಾಶಿ. ೨-೦೬). ೪. ಭೃಗುವಂಶದಲ್ಲಿ ಹುಟ್ಟಿದವನು ; ಪರಶುರಾಮ : ವಾಯುಪಥದೊಳ್ ಶಿತಾಸ್ತ್ರಂಗಳ್ ಪೋ[ಕ]ಂಗಿಡಿಸೆ ಸುಗಿದಂ ಭಾರ್ಗವಂ (ಕಂಕಥಾ. ೦-೬೦) ; ಕಲಿವೀರವೈರಿಭಟ ಭಾರ್ಗವನೀ ನರಸಿಂಹನೆಂದು ಕಾದದೆ ಸರಣೆಂದು ಬಂದಹಿತವರ್ಗ್ಗಮ ಹೇಳದೆ ವೀರದೇಳ್ಗೆಯಂ (ಎಕ. XII, ತಿಪಟೂ. ೦೨೩-೨೩; 1286); ಮುನ್ನಂ ಭಾರ್ಗವಂ ತಂದೆಯ ನನ್ನಿಗೆ ಮಾತೆ ರೇಣುಕೆಯಂ ಕೊಲ್ಲನೆ! (ರಾಚರಿತ್ಯ. ೨೬-೦೯). ೫. ಬಿಲ್ಲುಗಾರ; ಧನುರ್ಧರ : ಅಂತು ಕಲ್ತು ಮುನ್ನಮೆ ಚಾಪವಿದ್ಯೆಯೊಳಿರಿಂದವಿಗತನೆ ಭಾರ್ಗವನೆನಿಸಿದ ಭಾರ್ಗವಂಗೆ ತಾನೆ ಭಾರ್ಗವನಾಗಿ (ಶಂಶಪಾ. ೦-೩೯ ಪ); ಸಿಡಿಲ ಬಳಗವಿದೆಂಬಿನೆಗಂ ತಾಗಿದತ್ತು ಭಾರ್ಗವಸೈನ್ಯಂ (ಕಂಗಾಪಾ. ೦೩-೩೪) ; ಬಿಲ್ಲ ಬಲ್ಲಣಿಯ ತೆರಳ್ಕೆ ಭಾರ್ಗವರ ಮೊಗ್ಗರದೊಬ್ಬುಳಿ ಕುಂತದಾಳ ತಿಂತಿಣಿ ನೆಱಿ ತಮ್ಮ ತಮ್ಮ ಬಿರುದಂ . . . ಇಳಾವಳಯಕ್ಕಱ ಪುತ್ತುಮಿರ್ಪನಂ (ಕ್ತಕಿ. ೩-೦೨). ೬. ಶಿವ ; ಪರಮೇಶ್ವರ. ೭. ಗಜ ; ಆನೆ. ೮. ಕುಂಬಾರ ; ಕುಲಾಲ. ೯. ಬಾಣ ; ಶರ : ಬಾಳ್ಗಡಿಯಿಂ ಸಿಡಿಲ್ವ ಕಿಡಿಯಿಂ ಬೆನ್ನಟ್ಟಿ ನೋಟ್ಪಂಬರೇಚರರಂ ಕಾಗಿದುದುಗ್ರಭಾರ್ಗವಚಯಂ ವಿತ್ರಸ್ತಲೋಕತ್ರಯಂ (ಪರಕಿ. ೮-೪೮).

[ಸಂ.]

**ಭಾರ್ಗವಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು ; ಭೃಗುಮಹರ್ಷಿಯಿಂದ ಪ್ರೋಕ್ತವಾದ ಪುರಾಣ: ಸನತ್ಕುಮಾರಪುರಾಣ ನಾರಸಿಂಹಪುರಾಣ . . . ಭಾರ್ಗವಪುರಾಣವೆಂಬವೇ ಆಯಾ ನಾಮಧೇಯ ಮುಳ್ಳವರಿಂ ನಿರೂಪಿತಮಾದ ಹದಿನೆಂಟು ಉಪಪುರಾಣಂಗಳು (ವಿವೇಕ. ೬).

[ಸಂ.]

**ಭಾರ್ಗವಿ** (ನಾ). ೧. ಲಕ್ಷ್ಮಿ : "ಇಂದಿರಾ, ಲೋಕಮಾತಾ, ಮಾ, ರಮಾ, ಮಂಗಳದೇವತಾ, ಭಾರ್ಗವೀ, ಲೋಕಜನನೀ, ಕ್ಷೀರಸಾಗರತನ್ಯಕಾ --೮ ಲಕ್ಷ್ಮಿಯ ಹೆಸರುಗಳೆಂತಲೂ ಅಧಿಕಪಾಠ ಹೇಳುವರು" (ಸಿದ್ಧಾಂಶಿ. ೦೮). ೨. ಪಾರ್ವತಿ. ೩. ಗರಿಕೆ.　[ಸಂ. ಭಾರ್ಗವೀ]

**ಭಾರ್ಗವೀಪತಿ** (ನಾ). ಲಕ್ಷ್ಮೀಪತಿ ; ವಿಷ್ಣು : ಭಾರ್ಗವೀಪತಿಗಮಳ ಸತ್ವಾಂತರ್ಗತಮದಾಗಿಹುದು (ಕಂಕರಾ. ೦೨-೪೬).　[ಸಂ.]

**ಭಾರ್ಯ** (ನಾ). ೧. ಭಾರವನ್ನು ವಹಿಸಿಕೊಳ್ಳಬೇಕಾದುದು ; ಆಶ್ರಯ ನೀಡಬೇಕಾದುದು. ೨. ಸೈನಿಕ ; ಯೋಧ. ೩. [ಗಣಿತ] ಒಂದು ಅಳತೆ : ದ್ರೋಣದಿ ಪೋಡಶಭಾಗವ ಕಾಣುತಲಂ

ಭಾರ್ಯೆಮೆನ್ನುತದು . . . ದ್ರೋಣದಲಿ ಹದಿನಾಱಱೊಳಗೆ ವಂದು ಭಾಗೆ ಭಾರ್ಯವೆನಿಸಿಕೊಂಬುದು (ಶಾಸ್ಕ್ರ. ೭೪-೧). [ಸಂ.]

**ಭಾರ್ಯಾದೂತಿ** (ನಾ). ನಾಯಕ-ನಾಯಿಕೆಯರ ಸಮಾಗಮಕ್ಕೆ ಸಾಧಕರಾದ ದೂತಿಯರಲ್ಲಿ ಒಬ್ಬಳು : ದೂತಿಯು ಪ್ರಯತ್ನದಿಂದ ನಾಯಕನ ಹೆಂಡತಿಯಂ ನಂಬಿಸಿ ಆ ಗಂಡನ ಅರಿಕೆಯಿಂದಲೆ ಮೊದಲಲ್ಲಿ ಅಭಿಲಾಷೆಯ ಕುರುಹಾದರೆ ಆ ಬಟ್ಟೆಯಿಂ ನಾಯಕಿಯು ಪಾದರಕ್ಕೆ ನಡೆಸುವಳು. ಅವಳು ಭಾರ್ಯಾದೂತಿಯೆನಿಸಿಕೊಂಬಳು (ಶಾಮಶ್ಯ. ೨೩೯). [ಸಂ. ಭಾರ್ಯಾದೂತೀ]

**ಭಾರ್ಯೆ** (ನಾ). ಹೆಂಡತಿ; ಪತ್ನಿ : ''ದಾರಾಃ, ಕ್ಷೇತ್ರಂ, ಕಳತ್ರಂ, ಭಾರ್ಯಾ . . . ಗೃಹಾಃ — ಈ ೧೩ ಹೆಂಡತಿ'' (ಹಲಾಯು. ೮೧-೩೪೦); ಆರ್ಯಮನ ಬಳಿಗೈದಿದನು ಫಣಿವರ್ಯನೆಂದಾದರಿಸಿ ನಿನ್ನಯ ಭಾರ್ಯೆ ನುಡಿಯಲು ನಿಂದೆನೀ ವನದಲ್ಲಿ ನಾನೀಗ (ತಿಮ್ಮಶಾಂ. ೧೧-೬೯); ನಿನ್ನ ಕೀರ್ತಿಯನ್ನು ನೀನು ಮೆಚ್ಚಿಕೊಂಡರೆ, ನಿನ್ನ ಭಾರ್ಯೆಯು ಸುಮ್ಮನಿರುವು ದಕ್ಕಾದೀತೆ ? (ಆರ್ಯಕ. ೩೨). [ಸಂ. ಭಾರ್ಯಾ]

**ಭಾಲ, ಭಾಳ** (ನಾ). ಹಣೆ ; ನೊಸಲು : ತನ್ನ ದೈವರೇಷೆ ಬರೆಯುವಂತೆ ತಾನೆ ಭಾಲಾ (ನಾರಟೀ. ೮೪-೧೧). 'ಫಾಲ', 'ಭಾಲಪಟ್ಟ' ಪರಾ. **ಭಾಳ** : "ನಿಟಿಳಂ ಭಾಳಮಳಿಕಮುಱಗೆ ಲಲಾಟಂ" (ವಸ್ತುಕೋ. ೭೦-೦೯); ಅಗಣಿತಶೋಭಿವೆತ್ತ ಪುರಲಕ್ಷ್ಮಿಯ ಭಾಳದ ಲೋಚನಾಂಶುಮಾಲೆಗಳೆನೆ ಕಾಂತಿಸಂತತಿ ದಿಶಾವಳಿಯೊಳ್ ಕುಡಿಯಿಟ್ಟು . . . ಅಗ್ಗಳಿಸಿ ತೋರ್ಪುದು ತತ್ಪುರವೀಥಿವೀಥಿಯೊಳ್ (ಕುಸುಮ. ೨-೧೧೧); ಸರಸಿಜಾರಿಯ ಕಿರಣ ದೋಳಿಯ ವಿರಚಿಸಿದ ಸಿಂಧೂರಭಾಳದಿ ಕುಣಿವ ಕುಂತಳದ . . . ಗಣಪತಿ ಮಾಡೆಮಗೆ ನಿರ್ವಿಘ್ನದಾಯಕವ (ಕುಮ್ಯಾಆ. ೧-೩); ಭಸ್ಮತ್ರಿಪುಂಡ್ರಂ ತೊಳಪುದ್ಯದ್ಭಾಳಂ . . ವಿಸುಗೆ ಚರಿಯಿಪರ್ ತಪ್ಪಲೊಳ್ ತಾಪ ಸೇಂದ್ರರ್ (ರಾಜಶೇ. ೦-೦೩೨). [ಸಂ.]

**ಭಾಲಪಟ್ಟ, ಭಾಳಪಟ್ಟ** (ನಾ). ೧. ಹಣೆ ; ನೊಸಲು ; ನೆತ್ತಿ : ರಾಷ್ಟ್ರ ನಿರ್ಮಾಣದಲ್ಲಿ ಕವಿಯ ಕಾರ್ಯವಿದೆ. ವಿಶ್ವದ ಭಾಲಪಟ್ಟದಲ್ಲಿ ಅವನ ಸಾಲುಗಳೂ ಇವೆ (ಶಾಹಿ. ೩೭). **ಭಾಳಪಟ್ಟ** : ೧. ಅವರ ಭಾಳಪಟ್ಟದ ಮೇಲೆ ಮೂಡಿ ನಿಂತ ಗೆರೆಗಳು ಇದನ್ನು ತುಂಬಾ ಸೂಚಿಸಿದುವು (ಮುಗಿಮ. ೬). ೨. (ಸಂಚಾರದ ಬಗೆಗೆ ವಿವರಣೆಯಿರುವ) ಯಜ್ಞಾಶ್ವದ ಹಣೆಪಟ್ಟಿ,—ಲಲಾಟಪಟ್ಟ : ಕುದುರೆ ತನ್ನಿಚ್ಛೆಯಿಂದೈದೆ ಕಂಡು ಭಾಳಪಟ್ಟದ ಲೇಖನವನೋದಿಕೊಂಡು ನೀಲಾಳಕೆಯರಾಗ ನಡೆತಂದು . . . ಸಂಭ್ರಮದೊಳಿಂತೆಂದರು (ಕೈಮಿಶಾ. ೦೬-೦). [ಸಂ.]

**ಭಾಲಾಂಬಕ, ಭಾಳಾಂಬಕ** (ನಾ). ೧. ಹಣೆಗಣ್ಣು. ೨. ಹಣೆಯಲ್ಲಿ ಕಣ್ಣುಳ್ಳವನು ; ಹಣೆಗಣ್ಣ; ಶಿವ : ಭಾಲಾಂಬಕ ದುಷ್ಟಕಾಲಾರಿ ಖಡ್ಗಾದಿ ಶೂಲಾಯುಧ ತ್ರಿಪುರಕೋಲಾಹಲ (ವೀಶೈಶಿ. ೯-೦೩-೦). **ಭಾಳಾಂಬಕ** : ೨. ವಿಕಳಬಲನಿವನೇನು ಭಾಳಾಂಬಕನೊ ಬಲಿಬಂಧಕನೊ ಸುರಪಾಲಕನೊ ಫಡಫಡ ಎನುತ ಕವಿದುದು ಕರ್ಣಸಿದಿರಿನಲಿ (ಕುಮ್ಯಾಕ. ೦೨-೩); ತರಣಿಯುಱುಬೆಗೆ ಧರಣಿ ಕಲ್ಪದ ಹರನ ಭಾಳಾಂಬಕದ ಶಿಖಿ ಸೀವರಿಸಿದಂತಾಯ್ತೇನನೆಂಬೆನು ನವಗ್ರಹಾಗಮವ (ಕೊರರಾ. ೦-೩-೦೩); ಬೂಟಕದಿಂದ ಭಾಳಾಂಬಕನ ಭಜಿಸಿಯಾಡಂಬರಂ ಮೆಱೆವರೊಳು ಕೂಡದಿರು (ಷಡಂ. ೩-೬೪). [ಸಂ.]

**ಭಾಲಾಕ್ಷ, ಭಾಳಾಕ್ಷ** (ನಾ). ೧.=ಭಾಲಾಂಬಕ ೧. ೨.=ಭಾಲಾಂಬಕ ೨ : ಆಲಿಸೈ ಸಿದ್ಧರಾಮೇಶ ಕನಕಾಂಬಕಂ ಭಾಲಾ[ಶಾಕಾಂ. ೪ಾ]ಕ್ಷನಂ ಕುಱಿತು ಪುತ್ರನಂ ಬೇಡಿ ಬಹುಕಾಲಮುಯಿಂತರಂ ತಪಮನಾಚರಿಸಲು (ತಿಬಿಶು. ೪೭-೨). **ಭಾಳಾಕ್ಷ** : ೧. ಮೃಡನ ಭಾಳಾಕ್ಷದನಲನೊಳಿಟ್ಟು ಕಾಸಿ ಗಿರಿಯುಡಿಗಲ್ಲ ಮೇಲಿಟ್ಟ ಕೆಂಡಗೆದಱುನ ಬಟ್ಟದೆನೆ ದಿನಪನೆಯ್ತಂದನು (ಹಪಳಾ. ೪-೩೭); ಹೆಱೆದುಱಬಿನಿಂದೆ ಶೃಂಗಾರ . . . ಕಿಡಿಗೆದಱುವ ಭಾಳಾಕ್ಷದಿಂ ರೌದ್ರ . . . ಕ್ಷಮತ್ವದಿ ಶಾಂತ ಮೆಱೆಯೇ ಶ್ರೀಕೃಷ್ಣ ನಿದಿರಿನಲಿ ನವರಸಭರಿತನಾಗಿರ್ದನಗಜೇಶನು (ಲಕ್ಷ್ಮಕ. ೩-೪೨). ೨. ಭಿಕ್ಷಾನ್ನಮನುಂಡಾ ಭಾಳಾಕ್ಷಂ ಸೌರಾಷ್ಟ್ರಪತಿಗತುಳಗುಗ್ಗುಳಮಂ ಸುಕ್ಷಮೆ ಯಿಂದರ್ಪಿಸುತೊಳ್ದಕ್ಷಯಸುಖದೊಳ್ಪನೋಹಿಲಂ ಪಡೆದಿರ್ದಂ (ಉದ್ಭಟ. ೧೧-೪೦); ಭದ್ರಾರೂಢ ಭವಾರಿ ಭರ್ಗ ಮೃಡನಂ ಭಾಳಾಕ್ಷ ಪಾದಾಕ್ಷನಂ . . . ಹೃದ್ರಾಜೀವದೊಳಿಟ್ಟು ನಾಡೆ ನೆನೆದಂ ಮದ್ರಾಜನುರ್ವೀಶ್ವರಂ (ಹರಿಶ್ಚರ. ೨-೬); ಭಾಳಾಕ್ಷನ ಮೂಲಮಂತ್ರವೊಂದೇ ಸಾಲದೆ (ಅಣಂಡೀ. ೩೦-೩). [ಸಂ. (ಭಾಲ + ಅಕ್ಷಿ +—)]

**ಭಾಲೆ** 'ಬಲ್ಲೆಯ' ನೋ.

**ಭಾಲ್ಲುಕ** (ನಾ). = ಭಾಲ್ಲೂಕ : "ಭಲ್ಲೂಕವಚ್ಛಭಲ್ಲ[ಮೆನೆ ಕರಡಿ] ಭಾಲ್ಲೂಕ ಮೃಕ್ಷ್ಯಂ" (ವಸ್ತುಕೋ. ೪೦-೩). [ಸಂ.]

**ಭಾಲ್ಲೂಕ** (ನಾ). ಕರಡಿ ; ಭಲ್ಲೂಕ : "ಋಕ್ಷಃ, ಅಚ್ಛಃ, ಭಲ್ಲಃ, ಭಾಲ್ಲೂಕಃ, ಭಲ್ಲೂಕಃ – ಈ ೫ ಕರಡಿ" (ಹಲಾಯು. ೩೮-೭೫). [ಸಂ.]

**ಭಾವ$_1$, ಬಾವ** (ನಾ). ೧. ಸೋದರಿಯ ಗಂಡ ; ಅಕ್ಕ ಅಥವಾ ತಂಗಿಯ ಪತಿ : ನಿಮ್ಮ ಭಾವಂ ಕುಬೇರಪ್ರಿಯಂ ಉಪವಾಸಪೂರ್ವಕಂ ರಾತ್ರಿ ಪ್ರತಿಮೆ ನಿಲೆ (ಶಾಪುಂಶು. ೬೯); ಭಾವನೀಗಳೆ ಹೋಗಿ ಬೇಡಿದಡೀವ ನಾಗಳೆ ಬಸವರಾಜನು (ಬಸಪು. ೦೦-೨೩); ಓತಳ್ಕೆ ಶ್ರೀದೇವಿ ಹರಿಯಲ್ಲೋತು ತೊತ್ತಾಗಿಹಳದನಲಿಕ್ಕಾತನಿಂದತ್ಯಧಿಕಸಮಬಲರಿಲ್ಲ. . . ದಿನಕರ ಶೀತಕರ ರಿಗೆ ಭಾವ ವರುಣನಿಗಳಿಯ ಕೇಳೆಂದ (ಸಂಭಪ. ೬-೪೭). ೨. ಗಂಡನ ಅಣ್ಣ : ಆವ ಚೆನ್ನಿಗನೀತನಾವನೀ ಜಾಣನಿವನಾವನೀ ಗಾಡಿಕಾಱ ಶಿವಾ ಯೆಂದತ್ತೆ ಮಾವ ಮೈದುನ ಭಾವ ಗಂಡರಿರೆ ಮನೆಗಳಂ ಬಿಟ್ಟು. . . ಪರಿತಂದದೇವೇಳ್ವೆನಬ್ಜಾಕ್ಷಿಯರ್ ಮದನಲಕ್ಷ್ಮಿಯರ್ ನಿಟ್ಟಿಸಿದರೀಶನಿರವ (ಶಿಬಿಶು. ೨೦-೦೯). ೩. ಸೋದರಮಾವನ ಮಗ : ಸುದಾಮೆಯೆಂಬ ಕನ್ಯೆ. . . [ಗ]ಂಗೆಯುಂ ವಿಹಾವಾಗಳ್ ನೆಗಟ್ಟು ಬಂದು ಕಾಲಂ ಪಿಡಿದೊಡೆ . . . ತಮ್ಮ ಭಾವನಂ ಧನದೇವನಂ ಕರೆದೀ ನೆಗಟಿಂ ಬಿಡಿಸೆಂಬುದುಂ (ಸುಕುಮಾ. ೬-೦೬ ಪ). ೪. ಹೆಂಡತಿಯ ಅಣ್ಣ : ತಮ್ಮ ಭಾವಂ ಕೃಪನ ಮನೆಯೊಳಪಗತಪರಿಶ್ರಮನಾಗಿರ್ದೊಂದು ದಿವಸಂ ಪಾಂಡವರುಂ ಕೌರ ವರುಂ ಪೊಱಪೊಟಲೊಳ್ ನೆರೆದಿಸುತಿರೆ. . . ಕಂಡು ನಕ್ಕಂ ದ್ರೋಣಂ (ಪಂಪಭಾ. ೨೩-೦ ಪ); ರಾವು ಫಲುಗುಣಯೆನುತ ಪಾರ್ಥನ ಭಾವ ಕುಡಿ ಚಮ್ಮಟಿಗೆಯುಲಿ ತುರಗಾವಳಿಯನದುಹಿದನು ಸುಳಿಸಿದನಾಹವಕೆ ರಥವ (ಕುಮ್ಯಾದ್ರೋ. ೯-೩೭). ೫. ಸೋದರತ್ತೆಯರ ಮಗ : ಅವನು ನಮ್ಮ ಸೋದರತ್ತೆಯ ಮಗ, ನನಗೆ ಭಾವನೇ ಆಗಬೇಕು (ರೂಢಿ). ೬. ಬಂಧುತ್ವವಿಲ್ಲದಿದ್ದರೂ ಆತ್ಮೀಯತೆಯನ್ನು ಸೂಚಿಸಲು ಬಳಸುವ ಶಬ್ದ : ಆ ಜಂಬುಕನೊಂದುದಿವಸಂ. . . ವಾಯಸನಿರ್ದಲ್ಲಿಗೆ ಬರ್ಪುದುಮಾ ವಾಯಸು ಇದಿರ್ವಂದು ಎಲೆ ಭಾವ ಏಂ ಬಡವಾದಿರೆನೆ (ಪಂಚತಂ. ೪೦-೨೦); ಭಾವಚಿತ್ರ ತೆಗೆಯುವಷ್ಟರಲ್ಲಿ ಸಾರ್ವಜನಿಕ ಭಾವಂದಿರು ಅವರನ್ನು ಸುತ್ತು ವರಿದಿದ್ದರು (ದೀಪದೂ. ೨೦೯). **ಬಾವ** : ೧. ಪುನುವಲವಳ್ಳಿಯ ಗಾವುಣ್ಣನಗ್ಗಸೆರ್ ಎಳವರಿ ತಮ್ಮ ಬಾವಂಗೆ ಪರೋಕ್ಷವಿನಯಂಗೆಯ್ದು ಕಲ್ಲಂ ನಿಱಸಿದಂ (ಎಕ. VIII, ಸೊರಬ. ೩೩೦-೦೦; 979).

**ಬಾವನ ಬಂಟ** = ಒಂದು ಬಿರುದು ; ಭಾವನಾದ ರಾಜನಿಗೆ ನಚ್ಚಿನ ಸಹಾಯಕ : ಪರನಾರೀಪುತ್ರಕ . . . ಬಾವನ ಬಣ್ಟ ಗುಣ್ಡ ಚಕ್ರಜೆಡ್ಡುಗರಿ (ಎಕ. II, ೩೦೭; ಸು. 950). **ಭಾವನ ಕೇಸರಿ** = ಒಂದು ಬಿರುದು : ಸತ್ಯಯುಧಿಷ್ಟಿರಂ ಪ್ರತಿಪನ್ನಮೇರು ಭಾವನ ಕೇಸರಿ ನಾಮಾದಿ ಸಮಸ್ತಪ್ರಸಸ್ತಿ (ಕಇ. IV, ೪೦-೦೦; ಸು. 11ನೆಯ ಶತ). **ಭಾವನ ಗಂಧವಾರಣ** = ಚಾಲುಕ್ಯ ತ್ರೈಲೋಕ್ಯಮಲ್ಲದೇವನ ಕಾಲದ

ಒಬ್ಬ ಮಾಂಡಲಿಕನ ಬಿರುದು : ದಿಶಾಗಜವ್ರಜಂ ಬೆದಱೆ ವಿರೋಧಿಯಂ ತುಳಿದು ಕೊಲ್ವುದು ಭಾವನ ಗನ್ಧವಾರಣಂ (ಶಾಇಇ. XI-i, ೦೦೬-೫; ೧). **ಭಾವನ ಸಿಂಗ** = ಭಾವನ ಕೇಸರಿ : ಶ್ರೀಸೋಮೇಸ್ವ[ರ] ದೇವ ಪಾದಾರವಿಂದ × × × ಣ ಕಮಳಭೃಂಗಂ ಭಾವನ ಸಿಂಗಂ ಶ್ರೀಮತ್ಪೆರ್ಗ್ಗಡೆ ಚಂಗದೇವಯ್ಯ (ಶಾಇಇ. XX, ೬೦-೦೨; 1088).
[< ಸಂ. ಭಾವ]

**ಭಾವ₂** (ನಾ). ೧. ಇರುವಿಕೆ ; ಇರುವುದು; ಅಸ್ತಿತ್ವ; ಸತ್ತೆ : ವಸ್ತು ಸತ್ತೆಯೇ ಭಾವವೆಂದು ಹೇಳಲ್ಪಡುವುದು (ಶಿವಾಸೂ. ೯೬); ಅಭಾವದಿಂದ ಭಾವ ಹೊರಡದು (ಪುಣ್ಯಾರೆ. ೯ ಟೀಕೆ); ಪ್ರಪಂಚದಲ್ಲಿರುವ ವಸ್ತುಗಳು ಭಾವ, ಅಭಾವ ಎಂದು ಎರಡು ವಿಧ (ಹಿಂದಶಾ. ೦೩೦). ೨. ಆಗುವುದು; ಸಂಭವಿಸುವುದು; ಉಂಟಾಗುವಿಕೆ. ೩. ಹುಟ್ಟು; ಜನ್ಮ. ೪. ನಿಜಸ್ಥಿತಿ ; ಸತ್ಯ. ೫. ಪರಮಾತ್ಮ : ದೇವನಾರೆಂದೆನಲು ಬುದ್ಧಿಯ ಭಾವದಲಿ ಭಾವವನಱಿವ ಸದ್ಭಾವರೂಪನು (ಅಧ್ಯಾ. ೩-೦೯೬). ೬. ಮನಸ್ಸು; ಅಂತರಂಗ ; ಚಿತ್ತ : ''ಬಗೆಯೊಳಾತ್ಮನೊಳು ಘೋರ ಜನ್ಮದೊಳು ಚೇಷ್ಟೆಯೊಳು ಭಾವವೆನಿಕ್ಕು'' (ಪಂಚತಾ. ೦೯೫-೩೦); ಭಾವಶುದ್ಧವಿಲ್ಲದವಂಗೆ ಭಕ್ತಿ ನೆಲೆಗೊಳ್ಳದು ಕೂಡಲಸಂಗಯ್ಯನೊಲಿ ದಂಗಲ್ಲದೆ (ಬಸವ. ೬೩೬); ಅವ ಪರಿಯ ದೇಸಿಯಣ್ಣಂಗೆ ಬಗೆವರ್ಪುದಾ ವಿಧಗಳ ನಾರೈದು. . . ಭಾವವ ಬಂದಿಗೊಳುವುದು (ಹಂಬ. ೩-೦೬). ೭. ಪ್ರಾಣಿಗಳ ಸ್ವಭಾವ, —ಪ್ರಕೃತಿ; ಜೀವಿಗಳ ನೈಸರ್ಗಿಕ ಗುಣ, —ಪ್ರವೃತ್ತಿ. ೮. ಮನೋಧರ್ಮ; ಭಾವನೆ; ಚಿತ್ತವೃತ್ತಿ; ಸಂವೇದನೆ : ಮರುಳುತಲೆ ಹುರುಳುತಲೆ ನೀನೇ ದೇವಾ. . . ಕೂಡಲಸಂಗಮದೇವಾ ಭ್ರಾಂತಳಿದು ಭಾವ ನಿಂದುದಾಗಿ (ಬಸವ. ೯೦೬); ಭಾವಂ ಭಾಸುರತತ್ತ್ವಗರ್ಭಮಯನಂ ಚಾರಿತ್ರಗರ್ಭಂ (ಶಂಶ್ರ್ಪ. ೦-೩೪); ಭಾವದಿಂ ತಲ್ಲಣಿಸಿತೆದೆಯುರ್ಬಿ ಕಣ್ ತೊಯ್ದುದಿರ್ಬೆನಿಂ (ಶಶಾಂಗ. ೩೯-೦೦೩೦). ೯. ಅಭಿಪ್ರಾಯ ; ಆಶಯ ; ಇಂಗಿತ : ಭಾವಮೆಂಬುದಕ್ಕಂ ಕವಿಗಳಾ ಭಾವಿಸಿ ಮನದ ಬಗೆಯೊಂದಿದರ್ಥಂ (ಶಬ್ದಾ. ೩-೨೦೬) ; ಪದಮೆ ಪದಂ . . . ಭಾವಂ ಪೊಣ್ಮಿದ ಸದ್ಭಾವಂ ದನಿಯಿಂಪೊದವಿದ ದನಿಯೆನಿಸೆ ಪೇೞ್ದಪಂ ಕವಿತಿಲಕಂ (ಪುಕಪು. ೦-೬೨) ; ಈ ಸಹದೇವನೀ ಸಾತ್ಯಕಿ ಯುಧಾಮನ್ಯೂತ್ತಮೌಜಸರ ಭಾವವೆಮ್ಮದು (ಕಂಪ್ಯಾಅ. ೬-೦). ೧೦. ಕಣ್ಣಿಗೆ ಗೋಚರಿಸುವ ವಸ್ತು ; ಪ್ರತ್ಯಕ್ಷ ವಿಷಯವಾಗುವ ಪದಾರ್ಥ : ಪ್ರಪಂಚದಲ್ಲಿರುವ ವಸ್ತುಗಳು ಭಾವ, ಅಭಾವ ಎಂದು ಎರಡು ವಿಧ, ಭಾವಗಳಾದ ಘಟಪಟಾದಿಗಳು ಹೇಗೆ ಪದಾರ್ಥಗಳೋ ಅವುಗಳ ಅಭಾವಗಳೂ ಪದಾರ್ಥಗಳು (ಹಿಂದಶಾ. ೦೩೦). ೧೧. ಸ್ವರೂಪ ; ಚರ್ಯೆ ; ತೋರಿಕೆ : ಆ ಚಿತ್ರದಲ್ಲಿ, ಹುಡುಗಿಯ ಮುಖದ ಭಾವ ತುಂಬ ಚೆನ್ನಾಗಿ ಮೂಡಿಬಂದಿದೆ (ರೂಢಿ). ೧೨. ಆಂಗಿಕ ಚಲನೆ, —ಕ್ರಿಯೆ : ಅವರ ಮುಖದ ಭಾವದಿಂದ ಅವರಿಗೆ ಕೋಪ ಬಂದಿರುವುದು ಎದ್ದು ಕಾಣುತ್ತಿದೆ (ರೂಢಿ). ೧೩. ಅರುವತ್ತು ಸಂವತ್ಸರಗಳಲ್ಲಿ ಎಂಟನೆಯದು : ಮತ್ತಮಾ ವರುಷಮೇ ಪ್ರಭವ ವಿಭವ ಶುಕ್ಲ ಪ್ರಮೋದೂತ ಪ್ರಜೋತ್ಪತ್ತಿ ಆಂಗಿರಸ ಶ್ರೀಮುಖ ಭಾವ . . . ಅಕ್ಷಯ ವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೦) ; ಶಾಲಿವಾಹನ ಶಕ ೧೨೫೩ನೆಯ ಭಾವಸಂವತ್ಸರ ಕಾರ್ತಿಕವಮಾಸ, ಅಂದು ಪೂರ್ಣಿಮೆಯ ಸಂಜೆ (ಶ್ರೀಪದ್ಮಾ. ೦). ೧೪. [ವ್ಯಾಕ] ಕ್ರಿಯೆ ನಡೆಯುವುದರಿಂದ ಉಂಟಾಗುವ ಸ್ಥಿತಿ : ತನಮಿಕೆಯುಂ ಮೆಂಬಿವುಂ ಚೇತನಭಾವಮೊಳಕ್ಕುಂ (ಶಾಮ್ಮಿಕ. ೩೯೩). ೧೫. ಭಾವನಾಮ : ಚರಮಕೃತ್ತ್ವದ ವಿಧಿಯುಂ ಧಾತುಗೆ ಭಾವದೊಳಕ್ಕುಂ ಧಾತು ನಿಜದೆ ಭಾವಮುದಕ್ಕುಂ (ಶಮದ. ೨೦೩). ೧೬. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : "ವಸುಧಾ ಭಾವಂ ಕೇಶವದಿಶವಂಕಂ ಭಾವರಂಧ್ರು . . . ನಿಧಿ ರತ್ನ ನವಮುಪೊಂಭತ್ತೆನಿಸಂ (ಕ್ರಸಪಶಾ. ೯-೯). ೧೭. [ನಾಟ್ಯ] ಸೂತ್ರಧಾರನನ್ನು ಸಂಬೋಧಿಸುವಾಗ ಪ್ರಯೋಗಿಸುವ ಶಬ್ದ : ''ಸೂತ್ರಧಾರನಂ ಭಾವ ಎಂಬುದು" (ಪಲಾಯು. ೦೬-೯೯) ; ''ಶಿಕ್ಷಕಂ ಭಾವನಕ್ಕುಂ'' (ಸಂಗರಾ. ೨೫-೯). ೧೮. [ಕಾವ್ಯಮಿ] ಶೃಂಗಾರ ಮೊದಲಾದ ರಸಗಳನ್ನುಂಟುಮಾಡುವ ರತಿ, ಶೋಕ ಮೊದಲಾದ ಚಿತ್ತವೃತ್ತಿ ; ವಿಶೇಷ ರಸ ನಿಷ್ಪಾದನೆಗೆ ಕಾರಣಗಳಾದ ಸ್ಥಾಯಿಭಾವ ಮತ್ತು ಸಂಚಾರಿಭಾವ : ''ಬಾಹ್ಯಮಪ್ಪರ್ಥಮಂ ಆಶ್ರಯಿಸಿ ಪುಟ್ಟುವ ಮನದ ವಿಕಾರಮಂ ಭಾವಮೆಂಬುದು'' (ಪಲಾಯು. ೦೬-೯೦) ; ಭಾವದನುಬಾವದೆಸೆವ ವಿಭಾವದ ಪಸುಗೆಗಳೊಳೊಸರ್ವ ರಸದಭಿನಯಮಂ ಭಾವಿಸು ಪೊಡಾದಿದೇವನ ದೇವೇಂದ್ರನ ಬಗೆಗಮಸದಳಂ ನರ್ತಿಯಾ (ಆದಿಪು. ೯-೨೬) ; ರಸಭಾವವಿಳಾಸದಿಂ . . . ಸರಸ್ವತಿ ದಯೆಗೆಯ್ಗೆ (ಕಾದಂಪೂ. ೨) ; ಹಾಪಭಾವವಿಲಾಸವಿಭ್ರಮವಿಲಾಸಿನಿಯರಾ ವಿಟ ವಿದೂಷಕಂ ನಾಗರಿಕಪೀಠಮರ್ದಾವಳಿಯನಂದು . . . ಬರಿಸಿದಂ (ಹಶಾ. ೨೦೬ ಕಂ). ೧೯. (ಪ್ರಾಚೀನರ ಮತದಂತೆ) ಅರ್ಥಾಲಂಕಾರಗಳಲ್ಲಿ ಒಂದು ; ಒಬ್ಬರು ಹೇಳಿದ ಮಾತಿಗೆ ಸಂದರ್ಭ ಪರ್ಯಾಲೋಚನೆಯಿಂದ ಬೇರೊಂದರ್ಥವು ತೋರುವುದು : ವಿತರ್ಕಕ್ರಮದಿಂದರ್ಥಾಂತರಮಂ ಸಮನಿಸುವೊಂದುಕ್ತಿ ಭಾವಮೆನೆ ಮೆಸರ್ವಡೆಗುಂ (ಕಾವ್ಯಾವ. ೬೦೬). ೨೦. [ಜ್ಯೋತಿ] ಜಾತಕನಿಗೆ ಸಂಭವಿಸುವ ಫಲ ವಿಚಾರವನ್ನು ತಿಳಿಸುವ ಸ್ಥಾನ : ಕ್ರಮದಿಂ ತನು ಧನ ಸಹಜಾತ ಮಿತ್ರಪುತ್ರಾರಿ ಯುವತಿ ನೈಧನ ಧರ್ಮೋದ್ಯಮ ಲಾಭವ್ಯಯಮೆಂದಿಂತು ಮಿವಕ್ಕುಂ ಲಗ್ನಭಾವನಾಮಫಲಂಗಳ್ (ಜಾತಿ. ೦-೩೩) ; ಲಗ್ನದಿಂದ ಕ್ರಮವಾಗಿ ತನು, ಧನ, ಸಹಜ (ಸಹೋದರ), ಮಿತ್ರ, ಪುತ್ರ, ಅರಿ (ಶತ್ರು), ಯುವತಿ (ಕಳತ್ರ), ನೈಧನ (ಮೃತ್ಯು), ಧರ್ಮ, ಉದ್ಯಮ (ಉದ್ಯೋಗ), ಲಾಭ, ವ್ಯಯ (ಖರ್ಚು) ಇವು ಹನ್ನೆರಡು ಭಾವಗಳ ಹೆಸರು ; ಈ ವಿಚಾರಗಳ ಫಲವನ್ನು ಆಯಾ ಭಾವಗಳು ತಿಳಿಸುತ್ತವೆ (ಜಾತಿ. ೦-೩೩ ಟೀಕೆ). ೨೧. [ಜೈನ] ಜೀವನ ಪರಿಣಾಮ ; ಔಪಶಮಿಕ, ಕ್ಷಾಯಿಕ, ಕ್ಷಯೋಪಶಮಿಕ, ಔದಯಿಕ ಮತ್ತು ಪಾರಿಣಾಮಿಕ ಎಂಬ ಮುಖ್ಯವಾದ ಐದು ಭೇದಗಳುಳ್ಳದು : ಭಾವಮೆಂಬುದು ಕರ್ಮಂಗಳ ಕ್ಷಯದಿನುಪಶಮದಿಂ ಕ್ಷಾಯೋಪಶಮದಿನಪ್ಪಾತ್ಮನ ಪರ್ಯಾಯಂ (ಶಾಪುಂಪು. ೬). [ಸಂ.]

**ಭಾವಂಜಿ** 'ಬಾಗುಜಿ' ನೋ.

**ಭಾವಕ** (ಗು). ೧. ಆಗಲು ಕಾರಣವಾದ ; ಉಂಟುಮಾಡುವ. ೨. ಶ್ರೇಯಸ್ಸನ್ನುಂಟು ಮಾಡುವ ; ಶ್ರೇಯಸ್ಕರವಾದ. ೩. ಕಲ್ಪನೆ ಮಾಡುವ ; ಊಹಿಸುವ. ೪. ಸೌಂದರ್ಯದಲ್ಲಿ ಆಸಕ್ತಿಯನ್ನುಹೊಂದಿರುವ; ಸುಂದರವಸ್ತುಗಳನ್ನು ಅಭಿಲಾಷಿಸುವ. ೫. ರಸಾಸ್ವಾದನೆಯಲ್ಲಿ ಅಭಿರುಚಿಯುಳ್ಳ, (ನಾ). ೬. ಮನೋಭಾವ ; ಚಿತ್ತವೃತ್ತಿ. ೭. ಸೊಗಸಾದುದರಲ್ಲಿ ಅಭಿರುಚಿಯುಳ್ಳವನು ; ಕಲಾಭಿರುಚಿಯುಳ್ಳವನು ; ರಸಿಕ ; ಸಹೃದಯ : ಭಾವಕನೆಂದೊಡಂ ಚದುರನೆಂದೊಡಮಾರ್ ಪೆಱರೊ ನೀನೆ (ಶಂಕಶಾ. ೪-೯೬) ; ಈವ ಗುಣಂ ಬೇಡಲೊಡಂ ಕಾವ ಗುಣಂ ಭೀತಿಯಿಂದೆ ಮಱೆವುಗಲೆನಸುಂ ಭೂಮಿನುತಮಾಗಿ ತೋರ್ಪ್ಪವು ಭಾವಕನಿಧಿ ನಾರಸಿಂಹಗೌಂಡನೊಳೆನಸುಂ (ಎಕ. V, ಅರಸೀ. ೬೨-೯೭ ; 1117) ; ತೀವಿದರು ಹೊರವಳಯದಲಿ ನಾನಾ ವಿಧದ ನಾಟಕದ ನರ್ತನ ಭಾವಕ. . .ಮಲ್ಲಚಿತ್ರಕರು (ಕುವ್ಯಾಅ. ೦೨-೨೦) ; ಭಾವಕರ ಕಿವಿದೊಡವಿಗೊಡವಿದ ಹಿರಣ್ಮಯಮುಭೂತಳದೊಳೆನೆ ವಿರಾಜಿಪುದು ಲಕ್ಷ್ಮೀಪತಿಯ ಕಾವ್ಯರಚನೆ (ಕೃಪಾಶಾ. ೩೪-೯೬) [ಸಂ.]

**ಭಾವಕತ್ವ** (ನಾ). ೧. ಭಾವಕನ ಧರ್ಮ; ಭಾವಕತನ ೨. [ಕಾವ್ಯಮೀ] ಸಹೃದಯರು ರಸಾಸ್ವಾದನೆ ಮಾಡಲು ಸಹಾಯಕವಾದ ಒಂದು ವ್ಯಾಪಾರ,—ಕ್ರಿಯೆ ; P ಕಾವ್ಯಾರ್ಥಬೋಧೆಯಾದ ಮೇಲೆ ಸೀತೆ ಯೆಂಬ ರಮಣಿಯು ರಾಮನೆಂಬ ರಮಣನಲ್ಲಿ ಪ್ರಣಯವುಳ್ಳವಳು ಎಂಬ ಅಂಶದಲ್ಲಿ ಸೀತಾಂಶವನ್ನೂ ರಾಮಾಂಶವನ್ನೂ ನಿವಾರಿಸಿ ಕೇವಲ ಕಾಮಿನೀತ್ವ— ಕಾಮುಕತ್ವ ಭಾವನೆ ಬರುವಂತೆ ಮಾಡಿ ಕಾಮಿನಿಯು ಕಾಮುಕನಲ್ಲಿ ಪ್ರಣಯವುಳ್ಳವಳೆಂಬ ಭಾವನೆಯುಂಟು ಮಾಡುವ ಸಾಧಾರಣೀಕರಣ; ಇದು ಭಟ್ಟನಾಯಕನ ಮತ : ಕಾವ್ಯ ನಾಟಕಗಳಲ್ಲಿ ವರ್ಣಿತವಾಗಿರುವ ವಿಭಾವಾದಿಗಳಿಗೆ ಸಾಧಾರಣತ್ವವನ್ನುಂಟು ಮಾಡಿ ಅವು ರಸವಿಷಯವಾಗುವಂತೆ ಮಾಡುವುದು ಭಾವಕತ್ವ (ಕಾರಮೀ. ೩೬೭) ; ಕಾವ್ಯನಾಟಕದಲ್ಲಿ . . . 'ಭಾವಕತ್ವ', 'ಭೋಜಕತ್ವ' ಎಂಬ ಮತ್ತೆರಡು ಶಕ್ತಿಗಳಿವೆ (ಕ್ಕಾಮೀ. ೧೯೨). [ಸಂ.]

**ಭಾವಕಿ** (ನಾ). ೧. ಚೆಲುವೆಯಾದ ಸ್ತ್ರೀ ; ಸುಂದರಿ : ಗಿಳಿಯೊಡನೋದಿ ಯೋದಿ ನುಡಿಗಲ್ತು . . . ಕಳಾಗುಣಂ ಪೊದಟ್ಟಳವಡೆ ಬಾಲಭಾವದೊಳೆ ಭಾವಕಿಯರು ಬಳೆವರ್ ನಿರಂತರಂ (ಶಬರ. ೧೯೩ ಕ್ರಯೋ) ; ಭಾವಕಿ ಯೆನ್ನನೊರ್ಮೆವರೆ ಕಾಣಲೊಡಂ ಬೆಮರುಣ್ಮೆ ವಿಸ್ಮಯಂ ತೀವಿ . . . ಮರವಟ್ಟವೊಲಿರ್ದಳ್ (ದಶಕು. ೧೧-೬೪) ; ಸುರಿಯೆ ಮುತ್ತುಗಳರರೆ ಮುಸುರದಿ ಪರಿಪರಿಯ ಚಾರಿಗಳ ತಂದಚ್ಚರಿಯೆನಿಸಿ ನಟಿಸಿದಳು ಭಾವಕಿ ನಾಟ್ಯರಂಗದಲಿ (ಕವಕು. ೪-೧೯). ೨. ರಸಿಕಳಾದ ಸ್ತ್ರೀ: ಪಾಂಥರಿರವಜಾ ದೀಯುತುಂ ಜರಾಭೀರುವಂ ಕಾಣಿಸಿ ಕೆಳವುತೆಸೆದರೇಂ ಜಾತಿಭಾವಕಿಯರೋ (ಕನ್ಯಾರಾ. ೬-೦೩) ; ಮುದ್ದುಮೊಗದ ಭಾವಕಿಯರ ಲಲ್ಲೆನುಡಿಯೆಂಬ ನಯಗತ್ತಿ ಎಲ್ಲರ ಹೃದಯವ ಕೊಚೆವುತ್ತಿದೆ ನೋಡಾ (ಸಿದ್ಧೇವ. ೪೦-೦೦೬); ಭಾವಕಿಯರ್ ತೊಡಗಿದರತಿಕೋವಿದೆಯರ್ . . . ಜಲಕೇಳಿಗೆ (ಹಮ್ಮಿರ. ೪-೨೨). [ ಭಾವಕ + – ಇ ]

**ಭಾವಕೃದಂತ** (ನಾ). [ವ್ಯಾಕ] ಧಾತುವಿನಿಂದ ಹುಟ್ಟುವ ಭಾವನಾಮ; ಕೃದಂತಭಾವನಾಮ : ಕೆಲವು ಧಾತುಗಳು ನಿಜರೂಪದಿಂದಲೇ ಭಾವ ಕೃದಂತಗಳಾಗುವುವು. ಉದಾ:—ಆಗು, ಉರ್ಚು, ಓದು (ಕ್ಕಾಮೀ. ೦೭). [ಸಂ].

**ಭಾವಗಮ್ಯ** (ನಾ). ಮನಸ್ಸಿಗೆ ಗೋಚರಿಸುವುದು ; ಊಹೆಯಿಂದ ತಿಳಿಯತಕ್ಕುದು : ವಿಚಿತ್ರರತಪ್ರೌಢತೆ ಭಾವಗಮ್ಯಮೆನಿಕುಂ ಶ್ರೀರೂಪ ಕಂದರ್ಪನಾ (ಕಾವ್ಯಸಾ. ೬೩೩). [ಸಂ.]

**ಭಾವಗರ್ಭಿತ** (ನಾ). ಅಭಿಪ್ರಾಯದಿಂದ ಕೂಡಿರುವುದು; ಇಂಗಿತದಿಂದ ಕೂಡಿರುವುದು : ಹುಡುಗಿಯರು ಒಬ್ಬರನೊಬ್ಬರು ಭಾವಗರ್ಭಿತವಾಗಿ ನೋಡಿಕೊಂಡು ಗುಸುಗುಸುಪಟ್ಟುಕೊಂಡರು (ಹುಹೂ. ೨೯೬). [ಸಂ.]

**ಭಾವಗೀತ** (ನಾ). ಕವಿಯ ಆತ್ಮೀಯವಾದ ಭಾವನೆಗಳನ್ನು ಚಿತ್ರಿಸುವ ಹ್ರಸ್ವವಾದ ಕವನ; P ಹಾಡಲು ಅನುಕೂಲವಾಗಿದ್ದು, ಸಾಮಾನ್ಯ ವಾಗಿ ಒಂದು ಭಾವಗೀತೆಯಲ್ಲಿ ಒಂದೇ ಭಾವನೆ ನಿರೂಪಿತವಾಗಿರು ತ್ತದೆ. ಇದು ಇಂಗ್ಲಿಷಿನ 'Lyric' ಎನ್ನುವ ಪದದ ಅನುವಾದ : ಭಾವಗೀತ, ಅಷ್ಟಷಟ್ಪದಿ . . . ಎಲ್ಲವೂ ಇಂದು ಕನ್ನಡದಲ್ಲಿ ನೆಲೆಗೊಂಡಿವೆ (ಕಶ್ಯಾ. ೨೪) ; ನಿಬ್ಬಣಕೆ ಹೊರಟಂತೆ ಹಾಡುಗಬ್ಬಗಳ ಕೊಲ್ಲಾರಿ ಬಂಡಿ. ಭಾವಗೀತ ಒಪ್ಪಿದರೆ ಚಂದ ವಧೂವರ ಜೋಡಿ (ಶಂಖು. ೩೩-೯); ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸಾ ಮಾತು ಮಾತು ಮಥಿಸಿ ಬಂದ ನಾದದ ನವನೀತಾ . . . ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತಾ (ನಾದಲೀ. ೬೩-೧೧). [ಸಂ.]

**ಭಾವಗೀತೆ** (ನಾ). = ಭಾವಗೀತ : ಭಾವಗೀತೆಯ ಹಾಗೆ ಹಳ್ಳಿಯ ಜೀವನ ದೇವನೆ ಈ ಗೀತಕಾರ (ಇಂಹಾಕ. ೧೨೮-೨೬); ಕವಿಯ ಭಾವಪ್ರಧಾನವಾದ ಕಾವ್ಯ ಭಾವಗೀತೆ ಎಂದೆವು (ಕಾವಗೀ. ೧೨); ಭಾವಗೀತೆಯಲ್ಲಿ ಕೇವಲ ರಸ ಮಾತ್ರ ಇರುತ್ತದೆ (ಕಾರದ. ೪೬೪). [ಸಂ. ಭಾವಗೀತಾ]

**ಭಾವಚಿತ್ರ** (ನಾ). ೧. ಒಬ್ಬ ವ್ಯಕ್ತಿಯ ಆಕಾರವನ್ನು ತೋರಿಸುವ ಚಿತ್ರ ; ಪ್ರತಿಕೃತಿ : ಮನದಿ ಯೋಚಿಸಿದ [ಯು]ವನ ಭಾವಚಿತ್ರ ಮನೊಲಿದು ಘನಪ್ರಚುರವಾಗಿ ಚಿತ್ರಿಸಿಕೊಂಡು (ಪಪಮೋ. ೨೬-೨೮) ; ನನ್ನ ಕಯ್ಯಿಂದ ಬರೆದ ಪೂಜ್ಯಳಾದ ಶಕುಂತಳೆಯ ಭಾವಚಿತ್ರವನ್ನು ತೆಗೆದು ಕೊಂಡು ಬಾ (ಕಾಶುಂತ. ೬೪-೩); ಪ್ರೀತಿಯಿಂದೈತಂದು ನೀನಂದು ನನಗಿತ್ತ ನಿನ್ನ ಆ ಭಾವಚಿತ್ರವನು ನೋಡುತ್ತ (ಚಂದ್ರಶೀ. ೦೦೪-೦೬). ೨. ಕ್ಯಾಮರಾ ಎಂಬ ಯಂತ್ರದ ಮೂಲಕ ಗ್ರಹಿಸಿದ ಪ್ರತಿಬಿಂಬ ; ಛಾಯಾಚಿತ್ರ : ಫೋಟೊ : ಮೇಜಿನ ಮೇಲಿದ್ದ ಭಾವಚಿತ್ರ ತನ್ನ ಕಣ್ಣಿಗೆ ಸ್ಪಷ್ಟವಾಗಿ ಕಂಡಿತ್ತು (ದೂಪಟ್ಟ. ೦೩೩). [ಸಂ.]

**ಭಾವಚೇಷ್ಟೆ** (ನಾ). ಮನಸ್ಸಿನಲ್ಲಿ ತೋರುವ ಭಾವಗಳ ನಿರೂಪಣೆಗೆ ಬಹಿರಂಗವಾಗಿ ತೋರುವ ಶಾರೀರಿಕಕ್ರಿಯೆ ; ಶೃಂಗಾರಚೇಷ್ಟೆ : ಆತನಿನಾದ ಬೇಟಮಭಿಜಾತತೆಯಿಂ ನೆಗಟೆನ್ದೊಂದು ಧೈರ್ಯವಂತು . . . ಚೇತದೊಳುಣ್ಮೆ ಕನ್ನೆ ತಳೆದಳ್ ಕಿಲಿಕಿಂಚಿತ ಭಾವಚೇಷ್ಟೆಯಂ (ಕಾದ್ರಕು. ೩-೧೨೨). [ಸಂ. ಭಾವಚೇಷ್ಟಾ]

**ಭಾವಜ** (ನಾ). ೧. ಮನಸ್ಸಿನಲ್ಲಿ ಹುಟ್ಟುವುದು. ೨. ಮನಸ್ಸಿನಲ್ಲಿ ಜನಿಸಿದವನು ; ಮನ್ಮಥ ; ಕಾಮ : ಮೂವತ್ತಾಱುಂ ಗುಣದಿಂ ಭಾವ ಜನಂ ಕಟ್ಟಿ ಪೆಟ್ಟವೆಟಿದರ್ ವೃಷದಿಂ (ಮಲ್ಲಿಕು. ೦-೨೦) ; ಭಾವತಪದಿಂದೆ ಬೆದಱಿಸಿ ಭಾವಜನಂ ಪರಮಸಂಯಮೋಪಾಯಮನುಜ್ಜೀವಿಸಿದ ವಾಸು ಪೂಜ್ಯತ್ರೈವಿದ್ಯಪದಂಗಳಲ್ತೆ ಲೋಕನುತಂಗಳ್ (ಕಾಶ್ಯಕು. ೦-೩೦) ; ಜಾತಿ ಜಾಣ್ಬಡೆಯ ಭಾಮ ಭಾವಜನ ಹೂವಿನಂಬಿನಂತೆ ಮನಮಂ ನಾಟಿ (ರಾಜಶೇ. ೩-೦೯ ವ).

ಭಾವಜನಯ್ಯ = ಮನ್ಮಥನ ತಂದೆ ; ವಿಷ್ಣು : ಭಾವಜನಯ್ಯನ ದಿನದಿ ಉಂಡವರನು ಕೀವಿನೊಳಗೆ ಹಾಕಿ ಕುದಿಸುವ ಯಮನು (ಹರಿಕಂದ. ೦-೦೩೪-೦) ; ಬಾರೊ ಬಾರಯ್ಯ ಮನೆಗೆ ಭಾವಜನಯ್ಯ (ಕವಿಕ. ೯೬ ಕಲ್ಯಾ).

ಭಾವಜನರಸಿ = ಮನ್ಮಥನ ರಾಣಿ ; ರತಿ : ಅಂಗಲತೆಯು ಅತಿ ಬೆಂದು ಭಾವಜನರಸಿ ಬರವರಲು ತದ್ವನಂ ಕಂಗೊಳಿಸಿತ್ತೀವೇಳ್ವನೊ (ಪಪಮೋ. ೬-೨೪). [ಸಂ.]

**ಭಾವಜಜನಕ** (ನಾ). ಮನ್ಮಥನ ತಂದೆ ; ವಿಷ್ಣು : ದ್ವಾಪರದಲಿ ಭಾವಜಜನಕನಾಗುದಿಸಿದನು ತ್ರಿಜಗವಱಿಯಲು ಬಾದರಾಯಣನೆಂಬ ನಾಮದಲಿ (ಬಸಕು. ೩೪-೩೨). [ಸಂ.]

**ಭಾವಜಾಂತಕ** (ನಾ). ಮನ್ಮಥನನ್ನು ನಾಶಪಡಿಸಿದವನು ; ಶಿವ : ಭಾವಜಾಂತಕ ಜಯವೆನುತ . . . ಪೊಂದೊಟ್ಟಿಲಂ ತರಿಸಿ ಶಿಶುವನೆತ್ತಿ ಪಿಡಿದು (ಶ್ರೀರಾ. ೯-೪೬). [ಸಂ.]

**ಭಾವಜಾರಿ** (ನಾ). = ಭಾವಜಾಂತಕ : ಭಾವಜಾರಿಯು ಹರಿಯು ಕಮಲಜರಾವರಾದರು ಪೂಜಿಸಲುಬೇಕೀ ಮಹಾಗಣಪತಿಯ (ಗಗಕಾ. ೩-೦೦). [ಸಂ.]

**ಭಾವಜೀವಿ** (ನಾ). ಮಾನಸಿಕ ಕಲ್ಪನೆಗಳಲ್ಲಿ ತನ್ಮಯತೆಯನ್ನನು ಭವಿಸುವ ವ್ಯಕ್ತಿ; ವಾಸ್ತವತೆಗಿಂತಲೂ ಕಾಲ್ಪನಿಕಭಾವನೆಗಳಿಗೇ ಹೆಚ್ಚು ಮಾರುಹೋಗುವ, ಕಾವ್ಯ ನಾಟಕಾದಿಗಳಲ್ಲಿ ತೋರಿ ಬರುವ ಉದಾತ್ತಧ್ಯೇಯಗಳನ್ನು ಆದರ್ಶವಾಗಿಟ್ಟುಕೊಳ್ಳುವ ವ್ಯಕ್ತಿ: ಹೀಗೆ ಮನದಲ್ಲಿಯೇ ಎಣಿಕೆ ಹಾಕುತ್ತಿದ್ದಳು ಆ ಭಾವಜೀವಿಯಾಗಿದ್ದ ಬಾಲಕಿ (ಶರಕ. ೦೪) ; ಬುದ್ಧಿನಿಷ್ಠನು ಭಾವಜೀವಿಯನ್ನು ಬೈದು ಮುಚ್ಚುತ್ತಾನೆ (ಕಶ್ಯಾ. ೦೪) ; ಕನ್ನಡಿಗರು ಭಾವಜೀವಿಗಳು, ಬುದ್ಧಿಜೀವಿ ಗಳಲ್ಲ (ವಿಶಾವಾ. ೦೦). [ಸಂ. ಭಾವಜೀವಿನ್]

**ಭಾವಜ್ಞ** (ನಾ). ಇತರರ ಮನಸ್ಸಿನ ಭಾವನೆಗಳನ್ನು ತಿಳಿಯಬಲ್ಲವನು; **ರಸಿಕ** ; ಸಹೃದಯ : ಬಲ್ಲಂದಟ್ಟು ಅದೆಲ್ಲಿದ್ದರು ತನ್ನ ವೇದನೆಯ ಬಿಡದು ಭಾವಜ್ಞರ ಮನೆಯ ಬಾಗಿಲಲ್ಲಿದ್ದರೂ ಸ್ವಜಾತಿಯ ಗುಣವಲ್ಲದೆ ನೀತಿಯ ಗುಣವಿಲ್ಲ (ಕೋಳಿವಾ. ೩೩-೨೨೭); ಭೂಪಾಲನನು ಸಾವುದಲಿ ಮುರರಿಪು ಬೋಳವಿಸಿ ಭಾವಜ್ಞ ನಂದಿಸಿದನು ಮನೋವ್ಯಥೆಯ (ಶಾಪ್ಯ. ೪. ೧೪-೧); ಸೋತಡೆಯು ಸುಖಿದ್ಯೆವದಲಿ ಧೈರ್ಯಾತಿಶಯದಲಿ ಕಾದಿ ಕೀರ್ತಿಯ ಬೈತಲೆಯನಪ್ಪುವುದೆ ಭಾವಜ್ಞರಿಗೆ ಗುಣ (ಕೂರಾ. ೬-೪೪-೪೩). [ಸಂ.]

**ಭಾವತೀವ್ರತೆ** (ನಾ). ಆಲೋಚನೆಯ ಗಾಢತೆ; ಭಾವನೆಯ ತೀವ್ರತೆ: ಅವನ ಭಾವನಾವಿವೇಕಶಕ್ತಿಯು ಭವಿತವ್ಯ ಕಲಾಕೃತಿಯ ರಚನಾಕೌಶಲಕ್ಕೆ ಬಣ್ಣವಿಡುತ್ತದೆ. ಮತ್ತು ಭಾವತೀವ್ರತೆಯನ್ನೊದವಿಸುತ್ತದೆ (ನವ್ಯಕಾ. ೧೨೦). [ಸಂ. ಭಾವತೀವ್ರತಾ]

**ಭಾವತ್ರಯ** (ನಾ). [ವೀಶೈ] ಭಾವ, ಸದ್ಭಾವ ಮತ್ತು ನಿರ್ಭಾವ ಎಂಬ ಮೂರು ಭಾವಗಳು : ಭಾವತ್ರಯಂಗಳು ತಾಪತ್ರಯಂಗಳು ಷಟ್ಕರಣಂಗಳು ಇಂತಿವು ಆದಿಯಾಗಿ ತೋರುವ ತೋರಿಕೆಯೆ ನಾನಲ್ಲ ಎನ್ನವೆ ಅಲ್ಲ (ಶುಶಾರೇ. ೩. ೧೧೨-೨೩೩) ; ಭಾವಸದ್ಭಾವ ನಿರ್ಭಾವ ಎಂಬ ಭಾವತ್ರಯಂಗಳುಳ್ಳವರ ದೇವರೆಂದೆನ್ನ (ಸಿದ್ಧೇವ. ೬-೨೩) : ಭಾಪತ್ರಯಂಗಳ ಬಣ್ಣಗೆಡಿಸಿ ದುರ್ಭಾವತ್ರಯಂಗಳ ದೂರಮಾಡಿ ಮನತ್ರಯಂಗಳ ಮರ್ದನ ಮಾಡಿ (ಅನಂತೇ. ೧೬೪-೧೪). [ಸಂ.]

**ಭಾವದ್ಯೋತಕ** (ನಾ). ಭಾವದ ಅರ್ಥವನ್ನು ಪ್ರಖರಗೊಳಿಸುವುದು : ಮುದ್ರೆಗಳು ಭಾವದ್ಯೋತಕ ; ಆಸನಗಳು ರಾಮಾಣೀಯಕ (ಭಾರದ. ೩೦೩). [ಸಂ.]

**ಭಾವಧ್ವನಿ** (ನಾ). [ಕಾವ್ಯಮೀ] ಕಾವ್ಯದಲ್ಲಿ ದೇವತೆ. ಗುರು ಮೊದಲಾದವರಲ್ಲಿ ಇಟ್ಟಿರುವ ರತಿಯೂ ಮತ್ತು ವ್ಯಭಿಚಾರಿ ಭಾವಗಳೂ ಪ್ರಧಾನವಾಗಿ ತೋರುವುದು ; ಭಾವವು ಮುಖ್ಯವಾಗಿ ವ್ಯಂಗ್ಯವಾಗಿರುವುದು : ಉದ್ರಿಕ್ತಾವಸ್ಥೆಯನ್ನು ತಳೆದ ವ್ಯಭಿಚಾರಿ ಭಾವವು ಚಮತ್ಕಾರಕಾರಿಯಾದಾಗ 'ಭಾವಧ್ವನಿ' (ಧ್ವನ್ಯಾಲೋ. ೩೮). [ಸಂ.]

**ಭಾವನ** (ನಾ). [ಜೈನ] ನಾಲ್ಕು ಬಗೆಯ ದೇವಸಮೂಹದಲ್ಲಿ ಒಂದು ವರ್ಗಕ್ಕೆ ಸೇರಿದ ದೇವತೆ ; ಭವನವಾಸಿದೇವ : ನಿರುತಂ ಭಾವನರುಂ ವನಾವಸಥರುಂ ಜ್ಯೋತಿಷ್ಕರುಂ ಕಲ್ಪವಾಸರುಮಾಗಿರ್ದ ಚತುರ್ವಿಧಾಮರರು ದಾರರ್ ಸ್ತೋಮದೊಳ್ ಕೂಡೆ (ಪುಷ್ಪಕೃ. ೧೧-೧೩). [ಸಂ.]

**ಭಾವನಾಜೀವಿ** (ನಾ). = ಭಾವಜೀವಿ : ನಿನ್ನ ವ್ಯವಹಾರದಿಂದ ನೀನು ಭಾವನಾಜೀವಿಯೆಂದು ಕಂಡುಬರುವುದು (ಹೇಮಂತ. ೨೩೦). [ಸಂ. ಭಾವನಾಜೀವಿನ್]

**ಭಾವನಾಮ** (ನಾ). [ವ್ಯಾಕ] ಭಾವವನ್ನು ತಿಳಿಸುವ ನಾಮಪದ: ಒಂದು ಕ್ರಿಯೆ ನಡೆಯುವುದರಿಂದ ಉಂಟಾಗುವ ಸ್ಥಿತಿಯನ್ನಾಗಲಿ ಒಂದು ವಸ್ತುವಿನ ಸ್ಥಿತಿ ಸ್ವಭಾವಗಳನ್ನಾಗಲಿ ತಿಳಿಸುವ ನಾಮವಾಚಕಕ್ಕೆ ಭಾವ ನಾಮವೆಂದು ಹೆಸರು (ಶಬ್ದಮ. ೨೭). [ಸಂ.]

**ಭಾವನಾಮಯಿ** (ನಾ). ೧. ವಾಸ್ತವತೆಯ ಜಗತ್ತಿನಿಂದ ಬೇರೆಯಾದ ಕಲ್ಪನಾಲೋಕದಲ್ಲಿ ವಿಹರಿಸುವ ವ್ಯಕ್ತಿ : ಆಕೆ ತುಂಬ ಭಾವನಾಮಯಿ (ಊ). ೨. [ಬೌದ್ಧ] ಸಂಸ್ಕಾರನಿವೃತ್ತಿಗೆ ಕಾರಣವಾದ ಪ್ರಜ್ಞಾ ಪಾರಮಿತಾ ಎಂಬ ಸದಾಚಾರದ ಮೂರು ಭೇದಗಳಲ್ಲಿ ಒಂದು : ಈ ಸಾಕ್ಷಾತ್ಕಾರವೆಂಬ ಭಾವನೆಯು ವೇದಾಂತಿಗಳ ಶ್ರವಣ ಮನನ ನಿದಿಧ್ಯಾಸಗಳಂತೆ ಶ್ರುತಿಮಯೀ, ಚಿಂತಾಮಯೀ, ಭಾವನಾಮಯೀ ಎಂಬ ಕ್ರಮದಿಂದ ಪ್ರಜ್ಞಾಪಾರಮಿತಾ ಎಂಬ ನಾಮಧೇಯದಿಂದ ಪ್ರಸಿದ್ಧವಾಗಿರುವುದು (ಹಿಂದಾ. ೪೦). [ಸಂ. ಭಾವನಾಮಯೀ]

**ಭಾವನಾಲವಣ** (ನಾ). [ವೈದ್ಯಶಾ] ಒಂದು ಬಗೆಯ ಔಷಧ : ಔಷಧಿದ್ರವ್ಯಗಳೊಡನೆ ಭಾವನೆ ನೀಡಿದ ಉಪ್ಪು : ಭಾವನಾಲವಣ– ಆಡುಸೋಗೆ, ಎಲಹುರಿ . . . ಲೋಳಸರ – ಈ ರಸಗಳಲ್ಲಿ ಮಾಡಿ ಕೇರಿದ ಚೊಕ್ಕಟವಾದ ಲವಣ ಸೇರು ೪ನ್ನು ಪ್ರತ್ಯೇಕವಾಗಿ ಒಂದೊಂದು ದಿನ ಭಾವನೆಯಂ ಕೊಟ್ಟು ನೆಳಲಲ್ಲಿ ಒಣಗಿಸಿ ಇರಿಸಿಕೊಂಡು . . . ಸೇವಿಸಲು ಹುಟ್ಟುಗೂರಲು, ಹುಟ್ಟುಶ್ವಾಸವು ಪರಿಹರವಹುದು (ಸಕವೈ. ೨೨೭). [ಸಂ.]

**ಭಾವನಾಲೋಕ** (ನಾ). ಭಾವನಾಪ್ರಪಂಚ : ಮಾನಸಿಕ ಕಲ್ಪನೆ : ಅವಳ ಮಾತು ಭಾವನಾಲೋಕಕ್ಕೆ ಇಳಿಯತೊಡಗಿತು (ಶ್ಯಾಹಾ. ೬೨). [ಸಂ.]

**ಭಾವನಾವಾದಕ್ಕಿ** (ನಾ). [ವೈದ್ಯಶಾ] ಒಂದು ಬಗೆಯ ಔಷಧ ; ಭಾವನೆ ಕೊಟ್ಟ ಓಮು, – ಅಜಮೋದ : ಭಾವನಾವಾದಕ್ಕಿ – ಕೇರಿ ಮಾಡಿದ ವಾದಕ್ಕಿ ಸೇರು ೪ನ್ನು ಆಡಿನ ಮೂತ್ರದಲ್ಲಿ ಭಾವನೆಯಂ ಮಾಡಿಕೊಟ್ಟು . . . ಸೇವಿಸೆ ಕಾಸರೋಗಶ್ವಾಸ . . . ಅಗ್ನಿಮಾಂದ್ಯ ಮೊದಲಾದ ರೋಗಗಳು ಸಹ . . . ಶೀಘ್ರವಾಗಿ ಗುಣಮಕ್ಕುಂ (ಸಕವೈ. ೨೨೭). [ (ಸಂ. ಭಾವನಾ) + ವಾದಕ್ಕಿ ]

**ಭಾವನಾಶಕ್ತಿ** (ನಾ). ಊಹಿಸುವ ಸಾಮರ್ಥ್ಯ : ನಿಮಗೆ ಭಾವನಾಶಕ್ತಿ ಸ್ವಲ್ಪವೂ ಇಲ್ಲ (ಹಸುಹೋ. ೭೭). [ಸಂ.]

**ಭಾವನಿರ್ವ್ಯಂದ್ವ** (ನಾ). ೧. ಪ್ರೀತಿಯ ಅಭೇದ ; ಅಭಿನ್ನ ಪ್ರೀತಿ : ಆತ್ಮೀಯತೆಯಲ್ಲಿ ಏಕರೂಪತೆ. ೨. ಸಮಭಾವನೆಯುಳ್ಳವನು ; ಸಮಾನಪ್ರೀತಿಯುಳ್ಳವನು : ತನಯನಂ ಪೆತ್ತಳ್ ಗಡಂ ನಿನ್ನ ಪತ್ನಿ ಯಶೋದಾವಧು ತತ್ತನೂಜನೊಡನಿಂಬಿಂ ಭಾವನಿರ್ವ್ಯಂದ್ವನಾಗಿಯೆ ನೀಂ ರಕ್ಷಿಸು ರೌಹಿಣೇಯನೆನಿಪಸ್ಮತ್ಪುತ್ರನಂ (ಜಗದ. ೩-೨೩). [ಸಂ.]

**ಭಾವನಿಷ್ಠ** (ಗು). ಒಬ್ಬ ವ್ಯಕ್ತಿಯ ಭಾವವನ್ನು ಆಶ್ರಯಿಸಿಕೊಂಡಿರುವ ; ಭಾವಕ್ಕೆ ಅಧೀನವಾದ ; ಭಾವಪ್ರಧಾನವಾದ : ಮನಸ್ಸಿನ ಮತ್ತು ಭಾವನೆಯ ಪರಿಣಾಮಗಳನ್ನು ದರ್ಶಿಸುವ ಭಾವನಿಷ್ಠಕಲ್ಪನೆ (subjective imagination) ಹೀಗೆ ಇವೆಲ್ಲ ಕವಿಯ ಕಾವ್ಯಸೃಷ್ಟಿಯ ಉಪಕರಣಗಳು ಮಾತ್ರ (ಕಾಂರಸ. ೩೦). 'ಭಾವನಿಷ್ಠಕಾವ್ಯ' ಪರಾ. [ಸಂ.]

**ಭಾವನಿಷ್ಠಕಾವ್ಯ** (ನಾ). ಆಧುನಿಕ ಸಾಹಿತ್ಯವಿಮರ್ಶಕರು ಸೂಚಿಸಿರುವ ವಸ್ತುನಿಷ್ಠಕಾವ್ಯ, ಭಾವನಿಷ್ಠಕಾವ್ಯ ಎಂಬ ಕಾವ್ಯಭೇದಗಳಲ್ಲಿ ಒಂದು ; ಭಾವವೇ ಪ್ರಧಾನವಾಗಿರುವ ಕಾವ್ಯ : ಕವಿಪ್ರಜ್ಞೆ ತನ್ನ ಕಾವ್ಯವಸ್ತುವಿಗಾಗಿ ಬಾಹ್ಯಜಗತ್ತಿನ ವಸ್ತುಗಳನ್ನು ವಿಶೇಷವಾಗಿ ಆಶ್ರಯಿಸದೆ, ಆಶ್ರಯಿಸಿದರೂ ನಿವಾರ್ಯವಾದ ಉಪಲಂಬವನ್ನಾಗಿ ಮಾತ್ರ ಮಾಡಿಕೊಂಡು, ತನ್ನ ಅಂತರಂಗದ ಆಳಕ್ಕೆ ಇಳಿದು, ತನ್ನ ಅನುಭವ, ಆಲೋಚನೆ, ಭಾವ ಇವುಗಳಿಗೆ ಅಭಿವ್ಯಕ್ತಿಯನ್ನು ನೀಡುವುದು. ಇದನ್ನು 'ಭಾವನಿಷ್ಠ' ಕಾವ್ಯ ಎಂದು ಕರೆಯಬಹುದು (ಭಾಶಗೀ. ೦). 'ವಸ್ತುನಿಷ್ಠ ಕಾವ್ಯ' ಪರಾ. [ಸಂ.]

**ಭಾವನಿಷ್ಠುರ** (ನಾ). ಕ್ರೂರವಾದ ಅಭಿಪ್ರಾಯವುಳ್ಳದು : ಮುರಮಥನ ಚಿತ್ತೈಸಿದೈ ತರುವರಿಯ ಸಾಭಿಪ್ರಾಯವಾಕ್ಯಸ್ಫುರಣವನು ಸಭ್ಯಾಂಗಭಾಷಿತಭಾವನಿಷ್ಠುರವ (ಕುವ್ಯಾಕ. ೨೦-೨೮). [ಸಂ.]

**ಭಾವನೆ** (ನಾ). ೧. ಮನಸ್ಸಿನ ಅಭಿಪ್ರಾಯ.–ಆಶಯ ; ಅಂತರಂಗದ ಆಲೋಚನೆ. – ಅನಿಸಿಕೆ : ವರಗುಣಂಗಳನೊಂದನೊಂದಂ ಪರಿವಿಡಿಯೊಳೀಶ್ವರನೊಳರ್ಪಿಸಿ ಪರಿಕಿಪೊಡೆ ತಾನೆಂಬ ಭಾವನೆಯಿಲ್ಲದೆ (ಬಸವ. ೩೩-೩೮) ; ಈ ಪೂಜ್ಯಭಾವನೆಗೆ ಅನುಗುಣವಾದ ಪುರಾಣಗಳೂ ಕಥೆಗಳೂ ಹುಟ್ಟಿಕೊಳ್ಳುವುದು ಸಹಜವಷ್ಟೆ (ವಶದ. ೮) ; ಅವರ ಮುಖಗಳಲ್ಲಿ . . . ಇನ್ಯಾವ ಭಾವನೆಯೂ ಬೆಳಗುತ್ತಿರಲಿಲ್ಲ (ಮಹಾಶ್ವಾ. ೧೪೦).

೨. ಧ್ಯಾನ ; ಪದೇಪದೇ ಮಾಡುವ ಅನುಸಂಧಾನ : ತನು ತನುವಾಗೆ ನೋಂತು ಪರಮಾಗಮಭಾವನೆಯೊಳ್ ನಿರಂತರಂ ಮನಮಿರೆ (ಆಪು. ೩-೨) ; ನಿನ್ನ ರೂಪಭಾವನೆಯೊಳ್ ಕೂಡಿ ನಿನ್ನತುಳನಾಮಜಪಕ್ರಿಯೆಯಲ್ಲಿ ನಿಟ್ಟೆಸಿವಟ್ಟು (ಹಂಪ್ರಪು. ೯-೮೩). ೩. ಆಲೋತ್ತರ ; ಅಭಿಲಾಷೆ : ಉಮೆಯ ಭಾವನೆಯನೊಡಗೂಡಿಸುವ. . . ದೇವ ಗಂಗಾಧರಂ ಪೊರೆಗೆ ನಿಚ್ಚಂ ನಮ್ಮನು (ಕೃಮಿಖ. ೦-೨). ೪. [ವೈದ್ಯಶಾ] ಯಾವುದಾದರೂ ಚೂರ್ಣವನ್ನು ದ್ರವದಲ್ಲಿ ಕಲಸಿ ಒಣಗಿಸುವುದು ; ವಾಸನೆ ಕಟ್ಟುವುದು : ಲೋಹದ ಅರಪುಡಿಯನ್ನು . . . ಮಾಲಂಗೀರಸದಿಂದ ಭಾವನೆಯನ್ನು ಮಾಡಿ . . . ಚೂರ್ಣಮಾಡಲು ಶುದ್ಧಸಿಂಧೂರವಾಗುವುದು (ಸಕಪ್ಕ. ೯೩); ಜೇನುಮೇಣಯುಕ್ತದ ಹಾಲು ಮುಂಡಗಳ್ಳಿಹಾಲುಗಳಿಂದ ಏಳು ಬಾರಿ ಭಾವನೆಯ ಮಾಡಿ ಕಾಸಿ ವೃಶ್ಚಿಕದಂಶಕ್ಕೆ ಕಾಸಿ ವತ್ತಲು ವಿಷಹರ (ವಿಕಿ. ೦೬-೦); ಎಲಚಿಮರದ ಸೊಪ್ಪನ್ನು ಚೂರ್ಣಮಾಡಿ ಹಾಲಿನಿಂದ ಅನೇಕಸಾರಿ ಭಾವನೆ ಮಾಡಬೇಕು (ಚೂರ್ಣವನ್ನು ದ್ರವದಲ್ಲಿ ಕಲಸಿ ಒಣಗಿಸುವುದಕ್ಕೆ ಭಾವನೆಯೆಂದು ಹೆಸರು) (ಭೀಮಸೂ. ೬ ಅಚಿ). 'ಭಾವನೆಗೆಯ್' ಪರಾ. ೫. [ದ್ವೈತ] ಜೀವರುಗಳಲ್ಲಿರುವ ಒಂದು ಸಂಸ್ಕಾರ : ಸರ್ವಜೀವರಿಗೂ ಸಂಸ್ಕಾರವೆಂಬ ಭಾವನೆಯಿರುವುವು. ಸಾಮಾನ್ಯವಾಗಿ ಸಂಸ್ಕಾರವು ಭಾವನಾ, ವೇಗ, ಹಠಾತ್ಯಯೋಗ್ಯತಾ, ಸ್ಥಿತಸ್ಥಾಪಕಗಳೆಂದು ನಾಲ್ಕು ಪ್ರಕಾರವಾದ ಮನಃಪರಿಣಾಮವು . . . ಭಾವನೆ ಅನುಭವದಿಂದುಂಟಾಗಿ ಸ್ಮೃತಿಹೇತುವಾಗಿರುವುದು (ಸಿಂದಸಾ. ೨೮೯).
[ಸಂ. ಭಾವನಾ]

**ಭಾವನೆಗೆಯ್**, ಭಾವನೆಗೈ (ಕ್ರಿ). ೧. ನೆನೆಯಿಸು ; ದ್ರವಪದಾರ್ಥದೊಂದಿಗೆ ಮಿಶ್ರಮಾಡು : ತನಿವಾಲಿನೊಳಗೆ ಭಾವನೆಗೆಯ್ದು ಸೊಜ್ಜಿಗೆಯನಿನಿಸು ಕೆನೆವೆರಸಿ ಬೆಣ್ಣೆಯನಿಕ್ಕಿ ಮತ್ತೆ ಕಿವುಚನುಗೆಯ್ದು ಹಂಚಿನೊಳು ನಸುತುಪ್ಪವೆಚಿದು ಬೇಯಿಸಲದುವೆ ಕಿವುಚುರೊಟ್ಟಿ (ಸೂಶಾ. ೦-೦೬). ೨. ದ್ರವದ್ರವ್ಯದಲ್ಲಿ ನೆನೆಸಿ ಒಣಗಿಸು ; ವಾಸನೆ ಕಟ್ಟು : ಲಸದ್ವಿದ್ರುಮದ ರುಚಿಯನೊತ್ತಿ ಬರುವಿಂದದ ರಂಗಂ ಭಾವನೆಗೆಯ್ದುರಲಂಬಸತೇಜದೊಳ್ಳದ್ದಿ ಕರಂ ಪಲಿಸದಿ ಬಿದಿ ನಿರ್ಮಿಸಿದಂದದಿನೊಪ್ಪಿದುವವಳಂಘ್ರಿಗಳು (ಶಯುಶಾ. ೩-೨೬). **ಭಾವನೆಗೈ :** ೨. ಛಾಯೆಮಿಲ್ಲದ ಮಾಣಿಕಕ್ಕೆ ಮಾದಳರಸದಿ ಪ್ರಿಯದೀದಲತಿಗೆಯ ರಸದಿ ಭಾವನೆಗೆಯ್ಯಲಾಯತದಿ ಗಜನಿಂಬೆ ಪುಳಿಯಲೇಳುಂಬೆಳೆ ಭಾವನೆಗೈಯುಲದನು (ರತ್ನಶಾ. ೨೩-೦).
[ಭಾವನೆ + ಕೆಯ್ಯ್$_1$]

**ಭಾವನೆಗೈ** 'ಭಾವನೆಗೆಯ್' ನೋ.

**ಭಾವಪರವಶ** (ನಾ). ಭಾವೋದ್ರೇಕದಿಂದ ಮೈಮರೆತವನು; ಭಾವಾವೇಶಕ್ಕೆ ಒಳಗಾದವನು : ಪ್ರತಿಸಾರಿಯೂ ಭಾಷಣ ಮಾಡುವಾಗ ಪ್ರಕೃತಘಟ್ಟ ತಲುಪಿದ ಕೂಡಲೆ ಅವನು ಭಾವಪರವಶನಾಗುತ್ತಿದ್ದನು (ಭಸರು. ೩೯೭). [ಸಂ.]

**ಭಾವಪರವಶತೆ** (ನಾ). ಭಾವೋದ್ರೇಕದಿಂದ ಮೈಮರೆಯುವಿಕೆ : ವ್ಯಕ್ತಿನಿಷ್ಠವಾದ ದೃಷ್ಟಿಕೋನದ ಮೂಲಕ ಬಂದ ಭಾವಪರವಶತೆಯಿಂದ . . . ಮುಳುಗೇಳುವ ಕೃತಿಗಳಿಗೆ ಲೆಕ್ಕವೇ ಇಲ್ಲ (ಪೊಸಕ್ಷಿ. ೨೭೬).
[ಸಂ. ಭಾವಪರವಶತಾ]

**ಭಾವಪರಿವರ್ತನ** (ನಾ). ೧. ಅಭಿಪ್ರಾಯವು ವ್ಯತ್ಯಾಸವಾಗುವುದು. ೨. [ಜೈನ] ಜೀವಗಳ ಭಾವವು ಕ್ರಮವಾಗಿ ಬದಲಾವಣೆಯಾಗುವಿಕೆ; P ಇವರಲ್ಲಿ ಸ್ಥಿತಿಸ್ಥಾನ, ಕಷಾಯಾಧ್ಯವಸಾಯಸ್ಥಾನ, ಅನುಭಾಗಾಧ್ಯವಸಾಯಸ್ಥಾನ ಮತ್ತು ಯೋಗಸ್ಥಾನ ಎಂಬ ನಾಲ್ಕು ಪ್ರಕಾರಗಳಿವೆ : ಮೂಲೋತ್ತರಪ್ರಕೃತಿಗಳೊಳ್ ಸರ್ವಜಘನ್ಯ ಸ್ಥಿತಿಯಂ ಮೊದಲ್ಗೊಟ್ಟ ತತ್ಪಾಠ್ಯರ್ಯ ಸಂಪರಾಯ ವ್ಯವಸ್ಥಾಯ ಯೋಗದಿಂ ಪ್ರಪ್ರದೇಶಾನುಭಾಗ ಬಂದಸ್ಥಾನಂಗಳೊಳಗಲಿಸಿ ಸಮಯೋತ್ತರಾನುಕ್ರಮದಿನುತ್ಕೃಷ್ಟಸ್ಥಿತಿವರಂ ಪರಿವಡಿದಪ್ಪದೆ ಕಿಟ್ಟುವುದಂ ಭಾವಪರಿವರ್ತನಮೆಂಬುದು (ಸುಕುಮಾ. ೬-೬ ವ); ಇಂತೀ ಸರ್ವಸಮುದಾಯಂ ಭಾವಪರಿವರ್ತನಂ . . . ಭಾವಪರಿವರ್ತನಕಾಲಂ ಅನಂತಗುಣಂ ಅತೀತಕಾಲದೊಳ್ ಭಾವಪರಿವರ್ತನವಾರಂಗಳನಂತಂ (ತತ್ತ್ವಸೂ. ೯೦). [ಸಂ.]

**ಭಾವಪುಷ್ಟಿ** (ನಾ). ಭಾವನೆಯ ಆಧಿಕ್ಯ ; ಆಳವಾದ ಭಾವನೆ : 'ಅಶ್ವತ್ಥಾಮನ್' ನಾಟಕದಲ್ಲಿ ತೋರುವ ಭಾವಪುಷ್ಟಿ, 'ಪಾರಸಿಕರು' ನಾಟಕದಲ್ಲಿಲ್ಲ (ರೂಶಿ). [ಸಂ.]

**ಭಾವಪೂರ್ಣ** (ಗು). ೧. ಭಾವನೆಯಿಂದ ತುಂಬಿದ; ರಸಭರಿತವಾದ. (ನಾ). ೨. ಭಾವನೆಯಿಂದ ಕೂಡಿದುದು ; ರಸಭರಿತವಾದುದು : ಅವರ ಹಾಡುಗಾರಿಕೆ ಭಾವಪೂರ್ಣವಾಗಿತ್ತು (ರೂಶಿ). ೩. ಅಸ್ತಿತ್ವದಿಂದ ತುಂಬಿರುವುದು ; ಸತ್ತಾಭರಿತವಾದುದು ; ಸ್ಥಿರವಾದುದು : ಅಶೋಕನ ಪರಮತಸಹಿಷ್ಣುತೆಯ ನೀತಿ ಅಭಾವಸೂಚಕವಾದುದಲ್ಲ, ಭಾವಪೂರ್ಣವಾದುದು (positive) (ಭಾರದ. ೩೩೦). [ಸಂ.]

**ಭಾವಪ್ರಧಾನ** (ಗು). ಚಿತ್ತವೃತ್ತಿ ಅಥವಾ ಮನೋಧರ್ಮಗಳ ನಿರೂಪಣೆಯನ್ನೇ ಮುಖ್ಯವಾಗುಳ್ಳ : ನವೋದಯಕವಿಗಳು ಅಧಿಕವಾಗಿ ಭಾವಪ್ರಧಾನ ಕವನಗಳನ್ನು ಬರೆದರು (ರೂಶಿ). [ ಸಂ. ]

**ಭಾವಫಲ** (ನಾ). ೧. ಮನಃಕಲ್ಪನೆಯ ಪರಿಣಾಮ ; ಮನೋವೃತ್ತಿಯ ಪರಿಣಾಮ. ೨. [ ಜ್ಯೋತಿ ] ಲಗ್ನವೇ ಮೊದಲಾದ ಹನ್ನೆರಡು ಭಾವಗಳಲ್ಲಿ ಶುಭಾಶುಭಗ್ರಹಗಳಿದ್ದಾಗ ಅವು ಜಾತಕನಿಗೆ ಕೊಡುವ ಫಲ : ಮಿತ್ರಾರಿ ಪರೋಚ್ಚ ಸ್ವಕ್ಷೇತ್ರಸ್ಥಿತರಾಗೆ ಶುಭ ಶುಭಾನ್ಯರ್ ಲಗ್ನಕ್ಷೇತ್ರಾದಿ ಭಾವಫಲಮಂ . . . ಅಱಿವುದು (ಜಾತಿ. ೦೯-೦೬) ; ಯಾವ ಭಾವಫಲವನ್ನು ನಿರ್ಣಯಿಸಬೇಕಾದರೂ ಆ ಭಾವವನ್ನೇ ಲಗ್ನವೆಂದು ಭಾವಿಸಿ ಆಯಾ ಭಾವದ ಫಲವನ್ನು ವಿವರವಾಗಿ ತಿಳಿಯಬೇಕು (ಜಾತಿ. ೦೯-೦೬ ಟೀಕೆ). [ ಸಂ. ]

**ಭಾವಬಿದಿಗೆ** (ನಾ). (ಉಕ) ಕಾರ್ತಿಕ ಶುದ್ಧ ಬಿದಿಗೆಯಂದು ಸೋದರಿಯರು ಅಣ್ಣತಮ್ಮಂದಿರನ್ನು ಬರಮಾಡಿಕೊಂಡು ಸತ್ಕರಿಸುವ ಹಬ್ಬ ; ಸೋದರಬಿದಿಗೆ ; ಯಮದ್ವಿತೀಯೆ ; P ಯಮನು ತನ್ನ ತಂಗಿಯಾದ ಯಮುನೆಯ ಮನೆಗೆ ಹೋಗಿ ಬಂದನೆಂದು ನಂಬಲಾದ ಈ ದಿನ ಸಹೋದರರು, ಸಹೋದರಿಯರ ಮನೆಗೆ ಹೋಗಿ ಮಂಗಳದ್ರವ್ಯಗಳನ್ನು ಕೊಟ್ಟು ಊಟಮಾಡಿಕೊಂಡು ಬರುವ ವಾಡಿಕೆಯಿದೆ : ಕಾರ್ತಿಕಶುದ್ಧದ್ವಿತೀಯೆಗೆ ಭಗಿನಿಯರು ತಮ್ಮ ಸೋದರರನ್ನು ಬರಮಾಡಿಕೊಂಡು ಆರತಿ ಅಕ್ಷತೆಗಳಿಂದ ಸತ್ಕರಿಸುತ್ತಾರೆ, ಸವಿಯೂಟದಿಂದ ಸಂತೋಷಪಡಿಸುತ್ತಾರೆ. ಈ ಸಮಯದಲ್ಲಿ ಬಂಧುಗಳು ತಮ್ಮ ಅಕ್ಕ-ತಂಗಿಯರಿಗೆ ಬೆಲೆಯುಳ್ಳ ಉಡುಗರೆಗಳನ್ನು ಕೊಡುವ ರೂಢಿಯಿದೆ . . . ಈ ಹಬ್ಬ ಭಾವಬಿದಿಗೆಯಾಗಿದೆ (ಶಾಹಬ್ಬ. ೦೩೦); ನಾನು ಅವನಿಗೆ ಭಾವಬಿದಿಗೆಯ ದಿನ ಬಂಧುತಿಲಕವನ್ನು ಸಹ ಮಂದಿಯ ಮುಖಾಂತರ ಕಳಿಸುತ್ತಿದ್ದೆ (ಇಶ್ವಕ. ೯೯೨).
[ ಭಾವ್ (P ← ಮರಾ. ಭಾವ = ಭ್ರಾತೃ ) + ಬಿದಿಗೆ ]

**ಭಾವಭವ** (ನಾ). ಮನಸ್ಸಿನಲ್ಲಿ ಹುಟ್ಟುವವನು ; ಮನಸಿಜ ; ಕಾಮ ; ಮನ್ಮಥ : ಭಾವಭವಧ್ವಂಸಕನಾಭೂಮಿಶ್ರುತ ಭೂಧರೇಂದ್ರದಗ್ರದಿ ಸದ್ವಂಶಾವನಿಜದಧಸ್ಥಮಣಿಗ್ರಾವದ ಮೇಗಚಳಯೋಗದಿಂದಂ ನಿಂದಂ (ನೇಮಿ. ೦೩-೯೪); ಭಾವಭವನೆನಗೆ ಮುಳಿದು ನಿಶಿತಾಕುಸುಮಬಾಣಾವಳಿಗಳನೆಸುತಿರ್ದಪಂ ನಿರ್ದಯಂ (ಶಬರಶಂ. ೯೪-೯೧); ಬುಧಸೌಜನ್ಯ ಹತಭವಜನ್ಯ ನಿರ್ಜಿತಭಾವಭವಸೈನ್ಯ (ಬಸಪು. ೯೭-೬೦).
[ ಸಂ. ]

**ಭಾವಮೈದ** ' ಭಾವಮೈದುನ ' ನೋ.

**ಭಾವಮೈದುನ, ಭಾವಮೈದ** (ನಾ). ಗಂಡನ ಅಥವಾ ಹೆಂಡತಿಯ ಅಣ್ಣ ಅಥವಾ ತಮ್ಮ, – ಸಹೋದರ : ಭಾವಮೈದುನನಣ್ಣನಂತೆನೆ ಭಾವನಿಗೆ ನೀನಂಜಬೇಡೆಂದೋವಿ ಕರುಣಾಸಿಂಧು ಸಂತೈಸಿದನು ಧರ್ಮಜನ (ಕುಮ್ಯಾಭ. ೬೦೨. ೭–೪೩). **ಭಾವಮೈದ** : ಕೊಠಡಿಯ ಬಾಗಿಲನ್ನು ತೆರೆದು ಕೊಂಡು ಅವನ ಭಾವಮೈದ ರಘು ಒಳಗೆ ಬಂದು . . . ಹೇಳಿದನು (ಮಹಾಗ. ೦೫). [ ಭಾವ₁ + ಮೈದುನ ( < ಮೆಯ್ದುನ ) ]

**ಭಾವಮೋಕ್ಷ** (ನಾ). [ ಜೈನ ] ಸರ್ವಕರ್ಮನಿವೃತ್ತಿಯನ್ನುಂಟು ಮಾಡುವ ಆತ್ಮನ ಶುದ್ಧಸ್ವರೂಪ ; " ಮೋಕ್ಷಭೇದ – ಘಾತಿಕರ್ಮ ಕ್ಷಯ : ಅರ್ಹಂತಾವಸ್ಥೆ : ಆತ್ಮನಿಗೆ ಸಂಬದ್ಧವಾಗಿರುವ ಸಮಸ್ತ ಕರ್ಮಗಳ ನಾಶಕ್ಕೆ ಕಾರಣವಾದ ಆತ್ಮನ ಪರಿಣಾಮ " (ಜೈನಕೋ. ೧೯೨) : ಆತ್ಮನಲ್ಲಿ ಉಂಟಾಗುವ ರಾಗದ್ವೇಷಾದಿ ಭಾವನೆಗಳು ನಷ್ಟವಾಗು ವುದೇ ಭಾವಮೋಕ್ಷವು (ಜೈಸಶ. ೫೦೦). [ ಸಂ. ]

**ಭಾವಯಿತ್ರೀ** (ನಾ). [ಕಾವ್ಯಮೀ] ಕಾವ್ಯದ ಸ್ವಾರಸ್ಯವನ್ನು ತಿಳಿಯಲು ಸಹೃದಯನಲ್ಲಿರಬೇಕಾದ ಪ್ರತಿಭೆ : ಸಹೃದಯನಿಗೆ ಆವಶ್ಯಕವಾದ ಪ್ರತಿಭೆಗೆ ರಾಜಶೇಖರನು " ಭಾವಯಿತ್ರೀ " ಎಂದು ಹೆಸರು ಕೊಡುತ್ತಾನೆ (ಭಾರಮೀ. ೨೨೪). 'ಕಾರಯಿತ್ರೀ' ಪರಾ. [ ಸಂ. ]

**ಭಾವಯೋಗ** (ನಾ). ೧. [ ಜೈನ ] " ಮನೋವಚನಕಾಯಂಗಳನ್ನು ಅವಲಂಬಿಸುವ ಸಂಸಾರಿಜೀವಿಗೆ ತ್ರಿಕರಣಗಳಿಂದ ಬೇರೆ ಕರ್ಮಾಣು ಗಳನ್ನು ಎಳೆದುಕೊಳ್ಳುವ ಸಾಮರ್ಥ್ಯವಿರುತ್ತದೆ. ಇಂಥ ಸಾಮರ್ಥ್ಯವು ಭಾವಯೋಗ ಎನಿಸುವುದು " (ಜೈಸಶ. ೨೯೬). ೨. [ ಯೋಗ ] ನಿದಿಧ್ಯಾಸಯೋಗದ ಒಂದು ಬಗೆ : ಸ್ವರ್ಗವೇ ಮೂರ್ಧ್ನಿ ದಿಕ್ಕೇ ಶ್ರೋತ್ರ ಚಂದ್ರಾರ್ಕರೇ ನೇತ್ರ ಅಗ್ನಿಯೇ ಮುಖ ಅಂತರಿಕ್ಷವೇ ನಾಭಿ ಭೂಮಿಯೇ ಪಾದಂಗಳಾದೀಶ್ವರನ ವಿರಾಡ್ರೂಪಮಂ ನೆನೆದು ಅಲ್ಲದೆ ಭುಜಾಸ್ತ್ರಾಭರಣಾದಿಸಹಿತನಾದೀಶ್ವರನ ದಿವ್ಯಮೂರ್ತಿಯಂ ಪರಿಭಾವಿಸಿ ಬಳಿಕ್ಕದಱವಯವಂಗಳೊಂದೊಂದಂ ಬಿಟ್ಟುಳಿದ ಅವಯವ ಮಾತ್ರಮಾದ ಸದ್ರೂಪಬ್ರಹ್ಮದಲ್ಲಿ ಮನೋಲಯಮಪ್ಪುದೇ ಭಾವಯೋಗ ವೆನಿಸುವುದು (ಶಿವೀಶ. ೫೦). [ ಸಂ. ]

**ಭಾವರತಿ** (ನಾ). ಮನಸ್ಸಿನಲ್ಲಿ ಉಂಟಾದ ಪ್ರೀತಿ ; ಮನಃಪ್ರೀತಿ : ಮೃಡನ ನಿಡುದೋಳ ಬಾಳಿನ ಕಡುವೊಗರಿನ ಪೊಳಪನುರಗಿಗೆತ್ತುರಗೇಂದ್ರಂ ತೊಡರ್ದಲ್ಲಿ ಭಾವರತಿಯಿಂದೊಡನೊಗೆದಂ ಸಿನ್ದನಖಿಳಭುವನಾನಂದಂ (ಎಶಿ. XIV, ೨೭೦–೨೬ ; 1173). [ಸಂ.]

**ಭಾವಲಹರಿ** (ನಾ). ಮನಸ್ಸಿಗೆ ಹೊಳೆಯುವ ಭಾವನೆಗಳ ಪ್ರವಾಹ ; ಒಂದರ ಮೇಲೆ ಒಂದಾಗಿ ಬರುವ ಭಾವನೆ : ಅವರು ತಮ್ಮ ಆಲೋಚನೆಗಳನ್ನು, ಆಧ್ಯಾತ್ಮಿಕ ಚಿಂತನೆಗಳನ್ನು, ಭಾವಲಹರಿಗಳನ್ನು ವಚನರೂಪಕ್ಕಿಳಿಸುವಾಗ...ಉಪಮೆಗಳನ್ನೂ ಬಳಸಿದ್ದಾರೆ (ಸಾಹಿಪಂ. ೯). [ಸಂ.]

**ಭಾವಲಿಂಗ** (ನಾ). [ವೀಶೈ] ಮಾನಸಿಕಪೂಜೆಗಾಗಿ ಮನಸ್ಸಿನಲ್ಲಿ ಕಲ್ಪಿಸುವ ಲಿಂಗ ; ಕ್ರಿಯೆಯಂತೆ ಭಾವವೂ ಕೂಡ ಯಾವ ಲಿಂಗದಲ್ಲಿ ಲಯವನ್ನು ಹೊಂದುವುದೋ ಅದು : ಭಾವ ಸದ್ಭಾವ ನಿರ್ಭಾವ ವೆಂಬ ಭಾವತ್ರಯಂಗಳಲ್ಲಿ ಭರಿತವಾಗಿ ಭಾವಬ್ರಹ್ಮವೆಂಬ ಭೇದವಿಲ್ಲದೆ ಸನ್ನಿಹಿತಭಾವದಿಂದಿಪ್ಪುದೆ ಭಾವಲಿಂಗ (ಅರವ. ಮು. ೦೩೯–೨೩೫); ಲಿಂಗ ಸ್ಥಲವು ಮೂರು ಪ್ರಕಾರವಾಗಿರುವುದು. ಎಂದರೆ — ಒಂದನೆಯದು ಭಾವಲಿಂಗವು . . . ಭಾವಲಿಂಗವು ನಿಷ್ಕಳವು. ಅದು ಭಾವದಿಂದ ಗ್ರಹಿಸ ತಕ್ಕುದಾಗಿ ಭಾವಗ್ರಾಹ್ಯವೆನಿಸಿರುವುದು (ಶಿವಾಸೂ. ೩೪–೫ ಟೀಕೆ); ಭಾವ ಲಿಂಗವು ನಿಷ್ಕಳವು ಪರಕ್ಕೆ ಪರವು. ಇದು ಸದ್ಭಾವದಿಂದ ಗ್ರಹಿಸಲು ಯೋಗ್ಯವಾದುದು (ಅಪ್ಪ. ೩. ೨). [ಸಂ].

**ಭಾವಲಿಪಿ** (ನಾ). ಒಂದು ಬಗೆಯ ಲಿಪಿ. – ಅಕ್ಷರ : " ವಸ್ತುವಿನ ಹೆಸ ರನ್ನು ವ್ಯಕ್ತಪಡಿಸದೆ ಕೇವಲ ಭಾವವನ್ನು ಮಾತ್ರ ಸಂಕೇತವಾಗಿ ತಿಳಿಸುವ ಲಿಪಿ: ಭಾವಲಿಪಿ (ಉದಾ. ಚೀನಾಲಿಪಿ) " (Ideograph. ಇಂಕಅ). [ಸಂ.]

**ಭಾವಲೇಶ್ಯ** (ನಾ). [ಜೈನ] ಕಷಾಯದಿಂದ ಅನುರಂಜಿತವಾದ ಮನಸ್ಸು, ವಚನ, ಕಾಯಗಳ ಪ್ರವೃತ್ತಿ; ಕಷಾಯಗಳ ಉದಯ ದಿಂದ ಅನುರಂಜಿತವಾಗುವ ಮನೋವಾಕ್ಕಾಯ ಪ್ರವೃತ್ತಿ; P ಇದರಿಂದಲೇ ಸಂಸಾರಿಯಾದ ಜೀವವು ಪಾಪಪುಣ್ಯಗಳಿಂದ ಬಂಧಿತ ವಾಗುತ್ತದೆ,– ಲೇಪನಹೊಂದುತ್ತದೆ : ಭಾವಲೇಶ್ಯೆಯ ಕಲ್ಪನೆಯು ಪ್ರಾಚೀನವಾಗಿದ್ದು ಅದಕ್ಕೆ ಹಿಂದಿನಿಂದ ದ್ರವ್ಯಲೇಶ್ಯೆಯ ಕಲ್ಪನೆಯನ್ನು ಜೋಡಿಸಲಾಗಿದೆ (ಜೈನಶ. ೫೪೦). [ಸಂ.ಭಾವಲೇಶ್ಯಾ]

**ಭಾವವಚನ** (ನಾ). [ವ್ಯಾಕ] ಒಂದು ವಸ್ತುವಿನ ಧರ್ಮವನ್ನು ಅಥವಾ ಧಾತ್ವರ್ಥವನ್ನು ತಿಳಿಸುವ ಪದ; ಭಾವವನ್ನು ಅಥವಾ ಕ್ರಿಯೆಯ ಸ್ಥಿತಿಯನ್ನು ತಿಳಿಸುವ ಪದ ; ಭಾವನಾಮ : ವಿನುತ ಕ್ರಿಯಾತ್ಮಕಂಗಳುಮೆನಿಸುವ ಸಂಸ್ಕೃತದ ಭಾವವಚನಂಗಳನಾಯ್ದುನಿತರ್ಕ ಮಿಸುಪ್ರತ್ಯಯಾವನೆ ಪತ್ತಿಸಿ ನಿಜಿಸೆ ಬಿಕರ್ಮಮಾ ಕೃಲ್ಲಿಂಗಂ (ಶಮದ. ೬೪); ಬೆಳಿಯೆಂಬ ಧಾತುವಿನ ಭಾವವಚನಂ ಬೆಳಿಯೆಂದುಂ ಬೆಳಸೆಂದುಮಿರ್ಪುದು (ಶಮದ. ೨೦೬ ವೃತ್ತಿ). [ಸಂ.]

**ಭಾವವಾಚಿ** (ನಾ). = ಭಾವವಚನ : ಸಂಸ್ಕೃತದ=ಸಕ್ಕದದ, ಭಾವ ವಚನಂಗಳಂ = ಭಾವವಾಚಿಗಳಂ, ಆಯ್ದು=ಆಯ್ದುಕೊಂಡು (ಶಮದ. ೬೪ ಟೀಕೆ). [ಸಂ. ಭಾವವಾಚಿನ್ ]

**ಭಾವವಿದ** (ನಾ). = ಭಾವಜ್ಞ : ವಿವಿಧಕಳಾಭಿಜ್ಞಂ ಭಾವವಿದಂ ರಸರಸಿಕಂ . . . ನೃಪತತಿಮಹಿತಂ (ಪುಷ್ಪಕೃ. ೦–೬೫). [ಸಂ. ಭಾವವಿದ್]

**ಭಾವಶಬಲತೆ** (ನಾ). [ಕಾವ್ಯಮೀ] ಅನೇಕ ವ್ಯಭಿಚಾರಿಭಾವಗಳು ಒಟ್ಟಿಗೆ ಸೇರುವುದು ; P ಈ ವ್ಯಭಿಚಾರಿಭಾವಗಳ ಮೇಳನವು ಕಾವ್ಯದಲ್ಲಿ ಪ್ರಧಾನವಾಗಿ ವ್ಯಂಗ್ಯವಾದರೆ 'ಧ್ವನಿ' ಎಂಬ ಹೆಸರನ್ನು ಪಡೆಯುವುದಂ: ಆಸ್ವಾದ್ಯವಾಗುವ ಭಾವದಲ್ಲಿ ಆಲಂಕಾರಿಕರು ಭಾವೋದಯ, ಭಾವಶಾಂತಿ, ಭಾವಸಂಧಿ ಭಾವಶಬಲತೆ ಎಂಬ ನಾಲ್ಕು ದಶೆಗಳನ್ನು ವಿಂಗಡಿಸುತ್ತಾರೆ. . .ಒಂದನ್ನು ಒತ್ತರಿಸಿ ಮತ್ತೊಂದ ರಂತೆ ಅನೇಕ ಭಾವಗಳು ಒದಗುವುದು ಭಾವಶಬಲತೆ (ಭಾರಮೀ. ೪೨೪); ಹಿಂದೆ ಇದ್ದ ಒಂದೊಂದು ಭಾವವನ್ನು ಹೊಸಹೊಸದಾಗಿ ಹುಟ್ಟಿದ ಮತ್ತೊಂದೊಂದು ಭಾವವು ಮುಚ್ಚುವಂತೆ ನಾನಾಭಾವಗಳನ್ನು ಚಿತ್ರಿಸಿದರೆ ಅದಕ್ಕೆ 'ಭಾವಶಬಲತೆ' ಯೆಂದೂ ಹೆಸರು (ಕಮೀ. ೨೦೪); P 'ಎಲ್ಲಿಯ ಕಾರ್ಯಮೆಲ್ಲಿ ಶಶಿಯಾ ಸುಕುಲಂ ಪ್ರಿಯೆ ಮತ್ತೆ ಕಾಂಬಳೇ। ಪೊಲ್ಲದ ನೊತ್ತಲತ್ತೆ ತಿಳಿವೀ ಮೊಗಮೇಂ ಮುನಿದುಂ ಮನೋಹರಂ । ಬಲ್ಲರಕಲ್ಮಷರ್ ನುಡಿವರೇಂ ಕನಸಲ್ಲಿಯುಮಿಾಕೆ ಕಾಣಳಿ।ನ್ನಿಲ್ಲಿ ಸುಧೀರನಾಗು ಮನವೇ ಮಿಗೆ ಚುಂಬಿಪ ಧನ್ಯನಾವನೋ' (ಧ್ವನ್ಯಾಲೋ. ೧೭೦). ವಿಕ್ರಮೋರ್ವಶೀಯದ ನಾಲ್ಕನೆಯ ಅಂಕದ ಈ ಪದ್ಯದಲ್ಲಿ ಊರ್ವಶಿಯನ್ನು ಮೋಹಿಸಿ ಕಾಮಪರವಶನಾದ ಪುರೂರವಸ್ಸಿನ ಸ್ಥಿತಿಯ ವರ್ಣನೆಯಲ್ಲಿ ಮೊದಲಿಂದ ವಿತರ್ಕ– ಔತ್ಸುಕ್ಯ, ಮತಿ–ಸ್ಮೃತಿ, ಶಂಕೆ–ದೈನ್ಯ, ಧೃತಿ–ಚಿಂತೆ ಈ ಸಂಚಾರಿ ಭಾವಗಳು ಕ್ರಮವಾಗಿ ಹಿಂದಿನದನ್ನು ಮುಂದಿನ ಭಾವವು ಬಾಧಿಸುತ್ತಾ ಒಟ್ಟಿಗೆ ಸೇರಿ ಚಮತ್ಕಾರವನ್ನು ಕೊಡುತ್ತವೆ. ಇದು ಧ್ವನಿಯ ಒಂದು ಪ್ರಭೇದ. [ಸಂ. ಭಾವಶಬಲತಾ]

**ಭಾವಶಬಲತ್ವ, ಭಾವಶಬಳತ್ವ** (ನಾ). = ಭಾವಶಬಲತೆ: ಇಲ್ಲಿ ಜೈತಜಿಯ ವೃತ್ತಾಂತಮಂ ಕೇಳ್ದವಂಗೌತ್ಸುಕ್ಯ ಧೈರ್ಯ ನಿರ್ವೇದಾನಂದಭಾವಂಗಳ್

ತಱುವಾಯಿಂದೊಂದಱ ಮೇಲೊಂದು ಉದಿಸುವದು ಭಾವಶಬಲತ್ವಂ (ಅಕ್ರತಿ. ೧೪೬-೧೦). **ಭಾವಶಬಳತ್ವ** : ಪೂರ್ವಪೂರ್ವಭಾವಂಗಳನುತ್ತರೋತ್ತರಭಾವಂಗಳುಪಮರ್ದಿಸೆಯದು ಭಾವಶಬಳತ್ವಂ (ಅಕ್ರತಿ. ೧೪೬-೧೩). [ಸಂ.]

**ಭಾವಶಬಲಾಲಂಕಾರ** (ನಾ). [ಕಾವ್ಯಮಿ] ಒಂದನ್ನೊಂದು ಉಪಮರ್ದಿಸುತ್ತಾ ಸೇರಿರುವ ಅನೇಕ ಭಾವಗಳು ವ್ಯಂಗ್ಯವಾದರೂ ಪ್ರಧಾನತೆಯನ್ನು ಹೊಂದದೆ ಮತ್ತೊಂದು ರಸ ಅಥವಾ ಭಾವಕ್ಕೆ ಅಂಗವಾಗಿರುವುದು: ಇಲ್ಲಿ ಜೈತಜೆಯ ವೃತ್ತಾಂತಮಂ ಕೇಳ್ದವಂಗೌತ್ಸುಕ್ಯ ಧೈರ್ಯನಿರ್ವೇದಾನಂದಭಾವಂಗಳ್ ತಱುವಾಯಿಂದೊಂದಱ ಮೇಲೊಂದು ಉದಿಸುವದು ಭಾವಶಬಲತ್ವಂ ಇದು ಕವೀಶ್ವರನ ಪ್ರಭುವಿಷಯಮಾದ ಪ್ರೀತಿಭಾವಕ್ಕಂಗಮಾಗಿರ್ಪುದಱಿಂದಿದು ಭಾವಶಬಲಾಲಂಕಾರಂ (ಅಕ್ರತಿ. ೧೪೬-೧೨). [ಸಂ.]

**ಭಾವಶಬಳತ್ವ** 'ಭಾವಶಬಲತ್ವ' ನೋ.

**ಭಾವಶಬಳತ್ವಾಲಂಕಾರ** (ನಾ). = ಭಾವಶಬಲಾಲಂಕಾರ : ಪೂರ್ವಪೂರ್ವಭಾವಂಗಳನುತ್ತರೋತ್ತರ ಭಾವಂಗಳುಪಮರ್ದಿಸೆಯದು ಭಾವಶಬಳತ್ವಂ ಒಂದು ರಸಕ್ಕಾದೊಡಂ ಭಾವಕ್ಕಾದೊಡಮಂಗಮಾಗೆಯದು ಭಾವಶಬಳತ್ವಾಲಂಕಾರಂ (ಅಕ್ರತಿ. ೧೪೬-೧೪). [ಸಂ. ಭಾವಶಬಲತ್ವಾಲಂಕಾರ]

**ಭಾವಶಾಂತಿ** (ನಾ). [ಕಾವ್ಯಮಿ] ಒಂದು ಧ್ವನಿಪ್ರಭೇದ ; ಉತ್ಪನ್ನವಾಗಿದ್ದ ಒಂದು ಭಾವವು ಶಾಂತವಾದಂತೆ ವರ್ಣಿಸುವುದು ; **P** ಉದಾ: ಕಾಂತನು ವಿಲಂಬ ಮಾಡಿದನೆಂದು ಹುಬ್ಬುಗಂಟು ಹಾಕಿದ್ದ ಕಾಂತೆಯು, ನಾಯಕನು ಬಂದು ಕಾಲಿಗೆರಗಿದ ಕೂಡಲೆ ಮಂದಹಾಸವನ್ನು ಬೀರುವಳು. ಇಲ್ಲಿ ಮೊದಲು ಕೋಪ (ಅಮರ್ಷ)ವೆಂಬ ಭಾವವಿದ್ದು ಅದು ಶಾಂತವಾಯಿತೆಂದು ನಿರೂಪಿತವಾಗಿದೆ. ಆದ್ದರಿಂದ ಭಾವಶಾಂತಿಯಾಗುತ್ತದೆ : ಒಂದು ಭಾವವು ಶಾಂತ (ಅದೃಶ್ಯ) ವಾಯಿತು ಎಂದು ವರ್ಣಿಸಿದರೆ ಅದಕ್ಕೆ 'ಭಾವಶಾಂತಿ'ಯೆಂದೂ . . . ಹೆಸರು (ಕೈಬಿ. ೩೦೪); ಆಸ್ವಾದ್ಯವಾಗುವ ಭಾವದಲ್ಲಿ ಆಲಂಕಾರಿಕರು ಭಾವೋದಯ, ಭಾವಶಾಂತಿ, ಭಾವಸಂಧಿ, ಭಾವಶಬಲತೆ ಎಂಬ ನಾಲ್ಕು ದಶೆಗಳನ್ನು ವಿಂಗಡಿಸುತ್ತಾರೆ. . . ಏರಿದ್ದ ಭಾವಲಯ ಹೊಂದುವುದು ಭಾವಶಾಂತಿ (ಕಾರವಿ. ೪೨೩). [ಸಂ.]

**ಭಾವಶುದ್ಧ** (ನಾ)·= ಭಾವಶುದ್ಧಿ ೧ : ಭಾವಶುದ್ಧವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯ ನೀನು (ಮಹಾದೇ. ೬· ೦೨-೯). [ಸಂ.]

**ಭಾವಶುದ್ಧಿ** (ನಾ). ೧. ಮನಸ್ಸಿನ ಸ್ವಚ್ಛತೆ ; ಹೃದಯನೈರ್ಮಲ್ಯ ; ಚಿತ್ತಶುದ್ಧಿ : ಸ್ಕಂದನನು ರಾಮನನು ಹನುಮನ ಭೀಮಸೇನನ ವಿನತೆಯಾತ್ಮಜನಿಂತಿದೈವರ ಭಾವಶುದ್ಧಿಯಲಿ ನೆನೆದವರ ದುರಿತಂಗಳೋಡುವವು (ಕುಮ್ಯಾಉ. ೩-೧೩೨); ಬಸವಣ್ಣನರ ಭಕ್ತಿಭಂಡಾರಕ್ಕೆ ಭಾವಶುದ್ಧಿಯೇ ಬಾಗಿಲು (ಸಾಹಿಚ. ೨). ೨. [ಜೈನ] "ಅಷ್ಟಶುದ್ಧಿಗಳಲ್ಲೊಂದು; ದೇಹ ಭೋಗದಲ್ಲಿ ವೀತರಾಗನಾದಾಗ ರಾಗದ್ವೇಷಾದಿ ಮಲಗಳು ನಿರ್ಮೂಲವಾಗಿ ಮನಸ್ಸು ಶುದ್ಧವಾಗುವುದು" (ಜೈವಕೋ. ೧೯೨) : ಭಾವಶುದ್ಧಿ ವಿಶೇಷದಿಂದಮನಿಂದಿತೆಯುಮಪ್ಪಾರ್ಯನಾಗೆ ಸತ್ಯಭಾಮೆ ತದಾರ್ಯಿಯಾದಳ್ (ಶಾಂತಿಪು. ೬-೦೨೪ ವ); ಜ್ಞಾನದಿಂದ ಸಂಸಾರ, ದೇಹಗಳ ಭೋಗದ ವಿಷಯದಲ್ಲಿ ಉತ್ಪನ್ನವಾದಂಥ ವೀತರಾಗತ್ವವೇ ಸಂಪೂರ್ಣರಾಗ-ದ್ವೇಷಾದಿ ಮಲಗಳನ್ನು ಇಲ್ಲದಂತೆ ಮಾಡಿ ಮನವನ್ನು ನಿರ್ಮಲಗೊಳಿಸುತ್ತದೆ. ಈ ನಿರ್ಮಲತೆಗೇನೇ ಭಾವಶುದ್ಧಿ ಎನ್ನುವರು (ಶ್ರಾವಕಾ· ೪೦೦). 'ಶುದ್ಧಿ' ಪರಾ. [ಸಂ.]

**ಭಾವಶುದ್ಧಿಗೆಡು** (ಕ್ರಿ). ಚಿತ್ತಶುದ್ಧಿಯನ್ನು ಕಳೆದುಕೊಳ್ಳು; ಮನಸ್ಸಿನ ನಿರ್ಮಲಿನತೆಯನ್ನು ಕಳೆದುಕೊಳ್ಳು : ಗುರೂಪದೇಶಂಗೊಳ್ಳದೆ. . . ಅನುಮಿಂತೆ ತಪಂಗೆಯ್ವೆನೆಂದು ಪಂಚಾಗ್ನಿತಾಪತಪ್ತನಾಗಿ ಭಾವಶುದ್ಧಿಗೆಟ್ಟು ಕೋಪಾಗ್ನಿ ಪೆರ್ಚೆ (ಶಂಕಕಂ· ೬೦-೦೨). [ ಭಾವಶುದ್ಧಿ + ಕೆಡು$_1$ ]

**ಭಾವಸಂಧಿ** (ನಾ). [ಕಾವ್ಯಮಿ] ಧ್ವನಿಯ ಒಂದು ಪ್ರಭೇದ; ಪರಸ್ಪರ ವಿರುದ್ಧವಾದ ಅಥವಾ ಅಲ್ಲದ ಎರಡು ಭಾವಗಳು ಒಟ್ಟಿಗೆ ಸೇರಿರುವುದು; **P** ಹರ್ಷವಿಷಾದಗಳು ಅನೇಕ ಸಂದರ್ಭಗಳಲ್ಲಿ ಏಕಕಾಲದಲ್ಲಿ ಬರುವುದುಂಟು. ಅವು ಪ್ರಾಧಾನ್ಯದಿಂದ ವ್ಯಂಗ್ಯವಾದರೆ ಭಾವಸಂಧಿ ಎನಿಸುತ್ತದೆ : ಭಿನ್ನಕಾರಣಗಳಿಂದ ಉಂಟಾದ ಎರಡು ಭಾವಗಳ ಮಿಲನ ಭಾವಸಂಧಿ (ಕಾರವಿ. ೪೨೪); ಪರಸ್ಪರ ವಿರುದ್ಧವಾದ ಎರಡು ಭಾವಗಳು ಏಕಕಾಲದಲ್ಲಿ ಇದ್ದುವು ಎಂದು ವರ್ಣಿಸಿದರೆ ಅದಕ್ಕೆ ಭಾವಸಂಧಿಯೆಂದೂ. . . ಹೆಸರು (ಕೈಬಿ. ೩೦೪). [ ಸಂ. ]

**ಭಾವಸಂಧ್ಯಲಂಕಾರ** (ನಾ). [ಕಾವ್ಯಮಿ] ಒಂದು ಅಲಂಕಾರ; ಎರಡು ಭಾವಗಳ ಮೇಳನವು ತನ್ನ ಪ್ರಾಧಾನ್ಯವನ್ನು ಬಿಟ್ಟು ಮತ್ತೊಂದಕ್ಕೆ ಅಂಗವಾಗಿರುವುದು : ಪೆಱಪೆಱತಪ್ಪ ಭಾವಂಗಳ ಸಂಧಿ ಒಂದು ರಸಕ್ಕಾದೊಡಂ ಭಾವಕ್ಕಾದೊಡಮಂಗಮಾಗೆಯದು ಭಾವಸಂಧ್ಯಲಂಕಾರಂ (ಅಕ್ರತಿ. ೧೪೩-೧೩). [ ಸಂ. ]

**ಭಾವಸಂವರೆ** (ನಾ). [ಜೈನ]ಕರ್ಮಗಳನ್ನು ಉಂಟುಮಾಡುವ ಭಾವಗಳನ್ನು ತಡೆಯುವುದು; ಸಂಸಾರವನ್ನು ವರ್ಧಿಸುವ ಕ್ರಿಯೆಗಳನ್ನು ತಡೆಯುವುದು : ಕರ್ಮಸ್ಕಂದ ಪರಿಣಾಮಂ ತಗರಲ್ಕೆ ಕಾರಣಮಪ್ಪಂ ಪರಿಣಾಮಂ ಭಾವಸಂವರೆಯೆಂಬುದು (ಚಾಸ್ತಬೀ. ೧೪೪-೧).

[ ಸಂ. ಭಾವಸಂವರ ]

**ಭಾವಸಮಾಧಿ** (ನಾ). ಮನಸ್ಸಿನ ಏಕಾಗ್ರತೆ ; ಏಕಾಗ್ರಚಿತ್ತದಿಂದ ಮಾಡುವ ಧ್ಯಾನ : ಕಾಯಸಮಾಧಿ ಕರಣಸಮಾಧಿ ಭಾವಸಮಾಧಿಯಾದ ಬಳಿಕ ಗೊಹೇಶ್ವರಲಿಂಗದಲ್ಲಿ ಬಯಲುಭ್ರಮೆಯಳಿದು ಜ್ಞಾನಸಮಾಧಿಯನೆಯ್ದಬಲ್ಲಡೆ ಅದೇ ನಿಜಸಮಾಧಿ (ಅವಚ· ೧೯೨-೬೬೭). [ ಸಂ. ]

**ಭಾವಸಾರಾಯ** (ನಾ). ೧. ಭಾವದ ತಿರುಳು. ೨. (ಪರಮೇಶ್ವರನಲ್ಲಿ) ಚಿತ್ತವೃತ್ತಿಯುಳ್ಳ ವ್ಯಕ್ತಿ : ಭಾವಸಾರಾಯರ ಭಕ್ತಿಸಾರಾಯರ ತೋಱಿಯ್ಯಾ ನಿಮ್ಮ ಧರ್ಮ (ಬಸವ· ೫೦೩). [ಭಾವ$_2$ + ಸಾರಾಯ್ಯ$_2$]

**ಭಾವಸೂಚಕಾವ್ಯಯ** (ನಾ). [ವ್ಯಾಕ] ಸುಖ, ದುಃಖ, ಸಂತೋಷ ಮೊದಲಾದ ಭಾವಗಳನ್ನು ಸೂಚಿಸುವ ಅವ್ಯಯ ; ಅಹಹ, ಅಯ್ಯೋ, ಭಲಾ ಮೊದಲಾದ ಉದ್ಗಾರ : ಆಶ್ಚರ್ಯ, ಸಂಭ್ರಮ, ಪ್ರಶ್ನೆ, ಸಂಶಯ ಮೊದಲಾದ ಮನಸ್ಸಿನ ಭಾವಗಳನ್ನು ತೋರಿಸುವ ಅವ್ಯಯಗಳಿಗೆ ಭಾವಸೂಚಕಾವ್ಯಯಗಳೆಂದು ಹೆಸರು (ಪುರ್ಧ್ಯಮ·. ೦೫೬).

[ ಸಂ. ]

**ಭಾವಸೂತಕ** (ನಾ). [ವೀಶೈ] ಭಾವಲಿಂಗೋಪಾಸನೆಗೆ ಪ್ರತಿಬಂಧಕವಾದ ಚಂಚಲಚಿತ್ತತ್ವವೇ ಮೊದಲಾದ ಮೈಲಿಗೆ.—ಅಡ್ಡಿ ; ಮನಸ್ಸಿನ ಅನಧಿಕಾರತ್ವ : ಎನ್ನ ತನುಸೂತಕವ ಕಳೆದ ಬಸವಣ್ಣ. . . ಭಾವಸೂತಕವ ಕಳೆದ ಬಸವಣ್ಣ (ವಚಸಂ. ೫೮೨-೨೬). [ ಸಂ. ]

**ಭಾವಳಯ** (ನಾ). ಕಾಂತಿಯ ವಲಯ,-ವರ್ತುಲ : ಭಾವಳಯ ವಿಲಸಿತಾಶೋಕಮಂದಾರ ವರ್ಷಚ್ಛಾಯಾಚ್ಛನ್ನಾಂಗನಾದ್ಯಂ ತ್ರಿಭುವನ ವಿನುತಂ ನೇಮಿ ರಕ್ಷಿಕ್ಕೆ ನಮ್ಮಂ (ಅರ್ಣನೇ· ೧-೧). [ಸಂ. ಭಾವಲಯ]

**ಭಾವಾಜಿ** (ನಾ). ಭಾವನನ್ನು ಗೌರವದಿಂದ ಕರೆಯುವಾಗ ಅಥವಾ ನಿರ್ದೇಶಿಸುವಾಗ ಉಪಯೋಗಿಸುವ ಮಾತು : ಅಕ್ಕ ಭಾವಾಜಿಯಿಂದೆಮ್ಮ ಮನೆಗೆ ಬಂದು ಹೊಕ್ಕಾಗ ಗಳಿಯಿಂದ ನಾನು ಮಿಕ್ಕು ಸರಸವಾಡಿಸುವೆನೀಗ ಜಾಣ್ನುಡಿ ಲೆಕ್ಕದೋಱುವೆನು (ಶರಶ. ೯-೫೯); ನಮ್ಮ ಭಾವಾಜಿಯುವರೂ ಸ್ವಲ್ಪ ಜೈನಸಂಪ್ರದಾಯದವರು (ತೆಂಗಾಳಿ. ೩). 'ಅಕ್ಕಾಜಿ', 'ಅಣ್ಣಾಜಿ' ಪರಾ. [< ಭಾವ$_1$ + -ಜಿ ]

**ಭಾವಾತಿರೇಕ** (ನಾ). ಮನಸ್ಸಿನ ಉದ್ರೇಕ ; ಉದ್ವೇಗ ; ಭಾವಗಳ ಉಜ್ಜ್ವಲತೆ : ಭಾವಾತಿರೇಕದಿಂದ ಆವರು ಬಿರುಸಾಗಿ ಮಾತನಾಡಿದರು (ಕೂಶಿ). [ಸಂ.]

**ಭಾವಾತ್ಮ** (ನಾ). ತತ್ತ್ವವಿಚಾರಗಳನ್ನು ತಿಳಿದವನು : ತತ್ತ್ವಜ್ಞ : **ಜೀವಂ ಬೇಱೆ ಶರೀರಂ [ಭಾವಿ]ಸೆ ಬೇಱೆಂಬ ಪರಮತತ್ತ್ವಾರ್ಥವ ಸದ್ಭಾವ ವಿಚಾರವುನಱಿವಾ ಭಾವಾತ್ಮಂ** ಮೆಯ್ಯನೋವನೇನಱಿದಪನೇ (ಸುಕುಮಾ. ೦೨-೨೬). [ಸಂ. ಭಾವಾತ್ಮನ್]

**ಭಾವಾತ್ಮಕ** (ನಾ). ಚಿತ್ತವೃತ್ತಿರೂಪವಾದುದು ; ಭಾವಪ್ರಧಾನವಾದುದು : ಕಾವ್ಯಾತ್ಮಕವೆಂದರೆ ಭಾವಾತ್ಮಕ ಮತ್ತು ಕಲ್ಪನಾತ್ಮಕ ಎಂದು ನಮ್ಮ ಅರ್ಥ (ಸಾಹಿಶ್ರ. ೬೨). [ಸಂ.]

**ಭಾವಾನುಗುಣ** (ನಾ). ಮನಸ್ಸಿಗೆ ಅನುಸಾರವಾಗಿರುವುದು ; ಅವರವರ ನಂಬಿಕೆಗೆ ಅನುಸಾರವಾಗಿರುವುದು ; ಭಾವನೆಗೆ ತಕ್ಕಂತಿರುವುದು : **ದೈವವು ಮಂತ್ರವು ತೀರ್ಥವು ವೈದ್ಯವು ದ್ವಿಜನು ದೈವಜ್ಞನು ಗುರುವು ಲೋಗರಿಗಿವು ದಿಟ ಸಿದ್ಧಿಯನೀವುವು ಆ ಸಿದ್ಧಿ ಭಾವಾನುಗುಣವು** (ಇಂಜಾಶ. ೬೬-೬೬). [ಸಂ.]

**ಭಾವಾನುವಾದ** (ನಾ). ೧. ಕಾವ್ಯ ಅಥವಾ ಹಿಂದಿನ ಗ್ರಂಥದ ಭಾವವನ್ನು ಆಧುನಿಕ ಸರಳಗದ್ಯದಲ್ಲಿ ಬರೆಯುವುದು ; ಗದ್ಯಾನುವಾದ : ಪರಿಷತ್ತು ಅನೇಕ ಹಳಗನ್ನಡಕಾವ್ಯಗಳನ್ನು ಭಾವಾನುವಾದದ ಸಮೇತ ಪ್ರಕಟಿಸಿದೆ (ಕೂಶಿ). ೨. ಒಂದು ಭಾಷೆಯ ಕಾವ್ಯ ಅಥವಾ ಯಾವುದೇ ಗ್ರಂಥದ ಭಾವವನ್ನು ಇನ್ನೊಂದು ಭಾಷೆಯಲ್ಲಿ ಬರೆಯುವುದು : ಈ ರೀತಿಯ ಭಾವಾನುವಾದ ಮಾಡುವಲ್ಲಿ ಮೂಲದ ವಸ್ತುವಿನ ರಸ, ಗುರಿ ಇವುಗಳಿಗೆ ಧಕ್ಕೆಯುಂಟಾಗದಿರುವುದು ಮುಖ್ಯ (ಜೀರಯೋ. xii, ಬನ್ನಿ); ಸಂಸ್ಕೃತಸಾಹಿತ್ಯದ ಅನೇಕ ಕೃತಿಗಳ ಭಾವಾನುವಾದ, ಛಾಯಾನುವಾದ ಮತ್ತು ಅನುವಾದಗಳೂ ಬಂದವು (ಶಾಸರ. ೪೬೩). [ಸಂ.]

**ಭಾವಾನುಸಾರ** (ನಾ). ಭಾವನೆಗೆ ಅನುಸಾರವಾದುದು : ಅವಿದ್ಯೆಯು ದಿಟ್ಟಿಪರ ಭಾವಾನುಸಾರದಿ ತೋರುತಿಹಳು (ಗಗತಾ. ೦೪-೦೪). [ಸಂ.]

**ಭಾವಾಭಾಸ** (ನಾ). [ಕಾವ್ಯಮೀ] ಉಚಿತವಲ್ಲದ ಸ್ಥಾನವಲ್ಲಿ ಪ್ರವರ್ತಿಸುವ ಸಂಚಾರಿಭಾವ ; p ಮುನಿಪತ್ನಿ, ಗುರುಪತ್ನಿಯರನ್ನು ಅಥವಾ ಒಲ್ಲದ ತರುಣಿಯರನ್ನು ಕಾಮಿಸಿ ಚಿಂತೆ, ದೈನ್ಯ ಮೊದಲಾದ ಚಿತ್ತವೃತ್ತಿಗಳನ್ನು ತಳೆಯುವಂತೆ ವರ್ಣಿಸುವುದು, ಸಾತ್ತ್ವಿಕರಾದ ಹಾಗೂ ಶಾಂತರಾಗಿರುವ ವ್ಯಕ್ತಿಗಳ ಮೇಲೆ ಬಲಪ್ರದರ್ಶನೋತ್ಸುಕ್ಯ, ಗುರುಗಳ ಮೇಲೆ ಉಗ್ರತೆ ಇವುಗಳು ಭಾವಾಭಾಸವೆನಿಸುತ್ತವೆ ; ರಾವಣನು ಸೀತೆಗಾಗಿ ಸಂತಾಪಗೊಂಡಂತೆ ವರ್ಣಿಸುವಾಗ ಭಾವಾಭಾಸವಾಗುತ್ತದೆ. ಈ ಭಾವಾಭಾಸವು ಪ್ರಾಧಾನ್ಯದಿಂದ ಅಭಿವ್ಯಕ್ತವಾದರೆ ಭಾವಾಭಾಸಧ್ವನಿಯಾಗುತ್ತದೆ : ಭಾವವೂ ಅನೌಚಿತ್ಯದಿಂದ 'ಭಾವಾಭಾಸ' ವಾಗಬಹುದು (ಕೈಪಿಡಿ. ೨೦೪); ರಸ, ಭಾವ, ರಸಾಭಾವ, ಭಾವಾಭಾಸ, ಭಾವಶಾಂತಿ ಇವು ಎಂದೂ ವಾಚ್ಯವೇ ಅಲ್ಲ (ಧ್ವನ್ಯಾಲೋ. ೦೬); ಭಕ್ತಿಯೆಂಬುದೊಂದು ಉಚ್ಚತರಗತಿಯ ಭಾವಾಭಾಸ (Pathetic Fallacy)ವೆಂದು ತಿಳಿದಿದ್ದರೋ ತಿಳಿಯದು (ಸಾಹಿವಿ. ೪೬). [ಸಂ.]

**ಭಾವಾಭಿನಯ** (ನಾ). ಮನಸ್ಸಿನ ಹರ್ಷ, ವಿಷಾದ ಮೊದಲಾದ ಚಿತ್ತವೃತ್ತಿಗಳನ್ನು ಕಣ್ಣಿನ ಚಲನೆ, ಮುಖವಿಕಾರ ಮೊದಲಾದ ಶಾರೀರಿಕಚೇಷ್ಟೆಗಳಿಂದ ಪ್ರದರ್ಶಿಸುವುದು : ಮನುಷ್ಯ ಹೃದಯದಲ್ಲಿನ ಭಾವೋನ್ಮೇಷಗಳನ್ನು . . . ಅಂಗವಿನ್ಯಾಸ ಭಾವಾಭಿನಯಗಳ ಮೂಲಕ ತೋರ್ಪಡಿಸುವುದನ್ನು ಕಲಿತ (ಭಾರತ. ೩೪೮). [ಸಂ.]

**ಭಾವಾಭಿವ್ಯಕ್ತಿ** (ನಾ). ಅಂತರಂಗದ ಆಶಯವನ್ನು ಪ್ರಕಾಶಪಡಿಸುವುದು : ತನ್ನ ಭಾವಾಭಿವ್ಯಕ್ತಿಗೆ ಸರಿಯಾದ ಪದ ಹೊಳೆಯಲಿಲ್ಲವಾದ್ದರಿಂದ ಅವನು ಕೋಪಾರೂಢನಾದನು (ಕುಸರು. ೪೨೩); ಶಿಲ್ಪಿಗೆ ಕಲ್ಲು, ವರ್ಣಶಿಲ್ಪಿಗೆ ಬಣ್ಣಕಾಗದ, ಕವಿಗೆ ಭಾಷೆ, ಇವೆಲ್ಲವೂ ಅವನ ಭಾವಾಭಿವ್ಯಕ್ತಿಯ ಮಾಧ್ಯಮಗಳು (ಗೌಂದಸ. ೬೨). [ಸಂ.]

**ಭಾವಾರ್ಥ** (ನಾ). ೧. ಕಾವ್ಯ ಮೊದಲಾದುವುಗಳ ತಾತ್ಪರ್ಯ; ಯಾವ ಉದ್ದೇಶವನ್ನಿಟ್ಟುಕೊಂಡು ಕವಿಯು ಪ್ರಯೋಗ ಮಾಡಿದ್ದಾನೋ ಆ ಉದ್ದೇಶ, —ಆಶಯ : ಸಮ್ಯಗ್ದರ್ಶನಾದಿ ಗುಣಾಧಾರ ನಿಜಶುದ್ಧಾತ್ಮಂ ಉಪಾದೇಯಮೆಂಬುದು ಭಾವಾರ್ಥಂ (ತತ್ತ್ವಸೂ. ೬); ಮುನ್ನ ತಾಂ ಬರೆಸಿ ಕಳುಹಿದ ಪತ್ರಮಂ ತರಿಸಿ ನೋಡಿಕೊಂಡದಱೊಳಿರ್ದ ಭಿನ್ನಿಸಿದ ಭಾವಾರ್ಥಮಂ ತಿಳಿದು (ಜೈಮಿಭಾ. ೩೦-೩೩). ೨. [ವ್ಯಾಕ]ಒಂದು ವಸ್ತುವಿನ ಭಾವವನ್ನಾಗಲಿ, ಧಾತ್ವರ್ಥವನ್ನಾಗಲಿ ತಿಳಿಸುವ ಅರ್ಥ : ಈ ಸಾಪೇಕ್ಷಕ್ರಿಯಾರೂಪಗಳಿಗೆ ಕಾಲಭೇದ ಅರ್ಥಭೇದಗಳು ಮಾತ್ರ ಉಂಟು. . . 'ಹೊರಟರೆ' ಎಂಬುದಕ್ಕೆ ಪಕ್ಷಾರ್ಥದ ರೂಪವೆಂದೂ, 'ಹೊರಡಲು' ಎಂಬುದಕ್ಕೆ ಭಾವಾರ್ಥದ ರೂಪವೆಂದೂ ಹೆಸರು (ಮುಕ್ತಮು. ೬೩). [ಸಂ.]

**ಭಾವಾರ್ಪಿತ** (ನಾ). [ವೀಶೈ]ಮನಃಪೂರ್ವಕವಾಗಿ ಶಿವನಲ್ಲಿ ಸಮರ್ಪಣೆ ಮಾಡಲ್ಪಡುವುದು : ಶ್ರೇಷ್ಠವಾದ ಅವುದಾನೊಂದು ಪರಮಾತ್ಮಸ್ವರೂಪವಾದ ಶಿವಂಗೋಸುಗ ಮೊದಲಲ್ಲಿ ಸಮರ್ಪಿಸಲ್ಪಡುತ್ತಿಹುದು ಅದು ಭಾವಾರ್ಪಿತವೆಂದು ಇಚ್ಛೈಸಲ್ಪಡುತ್ತಿಹುದು (ಕೈವಲ್ಯ. ೪೩). [ಸಂ.]

**ಭಾವಾವಿಷ್ಟ** (ನಾ). ಮನಸ್ಸಿನಲ್ಲಿ ಹುಟ್ಟುವ ಹರ್ಷ, ಶೋಕ ಮೊದಲಾದ ಭಾವಗಳಿಂದ ಪರವಶನಾದವನು ; ಭಾವಪರವಶ : ಅವರು ಭಾವಾವಿಷ್ಟರಾಗಿ ಕೋಡುಗಲ್ಲಿನ ಬಳಿ ನಿಂತುಕೊಂಡು ನೋಡಿದರು (ರಾಶ್ಯೋದ. ೦೬೩); ಆಶುಬಾಬುಗಳು ಇದಕ್ಕೇನುತ್ತರ ಕೊಟ್ಟಾರು? ಅವರು ಭಾವಾವಿಷ್ಟರಾಗಿ ಕುಳಿತುಬಿಟ್ಟರು (ಶೇಶ್ರಕ್ನ. ೨೬೦). [ಸಂ.]

**ಭಾವಾವೇಗ** (ನಾ). ಮನಸ್ಸಿನ ಭಾವಗಳ ಉತ್ಕಟತೆ, —ತೀವ್ರತೆ: ಆ ಭಾವಾವೇಗದ ಪರಿಣಾಮವಾಗಿ ಅವನ ಮುಖದ ಮೇಲೆ ನಗು ಹಸರಿಸಿತ್ತು (ಕುಸರು. ೨೦೦). [ಸಂ.]

**ಭಾವಾವೇಶ** (ನಾ). ಮನಸ್ಸಿನ ಭಾವದ ಉದ್ವೇಗ, —ಉದ್ರೇಕ : ಸನ್ನಿವೇಶ ಅಂಥ ಭಾವಾವೇಶವನ್ನು ಉಂಟುಮಾಡಿದ್ದರಿಂದ ಹಾಗೂ ಆಗಬಹುದು ಎಂದು ಸಮಾಧಾನಮಾಡಿಕೊಳ್ಳಬಹುದು (ಜೀರಯೋ. VIII, ಮುನ್ನುಡಿ); ಭಾವಾವೇಶವಲ್ಲಿ ಮುಳುಗಿದ್ದ ಅವನಿಗೆ ಬಾಹ್ಯಪ್ರಪಂಚದ ಅರಿವೇ ಇರಲಿಲ್ಲ (ಶೇಶ್ರಕ್ನ. ೦೬೮); ವಿಪರ್ಯಾಟೆಲ್ಲ ನನಗಿರಲಿ ಎಂದು ಚಾಮುಂಡರಾಯ ಭಾವಾವೇಶದಿಂದ ಮಾತಾಡಿದನು (ದಾಪಶಿಂ. ೪೮). [ಸಂ.]

**ಭಾವಾಷ್ಟಕ** (ನಾ). [ತತ್ತ್ವಶಾ]ಸಾಂಖ್ಯಮತದಂತೆ ಬುದ್ಧಿಗೆ ಇರುವ ಎಂಟುಭಾವಗಳು: ಬುದ್ಧಿಗೇ ಸುಖ ದುಃಖ ಜ್ಞಾನ ಇಚ್ಛಾರಾಗ ದ್ವೇಷ ಮೊದಲಾದುವು; ಅದಕ್ಕೇನೆ ಪುಣ್ಯ ಪಾಪ ಸ್ವರ್ಗ ನರಕ ಬಂಧ ಮೋಕ್ಷ ; ಇದರಲ್ಲೇ ಧರ್ಮ ಅಧರ್ಮ ಜ್ಞಾನ ಅಜ್ಞಾನ ಐಶ್ವರ್ಯ ಅನೈಶ್ವರ್ಯ ವೈರಾಗ್ಯ ಅವೈರಾಗ್ಯವೆಂಬ ಭಾವಾಷ್ಟಕವಿರುವುದು (ಹಿಂದಸಾ. ೩೯). [ಸಂ.]

**ಭಾವಿ**₁ 'ಬಾವಿ' ನೋ.

**ಭಾವಿ**₂ (ಗು). ೧. ಮುಂದೆ ಆಗುವ; ಅನಂತರ ಉಂಟಾಗುವ ; ಮುಂದಿನ ಕಾಲದ : ಭಾವಿಭರತೇಶಪದಮುಮಿಳಾವಿಪುಳಪ್ರೇಮಭರಮುಮೆರ್ದೆಗೊಂಡಿರೆ ಸದ್ಭಾವದಿನಿಟ್ಟುದು ಬಂಧುಜನಾವಳಿ ಕೂಸಿಂಗೆ ಭರತನೆಂಬೀ ಪೆಸರಂ (ಆದಿಪು. ೬-೩೭); ಆದಿಜಿನೇಶ್ವರಂ ಮೊದಲ ಚಕ್ರಿಗೆ ಭಾವಿಜಿನೇಂದ್ರನಾಮತೀರ್ಥೋದಯಮಾಳೆಯಂ ಬೆಸಸೆ (ಶಾಂತಿಪು. ೦೦-೭೯); ಭಾವಿ ಉನ್ನತಿಗಾಗಿ ಶುಭಪ್ರಸಂಗಕ್ಕಾಗಿ . . . ಒಂದು ಮಾತು ಕೇಳ

ಬೇಕಾದ್ದರಿಂದ ಕೇಳಿದೆವು ಅಷ್ಟೆ (ಕುರುಕ್ಷೇ. ೧೨೫). (ನಾ). ೨. (ಕರ್ಮವಶದಿಂದ ಅಥವಾ ಕಾರಣಾಂತರದಿಂದ) ಆಗಿಯೇ ತೀರಬೇಕಾದುದು.–ನಡೆಯಲಿರುವುದು : ಭಾವಿಯೆನಿಸಿರ್ದ ಭೋಗದೊಳಾವುದು ನಿಶ್ಚಯಮತೀತಮದತೀತಮೆನಲ್ (ಶಂಪ್ರಪು. ೨-೩೬); ಭಾವಿಯೆನಿಸಿರ್ದುದದು ಪರಿಭಾವಿಸಿ ಕಳೆಯಲ್ಕೆ ಸಾಧ್ಯಮಾಗದು ಜಗದೊಳ್ (ರಾಜಶೇ. ೧೪-೧೧). ೩. ಭಾವನೆಯನ್ನು ಹೊಂದಿರುವವನು ; ಭಾವನೆಯುಳ್ಳವನು; ಭಾವಿಸುವವನು : ನಿನಗೆ ಮಜ್ಜನವ ಮಾಡುವಲ್ಲಿ ನಾನು ಮಲದೇಹಿ ನೀನು ನಿರ್ಮಲದೇಹಿ . . . ನಿನಗೆ ಧೂಪವನಿಕ್ಕುವಲ್ಲಿ ನಾ ಭಾವಿ ನೀ ನಿರ್ಭಾವಿ (ಪೋಲಾಪ. ೩೬-೧೫೦); ಶೈವರೊಳು ಲಿಂಗಾವಧಾನದ ಭಾವಿಯಾದಡೆ ಹೊಲಬುಗೆಟ್ಟು ಮನೋವಿಕಾರದ ಮಾತುಗಳನಾಡಲಿಕುಚಿತವಹುದೆ (ಬಸಪು. ೯೦-೨೬). ೪. [ವ್ಯಾಕ] ಮುಂದೆ ಬರುವ ಕಾಲ; ಭವಿಷ್ಯತ್ಕಾಲ: ನೆಗಟ್ಗಂ ಸಂಪ್ರತಿಗಂ ಭಾವಿಗಮನ್ನೆಗಮನ್ನಮಿನೆಗಮಿನಮೆಂಬಿವು ಸೂರಿಗಳಿಂ (ಶಮದ. ೨೯೭). [ಸಂ. ಭಾವಿನ್]

**ಭಾವಿಕ** (ಗು). ೧. ನೈಜವಾದ ; ಸ್ವಾಭಾವಿಕವಾದ ; ವಾಸ್ತವವಾದ. ೨. ಭಾವಾತಿರೇಕವುಳ್ಳ ; ಭಾವಪೂರ್ಣವಾದ ; ಭಾವಪ್ರಧಾನವಾದ. (ನಾ). ೩. ಒಳ್ಳೆಯದು; ಶುಭವಾದುದು; ಮಂಗಳಕರವಾದುದು : "ಶ್ವೋವಸೀಯಂ ಶಿವಂ ಶ್ವಶ್ರೇಯಸಂ ಶುಭಂ ಭಾವಿಕಂ ಮಂಗಳಂ ಭವ್ಯವಾ ಭದ್ರಂ . . . ಕಲ್ಯಾಣಮೆಂದೆನಲ್ಕೊಳ್ಳಿತಕೆ ಪೆಸರೆನಿಕ್ಕುಂ" (ಮಂಗರಾ. ೮-೨೬). ೪. ಅರಿತವನು ; ತಿಳಿದವನು ; ಬಲ್ಲವನು : ರಾವಣನ ಮಗನಿವನು . . . ಶಸ್ತ್ರಾಸ್ತ್ರದಲಿ ಪರಿಣತನು ಭಾವಿಕನು ಕರಿತುರಗರಥದಲಿ (ಕೌಶಿರಾ. ೨೬-೧೨); ಭಾವಿಕನೇ ಅವರ ಸ್ವರೂಪವನ್ನು ಬಲ್ಲನು. 'ಭಾವಿಕ ಬಲ್ಲನು ಅದರ ಹುಯಿಲಾ ! ಎಂದು ಕವಿಯು ಹೇಳುವನು (ಕರಕ. ೨೨೦). ೫. [ಕಾವ್ಯಮೀ] ಪ್ರಬಂಧವನ್ನೆಲ್ಲ ವ್ಯಾಪಿಸುವ, ಹಿಂದಿನ ಮತ್ತು ಮುಂದಿನ ಸಂಗತಿಗಳನ್ನೆಲ್ಲ ಕಣ್ಣೆದುರಿಗೆ ಈಗ ನಡೆಯುವಂತೆ ವರ್ಣಿಸುವ ಒಂದು ಗುಣ : ಭಾವಮೆಂಬುದಕ್ಕುಂ ಕವಿಗಳಾ ಭಾವಿಸಿ ಮನದ ಬಗೆಯೊಂದಿದರ್ಥಂ ಕೇವಲಮದಜಿಕ್ಕೊ[ಳ]ಲಂಕೃತಿ ಭಾವಿಕಮೆಂಬುದಕ್ಕುಂ ನೃಪತುಂಗದೇವಮತದಿಂ (ಕರಾ. ೩-೨೦೯); ಭಾವಿಕಮೆಂದರೆಬರ್ ಕವಿ ಭಾವಗತಾರ್ಥಮನೆ ತಾಮಲಂಕೃತಿಗಳೊಳುದ್ಭಾವಿಸಿ ಪೇಳ್ವರ್ ಶಕ್ತಿಸಮಾವಿರ್ಭೂತ ಪ್ರಬಂಧವಿಷಯಮದಕ್ಕುಂ (ಕಾವ್ಯಾವ. ೭೭೬); ಭಾವಿಕಮೆನಿಕುಂ ಸತ್ಕವಿಭಾವಗತಾರ್ಥಂ . . . ಕವಿಗಳ ಕಾವ್ಯಭಾವನೆಯೆ ಭಾವಿಕಮೆಂಬುದದುಂ ಪ್ರಬಂಧವಾಸ್ತವವಿಷಯಂ (ಉದಯಾ. ೬೯). ೬. ಅರ್ಥಾಲಂಕಾರಗಳಲ್ಲಿ ಒಂದು ; ಹಿಂದೆ ಅನುಭವಿಸಿದ ಅಥವಾ ಮುಂದೆ ನಡೆಯಬಹುದಾದ ವಿಷಯವನ್ನು ಕಣ್ಣಿಗೆ ಕಟ್ಟುವಂತೆ ವಿವರಿಸುವುದು : ಪಿಂದೆ ಪೋದುದಂ ಮುಂತೆ ಬರ್ಪುದನಾವುದನಾದೊಡಮೊಂದು ರಸಾವೇಶದಿಂ ಪ್ರತ್ಯಕ್ಷದಂತೆ ಕಾಣ್ಬುದು ಭಾವಿಕಮೆನಿಪುದು (ಅಶ್ರುತಿ. ೧೩೩-೨೩). 'ಭಾವಿಕಾಲಂಕಾರ' ಪರಾ. [ಸಂ.]

**ಭಾವಿಕತನ** (ನಾ). ಆಸ್ತಿಕತನ ; ಭಾವನೆಯ ಆಧಾರದ ಮೇಲೆ ಪರಲೋಕವಿದೆಯೆಂಬ ನಂಬಿಕೆ : ವೈಜ್ಞಾನಿಕಯುಗ ಉದಿಸುವ ಮುನ್ನ ಜನತಾಯುಗದಲ್ಲಿಯೇ ಮನುಷ್ಯನ ಭಾವಿಕತನ ಕೊನೆಗೊಂಡಿತ್ತು (ಕಾಲಯಾ. ೧೧೨). [ ಭಾವಿಕ + –ತನ ]

**ಭಾವಿಕತೆ** (ನಾ). = ಭಾವಿಕತನ : ತೀರ್ಥಪ್ರಸಾದರು ಮೊಗ್ಗಾವಿಗೆ ಬಂದಂದಿನಿಂದ ಅವರ ಭಾವಿಕತೆಗೆ ಸೀಮೆಯೇ ಇರಲಿಲ್ಲ (ಸವಾಹೀ. ೯೦). [ ಸಂ. ಭಾವಿಕತಾ ]

**ಭಾವಿಕಾಲ** (ನಾ). ಭವಿಷ್ಯತ್ಕಾಲ ; ಮುಂದೆ ಬರುವ ಕಾಲ : ಭೂತವತಿ . . . ಆಖ್ಯಾತವಿಭಕ್ತಿಗಳಕ್ಕುಮತೀತಭವದ್ಭಾವಿಕಾಲವಿದ್ಯಾದಿಗಳೊಳ್ (ಕಾವ್ಯಾವ. ೩೭೯). [ ಸಂ. ]

**ಭಾವಿಕಾಲಂಕಾರ** (ನಾ). = ಭಾವಿಕ ೬ : ಭೂತಭಾವ್ಯರ್ಥಸಾಕ್ಷಾತ್ಕಾರಪೇಳೆ ಭಾವಿಕಾಲಂಕಾರ . . . ಭೂತ ಭಾವಿಕವಾದರ್ಥವನು ಸಾಕ್ಷಾತ್ಕಾರವಾಗಿ ಪೇಳಲ್ಕೆ ಭಾವಿಕಾಲಂಕಾರ (ಕುವಲ. ೧೭೯-೧); ಹಿಂದೆ ನಡೆದ ವೃತ್ತಾಂತಮನಾದೊಡಂ ಮುಂದಾಗುವ ವೃತ್ತಾಂತಮನಾದೊಡಂ ಈಗಳ್ ಪ್ರತ್ಯಕ್ಷವಾಗಿ ಕಾಣುವಂತೆ ಪೇಳ್ವುದೇ ಭಾವಿಕಾಲಂಕಾರಮಪ್ಪುದು (ಪರಿಕ. ೩೦೯ ವೃತ್ತಿ). [ ಸಂ. ]

**ಭಾವಿಕೇವಲಿ** (ನಾ). [ಜೈನ] ಮುಂದೆ ಕೇವಲಿಯಾಗಲಿರುವವನು : ಸುಧರ್ಮಶ್ರುತಕೇವಳಿಗಳು ಜಂಬೂನಾಮ ಭಾವಿಕೇವಲಿ[ಜಾಕಾಂ. ೪]ಗಳ್ಗೆ ಪೇಟ್ದ ತ್ರಿಷಷ್ಟಿಲಕ್ಷಣಮಹಾಪುರಾಣದೊಳಾದಿಪುರಾಣಕಥಾನಿಬಂಧಂ (ಚಾಪುಂಪು. ೮). [ ಸಂ. ಭಾವಿಕೇವಲಿನ್ ]

**ಭಾವಿತ** (ಗು). ೧. ಸೃಷ್ಟಿಸಿದ ; ಉಂಟುಮಾಡಿದ ; ಉತ್ಪಾದಿಸಿದ. ೨. ಪಡೆದ ; ಹೊಂದಿದ ; ಪ್ರಾಪ್ತವಾದ. ೩. ತೋರ್ಪಡಿಸಿದ ; ಪ್ರದರ್ಶಿಸಿದ. ೪. ಊಹಿಸಿದ; ಕಲ್ಪಿಸಿದ. ೫. ಒಪ್ಪಿರುವ ; ಅಂಗೀಕೃತ. ೬. ಚಿಂತಿಸಿದ; ವಿಚಾರಮಾಡಿದ; ಧ್ಯಾನಮಾಡಿದ. ೭. ಸ್ಫೂರ್ತಿಗೊಂಡ; ಉತ್ತೇಜಿತವಾದ. ೮. (ದ್ರವದಲ್ಲಿ) ನೆನೆಯಿಸಿದ; ನೆನೆಹಾಕಿದ. ೯. ಮಿಶ್ರಿತವಾದ; ಬೆರೆತ. ೧೦. ವಾಸನೆ ಕಟ್ಟಿದ; ಸುವಾಸಿತ. (ನಾ). ೧೧. ಪಡೆದುದು ; ಪ್ರಾಪ್ತವಾದುದು : "ಲಬ್ಧಂ, ಪ್ರಾಪ್ತಂ, ವಿನ್ನಂ, ಭಾವಿತಂ, ಆಸಾದಿತಂ, ಭೂತಂ – ೬ ಹೊಂದಲ್ಪಟ್ಟಿರುವುದು, ಪಡೆಯಲ್ಪಟ್ಟಿರುವುದು, ಆಗಿ ಬಂದಿರುವುದು" (ಸಿದ್ಧಾಂಕಿ. ೩೫೦). ೧೨. ವಾಸನೆ ಕಟ್ಟಿದುದು ; ಸುವಾಸನೆಗೊಳಿಸಿದುದು: "ಭಾವಿತಂ, ವಾಸಿತಂ – ೨ ವಾಸನೇ ಕಟ್ಟಿದ ವಸ್ತುವಿನ ಪೆಸರುಗಳು" (ಸಿದ್ಧಾಂಕಿ. ೨೦೯). ೧೩. [ಗಣಿತ] ಗುಣಾಕಾರ ಮಾಡಿ ಪಡೆದ ಸಂಖ್ಯೆ; ಗುಣಲಬ್ಧ. [ ಸಂ. ]

**ಭಾವಿತಾತ್ಮ** (ನಾ). ಸ್ಫೂರ್ತಿಗೊಂಡ ಮನಸ್ಸುಳ್ಳವನು ; ಪರಿಪಕ್ವವಾದ ಮನಸ್ಸುಳ್ಳವನು ; ವಿಚಾರಶೀಲ : ಅಂತು ಭಾವಿತಾತ್ಮನ ಧ್ಯಾತ್ಮವಿಶಾರದನಾಗಿ ಪರಮಾತ್ಮನೊಳ್ ಕೂಡಿದಂ (ಶಂಶಭಾ. ೧೨-೨೫ ವ) ; ರಾಜರಾಜಂ ನದೀತನೂಜನಂ ಮಾಣಿಸಿ ನೀವಪ್ಪೊಡೆ ವಿದಿತವೇದಿತಜ್ಞರುಂ ಭಾವಿತಾತ್ಮರುಮಾಗಿರ್ದ ಜ್ಞಾನಿಗಳ್ ಅಂತೆ ನೆಗಟಲಾಗದೆಂದು ಅಱಿಪಿದೊಡೆ (ಗದಾಯು. ೩-೪೯ ವ) ; ದೃಢಚಿತ್ತನಾಗಿ ಭಾವಿಸಿದನೊ ಭಾವಿತಾತ್ಮನೆನೆ ಷೋಡಶಭಾವನೆಯಿಂ ಮುನೀಶ್ವರಂ (ಪುಣ್ಯಶ್ರ. ೧೧-೫೫). [ಸಂ. ಭಾವಿತಾತ್ಮನ್]

**ಭಾವಿಸು** (ಕ್ರಿ). ೧. ತಿಳಿ ; ಗೊತ್ತುಪಡಿಸಿಕೊಳ್ಳು : ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಳಯವಿಲೀನವಿಶದವಿಷಯವಿಶೇಷಂ (ಕವಿರಾ. ೧-೩೬) ; ತನ್ನ ಮನಮುಮನೆರ್ದೆಯುಮನುೞಿ ಸೆಱೆವಿಡಿದಿರ್ದಪೂರ್ವರೂಪೆಯ ರೂಪುಮಂ ಮನದೊಳೆ ಬಗೆದು ಭಾವಿಸಿ ಮತ್ತಮಿಂತೆಂದಂ (ಶಂಶಭಾ. ೪-೭೦ ವ) ; ಕನ್ಯೆಯದೊಂದು ಭಕ್ತಿಯಂ ಭಾವಿಸಿ ನೀನಿದಂ ನೃಪತಿ ಕೈಕೊಳವೇಟ್ಪುದು ರಾಜಕೀರಮಂ (ಕಾದಂಪೂ. ೫೬). ೨. ಆಲೋಚಿಸು ; ವಿಚಾರಮಾಡು : ಮಣಿಹಾರಂಬೋಲ್ ಸೊಗಯಿಸುವ ವಚಸವಿರಚನೆ ನೆಗಟ್ಗಂ ಭಾವಿಸುವೊಡದಱ ಪೆಂಪತಿಸುಲಭಂ (ಕವಿರಾ. ೧-೧೩) ; ಆಗಮಮಂ ಪರಿವಿಡಿಗೆಯ್ಯುತ್ತುಮರ್ಥಮಂ ಭಾವಿಸುತ್ತಂ (ವರ್ಧಾರಾ. ೯೬-೩) ; ನೆಟ್ಟನೆ ಮನದೊಳ್ ಭಾವಿಪ್ಪೊಡಸಾರಮಿ ಸಂಸಾರಂ (ಅಜಪು. ೨-೭೬). ೩. ನೆನಪು ಮಾಡಿಕೊಳ್ಳು ; ಜ್ಞಾಪಿಸಿಕೊಳ್ಳು ; ಸ್ಮರಿಸು : ನಭೋಮಧ್ಯದೊಳಿರ್ದಾನಂದೆ ಪೇೞ್ದನ್ನಯ ನುಡಿಯನದು ಭಾವಿಸಂಭೋಜನೇತ್ರೇ (ಕಾದಂಬ. ೭೯೦) ; ತಿಂಗಳಾರಕೆ ಬಹನೆಂಬ ಭಾಷೆಯಂ ಭಾವಿಸುತೆ (ಶಶಾಂಗ. ೫೬-೧೫೩೪). ೪. ಧ್ಯಾನಿಸು ;

ಅನುಸಂಧಾನ ಮಾಡು : ಪೂಣ್ಕೆಯ್ದ್ದುಳ್ಳ್ದಿಂದಮೋರಂತೆ ಭಾವಿಸಿ ತಾಂ ತನ್ಮಯನಾಗಿ ತಚ್ಚರಿತಮಂ ಕಾವ್ಯಂಗಳೊಳ್ಕೂಡೆ ಬಣ್ಣಿಸಿ ಪೇಟ್ದಾತನ ಕರ್ಮನಿರ್ಜರೆಯನಂಶಿಂತುಂತೆನಲ್ಬರ್ಕುಮೇ (ಅಂಪು. ೦-೬೭) ; ಧರೆಯಂ ನೋಯಿಸದಿರ್ ಜಿನೇಶ್ವರಪದಾಂಭೋಜಾತಮಂ ಭಾವಿಸುತ್ತಿರು (ಧರ್ಮಾಮೃ. ೯-೨೬೦) ; ಚೌತಿಯ ದಿನದೊಳು ಬೆನಕನ ಭಾವಿಸೆ ನನ್ನ ಬಳಿಗೊಂದು ಮೂಷಿಕ ಧಾವಿಸೆ (ಗಹೇಶ. ೦-೦೭). ೫. ಗಮನವಿಡು ; ಲಕ್ಷ್ಯಕೊಡು ; ಆಸಕ್ತಿಯಿಡು : ಭೂವಲ್ಲಭಸೋತ್ಕ್ಷೇಪಭ್ರೂವಿಲಸಿತದತ್ತವಾಚನಾದೇಶಮಿದಂ ಭಾವಿಸಿಮೆಂದತಿಮಧುರೋದ್ಭಾವಿತಗಂಭೀರನಾದದಿಂ ಬಾಜಿಸಿದಂ (ಆದಿಪು. ೦೯-೯೭) ; ಕೊಳ್ ನಿನ್ನ ನಚ್ಚಿನ ಪಾಂಡವರ ತಲೆಗಳಿವೆಯೆಂದು ದುರ್ಯೋಧನನ ಮುಂದಿಕ್ಕಿದೊಡಾ ಮಹಾನುಭಾವನಾ ತಲೆಗಳಂ ನೀಡುಂ ಭಾವಿಸಿ ನೋಡಿ (ಗದಾಯು. ೯-೩೨ ವ) ; ಇರದದನಟ್ಟಿರಿಂದಡರೆ ಭಾವಿಸಿ ಭಾವಿಸಿ ನೋಡಿ ನೋಡಿ ಚಿಚ್ಚರಮವನೀತಳಂ ತನಗೆ ಸಾರ್ದವೊಲೊರ್ವೊದಲುಣ್ಮೆ ಪೊಣ್ಮೆದಂ (ಧರ್ಮಾಮೃ. ೬-೮೦). ೬. ಗೌರವಿಸು ; ಆದರಿಸು : ಕರ್ಪೂರಿಕೆಯು . . . ನರವಾಹನದತ್ತನನ್ನು ಸ್ನಾನಾದಿ ಉಪಚಾರಗಳಿಂದ ಭಾವಿಸಿದಳು (ಕಸಂ. ೧೩೨). ೭. ಮಾಡು; ರಚಿಸು; ನಿರ್ಮಿಸು : ಕರಿಯ ನೆಯ್ದಿಲ ಕಾವಿನೊಳ್ ಭಾವಿಸಿದ ನೂಪುರಮುಮಂ . . . ಕೊಟ್ಟು (ಶಂಕಚಾ. ೩-೭ ವ) ; ಬೆಳಗುವ ಕನ್ನಡಿಯ ಶೀವೃವ ಕಳಶದ ಭಾವಿಸುವ ಬಣ್ಣವುರದ . . . ಕೋಲಾಹಳಮೆಸೆಯೆ (ಅಪಂಪು. ೯-೩೯ ವ). ೮. ವಾಸನೆ ಕಟ್ಟು ; ಭಾವನೆ ಕೊಡು : ವಿಳಾಸಿನೀಕಬರಿಕಾಬಂಧಂಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು (ಶಂಕಚಾ. ೪-೮೦) ; ಹಿಮರೋಚಿಃ—ಕಳಿಕಾಕದಂಬಕಮನಿಂಬಿಂ ತಿರ್ದಿ ನೋಳ್ಪಿಸಿ ಕುಂಕುಮದಿಂ ಭಾವಿಸಿ (ಅಪಂಪು. ೯-೦೪). ೯. ನೆನೆಯಿಸು ; ನೆನೆಹಾಕು : ಅರೆದಜಮೂತ್ರದೊಳೊಂದಿರೆ ಸುರದಾರುವಮನೆಚ್ಚಿದಂದು ಮೇಣೇಟುದಿನಂ ಸುರಭಿಯ ಜಳದೊಳ್ ಭಾವಿಸಿ ಹರೀತಕಿಯನೆಜ್ಜೊಡಂದಣಂಗಳ್ ಕಿಡುಗುಂ (ಲೋಕೋಪ. ೯-೭೩) ; ಮಾವಿನ ಬಿತ್ತಳೆಯ ಕರಿಕೆ ಶರ್ಕರೆಯನಿತಂ ಭಾವಿಸುವುದಕ್ಕಿಗಚ್ಚಿಂ (ಕಲ್ಯಾಕಾ. ೩-೦೩).

[ (ಸಂ. ಭಾವನಾ) + — ಇಸು₃ ]

**ಭಾವು** (ನಾ). (ಉಕ) ಬಂಧು ; ಭ್ರಾತೃ ; ಅಣ್ಣ ಅಥವಾ ತಮ್ಮ : ಭಾವು, ಭಾವೂರಾಯ ರಾಮಾ ! ಏಕೆ ಓಗೊಡಲಾರೆಯೋ ? (ಹಾಡುಜಾ. ೩೩-೦೬). 'ಭಾವೂರಾಯ' ಪರಾ.

[ ← ಮರಾ. ಭಾಉ, ಭಾವೂ./ಸಂ. ಭ್ರಾತೃ./ಪ್ರಾ. ಭಾಉ]

**ಭಾವುಕ** (ಗುಂ). ೧. ಆಗುವ ; ಇರುವ. ೨. ರಸಾಸ್ವಾದನೆ ಮಾಡಬಲ್ಲ ; ರಸಿಕನಾದ ; ಸಹೃದಯನಾದ ; ರಸಜ್ಞನಾದ. ೩. ಆತ್ಮೀಯವಾದ ; ಪ್ರೀತಿಪೂರ್ವಕವಾದ ; ಹಾರ್ದಿಕವಾದ: ಅಂತಹ ಒಂದು ಭಾವುಕಪ್ರೇಮ ತನ್ನ ಮತ್ತು ಇಂದುಮತಿಯಲ್ಲಿ ಇದೆ (ಅಕಪಾ. ೨೪೩). ೪. ಸುಖಕರವಾದ ; ಒಳ್ಳೆಯ ; ಮಂಗಳಕರವಾದ. (ನಾ). ೫. ಮಂಗಳ ; ಶುಭ ; ಶ್ರೇಯಸ್ಸು : "ಶ್ವಃ(ಸ್ವ)ಶ್ರೇಯಸಂ, ಕಲ್ಯಾಣಂ, ಶ್ವೋವಶೀಯಂ, ಶಿವಂ, ಶುಭಂ, ಭವಿಕಂ, ಭಾವುಕಂ, ಶ್ರೇಯಃ, ಭವ್ಯಂ ಭದ್ರಂ, ಮಂಗಳಂ— ಈ ೧೧ ಒಳ್ಪಿತರ್ಕೆ ಪೆಸರ್" (ಹಲಾಯು. ೨೦-೦೨೨); "ಶ್ವಶ್ಶ್ರೇಯಸಂ . . . ಭಾವುಕಂ, ಭವುಕಂ, ಭವ್ಯಂ, ಕುಶಲಂ, ಕ್ಷೇಮಂ, ಶಸ್ತಂ—ಈ ೧೨ ಶುಭದ ಪೆಸರುಗಳು" (ನಿಘಂಟು. ೪೨). ೬. ರಸಿಕ; ಸಹೃದಯ; ರಸಜ್ಞ : ಪ್ರಕಟತರಂ ಶಬ್ದಂ ಶಾಬ್ದಿಕಸಮ್ಮತಮರ್ಥದೃಷ್ಟಿ ಮನಃಕೌತುಕಜನಕಂ ಭಾವಂ ಭಾವುಕಭಾವ್ಯಂ ಕಾವ್ಯತತಿಯೊಳಗ್ಗಳಿನಿನ್ನಾ (ಚಂದ್ರಪ್ರ. ೦-೩೮); ಬಲ್ಲವರು ಭಾವುಕರು ಭಕ್ತಿಯ ಬಲ್ಲಿದರು ಲಾಲಿಸುವುದೀ ಪ್ರಭುಲಿಂಗಲೀಲೆಯಲಿ (ಪ್ರಭುಲೀ. ೦-೮). ೭. ಸಂಪ್ರದಾಯ ಶ್ರದ್ಧೆಯುಳ್ಳ ವ್ಯಕ್ತಿ: ಅಳಲಿನ ಬೆನ್ನ ಮೇಲೆ ಮೂರು ಗೆರೆಗಳು ಬಂದಿವೆಯೆಂದು ಭಾವುಕರು ನಂಬುತ್ತಾರೆ (ಕಾಕೋ. I, ೭-೩೪); ಭಾವುಕರ ಪಾಲಿಗೆ ಯವನರು ಕಲಿಯುಗದಲ್ಲಿ ಹುಟ್ಟಿದ ರಾಕ್ಷಸಸಂತಾನವೇ ಆಗಿದ್ದರು (ರಾಷ್ಟ್ರೋದ. ೨); ತುಂಬ ಭಕ್ತರೂ ಭಾವುಕರೂ ಇರುವ ನಾಡಿನಲ್ಲಿ ಒಂಟಿಒಂಟಿಯಾಗಿ ಯಾತ್ರೆ ಮಾಡಲಾರದ ಜನರು . . . ಯಾತ್ರಾಸ್ಪೆಶಲ್ ಬಂಡಿಗಳನ್ನು ನುಗ್ಗುತ್ತಾರೆ (ಅಳಪ. ೨). ೮. ಅಕ್ಕ ಅಥವಾ ತಂಗಿಯ ಗಂಡ ; ಭಾವ : "ಒಡಹುಟ್ಟಿದಳ ಮದವನಂ ಭಾವುಕನೆಂಬುದು" (ಹಲಾಯು. ೦೭-೯೯). [ಸಂ.]

**ಭಾವುಕತೆ** (ನಾ). ಭಾವನಾಮಯತೆ : ಮತ್ತಿನ್ನೇನು ? ಭಾವುಕತೆಗೂ ವಿಚಾರಕ್ಕೂ ನಡೆಯುವ ಸಂಘರ್ಷಣೆ (ದೂರಸ. ೨೮); ರೂಪಚಂದನು . . . ಭಾವುಕತೆಯಿಂದ ಎಲ್ಲ ಕೆಲಸಗಳನ್ನು ಮಾಡುತ್ತಿದ್ದ (ಜಬಾಪಾ. ೦೩೦).

[ಸಂ. ಭಾವುಕತಾ]

**ಭಾವುಕಸಾಹಿತ್ಯ** (ನಾ). ರಸಪ್ರಧಾನವಾದ ಸಾಹಿತ್ಯ ; ಕೇವಲ ಆನಂದವನ್ನುಂಟುಮಾಡುವ ಸಾಹಿತ್ಯ : ಮಹಾಯುದ್ಧದಿಂದಾದ . . . ರಾಷ್ಟ್ರೀಯಜಾಗೃತಿಗಳಿಂದಾಗಿ ಭಾವುಕಸಾಹಿತ್ಯಸೃಷ್ಟಿಗಿಂತ ಜನಜಾಗೃತಿಯುಂಟುಮಾಡುವ ಸಾಹಿತ್ಯಸೃಷ್ಟಿ ಅಗತ್ಯವೆಂಬ ಮನೋಭಾವ ಸಾಹಿತಿಗಳಲ್ಲಿ ಉಂಟಾಯಿತು (ಶಾರದ. ೯೭೮). [ಸಂ.]

**ಭಾವುಕಿ** (ನಾ). ಸಹೃದಯವುಳ್ಳವಳು; ರಸಜ್ಞೆ : ವಾಸುದೇವನನ್ನು ಹಡೆದ ವಸುದೇವನ ದೇವಕಿ ಭಗವಂತನ ಲೀಲೆಗಾಗಿ ದೇಹವೆತ್ತ ಭಾವುಕಿ (ಅರಗು. ೨೯೮-೭). [ಭಾವುಕ + —ಇ₂]

**ಭಾವುಕೆ** (ನಾ). = ಭಾವುಕಿ : ಭಾವುಕೆ ನೀಂ ಪೇಟ್ದಂದದಿನಾ ವನದೊಳಗಿರ್ಪನಂ ತದುರ್ವಿಪಸಚಿವಂ ಪಾವನಚರಿತಂ ಬರಲೆಲ್ಲಾ ವಿಪರಮನಱಿದೆಂ (ಅನ್ನಟಿ. ೭-೩೨). [ಭಾವುಕ + —ಎ₂]

**ಭಾವೂರಾಯ** (ನಾ). (ಉಕ) ಪ್ರೀತಿಯಿಂದ ಕರೆಯುವಾಗ ಬಳಸುವ ಶಬ್ದ ; ಬಂಧು ; ಅಣ್ಣ ಅಥವಾ ತಮ್ಮ : ಭಾವು ಭಾವೂರಾಯ ! ಏಕೆ ಓಗೊಡಲಾರೆಯೋ ? (ಹಾಡುಜಾ. ೩೩-೦೬). [ < ಭಾವು + ರಾಯ]

**ಭಾವೆ** (ನಾ). ೧. ಚೆಲುವೆಯಾದ ಹೆಣ್ಣು ; ಸುಂದರಸ್ತ್ರೀ : ಭಾವೆ ಭಾವಿತನೂಭವಾನುಕ್ರಮ ಪ್ರಭವಭಾವಂಗಳಂ ಭಾವಿಸಿ ಪಲುಂಬಿ ಪಂಬಲಿಸಿಯುಂ (ಚಂದ್ರಪ್ರ. ೩-೩೦ ವ); ಭಾವೆ ನೂಕದಿರೆನ್ನ ವರರಾಜೀವಮುಖಿ ಕೃಪೆಮಾಡು (ಕುಮಾರ. ೨-೨೭); ಬಟ್ಟ ಬಲ್ಮೊಲೆಯ ಭಾವೆಯರಾಯತಿ ವೆತ್ತು ಪಟ್ಟಣದಿಂ ಪೊಱಮಟ್ಟು (ಮೋಹತ. ೩-೨೯); ದೇವದುಂದುಭಿಮೊಳಗೆ ಸ್ವರ್ಗದ ಭಾವೆಯರು ನರ್ತಿಸಲು (ಕೋಗಯು. ೨೭-೯೮). ೨. [ಕಾವ್ಯಮೀ] ಚಿತ್ರಕಾವ್ಯಕ್ಕೆ ಸೇರಿದ ಪ್ರಹೇಳಿಕೆಗಳಲ್ಲಿ ಒಂದು : ಭಾವೆಯುಂ ನುಸುಳುಂ . . . ಕೇವಲಮವಱ ಭೇದಮಂ ನುಸಮಸ್ತಮಂ . . . ಅವಯವದೇಕೆ ಕಳೆಯವೇಟ್ದಿಂ ಪ್ರಿಯೆಯಂ (ಕವಿರಾ. ೨-೦೪೪).

[< ಸಂ. ಭಾವಾ]

**ಭಾವೇಂದ್ರಿಯ** (ನಾ). [ಜೈನ] ದ್ರವ್ಯೇಂದ್ರಿಯ ಮತ್ತು ಭಾವೇಂದ್ರಿಯ ಎಂಬ ಎರಡು ಬಗೆಯ ಇಂದ್ರಿಯಗಳಲ್ಲಿ ಒಂದು; ▶ ಇವರಲ್ಲಿ ಎರಡು ವಿಧ: "ಲಬ್ಧಿ ಮತ್ತು ಉಪಯೋಗ (ಜ್ಞಾನಾವರಣೀಯಕರ್ಮದ ಕ್ಷಯೋಪಶಮವಿಶೇಷ ಮತ್ತು ಆತ್ಮನು ದ್ರವ್ಯೇಂದ್ರಿಯದಿಂದಾಗಿರುವ ನಿರ್ವೃತ್ತಿಯ ಕಡೆಗೆ ಪ್ರವರ್ತಿತನಾದಾಗ ಅದರಿಂದಾಗುವ ಆತ್ಮನ ಪರಿಣಾಮ)" (ಜೈನಕೋ. ೦೯೩) : ದ್ರವ್ಯೇಂದ್ರಿಯಮುಂ ಭಾವೇಂದ್ರಿಯಮುಂ ಎಂದಿಂತು ಇಂದ್ರಿಯಂಗಳಿತ್ತೆಱಂ (ತತ್ತ್ವಸೂ. ೯೭) ; ಮತಿಜ್ಞಾನಾವರಣಕರ್ಮವು ಕಡಿಮೆ ಆದಂತೆ ಆತ್ಮನಲ್ಲಿ ಉಂಟಾಗುವ ವಿಶುದ್ಧಿಗೆ ಈ ವಿಶೇಷಶುದ್ಧಿಯಿಂದ ಉತ್ಪನ್ನವಾಗುವ ಉಪಯೋಗಾತ್ಮಕ ಜ್ಞಾನಕ್ಕೆ ಭಾವೇಂದ್ರಿಯವೆಂದು ಕರೆಯಲಾಗುತ್ತದೆ (ಜೈಪಶ. ೨೯೩). [ಸಂ.]

**ಭಾವೋದಯ** (ನಾ). ೧. ಸುಖ, ದುಃಖ ಮೊದಲಾದ ಭಾವಗಳ ಉತ್ಪತ್ತಿ,—ಹುಟ್ಟು. ೨. [ಕಾವ್ಯಮೀ] ಧ್ವನಿಯಲ್ಲಿ ಒಂದು ಭೇದ ;

ಯಾವುದಾದರೂ ಒಂದು ಸಂಚಾರಿಭಾವವು ಹೊಸದಾಗಿ ಹುಟ್ಟಿ ಅದು ಕಾವ್ಯದಲ್ಲಿ ಪ್ರಧಾನವಾಗಿ ವ್ಯಂಗ್ಯವಾಗಿ ತೋರುವುದು : ಆಸ್ವಾದ್ಯವಾಗುವ ಭಾವದಲ್ಲಿ ಆಲಂಕಾರಿಕರು—ಭಾವೋದಯ, ಭಾವಶಾಂತಿ ಭಾವಸಂಧಿ, ಭಾವಶಬಲತೆ ಎಂಬ ನಾಲ್ಕು ದಶೆಗಳನ್ನು ವಿಂಗಡಿಸುತ್ತಾರೆ . . . ಹೊಸದಾಗಿ ಒಂದು ಭಾವ ಉದಿಸುವುದೇ ಭಾವೋದಯ (ಕಾರಚಿಾ. ೪೨೫); ಒಂದು ಭಾವವು . . . ಹೊಸದಾಗಿ ಹುಟ್ಟಿತು ಎಂದು ವರ್ಣಿಸಿದರೆ ಅದಕ್ಕೆ 'ಭಾವೋದಯ'ವೆಂದೂ . . . ಹೆಸರು (ಕ್ರಿ.ಬಿ. ೨೦೪). ೩. ಒಂದು ಅಲಂಕಾರ ; ಹೊಸದಾಗಿ ಹುಟ್ಟುವ ಒಂದು ಭಾವವು ರಸಕ್ಕಾಗಲಿ, ಭಾವಕ್ಕಾಗಲಿ ಅಂಗವಾಗುವುದು : ಒಂದು ರಸಕ್ಕಾದೊಡಂ ಭಾವಕ್ಕಾದೊಡಂ ಭಾವೋದಯಮಂಗಮಾಗೆಯದು ಭಾವೋದಯಾಲಂಕಾರಮೆನಿಪುದು (ಅಶ್ರು. ೧೪೪-೨೧). [ಸಂ.]

**ಭಾವೋದ್ದೀಪನ** (ನಾ). ಮನಸ್ಸಿನ ಭಾವನೆಗಳನ್ನು ಉಜ್ವಲಗೊಳಿಸುವುದು,– ತೀವ್ರಗೊಳಿಸುವುದು : ಇಲ್ಲಿ 'ಭಾವ' ವಿಸ್ತೃತವಾಗಿಯೂ ಲೋಕಭಾವದ ಅತಿಶಯದ ರೂಪವಲ್ಲದಿದ್ದ ಪಕ್ಷದಲ್ಲಿ ಅದಕ್ಕೆ ಹೃದಯಸ್ಥ ಭಾವೋದ್ದೀಪನಶಕ್ತಿ ಬರಲು ಸಾಧ್ಯವಾಗುತ್ತಿರಲಿಲ್ಲ (ಕಾಂವಸ. ೬೪). [ಸಂ.]

**ಭಾವೋದ್ಭವ** (ನಾ). ೧. ಮನಸ್ಸಿನಲ್ಲಿ ಹುಟ್ಟಿದವನು ; ಮನಸಿಜ ; ಕಾಮ ; ಮನ್ಮಥ : ನವಯೌವನದೊಳ್ಗುಣದೋಷವಿಚಾರಮನಿಂತು ಮಾಡಲೀಯದ ಭಾವೋದ್ಭವನಿಂ ಪರವಶೆಯಾದೆಂ (ಕಾದಂಪೂ. ೬೪೫); ಕುಸುಮಾಸ್ತ್ರಾವಳಿಯಿಂದೋಲೈಸಿದ ಭಾವೋದ್ಭವನೀಗೆ ನಮಗೆ ಸುಖಸಂಪದಮಂ (ಪುದಶಿ ೧-೧); ಅವಗ್ರ್ಗಗ್ರಸೂನು ಭಾವೋದ್ಭವಮೂರ್ತ್ತಿ ಸುಧಾಂಶುವಿಶದಕೀರ್ತ್ತಿ ಜಯಶ್ರೀದೇವಂ. . . ಸಗರಮಾರ್ತ್ತಣ್ಡನೃಪಂ (ಕಾಇಇ. XX. ೪೬-೦೮ ; 1074). ೨. ತನ್ನ ಇಚ್ಛೆಯಿಂದಲೇ ಹುಟ್ಟಿರುವವನು ; ಸ್ವಯಂಭೂ ; ಬ್ರಹ್ಮ ; ವಿಧಿ : ಮರಣಂ ಲಗ್ನಭವಂಗೆ ಸಂಭವಿಸುಗುಂ ಭಾವೋದ್ಭವಂ ಕಾವೊಡಂ (ಜಾತತಿ. ೬-೦೨). [ಸಂ.]

**ಭಾವೋದ್ವಿಗ್ನತೆ** (ನಾ). ಮನಸ್ಸಿನ ಕಳವಳ,–ವ್ಯಾಕುಲತೆ : ಮಾಸ್ಲೋವ ಅವನ ಭಾವೋದ್ವಿಗ್ನತೆಯನ್ನು ಗಮನಿಸಿ, ಅವನನ್ನು ಗುರುತಿಸಿದಳು (ಪುನರು. ೦೯೦). [ಸಂ. ಭಾವೋದ್ವಿಗ್ನತಾ]

**ಭಾವೋನ್ಮತ್ತ** (ನಾ). ಭಾವನೆಯಲ್ಲಿ ಪರವಶನಾದವನು: ಕವಿ ಉನ್ಮತ್ತ! ಭಾವೋನ್ಮತ್ತ ! (ಅಶೀ. ೪೯-೦೦). [ಸಂ.]

**ಭಾವೋನ್ಮೇಷ** (ನಾ). ಭಾವನೆಗಳು ಹೊರಹೊಮ್ಮುವಿಕೆ : ಮನುಷ್ಯ ಹೃದಯದಲ್ಲಿನ ಭಾವೋನ್ಮೇಷಗಳನ್ನು . . . ಅಂಗವಿನ್ಯಾಸ ಭಾವಾಭಿನಯಗಳ ಮೂಲಕ ತೋರ್ಪಡಿಸುವುದನ್ನು ಕಲಿತ (ಶಾರದ. ೫೪೮). [ಸಂ.]

**ಭಾವ್ಯ** (ಗು). ೧. ಜರುಗಲಿರುವ ; ನಡೆಯಲಿರುವ. ೨. ಯೋಚಿಸಲು ತಕ್ಕುದಾದ ; ಊಹಿಸಲು ಯೋಗ್ಯವಾದ. (ನಾ). ೩. ಆಗತಕ್ಕುದು; ಆಗಬೇಕಾದುದು : ಸುಸ್ಥಿರಂ ಶ್ರೀವಿಭವಂ ಜೀವಕ್ಕೆ ಸಮನಿಕುಂ ಬುದ್ಧ್ಯಾವ್ಯಂ ತದ್ಭವತಿಯೆಂಬ ನುಡಿಯುಳ್ಳುದಜೀಂ (ಪಾರ್ಶ್ವಪು. ೬-೬). ೪. ಸವಿಯಲ್ಪಡತಕ್ಕುದು ; ಆಸ್ವಾದ್ಯವಾದುದು : ಭಾವಂ ಭಾವುಕಭಾವ್ಯಂ ಕಾವ್ಯತತಿಯೊಳಗ್ಗಳ ನಿನ್ನಾ (ಕಂಪ್ರಶು. ೦-೫೮) ; ರಾಮಾಯಣ ಕಾವ್ಯವು ಅಜರ ಅಮರ ಧರೆಯೊಳು ಬಹುಭಾವ್ಯವು! (ಕ್ರಾಂತರ್ಧ. ೩೪-೦೪). ೫. [ಕಾವ್ಯವಿ] ಪ್ರಹೇಳಿಕೆಗಳಲ್ಲಿ ಒಂದು ವಿಧ : ನುಸುಳೊರ್ಪುಡಿ ಭಾವ್ಯ [ಶಾಕಾ. ಮ] ಮನಕ್ಕೆಸೆವ ಸ್ಪಷ್ಟಾರ್ಥಮುಟೀವು ನಾಮಾಂತರಿತಂ ಕುಸುರಿಯ ನುಡಿಯೆಂಬಿವು ಭಾವಿಸೆ ಪೇಳಿಕೆಗಳೊಳೆ ಪೇಟ್ವ ಭೇದಮುಪಕ್ಕ್ಯಂ (ಕಾವ್ಯಾವ. ೫೪೪). [ಸಂ.]

**ಭಾಷಣ** (ನಾ). ೧. (ಸಭೆ ಮೊದಲಾದ ಕಡೆಗಳಲ್ಲಿ) ಮಾತನಾಡುವುದು ; ಉಪನ್ಯಾಸ : ವೇದಿಕೆಯ ಮೇಲೆ ನಿಂತು ಭಾಷಣ ಮಾಡಲು ನನಗೆ ಸುಸಮಯ ಕೊಟ್ಟಿದ್ದಕ್ಕಾಗಿ . . . ವಂದನೆಗಳನ್ನರ್ಪಿಸುತ್ತೇನೆ (ರಾಯುಳ. ೪೫) ; ''ಶ್ರೀ'' ಯವರನ್ನು ಸ್ಮರಿಸಿಕೊಂಡಾಗ ಭಾಷಣದ ಸ್ವರೂಪ . . . ಬೋಧೆಯಾಗಿ, ನನ್ನ ಸಂದೇಹ ಶಿಥಿಲವಾಗುತ್ತದೆ (೪೬ಸಾ. XIV, ೩೬೮೪). ೨. ಮಾತು ; ಉಕ್ತಿ ; ಸಲ್ಲಾಪ ; ಸಂಭಾಷಣೆ : ''ಮಿಥಃ, ಭಾಷಣಂ_ಪ್ರೀತಿಯಿಂದ ಅನ್ಯೋನ್ಯವಾಗಿ ಮಾತಾಡುವುದಕ್ಕೆ ಹೆಸರು'' (ಸಿದ್ಧಾಂತಿ. ೫೪). [ಸಂ.]

**ಭಾಷಣಕಲೆ** (ನಾ). (ಸಭೆ ಮುಂತಾದ ಕಡೆಗಳಲ್ಲಿ) ಮಾತನಾಡುವ ಜಾಣ್ಮೆ,– ಚಾತುರ್ಯ : ಭಾಷಣಕಲೆ ಎಲ್ಲ ಭಾಷಣಕಾರರಿಗೂ ಸಿದ್ಧಿಸಿರುವುದಿಲ್ಲ (ಸೂ). [ಸಂ. ಭಾಷಣಕಲಾ]

**ಭಾಷಣಕಾರ** (ನಾ). ಭಾಷಣ ಮಾಡುವವನು ; ಉಪನ್ಯಾಸಕ : ಸಭಾಂಗಣದ ಮಧ್ಯೆ ಭಾಷಣಕಾರರಿಗಾಗಿ ತೋಳುಳ್ಳ ಕುರ್ಚಿಯೊಂದನ್ನಿರಿಸಲಾಗಿತ್ತು (ಪುನರು. ೩೪೫) ; ಅವನು ಭಾಷಣಕಾರರಂತೆ ಒಂದೇ ರಾಗದಲ್ಲಿ ಬೇಸರ ಬರುವಂತೆ ಹೇಳುತ್ತಿದ್ದಾಗ (ಶಾಲಿಮ. ೮೨). [ಸಂ.]

**ಭಾಷಾಂಗ** (ನಾ). [ಸಂಗೀತ] ರಾಗಗಳಲ್ಲಿ ಒಂದು ಪ್ರಭೇದ : ಲಿಂಗವ ಸೋಂಕಿದ ಮನಕ್ಕೆ ಲಿಂಗಾಭಿಮಾನವಾವುದೆಂದಡೆ ಶೇಷನ ಅವಸಾನದಂತಿರಬೇಕು ತ್ರಾಸಿನ ವಾಸದ ಭಾಷಾಂಗದಂತಿರಬೇಕು (ಮೋಳಿಮಾ. ೦೮೮-೬೦೫) ; ಸರಸಭಾಷಾಂಗಕ್ರಿಯಾಂಗೋತ್ಕರದ ನಾಟಕ ಗದ್ಯ ಪದ್ಯ ವಿಸರ ಮಧುರಗೀತೋಕ್ತಿಯಿಂ . . . ಸಿರಿಯಾಳಚರಿತೆಯನೊರೆದೊರೆದು ವಿರಚಿಪರು ಭಕ್ತಸಭಾಂತರಂಗಳೊಳು (ಬಸಪು. ೨೫-೨೦) ; ಭಾಷಾಂಗರಾಗ – ಜನಕರಾಗಗಳಲ್ಲಿಲ್ಲದ ಅನ್ಯಸ್ವರಗಳನ್ನು ತಮ್ಮ ಆರೋಹಣದಲ್ಲಾಗಲೀ, ಅವರೋಹಣದಲ್ಲಾಗಲೀ ಅಥವಾ ವಿಶೇಷ ಪ್ರಯೋಗಗಳಲ್ಲಾಗಲಿ ಹೊಂದುವ ರಾಗಗಳು (ಸಂಗೀಸಂ. ೩೩). [ಸಂ.]

**ಭಾಷಾಂಗಕಾಪಿ** (ನಾ). [ಸಂಗೀತ] ಒಂದು ರಾಗದ ಹೆಸರು : ಕರ್ನಾಟಕಸಂಗೀತದ ಲಕ್ಷ್ಯದಲ್ಲಿ ಮೂರು ಬಗೆಯ ಕಾಪಿರಾಗಗಳಿವೆ . . . ಮೂರನೆಯದು ಭಾಷಾಂಗಕಾಪಿರಾಗ (ಸಂಗೀಶ. ೫೦). [ಭಾಷಾಂಗ + ಕಾಪಿ₁]

**ಭಾಷಾಂಗಿ** (ನಾ). [ಸಂಗೀತ] ಒಂದು ಶ್ರುತಿಯ ಹೆಸರು ; ಧೈವತದ ಎರಡನೆಯ ಶ್ರುತಿ : ಸ್ವರದಿಂ ಶ್ರುತಿ ಸಮುತ್ಪತ್ತಿ . . . ಭಾಷಾಂಗಿ ವರ್ತಕಿ ಸಂಪೂರ್ಣೆಯೆಂಬ ಮೂಱು ಶ್ರುತಿಗಳೇ ಧೈವತಸ್ವರದಿಂದುದ್ಭವಿಸಿದವು (ಬಿವೇಕ. ೦೮೬). [ಸಂ. ಭಾಷಾಂಗೀ]

**ಭಾಷಾಂತರ** (ನಾ). ೧. ಭಾಷೆಗಳ ನಡುವಿನ ಅಂತರ,_ವ್ಯತ್ಯಾಸ: ಉಭಯ ಭಾಷಾಂತರವ ತಿಳಿದು ಪ್ರಸಿದ್ಧದಿಂದಭಿನವನಿಘಂಟನಭಿನವಮಂಗನುಸಿರ್ದನು (ಮಂಗರಾ. ೨-೫). ೨. ಬೇರೆ ಭಾಷೆ ; ಪರಭಾಷೆ ; ಅನ್ಯಭಾಷೆ. ೩. ಒಂದು ಭಾಷೆಯಲ್ಲಿರುವುದನ್ನು ಬೇರೆಭಾಷೆಗೆ ಮಾಡುವ ತರ್ಜುಮೆ,_ಅನುವಾದ : ದುರ್ಗೇಶನಂದಿನಿಯು 'ಐವನ್‌ಹೋ' ವಿನ ಭಾಷಾಂತರವೆಂದಾಗಲಿ ಭಾವಾಂತರವೆಂದಾಗಲಿ ಯಾರೂ ಹೇಳುವಂತಿಲ್ಲ (ಬಂಕಿಮ. ೦೫೦). ೪. ಬೇರೆಯ ಶಬ್ದ ; ಪ್ರತಿಶಬ್ದ : ಭಾರತದೊಳ್ಪನ ನುಡಿಯಂ ಚಾರು ಸುದೇಶೀಯವೆಂಬ ಭಾಷಾಂತರಮಂ ಸೂರಿಜನ ಮೆಚ್ಚೆ ಪೇಳ್ವೆಂ (ಶಾರಪಿ. ೨).

**ಭಾಷಾಂತರ ಮಾಡು** = ಬೇರೆ ಭಾಷೆಗೆ ತರ್ಜುಮೆ ಮಾಡು,— ಅನುವಾದ ಮಾಡು : ಗುರುಗಳು ಪಂಚತಂತ್ರದೊಳಗಿನದೊಂದು ಕಥೆಯನ್ನು ಭಾಷಾಂತರ ಮಾಡಲಿಕ್ಕೆ ಕೊಟ್ಟಿದ್ದಾರೆ (ಮುಂಬಯಿ. ೪-೦೩೨). [ಸಂ.]

**ಭಾಷಾಂತರಿಸು** (ಕ್ರಿ). ಬೇರೆಭಾಷೆಗೆ ಪರಿವರ್ತಿಸು, – ಅನುವಾದ ಮಾಡು : ಅವರು ಇಂಗ್ಲಿಷಿನ ಕೆಲವು ಕವನಗಳನ್ನು ಭಾಷಾಂತರಿಸಿದ್ದಾರೆ

(ನವಸಂಶೋ. ೧೧) ; ನಕಾಶೆಗಳ ಸಹಾಯದಿಂದ ಅವರು ಹಲವು ಹಳೆಯ ಲೇಖನಗಳನ್ನು ಭಾಷಾಂತರಿಸಿದರು (ರತ್ನಸೋ. ೧೧).
[ಭಾಷಾಂತರ + — ಇಸು₃]

**ಭಾಷಾಧೀಶ** (ನಾ). ಸರಸ್ವತಿಯ ಗಂಡ ; ಬ್ರಹ್ಮ : ಶ್ರೀಶ ಭಾಷಾಧೀಶರುಂ . . . ದೇವೇಶವಮುಖ್ಯಾಧೀಶರುಂ ನೆನೆದೋಲಯಿಸುತಿರಲು (ಬಸವ. ೨೪-೯೬). [ಸಂ.]

**ಭಾಷಾಪತ್ರ** (ನಾ). ಪ್ರತಿಜ್ಞೆ ಮಾಡಿದುದನ್ನು ನಡೆಸಿಕೊಡುವುದಾಗಿ ಬರೆದುಕೊಟ್ಟ ಪತ್ರ ; ಪ್ರತಿಜ್ಞಾಪತ್ರ : ಮಜ್ಜನಕ್ಕೆಜೀವದು ಲಿಂಗ ಅದು ಲಿಂಗೇಶರಸ್ಥಲದ ದಿಬ್ಯ ಗುರುವಚನ ಭಾಷಾಪತ್ರ ಶಿವಕರದಲ್ಲಿ (ಬಸವ. ೬೪೪) ; ಈ ಅರ್ಥದ ಆತನ ಸ್ವಹಸ್ತಾಕ್ಷರದ ಭಾಷಾಪತ್ರಕ್ಕೆ . . . ಕಯ್ಯುರೆಹದ ಸಾಕ್ಷಿಗಳನ್ನೂ . . . ತೋರುವವನಾಗು (ಜಠರುಗಂ. ೩೭-೧).
[ಸಂ.]

**ಭಾಷಾಪತ್ರಿಕೆ** (ನಾ). = ಭಾಷಾಪತ್ರ : ಮೊದಲು ಕೊಡಗಿನ ಮಹಾರಾಜರ ಕಡೆಯಿಂದ ಮಿತ್ರತ್ವವಾಂಛಲ್ಯವಿಟ್ಟು ಶಾಶ್ವತವಾಗಿ ನಡದು ಬರಬೇಕು ಎಂಬುದಾಗಿ ಭಾಷಾಪತ್ರಿಕೆ ಬರೆಸಿ (ರಾಜೇಂದ್ರ. ೮೪).
[ಸಂ. ಭಾಷಾಪತ್ರಿಕಾ]

**ಭಾಷಾಪರ್ಯಾಪ್ತಿ** (ನಾ). [ಜೈನ] ಆರುಬಗೆಯ ಪರ್ಯಾಪ್ತಿಗಳಲ್ಲಿ ಒಂದು ; ವಚನರೂಪವನ್ನುಂಟು ಮಾಡಲು ಕಾರಣವಾದ ಜೀವನ ಪರಿಪೂರ್ಣತೆ ; P ಸ್ವರವೆಂಬ ಕರ್ಮದ ಉದಯದಿಂದ ಭಾಷಾ ವರ್ಗಣಾರೂಪವಾದ ಪುದ್ಗಲಸ್ಕಂಧಗಳಿಗೆ ಸತ್ಯ, ಅಸತ್ಯ, ಉಭಯ, ಅನುಭಯ ಎಂಬ ಭಾಷಾರೂಪವಾದ ಪರಿಣಾಮದ ಶಕ್ತಿಯ ನಿಷ್ಪತ್ತಿ : ಯದುದಯಾದಾಹಾರಾದಿ ಪರ್ಯಾಪ್ತಿ ನಿವೃತ್ತಿ ಸ್ತತ್ಪರ್ಯಾಪ್ತಿನಾಮ ತತ್ ಷಡ್ವಿಧಮಾಹಾರಪರ್ಯಾಪ್ತಿನಾಮ . . . ಭಾಷಾಪರ್ಯಾಪ್ತಿನಾಮ ಮನಃಪರ್ಯಾಪ್ತಿನಾಮ ಚೇತಿ (ಗೊಮ್ಮಸಾ. ೬-೨). 'ಪರ್ಯಾಪ್ತಿ' ಪರಾ. [ಸಂ.]

**ಭಾಷಾಪ್ರೌಢಿ** (ನಾ). ಭಾಷೆಯಲ್ಲಿಯ ಪಾಂಡಿತ್ಯ, — ವಿಶೇಷಜ್ಞಾನ, — ಪಾರಂಗತತ್ವ : ಅವುಗಳ ವರ್ಣನೆಯಲ್ಲಿ ಭಾಷಾಪ್ರೌಢಿಯೂ, ಕಾವ್ಯಮಯವಿವೇಚನೆಯೂ . . . ಏರಿತು (ಶಾಟಸ. ೯). [ಸಂ.]

**ಭಾಷಾಮರ್ಯಾದೆ** (ನಾ). ಭಾಷೆಯ ರೀತಿ, — ಸ್ಥಿತಿ : ಪ್ರಥಮಾ ವಿಭಕ್ತಿಗೆ ಪ್ರತ್ಯಯ ಹೇಳಿರುವುದು ಕೇವಲ ಸಂಸ್ಕೃತ ಭಾಷಾಮರ್ಯಾದೆಯನ್ನು ಅನುಸರಿಸಿ (ದ್ರಾವಿಬಿ. ೨೦೬). [ಸಂ. ಭಾಷಾಮರ್ಯಾದಾ]

**ಭಾಷಾರೂಢಿ** (ನಾ). ಭಾಷೆಯ ಬಳಕೆ, — ಪ್ರಯೋಗ : ಇವುಗಳ ಪ್ರಯೋಗವು ತೊಡಕಾಗಿರುವುದರಿಂದ ಭಾಷಾರೂಢಿಯನ್ನು ನೋಡಿ ತಿಳಿದುಕೊಳ್ಳಬೇಕು (ಶುದ್ಧಕು. ೫೦). [ಸಂ.]

**ಭಾಷಾವಿಜ್ಞಾನ** (ನಾ). ಭಾಷೆಯ ಉತ್ಪತ್ತಿ, ಬೆಳವಣಿಗೆ ಮೊದಲಾದ ವಿಷಯಗಳಿಗೆ ಸಂಬಂಧಪಟ್ಟ ಶಾಸ್ತ್ರ ; ಭಾಷಾಶಾಸ್ತ್ರ : ಭಾಷಾವಿಜ್ಞಾನಕ್ಕೆ ಸಂಬಂಧಿಸಿದ ಲೇಖನಗಳು ಕನ್ನಡಪತ್ರಿಕೆಗಳಲ್ಲಿ ಆಗಾಗ್ಗ ಬೆಳಕು ಕಾಣುತ್ತಿದ್ದರೂ ಈವರೆಗೆ ಪ್ರಕಟವಾಗಿರುವ ಗ್ರಂಥಗಳು ಕೇವಲ ಮೂರೇ ಮೂರು (ದ್ರಾವಿಬಿ. IV, ಮುನ್ನುಡಿ). [ಸಂ.]

**ಭಾಷಾವಿಜ್ಞಾನಿ** (ನಾ). ಭಾಷಾವಿಜ್ಞಾನವನ್ನು ಬಲ್ಲವನು ; ಭಾಷಾಶಾಸ್ತ್ರಪಂಡಿತ : ಕನ್ನಡದಲ್ಲಿ ಭಾಷಾವಿಜ್ಞಾನಿಗಳು ಪ್ರಥಮಾವಿಭಕ್ತಿಯಿಲ್ಲವೆನ್ನಲು ಕೊಡುವ ಕಾರಣಗಳನ್ನು ಕೆಳಗಿನಂತೆ ಸಂಕ್ಷೇಪಿಸಬಹುದು (ಸಂಶೋಧ. ೫೨). [ಸಂ. ಭಾಷಾವಿಜ್ಞಾನಿನ್]

**ಭಾಷಾವಿದ** (ನಾ). ಭಾಷೆಯನ್ನು ಬಲ್ಲವನು ; ಭಾಷೆಯಲ್ಲಿ ಪಾಂಡಿತ್ಯವುಳ್ಳವನು : ದೋಷಂಗಳಂತು ಮಿಗೆ ಸಂಶ್ಲೇಷದೊಳಾದಂದು ಸಕಲವಿದ್ವತ್ಸಭೆಯೊಳ್ ದೂಷಿಸುಗುಂ ಕೃತಿವಧುವಂ ಭಾಷಾವಿದರ್ (ಕವಿರಾ ೧ ೧೧೧); ಭಾಷಾವಿದರ್ಕವಿತ್ವವಿಶೇಷಜ್ಞನಿರ್ಕಷರಪ್ಪೊಡಪ್ಪುದು ಸಭೆಯೊಳ್ (ಅಂಪು. ೧-೨೦) ; ಇಂಥ ಸಂದರ್ಭಗಳಲ್ಲಿ ಮೂಲಗ್ರಂಥಗಳ ಭಾವವು ದೇಶಭಾಷೆಗಳಲ್ಲಿ ಹೇಗೆ ವ್ಯಕ್ತವಾಗಿದೆಯೆಂಬುದನ್ನು ಭಾಷಾವಿದರು ತುಲನಾತ್ಮಕ ದೃಷ್ಟಿಯಿಂದ ಅರಿಯಬೇಕು (ಕಮಶಾಂ. ೦೦೬). [ಸಂ. ಭಾಷಾವಿದ್]

**ಭಾಷಾಶಾಸ್ತ್ರ** (ನಾ). = ಭಾಷಾವಿಜ್ಞಾನ : ಅಲ್ಲಿಂದ ಮುಂದೆ . . . ಅವರೇ ಭಾಷಾಶಾಸ್ತ್ರವನ್ನು ಬೋಧಿಸಿದರು ( ದ್ರಾವಿಬಿ. X, ಮುನ್ನುಡಿ ) ; ಸ್ವರೂಪನಿಷ್ಪತ್ತಿಯನ್ನು ಸಾಹಜಿಕವಾಗಿ ವಿವೇಚಿಸುವ ಭಾಷಾಶಾಸ್ತ್ರದಲ್ಲಿಯೂ ವಿಭಕ್ತಿಗಳ ವಿವರಣವು ಅನಿವಾರ್ಯವಾಗುತ್ತದೆ (ಸಂಶೋಧ. ೪೬). [ಸಂ.]

**ಭಾಷಾಸಂಸ್ಕರಣ** (ನಾ). ಭಾಷೆಯಲ್ಲಿರುವ ತಪ್ಪುಗಳನ್ನು ತಿದ್ದಿ ಶುದ್ಧಿಗೊಳಿಸುವಿಕೆ ; ಭಾಷೆಯ ಪರಿಷ್ಕಾರ : ಭಾಷಾಸಂಸ್ಕರಣಪ್ರಮಾಣನಯನಿಕ್ಷೇಪರ್ ಜಿನೇಂದ್ರಾಗಮಶೇಷಜ್ಞರ್ ನಿಃಶಷಜ್ಞರಪ್ಪುದುಚಿತಂ ವಿದ್ವತ್ಸಭಾಮಧ್ಯದೊಳ್ (ಸಂಶಬ್ದಾ. ೧-೪೭). [ಸಂ.]

**ಭಾಷಾಸಮಿತಿ** (ನಾ). [ಜೈನ] ಸಾಧುಗಳು ಆಚರಿಸಬೇಕಾದ ಐದು ಸಮಿತಿಗಳಲ್ಲಿ ಒಂದು; P "ದೂಷಿತ ಭಾಷೆಯನ್ನು ಪರಿತ್ಯಜಿಸಿ ಸದಾ ಸತ್ಯಪ್ರಿಯಕಲ್ಯಾಣಕಾರಿಯಾದ ವಾಣಿಯನ್ನೇ ಉಪಯೋಗಿಸಬೇಕೆಂಬ ಪ್ರತಿಜ್ಞೆ ; ದುರ್ಭಾಷಣ ರಹಿತನಾಗಿರುವುದು" (ಕೃಪಕೋ. ೦೯೪); ಕರ್ಮಕ್ಷಯನಿಮಿತ್ತಂ ಅನರ್ಥಕ ಬಹುಪ್ರಲಾಪವಿರಹಿತಮುಂ ಸ್ಫುಟಾರ್ಥಮುಂ ವ್ಯಕ್ತಾಕ್ಷರಮುಮಾಗಿ ಮಾತ್ಸರ್ಯಾನೃತಭ್ರಾಂತಿಕಷಾಯೋಪಹಾಸ್ಯಾಸಭ್ಯನಿಷ್ಠುರಧರ್ಮವಿರೋಧೀ ದೇಶಕಾಲವಿರೋಧ್ಯತಿಸಂಸ್ತವಾದಿ ವಾಗ್ದೋಷವಿರಹಿತಮಪ್ಪ ನುಡಿ ಭಾಷಾಸಮಿತಿ (ಕನ್ನಸ್ವಿ. ೩೦೫); ನಿರ್ಗ್ರಂಥಸಂಪ್ರದಾಯದಲ್ಲಿ ಭಾಷಾಸಮಿತಿಗೆ ಬಹಳ ಮಹತ್ತ್ವದ ಸ್ಥಾನವಿದೆ (ಕೃಪಕ. ೫೩೭). 'ಪಂಚಸಮಿತಿ' ಪರಾ. [ಸಂ.]

**ಭಾಷಿಕ** (ಗು). ೧. ಭಾಷೆಗೆ ಸಂಬಂಧಿಸಿದ. (ನಾ). ೨. ಮಾತನಾಡುವವನು; ಹೇಳುವವನು : ಭಾಷೆಯೊಳಗಿನ ಪದಗಳಿಗೆ ಪ್ರಾಪ್ತವಾದ ಅರ್ಥ—ಭಾವಗಳಿಂದ ಆಯಾ ಭಾಷಿಕರ ಮನಸ್ಸಿನ ಸಂಸ್ಕಾರ—ಸಂಸ್ಕೃತಿಯು ವ್ಯಕ್ತವಾಗುತ್ತಿರುತ್ತದೆ (ಕರ್ನಾಟಿ. ೦೫). [ಸಂ.]

**ಭಾಷಿತ** (ನಾ). ೧. ಹೇಳಲ್ಪಟ್ಟದ್ದು; ಮಾತು ; ವಚನ : "ಉಕ್ತಂ, ಭಾಷಿತಂ, ಉದಿತಂ . . . ಲಪಿತಂ — ೭ ಹೇಳಲ್ಪಟ್ಟದ್ದು, ನುಡಿಯಲ್ಪಟ್ಟದ್ದು" (ಸಿದ್ಧಾಂತಿ. ೪೫೨) ; ತಜ್ಜನಭಾಷಿತಮಾತ್ಮಚಿತ್ರಮಂ ಭೇದಿಸಿದಂತೆ ಲೋಕಪತಿಗಿಟ್ಟಂ . . . ಹರಿ ಶಾಂತಿನಾಮಮಂ ( ಶಾಂತಿಪು. ೧೧-೭೯ ) ; ತದೀಯ ಪರುಷಭಾಷಿತಂ ತನಗೆ ಕರ್ಣಶೂಲಮಾಗೆ . . . ನೀಡುಂ ನೋಡುತ್ತುಮಿರೆ (ಜಗಪ. ೬-೦೪ ವ). ೨. ಭಾಷೆ : "ಬ್ರಾಹ್ಮೀ, ಭಾರತೀ, ಭಾಷಾ . . . ಭಾಷಿತಂ, ವಚನಂ, ವಚಃ — ೧೩ ಮಾತಿನ ಹೆಸರುಗಳು, ಅಂದರೆ ನುಡಿಯ ಹೆಸರು" (ಸಿದ್ಧಾಂತಿ. ೪೪). [ ಸಂ. ]

**ಭಾಷಿಸು** (ಕ್ರಿ). ಮಾತನಾಡು; ನುಡಿ ; ಹೇಳು : ತಾ ಮುಸುಡನೆತ್ತೀಗ ಭಾಷಿಸನೋ (ಬಸವ. ೬೭-೧೧). [ಭಾಷಣ + —ಇಸು₃]

**ಭಾಷೆ** (ನಾ). ೧. ಮಾತು ; ನುಡಿ ; ಜನರು ತಮ್ಮ ಅಭಿಪ್ರಾಯವನ್ನು ಇತರರಿಗೆ ತಿಳಿಸಲು ಉಪಯೋಗಿಸುವ ಸಾಧನ; ಪದಪ್ರಯೋಗ : ತಿಳಿದವನ ಮತಿವಿದನ ಭಾಷಾವಳಿ ಲಿಪಿಜ್ಞನ ಸಾಕ್ಷರನ . . . ಸುಂದರದುಷ್ಕರ ತಿಳಿವ ಹೃದಯನ ಸಂಧಿವಿಗ್ರಹರೆನಿಸಬೇಕೆಂದ (ಕುಮಾವ್ಯಾ. ೬-೪೯) ; ಭಾಷೆಯಲ್ಲಿರುವ ಪದಗಳು ಹಲವು ; ವರ್ಣಗಳು ಕೆಲವು (ಶುದ್ಧಕು. ೦೦); ಅಕ್ಷರ ರೂಪದಿಂದ ಅಭಿವ್ಯಕ್ತವಾದ ಮನೋಭಾವನೆಯೇ ಭಾಷೆ (ಸಂಶೋಧ. ೦). ೨. ಕನ್ನಡ, ತಮಿಳು, ಸಂಸ್ಕೃತ ಮೊದಲಾದ ಬೇರೆಬೇರೆಯ ಮಾತು,—ವಾಙ್ಮಯ : ಸಂಸ್ಕೃತಂ ಪ್ರಾಕೃತಂ ಅಪಭ್ರಂಶಿಕಂ ಪೈಶಾಚಿಕಮೆಂಬ ಮೂಱುವರೆ ಭಾಷೆಗಳೊಳ್ ಪುಟ್ಟುವ ದ್ರವಿಡಾಂಧ್ರ ಕರ್ಣಾಟಕಾದಿ ಷಟ್ಪಂಚಾಶತ್ ಸರ್ವವಿಷಯಭಾಷಾಜಾತಿಗಳಕ್ಕಂ (ಛಂದೋಂಬು. ೧-೪೭ ವ);

ಕನ್ನಡದೊಳ್=ಕನ್ನಡ ಭಾಷೆಯಲ್ಲಿ (ಕವಿರಾ. ೩. ೧೬೪). ೩. ವಿದ್ಯಾಭಿಮಾನಿಯಾದ ದೇವತೆ; ಸರಸ್ವತಿ; ವಾಣಿ : "ವಾಕ್(ಗ್), ವಾಣಿ, ಭಾರತೀ, ಭಾಷಾ. . .ಸರಸ್ವತೀ_ಈ ೮ ಸರಸ್ವತಿಯ ಪೆಸರ್" (ಹಲಾಯು. ೩-೮); ಶ್ರುತದೇವಿ ವಾಣಿ ವಾಗ್ಭಾರತಿ ವಚನಂ ಭಾಷೆ ವಾಚಿ ಗೀರ್ ಬ್ರಾಹ್ಮಿ ಸರಸ್ವತಿ ವರದೆಯಾಗಿ . . . ತಿರ್ದುಗೆ ದಯೆಯಿಂ (ಪಶ್ವಕೋ. ೨-೬); ದೂಷಿಸಿದೊಡಾ ವೀರಭದ್ರನು ಪೂಷನೆಂಬನ ಹಲ್ಲನುದುರ್ಚನೆ ಭಾಷೆ ಮುಖಿಕೆಯಿತಂದಡಾಕೆಯ ನಾಸಿಕವನರಿದ (ಬಸವ. ೫೪-೫೨). ೪. ಆಣೆ ; ಶಪಥ ; ಪ್ರತಿಜ್ಞೆ : ಹಣ ಬಂಗಾರವಸ್ತ್ರ ಕಪ್ಪಡ ಬಟ್ಟೆಯಲ್ಲಿ ನೆಟ್ಟನೆ ಬಿದ್ದಿರಲು ಕಂಡು ಕಾತರಿಸಿ ಕೈಮುಟ್ಟಿ ಎತ್ತದ ಭಾಷೆ (ಅಪವ. ೨೦-೫೨); ವಿಪ್ರರ ಕರಸಿ ವೈದಿಕದಿಂದ ರಚಿಸಿದರಗ್ನಿಯನು ಮಾಡಿದರು ಭಾಷೆಗಳ (ಕುಮಾರರಾ. ೨-೬); ಐರಾವಣನು ಕಂಟಕವೆತ್ತಿ ಬಂದರೆ ತನ್ನ ನೆನೆಯೆಂದಿತ್ತ ಭಾಷೆಯ ನೆನಹು ಬಂದುದನಜಿತು ಚಿಂತಿಸಿದ (ಕೌಶಿರಾ. ೩೯-೨೦); ತಿಂಗಳಾರಕೆ ಮರಳಿ ಬಹೆನೆಂಬ ಭಾಷೆಯಂ ಭಾವಿಸುತ್ತೆ ಭಾಮಿನಿ ಸಮಾಧಾನಬುದ್ಧಿಯಿಂ. . . ನಡೆದಳ್ ಶಿಬಿರದೆಡೆಗೆ (ಜಕ್ಕಾಂಗ. ೫೬-೦೫೭೩). ೫. [ಜೈನ] ಪಾರಿವ್ರಾಜ್ಯಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು : ಭಾಷೆಯೆಂಬುದು ಪರಮಭಾಷಾಸುಂದರ ವದನಾರವಿಂದನಪ್ಪ ಜಿನಪತಿಯನಾರಾಧಿಸಿ ವಾಕ್ಸಮಿತಿಯಿಂ ತಪದೊಳ್ ನೆಗಟ್ದೊಡೆ ದಿವ್ಯಾದಿ ಭಾಷೆಗಳಂ ಪಡೆಗುಂ (ಶಾಪುಂಪು. ೨೩).

**ಭಾಷಾ ಚತುರ್ಭುಜ**=ನಾಲ್ಕುಭಾಷೆಗಳಲ್ಲಿ ಪಾರಂಗತನಾದವನು: ಒಂದು ಬಿರುದು : ದಣ್ಣನಾಯಕಸಿಖಾಮಣಿ ಭಾಷಾ ಚತುರ್ಭುಜಂ ಸುಜನಮುಖರಧ್ವಜಂ [ಶಾ]ನ್ತ್ಯಕೌನ್ತೇಯುಂ . . . ಶ್ರೀಮದ್ದಣ್ಣನಾಯಕ ದಾಮಪಯಂ ಉಚಂಗಿ ಮೂವತ್ತುಮನಾಲುತ್ತಮಿಬ್ದು (ಶಾಇ. VI, ೫೬೦-೩೫: 1070). **ಭಾಷಾವಾರು**=ಭಾಷೆಗೆ ಅನುಸಾರವಾದ ; ಭಾಷೆಯನ್ನು ಆಧಾರವಾಗಿ ಪರಿಗಣಿಸಿದ : ನಾವು ಈಗ ತಾನೆ ಭಾಷಾವಾರು ಪ್ರಾಂತರಚನೆಯ ಫಲವಾಗಿ ವಿಶಾಲಮೈಸೂರುಪ್ರಾಂತವನ್ನು ಗಳಿಸಿಕೊಂಡಿದ್ದೇವೆ (ಗ್ರಹಿ. iii, ಮುನ್ನುಡಿ). **ಭಾಷೆಗಳನೊದಗಿಸು**=ಪ್ರತಿಜ್ಞೆಗಳನ್ನು ಪೂರ್ಣಗೊಳಿಸು ; ಶಪಥಗಳನ್ನು ನೆರವೇರಿಸು : ಭಾಷೆಗಳನೊದಗಿಸಲಸಮಭಕ್ತಿಯನು ವೇದಿಸಲು . . . ಈ ಮಣಿಹವಾಗಿಳೆಗೆ ಬಂದ ಮಹಾ ಮಹಿಮ ಹರಮೂರ್ತಿ. . . ಮಾಚಯ್ಯ (ಬಸವ. ೩೬-೪೨). **ಭಾಷೆಗೆ ತಪ್ಪು**= ಆಡಿದ ಮಾತನ್ನು ನಡೆಸದಿರು ; ಕೊಟ್ಟ ಮಾತಿಗೆ ತಪ್ಪು : ಅವರ ಎಂದೂ ಭಾಷೆಗೆ ತಪ್ಪುವವರಲ್ಲ (ರೂಢಿ). **ಭಾಷೆಗೆ ತಪ್ಪುವ ರಾಯರ ಗಂಡ**= ವಚನಭ್ರಷ್ಟರಾದ ರಾಜರನ್ನು ದಂಡಿಸುವವನು ; ಒಂದು ಬಿರುದು : ಶ್ರೀಮನ್ಮಹಾಮಂಡಲೇಶ್ವರಂ ಅರಿರಾಯವಿಭಾಡ [ಭಾಷೆಗೆ ತಪ್ಪುವ ರಾ]ಯರ ಗಂಡ ಶ್ರೀ ವೀರಬುಕಂಣವೊಡೆಯರ ರಾಜ್ಯಾ[ಭ್ಯು]ದಯದಲೂ (ಶಾಇ. IX–ii, ೪೦೫-೩; 1357) ; ಭಾಷೆಗೆ ತಪ್ಪುವ ರಾಯರ ಗಂಡಃ ರೋಪಕೃದರ್ಥಿಷುಯೋ ರಣಚಂಡಃ (ಎಕ. VII, ಶಿವಮೊ. ೦-೬೩; 1513). **ಭಾಷೆ ಮುಟ್ಟಿಸು**=ಪ್ರತಿಜ್ಞೆಯನ್ನು ನೆರವೇರಿಸು ; ವಾಗ್ದಾನವನ್ನು ನಡೆಸು : ಅವನು ಭಾಷೆ ಮುಟ್ಟಿಸಿ ಎಲ್ಲರಿಂದಲೂ ಭಲಾ ಎನ್ನಿಸಿಕೊಂಡ (ರೂಢಿ). **ಭಾಷೆಯಂ ಕೊಡು**= ಮಾತು ಕೊಡು ; ವಚನ ನೀಡು : ಭಾಷೆಯಂ ಕೊಟ್ಟು ತಪ್ಪುವನಲ್ಲ ನೀನಾ ವಿಶೇಷಮಂ ಕಂಡು ಬಲ್ಲೆವು (ತ್ರಿಬುಶಾ. ೨-೬೦). **ಭಾಷೆಯಂ ನೀಗು**=ಪ್ರತಿಜ್ಞೆಯನ್ನು ಕಳೆ; ಶಪಥಕ್ಕೆ ಭಂಗವನ್ನು ತರು ; ಮಾತಿಗೆ ತಪ್ಪು : ಉದರ ನಿಮಿತ್ತಕೆ ಭಾಷೆಯಂ ನೀಗಿ (ಬಸವ. ೩೯-೦೬). **ಭಾಷೆಯಂ ಪ್ರತಿಪಾಲಿಸು**= ಕೊಟ್ಟ ಮಾತಿನಂತೆ ನಡೆ; ಕೊಟ್ಟ ಮಾತನ್ನು ನಡೆಸು : ಜಿನಸಮಯ ದುರುಶಿರವನರಿವೆನು ಭಾಷೆಯಂ ಪ್ರತಿಪಾಲಿಸುವೆನು (ಬಸವ. ೪೯-೦೩). **ಭಾಷೆಯಂ ಸಲಿಸು**= ಕೊಟ್ಟ ಮಾತನ್ನು ಉಳಿಸು ; ಶಪಥವನ್ನು ನಡೆಸು.– ಪೂರ್ಣಗೊಳಿಸು : ನಿನ್ನ ಅಂದಿನ ಭಾಷೆಯಂ ಸಲಿಸಿನ್ನು ತದ್ರೋಹಿಯನಪಹರಿಸಿ ನನ್ನಿಯಂ ಮೆರೆ (ಬಸವ. ೬೦-೭). **ಭಾಷೆಯನುಳಿ**=ಭಾಷೆಗೆ ತಪ್ಪು : ನಾಂ ಬೇಡೆಂದು ನಿಲಿಸಲು ಮದಿಸಿ ಭಾಷೆಯನುಳಿದು ಕೈದುವನೆನ್ನ ಮೇಲುರ್ಚಿ ಗದಜಿದನ ತಲೆಯಂ ಪಱಿದು ಪಾಯ್ಕಿದೆನು (ಬಸವ. ೨೮-೪೩). **ಭಾಷೆಯನೊದವಿಸು** = ಭಾಷೆಯಂ ಕೊಡು : ಎನ್ನ ಸ್ವಾಮಿ ಸಂಗಯ್ಯ. . .ಚಿತ್ತದ ಮಲಿನಮಂ ಕಳೆದು ಭಾಷೆಯನೊದವಿಸಿದನೆನಗೆನುತ ಪ್ರಾಣವನಂತು ಬಿಡಲು (ಬಸವ. ೩೭-೨೦). **ಭಾಷೆಯ ಬಂಟ**=ಪ್ರತಿಜ್ಞೆಗೆ ದಾಸನಾಗಿರುವವನು ; ಶಪಥವನ್ನು ನೆರವೇರಿಸಲು ಶ್ರಮಿಸುವವನು : ಮನೆಯಲ್ಲಿ ವೀರ ಧೀರ ರಣದಲ್ಲಿ ಓಸರಿಸದ ಮತ್ತೆ ಭಾಷೆಯ ಬಂಟನಲ್ಲ (ಮೋಹತಮಾ. ೨೮೩-೫೩). **ಭಾಷೆಯಾಡು**=ಮಾತನಾಡು : ನಮ್ಮ ದೇಶದಲ್ಲಿ ಬೇರೆ ಬೇರೆ ಕಡೆ ಬೇರೆ ಬೇರೆ ಭಾಷೆಯಾಡುವ ಜನರಿದ್ದಾರೆ (ರೂಢಿ). **ಭಾಷೆಯಿಡು**=ಆಣೆಯಿಡು ; ವಾಗ್ದಾನ ಮಾಡು ; ಪ್ರತಿಜ್ಞೆಮಾಡು : ಭಾಷೆಯಿಟ್ಟು ಹೇಳಿದ್ದೇನೆ ಕೇಳು, ನಿನ್ನನ್ನು ಮನೆಗೆ ಸೇರಿಸುವುದಿಲ್ಲ (ರೂಢಿ). **ಭಾಷೆಯೋರು**= ಕೊಟ್ಟ ಮಾತಿಗೆ ಬದ್ಧನಾಗಿರು ; ಆಡಿದ ಮಾತಿಗೆ ತಪ್ಪದಿರು : ತನ್ನದಿರೊಳಾದನ್ಯಶಬ್ದವನು ಪೆಸರುಗೊಂಡವನಂ ಕೊಲುವೆನೆಂಬಸಮ ಭಾಷೆಯೊಳಿರುತಿರಲು ಛಾಂದಸನದೊರ್ಬನು . . . ಮನೆಗೆಯ್ತರಲು (ಬಸವ. ೫೩-೩೯). [ಸಂ. ಭಾಷಾ]

**ಭಾಷೆಕಾಱ** (ನಾ). ಪ್ರತಿಜ್ಞೆ ಮಾಡಿದವನು ; ಆಣೆಯಿಟ್ಟುಕೊಂಡವನು: ತೆಱಹ ಕೊಡು ಕೊಡು ಭಾಷೆಕಾಱನು ಮೆಱೆದು ಹೋಗಲಿ ಮಹ್ನಕಂಡದೊಳೊಱಗುವುದ ನೋಡುವೆವೆನುತ ತನಗೆವಱಿತರಿಸೇನೆ (ಕುಮಾರರಾ. ೦೪-೩೬). [ಭಾಷೆ + – ಕಾಱ]

**ಭಾಷೆಕೊಡು** 'ಭಾಷೆಗೊಡು' ನೋ.

**ಭಾಷೆಗಳ್ಳ** (ನಾ). ಕೊಟ್ಟ ಮಾತಿಗೆ ತಪ್ಪುವವನು : ಕೆಲವೆಡೆಯೊಳುಂ ಪುಸಿಗರುರುಭಾಷೆಗಳ್ಳರುಂ ಕೆಲವೆಡೆಯೊಳುಂ ಸದಾ ಪರವಧೂಸಂಗದಲಿ ಹೃನ್ಮಗ್ನರಾಗಿರ್ಪರು (ದುರಳು. ೨-೦೫). [ಭಾಷೆ + ಕಳ್ಳ$_1$]

**ಭಾಷೆಗೆಡು** (ಕ್ರಿ). ಕೊಟ್ಟ ಮಾತಿಗೆ ತಪ್ಪು : ಭಾಷೆಗೆಟ್ಟಿರ್ದವನ ಸಭೆಯಲಿ ದೋಷವಲ್ಲಾ ಕುಳ್ಳಿತಿದ್ದಡೆ ಶೇಷಭೂಷಣಭಕ್ತರಿದ್ದಹರವರೆ ಸಾಕಿನ್ನು (ಬಸವ. ೩೭-೦೨). [ಭಾಷೆ + ಕೆಡು$_1$]

**ಭಾಷೆಗೊಡು, ಭಾಷೆಕೊಡು** (ಕ್ರಿ). ಮಾತುಕೊಡು; ವಾಗ್ದಾನ ಮಾಡು : ನಿಂದುಬ್ಬೆತೆ ಭಾಷೆಗೊಟ್ಟನಚಳಿತವೀರಂ (ಗಂಕ. ೬-೫೨). **ಭಾಷೆಕೊಡು** : ಭಾಷೆಕೊಟ್ಟವನು ಮೋಸಣೆ ಮಾಡನೆ ? (ಗಾದೆ). [ಭಾಷೆ + ಕೊಡು$_1$]

**ಭಾಷೆತಪ್ಪುಕ** (ನಾ). = ಭಾಷೆಗಳ್ಳ : ಆತ ದ್ರೋಹಿ ಭಾಷೆತಪ್ಪುಕನವನು ಭವದಲ್ಲಿ ಬಳಲುವನು (ದೇದಾಶ್ರ. ೦೨೩-೦೦೫). [ಭಾಷೆ + ತಪ್ಪುಕ]

**ಭಾಷೆವಂತ** (ನಾ). ಕೊಟ್ಟ ಮಾತನ್ನು ಪಾಲಿಸುವವನು ; ಆಡಿದ ಮಾತಿಗೆ ತಪ್ಪದಿರುವವನು ; ಲೇಸನಿಪ ಪಾಲಂಕಱವಂ ಭಾಷೆವಂತನು ಬಂಕಿದೇವನು (ಬಸವ. ೯-೩೮). [ಭಾಷೆ + —ವಂತ]

**ಭಾಷ್ಟಿಗೆ, ಬಷ್ಟಿಗೆ, ಭಾಟಿಗೆ** (ನಾ). (ಉಕ) ನಿಶ್ಚಿತಾರ್ಥ : ಆದೇಮುಂಜಾನೆ ನಾಲ್ಕುನಾಲ್ಕು ಸಾರೆ ಎಡತಾಕಿದರೂ ಭಾಷ್ಟಿಗೆಗೆ ಸೆಟ್ಟೆಯೂ ಇಲ್ಲ ಮಗದುಮನೂ ಇಲ್ಲ (ಜಕೋಕ. ೪). **ಬಷ್ಟಿಗೆ** : ಬಷ್ಟಿಗೆಯು ಹಾಕಿ ಕನ್ನೆಯನ್ನು ನಿಶ್ಚಯಮಾಡದ ಮೇಲೆ ವೇದೋಕ್ತ ಸಮ್ಮತ ಪ್ರಕಾರ ಲಗ್ನವಾಯಿತೇ ಹ್ಯಾಗೇ ? (ಕೃಶಿಶ್ರ. ೩೩೦). **ಭಾಟಿಗೆ** : ನೆಗಿಯಾಣಿನ ೮ರಕೊಂಡು ಬಾಲನ ಭಾಟಿಗ್ಗೆ ಬರಬೇಕ (ಪಲ್ಲಗ. ೫೦) ; ಆ ಕಾಲದ ನೈಮಿತ್ತಿಕಕಾರ್ಯಕ್ಕೆ ಭಾಟಿಗೆ ಅಥವಾ ಭಾಷ್ಟಿಗೆ ಹಾಕುವುದು ಎನ್ನುವರು (ಪಲ್ಲಗ. ೦೨೭ ಟೀಕ). 'ಭಾಸದಿ' ಪರಾ. [ ? ]

**ಭಾಷ್ಯ** (ನಾ): ೧. ವ್ಯಾಕರಣ, ವೇದಾಂತ ಮೊದಲಾದ ಶಾಸ್ತ್ರಗಳ ಮೂಲಭೂತವಾದ ಸೂತ್ರಗಳ ಅರ್ಥವನ್ನು ವಿವರಿಸುವ ಗ್ರಂಥ; ಸೂತ್ರಾನುಸಾರವಾದ ಪದಗಳಿಂದ ಸೂತ್ರಾರ್ಥವನ್ನು ವಿವರಿಸುವ ಹಾಗೂ ವಿವರಣೆಗಾಗಿ ಕೊಟ್ಟ ಪದಗಳನ್ನು ಮತ್ತೆ ವಿಸ್ತಾರವಾಗಿ ವಿವರಿಸುವ ಸೂತ್ರವ್ಯಾಖ್ಯಾನ : ಈ ವಿಚಾರದಲ್ಲಿ ವ್ಯಾಸರು ಒಂದು ಸೂತ್ರವನ್ನು ಸಿದ್ಧಾಂತರೂಪಕವಾಗಿ ಬರೆದಿರುತ್ತಾರೆ . . . ಈ ಸೂತ್ರಕ್ಕೆ ಶ್ರೀ ಶಂಕರರ ಭಾಷ್ಯವು ವಿಚಾರಣೀಯವಾಗಿದೆ (ಶ್ರೀಪಾಶ್ಯ. ೩೮); ಪೂರ್ವ ಕಾಲದಲ್ಲಿ ಈ ರೀತಿ ಸ್ಪಷ್ಟವಾಗಿತ್ತು ಎಂಬುದು ಭಾಷ್ಯಗಳ ಮೇಲೆ ಹೊರಟಿರುವ ವಾರ್ತಿಕವೆಂಬ ಗ್ರಂಥದ ಅರ್ಥದಿಂದಲೇ ಸ್ಪಷ್ಟವಾಗುತ್ತದೆ (ಹಿಂದಶಾ. ೧೩೦). ೨. ತತ್ತ್ವವಿಚಾರಗಳನ್ನು ಪ್ರತಿಪಾದಿಸುವ ಉಪನಿಷತ್ತು, ಗೀತೆ ಮೊದಲಾದ ಉದ್ಗ್ರಂಥಗಳ ಪ್ರೌಢವಾದ ವ್ಯಾಖ್ಯಾನ; ಯಾವುದೇ ಗಹನವಾದ ಮೂಲಗ್ರಂಥದ ವಿವರಣ ಗ್ರಂಥ : ಪಟಿಗಾಂಪರ ನುಡಿ ಮುತ್ತುಂಮೆಟಿಸುಂಗೋವಂದದಕ್ಕೆ ಭಾಷ್ಯಮನೊರ್ವಂ ಕಟಿಯೋದಿದಾತನಲ್ಲದೆ ಬಟೀವಟೆಯಿಂ ಬಂದು ಬರೆಯಲಾಗದಗಣ್ಯಂ (ಶಾಂತಿಪು. ೧೧-೧೬೦); ಭಗವತ್ಪಾದರಾದ ಶ್ರೀ ಶಂಕರರೇ ಭಗವದ್ಗೀತೆಗೆ ಭಾಷ್ಯ ಬರೆದವರಲ್ಲಿ ಪುರಾತನರು (ಶಾರದ. ೦೦೯). ೩. ಪಾಣಿನಿಯ ಸೂತ್ರಗಳಿಗೆ ಪತಂಜಲಿಯು ಬರೆದಿರುವ ಪ್ರಸಿದ್ಧವಾದ ವ್ಯಾಖ್ಯಾನ. [ಸಂ.]

**ಭಾಷ್ಯಕಾರ** (ನಾ). ೧. ಯಾವುದೇ ಸೂತ್ರಗ್ರಂಥದ ವ್ಯಾಖ್ಯಾನವನ್ನು ರಚಿಸಿದವನು.—ಭಾಷ್ಯವನ್ನು ರಚಿಸಿದವನು : ತಮ್ಮ ಸಿದ್ಧಾಂತದಲ್ಲೂ ಭಾಷ್ಯಕಾರರ ಕೆಲವು ಅಭಿಪ್ರಾಯಗಳನ್ನು ವಾರ್ತಿಕಕಾರರು ನಿರಾಕರಿಸಿ ಭಾಷ್ಯಕಾರರ ಅರ್ಥವನ್ನು ಆದರಿಸಬಾರದೆಂದು ಬರೆಯುತ್ತಾರೆ (ಹಿಂದಶಾ. ೦೩೦); ನಿರುಕ್ತಕಾರರಾದ ಯಾಸ್ಕರೂ, ನಿರುಕ್ತದ ಭಾಷ್ಯಕಾರರಾದ ಸ್ಕಂದಸ್ವಾಮಿ ಮತ್ತು ದುರ್ಗಾಚಾರ್ಯರೂ . . . ಉಲ್ಲೇಖಿಸಿದ್ದಾರೆ (ಶಾರದ. ೪೬). ೨. ಪಾಣಿನಿಯ ಸೂತ್ರಗಳಿಗೆ ಭಾಷ್ಯವನ್ನು ಬರೆದ ಪತಂಜಲಿ. ೩. ಬ್ರಹ್ಮಸೂತ್ರಗಳಿಗೆ ಭಾಷ್ಯಗಳನ್ನು ಬರೆದ ಶಂಕರ. ರಾಮಾನುಜ ಮತ್ತು ಮಧ್ವ ಆಚಾರ್ಯರು : ವಾಣಿ ರಾಮಾನುಜರ್ಗಿಂತಿರದತಿಸನ್ಮಾನಂಗೆಯ್ದು . . . ತಳ್ಕೈಸಿ ಭೂಮಿಯಲ್ಲಿ ನಿಮಗಿಂ ಶ್ರೀ ಭಾಷ್ಯಕಾರಾಹ್ವಯಂ ಸಮನಿಕ್ಕೆಂದತಿಹೃಷ್ಟೆಯಾದಳ್ (ಧಿಷ್ಯಕ.೦೩-೩೩೪); ದ್ವೈತವೇದಾಂತಮತವನ್ನು ಸ್ಥಾಪಿಸಿ ಭಾಷ್ಯಕಾರರೆನಿಸಿದ ಶ್ರೀಮನ್ಮಧ್ವಾಚಾರ್ಯರವರು ಭರತಖಂಡದಲ್ಲೆಲ್ಲಾ ತಮ್ಮ ಮತವನ್ನು ಪ್ರಚುರಗೊಳಿಸಿ ಪ್ರಖ್ಯಾತರಾದರು (ಆಚಾ. ೦೦) [ಸಂ.]

**ಭಾಷ್ಯೆ** (ನಾ). ವಿವರಣೆ; ವ್ಯಾಖ್ಯಾನ : ನಿನಗೆ ಸೂಚನೆ ಮಾತ್ರ ಬೇಕಾಗಿತ್ತಲ್ಲವೆ ? ಸೂಚನೆ ಕೊಟ್ಟಿರುವೆ. ಅದರ ಭಾಷ್ಯೆ ಹೇಳಲು ನನಗೆ ಸಾಧ್ಯವಿಲ್ಲ (ಹುಚ್ಚು. ೨೦೬). [ಸಂ. ಭಾಷ್ಯ]

**ಭಾಸ** (ನಾ). ೧. ಹೊಳಪು; ಪ್ರಕಾಶ; ಕಾಂತಿ. ೨. (ಮನಸ್ಸಿಗೆ) ತೋರುವುದು; ಹೊಳೆಯುವುದು : ಇಲ್ಲಿ ತನ್ನ ಅಭಿವ್ಯಕ್ತಿಗಿಂತ ಅನ್ಯಪ್ರಯೋಜನವನ್ನು ಅದು ಕಾಣದು. ತನ್ನ ಅನುಭವಗಳಲ್ಲದೆ ಅನ್ಯಾನುಭವಭಾಸಗಳಿಗೆ ಇಲ್ಲಿ ಎಡೆಯಿಲ್ಲ (ಕಾಶಗೀ. ೫). ೩. ಒಂದು ಬಗೆಯ ಪಕ್ಷಿ; ಹಾಲಕ್ಕಿ : "ಶಕುಂತಃ, ಭಾಸಃ_ಈ ೨ ಪಿಂಗಲಿ" (ಹಲಾಯು. ೪೦-೯೪); ದ್ರೋಣನು . . . ಶಿಲ್ಪಿಯಿಂದ ಒಂದು ಕೃತ್ರಿಮವಾದ ಭಾಸಪಕ್ಷಿಯನ್ನು ಮಾಡಿಸಿ ಅದನ್ನು ಅವರಿಗೆ ತಿಳಿಯದಂತೆ ಒಂದು ಮರದ ತುದಿಗೊಂಬೆಗೆ ಕಟ್ಟಿಸಿ (ಪಕಥಾ. ೨೦). ೪. ಹದ್ದು; ಗೃಧ್ರ : ಈಸು ದೊಡ್ಡಿತು ಮಾಡಲೇನಾ ಭಾಸನನು ಸಾಕಿಂದು ಮಾಲಿ ಹುತಾಶನರ ನಂದನರು ಕೆದಱಿದರ್ ರುಪರಾಕ್ರಮವ (ಕೊರಡಾ. ೦-೯-೨೬). ೫. ಹುಂಜ; ಕುಕ್ಕುಟ. ೬. ದನಗಳ ಕೊಟ್ಟಿಗೆ; ಗೋಷ್ಠ. ೭. ಒಬ್ಬ ಸುಪ್ರಸಿದ್ಧನಾದ ಸಂಸ್ಕೃತ ನಾಟಕಕಾರ : ವಿದ್ವಾಂಸರು ಭಾಸನ ನಾಟಕಗಳನ್ನು . . . ಬೆಂಕಿಯಲ್ಲಿ ಹಾಕಲು ಅವುಗಳಲ್ಲಿ ಸ್ವಪ್ನವಾಸವದತ್ತವನ್ನು ಬೆಂಕಿ ಸುಡಲಿಲ್ಲ (ಸಂಪಾಟಿ. ೬೦).

**ಭಾಸವಾಗು** = ಕಾಣು; ತೋರು: ಒಬ್ಬರಿಗೆ ಅಮೃತದಂತೆ ಕಂಡದ್ದು ಇನ್ನೊಬ್ಬರಿಗೆ ವಿಷದಂತೆ ಭಾಸವಾಗಬಹುದು (ಸುಪಸಂ. ೩); ಪಾಠ ಮೊದಲಿನಿಂದ ಕೊನೆಯವರೆಗೂ ಮಕ್ಕಳಿಗೆ ಲೀಲೆಯಂತೆ ಭಾಸವಾಗಬೇಕು (ಶಿಕ್ಷದ. ೨೩೯). [ಸಂ.]

**ಭಾಸಕ** (ಗು). ೧. ಬೆಳಕು ಬೀರುವ; ಪ್ರಕಾಶಪಡಿಸುವ. ೨. ತೋರಿಸುವ : ಸ್ಪಷ್ಟಪಡಿಸುವ. ೩. ಸ್ಪಷ್ಟವಾದ; ತಿಳಿಯಲಾಗುವ; ಸುಗಮವಾದ; ಸರಳವಾದ. (ನಾ). ೪. ತೋರಿಸುವುದು; ಪ್ರಕಾಶಪಡಿಸುವುದು : ಇದೇ ರೀತಿ ಪದವ್ಯಂಗ್ಯವೆಂಬ ಧ್ವನಿಯಲ್ಲಿಯಾದರೂ ಅನ್ಯನಿರಪೇಕ್ಷವಾದ ಪದವೇ ಸ್ವಾರ್ಥವನ್ನು ನೆನಪಿಗೆ ತರುವ ಮೂಲಕ ರಸಾಭಿವ್ಯಕ್ತಿಯೋಗ್ಯವಾದ ಅರ್ಥಕ್ಕೆ ಭಾಸಕವೆನಿಸಬಹುದು (ಧ್ವನ್ಯಾಲೋ. ೦೩೩ ೮೨೩). [ಸಂ.]

**ಭಾಸದಿ** (ನಾ). (?) : ಅರಸನನುಮತಿಯಿಂದ ದೃಢರಥ ತರುಣಿಗೆಣ್ಣೆಯನೊತ್ತಿಸಿದ ಬಂಧುರವಿ ಪುಷ್ಪಾಸ್ತ್ರನಿಗೆ ಭಾಸದಿಯುಕ್ಕುವಂದದಲಿ ಸುರಸತಿಗೆ ನವದಿವ್ಯವುದಕವನೆರೆವ ಸುರಕಾಂತೆಯರ ತೆರದೊಳು ಹರುಷದೊಳು ಮಜ್ಜನವ ವಿರಚಿಸಲಾಳಿರನ್ನೆಯರು (ಶಪಊ. ೦೯-೨). 'ಭಾಷ್ಟಿಗೆ' ಪಠಾ. [ ? ]

**ಭಾಸಾಧಿಪ** (ನಾ). ಪ್ರಕಾಶಕ್ಕೆ ಒಡೆಯನಾದವನು; ಸೂರ್ಯ : ದಾಶರಥಿಗಳ್ ಸ್ನಾನಮಂ ಮಾಡಿ ಬೇಗದಿಂ ಭಾಸಾಧಿಪಂಗರ್ಘ್ಯವಿತ್ತಾಹ್ನಿಕ ಕ್ರಿಯೆಯ ರಚಿಸಿ (ತೊರಾರಾ. ೦-೦೨-೩). [ಸಂ.]

**ಭಾಸಿಸು** (ಕ್ರಿ). ೧. ಹೊಳೆ; ಪ್ರಕಾಶಿಸು. ೨. ಶೋಭಿಸು; ಕಂಗೊಳಿಸು : ಭಾಸಿಸುವ ಜಿಹ್ವೇಂದ್ರಿಯದೊಳೆ ಗುರುಲಿಂಗ ಕಂಭೋಮುಖದೆ ರಸವನಿತ್ತು (ಚನ್ನಬಾ. ೦೨-೩೬); ಭಾಸಿಪ ರಂಭೆಯೂರ್ವಶಿ ತಿಲೋತ್ತಮೆ . . . ಈ ಸುಂದರಿಗೇನು ಸಾಟಿ (ಬೋಚಕ. ೦೦-೪); ತಾಪಗಳಿಲ್ಲದನವರತ ಭಾಸಿಸುವ ಮುನಿಜನೋಪಾಸಿತದಖಂಡತೇಜೋರಾಶಿ . . . ಬೆಳಗಿತಾ ಮುನಿಯ ಕಣ್ಗೆ (ತೊರಾರಾ. ೦-೨-೩೯).

[ (ಸಂ. ಭಾಸನ) + — ಇಸು ]

**ಭಾಸುರ** (ಗು). ೧. ಹೊಳೆಯುವ; ಪ್ರಕಾಶಮಾನವಾದ. ೨. ಅಂದವಾದ; ಶೋಭಿಸುವ; ಭವ್ಯವಾದ : ಅಣುವಂ ಕಂಡಂ ಪರಮಾನುಭಾವಭಾಸುರ ಸುರರಾಜೋಪಮಿತ ವಿವಿಧವಿಭವೋದಯನಂ (ಕವಿರಾ. ೨-೯೦); ಪ್ರಾಸಾಭಾಸಂ ಮೂಱುಂ ಭಾಸುರಕಂಜಾಯತಾಕ್ಷಿ ಕೇಳದ ನೊರೆವೆಂ (ಛಂದೋಂಬು. ೦-೪೬ ಅವತ); ಭಾಸುರ ವಾರಣಾಸಿಯಂ ಪೊಕ್ಕನುತ್ತಮನೃಪಂ (ಹತಕಾ. ೦೦-೩೩); ಭಾಸುರಕುಸುಮಗಳಿಂದೆ ಹರನಂ ಯಜಿಪಂ (ಹರಿಶ್ಚ. ೨-೩೦). (ನಾ). ೩. ಅಂದ; ಶೋಭೆ; ಸೌಂದರ್ಯ : ಬಿಜ್ಜಳನೃಪತಿಯುಲ್ಲಾಸದಿಂ ಭಂಡಾರಿ ಬಸವನಚೀಶನಂ ನವರತ್ನಮಯಸಿಂಹಾಸನದ ಮೇಲೆ ಭಾಸುರಂ ಮಿಗೆ ಕುಳ್ಳಿರಿಸಿ (ಬಸಪು. ೩೯-೩೬). ೪. ಶೂರ; ಕಲಿ. [ಸಂ.]

**ಭಾಸೆ** 'ಬಾಸ್ಕೆ' ನೋ.

**ಭಾಸ್ಕರ** (ಗು). ೧. ಬೆಳಕನ್ನುಂಟುಮಾಡುವ; ಹೊಳೆಯುವ; ಪ್ರಕಾಶಿಸುವ. (ನಾ). ೨. ನೇಸರು; ರವಿ; ಸೂರ್ಯ : "ಆದಿತ್ಯಃ, ಸವಿತಾ . . . ಭಾಸ್ಕರಃ, ತಿಗ್ಮಾಂಶುಃ, ದ್ವಾದಶಾತ್ಮಾ, ತ್ರಯೀತನುಃ _ ಈ ೪೭ ಆದಿತ್ಯನ ಪೆಸರ್" (ಹಲಾಯು. ೬-೩೫); ಸಿತನುಂ ಭಾಸ್ಕರನುಂ ನಿಲೆ ಚತುರ್ಥದೊಳ್. . . ಜನಪತಿಯಕ್ಕುಂ (ಜಾತಕ. ೦೨-೨೫); ಮನದೊಳ್ ಭಾಸ್ಕರನಂ ಬೇಡಿ ಮತ್ತಂ ಪ್ರಕಾಶದೊಳ್

ಇದೆ ರಥಂ ಸಿದ್ಧಮಡರಿಮೆನೆ (ರಾಜಶೇ. ೨೯-೨೨). ೩. 'ಜೀವಂಧರ ಚರಿತೆ' ಎಂಬ ಷಟ್ಪದಿ ಕಾವ್ಯವನ್ನು ರಚಿಸಿದ ಕನ್ನಡದ ಒಬ್ಬ ಕವಿಯ ಹೆಸರು: ಈ ಕೃತಿರಚಿತ ಕವಿವರನು ವಿತತ ವಿಶ್ವಾಮಿತ್ರ ಗೋತ್ರಾನ್ವಿತ ಸರಸಬಸವಾಂಕಸುತವಿಶ್ರುತನು ಭಾಸ್ಕರನು (ಜೀವಂಚ. ೦-೩೩); ಭಾಸ್ಕರನು ಕುಮಾರವ್ಯಾಸಭಾರತದಿಂದ ಕಾವ್ಯಭಾಗಗಳನ್ನು ಒಂದೆರಡು ಕಡೆಗಳಲ್ಲಿಯಾದರೂ ಎರವಲಾಗಿ ತೆಗೆದುಕೊಂಡಂತಿದೆ (ಕಾಚ. ೨೩೩). ೪. 'ಬೇಹಾರಗಣಿತ' ವೆಂಬ ಗ್ರಂಥವನ್ನು ರಚಿಸಿದ ಕನ್ನಡದ ಒಬ್ಬ ಕವಿಯ ಹೆಸರು: ಭಾಸ್ಕರ. ಸು. ೧೬೫೦– ಈತನು ಬೇಹಾರಗಣಿತವನ್ನು ಬರೆದಿದ್ದಾನೆ (ಕಚ. II, ೩೩೦). ೫. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ: ಇಂದುಗಣಂ ಶರಸಂಖ್ಯೆಯೊಳೊಂದಿರೆ ಚಂದ್ರಧರಂ ಬಂದು ಪದಾಂತದೊಳಿರ್ದೊಡೆ ಭಾಸ್ಕರನೊಳ್ ಯತಿಯುಂ ನಿಂದು ವಿರಾಜಿಸೆ ನಾಕಿಗನಿಂ ಪಡೆದತ್ತು ಜಗದ್ವಂದಿತಂ (ಛಂದೋಂಬು. ೨-೦೬೦). ೬. [ಛಂದ] ಎರಡು ಲಘುಗಳ ಮಧ್ಯೆ ಒಂದು ಗುರುವಿರುವ ಗಣ; ಜಗಣ (∪–∪): ಉರ್ವೀಪಮಾರುತ ಭಾಸ್ಕರಾನಿಲವಿಯದ್ವಂದ್ವಂ ಪದಾಂತಂಗಳೊಳ್. . . ಶಾರ್ದೂಲವಿಕ್ರೀಡಿತಂ (ಛಂದೋಂಬು. ೨-೦೬೩). [ಸಂ.]

**ಭಾಸ್ಕರನಂದನ** (ನಾ). ೧. ಸೂರ್ಯನ ಮಗ. ೨. ಕರ್ಣ: ಹಿಂದಣಿಗೆ ತಿರುಗಿದನು ಭಾಸ್ಕರನಂದನನು ಬಲವಂಕದಲಿ (ಕುವ್ಯಾದ್ರೋ. ೬-೩೦). ೩. ಯಮ. ೪. ಶನಿ. ೫. ಸುಗ್ರೀವ. [ಸಂ.]

**ಭಾಸ್ಕರವಾರ** (ನಾ). ಸೂರ್ಯನು ಅಧಿದೇವತೆಯಾಗಿರುವ ವಾರ; ಭಾನುವಾರ; ಆದಿತ್ಯವಾರ: ಕೃಷ್ಣಸಪ್ತಮಿಯೊಳ್ ಭಾಸ್ಕರವಾರದಂದು (ಎಕ.VI, ಕಡೂರು. ೫೦-೫೮; 1169). [ಸಂ.]

**ಭಾಸ್ಕರಸುತ** (ನಾ). =ಭಾಸ್ಕರನಂದನ ೨: ಭಾಸ್ಕರಸುತನಿಂ ನಾಲ್ವಡಿ ಮುರಹರನಿಂದ್ಮೆವಡಿ ನೆಗಟ್ಟಿಯದಟರ ಭೀಮಂ (ಕವಿಪ. ೬೭ ಶ್ಲೋ). [ಸಂ.]

**ಭಾಸ್ಕರಸ್ವರ** (ನಾ). ಸೂರ್ಯಸ್ವರ; (ಮನುಷ್ಯನ) ಬಲಭಾಗದ ಮೂಗಿನ ಹೊಳ್ಳೆಯಿಂದ ಹೊರಡುವ ವಾಯು: ಒಂದು ದಿನ ತನುವಿನಲಿ ನಡೆವುದು ಇಂದುಭಾಸ್ಕರಸ್ವರಗಳಿಪ್ಪತ್ತೊಂದು ಸಾವಿರದಾಱನೂಱನು ಯೋಳುಭಾಗದಲಿ ಬಂದುದನು . . . ತಂದು (ಹಂಸಾ. ೯೮); ಇಂದು ಭಾಸ್ಕರ=ಸೂರ್ಯ ಚಂದ್ರರ, ಸ್ವರ=ಶ್ವಾಸಗಳು, (ಒಳಹೊರಶ್ವಾಸಗಳು) (ಹಂಸಾ. ೯೮ ಟೀ). [ಸಂ.]

**ಭಾಸ್ಕರಾಪತ್ಯ** (ನಾ). [ಜ್ಯೋತಿ] ಶನಿಗ್ರಹ: ಭಾಸ್ಕರಾಪತ್ಯನುಮಂಗಾರಕನುಂ ಮೇಣ್ ಕೂಡಿರೆ ದಾರಕನಬ್ದದ್ವಯಕ್ಕೆ ಲಯಮಾಗದಿರಂ (ಜಾತಿ. ೬-೦೯). [ಸಂ.]

**ಭಾಸ್ಕರಿ** (ನಾ). =ಭಾಸ್ಕರಾಪತ್ಯ: ಇರೆ ನೀಚಾಂಶಕದೊಳ್ ಹಿಮಾಂಶು ಮೃಗಕುಂಭಕ್ಷೇತ್ರದೊಳ್ ನೋಡೆ ಭಾಸ್ಕರಿ (ಜಾತಿ. ೪-೨೩). [ಸಂ.]

**ಭಾಸ್ವರ** (ಗು). ೧. ಹೊಳೆಯುವ: ಪ್ರಕಾಶಮಾನವಾದ. ೨. ಭವ್ಯವಾದ; ಉಜ್ಜ್ವಲವಾದ: ಭಾಸ್ವರಭಕ್ತಿಯಿಂದೆಜಗೆ ದೇವಗಣಂ (ಪುಷ್ಪ. ೦೦-೦೯). (ನಾ). ೨. ಒಂದು ಮೂಲಧಾತು; ರಂಜಕ: "ಸಾಮಾನ್ಯ ಶಾಖದ ವಾತಾವರಣದಲ್ಲಿ ಆಮ್ಲಜನಕದೊಡನೆ ಸಂಯೋಗ ಹೊಂದಿ ನಿಧಾನವಾಗಿ ಸುಡುತ್ತ, ಈ ಕಾರಣದಿಂದ ಕತ್ತಲೆಯಲ್ಲಿ ಹೊಳೆಯುವ, ಝಳದಿ ಛಾಯೆಯ, ಮೇಣದಂಥ, ಒಂದು ಅಲೋಹಮೂಲಧಾತು: ರಂಜಕ; ಭಾಸ್ವರ" (Phophorus. ಇಂಕೊ). [ಸಂ.]

**ಭಾಸ್ವರಬೋಧ** (ನಾ). ೧. ದಿವ್ಯಜ್ಞಾನ. ೨. ಭವ್ಯವಾದ ಜ್ಞಾನವನ್ನು ಪಡೆದಿರುವವನು; ದಿವ್ಯಜ್ಞಾನಿ: ಭಾಸ್ವರಬೋಧ ನೀನಱಿಪಿದ್ದೈ ನುಡಿಯೊಳ್ ನೃಪನೀತಿಸಾರಸರ್ವಸ್ವಮಂ (ಶಾಂತಿಪು. ೨-೫೪). [ಸಂ.]

**ಭಾಸ್ವರರೂಪ** (ನಾ). ಪ್ರಕಾಶಮಾನವಾದ ಆಕಾರ: ಕಾಂತಿಯುಕ್ತವಾದ ಸ್ವರೂಪ: ಶುಕ್ತಿಯಲ್ಲಿ ರಜತಜ್ಞಾನವು ಹುಟ್ಟುವ ಕ್ರಮ ಹೇಗೆಂದರೆ—ಇಂದ್ರಿಯಸಂಪ್ರಯೋಗದಿಂದ ಶುಕ್ತಿಗು ವ್ಯಕ್ತಿಯೂ ಭಾಸ್ವರರೂಪದಿಂದ ಸಹಿತವಾಗಿ ಗೃಹೀತವಾಗುವುದು (ಛಾತತ್ತ್ವ. ೩೮೯). [ಸಂ.]

**ಭಾಹದರು** 'ಬಹಾದುರ್' ನೋ.

**ಭಾಹೊ** (ಅ). ಮೆಚ್ಚುಗೆ, ಹರ್ಷ ಮೊದಲಾದ ಭಾವಗಳನ್ನು ಸೂಚಿಸುವ ಒಂದು ಅವ್ಯಯ: ಚಕ್ರೇಶ ಚಲದಂಕಮಲ್ಲ . . . ಭಾಹೊಯೆನೆ ವಕ್ರವಿಲ್ಲದೆ ಬರುತಿರ್ದ (ಶಕತ. ೫೦-೫೩).

**ಭಾಳ** 'ಭಾಲ' ನೋ.

**ಭಾಳನಯನ** (ನಾ). ಹಣೆಯಲ್ಲಿ- ಕಣ್ಣುಳ್ಳವನು; ಹಣೆಗಣ್ಣ; ಶಿವ: ಭಾಳನಯನಪ್ರತಿಮಾಕರುಣಾಲೋಲಮಾನಸ (ಬಸಪು. ೨೨-೫೨). [ಸಂ. ಭಾಲನಯನ]

**ಭಾಳನೇತ್ರ** (ನಾ). ೧. (ಶಿವನ) ಹಣೆಗಣ್ಣು: ಆ ಗಣಾಂಗಳ ನಡುವೆ ಮೆಱೆಮಿಂಡನೊಪ್ಪಿದಂ . . . ಭರ್ಗನ ಭಾಳನೇತ್ರದಂತೊಪ್ಪಿದಂ (ವೀಚರಿ. ದೀ. ೬೨-೦೦); ಮುಚ್ಚಿದಭವನ ಭಾಳನೇತ್ರದ ಮುಚ್ಚುಳವ ತೆಱೆದುರಿವ ಕಿಚ್ಚನು ಬಿಚ್ಚಿ ಬೀಸಿದ ತೆಱದಲುಱೆ ಅಟ್ಟಿದನು ಮರ್ಕಟರ (ಕೌಶಿರಾ. ೨೦-೩೪). ೨. = ಭಾಳನಯನ: ಭಾಳನೇತ್ರಂಗೆ ತಾಂ ಸದೃಶನೀ ಕೌಶಿಕಂ (ಶ್ರೀರಾಮಪ. ೩೦-೬೦). [ಸಂ. ಭಾಲನೇತ್ರ]

**ಭಾಳಪಟ್ಟ** 'ಭಾಲಪಟ್ಟ' ನೋ.

**ಭಾಳಲಾಂಛನ** (ನಾ). ಹಣೆಯಲ್ಲಿ ಧರಿಸುವ ವಿಭೂತಿ ಮೊದಲಾದ ಗುರುತು,-ಚಿಹ್ನೆ: ಬೇರೆಯ ಕೆಲವರು 'ಭಸಿತ_ಗಂಧಾಕ್ಷತೆ'ಗಳನ್ನೂ 'ಭಾಳಲಾಂಛನ'ವನ್ನಾಗಿ ಮಾಡಿಕೊಂಡರು (ಕನ್ನಡಿ. ೯೬). [ ಸಂ. ಭಾಲಲಾಂಛನ ]

**ಭಾಳಲಿಪಿ** (ನಾ). ಹೀಗೆ ಹೀಗೆ ಆಗಬೇಕೆಂದು ಬ್ರಹ್ಮನು ಹಣೆಯಲ್ಲಿ ಬರೆದಿರುವನೆಂದು ನಂಬಲಾದ ಅಕ್ಷರ,— ಬರವಣಿಗೆ; ಹಣೆಯ ಬರಹ; ವಿಧಿಬರಹ: ಕಾಳಗದಲಿಂದಹಿತರಾಯರ ಭಾಳಲಿಪಿಗಳ ನೊರಸುವೆನು (ಕುವ್ಯಾಕ. ೨೦-೨); ಕೊಡೆಮೇ ತೋರ್ಪೀ ನಿಶಾಚರಪಡೆಯ ಭಾಗ್ಯದ ಭಾಳಲಿಪಿಯನು (ತೊರರಾ. ೩-೬-೪). [ಸಂ. ಭಾಲಲಿಪಿ]

**ಭಾಳಲೋಚನ** (ನಾ). = ಭಾಳನಯನ: ಭಾಳಲೋಚನನಾದೊಡಂ ಕಾದಿ ತಂದಪೆವು (ಇಹರ. ದೀ. ೩೬-೮); ಬರಹೇಳಲಾಪರೆ ಕರೆ ಸಹಾಯಕೆ ಭಾಳಲೋಚನನ (ಕುವ್ಯಾದ್ರೋ. ೨-೦೬); ಅಂಗದನು ತಿರುಗಲು ಭಾಳಲೋಚನ ಮೆಚ್ಚುತಿರೆ ಭೂಪಾಲ ರಾಘವನಂಗಚಿತ್ರವನಿತ್ತು ಮನ್ನಿಸಿದ (ತೊರರಾ. ೨೦-೩೪); ಕೋಳಿ ಕೂಗದ ಮುನ್ನ ಏಳುವದು ನಿತ್ಯದಲಿ ಭಾಳಲೋಚನನ ಭಕ್ತಿಯಿಂ ನೆನೆದರೆ ಆಳಿನಾಳಯ್ಯ (ಸರ್ವಜ್ಞ. ೨೯೬). [ಸಂ. ಭಾಲಲೋಚನ]

**ಭಾಳವಿಲೋಚನ** (ನಾ). = ಭಾಳನಯನ: ಸನ್ನುತಾಮಳಸುಚರಿತಂ ಪ್ರಚ್ಛನ್ನಭಾಳವಿಲೋಚನನು (ಬಸಪು. ೩೦-೨). [ಸಂ. ಭಾಲವಿಲೋಚನ]

**ಭಾಳಾಂತರ** (ನಾ). ಹಣೆಯ ಮಧ್ಯಭಾಗ,-ಮಧ್ಯ: ಬರೆಯಬಲ್ಲನು ಬರೆದ ಬರಹವನೊರಸಲಱಿಯೆನು ಜಗದ ಭಾಳಾಂತರದಲೀ ಸಚರಾಚರದ ತತ್ಕರ್ಮಫಲವಿಡಿದು (ತೊರರಾ. ೦-೮-೬೦); ಶಿಶುವಿನ ಭಾಳಾಂತರದೊಳಿಟ್ಟಳು ಮಂತ್ರಿಸಿದ ವಿಭೂತಿಯ ಬೊಟ್ಟು (ಮೋಹಕ. ೪-೭೬). [ಸಂ. ಭಾಲಾಂತರ]

**ಭಾಳಾಂಬಕ** 'ಭಾಲಾಂಬಕ' ನೋ.

**ಭಾಳಾಕ್ಷ** 'ಭಾಲಾಕ್ಷ' ನೋ.

**ಭಾಳಾಕ್ಷರ** (ನಾ). = ಭಾಳಲಿಪಿ: ಬರೆಯಬಲ್ಲನು ಬರೆದ ಬರಹವ ನೊರಸಲಱಿಯೆನು ಜಗದ ಭಾಳಾಂತರದಲಿ . . . ನಿರ್ಭರದ ಭಾಳಾಕ್ಷರದ ವಿಧಿಗೆ ವಿಧಾತ್ರ ನೀನೆಂದ (ತೊರರಾ. ೦-೮-೬೦). [ಸಂ. ಭಾಲಾಕ್ಷರ]

**ಭಾಳಾಕ್ಷಿ** (ನಾ). [ಜೈನ] ಹಣೆಯಲ್ಲಿ ಕಣ್ಣುಳ್ಳವಳು; ಜ್ವಾಲಾಮಾಲಿನಿ: ಚಳದ್ಭಾಳಾಕ್ಷಿ ಸಂಪ್ರೀತಿಯಿಂ ಜ್ವಾಳಾಮಾಳಿನಿ ಮಾಟಕ್ಕೆ ಮಂತ್ರಕೃತಿಗೆ ನಿರ್ವಿಘ್ನೋಕ್ತಿನಿರ್ವಾಹಮಂ (ಶಂಪ್ರಶು. ೦-೯).
[ಸಂ. ಭಾಲಾಕ್ಷೀ (ಭಾಲ + ಅಕ್ಷಿ + —)]

**ಭಾಳೇಕ್ಷಣ** (ನಾ). ೧. ಹಣೆಗಣ್ಣು : ಶಿವನಿಂತೇಳ್ತಂದು ಭಾಳೇಕ್ಷಣಮಂ ನೆರೆಯೆ ತಾಂ ಕಿಡಿಸುಟ್ಟು ತನ್ಮಾಯೆಯುಮಂ ತೂಳ್ದು . . . ಗೆಲ್ದೊಪ್ಪಿದಂ (ವೃಕಾ. ೬-೯೭). ೨. = ಭಾಳನಯನ : ಬಿನ್ನೈಸಿದಳು ಭಾಳೇಕ್ಷಣಂಗಾ ವಾಸುದೇವಸ್ತುತಿಪರಾಯಣೆ ಗೌರಿದೇವಿಯರು ಭಾಸುರಾನುಗ್ರಹ ರಹಸ್ಯಮನರುಹಬೇಕೆಂದು (ಕೊರಟಾ. ೧-೨-೬). [ಸಂ. ಭಾಲೇಕ್ಷಣ]

**ಭಿಂಗಾರಿ** 'ಬಂಗಾರ' ನೋ.

**ಭಿಂಡಿಮಾಲ** (ನಾ). = ಭಿಂಡಿವಾಲ. [ಸಂ.]

**ಭಿಂಡಿವಾಲ, ಭಿಂಡಿವಾಳ** (ನಾ). ಕೈಯಿಂದ ಎಸೆಯುವ ಸಣ್ಣ ಭಲ್ಲೆಯಂತಹ ಆಯುಧ: ಶಕ್ತಿ, ಪ್ರಾಸ, ಹಾಟಕ, ಭಿಂಡಿವಾಲ, ಶೂಲ . . . ಮೊದಲಾದ ಆಯುಧಗಳಿಂದ ತುಂಬಿರುವ ಈ ಸಮಂತಪಂಚಕವು ಎಷ್ಟು ಭಯಂಕರವಾಗಿರುವುದು ! (ಶಾಸಭಾ. ೦೦೨) ; ತೋಮರ ಭಿಂಡಿವಾಲಗಳ ಯುದ್ಧ ಗಜಗಜಗಳ ಹೋರಾಟ . . ಅನಂತಾನಂತವಾಗಿ ಕೆತ್ತಲ್ಪಟ್ಟಿದ್ದುವು (ಶಾಂತಲಾ. ೦೯೦). **ಭಿಂಡಿವಾಳ :** ತೋಮರಮುಸಲ ಮುಸುಂಡಿಭಿಂಡಿವಾಳಮುದ್ಗರಗದಾದಿವಿವಿಧಾಯುಧಂಗಳೊಳ್ಮತಿಪ್ರವೀಣ[ನು]ಂ . . . ಆಗಿ (ಶಂಕಶಾ. ೨-೩೪ ವ) ; ಕುದುರೆಯ ಮೇಲೆ ಬಿಲ್ಬರಸು ಸೂಲಿಗೆ ತೀರಿಕೆ ಭಿಣ್ಡಿವಾಳಮೆತ್ತಿದ ಕರವಾಳು (ಎಕ. VII, ಶಿಕಾ. ೦೩೬-೨೯ ; 1068) ; ಪರಿಘಚಕ್ರಮುಸುಂಡಿತೋಮರಭಿಂಡಿವಾಳಚಯ . . . ಪರಧನುರ್ದಂಡಾದಿ ಶಸ್ತ್ರೋತ್ಕರದಲನಿಬರು ಕುಶಲರಾದರು ಮುನಿಯ ಗರುಡಿಯಲಿ (ಕಂಭಕ. ೦೭-೦೦೯). [ಸಂ.]

**ಭಿಂಡಿವಾಳ** 'ಭಿಂಡಿವಾಲ' ನೋ.

**ಭಿಂದಪಾಲ** (ನಾ). = ಭಿಂಡಿವಾಲ. [ಸಂ.]

**ಭಿಂದಿಸು** (ಕ್ರಿ). ಭೇದಿಸು ; ಪೀಢೆಯನ್ನುಂಟುಮಾಡು : ಸೋಲ್ತುದು ಗೆಲ್ದುದು ಮಗುಟ್ದುಂ ಸೋಲ್ತುದು ಭಿಂದಿಸಿದುದು . . . ಗ್ರಹಂಗಳೆಂದಱಿ ಮುನ್ನಂ (ಅಪ್ರಶು ೭-೯೯). 'ಭೇದಿಸು' ಪರಾ. [ಭಿಂದು + —ಇಸು$_{3}$]

**ಭಿಂದು** (ನಾ). ೧. ಮುರಿಯುವಿಕೆ ; ಹಾಳುಮಾಡುವಿಕೆ ; ನಾಶಪಡಿಸುವಿಕೆ : 'ಭಿಂದಿಸು' ಪರಾ. ೨. ಹಾಳುಮಾಡುವವನು ; ನಾಶಪಡಿಸುವವನು. ೩. ಗರ್ಭದಲ್ಲೇ ಸತ್ತ ಮಗುವನ್ನು ಪಡೆಯುವವಳು ; ಮೃತಜಾತ ಶಿಶುವಿನ ಜನನಿ : "ನಶ್ಯತ್ಪ್ರಸೂತಿಃ, ಭಿಂದುಃ — ಈ ೨ ಮಕ್ಕಳ್ ಬಾಱದವಳ್" (ಹಲಾಯು. ೬೦-೩೩೯) ; "ಮಕ್ಕಳುಱ[3] ಸಾವ ಸತಿ ಭಿಂದುವಕ್ಕು" (ಮಂಗರಾ. ೯೯-೩). [ಸಂ.]

**ಭಿಕಾರಿ** 'ಬಿಕಾರಿ' ನೋ.

**ಭಿಕ್ಕನೆ** (ಅ). ರಭಸ ಮೊದಲಾದುವುಗಳನ್ನು ಸೂಚಿಸುವ ಒಂದು ಅನುಕರಣಾವ್ಯಯ : ಸರಸಿರುಹಗರ್ಭಾಂಡ ಭಿಕ್ಕನೆ ಬಿರಿಯೆ ಪ್ರಳಯಾಂತಕನ ಕೋಪಸ್ಫುರಣೆಗಿಂ ಮಿಗಿಲೆಂದೆನಲು ಬೀಸಿದುದು ಬಿರುಗಾಳಿ (ಅನಂರಾ. ೦-೬-೨೩). [ಭಿಕ್$_{0}$ + — ಅನೆ$_{1}$]

**ಭಿಕ್ಷ** (ನಾ). ೧. ಇನ್ನೊಬ್ಬರನ್ನು ಬೇಡುವುದು ; ತಿರುಪೆ ; ಯಾಚನೆ : ಮೃಡದೇವಾ ಶರಣೆಂದು ಭಿಕ್ಷಕ್ಕೆ ಹೋದರೆ ಅಲ್ಲಿ ನಡೆ ದೇವಾ ಎಂದೆನಿಸು ಕೂಡಲಸಂಗಮದೇವಾ (ಬಸವ. ೯೩೬) ; ಆಕಾರಮೇಕಾರಮುಂ ಆಕಾರಮುಮಾದುದರ್ಕೆ — ಗ್ರೀವಾ, ಭಿಕ್ಷಾ — ಎಂಬೆರಡು ಶಬ್ದಂಗಳ್ಗೆ ಗ್ರೀವ, ಗ್ರೀವೆ ; ಭಿಕ್ಷ, ಭಿಕ್ಷೆ — ಎಂದು ನಿಱಿಸುವುದು (ಶಮದ. ೬೨ ಪ್ರಯೋ) ; ದ್ವಾರಾವತಿಯ ಪೊಕ್ಕು . . . ಭಿಕ್ಷವ ಬೇಡುತೆಯ್ದು ಮುವನಾರಿಯಲ್ಲಿಂದ ಶ್ರೀಕೃಷ್ಣನರಮನೆಯ ನೋಡುವೆನೆಂದು ನಡೆತಂದನು (ಭಿಕ್ಷಾತ. ೨ ಸಂಧಿ). ೨. ಬೇಡಿದಾಗ ಕೊಡುವ ಅನ್ನ, ಆಹಾರ ಇತ್ಯಾದಿ : ಅಕ್ಷಯನ ಭಕ್ತರ್ಗೆ ಒಕ್ಕೈ ಭಿಕ್ಷಮಂ ತಂದಿಕ್ಕಿದು ತ್ರಿಮಾನಕ್ಷಯದ ಫಲಕೇಂ ಸಮವಹುದೇ (ಬಸಪು. ೬೦-೩೩) ; ರಾಗಿ ತಂದಿರ್ಯಾ ಭಿಕ್ಷಕೆ ರಾಗಿ ತಂದಿರ್ಯಾ (ಪುರಂದ. ೦-೭೯ ಪಲ್ಲವಿ) ; ರಾವಣನು ಸನ್ಯಾಸಿಯ ವೇಷವನ್ನು ಹಾಕಿಕೊಂಡು ಈ ಪರ್ಣಶಾಲೆಗೆ ಬಂದು ಭಿಕ್ಷವನ್ನು ಕೇಳಿದನು. ಈ ತಂತ್ರವನ್ನರಿಯದ ಸೀತೆ ಭಿಕ್ಷವನ್ನು ನೀಡಿದಳು (ಶೀಲಾಶಾ. IV, ೨೩). ೩. ಸಂನ್ಯಾಸಿಗಳಿಗೆ ನೀಡುವ ಭೋಜನ, — ಊಟ: ಸ್ವಾಮಿಗಳನ್ನು ಈ ದಿನ ಭಿಕ್ಷಕ್ಕೆ ಕರೆದಿದ್ದೇವೆ (ರೂಢಿ).
[ಸಂ. ಭಿಕ್ಷಾ]

**ಭಿಕ್ಷಾಂದೇಹಿ** (ಅ). ೧. 'ಭಿಕ್ಷೆಯನ್ನು ಕೊಡಿ' ಎಂಬರ್ಥದಲ್ಲಿ ಬಳಕೆಯಾಗುವ ಸಂಸ್ಕೃತದ ವಾಕ್ಯ : 'ಭವತಿ ಭಿಕ್ಷಾಂದೇಹಿ' ಎಂಬುದಿದುವೆ ಕಬ್ಬಿಗರ್ಗೆ ಸಿದ್ಧಿಸಿದ ಪರ್ಮೆಯ ಸಪ್ತಾಕ್ಷರೀಮಂತ್ರಂ (ರಾಮಾಶ್ವ. ೦೦೬-೦೯). ೨. (ಆಲಂ) ಭಿಕ್ಷೆಯನ್ನು ಕೊಡಿ ಎಂದು ಬೇಡುವವನು ; ತಿರುಕ ; ಭಿಕ್ಷುಕ : ಅಶನ ದೊರೆಯದಡೆ ಉಪವಾಸಿ ತಾನೆಂದೆಂದು . . . ದೆಸೆದೆಸೆಗಳಂ ತಿರುಗಿ ಭಿಕ್ಷಾಂದೇಹಿಯಾದ ಸಂದೇಹಿಗಳ ಶಿವನೊಲ್ಲನು (೬ಪಗಿ. ೩೩-೨೬೦) ; ನನಗೆ ಭಾವೈದನಾಗಿ ಭಿಕ್ಷಾಂದೇಹಿಯಾಗಬಾರದೆಂದು ಅಧಿಕಾರವನ್ನು ಕೊಡಿಸಿದರೆ ಹೀಗೆ ಹೀನಜನಾಶ್ರಿತನಾಗಿ ಉಭಯಭ್ರಷ್ಟತ್ವವನ್ನು ಹೊಂದಿರುವೆ (ಬಜ್ಜಕೃ. ೭ ಕಥಾಸಾರ). 'ದೇಹಿ' ಪರಾ. [ಸಂ.]

**ಭಿಕ್ಷಾಟನ** (ನಾ). ಭಿಕ್ಷೆಗಾಗಿ ತಿರುಗಾಡುವುದು ; ಭಿಕ್ಷೆ ಬೇಡುವುದು : ನಿಮ್ಮ ಮನೆ ಜಱಿದೆನರಿದ ತಲೆಯ ಬಾಯೊಳಗೆ ರಕ್ತವನೆ ಒರೆಯಿಸುವಂದದಿಂದ ಭಿಕ್ಷಾಟನವನೆಸಗಬೇಕಭವ (ಶೀಕೃತ. ೨-೨-೩೬); ದೇವನುತ್ಸವದಿಂದ ಭಿಕ್ಷಾಟನಕ್ಕೆ ನಡೆದ ಠೀವಿಯನದೇಪೊಗಳ್ವೆನು (ಭಿಕ್ಷಾಶ. ೧-೦೦). [ಸಂ.]

**ಭಿಕ್ಷಾಟನಂಗೆಯ್** (ಕ್ರಿ). ಭಿಕ್ಷೆಗಾಗಿ ತಿರುಗು; ಯಾಚನೆಗಾಗಿ ಮನೆಮನೆಗೆ ಹೋಗು ; ತಿರುಪೆ ಬೇಡು : ಭಿಕ್ಷಾಟನಂಗೆಯ್ಯಬೇಕೆಂದು ಮನಸಂದು ಗುಹ ಗಣಪರುಗಳಯ್ಯ ಸಿಂಗರವಾದನು (ಭಿಕ್ಷಾತ. ೧-೦೨).
[ಭಿಕ್ಷಾಟನ + ಕೆಯ್$_{1}$]

**ಭಿಕ್ಷಾಟನೆ** (ನಾ). = ಭಿಕ್ಷಾಟನ : ಐಶ್ವರ್ಯ ಕಳೆದುಕೊಂಡವರಿಗೆ, ನಿರ್ಗತಿಕರಾದವರಿಗೆ ಈ ಭಿಕ್ಷಾಟನೆಯೇ ಆಶ್ರಯ (ಭಿಕ್ಷಾವ. ೨ ಪ್ರಸ್ತಾವನೆ).
[ಸಂ. ಭಿಕ್ಷಾಟನ]

**ಭಿಕ್ಷಾನ್ನ** (ನಾ). ೧. ಭಿಕ್ಷೆಯಿಂದ ದೊರಕುವ ಅನ್ನ ; ಮನೆಮನೆಗೆ ಹೋಗಿ ಬೇಡಿ ತರುವ ಅನ್ನ, — ಆಹಾರ: ಭಿಕ್ಷಾನ್ನಮನುಂಡಾ ಭಾಳಾಕ್ಷಂ ಸೌರಾಷ್ಟ್ರಪತಿಗತುಳಗುಗ್ಗುಳಮಂ ಸುಕ್ಷಮೆಯಿಂದರ್ಪಿಸುತೊಳ್ದಕ್ಷಯಸುಖದೊಳ್ಪನೋಹಿಲಂ ಪಡೆದಿರ್ದಂ (ಉದ್ಭಟ. ೦೦-೯೦) ; ಇವಂಗೆ ಭಿಕ್ಷೆಯನಿಕ್ಕದೊಡೆ ತಾನೆ ಪೊಱಮಟ್ಟು ಪೋಪನೆಂದು ಭಿಕ್ಷಾನ್ನಂ ಪುಟ್ಟದಂತೆಸಗಲು (ವೃಕಾ. ೨೯-೮೭ ವ) ; ಈ ಪದ್ರವನ್ನು ಕೊಂಡುಕೊಂಡರೆ ನನಗೆ ಮುಂದೆ ಭಿಕ್ಷಾನ್ನವೇ ಗತಿ (ಮುಡಿಕ. ೨೭). ೨. ಬೇಡಿದವರಿಗೆ ನೀಡುವ ಅನ್ನ, — ಆಹಾರ : ನೀಱೆಯೊರ್ವಳನುರಾಗದಿಂ ಭಿಕ್ಷಾನ್ನಮಂ ತಂದು ನಿಡಿನಿಂದಾಗಳ್ (ಭಿಕ್ಷಾಶ. ೨-೩೬); ಅಲ್ಲಿ ನಮ್ಮ ಜನ ಬೇಕಾದಷ್ಟು ಇರಬೇಕಲ್ಲವೆ ಭಿಕ್ಷಾನ್ನ ಹಾಕುವುದಕ್ಕೆ ? (ಮೂಕಕ್ಷ. ೩೯). [ಸಂ.]

**ಭಿಕ್ಷಾಪಾತ್ರ** (ನಾ). ೧. = ಭಿಕ್ಷಾಪಾತ್ರೆ. ೨. ಭಿಕ್ಷಾಪಾತ್ರೆಯನ್ನು ಹಿಡಿದವನು; ಶಿವ : ಎಲ್ಲಿಂದ ಬಂದನೋ ಈ ಮೋಹನದ ಸಿದ್ಧಂ . . . ತಾನೆಲ್ಲಿಂದ ಬಂದನೋ ವಿಸ್ಮಯಾಕಾರ ಕಾರುಣಿಕ ಭಿಕ್ಷಾಪಾತ್ರನು (ಭಿಕ್ಷಾತ. ೨-೩೭). [ಸಂ.]

**ಭಿಕ್ಷಾಪಾತ್ರೆ** (ನಾ). ಭಿಕ್ಷೆ ಬೇಡಲು ಉಪಯೋಗಿಸುವ ಪಾತ್ರೆ ; ತಿರುಪೆಗಾಗಿ ಹಿಡಿದುಕೊಂಡು ಹೋಗುವ ಪಾತ್ರೆ : ಭಿಕ್ಷಾಪಾತ್ರೆ ಹಿಡಿಯುವ ಜನ ಇನ್ನೂ ನಮ್ಮಲ್ಲಿ ಕಡಮೆಯಾಗಿಲ್ಲ (ರೂಢಿ). [ಸಂ. ಭಿಕ್ಷಾಪಾತ್ರ]

**ಭಿಕ್ಷಾಶನ** (ನಾ). = ಭಿಕ್ಷಾನ್ನ ೧ : ತಂದ ಭಿಕ್ಷಾಶನವನ್ನೆಪರು ನಂದನರು ತಾಯಿಗೆ ನಿವೇದಿಸಲು (ಕುವ್ಯಾ. ೧೧–೪). [ಸಂ.]

**ಭಿಕ್ಷಿಸು** (ಕ್ರಿ). ತಿರುಪೆ ಬೇಡಂ ; ಯಾಚಿಸು ; ಭಿಕ್ಷೆಬೇಡು : ಅಜನ ಕಪಾಲವಂ ಪಿಡಿದಸಮನೇತ್ರನು ಭಿಕ್ಷಿಸುವನೆಂದುಸುರ್ವನು (ಬಸವ. ೫೭–೨೨). [ಭಿಕ್ಷ + –ಇಸು₃]

**ಭಿಕ್ಷು** (ನಾ). ೧. ಭಿಕ್ಷೆ ಬೇಡುವವನು ; ಯಾಚಕ ; ಭಿಕ್ಷುಕ : ಮಿಱುಪ ಪಳಿಕಿನ ಕುಂಡಲವ ಕಿವಿಯೊಳಿಂಬಿಟ್ಟು . . . ಮೆಱೆಯೆ ಫಣೆಯೊಳು ತ್ರಿರೇಖೆಯು ಬೊಟ್ಟು ಭಿಕ್ಷುವೇಷವ ತಾಳ್ದನಲ್ಲಿವಟ್ಟು (ಭಿಕ್ಷಾತ. ೧–೧೧). ೨. ಸಂಸಾರದಲ್ಲಿ ವಿರಕ್ತನಾಗಿ ಭಿಕ್ಷೆಯಿಂದ ಪ್ರಾಣಧಾರಣೆ ಮಾಡಿಕೊಂಡು ಮೋಕ್ಷಕ್ಕಾಗಿ ಪ್ರಯತ್ನಿಸುವ ಸಂನ್ಯಾಸಿ ; ನಾಲ್ಕನೆಯ ಆಶ್ರಮವನ್ನು ಕೈಗೊಂಡಿರುವ ತಪಸ್ವಿ : "ಪರಾಶರೀ, ಬ್ರತೀ, ಭಿಕ್ಷುಃ . . . ತಾಪಸಃ—ಈ ೯ ತಪಸ್ವಿ" (ಹಲಾಯು. ೬೮–೨೫೫). ೩. ಬೌದ್ಧ ಸಂನ್ಯಾಸಿ : ನಾನು ತಂದೆಯ ಬಲಾತ್ಕಾರಕ್ಕಾಗಿ ಭಿಕ್ಷು ಆಗಲಿಲ್ಲ (ಕೃಬಾಇ. I, ೧೫೭); ಆನಂದ ಏಳನ್ನು ಭಿಕ್ಷುಗಳನೆಚ್ಚರಿಸು (ಪ್ರಬಾಬ. ೬೫–೧); ಸ್ತೂಪಗಳಲ್ಲಿ ಭಿಕ್ಷುಗಳು . . . ಮೆರವಣಿಗೆಯಲ್ಲಿ ಹೋಗುತ್ತಿರುವ ಶಿಲ್ಪಾಶಿಲ್ಪಗಳು ಬೇಕಾದಷ್ಟು ದೊರೆತಿವೆ (ಬಾಸಿ. ೪೪). ೪. ಜೈನ ಸಂನ್ಯಾಸಿ; p "ಸನ್ಯಾಸಿ. ಇವರಲ್ಲಿ ನಾಲ್ಕು ವಿಧ:– ೧. ಅನಗಾರ. ೨. ಯತಿ. ೩. ಮುನಿ. ೪. ಋಷಿ" (ಕೃಶಕೋ. ೧೯೪). [ಸಂ.]

**ಭಿಕ್ಷುಕ** (ನಾ). ೧. ಭಿಕ್ಷೆಯನ್ನು ಬೇಡಿ ಜೀವಿಸುವವನು ; ತಿರುಕ; ಯಾಚಕ : ಪುರಹರನು ಭಿಕ್ಷುಕನಾಗಿ ದ್ವಾರಾವತಿಗೆ ಬಂದ ಪರಿಯನದ ವರ್ಣಿಸುವೆನು (ಭಿಕ್ಷಾತ. ೧ ಸೂಚನೆ). ೨. ವಿರಕ್ತ ; ಸಂನ್ಯಾಸಿ : ಈ ದೇಗುಲಮನೊಳಪುಗಲ್ವೇಡ ನೀನೆಂದೊಡಂ ಗರ್ವಂ ತಳ್ತಾಮೇದುದಂ ಲೆಕ್ಕಿಸದೊಳಪುಗುವಂ ಭಿಕ್ಷುಕಂಗೇಕಿವಂಗೀ ಪಂತಂ (ಪ್ರಶಬ. ೨೯–೬೫). ೩. ಜೈನಯತಿ ; ಸಂನ್ಯಾಸಿ ; ಶ್ರವಣ : ಆರ್ಹತದೊಳ್. . . ಬ್ರಹ್ಮಚಾರಿಯುಂ ಗೃಹಸ್ಥನುಂ ವಾನಪ್ರಸ್ಥನುಂ ಭಿಕ್ಷುಕನುಮೆಂದು ನಾಲ್ವರಪ್ಪರ್ (ಚಾಪುಂಪು. ೨೨೭) : ತದಾಶ್ರಮಿಯಪ್ಪ ಲೋಹಿತಾಕ್ಷನೆಂಬ ಭಿಕ್ಷುಕಂ ಬಂದು ಚಾರುದತ್ತನ ಸಮಕ್ಷದೊಳಿರ್ದ ಶ್ವಾಣಂ ಬಂದಿರೆತ್ತ ಪೋದಪಿರ್ ಎಂಬುದುಂ (ಶೀಬಪು. ೪–೮೪ ವ). [ಸಂ.]

**ಭಿಕ್ಷುಕಿ** (ನಾ). ೧. ಭಿಕ್ಷೆಯನ್ನು ಬೇಡಿ ಜೀವಿಸುವವಳು ; ಯಾಚಕಿ : ತೆಗೆದುಕೋ! ಭಿಕ್ಷುಕಿ! (ದಾಂಡ್ ೨೨೮.); ತಿಂಮನ ಮನೆಯ ಬಾಗಿಲಲ್ಲಿ ಭಿಕ್ಷುಕಿಯೊಬ್ಬಳು ಕೂಗುತ್ತಿದ್ದಳು (ತಿಂಮ್ನ ತ ೧೦೭). ೨. ಜೈನ ಸಂನ್ಯಾಸಿನಿ ; ಕಂತಿ : "ಶ್ರವಣಾ, ಭಿಕ್ಷುಕೀ, ಮುಂಡಾ_ಈ ೩ ಕಂತಿ" (ಹಲಾಯು. ೯೦–೬೬೬). [ಸಂ. ಭಿಕ್ಷುಕೀ]

**ಭಿಕ್ಷುಣಿ** (ನಾ). ಬೌದ್ಧಸಂನ್ಯಾಸಿನಿ : ಇಂಥ ದಿವ್ಯವಾದ ದೃಷ್ಟಿಯ ಭಗವಂತ ತಾನು ತನ್ನ ಶಿಷ್ಯರ ಸಂಗವನ್ನು ಸ್ಥಾಪಿಸಿದ ಬಹುಕಾಲಕ್ಕಾದರೂ ಸ್ತ್ರೀಯರನ್ನು ಭಿಕ್ಷುಣಿಯರನ್ನಾಗಿ ಸ್ವೀಕರಿಸಿರಲಿಲ್ಲ (ಬಾವುರಾ. ೧೭); ಬುದ್ಧ, ಧರ್ಮ, ಸಂಘಗಳಿಗೆ ಶರಣಾಗುವುದರಿಂದ ಭಿಕ್ಷುಗಳೂ ಭಿಕ್ಷುಣಿಯರೂ ಮುಕ್ತಿ ಪಡೆಯಬಹುದೇ ಹೊರತು ಅವನ ಸ್ಥಾನವನ್ನು ಪಡೆಯುವುದು ಸಾಧ್ಯವಿಲ್ಲವೆಂಬ ಭಾವನೆ (ಕನ್ನಾ. ೦೭೩); ಪ್ರಾಯಶಃ ಇದು ಭಿಕ್ಷುಣಿ ಮತ್ತು ದೇವದಾಸಿಪದ್ಧತಿಯಿಂದ ಪ್ರಾರಂಭಿಸಿರಬಹುದು (ಭಾರಾಶಿ. ೬೦). [ಸಂ. ಭಿಕ್ಷುಣೀ]

**ಭಿಕ್ಷೆ** (ನಾ). ೧. ತಿರಿಯುವುದು; ಬೇಡುವುದು ; ತಿರುಪೆ ; ಯಾಚನೆ : "ಯಾಚ್ಞಾ, ಭಿಕ್ಷಾ, ಅರ್ಥನಾ, ಅರ್ದನಾ-೪ ಬೇಡುವಿಕೆ, ಕೇಳುವಿಕೆ, ತಿರಿದಾಡುವಿಕೆ" (ಸಿದ್ಧಾಂತಿ. ೩೫೭); ಗ್ರೀವಾ, ಭಿಕ್ಷಾ—ಎಂಬೆರಡು ಶಬ್ದಂಗಳ್ಗೆ ಗ್ರೀವ, ಗ್ರೀವೆ, ಭಿಕ್ಷ, ಭಿಕ್ಷೆ ಎಂದು ನಿಱಿಸುವುದು (ಶಮದ. ೫೨ ಪ್ರಯೋ). ೨. ಬೇಡಲು ಬಂದವರಿಗೆ ಕೊಡುವ ದಾನ.–ಅನ್ನ, ವಸ್ತ್ರ, ಹಣ ಮೊದಲಾದುವು : ಕರೆದು ಭಿಕ್ಷೆಯ ನೀಡೆ ಗೋಪ್ಯಮ್ಮ ನಿಮ್ಮ ತರಳ ಗೋಪಾಲನಿಗೆ (ಪುರಂದ. ೩–೧೫೨ ಪಲ್ಲವಿ); ಇವಂಗೆ ಭಿಕ್ಷೆಯನಿಕ್ಕದೊಡೆ ತಾನೆ ಪೊಱಮಟ್ಟು ಪೋಪನೆಂದು ಭಿಕ್ಷಾನ್ನಂ ಪುಟ್ಟದಂತೆಸಗಲು (ಪ್ರಶಬ. ೨೯–೬೭ ವ). ೩. ಸಂನ್ಯಾಸಿಗಳು ಮತ್ತು ಮಠಾಧಿಪತಿಗಳಿಗೆ ನೀಡುವ ಭೋಜನ: ಇಂದು ಸ್ವಾಮಿಗಳನ್ನು ನಮ್ಮ ಮನೆಗೆ ಭಿಕ್ಷೆಗೆ ಕರೆದಿದ್ದೆವು (ಕಶಾ).

**ಭಿಕ್ಷೆನೀಡು**=ಬೇಡಲು ಬಂದವರಿಗೆ ಏನನ್ನಾದರೂ ಕೊಡು ; ತನ್ನ ಹೃದಯವನ್ನೇ ತಂಡುಲರೂಪವಾಗಿ ಭಿಕ್ಷೆನೀಡಿದಳು (ಶಿಶಂಪ. ೧೦೭).

**ಭಿಕ್ಷೆ ಬೇಡು**=ಯಾಚನೆ ಮಾಡು ; ತಿರಿ : ಮುಂದಿನ ಮನೆಗೆ ಹೋಗಿ ಭಿಕ್ಷೆಬೇಡು (ಅಶ್ರಮ. ೨೭). [ಸಂ. ಭಿಕ್ಷಾ]

**ಭಿಡಿಯ** 'ಬಿಡೆಯ₁' ನೋ.

**ಭಿಡೆಯ** 'ಬಿಡೆಯ₁' ನೋ.

**ಭಿತ್ತ** (ನಾ). ಚೂರು ; ಖಂಡ : "ಭಿತ್ತಂ, ಶಕಲಂ, ಖಂಡಂ, ಅರ್ಧಃ—೪ ಮುರುಕು ಚೂರುಗಳ ಹೆಸರು" (ಸಿದ್ಧಾಂತಿ. ೨೯). [ಸಂ.]

**ಭಿತ್ತರಿ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ : ಬಂಡಿಕೋಲಿನ ಕೆಳಗಡೆಯಲ್ಲಿ ಬಂಡಿಕೋಲಿನಿಂದ ಮುಟ್ಟಿಸಿ ಭ್ರಮಣವನ್ನು ಮಾಡಿ ತೊಡೆಯಲ್ಲಿ ಏಟು ಆಪದು ಅದು ಭಿತ್ತರಿಯೆಂದು ಸಮ್ಮತವು (ಖಡ್ಗಬೀ. ೫–೬೦). 'ತಳಭಿತ್ತರಿ' ಪರಾ. [ ? ]

**ಭಿತ್ತಿ** (ನಾ). ೧. ಮುರಿಯುವುದು ; ಒಡೆಯುವುದು ; ಬೇರ್ಪಡಿಸುವುದು. ೨. ಚೂರು ; ಮುರುಕು ; ತುಂಡು. ೩. ಒಡೆದು ಹೋಗಿರುವ ಅಥವಾ ಭಾಗವಾಗಿರುವ ಯಾವುದಾದರೂ ವಸ್ತು. ೪. ಬಿರುಕು ; ಸೀಳು ; ಛಿದ್ರ. ೫. ಗೋಡೆ ; ಕುಡ್ಯ : "ಭಿತ್ತಿಃ, ಕುಡ್ಯಂ—೨ ಗೋಡೆಯ ಹೆಸರುಗಳು" (ಸಿದ್ಧಾಂತಿ. ೯೯); ಇದಿರೊಳ್ ಪೊಳೆವ ಪಳುಕಿನ ಭಿತ್ತಿಯಂತೆ ಸುತ್ತಿದ ನೇತ್ರದುಕೂಲದೊಳಂ (ಕಾದಂಪು. ೭೯); ಭಿತ್ತಿ ಮೂಱು ಮೇಲೆ ಚಿತ್ರ ಬರೆಯಿತ್ತು (ಅವಕಂ. ೯೨–೪೦೯). ೬. ಚಿತ್ರವನ್ನು ಬರೆಯುವ ಮೂಲ ಆಧಾರ ; ಹಲಗೆ, ಬಟ್ಟೆ, ಗೋಡೆ ಮೊದಲಾದ ಸಾಧನ : "ಭಿತ್ತಿಯನೆ ಪುಸ್ತಕಂ" (ಹುಂಗರಾ. ೦೦೬–೦೫); ಭಿತ್ತಿಯಿಲ್ಲದೆ ಬರೆಯಬಹುದೆ ಚಿತ್ತಾರವ ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ (ಬಸವ. ೩೯೮); ಭಿತ್ತಿಯೊಂದಿಲ್ಲದಿರೆ ಚಿತ್ರದೊತಿರಲಹುದು ? ಚಿತ್ರವಿಲ್ಲದೆ ಭಿತ್ತಿ ಸೊಗಸಹುದೆಂತು ? (ಕುಂಕುಶ. ೦೦೫). ೭. ಮೂಲ ; ತಳ : ಅರ್ಚನೆಯವನರ್ಚಿಸಿದಲ್ಲಿ ಪುಣ್ಯದ ಫಲ ಭಕ್ತಿಯಿಂ ದ್ರವ್ಯವ ಕೊಡುವುದು ಮುಕ್ತಿಲೋಕದೊಳಗು ಈ ಉಭಯದ ಭಿತ್ತಿಯನಱಿದು ನಿತ್ಯವ ತಿಳಿದವಂಗೆ ಏನೂ ಎನಲಿಲ್ಲ (ಶೋಳವಚ. ೦೬–೬೦). ೮. ಜೀವನ ನಡೆಸಲು ಅಥವಾ ದೇವತೋತ್ಸವಾದಿಗಳು ನಡೆಯಲು ಸ್ಥಾಪಿಸುವ ಆಧಾರಭೂತವಾದ ಶಾಸನವುಳ್ಳ ಭೂಮಿ, ಇಡುಗಂಟು ಮೊದಲಾದುವು; ಆಶ್ರಯನಿಧಿ: ಉತ್ಸವಗಳು ನಡೆಯುತಕ್ಕ ಬಗೆ ನಮ್ಮ ಹತ್ತು ಮಂದಿ ಒಪ್ಪಿ ಭಿತ್ತಿ ಮಾಡಿ ಕೊಟ್ಟಿರುವುದೇನೆಂದರೆ (ಎಕ. IX (S), ಆನೇಕ. ೦೦೭ ೬; 1892). ೯. ಹಿನ್ನೆಲೆ : "ಮುಂದುಗಡೆ ಇರುವ ಮುಖ್ಯ ವ್ಯಕ್ತಿಗಳಿಗೆ ಅಥವಾ ವಸ್ತುಗಳಿಗೆ ಪ್ರಾಧಾನ್ಯಕೊಡುವಂಥ ದೃಶ್ಯ . . . ಹಿನ್ನೆಲೆ ; ಭಿತ್ತಿ ; ಮರೆ ; ಅಪ್ರಸಿದ್ಧ" (Back-ground. ಇಂಕಶ). [ಸಂ.]

**ಭಿತ್ತಿಚಿತ್ರ** (ನಾ). ಗೋಡೆಯ ಮೇಲೆ ಬರೆದಿರುವ ಚಿತ್ರ : ಭಿತ್ತಿಚಿತ್ರಾಳೋಕೇಕವಿನೋದದಿಂ. . . ರಯ್ಯಮೆನಿಸಿತ್ತುರ್ವೀಶಶಯ್ಯಾಗೃಹಂ (ಶಿಷ್ಯಪು. ೯–೯೭); ಪ್ರಕೃತ ಅವಲೋಕನದಲ್ಲಿ . . . ಚೋಳರ ಕಾಲಗಳ ವರೆಗೆ, ಆ ಮೇಲೆ ತಿರುವಾಂಕೂರು—ಕೊಚ್ಚಿ ಭಿತ್ತಿಚಿತ್ರಗಳಿಂದ ಲೇಪಾಕ್ಷಿ ಕಲೆಯ ವರೆಗೆ . . . ಪರಿಚಯ ಮಾಡಿಕೊಡಲು ಉದ್ದೇಶಿಸಲಾಗಿದೆ (ಭಾರದ. ೫೨೨); ಅಜಂತಗುಹಾಲಯದಲ್ಲಿ ಭಿತ್ತಿಚಿತ್ರಗಳಿರುವ ಸಂಗತಿ ಅನೇಕರಿಗೆ ತಿಳಿದದ್ದೇ (ಬಾಸಿ. ೦೨). [ ಸಂ. ]

**ಭಿತ್ತಿದೋಷ** (ನಾ). [ಕಾವ್ಯಮೀ] ಒಂದು ಬಗೆಯ ಕಾವ್ಯದೋಷ ; ಸಂಧಿ ಮಾಡಬೇಕಾದ ಸ್ಥಳದಲ್ಲಿ ಸಂಧಿಯನ್ನು ಮಾಡದಿರುವುದು; ವಿಸಂಧಿ : ಮುನ್ನಂ ಪೇಳ್ದಿರ್ದರ್ಥಂ ಭಿನ್ನಪ್ರಸ್ತಾರ ಭಿತ್ತಿದೋಷಾನುಗತಂ (ಕಾವ್ಯಾ. ೦-೯೭). P "ಜನಪತಿಗೆ ಒಸಗೆಯಂ ಪುರಜನಮೆಲ್ಲಂ ಬೀಱುತಿರ್ಪರಾಗಳ್ ತಾಮುಂ" ಎಂಬಲ್ಲಿ 'ಜನಪತಿಗೊಸಗೆಯಂ' ಎಂಬುದನ್ನು, ಒಂದು ಮಾತ್ರೆ ಕಡಮೆ ಬೀಳುವುದೆಂದು ಕವಿ 'ಜನಪತಿಗೆ ಒಸಗೆಯಂ' ಎಂದು ಬಿಡಿಸಿದ್ದಾನೆ. ಹೀಗೆ ಒಡೆಯಬಾರದ ಸ್ಥಳದಲ್ಲಿ ಒಡೆದರೆ ಭಿತ್ತಿದೋಷ. [ಸಂ.]

**ಭಿತ್ತಿಪತ್ರ** (ನಾ). ಯಾವುದಾದರೂ ಒಂದು ವಿಷಯವನ್ನು ಪ್ರಚಾರ ಮಾಡುವುದಕ್ಕಾಗಿ ಜನರಿಗೆ ಚೆನ್ನಾಗಿ ಕಾಣಲೆಂಬ ಉದ್ದೇಶದಿಂದ ಗೋಡೆಗಳಿಗೆ ಅಂಟಿಸುವ ಪತ್ರ; ಪ್ರಚಾರಪತ್ರ : ಆಕಾಶದ ಬೆನ್ನ ಮೇಲೆ ಭಿತ್ತಿಪತ್ರ ಓದಿದೆ (ಅರಿಯೋ. ೦೯); ಸಾಂಡರ್ಸ್ ಕೊಲೆ ಸಂಬಂಧದ ಭಿತ್ತಿಪತ್ರಗಳನ್ನು ಭಗತ್‌ಸಿಂಗ್ ಬರೆದುದೂ ತಿಳಿಯಬಂತು (ಅಜ್ಞಾ.ಶ. ೦೦೯); ಈ ಕಾಯಿಲೆಯ ವಿಚಾರವನ್ನು ಭಿತ್ತಿಪತ್ರಗಳ ಮೂಲಕವಾಗಲಿ. . . ನಾಗರಿಕರಿಗೆ ಅರಿವಾಗುವಂತೆ ವಿವರಿಸಬೇಕು (ಕಿಂಡೋ. ೮೦). P ಇದು ಇಂಗ್ಲಿಷಿನ 'Wall Poster' ಎಂಬುದರ ಕನ್ನಡ ಅನುವಾದ. [ಸಂ.]

**ಭಿದುರ** (ಗು). ೧. ಮುರಿಯುವ; ಒಡೆಯುವ ; ಸೀಳುವ. (ನಾ). ೨. ಮುರಿಯುವವನು ; ಒಡೆಯುವವನು : ಮದವದರಿಹಸ್ತಿಮಸ್ತಕಭಿದುರಂ [ಭಯ]ವಿಧುರನನ್ಯಬಾಣಚ್ಛಿದುರಂ. . . ವೃಷಸೇನಂ (ಗದಾಯು. ೯-೬೩). ೩. ಇಂದ್ರನ ವಜ್ರಾಯುಧ; ಅಶನಿ : "ಪವಿಃ, ಅಶನಿಃ. . . ಗೌಃ, ಭಿದುರಂ. . . ಶಂಬಿಃ — ಈ ೧೨ ಇಂದ್ರನ ವಜ್ರಾಯುಧದ ಪೆಸರ್" (ಹಲಾಯು. ೦೦-೫೩) ; ಅರಿಭೂಭೃದ್ಗಿರಿಮುಗ್ಗ್ರಸಂಗಭಿದುರ ಜ್ವಾಲಾನಳಂ . . . ಬಲ್ಲಾಳನೃಪಾಲ ಭೈರವತರಪ್ರೋದ್ಯತ್ಪ್ರತಾಪಾನಳಂ (ಎಪಿ. VI, ಕಡೂರು. ೦೨೯-೨೨ ; 1218) ; ಶಾವು ಗೋಚರವಾಗದಿರೆ ಕೋಪ ಮೆಗ್ಗಳಿಸಿ ಶಿವಿ ಭಿದುರೋಪಮಿತಶಬ್ದವೇಧಿಯ ತೆಗೆದು ಶಾವವನ್ನರಿದು ಕೊಂದಪೆ ನೆನಲು (ಕಂಕಾರಾ. ೦-೦೨-೯೨). ೪. ವಜ್ರಾಯುಧವನ್ನುಳ್ಳವನು, ಇಂದ್ರ; ದೇವೇಂದ್ರ: ಅರಿರಾಯಗರ್ವಪರ್ವತದಳನಭಿದುರನುರುತರವಿಪಕ್ಷಪ್ರಬಲಸೇನಾಬ್ಧಿಬಾಡಬಂ (ಅಣಾಚ. ೦-೦-೯೯). ೫. ಸುಲಭವಾಗಿ ಒಡೆಯುವಂತಹುದು; ಭಂಗುರವಾದುದು. ೬. ಬೆರಕೆಯಾದುದು ; ಮಿಶ್ರವಾದುದು. ೭. ಆನೆಯ ಕಾಲಿನ ಸರಪಳಿ. ೮. ಸಿಡಿಲು. [ಸಂ.]

**ಭಿದೆ** (ನಾ). ೧. ಒಡೆಯುವುದು; ಮುರಿಯುವುದು : "ಭಿದೆ ಸ್ಫುಟನಮಕ್ಕುಂ" (ಷಟ್ಪಕೋ. ೦೦೯-೨೨). ೨. ವ್ಯತ್ಯಾಸ ; ಭೇದ : ರೂಪನಾಮ ಪಿಡಿದು ಭಿದೆಯಂ ಸ್ಥಾಪಿಸಲು (ವಿವೇಕ. ೦೨-೯೦). ೩. ರೀತಿ; ವಿಧ; ಬಗೆ. [ಸಂ. ಭಿದಾ]

**ಭಿದ್ಯ** (ನಾ). ದಂಡೆಯನ್ನು ಭೇದಿಸಿಕೊಂಡು ರಭಸದಿಂದ ಹರಿಯುವ ಹೊಳೆ ; ಗಂಡುಹೊಳೆ ; ನದ : "ಭಿದ್ಯಃ, ಉದ್ಯಃ, ನದಃ —ಈ ೩ ಗಂಡುದೊಱೆ" (ಹಲಾಯು. ೦೦೦-೯೯). [ಸಂ.]

**ಭಿನ್ನ** (ಗು). ೧. ಒಡೆದ ; ಮುರಿದ. ೨. ವಿಭಾಗಿಸಿದ ; ಬೇರ್ಪಡಿಸಿದ. ೩. ಬಿಡಿಸಿದ ; ತೆರೆದ. ೪. ಅರಳಿದ; ವಿಕಾಸಹೊಂದಿದ. ೫. ಬೇರೆಬೇರೆಯಾದ ; ಪ್ರತ್ಯೇಕವಾದ : ಭಿನ್ನ ಅಂಕಿ ಅಂಶಗಳನ್ನು ಹೋಲಿಸುವಾಗ ಪ್ರಶ್ನೆಗಳು ತುಂಬಾ ಸಹಾಯವಾಗುತ್ತವೆ (ಶಿಕ್ಷಣ. ೨೬೯). ೬. ವ್ಯತ್ಯಾಸಗೊಂಡ ; ವ್ಯತ್ಯಯಹೊಂದಿದ. (ನಾ). ೭. ಒಡೆದುಹೋದುದು ; ಸೀಳಿಹೋದುದು ; ಹಾಳಾದುದು : "ಭಗ್ನಮೆನೆ ರುಗ್ಣಮೆನೆ ತಿನ್ನಮೆನೆ . . . ಭಿನ್ನಮೆನೆ ಕೆಟ್ಟುದು" (ಪಂಗಣ. ೦೩೨-೨೬) ; ಜಲದ ನುಂಗಿತ್ತಯ್ಯಾ ಎನ್ನ ಕರವು ಪತ್ರೆಯ ನುಂಗಿತ್ತಯ್ಯಾ ಶಿವಿ ಎನ್ನಯ ಮಂತ್ರ ಭಿನ್ನವಾಯಿತ್ತು (ಬಸವ. ೯೬೩) ; ಭಿನ್ನವಾದ ಗಡಿಗೆ ಹೊನ್ನು ಕೊಟ್ಟರೆ ಸಮನಾದೀತೆ ? (ಗಾದೆ). ೮. ತುಂಡು ; ಚೂರು ; ಶಕಲ. ೯. ಬೇರೆಯಾದುದು ; ಪ್ರತ್ಯೇಕವಾದುದು ; ಅನ್ಯ : ನೀನೆ ಸರ್ವೇಶ ಸರ್ವಗಸರ್ವಾತ್ಮಕ ಸರ್ವಭೂತಮಯ ನಿನ್ನಿಂ ಭಿನ್ನವಾಗಿರ್ಪ ವಸ್ತುಗಳಿಲ್ಲ (ಜಗ. ೫-೯೯) ; ಅಭವನೊಳ್ಪೆರೆದಾ ಮನವುಂ ನೆನಹುಂ ವಾಂಛೆಯುಮನವರತಂ ಭಿನ್ನವಿಲ್ಲದಿರ್ಕುಂ ನಿಜದಿಂ (ಹರಿಶ್ಚ. ೨-೩೯). ೧೦. ಅರ್ಧಭಾಗ : "ಖಂಡಃ, ಅರ್ಧಃ (ರ್ಧಂ), ನೇಮಃ, ಶಕಲಂ, ಭಿನ್ನಂ, ಸಾಮಿ—ಈ ೬ ಅರ್ಧಂ" (ಹಲಾಯು. ೦೦೮-೨೮) ; "ಶಕಲಮೆನೆ ನೇಮಮೆನೆ ಭಿನ್ನಮೆನೆ ಖಂಡಮೆನಲರ್ಧಕ್ಕೆ ನಾಮಂ" (ಪಂಗಣ. ೦೨೯-೦೪). ೧೧. ಕುಂದು ; ಕೊರತೆ ; ದೋಷ : ತನ್ನ ಭಿನ್ನವನಱಿಯದೆ ಅನ್ಯರನೆಂಬ ಕುನ್ನಿಯನೇನೆಂಬೆ . . . ದೇವಾ (ಬಸವ. ೦೦೫) ; ದೇವಗೊಂದಿಷ್ಟು ಭಿನ್ನವಾದರೆ ಭಾವಿಸರು (ಬಸ್ಥ. ೭೨-೪೦). ೧೨. ಸೀಳಲ್ಪಟ್ಟವನು ; ಭೇದಿಸಲ್ಪಟ್ಟವನು ; ನಾಶಮಾಡಲ್ಪಟ್ಟವನು : ನಿನ್ನಿಂ ಭಿನ್ನವಾಗಿರ್ಪ ವಸ್ತುಗಳಿಲ್ಲೀ ರಿಪು ಭಿನ್ನನಾದನಿದು ಚಿತ್ರಂ ಪದ್ಮಪತ್ರಾಂಬಕಾ (ಜಗ. ೫-೯೯). ೧೩. ಬೇರೆಯಾದವನು ; ಬೇರೆಯಾದ ವ್ಯಕ್ತಿ: ಭಿನ್ನನಂತಿಸೆ ತೋಱಿ ಭಿನ್ನಾಭಿನ್ನನೆನಿಸಿಯೆ ಮೆಱೆವ ತಿಳಿಯಲಭಿನ್ನನೈ ಮುರವೈರಿ (ಕುಮಾ.ಉ. ೯-೭೦). ೧೪. [ಗಣಿತ] ಭಾಗಿಸುವುದು ; ಭಾಗಾಹಾರ ; ಸತ್ತುತಗೆಯಂ ಸಂಹ್ರಿತಂ ತವೆ ಭಕ್ತ ಭಿನ್ನ ಚಿನ್ನದಿತಂ ದಾಪ್ತಭಾಷೆಗಳ್ ಭಾಗಿಸೂದೆಂದಱಿ ನೀನಪಂ ಬುಧಾ ? (ಕ್ಷವಶಾ. ೦೨-೦೫). ೧೫. [ಸಂಗೀತ] ರಾಗ ಜಾತಿಗಳಲ್ಲಿ ಒಂದು : ರಾಗಜಾತಿಗಳು ಶುದ್ಧ ಭಿನ್ನ ಗೌಡ ಅಷ್ಟ ಸಾಧಾರಣ ಸಪ್ತಸಾಧಾರಣ ಷಟ್ಸ್ವರವೆಂಬಾಱುಜಾತಿಗಳು (ವಿವೇಕ. ೯೭). [ಸಂ.]

**ಭಿನ್ನಂಗೆಯ್**, ಭಿನ್ನಗೈ (ಕ್ರಿ). ೧. ಸೀಳು ; ನಾಶಮಾಡು : ಲೋಕಾಳಿ ಸಂತಾಪಮಂ ಭಿನ್ನಂಗೆಯ್ಯಲೊಡರ್ಚೆ ಪಾಲ್ಗಡಲನೆಯ್ದಲೋಡನಂಗೆಯ್ದು (ಹರಿಶ್ಚ. ೨-೫೬). **ಭಿನ್ನಗೈ** : ೨. ಭೇದಮಾಡು : ಪಕ್ಷಪಾತವನ್ನು ಮಾಡು : ತನ್ನನಿಯಳ ತನ್ನೊಡವೆ ವೈಬಳಗವ್ ಭಿನ್ನಗೈಯದೆ ಬೆರಸುವುದು (ಹರಿಶ. ೬-೯೬). [ಭಿನ್ನ + ಕೆಯ್$_1$]

**ಭಿನ್ನಕರ್ತೃ** (ನಾ). [ವ್ಯಾಕ] ಕ್ರಿಯಾಪದ ವಾಚ್ಯವಾದ ಕ್ರಿಯೆಯನ್ನು ಮಾಡುವ ವ್ಯಕ್ತಿಯನ್ನು ಪ್ರೇರಿಸುವವನು ; ಕ್ರಿಯೆಯನ್ನು ನಿರ್ವಹಿಸುವ ವ್ಯಕ್ತಿಯಿಂದ ಬೇರೆಯಾದ ವ್ಯಕ್ತಿ ; ಪ್ರಯೋಜಕ ಕರ್ತೃ ; ಪ್ರೇರಕ ಕರ್ತೃ : ಭಿನ್ನಕರ್ತೃವಿನೊಳಿಸುವಿಲ್ಲ (ಶಬ್ದಮ. ೨೪೦. ವೃತ್ತಿ). [ಸಂ.]

**ಭಿನ್ನಕರ್ತೃಕ** (ನಾ). ೧. = ಭಿನ್ನಕರ್ತೃ : ಅಥ ಭಿನ್ನಕರ್ತೃಕ ಪ್ರಯೋಗೇ _ ಪೆರ್ಚಿಸು _ ವರ್ಧನೇ, ಬೆರ್ಚಿಸು – ಭಯೇ (ಶಬ್ದಾ. ೬). ೨. ಪ್ರಧಾನ ಕ್ರಿಯೆಯ ಕರ್ತೃವಿನಿಂದ ಭಿನ್ನವಾದ ಕರ್ತೃವನ್ನು ಹೊಂದಿರುವ ಅಪೂರ್ಣಕ್ರಿಯಾಪದ : ಅಪೂರ್ಣಕ್ರಿಯಾಪದಗಳು . . . ಇವುಗಳಲ್ಲಿ ಏಕಕರ್ತೃಕ, ಭಿನ್ನಕರ್ತೃಕ ಎಂದು ಎರಡು ವಿಧಗಳಿವೆ . . . ಕಡೆದೊಡೆ ಪಾಲ್ಗಡಲ್ ವಿವಿಧ ವಸ್ತುವನೀಯದೆ ಎಂಬಲ್ಲಿ ಕಡೆವ ಕ್ರಿಯೆಯೂ ಈವ ಕ್ರಿಯೆಯೂ ಒಂದೇ ಕರ್ತೃವಿನಿಂದ ಆದುವಲ್ಲ ; ಭಿನ್ನಕರ್ತೃಕವಾದುವು (ಕ್ಕಬಿ. ೯೯). [ಸಂ.]

**ಭಿನ್ನಕುಂಭ** (ನಾ). ಒಡೆದ ಗಡಿಗೆ,– ಮಡಕೆ : ಭಿನ್ನಕುಂಭದೊಳೆಱೆದುದಕದಂತೆ ನೆಲಲುಗೆಟ್ಟು ಮಹೀಜದಂತೆ (ಬಸವ. ೬೦-೫೦). [ಸಂ.]

**ಭಿನ್ನಕೌಶಿಕಿ** (ನಾ). [ಸಂಗೀತ] ಒಂದು ರಾಗದ ಹೆಸರು : ಭಿನ್ನಷಡ್ಜ ಭಿನ್ನತಾನ ಭಿನ್ನಕೌಶಿಕಿ ಮಧ್ಯಭಿನ್ನವೆಂದು ನಾಲ್ಕು ರಾಗಂಗಳು ಗೌಡ ಜಾತೀಯಂಗಳು (ವಿವೇಕ. ೨೪೩). [ಸಂ. ಭಿನ್ನಕೌಶಿಕೀ]

**ಭಿನ್ನಗಣ್ಣು** (ನಾ). ತಪ್ಪುದೃಷ್ಟಿ ; ಸರಿಯಲ್ಲದ ನೋಟ : ತನ್ನಲ್ಲಿ ತಾ ಸುಯಿಧಾನಿಯಾಗಿ ನೋಡಲಱಿಯದೆ ಭಿನ್ನಗಣ್ಣಲಿ ನೋಡಿಹೆನೆಂದು ತಮ್ಮ

ಮುಚ್ಚಿದು ಇನ್ನುಳಿದೆಂದು ಅಳಿಸುವ ಅಣ್ಣಗಳಿರಾ ನೀವು ಕೇಳರೋ (ಬಂಗಳ. ೦೩-೩೦). [ಭಿನ್ನ + ಕಣ್ಣು (< ಕಣ್)]

**ಭಿನ್ನಗ್ಯೆ** 'ಭಿನ್ನಂಗೆಯ್' ನೋ.

**ಭಿನ್ನತಾನ** (ನಾ). [ಸಂಗೀತ] ಒಂದು ರಾಗದ ಹೆಸರು : ಭಿನ್ನಷಡ್ಜ ಭಿನ್ನತಾನ ಭಿನ್ನಕೌಶಿಕಿ ಮಧ್ಯಭಿನ್ನವೆಂದು ನಾಲ್ಕು ರಾಗಂಗಳು ಗೌಡ ಜಾತೀಯಂಗಳು (ಬಿವೇಕ. ೨೩೩). [ಸಂ.]

**ಭಿನ್ನತೆ** (ನಾ). ಬೇರೆಬೇರೆಯಾಗಿರುವಿಕೆ ; ವ್ಯತ್ಯಾಸ : ಮನುಷ್ಯನಲ್ಲಿ ಸಾಹಸ, ಹೇಡಿತನ ಮುಂತಾದುವು ಸ್ನಾಯುಸಂಸ್ಥಾನದ ಭಿನ್ನತೆಯಿಂದುಂಟಾಗುತ್ತದೆ (ಜೀವಾತ್ಮ. ೫೭) ; ಕಲಿಯುವ ಭಾಷೆಗೂ ಆಡುವ ಭಾಷೆಗೂ ತುಂಬ ಭಿನ್ನತೆ ಇದೆ (ಶಿಕ್ಷಣ. ೦೨೯). [ಸಂ. ಭಿನ್ನತಾ]

**ಭಿನ್ನಪಂಚಮ** (ನಾ). [ಸಂಗೀತ] ಒಂದು ರಾಗದ ಹೆಸರು : ಗಾನಸಾಮವರಾಲಿಯ ಮೇಳದಲ್ಲಿ ಪೂರ್ವವರಾಲಿ(ಕಾ), ಭಿನ್ನಪಂಚಮರಾಗ ಹೀಗೆ ಎರಡು ರಾಗಗಳನ್ನು ಹೇಳಿದೆ (ತತ್ವಶಾ. ೦೨೯). [ಸಂ.]

**ಭಿನ್ನಪದ** (ನಾ). [ವ್ಯಾಕ] ಸಮಾಸವಾಗದೆ ಇರುವ ಬೇರೆಬೇರೆ ಪದ : ವ್ಯಸ್ತಪದ : ಭಿನ್ನಪದದೊಳಂ ಸಮಾಸಪದದೊಳಂ ಣಕಾರಕ್ಕೆ ಪರಮಾದ ನಕಾರಂ ಣಕಾರಮನೆಯ್ದುಗುಂ (ಶಮದ. ೦೫೯ ವೃತ್ತಿ). [ಸಂ.]

**ಭಿನ್ನಪಾಠ** (ನಾ). ಸಂಪಾದಿತ ಗ್ರಂಥಗಳಲ್ಲಿ ಸೂಚಿಸಿರುವ ಬೇರೆ ಪಾಠ : ಪಾಠಾಂತರ : ಇಲ್ಲಿ ನಮಗೆ ಎರಡು ಪಾಠಗಳಲ್ಲಿ ಒಂದನ್ನು ಆಯುವ ಅವಕಾಶವಿದೆ. ಇವುಗಳನ್ನು ಭಿನ್ನಪಾಠಗಳು (variants) ಎಂದು ಕರೆಯುತ್ತಾರೆ (ಭಾರತ. ೫೩). [ಸಂ.]

**ಭಿನ್ನಪಾಠವಾಹಕ** (ನಾ). ಒಂದು ಮೂಲಪ್ರತಿಯಿಂದ ಜನ್ಯವಾಗಿರಬಹುದಾದ ಪಾಠಾಂತರಗಳನ್ನುಳ್ಳ ಹಸ್ತಪ್ರತಿಗಳಲ್ಲಿ ಒಂದು : ಇವರೆಡರಲ್ಲಿ ಒಂದು 'Z' ಪಾಠವಾಗಿರಬಹುದು. ಇಂಥ ಸಂದರ್ಭಗಳಲ್ಲಿ 'X', 'Y' ಮತ್ತು 'A' ಗಳನ್ನು 'Z' ಮೂಲಪ್ರತಿಯ ಭಿನ್ನಪಾಠವಾಹಕಗಳು (Variant bearers) ಎಂದು ಕರೆಯಬಹುದು (ಭಾರತ. ೫೩). [ಸಂ.]

**ಭಿನ್ನಭಾಜನ** (ನಾ). ೧. ಮಡಕೆಯ ಚೂರು ; ಓಡು ; ಬೋಕಿ : ವಿಜ್ಞಾನಮಾತ್ರಮೆ ತತ್ತ್ವಮಾತ್ಮಾದಿ ತತ್ತ್ವಮಿಲ್ಲೆಂಬ ನಿನ್ನ ಮಾತು ಭಿನ್ನಭಾಜನಸಮಾನಮೆಂದು ಸಂಭಿನ್ನಮತಿಗಂ ಪ್ರತಿಭಾಭಂಗಮಂ ಮಾಡಿ (ಆದಿಪು. ೨-೦೦ ವ). ೨. (ಆಲಂ) ಅಪ್ರಯೋಜಕ ವ್ಯಕ್ತಿ : ಪುತಮಂ ಕೈಕೊಂಡೆಡೆಯೊಳ್ ಬಿಟ್ಟವನೆ ಭಿನ್ನಭಾಜನಮಲ್ತೇ (ಶಂಬರಮಾ. ೧೦-೦೬೧). [ಸಂ.]

**ಭಿನ್ನಭಾವ** (ನಾ). ಬೇರೆಯ ಭಾವನೆ ; ಅನ್ಯಭಾವ : ಅಂಬುಧಿಯೊಳಗೆ ಬಿದ್ದ ಆಲಿಕಲ್ಲಂತೆ ಭಿನ್ನಭಾವವಳಿಯದೆ ಶಿವಾಶಿವಾ ಎನುತಿರ್ದೆನು ನಾನು (ಬಸವ. ೯೯೧) ; ಭಿನ್ನಭಾವಪ್ರಕೃತವಿಕೃತೋತ್ಪನ್ನಭೂತಂಗಳು . . . ಪಾರಸತಿಯರ ಮನಸುಗಳು ಮತ್ತೆ (ಐಸಪು. ೪೦-೬೬) ; ಭಿನ್ನಭಾವಗಳಲ್ಲಿ ಸಹಾನುಭೂತಿ ಇದ್ದ ಕಾಲದಲ್ಲಿ ಭಾರತದ ಸಂಸ್ಕೃತಿ ಸರ್ವತೋಮುಖವಾಗಿ ಬೆಳೆಯಿತು (ಭಾರತ. ೩೩೪). [ಸಂ.]

**ಭಿನ್ನಮುಖ** (ನಾ). ವಿರೋಧ : ತನ್ನ ಚಿಂತೆಯದೊಂದು ದೈವದ ಗನ್ನಗತಕವದೆರಡು ಭಾವದ ಬಿನ್ನಣೆಯ ಬಗೆ ಮೂಜು ದೈವದ ಭಿನ್ನಮುಖ ನಾಲ್ಕು (ಕುಮಾರ. ೩-೩). 'ಅಭಿಮುಖ' ಪರಾ. [ಸಂ.]

**ಭಿನ್ನಮುಹೂರ್ತ** (ನಾ). [ಜೈನ] ಒಂದು ಮುಹೂರ್ತ ಅಥವಾ ಎರಡು ಘಳಿಗೆಯಿಂದ ಅತ್ಯಲ್ಪ ಕಡಮೆಯಾಗಿರುವ ಕಾಲ : ಒಂದು ಮುಹೂರ್ತದಲ್ಲಿ ಒಂದು ಸಮಯದಷ್ಟು ಕಡಮೆಯಾಗಿರುವ ಕಾಲ : ಒಂದು ಮುಹೂರ್ತದೊಳಗಿಂದ ಒಂದು ಸಮಯವು ಕಡಿಮೆಯಾದರೆ. ಅದು ಭಿನ್ನಮುಹೂರ್ತವೆನಿಸುವುದು (ಕೃಪಶ. ೩೦೬). [ಸಂ.]

**ಭಿನ್ನಯಿಸು** 'ಭಿನ್ನಿಸಂ' ನೋ.

**ಭಿನ್ನರಾಶಿ** (ನಾ). ೧. [ಗಣಿತ] ಒಂದು ಪೂರ್ಣಾಂಕವನ್ನು ಒಡೆದರೆ ಬರುವ ಭಾಗ ; ಒಂದು ಎಂಬ ಸಂಖ್ಯೆಗಿಂತ ಕಡಮೆಯಾದ ಭಾಗ; ಕಾಲು, ಅರ್ಧ ಮೊದಲಾದುವು ; ಅಪೂರ್ಣಾಂಕ ; ಭಿನ್ನಾಂಶ : ಸುಮಾರು ಕ್ರಿ. ಪೂ. ೨೪೦೦ಕ್ಕೆ ಸೇರುವ ಶಾಸನಗಳಲ್ಲಿ ಪದಾರ್ಥಗಳ ಅಳತೆ, ತೂಕ ಮುಂತಾದುವುಗಳೂ, ಬಡ್ಡಿಯ ವ್ಯವಹಾರವೂ ೧/೨, ೧/೪, ೩/೪ ಎಂಬ ಭಿನ್ನರಾಶಿಗಳೂ ಕಂಡುಬರುತ್ತವೆ (ಗಣಿತ. ೫). ೨. ಅಪೂರ್ಣಾಂಕ ಲೆಕ್ಕ : ಭಿನ್ನರಾಶಿಗೆ ಸಂಬಂಧಿಸಿದ ಸಂಕಲನ, ವ್ಯವಕಲನ ಮೊದಲಾದ ಲೆಕ್ಕಗಳು : ಸ್ವಾಮಿನಾಥ ಅರ್ಧಗಂಟೆಹೊತ್ತು ಕುಳಿತು ಭಿನ್ನರಾಶಿ ಲೆಕ್ಕ ಮಾಡಿದ (ಸ್ವಾಮಿಸ್ನೇ. ೫೯). [ಸಂ.]

**ಭಿನ್ನರುಚಿ** (ನಾ). ೧. ಬೇರೆಬೇರೆ ರೀತಿಯ ರುಚಿ ,– ಸ್ವಾದ : ಸಕ್ಕರೆ, ಉಪ್ಪು ಎರಡೂ ಭಿನ್ನರುಚಿಯ ಪದಾರ್ಥಗಳು (ರಚನ). ೨. ಬೇರೆಬೇರೆ ರೀತಿಯ ಅಭಿರುಚಿ, – ಆಸಕ್ತಿ, – ಅಪೇಕ್ಷೆ : ಅವರಿಬ್ಬರೂ ಅಣ್ಣತಮ್ಮಂದಿರಾದರೂ ಭಿನ್ನರುಚಿಯುಳ್ಳ ವ್ಯಕ್ತಿಗಳು (ರಚನ). ೩. ಬೇರೆ ಬೇರೆ ರೀತಿಯ ಅಭಿರುಚಿಯುಳ್ಳ ವ್ಯಕ್ತಿ : ಭಿನ್ನರುಚಿಗಳಾಗಿ ತಂತಮ್ಮ ಮೆಚ್ಚನಿಚ್ಚೆಯ ಪೂಗಳನೆ ಪೊಗಟೆ (ಆದಿಪು. ೦೦-೦೨೩ ವ). [ಸಂ.]

**ಭಿನ್ನಲಿಂಗ** (ನಾ). [ವ್ಯಾಕ] ಬೇರೆಬೇರೆಯ ಲಿಂಗ : ಭಿನ್ನಲಿಂಗದ ಅನೇಕ ಕರ್ತೃಪದಗಳಿರುವಲ್ಲಿ ಕ್ರಿಯಾಪದಕ್ಕೆ ಕಡೆಯ ಕರ್ತೃಪದದ ಲಿಂಗವು ಬರುವುದು. ಉದಾ :— ಆನೆಯುಮರಸನುಮರಸಿಯುಂ ಬಂದರ್ (ಕೃ.ಬಿ. ೫೮). [ಸಂ.]

**ಭಿನ್ನವಿದ್ಯ** (ನಾ). ವಿದ್ಯಾಬಲವನ್ನು ಕಳೆದುಕೊಂಡವನು : ಬಹುರೂಪದಿಂ ಕಾಡುತ್ತಿರ್ದಸುರಂ ದೀನಜನತಾಕಲ್ಪಾಂಘ್ರಿಪನಿಂ ಭಿನ್ನವಿದ್ಯನುಮಭಿನ್ನಸನ್ನಾಹನುಮಾಗಿ ಪೆಜತೆಗೆದು ಪೋಗಿ (ಶಾಂತಿಪು. ೬-೩೯ ವ). [ಸಂ. (ಭಿನ್ನ + ವಿದ್ಯಾ + —)]

**ಭಿನ್ನವಿಸು** 'ಭಿನ್ನಿಸು' ನೋ.

**ಭಿನ್ನವೃತ್ತ** (ನಾ). [ಛಂದ] ಕಾವ್ಯಗಳಲ್ಲಿ ಉಂಟಾಗುವ ಒಂದು ಬಗೆಯ ವಾಕ್ಯದೋಷ ; ಒಂದು ವೃತ್ತದಲ್ಲಿ ನಿಯಮಿತವಾಗಿರುವ ಗುರು ಲಘುಗಳಂ ವ್ಯತ್ಯಾಸವಾಗಿ ಅಕ್ಷರವಾಗಲಿ ಮಾತ್ರೆಯಾಗಲಿ ಹೆಚ್ಚು ಕಡಮೆಯಾಗುವಿಕೆ : ಛಂದೋಭಂಗ : ಸುವಿದಿತ ಯತಿಭಂಗಂ ಭಿನ್ನವೃತ್ತಮೆಂದಿಂತು ವಾಕ್ಯದೋಷಮಿಮಕ್ಕುಂ (ಕಾವ್ಯಾವ. ೯೫೫) ; ಗುರುಲಘುರಚನೆಗೆ ನಿರ್ದಿಷ್ಟರೂಪಹೀನಾಧಿಕಾಕ್ಷರಂ ಛಂದದೊಳೊಂದಿರೆ ಭಿನ್ನವೃತ್ತಮೆಂಬುದು ಮರುಕ್ತಮಾತ್ಯಂತ ದೋಷಮಕ್ಕುಂ ಕೃತಿಯೊಳ್ (ಕಾವ್ಯಾವ. ೯೬೨). [ಸಂ.]

**ಭಿನ್ನಷಡ್ಜ** (ನಾ). [ಸಂಗೀತ] ಒಂದು ರಾಗದ ಹೆಸರು : ಭಿನ್ನಷಡ್ಜ ಭಿನ್ನತಾನ ಭಿನ್ನಕೌಶಿಕಿ ಮಧ್ಯಭಿನ್ನವೆಂದು ನಾಲ್ಕು ರಾಗಂಗಳುಂ ಗೌಡ ಜಾತೀಯಂಗಳು (ಬಿವೇಕ. ೨೩೬) ; ಭಿನ್ನಷಡ್ಜವೆಂಬ ರಾಗವು ಭೂಪಾಲ ಮೇಳದಿಂದ ಹುಟ್ಟಿದೆ (ತತ್ವಶಾ. ೬೦). [ಸಂ.]

**ಭಿನ್ನಾಭಿಪ್ರಾಯ** (ನಾ). ವಿರುದ್ಧಾಭಿಪ್ರಾಯ : ಅಭಿಪ್ರಾಯಭೇದ : ಈ ವಿಷಯಕ್ಕೆ ಇಬ್ಬರಿಗೂ ಭಿನ್ನಾಭಿಪ್ರಾಯ ಬಂದು ಕೊನೆಗೆ ಇಬ್ಬರಿಗೂ ಮಾತು ಕೂಡ ನಿಂತುಹೋಗಿತ್ತು (ಸಂಗೀತ. ೦೬) ; ಈ ಬಗೆಯ ಉಚ್ಚ ಭಿನ್ನಾಭಿಪ್ರಾಯದಲ್ಲಿ ಯಾವದೇ ನಿರ್ಣಯವನ್ನು ಕೊಡುವುದು ಕಠಿಣವಾಗುವುದು (ಧರ್ಮಶಾ. ೦೯೯). [ಸಂ.] .

**ಭಿನ್ನಿಸು, ಭಿನ್ನಯಿಸು, ಭಿನ್ನವಿಸು** (ಕ್ರಿ). ೧. ಬೇರ್ಪಡು; ಸಡಿಲವಾಗು: ವಿಪ್ರನುನ್ನತತಪೋಬಲದೊಳಂಘ್ರಿಯಿಂ ಬದಿರಲ್ಕೆ ಭಿನ್ನಿಸದೆ ಬಿಗಿದಿರ್ದ ಬಲ್ಮೆಗಳ ದಂತಂಗಳುಡಿದುವದನೇನೆಂಬೆನು (ಕೃಬಿಶಾ. ೦೫-೩೦) ; ತೋಯದದ ಕಪ್ಪಿನೊಳು ವಿದ್ಯುತು ಛಾಯ ಭಿನ್ನಿಸಿ ತೋರುವ್ವೋಲು

(ಶಾಗಕ. ೦೨-೬೩). ೨. ಪ್ರತ್ಯೇಕವಾಗು; ಬದಲಾಗು; ವ್ಯತ್ಯಾಸವಾಗು; ಭಿನ್ನವಾಗು: ಮುನ್ನ ತಾಂ ಬರೆಸಿ ಕಳುಹಿದ ಪತ್ರಮಂ ತರಿಸಿ ನೋಡಿಕೊಂಡದಱೊಳಿರ್ದ ಭಿನ್ನಿಸಿದ ಭಾವಾರ್ಥಮಂ ತಿಳಿದು (ಕೃಶಿಚ. ೩೦-೩೩); ನನ್ನ ಅಭಿಪ್ರಾಯವು ಭಿನ್ನಿಸುತ್ತದೆ (ದೇಶೀಣ. ೦೦೯). ೩. ಭಗ್ನವಾಗು; ಚೂರಾಗು: ಭಿನ್ನಿಸದೆ ಕಿಚ್ಚಿದೆಯು ಸತಿಯುರಾವಸುವಿಡಿದೆವು (ಕೃಶಿಚ. ೨೩-೩೯). ೪. ಚೂರುಮಾಡು: ತೆಂಗಾಯ ಬಲುಹಿಂದ ಭಿನ್ನಿಕೆ[ಸೆ]ಳನೀರ ಸೇವಿಸಬೇಕು (ಶಪಹೋ. ೨೬-೩). ೫. ಮುರಿದು ಹಾಕು; ಹಾಳುಮಾಡು; ನಾಶಮಾಡು: ಪನ್ನಿಸಲಿ ವಿಧಿ ನಿನ್ನ ಬೇಡಿಕೆಯ, ಭಿನ್ನಿಸಲಿ, ನಿನ್ನ ಬಲವನು ಮೆರಸೊ (ಪಂಕಳ. ೩೩೦). ಭಿನ್ನಯಿಸು: ೨. ಒಂದೇ ಮರದಲ್ಲಿ ಅವಸ್ಥಾಭೇದದಿಂದ ಬರುವ ರಸವೈವಿಧ್ಯ, ಗುಣವೈವಿಧ್ಯಗಳನ್ನು ಬೀಜವೂ ಕ್ಷೇತ್ರಬಲದಿಂದ ರಸ, ಪಾಕ ಮೊದಲಾದುವುಗಳಲ್ಲಿಯೂ ಭಿನ್ನಯಿಸುವುದನ್ನೂ ಗಮನಿಸಿ (ಖುಶಾಶ. ೩೦೯ ಸಂಧ್ಯಾವಂದನೆ). ೬. ಬೇರೆಮಾಡು; ಪ್ರತ್ಯೇಕಿಸು: 'ನಾನು ಇದ್ದೇನೆ' ಎಂಬ ವಿಷಯವನ್ನು ಎಲ್ಲರೂ ಒಪ್ಪುತ್ತಾರಾಗಲಿ ನನ್ನ ಸ್ವರೂಪದ ವಿಷಯದಲ್ಲಿ ಭಿನ್ನಯಿಸುತ್ತಾರೆ (ಶೀಪಾಕ. ೦೬). ಭಿನ್ನವಿಸು: ೨. ಮನುಷ್ಯನು ಕರ್ಮಯೋನಿ ಭೋಗಯೋನಿ ಎರಡೂ ಆಗಿರುವುದಾದರೆ ಕರ್ಮ ಮತ್ತು ಭೋಗಗಳ ಅನುಪಾತವು ಒಂದೇ ಆಗಿರದೆ ಭಿನ್ನವಿಸುತ್ತದೆ (ಶೀಪಾಕ. ೨೬೩).

[ಭಿನ್ನ + — ಇಸು₃]

**ಭಿನ್ನೋದರ** (ನಾ). ಮಲತಾಯಿಯ ಮಗ; ಮಲಅಣ್ಣ ಅಥವಾ ಮಲತಮ್ಮ: ರಾಜಒಡೆಯರ ಕಾಲದಲ್ಲಿ ಆ ಗ್ರಾಮವನ್ನು ಲಕ್ಷ್ಮೀಕಾಂತಯ್ಯನೆಂಬಾತನು ಅನುಭವಿಸುತ್ತಾ ಭಿನ್ನೋದರರಾದ ತನ್ನ ಸಹೋದರರನ್ನು ಪೋಷಿಸುತ್ತಿದ್ದನು (ಒಚಳ. ೦೯). 'ಏಕೋದರ' ಪರಾ.

[ಸಂ.]

**ಭಿನ್ನೋಪಪಾಠ** (ನಾ). ಗ್ರಂಥಸಂಪಾದನೆಯಲ್ಲಿ ಒಂದೆರಡು ಮಾತೃಕೆಗಳ ಆಧಾರದಿಂದ ಕಲ್ಪಿಸಿರುವ ಪೂರಕ ಪಾಠಾಂತರ: ಇವುಗಳಲ್ಲಿ ಒಮ್ಮತವಿಲ್ಲದಾಗ ಈ ಭಿನ್ನೋಪಪಾಠ (Sub-Variant) ಗಳಲ್ಲಿ ಯಾವುದಾದರೊಂದನ್ನು ಆರಿಸಿಕೊಳ್ಳಬೇಕಾಗುತ್ತದೆ (ಶಾರಶ. ೩೩); ಈ ಪ್ರತಿಗಳನ್ನು ಭಿನ್ನೋಪಪಾಠವಾಹಕಗಳೆಂದು (Sub-Variant Carriers) ಉಪಪ್ರಧಾನಮಾತೃಕೆಯ ದೃಷ್ಟಿಯಿಂದ ಕರೆಯಬಹುದು (ಕಪ್ನಸಂ. ೦೬೬).

[ಸಂ.]

**ಭಿಮ್ಮೆನು** (ಕ್ರಿ). ಶಬ್ದದಿಂದ ತುಂಬು; ಪ್ರತಿಧ್ವನಿಸು: ಜಿನಪೂಜೆಗೆಂದು ಮುನ್ನವೆ ಸುಚಿತ್ರರ ಮನೆಯಿಂದ ಬಂದಿರ್ದರತ್ತೆ ಅನುಪಮ ಪೂಜೆಗೈದರು ವಾದ್ಯಕೋಟಿ ಭೋರೆನೆ ದಶದಿಕ್ಕು ಭಿಮ್ಮೆನಲು (ಶರಕ. ೩೯-೨೦).

[ಭಿಂ₀ + ಎನು (< ಎನ್₁)]

**ಭಿಮ್ಸನ್** (ನಾ). ಒಂದು ಅನುಕರಣ ಶಬ್ದ: ಅಱಿಯದೆ ಬಂದವು ಕಿಮ್ಸನ್ ಪರಿಹರಿಸಯ್ಯ ಭಿ [ಶಾಕಾಂ. ಭ] ಮ್ಸನ್ (ಕುರಂದ. ೨-೩೬ ಶಲ್ಲಿಕ); ಮತ್ಸ್ಯಾವತಾರಗೆ ಕಿಮ್ಸನ್ ಕೂರ್ಮಾವತಾರಗೆ ಭಿ [ಶಾಕಾಂ. ಭ] ಮ್ಸನ್ (ಕುಲಂದ. ೨-೩೬-೦). P ಮುಂಹಮ್ಮದೀಯರು ತಮ್ಮ ಮತದ ಉತ್ಸವಗಳಲ್ಲಿ ಕ್ಯಾ ಹುಸೇನ್, ಬಾ ಹುಸೇನ್ ಎಂಬ ಶಬ್ದಗಳನ್ನು ಮತ್ತೆ ಮತ್ತೆ ಉಚ್ಚರಿಸುವುದನ್ನು ನೋಡಿ ಈ ರೀತಿಯಲ್ಲಿ ಕನ್ನಡ ಪದಗಳನ್ನು ಸೃಷ್ಟಿಮಾಡಿಕೊಂಡಿರಬಹುದೆಂದು ಕೆಲವರು ಊಹಿಸುತ್ತಾರೆ. 'ಕಿಮ್ಸನ್' ಪರಾ.

[?]

**ಭಿರಿಂಗನೆ** (ಅ). ಒಂದು ಅನುಕರಣಾವ್ಯಯ; ತಟ್ಟನೆ; ಕೂಡಲೆ; ಇದ್ದಕ್ಕಿದ್ದಂತೆ; ಧಿಡೀರನೆ: ಸಿಟ್ಟಿಗೆದ್ದು ಭಿರಿಂಗನೆ ಇನ್ನೊಂದು ಮೂಲೆಗೆ ಯಾರೂ ಇಲ್ಲವೆಂದು ಹೋಗಿ ಕೂಡುವಳು (ಅಖಶ. ೬೭).

[? + — ಅನ್₁]

**ಭಿರ್ಕಾ**₁ (ನಾ). ಬುರುಡೆಮಾತು; ಪೊಳ್ಳುಮಾತು: ಅದಕ್ಕೆ ಸರಿಯಾಗಿ ಏನು ಹೇಳಬೇಕೋ ತಿಳಿಯಲಿಲ್ಲ. ಆದರೂ ಅಲ್ಲಿಗೇ ಬಿಟ್ಟರೆ ತನಗೆ ಅವಮಾನ ಎಂದು, ಏನೋ ಒಂದು ಭಿರ್ಕಾ ಹೊಡೆದ (ಖುಲ್ಲ. ೦೦೪).

[← ಮರಾ. ಭಿರಕಾ]

**ಭಿರ್ಕಾ**₂, **ಬೃಗ** (ನಾ). [ಸಂಗೀತ] ರಾಗಾಲಾಪನೆಯಲ್ಲಿ ದ್ರುತ (ಕಾಲ)ದಲ್ಲಿ ಹಾಡುವಿಕೆ: ಒಮ್ಮೊಮ್ಮೆ ಒಂದೇ ಸಮನಾಗಿ ೨ ಸ್ಥಾಯಿಗಳ ವ್ಯಾಪ್ತಿಯುಳ್ಳ ಬೃಗಗಳನ್ನು (ಭಿರ್ಕಾ) ಅದ್ಭುತವಾದ ವೇಗ ಮತ್ತು ಸುಲಭ ರೀತಿಗಳಲ್ಲಿ ಹಾಡುತ್ತಿದ್ದರು (ಸಂಗೀತ. ೩). **ಬೃಗ**: ಕೇಳುವವರಿಗೆ ದೀಪಾವಳಿಯ ಮದ್ದು ಮತಾಪುಗಳ, ಬಾಣಬಿರುಸುಗಳ ಮಿಣುಕು ಬೆಳಕಿನ ಕಣ್ಣು ಕೋರೈಸುವ ಸೌಂದರ್ಯ ಸೊಗಸುಗಳು ಈ ಬೃಗಗಳಲ್ಲಿ ಕಾಣುತ್ತಿದ್ದುವು (ಸಂಗೀತ. ೩).

[?]

**ಭಿರ್ರನೆ** (ಅ). ಒಂದು ಅನುಕರಣಾವ್ಯಯ; ಬೇಗನೆ; ಚುರುಕಾಗಿ: ಭಿರ್ರನೆ ಸಮಸ್ತ ಕುರುಸೇನೆಗಳ್ಗಲ್ಲೆ ಗಜ ಕಿರ್ರೆನಲ್ (ಕುರಂಗ. ೩೦-೩೦).

[? + — ಅನ್₁]

**ಭಿಲ್ಲ** (ನಾ). ಬೇಡ; ವ್ಯಾಧ: "ಬಿಯದರ್ ಭಿಲ್ಲರ್ ವ್ಯಾಧರ್ ನಯದಿಂ" (ಕಬಿಕಂ. ೮೦); ಒಂದೊಂದೆಡೆಯ ಪುಳ್ಳಿಡುಗಳೊಳ್ ತೊಡರ್ದ ಮೆಯ್ಮವಿರ್ ಪಱಿಗುಮೆಂದು ಮಿಡುಕಲೊಲ್ಲದಲ್ಲಿಯೆ ನಿಂದು ಬಿ[ಭಿ]ಲ್ಲರ್ಗೆ ತಮ್ಮಿಂ ತಾಮೆ ಪಡುಮಿಗಂಗುಡುವ ಚಮರೀಮೃಗಂಗಳುಂ (ಚಂದ್ರಪು. ೩-೬೩ ವ); ಭಿಲ್ಲರ್ಗಾದುದೇ ಗೋಪುರಂ (ಕೋಪುಚ. ೩೦).

[ಸಂ.]

**ಭಿಲ್ಲಜಕರ** (ನಾ). [ಸಂಗೀತ] ಒಂದು ರಾಗದ ಹೆಸರು: ಸಾಳಗ ನಾಟ ಭಿಲ್ಲಜಕರಂಯೆಂಬೆರಡುಂ ರಾಮಕ್ರಿಯಾರಾಗಕ್ಕೆ ಉಪಾಂಗಗಳು (ಶಿವೀಳ. ೨೩೪).

[?]

**ಭಿಲ್ಲಪಲ್ಲಿ** (ನಾ). ಬೇಡರು ವಾಸಿಸುವ ಗ್ರಾಮ; ಬೇಡರ ಹಳ್ಳಿ: ಸೊಗಯಿಪುದೀ ಕಾನನೋದ್ದೇಶಮೋರಂತಿರೆ ನಾನಾಭಿಲ್ಲಪಲ್ಲೀಖನಮೃಗಲತಿಕಾವೃಕ್ಷಗುಲ್ಮಾವಕಾಶಂ (ಕುಶ್ವಪು. ೩-೬೯). [ಸಂ. ಭಿಲ್ಲಪಲ್ಲೀ]

**ಭಿಲ್ಲಪಳ್ಳಿ** (ನಾ). = ಭಿಲ್ಲಪಲ್ಲಿ: ದರಿಸರಿಯಾನೆಗಳ್ ಗಱಿಕೆ ಮೇವ ಮುಗಿಲ್ ದೊಣೆ ಭಿಲ್ಲಪಳ್ಳಿ ಕಿನ್ನರಮಿಥುನಾಳಿಗಳ್ ವಿಷಯಮಾಗಿರೆ ತೀರ್ವುದು ಶೈಲವರ್ಣನಂ (ಸೂಕ್ತಿಸು. ೩-೦). [ಭಿಲ್ಲ + ಪಳ್ಳಿ₁]

**ಭಿಲ್ಲಿ** (ನಾ). ಬೇಡರ ಹೆಂಗಸು; ಬೇಡಿತಿ: ವನವನದ ಬನದಿಪ ಭಿಲ್ಲಿಯರ ಬನ್ನಣವ ತೋಱಿಸುದು (ಖುದೀಪು. ೩-೩); ಭಿಲ್ಲಿಯ ವಿಳಾಸ ಮನಾಳ್ದಿಸೆದಂದು ಸರ್ವಮಂಗಳೆ ನಿಜಕಾಳರಾತ್ರಿವೆಸರಂ ಮಿಗೆ ಸಾರ್ಥಕಮಂ ನೆಗಳ್ಚಿದಳ್ (ಕಬಿಕಂ. ೩-೬); ಆ ಶಿವದೀಕ್ಷಾಪರಾಯಣೆಯು ಯಾರಿರಬೇಕು? ಭಿಲ್ಲಿಯ ವೇಷಧಾರಿಯಾದ ದಾಕ್ಷಾಯಣಿಯಾಗಿರಬೇಕು (ಶ್ರೀಣಾಹು. ೨೭೭).

[ಸಂ. ಭಿಲ್ಲೀ]

**ಭಿವೊಮ್ಮ** (ನಾ). ಒಬ್ಬಾತನ ಹೆಸರು (?): ಸ್ವಸ್ತಿಶ್ರೀ ಭಿವೊಮ್ಮ ಕೂರಾಳಿಗದ ಅಲರೊಳೆ ಕೊಣಮಿರುಗಂಗ ದುರದುಳ್ ದುಗ್ಗಮಾರರ ಪಡೆಬಟ್ಟು ಎಱಿದು ಬಿಟ್ಟು (ಎಕ. IX, ದೇವಹ. ೬೭-೦; ಕು. 780).

[? + ಅಮ್ಮ₁]

**ಭಿಷಗ್ಜನ** (ನಾ). ವೈದ್ಯರ ಗುಂಪು: ಶರೀರರಕ್ಷಣೆಗಂ ಪರಿಚರ್ಯೆಗಂ ಸಮಯೋಚಿತಕುಶಲರಪ್ಪ ಗುರುಜನ ಭಿಷಗ್ಜನ ಗಣಕಜನ ಗಣಿಕಾಜನ ಧಾತ್ರೀಜನ ಬಾಲಮಹತ್ತರಿಕಾಜನಮಂ ಸಮರ್ಪಿಸುವುದುಂ (ಖುಲ್ಲಪು. ೪-೯೩).

[ಸಂ.]

**ಭಿಷಗ್ದೋಷ** (ನಾ). ವೈದ್ಯನ ತಪ್ಪು: ಮತ್ತಮಾತುರನೌಷಧಭೀರುವಾದೊಡಂ ಭಿಷಗ್ದೋಷವಾಗದಂತೆ ನಿಮ್ಮ ಪೇಟ್ಬುದನುಪೇಕ್ಷಿಸಿದೊಡೆನ್ನ ದೋಷಂ (ಶಾಂತಿಪು. ೪-೦೦೦ ವ).

[ಸಂ.]

**ಭಿಷಗ್ವರ** (ನಾ). ೧. ಶ್ರೇಷ್ಠನಾದ ವೈದ್ಯ. ೨. ಉತ್ತಮವಾದ ಮದ್ದು,– ಔಷಧ : ಮನೋರೋಗಕಾ ಶ್ರೇಮವೇ ಭಿಷಗ್ವರಂ (ಶ್ರೀರಾಪರಾ. ೨೭೪-೩೦೩). [ಸಂ.]

**ಭಿಷಜ** (ನಾ). ವೈದ್ಯ : "ದೋಷಜಿತ್ ಭಿಷಜಂ ಚಿಕಿತ್ಸಕಂ ವೈದ್ಯನಕ್ಕು" (ಪುಂಗರಾ. ೦೦೫-೬): ಕಾಕುಬಡತನವಡೆಸಿ ನರಳುವಾತನ ಮನೆಗೆ ಜೋಕೆಯಿಂ ನಿಧಿ ತಾನೆ ಬಂದವೋಲ್ ರಂಜಿಸಿರೆ ನೂಕದಳಲುವನ ಮನೆಗಾರೈದು ಭಿಷಜ[ಜ]ನಂದೆಯ್ತಂದ ಮಾಳ್ಕೆಯಂತೆ . . . ಶಿವಮಂತ್ರ ಮೆನಗೀಗ ದೊರೆಕೊಂಡುದು (೬೦೮೮. ೩-೦೦). [ಸಂ. ಭಿಷಜ್]

**ಭಿಸ್ಸಟೆ** (ನಾ). ಸೀದುಹೋದ ಅನ್ನ : "ಭಿಸ್ಸಟ, ದಗ್ಧಿಕಾ–೨ ಅನ್ನದ ಸೀಕು; ಸೀದುಹೋದ ಅನ್ನ" (ಶಿದ್ಯಂ. ೨೬೮). [ಸಂ. ಭಿಸ್ಸಟಾ]

**ಭಿಸ್ಸೆ** (ನಾ). ಬೋನ; ಅನ್ನ : "ಅಂಧಃ, ಕೂರಂ, ಭಕ್ತಂ, ದೀದಿವಿಃ, ಅನ್ನಂ, ಓದನಂ, ಭಿಸ್ಸಾ, ಅಶನಂ, ಆಹಾರಃ – ಈ ೯ ಕೂಳ್" (ಕರಾಘು. ೫೩-೨೬೪). [ಸಂ. ಭಿಸ್ಸಾ]

**ಭೀ** (ನಾ). ಹೆದರಿಕೆ; ಭಯಂ; ಭೀತಿ : ಏಕಾಕ್ಷರಕ್ಕೆ – ಜ್ಯಾ, ಮಾ, ಪ್ರಾ, ಶ್ರೀ, ಸ್ತ್ರೀ, ಭೀ, ಭ್ರೂ, ಕೂ – ಎಂಬಿವು ಮೊದಲಾದ ಏಕಾಕ್ಷರ ಶಬ್ದಂಗಳಿರ್ದ ಕೆಳದಿಂ ವಿಭಕ್ತಿಯಂ ಪಡೆವುವು (ಶಬ್ದ. ೯೩ ಪ್ರಯೋ); ಅನೇಕ ಸ್ವರಸ್ಯೇತಿ ಕಿಂ? ಶ್ರೀ, ಹ್ರೀ, ಭೀ, ಧೀ (ಶಬ್ದಾ.ಶು. ೦೦೫ ಪ್ರಯೋ); ಕೋಡಿ ಖರದೂಷಣರ ಭೀಯಿಂದೋಡಿ ಪೋದಂಥೆಲ್ಲ ಮುನಿಗಳು ಕೂಡಿ ಪುನರಪಿ ಬಂದು . . . ಸೌಖ್ಯದಿಂದಾವಾಸ ಮಾಡಿಹರು (ರಘುಚಂ. ೦೩-೨೨). [ಸಂ.]

**ಭೀಂಕೃತ** (ನಾ). ಬಾಣದ ಧ್ವನಿ : ಭೀಂಕೃತಂ ಬಾಣದೊಳು ಛೀತ್ಕೃತಂ ಕಲಭದೊಳು ಬೃಂಹಿತಂ ಮದಗಜದೊಳು (ಪುಂಗರಾ. ೨೭-೬). [ಸಂ.]

**ಭೀಂಕೃತಿ** (ನಾ). = ಭೀಂಕೃತ : ಕಣೆವೃತಿದೆ ರಣಭೂತ ರಾಮನ ಕಣೆಯು ಭೀಂ[ಪಾಠಾಂ. ರೆಘೀಂ]ಕೃತಿರವಕೆ ನಭದಲಿ (ಕೊರರಾ ೩-೬-೩೫); ಬಿಲ್ಗಾರರ ಗುಣಠಂಕೃತಿ ಚಾಪಪ್ರಯುಕ್ತ ಶರನಿಕರ ಮಹಾಭೀಂಕೃತಿ ನೋಳ್ಪವರರ್ಗೆ ಭಯಂಕೃತಿಗೆಯ್ವುದು (ಅಜಿಕೇ. ೬-೪೬). [ಸಂ.]

**ಭೀಕರ** (ಗು). ೧. ಭಯವನ್ನುಂಟುಮಾಡುವ; ಹೆದರಿಕೆಯನ್ನುಂಟುಮಾಡುವ : ಭೀಕರಕರಿಮಕರನಿಕರಭಿನ್ನತರಂಗಾಸೀಕಲವಣಾಂಬು ರಾಶಿವೃತಾಕೃತಿ ಕಮನೀಯಮುಂಟು ಜಂಬೂದ್ವೀಪಂ (ಶಾಂತಿ. ೧-೫೬); ಪುರಹರಂ ಪೊಡೆಯೆ ತೋಳ್ಪಿಚ್ಚಿದ ಭೀಕರಗಜಾಸುರನೊ . . . ಎಂದೆಂಬ ಸಂದೇಹಕೆಡೆಯಾದ ಸೊಕ್ಕಿದೆಕ್ಕಲನನೊಂದಂ ಕಂಡಂ (ಹರಿಶ್ಚ. ೬-೨೦); ಉರವಣಿಸಿ ನಾವೆಸುವ ಭೀಕರ ಸರಳ್ಗಳಿಂ ತಪ್ಪಿಸಿಕೊಳುತ (ಭಾರತ. ೩೪-೨೭). (ನಾ). ೨. ಭಯವನ್ನು ಉಂಟುಮಾಡುವಂಥದು; ಹೆದರಿಕೆಯನ್ನುಂಟುಮಾಡುವಂಥದು : ಭೀಕರಮಪ್ಪ ಶೂಲಿಯುಭಿಲಾಷೆಯೊಳ್ ತಪವಾತನೇಕೆ ನೀನೇಕೆ ಕೃಪಾಣವೇಕೆ . . . ಸಿಡಿಲೇಕೆ ಮರಾಳನದೇಕೆ ಲೋಕದೊಳ್ (ಗಿರಿಜಾ. ೯-೧೦೨); ಕುಸುಮಧವಳರೋಮಂಥಫೇನಂ ಕರಂ ಭೀಕರಮಾಗಲ್ಕೊಪ್ಪುಗುಂ ಕಾನನದೊಳಿಭಸಮಾನ ಬಲಾಯುಪ್ರತಾನಂ (ದಶಕು. ೯-೨೮); ತರಳನ ಕೊರ್ಗಣೆಯಿಂದೆ . . . ಕೊರಲರೆಗಡಿದು ಕತ್ತರಿಸಲು ತಲೆ ಬಿದ್ದು ಹೊರಳಲು ಭೀಕರವಾಯ್ತು (ಮೋಹತ. ೩೫-೦೪). ೩. ಭಯಾನಕತೆ : ನರಹರಿಯು ವೇಷಂದಳೆದು ಭೀಕರದೊಳಂದು ಹಿರಣ್ಯಕನ ಸಂಹರಿಸಿದನು (ಭಾರತ. ೫೬-೨೫). [ಸಂ.]

**ಭೀಕರವಡೆ** (ಕ್ರಿ). ಭಯಂಕರತೆಯನ್ನು ಹೊಂದು; ಭಯಂಕರವಾಗು: ತೊಡೆದರೆ ಹೊಡೆದು ಡೊಕ್ಕರಿಸಿ . . . ಭೀಕರವಡೆದು ಹೊಯ್ದಾಡಿದು ಮೆರದು (ಮೋಹತ. ೩೬-೨೮). [ಭೀಕರ + ಪಡೆ₁]

**ಭೀಕರಿಸು** (ಕ್ರಿ). ಭಯವನ್ನುಂಟುಮಾಡು; ಹೆದರಿಸು : ಬಿತದೆ ಭುಸ್ಸನೆ ಘೂತ್ಕರಿಸುತಡಿಗಡಿಗೆ ಕೋಪಾಟೋಪದಲಿ ಭೀಕರಿಸು[ಸಿ]ತಾಶಯ್ಯೆ (ಶಾಕ್ಯಾ. ೨೨-೨೪); ಆಕಾಶದೊಳು ಬಾಣ ಚುಮ್ಮು ಭೋರ್ಚುಯ್ಯೆಂದು ಭೀಕರಿಸುತ ಹೋದುದತ್ತ (ಶರಶ. ೨೪-೩೪); ರಣವಂದು ಭೀಕರಿಸಿದುದು ಸುರಥನೃಪಾಲ ಕೇಳೆಂದ (ರಾಶೇಪು. ೩-೨೫).

[ಭೀಕರ + – ಇಸು₃]

**ಭೀತ** (ಗು). ೧. ಭಯಗೊಂಡ; ಹೆದರಿದ. (ನಾ). ೨. ಅಂಜುಬುರುಕ; ಹೇಡಿ; ಪುಕ್ಕ : "ದರಿತಃ, ಚಕಿತಃ, ಭೀತಃ . . . ಶಂಕಿತಃ ಈ ೮ ಪ(ಹ)ಂದೆ" (ಕರಾಘು. ೫೮-೦೯೪); ಭೀತನನಲಸಿದನಂ ಕಾರ್ಯಾತುರನಂ ಪಸಿದನಂ . . . ಅಜಿದಜಿದು ಬಿನ್ನವಿಪ್ಪಂ ಗಾಂಪಂ (ಶಂಕಕಂ. ೨೭-೦೨). ಭೀತಂ ಲೋಚಂ ಶರಂ ನಿರ್ಗುಣಿ ಕಿಸುಗುಳಿಗು ನಿರ್ಲಜ್ಜಂ ಪಾಪಿ ಕಳ್ಳಂ (ಮಾರಕ. ೬-೦೪). ೩. [ಸಂಗೀತ] ಹೆದರಿಕೆಯಿಂದ ಹಾಡುವವನು : ಭೀತ = ಭಯದಿಂದ ಹಾಡುವವನು (ಸಂಗೀಕಂ. ೦೦೩).

[ಸಂ.]

**ಭೀತಿ** (ನಾ). ೧. ಹೆದರಿಕೆ; ಅಂಜಿಕೆ; ಭಯ : ಜಗತ್ತ್ರಯ ರಕ್ಷಾಪ್ರಿಯನಪ್ಪ ಕೃಷ್ಣನ ಚರಿತ್ರಂ ಭೀತಿಯಂ ಮಾಟ್ಕುಮೇ (ಜಗಪು. ೩-೩೯); ಭೀತಿಯನುಂಟುಮಾಡುಗುಮಿವಂಗೆ ಶರಾಸನ ಬಾಣಜಾಲಂ (ಕುಸುಮಾ. ೦೦-೩೦); ಕರುಣದಲಿ ಬಿಟ್ಟಾತನನು ಮುಂದರುಣಪಟಪರಿಧಾನ ಶೌರ್ಯಾಭರಣ ಧಾಳಿಯನಿಕ್ಕಲೋಡಿದನನಿಲ ಭೀತಿಯಲಿ (ತೊರರಾ. ೦-೮-೩೭). ೨. ಅಪಾಯ. ೩. ನಡುಕ; ಕಂಪನ. [ಸಂ.]

**ಭೀತಿಗೊಳಿಸು** (ಕ್ರಿ). ಅಂಜಿಸು; ಹೆದರಿಸು : ದ್ವಿತಯ ಕಾಮುರ್ಗಕ ನಿಷ್ಠುರದಿಂದಖಿಳದೇವತೆಗಳೆಲ್ಲರ ಭೀತಿಗೊಳಿಸಿ (ಮೋಹತ. ೦೨-೫೪); ಪಾತಾಳಗಡಿಯಾದಗಳು ದಿಟ್ಟಿಗೆ ನೆಟ್ ಭೀತಿಗೊಳಿಸುವ ಕೊತ್ತಳವು (ಸಂಪ. ೦೮-೫೫). [ಭೀತಿಗೊಳು + – ಇಸು₃]

**ಭೀತಿಗೊಳು** (ಕ್ರಿ). ಹೆದರು; ಅಂಜು; ಗಾಬರಿಯಾಗು; ಭಯಗೊಳ್ಳು: ಮಂದಸ್ಮಿತಮುಖಾಂಬುಜನಾಗಿ ಭೀತಿಗೊಳುತ್ತಮಿಪ್ಪವರ ವಿತತಭಯಮಂ ಪರಿಹರಿಸಿ (ಭಾರತ. ೨-೨೭); ಭೀತಿಗೊಂಡನು ದ್ರೋಣ ಸೋಲಕೆ ಕೇತುವಾದನು ಶಲ್ಯ (ಕುಮಾರರಾ. ೦೬-೦೩); ಪಲ್ಲಿಯ ಹುಲ್ಲೊಳಡಗಿ ಭೀತಿಗೊಂಡಾಗ ನಿಲ್ಲದೆ ದೆಸೆಯ ನಿಟ್ಟಿಸುತ (ಸಂಪ. ೦೫-೪೪).

[ಭೀತಿ + ಕೊಳು (<ಕೊಳ್₁)]

**ಭೀತಿಯುಕ್ತ** (ನಾ). ಹೆದರಿದವನು; ಅಂಜಿದವನು : ಭೀತಿಯುಕ್ತನಾಗಿ ಆತ ಯೋಚಿಸಿದ (ಅಕ್ರಪು. ೦೩೪). [ಸಂ.]

**ಭೀತಿವಡಿಸು** (ಕ್ರಿ). = ಭೀತಿಗೊಳಿಸು : ವರ ದುಗ್ಧಾಬ್ಧಿಯ ಮಥನದಿಂ ತುಸುಮಾತ್ರ ಗರಳವ ಬಿಡಲಾಕ್ಷಣದಿ ಸುರಮುಖ್ಯರ ಭೀತಿವಡಿಸಿದ ಧರಣೀಧರ ಫಣಿರಾಜ ರಕ್ಷಿಪುದು (ಮೋಹತ. ೦-೦೪).

[ಭೀತಿವಡು + – ಇಸು₃]

**ಭೀತಿವಡು** (ಕ್ರಿ). = ಭೀತಿಗೊಳು : ಪೂಸಿದ ಸಿರಿಗಂಧ ಕರಿಕಾದುದು ಸದ್ವಿಳಾಸಿನಿಯರು ಭೀತಿವಡಲು (ಮೋಹತ. ೨೮-೦೭); ರಣದೊಳ್ ಕಲಿಪಾರ್ಥಂ ಭೀತಿವಟ್ಟು ಬೆನ್ಗೊಟ್ಟಪನೇ (ಕಬ್ಬಿ. ೪-೬೮). [ಭೀತಿ + ಪಡು₁]

**ಭೀತಿಸು** (ಕ್ರಿ). = ಭೀತಿಗೊಳು : ನೆಲೆಯನಿಸಿದೆನಗೆ ಶಿವಾಂಘ್ರಿಯೆಂದು ಭೀತಿಸಿ ಬೇಡಿಕೊಳುವೆ (ಕೃಷ್ಣ. ೩೩-೧); ಮದ್ದಾನೆಗೆ ಸಿಂಹ ಮಲೆತಂತೆ ಸುಭಟಾನಿರುದ್ಧ ನಿಂದಿರ್ದ ಭೀತಿಸದೆ (ಮೋಹತ. ೩೫-೦೮).

[ಭೀತಿ + – ಇಸು₃]

**ಭೀತೆ** (ನಾ). ಹೆದರಿದ ಹೆಂಗಸು : ನಿಜನಾಥಭೀತೆ ಸುಚರಿತ್ರ ಗುಣವತಿ ಮಾನಿನಿ ಜನಾಪವಾದವಿರಹಿತೆಯೆನಿಪ ನಾರಿ ನನ್ನಿಜನಾರ್ದನಾದಿನಿರ್ಜರ ವರ್ಯಾವಿನುತೆಯುತಳು (ಕೃಷ್ಣಾ. ೫-೫೦). [ಸಂ. ಭೀತಾ]

**ಭೀಮ** (ಗು). ೧. ಹೆದರಿಕೆಯನ್ನುಂಟುಮಾಡುವ; ಅಂಜಿಕೆಯನ್ನುಂಟುಮಾಡುವ; ಭೀಕರವಾದ : ಜವಂ ಕೊಲ್ವವೊಲೆಯ್ದೆ ಬಂದು ಜವದಿಂ

ಗಂಧಾಂಧನಾ ಭೀಮಸಾಮಜಮುಂ ವಿಸ್ಮಯಮುಪ್ಪಿನಂ ಭರತನಂ ಕಂಡಾಯ್ತು ಜಾತಿಸ್ಮರಂ (ಶಂಗಾಮ. ೦೫-೩೦). (ನಾ). ೨. ಹೆದರಿಕೆ ಯನ್ನುಂಟುಮಾಡುವುದು; ಭಯಂಕರವಾದುದು; ಭೀಕರವಾದುದು: "ಘೋರಂ, ಪ್ರತಿಭಯಂ, ಭೀಮಂ . . . ಭಯಾನಕಂ__ಈ ೧೦ ಭಯಂಕರಂ" (ಶಬ್ದಮ. ೦೦೭-೨೦); ಭೀಮಂ ಭಯಂಕರಂ ಪೆಚಿತೇ ಮಾತೀ ಕೂಸಿನಂಬವಿಮಾತನ ಪೆಸರುಂ ಭೀಮನೆ (ಶಂಶಣಾ. ೧-೦೨೮). ೩. ಶಿವ; ಶಂಭು; ಈಶ್ವರ: "ಈಶಾನಃ . . . ಭೀಮಃ, ಭರ್ಗಃ, ಕೃತ್ತಿವಾಸಾಃ . . ಮಹಾದೇವಃ, ಮೃಡಃ (ಸ್ಯಾತ್), ನೀಲಲೋಹಿತಃ— ಈ ೪೫ ಮಹಾದೇವರ ಪೆಸರ್" (ಶಬ್ದಮ. ೩-೦೨); ಭೀಮ . . . ವಿರೂಪಾಕ್ಷ ಕರುಣಿಸುವುದೆಮಗೆ (ಶಶಣ. ೦-೩). ೪. ಪಾಂಡುರಾಜನ ಮಗ; ಯುಧಿಷ್ಠಿರನ ತಮ್ಮ: "ಕುರುವೈರಿ ವಾಯುಪುತ್ರಂ ವೃಕೋದರನೆನಲು ಭೀಮನಕ್ಕುಂ" (ಶಂಗಣಾ. ೭೮-೩); ಆಗಳಶ್ವತ್ಥಾಮಂ ಹೇಮಪುಂಖಾಂಕಿತ ಭೀಮಸಾಯಕನಿರ್ಭಾತದಿಂದಟ್ಟಿಯೆ ನೊಂದು (ಶಂಶಣಾ. ೦೨-೭೪ ಶ); ಕುರುವಂಶಾಧೀಶನಂ ಮೊದಲಿಟ್ಟದನದಟಂ ಭೀಮನುದ್ದಾಮಭೀಮಂ (ಗದಾಯು. ೭-೦೪). ೧, ೪: ಮತ್ತಮಾ ಮಹಾವನಂ . . . ಪಾಂಡವಪ್ರಕರದಂಶಾತ್ಮಭೀಮನಕುಲದ್ರುಪದಮುಂ ಅರ್ಜುನೋರ್ಜಿತಮುಂ (ಶಂದ್ರಶ. ೫-೫೨ ಶ). ೫. ಯಮ. ೩, ೪, ೫: ಭೀಮ ಬಲಮದರಾತಿಸೇನಾಭೀಮ ಕುರುಕುಲಕುಸುಮ ಮಾರ್ಗಣ ಭೀಮ ಮಚಿದ್ದೈ ಮಾನಿನಿಯ ಮಾನಾಪಮಾನಗಳ (ಕುಬ್ಬ್ಯಾ. ೩-೨೩). ೬. ವಿದರ್ಭದೇಶವನ್ನು ಆಳಿದ ಒಬ್ಬ ರಾಜ; ದಮಯಂತಿಯ ತಂದೆ: ಭೀಮನೃಪಾಲಕಂ ಪೆರೆದ ನಿಬ್ಬಣಿಗರ್ಗೆ ವಿಚಿತ್ರವಸ್ತ್ರ ಮುಕ್ತಾಮಯಭೂಷಣಂಗಳನನೇಕವನಿತ್ತು (ಪಕಶಂ. ೪೬೨); ಎಸೆದುದಲ್ಲಿ ವಿದರ್ಭನಗರವದು . . . ಅಲ್ಲಿಗಧಿಪತಿ ಭೀಮನೃಪ (ಶಳಚ. ೦-೨೬). ೭. 'ಬಸವಪುರಾಣ' ಎಂಬ ಕಾವ್ಯವನ್ನು ರಚಿಸಿದ ಕನ್ನಡದ ಒಬ್ಬ ಕವಿಯ ಹೆಸರು: ಒದವಿದಖಿಳಕಳಾಪ್ರಪೂರಿತಹೃದಯ ಭೀಮಕವಿ ಪ್ರಣೀತಾಭ್ಯುದಯ ಬಸವಪುರಾಣಕಥೆಯೊಳು (ಬಸಪು. ೬೦-೯೭). ೮. ಸಂಸ್ಕೃತದಲ್ಲಿ ಧಾತುಪಾಠವನ್ನು ಬರೆದ ಒಬ್ಬ ವೈಯಾಕರಣನ ಹೆಸರು: ವೇದಸಮನಾಗಿ ಭೀಮನಿನಾದುದು ಸಂಸ್ಕೃತದ ಧಾತು (ಕಮದ. ೩-೧). ೯. ಒಂದು ನರಕದ ಹೆಸರು: ಪೂತಿವಕ್ತ್ರ ರಕ್ತಪೂತಿ ಮೃತ್ತಿಕೆ ಕಣಧೂಮವೆಂಬೈದು ಮಂತ್ರಿನರಕಂಗಳಿಂ ಸುತ್ತಿ ಭೀಮವೆಂಬರಸುನರಕ ವಿಹುದು (ವಿವೇಕ. ೦೪೦). ೧೦. (ಆಲಂ) ಹೆಚ್ಚಾಗಿ ಊಟಮಾಡುವವನು; ಹೊಟ್ಟೆಬಾಕ: ಭೀಮನಿಗೆ ಭಾನುವಾರವಾದರೇನು? ಭೌಮವಾರವಾದರೇನು? ಭೋಜನ ಸಿಕ್ಕಿದರೆ ಸೈ. (ಗಾದೆ).

ಭೀಮಗದೆ = ಭೀಕರವಾದ ಗದೆ: ದುರ್ಯೋಧನಾನುಜ ದುಶ್ಶಾಸನ ಭೀಮ ಭೀಮಗದೆಯಿಂ ಪಂಚತ್ವಮಂ ಪೊರ್ದಿದ್ಧೈ (ಗದಾಯು. ೫-೫); ಪಂದಿ ಪೋಟೆಟ್ಟು ಸಬಲ ಭೀಮಗದೆ ಕೊಂತ ಮುಂದುಗಡಿಸುವ ಕೈದುಗಳ ಸಂದಣಿ ಖಣಿಖಟಿಲೆನೆ (ಕುಂದಾಶಾಂ. ೦೦-೯೨). ಭೀಮನ ಅಮಾವಾಸ್ಯೆ = ಆಷಾಢಮಾಸ ಮುಗಿದು ಶ್ರಾವಣಮಾಸ ಆರಂಭವಾಗುವಾಗ ಬರುವ ಅಮಾವಾಸ್ಯೆ: ಇಂದು ಭೀಮನ ಅಮಾವಾಸ್ಯೆಯಾದ್ದರಿಂದ ಶಾಲೆಗೆ ರಜ (ಕೂ೨). ಭೀಮನ ಬಿಲ್ಲು = ಕಾಮನ ಬಿಲ್ಲು: ರಾಮನು ಹೊರಗೆ ಬಂದು ಪಡುವಿನಲ್ಲಿ ಉಂಟಾದ ಭೀಮನ ಬಿಲ್ಲನ್ನು ಕಂಡು 'ಅಮ್ಮ, ಅಮ್ಮ, ಇಲ್ಲಿ ನೋಡು!' ಎಂದು ಕೂಗಿ ಹೇಳಿದನು (ಮಕಮ. ೪೨೨). [ಸಂ.]

**ಭೀಮಕಾಯ** (ನಾ). ದಪ್ಪವಾಗಿಯೂ ಎತ್ತರವಾಗಿಯೂ ಇರುವ ದೇಹವುಳ್ಳವನು: ಒಪ್ಪುವ ಉರುಯಜ್ಞ ಚರ್ಮಾಸನಂ ಭೀಮಕಾಯನುಂ (ಅಂಶ. ೪-೪-೨೦); ಭೀಮಕಾಯನಾದರೂ ಕೌಶಿಕನು ಆ ರುದ್ರ ಮೂರ್ತಿಯ ಮುಂದೆ ಮಗುವಿನಂತಿದ್ದಾನೆ (ಮುಶಾಶ. ೩೬). [ಸಂ.]

**ಭೀಮಗಾಮುಂಡ** (ನಾ). ಒಬ್ಬಾತನ ಹೆಸರು: ಮರವೂರ ಉರ್ಕ್ಕಣೆ ಗಾಮುಂಡ್ಡರುಂ ಭೀಮಗಾಮುಂಡ್ಡರುಂ . . . ಎನೆಬ್ಬರುಂ ನರಸಾಕ್ಷಿಯಾಗೆ ಪಡೆದಾವುದ್ (ಎಕ. VI (R), ಶ್ರೀರಂಗ. ೩೩-೦೯; ಸು. ೮೦೦). [ ಭೀಮ + ಗಾಮುಂಡ ]

**ಭೀಮನಕಡ್ಡಿ** (ನಾ). ಒಂದು ಬಗೆಯ ಸಸ್ಯ: ವಿಷಬೊದ್ದಿ, ವಿಷಕಡ್ಡಿ, ಭೀಮನಕಡ್ಡಿ (ಸ್ಯ ಕಿಗ. ೭೦-೦೯೨೮). [ ? + ಕಡ್ಡಿ ]

**ಭೀಮನಸೊಪ್ಪು** (ನಾ). ಒಂದು ಬಗೆಯ ಸೊಪ್ಪು: (ಸ್ಯ ಕಿಗ. ೬೭-೦೬೬೩). [ ? + ಸೊಪ್ಪು ]

**ಭೀಮನಹಂಚಿ** (ನಾ). ಒಂದು ಬಗೆಯ ಹುಲ್ಲು: ಬೆಟ್ಟಂಚಿಹುಲ್ಲು, ಭೀಮನ ಹಂಚಿ, . . . ಗಂಟುಕಾಚಿ (ಸ್ಯ ಕಿಗ. ೭೯-೦೩೦೯). [? + ಹಂಚಿ]

**ಭೀಮಪರಾಕ್ರಮ** (ನಾ). ೧. (ಶತ್ರುಗಳಿಗೆ) ಭಯವನ್ನುಂಟು ಮಾಡುವ ಶಕ್ತಿಯುಳ್ಳವನು. ೨. ಭೀಮನಂತೆ ಶಕ್ತಿಯುಳ್ಳವನು: ಊರ್ಜಿತತೇಜಂ ಭೀಮಪರಾಕ್ರಮನೆನೆಸಿದನೀ ಮಹಿಯೊಳ್ ಪೃಥ್ವೀರಾಮ ನನುಪಮರೂಪಂ (ಶಾಸನ. XX. ೦೪-೦೦; ೯೮೦). [ಸಂ.]

**ಭೀಮಪಾಕ** (ನಾ). (ಆಲಂ) ಅತ್ಯಂತ ರುಚಿಕರವಾದ ಅಡುಗೆ; P ಭೀಮನು ರುಚಿಕರವಾದ ಅಡುಗೆ ಮಾಡುವುದರಲ್ಲಿ ತುಂಬಾ ಸಮರ್ಥನಾಗಿದ್ದನೆಂದು ಪ್ರಸಿದ್ಧವಾಗಿದೆ: ಷಡ್ರಸಗಳನ್ನು ಸೇರಿಸಿ ನಳಪಾಕ ಭೀಮಪಾಕಗಳನ್ನು ಇಳಿಸುವವರೇ ಪಾಕಕಲಾನಿಪುಣರು (ಸಂದಾಕ್ಕ. ೦೬೨). 'ನಳಪಾಕ' ಪರಾ. [ಸಂ.]

**ಭೀಮಬಲ** (ನಾ). (ಆಲಂ) ಅತಿಶಯವಾದ ಬಲ,-ಶಕ್ತಿ: ಭೀಮಬಲದಿಂದ ತನ್ನ ಮುಂದಿರುವ ಒಂದು ವಿದ್ಯುತ್ ಬಳ್ಳಿಯನ್ನು ಕಟ್ಟಿಗೆಯ ಕವಚ ಹೊದ್ದುಕೊಂಡದ್ದನ್ನು ಹಿಡಿದು ಸೆಳೆದಳು (ಹಕ್ಕಾ. ೦೨೦). [ಸಂ.]

**ಭೀಮಭೀಷಣ** (ನಾ). ಒಂದು ನರಕದ ಹೆಸರು: ತುಷಾಗ್ನಿ ಕ್ರಿಮಿ ಸಂಘ ಅಮೇಧ್ಯ ಪ್ರತಿಷ್ಠ ಮೂತ್ರಕೂಪ ದುರ್ಗಂಧವಾಸಗಳೆಂಬೈದು ಮಂತ್ರಿನರಕಂಗಳಿಂದೊಡಗೂಡಿ ಭೀಮಭೀಷಣವೆಂಬರಸುನರಕವಿಹುದು (ವಿವೇಕ. ೦೪೦). [ಸಂ.]

**ಭೀಮಯ್ಯ** (ನಾ). ಒಬ್ಬಾತನ ಹೆಸರು: ಭೀಮಯ್ಯನ ಮಗಂ ಪೆರ್ಗ್ಗಡೆ ದೇಕಾಯ್ಯಂ ಗಂಗರಾನೆಯ ಕುಮ್ಮಟ್ಟಸ್ಥಳಕ್ಕೆ ಕುದುರೆಯಂ ಪಾಯ್ಸಿ ಸತ್ತೊಡೆ (ಎಕ. XII, ಮಧ್ಯಗಿ. ೭೦-೭; ಸು. ೯೨೦); ಬಿಟ್ಟಿಗನ ಪೆರ್ಗ್ಗಡೆ ದಾಸಯ್ಯನ ಮಗಂ ಭೀಮಯ್ಯಂ ಬರೆದ (ಎಕ. VIII, ಸೊರಬ. ೫೩೦-೮; 979). [ ಭೀಮ + ಅಯ್ಯ ]

**ಭೀಮರ** (ನಾ). ಕಾಳಗ; ಯುದ್ಧ. [ಸಂ.]

**ಭೀಮರಕ್ಷೆ** (ನಾ). ಯಾವ ಭೀತಿಯೂ ತಟ್ಟದಿರಲೆಂದು ದೇಹದಲ್ಲಿ ಲೇಪಿಸುವ ಕಾಡಿಗೆ, ಕಟ್ಟುವ ಯಂತ್ರ ಮೊದಲಾದುವು: ರೋಮರೋಮಗಳಲ್ಲಿ ಭೀಮರಕ್ಷೆಯ ಬಲ ಕೊರಳಾಗ ಕಟ್ಟಿರಿ ಒಂದಾನ (ಸೂರ್ಯಾಶಾ. ೫೪-೦೩). [ ಸಂ. ಭೀಮರಕ್ಷಾ ]

**ಭೀಮರಥಿ** (ನಾ.) ೧. ದಕ್ಷಿಣ ಭಾರತದಲ್ಲಿ ಹರಿಯುವ ಒಂದು ನದಿ; ಕೃಷ್ಣಾನದಿಯ ಉಪನದಿ; ಭೀಮಾನದಿ. ೨. ಒಬ್ಬ ಮನುಷ್ಯನ ಜೀವಮಾನದಲ್ಲಿ ಬರುವ ಒಂದು ದುಷ್ಕಾಲ; ಎಪ್ಪತ್ತೇಳನೆಯ ವರ್ಷದ ಏಳನೆಯ ತಿಂಗಳ ಏಳನೆಯ ದಿನದ ರಾತ್ರಿ; P ಇದು ಬಹಳ ಅನಿಷ್ಟಪ್ರದವಾದ ಕಾಲವಾದುದರಿಂದ ಶಾಂತಿಯನ್ನು ಮಾಡಬೇಕೆಂದು ಶಾಸ್ತ್ರಗಳಲ್ಲಿ ಹೇಳಿದೆ. ಆ ಶಾಂತಿಗೆ ಭೀಮರಥಿಶಾಂತಿ ಎಂದು ಹೇಳುತ್ತಾರೆ. [ ಸಂ. ಭೀಮರಥೀ ]

**ಭೀಮರಾಜ** (ನಾ). ಪಶ್ಚಿಮಸಮುದ್ರತೀರದ ಕಾಡುಗಳಲ್ಲಿ ವಾಸಿಸುವ, ಕಪ್ಪುಬಣ್ಣದ 'ನೀಳವಾದ ರೆಕ್ಕೆಗಳುಳ್ಳ' ಮಧುರವಾದ ಕಂಠಧ್ವನಿಯುಳ್ಳ ಒಂದು ಬಗೆಯ ಹಕ್ಕಿ: (*). [ ಸಂ. ? ]

**ಭೀಮಸೇನ** (ನಾ). ೧. = ಭೀಮ ೪ : ಭೀಮಸೇನಚರಣಪ್ರಹರಣ ಗಳಿತಶೋಣಿತಾರ್ದ್ರಮೌಳಿಯುಮಾಗಿ (ಪಂಪಭಾ. ೦೩-೧೦೨ ವ); ಭೂಮಿಪತಿ ಹೇಳುವೆನದೇನನು ಭೀಮಸೇನನ ಜನನದದ್ಭುತವ (ಕುಮಾ.ಭಾ. ೪-೪೪). ೨. ಒಂದು ಬಗೆಯ ಕರ್ಪೂರ. [ಸಂ.]

**ಭೀಮಸೇನಿಕ** (ನಾ). =ಭೀಮಸೇನ ೨ : ಅಡಸಿದ ಪಾರಿಜಾತಕದ ಕಪ್ಪುರವಳ್ಳಿಯ ನೀಲವತ್ತಿಯಾಪ್ದುಡಕೆಯ ಭೀಮಸೇನಿಕದ ತುಬುಲದಿಂ (ಶಾಂತಿಪು. ೦೦-೯೩). [ಸಂ.]

**ಭೀಮಾಟವಿ** (ನಾ). ಭಯಂಕರವಾದ ಕಾಡು ; ಮಹಾರಣ್ಯ : ಆ ಭೀಮಾಟವೀಸರಸ್ತೀರದೊಳಿರಿಸಿ ಪೋಪುದುಂ ನಾಮಲ್ಲಿ ಧೈರ್ಯಮನೆ ಮನದೊಳವಳಂಬಿಸಿ ಚತುರ್ವಿಧಾಧಾರ ಶರೀರಪ್ರತ್ಯಾಖ್ಯಾನಪೂರ್ವಕಂ ಸನ್ಯಸನದಿಂ ಮುಡಿಪಿ (ಶಾಂತಿಪು. ೪-೯೭ ವ); ರಾಮಂ ಕಲಿಸಿದ ತೆಱದಿಂ ರಾಮೆಗೆ ಪುಸಿ ನುಡಿದು ರಥಮನೇಱಿಸಿಕೊಂಡಾ ಭೀಮಾಟವಿಯಂ ಕರಿಹರಿ ಭೀಮಾಟನಮಂ ಕೃತಾಂತಮುಖಮೆನೆಯ್ತಂದಂ (ಪಂಪರಾಮಾ. ೦೫-೬೫). [ಸಂ.]

**ಭೀಮೆ** (ನಾ). ೧. ದುರ್ಗೆಯ ಒಂದು ಹೆಸರು. ೨. ಭೀಮಾನದಿ: ಸೋಪಾನ ಕಟ್ಟಿ ಭೀಮೆಯೊಳು ಇಳಿಯುದಕೆ ಸೋಪಾನವಾನೆ ಪತನಿತ್ತ (ಕನ್ನಶಾ. ೩೦೬). [ಸಂ. ಭೀಮಾ]

**ಭೀರು** (ನಾ). ೧. ಅಂಜಿಕೆಯುಳ್ಳ ವ್ಯಕ್ತಿ : "ಜರಿತಃ, ಚಕಿತಃ, ಭೀತಃ, ತ್ರಸ್ತಃ, ಭೀರುಃ, ಕಾತರಃ, ಕ್ಷುಭಿತಃ, ಶಂಕಿತಃ—ಈ ೮ ಪ(ಹ)ಂದೆ" (ಹಲಾಯು. ೩೮-೦೯೯): ಭೀರುಗಳಂ ಶರಣಾಗುವರಂ. . . ಇಱಿಯಲ್ಕೆ ಪೇಸಿ (ಎಇ. XX. ೦೨-೨೩ ; 1167) ; ನೀನಿನಿಯುಳ್ ವಿಷಮಾತಂ . . . ನೀನುರುತರ ಭೀರು ಸರ್ವಭೂಷಣನಾತಂ (ಗಿಂಶ. ೯-೦೦೩). ೨. ನರಿ. ೩. ಹುಲಿ. ೪. ಒಂದು ಬಗೆಯ ಕಬ್ಬು. ೫. ಬೆಳ್ಳಿ. ೬. ಆಡು. ೭. ನೆರಳು ; ಛಾಯೆ. ೮. ಸಾವಿರಕಾಲಿನ ಹುಳು ; ಜರಿ. [ಸಂ.]

**ಭೀರುಕ** (ಗು). ೧. ಅಂಜುವ ; ಹೆದರುವ. (ನಾ). ೨. =ಭೀರು ೧: "ತ್ರಸ್ನುಃ, ಭೀರುಃ, ಭೀರುಕಃ, ಭೀಲುಕಃ—೪ ಹೆದರುವವನ ಹೆಸರು. ಭಯಪಡುವ ಪರಿಕಿ" (ಸಿದ್ಧಾಂತಿ. ೩೨೯). ೩. ಹುಲಿ. ೪. ನರಿ. ೫. ಕರಡಿ. ೬. ಗೂಬೆ. ೭. ಒಂದು ಬಗೆಯ ಕಬ್ಬು. [ಸಂ.]

**ಭೀರುತನ** (ನಾ). ಹೆದರಿಕೆ; ಹೇಡಿತನ : ಆರು ಕಲಿಸಿದರೆಲವೊ ಸಂಗರ ಭೀರುತನವನು ನಿನಗೆ ಯಾದವವೀರರಲಿ ಮುನ್ನಿಲ್ಲದಪಯಶವಾಯ್ತು (ತೊರಗ. ೦೦-೮೦-೩೪). [ಭೀರು + —ತನ]

**ಭೀರುತೆ** (ನಾ). = ಭೀರುತನ : ಶೈವಾಲವಾಪರಿಸಿದೆಳೆಯ ತಾವರೆಯಂತೆ ಚಾರುಭೀರುತೆ ಮೆರೆಯೆ ನಾರಿಯ ದುಕೂಲಮಂ ತಳೆದು (ಶಕ್ರಾಂಗ. ೦೯-೫೦೦). [ಸಂ. ಭೀರುತಾ]

**ಭೀರುತ್ವ** (ನಾ).=ಭೀರುತನ : ಭೀರುತ್ವಮೇಗೆಯ್ಕುದೋ (ಶಾಂತಿಪು. ೭-೫೯); ಅಂತುಪಶಮಭಾವಮುಂ ಪಾಪಭೀರುತ್ವಮುಂ ತನಗೆ ತೊಟ್ಟನೆ ಪುಟ್ಟೆ (ಪಂಪರಾಮಾ. ೪-೦೯ ವ). [ಸಂ.]

**ಭೀರುತ್ವಪ್ರತ್ಯಾಖ್ಯಾನ** (ನಾ). [ಜೈನ] ಸತ್ಯವ್ರತದ ಐದು ವಿಧವಾದ ಭಾವನೆಗಳಲ್ಲಿ ಒಂದು; ಭಯವನ್ನು ಬಿಡುವುದು; ಕ್ರೋಧಪ್ರತ್ಯಾಖ್ಯಾನ, ಲೋಭಪ್ರತ್ಯಾಖ್ಯಾನ, ಭೀರುತ್ವಪ್ರತ್ಯಾಖ್ಯಾನ, ಹಾಸ್ಯಪ್ರತ್ಯಾಖ್ಯಾನ ಮತ್ತು ಅನವೀಚಿಭಾಷಣ—ಇವು ಸತ್ಯವ್ರತದ ಐದು ಭಾವನೆಗಳು: ಭೀರುತ್ವಪ್ರತ್ಯಾಖ್ಯಾನ—ಭಯಮಂ ತೊಱೆವುದು . . . ಈಯಯ್ದುಂ ಸತ್ಯವ್ರತದ ಭಾವನೆಗಳಪ್ಪುವು (ತತ್ತ್ವಸೂ. ೨೭೦). [ಸಂ.]

**ಭೀಲುಕ** (ನಾ).=ಭೀರು ೧: "ತ್ರಸ್ನುಃ, ಭೀರುಃ, ಭೀರುಕಃ, ಭೀಲುಕಃ—೪ ಹೆದರುವವನ ಹೆಸರು. ಭಯಪಡುವ ಪರಿಕಿ" (ಸಿದ್ಧಾಂತಿ. ೩೨೯). [ಸಂ.]

**ಭೀಷಣ** (ಗು). ೧. ಭಯವನ್ನುಂಟುಮಾಡುವ ; ಭಯಂಕರವಾದ : ಪ್ರಕುಪಿತ ಮೃಗಪತಿ ಶಿಶುಸನ್ನಿಕಾಶ ರಶಿವಿಕಟ ಭೀಷಣಭ್ರೂಭಂಗರ್ ನಕುಲ ಸಹದೇವರ್ (ಪಂಪಭಾ. ೭-೪); ಭೀಷಣಬಲಿರಸ್ಸುಹೃದ್ಬಲಶೋಷಣದಕ್ಷರ್. . . ಕುಂಭಕರ್ಣ ವಿಭೀಷಣರೆಂಬರ್ (ಪಂಪರಾಮಾ. ೦೦-೨೨೬); ಆದರ ಭೀಷಣ ಪರಿಣಾಮವನ್ನು . . . ಕಾಣಲು ನಾವು ಐದನೆಯ ಅಂಕಕ್ಕೆ ಹೋಗಬೇಕು (ರಘುಗಾ. ೭೦). (ನಾ). ೨. ಭಯಂಕರವಾದುದು; ದಾರುಣವಾದುದು : "ಘೋರಂ. . . ಭೀಷಣಂ, ಭೀಷ್ಮಂ, ಭೈರವಂ, ಭಯಾ(ವಹ)ನಕಂ—ಈ ೧೦ ಭಯಂಕರಂ" (ಹಲಾಯು. ೦೦೬-೨೦). ೩. ಭಯಂಕರನಾದವನು : ಸಂಸ್ಫಾಳಿತೋದ್ಧತ ಚಪಳಚಾಪಕರಾಳಮೌರ್ವೀನಾದಭೀಷಣನಾದನಾ ಭೀಮ (ಕುಮಾ.ಭಾ. ೦೨-೦೩). ೪. ರುದ್ರ; ಶಿವ. ೫. 'ತಾಸೆ' ಎಂಬ ಒಂದು ವಾದ್ಯ: ಭದ್ರಕವೆಂಬ ಕರಾಡ ಶಾಸಕವೆಂಬ ನಗಾರಿ ಭೀಷಣವೆಂಬ ತ್ರಾಸಾ . . . ಘೋರಘಂಟಿಕೆಯೆಂಬ ಘಂಟೆ ಇತ್ತೆಱದ ದಶವಾದ್ಯಂಗಳಂ ಬಾರಿಸಲುಳ್ಳ ವಿಚಕ್ಷಣರಿಂ ವಿನುತರಾಗಿ (ಬಪೀಶ. ೨೩೬). 'ಪಂಚಮಹಾವಾದ್ಯ' ಪರಾ. ೬. [ಕಾವ್ಯಮೀ] ಎಂಟುರಸಗಳಲ್ಲಿ ಒಂದು ; ಭಯಾನಕರಸ : ಬಳಿಕ ಹಸಿತವ್ಯ ಶೋಚ್ಯ ದ್ವೇಷ್ಯ ಪ್ರತಿಭಟ ಭೀಷಣ ಜುಗುಪ್ಸನೀಯ ಆಶ್ಚರ್ಯ ಸಾಮ್ಯಾಸ್ಪದಂಗಳೆಂಬ ರಸಾಷ್ಟಕರೂಪವಾಗಿ ತತ್ತ್ರದ್ವಾಚ್ಯಮಹುದು (ಬಪೀಶ. ೨೪೪). [ಸಂ.]

**ಭೀಷ್ಮ** (ಗು). ೧. ಭಯವನ್ನುಂಟುಮಾಡುವ ; ಭಯಂಕರವಾದ : ಜಾಜ್ವಲ್ಯಮಾನಾನಲಾಭ್ಯರ್ಣಸ್ಥಂ ಬಹುಬಂಧನಂಬಡೆದು ಭೀಷ್ಮಧ್ಯಾನನಿರ್ದಂ ಚಿರಂ (ಧರ್ಮಪಶಂ. ೦೨-೪) ; ತೃಪ್ತಜಠರದ ಭೀಮಭೀಷ್ಮಭಲ್ಲುಕವೊಂದು ಚರಿಸುತ್ತೈತಂದು (ಶಕ್ರಾಂಗ. ೦೫-೩೯೪). (ನಾ). ೨. ಭೀಕರವಾದುದು; ಭಯಂಕರವಾದುದು : "ಘೋರಂ . . . ಭೀಷ್ಮಂ, ಭೈರವಂ ಭಯಾ(ವಹ)ನಕಂ—ಈ ೧೦ ಭಯಂಕರಂ" (ಹಲಾಯು. ೦೦೬-೨೦) ; ಮುತ್ತುಗಳ್ ಸುತ್ರಲುಂ ಸಿಡಿಯುತ್ತಿರ್ಪನಿಮಿರ್ದುದೊಂದತಿಮದೇಭಂ ಭೀಷ್ಮದೊಳ್ ಗ್ರೀಷ್ಮದೊಳ್ (ಗಿಂಶ. ೯-೨೪); ಮೇಘಚುಂಬಿತ ಗಿರಿಯ ಚೂಡದಿಂದಾರ್ಭಟಿಸಿ ದುಮ್ಮಿಕ್ಕುವಬ್ಧಿಯಾಘಾತದಿಂ ಭೀಷ್ಮವಹ ಜಲಪಾತವ್ರಾತಂಗಳಿಂ ಭೀಕರಮರಣ್ಯಂ! (ಶ್ರೀರಾಮಾ. ೮೮-೨೯೦). ೩. ಭಯ ; ಭೀತಿ : ದೊರೆಕೊಳ್ಗುಂ ಯಾಮಿನೀ ಸ್ವಾಮಿಯಿನೊಗೆವ ಮಹಾರಿಷ್ಟ ಭೀಷ್ಮ[ಪಾಠಾಂ. ಭೀಷ್ಟ- ಭೇಷ್ಟ]ಕ್ಕಭಂಗಂ (ಜಾತಕ. ೭-೦೦). ೪. 'ಶಂತನು' ಎಂಬ ರಾಜನಿಗೆ ಗಂಗಾದೇವಿಯಲ್ಲಿ ಹುಟ್ಟಿದವನು ; ಪಾಂಡವ, ಕೌರವರ ಅಜ್ಜ ; ಗಾಂಗೇಯ : "ಗಾಂಗೇಯನೆನೆ ಭೀಷ್ಮನಕ್ಕು" (ಬಂಗರಾ. ೭೮-೨); ತಂದನಂದಂಬೆಯಂಬಿಕೆಯಂಬಾಲಿಯರೆಂಬ ಬಾಲೆಯ[ರನೇಂ] ಭೀಷ್ಮಂ ಯಶೋಭಾಗಿಯೋ (ಪಂಪಭಾ. ೦-೭೪) ; ಕೌರವೇಂದ್ರನ ಮೋಹರದ ಗುರುಭಾರ ಭೀಷ್ಮಂಗಾಯ್ತು (ಕುಮಾ.ಭೀ. ೦-೩೨); ಯದೃಚ್ಛಾಮರಣ ಭಾಗವತಮಸ್ತಕಮಣಿ ಬೃಂದಾರ ಕೋಪಮಂ ಸತ್ಯಸಂಧಂ ಭೀಷ್ಮಂ (ಕೃಬಾಶಾ. ೯-೩೦). ೫. (ಆಲಂ) (ಒಂದು ಮನೆತನ ಅಥವಾ ಒಂದು ಊರು ಮುಂತಾದ ಕಡೆಗಳಲ್ಲಿ) ಬಹಳ ವಯಸ್ಸಾದವನು ; ಹಿರಿಯ ವ್ಯಕ್ತಿ : ರಾಜಮಾತೆಯವರ ಕರ್ಮಾಂತರಗಳು ಮುಗಿಯುತ್ತಿದ್ದಂತೆಯೆ ಭೀಷ್ಮರ ಆರೋಗ್ಯ ಕೆಟ್ಟಿತು (ಶಾಂತಲಾ. ೦೬೪). [ಸಂ.]

**ಭೀಷ್ಮತೆ** (ನಾ). ಭಯಂಕರತೆ ; ಭೀಕರತೆ : ಬಲಶಾಲಿಗಳ್ ತಣಿತಂದಿಟ್ಟ ಕಾರ್ಮುಕದ ಭೀಮ ಭೀಷ್ಮತೆಯುಜ್ವಲಿಸಿದತ್ತು (ಶ್ರೀರಾಮಾ. ೪೭-೪೯೨). [ಸಂ.]

**ಭೀಷ್ಮಪ್ರತಿಜ್ಞೆ** (ನಾ). (ಆಲಂ) (ಮಹಾಭಾರತದ ಭೀಷ್ಮನು ಮಾಡಿದಂಥ) ಪ್ರತಿಜ್ಞೆ: ಅಚಲವಾದ ಪ್ರತಿಜ್ಞೆ; ದೃಢಪ್ರತಿಜ್ಞೆ : ಗೌಡರು ಈ ಬಿಟ್ಟಿಯಲ್ಲಿ ಭೀಮಪ್ಪನಿಗೆ ಶಿಕ್ಷೆಮಾಡಿಸುವ ಭೀಷ್ಮಪ್ರತಿಜ್ಞೆ ಮಾಡಿ ನಿಂತರು (ಬುಪಶಿ. ೬). [ಸಂ. ಭೀಷ್ಮಪ್ರತಿಜ್ಞಾ]

**ಭೀಷ್ಮಪ್ರಯತ್ನ** (ನಾ). (ಆಲಂ) ಅಚಲವಾದ ಪ್ರಯತ್ನ; ಎಷ್ಟೇ ಕಷ್ಟ ಬಂದರೂ ಬಿಡದೆ ಸಾಧಿಸುವಿಕೆ: ಹಟದಿಂದ ಕಾರ್ಯವನ್ನು ಮುಂದುವರಿಸುವಿಕೆ: ಸರ್ವಾಪರಾಧವನ್ನು ನನ್ನ ತಲೆಯ ಮೇಲೆ ಹೊರಿಸಿ ಅವಳನ್ನು ನಿರಪರಾಧಿಯನ್ನಾಗಿ ಮಾಡುವ ಈ ನಿನ್ನ ಭೀಷ್ಮ ಪ್ರಯತ್ನವೇಕೆ ? (ರಕ್ತರ್. ೨೬೮). [ಸಂ.]

**ಭೀಷ್ಮಾರಿ** (ನಾ). ಭೀಷ್ಮನ ವೈರಿ ; ಶಿಖಂಡಿ : ಬೊಬ್ಬಿರಿವುತಂ ಬಂದು ಭೀಷ್ಮಾರಿಯುಂ ಮನೆಯನೊಳಪೊಕ್ಕನು ಘಡಯಿಸುತಲಿರಿದನು ಶಿಖಂಡಿಯುಂ (ತುರಂಗ. ೭೬-೪೭). [ಸಂ.]

**ಭೀಷ್ಮಿಸು** (ಕ್ರಿ). ಉಗ್ರವಾಗು : ಉಸಿರ್ದಂ ವಸುದೇವಂ ಭೀಷ್ಮಿಸೆ ಕೋಪಾರಕ್ತನೇತ್ರನಿರಿಬಳ್ಚೈತ್ರಂ (ನೇಮಿಪು. ೫-೩೨) ; ಇಸೆ ಪರಿಯೆ ರಥ ಹರಿಗಳ್ ಮಿಸುಗುವ ಸಂಕಲೆಯು ಕಣ್ಣಿಗಳ್ ಭೋಂಕನೆ ಭೀಷ್ಮಿಸೆ ದೆಸೆಗೆ ಹರಿಗಳೋಡಲ್ ಪೊಸರಥಮುಮನೇಱು ಮತ್ತೆ ನಿಲೆ ಸಿಂಹರಥಂ (ನೇಮಿಪು. ೫-೪೬). [ಭೀಷ್ಮ + — ಇಸು₃]

**ಭು** (ನಾ). ಒಂದು ಅನುಕರಣ ಶಬ್ದ; ಶಂಖ ಮೊದಲಾದ ವಾದ್ಯಗಳ ಧ್ವನಿಯನ್ನು ಅನುಕರಿಸುವ ಶಬ್ದ : ಭು ಭೂ ಭೂ ಎಂದು ಪೂರಯಿಸಿದುದು ಶಂಖಂ (ಕಮುಕ. ೧೦ ಕ್ರಯೋ).

**ಭುಂಕರಿಸು** (ಕ್ರಿ). ೧. ಭುಂ ಎಂದು ಶಬ್ದಮಾಡು. ೨. ಸಶಬ್ದವಾಗಿ ಬಂಧಿಸು : ಸಂಕಲೆಯನಳವಡಿಸಿಯುಗಳಿಯು ಭುಂಕರಿಸಿದನು (ಪ್ರಭುರಾ. ೩-೪೦). [ಭುಂಕರಣ₆ + — ಇಸು₃]

**ಭುಂಕಾರ** (ನಾ). ಭುಂ ಎಂಬ ಧ್ವನಿ : ಭೋರಂಗಿಗಳ ಭುಂಕಾರ (ಸೌಂದ. ೬೦-೧೦). [ ? ]

**ಭುಂಗಾ** 'ಭೋಂಗಾ' ನೋ.

**ಭುಂಜಕ** (ನಾ). ತಿನ್ನುವವನು ; ಉಣ್ಣುವವನು ; ಭಕ್ಷಿಸುವವನು : ಆತ ಪ್ರಸಾದವಿಡಿದು ಭುಂಜಿಸುವ ಭುಂಜಕನಾಗಿ ವೇಶವಿಡಿದು ರಂಜಿಸುವ ರಂಜಕನಲ್ಲ (ಕಪಗೋ. ೦೦೭-೯೭); ನೆರೆ ಹೊಲ್ಲ ಜಾರ ಚೋರಕರ ನೆರೆ ಹೊಲ್ಲ ಬ್ರಹ್ಮೇತಿಕಾರರ ನೆರೆ ಪೊಲ್ಲ ಸುರೆಯ ಭುಂಜಕರ (ಕಂಡಿ. ೦೨೮-೯೨). [<ಪ್ರಾ. ಭುಂಜಗ. / ಸಂ. ಭೋಜಕ]

**ಭುಂಜನ** (ನಾ). ತಿನ್ನುವುದು: 'ಭುಂಜಿಸು' ಪರಾ.

[< ಪ್ರಾ. ಭುಂಜಣ. / ಸಂ. ಭೋಜನ]

**ಭುಂಜಿಸು**, ಭುಜಿಸು (ಕ್ರಿ). ೧. ಆಹಾರವನ್ನು ಸೇವಿಸು ; ತಿನ್ನು; ಊಟ ಮಾಡು : ಏಕವ್ರತದ ಭೂಸುರರು ಏಕಾಂತನಿಳಯದೊಳೇಕವಾಗಿರೆ ಸ್ವಯಂಪಾಕವ ಮಾಡಿ ಭುಂಜಿಪರು (ಕೋಹಕ. ೭-೩೩); ಭುವನಜನವಂಜದಿ ನೋಟಕರ್ ಭು[ಪಾಠಾಂ. ಭು]ಜಿಸುವೆನೀ ಕಾಳಕೂಟಮಂ ನಾನೆನುತೆ ಕರವೆತ್ತಿ ಬಾರೆನಲ್ಕೆ (ಜಿನಪು. ೨೨-೦೯) ; ಸ್ವಾದುವಾದ ಫಲವಂ ಭುಂಜಿಸಿ (ಸೌಗಂಧಿ. ೨೮೫-೪). ೨. ಸುಖವನ್ನು ಅನುಭವಿಸು ; ಸವಿ : ನನೆಯುಂದಿರದ ಪೊಸ ಕಮ್ಮಂಗಳವೆಯು ತೆನೆಯ ತುದಿಯ ತನಿಗಂಪಂ ಭುಂಜಿಸಲೆನುತನುರಾಗ ದಿನವಱಿೊಳ್ಮಳ್ದಿರ್ದಾಱಡಿವಸುಳೆಗಳು (ಜಯಕಾ. ೦-೩೯) ; ಜಗದುವರ ಕೊಟ್ಟುದನು ಭುಂಜಿಸು (ಜಗದಾ. ೦೯೩) ; ಹಾನಿ ವೃದ್ಧಿ ಜಯಾಪ ಜಯಗಳು ಏನು ಕೊಟ್ಟುದ ಭುಂಜಿಸುತ ಲಕ್ಷ್ಮೀನಿವಾಸನ ಕರುಣವನೆ ಸಂಪಾದಿಸನುದಿನದ (ಕಮಲಾಂ. ೦೦೯). **ಭುಜಿಸು**: ೧. ಮುಡಿಯಿಕ್ಕಿ ರಾಘವನ ಚರಣದೆಡೆ ಕಾಣಿಕೆಯ ನೀಡಿದನು ತರತರದ ಪಣ್ಗಳಂ, ಪೂಗಳಂ ಮಾಂಸಾನ್ನಮಂ ಭುಜಿಸಿ ಸರ್ವರುಂ ತಣಿಯುತಂ . . . ಕಳೆದರಾ ರಾತ್ರಿಯುಂ ಸುಖದ ನಿದ್ರೆಯಲಿ (ಶ್ರೀರಾಮಾ. ೯೭-೩೩೭). 'ಭೋಜಿಸು' ಪರಾ.

[ಭುಂಜನ + — ಇಸು₃. / ತೆಲು. ಭುಜಿಂಚು]

**ಭುಂಭುಕ** 'ಬುಂಭುಕ' ನೋ.

**ಭುಕ್ತ** (ಗು). ೧. ತಿಂದ ; ಊಟಮಾಡಿದ. ೨. ಅನುಭವಿಸಿದ. (ನಾ). ೩. ತಿಂದುದು ; ಊಟಮಾಡಿದುದು : "ಭಕ್ಷಿತಂ, ಚರ್ವಿತಂ . . . ಅಶಿತಂ, ಭುಕ್ತಂ—೧೪ ಭುಜಿಸಲ್ಪಟ್ಟದ್ದು, ತಿನ್ನಲ್ಪಟ್ಟದ್ದು, ಅಗಿಯಲ್ಪಟ್ಟದ್ದು, ನುಂಗಲ್ಪಟ್ಟದ್ದು, ಮೆದ್ದದ್ದು" (ಸಿದ್ಧಾಂತ. ೩೫೨). ೪. ತಿನ್ನುವಿಕೆ ; ಊಟಮಾಡುವುದು : "ಭುಕ್ತಿಃ, ಭುಕ್ತಃ . . . ಭೋಜನೀಯಂ—ಈ ೭ ಹೊರೆತವೂ, ಊಟವುಂ" (ಶಾಕಕ. ೨೩೫). ೫. ಅನ್ನ ; ಆಹಾರ : "ಕೂರಮನ್ನಂ ಭುಕ್ತವೋ[ಪಾಠಾಂ. ಭಕ್ತವೋ]ದನಂ ಭಿಕ್ಷಮಾಹಾರಮಶನಂ ಬಲಿಯೆನಲ್ಕೆ ಮೋಗರಮಕ್ಕು" (ಮಂಗರಾ. ೬೩-೦). ೬. (ಆಲಂ) ಸಾಂಸಾರಿಕ ಸುಖಗಳನ್ನು ಅನುಭವಿಸುವವನು ; ವಿಷಯಲಂಪಟ : ಶಿವಭಕ್ತಿಯಳಿದ ಭುಕ್ತಂಗೆ ಎಂದೆಂದು ಭವಮುಕ್ತಿಯಿಲ್ಲ (ಸರ್ವಜ್ಞ. ೨೭೯). [ಸಂ.]

**ಭುಕ್ತಶಾಲೆ** (ನಾ). ೧. ಊಟದ ಮನೆ ; ಭೋಜನಗೃಹ. ೨. ಪ್ರಯಾಣಿಕರಿಗೆ ಧರ್ಮಾರ್ಥವಾಗಿ ಊಟಕ್ಕೆ ಏರ್ಪಾಡು ಮಾಡುವ ಮನೆ ; ಅನ್ನಸತ್ರ : ಮಠ ಭುಕ್ತಶಾಲೆ ಕಂಪೆಸೆವ ಘಟಪೂರಿತ ಗಂಧ ಶೃತ್ಕೋದಕದಱಿವಟಿಗೆಯ ಮನೆಗಳೊಪ್ಪಿಸುವುದು (ಮೋಹಕ. ೨-೨೭).

[ಸಂ. ಭುಕ್ತಶಾಲಾ]

**ಭುಕ್ತಶೇಷ** (ನಾ). ಉಂಡು ಮಿಕ್ಕ ಅನ್ನ; ಎಂಜಲು ; ಉಚ್ಛಿಷ್ಟ: "ವಿಘಸಃ, ಭುಕ್ತಶೇಷಃ—ಈ ೨ ಉಂಡು ಮಿಕ್ಕುದು" (ಹಲಾಯು.೫೪-೦೭೦); ಕೊಳೆತ ಬೆರಳನು ಭುಕ್ತಶೇಷದೊಳಿಳುಹಿದರೆ ಕಂಡೀಕೆ ಚಿತ್ತದೊಳಳುಕದುಪ ಭೋಗಿಸೆ (ಕುಮಾರ. ೦೭-೪೫). [ಸಂ.]

**ಭುಕ್ತಿ** (ನಾ). ೧. ಊಟ ಮಾಡುವುದು; ಊಟ ; ಭೋಜನ : "ಭುಕ್ತಿಃ. ಭುಕ್ತಂ . . . ಭೋಜನೀಯಂ—ಈ ೭ ಹೊರೆತವುಂ ಊಟವುಂ" (ಶಾಕಕ. ೨೩೫); ತೃಪ್ತಿಯರಿಯದ ವಾಂಛೆ ಜೀರ್ಣಿಸದ ಭುಕ್ತಿವೊಲು ಗುಪ್ತದಲಿ ಕೊಳೆಯುತ್ತ ವಿಷಬೀಜವಾಗಿ (ಶ್ಯಾಂಕುಕ. ೩೭೯); ಪುರುಷನ ಒಕ್ಕಲು ಮದುವೆಯಿಲ್ಲಾ ಆದ ಮೇಲೆ ಜಾತಿಪದ್ಧತಿಯನ್ನನುಸರಿಸಿ ಊಟಹಾಕಿಸುತ್ತಿದ್ದರು. ಇದಕ್ಕೆ 'ಭುಕ್ತಿ' ಎಂದು ಹೆಸರು (ಹುಬ್ಬಹ. ೦೪). ೨. ಸುಖಾನುಭವ : ಭೋಗ :"ಕಾಮದೊಳು ಭುಕ್ತಿಯೊಳು ಸಂಭೋಗಮೆಂದೆನಿಕು" (ಮಂಗರಾ. ೦೪೩-೨೦); ಕರ್ತನನಱಿಯದವನು ವಿಪ್ರನಾದರೇನು ಚತುರ್ವೇದಿಯಾದವರೇನು ಭುಕ್ತಿಕಾರಣ ಲೋಕದ ಇಚ್ಛೆಗೆ ನುಡಿದು ನಡೆವರಯ್ಯಾ (ಬಸವ. ೬೨೮); ಮಲತ್ರಯಂಗಳಗೆ ತಲೆಗೊಡಹಿ ಭೋಗಮುಂ ನೀಗಿ ಭುಕ್ತಿಯುಂ ತೊತ್ತಳದುಳಿದು (ಶಿವತ. ೨೭-೨೨). ೩. [ಜ್ಯೋತಿ] ಸೂರ್ಯಾದಿ ಗ್ರಹಗಳು ಯಾವುದಾದರೂ ರಾಶಿಯನ್ನು ಪ್ರವೇಶಿಸಿ ಮುಂದುವರಿಯುತ್ತಿರುವಾಗ ಅತಿಕ್ರಮಿಸಿದ ಕಾಲ : ಆಯಿದನು . . . ರಿಪುಭಟನಾಯಕಪದದೆಡೆವಗಲ ಭುಕ್ತಿಯ ಶಕ್ತಿಯನು ನೃಪತಿ (ಕುವ್ಯಾಕ. ೩-೬೫). ೪. ವ್ಯಕ್ತಿಯ ಜೀವಮಾನದಲ್ಲಿ ಯಾವ ಕಾಲದಲ್ಲಿ ಯಾವ ಫಲ ನಡೆಯುವುದೆಂಬುದನ್ನು ಕಂಡುಹಿಡಿಯಲು ಜ್ಯೋತಿಃಶಾಸ್ತ್ರಜ್ಞರು ನಿರ್ಣಯಿಸಿರುವ ಸೂರ್ಯಾದಿಗ್ರಹಗಳು ಫಲಕೊಡುವ ಕಾಲ ವಿಶೇಷ ; ಒಬ್ಬ ಮನುಷ್ಯನು ೧೨೦ ವರ್ಷಗಳ ಕಾಲ ಬದುಕುವುದಾದರೆ ಆತನ ಜೀವಮಾನದಲ್ಲಿ ಒಂಭತ್ತುಗ್ರಹಗಳ ದೆಶೆಗಳೂ ನಡೆಯುತ್ತವೆ. ಪ್ರತಿಯೊಂದು ದೆಶೆಯಲ್ಲೂ ಒಂಭತ್ತು ಗ್ರಹಗಳ ಭುಕ್ತಿಗಳು ನಡೆಯುತ್ತವೆ. ಪ್ರತಿಯೊಂದು ಭುಕ್ತಿಯಲ್ಲೂ ಬೇರೆ ಬೇರೆ ಫಲಗಳು ನಡೆಯುತ್ತವೆ. ಈ ದೆಶೆ ಮತ್ತು ಭುಕ್ತಿಗಳ ಕಾಲನಿರ್ಣಯಕ್ಕೆ ನಿರ್ದಿಷ್ಟವಾದ ಗಣಿತವಿದೆ. ಉದಾಹರಣೆಗೆ ಕೃತ್ತಿಕಾನಕ್ಷತ್ರದಲ್ಲಿ ಒಬ್ಬನು ಜನಿಸಿದರೆ ಅವನಿಗೆ ಜನನಕಾಲದಲ್ಲಿ ರವಿದಶೆಯು ಪ್ರಾರಂಭವಾಗುತ್ತದೆ. ಬಳಿಕ ಚಂದ್ರದಶೆ ಇತ್ಯಾದಿ. ರವಿದಶೆಯು ಆರುವರ್ಷಗಳು ನಡೆಯುತ್ತದೆ. ಆಗ ರವಿ, ಚಂದ್ರ, ಕುಜ, ರಾಹು, ಗುರು, ಶನಿ, ಬುಧ, ಕೇತು, ಶುಕ್ರ

ಗ್ರಹಗಳ ಭುಕ್ತಿಗಳು ಕ್ರಮವಾಗಿ ಲೆಕ್ಕಾಚಾರದಂತೆ ನಡೆಯುತ್ತವೆ : ಯುಕ್ತಿವಂತನು ಶುಕ್ರನ ಭುಕ್ತಿಯಲ್ಲಿ ಮುಕ್ತಿ ಪಡೆದನಂತೆ (ಗಾದೆ); ಮಾಘಮಾಸದ ಹೊತ್ತಿಗೆ ಶುಕ್ರಭುಕ್ತಿ ಪ್ರಾರಂಭವಾಗುತ್ತದೆ. ಆಗ ಮದುವೆಯಾಗುತ್ತದೆ (ರೂಢಿ). [ಸಂ.]

**ಭುಕ್ತಿಗೆಯ್** (ಕ್ರಿ). ಊಟಮಾಡು : ವರಮಂತವಂ ಪುಗುತಂದಲ್ಲಿರುತಂ ಸಲೆ ಭುಕ್ತಿಗೆಯ್ದು ಶಯನಂಗೊಂಡಿರೆ (ಜಾತಾಸ್ಮ. ೪-೦೪-೦೬).
[ಭುಕ್ತಿ + ಕೆಯ್$_1$]

**ಭುಕ್ತಿಗೆಯ್ಸು** (ಕ್ರಿ). ಊಟಮಾಡಿಸು ; ಭೋಜನ ಮಾಡಿಸು : ಸಡಗರದಿಂದುಪಚರಿಸುತೆ ಮೆಲ್ಲನೆ ಪಡೆದಳಾ ರತಿಯು ಚಿತ್ರವನು . . . ಮಜ್ಜನ ಭುಕ್ತಿಗೆಯ್ಸಿ (ವೋಹತ. ೦೦-೨೦). [ಭುಕ್ತಿ + ಕೆಯ್ಸು]

**ಭುಕ್ತಿದ** (ನಾ). ಸುಖವನ್ನು ಕೊಡುವವನು; ಐಹಿಕಸಂಖವನ್ನುಂಟು ಮಾಡುವವನು : ಭುಕ್ತಿದರು ದೇವತೆಗಳಲ್ಲದೆ ಮುಕ್ತಿದರು ತಾವಾಗರು (ಶಿವೇಶ. ೬-೩೦). [ಸಂ.]

**ಭುಕ್ತೋಚ್ಛಿಷ್ಟ** (ನಾ). ಊಟಮಾಡಿ ಬಿಟ್ಟ ಎಂಜಲು ಅನ್ನ : "ಭುಕ್ತೋಚ್ಛಿಷ್ಟಂ, ಫೇಳಿಕಾ–ಈ ೨ ಮಡಗೂಟು" (ಹರಾಯು. ೫೪-೦೬೦). [ಸಂ.]

**ಭುಗ್** (ನಾ). ಒಂದು ಅನುಕರಣ ಶಬ್ದ.; ಬೆಂಕಿಯು ತಟ್ಟನೆ ಪತ್ತಿಕೊಳ್ಳುವುದನ್ನು ಸೂಚಿಸುವ ಶಬ್ದ : ಒಮ್ಮೆ ಹೊಗೆಗಟ್ಟುವುದೊಮ್ಮೆ ಭುಗ್ಗೆನುವುದು ಒರ್ನರು ಕಟ್ಟ ಲಾಟೀನು (ಇಂಜಾಹ. ೨೦೫-೬೫).

**ಭುಗಭುಗ** (ನಾ). ಒಂದು ಅನುಕರಣ ಶಬ್ದ : 'ಭುಗಭುಗನೆ' ಪರಾ.

**ಭುಗಭುಗನೆ** (ಅ). ಒಂದು ಅನುಕರಣಾವ್ಯಯ ; 'ಭುಗಭುಗ ಎಂದು ಧ್ವನಿಯಾಗುವಂತೆ : ಭುಗಭುಗನರ್ಚಿ ಪಾಯ್ವ ಬಿಸುನೆತ್ತರ ಸುಟ್ಟುರೆಯಂ ನೆಲಕ್ಕೆ ಪರ್ದುಗಳುಗಲೀಯದವ್ವಳಿಸಿ ಪೀರ್ವಿಸಂ (ಶಂಕಪಾ. ೦೦-೬೦). [ಭುಗಭುಗ +— ಅನ್$_1$]

**ಭುಗಿಭುಗಿ** (ನಾ). ಒಂದು ಅನುಕರಣ ಶಬ್ದ : ಛಟಿ ಛಟೀ ಛಟಿ ಭುಗಿಲು ಭುಗಿಭುಗಿ (ಅಕವು. ೫೬-೩೨) ; ಭುಗಿಲು ಭುಗಿಭುಗಿ ಧಗಿಲು ಧಗಿಲೆಂದೊಗೆದು ದಳ್ಳುರಿಯುಗುಳಲು (ಕೌಶಿಕಾ. ೩೬-೭೪).

**ಭುಗಿಭುಗಿಸು** (ಕ್ರಿ). ಭುಗಿಭುಗಿ ಎಂದು ಧ್ವನಿ ಬರುವಂತೆ ಉರಿ, — ಜ್ವಲಿಸು ; ಹೆಚ್ಚಾಗಿ ಜ್ವಾಲೆಗಳನ್ನು ತೋರ್ಪಡಿಸುತ್ತಾ ಜ್ವಲಿಸು ; ಹೆಚ್ಚಾಗಿ ಉರಿ : ಭುಗಿಭುಗಿಸಿ ರಿಪುವನನಿಕರದಲಿ ಸಲೆ ಬೀದಿವರಿದುದು ಭೀಮದಾವಾಗ್ನಿ (ಕುವ್ಯಾದ್ರೋ. ೦೨-೨೪) ; ಭುಗಿಭುಗಿಸೆ ಕೋಪಾಗ್ನಿ ಮೂಡಿಗೆಯ ಕೋಲ್ಗಳಂ ತೆಗೆತೆಗೆದು . . . ಬಿಲ್ಲನಿಕ್ಕಡಿಗೈದು ಬೊಬ್ಬಿಱಿದನು (ಕೃಖಿಚ. ೦೨-೨೨). 'ಭುಗುಭುಗಿಸು' ಪರಾ.
[ಭುಗಭುಗಿ + —ಇಸು$_3$]

**ಭುಗಿಲ್**, ಭುಗಿಲು (ನಾ). ೧. ಒಂದು ಅನುಕರಣ ಶಬ್ದ : ಅನುಕರಣಾವ್ಯಯಗಳು . . . ನಿಟಿಲ್, ಪಠಿಲ್, ಭುಗಿಲ್, ಭೋರ್ . . . ಇತ್ಯಾದಿ (ಕೃಶಿಬ. ೫೨). **ಭುಗಿಲು** : ೧. ಛಟಿ ಛಟೀ ಛಟಿ ಭುಗಿಲು ಭುಗಿಭುಗಿ (ಅಕವು. ೫೬-೩೨); ಭುಗಿಲು ಭುಗಿಭುಗಿ ಧಗಿಲು ಧಗಿಲೆಂದೊಗೆದು ದಳ್ಳುರಿಯುಗುಳಲು (ಕೌಶಿಕಾ. ೩೬-೭೪). ೨. ತಾಪ; ಝಳ : ಎರಡುಹನಿಯಾದರೂ ಕಣ್ಣೀರು ಉದುರಬಾರದೆ ? ಆ ಒಳಗಿನ ಭುಗಿಲು ಸ್ವಲ್ಪವಾದರೂ ಹೊರಮುಖವಾಗಬಾರದೆ ? (ಶಾಂಕರಾ. ೩೦೩); ತಲೆಯಲ್ಲಿ ಹುಯಿಲು ಎದೆಯಲ್ಲಿ ಭುಗಿಲು (ಚಂದ್ರಪತ. ೩-೫).

**ಭುಗಿಭುಗಿಲ್**, **ಭುಗಿಭುಗಿಲು**, **ಭುಗಿಲ್ಬುಗಿಲ್**, **ಭುಗುಭುಗಿಲ್**, **ಭುಗ್ಬುಗಿಲ್**, **ಭುಭುರ್ಗಿಲ್** (ದ್ವಿರುಕ್ತಿ) : ದೆಸೆಗಳಂ ದಹಿಸುತ್ತ ರಸೆಯುನಲ್ಲಾಡಿಸುತೆ ಭುಗಿ[ಪಾಠಾಂ. ಗು]ಭುಗಿಲ್ ಛಿಳಿಛಿಟಿಲನೊಗೆವುದು ಮಹಾವಿಷಂ (ಶಂಚರಿ. ೦-೦೩) ; ಉರಿಗೆ ಹವಿಯಂ ಕೊಡಲೊಡನೆ ಸೆಕೆ ಪರಿದು ಭುಗಿಭುಗಿಲೆನುತ (ಅಕವು. ೫೬-೦೬) ; ಬಿಸುನೆತ್ತರ ಧಾರೆಗಳ್ ಭುಗಿಲ್ಬುಗಿಲೆನೆ ಪಾಯ್ದು ಪೊಣ್ಮಿದುವು (ಶಂಠಾಕು. ೦೩-೬೦) ; ಭುಗ್ಬುಗಿಲ್ ಭುಗಿಭುಗಿಲು ಧಗಧಗ ಧಗಿಧಗಿಲುಧಲೆಂದೊದಱಿದುರಿ ನಾಲಿಗೆಗಳನು ನೀಡಿದುವು (ಕೊರಠಾ. ೫-೯-೫೯) ; ದಳ್ಳೆಂಬ ಭೋರೆಂಬ ಭುಗ್ಬುಗಿಲೆಂ[ಪಾಠಾಂ. ಭುಭುರ್ಗಿಲೆಂ]ಬೀಟ್ಗೆಯನಾಂತು ಕೇಸುರಿಗಳಂ ಸೂಸಿತ್ತು ಗುರ್ವಪ್ಪನಂ (ಜಗ೨. ೦೫–೪೦) ; ನೆಗೆದುರಿ ಭುಭುರ್ಗಿಲ್ ಭುಗಿಲೆನುತು ಮಗುರ್ವಿಸಿ ಪರ್ವೆ (ಶುಹಾಸೇ. ೦೬-೩೯).

**ಭುಗಿಲನೆ** (ಅ). ಒಂದು ಅನುಕರಣಾವ್ಯಯ ; ಭುಗಿಲ್ ಎಂದು ಧ್ವನಿಯಾಗುವಂತೆ : ಧಿಗಿಲನೆ, ಭುಗಿಲನೆ, ಭೋರನೆ ಎಂಬನುಕರಣ ಪದಂಗಳ್ . . . ಅವ್ಯಯಪದಂಗಳಪ್ಪುವು (ಶಶಂದ. ೩೦೦ ವೃತ್ತಿ).

**ಭುಗಿಭುಗಿಲನೆ** (ದ್ವಿರುಕ್ತಿ) : ಧಗಧಗಸ್ವನಂ ನಿಮಿರೆ ಪಾಂ ಭುಗಿಭುಗಿಲನುರಿದುದು [ಪಾಠಾಂ. ಭುಗಿಲನುರಿದ್ದುದು] (ರಾಜಶೇ. ೫-೩೬).
[ಭುಗಿಲ್ + — ಅನ್$_1$]

**ಭುಗಿಲಿಡಿ** (ಕ್ರಿ). ತಳಮಳವು ತುಂಬು, — ವ್ಯಾಪಿಸು : ರಾಗದಿಂ ಟಂಕಾರಗೈಯ್ಯೆ ದಶದಿಶಿ ಬೆಸುಗೆ ಬಿಚ್ಚಿತ್ತು ತನ್ನಾದದೀ ಶ್ರೀಗಿರೀಶನ ಹೃದಯ ಭುಗಿಲಿಡಿದು ತನುಕಂಪನಾಗಿ ಜರ್ಝರಿಸಿ ತಲ್ಲಣಗೊಳುತಿರಲು (ನವಪೋ. ೬-೪೯). [ಭುಗಿಲ್ + ಇಡಿ$_2$]

**ಭುಗಿಲಿಡು** (ಕ್ರಿ). ೧. ಉರಿ ; ಜ್ವಲಿಸು ; ಧಗಧಗಿಸು : ಹುಟ್ಟಿದುರಿ . . . ಭುಗಿಲಿಟ್ಟು ಕವಿದುದು ತುದಿಗೆ ಬಹುಶಾಖೋಪಶಾಖೆಗಳ (ಕುವ್ಯಾಆ. ೨೦-೫೫) ; ಅದು ಬಳಿಕ ಭುಗಿಲಿಡುತ ಬೆಂಬತ್ತಿದುದು ಬಿಡದಾ ಕಾಕನನು (ಕೊರಠಾ. ೨-೬-೦೦). ೨. ಬಹಳ ಶಬ್ದವನ್ನು ಮಾಡು ; ಭೋರ್ಗರೆ : ಕಹಳೆಗಳ ಕಳಕಳದ ಬೊಗ್ಗುಗಳ ಮೇಳವಣೆ ಭುಗಿಲಿಡಲು (ಕುವ್ಯಾಶಿ. ೩-೪). ೩. ತಟ್ಟನೆ ಹೊರಸೂಸು, — ಚಿಮ್ಮು ; ಮೇಲಕ್ಕೆ ಉಕ್ಕು : ತಗರಾಗಿ ಕಾದಿ ನೆತ್ತರ್ ಭುಗಿಲಿಡೆ ತಲೆಯೊಡೆದು ಸತ್ತು ಗಂಗಾತಟದೊಳ್ ಸೊಗಯಿಪ ವೃಷಭಂಗಳಾಗಿಯೂ ಮಿಗೆ ಕ್ರೋಧಗೊಂಡು ಕಾದಿಯುಬೀದು (ಕುಣ್ಯಸ್ರ. ೪-೬). ೪. ಸಿಟ್ಟುಗೊಳ್ಳು ; ಕೋಪವನ್ನು ತೋರಿಸು : ಎನ್ನ ಕಂಡರೆ ಭುಗಿಲಿಡಲದೇಕಯ್ಯ ಶರಣರ ಮಿಗಿಲು ನುಡಿಗಾನವ್ಮನು (ಶ್ರಶುಶಿ. ೦೭-೯); ಕಿದಿಯೂದುಗಿಚ್ಚಿನ ಹೊದಱನಂತಿರೆ ಬಿಡದೆ ಭುಗಿಲಿಡುತ(ಕುವ್ಯಾಶ. ೭-೨೯). [ಭುಗಿಲ್+ಇಡು$_1$]

**ಭುಗಿಲು** 'ಭುಗಿಲ್' ನೋ.

**ಭುಗಿಲೆನ್**(ಕ್ರಿ). ಭುಗ್ಗನೆ ಹತ್ತಿಕೊಳ್ಳು; ತಟ್ಟನೆ ಉರಿಯೇಳು; ಜ್ವಲಿಸು : ಕೆಣಕಿದರೆ ಭುಗಿಲೆಂದುದೀತನ ರಣಪರಾಕ್ರಮಪಹ್ನಿ (ಕುವ್ಯಾಶ. ೩-೯); ಪಶು ಹವಿಗೆ ಭುಗಿಲೆಂದುಲಿದು ನಲಿದಾಡಿದನು ಹುತವಹನಶ್ವಮೇಧದಲಿ (ಕೊರಠಾ. ೦-೭-೪೯); ಬಿಂಕದುರಿ ಮಸಗಿದುದು ಭುಗಿಲೆಂದು ವೀರನಾರಿಯ ಮನದಿ (ಜನ್ಯಾಂಗ. ೦೨-೩೨೬). [ಭುಗಿಲ್+ಎನ್$_1$]

**ಭುಗಿಲ್ಗರೆ** (ಕ್ರಿ). ಭುಗಿಲೆಂದು ಶಬ್ದಮಾಡು : ದನುಜಾರಿಯುಂ ದನುಜನುಂ . . . ಭುಗಲ್ಗರೆವಿನಂ ಪೊಯ್ದರ್ ಗದಾದಂಡದಿಂ (ಜಗ೨. ೪-೭೫). [ಭುಗಿಲ್ + ಕರೆ$_1$]

**ಭುಗುಭುಗಿಸು** (ಕ್ರಿ). ಭುಗುಭುಗು ಎಂದು ಶಬ್ದಮಾಡು : ಸಗಾಢದ ಲಾಚ್ಚಿ ಭುಗುಭುಗಿಸಿ ಉಚ್ಚಳಿಸಿದವು ಹರಹಿನಲಿ ನಾಲಗೆ ಹವ್ಯವಾಹನನ (ಕುವ್ಯಾಸ. ೦೨-೨); ಟರಿಗಿರಿಯೊಳು ದಗದಗಿಸಿ . . . ಭುಗುಭುಗಿಸಿ ಬಿರುದಿನ ಮನ್ನೆಯ ಭಟರ ಪ್ರತಾಪಾಗ್ನಿ ಮೆಱೆದುದು ರಿಪುವನದೊಳಗೆ (ಕಂಪಶಿ. ೦೫-೫೫). 'ಭುಗಿಭುಗಿಸು' ಪರಾ. [ಭುಗುಭುಗು +—ಇಸು$_3$]

**ಭುಗುಭುಗು** (ನಾ). ಒಂದು ಅನುಕರಣ ಶಬ್ದ : ಭುಗುಭುಗು ಛಟಿಛಟಿಲೆಂದು ಲೋಚನದಿಂದೊಗೆದ ದಳ್ಳುರಿ ಸುತ್ತಿ ಸ್ಮರನ ಬಿಗಿದ ಬತ್ತಳಿಕೆ ಕರ್ವಿಲ್ಲುಸಹಿತೆ ಸುಟ್ಟುಗಿದುದು ಉರಿ ನಭಸ್ಥಳಕೆ (ಬೋಹತ. ೭-೩೯);

ಧಗಧಗಧಗನೆ ಪೊತ್ತುವ ಜ್ವಾಲೆಗಳ ಮಾಲೆ ಭುಗುಭುಗು . . . ಎಂದು ಡಾವರಿಸೆ (ಶ್ರೀಬಿಶಾ. ೯-೩೪).

**ಭುಗ್ನ** (ಗು). ೧. ಬಗ್ಗಿದ ; ಡೊಂಕಾದ : ವಕ್ರವಾದ. (ನಾ). ೨. ಬಗ್ಗಿರುವುದು; ಡೊಂಕಾದುದು; ಬಾಗಿರುವುದು; ವಕ್ರವಾದುದು : "ವಕ್ರಂ ..., ಭುಗ್ನಂ, ಅರಾಳಂ, ಕುಟಿಳಂ, ವ್ಯಾಕುಂಚಿತಂ, ಊರ್ಮಿಮತ್ — ಈ ೧೨ ಕೊಂಕಿದುದು" (ಹಲಾಯು. ೦೦೬-೦೦); "ಭಂಗುರ ಮರಾಳಂ ಭುಗ್ನಮಾವಿದ್ಧಂ . . . ವೃಜಿನಮೆನಲು ಪೊರೆದ ಕೊಂಕಕ್ಕು" (ಶಬ್ದಮಣಿ. ೦೨೬-೭). ೩. [ಕಾಮಶಾ] ರತಿಬಂಧದಲ್ಲಿ ಒಂದು ಬಗೆ : ತೋರಮೊಲೆಗಳನೊತ್ತಿ ಕೂರಿ ಕೂಡುವನೊಳಾಯ್ತೋರಂತಿ[ರೆ] ಭುಗ್ನಕರಣ ಮೆಂಬುದು (ಶಪಕ. ೯-೨೦). ೪. [ನಾಟ್ಯ] ಮುಖದ ಒಂದು ಅಭಿನಯ : "ಲಜ್ಜೆಯಿಂದ ಮುಖವನ್ನು ಕೆಳಕ್ಕೆ ಮಾಡುವುದು" (ಲಾಸ್ಯರಂ. ೨೮೫ ಗದ್ಯಾನುವಾದ) : ವ್ಯಾಭುಗ್ನ ಭುಗ್ನ ಉದ್ವಾಹಿತ ವಿಧುತ ವಿವೃತ ವಿನಿವೃತ್ತ —ಈ ಆಱು ವದನಭೇದಂಗಳ್ (ಲಾಸ್ಯರಂ. ೩-೦೨೪ ವ). [ಸಂ.]

**ಭುಜ** (ನಾ). ೧. ತೋಳು; ಬಾಹು : "ದೋಃ. ಪ್ರವೇಷ್ಟಃ. ಭುಜಃ, ಬಾಹುಃ, ಭುಜಾ—ಈ ೫ ತೋಳ್" (ಹಲಾಯು. ೯೬-೩೬೮); ವನ್ನತರ ನಡುವನುಡಿಯಲ್ಕೆನ್ನ ಭುಜಾರ್ಗಳವೆ ಸಾಲ್ಗುಂ (ಶಂಕಶಾ. ೬-೨೬) : ಭುಜಕೆ ಜಯವೇಟಿ ರಿಪುಭೂಭುಜರ್ಗಂ ಭಯವೇಟಿ (ತ್ರಿಪುರ. ೨೪-೨೯೯). ೨. ಹೆಗಲು : ನಾನು ಎರಡು ಮೂರು ವರ್ಷದ ಎಳೆಯ ಬಾಲಕನಿದ್ದಾಗ ನೆರೆಹಳ್ಳಿಯ ಒಂದು ಬಯಲಾಟಕ್ಕೆ ಯಾರದೋ ಭುಜವನ್ನೇರಿಕೊಂಡು ಹೋಗಿದ್ದೆ (ಚುಕ್ಕಿ. ೦೪೦). ೩. ಆನೆಯ ಸೊಂಡಿಲು. ೪. ಡೊಂಕು; ವಕ್ರತೆ. ೫. (ಅಲಂ) ಪರಾಕ್ರಮ : 'ಭುಜಾಕ್ರಾಂತ' ಪರಾ. ೬. [ರೇಖಾಗ] ಎರಡು ಕೋನಗಳನ್ನು ಸೇರಿಸುವ ರೇಖೆ : ಅ, ಆ ಎಂಬುವುದೆ ತಾನು ನಡೆಯುತ್ತಿರುವ ಸರಳರೇಖೆಯು. ಇ ಈ ಯೆಂಬುವುದು ಆ ಸರಳರೇಖೆಗೆ ಭುಜಗಳಾಗಿರುತ್ತೆ (ಕೂಪಶಾ. ೦೮). ೭. ದೂರದ ಒಂದು ಅಳತೆ: ಹತ್ತುಯೋಜನ(?) : ದಂಡವೊಂದೆಂಬ ಸಾವಿರದ ನೆರ ಕೂಡೆ ತೋಱಿರುವ ಕ್ರೋಶ ಚತುರುನ್ನತಕೆ ಯೋಜನವನೇರ್ಗೈದ ಕೂಡೆ ಭುಜವೆ (ಲಾಸ್ಯರ. ೩೨-೦).

**ಭುಜ ತಟ್ಟಿಕೊಳ್ಳು**=ಜಂಭ **ಕೊಚ್ಚಿಕೊಳ್ಳು** : ಆತ್ಮಪ್ರಶಂಸೆ ಮಾಡಿ **ಕೊಳ್ಳು** : ಉನ್ನತಾಧಿಕಾರದಲ್ಲಿರುವ ಜನ ಹಿಂಸಾತ್ಮಕವಾದ ತಮ್ಮ ಅಧಿಕಾರದ ಬಗ್ಗೆ ಭುಜತಟ್ಟಿಕೊಳ್ಳುವಾಗ ನಾವು ಅಂಥದೇ ವಿಚಿತ್ರ ವ್ಯಾಪಾರವನ್ನು ಗಮನಿಸಬಹುದಲ್ಲವೆ ? (ಕೃಪರು. ೦೪೭). [ಸಂ.]

**ಭುಜಂಗ** (ನಾ). ೧. ಹಾವು; ಸರ್ಪ : "ಭುಜಂಗಕ್ಕಲರುಣೆ" (೪೭೪೦. ೨೩೩); ಅಂತಜಾತಶತ್ರು ಶತ್ರುಪಕ್ಷಕ್ಷಯಕರಕರವಾಳದಂಷ್ಟ್ರಾಭೀಳ ಭುಜಂಗ ಮೂರ್ತಿ ವಿಶ್ವವಿಶ್ವಂಭರಾಧಾರಮುಪ್ಪರಿಕೆಸರಿಯು ತೋಳ್ವಲದೊಳ್ ರಾಜ್ಯಂಗೆಯ್ಯುತಿರ್ಪನ್ನಗರ (ಶಂಕಶಾ. ೪-೦೦ ವ). ೨. ವಿಟ; ಜಾರ : "ವೇಶ್ಯಾಪತಿಃ, ಭುಜಂಗಃ, ವಿಟಃ, ಪಲ್ಲವಿಕಃ—ಈ ೪ ಬೋಜಗಂ" (ಹಲಾಯು. ೬೩-೨೨೭); ಶಿಸುಳಿದುಂ ದೇವಚಯುವೇಶ್ಯಾಭುಜಂಗನುಂ . . . ನುತಿಸಿದಂ (ಉದ್ಭಟ. ೩-೩೦); ವಿಳಾಸದಿಂ ಸುಳಿದೊಡಿನ್ನುಮಿವಳ್ನಳೆದ್ಯೆ ದಳೇರೆನುತ್ತಾಡಿ ಭುಜಂಗರು (ರಾಜಶೇ. ೦೦-೦೦೦). ೩. ಪತಿ; ಒಡೆಯ. ೪. ಪಂಡಿತ ; ವಿದ್ವಾಂಸ : ಪೆಸರ್ವೆತ್ತಿರ್ದರ್ದಿರಾಜರ್ಕಳುಮನಿಱಿಸಿದಂ ರಾಜವಿದ್ಯಾಭುಜಂಗಂ ವಸುಧಾಲಕ್ಷ್ಮೀಭುಜಂಗಂ. . . ಸಹಜ ಮಧುರ ಸಂಗೀತಗೋಷ್ಠೀಭುಜಂಗಂ ರಸವದ್ವಾಣೀಭುಜಂಗಂ ನೃಪಗುಣನಿಳಯಂ (ಶಾಶಪುಂ. ೩೯-೨೦೦ ; 1112). ೫. ತಪಸ್ಸು ಮಾಡುವವನು : ಋಷಿ : ಮುನಿ : "ವಿಟ ತಪೋನಿಧಿ ಭೋಗಿಗಳುಂ ಭುಜಂಗಮಕ್ಕುಂ" (ಶಾಶಾರ. ೪೭) : "ಪಾವನಮುನಿ ವಿಟ ಸರ್ಪಂ ತೀವಿದ ಮೂರುಂ ಭುಜಂಗಶಬ್ದಂ ಜಗದೊಳ್" (ನಾಶಾಕಂ. ೭೭). [ಸಂ.]

**ಭುಜಂಗತ್ರಾಸ** (ನಾ). [ನಾಟ್ಯ] ಹದಿನಾರು ವಿಧವಾದ ಮಾರ್ಗದ ಆಕಾಶಚಾರಿಗಳಲ್ಲಿ ಒಂದು; P "ಒಂದು ಕಾಲನ್ನು ಕುಂಚಿತ [ಚರಣ ೩] ಮಾಡಿ ಹಿಮ್ಮಡಿಯನ್ನು ನಿತಂಬಕ್ಕೆದುರಾಗಿರಿಸಿ ಮೊಣ ಕಾಲನ್ನು ತನ್ನ ಪಾರ್ಶ್ವಕ್ಕೆ ತಿರುಗಿಸಿ ಅಂಗಾಲನ್ನು ಮೇಲಕ್ಕೆ ಮಾಡಿ ಸೊಂಟದಿಂದ ಮೊಳಕಾಲವರೆಗೂ ಅಡಿಯನ್ನು ಚಲಿಸುವುದು. [ಅಂಗಾಲನ್ನು ಮೇಲಕ್ಕೆ ಮಾಡಿ ಸೊಂಟ ಮೊಳಕಾಲು ಇವೆರಡನ್ನೂ ಚಲಿಸಬೇಕು. ಎಂದು ಭರತನಾಟ್ಯ ಮತ್ತು ಸಂಗೀತ ರತ್ನಾಕರದಲ್ಲಿದೆ]" (ಲಾಸ್ಯರಂ. ೩೦೯ ಗದ್ಯಾನುವಾದ) : ಅತಿಕ್ರಾಂತ, ಅಪಕ್ರಾಂತ, ಪಾರ್ಶ್ವಕ್ರಾಂತ, ಮೃಗಪ್ಲುತ, ಊರ್ಧ್ವಜಾನು, ಅಲಾತ, ಸೂಚೀ, ನೂಪುರಪಾದ, ಡೋಲಪಾದ, ದಂಡಪಾದ, ವಿದ್ಯುದ್ಭ್ರಾಂತ, ಭ್ರಮರಿ, ಭುಜಂಗತ್ರಾಸ, ಆಕ್ಷಿಪ್ತ, ಆವಿದ್ಧ, ಉದ್ವೃತ್ತ ಈ ಪದಿನಾಱು ಮಾರ್ಗದ ಆಕಾಶಚಾರಿಗಳು (ಲಾಸ್ಯರಂ. ೬-೦೭ ವ). [ಸಂ.]

**ಭುಜಂಗತ್ರಾಸಿತ** (ನಾ). [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು: P "ಭುಜಂಗತ್ರಾಸಿತ ಚಾರಿಯನ್ನು ಮಾಡಿ. ಕುಂಚಿತ ಪಾದವನ್ನು ಎತ್ತಿ, ಸೊಂಟ ತೊಡೆ ಮತ್ತು ಮೊಳಕಾಲುಗಳಿಂದ ತ್ರ್ಯಸ್ರಾಕಾರವನ್ನು ಮಾಡಿ ತಿರುಗಿಸಿ [ಸುತ್ತಿ] ಒಂದು ಕೈಯನ್ನು ವ್ಯಾವರ್ತ ಮತ್ತು ಪರಿವರ್ತ ಮಾಡಿ ದೋಲಹಸ್ತದಲ್ಲೂ ಇನ್ನೊಂದನ್ನು ಕಟಕಾಮುಖ ಹಸ್ತದಲ್ಲೂ ಹಿಡಿಯುವುದು" (ಲಾಸ್ಯರಂ. ೩೯೦ ಗದ್ಯಾನುವಾದ) : ತಲಪುಷ್ಪಪುಟ. . . ಭುಜಂಗತ್ರಾಸಿತ. . . ಗಂಗಾವತರಣ—ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). [ಸಂ.]

**ಭುಜಂಗನಿಲಯ** (ನಾ). ೧. ಹಾವುಗಳ ವಾಸಸ್ಥಾನ; ಹಾವಿನ ಹುತ್ತ; ಗೆದ್ದಲುಹುತ್ತ. ೨. ಪಾತಾಳಲೋಕ : ಭುಜಂಗನಿಲಯಂ [ಶಾಕಾಂ. ಭವನಂ]ಕ್ರೂರಂ ತ್ರಿಶೂಲಾಸ್ತ್ರಯಂ (ಶಾಶಾರ. ೯೩). [ಸಂ.]

**ಭುಜಂಗಪ್ರಯಾತ** (ನಾ). [ಛಂದ] ವರ್ಣಛಂದಸ್ಸಿನಲ್ಲಿ ಹನ್ನೆರಡನೆಯದಾದ ಜಗತಿಯಲ್ಲಿ ಒಂದು ವೃತ್ತ; ಪ್ರತಿಪಾದದಲ್ಲೂ ನಾಲ್ಕು ನಾಲ್ಕು ಯಗಣವಿರುವ ವೃತ್ತ : ಕುಶಂ ವಾರ್ಧಿಪರ್ಯಾಯಮಕ್ಕುಂ ವಿರಾಮಂ ದಿಶಾಸಂಖ್ಯೆಯಕ್ಕುಂ ಪಯೋಜಾಯತಾಕ್ಷೀ ವಿಶೇಷಂ ಕವೀಂದ್ರಸ್ತುತಂ ನಾಕಿಗಂಬೋಲ್ ಪ್ರಶಸ್ತಂ ಸಮಸ್ತಂ ಭುಜಂಗಪ್ರಯಾತಂ (ಛಂದೋಂಬು. ೨-೦೨೭). [ಸಂ.]

**ಭುಜಂಗಭೋಗ** (ನಾ). ೧. ಹಾವಿನ ಶರೀರ. ೨. ಹಾವಿನ ಹೆಡೆ : 'ಭುಜಂಗಭೋಗಾಶ್ರಿತೆ' ಪರಾ. [ಸಂ.]

**ಭುಜಂಗಭೋಗಾಶ್ರಿತೆ** (ನಾ). ೧. ಆದಿಶೇಷನ ಹೆಡೆಗಳನ್ನು ಆಶ್ರಯಿಸಿಕೊಂಡಿರುವವಳು; ಆದಿಶೇಷನ ಹೆಡೆಗಳ ಮೇಲೆ ಇರುವವಳು. ೨. ಜಾರರೊಂದಿಗೆ ಸುಖಿಸುವವಳು. ೧, ೨ : ಸತತಂ ಭುಜಂಗ ಭೋಗಾಶ್ರಿತೆ ನಿನ್ನ ಕಳತ್ರಮಿಾ ಧರಾವಧು ಮತ್ತೆಂತತಿಶಯದೆ ಮಹಾ ಪುರುಷವ್ರತಮಂ ತಾಳ್ದುವಳುದಾರಚರಿತಕ್ರಮದಿಂ [ಇಂತು] ವ್ಯಾಜಸ್ತುತ್ಯಲಂಕಾರಂ (ಕಾವ್ಯಾ. ೩-೧೬೩). [ಸಂ. ಭುಜಂಗಭೋಗಾಶ್ರಿತಾ]

**ಭುಜಂಗಮ** (ನಾ). ೧.= ಭುಜಂಗ ೧: "ವಿಷಧರಃ . . . ದರ್ವೀಕರಃ, ದೃಕ್ಶ್ರುತಿಃ, ಭುಜಂಗಮಃ — ಈ ೨೫ ಹಾವಿನ ಪೆಸರ್" (ಹಲಾಯು. ೦೦೩-೦೮): "ಉರಗಂ ಸರೀಸೃಪಂ ಕುಂಭೀನಸಂ ಭೋಗಿ ಮರುತಾಶನಂ ದಂದಶೂಕಂ ಭುಜಂಗಮಂ . . . ಸರ್ಪಂಗೆ ನಾಮಂ" (ಶಬ್ದಮಣಿ. ೦೦೮-೦). ೨. ಪಾತಾಳವಾಸಿಯಾದ ನಾಗ : ಸಿದ್ಧ ವಿದ್ಯಾಧರರು ವಸುಗಳು ಮನುಗಳಾದಿತ್ಯರು ಭುಜಂಗಮರು . . . ಎಸೆದರು ರೋಮ ರೋಮದ ಕುಳಿಯ ಚೌಕದಲಿ (ಕುವ್ಯಾಸಭಾ. ೯-೩೯). ೩. ರಾಹು. ೪. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ. ೫. [ಜ್ಯೋತಿ] ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಒಂಬತ್ತನೆಯದು; ಆಶ್ಲೇಷ. [ಸಂ.]

**ಭುಜಂಗಯಾಗ** (ನಾ). ಸರ್ಪಗಳನ್ನು ಹವಿಸ್ಸನ್ನಾಗಿ ಹೋಮ ಮಾಡುತ್ತಿದ್ದ ಯಾಗ ; ಸರ್ಪಯಾಗ : ತಂದೆಗಂ ಸರ್ಪದಷ್ಟಮಿರ ದಾದುದೆನುತ್ತ ಭುಜಂಗಯಾಗಮಂ ಕುಂದಿನಿತಿಲ್ಲದಂತೆ ರಚಿಸುತ್ತಿರಲಾಗ (ಕಬ್ಬಿಗ. ೨೮). [ಸಂ.]

**ಭುಜಂಗಲೋಕ** (ನಾ). ನಾಗಲೋಕ ; ಪಾತಾಳ : ರಂಗನಾಥನ ಪದಪತಿಗೆ ರಣರಂಗಭೀತನು ಬಿದ್ದನಿರದೆ ಭುಜಂಗಲೋಕಕೆ (ಕಿಶಾಗ. ೧೦-೩೬-೬೦). [ಸಂ.]

**ಭುಜಂಗವಳಿ** (ನಾ). [ಶೈವ] ಕಾಳಾಮುಖ ಸಂಪ್ರದಾಯದ ಒಂದು ಶಾಖೆ : ಸಮುದ್ರದ ಬಲಗೆನಿತೂನ್ನು ಗದ್ದೆ ಬೆಯುವುದೆನಿತುಮಂ ಕೊಟ್ಟರೀ ಸ್ಥಾನಕ್ಕೆ ಭುಜಂಗವಳಿ ಕಾಳಾಮುಖಿಂ ನೈಷ್ಠಿಕತಪೋಧನನೆ ನಡೆಯಿಸುವ . . . ಈ ಧರ್ಮ್ಮಮಂ ಪ್ರತಿಪಾಳಿಸಿದವಂಗೆ ವಾರಣಾಸಿಯೊಳ್ಕೋಟಿ ಚತುರ್ವೇದಪಾರಗರ್ಗ್ಗೆ ಕವಿಲೆಯುಂ ಕೊಟ್ಟ ಫಲವಕ್ಕುಂ (ಕಶಾಲೆ. ೨೨-೭-೩೭ ; 1083). [ಭುಜಂಗ ? + ಬಳಿ$_3$ (<ಬಟ್ಟು$_3$)]

**ಭುಜಂಗವಿಜೃಂಭಿತ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಇಪ್ಪತ್ತಾರನೆಯ ಉತ್ಕೃತಿಯಲ್ಲಿ ಒಂದು ವೃತ್ತ ; ಪ್ರತಿಪಾದದಲ್ಲೂ ಇಪ್ಪತ್ತಾರು ಅಕ್ಷರಗಳು ಇರುವ ನಾಲ್ಕುಪಾದಗಳುಳ್ಳ ವೃತ್ತ : ಆದಿಕ್ಷ್ಮಾಯುಗ್ಮಾಕಾಶಾಗ್ರಂ ಪುರಮಿತಸುರಪುರಸಹಿತಂ . . . ಸ್ತನಭರ ವಿನಮಿತ ಪೆಸರಿಂ ಭುಜಂಗವಿಜೃಂಭಿತಂ (ಛಂದೋಂಬು. ೨-೦೯೭). [ಸಂ.]

**ಭುಜಂಗವೀಣೆ** (ನಾ). ಒಂದು ಬಗೆಯ ವೀಣೆ : ಇವಲ್ಲದೆ ಪ್ರಾಚೀನ ಗ್ರಂಥಗಳು, ಕಿನ್ನರಿ, ಪಿನಾಕಿ, ರುದ್ರವೀಣೆ, ಆಕಾಶವೀಣೆ, ಬ್ರಹ್ಮವೀಣೆ, ಭುಜಂಗವೀಣೆ, ರಾವಣಹಸ್ತ ಮುಂತಾಗಿ ನಾನಾ ರೀತಿಯ ವೀಣೆಗಳನ್ನು ನಮೂದಿಸುತ್ತವೆ (ಸಂಗೀತಂ. ೩೦೦). [ಸಂ. ಭುಜಂಗವೀಣಾ]

**ಭುಜಂಗಶಯನ** (ನಾ). ಆದಿಶೇಷನನ್ನು ಹಾಸಿಗೆಯಾಗಿ ಉಳ್ಳವನು : ವಿಷ್ಣು : ಮಾತಂಗವರದ ವಿಹಂಗಗಮನ ಭುಜಂಗಶಯನ (ಐರಾಕ್ಷ. ೪೭-೧). [ಸಂ.]

**ಭುಜಂಗಾಂಚಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : P "ಬಲಗಾಲಿನಿಂದ ಭುಜಂಗತ್ರಾಸಿತಚಾರಿಯನ್ನು ಮಾಡಿ ಬಲಗೈಯಿಂದ ರೇಚಿತವನ್ನೂ ಎಡಗೈಯಿಂದ ಲತಾಕರವನ್ನೂ ಮಾಡುವುದು" (ಶಾಸ್ತ್ರರಂ. ೨೯೯ ಗದ್ಯಾನುವಾದ) : ಭುಜಂಗಾಂಚಿತಮೊದಲು ಭುಜಂಗತ್ರಾಸಿತಮುದು ಬಲಗಾಲೊಂದಿ ಮಗುಳ್ದು ಬಲಗೈ ರೇಚಿತಮೊದವೆ ಲತಾಕರಮುಮು ವಾಮದೊಳಿರೆ ಭುಜಂಗಾಂಚಿತಾಖ್ಯಕರಣಮೆನಿಕ್ಕುಂ (ಶಾಸ್ತ್ರರಂ. ೪-೯೨). [ಸಂ.]

**ಭುಜಂಗಾಂಚಿತಕ** (ನಾ). =ಭುಜಂಗಾಂಚಿತ : ತಲಪುಷ್ಪಪುಟ ಲೀನ. . . ಭುಜಂಗಾಂಚಿತಕ . . . ಗಂಗಾವತರಣ – ಈ ನೂಱೆಂಟು ಕರಣಂಗಳ್ (ಶಾಸ್ತ್ರರಂ. ೪-೪೨ ವ). [ಸಂ.]

**ಭುಜಂಗಾಕ್ಷಿ** (ನಾ). ಒಂದು ಬಗೆಯ ಸಸ್ಯ : ಸರ್ಪಾಕ್ಷಿ ಗಿಡ : "ನಾಕುಲೀ, ಸುರಸಾ, ನಾಗಸುಗಂಧಾ, ಗಂಧನಾಕುಲೀ, ನಕುಲೇಷ್ಟಾ ಭುಜಂಗಾಕ್ಷೀ, ಛತ್ರಾಕೀ, ಸುವಹಾ, ಆ ಸರ್ಪಾಕ್ಷಿಗಿಡದ ಹೆಸರುಗಳು" (ಸಿದ್ಧೌಷಧಿ. ೧೩೮). [ಸಂ. ಭುಜಂಗಾಕ್ಷೀ]

**ಭುಜಂಗಾಧಿಪ** (ನಾ). ಹಾವುಗಳ ಒಡೆಯ ; ಸರ್ಪರಾಜ ; ಆದಿಶೇಷ : ಉರುಭುಜಂಗಗಳ್ ಭುಜಂಗಾಧಿಪಂಗಂ ಪಡೆವನ್ನಂ ಸೋಲಮುಂ . . . ಜಯಾವನಶ್ರೀ ಪಡೆಗುದು ನೃಪಪುತ್ರಾಂಗದೊಳ್ ನಾಡೆ ಚೆಲ್ವಂ (ಚಂದ್ರಪ್ರ. ೨-೨೪). [ಸಂ.]

**ಭುಜಂಗಾಸ್ತ್ರ** (ನಾ). ಒಂದು ಬಗೆಯ ಮಂತ್ರಾಸ್ತ್ರ : ಸರ್ಪಾಸ್ತ್ರ : ವಿಗೇಂದ್ರಾಸ್ತ್ರಂ ಭುಜಂಗಾಸ್ತ್ರಮಂ ಗೆಲೆ ಗೆಲ್ವಾಸಯಿನಂದು ಕೇಶವ ನಿಕುಂಭರ್ ತಮ್ಮೊಳಿಚ್ಚಾಡಿದರ್ (ಜಗ. ೦೫-೩೦). [ಸಂ.]

**ಭುಜಂಗಿ** (ನಾ). ೧. ಹೆಣ್ಣುಹಾವು : ವೀರಶ್ರೀ ಭುಜಂಗೀಸಮಾಶ್ರಯ ಶ್ರೀಖಂಡಕಾಂಡಂಗಳುಮಪ್ಪ ದೋರ್ದಂಡಂಗಳಿಂದಮತಿನಿಬಿಡಾಲಿಂಗನಂಗೆಯ್ದು (ಆದಿಪು. ೦೪-೪೭ ವ). ೨. ನಾಗಸ್ತ್ರೀ. ೩. ಸೂಳೆ ; ವೇಶ್ಯೆ : ಇಂತನಂತಚರಿತ್ರದಿಂ ಲಂಕಿಣಿ ತಾಟಕಿ ಪಾಪಾಪತ್ಯ ರತಿ ಭಾರತಿ ಸಾಗರಸುತೆಯುವಂತೊಪ್ಪುವ ಭುಜಂಗಿಯರಂ . . . ನೋಡಿ (ಪುಷ್ಪರ. ೨-೯೨). [ಸಂ. ಭುಜಂಗೀ]

**ಭುಜಂಗೇಂದ್ರ** (ನಾ). ೧. ಶ್ರೇಷ್ಠವಾದ ಸರ್ಪ. ೨. ಆದಿಶೇಷ : ತರುಣೋತ್ತುಂಗ ಶಶಾಂಕಖಂಡಮೆ ಸುಧಾಬೀಜಂ ಭುಜಂಗೇಂದ್ರನಂಕುರಂ . . . ಶಂಕರ ಕಲ್ಪದ್ರುಮನೀಗಭೀಷ್ಟಫಲಮಂ ಚಾಳುಕ್ಯನಾರಾಯಣಂ (ಗದಾಯು. ೧-೨). [ಸಂ.]

**ಭುಜಕಿರೀಟ** (ನಾ). ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ : ನಮ್ಮ ಕರ್ಣಕುಂಡಲ, ಭುಜಕಿರೀಟ, ಆಲಂಕಾರಗಳ ರೀತಿ ಹಾಗಿಲ್ಲ (ಹುಕ್ಕಲು. ೧೩೮). [ಸಂ.]

**ಭುಜಕೀರ್ತಿ** (ನಾ). = ಭುಜಕಿರೀಟ : ನಳಿತೋಳಿಂಬಹಿಗಳ ಪೆಡೆಯೊಳು ಥಳಥಳಿಸುವ ರತ್ನಗಳಂತೆ ಬಳಸಕುಚಿಗೆ ರನ್ನದ ಭುಜಕೀರ್ತಿಯನಳವಡಿಸಿದರು ನಾರಿಯರು (ಜೀವಂಧರಾಂ. ೧೦-೦೮) ; ಮುತ್ತಿನ ಮೂಗುತಿ ಮುಕಡಿಟ್ಟು ಭುಜಕೀರ್ತಿ ವೃತ್ತಕುಚದ ನಡುವೆಸೆವ ಕತ್ತೂರಿಯಣ್ಣನ ಕಾಂತೆಸೂಲಿಯದನ ವೃತ್ತಾಂತಪನುಸುರುವೆನು (ಕುಮಾರಾಂ. ೧-೧೦೪) ; ಭುಜವಲ್ಲರಿಯ ಮಂಜರಿಯ ಸಿರಿಯುಂ ಭುಜಕೀರ್ತಿ ಕಳೆದು ತೆರಂಬೊಳೆಯೆ (ಶಾಕಲೆ. ೬-೧೧ ವ). [ಭುಜ + ಕೀರ್ತಿ$_?$. / ತೆಲು. ಭುಜಕೀರ್ತಿ]

**ಭುಜಗ** (ನಾ). = ಭುಜಂಗ ೧ : "ವಿಷಧರಃ . . . ಭುಜಗಃ . . . ಭುಜಂಗಮಃ –ಈ ೨೫ ಹಾವಿನ ಪೆಸರ್" (ಹಲಾಯು. ೦೦೫-೦೮) ; ಭುಜಗನ ಫಣಾಮಣಿನಿವಾಳಿ ಬೇಕೆಂದಡಂ ಕೋಡಿದನೆ ಕೊಂಕಿದನೆ ಕಂದಿದನೆ ಕುಂದಿದನೆ (ಬಸವ. ೭-೭೪) ; ಕೊಡಹಿದರೆ ಕಟ್ಟೆಜುಹೆಗಳು ಬೆಂಬಿಡದೆ ಭುಜಗನ ನಳಲಿಸುವವೋಲ್ (ಕುಮಾರವ್ಯಾಸ. ೦೬-೩). ೨. =ಭುಜಂಗ ೨ : ಪುರವ ಪೊಗುವನಿತರೊಳಗಲ್ಲಿಪ್ಪ ಭುಜಗ[ಪಾಠಾಂ. ಭುಜಂಗ]ನೀ ತೆಱನಱಿದು ತನ್ನ ವಧುವೆಂದು ಹಸ್ತವ ಪಿಡಿಯೆ (ಶ್ರೀಕರಾ. ೨-೦೩). ೩. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ. [ಸಂ.]

**ಭುಜಗತ್ರಸ್ತ** (ನಾ). [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು ; P "ಭುಜಂಗತ್ರಾಸಿತಚಾರಿಯನ್ನು . . . ಮಾಡಿ ಎರಡು ಕೈಗಳಿಂದಲೂ ಎಡಪಾರ್ಶ್ವದಲ್ಲಿ ರೇಚಿತ ಮಾಡುವುದು" (ಶಾಸ್ತ್ರರಂ. ೨೯೯ ಗದ್ಯಾನುವಾದ) : ಭುಜಗತ್ರಾಸಿತಚಾರಿಯು ಖುಜುವಿಂದಂ ಮಾಡುತೆರಡು ಕೈಗಳನೆಡದೊಳ್ ನಿಜದಿಂ ರೇಚಿತಮಾಗಲ್ ಭುಜಗತ್ರಸ್ತಾಖ್ಯಮೆಂಬ ಕರಣಮೆನಿಕ್ಕುಂ (ಶಾಸ್ತ್ರರಂ. ೪-೯೦). [ಸಂ.]

**ಭುಜಗದ್ವೇಷಿ** (ನಾ). ೧. ಹಾವುಗಳ ವೈರಿ ; ಗರುಡ. ೨. ವಿಟರನ್ನು ದ್ವೇಷಮಾಡುವವಳು ; ಜಾರಶತ್ರು. ೧, ೨ : ವೈನತೇಯನ ಚಿತ್ತವೃತ್ತಿಯಂತೆ ಭುಜಗದ್ವೇಷಿಯಾಗಿರ್ದ(ದ)ನಱಿದುರಗವನಿತೆಯಂತೆ ಕೋಳ್ಪಟ್ಟು ಮುಳಿದಿರ್ದಳಂ (ಶಾಂತಿಪು. ೬-೬೩ ವ). [ಸಂ. ಭುಜಗದ್ವೇಷೀ]

**ಭುಜಗಧಾರಿ** (ನಾ). ೧. ಹಾವನ್ನು ಆಭರಣವನ್ನಾಗಿ ಧರಿಸಿರುವವನು ; ನಾಗಭೂಷಣ ; ಶಿವ. ೨. [ಛಂದ] ರುದ್ರಗಣಪ್ರಸ್ತಾರದ ಹದಿನಾರುಭೇದಗಳಲ್ಲಿ ಒಂದು : ೧. ಗಂಗಾಧೀಶಂ . . . ೧೨. ಭುಜಗಧಾರಿ (ಛಂದೋಂಬು. ೫-೨೪೦ ವ). [ಸಂ. ಭುಜಗಧಾರಿನ್]

**ಭುಜಗಧ್ವಜ** (ನಾ). ೧. ಹಾವಿನ ಚಿಹ್ನೆಯಿರುವ ಬಾವುಟ. — ಧ್ವಜ ; ಸರ್ಪಧ್ವಜ. ೨. ಹಾವಿನ ಚಿಹ್ನೆಯಿರುವ ಬಾವುಟವನ್ನುಳ್ಳವನು ; ದುರ್ಯೋಧನ : ಒದವಿದರುನ್ನತಮೂರ್ತಿಗಳೊದವಿ ಗದಾಯುಧವೆ ಭೀಮ ಭುಜಗಧ್ವಜರುಂ (ಗದಾಯು. ೬-೩). [ಸಂ.]

**ಭುಜಗನಾಯಕ** (ನಾ). ೧. ಸರ್ಪಗಳ ನಾಯಕ. ೨. [ಜೈನ] ನಾಗಕುಮಾರರಲ್ಲಿ ಅಗ್ರಗಣ್ಯನಾದವನು : ವಂದನಾಭಕ್ತಿಗೆ ವಂದನಂ ಭುಜಗನಾಯಕನಂ ನಡೆನೋಡಿ (ಶಾಂತಿಪು. ೧-೯೮). [ಸಂ.]

**ಭುಜಗಪುರಿ** (ನಾ). ನಾಗಲೋಕದ ರಾಜಧಾನಿ ; ಭೋಗವತಿ : ಭುಜಗಪುರಿಧನದ[ನ ಪುರಿ ದಿತಿಜ]ಪುರಿ ಪಡೆದೂರ್ಗಳಂತಿವೆಂಬಂತಿರೆ(ಶಾಂತೀಶ್ವ. ೧೩-೦೨೯). [ಸಂ.]

**ಭುಜಗಬಂಧ** (ನಾ). ಮಲ್ಲಯುದ್ಧದಲ್ಲಿ ಒಂದು ಪಟ್ಟು; ನಾಗಬಂಧ : ತಳಹತ್ತಂ ದಣುವಟ್ಟ . . . ಭುಜಗಬಂಧಂ ತೋರಹತ್ತಂ ಶಿರೋವಳಯಂ ಬಾಹುತಳಂ ಚಮತ್ಕರಿಸೆ ನಾನಾ ಕೌಶಲಂದೋಜಿದರ್ (ಶಬಶಂ. ೪-೭೫). [ಸಂ.]

**ಭುಜಗಭೂಷ** (ನಾ). ಸರ್ಪಗಳನ್ನು ಆಭರಣವಾಗಿ ಧರಿಸಿರುವವನು ; ಸರ್ಪಭೂಷಣ ; ಶಿವ : ತಾಪತ್ರಯಾಪಹಾರಿ ವಿರೂಪಾಕ್ಷಂ ಭುಜಗಭೂಷಂ . . . ಕಣ್ಗೆಸೆದಂ ( ಶಬಶಂ. ೧-೭೫).

[ ಸಂ. (ಭುಜಗ + ಭೂಷಾ + – ) ]

**ಭುಜಗಭೋಜನ** (ನಾ). ಹಾವಿಗೆ ಆಹಾರವಾದುದು ; ಇಲಿ : 'ಭುಜಗ ಭೋಜನಗಮನ' ಪರಾ. [ಸಂ.]

**ಭುಜಗಭೋಜನಗಮನ** (ನಾ). ಇಲಿಯ ಮೇಲೆ ಸಂಚರಿಸುವವನು ; ಮೂಷಕವಾಹನ ; ಗಣಪತಿ : ಚಿರರಸಮಂ ಮಾಳ್ಕೆ ಭುಜಗಭೋಜನ ಗಮನಂ (ಶಬ್ದಾಕ. ೧-೬). [ಸಂ.]

**ಭುಜಗಮರ್ದನ** (ನಾ). (ಕಾಳಿಂಗ) ಸರ್ಪವನ್ನು ಹಿಂಸಿಸಿದವನು ; ಶ್ರೀಕೃಷ್ಣ ; ಕಾಳಿಂಗಮರ್ದನ : ಕಡಿಕೆಯಿದು ಕಾದಲೆಂದೊಡರಿಸುವಾತ ನೇಂ ಭುಜಗಮರ್ದ್ದನನೇ ಕಲಿಗೋನಭೂಪನೊಳ್ (ಎಕ. VIII, ಸಾಗರ. ೧೦೪-೩೭ ; 1042). [ಸಂ.]

**ಭುಜಗರ್ಬ** (ನಾ). ತೋಳಿನ ಮದ,—ಕೊಬ್ಬು,—ಗರ್ವ : ಕರಮಿದ ಸಾಧ್ಯವೆಂಬ ಕೊಳನಂ ಭುಜಗರ್ಬ್ಬದೆ ಕೊಂಡನುಗ್ರಸಂಗರಜಯಿ ನಾಗವರ್ಮ್ಮವಿಭು (ಸಾಂದೇಇ. ೩-೦೪ ; 1074).

[ ಭುಜ + ಗರ್ಬ ( < ಗರುವ ) ]

**ಭುಜಗಲೋಕ** (ನಾ). ನಾಗಲೋಕ ; ಪಾತಾಳ : ಬಿದಿ ಮನದಟ್ಟಿಯಿಂ ಭುಜಗಲೋಕದ ಮಾನವಲೋಕದಿಂದ್ರಲೋಕದ ಬಹುಸಾರವಸ್ತುಗಳ ನೊಂದೆಡೆಗೆಯ್ದೆ ತರಳ್ಚಿ ತಂದು (ಜಗಬ. ೨-೦೨). [ಸಂ.]

**ಭುಜಗಶಯನ** (ನಾ). ಹಾವನ್ನು ಹಾಸಿಗೆಯಹಾಗಿ ಉಳ್ಳವನು ; ಶೇಷ ಶಾಯಿ ; ವಿಷ್ಣು : ಎನಗೊಬ್ಬ ದೊರೆಯು ದೊರಕಿದನು . . . ಭುಜಗ ಶಯನನಾದ. ತ್ರಿಜಗವಂದಿತನಾದ (ಪುರಂದ. ೧-೦೪೪-೨). [ಸಂ.]

**ಭುಜಗಶಿಶುಸೃತ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಒಂಬತ್ತನೆಯ ದಾದ ಬೃಹತಿಯಲ್ಲಿ ಒಂದು ವೃತ್ತ : ಸೃಜಯಿಸೆ ನನಮುಂ ಮತ್ತಂ ಗಜಪತಿಗಮನೇ ವೃತ್ತಂ ತ್ರಿಜಗದೊಳಿದು ಸಂಸಿದ್ಧಂ ಭುಜಗಶಿಶುಸೃತಂ ನಾಮಂ (ಛಂದೋಂಬು. ೨-೦೦೪). [ಸಂ.]

**ಭುಜಗಾಭರಣ** (ನಾ). ಹಾವನ್ನು ಆಭರಣವಾಗಿ ಉಳ್ಳವನು ; ಶಿವ : ಶರಣಸಂಗವ್ಯಸನ ಭುಜಗಾಭರಣನಮರಕಿರೀಟಮಂಡಿತಚರಣ . . . ಸಲಹುಗೆ ಭಕುತಜನರನು ಪಾರ್ವತೀರಮಣ (ಶಬ್ದಾಕ. ೦-೨). [ಸಂ.]

**ಭುಜಗಾರಿ** (ನಾ). ಹಾವುಗಳ ಶತ್ರು ; ಗರುಡ : ಕುರುಕುಲವಂ ಬಕಾರಿ ಭುಜಗವ್ರಜಮಂ ಭುಜಗಾರಿ ದಾನವೇಶ್ವರಕುಲಮಂ ಮುರಾರಿ . . . ಕೊಂದ ಮೊಟ್ಟೆಯಿಂ (ಶಂಶತಂ. ೩೩೪-೦೫). [ಸಂ.]

**ಭುಜಗೇಂದ್ರ** (ನಾ). ೧. ನಾಗರುಗಳ ಒಡೆಯ ; ಹಾವುಗಳ ಒಡೆಯ; ನಾಗೇಂದ್ರ: ಘನಪರಾಕ್ರಮಿ ಭೀಮಸೇನಗೆ ವಿನುತ ಭುಜಗೇಂದ್ರಂಗೆ ದುಶ್ಶಾಸನನ ಜೀವಾನಿಳನ ಪಾರಣೆ ಸಮರಭೂಮಿಯಲಿ (ಶಬ್ದಾಕ. ೦೪-೭೨); ಎಚ್ಚು ಕೆಡಪಿದನಾತನುರುಭುಜವನ್ನವೆಡೆಯ ಭುಜಗೇಂದ್ರನಂದದಿಂ ಧರೆಯೊಳ್ ಪೊರಳ್ದು ( ಕೃಷಿಜಾ. ೧೪-೦೪ ). ೨. = ಭುಜಗ ನಾಯಕ ೨ : ಭುಜಗೇಂದ್ರರ್ ಭವನಪ್ರತಾನದಿನನೂನವ್ಯಂತರರ್ (ತಂತ್ರಪು. ೦೨-೪೨). [ಸಂ.]

**ಭುಜಪತ್ರ**, ಭುಜಪತ್ರೆ, ಭೋಜಪತ್ರೆ (ನಾ). ಒಂದು ಬಗೆಯ ಮರ ; ಭೂರ್ಜವೃಕ್ಷ : "ಭೂರ್ಜ, ಚರ್ಮಿ, ಮೃದುತ್ವಕ್—೩ ಭುಜಪತ್ರಗಿಡದ ಹೆಸರುಗಳು" (ಸಿದ್ಧಾಂತಿ. ೦೨೨). **ಭುಜಪತ್ರೆ**: "ಭೂತಘ್ನಿ—ಭುಜಪತ್ರೆ" (೬ಶಂ. ೦೦೨) ; ದೇವದಾರು, ಭುಜಪತ್ರೆ, ರಾಸ್ನೆ . . . ಇವುಗಳ ಕಷಾಯ ವನಿಕ್ಕಿ ತೆಗೆದುಕೊಳ್ಳಲು ವಾತಜ್ವರಂ ಕೆಡುಗುಂ (ಸಕವೈ. ೬೫). **ಭೋಜ ಪತ್ರೆ** : (ವ್ಯಾಕಿಗ. ೦೩-೨೨೨).

[<ಪ್ರಾ. ಭುಜ್ಜಪತ್ರ. / ಸಂ.ಭೂರ್ಜಪತ್ರ./ಮರಾ. ಭುಜಪತ್ರ]

**ಭುಜಪತ್ರೆ** ' ಭುಜಪತ್ರ ' ನೋ.

**ಭುಜಬಲ**, ಭುಜಬಳ (ನಾ). ೧. ತೋಳಿನ ಕಸುವು, – ಶಕ್ತಿ : "ತೋಳ್ವಲಂ ಭುಜಬಲಂ" (ಶಬ್ದಕ. ೯೮); ಭುಜಬಲಮಂ ಪವಣ್ಬಡಿಪೊಡ ಪ್ರತಿಮಂ . . . ಮತ್ತೆ ಸಾಧಿಸಿದಪಂ ಬಹುರೂಪಿಣಿಯಂ ದಶಾನನಂ (ಶಂರಾಜಾ. ೦೪-೮೫); ಆ ಸುಧನ್ವಂ ತನ್ನ ಭುಜಬಲದೊಳಾರ್ದು ನಿಜಧನುವ ನೊದರಿಸುತಿರ್ದನು (ಕೃಷಿಜಾ. ೦೩-೪೫). ೨. ಶೂರ ; ಪರಾಕ್ರಮಿ : ಕಳಕಳವಿದೇಕೆನುತ್ತಂ ಭುಜಬಲರು ದೌವಾರಿಕರು ಹೋ ಎನುತ ವಾರಿಸಲು (ಬಸವು. ೦-೪೪). **ಭುಜಬಳ**.

ಭುಜಬಳಮಲ್ಲ = ಪರಾಕ್ರಮದಲ್ಲಿ ಜಟ್ಟಿಯಂತಿರುವವನು ; ಶೂರ ; ಒಂದು ಬಿರುದು : ರಿಪುಮದನಮಹೇಶ್ವರ ರಾಯಮುರಾರಿ ಭುಜಬಳಮಲ್ಲ ಶ್ರೀಸೋವಿದೇವರಸರು (ಕಇಅ. ೭೪-೦೨-೦೪; 1170). [ಸಂ.]

**ಭುಜಬಲಿ** (ನಾ). ೧. ಪರಾಕ್ರಮಶಾಲಿ ; ಶೂರ. ೨. [ಜೈನ] ಆದಿ ತೀರ್ಥಂಕರನ ಎರಡನೆಯ ಮಗ ; ಬಾಹುಬಲಿ : ಪುರುತನಯರ್ ಭುಜಬಲಿಯುಂ ಭರತನುಮೆನೆ ದೊರೆಗೆವಂದೊಡೆ (ಆದಿಪು. ೦೪-೯೦).

[ಸಂ. ಭುಜಬಲಿನ್]

**ಭುಜಬಳ** ' ಭುಜಬಲ ' ನೋ.

**ಭುಜಭವ** (ನಾ). ಪರಬ್ರಹ್ಮನ ತೋಳಿನಿಂದ ಉತ್ಪತ್ತಿಯಾದವನೆಂದು ಹೇಳಲಾದ ವ್ಯಕ್ತಿ ; ಕ್ಷತ್ರಿಯ : ಭುಜಭವಗುಚಿತಂ ಶಿಷ್ಟಪ್ರಜ ಪಾಲನೆ (ಬಸ್ವಾಪು. ೩-೨-೭೦). [ಸಂ.]

**ಭುಜಮಧ್ಯ** (ನಾ). ತೋಳುಗಳ ಮಧ್ಯಭಾಗ ; ಎದೆ : " ಭುಜ ಮಧ್ಯಂ, ಉರಃ, ವಕ್ಷಃ, ಹೃದಯಂ, ವತ್ಸಃ — ಈ ೫ ಉರಂ" (ಹಲಾಯು. ೯೭-೩೭೩). [ಸಂ.]

**ಭುಜವಲಯ** (ನಾ). ತೋಳುಗಳಿಗೆ ತೊಡಿಸುವ ಆಭರಣ ; ತೋಳು ಬಳೆ : ಲಲನೆಗೆ ಮಿಸುಪ ಭುಜವಲಯ [ಪಾಠಾಂ. ಭುಜವಳೆಯ, ಭುಜವಳಿಯ] ಭುಜಕೀರ್ತಿಗಳನಂಕಿಸಿ ಕಡಗ ಕಂಕಣ ಸೂಡಗವನಿಕ್ಕಿ (ಬಸಪು. ೪-೩೭). [ಸಂ.]

**ಭುಜವಿಕ್ರಮ** (ನಾ). = ಭುಜಬಲ ೧. ಕಳಾವಿಭವದೊಳ್ ಭುಜ ವಿಕ್ರಮದೊಳ್ . . . ನಿನಗಾರ್ ದೊರೆ ಮಾನವರೀ ಧರಿತ್ರಿಯೊಳ್ (ಕೃಕೃಪು. ೮-೭೭). [ಸಂ.]

**ಭುಜವಿಕ್ಷೇಪ** (ನಾ). ೧ ತೋಳುಗಳನ್ನು ಕೊಡಹುವಿಕೆ ; ತೋಳು ಗಳನ್ನು ಒದರುವುದು. ೨. [ನಾಟ್ಯ] ನೃತ್ಯದಲ್ಲಿ ನಿರ್ದಿಷ್ಟ ರೀತಿ ಯಿಂದ ಮಾಡುವ ಬಾಹುಚಲನೆ : ಈರಯ್ದುನಿಸಿದ ಭುಜವಿಕ್ಷೇಪದಿಂ ದಿಗ್ವಿಭಾಗಂ ಪರಭಾಗಂಬೆತ್ತುವೊಂಭತ್ತನಿಪ ನಯನಭೇದಗಳಿಂದೆಂಬಿನಂ ನಿರ್ಭರಹರ್ಷಾಯತ್ತಚಿತ್ತಂ ದಿವಿಜಪರಿವೃಢಂ ತಾಂಡವಪ್ರೌಢಿವೆತ್ತಂ (ಮಲ್ಲಿಪು. ೦೩-೪೩). [ಸಂ.]

**ಭುಜವೊಯ್** (ಕ್ರಿ). ತೋಳುಗಳನ್ನು ತಟ್ಟಿಕೊಳ್ಳು; ಬಾಹುಗಳನ್ನು ಅಪ್ಪಳಿಸು; **ಸಡ್ಡುಹೊಡೆ**: ಬಳಿಕ್ಕೀವೇಳುವೆನು ಬಲಿದಂಘ್ರಿಯನು ಭುಜವೊಯ್ದು ಬೊಬ್ಬಿರಿದ (ಕೋಕಂ. ೪-೦೨-೨೭). [ಭುಜ + ಪೊಯ್$_1$]

**ಭುಜಶಿಖರ** (ನಾ). ತೋಳಿನ ಮೇಲುಭಾಗ; ಹೆಗಲು: ಕುಲಶಿಖರಿ ಶಿಖರೋತ್ತುಂಗಂಗಳಾದ ಭುಜಶಿಖರಂಗಳುಂ . . . ಆತ್ಮೀಯಯೌವನ ಪ್ರಾದುರ್ಭಾವಮಂ ಪ್ರಕಟಂ ಮಾಡೆ (ಆದಿಪು. ೩-೯ ವ); ಭುಜಶಿಖರಾಗ್ರದಲ್ಲಿ ಘನಕುಂಕುಮದಿಂ ಬರೆದಿರ್ದ ಪತ್ರಕವ್ರಜದಿಂ (ಪಾರ್ಶ್ವ. ೬-೦೧೨). [ಸಂ.]

**ಭುಜಶಿರ** (ನಾ). = ಭುಜಶಿಖರ: "ಸ್ಕಂಧಃ, ಭುಜಶಿರಃ, ಅಂಸಃ — ೩ ಹೆಗಲು ಪೆಸರು, ಭುಜಶಿರಸ್ಸು" (ಸಿದ್ಧಾಂತಿ. ೦೯೨); ಹೊಯ್ದನಾ ಪವನಜನ ಭುಜಶಿರವ ಸೀಸಕಕವಚವಜಿಜ್ಞಯಾಗೆ ಬೀಳೆನುತರಸ ಬೊಬ್ಬಿರಿದ (ಕುಮಾ.ಗ. ೭-೩೫); ಗುರುಕುಚವಂ ಮುಸುಕುತ ಭುಜಶಿರದೊಳ್ ಕುರು ಗಂಟನಾಂತ ವಲ್ಕಲದಿಂ (ಶಾಕುಂತ. ೯-೦೯). [ಸಂ.]

**ಭುಜಶಿರಸ್ಸು** (ನಾ). = ಭುಜಶಿಖರ: "ಸ್ಕಂಧಃ, ಭುಜಶಿರಃ, ಅಂಸಃ — ೩ ಹೆಗಲ ಪೆಸರು, ಭುಜಶಿರಸ್ಸು" (ಸಿದ್ಧಾಂತಿ. ೦೯೨). [ಸಂ. ಭುಜಶಿರಸ್]

**ಭುಜಾಕ್ರಾಂತ** (ಗು). (ಅಲಂ) ಪರಾಕ್ರಮದಿಂದ ಅಧೀನ ಮಾಡಿಕೊಂಡಿರುವ: ಅಜಿತಂಜಯಮಹಾರಾಜಂ ಯುವರಾಜಂಬೆರಸು ನಿಜ ಭುಜಾಕ್ರಾಂತಪ್ರತ್ಯಂತರಾಜಸಮಾಜಂಬೆರಸು . . . ಅಖಿಳಪ್ರಧಾನ ಪರಿವಾರಪರಿಕೃತನುಮಾಗಿರೆ (ಚಂದ್ರಪ್ರ. ೩-೨ ವ). [ಸಂ.]

**ಭುಜಾಗ್ರ** (ನಾ). = ಭುಜಶಿಖರ: "ಭುಜಾಗ್ರಃ, ಅಲಸಂ — ಈ ೨ ಮುಯ್ಪು" (ಹಲಾಯು. ೭೭-೩೭೦); ನಾಭಿಯಲಭವ ವರಭುಜಾಗ್ರದೊಳಖಿಳ ದಿಗುಪಾಲಕರು ರಂಜಿಸಿತು (ಕುಮಾ.ಶಾ. ೯-೩೬). [ಸಂ.]

**ಭುಜಾಸ್ಫಾಲನ**, ಭುಜಾಸ್ಫಾಳನ (ನಾ). ತೋಳನ್ನು ತಟ್ಟಿಕೊಳ್ಳುವುದು: ಅಂತು ಬಿಸುಟ್ಟು ಮಲ್ಲಯುದ್ಧಸನ್ನದ್ಧರಾಗಿರ್ವರುಂ ಭುಜಾಸ್ಫಾಲನಂ ಮಾಡಲೊಡಂ (ಚಂದ್ರಪ್ರ. ೩-೭೭ ವ); ಅವನ ಪ್ರದರ್ಶನಕಾರ್ಯವು ಮುಗಿಯುತ್ತ ಬರಲು . . . ಬಾಗಿಲ ಹತ್ತಿರ ಹಠಾತ್ತಾಗಿ ಸಿಡಿಲಿನಂಥ ಭುಜಾಸ್ಫಾಲನವು ಕೇಳಬಂತು (ಪತಾ. ೨೪). **ಭುಜಾಸ್ಫಾಳನ**: ಭಟಭಟ ಭಟಭಟನೆ ಭುಜಾಸ್ಫಾಳನಂ ಮಾಡಿ (ಇಹರ. ದೀ. ೪೦-೧೩). [ಸಂ.]

**ಭುಜಾಸ್ಫಾಳನ** 'ಭುಜಾಸ್ಫಾಲನ' ನೋ.

**ಭುಜಿಷ್ಯ** (ನಾ). ೧. ಆಳು; ಸೇವಕ: "ಚೇಟಃ, ಭುಜಿಷ್ಯಃ, ಕಿಂಕರಃ — ಈ ೩ ಭಂಟಂ" (ಹಲಾಯು. ೬೦-೨೦೦); "ಭೃತ್ಯಃ, ದಾಸೇರಃ, ಭುಜಿಷ್ಯಃ, ಪರಿಚಾರಕಃ — ಈ ೧೧ ಬಂಟನ ಪೆಸರು, ಚಾಕರಿಯವನು" (ಸಿದ್ಧಾಂತಿ. ೩೦೨). ೨. ದಾಸ್ಯದಿಂದ ಬಿಡುಗಡೆಹೊಂದಿದವನು: ಪಂಚನಿವಾರಣಗಳು ಹೋದ ಮೇಲೆ, ತಾನು ಅನೃಣ್ಯ, ಆರೋಗ್ಯ, ಬಂಧನಮೋಕ್ಷ, ಭುಜಿಷ್ಯ, ಕ್ಷೇಮಾತಭೂಮಿಗಳಲ್ಲಿ ಇದ್ದಂತೆ ಕಾಣುವನು (ಬುದ್ಧಕ. ೦೯೩). ೩. ಜೊತೆಗಾರ. ೪. ಹಸ್ತಸೂತ್ರ; ಕಂಕಣ. ೫. ರೋಗ; ಬಾಯಿಲೆ. [ಸಂ.]

**ಭುಜಿಷ್ಯೆ** (ನಾ). ೧. ದಾಸಿ; ಸೇವಕಿ: ಕಳಿಂಗೇಶನ ಮುಂದೆ ನಿಜಿಸಿ ನೃಪಕನ್ನೆಯುನಿಂತೆಂಗುಂ ಭುಜಿಷ್ಯೆ ಮದನನ ಭೃಂಗೀಧ್ವನಿ ತನ್ನ ದನಿಗೆ ಸಮನೆನಿಸುಪಿನಂ (ಶಾಂತಿಪು. ೫-೦೩೨). ೨. ಸೂಳೆ; ಗಣಿಕೆ. [ಸಂ. ಭುಜಿಷ್ಯಾ]

**ಭುಜಿಸು** 'ಭುಂಜಿಸು' ನೋ.

**ಭುಜೆ** (ನಾ). ೧. ತೋಳು; ಭುಜ: "ದೋಃ, ಪ್ರವೇಷ್ಟಃ, ಭುಜಃ, ಬಾಹುಃ, ಭುಜಾ — ಈ ೫ ತೋಳ್" (ಹಲಾಯು. ೩೭-೩೭೬). ೨. ಹಾವಿನ ತೆಕ್ಕೆ, -ಮಂಡಲ. ೩. ಕ್ಷೇತ್ರದ ಅಳತೆಯ ಒಂದು ಪ್ರಮಾಣ (?): ಧಾರಾಪೂರ್ವಕಂ ಮಾಡಿ ಕುಡಲು ಮಾರ್ತಂಡಯ್ಯನಾಯಕಂ ಪಡೆದು ಬಿಟ್ಟ ಸ್ಥಳಂ ಕುರವನ ಕೇರಿಯಾದಿತ್ಯದೇವರ ಕಯ್ಯಿಂ ಪತ್ತಿರೆ ಬಡಗ ತೋರಣಗಾವುಂಡಗೆಯು ನವಿಲವಂತ್ತರು ಹತ್ತುಃಪ್ಪು ಳಳಜ ಭುಜೆ ಪಡುವ ೨೭ ಬಡಗ ೧ ॥ ಮೂಡ ೨೪ ॥ ತೆಂಕ ೨೭ ॥ ಮತ್ತರು (ಸೌಇಇ. IX-i, ೦೯೭-೪೭; 1119); ಪೂಜೆ ಪುನಸ್ಕಾರ ನಿವೇದ್ಯಕ್ಕಂ ಜೀರ್ಣೋದ್ಧಾರಕ್ಕ ಮಂದು ಬಿಟ್ಟ ಭೂಮಿಯಯ್ವತ್ತಾಱು ಗೇಣ ಘಳೆಯು(ಂ) ನೀಳದ ಭುಜೆಯಂ ದ್ವಿಗುಣಿಸಿಯಗಲದೊಳೊಂದ ಕೂಡಿ ಗುಣಿಸುವೀ ಕ್ರಮದಳತೆಯಲು (ಸೌಇಇ. IX — i, ೨೯೯-೭೭; 1147); ಭುಜೆಗಳನಿಱಿದನಿತಱಿಕೊಳಂ ಭುಜೆಯೊಂದುಮನುಳಿದು ಕೂಡಿ ಭುಜೆಸಂಖ್ಯೆಯೊಳಂ ನಿಜದಿಂ ಪ್ರತಿಗಳ ಕೂಡಿಯ ಭುಜೆಸಂಖ್ಯೆಯೊಳೊಂದ ಕಳೆಯಲುಳಿದುದು ಹಾರಂ (ಕ್ಷೇತ್ರಗ. ೨೭-೦೦). [ಸಂ. ಭುಜಾ]

**ಭುದಿಂಗನೆ** (ಅ). ಒಂದು ಅನುಕರಣಾವ್ಯಯ; ಥಟ್ಟನೆ; ಫಕ್ಕನೆ; ಇದ್ದಕ್ಕಿದ್ದಂತೆ: 'ಉಪ್ಪು-ನೀರಿ'ನಲ್ಲಿ ಭುದಿಂಗನೆ 'ಹಿಮಗಿರಿ ತಿಮಿಂಗಲ' ಬಂದು 'ತಪ್ಪು ಯಾರದು?' ಎಂದು ಕೇಳುವಂತಾಗಿದೆ (ಸಂಮು. VIII, ಮುನ್ನುಡಿ). [ ? + - ಅನೆ$_1$ ]

**ಭುರ್ರನೆ** (ಅ). ಒಂದು ಅನುಕರಣಾವ್ಯಯ: ಭುರ್ ಎಂದು ಶಬ್ದವಾಗುವಂತೆ: ಭರಭರನೆ ಪೋಗಿ ಭುರ್ರನೆ ಹಾರಿ ಬಂದ ಹಾಗೆ (ಗಾದೆ). [ ಭುರ್$_0$ + — ಅನೆ$_1$ ]

**ಭುಲತಾಪಿ**, ಭುಲತಾಪೆ (ನಾ). ಸುಳ್ಳುಭರವಸೆ: ಮೋಸದ ಆಶ್ವಾಸನೆ: ಪಡದಪ್ಪನ ಭುಲತಾಪಿಯಿಂದ ಬಾಪೂಸಾಹೇಬ ಅವರಿಗೆ ಭೂಮಿ ಮತ್ತು ವಾಡೇದ ಕಬಜಾ ಕೊಡಲಿಕ್ಕೆ ಸಾಫ ಒಲ್ಲೆಂದಾಗ, ಆ ಹೆಣ್ಣುಮಗಳು ಏನು ಮಾಡಬೇಕು? (ಗ್ರಾಮಾಯ. ೩೦೪). ಭುಲತಾಪೆ.

**ಭುಲತಾಪಿ ತುಂಬು, ಭುಲತಾಪೆ ತುಂಬು** = ಸುಳ್ಳು ಭರವಸೆಯನ್ನುಂಟುಮಾಡು: ಸುಳ್ಳು ನಂಬಿಕೆಯನ್ನು ಹುಟ್ಟಿಸು: ಇಲ್ಲದ ಭುಲತಾಪಿ ತುಂಬಿ ಈ ಕೇಶಾಗ ನಿನ್ನ ತಂಗಿನ್ನ ಗಂಟು ಹಾಕಿ ಅವನ ತಲಿ ಕೆಡಿಸಿಟ್ಟಿ! (ಸಮಾಜ. ೪೬೨); ಲಗ್ನ ಆಗತೀನಿ ಅಂತ ಭುಲತಾಪಿ ತುಂಬಿ (ಗ್ರಾಮಾಯ. ೦೯); ಯಾರಾದರೂ ಭುಲತಾಪೆ ತುಂಬ್ಯಾರು ಜೋಕಿ (ಗಂಮಾಯ. ೨೦). **ಭುಲತಾಪಿ ಹೊಡೆ** = ಸುಳ್ಳು ಹೇಳು; ಬುರುಡೆ ಹೊಡೆ: ಅವರಿಗೆ ಭುಲತಾಪೀ ಹೊಡೆದು ನಿನ್ನ ಊರಿಗೆ ಕರಕೊಂಡು ಹೋಗತಾನ (ದೀಪಹ. II, ೨೦೬).

[ ← ಮರಾ. ಭುಲತಾಪ, ಭುಲಥಾಪ, ಭೂಲತಾಫ, ಭೂಲಥಾಪ ]

**ಭುಲತಾಪೆ** 'ಭುಲತಾಪಿ' ನೋ.

**ಭುಲ್ಲಣೆ** 'ಬುಲ್ಲವಣೆ' ನೋ.

**ಭುಲ್ಲಯಿಸು** 'ಬುಲ್ಲವಿಸು' ನೋ.

**ಭುಲ್ಲವ** (ನಾ). ೧. ಸಡಗರ; ಸಂಭ್ರಮ: ಎಲ್ಲಾ ಶಸ್ತ್ರಮನಾಂತತಿ ಭುಲ್ಲವದಿಂ ವೀರರಥಟನಿಂ ಪರಿಯುಟ್ಟರ್ (ತ್ರಿಪುರ. ೬-೬). ೨. ಆಧಿಕ್ಯ; ಅತಿಶಯ: ಎಲ್ಲಿ ನೋಡಲು ರೋದನದ ಪೆಚ್ಚಲ್ಲಿ ನೋಡಿದಡಲ್ಲಿ ಚಿಂತಾ ಭುಲ್ಲವವು ಯೆಲ್ಲಲ್ಲಿ ನೋಡಿದೊಡಲ್ಲಿ ಸಂತಾಪವು (ತಿಪ್ಪುಸ್ತ್ರೀ. ೦-೦೬).

[ < ಬುಲ್ಲವಣೆ, / ತೆಲು. ಬುಲುವು ]

**ಭುಲ್ಲವಣೆ** 'ಬುಲ್ಲವಣೆ' ನೋ.

**ಭುಲ್ಲವಣೆ** 'ಬುಲ್ಲವಣೆ' ನೋ.

**ಭುಲ್ಲವಿಸು** 'ಬುಲ್ಲವಿಸು' ನೋ.

**ಭುಲ್ಲಿಸು** 'ಬುಲ್ಲವಿಸು' ನೋ.

**ಭುಲ್ಲೈಸು** 'ಬುಲ್ಲವಿಸು' ನೋ.

**ಭುವ** (ನಾ). ೧. ಬೆಂಕಿ. ೨. ಭೂಮಿ: ಭೂರ್ಭುವಂ ಸ್ವರ್ಮಹಂ ಜನತಪಂ ಸತ್ಯಮೆಂದೇಳು ಮೇಲಣ ಲೋಕಮಕ್ಕು" (ಮಂಗರಾ. ೦೦-೩೨). ೩. ವಾಯುಮಂಡಲ. [ಸಂ.]

**ಭುವನ** (ನಾ). ೧. ಜಗತ್ತು; ಪ್ರಪಂಚ; ಲೋಕ: ಭುವನಂ, ವಿಷ್ಟಪಂ. ಲೋಕಃ, ಜಗತ್ — ಈ ೪ ಜಗದ ಪೆಸರ್" (ಹಲಾಯು. ೨೨-೦೩೩);

ಭುವನಂಗಳ್ ಪದಿನಾಲ್ಕುಮಂ ನಡುಗಿಸಲ್ ಸಾಮರ್ಥ್ಯಮುಳ್ಳೆನ್ನ ಕೆಯ್ದುವಿನೊಳ್ ತೀರದುದಾವ ಕೆಯ್ದುವಿನೊಳಂ ತೀರ್ದಪುದೇ (ಕಂಕಶಾ. ೧೨-೪೪); ಭುವನಂಗಳ್ ಪದಿನಾಲ್ಕು ನಾಲ್ಕು ಪೆಸರಿಂ ವಾರಾಶಿಗಳ್ . . . ಎಲ್ಲಿ ಪೊಕ್ಕು ಬರ್ದುಕಲ್ಕಕ್ಕುಂ ಭುಜಂಗಧ್ವಜಂ (ಗದಾಯು. ೬-೨೦); ಭುವನಂ ಸಹಸ್ರಶತವಾದವಟಿಯಿ ನಿಲ್ವ ಹಿರಣ್ಯಗರ್ಭನುಮಂ ನುಂಗುವ . . . ಹರಿಗರಿದುಂಟೇ (ಜಗಂ. ೫-೯೬). ೨. ಮನುಷ್ಯರು ವಾಸಮಾಡುವ ಲೋಕ; ಭೂಮಿ : ಭುವನದ ಕನ್ನತ ಸಕ್ಕದಗವಿಗಳ್ ಸಲೆ ಸಾಲೆ ಸೋಲೆ (ಶಾಂತಿಪು. ೦-೯); ಭುವನಜನಮೆಲ್ಲಮೊರ್ಮೆಯೆ ಬವಿದುದೆನಲ್ (ಕಾದಂಪೂ. ೪೬೫); ಭುವನಜನವಿನುತಪಾದಂ ದಿವಸಕರಂ . . . ದಿವಿಜಾತಾಶಿಖರಿಶಿಖರ ಶೇಖರನಾದಂ (ಕಂಕಶಂ. ೭೮-೧೩೬). ೩. ಮನುಷ್ಯವರ್ಗ; ಜನತೆ : ನೀವಧರ್ಮಿಕರು ಮುಯ್ವನಾನುವುದವರ್ಗೆ ಭುವನವು ಬೈವುದೈ ನಿಮ್ಮ ನಿಬರನು (ಕುಮಾಭಾ. ೦-೨೩). ೪. ನೀರು ; ಜಲ : "ಆಪಃ(ಪ್), ತೋಯಂ . . . ನೀರಂ, ಭುವನಂ, ಅಮೃತಂ, ಜೀವನಂ, ಜೀವನೀಯಂ — ಈ ೨೬ ನೀರ್" (ಹಲಾಯು. ೦೦೭-೨೬). ೧, ೪ : ಶ್ರೀನಾರೀಜನ್ಮಗೇಹಂ ಭುವನ ವಿನುತ ಮುದ್ದಾಮಸತ್ವಪ್ರಯುಕ್ತಂ ನಾನಾರತ್ನಪ್ರಕೀರ್ಣಂ. . . ಪೊಯ್ಸಳೋರ್ವೀಶವಂಶಂ (ಎಕ. V, ಕನ್ನಡ. ೨೦೯-೩; 1178); ರಥದಂತೆ ಚಕ್ರ ವಿಸ್ತರಮುರುಪದ್ಮಜಾಂಡದವೊಲಾತ್ತಲಸದ್ಭುವನಾಶ್ರಯಂ . . . ಕೊಳಂ (ಗಿರಿಜಾ. ೨-೫೪). ೫. ವಾಸಿಸುವ ಮನೆ, — ಗೃಹ. ೬. ಅಭಿವೃದ್ಧಿ ಹೊಂದುವಿಕೆ ; ಏಳಿಗೆಯಾಗುವಿಕೆ. ೭. ಸಮುದ್ರ; ಸಾಗರ. ೮. ಬಾನು; ಆಕಾಶ : "ಲೋಕದೊಳು ನಭದೊಳಂಬುಧಿಯೊಳುದಕದೊಳ್ ಭುವನಾಖ್ಯಮಕ್ಕುಂ" (ಸುಂದಾ. ೦೩೦-೩೩). ೯. ಕಾಡು; ಅರಣ್ಯ. ೧೦. ಯುದ್ಧ : "ಲೋಕಂ ರಣವಿಪಿನೋದಕವಾಕಾಶವಿವೈದು ಭುವನ ಶಬ್ದಂ" (ನಾನಾಕಂ. ೨೩). ೧೧. [ಗಣಿತ] ಹದಿನಾಲ್ಕು ಎಂಬ ಸಂಖ್ಯೆಯ ಸಂಕೇತ : "ಮನು ಭುವನ ಪದಿನಾಲ್ಕು" (ಪುಂಗರಾ. ೦೦೯-೯); ನವಪುರ ಶಶಿಗಣತ[ಕ]ವಸುಬ್ ನವಕೂಡಿದ ಶತಕದಿಂದ ಗುಣಿಸಲು ಮತ್ತಾ ಭುವನಂ ಶರ ಶಶಿ ಕುಸುಮಂ ಪವಣಿಸಿ ಧರೆಯೊಬ ಲಬ್ಧ ತಪ್ಪದೆ ಬಪ್ಪಂ (ಭಾಸ್ಕರ. ೪೩-೦).

**ಭುವನಯ್ಯಮಲ್ಲ** = ಜಗತ್ತಿನಲ್ಲಿ ಬಹಳ ಶೂರನಾದವನು; ಲೋಕೈಕ ವೀರ : ಆತನ ತಮ್ಮಂ ಭುವನಯ್ಯಮಲ್ಲನೆನಿಸಿದ ದಸವಮ್ಮರ್ದೇವ (ಸೌಇಇ. XX, ೦೯-೨೨ ; 1015). **ಭುವನೈಕ ಮಾನ್ಯ** = ಜಗತ್ತಿನಲ್ಲಿ ಮತ್ತಾರೂ ಸಮಾನರಿಲ್ಲದಂತಹ ಗೌರವಸ್ಥ : ಶಿವಶಿವಾ ಭುವನೈಕ ಮಾನ್ಯರನಪಗಡಿಸಲಂಗೈಸಿದ್ಯೆ ಮಾಣೆಂದನಾ ಶಕುನಿ (ಕುಮಾಸ. ೦೨-೦೪). **ಭುವನೈಕರಾಮ** = ಅದ್ವಿತೀಯನಾದ ಸುಂದರ : ಆನೆಯ ಮೇಲೆಯುಂ ಆಳ ಮೇಲೆಯುಂ ಕುದುರೆಯ ಮೇಲೆಯುಂ ಪರಿದುದೊಂದೆ ಗಜಂ ಭುವನೈಕರಾಮನಾ (ಪಪುದ. ೦೨೦ ಕ್ರ ಯೋ). **ಭುವನೈಕವೀರ** = ಜಗತ್ತಿನಲ್ಲಿ ತನ್ನ ಸರಿಸಮಾನರಿಲ್ಲದ ಶೂರ, — ಬಲಶಾಲಿ ; ಲೋಕದಲ್ಲಿ ಅಪ್ರತಿಮಶೂರ; ಅಸಹಾಯಶೂರ: ಮಂಡಳಿಕಮಕುಟಚೂಡಾಮಣಿ ಶ್ರೀಮಚ್ಚ × × × ಪೆರ್ಮಾಡಿ ಭುವನೈಕವೀರನುದೆಯಾದಿತ್ಯನುಂ (ಎಕ. VII, ಶಿಕಾರಿ. ೨೨೦-೨೫; 1075). [ಸಂ.]

**ಭುವನಕಂಟಕ** (ನಾ). ೧. ಪ್ರಪಂಚಕ್ಕೆ ಆಗುವ ಹಾನಿ. ೨. ನೀರಿನಲ್ಲಿ ಇರುವ ಮುಳ್ಳು; ತಾವರೆದಂಟಿನ ಮುಳ್ಳು. ೧, ೨ : ಸಕಲಂಕತೆ ಚಂದ್ರಮನೊಳ್ . . . ಭುವನಕಂಟಕಂ ಬಿಸದೊಳಲ್ಲದಿಲ್ಲಾ ನಾಡೊಳ್ (ಗಿರಿಜಾ. ೨-೬). [ಸಂ.]

**ಭುವನಕುಕ್ಷಿ** (ನಾ). ೧. ನೀರನ್ನು ಒಳಗೊಂಡಿರುವುದು ; ಸರೋವರ : ವನಮಾಲಿಯಂದದಿಂ ಪದ್ಮ ಪದ್ಮೆಯುಮೊಪ್ಪುವನಕುಕ್ಷಿ ಭುವನಕುಕ್ಷಿಯು ತೆಜದೆ ಹಂಸಲೋಭನಶೋಭಿ. . .ಎನೆ ರಂಜಿಸುವ ಕಾಸಾರಮಂ (ಕೃಶಂಭಾ. ೧೫-೦೨). ೨. ಜಗತ್ತುಗಳನ್ನು ಗರ್ಭದಲ್ಲಿ ಹೊಂದಿರುವವನು ; ವಿಶ್ವಂಭರ; ನಾರಾಯಣ. [ಸಂ.]

**ಭುವನಖ್ಯಾತಿ** (ನಾ). ಲೋಕದಲ್ಲಿ ಹೆಸರುವಾಸಿಯಾಗಿರುವಿಕೆ ; ಲೋಕಪ್ರಸಿದ್ಧಿ : ಭುವನಖ್ಯಾತಿಯ ಜಾತರೂಪಭರದಿಂ . . . ಸರ್ವೇರು ವೆನಿಪ್ಪಂ ಶ್ರುತಕೀರ್ತಿಸನ್ಮುನಿವರಂ (ಶಾಂತೀಶ್ವ. ೦-೪೪). [ಸಂ.]

**ಭುವನಗರ್ಭಿತ** (ನಾ). ೧. ಜಗತ್ತಿನ ಒಳಭಾಗದಲ್ಲಿ ಆವರಿಸಿಕೊಂಡಿರುವುದು. ೨. ಪ್ರಪಂಚವನ್ನೆಲ್ಲಾ ತನ್ನಲ್ಲಿ ಅಳವಡಿಸಿಕೊಂಡಿರುವುದು. ೧, ೨ : ಭುವನಗರ್ಭಿತವಾದುದಾ ಮಾಧವನ ಜಠರದವೋಲು ಪರಭಾಗ ವತನಂತಿರೆ ವಿಷ್ಣುಪದಸಂಸಕ್ತನುಮಾಯ್ತು (ಕುಮಾಭೀ. ೬-೦೨). [ಸಂ.]

**ಭುವನಜ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : ಶಾಂತಿ ಜನರ ಪಾದಭುವನಜಗಳಿಗೆಣಿಗುವೆನು [ಶಾಶಾಂ. ಪಾದಕಮಲತನಾಗುವೆ ಮುದದಿ] (ತ್ರಿಶಶಾಂ. ೦-೩). [ಸಂ.]

**ಭುವನಜನಕ** (ನಾ). ೧. ಜಗತ್ತಿನ ಸೃಷ್ಟಿಗೆ ಕಾರಣನಾದವನು; ಬ್ರಹ್ಮ. ೨. ಜನರಿಗೆ ತಂದೆಯಂತಿರುವವನು ; ರಾಜ: ಘನರಥನರನಾಥನ ಬವಣಿಯೊಳ್ ತಾವ್ರುಚಿಳಂಗಳಾಗಿ ಪೋರುತ್ತುಮಾಮಿರೆ ಭುವನಜನಕಂ ಬೆಸಗೊಳೆ ನೀಂ ಪೇಟ್ (ಶಾಂತಿಪು. ೯-೭೦ ಪ). [ಸಂ.]

**ಭುವನಜಭವ** (ನಾ). (ವಿಷ್ಣುವಿನ ನಾಭಿ)ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ.

**ಭುವನಜಭವಾಂಡ** = ಬ್ರಹ್ಮಾಂಡ : ಭುವನಜಭವಾಂಡಭವನಕೆ ಸಮೆದುರು ರವಿಬಿಂಬಮೆಂಬ ಬಾದಣದೊಳಪೊಕ್ಕವಿರಳತದಂಡದ ಬಹಿಃ ಸುಪರ್ಣರುಚಿ ಪರ್ಬಿದಂತೆ ಕೆಂಬಿಸಿಲೆಸೆಗುಂ (ರಾಜಶೇ. ೪-೨೪). [ಸಂ.]

**ಭುವನಜ್ಯಾಯ** (ನಾ). ಪ್ರಪಂಚಕ್ಕೇ ಹಿರಿಯನಾದವನು,-ಶ್ರೇಷ್ಠನಾದವನು : ಭುವನಜ್ಯಾಯನ ತಂದೆ ತದ್ವಿಭುವ ತಾಯೆಂಬೊಂದು ಸಯ್ಪಂಗೆ ನೋಂತವರಾರ್ ನಿಮ್ಮವೊಲು (ಚಂದ್ರಪ್ರ. ೦೨-೧೬೮).

[ಸಂ. ಭುವನಜ್ಯಾಯಸ್]

**ಭುವನತ್ರಯ** (ನಾ). (ಸ್ವರ್ಗ, ಮರ್ತ್ಯ, ಪಾತಾಳವೆಂಬ) ಮೂರು ಲೋಕಗಳು : ಭುವನತ್ರಯ ದುರ್ಲಭಮೆನಿಸುವ ವಸ್ತುಗಳಿನ್ನುಮೊಳವೆ (ಕಾದಂಪೂ. ೪೫೯); ಭುವನತ್ರಯಂಗಳೊಳಗುಳ್ಳ ವಸ್ತುಗಳ್ ದೇವ ಕರತಳಾ ಮಳಕಸಮಾನವೆ ನಿಶ್ಚಯಮಾದವು (ಸುಕುಮಾ. ೪-೫೦). [ಸಂ.]

**ಭುವನತ್ರಿಣೇತ್ರ** (ನಾ). ಲೋಕಕ್ಕೆ ರುದ್ರನಂತಿರುವವನು ; ಜನರಿಗೆ ಭಯವನ್ನುಂಟುಮಾಡುವವನು : ಭುವನತ್ರಿಣೇತ್ರರುಚಿಯಂ ಕೈಕೊಂಡನಾ ಪಾಂಡವಂ (ಪಪುದ. ೨೪೧ ಕ್ರ ದೋ). [<ಸಂ. ಭುವನತ್ರಿನೇತ್ರ]

**ಭುವನದಯಿತ** (ನಾ.) ಲೋಕಕ್ಕೆ ಒಡೆಯನಾದವನು : ಅದ್ಭುತಂಗಜಿತಂಗೆ ಭುವನದಯಿತಂಗಾಗಳ್ ದೈತೇಂದ್ರರೆಲ್ಲಮೆಜಗಿದರ್ (ಆದಿಪು. ೫-೩). [ಸಂ.]

**ಭುವನದಲ್ಲಣ** (ನಾ). ೧. ಪ್ರಪಂಚದ ಭಯ ; ಜನರ ಗಾಬರಿ : ಒಜಿಲಿದುದು ಜನನಿವಹವೆದೆ ಬಾಯಬಿತು ಬಸವಳಿದಖಿಳ ಸಚರಾಚರ ನಿರೋಧ ವನೇನನೆಂಬೆನು ಭುವನದಲ್ಲಣವ (ಶಿಭಾಗ. ೫-೩-೦೪). ೨. ಪ್ರಪಂಚಕ್ಕೆ ಭಯವನ್ನುಂಟುಮಾಡುವವನು : ಸುರನರ ಭುಜಂಗಮ ಭುವನದಲ್ಲಣ ದಶವದನನುತ್ಸವದಿನೊಡ್ಡೋಲಗದೊಳಿದ್ದನು (ತೊರರಾ. ೩-೭-೨).

[ಭುವನ + ತಲ್ಲಣ (<ತಲ್ಲಟ)]

**ಭುವನನಯನ** (ನಾ). ಲೋಕಕ್ಕೆ ಕಣ್ಣಾಗಿರುವವನು ; ಸೂರ್ಯ: ನಯನಕರ್ಣಾಹಾರವಾಹನನಯನ ಭುವನೇಶಯವನ ಭುವನನಯನ (ಬಸವ. ೭೦-೫೦). [ಸಂ.]

**ಭುವನನಾಥ** (ನಾ). ಭೂಮಿಗೆ ಒಡೆಯನಾದವನು; ಅರಸು ; ರಾಜ: ಚರಿಗೆವುಗೆ ಬೋಧನಿಧಿ ದಮವರಮುನಿಯಂ ಭುವನನಾಥನಿದಿರ್ಗೊಂಡು . . . ಕಂಡೆ (ಶಾಂತಿಪು. ೯-೯೫). [ಸಂ.]

**ಭುವನಪ್ರಾಣ** (ನಾ). ಜಗತ್ತಿಗೆ ಪ್ರಾಣಸ್ವರೂಪನಾದವನು; ವಾಯು : ಮಾಣು ಭಯವನು ಭೀಮ ಭೂಪನ ಕಾಣು ಹೋಗೆನೆ ನಡುಗಿ ಭುವನಪ್ರಾಣನಾತ್ಮಜ ಬದ್ದನಾ ಧೃತರಾಷ್ಟ್ರನಂಘ್ರಿಯಲಿ (ಕುಮಾ.ಗ. ೧೧-೪೧). [ಸಂ.]

**ಭುವನಬುಂಭುಕ, ಭುವನಭುಂಭುಕ** (ಗು). ೧. ಜಗತ್ತಿನಲ್ಲಿ ಹೆಸರುವಾಸಿಯಾದ ; ಲೋಕಪ್ರಸಿದ್ಧವಾದ : ಭುವನಬುಂಭುಕದೇವಿ ಮಹಿಮೆಯನಿವಹವಾರರುಹಕ್ಕು (ಬಸವ. ೧-೧೮). (ನಾ). ೨. ಜಗತ್ತಿನಲ್ಲಿ ಹರಡಿರುವುದು,–ವ್ಯಾಪಿಸಿರುವುದು : ಭುವನಬುಂಭುಕವಾಗಿ ಶಿಖಿ ತದ್ಭುವನವೆಲ್ಲವ ದಹಿಸಲು (ಬಸವ. ೧೩-೩೧). ೩. ಜಗತ್ತಿನಲ್ಲಿ ಪ್ರಸಿದ್ಧನಾದವನು,–ಕೀರ್ತಿವಂತ : ತದನುಜನಪರಿಮಿತ ಗುಣಾಸ್ಪದ ನೆಸೆವಂ ಭುವನಬುಂಭುಕಂ . . . ದೋಣಂ (ಎಕ. XVI, ೬೦-೧೯, 1081); ಭೀಷ್ಮನು ಭುವನಬುಂಭುಕನೈದಿ ಪೊಕ್ಕನು ಹಸ್ತಿನಾಪುರವ (ಬಸವ. ೪-೩೪). ಭುವನಭುಂಭುಕ : ೧. ಪೂರ್ವರೆ ಧಾತ್ರಿಯೊಳು ಭುವನಭುಂಭುಕ ದಾನಿಗಳುರ್ವರಾಗ್ರದೊಳು ಪೂರ್ವರೆ ರಾಜನೀತಿನಿಳಯರ್ಧರೆಯೊಳು ಸುಚರಿತ್ರಪಾತ್ರರುಂ (ಎಇ. VIII, ಸಾಗರ. ೧೩೯-೧೬; 1159); ಎಸೆದುದು ವಸುಧಾಧರನ ಭುವನಭುಂಭುಕತೇಜಂ (ರಘುರಾ. ೩-೧೪); ಕವಿಜನವಿತತಿ ಕೋಕಿಲ ಮಾತಂಗ [ಮಾಕಂದ] ಭೂಭುವನಭುಂಭುಕ ಕೀರ್ತಿಯುತನು (ಶ್ರೀಶಾಂ. ೩-೮೮). ೨. ಜಗತ್ಕಾಂತನೀ ಕೀರ್ತಿಯುಂ ಭುವನಭುಂಭುಕನೆ (ಎಕ. XIII, ೩೦೪-೩೬; 1125) ; ಭುವನಭುಂ [ಪಾಠಾಂ. ಬುಂ]ಭುಕವಾದ ತನ್ನ ಮಗಳ ವಿಚಿತ್ರನೃತ್ಯ ವಿದ್ಯಾವಿಳಾಸಮಂ ಕಂಡು ಜಿತಶತ್ರು ಮಹಾರಾಜಂ . . . ಬರಿಸಿ (ಅರ್ಕಸೀ. ೩-೯೭ ಪ); ಆಡಲದೇನೋ ಭೂಭುವನಭುಂ[ಭು]ಕವಾದು[ದು]ಕೀರ್ತಿ (ಶಾಇಇ. IV, ೨೬೭-೩೨; 1380). ೩. ಉನ್ನತಕೀರ್ತಿ ಭುವನಭುಂಭುಕನೊಪ್ಪಿದನು (ರಾಮಾ. ೬-೬೦). [ಭುವನ + ಬುಂಭುಕ]

**ಭುವನಭುಂಭುಕ** 'ಭುವನಬುಂಭುಕ' ನೋ.

**ಭುವನವಾಸ** (ನಾ). [ಸಂಗೀತ] ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು : ಹದಿನೆಂಟಂಗುಳ ಮೊದಲಾಗಿ ಒಂದಂಗುಳ ಪರ್ಯಂತವಾದ ಪರಿಣಾಮಕ್ರಮವಿಡಿದು ಜಾತಿವಾಸ . . . ಭುವನವಾಸ . . . ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವಱಿಕು (ಶಿವೀಶ. ೨೩೭). [ಭುವನ + ವಾಸ$_1$]

**ಭುವನಾಂತರ** (ನಾ). ೧. ಭೂಮಿಯ ಮಧ್ಯಪ್ರದೇಶ,–ಒಳಭಾಗ. ೨. ಭೂಮಿಯ ಎಲ್ಲಾ ಭಾಗ : ಶಾಂತಿಕಥೆಯುಂ ಭುವನಾಂತರದೊಳ್ ನಿಮಿರ್ಚಿದೊಂದಂದಮನೊಂದೆ ನಾಲಗೆಯೊಳೇಪೊಗಟ್ಟಿಂ ನೆಗಟ್ಟತಿ ಮುಬ್ಬೆಯ (ಶಾಂತಿಪು. ೧-೪ ೩೦); ಭುವನಾಂತರಮಂ ಸಿಂಪಿಸುವವೊಲ್ . . . ನಿಜಲಾವಣ್ಯರಸದ ಪೆರ್ಪೊನಲಿಂದಂ (ಕಾದಂಪೂ. ೯೯೯); ಭುವನಾಂತರಮಂ ಘೇರೀರವಮುದು ಶೀವಲ್ಕೆ (ತ್ರಿಪುರ. ೨-೭೦). ೩. ಬೇರೆಲೋಕ ; ಲೋಕಾಂತರ. [ಸಂ.]

**ಭುವನಾದಿತ್ಯ** (ನಾ). ೧. ಭೂಮಿಗೆ ಸೂರ್ಯನಂತಿರುವವನು. ೨. ಒಬ್ಬಾತನ ಹೆಸರು : ಕಿಱಿಯ ರಾಚಮಲ್ಲ ಮನ್ನೆ ಬೇಡಿದೊಳರೆನೆಲನುಂ ಭಣ್ಡಾರವುಮಂ ಕೊಟ್ಟಾನೆನ್ದು ಬನ್ದು ಭುವನಾದಿತ್ಯಂ ಬರೆ (ಎಇ. IV, ಹೆಗ್ಗ. ೧೧೬-೫; ಸು. 930). [ಸಂ.]

**ಭುವನಾಧಿಪ** (ನಾ). ಭೂಮಿಯ ಒಡೆಯ; ರಾಜ : ಭುವನಾಧಿಪನಂ ಮೆಚ್ಚಿಸಿ ಜವದಿಂ ಕೈಲಾಸಕೊಲ್ದು ತಳರ್ವೋಹಿಲನಂ ಸವಿಲಾಸಂಬಡೆದೀಕ್ಷಿಸಿ (ಅದ್ಭುತ. ೧೨-೬). [ಸಂ.]

**ಭುವನಾಧಿಪತ್ಯ** (ನಾ). ೧. –ಪ್ರಪಂಚದ ಒಡೆತನ,–ಪ್ರಭುತ್ವ. ೨. ಜಗತ್ತಿನ ಪ್ರಭುತ್ವವನ್ನು ಹೊಂದಿರುವವನು ; ಪರಮೇಶ್ವರ : ಶರಣ[ಸಾ]ಂಗತ್ಯಂಗೆ ಭುವನಾಧಿಪತ್ಯಂಗೆ ಸುರಗಣಾದಿತ್ಯಂಗೆ . . . ಮಯ್ಯಿಕ್ಕಿ ನಿಂದಿರೆ ವಿರೂಪಾಕ್ಷಲಿಂಗಕ್ಕೆ (ಶಂಕರ. ೧೯-೧೩೯). [ಸಂ.]

**ಭುವನಾಧಿಪವಾಸ** (ನಾ). [ಸಂಗೀತ] ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು : ಬಳಿಕ ಹದಿನೆಂಟಂಗುಳ ಮೊದಲಾಗಿ ಒಂದಂಗುಳ ಪರ್ಯಂತವಾದ ಪರಿಣಾಮಕ್ರಮವಿಡಿದು ಜಾತಿವಾಸ. . . ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವಱಿದು (ಶಿವೀಶ. ೨೩೭). [ಭುವನಾಧಿಪ + ವಾಸ$_1$]

**ಭುವನಾಧೀಶ** (ನಾ). ಭೂಪತಿ; ರಾಜ : ಭುವನಾಧೀಶನನೀಕ್ಷಿಪೊಂದು ತವಕಂ ಕೆಯ್ಗಣ್ಮೆ (ರಘುರಾ. ೪-೪೬). [ಸಂ.]

**ಭುವನಾಧ್ವ** (ನಾ). [ವೀಶೈ] ಮಂತ್ರ, ಪದ, ವರ್ಣ, ಭುವನ, ತತ್ತ್ವ, ಕಲಾ ಎಂಬ ಆರು ಮಾರ್ಗಗಳಲ್ಲಿ ಒಂದು : ತತ್ತ್ವಾಧ್ವ, ಕಲಾಧ್ವ ಭುವನಾಧ್ವ (ಇವು ಮೂರು ಅರ್ಥಾಧ್ವಗಳು) (ಶಿವಾತ. ೨-೦ ೬೩೬). [ಸಂ. ಭುವನಾಧ್ವನ್]

**ಭುವನಾಭಿರಾಮ** (ನಾ). ಲೋಕಕ್ಕೇ ಅತ್ಯಂತ ಸುಂದರನಾಗಿರುವವನು: ರಾಮನಂ ಭುವನಾಭಿರಾಮನಂ ಗುಣರತ್ನಧಾಮನಂ. . . ಸಂತತಂ ನಾ ಮನಂದಣಿಯೆ ರಮಿಸದೆ ಬಾಳ್ವೆನೆಂತೆಂದಳು (ಕೈಂಕ:ಕಾ. ೧೯-೨೨). [ಸಂ].

**ಭುವನಾಯ್ತ** (ನಾ). ಒಬ್ಬಾತನ ಹೆಸರು : ರಾಚಮಲ್ಲಂಗಲ್ಲದೆ ರಾಜ್ಯಮಂಗೆಯಲೀಯೆಮೆನ್ದು ಭುವನಾಯ್ತನ ಮಾಗುಣ್ಡಿಯೊಳ್ಕಾದಿದನ್ದು.(ಎಇ. IV, ಹೆಗ್ಗ. ೧೧೬-೮; ಸು. 930). [ ? ]

**ಭುವನಾರಾಧ್ಯೆ** (ನಾ). ಜಗತ್ತಿನ ಜನರಿಂದ ಪೂಜಿಸಲ್ಪಡತಕ್ಕವಳು ; ಲೋಕಪೂಜ್ಯೆ : ಶ್ರೀಮತ್ಪ್ರಾಲೇಯಶೈಲೋದ್ಭವೆ ಶಿವೆ ಭುವನಾರಾಧ್ಯೆ ಕಲ್ಯಾಣಿ (ರಾಜಶೇ. ೬-೦೩೮). [ಸಂ. ಭುವನಾರಾಧ್ಯಾ]

**ಭುವನಾಲಯ** (ನಾ). ನೀರಿಗೆ ವಾಸಸ್ಥಾನವಾದುದು ; ಸಮುದ್ರ : ಶಿವದೇವರ ವರಸದನಂ ಭುವನಾಲಯಮುಬ್ಬುಗೇಹ . . . ಶರಧಿ ಮಹಿಮಾವಾಸಂ (ಹರಿಶ್ಚಂ. ೧-೩೮). [ಸಂ.]

**ಭುವನಾಶ್ರಯ** (ನಾ). ೧. ಪ್ರಪಂಚಕ್ಕೆ ಆಶ್ರಯನಾಗಿರುವವನು. ೨. ನೀರಿಗೆ ಆಶ್ರಯವಾಗಿರುವುದು. ೧, ೨ : ಪಂಕರುಹಭವನಂತೆ ಸಕಲ ಭುವನಾಶ್ರಯಂ ಶಕ್ರನಂತನಿಮಿಷನಿಕರಕಾಂತನು . . . ತಾನೆಂದುದಧಿ ಮೆಱೆದುದು (ಕೈಂಕಾ. ೬-೫). [ಸಂ.]

**ಭುವನೇಜ** (ನಾ). ನೀರಿನಲ್ಲಿ ಹುಟ್ಟಿರುವುದು; ತಾವರೆ ; ಕಮಲ : ನಯನಭುವನೇಜಾರ್ಚಿತಕ್ರಮ ನಯನಕರ್ಣವಿಪಕ್ಷಲಕ್ಷಣ ಜಯತು ಸಿದ್ಧೇಶ (ಬಸವು. ೨೦-೩೭). [ಸಂ.]

**ಭುವನೇಶ** (ನಾ). ೧. ರಾಜ ; ಅರಸು : ಭುವನೇಶಂ ಬೆಸಗೊಳೆ ವಿನಯ ವಚಃಪ್ರಸರಂಗಳೆಸೆದೊಡಂಬಡೆ ನುಡಿದಂ (ಅಜಿತ. ೧೩-೨೪); ಈ ಭುವನೇಶಂ ಬಾಯ್ಕೇಳದೊಡವಂ ತಡೆಯದೊಂ ತ್ರಿಪೃಷ್ಟನಂಬಾಧಿತಟದೊಳ್ (ಶಾಂತಿಪು. ೫-೦೩೪). ೨. ಶಿವ; ಪರಮೇಶ್ವರ : ಭುವನೇಶಂ ಭೂತಿಯುಕ್ತ ಭುಜಗಧರನಜೀಯಂ (ಕಬಕಾ. ೩-೦೮). [ಸಂ.]

**ಭುವನೇಶಯನ** (ನಾ). =ಭುವನೇಜ : ನಯನಕರ್ಣಾಹಾರವಾಹನನಯನ ಭುವನೇಶಯನ ನಯನಾನಯನ ಭುವನತ್ರಯನಯನ (ಬಸವು. ೨೦-೩೭). [ಸಂ.]

**ಭುವನೇಶ್ವರ** (ನಾ). =ಭುವನೇಶ ೧: ಹರನೊಡನೆ ಹೊಯ್ದಾಡಿದಗ್ಗದ ನರನು ತಂದೆ ಸಮಸ್ತ ಭುವನೇಶ್ವರನಲಾ ಮುರವೈರಿ ಮಾವನು ನಿನ್ನ ತನಯನಿಗೆ (ಕುಮಾ.ದ್ರೋ. ೭-೨೭). [ಸಂ.]

**ಭುವನೇಶ್ವರಿ** (ನಾ). ೧. ಜಗತ್ತಿಗೆಲ್ಲ ಒಡೆಯಳಾದ ಶಕ್ತಿದೇವತೆ ; ಆದಿಶಕ್ತಿ. ೨. [ವಾಸ್ತು] ದೇವಸ್ಥಾನದ ಶಿಖರಗಳ ಒಳಮೈ,– ಒಳಭಾಗ; ಫಲಕವಿಮಾನದ ಎತ್ತರದ ಪರಮಾವಧಿ : ಮನೆ

ಮನೆಯ ಮೇಲೆ ಗೋಪುರದ ಭುವನೇಶ್ವರಿಯು ಪರಿಜನಾವಳಿಸಿ (ಶ್ರೀರಾಪು. ೪೪೮-೯೧); ಈ ರೀತಿಯ ಕಟ್ಟಡಗಳಲ್ಲಿ ಆಶ್ಚರ್ಯದಿಂದ ಬೆರಗುಮಾಡುವ ಭಾಗವೆಂದರೆ ಅವುಗಳ ಭುವನೇಶ್ವರಿಗಳು (ಮೈಶಾಸ್ತ್ರ. ೪೧).
[ಸಂ. ಭುವನೇಶ್ವರೀ]

**ಭುವರ್ಲೋಕ** (ನಾ). ಭೂಮಿಯೇ ಮೊದಲಾದ ಮೇಲಿನ ಏಳು ಲೋಕಗಳಲ್ಲಿ ಎರಡನೆಯದು : ಭುವರ್ಲೋಕದ ಸ್ವಾವರಕ್ಕೆ ಸತ್ಯಲೋಕದ ಅಗ್ರವಣಿಯಲ್ಲಿ ಮಜ್ಜನಕ್ಕೆ ಬಿದು (ಅಪತಂ. ೪೬-೧೪೬). ಪರಮ ಜಂಗಮದಲ್ಲಿ ಹದಿನಾಲ್ಕು ಲೋಕಂಗಳಡಗಿರ್ಪವು . . . ಕುಕ್ಷಿಯಲ್ಲಿ ಭುವರ್ಲೋಕ (ಅಬಂದೇ. ೧೪೨-೧೨೪); ಈ ಮಹಾಪುರುಷನ (ವಿರಾಟನ) . . . ಕುಕ್ಷಿಯಲ್ಲಿ ಭುವರ್ಲೋಕವಿರುವುದು (ನಾನಾಗು. ೯-೧೩). [ಸಂ.]

**ಭುಸ್** (ನಾ). ಒಂದು ಅನುಕರಣ ಶಬ್ದ ; ಹಾವಿನ ಫೂತ್ಕಾರ. ದೀರ್ಘನಿಶ್ವಾಸ ಮೊದಲಾದುದುವನ್ನು ಅನುಕರಿಸುವ ಶಬ್ದ : ಅಲ್ಲಿಗೆ ಭುಸ್ಸೆಂದೆಂಬ ಫಣಿಗಳಾಭರಣಮವು ತೊಳಗೆ . . . ವಿರೂಪಾಕ್ಷನಿರ್ದಂ ವಿಲಾಸದಿಂದೆ (ತರಿಶ. ೨-೨೨); ನಡೆಯುದೆ ತಡಂ ಲಕ್ಷೋಪಲಕ್ಷ ಹೆಡೆಗಳನ್ನೆತ್ತಿ ಭುಸ್ಸೆಂಬ ಸಾಸಿರಶಿರದ ಮಹಾಫಣಿಯಂತೆ (ತತ್ತ್ವಂಗ. ೬೬-೧೮೦೨).

**ಭುಸುಂಡಿ** (ನಾ). ಒಂದು ಬಗೆಯ ಆಯುಧ : ಮಿಸುಪ ಚಕ್ರ ಭುಸುಂಡಿ ಲುಡಿಗಳ ಸರಳ ಸಮುಕ್ಕೈದುಗಳಿಂದ ದಾನವ ಮುಸುಕಿದನು ಬೊಬ್ಬಿಡುತ ರಿಪುಸಂಹಾರಭೈರವಿಯಾ (ದೇವೀಪು. ೦-೦೨). [< ಸಂ. ಭುಶುಂಡೀ]

**ಭುಸುಗುಟ್ಟು** (ಕ್ರಿ). ೧. (ಹಾವು) ಭುಸ್ ಎಂದು ಶಬ್ದ ಮಾಡು. ೨. (ಆಲಂ) (ರೋಷದಿಂದ) ವೇಗವಾಗಿ ಉಸಿರುಬಿಡು ; ಉದ್ವೇಗವನ್ನು ಹೊಂದು : ಕೆಂಪುಸೀರೆಯ ಹುಡಿಗೆ, ಹೆಡೆಯನ್ನು ತಾಳಿಸಿಕೊಂಡ ನಾಗರಹಾವಿನಂತೆ ಭುಸುಗುಟ್ಟಿದಳು (ತಂದಾಟ. ೪೦); ಗೆಲುವಾದ ಗಂಡುಕುದುರೆಯು . . . ಒಂದು ಸಲ ಭುಸುಗುಟ್ಟಿ ಕತ್ತನ್ನು ಗಂಭೀರವಾಗಿ ಅಲುಗಿಸಿ, ಅನಂತರ ಚಲಿಸದೆ ಸುಮ್ಮನೆ ನಿಂತುಬಿಟ್ಟಂತೆ ತೋರುತ್ತಿದ್ದಿತು (ಮರಳಾ. ೭೦). [< ಭುಸ್ + ಕುಟ್ಟು$_1$]

**ಭುಸುಗುಡು** (ಕ್ರಿ). = ಭುಸುಗುಟ್ಟು ೨ : ಆವರೂ ಗೋಪಾಲನು ಭುಸುಗುಡುತ್ತಾ ಅನಂತನ ಮೇಲೆ ನೆಗೆದು ಬಿದ್ದನು (ಬಿಡ್ಡೆಆ. ೧೨೬); ಗೆಲುವಾದ ಮನಸ್ಸು . . . ಎಲ್ಲ ಬಿಟ್ಟು ನೆರೆಮನೆಯ ಪಾರ್ವತಕ್ಕನ ಮಾತನ್ನು ನೆನೆದು ಭುಸುಗುಡಹತ್ತಿತು (ಮುರುದಾ. ೨೪೯).
[< ಭುಸ್ + ಕುಡು$_1$ (< ಕೊಡು$_1$)]

**ಭೂ** (ನಾ). ೧. ಭೂಮಿ; ಧರಣಿ; ನೆಲ : "ಭೂಃ, ಭೂಮಿಃ, ವಸುಧಾ, ಅವನಿಃ . . . ಧರಾ, ಅಧಾರಾ – ಈ ೨೭ ಭೂಮಿಯ ಪೆಸರ್" (ಕರಾದು. ೨೬-೦). ೨. ಭೂಲೋಕ : "ಬಿತ್ತರದ ಭೂರ್ಭುವಂ ಸ್ವರ್ಮಹಂ ಜನತಪಂ ಸತ್ಯಮೆಂದೇಳು ಮೇಲಣ ಲೋಕಮೆಕ್ಕು" (ಮಂಗರಾ. ೧೦-೩೨). ೩. ಪಂಚಭೂತಗಳಲ್ಲಿ ಒಂದು ; ಪೃಥ್ವಿ : ಭೂ ತೋಯ ಪಾವಕ ಸಮೀರಣ ಅಂಬರಾದಿಗಳೆಲ್ಲ ಆದಿಯಾಧಾರದ ಪರಮಾತ್ಮಲಿಂಗದಲ್ಲಿ (ಬಸವ. ೯೪೯). ೪. [ಛಂದ] ಮೂರುಗುರುಗಳನ್ನು ಹೊಂದಿರುವ ಗಣ ; ಮಗಣ (— — —) : ಬರ್ಪ ಭೂ ಯುಗ್ಮಂ ನೆಲಸಿದುದಕ್ಕೆಂ ಜಲಜಪತ್ರಾಕ್ಷೀ ಸುಲಲಿತವೃತ್ತಂ (ಛಂದೋಂಬು. ೨-೬೦); ಭೂ ನಾಕಾಂತದೊಳಿರೆ ತೋಯೇಶಂ ತಾನೆಂದುಂ ಪವಣಕ ನಾಮಂ (ಛಂದೋಂಬು. ೨-೦೦೭). [ಸಂ.]

**ಭೂಂಕೃತಿ** (ನಾ). ಹಾವಿನ ಫೂತ್ಕಾರದ ಶಬ್ದ : ಅಭೀಳ ಭೂಂಕೃತಿ ಪೊಣ್ಮೆ ಪೊರೆವುತ್ತೇರುತ ವಿಜೃಂಭಿಸುವ ಸರ್ಪಟಸರ್ಪನಂ ನೋಡಿ (ಬಸಪು. ೫೦-೫೯). [ಸಂ.]

**ಭೂಕಂದಾಯ** (ನಾ). ಜಮೀನಿನ ಮೇಲೆ ಹಾಕುವ ಕಂದಾಯ.— ತೆರಿಗೆ : ಭೂಕಂದಾಯ ಕಂದಾಯದ ನಿರ್ಧಾರವೂ ವಸೂಲಿಯೂ ಭೂಅಭಿಲೇಖಗಳನ್ನು ಇಟ್ಟಿರುವುದೂ . . . ಕಂದಾಯದ ಪರಭಾರೆಯೂ ಸೇರಿ (ಶಾಶಾಪ. ೨೯೦). [ಭೂ + ಕಂದಾಯ]

**ಭೂಕಂಪ** (ನಾ). ಭೌತಿಕಕಾರಣದಿಂದ ಆಗುವ ಭೂಮಿಯ ಕಂಪನ ; ಭೂಮಿಯು ನಡುಗುವುದು : ದೊಡ್ಡದೊಡ್ಡ ದ್ವೀಪಗಳಲ್ಲಿ ಎತ್ತರವಾದ ಪರ್ವತಗಳಿವೆ . . . ಅನೇಕ ಜ್ವಾಲಾಮುಖಿಗಳಿವೆ. ಆಗಾಗ್ಗೆ ಭೂಕಂಪಗಳುಂಟಾಗುತ್ತವೆ (ಭೂಗೋಳ. ೦೨೨) ; ಕಾಲನೇಮಿಯ ಪ್ರಾಣ . . . ಆಕಾಶದಲ್ಲಿ ಮಿಂಚಿ, ಭೂಕಂಪದಲ್ಲಿ ಗದಗದ ನಡುಗಿ, ಜ್ವಾಲಾಮುಖಿಯೊಳಗೆ ಸಿಡಿದು ನುಚ್ಚುನೂರಾಗಿ . . . ನಮ್ಮೆದೆಯಲ್ಲಿ ತುಡಿವ ತಬಲವಾಗಿದ್ದಾನೆ (ನಲಪು. ೩೦-೫). [ಸಂ.]

**ಭೂಕಂಪನ** (ನಾ). = ಭೂಕಂಪ : ಇದೆ ಭೂಕಂಪನವಿದೆ ರಕುತದ ಮಳೆ . . . ಇದೆ ಧೂಮಕೇತು ಮುಂಗಡೆಯೊಳಗಾ ರಾಮನಿದಿರಾಗದಿರ ನೆಮಗೇದ (ಕುರಾಶಾಂ. ೪೦-೯). [ಸಂ.]

**ಭೂಕಡವ** (ನಾ). ಒಂದು ಬಗೆಯ ಸಸ್ಯ : "ಭೂಮಿಜಾ – ಭೂಕಡವ" (೬ಶಂ. ೦೦೨). [ಭೂ + ಕಡವ$_1$ (< ಕಡಂಬ)]

**ಭೂಕಾಂತ** (ನಾ). ಭೂಮಿಯ ಪತಿ ; ರಾಜ : ಉಪವಾಸವಿಸರಕ್ಕಾ ಪುಣ್ಯತಿಥ್ಯುತ್ಕರಂ ತಾನೆಯ್ದುತ್ತಣಮಿಲ್ಲದೇಂ ನಿಂತರೋ ಭೂಕಾಂತನುಂ ಕಾಂತೆಯುಂ (ಚಂದ್ರಪು. ೩-೬೨) ; ಜಸಂಬಡೆದ ಹಸ್ತಿನಾಪುರದಲ್ಲಿ ಗರಸೆನಿಸುವ ಭೂಕಾಂತ ಜನಮೇಜಯಂ (ಕೈಬಿಳಾ. ೨-೨). [ಸಂ.]

**ಭೂಕಂಡ** (ನಾ). ಭೂಮಿಯ ಭಾಗ : ಭೂಖಂಡಗಳ ಸಮೀಪದಲ್ಲಿಯೂ ಅವುಗಳ ಪಕ್ಕಗಳಲ್ಲಿರುವ ದ್ವೀಪಗಳ ಸಮೀಪದಲ್ಲಿಯೂ ಸಾಗರದ ನೀರಿನ ಆಳ ಕಡಮೆ (ಭೂರಚ. II, ೩೭) ; ನಮ್ಮದು ಬಹಳ ದೊಡ್ಡ ಭೂಖಂಡ (ಯುಕ್ತಬ. ೨). [ಸಂ.]

**ಭೂಖರ್ಜೂರ** (ನಾ). ಒಂದು ಬಗೆಯ ಸಸ್ಯ : "ಭೂಮಿಖರ್ಜೂರೀ — ಭೂಖರ್ಜೂರ" (೬ಶಂ. ೦೦೩). [ಸಂ.]

**ಭೂಗತ** (ಗು). ೧. ಭೂಮಿಯ ಒಳಗಿರುವ : ಯಾವುದೇ ನಾಡಿನಲ್ಲಿ ಭೂಗತ ಖನಿಜಸಂಪತ್ತನ್ನು ಕಂಡುಹಿಡಿಯುವುದು ಮುಖ್ಯವಾದುದು (ರೂಢಿ). ೨. ಬಹಿರಂಗವಾಗಿ ಕಾಣಿಸಿಕೊಳ್ಳದ : ಅನೇಕ ರಾಜ್ಯಗಳಲ್ಲಿ ಭೂಗತನಾಯಕರು ಸರ್ಕಾರಕ್ಕೆ ಕಿರುಕುಳವನ್ನು ಕೊಡುತ್ತಿದ್ದಾರೆ (ರೂಢಿ). (ನಾ). ೩. ಭೂಮಿಯಲ್ಲಿ ಮುಚ್ಚಿಹೋದುದು.— ಹೂತುಹೋದುದು : ಆದರೆ ಹತ್ತಿರದಲ್ಲಿದ್ದ ಊರುಗಳೆಲ್ಲವು ಭೂಗತವಾದವು (ಕರಪು. ೫-೦೯೩). ೪. ಹಾಳು ; ನಾಶ : ಜೀವ ಹಾಳ್ ಕಾಯ ಕೆಡೆದು ಭೂಗತವಾಗಿ ವಾಯುಪ್ರಾಣಿಯಾಗಿ ಹೋಹಾಗ ಆಗ ಮುಕ್ತಿಯ ಬಯಸಿದರುಂಟೆ (ಸಿದ್ಧೇಪ. ೨೦೭-೩೪೨) ; ಒಂದೇ ದಿನದಲ್ಲಿ ಐದುನೂರು ಹೊಯಿಸಳಸೇನೆ ಭೂಗತವಾಯಿತು (ಶಾಂತಲಾ. ೨೨೦). ೫. ನಾಶವಾದವನು : ಲೆಕ್ಕದಲ್ಲಿ ಲೇಪಿತವ್ಯಹರಿಗೇಕೆ ಅಜಾತನ ಸುದ್ದಿ . . . ಇವರೆಲ್ಲರು ಈಶನ ಭಾಷೆಯಲ್ಲಿ ಸಿಕ್ಕಿ ಭೂಗತರಾದರು (ಶೋಳಪವ. ೦೨-೪೪).

**ಭೂಗತ ಮಾಡು** = ೧. ನೆಲದೊಳಗೆ ಮುಚ್ಚಿಡು; ಹೂತಿಡು : ಅವನು ಹಣವನ್ನೆಲ್ಲ ಭೂಗತ ಮಾಡಿ ಹಠಾತ್ತಾಗಿ ಸತ್ತುಹೋದುದರಿಂದ ಅದು ಮಕ್ಕಳಿಗೆ ಸೇರದಂತಾಯಿತು (ರೂಢಿ). ೨. ಹಾಳುಮಾಡು : ಅವನಲ್ಲಿದ್ದ ಪಾಶವೀಶಕ್ತಿ . . . ಆ ದಿನ ಸುಳುಹುದೋರಿದ್ದ ದೈವೀ ಪ್ರವೃತ್ತಿಯನ್ನು ಮೆಟ್ಟಿ ತುಳಿದು ಭೂಗತಮಾಡಿತು (ಕುಪರು. ೭೫).
[ಸಂ.]

**ಭೂಗರ್ಭ** (ನಾ). ಭೂಮಿಯ ಒಳಭಾಗ : ಭೂಗೋಳದ ವ್ಯಾಸವು ಅಥವಾ ಭೂಗರ್ಭದ ಪಾರಳತೆಯು ೭೯೧೨ ಮೈಲುಗಳುಳ್ಳದ್ದಾಗಿದೆ (ಭೂಗೋಳ. ೩); ಭೂಗರ್ಭವನ್ನು ಸೀಳಿ ನೋಡಿದರೆ ಅಲ್ಲೂ ಅದೇ ಹಾಡು (ಶಾಲಿಶ್ರ. ೧, ೦೨೦). [ಸಂ.]

**ಭೂಗರ್ಭಜಲ** (ನಾ). ಭೂಮಿಯ ಒಳಗಿರುವ ನೀರು : ಭೂಗರ್ಭಜಲ (ಗುಪ್ತ ಜಲ) (ಭೂವಿ. ೧೨೩). [ಸಂ.]

**ಭೂಗರ್ಭಶಾಸ್ತ್ರ** (ನಾ). ಭೂಮಿಯ ಒಳಗಿರುವ ವಸ್ತುಗಳ ವಿಷಯವನ್ನು ತಿಳಿಸುವ ಶಾಸ್ತ್ರ : ಭೂಮಿಯ ಚಿಪ್ಪಿನ ವಿಚಾರವನ್ನು ಪರಿಶೀಲಿಸುವ ಶಾಸ್ತ್ರ ಭೂಗರ್ಭಶಾಸ್ತ್ರ (ಭೂವಿ. ೦೦೬); ಭೂಗರ್ಭಶಾಸ್ತ್ರ ಪ್ರವರ್ತಕನಾದ ಲಿರಿ ಮತ್ತು ಅರ್ಥವಾದಿಯಾದ ಮಾಲ್ಥ್ಯೂಸ್ ಮುಂತಾದವರ ಸಂಶೋಧನೆಗಳೂ ಪರಿಣಾಮವಾದಕ್ಕೆ ಪುಷ್ಟಿಯನ್ನು ಕೊಟ್ಟುವು (ಜುಕ್ಕಾ.ರ. ೩೩ ಪೀ೬೪). [ಸಂ.]

**ಭೂಗರ್ಭಶಾಸ್ತ್ರಜ್ಞ** (ನಾ). ಭೂಗರ್ಭ ಶಾಸ್ತ್ರವನ್ನು ಬಲ್ಲವನು : ಭೂಗರ್ಭಶಾಸ್ತ್ರಜ್ಞರು ಭೂಮಿಯ ಪದರಗಳ ವಿಷಯವನ್ನು ಚೆನ್ನಾಗಿ ಪರಿಶೀಲಿಸಿ . . . ನಿರ್ಧರಿಸಿದ್ದಾರೆ (ಭೂಜು.ಟ್ಟು. ೯೯). [ಸಂ.]

**ಭೂಗುಗ್ಗಳ** (ನಾ). ಒಂದು ಬಗೆಯ ಸಸ್ಯ : "ಮೇದಜಃ_ಭೂಗುಗ್ಗಳ" (೬೩ಧ. ೧೨೯). [ಸಂ. ಭೂಗುಗ್ಗುಲ]

**ಭೂಗುಗ್ಗುಳು** (ನಾ). =ಭೂಗುಗ್ಗಳ : "ಅಸುರಸಂಭವಾ-ಭೂಗುಗ್ಗುಳು" (೬೩೦. ೯). [ಸಂ. ಭೂಗುಗ್ಗುಲು]

**ಭೂಗುಣ** (ನಾ). ನೆಲದ ಸತ್ತ್ವ,-ಗುಣ: ಪೂರ್ವಕಡೆಯಲ್ಲಿರುವ ಬೆಂಗಳೂರು . . . ಇದರ ಭೂಗುಣವು ಇಂಡಿಯಾದಲ್ಲಿ ಅತ್ಯಂತ ಉತ್ತಮವಾದದ್ದು (ಭೂಗೋ೪. ೬೯). [ಸಂ.]

**ಭೂಗೃಹ** (ನಾ). ನೆಲದೊಳಗೆ ಕಟ್ಟಿರುವ ಮನೆ ; ನೆಲಮನೆ : ನೆಲಮಾಳಿಗೆ : ಭೂಗೃಹದೊಳ್ ಮಾಡನಿಟ್ಟು ಮೇಣ್ ಸುದತಿಯರ್ಕಳ ರೂಪಿನೊಳಂ ಮೆಯ್ಯೊಳ್ ಮೇಣ್ಣಾಂಚಿಸಿ ಪಾಣ್ಬನೋಳಾಡುವರ್ (ವ:ಧ೩. ೬-೨೩). [ಸಂ.]

**ಭೂಗೋಚರ** (ನಾ). ಭೂಮಿಯ ಮೇಲೆ ವಾಸಮಾಡುವವನು; ಮನುಷ್ಯ : ತಕ್ಕುಗಿಡೆ ಕಿಂಕರಭಾವಂ ನಿನಗೆ ಸಮನಿಸಿತ್ತು . . . ನೀಚ ಭೂಗೋಚರರೊಳ್ (ಶಂಣಪಾ. ೧೯-೦೦). [ಸಂ.]

**ಭೂಗೋಲ**, ಭೂಗೋಳ (ನಾ). ೧. ಗೋಲಾಕಾರವಾದ ಭೂಮಿ; ಭೂಮಂಡಲ : ಆವ ದೇವಿ ರವಿಯ ಸುತ್ತ ಭೂಗೋಲವ ತಿರುಗಿಸುತ್ತ ತನ್ನ ರುಂದ್ರಲೀಲೆಯತ್ತ ಸಾಗುತಿರುಪಳೋ (ಅನೀ೬. ೦೨-೦೦). ೨. =ಭೂಗೋಳಶಾಸ್ತ್ರ : ಅರ್ಥಶಾಸ್ತ್ರ . . . ಭೂಗೋಲ, ಗಣಿತ . . . ಅನುಭವಶಾಸ್ತ್ರ, ಇತ್ಯಾದಿ ವಿಷಯಗಳ ಮೇಲಿನ ಮೂಲಭೂತತತ್ತ್ವಗಳನ್ನೊಳಗೊಂಡ ಗ್ರಂಥಗಳನ್ನು ಅರಿಸಿಕೊಳ್ಳಬೇಕು (ಗ್ರಂಥಾ:೦. ೯). **ಭೂಗೋಳ:** ೧. ಆದಿವರಾಹರೂಪದೊಳೆ ನೀನಂದೆತ್ತಿದೈ ಗೋಮಿನೀಧವ . . . ಭೂಗೋಳಮಂ (ಜಗ೧. ೦-೫೭) ; ಭೂಗೋಳದ ಮೇಲ್ಭಾಗವು ಭೂಗೋಳಪಠದಲ್ಲಿ . . . ಎರಡು ಗೋಳಗಳಾಗಿ ವಿಂಗಡಿಸಲ್ಪಟ್ಟಿವೆ (ಭೂಗೋ೪. ೦೨). ೩. ಭೂಗೋಳಶಾಸ್ತ್ರದ ಪಾಠ,_ ಬೋಧೆ : ಮೂರನೆಯ ಘಂಟೆ ನಮಗೆ ಭೂಗೋಳವಿತ್ತು (ನಾರಿಮ. ೦೦). [ಸಂ.]

**ಭೂಗೋಳ** 'ಭೂಗೋಲ' ನೋ.

**ಭೂಗೋಳಶಾಸ್ತ್ರ** (ನಾ). " ಭೂಮಿಯ ಮೇಲ್ಮೈ, ಆಕಾರ, ಪ್ರಕೃತಿ ಲಕ್ಷಣಗಳು, ಸ್ವಾಭಾವಿಕ ಮತ್ತು ರಾಜಕೀಯ ವಿಭಾಗಗಳು, ವಾಯುಗುಣ, ಉತ್ಪನ್ನಗಳು, ಜನಸಂಖ್ಯೆ, ಮೊ. ವಿಷಯಗಳನ್ನೊಳಗೊಂಡ ಶಾಸ್ತ್ರ ; ಭೂಗೋಳಶಾಸ್ತ್ರ : ಭೂವಿವರಣೆ" (Geography. ೬೦೪೨): ಭೂಮಿಯನ್ನು ವಿವರಿಸುವ ಗ್ರಂಥಕ್ಕೆ ಭೂಗೋಳಶಾಸ್ತ್ರವೆಂದು ಹೆಸರು (ಭೂಗೋ೪. ೦); ಭೂಗೋಳಶಾಸ್ತ್ರದ ಅಭ್ಯಾಸಕ್ಕೆ ತೊಡಗುವ ಮೊದಲು ಭೂಮಿಯ ಆಕಾರದ ವಿಷಯವನ್ನು ನಿಚಿತವಾಗಿ ತಿಳಿದುಕೊಂಡಿರಬೇಕು (ಭೂವಿವ. ೦). [ಸಂ. ಭೂಗೋಲಶಾಸ್ತ್ರ]

**ಭೂಚಕ್ರ** (ನಾ). ೧. ಚಕ್ರಾಕಾರವಾದ ಭೂಮಿ; ಭೂಮಂಡಲ: ಪೆಂಪಚ್ಚರಿಯಾದ ದೇವಗಣಮಂ ರಕ್ಷಿಕ್ಕೆ ಭೂಚಕ್ರಮಂ (ಜಗ೧. ೬-೩); ಚಕ್ರಸಹಾಯನಾಕ್ರಮಿಸಿದಂ ಭೂಚಕ್ರಮಂ ಪಾದದಿಂ (ಕುಕ್ಕ.ಕ. ೬-೨೩); ಧರ್ಮಾಜನ ಕೀರ್ತಿ ಭೂಚಕ್ರಮಂ ಮುಸುಕಿದಂತೆ ಬೆಳ್ದಿಂಗಳರೆ (ಕ್ಕ.ಲ:ಚಾ. ೬-೨೬). ೨. ಭೂಮಧ್ಯರೇಖೆ : ಸುಮಂಭಾಜಕವೃತ್ತ. ೩. ಅರಸುಗಳಿಗೆ, ದೇವರುಗಳಿಗೆ ಉತ್ಸವಕಾಲದಲ್ಲಿ ಎತ್ತಿಹಿಡಿಯುವ ನೀಳವಾದ ದಂಡವನ್ನು ಹೊಂದಿರುವ ಹೆಚ್ಚು ಅಗಲವಾದ ಕೊಡೆ,—ಛತ್ರಿ; ಭೂಚಕ್ರಗಳನ್ನು ಭೂಪತಿಗಳಾದ ಅರಸುಗಳು ಹಿಡಿಸಿಕೊಳ್ಳುವುದರಿಂದ ಐಶ್ವರ್ಯವುಂಟಾಗಿ ಪುಷ್ಟಿಯನ್ನು ಕೊಡುತ್ತ ಮಹಾಮೋಹನಕರವಾಗಿರುವುದು(ಸಕಪ್ಪ. ೫೩). ೪. ರಥ, ಸಿಂಹಾಸನಗಳಿಗೆ ಅಳವಡಿಸುವ ಛತ್ರಿ; ನವರತ್ನ ರಚಿಸಿದ ಲಾವೆಗಳಿಂದ ಪೊಳೆಯುವ. . . ಭೂಚಕ್ರ ಕೊಡೆಯಿಂದ ಪೊಳೆವ ಕಳಶಂಗಳ ಸೋಜಿಗದಿರುತಿರ್ಪ ರಥವು (ಶಾಸಂಗ. ೨೩). ೫. ಹತ್ತಿಸಿದಾಗ ಕಿಡಿಗಳನ್ನು ಕಾರುತ್ತಾ, ಚಕ್ರದಂತೆ ವೃತ್ತಾಕಾರವಾಗಿ ನೆಲದ ಮೇಲೆ ಸುತ್ತುವ ಒಂದು ಬಗೆಯ ಪಟಾಕಿ: ಮಕ್ಕಳು ಭೂಚಕ್ರ, ವಿಷ್ಣುಚಕ್ರ, ಮತಾಪು ಮುಂತಾದ ಹಲವಾರು ಬಗೆಯ ಪಟಾಕಿಗಳನ್ನು ಆನಂದದಿಂದ ಸುಟ್ಟರು (ರೂಢ). [ಸಂ.]

**ಭೂಚಕ್ರಬಳ್ಳಿ** (ನಾ). ಒಂದು ಬಗೆಯ ಬಳ್ಳಿ: ಸರಂಜಿಬಳ್ಳಿ, ಅಸುರಾಣಿ ಬಳ್ಳಿ, ಭೂಚಕ್ರಬಳ್ಳಿ (ವೈ.ಶಿ೧. ೨೪-೯೯೯). [ಭೂಚಕ್ರ + ಬಳ್ಳಿ]

**ಭೂಚಕ್ರಿ** (ನಾ). ಭೂಮಿಯನ್ನೆಲ್ಲ ಆಳುವವನು ; ಚಕ್ರವರ್ತಿ : ನಿಜಾಯುಷ್ಯಾಂತದಿಂದಂ ಪ್ರಜಾಪತಿ ಭೂಚಕ್ರಿಗೆ ಬಂದು ಪುಟ್ಟಿ ಬಲದೇವಂ ವಾಸುದೇವಂ (ಶಾಂತಿಪು. ೬-೬೨). [ಸಂ. ಭೂಚಕ್ರಿನ್]

**ಭೂಚರ** (ನಾ). ೧. ಭೂಮಿಯ ಮೇಲೆ ನಡೆಯುವಿಕೆ; ಭೂಸಂಚಾರ : ಆಚಾರವಿಹುದೆಂದು ಲೋಚಗುಂಡಿಗೆವಿಡಿದು ಭೂಚರದಿ ಸತ್ತ ನವಿಲ ಗರಿ ಪಿಡಿಯುವುದು ನೀಚವಲ್ಲೇನು (ಸರ್ವಜ್ಞ. ೦೦೦೯). 'ಭೂಚರತ್ವ' ಪರಾ. ೨. ಭೂಮಿಯ ಮೇಲೆ ಚಲಿಸುವ ಪ್ರಾಣಿ. ೩. ಮನುಷ್ಯ; ಮಾನವ: ಪುಟ್ಟಿದಳ್ ಸ್ವಯಂಪ್ರಭೆ ಮಗಳಾಕೆ ಪಾರ್ಶ್ವಚರ ಭೂಚರ ಖೇಚರ ನೇತ್ರವುತ್ರಿಕಾನಿಭೆ (ಶಾಂತಿಪು. ೫-೦೭); ಈಗಳಿನ ಪೊತ್ತಪ್ಪುದು ಖೇಚರನಿಶಾಚರದ್ಯುಚರಸಂಚಾರಮಲ್ಲದೆ ಭೂಚರ ಗೋಚರಮಲ್ಲೆಂದು ಮುಟ್ಟೆನೆರ್ಪುದುಂ (ಸುಕುಮಾ. ೬-೦೬ ವ); ಪುರಂಜಿನನಾದಿಯಾಗೆ ಜನಪುಂಗವರುಂ. . . ಚಕ್ರಿಗಳು ಮೇಗಳ ಭೂಚರರಲ್ಲವಾರೊ ಖೇಚರರ್ (ಶಂಣಪಾ. ೫-೨೪). [ಸಂ.]

**ಭೂಚರತ್ವ** (ನಾ). ೧. ಭೂಮಿಯ ಮೇಲೆ ಸಂಚರಿಸುವಿಕೆ. ೨. ಭೂಮಿಯಲ್ಲಿ ಸಂಚಾರ ಮಾಡುವ ವಿಷಯದಲ್ಲಿ ವಿಶೇಷ ಪ್ರಾವೀಣ್ಯವನ್ನು ಹೊಂದುವ ಕಲೆ : ಮೂಲಿಕಾಸಿದ್ಧಿ ಭೂಚರತ್ವ ಖೇಚರತ್ವ . . . ಘುಟಿಕಾಸಿದ್ಧಿ ಮಂತ್ರತಂತ್ರ ಸಿದ್ಧಿ ಇವೆಲ್ಲವ ಕಲಿತವನೋ (ಮಂಮಪಾ. ೯೬-೬೦): ಭೂಚರತ್ವದಿ ಪೊರಳ್ದು ಪೊರಳ್ದು ತಿರಳ್ದ ಲಿಂಗೋತ್ಕರವನಿಲವೇಗದೊಳೆಚೆವಿಡದೆ ನಡೆವ ಲಿಂಗಚಯ (ಬಸವು. ೫೭-೯೩). [ಸಂ.]

**ಭೂಚಿಕ್ಕಿಗೆಡ್ಡೆ** (ನಾ). ಒಂದು ಬಗೆಯ ವನಸ್ಪತಿ: ಮೂಲವ್ಯಾಧಿಗೆ:- ಭೂಚಿಕ್ಕಿಗಡ್ಡೆ ಪುಡಿಮಾಡಿ ಗುಳಿಯನಗೆದು ಬಾಣಲೆ ಇದಕ್ಕೆ ಕೆಂಡವನ್ನು ಮಾಡಿ ಅದರ ಮೇಲೆ ಈ ಪುಡಿಯನ್ನು ಹಾಕಿ ಆ ಹೊಗೆಯನ್ನು ಆಸನಕ್ಕೆ ಹಿಡಿಸಿದರೆ ಮೊಳೆಕರಗಿ ಹೋಗುವುದು (ಪಿಪ್ಪಿ. ೦೬೭). 'ಭೂಮಿ ಚಕ್ರಗಡ್ಡೆ' ಹೋ. [ಭೂಚಿಕ್ಕಿ + ಗೆಡ್ಡೆ (<ಗಡ್ಡೆ)]

**ಭೂಚ್ಛಾಯ** (ನಾ). ೧. ಕತ್ತಲೆ ; ಇರುಳು : "ಧ್ವಾಂತಂ, ಅಂಧಕಾರಂ . . . ತಮಿಸ್ರಂ, ಭೂಚ್ಛಾಯಂ _ಈ ೭ ಕತ್ತಲೆ" (ಶಂ:ಮು. ೦೬.೦೦೦). ೨. ರಾಹು. [ಸಂ.]

**ಭೂಚ್ಛಾಯೆ** (ನಾ). ಭೂಮಿಯ ನೆರಳು : ಭೂಚ್ಛಾಯೆಯು ಚಂದ್ರನ ಮೇಲೆ ಬೀಳುವದರಿಂದ ಚಂದ್ರಗ್ರಹಣಗಳುಂಟಾಗುತ್ತವೆ (ಭೂಗೋ೪. ೨). [ಸಂ. ಭೂಚ್ಛಾಯಾ]

**ಭೂಚ್ಛೇದಕ** (ನಾ). (ಗಾಡಿ, ರಥ ಮೊದಲಾದ ವಾಹನಗಳು ಮುಂದೆ ಹೋಗಲು ಅನುಕೂಲವಾಗುವಂತೆ) ನೆಲವನ್ನು ಕೆತ್ತುವವನು : ಎತ್ತ ನೋಡಲು ಮದ್ದುಗುಂಡಿನ ಹೇರುಗಳ್ ಎತ್ತ ನೋಡಲು ಭೂಚ್ಛೇದರು (ಬಿಜ್ಜರಾ. ೧೨-೨೨). [ಸಂ.]

**ಭೂಜ₁** (ನಾ). ಒಂದು ಬಗೆಯ ಮರ ; ಭೂರ್ಜ : ಮಧ್ಯಇಂಡಿಯಾ ಮತ್ತು ಉತ್ತರ ಇಂಡಿಯಾದಲ್ಲಿ ಜನರು ಭೂಜಮರದ ತೊಗಟೆಯ ಮೇಲೆ ಬರೆಯುತ್ತಾರೆ (ಕೃವಾಇ. I, ೩೭೫).

[< ಪ್ರಾ. ಭೂಜ, ಭುಜ್ಜ./ಸಂ. ಭೂರ್ಜ]

**ಭೂಜ₂** (ನಾ). ಭೂಮಿಯಲ್ಲಿ ಹುಟ್ಟುವುದು : ಮರ : ಗಿಡ ; ವೃಕ್ಷ : "ಗಿಡು ಬಳ್ಳಿ ಮರನೆಯ್ದೆ ಭೂಜಮಕ್ಕುಂ" (ಮಂಗರಾ. ೯೩-೯೬) : ಕಕುಭಾಶೋಕ ಕದಂಬಲುಂಗಲವಲೀಭೂಜಾರ್ಜುನಾನೋಕಹಪ್ರಾರಂ (ಪಂಪಭಾ. ೩-೬೨) ; ಬಳಸಿತ್ತ ಮದನನರಮನೆ ವಸಂತನ ಬೀಡುಬೆಳಲತೆಗಳಿಕ್ಕೆ ನಾನಾಭೂಜದಾಗರಂ (ಪಂಪ. ೩-೨೬) : ಇದು ಶೈವಶಾಸ್ತ್ರಭೂಜದ ಘನಮೂಲಂ . . . ಷಡ್ವರ್ಣಮಂತ್ರಂ (ರಾಜಶೇ. ೪.೬೪). [ಸಂ.]

**ಭೂಜಟೆ** (ನಾ). ಒಂದು ಬಗೆಯ ಗಿಡ ; ಗೌರಿಜಡೆ : "ಭೂಜಟೆಯೆನಲ್ ಗೌರಿಜಡೆ" (ಮಂಗರಾ. ೪೦-೩೩). [ಸಂ. ಭೂಜಟಾ]

**ಭೂಜಾಂಗವೃತ್ತಿ** (ನಾ). ಪ್ರವಾಹಕ್ಕೆ ಸಿಕ್ಕಿದ ನದಿಯ ದಡದ ಮರದಂತೆ ವರ್ತಿಸುವುದು : P ನದಿಯ ದಡದಲ್ಲಿ ಬೆಳೆದಿರುವ ದೊಡ್ಡ ಮರವು ಪೂರ್ಣಪ್ರವಾಹ ಬಂದಾಗಲೂ ಯಾವ ರಕ್ಷಣೆಯನ್ನೂ ಮಾಡಿಕೊಳ್ಳದೆ ನಿಂತ ಹಾಗೆಯೆ ನಿಂತಿರುತ್ತದೆ. ಆಗ ಬೇರುಸಡಿಲವಾಗಿ ನದಿಯ ವೇಗದಲ್ಲಿ ಕೊಚ್ಚಿಹೋಗುತ್ತದೆ. ಹಾಗೆಯೇ ಪ್ರಬಲವಾದ ಶತ್ರು ಮೇಲೇರಿಬಂದಾಗ ಸಮಯೋಚಿತವಾಗಿ ವರ್ತಿಸದೆ ಇದ್ದಂತೆಯೆ ಅವನನ್ನು ಪ್ರತಿಭಟಿಸುವ ರಾಜನು ಸೋತು ಹೋಗುತ್ತಾನೆ. ಇಂತಹ ವರ್ತನೆಗೆ ಭೂಜಾಂಗವೃತ್ತಿಯೆಂದು ಹೇಳಲಾಗುತ್ತದೆ : ಭೂಜಾಂಗವೃತ್ತಿಯಂ ಬಿಸುಟಾ ಜಗದಧಿಪಂಗೆ ವೈತಸಾವಳಿ ಪರಿವಂಬಾ ಜಳಕೆಬಗುವವೋಲ್ ನಯಭಾಜನ ರೆಱಗಿದರಜಿಂಪರೆನಿಸಿಪ ಸುಮ್ಮರ್ (ಶಾಂತಿಪು. ೧೧-೦೩೯). [ಸಂ.]

**ಭೂಜಾತ** (ನಾ). = ಭೂಜ₂ : ಪಲ್ಲವಿತ ಕುಸುಮಿತ ಮುಕುಲಿತ ಫಲಿತ ಮಂಜರೀರಂಜಿತ ಚೂತ ಭೂಜಾತಂಗಳಂ . . . ಅಲ್ಲಲ್ಲಿಗೆ ನಿಂದು ಮೆಲ್ಲ ಮೆಲ್ಲನೆ ನೋಡುತ್ತಂ (ಸುಕುಮಾ. ೬-೧೦೭ ವ) ; ತದ್ವನಂ ಪಣ್ಗಳಿಂ ಪೂಗಳಿಂ ತಳ್ತ ಭೂಜಾತನಿಕುರುಂಬಸಚ್ಛಾಯದಿಂದಂ ತಣ್ಗದಿರನಂತೆ ಸೌಖ್ಯಮಸೇಯಲ್ (ಪಾರ್ಶ್ವ. ೦೨-೮). [ ಸಂ. ]

**ಭೂಜಾತೆ** (ನಾ). ಭೂಮಿಯಲ್ಲಿ ಹುಟ್ಟಿದವಳು ; ಭೂಮಿಯ ಮಗಳು ; ಸೀತೆ : "ಶಿರಃಸ್ನಾತೆ ! ಭೂಜಾತೆ ! ರಾಕ್ಷಸಪ್ರೀಯುಂತೆ ! ಅಲಂಕೃತೆ!" ಎನುತ್ತೆನುತೆ . . . ಕೋಮಲೆಯ ಹೃದಯಮಂ ಜಾಳಂವ್ರಗೆಯ್ಯೆ ವಿರಮೂಪಣಾಸಿಷೂದನಂ (ಶ್ರೀರಾಪಟಾ. ೬೪೨-೯೩೧).

[ ಸಂ. ಭೂಜಾತಾ ]

**ಭೂಜಾನಿ** (ನಾ). ಭೂಪತಿ; ರಾಜ : ಆ ನಿಲಿಂಪೋದ್ಭೂತ ಪರಮಾನ್ನವನ್ನು ಭೂಜಾನಿ ಕೊಡಲತಿಮುದದಿ ಪ್ರಾಶನಂಗೈದರಾ ಮಾನಿನಿಯರು (ಪಂಕಾರಾ. ೦-೬-೩೯) ; ಮತ್ತಮನಿತರ್ಜೊಳ್ ಸುಗ್ರೀವಾದಿ ಮರ್ಕಟರುಂ ಸುಭುಜಭೂಜಾನಿಯುಂ ಬಂದೊದವಿದರ್ (ರಾಮಚಕ್ರ. ೦೩೩-೦೦).

[ ಸಂ. (ಭೂ + ಜಾಯಾ + –) ]

**ಭೂತ** (ಗು). ೧. ಆದ; ಇರುವ. ೨. ಉಂಟಾದ. ೩. ನಡೆದಿರುವ; ಸಂಭವಿಸಿರುವ. ೪. ಸರಿಯಾದ; ಉಚಿತವಾದ; ಯೋಗ್ಯವಾದ. ೫. ಕಳೆದ; ಅತೀತವಾದ : 'ಭೂತಕಾಲ' ನೋಡಿ. ೬. ಸೇರಿಕೊಂಡಿರುವ; ಕೂಡಿರುವ. ೭. ಸಮಾನವಾದ ; ಸದೃಶವಾದ. (ನಾ). ೮. ನಿಜ; ಸತ್ಯ. ೯. ಕಳೆದುಹೋದುದು : ಹಿಂದೆ ಆದುದು: ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಗೋಚರವಾದ ವಸ್ತುಗಳು ಪ್ರಮಾಣವ್ಯಾಪಾರಕ್ಕಿಂತ ಮೊದಲೇ ಇರುವುದರಿಂದ ಅವು ಭೂತವೆನಿಸುವುವು (ಬ್ರಸ್ಪಭಾ. ೨೨ ೮೩೪). ೧೦. ಪಡೆದುದು : "ಲಬ್ಧಂ, ಪ್ರಾಪ್ತಂ, ವಿನ್ನಂ, ಭಾವಿತಂ, ಆಸಾದಿತಂ, ಭೂತಂ—೬ ಹೊಂದಲ್ಪಟ್ಟಿರುವುದು, ಪಡೆಯಲ್ಪಟ್ಟಿರುವುದು, ಆಗಿ ಬಂದಿರುವುದು" (ಸಿದ್ಧಾಂತ. ೩೩೦). ೧೧. ಶಿವ : ಪರಮೇಶ್ವರ. ೧೨. ಶಿವಗಣ ; ಪ್ರಮಥಗಣ. ೧೩. ಜಗತ್ತಿನ ಪ್ರಾಣಿವರ್ಗ : ಚರಾಚರಾತ್ಮಕ ಜೀವರಾಶಿ : ಸಲಭೂತಂಗಳಲಿ ನೆಱೆ ಕೃಪೆಯ ಸವನಿಸಲು ಸೀನಾರು (ಶಿಭಾಗ. ೦೦-೬೩-೦೦) ; ಸಕಲಭೂತಂಗಳ ಮನಸ್ಸನ್ನೂ ತಿಳಿದು . . . ಮತ್ತೊಬ್ಬ ಮನುಷ್ಯನ ಉಪಾಯವನ್ನು ತಿಳಿದವನೂ ಪಂಡಿತನೆನಿಸಿಕೊಳ್ಳುವನು (ಕೃವಾಶಾ. ೪೩); ಚರಾಚರಭೂತಗಳಲ್ಲಿ ಕಂಡುಬರುವ ಜನನಮರಣಗಳ ವ್ಯವಹಾರ ಆತ್ಮನ ವಿಚಾರದಲ್ಲಿ ಮುಖ್ಯವಲ್ಲ : ಗೌಣ (ಶಂಭಾಷ್ಯ. ೦೬೮). ೧೪. (ಕಣ್ಣಿಗೆ ಗೋಚರವಾಗದೆ ಮನುಷ್ಯರನ್ನು ಕಾಡಿಸುವ) ದೆವ್ವ : ಪಿಶಾಚಿ : ಲೋಕದವರನೊಂದು ಭೂತ ಹಿಡಿದಡೆ ಆ ಭೂತದಿಚ್ಛೆಯಲ್ಲಿ ನುಡಿವುತಿಪ್ಪರು (ಅವಚ. ೦೦೬-೪೬೪); ಭೂತಪತಿಯೊಗೆವುದುಂ ತನ್ಮಾತೆ ಪಲಂ ಮಡಿದಳ್ಳುಮಲ್ಲದೊಡಾತಂ ಪ್ರೇತಾವಾಸದೊಳಾಡುವ ಭೂತಂಗಳ ಕೂಡೆ ವಿಹರಣಂಗೆಯ್ದುವನೆ (ವ್ಯಕಂ. ೯-೦೦೨); ತಂತ್ರಿಯವರು ಕೂಡ ಹೇಳುತ್ತಾರೆ. . . ನಾನೇ ನಾಲ್ಕು ಭೂತಗಳನ್ನು ಬಂಧಿಸಿ ಆ ಜಾಗಕ್ಕೆ ಕಳುಹಿಸಿದ್ದೇನೆ ಎಂದು (ಕಥ್ಯಕ. ೨೭); ಪ್ರೇತಕ್ಕೆ ಹೆದರುವವ ಭೂತಕ್ಕೆ ಹೆದರನೇ ? (ಗಾದೆ). ೧೫. ನಿಜವಾಗಿಯೂ ನಡೆದುದು: ವಸ್ತುಸ್ಥಿತಿ; ವಿಷಯ. ೧೬. ಜಗತ್ತು: ಪ್ರಪಂಚ; ಲೋಕ. ೧೭. ಕಲ್ಯಾಣ : ಕ್ಷೇಮ. ೧೮. ದೇವತೆಗಳಲ್ಲಿ ಒಂದು ವರ್ಗ : "ಯಕ್ಷಃ, ರಾಕ್ಷಸಃ. . . ಭೂತಃ, ಪೈಶಾಚಃ. . . ದೇವಯೋನಿಃ—ಇಂತಿವೆಲ್ಲಂ ದೇವಜಾತಿಯೆಂಬುದು" (ಶಬ್ದಮ. ೦೩-೯೭). ೧೯. ಕೈವಿಾರಿ ಹೋದುದು : "ವಿಾಱಿದುದಱೊಳು ದೇವಯೋನಿಯೊಳು ಜಾತಿ(ಯೊಳು) ಭೂತದೊಳು ಭೂತಮಕ್ಕುಂ" (ಮಂಗರಾ. ೦೯೩-೩೦). ೨೦. ನವಗ್ರಹಗಳು. ೨೧. ಆರ್ಯ: ಪೂಜ್ಯ : "ಗ್ರಹನಿಕರ ಮ ರು ಳ್ ಪಂಚಭೂತಾತ್ಮಮುಂ ವಿಾಱಿದುದುಂ ಜಾತಾಸಮೂಹಾದ್ಯರು ಜನಿತಮಿವುಂ ಭೂತಶಬ್ದಂ ಪ್ರಸಿದ್ಧಂ"(ನಾನಾರ. ೬೯). ೨೨. ಪ್ರಪಂಚದ ಸೃಷ್ಟಿಗೆ ಮೂಲವೆನಿಸಿದ ಪೃಥ್ವಿ, ಅಪ್ಪು, ತೇಜಸ್ಸು, ವಾಯು ಮತ್ತು ಆಕಾಶ ಎಂಬ ಐದು ಪದಾರ್ಥಗಳು : ಭೂತವೈದಱಿಂದ ಸ್ಥೂಲತನು (ಅವಚ. ೪. ೯೪೨ ೦೩೩೨); ಭಾವಿಸಲು ಭೂಮ್ಯಾದಿ ಭೂತಪಂಚಾತ್ಮವೆನಿಸುವುದು (ಗಗಶಾ. ೩-೨೨); ನಾಲ್ಕು ಭೂತಗಳ ಜೊತೆಗೆ ಐದನೆಯ ಭೂತವಾದ ಆಕಾಶವಿದೆಯೆಂತಲೂ ಇವರ ವಾದ(ಕೃವಾಇ.I.೩೦). ೨೩. (ಅಲಂ) ದೊಡ್ಡದು ; ಗಾತ್ರವಾದುದು : 'ಭೂತಗನ್ನಡಿ'. 'ಭೂತಾಕಾರ' ನೋಡಿ. ೨೪. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ಕಾದಿರಲ್ಕತಿ ಭೂತದೊಳವರ್ಗಂದೋದೆ ಕಲ್ಪಮೆಲೀ ಮಣಿರಂಗಂ (ಛಂದೋಂಬು. ೨-೧೦೧) : ಪುರಹರ ವಕ್ತ್ರಂ ಪಂಚಂ ಪರಮ ವ್ರತಭೂತ ಮಿಂದ್ರಿಯಂ. . .ಐದಱ ನಾಮಂ (ನ್ಯವಹಾ. ೯-೩) ೨೫. = ಭೂತಕಾಲ ೨ : ದವಪವಕಾರಂಗಳ್ ಮೂಲದೊಳಕ್ಕುಂ ಭೂತ ವರ್ತಮಾನ ಭವಿಷ್ಯದ್ವಿದಿತವಿಭಕ್ತಿತ್ರಿತಯಕ್ಕದೆಲ್ಲ ವಚನಂಗಳೊಳವಿಂಗಮಕ್ಕುಂ (ಶಬ್ದಾವ. ೩೯೭) ;ರೇಫಾಂತಗಳಪ್ಪನೇಕಾಕ್ಷರಧಾತುಂಗಳ್ಗೆ ಭೂತ ವರ್ತಮಾನ ಭವಿಷ್ಯಂತಿಗಾದ ದ, ದಪ, ವ ಎಂಬಿವು ಪರಮಾದೊಡಂ(ಶಮದ. ವ. ೩೪ ವೃತ್ತಿ).

**ಭೂತ ಬಡಿ** = ಪಿಶಾಚಿ ಮೆಟ್ಟಿಕೊಳ್ಳು : ಏನೋ ಭೂತ ಬಡಿದವಳಂತೆ ವಿಮನಸ್ಕಳಾಗಿದ್ದವಳು . . . ಬೆಳಗಾವಿಗೆ ಬಂದು ಅಲ್ಲಿಯ ವಾತಾವರಣಕ್ಕೆ ಪೂರ್ಣಚಂದ್ರನಂತಾದಳು (ಪಶಾರ. ೪೨). **ಭೂತ ಹಿಡಿ** :

ಭೂತ ಬಡಿ : ನನಗೆ ಭೂತ ಹಿಡಿದಿದೆ . . . ಎಂದು ಅವನು ಹೆದರಿದ ಹಾಗೆ ಕಾಣುತ್ತದೆ (ಮೂಕಜ್ಜ. ೬೩). [ಸಂ.]

**ಭೂತಕರುಳು** (ನಾ). ಒಂದು ಬಗೆಯ ಗಿಡ : ಎಡಮುರಿ, ಮುರುಗಿ ಕಾಯಿ, ಭೂತಕರುಳು, ಕಾಡತಲ್ಲಾರು, ಕೌರಿ, ಕವರ್ಗಿ (ವೃಕ್ಷಾಗ. ೪೨–೯೩೨). [?]

**ಭೂತಕಾಲ** (ನಾ). ೧. ಕಳೆದುಹೋದ ಕಾಲ : ಭವಿಷ್ಯ ಹಾಗಾದರೂ ಭೂತಕಾಲ ಹಾಗಲ್ಲವಲ್ಲ. ನಮ್ಮ ಅನುಭವದಿಂದ ಕೇಳಿದ್ದನ್ನು ಅದು ನಡೆದಿದೆ ಅಥವಾ ಇಲ್ಲ — ಎಂಬುದನ್ನು ಸ್ಪಷ್ಟವಾಗಿ ತೀರ್ಮಾನಿಸಬಹುದು (ಮೂಕಜ್ಜ. ೧೩೦) : ಭೂತಕಾಲದಲ್ಲಿ ಅನೇಕ ವಿಷಯಗಳು ನಮ್ಮ ಗಮನಕ್ಕೆ ಬಂದಿವೆ (ಶಿಕ್ಷಣ. ೩೨೩). ೨. [ವ್ಯಾಕ] ವರ್ತಮಾನಕಾಲ, ಭೂತಕಾಲ, ಭವಿಷ್ಯತ್ಕಾಲಗಳೆಂಬ ಮೂರು ಕಾಲಗಳಲ್ಲಿ ಒಂದು: ಹಿಂದೆ ನಡೆದುದನ್ನು ಸೂಚಿಸುವ ಕಾಲ : ಕೊಳ್, ಉಣ್, ಕಾಣ್ ಧಾತುಗಳಲ್ಲಿ ಭೂತಕಾಲದಲ್ಲಿ ಡ ಪ್ರತ್ಯಯವು ಸೇರುವುದು (ಕೃವಿವ. ೪೬) ; ಕಳೆದುಹೋದ ಕಾಲಕ್ಕೆ ಭೂತಕಾಲವೆಂದೂ, ಈ ಕ್ರಿಯಾಪದರೂಪಕ್ಕೆ ಭೂತಕಾಲದ ರೂಪವೆಂದೂ ಹೆಸರು (ವ್ಯಾಕ್ರಮ. ೬೨). [ಸಂ.]

**ಭೂತಕಾಲಕ್ರಿಯೆ** (ನಾ). [ವ್ಯಾಕ] ಭೂತಕಾಲದ ಅರ್ಥವನ್ನು ತಿಳಿಸುವ ಕ್ರಿಯಾಪದ: ಭೂತಕಾಲಕ್ರಿಯೆಯೊಳ್ ಪ್ರತಿಷೇಧಮನುಸಿರ್ವ ಅದೆ ಎಂಬುದು ಪರಮಾದೊಡಂ ನ ಣ ಲ ಯ ಳಂಗಳ್ಗೆ ದ್ವಿತ್ವವೃತ್ತಿನಿತ್ಯಂ (ಶಮದ. ೬೧ ವೃತ್ತಿ). [ಸಂ. ಭೂತಕಾಲಕ್ರಿಯಾ]

**ಭೂತಕೇಶ** (ನಾ). ಒಂದು ಬಗೆಯ ಹುಲ್ಲು : "ಗೋರೋಮಾ, ಭೂತಕೇಶಃ — ೨ ಜಟಾಮಾಂಸಿಯ ಹೆಸರುಗಳು. ಭೂತಕೇಶವೆಂಬ ಹುಲ್ಲಿಗೆ ಹೆಸರೆಂದು ಕೆಲವರನ್ನುವರು" (ನಿಘಂಟು. ೩೦೭). [ಸಂ.]

**ಭೂತಕೇಶಿ** (ನಾ). ಒಂದು ಬಗೆಯ ಗಿಡ : "ಭೂತಕೇಶೀ = ಬಿಳಿಯ ಲೊಕ್ಕಿ" (ಔಷಧಿ. ೧೧೨). [?./ಸಂ. ಭೂತಕೇಶೀ = ತುಳಸೀಗಿಡ]

**ಭೂತಕೋಲ** (ನಾ). (ಕರಾ) ಭೂತದ ವೇಷವನ್ನು ಹಾಕಿಕೊಂಡು ಕುಣಿಯುವ ಒಂದು ಹಬ್ಬ : ಭೂತಕೋಲ ಮೊದಲಾದ ವರ್ಷಾವಧಿ ನಡೆಯತಕ್ಕ ಕ್ರಿಯೆಗಳಿಗೆ ವಂತಿಗೆ ಸಂತಿಗೆ ಮೊದಲಾದುವು ಸಲ್ಲಬೇಕು (ಶಾರದಾ. ೩೪) : ಹರಿಜನರ ವರ್ಗವಾದ 'ನಳಿಕೆ' ಜಾತಿಯವರು ಈ ಭೂತಕೋಲವನ್ನು ಕಟ್ಟುತ್ತಾರೆ (ಕಡಲ. ೧೯೦). [ಭೂತ + ಕೋಲ$_1$]

**ಭೂತಗಣ** (ನಾ). ೧. ದೆವ್ವಗಳ ಗುಂಪು ; ಪಿಶಾಚಿಗಳ ಸಮೂಹ : ಎಲವೋ ನಿನ್ನಸ್ಥಾನಸಹಿತೀ ಪೊಳಲ ಸುಡುವೆನು ನಿನ್ನ ಸೀಳಿದು ಬಲಿಯ ಕೊಡುವೆನು ಭೂತಗಣಕೆ (ಕುವ್ಯಾಪ. ೬–೩೫). ೨. ಪರಮೇಶ್ವರನ ಪರಿವಾರದೇವತೆಗಳ ಗುಂಪು; ಪ್ರಮಥಗಣ : ಭೂತಗಣಂಗಳವರ್ ಪರಿಪೂತರ್ ಪ್ರಮಥೇಂದ್ರರಿರ್ಪರಿನ್ನುಂ ಕೇಳ್ ವಿಖ್ಯಾತರ್ ನಂದೀಶಾದಿಗಳ್ (ಹಾಲಾಸ್ಯ. ೧–೯–೨೬). [ಸಂ.]

**ಭೂತಗಣೇಶ** (ನಾ). ೧. ಪ್ರಮಥಗಣಗಳ ಒಡೆಯ : ಶಿವ. ೨. [ಛಂದ] ಗುರು ಎಂಬುದರ ಸಂಕೇತ : ಭೂತಗಣೇಶಂ ಭೂತಶರಾಶಾಗಜದೊಳೆ ಯತಿಗಣಮೆಸೆದಿರೆ . . . ಕ್ರೌಂಚಪದಂ (ಛಂದೋಂಬು. ೧–೧೯೪). [ಸಂ.]

**ಭೂತಗನ್ನಡಿ** (ನಾ). ವಸ್ತುಗಳನ್ನು ಇರುವುದಕ್ಕಿಂತ ದೊಡ್ಡದು ಮಾಡಿ ತೋರಿಸುವ ಕನ್ನಡಿ ; ರಾವುಗನ್ನಡಿ : ಆಗ ಭೂತಗನ್ನಡಿಯೊಳಗಿನಿಂದ ಹಾದು ಬರುವ ಬೆಳಕಿನ ಕಿರಣದಂತೆ, ನಿನ್ನ ಬಯಕೆಯೂ ಪ್ರಭಾವಶಾಲಿಯಾಗುತ್ತದೆ (ಹಂಗೀತ. ೯೬) ; ಸರಾಫನು ಕಿಸೆಯಲ್ಲಿರುವ ಭೂತಗನ್ನಡಿಯನ್ನು ಒಂದು ಕಣ್ಣಿಗೆ ಇಟ್ಟುಕೊಂಡು, ರತ್ನಪರೀಕ್ಷೆಯನ್ನು ನಿಧಾನವಾಗಿ ಓರೆಕಣ್ಣಿನಿಂದ ಮಾಡುತ್ತಾ ಇದ್ದನು (ಶಿಶುವ್ಯ. ೨೯). [ಭೂತ + ಕನ್ನಡಿ$_1$]

**ಭೂತಚತುಷ್ಟಯ** (ನಾ). ಪೃಥ್ವಿ, ಅಪ್ಪು, ತೇಜಸ್ಸು, ವಾಯು ಎಂಬ ನಾಲ್ಕು ಬಗೆಯ ಮೂಲವಸ್ತುಗಳು : ಈ ನಿಮ್ಮ ಜಿನಮತದ ಜೀವಸಂಭಾವನೆಯೊಳ್ ಪೃಥಿವ್ಯಪ್ತೇಜೋವಾತಾಭಿಧಾನ ಭೂತಚತುಷ್ಟಯದಿಂದಂ ಬೇಱೆ ಜೀವತ್ವಗ್ರಾಹಕಪ್ರಮಾಣಮಿಲ್ಲಂ (ಶಾಂತಿಪು. ೯–೦೨೮ ವ) ; ಭೂತಚತುಷ್ಟಯಂಯೋಗದೆ ಚೇತನನುದಯಿಸುಗುಂ (ಧರ್ಮನಾ. ೩–೧೨೦). [ಸಂ.]

**ಭೂತಚಿಕಿತ್ಸೆ** (ನಾ). ದೆವ್ವ, ಪಿಶಾಚಿಗಳು ಹಿಡಿದಿರಬಹುದೆಂದು ನಂಬಿ ಮಾಡುವ ಚಿಕಿತ್ಸೆ; ಯಂತ್ರ ಮಂತ್ರಗಳನ್ನು ಮಾಡುವುದು: ಇಂಡಿಯಾ ದೇಶದಲ್ಲಿ ಔಷಧಿಚಿಕಿತ್ಸೆ ಎಂಟು ವಿಧ : ಒಂದನೆಯದು ಹುಣ್ಣುಗಳ ಚಿಕಿತ್ಸೆ . . . ನಾಲ್ಕನೆಯದು ಭೂತಚಿಕಿತ್ಸೆ (ಕ್ರಿವಾಆ. I, ೨೯೬). [ಸಂ. ಭೂತಚಿಕಿತ್ಸಾ]

**ಭೂತಚೇಷ್ಟೆ** (ನಾ). ಪಿಶಾಚಿಗಳಿಂದಾಗುವ ತೊಂದರೆ, —ಕಾಟ : ಈ ಭೂತಚೇಷ್ಟೆ ನಿಜವಾಗಿಯೂ ಹಾಸ್ಯಮಯವಾಗಿತ್ತು (ಸಮಾಜ. ೯೪೫). [ಸಂ. ಭೂತಚೇಷ್ಟಾ]

**ಭೂತದಯ** (ನಾ). ಪ್ರಾಣಿಗಳ ಬಗೆಗೆ ಇರುವ ಕರುಣೆ,—ದಯೆ : ಸರ್ವಜೀವದಯಾಪಾರಿಯೆಂದು ಭೂತದಯಕ್ಕಿಕ್ಕುವವನ ಮನೆ ಸಯಿಧಾನದ ಕೇಡು (ಬಸವ. ೨೨೬) ; ಯಾವ ಕಾರಣದಿಂದಲಾಗಲೀ ಪ್ರಾಣಿಗೆ ಹಿಂಸೆಯು ಪ್ರಾಪ್ತವಾದರೆ ಯಥಾಶಕ್ತಿಯಾಗಿ ಅದರ ದುಃಖವನ್ನು ನಿವಾರಿಸಬೇಕೆಂದು ಹೃದಯದಲ್ಲಾಗುವ ಪ್ರೇರಣೆಯು ಭೂತದಯವು (ಆರ್ಯಧ. ೬೨). [ಸಂ. ಭೂತದಯಾ]

**ಭೂತದಯೆ** (ನಾ). = ಭೂತದಯ : ಹರುಷದಿಂ ಶಾಂತಿ ಸತ್ಯಂ ಭೂತದಯೆಗಳಂ ದೊರಕಿಸಿಯೆ . . . ಮುನೀಶ್ವರರೆನಿಸಿ (ಹರಿಶ. ೯–೦೬) ; ಭೂತದಯೆಯಿಲ್ಲದನ ಮಾಟಂ ಶಾಂತಿಯಿಲ್ಲದ ತಾಪಸನ ತಪವು . . . ಭಕ್ತಿ ಪ್ರವರ್ಧನವಹುದೆ (ಬಸವಪು. ೩೭–೩೪) ; ದುರಭಿಮಾನವಿಲ್ಲದಲ್ಲಿಯೇ ಔದಾರ್ಯ ನೆಲೆಸುತ್ತದೆ. ಅಲ್ಲಿಯೇ ಭೂತದಯೆ ಇದೆ (ಕರ್ನಾಕ. ೪೦). [ಸಂ. ಭೂತದಯಾ]

**ಭೂತದೇಹಿ** (ನಾ). ಪಂಚಭೂತಾತ್ಮಕವಾದ ಶರೀರವುಳ್ಳವನು ; ಮನುಷ್ಯ : ಭೂಮಿಯ ಮೇಲೆ ಹುಟ್ಟಿದ ಕಲ್ಲ ತಂದು ಭೂತದೇಹಿಗಳ ಕೈಯಲ್ಲಿ ಕೊಟ್ಟು ಕೊಟ್ಟ ಕೂಲಿಯ ತೆಕ್ಕೊಂಡು ಹೊಟ್ಟೆಯ ಹೊರೆವ ಭ್ರಷ್ಟರಿಗೆ ಪ್ರಸಾದವೆಲ್ಲಿಯದೋ (ಸಿದ್ಧೇಶ. ೦೩೪–೪೧೬). [ಸಂ. ಭೂತದೇಹಿನ್]

**ಭೂತಧಾತ್ರಿ** (ನಾ). ಭೂಮಿ ; ಧರಣಿ : " ಭೂಃ, ಭೂಮಿಃ . . . ಭೂತಧಾತ್ರೀ, ರತ್ನಗರ್ಭಾ, ವಸುಂಧರಾ, ಧರಾ, ಆಧಾರಾ—ಈ ೩೭ ಭೂಮಿಯ ಪೆಸರ್" (ಹಲಾಯು. ೨೬–೨) ; ಭೂ[ತ]ಧಾತ್ರಿಯೊಳೋರಂತೆ ನೆಗಟ್ಟ . . . ಸೆಟ್ಟಿಯ ಬಳ್ಳಂ ಕಿಱಿದೆಂಬುದೊಂದು ನುಡಿಯಂ ನೀಂ ನಿಕ್ಕುವಂ ಮಾಡಿದ್ಯೆ (ಪಂಪಭಾ. ೧೨–೧೬೩); ದಾಡೆಯಲಿ ದಾನವನ ಕೋದು ಹಾಕೀ ಭೂತಧಾತ್ರಿಯ ಕಾದೆಲಾ ಕಾರುಣ್ಯಸಿಂಧುವೆ (ಕುವ್ಯಾಸ. ೦೪–೦೦೩). [ಸಂ. ಭೂತಧಾತ್ರೀ]

**ಭೂತನಾಥ** (ನಾ). ಪ್ರಮಥಗಣಗಳ ಅಧಿಪತಿ; ಶಿವ : ಕರ್ಣಾರ್ಜುನರೇಱಂ ನೋಡಲ್ಕೆ ಭೂತನಾಥಂ ಬಂದಂ (ಪಂಪಭಾ. ೦೨–೦೩೪)) ; ವಾತಜನ ಮೂಲಿಕೆಗೆ ಕಪಿಬಲ ಚೇತರಿಸಿದುದು ಬೇಡ ತತ್ತರೆ ಭೂತನಾಥನ ತಡೆವನೆಂದನು ದನುಜ ರಘುಪತಿಗೆ (ತೊರೆರಾ. ೩೬–೨೦). [ಸಂ.]

**ಭೂತನುಜೆ** (ನಾ). ಭೂಮಿಯಲ್ಲಿ ಜನಿಸಿದವಳು ; ಸೀತೆ : ಪೂರ್ಣಗರ್ಭಿಣಿಯಾದ ಭೂತನುಜೆಯಂ ಕಾನನದೊಳಿರಿಸಿ ಬಂದೆನಲ್ಲದ ಮುಂದಱಿಯೆನೆಂದನು (ಜೈಮಿಭಾ. ೨೦–೩೪). [ಸಂ. ಭೂತನುಜಾ]

**ಭೂತನ್ಯೂನ** (ನಾ). [ವ್ಯಾಕ] ಒಂದು ಪ್ರಧಾನಕ್ರಿಯೆ ನಡೆಯುವುದಕ್ಕೆ ಮೊದಲು ನಡೆದಿರುವ ಮತ್ತೊಂದು ಕ್ರಿಯೆಯನ್ನು ತಿಳಿಸುವ ಅಪೂರ್ಣಕ್ರಿಯಾರೂಪ ; ಸಾಪೇಕ್ಷ ಕ್ರಿಯಾವಾಚಕರೂಪ : ಅತ್ತು

ಅತ್ತು ಅವಳ ಕಣ್ಣು ಕೆಂಪಗಾಯಿತು . . . ಹೀಗೆ ಅರ್ಥಪೂರ್ತಿಗಾಗಿ ಬಂದಿರುವ ಕ್ರಿಯಾಪದದ ಕಾರ್ಯ ನಡೆಯುವುದಕ್ಕೆ ಮುಂಚೆ ಸಾಪೇಕ್ಷ ಕ್ರಿಯಾಪದದ ಕಾರ್ಯ ನಡೆದಿರುತ್ತದೆಂಬುದನ್ನು ತೋರಿಸುವ ರೂಪಗಳಿಗೆ ಭೂತಸ್ಯೂನರೂಪಗಳೆಂದು ಹೆಸರು (ಪುನ್ನಪು. ೦೦೨). [ಸಂ.]

**ಭೂತಪಂಚಕ** (ನಾ). ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ ವೆಂಬ ಐದು ಪದಾರ್ಥಗಳು ; ಪಂಚಮಹಾಭೂತಗಳು : ಧರಣಿ ಮೊದಲೆನೆ ಭೂತಪಂಚಕ ಮರುತಪಂಚಕ ವಿಷಯವಿಂದ್ರಿಯ ಕರಣ ವಿಪ್ಪತ್ತೈದು ತತ್ವಾತ್ಮಕನ ಚಿಂತಿಸಿದ (ಕುವ್ಯಾ.ಕ. ೩-೦) ; ಭೂತಪಂಚಕ ಬುದ್ಧ್ಯಹಂಕೃತಿ ಸಾಕ್ಷಿಕಯುಧವ್ಯಕ್ತ ದಶವಿಧ ಜಾತವಾದಿಂದ್ರಿಯನಿರ ಪ್ರಾಣಾದಿವಾಯುಗಳು (ಅಮ್ಮಕ. ೩-೩೨) ; ಇವನ್ನು ಭೂತಪಂಚಕ, ತನ್ಮಾತ್ರಪಂಚಕ . . . ಎಂದು ಐದು ಪಂಚಕವಾಗಿ ವಿಭಜಿಸುವರು (ಹಿಂದಸಾ. ೩೩). [ಸಂ.]

**ಭೂತಪತಿ** (ನಾ). = ಭೂತನಾಥ : ಭೂತಪತಿಗಾನಾದದಂ ಬಡವಾತ ಯಾಗಿ ಸಮುದ್ಧರಿಸುವೆನು (ಜಸಪು. ೦೫-೭). [ಸಂ.]

**ಭೂತಪದಿ** (ನಾ). ಹದಿನಾರು ಬಗೆಯ ರೂಪಾಯಿ ನಾಣ್ಯಗಳಲ್ಲಿ ಒಂದು : ೧. ಗಜಪತಿ . . . ೧೧. ಭೂತಪದಿ (ಕಭಾಗ. ೨೬೦). [ ? ]

**ಭೂತಪುಣ್ಯ** (ನಾ). ಹಿಂದೆ ಮಾಡಿದ ಸತ್ಕರ್ಮಗಳ ಫಲ ; ಸಂಚಿತ ಪುಣ್ಯ : ಇತ್ತ ಶ್ರೀಪೇಣಂಗವೂ ಮೂವರುಮಂಗನೋತ್ತಮೆಯರ್ಗ ಮುತ್ತಮಪಾತ್ರದಾನದ ದಾನಾನುಮೋದದ ಭೂತಪುಣ್ಯದಿಂ (ಶಾಂತಿಪು. ೬-೯೭ ವ). [ಸಂ.]

**ಭೂತಪೂಜೆ** (ನಾ). ೧. (ಕರಾವಳಿಯಲ್ಲಿ ಆಚರಣೆಯಲ್ಲಿರುವ) ದೆವ್ವಗಳ ಆರಾಧನೆ : ಭೂತಪೂಜೆ ಎಂದರೆ ಪ್ರಕೃತಿಯ ಮತ್ತು ಸಂಸಾರದಲ್ಲಿಯ ವಿಶೇಷದರ್ಶನಗಳನ್ನು ಅಥವಾ ಸಂಭವಗಳನ್ನು ಇಲ್ಲವೆ ಕೆಲವೊಮ್ಮೆ ವ್ಯಕ್ತಿಗಳನ್ನು, ಪ್ರಪಂಚ ಕಣ್ಣಿಗೆ ಕಾಣುವ ಹಾಗೂ ಮನಸ್ಸಿನಲ್ಲಿ ಒತ್ತುವ ವಿಷಯಗಳನ್ನು, ವ್ಯಕ್ತೀಕರಿಸಿ ಹಾಗೂ ಅವನ್ನು ದೇವೀಕರಿಸಿ ಆರಾಧಿಸುವಿಕೆ (ತುಳುನಾ. ೨೩೦). ೨. ಪಂಚಭೂತಗಳ ಹಾಗೂ ನದಿ, ಪರ್ವತ ಮೊದಲಾದ ಪ್ರಕೃತಿವಸ್ತುಗಳ ಪೂಜೆ,— ಆರಾಧನೆ : ವೇದದಲ್ಲಿ ಮೊದಲು ಭೂತಪೂಜೆ (Nature worship) ಇರುವುದು. ಭೂತಪೂಜೆಯಿಂದ ವಿವಿಧ ಭೂತಗಳಿಗೆ ನಿಯಾಮಕವಾದ ವಿವಿಧದೇವತೆಗಳ ಪೂಜೆ (Polytheism) ಪ್ರಸಕ್ತವಾಯಿತು (ಭಾತತ್ತ್ವ. ೪೩). [ಸಂ. ಭೂತಪೂಜಾ]

**ಭೂತಬಲಿ** (ನಾ). ದೇವತೆ, ಭೂತ, ದೈವ ಮೊದಲಾದುವುಗಳ ತೃಪ್ತಿಗಾಗಿ ಕೊಡುವ ಬಲಿ,— ಆಹುತಿ : ಕುಂಕುಮ ಹಣಿದದ . . . ದಂಡೆಯುಲಿ ಕಲಸಿದ ಕೂಳ ಮುದ್ದೆಗಳ ಹೊಜಗೆ ಬಡಿಸಿದ ಭೂತಬಲಿ ಬೊಬ್ಬಿರಿತ ದೊಡನುಬ್ಬೇಳ್ವ ಲಗ್ಗೆಯ ಹಜೆಗಳಬ್ಬರವಾಯ್ತು ಚರ್ಣನ ಶಸ್ತ್ರಪೂಜೆಯುಲಿ (ಕುವ್ಯಾ.ಕ. ೬-೯). [ಸಂ.]

**ಭೂತಭಾಗ್ಯ** (ನಾ). ಅದೃಷ್ಟಶಾಲಿ ; ಭಾಗ್ಯವಂತ : ಆತುಕೊಳಲಿಂದೀ ಸುಯೋಧನ ಜಾತಪುಣ್ಯನೊ ಧರ್ಮಪುತ್ರನೆ ಭೂತಭಾಗ್ಯನೊ ಕಾಣಲಹುದೈ ಶಲ್ಯ ಕೇಳೆಂದ (ಕುವ್ಯಾ.ಕ. ೨೦-೦೦). [ಸಂ.]

**ಭೂತಯಜ್ಞ** (ನಾ). (ಗೃಹಸ್ಥನು ಪ್ರತಿದಿನವೂ ಆಚರಿಸಬೇಕೆಂದು ಧರ್ಮಶಾಸ್ತ್ರಗಳಲ್ಲಿ ಹೇಳಿರುವ) ಪಂಚಯಜ್ಞಗಳಲ್ಲಿ ಒಂದು : ಪ್ರಾಣಿಗಳನ್ನು ಉದ್ದೇಶಿಸಿ ಕೊಡುವ ಬಲಿ : ಶ್ರುತಿಪಠಣವೋ ತರ್ಪಣವೋ ವೈಣತಿಥಿಪೂಜೆಯೊ ಭೂತಯಜ್ಞವೊ ಹುತವಹಾರಾಧನೆಯೊ ರಣವೀಯೈಯ್ಯರೊಳಗೇನು (ಕುವ್ಯಾದ್ರೋ. ೦೬-೩೭); ಬಳಿಕ ದೇವಯಜ್ಞ ಪಿತೃಯಜ್ಞ ಮನುಷ್ಯಯಜ್ಞ ಭೂತಯಜ್ಞ ಬ್ರಹ್ಮಯಜ್ಞಾದಿಗಳಿಂ ಮಾಳ್ಪಾತನಾಗಿ (ವಿವೇಕ. ೦೩೪); ಬ್ರಹ್ಮಯಜ್ಞ, ಪಿತೃಯಜ್ಞ, ದೈವಯಜ್ಞ, ಭೂತಯಜ್ಞ, ಮನುಷ್ಯಯಜ್ಞ — ಈ ಐದು ಮಹಾಯಜ್ಞಗಳು . . . ಬಲಿಹರಣವು ಭೂತಯಜ್ಞವು (ಅರ್ಥಶಾ. ೦೬೭). [ಸಂ.]

**ಭೂತರೂಪ** (ನಾ). [ವ್ಯಾಕ] ಭೂತಕಾಲದ ರೂಪ : ಬಿಸುಡು ಎಂಬ ಧಾತುವಿಗೆ ಭೂತರೂಪದಲ್ಲಿ ಬಿಸುಟ್ಟಂ, ಬಿಸುಟಂ ಎಂಬ ರೂಪಗಳು ಬರುವುವು (ಕೈಪಿಡಿ. ೪೭). [ಸಂ.]

**ಭೂತಲ, ಭೂತಳ** (ನಾ). ೧. ಭೂಮಿಯ ಮೇಲ್ಮೈ ; ಭೂಮಿಯ ಮೇಲುಭಾಗ. ೨. ಭೂಮಿ : ಭೂತಲಮನಾಂ ತರಲಾದಿವರಾಹನಾದೆಂ (ಕಂಕಥಾ. ೦೦-೭೬) ; ಈ ಸುಂದರವಾದ ಭೂತಲದ ಮೇಲೆ ಅವನು . . . ಮಸಿಯ ಒಂದು ಕರ್ಕಶ ಮಚ್ಚೆಯಂತಿದ್ದ ! (ಹೀರಹೊ. ೩೩). **ಭೂತಳ** : ೨. ರಸೆಯಿಂ ಭೂತಳದಿಂ ಕುಳಾದ್ರಿಕುಳದಿಂ . . . ಅಜಾಂಡತಟದಿಂದತ್ತೆಲ್ಲಾ ಪೊಕ್ಕಿರ್ದುವಿಂ ಮಿಸುಗಲ್ ತೀರ್ಗುಮೆ (ಕಂಕಥಾ. ೦೦-೦೦೬) ; ನಿಮ್ಮಯ ಭೂತಳವನಾಳುವಿರೆ ನೀವೆಂದೆಚ್ಚನಾ ಭೀಷ್ಮ (ಕುವ್ಯಾ.ಭಿ. ೬-೩೩). ೩. ಲೋಕದ ಜನ ; ಮಾನವಸಮೂಹ : ಸೀತೆ ಭೂತಳವಱಿಯೆ ಪರಿಶುದ್ಧೆ (ತೈಬಶಾ. ೨೦-೬೩). [ಸಂ.]

**ಭೂತಲಪತಿ** (ನಾ). ಭೂಮಿಯ ಒಡೆಯ; ಅರಸು; ರಾಜ : ನಿಖಿಲರೊಡ ಮನಿಬರುಮಂ ಭೂತಲಪತಿ ಬಟಿಯಟ್ಟಿ ಬರಿಸೆ (ಆದಿಪು. ೦೩-೦೦); ಭೂತಲಪತಿ ಬಂದನುಚ್ಛ್ರಿತಸಿತಾತಪವಾರಣಪುಷ್ಪಿತಾಂಬರಂ (ಕಂಪ್ರಪು. ೩-೩೦). [ಸಂ.]

**ಭೂತಲೀಲೆ** (ನಾ). ೧. ದೆವ್ವದ ಆಟ. ೨. (ಅಲಂ) ಗೊತ್ತುಗುರಿಯಿಲ್ಲದ, ವಿಚಾರಶೂನ್ಯವಾದ ವ್ಯವಹಾರ : ಸಣ್ಣಸಣ್ಣ ಮಾತಿನ ಸಲುವಾಗಿ ವಾದವಿವಾದದ ಭೂತಲೀಲೆ ನಡೆದು ಜೀವದ ಸಂವಾದವು ಮರೆತುಹೋಗಿ ಹೃದಯವು ರಣರಂಗವಾಗುತ್ತದೆ (ಗೊತ್ತುಗು. ೦೫೪). [ಸಂ. ಭೂತಲೀಲಾ]

**ಭೂತಳೇಶ, ಭೂತಳೇಶ** (ನಾ). ಭೂಮಿಯ ಒಡೆಯ; ಅರಸು; ರಾಜ : ಶೀತಕರಧರನೊಲಿದ ಭಕ್ತನು ಭೂತಲೇ[ಶಾಕಾಂ. ಳೇ]ಶನು ನಗಲೊಡನೆ ತನ್ನಳಿನಮುಖಿ ನೋಡಿ (ಐಸಪು. ೪೩-೯). **ಭೂತಳೇಶ** : ಪೂತುರೆಯೆಂದು ಕೊಂಡಾಡಿ ತನ್ನಯ ತನುಜಾತರುಗಳನಾಹವಕೆ ಭೂತಳೇಶ[ಶಾಕಾಂ. ಧಾತ್ರೀಶ್ವರ]ನು ಬೀಳ್ಕೊಡಲು (ಶ್ರೀಪುಶಾಂ. ೦೬-೦೯೯); ಪ್ರಾತಿಕಾಮಿಕ ಬಾ ಯುಧಿಷ್ಠಿರ ಭೂತಳೇಶನ ಕರೆದು ತಾರೈ (ಕುವ್ಯಾಸ. ೦೭-೨೩). [ಸಂ.]

**ಭೂತವತಿ** (ನಾ). [ವ್ಯಾಕ] ಭೂತಕಾಲ : ಭೂತವತಿ ವರ್ತಮಾನಂ ಖ್ಯಾತ ಭವಿಷ್ಯಂತಿ ಸರ್ವಸಾಧನಿಯೆಂಬಾಖ್ಯಾತವಿಭಕ್ತಿಗಳಕ್ಕುಮತೀತಭವದ್ಭಾವಿಕಾಲ ವಿದ್ಯಾದಿಗಳೊಳ್ (ಶಾಬ್ದಾವ. ೩೭೪); ಭೂತವತಿಯ ಕೃತ್ತಿಂಗೆ 'ನಲಿವಂ' ಎಂಬಲ್ಲಿ ಅವತ್ ಎಂಬ ವಿಭಕ್ತಿಯಂ ಕಳೆದು, ನಲಿದ ಎಂಬ ಕೃತ್ತನಿರಿಸಿ, ನಾಮವಿಭಕ್ತಿಯಂ ಪತ್ತಿಸಿ, ನಲಿದಂ, ನಲಿದನಂ, ನಲಿದನಿಂ ಎಂದು ಮಾಡುಬರು (ಶಮದ. ೭೩ ವೃ.ಮೊ.). [ಸಂ. ಭೂತವತೀ]

**ಭೂತವಾದಿ** (ನಾ). [ತತ್ತ್ವಶಾ] ಭೂಮಿ, ಜಲ, ತೇಜಸ್ಸು, ವಾಯುವೆಂಬ ಭೂತಗಳ ಸಂಯೋಗದಿಂದ ಉಂಟಾಗುವ ಚೈತನ್ಯವನ್ನೇ ಜೀವವೆಂದು ವಾದಿಸುವವನು ; ನಾಸ್ತಿಕ ; ಚಾರ್ವಾಕ : ಶರೀರವೃದ್ಧಿಯೊಳ್ ಚೈತನ್ಯವೃದ್ಧಿಯೆಂಬುದುಮವೃದ್ಧಿಯೊಳ್ ಅಂತರವೃದ್ಧಿಯೆಂತಂತೆ ಸಹಕಾರಿಕಾರಣಮೆಂದನೇಕಯುಕ್ತ್ಯೋಕ್ತಿಗಳಿಂ ಭೂತವಾದಿಯುಪ್ಪ, ಮಹಾಮತಿಯಂ ನಿರಾಕರಿಸಿ (ಆದಿಪು. ೨-೦೦ ವ). [ಸಂ. ಭೂತವಾದಿನ್]

**ಭೂತವಾಸ** (ನಾ). ಒಂದು ಬಗೆಯ ಮರ ; ತಾರೆ : 'ಭೂತಾವಾಸ' ಪಠಾ. [ಸಂ.]

**ಭೂತವೇಶಿ** (ನಾ). ಒಂದು ಬಗೆಯ ಸಸ್ಯ ; ನಿರ್ಗುಂಡಿ : "ಶ್ವೇತಸುರಸಾ. ಭೂತವೇಶಿ. ಸಿತಾಸಾ. ಬಿಳೀಹುವ್ವುಗಳುಳ್ಳ ಲಕ್ಕಿಲಿ" (ನಿಘಂ. ೧೨೬). [ಸಂ. ಭೂತವೇಶೀ]

**ಭೂತಶಂಕೆ** (ನಾ). ದೆವ್ವಗಳಿಂದಾಗುವ ಭಯ ; ದೆವ್ವ, ಪಿಶಾಚಿಗಳ ಭಯ : ಅವಳಿಗೆ ಭೂತಶಂಕೆಯಾಗಿರಬೇಕು. ಒಂದು ಯಂತ್ರ ಕಟ್ಟಿಸ ಬೇಕು (ರೂಢ). [ಸಂ. ಭೂತಶಂಕಾ]

**ಭೂತಶುದ್ಧಿ** (ನಾ). [ಶೈವ] ಶಿವೋಪಾಸನೆಯ ಅಂಗವಾಗಿ ಮಾಡುವ ಸಂಸ್ಕಾರ ; ಪೂಜಾದಿಗಳ ಪ್ರಾರಂಭದಲ್ಲಿ ದೇಹಾರಂಭಕವಾದ ಪಂಚಭೂತಗಳನ್ನು ಶೋಧಿಸುವುದು, ಬೀಜಮಂತ್ರಪೂರ್ವಕವಾಗಿ ಎಡಹೊಟ್ಟೆಯಲ್ಲಿರುವ ಪಾಪಪುರುಷನನ್ನು ಸುಟ್ಟು ಶರೀರವನ್ನು ಶುದ್ಧಿಗೊಳಿಸುವುದು. ಇದರ ಕ್ರಮವು ಆಗಮಗ್ರಂಥಗಳಲ್ಲಿ ನಿರೂಪಿತವಾಗಿದೆ : ಭೂತಶುದ್ಧಿಯೇ ಮೊದಲಾದ ಭಾವನಾಸಂಸ್ಕಾರಗಳಿಂದ ಪರಿಶುದ್ಧವಾದ ದೇಹದಲ್ಲಿ ಮಾನಸಿಕವಾಗಿ ಧ್ಯಾನಯೋಗದಿಂದ ಮಾಡುವ ಉಪಾಸನೆಯು "ಅಂತರ್ಯಾಗ" ವೆಂದೂ . . . ಉಕ್ತವಾಗಿದೆ (ಭಾರಶ. ೬೨). [ಸಂ.]

**ಭೂತಸಂಜ್ಞೆ** (ನಾ). ಪದಾರ್ಥಗಳ ಸಂಕೇತ : "ಮನು ಭುವನ ಪದಿನಾಲ್ಕು . . . ದಂತ ಮೂವತ್ತೆರಡುಮಿಂತಿವೆಲ್ಲಂ ಭೂತಸಂಜ್ಞೆಯಕ್ಕುಂ" (ಶಬ್ದಗಣಿ. ೧೦೧-೯). [ಸಂ. ಭೂತಸಂಜ್ಞಾ]

**ಭೂತಸಂತುಷ್ಟಿ** (ನಾ). ದೆವ್ವ, ಪಿಶಾಚಿ, ಕ್ಷುದ್ರಶಕ್ತಿಗಳೇ ಮೊದಲಾದ ಅಮಾನುಷಸತ್ವಗಳ ತೃಪ್ತಿ ; ಕ್ಷುದ್ರಶಕ್ತಿಗಳ ತೃಪ್ತಿ : ಭೂತಸಂತುಷ್ಟಿಯಪ್ಪಂತೆ ಕುಜಿ ಕೋಣಂಗಳಂ ಪೊಯ್ಸಿ ಬಣ್ಣಗೂಳಂ ಪಸರಿಸಿ (ಕೈಪಿಡಿ. ೫-೭೨). [ಸಂ.]

**ಭೂತಸಂಹಾರಿ** (ನಾ). ಒಂದು ಬಗೆಯ ಸಸ್ಯ : "ಭೂತಾಂಕುಶಂ ಭೂತಸಂಹಾರಿಯಕ್ಕುಂ" (ಶಬ್ದಗಣಿ. ೩೭-೦೬). [ಸಂ. ಭೂತಸಂಹಾರಿನ್]

**ಭೂತಸಿದ್ಧಿ** (ನಾ). ಪಂಚಮಹಾಭೂತಗಳನ್ನು ವಶಪಡಿಸಿಕೊಳ್ಳುವ ಒಂದು ಬಗೆಯ ಯೋಗಸಿದ್ಧಿ : ಧರೆ ಜಲಾನಲ ಮಾರುತಾಂಬರವಿರುವ ತತ್ವಗಳಿವನು ಜಯಿಸಲು ದೊರೆಯುತಿಹುದಾ ಭೂತಸಿದ್ಧಿಯು ಪರಿಪಯಿಪಲವಗೆ (ಗಣಕಾ. ೯-೧೨೬). [ಸಂ.]

**ಭೂತಸ್ಥಾನ** (ನಾ). (ಕರಾ) ಭೂತಗಳ ಪೂಜೆ ನಡೆಯುವ ಸ್ಥಳ, – ಬೀಡು : ತುಳುರಾಜ್ಯದಲ್ಲಿ ಬ್ರಾಹ್ಮಣರ ಅನಂತರ ೨ನೇ ಮರ್ಯಾದೆಯು ಎಲ್ಲಾ ದೇವಸ್ಥಾನಗಳಲ್ಲಿಯೂ ಭೂತಸ್ಥಾನಗಳಲ್ಲಿಯೂ ಇವರಿಗೆ ಸಲ್ಲುತ್ತದೆ (ತುಳುನಾ. ೫೦). [ಸಂ.]

**ಭೂತಹಿತ** (ನಾ). ಜನತೆಯ ಕ್ಷೇಮ : ಭೂತಹಿತಕಾರುಣ್ಯಸುಧೆಗಡಲ್ವಾತ ದುರ್ಧರಕರ್ಮಕೋಟಿವಿಘಾತನಂ (ಶಾಂತಿಪು. ೦೯-೯೦); ಒಂದಾನೊಂದು ದಿನಮುಮಾ ದೇವಿಯು . . . ತಾನೆಳಸಿದ ಭೂತಹಿತಪ್ರಯೋಜನವನ್ನು ಆ ಪರಮೇಶ್ವರನಿಂದಲೇ ತಿಳಿಯೆ ಕೇಳ್ವೆನೆಂಬಿಚ್ಛೆಯಿಂದ . . . ವಿಜ್ಞಾಪಸಂಗೆಯ್ವಲ್ಲಿ (ಕಕಪ್ರ. ೫). [ಸಂ.]

**ಭೂತಳ** 'ಭೂತಲ' ನೋ.

**ಭೂತಳೇಶ** 'ಭೂತಲೇಶ' ನೋ.

**ಭೂತಾಂಜನ** (ನಾ). ದೆವ್ವ, ಪಿಶಾಚಿ ಮೊದಲಾದ ಕಣ್ಣಿಗೆ ಕಾಣದ ವಸ್ತುಗಳನ್ನು ಕಾಣುವಂತೆ ಮಾಡುವ ಸಾಮರ್ಥ್ಯವನ್ನು ಹೊಂದಿರುವುದೆಂದು ನಂಬಲಾದ ಕಾಡಿಗೆ : (ಕಿ). [ಸಂ.]

**ಭೂತಾಕಾರ** (ನಾ). ದೊಡ್ಡ ಆಕಾರ, — ಗಾತ್ರ : ಹೆಂಗುಸಾದ ಚಿಕ್ಕಿಯು ಮನಸ್ಸನ್ನು ಆದು ಹೊಕ್ಕ ಮೇಲೆ ಕೇಳಬೇಕೆ ? ಕ್ಷಣದಲ್ಲಿ ಭೂತಾಕಾರವನ್ನೇ ತಾಳಿತು ಅದು ! (ಕುಂತಕೂ. ೩೭). [ಸಂ.]

**ಭೂತಾಗ್ರಣಿ** (ನಾ). ೧. ಶಿವ. ೨. [ಛಂದ] ರುದ್ರಗಣಪ್ರಸ್ತಾರದ ಹದಿನಾರು ಭೇದಗಳಲ್ಲಿ ಒಂದು: ರುದ್ರಗಣಮೆಂತೆಂದೊಡೆ :-೧. ಗಂಗಾಧೀಶಂ ... ೧೩. ಭೂತಾಗ್ರಣಿ (ಛಂದೋಂಬು. ೫-೨೯೦ವ). [ಸಂ. ಭೂತಾಗ್ರಣೀ]

**ಭೂತಾಡನಂಗೆಯ್** (ಕ್ರಿ). ನೆಲವನ್ನು ಒದೆ.–ಘಟ್ಟಿಸು: ಪುಷ್ಕರಣದೊಳ್ ಕೆಂದಳಂ ಕೆಂದಳಿರಂತೆ ತೊಳಗೆ ದೀರ್ಘಾಂಗುಳಿಯಿಂ ಪಿಡಿದು ಗರುಡನೊಪ್ಪಮಂ ಗಾಳಿಯ ನುಸುಳುಮಂ ಕೈಕೊಂಡು ಕೊಂಡಾಡಿ ಮನಮೆ ಮಾನಸವಾದಂತೆ ಪರಿದು ಪರಿಯಾಳ್ ಬಳಲ್ದು ಕುಡೆಂಬ ತಿಂಬುಮೊಳಗಿಂ ಬೆಂಗೆ ಬಾ ಎಂಬಂತೆ ಭೂತಾಟ[ಡ]ನಂಗೆಯ್ದು ಗಜದ ಬೆಂಗೆ ಸಿಂಗದಂತೆ ಲಂಘಿಸಿಯಾನೆಯ ಪೊರಜೆಯಾಗೆ ಪೂರ್ವಾಸನದೊಳ್ ಪದುಳಮಿರ್ದು (ಅರ್ಜನೀ. ೫-೦೦೩ ವ). [ಭೂ + ತಾಡನ + ಕೆಯ್₁]

**ಭೂತಾತ್ಮ** (ನಾ). ೧. ಪಂಚಭೂತಸ್ವರೂಪವಾದುದು ; ದೇಹ ; ಶರೀರ: 'ಭೂತಾತ್ಮ', 'ಇಂದ್ರಿಯಾತ್ಮ' ಎಂದು ಪ್ರಯೋಗ ಮಾಡಿರುವುದು ಕಂಡುಬರುತ್ತದೆ(ಯಾವ್ದರಿಂದ ಮುಖ್ಯವೃತ್ತಿಯಿಂದಲೇ ಅಚೇತನವನ್ನು ಆತ್ಮಬಲದಿಂದ ಕರೆಯಬಹುದೆಂದು ಗೊತ್ತಾಗುತ್ತದೆ) (ಬ್ರಹ್ಮಸೂ. ೯೦). ೨. ಎಲ್ಲಾ ಭೂತಗಳಲ್ಲೂ ಆತ್ಮರೂಪದಿಂದ ಇರುವವನು ; ಪರಮಾತ್ಮ ; ಶಿವ : ಎನಗೆ ನೈಜಾತ್ಮನಾಗುತ್ತಾ ಸಮಸ್ತ ಭೂತಾತ್ಮನಾಗುತ್ತ ಮಿರ್ಪಾ ಅನಘಗುರುವೇ ನಿನಗೆ ವಂದಿಸುವೆ (ಶೀಕೃಪು. ೦-೦-೦೯). ೩. ವಿಷ್ಣು. ೪. ಜೀವಾತ್ಮ ; ಜೀವ. [ಸಂ. ಭೂತಾತ್ಮನ್]

**ಭೂತಾಪಕಾರಿ** (ನಾ). ೧. ಜಗತ್ತಿಗೆ ಧಗೆಯನ್ನುಂಟುಮಾಡುವವನು, – ತಾಪವನ್ನುಂಟುಮಾಡುವವನು. ೨. ಪ್ರಾಣಿಗಳಿಗೆ ಕೆಡುಕನ್ನುಂಟುಮಾಡುವವನು. ೧, ೨ : ಪೊನಲೊಳ್ ಮುಲುಗಿಸಿ ಹಿಮಕರ ದಿನಕರರಂ ಮುಸುಳಿಸಿತ್ತು ಜನಸವನಪ್ರಯೋಜನನಿಕಾಯಂ ದೋಷಾಕರನೆನಿಪನ ಭೂತಾಪಕಾರಿಯೆನಿಪನ ಸಿರಿಯೇಂ (ಪುಷ್ಪಕೃ. ೦೦-೩೬). [ಸಂ. ಭೂತಾಪಕಾರಿನ್ (ಭೂ + ತಾಪಕಾರಿನ್ ; ಭೂತ+ಅಪಕಾರಿನ್)]

**ಭೂತಾಮರ** (ನಾ). [ಜೈನ] ವ್ಯಂತರದೇವತೆಗಳಲ್ಲಿ ಒಂದು ಪಂಗಡ, - ಭೇದ : ನೆನೆದ ಮನದಿಂ ಮುನ್ನಂ ಭೂತಾಮರರ್ ಬರೆ (ಶಾಂತಿಪು. ೯-೬೦). [ಸಂ.]

**ಭೂತಾರಾಧನೆ** (ನಾ). = ಭೂತಪೂಜೆ ೧ : ಹೀಗೆ ಭೂತಾರಾಧನೆಯು ಕ್ರಮಬದ್ಧ ಜೀವನದ ಮೊತ್ತ ಮೊದಲಿನ ವ್ಯವಸ್ಥೆಯೆಂದೂ . . . ಎಣಿಸಬಹುದು (ತುಳುನಾ. ೨೫೦); ಇದೇನು ಭೂತಾರಾಧನೆ ? ಇದಾವ ಬಗೆಯ ಪೂಜೆ ಎಂಬುದು ಅವನಿಗೆ ಹೊಳೆಯದೆ ಹೋಯಿತು (ಸ್ವಸ್ವಹೂ. ೨೯೩). [ಸಂ. ಭೂತಾರಾಧನಾ]

**ಭೂತಾವಾಸ** (ನಾ). ೧. ಶರೀರ. ೨. ಶಿವ. ೩. ವಿಷ್ಣು. ೪. ಒಂದು ಬಗೆಯ ಮರ; ತಾರೆಮರ: "ವಿಭೀತಕಃ. ಅಕ್ಷಃ. ತುಷಃ. ಕರ್ಷಫಲಃ ಭೂತಾವಾಸಃ. ಕಲಿದ್ರುಮಃ- ೬. ತಾರೇಗಿಡದ ಹೆಸರುಗಳು " (ನಿಘಂ. ೦೨೫). 'ಭೂತವಾಸ' ಪರಾ. [ಸಂ.]

**ಭೂತಾಳ** (ನಾ). ಒಂದು ಬಗೆಯ ಮರ : ತಮಾಳ ಭೂತಾಳ ತಾಳವೃಕ್ಷವನರನೆಲ್ಲಿಯ ಕರ್ಪೂರವಾಳೆಯನವ ಕಂಡನಲ್ಲಿ (ರಾಕುಮಾ. ೦೦-೦೦೭). [ಸಂ. ಭೂತಾಲ]

**ಭೂತಾಳಕ್ರಿಯೆ** (ನಾ). [ಸಂಗೀತ] ಒಂದು ಉಪಾಂಗರಾಗದ ಹೆಸರು : ದೇವಕ್ರಿಯೆ ತ್ರಿಣೇತ್ರಕ್ರಿಯೆ ಭೂತಾಳಕ್ರಿಯೆಯೆಂಬ ಮೂಱುಂ ಕೋಲಾಹಲರಾಗಕ್ಕುಪಾಂಗಂಗಳು (ವಿವೇಕ. ೨೩೪). [ಸಂ. ಭೂತಾಲಕ್ರಿಯಾ]

**ಭೂತಾಳಿ** (ನಾ). ಒಂದು ಬಗೆಯ ಮರ : "ಭೂತಾಳಿ – ನೆಲದಾಳು, ನೆಲಹಾದರಿ" (ಓಷಧಿ. ೦೦೨) ; ಗೊರಟೆಹೂಗಳ ಹಳದಿಯ ನಡುವೆ . . . ಭೂತಾಳಿಯ ರಕ್ತವರ್ಣದ ಎಲೆಯ ರೂಪದ ಹೂಗಳೂ ರಂಜಿಸಿದ್ದುವು (ಪಂಚಮ. ೯೬). [ಸಂ. ಭೂತಾಲೀ]

**ಭೂತಾಳಿ** (ನಾ). ೧. = ಭೂತಾಳ : ಭೂತಾಳಿ ಬೂರುಡೆ ಬಿಟ್ಟುಲಿಯು ದಿಂಡ ಪಾತಂಗ ಮುಂಗುಲಿಯು ಮರನು . . . ಅಲ್ಲಿಹವು (ಶಬಸಾಂ. ೧-೩೩); ಕೆಂದಡಸ ಭೂತಾಳಿ . . . ಪಾಲೆ ಬಿಳ್ಪಾಲೆ (ರುಕ್ಮಾಂಗ. ೧೧-೨). ೨. ಬೇಲಿ. ಸರಹದ್ದು ಮೊದಲಾದುವುಗಳಿಗಾಗಿ ಬೆಳೆಸುವ, ನಾರನ್ನು ತೆಗೆಯಲು ಬರುವ, ತಾಳೆ ಜಾತಿಗೆ ಸೇರಿದ ಒಂದು ಬಗೆಯ ಗಿಡ : ನಮ್ಮ ತೋಟದ ಬೇಲಿಯುದ್ದಕ್ಕೂ ಭೂತಾಳಿಗಿಡಗಳಿವೆ (ರೂಢಿ)

[ ಸಂ. ಭೂತಾಲ ]

**ಭೂತಿ** (ನಾ). ೧. ಇರುವಿಕೆ ; ಅಸ್ತಿತ್ವ. ೨. ಹುಟ್ಟು ; ಜನ್ಮ. ೩. ಏಳಿಗೆ ; ಅಭ್ಯುದಯ ; ಅಭಿವೃದ್ಧಿ. ೪. ಐಶ್ವರ್ಯ ; ಸಂಪತ್ತು: ಭೌತವಿಜ್ಞಾನದಾ ರಾಷ್ಟ್ರಸಂಸ್ಥೆಗಳಾ ನೂತನವಿವೇಕಪ್ರಯೋಗ ಗಳನಾದೀತು ಭೂತಿ ಸಂಪದ ಜಗಕೆ (ಪಂಚಕಜ ೩೭೭). ೫. ಘನತೆ ; ಗೌರವ : ಬೆಳಗುವುದಿಂದ್ರಲೋಕದೊಳಗಮ್ಯನ ಭೂತಿ ದಲೆ[ಬಾಕಾಂ. ಮಾತಿನೊಳಿ]ಮ್ಮ ಸಾಹಸಂ ಬೆಳಗುವುದೀ ಧರಾವಳಯದೊಳ್ (ಶಂಕಪಾ. ೬-೦೯). ೬. ಬೂದಿ ; ಭಸ್ಮ ; ವಿಭೂತಿ : ''ಭೂತಿಃ–೧. ಬೂದಿ. ಸಂಪತ್ತು ೨.'' (ಸಿದ್ಧಾಂತಿ. ೩೯೦) ; ಸುರರಲ್ಲ ಮೇಣು ಸಂತ್ಯಕ್ತವಸ್ತ್ರ ದ್ವಿಜರು ಓರಿಯಾಗಿ ಭೂತಿಯ ಧರಿಸಿಹರು (ಸರ್ವಜ್ಞ. ೧೬೩-೭೮೩) : ತುಂಗಭದ್ರಾನದೀತೀರದೊಳಿರ್ದುತ್ತುಂಗಹಸ್ತಂ ಮುಕುಲಿತನಯನಂ ಭೂತಿ ಸರ್ವಾಂಗನಾಗಿರ್ದು (ರಕ್ಮಾಶ. ೬೧): ಪಾತಕವ ಪರಿಹರಿಸಿ ಪರಮುಪದವಿಯು ಕೊಡುವ ಭೂತಿಯನು ಧರಿಸದಿಹ ಮನುಜನಂ (ಶ್ರೀರಾ. ೦೫-೩). ೭. ಆನೆಗಳ ಮೈಮೇಲೆ ಬಣ್ಣದ ಪಟ್ಟೆಗಳಿಂದ ಮಾಡುವ ಅಲಂಕಾರ. ೮. ತಪಸ್ಸು, ಯೋಗ ಮುಂತಾದುವುಗಳಿಂದ ಪಡೆದು ಕೊಂಡ ಅತಿಮಾನುಷಸಾಮರ್ಥ್ಯ : ಅಣಿಮಾದಿ ಸಿದ್ಧಿಗಳು : ''ವಿಭೂತಿಃ, ಭೂತಿಃ, ಐಶ್ವರ್ಯಂ – ೩. ಅಷ್ಟಧಾ . . . ಅಣಿಮಾದಿಕಂ ಎಂಟುಬಗೆಯಾಗಿರುವ ಅಣಿಮಾದಿ ಸಿದ್ಧಿಗಳು'' (ಸಿದ್ಧಾಂತಿ. ೦೯). ೯. ಸುಟ್ಟಮಾಂಸ : ''ಸುಟ್ಟಡಗು ಭೂತಿಯೆಂಬುದು'' (ಹಲಾಯು. ೩೪-೦೬೬). ೧೦. ಶಿವ. ೧೧. ವಿಷ್ಣು. [ಸಂ.]

**ಭೂತಿಕ₁** (ನಾ). ೧. ದವ್ವ, ಭೂತಗಳನ್ನು ವಶಪಡಿಸಿಕೊಂಡಿರುವ ವನು ; ದೆವ್ವ, ಪಿಶಾಚಿಗಳ ಉಪಾಸಕ. ೨. ಕಣ್ಣುಕಟ್ಟು ಮಾಡು ಪವನು ; ಇಂದ್ರಜಾಲ ಮಾಡುವವನು ; ಐಂದ್ರಜಾಲಿಕ : ಭೂತಿಕನ ಸೀರೆಯ ಸಾತ್ವಿಕ ನೆಜೆವುಟ್ಟರೆ ಭೂತಿಕ ಸಾತ್ವಿಕನಾದ ಸಾತ್ವಿಕ ಭೂತಿಕ ನಾದ (ಬಸವ. ೯೦೦) ; ಭೂತಿಕಗೆ ಸಾಹಸ್ರವರಪದ ಭೂತಳವನಿತ್ತೆನಗೆ ಸರಿ ಯಿನ್ನೀ ತಳದೊಳೆಲ್ಲೆಂದುಯಿಸೆವ ಪ್ರಧಾನಿ ಬಸವಣ್ಣ (ಬಿಜ್ಜಳ. ೯೦-೦೬). ೩. [ವೀಶೈ] ಭೂತಿಕ, ನೈಷ್ಠಿಕ ಎಂಬ ಎರಡು ಬಗೆಯ ಶಿವಧರ್ಮ ಗಳಲ್ಲಿ ಒಂದು : ಶಿವಧರ್ಮವಾ ಭೂತಿಕಂ ನೈಷ್ಠಿಕೆಯುಮೆನುತ್ತವು ಯುಗ್ಮದಲ್ಲಿ ಭೂತಿಕವೆ ಸುವ್ರತ ಪೋಕ್ಷವಿವು ಯುಗಳಮುಕ್ತವಾ ವ್ರತವಮು (ಶೀಕ್ಷಕೌ. ೭-೬-೬೨). [ < ಸಂ. ಭೌತಿಕ ]

**ಭೂತಿಕ₂** (ನಾ). ೧. ಒಂದು ಬಗೆಯ ಸಸ್ಯ ; ನೆಲಬೇವು. ೨. ಒಂದು ಬಗೆಯ ಹುಲ್ಲು ; ಕಾಚಿ ಹುಲ್ಲು : ''ಭೂತಿಕಂ – ನೆಲಬೇವು, ಕಾಚೀ ಹುಲ್ಲು, ಪಂಚೇಹುಲ್ಲು'' (ಸಿದ್ಧಾಂತಿ. ೩೭೩) ; ''ಭೂತೀಕಂ – ಗಂಜಳಿಕೆಯ ಹುಲ್ಲು'' (೬೩೦. ೦೦೨). ೩. ಕರ್ಪೂರ. ೪. ಗಂಧದ ಮರ. [ಸಂ.]

**ಭೂತಿಪಟ್ಟ** (ನಾ). [ವೀಶೈ] ''ಅಗಮೋಕ್ತಿಸ್ಥಾನಗಳಲ್ಲಿ ಆಯಾಯ ಮಂತ್ರಗಳಿಂದ ಭಸ್ಮಧಾರಣವನ್ನು ಮಾಡುವುದೇ ಭೂತಿಪಟ್ಟ ವೆನಿಸುವುದು'' (ಅಷ್ಟಾ. ೦). 'ವಿಭೂತಿಪಟ್ಟ' ಪರಾ. [ಸಂ.]

**ಭೂತೃಣ**(ನಾ). ಒಂದು ಬಗೆಯ ಹುಲ್ಲು : ''ಗವಿಮಃ – ಭೂತೃಣ'' (೬೩೦. ೯೩); ''ಭೂತಿಕಾ – ಭೂತೃಣ'' (೬೩೦. ೦೦೨). [ಸಂ.]

**ಭೂತೇಶ** (ನಾ). ೧. ಜೀವಿಗಳ ಒಡೆಯ. ೨. ಬ್ರಹ್ಮ. ೩. ವಿಷ್ಣು. ೪. ಪ್ರಮಥ ಗಣಗಳ ಅಧಿಪತಿ; ಶಿವ : '' ಈಶಾನಃ, ಶಶಿಶೇಖರಃ . . . ಭೂತೇಶಃ, ಪರಮೇಶ್ವರಃ . . . ನೀಲಲೋಹಿತಃ –ಈ ೪೫ ಮಹಾ ದೇವರ ಪೆಸರ್'' (ಹಲಾಯು. ೩-೦೧) ; ಧರೆಯೊಳಗೀ ಭಕ್ತರ್ಗಾರ್ ದೊರೆಯೆನುತಂ ನುಡಿದನಾಗಳಾ ಭೂತೇಶಂ (ಶ್ರೀಕೃಪಿ. ೦೬-೯೨) ; ಭೂತೇಶಗೆ ಜಗುಪನು ಜಾತಿಮಾದಿಗನಲ್ಲ ಜಾತಿಯಲಿ ಹುಟ್ಟಿ ಶಿವನಿಗೆ ಶರಣೆನ್ನದಾತ ಮಾದಿಗನು (ಸರ್ವಜ್ಞ. ೯೭೭). ೫.[ಜ್ಯೋತಿ]ರುದ್ರನು ಅಧಿಪತಿಯಾಗಿರುವ ನಕ್ಷತ್ರ; ಆರಿದ್ರಾನಕ್ಷತ್ರ : ಸ್ವಾತಿ ಫಣಿ ಭರಣಿ ಶತಭಿಷೆ ಭೂತೇಶಂ ಜ್ಯೇಷ್ಠೆ ಮುಂಟೆ ಕಜೆದೊಡೆ ಮುಟೆ ಧಾತ್ರೀತಳಕೆ ನೆಜೆಯೆ ಕಟೆಯದು (ಆಶ್ವಿಮ. ೮-೦೦೬). [ಸಂ.]

**ಭೂತೊಳಸಿ** (ನಾ). ಒಂದು ಬಗೆಯ ತುಳಸಿ : ಕಷಾಯಗಳು— ಭೂತೊಳಸಿಬೇರು, ವಿಷ್ಣುಕ್ರಾಂತಿ, ಶುಂಠಿ ಇವಂ . . . ಒಪ್ಪಲಿಪ್ರತಿ ಪಾಕವಿಕ್ಕಿ ಕೊಡಲು ಶೀತಜ್ವರಂ ಮಾಣ್ಗುಂ (ಸಕವೈ. ೬೪). [ಭೂ + ತೊಳಸಿ]

**ಭೂತೋಚ್ಚಾಟನೆ** (ನಾ). ದೆವ್ವದ ಕಾಟದಿಂದ ತೊಂದರೆಗೊಂಡಿರುವ ಸ್ಥಳ ಅಥವಾ ವ್ಯಕ್ತಿಯನ್ನು ಬಿಟ್ಟು ದೆವ್ವವು ಓಡಿಹೋಗುವಂತೆ ಮಾಡುವುದು : ಪದೊಪದಿಗೆ ಬರುವ ಭೂತೋಚ್ಚಾಟನೆ ಮುದದಿಂದ ಉದಕ ಸ್ಪರ್ಶ ಪ್ರಣವ ಮಿಗಿಲಾದ ವಿಧಿಗಳು ತಿಳಿದು (ವಿಕಾಸ. ೦೦೬೪) ; ಭೂತೋಚ್ಚಾಟನೆ, ರೋಗನಿವಾರಣೆಗಾಗಿ ಅಥರ್ವವೇದದಲ್ಲಿ ಉಕ್ತವಾದ ಮಂತ್ರಗಳು ಈ ತಾಯಿತಿಗಳ ಮೇಲೆ ಬರೆಯಲ್ಪಟ್ಟಿವೆ ಎಂಬ ಸಿದ್ಧಾಂತವೇ ನಮಗೆ ಸೂಕ್ತವೆಂದು ಕಂಡುಬರುತ್ತದೆ (ಶಾರದ. ೨೬).

[ಸಂ. ಭೂತೋಚ್ಚಾಟನ]

**ಭೂದಾನ** (ನಾ). ಭೂಮಿಯನ್ನು ದಾನವಾಗಿ ಕೊಡುವುದು ; ದಶದಾನಗಳಲ್ಲಿ ಒಂದು : ಭೂದಾನಂ ಧನದಾನಂ ಶ್ರೀದಾನಂಗುಡುತು ಮೊಪ್ಪಿದಂ ಗಿರಿರಾಜಂ (ಗಿರಿಜ. ೩-೬೩) ; ರಾಜನು ಕೌಂಡಿನ್ಯಗೋತ್ರದ ಕೊಂಡಮಾನನೆಂಬ ಬ್ರಾಹ್ಮಣನಿಗೆ ಭೂದಾನ ಮಾಡುವಂತೆ ಮಹಾವಲ್ಲಭ ನೆಂಬ ತನ್ನ ಅಧಿಕಾರಿಗೆ ಅಪ್ಪಣೆಕೊಟ್ಟನೆಂದು ತಿಳಿಯುತ್ತಿವೆ (ಕರ್ನಾಟ. ೩) ; ಭೂದಾನಕ್ಕಿಂತಲೂ ಶ್ರೇಷ್ಠವಾದ ದಾನ ಬೇರೊಂದಿಲ್ಲ (ಶಾಸನ. ೫). 'ದಸದಾನ' ಪರಾ. [ಸಂ.]

**ಭೂದಾರ** (ನಾ). ೧. (ಕೊನ್ನಾರಿಗೆಡ್ಡೆಗಾಗಿ ಮೂತಿಯಿಂದ) ಭೂಮಿ ಯನ್ನು ಅಗೆಯುವ ಪ್ರಾಣಿ ; ಹಂದಿ ; ವರಾಹ : '' ಭೂದಾರಃ – ಕಾಡುಹಂದಿ'' (ಸಿದ್ಧಾಂತಿ. ೦೫೩); ವ್ಯಾಳಗಜ ಭೂದಾರ ವೃಕ ಶಾರ್ದೂಲ ಸಿಂಹಾದಿಗಳ ಭಯವಾ ಕೀಳ ದೈತ್ಯಪ್ರಕರವಹುದೆನ್ನ ಮಣಿವೆಯಲಿ (ಕುಮಾಭಾ. ೯-೪) ; ಆ ರವ ಧ್ವನಿಗೊಡುವುದನು ಭೂದಾರವೇದೇ ಬಗೆದು ಹೂಡಿದ ಕೂರಲಗು ಬಿಡೆ ಬಿದ್ದುದುರದಲಿ ವೈಶ್ಯಮುನಿವರನ (ಕೊರಣ. ೨-೩-೦೨). ೨. ವರಾಹಾವತಾರವನ್ನೆತ್ತಿದ ವಿಷ್ಣು : ದಾನವಹೃತ ಮೇದಿನಿಯಂ ದಂಷ್ಟ್ರಾಗ್ರದೊಳಿರಿಸಿ, ಭೂದಾರಂ ಪಾತಾಳವನುಳಿದದ್ದನೊ ಎನಿಸಿ ದೂರದಿಗಂತದೊಳೊಪ್ಪಿದೆ ರವಿಮಂಡಿತಶೃಂಗಂ (ಪಂಪಾಶ. ೯೨-೩).

[ಸಂ.]

**ಭೂದಿವಿಜ** (ನಾ). ಬ್ರಾಹ್ಮಣ ; ಭೂಸುರ : ಬವರಮುಖದಲಿ ವೈರಿ ರಾಯರನವಗಡಿಸಿ ತಂದಾ ಧನವ ಭೂದಿವಿಜಸಂತತಿಗಿತ್ತ ಫಲವಿನಿತೆಂದು ಗಣಿಸುವಡೆ ದಿವಿಜಪತಿಗಾಗದು ಕಣಾ (ಕುಮಾಭಾ. ೩-೦೦). [ಸಂ.]

**ಭೂದುರ್ಗ** (ನಾ). ಶತ್ರುಗಳಿಂದ ರಕ್ಷಿಸಿಕೊಳ್ಳುವುದಕ್ಕಾಗಿ ಕಾಡಿನ ಮಧ್ಯದಲ್ಲಿ ಕಟ್ಟುತ್ತಿದ್ದ ಕೋಟೆ ; ನೆಲಗೋಟೆ : ಪರಂಪರೆಯು ಹೇಳಿಕೆಯಂತೆ ದುರ್ಗಗಳು ಮೂರು ಬಗೆಯವಿರುವುವು ; ಗಿರಿದುರ್ಗ, ಜಲದುರ್ಗ, ವನದುರ್ಗ ಅಥವಾ ಭೂದುರ್ಗ (ಕರ್ನಾಟ. ೪). [ಸಂ.]

**ಭೂದೇವ** (ನಾ). =ಭೂದಿವಿಜ : '' ದ್ವಿಜಾತಿಃ, ಅಗ್ರಜನ್ಮಾ, ಭೂದೇವಃ, ಬಾಡಬಃ, ವಿಪ್ರಃ, ಬ್ರಾಹ್ಮಣಃ – ೬ ಬ್ರಾಹ್ಮಣನ ಹೆಸರುಗಳು''

(ಸಿದ್ಧಾಂತಿ. ೨೦೩); ಭೂದೇವನಾತ್ಮಜನಂ ಪೊಯಿಂದನಾ ಜನ್ನಿವಾರದಲಿ (ಜೈಕೃ. ೩೦-೬); ದೇವಪಿತೃತರ್ಪಣವನಾ ಭೂದೇವತುಷ್ಟಿಯನಾ ಯಶೋದಾದೇವಿ ವಿರಚಿಸಿ (ಶಿಶಾಗ. ೧೧-೬-೩೩). [ಸಂ.]

**ಭೂಧರ** (ನಾ). ೧. ಬೆಟ್ಟ ; ಪರ್ವತ : ಸಕಲಗಜರಥಭೂಧರಾಧಿತ್ಯಕೆಯೊಳಗೆ ಭುಗಿಭುಗಿಸಿ ರಿಪುವನನಿಕರದಲಿ ಸಲೆ ಬೀದಿವರಿದುದು ಭೀಮದಾವಾಗ್ನಿ (ಕುವ್ಯಾದ್ರೋ. ೦೨-೨೪); ಮೇವ ಮುಗಿಲ್ಗಳಿಂ ಮುಸುಕಿ ಮೋಹಿಪ ಭೂಧರವೊಂದು ಪಕ್ಕದೊಳ್ ತಾವರೆಗಣ್ಣನಂತಿರೆ (ರಾಜಶೇ. ೧-೧೦೬); ಭೂಧರಮೆ ಶಿರವ್ವೊಲೆದುದೆನೆ ವಿಪಿನಾಳಿ ತೂಗಿದತ್ತೆಡಬಲಕೆ (ಚನ್ನಾಂಗ. ೪೬-೦೩೧೦). ೨. (ವರಾಹಾವತಾರದಲ್ಲಿ ಕೋರೆದಾಡೆಗಳ ಮೇಲೆ) ಭೂಮಿಯನ್ನು ಹೊತ್ತವನು ; ವಿಷ್ಣು : ಮಾಧವಮಹನೀಯಪಾದ ಮಂದರಧರಸಾಧಿತ ಸರ್ವಶಾಸ್ತ್ರಾರ್ಥಭೂಧರ ಭುವನೈಕವೀರ . . . ಸಲಹೆನ್ನ (ಶತಸಾಂ. ೬೦-೪). ೩. ಕೃಷ್ಣ : ಕೂರ್ಮೆಯಿಂ ವಿಂಸ್ಕ ಬಂದ ಪುದಿವರ್ಕೆಗೆಯ್ವನೇನೆಂಬೆನಾಂ ಮುಳಿದೆಂ ಮುನ್ನಿನದೊಂದು ವೈರಮನಿಂದಿಂತೀಶ್ವರಣಂ ಭೂಧರಾ (ಶಂಶಖಾ. ೦೨-೨೦೬). ೪. ಶಿವ. ೫. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ. ೬. [ವೈದ್ಯಶಾ] ರಾಸಾಯನಿಕ ಅಥವಾ ವೈದ್ಯಕೀಯಪ್ರಯೋಗಗಳಿಗೆ ಬಳಸುವ ಒಂದು ಬಗೆಯ ಉಪಕರಣ : 'ಭೂಧರಯಂತ್ರ' ಪರಾ. [ಸಂ.]

**ಭೂಧರಧರ** (ನಾ). ಗೋವರ್ಧನಪರ್ವತವನ್ನು ಎತ್ತಿ ಹಿಡಿದವನು : ಕೃಷ್ಣ : ಅಂತು ಭೂಧರವಿರೋಧಿ ಭೂಧರಧರಂಗೆ ಕ್ರುದ್ಧನಾಗಿ (ಜಗಬ. ೪-೬೪ ವ). [ಸಂ.]

**ಭೂಧರಯಂತ್ರ** (ನಾ). = ಭೂಧರ ೬ : ಶರಾವೆಯ ಮುಚ್ಚಿ ಸಂಧಿಲೇಪವಂ ಮಾಡಿ ಒಣಗಿಸಿ ಭೂಧರಯಂತ್ರದಲ್ಲಿ ಪಾಕವ ಮಾಡುವದು. ಭೂಧರಯಂತ್ರವೆಂತೆಂದರೆ ಭೂಮಿಯಲ್ಲಿ ಗೇಣು ಆರಂಗುಲ ಉದ್ದ ಚೌಕವಾಗಿ ಹಳ್ಳವ ತೆಗೆದು ಆ ಹಳ್ಳದಲ್ಲಿ ಸಂಪುಟಿಸಿದ ಶರಾವೆಯನಿರಿಸಿ ಆ ಶರಾವೆ ಮುಳುಗಿಯೂ ಮೇಲೆ ಎರಡಂಗುಲ ಪ್ರಮಾಣ ಪರ್ಯಂತ ಮಳಲ ತುಂಬಿ ಮೇಲೆ ಕಾಡ ಬೆರಣಿಯ ತುಂಬಿ ಪುಟವ ಹಾಕುವುದು, ಇದು ಭೂಧರಯಂತ್ರ ವೆನಿಸಿಕೊಂಬುದು (ವೈದ್ಯಶಾ. I, ೬೬). [ಸಂ.]

**ಭೂಧವ** (ನಾ). ಅರಸು ; ರಾಜ : ಅವನಿಪತಿ ಕೇಳ್ತನ್ನ ನಿಜಭಾಗ್ಯವನು ರಕ್ಷಿಸಿಕೊಂಬುದಕೆ ಭೂಧವರ ವಿಶ್ವಾಸತ್ವ ಬೇಕೆಲ್ಲರಿಗೆ (ತಿಮ್ಮಶಾ. ೪-೨೦). [ಸಂ.]

**ಭೂಧ್ರ** (ನಾ). ಬೆಟ್ಟ ; ಪರ್ವತ : ತತ್ಪ್ರತಾಪವಲ್ಲರಿ ರವಿರೋಚಿಯೆಂಬ ವಿಷದಿಂ ದಶದಿಕ್ಕನೆ ಪರ್ಬಿ ಪೆತ್ತುದೋ ಖರಕರಪುಷ್ಪಮುಂ ಕನಕಭೂಧ್ರಬೃಹತ್ಫಳಮುಂ ಮಹೀಶನಾ (... ೫ ೫). [ಸಂ.]

**ಭೂನಾಗ** (ನಾ). ೧. ಭೂಮಿಯಲ್ಲಿರುವ ಒಂದು ಬಗೆಯ ಹುಳು ; ಎರೆಹುಳು : ಭೂನಾಗನಾಕೃತಿಯನು ವ್ಯಾಳೇಶನ ಹೋಲಿಸಿದರೆ ವ್ಯಾಳೇಶನಾಗಲಜವುದೆ (ಜಸವ. ೩೨೯); ಶಂಬೂಕ ಮಾತೃವಾಹಿ ಶಂಖಿಶುಕ್ತಿ ಗಂಡುವಾಳ ಜಲೂಕ ಭೂನಾಗಾ ಪಾದೋದರಕ್ರಿಮ್ಯಾದಿ ದ್ವೀಂದ್ರಿಯಂಗಳ್ (ತತ್ತ್ವಸೂ. ೪೮). ೨. ಒಂದು ಬಗೆಯ ಮರ : "ಭೂಮೀಲತಾ–ಭೂನಾಗ" (ಚಿಕಂ. ೧೧೩); ಬೆಟ್ಟದಾವರೆಮರಂ ಭೂನಾಗ ಚಾಂಪೇಯಮುಂ . . . ಇರ್ದುವಂ (ಹರಿಶ್ಚರ. ೬-೪೬). ೩. ಪಾದರಸದಂತಿರುವ ಒಂದು ಬಗೆಯ ಧಾತು ; ಕ್ಷಿತಿನಾಗ : "ಭೂಜಂತು – ಭೂನಾಗ" (ಚಿಕಧಿ. ೦೦೦).

**ಭೂನಾಗಕಲ್ಕ** = ಭೂನಾಗವನ್ನು ಸೇರಿಸಿ ಮಾಡಿರುವ ಗಟ್ಟಿಯಂತಹ ಔಷಧದ್ರವ್ಯ : ಭೂನಾಗಕಲ್ಕ ಒಂದು ಪಲ, ಮೆಣಸು ನಾಲ್ಕು ಪಲ, ಬೆಳ್ಳುಳ್ಳಿ ಒಂದು ಹಲ ಪೂರನು ಕಲ್ಕಪ ಮಾಡಿ (ಚಿಕಚಿ.೨೦). [ಸಂ.]

**ಭೂನಾಗಸತ್ವ** (ನಾ). ೧. ಎರೆಹುಳುವಿನ ಸಾರ. ೨. ಪಾದರಸದಂತಹ ಒಂದು ಬಗೆಯ ಧಾತುವಿನ ಸತ್ವ : ಗರುಡಪಂಚಾಕ್ಷರಿಯ ಮಂತ್ರೋಚ್ಚಾರಣೆಯಲಿ ಭೂನಾಗಸತ್ವದ ಬೆರಳ ಮುದ್ರಿಕೆಗಳಲಿ . . . ವಿಷಸಂಹರಣ ವಿವಿಧೋಪಾಯದಲಿ ನೃಪವರರು ನೀಡುವು (ಕುವ್ಯಾಕ. ೨೫-೨೨) : P ಎರೆಹುಳುವನ್ನು ಸುಟ್ಟು ಆ ಭಸ್ಮವನ್ನು ಹಾವಿನ ವಿಷದ ಪರಿಹಾರಕ್ಕಾಗಿ ಉಪಯೋಗಿಸುತ್ತಾರೆ ಎಂದು ಹೇಳಲಾಗುತ್ತದೆ. ಭೂನಾಗವೆಂದರೆ ಭೂಮಿಯಲ್ಲಿ ಸಿಗುವ ಪಾದರಸದಂತಹ ಒಂದು ವಸ್ತು. ಇದಕ್ಕೆ ವಜ್ರವನ್ನು ನಾಶಪಡಿಸುವ ಗುಣವಿದ್ದು, ಇದರ ಸತ್ವವು ನಾಗರಹಾವಿನ ವಿಷವನ್ನು ಪರಿಹರಿಸುತ್ತದೆ ಎಂಬ ಬೇರೆ ರೀತಿಯ ವಿವರಣೆಯೂ ಇದೆ. [ಸಂ.]

**ಭೂನಾಥ** (ನಾ). ಭೂಮಿಯ ಒಡೆಯ ; ಅರಸ ; ರಾಜ : ಭೂನಾಥಂ ಮದ್ರರಾಜನನಿಂತೆಂದಂ (ಶಂಶಖಾ. ೦೩-೨೦ ವ); ಇಳೆಯ ಭೂನಾಥರೊಳು ಸತ್ಯರಾರೆಂದು ಬೆಸಗೊಂಡಡೀ ನಾಡ ಮಾತು ವಾಜುತ್ತರವೆ (ಪಶಕಾ.೨-೦೩). [ಸಂ.]

**ಭೂನಿಂಬ** (ನಾ). ಒಂದು ಬಗೆಯ ಸಸ್ಯ : ನೆಲಬೇವು : "ಕಿರಾತತಿಕ್ತಃ, ಭೂನಿಂಬಃ, ಅನಾರ್ಯತಿಕ್ತಃ —೩ ನೆಲಬೇವು. ಇದರಲ್ಲಿ ದೇಶಾವರವನ್ನೇ ಚಿರಾಯಿತವೆನ್ನುವರು" (ಸಿದ್ಧಾಂತಿ ೨೪೫); ಭೂನಿಂಬ . . . ಕಷಾಯವಿಕ್ಕಿ ಕೊಡಲು . . . ಪುರಾಣಜ್ವರ ಸಹ ಮಾಣ್ಗುಂ (ಸಳವ್ಯ. ೦೨೩). [ಸಂ.]

**ಭೂನೆಲ್ಲಿ** (ನಾ). ಒಂದು ಬಗೆಯ ಗಿಡ; ನೆಲನೆಲ್ಲಿ ಗಿಡ : "ತಾಮಲಕಿ – ಭೂನೆಲ್ಲೀಗಿಡ" (ಗಂಗಾಮ. ೦೫೦). [ಭೂ + ನೆಲ್ಲಿ$_1$]

**ಭೂಪ** (ನಾ). ೧. ಭೂಮಿಯನ್ನು ಪಾಲಿಸುವವನು; ದೊರೆ; ಅರಸ : "ರಾಜಾ . . . ಭೂಪಃ, ಮಹೀಕ್ಷಿತ್ —೭ ಪ್ರಜೆಗಳನ್ನು ಸಲಹುವ ಕ್ಷತ್ರಿಯನಾದ ಅರಸಿಗೂ. . . . ದಿವಾನ ಮುಂತಾದವರಿಗೂ ಹೆಸರುಗಳು" (ಸಿದ್ಧಾಂತಿ. ೨೩೪); ನಿನಗವಿನಾಯಿರವಾದುದೆ ವೈರಿಭೂಪರಿಂ (ಶಂಶಖಾ. ೦೩-೬೪); ಭೂಪರಿಗೆ ಬಡಹಾರುವರಿಗೆತ್ತಣದು ಸಖಿತನವೆಂದನಾ ದ್ರುಪದ (ಕುವ್ಯಾಆ. ೬-೩೪); ಭಾಪುರೇ ಜಗದೀಶ ತಪಸಿಯ ರೂಪದಲಿ ತಲೆಗಡಿದೆಯೆಂದಾ ಭೂಪರೆಲ್ಲರ (ಕೌಶಿರಾ. ೯೩-೯೭). ೨. (ಆಲಂ) ತನ್ನ ಇಚ್ಛೆಯಂತೆ ನಡೆಯುವವನು; ನಿರಂಕುಶವ್ಯಕ್ತಿ : ಅವನು ಭೂಪ, ಕುಡಕ, ಕಳ್ಳ, ಘಾಟಿ, ಬೇಟೆಗಾರ (ಮುಳಿಜಾ. ೬೪); ಹಣ ತೆಗೆದುಕೊಂಡೇ ಬಂದಿದ್ದ ಭೂಪ (ನಾಘೋರಿ. ೨೦೩). ೩. [ಗಣಿತ] ಹದಿನಾರು ಎಂಬ ಸಂಖ್ಯೆಯ ಸಂಕೇತ.

**ಭೂಪಮಾಂಧಾತ**=ರಾಜರ ಮಧ್ಯದಲ್ಲಿ ಮಾಂಧಾತಚಕ್ರವರ್ತಿಯಂತೆ ಹೆಸರಾಂತವನು ; ಬಹಳ ಪ್ರಸಿದ್ಧನಾದವನು; ಒಂದು ಬಿರುದು : ತದಗ್ರಜಂ ಸಮಸ್ತಭುವನಜನವಿಖ್ಯಾತಂ ಚಾಳುಕ್ಯಾನ್ವಯಪ್ರಸೂತಂ ಪರಿಜನಪಾರಿಜಾತಂ · ಭೂಪಮಾನ್ಧಾತಂ (ಕೌಇ. XX, ೭೦-೯; 1109). [ಸಂ.]

**ಭೂಪಟ** (ನಾ). ಭೂಮಿಯ ಪ್ರಕೃತಿಲಕ್ಷಣಗಳನ್ನು, ರಾಜಕೀಯ ವಿಭಾಗ ಮೊದಲಾದ ವಿವರಗಳನ್ನು ಗುರುತಿಸಿರುವ ನಕ್ಷೆ.—ಪಟ : ಭೂಪಟಗಳಲ್ಲಿ ಒಂದು ಖಂಡದ ಅಥವಾ ದೇಶದ ಆಕಾರವನ್ನು ಸಾಕಾದಷ್ಟು ದೊಡ್ಡದಾಗಿ ಬರೆದು ಬೇಕಾದಷ್ಟು ವಿಷಯಗಳನ್ನು ಗುರುತು ಮಾಡಿ ಏಕ ಕಾಲದಲ್ಲಿ ಕಣ್ಣಿಗೆ ಕಾಣುವಂತೆ ತೋರಿಸಬಹುದು (ಭೂರಚ. II. ೨೭); ಈ ರೇಖೆಗಳನ್ನು ನೋಡಿದ ಕೂಡಲೆ ಭೂಪಟವನ್ನು ನೋಡಿರುವ ಯಾರಿಗಾದರೂ ಅಕ್ಷಾಂಶ ರೇಖಾಂಶಗಳ ನೆನಪು ಬರುತ್ತದೆ (ನಕ್ಷತ್ರ. ೩೨). [ಸಂ.]

**ಭೂಪತಿ** (ನಾ). ೧.=ಭೂಪ ೧ : ಮಗನಟಬೊಂದು ಭೂಪತಿಯ ತಮ್ಮನೊಳಾವಟಬೊಂದು . . . ತನ್ನನಾವಗೆಯುರಿಯುಟ್ಟವೋಲಳುರೆ (ಶಂಶಖಾ. ೦೨-೦೭೦); ಈತ ಧನುವಿನಬೀತ ಖಡ್ಗದಲೀತ ಪರಿಘದಲೀತ ಕುಂತದಲೀತ ಬಲುಹಂದಂಥಭೂಪತಿಗಜುಹಿದನು ವಿದುರ (ಕುವ್ಯಾಆ.೭-೨೪);

ವಾಪಿಯಾದವ ಭೂಪತಿಯಾದಾನೇ ? (ಗಾದೆ). ೨. = ಭೂಪ ೨ : ಆ ಭೂಪತಿ ಎಲ್ಲಿಗೆ ಹೋಗಿದ್ದಾನೆಂಬುದು ಅವನ ತಾಯಿಗೂ ಗೊತ್ತಿರಲಿಲ್ಲ (ಕುಂಕಕ್ಕ. ೨೦೪). ೩. ಹಿಮಾಲಯ ಪರ್ವತದಲ್ಲಿ ದೊರಕುವುದೆನ್ನಲಾದ ಗಡ್ಡೆಯುಳ್ಳ ಒಂದು ಬಗೆಯ (ಔಷಧೀಯಗುಣವುಳ್ಳ) ಸಸ್ಯ : 'ಭೂಪತಿಮಾತ್ರೆ' ಪರಾ. [ಸಂ.]

**ಭೂಪತಿಮಾತ್ರೆ** (ನಾ). [ವೈದ್ಯಶಾ] ಭೂಪತಿ ಎಂಬ ಸಸ್ಯದಿಂದ ತಯಾರಿಸಿದ ಒಂದು ಬಗೆಯ ಗುಳಿಗೆ : ಭೂಪತಿಮಾತ್ರೆಯನು ಮೆಣಸು ಚವ್ಯ ಜೇನುತುಪ್ಪನಲ್ಲಿ ಸೇವಿಸಲು ಮಾಣ್ಗು (ನಾಭಿವಾತಲಕ್ಷಣ) (ವಾತಾ. ೦೩-೬). [ಸಂ. ಭೂಪತಿಮಾತ್ರಾ]

**ಭೂಪಥ** (ನಾ). ಭೂಮಿಯು ಸೂರ್ಯನನ್ನು ಸುತ್ತುವ ಮಾರ್ಗ : ಭೂಮಿ ಸೂರ್ಯನ ಸುತ್ತಲೂ ಸುತ್ತಿ ಬರುವ ದಾರಿಗೆ ಭೂಪಥವೆಂದು ಹೆಸರು (ಖಗೋವ. ೦೩); ಸೂರ್ಯನನ್ನು ಬಳಸಿರುವ ಭೂಪಥ ಒಂದೇ ಸಮ ತಲದಲ್ಲಿದೆ (ಆಕಾಶ. ೦೭). [ಸಂ.]

**ಭೂಪದಿ** (ನಾ). ಒಂದು ಬಗೆಯ ಮಲ್ಲಿಗೆ : "ತೃಣಶೂನ್ಯಾ, ಮಲ್ಲಿಕಾ, ಭೂಪದೀ, ಶೀತಭೀರುಃ- ೪ ಮಲ್ಲಿಗೆಗಿಡದ ಹೆಸರುಗಳು" (ನಿಘಂಟು. ೦೨೪). [ಸಂ. ಭೂಪದೀ]

**ಭೂಪಾಲ**, ಭೂಪಾಳ (ನಾ). ೧. ಭೂಮಿಯನ್ನು ಕಾಪಾಡುವವನು ; ಅರಸು ; ರಾಜ : ಜಾತಮಾತ್ರಕೆ ಜನನ ಮರಣದ ಭೀತಿ ಬೆಂಬಿಡದಂತೆ ಗೋತ್ರಜಭೀತಿ ಭೂಪಾಲರಿಗೆ ಹಿರಿದಹುದೆಂದನಾ ಶಕುನಿ (ಕುಮಾ.ಭಾ. ೬-೪೯). ಭೂಪಾಳ : ೧. ಏಕಾಕಿಯೆ ಆಗಿ ದೇವ ರಿಪುಭೂಪಾಳರ್ಕಳೊಳ್ ಕಾದುವೈ (ಕುಂಕಭಾ. ೦೩-೩೦). ೨. [ಸಂಗೀತ]ಒಂದು ರಾಗದ ಹೆಸರು: ಭೂಪಾಳಾದಿ ರಾಗಂಗಳ್ (ಸಂಗೀತ. ೦೧೭-೦೩). [ಸಂ.]

**ಭೂಪಾಳ** 'ಭೂಪಾಲ' ನೋ.

**ಭೂಪಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ಮನುಜರು ಭೂಪಾಳಿ ಧನ್ಯಾಸಿಗಳ ಪಾಡೆ ಇನ ಮೂಡವೆಟ್ಟನೊಳ್ ಮೂಡೆ (ಶೀವಂಸಾಂ. ೦೩-೩೪) ; ಬಳಿಕ ಸಮಸ್ತರಾಗಂಗಳೊಳಗೆ ರಾಮಕ್ರಿಯೆ ಭೂಪಾಳಿ . . . ಮಧ್ಯಮಾವತಿಯೆಂಬ ಮೂವತ್ತಾರು ರಾಗಂಗಳೇ ಮುಖ್ಯಮಾಗಿ (ವಿವೇಕ. ೨೩೪) ; ಸಂಗೀತಚಯದಿಂದೊಲಿದು ರತಿವೆತ್ತು ಭೂಪಾಳಿಯಂ ಪಾಡೆ (ಪವಪುರ. ೦೪-೩೦) . [ಸಂ. ಭೂಪಾಲೀ]

**ಭೂಪುಟ** (ನಾ). [ವೈದ್ಯಶಾ] ಔಷಧಿಗಳನ್ನು ನೆಲದಲ್ಲಿ ಪುಟಕ್ಕೆ ಹಾಕುವುದು : ಹಾವುಮೆಕ್ಕೆಕಾಯಿಗಳನ್ನು . . . ಏಳು ದಿನ ಭೂಪುಟದಲ್ಲಿರಿಸಿ ತೆಗೆದು . . . ಒಂದೊಂದು ಹೋಳ ಮೆಲ್ಲಲು ಕೆಮ್ಮು ಉಬ್ಬಸ ಪರಿಹರ (ಸಕವೈ. ೨೦೭);ತಾಪಿಸುತೆ ತಣಿಯಿಸುತೆ ಕುಲುಕಿಸುತೆ ಋತುಪೈದ್ಯ ಭೂಪುಟದಿ ಜೀವರಸಗಳ ಪಚಿಸುವಂತೆ (ಮಂಕುಕ. ೦೩೪). [ಸಂ.]

**ಭೂಪುತ್ರಿ** (ನಾ.) ಭೂಮಿಯ ಮಗಳು ; ಸೀತಾದೇವಿ : ಭೂಪುತ್ರಿ ಸಂನ್ಯಾಸಿಯೆಂದಡಿಯುಟ್ಟಳ್ ದಶಕಂಠನುಯ್ದು ವಳನಂದಾಯುಷ್ಯಮಂ ನೀಗಿದಂ (ಸೋಮೇಶ. ೪೩). [ಸಂ. ಭೂಪುತ್ರೀ]

**ಭೂಪೇಂದ್ರ** (ನಾ). ರಾಜರುಗಳ ಒಡೆಯ ; ಚಕ್ರವರ್ತಿ : ಭೂಪೇಂದ್ರ ಬೆಸಸು ಬೆಸಸೆಮ್ಮಂ ನೀನೆಂದುದನೆ ಬಯಸಿ ತೀರ್ಚಲ್ ಬಂದೆವು (ಶಾಂತಿಪು. ೯-೬೦); ಮಾತ್ರನಿಕಟದರ್ಭಕನಾದಂ ಸಾಂದ್ರಾನಂದದುನಾ ಭೂಪೇಂದ್ರನ ಹೃನ್ನಯನಜಲರುಹಕ್ಕೊದವಿಸಿದಂ (ಶಂಕ್ರಪು. ೩-೯೩). [ಸಂ.]

**ಭೂಪ್ರದಕ್ಷಿಣ** (ನಾ). ಭೂಮಿಯನ್ನು ಸುತ್ತು ಹಾಕುವುದು : ನೂಜಿಪ್ಪತ್ತು ವೇಳೆ ಭೂಪ್ರದಕ್ಷಿಣವ ಮಾಡಿದರಿಲ್ಲ ಕಾಣೆರಣ್ಣ (ಸಿದ್ಧೇಶ. ೮೩-೨೩೪). [ಸಂ.]

**ಭೂಪ್ರದಕ್ಷಿಣೆ** (ನಾ). = ಭೂಪ್ರದಕ್ಷಿಣ : ದೇವಸ್ಥಾನವನ್ನು ಮೂರು ಸಲ ಪ್ರದಕ್ಷಿಣೆ ಮಾಡಿದರೆ ಮೂರು ಸಲ ಭೂಪ್ರದಕ್ಷಿಣೆ ಮಾಡಿದಷ್ಟು ಪುಣ್ಯ ಬರುತ್ತದೆ ಎಂದು ಹೇಳುತ್ತಾರೆ (ರೂಢಿ). [ಸಂ. ಭೂಪ್ರದಕ್ಷಿಣ]

**ಭೂಬಲ** (ನಾ). ೧. ರಾಜನಿಗಿರುವ ರಾಜ್ಯದ ಬಲ, — ಶಕ್ತಿ : ಬಲಕ್ಕೆ — ಆಶ್ವಲ . . . ಭುಜಬಲ, ಭೂಬಲ (ಕಪುರ. ೨೯೭ ಪ್ರಮೋ). ೨. [ಜ್ಯೋತಿ] ಜಾತಕನ ಅಧೀನಕ್ಕೆ ಬರುವ ನಿವೇಶನ, ಜಮೀನು ಮುಂತಾದುವುಗಳಿಂದ ಒದಗುವ ಸುಖ ಇತ್ಯಾದಿ : ಆ ಪ್ರತಾಪ ಚಕ್ರವರ್ತಿ ಸಿಂಘಣರಾಯನೆಂಬ ಯಾದವನಾರಾಯಣನ ಅವತಾರಕ್ಕೆ ತಾರಾಬಲಂ ಅಯಿಶ್ವರ್ಯ್ಯಕ್ಕೆಯಾದಿತ್ಯಬಲಂ ಚತುರೋಪಾಯಕ್ಕೆ ಚಂದ್ರಬಲಂ ಭೋಗಕ್ಕೆ ಭೂಬಲಂ ದಿಗುವಿಜಯೋದ್ಯೋಗಕ್ಕೆ ಯೋಗಿನೀಬಲಂ (ಕಶಾಶಾ. XX. ೨೦೨-೦೦; 1244). [ಸಂ.]

**ಭೂಭರ** (ನಾ). ೧. ಭೂಮಿಯ ಹೊರೆ,— ಭಾರ : ದಿತಿಸುತರಂ ಕಂಸಾದ್ಯರನತಿಬಲರಂ ಕೊಲ್ದೆನಿಬಿಪುವೆಂ ಭೂಭರವಂ (ಜಗ. ೦-೭೯). ೨. ರಾಜ್ಯವನ್ನು ಆಳುವ ಹೊಣೆ; ರಾಜ್ಯಭಾರ : ಸುತನೊಳಜಿತಂ ಜಯಂ ವಿಸ್ತೃತಮಂ ಭೂಭರಮನೆಯ್ದೆ ಯೋಜಿಸಿ ನಿಶ್ಚಿಂತತೆಯ ನೊಳಕೆಯ್ದಂ (ಜಂದ್ರಪ್ರ. ೭-೩). [ಸಂ.]

**ಭೂಭಾಗ** (ನಾ). ಭೂಮಿಯ ಭಾಗ,— ಪ್ರದೇಶ : ಭೂಭಾಗ ನಭೋವಿಭಾಗವರಮುಳ್ಳುಜಿ ತಳ್ತಿರ್ದರ್ ವಿರೋಧಿಗಳ್ (ಶಂಕಭಾ. ೦೦-೦೯೦); ಪ್ರವಿಲಸದ್ವಾಕ್ಸಂದರೀಕಂಕಣಮಾಂಕಿತಕೇಳೀಭವನಾಚಿರೋ ಪಮಮುಖಂ ಭೂಭಾಗದೊಳ್ ನಾಕಿಗಂ (ಕಾವ್ಯಾವ. ೭೭೯) ; ಭೂಭಾಗದ ಕೆಲವು ಕಡೆಗಳಲ್ಲಿ ತುಂಬಾ ಶೀತ (ಹಾಂಕ್ಷ. I. ೨೦). [ಸಂ.]

**ಭೂಭಾರ** (ನಾ). = ಭೂಭರ ೧ : ಭೂಭಾರಚ್ಛೇದವಿನೋದಿ ಕೃಷ್ಣನೆಪಗೀಗಾನಂದಸಂದೋಹಮಂ (ಜಗ. ೦-೦). [ಸಂ.]

**ಭೂಭಾರಕ** (ನಾ). ಭೂಮಿಗೆ ಭಾರವಾಗಿರುವವನು : ಸದಾಚಾರ ಸದ್ಭಕ್ತಿಯಿಲ್ಲದವರನೊಲ್ಲನಯ್ಯಾ . . . ನಿಚ್ಚನಿಚ್ಚ ಪ್ರಾಯಶ್ಚಿತ್ತರನೊಲ್ಲ ಕೂಡಲಸಂಗಮದೇವ ಭೂಭಾರಕರ (ಬಸವ. ೬೩೨). [ಸಂ.]

**ಭೂಭಾರಕತನ** (ನಾ). ಭೂಮಿಗೆ ಭಾರವಾಗುವಿಕೆ : ಪೊಡವಿಪನ ರಾಘವನ ಧನುವಿಂ ಕಡಿವಡೆದುಳಿದ ಗಂಧವಾದನದಡರುವಿಕೆ ತಾನೆನಿತು ಭೂಭಾರಕತನದ ಮಾತು (ಐಕಪು. ೮೯-೩೦). [ಭೂಭಾರಕ +— ತನ]

**ಭೂಭುಜ** (ನಾ). ದೊರೆ; ಅರಸು; ರಾಜ : ಕ್ಷಿತಿಯೊಳಗುಳ್ಳ ಭೂಭುಜರ ಬತ್ತು ಮೊದಲ್ಗಿಡೆ ಮುನ್ನಮೇಕವಿಂಶತಿ ಪರಿಸಂಖ್ಯೆಯಿಂ ತವಿಸಿ (ಶಂಕಭಾ. ೩-೯೩); ಚತುರಬ್ಧಿ ಮೇಖಲಾವಳಯಿತ ಭೂಮಿಗಾವನೆಜಿಯಂ . . . ಶೂದ್ರಕನೆಂಬ ಭೂಭುಜಂ (ಕಾದಂಪು. ೬); ರಾಜ್ಯಮನಾರಾಳ್ದರೊ ಪದ್ಮ ರಾಜನವೊಲುರ್ವಿಭಾಗದೊಳ್ ಭೂಭುಜರ್ (ಕುಸ್ವಪು. ೩-೨೦). [ಸಂ. ಭೂಭುಜ್]

**ಭೂಭೃತ್ತು** (ನಾ). ೧. ಬೆಟ್ಟ; ಪರ್ವತ : ಎತ್ತಲೆಂದಜಾಯದು ಮಹಾಗಜ ಮುತ್ತಿದಾ ದ್ವಿಪಕರಗಳನು ಭೂಭೃತ್ಸ್ತಟದ ಹೆಬ್ಬಾವುಗಳ ಹೋಲಿಕೆಯೊಳೊಪ್ಪಿದುವು (ತಿಪ್ಪೂತ. ೩-೬೩). ೨. ಅರಸು; ರಾಜ : ಅಂತು ಪಾಂಡುರಾಜನಧಿಕತೇಜನುಮುವನತವೈರಿಭೂಭೃತ್ಸಮಾಜನುಮಾಗಿ ನೆಗಟುತ್ತಿರ್ದಂ (ಶಂಕಭಾ. ೦-೦೦೦ ಪ). ೩. ವಿಷ್ಣು. ೪. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ. [ಸಂ. ಭೂಭೃತ್]

**ಭೂಭೃದ್ವರ** (ನಾ). ೧. ರಾಜರಲ್ಲಿ ಶ್ರೇಷ್ಠನಾದವನು; ರಾಜಶ್ರೇಷ್ಠ : ಅಂತಿರ್ಪ ಭೂಭೃದ್ವರನೊಳ್ ಸ್ಯೆಪಿನ ಬತ್ತಿನಂತೆ ಶ್ರೀಮತಿಯೆಂಬೊಂದು ಪೆಣ್ಮಣಿ ಪುಟ್ಟಿದುದು (ಅದ್ಭುತ. ೭-೨೩). ೨. ಬೆಟ್ಟಗಳಲ್ಲಿ ಶ್ರೇಷ್ಠವಾದುದು. ೧, ೨ : ಪದುಮದ ಸಿರಿಯನು ದೊರೆಕೊಳುತ ಮತ್ತದೆ ಸಿರಿಯನೆ ಸೋಲಿಸುತ ಭೂಭೃದ್ವರರಾ ತಲೆಯಲೆ ಮೆರೆಯುತ ಮೇಣಮರರ ಶಿರಭಾಗದಲಿ ಆ ಎರಡೂ ದಿನಪನ ಪಾದಗಳು ಸೌಖ್ಯದ ತರಲೆಮಗನವರತ (ಧ್ವನ್ಯಾಲೋ. ೯೭). [ಸಂ.]

**ಭೂಭೃನ್ನಾಥ** (ನಾ). ೧. ರಾಜರುಗಳ ಒಡೆಯ ; ಚಕ್ರವರ್ತಿ. ೨. ಪರ್ವತಗಳ ಒಡೆಯ ; ಹಿಮಾಚಲ. ೧ . ೨ : ವಿಪುಳತರಕಟಕ ಸುವ್ಯದ್ದ್ವಿಪಹ[ರಿ] ಮಹಿಷೀನಿಷೇವ್ಯನುನ್ನತಪಾದಂ ವ್ಯಪನೀತ ಶ್ರೀಫಲದಂ ವಿಪರೀತಕನಪ್ಪನಂತು ಭೂಭೃನ್ನಾಥಂ (ಕವಿರಾ. ೩-೧೦೦). [ಸಂ.]

**ಭೂಭ್ರಮಣ** (ನಾ). ೧. ಭೂಮಿಯನ್ನು ಸುತ್ತುವುದು; ದೇಶಸಂಚಾರ ಮಾಡುವುದು. ೨. ಭೂಮಿಯು ತನ್ನ ಅಕ್ಷದ ಮೇಲೆ ತಿರುಗುವಿಕೆ: ಇನ್ನು ಒಂದು ದಿನಕ್ಕೆ ೨೪ ಘಂಟೆಗಳು, ಒಂದು ಭೂಭ್ರಮಣದ ಕಾಲ ಇದಕ್ಕಿಂತ ಸುಮಾರು ೪ ನಿಮಿಷಗಳು ಕಡಮೆ ಎಂಬ ವಾಕ್ಯಗಳಲ್ಲಡಗಿರುವ ಸಂಬಂಧವನ್ನು ತಿಳಿದುಕೊಳ್ಳಬೇಕಾಗಿದೆ (ಪಕ್ಷಕ್ರ. ೩೯). [ಸಂ.]

**ಭೂಮ** (ಗು). ೧. ಅತಿಶಯವಾದ ; ಮಹತ್ತರವಾದ : ಕೈಕೊಳ್ವ ನೊಂದನೀ ಭೂಮಸಾಧನೆಗಳಲಿ ಮೇಲಾದುದಂ ! (ಶ್ರೀರಾಕ್ಷು. ೬೨೪-೪೨೮). (ನಾ). ೨. ಹೆಚ್ಚಳ ; ಅತಿಶಯ ; ಸಮೃದ್ಧಿ : ಅಲ್ಪವೊ ಭೂಮವೊ ಹಿರಿದೋ ಕಿರಿದೋ ಸಿಹಿಯೋ ಕಹಿಯೋ (ಅಕಿಕೀ. ೩೦-೧); ಶ್ರೀಗುರುವಿನ ಐಹಿಕವ್ಯಾಪಾರದ ತ್ಯಾಗದಲ್ಲಿಯೂ ಭೂಮವಾದ ದರ್ಶನವನ್ನೇ ಪಡೆದಿದೆ ಕವಿಯ ಹೃದಯ (ಕಾವಗೀ. ೬೬). ೩. ಮದುವೆಯ ದಿನದಂದು ವಧೂವರರೂ ಎರಡುಕಡೆಯ ಬೀಗರೂ ಒಂದೇ ಪಂಕ್ತಿಯಲ್ಲಿ ಕುಳಿತು ಮಾಡುವ ಭೂರಿಭೋಜನ,-ಮೃಷ್ಟಾನ್ನದ ಊಟ : ಈರ್ವರನು ಸ್ಥಿರದಂಪತಿಗಳೆನಿಸಿ ನಿಜಮಂದಿರಕೆ ಕರೆದೊಯ್ದು ಸದ್ಗೋತ್ರ ಮಿತ್ರೈದೆಯರ್ವೆರಸಿ ಭೂಮಾದಿಗಳನು ತೀರ್ಚಿ (ಪಪಮೋ. ೩೪-೧೧); ಭೂಮ ಮಾಡುವ ಲಗ್ನದ ನೇಮದ ಮುಂದೊರಿಸೆ ಕಾಮಿನಿಯರು ತಂದರು ಸಾಹಿತ್ಯಪದಗಳ ಪ್ರೇಮದಿ ಹಾಡಿ ಪರಸಿದರು (ಸಿದ್ಧಪು. ೨೦-೧೩) ; ಓಲಗ ಊದಿಸಿ ಭೂಮ ಹಾಕಿದ್ದು ಮುಗಿದು ಹೋಯಿತು ! (ಶಿಂದಪ. ೪೮). ೪. ಆಹಾರ : ಹೋಮ ಸಾಕು ಭೂಮ ಬೇಕು ಭೂದೇವಿಯ ಬೇಡಿಕೆ (ಅರಳು. ೨೯೮-೪). ೫. ವಿರಾಟ್ಪುರುಷ ; ಪರಮಾತ್ಮ; ಪರಬ್ರಹ್ಮ: ಎಲ್ಲಿ ಮತ್ತೊಂದನ್ನು ಕಾಣುವುದಿಲ್ಲವೋ . . . ಮತ್ತೊಂದನ್ನು ಅರಿಯುವುದಿಲ್ಲವೋ ಅದು ಭೂಮವು (ಬ್ರಹ್ಮಶಾ. ೧೪೪) ; ವ್ಯಕ್ತಿಯಾದವನು ತನ್ನ ಜೀವನದ ಎಲ್ಲ ವ್ಯವಹಾರಗಳಲ್ಲೂ ಭೂಮದರ್ಶನದ ಸಾಹಸಕ್ಕೆ ಪ್ರಯತ್ನಿಸಬೇಕು (ಜುಕ್ಕಾರ. ೨ ಬೀಕೆ); ಅವರು ಭೋಗವೈಭವಗಳ ನಡುವೆ ಬಾಳಿದರೂ ಅವರ ದೃಷ್ಟಿ ಅದರಾಚೆಗಿರುವ ಭೂಮದೆಡೆಗೆ (ಶಂಕೀ. ೩೮). ೬. ಭೂಮಿ; ಧರಣಿ.

**ಭೂಮದ ಪದ**=ಭೂಮದ ಊಟ ಮಾಡುವಾಗ ಎರಡು ಕಡೆಯ ಬೀಗರು ವಿನೋದಕ್ಕಾಗಿ ಪರಸ್ಪರರ ಮೇಲೆ ದೋಷಾರೋಪಣೆ ಮಾಡುತ್ತಾ ಹಾಡುವ ಹಾಡು,- ಜರೆಯುವ ಹಾಡು : ಕೆಲ ರಸಿಕರಮಣಿಯರು ಮರೆತಿರುವ ಊಟಣೆ ಹಾಡುಗಳನ್ನು ಭೂಮದ ಪದಗಳನ್ನು ನೆನಪು ಮಾಡಿಕೊಳ್ಳುವುದರ ಸಲುವಾಗಿ (ದೇಯಾಹ. ೧೩೨). **ಭೂಮದ ಹಾಡು**=ಭೂಮದ ಪದ ; P ವಧೂವರರಿಗೆ ಭೂಮದ ಸಂದರ್ಭದಲ್ಲಿ ಆರತಿ ಎತ್ತುವಾಗ ಕೃಷ್ಣ-ರುಕ್ಮಿಣಿ, ಶಿವ-ಪಾರ್ವತಿ ಮೊದಲಾದ ದೇವತೆಯರಿಗೆ ಹೋಂದಿಸಿದಂತೆ ಹೇಳುವ ವಿವರಣೆಗಳಿವೆ. ಆಧುನಿಕಸಮಾಜದಲ್ಲಿ ಮದುವೆಯ ಸಂದರ್ಭದಲ್ಲಿ ಹೇಳುವ 'ಬೀಗರಹಾಡಿ' ಗೂ 'ಭೂಮದ ಹಾಡು' ಎಂದು ಕರೆಯುತ್ತಾರೆ : ಭೋಜನ ಮಾಡುತ್ತಿರುವಾಗ ಎರಡೂ ಪಕ್ಷದ ಸ್ತ್ರೀಯರು ಪರಸ್ಪರರ ಮೇಲೆ ಕೋಟೆಗಳನ್ನು ಮಾಡಿ ಭೂಮದ ಹಾಡು ಹಾಡಹತ್ತಿದರು (ತುಳಸೀ. ೩೨); ಸುಂದರಕ್ಕ ಇದ್ದರೆಂದೇ ಭೂಮದ ಹಾಡಿನಲ್ಲಿ ಗಂಡಿನವರದ್ದೇ ಮೇಲುಗೈ ಆಯಿತು (ವೃಶಿ. ೨೩). **ಭೂಮದೂಟ**= ಮದುವೆಯ ಸಂದರ್ಭದಲ್ಲಿ ವಧೂವರರೂ ಎರಡು ಕಡೆಯ ಬೀಗರೂ ಒಂದೇ ಪಂಕ್ತಿಯಲ್ಲಿ ಕುಳಿತು ವಿನೋದದಿಂದ ಮಾಡುವ ಊಟ,-ಭೋಜನ: P ಈ ಸಂದರ್ಭದಲ್ಲಿ ವಧೂವರರ ಮುಂದೆ ಅಗ್ರದ ಬಾಳೆಯೆಲೆಗಳನ್ನು ಜೋಡಿಸಿ ರಂಗವಲ್ಲಿ ಮುಂತಾದುವುಗಳಿಂದ ಅಲಂಕರಿಸಿ, ಎಲೆಗಳಿಗೆ ಅನೇಕ ಬಗೆಯ ಅಡುಗೆಗಳನ್ನು ಬಡಿಸುತ್ತಾರೆ. ಈ ಸಮಯದಲ್ಲಿ ಎರಡು ಕಡೆಯವರೂ ವಧೂವರರಲ್ಲಿ ಸಲಿಗೆಯನ್ನು ಹೆಚ್ಚಿಸಲು ಪರಸ್ಪರರ ಎಂಜಲು ತಿನ್ನಿಸುವ ವಿನೋದ ನಡೆಯುತ್ತದೆ. ಆಗ ಹಾಡುವ ಹಾಡುಗಳಲ್ಲಿ 'ಬೀಗರ ಹಾಡು'ಗಳನ್ನು ಹೇಳುವುದೂ ಉಂಟು : ನಾನಿನ್ನು ಬರ್ತೀನಿ ದೇವರೂ . . . 'ಉಂಟೇ, ರಾತ್ರಿ ಭೂಮದೂಟ ನೋಡಿಕೊಂಡು . . . '(ದೂಬಿಲ್ಕಿ. ೧೩). [ಸಂ. ಭೂಮನ್]

**ಭೂಮಂಡಲ, ಭೂಮಂಡಳ** (ನಾ). ೧. (ಮಂಡಲಾಕಾರವಾದ) ಭೂಮಿ : ಧರಣಿ : ಪಾಂಡುರಂಗನ ಭಕ್ತರು ಭೂಮಂಡಲದೊಳಗೆ ಸುಳಿವ ಜಂಗಮಮಂಡಳಿಗಳು ಕರಸಿದರು (ಬಸಪು. ೪-೩); ಮಗನೆ ಸಕಲ ಭೂಮಂಡಲಂ ದ್ವಿಜರದಲ್ಲವೆ (ಕೈಬಿಭಾ. ೨-೮೩) ; ಈ ಭೂಮಂಡಲದ ಸುತ್ತಳತೆ ೨,೫೨,೦೦೦ ಸ್ಟೇಡಿಯಂ ಎಂದು ಅವನು ಕಂಡುಹಿಡಿದ (ಭೂವಿವ. ೭). **ಭೂಮಂಡಳ** : ೨. ಸ್ಥಳ ; ಎಡೆ ; ಜಾಗ : ಪ್ರದೇಶ : ಭೂನಾಥಂ ಪೊಕ್ಕಂ ಭವ್ಯಾನಂದನಸಮವಸರಣಭೂಮಂಡಳಮಂ (ಶಾಂತಿಪು. ೮-೧೩೬). [ಸಂ.]

**ಭೂಮಂಡಳ** ' ಭೂಮಂಡಲ ' ನೋ.

**ಭೂಮಂಡಳಪತಿ** (ನಾ). ಭೂಮಿಯ ಒಡೆಯ ; ರಾಜ: ಭೂಮಂಡಳಪತಿ ಬುಧಚಿಂತಾಮಣಿ ಜಿನಚಂದ್ರನಿರೆ ಸಭಾಮಂಡಳದೊಳ್ (ಶಾಂತಿಪು. ೮-೧). [ಸಂ. ಭೂಮಂಡಲಪತಿ]

**ಭೂಮತೆ** (ನಾ). ಹಿರಿಮೆ ; ಉದಾತ್ತತೆ ; ಮಹತ್ತ್ವ : ನಿನ್ನ ಈ ದಿವ್ಯನಿರ್ಲಕ್ಷ್ಯತಾಸ್ಥಿರತೆಯಂ ಭೂಮತೆಯ ಭವ್ಯತೆಯ ಬ್ರಹ್ಮಗಾಂಭೀರ್ಯಮಂ ದಯಪಾಲಿಸೆನಗೆ (ಅಗ್ನಿಹಂ.೬೩). [ಸಂ. ಭೂಮತಾ]

**ಭೂಮಧ್ಯಪ್ರದೇಶ** (ನಾ). ಭೂಮಿಯ ಮಧ್ಯಭಾಗ : ಅಫ್ಘಾನಿಸ್ಥಾನ, ನೇಪಾಳ, ಲಾವೋಸ್ ಇಂತಹ ಭೂಮಧ್ಯಪ್ರದೇಶಗಳಿಗೇ(Land Locked Countries) ಇತರ ರಾಷ್ಟ್ರಗಳ ಮೂಲಕ ರೇವುಪಟ್ಟಣಗಳಿಗೆ ಹಾದು ಹೋಗುವ ಅನುಕೂಲ ಒದಗಿಸುವುದರಲ್ಲಿ ಇಕಾಫೆಯು ವಿಶೇಷ ಆಸಕ್ತಿ ವಹಿಸಿದೆ (ಅಂತಸಂ. ೫೩). [ಸಂ.]

**ಭೂಮಧ್ಯರೇಖೆ** (ನಾ). ಭೂಗೋಳವನ್ನು ಪೂರ್ವಪಶ್ಚಿಮವಾಗಿ ಎರಡು ಸಮಭಾಗಗಳಾಗಿ ವಿಭಜಿಸುವಂತೆ ಮಧ್ಯದಲ್ಲಿ ಕಲ್ಪಿಸಿರುವ ರೇಖೆ ; ಸಮಭಾಜಕವೃತ್ತ : " ಭೂಮಿಯ ಎರಡು ಧ್ರುವಗಳಿಗೂ ಸಮಾನದೂರದಲ್ಲಿರುವ ಭೂಮಿಯ ದೊಡ್ಡವೃತ್ತ ; ಸಮಭಾಜಕವೃತ್ತ; ವಿಷುವದ್ವೃತ್ತ ; ನಿರಕ್ಷರೇಖೆ; ಭೂಮಧ್ಯರೇಖೆ " (Equator. ೨೦೪೬) ; ಭೂಮಧ್ಯರೇಖೆಯಿಂದ ಬಡಗಕ್ಕೂ ತೆಂಕಣಕ್ಕೂ ಹೋದ ಹಾಗೆ ಗುರುತಿನ ಚಿಕ್ಕಿಗಳು. . . ದೃಷ್ಟಿಗೆ ಬೀಳಹತ್ತುತ್ತವೆ (ಮುಂಬಯಿ. ೪-೬೭); ಭೂಮಿಯು ಮೇರುಭಾಗದಲ್ಲಿ ಸ್ವಲ್ಪ ಚಪ್ಪಟೆಯಾಗಿಯೂ, ಭೂಮಧ್ಯರೇಖೆಯ ಸಮೀಪದಲ್ಲಿ ಸ್ವಲ್ಪ ಉಬ್ಬಿಕೊಂಡೂ ಇದೆ (ಭೂವಿವ. ೫). [ಸಂ. ಭೂಮಧ್ಯರೇಖಾ]

**ಭೂಮಧ್ಯರೇಷೆ** (ನಾ). = ಭೂಮಧ್ಯರೇಖೆ : ಭೂಮಧ್ಯರೇಷೆಯ ಮೇಲೆ ಯಾವಾಗಲೂ ಹನ್ನೆರಡು ತಾಸಿನ ದಿನಮಾನವಿರುತ್ತದೆ (ಮುಂಬಯಿ. ೪-೬೭). [ಸಂ. ಭೂಮಧ್ಯರೇಷಾ]

**ಭೂಮಾನ** (ನಾ). ೧. ಭೂಮಿಯ ತೂಕ : ಓಜಾಯಿತರೋಜೆಯೊಲವರದ ಭೂಮಾನಕ್ಕಂ ಸಕ್ಕಸಮನಾಗಿ ತೂಗಿವಂತೆ (ಅಪಂಪು. ೨-೩೦ ವ). ೨. ಮಲ್ಲಯುದ್ಧದ ನಿರ್ದಿಷ್ಟವಾದ ಎಲ್ಲೆಯುಳ್ಳ ಸ್ಥಳ ; ಕಂಸ್ತಿಯ ಕಣ : ಅಖಾಡ: ಒರ್ವರೊರ್ವರಂ ಮೂದಲಿಸಿ ನುಡಿಯುತ್ತುಮಿರ್ವರುಂ ಭೂಮಾನದಳವಿಯೊಳ್ ಪರಿಯುಲನುಗೆಯ್ವಾಗಳ್ (ಅಪಂಪು. ೧೦-೫೩ ವ). [ಸಂ.]

**ಭೂಮಾನುಭೂತಿ** (ನಾ). ಬ್ರಹ್ಮಸಾಕ್ಷಾತ್ಕಾರ : ಬ್ರಹ್ಮಾನಂದದ ಅನುಭವ : ಚೈತ್ರರವಿಯ ಸೌಂದರ್ಯವು ತಿಮ್ಮಿಯಂತಹವಳಿಗೂ ಹೃದಯದಲ್ಲಿ ಭೂಮಾನುಭೂತಿ ಸಂಚಾರವಾಗುವಂತೆ ಮಾಡಿತ್ತು (ಮಲೆಮ. ೨೬೦) ; ತನಗೆ ಆಧ್ಯಾತ್ಮಿಕಭೂಮಾನುಭೂತಿಯನ್ನು ನೀಡಿದ ಶ್ರೀಗುರುವಿನ ಐಹಿಕವ್ಯಾಪಾರದ ತ್ಯಾಗದಲ್ಲಿಯೂ ಭೂಮವಾದ ದರ್ಶನ ವನ್ನೇ ಪಡೆದಿದೆ ಕವಿಯ ಹೃದಯ (ಶಾವಗೀ. ೬೬). [ಸಂ.]

**ಭೂಮಾಲೀಕ** (ನಾ). ಜಮೀನಿನ ಪೂರ್ಣಾಧಿಕಾರವನ್ನು ಹೊಂದಿರು ವವನು ; ಭೂಸ್ವಾಮ್ಯವುಳ್ಳವನು : ಭೂಮಾಲೀಕರು ಜೀತದಾಳುಗಳಿಗೆ ಈಗಲೂ ಸ್ವಾತಂತ್ರ್ಯ ನೀಡಲು ಇಷ್ಟಪಡುವುದಿಲ್ಲ (ರೂಢಿ).

[ಭೂ + ಮಾಲೀಕ]

**ಭೂಮಿ** (ನಾ). ೧. ಮನುಷ್ಯರು ವಾಸಮಾಡುತ್ತಿರುವ ಲೋಕ ; ಭೂಲೋಕ : ನಾನು ಭಕ್ತನಾದಡೆ ನೀನು ದೇವನಾದಡೆ . . . ಭೂಮಿ ಯಾಕಾಶವನೊಂದುಮಾಡಿ ಚಂದ್ರ ಸೂರ್ಯರಿಬ್ಬರ ತಾಳವ ಮಾಡಿ ಆಡುವೆ (ಅಕಸಂ. ೫೪-೨೩೪) ; ಭೂಮಿಗೆ ಶರನಿಧಿ ಸೆಱಿಗೆಂಬಾ ಮಾತಂತಿರ್ಕೆ (ದಶಕು. ೨-೩೭) ; ಭೂಮಿ ಒಂದು ದೊಡ್ಡ ಗೋಳದ ಹಾಗೆ, ಚಂಡಿನ ಹಾಗೆ ಇದೆ (ಕೂಪಪ. ೦). ೨. ನೆಲ : ವಿಮಾನ ಭೂಮಿಗಿಳಿಯಲು ಇನ್ನೂ ಇಪ್ಪತ್ತು ನಿಮಿಷಗಳಿವೆ (ರೂಢಿ). ೩. ಹೊಲ, ಗದ್ದೆ, ತೋಟ ಮೊದಲಾದುವು; ಜಮೀನು : ಕಪ್ಪು ಮಣ್ಣಿನ ಭೂಮಿಯನ್ನು ವರ್ಷೇ ವರ್ಷೇ ಉಳುವ ಅಗತ್ಯವಿರುವುದಿಲ್ಲ (ಕೃಪಮ. ೪) ; ಭೂಮಿ ಮಾರಿ ನಾಮ ಹಾಕಿ ಕೊಂಡ (ಗಾದೆ). ೪. [ಛಂದ] ಮೂರು ಗುರುಗಳುಳ್ಳ ಗಣ ; ಮಗಣ (— — —) : "ಗುರು ಮೂಱಿರಲ್ ಭೂಮಿಯಕ್ಕು" (ಮಂಗರಾ. ೦೦೭-೨೦) ; ಮಗಣಂ ಭೂಮಿಯೆನಿಕ್ಕುಂ (ಛಂದೋಂಬು. ೦-೩೭ ಅವತರ್ಣ).

**ಭೂಮಿಕಾಣಿ**=ಹೊಲಗದ್ದೆ ಮೊದಲಾದ ಜಮೀನು. –ಆಸ್ತಿ : ಅವನನ್ನು ರಾಜ ತನ್ನ ಆಸ್ಥಾನೀಕನಾಗಿ ಮಾಡಿ ಬೇಕಾದಷ್ಟು ಭೂಮಿ ಕಾಣಿಗಳನ್ನು ಕೊಟ್ಟನು (ಕೃಶಾಇ. II, ೨೨೬); ನಮಗೆ ಅನೇಕ ಗ್ರಾಮಗಳೂ ಭೂಮಿಕಾಣಿಯೂ ದಾನವಾಗಿ ದೊರಕಿದ್ದುವು (ಕೃಶಾಕ. ೦೭). **ಭೂಮಿಗಿಳಿ**= (ಆಲಂ) ಚಿಂತೆ ಮೊದಲಾದ ಕಾರಣದಿಂದ ಕುಸಿ; ಎದೆಗುಂದು: ಈಗ ಅವನ ನಡತೆಯನ್ನು ನೋಡಿದೊಡನೆ ಸುಂದರಿ ಭೂಮಿಗಿಳಿದು ಬಿಟ್ಟಳು (ಹಳ್ಳಿಚಾ. ೩೨). **ಭೂಮಿಗೆ ಭಾರ** = ಉಪಯೋಗವಿಲ್ಲದ ಹೊರೆ; ಅಪ್ರಯೋಜಕವಾದುದು : ದೂರದಲ್ಲಿಯೆ ಸಾಲು ನಿಂತ ಪರ್ವತಶಿಖರ ಆಗಿಲ್ಲ ಭೂಮಿಗೆ ಭಾರ (ಪಂಚಮು. ೩೦-೨೦). **ಭೂಮಿ ತೂಕದ ಮನುಷ್ಯ** = ದೊಡ್ಡ ವ್ಯಕ್ತಿ; ಉದಾತ್ತಸ್ವಭಾವದವನು: ಭೂಮಿ ತೂಕದ ಮನುಷ್ಯರಾದ ಅವರನ್ನು ಕಂಡರೆ ಎಲ್ಲರಿಗೂ ಗೌರವ (ರೂಢಿ). [ಸಂ.]

**ಭೂಮಿಕಂಪ** (ನಾ). ಭೂಮಿಯು ನಡುಗುವುದು : ಭೂಕಂಪ : ಕಲಿ ರಾಧೇಯ ಬರುತಿರೆ . . . ವಾಯಸದ ತಡೆ ಭೂಮಿಕಂಪ . . . ಗಜಾಶ್ವ ನಿಕಾಯ ರಥವಾಜಿಗಳ ಕಂಬನಿ ಕಾಣಲಾಯ್ತು (ಕುವ್ಯಾಕ. ೬-೨೬). [ಸಂ.]

**ಭೂಮಿಕಾಶ್ರಯ** (ನಾ). ೧. ಉಪ್ಪರಿಗೆಯ ಮನೆಗಳಿಂದ ಕೂಡಿ ಕೊಂಡಿರುವುದು. ೨. ವೇಷಾಂತರಗಳಿಂದ ಕೂಡಿರುವುದು ; ಪಾತ್ರ ಗಳುಳ್ಳುದು. ೧, ೨ : ಆ ಪುರಂ . . . ಅನೇಕಭೂಮಿಕಾಶ್ರಯ ಮಾಗಿಯುಂ ಕ್ಷಣಭಂಗಿಶೋಭಾಸಂಗತಮಲ್ತು (ಚಂದ್ರಪು. ೦-೦೩೭). [ಸಂ.]

**ಭೂಮಿಕೆ** (ನಾ). ೧. ನೆಲ ; ಭೂಮಿ. ೨. ಮನೆಯ ಅಂತಸ್ತು; ಉಪ್ಪರಿಗೆ: ದಿವಿಜೇಂದ್ರಾರ್ಚಿತನುಚ್ಚಗಂ ದಶಮದೊಳ್ ನಿಂದಂದೆರೞ್ಮೂಱುಂ ನಾಲ್ಕು ವಲಂ ಭೂಮಿಕೆಯಕ್ಕುಮುಚ್ಚವಶದಿಂ ಗೇಹಕ್ಕೆ (ಜಾತಿತಿ. ೪-೦೪); ರಾಜಮಂದಿರಮಂ ಪೊಕ್ಕು ಕರುಮಾಡದ ಮೊದಲ ಭೂಮಿಕೆಯೊಳಿಕ್ಕಿದ ವಿಶಾಲಹಂಸತೂಲದೊಳರಸಿಯುಂ ತಾನುಂ ಕುಳ್ಳಿರ್ದು (ಚಂಪ್ರಪು. ೬-೯೬ ವ). ೩. ಹಂತ ; ಮಟ್ಟ ; ಮೆಟ್ಟಿಲು : ಗೀತೆಯ ಕಾರ್ಯ ಅಜ್ಞಾನಿಗಳನ್ನು ಜ್ಞಾನಿಯ ಭೂಮಿಕೆಗೇರಿಸುವುದಕ್ಕಿಂತ . . . ಭಗವಲ್ಲೀಲೆಯಲ್ಲಿ ಭಕ್ತರ ಕರ್ಮಯೋಗಕ್ಕೆ ಇಂಬು ಮಾಡಿಕೊಡುವುದಾಗಿದೆ (ಮಸಾಹಿ. ೦೩); ಇಲ್ಲೆಲ್ಲಾ ಲಾಲಿತ್ಯದಿಂದ ಭವ್ಯತೆಯವರೆಗೆ ವಿವಿಧ ಭೂಮಿಕೆಗಳಲ್ಲಿ ವ್ಯಾಪಿಸುವ ದೇವತೆಯ ಚಿತ್ರಗಳಿವೆ (ಸೌಂದಕ. ೯೯). ೪. ಮುನ್ನುಡಿ ; ಪ್ರಸ್ತಾವನೆ. ೫. ನಿಲುವು : ತನ್ನ ಭೂಮಿಕೆಯನ್ನು ಕುಮಾರಿಯು ಸ್ಪಷ್ಟಗೊಳಿಸಿದಳು (ಸಮುತೀ. ೭೪೦). ೬. ಹಿನ್ನೆಲೆ ; ತಳಹದಿ : ಅದಕ್ಕೆ ಬೇಕಾದ ಭೂಮಿಕೆಯನ್ನು ನಿರ್ಮಿಸಿ ಆ ವಿಚಾರವನ್ನು ರಾಜನ ಕಿವಿಯವರೆಗೆ ಹಾಕಿದರೆ ಕಾರ್ಯಕಾರಿಯಾಗಬಹುದೋ ? (ಮೂರಜ. ೭೪). ೭. ಶಾಸನ ಮುಂತಾದು ವನ್ನು ಬರೆಯುವ ಶಿಲಾಫಲಕ : ಕೀರ್ತಿ ಪ್ರಶಸ್ತಿಯು ಸ್ಫಟಿಕಭೂಮಿಕೆ ಯಂತೆ (ವ್ಯಶಾಬಿ. ೪೦-೭೨೬). ೮. [ಕಾವ್ಯಮೀ] ನಾಟಕಾದಿ ರೂಪಕಗಳ ಪಾತ್ರ,–ವೇಷ : ಭಕ್ತನು ಕಲ್ಪಿಸಬಹುದಾದ ತಂದೆ, ತಾಯಿ, ಬಂಧು, ಒಡೆಯ, ಸಖ, ನಲ್ಲ ಈ ಮುಂತಾದ ಯಾವ ಬೇಕಾದ ಅಥವಾ ಎಲ್ಲ ಭೂಮಿಕೆಗಳನ್ನು ಪರಮಾತ್ಮನು ಕೈಕೊಳ್ಳಬೇಕಾಗುವುದು! (ಪತರ. ೬೦); ಜೈನಪುರಾಣಗಳಲ್ಲಿ ಕಾಮನ ಭೂಮಿಕೆಯು ಬೇರೆ ವಿಧವಾಗಿದೆ (ಸಾಹಿಸ. ೦೭೩). ೯. [ವೇದಾಂತ] ಮೋಕ್ಷಸಾಧಕನಿಗೆ ಹೇಳಿರುವ ಸುಖೇಚ್ಛೆ, ಸದಾತ್ಮವಿಚಾರ, ನಿಸ್ಸಂಗ, ವಾಸನಾಕ್ಷಯ, ಆನಂದಿನಿ, ತುರೀಯ, ತುರೀಯಾತೀತವೆಂಬ ಏಳುಸ್ಥಲಗಳು : ಪೇಳುವೆ ನಿನಗೆ . . . ಭೂಮಿಕೆಗಳಭ್ಯಾಸದಿರವುಗಳ (ಅಮೃತ. ೦-೧೬). ೧೦. ಮೋಕ್ಷಸಾಧನೆಯ ಬಾಲಲೀಲೆ, ಅಕ್ಷರಾಭ್ಯಾಸ, ಕಾವ್ಯನಾಟಕಾದಿ ಸಾಹಿತ್ಯಾಭ್ಯಾಸ, ದರ್ಶನಾಭ್ಯಾಸ. ಶಾಸ್ತ್ರಾಭ್ಯಾಸ, ಪೂರ್ವಮೀಮಾಂಸಾಧ್ಯಯನ, ವೇದಾಂತಾಧ್ಯಯನ, ವಿವಿದಿಷಾ, ವಿಚಾರಣಾ, ತನುಮಾನಸಾ, ಸತ್ವಾಪತ್ತಿ, ಅಸಂಸಕ್ತಿ, ಪದಾರ್ಥಭಾವಿನೀ ಮತ್ತು ತುರ್ಯಗಾ ಎಂಬ ಹದಿನಾಲ್ಕು ಹಂತಗಳು: ಅಭ್ಯಾಸಕ್ರಮದಲ್ಲಿ ಏಳು ಭೂಮಿಕೆಗಳು ಸಾಧನಾನುಷ್ಠಾನಗಳಲ್ಲಿ, ಜ್ಞಾನಭೂಮಿಕೆಗಳೇಳು ಒಟ್ಟು ಹದಿನಾಲ್ಕು ಭೂಮಿಕೆಗಳು (ಶಾರದ. ೨೨೬). [ಸಂ. ಭೂಮಿಕಾ]

**ಭೂಮಿಗೃಹ** (ನಾ). ನೆಲದೊಳಗೆ ಕಟ್ಟಿರುವ ಮನೆ; ನೆಲಮನೆ; ನೆಲಮಾಳಿಗೆ : ಮಹಾಶನಿರಕ್ಷೋಪಾಯಮಂ ಬೆಸಗೊಳೆ ಭೂಮಿಗೃಹ ಪ್ರವೇಶ ಮಂಜೂಷಿ ಜಯಾ[ಮಂಜೂಷಾಜಲಾ] ವಗಾಹಾದಿ ರಕ್ಷೋ ಪಾಯಂಗಳನೇಕಂಗಳಂ ಮಂತ್ರಿಗಣಂ ನುಡಿದು ತೋಱೆ (ಶಾಂತಿಪು. ೬-೨೩ ವ). 'ಭೂಗೃಹ' ಪರಾ. [ಸಂ.]

**ಭೂಮಿಗೋಚರ** (ನಾ). ಮನುಷ್ಯ ; ಮಾನವ : ವಿಶ್ವವಿದ್ಯಾಧರ ಭೂಮಿಗೋಚರಕಿರೀಟಶಿಖಾಮಣಿ ಚುಂಬಿತಕ್ರಮಾ (ಶಾಂತಿಪು. ೯-೬) ; ವಿಯಚ್ಚರಪತಿಯಪ್ಪ ರಾವಣನಿರಲ್ ಕರಮೇಳಿದರಪ್ಪ ಭೂಮಿಗೋಚರ ರೊಳಸೇವ್ಯರೊಳ್ ತನಗೆ ಕಿಂಕರಭಾವಮನಪ್ಪುಕೆಯ್ದಂ (ಪಂಪರಾ. ೦೦-೦೦೪). 'ಭೂಗೋಚರ' ಪರಾ. [ಸಂ.]

**ಭೂಮಿಚ್ಛಿದ್ರನ್ಯಾಯ** (ನಾ). ಭೂಮಿಯನ್ನು ಹಂಚುವ ಬಗ್ಗೆ ರಾಜನು ಅನುಸರಿಸಬೇಕಾದ ನಿಯಮ,–ವಿಧಾನ : (ಕೋಕಸ. ೦೪೨). P 'ಭೂಮಿಚ್ಛಿದ್ರ' ಎಂದರೆ ಕೃಷಿಗೆ ಅನರ್ಹವಾಗಿರುವ ಭೂಮಿ ಎಂದರ್ಥ. ಈ ವಿಷಯವು ಕೌಟಿಲ್ಯನ ಅರ್ಥಶಾಸ್ತ್ರದ ೨ನೆಯ ಅಧಿಕರಣದಲ್ಲಿ 'ಭೂಮಿಚ್ಛಿದ್ರವಿಧಾನಂ' ಎಂಬ ೨೦ನೆಯ ಪ್ರಕರಣದಲ್ಲಿ ಸೂಚಿತವಾಗಿದೆ. ಅದರಲ್ಲಿ ವ್ಯವಸಾಯಕ್ಕೆ ಯೋಗ್ಯ ವಲ್ಲದ ಭೂಮಿಯನ್ನು ಗೋಮಾಳ, ತಪೋವನ, ಹೂದೋಟ, ಮೃಗವನವಾಗಿ ಪರಿವರ್ತಿಸುವ ವಿಧಾನ, ಬೇಡರ ಕಾಟದಿಂದ ನುಸುಳಿಕೊಂಡು ಬರುವ ಜಿಂಕೆಗಳಿಗಾಗಿ "ಸರ್ವಾತಿಥಿಮೃಗ" ಎಂಬ ವನವೊಂದನ್ನು ನಿರ್ಮಿಸುವುದು ಮೊದಲಾದ ಭೂಮಿಯ ಹಂಚಿಕೆಗೆ ಸಂಬಂಧಪಟ್ಟ, ರಾಜನು ಅನುಸರಿಸಬೇಕಾದ ವಿಧಾನಗಳ

ವಿವರಣೆ ಇದೆ. ಇದಲ್ಲದೆ 'ಭೂಮಿಚ್ಛಿದ್ರಾಪಿಧಾನನ್ಯಾಯ' ಎಂಬ ಮತ್ತೊಂದು ನ್ಯಾಯವೂ ಇದೆ. [ ಸಂ. ]

**ಭೂಮಿಜ** (ನಾ). ೧. ಭೂಮಿಯಲ್ಲಿ ಹುಟ್ಟುವುದು ; ಮರ : ಪಾರಿಜಾತಕ್ಕೆ ಭೂಮಿಜಂಗಳು ಸರಿಯೆ (ಬಸವು. ೩೪-೨೨); ಗಿರಿಗಳಿಂ ಭೂಮಿಜಗಳಿಂ ತಳ್ತ ಬನಂಗಳಿಂ (ಕುವಡಾವು. ೨-೪). ೨. ಭೂದೇವಿಯ ಮಗ ; ಕುಜ ; ಭೌಮ. ೩. ನರಕಾಸುರ. ೪. ಮನುಷ್ಯ. ೫. [ಅಶ್ವಶಾ] ಕುದುರೆಗಳಲ್ಲಿ ಒಂದು ಬಗೆ : ''ಭೂಮಿಜಂಗಳಂ ಆಜಾನೇಯಂಗಳೆಂಬುದು'' (ಹಲಾಯು. ೬೨-೨೮೩). ೬. [ವಾಸ್ತು] ಒಂದು ಬಗೆಯ ಶಿಲ್ಪಶೈಲಿ (?) : ವಿಶ್ವಕರ್ಮ ನಭವಂಗೆಂದೊಲಿದು ಸವ್ಯಕೃತಿಯೊಳ್ ಭರದಿಂ ಕಂಡರಿಸಿಟ್ಟನೆಂಬನೆಗನೇಕ ದ್ರಾವಿಡಂ ಭೂಮಿಜಂ ಖರಿದುಂ ನಾಗರಮೆಂಬ ಬಹುವಿಧದ ಭದ್ರೋಪೇತದಿಂ ಕಣ್ಗೆಪಂದಿರೆ ಕೋಟೀಶಭವಾಲಯಂ ಸುಬಲಿತಂ ಸೌಮ್ಯಂ ಸೌಷ್ಠವಂ (ಎಕ. VIII, ಸೊರಬ. ೨೭೫-೬; 1231). [ಸಂ.]

**ಭೂಮಿಜಂಬುಕೆ** (ನಾ). ಒಂದು ಬಗೆಯ ನೇರಳೆ ; ನೆಲನೇರಿಳೆ : ''ನಾದೇಯಿಪಾ ಭೂಮಿಜಂಬುಕಾ—೨ ನೆಲನೇರಳೇ ಪೆಸರುಗಳು'' (ನಿಘಂ. ೧೩೯). [ಸಂ. ಭೂಮಿಜಂಬುಕಾ]

**ಭೂಮಿಜೆ** (ನಾ). ಭೂಮಿಯಲ್ಲಿ ಜನಿಸಿದವಳು; ಸೀತೆ : ಆ ತಪಸ್ವಿಗಳ್ . . . ಭೂಮಿಜೆಯಂತೆ ಕುಶಲವಾಧಿಸ್ಮಿತರುಂ . . . ಎನಿಸಿರ್ದರ್ (ಗಂಕ. ೦-೬೯ ವ); ಬೆರೆಸಿದುದು ಲಜ್ಜೆ ಭೂಮಿಜೆಗೆಂದು (ಕೈವಲ್ಯ. ೦೯-೮೦). [ಸಂ. ಭೂಮಿಜಾ]

**ಭೂಮಿತಿ** (ನಾ). [ಗಣಿತ] ರೇಖೆ, ಕ್ಷೇತ್ರ, ಘನಾಕೃತಿ—ಇವುಗಳ ಲಕ್ಷಣಗಳ ಮತ್ತು ಪ್ರಮಾಣಸಂಬಂಧಗಳ ಪರಿಚಯವನ್ನುಂಟುಮಾಡಿ ಕೊಡುವ ಗಣಿತಶಾಸ್ತ್ರ; ರೇಖಾಗಣಿತ : ಇಂದು ಕಾಮಿನಿಗೆ ಭೂಮಿತಿ ಕಲಿಸುವಾಗ ಅವಳ ಕೈಯ ಮೇಲೆ ನನ್ನ ಕೈಯನ್ನಿಡಬೇಕು (ಮುಕ್ತಿ. ೬೯); ಹೊಲಸುಗೋಡೆಯ ಮೇಲೆ ಇದ್ದಲಿಯಿಂದ ತೆಗೆದ ಭೂಮಿತಿಯ ಆಕೃತಿ ರೇಖೆಗಳು ಇನ್ನೂ ಕಾಣುತ್ತಿವೆ (ಇಪ್ಪ. ೩೯೬). 'ಜ್ಯಾಮಿತಿ' ಪರಾ. [ಸಂ.]

**ಭೂಮಿದುಂದುಭಿ** (ನಾ). ಒಂದು ಬಗೆಯ ವಾದ್ಯ : ಭೂಮಿಯಲ್ಲಿ ಹಳ್ಳ ತೋಡಿ ಅದರ ಬಾಯಿಗೆ ಚರ್ಮ ಬಿಗಿದು 'ಭೂಮಿದುಂದುಭಿ' ಎಂದು ಹೆಸರು ತಾಳಿದ ಈ ವಾದ್ಯ . . . ತಾಳವಾದ್ಯವಾಗಿ ಪ್ರಯೋಗದಲ್ಲಿತ್ತೆಂದು ಕೃಷ್ಣಯಜುರ್ವೇದ ಸಾಹಿತ್ಯ ತಿಳಿಸುತ್ತದೆ (ಸಂಗೀತಸಂ. ೩೦೯). [ಸಂ.]

**ಭೂಮಿದೇವ** (ನಾ). ಬ್ರಾಹ್ಮಣ ; ಭೂಸುರ : ಕಾಮಧೇನು ಸಹಸ್ರ ಕಪಿಲೆಯು . . . ಶತಭೂಮಿದೇವರಿಗಿತ್ತ ಫಲವಹುದೀ ಮಹಾಭಾರತದೊಳೊಂದಕ್ಷರವ ಕೇಳ್ದರಿಗೆ (ಕುಮ್ಯಾಆ. ೧-೨೦); ಆ ವೇಳೆಯಲ್ಲಿ ಕೃತಕದ ಪಶುವನಾ ಭೂಮಿದೇವರೆಲ್ಲರೂ ಕೂಡಿ ರಚಿಸಿಯಾತನ ಪೊಲದ ಠಾವಿನೊಳಗಿರಿಸಿದರು (ಏಕ್ಕಪು. ೪-೨-೬). [ಸಂ.]

**ಭೂಮಿಧರ** (ನಾ). ೧. ಬೆಟ್ಟ; ಪರ್ವತ : ಪರಮಗಂಭೀರೆ ಸದ್ವಟ ಫಲಾಧರೆ ಭೂಮಿಧರಜಘನೆ . . . ಕರುವಿಟ್ಟೆಚಿದ ಸುವರ್ಣದ ಬೊಂಬೆಯಂತೆ ನಿಂದಿರೆ ಕಂಡನರಸನಾಗ (ಶ್ರೀರಾ. ೩-೨೬). ೨. ರಾಜ; ಅರಸ. ೩. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : 'ಭೂಧರ' ಪರಾ. [ಸಂ.]

**ಭೂಮಿಪ** (ನಾ). ೧. ಭೂಮಿಯನ್ನು ಪಾಲಿಸುವವನು; ದೊರೆ; ರಾಜ : ಭೂಮಿಪನುಪ್ಪಟನ ಶರಸ್ತೋಮಮನೆದೆಯಲ್ಲಿ ಕಡಿದು . . . ಪೆರ್ಚಿದನಸುರಂ (ಅರ್ಜುಟ. ೪-೯೩); ಎನಗೆ ಭೀಮಾರ್ಜುನರ ಕೊಡುರಿಪುರಮಣಿಯರ ಸೀಮಂತಮಣಿಗಳ ನಿಮಿಷದಲಿ ತರಿಸುವೆನು ಹಜಿಸುವೆನಹಿತಭೂಮಿಪರ (ಕುಮ್ಯಾಕ. ೨-೩೨). ೨. ಕ್ಷತ್ರಿಯ : ಭೂಮಿಪರನುಜಿಜಜಿದ ಭಾರ್ಗವರಾಮನನು ಗೆಲಿದು (ಕೊರಡಾ. ೦-೧೭ ಸೂಚಕ). [ಸಂ.]

**ಭೂಮಿಪತಿ** (ನಾ). ಭೂಮಿಯ ಒಡೆಯ ; ದೊರೆ : ಕೌರವ ಭೂಮಿಪತಿಯೊಡ್ಡಿದನು ಧರ್ಮಜ ಹೆಸರಿಸಿದ ಧನವ (ಕುಮ್ಯಾಸ. ೦೩-೪೯); ಭೂಮಿಪತಿ ಕೇಳ್ಬಳಿಕ ಸೌರಾಷ್ಟ್ರದಿಂದೆ ಸುತ್ರಾಮಸುತನು ನಡೆತರುತಿರ್ದನು (ಕೈಬಾಭಾ. ೨೮-೧). [ಸಂ.]

**ಭೂಮಿಪಾಲ** (ನಾ). = ಭೂಮಿಪ ೧ : ಕನಕಶೈಲಮೆನಿಸಿ ನೆಗಟ್ದ ಭೂಮಿಪಾಲಭವನದಿಂ ಸಮಸ್ತವಸ್ತುಭುವನದಿಂ (ಶಂಕಭಾ. ೦-೫೮ ರಗಳೆ) ; ಕರುಣಿಸು ಭೂಮಿಪಾಲಯೆಂದಡಿಗೆಜಗಿ ಬೀಳ್ಕೊಂಡು ನಿಂದಳಾಪುರಿಯುದಿರೊಳು (ಕದಂಬ. ೦೦-೨೩). [ಸಂ.]

**ಭೂಮಿಪಾಲಕ** (ನಾ). = ಭೂಮಿಪ ೧ : ಜಿನೇಶ್ವರಂ ಬೆಸಸೆ ಕೇಳ್ದ ಜಿತಂಜಯ ಭೂಮಿಪಾಲಕಂ ... ದೀಕ್ಷೆಗೆ ಮನಂದಂದು (ಶಂದ್ರಪು. ೭-೨೮); ಭೂಮಿಪಾಲಕ ಕೇಳು ಪೇಳ್ವೆನು (ಬಸವು. ೫೬-೨). [ಸಂ.]

**ಭೂಮಿಭೃತ್ತು** (ನಾ). ೧. ದೊರೆ ; ಅರಸ; ರಾಜ : ಮೇರುವಿಂ ಭೂಮಿಭೃದ್ವರನಪ್ಪಾಹಿತನಿಂ ಕಳಾನಿಧಿಕುಮಾರಂ ಪುಟ್ಟುವಂ ನಿಶ್ಚಯಂ (ರಾಜಶೇ. ೪-೨೯). ೨. ಬೆಟ್ಟ ; ಪರ್ವತ. [ಸಂ. ಭೂಮಿಭೃತ್]

**ಭೂಮಿರುಹ** (ನಾ). ಭೂಮಿಯಲ್ಲಿ ಬೆಳೆಯುವುದು ; ಗಿಡ, ಮರ ಮುಂತಾದುವು : ಈವ ನೆಗಟ್ಟೆ ಕಲ್ಪಭೂಮಿರುಹದಿನಗ್ಗಳಂ (ಎಕ. II, ೦೬೩-೨೬ : ೯೮೨). [ಸಂ.]

**ಭೂಮಿರೇಖೆ** (ನಾ). ಲೋಹದ ತಗಡಿನಲ್ಲಿ ಯಂತ್ರಗಳನ್ನು ಲಿಖಿಸುವಾಗ ಹಾಕುವ ಗೀರು, — ಗೆರೆ : ಗಳರೇಖಾಕೃತಿ ಭೂಮಿರೇಖೆ . . . ಕಾಶ್ಮೀರಾದಿ ಲಿಪ್ತಂ ಮನಂಗೊಳೆ ಕಂದರ್ಪನ ವಶ್ಯಯಂತ್ರಮೆನಿಸಿತ್ತಾಸ್ಯಂ ಸರೋಜಾಸ್ಯೆಯಾ (ಗದಾಯು. ೮-೫೨). [ಸಂ. ಭೂಮಿರೇಖಾ]

**ಭೂಮಿಲಂಬ** (ನಾ). ಭೂಮಿಯಷ್ಟು ದೊಡ್ಡದಾದುದು ; ಭೂಮಿಯ ಅಗಲವನ್ನು ವ್ಯಾಪಿಸಿಕೊಂಡಿರುವುದು : ರಾಮಣೀಯಕವಹ ಸುಶಕುನಸ್ತೋಮವನು ವಿವರಿಸುತ ಹೊಕ್ಕರು ಭೂಮಿಲಂಬದ ನೃಪರ ನೆರವಿಯ ದ್ರುಪದಪಟ್ಟಣವ (ಕುಮ್ಯಾಆ. ೦೨-೧) ; ಮಗಧನೃಪಾಲನಾಹವಕೆ ಭೂಮಿಲಂಬದ ಬಲಸಹಿತ ಸಂಗ್ರಾಮಧೀರನು ಬರುತ (ಶಿಖಾಗ. ೦೨-೫೫-೨೬). [ಸಂ.]

**ಭೂಮಿವಲ್ಲಭ** (ನಾ). = ಭೂಮಿಪತಿ : ಈ ಮಹಾರಾಷ್ಟ್ರಕ್ಕೆ ಶಾನೀ ಭೂಮಿವಲ್ಲಭನಲ್ಲದೇ ಮತ್ತೀ ಮಹಿಯೊಳಗೆ ಹೇಳಲಿಲ್ಲೆಂದೆಂಬ ಬುದ್ಧಿಯದು (ಬಸವು. ೫೦-೧೬). [ಸಂ.]

**ಭೂಮಿವಿಲಗ್ನ** (ನಾ). [ನಾಟ್ಯ] ಅಂಗಾಲಿನ ಆರು ಭೇದಗಳಲ್ಲಿ ಒಂದು ; ನೆಲದ ಮೇಲೆ ಪಾದವನ್ನು ಸರಿಯಾಗಿ ಊರಿರುವುದು : ಪತಿತಾಗ್ರ, ಉಚ್ಛ್ರಿತಾಗ್ರ, ಭೂಮಿವಿಲಗ್ನ, ಉದ್ವೃತ್ತ, ಕುಂಚಿತ್ನಮಧ್ಯ, ತಿರಶ್ಚೀನ — ಈ ಆಱುಂ ಅಂಗಾಲ ಭೇದಂಗಳ್ (ಶಾಸ್ತ್ರರು. ೩-೦೨೦ ವ). [ಸಂ.]

**ಭೂಮಿಸ್ಪರ್ಶ** (ನಾ). ಮಗು ಹುಟ್ಟಿ ಭೂಮಿಗೆ ತಗುಲುವುದು ; ಶಿಶುವಿನ ಜನನ : ಜಾತಕನ ಭೂಮಿಸ್ಪರ್ಶವಾದುದು ಪ್ರಾತಃಕಾಲ ಎಂಟು ಗಂಟೆಗೆ (ರೂಢಿ). [ಸಂ.]

**ಭೂಮಿಸ್ಪೃಶ** (ನಾ). ೧. ಮನುಷ್ಯ. ೨. ವೈಶ್ಯ : "ಆರ್ಯಾಃ, ಭೂಮಿಸ್ಪೃಶಃ, ವೈಶ್ಯಾಃ, ಊರವ್ಯಾಃ, ವಿಶಃ — ಈ ೫ ವೈಶ್ಯಂ" (ಹಲಾಯು. ೯೩೪-೦೬). ೩. ಕುರುಡ; ಅಂಧ. ೪ ಕುಂಟ ; ಹೆಳವ. [ಸಂ. ಭೂಮಿಸ್ಪೃಶ್]

**ಭೂಮಿಹುಣ್ಣಿಮೆ** (ನಾ). ಭಾದ್ರಪದ ಶುದ್ಧ ಹುಣ್ಣಿಮೆ : ಭೂಮಿಹುಣ್ಣಿಮೆ ಹಬ್ಬದಲ್ಲಿ ನೂಲಿಗೆಣಸು, ಉಗನಿಕಾಯಿ. ಬೆರಕೆಸೊಪ್ಪು ಇತ್ಯಾದಿ

ಗಳನ್ನು ಸಂಗ್ರಹಿಸುವಾಗಲೋ . . . ಗುತ್ತಿಗೆ ಸಹ್ಯಾದ್ರಿಯ ಆ ಅರಣ್ಯ ಪ್ರದೇಶ ಸುಪರಿಚಿತವಾದದ್ದೆ ಆಗಿತ್ತು (ಮಲೆಮ. ೩೭೭).

[ ಭೂಮಿ + ಹುಣ್ಣಿಮೆ (< ಪುಣ್ಣಮೆ) ]

**ಭೂಮಿಾಜ** (ನಾ). =ಭೂಮಿಜ ೧ : ಭೂಮಿಾಜದಿಂ ತಣ್ಣೆರಲಿಂ ಮಾರ್ಗಂ . . . ಎಸೆಗುಂ ದೇಶದೊಳ್ಳಿಂದಜಸ್ರಂ (ರಾಜಶೇ. ೨-೨೭). [ಸಂ.]

**ಭೂಮಿಾಧ್ರ** (ನಾ). ಬೆಟ್ಟ ; ಪರ್ವತ : ತುಹಿನಭೂಮಿಾಧ್ರಕ್ಕೆ ಸಾರ್ದಂ ಪರಬ್ರಿಯನಾವರ್ತಿಸೆ ತಳ್ತು ನಾಲ್ದೆಸೆಯುಮಂ ಗ್ರೀಷ್ಮಪ್ರತಾಪೋದಯಂ (ಚಂದ್ರಪ್ರ. ೯-೭೭) ; ತಾಮರಸಮಿತ್ರ ಶುಚಿ ತಾಮರಸವೈರಿನಯನಾ . . . ರುಂದ್ರ ಭೂಮಿಾಧ್ರ ಭಿನ್ನಭಿದುರಾ ಪಾಲಿಸೆಮ್ಮುಮಂ ಪ್ರೇಮದಿಂ (ಅರಾಚ. ೧-೧-೧). [ಸಂ.]

**ಭೂಮಿಾಶ** (ನಾ). = ಭೂಮಿಪತಿ : ಈ ಸಮಂಜಸದಿವಸದಲಿ ಸಿಂಹಾಸನದಲಭಿಷೇಕವನು ಭೂಮಿಾಶ ವಿಸ್ತರಿಸುವೆನು (ಕುಮಾ.ವಿ. ೧೧-೨೨) ; ಆ ಮಾಧವಂ . . . ಭೂಮಿಾಶದರ್ಶನೋತ್ಸವಕ್ಕೆ ಬಿಜಯಂಗೈದನು (ಕೃಚಾಭಾ. ೬-೧೩). [ಸಂ.]

**ಭೂಮಿಾಶ್ವರ** (ನಾ). = ಭೂಮಿಪತಿ : ಗುರುಶಿಕ್ಷಾವಚನಂಗಳಂ ಹೃದಯದೊಳ್ . . . ತಾಳ್ದಿದನುತ್ತರೋತ್ತರತೆಯಿಂ ಶ್ರೀವರ್ಮ ಭೂಮಿಾಶ್ವರಂ (ಚಂದ್ರಪ್ರ. ೪-೨೫) ; ತಿರಿವ ಹಾರುವರೊಡನೆ ಭೂಮಿಾಶ್ವರರಿಗೆತ್ತಣ ಮೈತ್ರಿ (ಕುಮಾ.ಆ. ೬-೩೧). [ಸಂ.]

**ಭೂಯಿಷ್ಠ** (ಗು). ೧. ಹೆಚ್ಚಾದ ; ಅತಿಶಯವಾದ : ಕಷ್ಟಭ್ರಷ್ಟ ಕನಿಷ್ಠ ದಕ್ಷವಿಳಸದ್ಭೂಯಿಷ್ಠ ಬೃಂದಿಷ್ಠನಾದಿಷ್ಟೋತ್ಕೃಷ್ಟನಿಜೇಷ್ಟದಾಧ್ವರಹರಂ (ಹರಿಶ್ಚ.ರ. ೧-೭). (ನಾ). ೨. ಅಧಿಕವಾದುದು ; ಪ್ರಚುರವಾದುದು : "ಪ್ರಭೂತಂ . . . ಭೂಯಿಷ್ಠಂ, ಸ್ಫಾರಂ, ಭೂಯಃ, ಭೂರಿ — ೧೨ ಅಧಿಕವಾದದ್ದರ ಹೆಸರುಗಳು". (ಸಿದ್ಧಾಂತಿ. ೩೪೦) ; ತುಂಗ ತುರಂಗಮ ಭೂಯಿಷ್ಠಂಗಳ್ ಕೊಟ್ಟಜದ ಕೊಟ್ಟ ಕಪ್ಪದ ಭಂಡಾರಂಗಳ್ ನಿಂದುವು ರಾಜಗೃಹಾಂಗಣದೊಳ್ (ಶಾಂತಿಪು. ೧೧-೨೮) : ತತ್ತ್ವನಿರೂಪಣೆಯು ಇಲ್ಲಿ ಭೂಯಿಷ್ಠವಾಗಿದ್ದರೂ ಇದು ತತ್ತ್ವಪ್ರಧಾನ ಕಾದಂಬರಿಯಲ್ಲ (ಸಪುಶೀ. ೩೭ ಪು:೮೫). ೩. ಪರಿವಾರ ; ಬಳಗ : ಮಹಾಸ್ವಾಮಿಯ ಪಾದಸ್ಪರ್ಶದ ಐಶ್ವರ್ಯಸುಖಕ್ಕೆ ಪ್ರಸ್ತುತ ಮನೆಯ ಭೂಯಿಷ್ಠವು ಪಾತ್ರವಾಗದೇ ಇರುವುದೇ ದೊಡ್ಡ ಲೋಪವಲ್ಲವೆ ಮಹಾಪ್ರಭು ? . . . ನಿಮ್ಮ ಮನೆಯ ಭೂಯಿಷ್ಠ ಪರಿಶುದ್ಧವಾಗುವುದೆಂಬ ಮಾತು ಉಪಚಾರೋಕ್ತಿ (ಮೂಮಿಾ. ೬೬). [ಸಂ.]

**ಭೂಯುಗ** (ನಾ). ಭೂಮಿಯ ಪ್ರಾಕೃತಿಕ ಸ್ವರೂಪ ಹಾಗೂ ಸ್ಥಾವರ ಜಂಗಮ ವಸ್ತುಗಳು ಬದಲಾವಣೆಯಾಗುವ ಕಾಲ ; ಭೂಮಿಯ ಪರಿವರ್ತನಕಾಲ : ಭೂಮಿಯ ಮೇಲೆ ಮನುಷ್ಯನು ಮೊದಲು ಕಾಣಿಸಿಕೊಂಡಿದ್ದು ಸುಮಾರು ಐದುಲಕ್ಷ ವರುಷಗಳ ಹಿಂದೆ ಎಂದು ತೋರುತ್ತದೆ, ಈ ಕಾಲವನ್ನು ಭೂಗರ್ಭಶಾಸ್ತ್ರಪಂಡಿತರು ಮೂರನೆಯ ಭೂಯುಗ (Pleistocene) ವೆನ್ನುತ್ತಾರೆ (ಶಿಲ್ಪಶಾ. ೧೮). [ ಸಂ. ]

**ಭೂಯೋನುಗ್ರಹನ್ಯಾಯ** (ನಾ). ಕಡಮೆಯಾಗಿರುವ ದೋಷಗಳನ್ನು ಗಣಿಸದೆ ಹೆಚ್ಚು ಗುಣಗಳುಳ್ಳ ವ್ಯಕ್ತಿ ಅಥವಾ ವಸ್ತುವಿಗೆ ಪುರಸ್ಕಾರವನ್ನು ಕೊಡುವ ದೃಷ್ಟಾಂತ : ಲೋಕದಲ್ಲಿ ಪ್ರಾಯಃ ಪ್ರತಿಯೊಂದು ವಿಷಯದಲ್ಲೂ ಸರಿಯಾಗಿರುವುದು ಹೆಚ್ಚು, ಕೆಟ್ಟು ಹೋಗುವುದು ಕಡಿಮೆ . . . ಹೀಗೆ ಸಕಲವಿಷಯಗಳಲ್ಲೂ ಸರಿಯಾಗಿರುವುದು ಹೆಚ್ಚು ಎಂಬುದಕ್ಕೆ ಭೂಯೋನುಗ್ರಹನ್ಯಾಯವೆಂದು ಹೆಸರು (ಹಿಂದಗ್ರಂ. ೧೩೭). [ಸಂ.]

**ಭೂಯೋಪಾಧ್ಯ** (ನಾ). ಅನೇಕ ವಿದ್ಯೆಗಳನ್ನರಿತವನು ; ಮಹಾವಿದ್ವಾಂಸ : ಬಗೆಯುಪನ್ಯಾಸದ ಸುಶಾಖಿಗಳ ಬೀಳಲು ಬೆಳೆದ ಗಡ್ಡದ ವಿಗಡಭೂಯೋಪಾಧ್ಯರಿದ್ದುದು [ಪಾಠಾಂ. ವಿದ್ಯರಿದ್ದರು] ರಾಜಸಭೆಯೊಳಗೆ (ಕುಮಾ.ಉ. ೯-೩೭). [ < ಸಂ. ಭೂಯೋಪಾಧ್ಯಾಯ]

**ಭೂಯೋವಿದ್ಯ** (ನಾ). = ಭೂಯೋಪಾಧ್ಯ : ಬಗೆಯುಪನ್ಯಾಸದ ಸುಶಾಖಿಗಳ ಬೀಳಲು ಬೆಳೆದ ಗಡ್ಡದ ವಿಗಡಭೂಯೋವಿದ್ಯರಿದ್ದರು [ಪಾಠಾಂ. ಪಾಧ್ಯರಿದ್ದುದು] ನೃಪನ ಸಭೆಯೊಳಗೆ (ಕುಮಾ.ಉ. ಓಂ೨. ೯-೩೭). [ಸಂ.]

**ಭೂರಣ** (ನಾ). ಖಡ್ಗಯುದ್ಧದ ಒಂದು ವರಸೆ (?) : ಸೈಪಾರಿಸೆ ಕಂಡ ಭೂರಣದೆ ರೂಪಿಸಿದಂ ಪೊಯ್ಯೆ ಕಾಳವಟ್ಟದಿಂ (ಅನಂಪು. ೧೧-೬೦). [ ? ]

**ಭೂರಥ** (ನಾ). ಭೂಮಿಯನ್ನೇ ರಥವಾಗಿ ಮಾಡಿಕೊಂಡವನು : ಶಿವ : ಅಂಧಕಾಸುರಮೋಘಮಮಾನ ಭೂರಥ ಜಲಂಧರಾಸುರಕುಜಕುಠಾರ (ಶ್ರೀರಾ. ೧೭-೧). [ ಸಂ. ]

**ಭೂರಮಣ** (ನಾ). = ಭೂಮಿಪತಿ : ಭೂರಮಣೋದ್ಭಟಾಂಕ ನೃಪಕುಂಜರಸೊಯ್ಯನೆ ತುಳ್ಕಿದಚ್ಛಕಸ್ತೂರಿಯ ವಾರಿಯಿಂ ನೆನೆದು (ಜನ್ನಲಿ. ೯-೧೧೪) : ಭೂರಮಣನೈತಂದು ಪೊಕ್ಕನು ಹಸ್ತಿನಾಪುರವ (ಕುಮಾ.ಗ. ೧೨-೧೧೧). [ಸಂ.]

**ಭೂರಿ** (ಗು). ೧. ಹೆಚ್ಚಾದ : ಅಧಿಕವಾದ ; ಅತಿಶಯವಾದ : ಸಮುಚ್ಚಯಜಾತದೋಷಮುಂ ಭೂರಿವಿಕಲ್ಪದೋಷಮುಂ . . . ವಿಶಂಕಾರಚಿತೋರುದೋಷಮುಮನೀ ತೆಱದಿಂ ತಱಿಸಲ್ಕೆ ಪಂಡಿತರ್ (ಕವಿರಾ. ೧-೧೧೩) ; ಇತ್ತ ವಿಶಾಖಭೂತಿಯುಂ ಭೂರಿತಪೋಭಾರಮಂ ನಿರ್ವಹಿಸಿ ಶತಾರಕಲ್ಪದೊಳ್ ಸಾಮಾನಿಕದೇವನಾದೊಂ (ಶಾಂತಿಪು. ೬-೩೯ ವ) ; ಪಾಂಡುನೃಪಾಲಕರ ವಳ್ ನಡೆದು ಬಂದುದು ಭೂರಿರಭಸದಲಿ (ಕುಮಾ.ಆ. ೧೦-೧). ೨. ಅಧಿಕ ಸಂಖ್ಯೆಯ ; ಅಸಂಖ್ಯಾತವಾದ : ಮನುಜ ವೇಷದಲಿ ಭೂರಿದನುಜರನೊರಸಿದನು ಕೈಯಾರ (ಕುಮಾ.ಉ. ೩-೨೦) ; ಭೂರಿಭೂರಿಪುಸಂಘಸಂಹೃತಿಶಕ್ತ ಶಕ್ತಿಸಮನ್ವಿತೇ (ರಾಜಶೇ. ೩-೧೧೪). ೩. ವಿಶಾಲವಾದ ; ವಿಸ್ತಾರವಾದ : ಅತ್ಯುದಾರತರ ನೂತನ ಗುಣಾನ್ವಿತ ಚಂದ್ರಕೀರ್ತಿಭಟ್ಟಾರಕರೆಂದು ಬಣ್ಣಿಪುದು ವಾರಿಧಿವೇಷ್ಟಿತ ಭೂರಿಭೂತಳಂ (ಸುಕುಮಾ. ೧-೨೨). (ನಾ). ೪. ಹೆಚ್ಚು : ಅಧಿಕ ; ಅತಿಶಯ : "ಪ್ರಾಜ್ಯಂ, ಭೂರಿ, ಪ್ರಭೂತಂ . . . ಅದಭ್ರಂ — ಈ ೧೮ ಮೊಕ್ಕಳಂ" (ಹಲಾಯು. ೦೦೭-೧೭) ; ಬಸವರಸನಾಗ ಸ್ಮೇರಮುಖನಾಗುತ್ತ ಕೂಡಿದಪಾರಪಟುಗರಳಂಗಳೆಲ್ಲಂ ಭೂರಿಯಾಗಲು ಪೊನ್ನ ಕೊಪ್ಪರಿಗೆಗಳೊಳಗೆ ಶೀವಿ (ಬಸಪು. ೩೮-೩೭) ; ಭೂರಿಯಲಿ ಮಿಗೆ ಭರಿತ ದಕ್ಷಿಣೆ ಮೃಷ್ಟಭೋಜನವುಂಟು ನಮಗೆ (ಕುಮಾ.ಆ. ೧೧-೭). ೫. ವಿಷ್ಣು. ೬. ಬ್ರಹ್ಮ. ೭. ಶಿವ. ೮. ಇಂದ್ರ. ೯. ಚಿನ್ನ ; ಸುವರ್ಣ : "ಹೇಮ, ಸ್ವರ್ಣಂ . . . ಭೂರಿ, ಚಂದ್ರಂ . . . ತಪನೀಯಂ — ಈ ೨೫ ಹೊನ್(ಪೊನ್)" (ಹಲಾಯು. ೨೯-೦೯) ; ಮೇರುವಂ ಸೋಂಕಿದ ಜಲಾ ತದ್ಭೂರಿವರ್ಣದೊಳಹುದು ಕಾಗೆ ವಿಚಾರಿಸಲು ಲಿಂಗೈಕ್ಯಭಾವರ ಕುಲವನಱಸುವರೆ (ಬಸಪು. ೩೭-೬೮). ೧೦. ಬಹುಜನಕ್ಕೆ ಕೊಡುವ ದಾನ ; ಸಾಮೂಹಿಕ ದಾನ ; ಭೂರಿದಕ್ಷಿಣೆ : ಮುತ್ತುಮಾಣಿಕಂಗಳಂ ಚೆಲ್ಲಾಡಿ ಮೊಗೆಮೊಗೆದು ವಿತ್ತಮಂ ಭೂರಿಯಂ ಮಾಡಿ (ಶರಚ. ೩೭-೦೭); ಭೂಮಿಸುರಚಯಕೆ ಭೂರಿಯನ್ನಿತ್ತು ಶುಭವಾದ್ಯಗಡಣಮಂ ಮೊಳಗಿಸುತ್ತೆ (ಪಪಮೋ. ೦೫-೨೭). ೧೧. ಕಟ್ಟಿಗೆ : ಕಾಷ್ಠ. ೧೨. ಅವಜ್ಞೆ ; ಉದಾಸೀನ ; ತಿರಸ್ಕಾರ : "ಕಾಷ್ಠಮನೇಕಕಾಂಚನಮವಜ್ಞೆಯು ಭೂರಿ ಸಮಾಖ್ಯೆ" (ನಾನಾರ. ೬೦). ೧೩. [ಗಣಿತ] ಏಕಸ್ಥಾನದಿಂದ ಹಿಡಿದು ಪರಾರ್ಧವೆಂಬ ಹದಿನೆಂಟನೆಯ ಸಂಖ್ಯೆಯಾದ ಮೇಲೆ ಹೇಳುವ ಪದ ; ಅಸಂಖ್ಯೇಯವೆಂಬ ಅರ್ಥವನ್ನು ತಿಳಿಸುವ ಪದ ; ಹತ್ತೊಂಬತ್ತನೆಯ ಸ್ಥಾನ : ಕೆಲವು ಹಿಂದೂಗಳು ಹತ್ತೊಂಬತ್ತನೆಯ

ಶ್ರೇಣಿಯೂ ಇದೆಯೆಂದು ಹೇಳುತ್ತಾರೆ. ಅದನ್ನು ಭೂರಿ ಎಂದು ಕರೆಯು ತ್ತಾರೆ (ಕೃಪಾಇ. I. ೪೫೬). P "ಏಕಂ, ದಶಂ, ಶತಂ, ಸಹಸ್ರಂ, ಅಯುತ, ಲಕ್ಷ, ಪ್ರಯುತ, ಕೋಟಿ, ನ್ಯರ್ಬುದ, ಪದ್ಮ, ಖರ್ವ, ನಿಖರ್ವ, ಮಹಾಪದ್ಮ, ಶಂಖ, ಸಮುದ್ರ, ಮಧ್ಯ, ಅಂತ್ಯ ಮತ್ತು ಪರಾರ್ಧ" (ಪ್ರವಾಇ. I. ೩೫೭) ಎಂದು ದಶಕವೃದ್ಧಿ ಸ್ಥಾನಗಳ ಹೆಸರುಗಳನ್ನು ಕೊಟ್ಟಿದ್ದಾರೆ. ಬೇರೆ ಗ್ರಂಥಗಳಲ್ಲಿ ಹೆಸರು ಮತ್ತು ವೃದ್ಧಿಸ್ಥಾನಗಳಲ್ಲಿ ವ್ಯತ್ಯಾಸವು ಕಂಡುಬರುತ್ತದೆ. [ಸಂ.]

**ಭೂರಿಗುಡು** (ಕ್ರಿ). ಎಲ್ಲರಿಗೂ ಹಂಚು.—ವಿತರಿಸು : ಕುಸುಮಕಂಕಣ ತೋಳ್ವಂದಿ ಮೊದಲಾದ ಪೂದೊಡವುಗಳು. ಇದನ್ನು ಹೂವಟ್ಟಿಗಳ ರಾಶಿ ಗಳಿಂದ ಎಲ್ಲರಿಗೂ ಭೂರಿಗುಡುತ್ತಿರುವ . . . ಸುನ್ದರೀಚೇಟಿಯರು ಎಡೆ ಯಾಡುತ್ತಿರುವರು (ಕಲ್ಯಾಕ. ೬೨-೮೪). [ಭೂರಿ + ಕುಡು$_1$ (<ಕೊಡು$_1$)]

**ಭೂರಿದಕ್ಷಿಣೆ** (ನಾ). ನೆರೆದಿರುವವರಿಗೆಲ್ಲ ಕೊಡುವ ದ್ರವ್ಯದಾನ; ಸಾಮೂಹಿಕದಾನ : ಕೃಪಾಚಾರ್ಯನು ಧನಾಧ್ಯಕ್ಷನಾಗಿ ಭೂರಿದಕ್ಷಿಣೆ ಯನ್ನು ಕೊಡುವ ಕಾರ್ಯವನ್ನು ವಹಿಸಿದನು (ಅಶ್ವಕ. ೦೦೦); ಬ್ರಾಹ್ಮಣರು ಭೂರಿದಕ್ಷಿಣೆಗಳನ್ನು ಪಡೆದು ಹರಸಿದರು (ಧಪಾ. ೩೩೦) ; ಭೂಮಿ ಇದ್ದ ವನಾದರೆ ಭೂರಿದಕ್ಷಿಣೆ ಕೊಟ್ಟಾನೆ ? (ಗಾದೆ). [ಸಂ. ಭೂರಿದಕ್ಷಿಣಾ]

**ಭೂರಿದತ್ತಿ** (ನಾ). ದೊಡ್ಡ ಕೊಡುಗೆ.—ಉಂಬಳಿ : ಆ ಬಸದಿಗೆ ಅರಮನೆಯಿಂದ ಭೂರಿದತ್ತಿಗಳನ್ನು ಕೊಟ್ಟು, ಸತ್ರ ಗಂಗರಾಜನ ಆತ್ಮವನ್ನು ತೃಪ್ತಿಗೊಳಿಸಿದರು (ಶಾಂತಲಾ. ೪೦೨). [ಸಂ.]

**ಭೂರಿದಾನ** (ನಾ). ಸಾಮೂಹಿಕವಾಗಿ ವಸ್ತ್ರ, ಧನ ಮೊದಲಾದುವು ಗಳನ್ನು ಕೊಡುವ ದಾನ : ಕರಕರದು ಗಜತುರಗಭೂಕನ್ಯಧನವಸ್ತ್ರ ವಿರದೆ ಬ್ರಾಹ್ಮರಿಗೆ . . . ಭೂರಿದಾನ . . . ಇತ್ತು (ಜಪಪೋ. ೦೩-೩೮); ಮದುವೆ ಮುಂಜಿಗಳಾದರೆ ಹಾರುವರಿಗೂ, ಪಪ್ಪಮಯ್ಯ, ಆಚಾರ್‍ರು ಮುಂತಾದವರಿಗೂ ಭೂರಿದಾನ ಮಾಡುತ್ತಿದ್ದರು (ಪಮ್ಮಕು. ೦೨೦). [ಸಂ.]

**ಭೂರಿನಯನ** (ನಾ). ಅನೇಕ ಕಣ್ಣುಗಳನ್ನುಳ್ಳವನು ; ಸಹಸ್ರಾಕ್ಷ ; ಇಂದ್ರ : ಭೂರಿನಯನನ ಮನೆಗೆ ಹೋಗಿರಲಾರು ತಾನೆಂದೆನ್ನಲಾತನ ನಾರಿ ಪರಿಭವಿಸಿದಳು ಗರ್ವದಲೆಂದಳಬುಜಾಕ್ಷಿ (ಶಿಶುಗ. ೦೦-೭೦-೩೨). [ಸಂ.]

**ಭೂರಿಷು** (ನಾ). ಭೂಮಿಯ ಜನಸಮೂಹದ ವೈರಿ; ರಾಕ್ಷಸ; ಭೂರಿ ಭೂರಿಷುಸಂಘಸಂಹೃತಿಶಕ್ತಿ ಶಕ್ತಿಸಮನ್ವಿತೇ (ಶಾಜಶೀ. ೩-೦೦೯). [ಸಂ.]

**ಭೂರಿಫೇನ** (ನಾ). ಒಂದು ಬಗೆಯ ಗಿಡ : "ಸಪ್ತಲಾ, ವಿಮಲಾ, ಸಾತಲಾ, ಭೂರಿಫೇನಾ, ಚರ್ಮಕಷಾ — ಶಿ ಸಮ್ಮಗಾರಯೆಂಬುವದು" (ನಿಘಂಟ. ೦೯೫). [ಸಂ. ಭೂರಿಫೇನಾ]

**ಭೂರಿಬಲ** (ನಾ). ಮಹಾ ಪರಾಕ್ರಮಶಾಲಿ : ಭೂರಿಬಲ ಗುರುಸೂನು ಶಕುನಿ ಮುಪಾರಥಾದಿಯ ಕೂಡಿಕೊಂಡನು ನರನ ಸಂಗರಕೆ (ಕುಮ್ಯಾಭ. ೭-೨೬). [ಸಂ.]

**ಭೂರಿಭೋಜನ** (ನಾ). ಅನೇಕ ಜನರಿಗೆ ಮಾಡಿಸುವ ಸಂತರ್ಪಣೆ ; ಯಾರು ಬೇಕಾದರೂ ಬಂದು ಊಟ ಮಾಡಬಹುದಾದ ಸಾಮೂ ಹಿಕ ಸಂತರ್ಪಣೆ : ಸೀರೆ ಕುಪ್ಪಸ ಬೇಡ ಹಾರ ಓಲೆಯೂ ಬೇಡ ಭೂರಿ ಭೋಜನ ಬೇಡ ನಾವು ದೀನರಮ್ಮಾ (ಕಂಪು. ೩೩-೩); ಆ ಹದಿನೆಂಟು ದಿನಗಳೂ ಭೂರಿಭೋಜನಾದಿಗಳು ನಡೆದುವು (ಶಾಂತಲಾ. ೨೪೭). [ಸಂ.]

**ಭೂರಿಮಾಯು** (ನಾ). ಹೆಚ್ಚು ಮೋಸ ಮಾಡುವ ಪ್ರಾಣಿ ; ಬಳ್ಳು ; ನರಿ : "ಗೋಮಾಯುಃ, ಭೂರಿಮಾಯುಃ — ಈ ೨ ಬಳ್ಳು" (ಶಬ್ದಮ. ೩೯-೭೬). [ಸಂ.]

**ಭೂರಿವಸರ** (ನಾ). ಅನೇಕ ಸಾಮಾನುಗಳಿಂದ ಕೂಡಿದ ಅಂಗಡಿ ; ದೊಡ್ಡ ಅಂಗಡಿ : ಓರಂತೆ ಕಣ್ಗೆಸೆದುವು ಕಂಚುಗಾಜಿನ ಭೂರಿವಸರಗಳು (ಕುಣಾಚಾಂ. ೩-೩೮). [ಭೂರಿ + ವಸರ]

**ಭೂರುಂಡಿ** (ನಾ). ಒಂದು ಬಗೆಯ ಗಿಡ ; ಅನೇಕಿವಿ ಗಿಡ ; ಹಣ್ಣೆಗಿಡ : "ಶ್ರೀಹಸ್ತಿನೀ, ಭೂರುಂಡೀ—೨ ಹಣ್ಣೆಗಿಡದ ಹೆಸರುಗಳು. ಗುರು ಗಲಗಿಡ" (ನಿಘಂಟ. ೦೨೭). [ಸಂ. ಭೂರುಂಡೀ]

**ಭೂರುಗ** 'ಬುರುಗು$_2$' ನೋ.

**ಭೂರುಹ** (ನಾ). = ಭೂಮಿರುಹ : ನಿಶ್ಚೀತನಂಗಳುಮಿರ್ದಪ್ಪುವು ಪಾರ್ಶ್ವದೊಳ್ ನಿಯಮಮಂ ತಾಳ್ದಿರ್ದಪೋಲ್ ಭೂರುಹಂಗಳೆಂದೆಂದು ಮುನೀಂದ್ರನುನ್ನತಿಯನುತಿಂತುಂತೆನಲ್ ಬರ್ಕುಮೇ (ಕಾದಂಪೂ. ೨೫೯); ಕುಬೇರನ ಗರ್ವಭೂರುಹದ ಬೇರುಳಿಯದಂತೆ ಕಿತ್ತು ಬಿಸುಡುವೆನು (ಕೃಷ್ಣಸಾಂ. ೦೦-೦೨೭). [ಸಂ.]

**ಭೂರ್ಗ** 'ಬುರುಗು$_2$' ನೋ.

**ಭೂರ್ಜ** (ನಾ). ಒಂದು ಬಗೆಯ ಮರ; ಭುಜಪತ್ರೆಮರ: "ಭೂರ್ಜಃ, ಚರ್ಮಿ, ಮೃದುತ್ವಕ್- ೩ ಭುಜಪತ್ರೆಗಿಡದ ಹೆಸರುಗಳು" (ನಿಘಂಟ. ೦೨೨); ಏಳಾಲುಂಗುಲವಂಗಭೂರ್ಜಲವಲೀನಾರಂಗಜಂಬೀರಹಿಂತಾಳಾನೋಕಹ ಸಂಕುಳಂ ಬಳಸಿ ತಟ್ಟು (ಶಾಂತಿಪು. ೯-೦೯೩): ಹಸುರು ಕಾಣದಾಗಿದ್ದ ಕಾಂಪೌಂಡಿನ ಆಚೆಗೆ ಭೂರ್ಜಮರಗಳ ತೋಪು (ಬಳಜೀ. ೬೮). [ಸಂ.]

**ಭೂರ್ಜತ್ವಕ್ಕು** (ನಾ). ಭೂರ್ಜವೃಕ್ಷದ ತೊಗಟೆ : ಪ್ರಾಚೀನಗ್ರಂಥವಾವುದಾದರೂ ತಾಳಪತ್ರವೋ ಭೂರ್ಜತ್ವಕ್ಕೋ ದೊರೆತ ಕೂಡಲೆ . . . ವಿಷಯವನ್ನು ಅದರಿಂದ ಹೀರಿ ಉಪಯೋಗಿಸುವರು (ಶಾಜಕ್ರ. ೦೦). [ಸಂ. ಭೂರ್ಜತ್ವಚ್]

**ಭೂರ್ಜಪತ್ರ** (ನಾ).=ಭೂರ್ಜತ್ವಕ್ಕು : ಆಗ ಚಿಂತೆಯಿಂದ ಅದರ ಹಸಿರು ಎಲೆಗಳು ಭೂರ್ಜಪತ್ರದಂತೆ ಬಿಳಿಚಿಕೊಂಡುಹೋಗುತ್ತವೆ (ಹಿಂದ. II. ೪೦೨); ಬಖ್‌ಶಾಲಿ ಎಂಬಲ್ಲಿ ದೊರೆತ ಭೂರ್ಜಪತ್ರ ಹಸ್ತಪ್ರತಿ ೭"×೪" ಅಂಗುಲಗಳ ಅಳತೆಯಿದೆ (ಕನ್ನಸಂ. ೩೭). [ಸಂ.]

**ಭೂರ್ಜಾರ** (ನಾ). ಒಂದು ಬಗೆಯ ಮರ : "ಭುಕ್ತಾ—ಭೂರ್ಜಾರ" (೬೩೨. ೦೦೦). [ ? ]

**ಭೂಲೋಕ**, ಭೂಳೋಕ (ನಾ). ಮನುಷ್ಯರು ವಾಸಿಸುತ್ತಿರುವ ಲೋಕ; ಭೂಮಿ; ಭೂಲೋಕವದಿಂತು ಸರ್ವಜೀವಿಗಳವನಿಗೊಚಿಗಿದವು (ಬಸಪು. ೩೯-೬೦); ದೇವಲೋಕಕ್ಕೆ ಹೋದರೂ ಭೂಲೋಕ ತಪ್ಪದು (ಗಾದೆ). **ಭೂಳೋಕ** : ಭೂಳೋಕಾದನೇಕದ್ರ × × × (ಎಕ. II. ೫೯-೪೦; 974 ?). [ಸಂ.]

**ಭೂಲೋಲ** (ನಾ). ರಾಜ ; ಅರಸು : ಕಿಷ್ಕಿಂಧಕ್ಕೆಲದ ಮಹಾಮರ್ಕಟಾಧಿಪರ ನೋಡುತ್ತ ಭೂಲೋಲನಿರಲು (ಜಕಾ. ೩-೩೦); ಭೂಲೋಲ ಕೇಳ್ಕೈಕ್ಯಮಾಗಿರ್ದುದಾ ಕಲ್ಲೋಲಾ ಲಲಿತವಾಜಿ (ಕೈಮಿಜೈ. ೦೦-೦೦). [ಸಂ.]

**ಭೂವರ** (ನಾ). ದೊರೆ ; ರಾಜ; ಅರಸು: ಭೂವರರೊಳ್ ತ್ಯಾಗಿಗಳಲ್ಲವೇ ಕವಿಗೆ ವಿದ್ಯಾಮಾತ್ರಮೇ ಬಂಚಿಯೇ (ಸೂಕ್ತಿಸು. ೩೮); ಭೋಜ್ಯಾಭೋಜ್ಯ ವನು ತಿಳಿದು ಪರಿಹರಿಸಬಲ್ಲವರುಗಳು ಘನತರದ ಸುಕೃತವನ್ನೈದುವರು ಭೂವರರೊಳಗೆ (ಕುಮ್ಯಾಅ. ೩-೬೨). [ಸಂ.]

**ಭೂವಲಯ**, ಭೂವಳಯ (ನಾ). ಭೂಮಿ; ಧರಣಿ; ಭೂವಲ [ಶಾಕಾಂ. ೪]ಯದೊಳು ಕೇಳು ಮತ್ಸ್ಯಯು ಭೂವರೇಣ್ಯಂ . . . ಆಗ್ರಹಿಸಿ (ಬಸಪು. ೨೯-೬೯). **ಭೂವಳಯ** : ಇದೇವುದೊ ಷಟ್ಖಂಡಮಂಡಿತಂ ಭೂವಳಯಂ (ಆದಿಪು. ೦೮-೨೯). [ಸಂ.]

**ಭೂವಲ್ಲಭ** (ನಾ). = ಭೂವರ : ಭೂವಲ್ಲಭ ಸೋತ್ಕೈವ ಭ್ರೂವಿಲಸಿತ ದತ್ತವಾಚನಾದೇಶವಿಂದಂ ಭಾವಿಸಿಮೆಂದತಿಮಧುರೋಧ್ಭಾವಿತಗಂಭೀರನಾದಧಿ ಬಾಜಿಸಿದಂ (ಆದಿಪು. ೦೯-೯೬). [ಸಂ.]

**ಭೂವಳಯ** 'ಭೂವಲಯ' ನೋ.

**ಭೂವಿಕ್ರಮ** (ನಾ). ಒಬ್ಬ ರಾಜನ ಹೆಸರು : ನಿರವದ್ಯಚರಿತಃ ಪ್ರತಿದಿನಮಭಿವರ್ಧಮಾನಪ್ರಭಾವೋ ಭೂವಿಕ್ರಮನಾಮಧೇಯಃ ಅಪಿ (ಎಕ. XII. ಶಂ೩೫. ೨೬೯-೦೩; ೭೦೪). [ಸಂ.]

**ಭೂವಿಜ್ಞಾನ** (ನಾ). ಭೂಮಿಯ ಸ್ತರಗಳು, ಅವುಗಳಿಗಿರುವ ಸಂಬಂಧ ಹಾಗೂ ಅವುಗಳಲ್ಲಿ ಉಂಟಾಗುವ ವ್ಯಾರ್ಪಾಡುಗಳನ್ನು ಕುರಿತ ಶಾಸ್ತ್ರ : ಭೂವಿಜ್ಞಾನ ... ಭೂಮಿಯ ಜೀವನವೃತ್ತಾಂತ, ಇತಿಹಾಸಗಳ ಸಮಗ್ರಅಧ್ಯಯನ ಇದರಲ್ಲಿ ಮಾಡಲಾಗುತ್ತದೆ (ಕಂಕೋ. XII, ೯೦೨). [ಸಂ.]

**ಭೂವಿಬುಧ** (ನಾ). ಬ್ರಾಹ್ಮಣ ; ಭೂಸುರ : ದೈವದಾಧೀನದಲಿ ಜಗವಾದೈವ ಮಂತ್ರಾಧೀನ ಮಂತ್ರವು ಭೂವಿಬುಧರಾಧೀನವಾಗಿಹುದಾಗಿ ಲೋಕದಲಿ ದೈವವೇ ಬ್ರಾಹ್ಮಣನು (ಕುಮ್ಮಾಅ. ೪-೫೦). [ಸಂ.]

**ಭೂವಿಶ್ರುತ** (ಗು). ೧. ಭೂಮಿಯಲ್ಲಿ ಹೆಸರುವಾಸಿಯಾದ; ಪ್ರಸಿದ್ಧನಾದ; ಕೀರ್ತಿವಂತನಾದ : ಅಶಾವನಿತೆಗೆ ಶೇಖರವೆನೆ ಭೂವಿಶ್ರುತ ವಿಭವನಾದನಭಿನವಪುಷ್ಪಂ (ಮಲ್ಲಿಪು. ೩-೦); ಭೂವಿಶ್ರುತ ಯೋಗಿನಾಥ ಯೋಗಾಹ್ಲಾದಂ (ಕಂದ್ರಪು. ೩-೨೪). (ನಾ). ೨. ಭೂಮಿಯಲ್ಲಿ ಹೆಸರುವಾಸಿಯಾದವನು,—ಪ್ರಸಿದ್ಧನಾದವನು : ಆ ವಿಪ್ರೋತ್ತಮನ ಮಗಂ ಭೂವಿಶ್ರುತನೀಶ್ವರಾರ್ಯಂ (ಕಂಶಸಂ. ೯-೦೪); ಭೂವಿಶ್ರುತನೆನೆ ಸುಕೌಶಲ ವೃತಿಪತಿ ಶವದಿಂ ಶ್ರುತದಿನಾರುಮಂ ಗೆಲೆವಂದಂ (ಕಂಣಾಪಾ. ೨-೫೦). [ಸಂ.]

**ಭೂವೇಷ್ಟಿ** (ನಾ). ಜಾಯಿಕಾಯಿ (?) : ಒಪ್ಪುವ ಲವಂಗ ಭೂವೇಷ್ಟಿ ಜಾತಿಭರ್ಜಸಚೂರ್ಣಕಕ್ಕೋಲಜಂ ಕರ್ಪೂರವೂ ಹಿಂಗೆಯಾ ಪಂಚಸೌಗಂಧಿಕಂ ಮುಖವಾಸನಂಗಳೀ ಶ್ರೇಷ್ಠ (ಶೀಕ್ಕಪು. ೬-೦೦-೯೯). [ ? ]

**ಭೂಶಯ್ಯೆ** (ನಾ). ನೆಲದ ಮೇಲೆ ಮಲಗುವಿಕೆ : ಸುಕುಮಾರಶ್ರೀಯ ನಾಲ್ಕಾ ನಿತಂಬಿನಿ ಭೂಶಯ್ಯೆಗೆ ಜಾಗರಕ್ಕನಶನಕ್ಕೆ . . . ಒಡಲಂ ನಿಯೋಜಿಸಿದಳ್ (ಮಲ್ಲಿಪು. ೪-೯೭). [ಸಂ. ಭೂಶಯ್ಯಾ]

**ಭೂಶಾಯಿ** (ನಾ). ನೆಲದ ಮೇಲೆ ಮಲಗುವುದು ; ಭೂಮಿಯ ಮೇಲೆ ಒರಗುವುದು.

ಭೂಶಾಯಿಯಾಗು = ಸತ್ತುಬೀಳು : ಕನ್ನಡ ಕಟ್ಟಾಳುಗಳು ಬೊಬ್ಬಿರಿದು ರಣಕೋಲಾಹಲವೆಸಗಲು ಇನ್ನೂ ನಾಲ್ಕು ಸಹಸ್ರ ಶತ್ರು ಹಯ ಭೂಶಾಯಿಯಾದವು (ಅಶ್ವ. ೨೨). [ಸಂ. ಭೂಶಾಯಿನ್]

**ಭೂಶಾಯಿತ** (ನಾ). ಭೂಮಿಯ ಮೇಲೆ ಮಲಗಿರುವಂತಹುದು : ಈಗ ಅವೆಲ್ಲ ಭೂಶಾಯಿತವಾಗಿವೆ (ಕಂಹಾತ್ರ. ೨೬). [ಸಂ. ಭೂಶಾಯಿತಾ]

**ಭೂಶಿರ** (ನಾ). ಸಮುದ್ರದೊಳಗೆ ಚಾಚಿಕೊಂಡಿರುವ ಭೂಭಾಗ : ಭೂಶಿರ ಪಕ್ಕದಲ್ಲಿರುವ ಪ್ರದೇಶಗಳಿಗಿಂತ ಹೆಚ್ಚಾಗಿಯೂ, ಇಕ್ಕಟ್ಟಾಗಿಯೂ, ಸಮುದ್ರದೊಳಕ್ಕೆ ಚಾಚಿಕೊಂಡಿರುವ ಭೂಮಿ (ಉದಾ. ಕನ್ಯಾಕುಮಾರಿ) (ಕಂಕೋ. I, ೨೭) ; ಸಮುದ್ರದೊಳಕ್ಕೆ ಚಾಚಿಕೊಂಡಿರುವ ಭೂಭಾಗವು "ಭೂಶಿರವು ಅಥವಾ ಕೇಪ್" . . . ಎಂದು ಕರೆಯಲ್ಪಡುತ್ತದೆ (ಕಂಗೋಳ. ೦೦). [ಸಂ.]

**ಭೂಶುದ್ಧಿ** (ನಾ). ಮನೆಯನ್ನು ಕಟ್ಟುವಾಗ ಪ್ರಾರಂಭದಲ್ಲಿ ಶಂಕುಸ್ಥಾಪನೆ ಕಾಲದಲ್ಲಿ ನೆರವೇರಿಸಬೇಕಾದ ಸ್ಥಳಪರಿಶುದ್ಧಿ ; ದೇವತಾವಿಗ್ರಹ ಪ್ರತಿಷ್ಠೆ, ಪೂಜೆ, ಜಪ ಮೊದಲಾದುವಕ್ಕೆ ಕುಳಿತುಕೊಳ್ಳುವ ಸಂದರ್ಭ, ಧ್ವಜಸ್ಥಾಪನೆ ಮೊದಲಾದುವುಗಳಿಗೂ ಭೂಶುದ್ಧಿಯು ಅವಶ್ಯಕ : ಭೂಶುದ್ಧಿಯುಂ ಬಿನನಾದ ಪಟ್ಟಿಯಾಗಳಂ ಪೆಗಳ (ಕುಶಾಪು. ೨-೫೭). [ಸಂ.]

**ಭೂಶೋಧನೆ** (ನಾ). ನೆಲವನ್ನು ಅಗೆದು ಪರೀಕ್ಷಿಸುವುದು : ಅರಮನೆಯ ನಿವೇಶನದಲ್ಲಿ ನಡೆದ ಭೂಶೋಧನೆಯ ಫಲವಾಗಿ ಒಂದು ಪ್ರೇಕ್ಷಕರ ಹಜಾರವು . . . ಸಿಕ್ಕಿತು (ಕಾರತ. ೯೯೪) ; ಹೆಚ್ಚಾಗಿ ಭೂಶೋಧನೆ ನಡೆದರೆ ಕೆಲವು ಕುರುಹುಗಳು ಕಂಡುಬರಬಹುದು (ಹೊಯ್ಸಳಾ. ೭). [ಸಂ. ಭೂಶೋಧನ]

**ಭೂಷಣ** (ನಾ). ೧. ಅಂದವನ್ನುಂಟುಮಾಡುವಿಕೆ ; ಅಲಂಕರಣ : "ಭೂಷಣಂ, ಅಲಂಕ್ರಿಯಾ—೨ ಅಲಂಕರಿಸುವಿಕೆ, ಅಲಂಕಾರಮಾಡುವಿಕೆ" (ಸಿದ್ಧಾಂತಿ. ೦೯೮). ೨. ಅಲಂಕಾರ ; ಶೃಂಗಾರ : "ಪರಿಷ್ಕಾರಃ, ಭೂಷಣಂ – ಈ ೨ ಅಲಂಕಾರಂ" (ಹಲಾಯು. ೯೯-೩೮೬) ; ಗಣನಾಕ್ಷ ಸೂತ್ರಮಣಿಯೊಳ್ರತ್ನೋಜ್ಜಲಂ ಭೂಷಣಂ (ಗದಾಯು. ೦-೩) ; ಗುಣಗಳಿಗೆಲ್ಲಕೆ ಭೂಷಣ ರೂಪವು ಶೀಲಕೆ ಭೂಷಣ ಕುಲವು (ಜಂಶಾಪ. ೮೦-೯೩). ೩. ಒಡವೆ ; ತೊಡವು ; ಆಭರಣ : "ಭೂಷಣಃ, ಅಲಂಕಾರಃ, ನೇಪಥ್ಯಂ, ಆಭರಣಂ — ಈ ೪ ತುಡುಗೆ" (ಹಲಾಯು. ೯೯-೩೮೫) ; ಇದು ಕೊರಲಿಂತಿದಾರಮಿದು ಭೂಷ್ಯಮಿದರ್ಕಿದು ಭೂಷಣಂ ದಲೆಂಬುದನೆನವೇಡ (ಕಾಂತಿಪು. ೩-೯೦) ; ಒಂದು ಸ್ವರ್ಣವೆ ಕೃತನ ಚತುರತೆಯಿಂದ ಬಹುಭೂಷಣಗಳಾದಂತೆ (ಗಗಶಾ. ೦೯-೭). [ಸಂ.]

**ಭೂಷಣಾಂಗ** (ನಾ). [ಜೈನ] ಹತ್ತು ಕಲ್ಪವೃಕ್ಷಗಳಲ್ಲಿ ಒಂದು ; ನಾನಾತರದ ಆಭರಣಗಳನ್ನು ಕೊಡುವ ಕಲ್ಪವೃಕ್ಷ : ಜಂಗಮ ಕಲ್ಪವೃಕ್ಷಮೆನೆ ಕೊಟ್ಟೀ ಮಾಟ್ಕೆಯಿಂ ಭಾಜನಾಂಗದ ಮಾಲ್ಯಾಂಗದ ಭೂಷಣಾಂಗದಳವಂ ಚಕ್ರೇಶ್ವರಂ ತಾಳ್ದಿದಂ (ಆದಿಪು. ೪-೩೩) ; ಭೂಷಣಾಂಗಮೆಂಬುದು ಕಟಕ ಕಟಿಸೂತ್ರ ಕುಂಡಲ ಕೇಯೂರ ಹಾರ ನೂಪುರಾದಿ ಪುರುಷಯೋಗ್ಯಭೂಷಣವಿಶೇಷಂಗಳನೀವುದು (ಚಾವುಂಪು. ೯). 'ದಶಾಂಗಕಲ್ಪಕುಜ' ಪರಾ. [ಸಂ.]

**ಭೂಷಿತ** (ಗು). ೧. ಅಲಂಕೃತವಾದ. (ನಾ). ೨. ಅಲಂಕೃತನಾದವನು : "ಮಂಡಿತಃ, ಪ್ರಸಾಧಿತಃ, ಅಲಂಕೃತಃ, ಭೂಷಿತಃ, ಪರಿಷ್ಕೃತಃ — ೫ ಅಲಂಕರಿಸಲ್ಪಟ್ಟವನ ಹೆಸರುಗಳು" (ಸಿದ್ಧಾಂತಿ. ೦೯೪) ; ದೈವ ಹೊಡೆದಂದದಲಿ ಬೆಚಿತು ಸಭಾವಲಯದಲಿ ಗರ್ವವಿಭ್ರಮಭಾವಭೂಷಿತನಾಗಿ ವೈಶಾಯನವನೀಕ್ಷಿಸುತ (ಕುಮ್ಮಾಅ. ೬-೩೭). [ಸಂ.]

**ಭೂಷಿಸು** (ಕ್ರಿ). ೧. ಚೆನ್ನಾಗುವಂತೆ ಮಾಡು : ಮನುಷ್ಯನನ್ನು ಭೂಷಿಸುವುದು ಒಡವೆಗಳಲ್ಲ, ಗುಣಗಳು (ಕೂ೦). ೨. ಹೊಗಳು ; ಪ್ರಶಂಸಿಸು : ದೂಷಿಸಲಿ ಅಥವಾ ಭೂಷಿಸಲಿ ಧೀರರಾದವರು ನ್ಯಾಯ ಮಾರ್ಗದಲ್ಲಿಟ್ಟ ಹೆಜ್ಜೆಯನ್ನು ಎಂದಿಗೂ ಚಲಿಸುವುದಿಲ್ಲ (ಶೀತಿಶ೦. XI, ೪ ಅ೩೮) ; ನೀನು ಯಾವಾಗಲೂ ನಮ್ಮನ್ನು ದೂಷಿಸಿ ನಮ್ಮ ಹಗೆಗಳನ್ನು ಭೂಷಿಸುತ್ತೀಯೆ (ಶೀಕ್ಕಶ. ೦೦೬). [ಭೂಷಣ + – ಇಸು]

**ಭೂಷೆ** (ನಾ). ಒಡವೆ ; ಆಭರಣ : ಅರ್ಹಂತ್ಯಧರ್ಮಂ ತನಗಾಮರ್ಮಂ ಭೂಷೆ ರತ್ನತ್ರಯಮನೆ ನೆಗಬ್ದಂ ಧಾತ್ರಿಯೊಳ್ ಶಾಂತಿನಾಥಂ (ಸುಕುಮಾಚ. ೦-೫೫) ; ಕರ್ಣಪೂರತೆಗೆ ಕೆಂದಳವೈತಂದುದು ಹಾರಂ ಕಣ್ಬನಿಯಿಂದಾದತ್ತುಬಿದ ಭೂಷೆಯುಂ ದೂಷಿಪವೊಲ್ (ಚಂದ್ರಪು. ೩-೦೨೬). [ಸಂ. ಭೂಷಾ]

**ಭೂಷ್ಣು** (ನಾ). ೧. ಬಾರಿಬಾರಿಗೂ ಹುಟ್ಟುವ ಸ್ವಭಾವವುಳ್ಳದು : "ಭೂಷ್ಣುಃ, ಭವಿಷ್ಣುಃ, ಭವಿತಾ — ೩ . . . ಬಾರಿಬಾರಿಗೂ ಹುಟ್ಟುವ ಸ್ವಭಾವವುಳ್ಳ ಕೇಶನಪಾದಿಗಳ ಹೆಸರೆಂದು ಕೆಲವರೆನ್ನುವರು" (ಸಿದ್ಧಾಂತಿ. ೩೩೦). ೨. ಚೆನ್ನಾಗಿ ಬದುಕಿ ಬಾಳಬೇಕೆಂಬ ಅಭಿಲಾಷೆ ; ಪುರೋಭಿವೃದ್ಧಿಗೆ ಬರಬೇಕೆಂಬ ಇಷ್ಟ. ೩. ವಿಷ್ಣು ; ನಾರಾಯಣ: ಭಗವಂತ ಸುಗತ ಶುದ್ಧಾತ್ಮ ಸುಶ್ರುತ ಸರ್ವದರ್ಶನ ಭಗವನ್ ಭೂಷ್ಣು ವಿಭೂಷ್ಣು (ಜ್ಞಾಸಕ. ೯೯-೦೦೨). [ಸಂ.]

**ಭೂಷ್ಯ** (ಗು). ೧. ಅಲಂಕರಿಸಲು ಯೋಗ್ಯವಾದ ; ಶೃಂಗರಿಸಲು ಅರ್ಹವಾದ : ನೋಡಿದರ್ ಘಟಿಕಬಿಯರ್ ಸಮಂದರುತುಮಾಕೆಯ

ಭೂಷ್ಯವಿಭೂಷಣಂಗಳಂ (ಶಂಶ್ರಕೃ. ೬-೬೭). (ನಾ). ೨. ಅಲಂಕರಿಸಬೇಕಾದುದು : ಇದು ಕೊರಲಿಂತಿದಾರವಿದು ಭೂಷ್ಯವಿದರ್ಕಿದು ಭೂಷಣಾ ದಲೆಂಬುದನೆನಪೇಡ (ಶಾಂತಿಪು. ೩-೯೦). ೩. ಹೊಗಳಿಕೆಗೆ ಪಾತ್ರವಾದುದು ; ಸ್ತುತ್ಯವಾದುದು. ೪. ಹೊಗಳಿಕೆ ; ಸ್ತುತಿ : ಜನರ ಪರಿಪರಿ ದೂಷ್ಯ ಭೂಷ್ಯವ ನೆನೆವೆನೇ ತಮ್ಮಡಿಯ ಸಂಭಾವನದ ಬಲುಹಿರಲಾವ ಭಯವೇಕೆ (ಗಗಹಾ. ೦೭-೬೪). [ಸಂ.]

**ಭೂಸಕ್ಕರೆ** (ನಾ). ಒಂದು ಬಗೆಯ ಸಸ್ಯ ಮತ್ತು (ಔಷಧಿಗೆ ಬಳಸುವ) ಅದರ ಗಡ್ಡೆ : ಭದ್ರಮುಸ್ತೆ, ಕೋಷ್ಠ, ಭೂಸಕ್ಕರೆ ತಾವರೆನಾಳ . . . ಇಷ್ಟು ಔಷಧಗಳನ್ನು ಸರಿಯಾಗಿ ಕೂಡಿ . . . ಮಜ್ಜಿಗೆಯಲ್ಲಿ ಕದಡಿಕೊಡುವುದು (ಶಿಸ್ಯಶಿ. ೪೪); ಚೆನ್ನಿಗ್ಗಿಲು . . . ತುಪ್ಪ ಉಳಿವಂತೆ ಕಾಸಿ ಅದರಲ್ಲಿ ಭೂಸಕ್ಕರೆ ಕಲ್ಲ ನಾರು . . . ಚೂರ್ಣವ ಮಾಡಿ ಹಾಕಿ . . . ಜೇನುತುಪ್ಪವ ಪನಿಸಿ ಸೇವಿಸಲು ಅಸ್ಥಿಸ್ರಾವ ಪರಿಹರ (ಸಳಸ್ಯ. ೨೦೩). [<ಸಂ. ಭೂಶರ್ಕರಾ]

**ಭೂಸವೆತ** (ನಾ). ಭೂಮಿಯು ಸವೆದು ಹೋಗುವುದು : ಕತ್ತಾಳೆಗಳನ್ನು ಮುಟ್ಟವಲ್ಲದ ಭೂಮಿಯ ಬದುಗಳಲ್ಲಿನ ಭೂಸವೆತವನ್ನು ತಡೆಯುವುದಕ್ಕೂ ಬೆಳೆಸುತ್ತಾರೆ (ಕಶಕೋ. 1. ೦೭೪). [ಭೂ + ಸವೆತ]

**ಭೂಸಾರ** (ನಾ). ನೆಲದಲ್ಲಿರುವ ಸಸ್ಯಗಳು ಬೆಳೆಯಲು ಕಾರಣವಾದ ರಾಸಾಯನಿಕ ವಸ್ತು ; ಗೊಬ್ಬರ. [ಸಂ.]

**ಭೂಸಾರತೆ** (ನಾ). ನೆಲದ ಸಾರ,–ಸತ್ತ್ವ : ಶಿಳಿದ ತಡಿದಡಿಯ ಮಡಿಗಳ ಜಳದೊಳ್ ರಂಜಿಸುವ ಧಾನ್ಯಮಂಜರಿಯ ನೆಟಲ್ ಪೊಳೆಯೆ ತೆನೆವೋದುವಿವು ಬೇರ್ಗಳೆನಿಪುವು ಬೆಳೆದ ಕಟಿವೆ ಭೂಸಾರತೆಯಿಂ (ಶಂಶ್ರಕೃ. ೦-೯೨). [ಸಂ. ಭೂಸಾರತಾ]

**ಭೂಸುತೆ** (ನಾ). ಭೂಮಿಯ ಮಗಳು ; ಸೀತೆ : ಭೂಸುತೆಯಣ್ಮನೊಲ್ದು ಬೆಸನಂ ಕುಡೆ ಲಂಕೆಗೆ ಪೋಗಿ ದಾನವಾಧೀಶನ ರಾಜಮಂದಿರ ಮನಂಜದೆ ಪೊಕ್ಕು (ಧರ್ಮಶ. ೯-೯೨). [ಸಂ. ಭೂಸುತಾ]

**ಭೂಸುರ** (ನಾ). ೧. ಬ್ರಾಹ್ಮಣ : ಮಹಿಯೊಳ್ ಭೂಸುರವೇಷದಿಂದ ಕಲಿಯಲ್ ಕರ್ಣಂ ಧನುರ್ವೇದಮಂ ರಹಿಗೆಟ್ಟಂ (ಕೋಪೆಂಚ. ೯೨); ನೀನೆನೆವುದು ಭಗೀರಥಪುತ್ರನೆಂದುದು ಭೂಸುರವ್ರಾತ (ಕುಪ್ಯಾಳ. ೦೩-೦೦) ; ಭೂಸುರರ್ ದಾನ ದಕ್ಷಿಣೆಗಳಿಂ ತಣಿವರ್ (ರಾಧಚಾತ್ರ. ೨೦-೮೪). ೨. ಒಂದು ಬಗೆಯ ರತ್ನ : ಪಳುಕಿನಂದದಿ ನಿರ್ಮಲತ್ವದಿಂ ತೋರಿ ಶಶಿಕಳೆಯ ತೋರುವದು ಭೂಸುರಜಾತಿಯುಕ್ಕಂ (ರತ್ನಶಾ. ೯). [ಸಂ.]

**ಭೂಸ್ತೃಣ** (ನಾ). = ಭೂತೃಣ : "ಮಾಲಾತೃಣಕಂ ಭೂಸ್ತೃಣಂ–೨ ಮಾರವಳೀ ಹುಲ್ಲಿನ ಹೆಸರು" (ಸಿದ್ಧಾಂತಿ. ೦೭೨). [ಸಂ.]

**ಭೂಸ್ಥಾಪನೆ** (ನಾ). ಭೂಮಿಯಲ್ಲಿ ಹೂತಿಟ್ಟುದು ; ಭೂಮಿಯ ಒಳಗೆ ಇರುವುದು : ಬ್ರಾಹ್ಮಣನೊಬ್ಬನು . . . ಭೂಸ್ಥಾಪನೆಯಾದ ಸಿಂಹಾಸನವನ್ನು ನೋಡಿ ಅಲ್ಲಿಂದ . . . ದಕ್ಷಿಣದೇಶಕ್ಕೆ ಹೊರಟುಹೋದನು (ಕುಳಲಾ. ೦೬೩). [ಸಂ. ಭೂಸ್ಥಾಪನ]

**ಭೂಸ್ಥಿತಿ** (ನಾ). ೧. ಭೂಮಿಯ ಲಕ್ಷಣ,– ಸ್ಥಿತಿ : ನಾವು ಪ್ರಪಂಚದ ಸಮಗ್ರಭೂಸ್ಥಿತಿಯನ್ನು ಸ್ಥೂಲವಾಗಿ ವಿಮರ್ಶೆ ಮಾಡಿದೆವು (ಜಾಲಕ್ರ. III, 1748). ೨. ಹೊಲಗದ್ದೆ ಮೊದಲಾದ ಸ್ಥಿರವಾದ ಸ್ವತ್ತು; ಸ್ಥಿರ ಆಸ್ತಿ : (೬). [ಸಂ.]

**ಭೂಸ್ವಾಮ್ಯ** (ನಾ). ಭೂಮಿಯ ಒಡೆತನ,—ಪಾಲೀಕತ್ವ : ಅತ್ಯಂತ ವಿಸ್ತಾರವಾದ ಆಸ್ತಿಪಾಸ್ತಿಗಳಿಗೆ ಅವನು ವಾರಸುದಾರನಾಗಿದ್ದರೂ, ಭೂಸ್ವಾಮ್ಯಸಂಬಂಧವಾದ ಸ್ಪೆನ್ಸರ್‌ನ ಅಭಿಪ್ರಾಯಗಳು ಅವನ ಮನಸ್ಸಿನ ಮೇಲೆ ತುಂಬ ಪ್ರಭಾವಕಾರಿಯಾದವು (ಪ್ರಸರು. ೩೪). [ಸಂ.]

**ಭೂಲೋಕ** 'ಭೂಲೋಕ' ನೋ.

**ಭೃಂಗ** (ನಾ). ೧. ತುಂಬಿ ; ಬಂಡುಣಿ : "ಅಳಿ ಚಂಚರೀಕಮಿಂದಿಂದಿರಂ ತುಂಬಿ ಪುಷ್ಪಲಿಹಂ ಮಧುವ್ರತಂ ಭೃಂಗಂ . . . ಮಧುಪಮಾ ಭ್ರಮರಮಕ್ಕುಂ" (ಶಂಂಗಣಾ. ೩೨-೦೦) ; ಯಾಚಕಭೃಂಗಕೋಟಿ ಕೈಕೊಂಡು ನಿರಂತರಂ ತಗಳ್ದು ಕೀರ್ತಿಸೆ . . . ಪ್ರಚಂಡಮಾರ್ತಾಂಡನಲರ್ಚುಗೆನ್ನ ಹೃದಯಾಂಬುಜಮಂ ನಿಜಪಾಜ್ಞಿರೀಚಿಯಿಂ (ಶಂಶಾ. ೦-೩) ; ಪುಷ್ಪವೊಂದು ಬಟಲಲ್ ಭೃಂಗಕ್ಕೆ ಪೂವಿಲ್ಲವೇ(ಕೋಮೇಶ. ೨೬); ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸ (ನಾದಲೀ. ೪೯-೧). ೨. ಒಂದು ಬಗೆಯ ಕಡಜದ ಹುಳು: 'ಭೃಂಗಕೀಟನ್ಯಾಯ' ಪರಾ. ೩. ಒಂದು ಬಗೆಯ ಪಕ್ಷಿ : "ಕಳಿಂಗಃ, ಭೃಂಗಃ, ಧೂಮ್ಯಾಟಃ – ೩ ಕುಕ್ಕುಟಿಯೆಂಬ ಹಕ್ಕಿಯ ಹೆಸರುಗಳು" (ಸಿದ್ಧಾಂತಿ. ೦೫೬). ೪. ವ್ಯಭಿಚಾರಿ ; ಸ್ವೇಚ್ಛಾಚಾರಿ. ೫. ಬಂಗಾರದ ಕಳಶ. ೬. ಒಂದು ಬಗೆಯ ಸಸ್ಯ ; ಗರುಗ: "ಗರುಗ ಮಂಗಾರಕಂ ಭೃಂಗಮದು" (ಶಂಂಗಣಾ. ೩೯-೨೬). ೭. ಒಂದು ಬಗೆಯ ಸಸ್ಯ : (ವೃಕ್ಷಿಗಿ. ೨೦-೩೯೯) ೮. ಕಾಗೆಬಂಗಾರ ; ಅಭ್ರಕ : "ಭೃಂಗಮಭ್ರಕಮಕ್ಕುಂ" (ಶಂಂಗಣಾ. ೩೦-೭) ; ದಂತದ ಪಾವುಗೆ ಭೃಂಗದೋಲೆ ಮೆಯ್ವೆತ್ತಿರೆ ರಾತ್ರಿಯೊಳು ಸುಳಿವ ಬ್ರಹ್ಮೆಯನೀಗಮಗಿಷ್ಟಸಿದ್ಧಿಯಾ (ಎಕ. V. ಅರಸೀ. ೬೦-೨ ; 1184). ೯. ಮೋಡ ; ಮೇಘ. ೧೦. ಕತ್ತಲೆ ; ಅಂಧಕಾರ. ೧೧. ಕಪ್ಪುಬಣ್ಣ ; ಕೃಷ್ಣವರ್ಣ : "ಭ್ರಮರಾಭ್ರಂ ಗರುಗಾಭ್ರಕಂ ತಿಮಿರಮುಂ ಕೃಷ್ಣಾದಿ ಭೃಂಗಾಹ್ವಯಂ" (ಶಾಶಾರ. ೪೬). ೧೨. [ನಾಟ್ಯ] ನೃತ್ಯದ ಒಂದು ಭಂಗಿ : ಒಂದು ಕಾಲನೆತ್ತಿಕೊಂಡು ಒಂದು ಕಾಲ ನೆಲದಲ್ಲಿಟ್ಟುಕೊಂಡು ಚಕ್ರದೋಪಾದಿ ತಿರುಗುವಣ ಇದು "ಭೃಂಗ"ವೆನಿಸಿಕೊಂಬುದು (ಶುಕಸ. ೩೩). [ಸಂ.]

**ಭೃಂಗಕೀಟನ್ಯಾಯ** (ನಾ). ಕಡಜವು ತನ್ನ ಗೂಡಿನಲ್ಲಿ ಕೀಟವೊಂದನ್ನು ತಂದಿಟ್ಟುಕೊಂಡು ಅದರ ಸುತ್ತಲೂ ಗುಯ್‌ಗುಡುತ್ತ ಸುತ್ತುತ್ತಿದ್ದರೆ, ಆ ಕೀಟವು ಕಡಜ ತನ್ನನ್ನು ಚುಚ್ಚಿ ತಿನ್ನುವುದೆಂದು ಇದರತ್ತಲೇ ಲಕ್ಷ್ಯವನ್ನಿಟ್ಟುಕೊಂಡಿದ್ದು ಕಡೆಗೆ ತಾನೂ ಕಡಜದ ಆಕಾರಕ್ಕೆ ಪರಿವರ್ತನೆಗೊಳ್ಳುವ ದೃಷ್ಟಾಂತ : ಯುವತಿಯೊರ್ವಳ್ಳಿಮ ತೊಲಗಿದಾತ್ಮೇಶ್ವರನ ತವಕದಿಂದಾವಗಂ ಮನದಂಟ ನೆನೆಯಲ್ಕೆ ಯುವತಿತ್ವಮುಡುಗಿ ಪುರುಷತ್ವಮೆಯ್ದುಗುಮಂತೆ ಭೃಂಗಕೀಟನ್ಯಾಯದಿಂ (ಅರಾಕ. ೦-೦೩೬೭). 'ಭ್ರಮರಕೀಟನ್ಯಾಯ' ಪರಾ. [ಸಂ.]

**ಭೃಂಗಕುಂತಳೆ** (ನಾ). ತುಂಬಿಯಂತೆ ಕಪ್ಪಾದ ತಲೆಗೂದಲುಳ್ಳವಳು: ಚಲವಿಮಾನೇಕ್ಷಣೆಯರ್ ಮೃಣಾಳಭುಜೆಯರ್ ಪದ್ಮಾಸ್ಯೆಯರ್ ಭೃಂಗಕುಂತಳೆಯರ್ (ಪುಷ್ಪಪು. ೦೨-೦೦೨). [ಸಂ. ಭೃಂಗಕುಂತಲಾ]

**ಭೃಂಗಗಾವುಂಡ** (ನಾ). ಒಬ್ಬಾತನ ಹೆಸರು : ಸಕಕಾಲಂ ಎಣ್ಣೂರಜ ತೊಂಬತ್ತನಾಲ್ಕನೆಯ ಪ್ರಜಾಪತಿಸಂವತ್ಸರಂ ಪ್ರವರ್ತಿಸೆ ಭೃಂಗಗಾವುಣ್ಡನ ಮಮ್ಮರ್ಂ ಗಾವುಣ್ಡಯ್ಯನ ಕಲ್ಲು (ಎಕ. XI, ಹಿಂಯೂ. ೩೦-೦ ; 971). [ ಭೃಂಗ + ಗಾವುಂಡ (<ಗಾವುಂಡ) ]

**ಭೃಂಗಗುಣ** (ನಾ). ತುಂಬಿಗಳೇ ಬಿಲ್ಲಿನ ಹೆದೆಯಾಗಿ ಉಳ್ಳವನು ; ಕಾಮ; ಮನ್ಮಥ ; P ಮನ್ಮಥನಿಗೆ ತುಂಬಿಗಳೇ ಹೆದೆಯೆಂಬುದು ಕವಿಸಮಯ.

**ಭೃಂಗಗುಣಹರ** = ಮನ್ಮಥನನ್ನು ಸಂಹರಿಸಿದವನು ; ಶಿವ : ಭೃಂಗಗುಣಹರ [ಶಾಶಾಂ. ತಂಗವಿರಧರ] ಕೊಡುವನೆಂದು ಬಲುಸೊಕ್ಕಿಂದ ಪೊಂಗಳಂ ಕೊಡ ಬಂದ ಗಂಧರ್ವಭಾರತಿಯ ಜಚಿದು (ಶ್ರೀಶರಾ. ೦೫-೨೬). [ಸಂ.]

**ಭೃಂಗಗುರುಳಿ** (ನಾ). =ಭೃಂಗಕುಂತಳೆ : ಅದಾವ ಕವಿಯು ಬಣ್ಣಿಸುವನೈ ಭೃಂಗಗುರುಳೀ (ಶವಶೋ. ೩-೨೨).

[ಭೃಂಗ + ಕುರುಳು$_1$ (< ಕುರುಳ್$_1$) + – ಇ$_2$]

**ಭೃಂಗಬೋದಿಗೆ** (ನಾ). ಕಾಗೆಬಂಗಾರದಂತೆ ಹೊಳೆಯುವ ಬೋದಿಗೆ : ಅಂಗಡಿಯ ಬೀದಿಗಳು ರಂಗಶಾಲೆಗಳು ಶೃಂಗರದೊಳೊಪ್ಪುತಿಹ ಭೃಂಗ ಬೋದಿಗೆಯು (ಹಮ್ಮ. ೬೬). [ಭೃಂಗ + ಬೋದಿಗೆ]

**ಭೃಂಗರಾಜ** (ನಾ). ೧. ಒಂದು ಬಗೆಯ ಸಸ್ಯ; ಗರುಗ : "ಮಾರ್ಕವಃ, ಭೃಂಗರಾಜಃ—೨ ಗರಗದ ಸೊಪ್ಪು" (ಸಿದ್ಧಾಂತಿ. ೦೪೬); "ಭೃಂಗರಾಜಃ—ಹೊಂಗರುಗ" (೬೫೦. ೦೦೩). ೨. ಒಂದು ಬಗೆಯ ದೊಡ್ಡ ದುಂಬಿ. [ಸಂ.]

**ಭೃಂಗವಲ್ಲಿ** (ನಾ). = ಭೃಂಗರಾಜ ೧ : "ಭೃಂಗಾಹ್ವಾ—ಗರುಗ, ಭೃಂಗವಲ್ಲಿ" (೬೫೦. ೦೦೩). [ ಸಂ. ಭೃಂಗವಲ್ಲೀ ]

**ಭೃಂಗಾಯಿ** (ನಾ). ಒಂದು ಬಗೆಯ ಗಿಡ ಮತ್ತು ಅದರ ಫಲ : ತೆಂಗಾಯಿ ಪಲಸು ಕಿತ್ತಳೆ ಮಾವು ಮಾದಲ ಭೃಂಗಾಯಿವಣ್ಣಾಳು ಸಹಿತ ಹಿಂಗದ ಬಹುಫಲಾದಿಗಳ ತೋಂಟಿಗರು ಸಾರಂಗಪಾಣಿಗೆ ಸಾರ್ಚಿದರು (ವೋಪತ. ೪-೬೨). [ ? ]

**ಭೃಂಗಾರ** (ನಾ). ೧. ಚಿನ್ನದ ಗಿಂಡಿ; ಸುವರ್ಣಕಲಶ; P ರಾಜರ ಪಟ್ಟಾಭಿಷೇಕದಲ್ಲಿ ಉಪಯೋಗಿಸುತ್ತಿದ್ದ ಕಲಶವು ಚಿನ್ನ, ಬೆಳ್ಳಿ, ಮಣ್ಣು, ತಾಮ್ರ, ಸ್ಫಟಿಕ, ಗಂಧದ ಮರ, ಕಬ್ಬಿಣ ಮತ್ತು ಕೊಂಬು ಎಂಬ ಎಂಟು ಪದಾರ್ಥಗಳಿಂದ ನಿರ್ಮಿತವಾಗಿದ್ದು ಆಕಾರ, ಅಳತೆಗಳಲ್ಲೂ ಭೇದವಿರುತ್ತಿತ್ತೆಂದೂ ಹೇಳಲಾಗಿದೆ : "ಭೃಂಗಾರಃ, ಕನಕಾಳುಕಾ—ಈ ೨ ಬಿಂಗಾರಿ" (ಹಲಾಯು. ೩೨-೦೬೦); ಧ್ವಜ ದರ್ಪಣ ಚಂಚಚ್ಚಮರಜ ಮಣಿ ಭೃಂಗಾರ ಸುಪ್ರತಿಷ್ಠಿತ ತಾಳವೃಜನ ಕಳಶಾತಪತ್ರಂ ತ್ರಿಜಗತ್ಪತಿ ಗಪ್ಪಮಂಗಳಂ ಸೊಗಯಿಸುಗುಂ (ಆಪು. ೪-೪೦); ಹರಿನೀಲಸ್ತಂಭಮಂ ಜಾಗದ ಪಡಲಿಗೆಯುಂ ತುಂಗಭೃಂಗಾರಮುಂ ಸೆರ್ವಿರೆ . . . ಬೆಡಂಗಾದು ದುಮ್ಮಾಹಗೇಹಂ (ಶಂರಾಪ. ೩-೦೦೨). ೨. ಪಾತ್ರೆ; ಕಲಶ : ತುಂಗ ಕನಕಭೃಂಗಾರವಿರಾಜಿ ರಾಜನ್ಮರಕತಮಯುತುಕವಿರಾಜಿ (ಅಪು. ೪-೩೦ ಗದ್ಯ); ಗಂಧಸಲಿಲಸಂಭೃತ ವಿಶಾಲಹರಿನೀಲಭೃಂಗಾರಂಗಳಿಂ. . . ಮನಂಗೊಳಿಪ ದೇವಪೂಜಾಗೃಹಮಂ ಪೊಕ್ಕು (ಶಂರಾಪ. ೦೨-೨ ವ); ಪಳಿಕಿನ ಭೃಂಗಾರದ ಬೆಳ್ಳಿಳಗುಂ ಜಾಗಂಗಳಿಸೆವ ಪಸುರ್ವೆಳಗುಂ. . . ಪಸರಿಪ್ಪುವು ಸುರಶರಾಸನಶತಮಂ (ತಂಪ್ರಪು. ೬-೩೦). ೩. ಚಿನ್ನ; ಬಂಗಾರ : 'ಭೃಂಗಾರವನೆ' ಪರಾ. [ಸಂ.]

**ಭೃಂಗಾರವನೆ** (ನಾ). ಚಿನ್ನದಿಂದ ನಿರ್ಮಿಸಿರುವ ಮನೆ; ಬಂಗಾರದ ಮನೆ : ಭೃಂಗಾರವನೆಯ ಭೋಗಂ ಮಂಗಳಕಳಶಂ . . . ಸಪ್ಪುಸ್ವರ ಕಂಗೆಸೆಯಲ್ ಮೆಚಿದುದಾ ಸ್ವಯಂವರಗೇಹಂ (ಪಶಂ. ೨೬೯). [ ಭೃಂಗಾರ + ಮನೆ ]

**ಭೃಂಗಾರಿ** (ನಾ). ೧. = ಭೃಂಗಾರ ೨ : ತೋರಮೊಲೆಗಳ ಮೊಗಂಗಳ್ ರಾರಾಜಿಸೆ ಕರ್ಪುವೆತ್ತು ಮೋಹನಧೂಮೋದ್ಗಾರಿಗಳಂ ಕಾಂಚನಭೃಂಗಾರಿಗಳಂ ಪೋಲ್ತುವರಸಿಗಂದೆಳಮಾಜೋಳ್ (ಶಂರಾಪ. ೩-೯೩) ; ಪೊಸಬಾಸಿಗವಂ ಬಿಸುಡುತ ವಿಸುನಿಯ ಭೃಂಗಾರಿಗಳ ಘಟಂಗಳನೊಡೆವುತ್ತಸವಸದ ಕರ್ಪುವಂ ತಾಪಸನುರು ಮುಳಿಸಿಂದೆ ಮಾಡುತಿರಲ್ (ತ್ರಿಕೂ. ೨-೮೬). ೨. ರೆಕ್ಕೆ ಇರುವೆ ; ಜೀರುಂಡೆ : "ಭೃಂಗಾರೀ, ಜೀರಿಕಾ, ಚೀರೀ, ಝಿಲ್ಲಿಕಾ—೪ ರೆಕ್ಕೆಗಳುಳ್ಳ ಇರುವೆಗಳ ಹೆಸರುಗಳು. ಜಿಮ್ಮಂಡೆ ಹುಳ ವೆನ್ನುವರು" (ಸಿದ್ಧಾಂತಿ. ೬೬೦). [ ಸಂ. ಭೃಂಗಾರೀ ]

**ಭೃಂಗಾರು** (ನಾ). = ಭೃಂಗಾರ ೧ : ಗೃಹೀತಚಾಮರತಾಳವೃಂತ ಭೃಂಗಾರುವಾರಾಂಗನಾಸಹಸ್ರಸಂಗತಮುಂ . . . ಅಪ್ಪ ರಾಜಮಂದಿರಮಂ ಪೊಕ್ಕು (ಕಾದಂಪ. ೪೩೪); ವಿರದಂಡಾಂಕುಶ ಝಷಚಾಮರದರ್ಪಣ ಕಲಶ ಶಂಖ ಭೃಂಗಾರು ನಿರಾಕರಶಕ್ತಿ ಖಿಟ್ಗ ಮುಸಲೋತ್ಕರಮಂ ವಾಜಿಗಳ ಪೋಡ್ರಮುದನುಕರಿಸಿ ಶುಭಂ (ಅಶ್ವಶಾ. ೩-೪). [ಸಂ.]

**ಭೃಂಗಾರುಧಾರಿ** (ನಾ). ಚಿನ್ನದ ಕಲಶವನ್ನು ಹಿಡಿಯುವ ವ್ಯಕ್ತಿ : ವಿಜಯಿ . . . ನಂದಿವರ್ಧನೆಯೆಂಬೆಣ್ಬರುಂ ದಿಗ್ವನಿತೆಯರಂ ಪರಮಜಿನ ಜನ್ಮೋತ್ಸವದೊಳ್ ಶೃಂಗಾರಂಬೆರಸು ಭೃಂಗಾರುಧಾರಿಗಳಾಗಲುಂ . . . ಬೆಸಸುವುದುಂ (ಆಪು. ೬-೩ ವ). [ಸಂ. ಭೃಂಗಾರುಧಾರಿನ್]

**ಭೃಂಗಾರುಧಾರಿಣಿ** (ನಾ). ಚಿನ್ನದ ಕಲಶವನ್ನು ಹಿಡಿಯುವವಳು : ತಾಂಬೂಲತಾಳವೃಂತಾಂಗರಾಗ ಭೃಂಗಾರುಧಾರಿಣಿಯರಪ್ಪ ವಾರವಿಳಾಸಿನಿಯರೊಳಂ (ಕಾದಂಪ. ೪೯೩); ಜಿನೇಂದ್ರಜನ್ಮಕಲ್ಯಾಣದೊಳ್ ಭೃಂಗಾರುಧಾರಿಣಿಯರಾಗಿ (ತಂಪ್ರಪು. ೦೦-೧೨೨ ವ).

[ಸಂ. ಭೃಂಗಾರುಧಾರಿಣೀ]

**ಭೃಂಗಾಲಕ, ಭೃಂಗಾಳಕ** (ನಾ). ತುಂಬಿಯಂತೆ ಕಪ್ಪಾದ ಮುಂಗುರುಳು; ನೀಲಕುಂತಲ : ಒಬ್ಬ ಉತ್ತಮ ದೇವಶಿಲ್ಪಿ ಕೊರೆದ ಕಣ್ಣು-ಮೂಗಿನ ಮಾಟ; ಕಣ್ಣನ್ನು ಸೆರೆಹಿಡಿಯುವ ಭೃಂಗಾಲಕಗಳು (ಶಪುಪಾ. ೬೪೬). **ಭೃಂಗಾಳಕ :** ನವಕನಕಮಣಿಬಂಧನಿಗಳಂಗಳಿಂ ಭೃಂಗಾಳಕಂಗಳಿಂದೆ . . . ಎಸೆವ ಪೆಣ್ಗಳಾನೆಗಳ ಮೇಲ್ವೆತಂದರು (ಕೃಮಿಚಾ. ೦೬-೩); ಸುಲಿಪಲ್ಕೆಂಬವಳಂ ಬೊಲೊಪ್ಪುವಧರಂ ಭೃಂಗಾಳಕಂ . . . ಪದಾಬ್ಜಂ ಮಂಜುಳಂ ಕಾಂತೆಯಾ (ರಾಜಕೇ. ೩-೦೬). [ಸಂ.]

**ಭೃಂಗಾಳಕ** 'ಭೃಂಗಾಲಕ' ನೋ.

**ಭೃಂಗಿ**[1] (ನಾ). ೧. ಪರಮೇಶ್ವರನ ಪ್ರಮಥರುಗಳಲ್ಲಿ ಒಬ್ಬ : ಅವರಿದರಾಗಿ ಬಹ ಭೃಂಗಿಯಂ ಕಂಡು ನಸುನಕ್ಕರು (ಸಿದ್ಧರಾ. ೦-೨೪); ಅವ್ವರೊಳಿದ್ದು ಕೋಡಗದಾಟವಾಡುವ ಭೃಂಗಿಯೆಯ್ತಂದ (ಬಸಪು. ೨೯-೬). ೨. ಅಂಜೂರವೃಕ್ಷ. [ಸಂ. ಭೃಂಗಿನ್]

**ಭೃಂಗಿ**[2] (ನಾ). ಹೆಣ್ಣುದುಂಬಿ; ಭ್ರಮರಿ : ಸರಸಕಂಠಕುಕಟ್ಟಳಸಂಗಿ ಭೃಂಗಿಯಂಗಲೆ (ಜಗಪ. ೨-೫೬). [ಸಂ. ಭೃಂಗೀ]

**ಭೃಂಗಿನರ್ತನ** (ನಾ). ೧. (ಪರಮೇಶ್ವರನ ಸಭೆಯಲ್ಲಿ) ಭೃಂಗೀಶ್ವರನು ಮಾಡುವ ನರ್ತನ. ೨. [ವೀಶೈ] ವೀರಶೈವ ಮಠಗಳಲ್ಲಿರುವ ಪರಂಪರಾಗತವಾದ ಒಂದು ಬಿರುದು (?) : (ಸಾಧಾರಣ ಬಿರುದುಗಳು)—ಉಡುಕುವಾದ್ಯ, ಭೃಂಗಿನರ್ತನ, ದುಂದುಭಿ, ಭೇರಿ, ಕಹಳೆ, ಕರ್ನೆ (ಗುರುಚ. ೦೦). [ಸಂ.]

**ಭೃಂಗಿಪ** (ನಾ). = ಭೃಂಗಿ[1] ೧ : ಗರುಡನ ಗಜರಿಯ ಗಾಳಿಯೊಳ್ಸಿಕ್ಕಿ ಬೆಂಡಾಗಿ ತಿರುಗಿ ಬಂದಭವಂಗೆ ಭೃಂಗಿಪಂ ಬಿನ್ನೈಸುತಿರೆ ಕೇಳ್ದು (ಕೃಮಿಚಾ. ೦೪-೨೦). [ಸಂ.]

**ಭೃಂಗಿರಿಟಿ** (ನಾ). =ಭೃಂಗಿ[1] ೧ : ಭೃಂಗಿರಿಟಿಯ ಮೊಲ್ಲಡಿಗಳೆನ್ನಯ ಮುಡಿಗೆ ಸತ್ಪತಮಾಪುತ್ತಿರ್ಕೆ ನಿರ್ಮಳತ್ವಮುಂ (ಅರಾತ. ೦-೧-೦೬). P ಭೃಂಗಿಗೆ ಶಿವಗಣದಲ್ಲಿ ಬಹಳ ಉನ್ನತಸ್ಥಾನವಿದೆ. ಭೃಂಗಿರಿಟಿ, ಭೃಂಗೇರಿಟಿ, ಭೃಂಗಿರೀಟಿ, ಭೃಂಗರಿಟಿ, ಭೃಂಗರೀಟ, ಭೃಂಗಿರೀಟ, ಭೃಂಗೀರಿಟ ಎಂಬ ವ್ಯತ್ಯಾಸವು ಹೆಸರಿನಲ್ಲಿ ಕಂಡುಬರುತ್ತದೆ. ಇವನು ದುಂಬಿಯಂತೆ ಧ್ವನಿ ಮಾಡುತ್ತಿದ್ದುದರಿಂದ (ಭೃಂಗ ಇವರಟತಿ ಎಂದು) ಇವನಿಗೆ ಈ ಹೆಸರುಗಳು ಬಂದಿವೆ. ಪರಮೇಶ್ವರನು ಪಾರ್ವತಿಯೊಂದಿಗೆ ಬೆರೆತಾಗ ತನ್ನ ವೀರ್ಯವನ್ನು ಅಗ್ನಿಯಲ್ಲಿ ಬಿಟ್ಟನು. ಆಗ ಅದರ ಎರಡು ಕಣಗಳು ಬೆಟ್ಟದ ಮೇಲೆ ಸಿಡಿದು ಬಿದ್ದುವು. ಅದರಿಂದ ಇಬ್ಬರು ಮಕ್ಕಳು ಹುಟ್ಟಿದರು. ಬ್ರಹ್ಮನು ಆ ಮಕ್ಕಳಲ್ಲಿ ದುಂಬಿಯಂತೆ ಕಪ್ಪುಬಣ್ಣವುಳ್ಳ ಒಬ್ಬನಿಗೆ ಭೃಂಗೀ ಎಂದು ಹೆಸರಿಟ್ಟನು. ಕಾಡಿಗೆಯಂತೆ ಬಹಳ ಕಪ್ಪಾಗಿದ್ದ ಮತ್ತೊಬ್ಬನಿಗೆ ಮಹಾಕಾಲನೆಂದು ನಾಮಕರಣ ಮಾಡಿದನು. ಪಾರ್ವತೀ ಪರಮೇಶ್ವರರು ಆ ಮಕ್ಕಳನ್ನು ಬಹಳ ಪ್ರೀತಿಯಿಂದ ಸಲಹಿದರು. ಶಿವನು ಅವರನ್ನು ಗಣಾಧಿಪತಿಗಳನ್ನಾಗಿ ಮಾಡಿದನು. ಅವರಿಬ್ಬರೂ

ದ್ವಾರಪಾಲಕರಾಗಿದ್ದು ಶಿವಸೇವೆಯನ್ನು ಮಾಡುತ್ತಿದ್ದರು ಎಂದು ಕಾಳಿಕಾಪುರಾಣದ ೪೫ನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. [ಸಂ.]

**ಭೃಂಗೀಶ** (ನಾ). =ಭೃಂಗಿ₁ ೧ : ಭೃಂಗೀಶ ವೀರಗಣೇಶರುಂ ರುದ್ರೇಶ ಯೋಗಾಚಾರ್ಯರುಂ ನೆರೆದೋಲಯಿಸುತಿರಲು (ಬಸವ. ೨೪-೯೬) : ಗಗನ ಪಥದೊಳ್ ಪಿನಾಕಿ ಕಂಡಳ್ಕಿಯಿಂದಾ ತಲೆಗೆ ಕಳುಹಿದಂ ಭೃಂಗೀಶನಂ ಮುಂದದೊಳು (ಶ್ರೀ ಬಿಜ್ಜ. ೦೪-೦೬). [ಸಂ.]

**ಭೃಗು** (ನಾ). ೧. ಬ್ರಹ್ಮನ ಹೃದಯದಿಂದ ಜನಿಸಿದವನು; ಒಬ್ಬ ಬ್ರಹ್ಮರ್ಷಿ: ಪರನಿಳಯದೊಳು ಹುಗುವ ಸಂದೀಶ್ವರನೊ . . . ವರಮುನಿಪ ದೂರ್ವಾಸನೋ ಭೃಗುವೋ (ಬಸವ. ೪೩-೪೦) ; ರಕ್ಷೋಘ್ನ ಮಂತ್ರದಿಂದೆಂಟುಬಾಗಿಲ್ಗಳಂ ರಕ್ಷಿಸುವರಾಗಿ ವಿಶ್ವಾಮಿತ್ರ ಭೃಗು . . . ಅಕ್ಷಯತಪೋಧನದ ವರಮುನಿಗಳೆಲ್ಲರುಂ ಲಕ್ಷಿತದ ಪೂಜೆಗಳನನುಕರಿಸಲು (ಶ್ರೀ ರಾಜಾ. ೩೩-೪೦) ; ಭೃಗುಮುನಿಯ ಶಾಪದಿಂ ಪನ್ನಗಶಯನಂ ಪತ್ತು ಯೋನಿಯೊಳ್ ಪುಟ್ಟಿದನು (ಪ್ರಶಂ. ೩೭-೪೦). ೨. ಪರಶುರಾಮನ ತಂದೆ; ಜಮದಗ್ನಿ: 'ಭೃಗುಸುತ' ಪರಾ. ೩. ದೈತ್ಯಗುರು; ಶುಕ್ರ: "ರಂಗವಾನ್ ಕಾವ್ಯನಾ ಕವಿ ಭಾರ್ಗವಂ ಭೃಗು ಸಿತಾಂಗನುಶನಸನಸುರಗುರು ವೆಂದೆನಲು ಶುಕ್ರನು" (ಶಬ್ದಮ. ೦೨-೩) ; ಕವಿರಿಪು ಗುರು ಗುರುರಿಪು ಭೃಗುವವರೇಪರೆನಲ್ ಧರಿತ್ರಿ ಕವಿಗುರು ಜನತೋದ್ಭವಮೊವವೆ ಮಂತ್ರ ಗುಣಮೊಪ್ಪುವುದು ಮಹಾದೇವದಣ್ಣನಾಥೋತ್ತಮನೊಳ್ (ಎಕ. VIII. ಸೊರಬ. ೨೬-೪೬ ; 1208?). ೪. ಬೆಟ್ಟದ ಇಳಿಜಾರು,— ಕಡಿದಾದ ಭಾಗ : " ಸಾನುಕಟಕಂ ಭೃಗು ಪ್ರಸ್ಥಂ ತಟಂ ನಿತಂಬಂ ಗಿರಿಯ ಹೊರೆ ಯಕ್ಕು " (ಶಬ್ದಮ. ೩೦-೨). ೫. ಶುಕ್ರವಾರ. ೬. ಶುಕ್ರನೀತಿ ಶಾಸ್ತ್ರ: ವರಸೂಪಶಾಸ್ತ್ರ ಭೃಗು ಚಿತ್ರ ರಸಾಳಂಕಾರ ಗಣಿತ ಗಜ ಹಯ ವೈದ್ಯಂ ಸ್ವರ ಶಕುನ ಕಾವ್ಯನಾಟಕ ಭರದಿ ಕಳಾವಿದನೆನಿಪ್ಪುದತಿ ಚತುರವಿಟಂ (ಪುಶಃ. ೧೦-೦೬). ೭. [ಜ್ಯೋತಿ] ಶುಕ್ರನು ಅಧಿದೇವತೆ ಯಾದ ಗ್ರಹ; ಶುಕ್ರಗ್ರಹ. [ಸಂ.]

**ಭೃಗುಜ** (ನಾ). ೧. ಭೃಗುಋಷಿಯ ಮಗ : ಶುಕ್ರಾಚಾರ್ಯ. ೨. [ಜ್ಯೋತಿ] ಶುಕ್ರಗ್ರಹ : ಭೃಗುಜನಿಪ್ಪತ್ತೇಳಜೊಳ್ ನಿಂದೊಡಲ್ಲಿ ನಿಜೋಚ್ಚಾಲಯಭಾಗದಲ್ಲಿ ಪರಮೋಚ್ಚಸ್ಥಾಯಿ ತಾನಾ ಗ್ರಹಂ (ಜಾತಕ. ೦-೪೦). [ಸಂ.]

**ಭೃಗುಜೆ** (ನಾ). ೧. ಭೃಗುಋಷಿಯ ಮಗಳು; ಲಕ್ಷ್ಮಿ; ಭಾರ್ಗವಿ. ೨. ಒಂದು ಬಗೆಯ ಮರ; ಕಿರುದೇಗು : "ಸ್ವಸು ಭೃಗುಜೆ ಕಾಸಙ್ಕ ಕಿರುದೇಗೆನಿಸ್ಕುಂ" (ಶಬ್ದಮ. ೪೭-೧೬). [ಸಂ. ಭೃಗುಜಾ]

**ಭೃಗುಪತನ** (ನಾ). ಬೆಟ್ಟದ ಕಡಿದಾದ ಪ್ರದೇಶದಿಂದ ಕೆಳಕ್ಕೆ ಬೀಳು ವುದು; P ಮಹತ್ತರವಾದ ಪಾಪವನ್ನು ಮಾಡಿದವರು ಬೆಟ್ಟದಿಂದ ಧುಮುಕಿ ಆತ್ಮಹತ್ಯೆ ಮಾಡಿಕೊಂಡರೆ ಪಾಪಪರಿಹಾರವಾಗುವು ದೆಂದು ಧರ್ಮಶಾಸ್ತ್ರಗಳಲ್ಲಿ ಹೇಳಿದೆ: ಜಮುಕು ಮರ್ಭರವಾದಾಗ ಬೆಟ್ಟದ ಶಿಖರದಿಂದ ಹಾರಿ ಪ್ರಾಣವನ್ನು ಕಳೆದುಕೊಳ್ಳುವ ಭೃಗುಪತನವೂ ಪುರಾಣೇತಿಹಾಸಕಾಲಗಳ ವೀರರ ಆತ್ಮಾರ್ಪಣೆಯ ಉದಾಹರಣೆಗಳು (ಕಾಂತಲ. ೩೪೨ ಟಿಪ್ಪಣಿ). [ಸಂ.]

**ಭೃಗುವಾರ** (ನಾ). ಶುಕ್ರವಾರ : ಅಂದಿದೊ ವಸಂತಪೂರ್ಣಿಮೆಯು ಭೃಗುವಾರದಾ ನಡುಹಗಲ ಸಿರಿ ಹೊತ್ತು (ಗೂರ್ಖಾ. ೦೦-೨೬೦). [ಸಂ.]

**ಭೃಗುವಿದ್ಯೆ** (ನಾ). (?) : ಚಿತ್ರಮೆಂಬ ಭೃಗುವಿದ್ಯೆಯೊಳಾರ್ದೊರೆ ರೇಖೆಭೂಪನೊಳ್ (ಪುಶಃ. ೦-೨೦). [ ? ]

**ಭೃಗುಸುತ** (ನಾ). ೧. ಜಮದಗ್ನಿಯ ಮಗ ; ಪರಶುರಾಮ : ಬಲವಂತಂ ಭೀಮನಿಂದಂ ಛಲಿ ಭೃಗುಸುತನಿಂದಂ . . . ಸಮರವಿಜಯು ವಿಕ್ರಾಂತರಂಹಂ ನೃಸಿಂಹಂ (ಎಕ. XI. ದಾವಣ. ೨೫-೫೭ ; 1224); ಇಪ್ಪತ್ತೊಂದು ದಿನ ಭೃಗುಸುತನೊಡನೆ ಕಾದಿದನು ವಿರಥನ ಮಾಡಿದನು ಭೀಷ್ಮ (ಶಲ್ಯಾ. ೨-೩೬). ೨. ಶುಕ್ರಾಚಾರ್ಯ. ೩. [ಜ್ಯೋತಿ] ಶುಕ್ರಗ್ರಹ : ನಿಶಾಪತಿಸುತನಿಂ ಮಲ್ಲಂ ಭೃಗುಸುತನಿಂ ಪರದಾರಶೀಲ ನೆನಿಕುಂ ಮನುಜಂ (ಜಾತಕ. ೦೫-೩). [ಸಂ.]

**ಭೃಗುಸೂನು** (ನಾ). = ಭೃಗುಸುತ ೩ : ಸೋಮಸೂನು ಭೃಗುಸೂನು ಸುಧಾಕರರೇಕಾದಶದೊಳ್ ನಿಲೆ ಪರಾಕ್ರಮೋನ್ನತಿಯೆನಿಪ್ಪ ಭೂಪತಿ ಯಕ್ಕುಂ (ಜಾತಕ. ೦೨-೯). [ಸಂ.]

**ಭೃತ** (ಗು). ೧. ಕಾಪಾಡಿದ ; ರಕ್ಷಿಸಿದ : ಧಾರಿಣಿ ಬಣ್ಣಿಕುಂ ನಿಜ ಯಶೋವಲ್ಲೀ ವೃತಾಂಭೋದಮಾರ್ಗನನಾರಾಧಿತ ಭರ್ಗನು ಭೃತವಿಪಶ್ಚಿದ್ವ ರ್ಗನುಂ ದುರ್ಗನುಂ (ಶಂತನು. ೦೦-೦೬); ಭೃತಶಿಖಿಂಡ ಜಿತಸುಮಕಾಂಡ ವಿತರಣಶೌಂಡ ಭೃತಜಗದಂಡ ಪಾಲಯ . . . ಮಹೇಶ (ಶಾಸಂತ. ೦೬೬ ಅಡಿ). ೨. ತುಂಬಿರುವ; ತುಂಬಿದ. (ನಾ). ೩. ಕೂಲಿಯ ಆಳು; ಸೇವಕ. ೪. ಅರ್ಥಪೂರ್ಣವಾದುದು : ಗಜಜಿ ಗರ್ಜಿಸುವುದು ಮಮಳರುವಿಪ ಬೇಳ್ವಿಯ ಮಾತಂ [ತೆ]ಮಳೆ ನುಡಿದೊಡಮ್ಮ ಗಂಡ[ವಾ] ತುಮುಳುಂಬಂ ಭೃತಮಕ್ಕುಮೆಂದು ಮೆಯ್ಯಮೆಯ್ಗೆ ಬೆಸಸಿಂಬುದುಂ (ಶಂಕರಾ. ೬-೨೬ ಪ); "ಭೃತಮಕ್ಕುಂ – ಹೀನವಾಗುತ್ತದೆ" (ಶಂಕರ. ೨೨೨). [ಸಂ.]

**ಭೃತಕ** (ಗು). ೧. ಪೊರೆದ ; ಪೋಷಿಸಿದ. ೨. ಕೂಲಿ ತೆಗೆದುಕೊಳ್ಳುವ; ಸಂಬಳವನ್ನು ಪಡೆಯುವ. (ನಾ). ೩. ವೇತನವನ್ನು ತೆಗೆದು ಕೊಂಡು ಸೇವೆ ಮಾಡುವವನು; ಸೇವಕ : "ಭೃತಕಃ, ಭೃತಿಭುಕ್, ಕರ್ಮಕರಃ, ವೈತನಿಕಃ – ೪ ಕೂಲಿಯವನ ಪೆಸರು" (ನಿಘಂಟು. ೩೦೨); ಭೃತಕಂ ಕೃತಕಪ್ರಣಯಮೆಂದೆಚ್ಚರಿಯದೆ ನೆಚ್ಚಿ ಕೂರ್ತಳೆಗೆತ್ತು (ಸುಕುಮಾ. ೬-೨೬ ಪ); ಕೂಲಿಕಾಜಿರೆಚ್ಚಿಯನೆಂದು. . . ಭಕ್ತಿಯಿರ್ದ ನೆಲೆಗೆ ಗಮಿಸಿ ಯಬ್ಬೆಗೆ ಭೃತಕನಿರ್ಚಿಯಿಂದೊರ್ಡುಸಿರ್ವುದೆನಗೆ ಸಮುದಾಗೆ ಮಾಳ್ಪೆ ನಾನೆ ಕೂಲಿಯುಂ ದಿಟಂ ಸಮಂತು ಎನೆ (ಕಾಲಾಸ್ಕ. ೯-೦೩-೦ ದಿಗ). [ಸಂ.]

**ಭೃತವಂಶ** (ನಾ). ೧. ಕೊಳಲನ್ನು ಹಿಡಿದಿರುವವನು. ೨. ಕುಲವನ್ನು ಪೋಷಿಸುವವನು ; ಕುಲರಕ್ಷಕ. ೧, ೨ : ಭೃತವಂಶನಾಗಿಯು.೦ ನೃಪಗತರಾಗಾಸಕ್ತ ಸಿಂಹನಂದ್ಯಾಚಾರ್ಯವೃತಿಪತಿ ಸತ್ವಸ್ವಸಮನ್ವಿತ ನಾಗಿಯುಂಮಾತ್ರತತ್ತ್ವಚಯಚಾತುರ್ಯಂ (ಶಂದ್ರ. ೦-೦೯). [ಸಂ.]

**ಭೃತಿ** (ನಾ). ೧. ರಕ್ಷಣೆ; ಪೋಷಣೆ. ೨. ಕೂಲಿ; ವೇತನ; ಸಂಬಳ : "ಕರ್ಮಣ್ಯಾ, ವಿಧಾ, ಭೃತ್ಯಾ, ಭೃತಿಃ . . . ಪಣಃ – ೧೧ ಕೂಲಿಯ ಪೆಸರುಗಳು" (ನಿಘಂಟು. ೩೦೬). ೩. ಅಸಲು ; ಮೂಲಧನ ; ಬಂಡವಾಳ. ೪. ಆಹಾರ. ೫. ಕೂಲಿ ಪಡೆದು ಮಾಡುವ ಸೇವೆ. ೬. ಕೊಡುವುದು ; ದಾನ : " ವಿಶ್ರಾಣನಂ, ವಿಹಾಯನಂ, ಭೃತಿಃ . . . ದಾನಂ — ಈ ೧೦ ಕುಡುವುದು" (ಶಬ್ದಮ. ೩೯-೨೩೩). ೭. ಸಂಪಾದನೆ ; ಗಳಿಕೆ : ಶತಲಕ್ಷಧನದ ಲೆಕ್ಕದ ಬಾಯಿ ನುಡಿದೊಡೇಂ? ಭೃತಿಯೆಷ್ಟು ವೆಚ್ಚಕ್ಕೆ ? (ಮಂಕುತಿ. ೬೩೩). [ಸಂ.]

**ಭೃತಿಭುಜ** (ನಾ). ಕೂಲಿಯನ್ನು ಪಡೆಯುವವನು ; ಸೇವಕ : "ಭೃತಕಃ, ಭೃತಿಭುಕ್, ಕರ್ಮಕರಃ, ವೈತನಿಕಃ —೪ ಕೂಲಿಯವನ ಪೆಸರು " (ನಿಘಂಟು. ೩೦೨). [ಸಂ. ಭೃತಿಭುಜ್]

**ಭೃತ್ಯ** (ನಾ). ೧. ಆಳು ; ಸೇವಕ : "ಭೃತ್ಯಃ, ದಾಸೇರಃ . . . ಪರಿಚಾರಕಃ — ೧೧ ಬಂಟನ ಪೆಸರು" (ನಿಘಂಟು. ೩೦೨); ಈ ವರ್ಣಮಾ ವರ್ಣಶೂನ್ಯನ ಭೃತ್ಯಂಗೆಸೆವಂದಮುಚ್ಚರಿ (ಜಗಂ. ೦-೫೦) ; ಬಲಿಸಹೀರದು ನೃಪರ ಸೇವೆಯ ಮಾಡಿ ಭೃತ್ಯರಿಗೆ (ಕೌರವ. ೪೬-೩೭); ಬುದ್ಧಿ ಪರಾಕ್ರಮ ವಿರಬೇಕು ಭೃತ್ಯಗೆ ಭಕ್ತಿಯೊಂದಿರಬೇಕು ಜೊತೆಗೆ (ಇಂದಾಶ. ೧೩೯-೬೦).

೨. ಸಚಿವ; ಮಂತ್ರಿ. ೩. ಪ್ರಜೆ.

**ಭೃತ್ಯಚಿಂತಾಮಣಿ**=ಸೇವಕರ ಇಷ್ಟಾರ್ಥಗಳನ್ನು ಪೂರೈಸುವವನು: ಒಂದು ಬಿರುದು : ಸುಭಟಚೂಡಾಮಣಿ ಭೃತ್ಯಚಿನ್ತಾಮಣಿ (ಶಾಇಇ. XX. ೦೩-೦೭: 875). [ಸಂ.]

**ಭೃತ್ಯತೆ** (ನಾ). ಆಳುತನ ; ದಾಸ್ಯ : ಎನ್ನಯ ಭೃತ್ಯತೆ ಪೋದೊಡ ಮೆನ್ನರಸನಾಜ್ಞೆಯುಳಿದೊಡಪೋಂ . . . ಮಾದೇವನೊಳೈಕ್ಯವೃತ್ತಿಯೋಂ ಸಮನಿಕುಮೋ (ಚಾಶಕೀ. ೮೯-೩೯). [ಸಂ. ಭೃತ್ಯತಾ]

**ಭೃತ್ಯತ್ವ** (ನಾ). ೧. = ಭೃತ್ಯತೆ : ದಾಸತ್ವ ವೀರದಾಸತ್ವ ಭೃತ್ಯತ್ವ ವೀರ ಭೃತ್ಯತ್ವ . . . ಎಂಬ ಷಡ್ವಿಧ ಸಜ್ಜನತ್ವಯುಕ್ತನಾಗಿ (ಬಿಶೀಳ. ೯೭). ೨. ವಿನಯ : ದಾಸಭಾವ ಇಂತೆಂದು ಖಿಳರಾಯನಧಿಕದೈನ್ಯದಲಿಯತ್ಯಂತ ಭೃತ್ಯತ್ವದಿಂ ಬೇಡಿಕೊಳ್ಳಲು (ಷಷಷೂ. ೯-೯೭). [ಸಂ.]

**ಭೃತ್ಯಭಾವ** (ನಾ). = ಭೃತ್ಯತೆ : ಅವರ ದೇಶನಾಮಕುಲಗೋತ್ರಂಗಳಂ ನೆಱಿಯೆ ತಿಳಿಯೆ ಬಿನ್ನಪಂಗೆಯ್ದು ಭೃತ್ಯಭಾವಮಂ ಪೂಣಿಸಿ (ಅದಿಪು. ೦೩-೯೦ ವ). [ಸಂ.]

**ಭೃತ್ಯಾಚಾರ** (ನಾ). [ವೀಶೈ] ಪಂಚಾಚಾರಗಳಲ್ಲಿ ಒಂದು ; ಭೃತ್ಯನಂತೆ ಸೇವೆ ಸಲ್ಲಿಸುವುದು : ಲಿಂಗ ಜಂಗಮವ ಪೂಜಿಸಿ ಭಕ್ತನಾದನೆಂದರೆ ಭೃತ್ಯಾಚಾರ ಸದಾಚಾರವೆ ಮೊದಲು ನೋಡಾ (ಅಪಶ್ಲ. ೨೨೩-೦೦೨೦) ; ಭಕ್ತರೆಲ್ಲರೂ ಕೂರ್ತು ಹತ್ತೆ ಕರೆಯುತಿರೆ ಮತ್ತೆ ಕೆಲಕ್ಕೆ ಹೋಗಿ . . . ಭೃತ್ಯಾಚಾರವ ನುಡಿದು (ಬಸವ. ೨೪೩) ; ಬಸವಣ್ಣನವರ ಬಾಳಿನ ಘನತೆಯ ಗುರುತು . ಅವರ ಭೃತ್ಯಾಚಾರ (ಶರತ. ೦೨೯). 'ಪಂಚಾಚಾರ' ಪರಾ. [ಸಂ.]

**ಭೃತ್ಯಾಚಾರಿ** (ನಾ). [ವೀಶೈ] ಭೃತ್ಯಾಚಾರವನ್ನು ಪಾಲಿಸುವವನು : ಇಕ್ಕುಳ ಕೈಮುಗಿದರೇನು ಭೃತ್ಯಾಚಾರಿಯಾಗಬಲ್ಲುದೆ (ಬಸವ. ೦೨೩); ಲಿಂಗಕ್ಕೆ ಕೊಟ್ಟು ಕೊಂಡಡೆ ಪ್ರಸಾದಿ ಇದು ಕಾರಣ ಇಂತಪ್ಪ ಭೃತ್ಯಾಚಾರಿಗಲ್ಲದೆ ಪ್ರಸಾದವಿಲ್ಲ ಗುಹೇಶ್ವರ (ಅವಚಂ. ೩೮-೧೭೬).

[ಸಂ. ಭೃತ್ಯಾಚಾರಿನ್]

**ಭೃತ್ಯೆ** (ನಾ). ೧. ಪೋಷಿಸುವುದು ; ಸಲಹುವುದು. ೨. ಆಧಾರ; ಬೆಂಬಲ. ೩. ಆಹಾರ. ೪. ಕೂಲಿ ; ಸಂಬಳ ; ವೇತನ : "ಭೃತಿಃ, ಭೃತ್ಯಾ . . . ವೇತನಂ—ಈ ೬ ಬೆಲೆ" (ಹಲಾಯು. ೦೨೦-೯೩). ೫. ಸೇವೆ.

[ಸಂ. ಭೃತ್ಯಾ]

**ಭೃಶ** (ಗು). ೧. ಪ್ರಬಲವಾದ ; ಪ್ರಚಂಡವಾದ : ಭೃಶವಿಶ್ವ ಜೀವಿತ ಗಭೀರತೆಯ ದರ್ಶನದ ರಸವದದ್ಭುತ ಮೌನ (ಪಾಂಶುಳ. ೯೬೬). (ನಾ). ೨. ಆಧಿಕ್ಯ; ಅತಿಶಯ : "ಅತಿಶಯಃ, ಭರಃ, ಅತಿವೇಲಂ, ಭೃಶಂ . . . ದೃಢಂ — ೧೪ ಅತಿಶಯದ ಹೆಸರುಗಳು" (ಸಿದ್ಧಾಂಷ. ೨೩). ೩. ದೊಡ್ಡದಾದುದು; ಅತಿಶಯವಾದುದು : "ಕಾಮಂ, ಪ್ರಕಾಮಂ, ಪರ್ಯಾಪ್ತಂ, ನಿತಾಂತಂ, ಭೃಶಂ . . . ಅತಿವೇಳಂ—ಈ ೮ ಹಿರಿದಾಗಿ ರ್ದುದು" (ಹಲಾಯು. ೦೦೯-೩೯). ೪. ಸಂಕಟ : "ಭೃಶದೊಳಂ ನೆಗಟ್ದ ಸಂಬಾಧಮೆಂದೆನಿಕು" (ಮಂಗರಾ. ೦೩೩-೨೦). ೫. ಆಣೆ : ಪ್ರತಿಜ್ಞೆ : "ಭೃಶ=ಸಂಬಾಧ, ಸೂರುಳು" (ನಾಶರಾ. ೦೫೬ ೬). [ಸಂ.]

**ಭೃಷ್ಟ** (ಗು). ಹುರಿದ; ಸುಟ್ಟ: ಸೊಗಯಿಸುವ ದೇಹಾದಿ ನಿವಹಂಗಳೆಯ್ದೆ ತೊಟ್ಟಗೆ ದಗ್ಧಪಟ ಭೃಷ್ಟಬೀಜಂಗಳಂತೆ ಕಮ್ಮಗೆ ಕಟ್ಟು ಪೋಕುಂ (ಅರಾತ. ೩-೬-೩೯). [ಸಂ.]

**ಭೆಂಡೆವಾಡ** (ನಾ). ಒಂದು ಊರಿನ ಹೆಸರು: ಪಶ್ಚಿಮತಃ ಭೆಂಡೆವಾಡೋ ನಾಮಗ್ರಾಮಃ (ಇಆ. XVI. ೨೯-೬೬ ; 1009). [ ? ]

**ಭೆಟ್ಟಿ** 'ಭೇಟಿ' ನೋ.

**ಭೇಕ** (ನಾ). ೧. ಕಪ್ಪೆ; ಮಂಡೂಕ : "ಮಂಡೂಕಃ, ಪ್ಲವಗಃ, ಭೇಕಃ. . . ಪ್ಲವಂಗಃ—ಈ ೮ ಕಪ್ಪೆ" (ಹಲಾಯು. ೮೦೯-೯೦); ಕಂತುವೀ ಬಂದನೆನುತ್ತುಂ ಗರ್ಜಿಪಂತಾದುದು ವಿರಹಿಗಳಂ ಕೇಕಿ ಭೇಕಪ್ರಣಾದಂ (ಜಗಪು. ೯-೨೦); ಕಾಳಸರ್ಪನ ಹೆಡೆಯ ನೆಳಲಲಿ ಬಾಳಲೆಳಸಿದ ಭೇಕನಂತಿಹುದನ್ಯಸತಿ ಬೇಟ (ಕೌಶಿಕಾ. ೩೮-೮). ೨. ಪುಕ್ಕಲ ; ಭೀರು. ೩. ಮುಗಿಲು ; ಮೋಡ.

[ಸಂ.]

**ಭೇಕವೈರಿ** (ನಾ). ಕಪ್ಪೆಯ ಶತ್ರು ; ಹಾವು : ಸೂಕರನ ತುಂಬಿಯ ಮರಾಳನ ಭೇಕವೈರಿಯ ಕಾರುರಗ ೯೭ ಕೋಕಿಲನ. . . ಒಂದು ಗುಣವಿರ ಬೇಕು ನೃಪರಿಗೆ (ಕುಮಾ.ಸ. ೦-೩೯). [ಸಂ. ಭೇಕವೈರಿನ್]

**ಭೇಕಾಸನ** (ನಾ). [ಯೋಗ] ಒಂದು ಬಗೆಯ ಆಸನ : ಭೇಕಾಸನ . . . ಈ ಆಸನದಲ್ಲಿನ ಚಲನವಲನಗಳು ಕಪ್ಪೆಯನ್ನು ಹೋಲುವುದರಿಂದ ಇದಕ್ಕೆ ಈ ಹೆಸರು (ಯೋಗದೀ. ೦೦೦). 'ಮಂಡೂಕಾಸನ' ಪರಾ. [ಸಂ.]

**ಭೇಕಿ** (ನಾ). ಹೆಣ್ಣು ಕಪ್ಪೆ : "ಭೇಕಿ ವರ್ಷಾಭುಯೆನೆ ಪೆಣ್ಗಪ್ಪೆಯಕ್ಕುಂ" (ಮಂಗರಾ. ೦೨೨-೮). [ಸಂ. ಭೇಕೀ]

**ಭೇಕಿಸು** (ಕ್ರಿ). (ಆಲಂ) ವಟಗುಟ್ಟು; ಅರಚು: ಹುಲುಗೊಡ್ಡು ಮೋಡ ಮುಸುಗುಡುಗಿದಾಗ ಕೆಲ ಜೀವ ಭೇಕಿಸುವುವು (ಅರಳು. ೩೯-೬).

[ಭೇಕ +— ಇಸು₃]

**ಭೇಟಿ**, **ಬೆಟ್ಟಿ**, **ಭೆಟ್ಟಿ** (ನಾ). ಒಬ್ಬರನ್ನೊಬ್ಬರು ಸಂಧಿಸಿ ಮಾತನಾಡುವುದು ; ಸಂದರ್ಶನ : ಇನ್ನು ಕಡೆಯ ಭೇಟಿಯನ್ನು ನನಗೊಮ್ಮೆ ಕೊಟ್ಟು ಆಮೇಲೆ ಏನು ಮಾಡಬೇಕೆಂದು ಹೇಳು (ಮುಂಬಯಿ. ೬-೦೬೪); ಸ್ಟಾಲಿನ್ ಟ್ರೂಮನ್ ಭೇಟಿಗೆ ನೂರ್ಮಡಿ ಮುಖ್ಯಂ ಭವ್ಯಂ ಕವಿಗೀ ನೀರ್ಕಡಿ! (ಅಕೀ. ೩೩-೦೩). **ಬೆಟ್ಟಿ**: ಮೂರು ಕುರ್ಚಿಗಳು ಒಂದು ಮೇಜಿನ ಹತ್ತಿರವಿದೆ; ಮತ್ತೊಂದನ್ನು ಅದರ ಮುಂದುಗಡೆ ಮುಖ್ಯೋಪಾಧ್ಯಾಯರ ಬೆಟ್ಟಿಗೆಂದು ಬಂದವರು ಕೂಡುವುದಕ್ಕಾಗಿ ಇಟ್ಟಿದೆ (ಶ್ರತಿಬಿಂ. ೩೩); ಬೆಟ್ಟಿಯ ಆವಶ್ಯಕತೆಯು ತಿಳಿಯಲಿಲ್ಲ. ಬೆಟ್ಟಿಯು ಅನುಚಿತವೆಂದೂ ತಿಳಿದನು (ಸಂಶಿಖ. ೦೦೦). **ಭೆಟ್ಟಿ**: ಒಡೆಯದೇವರಿಗೆ ಕೊಟ್ಟಲ್ಲದೆ ಕೊಳ್ಳೆವೆಂಬ ಮೃಡನ ಭಕ್ತರ ನೋಡಾ ಒಡೆಯಂಗೆ ಭೆಟ್ಟಿ ಮನೆಯೊಡೆಯಂಗೆ ತುಪ್ಪ ಕಟ್ಟುಮೊಸರು ಮೃಷ್ಟಾನ್ನ (ಬೋಳಬಸ. ೨೨-೬೩): ಕುಬ್ಜೆಗೆ ದಯವಿಟ್ಟ. . . ಸದಯಳಿಗೆ ಭೆಟ್ಟಿಯನೆ ಕೊಟ್ಟ (ಶ್ರೀಕೃಶಾ. ೬೦) ; ಮನೆಯ ಒಳಗೇ ಕುಳಿತು ಕಾತರಿಸಿಹೆನು ಗೆಳೆಯರ ಭೆಟ್ಟಿಗೆ (ಕಂಕು. ೦೩-೪).

[<ಪ್ರಾ. ಭಿಟ್ಟ, ಭಿಟ್ಟಣ./ಹಿಂ. ಭೇಂಟ್; ಮರಾ. ಭೇಟ./ತೆಲು. ಭೇಟೀ]

**ಭೇಣ** (ನಾ). ಸಮತಟ್ಟಾದ, ಗಿಡಮರಗಳಿಲ್ಲದ ಬರಿದಾದ ನೆಲ: ಹಕ್ಕಲು ಹಳಗಾಡು ಭೇಣ ಭಿಳರು ಭಿಟ್ಟು ಚಿಟೆ ಮುಂತಾದ ಸೀಮೆ ಸಾಮ್ಯ (ಕಇ. III-i, ೯-೨೨; 1538). [ ? ಇದು 'ಬೆಣ' ಎಂಬುದರ ಅಪಲಿಖಿತ]

**ಭೇದ** (ನಾ). ೧. ಮುರಿಯುವುದು; ಒಡೆಯುವುದು. ೨. ಹರಿಯುವುದು ; ಸೀಳುವುದು. ೩. ಭಾಗ ಮಾಡುವುದು; ಬೇರ್ಪಡಿಸುವುದು. ೪. ಬಿರುಕು ; ಛಿದ್ರ. ೫. ಗಾಯ ; ಪೆಟ್ಟು. ೬. ವಿಂಗಡಣೆ; ಪಂಚಿಕೆ. ೭. ವ್ಯತ್ಯಾಸ ; ಅಂತರ ; ಬೇರೆಯಾಗಿರುವುದು : ಕಾಯದ ಜೀವದ ಹೊಲಿಗೆಯ ಅಳಿದ ಭೇದವ ತಿಳಿಯಬಲ್ಲಡೆ ನಮ್ಮ ಗುಹೇಶ್ವರಲಿಂಗದ ಅಱಿವು ಸಾಧ್ಯವಪ್ಪುದು ಕಾಣಾ (ಅವಚಂ. ೨೭೩-೦೨೩೭); ಕನ್ನಡದ ನುಡಿಯೆಂದುಪೇಕ್ಷಿಸಲಿನ್ನು ಹಿರಿಯರಿಗಂಜಿ ನುಡಿವೆನು ಕನ್ನಡಿಯ ದರ್ಪಣವಿದಲ್ಲದೆ ಭೇದವೇನಿದಕೆ (ಅಮ್ಮಕ. ೦-೪); ಹಿರಿದು ಕಿಱಿದುಗಳ ಭೇದವನೆಣಿಸದೆ ನಿರವಿಸಿದುದನೆಸಗುವುದು (ಹರಿಶ. ೩-೩೩). ೮. ಬಗೆ ; ವಿಧ; ಪ್ರಕಾರ: ವೇದಾಂಗಂ ಸ್ಮೃತಿ ವೇದಮೆಂದಿನಿತುಮಂ ಪೂರ್ಣೋದಿದಂ ಸತ್ಕಲಾಭೇದಂಗಳ್ ಪದಿನೆಂಟುಮಂ ತಿಳಿದಂ (ಸುಕುಮಾ. ೩-೯೩). ೯. ಗುಟ್ಟನ್ನು ರಟ್ಟುಮಾಡುವುದು ; ರಹಸ್ಯವನ್ನು ಬಹಿರಂಗ

ಪಡಿಸುವಿಕೆ. ೧೦. ಮಾರ್ಪಾಡು; ಬದಲಾವಣೆ. ೧೧. ಭಿನ್ನಾಭಿಪ್ರಾಯ; ಪರಸ್ಪರವಿರೋಧ: ಇಂದಿರಮ್ಮನವರ ಕೈಲಿ ಭೇದದ ಬೀಜ ಬಿತ್ತಿಸಬೇಕೆಂದು ಕಾದಿದ್ದ ಭಾಗೀರತಮ್ಮನಿಗೆ ಸದವಕಾಶ ಸಿಕ್ಕಿತು (ಕೊಸಕೆ. ೬೮). ೧೨. ಹಗೆ: ಶತ್ರು. ೧೩. ಎರಡು ಎಂಬ ಭಾವ: ದ್ವೈತ. ೧೪. ಮಲವಿಸರ್ಜನೆ. ೧೫. ಕ್ಷೋಭೆ. ೧೬. ಸೋಲು: ಅಪಜಯ. ೧೭. (ಕೈ, ಕಾಲುಗಳಲ್ಲುಂಟಾಗುವ) ನೋವು. — ಚಳಕು. ೧೮. ಪಾರ್ಶ್ವವಾಯು: ಲಕ್ವ. ೧೯. ಕುಗ್ಗುವಿಕೆ: ಸಂಕೋಚನ. ೨೦. ಗ್ರಹಗಳ ಕೂಟ, – ಸೇರುವೆ. ೨೧. ನೀರು: ಜಲ: "ತಂತ್ರಂ ಗಜಸಂತ್ರಾಸಂ ಸಪತ್ನಂಬುಗಳವು ಚತುರಂ ಭೇದಮುಮಕ್ಕುಂ" (ಶಾಶಾರ. ೬೩). ೨೨. [ರಾಜನೀ] ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಬಗೆಯ ಪ್ರಸಿದ್ಧವಾದ ಉಪಾಯಗಳಲ್ಲಿ ಒಂದು: ತನಗೆ ಶತ್ರುಗಳಾದವರಲ್ಲಿ ಪರಸ್ಪರ ಜಗಳ ತರುವುದು; ಶತ್ರುಪಕ್ಷದಲ್ಲಿ ಒಡಕು ಹುಟ್ಟಿಸಿ ಒಳಜಗಳವನ್ನುಂಟುಮಾಡುವುದು: "ಉಪಜಾಪಃ-ಭೇದಃ–ಈ ೨ ಒಳಗುಗುಡುವುದು" (ಶಬ್ದಮ. ೦೨೮-೯೫); ಭೇದಂ ಕೃತ್ಯಪೇಕ್ಷೋಪೇತ ಭೂಪಾಲಪ್ರಾಪ್ತಂ (ಶಾಂತಿಪು. ೨-೯೩ ವ); ತನ್ನ ಪಗೆಗಾತನ ಪಿತರ್ಗುನ್ನತಿಯಂ ಭಿನ್ನವೆಸಗೆ ತಾನದು ಭೇದಂ (ಕಬ್ಬಿಗ. ೨-೦೨೦). 'ಚತುರುಪಾಯ' ಪರಾ. ೨೩. [ಸಾಂಖ್ಯ] ಮೂಲಭೂತವಾದ ಹತ್ತು ಬಗೆಯ ಪ್ರಕೃತಿಧರ್ಮಗಳಲ್ಲಿ ಒಂದು: ಮೂಲಭೂತಗಳಾದ ಪ್ರಕೃತಿಧರ್ಮಗಳು ಹತ್ತು: — ಅಸ್ತಿತ್ವ, ಏಕತ್ವ, ಅರ್ಥವತ್ತ್ವ, ಅನ್ಯತ್ವ, ಪರಾರ್ಥತ್ವ, ಭೇದ, ಸಂಯೋಗ, ವಿಯೋಗ, ಶೇಷತ್ವ, ಅಕರ್ತೃತ್ವ – ಇವುಗಳು (ಹಿಂದಶಾ. ೫೭). ೨೪. [ತತ್ತ್ವಶಾ] (ಮರಕ್ಕೂ-ಕೊಂಬೆಗೂ ಇರುವಂತೆ) ದೊಡ್ಡ ವಸ್ತುವಿಗೂ ಅದರ ಅಂಶವಾದ ಸಣ್ಣ ವಸ್ತುವಿಗೂ ಇರುವ ವ್ಯತ್ಯಾಸ: ಅವಚ್ಛೇದ, ಅವಚ್ಛೇದಕ, ಅವಚ್ಛಿನ್ನವೆಂಬ ಪದಗಳಿಗೆ ಪರ್ಯಾಯಪದಗಳಾಗಿ . . . ಭೇದ, ಭೇದಕ, ಭೇದ್ಯ . . . ಎಂದು ವ್ಯವಹರಿಸುವರು (ಹಿಂದಶಾ. ೦೯೯). ೨೫. [ಜೈನ] ಪುದ್ಗಲಸ್ಕಂಧಗಳು ವಿಭಾಗವಾಗುವಿಕೆ: ಪುದ್ಗಲಸ್ಕಂಧವು ಒಡೆದು ಅಣುಗಳು ಚೆದರುವುದು 'ಭೇದ'ವೆಂದೂ ಹೇಳಿದ್ದಾನೆ (ಕೈ ೭೫. ೪೨೭). ೨೬. [ವೇದಾಂತ] ವಿವಕ್ಷಿತವಾದ ಎರಡು ಪದಾರ್ಥಗಳಲ್ಲಿ ಒಂದಕ್ಕೊಂದಕ್ಕೆ ಒಂದು ದೃಷ್ಟಿಯಿಂದ ಇರುವ ಪರಸ್ಪರ ವ್ಯತ್ಯಾಸ: ಜ್ಞಾನಕ್ಕೂ ಜೀವನಿಗೂ ಭೇದ, ಅಭೇದ ಭೇದಾಭೇದಗಳೆಂಬ ಮೂರು ಪಕ್ಷಗಳು ಸಮ್ಮತವಾಗಿವೆ (ಹಿಂದಶಾ. ೯೩). 'ಭೇದಾಭೇದ' ಪರಾ. ೨೭. [ನಾಟ್ಯ] ಇಪ್ಪತ್ತು ಬಗೆಯ ಕರಕರ್ಮಗಳಲ್ಲಿ ಒಂದು: ಘೂಸನ . . . ಭೇದ, ಸ್ಫೋಟನ, ಮೋಟನ, ವಿಸರ್ಜನ, ಆಹ್ವಾನ, ತರ್ಜನ ಈ ಇಪ್ಪತ್ತು ಕರಕರ್ಮಭೇದಂಗಳ್ (ಶಾಸ್ತ್ರರಂ. ೪-೦೩ ವ). [ಸಂ.]

**ಭೇದಂಬಡು** (ಕ್ರಿ). ಬೇರೆಯಾಗು; ದೂರವಾಗು: ದುರ್ವಾದದಿಂದಿನ್ನೆಗಂ ಭೇದಂಬಟ್ಟಿರ್ದಗೆಟ್ಟ ಕೆಟ್ಟಿನಿತುಂ ಕಾಲಂಗಳಿಂ ನಿರ್ಮಪೋ (ಸುಕುಮಾ. ೩-೪೩). [ಭೇದ + ಪಡು₁]

**ಭೇದಂಬಡೆ** (ಕ್ರಿ). ಬೇರೆಬೇರೆ ವಿಧಗಳನ್ನು ಹೊಂದು: ಪಾದ ವಿಪರ್ಯಾಸದೊಳ್ ಭೇದಂಬಡೆದೇಕವರ್ಣಪೀನಾಧಿಕದಿಂದಾದಂದರ್ಥಸದಂ ಪೆಸರಾದುವು (ಛಂದೋಂಬು. ೩-೨೦೦). [ಭೇದ + ಪಡೆ₁]

**ಭೇದಕ** (ಗು). ೧. ಮುರಿಯುವ; ಸೀಳುವ; ಒಡೆಯುವ. ೨. ಪ್ರತ್ಯೇಕಿಸುವ; ವಿಂಗಡಿಸುವ; ಬೇರ್ಪಡಿಸುವ. ೩. ನಿಷ್ಕೃಷ್ಟವಾಗಿ ತಿಳಿಸುವ. (ನಾ). ೪. ಮುರಿಯುವುದು; ನಾಶಮಾಡುವುದು. ೫. ಮುರಿಯುವವನು; ನಾಶಮಾಡುವವನು. ೬. (ಪದಾರ್ಥಗಳನ್ನು) ವಿಶ್ಲೇಷಣೆಮಾಡುವಿಕೆ; ಪದಾರ್ಥಗಳ ಒಳಹೊಕ್ಕು ತತ್ತ್ವವನ್ನು ಗ್ರಹಿಸುವುದು: ಜ್ಞಾನಕ್ಕೆ ಲೇಪವಾದವನರವು ತುಪ್ಪದ ಸಂಬಿದ ಬತ್ತಿಯಂತೆ ಕಾದ ಲೋಹದ ಜಲದಿರವಿನಂತೆ. . . ಇದಾರಿಗೆ ಭೇದಕ ಇದ ಶೋಧಿಸಬೇಕು (ಶೋಲವ. ೪-೧೦). ೭. (ಪದಾರ್ಥಗಳನ್ನು ವಿಶ್ಲೇಷಣೆ ಮಾಡಿ ತತ್ತ್ವವನ್ನು ಗ್ರಹಿಸುವವನು) – ವಿಚಾರ ಮಾಡುವವನು: ಆ ಶರಣನು. . . ವೇದ ಶಾಸ್ತ್ರ ಪುರಾಣ ಛಂದಸ್ಸು ನಿಘಂಟುಗಳೆಂಬವಕ್ಕೆ ಭೇದಕನಲ್ಲ (ಅವತಂ. ೨೫೦-೦೦೪೬). ೮. [ವ್ಯಾಕ] ಒಂದು ವಸ್ತುವನ್ನು ಬೇರೆ ವಸ್ತುವಿನಿಂದ ಬೇರ್ಪಡಿಸಬೇಕಾದಾಗ ಪ್ರಯೋಗಿಸುವ ಗುಣವಿಶಿಷ್ಟ ಪದ: P ಒಂದು ಕೊಟ್ಟಿಗೆಯಲ್ಲಿ ಬೇರೆ ಬೇರೆ ಬಣ್ಣದ ಕರೆಯುವ ಹಸುಗಳಿದ್ದು, ಕೆಂಪುಹಸುವಿನ ಹಾಲನ್ನು ಕರೆದುಕೊಂಡು ಬಾ ಎಂದು ಹೇಳಿದರೆ, ಆಗ ಕೆಂಪು ಎಂಬ ಪದವು ಭೇದಕ. ಏಕೆಂದರೆ ಅದು ಕರೆಯಬೇಕಾದ ಹಸುವನ್ನು ಅಲ್ಲಿದ್ದ ಕರಿಯ ಮತ್ತು ಬಿಳಿಯ ಹಸುಗಳಿಂದ ಬೇರ್ಪಡಿಸುತ್ತದೆ: ಅಲ್ಲದೆ ಕರೆಯಬೇಕಾದ ಹಸುವನ್ನು ನಿರ್ದಿಷ್ಟವಾಗಿ ತಿಳಿಸುತ್ತದೆ: ಭೇದ್ಯಂ ವಿಶೇಷ್ಯಂ; ಭೇದಕಂ ವಿಶೇಷಣಂ (ಶಬ್ದಾನು. ೧೦೦ ವೃ). ೯. [ತತ್ತ್ವಶಾ] ಒಂದು ದೊಡ್ಡ ಪದಾರ್ಥವನ್ನು ಚಿಕ್ಕದನ್ನಾಗಿ ಮಾಡಿಕೊಳ್ಳುವುದಕ್ಕಾಗಿ ಉಪಯೋಗಿಸುವ ಸಾಧನ: P ಬ್ರಹ್ಮವಸ್ತು ಸರ್ವವ್ಯಾಪಿ. ಇದು ಒಂದರಲ್ಲಿ ಅಡಕವಾಗಿಲ್ಲವಾದುದರಿಂದ ಅಪರಿಚ್ಛಿನ್ನ. ಇದು ಪರಿಚ್ಛಿನ್ನವಾದರೆ ಜೀವವೆನಿಸಿಕೊಳ್ಳುತ್ತದೆ. ಸರ್ವವ್ಯಾಪಿಯಾದ ಬ್ರಹ್ಮ ಪ್ರಾಣಿಗಳ ಅಂತಃಕರಣದಲ್ಲೂ ಇರಲೇಬೇಕಷ್ಟೆ. ಆ ಅಂತಃಕರಣದಲ್ಲಿ ಇರುವ ಬ್ರಹ್ಮವೇ ಜೀವ. ಈಗ ಅಂತಃಕರಣವು ಬ್ರಹ್ಮನನ್ನು ವಿಶಾಲಜಗತ್ತಿನಿಂದ ಪ್ರತ್ಯೇಕಿಸಿ ತನ್ನೊಳಗಿರುವ ಅವನಿಗೆ ಜೀವವೆಂಬ ಹೆಸರನ್ನು ಕೊಟ್ಟಿತು. ಹೀಗೆ ಪ್ರತ್ಯೇಕಿಸಿದ್ದು ಆ ಅಂತಃಕರಣ. ಇದನ್ನು ಭೇದಕ ಅಥವಾ ಅವಚ್ಛೇದಕ ಎಂದು ಶಾಸ್ತ್ರಗಳು ಹೇಳುತ್ತವೆ: ಅವಚ್ಛೇದಕ, ಅವಚ್ಛಿನ್ನವೆಂಬ ಪದಗಳಿಗೆ ಪರ್ಯಾಯಪದಗಳಾಗಿ . . . ಭೇದ, ಭೇದಕ, ಭೇದ್ಯ . . . ಎಂದು ವ್ಯವಹರಿಸುವರು (ಹಿಂದಶಾ. ೦೯೯). [ಸಂ.]

**ಭೇದಕಾತಿಶಯೋಕ್ತಿ** (ನಾ). [ಕಾವ್ಯಮೀ] ಎಂಟುಬಗೆಯ ಅತಿಶಯೋಕ್ತಿಗಳಲ್ಲಿ ಒಂದು: P ವರ್ಣಿಸಬೇಕಾದ ವಸ್ತುವು ಜಗತ್ತಿನಲ್ಲಿರುವ ಒಂದು ವಸ್ತುವಾಗಿದ್ದರೂ ಅದು ಲೋಕಾತೀತವಾದುದು. ಆದರೆ ಪ್ರಪಂಚದ ವಸ್ತುಗಳಿಗಿಂತ ಬೇರೆಯಾದುದು ಎಂದು ವರ್ಣಿಸುವುದು: ವರ್ಣ್ಯವಾದ ವಸ್ತುವಂ ಲೋಕದೊಳಿರ್ಪ ವಸ್ತುವತ್ತಣಿಂ ಬೇರೆಂದು ಪೇಟ್ವುದು ಭೇದಕಾತಿಶಯೋಕ್ತಿಯೆನಿಪುದು (ಅಕ್ರತಿ. ೫೩-೦೬); ಲೋಕಪ್ರಸಿದ್ಧ ಪದಾರ್ಥಕ್ಕಿಂತಲೂ ಬೇರೆಯಾಗದೆ ಇದ್ದರೂ ಬೇರೆಯೆಂದು ತೋರುವಂತೆ ವರ್ಣಿಸುವುದೇ ಭೇದಕಾತಿಶಯೋಕ್ತಿ (ಕೈಪಿಡಿ. ೨೬೪). [ಸಂ.]

**ಭೇದಗೆಡು** (ಕ್ರಿ). ವ್ಯತ್ಯಾಸವು ಇಲ್ಲವಾಗು; ಅಭೇದವುಂಟಾಗು: ಗುಹೇಶ್ವರನ ಬೆರಸಿ ಭೇದಗೆಟ್ಟು ಬಳಿಕ ಮತ್ತೆ ಸಂಗವ ಮಾಡಹೆನು ತವಕವೇಕಯ್ಯ (ಪ್ರಭುಶ. ೨೦೩). [ಭೇದ + ಕೆಡು₁]

**ಭೇದತಂತ್ರ** (ನಾ). ಒಡಕನ್ನು ಹುಟ್ಟಿಸುವ ಉಪಾಯ: ಶ್ರೀರಾಮನಿಗೆ ಭೇದತಂತ್ರವನ್ನಟ್ಟಿಸುವ ಹಾಗೂ ಕೈಕೆಯಿಯಾದೇವಿಗೆ ಅತ್ಯಂತ ಮನೋವ್ಯಥೆ ಹುಟ್ಟುವ ಹಾಗೂ ಆಕೆಯನ್ನು ಕುರಿತು. . . ನುಡಿವಳು (ಕಗಿಂ. ೬೩). [ಸಂ.]

**ಭೇದದರ್ಶನ** (ನಾ). ವಸ್ತುತಃ ಒಂದೇ ಆದರೂ ಬೇರೆಯಾಗಿ ಕಾಣುವುದು: ಈ ಅವಿದ್ಯೆಗೆ ಆವರಣಶಕ್ತಿ, ವಿಕ್ಷೇಪಶಕ್ತಿ ಎಂಬೆರಡು ಸ್ವಭಾವಗಳು ಇರುವುವು. ಆವರಣಶಕ್ತಿಯಿಂದ ವಸ್ತುಸ್ವರೂಪವು ಮುಚ್ಚಲ್ಪಡುವುದು. ವಿಕ್ಷೇಪಶಕ್ತಿಯಿಂದ ವಸ್ತು ವಿಚಿತ್ರವಾಗಿ ಕಾಣುವುದು. ಇದಕ್ಕೆ ಭೇದದರ್ಶನವೆಂದು ಹೆಸರು (ಹಿಂದಶಾ. ೨೦೪). [ಸಂ.]

**ಭೇದದೃಷ್ಟಿ** (ನಾ). ಜೀವಾತ್ಮ ಮತ್ತು ಪರಮಾತ್ಮನು ಬೇರೆ ಬೇರೆ ಎಂಬ ಭಾವನೆ; ದ್ವೈತ: ಜೀವನು . . . ಭಕ್ತನಾದ ಮೇಲೆ . . .

ದ್ವೈತವೇದಾಂತದ ಭೇದದೃಷ್ಟಿ ಜೀವನದಲ್ಲಿ ಸಹಜವಾಗಿ ನೆಲಸಿರುತ್ತದೆ (ತತ್ತ್ವ. ೧೦೦). [ಸಂ.]

**ಭೇದನ** (ನಾ). ೧. ಒಡೆಯುವುದು; ಮುರಿಯುವುದು; ಸೀಳುವುದು. ೨. ಬೇರೆ ಮಾಡುವುದು; ಬೇರ್ಪಡಿಸುವುದು. ೩. ಮನಸ್ತಾಪವನ್ನುಂಟುಮಾಡುವುದು: ಭಿನ್ನಾಭಿಪ್ರಾಯ ಬರುವಂತೆ ಮಾಡುವುದು. ೪. ಶಿಥಿಲಗೊಳಿಸುವುದು; ಸಡಿಲಗೊಳಿಸುವುದು. ೫. ಗುಟ್ಟನ್ನು ಬಿಟ್ಟುಕೊಡುವುದು. ೬. ಭೇದ; ಒಡಕು; ವೈಮನಸ್ಯ. ೭. ಇಂಗು. ೮. ಭೇದಿಯಾಗುವುದು. ೯. ಭೇದಿ ಮಾಡಿಸುವ ಔಷಧ; ವಿರೇಚಕ. ೧೦. ಹಂದಿ. [ಸಂ.]

**ಭೇದಬುದ್ಧಿ** (ನಾ). ಒಬ್ಬರಿಗೊಂದು, ಮತ್ತೊಬ್ಬರಿಗೊಂದು ಮಾಡುವ ಮನೋಭಾವ; ಪಕ್ಷಪಾತಭಾವನೆ: ಈ ಪ್ರಕಾರ ಪ್ರತ್ಯಕ್ಷ ತಮ್ಮ ಹೊಟ್ಟೆಮಕ್ಕಳಲ್ಲಿ ಭೇದಬುದ್ಧಿ ಮಾಡುವುದರ ಕಾರಣವನ್ನು ದೇವರೇ ಬಲ್ಲನು (ಮುಂಬಯಿ. ೪-೧೦೮). [ಸಂ.]

**ಭೇದಭಾವ** (ನಾ). ಬೇರೆಬೇರೆ ಎಂಬ ಭಾವನೆ: ಶಿವನು ಪ್ರೇರಕನೂ, ಜೀವನು ಪ್ರೇರ್ಯನೂ ಆದ ಮೇಲೆ ಶಿವ – ಜೀವರಿಗೆ ಭೇದಭಾವ ಸಹಜವಾಗಿ ಇರುವುದರಿಂದ ಅದ್ವೈತವನ್ನು ಭಾವಿಸುವುದು ಯುಕ್ತವಾಗದು (ತತ್ತ್ವ. ೧೦೬); ಭಾವನೆ ಸಂಕುಚಿತವಾಗಿದ್ದಾಗ ತನ್ನದು ಪರರದು ಎಂಬ ಭೇದಭಾವ ಇದ್ದದ್ದೇ (ಹೊಸಕ. ೩೦). [ಸಂ.]

**ಭೇದಶ್ರುತಿ** (ನಾ). [ವೇದಾಂತ] "ಚಿತ್ತು, ಅಚಿತ್ತು, ನಾರಾಯಣ ಈ ಮೂರಕ್ಕೂ ಇರುವ ಪರಸ್ಪರ ಭೇದಸ್ವರೂಪವನ್ನು ತಾತ್ತ್ವಿಕವಾಗಿ ಬೋಧಿಸುವುದಕ್ಕೋಸ್ಕರ ಹೊರಟಿರುವುದಕ್ಕೆ 'ಭೇದಶ್ರುತಿ' ಎಂದು ಹೆಸರು" (ತತ್ತ್ವಶು. ೧). [ಸಂ.]

**ಭೇದಾಭೇದ** (ನಾ). [ವೇದಾಂತ] ವಿವಕ್ಷಿತವಾದ ಎರಡು ಪದಾರ್ಥಗಳಲ್ಲಿ ಒಂದಕ್ಕೊಂದಕ್ಕೆ ಒಂದು ದೃಷ್ಟಿಯಿಂದ ಪರಸ್ಪರ ಭೇದವೂ ಮತ್ತೊಂದು ದೃಷ್ಟಿಯಿಂದ ಅಭೇದವೂ ಇರುವಿಕೆ; P ಉದಾಹರಣೆಗೆ ಚಿನ್ನದ ಸರ ಮತ್ತು ಡಾಬು – ಈ ಎರಡು ಪದಾರ್ಥಗಳಲ್ಲಿ ಸರವನ್ನೂ ಡಾಬನ್ನೂ ಆಕಾರದೃಷ್ಟಿಯಿಂದ ನೋಡಿದರೆ ಸರವೇ ಬೇರೆ, ಡಾಬೇ ಬೇರೆ— ಹೀಗೆ ಭೇದವಿದೆ. ಆದರೆ ಎರಡೂ ಚಿನ್ನದಿಂದಲೇ ಆಗಿವೆ. ಕರಗಿಸಿದಾಗ ಆಕಾರ ಹೋದರೆ ಎರಡೂ ಚಿನ್ನವೇ ಆಗಿಬಿಡುತ್ತವೆ. ಆದ್ದರಿಂದ ಮೂಲದ್ರವ್ಯದ ದೃಷ್ಟಿಯಿಂದ ಎರಡಕ್ಕೂ ಅಭೇದವೇ ಇರುತ್ತದೆ: ಜ್ಞಾನಕ್ಕೂ ಜೀವನಿಗೂ ಭೇದ, ಅಭೇದ, ಭೇದಾಭೇದಗಳೆಂಬ ಮೂರು ಪಕ್ಷಗಳೂ ಸಮ್ಮತವಾಗಿವೆ (ಹಿಂದಸಾ. ೬೩); ಶಿವ ಜೀವರಿಗೆ ಭೇದಾಭೇದಗಳೆರಡೂ ಕಾಲಭೇದದಿಂದಲೂ ಅವಸ್ಥಾಭೇದದಿಂದಲೂ ಯಥಾರ್ಥವಾಗಿ ಅನ್ವಯಿಸುತ್ತವೆ (ತತ್ತ್ವ. ೨೦). [ಸಂ.]

**ಭೇದಿ** (ಗು). ೧. ಒಡೆಯುವ; ಸೀಳುವ; ಭಾಗ ಮಾಡುವ. (ನಾ). ೨. ಮಲವು ನೀರಾಗಿ ಗುದದ್ವಾರದಿಂದ ಹರಿಯುವುದು: ವಿರೇಚನ; ಜುಲಾಬು: ಇದ್ದಕ್ಕಿದ್ದ ಹಾಗೆ ಅನೇಕ ಸಲ ಭೇದಿಯಾಗಲು ಆರಂಭವಾಗುತ್ತದೆ (ಗೃಹವೈ. ೧೪೪).

**ಭೇದಿ ಕಟ್ಟು** = ಜುಲಾಬಾಗುವುದು ನಿಲ್ಲು: ಭೇದಿ ಕಟ್ಟುವುದಕ್ಕೆ ಬೇರೆ ಚೂರ್ಣವನ್ನು ಕೊಟ್ಟಿದ್ದೇನೆ (ರೂಢಿ). **ಭೇದಿಗೆ ಕೊಡು** = ೧. ಜುಲಾಬಾಗುವಂತೆ ಔಷಧಿಯನ್ನು ಕೊಡು: ವೈದ್ಯನು ಮಗುವಿಗೆ ಭೇದಿಗೆ ಕೊಟ್ಟನು (ರೂಢಿ). ೨. (ಅಲಂ) ಭಯವನ್ನುಂಟುಮಾಡು; ಗಾಬರಿಪಡಿಸು: ಅವನಿಗೆ ಸರಿಯಾಗಿ ಭೇದಿಗೆ ಕೊಟ್ಟಿದ್ದೇನೆ (ರೂಢಿ). **ಭೇದಿಮಾತ್ರೆ** = ಭೇದಿಯನ್ನು ಮಾಡಿಸುವ ಜಾಪಾಳ ಮೊದಲಾದುವುಗಳಿಂದ ಮಾಡಿರುವ ಮಾತ್ರೆ, – ಗುಳಿಗೆ: ಪಂಡಿತರು ಭೇದಿಮಾತ್ರೆಯನ್ನು ಕೊಟ್ಟು ಕಳುಹಿಸಿದರು (ರೂಢಿ). [ಸಂ. ಭೇದಿನ್]

**ಭೇದಿಗ** (ನಾ). ಒಡಕನ್ನು ಹುಟ್ಟಿಸುವವನು; ಜಗಳ ತಂದುಹಾಕುವವನು: ಹಾದಿಯ ಮನೆ ಹೊಲ್ಲ ಬೀದಿಯ ಸಸಿ ಹೊಲ್ಲ ಹಾವರದ ಹೆಣ್ಣು ನೆರೆ ಹೊಲ್ಲ ಹಳ್ಳಿಯಲಿ ಭೇದಿಗನೆ ಹೊಲ್ಲ (ಸರ್ವಜ್ಞ. ೧೦೦೦).

[ಭೇದ + – ಇಗ]

**ಭೇದಿತ** (ಗು). ೧. ಮುರಿದ; ಒಡೆದ; ಸೀಳಿದ; ಭಿನ್ನವಾದ. (ನಾ). ೨. ಒಡೆದುಹೋದುದು; ಸೀಳಿದುದು: "ದಾರಿತಃ, ಭಿನ್ನಃ, ಭೇದಿತಃ—೩ ಸೀಳುವುದಕ್ಕೆ ಯೋಗ್ಯವಾಗಿರುವುದು, ಕಡಿಯಲ್ಪಟ್ಟದ್ದು" (ಸಿದ್ಧಾಂತ. ೩೩೧). [ಸಂ.]

**ಭೇದಿಸು** (ಕ್ರಿ). ೧. ಒಡೆ; ಮುರಿ: ಸೀಳು; ಭಾಗ ಮಾಡು: ಬೆಸಸಿದೊಡದು ಮಾರ್ಕೊಳ್ಳದೆ ಬೆಸನಂ ಬಲವಂದು ಬಾಹುಬಲಿಯನಣಂ ಭೇದಿಸಲಾಱದು ದಱ್ನಿರ್ದುದು. . .ಕಲದೊಳ್ (ಆದಿಪು. ೧೪-೧೦೬); ಬೆಟ್ಟ ತಪ್ಪ ಕಲ್ಲುಗಳುಳ್ಳ ಬೆಟ್ಟಮಂ ಸಿಡಿಲುಂ ನೀರುಂ ಭೇದಿಸುವಹಗೆ (ಶಂಕರಂ. ೦೬೬-೨೦); ಹೊನ್ನಪೆಟ್ಟಿಗೆಯ ಭೇದಿಸಿ ತೆಗೆದು ನಾನಾ ವಸ್ತುಗಳನು ಸಂಪಾದಿಸಿಕೊಂಡನರ್ಥಿಯಲಿ (ಪೋಹಚ. ೧೮-೨೦). ೨. ಸೋಲಿಸು; ಪರಿಭವವನ್ನುಂಟು ಮಾಡು: ಶರೌಘದಿಂ ಭೇದಿಪ ಬಿನ್ನಣಂ ಗಡ ಜಿತಾಂತಕನೊಳ್ . . . ಚಿತ್ರಮಲ್ಲವೇ (ರಬಕು. ೮-೦೩೧). ೩. ಪರಿಹರಿಸು; ನಿವಾರಿಸು: ಕಯ್ದಿವಿಗೆಗಳ ಬೆಳಗಿಂ ಕಾಯ್ದುಸೆವ ಸಹಸ್ರಕಿರಣನಿಂ ಭೇದಿಸಲೇಗೆಯ್ದುಂ ಬಾರದುದಲ್ ತವೆ ಮಾಯ್ದಾ ಜವ್ವನದೊಳೊಡಲೊಳಡಿದಿರ್ದ ತಮಂ (ಕಾದಂಪೂ. ೫೨೯). ೪. ಅಭಿಪ್ರಾಯವನ್ನು ಖಂಡಿಸು: ನಿರಾಕರಿಸು: ಲೋಕಾಯತವೆನಿಸಿದ ಚಾರ್ವಾಕೋಕ್ತಿಯಂ . . . ಜಿನಚಂದ್ರಭೂಭುಜಂ ಭೇದಿಸಿದಂ (ಶಾಂತಿಪು. ೮-೧೩೩). ೫. ಛಿದ್ರಿಸಿ ಒಳಹೊಗು: ಸೀಳಿಕೊಂಡು ಒಳನುಗ್ಗು: ಅಸಮಪದ್ಮವ್ಯೂಹವನು ಭೇದಿಸುವನಾವವನೆನಲು ಕೇಳಿದು ಶಿಶುತನದಲಾಹವಕೆ ನಡೆದನು (ಕುಮಾದ್ರೋ. ೮-೨೨); ಭೀಮಸೇನ, ನಕುಲ, ಸಹದೇವರು ಯಾರೂ ಪದ್ಮವ್ಯೂಹವನ್ನು ಭೇದಿಸಿ ಒಳಗೆ ನುಗ್ಗಲಾರದೆ ಹಿಂತಿರುಗಿದ್ದು (ಕಂಗಾಳ. ೨೦). ೬. ಗುಟ್ಟನ್ನು ಕಂಡುಹಿಡಿ: ರಹಸ್ಯವನ್ನು ತಿಳಿ: ಪತ್ತೆ ಮಾಡು: ಭೇದಿಸಿ ಸಹದೇವಿಗೆ ಮಗನಾದುದನೊರ್ವಂ ಧನಾರ್ಥಿ ಮೆಚ್ಚಂ ಪಡೆವೊಂದಾದರದಿನಱಿಪೆ (ಕಂಗಾಪು. ೨-೩೩); ಕೃಷ್ಣನ ನೊಳಗುಮಾಡುವ ಮುದದಿ ಬಂದನು ಕೌರವೇಂದ್ರನು ದ್ವಾರಕಾಪುರಿಗೆ ಇದನು ಭೇದಿಸಿ ಬೇಹಿನವರಱುಹಿದರು ಕುಂತೀಸುತರಿಗೆ (ಕುಮಾಉ. ೦-೦೬); ಆದಿದೈವವನು ತಾ ಭೇದಿಸಲಿಕಱಿಯದಲೆ ಹಾದಿಯ ಕಲ್ಲಿಗೆಡೆಮಾಡಿ ನಮಿಸುವ ಮಾದಿಗರ ನೋಡು (ಸರ್ವಜ್ಞ. ೦೯೫). ೭. ಭೇದೋಪಾಯಕ್ಕೆ ಒಳಗು ಮಾಡು; ಪಕ್ಷಾಂತರ ಮಾಡಿಸು: ಈ ಮೃದುಹೃದಯನಪ್ಪ ಸಂಜೀವಕನಂ ಭೇದಿಸುವುದಾವ ಗಹನಂ (ಪಂಚತಂ. ೦೩೨-೦೪). ೮. (ಒಂದು ವಿಷಯವನ್ನು) ಚೆನ್ನಾಗಿ ಆಲೋಚನೆಮಾಡು, – ವಿಚಾರಿಸು: ಇದಱೊಳಗೊಂದು ಕುಂದಿಲ್ಲ ಭೇದಿಸುವೊಡೀ ಕೃತಿಗೆ ಪ್ರತಿಯಿಲ್ಲ (ರತ್ನಾ. ೦-೦೩); ಹಸಗೆಟ್ಟು ತನುಸುಖಕೊಲಿಯದೆ ಕೆಲರು ಭೇದಿಸಿ ನಿಜಸುಖವ ಭೋಗಿಪರು (ಶರತ. ೦-೧೦೬); ವೇದದೊಳು ಮನ್ವಾದಿ ಧರ್ಮಶಾಸ್ತ್ರದೊಳು ಭೇದಿಸಿ ಹಿರಿಯರು ಪೇಳಿದುದನೆ ಕೃತಿಗೈದಾನು ಕಿವಿಗೊಳಿಸಿದೆನು (ಹರಿಶ್ಚ. ೦-೫೦). ೯. ವ್ಯತ್ಯಾಸವನ್ನು ಗ್ರಹಿಸು; ಭೇದವನ್ನು ಕಾಣು: ದೆಸೆಯದಾಗಸ ಭೂವಿಭಾಗವೆನುತ ಭೇದಿಸಬಾರದವಾರನಿಕರಕೆ ಮಸೆದ ಕೂರ್ಗಣೆಯಲಿ ಭುವನವ ಕೂಡೆ ಮುದ್ರಿಸಿದರು ಕೈಚಳಕದಲಿ (ವರ್ಣಕ. ೭-೦೨). ೧೦. ಬೇರೆಯಾಗು: ಪಾದದೆ ಷೋಡಶಷೋಡಶಮಾತ್ರೆಯು ಭೇದಿಸಿ ಮೂಱನೆಯಾಱನೆಯಡಿಯೊಳ್ ಲಘುವಿರ್ಪತ್ತಾಱು ಸಾವಿರವಿಂತಾಱಡಿಯೊಳ್ ಗುಣಿಯಿಸೆ (ಛಂದೋಂಬು. ೫-೨೩೯ ರ ಅರಿಕೆಪದ್ಯ).

[ಭೇದ + – ಇಸು]

**ಭೇದಿಸೊಪ್ಪು** (ನಾ). (ಭೇದಿಯಾಗುವುದಕ್ಕೆಂದು ಕಷಾಯಮಾಡಲು ಬಳಸುವ) ಒಂದು ಬಗೆಯ ಸೊಪ್ಪು : (ಮ್ಯಾಶಿಗ. ೩೫-೬೯೨). [ಭೇದಿ + ಸೊಪ್ಪು]

**ಭೇದೋಪಾಯ** (ನಾ). = ಭೇದ ೨೨ : ರಾಜ್ಯವನ್ನು ಪುನಃ ಪಡೆಯಲು ಸಾಮ, ದಾನ ಮತ್ತು ಭೇದೋಪಾಯಗಳನ್ನು ಬಳಸಿ ವಿಫಲವಾದ ಮೇಲೆ . . . ಯುದ್ಧಸನ್ನಾಹವಾಗುತ್ತದೆ (ಭಾರದ. ೯೯). [ಸಂ.]

**ಭೇದ್ಯ** (ಗು). ೧. ಒಡೆಯಲು ಯೋಗ್ಯವಾದ ; ಮುರಿಯಬಹುದಾದ. ೨. ಒಳನುಗ್ಗಬಹುದಾದ ; ಪ್ರವೇಶಿಸಲು ಸಾಧ್ಯವಾದ. 'ಅಭೇದ್ಯ' ಪರಾ. ೩. ಸುಲಭವಾಗಿ ಒಡೆಯುವ ; ಭಂಗುರವಾದ. ೪. ತಪ್ಪು ದಾರಿಗೆ ಎಳೆಯಲು ಸಾಧ್ಯವಾದ ; ದುಷ್ಪ್ರೇರಣೆಗೆ ಒಳಗಾಗುವ. (ನಾ). ೫. ಭೇದಿಸಲು ಸಾಧ್ಯವಾಗಿರುವುದು. ೬. [ವ್ಯಾಕ] ವಿಶೇಷಣವನ್ನು ಹೊಂದುವ ನಾಮಪದ ; ವಿಶೇಷ್ಯ : ಭೇದ್ಯಂ ವಿಶೇಷ್ಯಂ, ಭೇದಕಂ, ವಿಶೇಷಣಂ(ಶಬ್ದಾಮ. ೦೦೦ ವೃತ್ತಿ). ೭. [ತತ್ತ್ವಶಾ] ಭೇದ, ಭೇದಕ, ಭೇದ್ಯವೆಂಬ ತ್ರಿಪುಟಿಯಲ್ಲಿ ಒಂದು ; ಪ್ರತ್ಯೇಕಿಸಿ ಗುರುತಿಸಬೇಕಾದುದು ; ☞ ಉದಾಹರಣೆಗೆ ಕೆಂಪು ಹೂವು ಎಂಬಲ್ಲಿ ಹೂವು ಎಂಬುದು ವಿಶೇಷ್ಯ ಅಥವಾ ಭೇದ್ಯ, ಕೆಂಪು ಎಂಬ ಪದಾರ್ಥದ ಸಂಬಂಧದಿಂದ ಹೂವು ಬಿಳಿಹೂವು ಮೊದಲಾದುವು ಗಳಿಂದ ಬೇರ್ಪಡುತ್ತದೆ : ಅವಚ್ಛೇದ, ಅವಚ್ಛೇದಕ, ಅವಚ್ಛಿನ್ನವೆಂಬ ಪದಗಳಿಗೆ ಪರ್ಯಾಯಪದಗಳಾಗಿ ವ್ಯಾವೃತ್ತಿ, ವ್ಯಾವರ್ತಕ, ವ್ಯಾವರ್ತ್ಯ, ವಿಶೇಷ, ವಿಶೇಷಣ, ವಿಶೇಷ್ಯ, ಭೇದ, ಭೇದಕ, ಭೇದ್ಯ . . . ಎಂದು ವ್ಯವಹರಿಸುವರು (ಹಿಂದಶಾ. ೦೯೯). [ಸಂ.]

**ಭೇನ** (ನಾ). ನಕ್ಷತ್ರಗಳ ಒಡೆಯ ; ಚಂದ್ರ : ಸೇನಾಧಿಪತಿಜನಕ ಭೇನಾನಲಾರ್ಕಾಕ್ಷಿ ಶೇನಾಶದರ್ಪಹರ (ಗುರುಶಾ. ೦-೯). [ಸಂ.]

**ಭೇನಚೂಡ** (ನಾ). ನಕ್ಷತ್ರಗಳ ಒಡೆಯನಾದ ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಚಂದ್ರಚೂಡ ; ಶಿವ : ಆನಿರಲು ಏನು ಸಂಶಯ ಬೇಡ ನಿನಗೆಂದು ಬೇ[ಭೇ]ನಚೂಡಂ ನಂಬಿಸಿದ ಮಹಾನೀಕಾಮುಗಣರುಂಟು ಮಾಯೆಯೆಂದು ವಿವಲೆ ಪೇಳಲು (ಶ್ರಶುಕ್ಷ. ೫-೦೩೯). [ಸಂ.]

**ಭೇರ** (ನಾ). ಒಂದು ಬಗೆಯ ಚರ್ಮವಾದ್ಯ ; ನಗಾರಿ ; ದುಂದುಭಿ : ಗಾಳಪಟಕ್ಕೆ ಭೇರಬಿರಿಕೆಯು ಕಟ್ಟಿ ನುಡಿಸುವ ತೆರದಂತೆ ತೇಜವಾಗಿ (ಅಲಂದೇ. ೩೨೬-೨೯). [ಸಂ.]

**ಭೇರಿ** (ನಾ). = ಭೇರ : ''ವಿಸ್ತರ ಭೇರಿ ದುಂದುಭಿಯೆನಿಕ್ಕು'' (ಶಂಗರಾ. ೨೪-೭); ಧರೆ ನಡುಗೆ ಪೊಡೆವ ಭೇರಿಯ ಘನಧ್ವನಿಯೊಳಗೆ (ಶಂಶಿರ. ೭-೦೨೦); ಧರಧುರದ ನಿಸ್ಸಾಳಸೂಳಿನ ಮೊಳಗಿವ ಭೇರಿಯ ರಾಯಗಿಡಿಗನ ಜಡಿವ ಚಂಬುಕನ (ಶುಬ್ಬಾಶ. ೦೪-೩೩) ; ತಂಬಟೆ ಹೋಗಿ ಭೇರಿಗೆ ದೂರು ಹೇಳಿದ ಹಾಗೆ (ಗಾದೆ). [ಸಂ. ಭೇರೀ]

**ಭೇರುಂಡ** (ಗು). ೧. ಭಯಂಕರವಾದ ; ಕ್ರೂರವಾದ; ಭೀಷಣವಾದ. (ನಾ). ೨. ಎರಡು ತಲೆಗಳುಳ್ಳ, ಭಯಂಕರವಾದುದೆಂದು ತಿಳಿಯಲಾದ ಒಂದು ಬಗೆಯ ಕಾಲ್ಪನಿಕ ಹಕ್ಕಿ ; ಗಂಡಭೇರುಂಡ : "ಬಿಡದಮುಳ್ಳಲಿವಕ್ಕಿಯುಮೆಂದೊಡೆ ಭೇರುಂಡಕ್ಕೆ ನಾಮಂ" (ಶಬ್ದಾಂ. ೬೦); ಸಕಲ ಶಕುನಿಗಣಂಗಳೊಳಗೆ ಸತ್ತ್ವದೊಳಂ ಸಾಹಸದೊಳಮಧಿಕಮಪ್ಪ ಭೇರುಂಡಮಂಡಳಿಯುಂ . . . ಇರ್ದಂತೆ (ಶಂತಶಂ. ೨೨೫-೨೦); ನಮ್ಮ ಮುಂದಿಗಳಂ ಸಿಂಹ ಶರಭ ಭೇರುಂಡ ಶುಂಡಾಲ . . . ರೂಪಂಗಳಿಂ ಬಾಧಿಸದಂತು ಶಾಂತಿಯಂ ಮಾಡಲ್ವೇಳ್ಬುದು (ಜಗದ. ೯-೬೭ ವ). [ಸಂ.]

**ಭೇರುಂಡಗಳೆ** (ನಾ). (ಬಳ್ಳಿಗಾವೆಯ ಭೇರುಂಡೇಶ್ವರದೇವರ ಅಧಿಕಾರದಲ್ಲಿ ಸ್ಥಾಪಿತವಾಗಿದ್ದ) ಭೂಮಿಯನ್ನು ಅಳೆಯುವ ಒಂದು ಅಳತೆ ಮತ್ತು ಅಳತೆಗೋಲು (?) : ಊರಿಂ ಮೂಡಣ ಭೇರುಣ್ಡೇಶ್ವರದ ತಳವೃತ್ತಿ ಪುಲ್ಲೆಯ ಬಯಲ ಮೂಡಣಪತ್ತುಗೆಯಲೆ ಭೇರುಣ್ಡಗಳೆಯ ಲ್ಕೊಟ್ಟ ಗಟ್ಟಿ (ಎಕ. VII, ಶಿಕಾ. ೦೫೦-೬೦೮ ; 1047) ; ಬಳ್ಳಿಗಾವೆಯ ಪುಲ್ಲೆಯ ಬಯಲೊಳ್ ಭೇರುಣ್ಡಗಳೆಯೊಳ್ ಕೊಟ್ಟ ಗಟ್ಟಿ ಮತ್ತರಯ್ದು (ಇಳ. IV, ೦೫೦-೦೬: 1048). [ಭೇರುಂಡ + ಗಳೆ (<ಗಟಿ)]

**ಭೇರುಂಡವಕ್ಕಿ** (ನಾ). = ಭೇರುಂಡ ೨ : ಭೇರುಂಡವಕ್ಕಿಯಾಗಿ ಪುಟ್ಟಿ ಸತ್ತು (ವಡ್ಡಾರಾ. ೦೬೬-೨೫); ಶರಭಂ ಬೆಂಕೊಳ್ವ ಭೇರುಂಡವಕ್ಕಿಗಳಂ ನೋಡಿದ ನೋಟದಾಸಱುಗಿವನ್ನಂ ಕಂಡಂ (ಶಂರಾಮಾ. ೦೦-೬೪). [ಭೇರುಂಡ + ಪಕ್ಕಿ]

**ಭೇಲ್**, ಭೇಳ (ನಾ). ಒಂದು ಬಗೆಯ ತಿಂಡಿ ; ಎರಡು ಮೂರು ತಿಂಡಿಗಳನ್ನು ಸೇರಿಸಿರುವ ಮಿಶ್ರಣ; ಚೌಚೌ; ಮಿಸಳ (ಉಕ): ಇನ್ನೊಂದು ಕಡೆ ಕಡಲೆಕಾಯಿ, ಭೇಲ್, ಮಿಠಾಯಿ ಮಾರುವ ಹುಡುಗರು ಬಂದು ಕೊಳ್ಳಿರೆಂದು ಎಲ್ಲರನ್ನು ಬಲವಂತ ಪಡಿಸುತ್ತಿದ್ದರು (ಸೋಕಗ. ೭೦). **ಭೇಳ** : ಆರ್ಡರ್ ದೊರೆತೊಡನೆ ಸಂತುಷ್ಟನಾದ ಭಯ್ಯಾ . . . ಓಡುತ್ತ ಹೋಗಿ ಭೇಳ (ಚೌಚೌ)ನ್ನು ಎರಡು ಎಲೆಗಳಲ್ಲಿ ತಂದು ಅವರ ಮುಂದಿರಿಸಿದ (ಎಡಹ. ೨೪). [ ← ಮರಾ. ಭೇಲ್. / ಪ್ರಾ. ಭೇಲ್, ಭೇಳ್]

**ಭೇಶ** (ನಾ). ೧. ನಕ್ಷತ್ರಗಳ ಒಡೆಯ ; ಚಂದ್ರ : ದುರಿತವಾರಿಜಭೇಶ ಜಗದೀಶ (ಶ್ರೀಕಠ. ೪-೦). ೨. ಕಾಂತಿಯ ಒಡೆಯ ; ತೇಜಸ್ಸಿಗೆ ಒಡೆಯನಾದವನು : ಭೂವಂದ್ಯ ಭೇಶ ಭೈಷಜ್ಯ . . . ಎನೆ ಕಾಯ್ದು ಹರಿಯ (ಶತಶಾಂ. ೭೭-೮೨). [ಸಂ.]

**ಭೇಶಚೂಡ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿರುವವನು ; ಚಂದ್ರಚೂಡ ; ಶಿವ : ಬಸವ ಭೇಷ[ಶ]ಚೂಡನ ಧ್ಯಾನದೊಳು ರಾಜ್ಯವೈಭವದಿ ಮೋಸಹೋಗದೆ (ಶ್ರಶುಕ್ಷ. ೬-೩೦). [ಸಂ.]

**ಭೇಷ್** 'ಬೇಶ್' ನೋ.

**ಭೇಷಜ** (ನಾ). ೧. ಮದ್ದು; ಔಷಧಿ : ''ಭೈಷಜ್ಯಂ, ಭೇಷಜಂ, ಜಾಯುಃ, ಅಗದಂ, ತಂತ್ರಂ, ಔಷಧಂ__ ಈ ೬ ಮದ್ದು'' (ಶಬ್ದಮ. ೦೦೦-೪೩೪); ನಿನ್ನೀ ಸ್ತವಭೇಷಜದಿಂದಘ ಕರಗುವುದಲ್ತೆ (ಕಪಾರ. ೩೨); ದಿವ್ಯಶಸ್ತ್ರಪ್ರಹರಣ ಭರಮುನಪಹರಿಸುವ ಭೇಷಜಪ್ರಯೋಗಮನೊಡರಿಸುವಮೆಂದು ಶೋಕೋದ್ರೇಕಮನುಪಶಮಿಸುವುದುಂ (ಶಂರಾಮಾ. ೦೪-೩೪ ವ). ೨. ಪರಿಹಾರೋಪಾಯ ; ನಿವಾರಣೆ : ಕಾಮಿನಿಯರ ಕುಚಾಲಿಂಗನವನುಳಿದೊಡೆತ್ತಣದು ಹಿಮುಕೆ ಭೇಷಜಮೆಂದು ವಿರಹಿಗಳ್ಕೂರ್ಪರನಱುಹಿರ್ದರು (ಕೈಪಿಶಾ. ೨೮-೩); ಪ್ರೀತಿಯಲ್ಲದೆ ಬೇರೆ ಭೇಷಜಂ ಪೋ ಭ್ರಾಂತಿಯೆಂಬಿನಂ, ಕೇಳುರ್ವಿಕೆ ಮಾಡಿದಳೊ (ಶ್ರೀರಾಮಾ. ೨೭೪-೪೦೫). [ಸಂ.]

**ಭೇಷಜನಿವಾಸ** (ನಾ). ಔಷಧಗಳು ಸಿಗುವ ಸ್ಥಳ ; ಆರೋಗ್ಯಗೃಹ : ''ಭೇಷಜನಿವಾಸಮೆನಲು ಆರೋಗ್ಯಗೃಹಮಕ್ಕು'' (ಶಂಗರಾ. ೫೬-೦೦). [ಸಂ.]

**ಭೇಳ** 'ಭೇಲ್' ನೋ.

**ಭೈ** (ನಾ). ಒಂದು ಅನುಕರಣ ಶಬ್ದ : ಪೂರಿತ ರಣಶಂಖ ಗಭೀರಾರಾವಂ ದೆಸೆಯ ಕೋಣ ಕುಸುಕುಱ ಗಜಘಂಟಾರವಮನುಱದೆ ಪೆಱಗಿಡೆ ಭೈ ರವ ಮೆಸೆದತ್ತು ಚರದ ಬಲಜಲನಿಧಿಯೊಳ್ (ಶಾಂತಿಪು. ೩-೯೭).

**ಭೈಭೈ** (ದ್ವಿರುಕ್ತಿ) : ದೋರ್ಗರ್ಬ್ಬದಗರ್ವದನ್ನಲ್ಲಿ ಮೆಱೆವಂ ಭೈಭೈ ಎನುತ್ತಾಗಳೇಱದ ಮತ್ತದ್ವಿಪವಂ ನೃಸಿಂಹಮಹಿಪಂ (ಎಕ. VI. ಕಕ್ಷಮು. ೨೦-೦೪: 1249) ; ಒಡೆದದ್ರಿಕುಕ್ಷಿಸಂಧಿ ಪತ್ತುವಿಡೆ ಭೈಭೈಯೆಂಬಿನಂ ಕಿಬ್ಬು (ಕವಿದ. ೩೩ ಪ್ರಯೋ).

**ಭೈಕಾರ** (ನಾ). ಭೈ ಎಂಬ ಅಕ್ಷರ : ಬತ್ವದ ಭೈಕಾರಕ್ಕೆ—ಬಹಿತ್ರ—ಭೈತ್ರ (ಕವಿದ. ೨೭೫ ಪ್ರಯೋ).

**ಭೈಭೈಕಾರ** (ದ್ವಿರುಕ್ತಿ) : ಆ ಕುವಲಯಾಪೀಡಗಜಮಂ ಕಂಡು

ಗಜಾಸುರನಂ ಕಂಡ ಖಂಡಪರಶುವಿಸಂತುದ್ಭಟಾರಭಟಿಯಿಂದಾರ್ದು ಭೈಭೈ ಕಾರದಿಂದಾ ದ್ವಿರದದಿದಿರಂ ನಡೆಯೆ (ಜಗಪು. ೬-೩೦ ವ). [ಸಂ.]

**ಭೈಕೃತ** (ನಾ). ಭೈಯೆಂಬ ಕೂಗು : ದಿಕ್ತಿಜಾರಿಯ ಭೈಕೃತದೊಡನೆ ತಗುಳ್ದು ನ್ಮೈಮಮ ಕೆಳರ್ದಿಭೇಂದ್ರದ ಗಳಬೃಂಹಿತಮುಂ . . . ಮದಗಂಧ ವಿಚಲದಳಿಝಂಕೃತಮುಂ (ಜಗಪು. ೬-೩೦). [ಸಂ.]

**ಭೈಕ್ಷ** (ನಾ). ೧. ಭಿಕ್ಷೆ ಬೇಡುವುದು ; ಭಿಕ್ಷಾಟನೆ ; ತಿರುಪೆ. ೨. ಭಿಕ್ಷೆಯಿಂದ ತಂದ (ಆಹಾರ) ಪದಾರ್ಥ : "ಭೈಕ್ಷಂ, ಭಿಕ್ಷಾ ಕದಂಬಕಂ — ೨ ತಿರಿದು ತಂದ ಪದಾರ್ಥಗಳ ಗುಂಪಿನ ಹೆಸರುಗಳು" (ಸಿದ್ಧಾಂತಿ. ೨೨೯). ೩. ಕರುಣೆಯನ್ನು ಯಾಚಿಸುವುದು ; ಕೃಪೆಗಾಗಿ ಪ್ರಾರ್ಥನೆ ಮಾಡುವುದು : ಸೊರ್ಕಿಟ್ಟ ಮುಕ್ಕುಮೋಗಿ ಕಡೆಯೊಳ್ ಭೈಕ್ಷಕ್ಕೆ ಪಕ್ಕಾದಿರೇ (ಸುಕುಮಾ. ೯-೨೬). ೪. ಭಿಕ್ಷಾದಾನ : 'ಪುರುಷಭೈಕ್ಷ' ಪರಾ. [ಸಂ.]

**ಭೈಕ್ಷಶುದ್ಧಿ** (ನಾ). [ಜೈನ] ಆಚಾರ್ಯವ್ರತದ ಐದು ಭಾವನೆಗಳಲ್ಲಿ ಒಂದು ; ಆಹಾರಶುದ್ಧಿ : ಆಚಾರಸೂತ್ರೋಕ್ತಮಾರ್ಗದಿಂ ಭೈಕ್ಷ ಶುದ್ಧಿಯುಂ . . . ಅಸ್ತೇಯವ್ರತದ ಭಾವನೆಗಳಯ್ದುವು (ತತ್ತ್ವಸೂ. ೨೭೦) ; ಅನ್ಯಾಯ ಮತ್ತು ಅಭಕ್ಷ್ಯಗಳನ್ನು ತ್ಯಾಗಮಾಡಿ ಭೋಗಾಂತರಾಯದ ಕ್ಷಯೋಪಶಮಕ್ಕನುಸರಿಸಿ ಲಭಿಸುವಂಥ ಸರಸವಾಗಿರಲಿ ನಿ[ ನೀ ]ರಸವಾಗಿರಲಿ . . . ಅದನ್ನೇ ಸ್ವೀಕರಿಸುವದಕ್ಕೆ ಭೈಕ್ಷಶುದ್ಧಿಭಾವನೆ ಎನ್ನುವರು (ಶ್ರಾವಕಾ. ೩೦೪). [ಸಂ.]

**ಭೈಕ್ಷುಕ** (ನಾ). ಭಿಕ್ಷುಕರ ಗುಂಪು, — ಸಮೂಹ : ಭೈಕ್ಷುಕಕ್ಕಂಜಿ ಅಟ್ಟುಂಬುದಂ ಮಾಣಬೇಡ (ಪಂಪಭಾ. ೦-೩೮ ವ). [ಸಂ.]

**ಭೈಕ್ಷೆ** (ನಾ). ಯಾಚನೆ ; ಭಿಕ್ಷೆ : 'ಪುರುಷಭೈಕ್ಷೆ' ಪರಾ. [ಸಂ. ಭೈಕ್ಷ]

**ಭೈತು** (ನಾ). ನೃತ್ಯದಲ್ಲಿ ಒಂದು ಬಗೆ : ಚಿಂದು ಜಕ್ಕಡಿ ಕವಿಲು ಗಜಲು ಭೈತು ತುರಿಗೆ ಆಂದೋಳಿತ ಮೊದಲಾದ ಆಟಗಳಿಂ ನೋಟಕರ ದಿಟ್ಟಿಗೆ ಮಧುರಸಮಾಗೆ ಮೆಚ್ಚಿಸುತ್ತಿರ್ದರ್ (ಅರೂಪಾ. ೯೦). [ ? ]

**ಭೈತ್ರ** 'ಬಹಿತ್ರ' ನೋ.

**ಭೈತ್ರಕಾಜ** (ನಾ). ಹಡಗನ್ನು ನಡೆಸುವವನು ; ನಾವಿಕ : ಭೈತ್ರ ಕಾಜರಿಂ ದ್ವೀಪಗಳಂ ಜೋಯಿಸರಿಂ ಗ್ರಹಣಮಂ ಪಡೆವಂತೆ (ಧರ್ಮಾಮೃ. ೯-೬೯). [ಭೈತ್ರ (<ಬಹಿತ್ರ) + —ಕಾಜ]

**ಭೈತ್ಯ** (ನಾ). = ಭೈಕಾರ : ಆದಿಸು ಬಿತ್ತುಂ ಭೈತ್ಯ ವೈತ್ಯ ವಿಧಿಯುತ್ತ ವಾತ್ಯದೊಳ್ ದೊರೆಕೊಳ್ಳುಂ (ಕವಿಪಂ. ೫೬೩). [ಸಂ.]

**ಭೈಮುಂಗ** 'ಭೈಮೂಗು' ನೋ.

**ಭೈಮುಂಗು** 'ಭೈಮೂಗು' ನೋ.

**ಭೈಮೂಗು**. ಬೈಮೂಗ, ಭಯಿಮೂಗ, ಭೈಮುಂಗ, ಭೈಮುಂಗು (ನಾ). (ಉಕ) ನೆಲಗಡಲೆ ; ಶೇಂಗಾ : ಇಲ್ಲಿ ಭತ್ತ, ಜೋಳ, ಸಜ್ಜೆ, ಕುಸುಬಿ, ಭೈಮೂಗು ಚನ್ನಾಗಿ ಬೆಳೆಯುತ್ತವೆ (ಮುಂಬಿಶಿ. ೦೬೦). **ಬೈಮೂಗ** : ಎಣ್ಣೆಯ ಪ್ರಕಾರವು . . . ಕುಸುಬಿ, ಬೈಮೂಗ, ಗಣಜಲ (ಮುಂಬಿಶಿ. ೦೬೨). **ಭಯಿಮೂಗ** : ಬಜ, ಭಯಿಮೂಗದ ಕಾಯಿ (ಶೇಂಗಾದ ಕಾಯಿ) ಈ ಮಾಲಿನ ಕಿಮ್ಮತ್ತು ಸೂರ್ತಿ ಚವಾಳಾ ೨೦ ಮಣದ ಖಂಡುಗದ ಮೇಲೆ ಇರುತ್ತದೆ (ಮುಂಬಿಶಿ. ೦೦೩). **ಭೈಮುಂಗ** : ಭೈಮುಂಗ ಪೂರಾ ಚಾದ ಹಣ ಬೆಳಗಾಂವಿಯ ಅಡತಿಯಲ್ಲಿತ್ತು (ರೀಕಪ. II. ೨೯೬). **ಭೈಮುಂಗು** : ಅನೇಕ ದಿನ ಬರಿ ಹಾಲು ಕುಡಿದು ಭೈಮುಂಗು ತಿಂದಿದ್ದೆ ನಾನು (ಕಮುಜೀ. ೫೬೬). [← ಮರಾ. ಭುಇಮೂಗ್]

**ಭೈರವ** (ಗು). ೧. ಭಯವನ್ನುಂಟುಮಾಡುವ ; ಭಯಂಕರವಾದ : ಭೈರವನ ಭೈರವಾಡಂಬರಕ್ಕಿರ್ದ ಬಿರಿದು ತಾರಕಾಕ್ಷಂ ಮುನಿದಂ (ಕಾವ್ಯ. ೩೯-೩೮) ; ಗಂರಂಗಾತ್ರಭಯ್ಯದಿಂ ಪರ್ವತ ಸಹೋದರತೆಯಾಂತುದು ವಿಯುಚ್ಚುಂಬಿ ಭೈರವಬೃಹತ್ತ್ರರೂವರಂ (ಶ್ರೀರಾಪಟಾ. ೨೪೬೬-೬೩). ೨. ಶಿವನಿಗೆ ಸಂಬಂಧಿಸಿದ. (ನಾ). ೩. ಭಯಂಕರವಾದುದು : ಭೀತಿಯನ್ನುಂಟು ಮಾಡುವಂತಹುದು : ಘೋರಂ, ಪ್ರತಿಭಯಂ . . . ಭೈರವಂ, ಭಯಾ (ವಹಂ)ನಕಂ —ಈ ೧೦ ಭಯಂಕರು " (ಹಲಾಯುಧ. ೦೮೬-೨೦) : ಮಲೆತುದು ಮುಂದೆ . . . ಕರ್ಕಶಂ ಭೈರವಂ ಜನಸಂಗಮೋನಂ ಮಹದ್ಭಯಂ (ಶ್ರೀರಾಪಟಾ. ೦೨೭-೩೬). ೪. ಪರಮೇಶ್ವರನ ರೂಪಗಳಲ್ಲಿ ಒಂದು : "ಘೋರಮೂರ್ತಿಯು ಖಡ್ಗಹಸ್ತಂ ದಿಗಂಬರಂ ಭೈರವನ ಪೆಸರಕ್ಕು" (ಮಂಗರಾ. ೩-೦೩) ; ಭೈರವನಂತೆ ಭಾಂಕಾರಂಗುಡುತಿರ್ಪ ಸಾಧಕರುಂ . . . ಅತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೩೯ ಕಾವ್ಯಕ) ; ಪರಸೈನ್ಯ ಭೈರವನೊಳಿಜಾವೆನೆಂಬ ಪಟುವಗೆಯೊಳ್ ಭೈರವಂಬಾಯ್ವಂತೆ ಬಂದು ನಿಂದ ಪುರಂದರನಲ್ಲಿಗೆ ಸರಸಿಜಸಂಭವಂ ಬಂದು ಮಾರ್ಕೊಂಡು (ಶಂಕಶಾ. ೩-೦೦೦೪). ೫. ಈಶ್ವರನ ಪ್ರಮಥ ಗಣ: ಎಡೆವಿಡದೆ ಕಿಕ್ಕಿರಿದು ಕುಳಿತಿರ್ಪ ಭೈರವರ ಗಡಣ ತರತರದಿ ನಿಖಿಳಾಯುಧಮನಾಂತು ಕಾಯ್ದಿ ಹರುಷತಿ ಜಾಗ್ರದಿಂದೇ (ಸವಪೋ. ೨೪-೬೭). 'ಭೈರವಾಳಿ' ಪರಾ. ೬. ಮಹಾ ಮಂತ್ರಗಳಲ್ಲಿ ಒಂದು: ಗಾಯಿತ್ರಿ . . . ಭೈರವಾದಿ ಮಹಾಮಂತ್ರಂಗಳಂ ...ಬೇಜಿಬೇಜಿ ವಿವೇಕಿಸಿ ನೋಡಿ (ಏಕೋ. ೬೩) ೭. ಒಡೆಯನಿಗಾಗಿಯೇ ಬದುಕಿ ಅವನೊಡನೆಯೇ ಮಡಿಯುವುದೆಂಬ ದೀಕ್ಷೆಯನ್ನು ಕೈಗೊಂಡಿ ರುವ ವೀರ : ಲಿಂಕರಾಯನೆಂಬ ಒಬ್ಬ ಸೈನಿಕ ತಾನು 'ಭೈರವ ನಾಗಲು ನಿರ್ಧರಿಸಿ . . . ವೀಳೆಯ ಅಪ್ಪಣೆಯಾಗಬೇಕು ಎಂದ (ಚಾಂಕರಾ. ೨೨೯). 'ಗರುಡ' ಪರಾ. ೮. ಭಯ; ಹೆದರಿಕೆ. ೯. ಪರ್ವತ ; ಬೆಟ್ಟ. ೧೦. [ಸಂಗೀತ] ಒಂದು ರಾಗದ ಹೆಸರು : ವೇಗವಾಹಿನೀ ಮೇಳದ ಜನ್ಯಾದರೋ ಭಾಷಾಂಗ (ರಾಗ)ವಾದ ಭೈರವವು ಹುಟ್ಟಿತು (ಕರ್ನಾಪು. ೦೨೯) ; ಕೀರವಲಾಲನು . . . ಶುದ್ಧಸುಕಂಠದಿಂದ ಭೈರವರಾಗದಲ್ಲಿ ಭಜನೆಯ ಹಾಡು ಹಾಡುತ್ತ ಮನೆಗೆ ಮರಳುತ್ತಿದ್ದನು (ಇಕ್ಷು. ೦೬೬). [ಸಂ.]

**ಭೈರವಾಂಜನ** (ನಾ). ಒಂದು ಬಗೆಯ ಅಂಜನ : ಭೈರವಾಂಜನ– ಹಿಂಗು, ಸೈಂಧವ, ಹಿಪ್ಪಲಿ ಇವನ್ನು ಗೋಮೂತ್ರದಲ್ಲಿ ತೇದು ಅಂಜನ ವಿಡಲು ಸನ್ನಿಪಾತಜ್ವರಗಳು ಮಾಣುವುವು (ಸಕಚ. ೪೩೩ ಪಂ). [ಸಂ.]

**ಭೈರವಾವಳಿ** (ನಾ). ಭೈರವದೇವರ ಸಮೂಹ,– ಗುಂಪು ; ☞ ಇವರು ಎಂಟು ಜನ:—ವಿದ್ಯಾರಾಜ, ಕಾಮರಾಜ, ನಾಗರಾಜ ಸ್ವಚ್ಛಂದ ರಾಜ, ಲಂಬಿತರಾಜ, ದೇವರಾಜ, ಉಗ್ರರಾಜ ಮತ್ತು ವಿಘ್ನರಾಜ– ಎಂದು ವಾಮನಪುರಾಣದ ೬೭ನೆಯ ಅಧ್ಯಾಯದಲ್ಲೂ ಅಸಿತಾಂಗ, ರುರು, ಚಂಡ, ಕ್ರೋಧ, ಉನ್ಮತ್ತ, ಕಪಾಲ, ಭೀಷಣ ಮತ್ತು ಸಂಹಾರ–ಎಂದು ತಂತ್ರಸಾರದಲ್ಲೂ ಹೇಳಿದೆ. ಈ ರೀತಿ ಈ ಎಂಟು ಜನ ಭೈರವರಿಗೆ ಇನ್ನೂ ಬೇರೆ ಬೇರೆ ಹೆಸರುಗಳಿವೆ : ಆ ಮಹಾವನಂ . . . ಭೈರವಾವಳಿಯಂತೆ ರುರುವಿರಚಿತಮುಂ ಪಿತಾಮಹಾಸನದಂತೆ ಸಾಮಜ ಪದಾಭಿರಾಮಮುಂ . . . ಅಲ್ತು (ಶಂಪ್ರಪು. ೩-೩೨ ವ). [ಸಂ. ಭೈರವಾವಲಿ]

**ಭೈರವಾಸನ** (ನಾ). [ಯೋಗ] ಒಂದು ಬಗೆಯ ಆಸನ : ಮೊದಲು 'ಭೈರವಾಸನ'ವನ್ನು ಅಭ್ಯಸಿಸಿ . . . 'ಏಕಪಾದಶೀರ್ಷಾಸನ'ಕ್ಕೆ ಮತ್ತೆ ಹಿಂದಿರುಗಬೇಕು (ಯೋಗದೀ. ೨೦೭) ; ಮುಖ್ಯವಾದ ಕೆಲವು ಆಸನ ಗಳು. ಅಷ್ಟವಿನ್ಯಾಸಗಳು. ೧. ಉತ್ತಾನಾಸನ . . . ೭೯. ಭೈರವಾಸನ (ಶಾರಶ. ೦೬೭). [ಸಂ.]

**ಭೈರವಿ** (ನಾ). ೧. ದುರ್ಗಾದೇವಿಯ ಒಂದು ರೂಪ : "ಚಾಮುಂಡಿ ಚರ್ಚಿ ಭೈರವಿಯೆನಲು ವನದೇವಿ" (ಮಂಗರಾ. ೯-೦೪) ; ರೋಷನದಿಂ ಸುತನ ಶಿರಶ್ಛೇದನವಲಲಾಜನಾಜುಗಂ ರಿಪುರುಧಿರಾಸ್ವಾದನದಿನೆಂದು ವಿಲಂಬೋತ್ಪಾದನ ಭೈರವಿಯ ಮುಸಕಮಂ ಕೈಗೊಂಡಳ್ (ಶಂಠಾಮಾ. ೯೩೩) :

ಈಕೆಯುಮಾವಳೊ ಪ್ರತ್ಯಕ್ಷೊ ಮಾಕಾಳಿಯೊ ಚಂಡಿಯೋ ಮಹಾಭೈರವಿಯೋ (ಜಗವ. ೪-೦೩). ೨. [ಸಂಗೀತ] ಒಂದು ರಾಗದ ಹೆಸರು: ಕಾಂಭೋದಿ ಭೈರವಿ ಮೊದಲಾದವನು ಸ್ವರವಡೆದು ಸವಿಧಾನಗಳಿಂ ಸುರನಾರಿಯರ್ಸೊಲಿವಂತೆ ಪಾಡೆ (ಜೀವಂಧರಾಂ. ೦೬-೪೭); ಶ್ರೀರಾಗ ಭೈರವಿ ವರಾಳಿ ಹುಸೇನಿ ಗುಂಡಾಕ್ರೀ . . . ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹರಿಶ್ಚ. ೨-೪೦); ಭೈರವಿರಾಗದ . . . ಕೆಲವು ಕೃತಿಗಳನ್ನು ಮಾತ್ರ ಅವರು ತಮ್ಮ ಕಚೇರಿಗಳಲ್ಲಿ ಹಾಡುತ್ತಿದ್ದರು (ಸಂಗೀತ. ೩). [ಸಂ. ಭೈರವೀ]

**ಭೈರವೇಶ್ವರ** (ನಾ). = ಭೈರವ ೪ : ಆ ಭೈರವೇಶ್ವರದೇವರ ನಾಲ್ಕು ವೃತ್ತಿಯ ಪ್ರಾಪ್ತಿಯೊಳಗಾದ ಗ್ರಿಹಕ್ಷೇತ್ರ (ಎಕ. IV. ಕೃಷ್ಣರಾ. ೦೨-೪೩; 1267). [ಸಂ.]

**ಭೈರಿ₁** (ನಾ). ಒಂದು ಬಗೆಯ ಹಕ್ಕಿ : ಆ ಮೃಗಶಾಲೆಯಲ್ಲಿ ಹುಲಿ, ಕರಡಿ . . . ಗಿಡಗ, ಭೈರಿ ಮುಂತಾದ ನಾನಾಬಗೆಯ ಮೃಗಗಳಿದ್ದವು (ಎಡೆ. ೩೩) : ದೊರೆಗಳವರು . . . ಗೌಜಲಹಕ್ಕಿ, ಲಾವಕನಹಕ್ಕಿ ಗಿಡಗ ಭೈರಿ ಮುಂತಾದ ಅನೇಕ ಮೃಗಪಕ್ಷಿಗಳನ್ನೂ ಚೆನ್ನಾಗಿ ಕಾಪಾಡುತ್ತಿದ್ದರು (ಮಹಾವ. I. ೦೬೨).

[ದೇ.॥ ತೆಲು. ಭೈರಿ, ಬೈರಿ, ಬಯಿರಿ, ಭೈರವಿ. /ಮರಾ. ಭೈರೀ, ಬಹಿರೀ]

**ಭೈರಿ₂** (ನಾ). ಒಬ್ಬ ದೇವತೆಯ ಹೆಸರು ; ಭೈರವ : ಶಿವಜೋಗಿಗಳು . . . ಇವರು ಭೈರಿ, ವಿಠೋಬ, ಹನುಮಂತ ಮುಂತಾದ ದೇವರಿಗೆ ನಡದುಕೊಳ್ಳುವರು (ಕಜಾಗ. ೨೬೯). [←ಮರಾ. ಭೈರೀ]

**ಭೈರಿ₃** 'ಬೈರಿ' ನೋ.

**ಭೈಷಜ್ಯ** (ನಾ). ೧. ವೈದ್ಯಕೀಯ ಚಿಕಿತ್ಸೆ : ಔಷಧೋಪಚಾರ : ಅಥರ್ವವೇದದಲ್ಲಿ ಭೈಷಜ್ಯಕ್ಕೆ ಪ್ರಾಧಾನ್ಯ (ಕರ್ನಾಟ. ೦೭). ೨. ಮದ್ದು ; ಔಷಧ : "ಭೈಷಜ್ಯಂ, ಭೇಷಜಂ, ಜಾಯುಃ, ಅಗದಂ, ತಂತ್ರಂ, ಔಷಧಂ —ಈ ೬ ಮದ್ದು" (ಅಭಿಧಾ. ೦೦೦-೪೩೯); ಭೈಷಜ್ಯಜ್ಞಾನಮೆ ಮಾಡುಗುಮೆ ವೇದನಾನಿಗ್ರಹಮಂ (ತಂತ್ರಶು. ೭-೨೬) : ಆ ಜನಪದಂ . . . ಭೈಷಜ್ಯಸಂಗ್ರಹದಂತೆ ಬಹುಧಾನ್ಯಕಧಾತ್ರೀಸಂಯುಕ್ತಮುಂ ಸಾರರಸೌಷಧಿಸಮೇತಮುಂ . . . ಎನಿಸಿ ರಮಣೀಯಮಾಗಿರ್ದುದು (ರಾಜಶೇ. ೨-೨೮ ವ). ೩. ರೋಗವನ್ನು ಗುಣಪಡಿಸುವ ಸಾಮರ್ಥ್ಯ. [ಸಂ.]

**ಭೈಷಜ್ಯಕ** (ನಾ). ಒಂದು ಬಗೆಯ ಜ್ವರ,– ತಾಪ : ಶರ್ವಂ . . . ನಂದಿಪ್ರಮುಖನಿಖಿಲಪ್ರಮಥಯೂಥಮನಲ್ಲಿಂ ಪೆಜಗೆ ಭೈಷಜ್ಯಕವೆಂದಿ ಜ್ವರಮುಮಂ ಬೆಸಸೆ (ಜಗೆ. ೦೮-೯ ವ). [ಸಂ.]

**ಭೈಷಜ್ಯಶಾಸ್ತ್ರ** (ನಾ). ವೈದ್ಯಶಾಸ್ತ್ರ : ಧರೆಯೊಳ್ ಭೈಷಜ್ಯಶಾಸ್ತ್ರಂ ಸುಖಕರಮಖಿಳರ್ಗೆ (ಕಳವೈ. ೪ ಪ್ರಸ್ತಾವನೆ). [ಸಂ.]

**ಭೊಂ** (ನಾ). ಒಂದು ಅನುಕರಣ ಶಬ್ದ.

**ಭೊಂಭೊಂ** (ದ್ವಿರುಕ್ತಿ) : ರಂಭೆಯುದೊರ್ವಳ್ . . . ಭೊಂಭೊಂ ಭೊಂಭೊಂಬೆಂಬೀ ಶಂಖಧ್ವನಿ ಪೊಣ್ಮೆ ಢಕ್ಕೆಯುಂ ಬಾಜಿಸಿದಳ್ (ಪಾರಶು. ೬-೮೯).

**ಭೊಗ್ಗನೆ** (ಅ). ಒಂದು ಅನುಕರಣಾವ್ಯಯ : ಕೂಡಲೆ . ತಟ್ಟನೆ : ಕೋಟೆಯನು ಭೊಗ್ಗನೆ ವಶಮಾಡಬೇಕೆಂಬ ನುಡಿಗಳು ಕಗ್ಗಲಿಗಳೊಳೊಪ್ಪಿದವು (ತಂಪ್ರಶಾ. ೯-೨೦) ; ಭೊಗ್ಗನಯ್ಯನ ಕಾಣಲೊಡನೆ ರೋಮಾಂಚದ ಸುಗ್ಗಿ ಚಿತ್ರಾಂಗರೆಯ್ದಿದರು (ಭರತ. ೩೮-೪೯). [ಭೊಗ್₀ + – ಅನೆ₁]

**ಭೊಪ್ಪರ** (ನಾ). (?) : ಪೂರ್ವ್ವಕಟಳೆ ಪೂರ್ವಮರಿಯಾದೆ ಹಾಗುವ ಪೊಲೆಯ ಕೋಲಿನಲು ತೆಗವಂಥಾ ದೇವಿಯ ಭೊಪ್ಪರವನು ಪೂರ್ವಮರಿಯಾದೆಯಲು ಎರಡು ಕೇರಿಯ ಹಲರು ಸಟಿಕಾಜಿರು ಆ ದೇವ್ಯಿದೇವರಿಗೆ ನಡಸಿ ಬಹರು(ಕರ್ನಾಇ. IX–ii, ೯೩೭-೦೭; 1455). 'ಬೊಪ್ಪರ' ಪಠಾ.[?]

**ಭೋ** (ಅ). ೧. (ಸಾಮಾನ್ಯವಾಗಿ ಗೌರವಾರ್ಹರಾದವರನ್ನು ಸಂಬೋಧಿಸುವಾಗ ಹೇಳುವ) ಒಂದು ಅವ್ಯಯ : ತೋಱೆಯು ಮಿಾವಣ್ಣಗಳರಾ . . . ಪರನಾರಿಯ ಸಂಗವ ತೊಱೆಯಿಂ ಭೋ (ಬಸವ. ೬೪೪); ಗುಹೇಶ್ವರಲಿಂಗವ ತನ್ನೊಳಱಿದೆನೆಂಬ ಮಹಾಂತಂಗೆ ಸತ್ಕ್ರಿಯಾಚರಣೆಯ ಸಾಧನೆ ಕಾಣೆ ಭೋ (ವಚನ. ೮೯). ೨. ದುಃಖ, ಗಾಬರಿ, ಅಪಘಾತ ಮುಂತಾದ ಸಂಕಟಪ್ರಸಂಗಗಳಲ್ಲಿ ಉದ್ಗರಿಸುವ ಶಬ್ದ ; ಅಯ್ಯೋ ಎಂಬ ಅರ್ಥವನ್ನು ಕೊಡುವ ಶಬ್ದ : ಬ್ರಹ್ಮರ್ ಭೋಯೆನಲುಂ ಬಲ್ಲಕೆರ್ಲೆಧೋಯೆನಲುಂ ಬಲ್ಲರಿಱಿಯೆಲವರೆತ್ತಱಿವರ್ (ಗದಾಯು. ೨-೦೬); ಈಯೆಡೆಯೊಳ್ ಪೋಗೆಲೆ ಪಾರ್ವಾಯೆನೆತಲ್ಲಣಿಸಿ ಪಾರ್ವನಬ್ರಾ{ಬ್ರಾ}ಹ್ಮಣ್ಯಂ ಭೋಯೆಂದು ಪುಯ್ಯಲಿಡುತ್ತುಂ . . . ನೃಪೇಂದ್ರಸಭೆಯಂ ಪೊಕ್ಕಂ (ಸುಕುಮಾ. ೭-೪೧) : ಭೋಯೆಂದುದಖಿಳಪರಿವಾರಮಡಿಗಡಿಗೆ ಹಾಹಾಯೆಂದು ಮಱುಗಿದುದು (ಕೈಟಭ. ೦೧-೩೪). [ಸಂ. ಭೋಸ್]

**ಭೋಂಕನೆ** (ಅ). ಒಂದು ಅನುಕರಣಾವ್ಯಯ : ತಟ್ಟನೆ; ಬೇಗನೆ : ಸಿದ್ಧಾರ್ಥಂ . . . ಪುತ್ರಮುಖಮಂ ನೋಟ್ಟೆಂದು ಭೋಂಕನೆ ನೆಲಮನೆಯೊಳಗಂ ಪೊಕ್ಕು ನೋಟ್ಪೆನ್ನೆಗಂ (ವಡ್ಡಾರಾ. ೪೪-೨೦); ಸೂರ್ಯಜಂ . . . ಮಂಗಳಲಕ್ಷಣೆಯನಂದು ಭೋಂಕನೆ ಕಂಡಂ (ಕುಶಲ. ೯-೭೩): ಮಾಧವಂ ತನ್ನ ಗಿಳಿಗಳ ಮಱಿಗೋಗಿಲೆಗಳ ಪಸಾಯ್ತರಿಂ ಕೂಡಿ ಭೋಂಕನೆಬಂದು (ರಾಮಾಶ್ವ. ೩೭-೦೪). [? + – ಅನೆ₁]

**ಭೋಂಕರಿಸು** (ಕ್ರಿ). ಧ್ವನಿಮಾಡು ; ಘೋಷಿಸು ; ಮೊಳಗು : ಬಿಂದುದಬುಜಭವಾಂಡವೆನೆ ಭೋಂಕರಿಸಿದವು ನಿಸ್ಸಾಳತತಿ (ಕುಮಾ. ೪.೮. ೦೪); ಭೋಂಕರಿಸುತೊಗ್ಗಿದರ್ಕಳಿದು ಜೀನ್ಮೊಣದಂತೆ . . . ಪಟುಭಟರ್ (ಜೈಮಿ. ೬. ೩೨). [ಭೋಂಕರಣ₀ + – ಇಸು₃]

**ಭೋಂಕಲ್** (ಅ). = ಭೋಂಕನೆ : ನಿಮದೋಳಂದಟ್ಟಿ ಭೋಂಕಲ್ ಭಯದೆ ನಡುಗುತಂ . . . ತಾನದೇನೆಂದಱಿಯದಬಲೆ ನಾನಾರಸಾಕ್ರಾಂತೆಯಾದಳ್ (ಕಾದಂಬ. ೭೮೮) ; ದೇವಂಗೊಗೆತಂದುದವಧಿಬೋಧಂ ಭೋಂಕಲ್ (ನೇಮಿಶು. ೧-೦೦೧); ಭೋಂಕನೆ ಚಿಕ್ಕನೆ ಭೋರನೆ ಭೋಂಕಲ್ . . . ಕೂಡಿರೆ ತವೊಳ್ಕೊದವುಗುಂ ಶೀಘ್ರಾರ್ಥಂ (ಶಮದ. ೩೦೩). [ ? ]

**ಭೋಂಗಾ, ಭೊಂಗಾ** (ನಾ). ಕಾರ್ಖಾನೆ, ಗಿರಣಿ ಮುಂತಾದುವುಗಳಲ್ಲಿ ಕೆಲಸಗಾರರನ್ನು ಎಚ್ಚರಿಸಲು ಇರುವ ಯಂತ್ರ ಮತ್ತು ಅದರ ಮೂಲಕ ಹೊರಡಿಸುವ ಸಿಳ್ಳು : ನಿದ್ರೆಗೆಟ್ಟು ಬಳಲಿದ ದೇಹವನ್ನು ಎಳೆದುಕೊಂಡು ಕಚೇರಿಗೆ ಬಂದು . . . ಕೊಠಡಿಗೆ ಬಂದಾಗ ಗಿರಣಿಯ ಭೋಂಗಾ ಭೋರಿಡುತ್ತಿತ್ತು (ನಾಕೋ. ೦೬. ೪೭). **ಭೊಂಗಾ** : ಗಿರಣಿಯ ಭೊಂಗಾ ಜೋರಿನಿಂದ ಸೀಳುಹಾಕಿತು (ತಂಪ್ರಶಾ. ೪೩).

[← ಮರಾ. ಭೋಂಗಾ]

**ಭೋಕು** (ನಾ). ತೂತು ; ರಂಧ್ರ : ಅವಳ ತಲೆಯಲ್ಲಿ ಭೋಕು ಬಿದ್ದು ರಕ್ತ ಪುಟಿಯ ಹತ್ತಿತು (ಕಃಸಬಾ. ೩೦). [←ಮರಾ. ಭೋಕ್, ಭೋಂಕ್]

**ಭೋಕ್ತೃ** (ನಾ). ೧. ಅನುಭವಿಸುವವನು : ಭೋಗಿಸುವವನು : ನಾವು ಕರ್ತರೂ ಅಲ್ಲ ಭೋಕ್ತರೂ ಅಲ್ಲ (ರಾಂಕರಾ. ೪೯) ; ಪುರುಷನಿಗೆ ಕೈವಲ್ಯ ಬೇಕಾಗಿರುವುದರಿಂದ ಪ್ರಕೃತಿ ಪ್ರಾಕೃತ ವಸ್ತುಗಳಿರಬೇಕು. ಆ ವಸ್ತುಗಳು ಭೋಗ್ಯಗಳಾದುದರಿಂದ ಭೋಕ್ತನು ಬೇಕು (ಹಿಂದಶಾ. ೩೯). ೨. ತಿನ್ನುವವನು : ಭೋಜ್ಯ ಭೋಜನವಲ್ಲ, ಭೋಕ್ತ ನಾನಲ್ಲ (ಅಗ್ನಿಪು. ೩೪). ೩. ಅನುಭವಿಸುವುದು ; ಭೋಗಿಸುವುದು : "ಉಪಭೋಗಮೆನಲು ನಿರ್ದೇಶಮೆನೆ ಭೋಕ್ತ್ರಂ" (ಮಂಗರಾ. ೦೩೩-೩೩). [ ಸಂ. ಭೋಕ್ತೃ ]

**ಭೋಕ್ತವ್ಯ** (ನಾ). ೧. ತಿನ್ನಲು ಯೋಗ್ಯವಾದುದು ; ತಿನ್ನಬಹುದಾದುದು. ೨. ಅನುಭವಿಸಬೇಕಾದುದು ; ಭೋಗಿಸಬೇಕಾದುದು :

ಸ್ವಾಧ್ಯಾಯಪರನಪ ಭೂಸುರೋತ್ತಮನ ಭವ್ಯನೆಂದುಂ ವಂದನೆಯು ಭೋಕ್ತೃವ್ಯವಸ್ಥೆಯ್ಯೇ ಬೇಡಿದತಿಥಿಗೆ ಸೇವ್ಯಭಿಕ್ಷವನಿತ್ತುವುದು ನಡೆಯೆಂಬು ದಿಲ್ಲವಡೆ ಇಂದು ಕೊಲುವರೆ (ಬಸಕ. ೩೩–೪೧) ; ವಿಪ್ರಾಳಿ ವಧೆಯಾತಂಗೆ ಬಂದುದು ಹೇಳಲದು ಭೋಕ್ತೃವ್ಯತಿಪಾತಕದ ಫಲವೆಂದ (ಕುವ್ಯಾಕ. ೧೭–೦೬). [ಸಂ.]

**ಭೋಕ್ತೃ** (ನಾ). ೧. ಅನುಭವಿಸುವವನು : ಭೋಗಿಸುವವನು : ಮಾಯೆ ತ್ರಿಪುಟಿಯ ರೂಪು ತ್ರಿಪುಟಿನಿಕಾಯಮೇ ಜಗಜ್ಜೀವಕರಣ ನಿಕಾಯವವು ತಿಳಿ ಭೋಗ ಭೋಗ್ಯವು ಭೋಕ್ತೃವೆನಿಸುವವು (ಅವ್ಯಾಕ. ೪–೩); ಆತ್ಮವೆಂಬುದು ಶರೀರಕ್ಕಿಂತ ಭಿನ್ನವಾದುದು. ಅದು ಸಂಸಾರದಲ್ಲಿ ಕರ್ತೃವೂ ಭೋಕ್ತೃವೂ ಆಗಿರುತ್ತದೆ (ಜೀವಾಕ್. ೧೭). ೨. ರಾಜ; ಅರಸ. ೩. ನಲ್ಲ : ಪ್ರಿಯಕರ. ೪. ಚೆನ್ನಾಗಿ ಸುಖವನ್ನು ಅನುಭವಿಸುವವನು : ಸುಖಿ : ಭೋಗಿ : ರವಿಜಂ . . . ಶನಿಗೇಹ ದೊಳ್ ನಿಲೆ ಮಾಳ್ಪಂ ಭೋಕ್ತೃ ಸಸ್ವಂ ಧನಂ (ಜಾತಕ. ೧೭–೭೩). ೫. [ತತ್ತ್ವಶಾ]ರಜೋಗುಣದಿಂದ ಕೂಡಿದ ಚೇತನ : ಸ್ವಲ್ಪ ಸತ್ತ್ವ ಸಹಿತವಾದ ರಜೋಗುಣದ ರೂಪಕ್ಕೆ ಭೋಕ್ತೃ ಎಂದು ಹೆಸರು (ಶಾತತ್ತ್ವ. ೬೭೨): ಕೊಂಚ ಸತ್ತ್ವಗುಣ ಮತ್ತು ಹೆಚ್ಚು ರಜೋಗುಣಗಳಿಂದ ಕೂಡಿದ ಚೇತನವು ಭೋಕ್ತೃ ಅಥವಾ ಜೀವವೆನಿಸುವುದು (ಕತ್ತ್ವ. ೩೬). ೬. [ದ್ವೈತ] ವಿಷ್ಣು : ಜಯಾಪತಿಯಾದ ಸಂಕರ್ಷಣನು ಪಿತೃಗಳನ್ನು ಆವಾಹನ ಮಾಡಿರುವ ಬ್ರಾಹ್ಮಣರಲ್ಲಿದ್ದು ಶ್ರಾದ್ಧಾನ್ನವನ್ನು ಭುಂಜಿಸಿ, ಭೋಕ್ತೃ ಎನಿಸುವನು (ಹಕಾರ. ೧೪–೧ ತಾತ್ಪರ್ಯ). [ಸಂ.]

**ಭೋಕ್ತೃತ್ವ** (ನಾ). ಅನುಭವಿಸುವ ಸಾಮರ್ಥ್ಯ : ಆತ್ಮವಸ್ತುಗಳಿಗೆ ಚೇತನತ್ವ ಜ್ಞಾತೃತ್ವ ಕರ್ತೃತ್ವ ಭೋಕ್ತೃತ್ವ ಮೊದಲಾದ ವ್ಯವಹಾರ ಗಳಿರುವುವು (ಹಿಂದಗಾ. ೨೩೯); ಆತ್ಮನಿಗೆ ಸುಖದುಃಖ ಭೋಕ್ತೃತ್ವವು ಇಲ್ಲ ವಾದರೆ ಜಗದ್ವ್ಯಾಪಾರವು ಹೇಗೆ ಸಂಭವಿಸುವುದು ? (ತ್ವಸಫ. ೦೩).
[ಸಂ.]

**ಭೋಗ** (ನಾ). ೧. ಉಣ್ಣುವುದು ; ತಿನ್ನುವುದು. ೨. ಭೋಗಿಸು ವುದು : ಅನುಭವಿಸುವುದು. ೩. ಸುಖವನ್ನು ಅನುಭವಿಸು ವುದು.—ಹೊಂದುವುದು ; ಸುಖಾನುಭವ : ಬೆರಸಿ ಬೋಗದೆ ದುಡಿವ ಭೋಗದೆ ಮೆರೆವನೇ ಸುಖಮನುಜನ್ಮ (ಕುಮಾ. ೪೦–೪) ; ಪ್ರತಿ ಪುರುಷನೂ ಕ್ರಮಕ್ರಮವಾಗಿ ಭೋಗದಿಂದ ವಿರಕ್ತನಾಗಿ ಮೋಕ್ಷವನ್ನು ಪಡೆಯುವುದಕ್ಕಾಗಿಯೇ ಪ್ರಕೃತಿಯ ವ್ಯಾಪಾರವು (ಹಿಂದಗಾ. ೬೩). ೪. ಪೂರ್ವಜನ್ಮದಲ್ಲಿ ಮಾಡಿದ ಪುಣ್ಯ ಅಥವಾ ಪಾಪದ ಪರಿಣಾಮ ; ಕರ್ಮಫಲ : ಹುಟ್ಟಿದ ಬಳಿಕ ಕೊಟ್ಟ ಭೋಗಂಗಳ ತಪ್ಪಿಸಿಹೆನೆಂದರೆ ತಪ್ಪದು ನೋಡಯ್ಯಾ (ಬಸವ. ೬೮೯) ; ಹಿಂದೆ ಮಾಡಿದ ಕರ್ಮವೆಂದಿಗೂ ಬೆಂಬಿಡದು ಬಂದ ಭೋಗವನು ತಿಂದು ತೀರಲೆ ಬೇಕು ನೊಂದೆನೆನಬೇಡ (ಸರ್ವಜ್ಞ. ೮೭೯). ೫. ಸೌಖ್ಯ ; ಸುಖ : ಹಿಂದಣ ಜನನವೇನಾದೊಡಾಗಲಿ ಇಂದಿನ ಭೋಗವು ಕಯ್ಯ ಮೇಲೆ (ಬಸವ. ೦೭೦): ಶಿಭೂ ಭೋಗಂ ರಾಗದಿಂದೆ ಬಳೆವಂದದಿಂ ಭವನ ಭಾಗ್ಯಂ ಮೂರ್ತಿಗೊಂಡು ಬಳೆವಂದದಿಂ (ಸುಬಕ. ೧–೧೧೬). ೬. ಸುಖವನ್ನುಂಟುಮಾಡುವ ವಸ್ತು.—ಸಾಮಗ್ರಿ : ಅಮರಾಧಿಪಪ್ರಹಿತಸುರತರುಪ್ರಸೂನಗ್ರಥಿತ . . . ಸುರಭಿವಿಲೇಪನಪ್ರಮುಖಭೋಗೋಪಭೋಗಂಗಳೊಳ್ (ಆದಿಪು. ೯–೩೭): ರಾಜ್ಯದಿನೇಂ. ಭಾಗ್ಯದಿನೇಂ ? ಆನೊಲ್ಲೆನೀ ಕ್ಷಣಭಂಗುರದ ಭೋಗಂಗಳಂ (ರಾಮಾಶ್ವ. ೬೨–೨೦). ೭. ಧನ: ಸಂಪತ್ತು. ೮. ದೇವಾಲಯದಲ್ಲಿ ದೇವತಾಮೂರ್ತಿಗೆ ಮಾಡಿಸುವ ಸ್ನಾನ, ಗಂಧಲೇಪನ ಮುಂತಾದ ಸೇವೆ. —ಉಪಚಾರ : ನಗರೇಶ್ವರದೇವರ ಭೋಗಕ್ಕಂ ಖಿಣ್ಡಸ್ಫುಟಿತಕ್ಕಂ . . . ಧಾರಾಪೂರ್ವ್ವಕಂ ಮಾಡಿಬಿಟ್ಟ ನೆಲಂ (ಶಾಇ. XX, ೨೦–೩೩ : 1019) ; ಸಿದ್ಧಾಯದಲು ಸ್ವಯಂಭುದೇವರ ಭೋಗಕ್ಕೆ ವರ್ಷಂಪ್ರತಿ ಕುಡುವ ಗದ್ಯಾಣ ಹತ್ತು (ಶಾಇ. XX, ೬೦–೩೬: 1109) ; ವಿಗ್ರಹದ ದೇಹಕ್ಕೆ ಸಲ್ಲುವ ಭೋಗ ಎಂದರೆ ಸ್ನಾನ, ಗಂಧಲೇಪನ, ಧೂಪ, ದೀಪ, ಪುಷ್ಪ ಇತ್ಯಾದಿಗಳು ಅಂಗಭೋಗಗಳು (ಕಶಾ. ೦೮೦). ‘ಅಂಗಭೋಗ’, ‘ರಂಗಭೋಗ’ ಪರಾ. ೯. ಹಾವಿನ(ಬಿಚ್ಚಿದ) ಹೆಡೆ: ಶ್ರೀಮನ್ನಾಗೇಂದ್ರ ಭೋಗಸ್ಫುರದರುಣಮಣಿದ್ಯೋತಿಸಂಧ್ಯಾನಿಬದ್ಧಪ್ರೇಮಂ (ಕಾದಂಪೂ. ೧); ಮೆರೆದಳು ಕೈಕೆ ಮಂಥರೆಯ ತೊಡೆಯಲ್ಲಿ ಕಾಳಾಹಿಭೋಗದಲಿ ಹೊಳೆವ ಹೆಡೆಮಣಿಯಂತೆ (ತೊರವೆರಾ. ೨೩–೬೦೭). ೧೦. ಹಾವಿನ ಶರೀರ, ದೇಹ : “ಭೋಗವೆಂಬುದು ಹಾವಿನ ಒಡಲ್” (ಶಬ್ದಮ. ೧೦೭–೨೦). ೧೧. ವಿಷಯಸುಖಾನುಭವ: ಸಂಭೋಗ : ‘ಭೋಗಿಸು’ ಪರಾ. ೧೨. ಸೂಳೆಗೆ ಕೊಡುವ ಹಣ : ಒತ್ತೆ. ೧೩. ನಾಡಿನ ಒಂದು ಭಾಗ. — ಪ್ರದೇಶ : ಮಂಡಲ : ‘ಭೋಗನಾಯಕ’ ಪರಾ. ೧೪. ರಕ್ಷಣೆ : ಪಾಲನೆ. ೧೫. ಚಿಂತೆಯಿಲ್ಲದಿರುವಿಕೆ: ನಿಶ್ಚಿಂತೆ. ೧೬. ಸೈನ್ಯ: ಪಡೆ : ಪರಿವಾರ : “ನಿರ್ವ್ಯಸನದೊಳು ಪಾಲನೆಯೊಳು ಧನದೊಳಹಿತಾಯದೊಳ್ ವ್ಯವಹಾರದೊಳ್ ಪಣ್ಯಮನಿಶೆಯೊಳ್ಪಡೆಯೊಳತಿ ಸುಖದೊಳಂ ಭೋಗವಕ್ಕು” (ಶಬ್ದಮ. ೦೩೦–೩೦). ೧೭. ಜಹಗೀರು : ಉಂಬಳಿ. ೧೮. ತೆರಿಗೆ ; ಕರ. ೧೯. ಬೆಳೆಯಿಂದಾದ ಗಳಿಕೆ : ಅಚಕಟಿನ ಗದೆಯಸಂ ಬೆಳೆದ ಭೋಗ ನಾಲ್ಕು ಭೋಗಮಾನ್ಯವಾಗಿ (ಶಾಇ. ೦೯೩೪, ಕೃಂಗವೂರು. ೧೩೬–೯: 1419). ೨೦. =ಭೋಗಷಟ್ಪದಿ: ಶರ ಕುಸುಮ ಭೋಗ ಭಾಮಿನಿ ಪರಿವರ್ಧಿನಿ ವಾರ್ಧಕಗಳೆಂದಾಱು ತೆಱಂ (ಛಂದೋಂಬು. ೩–೨೩೯); ಇವು ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ ಎಂದಾರು ವಿಧವು (ಕೃಬಿ. ೯೩). ೨೧. [ದ್ವೈತ] ಮುಕ್ತಿಯ ಭೇದಗಳಲ್ಲಿ ಒಂದು : ಸಾರೂಪ್ಯಪ್ರಾಪ್ತಿ : ಈ ಪುರುಷಾರ್ಥವನ್ನು ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂದು ವಿಂಗಡಿಸಿ . . . ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ, ಸಾರೂಪ್ಯ ಪ್ರಭೇದ ದಿಂದ ನಿರೂಪಿಸಿರುವರು (ಚಾರಿ. ೨೭೬); ಇದರಿಂದ ಬರುವ ಮೋಕ್ಷ ಕರ್ಮ ಕ್ಷಯ . . . ಭೋಗ ಎಂದು ನಾಲ್ಕು ಪರ್ವಗಳುಳ್ಳದ್ದು (ಹಿಂದಗಾ. ೨೯೨).

**ಭೋಗದ ಸೂಳೆ** = ದೇವಾಲಯದಲ್ಲಿ ನಾಟ್ಯವಾಡಲು ನಿಯಮಿತ ಳಾಗಿರುವ ಸೂಳೆ ; ದೇವದಾಸಿ : ಭೋಗದ ಸೂಳೆಯರ್ಗ್ಗೆ ಸರ್ವ್ವಬಾಧಾಪರಿಹಾರವಾಗೆ ಬಿಟ್ಟ ಮನೆ ಪನ್ನೆರಡು (ಶಾಇ. XX, ೩೩–೦೨ ; 1055). [ಸಂ.]

**ಭೋಗಕ್ಷಿತಿ** (ನಾ). = ಭೋಗಭೂಮಿ ೩ : ಮುಸಿ ಹಸಿವಾವುದು ಮಾಱುಲಮುಸುರಾಮಿ ಕ್ರೂರಸತ್ತ್ವಬಾಧೆಗಳಿವು ವರ್ತಿಸವೆನೆ ಭೋಗಕ್ಷಿತಿಗಳ್ ನಿಸದಂ ಸಗ್ಗಕ್ಕಮಗ್ಗಳಂ ತಾಮಲ್ತೇ (ಚಂದ್ರಪ್ರ. ೩–೩೩). [ಸಂ.]

**ಭೋಗಚೌಪದಿ** (ನಾ). [ಛಂದ] ಭೋಗಷಟ್ಪದಿಯನ್ನು ನಾಲ್ಕು ಪಾದ ಗಳಲ್ಲಿ ಅಳವಡಿಸುವ ಆಧುನಿಕ ಪದ್ಯಭೇದ: P ಇದರಲ್ಲಿ ಒಂದು ಮತ್ತು ಮೂರನೆಯ ಸಾಲುಗಳಲ್ಲಿ ೨೪ ಮಾತ್ರೆಗಳೂ ಎರಡು ಮತ್ತು ನಾಲ್ಕನೆಯ ಸಾಲುಗಳಲ್ಲಿ ೧೯ ಮಾತ್ರೆಗಳೂ ಇರುತ್ತವೆ : ಭೋಗಚೌಪದಿ : ಭೋಗಷಟ್ಪದಿಯನ್ನು ನಾಲ್ಕು ಪಾದಗಳಲ್ಲಿ ಏರ್ಪಡಿಸಿದ ರೂಪವಿದು (ಛಂದೋಽ. ೨೭೦). [ಭೋಗ + ಚೌಪದಿ]

**ಭೋಗತಲ್ಪ** (ನಾ). ಹಾವಿನ ಹಾಸುಗೆ ; ಶೇಷಶಯ್ಯೆ : ಆ ಗರುಡ ಹೊಕ್ಕಳು ಮಹಾಹಿಯ ಭೋಗತಲ್ಪದ ಹರಿಯೊಲಿಹ ಶತಮಾಗಸುತನನು ಕಂಡಳಂಗನೆ ಮಣಿಯ ಮಂಚದಲಿ (ಕುವ್ಯಾಕ. ೯–೦೪). [ಸಂ.]

**ಭೋಗತೃಷ್ಣೆ** (ನಾ). ಸುಖವನ್ನು ಅನುಭವಿಸಬೇಕೆಂಬ ಉತ್ಕಟೇಚ್ಛೆ : ತನ್ನ ಭೋಗತೃಷ್ಣೆಯುಂ ತಾನೆ ತನ್ನ ಮನದೊಳ್ ನಿಂದಿಸುತ್ತುಂ (ಆದಿಪು. ೦೭–೬೦ ವ). [ಸಂ. ಭೋಗತೃಷ್ಣಾ]

**ಭೋಗನಾಯಕ** (ನಾ). ಪ್ರದೇಶಪಾಲಕ; ಮಂಡಲಾಧಿಪ : ಭೋಗಿಗಳ್ ಭೋಗಿಗಳೆಂಬ ಭೋಗಿಗಳೆ ಭೋಗಿಗಳಲ್ಲಿಯು ಭೋಗನಾಯಕರ್ (ಶಂಶಪು. ೪-೧೬). [ಸಂ.]

**ಭೋಗಪಟ್ಟ** (ನಾ). ಆಸ್ತಿಯನ್ನು ಅನುಭವಿಸುವ -ಹಕ್ಕಿಗಾಗಿ ಬರೆದು ಕೊಡುವ ಪತ್ರ : ಆ ಬಿಳಿಜೋಡಿನ ಜೋಯಿಸರಿಗೆ ಮಕ್ಕಳಿಲ್ಲದ್ದರಿಂದ ಈ ನಾಯಕರ ಹತ್ತಿರವಿದ್ದ ಇಬ್ಬರು ಪೂಜಾರಿಗಳ ಹುಡುಗರನ್ನು ಭೋಗ ಪಟ್ಟ ಬರಿಸಿಕೊಟ್ಟು ತಮ್ಮ ತರುವಾಯಕ್ಕಾಗಿ ನಿಯಮಿಸಿಕೊಂಡರು (ಕಶಿಕ. ೧೦೭). [ಭೋಗ + ಪಟ್ಟ₂]

**ಭೋಗಪಟ್ಟೆ** (ನಾ). = ಭೋಗಪಟ್ಟ : ಬಿಳಿಜೋಡುಸ್ಥಳದ ಪಂಚಾಂಗದ ಜೋಯಿಸರು ನಷ್ಟಸಂತಾನರಾಗಿದ್ದದರಿಂದ . . . ಈ ಕರಿಜೋಯಿಸ ವಿರೂಪಾಕ್ಷಜೋಯಿಸರಿಗೆ ಭೋಗಪಟ್ಟೆ ಬರಸಿಕೊಟ್ಟು ಅವರನ್ನು ಸ್ಥಳಕ್ಕೆ ಜೋಯಿಸರನ್ನಾಗಿ ನೇಮಿಸಿದರು (ತಕ್ರಶಾ. ೪). [ಭೋಗ + ಪಟ್ಟ₃]

**ಭೋಗಪಾತ್ರ** (ನಾ). ದೇವಾಲಯದ ರಂಗಭೋಗದಲ್ಲಿ ನಡೆಸುವ ನಾಟ್ಯದ ಸೇವೆ : ಸೂಜಿಯಿಪ್ಪತಒಂದು ಹೊನನೂ ಕಾಲಕಾಲಕ್ಕೆ ಯೆತ್ತಿಕೊಂಡು ಯೆರಡುಹೊತಿನ ಭೋಗಪಾತ್ರದ ಜ್ಯೋಳಿಗವನೂ ನಡೆಸಿಕೊಂಡು ಬಹಿರಿ (ಕಶಾಇ. IX–ii, ೪೩೬-೦೭; 1451). [ಸಂ.]

**ಭೋಗಬ್ರಹ್ಮವ್ರತ** (ನಾ). [ಜೈನ] ಒಂದು ಬಗೆಯ ವ್ರತ; P ಬ್ರಹ್ಮ ಚರ್ಯವಲ್ಲಿದ್ದಾಗ ಮೂಗು. ಕಣ್ಣು. ಕಿವಿ ಎಂಬ ಭೋಗೇಂದ್ರಿಯ ಗಳಿಂದ ಗಂಧ, ರೂಪ, ಶಬ್ದಗಳ ಅನುಭವವನ್ನು ಮಾತ್ರ ಮಾಡ ತಕ್ಕುದು; ಗೃಹಸ್ಥಾಶ್ರಮಕ್ಕೆ ಬಂದ ಮೇಲೆ ಕಾಮಬ್ರಹ್ಮವ್ರತ ಅಂದರೆ ರಸ, ಸ್ಪರ್ಶ ಇವುಗಳನ್ನು ಅನುಭವಿಸತಕ್ಕುದು : ಭೋಗ ಬ್ರಹ್ಮವ್ರತಮಂ ಪತ್ತುವಿಟ್ಟು ಕಾಮಬ್ರಹ್ಮವ್ರತಮನಂತ್ತರಕ್ರಿಯೆಯರ್ಜಿ ಸೆಗಂ ನಡಯಿಸುವುದು ವ್ರತಾವತರಣಕ್ರಿಯೆ (ಚಾವುಂಪು. ೨೦೩). 'ಕಾಮಬ್ರಹ್ಮವ್ರತ' ಪರಾ. [ಸಂ.]

**ಭೋಗಭಾಗ್ಯ** (ನಾ). ಸುಖಕೊಡುವ ಸಂಪತ್ತು: ಸುಖವನ್ನು ಅನು ಭವಿಸಲು ಸಾಧಕವಾದ ಐಶ್ವರ್ಯ : ಭೋಗಭಾಗ್ಯವ ಬಯಸಿ ಮುಕ್ತಿಯ ನೀಗಿ ನಿಮ್ಮನು ಭಜಿಸಲರಿಯದ ಯೋಗಿಗಳ ಮಾತೇನು (ಹಂಶಾ. ೦೭); ನಾನು ರಾಜನಾದಾಗ ನನ್ನ ರಾಜ್ಯವನ್ನೂ ಅದರ ಸಮಸ್ತ ಭೋಗಭಾಗ್ಯಗಳನ್ನೂ ಮಿತ್ರನಾದ ನಿನ್ನೊಡನೆ ಹಂಚಿಕೊಂಡು ಅನುಭವಿಸು ತ್ತೇನೆ (ವಚಾ. ೦೪). [ಸಂ.]

**ಭೋಗಭೂತಲ** (ನಾ). = ಭೋಗಭೂಮಿ ೩ : ತನ್ನೊಳೆ ಸರಿಮೊರೆ ಸುರರೇಂ ಭೋಗಭೂತಲಂ ಸುಖಿಮಯಮೋ (ಶಂಕ್ರ ಪು. ೩-೩೬). [ಸಂ.]

**ಭೋಗಭೂಮಿ** (ನಾ). ೧. ಭೂಲೋಕದಲ್ಲಿ ಹುಟ್ಟಿ ಪುಣ್ಯವಂತನಾಗಿ ಬಾಳಿ, ಸತ್ತ ಮೇಲೆ ಪುಣ್ಯಫಲಗಳನ್ನು ಅನುಭವಿಸುವುದಕ್ಕಾಗಿ ಇರುವುದೆಂದು ನಂಬಲಾದ ಲೋಕ : ಸ್ವರ್ಗಲೋಕ; ಊರ್ಧ್ವ ಲೋಕ. ೨. ವ್ಯವಸಾಯಕ್ಕೆ ಉತ್ತಮವಾದ ಭೂಮಿ : ಫಲ ವತ್ತಾದ ಭೂಮಿ ; ಸುಕ್ಷೇತ್ರ : ಚಾವುಣ್ಡಸೆಟ್ಟಿಯರು ಕಾರಿಗಾವುಣ್ಡನ ಕಯ್ಯೊಳು ಮತ್ತಂ ಭೋಗಭೂಮಿಯಂ ಪೊನ್ನಂ ಕೊಟ್ಟು ಮಾಱಿಕೊ(ಂ)ಣ್ಡು ಆ ತೋಟಮಂ ಮಾಡಿಸಿ (ಕಶಾಇ. XI–ii, ೦೩೬-೩೭; 1109). ೩. [ಜೈನ] ಭೂಮಿಯ ಮೇಲೆಯೇ ಇರುವುದೆಂದು ಹೇಳಲಾದ, ಪುಣ್ಯವಂತರು ಹುಟ್ಟುವ ಪ್ರದೇಶ; ಭೂಮಿಯಲ್ಲಿ ಅತ್ಯಂತ ಸಂತೋಷವನ್ನು ಪಡೆ ಯುವ ಸ್ಥಳ : P ಇಲ್ಲಿ ಕೇಳಿದುದನ್ನು ಕೊಡುವ ಹತ್ತುಬಗೆಯ ಕಲ್ಪವೃಕ್ಷಗಳಿದ್ದು, ಈ ಭೂಮಿಯಲ್ಲಿ ಊರು, ನಗರ, ಮನೆ, ಇತ್ಯಾದಿ ಯಾವುದೂ ಇರುವುದಿಲ್ಲ. ಒಂದು ಸಂಸಾರದಲ್ಲಿ ಗಂಡ ಹೆಂಡಿರು ಮಾತ್ರ ಇದ್ದು ಪೂರ್ವಜನ್ಮದ ಪುಣ್ಯಫಲವನ್ನು ಅನು ಭವಿಸಿ, ಸತ್ತ ಮೇಲೆ ಸ್ವರ್ಗಕ್ಕೆ ಹೋಗುತ್ತಾರೆ. ಇಲ್ಲಿ ರೋಗ ರುಜಿನ ಗಳಿರುವುದಿಲ್ಲ ಎಂದು ನಂಬಲಾಗಿದೆ : ಪುಣ್ಯಫಲದಿಂದಲೂ ಜಂಬೂ ದ್ವೀಪದ ಮಂದರಮಹೀಧರದುತ್ತರದಿಗ್ಭಾಗದೊಳಿರ್ದುತ್ತರಕುರುವೆಂಬು ತ್ತಮಭೋಗಭೂಮಿಯೆ ಜನ್ಮಭೂಮಿಯಾದುದು (ಆದಿಪು. ೫-೨೭ ವ) : ಈ ಭರತಾವನಿಭೋಗಭೂಮಿ ಭೂಭಾಗಿ ಸುಖಾತ್ಮ್ಯಯಂ ಪಡೆದುದು (ಶಾಂತಿಪು. ೦೨-೨೪). [ಸಂ.]

**ಭೋಗಮಂಟಪ** (ನಾ). ಉತ್ಸವಮೂರ್ತಿಗೆ ಅಲಂಕಾರ, ಕಲ್ಯಾಣೋ ತ್ಸವ, ಶಯನೋತ್ಸವ ಮೊದಲಾದುವನ್ನು ಮಾಡುವ ದೇವಾಲಯದ ಕಟ್ಟಡ : ಕಲ್ಯಾಣಮಂಟಪ: ಸೋಮವಾರ ದಿನ ಕಲ್ಲೂರ ಕಲ್ಲಯ್ಯದೇವರ ಭೋಗಮಂಟಪ ಆಯಿತು (ಶಾಸಶ. ೪೪-೩೮). [< ಸಂ. ಭೋಗಮಂಡಪ]

**ಭೋಗಮಾನ್ಯ** (ನಾ). ಮಾನ್ಯವಾಗಿ ಕೊಡುವ (ತೆರಿಗೆ ವಿನಾಯಿತಿ ಪಡೆದ) ಭೂಮಿ : ಅಚಕಟನ ಗದೆಯನುಂ ಬೆಳೆದ ಭೋಗ ನಾಲ್ಕು ಭೋಗಮಾನ್ಯವಾಗಿ (ಕಶಾಇ. ೦೯೩೪. ಕುಂಗನೂರು. ೦೩೬-೯; 1419). [ಸಂ.]

**ಭೋಗಯುತ** (ನಾ). ೧. ಸುಖದಿಂದ ಕೂಡಿಕೊಂಡಿರುವವನು. ೨. ಆದಿಶೇಷನ ದೇಹದ ಮೇಲೆ ಮಲಗಿರುವವನು. ೧, ೨ : ಧರಧಾರಕ ನೆಂಬ ಭೋಗಯುತನೆಂಬುದ್ಯದ್ವಲಾಂಸ್ವೀತನೆಂಬ . . . ವಿಷ್ಣುಧರೇಶಂ ಸರಿ ವಿಷ್ಣುವೊಲು ಸೊಗಯ್ಪಂ ಲಕ್ಷ್ಮೀಮನೋವಲ್ಲಭಂ (ಎಕ. V, ಅರಸೀ. ೩೮-೭; ಕ್ರಿ. 1200). [ಸಂ.]

**ಭೋಗರತ್ನ** (ನಾ). ನಾಗರಹಾವಿನ ಹೆಡೆಯಲ್ಲಿರುವುದೆಂದು ಹೇಳ ಲಾಗುವ ಮಣಿ : ಹೆಡೆಮಣಿ: ವಿಸ್ಮಂ ವಿಷವಹ್ನಿಯಿಂ ವಿಳಯಕಾಲ ಜ್ವಾಲೆಯಂ ಭೋಗರತ್ನದ ಚೆಲ್ವಿಂ ದ್ಯುತಿಮಾಲಿಯಂ ಮಸಕದಿಂದಂ ಭೋಳಿ ಯಂ ಕಾಳಿಯಂ (ಜಗಪು. ೩-೯೪). [ಸಂ.]

**ಭೋಗರಾಜ** (ನಾ). ಹಾವುಗಳ ಒಡೆಯ : ಭೋಗರಾಜನ ನಗರದಂತನು ವಾಗಿ ರಾಜಿಪ ನಗರವನು ಸುತ್ತಾಗಿ ಶೋಭಿಪ ಸಲಿಲಖಾತಿಯು ಮುಟ್ಟು ತಿಹುದಡಿಯಾ (ಬಜ್ಜಪು. ೨೦-೦೯). [ಸಂ. ಭೋಗರಾಜನ್]

**ಭೋಗವತಿ** (ನಾ). ೧. ಪಾತಾಳಲೋಕದ ರಾಜಧಾನಿ : ಅದು ಕೊಯ್ದು ದಳಕೆಯುಳಕಮನದು ಮಿಕ್ಕುದು ಭೋಗವತಿಯ ಭೋಗಮಂ . . . ಎನಲ್ ವೀತಶೋಕಪುರವರಮೆಸೆಗುಂ (ಮಲ್ಲಪು. ೨-೩೨); ಮುತ್ತು ಪಚ್ಚೆ ಮುಂತಾದ ರಾಶಿಗಳಿಂದಲೂ ರಾಜಬೀದಿಯು ನೋಡಿಯದು ತೇಜೋವತಿಯೊ ಅಲ್ಲದೆ ಭೋಗವತಿಯೊಯೆಂದು ಸಂದೇಹಪಡುತ್ತ ಬರುತಿರುವ ಸುರಸುಂದರಿ ಯರಂ ನೋಡಿ (ಕಗಂಧ. ೫೦೯-೦೬). ೨. ಪಾತಾಳಲೋಕದ ನದಿ ; ಪಾತಾಳಗಂಗೆ : ವಿವಿಧೋಪಚಾರಕೃತ ಪೂಜೆಗಳ ನಾನಾವಿಧವಂದನೆವ ಮಹಾಹಾಟಕೇಶ್ವರನೆಂಬ ಶಿವಲಿಂಗವಿರೆ ಭೋಗವತಿಯ ತಟದೊಳ್ಕೆಂಡು ಪುಂಡರೀಕಂ ಮುಣಿದನು (ಕೃವಿಪಾ. ೨೪-೦೪). [ಸಂ. ಭೋಗವತೀ]

**ಭೋಗವಾಡಗೆ** (ನಾ). ಪರಕೀಯವಾದ ಮನೆ ಮೊದಲಾದುವನ್ನು ಅನುಭವಿಸಲು ಮಾಲೀಕನಿಗೆ ಕೊಡುವ ಪ್ರತಿಫಲರೂಪವಾದ ಶುಲ್ಕ: ಬಾಡಿಗೆ : ಮನೆವೊಂದು ಭೋಗವಾಡಗೆ ಗದ್ಯಾಣಂ ನಾಲ್ಕು (ಎಇ. XV. ೩೪೨-೩೦ ; 1072). [ಭೋಗ + ಬಾಡಗೆ]

**ಭೋಗಷಟ್ಪದಿ** (ನಾ). [ಛಂದ] ಕನ್ನಡಭಾಷೆಯಲ್ಲಿ ಪ್ರಸಿದ್ಧವಾದ ಷಟ್ಪದಿಗಳಲ್ಲಿ ಒಂದು : ಪೊಳೆವ ಮೊದಲಿನೆರಡುಪದದೆ ಬಟಿಕ ಚರಣ ದೆರಡುವೆಡೆಗೆ ಕಳೆಗಳರ್ಕಸಂಖ್ಯೆಯಾಟು ಮೂಜಣಂಘ್ರಿಗೆ ತಿಳಿಯಲಿರ್ಪತಿರ್ಪ ತಿಂತು ಕಳೆಗಳೆಂಬತೆಂಟಱಿಂದೆ ತೊಱಪುದಾಗಲೊಡನೆ ಖಲನೆ ಭೋಗಷಟ್ಪದೀ (ಛಂದೋಂಬು. ೫-೨೩೪ ಅರಿಕಶರ); ಮೂರುಮಾತ್ರೆಯ ಗಣವು ಒಂದೆರಡು ನಾಲ್ಕಯ್ದನೆಯ ಪಾದಗಳಲ್ಲಿ ನಾಲ್ಕುನಾಲ್ಕೂ, ಮೂರಾರನೆಯ ಪಾದಗಳಲ್ಲಿ ಆರಾರೂ ಒಂದು ಗುರುವೂ ಬರಲು ಭೋಗಷಟ್ಪದಿಯಾಗುವುದು (ಕೃಶಿಪ. ೯೬). [ಸಂ. ಭೋಗಷಟ್ಪದೀ]

**ಭೋಗಾಂಗ** (ನಾ). ೧. ಸುಖಾನುಭವಕ್ಕೆ ಬೇಕಾದ ಸಾಧನ : ಭೋಗಾಂಗವಾಗಿಯುಂ ಕೃಷ್ಣಾಗರುಧೂಪಂ ಮುಸುಂಕಿ ಕೊಂದಿಕ್ಕಿದುದಾ ಭೋಗಿಗಳಂ (ಆದಿಪು. ೫-೨೫). ೨. [ವೀಶೈ] ಅಂಗಸ್ಥಲದ ಮೂರು ಭೇದಗಳಲ್ಲಿ ಒಂದು ; ಜೀವನು ತನ್ನ ಭೋಗವನ್ನು ಮೊದಲು ಶಿವನಿಗರ್ಪಿಸಿ ನಂತರ ಅದನ್ನು ಪ್ರಸಾದರೂಪವಾಗಿ ಪರಿಗ್ರಹಿಸುವುದು: ಯೋಗಾಂಗ ತಾನೆ ಕಾರಣತನುವೆನಿಪ್ಪುದಾ ಭೋಗಾಂಗವೇ ಸೂಕ್ಷ್ಮತನುವಾಚಕಂ ಮಹಾತ್ಯಾಗಾಂಗವೇ ಸ್ಥೂಲತನುವೆನಿಸಿ ವಿವಿಧಭೇದದೊಳಿಪ್ಪುದಂಗತ್ರಯಂ (ಲಶಿಶಂ. ೫೦-೪) ; ಇನ್ನು ಸ್ವಭಾವವನ್ನು ಹೊಂದಿದ ಅಂಗಸ್ಥಲವು (ಶುದ್ಧಜೀವನು) ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು ಮೂರುವಿಧವಾಯಿತು (ಶಾರದ. ೨೫೪). 'ತ್ಯಾಗಾಂಗ'. ಪರಾ. ೩. ತನ್ನ ಭೋಗವನ್ನು ಮೊದಲು ಶಿವನಿಗರ್ಪಿಸಿ ನಂತರ ಅದನ್ನು ಪ್ರಸಾದರೂಪವಾಗಿ ಪರಿಗ್ರಹಿಸುವ ಜೀವ : ಉದ್ಯಾಪನ ವ್ಯಾಪಾರ ಕೃತಭೇದ ಸರ್ವವನಱಿದು ತ್ಯಾಗಾಂಗನಾಗಿ ಭೋಗಾಂಗನಾಗಿ ಯೋಗಾಂಗನಾಗಿ . . . ಆತನ ಲಿಂಗವೇ ಅಂಗವಾದ ಕಾರಣ ಪೃಥಕ್ ಎಂಬುದಿಲ್ಲ (ಪೋಲವಚ. ೯೬-೧೯೦). [ಸಂ.]

**ಭೋಗಾಂಗಿ** (ನಾ). =ಭೋಗಾಂಗ ೩ : ಜಂಗಮಲಿಂಗದ ಎಚ್ಚಱಿನ ಬಲದಿಂದ . . . ಲಿಂಗಭೋಗೋಪಭೋಗಿಯಾಗಿ ಭೋಗಾಂಗಿಯಾದೆ (ಶಿವವ. ೬೯-೩೨); ಭೋಗಾಂಗಿಯಾಗಿ ತನ್ನ ಭೋಗವೆಲ್ಲವನ್ನೂ ಶಿವನಿಗರ್ಪಿಸಿ ಶಿವಪ್ರಸಾದರೂಪದಿಂದ ಸ್ವೀಕರಿಸುವವನು (ಶಾರದ. ೨೦೬).

[ಸಂ. ಭೋಗಾಂಗಿನ್]

**ಭೋಗಾಂತರಾಯ** (ನಾ). [ಜೈನ] ಮೋಕ್ಷಸಾಧಕನಿಗೆ ಸಾಧನ ಮಾರ್ಗದಲ್ಲಿ ಉಂಟಾಗುವ ಐದುಬಗೆಯ ವಿಘ್ನಗಳಲ್ಲಿ ಒಂದು: ಸುಖಾನುಭವಕ್ಕೆ ವಿಘ್ನವನ್ನುಂಟುಮಾಡುವ ಕರ್ಮ : ಭೋಗಾಂತರಾಯ : ಭೋಗದ ಇಚ್ಛೆ ಸಾಧನಗಳೆಲ್ಲ ಇದ್ದೂ ಭೋಗಿಸಗೊಡದ ಕರ್ಮಪ್ರಕೃತಿ (ಜೈನಶ. ೪೬೬). 'ಅಂತರಾಯಪಂಚಕ' ಪರಾ. [ಸಂ.]

**ಭೋಗಾಧಿ** (ನಾ). ಒಬ್ಬನಿಗೆ ಸೇರಿದ ಆಸ್ತಿಯನ್ನು ಮತ್ತೊಬ್ಬನಿಗೆ ಅನುಭವಿಸಲು ಕೊಡುವಿಕೆ; ಭೋಗ್ಯ; ಒತ್ತೆ; ಅಡವು.

**ಭೋಗಾಧಿಯ ಪತ್ರ** = ಆಸ್ತಿಯನ್ನು ಭೋಗ್ಯಮಾಡಿರುವ ಬಗ್ಗೆ ಬರೆದುಕೊಡುವ ದಾಖಲೆಪತ್ರ : ಭೋಗ್ಯಪತ್ರ : ಭೂಮಿಯ ಭೋಗಾಧಿಯ ಪತ್ರದ ಕ್ರಮ (ಎಕ. VI, ಕಡೂ. ೫೬-೪; 1592 ?) [ಸಂ.]

**ಭೋಗಾಭೋಗ** (ನಾ). ಭೋಗಸಾಮಗ್ರಿಗಳಿಂದ ದೊರಕುವ ಸುಖಾನುಭವ : ವಿದ್ಯುತ್ ಕ್ಷಣಿಕಂ ನಿಚ್ಚಿಯೆ ತನುಭೃದ್ಗಣಯೌವನರೂಪವಿಭವಭೋಗಾಭೋಗಂ (ಆದಿಪು. ೪-೭೫). [ಸಂ.]

**ಭೋಗಾರುಹ** (ನಾ). ಸುಖಕ್ಕೆ ಯೋಗ್ಯವಾದುದು : ನಗರದ ಸುತ್ತ ಹೊಱವಳಯದಲಿ ಕಾಣಿಸಿ ಕತ್ತರಿಸುವ ಸಮಸ್ತಭೋಗಾರುಹದ ತರುಲತೆಯ . . . ಉದ್ಯಾನವನು ಪೃಥು ಕಂಡ (ಶ್ರಭಂ. ೧೪-೯).

[<ಸಂ. ಭೋಗಾರ್ಹ]

**ಭೋಗಾವತಿ** (ನಾ). ೧. ಪಾತಾಳಲೋಕದ ರಾಜಧಾನಿ: ಭೋಗವತಿ: ವಿಸುಭೋಗಿಗಳುಳ್ಳೊಡೇಂ ಫಲಂ ವಿಷಧರನಿವಾಸಮಾ ಭೋಗಾವತೀಪುರಂ (ಕಾಂಪು. ೧೧-೪೬). ೨. ಲಕ್ಷ್ಮಿ . ೩. ಪಾತಾಳಲೋಕದ ನದಿ : ಪಾತಾಳಗಂಗೆ : "ನಗರಂ ೩ರಿ ಪಾತಾಳಂ ನದಿ ನಾಲ್ಕಱ ಭೋಗಾವತಿಯ ನಾಮಮೆನಿಕುಂ ಜಗದೊಳ್" (ನಾನಾಳಂ. ೫೯): "ರಮೆ ಪಾತಾಳತರಂಗಿಣಿ ನಗರದುಂ ಭೋಗಾವತೀವಾಚಕಂ" (ನಾನಾರ. ೨೫).

[<ಸಂ. ಭೋಗವತೀ]

**ಭೋಗಿ**$_1$ (ನಾ). ೧. ಮಕರಸಂಕ್ರಾಂತಿಯ ಹಿಂದಿನ ದಿನ (ಕೆಲವು ಕಡೆ) ಆಚರಿಸುವ ಒಂದು ಹಬ್ಬ: ಮಕರಸಂಕ್ರಮಣ ಎರಡುದಿವಸಗಳ ಹಬ್ಬ: ಭೋಗಿ, ಸಂಕ್ರಮಣ. ಭೋಗಿಹಬ್ಬದ ಆಚರಣೆ ಉಪವಾಸವ್ರತಕ್ಕೆ ಸಮಾಪವಾದುದೆಂದು ಹೇಳಬಹುದು . . . ಭೋಗಿ ಪೊಂಗಲ ಪ್ರಥಮ ದಿವಸದ ಹಬ್ಬ (ಶಾಸಸ್ಮ. ೧೬೭). ೨. ನರಕಚತುರ್ದಶಿಯ ಹಿಂದಿನ ದಿನದ ಹಬ್ಬ : ಮಗಳು, ಅಳಿಯ ಭೋಗಿಹಬ್ಬದಂದು ಊರಿಗೆ ಬಂದರು (ರೂಢಿ). [← ತಮಿ. ಪೋಕಿ./ಮರಾ. ಭೋಗೀ]

**ಭೋಗಿ**$_2$ (ಗು). ೧. ತಿನ್ನುವ: ಉಣ್ಣುವ. ೨. ಸಹಿಸುವ : ತಾಳುವ. ೩. ಉಪಯೋಗಿಸುವ ; ಬಳಸುವ. ೪. ಉಪಭೋಗಿಸುವ; ಅನುಭವಿಸುವ. ೫. ಇಂದ್ರಿಯಸುಖಲೋಲುಪನಾದ ; ಇಂದ್ರಿಯಸುಖಪರವಶನಾದ. ೬. ಸಂಪತ್ತಿನಿಂದ ಕೂಡಿದ; ಐಶ್ವರ್ಯವುಳ್ಳ. (ನಾ). ೭. ಸುಖವನ್ನು ಅನುಭವಿಸುವವನು ; ವಿಲಾಸಿ: ನಾಗಕನ್ನೆಯರ ರೂಪುಗಳಿಟ್ಟಳವಾಗೆ ಭೋಗಿಗಳ್ ಭೋಗಿಗಳ್ (ಶಂಶಾ. ೪-೧೬): ಜಲದೊಳ್ ಪುಟ್ಟಿದ ವಸ್ತುವಿಂ ಪೆಜರ ಪೊನ್ನಂ ಭೋಗಿ . . . ವನಿಕಂ ವಿಮಾನಾಲಯಪ್ರೋದ್ಭವಂ (ಜಾತಿ. ೧೬-೧೨); ಭೋಗಿಗೆ ಲೋಭಿಗೆ ಯೋಗಿಗೆ ತ್ಯಾಗಂ ಹಿತಮಾಗದೆಂದು ನುಡಿದಂ ಭೂಪಂ (ಹರಿಶ್ಚ. ೨-೫). ೮. ಜಿಡಗಿ: ವಿಲಾಸವತಿ : ನವೆತಂದರ್ ಸಂತಸದೆ ಪೊನ್ನ ಕಳಸದಂತದ ಸಿವಿಗೆಗಳನೇಱಿ ಭೋಗಿಯರೆಬರ್ (ಶಂಶಾ. ೯-೧೧೧); ವಾಚ್ಯಲಿಂಗಮೆಂದು ವಿಶೇಷ್ಯಾಧೀನಲಿಂಗಕ್ಕೆ—ನೇರಿದನಿವಂ, ನೇರಿದಳಿವಳ್, ನೇರಿತ್ತಿದು . . . ಭೋಗಿ, ಸುಖಿ. ಹೇಡಿ, ಕಲಿ, ಗುರು, ಲಘು – ಇವು ತೆಱದೆ ಸಲ್ವುವು (ಶಮದ. ೯೯ ಪ್ರಯೋ.). ೯. ಹಾವು : ಸರ್ಪ : "ವಿಷಧರಃ . . . ನಾಗಃ, ಭೋಗೀ, ಅಹಿಃ . . . ಭುಜಂಗಮಃ -- ಈ ೨೫ ಹಾವಿನ ಹೆಸರ್" (ಹಲಾಯು. ೧೧೫-೧೯); ನಾಗರ ನಾಗಕನ್ನೆಯರ ರೂಪುಗಳಿಟ್ಟಳಮಾಗೆ ಭೋಗಿಗಳ್ ಭೋಗಿಗಳೆಂಬ ಭೋಗಿಗಳ್ ಭೋಗಿಗಳಲ್ಲಿಯ ಭೋಗನಾಯಕರ್ (ಶಂಶಾ. ೪-೧೬); ಭೋಗಿಕುಲ ಪಾತಾಳಕೆ ಪೋಗಲು (ಗುರುಚಾ. ೧-೩೦). ೭, ೯ : ಇದು ನೋಡ ನಾಗಲೋಕದವೊಲನಂತಭೋಗಿಜನಸೇವಿತಂ (ಎಇ. VIII. ೪೦; 1112; ಶಾಸಪಂ. ೨೦೫ ನೋ.); ಭೋಗಿಯಾಗಿಯುಂ ಪ್ರವಿಗತವಕ್ರಮಾರ್ಗಂ . . . ಆ[ದನಾ] ನೃಪಂ (ಕುಸ್ವಪು. ೧೪-೭) ; ನಾಡಿಗರೊಳೆಲ್ಲರುಂ ಭೋಗಿಗಳ್ ಕುಟಿಲಗಾಮಿಗಳಲ್ತು (ರಾಮಾಶ್ವ. ೬-೨೨). ೧೦. ಕಾಮುಕ ; ವಿಷಯಾಸಕ್ತ. ೧೧. ದೊರೆ ; ರಾಜ. ೧೨. ಹಳ್ಳಿಯ ಮುಖಂಡ ; ಗ್ರಾಮಾಧಿಪತಿ. ೧೩. ಜಹಗೀರುದಾರ : ಶ್ರೀನೇಟ್ಟಭಂಜದೇವಃ ಕುಶ(ಲ)ೀ ನಾನಾಖಂಡವಿಷಯೋ ಯಥಾ ನಿವಾಸಿನ(ಸ) ಕರಣ ಸಾಮಂತ ಭೋಗ್ಯಾದಿ ಜನಪದಾನ್ ಯಥಾರ್ಹಂ ಮಾನಯತಿ (ಎಇ. XXVIII. ೨೬೨-೧೨; 11ನೆಯ ಶತ). ೧೪. ಹಜಾಮ ; ಕ್ಷೌರಿಕ. ೧೫. ಒಂದು ನಿರ್ದಿಷ್ಟವಾದ ಖರ್ಚಿಗಾಗಿ ಹಣವನ್ನು ಕೂಡಿಡುವವನು,– ಸಂಗ್ರಹಿಸುವವನು. ೧೬. ಒಂದು ಬಗೆಯ ಪೊದೆ. ೧೭. ಒಂದು ಬಗೆಯ ಮರ : ಕೆಲವು ಕಡೆಗಳಲ್ಲಿ ತೇಗ, ನಂದಿ, ಹೆಬ್ಬಲಸು. ಬಲಿಗೆ, ಧೂಪ, ಜಂಭೆ, ಭೋಗಿ, ಮತ್ತಿ . . . ಮುಂತಾದ ಗಗನಚುಂಬಿತ ವೃಕ್ಷಗಳಿದ್ದರೆ ಕೆಲವು ಕಡೆಗಳಲ್ಲಿ ಗುರಗಿ, ಬಿದಿರು, ಕೆಂಜಿಗೆ. ವಾಟೆ . . . ಮುಂತಾದ ಗಿಡ ಬಳ್ಳಿ ಪೊದೆಗಳಿದ್ದವು (ಕಂಜಿಕಂ. ೨).

[ಸಂ. ಭೋಗಿನ್]

**ಭೋಗಿಕಟಕ** (ನಾ). ಹಾವುಗಳನ್ನು ಕಂಕಣವನ್ನಾಗಿ ಮಾಡಿಕೊಂಡಿರುವವನು : ಶಿವ : ಭೋಗಿಕಟಕನ ಗಾಣಪತ್ಯಕೆ ಹೋಗನೇ ತಂತ್ರಂ ಬೆರಸಿ ಶಿವಯೋಗದಿಂದ ಕುಮಾರಪಾಲಕ ಗುರ್ಜರನು ಮುನ್ನ (ಬಸಪು. ೫೪-೭೫).

[ಸಂ.]

**ಭೋಗಿತ** (ನಾ). ಊಟಮಾಡಿದವನು : ಭೋಜನಮಾಡಿದವನು : ಇದುವಲಾ ನಿಜಪದವಿಗಳಿಗಾಸ್ಪದವೆನುತ್ತಂ ತತ್ಪ್ರಸಾದಸಮುದಿತ ಭೋಗಿತನಾಗಿ ತತ್ಪದನಾಂಗಣಕೆ ಬಂದು (ಬಸಪು. ೩೦-೧೨). [< ಭೋಗ]

**ಭೋಗಿತಲ್ಪ** (ನಾ). ಆದಿಶೇಷನನ್ನು ಹಾಸಿಗೆಯಾಗುಳ್ಳವನು : ವಿಷ್ಣು. **ಭೋಗಿತಲ್ಪಾತ್ಮಜ** = ವಿಷ್ಣುವಿನ ಮಗ; ಮನ್ಮಥ: ಭೋಗಿತಲ್ಪಾತ್ಮಜನ ಪಡೆ ಸೋಲದರಾರು (ಶ್ರೀರಾ. ೫-೪೦). [ಸಂ.]

**ಭೋಗಿತ್ವ** (ನಾ). ೧. ಸುಖಪಡುವಿಕೆ; ಉಪಭೋಗಿಸುವಿಕೆ. ೨. ಹಾವಿನ ಗುಣ. ೧. ೨: ಅಸಿಯುಳುಸಿರೆಲರನಾಸ್ವಾದಿಸುತಭರಾಪ್ಯಾಯಿತವ ನೀರಿಟೆ ಭೋಗಿತ್ವಮನಾಂತಸಮುಕುಚಕಲಶನಿಧಿಗಾದಸಿವಂಗೆ ಭುಜಂಗನಾಮಮೇಂ ಬಗೆವುಗದೇ (ರಾಜಶೇ. ೧೧-೧೯೭). [ಸಂ.]

**ಭೋಗಿನಿ** (ನಾ). ೧. ಹೆಣ್ಣುಹಾವು; ನಾಗಿಣಿ: ಪೆಡೆಯುಡುಗಿದ ಭೋಗಿನಿಯೆಮೆಮಿಡುಕಂ ಸಂಗಳಿಸಿದಪುರಿ . . . ಎಂಬೀ ನುಡಿಗೆಡೆಗೊಟ್ಟಳ್ ಲತಾಂಗಿ ನವತರುಣಿಮದೊಳ್ (ಚಂದ್ರಪ್ರ. ೫-೧೧೧). ೨. ಪಟ್ಟಮಹಿಷಿಯಲ್ಲದ ರಾಣಿ: ರಾಜನ ಪಟ್ಟದರಸಿಯು ಮಹಿಷಿಯೆನ್ನಿಸಿಕೊಳ್ಳುವಳು . . . ಮಿಕ್ಕ ರಾಜಸ್ತ್ರೀಯರೆಲ್ಲಾ ಭೋಗಿನಿಗಳೆನ್ನಿಸಿಕೊಳ್ಳುವರು (ಗುರುಚ. ೨-೨೦೦). 'ಭಟ್ಟಿನಿ' ಪರಾ. [ಸಂ. ಭೋಗಿನೀ]

**ಭೋಗಿಪ** (ನಾ). ಹಾವುಗಳ ಒಡೆಯ: ನಾಗರಾಜ: ಆದಿಶೇಷ: ಭೋಗಿಪಭೋಗತಳ್ಪತಳದೊಳ್ ಸದ್ಯೋಗನಿದ್ರಾಪರಂ ಕಮಳಾವಲ್ಲಭನ್ (ಎಕ. XI. ದಾವಣ. ೬೫-೪; ಕ್ರಿ. 1160) : ಹುದುಗಿದಂ ಭೋಗಿಪಂ ಗದಗದಿಸಿತಾ ಸಾಯುದ ಬಿಸಿಗೆ ಬ್ರಹ್ಮಾಂಡಂ (ಕೃಷ್ಣರಾ. ೦೬-೯೭); ಕಮಠನ ಕೊರಲ್ ಕುಸಿಯೆ ಭೋಗಿಪನ ಭೋಗಂ ನಸಿಯೆ . . . ಸಬ್ಬಸಬ್ಬರಂ ಕಡಿದಾಯ್ತು (ರಾಮಾಶ್ವ. ೦೬೦-೫೬). [ಸಂ.]

**ಭೋಗಿಪತಿ** (ನಾ). = ಭೋಗಿಪ : ಭೋಗಿಪತಿ ತನ್ನ ಸಹಸ್ರಫಣಾಮಣಿದ್ಯುತಿ ವ್ಯಾಪಿಸೆ ಸುತ್ತಿ ನಿಂದನೆನೆ ಕೋಂಟೆಯು ಪೊಂದೆನೆಗಳ್ ವಿರಾಜಿಕುಂ (ಜಗನ್ನಾ. ೨-೦೯). [ಸಂ.]

**ಭೋಗಿಭೋಗ** (ನಾ). ೧. ಹಾವಿನ ಹೆಡೆ: ಸಂಸ್ಕೃತಿಭೋಗಂಗಳ್ ಭೋಗಿಭೋಗದಿಂ ವಿಷಮಂಗಳ್ (ಆದಿಪು. ೫-೨೫). ೨. ಹಾವಿನ ದೇಹ: ಹೊಗೆಯಲಿ ಬಿದ್ದಂತೆ ಜನ ಸುಡಿಗಾಗಿ ಹರಿತಂದಾ ಜಲಾಂತ್ರದ ಭೋಗಿಭೋಗ ಪರೀತನಾಗಿಹ ಕೃಷ್ಣನನು ಕಂಡು (ಕಿಶಾಗ. ೧೧-೦೬-೨೮). [ಸಂ.]

**ಭೋಗಿವಿಷ** (ನಾ). ಹಾವಿನ ನಂಜು: ಸರ್ಪದ ವಿಷ : ಆಗಮಸಮುಯನ್ಯಾಯ ವಿಭಾಗಕಳಾಕಾಲ ಲೋಕವೇಶವಿರುದ್ಧಂ ಭೋಗಿವಿಷಂಬೋಲ್ ಪ್ರಾಣತ್ಯಾಗಮನಾಗಿಸುಗುಮುಮಳಿಕೃತಿ ವಧುಗಿನಿತುಂ (ಕವಿರಾ. ೮-೬೦). [ಸಂ.]

**ಭೋಗಿಶಯನ** (ನಾ). ೧. ಹಾವಿನ ಹಾಸಿಗೆ : ಸಾಗರಪತಿಯಾಗಿ ಭೋಗಿಶಯನದಲಿ ಭೋಗನಿದ್ರೆಯೊಳಿಪ್ಪ ಆ ಕಂದನ . . . ತೂಗಿ ನೋಡುವ ಪುಣ್ಯವೆಲ್ಲಿ ಪಡೆವಳೊ (ಪುರಂದ. ೪-೦೦೬-೨). ೨. ಹಾವಿನ ಮೇಲೆ ಮಲಗುವವನು: ಶೇಷಶಾಯಿ: ವಿಷ್ಣು: ಭೋಗಿಶಯನನ ಚರಣದಲಿ ತಲೆವಾಗಿ ಪರಿತೋಷದಲಿ ಪುಳಕಿತ್ಸರಾಗುತ್ತವೆ ಜೀಳ್ವೊಂದರಳಿದಾ ಪುರಿಗೆ ಧನುಜಪುತ್ರ (ಕಿಶಾಗ. ೧೧-೯೦-೬೬): ಭೋಗಿಶಯನ ಶ್ರೀ ಪುರಂದರ ವಿಠಲನ ಆಗ ನೆನೆಯುಲಿಲ್ಲಾ (ಪುರಂದ. ೧-೫೪-೬). [ಸಂ.]

**ಭೋಗಿಸು** (ಕ್ರಿ). ೧. ತಿನ್ನು: ಸೇವಿಸು: ಆವ ಪದಾರ್ಥವಾದರೇನು ತಾನಿದ್ದೆಡೆಗೆ ಬಂದೊದ ಲಿಂಗಾರ್ಪಿತವ ಮಾಡಿ ಭೋಗಿಸುವುದೆ ಆಚಾರ (ಬಸವ. ೭೭೪): ರಾಜಾಸ್ನದಕ್ಕಿಯಂ ಬೋಸಮಂ ಮಾಡಿ ಇತ್ತು ತಲ್ಲಿಂಗ ಪ್ರಸಾದವನಿತ್ತಯಂ ಭೋಗಿಸಲು (ಬಸವಪು. ೨೭-೦೫). ೨. (ಸುಖ ಮುಂತಾದುವುಗಳನ್ನು) ಅನುಭವಿಸು; ಉಪಭೋಗಿಸು : ನಿತ್ಯಲೀಲಾ ಬಿಡುವಿನ ವಿನೋದದಿಂ ಪಸದನದಾ ವಿಲಾಸದೊಳೊಡಂಬಡೆ ಭೋಗಿಸಿದಂ ಗುಣಾರ್ಣವಂ (ಪಂಪಭಾ. ೦೯-೩೮); ಮುಂದೆ ನೀಂ ಭೋಗಿಸುವ ಸಕ್ಕಳ ಭಾಗ್ಯಕ್ಕೆ ಬೀಜಭೂತಮಾಗಿರಲ್ಕೆ (ನಂಬಿಠ. ೪-೨೯); ಭಾಗೀರಥಿ ನಿನ್ನ ಸೋಂಕಿನ ತಂಗಾಳಿ ತಾಗಿದ ಸಕಲಜಂತುಗಳು ಯೋಗತೆವಡೆದು ಸ್ವರ್ಗದ ಸೌಖ್ಯಂಗಳ ಭೋಗಿಸುತಿಹರು ಸಂತಸದಿ (ಪುರಂದ. ೬ ೪೨). ೩. ಸೆರೆ: ಕೂಡು: ಸಂಭೋಗಿಸು : ಬಸನದಿಂ ವನಿತೆಯರೊಳ್ ಭೋಗಿಸುವುದು ಸಚ್ಚರಿತಂಗಾಗದು (ಸಮಯ. ೫-೬೨): ಪರಿಪರಿಯ ವೇಷಿಯರ ಮನೆಗಳೊಳರವಿನಲಿ ಭೋಗಿಸುವವರು ಹನ್ನೆರಡುಸಾವಿರ ಮಿಂಡಜಂಗಮವು (ಬಸವ. ೬-೫೫): ಓವರೊಳ್ನಿರೆದು ವಿರಹಿಗಳಲಯಜದ ಘನಸಾರದೊಳ್ ತಂಪುಪೆತ್ತು ನಿಚ್ಚಳದ ಕರುವಾಡದೊಳ್ ಭೋಗಿಸಿದರೆಂದು ಚೈತ್ರಾಗಮದ ಸಂಭ್ರಮದೊಳು (ಕೃಷ್ಣರಾ. ೮-೫). [ಭೋಗ + —ಇಸು₃]

**ಭೋಗೀಂದ್ರ** (ನಾ). = ಭೋಗಿಪ : ಇಂದ್ರನೆ ಭೋಗೀಂದ್ರನೆ ಖೇಚರೇಂದ್ರನೆ ದಟಿ ಭೂಪೇಂದ್ರನೆಂಬನ್ನೆಗಂ ಮಾನುಪಂಶಪ್ರಭು ಬೀಡಿನತ್ತ ತಳರ್ದಂ (ಆದಿಪು. ೧೨-೦೫೬). [ಸಂ.]

**ಭೋಗೀಶ್ವರ** (ನಾ). ೧. ಸುಖವನ್ನು ಅನುಭವಿಸುವವರಲ್ಲಿ ಅಗ್ರಗಣ್ಯ: ಬಹಳ ಸುಖವನ್ನು ಅನುಭವಿಸುವವನು. ೨. = ಭೋಗಿಪ. ೧. ೨ : ಅಂತು ವೀರಮಹೇಂದ್ರ . . . ವಿಶೇಷ ಭೋಗೀಶ್ವರನಾಗಿರ್ದುಂ ಶೇಷಫಣೀಶ್ವರನಲ್ಲ (ಪಂಚತಂ. ೭ ೩ ೩). [ಸಂ.]

**ಭೋಗ್ಯ** (ಗು). ೧. ಭೋಗಿಸಲು ಯೋಗ್ಯವಾದ ಉಪಭೋಗಿಸಬೇಕಾದ. ೨. ಅನುಭವಿಸಬೇಕಾದ : ಸಹಿಸಬೇಕಾದ. (ನಾ.) ೩. ಸುಖಾನುಭವಕ್ಕೆ ಯೋಗ್ಯವಾದ ವಸ್ತು : ಭೋಗಪರಿಕರ : ಭೋಗ್ಯಭೋಕ್ತೃಗಳೊಳಗೆ ಪರಿ ತಾ ಬೋಗ್ಯಭೋಕ್ತನು ಎನಿಸಿ ಯೋಗ್ಯಾಯೋಗ್ಯರಸಗಳ ದೇವದಾನವಗಣಕೆ ಉಣಿಸುವನು (ಹರಿಕ. ೦೬-೬೨): ತೊಡಿಪುವರ್ಗೆ ಭೋಗ್ಯಮಾನ್ ನೀಡೆ ಮಜಿತ್ರರೇನೊ ದುತ್ತಿನವರ್ಗಳ್ ತಪಮಂ (ಕುಟೀರ. ೧-೨೭) ; ಆ ವಸ್ತುಗಳು ಭೋಗ್ಯಗಳಾದುದರಿಂದ ಭೋಕ್ತನು ಬೇಕು (ಸಿಂದಸಾ. ೫೯). ೪. ಒಬ್ಬನಿಂದ ಸಾಲವನ್ನು ಪಡೆದು ಆತನಿಗೆ ಧನರೂಪವಾಗಿ ಬಡ್ಡಿಯನ್ನು ಕೊಡುವ ಬದಲು ಆಸ್ತಿಯನ್ನೇ ಅಸಲು ತೀರುವವರೆಗೂ ಬಿಟ್ಟು ಕೊಡುವುದು ; ಆಧಾರ ; ಈಡು; ಅಡಮಾನ : ತಾನು ಭೋಗ್ಯಕ್ಕೆ ಕೊಟ್ಟಿರೊ ಮನೇನ ಬಿಡಿಸಿಕೋಬೇಕು (ಶೂಗೆಪ. ೬೫).; ಕಾನೂನಿನ ಪ್ರಕಾರ ಕೆಳಮನೆಯು ಆಸ್ತಿಯನ್ನೆಲ್ಲ ತನ್ನ ಹೆಸರಿಗೆ ಭೋಗ್ಯಮಾಡಿಸಿಕೊಂಡ (ಗಂಗಾಳ. ೦೪). [ಸಂ.]

**ಭೋಗ್ಯಕ** (ನಾ) = ಭೋಗ್ಯ ೩ : ಈ ಮೂರು ಜಾತಿಯ ದ್ರವ್ಯಗಳನ್ನು ರಾಮಾನುಜಗೀತಾಭಾಷ್ಯದಲ್ಲಿ ಧಾರಕ, ಪೋಷಕ, ಭೋಗ್ಯಕ ಎಂದು ಕರೆದಿದೆ (ಭಾರದ. ೬೫೫). [ಸಂ.]

**ಭೋಗ್ಯಡವು** (ನಾ). ಒಬ್ಬ ವ್ಯಕ್ತಿಯು ಸಾಲಕ್ಕೆ ಕಂದಾಯ ಮೊದಲಾದ ಉತ್ಪತ್ತಿಗಳನ್ನು ತೆಗೆದುಕೊಳ್ಳುವಂತೆ ಇಡುವ ಸ್ಥಿರಾಸ್ತಿಯ ಒತ್ತೆ: ಭೋಗ್ಯರೂಪವಾದ ಒತ್ತೆ: ಪೈದರನು ಕೋಟಾರಪ್ರಾಂತವನ್ನು ಪೇಶ್ವೆಗೆ ಭೋಗ್ಯಡವು ಮಾಡಿಕೊಡಬೇಕು (ತಂಕಂ. ೧೪೨).

[ಭೋಗ್ಯ + ಅಡವು₂ (< ಅಡವು₁) ]

**ಭೋಗ್ಯದಾರ** (ನಾ). ಜಮೀನನ್ನು ಭೋಗ್ಯಮಾಡಿಕೊಂಡಿರುವವನು : (ಕೃಕಿಗ. II. ೫೪೫). [ಭೋಗ್ಯ + —ದಾರ₁]

**ಭೋಗ್ಯಪತ್ರ** (ನಾ). ಜಮೀನು ಮನೆ ಮೊದಲಾದುವನ್ನು ಭೋಗ್ಯಮಾಡಿರುವ ಬಗ್ಗೆ ಬರೆದುಕೊಡುವ ದಾಖಲೆ ಪತ್ರ.—ದಸ್ತಾವೇಜು ; "ಗುತ್ತಿಗೆ ಕರಾರು ; ಗೇಣುಚೀಟಿ : ಭೋಗ್ಯಪತ್ರ" (Lease. ೩೦೪೨). [ಸಂ.]

**ಭೋಗ್ಯಾಧಿ** (ನಾ). = ಭೋಗಾಧಿ : ಆ ಗದ್ದೆಯನ್ನು ಭೋಗ್ಯಾಧಿಗೆ ಹಾಕಿದ್ದಾರೆ (ರೂಢಿ). 'ಭೋಗ್ಯಾಧಿಪತ್ರ' ಪರಾ. [ಸಂ.]

**ಭೋಗ್ಯಾಧಿಪತ್ರ** (ನಾ). ಆಸ್ತಿಯನ್ನು ಭೋಗ್ಯಕ್ಕೆ ಹಾಕಿ ಬರೆದುಕೊಡುವ ದಾಖಲೆಪತ್ರ.—ದಸ್ತಾವೇಜು : ಸಾಲ ತೀರಿದ ಮೇಲೆ ಭೋಗ್ಯಾಧಿಪತ್ರವನ್ನು ವಾಪಸು ಪಡೆದು ಹಿಂದಕ್ಕೆ ತೆಗೆದುಕೊಳ್ಳಬೇಕು (ರೂಢಿ). [ಸಂ.]

**ಭೋಜ** (ನಾ). ೧. (ಸಂಸ್ಕೃತಸಾಹಿತ್ಯದಲ್ಲಿ ಕವಿಯಾಗಿಯೂ ಕವಿಗಳಿಗೆ ಪ್ರೋತ್ಸಾಹಕನಾಗಿಯೂ ಇದ್ದ) ಮಾಳವದೇಶದ ಮಹಾರಾಜನ ಹೆಸರು : ವಿನುತ ಭೋಜನ ಭಲ್ಲಟನ ಭಾರವಿಯ ಪದವ ನೆನೆದು ಬಲಗೊಂಡು ತೊಡಗಿದೆನೀ ಮಹಾಕೃತಿಯನು (ಹರಿಶ್ಚ. ೧-೧೪). ೨. ಯಾದವರ ಒಂದು ಒಳಪಂಗಡ : ಅಂಧಕವೃಷ್ಣಿ ಭೋಜರೆನಿಪ ಬಳಿಯಾದವಕುಲದ ಪಟುಭಟಸಮಾಜಮಂ ಪ್ರದ್ಯುಮ್ನನೊಡನೆ ಸುರಥನ ರಥಕ್ಕೆಣೆಯೊಡ್ಡಿ (ಜೈಮಿನಿ. ೧೪-೩). ೩. ಒಂದು ರಾಜವಂಶದ ಹೆಸರು : ವಿಜಯ ವೃಷಭಿಣೆ ಪೇಟಾತ್ ಭೋಜಾನಾಂ ಪೃಥಿವೀ ಮಲ್ಲವರ್ಮ್ಮಣೋ ವಚನಾತ್ ದೇಶೇ ಕುಪಲ[ಪ]ಕಟಾಹಾರೇ ಗ್ರಾಮೋ ಭಾಗಲಪಲಿ[ಲ್ಲಿ]ಕಾಯಾಂವರ್ತ್ತಮಾನ ಭವಿಷ್ಯದ್ ಭೋಜಕಾಯುಕ[ಕ್ತ]ಕ ಸ್ಸಾಯ್ಯಾದಯೋ [ವಕ್ತವ್ಯಾಃ] (ಎಇ. XXXIII, ೬೨-೧ ; ೭ನೆಯ ಶಕ ?). ೪. ಭರತಖಂಡದ ಪ್ರಾಚೀನ ದೇಶಗಳಲ್ಲಿ ಒಂದು : "ಭೋಜಃ . ಕಾಂಭೋಜಃ — ಈ ೨ ದೇಶಂ " (ಕಾಶಕ. ೨೨೨). 'ಕಾಂಭೋಜ' ನೋ. [ಸಂ.]

**ಭೋಜಕ** (ನಾ). ೧. ಭೋಜನಮಾಡುವವನು : ತಿನ್ನುವವನು. ೨. = ಭೋಜ ೨ : ಭೋಜರು ಅಥವಾ ಭೋಜಕರುಗಳ ನೆಲೆವೀಡು ಪಿವರ್ಧವೆಂದು ಸಿದ್ಧವಾಗುತ್ತದೆ (ಕರ್ನಾ ಪಿ.೦೩೬). ೩. ಜಹಗೀರುದಾರ : ಭಾಗಲಪಲಿ[ಲ್ಲಿ]ಕಾಯಾಂವರ್ತ್ತಮಾನ ಭವಿಷ್ಯದ್ ಭೋಜಕಾಯುಕ [ಕ್ತ]ಕ ಸ್ಸಾಯ್ಯಾದಯೋ [ವಕ್ತವ್ಯಾಃ] (ಎಇ. XXXIII. ೬೨-೦ ; ೭ನೆಯ ಶಕ ?): ಒಂದು ಅಥವಾ ಹೆಚ್ಚು ಗ್ರಾಮಗಳ ಮೇಲೆ ನಿರಾಬಾಧಸ್ವಾಮ್ಯವುಳ್ಳವರೇ ಭೋಜಕರು (ಕರ್ನಾ. ೪೦). [ಸಂ.]

**ಭೋಜಕತ್ವ** (ನಾ). ೧. ಊಟಮಾಡುವಿಕೆ. ೨. [ಕಾವ್ಯಮೀ] ಸಹೃದಯನಿಗೆ ಕಾವ್ಯನಾಟಕಗಳಿಂದ ರಸಾಸ್ವಾದವನ್ನುಂಟು ಮಾಡುವ ಒಂದು ಕಾರ್ಯವಿಶೇಷ : ಕಾವ್ಯ ನಾಟಕದಲ್ಲಿ ಮುಖ್ಯವಾದ ಅರ್ಥವನ್ನು ಕೊಡುವ ಅಭಿಧಾವೃತ್ತಿ ಅಥವಾ 'ಶಕ್ತಿ' ಇರುವಂತೆ 'ಭಾವಕತ್ವ'. 'ಭೋಜಕತ್ವ' ಎಂಬ ಮತ್ತೆರಡು ಶಕ್ತಿಗಳಿವೆ . . . ಎರಡನೆಯ 'ಭೋಜಕತ್ವ' ಎಂಬ ಶಕ್ತಿಯಿಂದ ಈ ಸಾಧಾರಣವಾಗಿ ಮಾಡಲ್ಪಟ್ಟ ರತ್ಯಾದಿಗಳು ಅನುಭವಿಸಲ್ಪಟ್ಟು ಸುಖಗೊಳಿಸುತ್ತವೆ (೪೬೩. ೦೯೩): ಇಲ್ಲಿಂದ ಮುಂದಕ್ಕೆ "ಭೋಜಕತ್ವ" . . . ಎಂಬ ಮೂರನೆಯ ವ್ಯಾಪಾರವು ಪ್ರವರ್ತಿಸುತ್ತದೆ. ರಸವು ಇದರ ಬಲದಿಂದ ಸಾಮಾಜಿಕನಿಗೆ ಭೋಗವಿಷಯವಾಗುತ್ತದೆ (ಕಾಲಮಿ. ೩೬೬). [ಸಂ.]

**ಭೋಜನ** (ನಾ). ೧. ಆಹಾರಸೇವನೆ : ತಿನ್ನುವುದು ; ಉಣ್ಣುವುದು. ೨. ಅನುಭವಿಸುವುದು: ಭೋಗಿಸುವುದು. ೩. ಊಟ: ಆಹಾರ : "ವಲ್ಭನಂ . . . ಆಹಾರಃ, ಭೋಜನಂ, ಸ್ವದನಂ—ಈ ೧೧ ಊಟಂ" (ಕರ್ಣಾಟ. ೫೪-೧೭೦) : ರಕ್ಕಸಿಯ ಮನೆಯಲ್ಲು ಭೋಜನವುಂಡು ತೃಪ್ತಿ ಯಾಯಿತ್ತೆಂದು ಬೆಸಗೊಂಡರೆ ಪೇಳಿಪೆನು (ಶಶಿ. ೪೨೦) ; ಮಜ್ಜನ ಭೋಜನಾದಿ ದಿವಸವ್ಯಾಪಾರಂಗಳಂ ತೀರ್ಚಿಸಿ (ಕುಸು. ೪-೬೬ ವ). ೪. ಊಟವನ್ನು ನೀಡುವುದು; ಆಹಾರವನ್ನು ಕೊಡುವುದು. [ಸಂ.]

**ಭೋಜನಂಬಡೆ** (ಕ್ರಿ). ಊಟವನ್ನು ಪಡೆ.— ದೊರಕಿಸಿಕೊಳ್ಳು : ರಾಜಕುಮಾರರ್ ಭೋಜನಂಬಡೆಯುದರಂತೆ ಬಡವಾಗೆ (ರಾಮಾಶ್ವ. ೨-೬೪). [ಭೋಜನ + ಪಡೆ₁]

**ಭೋಜನಕೂಟ** (ನಾ). ಯಾವುದಾದರೂ ಒಂದು ವಿಶೇಷ ಸಂದರ್ಭ ದಲ್ಲಿ ನೀಡುವ ಸವಿಯಾದ ಊಟ: ಔತಣಕೂಟ : ಸಿದ್ಧನಾಥನನ್ನು ಕಂಡಿದ್ದ ಅಪರಿಚಿತನು ಭೋಜನಕೂಟದಲ್ಲಿ ಸಮ್ಮಿಲಿತನಾಗಿದ್ದ (ಅಕ್ರಮ. ೮೬). [ಭೋಜನ + ಕೂಟ₁]

**ಭೋಜನಗೆಯ್** (ಕ್ರಿ). ಊಟಮಾಡು : ಇತ್ತ ರಂಬರಾಸುರ ಮಿಂದು ಭೋಜನಗೆಯ್ದು ವರರತ್ನಮಂಟಪದೆಡೆಗೈದಿ . ಸಿಂಹವಿಷ್ಟರದಲ್ಲಿ ಕುಳಿತ ವೈಭವದಿ (ಮೋಹತ. ೧೧-೬೪). [ಭೋಜನ + ಕೆಯ್₁]

**ಭೋಜನಪ್ರಿಯ** (ನಾ). ತಿನ್ನುವುದರಲ್ಲಿ ಬಹಳ ಆಸಕ್ತಿಯುಳ್ಳವನು : ಇಂತು ಗಂಧಾಕ್ಷತಾ ಭೋಜನಪ್ರಿಯರಾದ ಸಂತತಂ ಸದ್ಬ್ರಾಹ್ಮಣರ ಕೆಂ ಪಂದೆಸೆಯು (ನವಮೋ. ೨-೩೮). [ಸಂ.]

**ಭೋಜನಭೂಮಿ** (ನಾ). ಊಟಮಾಡುವ ಸ್ಥಳ.—ಮನೆ : ಭೋಜನ ಶಾಲೆ : ವಿಕಸಿತಾಂಭೋಜ ಹೇಮಕಮಲಮನೋಹರತರಶ್ರೀಯಂ ತಾಳ್ದಿರ್ದ ಭೋಜನಭೂಮಿಗೆ ರಾಜಹಂಸ ವಿಳಾಸದಿಂ ಬಿಜಯಂಗೆಯ್ದು (ಆದಿಪು. ೧೦-೨೬ ವ). [ಸಂ.]

**ಭೋಜನಶಾಲೆ** (ನಾ). ಊಟದ ಮನೆ : ಚಿತ್ರಶಾಲೆ ಚಂದ್ರಶಾಲೆ ಶಿಶಿರಶಾಲೆ . . . ಭೋಜನಶಾಲೆ ಮಜ್ಜನಶಾಲೆ (ಲವಕು. ೨೦೩); ಸಿದ್ಧನಾಥನ ಜೊತೆಗೆ ಮುಕ್ತಾ ಭೋಜನಶಾಲೆಯಲ್ಲಿ ಪ್ರವೇಶಿಸಿದಳು (ಅಕ್ರಮ. ೮೬). [ಸಂ. ಭೋಜನಶಾಲಾ]

**ಭೋಜನಾಂಗ** (ನಾ). [ಜೈನ] ಭೋಗಭೂಮಿಯಲ್ಲಿರುವ ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; ಬಯಸಿದ ಆಹಾರವನ್ನು ಕೊಡುವುದೆಂದು ಭಾವಿಸಲಾದ ಮರ : ತೇಜೋಬಲಾಯು ರಾರೋಗ್ಯಸಮೇತಮನಮೃತಾನ್ನಮನೊಲ್ದೀಗುಮಾಗಳುಂ ಭೋಜನಾಂಗ ಕಲ್ಪಾವನಿಜಂ (ಆದಿಪು. ೩-೫೪) : ಭೋಜನಾಂಗವೆಂಬುದು ತೇಜೋಬಲಾ ಯುರಾರೋಗ್ಯತುಷ್ಟಿಪುಷ್ಟಿಪ್ರತಿಭಾಪ್ರೀತಿಪ್ರದಾಯಿಗಳಪ್ಪಮೃತಾನ್ನಂಗಳ ನೀವುದು (ಶಾಪುಂಪು. ೪). [ಸಂ.]

**ಭೋಜಪತ್ರ** 'ಭೂರ್ಜಪತ್ರ' ನೋ.

**ಭೋಜಿಸು** (ಕ್ರಿ). ೧. ಊಟಮಾಡು ; ಆಹಾರವನ್ನು ಸೇವಿಸು : ಅರಮನೆಗೊಯ್ದು ಕಂಪಾಂಕ ಮನ್ನಿಸೆ ತನ್ನರಸಿ ಕೂರ್ತೆಯ್ದೆ ಭೋಜಿಸಿದ (ಕರಕ. ೩೮-೦೩): ಸೇವಿಸುವಂ. ಪಾಲಿಸುವಂ, ಭೋಜಿಸುವಂ (ಕಬ್ಬಿ.ಕಾ. ೩೬೩ ಪ್ರ.ಯೋ). ೨. (ಸುಖವನ್ನು) ಅನುಭವಿಸು ; ಸವಿ : ಕುಮಾರೆಯು ಮುನ್ ಇಜ್ಜಿದು ಪಲರಂ ಕೊಂದು ಸೂರ್ಯ್ಯಮಂಡಲಮಂ ಭೋಜಿಸಿದರ್ (ಎಇ. XVIII, ೨೦೦-೬ ; 1107). [ ಭೋಜನ + — ಇಸು₃ ]

**ಭೋಜ್ಯ** (ಗು). ೧. ತಿನ್ನಲು ಯೋಗ್ಯವಾದ ; ತಿನ್ನಬಹುದಾದ. (ನಾ). ೨. ತಿನ್ನಲು ಯೋಗ್ಯವಾದುದು ; ತಿನಿಸು; ಆಹಾರಪದಾರ್ಥ: ಅನಿಸಿತು ಭೋಜ್ಯದಿಂ ಪೆಜತ್ರೇನುಮನುಣಿಷ್ಠೊಳ್ಳಿಂ (ಸುಕುಮಾ. ೪-೬) : ಸೆರೆದ ಸಚರಾಚರವಿಲ್ಲದೆಲ್ಲವು ನರರ ನಿಜಭೋಜನಕೆ ಜನಿಸಿದವರಸ ಕೇಳಿದ ಜಗದೊಳಗೆ ಭೋಜ್ಯಾಭೋಜ್ಯವನು ತಿಳಿದು ಪರಿಹರಿಸಬಲ್ಲವರುಗಳು ಘನ ತರದ ಸುಕೃತವನೈದುವರು (ಕುಮಾರ. ೩-೬೨) : ಅಡಿಗೆಮನೆಗಳು ಅನೇ ಕವಿದ್ದರೂ ಸಿದ್ಧಪಡಿಸಿದ ಭೋಜ್ಯ ಮಾತ್ರ ಹೊಸದು ( ಕೈರ. ೧೩೩ ). ೩. ಉತ್ತಮವಾದ ಆಹಾರ; ರಸಕವಳ : ಮೃಷ್ಟಾನ್ನಭೋಜನ: ರಚಿತರುಚಿನಿಚಿತಶುಚಿ ಸಾಜ್ಯಭೋಜ್ಯಾಳಿಯಿಂ . . . ರಾಜಿಸುತೆ ನಲ್ಮೆಯಿಂ ಪೂಜಿಸಿದನೊಲ್ಮೆಯಿಂ (ರಾಜಶೇ. ೦೩-೩೦ ಪದ್ಯ). ೪. ಅನುಭವಿಸಲು ಯೋಗ್ಯವಾದುದು ; ಭೋಗವಸ್ತು : ಪ್ರಾಜ್ಯವೈಭವದಿಂದ ರಂಜಿಸುವ ಧರೆಯ ಸಾಮ್ರಾಜ್ಯಾಧಿಪತ್ಯದ ಮಹಾಧನಂ ಸುರವಿಪ್ರಭೋಜ್ಯಮಪ್ಪ ವೋಲು (ತಿ.ಪಾಂಪ್ರ. ೩-೨೪). [ಸಂ.]

**ಭೋಜ್ಯಾಂಗ** (ನಾ). ಭೋಜನಾಂಗ : ತ್ರಿದಶಾಮೃತಾನ್ನಮಂ ಕುಡುವುದವರ್ಗೆ ಭೋಜ್ಯಾಂಗ ತರುಗಳಲ್ಪಮಹೀಜಂ (ಶಾಂತಿಪು. ೬-೦೦೩). [ಸಂ.]

**ಭೋದರಿಯೂರ್** (ನಾ). ಒಂದು ಊರಿನ ಹೆಸರು : ಕೂಡಲೂರ ಭೋದರಿಯೂರ ಮಾನ್ಯಸ್ಥಕ್ಕೆ ಬಿಟ್ಟ ಸ್ಥಿತಿಕ್ರಮವಾವುದು ಎನ್ನದೆ (ಎ೪. IX. ತಸ್ತ. ೦೬೨-೫ : ೪೧೩). [ ? + ಊರ್ ]

**ಭೋರ್** (ಅ). ಒಂದು ಅನುಕರಣಾವ್ಯಯ : ಅಗಳಶ್ವತ್ಥಾಮಂ . . . ನೊಂದು ಭೋರೆಂದು ಕವಿವ ಬಿಸುನೆತ್ತರ್ ಕಣ್ಣಿಂ ಕವಿಯೆ ಸೀಂಟಿ ಕಳೆದು (ಶಂಕಹಾ. ೦೨-೭೪೩) ; ಘೋರೆಂಬ ಭೋರೆಂಬ ಕೂರಸಿಗಳುರವಣೆಯು ದನಿಯುತಸುತಂ ಪುಟ್ಟೆ (ಇಹರ. ದೀ. ೪೨-೨).

**ಭೋಭೋರ್** (ದ್ವಿರುಕ್ತಿ): ಭೋಭೋರೆನೆ ಪಾಯ್ವುವು ಪಿಪುನಗಕ್ಕೆ ಗಂಗಾಸ್ರೋತ್ರಂ (ಶಶುಚ. ೦೯೩ ಪ್ರಯೋ) ; ಬೊಬ್ಬುಳಿತೆರೆಯನು ದಡಕ್ಕೆ ಹೊಮ್ಮಿಸಿ, ಅಬ್ಬರವಲಿ ಭೋರ್ಭೋರೆನೆ ಗುಮ್ಮಿಸಿ, ಬರುತಿದೆ . . . ತೆಂಕಣಗಾಳಿಯು ಕೊಂಕಣಸೀಮೆಗೆ (ಕನ್ನಡಾ. ೦೨೧).

**ಭೋರಂಗ** 'ಬೋರಂಟೆ' ನೋ.

**ಭೋರಂಗಿ** 'ಬೋರಂಗಿ' ನೋ.

**ಭೋರಜಗುಲಿ** 'ಭೋರ್ಜಗಲಿ' ನೋ.

**ಭೋರನೆ** (ಅ). ೧. ಒಂದು ಅನುಕರಣಾವ್ಯಯ; ಭೋರೆಂದು ಶಬ್ದವಾಗುವಂತೆ : ಭೋರನೆ ಕೊಂಡುದಾಗಳೆಂಬಿನ ಮುಟಿ (ಶಂಕಾಮೃ. ೦೩-೪೪); ಭೋರನಬ್ಬರಿಸಿದುವು ದಿವಿಜರ ಭೇರಿಗಳು (ಕೂಶಿಶಾ. ೧-೬-೮). ೨. ಶೀಘ್ರವಾಗಿ : "ಭೋರನೆಯೆನೆ ಭೋಂಕನೆನಲು . . . ಶೀಘ್ರಾರ್ಥಂ" (ಶಬ್ದಮಂ. ೧೧೧); ತರಳೆ ಮಹಾಶ್ವೇತೆಯುಂ ಬಿಟ್ಟು ಭೋರನೆ ಚಂದ್ರಾಪೀಡಶರೀರಮಂ ಸಾರ್ದು (ಕಾದಂಬ. ೫೭೬). ೩. ಥಟ್ಟನೆ ; ಕೂಡಲೆ : ನಾರಿಯರ್ಕ್ಯದ ಕೂಡಿಕೊಂಡು ನಾ ದಾರಿಸಂಗಡವಾಗಿ ಬರುತಿರಲು ಭೋರನೆ ಶ್ರೀಶೈಲ ಚೆನ್ನಮಲ್ಲೇಶಂಗೆ ಓರಂತೆ ಮನಸೋತೆ (ಶಿವನೀ. ೦೩೪-೩೬೨).

[ ಭೋರ್ + — ಅನೆ$_1$ ]

**ಭೋರಾಟ** (ನಾ). ಭೋರೆಂಬ ಶಬ್ದ; ಆರ್ಭಟ; ಮೊರೆತ : ಬಿರುಮಳೆಯ ಸೂಚನೆ ಗಾಳಿಯ ಭೋರಾಟದಿಂದಲೂ . . . ಗುಡುಗುಗಳ ಆರ್ಭಟದಿಂದಲೂ ರೌದ್ರವಾಗಿದೆ (ಚಂದ್ರಸ. ೦೦೪-೫) ; ತೊರೆಯ ನೀರಿನ ಭೋರಾಟವನ್ನು ಆಲಿಸಿ (ಮಾರಿಮ. ೫). [ಭೋರ್ + ಆಟ]

**ಭೋರಾಡು** (ಕ್ರಿ). ಹೆಚ್ಚು ಧ್ವನಿಮಾಡು ; ಗೋಳಾಡು : ಅವಳು ನಿಂತ ಸ್ಥಳದಲ್ಲಿಯೇ ಕುಸಿಬಿದ್ದು ಭೋರಾಡಿ ರೋದಿಸತೊಡಗಿದಳು (ಸ್ವ್ಯಾಲಿಟಾ. ೦೭೮); ಇವರ ದಶರಥನ ಪಾರ್ಟು ನೋಡಿದವರೆಲ್ಲ ಭೋರಾಡಿ ಅತ್ತರು (ಸ್ತ್ರ್ಯೊತೀ. ೨೭). [ಭೋರ್ + ಆಡು$_1$]

**ಭೋರಿಡು** (ಕ್ರಿ). ೧. ಘೋಷಿಸು : ನೀರಪಕ್ಷಿ ನಿರ್ಜರಪತಿ ಪರಿಯೆಂದು ಚೀಟಿ ಹಾಟಿ ಭೋರಿಡುತಲಿ ಕುಣಿಯೊ (ಪುರಂದ. ೨-೭೬-೧). ೨. ಗೋಳಾಡು ; ರೋದಿಸು : ಕಳೆದ ಸುಖ-ಸೊಬಗುಗಳ ಗೋರಿಗೀತವ ಕಟ್ಟಿ ಭೋರಿಡುವ ಮಾನವನ ನಿತ್ಯಮಿಡುಕು (ಬಿಂಶ. ೬-೮). ೩. ಅಬ್ಬರಿಸು ; ಮೊರೆ : ಗಂಗತ್ತೆಯ ಗೋಳು ಬೊಬ್ಬೆಗಳು ಭೋರಿಡುವ ಮಳೆಯನ್ನು ಭೇದಿಸಿಕೊಂಡು ದೂರಕ್ಕೆ ಹೋಗಲೇ ಇಲ್ಲ (ಒಬ್ಬಾ. ೫).

[ಭೋರ್ + ಇಡು$_1$]

**ಭೋರೆನ್** (ಕ್ರಿ). ೧. ಭೋರೆಂದು ಶಬ್ದಮಾಡು ; ಅಬ್ಬರಿಸು : ಮಾವವಕ್ರಕಿರಿಸಿಟಿಯುಂ ಪಟಿದೊಡವಿದ ಮುಳಿಸಿಂದೆ ಭೋರೆನೆಯ್ದೊಡ ವರ್ಕಾದಿರದಿರೆ ಭಕ್ತಿಯಿಂದವಮ ಪವಯುಗಕೆಜಗಿದುದು ದಾನಚಿಂತಾಮಣಿಯು (ಶಾಶಿಇ. XI-i, ೬೨-೪೦; 1007). ೨. ರಭಸದಿಂದ ಕೂಡು; ವೇಗವಾಗು : ಸಂಜೀವಕಂ ನಿಮ್ಮಲ್ಲಿ ಮುನ್ನಂ ಬರ್ಪಂಪಮಲ್ಲದೆ ಭೋರೆನೆ ಬಂದು (ಶಂತಕಂ. ೦೬೨-೨). [ಭೋರ್ + ಎನ್$_1$]

**ಭೋರ್ಗರೆ** (ಕ್ರಿ). ಭೋರೆಂದು ಶಬ್ದಮಾಡು; ಅಬ್ಬರಿಸು : ಭೋರ್ಗರೆ ದೂಮವ ಗಾಳಿ ಸಿಡಿದು ಪೊಯ್ದು ಸಿಡಿಲ್ (ಅಂತು. ೬-೬೨); ಸಭದೊಳ್ ಭೋರ್ಗರೆವುಂತಿರೆ ಸುರದುಂದುಭಿ (ವರ್ಧಪು. ೦೨-೪೬) ; ಸೊಂಡಿಲ ನೆಗಹಿ ಭೋರ್ಗರೆವ ನೀರಾನೆಯ ತಂಡ . . . ಜಲಚರ ತುಂಬಿ ಕಣ್ಗೆ ಶ್ರೀಖಂಡವಾಗಿರ್ದಳಾ ಗಂಗೆ (ವೋಃಶ. ೬-೭೬). [ಭೋರ್ + ಕರೆ$_1$]

**ಭೋರ್ಗಟಿ** (ಕ್ರಿ). ಬಿರುಸಿನಿಂದ ಸುರಿಸು. — ವರ್ಷಿಸು : ಧರೆಗೆ ಪೊಸತೆನೆ ಕೂಕಿಟಿದು ಭೋರ್ಗಟಿದರಂಬಿನ ಬಲುಮಳೆಯ ಬೇಡರು (ಶಾಶ್ವಶಾ. ೩೦-೨೩). [ಭೋರ್ + ಕಟಿ$_1$]

**ಭೋರ್ಜಗಲಿ, ಭೋರಜಗುಲಿ, ಭೋರ್ಜಗುಲಿ** (ನಾ). ೧. (ಉಕ) ಮದುಮಕ್ಕಳನ್ನು ಕೂರಿಸಿ ಧಾರೆ, ಮಾಂಗಲ್ಯಬಂಧನ ಮೊದಲಾದ ಮಂಗಳಕಾರ್ಯಗಳನ್ನು ಮಾಡುವುದಕ್ಕಾಗಿ ಏರ್ಪಡಿಸಿರುವ ಜಗಲಿ (?) : ಈ ಗದ್ದಲದಲ್ಲಿ ಸ್ಥೂಲಕಾಯಳಾದ ಮೆಹಬೂಬ ಭೋರ್ಜಗಲಿಯಿಂದ ದೂರವೇ ಉಳಿದಳು (ಗಂಪಚಾಯ. ೦೪೪). **ಭೋರಜಗುಲಿ :** ೧. ತೆಲಗುಬಣಜಿಗರು :— ಇವರು ಲಗ್ನದಲ್ಲಿ ಭೋರಜಗುಲಿಯ ಬುಡಬಲವಲ್ಲಿ ಹೊಸಗಡಿಗೆಗಳ ಅಡಿಕಿಲುಯೇರಿಸಿ ಇಡುವರು (ಕಶಾಗ. ೦೦೬). **ಭೋರ್ಜಗುಲಿ :** ೨. ಸಂಪ್ರದಾಯ ಬದ್ಧವಾದ ರೇಖಾವಿನ್ಯಾಸಗಳನ್ನು ಬರೆದು ಸಿದ್ಧಪಡಿಸಿರುವ ಸ್ಥಳ (?) ; ಮದುಮಕ್ಕಳು ಕೂಡುವ ಹಸೆಮಣೆಯ ಹಿಂದೆ ಗೋಡೆಯ ಮೇಲೆ ಬರೆದಿರುವ ರೇಖಾಕೃತಿ (?) : ಅವರು ತಮ್ಮ ಮಗಳನ್ನು ನಿನಗೆ ತೋರಿಸಬೇಕೂ ಎಂದು ಅನ್ನುತ್ತಿದ್ದರು . . . ಒಪ್ಪಿತವಾದರೆ ಎರಡು ಭೋರ್ಜಗುಲಿ ಎದುರೆದುರು ಬರೆಯಿಸಬಹುದು (ಜಾಂದ. ೩೭). [ ? + ಜಗಲಿ]

**ಭೋರ್ಜಗುಲಿ** 'ಭೋರ್ಜಗಲಿ' ನೋ.

**ಭೋಷ** 'ಭೌಷೆ' ನೋ.

**ಭೋಷವಂತ** (ನಾ). ಮರ್ಯಾದಸ್ಥ : ಪರಮಪವಿತ್ರ ಸದ್ಗತಿಯುಳ್ಳ ಯುಂಟೇ ಭೋಷವಂತರಿಗೆ (ಶಂಕದಾ. ೬-೫೫).

[ ಭೋಷ (< ಭೌಷೆ ) + — ವಂತ ]

**ಭೋಸಡಿ, ಬೋಸಡಿ, ಬೋಸುಡಿ, ಭೋಸುಡಿ** (ನಾ). ೧. ಹೆಂಗಸಿನ ಜನನೇಂದ್ರಿಯ : ಯೋನಿ : (೧). ೨. (ಆಲಂ) ಅಶ್ಲೀಲವಾದ ಒಂದು ಬಯ್ಗುಳು ; ಹಾದರಗಿತ್ತಿ : ರಮಾಬಾಯಿಯರು ವೆಂಕಮ್ಮನವರನ್ನು "ಭೋಸಡಿ" ಎಂದು ಬಯ್ದುದಲ್ಲದೆ . . . ಮೋರೆಗೆ ಕೈ ತಿವಿದಿದ್ದರು (ಸತುಜೀ. ೬೭) ; ಈಗ ತಾನೆ ಮೊಗ ಹೆತ್ತ ಬಾಣಂತಿ ಹಂಗೆ ಕುಂತುಗೊಂಡಿದ್ದೀಯಲ್ಲೇ ? ಎದ್ದು ಬದುಕು ಮಾಡೆ ಭೋಸಡಿ (ಸರ್ಪಮಂ. ೩೩೩). **ಬೋಸಡಿ :** ೨. ಈ ಬೋಸಡಿಯು ಎಂತಹ ಬೇಡಿಕೆಯನ್ನು ಬೇಡಿದಳು ನೋಡು (ಪಲಾದು. ೬೦). **ಬೋಸುಡಿ :** ೨. ಇನ್ಯಾವ ಮರ್ವಾದೆಸ್ತ ಬೋಸುಡಿ ಬಂದಾಳು ಇಲ್ಲಿ ಅಮ್ಮಾನಿ (ಸಂಗಾ. ೦೦೩). **ಭೋಸುಡಿ :** ೨. "ಮನಗೇ ಭೋಸುಡಿ" ಗದರಿಕೊಂಡಳು ಸೋನೂಬಾಯಿ (ಶಂಗಾ. ೦೬೦).

[← ಮರಾ. ಭೋಸಡೀ]

**ಭೋಸುಡಿ** 'ಭೋಸಡಿ' ನೋ.

**ಭೋಳಾಶಂಕರ** (ನಾ). ೧. ಶಿವ ; ಶಂಕರ : ಭಸ್ಮಾಸುರಬಾಧಿತನಾದ ಭೋಳಾಶಂಕರನೆಂಬ ದೊಮ್ಮನಂ ಪಾಲಿಸಲಾ ನಿಶಾಚರನ ಮಾಯದಿಂ ಮೋಹಿಸಿ (ಅಶಾಶಿ. ೨೫-೦೩ ಪ). ೨. ಏನೂ ಅರಿಯದವನು ; ಮುಗ್ಧ : ಅವರ ಸರಳತೆ ಔದಾರ್ಯಗಳ ದುರುಪಯೋಗ ಮಾಡಿಕೊಂಡು ಅವರನ್ನು ಮೋಸಗೊಳಿಸಿದ ಜನರೂ ಉಂಟು. ಅಂತೆಯೇ ಜನರು ಅವರಿಗೆ ಆಗಾಗ 'ಭೋಳಾಶಂಕರ' ಎಂದು ಚೇಷ್ಟೆ ಮಾಡುವರು (ಗಂಪಾಕಾ. ೨೫).

[ ← ಮರಾ. ಭೋಳಾಶಂಕರ್ ]

**ಭೋಳೆ, ಬೋಳ್ಯ, ಬೋಳೆಯ್ಯ** (ನಾ). ೧. ಸಾಧುಸ್ವಭಾವದವನು ; ಕಪಟವನ್ನರಿಯದವನು ; ಮುಗ್ಧ : ಗರುಡ ಊರು ಹಾಳು ಮಾಡುವ ಪ್ರಚಂಡ ಗಟ್ಟಿಗ, ನಿಮ್ಮ ಹಾಗೆ ಭೋಳೇ ಅಲ್ಲ (ಕಂಪ್ಯಾರ. ೩೫) ; ನಾನು ಇಷ್ಟು ಭೋಳೆ ಇಲ್ಲ — ಏನ್ನ ಮುಂದೆ ಮೋಸದಾಟ ನಡೆಯುದು

(ಜೋತಶಿ. ೦೩೦). (ಗು). ೨. ಸಾಧುಸ್ವಭಾವದ ; ಮುಗ್ಧವಾದ : ನೀವು ಹಳೇ ಕಾಲದ ಮಂದಿ ; ಬಹಳ ಭೋಳೇ ಮಂದಿ (ಹೊಸಂಶಾ. ೦೦೪); "ಭೋಳೇ" ಜನರನ್ನು ಬಗಲಿಗೆ ಹಾಕುವ ಚಾತುರ್ಯವೂ ಅವರಲ್ಲಿದೆ (ಮಂಜಹು. ೪೮). **ಬೋಳೆ₃ :** ೨. ಹಳ್ಳಿಯ ಬೋಳೇಜನದ ಮಾತು ಹೇಳಬೇಕೆ? (ಸುವಸಂ. ೧). **ಬೋಳೆಯ₂ :** ೧. ಬೋಳೆಯನೆಂದು ಸಂಬಬೇಡ ಘಾಳಕನವನು ಜಗದ ಬಿನ್ನಾಣಿ (ಮಹಾದೇ. ೪. ೨೮-೬೨).

**ಬೋಳೆಯ ಮಾತು** = ನಿಷ್ಕಪಟವಾದ ನುಡಿ : ನಗುನಗುತ್ತಲೆ ಬೋಳೆಯ ಮಾತುಗಳನ್ನಾಡುತ್ತಾ, ತಮಾಷೆ ಮಾಡುವವರಂತೆಯೆ ಕಸಿದು ಕೊಳ್ಳುತ್ತಿದ್ದರು (ಮಲೆಮ. ೪೨೬).

[ ← ಹಿಂ. ಭೋಲಾ ; ಮರಾ. ಭೋಳಾ ]

**ಭೋಳೆತನ.** ಬೋಳೆಯತನ (ನಾ). ೧. ಸರಳಸ್ವಭಾವ ; ಮುಗ್ಧತೆ : ಉರಿಯ ಹಸ್ತವ ಕೇಳಲಾ ಶಂಕರನು ತಿಳಿಯದೆ ಭೋಳೆತನದಲಿ ಕೊಟ್ಟು ಮರುಳ್ಗಳಗೊಡೆಯನಾದನಲಾ (ಅರ್ಜುವಿ. ೩-೨೮) ; ಅವಳ ಆ ಮಾತು ಕೇಳಿ, ನನ್ನ ಭೋಳೇತನದ ಅರಿವಾಗಲು ನನಗೆ ನಗು ಬಂದಿತು (ಹಿಂಕ್ಷ. ೦೩೩) ; ನಮ್ಮ ತಂದೆ ಭೋಳೆತನದಿಂದ . . . ತಮ್ಮ ಎಲ್ಲಾ ಆಸ್ತಿಯನ್ನು ನಾಶಮಾಡಿಕೊಂಡರು (ಇತಿಶ್ರೀ. ೨೦೨). **ಬೋಳೆಯತನ :** ೨. ಮೂರ್ಖತನ ; ಅಜ್ಞಾನ : ಜನಪನೀತಿಯೊ ಮೇಣು ಬೋಳೆಯ ತನವೊ . . . ನಾವಱಿಯೆವು (ಕುಮ್ಯಾಆ. ೨೦-೩೩) ; ಕೇಳು ನಿನ್ನಾತನ ವಿನೋದದ ಖೂಳ ಬೋಳೆಯತನದಲೊದಗಿದ ಬಾಳಿಕೆಯ ಬೀಸರವನು (ಕುಮ್ಯಾಕ. ೧-೦೬). [ ಭೋಳೆ + -ತನ ]

**ಭೋಳೆಭಾವಿಕ** (ನಾ). = ಭೋಳೆ ೧ : ಬಾದಶಹ ತನ್ನ ಮಿತಿಮೀರಿದ ಠಕ್ಕತನ ತೋರಿಸಿ ಭೋಳೆಭಾವಿಕರಿಂದ ದೊಡ್ಡ ಸತ್ಪುರುಷನೆಂದೆನಿಸಿ ಕೊಳ್ಳುತ್ತಿದ್ದ (ಷಃಶಾ. ೦೦೦). [ಭೋಳೆ + ಭಾವಿಕ ]

**ಭೋಳೆಭಾವಿಕತನ** (ನಾ). = ಭೋಳೆತನ ೧ : ಆತನ ಭೋಳೆಭಾವಿಕ ತನಕ್ಕೆ ಮೋಹಿತನಾಗಿ ಆತನನ್ನು ತೀರ ಹತ್ತಿರ ಕುಳ್ಳಿರಿಸಿಕೊಂಡು ಕುಶಲ ಪ್ರಶ್ನೆಗಳನ್ನು ಕೇಳಿದನು (ತುಳಸೀ. ೦೩೪). [ಭೋಳೆಭಾವಿಕ + —ತನ]

**ಭೋಳೇಸ್ವಭಾವ** (ನಾ). = ಭೋಳೆತನ ೧ : ನೀನು ಶುದ್ಧ ಭೋಳೇ ಸ್ವಭಾವದವ (ಕುರುಕಾ. ೪೪). [ ಭೋಳೆ + ಸ್ವಭಾವ ]

**ಭೌಗೋಳಿಕ** (ಗು). ೧. ಭೂಗೋಳಕ್ಕೆ ಸಂಬಂಧಿಸಿದ. ೨. ಭೂಮಿ ಯಂತಿರುವ: ಆವು ಭೌಗೋಳಿಕ ಗ್ರಹಗಳಿಗಿಂತಲೂ (ಅಂದರೆ ಭೂಮಿ, ಬುಧ, ಶುಕ್ರ, ಮಂಗಳ ಗ್ರಹಗಳು) ಹೆಚ್ಚುಹೆಚ್ಚು ಸ್ಥೂಲ ಮತ್ತು ಗಾತ್ರ (ಊಹುಚ್ಛು. ೭). [ಸಂ. ಭೌಗೋಲಿಕ]

**ಭೌತ** (ಗು). ೧. ಪೃಥ್ವಿ, ಅಪ್ಪು, ತೇಜಸ್ಸು, ವಾಯು ಮತ್ತು ಆಕಾಶ ಗಳೆಂಬ ಪಂಚಭೂತಗಳಿಗೆ ಸಂಬಂಧಿಸಿದ. ೨. ಭೂತ, ಪಿಶಾಚಿ ಗಳಿಗೆ ಸಂಬಂಧಿಸಿದ ; ಅತಿಮಾನುಷವಾದ. ೩. ಉನ್ಮತ್ತವಾದ; ಹುಚ್ಚುಹಿಡಿದ. (ನಾ). ೪. ಪಂಚಭೂತಗಳಿಂದ ಹುಟ್ಟಿದುದು ; ಪಂಚಭೂತಾತ್ಮಕವಾದುದು : ಶರೀರವೂ ಭೌತ, ಅದರಲ್ಲಿನ ರಕ್ತ, ಮೂಳೆ, ಮಾಂಸ, ಮಜ್ಜಾದಿಗಳೆಲ್ಲವೂ ಭೌತ (ತೀವಾತ್ಮ. ೬೦೪). ೫. ಪಿಶಾಚಿ ಗಳ ಆರಾಧಕ ; ಭೂತಗಳ ಉಪಾಸಕ. ೬. ದೇವರ ಪೂಜೆಯ ಆಧಾರದಿಂದ ಜೀವಿಸುವವನು ; ದೇವಲ. ೭. ಗೃಹಸ್ಥನು ಪ್ರತಿದಿನವೂ ಆಚರಿಸಬೇಕಾದ ಪಂಚಯಜ್ಞಗಳಲ್ಲಿ ಒಂದು : ಭೂತಯಜ್ಞ. ೮. (ಪಿಶಾಚ, ಭೂತ ಮೊದಲಾದ) ದುಷ್ಟಶಕ್ತಿಗಳ ಸಮೂಹ. [ಸಂ.]

**ಭೌತವಸ್ತು** (ನಾ). ಪಂಚಭೂತಗಳಿಂದಾದ ವಸ್ತು ; ಪದಾರ್ಥ : ಭೌತವಸ್ತುಗಳು ಭೌತವಿಜ್ಞಾನಕ್ಕೆ ಸಂಬಂಧಪಟ್ಟವುಗಳು (ತೀವಾತ್ಮ. ೪೨). [ಸಂ.]

**ಭೌತವಾದಿ** (ನಾ). ಪಂಚಭೌತಿಕವಸ್ತುಗಳಿಗಿಂತ ಭಿನ್ನವಾದ ಆತ್ಮನನ್ನು ಒಪ್ಪದಿರುವ ಮತದವನು ; ಚೇತನಶಕ್ತಿಯೊಂದಿಲ್ಲದೆ ಆತ್ಮನ ಎಲ್ಲ ಕಾರ್ಯಗಳೂ ಭೌತದ್ರವ್ಯದಿಂದಲೇ ಆಗುವುದೆಂಬುದನ್ನು ಪ್ರತಿ ಪಾದಿಸುವವನು : ಭೌತವಾದಿಗಳು (ಲೋಕಾಯುತಿಕರು) ಸ್ಪಷ್ಟವಾಗಿ ಇದೆಲ್ಲ ಅಸಂಬದ್ಧ ಎನ್ನುತ್ತಾರೆ (ಪವ್ಯಶಾ. ೦೨೬) ; ಅಭೌತ ಆತ್ಮವೆಂಬ ಬೇರೊಂದು ವಸ್ತು ಅನಾವಶ್ಯಕವೆಂದು ಭೌತವಾದಿಗಳ ವಾದ (ತೀವಾತ್ಮ. ೦೦೪). [ ಸಂ. ಭೌತವಾದಿನ್ ]

**ಭೌತವಿಜ್ಞಾನ** (ನಾ). ಪ್ರಕೃತಿಯ ಶಕ್ತಿಗಳನ್ನು ತಿಳಿಸುವ ಶಾಸ್ತ್ರ ; "ದ್ರವ್ಯದ ಮತ್ತು ಶಕ್ತಿಯ ಲಕ್ಷಣಗಳನ್ನೂ ಅಥವಾ ಶಕ್ತಿಯ ನಾನಾರೂಪಗಳು ದ್ರವ್ಯದ ಮೇಲೆ ಉಂಟುಮಾಡುವ ಪರಿಣಾಮ ವನ್ನೂ ಕುರಿತ ಶಾಸ್ತ್ರ" (Physics. ಇಂಕಪ) : ಯಾಂತ್ರಿಕವಾದ ದಿಂದ ಜಗತ್ತನ್ನು ವಿವರಿಸಲು ಹೊರಟ ಭೌತವಿಜ್ಞಾನದ ಪ್ರಗತಿಯು ಎರಡ ನೆಯ ಘಟ್ಟವೆನ್ನಬಹುದು (ಜುಕ್ಕಾರ. ೬ ಶಿ೬೪). [ಸಂ.]

**ಭೌತಶರೀರ** (ನಾ). ಪಂಚಮಹಾಭೂತಗಳಿಂದಾದ ದೇಹ : ಶಾಂತಲೆಯ ಈ ಸುಂದರಸ್ವಪ್ನ ಅಲ್ಲಿಗೇ ಕೊನೆಗಂಡಿತು. ಆಕೆಯ ಭೌತಶರೀರ ಆಗ ಎಚ್ಚರ ಗೊಂಡಿತು (ಶಾಂಶಲಾ. ೪೨). [ಸಂ.]

**ಭೌತಶಾಸ್ತ್ರ** (ನಾ). = ಭೌತವಿಜ್ಞಾನ : "ಅಥಾತೋ ವಸ್ತುಜಿಜ್ಞಾಸಾ" ಎಂಬೀ ಸೂತ್ರದಿಂದ ನಾವು ಭೌತಶಾಸ್ತ್ರವನ್ನು ಪ್ರಾರಂಭಿಸಿದರೆ ಉಚಿತ ವಾಗಿರುವುದು (ಭೌಶಾ. ೧) ; ಒಂದು ನಕ್ಷತ್ರದಿಂದ ಹೊರಟ ಕಿರಣವು ಕಣ್ಣಿನ ತಂತುವಿನ ತನಕ ಹೇಗೆ ಬರುತ್ತದೆ ? ಎಂಬ ವಿಚಾರವನ್ನು ಭೌತಶಾಸ್ತ್ರವು ಚಿತ್ರಿಸಬಲ್ಲದು (ತೀವಾತ್ಮ. ೧೦೨). [ಸಂ.]

**ಭೌತಿಕ** (ಗು). ೧. ಭೂಮಿ ಮೊದಲಾದ ಪಂಚಭೂತಗಳಿಂದಾದ ; ಐಹಿಕವಾದ : ಈ ಧರಣೀಭಾರಮನಾಂ ಬಿಸುಟ್ಪೊಡದು ಚೀ ಲೋಕಕ್ಕೆ ಬಾತ್ಸಾಸಮೀಕರಣಂ ಭೌತಿಕಮೋದಕವ್ಯತಿಕರಂ ತಾನೆಂಬುದಂ ಮಾಡದೇ (ಆದಿಪು. ೪-೮೦). ೨. ಜೀವಿಗಳಿಗೆ ಸಂಬಂಧಿಸಿದ. ೩. ಭೂತ, ಪ್ರೇತಾದಿಗಳಿಗೆ ಸಂಬಂಧಿಸಿದ. (ನಾ). ೪. ಪಂಚಭೌತಿಕವಾದುದು ; ಶರೀರ ಮುಂತಾದುವು. ೫. ಜ್ಯೋತಿಶ್ಶಾಸ್ತ್ರವನ್ನು ಬಲ್ಲವನು ; ಜ್ಯೋತಿಷಿ : ಮಲೆಯ[ದೆ] ಶಾಂಬ್ಯ ಮಟ್ಟವಿರು ಭೌತಿಕ ಪೊಂಗಿ ಕಡಂಗಿ ಬಾಗದಿರ್ (ಎಕ. II. ೬೪-೩೭ ; 1100) ; ದುರ್ಭಿಕ್ಷಾದಿ ರಾಜ್ಯಾರಿಷ್ಟ ಕ್ಕೇನಂ ಮಾಳ್ಪೆನೆಂದು ಭೌತಿಕರಂ ಬರಿಸಿ ಕೇಳ್ವುದುಂ (ರಾಜಾವ. ೬೩). ೬. ತಪಸ್ವಿ ; ತಾಪಸಿ : ಆ ಭೌತಿಕನರಸಂ ತಾನೆಂದು ಉಡುವೆನಲ್ಲಿಂ ಕನ್ಯಾವರೆಯುಂ ಗತಯೌವನರ್ಗನಲುರಿದಂ ವಿರಹಾಗ್ನಿ ಪೆರ್ಚೆ ಶಾಂತನು ಭೂತಂ (ನೇಮಿಪು. ೩-೨೬). ೭. ಶಿವ ; ಈಶ್ವರ. ೮. ಮುತ್ತು ; ಮೌಕ್ತಿಕ. ೯. ಜೀವಿ ; ಪ್ರಾಣಿ. ೧೦. ಭೂತ, ದೆವ್ವ ಮುಂತಾದ ದುಷ್ಟ ಶಕ್ತಿಗಳಿಂದ ಆವೃತವಾಗುವುದು ; ದೆವ್ವ ಹಿಡಿಯುವುದು. [ಸಂ.]

**ಭೌತಿಕತೆ** (ನಾ). ೧. ಐಹಿಕವಿಚಾರಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಡುವ ಪ್ರವೃತ್ತಿ : ಸ್ಟೂಅರ್ಟನ ಕಣ್ಣಿಗೆ ಮಾತ್ರ ಇದು ಭಾರತೀಯ ಯುವಕರ ಭಯಂಕರವಾದ ಭೌತಿಕತೆಯೆಂದೇ ಕಾಣುತ್ತದೆ (ಹೊಸಕ್ಷ. ೨೯೬). ೨. ಪಂಚಭೂತಗಳಿಂದ ಆಗುವಿಕೆ : ಈ ರೀತಿ ಭೌತಿಕತೆ, ಪಾರಮಾರ್ಥಿ ಕತೆ ಹಾಗೂ ದಾರ್ಶನಿಕತೆ ಇವು ಈ ಲಿಂಗಗಳ ಮೂರು ಪ್ರಧಾನಸ್ವರೂಪ ಗಳು (ಶರಶ. ೧೯೬). [ಸಂ. ಭೌತಿಕತಾ]

**ಭೌಮ** (ಗು). ೧. ಭೂಮಿಗೆ ಸಂಬಂಧಪಟ್ಟ ; ಭೂಮಿಗೆ ಸೇರಿದ : ಕಣ್ಗೊಂಡುದೆತ್ತಂ ಪರಿಯುತ್ತುಂ ಭೌಮವೈಹಾಯಸವಧವಿಧಮುಂ ತೋಱುತರಂ ದಂತಿಸೈನ್ಯಂ (ಜಗಪು. ೭-೬೦). ೨. ಮಣ್ಣಿನಿಂದ ಮಾಡಿದ. (ನಾ). ೩. ಭೂದೇವಿಯ ಮಗ ; ಅಂಗಾರಕ ;

ಮಂಗಳ: ಕುಜ : "ಅಂಗಾರಕಂ ವಕ್ರನವನಿಜಂ ಭೌಮನೆನೆ ಮಂಗಳಾಖ್ಯಂ" (ಶಂಗಾರಾ. ೧೦-೬) : ಧ್ರುವಮಬ್ದಾಹಿತನೊಂದು ಭೌಮನೆರಡಿಂದುತ್ಪನ್ನನೊಂದಿತ್ತು . . . ಸಂವತ್ಸರಕ್ಕೀಶರಪ್ಪವರ್ (ಬಾತಕ. ೯-೧೪) : ಭೌಮನು ದಗ್ರಗ್ರಹದೊಳ್ . . . ಧಿಷಣಂ ಕರ್ಕಿಯೊಳ್ಸಂತಮಿಂತಿರ್ದಿನಂ . . . ಪುತ್ರನಂ ಪೆತ್ತಳಾಗಳ್ (ಕುಸುಮಾವ. ೧೦-೨೬) : ಜೀವ ಭಾಸ್ಕರ ಭೌಮರುಚ್ಚಸ್ಥಾಯಿಗಳು ಗುರು ಮಂದರಧಿಪದಾಯಿಗಳು ವಿಪರೀತ ದೆಸೆ ಬುಧ ಶುಕ್ರ ರಾಹುಗಳ್ ಯಾಯಿಗಳಿಗಪಜಯ ನಿವಾಸಸ್ಥಾಯಿಗೊಳ್ಳಿತು (ಕುಮಾರ. ೨೨-೪). 'ಭೌಮವಾರ' ನೋಡಿ. ೪. ಭೂದೇವಿಯ ಮಗ : ನರಕಾಸುರ : ಚೋದಿತರಥನಸುರಾರಿಗೆ ಮಾರಾಂತನಾಜಿಭೀಮ ಭೌಮಂ (ಜಗ. ೧೨-೩೫) : ಭೌಮ ನಿರುದ್ಧ ಕನ್ಯಾನಿಳಯವನು ದೈತ್ಯಾರಿ ಹೊಕ್ಕನು (ಜಭಾಗ ೧೦-೬೯-೪೯). ೫. ಭೂಮಿಯಲ್ಲಾಗುವ ಉತ್ಪಾತ; ಭೂಕಂಪನ: ಭೂಮಿಯೊಳಪ್ಪವು ಭೌಮಂ ಜೀಮೂತದೊಳಪ್ಪುದಾಂತರಿಕ್ಷಂ ಗ್ರಹದಿಂ ತಾಮಪ್ಪುದು ದಿವ್ಯಮೆನಲ್ ಈಮತ್ರಯದಿಂದಮೆಸೆವುತ್ಪಾತಂಗಳ್ (ಅಡ್ಡಿಮ. ೩-೧). ೬. ಭೌತಿಕವಾದ ವಸ್ತು; ಭೌತದ್ರವ್ಯ. ೭. ನೀರು : ಜಲ. ೮. ಬೆಳಕು : ಪ್ರಕಾಶ. ೯. ಆಕಾಶ ; ಗಗನ. ೧೦. ಅತ್ರಿ ಮುನಿಯ ಹೆಸರು. ೧೧. ಕಾಳು ; ಧಾನ್ಯ. ೧೨. [ಅಶ್ವಶಾ] ಕುದುರೆ ಸವಾರಿಯ ಒಂದು ರೀತಿ : ಪರಿಬಂಧನಮುಂ ಭೌಮಂ ಪ್ರೈಹಾಯುಸಂ ವಯಸ ಯಂತ್ರಕ್ಷೇತ್ರ ಮಹಾ ಸತ್ಯಂ ದ್ವಾರಮೆಂಬ ಭೇದಂಗಳಂ ನೇಜಿಲು ರೇಣಿಗಸ್ಯಪತಿ ಶಾಸಿ ಬಲ್ಲಂ (ಶಾಪತ. ೧-೨೦). [ಸಂ.]

**ಭೌಮಚಾರಿ** (ನಾ). [ನಾಟ್ಯ] ಭೌಮ ಮತ್ತು ಆಕಾಶವೆಂಬ ಚಾರಿಗಳಲ್ಲಿ ಒಂದು ಬಗೆ : ಕಾಲು ನೆಲವನ್ನು ಬಿಟ್ಟಿರದೆ ಚಲಿಸುವ ಒಂದು ಬಗೆಯ ಚಲನೆ : ಭೌಮಚಾರಿಗಳನ್ನು ಮುಷ್ಟಿಯುದ್ಧ, ಅಂಗಹಾರ, ನಾಟ್ಯ ಇವುಗಳಲ್ಲಿ ಉಪಯೋಗಿಸಬೇಕು (ಲಾಕ್ಷರಂ. ೩೦೬ ಗದ್ಯಾನುವಾದ). [ಸಂ. ಭೌಮಚಾರೀ]

**ಭೌಮನಿಮಿತ್ತ** (ನಾ). [ಜೈನ] ಎಂಟು ಬಗೆಯ ನಿಮಿತ್ತಗಳಲ್ಲಿ ಒಂದು : ಭೂಮಿಯ ಮೇಲೆ ಸಂಭವಿಸುವ ಆಗುಹೋಗುಗಳಿಂದ ಶುಭಾಶುಭ ಫಲಗಳನ್ನು ತಿಳಿದುಕೊಳ್ಳುವುದು : ಭೂಮಿಯ ಘನ. ಸುಷಿರ. ಸ್ನಿಗ್ಧತೆ. ರೂಕ್ಷತೆ ಮೊದಲಾದುವುಗಳಿಂದ ತಾಮ್ರ, ಕಬ್ಬಿಣ. ಬೆಳ್ಳಿ, ಬಂಗಾರಗಳ ಹಾನಿ ಅಥವಾ ವೃದ್ಧಿಯನ್ನು ತಿಳಿಯುವುದು : ಭೂಮಿಯ ಕಟುತ್ವಮೊದಲಾದುದಂ ನೋಡಿ ನಯಾನಯಂ ಪೇಳ್ವುದಂ ಭೌಮನಿಮಿತ್ತಮೆಂಬುದು (ಶ್ರಾವಕಾ. ೯೩-೭೭). 'ನಿಮಿತ್ತ' ನೋಡಿ. [ಸಂ.]

**ಭೌಮಮಂಡಲ** (ನಾ). [ನಾಟ್ಯ] ಚಾರಿಗಳ ಸಮುದಾಯವಾದ ಭೌಮಮಂಡಲ ಮತ್ತು ಆಕಾಶಮಂಡಲ ಎಂಬ ಮಂಡಲದ ಎರಡು ಬಗೆಗಳಲ್ಲಿ ಒಂದು : ಭ್ರಮರ, ಆಸ್ಕಂದಿತ, ಆವರ್ತ, ಶಕಟಾಸ್ಯ, ಅಡ್ಡಿತ, ಸಮೋಸರಿತ [ಮತ್ತಲ್ಲಿ], ಅಧ್ಯರ್ಧಿಕ, ಪಿಂಡಿಕಾಕ್ರೀಡಿತ, ಪಿಷ್ಟಕುಟ್ಟ, ಚಾಷಗತಿ ಈ ಹತ್ತು ಭೌಮಮಂಡಲಂಗಳ್ (ಲಾಕ್ಷರಂ. ೬-೪೨). [ಸಂ.]

**ಭೌಮವಾರ** (ನಾ). ಮಂಗಳವಾರ : ಭೀಮನಿಗೆ ಭಾನುವಾರವಾದರೇನು ? ಭೌಮವಾರವಾದರೇನು ? ಭೋಜನ ಸಿಕ್ಕಿದರೆ ಸೈ (ಗಾದೆ). [ಸಂ.]

**ಭೌಮವಾಸರ** (ನಾ). ಭೌಮವಾರ : ಸಂಕಲ್ಪ ಹೇಳುವಾಗ ಭೌಮವಾಸರ ಎಂದು ಹೇಳುವುದು ಪದ್ಧತಿ (ರೂಢಿ). [ಸಂ.]

**ಭೌಮವಿಹಾರ** (ನಾ). ಭೂಲೋಕದಲ್ಲಿ ಮಾಡುವ ವಿನೋದಾರ್ಥವಾದ ಸಂಚಾರ : ಎನ್ನುಂಬಿನ ಭರ್ತಾರಂ ಮಣಿಚೂಳನೆಂಬೊಂ ವಿದ್ಯಾಧರನಾತನೊಡನೆ ಭೌಮವಿಹಾರಾರ್ಥಂ ತೊಟಲ್ವಲ್ಲಿ (ವಡ್ಡಾರಾ. ೩೫-೨) ; ಭವನವಾಸಿಗಳೊಳನಂತವೀರ್ಯನುಂ ಮಹಾಬಲನುಮೆಂಬ ಪೆಸರೊಳಸುರರಾಗಿ ಪುಟ್ಟಿ ಭೌಮವಿಹಾರಾರ್ಥಂ ಪೋಗಿ (ಚಾಂಪು. ೯-೭೭ ವ). [ಸಂ.]

**ಭೌಮಾಗ್ನಿ** (ನಾ). ಭೂಮಿಯಲ್ಲಿರುವ ಮರ. ಕಲ್ಲು ಮೊದಲಾದುವುಗಳಿಂದ ಉಂಟಾಗುವ ಬೆಂಕಿ : ತರು ಪಾಷಾಣಾದಿ ಗರ್ಭಸ್ಥಮಾಗಿ ವ್ಯಕ್ತಮಪ್ಪ ಭೌಮಾಗ್ನಿ . . . ಸೂಕ್ಷ್ಮ ಬಿಂದುರೂಪ ಪಂಚಾಗ್ನಿಗಳನುಂ (ವಿವೇಕ. ೦೪೪). [ಸಂ.]

**ಭೌಮಾಷ್ಟಮಿ** (ನಾ). ಮಂಗಳವಾರದಂದು ಬರುವ ಅಷ್ಟಮಿ : ಆ ನೃಪತಿ ಬಟೀಕೆ ತಾಯುಂ ತಾನುಂ ಚಂಡಿಕೆಯ ಪೂಜೆಗೆಂದೆಟ್ಟುಂದಾ ನಾನಾವಿಧವರ್ಜನೆಯಿಂ ಮಾನೋಮಿಯ ಮುಂದೆ ಬಂದ ಭೌಮಾಷ್ಟಮಿಯೊಳ್ (ಜುಕೋತ. ೩-೨೩). 'ಜೀವದಯಾಷ್ಟಮಿ' ನೋಡಿ. [ಸಂ. ಭೌಮಾಷ್ಟಮೀ]

**ಭೌರಿಕ** (ನಾ). ಅರಮನೆ ಮುಂತಾದವುಗಳ ಭಂಡಾರದ ಅಧಿಕಾರಿ ; ಕೋಶಾಧಿಕಾರಿ: "ಭೌರಿಕಃ. ಕನಕಾಧ್ಯಕ್ಷಃ–ಭಂಗಾರದ ಅಧಿಕಾರವುಳ್ಳವನು. ಖಜಾನೆ ಅಧಿಕಾರಿ" (ಸಿದ್ಧಾಂ. ೨೩೭) ; ತಣ್ಕೊಳಿಪ ಭಂಡಾರದ ಮನೆಯು ನೆಯ್ದು ಕಾಳ್ಕಿರ್ದು ತದ್ಭೌರಿಕಂಗೆ ಪೇಳ್ದು (ಕವ್ಯರಾ. ೩-೪೦). [ಸಂ.]

**ಭೌಷೆ, ಭೋಷ** (ನಾ). ಮರ್ಯಾದೆ : ಎಲ್ಲರುಂ ಮೆಲ್ಲನೆ ಕಯ್ಯುಮಂ ಕಾಲುಮಂ ಪಿಡಿದೆತ್ತಿ ಕೊಂಡು ಹೋಗಿ ತಮ್ಮಾಳುಷ್ಯ ಭೌಷೆ [ಪಾಠಾಂ. ಕಲುಷೆ. ಬಾಷೆ]ಗಳಂ ಪೂಜಗಿಡುವಂತೆ ಚಪ್ಪರದ ಪೂಜಗೆ ಮೆಲ್ಲನಿಳುಪಿ (ಇಂದಿರ. ೬-೩೩). **ಭೋಷ** : ಹಮ್ಮಿನಿಂದಿದ್ದವರ ನೀಗಿದ ಹಮ್ಮಿನಿಂ ಸುರರಾಜ ಭೋಷವ ಹೋಗಲಾಡಿದನು (ಕುಕಿರಾ. ೬-೩೦); ದೇಶಾವರಕ್ಕೆ ಹೋಗಿ ಭೋಷ ಕಳೆದುಕೊಂಡ (ಗಾದೆ): ನಹುಷರಾಯನ ಭೋಷ ನಾಕದಲ್ಲಿ ಹೋಯಿತು (ಗಾದೆ). 'ಭೋಷವಂತ' ನೋಡಿ. [ ? ]

**ಭೌಳಿ** (ನಾ). [ಸಂಗೀತ] ಒಂದು ರಾಗದ ಹೆಸರು: ಸಮಸ್ತರಾಗಂಗಳೊಳಗೆ ರಾಮಕ್ರಿಯೆ . . . ಭೌ[ಪಾಠಾಂ. ಬೌ]ಳಿ . . . ಮಧ್ಯಮಾವತಿಯೆಂಬ ಮೂವತ್ತಾಱುರಾಗಂಗಳೇ . . . ಪ್ರಸಿದ್ಧ ಗೊಂಡಿರ್ಪುವು (ವಿವೇಕ. ೨೩೪). [ಸಂ. ಭೌಲೀ]

**ಭ್ಯವಹಾರ** 'ಬೆವಹಾರ' ನೋ.

**ಭ್ರಂಶ** (ನಾ). ೧. ಕೆಳಕ್ಕೆ ಬೀಳುವುದು; ಕುಸಿಯುವುದು: ಪತನ. ೨. ಓಡಿ ಹೋಗುವುದು; ಪಲಾಯನ. ೩. ಕಮ್ಮಿಯಾಗುವುದು; ಕುಗ್ಗುವುದು. ೪. ಬೇರೆಯಾಗುವುದು ; ಅಗಲುವುದು. ೫. ನಷ್ಟ; ಹಾನಿ. ೬. ನಾಶ; ಹಾಳು. ೭. ಕ್ರಮ ತಪ್ಪುವುದು; ಹಾದಿ ತಪ್ಪುವುದು. ೮. ಮರೆಯಾಗುವುದು; ಅದೃಶ್ಯವಾಗುವುದು. ೯. [ಕಾವ್ಯಮೀ] (ನಾಟಕದಲ್ಲಿ) ಉದ್ರೇಕದಿಂದ ಬಾಯಿ ತಪ್ಪುವುದು. [ಸಂ.]

**ಭ್ರಂಶಿಸು** (ಕ್ರಿ). ಭ್ರಂಶವನ್ನುಂಟುಮಾಡು : ತತ್ತ್ವಜ್ಞಾನರೂಪದಲಿ ಭ್ರಂಶಿಸುವ ಮಾಯಾಗುಣಪ್ರಧ್ವಂಸನವನಭಿಮಾಸಿಸುವನಾ ಕಂಸಹರನು (ಶಭಾಗ. ೨-೩-೩೪). [ ಭ್ರಂಶ + — ಇಸು ]

**ಭ್ರಕುಂಸ** (ನಾ). ಹೆಣ್ಣುವೇಷವನ್ನು ಧರಿಸಿರುವ ನಟ : "ಭ್ರಕುಂಸಃ. ಭ್ರುಕುಂಸಃ, ಭ್ರೂಕುಂಸಃ — ೩ ಸ್ತ್ರೀವೇಷಧಾರೀ — ಹೆಣ್ಣುವೇಷವನ್ನು ಧರಿಸಿದ — ನರ್ತಕಃ — ಪುರುಷಃ, ಕುಣಿಯುವ ಗಂಡಿನ ಹೆಸರುಗಳು" (ಸಿದ್ಧಾಂ. ೬೦). [ಸಂ.]

**ಭ್ರಕುಟಿ** (ನಾ). (ಕೋಪ ಮೊದಲಾದ ಕಾರಣಗಳಿಂದ) ಹುಬ್ಬುಗಂಟಿಕ್ಕಿಕೊಳ್ಳುವುದು: "ಭ್ರಕುಟಿಃ. ಭ್ರುಕುಟಿಃ, ಭ್ರೂಕುಟಿಃ — ೩ ಕಣ್ಣಿನ ಹುಬ್ಬುಗಳನ್ನು ಗಂಟಿಕ್ಕುವದಕ್ಕೆ ಹೆಸರುಗಳು" (ಸಿದ್ಧಾಂ. ೭೦). [ಸಂ.]

**ಭ್ರಮ** (ನಾ). ೧. ಅಲೆದಾಡುವುದು : ಸುತ್ತಾಟ. ೨. (ದುಂಬಿ ಮೊದಲಾದ ಕೀಟಗಳಂತೆ) ಹಾರಾಡುವಿಕೆ ; ಭ್ರಮಣ. ೩. ವೃತ್ತಾಕಾರದ ಚಲನೆ : ಗುಂಡಗೆ ತಿರುಗುವುದು : "ಭ್ರಮಃ, ಭ್ರಮಿಃ — ೨ ತಿರುಗುವಿಕೆ, ಸುತ್ತುವಿಕೆ" (ಸಿದ್ಧಾಂ. ೩೫೭). ೪. ಸುಳಿ; ಆವರ್ತ:

"ಆವರ್ತಃ. ಅಂಭಸಾಂ. ಭ್ರಮಃ — ನೀರುಗಳ ಸುಳಿಗುಂಡೀ ಹೆಸರು" (ಸಿದ್ಧಾಂತ. ೬೬). ೫. ದಾರಿ ಬಿಟ್ಟುಹೋಗುವುದು; ಅಡ್ಡದಾರಿ ಹಿಡಿಯುವುದು. ೬. ತಪ್ಪು: ದೋಷ. ೭. ತಲೆಸುತ್ತುವಿಕೆ; ತಲೆ ತಿರುಗುವಿಕೆ. ೮. ತಪ್ಪುತಿಳಿವಳಿಕೆ; ಭ್ರಾಂತಿ: "ಭ್ರಾಂತಿಃ, ಮಿಥ್ಯಾಮತಿಃ, ಭ್ರಮಃ — ೩ ಭ್ರಾಂತಿ. ಅಂದರೆ ಒಂದನ್ನು ಮತ್ತೊಂದನ್ನಾಗಿ ತಿಳಿವು ನಂಬುವಿಕೆ" (ಸಿದ್ಧಾಂತ. ೪೩): ಜನಿತ ಕುದೃಷ್ಟಿ ಭ್ರಮಮತಿಘನಮೋಹತಮಃಪಟಾವೃತಂ ಜಗಂ (ತಂಪ್ರಕೃ. ೯-೩೦). ೯. ತೊರೆ; ಸಣ್ಣಹೊಳೆ. ೧೦. ಕುಂಬಾರನ ಚಕ್ರ; ತಿಗುರಿ. ೧೧. ಬೀಸುವ ಕಲ್ಲು. ೧೨. ಛತ್ರಿ; ಕೊಡೆ. ೧೩. ವೃತ್ತ; ಮಂಡಲ. ೧೪. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು: ಒಂದು ವಸ್ತು ವನ್ನು ಸಾಮ್ಯದಿಂದ ಬೇರೊಂದೆಂದು ತಿಳಿದುಕೊಳ್ಳುವುದು; ಭ್ರಾಂತಿಮದಲಂಕಾರ: ಚಿತ್ರಮೋಹನಂ ಭ್ರಮವಾಕ್ಯಂ (ಕಾವ್ಯಾವ. ೭೦೬). [ಸಂ.]

**ಭ್ರಮಣ** (ನಾ). ೧. ತಿರುಗಾಟ: ಅಲೆದಾಟ: ಸಂಚಾರ: ಸುತ್ತಮುತ್ತಲೂ ಇದ್ದ ರಮಣೀಯಸ್ಥಳಗಳಲ್ಲಿ ಭ್ರಮಣ ಮಾಡುವುದೆಂದು ಅವನು ನಿಶ್ಚಯಿಸಿಕೊಂಡನು (ವ್ಯಾಸಂ. ೪೦). ೨. ಗುಂಡಗೆ ತಿರುಗುವುದು; ಪರಿಭ್ರಮಣ: ಅದಜೀನವಿರಳವಾ ತೂಳಿಕಾಭ್ರಮಣಪರಿಗತ ತೂಳಿಕಾತಳಮಪ್ಪ ಮನಕ್ಕೆಂತಾನುಂ ಕಾಲಲಬ್ಧಿವಶದಿಂ ನಿವೃತ್ತಿಪರಿಣತಿಯೊಳ್ ಪರಿಣಮಿಸಿದ ಸುಸ್ಥತೆಯುಂ ವ್ಯರ್ಥಂ ಮಾಡದೆ (ತಂಪ್ರಕೃ. ೪-೦೬ ವ). ೩. ಮಲ್ಲಯುದ್ಧದ ಒಂದು ವರಸೆ; ಜಟ್ಟಿ ಕಾಳಗದ ಒಂದು ಭಂಗಿ: ನಂದಗೋಪನಂದನಂ . . . ನಿರ್ವರ್ತನಾವರ್ತನ ಭ್ರಮಣ ವಲ್ಗನ ಪ್ಲವನಾವಸ್ಥಾನಾದಿ ಕ್ರಿಯಾಪರಿಣತಂ ತಿರಿಪಿ(ದೊಕ್ಕರಿಸಿ)ನಿಂದಾಗಳ್ (ಜಾಪುಂಪು. ೩೪೧). ೪. ಗ್ರಹಗಳು ತಿರುಗುವ ಪಥ: ಕಕ್ಷೆ. ೫. ಅದುರುವಿಕೆ; ಕಂಪನ: ಓಷ್ಠಭ್ರಮಣ ಮೋಚಾಗರ್ವಮೋಚಮೆನಿಸುವ ವಾಮೆಯೂರು ಚಾಂಚಲ್ಯಮಾಗಿ ಪ್ರಮುದಿತಾಂತಃಕರಣಮಾಗಲ್ (ವಂಕಾರಾ. ೫-೦೦-೪೩). ೬. ತತ್ತರಿಸುವಿಕೆ; ಅಸ್ಥಿರತೆ. ೭. ಕಂಗೆಡುವಿಕೆ; ತಬ್ಬಿಬ್ಬು: ದಿಗ್ಭ್ರಮೆ. ೮. ತಲೆ ಸುತ್ತುವಿಕೆ; ತಲೆ ತಿರುಗುವಿಕೆ. ೯. ತಪ್ಪು ಮಾಡುವಿಕೆ. ೧೦. ಸುತ್ತಿಸುವಿಕೆ: ತಿರುಗಿಸುವಿಕೆ. ೧೧. ಪ್ರವಾಸ; ಯಾತ್ರೆ. ೧೨. ಕಟ್ಟಡದ ಅರ್ಧಗೋಲಾಕಾರದ ಮೇಲ್ಭಾವಣಿ; ಗುಮ್ಮಟ. ೧೩. [ನಾಟ್ಯ] ಕಣ್ಣಿನ ಚಲನೆಯ ಒಂದು ಬಗೆ: P "ಅಲಿಗಳನ್ನು ರೆಪ್ಪೆಗಳ ಮಧ್ಯದಲ್ಲಿ ಮಂಡಲಾಕಾರವಾಗಿ ಜಾಗ್ರತೆ ಸುತ್ತಿಸುವುದು" (ಲಾಸ್ಯರಂ. ೨೭೪ ಗದ್ಯಾನುವಾದ): ಭ್ರಮಣ, ವಲನ, ಪಾತ, ಚಲನ, ಪ್ರವೇಶ, ವಿವರ್ತ, ಸಮುದ್ವೃತ್ತ, ನಿಷ್ಕ್ರಾಮ, ಪ್ರಾಕೃತ—ಈ ಒಂಭತ್ತು [ಸ್ವನಿಷ್ಠ] ಆಲಿಯ ಭೇದಂಗಳಿಂ ಎರಡೆವೆಗಳ ಮಧ್ಯದೊಳಂ ತಿರುಗಲ್ ಪಟುವಾಗಿ ತಾರೆಗಳ್ ಭ್ರಮಣಾಖ್ಯಂ (ಲಾಸ್ಯರಂ. ೩-೫೪ ವ). ೧೪. (ಅಲಂ) ಹುಟ್ಟುಸಾವುಗಳ ಪರಂಪರೆ; ಭವಾವಳಿ: ಪುಟ್ಟಿ ಕಟ್ಟಿದಾಯುಷ್ಯದ ವಿನಾಶದೊಳ್ ಸತ್ತು ನಾನಾ ಭ್ರಮಣದಿಂ ಒಂದು ಪೂರ್ವೋಕ್ತಸಮಯದ ತದ್ವಿತೀಯಾದಿ ಸಮಯದೊಳ್ ಪುಟ್ಟುತ್ತುಂ ಸಾಪುತ್ತುಂ (ಸುಕುಮಾ. ೬-೬ ವ). [ಸಂ.]

**ಭ್ರಮಣಿ** (ನಾ). ೧. (ಪ್ರಿಯ, ಪ್ರೇಯಸಿಯರು ಸೇರಿ ಆಡುವ ವೃತ್ತಾಕಾರದ ಚಲನೆಯುಳ್ಳ) ಒಂದು ಬಗೆಯ ಆಟ. ೨. ಜಿಗಣೆ. ೩. ಕ್ರೀಡಾಸಂಚಾರ; ವಿನೋದವಿಹಾರ. [ಸಂ. ಭ್ರಮಣೀ]

**ಭ್ರಮಣೆ** (ನಾ). ೧. ಸುತ್ತುವಿಕೆ: ತಿರುಗುತಿರ್ದುದು ವರೂಥಂ ಕುಲಾಲಚಕ್ರದವೊಲಸವಳಿದಂ ಕಪೀಶ್ವರಂ ಭ್ರಮಣೆಯಿಂ ಧ್ವಜದ ಮೇಲೆ (ಕೈಟಭ. ೧೩-೨೦). ೨. ಭ್ರಾಂತಿ: ಭ್ರಮಣೆಯಿಂದಪ್ಪಾಂಗಯೋಗವನು ಮಾಳ್ಪರಿಗೆ ಲಿಂಗಾಂಗಯೋಗವಿಲ್ಲ (ವ್ಯಲಾರ ೩. ೩೨). [ಸಂ. ಭ್ರಮಣ]

**ಭ್ರಮನಿರಸನ** (ನಾ). ತಪ್ಪು ಕಲ್ಪನೆಯನ್ನು ಹೋಗಲಾಡಿಸುವುದು; ಭ್ರಾಂತಿನಿವಾರಣೆ: ಶೀನೂ ಕುಸುಮಾರ ಬಗ್ಗೆ ನರಹರಿಯಲ್ಲಾದ ತಪ್ಪು ತಿಳಿವಳಿಕೆ ಕೂಲಂಕಷವಾಗಿ ಚಿತ್ರಿಸಲ್ಪಟ್ಟಿದೆ. ಶೀನೂನ ಭ್ರಮನಿರಸನವೂ ಹಾಗೆಯೇ (ಕಮಾಕ. ೨೭ ೬೬೦೪); ಗೋವಿಂದರಾಯರಿಗೆ ಕೊನೆಯ ಗಳಿಗೆಯಲ್ಲಿ ಭ್ರಮನಿರಸನವಾಗಲು ಅವರು ತಮ್ಮ ಔದಾರ್ಯವನ್ನೇ ಇನ್ನಷ್ಟು ಹಿಗ್ಗಿಸಬೇಕಾಯಿತು (ಕುಗಮು. ೬೧). [ಸಂ.]

**ಭ್ರಮರ** (ನಾ). ೧. ದುಂಬಿ; ಭೃಂಗ; ಅಳಿ: "ಮಲ್ಲಿಕಾ . . . ಮುಯಿನ್ಕಾರಡಿಯೊಂದೆಲ್ಲಿಯುಮಲರುಣೆಯುಂ ತಾಂ ಬಲ್ಲವರಿಂ ಭ್ರಮರಮಕ್ಕುಂ" (ಕವಿಕಂ. ೬೯); ಕಮಳವಿಮೋಹದಿನೀ ನಿನ್ನ ಮೊಗಕ್ಕೆಳಗುವುದು ತೊಟಿವುದಾ ಸರಸಿಜಮಂ ಭ್ರಮರಂ (ಕವಿರಾ. ೩-೬೯); ತಂದೆ ಜನೇಂದ್ರಪಾದಕಮಲಭ್ರಮರಂ ಜನವಲ್ಲಭೇಂದ್ರಂ (ಅಜಪು. ೧೨-೪೬); ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ (ಬಸವ. ೩೬೪). ೨. ಕುಂಬಾರನ ಚಕ್ರ; ತಿಗುರಿ. ೩. ಕಾಮುಕ: ವಿಟ. ೪. ಮೋಡಗಳ ಘರ್ಷಣೆಯಿಂದ ಉಂಟಾಗುವ ಬೆಳಕು: ಮಿಂಚು: "ಮಿಂಚು ಭುಜಂಗ ಕಾಮುಕ ಮಧುವ್ರತ ಭ್ರಮರಾಂಕಿತಂ" (ನಾನಾರ. ೬೪). ೫. ತಲೆ ಸುತ್ತುವಿಕೆ: ತಲೆ ತಿರುಗುವುದು. ೬. ಬುಗುರಿ. ೭. [ಕಾಮಶಾ]ಸಂಭೋಗದಲ್ಲಿ ಒಂದು ವಿಧ: ಅಲ್ಲಿ ಪುರುಷನ ಲಿಂಗದಲ್ಲಿ ತನ್ನ ಯೋನಿಯಂ ಸಿಕ್ಕಿಸಿ ಪುರುಷನು ಎರಡು ಕಾಲಂ ನೀಡಿ ಮಲಗಿರೆ ಬುಗುರಿಯಂತೆ ಪದ್ಮಾಸನಂಗಳ ಮಾಡಿ ತಿರುಗುತಿರ್ಪುದು ಭ್ರಮರವೆಂಬುದು (ಕಾಮಶಾ. ೨೩೮). ೮. [ನಾಟ್ಯ] ಸ್ಥಿರಹಸ್ತ ಮೊದಲಾದ ಮೂವತ್ತೆರಡು ಬಗೆಯ ಅಂಗಹಾರಗಳಲ್ಲಿ ಒಂದು; P ನೂಪುರ, ವಿಕ್ಷಿಪ್ತಕ, ಅಲಾತ, ಆಕ್ಷಿಪ್ತ, ಉರೋಮಂಡಲ, ನಿತಂಬ, ಕರಿಹಸ್ತ, ಕಟೀಛಿನ್ನ ಎಂಬ ಕರಣಗಳನ್ನು ಕ್ರಮವಾಗಿ ಪ್ರಯೋಗಿಸುವಿಕೆ: ಸಲೆ ನೂಪುರ ವಿಕ್ಷಿಪ್ತಕಮಲಾತಮಾಕ್ಷಿಪ್ತವೆಸೆವುರೋಮಂಡಲಮುಂ ನೆಲೆಗೊಂಡ ನಿತಂಬಂ ಕೇಳ್ ಬಳಸೇ ಕರಿಹಸ್ತಮುಂ ಕಟೀಛಿನ್ನಾಖ್ಯಂ ಇಂತೊಪ್ಪುವೆಂಟುಕರಣಮುಮಂ ತವೆ ಮಾಡಿದೊಡಂಗಹಾರಮೆನಿಕ್ಕುಂ ಸಂತತ ಭರತಾಗಮದೊಳ್ ಕಾಂತೇ ಕೇಳ್ ಭ್ರಮರಮೆಂಬ ಪೆಸರಂ ತಾಳ್ಗುಂ (ಲಾಸ್ಯರಂ. ೫-೨೨). ೯. ಹತ್ತು ಬಗೆಯ ಭೌಮಮಂಡಲಗಳಲ್ಲಿ ಒಂದು: ಚಂದದ ಶಕಟಾಸ್ಯಮಪಸ್ಯಂದಿತವೆಡಪಾದದಿಂದೆ ಬಲದಿಂ ಭ್ರಮರಂ ಸ್ಯಂದಿತಮದು ವಾಮಂ ಬಲದಿಂದಂ ಶಕಟಾಸ್ಯವೆಡದಿ ಚಾಷದ ಗತಿಯುಂ ಬಲಪಾದಂ ಭ್ರಮರಮನೆಡಗೆಲಪಾದಂ ಸ್ಯಂದಿತಾಖ್ಯಮುಂ ಸಮೆಯಲೊಡಂ ಬಳಸೇ ಕೇಳ್ ಭ್ರಮರ[ದ] ಮಂಡಲಮೆಂಬೀ ಪೆಸರನಾಂತು ರಂಜಿಸಿ ತೋರ್ಕುಂ (ಲಾಸ್ಯರಂ. ೯-೬). [ಸಂ.]

**ಭ್ರಮರಕ** (ನಾ). ೧. ದುಂಬಿ; ಭ್ರಮರ: ಅನುನಯದಿನೆಚಗಿದಳ್ ಸೀತೆ ನಗುವಿನಂ ಭ್ರಮರಕಂ ಭ್ರಮದ್ಭ್ರಮರಕಮಂ (ಕುಂರಾಮಾ. ೬-೪೧). ೨. ಮುಂದಲೆಯ ಗುಂಗುರುಕೂದಲು; ಮುಂಗುರುಳು: "ನೊಸಲನಲೆವ ಕುರುಳ್ ಭ್ರಮರಕಮೆಂಬುದು" (ಕರ್ಣಾಟ. ೮೬-೩೬೬); ಬಿಂಡೇಂದುಭಾಲಸ್ಥಲಾಗ್ರಮುಮಂ ಶಾಗೆ ಚಳಲ್ಲಸದ್ಭ್ರಮರಕಂ ಸಂಭೋಗಿನೀ ಪ್ರಾಂತದೊಳ್ ಸಮುಸತ್ತ್ವಂಬಡುವಂತಿರಾಯ್ತು ಸುರತಪ್ರಾರಂಭ ಕೋಳಾಹಳಂ (ಕಾವ್ಯಸಾ. ೬೫೬); ಬಾಷ್ಪಸರಿದ್ವ್ಯಾಲಗ್ನಕೀರ್ಣಭ್ರಮರಕಮಮ್ಲಾನಪಾಂಡುಗಂಡಸ್ಥಲಂ . . . ವ್ಯಥಾನಲ್ಪಸಂಕಲ್ಪಚಿತ್ತಂ ಮುಸುಕಿದರ್ಪಾಲಸ್ಯಭಾವಂ ನೆಗಳ್ದರೆ ವಿರಹಾಕ್ರಾಂತೆ ಶತ್ಕಾಂತೆಯಿರ್ದಳ್ (ರಾಜಶೇ. ೬-೬೬). ೩. ನೀರಿನ ಸುಳಿ; ಆವರ್ತ. ೪. (ಸುತ್ತು ತಿರುಗುವಾಗ) ಮೊರೆಯುವ ಬುಗುರಿ. [ಸಂ.]

**ಭ್ರಮರಕೀಟ** (ನಾ). ಕಣಜದ ಹುಳು: 'ಭ್ರಮರಕೀಟನ್ಯಾಯ' ಪರಾ. [ಸಂ.]

**ಭ್ರಮರಕೀಟನ್ಯಾಯ** (ನಾ). ಕಣಜದ ಹುಳುವಿನ ಗೂಡಿನಲ್ಲಿರುವ ಯಾವುದಾದರೊಂದು ಹುಳುವು, ಕಣಜವು ಬಂದು ತನ್ನನ್ನು ಚುಚ್ಚುವುದೆಂಬ ಭೀತಿಯಿಂದ ಸದಾ ಅದನ್ನೇ ನೆನೆಯುತ್ತಿದ್ದು, ಕೊನೆಗೆ ಕಣಜದ ಹುಳುವಿನ ಆಕಾರವನ್ನೇ ಪಡೆಯುವ ದೃಷ್ಟಾಂತ: ಭ್ರಮರಕೀಟನ್ಯಾಯದಂದದಲಿ ನೀನೊಲಿಯೆ ತೃಣ ಪರ್ವತವು ಪುಸಿಯೇನು (ಹಂಸಾ. ೪೦) ; ಶಿವಾಗಮವು ಭ್ರಮರಕೀಟನ್ಯಾಯದಿಂದ ಶಿವ ಜೀವೈಕ್ಯವನ್ನು ಪ್ರತಿಪಾದಿಸುತ್ತದೆ (ಚೆ.ಬ. ೬೭). [ಸಂ.]

**ಭ್ರಮರವಿಲಸಿತ** (ನಾ). ೧. ತುಂಬಿಯ ಲೀಲೆ.–ವಿಲಾಸ ; ತುಂಬಿಯ ಹಾರಾಟ. ೨. [ಛಂದ]ಪ್ರತಿಯೊಂದು ಸಾಲಿನಲ್ಲೂ ಹನ್ನೊಂದು ಅಕ್ಷರಗಳುಳ್ಳ, ತ್ರಿಷ್ಟುಪ್ ಛಂದಸ್ಸಿಗೆ ಸೇರಿದ ಒಂದು ವೃತ್ತ ; ಪ್ರತಿಯೊಂದು ಸಾಲಿನಲ್ಲೂ ಮಗಣ, ಭಗಣ, ನಗಣ, ಲಘು ಮತ್ತು ಗುರು –ಹೀಗೆ ಗಣನಿಯಮವುಳ್ಳ ವೃತ್ತ : ಪವಮಾತುರ್ವೀಶಿ ದಿವಿಜ ಲಗಂ ತಾವೆತ್ತಂ ಬಂದಿರೆ ಯತಿ ಚತುರೋದ್ದಾಮಂ ವೃತ್ತಂ ಘನಜಘನೆಯುಗೇ ನಾಮಂ ಶ್ರೀಮದ್ಭ್ರಮರವಿಲಸಿತಂ (ಛಂದೋಂಬು. ೨-೨೨೦). [ಸಂ.]

**ಭ್ರಮರವೃತ್ತಿ** (ನಾ). ೧. ನಾನಾ ಬಗೆಯ ಹೂವುಗಳಿಂದ ರಸವನ್ನು ಸಂಗ್ರಹಿಸುವ ದುಂಬಿಯ ಕೆಲಸ : ತೊಟ್ಟು ಹನಿ ರಸಕ್ಕಾಗಿ ಹುಡುಕುವ ಹುಚ್ಚು ಹಿಡಿದಿಹ ಹುಳಿಕೆ ಭ್ರಮರವೃತ್ತಿಯು ಬಿಡಿಸಿ ಸುಗ್ಗಿಸು ಒಳಿಕೆ ಬೆಳಕಿನ ಕಳಿಕೆ (ಹೃದಸ. ೦೪-೦೪). ೨. ಚಾಂಚಲ್ಯ ; ಅಸ್ಥಿರಪ್ರವೃತ್ತಿ: ಮೊದಲಿನಿಂದಲೂ ಬಲ್ಲೆ ನಿಮ್ಮ ಭ್ರಮರವೃತ್ತಿ, ಎದುರಿಗಿರುವ ಹೂವಿನಿಂದ ಸೆಳೆಯಲ್ಪಟ್ಟು ಅದರಲ್ಲಿಯೇ ರಮಮಾಣನಾಗುವುದು (ದಾಸಹು. ೬೦). [ಸಂ.]

**ಭ್ರಮರಹಿತ** (ನಾ). ೧. ದುಂಬಿಗೆ ಅನುಕೂಲವಾದುದು.—ಹಿತವನ್ನುಂಟುಮಾಡುವುದು. ೨. ಭ್ರಾಂತಿ ಅಥವಾ ತಪ್ಪುಕಲ್ಪನೆ ಇಲ್ಲದುದು ; ಯಥಾರ್ಥಜ್ಞಾನವುಳ್ಳುದು. ೧, ೨ : ಭ್ರಮರಹಿತಂ ವ್ಯಾಭಾತಿಕಸಮೀರನೆಸಗಿದುದು ಪೋಲ್ತು ಸುವಿಧಿಯ ಬಗೆಯಂ (ಕುಸ್ಮಪು. ೦೩-೩೬) ; ಭ್ರಮರಹಿತಾಮೋದಪ್ರದ ಸುಮನೋಗಣಹೃದ್ಯಂ . . . ನೀತಿ ಸುರಪಮೀರುಹಂ (ರಾಜಶೇ. ೦೩-೦೩).

[ ಸಂ. ( ಭ್ರಮರ + ಹಿತ : ಭ್ರಮ + ರಹಿತ )]

**ಭ್ರಮರಾಳಕಿ** (ನಾ). ದುಂಬಿಯಂತೆ ಕಪ್ಪಾದ ಮುಂಗುರುಳುಳ್ಳವಳು: ಲೀಲೆಯೊಳ್ ತಾಮ ನಡೆಪಿದ ಕೇಳೀವನಲತೆಗಳಂ ನಿರೀಕ್ಷಿಸಿ ಸುಯ್ದಾವಾಳವಳಯಂಗಳಂ ಭ್ರಮರಾಳಕಿಯರ್ ಬಾಷ್ಪವಾರಿಯಿಂ ಪೂರಿಸಿದರ್ (ಪುಶ್ಪಪು. ೦೩-೯೯). [ ಸಂ. ಭ್ರಮರಾಲಕೀ ]

**ಭ್ರಮರಿ** (ನಾ). ೧. ಹೆಣ್ಣುದುಂಬಿ. ೨. ಬುಗುರಿ : ವಾಯಸದಂತೆ ನೋಡು ಬಕನಂತಿರೆ ಮೆಲ್ಲನೆ ಮೆಟ್ಟು ಕಚ್ಛಪೋಪಾಯದವದಂಗು[ಶಾಕಾಂ.೧] ನಿಲ್ ಭ್ರಮರಿಪೊಲ್[ಶಾಕಾಂ. ಯೊಳ್]ಭ್ರಮಿಯಂತಿರೆ ಬೆಚ್ಚರಾಗು (ಕಪುಪ. ೨೩೦ ಕೃಯೋ ; ಕಾವ್ಯಾವ. ೪೦೨ ನೋ). ೩. ಸುತ್ತುವುದು ; ತಿರುಗುವುದು : 'ಭ್ರಮರಿಗುಡು', 'ಭ್ರಮರಿಗೊಳಿಸು' ಪರಾ. ೪. ಸುತ್ತಿಸುವುದು ; ತಿರುಗಿಸುವುದು : (೩). ೫. [ಯೋಗ] ಪ್ರಾಣಾಯಾಮದ ಒಂದು ಭಾಗವಾದ ಕುಂಭಕದಲ್ಲಿನ ಒಂದು ಪ್ರಕಾರ : ಸೂರ್ಯಭೇದನ ಉಜ್ಜಾಯಿ ಸೀತ್ಕಾರಿ ಶೀತಳ ಭಸ್ತ್ರಿಕೆ ಭ್ರಮರಿ ಮೂರ್ಛೆ ಕೇವಲವೀ ಅಷ್ಟಕುಂಭಕಪ್ರಕಾರಂಗಳಂ (ಒಬೀಳ. ೦೪೭). ೬. [ನಾಟ್ಯ] ಮಾರ್ಗ ಆಕಾಶಚಾರಿಗಳಲ್ಲಿ ಒಂದು ; "ಅತಿಕ್ರಾಂತಚಾರಿಯಂತೆ . . . ಕಾಲನ್ನಿರಿಸಿ [ಕುಂಚಿತವಾದವನ್ನೆತ್ತಿ] ತ್ರ್ಯಸ್ರಾಕಾರವಲ್ಲಿ ತೊಡೆಯನ್ನೂ ಮೇಲಕ್ಕೆತ್ತಿ ಇನ್ನೊಂದು ಕಾಲಿನ ಅಂಗಾಲಿನಿಂದ ಸುತ್ತುವುದು" (ಚಾಕ್ಯರಂ. ೩೦೯ ಗದ್ಯಸಾರ) : ನೇವಣೆಕರಣ ಭ್ರಮರಿಗಳನಱಿದು ತರುಣಿ ರಂಗಸ್ಥಲದಲಿ ನರ್ತಿಸಿದಳು (ಶಿತಸಂಕಾ. ೯-೯೪); ಅತಿಕ್ರಾಂತಚಾರಿಯಂ ಸಮೆದತಿತ್ರ್ಯಸ್ರದಿನೂರುಮೂರ್ಧ್ವವರ್ತನವಾಗಲ್ ಸತಿ ಕೇಳ್ ಮತ್ತೊಂದಂ ಪದದ ತಲದಿನಾಜಿ ತಿರುಪುಗೆಯ್ದು ಭ್ರಮರಿಯೆನಿಕ್ಕುಂ (ಚಾಕ್ಯರಂ. ೬-೩೨). ೭. ಒಂದು ಬಗೆಯ ವಿದ್ಯೆ : ಪ್ರಜ್ಞಪ್ತಿ ಕಾಮರೂಪಿಣಿ . . . ಭ್ರ[ಶಾಕಾಂ. ಭ್ರಾ]ಮರಿ ಆಭೋಗನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಶಾಪುಂಪು. ೦೯೭). [ ಸಂ. ಭ್ರಮರೀ ]

**ಭ್ರಮರಿಗುಡು** (ಕ್ರಿ). ವರ್ತುಳಾಕಾರವಾಗಿ ಸುತ್ತು, – ತಿರುಗು : ಭ್ರಮರಿಗುಡುತ್ತೆ ಕಂತುಕವನಂಗನೆ ಪೊಯ್ಯಲಲಾತಚಕ್ರದಂತಮರ್ದಿರೆ ಸೆಂಡು ವೃತ್ತತೆಯೊಳಂಗನೆ ಮಧ್ಯದೊಳೊಪ್ಪುತಿರ್ದಳುತ್ತಮಪರಿವೇಷಮಧ್ಯದ ಶಶಾಂಕಕಳಾಕೃತಿಯಂತೆ (ಧರ್ಮಾ. ೦೨-೩೦).

[ ಭ್ರಮರಿ + ಕುಡು₁ ( < ಕೊಡು₁ ) ]

**ಭ್ರಮರಿಗೊಳಿಸು** (ಕ್ರಿ). ವರ್ತುಳಾಕಾರವಾಗಿ ಸುತ್ತಿಸು : ತೂಗಿ ತೂಗಿಸುವ ನೀಳ್ತೋಳ್ಗಳ ಕಂಕಣದ ಝಂಕಾರಂ ಭ್ರಮರಮಾಲೆಯಂ ಭ್ರಮರಿಗೊಳಿಸೆಯುಂ (ಅಪಂಪು. ೬-೦೦ ವ).

[ ಭ್ರಮರಿ + ಕೊಳ್₁ + — ಇಸು₃ ]

**ಭ್ರಮರೀಗೀತ** (ನಾ). ಹೆಣ್ಣುದುಂಬಿಯ ಝೇಂಕಾರ. – ಮೊರೆತ : ಭ್ರಮರೀಗೀತಸಮೇತ ಹೇಮನಳಿನೀಶ್ರೀಸಂಗೆಯಂ ನೋಡಿ ನಾಡೆ ಮನಂಗೊಂಡನೀಶ್ವರಂ ಲಲಿತಮತ್ತಾಪಾಂಗೆಯಂ ಗಂಗೆಯಂ (ಅಪಂಪು. ೨೦-೩೪). [ ಸಂ. ]

**ಭ್ರಮಾಂತುಕ** ? (ನಾ). ಸಾಮಾನುಗಳನ್ನು ಹೊತ್ತುಕೊಂಡು ಊರೂರು ತಿರುಗುತ್ತ ವ್ಯಾಪಾರ ಮಾಡುವವನು ; ಸಂಚಾರೀ ವ್ಯಾಪಾರಿ (?) : ಲಕ್ಷ್ಮೀಶ್ವರದೇವರ ಅಂಗಭೋಗಕ್ಕಂ ನಿವೇದ್ಯಕ್ಕಂ ಚೈತ್ರಪವಿತ್ರಾದಿಗಳ್ಗಂ ೧ × ವಿಲ್ಲಿಯ ತಳದೊಕ್ಕಲುಂ ಪೊಜಗಣ ಭ್ರಮಾಂತುಕರುಂ ಮಾಱಿದ ಸೀರೆಗಂ ಅಡಕೆಗಂ ಪೊಂಗೊಂದು ಸಲಿವೀಸವಂ ಆಯಂ ಮಾಡಿಬಿಟ್ಟರು (ಕಶಾಇ. ೦-೦-೮; 1092). [?]

**ಭ್ರಮಾಳ** (ನಾ). [ಸಂಗೀತ] ಒಂದು ರಾಗದ ಹೆಸರು : ನರ್ತಕಿ ಕಕುಭ ಷಡ್ಜಕೌಶಿಕಿ ಭ್ರಮಾಳ ಪಂಚಮಭ್ರಮಾಳ ಪಂಚಮಗಾಂಧಾರ ರೂಪಸಾಧಾರಣವೆಂಬೀಳು ಸಪ್ತಸಾಧಾರಣಜಾತಿಯಿಂದಾದ ರಾಗಂಗಳು (ಒಬೀಳ. ೦೮೭). [ ? ]

**ಭ್ರಮಿ₁** (ನಾ). ಭ್ರಮೆಯುಳ್ಳವನು ; ನಿಶ್ಚಯಜ್ಞಾನವಿಲ್ಲದವನು : ಭ್ರಾಂತನಾದವನು: ವಾಯಸದಂತೆ ನೋಡು ಬಕನಂತಿರೆ ಮೆಲ್ಲನೆ ಮೆಟ್ಟು ಕಚ್ಛಪೋಪಾಯದದಂಗು[ಶಾಕಾಂ. ೧] ನಿಲ್ ಭ್ರಮರಿಪೊಲ್ [ಶಾಕಾಂ. ಯೊಳ್] ಭ್ರಮಿಯಂತಿರೆ ಬೆಚ್ಚರಾಗು (ಕಪುಪ. ೨೩೦ ಕೃಯೋ; ಕಾವ್ಯಾವ. ೪೦೨ ನೋ) : ಭ್ರಮಿ ನಾನು ಭ್ರಮರ; ನಿಃಶಂಕಿ ನೀನು. ಈ ಜಾತಶಂಕೆಯನ್ನು ಶಮಿಯಾಗಿ ಶಮಿಸಿ, ನೀನಾಗಿ ಹೊಸೆದು ಹೊತ್ತಿಸಿದೆ ಬೆಂಕಿಯನ್ನು (ಹೃದಸ. ೨೨-೯). [ಸಂ. ಭ್ರಮಿನ್]

**ಭ್ರಮಿ₂** (ನಾ). ೧. ತಿರುಗುವುದು ; ಅಲೆಯುವುದು : ಭ್ರಮಣ : "ಭ್ರಮಃ, ಭ್ರಮಿಃ—೨ ತಿರುಗುವಿಕೆ, ಸುತ್ತುವಿಕೆ" (ಸಿದ್ಧಾಂತ. ೩೫೭). ೨. ಮಂಡಲಾಕಾರವಾಗಿ ಸುತ್ತುವುದು. ೩. ಸೈನ್ಯದ ಮಂಡಲಾಕಾರವಾದ ರಚನೆ: ಚಕ್ರವ್ಯೂಹ : ಅಲ್ಲದಲಿದ ರಿಪುವಾಹಿನೀಭ್ರಮಿಗಳು ಪರಿದುವೆಣ್ದೆಸೆಗಳ್ಗೆ (ಕೃಮಿಚ. ೨೦-೬೨). ೪. ಒಂದು ನಿರ್ದಿಷ್ಟವಾದ ಸಂಖ್ಯೆಯ ಆಳು, ಕುದುರೆ, ರಥ ಮತ್ತು ಆನೆಗಳನ್ನು ಹೊಂದಿರುವ ಸೇನೆ : ನೂಱಾಳಿಗೊಂದು ಹಯವಿರುತಿರ್ಪುದಾ ಹಯಂ ನೂಱಕಿರುತಿಹುದು ಮೇಣೊಂದು ರಥಮಾ ರಥಂ ನೂಱಕಿಭಮೊಂದಿರ್ಪುದಿಂತಿಭ ಸಹಸ್ರಮಿರೆ ಭ್ರಮಿಯೆಂದೆನಿಸಿಕೊಳ್ವುದು (ಕೃಮಿಚ. ೨೦-೪೪).

೫. ಸುಂಟರಗಾಳಿ. ೬. ನೀರಿನ ಸುಳಿ; ಜಲಾವರ್ತ. ೭. ಕುಂಬಾರನ ಚಕ್ರ; ತಿಗುರಿ. ೮. ತಪ್ಪು: ದೋಷ. ೯. ಚರಕಿ ಯಂತ್ರ; ಕಡೆತದ ಯಂತ್ರ. [ಸಂ.]

**ಭ್ರಮಿತ** (ಗು). ೧. ಸುತ್ತಿಸಿದ; ತಿರುಗಿಸಿದ : ನೀಳ್ದ ಗುರ್ವಿನ ಬಾಹು ಭ್ರಮಿತಾಪ್ರ ಪಿಪ್ರಮಗದಂ ಕೌರವ್ಯರಂ ತಿಂದ ರಕ್ಕಸನೋ ಈತನೊ ಭೀಮಸೇನಂ (ಗದಾಯು. ೬-೩೩). ೨. ಹರಡಿದ; ಪ್ರಸರಿಸಿದ : ಅಮಿತ ಕರುಣಾಮೂರ್ತಿ ದಶದಿಗ್ಭ್ರಮಿತಕೀರ್ತಿಯುದಾರಧೀರಂ (ಬಸವ. ೧೯-೩). (ನಾ). ೩. ಭ್ರಾಂತಿಯನ್ನು ಹೊಂದಿದ ವ್ಯಕ್ತಿ : ಕೂಡಲಸಂಗನವಜೀಯದ ದ್ವಿಜರೆಲ್ಲಾ ಭ್ರಮಿತರು (ಬಸವ. ೫೯೯); ಹಿಂಗದಾಲೋಕಂಗಳುಂ ಭ್ರಮಿತಂಗಳಪವಿತ್ರಂಗಳುಂಪತಾಪಂಗಳಾವಾಸಂಗಳು (ಬಸವು. ೪೦-೫೯). ೪. [ನಾಟ್ಯ] ಪ್ರತ್ಯಂಗಾಭಿನಯದಲ್ಲಿ ಐದು ಬಗೆಯ ಮುಂಗೈಯ ಭೇದಗಳಲ್ಲಿ ಒಂದು; ಮುಂಗೈಯನ್ನು ಸುತ್ತಿಸುವುದು (ರಾಸ್ಕರಂ. ೨೬೪ ಗದ್ಯಾನುವಾದ): ಪ್ರಕಟ ನಿಕುಂಚಿತಮಾಕುಂಚಕ ಚಲಮುಂ ಭ್ರಮಿತ ಸಮದಳುಂ ಪರಿಣತಿಯಿಂ ಸಖಿ ಕೇಳ್ ಮಣಿಬಂಧಂ ಕೌತುಕದಿಂದೈದುಂ ವಿಭೇದದಿಂ ರಂಜಿಸಿಗುಂ (ರಾಸ್ಕರಂ. ೨-೧೫೦). [ಸಂ.]

**ಭ್ರಮಿಯಿಸು** 'ಭ್ರಮಿಸು' ನೋ.

**ಭ್ರಮಿಷ್ಠ** (ನಾ). ಬುದ್ಧಿಯು ಪತೋಟಿಯುಲ್ಲಿಲ್ಲದವನು : ಹುಚ್ಚ : ಆ ವನದ ಭವ್ಯವಾದ ದರ್ಶನವನ್ನು ಬಿಟ್ಟುಕೊಟ್ಟು ಭ್ರಮಿಷ್ಠನಂತೆ ಆಕಾಶವನ್ನು ನೋಡುತ್ತ ಕುಳಿತುಕೊಂಡಿದ್ದನು (ಕಗದ್ಯ. II ೨೦); ಭ್ರಮಿಷ್ಠರಂತೆ ಅಲೆಯುವ ಅವರ ಜೀವಕ್ಕೆ ಯಾವ ತೊಂದರೆಯೂ ಬಾರದಿರಲಿ (ದೂರಕ. ೦೫೨). [ಸಂ.]

**ಭ್ರಮಿಸು, ಭ್ರಮಿಯಿಸು** (ಕ್ರಿ). ೧. ಅಲೆದಾಡು; ಸುತ್ತಾಡು : ತಿರುಗಾಡು : ಭ್ರಮರದಂತೆ ಕುಸುಮಮಂಜರೀರಂಜಿತಲತಾಭವನಂಗಳೊಳ್ ಭ್ರಮಿಸಿಯುಂ (ಕಾದಂಪೂ. ೩೨೪); ಓರೊಮ್ಮೆ ಸುರಭಿ ಪರಿಮಳೋದ್ಗಾರಿಸ್ಮೇರ ಕುಸುಮಮಂಜರೀನಿಕರಭರವಿನತಲತಿಕಾಗೃಹಂಗಳೊಳ್ ಭ್ರಮರಮಿಥುನದಂತೆ ಪುಷ್ಪಾಪಚಯದಿಂ ಭ್ರಮಿಸಿಯುಂ (ಚಂದ್ರಪ್ರ. ೩-೨೮ ವ); ಸರಸಿಜದೊಳ್ಭ್ರಮಿಸುವ ಮಜೀಮುಂಬಿಗಳ ವೃಂದಮಂ ಕೂಡಿಕೊಂಡೆಳವೆಲರ್ಬಂದುದು (ಕೃಖಂಡ. ೬-೨). ೨. ಆಸೆ ಪಡು : ಮರುಳಾಗು ; ಮೋಹಗೊಳ್ : ಭಾವಲಿಂಗವಾದರೆ ಸಕಲವಿಷಯಂಗಳಿಗೆ ಭ್ರಮಿಸುವುದೆ (ಅದಪ. ೩೨-೯೨): ಭ್ರಮಿಸಿ ಮಗಳ್ ಹರಿಣರೂಪಧರಮಿಸುವಾ ನೀರೇಜಭವನಂ ನಿಮಿಷದಲಿ ಹರಿಸಿದನತಿ ಮೃಗವ್ಯಾಧರುದ್ರನಲಾ (ಬಸವು. ೫೪-೪೮): ಇಂತು ಯೋಜನಗಂಧಿಯುರೆ ಬೇಟೆಗೈತಂದು ಶಂತನಿವಳಂ ಕಂಡು ಭ್ರಮಿಸಿ ಕರೆಯಲ್ಕೆ (ತಬಪು. ೫೪-೯). ೩. ಭ್ರಾಂತಿಗೆ ಒಳಗಾಗು: ಸರಿಯಲ್ಲದುದನ್ನು ಸರಿಯೆಂದು ತಿಳಿದುಕೊಳ್ಳು : ತಪ್ಪಾಗಿ ಭಾವಿಸು : ಭ್ರಮಿಸಿ ಸಸಿನೆ ಇದ್ದಂತಿರ್ದ ತುಂಬಿರ್ದಸಮುಸಭೆಯೊಳು ಅಂಜದಿರುಭೋಸುತೂಸದು ತೋಳ್ಗಳೆನ್ತಿ ನೀಡುತ ಹಿಡಿದುದೇನೆನಲು (ಬಸವು. ೨೦-೩): ಲೋಕಪೊಬುದು ವರ್ಣಧರ್ಮವನೌಕಿ ನಡೆವುದು ವೈದಿಕಕ ನಾವಾಕಿವಾಳರು ತಪ್ಪಿ ನಡೆದರೆ ಭ್ರಮಿಸುವರು ಬುಧರು (ಕುಮ್ಯಾದ್ರೋ. ೦೮-೫೩): ಕೆಟ್ಟದ್ದನ್ನು ಒಳ್ಳೆಯದೆಂದು ಭ್ರಮಿಸುತ್ತೇವೆ (ಕಾಂಡಪಟ. ೬೫). ೪. ದಿಗ್ಭ್ರಮೆ ಹೊಂದು : ತಬ್ಬಿಬ್ಬಾಗು : ಭ್ರಮಿಸಿ ನುಡಿಯಂಥ ಸುಮ್ರನಿರ್ಪ ಪರಿಯಂ ಕಂಡು ಕ್ಷಮಿಸಿ ನುಡಿದಂ (ತಬಪು. ೩೩-೯): ಎನಿತೊ ಅರಸರ ಗಲ್ಲನಾದರೂ ಒಮ್ಮೆಯೂ ಕ್ರೌರ್ಯವುಂ ಕ್ಷಾತ್ರವೆಂದವನು ಭ್ರಮಿಸಲಿಲ್ಲ (ಚಂದ್ರಗ. ೫೦-೨). ೫. ಬೆರಗಾಗು : ಅಚ್ಚರಿಗೊಳ್ಳು : ಆದೇ ತೆರನಾದ ತಪಸ್ಸನ್ನು ಆಚರಿಸುತ್ತಿದ್ದ ಋಷಿಗಳೂ ಯೋಗಿಗಳೂ ಪಾರ್ವತಿಯ ಉಗ್ರತಪಸ್ಸನ್ನು ಕಂಡು ಭ್ರಮಿಸುತ್ತಿದ್ದರು (ಒಂಕಲು. ೬೪).

**ಭ್ರಮಿಯಿಸು** : ೧. ಎಮಗೀ ಪೊಟಲೊಳ್ ನಿಚ್ಚಂ ಭ್ರಮಿಯಿಸಿ . . . . ಗ್ರಾಸಮಾತ್ರಮಿಲ್ಲಾಯ್ತು ಸೂರ್ಯಮಿತ್ರಸ್ವಾಮಿ (ಸುಕುಮಾ. ೨-೫೭). ೬. ಭವಾಳಿಯಲ್ಲಿ ತಿರುಗು; ಸಂಸಾರಚಕ್ರದಲ್ಲಿ ತೊಳಲು : ರತ್ನಕಂಠಕನುಂ ರತ್ನಾಯುಧನುಮೆಂಬರ್ ಸಂಸಾರದೊಳ್ ಭ್ರಮಿಯಿಸಿ ಮಹಾಬಲ ಅತಿಬಲರೆಂಬ ಅಸುರರಾಗಿ ಪುಟ್ಟಿ (ವಾರ್ಧಮಪು. ೨೦೫); ಸಮನಿಸಿದ ನಿಷ್ಟಸಂಯೋಗಮನಿಷ್ಟ ವಿಯೋಗಮುಂ ಚತುರ್ಗತಿಗಳೊಳಂ ಭ್ರಮಿಯಿಸಿ ಕೈಕೊಳ್ಳ್ಗುಂ (ಕಂರಾಪಾ. ೪-೦೨೭). [ಭ್ರಮ + – ಇಸು$_3$]

**ಭ್ರಮೆ** (ನಾ). ೧. ಇದ್ದುದನ್ನು ಇದ್ದ ಹಾಗೆ ಗ್ರಹಿಸದೆ ಬೇರೆ ರೀತಿಯಲ್ಲಿ ಗ್ರಹಿಸುವುದು; ವಸ್ತುಸ್ಥಿತಿಗೆ ವ್ಯತಿರೇಕವಾದ ಜ್ಞಾನ; ಭ್ರಾಂತಿ : ಈ ಮನದ ಭ್ರಮೆಯನೆಲ್ಲವ ಮಜೀಸಿ ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸಿ (ಬಸವ. ೨೫೮); ಭಾವವಿಲ್ಲದ ಭ್ರಮೆಯು ಭ್ರಮೆಗೊಳಿಸಿ ಭಾವಕ್ಕೆ ತಂದಾತ ನಮ್ಮ ಬಸವಯ್ಯನು (ಸೀಲವ. ೪. ೬-೯); ಅವಳ ಭ್ರಮೆಯನ್ನು ಮತ್ತಷ್ಟು ಉಲ್ಬಣಗೊಳಿಸುವ ಘಟನೆಯೊಂದು ನಡೆಯಿತು (ಶರ್ಮಕ. ೮೦). ೨. ಹುಚ್ಚು : ಉನ್ಮಾದ : ಅಳಲೆಕಾಯಿ, ಪರ್ಪಾಟಕ . . . ಕಷಾಯ ಹಾಕಿ ಶೋಧಿಸಿ ದ್ರಾಕ್ಷಿಹಣ್ಣು ಹಾಕಿ ಕೊಡಲು ಪ್ರಲಾಪ ಮೂರ್ಛೆ, ಭ್ರಮೆ . . . ಪೈತ್ಯಜ್ವರ ಮಾಣುವುವು (ಸಳವ್ಯ. ೮೨). ೩. ಮೋಹ: ವಾಂಛೆ; ಅಕ್ಕರೆ. [ಸಂ. ಭ್ರಮ]

**ಭ್ರಮೆಗವಿ** (ಕ್ರಿ). ಭ್ರಾಂತಿಯು ಆವರಿಸು : ದಿಕ್ಕು ತೋಚದಂತಾಗು : ಎವೆಯನಿಕ್ಕದೆ ನೋಡುತಂ ಭ್ರಮೆಗವಿದೆದೆಗಳುಜೀ ರ್ಛಾಲ್ಲೆ ನುತ್ತೆ (ಬಸವು. ೯-೩). [ಭ್ರಮೆ + ಕವಿ$_1$]

**ಭ್ರಮೆಗೊಳ್** (ಕ್ರಿ). ದಿಗ್ಭ್ರಾಂತವಾಗು : ಕಕ್ಕಾಬಿಕ್ಕಿಯಾಗು : ಭಯಂಕರ ಭ್ರಮೆಗೊಂಡಿತ್ತು ಮಂತ್ರ ತಂತ್ರ (ನಕಪ. ೮೦). [ಭ್ರಮೆ + ಕೊಳ್$_1$]

**ಭ್ರಮೆಗೊಳಿಸು** (ಕ್ರಿ). ಭ್ರಾಂತಿಯನ್ನುಂಟುಮಾಡು : ದಿಕ್ಕು ತೋಚದಂತೆ ಮಾಡು : ಅಮರಾಧಿಪನ ಪಂಚಿಸಿ ಸುರನಿಕರವ ಭ್ರಮೆಗೊಳಿಸಿಯೆ . . . ಕಾಡುತಿಹನು (ಕೃಕೃಸಾಂ. ೬-೭೭). [ಭ್ರಮೆಗೊಳ್ + – ಇಸು$_3$]

**ಭ್ರಷ್ಟ** (ಗು). ೧. ಕೆಳಗೆ ಬಿದ್ದ. ೨. ದಾರಿತಪ್ಪಿದ ; ಪತಿತ. ೩. ಧರ್ಮವನ್ನು ಬಿಟ್ಟ : ಧರ್ಮಹೀನವಾದ : ಇಷ್ಟಲಿಂಗದಲ್ಲಿ ಅವಿಶ್ವಾಸ ಮಾಡುವ ಭ್ರಷ್ಟಭವಿಗಳ ಮುಖವ ನೋಡಲಾಗದಯ್ಯ (ಅಜಂದೇ. ೦೦೯-೫೦); ಶಿಷ್ಟ ಸಾತ್ವಿಕತೆ ನಡೆಯುವುದೆ ಭ್ರಷ್ಟ ರಾಕ್ಷಸ ನೀತಿ? (ಶ್ರೀರಾಮಾ. ೨೯೦-೦೫೮); ಭ್ರಷ್ಟ ಋಷಿಯೆ ಎಲ್ಲರಿಗೂ ವೇದವು ಓದದೆಯೆ ಬರಬೇಕೆಂದು ನೀನು ತಪಸ್ಸು ಮಾಡಿದರೆ ಅದು ಸಾಗೀತೆ? (ಸೀತಾಂ. ೦೩-೦೭). ೪. ಹಾಳಾದ. ೫. ಕಳೆದುಹೋದ; ನಷ್ಟವಾದ. ೬. ಅಗಲಿದ. ೭. ಕೆಟ್ಟತನದಿಂದ ಕೂಡಿದ; ನೀಚವಾದ. (ನಾ). ೮. ಕೆಳಗೆ ಬಿದ್ದು ಹೋದುದು : "ಸ್ರಸ್ತಂ ಧ್ವಸ್ತಂ ಭ್ರಷ್ಟಂ . . . ಗಳಿತಂ ಎಂಬ ಜಾರಿ ಬಿದ್ದುದು" (ಸಿದ್ಧಾಂತ. ೩೫೦); ೯. ನಾಶ; ಹಾಳು : ಹುಟ್ಟಿಸಿದವರನು ಭ್ರಷ್ಟ ಮಾಡುವರೇನೊ (ಕುರಂದ. ೩-೮೯-೨): ನಮ್ಮ ಹೊಲ, ನಮ್ಮ ಮನೆ . . . ನಮ್ಮ ಮಕ್ಕಳು ಎಲ್ಲರನ್ನೂ ಎಲ್ಲವನ್ನೂ ಭ್ರಷ್ಟ ಮಾಡಿದ್ದೀರಿ (ಕಾಲೇಮು. ೫೮). ೧೦. ತಪ್ಪಿಹೋಗಿರುವುದು; ಕಳೆದುದು : ಅಟವಿಯ ಕುಟಿಲಪಥದಲಿ ಹತಾತ್ತನಲ್ ಭ್ರಷ್ಟಮಾದುದು ಪರಿಚಿತಾಧ್ವಂ (ಶ್ರೀರಾಮಾ. ೩೫-೨೦೮). ೧೧. ಧರ್ಮಹೀನನಾದವನು : ಹರಿನಾಮವನು ದಿನದಿ ಸ್ಮರಿಸದಾತನು ಭ್ರಷ್ಟ (ಕುರಂದ. ೪-೦೫೮-೫). ೧೨. (ಗೌರವ, ಅಧಿಕಾರ, ಜಾತಿ, ಧರ್ಮ ಮೊದಲಾದುವುಗಳಿಂದ) ಹೊರಗೆ ಹಾಕಲ್ಪಟ್ಟವನು : ಮಾತ್ರೀಗಳವುಗಳಂ ಬೇಡವೆಂಬುವ ನೆವದಿ ಪರ್ಗಭ್ರಷ್ಟನಂ ಮಾಡಿ ರವಿಬಾಲಯಶೋದೀಪ್ತಿಯಂ ನನ್ನಿಂದೆ ಮುಸುಳಿಸುವ ಪಾಂಗುಮಂ ನೆನೆವೆ! (ಶ್ರೀರಾಮಾ. ೬೨-೪೪೭). 'ಜಾತಿಭ್ರಷ್ಟ', 'ದೇಶಭ್ರಷ್ಟ' ಪರಾ.

**ಭ್ರಷ್ಟಳಾಗು** = ಪತಿತಳಾಗು ; ದಾರಿತಪ್ಪು : ನಿಷ್ಠೆಯಿಂದಿರುವರಿಥ ಸತಿಯು ಭ್ರಷ್ಟಳಾಗುವುದಿಲ್ಲವೆದನು ನೀನರಿತಿರು (ಇುಶಾಕ. ೦೦೦-೬೬).
[ಸಂ.]

**ಭ್ರಷ್ಟಗೊಳಿಸು** (ಕ್ರಿ). ಹೊರತುಗೊಳಿಸು ; ಹೊರತು ಮಾಡು: ನನ್ನನ್ನು ಯಾವ ಗೃಹಿಣೀಪದದಿಂದ ನೀಚನಾದ ನೀನು ಒಮ್ಮೆ ಭ್ರಷ್ಟಗೊಳಿಸಿರುವೆಯೋ ಆ ಪೂಜ್ಯಪದವು ಜನ್ಮಜನ್ಮಾಂತರದಲ್ಲಿಯೂ ನನಗೆ ದುರ್ಲಭವಾಗಿ ಬಿಟ್ಟಿತು (೮೦ಲೆ. ೦೬).
[ಭ್ರಷ್ಟ + ಕೊಳು (< ಕೊಳ್$_1$) + — ಇಸು$_1$]

**ಭ್ರಷ್ಟತೆ** (ನಾ). ಧರ್ಮದ ಲೋಪ : ಕರ್ಮಗಳ ಸನುಮತದಲಾರ್ಜಿಸಲು ಶಿಷ್ಟತೆ ಜನಕ ಕರ್ಮವಿಲೋಪ ಭ್ರಷ್ಟತೆ ಎನುತ ವಿಧಿಯಿರಲು (ಗಗಣಾ. ೦೬-೪೦).
[ಸಂ. ಭ್ರಷ್ಟತಾ]

**ಭ್ರಷ್ಟಾಚರಣೆ** (ನಾ). ಧರ್ಮವಿರುದ್ಧವಾದ ಕೆಲಸವನ್ನು ಮಾಡುವಿಕೆ; ದುರಾಚಾರ; ನೀತಿಬಾಹಿರವಾದ ಆಚರಣೆ : ಸಮಾಜವೇ ಭ್ರಷ್ಟಾಚರಣೆಯಿಂದ ಕೂಡಿರುವಾಗ ಸರ್ಕಾರೀನೌಕರರು ಅದರಿಂದ ವಿರಹಿತರಾಗಿರುವುದು ಕಷ್ಟವೇ ಸರಿ (ಶ್ರತಮಿತ. ೦೫೯).
[ಸಂ. ಭ್ರಷ್ಟಾಚರಣ]

**ಭ್ರಷ್ಟಾಚಾರ** (ನಾ). ೧. = ಭ್ರಷ್ಟಾಚರಣೆ : ಗ್ರಂಥಾಲಯದ ಕಾರ್ಯವಾಹಕರು ಈ ಬಗೆಯ ಭ್ರಷ್ಟಾಚಾರಗಳನ್ನು ತಡೆಯುವಲ್ಲಿ ಬಹು ಎಚ್ಚರಿಕೆ ವಹಿಸಬೇಕು (ಗ್ರಂಥಾಂ. ೬೬); ದೇವರ ಹೆಸರಿನಲ್ಲಿ ಭ್ರಷ್ಟಾಚಾರ, ಜಾತಿಯ ಬೆಲೆಕೊಂಡ ಸ್ಥಾನಗೌರವ! (ಹೀಮಿಳಾ. ೨ ಜುಬುಬ್ನ). ೨. ಧರ್ಮವಿರುದ್ಧವಾದ ಕೆಲಸಗಳನ್ನು ಮಾಡುವವನು ; ದುರಾಚಾರಿಯಾದವನು : ನೀನೆತ್ತಲೀ ಚಂಡಾಲಕರ್ಮದೊಳ್ ತೊಡರ್ದು ಇಂತು ಭ್ರಷ್ಟಾಚಾರನಾದೆ ನಿನ್ನಂ ಮುಟ್ಟಲಾಗದೆಂದವಂ ಕಟಿದು ಪೋಪುದುಂ (ಶಂತಕಂ. ೦೪೬-೨೦). ೩. ಲಂಚ ತಿನ್ನುವುದು ; ಲಂಚಗುಳಿತನ.
[ಸಂ.]

**ಭ್ರಷ್ಟಾಚಾರನಿರೋಧ** (ನಾ). ಅನೀತಿಯುತವಾದ ಲಂಚ ಮೊದಲಾದ ಕೆಟ್ಟ ನಡವಳಿಕೆಗಳನ್ನು ಪ್ರತಿಬಂಧಿಸುವುದು, — ತಪ್ಪಿಸುವುದು : " ಭ್ರಷ್ಟಾಚಾರನಿರೋಧ, ಲಂಚನಿರೋಧ " (Anti – Corruption ಪತ್ರಿ. ೩) ; ಭ್ರಷ್ಟಾಚಾರನಿರೋಧವನ್ನು ಕೈಗೊಳ್ಳದಿದ್ದರೆ ದೇಶವು ಹಾಳಾಗುತ್ತದೆ (೧೬೩).
[ಸಂ.]

**ಭ್ರಷ್ಟೆ** (ನಾ). ಪತಿತೆ ; ನೀತಿಗೆಟ್ಟವಳು : ವಿಶ್ವಕೆ ನಾನೇಕಾಕಿನಿ . . . ಅಸತಿ ಅನಾತ್ಮೆ ಭ್ರಷ್ಟೆ ಹೇಸಿಕೆ ಎಲ್ಲರ ಮನಕು (ಅತಳ್ಕ. ೦೦೪-೭).
[ಸಂ. ಭ್ರಷ್ಟಾ]

**ಭ್ರಷ್ಟೆಬ್ಬಿಸು** (ಕ್ರಿ). ಭ್ರಷ್ಟರನ್ನಾಗಿ ಮಾಡು ; ದಾರಿ ತಪ್ಪಿಸು : ವರಸಿದ್ಧಸಾಧಕರ ಮುನಿ ತಪೋಧನರುಗಳಯಲರಂಬಿನಿಂದೆಚ್ಚು ವಿರಹಾಗ್ನಿಯಿಂದವರ ಬೇಗುದಿಗೊಳಿಸಿ ಭ್ರಷ್ಟೆಬ್ಬಿಸಿ ತರುಣಿಯರ ತೋಳ್ತೊಡೆಯ ನಿರಿಮುರಿಯೊಳಂ ಪೊಗಿಸಿ (ಪಪರೋ. ೦೫-೪೦).
[ಭ್ರಷ್ಟ + ಎಬ್ಬಿಸು (< ಎಟ್ಬಿಸು)]

**ಭ್ರಾಂತ** (ಗು). ೧. ಅಲೆದಾಡಿದ. ೨. ಗುಂಡಗೆ ತಿರುಗಿದ, –ಸುತ್ತಿದ. ೩. ಕಂಗೆಟ್ಟ ; ದಿಕ್ಕುತೋಚದಂತಾದ : ಭ್ರಾಂತಮುನಿ ನಾನೊಬ್ಬ ಸಾಲದೇ ಸ್ತ್ರೀಬಾಲರೆಂತಾದಡಂ ನುಡಿವರಮುಚ್ಚೆಯಿಂ (ಹತಳಾ. ೯-೯೩). (ನಾ). ೪. ತಿರುಗುವವನು ; ಸಂಚರಿಸುವವನು : “ಭ್ರಮುನ್ . . . ಭ್ರಾಂತಃ—ಈ ೪ ತಿರುಗುವಂ” (೧೩೮೪ಕ್ಕ. ೦೯೬). ೫. ಭ್ರಮೆಗೊಂಡವನು ; ತಪ್ಪಾಗಿ ತಿಳಿದುಕೊಂಡವನು : ಇಷ್ಟಲಿಂಗ ಪ್ರಾಣಲಿಂಗ ಒಂದೇಯೆಂದರಿಯದೆ ಭಿನ್ನವಿಟ್ಟು ನುಡಿವ ಭ್ರಾಂತರ ಮಾತ ಕೇಳಲಾಗದು (೬೩೦ದೇ. ೦೦೯-೩೦). ೬. ರಥದ ಚಲನೆಗಳಲ್ಲಿ ಒಂದು : ಆಗಳ್ ಸವ್ಯಾಪಸವ್ಯ ಭ್ರಾಂತೋದ್ಭ್ರಾಂತಂಗಳೆಂಬ ರಥಕಲ್ಪವಿಶೇಷವಿನ್ಯಾಸಂಗಳನರಿದು (ಶಂತಕಾ. ೦೨-೬೩ ಪ). ೭. ದತ್ತೂರಿಗಿಡ. ೮. ಮದಿಸಿದ ಆನೆ.

೯. [ಕಾಮಶಾ] ಒಂದು ಬಗೆಯ ಚುಂಬನ : ಓಪಳಂ ಕರ(?) ದಿಂ ತುಟಿವಿಡಿಸುತ್ತ ಚುಂಬಿಸಲ್ ಭ್ರಾಂತಾಖ್ಯಂ (ಮಸ್ಮಿ. ೦೨-೦೧). ೧೦. [ನಾಟ್ಯ] ಅಭಿನಯದಲ್ಲಿ ಉಪಾಂಗವಾದ ಉಸಿರಿನ ಒಂದು ಭೇದ ; “ಒಳಗೊಳಗೇ ಉಸುರಾಡುವುದು” (ಅಾಸ್ಕಕೊ. ೫೭೬ ಗದ್ಯಾನುವಾದ) : ಸಮ, ಭ್ರಾಂತ, ವಿಲೀನ . . . ಸೀತ್ಕೃತ – ಈ ಹತ್ತು ಮೊದಲ ಒಂಬತ್ತುಗೂಡಿ ಒಟ್ಟು ಹತ್ತೊಂಬತ್ತು ಭೇದಂಗಳ್ (ಅಾಸ್ಕರಂ. ೩-೭೬ ಪ).
[ಸಂ.]

**ಭ್ರಾಂತಕ** (ನಾ). [ಕಾಮಶಾ] ಚುಂಬನದ ಒಂದು ಪ್ರಕಾರ : ಒಂದಣಮೆಯ್ಯಿಂ ಬಂದಿನೆಯಂ ತಲೆಯಿಂದ ಮೊಗಂಗುಡೆ ಮೊಗಮೆತ್ತಿ ಸಂದುಟಿ ಚುಂಬಿಸುವಂದಂ. . . ಭ್ರಾಂತಕಂ (ಜಪವ. ೭-೦೯) ; ನಿಮಿತ್ತಕ ಸಂಘಟಕ ಸ್ಫುರಿತಕ ಭ್ರಾಂತಕ . . . ಜಿಹ್ವಾಯೋಗವೆಂಬ ದ್ವಾದಶಚುಂಬನಸಂಪ್ರವಿಗಳಿಂ (ಏಲೀಶ. ೦೬೩).
[ಸಂ.]

**ಭ್ರಾಂತತೆ** (ನಾ). ಭ್ರಮೆ; ಭ್ರಾಂತಿ : ಇರವಧಿಕಭ್ರಾಂತತೆಯಂ ಧರಿಯಿಸಿ ಕಡುಗಂದಿ ಜನುಗುವಾಜಿಡಿಯಾದಂತಿರೆ ತೋರ್ಪೀ ಪರಿಜನವಂ ಹರಿಸದೊಳೊಡಗೂಡಿ ತೋರು ಚರಣಾಂಬುಜಮಂ (ಕಂಪ್ರಕೃ. ೫-೦೫).
[ಸಂ. ಭ್ರಾಂತತಾ]

**ಭ್ರಾಂತಾತ್ಮ** (ನಾ). ಭ್ರಾಂತಿಗೊಂಡ ಮನಸ್ಸುಳ್ಳವನು ; ಮರುಳ : ಅಶ್ವಗ್ರೀವನೆಬ್ಬಂದಹಿತನ ಮೊನೆಯತ್ತೆತ್ತಣಂ ಪೇಟ್ ತ್ರಿಪೃಷ್ಠಂ ಭ್ರಾಂತಾತ್ಮಂ ತೋರು ತೋಟೆಂದೊದರು (೩೦೮೩ಪು. ೫-೩೬).
[ಸಂ. ಭ್ರಾಂತಾತ್ಮನ್]

**ಭ್ರಾಂತಿ** (ನಾ). ೧. ತಿರುಗುವಿಕೆ ; ಸುತ್ತುವಿಕೆ. ೨. ತಿರುಗಾಟ; ಸಂಚಾರ : ಅರಿಸೇನಾಚಕ್ರಚಕ್ರಂ ಪೊರಳೆ ರಿಪುಕುಭೃತ್ತುಂಗಮಭ್ರಾಂತಿ ತಳ್ತೊಪ್ಪಿರೆ . . . ನವಘಟೀಯಂತ್ರದಿಂ ವಿಷ್ಣು ಯಿಂದ್ಧಾಜಿರವಾಹೀ ವೈರಿರಕ್ತಾಂಬುವನೆ ನಿಜಯಶೋವಲ್ಲಿಗೆತ್ತುತ್ತುಮಿರ್ಪಂ (ಎಶ. V. ಹಾಸಪ. ೦೪೦-೦೦ ; 1147). ೩. ಒಂದನ್ನು ಮತ್ತೊಂದೆಂದು ತಿಳಿದುಕೊಳ್ಳುವುದು ; ತಪ್ಪುತಿಳಿವಳಿಕೆ ; ಭ್ರಮೆ : ಅಂಬಿಗರ ಮಗನೆಂಬ ಭ್ರಾಂತಿಯು ಕೃಷ್ಣನಿಂ ಕೇಳಿ ನಂಬಿ ಕರ್ಣಗೆ ಬಿಟ್ಟ ಪರಿ (ಗದಣಾ. ೦೬-೪೦); ಒಂದು ವಸ್ತುವನ್ನು ಮತ್ತೊಂದೆಂದು ತಪ್ಪಾಗಿ ತಿಳಿಯುವುದೇ ಅಧ್ಯಾಸವು. ಅಧ್ಯಾಸ, ಭ್ರಾಂತಿ, ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ ಇವೆಲ್ಲ ಪರ್ಯಾಯ ಶಬ್ದಗಳು (ಬ್ರಸೂಭಾ. ೨-೦೦) ; ಸರ್ವತ್ರ ಚೆನ್ನಾಗಿ ತಿಳಿಯದಿರುವಿಕೆಯೇ ಭ್ರಾಂತಿ (ಹಿಂದಣಾ. ೨೪೦). ೪. ತಲೆ ತಿರುಗುವುದು ; ತಲೆ ಸುತ್ತುವುದು : ಸುರುಸುರಿಕೆಸೊಪ್ಪಿನ ರಸದಲ್ಲಿ ಜೀರಿಗೆಯಂ ಭಾವನೆ ಮಾಡಿ ಏಲಕ್ಕಿ ಸಕ್ಕರೆವೆರಸಿ ಸೇವಿಸೆ ಭ್ರಾಂತಿ ಮಾಣ್ಗುಂ (ಕಳವೈ. ೦೬೨). ೫. ದಿಕ್ಕು ತೋಚದಿರುವಿಕೆ ; ದಿಗ್ಭ್ರಾಂತಿ : ಪವಿಭಯಭ್ರಾಂತಿಯಿಂದಂ ಶರಣೊಕ್ಕಿದು ತನ್ನಂ ಗೋತ್ರಧಾತ್ರೀಧರತತಿಯೆನೆ ಪೆಂಪಣ್ಣವಕ್ಕೇನೊ ಚೋದ್ಯಂ (ಅಗಂ. ೦-೪೩). ೬. ಸಂದೇಹ ; ಸಂಶಯ ; ಅನಿಶ್ಚಿತತೆ : ಭ್ರಾಂತಿಯನುಟಿದಂತಿಂತಿಂತೆಂಬಿವು ಶಾಂ ಪ್ರಕಾರ ಕಾಲ್ಯಾರ್ಥಂಗಳ್ (ಕಪುರ. ೩೨೦). ೭. = ಭ್ರಾಂತಿಮದಲಂಕಾರ : ಒಂದನ್ನು ಬೇರೊಂದನ್ನಾಗಿ ತಿಳಿಯುವುದೇ ಭ್ರಾಂತಿ. ಸಾದೃಶ್ಯಮೂಲಕವಾಗಿ ಉಕ್ತವಾಗಿರುವ ಭ್ರಾಂತಿ ಭ್ರಾಂತ್ಯಲಂಕಾರ (ಕೈಪಿಡಿ. ೨೬೬). ೮. [ಸಾಂಖ್ಯ] ಒಂದು ವಸ್ತುವಿನಲ್ಲಿ ಮುಖ್ಯಾಂಶವನ್ನು ಗ್ರಹಿಸದೆ ಸಾಧಾರಣಾಂಶವನ್ನು ಮಾತ್ರ ಗ್ರಹಿಸುವುದು : ಎದುರಿಗಿರುವ ವಸ್ತುವಿಗೆ ಸಮಾನವಾದ ಬೇರೊಂದು ವಸ್ತುವಿನ ಸ್ಮರಣೆ ಬೆರೆತು ಭ್ರಾಂತಿ ಎಂದು ವ್ಯವಹರಿಸಲ್ಪಡುವುದು (ಹಿಂದಣಾ. ೫೦). ೯. [ಕಾಮಶಾ] ಚುಂಬನದಲ್ಲಿ ಒಂದು ಬಗೆ : ಪುರುಷಂ ಸ್ತ್ರೀಕೂಡಲ ಚಿಬುಕವಂ ಎರಡು ಕೈಗಳಿಂ ಪಿಡಿದು ಅವಳ ಹಿಂದೆ ನಿಂದಿರ್ದು ಮೋರೆಯ ಸ್ವಲ್ಪ ತಿರುಗಿಸಿ ಹಿಡಿದು ಅವಳ

ಕೆಳಗಣ ತುಟಿಯುಂ ತಾಂ ಪಿಡಿದು ಅವಳ ಕೈಯಿಂದ ತನ್ನ ಕೆಳಗಣ ತುಟಿಯುಂ ಅಂಗುಷ್ಠ ತರ್ಜನಿಗಳಿಂ ಪೀಡಿಸಿ ಚುಂಬಿಸುವ ಭಾವಂ ಭ್ರಾಂತಿಯೆಂಬ ಚುಂಬನಂ (ಕಾಮಶಾ. ೨೨೩). [ಸಂ.]

**ಭ್ರಾಂತಿಗೊಳ್** (ಕ್ರಿ). ದಿಕ್ಕು ತೋಚದಂತಾಗು ; ಕಂಗೆಡು : ಮುಂತೆ ಗೌರೀಶನ ಶರೀರದೊಳೆಂತು ಮಾಡಿದಡಂತಲಾ ನಾಂ ಭ್ರಾಂತಿಗೊಂಡಡಿದು (ಬಸಪು. ೦೬-೯) ; ತನ್ನ ಪ್ರಾಣೇಶನ . . . ಕಾಣದೆ ಕಂಗೆಟ್ಟಳು ಭ್ರಾಂತಿಗೊಂಡಳು ಮಾಣದೆ ಮಗುಳಟ್ಟಿಸಿದಳು (ಪೋಚಕ. ೨೬-೪೬).

[ ಭ್ರಾಂತಿ + ಕೊಳ್$_1$ ]

**ಭ್ರಾಂತಿಗೊಳಿಸು** (ಕ್ರಿ). ಅಜ್ಞಾನವನ್ನುಂಟುಮಾಡು ; ಭ್ರಮಿಸುವಂತೆ ಮಾಡು : ಶಂಬರಾಸುರನ ಭ್ರಾಂತಿಗೊಳಿಸಿ ಮಹದಾದಿವಿದ್ಯವ ಸ್ಥೈರ್ಯಂ ತೋಚಿಸಿದನು ಕಂತುವಿಗೆ (ಪೋಚಕ. ೧೧-೬೦).

[ ಭ್ರಾಂತಿಗೊಳ್ + — ಇಸು$_3$ ]

**ಭ್ರಾಂತಿಜನ್ಯ** (ನಾ). ಭ್ರಾಂತಿಯಿಂದ ಉಂಟಾದುದು ; ಅಜ್ಞಾನದಿಂದ ಉಂಟಾದುದು : ಸರ್ವಾಧಿಷ್ಠಾನವಾದಂಥಾ ಆತ್ಮಸ್ವರೂಪವನು ತಿಳಿಯದ್ದರಿಂದಾ ಬಂದದೆ ಆಗಲಾಗಿ ಇದಕ್ಕೆ ಭ್ರಾಂತಿಜನ್ಯವೆಂದು ಹೆಸರು (ಆತ್ಮಸ್ವ. ೨೯-೦೦). [ಸಂ.]

**ಭ್ರಾಂತಿಮದಲಂಕಾರ** (ನಾ). [ಕಾವ್ಯಮಿ] ಪರಸ್ಪರ ಹೋಲಿಕೆಯುಳ್ಳ ಎರಡು ವಸ್ತುಗಳಲ್ಲಿ ಒಂದು ವಸ್ತುವನ್ನು ನೋಡಿ ಆ ಬೇರೊಂದು ವಸ್ತುವೇ ಇದು ಎಂಬ ಭ್ರಾಂತಿಯನ್ನು ಉಂಟು ಮಾಡುವ ಅಲಂಕಾರ ; ಉದಾಹರಣೆಗೆ – ' ಈ ದುಂಬಿಯು ನಿನ್ನ ಮುಖವನ್ನು ಕಮಲವೆಂದು ತಿಳಿದುಕೊಂಡುಬಿಟ್ಟಿದೆ ' – ಎಂಬ ಈ ವಾಕ್ಯದಲ್ಲಿ ಸುಂದರಿಯೊಬ್ಬಳ ಮುಖಕ್ಕೂ ಕಮಲಕ್ಕೂ ಸಾದೃಶ್ಯವಿರುವುದರಿಂದ ದುಂಬಿಗೆ ಮುಖದಲ್ಲಿ ಕಮಲವೆಂಬ ಭ್ರಾಂತಿಯುಂಟಾಯಿತು ಎಂದು ವರ್ಣಿಸಿರುವುದರಿಂದ ಇದು ಭ್ರಾಂತಿಮದಲಂಕಾರ : ಒಂದು ವಸ್ತುವಂ ಪೆಱತೊಂದು ವಸ್ತುವೆಂದು ಭ್ರಮಿಸುವುದು ಭ್ರಾಂತಿಮದಲಂಕಾರಂ ಎಂದುಂ (ಅಪ್ಪ. ೪೩-೦೩) ; ಸಾದೃಶ್ಯಮೂಲಕ ಸ್ಮೃತಿ ಸಂದೇಹ ಭ್ರಾಂತಿಗಳಿಂ ಪ್ರತ್ಯೇಕಮಾಗಿ ಸ್ಮೃತಿಮದಲಂಕಾರಂ ಸಂದೇಹಾಲಂಕಾರಂ ಭ್ರಾಂತಿಮದಲಂಕಾರಂ ಎಂಬಿವಕ್ಕುಂ (ಪಠಕ. ೨೪). [ಸಂ.]

**ಭ್ರಾಂತಿಯೋಗ** (ನಾ). (ಆಲಂ) ಇತರರಿಗೆ ಭ್ರಮೆಯನ್ನುಂಟುಮಾಡುವ ಸ್ಥಿತಿ : ಸೊಗಸು ಮಿಗಲಲೆದೆಱೆದ ಲೋಚನಯುಗಳ ಸಮತಳಿಸಿದ ಸುಷುಪ್ತಿಯ ಬಿಗುಹಿನಲಿ ಪರಮಾತ್ಮನೆಸೆದನು ಭ್ರಾಂತಿಯೋಗದಲಿ (ಕುಮಾ ಉ. ೦-೨೩). [ಸಂ.]

**ಭ್ರಾಂತಿವಡೆ** (ಕ್ರಿ). ಭ್ರಾಂತಿಯನ್ನು ಹೊಂದು : ಎಂತು ಸ್ಮರಿಪೆ ಕನಸಲ್ಲಿ ಕಂಡ ವಿರಹದ ಭ್ರಾಂತಿವಡೆದ ನೀಱೆ ತನ್ನ ಅಂತಕಾಲದೆ ನೀ ಜೀವಿಸಲಾಱೆಂದು ಸಂತವಿಸಿದನು ಮಾನಿನಿಯು (ಪೋಚಕ. ೩೩-೩೦).

[ ಭ್ರಾಂತಿ + ಪಡೆ$_1$ ]

**ಭ್ರಾಂತಿವಿಡಿ** (ಕ್ರಿ). ಭ್ರಾಂತಿಯನ್ನು ಹೊಂದು ; ತಪ್ಪುತಿಳಿವಳಿಕೆಯನ್ನು ತಾಳು : ಅಱಿಯದೆ ಭ್ರಾಂತಿವಿಡಿದೇ ತೀರ್ಥಯಾತ್ರೆಗಳೆಂತವಿಲ್ಲದೆ ತಿರುತಿರುಗಿ ಬೇಸತ್ತು ಬೆಂಡಾಗಿ (ಗಗಕಾ. ೯-೪೯). [ಭ್ರಾಂತಿ + ಪಿಡಿ$_1$]

**ಭ್ರಾಂತಿಸು** (ಕ್ರಿ). ತಪ್ಪಾಗಿ ತಿಳಿ ; ಭ್ರಮೆಗೆ ಒಳಗಾಗು : ಪ್ರಿಯಕಾಂತಾಭ್ರೂವಿಭ್ರಮಗ್ರಹಾಗ್ರಹವಶದಿಂ ಭ್ರಾಂತಿಸದುಪಶಾಂತಮನಂ ಶಂತನುಗಿತ್ತಂ ಸಮಸ್ತರಾಜ್ಯಶ್ರೀಯಂ (ಕಂಪಕಾ. ೦-೬೬) ; ಗ್ರಂಥಕಾರನ ಸಂಕಲನೆಯೊಳು ವಿರೋಧಿಸಲ್ಪಡುಗುಮೆಂದು ಭ್ರಾಂತಿಸಲ್ವೇಡ (ಗೊಮ್ಮಟ. ೩೬-೬).

[ ಭ್ರಾಂತಿ + — ಇಸು$_3$ ]

**ಭ್ರಾಂತು** (ನಾ). ೧. ತಪ್ಪು ತಿಳಿವಳಿಕೆ ; ಭ್ರಮೆ : ಪಾಪ ನೇಣೆಂಬ ಭ್ರಾಂತುಳ್ಳನ್ನಕ್ಕ ನಾನು ಭಕ್ತನೆಂತಪ್ಪೆನು (ಬಸವ. ೪೦೩) ; ಅವನಿಯೊಳಾಂ ಕ್ಷುಲ್ಲಕಂ ತಪ್ಪದೆಂಬೀ ಭ್ರಾಂತಂ ಬಿಟ್ಟಿರ್ಪುದಿನ್ನಾದಪೆ ನಿಖಿಳಜನಾನೀಕದಿಂ ಪೂಜ್ಯನುಂ (ಜಾರಪು. ೩-೬೨) ; ವಿರಕ್ತನಾದ ಬಳಿಕ ಚಿಂತೆ ಭ್ರಾಂತುಗಳನಳಿದು . . . ಮಹಾಬಯಲು ನಿಜವಾಸಿಯಾಗಿರಬೇಕು (ಅಬಂದೆ. ೦೩೯-೦೨೧). ೨. ಸಂದೇಹ ; ಸಂಶಯ : ಭ್ರಾಂತೇಂ ಜಗತ್ಪ್ರಸಿದ್ಧ ಚಿರಂತನ ನೂತನ ಮಹಾಕವೀಶ್ವರಕೃತಿ ಶಾಸ್ತ್ರಾಂತರಸ್ಮಾರತೆ ನಿಶ್ಚೈ ನಿರಂತರ ಮಸ್ಮತ್ಪ್ರಣೀತ ಜಾತಕಕೃತಿಯೊಳ್ (ಜಾತಕ. ೦-೩) : ಮಿಾನಕ್ಕಂ ಕೂರ್ವರ್ಕ್ಕಂತೇನೊಂದಂ ಪೊರ್ಥರೇಪಿ ಪೋಲೆತ್ತಡಮಿರ್ಪತ್ತಾನಾಲ್ಕು ವರ್ಷದೊಳ್ ಸಾವಾನುಂ ಭ್ರಾಂತಿಲ್ಲದಕ್ಕು (ಜಕ್ಕನಾ. ೩-೩೦). ೩. ಭ್ರಮೆಗೊಳಗಾದವನು ; ಮರುಳ : ಭ್ರಾಂತುಗಳಿರಾ ಶಿವಮಥನಸುಖವೇಕಹುದು ನಿಮಗೆ (ಬಸಪು. ೩೦-೨೩). [ < ಸಂ. ಭ್ರಾಂತಿ ]

**ಭ್ರಾಂತುಮಾರಿ** (ನಾ). ಭ್ರಮೆಗೊಂಡವನು ; ಭ್ರಾಂತಿಶೀಲ : ಜಗದ ಪಾತಕರ ಘಾತಿಸದೆ ವಿಷಯವನಱಿಯದೆ ಆಶೆಯಲ್ಲಿ ಸುಳಿವ ಭ್ರಾಂತುಮಾರಿಗಳನೇನೆಂದಱಿಯದೆ (ಮೋಳಿಗಾ. ೩೪-೦೪೩). [ಭ್ರಾಂತು+—ಮಾರಿ$_1$]

**ಭ್ರಾಂತುವಿಡಿ** (ಕ್ರಿ). ಭ್ರಮೆಯನ್ನು ಹೊಂದು : ಅಜ್ಞಾನದಿಂದ ಕೂಡಿರು : ಭ್ರಾಂತುವಿಡಿದು ಲಿಂಗಕೋಗದವನಱಸುವ ಪಾತಕರ ಮೆಚ್ಚ ಕೂಡಲಸಂಗಮದೇವ (ಬಸವ. ೬೬೨). [ಭ್ರಾಂತು + ಪಿಡಿ$_1$]

**ಭ್ರಾಜಿತ** (ಗು). ೧. ಹೊಳಪುಗೊಂಡ ; ಪ್ರಕಾಶಮಾನವಾದ ; ಕಾಂತಿಯುಕ್ತವಾದ : ಮುಂದೊಂದೆಡೆಯೊಳ [ದ] ಭ್ರಾಭ್ರವಿಭ್ರಮಭ್ರಾಜಿತೋತ್ತುಂಗಶೈಲಮಂ ಕಂಡು (ಕುಶಕಾ. ೪-೨೩ ಪ); ಅಭ್ರಂಕಷಹರ್ಮ್ಯಾಗ್ರತಳ ಭ್ರಾಜಿತ ಮತ್ತವಾರಣಸ್ಥಿತ ಕಾಂತಾವಿಭ್ರಮನಿರೀಕ್ಷಣೋಪಗತಭ್ರಮದಿಂದಮರಸಮಿಾತಿಗಾಯ್ತನಿಮೇಷಂ (ಚಂದ್ರಪು.೦-೦೨೬). (ನಾ). ೨. ಪ್ರಕಾಶಮಾನವಾದುದು ; ಕಾಂತಿಯುಕ್ತವಾದುದು : ಅನತಿಶಿಷ್ಟೋಷ್ಠಭ್ರಾಜಿತ ಮಾಯ್ಯಾನನ ಶುಭ್ರಾಂಬುಜಮಾತ್ಮಭಾವನಾತತ್ಪರನಾ (ಚಂದ್ರಪು. ೦೪-೦೯). ೩. ಪ್ರಕಾಶಮಾನನಾದವನು ; ಕಾಂತಿಯುಕ್ತನಾದವನು : ಧವಳಾತಪತ್ರಚಾರುಚಾಮರಚತುಷ್ಟಯಭ್ರಾಜಿತನುಂ (ಸಣ್ಣಬಸ. ೯-೬೯ ಪ).

[ಸಂ.]

**ಭ್ರಾಜಿಷ್ಣು** (ಗು). ೧. = ಭ್ರಾಜಿತ ೧. (ನಾ). ೨. = ಭ್ರಾಜಿತ ೩ : "ವಿಭ್ರಾಟ್, ಭ್ರಾಜಿಷ್ಣುಃ, ರೋಚಿಷ್ಣುಃ—೩ ಭೂಷಣಾದಿಗಳಿಂದ ಪ್ರಕಾಶಿಸುತ್ತಿರುವವನ ಹೆಸರುಗಳು" (ಸಿದ್ಧಾಂತಿ. ೧೯೯) ; ಬಂದನೀಕ್ಷಿಸುವ ಲಂಪಿಂ ವಜ್ರಿ ಗೋವರ್ಧನಾಚಳಭಾರೈಕಸಹಿಷ್ಣುವಂ ಜಳಧರಭ್ರಾಜಿಷ್ಣುವಂ ವಿಷ್ಣುವಂ (ಜಗಜ. ೪-೯೯) ; ನುತಿಗೆಯ್ದಂ . . . ಸಿತ ಶೂಲಾಹತನಾಗನಾಗಭರಣ ಭ್ರಾಜಿಷ್ಣುವಂ ಜಿಷ್ಣುವಂ (ರಾಜಶೇ. ೩-೩೩). ೩. ಶಿವ : ಭ್ರಾಜಿಷ್ಣು ಭದ್ರಂ . . . ರಕ್ಷಿಕ್ಕೆ ವೀರೇಶ್ವರಂ (ಹಮ್ಮೀಶ. ೦-೬). ೪. ವಿಷ್ಣು. [ಸಂ.]

**ಭ್ರಾತೃ** (ನಾ). ೧. ಅಣ್ಣ ಅಥವಾ ತಮ್ಮ ; ಒಡಹುಟ್ಟಿದವನು : "ಸಹಜಾತಂ ಸಹೋದರಂ ಸೋದರಂ ಭ್ರಾತೃವೆನಲೊಡಹುಟ್ಟಿದಂ" (ಚುಂಗಶಾ. ೯೨-೦೦); ಅಂತಃಕಲಹದಿಂದಾಗಿ ಭ್ರಾತೃಗಳಲ್ಲಿ ಯುದ್ಧ ಪ್ರಾರಂಭವಾಯಿತು (ಪೊಳಂಬ. ೩೨). ೨. [ಜ್ಯೋತಿ] ಲಗ್ನದಿಂದ ಮೂರನೆಯ ಸ್ಥಾನ ; ಸಹೋದರಸ್ಥಾನ : ಲಗ್ನದಿಂ ಚತುಸ್ತನು ದಶಲಾಭಂವು ಭ್ರಾತೃವಿನೊಳ್ [ಜಾತಾಂ. ತ್ರಿರಾಶಿಯೊಳ್] . . . ಶುಭಪ್ರದನಸಿತಂ (ಜಾತಕ. ೦೦-೦೩). [ಸಂ.]

**ಭ್ರಾತೃಜ** (ನಾ). ಅಣ್ಣನ ಅಥವಾ ತಮ್ಮನ ಮಗ ; ದಾಯಾದಿ : "ಭ್ರಾತ್ರೀಯಃ, ಭ್ರಾತೃಜಃ—೨ ಒಡಹುಟ್ಟಿದವನ ಮಗ, ಅಣ್ಣನ ಮಗ, ತಮ್ಮನ ಮಗ" (ಸಿದ್ಧಾಂತಿ. ೧೬೬). [ಸಂ.]

**ಭ್ರಾತೃಜಾಯೆ** (ನಾ). ಸಹೋದರನ ಹೆಂಡತಿ : "ಪ್ರಜಾವತೀ. ಭ್ರಾತೃಜಾಯಾ—೨ ಒಡಹುಟ್ಟಿದವನ ಹೆಂಡತಿ" (ಸಿದ್ಧಾಂತಿ. ೧೬೩).

[ ಸಂ. ಭ್ರಾತೃಜಾಯಾ]

**ಭ್ರಾತೃದ್ರೋಹ** (ನಾ). ಒಡಹುಟ್ಟಿದವರು ಪರಸ್ಪರರಿಗೆ ಮಾಡುವ ಮೋಸ,-ವಿಶ್ವಾಸಘಾತ : (೧). [ಸಂ.]

**ಭ್ರಾತೃಪುತ್ರ** (ನಾ). = ಭ್ರಾತೃಜ : "ಭ್ರಾತೃವ್ಯಃ, ಭ್ರಾತೃಪುತ್ರಃ, ಭ್ರಾತ್ರೀಯಃ, ಭ್ರಾತೃಜಃ — ಈ ೪ ಒಡಹುಟ್ಟಿದನ ಮಗಂ" (ಹಲಾಯು. ೯೩-೩೫೨); ಧರ್ಮರಿಗೆ ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರು ನನ್ನ ಸಮೀಪಬಂಧು. ಭ್ರಾತೃಪುತ್ರರು ಎಂಬಂಶವು ತಿಳಿದಿರಬಾರದು (ಕವಿಚ. III, XXXVII, ಅವತರಣಿಕೆ). [ಸಂ.]

**ಭ್ರಾತೃರೇಖೆ** (ನಾ). [ಸಾಮುದ್ರಿ] ಅಣ್ಣ ತಮ್ಮಂದಿರ ವಿಚಾರವನ್ನು ತಿಳಿಸುವ ಅಂಗೈಯಲ್ಲಿರುವ ಗೆರೆ : ಕಿರುಬೆರಳ ತಾಳಿನಲ್ಲಿ ಭ್ರಾತೃರೇಖೆ ಯಿರುವುದು (ಸಾಮುಂ. ೯೭-೭). [ಸಂ. ಭ್ರಾತೃರೇಖಾ]

**ಭ್ರಾತೃವಧು** (ನಾ). = ಭ್ರಾತೃಜಾಯೆ : "ಪ್ರಜಾವತೀ, ಭ್ರಾತೃವಧೂಃ — ಈ ೨ ನಾ(ದ)ದುನಿ" (ಹಲಾಯು. ೯೩-೩೩೦). [ಸಂ.]

**ಭ್ರಾತೃವ್ಯ** (ನಾ). ೧. = ಭ್ರಾತೃಜ : "ಭ್ರಾತೃವ್ಯಃ, ಭ್ರಾತೃಪುತ್ರಃ, ಭ್ರಾತ್ರೀಯಃ, ಭ್ರಾತೃಜಃ — ಈ ೪ ಒಡಹುಟ್ಟಿದನ ಮಗಂ" (ಹಲಾಯು. ೯೩-೩೫೨). ೨. ಶತ್ರು ; ಹಗೆ. [ಸಂ.]

**ಭ್ರಾತ್ರೀಯ** (ಗು). ೧. ಸಹೋದರನಿಗೆ ಸಂಬಂಧಿಸಿದ ; ಸಹೋದರ ನಿಗೆ ಸೇರಿದ. (ನಾ). ೨. = ಭ್ರಾತೃಜ : "ಭ್ರಾತೃವ್ಯಃ, ಭ್ರಾತೃ ಪುತ್ರಃ, ಭ್ರಾತ್ರೀಯಃ, ಭ್ರಾತೃಜಃ — ೪ ಒಡಹುಟ್ಟಿದನ ಮಗಂ" (ಹಲಾಯು. ೯೩-೩೫೨). [ಸಂ.]

**ಭ್ರಾಮ** (ನಾ). ೧. ಅಲೆದಾಟ ; ತಿರುಗಾಟ. ೨. ಭ್ರಾಂತಿ ; ಭ್ರಮೆ. [ಸಂ.]

**ಭ್ರಾಮಕ** (ಗು). ೧. ತಿರುಗುವಂತೆ ಮಾಡುವ ; ಸುತ್ತಿಸುವ. ೨. ಭ್ರಮೆಯನ್ನುಂಟುಮಾಡುವ ; ತಪ್ಪುತಿಳಿವಳಿಕೆಯನ್ನು ಕೊಡುವ ; ಮಿಥ್ಯಾಜ್ಞಾನವನ್ನುಂಟುಮಾಡುವ : ಆತುರಾತುರದೊಳು ಮದುವೆ ನಿಂದೆನು ಅರಿದು ಭ್ರಾಮಕಸುಖದೊಳು ಸಂದು (ಇಂಶಾಕ. ೨೦೩-೫೨) : ಅನೇಕ ಭಾಷೆಗಳ ಲಿಂಗವಿಂಗಡಣೆಯಲ್ಲಿ ಚಂಚಲ ಹಾಗೂ ಭ್ರಾಮಕ ಅಂಶ ಗಳು ಇರುವುದೇ ಈ ಅಪಹಾಸ್ಯಕ್ಕೆ ಕಾರಣವಿದ್ದಿರಬೇಕು (ಪ್ರಾಶಿಶಿ. ೨೮೭). ೩. ಮೋಸದ ; ಕಪಟದ. (ನಾ). ೪. ತಪ್ಪುತಿಳಿವಳಿಕೆ : ಭ್ರಾಂತಿ ; ಭ್ರಮೆ : ಭ್ರಮೆಯೊಳಗೆ ತನ್ನಯ ಭ್ರಾಮಕ ಹಿಂಗಿದಲ್ಲದೆ ಕಂಡುದ ಕಾಣ ಬಾರದೆಂಬುದಕ್ಕೆ ಸೂಚನೆ (ಬೋಳಬಸ. ೧೯೦-೬೨೦) ; ಪಾಶವಱತು ಗುರು ವಾಗಬೇಕು ವೇಷವಱತು ಚರವಾಗಬೇಕು ಭ್ರಾಮಕವಱತು ಲಿಂಗವಾಗಬೇಕು (ಶವಗೋ. ೫೦-೦೦೫). ೫. ಮೋಹ ; ವ್ಯಾಂಛೆ : ಪರಮಪತಿವ್ರತೆ ಯಾಗಿರ್ದು ತನಗೀ ತರಳನ ಮೇಲೆ ಭ್ರಾಮಕವ ಇರಲೀಯದೊಡಲನೀಡಾಡು ವೆನು (ಮೋಹತ. ೦೦-೯೩). ೬. ಭ್ರಮೆಯನ್ನುಂಟುಮಾಡುವುದು ; ಸುಳ್ಳನ್ನು ನಿಜವೆಂದು ನಂಬಿಸುವುದು : ಮೋಸ : ಭೊವಿಾಶನಿತ್ತಪನೆ ತನ್ನ ತನುಭಾಗಮುಂ ಭ್ರಾಮಕವಿದೆಂದು ಜಱಿದು (ಕೈಐಶಾ. ೨೬-೪೦). ೭. ಸೂಜಿಗಲ್ಲು ; ಅಯಸ್ಕಾಂತ : "ಚುಂಬಕಃ, ಭ್ರಾಮಕಃ ಮೊದ ಲಾದುವು ಅಯಸ್ಕಾಂತದ ಭೇದಂಗಳ್" (ಹಲಾಯು. ೨೮-೦೫) ; ತತ್ತ ರಣಿಯ ಬಿಱಿಪಟಿಯಂ ಪತ್ತಿ . . . ಮುನಿಪಂ ಭ್ರಾಮಕದತ್ತೆಳೆಸುವ ಪಟ್ಟಿಗರ್ಬುನಕ್ಕೆಣೆಯಾದಂ (ಕಂದಾಪುಷ. ೪-೯೩) ; ಇವೊತ್ತಿನ ವಿದ್ಯುಜ್ಜನಕ ಗಳಲ್ಲಿ ಒಂದೇ ಚಾಲಕದಂಡದ (Driving Shaft) ಮೇಲೆ ಅನೇಕ ಭ್ರಾಮಕ ಗಳನ್ನು ಜೋಡಿಸಿರುತ್ತಾರೆ (ಶಿಲ್ಪಶಾ. ೨೪೨). ೮. ಧೂರ್ತ ; ಮೋಸ ಗಾರ. ೯. ನರಿ. ೧೦. ಸೂರ್ಯಕಾಂತಿ ಹೂವು. [ಸಂ.]

**ಭ್ರಾಮಕಗೊಳ್ಳು** (ಕ್ರಿ). ಮರುಳಾಗು ; ಮೋಹಗೊಳ್ಳು : ಸತ್ಕೋಮ ಲಾಂಗಿಯ ಬೇರುರದ ಹೇಮಾಬ್ಜಮುಕುಳಸ್ತನ ಬಿಗಿವಡೆದಿರೆಭ್ರಾಮಕಗೊಂಡು ವೀಕ್ಷಿಸಿದ (ಮೋಹತ. ೦೭-೫೭). [ಭ್ರಾಮಕ + ಕೊಳ್ಳು$_1$ (< ಕೊಳ್$_1$)]

**ಭ್ರಾಮಕರತಿ** (ನಾ). [ಕಾಮಶಾ] ಒಂದು ಬಗೆಯ ರತಿ : ಪ್ರಪಂಚದಲ್ಲಿ ಸ್ತ್ರೀಯರೆ ಅವರ ಮನಃಪೂರ್ವಕ ಮನಸ್ಸಿಟ್ಟು ರಮಿಸಿದರೆ ಮಹಾರತಿ. ಆಕೆ ಮನಸ್ಸಿಲ್ಲದೆ ರಮಿಸುವದು ಭ್ರಾಮಕರತಿ ಎಂದು ತಿಳಿಯುವದು (ಕಾಮಶಾ. ೨೫೦). [ಸಂ.]

**ಭ್ರಾಮಕವಡಿಸು** (ಕ್ರಿ). ಮೋಹಗೊಳಿಸು : ಮರುಳುಮಾಡು : ನಿನ್ನನ್ನು ಕಾಮರಸಾಸ್ತ್ರದೊಳೆಚ್ಚು ಭ್ರಾಮಕವಡಿಸಿದನಿವನೀಗ ನೋಡೆಂದು ಕಾಮನ ರೂಹ ತೋಱಿದಳು (ಮೋಹತ. ೩೦-೩೦). [ಭ್ರಾಮಕ + ಪಡಿಸು]

**ಭ್ರಾಮಕವಡೆ** (ಕ್ರಿ). ಮರುಳಾಗು ; ಮೋಹಗೊಳ್ಳು : ಕಾಮನ ತರಳ ವಿಗ್ರಹವ . . . ಮಾನಿನಿ ಕಂಡು ಭ್ರಾಮಕವಡೆದಳಾಕ್ಷಣದಿ (ಮೋಹತ. ೦೩-೯೩). [ಭ್ರಾಮಕ + ಪಡೆ$_1$]

**ಭ್ರಾಮಕಾಸ್ತ್ರ** (ನಾ). ದಿಗ್ಭ್ರಮೆ ಹಿಡಿಸುವ ಅಸ್ತ್ರ ; ಸಮ್ಮೋಹನಾಸ್ತ್ರ : ಭ್ರಾಮಕಾಸ್ತ್ರಗಳಂ ಸಂಧಿಸಿಯುಂ ಕಡುಕೆಯ್ದು ಪುಷ್ಕಲನೊಳ್ ಚಿತ್ರಂ ಚಿತ್ರತರವಾಗಿ ಕೈಗೆಯ್ದುತಿರ್ದಂ (ರಾಮಾಶ್ವ. ೯೭-೯). [ಸಂ.]

**ಭ್ರಾಮರ** (ನಾ). ೧. ದುಂಬಿಯಿಂದಾದುದು ; ದುಂಬಿಗೆ ಸಂಬಂಧ ಪಟ್ಟುದು. ೨. ಜೇನುತುಪ್ಪ. ೩. ಸುತ್ತುವಿಕೆ ; ತಿರುಗುವಿಕೆ. ೪. (ಅಲಂ) ಮನಸ್ಸಿನ ಅಲೆದಾಟ ; ಭ್ರಾಂತಿ ; ಅಜ್ಞಾನ : ತ್ಯಾಗಾಂಗ ಭೋಗಾಂಗ ಯೋಗಾಂಗ ಸ್ವರ್ವಸಮಾಧಾನ ಸುಚಿತ್ತವಿರ್ದು ಮತ್ತೆ ಇತ್ಯಾದಿಗಳಲ್ಲಿ ಸೋಡಹೆನೆಂಬ ಭ್ರಾಂತು ಭ್ರಾಮರವೇತಕ್ಕೆ (ಬೋಳಬಸ. ೦೯೦-೭೦೫). [ಸಂ.]

**ಭ್ರಾಷ್ಟ್ರ** (ನಾ). ೧. ಹುರಿಯುವ ಓಡು ; ಬಾಂಡಲೆ : "ಅಂಬರೀಷಃ, ಭ್ರಾಷ್ಟ್ರಂ — ಈ ೨ ಹುರಿಗಾವಲಿ" (ಹಲಾಯು. ೫೨-೦೫೯) ; "ಭ್ರಾಷ್ಟ್ರ ಮಂಬರೀಷಂ ಹುರಿವ ಹಂಚಕ್ಕು" (ಮಂಗರಾ. ೩೨-೨೪). ೨. ಬೆಳಕು ; ಪ್ರಕಾಶ. ೩. ಆಕಾಶ. [ಸಂ.]

**ಭ್ರಾಷ್ಟ್ರಕ** (ನಾ). = ಭ್ರಾಷ್ಟ್ರ ೧. [ಸಂ.]

**ಭ್ರುಕಂಸ** (ನಾ). ಹೆಂಗಸಿನ ವೇಷಧಾರಿಯಾದ ನಟ : "ಭ್ರುಕಂಸಃ, ಭ್ರುಕುಂಸಃ, ಭ್ರೂಕುಂಸಃ — ೩ ಸ್ತ್ರೀವೇಷಧಾರೀ — ಹೆಣ್ಣುವೇಷವನ್ನು ಧರಿಸಿದ, ನರ್ತಕಃ, ಪುರುಷಃ, ಕುಣಿಯುವ ಗಂಡಿನ ಹೆಸರುಗಳು" (ಸಿದ್ಧಾಂತಿ. ೬೦). [ಸಂ.]

**ಭ್ರುಕುಟಿ** (ನಾ). ೧. (ಕೋಪ ಮೊದಲಾದ ಕಾರಣದಿಂದ ಉಂಟಾ ಗುವ) ಹುಬ್ಬುಗಂಟು ; ಭ್ರೂಭಂಗ : ಪಿರಿದುಂ ಪ್ರಯತ್ನದಿಂದಮೆ ವಿರಚಿಸೆ ಚಣ್ಣೆಸಿವ ಭೀಷಣಭ್ರುಕುಟಿ ಪೊದಟ್ಟಿರೆ (ಸಾದಂಪು. ೬೦೦) ; ಭ್ರುಕುಟಿ ಪೊದಳ್ದಿಡೆಗೊಂಡಿರೆ ಕೋಪಾಗ್ನಿಯ ಪೊಡರ್ಪು ರೂಪಾಂತ ತೆಱದೆ ಘುಡುಘಡಿಸುತ್ತುಂ (ರಾಜಶೇ. ೦೯-೬). ೨. [ನಾಟ್ಯ] ಅಭಿನಯದಲ್ಲಿ ಹುಬ್ಬಿನ ಏಳು ಭೇದಗಳಲ್ಲಿ ಒಂದು ; "ಎರಡು ಹುಬ್ಬುಗಳನ್ನು ಜಾಗ್ರತೆ ಮೇಲೆತ್ತುವುದು" (ಶಾಸ್ತ್ರಂ. ೨೭೩ ಗದ್ಯಸೂಚಾದ) : ಸಹಜ, ಪತಿತ, ಉತ್ಕ್ಷಿಪ್ತ, ರೇಚಿತ, ಕುಂಚಿತ, ಭ್ರುಕುಟಿ, ಚತುರ — ಈ ಏಳು ಹುಬ್ಬಿನ ಭೇದಂಗಳ್ . . . ಘಳಿಲನೆಯೆತ್ತಲೆರಡುಂ ಜಲಜಾಕ್ಷೀ ಭ್ರುಕುಟಿ ಯೆಂಬ ಪೆರ್ಸರಿದಕ್ಕುಂ (ಶಾಸ್ತ್ರಂ. ೩-೯೬). [ಸಂ.]

**ಭ್ರೂಕುಂಸ** (ನಾ). = ಭ್ರುಕಂಸ : "ಭ್ರುಕುಂಸಃ, ಭ್ರುಕಂಸಃ, ಭ್ರೂಕುಂಸಃ — ೩ ಸ್ತ್ರೀವೇಷಧಾರೀ — ಹೆಣ್ಣುವೇಷವನ್ನು ಧರಿಸಿದ ನರ್ತಕ, ಪುರುಷ, ಕುಣಿಯುವ ಗಂಡಿನ ಹೆಸರುಗಳು" (ಸಿದ್ಧಾಂತಿ. ೬೦). [ಸಂ.]

**ಭ್ರೂಕುಟಿ** (ನಾ). = ಭ್ರುಕುಟಿ ೧ : "ಭ್ರುಕುಟಿಃ, ಭ್ರೂಕುಟಿಃ — ೨ ಹುಬ್ಬು (ಪುರ್ಬು) ಗಂಟಿಕ್ಕುವುದು" (ಹಲಾಯು. ೦೨೮-೯೦). [ಸಂ.]

**ಭ್ರೂಕೋಟಿ** (ನಾ). ಹುಬ್ಬಿನ ಕೊನೆ, — ತುದಿ : ಈ ಜಗದೊಳ್ ಬದ್ದಗ ನನ್ನನಾತನಿಟಿಸುಂ ಭ್ರೂಕೋಟಿಯಿಂ ಕೋಟಿಯುಂ (ಶಂಕಶಾ. ೦-೨೭);

ಕಾರುಣ್ಯದೃಷ್ಟಿಯೊಳಿತ್ತಂ ಧರಣೀಶ್ವರಂ ಕನಕಮಂ ಭ್ರೂಕೋಟಿಯಿಂ ಕೋಟಿಯುಮಂ (ಪಂಪಭಾ. ೩-೪೪). [ಸಂ.]

**ಭ್ರೂಣ** (ನಾ). ೧. ಗರ್ಭಸ್ಥ ಶಿಶು ; ಪಿಂಡ : " ಗರ್ಭಃ, ಭ್ರೂಣಃ —ಈ ೨ ಗರ್ಭಂ " (ಕರಾಯು. ೬೨-೩೪೩); ತಾಯಿಯ ಗರ್ಭದಲ್ಲಿ, ತಾಯಿಯಿಂದಲೇ ಆಹಾರವನ್ನು ಪಡೆದು ಬೆಳೆಯುವ ಮನುಷ್ಯನ ಭ್ರೂಣವೂ (Embryo) ಕೂಡ ಶಾಸ್ತ್ರೀಯವಾಗಿ ನೋಡಿದರೆ ಪರತಂತ್ರಜೀವಿಯೇ (ಪರೋ. ೯). ೨. ಕೂಸು ; ಶಿಶು ; ಮಗು. ೩. ಹುಡುಗ ; ಬಾಲಕ. ೪. ಬಸುರಿ ; ಗರ್ಭಿಣಿ ; " ಬಸುರಿ ಸತಿಯೊಳ್ ಭ್ರೂಣಮೆಂಬುದು " (ಮಂಗರಾ. ೧೪೦-೧೨). ೫. ಸಸ್ಯದ ಅಂಕುರ ; ಮೊಳಕೆ : ಈ ಅಂಡವು ಪರಾಗನಳಿಕೆಯ ದ್ರವದೊಂದಿಗೆ ಸ್ಪರ್ಶವಾದ ಮೇಲೆಯೇ ಭ್ರೂಣವು ತಯಾರಾಗುವುದೆಂದೂ ಖಚಿತವಾಗಿ ನಿರ್ಧರಿಸಲ್ಪಟ್ಟಿತು (ಸಸ್ಯಶ. ೧೬) ; ಭತ್ತದ ಉಮಿ ಅಥವಾ ಹೊರಕವಚವನ್ನು ತೆಗೆದರೆ ಬರುವ ಅಕ್ಕಿಯಲ್ಲಿ ಮೇಲ್ಭಾಗದಲ್ಲಿ ಭ್ರೂಣ . . . ಮತ್ತು ಒಳಗೆ ಪಿಷ್ಟದ ಭಾಗ ಇರುತ್ತವೆ (ಆಹುಶಾ. ೬೨). ೬. ಮೂಲಾವಸ್ಥೆಯಲ್ಲಿರುವ ವಸ್ತು ; ಮೂಲವಸ್ತು : ಈ ಹಂತದಲ್ಲಿ ರೂಪುಗೊಂಡ ವಸ್ತುಗಳನ್ನು ಸೌರವ್ಯೂಹದ ಗ್ರಹಗಳ ಮತ್ತು ಇತರ ವಸ್ತುಗಳ ಭ್ರೂಣಗಳೆಂದು ವರ್ಣಿಸಬಹುದು (ಭೂಹುಟ್ಟು. ೩೯). ೭. (?) : "ಗರ್ಭಿಣೀ ಜ್ವಾಲೆಯಶೀವ ಬಾಲಕರುಮಿಂತಿವು ಭ್ರೂಣಮೆನಿಕ್ಕು" (ನಾನಾರ. ೧೩೪). [ಸಂ.]

**ಭ್ರೂಣಹತ್ಯ** (ನಾ). ಗರ್ಭದಲ್ಲಿರುವ ಶಿಶುವನ್ನು ನಾಶಪಡಿಸುವುದು,-ಕೊಲ್ಲುವುದು : ಅಂದು ಕಣ್ಣಪ್ಪನ ನಯನವಿರೆ ಇಂದುಜೂಟಂ ಭ್ರೂಣಹತ್ಯಕೆ ಬಂದು ನಿಲುವನೆ (ಬಸಪು. ೧೬-೯೦); ಆತ್ಮಹತ್ಯ ಭ್ರೂಣಹತ್ಯದೋಷಂಗಳೊರ್ಮೊದಲೊಳೆ ಬಂದೊದವುಗುಮೆಂದೆ ಮಾಣ್ದಂ (ರಾಜಶೇ. ೪೨-೩). [ಸಂ.]

**ಭ್ರೂಣಹತ್ಯಾಪಾತಕ** (ನಾ). ೧. ಗರ್ಭದಲ್ಲಿರುವ ಶಿಶುವನ್ನು ಕೊಂದುದರಿಂದ ಬರುವ ಪಾಪ. ೨. ಹಸುಳೆಯನ್ನು ಕೊಂದುದರಿಂದ ಉಂಟಾಗುವ ಪಾಪ ; ಬಾಲವಧೆಯಿಂದ ಬರುವ ದೋಷ : ಕರೆ ನಿಮ್ಮಾತಗಳನೀ ಭ್ರೂಣಹತ್ಯಾಪಾತಕಕ್ಕಂಜುವೆನು (ಕುಮಾರದ್ರೋ. ೩-೨೩) ; ಈ ತರಳನ ಮರ್ದಿಸಿ ಭ್ರೂಣಹತ್ಯಾಪಾತಕವನು ಕಟ್ಟಿಕೊಳಲು ಏತಕೆ (ಬೋಜಪ. ೦೦-೨೭). [ಸಂ.]

**ಭ್ರೂಣಹತ್ಯಾಪಾತಕಿ** (ನಾ). ಬಾಲಕನನ್ನು ಕೊಂದ ಪಾಪಿ : ಆತುಕೊಳ್ಳಲ ಭ್ರೂಣಹತ್ಯಾಪಾತಕಿಯೆ ಪಡಿತಳಿಸು ವಿಶಿಖವ್ರಾತವಿಮೆಯೆನುತೆಚ್ಚ ನಿನ ಸುತನನಿಲನಂದನನ (ಕುಮಾಕ. ೧೦-೪೦). [ಸಂ. ಭ್ರೂಣಹತ್ಯಾಪಾತಕಿನ್]

**ಭ್ರೂಣಹತ್ಯೆ** (ನಾ). =ಭ್ರೂಣಹತ್ಯ : ಭ್ರೂಣಹತ್ಯೆ ನಮ್ಮ ಮೊದಲನೆಯ ಹೆಜ್ಜೆ (ಚಂದ್ರಪಡಾ. ೪೩-೨೦). [ಸಂ. ಭ್ರೂಣಹತ್ಯಾ]

**ಭ್ರೂಭಂಗ** (ನಾ). = ಭ್ರುಕುಟಿ ೧ : ಪ್ರಕುಪಿತಮೃಗಪತಿಶಿಶುಸನ್ನಿಕಾಶರತಿವಿಕಟಭೀಷಣಭ್ರೂಭಂಗರ್ ನಕುಲ ಸಹದೇವರ್ (ಪಂಪಭಾ. ೭-೯) ; ನಿಮಗಿನಿತು ಭಂಗಮಂ ಮಾಡಿದಂಗವಾದಿಗಳಂ ಭ್ರೂಭಂಗಮಾತ್ರದೊಳೆ ಸೆಱೆಗೆಯ್ದು ತಂದು . . . ಪರಿಭವಿಸುವೆಂ (ಜಂರಾಪಾ. ೦೪-೦೦೬ ವ); ಕಂಗಳಿಂದನುಯೋಗ ನಿಜಹಸ್ತಾಂಗುಲಿಯೊಳುತ್ತರ ಲಸದ್ಭ್ರೂಭಂಗದಲಿ ಸಂದೇಹ ಮುಖವಿಕೃತಿಯಲಿ ದುರ್ನೀತಿ (ಕುಮಾಗ. ೦೪-೯೩). [ಸಂ.]

**ಭ್ರೂಭ್ರುಕುಟಿ** (ನಾ). =ಭ್ರುಕುಟಿ ೧ : ಕೃತಾಂತಭ್ರೂಭ್ರುಕುಟಿಕುಟಿಲಮಂ ಜಯಲಕ್ಷ್ಮೀಕಾಂತಂ ಕಾರ್ಮುಕಮಂ ತಳೆದು (ಚಂದ್ರಪು. ೬-೩೦). [ಸಂ.]

**ಭ್ರೂಮಧ್ಯ** (ನಾ). ಎರಡು ಹುಬ್ಬುಗಳ ಮಧ್ಯಪ್ರದೇಶ : ಮೂಲನಾಭಿಸ್ಥಿತನೆ ಕಂಠಮುಖನಾಸಾಗ್ರಲೋಲನೇ ಭ್ರೂಮಧ್ಯನಾದ ಮಧ್ಯಸ್ಥನೆ (ವೀಶೈಪು. ೩-೦೬-೭೨) ; ದ್ವಾರಗಳೊಂಭತ್ತು ಮುಚ್ಚಿ ನಿಲ್ಲಿಸಿ ಧ್ಯಾನ ಭ್ರೂಮಧ್ಯದಿ (ಪುರಂದ. ೩-೮೦ ಅನುಬಂಧ). [ಸಂ.]

**ಭ್ರೂಲಾಸ್ಯ** (ನಾ). ಹುಬ್ಬನ್ನು ಆಡಿಸುವುದು ; ಹುಬ್ಬನ್ನು ಕುಣಿಸುವಿಕೆ : ಇದು ನಿನ್ನರ್ಚಿಸುವಿಕ್ಷುಚಾಪಂ . . . ಎಂದು ತೋರ್ಪ ತೆಱದಿಂ ಭ್ರೂಲಾಸ್ಯಮಂ . . . ತೋಱಿದಳ್ (ಆದಿಪು. ೮೦-೦೭). [ಸಂ.]

**ಭ್ರೂಲೇಖೆ** (ನಾ). ಹುಬ್ಬಿನ ರೇಖೆ,-ಗೆರೆ : ಮುಂದೆ ನಿಂದ ಸಕಳಮುಕುಟಬದ್ಧರನುನ್ನಮಿತಭ್ರೂಲೇಖೆಯಿಂ . . . ಬೀಡಿಂಗೆ ಬೆಸಸೆ (ಮಲ್ಲಿಪು. ೯-೩೨). [ಸಂ. ಭ್ರೂಲೇಖಾ]

**ಭ್ರೂವಿಕ್ಷೇಪ** (ನಾ). = ಭ್ರೂಲಾಸ್ಯ : ಆ ಪುರಸ್ತ್ರೀಭ್ರೂವಿಕ್ಷೇಪಕ್ಕೆ ಸೇನಾಪತಿಪದವಿಯನಿತ್ತಂ ಮನೋಜಾತಂ (ಮಲ್ಲಿಪು. ೨-೩೭). [ಸಂ.]

**ಭ್ರೂವಿಕ್ಷೇಪಣ** (ನಾ). = ಭ್ರೂಲಾಸ್ಯ : ತದ್ಭ್ರೂವಿಕ್ಷೇಪಣಪ್ರೇರಿತಂ ಮೇಘನಾದನಾದರದಿಂ ಬಂದು (ರಾಜಶೇ. ೩-೪೦ ವ). [ಸಂ.]

**ಭ್ರೂವಿಭ್ರಮ** (ನಾ). ಹುಬ್ಬಿನ ರಮಣೀಯವಾದ ಚಲನೆ,-ವಿಲಾಸ : ಕಂತುಶರಭವ[ನ]ನಾ ಪ್ರಿಯಕಾಂತಾಭ್ರೂವಿಭ್ರಮಗ್ರಹಾಗ್ರಹವಶದಿಂ ಭ್ರಾಂತಿಸದುಪಶಾಂತಮನಂ ಶಂತನುಗಿತ್ತಂ ಸಮಸ್ತರಾಜ್ಯಶ್ರೀಯಂ (ಪಂಪಭಾ. ೦-೬೬) ; ಆಕೆಯರ ಸಪ್ತವಿಧಭ್ರೂವಿಭ್ರಮದಿಂ ಮದನನ ಪದೆವಿಲ್ಗಳಂ ಕೆದಱಿದಂತೆಯುಂ . . . ಅತಿ ಮನೋಹರವಾಗೆ (ಚಂದ್ರಪು. ೧೨-೦೯೪ ವ). [ಸಂ.]

**ಭ್ರೂವಿಲಾಸ** (ನಾ). = ಭ್ರೂವಿಭ್ರಮ : ಭ್ರೂವಿಲಾಸಸ್ಥಿತಿಯೊಳೀ ಸಂತ್ಪತ್ತಿಯಾಗದೆ ಬ್ರಹ್ಮಕೋಟಿಗಳು . . . ದೇವ (ಕುಮಾರಾ. ೬-೪೨). [ಸಂ.]

**ಭ್ರೂಸಂಜ್ಞೆ** (ನಾ). ಹುಬ್ಬಿನಿಂದ ಮಾಡುವ ಸನ್ನೆ : ವಿವಾಹಮಂಗಳಕದೇ ಭ್ರೂಸಂಜ್ಞೆಯೆಂಬಂತೆ ಚೆಲ್ವನದೇಂ ಶ್ಮಶ್ರುವಿಕಾಸರೇಖೆ ತಳೆದತ್ತೀಗಳ್ ಕುಮಾರಾಸ್ಯದೊಳ್ (ಕಾದಂಬ. ೪೦೦). [ಸಂ. ಭ್ರೂಸಂಜ್ಞಾ]

*

# ಮ



**ಮ** (ನಾ). ೧. ಕನ್ನಡ ವರ್ಣಮಾಲೆಯ ನಲವತ್ತೈದನೆಯ ಅಕ್ಷರ : ಪಫಬಭಮಯರಲವಶಷಸಹ (ಶಬ್ದಮ. ೬ ಸೂತ್ರ) ; ಅಚ್ಚಗನ್ನಡದಲ್ಲಿ ೪೭ ಅಕ್ಷರಗಳಿವೆಯೆಂದು ಕೇಶಿರಾಜನು ಹೇಳಿರುತ್ತಾನೆ . . . ವ್ಯಂಜನಗಳು . . . ಪಫಬಭಮ (ಶಬ್ದ. ೩). ೨. ಚಂದ್ರ. ೩. ಬ್ರಹ್ಮ. ೪. ವಿಷ್ಣು. ೫. ಶಿವ. ೬. ಯಮ. ೭. ಸಮಯ ; ಕಾಲ. ೮. ವಿಷ. ೯. ನೀರು. ೧೦. ಸುಖ ; ಕ್ಷೇಮ. ೧೧. [ಛಂದ] ಮೂರು ಗುರುಗಳನ್ನು ಒಳಗೊಂಡಿರುವ ಒಂದು ಅಕ್ಷರ ಗಣ ; ಮಗಣ ( — — — ) : ಮಯರಸತಜಭನಲಿ ಗುವಿನಿಚಯಮೆಂಬಿವು ನಿಯಮದಿಂ ಗಣಾಕ್ಷರಮಕ್ಕುಂ (ಛಂದೋಂಬು. ೦-೩೬). ೧೨. [ಸಂಗೀತ] ಸರಿಗಮಪಧನಿ ಎಂಬ ಸಪ್ತ ಸ್ವರಗಳಲ್ಲಿ ನಾಲ್ಕನೆಯದು ; ಮಧ್ಯಮ : ಅವಱಲ್ಲಿ ತೋಱುವಕ್ಷರಾದಿ ಸಂಜ್ಞೆಗಳು ಪುಟ್ಟಿದುವು ಸರಿಗಮಪಧನಿಯೆಂಬಿವು (ಸಂಗರಾ. ೨೩-೩) ; ಸಪ್ತಸ್ವರ ಕ್ರಮವಾಗಿ ಸ, ರಿ, ಗ, ಮ, ಪ, ಧ, ನಿ ಎಂಬ ಸಂಕೇತಾಕ್ಷರಗಳಿಂದ ಪ್ರಯೋಗದಲ್ಲಿವೆ (ಸಂಗೀತ. ೧೫). ೧೩. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ ; **P** ಜ್ಯೋತಿಷ್ಯದಲ್ಲಿ ಅಕ್ಷರಗಳಿಂದ ಸಂಖ್ಯೆಯನ್ನು ಗುರುತಿಸುವ ಒಂದು ಕ್ರಮವಿದೆ. 'ಪಾದಿ ಪಂಚ' ಎಂದರೆ—ಪ ಎಂದರೆ ೧, ಫ = ೨, ಬ = ೩, ಭ = ೪, ಮ = ೫ — ಈ ರೀತಿ ಲೆಕ್ಕ ಮಾಡುತ್ತಾರೆ. [ಸಂ.]

**ಮಇಂದ** 'ಮೆಯಿಂದ' ನೋ.

**ಮಇದು** 'ಮೆಯ್ದುನ' ನೋ.

**ಮಂಕ** (ನಾ). ೧. ಕಳೆಗುಂದಿದವನು ; ಪೆಚ್ಚುಮೋರೆ ಹಾಕಿಕೊಂಡಿರುವವನು : ಯಾಕೆ ಮಂಕನಾಗಿ ಕುಳಿತುಕೊಂಡಿದ್ದೀಯ ? (ಲೋಕ). ೨. ದಡ್ಡ ; ತಿಳಿಗೇಡಿ ; ಮೂಢ : ಕುರುಬನೆಂಬ ಮಾತು ಮಂಕನೆಂಬ ಅರ್ಥದಲ್ಲಿ ರೂಢಿಯಾಗಿರುವುದು (ಕರ್ನಾಮಂ. IV. ೨೩); ಆಗ ನಾನು ಮಂಕನಂತೆ ಕುಳಿತು ಬಿಡುತ್ತೇನೆ (ಶಾರದಾ. ೨೭).

[ ಮಂಕು + - ಅ₇ ]

**ಮಂಕಡ** 'ಮಕ್ಕಡ' ನೋ.

**ಮಂಕಣೆ** 'ಮಕ್ಕರಿ₁' ನೋ.

**ಮಂಕಬ್ಬೆ** (ನಾ). ಒಬ್ಬಾಕೆಯ ಹೆಸರು : ಪದ್ಮಣನ್ದಿಭಟಾರರ ಮಾಳವೆ ಕನ್ತಿಯರ ಸಿಷಿತ್ತಿಯರಪ್ಪ ಮಂಕಬ್ಬೆಕನ್ತಿಯರ್ (ಎಕ. IX (S). ಶಿಂಧಾಸ ೯೩-೯; ಸು. 1000). [ಮಂಕ ? + ಅಬ್ಬೆ₁]

**ಮಂಕರಿ** 'ಮಕ್ಕರಿ₁' ನೋ.

**ಮಂಕಿ** (ನಾ). ಬುದ್ಧಿಯಿಲ್ಲದವಳು ; ದಡ್ಡಿ : ಕಂಕಿ ಹೋಹುದಱಿಂದ ಮಂಕಿ ಹೋಹುದು ಲೇಸು (ಸರ್ವಜ್ಞ. ೧೬೨೨). [ಮಂಕ + — ಇ₂]

**ಮಂಕು** (ನಾ). ೧. ಮಸುಕು ; ಮಬ್ಬು : ಅವಳ ಕಣ್ಣ ಬೆಳಕಿನಲ್ಲಿ ಹಗಲು ಮಂಕು ಚೆದರಿತು (ಶಾಪಗೀ. ೩೦೯). ೨. ಜಡತೆ ; ಆಲಸ್ಯ; ನಿರುತ್ಸಾಹ : ಗೆಲವು ಹೋಗಿ ಮಂಕು ಕವಿಯಿತು (ಮುಂಚಿವಾ. ೩); ನಿವಾರಿಸಲಾಗದ ಮಂಕು ಕಳಸಾಪುರವನ್ನು ಕವಿದಂತೆ ಅವರಿಗೆ ತೋರಿತು (ಕಳಸು. ೯೦). ೩. ದಿಗ್ಭ್ರಮೆ; ಕಕ್ಕಾಬಿಕ್ಕಿ : ಅರಿವೊ ಮಾಯೆಯ ಮಂಕೊ (ಶಿಸೀಗೀ. ೧೨-೧). ೪. ಮಂದಬುದ್ಧಿ ; ಅಜ್ಞಾನ : ಮಂಕಿನ ಜಿಡ್ಡು ಕವಿದರೆ ಮಱೆಪರೇ ಮಾಡಿದ ಮಹಾತ್ಮಕರ (ಸುಜ್ಞಾಕಂ. ೨-೩೪). ೫. ತಿಳಿವಳಿಕೆ ಇಲ್ಲದ ವ್ಯಕ್ತಿ; ಬುದ್ಧಿಗೇಡಿ : ಕೊಂಕುಗುರುಳಿನ ರಂಭೆ ಕಂಕಣವು ಕಟಿಸೂತ್ರ ಪಂಕಜಮುಖಿಯು ಎನಬೇಡ ತಾನೊಲಿದ ಮಂಕೆ ಮಾಣಿಕವು (ಸರ್ವಜ್ಞ. ೦೬೦೦). (ಗು). ೬. ಬುದ್ಧಿಯಿಲ್ಲದ; ದಡ್ಡತನದಿಂದ ಕೂಡಿದ : ಮಂಕು ಜೀವನಾಗಿ ಮುಕ್ತಿ ಬೇಡಬಾರದು (ಕುರಂದ. ೨-೩೯-೪); ಎಲೆ ಮಂಕುಮದವ ನಿನ್ನರಳೆಂಬು . . . ಎನ್ನ ಕಲುವೃಕ್ಷದೊಳು ನಾಂಟಲರಿಯವು ಹೋಗು (ಪೋಚಕ. ೦೨-೩೮).

**ಮಂಕಾಡು** = ಹುಡುಗಾಟಿಕೆ ಮಾಡು ; ಹುಡುಗಾಟವಾಡು : ತಾಯ ಮುಂದೆ ಮಗು ಮಂಕಾಡಿದೋಪಾದಿಯಲ್ಲಿ (ಶಾಕೀಸು. ೯೦). **ಮಂಕುಮಾಡು** = ೧. ಮರುಳುಮಾಡು; ಮೋಹಗೊಳಿಸು : ಬಿಂಕದ ಗಿಳಿಯ ಕೇಳಿಮ್ಮ ನಾಯಕ ತನ್ನ ಸೋಂಕಿದಾಕ್ಷಣವೆ ನೀಱೆಯರ ಮಂಕು ಮಾಡುವ (ಛಕತ. ೬-೯೫). ೨. ಕಳೆಗುಂದಿಸು : ಕಾಂತಿಹೀನನನ್ನಾಗಿ ಮಾಡು : ಪ್ರಖರತೇಜಸ್ಸುಳ್ಳ ಸೂರ್ಯ. . . ಶಾಂತಪ್ರಕಾಶನಾದ ಚಂದ್ರನನ್ನು ಮಂಕು ಮಾಡಿ ಲೋಕದ ಕಣ್ಣಿಗೆ ಅವನ ಇರವೇ ಗೊತ್ತಾಗದಂತೆ ಮಾಡಿಬಿಡುತ್ತಾನೆ (ಕೂಪ್ಯಕು. ೦೦೩). [ದೇ.೩ ತಮಿ. ಮಕ್ಕು; ಮಲ. ಮಣ್ಣುಕ ; ತುಳು. ತೆಲು. ಮಂಬು./ಪಾಲಿ. ಮಂಕು ]

**ಮಂಕುಗೊಳಿಸು** (ಕ್ರಿ). ೧. ಮರುಳುಮಾಡು ; ವಿಸ್ಮಯಗೊಳಿಸು : ಭಾರತದ ಸನ್ಯಾಸಿಯೊಬ್ಬ ಅಮೇರಿಕೆಯ ಜನವನ್ನು ಮಂಕುಗೊಳಿಸಿದ (ಕರ್ಣಾಗಾ. ೫೦). ೨. ಹೆಚ್ಚದಂತೆ ಮಾಡು ; ಕುಂಠಿತಗೊಳಿಸು : ಆ ಹುಡುಗಿಯಲ್ಲಿ ಅಡಕವಾಗಿರುವ ಪ್ರತಿಭೆಯನ್ನು ತಾಯಿ ತಂದೆ ಮಂಕುಗೊಳಿಸುತ್ತಾರಲ್ಲಾ ಎಂದು ಸುನಂದಳಿಗೆ ವ್ಯಥೆಯಾಯಿತು (ದೂಶಲ್ಯ. ೦೦೦). ೩. ಮಸಕಾಗುವಂತೆ ಮಾಡು ; ಮಬ್ಬಾಗಿಸು.

[ಮಂಕು + ಕೊಳ್₁ + — ಇಸು₃]

**ಮಂಕುತನ** (ನಾ). ತಿಳಿವಳಿಕೆಯಿಲ್ಲದಿರುವಿಕೆ ; ದಡ್ಡತನ ; ಬೆಪ್ಪುತನ : ನಿನಗೀ ಮಂಕುತನವೇನೆಂದರಾ ಸಖರು (ಕೃಹಾಸ. ೬-೬) ; ಏ ಚಿನ್ನಾ ಇದೇನೋ ನಿನ್ನ ಮಂಕುತನ ? (ಕಂದಯು. ೩೯). [ಮಂಕು + — ತನ]

**ಮಂಕುದಿಣ್ಣೆ** (ನಾ). ದಡ್ಡತನದ ರಾಶಿಯಂತಿರುವವನು ; ಬಹಳ ಪೆದ್ದ: ನೀನು ಬೆಳೆದ ಮೇಲೆ ಶುದ್ಧ ಮಂಕುದಿಣ್ಣೆ ಆಗುತ್ತೀಯ ನೋಡುತ್ತಿರು (ಶಾಲವಾ. ೦೬) ; ಮಂಕುದಿಣ್ಣೆ ಮದುವೆಗೆ ಹೋದರೆ ವಾಲಗದವರೆಲ್ಲಾ ಅಟ್ಟಾಡಿಕೊಂಡು ಹೊಡೆದರಂತೆ (ಗಾದೆ). [ಮಂಕು + ದಿಣ್ಣೆ]

**ಮಂಕುಬಡಿ** (ಕ್ರಿ). ಏನೂ ತೋಚದಿರು ; ದಿಗ್ಭ್ರಮೆಯುಂಟಾಗು : ಮಂಕುಬಡಿದವರಂತೆ ಕುಳಿತುಬಿಟ್ಟವರು ಒಮ್ಮೆಲೇ ಚೇತರಿಸಿ ಘಟಘಟನೆ ಅಂಗೈಯಿಂದ ಹಣೆ ಬಡಿದುಕೊಳ್ಳುತ್ತಿದ್ದರು (ಮೂಕಜ್ಜಿ. ೨೫೨); ಚಿದಂಬರನಂತೂ. . . ಮಂಕುಬಡಿದವನಂತೆ ನಿಂತುಬಿಟ್ಟ (ಹಸುಹೂ. ೯೩).

[ ಮಂಕು + ಬಡಿ₁ ]

**ಮಂಕುಬೂದಿ** (ನಾ). ತಾಂತ್ರಿಕಸಿದ್ಧಿಯನ್ನು ಪಡೆದವರು ಜನರ ಮನಸ್ಸನ್ನು ವಶಪಡಿಸಿಕೊಳ್ಳಲು ಪ್ರಯೋಗಿಸುವರೆಂದು ನಂಬಲಾದ ಮಂತ್ರದ ಬೂದಿ ; ವಶೀಕರಣ ಭಸ್ಮ : ಮಂಕುಬೂದಿಯನ್ನೆರಚಿದ ಮಾಟಗಾರನಿಗೆ ಶರಣು ಹೊಂದಿದವರಂತೆ ಈ ದೇಶದ ಜನರು ಪವಾಡಪುರುಷರಾದ ಮಹಾತ್ಮರನ್ನು ಹಿಂಬಾಲಿಸಿದರು (ಕಂಐಕಂ. ೭೫).

**ಮಂಕುಬೂದಿಯನ್ನೆರಚು** = (ಅಲಂ) ಮೋಸಮಾಡು ; ವಂಚನೆ ಮಾಡು : ವೃದ್ಧತೀರ್ಥಯಾತ್ರಿಗಳ ಮೇಲೆ ಮಂಕುಬೂದಿಯನ್ನೆರಚುವದಂತೂ ಪಾಪ ಅವರಿಗೆ ಗೊತ್ತೇ ಇಲ್ಲ ! (ಜಾಪಾಆ. ೫೨) ; ಈ ವಿಭೂತಿ

ರುದ್ರಾಕ್ಷಿಗಳು ಅವನ ಕಣ್ಣಿಗೆ ಮಂಕುಬೂದಿಯನ್ನೆರಚಲಾರವು (ಶ್ರೀರಾಯ. ೨೯೩). [ಮಂಕು + ಬೂದಿ]

**ಮಂಕುಮಳೆ** (ನಾ). ದಿಗ್ಭ್ರಮೆಗೊಳಿಸುವ ಮಳೆ ; ಭಯಂಕರವಾದ ಮಳೆ: ತೆಂಕಣಗಾಳಿ ಮಂಕುಮಳೆ ಬರಸೀತು (ಗಾದೆ).

[ ಮಂಕು + ಮಳೆ ( < ಮಬ್$^{3}$ ) ]

**ಮಂಕುರ** (ನಾ). ಕನ್ನಡಿ ; ದರ್ಪಣ. [ಸಂ.]

**ಮಂಕುಪೊಯ್** (ಕ್ರಿ). ಮಂಕು ಆವರಿಸು ; ಭ್ರಾಂತಿಯುಂಟಾಗು ; ದಿಗ್ಭ್ರಾಂತನಾಗು : ಝೇಂಕರಿಸುವ ತುಂಬಿಗಳ ಕಂಡು ನಮಿರಾಜ ಮಂಕುವೊಯ್ದಂತಾದನೊಡನೆ (ಶಬರ. ೩೯-೬೮). [ಮಂಕು + ಪೊಯ್$_{2}$]

**ಮಂಕುಹಿಡಿ** (ಕ್ರಿ). ಪೆಚ್ಚುತನ ಆವರಿಸು ; ಪೆಚ್ಚಾಗು ; ಬೆಪ್ಪಾಗು : ಅದೆಲ್ಲವನ್ನೂ ನೋಡಿ ಶ್ರೀನಿವಾಸರಾಯನು ಮಂಕುಹಿಡಿದವನಾಗಿ "ಸುಬ್ಬಣ್ಣವರೇ, ಇದೇನು ಮನೆಯೋ, ಇಲ್ಲವೆ ದೆವ್ವದ ಗುಹೆಯೋ ?" ಎಂದು ಕೇಳಿದನು (ಕೃಕಕ್ಕೃ. ೦೨೩). [ ಮಂಕು + ಹಿಡಿ$_{1}$ ( <ಪಿಡಿ$_{1}$ )]

**ಮಂಕ್ರಿ** 'ಮಕ್ಕರಿ$_{1}$' ನೋ.

**ಮಂಗ$_{1}$** (ನಾ). ೧. (ಮನುಷ್ಯನನ್ನು ಹೋಲುವ ಹಾಗೂ ಬಾಲವುಳ್ಳ) ಒಂದು ಬಗೆಯ ಪ್ರಾಣಿ; ಕೋತಿ; ಕಪಿ; ಶ್ರೀ ವಿಕಾಸವಾದದ ಪ್ರಕಾರ ಮಾನವಜನಾಂಗದ ಮೂಲಪ್ರಾಣಿ: ಮಾಡಿದ ಗಣಪತಿ ಮಂಗನಾದ ಮೇಲಿನ್ನೇನಿನ್ನೇನು (ತುರಂಡ. ೨-೩೬-೩); ಮಂಗನ ಕೈಗೆ ಮಾಣಿಕ್ಯ ಸಿಕ್ಕಿದ ಹಾಗಾಗಿದೆ (ದೀಕರು. ೫); ಮಂಗನ ಕೈಯಲ್ಲಿ ಕೊಳ್ಳಿ ಕೊಟ್ಟ ಹಾಗೆ (ಗಾದೆ). ೨. (ಅಲಂ) ಕುರೂಪಿ ; ಅಂದಗೇಡಿ : ಆ ಮಂಗನನ್ನು ಯಾರು ಮದುವೆ ಮಾಡಿಕೊಳ್ಳುತ್ತಾರೆ ? (ರೂಢಿ).

**ಮಂಗನ ಕಾಯಿಲೆ** = ಸತ್ತ ಕೋತಿಯಿಂದ ಹರಡುವ ಒಂದು ಬಗೆಯ ಸಾಂಕ್ರಾಮಿಕರೋಗ : ಸಾಗರ, ಸೊರಬ ಮುಂತಾದ ಕಡೆಗಳಲ್ಲಿರುವ ಮಂಗನ ಕಾಯಿಲೆಗೆ ಅನೇಕರು ಬಲಿಯಾಗಿದ್ದಾರೆ (ರೂಢಿ). **ಮಂಗನ ಕೆಮ್ಮು**=ಸಣ್ಣಮಕ್ಕಳಿಗೆ ಬರುವ ಒಂದು ಬಗೆಯ ಕೆಮ್ಮು; ಕೋಡಗಕೆಮ್ಮು ; ನಾಯಿಕೆಮ್ಮು : ಸಣ್ಣ ಹುಡುಗರ ಮಂಗನ ಕೆಮ್ಮಿನಲ್ಲಿ ಪ್ರವಾಳಭಸ್ಮವು ಬಹಳೇ ಉತ್ತಮ ಔಷಧವಾಗಿರುವುದು (ಶಿಶುಧೀ. ೬೨). **ಮಂಗನ ಕೈ** = ಅನ್ನ ಮೊದಲಾದುವನ್ನು ತೋಡಲು ಉಪಯೋಗಿಸುವ ಸಲಕರಣೆ. **ಮಂಗನ ಬಾವು** = ಕೆನ್ನೆ ಹಾಗೂ ಕೊರಳು ಊದಿಕೊಳ್ಳುವ ಒಂದು ಬಗೆಯ ರೋಗ; ಕೆಪ್ಪಟರಾಯ (ಕರಾ); ಗದ್ದ ಕಟ್ಟು : "ಗದ್ದಕಟ್ಟು; ಮಂಗನ ಬಾವು" (Parotitis. ಇಂಕಶ). **ಮಂಗಮಾಯ** = ಕಣ್ಣಿಗೆ ಕಾಣದಂತಾಗುವಿಕೆ ; ಅದೃಶ್ಯವಾಗುವಿಕೆ : ಎಷ್ಟೆಷ್ಟು ತಡಕಿದರೂ ಅದು ಮಂಗಮಾಯವಾಗಿದೆಯಲ್ಲೇ ! (ಕಥಾ. I, ೫೦೫).

[ ದೇ.॥ ಮಲ. ಮೊಣ್ಣ ; ತುಳು. ಮಂಗ]

**ಮಂಗ$_{2}$** (ನಾ). ೧. ದೋಣಿಯ ಮೇಲುಭಾಗ ; ನಾವೆಯ ಅಗ್ರಭಾಗ; ನೌಕಾಶಿರ : "ಪುಳಿಂದಃ, ಮಂಗಃ— ಈ ೨ ನಾವೆಯ ಬಸುಬು" (ಹಲಾಯು. ೧೧೧-೫೦). ೨. ಹಡಗಿನ ಪಕ್ಕ,-ಪಾರ್ಶ್ವಭಾಗ. [ಸಂ.]

**ಮಂಗಚೇಷ್ಟೆ** (ನಾ). ಕಪಿಯಂತೆ ಹುಬ್ಬು ಕುಣಿಸುವುದು, ಹಲ್ಲು ಕಿರಿಯುವುದು ಮೊದಲಾದ ಅಂಗಚಲನೆ : ಹೀಗೆ ನಾನಾತರದ ಮಂಗಚೇಷ್ಟೆಗಳಿಂದ ತನ್ನ ಸೌಂದರ್ಯವನ್ನು ತಾನೇ ಪ್ರಶಂಸಿಸಿಕೊಂಡು ಕನ್ನಡಿಯಿಂದ ಈಚೆಗೆ ಸರಿದಳು (ಅಶಬಾ. ೦೬೮). [ಮಂಗ$_{1}$ + ಚೇಷ್ಟೆ]

**ಮಂಗಟ್ಟೆ** (ನಾ). ಒಂದು ಜಾತಿಯ ಪಕ್ಷಿ : ಒಂದೆಡೆ ಮಂಗಟ್ಟೆಪಕ್ಕಿಗಳ ವಿಕಟನಾದವು ಕಾಡನ್ನು ಭಯಗೊಳಿಸುವಂತಿತ್ತು (ಕಾನೂರು. ೯೩).

**ಮಂಗತಂಡಬಾಕಬ್$^{3}$** (ನಾ). ಒಂದು ಕೆರೆಯ ಹೆಸರು : ಮಂಗತಣ್ಡಬಾಕಜ್ಜಿಯೊಳ್ ಬಿತ್ತು ಬೀಜ ಮಾಗೊಟಿಗಟ್ಟಿಯುಂ ಮಾಗೊಟಿ ಪಾಳ್ಯಂ ಬಿಟ್ಟರ್ (ಎಕ. X, ಶಿಂತಾಮ. ೦೫೩-೯; ಸು. 1000). [ ? + ಕೆಬ್$^{3}$ ]

**ಮಂಗತನ** (ನಾ). ೧. ಕಪಿಯ ಮೂಲಸ್ವರೂಪ,—ಪ್ರಕೃತಿ : ಮನುಷ್ಯನು ವಿವೇಕವಂತನೂ ವಿಕಾಸಶೀಲನೂ ಆದ ಪ್ರಾಣಿಯೆಂದು ಕೇಳುತ್ತೇವೆ. ಮಂಗತನದಿಂದ ಮನುಷ್ಯತ್ವಕ್ಕೆ ಬಂದಿದ್ದಾನೆ (ದೀಕವ್ಯ. ೦೦೯). ೨. (ಅಲಂ) ಕುಚೇಷ್ಟೆ; ಅಧಿಕಪ್ರಸಂಗ : ಹೆಣ್ಣುಹುಡುಗೇರ ತಂದೆ ಅಂದರೆ ದೇವರ ಗುಡಿ ಅಂತ ತಿಳಿದಾನೇನೋ, ಮನಸಿಗೆ ಬಂದ್ಹಾಂಗ ಮಂಗತನ ಮಾಡಲಿಕ್ಕೆ ? (ಅಶ್ವಮೇ. ೦೫); ತಿಪ್ಪನಲ್ಲಿ ವೈದಿಕವೃತ್ತಿಯ ಹುಡುಗರ ಮಂಗತನವೆಲ್ಲ ತುಂಬಿಕೊಂಡಿತ್ತು ( ಸಮಾಜ. ೦೨ ).

[ಮಂಗ$_{1}$ + -ತನ]

**ಮಂಗತೋರಣ** (ನಾ). ಒಬ್ಬಾತನ ಹೆಸರು: ಶ್ರೀಮಂಗತೋರಣನ್ ಪ್ರಮಾದಿಯೆಮ್ಬ ಸಂವತ್ಸರದಾ[ಷಾಢ]ಸುದ್ಧ ಸಪ್ತಮಿಯಾ ಆದಿತ್ಯವಾರದನ್ದು ಬೆಳ್ವೊಲನಾಡನಾಳ್ದರ್ಕೆ (ಶಾಇಇ. XI-i, ೨೦-೪ ; ೮೯೩). [ ? ]

**ಮಂಗನಉಡಿದಾರ** (ನಾ). ಒಂದು ಬಗೆಯ ಬಳ್ಳಿ : ಆಕಾಶಬಳ್ಳಿ, ಮಂಗನ ಉಡಿದಾರ (ಬ್ಯಾಶಿಗ. ೦೯-೩೯೨). [ ? ]

**ಮಂಗನಬಳ್ಳಿ** (ನಾ.) = ಮಂಗನಉಡಿದಾರ : ಇದನ್ನು ಆಕಾಶಬಳ್ಳಿ ಅಥವಾ ಮಂಗನಬಳ್ಳಿ (Cuscuta) ಎಂದು ಕರೆಯುತ್ತಾರೆ (ಸಸ್ಯಶಾ. ೦೦೯). [ ? + ಬಳ್ಳಿ ]

**ಮಂಗಪೆರಸ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ನಿಜರವನ ಮಂಗವರ್ ಮಙ್ಗಪೆರಸರ ಅಟಿಯ ತುಱುಗೋಳೂರಟವಿನೊಲೆಟಪಡೆ ಪಱಿಯಾಟ್ಟು × × ಸತ್ತ (ಎಕ. XII, ತುಮಕೂ. ೬೯-೨ ; ಸು. ೯೦೦ ?).

[ ಮಂಗ$_{1}$ + ಅವ (< ಅಪ್ಪ$_{1}$ ) + ಅರಸ$_{1}$ ]

**ಮಂಗಪ್ಪೆ** (ನಾ). ಒಂದು ಬಗೆಯ ಸಸ್ಯ : (ಬ್ಯಾಶಿಗ. ೬೬-೦೫೬೯). 'ಅಪ್ಪೆಯಸೊಪ್ಪು' ಪರಾ. [ ? ]

**ಮಂಗಮಾರಿ** (ನಾ). ಒಂದು ಬಗೆಯ ಸಸ್ಯ : ಮಂಗಮಾರಿಸೊಪ್ಪು, ಹೆಣ್ಣುಕರೀತುಂಬೆ, ಹುಚ್ಚುಮುಟ್ಟೇಗಿಡ (ಬ್ಯಾಶಿಗ. ೭-೦೦೬); ಮಂಗಮಾರಿ, ತುಂಬೆ, ಶಿರಪೊಟ್ಟಲಿ (ಶಪ್ಯಸು. ೨೩೮). 'ಮಂಡಳಮಾರಿ' ಪರಾ. [?]

**ಮಂಗಮುಷ್ಟಿ** (ನಾ). ೧. ಕಪಿಯ ಮುಷ್ಟಿ,-ಹಿಡಿತ. ೨. (ಅಲಂ) ಹಿಡಿದ ಹಟವನ್ನು ಬಿಡದಿರುವುದು ; ಹಟಮಾರಿತನ : ಷಣ್ಮುಖನೂ ಅಷ್ಟಿಷ್ಟರವನಲ್ಲ, ತುಂಬ ಹಟಮಾರಿ ! ಉಡದ ಹಿಡಿತ ಅವನದು. ಅದಕ್ಕೆ 'ಮಂಗಮುಷ್ಟಿ' ಎಂದು ಹೇಳಿದರೆ ಸಲ್ಲೀತು (ಶೂದ್ರತಾ. ೯೨). ೩. ಜಿಪುಣ ; ಲೋಭಿ : ಅವನು ಬಹಳ ಮಂಗಮುಷ್ಟಿ, ಅವನನ್ನು ಸಾಲ ಕೇಳಲೇ ಬೇಡ (ರೂಢಿ). 'ಕಪಿಮುಷ್ಟಿ' ಪರಾ.

[ ಮಂಗ$_{1}$ + ಮುಷ್ಟಿ ]

**ಮಂಗಯ್ಯ** (ನಾ). ಒಬ್ಬಾತನ ಹೆಸರು : ತೋಟಯ್ಯನ ಮಗ ಮಙ್ಗಯ್ಯಂ . . . ಕಾಳೆಗದೊಳ್ ಆನೆಯ ಮುಂದೆ ಸತ್ತು ಸಗ್ಗಕ್ಕೆ ಸಂದೊಂ (ಎಕ. XII, ಕುಣಿಗ. ೩೯-೦೨ ; ಸು. ೯೬೦). [ ಮಂಗ$_{1}$ + ಅಯ್ಯ$_{61}$ ]

**ಮಂಗರವಳ್ಳಿ** 'ಮಂಗುಬಿಷಳ್ಳಿ' ನೋ.

**ಮಂಗರೆ** 'ಮಗ್ಗಾರೆ' ನೋ.

**ಮಂಗಲ, ಮಂಗಳ** (ಗು). ೧. ಶುಭಕರವಾದ ; ಕಲ್ಯಾಣಕರವಾದ : ಶಶಿಯ ಪೋಲ್ವ ಮುಖಮೈದೆ ಕೊರಗಿತ್ತು ಮಂಗಲಸೌಮ್ಯವಡಿತುದೇ . . . ಗ್ರಹಬಲಂ ತಪ್ಪಿತಕಟಾಯೆಂದಳು (ಕಾವಶಂ. ೯-೨೮). (ನಾ). ೨. ಏಳಿಗೆ ; ಅಭಿವೃದ್ಧಿ. ೩. ಅದೃಷ್ಟ ; ಭಾಗ್ಯ ; ಮೇಲ್ಮೆ. ೪. ಕುಶಲ ; ಕ್ಷೇಮ. ೫. ಸುಖ ; ಸಂತೋಷ. ೬. ಶುಭ ; ಕಲ್ಯಾಣ ; ಒಳ್ಳಿತು ; ಶ್ರೇಯಸ್ಸು : "ಶ್ವಃ(ಸ್ವ)ಶ್ರೇಯಸಂ, ಕಲ್ಯಾಣಂ . . . ಮಂಗಳಂ— ಈ ೧೧ ಒಳ್ಳಿತರ್ಕೆ ಪೆಸರ್" (ಹಲಾಯು. ೨೦-೦೨೨) ; ಬೆಳಗಾದುದಾ ದಿನಂ ಪೂಜೆಗೈದಂಗಜಾರಿಗೆ, ಮಧುರ

ಮಂಗಲದ ಸಂಗೀತದಿ ಸ್ತುತಿಸಿ (ಶತ್ಕಾಂಗ. ೬೨-೦೭೦೯). ೭. ಕಾವ್ಯ, ಗೀತ, ಶಾಸನ ಇತ್ಯಾದಿಗಳ ಆರಂಭ ಅಥವಾ ಅಂತ್ಯದಲ್ಲಿ ಬರುವ ಇಷ್ಟದೇವತಾಪ್ರಾರ್ಥನೆ ಅಥವಾ ಶುಭವನ್ನು ಕೋರುವಿಕೆ ,—ಶುಭದ ಹಾರೈಕೆ: ಮಂಗಲವು ಕರುಣಾಂತರಂಗ ಶ್ರೀರಂಗಗೆ ಮಂಗಲವು ಸಿಂಹಾದ್ರಿ ನರಸಿಂಹಗೆ (ಪುರಂದ. ೩-೨೨೦ ಅನುಕ್ರಮ). 'ಜಯಮಂಗಲ'ಹೋ. ೮. ಶುಭಶಕುನ,–ನಿಮಿತ್ತ. ೯. (ಶುಭ ಕಾರ್ಯಗಳಿಗೆ ಸಂಬಂಧಪಟ್ಟಂತೆ ಮಾಡುವ) ಶುಭಾರಂಭ. ತಲವಜ್ರಾಘಾತದಿಂ ಮರ್ದಿಸಿ ರಜಕನನಾತ್ಮಪ್ರವೇಶಕ್ಕಿದೇಮಂಗಲ ಮೆಂಬಂತಾ ಪುರದ್ವಾರದೊಳವನಡಗಿಂ ಬಾತ್ತಿಯಿಟ್ಟು . . . ಪೊಕ್ಕಂ ದನುಜನ ಪೊಟಲಂ (ಜಗ. ೬-೦೦). ೧೦. ಮದುವೆ ಮೊದಲಾದ ಶುಭಕಾರ್ಯ, – ಉತ್ಸವ, – ಸಮಾರಂಭ: 'ಮಂಗಲಕಾರ', 'ಮಂಗಲವಣಿ' ಪರಾ. ೧೧. ಅನೂಚಾನವಾಗಿ ಬಂದ ಆಚಾರ, –ಪದ್ಧತಿ, –ಸಂಪ್ರದಾಯ. ೧೨. ನವಗ್ರಹಗಳಲ್ಲಿ ಒಂದು; ಕುಜ. ೧೩. ಸೈನ್ಯವು ನೆಲಸಿರುವ ಸ್ಥಳ: ವಾಸ್ತುಶಾಸ್ತ್ರದ ಪ್ರಕಾರ "ಮಂಗಲ" ಎಂದರೆ ದುರ್ಗರಕ್ಷಣಕ್ಕಾಗಿ ನಗರದ ಸೈನ್ಯವು ನೆಲೆಗೊಂಡಿರುವ ಸ್ಥಳವೆಂದರ್ಥ (ಶುಳುಶಾ. ೨೦೪). ೧೪. ಕೋಟೆ; ದುರ್ಗ: ಮಂಗಲ_ ವಾಸ್ತುಶಾಸ್ತ್ರದಲ್ಲಿ ಕೋಟೆ ಎಂಬರ್ಥ (ಶುಳುಶಾ. ೪೯). ೧೫. ಕೆಲವು ಊರುಗಳ ಹೆಸರಿನ ಕೊನೆಯಲ್ಲಿ ಸೇರುವ ಪದ; ಉದಾಹರಣೆಗೆ– ನಾಗಮಂಗಲ, ನೆಲಮಂಗಲ, ಸತ್ಯಮಂಗಲ ಇತ್ಯಾದಿ. ೧೬. ಒಂದು ಊರಿನ ಹೆಸರು: ಮಜ್ಗಲಾಳ್ವ ಅಷ್ಟಶತೂ ಕ್ಷೇತ್ರ (೦) ಗೊಟ್ಟರ್ (ಇಕ. X, ೦೦೩-೯; 696 ?); ಮಂಗಲದ ಗರಳೋಜ ಆರ × × ಕೊಟ್ಟ (ಎಕ. IV, ಗುಂಡ್ಲುಪೇ. ೯೭-೦೦; ಸು. 750). ಮಂಗಳ: ೧. ಮಂಗಳ ಮಣಿಪೀಠಂ ವಿಜಯಾಂಗನೆಗೆನೆ . . . ಭುಜಶಿಖರಮಂ ರತ್ನಾಂಗದಮಂ ಸಾರ್ಚುವೊಂದು ನೆವದಿಂ ಮೆಚ್ಚಿದಂ (ಶಂಖಾಮಾ. ೩-೩೭); ತುಂಗೆ ಮಂಗಳ ತರಂಗೆ (ಪುರಂದ. ೪-೪೦ ಕ್ರಮ). ೨. ತ್ರಿಜಗವಂದಿತ ಗಣಪ ಮಾಳ್ಪುದು ಮತಿಗೆ ಮಂಗಳವ (ಕುಮಾ. ೦-೪). ೬. "ಶ್ವೋವಶೀಯಂ ಶಿವಂ . . . ಮಂಗಳಂ . . . ಕಲ್ಯಾಣಮೆಂದೆನಲ್ಕೊಳ್ತಕೆ ಪೆಸರೆನಿಕ್ಕುಂ" (ಮಂಗರಾ. ೮-೨೭); ಮಂಗಳಮಪ್ಪ ಪಾಲ್ಗಡಲೊಳಾ ಹರಿಯುಂ ಸಿರಿಯುಂ . . . ಎಸೆ ವಂತೆ (ಕುಸುಮಾ. ೪-೩೯). ೭. ಮನದೊಳೆಣಿಸುವುದಂ ಪಡೆವರೀ ಪೋಡ ಶಸ್ವಪ್ನದ ಫಲಂಗಳಂ ಪಡೆಯಲಣಮಾಗದ ಸುಖಂಗಳಂ ಮಂಗಳಂ (ಆದಿಪು. ೭-೨೭ ರಗಳೆ); ಮಂಗಳಂ ಪೃಥಿಲಿಗೆ ಅಂಗುಲಿಯನಿತ್ತವಗೆ (ಪುರಂದ. ೦-೨೩೦ ಅನುಕ್ರಮ); ಇಂತು ಶ್ರೀರಾಘವಂ ಸೀತಾಸಮೇತಂ ಜನ್ಮಮಂ ಬೇಳ್ದು . . . ಅರಸುಗೆಯುತ್ತುಮಿರ್ದನವಂಗಂ ಮಂಗಳಂ (ರಾಮಕಥಾ. ೦೬೭-೨೪). ೧೦. ಮಂಗಳ ಹತ್ತಿರವಾದೂ ಗಂಗಳ ತೂಕೀಲಿಲ್ಲಂತ (ದುರಂಪಾ. ೦೦೯). ೧೧. "ಪೂರ್ವಪದ್ಧತಿಯ ತೆಜನುಸಿರ್ವಲ್ಲಿಯುಂ . . . ಮಂಗಳಾಖ್ಯಂ" (ಮಂಗರಾ. ೦೩೪-೬೭). ೧೨. "ಅಂಗಾರಕಂ ವಕ್ರನವನಿಜಂ ಭೌಮನೆನೆ ಮಂಗಳಾಖ್ಯಂ" (ಮಂಗರಾ. ೦೦-೬); ಲಿಂಗದ ಸ್ಥಲ ಲೇಸು ಮಂಗಳನ ಬಲ ಲೇಸು . . . ಶರಣರ ಸಂಗವೇ ಲೇಸು (ಸರ್ವಜ್ಞ. ೨೯೩). ೧೭. ಶುಭವನ್ನು ಕೋರುವ ಹಾಡು: ಮಂಗಳಮನೆ ಪಾಡುತ್ತುಂ ಮಂಗಳಧಾರಿಣಿಯರಶಿಗ ಮುಂದಂ ನಡೆಪಾಶಾಂಗನೆಯರಿಂದೆ ದಿವಿಜೇಂದ್ರಾಂಗನೆ ಕರಮೆಸೆದು ಹಂಸಗತಿಯೊಳ್ ಬಂದಳ್ (ಆದಿಪು. ೭-೪೯). ೧೮. ಒಂದು ಬಗೆಯ ಕಾ[illegible]ರ: "ಕಾಲ್ಗೊಗವೆಪ್ಪ ಬೆಳ್ಪುದೋಚರೆ ಮಂಗಳಂ" (ಮಂಗರಾ. ೬೨-೦೩); ಬಾಲದೊಳುರದೊಳ್ ತಾಂ ಕೇಸರದೊಳಮತಿಶಯ ಬೆಳ್ಪದಾಗೆ ಮಂಗ(ಕ)ಳನಕ್ಕುಂ (ಅಶ್ವಶಾ. ೨-೦೯). ೧೯. ಸೊಬಗು; ಚೆಲುವು: 'ಮಂಗಳವಡೆ' ಪರಾ. ೨೦. ಕ್ಷೌರಮಾಡುವ ವೃತ್ತಿಯವನು; ನಾಯಿಂದ: ನಿಲಿಸಿ ಕುರುಳನು ತೆಗವನಿಗೆ ಮಂಗಳನುಯೆಂಬಾಖ್ಯದಲಿ (ಳರಂಪು. ೦೯-೬೯). ೨೧. ಕೇಡನ್ನು ಸೂಚಿಸುವ ಸಂದರ್ಭದಲ್ಲಿ ಬಳಸುವ ಸೌಮ್ಯೋಕ್ತಿ: "ನಿಪಾತ ಶಬ್ದವನು ಪೇಟ್ವಲ್ಲಿಯುಂ ಮಂಗಳಾಖ್ಯಂ" (ಮಂಗರಾ. ೦೩೪-೬೭). ೨೨. (ಆಲಂ) ಯಾವುದಾದರೂ ಉತ್ಸವ ಸಮಾರಂಭದ ಮುಕ್ತಾಯದಲ್ಲಿ ಮಾಡುವ ಆರತಿ, ನೈವೇದ್ಯ ಇತ್ಯಾದಿ ವಿಧಿ: ಆಯ್ತಾಯ್ತು ಪೇಟ್ದ ಕತೆಗೆ ಮಂಗಳಮಂ ಮಾಡು (ರಾಮಕಥಾ. ೦೭೩-೩). ೨೩. [ಛಂದ] ನಾಲ್ಕು ಪಾದಗಳುಳ್ಳ ಒಂದು ಅಕ್ಷರಗಣದ ಸಮವೃತ್ತ; ಪ್ರತಿ ಸಾಲಿನಲ್ಲೂ ಹದಿನಾರು ಅಕ್ಷರಗಳಿರುವ ಅಷ್ಟಛಂದಸ್ಸಿನ ಒಂದು ವೃತ್ತ: ದಂತಿಯೊಳೊಪ್ಪ ಪದ್ಧತಿಯೊಳಲ್ಲಿ ಯತಿಯುಂ ನಿಲೆ ಮಂಗಳಮೆಂಬುದೀ ಕ್ಷಿತಿಗೆ ಸಂದುದು (ಛಂದೋಂಬು. ೨-೧೩೪); ವಭಜಜಂ ಜಗಮುಮೊಂದಿರಲಪ್ಪುದು ಮಂಗಳಂ (ಕೃಪಿಪಿ. ೯೪).

ಮಂಗಲಮಾಡಿಕೊಡು = ಮದುವೆ ಮಾಡಿಕೊಡು: ನಿನ್ನಂತಹ ಸಾಮಾನ್ಯನಿಗೆ ಅವನು ಮಗಳನ್ನು ಮಂಗಲ ಮಾಡಿಕೊಡಲಾರ (ಹುಂಚಾ. ೦೦೪). ಮಂಗಳಹಾಡು = ಪರಿಸಮಾಪ್ತಿಗೊಳಿಸು; ಮುಕ್ತಾಯಮಾಡು: 'ಶಾಕುಂತಲ' ನಾಟಕವನ್ನು ಹಲವಾರು ಬಾರಿ ಆಡಿ ಕಡೆಗೆ ಮಂಗಳ ಹಾಡಿದರು (ರೂಢಿ). [ಸಂ.]

**ಮಂಗಲಂಬಾಡು**, ಮಂಗಳಂಬಾಡು (ಕ್ರಿ). ಶುಭವನ್ನು ಕೋರುವ ಹಾಡನ್ನು ಹಾಡು: ಮುನಿವೃಂದಾರಕನ ಬರವಿನೊಸಗೆಯೊಳ್ ಮಂಗಲಂ [ಪಾಠಾಂ. ಳಂ]ಬಾಡುವಂತಿನಿಯ ದನಿಯಂ ನೆರೆದು ಮೊರೆವ ಪೆಣ್ದುಂಬಿಗಳುಂ (ಕಂಪ್ರಪು. ೨-೦೦೩). ಮಂಗಳಂಬಾಡು: ನೆರೆದೊಡನೆ ಮಂಗಳಂ ಬಾಡೆ ಗಾಯಕಗಣಂ ಕರಮೆ ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಜಪು. ೪-೭ ರಗಳೆ). [ಮಂಗಲ + ಪಾಡು$_1$]

**ಮಂಗಲಕಾರ** (ನಾ). ಮದುವಣಿಗ; ವರ: ಮಂಗಲಕಾರನನ್ನು ಈ ಮೊದಲು ನಾನು ನೋಡಲೇ ಇಲ್ಲವಲ್ಲ ? (ಹುಂಚಾ. ೨೦೩).
[ಮಂಗಲ + — ಕಾರ$_1$ (< — ಕಾಱ)]

**ಮಂಗಲಕಾರ್ಯ**, ಮಂಗಳಕಾರ್ಯ (ನಾ). ಮಂಗಲಕರವಾದ ಸಮಾರಂಭ; ಶುಭಕಾರ್ಯ: ಬಂದವರು ಯಾವ ಆತಂಕವೂ ಇಲ್ಲದೆ ಮಂಗಲಕಾರ್ಯಗಳನ್ನು ನೋಡಿ ಅನುಭವಿಸಲಿ ಎಂದು ವಿಧಿಸಿದಳು (ಹತ್ತುಕ. ೨೯). ಮಂಗಳಕಾರ್ಯ: ಸ್ವಸ್ತಿಶ್ರೀ ಲಕ್ಷ್ಮೀಸೇನಭಟ್ಟಾರಕ ಸ್ವಾಮಿಗಳವರು . . . ಮಂಗಳಕಾರ್ಯವನ್ನು ನೆರವೇರಿಸಿಕೊಟ್ಟರು (ಶಿಟ್ಯೂಶಾಂ. iii, ೮೦೪). [ಸಂ.]

**ಮಂಗಲಕಾಲ** (ನಾ). ಶುಭ ಸನ್ನಿವೇಶ; ಒಳ್ಳೆಯ ಕಾಲ: ಎಲೆ ಸಖಿ, ಮಂಗಲಕಾಲದಲ್ಲಿ ನೀನಿಂತು ರೋದನ ಮಾಡುವುದು ಉಚಿತವಲ್ಲ (ಶಾಕುಂತ. ೩೦-೨೦). [ಸಂ.]

**ಮಂಗಲಗಾತ್ರೆ** (ನಾ). ಮನೋಹರವಾದ ದೇಹವುಳ್ಳವಳು; ಸುಂದರಿ: ಕಲಹಂಸಗಮನೆ ಪೂರ್ಣೇಂದುಮುಖಿ ಚಾರುಮಂಗಲ[ಪಾಠಾಂ. ಳ]ಗಾತ್ರ [ಪಾಠಾಂ. ತ್ರಿ] ಘನ ಸೌಮ್ಯ ಸುಂದರವಿಲಾಸಿನಿ . . . ಕೇಳ್ನಿನ್ನ ದೆಸೆಗಿದೆ ನವಗ್ರಹಂಗಳ ಪೆಸರ ಬಲಂ (ಕೃಮಾಪು. ೬-೨೯).
[ಸಂ. ಮಂಗಲಗಾತ್ರಾ (ಮಂಗಲ + ಗಾತ್ರ + —)]

**ಮಂಗಲತೋರಣ**, ಮಂಗಳತೋರಣ (ನಾ). ಮದುವೆ, ಹಬ್ಬ ಮೊದಲಾದ ಶುಭಸಮಾರಂಭಗಳಲ್ಲಿ ಅಲಂಕಾರಕ್ಕಾಗಿ ಬಾಗಿಲು, ಬೀದಿ ಮುಂತಾದೆಡೆಗಳಲ್ಲಿ ಕಟ್ಟುವ ತಳಿರು, ಹೂವು, ಬಟ್ಟೆ ಮೊದಲಾದುವುಗಳ ಮಾಲಿಕೆ: ತ್ರಿಭುವನಮಂಗಲತೋರಣನಿಭಮಂ ಪ್ರವಚನಮನೆಯ್ದೆ ರೈಸ್ತಂಭನಮಪ್ರಭರಂತರ್ನಿಭೃತೋನ್ನತವಿಭವರ್ ಭೂತಬಲಿಪುಷ್ಪದಂತಾಚಾರ್ಯರ್ (ಕಂಪ್ರಪು. ೦-೦೩). ಮಂಗಳತೋರಣ: ಉತ್ಸವದ ಸಮಯದಲ್ಲಿ ಊರ ಬಾಗಿಲಿಗೆ ಮಂಗಳ ತೋರಣ ಕಟ್ಟಿ ಅಲಂಕರಿಸಿದ್ದರು (ರೂಢಿ). [ಸಂ.]

**ಮಂಗಲಪಾಠಕ,** ಮಂಗಳಪಾಠಕ (ನಾ). ಬಿರುದಾವಳಿಯನ್ನು ಹೇಳುವವನು; ಹೊಗಳುಭಟ್ಟ; ವಂದಿ : ಆಗಳ್ ಮಜ್ಜನಾವಸರಮಂಗಲ[ಪಾಠಕಾಂ. ಳ]ಪಾಠಕಮಧುರಗಂಭೀರನಿನದಮನಾಲಿಸುತ್ತುಂ(ಆದಿಪು. ೯-೬೦ ವ). **ಮಂಗಳಪಾಠಕ :** "ಪ್ರಬೋಧಕಾಃ, ಮಗಧಾಃ . . . ಮಂಗಳಪಾಠಕಾಃ _ಈ ೬ ಮಂಗಳಪಾಠಕರ್" (ಶಬ್ದಮ. ೬೦-೨೬೦); ಮಂಗಳಪಾಠಕರವ ವಾದ್ಯಂಗಳ ರವಮುಖಿಳಕಂಚುಕಿಗಳ ನಿನಾದಂ ಪೊಂಗೆ . . . ಎಸೆದನುದ್ಯ ಟಕ್ಷಿತಿಪಾಲಂ (ಅದ್ಭುತ. ೨-೩೯); ಒಡನೆ ಮಂಗಳಪಾಠಕರು ಸಂಗಡಿಸಿ ಬಿರಿದುಗಳಂ ಪೊಗಳುತಂ ನಡೆಯೆ (ಬಸವ. ೩೦-೧೬). [ಸಂ.]

**ಮಂಗಲಪ್ರಸಾಧನ,** ಮಂಗಳಪ್ರಸಾಧನ (ನಾ). ಶುಭಪ್ರದವಾದ ಅಲಂಕಾರಸಾಮಗ್ರಿ : ಪರಪದಂ ತದ್ಭವಮಾದ ಸಮಾಸಕ್ಕೆ . . . ಮಂಗಲ[ಪಾಠಕಾಂ.ಳ]ಪ್ರಸಾಧನ _ ಮಂಗಲವಸದನ (ಶಬ್ದ. ೨೯೯ ವೃತ್ತಿ). **ಮಂಗಳಪ್ರಸಾಧನ :** ಮನ್ಮಥನ ಮೋಹನಯಂತ್ರಮಿದಪ್ಪುದಲ್ಲದಂದಿನಿತುವರಂ ಮನಂಗೊಳಿಸದೆಂಬಿನಮುಜ್ಜ್ವಳಮಂಗಳ[ಪಾಠಕಾಂ.ಲ]ಪ್ರಸಾಧನಮೆ ಮನೋಜರಾಜಜಯಸಾಧನಮಾದುದು ವಜ್ರಜಂಘನಾ (ಆದಿಪು. ೯-೯೦) ; ಮಂಗಳಪ್ರಸಾಧನಸನಾಥನುಂ ವಿನೀತನುಂ (ಶಾಂತಿಪು. ೦೦-೯೯ ವ). [ಸಂ.]

**ಮಂಗಲಬೀವಣ್ಣ** (ನಾ). ಒಬ್ಬಾತನ ಹೆಸರು : ನಾಗತ್ತರನಳು ಮಂಗಲಬೀವಣ್ಣಸೆಟ್ಟಿಯುಂ ನಾಗದೇವಸೆಟ್ಟಿಯುಂ × × × ಕದಮ್ಬೂರ್ ತುಱುಗಳ್ವೊಳ ಕಾದಿ ಸತ್ತ (ಎಕ. IX. ಚಿಕ. ೬೩-೬; ಸು. ೯೦೦).

[ಮಂಗಲ + ಬೀವ (< ಬೀಮ) + ಅಣ್ಣ₁]

**ಮಂಗಲಮಣಿ** (ನಾ). ಮದುವೆಯಲ್ಲಿ ವರನು ವಧುವಿನ ಕೊರಳಿಗೆ ಕಟ್ಟುವ ಮಾಂಗಲ್ಯದ ಬೊಟ್ಟು; _ ತಾಳಿ : ನಿನ್ನ ಕೊರಳಿಗೆ ಮಂಗಲಮಣಿಯನ್ನು ಕಟ್ಟಿದ ಗಂಡಭಟ್ಟ ನಾನು (ಶ್ರಾವಂ. ೫೦).

[ಮಂಗಲ + ಮಣಿ. / ತಮಿ. ಮಙ್ಗಲಮಣಿ]

**ಮಂಗಲವತಿ** (ನಾ). ಮುತ್ತೈದೆ; ಸುಮಂಗಲಿ : 'ಚಿರಮಂಗಲವತಿ' ಪರಾ. [ಸಂ. ಮಂಗಲವತೀ]

**ಮಂಗಲವರಿಗೆ** (ನಾ). ಶುಭಸನ್ನಿವೇಶದಲ್ಲಿ ಬಾರಿಸುವ ಹಲಗೆ : "ಮಂಗಲದ ವಾದ್ಯದೊಳಗೆ ಮಂಗಲವರಿಗೆಯೆಂಬ ನಾಮಂ" (ಶಬ. ೯೬).

[ಮಂಗಲ + ಪರಿಗೆ]

**ಮಂಗಲವಾದ್ಯ,** ಮಂಗಳವಾದ್ಯ (ನಾ). ಶುಭಸಂದರ್ಭಗಳಲ್ಲಿ ಬಾರಿಸುವ ವಾದ್ಯ ; ಮಂಗಳವನ್ನು ಸೂಚಿಸುವ ವಾದ್ಯ : ಎಸೆದುದು ವಿಹಂಗಮಂಗಲವಾದ್ಯಮೆತ್ತಲುಂ (ಶೃಂಗಾರ. ೯೦-೦೦೦೬). **ಮಂಗಳವಾದ್ಯ:** ಮಂಗಳವಾದ್ಯದಿಂ ಕಳಸಕ[ನ್ನ]ಡಿಯಿಂ . . . ಇದಿರ್ಗೊಳುತ್ತಂಗಜರೂಪಸನ್ನಿಭರನುರ್ವಿಪರಂ ಸ್ವಪುರಪ್ರವೇಶಮಂ ಕಂಗೊಳಿಪಂತು ಮಾಡಿಸಿದಂ (ಪಶಸಂ. ೩೦೩); ತಪ್ಪದೆ ಮಂಗಳವಾದ್ಯದ ಬಲುರವಪುಪ್ಪರಿಸಿದುವೆಂಟು ದೆಸೆಗೆ (ಕಂಸಂ. ೨-೧೦೯). [ಸಂ.]

**ಮಂಗಲಸೂತ್ರ,** ಮಂಗಳಸೂತ್ರ (ನಾ). ವಿವಾಹಕಾಲದಲ್ಲಿ ವಧುವಿನ ಕೊರಳಿಗೆ ವರನು ಕಟ್ಟುವ ತಾಳಿಯನ್ನು ಪೋಣಿಸಿರುವ ದಾರ : ಪಟ್ಟವಧಿನ್ನುಸುರೇಂದ್ರವನಿತೆಯು ಮೆಚ್ಚಿವ ಮಂಗಲಸೂತ್ರ (ಕೊರಡ. ೩-೨-೦೦). **ಮಂಗಳಸೂತ್ರ :** ಭಾಸುರಜ್ಯೋತಿಗಳಗರ್ಭವನೋಸರಿಸದಿಂತರ್ಪಿಸುತ್ತಿರೆ ನೈಸಜಿಲಿ ಪೆಂಡಿತಿಯ ಮಂಗಳಸೂತ್ರವದು ಮೊದಲು (ಬಸವ. ೨೭-೯) ; ಬೇಸರಾಗದೆ ಬಾಳ್ವುದೆಂದು ಮಂಗಳಸೂತ್ರ ಲೇಸಿನಲಿ ಕಂಠದಲಿ ಬಂಧಿಸುತ (ಪಂಚಸೋ. ೦೩-೫೭). [ಸಂ.]

**ಮಂಗಲಾಗುರು** (ನಾ). ಒಂದು ಬಗೆಯ ಸುಗಂಧದ್ರವ್ಯ : "ಮಲ್ಲಿಕಾಗಂಧ_ ಮಂಗಲಾಗುರು" (೬ಕಂ. ೦೨೦). [ಸಂ.]

**ಮಂಗಲಾತ್ರಯೋದಶಿ** (ನಾ). ಒಂದು ಬಗೆಯ ವ್ರತ : ಈ ವಾರಂಗಳಲ್ಲಿ ಮಂಗಲಾತ್ರಯೋದಶಿ ಬಹಾಗ ಆ ಮಂಗಲಾತ್ರಯೋದಶಿ ನಡವ[ದ]ಂದು ವಿಶೇಷವಾಗಿ ಉಂಬಿಸಿದ ಅಕ್ಕಿಮುಡಿ ೨ (ಎಇ. XX. ೯೯-೩೦; ೧೩೩೩). [ಸಂ. ಮಂಗಲಾತ್ರಯೋದಶೀ]

**ಮಂಗಲಾನಕ,** ಮಂಗಳಾನಕ (ನಾ). ಮದುವೆ ಮೊದಲಾದ ಶುಭಸಮಾರಂಭಗಳಲ್ಲಿ ಬಾರಿಸುವ ತಮಟೆ, _ ಭೇರಿ : ಆಶೀರ್ನಿನಾದ ವಾಶಾದೇಶಮನೆಯ್ದಿದುದು ಮಂಗಲಾನಕರವಮಾಕಾಶಮನಡರ್ದುದು (ಶಾಂತಿಪು. ೦೯-೬೨). **ಮಂಗಳಾನಕ :** ಜಿನಪೂಜೋತ್ಸವಮಂಗಳಾ[ಪಾಠಕಾಂ. ಲಾ]ನಕವ್ಯಾದುಪ್ರಧ್ವಾನದೊಳ್ . . . ಪೊಂಪುಱಿಪೋಗುತಿರ್ಪ ವೆರಡುಂ ವಿದ್ಯಾಧರಶ್ರೇಣಿಗಳ್ (ಆದಿಪು. ೦-೬೦) ; ಮಂಗಳಾನಕಂಗಳುಂ ಭೋರ್ಗರೆಯೆ ಪೊಱಮಟ್ಟು ಬರ್ಪಲ್ಲಿ (ಪುಷ್ಪ. ೦೦-೦೬ ವ). [ಸಂ.]

**ಮಂಗಲೀಶ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಮಾತ್ಪ್ರಿ(ಪ್ರ)ಥಿವಿವಲ್ಲಭ ಮಂಗ(ಲೀ)ಸ(ಶ)ನಾ ಕಲ್ಲನೆ ಇತ್ತೊದು (ಇಇ. X, ೬೦-೦; ೫ನೆಯ ಶ). [ಸಂ.]

**ಮಂಗಲೋತ್ತರ** (ನಾ). ಮೋಕ್ಷವನ್ನು ಪಡೆದವನು ; ಮುಕ್ತ : ನಿರಂಗಸಂಗವನೈದಿದ ಮಂಗಲೋತ್ತರನಂತೆ ಇದಱಿಂದದ ಸಂಗ ಇದೇ ಹಿಂಗದ ಲಿಂಗೈಕ್ಯ (ಶೋಳಶಾ. ೦೨೯-೯೬೨). [ಸಂ.]

**ಮಂಗಲ್ಯಕ,** ಮಂಗಳ್ಯಕ (ನಾ). ಒಂದು ಬಗೆಯ ಕಡಲೆ; ಕಾಡುಗಡಲೆ ; ಸಣ್ಣಗಡಲೆ. **ಮಂಗಳ್ಯಕ :** "ಮಂಗಳ್ಯಕಃ, ಮಸೂರಃ _ ೨ ಚಣ್ಣಂಗಿ ಹೆಸರು, ಸಣ್ಣಬಟ್ಟಗಡಲೆ, ಕಿರಿಗಡಲ್ ; ಕಾಡುಗಡಲೆ" (ವಿದ್ಯಾಂತಿ. ೨೬೬). [ಸಂ.]

**ಮಂಗಲ್ಯೆ** (ನಾ). ೧. ಬಹಳ ಸುವಾಸನೆಯುಳ್ಳ ಒಂದು ಬಗೆಯ ಗಂಧದ ಮರ. ೨. ಶಕ್ತಿದೇವತೆ ; ದುರ್ಗೆ. ೩. ಒಂದು ಬಗೆಯ ಸುಗಂಧ ದ್ರವ್ಯ. [ಸಂ. ಮಂಗಲ್ಯಾ]

**ಮಂಗಸಮುದ್ರ** (ನಾ). ಒಂದು ಊರಿನ ಹೆಸರು : ಮಂಗಸಮುದ್ರ × × × ಗಣ್ಣ್ಗನ್ ಕಳನಿಗೆಯ್ದು ಕಾಸಿಯ × × × ಅಚ್ಚಿಟ್ಟಿಗೆಯ್ದು ಈವಿ × × × (ದ್ವಿ.ಕಂ. ೦೯೨೬, ೦೨೩-೯ ; ೯೩೩). [ ? ]

**ಮಂಗಳ** 'ಮಂಗಲ' ನೋ.

**ಮಂಗಳಂಬಾಡು** 'ಮಂಗಲಂಬಾಡು' ನೋ.

**ಮಂಗಳಕರ** (ಗು). ಶುಭವನ್ನುಂಟುಮಾಡುವ ; ಶ್ರೇಯಸ್ಕರವಾದ : ಮಂಗಳಕರ ಭುವನಾಧಿಕ ಮಂಗಳನನಂತಬೋಧನಿಧಿಯಂ ನಿಧಿಗಳ್ ಸಂಗಡದೋಲಗಿಸುವುದುಚಿತಂ ಗಡಮೆನೆ ನೆಲಸಿ ಗೋಪುರದೊಳೋಲಗಿಕುಂ (ಶಾಂತೀಶ್ವರಪು. ೦೬-೬೬). [ಸಂ. ಮಂಗಲಕರ]

**ಮಂಗಳಕಷ್ಟ** (ನಾ). [ಜ್ಯೋತಿ] ಕುಜಗ್ರಹವು ವಿರುದ್ಧಸ್ಥಾನದಲ್ಲಿರುವಾಗ ಜಾತಕನಿಗೆ ಉಂಟಾಗುವ ತೊಂದರೆ : ಅಂಗಳದಲ್ಲಿ ಹೇತು ಮಂಗಳಕಷ್ಟ ಅಂದ ಹಾಗೆ (ಗಾದೆ). [ಸಂ. ಮಂಗಲಕಷ್ಟ]

**ಮಂಗಳಕಾಂಕ್ಷಿ** (ನಾ). ಶುಭವನ್ನು ಬಯಸುವ ವ್ಯಕ್ತಿ : ನೀವು ಅವರ ಮಂಗಳಕಾಂಕ್ಷಿಗಳಾಗಿದ್ದರೆ ಅವರಿಗೆ ಸತ್ಪರಾಮರ್ಶವನ್ನು ಕೊಡುತ್ತಿದ್ದಿರಿ (ಕನ್ನಡಿ. ೩೬). [ಸಂ. ಮಂಗಲಕಾಂಕ್ಷಿನ್]

**ಮಂಗಳಕಾರಣ** (ಗು). ೧. ಶುಭಕ್ಕೆ ಕಾರಣವಾದ ; ಶ್ರೇಯಸ್ಸನ್ನುಂಟುಮಾಡುವ : ಮಂಗಳಕಾರಣಪಂಚಪದಂಗಳುಂ . . . ಅಕ್ಷಯಮಂತ್ರಪದಂಗಳನೋದುವುದು ನೆಱೆಯೆ ನಿಶ್ಚಲಮತಿಯಿಂ (ಆದಿಪು. ೨-೫೯). (ನಾ). ೨. ಶುಭಕಾರಿಯಾದುದು ; ಶ್ರೇಯಸ್ಕರವಾದುದು : ಚಂದನದೆಳದಳಿರ್ದೋರಣಂಗಳವು ಸೂಚಿತ ಮಂಗಳಕಾರಣಂಗಳವು (ಆದಿಪು. ೯-೩೦ ಕಳಿ); ಪುರುಷೋತ್ತಮನೀ ಚಳುಕ್ಯನಾರಾಯಣದೇವನೀಗೆಮಗೆ ಮಂಗಳಕಾರಣಮುತ್ಸವಂಗಳಂ (ಗದಾಯು. ೦-೦). [ಸಂ. ಮಂಗಲಕಾರಣ]

**ಮಂಗಳಕಾರ್ಯ** 'ಮಂಗಲಕಾರ್ಯ' ನೋ.

**ಮಂಗಳಕೇತು** (ನಾ). ೧. ಉತ್ಸವಕಾಲದಲ್ಲಿ ಏರಿಸುವ ಶುಭಸೂಚಕವಾದ ಬಾವುಟ. ೨. ನವಗ್ರಹಗಳಲ್ಲಿರುವ ಕುಜ ಮತ್ತು ಕೇತು ಎಂಬ ಎರಡು ಗ್ರಹಗಳು. ೧, ೨ : ಮಂಗಳಕೇತುವಿರಾಜಿತಮಂಗೀಕೃತನೀಲ ಭಾನು ತಮಸಂ ಪರಿಷತ್ಸಂಗತಬುಧಗುರುಕವಿರಾಜಂಗತಿನವಗ್ರಹಪರೀತ ಮುದ್ಯಾಹಗೃಹಂ (ಅಕಂಕ. ೬-೪೪). [ಮಂಗಳ (= ಮಂಗಲ) + ಕೇತು]

**ಮಂಗಳಕ್ರಿಯೆ** (ನಾ). ಶುಭಸಮಾರಂಭಗಳಲ್ಲಿ ನಡೆಸಬೇಕಾದ ಕೆಲಸ,– ಕಾರ್ಯ : ಜನಂಗಳೆಲ್ಲಂ ಮಂಗಳ[ಪಾಠಾಂ. ಲ]ಕ್ರಿಯೆಗಳೊಳು ವಂದನ ಮಾಲೆಗಳೊಳು ಮಾಡಲು ತಗುಬ್ದರು (ಸಾಪುಂತ. ೫೪).

[ಸಂ. ಮಂಗಲಕ್ರಿಯಾ]

**ಮಂಗಳಗಾಯಕ** (ನಾ). ಶುಭಸೂಚಕವಾದ ಹಾಡನ್ನು ಹಾಡುವವನು : ಗೀರ್ವಾಣಮಂಗಳಗಾಯಕರೆ ಸಂಗೀತಗಾಯಕರಾಗೆ ನಿಳಿಂಪಭಾರತಿಕರ ನಟ್ಟುವರಾಗೆ (ಶಾಂತಿಪು. ೧೧-೬೦ ವ); ಮಂಗಳಗಾಯಕರ್ . . . ಮಂಗಳ ಪಾಠಕರ್ ಗಣಿಕಸಂತತಿ ಸಂಭ್ರಮದಿಂ ಪುಗುತ್ತಿರಲ್ ಮಂಗಳಗೇಹಮಂ (ರಶಚ. ೮-೩೨೬). [ಸಂ. ಮಂಗಲಗಾಯಕ]

**ಮಂಗಳಗಾಯಿಕೆ** (ನಾ). ಶುಭಸೂಚಕವಾದ ಹಾಡನ್ನು ಹಾಡುವವಳು: ಮಂಗಳಗಾಯಿಕಾಮುಖಸರೋರುಹಗೀತಮಧುಪ್ರಸೇವನಾ ಸಂಗತ ರಾಜ ಭೃಂಗಕುಳದಿಂ . . . ಒಪ್ಪುತಿರ್ದುದು ಸರೋವರದಂತೆ ಗೃಹಂ ಮಹೇಶನಾ (ಶಾಕ್ಯಕ. ೧೪-೧೧೯) : ಮಂಗಳಗಾಯಿಕಾಮಧುರಗಾನದಿ ನೆಟ್ಟನೆಯ್ದಿ ನಿತ್ಯಕೃತ್ಯಂಗಳ ಮಂಗಳಾಚರಣಮಂ ನೆಗಟುತ್ತೆ (ಪುಶ್ಪ. ೩-೦೨೦). [ಸಂ. ಮಂಗಲಗಾಯಿಕಾ]

**ಮಂಗಳಗಾಯಿನಿ** (ನಾ). = ಮಂಗಳಗಾಯಿಕೆ : ಮಂಗಳಗಾಯಿ[ಪಾಠಾಂ. ಯ]ನಿಯುತ ಗೀತಂಗಳನುಪಹಾರಕುಸುಮಮಧುಪಾನವ್ಯಾಸಂಗ ದೋಳಿರ್ದಳಿದುಂಬಿಗಳಿಂಗೊರಲಿಪೂರ್ಡಿಸಿದತ್ತು ರಾಜಾಂಗಣದೊಳ್ (ಶಂಬಪು. ೩-೧೦೭). [ಸಂ. ಮಂಗಲಗಾಯಿನೀ]

**ಮಂಗಳಗೀತ** (ನಾ). ಶುಭಕರವಾದ ಹಾಡು : ಯುಗಪದುತ್ಥಿತ ಮಂಗಳ [ಪಾಠಾಂ. ಲ]ಗೀತೋನ್ಮಿಶ್ರಿತಾನೇಕಲಯಾನುಗತಲೀಲಾಲಾಸ್ಯಪ್ರಸಕ್ತ ಕಾಮಿನೀಕಮನೀಯಮುಮಾಗಿ (ಆದಿಪು. ೬-೩೫ ವ); ಮಂಗಳಗೀತವಾದ್ಯ ನಿನದಂಗಳಶೇಷದಿಶಾತಟಂಗಳೊಳ್ ಪೊಂಗಿರೆ (ಪರ್ಶಪು. ೧೪-೩೯).

[ಸಂ. ಮಂಗಲಗೀತ]

**ಮಂಗಳಗೀತಿ** (ನಾ). = ಮಂಗಳಗೀತ : ಮಂಗಳಗೀತಿಗಳೊಳ್ಪಿಗೆ ಮಂಗಳ ಪಾಠಕರಪಂಗಳಿಂದೆಸೆದಿರೆ ರಾಜಾಂಗಣದೊಳ್ (ಆದಿಪು. ೦೨-೪೯).

[ಸಂ. ಮಂಗಲಗೀತಿ]

**ಮಂಗಳಗುಣ** (ನಾ). ೧. ಒಳ್ಳೆಯ ಗುಣ,– ನಡತೆ ; ಸದಾಚಾರ : ಮಂಗಳಗುಣಾನ್ವಿತ ರಥಾಂಗಧರಸೇವಿತ . . . ದಯಾದ್ರ್ರಾಪಾಂಗ ಪೊರೆ ಯೆನ್ನನು (ಕೃಶಿ. ೪-೦೨೬). ೨. ಒಳ್ಳೆಯ ಗುಣವುಳ್ಳವನು ; ಸದಾಚಾರವುಳ್ಳವನು : ಮಂಗಳಗುಣರೇಟುಂ ನರಕಂಗಳ ನಾರಕರ ದಂಡನಾದಿಗಳಂ ದುಃಖಂಗಳನಭಿವರ್ಣಿಸಿದೊಡೆ (ಅತಪು. ೧೧-೦೩).

[ಸಂ. ಮಂಗಲಗುಣ]

**ಮಂಗಳಗೌರಿವ್ರತ** (ನಾ). ಶ್ರಾವಣಮಾಸದ ಪ್ರತಿ ಮಂಗಳವಾರ ನಡೆಸುವ ಗೌರೀದೇವಿಯ ವ್ರತಾಚರಣೆ : ಅವರ ಮನೆಯಲ್ಲಿ ಮಂಗಳ ಗೌರಿವ್ರತವನ್ನು ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ (ರೂಢಿ).

[ಮಂಗಳ (=ಮಂಗಲ) + ಗೌರಿ + ವ್ರತ]

**ಮಂಗಳಚರಿತ** (ನಾ). ಪುಣ್ಯಕರವಾದ ನಡವಳಿಕೆಯುಳ್ಳವನು ; ಶುಭ ಚರಿತನಾದವನು : ತಣ್ಣೆಟಲೊಳ್ ಗೋಕುಳಮಂ ನಿಲಿಸುತ್ತುಂ ಮಂಗಳ ಚರಿತಂ ಕ್ರೀಡಮಾನನೆಸೆದಂ ಕೃಷ್ಣಂ (ನೇಮಿ. ೪-೪೩).

[ಸಂ. ಮಂಗಲಚರಿತ]

**ಮಂಗಳತಾಳಿ** (ನಾ). ಮದುವೆಯಲ್ಲಿ ವರನು ವಧುವಿನ ಕೊರಳಿಗೆ ಕಟ್ಟುವ ತಾಳಿ,–ಮಾಂಗಲ್ಯ : ಸದಮಲಾರಕ್ತಸರಸಿಜಪೊ ದೇಣ್ ಪ್ರಾಗ್ದಿಶಾಸುದತಿ ಧರಿಸಿರ್ದ ಮಂಗಳತಾಳಿಯಂತೆ . . . ಬಿಸಿಗದಿರಬಿಂಬಂ ಕಾಣಿಸಿತು ಪ್ರಭಾತದೊಳ್ಕೌತುಕವೆನೆ (ಸಂಬಪು. ೨೨-೪೪).

[ಮಂಗಳ (=ಮಂಗಲ) + ತಾಳಿ$_1$ (=ತಾಲಿ$_1$)]

**ಮಂಗಳತೂರ್ಯ** (ನಾ). ಶುಭಸಂದರ್ಭದಲ್ಲಿ ನುಡಿಸುವ ವಾದ್ಯ : ಮೊಟಗುವ ಮಂಗಳತೂರ್ಯಂಗಳೆಸೆಯೆ (ಶಂಕಪು. ೩-೪೯ ವ) ; ಪೊಣ್ಮೆ ಕೃತಮಂಗಳತೂರ್ಯನಿನಾದಮೆತ್ತಲುಂ (ಪುಶ್ಪ. ೮-೩೦).

[ಸಂ. ಮಂಗಲತೂರ್ಯ]

**ಮಂಗಳತೆ** (ನಾ). ಸುಖ ; ಸಂತೋಷ : ತಿಳುಹಿ . . . ಸತ್ಕೃತಿಯ ಮಂಗಳತೆಯನು ಕೈಕೊಂಡು ಹಾಯ್ದನು ಹಂಸೆಯಲಿ ಮುನಿಪ (ಕೊರಚ. ೦-೩-೨೩). [ಸಂ. ಮಂಗಲತಾ]

**ಮಂಗಳತೋರಣ** 'ಮಂಗಲತೋರಣ' ನೋ.

**ಮಂಗಳದ್ರವ್ಯ** (ನಾ). ೧. ಶುಭಸಮಾರಂಭಗಳಲ್ಲಿ ಉಪಯೋಗಿಸುವ ಅರಿಸಿನ, ಕುಂಕುಮ, ಗಂಧ, ಮೊದಲಾದ ಪದಾರ್ಥಗಳು : ಅನಬರಿಂದ್ರರುಮಭಿಷೇಕಮಂಗಳದ್ರವ್ಯಂಗಳಂ ಕೂಡಿ ಶಚೀದೇವಿ (ಶಕ್ರ)ಕರತಳ ಕ್ಕವಂ ನೋಡಿ ನೀಡೆ (ಶಾಂತಿಪು. ೧೧-೩೭ ವ); ಕೊರಳೊಳಾಭರಣದೊಳು . . . ಮಂಗಳದ್ರವ್ಯದೊಳು ಮಾತುಳಂಗದೊಳು ನಿರುತದಿಂ ರುಚಕಮಸ್ಕ (ಮಂಗಣ. ೦೩೨-೩೯). ೨. ಹೆಣ್ಣುಮಕ್ಕಳಿಗೆ ಗೌರಿಹಬ್ಬ, ಮೊದಲಾದ ಶುಭಕಾರ್ಯಕ್ಕೆ ಪೂಜಾದ್ರವ್ಯ ತರಲು ತೌರುಮನೆಯವರು ಕೊಡುವ ಹಣ : ತಂಗಿಗೆ ಗೌರೀಹಬ್ಬದ ಮಂಗಳದ್ರವ್ಯ ಇಪ್ಪತ್ತೈದು ರೂಪಾಯಿಗಳನ್ನು ಕಳುಹಿಸಿರುತ್ತೇನೆ (ರೂಢಿ). [ಸಂ. ಮಂಗಲದ್ರವ್ಯ]

**ಮಂಗಳಧಾರಿಣಿ** (ನಾ). (ಶುಭ ಸಂದರ್ಭಗಳಲ್ಲಿ) ಮಂಗಳದ್ರವ್ಯಗಳನ್ನು ಹಿಡಿದಿರುವವಳು ; ಸುಮಂಗಲಿ : ಮಂಗಳ[ಪಾಠಾಂ. ಲ]ಮನೆ ಪಾಡುತ್ತುಂ ಮಂಗಳ[ಪಾಠಾಂ. ಲ]ಧಾರಿಣಿಯರಾಗಿ ಮುಂದಂ ನಡೆ ವಾಶಾಂಗನೆಯರಿಂದೆ ದಿವಿಜೇಂದ್ರಾಂಗನೆ ಕರಮೆಸೆದು ಹಂಸಗತಿಯೊಳ್ ಬಂದಳ್ (ಆದಿಪು. ೭-೪೮) ; ಅರ್ಚಿಸಿದರಷ್ಟವಿಧದರ್ಚನೆಯಿಂ ಮಂಗಳ ಧಾರಿಣಿಯರ್ ಶಕ್ರಾಂಗನೆಯುಂ ನೆಗಟ್ದ ನಾಗದೇವಾಂಗನೆಯುಂ (ಅತಪು. ೪-೭೯). [ಸಂ. ಮಂಗಲಧಾರಿಣೀ]

**ಮಂಗಳನಿಲಯ, ಮಂಗಳನಿಳಯ** (ನಾ). ಶ್ರೇಯಸ್ಸಿಗೆ ನೆಲೆಯಾಗಿರುವವನು : ಸುಶ್ರಾವ್ಯಚರಿತ್ರನಖಿಳಮಂಗಳನಿಲಯಂ (ಪಶ್ಚಿಶಂ. ೬-೯೦). **ಮಂಗಳನಿಳಯ** : ಮಂಗಳನಿಳಯನ ಪದಪದ್ಮಂಗಳನರ್ಚಿಸಿದರಷ್ಟವಿಧ ದರ್ಚನೆಯಿಂ (ಅತಪು. ೪-೭೯). [ಸಂ. ಮಂಗಲನಿಲಯ]

**ಮಂಗಳನಿಳಯ** 'ಮಂಗಳನಿಲಯ' ನೋ.

**ಮಂಗಳಪಾಠಕ** 'ಮಂಗಲಪಾಠಕ' ನೋ.

**ಮಂಗಳಪ್ರಸಾಧನ** 'ಮಂಗಲಪ್ರಸಾಧನ' ನೋ.

**ಮಂಗಳಬೇರ** (ನಾ). ಹವಳದ ಬಣ್ಣ ಮತ್ತು ಬಿಳುಪು ಮಿಶ್ರವಾದ ಬಣ್ಣದ ಒಂದು ಜಾತಿಯ ಕುದುರೆ : ಪವಳಾಂಗ ತನುಚ್ಛವಿ ಬೆಳ್ಪವಿರಳ ಮಾದುದು ನೋಡೆ ಮಂಗಳಬೇರಂ (ಅಶ್ವಶಾ. ೨-೦೩).

[ಮಂಗಳ ( = ಮಂಗಲ) + ಬೇರ$_3$]

**ಮಂಗಳಭೂಷಣ** (ನಾ). = ಮಂಗಲಪ್ರಸಾಧನ : ಮಂಗಳಭೂಷಣಂಗಳಿನಲಂಕರಿಸಿರ್ದಡೆಯಾಡುತಿರ್ಪವಳ್ . . . ನಿಜೇಶಂಗಿದಿರೆಟ್ದು ಬಂದು ಮಟಿದಳ್ ಧವಳೇಕ್ಷಣೆ ತನ್ನ ನಲ್ಮೆಯಂ (ಶೃಂಗಾರ. ೩-೬೪).

[ಸಂ. ಮಂಗಲಭೂಷಣ]

**ಮಂಗಳಮಂಡನ** (ನಾ). = ಮಂಗಲಪ್ರಸಾಧನ : ಮಂಗಳಮಂಡನಕ್ಕೆ ನೆಲೆಯಾದ ಕುಮಾರನ ಭೂಷಣಾಂಶು ದಿವ್ಯಾಂಗದ ಕಾಂತಿಯೊಳ್ ತೊಡರ್ದು

ರಂಜಿಸಲಾಜಿವೆ (ಕೃಷ್ಣಕೃ. ೦೨-೧೦೪). [ಸಂ. ಮಂಗಲಮಂಡನ]

**ಮಂಗಳಮಜ್ಜನ** (ನಾ). ಶುಭಕಾರ್ಯದ ಅಂಗವಾಗಿ ಮಾಡುವ ಸ್ನಾನ: ಶ್ರೀರಮಣೀಪ್ರಿಯಂಗಮೃತಮಂಗಳಮಜ್ಜನಮಂ ಜಿನಂಗೆ ವಿಸ್ತಾರಿಸೆ (ಶಾಂತಿಪು. ೦೦-೪೩); ಪರಮಮಂಗಳಮಜ್ಜನವನಾಭರಣವಸನಾದಿಗಳ ನೀ ಸ್ವೀಕರಿಸಬೇಹುದು (ಕಿರಾ. ೪೪-೦). [ಸಂ. ಮಂಗಲಮಜ್ಜನ]

**ಮಂಗಳಮುಖಿ** (ನಾ). ಶುಭಕರವಾದ ಮುಖವುಳ್ಳವಳು; ಕಲ್ಯಾಣಿ : ಮಂಗಳಮುಖಿ ಮಾನಿನಿ . . . ಗಿರಿಸುತೆಯೆಸೆದಳ್ (ಗಿರಿ. ೩-೩೬). [ಸಂ. ಮಂಗಲಮುಖೀ (ಮಂಗಲ + ಮುಖ + — )]

**ಮಂಗಳಮುಹೂರ್ತ** (ನಾ). ಶುಭಗಳಿಗೆ ಮತ್ತು ಆ ಗಳಿಗೆಯಲ್ಲಿ ನಡೆಸುವ ಶುಭಕಾರ್ಯ : ಹರುಷದಲಿ ಮಂಗಳಮುಹೂರ್ತವ ಮಾಡಿಯೆಂದನು (ಕುಮಾ. ೦೦-೬೩); ಮಂಗಳಮುಹೂರ್ತವನು ಜನತತಿಗೆ ತಿಳುಹಿಸುತ . . . ಬರುತಿಹುದು (ಹರಿ. ೦-೧೨). [ಸಂ. ಮಂಗಲಮುಹೂರ್ತ]

**ಮಂಗಳಮೂರುತಿ** (ನಾ). ಶುಭಕರವಾದ ಸ್ವರೂಪವುಳ್ಳವನು : ಗಂಗೆ ನೀ ಪಾತಾಳಕೆ ಹೆಂಗ ಬಂದಿದಿ ಹೇಳೆ ಮಂಗಳಮೂರುತಿ ಮಾರಾಯನ ಜಡೆ ಬಿಟ್ಟು (ಸಿದ್ಧ. ೩-೪೩). [ಮಂಗಳ ( = ಮಂಗಲ) + ಮೂರುತಿ]

**ಮಂಗಳಮೂರ್ತಿ** (ನಾ). ೧. ಶುಭಕರವಾದ ಆಕಾರ,—ಸ್ವರೂಪ : ದೇವರ ಮಂಗಳಮೂರ್ತಿಯನ್ನು ನೋಡಿ ಆನಂದಪರವಶನಾದನು (ರೂಢಿ). ೨. ಶುಭಕರವಾದ ಸ್ವರೂಪವುಳ್ಳ ವ್ಯಕ್ತಿ : ಸಂಗವೆರಡುಂಟು ಒಂದ ಬಿಡು ಒಂದ ಹಿಡಿ ಮಂಗಳಮೂರ್ತಿ ನಮ್ಮ ಕೂಡಲಸಂಗನ ಶರಣರ (ಬಸವ. ೦೩೪); ಮಂಗಳಮೂರ್ತಿ ತಾಪಸಶಿರೋಮಣಿ . . . ಶಿವಧೋಯೆಂಬುತಿರ್ದನದೊರ್ಬ ಭೂಸುರಂ (ಬಸವ. ೩-೪೬); ಜಯಮಂಗಳಂ . . . ಮಾರನ್ನ ಪಡೆದ ಮಂಗಳಮೂರ್ತಿಗೆ (ಕೃಷ್ಣ. ೦-೨೩೩-೨). [ಸಂ. ಮಂಗಲಮೂರ್ತಿ]

**ಮಂಗಳವಡೆ** (ಕ್ರಿ). ಸೊಬಗನ್ನು ಹೊಂದು ; ಚೆಲುವಾಗು : ಸಕೆಯಿಲ್ಲದಾವಗಮುರಿವ ಕೆಂಗಿಡಿಯ ಮಾಲಿಕೆಯಂತೆ ಮಂಗಳವಡೆದ ನಿಖಿಳರತ್ನಂಗಳ ಡಸಿದ ಮುದ್ರಿಕೆ ಮಂಟಿಕೆಯನಿಟ್ಟರು ಬೆರಲ್ಗಳಿಗೆ (ಸೋಮೇಶ. ೨೩-೪೬). [ ಮಂಗಳ ( = ಮಂಗಲ ) + ಪಡೆ$_1$ ]

**ಮಂಗಳವರೆ** ' ಮಂಗಳವಜಿ$^3$ ' ನೋ.

**ಮಂಗಳವಸದನ** (ನಾ). = ಮಂಗಲಪ್ರಸಾಧನ : ಓರೊರ್ವರಾಕೆಯ ರೂಪಂ. ವಕ್ರೋಕ್ತಿಯೊಳೆ ಪೊಗಟ್ಟು ಮಂಗಳವಸದನವಿಕ್ಕಿಯುಂ (ಶಂಕರ. ೩-೪೬ ವ) ; ಮಂಗಳವಸದನದಿಂದೆ ಮನಂಗೊಳಿಸುತವಿರ್ದ ಪಡೆಯ ಕಾಪಂ ಪಡೆವಳ್ಳಂಗೆ ಸಮರ್ಪಿಸಿ (ಪಾರ್ಶ್ವಪು. ೦೦-೯೯). [ ಮಂಗಳ ( = ಮಂಗಲ ) + ಪಸದನ ]

**ಮಂಗಳವಸದನಂಗೊಳ್** (ಕ್ರಿ). ಶುಭಪ್ರಸಂಗಕ್ಕೆ ಉಚಿತವಾದ ವೇಷಭೂಷಣಗಳನ್ನು ಧರಿಸು : ಪಾಂಡವರಯ್ವರುಮುನ್ಮೀಲಿತನಯನರಾಗಿ ನಿತ್ಯನಿಯಮಂಗಳಂ ನಿರ್ವರ್ತಿಸಿ ಮಂಗಳವಸದನಂಗೊಂಡು ( ಪಂಪಭಾ. ೨-೪೩ ವ ) ; ಸೌಜನ್ಯಕಂದಾಂಕುರಂ ವಿಜಯಪ್ರಸ್ಥಾನೋದ್ಯುಕ್ತಂ ಮಂಗಳವಸದನಂಗೊಂಡು (ಶಾಂತಿಪು. ೦೦-೦೪೨ ವ). [ ಮಂಗಳವಸದನ + ಕೊಳ್$_1$ ]

**ಮಂಗಳವಸ್ತು** (ನಾ). = ಮಂಗಳದ್ರವ್ಯ ೧ : ಮಂಗಳವಸ್ತುಗಳಿಂ ದೇವಾಂಗನೆಯರ್ಮಾಡೆ ಗರ್ಭಶೋಧನಮಂ (ಮಲ್ಲಿಪು. ೦೦-೯೪); ಗೌರಿಯು ಮನೆಯ ಮಗಳೆಂದು . . . ಆದರದಿಂದ ಹಸಿರುಬಳೆ, ಕುಂಕುಮ, ಅರಿಷಿಣ, ಪತ್ತಲ ಮೊದಲಾದ ಮಂಗಳವಸ್ತುಗಳನ್ನು ಇಡಿಸಹೋಗಿದ್ದಾರೆ ನಮ್ಮ ಹೆಣ್ಣುಮಕ್ಕಳು (ಕಥಾ. ೦೬೮). [ ಸಂ. ಮಂಗಲವಸ್ತು]

**ಮಂಗಳವಜಿ$^3$**, ಮಂಗಳವರೆ (ನಾ). = ಮಂಗಲಾನಕ : ಮಂಗಳವಜಿ$^3$ಗಳ್ . . . ಶ್ವೇತಚ್ಛತ್ರಂಗಳಮರ್ದಸೆಯೆ ಕರ್ಣಂಗಂಗಮಹೀತಳವಿಭೂತಿಯುಂ ನೆಜೆಯುತ್ತಂ (ಶಂಕರ. ೨-೫೪) ; ಪೊಂಗಳಸದ ನೀರಂ ತರಿಸಿ ಮಂಗಳವಜಿ$^3$ಗಳೆಸೆಯೆ ಧಾರೆಯನೆಜೆಯಲೆಂದಿರ್ಪುದುಂ (ರಾಜಶೇಖ. ೪-೨೨೬). **ಮಂಗಳವರೆ** : ಮಂಗಳವರೆಯ ನಾದಕ್ಕೆ ನಡೆನಡೆಯ ನಿಡುಪೊಸಗೆ (ತ್ರಿಣಾಕ. ೩೦-೬೪೬). [ ಮಂಗಳ ( = ಮಂಗಲ) + ಪಜಿ$^3_1$ ]

**ಮಂಗಳವಾಚಕ** (ನಾ). ಶುಭದ ಅರ್ಥವನ್ನು ಸೂಚಿಸುವ ಶಬ್ದ ; ಓಂ, ಶ್ರೀ ಇತ್ಯಾದಿ ಶಬ್ದಗಳು : ಭಾರತೀಯರ ಪ್ರಕಾರ ಯಾವ ಕೃತಿಯೇ ಆಗಲಿ ಮಂಗಳಶ್ಲೋಕದಿಂದ ಅಥವಾ ಮಂಗಳವಾಚಕದಿಂದ ಆರಂಭವಾಗಬೇಕು (ಕನ್ನ. ೪೬). [ ಸಂ. ಮಂಗಲವಾಚಕ ]

**ಮಂಗಳವಾದ್ಯ** 'ಮಂಗಲವಾದ್ಯ' ನೋ.

**ಮಂಗಳವಾರ** (ನಾ). ವಾರದ ಏಳುದಿನಗಳಲ್ಲಿ ಮೂರನೆಯ ದಿನ ; ಕುಜನು ಅಧಿದೇವತೆಯಾಗಿರುವ ವಾರ ; ಕುಜವಾರ : ಆ ದಿನವೇ ಆದಿತ್ಯವಾರ ಸೋಮವಾರ ಮಂಗಳವಾರ . . . ಶನಿವಾರವೆಂದೇಳು ತೆಱನಾಗಿಹುದು (ಬಸವ. ೨೬೧) ; ಹೇವಿಳಂಬಿನಾಮಸಂವತ್ಸರದ ಜ್ಯೇಷ್ಠ ಬ ೪. ಮಂಗಳವಾರಕ್ಕೆ (ಕೃಷ್ಣ. ೦೯೩೪, ೨೩-೨ ; 1897). [ಸಂ. ಮಂಗಲವಾರ]

**ಮಂಗಳವಿಧಿ** (ನಾ). ನಿಯಮಿತ ಕಾಲದಲ್ಲಿ ಮಾಡಬೇಕಾದ ಶುಭಕಾರ್ಯ; ಸ್ನಾನ, ಪೂಜೆ ಮೊದಲಾದುವು : ಕನಕಾದ್ರಿಶಿಖಾವಳವರ್ತನಕ್ಕೆಲಯಮೆಳಸೆ ದಿವಿಜದುಂದುಭಿ ಶಂಖಸ್ವನದೊಡನೆ ಮೊಟಗಿದುವು ಜಿನಜನನಾಭಿಷವಪ್ರಸಂಗಮಂಗಳವಿಧಿಯೊಳ್ (ಶಾಂತಿಪು. ೦೦-೩೪); ನೃಪನೊಡರಿಸಿದಂ ಬೇಗಂ ಪ್ರತ್ಯೂಷಕೃತ್ಯಮಂಗಳವಿಧಿಯಂ (ಕೃಷ್ಣಪು. ೬-೨೪). [ ಸಂ. ಮಂಗಲವಿಧಿ ]

**ಮಂಗಳವೇದಿ** (ನಾ). ಶುಭಕಾರ್ಯಕ್ಕಾಗಿ ನಿರ್ಮಿಸಿದ ಜಗಲಿ,— ಕಟ್ಟೆ : ಸುತ್ತಿದ ಚಿತ್ರಕಾಂಡಪಟವಿಕ್ಕಿದ ಮಂಗಳವೇದಿ . . . ಕಣ್ಗೊಳಿಸುತಿರ್ದಾ ಮಂಟಪದೊಳ್ (ಕೃಷ್ಣಪು. ೪-೬೮). [ಸಂ. ಮಂಗಲವೇದಿ ]

**ಮಂಗಳಶಿಖಿ** (ನಾ). ಮದುವೆ ಮೊದಲಾದ ಶುಭಕಾಲದಲ್ಲಿ ಹೋಮಕ್ಕಾಗಿ ಸಿದ್ಧಪಡಿಸುವ ಅಗ್ನಿ : ಮಂಗಳಶಿಖಿಗಳ್ ಜಾತ್ಯಶ್ವಂಗಳ ಪೋಲ್ತೆಳೆದು ದಕ್ಷಿಣಾವರ್ತವಿಳಾಸಂಗಳನೇಂ ಧನದನ ರತ್ನಂಗಳ ಪುರಂಗಳಂತೆ ಜಲಜಲಿಸಿದುವೋ (ಮಲ್ಲಿಪು. ೦೪-೯೪). [ಸಂ. ಮಂಗಲಶಿಖಿನ್]

**ಮಂಗಳಶ್ಲೋಕ** (ನಾ). ಕಾವ್ಯ, ನಾಟಕ ಮೊದಲಾದುವುಗಳ ಪ್ರಾರಂಭದಲ್ಲಿ ಅಥವಾ ಮುಕ್ತಾಯದಲ್ಲಿ ಮಾಡುವ ದೇವತಾಸ್ತುತಿರೂಪವಾದ ಪದ್ಯ : ಅಂತು ಸೂತ್ರಧಾರನು ಈ ಮಂಗಳಶ್ಲೋಕವನ್ನು ಹೇಳಿ . . . ಹೋಗುವನು (ಕೃಶಾ. ೨೬೨) ; ಭಾರತೀಯರ ಪ್ರಕಾರ ಯಾವ ಕೃತಿಯೇ ಆಗಲಿ ಮಂಗಳಶ್ಲೋಕದಿಂದ ಅಥವಾ ಮಂಗಳವಾಚಕದಿಂದ ಆರಂಭವಾಗಬೇಕು (ಕನ್ನ. ೪೬). [ಸಂ. ಮಂಗಲಶ್ಲೋಕ]

**ಮಂಗಳಸವನ** (ನಾ). = ಮಂಗಳಮಜ್ಜನ : ಮಳಯಜಮಿಶ್ರತೀರ್ಥಜಲಧಾರೆಗಳಿಂ ಶಶಿಕಾಂತಕಾಂತಮಂಗಳಕಲಶಾಂಶುಧಾರೆಗಳನಿವರ್ಣಡಿಸಿತ್ತು ವಿವಾಹಮುಖ್ಯಮಂಗಳಸವನಂ (ಶಂರಾಶ. ೩-೩೪) ; ಮಂಗಳಸವನಾನಂತರ ಮಂಗೀಕೃತಶುಭವಿಭೂಷರಂ ಮಾಡಿ (ಶಾಂತೀಶ್ವ. ೨-೦೩೪). [ ಸಂ. ಮಂಗಲಸವನ ]

**ಮಂಗಳಸಾಧನ** (ನಾ). = ಮಂಗಳದ್ರವ್ಯ ೧ : ನೆರಪಿದ ಮಂಗಳಸಾಧನಂಗಳಿರ ಸರಸಗೀತಮಂ ಪಾಡುವ ಗಾಯಕರಿಂ. . . ಪಸದನಂಬಡೆದ ಪೊಸಪಸುರ್ವಂದರೊಸಗೆ ಮಿಗೆ ಮಿಸುಗುತ್ತಿರ್ದುದು (ರಾಜಶೇ. ೬-೩ ವ). [ಸಂ. ಮಂಗಲಸಾಧನ]

**ಮಂಗಳಸೂಕ್ತ** (ನಾ). ಶುಭವನ್ನು ಕೋರುವ ಮಂತ್ರ : ವೀರಸೇಸೆಯನಿಕ್ಕಿ ರಾಯನ ನಾರಿ ಪರಸಿದಳಖಿಳವಿಪ್ರರ ಚಾರು ಚಾತುರ್ವೇದ ಮಂಗಳಸೂಕ್ತಘೋಷದಲಿ ಶೇರನೇಜಾಡನಸುರರಿಪು (ಕುಮಾ. ೦೬-೦೨). [ಸಂ. ಮಂಗಲಸೂಕ್ತ]

**ಮಂಗಳಸೂತ್ರ** 'ಮಂಗಲಸೂತ್ರ' ನೋ.

**ಮಂಗಳಾಂಗ** (ನಾ). ಶುಭಕರವಾದ ದೇಹವುಳ್ಳವನು ; ಪವಿತ್ರವಾದ ಶರೀರವುಳ್ಳವನು : ಮಂಗಳಾಂಗನು ಮತ್ತೆ ಕರುಣಾಪಾಂಗದಲಿ ನೋಡುತ್ತ ನಿನ್ನತಿಸಾಂಗಭಕ್ತಿಗೆ ಮೆಚ್ಚಿದೆವು ಎನಲು (ಐಕ್ಯ. ೩೭-೩೦) ; ಇವನಾವನು, ಕಟ್ಟಿದ ರಕ್ಷೆಯಿಂದ ಮಂಗಳಾಂಗನಾದ ನನ್ನ ಮಗನನ್ನು ಮುಟ್ಟಿ ಅಪರಿಶುದ್ಧನನ್ನು ಮಾಡುವನು ? (ಶಾಕುಂತ. ೦೦೯-೪).

[ಸಂ. ಮಂಗಲಾಂಗ]

**ಮಂಗಳಾಂಗಿ** (ನಾ). ಶುಭಲಕ್ಷಣಗಳಿಂದ ಕೂಡಿದ ದೇಹವುಳ್ಳವಳು ; ಸುಂದರಿ : ಮಂಗಳಾಂಗಿ ಮಂಜುಳಾಂಬುಜಾಸ್ಯೆ . . . ರಕ್ಷಿಸೆನ್ನನದ್ರಿರಾಜ್ಞಾತೇ (ಪ್ರಕಾ. ೨೭-೮೦).

[ ಸಂ. ಮಂಗಲಾಂಗೀ (ಮಂಗಲ + ಅಂಗ + — ) ]

**ಮಂಗಳಾಚರಣ** (ನಾ). ಶುಭಕಾರ್ಯ ; ಮಂಗಳಕಾರ್ಯ : ಮಂಗಳ ಗಾಯಿಕಾಮಧುರಗಾನದಿನೆಚ್ಚ ಜನೆಯ್ದು ನಿತ್ಯಕೃತ್ಯಂಗಳ ಮಂಗಳಾಚರಣಮಂ ನೆಗಟುತ್ತೆ (ಕುಸ್ತು. ೩-೦೨೦). [ಸಂ. ಮಂಗಲಾಚರಣ]

**ಮಂಗಳಾಚ್ಛಾರ** (ನಾ). = ಮಂಗಳಾಚರಣ : ಆಗಳಾ ಗರ್ಭಸ್ಖಲನ ಸಮಯಮೆ ಋತುಸಮಯಮಾಗೆ ಚತುರ್ಥದಿವಸಮನಂತರ ಮಜ್ಜನಂಬೊಕ್ಕು ಮಂಗಳಾಚಾರಮನಪ್ಪುಕೆಯ್ದು (ಚಗು. ೨-೬೦ ವ).

[ಸಂ. ಮಂಗಲಾಚಾರ]

**ಮಂಗಳಾನಕ** 'ಮಂಗಲಾನಕ' ನೋ.

**ಮಂಗಳಾನುಲೇಪ** (ನಾ). ಶುಭಕರವಾದ ಲೇಪನದ್ರವ್ಯ : ಅಷ್ಟರಲ್ಲಿ ನಾನೂ ಕೂಡ ಶಕುಂತಳೆಗೋಸ್ಕರ ಗೋರೋಚನ, ತೀರ್ಥಮೃತ್ತಿಕೆ, ದೂರ್ವಾಕಿಸಲಯಗಳ ಮಂಗಳಾನುಲೇಪಗಳನ್ನು ಮಾಡುವೆನು (ಶಾಕುಂತ. ೪೯-೨೦). [ಸಂ. ಮಂಗಲಾನುಲೇಪ]

**ಮಂಗಳಾರತಿ** (ನಾ). ೧. ದೇವರ ಪೂಜೆಯ ಕಾಲದಲ್ಲಿ ಬತ್ತಿ, ಕರ್ಪೂರಗಳನ್ನು ಹಚ್ಚಿ ಬೆಳಗುವುದು : ಚಿತ್ರದೊಳು ಪೂಜೆಯುಜ್ಯೋತಿರ್ದಂತರ್ಚಿಸುತೆ . . , ಮಂಗಳಾರತಿಯಿತ್ತು ಚವರ ಸೀಗುರಿಯಿಕ್ಕಿ (ಐಕ. ೦೩-೮೦); ಪಲ ಬಗೆ ಪಂಚವುಂವ ಜ್ಯೋತಿಯ ಮಂಗಳಾರತಿಯನಿಡಲು (ಚಚಲೋ. ೩೦-೨೯). ೨. ಶುಭೋತ್ಸವಗಳಲ್ಲಿ ಮುತ್ತೈದೆಯರು ತೊಡಿದುಕೊಳ್ಳುವ ದೀಪಾರತಿ : ತಮತಮಗೆ ಫಳವಿಡಿದು ಮಂಗಳಾರತಿ ವಿಡಿದು ಸೇಸೆವಿಡಿದಮರಕಾಮಿನಿಯರೈದೆ (ಸಿದ್ಧರಾ. ೦-೩೭). ೩. (ಅಲಂ) ಅಪಮಾನ ; ಮುಖಭಂಗ : ರಾಯರಿಗೆ ಮಂಗಳಾರತಿಯಾಗಿದ್ದು ಏನಾಶ್ಚರ್ಯ ? (ಕವಃಚ. ೬); ಕೆಣಕಿದರೆ ಮಾಡುತೀನಿ ಅವನಿಗೆ ಮಂಗಳಾರತಿ ! (ಶಾಕುಂತ. ೨೦೩). [ಮಂಗಳ (=ಮಂಗಲ) + ಆರತಿ$_1$]

**ಮಂಗಳಾಲಂಕಾರ** (ನಾ). ಶುಭಸನ್ನಿವೇಶಕ್ಕೆ ಉಚಿತವಾದ ವೇಷಭೂಷಣ : ಆನಂತರಂ ಭಗವಜ್ಜಿನೇಂದ್ರಪೂಜಾವಿವಿಧಮಂಗಳಮನಾಚರಿಸಿ ಮಂಗಳಾಲಂಕಾರಾಲಂಕೃತೆಯಾಗಿ (ಕುಸ್ತು. ೩-೦೦೭ ವ).

[ಸಂ. ಮಂಗಲಾಲಂಕಾರ]

**ಮಂಗಳಾಷ್ಟಕ** (ನಾ). ಮದುವೆ, ಮುಂಜಿ ಮೊದಲಾದ ಶುಭ ಮುಹೂರ್ತದಲ್ಲಿ ಸಾಂಪ್ರದಾಯಿಕವಾಗಿ ಹೇಳುವ ಶುಭವನ್ನು ಕೋರುವ ಎಂಟು ಶ್ಲೋಕಗಳು ; ☞ ಇವು 'ಕುರ್ಯಾತ್ ಸದಾ ಮಂಗಳಂ' ಎಂದು ಕೊನೆಗಾಣುತ್ತವೆ : ಮಾಂಗಲ್ಯಧಾರಣೆಯ ಸಮಯದಲ್ಲಿ ಮಂಗಳಾಷ್ಟಕ ಹೇಳುವುದು ಪದ್ಧತಿ (ಲೋಕ).

[ಸಂ. ಮಂಗಲಾಷ್ಟಕ]

**ಮಂಗಳೆ** (ನಾ). ದುರ್ಗೆ; ಪಾರ್ವತಿ : ಮಾನ್ಯ ಮಾನಿನಿ ಮಹನೀಯೆ ಮಂಗಳೆ ಮಹೇಶ್ವರಿ (ಲಾಕ್ಷೀ. ೦೩-೦೬). [ಸಂ. ಮಂಗಲಾ]

**ಮಂಗಳ್ಯಕ** 'ಮಂಗಲ್ಯಕ' ನೋ.

**ಮಂಗಜಿವಳ್ಳಿ** 'ಮಂಗುಜಿವಳ್ಳಿ' ನೋ.

**ಮಂಗಾಟ** (ನಾ). ೧. ಕಪಿಯ ಆಟ ; ಕೋತಿಚೇಷ್ಟೆ. ೨. (ಅಲಂ) ಬುದ್ಧಿಹೀನತೆಯಿಂದ ಮಾಡುವ ಕೆಲಸ ; ವಿವೇಕವಿಲ್ಲದೆ ಮಾಡುವ ಕಾರ್ಯ: ಹ್ಯಾಂಗಾರೆ ಕುಣಿಕುಣಿದು ಮಂಗಾಟ ನಡೆದಾಗ ಅಂಗಾತ ಬಿತ್ತೋ ಮೆಗಲಲಿ ಎತ್ತೋ (ನಾದಲೀ. ೩೮-೨೩) ; ಕಾಯಿದೆ ನಿಮ್ಮ ಕಡೆಗೆ ಇರುವದೆಂದು ಮಂಗಾಟ ನಡೆಸಬಾರದು (ಮಣ್ಣಮ. ೨೯೯).

[ಮಂಗ$_1$ + ಆಟ]

**ಮಂಗಾಟಿಕೆ** (ನಾ). = ಮಂಗಾಟ ೨ : ಆತ ಮಂಗಾಟಿಕೆ ಮಾಡದೆ ಹಳೆಯ ಸಂಪ್ರದಾಯವನ್ನು ಉಳಿಸಿಕೊಂಡು ಬರಬೇಕಾದುದು ಅನಿವಾರ್ಯವಾಗುತ್ತದೆ (ಹುಕ್ಷಬ. ೦೪೦). [ಮಂಗ$_1$ + ಆಟಿಕೆ]

**ಮಂಗಾಡಿಸು** (ಕ್ರಿ). (ಅಲಂ) ಕಪಿಯಂತೆ ಕುಣಿಸು ; ತನಗೆ ಇಷ್ಟಬಂದುದನ್ನು ಮತ್ತೊಬ್ಬರಿಂದ ಮಾಡಿಸು : "ನನ್ನನ್ನು ಮಂಗಾಡಿಸಿ ಬಿಟ್ಟ" ಎಂದು ಕಿಟ್ಟಪ್ಪ ಮಾಸ್ತರರು ನಾಲ್ಕು ಜನರ ಮುಂದೆ ದೂರಿ, ತಮ್ಮ ಮರ್ಯಾದೆಯನ್ನು ಉಳಿಸಿಕೊಂಡರು (ಜಾರುಣಾ. ೦೫). [ಮಂಗ$_1$ + ಆಡಿಸು]

**ಮಂಗಾರೆ** 'ಮಗ್ಗಾರೆ' ನೋ.

**ಮಂಗಾರೆಮುಳ್ಳು** (ನಾ). (ದಟ್ಟವಾಗಿಯೂ ಒರಟಾಗಿಯೂ ಇರುವ ಮುಳ್ಳುಗಳುಳ್ಳ) ಒಂದು ಬಗೆಯ ಪೊದರು ಗಿಡ : (♦).

[ಮಂಗಾರೆ (< ಮಗ್ಗಾರೆ) + ಮುಳ್ಳು (< ಮುಳ್)]

**ಮಂಗಿ** (ನಾ). ೧. ಹೆಣ್ಣುಕಪಿ : ಆ ಮಂಗಿ ಮರಿಯನ್ನು ಎತ್ತಿಕೊಂಡು ಕೊಂಬೆಯಿಂದ ಕೊಂಬೆಗೆ ನೆಗೆಯುತ್ತಿದೆ (ಲೋಕ). ೨. (ಅಲಂ) ತಿಳಿವಳಿಕೆ ಇಲ್ಲದವಳು : ಅವಳು ಶುದ್ಧ ಮಂಗಿ, ಹೊಲಮನೆಯನ್ನೆಲ್ಲಾ ಅಡ್ಡಾದಿಡ್ಡಿಯಾಗಿ ಮಾರಿಬಿಟ್ಟಳು (ಲೋಕ). [ಮಂಗ$_1$ + — ಇ$_2$]

**ಮಂಗಿನಿ** (ನಾ). ಹಡಗು; ನೌಕೆ. [ಸಂ. ಮಂಗಿನೀ]

**ಮಂಗುರವಳ್ಳಿ** 'ಮಂಗುಜಿವಳ್ಳಿ' ನೋ.

**ಮಂಗುಜಿವಳ್ಳಿ** 'ಮಂಗುಜಿವಳ್ಳಿ' ನೋ.

**ಮಂಗುಜಿವಳ್ಳಿ**, ಮಂಗರವಳ್ಳಿ, ಮಂಗಜಿವಳ್ಳಿ, ಮಂಗುರವಳ್ಳಿ, ಮಂಗುಜಿವಳ್ಳಿ, ಮೊಂಗರವಳ್ಳಿ (ನಾ). (ಚಕ್ಕುಲಿ ಮೊದಲಾದ ಭಕ್ಷ್ಯಗಳಿಗೆ ಸೇರಿಸುವ, ಚಟ್ನಿ ಮೊದಲಾದ ಅಡಿಗೆಗೂ ಮತ್ತು ಔಷಧಗಳಿಗೂ ಉಪಯೋಗಿಸುವ) ಒಂದು ಬಗೆಯ ಬಳ್ಳಿ ; ನಾಲ್ಕು ಏಣುಗಳುಳ್ಳ ಒಂದು ಬಗೆಯ ಹಸಿರು ಬಳ್ಳಿ; ನರಳೆ : ತುಜುವೆಯ ಕಾಯ್ಗಳುಮಂ ಮಂಗುಜುವಳ್ಳಿಯನಿಡಿದ ಚೂರ್ಣಮಂ ಶರ್ಕರೆಯಿಂ ನೆಜೆತಿಂದು ಬಿಸಿಯ ನೀರಂ ಕಿಜಿದುಗೊಳಲ್ಕುಬೀಯದುಮಟಿಗುಮೇ ಕೆಯ್ಮಸಕಂ (ಚಿಕಿದ. ೦೯-೯೨). **ಮಂಗರವಳ್ಳಿ** : ಅಡುಸೋಗೆಯೆಲೆಯ ಕಡ್ಡಿ, ಬಜೆ, ಮಂಗರವಳ್ಳಿ, ರಾಮಗುಳ್ಳ, ಶುಂಠಿ, ಕಟುಕರೋಹಿಣಿ ಇವುಗಳನ್ನು ಸಮಭಾಗ ಕಷಾಯ ಕಾಯಿಸಿ ಕೊಡಲು ಶ್ಲೇಷ್ಮಜ್ವರವು ಗುಣವಾಗುವುದು (ಸಕಪ್ರ. ೯೦). **ಮಂಗಜಿವಳ್ಳಿ** : ಮಂಗಜಿವಳ್ಳಿರಸ, ಕಳ್ಳಿರಸ ಎಲಹುರಿ, ಈ ಮೂಜು ರಸಗಳಲ್ಲಿ ಷೋಡಶಾಂಶ ಶೋಧಿಸಿದ ಗಂಧಕವನ್ನಿಕ್ಕಿ (ಚಿಪ್ರಿ. ೨೩); ಬಳ್ಳಿಸುಂಡೆಯ ಸಹಮೂಲವು ಮಂಗಜಿವಳ್ಳಿ ರಸಂಗಳು ಸಹಿತ (ಶಾಸ್ತ್ರಸಾ. ೦೮). **ಮಂಗುರವಳ್ಳಿ** : "ಅಸ್ಥಿಸಂಘಾತಃ — ಮಂಗುರವಳ್ಳಿ" (೬ಶಧಿ. ೭). **ಮಂಗುಜಿವಳ್ಳಿ** : "ಅಸ್ಥಿವಳ್ಳಿ ಮಂಗುಜಿವಳ್ಳಿ" (ಮಂಗರಾ. ೯೩-೯೩). **ಮೊಂಗರವಳ್ಳಿ** : ಮೊಂಗರವಳ್ಳಿಬೇರು, ಉದ್ಧರಣೆಯ ಬೇರು, ನೆಲಗುಳ್ಳದ ಬೇರು, ಹೆಗ್ಗುಳ್ಳದ ಬೇರು (ದ್ರಾಕ್ಷಾಕೂ. ೬-೯).

[ಮಂಗುಜು$_1$ + ಬಳ್ಳಿ]

**ಮಂಗುಳಿಅಳತೆ** (ನಾ). [ಗಣಿತ] ಒಂದು ಅಳತೆ : ಕ್ಷೇತ್ರಗಣಿತ, ಮಂಗುಳಿ ಅಳತೆ, ರಾಜನೀತಿ . . . ಉತ್ಕಳಿತಗುಣಿ ಮಂತ್ರಿನ ಚೆಲ್ವನ ಗುಣಿತವುಂ ಅಪ್ಪಾದಶ ಗುಣಿತಂಗಳು (ಕ್ಷೇತ್ರಗ. ೨-೩). [? + ಅಳತೆ]

**ಮಂಗೇಶ** (ನಾ). ಶಿವ : (೬). P ಇದು ದಕ್ಷಿಣಕನ್ನಡ, ಉತ್ತರಕನ್ನಡದಲ್ಲಿ ವಾಸಿಸುವ ಕೊಂಕಣಿಭಾಷೆಯನ್ನಾಡುವ ಅನೇಕರ ಮನೆದೇವತೆಯ ಹೆಸರು. [< ಮಂಗಲ ? + ಈಶ]

**ಮಂಚ** (ನಾ). ೧. ಮಲಗಲು ಉಪಯೋಗಿಸುವ, ನಾಲ್ಕುಕಾಲುಗಳುಳ್ಳ ಮರ ಅಥವಾ ಲೋಹದ ಸಾಧನ : ಪರ್ಯಂಕ : "ಶಯನವಾ ಪರಿಯಂಕವಾ ಶಯ್ಯೆಯೆನೆ ಮಂಚಮೆನಿಸಿಕ್ಕು" (ಮಂಗರಾ. ೬೦-೧೫) ; ನೀಂ ಮಹಾದೇವಿಯ ಮಂಚಮನಂಜದೇಱಿ ಆಕೆಯೊಡನೆ ನಗುತ್ತುಂ ತೆಗಟುತ್ತುಮಿರೆಂದು ಕಲ್ಪಿಸಿದಂ (ವಡ್ಡಾರಾ. ೦೭೭-೦೬) ; ದ್ರುಪದನಂ ತನ್ನ ಮಂಚದ ಕಾಲೊಳ್ ಕಟ್ಟವೇಟ್ಟು (ಕಂಕಥಾ. ೨-೬೨ ವ) ; ಭಾಳಾಕ್ಷಿಯರ ಮನೆಯೊಳಾಭೀಳದ ದಳ್ಳುರಿಯು ಮಂಚದೊಳ್ ಪವಡಿಸಿದರ್ (ಗಿರಿಕ. ೮-೬೬). ೨. ಉತ್ತಮವಾದ ಪೀಠ; ಉನ್ನತವಾದ ಆಸನ: ಮಣಿ ಮಂಚಂ ಪಟ್ಟಂ . . . ಗಲ್ಲಂ ಮಲ್ಲಂ ತಳಮಿಂತೆಲ್ಲಂ ಶತ್ರುಮಮುಂ (ಕಮದ. ೨೯೭) ; ಜ್ಯೋತಿಷನಿಪುಣವರರ್ ಬಂದು ಪೊಕ್ಕಲ್ಲಿ ಮಂಚೋತ್ಕರದೊಳ್ ಕುಳ್ಳಿರ್ದರ್ (ಶಿಪುಪು. ೩-೩-೨೩). ೩. ವೇದಿಕೆ ; ರಂಗಸ್ಥಳ : ಪ್ರೇಕ್ಷಕರಲ್ಲಿಂದ ಸುಮಾರು ೨೫ ವಯಸ್ಸಿನವನೊಬ್ಬನು ಮಂಚದ (ವ್ಯಾಸಪೀಠ) ಕಡೆಗೆ ಬರಹತ್ತಿದನು (ದಾಸಪು. ೩೨). ೪. ಹೊಲ, ಗದ್ದೆಗಳನ್ನು ಕಾಯಲು ಎತ್ತರವಾಗಿ ಕಟ್ಟಿರುವ ಬಿದಿರು ಮೊದಲಾದುವುಗಳಿಂದ ಮಾಡಿರುವ ಅಟ್ಟಣೆ ; ಮಂಚಿಕೆ, [ಸಂ.]

**ಮಂಚಕ** (ನಾ). ೧. = ಮಂಚ ೧ : ನಿನ್ನ ನಾಲಗೆಯನ್ನು ತನ್ನ ಮಂಚಕ ಮಾಡಿ . . . ಚೆನ್ನೆ ಸರಸತಿ ನಿತ್ಯ ಪವಡಿಸುವಳಾಡಿ (ಗಂ. ೨೬-೦). ೨. = ಮಂಚ ೨ : ಒಂದು ಉತ್ತಮವಾದ ಮಂಚಕದ ಮೇಲೆ ಕುಳಿತು ಕೊಳ್ಳುವಷ್ಟರಲ್ಲಿ ಅವನ ಅಣ್ಣನಾದ ಶಹರಿಯಾದನು ಅಲ್ಲಿಯೇ ಬಂದು ಕುಳಿತುಕೊಂಡನು (ಅಗದ್ಯ. II. ೦೬). [ಸಂ.]

**ಮಂಚಟಿಕೆ** 'ಮಂಜಿಟ್ಟಿಗೆ' ನೋ.

**ಮಂಚದಕಾಲಹುಲ್ಲು**, ಮಂಚದಕಾಲುಹುಲ್ಲು (ನಾ). ನಾಲ್ಕುದಳಗಳಿರುವ ಒಂದು ಬಗೆಯ ಹುಲ್ಲು : (೬). **ಮಂಚದಕಾಲುಹುಲ್ಲು** : ಮಂಚದಕಾಲುಹುಲ್ಲು, ಉಪ್ಪುಗಡ್ಡೆ (ಪ್ರಜಿಗಿ. ೨೦-೩೬೮).
[< ಮಂಚ + ಕಾಲು$_1$ (< ಕಾಲ್$_1$) + ಹುಲ್ಲು (< ಪುಲ್)]

**ಮಂಚದಕಾಲುಹುಲ್ಲು** 'ಮಂಚದಕಾಲಹುಲ್ಲು' ನೋ.

**ಮಂಚಯ್ಯ** (ನಾ). ಒಬ್ಬಾತನ ಹೆಸರು : ಪಟ್ಟಣ ವಸನ್ತರ ಮಂಚ್ಯಯ್ಯನು ಇಪ್ಪತ್ತಅಯ್ವರು ಕೞಿಯು ×× ಬೆಸಕ . . . ದ್ರವ್ಯವ ಕೊಟ್ಟು (ಎಕ. XIV. ತಿನಪು. ೨೦೪-೭ ; ಕು. 933). [ಮಂಚ ? + ಅಯ್ಯ$_1$]

**ಮಂಚಲ್**, ಮಂಚಲು$_1$ (ನಾ). ೧. ಮೋಸ ; ವಂಚನೆ : ಎನಗಿಂದಿಂಗಾಜುತಿಂಗಳ್ ಸಮನಿಸಿದವುದಿಲ್ಲಿಲ್ಲಿಯುಂ ಬಂದಿ ಮಂಚಲ್ ಖನನ ಪ್ರಾರಂಭ ಚೌರ್ಯಾದಿಗಳನಶನವಿನಾಗಳ್ ಚತುರ್ವಾಸರಂ ಭೋಜನ ಮಾತ್ರಂ ಬಂದೊಡಿಂದಾಂ ಸಕಲವಿಭವಮಂ ಪೆತ್ತಂ (ಸುಕುಮಾ. ೬-೦೮) ; ಕೈಮಾಡಕಂ ವಂಚನೆ ಮಿಕ್ಕ ಮಾನಸಿಕೆ ಮಂಚು ಮಂಚಲಂ ತಾನೆ ತಾಂ ಗೆಡೆವಳ್ ಪತ್ತ್ರದರಾರೊ ಧೂರ್ತವಿಟಹೃತ್ಸಂತಾಪೆಯುಂ ತೇಪೆಯಂ (ಲೀಲಾವ. ೨-೯೬) ; ಮಂಚಲ್ ಕಳವಾಜಿಡಿ ಭಯಸಂಚಯಮೆಂಬವಱ ಪೆಸರುಮಿಲ್ಲಾ ನಾಡೊಳ್ (ಪುಷ್ಪವೃ. ೨-೩). ೨. ಬಂಧನ ; ಸೆರೆ : 'ಮಂಚಲ್ವಿಡಿ' ಪರಾ.
**ಮಂಚಲು$_1$** : ೧. ಮಂಚಲು ಲಂಚಂ ಕಳವು ಓಸುಣ್ ಪಸವು ಪಱಿವಱಿವಲಸೊಲಸು ಕುತ್ತುಮಿಲ್ಲಾ ನಾಡೊಳ್ (ಕಬ್ಬಾಪ. ೦೪೦ ಪ್ರಯೋ).
ಮಂಚಲಂಬಿಡಿ = (ಅಲಂ) ಆಕರ್ಷಿಸು ; ಸೆಳೆ ; ಮರುಳುಮಾಡು: ನಡೆ ನೋಟ್ಟರ ಕಣ್ಗಳನೆಯ್ದೆ ಮಂಚಲಂಬಿಡಿವ ವಿಳಾಸಿನೀನಿಜಾಹಮೋಱು ದುದಿತು ಕರೇಣುಜಾಲಮಂ (ಶಾಂತೀಶ್ವ. ೦೦-೭೭).

**ಮಂಚಲು$_1$** 'ಮಂಚಲ್' ನೋ.

**ಮಂಚಲು$_2$** 'ಮಂಚಿಲ್' ನೋ.

**ಮಂಚಲ್ಪಿಡಿ** 'ಮಂಚಲ್ವಿಡಿ' ನೋ.

**ಮಂಚಲ್ವಿಡಿ**, ಮಂಚಲ್ಪಿಡಿ (ಕ್ರಿ). ೧. ಸೆರೆ ಹಿಡಿ ; ಬಂಧಿಸು : ಕಳ್ಳಂ ಬನ್ದಿಕಾಱಂ ಮಂಚಲ್ವಿಡಿವವಂ ಪಗೆವಂ ಪೊಲ್ಲಮಾನಸನಿನ್ತಿವರಂ . . . ಇಱಿದೊಡೆ ದಣ್ಡಂ ದೋಷಮಿಲ್ಲ (ಎಕ. XV. ೬೯-೨೩; 1050).
**ಮಂಚಲ್ವಿಡಿ** : ೨. (ಅಲಂ) ಆಕರ್ಷಿಸು ; ಸೆಳೆ : ಅಂಚೆಯ ನಡೆಯನಿದಂ ತನತೆನುತುಂ ಮಂಚಲ್ಪಿಡಿವೊಳ್ನಡೆ ರತಿರೂಪಂ ಲಂಚಂಗೊಂಡ ವಿಲಾಸದಿನೆಸೆದತ್ತಾ ರಾಣೀವಾಸ (ಜಯಕಾ. ೨-೨). [ಮಂಚಲ್ + ಪಿಡಿ$_1$]

**ಮಂಚಾಲಿ** 'ಮಂಚಾಳ' ನೋ.

**ಮಂಚಾಳ**, ಮಂಚಾಲಿ (ನಾ). ಒಂದು ಊರಿನ ಹೆಸರು : P ರಾಘವೇಂದ್ರಸ್ವಾಮಿಗಳ ಬೃಂದಾವನವಿರುವ ಈಗಿನ ಮಂತ್ರಾಲಯ : ಶ್ರೀಮತುಕಣ್ಣಂ ಸಿಂದವಾಡಿಸಾಯಿರಮುಮನಾಳುತ್ತು ಮಂಚಾಳ ಕೊಟ್ಟ ಸ್ಥಿತಿ ಅವುದೆನ್ದೊಡೆ (ಸೌಇಇ. IX-i, ೩೩-೯ ; 893).
**ಮಂಚಾಲಿ** : ಶ್ರೀರಾಘವೇಂದ್ರರು ಮಂತ್ರಾಲಯ(ಮಂಚಾಲಿ)ವನ್ನು ಸೇರಿದೊಡನೆಯೇ ಮೊದಲು ಕುಲದೇವಿ ಮಂಚಾಲಮ್ಮನ ದರ್ಶನ ಮಾಡಿದರು (ಕಥಾ. ೩೩೮). [ ? ]

**ಮಂಚಿಕೆ** (ನಾ). ೧. ಪೀಠ ; ಆಸನ. ೨. ದನಕರುಗಳಿಗೆ ನೀರು ಹಾಕುವ ಹರಿದೋಣಿ, – ತೊಟ್ಟಿ. ೩. ಕಾಲುಮಣೆ : 'ಅಡೆಮಂಚಿಕೆ' ಪರಾ. ೪. ಹೊಲ, ಗದ್ದೆಗಳನ್ನು ಕಾಯಲು ಎತ್ತರವಾಗಿ ಕಟ್ಟಿರುವ ಬಿದಿರು ಮೊದಲಾದುವುಗಳಿಂದ ಮಾಡಿರುವ ಅಟ್ಟಣೆ : (೬).
[ಸಂ. ಮಂಚಿಕಾ]

**ಮಂಚಿಗೆ**, ಮಂಜಿಗೆ, ಮೆಂಚಿಗೆ (ನಾ). = ಮಂಚಿಕೆ ೪ : ಆ ಸಸಿ . . . ಫಲಕ್ಕೆ ಬರಲಾಗಿ ಚತುರ್ವಿಧಮೆಂಬ ಮಂಚಿಗೆಯಂ ಮೆಟ್ಟಿ (ಸರ್ವಪ. ೦೦೭-೩೬೮); ಊವಿತತಿ ತೆನೆಗೆ ಪಾಯ್ದು ಪುಮರವಣೆಯಿಂದೆಂದದಂ ನಿವಾರಿಪ ಬಗೆಯಿಂ ನೆರಪಿದ ಕಲ್ಲುಂ ಕವಣೆಯುಮಿರೆ ಮಂಚಿಗೆಯಂ ಕಿರೆಸೆದುಮಟ್ಟಳೆ ಪಲವುಂ (ಪಾರ್ಶ್ವಪು. ೩-೦೩೩) ; ಕಯ್ಯೆತ್ತಿ ಕೊಡಲಿಲ್ಲ ಮೆಯ್ಯ ದಂಡಿಸಲಿಲ್ಲ ಅಯ್ಯಗಳೆಲ್ಲ ಹರಿಯಲ್ಕೆ ಕೈಲಾಸ ಕೆಯ್ಯ ಮಂಚಿಗೆ[ಪಾಠಾಂ. ಕೆ]ಯೆ (ಸರ್ವಜ್ಞ. ೬೮೯) ; ಮರಸು ಕುಳಿತಿರೆ ಮರದ ತುದಿಮಂಚಿಗೆಯ ಮೇಲೆ (ತ್ರಿಲಾವತಾ. ೩೧೦-೨೮೨). **ಮಂಜಿಗೆ** : ಹೊಲದಲ್ಲಿ ಹಾಕಿದ ಎತ್ತರವಾದ ಮಂಜಿಗೆಯ ಮೇಲೆ ನಿಂತುಕೊಂಡು ಒಕ್ಕಲಿಗರು ಕವಣೆಯಿಂದ ಕಲ್ಲುಗಳನ್ನು ಹೊಡೆಯುತ್ತಾ ಹಕ್ಕಿಗಳನ್ನು ಹಾರಿಸಹತ್ತಿದ್ದಾರೆ (ಮಂಜುಳ. ೨). **ಮೆಂಚಿಗೆ:** ಪಂಚಬೀಜಗಳೆಲ್ಲ ಸಂಚರಿಸಿ ಹೊಲದೊಳಗೆ ಮೆಂಚಿಗೆಯ ನಿಲವುಬೆಳೆ ಬಂದು ನಗುತಿರಲು (ಕರತ. ೯೬); ಮೇಘದ ಮೆಂಚಿಗೆಯನ್ನೇರಿ ಮಿಂಚಿನ ಕವಣೆಯೊಳಾಲಿಯ ಕಲ್ಲನು ತೂರುಪಳು (ಕರುಶ್ರಾ. ೦೭-೦).
[ < ಸಂ. ಮಂಚಿಕಾ]

**ಮಂಚಿಗೆಗಲ್** (ನಾ). (ದಾರಿಯಲ್ಲಿ ಹೊರೆಯನ್ನು ಇಳಿಸಲು ಮಾಡಿರುವ) ಎತ್ತರ ಹಾಗೂ ಸಪಾಟಾದ ಕಲ್ಲು : ನವಿಲೆಯೂಱಂ ಪಡುವಣ ಮಂಚಿಗೆಗಲ್ಲಿಂ ಪಡುವ ಹಳ್ಳದಿಂ ಮೂಡಲಿಬ್ಬ ×× ವಾಡವಾಗಿ ಯಿಕ್ಕಿದ ಕೆಯಿಮಾತ್ರರು ೫೦ (ಸೌಇಇ. IX-i, ೨೨೮-೦೩ : 1133). [ಮಂಚಿಗೆ + ಕಲ್$_3$]

**ಮಂಚಿಟಿಕೆ** 'ಮಂಜಿಟ್ಟಿಗೆ' ನೋ.

**ಮಂಚಿಟಿಗೆ** 'ಮಂಜಿಟ್ಟಿಗೆ' ನೋ.

**ಮಂಚಿಪತ್ರ** (ನಾ). (ಸುವಾಸನೆಯ ಎಲೆಗಳನ್ನು ಹೊಂದಿರುವ) ಒಂದು ಬಗೆಯ ಸಸ್ಯ ಮತ್ತು ಅದರ ಎಲೆ : ಮಂಚಿಪತ್ರವನ್ನು ಧರಿಸುವುದರಿಂದ ದೇವತೆಗಳಿಗೂ ಸೂರ್ಯನಿಗೂ ಪ್ರಿಯವಾಗಿ . . . ಸುಖವನ್ನುಂಟುಮಾಡುವುದು (ಸಳವ್ಯ. ೪೩). [ಸಂ.]

**ಮಂಚಿಪತ್ರೆ** (ನಾ). = ಮಂಚಿಪತ್ರ : "ದೇವಾರ್ಹಂ – ಮಂಚಿ(ಜಿ)ಪತ್ರೆ" (೬೪೦. ೭೯). [ಸಂ. ಮಂಚಿಪತ್ರ]

**ಮಂಚಿಲ್**, ಮಂಚಲು$_2$ (ನಾ). (ಬಟ್ಟೆಯಿಂದ ಮಾಡಿದ, ತೊಟ್ಟಿಲನ್ನು ಹೋಲುವ) ಡೋಲಿಯಂತಹ ಒಂದು ಬಗೆಯ ಸಾಧನ : ಅವರು ಬಂದ ಬಳಿಕ ಕಂಬಳಿಯ ಒಂದು ಮಂಚಿಲ್ ತಯಾರಿಸಿದರು (ಕೃಹಿಣ. ೨೭೦). **ಮಂಚಲು$_2$** : ಭೋಯಿಗಳಲ್ಲದೆ . . . ಅಂಬಿಗರು ಮಂಚಲುಗಳನ್ನು ಹೊರುವ ಹೋರೆಯನ್ನು ಮಾಡುವರು (ಕಥಾಗ. ೫೭). [← ತುಳು. ಮಂಚಿಲ್]

**ಮಂಜಟಿ** 'ಮಂಜಿಟೆ' ನೋ.

**ಮಂಜಟ್ಟೆ** 'ಮಂಜಿಟೆ' ನೋ.

**ಮಂಜಡಿ$_1$** 'ಮಂಜಿಟೆ' ನೋ.

**ಮಂಜಡಿ$_2$** 'ಮಂಜಾಡಿ' ನೋ.

**ಮಂಜತ್ತಿ** 'ಮಂಜಿಟೆ' ನೋ.

**ಮಂಜನ$_1$**, ಮಜ್ಜಣ (ನಾ). ೧. ಪವಿತ್ರವಾದ ನೀರು, ಹಾಲು ಮುಂತಾದ ದ್ರವವನ್ನು ಎರೆಯುವುದು ; ಅಭಿಷೇಕ : ರಾಮಾನುಜಾಚಾರ್ಯ್ಯರಿಗೆ ನಿತ್ಯ ತಿರುಮಂಜನಕೆ . . . ತಿರುನಾಳಿಗೆ ಗ ೬೦ ವರಹ (ಎಕ. XIV, ಶ್ರೀರಂಗ. ೨೩೯-೦೦ ; 1154) ; ಜಲದಿಂದ ಗಂಧದಿಂದಕ್ಷತೆಯಿಂ ಕಮ್ಮಲರಿಂದ ಚರು ದೀಪದಿಂದ ಕಲುಕುಮಂಜನದಿಂದ ಫಲದಿಂದಲಾ ಭೂಲಲನೇಶ ಜಿನರನರ್ಚಿಸಿದ (ರಾಮಾಪ. ೦೯-೨೨). **ಮಜ್ಜಣ** : ೨. ಸ್ನಾನ; ವಿವಾಹ ; ಜಳಕ : ಮಜ್ಜಣದ ಈ ಮನೆಯ ಎದ್ದು ನೋಡೋಣ ಬಾರ (೬೦೭೫೧. ೦೫). [< ಪ್ರಾ. ಮಜ್ಜಣ./ಸಂ. ಮಜ್ಜನ]

**ಮಂಜನ$_2$** (ನಾ). (ಹಲ್ಲು, ಮುಖ ಮುಂತಾದುವನ್ನು) ಉಜ್ಜಿ ಸ್ವಚ್ಛಗೊಳಿಸಲು ಉಪಯೋಗಿಸುವ ವಸ್ತು : ' ದಂತಮಂಜನ ' ಪರಾ. [<ಪ್ರಾ. ಮಜ್ಜಣ./ಸಂ. ಮಾರ್ಜನ./ಹಿಂ. ಮರಾ. ಮಂಜನ್]

**ಮಂಜರ**, ಮಂಜರೆ (ನಾ). ಬೆಕ್ಕು ; ಮಾರ್ಜಾಲ: "ಮಂಜರವೆನೆ ಮಾರ್ಜಾಲಂ" (ಶಾಠಿ. ೦೩) ; ನಿನ್ನ ಮನದಲ್ಲಿ ಮಾಯಾಮಂಜರ ಕೊಲುವರೆ ನಿನ್ನ ಹಂಜರ ಕಾವುದೆ ಕೂಡಲಸಂಗಮದೇವನಲ್ಲದೆ (ಬಸವ. ೦೩೩); ಪಂಜರದ ಗಿಣಿ ನೀವು ನಿಮಗೀ ಮಂಜರನ ಪಡಿಮುಖಿಕೆ ನಿಲುವುದು ನೀತಿಯೇ (ಶುಭ್ರಾ,ಕ. ೦೦-೯೨). **ಮಂಜರೆ**: ಪಂಜರದೊಳು ತೇಜಃಪುಂಜ ರಂಜಿಸುತಿರಲು ಅಂಜನಸಿದ್ಧ ಶಿವಯೋಗಿ ತಾ ಕುಟಿಲ ಮಂಜರೆಯ ಕಾದ (ಸರ್ವಜ್ಞ. ೪೯೫). [ <ಪ್ರಾ. ಮಂಜರ./ಸಂ. ಮಾರ್ಜಾರ, ಮಾರ್ಜಾಲ]

**ಮಂಜರದೃಷ್ಟಿ** (ನಾ). ೧. ಬೆಕ್ಕಿನ ಕಣ್ಣು. ೨. (ಆಲಂ) ಸೂಕ್ಷ್ಮವಾದ ದೃಷ್ಟಿ : ಮಂಜರದೃಷ್ಟಿಯಲ್ಲಿ ತೋರುವ ಇಂದ್ರಿಯಭೋಗಂಗಳು ಮಹೇಂದ್ರಜಾಲವಾಗಿಪ್ಪವಯ್ಯ (ಸಿದ್ಧೇಶ. ೦೦೯-೩೩೯). [ಮಂಜರ + ದೃಷ್ಟಿ]

**ಮಂಜರನೇತ್ರ** (ನಾ). = ಮಂಜರದೃಷ್ಟಿ ೨ : ಮಂಜರನೇತ್ರದಲ್ಲಿ ಉಭಯಚಂದ್ರರ ಕಾಬುವರಾರೋ (ಅವಪಂ. ೫೭-೨೪೦). [ಮಂಜರ + ನೇತ್ರ]

**ಮಂಜರಿ$_1$**, ಮಂಜಲಿ (ನಾ). ಹೆಣ್ಣುಬೆಕ್ಕು : ಮಾತನಾಡುವ ಪಂಜರದ ವಿಹಂಗನದೊಂದು ಕೋಡಗ ನುಂಗಿತ್ತು ನುಂಗಿದ ಕೋಡಗವ ಮಂಜರಿ ತಿಂದಿತ್ತು (ಪೋ೬ಶಪಾ. ೨೩೩-೬೦೭). **ಮಂಜಲಿ** : ಮಂಜಲಿ[ಶಾಕಾಪ್ರ.ಡಳಿ]ಯ ಮಜು ಮಿಡುಕಿದರೆ ಕಳವಳಿಸುವುದೆ ಕಲಿಸಿಂಹ (ಶುಭ್ರಾ,ಸ. ೬-೯೭). [ಮಂಜರ + —ಇ$_2$]

**ಮಂಜರಿ$_2$** (ನಾ). ೧. ಗೊಂಚಲು ; ಗುಚ್ಛ : "ವಲ್ಲರೀ, ಮಂಜರೀ —ಈ ೨ ಮರದ ಗೊಂಚಲ್" (ಪರಾಯು. ೩೦-೩೧) ; ಲಲಾಟದೊಳ್ ತುಱುಗಿದ ಸಿಂಧುವಾರ ನವಮಂಜರಿಯೆಂಬಿನೆಗಂ . . . ಘನಘರ್ಮಬಿಂದುಗಳ್ ಪೊಜಮಡೆ (ಶಾದಂಪೂ. ೬೯) ; ಗುರುಭರವಮಂ ಪಡೆಯುದವೋಲ್ ಪಂಮಳಮಂತಿಬಹಳವಾಗಿ ಮಂಜರಿಗೆ (ಪುಣ್ಯಶ್ರ. ೦೦-೦೩೦). ೨. ಕಾವು ; ತೊಟ್ಟು. ೩. ಮುತ್ತು ; ಮುಕ್ತಾಫಲ. ೪. ಒಂದು ಬಗೆಯ ಮರ ; ತಿಲಕವೃಕ್ಷ. ೫. ಕುದುರೆಯ ಶರೀರದ ಒಂದು ಭಾಗ ; ಮೊಳಕಾಲು ; ಜಾನು : ಸ್ತುರೆಯಿಂ ಕೆಲಗಕ್ಕುಂ ಮಂಜರಿಯೆಂಬ ಪೆಸರ್ (ಅಶ್ವಶಾ. ೯-೫೫). 'ಜಾನುಮಂಜರಿ' ಪರಾ. [ಸಂ. ಮಂಜರೀ]

**ಮಂಜರಿಕೆ** (ನಾ). = ಮಂಜರಿ$_2$ ೧ : "ಮಂಜರಿಗೆ — ಮಂಜರಿಕಾ = ಹೂಗೊಂಚಲು" (ಕರ್ನಕೋ. ೩೩). [ಸಂ. ಮಂಜರಿಕಾ]

**ಮಂಜರಿಗ** (ನಾ). ಒಂದು ಬಗೆಯ ಹಕ್ಕಿ : ಗಳಿಗಳಂಟಿಗೆ ಸಿಲುಕಿದವು ಪಿಸ್ಕುಳಿಗ ಪಿಂಜರ ಮಂಜರಿಗ ಮಿಂಬುಲಿಗ ಲಾವುಗೆ ಸರಲೆ ಬುಲುಲೆಗಳಿಟ್ಟ ಮಿಂಚೆಯುಲಿ (ತೊರವೆ. ೩-೩-೦೯). [ ? ]

**ಮಂಜರಿಗೆ**, ಮಂಜಳಿಕೆ (ನಾ). = ಮಂಜರಿ$_2$ ೧ : " ಮಂಜರಿಗೆ — ಮಂಜರಿಕಾ=ಹೂಗೊಂಚಲು" (ಕರ್ನಕೋ. ೩೩). **ಮಂಜಳಿಕೆ** : ಆಭರಣಂಗಳ ಪೆಟ್ಟಿಗೆಯುಂ ತರಿಸಿ ರತ್ನಮಂಜ[ಶಾಕಾಂ. ಜು]ಳಿಕೆಯ ಮುದ್ರಿಸಿದ ಮುಚ್ಚಳಂ ತೆಗೆದು ಮಾಣಿಕದ ಕರ್ಣಾವತಂಸಮಂ ಕಿವಿಗಳವಡಿಸಿ (ಬಸರ. ೬-೦೭). [< ಸಂ. ಮಂಜರಿಕಾ]

**ಮಂಜರಿಸು** (ಕ್ರಿ). ಗೊಂಚಲಾಗು ; ಗುಚ್ಛವಾಗು : ಕೆಂಪಿನ ಕಂಪಿನ ಮಂಜರಿಯಂತೆ ಮಂಜರಿಸಿ ಮಗಮಗಿಸಿ ಮರಿಪುಗೊಂಡು ಸೊಬಗು ಕೋಂಬುಗೊಂಡರಿಸಿನದ ಕೊಂಬುಗಳಂ ಸೊಪ್ಪುಗಟ್ಟಿ (ಆರಾಪ. ೦೩-೭೭ ವ). [ಮಂಜರಿ$_2$ + —ಇಸು$_3$]

**ಮಂಜರೆ** 'ಮಂಜರ' ನೋ.

**ಮಂಜಲಿ** 'ಮಂಜರಿ$_1$' ನೋ.

**ಮಂಜಳ್**, ಮಂಜಳ$_1$ (ನಾ). ೧. ಅರಿಸಿನದ ಗಿಡ ಮತ್ತು ಅದರಿಂದ ತಯಾರಾಗುವ ಅರಿಸಿನ : 'ಮಂಜಳೆಣ್ಣೆ' ಪರಾ. ೨. ಅರಿಸಿನದ ಮೇಲೆ ವಿಧಿಸುತ್ತಿದ್ದ ಒಂದು ಬಗೆಯ ತೆರಿಗೆ : ತೆನ್ನಮರಂ ಕೋಳಂದು ವಾಳ್ಳಿ ಕುರುಂಬು ಮಂಜಳ್ (ಎಕ. XVIII, ೦೯೨-೯೫ ; 1434). **ಮಂಜಳ$_1$** : ೧. 'ಕಳಿಮಂಜಳ' ಪರಾ.

[ದೇ.॥ ತಮಿ. ಮಞ್ಞಳ್ ; ಮಲ. ಮಞ್ಞಳ್ ; ತುಳು. ಮಂಜಲ್, ಮಂಜಳ್ ; ಕೊಡ. ಮಂಜ]

**ಮಂಜಳ$_1$** 'ಮಂಜಳ್' ನೋ.

**ಮಂಜಳ$_2$** 'ಮಂಜಾಡಿ' ನೋ.

**ಮಂಜಳಿಕೆ** 'ಮಂಜರಿಗೆ' ನೋ.

**ಮಂಜಳೆಣ್ಣೆ** (ನಾ). ಮದುವೆ ಮುಂತಾದ ಶುಭಸಂದರ್ಭಗಳಲ್ಲಿ ಮಾಡುವ ಅರಿಸಿನೆಣ್ಣೆಯೆಂಬ ವಿಧಿ : ಪಳಿ ಮಂಜಳೆಣ್ಣೆಯುಂ ದೊಡ್ಡಂಗೆ ದೂಳಿಸಿದರೆಳೆವೆಣ್ಣಳ್ (ಶಾಲಾರ. ೦೪೭-೩೨೦). [ಮಂಜಳ್ + ಎಣ್ಣೆ]

**ಮಂಜಳ್ಗೊಣೆ** (ನಾ). ಒಂದು ಪ್ರದೇಶದ ಹೆಸರು (?): ಅಂತೆ ವಂದು ಮಂಜಳ್ಗೊಣೆಯ ಬಾಚಿಕೊಟ್ಟೆವೆ ಸಂದು . . . ಕೂಡಿತ್ತು ಸೀಮೆ (ಪ್ರ್ಯಕಂ. ೦೯೨೭, ೦೦೯-೯೯; 726). [ ? ]

**ಮಂಜಾಡಿ**, ಮಂಜಡಿ$_2$, ಮಂಜಳ$_2$ (ನಾ). ಒಂದು ಬಗೆಯ ಮರ ಮತ್ತು ಅದರ ಹೂವು ಹಾಗೂ ಕೆಂಪುಬಣ್ಣದ ಬೀಜವುಳ್ಳ ಅದರ ಕಾಯಿ ; P ಗುಲಗಂಜಿಯಂತೆ ಈ ಬೀಜವನ್ನು ವಜ್ರ, ಚಿನ್ನ, ಬೆಳ್ಳಿಗಳನ್ನು ತೂಗಲು ಅಕ್ಕಸಾಲಿಗರು ಉಪಯೋಗಿಸುತ್ತಿದ್ದರು : ವಜ್ರವ ತೂಗುವುದು ಮಂಜಾ[ಶಾಕಾಂ. ಜ]ಡಿ ೧ಕ್ಕೆ ತೂಕಂ (ಕೃಷಿಪಾ. ಅಮರಾಂಥ. ೦-೦೭ ೬೯೪) ; ಓರಂತೆ ಬುಧರ್ಕಳಾಯೆನೆ ಸದಾ ಮೇಣ್ ಗುಂಜೆ ಮಂಜಾಡಿಗಳ್ ಸರಿಯಪ್ಪಂತಿಯನರ್ಘ್ಯಮಪ್ಪ ಗುಣಿಯೊಳ್ (ವಾವೆ. ೫೭) ; ಮಂಜಾಡಿ ಇರವಂತಿಗೆ ವನಸಂಪಿಗೆ ಸಣ್ಣಮಲ್ಲಿಗೆ ಮೊಲ್ಲೆ

ಪಾರಿಜಾತ . . . ಮೊದಲಾದ ಪುಷ್ಪಂಗಳಂ (ಶಾಶಿಃಪು. ೬೫-೨); **ಮಂಜಡಿ₂**: "ಮಂಜತ್ತಿ, ಮಂಜಡಿ, ಆನೆಗುಲಗಂಜಿ" (ಸಸ್ಯಶಿ. ೬); ಹವಳಕ್ಕೆ ಕಣಜುಗಟ್ಟುಳೆ . . . ಧ್ರುವದಿಂ ಮಂ(ಜ)ಡಿ ವಜ್ರಕೆ (ವೃಷಭಾ. ಅನುಬಂಧ. ೦-೪-೦೫). **ಮಂಜಳ₂** : ಎನಿತು ಪಸುರೊಳ್ ಶೆರಮದೆನಿತು ಮಂಜಳ ಕೆಂಪದೆನಿತು ನಾಲಗೆ ನುಡಿಯ:ದಿರ್ಪ ಪೊಗರೆನಿತು ? (ಶಾಂತೀಶ. ೦೦೯-೨೫೦).

[ದೇ.॥ ತಮಿ. ಮಞ್ಞಟಿ; ಮಲ. ಮಞ್ಞಾಡಿ; ತುಳು. ಮಂಜೊಟ್ಟಿ, ಮಂಜಿಟ್ಟಿ, ಮಂಜೋಟಿ ; ತೆಲು. ಮಂಜಾಡಿ, ಮಂಜಾಳಿ]

**ಮಂಜಾಣ** 'ಮಂಜಾಳ' ನೋ.

**ಮಂಜಾಳ**, ಮಂಜಾಣ (ನಾ) ೧. (ಉತ) ತಿಳಿಗೇಡಿತನ (?): ಛೇ ನಿಮ್ಮ ಮಂಜಾಳಾ ಹೋಗಲಿ! ಅದನ್ನು ನೀವು ಕೇಳಿಯೇ ತೀರಬೇಕು (ಸಂದರ್ಶ. ೦೬೨); ಅಯ್ಯ! ನನ ಮಂಜಾಳ ಹೋಗಲಿ. ಮರೆತೇ ಬಿಟ್ಟಿದ್ದನಲ್ಲ (ಪೋಃಪಾ. ೦೨) ; ಥೂ ನಿನ್ನ ಮಂಜಾಳ ಹೋಗಲಿ, ಹುಟ್ಟಿಸಿದ ದೇವರು ಹುಲ್ಲ ಮೇಯಿಸತಾನೇನೋ ? (ತಿರುಗು. ೫೦). **ಮಂಜಾಣ** : ೨. ಮಬ್ಬು ; ಮಸುಕು (?) : ಈ ಮಲ್ನಾಡದ ಪ್ರದೇಶದಲ್ಲಿ ಮಂಜಾಣಾದ ಅಡವಿಯು ಹಬ್ಬಿರುತ್ತದೆ (ಕರ್ನಾಗ. ೫). [ ? ]

**ಮಂಜಿ₁** (ನಾ). (ಕರಾ) ಉದ್ದವಾದ ನಾಡದೋಣಿ ; ಒಂದೇ ಒಂದು ಪಟಸ್ತಂಭವುಳ್ಳ ದೋಣಿ : ತಾನು ಮಂಜಿಯನ್ನೇರಿ ಹೊನ್ನಹಳ್ಳಿಗೆ ಪಯಣವನ್ನು ಕೈಗೊಂಡ (ಪಾಹುತ್ರ. ೬) ; ದೀವಿಯಿಂದ ಮಂಜಿಗಳು ಬರಲಿಕ್ಕಾಯಿತು (ಪುರಪು. ೪೮); ಮಂಜಿಯೊಡೆದರೆ ಗುಂಜಿಗಿಂತ ಕಡೆಯೇ ? (ಗಾದೆ). 'ಮಂಚವೆ' ಪರ್ಯಾ.

[ದೇ.॥ ತಮಿ. ಮಞ್ಜಿ; ಮಲ. ಮಞ್ಜಿ; ತುಳು. ಮಂಜಿ]

**ಮಂಜಿ₂** (ನಾ). ೧. (ಕತ್ತಾಳೆ. ಬಾಳೆ ಮೊದಲಾದುವುಗಳ) ನಾರು : ನೂಲು : ಅಲರಿಂದೆ ಮಂಜಿ ಬಂದುಜಿ ತಲೆಗೇಜಿದ ತೆಜದೆ (ಉದ್ಭಟ. ೫-೦೦೬). ೨. ನಾರಿನ ಗಿಡ ; ಸೆಣಬು : ಮಂಜಿಯ ಗೆಡ್ಡೆ, ಪಂಚಲವಣ, ಸರ್ವಕ್ಷಾರ, ಯವಕ್ಷಾರ, ಇಂಗು . . . ವಸಗದ ಬೇರು. ಇಷ್ಟನೂ ಮುಂಡುಗಳ್ಳಿಯ ಹಾಲಲ್ಲಿ ಮರ್ದಿಸಿ (ವೈದ್ಯಸಾ. I. ೪೨೨).

[ದೇ.॥ ತಮಿ. ಮುಞ್ಜಿ : ತುಳು. ಮಂಜಿ]

**ಮಂಜಿಗೆ** 'ಮಂಚಿಗೆ' ನೋ.

**ಮಂಜಿಟಿ** 'ಮಂಜಿಟಿ' ನೋ.

**ಮಂಜಿಟಿಗೆ** 'ಮಂಜಿಟ್ಟಿಗೆ' ನೋ.

**ಮಂಜಿಟಿ**, ಮಂಜಟಿ, ಮಂಜಟ್ಟಿ, **ಮಂಜಡಿ₁**, ಮಂಜತ್ತಿ, ಮಂಜಿಟಿ, ಮಂಜಿಟ್ಟೆ, ಮಂಜಿಷ್ಟೆ, ಮಂಜೂತಿ (ನಾ). ೧. (ಬಟ್ಟೆಗಳಿಗೆ ಹಾಕಲು ಗಾಢವಾದ ಕೆಂಪುಬಣ್ಣವನ್ನು ತಯಾರಿಸಲು ಮತ್ತು ಔಷಧದ್ರವ್ಯವಾಗಿ ಉಪಯೋಗಿಸುವ) ಒಂದು ಬಗೆಯ ಸಸ್ಯ: "ಮಂಜಿಟಿಯು ಮಂಜಿಷ್ಠೆ" (ಮಂಗರಾ. ೯೨-೪೬); ಯಷ್ಟಿಮಧುಕಂ ಮಧು ಮಂಜಿಟಿ ತುಪ್ಪವಿಂತಿವಂ ಕಲಸಿ ಹಯಕ್ಕೆ ಕೊಟ್ಟು (ಅಶ್ವಶಾ. ೦೦-೨೯). **ಮಂಜಟಿ** : ೧. "ಮಂಜಿಟಿ (ಮಂಜಟಿ) = ಮಂಜಿಷ್ಠಾ" (ಕರ್ಣಕೋ. ೪೪). **ಮಂಜಟ್ಟಿ** : ೧. ಹುಣಸೆ, ಕಂಚವಾಳ, ಮಂಜಟ್ಟಿ, ಗೌಳಿಗೆ (ಸಮ್ಯಸು. ೨೪೬). **ಮಂಜಡಿ₁** : ೧. ಮಂಜತ್ತಿ, ಮಂಜಡಿ, ಮಂಜಿಟ್ಟೆ, ದೊಡ್ಡಗುಲಗಂಜಿ, ಆನೆಗುಲಗಂಜಿ (ವೃಕ್ಷಶಿ. ೪-೪೮). **ಮಂಜತ್ತಿ** : ೧. "ಮಂಜತ್ತಿ, ಮಂಜಡಿ. . . ಆನೆಗುಲಗಂಜಿ" (ಸಸ್ಯಶಿ. ೬). **ಮಂಜಿಟಿ** : ೧. "ಮಂಜಿಟಿ (ಮಂಜಟಿ) = ಮಂಜಿಷ್ಠಾ" (ಕರ್ಣಕೋ. ೪೨). **ಮಂಜಿಟ್ಟೆ** : ೧. ಮಂಜತ್ತಿ, ಮಂಜಡಿ, ಮಂಜಿಟ್ಟೆ, ದೊಡ್ಡಗುಲಗಂಜಿ, ಆನೆಗುಲಗಂಜಿ (ವೃಕ್ಷಶಿ. ೪-೪೬). **ಮಂಜಿಷ್ಟೆ** : ೧. "ರಕ್ತಾಂಗೀ— ಮಂಜಿಷ್ಟೆ" (೬ಕಥಿ. ೦೪೯); ಮಂಜಿಷ್ಟೆ ವಿಳ್ಳ ಅಮೃತವಳ್ಳಿಯೆಲೆಗಳ್ ಮಣಿರಿಲೆಯುವುಗಳಂ ಅರದು (ಶಾಗಂಧಿ. ೯೪೬-೧). ೨. ನಸುಕೆಂಪು ಬಣ್ಣದ ಮೂತ್ರ ಹೋಗುವ ಒಂದು ಬಗೆಯ ರೋಗ : ರಕ್ತವರ್ಣವಾಗಿ ಹೋಗುವ ಮೂತ್ರವನ್ನು ಮಂಜಿಷ್ಟೆ ಎಂಬುವರು (೬ವೈಶಿ. ೦೫೪). **ಮಂಜೂತಿ** : ೧. ಮಂಜೂತಿ. (ಮಂಜಿಷ್ಠ) ಎತ್ತರವಾಗಿ ಬೆಳೆಯುತ್ತದೆ . . . ಇದರಿಂದ ಕೆಂಪುಬಣ್ಣವಾಗುತ್ತದೆ (ಕರ್ನಾಗ. ೯೬).

[<ಪ್ರಾ. ಮಂಜಿಟ್ಠಾ ./ ಸಂ. ಮಂಜಿಷ್ಠಾ]

**ಮಂಜಿಟ್ಟಿಗೆ**, ಮಂಚಟಿಕೆ, ಮಂಚಿಟಿಕೆ, ಮಂಚಿಟಿಗೆ, ಮಂಜಿಟಿಗೆ, ಮಂಜಿಡಿಕೆ₂, ಮಂಜಿಷ್ಟಿಗೆ (ನಾ). ೧.=ಮಂಜಿಟಿ ೧ : ಮಂಜಿಷ್ಟಕ— ಮಂಜಿಟ್ಟಿಗೆ, ಮಂಜಿಟಿಗೆ (ಕಮದ. ೨೮೪ ಶ್ರಯೋ). **ಮಂಚಟಿಕೆ** : ೧. "ಮಂಜಿಷ್ಠಾ—ಮಂಚಟಿಕೆ" (ಶಾಶಬ್ದ. ೨-೨-೫೦ ವ). **ಮಂಚಿಟಿಕೆ** : ೨. ಕೆಂಪುಬಣ್ಣದ ಸೀರೆ ಮೊದಲಾದ ವಸ್ತ್ರ : ಪೊಸತಹ ಮಂಚಿಟಿಕೆ ಗುಜ್ಜರಿ ದುಕೂಲಗಳ ಅಳವಡಿಸಿ . . . ಶ್ರೀಕೃಷ್ಣನೋಲಗಸಾಲೆ ರಂಜಿಸಿತು (ಕೋಗಮ. ೪-೪೬). **ಮಂಚಿಟಗೆ** : ೨. ಕರಮೆಸೆವ ಕಾವಿ ಮಂಚಿ [ಪಾಠಾಂ. ಜ]ಟಿಗೆ ತೋಪುಗಳಿಂದೆ ಭರದೆ ಬಾಸಣಿಸಿಸಿದ ಬಲ್ಲಾಳದಟ್ಟಿ ಯೊಳಗುರುಮೋದದಿಂ ಬರ್ಪವರ್ ಕೆಲಬರ್ (ಅರಾತ. ೫-೯-೨೩); ಮಂಚಿ [ಪಾಠಾಂ. ಜ]ಟಿಗೆ ಪಲ್ಲಕ್ಕಿ ನಲ್ಲೂರ ತೆಳಗಾವಿಯೆಂಬಾ ಸೀರೆಗಳಂ ಸತಿಯ ರೊಲೆಯೊಳುರುಪಿದರಾಗಳ್ (ತ್ರಿಶಪ. ೦೦-೨೬). **ಮಂಜಿಟಿಗೆ** : ೧. ಮತ್ತಗಜಮಂ ಪಾಯ್ದು ಪೊಯ್ದು ಪವನಖಿಗಳೊಳ್ ಪತ್ತಿ ಜಗುಬ್ಬಿ ನೆತ್ತರಿಂ ಮಹೀತಳಂ ಮಂಜಿಟಿಗೆಯ [ಕೆಂಬಣ್ಣಮಂ ಪ]ತ್ತಿದಂತಾಗುತ್ತಿರೆ ಪೋದ ಕೇಸರಿಗಳ ಕೇಸಡಿವಜ್ಜೆಗಳುಮಂ (ಕುಸುಮಾ. ೦೪-೨೯ವ); ಅರಿಸಿನ . . . ಮಂಜಿಟಿಗೆಯುಂ . . . ಘೃತದಿಂದಮಟ್ಟುದುಮನಂಜನಲೇಪನ ನಸ್ಯ ಪಾನದಿಂ ಪರಿಕಿಸೆ (ಖಮದ. ೯-೦೯). ೨. ಪೊಸ ಪಸಗೆಯ ಮಂಜಿಟಿಗೆ [ಪಾಠಾಂ. ಕೆ]ಯ ಮಿಸುಗುವ ದೋರಿಯುದ ಪಟೆಯ ಪುಲ್ಲಿಯ ಸೊಂಪಂ ಪಸರಿಸಿದ ಪಕ್ಕರಕ್ಕೆಗಳೆಸೆದಿರ್ದುವು ತರದಿನೊಡ್ಡಿದೆರಡುಂ ಪಡೆಯೊಳ್ (ಕಬ್ಬಿಗ. ೨೬೦). **ಮಂಜಿಡಿಕೆ₂** : ೨. ಚೀನದ ಬರಹದ ಸೀರೆ ೩ ಮಂಜಿಡಿಕೆ ಸೀರೆ ೨ (ಶಾಶಾ. IX–ii, ೫೯೬–೪; 1532). **ಮಂಜಿಷ್ಟಿಗೆ** : ೧. "ಮಂಜಿಷ್ಠಾ, ವಿಕಸಾ . . . ಯೋಜನವಲ್ಲೀ—ಈ ೯ ಮಂಜಿಷ್ಟಿಗೆ" (ಶಾಶಬ್ದ. ೦೦೯) ; ವರಮಂಜಿಷ್ಟಿಗೆ ದೇವದಾರು ಮಧುಕಂ . . . ಸರಿಗೊಂಡಾಜ್ಯದೊಳೀಯೆ (ಖಮದ. ೯-೬). [ < ಸಂ. ಮಂಜಿಷ್ಠಕ ? ]

**ಮಂಜಿಟ್ಟಿ** 'ಮಂಜಿಟಿ' ನೋ.

**ಮಂಜಿಡಿ** (ಕ್ರಿ). ಮಂಜಿನಿಂದ ಮುಚ್ಚಿಕೊಂಡಿರು,–ಆವೃತವಾಗಿರು : ರಂಜಿಸುವ ಮೊಗ್ಗುಗಳು ಮಂಜಿಡಿದ ತುಟಿ ತೆರೆದು ನೋಡುತಿಹವು (ಕರ್ಪೂ. ೨೬-೨). [ಮಂಜು₁ + ಇಡಿ₂]

**ಮಂಜಿಡಿಕೆ₁** (ನಾ). ೧. ಮಂಜು ಕವಿಯುವುದು,–ಆವರಿಸುವುದು,– ತುಂಬಿರುವುದು. ೨. (ಅಲಂ) ಮಂಕು ಕವಿಯುವುದು ; ವಿವೇಕ ವಿಲ್ಲದಂತಾಗುವುದು : ಭಯರಸಗದ್ದುಗೆಯ ಮಂಜಿಡಿಕೆಮನದವರಿದ್ದು ಫಲವೇನೆನುತ ಕೈ ಮಾಡಿದನು ಕಲಿಕರ್ಣ (ಕುವ್ಯಾಶ. ೦೯-೨೫).

[ಮಂಜು₁ + ಇಡಿಕೆ]

**ಮಂಜಿಡಿಕೆ₂** 'ಮಂಜಿಟ್ಟಿಗೆ' ನೋ.

**ಮಂಜಿಪತ್ರೆ**, ಮಂಜುಪತ್ರೆ (ನಾ). = ಮಂಚಿಪತ್ರ : "ಮಂಜಪರ್ಣಂ— ಮಂಜಿಪತ್ರೆ" (೬ಕಥಿ. ೦೦೯). **ಮಂಜುಪತ್ರೆ** : ಮಂಜುಪತ್ರೆಸೊಪ್ಪನ್ನು ಕುಟ್ಟಿ ಪಾವುರಸಮಂ ತೆಗೆದುಕೊಳ್ಳಲು ಶ್ಲೇಷ್ಮ, ಉದರಶೂಲೆ ಸಹ ಮಾಣ್ಗುಂ (ಸಕವೈ. ೨೦೬). [ < ಸಂ. ಮಂಚಿಪತ್ರ ]

**ಮಂಜಿಮ** (ನಾ). ಸೊಬಗು ; ಸೊಗಸು ; ಸೌಂದರ್ಯ : ಕಮಳ ದಳಾಯತೇಕ್ಷಣರುಚಿಪ್ರಸರಂ ಭಸಿತತ್ರಿಪುಂಡ್ರಮಂಜಿಮಯುತಪಾಲಪಾ ಲಿತಕುಂಡಳಮಂಡಿತಗಂಡಮಂಡಳಂ (ರಾಜಶೇ. ೦೯-೬೯).

[ಸಂ. ಮಂಜಿಮನ್]

**ಮಂಜಿರ** (ನಾ). ೧. ಒಂದು ಬಗೆಯ ಪದ್ಯಜಾತಿ : ಸರಸಮಂಜಿರ ವೆಂಟುಕಂದಂಗಳ್ಳೆನೂಱು ವಿರಚಿಸಿದ ಕೃತಿಯು ಮೂಪತ್ತಾಱು (ಗುರುತಾ. ೧೨-೩೬). ೨. [ಛಂದ] ಒಂದು ಬಗೆಯ ಛಂದಸ್ಸು.
[ < ಪ್ರಾ. ಮಂಜೀರ./ ಸಂ. ಮಂಜೀರಾ ]

**ಮಂಜಿಷ್ಟಿಗೆ** 'ಮಂಜಿಟ್ಟಿಗೆ' ನೋ.

**ಮಂಜಿಷ್ಟೆ** 'ಮಂಜಿಟೆ' ನೋ.

**ಮಂಜಿಷ್ಠ** (ಗು). ೧. ಪ್ರಕಾಶಮಾನವಾದ ಕೆಂಬಣ್ಣದ; ಗಾಢವಾದ ಕೆಂಬಣ್ಣದ : ವಜ್ರಪಟ್ಟ ಮಂಜಿಷ್ಠಪಟ್ಟ ಕ್ರಮದನು ಪೊಸದೇಸಿಕಾಱತನ ಮಿಗಲು ಗಳಿಗಳಲು ಜೋಡಿಸಿ (ಸಿದ್ಧರಾ. ೮-೫೬). (ನಾ). ೨. ಗಾಢವಾದ ಕೆಂಬಣ್ಣ ; ಪ್ರಕಾಶಮಾನವಾದ ಕೆಂಬಣ್ಣ : ಆತ್ಮನ ಇರವು ಶ್ವೇತವೋ ಪರಿತವೋ ಕಪೋತವೋ ಮಂಜಿಷ್ಠವೋ ಕೃಷ್ಣವೋ (ಪೋಳಶಪ. ೮೯-೩೫೩). ೩. = ಮಂಜಿಟೆ ೧ : "ಕಾಡುಬಳ್ಳಿ, ಸೋಮಲತೆ, ಸಿರಗತ್ತಿ, ಮಂಜಿಷ್ಠ . . . ಯೋಜನವಲ್ಲಿ "(ಶಬ್ದಾ. ೧೧೪) ; ಸೋಮಲತೆ, ಮಂಜಿಷ್ಠ, ಸಿರಗತ್ತಿ (ವೈಕಿಗ. ೬೭-೧೩೬೦). [ಸಂ.]

**ಮಂಜಿಷ್ಠಾರಾಗ** (ನಾ). ೧. ಮಂಜಿಷ್ಠೆಯ ಬಣ್ಣ. ೨. ವಿಪ್ರಲಂಭ ಶೃಂಗಾರದ ಪೂರ್ವರಾಗದಲ್ಲಿರುವ ಮೂರು ವಿಧಗಳಲ್ಲಿ ಒಂದು ; ಮೊದಲಿನಿಂದ ಕೊನೆಯವರೆಗೂ ಅತಿಶಯವಾಗಿಯೇ ಇರುವ ಪ್ರೀತಿ ; ಶಾಶ್ವತವಾದ ಪ್ರೀತಿ. 'ನೀಲೀರಾಗ' ಪರಾ. [ಸಂ.].

**ಮಂಜಿಷ್ಠೆ** (ನಾ). ೧. = ಮಂಜಿಟೆ ೧ : "ಮಂಜಿಟೆಯು ಮಂಜಿಷ್ಠೆ" (ಶಂಗರಾ. ೪೨-೩೮) ; "ರಕ್ತಯಷ್ಟೀ_ಮಂಜಿಷ್ಠೆ" (ಚಿತಂ. ೦೩೪) ; ಧಾತಕೀಕುಸುಮ, ಲೋಧ್ರ, ಮಂಜಿಷ್ಠೆ, ಲಾಮಂಚ, ಶ್ರೀಗಂಧ ಇಷ್ಟನೂ ಸಮಾಂಶವಾಗಿ ನೀರಿಂದ ಅರೆದು ಮೈಗೆ ಲೇಪಿಸಲು ಸಲಗ್ರಹಗಳು ಹರವಹವು (ವೈದ್ಯಸಾ. II, ೦೫) ; ಮಂಜಿಷ್ಠೆ ಕೋಲುಮುರುಕಿನ ಚಕ್ಕೇರಿ . . . ಕುರುಟಿಗೆಗಳನು ಪರಿಹರಿಸುವದು (ದ್ರವ್ಯಗುಣ. ೪-೧೦). ೨. ಮಂಜಿಷ್ಠೆಯ ಬಣ್ಣ ; ಕೆಂಪುಬಣ್ಣ : ನಿಡಿದೇಹ ಸ್ವರ್ಣಚ್ಛಾಯೆ ಮಂಜಿಷ್ಠ ಬಾಯ್ದಿಡುವ ಪೆಣ್ಮೇನ ತಂದವಳು . . . ಬೇಗಡಿಗೆಯ ಮಾತ ಹೇಳಿದವಳು (ಶೋಹಶ. ೧೦-೩೬). ೩. ಕೆಂಪುಬಣ್ಣದ ಬಟ್ಟೆ : "ದಸರಿ ಗಬ್ಬುಳ ನೀಲಿಗಂಧ . . . ಮಂಜಿಷ್ಠೆ ದೇವಾಂಗಮೆಂದು ಪಟಭೇದಮುಳ್ಳಂ" (ಶಂಗರಾ. ೧೧೧-೨೮). [ಸಂ. ಮಂಜಿಷ್ಠಾ]

**ಮಂಜೀರ** (ನಾ). ೧. ಕಾಲಿಗೆ ಹಾಕಿಕೊಳ್ಳುವ ಆಭರಣ ; ನೂಪುರ : "ಶಿಂಜಿನಿ ನೂಪುರಮಂದುಗೆ ಮಂಜೀರಂ ಹಂಸಕಂ" (ಪಜ್ಞಕೋ. ೬೬-೬) ; ಲಲಸಾಮಂಜೀರನಾದಕ್ಕೆಳಸುವ ಕಳಹಂಸಂಗಳಂ ಕಂಡು (ಶಾಂತಿಪು. ೩೫೮) ; ಮಂಜೀರಗಣ್ಣನಿಯುಂ ಸುಕಂಕಣಝಣತ್ಕಾರಂಗಳುಂ . . . ಪೊಣ್ಮೆ (ಶಾಂತಿಪು. ೬-೦೪೩). ೨. ಕಡೆಗೋಲಿನ ಹಗ್ಗವನ್ನು ಕಟ್ಟುವ ಕಂಬ. [ಸಂ.]

**ಮಂಜೀರಕ** (ನಾ). = ಮಂಜೀರ ೧ : ಸುರಗಣಿಕಾಗುಂಜನ್ಮಣಿರತ್ನಾಮಣಿ ಮಂಜೀರಕ ಮಂಜುಸಿಂಜಿತಂ ರಂಜಿಸುಗುಂ (ಅಜಿಪು. ೮-೦೮) ; ಪದದಿಂ ಮಂಜೀರಕರಪಮೊಗೆಯೆ ಮಗಂ ಜಗುಟುತ್ತೆಂದೊ ತೊಟ್ಟಿಲಂ ಪಟ್ಟೊದೆಪಂ (ಪುಷ್ಪವೃ. ೩-೪೦). [ಸಂ.]

**ಮಂಜೀರಿಕೆ** (ನಾ). = ಮಂಜೀರ ೧ : ಏಂ ಕಱಿದುದೋ ಕರ್ಣಾಮೃತಾ ಸ್ವರಮಂ ವಿವಿಧಾತೋದ್ಯಲಯಾನುಗಂ ಸುರಸತೀಮಂಜೀರಿಕಾಶಿಂಜಿತಂ (ಶಂಗಾಪತಿ. ೦೬-೪೬) ; ಮಂಜೀರಿಕಾಪುಂಜಮಂಜುಶಿಂಜಾನಮೊಳ್ದವು ವಿನಮೊದೆವ ಪದದೊಳ್ (ಶಂಕ್ರಪು. ೦-೦೦೬). [ಸಂ. ಮಂಜೀರಿಕಾ]

**ಮಂಜು₁** (ನಾ). ೧. ವಾಯುಮಂಡಲದಲ್ಲಿರುವ ನೀರಿನ ಕಣ, —ನೀರಿನ ಆವಿರೂಪ ; ಇಬ್ಬನಿ ; ಕಾವಳ : ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಜಿವೊಲ್ಮಂಜಿನ ಪೋಲ್ಗೆಂಜಿ ಬೇಗಂ ಪಿರಿಗುಂ ಶ್ರೀರೂಪಲೀಲಾಧನವಿಭವ ಮಹಾರಾಶಿಗಳ್ನಿಲ್ಲವಾಗ್ಗ್ರಂ (ಎಕ. II, ೬೬-೦; ಸು. 700) ; ಕಾಂಡಪಟ ದಂತಿರ್ಪನ್ನೆಗಂ ಮಾಡಿ ಮಂಜಿನಲಂಪಟ್ಟುಱನೀಯೆ ಕೂಡುವೆಡೆಯೊಳ್ ಜ್ಞಾನಸ್ವರೂಪಂ ಮಹಾಮುನಿಪಂ ಪುಟ್ಟಿದಂ (ಶಂಕರಾ. ೦-೬೯); ದೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಪರಿದು (ಧರ್ಮಾಮೃ. ೨-೬೯). ೨. ತಂಪು ; ಶೈತ್ಯ : 'ಮಂಜುವೆಳಗ' ಪರಾ. ೩. ಮಸುಕು ; ಆಚ್ಛಾದನೆ ; ತೆರೆ : ಮುಂದೆ ರಭಂಗಿಡುವ ನಂಜಿನ ಮಂಜನುತ್ತರಿಸಿ ನಡೆದನು (ಸಿದ್ಧರಾ. ೩-೯); ಕರ್ಪೂರಕಿಂಜಲ್ಕಪರಾಗದಿಂ ಮಂಜು ಮಸಗೆ ಸಂಜೆಯಾಯ್ತೆಂದಂಜುವ ಚಕ್ರವಾಕಂಗಳಿಂ (ಧಶಳು. ೪-೩೫ ವ). ೪. ವಾತಾವರಣದಲ್ಲಿರುವ ಘನೀಕೃತವಾದ ಆವಿಯ ಬಿಳಿಯ ಪಲ್ಲೆ,— ಪದರ; ಹಿಮ: "ಪ್ರಾಲೇಯಂ, ಅವಶ್ಯಾಯಃ . . . ನೀಹಾರಃ—ಈ ೮. ಮಂಜು" (ಶಬ್ದಮ. ೦೦೬-೨೯). 'ಮಂಜುವೆಟ್ಟ' ಪರಾ. ೫. (ದೃಷ್ಟಿಯ) ಮಬ್ಬು; ಮಸಕು : 'ಮಂಜುಗಣ್ಣು' ಪರಾ. ೬. ವಿವೇಚನೆಯಿಲ್ಲದಿರುವಿಕೆ ; ಅಜ್ಞಾನ; ಬೌದ್ಧಿಕವಾದ ಜಡತೆ : ಮಾಮರದೊಳಗೊಂದು ಮಾಗುವ ಮಂಜು ಕವಿದರೆ ಹೂಮಿಡಿಫಲಂಗಳು ಉದುರ ವಿನ್ನೆಂತೋ ಮಂಜಿನ ರಸವನುಂಡು ಫಲ ನಿವಿರ್ದು ಬೆಳೆದರೆ ಆ ಫಲವ ನಾನು ಮುಟ್ಟೆನು (ಅವಸಂ. ೬೬-೩೪೬).

ಮಂಜುಮಂಜು (ದ್ವಿರುಕ್ತಿ): ಅವರಿಗೆ ಕಣ್ಣು ಮಂಜುಮಂಜಾಗುತ್ತಿವೆ ಯಂತೆ (ಕಾದ). **ಮಂಜಾಗು**= ೧. ಮಂಜಿನಿಂದ ಕೂಡು ; ಮಂಜು ಉಂಟಾಗು : ಮಂಡಲ ಪರ್ವವಾಗಿ(ರೆ)ಕೊಂಡು ಮಂಜಾಗಿ ಕೊಂಡೊಡು . . . ಪೊಲ್ಲ ವಸುಧೆಯೊಳ್ (ಅಬ್ಬಪು. ೬-೦). ೨. ತಂಪಾಗು; ಶೀತಲವಾಗು : ವಿಶ್ವಾಸದಿಂ ಶಿವನೇ ಎಂದು ಜಪಿಸುತ್ತಿರ್ದಂಗೆ . . . ಬೆಂಕಿ ಮಂಜಾವವುದು (ಶಾಕಕ. ೩೦೦). ೩. ಮಸಕಾಗು ; ಮಬ್ಬಾಗು : ಎಲ್ಲವೂ ಮಂಜಾಯಿತು (ಮುರುಳು. ೫೯) ; ನಶ್ಯ ಹಾಕಿ ಹಾಕಿ ಮಂಜಾದ ಕಣ್ಣು (ಶುಹಾಂ. ೮). **ಮಂಜಿನ ಗಡ್ಡೆ**=ಮಂಜುಗಡ್ಡೆ : ದಟ್ಟ ಮಂಜಿನ ಗಡ್ಡೆ ಹೆಪ್ಪುಗಟ್ಟಿರೆ (ಅಶಿಕ. ೨-೫). **ಮಂಜಿನ ನೀರು**=ಇಬ್ಬನಿಯ ಜಲ : ಮಂಜಿನ ನೀರನಕ್ಕಟ ನಂಬಿ ಬಿತ್ತುವೆನೆಂಬನುಂ . . . ಮರುಳನಲ್ಲನೇ (ರವಿಕೃಮ. ೯-೨೨) ; ಮಳೆನೀರು ಬಿಟ್ಟು ಮಂಜಿನ ನೀರಿಗೆ ಕೈ ಒಡ್ಡಿದ ಹಾಗೆ (ಗಾದೆ). **ಮಂಜಿನ ಹನಿ**=ಇಬ್ಬನಿಯ ಹನಿ; ಕಾವಳದ ಬಿಂದು : ಕುಳಿರ್ವ ಮಂಜಿನ ಪನಿಗಳಿಂ ಕಪೋಲಸಂಕುಲಂ. . . ಸಲೆ ಕಿಡುವವೊಲ್ (ತೆಂಪು. ೬-೫). **ಮಂಜಿನ ಮಟೆ**, **ಮಂಜಿನ ಮಳೆ**=ಇಬ್ಬನಿಯ ಧಾರೆ,— ವೃಷ್ಟಿ: ಅಂತಿಸುವ ಚಾಪಧರನೀರದನಿಕರದ ಶರಾಸಾರಮಂ ಮಂಜಿನ ಮಟೆಯನಹಿಮಕಿರಣನಾತ್ಮಕಿರಣಂಗಳಿಂ ಕಿಡಿಸುವಂತೆ (ಶಾಂತಿಪು. ೪-೦೪ ವ) ; ಮುಸುಕಿದ ಮಂಜಿನ ಮಟೆಯೊಳ್ ನಸುದೋಱುವ ಶೋಣಕಮಲ [ಯುಗ]ದಂತೆ (ಕುಸುಮಪ. ೧೦-೫೦) ; ಮಂಜಿನ ಮಳೆಗೆ ಕುಲಗಿರಿ ಕರಗುವುದೆ (ಕುಮಾರರಾ. ೨-೫೪); ಕಾಲಾಗ್ನಿ ಮಂಜಿನ ಮಳೆಗೆ ವ್ಯೆದೆಗೆವುದೆ (ಕೂರಾ. ೫-೫-೨೬). **ಮಂಜಿನ ಸರಿ** = ಮಂಜಿನ ಮಟೆ : ಅರಳಿದಂಬುಜವನಕೆ ಮಂಜಿನ ಸರಿಯು ಸುರಿವಂದದಲಿ (ಕುಮಾರ. ೦೪-೫೦).

[ದೇ.॥ ತಮಿ. ಮಞ್ಞು; ಮಲ. ಮಞ್ಞು; ತುಳು. ಮಂಜು, ಮೈಂದ ; ಕೊಡ. ಮಂಜಿ ; ತೆಲು. ಮಂಚು]

**ಮಂಜು₂** (ಗು). ೧. ಚೆಲುವಾದ; ರಮಣೀಯವಾದ; ಮನೋಹರವಾದ : ಮಂಜು ಮಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ ಸದಾನಭೋಗಂ (ಕೃಪಾಶಾ. ೨೮-೬೨). 'ಮಂಜುಮ' ಹೋ. ೨. ಇಂಪಾದ ; ಮಧುರವಾದ : ಸೊಗಯಿಸಿದುದು ಕಣ್ಗೊಳಂಬವೋರಂತೆಡೆಯಾಡುವ ಯುವತಿಜನದ ಮಂಜೀರಗುಂಜನ್ಮಂಜುಸಿನದಂ (ಸುಕುಮಾರ. ೦೦-೯೯ ರಗಳೆ); ಕಳಕಾಂಚೀಮಂಜುಮಂಜೀರರವಳಯಂರವಂ ಪೊಣ್ಮೆ (ಜಗಂ. ೨-೬೮). (ನಾ). ೩. ಸುಂದರವಾಗಿರುವುದು ; ಸೊಗಸಾಗಿರುವುದು : "ಪ್ರಾಗ್ರ

ಪ್ರಾಗ್ರಹರಂ . . . ಮಂಜು, ಪ್ರಿಯಂ . . . ಪೇಶಲಂ—ಈ ೨೯ ಒಳ್ಳಿತು" (ಹಲಾಯು. ೦೦೪-೪); "ಕಮನಂ ಶುಭಂ. . . ಮಂಜು . . . ಪ್ರವೇಕಮೆನೆ ಸೌಮ್ಯಕ್ಕೆ ನಾಮಮಕ್ಕುಂ" (ಶಬ್ದಮ. ೦೨೬-೨) ; ಸನ್ನುತಚಂದ್ರ(ದ)ನಂ ದಿನಪನೀಕ್ಷಿಸೆ ಚಾರಿ ಕುಜಂ ನಿರೀಕ್ಷಿಸಲ್ ಬಿನ್ನಣಮೇನೋ ಶುಕ್ರ ಶನಿ ನೋಡಿದನ(ರ)ಪ್ಪೊಡೆ ಮಂಜು (ಜಟ್ಟಮ. ೯-೩). [ಸಂ.]

**ಮಂಜು₃** (ನಾ). ಒಂದು ಬಗೆಯ ಸಸ್ಯ : ಅನಾನಸ್, ಕರಡೀಕಣ್ಣಿನ ಗಿಡ, ಮಂಜು, ಈರುಳ್ಳಿ, ಬೆಳ್ಳುಳ್ಳಿ (ಸಮ್ಯಮ. ೨೩೮). 'ಮುಂಜಿ₂' ಪರಾ. [?]

**ಮಂಜುಗಡ್ಡೆ** (ನಾ). ಗಡ್ಡೆಗಟ್ಟಿದ ನೀರು; ಬರ್ಫ; ನೀರ್ಗಲ್ಲು : ನಮ್ಮ ಮನಸ್ಸನ್ನು ಸಾಗರದಲ್ಲಿ ತೇಲುವ ಮಂಜುಗಡ್ಡೆಗೆ ಹೋಲಿಸಬಹುದು (ಶಿಕ್ಷಿರ. ೬೪೮) ; ಶೀತವಲಯಗಳಲ್ಲಿ ಮಳೆಗೆ ಬದಲಾಗಿ ಮಂಜುಗಡ್ಡೆಗಳು ಬೀಳುತ್ತವೆ (ಕೂಗೋಳ. ೦೭). [ಮಂಜು₁ + ಗಡ್ಡೆ]

**ಮಂಜುಗಣ್ಣು** (ನಾ). ೧. ಮಬ್ಬಾದ ಕಣ್ಣು; ಚೆನ್ನಾಗಿ ಕಾಣದಿರುವ ಕಣ್ಣು : ಬೇರಂ ಕಕ್ಕೆಯ ಎಲೆಯ ರಸದಿಂದ ಹಚ್ಚಲು ಮಂಜುಗಣ್ಣು ಮಾಣ್ಗುಂ (ಶಿವ್ಯ.ಶಿ. ೦೩೩) ; ನೀರುಗಣ್ಣು ಕಾಚಗಣ್ಣು ಮಂಜುಗಣ್ಣು (ಬಳಸ. ೩೨೮). ೨. (ಆಲಂ) ವಿವೇಚನಾಶಕ್ತಿಯಿಲ್ಲದ ಬುದ್ಧಿ: ಹಿಂದಿನ ಮಂಜುಗಣ್ಣಿನಿಂದ, ಅಂಧಶ್ರದ್ಧೆಯಿಂದ . . . ನಮ್ಮ ಕನ್ನಡದ ಬಯಲಿಗೆ ತಿದ್ದಿಕೊಂಡ ಕಾಲುವೆಗಳನ್ನೇ ಮತ್ತೆ ನಾವು ಈಗ ತಿದ್ದ ಬೇಕಾಗಿಲ್ಲ (ಕಟಶಾ. ೩೦). [ಮಂಜು₁ + ಕಣ್ಣು (< ಕಣ್)]

**ಮಂಜುಗತ್ತಲು** 'ಮಂಜುಗತ್ತಲೆ' ನೋ.

**ಮಂಜುಗತ್ತಲೆ,** ಮಂಜುಗತ್ತಲು (ನಾ). ೧. ಮಬ್ಬುಗತ್ತಲೆ ; ಮಸುಕಾದ ಕತ್ತಲೆ; ನಸುಗತ್ತಲೆ : ಹಗಲು ಮಸುಗಿತು ಮಂಜುಗತ್ತಲೆ ಗಗನದೊಳು . . . ಉದಯಾದ್ರಿಗೆ ತರಣಿ ಬಹ ಸಮಯದಲಿ ಪ್ರತಿಯಿನ ನುದಯಿಸಿದನು (ಬಸಪು. ೩೧-೦೨). **ಮಂಜುಗತ್ತಲು** : ೨. ಹಿಮದಿಂದ ಆವೃತವಾದ ಕತ್ತಲು ; ಮಂಜಿನಿಂದ ತುಂಬಿರುವ ಕತ್ತಲೆ : ತಂಗು ದಾಣದ ಮುಂಭಾಗದಲ್ಲಿ ನೇತುಹಾಕಿದ್ದ ದೀಪಗಳ ಬೆಳಕು ಆ ಮಂಜು ಗತ್ತಲಲ್ಲಿಯೂ ಬರಬರುತ್ತ ಸುಸ್ಪಷ್ಟವಾಯಿತು (ಕೃನರು. ೩೦೮). [ಮಂಜು₁ + ಕತ್ತಲೆ₁ (< ಕಟ್ಟಲೆ)]

**ಮಂಜುಗಾಲ** (ನಾ). ಮಂಜು ಸುರಿಯುವ ಕಾಲ ; ಚಳಿಗಾಲ : "ಜಿಕಿಲೆ ಹೈಮಂತಂ ಮಂಜುಗಾಲಂ" (ಚಕುಶಿ. ೬೮). [ಮಂಜು₁ + ಕಾಲ]

**ಮಂಜುಗಾಳಿ** (ನಾ). ಹಿಮದಿಂದ ಕೂಡಿರುವ ಗಾಳಿ : ಆಸೆಯೊಂದು ಎಂದು ಮನದಿ ಪೊಳೆವುದಂದೆ ಮಂಜುಗಾಳಿ ಬೀಸಿ ಬಂದು ಬಂದ ಪೊಳಕ ಬೇರ ಕಿತ್ತು ಅಂದೆ ಅಂತೆ ತೂರಿಕೊಂಡು ಪೋಪುದೆತ್ತಲೊ (ಬಸಿನಗ. ೮೪-೩). [ಮಂಜು₁ + ಗಾಳಿ₁]

**ಮಂಜುಗಿರಿ** (ನಾ). ಹಿಮಾಲಯಪರ್ವತ ; ಹಿಮಾಚಲ : ಆ ಮಂಜುಗಿರಿ ಬಳಿಯಲ್ಲಿ ಪುಟ್ಟಿದ ಸಿರಿಯ ಸೋಮಕುಲಪಾವನೇ ಶರಣಸಂಜೀವನೆ (ಶೀಶರಮ. ೨೭). [ಮಂಜು₁ + ಗಿರಿ₁]

**ಮಂಜುಗೈಯ** (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : "ಜೊನ್ನೊಡಲಂ . . . ಮಂಜುಗೈಯಂ . . . ತಿಂಗಳ್ — ಈ ೨೦ ಚಂದ್ರನ ಪೆಸರ್" (ಕಕಶಾ. ೪೮-೨೩); "ಚಳಿಗದಿರಂ . . . ಐಕಿಲ್ವೆಳಗಂ ತಣ್ಗದಿರ ಮಂಜುಗೈಯಂ ಚಂದ್ರಂ" (ಕವಿಕಂ. ೪೩).
[ಮಂಜು₁ + ಕೈ₂ (< ಕೆಯ್₂) + –ಅ₇]

**ಮಂಜುಘೋಷ** (ನಾ). ಇಂಪಾದ ಶಬ್ದ : ಮಂಜುಘೋಷಮಂ ಬೀಜುವ ಸಿಂಜಿನೀವಳಯಕಾಂಚಿಗಳೆಂಬಿವಱಿಂದದೊಂದು ಚೆಲ್ವೇಱೆ ಭೋಗಿ ಭಾವಿನಿಯರಾ ಮಡುವಿಂ ಪೊಱಮಟ್ಟರಬ್ಬಿತ್ತಿಯಿಂ (ಜಗಶಿ. ೩-೦೦೨). [ಸಂ.]

**ಮಂಜುಘೋಷೆ** (ನಾ). ೧. ಇಂಪಾದ ಧ್ವನಿಯುಳ್ಳವಳು. ೨. ಒಬ್ಬ ಅಪ್ಸರೆಯ ಹೆಸರು : ಘೃತಾಚೀ, ಮೇನಕಾ . . . ಮಂಜುಘೋಷಾ- ಇವರು ಮೊದಲಾದವರ್ ಅಚ್ಚರಸಿಯರ್ (ಹಲಾಯು. ೧೩-೬೮) : ಮೇನಕೆ . . . ಮಂಜುಘೋಷೆಯೆಂಬೀ ನೆಗಟ್ಟಿಗ್ಗದಚ್ಚರಿಯರಚ್ಚರಿಯಪ್ಪ ವಿಳಾಸವುಂ ನಿಜನಟನೈಕದೇಶಮೆ ತಱುಂಬಿದುದು (ಚಕ್ಕ್ರಶ. ೨-೭೭).
[ಸಂ.ಮಂಜುಘೋಷಾ]

**ಮಂಜುಪತ್ರೆ** 'ಮುಂಜಿಪತ್ರೆ' ನೋ.

**ಮಂಜುಬೆಟ್ಟ** 'ಮಂಜುವೆಟ್ಟ' ನೋ.

**ಮಂಜುಭಾಷಿಣಿ** (ನಾ). ೧. ಇಂಪಾಗಿ ಮಾತನಾಡುವವಳು ; ಚೆನ್ನಾಗಿ ಮಾತನಾಡುವವಳು. ೨. [ಛಂದ] ಒಂದು ವೃತ್ತದ ಹೆಸರು ; ಪ್ರತಿ ಸಾಲಿನಲ್ಲೂ ಹದಿಮೂರಂ ಅಕ್ಷರಗಳಿರುವ ಅತಿಜಗತಿಛಂದಸ್ಸಿಗೆ ಸೇರಿದ ಸಮವೃತ್ತ : ಇರೆ ಮಂಜುಭಾಷಿಣಿ ಸಜಂಸಜಂಗಮುಂ (ಛಂಬುಶಿ. ೮೨). [ಸಂ. ಮಂಜುಭಾಷಿಣೀ]

**ಮಂಜುಮ** (ಗು). ಸುಂದರವಾದ ; ರಮಣೀಯವಾದ : ಮಂಜುಮ ಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ (ಶ್ರೀಂಶಿ. ೨೪-೬೨); ಮಂಜಿ ನೊಲ್ ಪಸರಿಸಿದ ಮುಗಿಲ ತೇರಿಂದೊಂದು ಮೂಡಿದುದು ಮಂಜುಮ ಸ್ತ್ರೀಮೂರ್ತಿ (ಶ್ರೀರಾಮ. ೨೦೩-೩೦೦). [ಸಂ. ಮಂಜುಮನ್]

**ಮಂಜುಲ,** ಮಂಜುಳ (ಗು). ೧. ಮನೋಹರವಾದ : ಸೊಬಗಿ ನಿಂದ ಕೂಡಿದ ; ರಮಣೀಯವಾದ : ಮಂಜುಲವೇಣೀರಮಣೀಯ . . . ವಿಮಲಶ್ರೀಮಜ್ಜನಸ್ಥಾನೆ ಕಣ್ಗೊಳಿಕುಂ ವಾಹಿನಿ ಸೀತೆ ಪೋಲ್ತು ಭುವನಪ್ರಖ್ಯಾತೆಯುಂ ಸೀತೆಯುಂ (ಕುಪ್ಪಪು. ೨-೮); ಕಂಜಬಾಂಧವನಸ್ತಮಿಸೆ ಪಡುವಣವೆಣ್ಣು ಮುಂ ಚೇತನಗುಂದಿ ತನ್ನ ಮಂಜುಲ ಬಾಯ ತಂಬುಲ ವುಗುಳ್ದಂತೆ ಸಂಜೆಗೆಂಪೆಸೆದಿರ್ದುದಾಗ (ಪೋಹಕ. ೦೩-೪). ೨. ಇಂಪಾದ ; ಮಧುರವಾದ : ಸವಿಯಾದ. (ನಾ). ೩. ಚಿತ್ರವರ್ಣ; ಶಬಲವರ್ಣ. ೪. ನೀರಿನ ಬುಗ್ಗೆ ; ಊಟೆ. ೫. ಲತಾಗೃಹ ; ಬಳ್ಳಿಮಾಡ. ೬. ನೀರುಕೋಳಿ. **ಮಂಜುಳ** : ೧. 'ಮಂಜುಳವೆಳಗ' ಪರಾ. ೨. ಶುಕತತಿ . . . ಮಂಜುಳಾರಾವಂ ಪ್ರಕಟಿಸೆ ಪರ್ಬುಗೊಂಡು ಸುಚಿದಾಡುವ್ವದಲ್ಲಿಯ ಕೆಯ್ವೊಲಂಗಳೊಳ್ (ಜಗಶಿ. ೨-೮) ; ಮತ್ತಾರ ಮಂಜುಳಮಧುರಕಂಠದ ವಿಪಂಚಿಕಾನಾದವುಂ ಸವಿಸವಿದು ಕಿವಿ ತಣಿಯನ್ವೋ ಅವನ್ನಾಲಿಪನ್ನೆಗಮುಣಂ ಶಾಂತಿಯಿಲ್ಲೆನಗೆ (ಶ್ರೀರಾಮ. ೦೬೦-೨೭೩). ೭. ಮನೋಹರವಾದುದು : "ಪ್ರಾಗ್ರ್ಯಂ . . . ಮಂಜುಳಂ, ಹೃದ್ಯಂ, ಹಾರಿ, ಮನೋಹರಂ . . . ಪೇಶಲಂ — ಈ ೨೯ ಒಳ್ಳಿತು" (ಹಲಾಯು. ೦೦೪-೪) ; ದೃಗುಮನೋಮಂಜುಳದ ಕಂಜಾಳಿಗಳ ಕತುಪರಿಮಳದ ಪಸರದ ಸೊಗಸು ತೀವಿತು (ಕುಮಾರ. ೨೩-೦೩); ಬಹುಮೃಗಮನೋಹರಂ, ಬಹುಪಕ್ಷಿ ಮಂಜುಳಂ (ಶ್ರೀರಾಮ. ೦೯೩-೪೩೪). [ಸಂ.]

**ಮಂಜುಲಾಸ್ಯ** (ನಾ). ೧. ಚೆಲುವಾದ ಮುಖ ; ಸುಂದರವದನ. ೨. ರಮಣೀಯವಾದ ನಾಟ್ಯ. ೧, ೨ : ಆ ತರುಣಿ . . . ನರ್ತಕಿಯಂತೆ ಮಂಜುಲಾಸ್ಯಮನೋಜ್ಞೆಯುಂ (ರಾಜಶೇ. ೭-೬೦ ವ).
[ಸಂ. ( ಮಂಜುಲ + ಆಸ್ಯ ; ಮಂಜು + ಲಾಸ್ಯ) ]

**ಮಂಜುವೆಟ್ಟ,** ಮಂಜುಬೆಟ್ಟ, ಮಂಜುವೆಟ್ಟು (ನಾ). ಮಂಜು ಮುಚ್ಚಿ ರುವ ಪರ್ವತ ; ಕೈಲಾಸ : ಈಗಳ್ ಸಿವನೆಂಬ ದುಟ್ಟಗೊರವಂ ಮಂಜು ವೆಟ್ಟಮಂ ಗೊಟ್ಟಂಬಮಾಡಿ ಕಿತ್ತಡಿಗಳಂ ಮರುಳ್ವಡೆಗಳಂ ಕೂಡಿಕೊಂಡು . . . ಮೆಯ್ಯಾಱಿಯದಿರ್ಪಂ (ಕಬ್ಬಿಗ. ೦೪೩) ; ನೀಱಿ ನಿನಗೆ ಸೋತು ವಿರಹದುರಿಯ ತಾಳಲಾಱದೆ ಮಂಜುವೆಟ್ಟಮನು ಏಱಿದನಾ ನಳಕೂಬರನು (ಕುಂದಾಶಾಂ. ೨೪-೬೨). **ಮಂಜುಬೆಟ್ಟ** : ಮಂಜುಬೆಟ್ಟವನು ಮೀಟು, ಹಂಸ ದ್ವಾರವನು ದಾಟು ಓಡು (ಪೇಶಿಮ. ೦೩-೩೭). **ಮಂಜುವೆಟ್ಟು** : ತಾವರೆಯೆಂದು ತೋಱಬಾರದು ಪೊಸಗುಗ್ಗಿಯೆಂದುಸಿರಬಾರದು ತನ್ನಯ ಮಂಜುವೆಟ್ಟಿನೊಳ್ (ಕಬ್ಬಿಗ. ೦೪೭). [ಮಂಜು₁ + ಬೆಟ್ಟ]

**ಮಂಜುವೆಟ್ಟು** 'ಮಂಜುಮೆಟ್ಟು' ನೋ.

**ಮಂಜುವೆಳಗ** (ನಾ). ತಂಪಾದ ಕಾಂತಿಯುಳ್ಳವನು ; ಚಂದ್ರ : "ಮಂಜುವೆಳಗನು ಬೆಳ್ಗದಿರನೈಕಿಲ್ವೆಳಗ ಚಂದಿರನು . . . ಕತ್ತಲೆವಣಿಯು ಶಶಿಯು ನಾಮಂ" (ಕಬ್ಬಿಗ. ೯೬). [ಮಂಜು$_1$ + ಬೆಳಗು$_2$ + –ಅ$_7$ ]

**ಮಂಜುಸಿಂಜಿತ** (ನಾ). ಇಂಪಾದ ಶಬ್ದ ; ಮಧುರವಾದ ನಾದ : ಲಂಜಿಕೆಯರ ಗುಂಜನ್ಮಣಿಮಂಜೀರಕ ಮಂಜುಸಿಂಜಿತಂ ರಂಜಿಸಿತೊ (ಅಕಪು. ೫-೪೨). [ಸಂ.]

**ಮಂಜುಹುಲ್ಲು** (ನಾ). ಒಂದು ಬಗೆಯ ಹುಲ್ಲು : ಮಂಜುಹುಲ್ಲು, ತಪ್ಪರಿಕಹುಲ್ಲು (ವೃಕ್ಷಶಿಗ. ೦೪-೨೪೬). [ಮಂಜು$_3$ + ಹುಲ್ಲು ( < ಪುಲ್ )]

**ಮಂಜುಳ** 'ಮಂಜುಲ' ನೋ.

**ಮಂಜುಳತೆ** (ನಾ). ಸೊಗಸು ; ಸೊಬಗು : 'ಮಂಜುಳತೆವಡೆ' ಪರಾ. [ಸಂ. ಮಂಜುಲತಾ]

**ಮಂಜುಳತೆವಡೆ** (ಕ್ರಿ). ಸೊಗಸಾಗು ; ಮನೋಹರವಾಗು : ನಿಳಯ ನಿಳಯದೊಳು ಮಂಜುಳತೆವಡೆದು ದೀಪಾಳಿ . . . ಸಾಲ್ವಿಡಿದೊಪ್ಪುತ (ಸೌಂದಪು. ೦೭-೦೭). [ಮಂಜುಳತೆ + ಪಡೆ$_1$]

**ಮಂಜುಳವೆಳಗ** (ನಾ). ಮನೋಹರವಾದ ಬೆಳಕುಳ್ಳವನು ; ಚಂದ್ರ : "ಮಂಜುಳವೆಳಗನೆನೆ ಶಶಿ" (ಕಚಿ. ೬೭).

[ಮಂಜುಳ ( = ಮಂಜುಲ) + ಬೆಳಗು$_2$ + –ಅ$_7$ ]

**ಮಂಜುಳಿ** (ನಾ). ವಿಧವಿಧವಾದ ಬಣ್ಣ ; ಚಿತ್ರವರ್ಣ : ಹಸುರು ನಸುಹುರುಮಂಜಿ ಮಂಜುಳಿ ಮಸುತ ಗೌರವ ಮತ್ಸ್ಯಮಾವಿ ಮುಸುಲ ಮಲ್ಲಿಗೆ ಕದಡುಚುಕ್ಕೆಗ ಚಿತ್ರಹೇಮಲತೆ ಮಿಸುನಿಚಂಪಕ ನೀಲಪಂಕಜ ಶಶಕಮಂಜರಿ ಹಲವು ವಿಲಸಿತ ಕುಶಲವರ್ಣದ ರಾಜಮೃಗತತಿ ಕಾಣ ಲಾಯ್ತು (ಅಂಬಿಕಾ. ೩೩-೩೭).

[ಸಂ. ಮಂಜುಲ. / ತೆಲು. ಮಂಜಿಡಿ]

**ಮಂಜೂತಿ** 'ಮಂಜಿಟೆ' ನೋ.

**ಮಂಜೂರ್** 'ಮಂಜೂರು' ನೋ.

**ಮಂಜೂರಾತಿ** (ನಾ). ಒಪ್ಪಿಗೆ ; ಅಂಗೀಕಾರ ; ಅನುಮೋದನೆ ; ಅನುಮತಿ : ರೆವಿನ್ಯೂಕಮಿಷನರ ಮಂಜೂರಾತಿಯಿಲ್ಲದೆ ಜಾಪತಿ ಮಾಡಲ್ಪಡಕೂಡದು (ಗ್ರಾಪಂಳ. ೭) ; ೫೦೦ ರೂಪಾಯಿಗೆ ಮೀರಿದ ಕಂಟೆಂಜನ್ಸಿಮೊಬಲಗನ್ನು ಮಂಜೂರಾತಿ ಮಾಡುವ ಹಕ್ಕು ನನ್ನ ಪ್ರಿನ್ಸಿಪಾಲಿಗೂ ಇಲ್ಲ (ಹಸುಹೊ. ೨೨೭). [< ಮಂಜೂರು]

**ಮಂಜೂರಿ** (ನಾ). = ಮಂಜೂರಾತಿ : ಇದಕ್ಕೆ ಸುಬ್ಬೂನ ಮಂಜೂರಿ ಇದೆ (ಛೀಮುಕಾ. ೨೫೦). [← ಹಿಂ. ಮರಾ. ಮಂಜೂರೀ]

**ಮಂಜೂರು, ಮಂಜೂರ್** (ನಾ). = ಮಂಜೂರಾತಿ : ಅವುಗಳನ್ನು ಮಂಜೂರು ಅಥವಾ ತಿದ್ದುಪಡಿ ಮಾಡಿ ಅವರ ಡಿಕ್ರಿಗಳನ್ನು ನೋಡಿ ಅವುಗಳಿಗೆ ತಮ್ಮ ಮೊಹರು ಮಾಡುತ್ತಿದ್ದರು (ಮುಹಾಪಂ. II. ೪೫). **ಮಂಜೂರ್**: ವೈಸರಾಯಿ ವ ಗವರ್ನರ್‌ಜನರಲ್‌ಯವರಿಂದ ಮಂಜೂರ್ ಮಾಡಲ್ಪಟ್ಟು (ಗ್ರಾಪಂಳ. ೪ ಬಿ೮೪).

**ಮಂಜೂರುಮಾಡು** = ಒಪ್ಪಿಗೆ ಕೊಡು ; ಅನುಮೋದಿಸು : ಕೃಷ್ಣರಾಜವಡೆಯರವರು ದಯಮಾಡಿ ಮಂಜೂರುಮಾಡಿರುವ ಕಳಶದ . . . ಪ್ರತಿಷ್ಠೆ ಮಾಡಿರುತ್ತಾರೆ (ವೃಅಶಾ. ೦೯೩೪, ೨೩-೫ ; 1898) ; ಈ ರಾಜೀನಾಮೆಯನ್ನು ಮಂಜೂರುಮಾಡಬೇಕು (ರಂಗಕೋ. ೭೦).

[ ←ಅರ. ಹಿಂ. ಮರಾ. ಮಂಜೂರ್ ]

**ಮಂಜೂಷ** (ನಾ). ೧. ಪೆಟ್ಟಿಗೆ ; ಸಂದೂಕ : "ಪೇಟಾ, ಮಂಜೂಷಾ —ಈ ೨ ಪೆಟ್ಟಿಯುಂ" (ಹಲಾಯು. ೫೨-೦೫೭) ; ಅಮರೇಂದ್ರೋತ್ತುಂಗ ಮಾತಂಗದ ಬಿದುವಿನ ಮುಕ್ತಾಳಿಯಿಂದಾದ ಮಂಜೂಷಮಿದು (ಜಗಾ. ೬-೨೯). ೨. ಊರು ; ಪಟ್ಟಣ. ೩. ಬಿದಿರಿನ ಬುಟ್ಟಿ ; ಮಂಕರಿ. ೪. ಶಿಲೆ ; ಕಲ್ಲು. [ ಸಂ. ಮಂಜೂಷಾ ]

**ಮಂಜೂಷಿಕೆ** (ನಾ). = ಮಂಜೂಷ ೧ : ಭೂಮಿಗೃಹಪ್ರವೇಶಮಂಜೂಷಿಕಾ[ಪಾಠಾಂ. ಮಂಜೂಷಿ] ಜಯಾ[ಪಾಠಾಂ. ಲಾ]ವಗಾಹಾದಿ ರಕ್ಷೋಪಾಯಂಗಳನೇಕಂಗಳಂ ಮಂತ್ರಿಗಣಂ ನುಡಿದು ತೋರೆ (ಶಾಂತಿಪು. ೬-೨೫ ವ).

[ ಸಂ. ಮಂಜೂಷಿಕಾ ]

**ಮಂಜೂಷೆ** (ನಾ). ೧. = ಮಂಜೂಷ ೧: "ಪಿಟಕಃ, ಪೇಟಕಃ, ೨ ಪೆಟಾರಿಗೆ ಹೆಸರುಗಳು, ಪೇಟಾ, ಮಂಜೂಷಾ ೨ ಮಂದಾಸನದ ಹೆಸರು — ಈ ೪ ಪರ್ಯಾಯಪದಗಳೆಂದು ಕೆಲವರು, ಪೆಟ್ಟಿಗೆ, ಗೌಸಣಿಗೆ" (ಸಿದ್ಧಾಂತ. ೩೦೫). ೨. ದೇವತಾವಿಗ್ರಹಗಳನ್ನಿಡುವ ಮರ ಅಥವಾ ಲೋಹದ ಮಂಟಪ ; ಮಂದಾಸನ : "ಪೇಟಾ, ಮಂಜೂಷಾ – ೨ ಮಂದಾಸನದ ಹೆಸರು" (ಸಿದ್ಧಾಂತ. ೩೦೫). [ಸಂ. ಮಂಜೂಷಾ]

**ಮಂಟಕೆ** 'ಮೆಂಟಿಕೆ' ನೋ.

**ಮಂಟಗೆ** 'ಮೆಂಟಿಕೆ' ನೋ.

**ಮಂಟಪ, ಮಂಟಮೆ, ಮಂಟಯ, ಮಂಟೆಯ, ಮಂಠೆಯ, ಮಂಡಪ** (ನಾ). ೧. (ಹೆದ್ದಾರಿ, ನದೀತೀರ ಮೊದಲಾದ ಕಡೆಗಳಲ್ಲಿ ಜನರ ಉಪಯೋಗಕ್ಕಾಗಿ ನಿರ್ಮಿಸುತ್ತಿದ್ದ) ಸಮತಲವಾದ ಚಾವಣಿಯುಳ್ಳ, ಬಾಗಿಲಿಲ್ಲದ ಚಪ್ಪರದಾಕಾರದ ಕಲ್ಲಿನ ಕಟ್ಟಡ : ಮಂಟಪದಲ್ಲಿ ಕುಳಿತರೂ ಕಂಟಕ ಬಿಡಲಿಲ್ಲ (ಗಾದೆ). ೨. ದೇವಾಲಯಗಳಲ್ಲಿ ಉತ್ಸವಮೂರ್ತಿಯನ್ನು ಕೂರಿಸಿ ಮಾಡುವ ಸಮಾರಂಭಗಳಿಗಾಗಿ ಕಟ್ಟಿರುವ ಕಟ್ಟಡ : ಅಪ್ರತಿಮಂಗಳಪ್ಪ ರೂಪಾರದಿನಾರುಮಂ ಬಗೆಗೊಳಲ್ ಪರಿಶೋಭಿಪ ಮಂಟಪಂಗಳಿಂ . . . ಜಿನರಾಜಗೃಹಂಗಳೊಪ್ಪುಗುಂ (ಸುಕುಮಾ. ೯-೫೮). ೩. ಅರಮನೆ, ರಾಜಭವನ ಮುಂತಾದ ಕಡೆಗಳಲ್ಲಿ ದರ್ಬಾರು ಮೊದಲಾದ ಸಮಾರಂಭಗಳನ್ನು ನಡೆಸಲು ನಿರ್ಮಿಸುತ್ತಿದ್ದ ಸಭಾಸ್ಥಾನ ; ಓಲಗಶಾಲೆ : "ಜನಾಶ್ರಯಂ ಮಂಟಪಾಖ್ಯಂ" (ಮಂಗರಾ. ೫೭-೬) : ನೆಗೆವಗರುಧೂಪಧೂಮದೊಳಮೆಸೆವಾಸ್ಥಾನಮಂಟಪದೊಳ್ ಸಮುಚಿತಾಮಾತ್ಯರಾಜಪುತ್ರಮಿತ್ರಸಮನ್ವಿತಂ ಬಂದು ಪುಗುವಲ್ಲಿ (ಕಾದಂಪೂ. ೭೯) ; ಅಚಲಸಿಂಹಾಸನವನಿಕ್ಕಿ ನಿಶ್ಚಲ ಮಂಟಪದ ಸಂಚದೋಪರಿಯೊಳಗೆ ರುಚಿಗಳೆಲ್ಲವ ನಿಲ್ಲಿಸಿ (ಅಪಶಂ. ೪೬-೦೯೬) ; ಸಿಂಗರಿಸಿದ ರತ್ನಪಟ್ಟಿ ಪೂಮಾಲೆ ಬೆಡಂಗಿನ ಮಂಟಪದಲ್ಲಿ ಶೃಂಗಾರವನದೊಳು ಮೆಚ್ಚಿವ ವಸಂತರಾಜಂಗೆಣೆಯಾದನಾ ಸೊಬಗ (ಛರಕ. ೦-೨೮). 'ಅನುಭವಮಂಟಪ' ಪರಾ. ೪. ನ್ಯಾಯದ ಕಟ್ಟೆ,—ಚಾವಡಿ : ನಡೆಯಿ ಪೊನ್ನಾಂಬಲದ ಹಿರಿಯರಿಪ ಮಂಟಪಕೆ (ತಿರುಕ. ದೀ. ೦೪-೦). ೫. ಮದುವೆ, ಪೂಜೆ, ಯಾಗ, ಸಮ್ಮೇಳನ ಮೊದಲಾದ ಸಂದರ್ಭಗಳಲ್ಲಿ ಹೆಚ್ಚು ಜನರು ಕುಳಿತುಕೊಳ್ಳಲು ಅನುಕೂಲವಾಗುವಂತೆ ನಿರ್ಮಿಸುವ ಚಪ್ಪರ : ಮಂಗಳಲಕ್ಷ್ಮಿ ತೊಟ್ಟಲಂಕಾರನಿಕಾಯದಂತಿರೆ ಮನೋಹರಮಾಯ್ತು ವಿವಾಹಮಂಟಪಂ (ಜಗಾ. ೦೦-೯೭) ; ಮಾಡಿದಾಕ್ಷಣ ಮಂಟಪಂಗಳ ರೂಢಿಯಲಿ ಕೈಗಟ್ಟಿಕೊಂಡರು ನೀಡಿದರು ಮೇಳೆಯವ (ಸಂಛಕ. ೨೪-೬೩). **ಮಂಟಮೆ** : ೧. 'ಅಟಿಮಂಟಮೆ' ಪರಾ. ೬. "ಮನೆಯ ಪಕ್ಕದಲ್ಲಿ ಕಟ್ಟಿರುವ ಸಣ್ಣಮನೆ" (ಅಪಂಕಾ). **ಮಂಟಯ** : ೫. ಅಂತು ಬಂದಾ ಪಾರ್ವರ ಮಂಟಯದೊಳ್ ಕುಳ್ಳಿರ್ದಾ ಸಮಯದೊಳ್ ಇಂದ್ರದತ್ತನೆಂಬ ವೃದ್ಧವೈಶ್ಯನೋರ್ವಂ . . . ಆ ಮಂಟಯಕ್ಕೆ ಬರ್ಪುದುಂ (ಧರ್ಮಾಸ್ತ್ರ. ೩-೯ ವ). **ಮಂಟೆಯ** : ೧. ಎಂಟುಕಾಲ ಮಂಟೆಯ ಟೆಂಟೆಣಿಸಿ ನಿಂದುವೈದು ಕಂಭ (ಮೋಳಪಾ. ೨೫೪-೬೦೫) ; ಮಟ ಮಂಟೆಯ ದೇಗುಲ ನಿನಗೆಂದು ದಿಟದಿಂದೆನಗಿತ್ತೆಯೊ ನೀನಿಂದು (ಹಕಾಗ. ೦೨-೩೦ ರಗಳೆ) ; ತೀನಿ ಕೆರಳ್ದ ಢಂಗವನು ಬೂದಿಯ

ಮೇಲೆ ಪೊರಳ್ಚಿಕೊಂಡುದಾ ಶ್ವಾನನು ಮಂಟೆಯಕ್ಕೆ ನಡೆತಂದು ನರಳ್ವನ ಮೆಟ್ಟಲು (ಪಪ್ಪಾ. ೩-೯೬). ಮಂಠೆಯು : ೧. ಕೇತಾರಗುರುಗಳುಂ ಸಂದ ಹಾವಿನಹಾಳ ಕಲ್ಲಿದೇವಂಗಳುಂ ಬಂದೊಂದುದಿನವಿರುಳು ಪೊತ್ತು ಹೋಗದೆ ಕುಳ್ಳಿರ್ದ ಮಂಠೆಯುಂ ಮಂದಿಯೊಳಗೆ. . . ಮನವಕ್ಕಿ ಸುಜನ ನೊರ್ವಂ ಪೊಗಳ್ದಪೆ (ಸಿದ್ಧರಾ. ೭-೨); ಮಹಾವ್ಯಾಳಂ. . . ಚವುಬಾರದ ಮಂಠೆಯದೊಳು ಕುಳ್ಳಿರ್ಪುದುಂ (ಪುಣ್ಯಾಸ್ರ. ೭-೭೪ ವ). ೭. ಜೂಜಿನ ಕಟ್ಟೆ: ಜೂಜಿನ ಚಾವಡಿ : ನಾಗರೀಕನಾನಾಜನದುಂದು ಪೆಂಪೆಸೆವ ಮಂಠೆಯದೊಳ್ ನೆರೆದುತ್ಸವಂ ಮಿಗಲ್ ಜೂಜುಗಳಂ ಸಮಗ್ರ ಮೆನಲಾಡುತಿರಲ್ ಪದೆದಲ್ಲಿಗೆಯ್ದಿದೆಂ (ಧರ್ಮ. ೬-೯೭). ಮಂಡವ : ೩. ದಿವಸಾಧಿಪ ಶ್ರೀರಂಗಧಾಮನ ರಥೋತ್ಸವವನು ನಿಟ್ಟಿಸಲೆಂದು ತವೆ ಹರುಷದೆ ಬಂದನೆನೆ ಪೂರ್ವಗಿರಿಯ ಮಂಡವದೆ ರಾಜಿಸಿದನೇವೇಳ್ವೆ (ಕಂಠೀ. ೨೩-೭೪). ೮. ಬಳ್ಳಿಯನ್ನು ಹಬ್ಬಿಸಲು ಮಾಡಿದ ಚಪ್ಪರ : ಕಾವಣ : ಬಳಸಿದ ಬಳ್ಳಿಮಲ್ಲಿಗೆಯ ಮಂಡವದೊಳ್ ಸುಚಿದಾಡಿ (ಕಬ್ಬಿಗ. ೩೦೭). [< ಸಂ. ಮಂಡಪ. / ಪ್ರಾ. ಮಂಡವ]

**ಮಂಟಬೆಕ್ಕು** ' ಮಂಟಬೆಕ್ಕು ' ನೋ.

**ಮಂಟಮೆ** ' ಮಂಟಪ ' ನೋ.

**ಮಂಟಯ** ' ಮಂಟಪ ' ನೋ.

**ಮಂಟವಲ್** (ನಾ). ಒಂದು ಹಲ್ಲಿಗೆ ಮತ್ತೊಂದು ಹಲ್ಲು ಒತ್ತಿ ವಿಕಾರವಾಗಿರುವ ಹಲ್ಲುಸಾಲು : ಕಿವಿಯುಂ ಮಂಟಿಸಿ ಮಂಟವಲ್ಲಿ [ಪಾಠಾಂ. ಮಂಡಿಸಿ ಮಾಟವಲ್ಲಿ, ಮೆಳ್ಳಿಸಿ ಮಾಟವಲ್ಲಿ. ಮೆಳ್ಳಿಸಿ ಮಾವುವಲ್ಲಿ] ಚಿದು ಕಣ್ಣಂ ಬಿಟ್ಟು ವಕ್ರಾಂಗಿ . . . ತೋರ್ಪ ವಿಕಾರಂ ಸಭೆಗಾಗಳೆಂ ಪಡೆದುದೋ ವಕ್ರಪ್ರಕಾರೋದಿತಾರವಮಂ (ರಕರ. ೨-೯೮).

[< ಮಂಟು + ಪಲ್]

**ಮಂಟಿ** (ನಾ). ಮೃತ್ತಿಕೆ : ಉಂಟಾದ ಗುರುಪಾದತೀರ್ಥವನಿತ್ತು ತಾ ಮಂಟಿ ಬೂದಿಯನು ಧರಿಸಿ (ಬಸ್ಯರಾ. ೨-೨೪). 'ಮಟ್ಟಿ$_1$', 'ಮಡ್ಡಿ$_1$' ನೋ.

[ದೇ.॥ ತಮಿ. ಮಣ್ಣು: ತೆಲು. ಮಂಟಿ]

**ಮಂಟಿಕೆ** ' ಮೆಂಟಿಕೆ ' ನೋ.

**ಮಂಟಿಗೆ** ' ಮೆಂಟಿಕೆ ' ನೋ.

**ಮಂಟು** (ಕ್ರಿ). ೧. ದಟ್ಟವಾಗು ; ಸಾಂದ್ರವಾಗು : ' ಮಂಟವಲ್ ' ಪರಾ. ೨. ಬಾಗು ; ಬಗ್ಗು : ಸೊಂಟವೊರಗುತ ಮುಖವು ಬಾಡಿ ಬತ್ತಿಹುದು ಮಂಟಿ ಸಿರ ಸುಲಿದೊಂದು ಚರಣ ಮೇಲಕ್ಕೆ ಒದ್ದು ಭೂಮಿಯ ಮೇಲೆ ಬಿದ್ದಿರುವುದೊಂದು (ಕರರ. ೩೯೯-೩). [ದೇ.॥ ತಮಿ. ಮಣ್ಣು]

**ಮಂಟೆ** ' ಮೊರದ್ದು ' ನೋ.

**ಮಂಟೆಯ** 'ಮಂಟಪ' ನೋ.

**ಮಂಠ** (ನಾ). (ಬೇಯಿಸಿ ತಯಾರಿಸುವ) ಒಂದು ಬಗೆಯ ಸಿಹಿ ತಿಂಡಿ. [ಸಂ.]

**ಮಂಠೆಯ** 'ಮಂಟಪ' ನೋ.

**ಮಂಡ$_1$** 'ಮಡ್ಡಿ$_1$' ನೋ.

**ಮಂಡ$_2$** (ನಾ). ಅಂಗಡಿಯಲ್ಲಿ ವರ್ತಕನು ಕುಳಿತುಕೊಳ್ಳುವ ಸ್ಥಳ ; ಹಣದ ಪೆಟ್ಟಿಗೆ ಇಡುವ ಸ್ಥಳ ; ಗಲ್ಲೆ: ಆಫೀಸರಿಗೂ ಬಿಟ್ಟುಕೊಡದ ತನ್ನ ಮಂಡದ ಉನ್ನತಾಸನವನ್ನು ಸೆಟ್ಟಿಗೆ ಬಿಟ್ಟುಕೊಟ್ಟು ಹಲ್ಲುಕಿರಿದು ನಿಲ್ಲುತ್ತಿದ್ದರು (ಒಬ್ಬ. ೦೦೭). [←ತುಳು. ಮಂಡ]

**ಮಂಡ$_3$** (ನಾ). ೧. ಹಾಲಿನ ಕೆನೆ. ೨. ಅನ್ನವನ್ನು ಬಸಿದ ಗಂಜಿ. ೩. ಯಾವುದೇ ದ್ರವಪದಾರ್ಥದ ಮೇಲುಭಾಗದಲ್ಲಿ ಕೆನೆಗಟ್ಟುವ ರಸಭಾಗ : "ಮಂಡಂ—ಸರ್ವರಸಾಗ್ರೇ=ತುಪ್ಪ, ಎಣ್ಣೆ ಮುಂತಾದ ಸರ್ವರಸಗಳ ತಿಳಿಗೂ, ಮೊಸರು, ಹಾಲು, ಮುಂತಾದುವುಗಳ ಕೆನೆಗೂ; ಎಲ್ಲಾ ವಸ್ತುಗಳ ಬಸಿದ ನೀರಿಗೂ ಪೆಸರುಗಳು" (ಸಿದ್ಧಾಂತಿ. ೨೬೬). ೪. ಮದ್ಯದಲ್ಲಿರುವ ಮಾದಕಾಂಶ ; ಮಾದಕಪಾನೀಯದಲ್ಲಿರುವ ಮತ್ತುಬರುವ ಅಂಶ,–ಪದಾರ್ಥ : ಮದ್ಯವನ್ನು ಸ್ವಲ್ಪ ಭಯದಿಂದ ಸ್ವಲ್ಪವೇ ಬಾಯಿಗೆ ತೆಗೆದುಕೊಂಡನು. ಅದರಲ್ಲಿ ಮಂಡ ಕಡಮೆ. ಆದರೆ ಅದೂ ರುಚಿಯಾಗಿ ಕುಡಿಯೋಣ ಎಂಬಂತೆ ಇದ್ದಿತು (ಕಪ್ಪ. VIII, ೪೪). ೫. ಹುದುಗು ಬರುವಂತೆ ಮಾಡುವ ಪದಾರ್ಥ : "ಮಂಡ, ಕಿಣ್ವ, ಹುದುಗು" (yeast. ಇಂಕಾ). ೬. ಹರಳುಗಿಡ ; ಔಡಲ : "ಕಂಟಕಿ ಬೆಸಲ್ ಮಂ[ಪಾಠಾಂ. ಕಂ]ಡನೆಂಗು" (ಮಂಗರಾ. ೩೭-೧೯); ಮಂಡನ ಬೀಜ,ಸಾರಗದ ಕೊಂಬು, ಇಲಿಯ ಹಿಕ್ಕೆ, ಇಲ್ಲಣ ಸಹ ಮಕ್ಕಳ ಮೂತ್ರ ದಿಂದರೆದು ಗುಳಿಗೆಯುಂ ಮಾಡಿ...ತೊಡೆದು ಕಾಸಲು ಆ ಕ್ಷಣವೆ ಮೂತ್ರ ಬಿಡುವುದು (ಸಸ್ಯ. ೩೭೩). ೭. ತಲೆ; ಶಿರಸ್ಸು. ೮. ಅಲಂಕಾರ ; ಆಭರಣ. ೯. ಕಪ್ಪೆ; ಮಂಡೂಕ. ೧೦. ಸಾರ : ತಿರುಳು. ೧೧. ಹಕ್ಕಿಯ ಪುಕ್ಕ. [ಸಂ.]

**ಮಂಡಕ$_1$** (ನಾ). ಗೋಧಿಯ ಹಿಟ್ಟಿನಿಂದ ಮಾಡುವ ಒಂದು ಬಗೆಯ ಭಕ್ಷ್ಯ; ಮಂಡಿಗೆ : ಹಾಲ್ಗಡಲ ನೊರೆಯ ಪೊರೆಯ ತೆರೆಯನನುಕರಿಸಿಯುಂ ಮಲ್ಲದಶನವಂಶಮಾತ್ರ ಖಂಡನೀಯಕರಂಗಳೆನಿಸಿದ ಮಂಡಕಂಗಳುಮಂ . . . ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೧೦-೨೪ ವ). [ಸಂ.]

**ಮಂಡಕ$_2$** (ನಾ). ಅಧೀನತೆಯನ್ನೂ ವಿನಯವನ್ನೂ ತೋರಿಸಲು ತಲೆಯನ್ನು ನೆಲಕ್ಕೆ ಮುಟ್ಟಿಸುವುದು ; P ಗುರುಹಿರಿಯರ ಮತ್ತು ರಾಜರ ಹಾಗೂ ದೇವರ ಮುಂದೆ ಮಂಡಿಯೂರಿ ಕಿವಿಗಳನ್ನು ಹಿಡಿದುಕೊಂಡು ತಲೆಯನ್ನು ನೆಲಕ್ಕೆ ಮುಟ್ಟಿಸುವ ಸಂಪ್ರದಾಯ: ಕಿವಿಗಳನ್ನು ಹಿಡಿಕೊಂಡು ನಾಲ್ಕೈರು ಬಾರಿ ಮಂಡಕವನ್ನಾಚರಿಸಿ ಮಣಿದು ಮುಖವನ್ನು ಮಣ್ಣಲ್ಲಿ ಹೊರಳಿಸಿ (ಬರುಗಂ. ೩೯-೮). [ ? ]

**ಮಂಡಕತ್ತಿ** ' ಮೊಂಡಗತ್ತಿ ' ನೋ.

**ಮಂಡಕುಸುಬಿ** (ನಾ). ಒಂದು ಬಗೆಯ ಸಸ್ಯ : "ಚಿಪ್ಪಲಿಬೆಂಡು, ಮಂಡಕುಸುಬಿ" (ಸಸ್ಯನಿ. ೦೩೦). [? + ಕುಸುಬಿ$_1$ (< ಕುಸುಂಬೆ)]

**ಮಂಡಕ್ಕಿ, ಮೊಂಡಕ್ಕಿ** (ನಾ). ಕುದಿಸಿದ ಬತ್ತವನ್ನು ಹುರಿದು ಮಾಡುವ ಅರಳು ; ಪುರಿ ; ಬುರುಗು ; ಚುರುಮುರಿ (ಉಕ) : ಮಗಳ ಉಡಿಯಾಗ ಹುರುಳ್ಡಿ ಮಡಲಾಗ ಮಂಡಕ್ಕಿ (ಲೋಕಗೀ. ೩೩); ಬದಿಯಲ್ಲಿಯೇ ಮಂಡಕ್ಕಿ ಹುರಿಗಡಲೆಯ ರಾಶಿಗಳು ಇದ್ದುವು (ಕಪತ. ೩-೨೩). **ಮೊಂಡಕ್ಕಿ:** ಮೊಂಡಕ್ಕಿ (ಚುರಮುರಿ) ಮುಂತಾದ ಹುರಿದ ಧಾನ್ಯವು ಸ್ತಂಭಕ (ಅಪ್ಪಾಂಗ. ೦೨೨ ವ-೩೭ ೭೯೬). [ಮಂಡ$_?$ + ಅಕ್ಕಿ$_1$]

**ಮಂಡಗನ ಗಡ್ಡೆ** (ನಾ). ಒಂದು ಬಗೆಯ ಸಸ್ಯ : ಕುರುಬನ ಗಡ್ಡೆ : (ಕ). [? + ಗಡ್ಡೆ]

**ಮಂಡಗಳ್ಳಿ** ' ಮಂಡಗಳ್ಳಿ ' ನೋ.

**ಮಂಡಗೆ, ಮಂಡಿಗೆ** (ನಾ). = ಮಂಡಕ$_1$ : ಲಾವಣಿಗೆ ಘೃತಪೂರಂ ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ . . . ಮಹಾದೇವಿ ಬಡ್ಡಿಸಿದೊಡೆ (ಪಂಪಾರಾ. ೭೮-೧೭); ಸೊಗಯಿಪ ಘೃತಪೂರಂ ಹೋಳಿಗೆ ಮಂಡಗೆ ತಳಿಗು . . . ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯ ಮನಾಗಳ್ ಆಜ್ಯಯುತಮಪ್ಪುವಂ ಮೆಲ್ದು (ಧರ್ಮಾಮೃ. ೦-೧೯೭); ಮೊದಲ ಹೂರಿಗೆಗೆ ಸಮೆದುಂಡೆಯೊಂದನೆ ತೆಗೆದು ಬಿದಿರ ನೇತ್ರದ ತೆಱದಿ ನೇಣಗಲಮಂ ಮಾಡಿ ಪದಪಿನಿಂ ಹಂಚಿನೊಳು ತುಪ್ಪವಂ ತಡೆ ಅಡಲು ಮಂಡಗೆಯೆನಿಸಿ ಕೊಂಡುದು (ಸೂಪಶಾ. ೧-೨೪). **ಮಂಡಿಗೆ:** ಹಾಲುಪುಗು ಹಾಲುಂಡೆ ಹಾಲ ಮಂಡಿಗೆಗಳನಟ್ಟು . . . ಸುಕರಚಿತ್ರಸಜ್ಜರಿತ್ರ ವೈಜಕವ್ವೆ ಮಾಡಿ ನೋಡಿ (ಪ್ರಸಿರ. ವ. ೨೩೩-೦) ; ಹಲ್ಲಿಗೆಯ ತತ್ಸವಿಯ ಮಂಡಿಗೆಯಲ್ಲಿ ಸವಘೃತಸೂಪನಂಶಕದಲ್ಲಿ ನೋಡಲಿ ನಮ್ಮನೆಂದುದು ಧೂರ್ಜಟಿಯುಸಿಕರ

(ಶಂಪ್ರಾ.ಕ. ೧೫-೬); ಮಡೆ ಮಂಡಿಗೆ ಕಜ್ಜಾಯಗಳ ತಂಡತಂಡದೆ ರಾಸಿಗೈದು ನೈವೇದ್ಯವ ಚಂಡಿಕಾಂಬಿಕೆಗರ್ಪಿಸಿದರು (ಕಂಸಂ. ೨೨-೨೬).

**ಮಂಡಗೆಯುರುಳಿ** = ಮಂಡಗೆಯನ್ನು ಸುರುಳಿ ಮಾಡಿ ಕತ್ತರಿಸಿ ಬೇರೆ ಬೇರೆ ಹಣ್ಣುಗಳ ರಸಗಳಲ್ಲಿ ಹಾಕಿ ತಯಾರಿಸುವ ಒಂದು ಬಗೆಯ ಸಿಹಿಭಕ್ಷ್ಯ: ಪಲಸಿವಮ್ಮಾವು ದ್ರಾಕ್ಷೆ ಖರ್ಜೂರವಣ್ಣ ರಸಂಗಳಂ ಬೇಱೆ³ ಬೇಱಿಕ್ಕಿಯಿಂವ ಸುರುಳಿ ಕುಯಿದಿಕ್ಕಲವು ತಾನದಱ ಹೆಸರ ಮುಂಡಗೆಯುರುಳಿ ಪೆಸರಾದುದು (ಸೂಶಾ. ೦-೩೯). **ಮಂಡಗೆಹೂರಿಗೆ**=ಮಂಡಗೆಯನ್ನು ಪುಡಿ ಮಾಡಿ ಅದರಿಂದ ತಯಾರಿಸುವ ಒಂದು ಬಗೆಯ ಹೂರಿಗೆ : ತುಪ್ಪ ಸಕ್ಕರೆ ಮಂಡಗೆಯು ಕಲಸಿಯೆಸೆವ ಹೂರಣವಿಕ್ಕಿ ಚೆನ್ನಾಗಿ ಪಾಕ ಮಾಡಿದುದು ಮಂಡಗೆಹೂರಿಗೆ (ಸೂಶಾ. ೦-೨೯).

[<ಸಂ. ಮಂಡಕ. /ತೆಲು. ಮಂಟಕ, ಮಂಡಗ, ಮಂಡಿಗೆ]

**ಮಂಡಗೆಱ³** (ನಾ). ಒಂದು ಊರಿನ ಹೆಸರು: ಮೂಡಣದೆಸೆಯ ವ[ರಾಹ] ಕೆಱ³ಯುಂ ಮೂಡಣ ಪಳ್ಳ ಅದಱ ತೆಙ್ಕಣ ದೆಸೆ [ಮಣ್ಣಗೆಱ³]ಗೊಟ್ಟಂ (ಶಾಸಂ. XI-i. ೯-೨೯; ೬೯೬). [ ? + ಕೆಱ³ ]

**ಮಂಡಗೊಳಲೆ** (ನಾ). ಒಂದು ಬಗೆಯ ಹಕ್ಕಿ : ಬಕ ಮಂಡಗೊಳಲೆ ಹೆಬ್ಬಕ್ಕಿ . . . ನಾಗರಪಕ್ಷಿಮುಖ್ಯಂಗಳ್ ಸುಖಮಿಪ್ಪವಾ ವನದೊಳು (ಬಸವಪು. ೦೦-೬೦). 'ಮರಗೊಳಲೆ' ಪಾಠ. [ ? ]

**ಮಂಡಣ₁** (ನಾ). = ಮಂಡನ ೧ : 'ಮಂಡಣಂಗೊಳಿಸು' ನೋಡಿ.

[< ಪ್ರಾ. ಮಂಡಣ./ಸಂ. ಮಂಡನ ]

**ಮಂಡಣ₂** (ನಾ). ಸುತ್ತು ; ಸುರುಳಿ : 'ಮಂಡಣಿಸು' ನೋಡಿ.

[< ಸಂ. ಮಂಡಲ]

**ಮಂಡಣಂಗೊಳಿಸು** (ಕ್ರಿ). (ಆಲಂ) ಕುಳಿತುಕೊಳ್ಳುವಂತೆ ಮಾಡು ; ಕುಳ್ಳಿರಿಸು : ಭೂಸುರವಿತಾನಮುಮಂ ಸಂತಸದಿ ಕರಸಿಯವರವರ ಯೋಗ್ಯಮನರಿತು ತಾಂ ತಮಗೆ ಮಂಡಣಂಗೊಳಿಸಿ (ಜೈಮಿನಿ. ೦೪-೫೩).

[ಮಂಡಣ₁ + ಕೊಳ್₁ + – ಇಸು₃]

**ಮಂಡಣಿಸು** (ಕ್ರಿ). ಸುತ್ತು ; ಸುರುಳಿಮಾಡು : ರಣವೊ ದಾನವಕುಲ ವಿಹಿತಮಾರಣವೊ ಪರಿಯೊ ಮಾರಿಯೊ ಮಂಡಣಿಸಿ ಕಳುಹಿದ ಕೃತ್ತಿಯೊ (ಐಶಾಗ. ೯-೦೭-೩೫). [ಮಂಡಣ₂ + – ಇಸು₃]

**ಮಂಡನ** (ನಾ). ೧. ಸಿಂಗರಿಸುವುದು: ಅಲಂಕರಿಸುವುದು : "ಆಕಲ್ಪಂ ಮಂಡನಂ . . . ಪ್ರಸಾಧನಂ– ಈ ೫ ಶೃಂಗಾರಂಗೆಯ್ವುದು" (ಹಲಾಯು. ೯೯-೩೯೫) : ಇತ್ತ ದೇವಿಯರುಂ ಮಜ್ಜನಮಂಡನಕ್ಷ್ವೇಳನಾದಿವಿಧಿಗಳಂ ಮಾಡಿ ವಯೋನುರೂಪದಿಂ ಕುಮಾರಂಗನುಷ್ಟಿಸುತ್ತಿರ್ಪನ್ನೆಗಂ (ಶಾಪುಂಪು. ೩೪). ೨. ಆಭರಣ ; ಭೂಷಣ ; ಅಲಂಕಾರ : ಸೌಮ್ಯಸಂವತ್ಸರದೊಳ್ ಕರ್ಕಟಕರಾಶಿಯೊಳ್ ಸೌಮ್ಯಮುಮಿಂ ಗುರುವತ್ಸಳನುದಯಿಸಿದಂ ಸರಸ್ವತೀರತ್ನಮಂಡನಂ ಕವಿರತ್ನಂ (ಅಜಿಪು. ೦೨-೪೯); ಎಳೆಮಾವಿಂ ಬನವಬ್ಬದಿಂ ತಿಳಿಗೊಳಂ ಮಾಣಿಕ್ಯದಿಂ ಮಣ್ಣನಾವಳಿ ತಾರಾಧಿಪದಿಂ ಸಭಂ ಶುಭದಮಾಗಿರ್ಪ್ಪಂತಿರೆ (ಎಕ. II, ೬೪-೫೯; 1163). ೩. (ಶಾಸನ ಸಭೆ, ಚರ್ಚಾಕೂಟ ಮೊದಲಾದ ಕಡೆ ಆಗುವ ಗೊತ್ತುವಳಿಯ) ಪ್ರತಿಪಾದನೆ; ಸಮರ್ಥನೆ : ತದನಂತರ ಅವತರಿಸಿದ ಆಚಾರ್ಯದ್ವಯರೂ ಪ್ರಸ್ಥಾನತ್ರಯಕ್ಕೆ ಭಾಷ್ಯ ಬರೆದು ಪರಮತಖಂಡನೆ ಮತ್ತು ಸ್ವಮತಮಂಡನಕಾರ್ಯೋದ್ಯುಕ್ತರಾದರು (ಶಾರದ. ೦೦೯) ; ಹೊಸ ಸಿದ್ಧಾಂತದ ಮಂಡನ ಮತ್ತು ಆಕ್ಷೇಪಗಳ ಖಂಡನ (ರ್ಯಾಪ್ಸೋ. xxii, ೬೯೦೪). [ಸಂ.]

**ಮಂಡನಾಯೋಗ** (ನಾ). (ಆನೆಯ ಮೇಲೆ) ಅಲಂಕಾರಕ್ಕಾಗಿ ಹೊದಿಸುವ ಜೂಲು,– ಸಬರ : ಮುತ್ತಿನ ಮಾಣಿಕದ ಮಂಡನಾಯೋಗಂಗಳೊಳ್ ನೆಱೆಯೆ ಪಣ್ಣಿದ ಮದಾಂಧಗಂಧಸಿಂಧೂರಂಗಳನೇಱ³ (ಶಾಂತಿಪು. ೬-೪೯ ವ) : ರತ್ನಮಂಡನಾಯೋಗಪರಿಗೃಹೀತಸುರೇಂದ್ರಕರೀಂದ್ರಪೃಷ್ಠಗತನಪ್ಪಮರೇಂದ್ರನನೆ ಪೋಲ್ತುಂ ಸೌಜನ್ಯಕಂದಾಂಕುರನಿರ್ಪುದುಂ (ಶಾಂತಿಪು. ೩-೯೪ ವ). [ಸಂ.]

**ಮಂಡನೆ** (ನಾ). ಪ್ರತಿಪಾದನೆ; ಸಮರ್ಥನೆ : ಈ ಅವಧಿಯಲ್ಲಿ ಅಲ್ಲಲ್ಲಿ ಅಭಿಪ್ರಾಯಗಳ ಚಕಮಕಿಯೂ ಮಂಡನೆ – ಖಂಡನೆಗಳೂ ಆದುವು (ದ್ರಾಶಿಶಿ. ೦೭ ಹಿನ್ನೆಲೆ). [ಸಂ. ಮಂಡನ]

**ಮಂಡಪ** (ನಾ). ೧. = ಮಂಟಪ ೧. ೨. = ಮಂಟಪ ೨ : ಜಿನಮಂದಿರದ ಮುಂದಣ ಮಂಡಪದೊಳ್ ನಿಂದಿರ್ಪುದುಂ (ಶಾಂತಿಪು. ೯-೯೭ ವ) ; ಇವೇ ಶಿಲ್ಪದಲ್ಲಿ 'ವಿಮಾನ', 'ಪ್ರಾಸಾದ', 'ಮಂಡಪ' ಗಳ ಮಾದರಿಗಳಾಗಿ ಭಾರತೀಯ ದೇವಾಲಯಶಿಲ್ಪಕ್ಕೆ ಮೂಲವಾದುವು (ಕರ್ನಾಟಕ. ೧೨೦). ೩. = ಮಂಟಪ ೩ : "ಜನಾಶ್ರಯಃ, ಮಂಡಪಃ– ಈ ೨ ಸಭಾಮಂಟಪಂ" (ಹಲಾಯು. ೩೦-೧೪೩); ಆರೋಗಿಸುವ ಮನೆ ಮಂಡಪಂ ಗುಣನೆಸಾಲೆಯೆಂಬಿನಿತುಮಂ ಗೃಹಾಂಗಂ ಕುಡುಗುಂ (ಶಾಂತಿಪು. ೬-೦೨೬); ಮಂಡಪದುಪರಿಮತಲದೊಳ್ಕಂಡರಿಸಿದ ಚಿತ್ರಮಂಡಲಂ . . . ಸೊಗಯಿಸುಗುಂ (ಕಾದಂಪು. ೦೦೧೫). ೪. = ಮಂಟಪ ೫ : ಪಳುಕಿನೆಸೆವಾ ಕಳಸಮಂಡಪದೊಳಗೆ ಚೆಂದಳಿರಿಂದ ಕರಮಂಗಳಮೆಯುಕ್ತತೆಯಿಂದ ಮಾದಲವಣ್ಗಳಿಂ . . . ಕಾಂಚನವಿಲಸಿತದ ಮಾಲೆಗಳನೆಸೆವುದನೀಕ್ಷಿಸಿದ ಸರಸ (ಸಾಳ್ವಭಾ. ೪-೩೪); ಮುಂದೆ ಮಗುವಿಗೆ ಎಂಟು ವರ್ಷಗಳು ಕಳೆದ ಮೇಲೆ ಕ್ರಮವಾಗಿ ಕುಂಡ, ಮಂಡಪ, ಪಂಚಕಲಶಗಳನ್ನು ಸ್ಥಾಪಿಸಿ . . . ಸಂಸ್ಕೃತವಾದ ಅಂಗದಲ್ಲಿ ಶಿವಕಲಾಸಮಾವಿಷ್ಟವಾದ ಲಿಂಗವನ್ನು ಮಂತ್ರೋಪದೇಶಪೂರ್ವಕವಾಗಿ ನೆಲೆಗೊಳಿಸುವನು (ಭಾರದ. ೨೪೯). [ಸಂ.]

**ಮಂಡಯ್ಸು** 'ಮಂಡಿಸು₂' ನೋ.

**ಮಂಡರಗಪ್ಪೆ** (ನಾ). ಒಂದು ಬಗೆಯ ದೊಡ್ಡ ಚೇಳು : ಎಮ್ಮೆಚೇಳು : ಮಂಡರಗಪ್ಪೆಯೊಂದು ಕಳಕ್ಕ ಬಿದ್ದು ಕೊಂಡಿಯನ್ನು ಮೇಲಕ್ಕೆತ್ತಿ ನೆಲದ ಮೇಲೆ ಚಲಿಸಿತು (ಹಸುಹೂ. ೧೯೫). [ದೇ.॥ ತೆಲು. ಮಂಡ್ರಗಬ್ಬ]

**ಮಂಡರಳು**, **ಮೊಂಡರಳು** (ನಾ). ಅವಲಕ್ಕಿ : ಈ ಮನೆತನದ ಹುಡುಗ ಜೋಲಿಯ ಕಟ್ಟಿಕೊಂಡು ಬೆಲ್ಲ ಮಂಡರಳು ತಿನ್ನುವದೆಂದರೇನು ? (ಇಶ್ವ. ೩೭೫). **ಮೊಂಡರಳು** : ಮೊಂಡರಳು ಬೆಲ್ಲದಿಂದಲೇ ಅವನ ಉಪಹಾರ ಮುಗಿಯುವಂತೆ ಏರ್ಪಡಿಸಿದಳು (ಇಶ್ವ. ೩೬೫).

[ ಮಂಡ? + ಅರಳು₃ (< ಅರಳ್₃) ]

**ಮಂಡರಿಸಿನ** (ನಾ). ಉತ್ತಮವಾದ ಅರಿಸಿನ : ಒಳ್ಳೆಯ ಅರಿಸಿನ (ಮಂಡರಿಸಿನ) ಮತ್ತು ಚಿಕ್ಕಣಅಡಿಕೆಗಳ ಸಮಚೂರ್ಣವನ್ನು ಜೇನುತುಪ್ಪದೊಡನೆ ಗದ್ಯಾಣ ೧ ತೂಕ ಕೊಡಲು ವಾಂತಿಭ್ರಾಂತಿ ಗುಣವಾಗುವುದು (ಸಕಪ್ಪ. ಪು ೪೯೦). [ ಮಂಡ₁ (< ಮಂಡಿ₁) + ಅರಿಸಿನ ]

**ಮಂಡಲ**, **ಮಂಡಳ** (ನಾ). ೧. ವರ್ತುಲಾಕಾರವಾಗಿರುವ ಸೂರ್ಯ ಅಥವಾ ಚಂದ್ರಬಿಂಬ: "ಮಂಡಲಂ, ಬಿಂಬಂ–ಈ ಎರಡು ಚಂದ್ರಮಂಡಲದ ಪೆಸರ್" (ಹಲಾಯು. ೬-೪೪); ಬೆಟ್ಟ ತಲೆಯಲಿ ಕಂಡು ಹೊಳೆವ ಚಂದ್ರನನು ದಿಟ್ಟಿಸಿ . . . ತಟ್ಟನೆ ನುಡಿದೆ "ಅಲ್ಲಿ ನಾ ಹೋಗಲೇನು ? ಬಟ್ಟಲಂತಿಹ ಮಂಡಲವಲಿರುವುದೇನು ? " (ಕಂಪು. ೦೦-೪). ೨. ಸೂರ್ಯ ಅಥವಾ ಚಂದ್ರನ ಸುತ್ತಲೂ ದುಂಡಾಗಿರುವ ಪ್ರಭಾವಲಯ, – ವರ್ತುಲ ರೇಖೆ ; ಪರಿವೇಷ : "ಪರಿಧಿಃ, ಪರಿವೇಷಃ(ಸ್ಯಾತ್), ಮಂಡಲಂ, ಉಪಸೂರ್ಯಕಂ — ಈ ೪ ಪರಿವೇಷದ ಪೆಸರ್" (ಹಲಾಯು. ೬-೪೦). ೩. (ಚೆಂಡು, ಚಕ್ರ ಮೊದಲಾದುವುಗಳಂತೆ) ಯಾವುದೇ ದುಂಡಾಗಿರುವ ವಸ್ತು, ಆಕೃತಿ ಇತ್ಯಾದಿ : "ಚಕ್ರವಾಳ, ಮಂಡಲ ಶಬ್ದಗಳು ೨ ಮಂಡಲಾಕಾರವಾದ ಪದಾರ್ಥದ ಹೆಸರುಗಳು" (ಗುರುಶಾ ೩೫). ೪. ಸುತ್ತು ; ಇರಿಕೆ ; ಸುರುಳಿ : 'ಮಂಡಲಂಗೊಳ್ಳು' ನೋ.

೫. ವೃತ್ತ; ಬಟ್ಟು: "ಬಟ್ಟೆಂದು ಮಂಡಲಂ" (ಶಬ್ದಮ. ೪೩-೨೪); "ಬಟ್ಟೆಂದು ಮಂಡಲಾಖ್ಯಂ" (ಶಬ್ದಮ. ೦೭). ೬. ವರ್ತುಲಾಕಾರವಾಗಿ ನಿಲ್ಲಿಸುವ ಒಂದು ಬಗೆಯ ಸೇನಾವ್ಯೂಹ. ೭. ನಾಯಿ: ಶುನಕ. ೮. ಒಂದು ಬಗೆಯ ಹಾವು: ಮಂಡಲ ಕಚ್ಚಿದೊಡೌಷಧಗೊಂಡಾಕ್ಷಣಮುಟಿಗುಮಲ್ಲದಂತವನಟಗುಂ (ಶೀತಾ. ೭೨೭); ದರ್ವೀಕರ ಮಂಡಲ ರಾಜಿಗಳೆಂಬ . . . ವಿಷಗಳಲ್ಲಿ ಸಳಿಯ ಸಟ್ಟುಗದ ಬೇರ ನೀರಲ್ಲಿ ಅರೆದು ಕುಡಿಯಲು ವಿಷ ಹರ (ವಿಷತ. ೦೦-೪). ೯. (ಸಾಧಾರಣವಾಗಿ ಮಾಂತ್ರಿಕನಿಂದ ಬರೆಯಲಾದ ಗೂಢಮಂತ್ರಪೂರಿತವಾದ, ವೃತ್ತಾಕಾರವಾದ) ರೇಖಾವಿನ್ಯಾಸ: ಪತಿಲಿಖಿತಮಂಡಲಸ್ಥಿತೆ ಕೃತಾಷ್ಟದಿಗ್ದೇವತಾರ್ಚನಪ್ರಕರೆ ದೃಢವ್ರತೆ . . . ಚತುಷ್ಪಥಸ್ನಾನವಿಧಿಯನಿರುಳೊಳ್ ತಳೆವಳ್ (ಕಾದಂಪೂ. ೩೭೭). ೧೦. ಗುಂಪು; ಸಮೂಹ: ಅಗಳವರ ಮುಸಕಮಂ ಕಂಡು ಭಯಂಗೊಂಡು ಖಚರಮಂಡಲಂ ಪ್ರಭಾಮಂಡಲಂಗೆ ಕನ್ನೆ ಕೈಸಾರ್ದಳೆಂದು ಪೆಜಸಾರ್ದು ನೋಡುತಿರ್ಪುದುಂ (ಶಂಠಾಪಿ. ೫-೭೫ ವ). 'ಮಂಡಲಿಸು' ಪರಾ. ೧೧. ನಾಡು; ರಾಷ್ಟ್ರ; ದೇಶ: ತಜಸಂದು ಲಾಳರೊಳ್ ತ[ಳ್ತ]ಜದೇಜು ಪೇಟ್ ಕೇಳ್ದು ಮಂಡಲಮಿನ್ನುಂ ತಿಜುನೀರಿಕ್ಕುವುದೆನಿಸಿದ ತಜಸಲವಿನ ಚಲದ ಬಲದ ಕಲಿ ನರಸಿಂಹಂ (ಶಂಕಶಾ. ೦-೩೩); ಪುರುಷೋತ್ತಮಂ ಕ್ಷಣಿಕರಿವರ್ಗ್ಯ ವರಂ ಕೂಡಿಕೊಂಡು ಬಂದನೀ ಮಂಡಲದೊಳಿರವಿಲ್ಲ ತನಗಿನ್ನು (ಕೈವಿಭಾ. ೩೨-೨೭); ಕೊಂಡೆಯುವ ಕೇಳುವರಸಿನ ಮಂಡಲ ಹಾಬಕ್ಕು (ಶೀತಾ. ೭೨೪). ೧೨. ಒಂದು ದೇಶದ ವಿಭಾಗ: ಜಿಲ್ಲೆ; ಪ್ರಾಂತ್ಯ: ಭೌಗೋಳಿಕ ಯಾ ರಾಜಕೀಯ ವಿಭಾಗಗಳು:- ಊರು, ಪುರ . . . ಮಂಡಲ, ಕುದುರು (ತುಳುಶಾ. ೨೭೦); ರಾಜ್ಯವನ್ನು ಹಲವು ಮಂಡಲಗಳಾಗಿ ವಿಭಾಗಿಸಿ, ಅವುಗಳ ಆಡಳಿತಕ್ಕಾಗಿ ಮಂಡಲೇಶ್ವರನನ್ನು ನೇಮಿಸಿದ್ದನು (ಕರ್ನಾ. ೭-೫೦). ೧೩. ಬಿಲ್ಲುಗಾರನ ಒಂದು ಭಂಗಿ; P ಬಾಣಪ್ರಯೋಗಕಾಲದಲ್ಲಿ ಮೂರಡಿಯ ಅಗಲದಲ್ಲಿ ಕಾಲುಗಳನ್ನು ಇಟ್ಟುಕೊಳ್ಳುವುದು. ೧೪. ಮಲ್ಲಯುದ್ಧ, ಗದಾಯುದ್ಧ ಮೊದಲಾದ ದ್ವಂದ್ವಯುದ್ಧಗಳ ಒಂದು ಗತಿ: ಭೀಮನು ಅದನ್ನು ಅರ್ಥಮಾಡಿಕೊಂಡು, ಮಂಡಲಗಳು ಯಮಕಗಳು ಗೋಮೂತ್ರಿಕ ಮೊದಲಾದ ಚಿತ್ರವಿಚಿತ್ರವಾದ ಗತಿಗಳಲ್ಲಿ ಓಡಾಡುತ್ತ, ಎದುರಾಳಿಯನ್ನು ಬುದ್ಧಿಭ್ರಮೆಗೊಳಿಸುವುದಕ್ಕೆ ಪ್ರಯತ್ನಪಟ್ಟನು (ವತಶಾ. ೩೦೭). ೧೫. ವ್ರತಾಚರಣೆ, ಔಷಧಸೇವನೆ ಮೊದಲಾದ ಸಂದರ್ಭಗಳಲ್ಲಿ ಅನುಸರಿಸುವ ಕಾಲದ ಒಂದು ಗಡು; ನಲವತ್ತೆಂಟುದಿನಗಳ ಅವಧಿ: ಈ ರಸಮಂ ಒಂದು ಮಂಡಲ ಕೊಂಬುದು (ವಿಪ್ನವಿ. ೫೫); ಆದಿವಾರದ ದಿವಸ ನೆಲತಂಗನ್ನು ತಂದು . . . ಚೂರ್ಣಂಗೈದು ಜೇನು ತುಪ್ಪದಲ್ಲಿ ಲೇಹ್ಯದ ಹಾಗೆ ಕಲಸಿ ಕಾಲುಮಂಡಲ ತೆಗೆದುಕೊಳ್ಳಲು ಸಕಲ ಜ್ವರ ಹರವು (ಸಕವೈ. ೦೦೩); ಒಂದು ಮಂಡಲಕಾಲ ಚಂಡೀಯಾಗವು ನಿರ್ವಿಘ್ನವಾಗಿ ನೆರವೇರಿತು (ಶ್ರೀರಾಮ. ೩೭೦). ೧೬. ಋಗ್ವೇದದ ಒಂದು ಭಾಗ; ಸಂಹಿತಾಭಾಗ: ಸಂಹಿತೆಗಳಲ್ಲಿ ಮೊದಲನೆಯದು ಋಕ್ಸಂಹಿತೆ. ಅದರಲ್ಲಿ ೧೦೨೮ ಸ್ತೋತ್ರಗಳುಂಟು. ಅವುಗಳನ್ನು ೧೦ ಮಂಡಲಗಳಾಗಿಯೂ . . . ಅಧ್ಯಯನ ಮಾಡುತ್ತಾರೆ (ಭಾಇಶ್ರ. ೨೯); ಈ ಅಗಾಧವಾದ ಸಂಹಿತೆಯ ಸೂಕ್ತಗಳನ್ನು ಹತ್ತುಮಂಡಲಗಳಾಗಿ ವಿಭಾಗ ಮಾಡಿದ್ದಾರೆ (ಭಾರಶ. ೨೦). ೧೭. ಅಥರ್ವಣವೇದದ ಒಂದು ಭಾಗ: ಇತಿಹಾಸ ಮತ್ತು ಪುರಾಣಗಳ ಸಾಹಿತ್ಯ ಅಥರ್ವವೇದದ ಹದಿನೈದನೆಯ ಮಂಡಲ ಮತ್ತು ಛಾಂದೋಗ್ಯೋಪನಿಷತ್ತಿನ ಏಳನೆಯ ಅಧ್ಯಾಯಗಳಲ್ಲಿ ಕಾಣುಬರುತ್ತದೆ (ಭಾರಶ. ೦೩೪). ೧೮. ದುಂಡಾದ ಮಚ್ಚೆಗಳುಂಟಾಗುವ ಒಂದು ಬಗೆಯ ಕುಷ್ಠರೋಗ. ೧೯. [ರಾಜನೀ] ಪನ್ನೆರಡು ಬಗೆಯ ರಾಜರ ಕೂಟ,— ಗುಂಪು; P ದಿಗ್ವಿಜಯಕ್ಕೆ ಹೊರಡುವ ರಾಜನು ಇವರನ್ನು ಮುಖ್ಯವಾಗಿ ಪರಿಗಣಿಸಬೇಕು. ೧. ಶತ್ರು. ೨. ಮಿತ್ರ. ೩. ಶತ್ರುವಿನ ಮಿತ್ರ. ೪. ಮಿತ್ರನ ಮಿತ್ರ. ೫. ಶತ್ರುವಿನ ಮಿತ್ರನ ಮಿತ್ರ. ೬. ವಿಜಿಗೀಷು. ೭. ಪಾರ್ಷ್ಣಿಗ್ರಾಹ. ೮. ಆಕ್ರಂದ. ೯. ಪಾರ್ಷ್ಣಿಗ್ರಾಹಾಸಾರ. ೧೦. ಆಕ್ರಂದಾಸಾರ. ೧೧. ಭೂಮ್ಯನಂತರ. ೧೨. ಉದಾಸೀನ. ೨೦. [ನಾಟ್ಯ] ಒಂದು ಬಗೆಯ ಪಾದಚಲನೆ: ಮೂರುಕರಣಗಳ ಜೋಡಣೆಗೆ 'ಖಂಡ' ವೆಂದು ಹೆಸರು. ಮೂರು ಅಥವಾ ನಾಲ್ಕುಖಂಡಗಳನ್ನು ಜೋಡಿಸಿದರೆ ಒಂದು ಮಂಡಲವಾಗುತ್ತದೆ (ಅಶಾಸ್ತ್ರ. ೫೦); ಆ ನರ್ತಕಿಯರಿಗೆ ನಾಟ್ಯಭೇದಗಳಾದ . . . ಮಂಡಲ, ಕರಕ್ಷೇತ್ರ ಎಂಬುವೆಲ್ಲ ಚೆನ್ನಾಗಿ ಗೊತ್ತಿದ್ದುವು (ಕರ್ನಾ. ೦೭೪). ೨೧. ವೈಷ್ಣವ, ಸಮಪಾದ, ವೈಶಾಖ, ಮಂಡಲ, ಪ್ರತ್ಯಾಲೀಢ ಮತ್ತು ಆಲೀಢವೆಂಬ ಆರುಬಗೆಯ ಪುರುಷಸ್ಥಾನಕಗಳಲ್ಲಿ ಒಂದು; P "ಇದಕ್ಕೆ ದೇವೇಂದ್ರನು ಅಧಿದೇವತೆ. ಗಜವಾಹನ, ಧನುಸ್ಸು ಮತ್ತು ವಜ್ರಾಯುಧ ಇವುಗಳ ಪ್ರಯೋಗ, ಗರುಡ ಮೊದಲಾದ ಪಕ್ಷಿಗಳ ನೋಟ ಇವುಗಳನ್ನು ತೋರಿಸುವಾಗ ಇದನ್ನು ವಿನಿಯೋಗಿಸಬೇಕು" (ಅಸ್ತರಂ. ೩೨೭ ಗದ್ಯಾನುವಾದ): ಎರಡುಂ ಪಾದಂ ತ್ರ್ಯಸ್ರದಿನಿರೆ ನಡು ಗೇಣೆಡೆಯನುಳಿದು ಕಟಿ ಮೊಳಕಾಲ್ಗಳ್ ಸರಿಯಾಗುತೆರಡುಗೇಣರೆ ಧರೆಯಂ ಬಟ್ಟೊಡನೆ ನಿಲ್ಲೆ ಮಂಡಲಮೆನಿಸುಂ (ಅಸ್ತರಂ. ೭-೨೦). 'ಮಂಡಲಾಗ್ರ' ಹೋ. ೨೨. [ಕಾಮಶಾ] ಒಂದು ಬಗೆಯ ನಖಕ್ಷತ; P ಮೇಲೆ ಅರ್ಧಚಂದ್ರ ಮತ್ತು ಕೆಳಗೆ ಅರ್ಧಚಂದ್ರನಂತೆ ಕಾಣುವ ಪರಸ್ಪರ ಅಭಿಮುಖವಾಗುವ ಉಗುರಿನ ಗುರುತು: ಪಂಚನಖಯೋಗ ದ್ವಂದ್ವಯೋಗ ಅರ್ಧಚಂದ್ರಕ ಮಂಡಲ ಮಯೂರಪಥ ಶಶಪ್ಲುತ ಉತ್ಪಲದೆಂಬ ಸಪ್ತವಿಧ ವಿರೋಪಹತಿವಿಹಿತರಿಂ (ವಿವೇಕ. ೦೩೪). ೨೩. [ಜೈನ] ಪಾರಿವ್ರಜ್ಯಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು: ಮಂಡಲಮೆಂಬುದು ಪರಮತೇಜೋಮಂಡಲಮಂಡಿತನಪ್ಪ ಜಿನಪತಿಗೆಱಗಿ ಮಣಿದೀಪ ಸ್ನೇಹದೀಪಮೆಂಬೆರಡುಮಂ ಪತ್ತುವಿಟ್ಟು ತಪದೊಳಿಸಗಿದೊಡೆ ದಿವ್ಯಾದಿ ತೇಜೋವಳಯೋಜ್ವಳನಕ್ಕುಂ (ಚಾಪುಂಪು. ೨೨೯). ೨೪. [ಯೋಗ] ಮೂಲಾಧಾರದಿಂದ ಹಿಡಿದು ಶಿರಸ್ಸಿನವರೆಗೆ ಇರುವ ಆರು ಸ್ಥಳಗಳು: ಮೂಲಾಧಾರ ಮೊದಲು ಮೇಲೆ ಹೇಳಿದ ಆರು ಪದ್ಮಗಳಲ್ಲೂ ಮಧ್ಯಪ್ರದೇಶಗಳಲ್ಲಿ ೬ ಮಂಡಲಗಳು ಇರುವುವು. ತ್ರಿಕೋಣಮಂಡಲ, ಷಟ್ಕೋಣಮಂಡಲ, ದ್ವಾದಶಕೋಣ, ವರ್ತುಳಮಂಡಲ, ತ್ರಿಕೋಣ, ವರ್ತುಳವೆಂಬ ಆರು ಮಂಡಲಗಳು ಇರುವುವು (ಹಠಾರ. ೯-೪ ತಾತ್ಪರ್ಯ). ಮಂಡಳ: ೧೦. "ನಿಕರಃ, ನಿಕಾಯಃ . . . ಮಂಡಳಂ, ಜಾಳಂ . . . ಸ್ತೋಮಃ — ಈ ೩೯ ಸಮೂಹಂ" (ಹಲಾಯು. ೦೦೫-೨); ಎರೆಗೊಳ್ವುದಖಿಳವಿದ್ವದ್ವಿದ್ರತಾಚಿಶಿತಮಂ ದ್ವಿಷದ್ರಾಜಮನೋಹರವಣ್ಣಳಮುಮನವನೀವರನಾಗತಿಯರಸನತುಳಬಳ ಭುಜಭುಜಂಗಂ (ಎಕ. XI, ದಾವಣ. ೩೨-೩೭; 1171). ೧೨. ದೆಕ್ಕನ್ನಿನ ಕೆಲವು ಪ್ರಾಂತ್ಯಗಳಲ್ಲಿ 'ರಾಷ್ಟ್ರ'ವು ಒಳಗೊಂಡ ಭಾಗವನ್ನು 'ಮಂಡಳ' ಎಂದು ಕರೆಯುತ್ತಿದ್ದರು (ದಶಾಇ. ೦೦೭). ೨೦. ಮಂಡಳಮುಂ ನೆರೆದಳ್ಮಬಿಮಂಡಳ ಮಮೃತಾಂಶುಮಂಡಳಕ್ಕೆಣೆವರೆ ಭೂಮಂಡಳದಿಂ ನೆಗೆದು ನಭೋಮಂಡಳದೊಳ್ಳೆಂದು ನೀಜ್ ಮೇಣ್ದಾಶವಿಧಮಂ (ರಾಶಕೀ. ೦೨-೪೪).

**ಮಂಡಲದ ಹಾವು** = ಮೈಮೇಲೆ ದುಂಡಾದ ಮಚ್ಚೆಗಳಿರುವ ಒಂದು ಜಾತಿಯ ಹಾವು: "ಚಿತ್ರ(ಕಃ)ತಃ—ಚಿತ್ರಮೂಲ, ಮಂಡಲದ ಹಾವು" (೬ಕಧಿ. ೫೭); ಮಂಡಲದ ಹಾವಿನ ಪ್ರಧಾನಆಹಾರ ಇಲಿ, ಓತಿ, ಹಲ್ಲಿ, ಏಡಿ, ಕೆಲವು ತೆರನ ಕೀಟಗಳು (ಕವಿಕೋ. XII, ೯೭೩). **ಮಂಡಲ ಹಾಕಿ**

ಕೊಳ್ಳು = ಸುರುಳಿ ಸುತ್ತಿಕೊಳ್ಳು : ಜನರ ಗಲಾಟೆಗೆ ಹೆದರಿದ ಹಾವು ಮಂಡಲಹಾಕಿಕೊಂಡು ಹೆಡೆಯನ್ನು ಮುಚ್ಚಿಕೊಂಡಿತು (ಬೂಪ). ಮಂಡಲ ಹಾಕಿಸು = (ವಿಶೇಷವಾಗಿ ನಾಗದೇವತೆಯ ಪ್ರೀತ್ಯರ್ಥವಾಗಿ) ನಲವತ್ತೆಂಟುದಿನಗಳ ಸೇವೆಯನ್ನು ಮಾಡಿಸು : "ಪೂಜಾರಿಯ ಬಳಿ ಹೋಗಿ ಹಣ್ಣು ಹಂಪಲು ಹಣ ಕೊಟ್ಟು ಮಂಡಲ ಹಾಕಿಸಬೇಕು". "ಮಂಡಲ ಅಂದರೆ ?" "ಬಣ್ಣಬಣ್ಣಗಳಲ್ಲಿ ಹಾವಿನ ಆಕೃತಿಯನ್ನು ರಂಗೋಲೆಯಲ್ಲಿ ಎಳೆದು ಪೂಜೆ ಮಾಡಬೇಕು" (ಹಸುಹೂ. ೬೯). ಮಂಡಲ ಹಾಕು = ಮಾಟ, ಮಂತ್ರ, ತಂತ್ರ ಮುಂತಾದ ತಾಂತ್ರಿಕವಿಧಿಗಳನ್ನು ಆಚರಿಸುವ ಸಂದರ್ಭಗಳಲ್ಲಿ ಚಕ್ರಾಕಾರವಾದ ಆಕೃತಿಯನ್ನು ಬರೆ : ಮಾಂತ್ರಿಕನು ಮಂಡಲಹಾಕಿ ಪೂಜೆಗಾರಂಭಿಸಿದನು (ರೂಪ). [ಸಂ.]

**ಮಂಡಲಂಗೊಳ್ಳು** (ಕ್ರಿ). ಸುರುಳಿಸುತ್ತಿಕೊಳ್ಳು ; ಸುತ್ತುಹಾಕು : ಪೆರ್ಬಾವಿನಂತೆ ಮಂಡಲಂಗೊಳ್ಳುತ್ತುಂ . . . ಲತೆಯಂತಲ್ಲಾಡುತ್ತುಂ ಕಣ್ಗೊಳಿ ಬೆಳಗಾಗೆ (ವರ್ಧಮಾ. ೦-೦೬೦).

[ ಮಂಡಲ + ಕೊಳ್ಳು₁ (< ಕೊಳ್₁) ]

**ಮಂಡಲಕ** (ನಾ). ೧. ಮೈಮೇಲೆ ದುಂಡುದುಂಡಾದ ಮಚ್ಚೆಗಳುಂಟಾಗುವ ಒಂದು ಬಗೆಯ ಕುಷ್ಠರೋಗ : "ಕೋಠಃ, ಮಂಡಲಕಂ – ೨ ಮಂಡಲಾಕಾರವಾದ ಕುಷ್ಠಕ್ಕೆ ಹೆಸರು; ಕೊಳೆಮಚ್ಚೆ ಹುಣ್ಣು" (ಸಿದ್ಧಾಂಶಿ. ೦೮೪). ೨. ಯುದ್ಧದಲ್ಲಿ ಸೈನ್ಯವನ್ನು ಮಂಡಲಾಕಾರವಾಗಿ ನಿಲ್ಲಿಸುವ ಒಂದು ಬಗೆಯ ಸೈನ್ಯರಚನೆ. ೩. ಸೂರ್ಯ ಅಥವಾ ಚಂದ್ರಬಿಂಬ. ೪. ವಲಯ ; ಗೋಳ. ೫. ಕನ್ನಡಿ ; ದರ್ಪಣ. ೬. ದೇಶ; ರಾಷ್ಟ್ರ. ೭. ನಾಯಿ. ೮. [ಕಾಮಶಾ] ಒಂದು ಬಗೆಯ ನಖಕ್ಷತ ; ಮಂಡಲ : ಕವಪು . . . ಎದೆಯೊಳಿಪ್ಪೆಡೆಗಳಂ ಸೊಗಸುವಂತೆ ಪದೆದುಗುರ ಮೊನೆಗಳಿಂ ಕಮಂಕಿಸುವಜೀವಿರೊಳಜೀಬಿಸು ಗಳೆರಡಿರಲದೇ ಮಂಡಲಕವು (ಜಪಜ. ೬-೩೯). [ಸಂ.]

**ಮಂಡಲಗತಿ** (ನಾ). ೧. ಯುದ್ಧ ಕತ್ತಿವರಸೆ ಮೊದಲಾದ ಸಂದರ್ಭಗಳಲ್ಲಿ ಮಾಡುವ ಚಕ್ರಾಕಾರವಾದ ಚಲನೆ. ೨. [ನಾಟ್ಯ] ಹದಿನಾರು ಬಗೆಯ ಬಾಹುಚಲನ ಭೇದಗಳಲ್ಲಿ ಒಂದು: P "ಎಲ್ಲ ಕಡೆಗಳಲ್ಲೂ ತೋಳುಗಳನ್ನು ಸುತ್ತಿಸುವುದು.—ಕತ್ತಿವರಸೆಯನ್ನು ಅಭಿನಯಿಸುವಾಗ" (ಲಾಸ್ಯರಂ. ೨೬೦ ಗದ್ಯಾನುವಾದ) : ಮಂಡಲಗತಿ—ಎಲ್ಲಾ ಕಡೆಯಂ ತೋಳ್ಗಳ್ ನಿಲ್ಲದೆ ಸುತ್ತಲ್ಕೆ ತಾನೆ ಮಂಡಲಗಮನಂ (ಲಾಸ್ಯರಂ. ೨-೦೨೬). [ಸಂ.]

**ಮಂಡಲನೃತ್ಯ** (ನಾ). (ಕೃಷ್ಣ ಮತ್ತು ರಾಧೆಯ ಸುತ್ತಲೂ ಗೋಪಿಯರು ನರ್ತಿಸಿದಂತೆ) ಚಕ್ರಾಕಾರವಾಗಿ ಚಲಿಸಿ ಮಾಡುವ ನೃತ್ಯ : ಗೊಂದಳದ ನೃತ್ಯವು ಮಂಡಲನೃತ್ಯ . . . ಎಂದು ಪ್ರತ್ಯಕ್ಷವಿದೆ . . . ಅದರಲ್ಲಿ ಗೊಂದಳಿಗರು ಹಾಡುತ್ತ ಕುಣಿಯುತ್ತ ನಡುವೆ ಇಟ್ಟ ದೀಪವನ್ನು ಸುತ್ತಿಸುತ್ತಿ ಬರುತ್ತಾರೆ (ಹಮ್ಮಿರ. ೬ ಮುನ್ನುಡಿ). [ಸಂ.]

**ಮಂಡಲವರ್ಷ** (ನಾ). ದೀರ್ಘಕಾಲ ನಿಲ್ಲದೆ ಸುರಿಯುವ ಮಳೆ : ಮಂಡಲವರ್ಷಮಾಗಿ(ರೆ) ಕೊಂಡು ಮಂಜಾಗಿ ಕೊಂಡೊಡಂ ತುಂತುರ್ವನಿ(ಯೊಳ್)ಯಾಗಿ ಬಡಪಮಂ ಕೊಂಡೊಡಂ ಪೊಲ್ಲ ವಸುಧೆಯೊಳ್ (ಅಟ್ಟಮ. ೬-೦); ಮಂಡಲವರ್ಷಂ ಪುಷ್ಯದೆ ಚಂಡಕರಪ್ರಿಯಾತನುಜನೊಸೆದಿರ್ದಾಗಳ್ ಕೊಂಡುಂ ಮಡಗಿಡು ಛತ್ರಮ ಮಂಡಲದೊಳ್ ಪಡೆಯ ಲಾಬಿರೆಂದರ್ ಗಾರ್ಗ್ಯರ್ (ಅಟ್ಟಮ. ೦೨-೪೩). [ಸಂ.]

**ಮಂಡಲಸೇವೆ** (ನಾ). ೧. ಯಾವುದಾದರೂ ದೇವತೆಯ ಪ್ರೀತ್ಯರ್ಥವಾಗಿ ಕೈಗೊಳ್ಳುವ ನಲವತ್ತೆಂಟು ದಿನಗಳ ಪೂಜೆ.—ಉಪಾಸನೆ : ಹಿರಿಯರು ಹೇಳಿದಂತೆ ಮಂಡಲಸೇವೆ ಮಾಡಿದ ಮೇಲೆ ಅವಳ ಕಷ್ಟವೆಲ್ಲ ಪರಿಹಾರವಾಯಿತು (ಬೂಪ). ೨. ಕರಾವಳಿಯಲ್ಲಿ ಆಚರಿಸುವ ವಿಶಿಷ್ಟ ರೀತಿಯ ನಾಗಪೂಜೆ : ನಾಗನ ಪ್ರೀತಿಗಾಗಿ ದಕ್ಷಿಣಕನ್ನಡಜಿಲ್ಲೆಯ ಉಡುಪಿ, ಕಾರ್ಕಳ, ಕುಂದಾಪುರ ಮತ್ತು ಪುತ್ತೂರು ತಾಲ್ಲೂಕುಗಳಲ್ಲಿ 'ನಾಗಮಂಡಲ' ವೆಂಬ ಸೇವೆಯು ನಡೆಸಲ್ಪಡುತ್ತದೆ. (ವ್ಯವಹಾರದಲ್ಲಿ ಇದನ್ನು ಮಂಡಲಸೇವೆ ಅನ್ನುತ್ತಾರೆ) (ತುಳುಜಾ. ೨೫೦). 'ನಾಗಮಂಡಲ' ನೋಡಿ. [ಮಂಡಲ + ಸೇವೆ₁]

**ಮಂಡಲಸ್ವಸ್ತಿಕ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : P "ಚತುರಸ್ರಹಸ್ತವನ್ನು ಮಾಡಿ ಉದ್ವೇಷ್ಟನ ಮಾಡುತ್ತ ಕೈಗಳನ್ನು ನೀಡುವಾಗಲೇ ವಿಕ್ಷಿಪ್ತಚಾರಿಯನ್ನು ಮಾಡಿದ ಊರ್ಧ್ವಮಂಡಲ ಹಸ್ತದಿಂದ ಸುತ್ತಿಸುತ್ತ ಕೈಗಳನ್ನು ಸ್ವಸ್ತಿಕದಂತೆ ಹಿಡಿಯುವುದು" (ಲಾಸ್ಯರಂ. ೨೫೬ ಗದ್ಯಾನುವಾದ): ತಲಪುಷ್ಪಪುಟ, ಲೀನ, ವಿವರ್ತಿತ, ವಲಿತೋರು, ಮಂಡಲಸ್ವಸ್ತಿಕ . . . ಗಂಗಾವತರಣ— ಈ ನೂರೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). [ಸಂ.]

**ಮಂಡಲಾಗ್ರ**, ಮಂಡಳಾಗ್ರ (ನಾ). ೧. ತುದಿಯಲ್ಲಿ ಬಾಗಿರುವ ಕತ್ತಿ : "ನಿಸ್ತ್ರಿಂಶಃ . . . ಮಂಡಲಾಗ್ರಂ – ಈ ೧೦ ಅಡ್ಡಾಯುಧಂ" (ಹಲಾಯು. ೭೮-೩೦೮): ಮತ್ತೊರ್ವನತ್ಯುಗ್ರಮಂಡಲಾ[ಶಾಕಾಂ. ಳಾ]ಗ್ರಮನ ಸುಗೆಯ್ದು ವೀರಗ್ರಹಗ್ರಸ್ತನಾಗಿ (ಶಂಕರಾ. ೦೦-೪೦ ವ); ಪ್ರಭಾಮಂಡಲನ ಮಂಡಲಾಗ್ರಮಂ ಚಂದ್ರಹಾಸಪ್ರಭಾಮಂಡಲದಿಂ ಹತಪ್ರಭಾಮಂಡಲಂ ಮಾಡಲುಂ (ಶಂಕಾವಿ. ೦೩-೦೩೩ ವ). ೨. ಗದಾಯುದ್ಧ ಹಾಗೂ ದ್ವಂದ್ವಯುದ್ಧಗಳಲ್ಲಿ ಅನುಸರಿಸುವ ಒಂದು ಬಗೆಯ ವರಸೆ, — ಪಟ್ಟು: ಆಲೀಢ ಪ್ರತ್ಯಾಲೀಢ ಸಮಪಾದ ವೈಷ್ಣವ ಮಂಡಲಾಗ್ರಮುಮೆಂಬ ಪಂಚವಿಧಸ್ಥಾನಕೃತಂಗಳೊಳಂ . . . ನಿಂದು (ಗದಾಯು. ೬-೦ ವ). ಮಂಡಳಾಗ್ರ : ೧. ಕವಸಮಹೇಶ್ವರಂ ಪ್ರಚಣ್ಡಮಣ್ಡಳಾಗ್ರಮಣ್ಡಿತ ದೋರ್ದ್ದಣ್ಡಂ (ಶಾಇ. XX, ೪೭-೨೨; 1074). [ಸಂ.]

**ಮಂಡಲಾಧಿಪ** (ನಾ). ೧. ರಾಜ ; ದೊರೆ : ಬಸವನಾ ಮಂಡಲಾಧಿಪನೋಲಗದೊಳೊಲವಿಂದ ಕುಳ್ಳಿರ್ದ (ಬಸಪು. ೦೦-೦). ೨. ಪ್ರಾಂತ್ಯದ ಒಡೆಯ. [ಸಂ.]

**ಮಂಡಲಾಧಿಪತಿ** (ನಾ). = ಮಂಡಲಾಧಿಪ ೨ : ಮುಂದೆ ಬಂದ ರಕ್ಕಸತಂಗಡಿ ಅನಾಹುತಕ್ಕೆ ಮಂಡಲಾಧಿಪತಿಗಳ ವೈಮನಸ್ಯ ನಾಂದಿಯಾಯಿತು (ಕರ್ನಾಟ. I, ೦೯೬). [ಸಂ.]

**ಮಂಡಲಾಧೀಶ** (ನಾ). = ಮಂಡಲಾಧಿಪ ೨ : ಒಲಗಿಸುವ ನೃಪರಿಂ ಮಂಡಲಾಧೀಶರಿಂ . . . ವಿಶ್ವಂಭರೋರ್ವೀಶ್ವರನರಸುಗೆಯುತ್ತಿರ್ದಂ (ಶಾಂತಿಪು. ೩-೨೨). [ಸಂ.]

**ಮಂಡಲಿ₁**, ಮಂಡಳಿ₁ (ನಾ). ೧. ಸುತ್ತು ; ವರ್ತುಲ ; ವಲಯ . ೨. ದುಂಡಾದ ಚಲನೆ ; ಚಕ್ರಾಕಾರವಾಗಿ ತಿರುಗುವುದು. ೩. ಗುಂಪು; ಸಮೂಹ : ' ಮಂಡಲಿಗೊಳ್ ' ನೋಡಿ. ೪. ಯಾವುದಾದರೊಂದು ಉದ್ದೇಶಕ್ಕಾಗಿ ರಚಿತವಾದ ಅಧಿಕಾರಿಗಳ ಸಮಿತಿ, ಸಂಸ್ಥೆ ಮುಂತಾದುವು : ಮಂಡಲಿಯಲ್ಲಿದ್ದವರೆಲ್ಲರಿಗೂ ಅವನನ್ನು ಕಂಡರೆ ಬೇಸರ (ಬಾಡಹ. ೩೦೮). ಮಂಡಳಿ₁ : ೩. ಆಗಳನೇಕ ಮೂರ್ಧಾಭಿಷಿಕ್ತ ಮಂಡಳಿಕ ಮಂಡಳೀಪರಿವೃತನಾಗಿ ಪದ್ಮರಾಜನಾ ರಾಜವಿದ್ಯಾವಿಳಾಸನಂ . . . ಕಲ್ಯಾಣಪೀಠನಿಮ್ಮಿತನಂ ಮಾಡಿ (ಭೃಶ್ರೀ. ೪-೬೦ ವ) ; ಗಿಳಿಜೊಡನೋದಿಯೋದಿ ನುಡಿಗಲ್ತು ಮರಾಳಸರೋಜಹಂಸಮಂಡಳಿಯೊಡನಾಡಿಯಾಡಿ ನಡೆಗಲ್ತು (ಕಮಲ. ೦೯೩ ಕ್ರಿಯೋ) ; ಪಾಂಡುರಂಗನ ಭಕ್ತರಂ ಭೂಮಂಡಲದೊಳಗೆ ಸುಳಿವ ಜಂಗಮಮಂಡಳಿಗಳಂ ಕರಸಿದರು ಪಡಿಹಾರರು ಕಳುಹಿ (ಬಸಪು. ೪-೩). ೪. ರಾಜನಿಗೆ ಸಲಹೆನೀಡುವ ಸಚಿವಮಂಡಳಿ ಇತ್ತೆಂಬುದಕ್ಕೆ ಸೂಕ್ತನಿದರ್ಶನಗಳಿವೆ (ರಘಾಇ. ೦೦೪).

☞ ಸಂಸ್ಕೃತದಲ್ಲಿ ಸಾಮಾನ್ಯವಾಗಿ 'ಮಂಡಲ' ಶಬ್ದಕ್ಕೆ 'ಈ' ಎಂಬ ಸ್ತ್ರೀವಾಚಕಪ್ರತ್ಯಯವು ಸೇರಿದಾಗ ಈ ಎಲ್ಲ ಅರ್ಥಗಳೂ ಬರುತ್ತವೆ. [ಸಂ. ಮಂಡಲೀ]

**ಮಂಡಲಿ₂, ಮಂಡಳಿ₂** (ನಾ). ೧. ಸುತ್ತುಹಾಕುವುದು ; ಬಳಸುವುದು. ೨. ವರ್ತುಲಾಕಾರವಾಗಿ ಬರುವ ಗಾಳಿ; ಸುಂಟರಗಾಳಿ. ೩. ಹಾವು. ೪. ಮೈಮೇಲೆ ಗುಂಡನೆಯ ಚಿಹ್ನೆಗಳುಳ್ಳ ಒಂದು ಬಗೆಯ ವಿಷಸರ್ಪ. ೫. (ಇಲಿಯನ್ನು ಹಿಡಿಯಲು ಹೊಂಚುಹಾಕುತ್ತಿರುವ) ಬೆಕ್ಕು : "ಜಾಹಕಃ, ಗಾತ್ರಸಂಕೋಚೀ, ಮಂಡಲೀ—ಈ ೩ ಇಲಿಯಂ ಹಿಡಿಯಲನುಗೆಯ್ವ ಬೆಕ್ಕು" (ಪಠಾಯು. ೪೦-೮೩). ೬. ಗೋಸುಂಬೆ. ೭. ನಾಯಿ. ೮. ಆಲದ ಮರ. ೯. ಒಂದು ಪ್ರದೇಶವನ್ನು ಆಳುವುದು : 'ಮಂಡಲಿನಾಡುಸಾಸಿರ' ಪರಾ. ೧೦. ಪ್ರಾಂತ ವನ್ನು ಆಳುವವನು. ೧೧. ಸೂರ್ಯ. ೧೨. (?) : ಸಂತತದಿ ಕೇಳಿ ಮುನಿವರರೆಲ್ಲ ಮಾನವರೊಳಿಂತು ಲಕ್ಷಣಂಗಳ ತಿಳಿದು ಬೆಲೆಯ ಮಾಳ್ಪ ಸಂತವನು ಮಂಡಲಿಯು ಪೆಸರಾದುದಾತಂಗೆ (ರತ್ನಶಾ. ೬-೨೩). **ಮಂಡಳಿ₂:** ೨. "ವಾತ್ಯೆ ಮಂಡಳಿಯೆನಲು ಸುಟಿಪ್ಪಾನಿಲಂ" (ಮಂಗರಾ. ೦೩-೦೦). [ಸಂ. ಮಂಡಲಿನ್]

**ಮಂಡಲಿಕ, ಮಂಡಳಿಕ** (ನಾ). ಸಾಮಾನ್ಯವಾಗಿ ಈಗಿನ ಒಂದು ಜಿಲ್ಲೆಯಷ್ಟು ವಿಸ್ತಾರವಾದ ದೇಶಭಾಗದ ಒಡೆಯ ; ಮಾಂಡಲಿಕ ; ಸಾಮಂತ : "ಮಧ್ಯಮಂ ಮಂಡಲೇಶಂ ಮಂಡಲಿಕನೆನಿಕ್ಕುಂ" (ಮಂಗರಾ. ೭೮-೦) ; ಅತಿಪ್ರಚಂಡಮಂಡಲಿ[ ಪಾಠಾಂ. ೪ ]ಕಮಹಾಸಾಮಂತಮಂತ್ರಿ ಪ್ರಧಾನಪುರೋಹಿತಾಂತರ್ವಂಶಿಕಾದಿಪರಿವಾರಪರಿವೃತಂ . . . ಒಡ್ಡೋಲ ಗಂಗೊಟ್ಟಿರೆ (ಅಜಿಪು. ೨-೨ ವ); ಮನ್ನೆಯ ಮಂಡಲಿಕರುಗಳು ಪೊಡಮೀಸಗೆ ಕೈಯ ಮುಗಿದು ಎಡಬಲವನು ಸಾರಿರಲು (ಕಂಸಂ. ೦೧-೦೨೬). **ಮಂಡಳಿಕ :** "ಮಧ್ಯಮಃ, ಮಂಡಲೇಶ್ವರಃ — ಈ ೨ ಮಂಡಳಿಕಂ" (ಪಠಾಯು. ೭೦-೩೬೮); ಆ ಪೊಟಲನಾಳ್ದಂ . . . ಸ್ವಮಿತಸಾಗರು ಮಂಡಳಿಕಂ (ಶಾಂತಿಪು. ೦-೭೭); ಮಂಡಳಿಕ ಮನ್ನೆಯರಾಂಪರೇ ಚತುರಂಗಪದಹತಿಗೆ (ಸುಭಾ.ಸ. ೩-೩).

**ಮಂಡಳಿಕಕಂಠೀರವ** = ಸಾಮಂತರಾಜರಿಗೆ ಸಿಂಹದಂತಿರುವವನು ; ಒಂದು ಬಿರುದು : ಮಣ್ಡಳಿಕಕಣ್ಠೀರವಂ ಪರಚಕ್ರಭೈರವಂ ರಾಯದಣ್ಡ ಗೋಪಾಳಂ (ಕೌಇಇ. XX. ೯೭-೯; 1074). **ಮಂಡಳಿಕಚೂಡಾಮಣಿ** = ಸಾಮಂತರಲ್ಲಿ ಶಿರೋಭೂಷಣಪ್ರಾಯನಾದವನು ; ಒಂದು ಬಿರುದು : ಅಜ್ಞಿವಂಶಾಂಬರದ್ಯುಮಣಿ ಮಣ್ಡಳಿಕಚೂಡಾಮಣಿ (ಎಕ. XII. ಶಿರಾ. ೪೦-೨೩; 1040). **ಮಂಡಳಿಕತ್ರಿಣೇತ್ರ**=ಸಾಮಂತರಾಜರಲ್ಲಿ ಪರಮೇಶ್ವರನಂತಿರುವವನು ; ಒಂದು ಬಿರುದು : ಪರಮಣ್ಡಳೀಕರ್ಕ್ಕಳ ನಮ್ಮ ನೀವು ಇ ಯೊಳಗೆ ನಿಮ್ಮ ಪನ್ನಲಿಗಳಂ ಬರಲೀಯದೆ ಕಣ್ಣು ಬಟ್ಟುದೇಳೋಳಿಯಲೆಂಬಿನಂ ನೆಗಬ್ದುದೊಟ್ಟಜ ಮಣ್ಡಳಿಕತ್ರಿಣೇತ್ರನಾ (ಎಕ. II (R). ೬೪-೯೦; 974). **ಮಂಡಳಿಕಭೈರವ**= ಸಾಮಂತರಲ್ಲಿ ಭೈರವ ನಂತಿರುವವನು ; ಒಂದು ಬಿರುದು : ವಿಕ್ರಾನ್ತಕಣ್ಠೀರವಂ ಮಣ್ಡಳಿಕ ಭೈರವಂ ಶರಣಾಗತವಜ್ರಪಂಜರಂ (ಸೌಇಇ. XX. ೪೦-೦೦ ; 1056). **ಮಂಡಳಿಕಮುಖದರ್ಪಣ** = ಸಾಮಂತರಾಜರಿಗೆ ಕನ್ನಡಿಯಂತಿರು ವವನು ; ಒಂದು ಬಿರುದು : ವಿಬುಧಸನ್ತರ್ಪಣಂ ಮಣ್ಡಳಿಕಮುಖ ದರ್ಪಣನರಿಮಣ್ಡಳಿಕಗಜಕಂಠೀರವಂ (ಕಇ. IV. ೪೦-೬; 11 ನೆಯ ಶ). **ಮಂಡಳಿಕವೃಷಭಶಂಕರ** = ಸಾಮಂತರೆಂಬ ಎತ್ತುಗಳಿಗೆ ಶಿವನಂತಿರು ವವನು ; ಒಂದು ಬಿರುದು : ಗಣ್ಡರ ಗಣ್ಡಂ ಗಣ್ಡಭೇರುಣ್ಡಂ ಮೂಜುರಾಯಸ್ಥಾಪನಕಲಿ ಮಣ್ಡಳಿಕವೃಷಭಶಂಕರಂ (ಕಇ.IV. ೪೦-೪ ; 11ನೆಯ ಶ). [ಸಂ.]

**ಮಂಡಲಿನಾಡುಸಾಸಿರ** (ನಾ). ಒಂದು ಆಡಳಿತಕ್ಕೆ ಒಳಗಾದ ಪ್ರದೇಶ : ಮಣ್ಡಲಿನಾಡುಸಾಸಿರಮಂಪಾಳೆ (ಎಕ. VII. ಶಿಕಾಂ. ೨೪-೩ ; 920). [ಮಂಡಲಿ₂ + ನಾಡು + ಸಾಸಿರ]

**ಮಂಡಲಿಸು, ಮಂಡಳಿಸು** (ಕ್ರಿ). ೧. ಚಕ್ರಾಕಾರವಾಗಿ ಸುತ್ತು.— ತಿರುಗು : ಕಿರುವಕ್ಕಿ ಹೊರಹೊಮ್ಮಿ ಚಲಿದಿಲಿಸುತಿರೆ, ಹದ್ದು ಮಂಡಲಿಸುತಿರೆ (ಭ್ಯಚಾಪ. ೬೪-೨೬೬). ೨. ಗುಂಪಾಗಿ ಸೇರು ; ಒಟ್ಟಾಗಿ ಕೂಡು : ಮಂಡಲಿ[ಪಾಠಾಂ. ೪]ಸಿರ್ದ ಬೇಚರಸಮೂಹದ ಮಧ್ಯ ದೊಳಿರ್ದ ಮೂರಿದಿಂ . . . ಕಂಡನಣುವ್ರತಪ್ರಕರಪಾಲಕನಂ (ತಂಪ್ರತೀ. ೬-೬); ನೆತ್ತಿಯೊಳ್ ಪಾಜುವ ಗಿಳಿವಿಂಡು ಪಕ್ಷಿಯು ಸತ್ತಿಗೆಯಂತೆ ಮಂಡಲಿಸಿ (ಪೋತಶ. ೨-೪೩). **ಮಂಡಳಿಸು :** ೨. ನೀರ್ವನಿಯಂ ಸುರಿವಂಬುದಾಳಿ ಮಂಡಳಿಸಿದ ಮೇಘಕಾಲಮೆನೆ ಕಣ್ಗೆಸೆದಂ ನೃಪರೂಪ ಚಂದ್ರಮಂ (ಕಾದಂಪೂ. ೩೮೯); ಕೋಡೆವಿಡಿದಂತೆ ಮಂಡಳಿಸಿ ಮೇಲೆ ಕಿರೀಟ ಮರೀಚಿ . . . ಕುಂಡಳಮಂಡಿತನೇಂ ವಿಳಾಸಮಂ ಪಡೆದನೊ (ಕಂಠಾಜಾ. ೪-೯); ಕಲಶಪಲ್ಲವಚೌಕದಲಿ ಮಂಡಳಿಸಿದವು ಸತ್ತಿಗೆಗಳು (ಕುಮಾರರಾ. ೬-೨); ಬಂಡುಣಲೆಂದು ತಂಡತಂಡದಿಂ ಮಂಡಳಿಸಿ ಮುಯ್ಯೇರಡಿಗಳ್ ಬಂದೆಜಗುಗುಂ (ರಾಘಾಕ್ಕ. ೯-೦). ೩. ಸುತ್ತುಗಟ್ಟು ; ಆವರಿಸು; ಬಳಸು: ಮಂಡಳಿಸಿ ಮುರಿದೇಳ್ವ ವಹ್ನಿಯ ತುಂಡದಲಿ ತಳಿತೊಗೆದವಂಬರ ಮಂಡಲದ ವಳಯದಲಿ ವಿಲಯುಶಿಖಾಗ್ನಿ ಕಣವಂತೆ (ಕೊರಾ. ೩-೬-೬೨). ೪. ಸುರುಳಿಸುತ್ತಿಕೊಳ್ಳು ; ಇರಿಕೆ ಹಾಕಿಕೊಳ್ಳು : ಪೆಡೆಯ ಮೊದಲ್ಗೆ ತಂದಡರೆ ಮಂಡಳಿಸಿತ್ತಹಿ ಶೇಷಕಾಯಮಂ (ತಂಪ್ರತೀ. ೯-೬೦). [ಮಂಡಲ + -ಇಸು₃]

**ಮಂಡಲೀಕ, ಮಂಡಳೀಕ** (ನಾ). = ಮಂಡಲಿಕ : ಕುಡಿಯರ ವಲ್ಲಭನುಜಿ ಮಂಡಲೀಕಪದವಮಂ ಪಡೆದಂ (ಎಇ. VI. ೨೦೬-೦೦; 1057) ; ಮಂಡಲೀಕರ ಶಿರವ ಶೀಳಿದ ಗಲವ ತೆಗೆ . . . ಎನುತ ತೆಗೆದೆಚ್ಚರು ಮಹಾರಥರು (ಕುಮಾರರಾ. ಶಂ. ೨೯೦). **ಮಂಡಳೀಕ :** ಬಾಳಿಮಮಂಡಳೀಕ ತ್ರಾಂ ಪಡೆವನಪಾರಶೌರ್ಯ್ಯಮಹಿಮೋನ್ನತಿಯಂ ಮಹಾತಳಾಗ್ರದೊಳು (ಎಕ. VIII. ಸಾಗರ. ೦೩-೪೪ ; 1218). [< ಮಂಡಲಿಕ]

**ಮಂಡಲೆಸಾಯಿರನಾಡು** (ನಾ). ಒಂದು ಆಡಳಿತಕ್ಕೆ ಒಳಪಟ್ಟ ಪ್ರದೇಶ : ಮಣ್ಡಲೆಸಾಯಿರನಾಡ ತುಜುಗೊಳ್ಳ್ ತೆರಳ್ದು ಸತ್ತಂ (ಮೈಅಂ. ೦೯೩೩, ೩೩-೪ ; 939). [< ಮಂಡಲಿ₂ + ಸಾಯಿರ (< ಸಾಸಿರ) + ನಾಡು]

**ಮಂಡಲೇಶ** (ನಾ). ೧. = ಮಂಡಲಿಕ : "ಮಂಡಲೇಶಂ ಮಂಡಲಿಕ ನೆನಿಕ್ಕುಂ" (ಮಂಗರಾ. ೭೮-೧). ೨. = ಮಂಡಲಾಧಿಪ ೧ : ಮಂಡಲೇಶ ನುದ್ಭಟೋದ್ಧನಿಷ್ಟ ಶೂಲವೈದೆ ಮುಂಕೊಂಡು ನಾಟಿ ವಕ್ಷಮಂ ಸುಶಕ್ತಿ ಯುಕ್ತನಾಗಿಯುಂ ಚಂಡಶಕ್ತಿಹೀನನಾಗಿ ಕೂಡೆ ನಿರ್ಜರಾರಿ ಕೈಕೊಂಡು ಪುಲ್ಲಮಂದವಿಂದೆ ಕೂರ್ತು ಪೋದನದ್ಭುತಂ (ಅದ್ಭುತ. ೪-೦೦೮). [ಸಂ.]

**ಮಂಡಲೇಶ್ವರ, ಮಂಡಳೇಶ್ವರ** (ನಾ). = ಮಂಡಲಾಧಿಪ ೨: ಮಹೋನ್ನತಿವೆತ್ತ ಮಣ್ಡಲೇಶ್ವರ ನಡೆಗೊಣ್ಡೆ ಸಾಯ್ಯನ ಕುಮಾರನಗ್ಗದ ಮಲ್ಲಿನಾಥನಂ ಪರಬಲಧೀರನೆನ್ದೊಲಿದು ಮನ್ನಿಸುವಂ (ಎಕ. XI. ಹಿರಿದು. ೨-೦೪; 1355) ; ಮಂಡಲೇಶ್ವರ ನಿನಗೆ ಕೊಡುವೆನಖಂಡಿತಾಭಿಮತಂಗಳಂ (ಐಕಾಪು. ೨೭-೩೩) ; ರಾಯರಾವುತ ಮನ್ನೆಯರಿಂ ಮಂತ್ರಿ ಮಂಡಲೇಶ್ವರ ರಿಂದೊಡ್ಡೋಲಗಂಗೊಟ್ಟು (ಪಂಪಾಶ. ೨-೩೩ ವ). **ಮಂಡಳೇಶ್ವರ :** "ಮಧ್ಯಮಃ, ಮಂಡಳೇಶ್ವರಃ — ಈ ೨ ಮಂಡಳಿಕಂ" (ಪಠಾಯು. ೭೦-೩೬೮) ; ಚಕ್ರೇಶ್ವರ ಮಂಡಳೇಶ್ವರರಂ ಬೆಸಸೆ ನೆಗಟ್ದ ಕವಿ ಕವಿರತ್ನಂ (ಅಜಿಪು. ೦೨-೪೩). [ಸಂ.]

**ಮಂಡವ** 'ಮಂಟಪ' ನೋ.

**ಮಂಡವಳ್ಳಿ** (ನಾ). ವಧೂವರರ ತಲೆಗೆ ಸಂಪ್ರದಾಯಬದ್ಧವಾಗಿ ತೊಡಿಸುವ ಹೂವು, ಮುತ್ತು ಮುಂತಾದುವುಗಳ ಅಲಂಕಾರಸಾಧನ : ಸರೋಜಳಿಗೆ ಮುತ್ತಿನ ಮಂಡವಳ್ಳಿಯನ್ನು ಕಟ್ಟಿ . . . ಶೃಂಗರಿಸಿದರು (ಹಂಪಿ. ೪೦). [ ← ಮರಾ. ಮಂಡವಳೀ, ಮಂಡಾವಳ, ಮುಂಡ್ಯಾವಳ, ಮುಂಡಾವಳೀ]

**ಮಂಡವಿಗೆ** (ನಾ). ೧. ಸಣ್ಣ ಮಂಟಪ : ಮಂಡವಿಗೆಯ ವಿಳಾಸ ನಿವಾಸಂಗಳಿಂದಂ . . . ಅಂದಂಬಡೆದ ಪೊಚಿವೀಡಂ ಸೋವಮಾನ್ಯಪ್ರದೀಪಂ ಪುಗುವಾಗಳ್ (ಶಾಂತಿಪು. ೧೧-೦೯೬ ವ) ; ಪವಳದ ಕಂಬಂ ಪಳಿಕಿನೆಸೆವ ತೊಲೆ ಪಜ್ಜದ ಮತ್ತವಾರಣಂ ಮುತ್ತಿನ ಮಂಡವಿಗೆ (ಸುಕುಮಾ. ೧೧-೪೫) : ರಾಯನರಮನೆ ಮಂಡವಿಗೆ ಗುಡಿ ಲಾಯ ಚವುಕಿಗೆ ನಿಖಿಳಭವನನಿಕಾಯವನು ತೆಗೆದೊಟ್ಟಿದರು ಬಂಡಿಗಳ ಹಂತಿಯಲಿ (ಕುವ್ಯಾಗ. ೪-೦೬). ೨. ಮೆರವಣಿಗೆ, ಉತ್ಸವ ಮೊದಲಾದ ಸಂದರ್ಭಗಳಲ್ಲಿ ಉತ್ಸವಮೂರ್ತಿ ಮೊದಲಾದುವುಗಳ ಮೇಲೆ ಎತ್ತಿಹಿಡಿಯುವ ಚತುಷ್ಕೋಣಾಕಾರದ ಮೇಲ್ಕಟ್ಟು ; ವಿತಾನ : ಸಂಪತ್ತಿನ ಚಿತ್ರರಚಿತ್ತಿದ ಮುತ್ತಿನ ಮಂಡವಿಗೆ ಪೊಚಲ ಮನೆಗಳೊಳಿಲ್ಲಂ (ಪುಕಥಾ. ೩-೨) ; ಚಿತ್ರರದಿಂ ಬೆಳ್ಪಂಗಳ ಬಿತ್ತನೆ ತೊಳತೊಳಗೆ ತೊಳಪ ತಾರಗೆಯಿಂ ತಾಳ್ದಿತ್ತದು ಮದನಂಗೆತ್ತಿದ ಮುತ್ತಿನ ಮಂಡವಿಗೆಯೊಪ್ಪವಂ ಗಗನತಳಂ (ಪಾರ್ಶ್ವಪು. ೧೦-೦೬). [ < ಸಂ. ಮಂಡಪಿಕಾ]

**ಮಂಡವಿಗೆಬಲೆ** (ನಾ). ಒಂದು ಬಗೆಯ ಬಲೆ : ಹಿಂಡುವಲೆಗಳ ಬಿಚ್ಚಣಿಗೆಯ ಮುಂಡವಿಗೆಬಲೆ[ಶಾಣಂ. ಮಂಡವಿಗೆವಲೆ]ಗಳ ಕಿರಾತರು ಕಿವಿಚೆಗಲದಲಿ (ಕುವ್ಯಾಆ. ೦೩-೨೩). [ಮಂಡವಿಗೆ? + ಬಲೆ$_1$]

**ಮಂಡಸೀಗೆ**. ಮಂಡೆಸೀಗೆ (ನಾ). ಒಂದು ಬಗೆಯ ಮುಳ್ಳಿನ ಬಳ್ಳಿ : ಮಂಡಸೀಗೆಯ ತುಚಿತಮೆನಿಪ್ಪ ಪಾಪಟೆಯ ಸದ್ವಳಮಂ ಬೆರಸುತ್ತುಂ (ಐಪುವ. ೦೩-೬೦). **ಮಂಡೆಸೀಗೆ** : ಮಂಡೆಸೀಗೆ ಹೇರಿಚೆಯಲಚ ತಂಡಸಿ ಮುಳ್ಳು ಬೇಲಿಗಳ್ ಸೇರಿ ಮುಟ್ಟಹುವಾಗಸವನು (ಕುಶಪ. ೦೮-೩೫).

[ಮಂಡ? + ಸೀಗೆ$_1$]

**ಮಂಡಹಾರಕ** (ನಾ). ಮದ್ಯವನ್ನು ಬಟ್ಟಿ ಇಳಿಸುವವನು ; ಸಾರಾಯಿ ಮಾಡುವವನು : "ಶೌಂಡಿಕಃ, ಮಂಡಹಾರಕಃ — ೨ ಹೆಂಡಾ ಮಾಡುವವನ ಹೆಸರುಗಳು" (ಸಿದ್ಧಾಂತಿ. ೩೦೦). [ಸಂ.]

**ಮಂಡಳ** 'ಮಂಡಲ' ನೋ.

**ಮಂಡಳಮಾರಿ** (ನಾ). ಒಂದು ಬಗೆಯ ವನಸ್ಪತಿ : ಬೆಳುಹೂಲಿಯ ಬೀರಂ ಮಂಡಳಮಾರಿಯ ಬೇರನಕ್ಕಿ ಪೂಳೆಯುದರವಾ ವಿಳಸರ್ಪ ಕಾಡಿದೆಡೆಗಾಗಳೆ ಪೂಸಲ್ ನಿರ್ವಿಷಂ (ಐಪುಚ. ೬-೦೨). 'ಮಂಗಮಾರಿ' ಪಠಾ. [ ? ]

**ಮಂಡಳಾಂಕ** (ನಾ). ೧. ಬಿಂಬದಲ್ಲಿ ಕಪ್ಪುಮಚ್ಚೆಯುಳ್ಳವನು : ಚಂದ್ರ. ೨. ಗ್ರಹಣಸಮಯದಲ್ಲಿ ತನ್ನ ಸುತ್ತಲೂ ನೆರಳುಳ್ಳವನು; ಸೂರ್ಯ. ೧. ೨ : ಪರಮಂಡಳಾಂಕನೀ ಹಿಮಕರನೆನೆದಪನಾ ದಿನೇಶನೆನೆ ನೋಡರಸಾ (ರಾಜಶೇ. ೧೦-೬೬). ೩. ಯಾವುದಾದರೂ ಅಪಾರದರ್ಶಕ ವಸ್ತುವಿನ ಸುತ್ತಲೂ ಕಂಡುಬರುವ ನೆರಳಿನಂತಹ ಭಾಗ. [ಸಂ. ಮಂಡಲಾಂಕ]

**ಮಂಡಳಾಗ್ರ** 'ಮಂಡಲಾಗ್ರ' ನೋ.

**ಮಂಡಳಿ$_1$** 'ಮಂಡಲಿ$_1$' ನೋ.

**ಮಂಡಳಿ$_2$** 'ಮಂಡಲಿ$_2$' ನೋ.

**ಮಂಡಳಿಕ** 'ಮಂಡಲಿಕ' ನೋ.

**ಮಂಡಳಿಗೊಳ್** (ಕ್ರಿ). ಗುಂಪುಗೂಡು ; ಒಟ್ಟಾಗು : ಮಂಡಳಿಗೊಂಡು ಸಿಂಪಿಸುವ ತಂಕುಮವಾರಿಯ ಚೆಂಬೆಗೆಂಚು ಕೈಕೊಂಡು (ಅಸಂಪು. ೬-೩೦) ; ಈತಗೇಕೀ ದುಃಕೃತ್ಯವು ಮೊನೆಕೊಂಡುದು ವಿಸ್ಮಯವೆನುತ ಮಂಡಳಿಗೊಂಡು ಮಾತಾಗುತಿರಲು (ಕೃಶಂಶ. ೨-೦೫೩) ; 'ಮಂಡಳಿ' [ಶಾಣಂ. ಲಿ] ಗೊಂಡಾಗಳ್ ಮರಾಳಾವಳಿ ನಗದ ಬಿಲದ್ವಾರದಿಂದೇಳ್ವುದು (ರಾಜಶೇ. ೬-೨).

[ಮಂಡಳಿ$_1$ ( = ಮಂಡಲಿ$_1$ ) + ಕೊಳ್$_1$ ]

**ಮಂಡಳಿಸು** 'ಮಂಡಲಿಸು' ನೋ.

**ಮಂಡಳೀಕ** 'ಮಂಡಲೀಕ' ನೋ.

**ಮಂಡಳೇಶ್ವರ** 'ಮಂಡಲೇಶ್ವರ' ನೋ.

**ಮಂಡಿ$_1$** (ನಾ). ೧. ತೊಡೆ ಮತ್ತು ಕಣಕಾಲಿನ ಮಧ್ಯದ ಕೀಲು, – ಸಂಧಿ : ತಿವಿದು ಕಡುಹಿಂ ಕೆಡೆಪಿ ಕೊಪ್ಪರದೊಳ್ ಕಾವಿನ್ನಿ ಮಂಡಿಯೊಳ್ ಮಿದಿದು (೧೧೮. ೨-೦೦೫ ವ) ; ಅವರು ಮಂಡಿಯಿಂದ ಮೇಲೆ ದಟ್ಟಿ ಸುತ್ತುತ್ತಿದ್ದರು (ಮುಟ್ಟಿಪ. ೬) ; ಮಂಡಿ ಹಾಕಿ ಕೂತರೆ ಮಂಡಿಗೆ ಬಡಿಸ್ಯಾರೆ ? (ಗಾದೆ). ೨. ಮೊಳಕಾಲು ; ಜಾನು : ಬಲಿದು ಮಂಡಿಯನೂಚಿ ಕನ್ನೆಗೆ ಸೆಳೆದು ಮುಷ್ಟಿಯ ಪಾರ್ಥಸುತನ ತಲೆಯ ನೆಟ್ಟನು (ಕುವ್ಯಾದ್ರೋ. ೦೯-೪೦); ಮಿಡುಕು ಕಂಠದೊಳಾಯ್ತು ಮಂಡಿಯ ಪಡಿಯ ಪದಪದ್ಧತಿಗೆ ಫಣಿಪನ ಹೆಡೆ ನಿಚಿಲುನಿಟಿಲೆಂದುದ (ಕೊರಡಾ. ೪-೩-೬). ೩. ಮಲ್ಲಗಾಳಗ, ಕತ್ತಿವರಸೆ, ಬಾಣಪ್ರಯೋಗ ಮುಂತಾದ ಸಂದರ್ಭಗಳಲ್ಲಿ ಮೊಳಕಾಲನ್ನೂರಿ ಕುಳಿತುಕೊಳ್ಳುವ ಒಂದು ಭಂಗಿ : "ಕಳಾಸ ಚಾಳೆಯ ಮಂಡಿ ಸೀರಣಾ ಪಜ್ಜೆಯಕ್ಕುಂ" (ಮಂಗರಾ. ೮೮-೩೮); ಆಯತ ಮಂಡಿ ದುಮಾಡವೆಕ್ಕಸರವಿಸರದುಲ್ಲಾಸ ದುಸ್ಸರಚವ್ವಡಿ . . . ಚಟಿಯೆಂಬ ಚತುರತಾನಾದ ತರಹರದೊಳು ಹಲಗೆಯ ಮಗ್ಗುಲೊಳು ಮಿಣ್ಣಮಂ ಜಡಿದರು (ಸೋಮಶ. ೫-೦೯) ; ಕಕ್ಕಡ ಪರರು ಖಂಡೆಯ ದವನು ಮಂಡಿಯು ತೆತ್ತಳದಂತರು ಫಲುಗುಣನ ರಥದೆರಡುಪಕ್ಕದಲಿ ( ಕುವ್ಯಾಕ. ೨೪-೩೯ ) ; ಧ್ರುವಮಣದಲ್ಲಿ ಮೊಳಕಾಲಿನೊಡನೆಯೆದೆಯ ಕೂಡಿಸುವುದು ಯಾವುದು ಸಾಧನೆಯಲ್ಲಿ ಬೇರೆ ಉಂಟು ಅದರ ಹೆಸರು ಮಂಡಿಯಂಬುದು (ಐತ್ವಬೀ. ೪-೨೭). ೪. ವಾತದಿಂದ ಮೊಳಕಾಲು ಹಿಡಿದುಕೊಳ್ಳುವ ಒಂದು ಬಗೆಯ ರೋಗ : (*).

**ಮಂಡಿಡಕ್ಕೆ** = ಮಂಡಿಗೆ ಕಟ್ಟಿಕೊಂಡು ಬಾರಿಸುವ ಒಂದು ಬಗೆಯ ವಾದ್ಯ : ಮಂಡಿಡಕ್ಕೆ ಶಲ್ಲುಕಿ ಕುಡುವೆ . . . ಶಂಖಿಪಾವಪ್ರಭೃತಿ ಸುಷಿರ ವಾದ್ಯಚಯಮುಮಂ . . . ಬಾಜಿಸುತೆ (ಕವ್ಯಶಾ. ೩-೩೩). **ಮಂಡಿಯೂರು** = ಮೊಳಕಾಲನ್ನು ನೆಲದ ಮೇಲೆ ಊರಿ ಕುಳಿತುಕೊಳ್ಳು : ಪುಟ್ಟ ಲಕ್ಷ್ಮಿಯ ಆಕೃತಿ . . . ಭೂತದ ಎದುರಿಗೆ ಮಂಡಿಯೂರಿ ನಮಸ್ಕಾರ ಮಾಡಿತು (ಕಪ್ರ.ಕ. IV, ೩೬) ; ದೇವರ ಮುಂದೆ ಆಕೆ ಮಂಡಿಯೂರಿ ಕುಳಿತು ಪ್ರಾರ್ಥಿಸುತ್ತಿದ್ದಳು (ಕೂಂ). **ಮಂಡಿಯೊಳರು** = ಮಂಡಿಯೂರು : ಗಗನದಲಿ ರಥ ಯೋಜನಾಂತಕೆ ಚಿಗಿದು ಧರಣಿಯ ಮೇಲೆ ಬೀಳಲು ನಗುತ ಕರಣವ ಹಾಯ್ಕಿ ಮಂಡಿಯೊಳರ್ದನಾ ದ್ರೋಣ (ಕುವ್ಯಾದ್ರೋ. ೦೩-೦೯). **ಮಂಡಿಪೂಡು**, **ಮಂಡಿಯಪೂಡು** = ಮಂಡಿಯೂರು : (*) ; ಪರಮಶಿವನಾನಂದಯೋಗದೊಳಿರಲು ಕಂಡಿತಪಂಕದಲಿ ಘನತರುವ ಮರೆಗೊಂಡಾಗ ಮಂಡಿಯ ಪೂಡಿ ಬಿಲ್ಲಿಡಿದು . . . ಎಚ್ಚಡೆ (ಅಸಂಶಾ. ೧-೦೯-೦೫).

[ದೇ. ॥ ತಮಿ. ಮುಣ್ಣಿ; ಮಲ. ಮುಣ್ಣುಕ = ಹಿಮ್ಮಡಿಯ ಮೇಲೆ ಕುಳಿತುಕೊಳ್ಳು ; ತುಳು. ಮುಂಚಿ , ತೆಲು. ಮುಂಟ, ಮುಂಡಿವಿ ; **ಗೊಂಡಿ**. ಮೊಂಡಾ; ಕುಇ. ಕುವಿ. ಮೊಂಡ./ಮರಾ. ಮಾಂಡೀ]

**ಮಂಡಿ$_2$** 'ಮೊಂಡಿ' ನೋ.

**ಮಂಡಿ$_3$** (ನಾ). ಭಾರಿ ಪ್ರಮಾಣದ ವ್ಯಾಪಾರ ನಡೆಯುವ ಸ್ಥಳ ; ಸಗಟು ವ್ಯಾಪಾರದ ಅಂಗಡಿ : ಆ ಮಂಜಪ್ಪನವರು ಅಡಿಕೆಯ ಮಂಡಿಯ

ವೆಂಕಟಸ್ವಶೆಟ್ಟರು ಎಲ್ಲರೂ ಮಾಳೂರಿನವರು (ಇಂತಾಕ. ೬-೨೨) ; ಬಹುಶ್ರುವು ಪಟ್ಟು ಒಂದು ಮಂಡಿ ಅಂಗಡಿಯಲ್ಲಿ ಗುಮಾಸ್ತೆ ಕೆಲಸವನ್ನು ಕೊಡಿಸಿದನು (ಪಾಠನೀ. ೧೬೭). [← ಹಿಂ. ಮಂಡೀ ; ಮರಾ. ಮಂಡಈ]

**ಮಂಡಿಕಲ್** (ನಾ). ಒಂದು ಊರಿನ ಹೆಸರು : ಮಣ್ಣಕಲ್ಲ ಕಮ್ಮಲ ದಾನವಮ್ರ್ಮ ಕಡಸಂ ಪೆರ್ಘಲಿ ಕೋಹ್ಕೋಡೆ ಆ ಪುಲಿಯಂ ಕೊಲ್ವೆನೆನ್ದು ಪ್ರತಿಜ್ಞೆ ಕಡಿದು (ಎಕ. X. ಮುಳಬಾ. ೧೬೨-೩ ; ಸು. 950).

[ ಮಂಡಿ₇ + ಕಲ್₃ ]

**ಮಂಡಿಗಾಲು** (ನಾ). ಕುಳಿತುಕೊಳ್ಳುವುದರಲ್ಲಿ ಒಂದು ರೀತಿ; ಕುಳಿತುಕೊಳ್ಳುವಾಗ ಮೊಣಕಾಲನ್ನು ಊರುವುದು; ಮಂಡಿಯೂರುವುದು: ಮಂಡಿಗಾಲಲ್ಲಿ ಕುಳಿತುಕೊಳ್ಳುವುದರಿಂದ ಪಾಪಕ್ಷಯವಾಗಿ ತ್ರಿದೋಷ ಹರವಾಗಿ, ಶರೀರಕ್ಕೆ ಕಾಂತಿಯುಂಟಾಗುವುದು (ಸಳವ್ಯ. ೩೯) ; ಮಂಡಿಗಾಲು ಹೂಡಿ . . . ಕಂಗೊಳಿಸುವ ಬಾಲಕೃಷ್ಣನ . . . ಶಿಲ್ಪಕಲಾವಿಶಿಷ್ಟವಾದ ಮೂರ್ತಿಗಳು ವಿನಾ ಬೇರೆಯವು ಭಕ್ತರ ಚಿತ್ತೋಹಾರಿಯಾಗಲು ಶಕ್ಯವಿಲ್ಲ (ಕಾರದ. ೬೭). [ಮಂಡಿ₁ + ಕಾಲು₁ (<ಕಾಲ್₁)]

**ಮಂಡಿಗೆ** 'ಮಂಡಗೆ' ನೋ.

**ಮಂಡಿಚಡ್ಡಿ** (ನಾ). ಮೊಳಕಾಲಿನವರೆಗೆ ಬರುವಂತೆ ಸೊಂಟದ ಕೆಳಗೆ ತೊಡುವ ಉಡುಪು ; ಚಲ್ಲಣ : ಮಂಡಿಚಡ್ಡಿಯು ಕಾಲಾಳೊಬ್ಬ ಬೆಳ್ಳಿತಟ್ಟೆಯಲ್ಲೊಂದು ಪತ್ರ ತಂದನು (ಭುವರು. ೩೨೯).

[ಮಂಡಿ₁ + ಚಡ್ಡಿ₁]

**ಮಂಡಿತ** (ಗು). ೧. ಶೋಭೆಗೊಂಡ ; ಅಲಂಕೃತವಾದ : ರವಿಕುಲದ ರಾಯಂ . . . ನಿಜಸತಿಯ ತೋರದೊಡೆಗಳ ಮೇಲೆ ಲಲಿತಮಣಿಮಕುಟ ಮಂಡಿತಮಸ್ತಕವನಿಳುಹಿ ಮಗ್ಗುಲಿಕ್ಕಿದನು (ಹತಕಾ. ೬-೩೦) ; ಗುರು ಮಲ್ಲಿಕಾರ್ಜುನಪಂಡಿತರ ಕೃಪೆಯಿಂ ಮಂಡಿತೋಕ್ತಿಯೊಳವರ್ಗಳಿತ್ತುದ್ದಂಡ ಮತಿಯಿಂದಿಳೆಗೆ ಬಸವಣದಂಡನಾಥನ ಕೃತಿಯನೊರೆದೆನು (ಬಸಪು. ೦-೦೦). ೨. (ಅಧಿಕಾರಕ್ಕಾಗಿ) ಸ್ಥಾಪಿಸಿದ ; ನೆಲೆಗೊಳಿಸಿದ : ಕದನಮಹೇಶ್ವರಂ ಪ್ರಚಣ್ಡಮಣ್ಡಳಾಗ್ರಮಣ್ಡಿತದೋರ್ದ್ದಣ್ಡಂ (ಕರ್ನಾ. XX. ೪೭-೨೨ ; 1074). (ನಾ). ೩. ಅಲಂಕೃತನಾದವನು ; ಭೂಷಿತನಾದವನು : "ಮಂಡಿತಃ . . . ಪರಿಷ್ಕೃತಃ — ೫ ಅಲಂಕರಿಸಲ್ಪಟ್ಟವನ ಹೆಸರುಗಳು" (ಸಿದ್ಧಾಂತಿ. ೦೯೮). ೪. ಸ್ಥಾನ ; ಪದವಿ. ೫. ಕಪ್ಪೆ. ೬. ಕುದುರೆ. ೭. ಮನಸ್ಸು. ೮. ಹುಲ್ಲು : "ಮಂಡಿತಮೆನೆ ಪವಮಕ್ಕುಂ ಮಂಡಿತಮೆನೆ ಕಪ್ಪೆಯಕ್ಕು ಮಂಡಿತಮೆನೆ ತುರಗಂ ಮಂಡಿತಮೆನೆ ಮನಮಕ್ಕುಂ ಮಂಡಿತಮದು ತೃಣಮೆನಿಕ್ಕು ಶಬ್ದಾಗಮದೊಳ್" (ಶಬ್ದಮಂ. ೨೬). ೯. ಚಂದ್ರ. ೧೦. ಹಂಸ. ೧೧. ಕಮಲ. ೧೨. ಬೆಟ್ಟ. ೧೩. ಸಿಹಿ ; ಮಧುರ : "ಮಂಡಿತಮೆನೆ ಶಶಿಯಕ್ಕುಂ ಮಂಡಿತಮೆನೆ ಹಂಸೆಯಕ್ಕುಂ ಮಂಡಿತ ಕಮಲಂ ಮಂಡಿತಮೆನೆ ಗಿರಿಯಕ್ಕುಂ ಮಂಡಿತಮೆನೆ ಮಾಧುರಮಕ್ಕು ಶಬ್ದಾಗಮದೊಳ್" (ಶಬ್ದಮಂ. ೨೯). [ಸಂ.]

**ಮಂಡಿಸು₁** 'ಮಂಡಿಸು' ನೋ.

**ಮಂಡಿಸು₂**, ಮಂಡಯಿಸು (ಕ್ರಿ). ೧. ಪೀಠ ಮೊದಲಾದುವುಗಳ ಮೇಲೆ ಕುಳಿತು ಅದಕ್ಕೆ ಶೋಭೆಯನ್ನು ತರು : ಅಂಧನೃಪನನು ಹರಸಿ ಹರುಷದಲಂದು ಮುನಿ ಮಂಡಿಸಿದನುನ್ನತಸಿಂಹಪೀಠದಲಿ (ಕುವ್ಯಾಕ. ೧೬-೯) ; ಉಚಿತವ ಕೈಕೊಂಡು ನಾರದ ನವರತ್ನಖಚಿತಪೀಠದಲಿ ಮಂಡಿಸಿದ (ಮೋಹತ. ೩೩-೦೩). ೨. ಕುಳಿತುಕೊಳ್ಳು ; ಕೂಡು : ಮಂಡಿಸಿ ದನುವನೆದೆಯಲಾ ದೋರ್ದಂಡಬಲ ಕಲಿವೃಷಭನಂದಿನ ಖಂಡಪರಶುವಿನಂತೆ ನೆಗಹಿದ ಮುಷ್ಟಿ ಕಿಡಿಗೆದಱೆ (ಕೊರಡಾ. ೬-೩೩-೦೯) ; ತಾನುಮರೆಗಳಿಗೆ ಕೆಲದೊಳ್ ಮಂಡಿಸಿ ಬಾಲಲೀಲೆಯಂ ನೆನೆನೆನೆದು (ರಾಮಾಶ್ವ. ೦೮-೦೮) ; ಯಜಮಾನರು ನಡುವೆ ಉಯ್ಯಾಲೆಯ ಮೇಲೆ ಮಂಡಿಸಿದ್ದಾರೆ (ಕವಿಕೀ. ೩೬).

೩. ಶಕ್ತಿಯನ್ನು ಕಳೆದುಕೊಂಡು ಕುಸಿದುಬೀಳು ; ಒರಗು : ಚೇತನಗುಂದಿ ದಿಗ್ದಂತಿ ಮಂಡಿಸಲಾಗ ಭೂತಲವೆಲ್ಲ ಕಂಪಿಸಿತು (ಮೋಹತ. ೩೯-೬೨). ೪. ಬಾಗಿಸು ; ಬಗ್ಗಿಸು : ಕಿವಿಯಂ ಮಂಡಿಸಿ [ಕಾಕಾಂ. ಮಂಟಿಸಿ, ಮೆಳ್ಳಿಸಿ] ಮಂಚುವಲ್ಗಿಱಿದು ಕಣ್ಣಂ ಬಿಟ್ಟು ವಕ್ರಾಂಗಿ . . . ಶೋರ್ಪ ವಿಕಾರಂ ಸಭೆಗಾಗಳೆಂ ಪಡೆದುದೋ ವಕ್ತ್ರಪ್ರಕಾಶೋದಿತಾರವಮಂ (ಶಹರ. ೨-೯೮) ; ಬಲಗಿವಿಯಂ ಮಂಡಿಸಿ ಮಣಿವೃತ್ತಂ (ಶೃಂಗಾರ.ಪ. ೩೯-೩). ೫. ಇರು ; ನೆಲಸು : ಐಕಲ್ವೆಟ್ಟನಣುಗಿಗೆಡದೊಡಲನಿತ್ತಲ್ಲಿ ಮಂಡಿಸಿದ ಶಂಕರನಳ್ತಿಯಿಂ (ಚಾವಶಂ. ೦-೩೦) ; ವಿಸ್ತರಗೆಯ್ದು ನೋಡಿವಡೆ ಬ್ರಹ್ಮಾಂಡಸಮಸ್ತ ನಿನ್ನೊಳಡಗಿಯುದು ಪ್ರಸ್ತವಿದೇನು ಕಾರಣ ಸ್ವಾಮಿ ನೀನೆನ್ನ ಹಸ್ತಾಬ್ಜದೊಳಗೆ ಮಂಡಿಸಿದೆ (ಮೋಹತ. ೨೦-೨೪). ೬. ನೆಡು ; ನಾಟು : ಮಂಡಿಸಿದವಕ್ಷಿಗಳು ತಿಳಿಗೊಳನಲಿ ತಳೋದರಿಯ (ಕೊರಡಾ. ೩-೯-೨೪). ೭. ವಿಷಯವನ್ನು ಮುಂದಿಡು : ಪ್ರತಿಪಾದಿಸು : ಜ್ಞಾನ ಕರ್ಮಗಳ ತಿಕ್ಕಾಟವನ್ನು ಬಿಂಡಿಸಿ ಇಲ್ಲಿಯೂ ಸಮನ್ವಯ ಸಿದ್ಧಾಂತವನ್ನೇ ಮಂಡಿಸುತ್ತಾನೆ ಶ್ರೀಕೃಷ್ಣ (ಕಾರದ. ೦೦೩) ; ಮುಕ್ತಾಯಕ್ಕೆ ಅಲ್ಲಮನ ಮುಂದೆ ತನ್ನ ಮನದ ಸಂದೇಹಗಳನ್ನು ಮಂಡಿಸಿ ಅವನಿಂದ ಸಮರ್ಪಕವಾಗಿ ಸಂದೇಹಗಳನ್ನು ಪರಿಹರಿಸಿಕೊಂಡು . . . ಸದ್ಯೋನ್ಮುಕ್ತೆಯಾಗುತ್ತಾಳೆ (ಕೂಶ್ಯಕು. ೦೩೯). ೮. [ರಾಜನೀ] ಶಾಸನಸಭೆ ಮೊದಲಾದುವುಗಳಲ್ಲಿ ಒಪ್ಪಿಗೆಯನ್ನು ಪಡೆಯಬೇಕಾದ ನಿರ್ಣಯ ಅಥವಾ ಠರಾವನ್ನು ಸಭೆಯಲ್ಲಿ ಪ್ರಸ್ತಾಪಿಸು : ಸಂಸತ್ತಿನ ಯಾವ ಸದನದಲ್ಲಿಯೂ ಆ ವಿಧೇಯಕವನ್ನು ಮಂಡಿಸತಕ್ಕದ್ದಲ್ಲ (ಭಾಧಾಪ. ೩) ; ಕಾರ್ಯದರ್ಶಿ ಕೃಷ್ಣಮೂರ್ತಿಗಳು . . . ಬಜೆಟ್ಟಿನ ವಿವರವನ್ನು ಮಂಡಿಸಿದರು (ಮರೀ. ೦೦೬). **ಮಂಡಯಿಸು** : ೯. ಶೋಭಿಸು ; ಕಂಗೊಳಿಸು : ಸರಥಿಯಂ ದಾಂಟಿ ಮೆಯ್ಮೆಚ್ಚ ಮತ್ತಾಗಸದೊಳ್ಮಂಡಯಿಸ ನಕ್ಷತ್ರಮಿರಸುವ ಫಳಂ ಚಂದ್ರಸೂರ್ಯರ್ಕ್ಕಳಾ ಕೀರ್ತಿ ಸುರಾಮರಚುಂಕುಗಿರೆ ಬಳೆವುದು (ಕರ್ನಾ. IX-i. ೨೪೯-೩೦ ; 1147). [ಮಂಡನ + -ಇಸು₃]

**ಮಂಡುಕ** (ನಾ). ಕಪ್ಪೆ ; ಭೇಕ : ಅಡವಿಯ ಸಿತ್ರನಾಂಘ್ರಿಪದ ಪಶ್ಚಿಮದೊಳ್ ತ್ರಿಕಹಸ್ತದಿಂದೆ ನೋಡಗುಬಿಸುಮಂತೆ ಪುಂಸವರೆ ಮಂಡುಕಮಂ ಸಿತಪಿತವರ್ಣದಿಂದಹಸಿದಮಾ ಬಿಟಿಕ್ಕೆ ಸಿರೆ(ಲೆ)ಯಾಮೊಡೆ (ಅಬ್ಬಿಸು. ೦೦ ೩).

[<ಪ್ರಾ. ಮಂಡುಕ. / ಸಂ. ಮಂಡೂಕ]

**ಮಂಡೂಕ** (ನಾ). ೧. = ಮಂಡುಕ : "ಮಂಡೂಕಃ, ಪ್ಲವಗಃ . . . ಪ್ಲವಂಗಂ — ಈ ೬ ಕಪ್ಪೆ" (ಹಲಾಯು. ೦೦೯-೪೦) ; ಮಂಡೂಕಂ ಶರನಿಧಿಯಂ ಕಂಡಱಿಯದೆ ಪಳಿಗುವಬ್ಧಿಗದು ಭಂಗಮೆ (ಧರ್ಮಾಮೃ. ೦-೪೯). ೨. ಒಂದು ಜಾತಿಯ ಕುದುರೆ. ೩. ಕುದುರೆಯ ಗೊರಸಿನ ತಳಭಾಗ. ೪. ಒಂದು ಬಗೆಯ ಸಸ್ಯ. [ಸಂ.]

**ಮಂಡೂಕಪರ್ಣ** (ನಾ). ಒಂದು ಬಗೆಯ ಮರ : "ಮಂಡೂಕಪರ್ಣಃ . . . ಶೋಣಕಃ, ಅರಳುಃ — ೧೨ ಹೆಮ್ಮರದ ಹೆಸರುಗಳು" (ಸಿದ್ಧಾಂತಿ. ೦೨೪). [ಸಂ.]

**ಮಂಡೂಕಪರ್ಣಿ** (ನಾ). ಒಂದು ಬಗೆಯ ಗ್ರಂದಿಗೆ ದ್ರವ್ಯ ; ಮಂಜಿಷ್ಠೆ : "ಮಂಜಿಷ್ಠಾ . . . ಮಂಡೂಕಪರ್ಣೀ. ಭಂಡೀರೀ. ಭಾಂಡೀ. ಯೋಜನವಲ್ಲೀ — ೯ ಮಂಜಿಷ್ಠೀ ಹೆಸರುಗಳು, ಇವು ಗ್ರಂಧಿಕದ್ರವ್ಯವು" (ಸಿದ್ಧಾಂತಿ. ೬೩೨). [ಸಂ. ಮಂಡೂಕಪರ್ಣೀ]

**ಮಂಡೂಕಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ: ಸಿದ್ಧಾಸನ ಸಿಂಹಾಸನ . . . ಮಂಡೂಕಾಸನ. . . ಅರ್ಧಾಸನಾದಿ ಎಂಬತ್ತುನಾಲ್ಕು ಆಸನಭೇದಂಗಳು (ಶಿವಸ. ೦೩೦) ; ಮಂಡೂಕಾಸನ . . . ಈ ಆಸನದಲ್ಲಿನ ಚಲನವಲನಗಳು ಕಪ್ಪೆಯನ್ನು ಹೋಲುವುದರಿಂದ ಇದಕ್ಕೆ ಈ ಹೆಸರು (ಯೋಗವೀ. ೦೦೧). [ಸಂ.]

**ಮಂಡೂಕಿ** (ನಾ). ೧. ಹೆಣ್ಣುಕಪ್ಪೆ. ೨. ಕುದುರೆಯ ಗೊರಸಿನ ಮೇಲಿರುವ, ಕಪ್ಪೆಯಂತಿರುವ ತ್ರಿಕೋಣಾಕಾರವಾದ ರೇಖೆ : ಖುರದ ನಡುವೆ ತಳವೆ(ಯಂ)ಬ ಪೆಸರಕ್ಕುಂ ತಳದ ನಡುವಣ ತ್ರಿಕೋಣರೇಖೆಗೆ ಮಂಡೂಕಿಯೆಂಬ ಪೆಸರಕ್ಕುಂ (ಅಶ್ವಶಾ. ೬೬-೨೬). [ಸಂ. ಮಂಡೂಕೀ]

**ಮಂಡೂರ** (ನಾ). ೧. ಕಬ್ಬಿಣದ ತುಕ್ಕು, — ಕಿಟ್ಟ : "ಮಂಡೂರಃ, ಸಿಂಘಾಣಂ—೨ ಕಬ್ಬಿಣದ ಕಿಟ್ಟಕ್ಕೆ ಹೆಸರುಗಳು" (ಸಿದ್ಧಾಂತ. ೩೦೪). ೨. ಕಬ್ಬಿಣದ ಕಿಟ್ಟದಿಂದ ಮಾಡಿದ ಕೆಂಪು ಭಸ್ಮ : ಪೊಣಸು. ಮಂಡೂರ. ರಜಸ್ಸಿ . . . ಪ್ರಾತಃಕಾಲದಲ್ಲಿ ಗ ಳ ತೂಕವಂ ಸೇವಿಸುವುದು (ಸಕವೈ. ೨೦೬). [ಸಂ.]

**ಮಂಡೆ** (ನಾ). ೧. ತಲೆ ; ಶಿರಸ್ಸು : "ತಲೆ ನೆತ್ತಿ ಮಂಡೆ" (ಶಬ್ದಮಂ. ೬೨) ; ಉತ್ಸುಕತನದಿಂ ಪೆಟ್ಟುವೆರ್ಚೆ ಕಡುಪೆಸನಂ ಮಾಟ್ಟಿ ಸೊಸೆ ಮಾವನ ಮಂಡೆಯಂ ಬೋಟಿಸಿದಳ್ (ಧರ್ಮಾಮೃ. ೬-೩೮) ; ಮಂಡೆ ಬೋಳಾದ ರೇಸೋ ಹುಟ್ಟಿ ಬೋಳುಗದನ್ನಕ್ಕರ (ಅಪಶ. ೯-೦೩) ; ಕಂಡೆ ಕರುಣಾ ನಿಧಿಯ ಗಂಗೆಯ ಮಂಡೆಯೊಳಟ್ಟ ದೊರೆಯ (ಪುರಂದ. ೦-೦೬೩ ಕಲ್ಪ). ೨. ತಲೆಯ ಓಡು ; ಬುರುಡೆ : 'ಮಂಡೆಗೈಯ' ಪರಾ. ೩. (ಅಲಂ) ತಲೆಗೂದಲು : ವೃದ್ಧವಿಟೆಯೊರ್ವಳ್ತನ್ನ ಮೊಗದ ತೆರೆಯುಮಂ ಮಂಡೆಯ ನರೆಯುಮಂ ಕಂಡಪಲ್ಕಂದಡಿಗಡಿಗೆ ಮೊಗಕ್ಕೆ ತೆರೆಯಂ ತೆಗೆವುದಂ ಕಂಡು (ಶಾಕ್ಟಿಕ್ಷ. ೦೦-೭೦ ವ) ; ಬೆನ್ನಲಿ ಬಿಟ್ಟ ಮಂಡೆಗಳ ಸುಯ್ಯ ಬಹಳದ ಭಟರು ತೊಡೆಲಸುತೊಯ್ಯನೆಂದರು (ಕುಮಾ.ರಾ. ೦೯-೬) ; ವೃದ್ಧಾಪ್ಯವಿಲ್ಲದೆ ಮಂಡೆ ನರೆವದು, ಕೆಂಪಾಗಿಹನು . . . ಈತನನ್ನು ಪಿತ್ತ ಪ್ರಕೃತಿಸೆಂದು ಅರಿವುದು (ವೈದ್ಯಸಾ. I, ೦೩). ೪. ಅತ್ಯುತ್ತಮವು ವಾದುದು ; ಶ್ರೇಷ್ಠವಾದುದು : ಬೇಡಿದ್ಯೆದೂರುಗಳು ನಮ್ಮಯ ನಾಡುಗಳ [ಪಾಠಾಂ. ನಾಡ ತಲೆ] ಮಂಡೆಗಳು (ಕುಮಾ.ಭಾ. ೯-೩೩). ೫. ದೊಡ್ಡದು ; ಗಾತ್ರವಾದುದು : 'ಮಂಡೆಕಾಗೆ' ಪರಾ. ೬. (?) : ಬಲದೊಳ್ ಪತ್ತಿದ ಮಂಡೆ ಚಮ್ಮಟಿಗೆ ಕೈವೀಣಂ ಬೆಡಂಗಾಗೆ (ಅಪಂಪು. ೦೦-೬೨) ; ಒಂದು ಕಾಲದಕ್ಕಿ ಸಿಕ್ಕಿದರೆ ಅಕ್ಕಿಯ ಕೊಟ್ಟು ಬಾಳೆ ಒಪ್ಪಿಸುವರು ತೋಟಕ್ಕೆ × × × ತೆಕಲ ಮಂಡೆ ೪ ನಾಲ್ಬದರ ಒಪ್ಪ ಮಂದ್ರಣದೇವರು (ಶಾಸನ. IX-ii, ೯೯೯-೫೬ : 1433).

**ಮಂಡೆಗೆ ನೀರು ತಳೆ** = ಅಭಿಷೇಕ ಮಾಡು : ದೇವರ ಮಂಡೆಗೆ ನೀರುತಳೆಯುವರಿಲ್ಲಲ್ಲಿ (ತಿಳಾ. ೨೬). **ಮಂಡೆಬೀಳು** = ಶರೀರದಿಂದ ತಲೆಯು ಬೇರ್ಪಡು ; ಸಾಯು : ಚಂಡೀಮುಖಕ್ಷುತ್ಕಿಪಾಶಗಳ ನೀಗಿಸಲು ಮಂಡೆ ಬೀಳಲಿ ಬಿಟ್ಟು ದುರ್ಧರಕಬಂಧವ ಚರಿಂಡಿಯುರಿ (ಪದ್ಮರ್ದ. ೦೩-೬). **ಮಂಡೆಮಾಣಿಕ** = (ಅಲಂ) ಶ್ರೇಷ್ಠವ್ಯಕ್ತಿ : ಇನಿವಾತುಗಳ ಸತ್ಪದಬಂಧವ್ಯಂಗ್ಯೋಕ್ತಿ ಧ್ವನಿಯರ್ಥಗೌರವದಿಂದೆ ತನಿರಸವಡೆದ ಮತ್ಕೃತಿಯ ಚತ್ರೈಸೆಲೆ ವನಿತೆಯ ಮಂಡೆಮಾಣಿಕವೆ (ಪ್ರೋಚತ. ೨೫-೨). **ಮಂಡೆಮಾಣಿಕ್ಯ** = ಮಂಡೆಮಾಣಿಕ : ವನಿತೆಯರ ಮಂಡೆಮಾಣಿಕ್ಯ ತಾನಾದ ಕಾರಣ ತನ್ನ ಸೌಂದರ್ಯ ಮಾಜಿಕೊಂಡಿರ್ದಡೇಂ (ಪವಮೋ. ೯-೦೦). **ಮಂಡೆಮಾರಿ$_1$** = ತಲೆಗೆ ಕುತ್ತದಂತಿರುವವನು; ಪ್ರಾಣಾಪಾಯವನ್ನುಂಟುಮಾಡುವವನು ; ಒಂದು ಬಿರುದು : ಸ್ವಸ್ತಿಶ್ರೀಜಯ ಕಾಮನ್ನೀರಪಬ್ಬಾಣನ್ ಕಡಿತಲೆ ಮಣ್ಡೆಮಾರಿ ತೊಪ್ಪುತ್ತೈವರ್ ಇಜಿವೊ (ಎಕ. IX (೩), ದೊತ್ತ. ೩೨-೬ ; ೯೦೦). **ಮಂಡೆ ಬೋಚು** = ತಲೆಯನ್ನು ಬೋಳಿಸಿಕೊಳ್ಳು ; ಮುಂಡನಮಾಡಿಸಿಕೊಳ್ಳು : ಮಂಡೆಬೋಚಿದಾ ಹೆಂಡಿರ ದಂಡೇ ವಿವಿಧಾಲಾಪಚಂಡಪ್ರಲಾಪದ ಓಲಗ ಬಾಜಿಸಿರಿ ! (ಗಂ. ೬೬-೩). **ಮಂಡೆಯಾಜುಳ್ಳವ** = ಆರುತಲೆಗಳುಳ್ಳವನು ; ಷಣ್ಮುಖ : ಕುಂಡಲ ಮಖಗನು ಮಂಡೆಯಾಜುಳ್ಳವ ಕೆಂಡಗಣ್ಣವನು ಕಂಗಳ ಗಂಡು ಮೂವರ ಚೆಲ್ವ ಹುಸಿತಿ ಪೊಗಳ್ವರೆ. . . ಇಂದು ಕುಣಿಯೊಂದ (ಕೋಟಕ. ೩-೦೬೭). [ ದೇ.॥ ತಮಿ. ಮಣ್ಟೈ; ಮಲ. ಮಣ್ಣ; ತುಳು. ಕೊಡ. ಮಂಡೆ; ಕೋತ. ಮಂಡ್; ತೊದ. ಮಡ್ ]

**ಮಂಡೆಕತೆ** (ನಾ). (ಕರಾ) ಸಮಸ್ಯೆ; ಒಡಪು : ಒಂದು ಒಗಟನ್ನು ಬಿಡಿಸಿದಾಗ, ಒಂದು ಮಂಡೆಕತೆಯ ಗುಟ್ಟನ್ನು ಪ್ರಕಟಿಸಿದಾಗ ಆಗುವ ಆನಂದ ಅನುಪಮ (ಸಂಶೋಧ. ೦೯೬). [ ಮಂಡೆ + ಕತೆ ]

**ಮಂಡೆಕರಂಡೆ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು : ಮಂಡೆಕರಂಡೆ(ಬೇಸಿಗೆಯಲ್ಲಿ ಗದ್ದೆಗಳಲ್ಲಿ ಬೆಳೆಯುವ ಗೋಲಿಯಾಕಾರದ ಕೆಂಪುಗೊಂಡೆಹೂವುಳ್ಳ ಗಿಡ)ಯ ಸೊಪ್ಪಿನ ರಸ ಎರಡುತೊಲೆಯಷ್ಟನ್ನು ಬಿಸಿಮಾಡಿ ಅರ್ಧತೊಲೆ ಕಾಳುಮೆಣಸಿನ ಪುಡಿ ಬೆರೆಸಿ ಬಿಸಿಬಿಸಿ ಏಳುದಿನ ಬೆಳಗ್ಗೆ ಕುಡಿದರೆ ಪೂರ್ಣಗುಣ (ಮನೆಮ. ೯೮). [ ಮಂಡೆ$_1$ + ಕರಂಡೆ ]

**ಮಂಡೆಕಾಗೆ** (ನಾ). ದೊಡ್ಡ ಆಕಾರದ ಒಂದು ಬಗೆಯ ಕಾಗೆ : ಮಂಡೆಕಾಗೆ ಕಾಗೆಯಲ್ಲೆ ದೊಡ್ಡದು. ಅದರ ಕತ್ತು, ಎದೆಗಳು, ತಲೆ, ರೆಕ್ಕೆಗಳಷ್ಟು ಕಡುಪಾಗಿಲ್ಲ (ಪಾಲಕ್ಕ. III. ೦೬೩೨). 'ಡೊಂಬಕಾಗೆ' ಪರಾ. [ ಮಂಡೆ + ಕಾಗೆ./ ತುಳು. ಮಂಡೆಕಕ್ಕೆ ]

**ಮಂಡೆಗೈಯ** (ನಾ). ತಲೆಬುರುಡೆಯನ್ನು ಕೈಯಲ್ಲಿ ಧರಿಸಿರುವವನು : ಕಪಾಲಧರ; ಶಿವ : ಜೈಸರು ... ತಂಡತಂಡದಿ ಬಂದು ನೆರವುತಲಿರ್ದರು ಮಂಡೆಗೈಯನ ಹಳಿವುತಲಿ (ಅಭ್ಯುದ. ೯-೦೯). [ ಮಂಡೆ + ಕೈ$_{12}$ (< ಕೆಪರ್$_2$) + — ಅ$_7$ ]

**ಮಂಡೆತೆರಿಗೆ** 'ಮಂಡೆದೆರಿಗೆ' ನೋ.

**ಮಂಡೆದೂಗು** (ಕ್ರಿ). (ಆಶ್ಚರ್ಯ, ಮೆಚ್ಚುಗೆ ಮುಂತಾದುವುಗಳಿಂದ) ತಲೆಯನ್ನು ಅಲುಗಿಸು,—ಓಲೆದಾಡಿಸು : ಕುವರರು ನೋಳ್ಪರು ನಗುವರು ಮಂಡೆದೂಗುವರು ಕೈಮುಗಿವರುಬ್ಬುವರು . . . ಅಜ್ಜನ ಭುವನತ್ರಯಾದ್ಭುತೋಜ್ವಲಕೆ (ಭರತ. ೪೩-೩). [ ಮಂಡೆ + ತೂಗು$_1$ (< ತೂಂಗು$_1$) ]

**ಮಂಡೆದೆರಿಗೆ, ಮಂಡೆತೆರಿಗೆ** (ನಾ). ಪ್ರತಿಯೊಬ್ಬ ವ್ಯಕ್ತಿಯೂ ಕೊಡಬೇಕಾದ ತೆರಿಗೆ; ತಲೆಗಂದಾಯ : ಕ್ರಿ.ಶ. ೧೩೭೭ರಲ್ಲಿ ನೆರೆದ ಪಾರ್ಲಿಮೆಂಟಿನವರು ಹಿಂದಾದದ್ದನ್ನೆಲ್ಲ ರದ್ದುಮಾಡಿದ್ದಲ್ಲದೆ ಮಂಡೆದೆರಿಗೆ ಎಂಬ ಹೊಸತೆರಿಗೆಯನ್ನು ಗೊತ್ತುಪಡಿಸಿದರು (ಇಂಗ್ಲಂಡ. ೬೩); ಜಿಜಿಯಾಯೆಂಬ ಮಂಡೆದೆರಿಗೆಯನ್ನು ಬಿಟ್ಟುಕೊಟ್ಟನು (ಅಕ್ಬರ. ೦೨೯). **ಮಂಡೆತೆರಿಗೆ :** ತಮ್ಮ ಮೇಲೆ ಮತ್ತಿಲ್ಲಿ ಮಂಡೆತೆರಿಗೆ ಬೀಳುತ್ತದೋ ಎಂಬುದಾಗಿ ಶಂಕಿಸಿದ್ದ (ಬ್ರಿಟಿ.ಇ. ೦೯೦). [ಮಂಡೆ + ತೆರಿಗೆ ( < ತೆಱಗೆ). / ತುಳು. ಮಂಡೆತೆರಿಗೆ]

**ಮಂಡೆದೋಱು** (ಕ್ರಿ). ಗೋಚರವಾಗು ; ಕಾಣಿಸಿಕೊಳ್ಳು : ಗಂಡುತನವುಳ್ಳವರು ರಣದಲಿ ಮಂಡೆದೋಱುವರೆನುತ ಬಳಿಕೀ ರಂಡೆಯುಯ್ಯಲು ಬೇಡ ಕಾದುವರುಂಟೇ ಕರೆಯೆಂದ (ಕೌಶಿಕಾ. ೨೦-೩೦). [ ಮಂಡೆ + ತೋಱು ]

**ಮಂಡೆನೋವು** (ನಾ). ತಲೆನೋವು ; ಶಿರೋವೇದನೆ : "ಮಂಡೆ ನೋವದು ಶಿರೋವ್ಯಾಧಿಯೆನಿಕುಂ" (ವಂಂಗರಾ. ೦೦೯-೪) ; ತೃಷೆ, ಮಂಡೆ ನೋವು, ಪ್ರಲಾಪ ಇವಿಷ್ಟೂ ಅಮ್ಲಪಿತ್ತಲಕ್ಷಣ (ವೈದ್ಯಸಾ. I. ೯೯೩). [ಮಂಡೆ + ನೋವು]

**ಮಂಡೆಬೇನೆ** 'ಮಂಡೆವೇನೆ' ನೋ.

**ಮಂಡೆಮಣೆ** 'ಮಂಡೆವಣೆ' ನೋ.

**ಮಂಡೆಮಲಗು** (ನಾ). ಮಲಗುವಾಗ ತಲೆಗೆ ಆಶ್ರಯವಾಗುವಂಥ ಸಾಧನ ; ತಲೆದಿಂಬು : ಮಣಿಮಂಚ ಸುಪ್ಪತಿಗೆ ಮಂಡೆಮಲಗುಗಳಡ್ಡ ಪೊಜೆಯಾಳ್ಗಳಿಟ್ಟಣಿಸಿ ನಡೆತಂದುದೇಳ್ವೆನು (ಶಬರ. ೪೬-೪೦). [ಮಂಡೆ + ಮಲಗು$_2$ ( < ಮಲಂಗು$_2$)]

**ಮಂಡೆಮಾರಿ$_1$** 'ಮಂಡೆ' ಪರಾ.

**ಮಂಡೆಮಾರಿ$_2$** (ನಾ). ತಲೆಸುತ್ತು ಮುಂತಾದ ತಲೆಗೆ ಸಂಬಂಧಿಸಿದ ರೋಗ : ಅವನಿಗೇನಾಗಿದೆ ಮಂಡೆಮಾರಿ? ಕಲ್ಲುಗುಂಡಿನ ಹಾಗೆ ಇದ್ದಾನೆ (ಬಾಳಗ. ೦೮) ; ನಿಮಗೆ ದುಡಿಯಲಿಕ್ಕೆ ಮಂಡೆಮಾರಿ. ಮನೆಯಲ್ಲಿ ಸುಮ್ಮನೇ ಕೂಡುವುದೇ ಕೂಡುವುದು (ಪರಾವ. ೦೩೯).

[ ← ತುಳು. ಮಂಡೆಮಾರಿ]

**ಮಂಡೆಯ** (ನಾ). (?) : ಮಣ್ಣೆಯ ಗಾಮುಣ್ಡನ ಮಗಂ ಪೃಥುವೀರಾಮ ಸೆಟ್ಟಿ ಬಸದಿಯಂ ಕಟ್ಟಿಸಿದೊಡೆ (ಎಕ. X, ಮುಳಬಾ. ೨೦೬-೨೦:1000). [ ? ]

**ಮಂಡೆಮಣಿ**, ಮಂಡೆಮಣಿ (ನಾ). ೧. (ಅಲಂ) ಶ್ರೇಷ್ಠವ್ಯಕ್ತಿ; ಅಗ್ರೇಸರ: ನೃಪತಿ . . . ಚಂಡಸೇನೆಯನೊಳಪೊಕ್ಕೇರಿ ತಿವಿದನು ಮಂಡಳಿಕರ ಮಂಡೆಮಣಿಯು (ಜೀವಂಧಸಾಂ. ೩-೩೬). **ಮಂಡೆಮಣಿ :** ೨. ಶ್ರೇಷ್ಠವಾದ ರತ್ನ : ಕಂಜಾಕ್ಷಿಯ ಮಂಡೆಯೊಳತಿರಂಜಿಸುವನುಪಮದ ಮಂಡೆಮಣಿ ನೆಲೆಸಿರ್ಕುಂ (ಹರಿಶ್ಚಂ. ೨-೩೩). [ಮಂಡೆ + ಮಣಿ$_3$]

**ಮಂಡೆವೇನೆ**, ಮಂಡೆಬೇನೆ (ನಾ). = ಮಂಡೆನೋವು : ಕೊಂಡಯುರಾಡಿದ ನುಡಿಯಿಂದ ಬಂದುದೊ ಮಂಡೆವೇನೆಯೊ ಸವತಿಯರ ತಂಡದಿಂದಾದುದೊ ಪೇಳೀ ಚಿಂತೆಯ (ಕುಮಾರಾಮ. ೨೬-೦೪). **ಮಂಡೆಬೇನೆ :** ನಸ್ಯವಂ ಮಾಡಿಸಲು . . . ಮಂಡೆಬೇನೆ . . . ಸ್ವರಭಂಗ ಇವಿಷ್ಟನ್ನೂ ಪರಿಹರಿಸುವದು (ಪ್ರತ್ಯಕ್ಷಾ. ೧, ೩೩). [ಮಂಡೆ + ಬೇನೆ]

**ಮಂಡೆಶೂಲೆ** (ನಾ). = ಮಂಡೆನೋವು : ಮಂಡಶೂಲೆಗೆ :– ಹುಳಿಪಣ್ಣಿಗೆ ಕಬಿಸೋರೆಯನ್ನು ತಂದು ಅರೆದು ಸಾಮಕ್ಕಿಯನ್ನು ಹಾಕಿ ಬೇಯಿಸಿ ಮಂಡೆಗೆ ಹಾಕಿ ಕಟ್ಟಿ (ಬಿವೈ.ಶಿ. ೦೪೬). [ಮಂಡೆ + ಶೂಲೆ$_1$]

**ಮಂಡೆಸೀಗೆ** 'ಮಂಡಸೀಗೆ' ನೋ.

**ಮಂಡೆಸುತ್ತು** (ನಾ). ೧. ತಲೆತಿರುಗುವುದು : ತಲೆಸುತ್ತು ಎಂಬುವನ್ನೇ ಕೆಲವುಕಡೆಗಳಲ್ಲಿ ಮಂಡೆಸುತ್ತು ಎಂದು ಹೇಳುತ್ತಾರೆ (ರೂಢಿ). ೨. ರುಮಾಲು ; ಪೇಟ : ಒತ್ತಿ ಬೇಡುತ ಮಂಡೆಸುತ್ತಿನೊಳಿತ್ತಿ ಕಾಲಂ ಕಟ್ಟಿ (ಬಸವು. ೪೪-೬೦). [ಮಂಡೆ + ಸುತ್ತು$_2$]

**ಮಂಡೆಹಜಿಕ** (ನಾ). ತಲೆಗೂದಲನ್ನು ಕೀಳಿಸಿಕೊಂಡವನು : ಜೈನಸಂನ್ಯಾಸಿ ; ಶ್ರಮಣ : ಕಂಡ ಮಾತ್ರದೊಳು ಕೈವಲ್ಯಸುಖವನೀವ ಪೆಂಡವಾಸವನುಜಿ ತೊಜಿದು ಮಂಡೆಹಜಿಕರ ಮಾತನು ಕೇಳ್ವುದಕೆ ಮನಗೊಂಡೆಯಲಾ (ಶೀಬಿಸಂ. ೩೪-೩೩).

[ಮಂಡೆ + ಪಜಿ$_1$ ( < ಪಜಿ$_1$) + – ಕ$_3$]

**ಮಂಡೆಹುಣ್ಣು** (ನಾ). ತಲೆಯಲ್ಲಿ ಏಳುವ ಹುಣ್ಣು : ತಲೆಕಜ್ಜಿ : ಅಕ್ಕಿಹೊಡೆಯ ಸಮೂಲವನ್ನು ಒಳ್ಳೆಣ್ಣೆಯಲ್ಲಿ ಅರೆದು ಪೂಸೆ ಮಂಡೆಹುಣ್ಣು ಮಾಣ್ಗುಂ (ಬಿವೈ.ಶಿ. ೬೬). [ಮಂಡೆ + ಹುಣ್ಣು (<ಪುಣ್)]

**ಮಂಡೋದಕ** (ನಾ). ೧. ದೋಸೆ, ಇಡ್ಲಿ ಮುಂತಾದುವು ಮೆದುವಾಗಲು ಬೆರಸುವ ಉದ್ದು ಮುಂತಾದ ಹಿಟ್ಟು : ಹುದುಗು. ೨. ಅನೇಕ ವರ್ಣಗಳಿಂದ ಕೂಡಿದುದು; ನಾನಾವರ್ಣಗಳ ಮಿಶ್ರಣ : ' ಮಂಡೋದಕಚಿತ್ರ ' ಪರಾ. [ಸಂ.]

**ಮಂಡೋದಕಚಿತ್ರ** (ನಾ). " (ಗೋಡೆಯ, ಚಾವಣಿಯೊಳಮೈಯ) ಗಾರೆ ಒಣಗುವುದಕ್ಕೆ ಮೊದಲೇ ಅದರ ಮೇಲೆ ನೀರುಬಣ್ಣಗಳಿಂದ ಬರೆದ ಚಿತ್ರ : ಮಂಡೋದಕಚಿತ್ರ ; ಭಿತ್ತಿಚಿತ್ರ " (Fresco. ೩:೪೩): ಮನಮೋಹಕವಾಗಿ ಬರೆದಿದ್ದ ಚಿತ್ರವು ರೇಖಾಚಿತ್ರವಾಗಿರದೆ ಬಣ್ಣದಿಂದ ಬರೆದಿದ್ದ ಮಂಡೋದಕಚಿತ್ರವಾಗಿದ್ದಿತು (ಹೇಮಂತ. ೩೯೩). [ಸಂ.]

**ಮಂಡೋಳ** (ನಾ). ಒಂದು ಬಗೆಯ ವಿಷಸರ್ಪ : ಬೇರೆ ವಿಷಯುಕ್ತ ಸರ್ಪಗಳು ಜೇಣೀಹಾವು (ಘುರ್ಸಾ), ಮಂಡೋಳ (ಘೋಣಸ) . . . ಅಜಗರ ಮುಂತಾದವುಗಳು ಪ್ರಸಿದ್ಧ ಉಂಟು (ಕಣಗ. ೬೬).

[←ಮರಾ. ಮಾಂಡೂಳ, ಮಾಂಢೂಳ, ಮಾಡೂಳ, ಮಾಢೂಳ]

**ಮಂತ**, ಮಂತು$_1$ (ನಾ). ೧. ಕಡೆಯುವ ಕೋಲು : ಕಡಗೋಲು : ಥಕಾರಕ್ಕೆ ತಕಾರಂ . . . ಮಂಥ_ಮಂತ ; ಮಿಥಿಳಾ-ಮಿತಿಳೆ (ಶಮಂದ. ೨೩೩ ಸೂತ್ರ). ೨. ಮೊಸರಿನ ಮೇಲಿನ ಒಡಕಲಾದ ನೀರು : ನಿಡಿ : ಮಂತಮೆಂದುಂ ಕಡೆಗೋಲುಂ ಮೊಸರ ಮೇಲಿನ ನಿಡಿಯುಮಕ್ಕುಂ (ಶಮದ. ಸ. ೨೬೯ ಸೂತ್ರ). ೩. (?) : ಆತನಂ ನೋಯಿಪುದೇಂ ಪುರುಷಾರ್ಥಮೆ ಮಂತದೊಳೇಂ ಕರಿ ಹರಿಯೊಳ್ ಸೆಣಸಿ ಪೋರ್ದು ನಿರ್ವಹಿಸುಗುಮೇ (ಶಾಂತಿಪು. ೩-೮೩). **ಮಂತು$_1$** : ೧. ಮಂದರ ಪರ್ವತಮಂ ಮಂತುಮಾಡಿ ಪಾಲ್ಗಡಲ ಮಥನಮನೆಂತು ಮಾಡಿದರೊ (ಸೌಗಂಧಿ. ೩೦೩-೪) ; ನಗುಪಾತ್ರ ಪರಿಮಳದ ಪಸರಿಸುವ ಕುಸುಮ ದುಗುಡ ಪಾತ್ರದ ಕಡೆದು ಸತ್ತ್ವವೆತ್ತುವ ಮಂತು ಬಗೆದರಡನುಂ ಭುಜಸು (ಮಂಕಣ. ೪೩೪). ೪. ಕಡೆಯುವುದು : ಮಥಿಸುವುದು : (ಅ).

[< ಸಂ. ಮಂಥ]

**ಮಂತಣ$_1$**, ಮಂತಣೆ$_1$ (ನಾ). ೧. ಆಪ್ತರೊಂದಿಗೆ ಯಾವುದಾದರೂ ಗಹನವಾದ ವಿಷಯವನ್ನು ಗುಟ್ಟಾಗಿ ಆಲೋಚಿಸುವುದು : ಮಂತ್ರಾಲೋಚನೆ : " ಮಂತಣಮೊಂದೇಕಾಂತಂ " (ಕಕಸಾ. ೬೬-೩೦೨); ಮಂತ್ರಿಯಿಲ್ಲದರಸು ಮಂತಣಮಿ[ಶಾಕಾಂ. ಮನ್ನಣೆಯಿ]ಲ್ಲದ ನೃಪನೋಲಗಮೆಣೆಯಿಲ್ಲದ ಜಕ್ಕವಕ್ಕಿ ಸೊಗಯಿಸಿದಪ್ಪುದೇ (ಅಜಿತ. ೬-೯೬); ಮಂತಣಕಂ ನೆಗಟೆ ಬಂದರೆನಿಸಿರ್ದುಂ ತಾಂ ಮಂತಣಮುಸಿರದೆ ಕೆಲರಾಮಂತಣ ಮುಂಡಂತೆ ಪೆಜರ ನಯದೊಳೆ ತಣಿಪರ್ (ಕಾವ್ಯಾವ. ೩೩೩). ೨. ಉತ್ತಮವಾದ ರಾಜನೀತಿ : ಪುಸಿವುದೆ ತಪ್ಪು ಕೊಟ್ಟಬೆಚ್ಚಿಕೊಳ್ವುದೆ ಮಂತಣಂ (ಎಕ. II, ೦೩೩-೪೩ ; ೧೧೮೨). ೩. ಬುದ್ಧಿವಾದ ಹೇಳುವುದು : ಸಂಜೀವಕಂ ದಾವದಾವನಿನಾದಂ ಭವದಿಷ್ಟಸೇವಕಗಣಕ್ಕೇಂ ಪರ್ದುವೇಂ ಮಂತಣಂ (ಪಂಚತಂ. ೯೬-೨೦). ೪. ಆಲೋಚನೆ : ವಿಚಾರ : ಭವದೀಯ ವಿಯೋಗದಿಂದೇಂ ಮಂತಣಂ (ನೇಮಿಪು. ೪-೯೪). ೫. ರಹಸ್ಯವಾದ ಮಾತುಕತೆಯಾಡುವ ಸ್ಥಳ ; ಮಂತ್ರಾಲೋಚನೆಯ ಸ್ಥಳ : ಚಿಂತೆಯ ಮಂತಣಂ ದುಗುಡದೋವರಿ ಜಾಡ್ಯದ ಬೀಡು (ದಶಕು. ೮-೨೩೬). ೬. (ಅಲಂ) ಗುಂಪು; ಸಮೂಹ : ವಿರಚಿಪ ಮಾಲೆಗಾರ್ತಿಯರ ಮಂತಣ ಮೊಪ್ಪುಗುಮಲ್ಲಿ ಸಂತತಂ (ರಾಜಶೇ. ೨-೦೦೪). ೭. ಒಟ್ಟಿಲು ; ರಾಶಿ : ಬಾಳೆಯ ಹಣ್ಣಿನಿಕ್ಕೆಯ ಮಧೂಫಲದ ಮಂತಣದ ನಾರಿಕೇಳದ ನೆರವಿಯ ಸರ್ವಫಲಮಸ್ತುಸಂತಾನಮಂ (ಕೇಶಿರ. ಷ. ೩೦೪-೮೦). **ಮಂತಣೆ$_1$** : ೪. ವಿಧಾತ್ರಂ ಮಂತಣೆಯಂ ಮಾಡಿದನಯ್ಯ ಪಾಯ್ಯಲೆಯೊಳಾತ್ಮಸ್ಥಾಯ್ಯನ ಪಾಯ್ಯನಂ (ಸೌಇಇ. XX. ೨೦೨-೬೦; 1244).

**ಮಂತಣದ ತೊಟ್ಟಿ** = ರಾಜನು ಇತರರೊಂದಿಗೆ ಸಮಾಲೋಚನೆ ಮಾಡುವ ಶಾಲೆ._ಮಂಟಪ : ಮೈಸೂರ ಅರಮನೆ, ಮಂತ್ರಣದ ತೊಟ್ಟಿ (ಸಂಗಸಂ. ೪೩-೦ ). **ಮಂತಣದ ಮಂದಿರ** = ಮಂತ್ರಾಲೋಚನೆಮಾಡುವ ಭವನ : ಅವಳು ಪಹರೆಯವರ ನುಡಿಗೆ ಕಿವಿಗೊಡದೆ ಬಿರುಗಾಳಿಯಂತೆ ಮಂತಣದ ಮಂದಿರದೊಳಗೆ ನುಗ್ಗಿದಳು (ಹಾಮೂತ. ೪೦). **ಮಂತಣದ ಸಾಲೆ** = ಮಂತಣದ ಮಂದಿರ : ಚಿತ್ರಶಾಲೆಯೊಳಿನಿಸೂರ್ಮೆ ಮಂತಣದ ಸಾಲೆಯೊಳಂದಿರದೊರ್ಮೆ . . . ಪೊಱ್ತುಗಳೆವಂ ಕವಿತಾಕಳಿಕಾಮ್ರಕೋಕಿಳಂ (೦ಲಾವ. ೪-೦೨) ; ಸಾಂತಣ್ಣ ಮಂತಣದ ಸಾಲೆಯಲ್ಲಿ ಕುಳಿತು ಅಧಿಕಾರಿಗಳಿಂದ ಬಂದ ಓಲೆಗಳನ್ನು ಪರಿಶೀಲಿಸುತ್ತಿದ್ದಾಗ (ಹಾಮೂತ. ೦೦೦).

[<ಪ್ರಾ. ಮಂತಣ. / ಸಂ. ಮಂತ್ರಣ]

**ಮಂತಣ$_2$**, ಮಂತಣೆ$_2$ (ನಾ). ೧. ಕಡೆಗೋಲು : ' ಮಂತಣಸೂಲ ' ಪರಾ. **ಮಂತಣೆ$_2$** : ೨. ಅಡಗಿಸುವಿಕೆ : ಹತೋಟಿಗೆ ತರುವುದು :

ಬಿನ್ನಪಂಗೆಯ್ದು ಬಸಂತನ ಮಂತಣದ ಮಾತಂ ಸೋರ್ಕಾನೆ ಮಂತಣೆಯ ಮಾವಂತನ ಮಾತಂ ಮನ್ನಿಸುವಂತೆ ಮನ್ನಿಸಿ (ಕಬ್ಬಿಗ. ೦೬೦).

[<ಪ್ರಾ. ಮಂಥಣ./ಸಂ. ಮಂಥನ]

**ಮಂತಣಂಗೊಳ್**, ಮಂತಣಂಗೊಳು, ಮಂತಣಗೊಳು (ಕ್ರಿ). ೧. ಮಂತ್ರಾಲೋಚನೆಮಾಡು; ಸಲಹೆಯನ್ನು ಕೇಳು : ದೂತಿಯೊರ್ವಳ್ ... ಓಲಗಂ ಪರೆಯೆ ಸಚಿವಂಬೆರಸು ಮಂತಣಂಗೊಳ್ವ ರಾಯನೆಡೆಗೈತಂದು (ರಾಜಶೇ. ೦೯-೦೩). **ಮಂತಣಂಗೊಳು** : ೧. ಪಲವು ಪಿಸುಣರ್ ಪಾತಕರ್ ನೆರೆದು ತಾವೆಲ್ಲರೊಲವಿಂ ಮಂತಣಂಗೊಳುತೆ ಗುಜುಗುಜು ಗುಟ್ಟಿ (ಶಬ್ದ. ೬-೨). **ಮಂತಣಗೊಳು** : ೨. ಆಲೋಚಿಸು; ವಿಚಾರಮಾಡು : ಚಿಂತರಪಿತರಾಗಿಹ ತನುಜರ ಕಂಡು ಮಂತಣಗೊಂಡು ಮನದಲಿ (ಭಕ್ತ. ೦೬). [ಮಂತಣ$_1$ + ಕೊಳ್$_1$]

**ಮಂತಣಂಗೊಳು** 'ಮಂತಣಂಗೊಳ್' ನೋ.

**ಮಂತಣಂಬಡೆ** (ಕ್ರಿ). ಗುಂಪುಗೂಡು; ಒಟ್ಟಿಗೆ ಸೇರು : ತರುಬಿದ ರಾಜಪುತ್ರರಿಂ ಮಂತಣಂಬಡೆದ ಮಂತ್ರಿಗಳಿಂ . . . ಪೊಸುಪಸುರ್ವಿಂದ ರೊಸಗೆ ಬಿಗೆ ಮಿಸುಗುತ್ತಿರ್ದುದು (ರಾಜಶೇ. ೬-೩ ವ). [ಮಂತಣ$_1$+ಪಡೆ$_1$]

**ಮಂತಣಗಾರ್ತಿ** (ನಾ). ಏಕಾಂತದಲ್ಲಿ ಸಲಹೆ ಕೊಡುವವಳು : "ಪಚ್ಚುಗೆಗಾರ್ತಿ, ಮಂತಣಗಾರ್ತಿ_ಈ ಎರಡು ಏಕಾಂತದವಳ್" (ಶಶಾ. ೬೨-೩೬೯). [ಮಂತಣ$_1$ + —ಕಾಱ + —ತಿ$_1$ (<—ಇತ್ತಿ)]

**ಮಂತಣಗೆಯ್**, ಮಂತಣಗೈ (ಕ್ರಿ). ೧. ಮಂತ್ರಾಲೋಚನೆಯನ್ನು ಮಾಡು; ಸಮಾಲೋಚಿಸು : ನೆನೆದು ರಣಭಂಗಮಂ ಸಕಲದೈತ್ಯರ್ ತಮ್ಮ ಮನದಹಂಕೃತಮಳಿದು ದುಃಖದಿಂ ನೋವುತಿರ್ಪನಮಂಧಕಾಸುರಂ ಕರೆಸಿದಂ ದೊರೆದೊರೆಗಳಂ ಮಂತಣಗೆಯ್ಯಲು (ತಂಶ್ರ. ೩೦-೨). **ಮಂತಣಗೈ** : ೨. ಆಲೋಚಿಸು; ವಿಚಾರಮಾಡು : ಅರಸನಚ್ಚರಿ ಪಟ್ಟು ಮನದಿ ಮಂತಣಗೈದು ಮಗುಳವರೋಳೀತೆಂದನು (ಚನ್ನಿರಾ. ೩-೯). [ಮಂತಣ$_1$ + ಕೆಯ್$_1$]

**ಮಂತಣಗೈ** 'ಮಂತಣಗೆಯ್' ನೋ.

**ಮಂತಣಗೊಳು** 'ಮಂತಣಂಗೊಳ್' ನೋ.

**ಮಂತಣಮಿರ್** (ಕ್ರಿ). ೧. ಸಮಾಲೋಚನೆ ಮಾಡು; ಮಂತ್ರಾಲೋಚನೆಯಲ್ಲಿ ತೊಡಗು : ಅತಿರಥಮಹಾರಾಜಂ ಮಂತ್ರಿಯರ್ಕಳೊಡನೆ ಮಂತಣಮಿರ್ದಲ್ಲಿ ಮಂತ್ರಿಯರ್ಕಳನಿಂತೆಂದು ಬೆಸಗೊಂಡಂ (ವಡ್ಡಾರಾ. ೯೦-೨೦); ದುರ್ಯೋಧನ ಕರ್ಣ ಶಕುನಿ ಸೈಂಧವರೆಂಬ ದುಷ್ಟಚತುಷ್ಟಯ ದೊಳ್ ಮಂತಣಮಿರ್ದು (ಸಂಶಜಾ. ೬-೬೬ ವ). ೨. **ಆಲೋಚಿಸು** : ಅಂತು ಕಿಱಿದುಪೊತ್ತು ಮನದೊಳೆ ಮಂತಣಮಿರ್ದು ನಿಶ್ಚಯಿಸಲಱಿಯದೆ (ವರ್ಧಮಾ. ೩-೦೭ ವ); ಮನದೊಳ್ ಮಂತಣಮಿರ್ದು ಲಕ್ಷ್ಮಣಂ ಸಭೆಯಿಂನೆಟ್ಟನೆ ಪೋಪುದುಂ (ಶಂರಾಮಾ. ೬-೦೩೯ ವ). [ಮಂತಣ$_1$ + ಇರ್$_1$]

**ಮಂತಣವಟ್ಟೆ** (ನಾ). ಆಲೋಚನೆಯ ಮಾರ್ಗ : ಸಲಹೆಯ ರೀತಿ : ಮಾಯಾಸಮರ್ಥರಿರ, ತಿಳಿಯಲಾಟಪೆನಿಲ್ಲಿಗೇಂ ಮುಂದೆ ಪದನೆಂಬ ನಿಮ್ಮ ಮಂತಣವಟ್ಟೆಯಂ (ಶ್ರೀಣಮಾ. ೩೩೬-೦೦೯). [ಮಂತಣ$_1$ + ಬಟ್ಟೆ$_1$]

**ಮಂತಣಶಾಲೆ**, ಮಂತಣಸಾಲೆ (ನಾ). ಮಂತ್ರಾಲೋಚನೆ ಮಾಡುವ ಮನೆ : ಮಾರಿಯ ಮಂತಣಶಾಲೆಯೆಂದೆನಿಪಾ ಘೋರಾಕಾರವನಾಂತ ಪೇರಾಲದಡಿಯೊಳು ವಿಕೃತಾಕಾರದ ಕೂರಾಳಿರ್ದನದೊರ್ವ (ಶ್ರೀಪಾಲ. ೬-೫೭) : ಸಂಜರಾಜಯ್ಯನವರು ಟಿಪ್ಪೂಸುಲ್ತಾನರ ದಿವಾನರನ್ನು ಅರಮನೆಯ ಮಂತಣಶಾಲೆಯಲ್ಲಿ ಕುಳ್ಳಿರಿಸಿ ... ತಾವೂ ಕುಳಿತುಕೊಂಡರು (ಕೃಷ್ಣಭೂ. ೩೬). **ಮಂತಣಸಾಲೆ** : ಮಂತಣಸಾಲೆಗೆ ಬಂದನಿಂದ್ರಸಿಂಧುಗತಿ ರೇವತೀಧವನುಮುದ್ಧವನುಂ ಬರೆ ರುಕ್ಮಿಣೀಧವಂ (ಜಗನ್ನಾ. ೦೩-೯೭); ಓಲಗಸಾಲೆ ಮಂತಣಸಾ[ಶಾ]ಲೆ . . . ಸುಚಿತ್ರಸಾಲೆಗಳೊಳ ಱಸಿದಳಾ ಲೋಲಲೋಚನೆ ರಾಮನನು (ತೊರವೆರಾ. ೩೩-೯೨); ರಾಜನೂ ಮಂತಣಸಾಲೆಯ ಬಾಗಿಲಲ್ಲಿ ಕಾದು ನಿಂತಿದ್ದ ಪ್ರಭಾಚಂದ್ರರನ್ನು ಕರೆದು ಕೊಂಡನು (ನವಿ. ೨೨). [< ಸಂ. ಮಂತ್ರಣಶಾಲಾ]

**ಮಂತಣಸಾಲೆ** 'ಮಂತಣಶಾಲೆ' ನೋ.

**ಮಂತಣಸೂಲ** (ನಾ). ಕಡೆಗೋಲಿನಾಕಾರದ ಶೂಲ. —ಈಟಿ : ಜವನ ಮಂತಣಸೂಲದಂತೆ ನೆಗೆದ ಕೊಂತದ ಕೂರ್ಮೊನೆಯ ಕೋಲಾಟಕ್ಕೆ. . . ಬಿಜ್ಜೋವರಿಯರ್ ಪುಗಲಱಿಯದೆ ಸಿಡಿಮಿಡಿಗೊಳುತ್ತಿರೆಯುಂ (ಕಬ್ಬಿಗ. ೨೮೮). [ಮಂತಣ$_2$ + ಸೂಲ$_2$]

**ಮಂತಣೆ** (ನಾ). ೧. ಮೊಸರಿನ ಪಾತ್ರೆ; ಘಟಾರಕ್ಕೆ ತಕಾರಂ—ಕಘಾ—ಕತೆ . . . ಮಂಥನಿ—ಮಂತಣಿ (ಶಮದ. ೨೫೫ ಕ್ರಜೋ.) ; ಹರಿ . . . ತೆಗೆದೊಂದ ಸುಬೆಗಲ್ಲನು ಮಿತ್ತು ಬಿಸಾಡುವ ಕೋಪದಿಂದೆತ್ತಿಕ್ಕಿದನು ಮಂಥ[ತ]ಣೆಯ ಮೇಲಿದ್ದ ನೆಯ್ಯನೀಕ್ಷಿಸುತ (ಶಿಭಾಗ. ೦೦-೯-೨೮). ೨. ಕಡೆಗೋಲು.

**ಮಂತಣಿಯ** ಶೂಲ=ಮಂತಣಸೂಲ : ಪರನ ಮಂತ[ಶಾಂ. ಥ]ಣಿಯ ಶೂಲದಲ್ಲಿ ಸಿರದ ಉಂಗುಟ ಉಜ್ಜಿ ನೆರೆವುತ್ತಿದ್ದುದ ನಾನೇನೆಂಬೆ (ಅವತಂ. ೩೩-೨೩೮). [< ಪ್ರಾ. ಮಂಥಣೀ./ಸಂ. ಮಂಥನೀ]

**ಮಂತಣೆ$_1$** 'ಮಂತಣ$_1$' ನೋ.

**ಮಂತಣೆ$_2$** 'ಮಂತಣ$_2$' ನೋ.

**ಮಂತರ** (ನಾ). ೧. ವೇದದಲ್ಲಿರುವ ಪವಿತ್ರವಾದ ದೇವತಾಸ್ತುತಿ; ಮಂತ್ರ : "ಮಂತರ (ಮಂತುರ)—ಮಂತ್ರ= ಆಲೋಚನೆ, ವೇದೋಕ್ತಿ" (ಶಬ್ದಕೋ. ೩೪); ಎಂತಪ್ಪ ಮೂರ್ಖ ಪಂಡಿತನಾಗಲಿ ಉಂತೆ ಪಂಚಾಕ್ಷರಿಯ ಮಂತು[ತ]ರವ ಜಪಿಸುವಾತಂ ತಾನೆ ಶಿವನೆಂದುದ್ದೈ ಲೈಂಗ್ಯವು (ಶಃಶೀ. ೯-೦೯). ೨. ಮಾಟ, ಇಂದ್ರಜಾಲ ಮುಂತಾದುವುಗಳಲ್ಲಿ ಬಳಸುವ ವೈದಿಕವಲ್ಲದ ಪದಸಮೂಹ : ತಂತರವಿದ್ದವನಿಗೆ ಮಂತರ ಬೇಡ (ಗಾದೆ). 'ಮಂತರಿಸು' ಪರಾ. [<ಸಂ. ಮಂತ್ರ]

**ಮಂತರವರಿಜು** (ನಾ). ಮಂತ್ರರೂಪವಾದ ಆಕಾರ. —ಮೂರ್ತಿ: ಅಮರ್ಮುಣಿವರನೆನಿಸಿ. . . ಮಂತು[ತ]ರವರಿಜುದಾಳ್ದು ನೆಟಿ ಮಜ್ಜಿವ ರಾಶಿಯೊಡೆಯಂ ತಪೆಯದೋವುಗೆಮ್ಮಂ (ಶಬ್ದಾ. ೦೩-೬೩).

[ಮಂತರ + ಪರಿಜು]

**ಮಂತರಿಸು** (ಕ್ರಿ). ಮಂತ್ರಹಾಕು; ಮಂತ್ರಿಸು: ಕೋಟ್ಯಾಂತರ ಸರ್ಪ ಒಡಿದ ಸವುರಿದ ಪಂಥಣಿಯ(ತಿಂತಿಣಿಯ) ಮಧದಡಿಯ ತೀವ್ರದಲಿ ಮಲಗಿರಲು ಮಂತರಿಸಿ ಮನೆಗೆ ಕಳುಹಿದ ಮಹಾತ್ಮಕನೆ (ಶಶಿ. ೦೦೨-೨); ಘಕೀರನು ಮಂತರಿಸಿ ಬಿಟ್ಟ ಮೇಲೆ ಅವ ಹೇಳಿದ್ದ ಪ್ರಕಾರವೇ ಇವನಿಗೆ ಜ್ಞಾನ ಬಂತು (ಅಮೂಟಿ. ೬೦).

[ಮಂತರ + —ಇಸು$_3$]

**ಮಂತವ್ಯ** (ನಾ). ೧. ನೆನೆಯತಕ್ಕುದು; ಮನನಮಾಡಬೇಕಾದುದು : "ಮನನಂ, ಮನನೀಯಮುಂ, ಮಂತವ್ಯಂ, ಈ ೩ ನೆನೆಯಲ್ತಕ್ಕುದು" (ಶಾಕಶ. ೨೦೨) : ಲಲಿತಶ್ರಾವ್ಯ ಪರಮಂತವ್ಯವೆಂದೆನಿಪ ಘನತೆಯುಳ್ಳ ಸಪ್ತಸಂಖ್ಯೆಗಳನಘವಾದ ಸಮಿತ್ಯದಂಬಕ ಘನರು ಮಿಗೆ ಸಂಸ್ತುತಿಪರರು ವೈಶ್ವಾನರಾನಲಗೆ (ತಿಪ್ಪು.ಶ. ೨-೬೩); ಪ್ರಭುದೇವರ 'ಅನಾಯಸವಾದ ಅನು', 'ಚಿಂತೆಮಿಲ್ಲದ ಅನುಭಾವ ಗೊಹೇಶ್ವರ' ಇನ್ನೂ ಶ್ರೋತವ್ಯ, ಇನ್ನೂ ಮಂತವ್ಯ (ವಚನ. VIII, ೭ಳಗ ಕ್ರಮಿಕ). ೨. ಅಭಿಪ್ರಾಯ; ಮತ: ಬರುಲೆ ದುರಭಿಮಾನಿ ಮತ್ತು ಮೂರ್ಖಳು ಎಂದು ಕೇಶವಯ್ಯನ ಮಂತವ್ಯ (ನವಜೀ. ೦); ಕಾರ್ಲ್‌ಮಾರ್ಕ್ಸ್‌ನು ತನ್ನ ಮತ—ಮಂತವ್ಯಗಳನ್ನು ಆರ್ಥಿಕ ರಾಜಕೀಯ ಶೋಧಗಳನ್ನು ಮಂಡಿಸಿದನು (ಮೂಷಾದ. ೯೩). ೩. ಮನನಮಾಡಲ್ಪಡತಕ್ಕವನು ; ಧ್ಯಾನಯೋಗ್ಯನಾದವನು ; ಶ್ರೇಷ್ಠನಾದವನು : ಸೇವ್ಯನನು ಸತ್ಕೃತಿಗಳಲಿ ದ್ರಷ್ಟವ್ಯನನು ದೃಢ

ಚಿತ್ತದಲಿ ಮಂತವ್ಯನನು ಶ್ರೋತವ್ಯನನು ಸಂಕೀರ್ತಿತವ್ಯನನು . . . ಅಜ್ಞಾನದಲಿ ಯೋಗವ್ಯನೆಂದೇ ನೆಣಸಿದೆವಲಾ (ಕುವ್ಯಾ.೮.೬-೬೪). [ಸಂ.]

**ಮಂತಿಡು** (ಕ್ರಿ). ಮಂತುಕೋಲನ್ನು ಇಟ್ಟು ಕಡೆ : ತಟವನುಚ್ಚಳಿಸಿತು ಕಡಲು ಮಂತಿಟ್ಟರೆ ಘಟದ ಮೊಸರು ಚೆಲ್ಲುವಂತೆ (ಭರತ. ೨೪-೩೬).
[ ಮಂತು$_1$ (<ಮಂತ) + ಇಡು$_1$ ]

**ಮಂತು$_1$** 'ಮಂತ' ನೋ.

**ಮಂತು$_2$** (ನಾ). ೧. ಮಂತ್ರಿ ; ಸಚಿವ : ಇತ್ವಕ್ಕುತ್ವಂ . . . ಮಂತ್ರಿ —ಮಂತು; ಸಂಧಿ—ಸಂದು (ಶಮತ. ೨೬೯ ಸೂತ್ರ); ಐವತ್ತಾಜಿಜಿಗೊಳಂ ನೀಂ ನೋಡದ ನಾಡಿಲ್ಲಕ್ಕುಂ . . . ಮಂತುಗಳಿಂತಿರವೇಡಾ (ರಾಮಾಶ್ವ. ೦೨೭-೧೦). ೨. ತಪ್ಪು; ದೋಷ ; ಅಪರಾಧ : "ವ್ಯಳೀಕಂ . . . ಮಂತುಃ, ವಿಪ್ರಿಯಃ _ಈ ೫ ಅಪರಾಧಂ" (ಹಲಾಯು. ೦೨೩-೬೪); ನೆಟ್ಟನೆ ಚಂದ್ರನೊಳ್ ಬಿಸುಪು ಪುಟ್ಟಿದಪೋಲ್ ಸ್ವಪರೂಪಚಂದ್ರನೊಳ್ ಪುಟ್ಟಿದು ಮಂತು (ಕಾದಂಬ. ೪೬೯). [ಸಂ.]

**ಮಂತುಗೋಲು** (ನಾ). ಕಡೆಗೋಲು : ತತ್ತ್ವಮೆಂಬ ಮಂತುಗೋಲಿನಿಂ ಮಥಿಸಲು ಲಿಂಗವೆಂಬ ನವನೀತವು ಕಾಣಿಸಲಾಗಿ ಅದಂ ಪರಿಗ್ರಹಿಸಿ (ವಶಶಾ. III, ೦೩೪); ಸುರರೆಲ್ಲಂ ಕೂಡಿ ಘೋಗೀಶ್ವರಗುಣಮಿಳಿತಂ ಮಂದರಂ ಮಂತುಗೋಲಾಗಿರೆ ದುಗ್ಧಾಂಭೋಧಿಯಂ ಪೋಣ್ ಕಡೆಯೆ (ಕೃಶಪಿ. ೯-೩೯).
[ ಮಂತು$_1$ (< ಮಂತ) + ಕೋಲು$_1$ (<ಕೋಲ್$_1$) ]

**ಮಂತುಳ್ಳಿ**; ಮಂತೇಹುಳಿ (ನಾ). ಒಂದು ಬಗೆಯ ಕಾಡುಮರ : ಮಂತುಳ್ಳಿ . . . ಈ ಮರದ ಚೌಬೀನೆಯನ್ನು ಪೆಟ್ಟಿಗೆ ತಯಾರಿಕೆಯಲ್ಲಿ ಉಪಯೋಗಿಸುವುದುಂಟು (ಕಶಕೋ. XII, ೯೬೭). ಮಂತೇಹುಳಿ : ಮಂತುಳ್ಳಿ . . . ಅರದಳ. ಉಪಾಗಿ, ಮಂತೇಹುಳಿ ಪರ್ಯಾಯನಾಮಗಳು (ಕಶಕೋ. XII, ೯೬೭). [ ? ]

**ಮಂತೇಹುಳಿ** 'ಮಂತುಳ್ಳಿ' ನೋ.

**ಮಂತ್ರ** (ನಾ). ೧. ವೇದದಲ್ಲಿರುವ, ಛಂದೋಬದ್ಧವೂ ಪವಿತ್ರವೂ ಆದ ದೇವತಾಸ್ತುತಿ : ಪೂಜೆ. ಹೋಮ, ಅಭಿಷೇಕ ಮೊದಲಾದ ಸಂದರ್ಭಗಳಲ್ಲಿ ಪಠಿಸುವ ವೇದಭಾಗ : ದೈವವು ಮಂತ್ರವು ತೀರ್ಥವು ವೈದ್ಯವು . . . ಲೋಗರಿಗಿವು ದಿಟ ಸಿದ್ಧಿಯನೀವುವು (ಜಗನ್ನಾಥ. ೬೬-೬೬); ಮಂತ್ರಕ್ಕಿಂತ ಉಗುಳು ಜಾಸ್ತಿ (ಗಾದೆ). ೨. ದೇವತೆಗಳನ್ನು ವಶೀಕರಿಸಿಕೊಳ್ಳುವುದಕ್ಕಾಗಿ ಹೇಳುವ, ಆಯಾ ದೇವತೆಯ ಸಾಮರ್ಥ್ಯವುಳ್ಳ ವಾಕ್ಯಸಮೂಹ : ಮಗಳೆ ಬಾ ಕೊಳ್ ಐದು ಮಂತ್ರಾಳಿಗಳನಿವು ಸಿದ್ಧಪ್ರಯೋಗವು (ಕುವ್ಯಾ.೮. ೩-೦೬); ಕಾಟಾರಮ್ಮನು ಬಲು ಸೌಮ್ಯದೇವತೆ . . . ಮಂತ್ರಗಳನ್ನು ಹೇಳಿದರೇ ಆಕೆಯ ಹೊಟ್ಟೆ ತುಂಬುತ್ತದೆ (ಮಹೋನಂ. ೦೩೪). ೩. ಮೀಮಾಂಸಾಶಾಸ್ತ್ರದ ಪ್ರಕಾರ ಛಂದೋಬದ್ಧವಲ್ಲದ ಬ್ರಾಹ್ಮಣಭಾಗವನ್ನು ಬಿಟ್ಟು ಉಳಿದ ವೇದಭಾಗ ; ಸಂಹಿತೆ ಮತ್ತು ಉಪನಿಷತ್ತು : ಅವನಿಗೆ ಮಂತ್ರಭಾಗವೆಲ್ಲ ಆಗಿದೆ., ಬ್ರಾಹ್ಮಣವನ್ನು ಇನ್ನೂ ಹೇಳಿಲ್ಲ (ರೂಢಿ). ೪. ಮಾಂತ್ರಿಕರು ಮಾಟ, ವಶೀಕರಣ ಮೊದಲಾದ ಕ್ರಿಯೆಗಳಲ್ಲಿ ಬಳಸುವ ವೈದಿಕವಲ್ಲದ ಅಕ್ಷರಸಮೂಹ : ಇನ್ನು ಕೆಲವರು ಇದು ಪಿಶಾಚಿಯ ಬಾಧೆಯೆಂದೂ ಹೇಳತೊಡಗಿದರು. ಇದಕ್ಕಾಗಿ ಮಂತ್ರ – ಹರಕೆ ಮೊದಲಾದುವುಗಳ ಸೂಚನೆಗಳು ಬಂದುವು (ಕಾಂಟೂರ. ೦೪ ಕಥಾಸಾರ). ೫. ರಾಜ ಮೊದಲಾದವರು ನಡೆಸುವ ರಹಸ್ಯಾಲೋಚನೆ,– ಮಂತ್ರಾಲೋಚನೆ : ಸತ್ಯವತಿ ತಾನುಮಾತನಂಮಾಳೋಚಿಸಿ ನಿಶ್ಚಿತಮಂತ್ರರಾಗಿ ಕೃಷ್ಣದ್ವೈಪಾಯನನಂ ನೆನೆದು ಬರಿಸಿದೊಡೆ (ಪಂಪಭಾ. ೧-೮೪ ವ); ಮಂತ್ರವುಳ್ಳವನವನೆ ಪಿರಿಯನು ಮಂತ್ರವುಳ್ಳವನವನೆ ರಾಜನು ಮಂತ್ರವುಳ್ಳವನವನೆ ಸಚಿವ ನಿಯೋಗಿಯೆನಿಸುವನು ಮಂತ್ರವಿಲ್ಲದ ಬಹುಳ ಬಲತಳತಂತ್ರದಲಿ ಫಲವಿಲ್ಲವೈ (ಕುವ್ಯಾ.ಕ. ೦-೪೯); ಮಂತ್ರಿಯು ಹಗೆ ನೃಪನ ಕಾಂತೆಯು ಸಮಗೋಷ್ಠಿ ಮಂತ್ರವಿಲ್ಲದನ ಒಡನಾಟ ಇವು ತನ್ನ ಆತ್ಮಕಾಲಕ್ಕೆ (ಸರ್ವಜ್ಞ. ೬೩೯). ೬. ಆಲೋಚನೆ; ವಿಚಾರ : ಮಂತ್ರಾಕ್ಷರನಿಚಯಮದಿನಭಿಮಂತ್ರಿಸಿ ಬರಿಸಿದೊಡೆ ವಾಯುದೇವಂ ಬಂದೇಂ ಮಂತ್ರಂ ಪೇಳೆನೆ (ಪಂಪಭಾ. ೦-೦೨೪). ೭. ವಿಷ್ಣು. ೮. ಶಿವ. ೯. [ಜ್ಯೋತಿ] ಐದನೆಯ ರಾಶಿ. ೧೦. [ರಾಜನೀ] ಸಾಮ, ದಾನ. ಭೇದ ಮತ್ತು ದಂಡ ಎಂಬ ನಾಲ್ಕು ಬಗೆಯ ಉಪಾಯಗಳು: ರಾಜತಂತ್ರಜ್ಞಾನ; ರಾಜನೀತಿ : "ಚತುರೋಪಾಯಮಕ್ಕು ಮಂತ್ರಂ ಕ್ಷಾತ್ರಮಕ್ಕು ರಾಜಪ್ರಕೃತಿಯಕ್ಕು" (ಚಂಗಾ. ೬೯-೬ ). ೧೧. [ಜೈನ] ದೀಕ್ಷಾನ್ವಯಕ್ರಿಯೆಗೆ ಸೇರಿದ ಅವತಾರಕ್ರಿಯೆಯ ಹತ್ತು ವಿಧಗಳಲ್ಲಿ ಆರನೆಯದು : ಆಜಿನೆಯ ಮಂತ್ರಮೆಂಬುದು ಪಂಚವಿಧಮಕ್ಕುಂ (ಶಾಪುಂಪು. ೨೨೦). ೧೨. ಪರಂಪರಾಗತವಾದ ಮುಕ್ತಿಸಾಧಕವೆನಿಸಿದ ಸಂಸ್ಕೃತ, ಪ್ರಾಕೃತ ಭಾಷೆಗಳ ಪವಿತ್ರವಾಕ್ಯಗಳು : ಣಮೋ ಅರಹಂತಾಣಂ . . . ಈ ಐದು ಮಂತ್ರಗಳಿಗೆ ಣಮೋಕಾರಮಂತ್ರಗಳೆಂಬ ಹೆಸರು (ಜೈಪಧ. ೯೪). [ಸಂ.]

**ಮಂತ್ರಕರ್ತ** (ನಾ). ತನ್ನ ತಪಸ್ಸಿನ ಪ್ರಭಾವದಿಂದ ಮಂತ್ರಗಳನ್ನು ಕಂಡುಕೊಳ್ಳುವವನು: ಋಷಿ : ನಮ್ಮಲ್ಲಿ ಯಾರೂ ಮಂತ್ರದ್ರಷ್ಟರಾಗುವುದಿರಲಿ ಮಂತ್ರಕರ್ತರೂ ಆಗಿಲ್ಲ (ಮಹಾಬ. ೨೬೦). [ಸಂ.]

**ಮಂತ್ರಕೋವಿದ** (ನಾ). ೧. ವೇದಮಂತ್ರಗಳನ್ನು ಆಳವಾಗಿ ಅಭ್ಯಾಸ ಮಾಡಿರುವವನು ; ವೈದಿಕ. ೨. (ಮಂತ್ರಾಸ್ತ್ರಗಳಲ್ಲಿ) ಪಾರಂಗತನಾದವನು : ಖಳ ಮರಳಿ ಮರುತಾಸ್ತ್ರವನು ಬಿಟ್ಟನು ಮಂತ್ರಕೋವಿದನು (ಕೌಶಿರಾ. ೩೬-೫೬). [ಸಂ.]

**ಮಂತ್ರಗಾರ** (ನಾ). ೧. ಮಂತ್ರಗಳ ಸಹಾಯದಿಂದ ಅಲೌಕಿಕಸಿದ್ಧಿಯನ್ನು ಪಡೆದವನು : ಮನೆಯೊಳಗೆ ನುಗ್ಗಿದ್ದ ಹಾವನ್ನು ಮಂತ್ರಹಾಕಿ ಹಿಡಿದ ಮಂತ್ರಗಾರನನ್ನು ನಾನು ಕಣ್ಣಾರೆ ಕಂಡಿದ್ದೇನೆ (ರೂಢಿ). ೨. ಮಾಟಮಾಡುವವನು ; ಮಾಟಗಾರ : ಆ ಮಂತ್ರಗಾರನು ಮಾಟ ಮಾಡುವುದರಲ್ಲಿ ಎತ್ತಿದ ಕೈ (ರೂಢಿ).
[ ಮಂತ್ರ + — ಕಾರ$_1$ (< — ಕಾಜ) ]

**ಮಂತ್ರಗಾರಿಕೆ** (ನಾ). ೧. ಮಂತ್ರಗಾರ ವೃತ್ತಿ.—ಉದ್ಯೋಗ. ೨. ಮಾಯಾವಿದ್ಯೆ; ಇಂದ್ರಜಾಲ : ಮಾನವೀಯ ವ್ಯಕ್ತಿತ್ವದ ಮೂಲದ್ರವ್ಯವನ್ನು ಮೇಲಿನ ಮಟ್ಟಕ್ಕೆ ಮಾರ್ಪಡಿಸುವ ಮಂತ್ರಗಾರಿಕೆಯನ್ನು ತರಬೇಕು (ಪವ್ಯಕಾ. ೦೭). [ ಮಂತ್ರಗಾರ + _ ಇಕೆ ]

**ಮಂತ್ರಗಾರ್ತಿ** (ನಾ). ಮಂತ್ರಮಾಡುವವಳು; ಯಕ್ಷಿಣೀವಿದ್ಯೆಯನ್ನು ತಿಳಿದಿರುವವಳು : ಆ ಮಂತ್ರಗಾರ್ತಿ . . . ಜವನಾಲಯಕ್ಕೆ ಸಂದಿದ್ದಳು (ಬಗ್ಗಾ. ೬ ಮುನ್ನುಡಿ).
[ಮಂತ್ರಗಾರ + _ ತಿ$_1$ (<_ ಇತ್ತಿ)]

**ಮಂತ್ರಗುಪ್ತಿ** (ನಾ). ರಾಜಕಾರ್ಯ ಮುಂತಾದುವುಗಳಲ್ಲಿ ಮಾಡುವ ಸಮಾಲೋಚನೆ; ಮಂತ್ರಾಲೋಚನೆ: ಆ ಮುನಿನಾಥಂ ತ್ರಿಗುಪ್ತಿಯೊಳ್ ನೆರೆದಂ ಈ ಮಹೀನಾಥಂ ಮಂತ್ರಗುಪ್ತಿಯೊಳ್ ನೆರೆದಂ (ಆದಿಪು. ೬-೨೪ ವ). [ ಸಂ. ]

**ಮಂತ್ರಗೋಪ್ಯ** (ನಾ). ೧. ವೇದಾಗಮಗಳಲ್ಲಿ ನಿರೂಪಿತವಾಗಿರುವ ಮಂತ್ರಗಳ ಗುಟ್ಟು.—ರಹಸ್ಯ. ೨. [ವೀಶೈ] "ಈ ಮಂತ್ರಗೋಪ್ಯಕ್ಕೆ ಅರ್ಥವೇನೆಂದರೆ 'ಮಂ' ಎಂಬಲ್ಲಿ ಮನನವೆಂದು ಪ್ರಣವಸ್ವರೂಪವಪ್ಪ ಪರಶಿವನ ನೆನಹು. 'ತ್ರ' ಎಂದರೆ ತ್ರಾಣವೆಂದು. ಅಂತು ಪರಶಿವನ ನೆನಹೆಂಬುದು ನೆನೆವಾತನ ಚಿತ್ತವ ಸಂಸಾರವ್ಯಾಪ್ತಿಯಿಂದ ಕಡೆಗೆ ದಾಂಟಿಸಿ. ಆ ಚಿತ್ತವ ತನ್ನಲ್ಲಿ ಸಂಬಂಧಿಸಿ

ಕೊಳ್ಳುತ್ತಿರ್ದ ಕಾರಣ, ಆ ನೆನಹಿಂಗೆ ಮಂತ್ರವೆಂಬ ಅರ್ಥವಾಯಿತು" (ತನ್ನಣಾ. ೯೭). [ಸಂ.]

**ಮಂತ್ರಘೋಷ** (ನಾ). ೧. ವೇದಮಂತ್ರಗಳ ಧ್ವನಿ ; ವೇದವನ್ನು ಪಠಿಸುವಾಗ ಕೇಳಿ ಬರುವ ಧ್ವನಿ : ಓಂಕಾರಸ್ವಾಹಾದಿಮಂತ್ರಘೋಷಂ ಬೆರಸಿ . . . ದೇವರಿಗೆ ಪವಿಯಸಮರ್ಪಿಸುತ್ತಿರ್ದಂ (ಶ್ರೀರಾಮ. ೦೩-೩೦೦). ೨. ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂಬ ಮೂರು ಪ್ರಕಾರದ ಸ್ಥಾಯಿಗಳಲ್ಲಿ ವೇದಮಂತ್ರವನ್ನು ಹೇಳುವುದು.— ವೇದಪಠಣ : ವೈದಿಕರು ಮಂತ್ರಘೋಷ ಮಾಡುತ್ತಿದ್ದಂತೆಯೇ ದೇವರ ಮೂರ್ತಿಯನ್ನು ಪ್ರತಿಷ್ಠಾಪಿಸಿದರು (ರೂಢಿ). [ಸಂ.]

**ಮಂತ್ರಜಾಪ್ಯ** (ನಾ). ಮಂತ್ರಪಠಣ ; ಮಂತ್ರವನ್ನು ಜಪಿಸುವುದು : ಈ ಗುಪೆಯೊಳ್ ಮಹಾಗ್ನಿತ್ರಿತಯ ನೆಲಸಿರ್ದಪುದಲ್ಲಿ ಮಂತ್ರಸಾನಾಗಮ ವಿರ್ಪ ಪುಸ್ತಕಮುಮುಂಟಿವಜಾದಿಯ ಮಂತ್ರಜಾಪ್ಯದಿಂ ಬೇಗ ದೊಳಗ್ನಿಯಂ ಪುಗು (ದಶಕು. ೩-೨೭). [ಸಂ.]

**ಮಂತ್ರಜ್ಞ** (ನಾ). ೧. ವೇದಗಳ ಮಂತ್ರಭಾಗದಲ್ಲಿ ಪಾರಂಗತನಾದ ವನು : ನಮ್ಮ ಪುರೋಹಿತರು ಒಳ್ಳೆಯ ಮಂತ್ರಜ್ಞರು (ರೂಢಿ). ೨. ವಿದ್ವಾಂಸನಾದ ಬ್ರಾಹ್ಮಣ, ೩.(ರಾಜನಿಗೆ) ಸಲಹೆ ಕೊಡು ವುದರಲ್ಲಿ ನಿಪುಣನಾದವನು : ವಿಶ್ವೇಶ್ವರಯ್ಯನವರು ಮೇಲ್ಮಟ್ಟದ ಆಡಳಿತಗಾರರು, ಶ್ರೇಷ್ಠ ಮಂತ್ರಜ್ಞರು (ರೂಢಿ). ೪. ಗೂಢಚಾರ ; ನಿಯೋಗಿ : "ಯಥಾರ್ಥವರ್ಣಃ, ಮಂತ್ರಜ್ಞಃ, ಸ್ಪಶಃ, ಹೇರಿಕಃ — ಈ ೪ ಹೇರಿಗಂ" (ಶಬ್ದಮ. ೬೦-೨೬೦). [ಸಂ.]

**ಮಂತ್ರಣ** (ನಾ). ಗಹನವಾದ ರಾಜಕಾರ್ಯವೇ ಮೊದಲಾದುವುಗಳ ರಹಸ್ಯವಾದ ಚರ್ಚೆ ; ಮಂತ್ರಾಲೋಚನೆ : ದಶಶಿರಪ್ರಣಯ ಮಂತ್ರಣಕಾಕೆ ಸಚಿವಳ್ (ಶ್ರೀರಾಮ. ೩೦೯-೦೭). [ಸಂ.]

**ಮಂತ್ರದಂಡ** (ನಾ). ಇಂದ್ರಜಾಲಿಕರು ಮಂತ್ರಪ್ರಯೋಗವಮಾಡು ವಾಗ ಹಿಡಿಯುವ ಕೋಲು : ಮಂತ್ರವನ್ನು ಹೇಳುತ್ತಾ ಮಂತ್ರಗಾರನು ತನ್ನ ಮಂತ್ರದಂಡದಿಂದ ಮುಟ್ಟಿದ ಕೂಡಲೇ ಅದ್ಭುತವಾದ ಚಮತ್ಕಾರ ವಾಯಿತು (ರೂಢಿ). [ಸಂ.]

**ಮಂತ್ರದಾತ** (ನಾ). ಮಂತ್ರವನ್ನು ಹೇಳಿಕೊಡುವವನು ; ಗುರು ; ಪುರೋಹಿತ : ಅವನ ತಂದೆ ಊರಿನ ಮಂತ್ರದಾತರು. ಈತ ಊರಿನ ಮಂತ್ರಣದಾತ, ಸಲಹಾಕಾರ (ಐಶ್ವ. ೩೫೭). [ಸಂ. ಮಂತ್ರದಾತೃ]

**ಮಂತ್ರದೀಕ್ಷಿತ** (ನಾ). ಯಾವುದಾದರೊಂದು ಮಂತ್ರವನ್ನು ಸಾಧಿಸು ವುದಕ್ಕಾಗಿ ವ್ರತವನ್ನು ಕೈಗೊಂಡಿರುವವನು ; ಮಂತ್ರಸಿದ್ಧಿಗಾಗಿ ನಿಯಮಬದ್ಧನಾಗಿರುವವನು : ನಂಬು ! ನಿನ್ನನೆ ನಂಬು ! ಮಂತ್ರ ದೀಕ್ಷಿತಗೆ ಗುರಿ ತಪ್ಪದೆಂದು (ಪಾಂಚಜ. ೫೦-೦೩). [ಸಂ.]

**ಮಂತ್ರದೀಕ್ಷೆ** (ನಾ). ೧. ಯಾವುದಾದರೊಂದು ಮಂತ್ರಸಿದ್ಧಿಗಾಗಿ ಕೈಗೊಂಡಿರುವ ನಿಯಮ.—ವ್ರತ : ಅವನು ಮಂತ್ರದೀಕ್ಷೆ ತಾಳಿ ದ್ದಾನೆ. ಆದ್ದರಿಂದ ಸೋಮವಾರ ಉಪವಾಸ ಮಾಡುತ್ತಾನೆ (ರೂಢಿ). ೨. ಗುರುವಿನಿಂದ ಯಾವುದಾದರೊಂದು ಮಂತ್ರಸಿದ್ಧಿಗಾಗಿ ಉಪದೇಶವನ್ನು ತೆಗೆದುಕೊಳ್ಳುವುದು : ಗುರುವಿನಿಂದ ಶಿಷ್ಯನ ಕಿವಿ ಯಲ್ಲಿ ಉಪದೇಶಿಸಲ್ಪಡುವ ಮಂತ್ರವೇ ಮಂತ್ರದೀಕ್ಷೆಯು (ಶಿವಾಸೂ. ೬೦); ಶಿವಧ್ಯಾನಪರನಾಗಿ ಪಂಚಾಕ್ಷರಿಯ ಶಿಷ್ಯಗೊರೆವುದೇಮಂತ್ರದೀಕ್ಷೆಯುದೇವಜಾ (ಶೀಕ್ಷ್ಮಶಿ. ೬-೬-೬೩). [ಸಂ. ಮಂತ್ರದೀಕ್ಷಾ]

**ಮಂತ್ರದೇವತೆ** (ನಾ). ಮಂತ್ರಾಭಿಮಾನಿಯಾದ ದೇವತೆ : ಬೆಸಸಂ ಪಾರ್ವುವು ಮಂತ್ರದೇವತೆಗಳ್ (ಅಜಿತ. ೦-೬೯) ; ಮನಸಿಜಮಂತ್ರದೇವತೆ ಯುವಂಗನೆಯರ್ (ಚಾಂಚಿತಿ. ೬-೦೯). [ಸಂ. ಮಂತ್ರದೇವತಾ]

**ಮಂತ್ರದ್ರಷ್ಟ** (ನಾ). ಮಂತ್ರಗಳ ತತ್ತ್ವಾರ್ಥವನ್ನು ಕಂಡುಕೊಳ್ಳುವ ವನು, —ರಹಸ್ಯಗಳನ್ನು ಕಂಡುಕೊಳ್ಳುವವನು ; ಋಷಿ : ನಮ್ಮಲ್ಲಿ ಯಾರೂ ಮಂತ್ರದ್ರಷ್ಟರಾಗುವುದಿರಲಿ ಮಂತ್ರಕರ್ತರೂ ಅಗಿಲ್ಲ (ಮಹಾಕ್ಷ. ೫೬೦). [ಸಂ. ಮಂತ್ರದ್ರಷ್ಟೃ]

**ಮಂತ್ರದ್ರಷ್ಟಾರ** (ನಾ). = ಮಂತ್ರದ್ರಷ್ಟ : ಕ್ರೌಂಚದರ್ಶನ ಕವಿಯು ಮಂತ್ರದ್ರಷ್ಟಾರ (ಕ್ರೌಂಚಕ್ರ. ೩೩-೮೩). [ಸಂ. ಮಂತ್ರದ್ರಷ್ಟೃ]

**ಮಂತ್ರಪಿಂಡ** (ನಾ). [ವೀಶೈ] ಮಂತ್ರಪೂತವಾದ ದೇಹ : ಎನಿಸಿದನು ಮಂತ್ರಪಿಂಡ ಎನಿಸದೆ ಮಾಂಸಪಿಂಡ ಎನಿಸದೆ ವಾಯುಪ್ರಾಣಿ ಎಂದು ಬಸವಣ್ಣ ಎನಿಸಿದನು ಲಿಂಗಪ್ರಾಣಿ ಎಂದು (ಸಿದ್ಧ ವ. ೨೬-೯೯) ; ಶರೀರದಲ್ಲಿ ಲಿಂಗವನ್ನು ಧರಿಸುವುದರಿಂದ ಈ ಶರೀರವು ಮಂತ್ರಪಿಂಡವೆನಿಸಿತು (ಶಾರದ. ೫೩೩). [ಸಂ.]

**ಮಂತ್ರಪುರಶ್ಚರಣ** (ನಾ). ಏಕಚಿತ್ತದಿಂದ ಮಂತ್ರವನ್ನು ಮೆಲ್ಲಗೆ ಉಚ್ಚರಿಸುವುದು : ಮಂತ್ರಜಪ : ಯಂತ್ರೋದ್ಧಾರಣ, ಮಂತ್ರ ಪುರಶ್ಚರಣ . . . ಮೊದಲಾದ ವಿವರಣಗಳು . . . ಪಾಂಚರಾತ್ರಾಗಮ ದಲ್ಲಿಯೂ ಸುಂದರವಾಗಿ ಚಿತ್ರಿತವಾಗಿವೆ (ಶಾರದ. ೬೭). [ಸಂ.]

**ಮಂತ್ರಪುಷ್ಪ** (ನಾ). ದೇವರಿಗೆ ಮಹಾಮಂಗಳಾರತಿಯಾದ ಮೇಲೆ ಮಂತ್ರಪೂರ್ವಕವಾಗಿ ಅರ್ಪಿಸುವ ಹೂವು ಮತ್ತು ಆಗ ಹೇಳುವ ಮಂತ್ರಸಮುದಾಯ : ರಾಜಾಧಿರಾಜನೆಂಬ ಮಂತ್ರಪುಷ್ಪಗಳಿಂದ ಪೂಜಿಸಿದರು ಒಲ್ಲ ಪುರಂದರವಿಠಲನು (ಪುರಂದ. ೨-೬೯-೫); ಯಂತ್ರವಾಹನಂಗೆ ಮಂತ್ರ[ಶಾಕಾಂ. ಸುಮಂತ್ರ]ಪುಷ್ಪಮನಿತ್ತು ನಿವ್ಯಾಜಭಕ್ತಿಯಿಂ ಪ್ರದಕ್ಷಿಣಂ ಗೆಯ್ದು ಪೊಡಮಟ್ಟು (ರಾಜಶೇ. ೦೩-೫೯ ವ). [ಸಂ.]

**ಮಂತ್ರಪೂತ** (ನಾ). ಮಂತ್ರದಿಂದ ಪವಿತ್ರವಾದುದು. — ಪರಿಶುದ್ಧ ವಾದುದು : ಮಂತ್ರಪೂತವಾದ ಈ ದರ್ಭೋದಕದಿಂದ ನಿನ್ನ ಶರೀರ ಬಾಧೆಯೆಲ್ಲಾ ಪರಿಹಾರವಾಗುವುದು (ಶಾಕುಂತ. ೯೩-೩೯). [ಸಂ.]

**ಮಂತ್ರಭ್ರಮಿತ** (ನಾ). ರಹಸ್ಯಾಲೋಚನೆಯಲ್ಲಿ ತಪ್ಪುದಾರಿಯನ್ನು ಹಿಡಿದವನು : ಸಮರಜಯಸಾಧಕರು ಮಂತ್ರಭ್ರಮಿತರಾಯ್ತುಪಜಯ ವಧೂವಿಭ್ರಮಕಟಾಕ್ಷದ ಛಾಯದಲಿ ಕಳವಳಿಸದವರಾರು (ಕುಮ್ಮಾ.ಕ. ೫-೦೩); P ಇಲ್ಲಿ 'ಭ್ರಾಂತ' ಎಂಬ ಅರ್ಥದಲ್ಲಿ 'ಭ್ರಮಿತ' ಎಂದು ಪ್ರಯೋಗ ವಾಗಿದೆ. [ಸಂ.]

**ಮಂತ್ರಮುಕ್ತ** (ನಾ). ಮಂತ್ರದ ಸಹಾಯದಿಂದ ಪ್ರಯೋಗಿಸುವ ಆಯುಧ ; ಮಂತ್ರಾಸ್ತ್ರ : ಅಗ್ನಿಪುರಾಣವು ಆಯುಧಗಳನ್ನು ಅಸ್ತ್ರ ಮತ್ತು ಶಸ್ತ್ರಗಳೆಂದು ಎರಡು ಭಾಗಗಳಾಗಿ ವಿಂಗಡಿಸುತ್ತದೆ. ಇವುಗಳಲ್ಲಿ ಮೊದಲನೆಯದನ್ನು (೧) ಯಂತ್ರಮುಕ್ತ, (೨) ಪಾಣಿಮುಕ್ತ, (೩) ಮಂತ್ರಮುಕ್ತ, (೪) ಮುಕ್ತಸಂಧಾರಿತ (ಬಿಟ್ಟು ಹಿಂದಕ್ಕೆ ಪಡೆದದ್ದು) ಎಂದು ನಾಲ್ಕಾಗಿ ವಿಭಾಗಿಸುತ್ತದೆ (ಕರಾಶ. ೨೬೨). [ಸಂ.]

**ಮಂತ್ರಮುಗ್ಧ** (ನಾ). ಮಾಟ, ವಶೀಕರಣ ಮುಂತಾದ ಮಂತ್ರದ ಪ್ರಯೋಗಗಳಿಗೀಡೆಂಬಂತೆ ಮರುಳಾದವನು, — ಪರವಶನಾದವನು : ಶ್ರೀ ರಾಮಕೃಷ್ಣ ಪರಮಹಂಸರ ಮಾತು ನರೇಂದ್ರನನ್ನು ಮಂತ್ರಮುಗ್ಧ ನನ್ನಾಗಿ ಮಾಡಿತು (ಧರ್ಮಸಾ. ೪೬); ಈ ಅದ್ಭುತಭಾವವನ್ನು ಅನುಭವಿಸ ಬಲ್ಲವರು ಇದರಿಂದ ಮಂತ್ರಮುಗ್ಧರಾಗುತ್ತಾರೆ (ಶಾರದ. ೫೨೯). [ಸಂ.]

**ಮಂತ್ರಯೋಗ** (ನಾ). ಮಂತ್ರಸಾಧನೆ ; ಮಂತ್ರದ ಅನುಸಂಧಾನ : ಪ್ರಣವಾದಿ ಮಂತ್ರಾನುಸಂಧಾನದಿಂ ಪರಮಾತ್ಮನಲ್ಲಿ ಮನೋಲಯಮಹುದೇ ಮಂತ್ರಯೋಗವೆನಿಸುವುದು (ವೀಕ. ೪೯); ಆಗಮೋಕ್ತಮಾರ್ಗದಿಂದೆ ಜಪಮಾಲಿಕೆಯಿಂದೆ ಅಂಗುಷ್ಠಮಧ್ಯಮಗಳಿಂದೆ ಉಪಾಂಶುರೂಪದಿಂದೆ ಧ್ಯಾನಪೂರ್ವಕದಿಂ ಜಪವಂ ಮಾಡುವುದೆ ಮಂತ್ರಯೋಗವೆನಿಸಿತ್ತು (ಕಣಂಶೇ. ೨೦೩-೫೨); ಈ ಮಂತ್ರಗಳ ಜಪಗಳಿಂದ ಶಾಸ್ತ್ರದಲ್ಲಿ ಹೇಳಿರುವಂತೆ ಕಾಲ

ದೇಶಗಳಿಗನುಸಾರವಾಗಿ ಅಭ್ಯಾಸಮಾಡುವುದಕ್ಕೆ "ಮಂತ್ರಯೋಗ" ವೆಂದು ಹೆಸರು (ಶಾರದ. ೧೭೪). [ಸಂ.]

**ಮಂತ್ರವಾದ** (ನಾ). ೧. ಯಕ್ಷಿಣೀವಿದ್ಯೆ; ಇಂದ್ರಜಾಲ: ಚಾಣಕ್ಯಂ ಜ್ಯೋತಿಷಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮನೇನಿ ಕೂಸನೋದಿಸಿದಾ (ವಡ್ಡಾರಾ. ೨೩-೦೭); ಜ್ಯೋತಿಷ ಮಂತ್ರವಾದದೆಡೆಯೊಳ್ ವಿದ್ವಾಂಸರೊಳ್ ಸ್ತ್ರೀಯರೊಳ್ ದೊರೆಗಳ್ಗೆ ಚಿಷ್ಟಜು ಬೇಕೆಲ್ಬೆ (ಸೋಮೇಶ. ೫೭); ವಿಗಡಮುನಿ ಚಿತ್ರಾಕರುಷಣದ ಮಂತ್ರವಾದವೊ . . . ಚಿತ್ರವಾಯ್ತೂ ರ್ವಶಿಯ ಬರವಿನಲಿ (ಕುಮ್ಯಾಭಾ. ೬-೫). ೨. ಸನ್ಮಾರ್ಗವನ್ನು ತೋರಿಸು ವುದು : ಆಚಾರ್ಯನಂತೆ ಮಾಡಲ್ಕಕ್ಕುದಂ ತೋರ್ಪುದೇ ಮಂತ್ರವಾದ ಮೆನಿಸುವುದು (ವಿವೇಕ. ೪). [ಸಂ.]

**ಮಂತ್ರವಾದಿ** (ನಾ). ೧. ವೇದಮಂತ್ರಗಳನ್ನು ಹೇಳುವವನು ; ಸನ್ಮಾರ್ಗವನ್ನು ತೋರಿಸುವವನು. ೨. ಯಕ್ಷಿಣೀವಿದ್ಯೆಯನ್ನು ಬಲ್ಲವನು; ಐಂದ್ರಜಾಲಿಕ : ಮಾಂತ್ರಿಕ : ವಿವಿಧ ಮಣಿಕಿರಣಚಯದಿಂ ದವನಿಪನಂ ಬಿಟ್ಟಿದು ಕೊಟ್ಟನರ್ಥಿಜನಕ್ಕಾ ದಿವಿಜೇಂದ್ರಂ ಬಳವಿಯ ಮಂತ್ರ ವಾದಿಯೆನಿಸೆ ಮಕುಟಬದ್ಧಸಮಾಜಂ (ಶಾಂತಿಪು. ೧೧-೧೧). ೩. ಜನರನ್ನು ಪೀಡಿಸುವ ಭೂತಪ್ರೇತಪಿಶಾಚಾದಿ ಬಾಧೆಗಳನ್ನು ಮಂತ್ರತಂತ್ರ ಗಳಿಂದ ಪರಿಹರಿಸುವವನು ; ಮಾಮೂಚಾರಿ : ಬಡತನವೆಂಬ ಮಂತ್ರ ವಾದಿ ಹೊಗಲು ಒಡನೆ ನುಡಿವರು (ಬಸವ. ೦೩೨); ಎಲವೊ ದುಷ್ಟಗ್ರಹದ ಬಾಧೆಯ ನಿಲಿಸಲರಿಯರೆ ಮಂತ್ರವಾದಿಗಳು (ಕುಮ್ಯಾದ್ರೋ. ೧೩-೧೧); ಮಂತ್ರವಾದಿ ಎಂಬವನು ಊರನ್ನು ಕಣ್ಣವೆ ತೆರೆಯುವುದರೊಳಗೆ ಸುಟ್ಟು ಬಿಡಬಲ್ಲ ಶಕ್ತಿಗಾರನೆಂದು ಅವರ ತಿಳಿವು (ಶಾಲೆಕ್ರ. I, ೧೫೦).

[ಸಂ. ಮಂತ್ರವಾದಿನ್]

**ಮಂತ್ರವಾದಿನಿ** (ನಾ). ಮಾಯಾವಿದ್ಯೆಯನ್ನು ಬಲ್ಲವಳು; ಮಾಟಗಾತಿ : ಶನಿಹೆಸರ ಮುದುಕಿಯಾದಾ ಮಂತ್ರವಾದಿನಿಯ ಮರೆತೆಯೇಂ? (ಬಗಾಳ. ೨೭-೧). [ಸಂ. ಮಂತ್ರವಾದಿನೀ]

**ಮಂತ್ರವಿದ** (ನಾ). ೧. ಮಾಟ, ಮಂತ್ರಗಳನ್ನು ಬಲ್ಲವನು ; ಮಂತ್ರವಾದಿ : ಕನಕಲತೆಯುಮಾಕೆಗಮುರಸಂಗಂ ಕ್ಷಣಮಾತ್ರ ವಿದ್ವೇಷಕಾರಿಯಪ್ಪ ಪುಷ್ಪಮಾಲೆಯಂ ಮಂತ್ರವಿದರುಪದೇಶದಿಂ ಮದ್ಯರಸನಿವೇದನವ್ಯಾಜದಿಂ ಪರಿಚಾರಿಕೆಯರ ಕೆಯ್ಯೊಳಟ್ಟುವುದುಂ (ಶಾಂತಿಪು. ೯-೫೦ ವ). ೨. ಮಂತ್ರಪ್ರಯೋಗದಿಂದ ರೋಗ, ವಿಷ ಮುಂತಾದವುಗಳನ್ನು ಹೋಗಲಾಡಿಸುವವನು : ಅಜಿದಪ್ಪನಂ ಪರೀಕ್ಷಿಸಿ ದಯೆಯಿಂ ಮಂತ್ರೌಷಧಿಯಂ ಮಾಟ್ಟುದು ಮಂತ್ರವಿದಂ (ಜವುರ. ೩-೧೧೧). [ಸಂ. ಮಂತ್ರವಿದ್]

**ಮಂತ್ರವೈದ್ಯ** (ನಾ). = ಮಂತ್ರವಿದ ೨ : ಗುರೂಪದೇಶ ಮಂತ್ರವೈದ್ಯ ಜಂಗಮೋಪದೇಶ ಶಸ್ತ್ರವೈದ್ಯ ನೋಡಾ (ಬಸವ. ೬೫೩). [ಸಂ.]

**ಮಂತ್ರಶಕ್ತಿ** (ನಾ). ೧. ವೇದಾದಿ ಮಂತ್ರಗಳ ಸಾಮರ್ಥ್ಯ: ಮಂತ್ರಿಗಳ ಮಂತ್ರಕ್ಕೆ ಉದುರುವುದೆ ಮಾಂಗಾಯಿ ಮಂತ್ರಶಕ್ತಿಯು ದೈವಪಂಚಾಯತ್ರ (ನೀಲಮು. ೦೯-೨೦). ೨. ಹಿಂದೆ ರಾಜನಾಗಿದ್ದ ಪ್ರಭುಶಕ್ತಿ, ಮಂತ್ರಶಕ್ತಿ ಮತ್ತು ಉತ್ಸಾಹಶಕ್ತಿ ಎಂಬ ಮೂರು ಪ್ರಕಾರದ ಶಕ್ತಿಗಳಲ್ಲಿ ಒಂದು; ರಾಜನೀತಿಯ ಸಾಮರ್ಥ್ಯ : ಕಾರ್ಯಾಂಶವಿಶೇಷಾರ್ಥಮಂ ನೆನೆದು ತಿಳಿವಾ ಧರಾಧೀಶ್ವರಂ ಮಂತ್ರಶಕ್ತಿಗೆ ಜನ್ಮಭೂಮಿಯಾದಂ (ಮಲ್ಲಿಪು. ೩-೧೧) ; ಒಲಿದರೊಳಲಂಚದಲಿ ಭಿದ್ರಿಸಿ ಕೊಲುವ ಮುನಿದೊಡೆ ಮಂತ್ರ ಶಕ್ತಿಯೊಳಳುಕಿಸುವ ಮಂತ್ರಿಗಳು ಮೊಜಿದರು ವಾಮಭಾಗದಲಿ (ಕುಮ್ಯಾಉ. ೮-೩೫). ೩. ಅಭಿಚಾರ ; ಮಾಟ : ಮಂತ್ರಶಕ್ತಿಯಲ್ಲಿ ನನ್ನದು ಅದ್ಭುತ ಎಂಬ ಹೆಮ್ಮೆ ನನಗೆ (ಶದ್ಯಸ. ೨೫೮). [ಸಂ.]

**ಮಂತ್ರಶಾಲೆ** (ನಾ). (ಅರಸನು) ಮಂತ್ರಿಗಳೊಂದಿಗೆ ಗಹನವಾದ ವಿಷಯಗಳಿಗೆ ಸಂಬಂಧಿಸಿದಂತೆ ಸಮಾಲೋಚನೆ ನಡೆಸುವ ಮನೆ : ನಿರ್ಣೀತಮಂತ್ರರಾದ ಮಂತ್ರಿಗಣಮಂ ಸನ್ಮಾನಪುರಸ್ಸರಂ ಕ್ರಮದಿಂ ವಿಸರ್ಜಿಸಿ ಮಂತ್ರಶಾಲೆಯಂ ಪೊಜಮಟ್ಟು ಬಂದು (ಶಾಂತಿಪು. ೬೨-೧ ವ) : ವಾಲಿ ಮಂತ್ರಶಾಲೆಯಂ ಸುಗ್ರೀವಂಬೆರಸು ಪೊಕ್ಕು ಮಂತ್ರಿಮಂಡಲಮುಮನಾಪ್ತಪರಿಜನಮುಮಂ ಬರಿಸಿ (ಶಬ್ದಮಣಿ. ೧೧-೦೬೯ ವ).

[ಸಂ. ಮಂತ್ರಶಾಲಾ]

**ಮಂತ್ರಸಾಕ್ಷಾತ್ಕಾರ** (ನಾ). ತನ್ನ ತಪಸ್ಸಿನ ಪ್ರಭಾವದಿಂದ ಮಂತ್ರಗಳ ಪ್ರಯೋಜನವನ್ನು ಕಂಡುಕೊಳ್ಳುವಿಕೆ : ಈ ವಿಧವಾದ ಮಂತ್ರ ಸಾಕ್ಷಾತ್ಕಾರ ಮಾಡಿಕೊಂಡವರೇ ಋಷಿಗಳು (ಶಾರದ. ೪೭೮). [ಸಂ.]

**ಮಂತ್ರಸಾನಿ** (ನಾ). ೧. ಮಾಟಮಾಡುವವಳು ; ಮಾಟಗಾತಿ : ಆ ಮುದುಕಿ ಮಂತ್ರಸಾನಿ (ದೇವಾಂಕ. ೬೭). ೨. ಹೆರಿಗೆ ಮಾಡಿಸುವ ವೃತ್ತಿಯವಳು ; ಸೂಲಗಿತ್ತಿ : ಈ ಪೊಳಲ ಮಂತ್ರಸಾನಿಯರೆಲ್ಲರನ್ನೂ ಹಿಡಿದು . . . ದೇಶಾಂತರಕ್ಕೆ ಕಳುಹಿಸುವರಂತೆ (ಮುದ್ರಾಮಂ. ೩೯೩).

[ಮಂತ್ರ + ಸಾನಿ$_1$. / ತೆಲು. ಮಂತ್ರಸಾನಿ, ಮಂತರಸಾನಿ]

**ಮಂತ್ರಸಿದ್ಧ** (ನಾ). ಮಂತ್ರದ ಬಲವನ್ನು ವಶಪಡಿಸಿಕೊಂಡಿರು ವವನು : ಮಹನೀಯಂ ಮಂತ್ರಸಿದ್ಧಂ ಬಿಡೆ ಪಿಡಿದ ಮಹಾಮುದ್ರೆಯಂ ಕಂಡು ದುಷ್ಟಗ್ರಹಮಾದಂ ಶಾಂತಿಯಂ ತಾಳ್ದುವ ತೆಜದೆ (ಪಾರ್ಶ್ವಪು. ೪-೦೪೮). [ಸಂ.]

**ಮಂತ್ರಸಿದ್ಧಿ** (ನಾ). ೧. ಮಂತ್ರದ ಬಲವನ್ನು ಸಾಧಿಸುವುದರಿಂದ ಉಂಟಾಗುವ ಸಾಮರ್ಥ್ಯ, – ಶಕ್ತಿ : ಕಾಮೇಶ್ವರಮಂತ್ರಮಂ ಲಕ್ಷಮಂ ಜಪಿಸಿ ಅದರ ಪತ್ತನೆಯ ಭಾಗ ಮುತ್ತುಗದ ಹೂವಂ ಹೋಮಮಂ ಗೈಯಲು ಮಂತ್ರಸಿದ್ಧಿಯಪ್ಪುದು (ಕಾಮಶಾ. ೨೬೦) ; ಈ ರಾಕ್ಷಸನು ನನ್ನ ಮಗನನ್ನು ಕೊಲ್ಲಲು ಶಕ್ತನಲ್ಲ ; ಏಕೆಂದರೆ ನನ್ನ ಮಗ ತೇಜಶ್ಶಾಲಿ, ವೀರ, ಮಂತ್ರಸಿದ್ಧಿಯನ್ನು ಪಡೆದವನು (ವಕಥಾ. ೪೬). ೨. ಮಾಟ, ವಶೀಕರಣ ಮುಂತಾದ ವಿದ್ಯೆ : ಮಂತ್ರಸಿದ್ಧಿಯೊ . . . ಮೋಹ ನರಶೌಷಧತಂತ್ರತಿಲಕವೊ ರಮಣರಿವರ್ಗೆವರ ವಶೀಕರಣ (ಕುಮ್ಯಾಭಾ. ೦೫-೨೨). [ಸಂ.]

**ಮಂತ್ರಾಕ್ಷತೆ** (ನಾ). ಶುಭಕಾರ್ಯಗಳಲ್ಲಿ ಮಂತ್ರಪೂರ್ವಕವಾಗಿ ಬಳಸುವ ಅರಿಸಿನ ಅಥವಾ ಕುಂಕುಮದಲ್ಲಿ ಕಲಸಿದ ಅಕ್ಕಿ ; ಅಕ್ಷತೆ : ಆ ಪರಿತುಷ್ಟನಪ ನೃಪಗೆ ಮಂತ್ರಾಕ್ಷತೆಯನಿತ್ತು (ಹಕಥಾ. ೫-೬೩) : ನಿಖಿಲ ಭೂಸುರರುರುವ ಮಂತ್ರಾಕ್ಷತೆಯ ಕೊಳುತಳ್ಳಿಜಿದ ಜಯರವದೊಡನೆ ರಥ ವೇಜಿದನು ಕಲಿದ್ರೋಣ (ಕುಮ್ಯಾದ್ರೋ. ೯-೦೫) ; ಬರಲಾ ನೃಪಾಲಕಂ ಸೋದರರ್ವೆರಸಿ . . . ಪರಸಿ ಮಂತ್ರಾಕ್ಷತೆಯನಿತ್ತು (ಜೈಮಿಭಾ. ೨-೧೪).

[ ಸಂ. ಮಂತ್ರಾಕ್ಷತ ]

**ಮಂತ್ರಾಕ್ಷರ** (ನಾ). ಮಂತ್ರದಲ್ಲಿರುವ ವರ್ಣ ; ಮಂತ್ರಘಟಿತವಾದ ಅಕ್ಷರ : ಮಂತ್ರಾಕ್ಷರನಿಯಮದಿನಭಿಮಂತ್ರಿಸಿ ಬರಿಸಿದೊಡೆ ವಾಯು ದೇವಂ ಬಂದೇಂ ಮಂತ್ರಂ ಪೇಟಿನೆ (ಶಂಶಭಾ. ೦-೦೨೪); ಎನಗಂ ಸಮ್ಮೋ ಹನಮಾದುದಕ್ಕುಮಂದಣ್ಣನ ಸೂನೃತವಚನವೆಂಬ ಮಂತ್ರಾಕ್ಷರದಿಂ (ಗದಾಯು. ೦-೬೨). [ಸಂ.]

**ಮಂತ್ರಾಗಮ** (ನಾ). ಮಂತ್ರದ ಉಚ್ಚಾರಣೆ ; ಮಂತ್ರಪಠಣ : ಮೊರೆಯುವರ ಕೈಲಾಗುಮದ್ದಿನ ಕಮಳಜಳಮಂತ್ರಾಗಮದಲೆಚ್ಚತ್ತನೊಂದೇ ನಿಮಿಷದಲಿ ಕರ್ಣ (ಕುಮ್ಯಾಕ. ೧೧-೩೦). [ಸಂ.]

**ಮಂತ್ರಾಗಾರ** (ನಾ). = ಮಂತ್ರಶಾಲೆ : ಮಂತ್ರಾಗಾರದಿಂದಂ ಕ್ಷಿತಿಪತಿ ಪೊಜಮಟ್ಟಂ (ಚಂದ್ರಪು. ೯-೦೩೦). [ಸಂ.]

**ಮಂತ್ರಾಧ್ವ** (ನಾ). [ವೀಶೈ] ಮಹಾಲಿಂಗದಲ್ಲಿ ಉತ್ಪತ್ತಿಯಾದ ಸಾದಾಖ್ಯಗಳು ಜಗತ್ತಿನಲ್ಲಿ ಪ್ರಕಟವಾಗಲು ಸಹಾಯಕವಾಗಿರುವ

ಆರುಮಾರ್ಗಗಳಲ್ಲಿ ಒಂದು: ಮಂತ್ರರೂಪವಾದ ಮಾರ್ಗ: ವರ್ಣಾರ್ಥ್ವ, ಪದಾರ್ಥ್ವ, ಮಂತ್ರಾರ್ಥ್ವ (ಇವು ಮೂರು ಶಬ್ದಾರ್ಥ್ವಗಳು) (ಶಿವಾಶೂ. ೨ ೧೩೪); ಐವತ್ತೆರಡಕ್ಷರಗಳೇ ವರ್ಣಾರ್ಥ್ವ. ಈ ವರ್ಣಗಳ ಮೂಲಕ ಪದಗಳು ಉಂಟಾಗುತ್ತವೆ. ಇವೇ ಪದಾರ್ಥ್ವ. ಈ ಪದಗಳ ಮೂಲಕ ಮಂತ್ರಗಳು ಉತ್ಪನ್ನವಾಗುತ್ತವೆ. ಇವೇ ಮಂತ್ರಾರ್ಥ್ವ (ಶಿವಾಕೋ. ೨೨). 'ಷಡಧ್ವ' ಪರಾ. [ಸಂ. ಮಂತ್ರಾರ್ಥ್ವನ್]

**ಮಂತ್ರಾನುಷ್ಠಾನ** (ನಾ). ಮಂತ್ರಸಹಿತವಾದ ವಿಧಿ. – ಆಚರಣೆ: ವಿಧುವಿಶದದುಕೂಲವಸನಶೋಭಂ ನಾನಾವಿಧಮಂತ್ರಾನುಷ್ಠಾನಪ್ರಧಾನ ಸುಪವಾಸದಿಂ ತ್ರಿರಾತ್ರಮನಿರ್ದಂ (ಆದಿಪು. ೧೨-೬೪): ಚಿನ್ನದಲ್ಲಿ ಮಾಡಿದ್ದ ಒಂದು ಗೋವಿನ ಉದರದೊಳಗೆ . . . ಕುಳಿತುಕೊಂಡು, ಮಂತ್ರಾನುಷ್ಠಾನ ಮಾಡಿ ಅನಂತರ ಈಚೆಗೆ ಬಂದರು (ಶಾಂಕಲಾ. ೨೩೬). [ಸಂ.]

**ಮಂತ್ರಾಲಯ**[1] (ನಾ). = ಮಂತ್ರಶಾಲೆ: ಸಚಿವರೊಡವರೆ ಪತಿ ಮಂತ್ರಾಲಯಕೆ ಬಂದು ಮಂತಣವಿರ್ದಂ (ಕೃಷ್ಣಕೃ. ೬-೩೦). [ಸಂ.]

**ಮಂತ್ರಾಲಯ**[2] (ನಾ). ಆಂಧ್ರಪ್ರದೇಶದ ಕರ್ನೂಲುಜಿಲ್ಲೆಯ ಆದವಾನಿ ತಾಲ್ಲೂಕಿನಲ್ಲಿರುವ ಒಂದು ಪುಣ್ಯಕ್ಷೇತ್ರ: ಶ್ರೀ ರಾಘವೇಂದ್ರರು ಮಂತ್ರಾಲಯ(ಮಂಚಾಲೆ)ವನ್ನು ಸೇರಿದೊಡನೆಯೇ ಮೊದಲು ಕುಲದೇವಿ ಮಂಚಾಲಮ್ಮನ ದರ್ಶನ ಮಾಡಿದರು (ಕಥಾ. ೩೩೬); ಮಂತ್ರಾಲಯ . . . ಇಲ್ಲಿ ರಾಘವೇಂದ್ರಸ್ವಾಮಿಗಳ ಮಠ ಹಾಗೂ ಬೃಂದಾವನವಿದೆ (ಕಶಕೋ. XII, ೯೬೬).

[p ಇದು 'ಮಂಚಾಲೆ' (ಗ್ರಾಮ) ಎಂಬುದರ ಸಂಸ್ಕೃತೀಕರಣ]

**ಮಂತ್ರಾಲೋಚನೆ**, 'ಮಂತ್ರಾಲೋಚನೆ (ನಾ). ರಾಜಕಾರ್ಯ ಮುಂತಾದ ವಿಷಯಗಳಲ್ಲಿ ಮಾಡಬೇಕಾದ ಕರ್ತವ್ಯವನ್ನು ಕುರಿತು ಆಪ್ತರೊಂದಿಗೆ ಮಾಡುವ ಸಮಾಲೋಚನೆ.— ಚರ್ಚೆ: ವಿಶಾಖಭೂತಿ ಮಂತ್ರಾಲೋಚನೆಯೊಳ್ ಯುವರಾಜಂಗೆ ಬಟ್ಟಯನಟ್ಟಿ (ಶಾಂತಿಪು. ೬-೩೩ ವ): ಧರ್ಮರಾಯನು . . . ಧೌಮ್ಯಮಹರ್ಷಿಗಳನ್ನು ಬರಮಾಡಿಕೊಂಡು ರಾಜಸೂಯಯಾಗದ ವಿಚಾರದಲ್ಲಿ ಮಂತ್ರಾಲೋಚನೆ ನಡಸಿದನು (ರಾಜಸೂ. ೮). **ಮಂತ್ರಾಳೋಚನೆ**: ದೇವಋಷಿಗಣಂ ನೆರೆದು ಬಹುವಿಧ ಮಂತ್ರಾಳೋಚನೆಯಂನೆಸಗಿ (ವಿಂಶಾರಾ. ೨-೩-೨೬).

[ಸಂ. ಮಂತ್ರಾಲೋಚನ]

**ಮಂತ್ರಾವಾಸ** (ನಾ). = ಮಂತ್ರಶಾಲೆ: ಮಾಣ್ದರದೆ ಮಂತ್ರಾವಾಸದೊಳ್ ಮಂತ್ರನಿಶ್ಚಿತನಾಗೀಗಡೆ ಕಾದಿದಲ್ಲದಿಳಿಯಂ ನೀನೆಂತುಮೇನಿತ್ತಪಯ್ (ಶಂಕರಾ. ೬-೬೭). [ಸಂ.]

**ಮಂತ್ರಾಸ್ತ್ರ** (ನಾ). ಇಂದ್ರ, ಅಗ್ನಿ ಮೊದಲಾದ ದೇವತೆಗಳು ಆವಾಹನೆಯಾಗಿರುವರೆಂದು ನಂಬಲಾದ ಬಾಣ ಮುಂತಾದ ಅಸ್ತ್ರ: ದನುಜ ಮನದಲಿ ಕಡುಗಿ ಮಂತ್ರಾಸ್ತ್ರವನು ತೊಡಚಿದನಾಹವಾಗ್ರದಲಿ (ಕಕಿರಾ. ೨೨-೩೦); ಪೂತುರೇ ತರುಣ ಮಂತ್ರಾಸ್ತ್ರಪ್ರತೀಕಾರಚಾತುರ್ಯ ಮುಂಟಲಾ ನಿನ್ನೊಳಮ ಲೇಸು (ಕೈಪಿಡಾ. ೯-೩೪). [ಸಂ.]

**ಮಂತ್ರಾಳೋಚನೆ** 'ಮಂತ್ರಾಲೋಚನೆ' ನೋ.

**ಮಂತ್ರಿ** (ನಾ). ೧. ವೇದಪಾಠದಲ್ಲಿ ಪರಿಶ್ರಮವಿರುವವನು. ೨. ಮಂತ್ರಗಾರ; ಇಂದ್ರಜಾಲಿಕ: ಎಪ್ಪುದೊಂದು ರಕ್ಕಸಗಾಳಿ . . . ಮಂತ್ರಿಯ ಮುಂದೆ ಮಂತ್ರಕೆ ಬೆದರುತೋಡುವ ಮರುಳ್ಗಳನೆ ಪೋಲಿ ಧೂಳಿ ತರಗೆಲೆ ತೃಣಂ ಕಸಕಡ್ಡಿಗಳ ಹಿಂಡು ಚೆದರಿದುವು (ಕತ್ರಾಂಗ. ೯೮-೦೩೦೬). ೩. = ಮಂತ್ರವಿದ ೨: ದಷ್ಟನೊಳ್ ಕರಂ ಸುರುಚಿರ ಶಾಂತಿಯಿಂ ನೆಗೞ್ ಮಂತ್ರಿ ಪೊಗೞ್ಕೆಯ ಮಂ[ಶಾಂತಿ. ತಂ]ತ್ರಿಯಲ್ಲನೇ (ಜಕುವ. ೩-೦೦೨). ೪. ಅರಸನಿಗೆ ಸಲಹೆಯನ್ನು ಕೊಡುವವನು; ಸಚಿವ: "ಮಂತ್ರೀ, ಬುದ್ಧಿಸಹಾಯಃ, ಅಮಾತ್ಯಃ, ಸಚಿವಃ — ಈ ೪ ಮಂತ್ರಿ" (ಶರಾಧು. ೭೦-೨೭೨); ಮಂತ್ರಿ ಪುರೋಹಿತ ಶ್ರೀಕರಣಮುಂ ಸಾಸಿರ್ವ್ವರುಂ ಅಱುನೂರ್ವರುಂ ಸಹಿತಂ . . . ಕೊಟ್ಟರ್ (ಎಕ. XXI. ೨೯-೬; ೫೨ದು ೫೩); ನಾನಾ ಚಮತ್ಕಾರವಂ ಅಱಯಲ್ಬಲ್ಲೊಡೆ ಮಂತ್ರಿಯಾಗು (ಸೋಮೇಶ. ೬೭). ೫. ಪ್ರಜಾತಂತ್ರದಲ್ಲಿ ರಾಜ್ಯಕ್ಕೆ ಸಂಬಂಧಿಸಿದಂತೆ ಆಡಳಿತವನ್ನು ನಿರ್ವಹಿಸುವವನು: ಮಂತ್ರಿಗಳ ಮನೆಗೇ ಹೋಟಾರು ಹೋಯಿತು (ಮಹೋಶ. ೬೯). 'ಮಂತ್ರಿಮಂಡಲ' ಪರಾ.

[ಸಂ. ಮಂತ್ರಿನ್]

**ಮಂತ್ರಿತ** (ಗು). ೧. ಮಂತ್ರಾಲೋಚನೆ ಮಾಡಲ್ಪಟ್ಟ; ಸಲಹೆಯನ್ನು ಕೊಡಲ್ಪಟ್ಟ. ೨. ಮಂತ್ರ ಹಾಕಲ್ಪಟ್ಟ; ಅಭಿಮಂತ್ರಿಸಿದ: ವೇದವ್ಯಾಸ ಪರಮಋಷಿ ಗಂಗೆಯೊಳ್ವಲದೇವತೆಯನರ್ಚಿಸಿದ ಮಂತ್ರಿತೋದಕವನು ವರಪುಷ್ಪಪಲ್ಲವದ ಪೊಂಗಳಸವುಂ ತುಂಬಿ . . . ಈಯಲ್ಕೆ (ಕೈಪಿಡಾ. ೩೯-೧). [ಸಂ.]

**ಮಂತ್ರಿತನ** (ನಾ). ಸಚಿವನ ಪದವಿ.— ಹುದ್ದೆ: ಆತನು ನಿನಗೆ ಮಂತ್ರಿತನಕ್ಕೆ ತಕ್ಕವನು (ಏಶಕೃ. ೩-೬). [ಮಂತ್ರಿ + – ತನ]

**ಮಂತ್ರಿತ್ವ** (ನಾ). = ಮಂತ್ರಿತನ: ನಮ್ಮ ಕಥಾನಾಯಕರ ಕಾಲಕ್ಕೆ ಮಂತ್ರಿತ್ವ ಹೋಗಿ ಕೇವಲ ಶಾನುಭೋಗಿಕೆ ಮಾತ್ರ ಉಳಿದಿತ್ತು (ಅರಿವು. ೩೩). [ಸಂ.]

**ಮಂತ್ರಿಪ** (ನಾ). ಮಂತ್ರಿಗಳಲ್ಲಿ ಮುಖ್ಯನಾದವನು: ಭೂಸುರವರ ವಿರೂಪಾಕ್ಷಸುತ ಲಿಂಗಮಂತ್ರಿಪಂ ವಿರಚಿಸಿದ ಕಬ್ಬಿಗರ ಕೈಪಿಡಿಯನಂಗೀ ಕರಿಪುದುಬುಧಸುಜನರ್ಕಳು (ಕಬ್ಬಿಕೈ. ೧೦೦); ನೀಲಗಿರಿಮಾಹಾತ್ಮ್ಯೆಯಂ ಮಂತ್ರಿಪಂ ಕಥಿಸಿದಂ (ರಾಜಮಾಹ. ೬೨-೨೩). [ಸಂ.]

**ಮಂತ್ರಿಮಂಡಲ**, ಮಂತ್ರಿಮಂಡಳ (ನಾ). ರಾಜ್ಯಾಡಳಿತದ ಹೊಣೆಯನ್ನು ಹೊತ್ತಿರುವ ಸಚಿವಸಮಿತಿ: ವಾಲಿ . . . ಮಂತ್ರಿಮಂಡಲ [ಶಾತಾಂ. ೪] ಮುಮನಾಪ್ತಪರಿಜನಮುಮಂ ಬರಿಸಿ (ಶಂರಾಮ.೦೦-೦೬೯ ವ); ಮಹಾಪ್ರಧಾನ ಅಥವಾ ಮಹಾಮಾತ್ಯನು, ಮಂತ್ರಿಮಂಡಲದ ಮುಖ್ಯಸ್ಥನೆಂದು ಭಾವಿಸಬಹುದು (ಕಶಾಇ. ೩೩೧). **ಮಂತ್ರಿಮಂಡಳ**: ಚುನಾವಣೆಯ ನಂತರ ಮೊದಲ ಬಾರಿಗೆ ಮಂತ್ರಿಮಂಡಳವು ಸಭೆ ಸೇರಿತು (ರೂಢಿ).

[ಸಂ.]

**ಮಂತ್ರಿಮಂಡಳ** 'ಮಂತ್ರಿಮಂಡಲ' ನೋ.

**ಮಂತ್ರಿಸಂಪುಟ** (ನಾ). = ಮಂತ್ರಿಮಂಡಲ: ಮಂತ್ರಿಸಂಪುಟದಲ್ಲಿ ಪಕ್ಷಗಳು ಚಾಲನಶಕ್ತಿಯನ್ನು ಮತ್ತು ನಿರ್ದೇಶನದ ತತ್ತ್ವಗಳನ್ನು ನೀಡುತ್ತ ಬಂದಿವೆ (ರಾಜಶ. ೨); ಮಂತ್ರಿಸಂಪುಟವು ದುರ್ಬಲವಾಗಿದೆಯೆಂದು ತೋರಿದಾಗ ರಾಜನು ಅದಕ್ಕೆ ಧೈರ್ಯ ಹೇಳಿ ಅದನ್ನು ಪ್ರೋತ್ಸಾಹಪಡಿಸಬಹುದು (ರಾಜ್ಯಾಂಗ. ೦೦೨). [ಸಂ.]

**ಮಂತ್ರಿಸು** (ಕ್ರಿ). ೧. ಯಜ್ಞ, ಯಾಗ, ಹೋಮ, ಪೂಜೆ ಮೊದಲಾದ ಧಾರ್ಮಿಕಸಮಾರಂಭಗಳಲ್ಲಿ ಯಾವ ವಸ್ತುವನ್ನಾಗಲಿ ಪವಿತ್ರಗೊಳಿಸಲು ಅದನ್ನು ಮುಟ್ಟಿ ವಿಧ್ಯುಕ್ತವಾಗಿ ಮಂತ್ರಗಳನ್ನು ಪಠಿಸು: ಮಂತ್ರಿಸಿದ ಪಶು ಉಪಾಕೃತವೆಂಬುದು (ಶರಾಧು. ೬೯-೨೬೩). ೨. ಮಂತ್ರವನ್ನು ಉಚ್ಚರಿಸು.— ಪಠಿಸು.— ಹೇಳು: ಬ್ರಹ್ಮರ್ಷಿ ದೇವರ್ಷಿ ವಿಪ್ರೋತ್ತಮರನುಮತದಿಂ ಪ್ರಾಣಾಯಾಮಂ ಮಂತ್ರಿಸಿ . . . ಹೋಮಮುಂ ಮಾಡುತ್ತಿರ್ದು (ಗಿರಿಕ. ೦೦-೯೬ ವ); ಮಣಿದೆಳೆಯರಂ ಪರಸಿದನು ಮಂತ್ರಿಸುತೆ ಓಂ ಶಾಂತಿಯಂ (ಶ್ರೀರಾಮಾ. ೦೬೬-೯೨). ೩. ವಿಷ, ರೋಗ ಮುಂತಾದುವನ್ನು ಪರಿಹರಿಸಲು ವಿಧ್ಯುಕ್ತವಾಗಿ ಮಂತ್ರ ಹಾಕು: ಗಾರುಡಿಗರ್ ಬಂದು ಕಂಡು ತಮ್ಮತಮ್ಮಱಿವಿಂದಂ ಮಂತ್ರಿಸಿದೊಡೆಂತುಂ ನಿರ್ವಿಷಮಾಗದಿರ್ಪುದುಂ (ಶಂಕರ. ೦೦೩-೦೩); ಗಾರುಡಿಗರು . . . ಬಂದು ಮಂತ್ರಿಸಿ ನಾಗವಿಷದಿಂ ಮಡಿದ ರಾಯನ

ನಾಗದಯ್ಯೋ ತಮ್ಮ ಕೈಯಲೆನುತ್ತ ತೊಲಗಿವರು (ಬಸಪು. ೪೬-೨೩); ಮಂತ್ರಜಲದಲಿ ತೊಳೆದು ಘಾಯವ ಮಂತ್ರಿಸುತ ಕರ್ಪೂರದ ಕವಳದ ಯಂತ್ರರಕ್ಷೆಯಲವನಿಪನ ಸಂತೈಸಿ ಮಲಗಿಸುತ (ಕುವ್ಯಾ.ಕ. ೧೧-೩೬). ೪. ಬಾಣ, ಜಲ, ದರ್ಭೆ ಮೊದಲಾದುವುಗಳಲ್ಲಿ ದಿವ್ಯಶಕ್ತಿಯನ್ನುಂಟುಮಾಡಲು ಯಾವುದಾದರೂ ದೇವತೆಯನ್ನು ಆಹ್ವಾನಿಸಿ ಮಂತ್ರ ಹಾಕು : ಹರಶರಣರಂ ನೆನೆದು ಪಂಚಾಕ್ಷರಿಯ ಮಂತ್ರದಿ ಮಂತ್ರಿಸಿದ ಸುರುಚಿರ ಭಸಿತವಂ ತಳಿದು ತಾಂ ತೊಡೆಯಲ್ಕೆ ತತ್‌ಕ್ಷಣದೆ ಪರಿಹರಿಸಲು (ಬಸಪು. ೪೮-೨೯); ಬಸಿವ ರಕುತವ ತೊಳೆತೊಳೆದು ಮಂತ್ರಿಸಿದ ಸಲಿಲವ ಮುಕ್ಕಳಿಸಿ (ಕುವ್ಯಾ.ಕ. ೧೧-೫೦); ಜಗಜಗಿಸುವ ಮೂಡಿಗೆಯಿಂ ತೆಗೆದು ದಿವ್ಯಾಸ್ತ್ರವೃಂದಮಂ ಮಂತ್ರಿಸುತುಂ ಮಗುಳ್ದಿಟ್ಟಂ (ಶಬಸಂ. ೩-೩೪). ೫. ಸಲಹೆ ನೀಡು; ಬುದ್ಧಿವಾದವನ್ನು ಹೇಳು : ಮಂತ್ರಿಸಲ್ ಶ್ರೇಷ್ಠವಾಗ್ಮಿ ಗುರುವಸಿಷ್ಠನೀ ವಾಕ್ಯೆಯಿಂ, ಭರತನಾತನ ಹಿಂದೆ ನಡೆದನ್ (ಶ್ರೀರಾಪ. ೧೦೭-೦೩೮). [ಮಂತ್ರ + — ಇಸು₃]

**ಮಂತ್ರೋದಕ** (ನಾ). ಮಂತ್ರಪಠಣದಿಂದ ಪವಿತ್ರಗೊಂಡ ನೀರು ; ಮಂತ್ರಪೂತವಾದ ಜಲ : ಕುಡಿಸಿದರು ಮಂತ್ರೋದಕವನೊಳಗಡಸಿ ದರುಳನು ಮುಚ್ಚಿ ಮಂತ್ರಿಸಿ ತೊಡೆದರಖಿಳೌಷಧಿಗಳನು ನೃಪಸೇನೆಯೆರಡಖಿಲ (ಕುವ್ಯಾ.ಭೀ. ೩-೪೨). [ಸಂ.]

**ಮಂಥ** (ನಾ). ೧. ಕಡೆಯುವುದು. ೨. ಕಲಕುವುದು ; ಅಲುಗಾಡಿಸುವುದು. ೩. ಕೊಲ್ಲುವುದು; ನಾಶಪಡಿಸುವುದು : ಅರಿಗಾವ ಸಾಗರನು ಮಂಥಮೂಢೆಯನಂತು ಒಲಿದಿತ್ತನೋ ಅವನೆ ಪೊರೆಗೆಮ್ಮನು (ಕೃಶ್ಯಾ.ಲೋ. ೯೯). ೪. ತುಪ್ಪದಿಂದ ಮಿಶ್ರಿತವಾದ ಹುರಿಹಿಟ್ಟನ್ನು ತಣ್ಣೀರಿನಲ್ಲಿ ಹದವಾಗಿ ಕಲಸಿ ಮಾಡಿದ ಒಂದು ಬಗೆಯ ಪಾನೀಯ. ೫. ಕಡೆಗೋಲು ; ಮಂತು : "ಮಂಥಾಃ, ಮಂಥಃ . . . ಖಜಕಃ — ಈ ೫ ಕಡೆಗೋಲ್" (ಹಲಾಯು.೪೭-೦೨೦). ೬. ಸೂರ್ಯ; ರವಿ. ೭. ಸೂರ್ಯನ ಕಿರಣ. ೮. ಒಂದು ಬಗೆಯ ಕಣ್ಣುಬೇನೆ. ೯. ಕಣ್ಣಿನ ಪಿಸುರು. ೧೦. (ಯಾಗದ) ಅಗ್ನಿಯನ್ನು ಉತ್ಪಾದಿಸಲು ಉಜ್ಜುವ ಸಾಧನ ; ಬನ್ನಿಯ ಕೊರಡು ; ಅರಣಿ. ೧೧. ಪದಾರ್ಥಗಳನ್ನು ತೊಳಸುವುದಕ್ಕೆ ಉಪಯೋಗಿಸುವ ಸೌಟು. ೧೨. ಒಂದು ಬಗೆಯ ಜಿಂಕೆ. [ಸಂ.]

**ಮಂಥನ** (ನಾ). ೧. ಕಡೆಯುವುದು ; ಮಥಿಸುವುದು : ಮದಗಜ ಬೃಂಹಿತಧ್ವನಿ ತುರಂಗಮ ಹೇಷಿತಘೋಷಮಾದಮೊರ್ಮೊದಲೆ ಪಯೋಧಿ ಮಂಥನಮಹಾರವಮಂ ಗೆಲೆ (ಶಂಪರಾ. ೩-೭೮) ; ಒಲಿದು ಮಂಥನವನೆಸಗೆಂಬುದಂ ಕಡೆಯೆಂಬರು (ಕೃಬಲಾ. ೨-೯); ಅನುಭವದ ಪಾಲೊಳು ವಿಚಾರಮಂಥನವಾಣೆ ಜನಿಯಿಸಿ ಜ್ಞಾನನವನೀತವದೆ ಸುಖದಿಂ (ಮಂಕಾಳ. ೩೪೪). ೨. ಕಡೆಗೋಲು ; ಮಂತು. ೩. ಅರಣಿಯನ್ನು ಯಾಗಾಗ್ನಿಗಾಗಿ ಉಜ್ಜುವುದು : ಬನ್ನಿಕೊರಡನ್ನು ಚೆನ್ನಾಗಿ ಮಂಥನ ಮಾಡಿದರೆ ಬೆಂಕಿಯುಂಟಾಗುತ್ತದೆ (ರೂಢಿ). ೪. ಯಾವುದಾದರೊಂದು ವಿಷಯದ ಕೂಲಂಕಷವಾದ ಚರ್ಚೆ,–ವಿಚಾರ : ಮಾತಿಲ್ಲದೆ ಮಂಥನ [ಶಾಕಾಂ. ಮಥನ]ವ ಮಾಡಿ ಮೆಚ್ಚಿದೆ ಬಸವಾ (ಶೀಲಪ. ೪. ೦೩-೩೩). ೫. (ಮನಸ್ಸಿನ) ತುಡಿತ ; ಹೊಯ್ದಾಟ : ಮಧುರಯಾತನೆಯ ಮಂಥನ ಎದೆಯಿಂದಿಳಿದು ಉದರವತ್ತ ಕೊಸಳಿ (ಹೊಸಕ್ಷ. ೩೨). [ಸಂ.]

**ಮಂಥನಿ** (ನಾ). ೧. ಮೊಸರು ಕಡೆಯುವ ಪಾತ್ರೆ,–ಗಡಿಗೆ : "ಮಂಥನೀ, ಗರ್ಗರೀ—೨ ಮೊಸರು ಕಡೆಯುವ ಗಡಿಗೆ. ಗುಡಾಣ" (ಸಿದ್ಯಾಂಕಿ. ೨೯೬). ೨. ಮರದ ತುಂಡುಗಳನ್ನು ಉಜ್ಜಿ ಬೆಂಕಿಯನ್ನು ಹತ್ತಿಸುವಿಕೆ. [ಸಂ. ಮಂಥನೀ]

**ಮಂಥರ** (ಗು). ೧. ನಿಧಾನವಾದ ; ಮಂದಗತಿಯ : ಮದಮಂಥರಗಮನಾಭಿಧಾನ ಮನ್ಮಥರದವ್ಯಾಪಾರವಿಫಲೀಕರಣಚರಣಪರಿಣತನುಂ ಅಪ್ಪ ಜನಯೋಗಿಗೆ ನಿಕ್ಕುವಂ ಸ್ತ್ರೀಬಾಧಾಪರೀಷಹ ಜಯಮುಕ್ಕುಂ (ಕತ್ರ್ಯಶ್ರ.೩೩೪). ೨. ಆಲಸ್ಯದಿಂದ ಕೂಡಿದ; ಜಡವಾದ : ನಿರತಿಶಯಮಪ್ಪುವುದು . . . ಗುರುಜಘನಸ್ತನಭರಮಂಥರಲೀಲಾಲಸವಿಲಾಸಿನೀಚಳಿತಂಬೋಲ್ (ಶಬರಾ. ೧-೬೩) ; ಗುರುಕಬರೀಭರಸ್ತನಭರೋರುಭರಸ್ಥಿತಿಯಿಂ ಸ್ವಭಾವಮಂಥರಗತಿಯಪ್ಪ ತನ್ವಿಗೆ . . . ಗರ್ಭದೊಳ್ ಧರಿಯಿಸಿದಚ್ಯುತಂ ಬಳೆಯೆ (ಜಗದ. ೨-೯೮). ೩. ದಡ್ಡತನದ ; ಮೂರ್ಖತನದಿಂದ ಕೂಡಿದ. ೪. ತಗ್ಗಾದ ; ಕೆಳಸ್ತರದ. ೫. ಬಾಗಿದ ; ವಕ್ರವಾದ. ೬. ಅಗಲವಾದ ; ವಿಸ್ತಾರವಾದ. (ನಾ). ೭. ನಿಧಾನವಾಗಿ ನಡೆಯುವವನು : "ಮಂದಗಾಮೀ, ಮಂಥರಃ — ೨ ಮೆಲ್ಲಗೆ ನಡಿಯುವವನು" (ಸಿದ್ಯಾಂಕಿ. ೨೩೮). ೮. ಸೋಮಾರಿ; ಜಡ; ಆಲಸ : "ಅಲಸಃ. ಶಿಥಿಲಃ . . . ಮಂಥರಃ— ಈ ೬ ಸೋಂಬಂ" (ಹಲಾಯು. ೬೪-೨೩೩). [ಸಂ.]

**ಮಂಥರೆ** (ನಾ). ೧. ಚಟುವಟಿಕೆಯಿಲ್ಲದವಳು ; ಸೋಮಾರಿ : ಅಂತರ್ವರ್ನ್ಯಭಾರಾತಿಮಂಥರೆ ಪೆಂಡಿರ್ಗಿದು ತಕ್ಕುದಲ್ತೆನಿಪವಸ್ಥಾಭೇದವಂ ತಾಳ್ದಿದಳ್ (ಕಾದಂಉ. ೩೬೩). ೨. ಕೈಕೇಯಿಯ ಗೂನುಬೆನ್ನಿನ ಒಬ್ಬ ದಾಸಿ: ಹರೆದುದೀ ವೃತ್ತಾಂತವಿದನಾದರಿಸಿದಳಲ್ತೆ ಪೂರ್ವಮಾಯಾತರುಣಿ ಮಂಥರೆ ಮಥಿಸಿ ಮನದಲಿ ಪೂರ್ವಸೂಚಿತವ (ತೊರರಾ. ೨-೧-೨೦). [ಸಂ. ಮಂಥರಾ]

**ಮಂಥಾಚಲ** (ನಾ). ದೇವಾಸುರರು ಕ್ಷೀರಸಮುದ್ರವನ್ನು ಕಡೆಯಲು ಕಡೆಗೋಲನ್ನಾಗಿ ಮಾಡಿಕೊಂಡರೆಂದು ಭಾವಿಸಲಾದ ಬೆಟ್ಟ ; ಮಂದರಪರ್ವತ : ದೇವ ಸಮುದಗ್ರಮಂಥಾಚಲೋದ್ಧರಣ ಜಯ (ಜಗದ. ೩-೦೦೩ ರಗಳೆ). [ಸಂ.]

**ಮಂಥಾನ** (ನಾ). ೧. ಕಡೆಗೋಲು ; ಮಂತು : "ಮಂಥಾಃ, ಮಂಥಃ, ಮಂಥಾನಃ, ವೈಶಾಖಃ, ಖಜಕಃ - ಈ ೫ ಕಡೆಗೋಲ್" (ಹಲಾಯು. ೪೭-೦೨೦). ೨. ಶಿವನ ಹೆಸರುಗಳಲ್ಲಿ ಒಂದು. [ಸಂ.]

**ಮಂಥಿ** (ನಾ). ೧. ಕಡೆಯುವಿಕೆ. ೨. = ಮಂಥಾನ ೧ : "ವೈಶಾಖಮೆನೆ ಮಂಥಮೆನೆ ದಧಿವಿಘಾತಮೆನೆ ಮಂಥಿ ಮಂಥಾನಮೆನೆ ಕಡೆಗೋಲದು" (ಮಂಗರಾ. ೩೯-೭). [ಸಂ. ಮಂಥಿನ್]

**ಮಂಥಿಕ** (ನಾ). ಒಂದು ಬಗೆಯ ಸಸ್ಯ ಮತ್ತು ಅಡುಗೆಗೆ ಬಳಸುವ ಅದರ ಕಾಳು ; ಮೆಂತ್ಯ: "ಮಂಥಿಕಮೆನಲು ಮೆಂತೆಯಕೆ ನಾಮಮಕ್ಕುಂ" (ಮಂಗರಾ. ೪೦-೩೭). [ಸಂ. ?]

**ಮಂದ₁** 'ಮಂದು' ನೋ.

**ಮಂದ₂** (ಗು). ೧. ನಿಧಾನವಾದ; ಚುರುಕಲ್ಲದ : 'ಮಂದಗತಿ' ಪರಾ. ೨. ಜಡವಾದ ; ಆಲಸ್ಯದಿಂದ ಕೂಡಿದ. ೩. ಮಂಕಾದ; ಕಾಂತಿಹೀನವಾದ : ನಾನು ಗಿಡಗಳ ಮರೆಗಿದ್ದ ಮಂದಪ್ರಕಾಶದಲ್ಲಿ ಎರಳೆಯ ಎಳಗಂದಿನಂತೆ ಓಡಲು ತೊಡಗಿದೆ (ಕ್ರಜಸ. ೩); ಗರ್ಭಗುಡಿಯಿಂದ ಬರುವ ಮಂದಪ್ರಕಾಶದಲ್ಲಿ ಪರವಶನಾಗಿ ನನ್ನ ಹೊಂಡದ ಮಾದರಿಯಲ್ಲಿ ಕಾಲಿಟ್ಟರೆ ಏನು ಗತಿ (ದೇಕನ್ಯ.೮೪). ೪. ದಡ್ಡತನದಿಂದ ಕೂಡಿದ ; ಮೊದ್ದುತನದ: 'ಮಂದಬುದ್ಧಿ' ಪರಾ. ೫. ಮೃದುವಾದ; ಕೋಮಲವಾದ: 'ಮಂದಪವನ' ಪರಾ. ೬. ತೀಕ್ಷ್ಣತೆಯನ್ನು ಕಳೆದುಕೊಂಡ ; ಪಾಟವವಿಲ್ಲದ : ಶಾಕಕ್ರೀಜ್ಯಗೃಹಸ್ಥನಾಗೆ ನೃಪರಿಂ ಶುದ್ಧಾತ್ಮಕಂ ಮಂದದೃಷ್ಟಿ ನಿಜಸ್ತ್ರೀಸುತವೈಭವಂ. . . ಅಕ್ಕುಂ ನರಂ (ಜಾತಕ. ೦೭-೩೪). ೭. (ಆಲಂ) ಅಳ್ಳಕವಲ್ಲದ ; ನೀರಾಗಿರದ ; ಗಟ್ಟಿಯಾಗಿರುವ. ೮. ಗಾಢವಾದ ; ದಟ್ಟವಾದ : 'ಮಂದಗಟ್ಟಲೆ' ಪರಾ. (ನಾ). ೯. ನಿಧಾನಗತಿಯುಳ್ಳುದು : ಅವುಗಳಲ್ಲಿ ಕೆಲವು ಅತಿ ಮಂದ ; ಇನ್ನು

ಕೆಲವು ಅತಿ ದ್ರುತ (ಸಂಗೀರ್ತ. ೨೦೦). ೧೦. ಮೈಗಳ್ಳ; ಸೋಮಾರಿ : "ಅಲಸಃ, ಶಿಥಿಲಃ, ಮಂದಃ, ಜಡಃ, ಜಿಹ್ಮಃ, ಮಂಥರಃ — ಈ ೬ ಸೋಂಬಂ" (ಹಲಾಯು. ೬೪-೨೩೩). ೧೧. ಎಗ್ಗ; ದಡ್ಡ; ತಿಳಿಗೇಡಿ : "ಮೈಧೇಯಃ . . . ಮಂದಃ, ವಿವರ್ಣಃ, ಮೂರ್ಖಃ, ಮಾತೃಶಾಸಿತಃ— ಈ ೧೧ ಅಱಿಯದವಂ" (ಹಲಾಯು. ೫೬-೦೬೦); ಅಂಥ ಮಂದರಂದವ ನುಡಿವಡೆ ನೊಂದು ಬೈಯಲೇಕೆ (ಮೋಹನತ. ೨೦-೬೪); ಇವನು . . . ಮಂದನಾಗಿದ್ದರೂ ಕಡೆಗೆ ಹೇಗೋ ಅಲ್ಲಿಂದ ಹೊರಟು ಇಲ್ಲಿಗೆ ಬಂದಂದಿನಿಂದ ಸಮ್ಮ ಈ ರಾಜಹಿತನಾಗಿ ಬಹಳ ಪ್ರಸಿದ್ಧನಾಗಿದ್ದಾನೆ (ಹಗಲ. ೦೯); ಕಂಧಿದವನಾದರೂ ಮಂದನಾಗಿರಬಾರದು (ಗಾದೆ). ೧೨. ತೀಕ್ಷ್ಣವಾಗಿಲ್ಲದಿರುವುದು; ಪಾಟವವಿಲ್ಲದಿರುವುದು : ಕಣ್ಣು ಮಾತ್ರ ಸ್ವಲ್ಪ ಮಂದವಾಗಿದೆ (ಬಾಳಗ. ೦೬); ಅವರ ಕಿವಿ ಸ್ವಲ್ಪ ಮಂದವಾಗಿರುವುದರಿಂದ ಮೆಲ್ಲಗೆ ಮಾತನಾಡಿದರೆ ಕೇಳಿಸುವುದಿಲ್ಲ (ರೂಢಿ). ೧೩. ಅಳ್ಳಕವಾಗಿಲ್ಲದುದು ; ಗಟ್ಟಿಯಾದುದು : ಸುರಾಮೋಹವೆಂಬುದು . . . ಕೆಳಗೆ ಮಂದವಾಗಿ ಗಟ್ಟಿಯಾಗಿ ಇಹುದು (ವೈದ್ಯಶಾ. ೧. ೨೬೬). ೧೪. ದಟ್ಟವಾದುದು ; ನಿಬಿಡವಾದುದು ; ಒತ್ತಾಗಿರುವುದು : "ನಿರಂತರಂ . . . ವಿರಳೇತರಂ — ಈ ೫ ಮಂದಂ" (ಹಲಾಯು. ೦೧೯-೩೨) ; ಸಣ್ಣಂ ನಡು ತಿಣ್ಣಂ ಮೊಲೆ . . . ಕಣ್ಣಲರ್ಗಣ್ಣಮೆ ಮಂದಂ ಬಣ್ಣಿಸಲರಿವಬ್ಬಜಂಗಮಾಕೆಯ ರೂಪಂ (ಕಾವ್ಯಸಾ. ೨೬೦ ಕೂಡ್ರಿ೪) ; ಕಾಮಸಾಮ್ರಾಜ್ಯದೊಸಗೆಯೊಳ್ ಪಸರಿಸಿದ ಪಿಷ್ಟಾತಕಚೂರ್ಣದಂತೆ ಮಂದಮಾದ ಪೊಂದಾವರೆಯ ರಜದೊಳಂ (ಮಲ್ಲಿಪು. ೨-೩೩): ಬೆಂದ ಕೆಂಡವನ್ನು ಕೊಡದ ಉದ್ದಕ್ಕೂ ಮಂದವಾಗಿ ಹರಡುವರು (ಪೋಕರಚ. ೪೯). ೧೫. ದುಷ್ಟ : ಖಳ. ೧೬. ಭಾಗ್ಯಹೀನ : ದುರದೃಷ್ಟಶಾಲಿ: ಕಂದದೆ ಕುಂದದೆ ಬಾಳ್ವರ್ ಚಂದದಿ ಮನುರಾಜರ್ರಾಜಧರೆಯೊಳ್ಮನುಜರ್ ಮಂದರ ಮಂದರ ಮಂದರ ಮಂದರ ಕೆಳೆ ರೀತಿ ನೀತಿ ಬಗೆಯಿಲ್ಲವರೊಳ್ (ಹರಿಶ್ಚಂ. ೦-೪೯). ೧೭. ರೋಗಿ. ೧೮. ಮದವೇರಿದವನು. ೧೯. ಆಹಾರವನ್ನು ಅರಗಿಸುವ ಶಕ್ತಿಯಿಲ್ಲದಿರುವಿಕೆ : ಅಜೀರ್ಣ : ಮಗುವಿಗೆ ಮಂದವಾಗಿದೆ, ಹಾಲು ಕುಡಿಸಬೇಡ (ರೂಢಿ). ೨೦. ಸುಲಭವಾಗಿ ಜೀರ್ಣಿಸದಿರುವ ಪದಾರ್ಥ : ಆಲೂಗಡ್ಡೆ, ಗಟ್ಟಿಮೊಸರು ಮುಂತಾದುವನ್ನು ಮಂದವೆಂದು ಹೇಳುತ್ತಾರೆ (ರೂಢಿ). ೨೧. ಅಜೀರ್ಣದಿಂದ ಬರುವ ಒಂದು ಬಗೆಯ ಜ್ವರ : ಈ ರೀತಿಯಲ್ಲೇ ರಾತ್ರಿಯ ಕಾಲದಲ್ಲಿ ಬರುವ ಜ್ವರವು ಮಂದವೆಂದು ಹೇಳುವುದು (ಸಕಪ್ರ. ೦೨). ೨೨. ನವಗ್ರಹಗಳಲ್ಲಿ ಒಂದು ; ಶನಿಗ್ರಹ : ಶಶಲಕ್ಷ್ಮಂ ಮಂದನೊಳ್ ಮೇಣ್ ಮಹೀಜನೊಳೊಂದಿರ್ದೊಡೆ . . . ಲಗ್ನಜಂ ಪೊಂದುಗುಂ (ಜಾತಕ. ೬-೯೨) ; ಭಾಸ್ಕರ ಭೌಮರಶುಭಸ್ಥಾಯಿಗಳು ಗುರುಮಂದರ ಭಿಭವದಾಯಿಗಳು (ಕುಮಾರ. ೨೨-೪). 'ಮಂದವಾರ' ನೋಡಿ. ೨೩. (ನಿಧಾನಗತಿಯ) ಆನೆಗಳಲ್ಲಿ ಒಂದು ಜಾತಿ : "ಭದ್ರಃ, ಮಂದಃ, ಮೃಗಃ. ಎಂದಿಂತು ಆನೆಗಳ್ ಮೂಱು ತೆಱನಕ್ಕುಂ" (ಹಲಾಯು. ೩೬-೬೨) ; ನಯನಿಪುಣಸೂತ್ರಧಾರರ್ ನಿಯಮಿಸುವರ್ ಭದ್ರ ಮಂದ ಮೃಗಸಂಕೀರ್ಣಸ್ವಯದ ನೃಪಕರಿಗಳಂ (ಕುಸುಪು. ೨-೩೬). ೨೪. [ಸಂಗೀತ] ಕೆಳಸ್ತರದ ಧ್ವನಿ ; ಮಂದ್ರಸ್ಥಾಯಿಯ ಧ್ವನಿ : ಆ ರಾಗಂಗಳಂ ಪಾಡುವಲ್ಲಿ . . . ಮಂದ ಮಧ್ಯ . . . ಸ್ತಂಭನ ದೀರ್ಘಭೇದಗಳಂ ರವವಿಕಲ್ಪಗಳಂ ತೋಱಿ (ಎಷೇಳ. ೨೩೬). [ಸಂ.]

**ಮಂದಕಾಲಿ** (ನಾ). ಒಂದು ಬಗೆಯ ಗಿಡ ; ಬಸಲೆ : "ಪೋತಕಿ ಮಂದಕಾಲಿ [ಪಾಠಾಂ. ಮಂಥಗಾಲಿ, ಮಣ್ಣಡಕಾಳಿ]ಯೆನೆ ಬಸಲೆಯಕ್ಕು" (ಮಂಗರಾ. ೪೪-೯೬). [ ? ]

**ಮಂದಗತಿ** (ನಾ). ನಿಧಾನವಾದ ನಡೆ, — ಚಲನೆ : ಅಂತು ಗಗನತಳದಿನವನೀತಳಕ್ಕವತರಿಸಿದಿಂದುಗತಿ ಮಂದಗತಿಯಿಂ ಜಿನಮಂದಿರಮಂ ಬಲಗೊಂಡೊಳಗಂ ಪೊಕ್ಕು (ಕಂಚಾಪಾ. ೩-೦೫ ವ) ; ಕಾಲ್ಗಳ್ ಮಂದಗತಿಗಲಸೆ ನಗಮೊಗಂ ಬೆಳ್ಪುದೋಱೆ . . . ಸುತಲಾಂಛನದ ಗರ್ಭದಿಂದೆ (ಕೈಪಿಕಾ. ೦೬-೩೪) : ವಿಸ್ತರಣಪ್ರಗತಿ ಏಕೆ ಇಂಥ ಮಂದಗತಿಯನ್ನು ಪ್ರದರ್ಶಿಸುತ್ತಿವೆ (ಶಿಕ್ಷಣ. ೭೨೩). [ಸಂ.]

**ಮಂದಗಮನ** (ನಾ). = ಮಂದಗತಿ : ಮಂದಗಮನದ ತಳಿತ ಮುಸುಕಿನ ಮೌಳಿಕಾಂತೆಯರ್ಕೈದಿತೊಗ್ಗಿನಲಿ (ಕುಮಾರ. ೦೦-೫೦) ; ರಾಜಕುಮಾರನು ಮುಂದೆ ನೀಲನದಿಯ ಮಂದಗಮನವನ್ನು ನೋಡುತ್ತಾ ಮೈಮರೆತನು (ಮುಜಿಕ. ೪೯). [ಸಂ.]

**ಮಂದಗಮನೆ** (ನಾ). ಮೆಲ್ಲಗೆ ನಡೆಯುವವಳು ; ನಿಧಾನವಾಗಿ ಚಲಿಸುವವಳು : ಮಂದಗಮನೆ ಇವನಾರೆ ಪೇಳಮ್ಮ ಮಂದರಧರಗೋವಿಂದ ಕಾಣಮ್ಮ (ಪುರಂದ. ೨-೬೦ ಕಲ್ಲಿ) ; ಮಂದಗಮನೆಯ ಮಂದಹಾಸದ ವಿಲಾಸವಂ . . . ಏನೆಂದು ಬಣ್ಣಿಸಬಹುದು (ಕೈಪಿಕಾ. ೦೯-೨೯) ; ಅಂದಳನೇಱುವರೆ ಅಂದವಲಿ ಸುಖಿಸುವರೆ ಮಂದಗಮನೆ ಸಿರಿ ದೊರೆಯುವರೆ ಹಸಿದರಿಗೆ ಚೆಂದದಿಂದಿಕ್ಕು (ಸರ್ವಜ್ಞ. ೬೪೬). [ಸಂ. ಮಂದಗಮನಾ]

**ಮಂದಗತ್ತಲೆ** (ನಾ). ದಟ್ಟವಾದ ಕತ್ತಲೆ ; ಗಾಢಾಂಧಕಾರ : ಮಹಾವೀಥಿದ್ವಯದಿಂ ಮಹಾಗುಹಾದ್ವಾರಮನೆಯ್ದಿ ಮಂದಗತ್ತ [ಪಾಠಾಂ. ತ್ತ]ಲೆಯೊಳ್ ಮಣಿರತ್ನಕಾಕಿಣೀರತ್ನಂಗಳೊಳ್ ಬರೆದ ಚಂದ್ರಾದಿತ್ಯಮಂಡಲದ ಬೆಳಗು ಬೆಳಗೆ ಸಿಂಧುವಿನ ತಡಿವಿಡಿದು . . . ನಡೆದು (ಆದಿಪು. ೯-೩೪ ವ). [ಮಂದ$_2$ + ಕತ್ತಲೆ]

**ಮಂದಗಾತಿ** (ನಾ). ಮೃದುಸ್ವಭಾವದವಳು ; ನಿಧಾನಸ್ಥೆ : ಹಸ್ತದೊಳ್ ಹಸ್ತವಂ ಹಾಕುತ್ತಿರುವ ಮಂದಗಾತಿಯಂ ನೋಡಿ ರಾಯನು ಸೋತು (ಸೌಗಂಧಿ. ೩೩೯-೦೦). [ಮಂದ$_2$ + — ಕಾತಿ]

**ಮಂದಗಾಮಿ** (ನಾ). ೧. ನಿಧಾನಗತಿಯುಳ್ಳದು. ೨. ಮೆಲ್ಲನೆ ಚಲಿಸುವವನು : ನಿಧಾನವಾಗಿ ನಡೆಯುವವನು : "ಮಂದಗಾಮೀ. ಮಂಥರಃ — ೨ ಮೆಲ್ಲಗೆ ನಡೆಯುವವನು" (ಸಿದ್ಧಾಂತಿ. ೨೩೮).

[ಸಂ. ಮಂದಗಾಮಿನ್]

**ಮಂದಗಾಮಿನಿ** (ನಾ). = ಮಂದಗಮನೆ : ಬಹುಮಂದಗಾಮಿನಿ ಬಹುದೂರ ಸಾಗಲು ನಿನ್ನ ಸತ್ಕೀರ್ತಿಯ ಪಣ್ಣು (ಇಂಚಾಶ. ೨೦೬-೦೮).

[ಸಂ. ಮಂದಗಾಮಿನೀ]

**ಮಂದಜ** (ನಾ). ಕಮಲ ; ತಾವರೆ (?) : ಮಂದಜಾಯತನಯನ ಬಾರ ಮುಕುಂದ ಬಾರ ಮುರಾರಿ ಬಾರ (ಸಿಶಾಗ. ೦೦-೦೦-೪೭). [ ? ]

**ಮಂದಜಾಸನ** (ನಾ). ಕಮಲವನ್ನು ಪೀಠವಾಗಿ ಉಳ್ಳವನು ; ಬ್ರಹ್ಮ (?) : ನಿಜಮಾಯೆಯನು ಮೆಱೆದು ಮುಕುಂದನನು ಮೋಹಿಸಲು ಬಂದಾ ಮಂದಜಾಸನ ತನ್ನ ಮಾಯೆಗೆ ತಾನೆ ಗುಱಿಯಾಗಿ ನಿಂದು ಬೆಱಗಾಗುತ್ತಿರಲು (ಸಿಶಾಗ. ೦೦-೦೩-೪೪). [ಮಂದಜ + ಆಸನ]

**ಮಂದಟ್ಟು** 'ಮನದಟ್ಟು$_2$' ನೋ.

**ಮಂದತನ** (ನಾ). ಆಲಸ್ಯ; ಜಡತ್ವ: ಮಂದಿಯ ತಡೆ ಕುದುರೆಯ ಕಟ್ಟು ಜೀವಿತ ಸಂದು ಬರಲಿ ಸುಭಟರಿಗೆ ಮಂದತನವ ಬಿಡು ಮುಕ್ಕಳಾಟಿಕೆ ಬೇಡ (ಕುಂರಾಮಾ. ೩೦-೨೬) ; ಕುಂದು ಬಂದವಗೆ ಸೊಬಗೇಕೆ ಸೂಳೆಗೆ ಮಂದತನವೇಕೆ (ಸರ್ವಜ್ಞ. ೦೬೯೪). [ಮಂದ$_2$ + — ತನ]

**ಮಂದತೆ** (ನಾ). ನಿಧಾನ : ವಿಳಂಬ ಗತಿ : ಅವಳ ಅಲಸಗತಿಗೆ ಮತ್ತೊಂದಿಷ್ಟು ಮಂದತೆ ಬಂದಿತ್ತು (ಓನಾಶ. ೫೦). [ಸಂ. ಮಂದತಾ]

**ಮಂದತ್ವ** (ನಾ). ೧. ನಿಧಾನ ; ವಿಳಂಬಗತಿ. ೨. ದಡ್ಡತನ ; ಮೌಢ್ಯ. ೩. = ಮಂದತನ. ೪. ಜೀರ್ಣಶಕ್ತಿಯು ಕಡಮೆಯಾಗಿರುವುದು ; ಅಜೀರ್ಣ : ವಾತಪಿತ್ತಂಗಳಿಗೆ ಅಧಿಕ್ಯ ಶ್ಲೇಷ್ಮಕ್ಕೆ ಮಂದತ್ವವೆಂಬುವ

ದೊಂದು ಸನ್ನಿಪಾತ . . . ವಾತಶ್ಲೇಷ್ಮಗಳಿಗಾಧಿಕ್ಯ ಪಿತ್ತಕ್ಕೆ ಮಂದತ್ವ ಮಾದುದೊಂದು ಸನ್ನಿಪಾತ (ಶಶವ್ಯ. ೦೩೦). [ಸಂ.]

**ಮಂದದೋಷ** (ನಾ). ದೋಷಯುಕ್ತವಾದ ಪಚ್ಚೆಯ ಐದು ವಿಧಗಳಲ್ಲಿ ಒಂದು ; ನವಿಲುಗರಿಯ ಬಣ್ಣವನ್ನು ಹೊಂದಿರುವ ಪಚ್ಚೆ : ದೋಷಲೇಶಾನ್ವಿತಂ ದುಷ್ಟಂ ದೋಷಪೂರ್ಣಿತಂ ದೋಷಲೇಶಂ ಮಂದ ದೋಷಮೆಂದಿಂತೀ ಪಂಚವಿಧಮಾದ ಸದೋಷಜಾತಿ ಮರಕತಮಂ ಪೇಳ್ವೆಂ (ಹಾಲಾಸ್ಯ. ೨-೦-೬೬ ವ). [ಸಂ.]

**ಮಂದಪವನ** (ನಾ). ಮೃದುವಾಗಿ ಬೀಸುವ ಗಾಳಿ ; ಮೆಲ್ಲನೆ ಬೀಸುವ ಗಾಳಿ : ಎಸಗಿತ್ತಂದನುಕೂಲಮಂದಪವನಂ (ಶಂಶಅ. ೯-೯೬) ; ಗಾಳಿಯಲ್ಲಿ ಯಾವ ಪ್ರಮಾಣದ ವೇಗವಿದ್ದರೆ ಅದನ್ನು ಮಂದಪವನವೆನ್ನಬಹುದೋ, ಎಂದರೆ ಯುವತಿಯ ಮಂದಗಮನದೊಡನೆ ಹೋಲಿಸಬಹುದೋ, ಇದು ಅದಕ್ಕಿಂತ ಹೆಚ್ಚು (ಶಿಬಂಠ. II. ೦೬೨). [ಸಂ.]

**ಮಂದಪ್ರಕೃತಿ** (ನಾ). ಆಲಸ್ಯ ; ಜಡಸ್ವಭಾವ : ಸ್ವಲ್ಪ ಮಂದ ಪ್ರಕೃತಿಯ ವಿದ್ಯಾರ್ಥಿಗಳಿಗೆ ಇದೊಂದು ನೂತನವೂ ಫಲಪ್ರದವೂ ಆದ ಶಿಕ್ಷಣಕ್ರಮವೆಂದು ಉಪಾಧ್ಯಾಯರು ಗಣಿಸಬೇಕು (ಶಿಕ್ಷಣ. ೨೮೯). [ಸಂ.]

**ಮಂದಫಲ** (ನಾ). ೧. ಕಡಮೆಯಾದ ಆದಾಯ.— ಉತ್ಪತ್ತಿ : ಕಳೆದ ವರ್ಷ ಕಪ್ಪುಧಾನ್ಯಗಳ ಪೈರುಗಳು ಮಂದಫಲವನ್ನು ಕೊಟ್ಟವು (ರೂಶ). ೨. [ಜ್ಯೋತಿ] " ಸೂರ್ಯನೀಚದಿಂದ (ಅಥವಾ ಚಂದ್ರ ನೀಚದಿಂದ) ಗ್ರಹಕ್ಕೆ ಅಥವಾ ಉಪಗ್ರಹಕ್ಕೆ ಇರುವ ಕೋನದೂರ ; ನೀಚಾಂತರ ; ಮಂದಫಲ, ಸೌರಶೃಂಗಾಂತರ " (Anomaly. ೩೦೪೩). [ಸಂ.]

**ಮಂದಬುದ್ಧಿ** (ನಾ). ೧. ಅಜ್ಞಾನ ; ಮೂರ್ಖತನ : ಮಂದಬುದ್ಧಿಯಿಂದ ನೀವು ಮುಕುಂದನ ಮಹಿಮೆಯರಿದಿರಿ (ಭೂರಂಠ. ೨-೨೦೩-೩) ; ಅವನು . . . ಮಂದಬುದ್ಧಿಯ ಆಡಂಬರವ್ಯಕ್ತಿಯೆಂದು . . . ಮನದಟ್ಟಾಯಿತು (ಭೂಸಹು. ೩೩೩). ೨. ಚುರುಕುಬುದ್ಧಿಯಿಲ್ಲದವನು ; ದಡ್ಡ ; ಹೆಡ್ಡ : ಮಂದ ಬುದ್ಧಿಯವರಿಗೆ ಅಂತಹುದು ಸಾಧ್ಯವಾಗಬಹುದು. ನಿನಗಲ್ಲ (ವಂಕೋಸಂ. ೮೦). [ಸಂ.]

**ಮಂದಭಾಗ್ಯ** (ನಾ). ೧. ದುರ್ದೈವ ; ದುರದೃಷ್ಟ : ತಂದೆ ತಾಯ್ಗಳ ಸೇವೆ ಒಂದುದಿನ ಮಾಡಲಿಲ್ಲ ಮಂದಭಾಗ್ಯದ[ವಶಾಂ. ಗೆ] ಭವಣೆ ತಪ್ಪಲಿಲ್ಲ (ಭೂರಂವ. ಫಾ. ೨-೦೯-೩). ೨. ದುರದೃಷ್ಟಶಾಲಿ ; ಅದೃಷ್ಟ ಹೀನ: ಇಂದಿನಾಹವ ಲೇಸು ಲೇಸಿದು ಮಂದಭಾಗ್ಯನು ತಾನು ಸಾಕಿನ್ನೆಂದು ಮಾಡುವುದೇನು ನಿಮ್ಮೊಳು ಕದನ ಬೇಡ (ಕುಬ್ಬ್ಯಕ್ತೋ. ೦೩-೦೦); ಅಂಥವನಿಗೆ ಕತ್ತಲೆಯಿಲ್ಲ, ಮಂದಭಾಗ್ಯನಿಗೆ ದರಿದ್ರವಿಲ್ಲ (ಗಾದೆ). [ಸಂ.]

**ಮಂದಭಾಗ್ಯತೆ** (ನಾ). ಅದೃಷ್ಟಹೀನತೆ ; ದುರದೃಷ್ಟ : ಮದೀಯ ಮಂದಭಾಗ್ಯತೆಯುಮಂ ದೈವದ ದಾರುಣತೆಯುಮಂ . . . ಭಾವಿಸಿ ನೋಡಿ (ಕಾದಂಪೂ. ೯೩೨). [ಸಂ. ಮಂದಭಾಗ್ಯತಾ]

**ಮಂದಮತಿ** (ನಾ). ೧. = ಮಂದಬುದ್ಧಿ ೧ : ತಂದೆ ಸತ್ತ ಮೇಲೆ ನೂಜುಮಂದಿ ವಿಪ್ರರಿಗುಣಿಸಿ ತಮ್ಮ ತಂದೆ ತೃಪ್ತಿಪಡುವನೆಂಬರು ಮಂದ ಮತಿಯ ಜನಗಳು (ಭೂರಂಠ. ೦-೦೮೦-೪). ೨.=ಮಂದಬುದ್ಧಿ ೨ : ಮಂದಮತಿಯಾಗಿ ಮರುಳೆ ಕಾದದ ಕಟ್ಟದೆಮ್ಮನು ಬಡಿದೆ ಜಯಸಿದೆ (ಕುಬ್ಬಾಖು. ೦-೯೦) ; ಮಂದಮತಿಯೋ ನಾನು ಮದನಜನಕನು ನೀನು (ಭೂರಂಠ. ೪-೯೦ ಕಲ್ಲಿಖ) ; ಮಂದಮತಿಯಲಿ ತರ್ಕ ಸಲ್ಲ (ಕುಖಿ. ೦೩-೯). [ಸಂ.]

**ಮಂದಮರುತ** (ನಾ).=ಮಂದಪವನ : ಪರಿವ ಪರಿಪೊನಲ ಹಿಮಶೀಕರಂ ಗಳೊಳ್ ಪುದಿದ ಮಂದಮರುತಂ . . . ಒಗೆದ ಬೆಮರ್ವನಳಿವಡಿಸುವಿನಂ (ಶಾಂತಿಪು. ೯-೭೯). [ಸಂ.]

**ಮಂದಮಾರುತ** (ನಾ). =ಮಂದಪವನ : ಅನಂತಲತಾಳಿಲತಾಂತವಾಂತ ಸೌರಭಭರಮಂದರಂ ಸೊಗಯಿಕುಂ ಪುರಸಂದನಮಂದಮಾರುತಂ (ಶಂತ್ರಪು. ೦-೦೦೦); ಒಗುವಿಂಗೆಯ ಪರಿವಳದ ಕಂಪಿನ . . . ಸೊಗಸ ಸೇರಿಸಿ ಮಂದ ಮಾರುತನಿಪ್ಪದನು ಮಗನ (ಕುಬ್ಬ್ಯಆ. ೦೦-೯೩) ; ಸುಮಲತೆಗಳ ಪರಿಮಳದ ಬಿತ್ತರಿಸಿ . . . ಮಂದಮಾರುತವು ಬೀಸುತ್ತಿರಲಿನಿಸು (ಕಂಖ. ೨೩-೦). [ಸಂ.]

**ಮಂದಯಾನ** (ನಾ). = ಮಂದಗತಿ : ತೋರನಿತಂಬಭಾರಕಲಸುತ್ತವೆ ಪೋಪಳ ಮಂದಯಾನಮುಂ (ಶಾಕುಂತ. ೨೦-೩೬). [ಸಂ.]

**ಮಂದಯಿಸು**, ಮಂದಯ್ಸು, ಮಂದವಿಸು, ಮಂದೈಸು (ಕ್ರಿ). ೧. ದಟ್ಟ ವಾಗು ; ಸಾಂದ್ರವಾಗು : "ಮಂದಯಿಸು—ಸಾಂದ್ರತ್ವೇ (ದಟ್ಟ ವಾಗು)" (ಶಮಂದ) ; ರಸೆ ಪಶ್ಚಿತ್ತಮಾಕಾಶದೊಳನಿಲಪಥಂ ಧಾರಿಣೀ ಚಕ್ರದೊಳ್ ಕಾಳಸೆಗೊಂಡತ್ತೆಂಬಿನಂ ಮಂದಯಿಸಿ ನಿಜಪರಾಲೋಕನ ವ್ಯಗ್ರವೃಷ್ಟಿ ಪ್ರಸರಕ್ಕಿಲ್ಲಿತ್ತೊ ಮಾರ್ಗಂ (ಆದಿಪು. ೦೪ - ೯೩) ; ತಳ್ಳಿಂಗಗರ್ಭಂದೆಯೆ ಜಾಜ್ವಲ್ಯಮಾನಮಾಗೊಂದು ಬೆಳಗು ಮಂದಯಿಸಿ ಪೊಜಪ್ಪೊಣ್ಚೆ (ಶಬ್ದ್ರಾ. ೦೩-೩೩) ; ಮಂದಯಿಸಿದ ಘೋರತಮಂ ಮುಸುಕಿ ತ್ತಿಳೆಯುಂ (ಹುಸ್ಕ್ರ. ೩-೦೪). **ಮಂದಯ್ಸು** : ೨. ಒಟ್ಟುಗೂಡು ; ಗುಂಪಾಗು : ಭೃಂಗೀವೃಂದಮನುಚ್ಚ ಸೋವೃತ್ತುಂ ಮಂದಯ್ಸ ಮಗುಳ್ಚಿ ಗಟ್ಟಿವಳ್ಳಿಯಲಿಸಗುಂ (ನಂಕ. ೨-೯೦). ೩. ನೀರಾಗಿಲ್ಲದಿರು ; ಗಟ್ಟಿಯಾಗು : ಪೊರೆದ ಪುಡಿಯನೊಡನೊಡನೆ ಬೆಮರ ಬಿಂದುಗಳ್ ನಾಂದೆ ಮಂದಯ್ಸದಳ್ಸಜಿಳಿಡಿದು ಜೆಡೆಗೊಂಡು ನಗವೊಗಮ ನಾಗಳುಗಳೆ ಕರಂಗಿಸಿದ ಮಸಿಯ ಕುಂಚಿಗೆಳಿಸಿ ನೊಸಲಂ ಮುಸುಂಕಿ ದಳೆತವಲ್ಲರಿಗಳೊಳಂ (ಪರ್ಣ. ೯-೭೦ ವ). **ಮಂದವಿಸು** : ೧. ಮಂದವಿಸಿ ಮುಸುಕಿದ ಮಹೀರುಹವೃಂದವನು ಕುಶ ಕೇಳ್ಪವಿತ್ರಾಸಂದನನು ಬಳಿ ಕಗಿದು ಹೂಡಿದನಸಮಮಾರ್ಗಣವ (ಕೂರಂ. ೩-೩-೨೦). **ಮಂದೈಸು** : ೧. ಮೊದಲೊಳ್ ನೀಳ್ಪು ಪೊದಟ್ಟು ಪರ್ವಿ ಪರೆಪಂ ಕೈಕೊಂಡು ಮಂದೈಸಿ ಮಾಣದೆ . . . ಪುದಿದಾ ದಂಪತಿಯಂ ಪುದುಂಗೊಳಿಸಿ ಲೋಕಾ ಶ್ಚರ್ಯಮಂ ಮಾಡಿ ಕೊಂಡುದು ಕೃಷ್ಣಾಗರುಧೂಪಧೂಮನಿವಹಂ (ಆದಿಪು. ೩-೨೩) ; ಮುಂದೊಂದು ಮಂದೈಸಿದ ಮರದಡಿಯೊಳ್ ಕುಳ್ಳಿರ್ಪ ನ್ನೆಗಂ (ಕೃಷ್ಣಾಸ್ತ್ರ. ೦೨-೦೬ ವ). ೨. ಮಂದಸ್ಮಿತಮಧುರವಿಲೋಚನದಿಂ ಮಂದೈಸಿದ ನೃಪಸುತರಂ ನೋಡುತ ಕಂದರ್ಪನ ಪಟ್ಟದ ಕರಿ ಮೆಲ್ಲನೆ ನಡೆವಂತೆಯ್ದಿದಳು (ಜಯುಶಾ. ೩-೯೬) ; ಮಂದೈಸಿದಲರ್ಗೊಂಪಮಂ ಕಂಡು ಪಿಂಡೆಚಿ ಪೊಸಜೇನನುಂಡು . . . ಮುಂಬರಿದ ಬವರಿವಿಂಡಿಂ . . . ಬನಂ ಮನಂಗೊಂಡುದು (ರಾಮಾಶ್ವ. ೩೪-೪). ೪. ಹೆಚ್ಚಾಗು ; ಅಧಿಕ ವಾಗು: ತರುಣಿಗೆ ದೇವ ನಿಜಾನುಸ್ಮರಣದೆ ಮಂದೈಸಿ ಮೈಯೊಳುಣ್ಮಿದ ಪುಳಕಾಂಕುರನಿಕರಂ ಕುಸುಮಾಯುಧಶರಪಾತಕ್ಕಗಿದು ತೊಟ್ಟ ಕವಚ ಮಿದೆನಿಕುಂ (ಕಾದಂಉ. ೩೩೦) ; ಹೊಗಳುತ್ತ ಹೊಂಗುತ್ತ ಮಂದೈಸಿ ಪಲ್ಲವಿಸಿ ಪುಳಕದಿಂ ಪೊಣ್ಮುತ್ತೆ (ಕಂಠೀರ.ದೇ. ೨೯೩-೪) ; ಮಂದೈಸಿದ ಲಜ್ಜೆ ಯಿಂದೆರ್ದು ನುಡಿದಳು ಮುಂದಣ ಕಾರ್ಯದ ತೆಜನ (ಕ್ರೀಶಾಂ. ೬-೭). [ಮಂದ₂ + —ಇಸು₃]

**ಮಂದಯ್ಸು** ' ಮಂದಯಿಸು ' ನೋ.

**ಮಂದರ₁** (ನಾ). [ಸಂಗೀತ] ಕೆಳಸ್ವರದ ಧ್ವನಿ ; ಮಂದ್ರಸ್ಥಾಯಿ : "ಮಂದರ–ಮಂದ್ರ=ಕೆಳದನಿ" (ಶಬ್ದಕೋ. ೩೪) ; ಮಂದ್ರಂ–ಮಂದರಂ, ಮಂದಿರಂ (ಶಬ್ದಾಕು. ೦೪೭ ವ್ಯಾಖ್ಯಾ). ' ಮಂದರಶ್ರುತಿ ' ಪರಾ. [< ಸಂ. ಮಂದ್ರ]

**ಮಂದರ₂** (ಗು). ೧. ನಿಧಾನವಾದ ; ಮಂದವಾದ : ' ಮಂದರ ಯಾನ ' ಪರಾ. ೨. ದಟ್ಟವಾದ ; ಸಾಂದ್ರವಾದ. ೩. ದೃಢವಾದ.

೮. ಹೆಚ್ಚಾದ: ಅಧಿಕವಾದ. (ನಾ). ೫. ಒಂದು ಪರ್ವತದ ಹೆಸರು; ಇದು ಅಷ್ಟಕುಲಪರ್ವತಗಳಲ್ಲಿ ಒಂದೆಂದೂ ಕ್ಷೀರಸಮುದ್ರವನ್ನು ಕಡೆಯುವುದಕ್ಕಾಗಿ ದೇವತೆಗಳು ಇದನ್ನು ಕಡೆಗೋಲನ್ನಾಗಿ ಮಾಡಿಕೊಂಡಿದ್ದರೆಂದೂ ಭಾವಿಸಲಾಗಿದೆ : ಮಂದರಕ್ಷುಭಿತಪಯೋಧಿನಾದದಿಂ ಗಜಜಃ ಗರ್ಜಿಸಿ (ಕಂಕಸಂ. ೩೦-೪) ; ಮೊರಡಿಗಳ ನಡುವೆ ಮಂದರ [ಮಣಿ. ಎರ] . . . ಬಕಂಗಳ ನಡುವೆ ಪರಹಂಸೆಯುಪ್ಪಂತೆ (ಸೋಮಸು. ೧-೧೦೬). 'ಮಂದರಧರ' ಪರಾ. ೬. ಕೈಲಾಸ : 'ಮಂದರನಿಲಯ' ಪರಾ. ೭. ಸ್ವರ್ಗ : ದೇವಲೋಕ : ಕೋಪದಿ ಪಡಪಡಿಸಿ ಭೂಮಂದರಂ ನಡುಗಲ್ಕೆ (ಕಂಕಚಾ. ೨೨-೯೨). ೮. ಒಂದು ಬಗೆಯ ಮರ : ಮಂದಾರ : ಮಂದರ–ಶೋಭೆಯ ವೃಕ್ಷ. ಹೂಗಳು ತರತರದ ಬಣ್ಣಗಳವು. ಕಟ್ಟಿಗೆ ಗಟ್ಟಿ. ಕೆಲಸಕ್ಕೆ ಬರುತ್ತದೆ (ಆರಾಗ. ೪೬). ೯. ಒಂದು ರಥದ ಹೆಸರು : ಬಾಹುಬಲಿವಿಗ್ರಹ ಸುಮಾರು ಐದಡಿ ಎತ್ತರವಿದೆ. ಇದರ ಮುಂದಿರುವ "ತೇರಿ"ಗೆ ಮಂದರವೆಂದು ಹೆಸರು (ಹೊಯ್ಸಳ. ೨೦೬). ೧೦. ಎಂಟು ಅಥವಾ ಹದಿನಾರು ಎಳೆಗಳುಳ್ಳ ಮುತ್ತಿನ ಹಾರ. ೧೧. [ಜೈನ] ದೇವತೆಗಳು ತೀರ್ಥಂಕರರಿಗೆ ಪಂಚಕಲ್ಯಾಣಗಳನ್ನು ನೆರವೇರಿಸುವ ಸ್ಥಳವೆಂದು ಭಾವಿಸಲಾದ ಪರ್ವತ : ಮೇರು : ಮೂಲೋಕಕ್ಕೆ ಪೆಂಪಿಂದಗುಂದಲೆಯಾಗಿರ್ದುದು ದೇವದಂಪತಿರತಶ್ರೀಸುಂದರಂ ಮಂದರಂ (ಆದಿಪು. ೦-೩೦) : ಜಗತೀವಿಶ್ರುತಮಂದರಕ್ಕೆ ನಡೆಯಲ್ ಪೇಟ್ಟು (ಪುಷ್ಪ. ೦೦-೨೯). [ಸಂ.]

**ಮಂದರಧರ** (ನಾ). ೧. ಸಮುದ್ರಮಥನಕಾಲದಲ್ಲಿ ಕೂರ್ಮಾವತಾರದಿಂದ ಮಂದರಪರ್ವತವನ್ನು ತನ್ನ ಬೆನ್ನಿನ ಮೇಲೆ ಧರಿಸಿದ ವಿಷ್ಣು : [ಶರಸಿಧಿ]ಮಂದದೀವತಿಗಭೀರಗುಣೋನ್ನತಿಯಿಂದೆ ಸಂದ ಮಂದರಧರಬಾಹುಗಳ್ ಪಸುಮತೀತಳರಕ್ಷಣದಕ್ಷರಪ್ಪ ನಾಲ್ವರುಮಂ ನೀಶರಂ ಪರರಥಂ ಪಡೆದಂ ತನುಜಾತರಂ (ಅಬಂಭು. ೩೩೦) : ಮಂದರಧರನೀಕ್ಷಿಸಿ ಸಂಕ್ರಂದನಮುಹಮೇನಿಮಿತ್ತಮೆಮಗಿದು ಚಿತ್ರಂ ಎಂದು ಬೆಸಗೊಳ್ವುದುಂ (ಜಗ. ೪-೭೬). ೨. ಗತಿಸಿದವನು ; ಸ್ವರ್ಗಸ್ಥ : ನಂದಕಮಂ ದಿವಿಜಗಣಾನಂದಕಮಂ ಕೊಂಡು ಚೇದಿಪತಿಯೊಳ್ ಪೋರ್ವರ್ಗಂ ಮಂದರಧರನಾತುಪದೊಳ್ ಮಂದರಧರರಾದರಹಿತರೆಂದೆಂಬಿನೆಗಂ (ಜಗ. ೩-೯೬). ೩. [ಛಂದ] ಅಂಶಗಣಗಳಲ್ಲಿ ಒಂದು : ವಿಷ್ಣುಗಣ : ಮಂದರಧರಗಣಮೆಸೆದಿರೆ ಮೊದಲೊಳ್ . . . ಛಂದೋವತಂಸಂ (ಛಂದೋಂಬು. ೩-೨೩೩). [ಸಂ.]

**ಮಂದರನಿಲಯ** (ನಾ). ಕೈಲಾಸದಲ್ಲಿ ವಾಸಮಾಡುವವನು : ಶಿವ : ಸಿಂಧುಪೂಟನೆ ಪಾಹಿ ಶ್ಯಾಮಾಂಗಸಖಿ ಪಾಹಿ ಮಂದರನಿಲಯನೆ ಪಾಹಿ (ಹರಿಶ್ಚ. ೨೦-೯೩). [ಸಂ.]

**ಮಂದರಯಾನ** (ನಾ). ನಿಧಾನವಾದ ನಡಗೆ : ಮಂದಗಮನ : ಬಿಸರುಹನೇತ್ರೆಯೊಳ್ನಡು ಪೊದಬ್ದುದು . . . ಮಂದರಯಾನವೊಡರ್ಚಿತು (ಕಂಚಾರು. ೨೬೯-೦೨). [ಸಂ.]

**ಮಂದರಶ್ರುತಿ** (ನಾ). = ಮಂದರ$_1$ ; ಅವರ ತಂಬೂರಿಯ ಮಂದರಶ್ರುತಿಯ ತಂತಿಯು ಒಂದು ಶ್ರುತಿಗೆ ಸರಿಯಾಗಿರುತ್ತಿತ್ತು (ಕಂಗೀತ. ೨೩).
[ಮಂದರ$_1$ + ಶ್ರುತಿ]

**ಮಂದರಿ** (ನಾ). ಚಾಪೆ : ಮಕ್ಕಳಿಗೆ ಮಲಗಲಿಕ್ಕೆ ಮಂದರಿ, ಮಂದರಿ ಹರಿದರೆ ಹಚ್ಚಡ, ಹಚ್ಚಡ ಹರಿದರೆ ಮಂದರಿ ಕೊಡಿಸಿ, ಅವನನ್ನು ಕಳುಹಿದನು (ಕೋಟಿಚ. ೬). 'ಮಂದಲಿಗೆ' ಪರಾ.
[ದೇ.॥ ತುಲ. ಮನ್ತಿರಿ ; ತುಳು. ಮಂದಿರಿ, ಮಂದ್ರಿ = ಮಗ್ಗುಲಂ ಹಾಸುಗೆ; ತೊದ. ಮೊದರ್ಕೈ. / ಮರಾ. ಮಾಂದರೀ. / ಸಂ. ಮಂದುರಾ]

**ಮಂದಲಿಗೆ** (ನಾ). = ಮಂದರಿ : ಬಾಯಿಗಿಕ್ಕಿದ ಅಕ್ಕಿ ಒಕ್ಕವು ಮಂದಲಿಗೆಯಲ್ಲಿ ಮಂದಲಿಗೆ ಆನಲಾಜದೆ ಹಿಂಗಿ ಒಕ್ಕವು ನೆಲಕ್ಕೆ (ವಚನಶಾ. ೨೩೮-೬೦೯); ಅಂಗಳದಲ್ಲಿ ಒಬ್ಬರು ಒಂದು ಪಂಜೆಯನ್ನು ಹೊದೆದು ಮಂದಲಿಗೆಯ ಮೇಲೆ ಮಲಗಿದ್ದರು (ರತ್ನಾಕರ. ೩೯).

**ಮಂದಲಿಸು** (ಕ್ರಿ). ತಪ್ಪನ್ನು ಎತ್ತಿ ಹೇಳು : ಮೂದಲಿಸು : ತವ ಸ್ತ್ರೀಯು ಕೂಡೆ ತನ್ನ ಮನೆಯಲ್ಲಿರುವ ಗಿಳಿಯು ಕೂಡೆಯೂ ಅರಸು ಮಂದಲಿಸಿದ ವೃತ್ತಾಂತಮಂ ಪೇಳಲು (ಶುಕ. ೯) ; ನಿಮ್ಮೆಲ್ಲರನು ಕಡಿದೊಟ್ಟಿ ಖಂಡವ ಚೆಲ್ಲಿ ಭೂತಕೆ ಬಲಿಯನಿಕ್ಕುವೆ . . . ಎಂದು ಒಬ್ಬರಿಗೊಬ್ಬರಿದಿರಲಿ ಮಂದಲಿಸಿ (ಕಠಾರಿ. ೩೩೬-೦೩) ; ಅರಸಿನವರು ಮಂದಲಿಸಲಾಗಿ ನವಾಬರು ಯುದ್ಧ ಪುನಹಾ ಕೈಕೊಂಡಿಸಿಕೊಂಡೂ (ಹೈದರ. ೪೯). [ದೇ.॥ ತೆಲು. ಮಂದಲಿಂಚು = ಆಜ್ಞಾಪಿಸು, ಬೋಧಿಸು, ಎಚ್ಚರಿಕೆ ನೀಡು, ಬಿನ್ನವಿಸು, ಪ್ರಶ್ನಿಸು]

**ಮಂದವಾರ** (ನಾ). ಶನಿವಾರ : ದಂಡನಾಯಕರುಂ . . . ಆಷಾಢ ಬಹುಳನವಮಿಮಂದವಾರ ದಕ್ಷಿಣಾಯನಸಂಕ್ರಾಂತಿಯಲು . . . ಸರ್ಬ್ಬನಮಸ್ಯಂ ಮಾಡಿ (ಕೂಣ್ಗಲ್ಲಾ. ೦೩-೩೯ : 1166) ; ಪರಜಯ (ಸೌ)ವತ್ಸರಂ ವಿನುತಪೇಷ್ಯಯುತಂ ಸಿತಪಕ್ಷಪುಷ್ಯಮಿಪಂಗತಂ ಮಂದವಾರದೊಳ್ (ಎಕ. XII, ತಿಪಟೂ. ೯೯-೨೩ : 1174 ?). [ಸಂ.]

**ಮಂದವಿಸು** 'ಮಂದಯಿಸು' ನೋ.

**ಮಂದವೇಗ** (ನಾ). [ಕಾಮಶಾ] ರತಿಭೇದದೃಷ್ಟಿಯಿಂದ ವಿಂಗಡಿಸಿದ ಮೂರು ಪ್ರಕಾರದ ಪುರುಷವರ್ಗಗಳಲ್ಲಿ ಒಂದು ವರ್ಗಕ್ಕೆ ಸೇರಿದವನು : ವೇಗಗತಿಯಿನಾಯ್ತು ಮಂದವೇಗ ಮಧ್ಯವೇಗ ಚಂಡವೇಗನೆಂಬ ಪೆಸರು ಪುರುಷರ್ಗೆ ಸುರತದೊಳ್ (ಚಪ. ೪-೩೬) ; ಬಗೆಗೆ ತಂದು ಸತಿಯನಿಚ್ಚೆಯೊಗೆಯೆ ನೆರೆವನವನೆ . . . ಮಂದವೇಗನೆಂಬವಂ (ಚಪ. ೪-೪೦). [ಸಂ.]

**ಮಂದವೇಗಿ** (ನಾ). [ಕಾಮಶಾ] ಸಂಭೋಗದಲ್ಲಿ ಉದಾಸೀನಳಾದವಳು : ವೇಗಗತಿಯಿನಾಯ್ತು . . . ಸುರತದೊಳ್ ತೂಗಿದಂದದಿಂದೆ ಮಂದವೇಗಿ ಮಧ್ಯವೇಗಿ ಚಂಡವೇಗಿಯೆಂಬುದಾದುದಬಲೆಯರ್ಗೆ (ಚಪ. ೪-೩೬).
[<ಸಂ. ಮಂದವೇಗಿನೀ]

**ಮಂದವೇಗಿನಿ** (ನಾ). = ಮಂದವೇಗಿ : ಮಂದವೇಗಿನಿ ಮಧ್ಯವೇಗಿನಿ ಚಂಡವೇಗಿನಿಯರೆಂಬ ತ್ರಿವಿಧರತಿಭೇದಕಾಂತೆಯರಿಂ (ಪಂಪ. ೩-೯).
[ಸಂ. ಮಂದವೇಗಿನೀ]

**ಮಂದಸ** 'ಮಂದಸು' ನೋ.

**ಮಂದಸು**, ಮಂದಸ, ಮಂದಾಸನ, ಮಂದಾಸು (ನಾ). ೧. ಪೆಟ್ಟಿಗೆ : ಮಂಜೂಷ : ತಳಾಜಿನಂ ಮಂದಸಿನೊಳಗಿಟ್ಟು ತ್ಸಲಮಾಲೆ ಪೃಥುವನೆಂದಳ್ (ಜಾಪುಂಪು. ೬೯) ; ಪಡೆಯೆ ಮಗನಂ ನಿದಾನಮಾನಿತುವಂತೆಪೋಲಿಟ್ಟು ಪೊನ್ನ ಮಂದಸಿನೊಳಗಾಗಡೆ ಗಡ ಬಿಟ್ಟರ್ಜಗುನೆಯ ಮಡುವಿನೊಳ್ (ಅರ್ಜುನ. ೪-೯೩) ; ಉಪೇಂದ್ರನರ್ಬಿದ ಮಳಿಸಿಂದೆ ಮಂದಸಿನ ಮುಚ್ಚಳನಂಗುಟದಿಂದೆ ಮೀಂಟಿ (ಜಗ. ೬-೩೦) ; ಮೊಗವ ನೋಡದೆ ಮಂದಸಿನೊಳು ನಿನ್ನೀ ಚೆಲ್ವ ಮಗಳನಿರಿಸಿ ಬೇಗದೊಳು ನಗರವ ಪೊರಮಡಿಸು (ರಾಮಾ. ೬-೩೬). **ಮಂದಸ** : ೧. ಆ ಮಂದಸಮಂತು ನೀರೊಳರ್ದಂದು ಬರಿಯುದೊಂದು ಮೀನ ಬೆನ್ನಂ ತಾಗಿ . . . ಮೇಗೆ ನೆಗೆದ ಮಂದಸಂ ಸಿಡಿಲ್ ಬಡಿದು ಸಂಭೌಮಂ ಸತ್ತು (ಚಾಪಾಂ. ೦೩೪-೩) ; ಕರ್ಣಂಗಳ ತುದಿಯೊಳ್ ಸುಚಿನಿರ್ಮಿತಂ ತೋಚಿ ಪತಿಗೆ ಮಂತ್ರಿಗಮಾರಭ್ಯರ್ಣದೊಳರ್ಗಂ ಮರಣಾಸ್ವರ್ಣದ ಕರ್ಬುನದ ಮಂದಸಂ ಪುಗಿಸಿದೊಡಂ (ಅಜಿತಾ. ೪-೦೯) : ಚಿನ್ನ ಭೂಮಿಯನುಳಿಸೆ ಕಂಡುದು ಹೊನ್ನ ಮಂದಸವಾ ಹಲಾಗ್ರದಿ (ಕೌಶಿಕ. ೨-೨). **ಮಂದಾಸನ** : ೧. ಲೋಕಾಪವಾದಕ್ಕೆ ಹೆದರಿದ ಕುಂತಿಯು ಒಂದು ಮಂದಾಸನದೊಳಗೆ ರತ್ನವನ್ನು ತುಂಬಿ ಅದರ ಮಧ್ಯದಲ್ಲಿ ಆ ಮಗು

ವನ್ನಿಟ್ಟು ಯಮುನಾನದಿಗೆ ಬಿಟ್ಟಳು (ಕಬ್ಬೂಕಾಂ. ೧೧). ೨. ದೇವರ ವಿಗ್ರಹಗಳನ್ನಿಡುವ ಮರ ಅಥವಾ ಲೋಹದ ಮಂಟಪ: ಮಂದಾಸನದಲ್ಲಿದ್ದ ದೇವರ ಮೂರ್ತಿಯು ನಯನಮನೋಹರವಾಗಿತ್ತು (ಬೂತ). ಮಂದಾಸು : ೧. ಆ ಸುಕುಮಾರನನೊಂದು ಮಂದಾಸಿನೊಳ್ ರಾಶಿಮಾಡಿದ ರತ್ನಸಹಿತ ಆ ಸಹಚರಿಯರಿರಿಸಿ (ಸೇಬಸಂ. ೫-೧೦೩). ೩. ಪ್ರಾಣಿಗಳನ್ನು ಬಂಧಿಸಿಡುವ ಸಾಧನ; ಪಂಜರ; ಬೋನು: ಘೋಟದರಸು ಅಟ್ಟಿದ ಮಂದಾಸಿನೊಳು ಶಕಟದ ಮೇಲಿಟ್ಟೊಂದು ದುಷ್ಟವಾಜಿಯನು ಕರವೊಪ್ಪವೆತ್ತು (ಶಾಗಳು. ೯-೦).

[<ಸಂ. ಮಂಜೂಷಾ./ತೆಲು. ಮಂದಸ]

**ಮಂದಸ್ಮಿತ** (ನಾ). ೧. ನಸುನಗೆ; ಮುಗುಳುನಗೆ; ಮೆಲುನಗೆ: ಹನುಮನ ನೋಡಿ ತಲೆದೂಗಿದನು ಮಂದಸ್ಮಿತಮಧುರಮುಖಕಮಳ ನೊಲವಿನಲಿ (ಕುವ್ಯಾಕ. ೨೪-೨೯); ಶಿವನುರಿಗಣ್ಣಿನ ಬೆಳುದಿಂಗಳೊ ಎನೆ ನೋಟದ ಮಂದಸ್ಮಿತರುಚಿ ತಣ್ಣನೆ ತೀಜಿದ ಸೂಸುತಲೆಲ್ಲೆಡೆಗೆ ಬೆಳಗ (ಗಕೀಶ. ೨-೩೬). ೨. ಮಂದಹಾಸದಿಂದ ಕೂಡಿರುವವನು: ಆ ಮಹಾಪುರುಷನು ವಿನಯವಂತನಾಗಿ ಮಂದಸ್ಮಿತನಾಗಿ ಶಾಂತಲೆಯನ್ನು ನೋಡಿದನು (ಶಾಂತಲಾ. ೪೨). [ಸಂ.]

**ಮಂದಸ್ಮೇರ** (ನಾ). ಮುಗುಳುನಗೆ; ಮಂದಸ್ಮಿತ: ಮಂಜುಳ ಮಂದಸ್ಮೇರವಕ್ತ್ರಂ ಮಿಸುಗೆ (ರಾಜಶೇ. ೦-೧೩೨); ರಾಜನು ಮತ್ತೊಂದು ಮಂದಸ್ಮೇರವನ್ನು ತುಟಿಗಳಲ್ಲಿ ಮಿನುಗಿಸಿ ಸುಮ್ಮನಾದನು (ಕವತಿ. ೧೦೯). [ಸಂ.]

**ಮಂದಹಸಿತ** (ನಾ). =ಮಂದಸ್ಮಿತ ೧: ಅಂದದೊತವೆಯ ಮೊನೆಗಳಿಂ ದೆಯನೊತ್ತುವಾ ಮಂದಹಸಿತದ ಕೊಲೆಮೊ (ಮುಕುಲ. ೦೭೭). [ಸಂ.]

**ಮಂದಹಾಸ** (ನಾ). =ಮಂದಸ್ಮಿತ ೧: ಲಲಿತಾನನಾಂಬುಜದಲರ್ದೆಸೆದುದು ಮಂದಹಾಸದಿಂ ಮಾರಹರನಾ (ಜಗಿ. ೩-೩೨); ಮುಂದೆ ಬರುತಿಹ ಭಟರ ಬರವಿಗೆ ಮಂದಹಾಸದಲಸುರ ನೋಡಿದನೊಡೆ (ಕೌಶಿರಾ. ೩೫-೦೨). [ಸಂ.]

**ಮಂದಳ** 'ಮಸೆದಳ' ನೋ.

**ಮಂದಾಕಿನಿ** (ನಾ). ಗಂಗಾನದಿ; ದೇವನದಿ: "ಮಂದಾಕಿನೀ, ವಿಯದ್ಗಂಗಾ, ಸ್ವರ್ಣದೀ, ಸುರದೀರ್ಘಿಕಾ—ಇ ಆಕಾಶಗಂಗೆ ಹೆಸರುಗಳು" (ಸಿವ್ಯಾಂತ. ೨೨); ಆದಾರ್ಯವೀರ್ಯಂ ಸೂರ್ಯದಿನದಂದು ಮಂದಾಕಿನಿಯುಂ ವಿಹಾಯಲೆಂದು ಬಂದು (ಶಂಕಪು. ೯-೭೧ ವ); ವಿಕ್ರಮಾರ್ಜಿತವಿಶುದ್ಧಕೀರ್ತಿ ಮಂದಾಕಿನೀ ಪವಿತ್ರೀಕೃತತ್ರಿಲೋಕನುಂ (ಕಶಿ. ೫-೨-೦೩೭; 1058); ಮಂದಾಕಿನಿಯನ್ನು ಯಾರು (ತಲೆಯಲ್ಲಿ) ಧರಿಸಿದನೋ. . . ಆ ಅಂಧಕಾಸುರಸಂಹಾರಕನೂ . . . ಆದ ಭಗವಂತನು ನಿನ್ನನ್ನು ಸರ್ವದಾ ರಕ್ಷಿಸಲಿ (ವೃಶ್ಯಾಲೋ. ೮೯).

[ ಸಂ. ಮಂದಾಕಿನೀ ]

**ಮಂದಾಕಿನೀನಂದನ** (ನಾ). ಗಂಗಾನದಿಯ ಮಗ; ಗಾಂಗೇಯ; ಭೀಷ್ಮ: ಮಂದಾಕಿನೀನಂದನನ ಮಾತಿಂಗೆ ಯಮುನಂದನನಾನಂದಮನಸ್ಕನಾಗಿ ದೇವಕೀನಂದನಂಗಗ್ರಪೂಜೆಯನೆತ್ತುವಾಗಳ್ (ಶಂಕಶಂ. ೨೩೭-೦೩); ಮಂದಾಕಿನೀನಂದನು ನುಡಿಯೆ ಕೇಳ್ದು (ಜಗಿ. ೦೭-೦೭ ವ). [ಸಂ.]

**ಮಂದಾಕ್ರಾಂತ** (ನಾ). [ಛಂದ] ವರ್ಣಛಂದಸ್ಸಿನಲ್ಲಿ ಹದಿನೇಳು ಅಕ್ಷರಗಳ ಅತ್ಯಷ್ಟಿಯಲ್ಲಿ ಒಂದು ವೃತ್ತ: ಪ್ರತಿಸಾಲಿನಲ್ಲೂ ಕ್ರಮವಾಗಿ ಮಗಣ, ಭಗಣ, ನಗಣ, ತಗಣ, ತಗಣ ಮತ್ತು ಎರಡು ಗುರು—ಹೀಗೆ ಬರುವ ನಾಲ್ಕುಸಾಲುಗಳುಳ್ಳ ವರ್ಣವೃತ್ತ: ಯೌವನಾಕ್ರಾಂತೆ ಮಂದಾಕ್ರಾಂತಂ ವೃತ್ತಂ ನೆಗಬ್ದುದಿಳೆಯೊಳ್ (ಛಂದೋಂಬು. ೨-೧೭೩); ಮಂದಾಕ್ರಾಂತಂ ನೆರೆಯೆ ಮಘನಂತದ್ವಯಂಗದ್ವಯಂ ಮೇಣ್ (ಕೃಶಿ. ೬೩). [ ಸಂ. ಮಂದಾಕ್ರಾಂತಾ ]

**ಮಂದಾಕ್ಷ** (ನಾ). ೧. ಮಂದವಾದ ದೃಷ್ಟಿಯುಳ್ಳವನು; ಚೆನ್ನಾಗಿ ಕಾಣದ ಕಣ್ಣುಳ್ಳವನು. ೨. ನಾಚಿಕೆ; ಲಜ್ಜೆ: "ಹ್ರೀ, ಲಜ್ಜಾ . . . ಮಂದಾಕ್ಷಂ—ಈ ೬ ಲಜ್ಜೆ" (ಹಲಾಯು. ೯೩-೪೦೩). [ಸಂ.]

**ಮಂದಾಕ್ಷಿ** (ನಾ). ೧. ದೃಷ್ಟಿಪಾಟವವಿಲ್ಲದಿರುವ ಕಣ್ಣು; ಮಂದವಾದ ಕಣ್ಣು: ಮಂದಾಕ್ಷಿ ನಮಗಿಹುದು ಬಲುದೂರ ಸಾಗದದು (ಮುಂಕುಕ. ೪೪). ೨. ದೃಷ್ಟಿಪಾಟವವಿಲ್ಲದವಳು; ಸರಿಯಾಗಿ ಕಣ್ಣುಕಾಣದವಳು: ದಯಿತಾವಿಯೋಗಾಗ್ನಿಯಿಂಧನಶರೀರನಂ, ರೂಕ್ಷರೂಪದ ರಾಮನಂ ಕಂಡು ಮಂದಾಕ್ಷಿ, ಶಬರಿ, ಬೇಡಂಗೆತ್ತಳ್ (ಶ್ರೀರಾಶೂ. ೨೬೯-೦೭೭).

[ಸಂ. ಮಂದಾಕ್ಷೀ]

**ಮಂದಾಗ್ನಿ** (ನಾ). ೧. ಪ್ರಖರವಾದ ಉರಿಯಿಲ್ಲದಿರುವ ಬೆಂಕಿ; ಹೆಚ್ಚು ಶಾಖವಿಲ್ಲದಿರುವ ಬೆಂಕಿ: ಒಳ್ಳೆಣ್ಣೆಯಲ್ಲಿ ಆರುಬಳ್ಳ ಮಜ್ಜಿಗೆಯನ್ನು ಹಸಿಸಿ, ಮಂದಾಗ್ನಿಯಿಂದ ಕಾಯಿಸಿ, ಪಾಕದಲ್ಲಿಳುಹಿ ಅಭ್ಯಂಜನವನ್ನು ಮಾಡಿಸಲು ಶ್ಲೇಷ್ಮಜ್ವರ ಪರಿಹಾರವಾಗುವುದು (ಕಳವ್ಯ. ೪೦). ೨. ಗುಪ್ತವಾದ ಬೆಂಕಿ: ಸುಪ್ತಾಗ್ನಿ: ಪ್ರತಿಯೊಂದು ಮರದಲ್ಲೂ ಮಂದಾಗ್ನಿ ಅಡಗಿರುವುದನ್ನು ಅವರು ಅರಿತಿದ್ದರು (ಶಾಸಗಿ. ೭೮). ೩. ಜಠರಾಗ್ನಿಯ ನಾಲ್ಕು ಸ್ಥಿತಿಗಳಲ್ಲಿ ಒಂದು; ಕಫದಿಂದ ಉಂಟಾಗುವ ವಿಕಾರ: ದೇಹದಲ್ಲಿ ಜಠರಾಗ್ನಿಯು ನಾಲ್ಕು ತೆರನಾಗಿರುವುದೆಂತೆಂದೊಡೆ—ಮಂದಾಗ್ನಿ ತೀಕ್ಷ್ಣಾಗ್ನಿ ವಿಷಮಾಗ್ನಿ ಸಮಾಗ್ನಿಯೆಂಬ ನಾಲ್ಕು ವಿಧವಾದ ಅಗ್ನಿಗಳಲ್ಲಿ ಶ್ಲೇಷ್ಮದಿಂ ಮಂದಾಗ್ನಿ. . . ಉಂಟಾಗಿರುವುದು (ಕಳವ್ಯ. ೦೭); ತಾಯಿಯು ನೋಡಿ ಮಗನಿಗೆ ಮಂದಾಗ್ನಿಯಾಗಿದೆ ಎಂದು ಒಳ್ಳೊಳ್ಳೆ ಜೀರ್ಣಕಾರಿ ಮಾತ್ರೆ ಲೇಹಗಳನ್ನು ಮಾಡಿಸಿಕೊಟ್ಟಳು (ದೇವೀಶಾ. ೫೭). ೪. ತಿಂದ ಆಹಾರವು ಪಚನವಾಗಲು ಶಕ್ತಿಯಿಲ್ಲದಂತಾಗುವ ಒಂದು ಬಗೆಯ ರೋಗ: ಅಮೃತಾದಿಯೋಗ . . . ಊರ್ಧ್ವತೃಷೆ, ಮಂದಾಗ್ನಿ, ಗ್ರಹಣಿ, ಸಂಗ್ರಹಣಿ ಈ ವ್ಯಾಧಿಗಳೊಳು ಹಿತಮಪ್ಪುದು (ಖಿಕ್ಯಶಿ. ೦೦).

[ಸಂ.]

**ಮಂದಾನಿಲ, ಮಂದಾನಿಳ** (ನಾ). ೧. ಮೆಲ್ಲಗೆ ಬೀಸುವ ಗಾಳಿ; ಮಂದಮಾರುತ: ಮಂದಾನಿಲಂ ತೆಂಕಣಿಂ ಬರೆ ಚೈತ್ರಂ ಕುಡುವರ್ಘ್ಯ ಲಾಜತತಿಯೋ ಪೇಟೆಂಬಿನಂ ಪುಷ್ಪಮಂಜರಿಯುಂ ತನ್ನ ನಿಕರ್ಣಪೂರಕ ಮನತ್ಕಾರ್ಶ್ಯರ್ಯದಿಂ ನೋಡಿದಂ (ಶಾದಂಪು. ೭೪೦); ಪರವೆನಾಚಿಯರ ಮೆಯ್ಯ ಸುಗಂಧಂ ಮೊದಲಾದ ಸಕಲಪರಿಮಳಮಂ ಕವರ್ತಗೊಂಡಾ ಮೋದಭಾರದಿಂ ಮಂದಾನಿಲನಾಗಿ ಮೆಲ್ಲಮೆಲ್ಲನೆ ಬಂದು (ಶಂಬರ. ೦೪-೭೯). ೨. [ಛಂದ] ಮಂದಾನಿಲ, ಲಲಿತ, ಉತ್ಸಾಹ ಎಂಬ ಮೂರು ಬಗೆಯ ರಗಳೆಗಳಲ್ಲಿ ಒಂದು; ಪ್ರತಿಯೊಂದು ಸಾಲಿನಲ್ಲಿಯೂ ನಾಲ್ಕುಮಾತ್ರೆಯ ನಾಲ್ಕುಗಣಗಳಂ ಎಂದರೆ ಹದಿನಾರುಮಾತ್ರೆಗಳಿರುವ, ಆದ್ಯಂತಪ್ರಾಸವುಳ್ಳ ಹಾಗೂ ಪಾದನಿಯಮವಿಲ್ಲದ ಒಂದು ಪ್ರಕಾರ: ಮಂದಾನಿಲ ಲಲಿತೋತ್ಸವವೆಂದೀ ರಗಳೆಗಳ ನಾಮಮಕ್ಕುಂ (ಛಂದೋಂಬು. ೩-೨೨೦ ಅಧಿಕರ್ನ); ಉತ್ಸಾಹ, ಮಂದಾನಿಲ, ಲಲಿತ ಎಂದು ಮೂರುವಿಧವಾದ ರಗಳೆಗಳು ಪ್ರಸಿದ್ಧವಾಗಿರುವುವು (ಕೃಶಿ. ೪೭). ಮಂದಾನಿಳ : ೧. ಮಂದಾನಿಳನಲೆವದೆ ಮಾಕಂದಂ ವಿಚಕಿಳಲತಾಸಮೇತಮರಲ್ವಂತು . . . ಪಿಸೆದುದಾ ನೃಪಚಿತ್ತಂ (ಖಶ್ಯಶ. ೩-೦೨೩).

[ಸಂ.]

**ಮಂದಾನಿಲವೃತ್ತ** (ನಾ). [ಛಂದ] ಪಂಕ್ತಿಛಂದಸ್ಸಿನಲ್ಲಿ ಒಂದು ಪ್ರಕಾರ; ಪ್ರತಿಸಾಲಿನಲ್ಲೂ ಹತ್ತುಅಕ್ಷರಗಳುಳ್ಳ ನಾಲ್ಕುಸಾಲುಗಳ ವೃತ್ತ: ಶೀತಕರೋರ್ವೀಮಾರುತಚೇತೋಜಾತಹರಂ ಬಂದಿರ್ದೊಡ ಡೆಂತುಂ ಭೂತಳಕೆಲ್ಲಂ ಸಂದುದಿಮೆತ್ತಂ ನೀತಿಯುತೇ ಮಂದಾನಿಲವೃತ್ತಂ (ಛಂದೋಂಬು. ೨-೦೦೯). [ಸಂ.]

**ಮಂದಾನಿಳ** 'ಮಂದಾನಿಲ' ನೋ.

**ಮಂದಾರ** (ನಾ). ೧. ಒಂದು ಬಗೆಯ ಮರ ಮತ್ತು ಸುವಾಸನೆಯುಳ್ಳ ಅದರ ಹೂವು; ೞ ಸುರಾಸುರರು ಕ್ಷೀರಸಮುದ್ರವನ್ನು ಕಡೆದಾಗ ಹುಟ್ಟಿದ ಐದು ಕಲ್ಪವೃಕ್ಷಗಳಲ್ಲಿ ಒಂದೆಂದು ನಂಬಲಾಗಿದೆ : "ಮಂದಾರಃ, ಪಾರಿಜಾತಕಃ, ಹರಿಚಂದನಃ, ಕಲ್ಪವೃಕ್ಷಃ, ಸಂತಾನಃ –ಈ ೫ ದೇವರ ಮರಂಗಳ್" (ಹಲಾಯು. ೨೨-೦೩೫); ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತುಂ (ವರ್ಧ.ರಾ. ೬೪-೮); ಸಿರಿಯುಂ ಮಂದಾರವಮಂ ಚಂದ್ರನನಮಲಮಣಿಶ್ರೇಣಿಯುಂ ಮಾಣದಂತಃ ಕರಿಸಿದರ್ಾ ಪೂರ್ಣದುಗ್ಧಾರ್ಣವ ದೊರೆಗೊಳೆವಂದತ್ತು . . . ಆಸ್ಥಾನಗೇಹಂ (ಶಂಪ್ರ.ಪು. ೫-೩) ; ಈ ವನದಿ ಮಂದಾರ ಆಗೊಮ್ಮೆ ಈಗೊಮ್ಮೆ (ಕಲೋ.೧೦. ೩-೦). ೨. ಎಕ್ಕದ ಗಿಡ ; ಅರ್ಕ : "ಅರ್ಕಾಹ್ವಃ . . . ಮಂದಾರಃ, ಅರ್ಕಪರ್ಣಃ – ೭ ಎಕ್ಕಗಿಡ, ಯಕ್ಕೇಗಿಡ, ಸೂರ್ಯವೃಕ್ಷ" (ಸಿದ್ಧಾಂತಿ. ೦೩೦). ೩. ದತ್ತೂರದ ಗಿಡ. ೪. ಸ್ವರ್ಗ. ೫. ಆನೆ. [ಸಂ.]

**ಮಂದಾರಿ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು : ಬಗಿನಿ ಪಚಾರಿ- ಮಂದಾರಿ ದೇವದ್ವಾರಿ . . . ಬೋರೆಗಳೆಸೆದವು (ಶಂಬಷು. ೦೩-೦೩). [ ಸಂ. ಮಂದಾರೀ ]

**ಮಂದಾರಿಕ** (ನಾ). ಒಂದು ಬಗೆಯ ಸಸ್ಯ : "ರೂಪ–ಮಂದಾರಿಕ, ತುಪ್ಪಕೀರೆ" (೬ಕಾ. ೦೪೦). [ <ಸಂ. ಮಂದಾರಕ ]

**ಮಂದಾಸನ** 'ಮಂದಸು' ನೋ.

**ಮಂದಾಸು** 'ಮಂದಸು' ನೋ.

**ಮಂದಾಸುವಲೆ** (ನಾ). ಪೆಟ್ಟಿಗೆಯಂತಿರುವ ಒಂದು ಬಗೆಯ ಬಲೆ : ತಡಿಕವಲೆ ತಟ್ಟಿವಲೆ ಹಾಸುವಲೆ ಬೀಸುವಲೆ . . . ಮಂದಾಸು [ಪಾಠಾಂ. ಮಂದಸಿನ]ವಲೆಯು ಹೊಲೆಗಳ ಮೊತ್ತಮಂ ಕಂಡನಾದಯ್ಯನು (ಸೋಮಶ. ೫೨. ೨೦೦; ಹಕಾ. ೫-೬ ನೋ). [ಮಂದಾಸು (<ಮಂದಸು) + ಬಲೆ₁]

**ಮಂದಿ₁** (ನಾ). ೧. ಜನಸಮೂಹ ; ಜನತೆ : ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯಾ ಇದ ನೆಚ್ಚಿ ಕೆಡಬೇಡ (ಬಸವ. ೦೬೪); ಮಂದಿಯಿಲ್ಲದ ರಾಜ್ಯ ಕಂದನಿಲ್ಲದ ಭಾಗ್ಯ ಬಂಧುವಿಲ್ಲದ ಬಾಳುವೆಯು ಜಗದೊಳಗೆ ಚಂದವಲ್ಲ (ಸರ್ವಜ್ಞ. ೬೦೭) ; ಮಂದಿ ಹೇಳಿದರೆಂದು ಹಂದಿ ತಿನ್ನಬಹುದೆ ? (ಗಾದೆ). ೨. ಜನ ; ವ್ಯಕ್ತಿ : ಸಂದಣಿಸಿದುದು ಕೇರಿ ಕೇರಿಯ ಮಂದಿ ಮಣಿ ಮನೆ ಮೇಲೆ ಘನತರುವ್ಯಂಪದಲಿ (ಕುಮಾ.ಭಾ. ೦೬-೬೬) ; ತಂದೆ ಸತ್ತ ಮೇಲೆ ನೂರುಮಂದಿ ವಿಪ್ರರಿಗುಣಿಸಿ ತಮ್ಮ ತಂದೆ ತೃಪ್ತನಾದನೆಂಬರು ಮಂದಮತಿಯ ಜನಗಳು (ಭರತೇ. ೦-೦೮೦-೪) ; ನೀವು ಅಷ್ಟೊಂದು ಮಂದಿ ಜನರನ್ನು ಕೊಲ್ಲಬೇಕೆಂದೆಣಿಸಿರುವಿರಿ (ದೇಜಾ. ೦೩೫).

**ಮಂದಿಗೆ ಬರಿಸು** = ಎಲ್ಲರಿಗೂ ತಿಳಿಯುವಂತೆ ಮಾಡು ; ಬಹಿರಂಗಗೊಳಿಸು : ಕನಸಿನೊಳಾದೊಡಮಿದಿರುವಾತಾಡವೆ ಕನಲದೆ ಕಲಹವೆಸಗದೆ ಮನೆಯೊಳಗಿರುವೆಸ್ಮು ಮಂದಿಗೆ ಬರಿಸದೆ ಮನದನ್ನನ ಮನವೊಲಿಸು (ಹರಿಶ. ೫-೩೪). **ಮಂದಿಗೆಳೆ** = ಬಲಾತ್ಕಾರವಾಗಿ ಜನರ ಮುಂದೆ ಬರುವಂತೆ ಮಾಡು : ಮಂದಿಗೆಳೆದನು[ಪಾಠಾಂ. ಮಂದೆಗೆಳಸಿದ] ಪಾಪಿ ಕೌರವನೆಂದು ಮುಂದಲೆವಿಡಿದು ಸೈಂಧವ ಬಂದು ಬಳಕಾರಣ್ಯವಾಸದೊಳೆನ್ನನೆಳೆದೊಯ್ದು (ಕುಮಾ.ವಿ. ೩-೫೪). 'ಮಂದೆ' ಪರಾ.

[ದೇ.॥ ತಮಿ. ಮನ್ರು =ಸಭೆ, ಗೋಷ್ಠಿ ; ತುಳು. ಮಂದಿ, ಮಂದೆ ; ತೆಲು. ಮಂದಿ ; ಕೋಲಾ. ಮಂದೀ ]

**ಮಂದಿ₂** (ನಾ). (ಉಕ) ವ್ಯಾಪಾರದಲ್ಲುಂಟಾಗುವ ಪದಾರ್ಥಗಳ ಬೆಲೆಯ ಇಳಿತ ; ಅಗ್ಗ : ಈಗ ಬಟಾಟೆ ಮಂದಿಯಾಗಿದೆ (ರೂಢಿ). [ ← ಹಿಂ. ಮರಾ. ಮಂದೀ ]

**ಮಂದಿರ** (ನಾ). ೧. ವಾಸಮಾಡುವ ಕಟ್ಟಡ ; ಮನೆ ; ಭವನ : "ಆವಾಸಃ . . . ಗೇಹಂ, ಕುಟಂ, ಮಂದಿರಂ . . . ಆಲಯಃ — ಈ ೩೧ ಮನೆ" (ಹಲಾಯು. ೪೯-೦೩೫) ; ಕಂಸಮಹಾಮಂದಿರಮಧ್ಯದ ಮಣಿಗೃಹದಿಂದಗಲದೆ ನಲಿಯುತಿರ್ದರಾ ದಂಪತಿಗಳ್ (ಜಗ೩. ೨-೫೨) ; ಆನೆಗೊಂದಿಯ ಪ್ರಪರೇಶ್ವರಪಾತ್ರನು ತನ್ನ ಮಂದಿರದಲ್ಲಿ ಕುಳಿತುಕೊಂಡು ಏನೋ ಯೋಚಿಸಿಕೊಳ್ಳುತ್ತಾ ಇರಲು ಹುಚ್ಚನು ಅವನ ಬಳಿಗೆ ಬಂದನು (ರಾಣಿಜ. ೦೩). ೨. ಹೆಂಡತಿ ಮತ್ತು ಮಕ್ಕಳಿಂದ ಕೂಡಿದ ಸಂಸಾರ, – ಕುಟುಂಬ : ಮುರಾಂತಕ ನೀಂದು ಮನದೊಲವಿನಲಿ . . . ಮಂದಿರದ ಸುಕ್ಷೇಮಕುಶಲವನೆಂದು ಕೇಳಿದು ವೀಳೆಯವನಾ ಮಂದಿಗಿತ್ತನು ದೇವ (ಕುಮಾ.ಅ. ೭-೨೨). ೩. ದೇವಾಲಯ ; ಗುಡಿ. ೪. ನಗರ ; ಪಟ್ಟಣ : "ಮಂದಿರಂ—೧. ಮನೆ, ೨. ನಗರ" (ಸಿದ್ಧಾಂತಿ. ೪೦೬). ೫. ಕುದುರೆಯಾಲಾಯ ; ಅಶ್ವಶಾಲೆ : "ವಾಜಿಶಾಲಾ, ಮಂದುರಾ—ಈ ೨ ಕುದಿರೆಯ ಮಂ(ದಿ)ದುರಂ" (ಹಲಾಯು. ೫೧–೦೪೦). [ಸಂ.]

**ಮಂದಿರಂಬೊಗು** (ಕ್ರಿ). ಮನೆಯನ್ನು ಪ್ರವೇಶಿಸು : ಈ ಕನಕಲೋಚನಂ . . . ಪೊಳಲೊಳ್ ಮೆರೆದು ಮಂದಿರಂಬೊಕ್ಕು (ತೆರ್ಪು. ೪೭-೫). [ಮಂದಿರ + ಪೊಗು]

**ಮಂದಿಲ** 'ಮಂದೀಲ' ನೋ.

**ಮಂದಿವಾಳ, ಮಂದೆವಳ, ಮಂದೆವಾಳ, ಮಂದ್ಯಾಳ** (ನಾ). ೧. ಒರಿವೇಯಿಲ್ಲದವನು ; ಜನಸಾಮಾನ್ಯ ; ನಾಡಾಡಿ : ಮಂದಿವಾಳನ ತೆರನ ನರನೊಳು ಸಂದುದೇ ಕಾಳಗವು ನಿನ್ನಿಂ ಬೆಂದುದೇಯೆನ್ನೊಡಲು (ತಿಮ್ಮಪ್ಪ. ೩-೩೧) ; ಓಂದೆ ದಕ್ಷನ ಯಜ್ಞಕುಂಡದಿ ಬೆಂದಿರ್ಪ ಸತಿಯೊಳು . . . ತಂದೆತಾಯ್ಗಳುಯೆಂದು ಸುಮ್ಮನೆ ಮಂದಿವಾಳರವೋಲು ಮುಂದುಗೆಡುತಿಹುದಂದವೇನ್ಯ (ಯುಗಳ. ೩). ೨. (ಅತಿಪರಿಚಯದಿಂದುಂಟಾದ) ಸಲುಗೆ ; ಸದರ : ಹರಿಯೊಳ್ ನಾರದ ಮಂದಿವಾಳದೆ ಮಹಾಶಾಪಂಗಳಂ ತಾಳನೇ (ಸೋಮೇಶ. ೬೪) ; ನಂಬಿಯೆಂಬ ವಿಚಾರದೂರನು ಮಂದಿ[ಪಾಠಾಂ. ದೆ]ವಾಳದಿ ಮಾರಮರ್ದನನೆಂದಿನಿತು ಭಯವಿಲ್ಲದಾತ್ಮದಲಿ ಕಾಳುಗೆಲಸಂಗಳಿಗೆ ಕಳುಪುತ (ಬಸಪು. ೨೭-೫೭) ; ಕಾತರಿಸದಿರು ಮಂದಿವಾಳದ ಮಾತುಗಳು ಸಾಕಟ ತೊಲಗೈ (ಕುಮಾ.ಭಿ. ೨-೨೬) ; ಮಂದಿವಾಳದೊಳಾಣ್ಮನ ಮೇಗಣ ದೂಜಿ ತಂದ ತನ್ನಣುಗಿಯನೊಡನೆ ಹಿಂದುಮುಂದೆಣಿಸದೆ ಹೀಯಾಳಿಸಿ ಬಾಗೆ ನಿಂದಿಸಿ ನೀಕರಿಸುವುದು (ಹರಿಶ. ೫-೩೦). ೩. ಸೊಕ್ಕು ; ಮದ ; ಔದ್ಧತ್ಯ : ಹಂದೆ ಹೋಗೆಲೆ ನಾಯೆ . . . ಬಹುವಿಕಾರದ ಮಂದಿವಾಳದ ಮಾತದೇಕೆ (ತೊರವೆ. ೫-೩-೫೩); ಕೇಳಬಾರದ ಬೊಮ್ಮೆತಿಯಸ್ಗಳ್ದ ಹೇರಾಳಪಾತಕ ಭೂಭುಜನ ತೋಳಡವಿಯು ತಜಿದೊಟ್ಟಿದೆಲಾ ಮಂದಿವಾಳವ ತೋರು ತನ್ನೊಡನೆ (ಸೋಮಶ. ೪೦-೨೪) ; ನಾಲಗೆದೀಕ್ಷೆಗೆ ಬಗುಳ್ದಾಡುವ ನಿನ್ನ ಅವಿಧೇಯತೆಯು—ಮಂದಿವಾಳವು ಎದೆಗೊಬ್ಬಿ ಅಕ್ಷಮ್ಯವಾಗಿದೆ (ಪುಂಶ್ರೀಕ. ೭೦-೧೦). ೪. ಸಡಗರ : ಸಂಭ್ರಮ : ಮಂತ್ರದ ತಂತ್ರದ ಮಂದಿವಾಳದ ಮದುವೆ ಸಂದಣಿಯಲಿ ಹೇಗೊ ಮೆರೆಯುತಿರೆ (ಸರ್ವಗೀ. ೮-೨೬). **ಮಂದೆವಳ : ೫. ಪ್ರೇಮ ; ಪ್ರೀತಿ :** ಆ ಧರ್ಮನಾಥಕುಮಾರಂ ಮುನ್ನಮೆ ಲೋಕತ್ರಯೈಕಸ್ವಾಮಿಯುಪ್ಪದ ನಜಿದಿರ್ದೊಡಮಾ ಮಹಾಸೇನಮಹಾರಾಜಂ ನಿಜತನೂಜನೆಂಬೀ ಮಂದೆವಳದಿಂದೊಂದಿದ ಮೋಹನೀಯೋದ್ರೇಕ ಪರಿಪಾಕದಿಂ ಮೂಜುಂಲೋಕಕ್ಕ ತೀವಕೌತುಕಮಪ್ಪಂತಿರೆ (ಶಾಂತಿಪು. ೯-೯೯ ವ). **ಮಂದೆವಾಳ : ೨. ಭೋಗ**ದೊಳ್ ಬೋಳೈಸಿ ರಾಗದಿಂ ಮೇಳಯಿಸಿ ಮಂದೆವಾಳಂ ಮೆಯ್ಯಂದೊಂದೆರಡು ಚಿಂದದನುಭವದೊಳ್ ಮಂದಯಿಪ ಸುಖಿಮನಿತ್ತು (ಗಿರಿ. ೨-೧೦೫ ವ). ೩. ನಿಂಬಪ್ಪೆ ಸಿರಿಯಾಳನಂದನನ ಕೊಂದು ತಿರಿಗಿತ್ತಹಂಕಾರ ನಮ್ಮೊಳು ನೀತ ಮಂದೆ[ಪಾಠಾಂ. ದಿ]ವಾಳವೆ ನಿಜದ ಭಕ್ತರೊಳಗೆಂಬವಳ ಚರಣಾಂಬುಜಕ್ಕೆ ಶರಣು (ರಾಜಶೇ. ೩೭-೯೦) ; ಮಂದ ದಕ್ಷಂ ಶಿವಗೆ

ಮಾರ್ಮಲತು ಯಜ್ಞವಂ ಮಂದೆವಾಳದೆ ಮಾಡಲು (ಅಃಕ್ಕ ಕೃ. ೨-೦-೬೮).
**ಮಂದ್ಯಾಳ** : ೫. ಒಡಹುಟ್ಟಿದೊಂದು ಮಂದ್ಯಾಳದೊಳ್ನುಡಿದನೊ ಕೆಡುವುದಜಿಯದೆ ತಾನು (ಭರತ. ೪೯-೩೦). P 'ಮಂದಿವಾಳ' ಎಂಬ ಶಬ್ದಕ್ಕೆ 'ಮಂದಿವಾಳತನ' ಎಂಬ ಶಬ್ದದ ಭಾವವಾಚಕದ ಅರ್ಥಗಳು ಅನೇಕ ಕಡೆ ಆರೋಪಿತವಾಗಿವೆ.

[ಮಂದಿ$_1$ + —ವಾಳ$_3$ (< —ವಳ). / ತೆಲು. ಮಂದಿಪೋಲು]

**ಮಂದಿವಾಳತನ**, ಮಂದೆವಾಳತನ, ಮಂದ್ಯಾಳತನ (ನಾ). ೧. ಪ್ರೀತಿ; ಪ್ರೇಮ : ಪರಮಕಾರಣಿಕೆಯಾದಂಬಿಕೆಯೆಂದಜಿಯದೆ ತನ್ನ ಪುತ್ರಿಯೆಂಬ ಮಂದಿವಾಳತನದಿಂ ಸಲಪುತ್ರಿರೆ (ಭೈರಸೂ. I, ೦೯೬). **ಮಂದೆವಾಳತನ** : ೨. (ಅತಿಪರಿಚಯದಿಂದಾದ) ಸಲುಗೆ; ಸದರ : ಅನಂಗಕೇಳಿಗೆ ಮನ ಸಂದಣಿಸಿ . . . ಭೀತಿಬಿಟ್ಟು ಮಂದೆ [ಪಾಠಾಂ. ದಿ] ವಾಳತನಂ ಮೈಸಂದು ಸೋಂಕಂ ಸವಿಗಂಡಾಲಿಂಗನಕ್ಕಾತುರಿಸಿ (ಪ್ರಭುರ. ೦೦೬-೭). **ಮಂದ್ಯಾಳತನ** : ೨. ತಂದೆಯೋಲಗವೆಂಬ ಮಂದ್ಯಾಳತನವಿಲ್ಲ ಹೊಂದಿದ ಭಯಭಕ್ತಿಯಿಂದ ಮಂದಗತಿಯೊಳೊಯ್ಯನೋಸರಿಸುತ ಬಪ್ಪ ಚಂದಕೆ ನೃಪರು ಮೆಚ್ಚಿದರು (ಭರತ. ೨೭-೩೭). [ಮಂದಿವಾಳ + —ತನ]

**ಮಂದಿವಾಳಿಕೆ** (ನಾ). ಸೊಕ್ಕು ; ಅಹಂಕಾರ : ಏನಿದು— ಈ ನನ್ನ ಮಂದಿವಾಳಿಕೆ ! ಅವಿನಯ ! ಸ್ವಾಮಿದ್ರೋಹ ! (ಶಿಲ್ಪ. ೦೬೩-೦೪).

[ಮಂದಿವಾಳ + — ಇಕೆ]

**ಮಂದಿವಾಳ್ಕೆ** (ನಾ). ಜನರ ಬದುಕು ; ಜನಜೀವನ : ಮುಸುಗಿಹುದು . . . ರೂಪಮಿಲ್ಲದ ಭೀತಿಭೂತದ ಬೃಹಚ್ಛಾಯೆ ನಮ್ಮ ನಗರದ ಮಂದಿವಾಳ್ಕೆಯಂ (ಶ್ರೀರಾಘೂ. ೩೬೩-೩೩೩). [ಮಂದಿ$_1$ + ಬಾಳ್ಕೆ (< ಬಾಟ್ಕೆ) ]

**ಮಂದೀಭೂತ** (ಗು). ೧. ಕುಗ್ಗಿದ ; ಕ್ಷೀಣವಾದ : ತನಯುನಾನನಮನ ಪನೀವಲ್ಲಭಂ ಮಂದೀಭೂತಮೋಹರಸಾನುಬಂಧಿಗಳಪ್ಪ ದೃಷ್ಟಿಗಳಿಂ ನೋಡಿ (ಚಂದ್ರಕೃ. ೪-೦೪ ವ). (ನಾ). ೨. ಕುಗ್ಗಿದುದು ; ಕ್ಷೀಣವಾದುದು : ಧ್ವನಿಯು . . . ಸಾಗರದ ಘೋಷದಲ್ಲಿ ಮಂದೀಭೂತವಾಯಿತು (ಲಹಾಕುಂ. ೨೦). [ಸಂ.]

**ಮಂದೀಲ**, ಮಂದಿಲ, ಮಂದೀಲು (ನಾ). ಜರಿಯ ರುಮಾಲು; ಜರತಾರಿ ಪೇಟ : ತನ್ನ ಅಂದವಾಗಿರುವ ಅಂಗಿಗೆ ಒಪ್ಪುವಂಥ ಹೊಸ 'ಮಂದೀಲ' ವನ್ನು ತರಬೇಕಾಗಿ ಬೇರೊಬ್ಬನು ಗುಮಾಸ್ತನನ್ನು ಜಾಗ್ರತೆಯಾಗಿ ಪೇಟೆಗೆ ಅಟ್ಟುತ್ತಿದ್ದನು (ಶಿರಂಗ. ೩) ; ಅವನ ಶೇರವಾನ್, ಅವನ ಮಂದೀಲ ಮುಂತಾದವುಗಳನ್ನು ನೋಡಲಾಗಿ ಅವನು ಒಳ್ಳೇ ಮನೆತನಸ್ಥನಾಗಿ ತೋರಿದನು (ಕೋಳಿಮ. ೨೯೪). **ಮಂದಿಲ** : ಕುಮಾರನು ತನ್ನ ತಲೆಯ ಮೇಲಿನ ಮಂದಿಲವನ್ನು ತೆಗೆದು ಮಾನಸಿಂಹನ ಚರಣದೆಡೆಯಲ್ಲಿಟ್ಟು ಕೈ ಮೋಡಿಸಿ (ತಿರೋಮ. ೦೩೭). **ಮಂದೀಲು** : ತಲೆಯ ಮೇಲೆ ಕಲಾಬತ್ತಿನ ಕುಸುರುಗಳುಳ್ಳ ಮೇಘವರ್ಣದ ಮಂದೀಲು (ರಾಜಶೋ. ೨).

[← ಹಿಂ. ಮರಾ. ಮಂದೀಲ್; ಅರ. ಮಿಂದೀಲ್]

**ಮಂದೀಲು** ' ಮಂದೀಲ ' ನೋ.

**ಮಂದು**$_1$, ಮಂದ$_1$ (ನಾ). ೧. ಆವರಣವಿಲ್ಲದ ನಿವೇಶ ; ಬಯಲು : ಕುಮ್ಮರಿ ಕೋಹು ಮನ್ನು ಮನೆ ಮಾನಿ ಸರುಹು ಕಾಡಾರಂಭ ಮುಂತಾದ ನಿಧಿ ನಿಕ್ಷೇಪ . . . ಸಹಿತವಾಗಿ (ಎಕ. VI, ಕೊಪ್ಪ. ೩೨-೦೭; 1403); ಹಿತ್ತಿಲು ಕೊಪ್ಪ ಮಂದು ಮನೆ ಹಲಸು (ಎಕ. VIII, ತೀರ್ಥಹ. ೦೯೪-೦೭; 1421); ಭಾವಿ ಹಕ್ಕಲು × ಮಂದು ಮರ ಫಲ ಸಹ ಮತ್ತಂ ಹಡುವಲ ಗದ್ದೆ ಚತುಸೀಮೆ (ಕ್ಯಾಇ. IX-ii, ೪೬೩-೩೦; 1472). ೨. ಸಣ್ಣ ಹಳ್ಳಿಗಳ ಗುಂಪು : ಅಯ್ದುಂ ಮನ್ದಿನ ಸಾಸಿವರ್ ಕಂಡು ಕಾಪ್ಪರಕ್ಕ (ಮ್ಯಾಆ. ೦೯೩೦. ೭೪-೭೯; 1053); ಅಬಿವತ್ತುನಾಡಂ ಸಮೇತ . . . ಅಯ್ದು ಮಂದಿಂಗೆ ಮೂಡಲ ಮಂದೆನಿಸುವ (ಮ್ಯಾಆ. ೦೯೩೦, ೭೦-೦೭; 1297).

**ಮಂದ**$_1$ : ೧. ಎಲೆ ಬಸವಣ್ಣಾ ನಾವು ಬಾಹುದಕ್ಕೆ ಮುನ್ನವೆ ಬಂದಹರೆಂದು ಶುಭಸೂಚನೆ ತೋಱುತ್ತೆಂದೆ ಮನೆಯ ಮಿಱು ಮಂದದ ದೈವವೆಂಟೆ ಎಂಬುದ ತಿಳಿ ಗೋಹೇಶ್ವರಲಿಂಗವಲ್ಲಿ ಸಂಗನಬಸವಣ್ಣ (ಅವಚಂ. ೨೨೮-೦೦೩೦). 'ಮಂದೆ' ಪರಾ. [ದೇ.‖ ತಮಿ. ಮನ್ಱಮ್]

**ಮಂದು**$_2$ ' ಮದರ್ಗ ' ನೋ.

**ಮಂದುಬೋಯ** (ನಾ). ಒಬ್ಬಾತನ ಹೆಸರು : ಮನ್ದುಬೋಯಸ್ಯ ಭಾರದ್ವಾಜಗೋತ್ರ ಕತ್ತಿಶರ್ಮ್ಮಣ (ಇಆ. VII, ೦೮೮-೩೯ ; 668).

[ಮಂದು$_1$ + ಬೋಯ]

**ಮಂದುರ** (ನಾ). ಕುದುರೆಯ ಲಾಯ ; ಅಶ್ವಶಾಲೆ : "ವಾಜಿಶಾಲಾ, ಮಂದುರಾ– ಈ ೨ ಕುದಿರೆಯ ಮಂ(ದಿ)ದುರಂ " (ಹಲಾಯು. ೩೦-೧೪೦) ; ವಲ್ಲಭವಾಜಿಯು ಮಂದುರದಲ್ಲಿಗೆ ಕೇಯೂರದ್ವಿತೀಯನಾಗಿ ಬಂದು (ಕಾದಂಉ. ೦೯೩); ಆ ತಗರ್ ಪರಿದು ಕುದುರೆಯ ಮಂದುರಮಂ ಮಾರಿ ಪುಗುವಂತೆ ಪೊಕ್ಕು ಚರಣಿಯ ಪುಲ್ಲೊಳ್ ಪೊರಳಲು (ಕಂತಕಂ. ೦೭೯-೦೦) ; ಎಳಸಿದುವು ತುಹಿನಕರಮಂಡಳಮಂ ತೀವ್ರಾತಪಕ್ಕೆ ಸುಗಿದಿನನ ಹಯಾವಳಿ ಸಂದೆಯಮೇನೆನಿಪುವು ಪಳುಕಿನ ಮಂದುರದೊಳಿರ್ದ ಜಾತ್ಯಶ್ವಂಗಳ್ (ಪುಷ್ಪಪು. ೨-೬೮). [ಸಂ. ಮಂದುರಾ]

**ಮಂದುರಿಗ** (ನಾ). ಕುದುರೆಯ ಲಾಯದ ಅಧಿಕಾರಿ,– ಮೇಲ್ವಿಚಾರಕ : ಮುರರಿಪು ರಾವುತರ್ ಸುಬೇದರ್ ಹರಿಶಿಕ್ಷಕರಶ್ವಶಿಕ್ಷಕರ ಜೋದರ ಮಲ್ಲರ ಮಾವಂತರ ಮಂದುರಿಗರ ನೆಗಬ್ದಾವಾಸವಾಂಗಳ ಕೇರಿಗಳೊಳ್ (ಜಗನಾ. ೬-೨೭); ರಾಜವಾಹನನಾದ ಮಂದುರಿಗು ತಾನುಂ ಚಿಂತೆಯಿಂ ಮಂದುರಕ್ಕೆ ಮಂದಿರ್ದದಂ ಬಾಹುಕಂ ಕಂಡು (ನಳಕಂ. ೬೬೮ ವ); ಆ ಚೆನ್ನರಂಗರನ್ನು . . . ಕಯ್ಯ ಚಸೆಗೋಲಿಂದ ಬಡಿದು ಮಂದುರಿಗರಿಂದ ಹೊರಗಣ್ಗೆ ನೂಂಕಿಸಿಬಿಟ್ಟನು (ಮುಂಕ್ರಶ. ೬೮-೮). [ಮಂದುರ + —ಇಗ]

**ಮಂದುರೆ** (ನಾ). = ಮಂದುರ : "ಮಂದುರೆ—ಮಂದುರಾ=ಲಾಯ" (ತಮ್ಯಕೋ. ೩೪) ; ತರುಣಾಕೇಸರಿವಿಸರಭ್ರಾಂತಿಯನೊದವಿಸುವುದು ಹಯಸಂತತಿ ನೆಲಸಿರ್ದ ಹೊನ್ನ ಹೊಸ ಮಂದುರೆಯೊಳ್ (ಚಂದ್ರಕೃ. ೦-೦೪೦).

[ಸಂ. ಮಂದುರಾ]

**ಮಂದುವೂರ್** (ನಾ). ಒಂದು ಊರಿನ ಹೆಸರು : ಶ್ರೀಮತ್ ಶ್ರೀಪುರುಷ ಮಹಾರಾಜರ್ ಪೃಥಿವೀರಾಜ್ಯಂಗೆಯೆ ಮಂದುವೂರಾ ತೊಱುಕೊಳ್ವಲ್ಲಿ ವಿಟ್ಟೋರ್ (ಎಕ. X, ಶ್ರೀನಿವಾ. ೨೦-೪; 750). [ಮಂದು$_1$ + ಊರ್]

**ಮಂದೆ** (ನಾ). ೧. ಗುಂಪು; ತಂಡ; ಸಮೂಹ : ಅರುವಿನ ಮೇಲಣ ಎವರ್ಣಕ್ಕೆ—ಘಟ್ಟುರೆ ಬಂದಿರೇಂ ಮಂದೆಗೆ (ಶಮದ. ೦೨೪ ಪ್ರಯೋ); ಸಡಿಲಿದುಡುಗೆಯ ಕುಚದ ಸೆಱಗಿನ ಮಡದಿಯರ ಮಂದೆಯ [ಪಾಠಾಂ. ಮೇಳದ]ಲಿ ಬಂದಳು ಕೌಸಲಾದೇವಿ (ತೊರವೆ. ೨-೩-೨) ; ಈತನೆ ಪೂರ್ವದೊಳ್ ಇಂದ್ರನಿಗೆ ಬಲವಾಗಿ ದಾನವರ ಮಂದೆಗಳನೆಲ್ಲವಂ ಕೊಂದು ಮಂದರಗಿರಿಯಂ ಧರಿಸಿದನು (ಸಾಗಂರ. ೦೭೭-೭). ೨. ಹಸು, ಎಮ್ಮೆ ಮೊದಲಾದ ಪ್ರಾಣಿಗಳ ಹಿಂಡು : ಒಂದೇ ಹೊಲದಲ್ಲಿ ಮೇದು ಮಂದೆಯಲ್ಲಿ ನಿಂದು ಸಂದೆಯ ಕಳೆದು ಉದಯದ ಸಂದೇಹವಳಿದು ವೀರಬೀರೇಶ್ವರಲಿಂಗದಲ್ಲಿಗೆ ಹೋಗುತ್ತಿರಬೇಕು (ಸರ್ವವ. ೬೨-೪೩೩) ; ದೂಱುಮಾಡುವರೇನೆ ರಂಗಯ್ಯನ . . . ನಂದಗೋಕುಲದಲ್ಲಿ ಮಂದೆಗೋವುಗಳ ಮುಂದೆ ಕೊಳಲನೂದಿ ಚಂದದಿ ಬರುವನ (ಪುರಂದ. ೦-೯೪-೧); ಮಂದೆಪಸುಗಳ್ ಪೊಸಮಂದೆಯಂ ಕಂಡ ಪಾಂಗಿನಿಂ ತೊಲಗುವುದೆಮ್ಮ ಬಲ್ವಡೆಯ ನೆಟ್ಟನೆ ನಿಟ್ಟಿಸಿದಾಗಳ್ ( ಜಕವಿ. ೩-೪೩ ). ೩. ಈಗಿನ ಒಂದು ಪಂಚಾಯಿತಿಯ ಘಟಕಕ್ಕೆ ಸೇರುವಷ್ಟು ಗ್ರಾಮಗಳ ಗುಂಪು; ಫಿರ್ಕಾ : ಬೇಲೂರಿಗೆ ಸಲ್ಲುವ ಹೆತ್ತುಳಿಗನಾಡ ಬೆಳ್ಳೂರು ಮಂದೆಯೊಳಗಣ ಹೊಸವೂರುಯೆಂಬ ಗ್ರಾಮವನು (ಎಕ. XIV, ತಿರುಮ. ೦೩೪-೦೭ ; 1668); ಹೆತ್ತಿಗೆನಾಡ ಹೆತ್ತೂರ

ಮುಂದೆ ವಳಿತವಾದ ಕಿರಕಹಳ್ಳಿ ಗೊಮ್ಮವಳಿನಾಡ ಮರತ್ತೂರ ಮಂದೆ ವಳಿತವಾದ (ಎಕ. V, ಹಾಸನ. ೦೭-೯; 1774). ೪. ದನ, ಕರು ಮುಂತಾದುವುಗಳ ಮೇವಿಗಾಗಿ ಬಿಟ್ಟಿರುವ ಸಾರ್ವಜನಿಕ ಸ್ಥಳ; ಗೋಮಾಳ; ಹುಲ್ಲುಗಾವಲು : ಅಂದು ತುಱುವಂ ಕಾಯಲೆಂದೆಯ್ತಂದು ಬಾಲಕನೊರ್ವನಡವಿಯ ಮಂದೆಯುಲಿ ನಲಿದೊಂದೆ ಮಳಲಲಿ ಲಿಂಗವಂ ಮಾಡಿ . . . ಪೂವನೇಱಿಸಿದ (ಬಸವ. ೫೬-೨೨). 'ಮಂದಿ₁', 'ಮಂದ್ಯ₁' ಪರಾ.

[ದೇ.॥ ತಮಿ. ಮನ್ರು; ತುಳು. ಮಂದೆ : ತೆಲು. ಮಂದ]

**ಮಂದೆಗರುಳ್** (ನಾ). ಗುಂಪಾದ ಕರುಳು ; ಬೊಂತೆಯಾದ ಕರುಳು : ಕರುಳ ಬಣಲು ಕಾಲಂ ತೊಡಂಕೆಯುಂ ಮಂದೆಗರುಳ್ಗಳಿಂದೆ ದಾಡೆ × × ಯುಂ (ಎಕ. VIII, ಸೊರಬ. ೦೩೯-೦೯ ; 1173). [ ಮಂದೆ + ಕರುಳ್]

**ಮಂದೆವಳ** 'ಮಂದಿವಾಳ' ನೋ.

**ಮಂದೆವಾಳ** 'ಮಂದಿವಾಳ' ನೋ.

**ಮಂದೆವಾಳತನ** 'ಮಂದಿವಾಳತನ' ನೋ.

**ಮಂದೇಹ** (ನಾ). ಸೂರ್ಯೋದಯಕಾಲದಲ್ಲಿ ಸೂರ್ಯನಿಗೆ ಮುತ್ತಿಗೆ ಹಾಕುವರೆಂದು ನಂಬಲಾದ ಒಂದು ರಾಕ್ಷಸವರ್ಗ ಮತ್ತು ಆ ವರ್ಗಕ್ಕೆ ಸೇರಿದವನು : ಮಂದೇಹರ ಶೋಣಾಂಬುವಿನಿಂದಂ ತೊಯ್ದಂಗಮಂ ತೊಳೆಯಲೆಂದೊಲ್ದಿಟ್ಟಂದಿರದಿಟಿವಪೊಲಿಟಾದಂ ಕುಂದದೆ ಪಡುಗಡಲೊಳೊಪ್ಪುವಂಬುಜಮಿತ್ರಂ (ಅದ್ಭುತ. ೫-೦೨) ; ಮಂದೇಹರ ಭಯದಿಂದರವಿಂದಸಖಂ ನಿಜಮಯೂಖಮಂ ಪಸರಿಸನೇ (ರಾಜಶೇ. ೦-೩೦) ; ಲೋಕವಂ ನುಂಗಲ್ಕೆಂದು ಬಂದ ಮಂದೇಹರಾಕ್ಷಸನೆನೆ ಕಟ್ಟಲೆದೊತ್ತಂ ಪರ್ಬಿದುದು (ರಾಜಶೇ. ೨೨-೨೫). [ಸಂ.]

**ಮಂದೈಸು** 'ಮಂದಯಿಸು' ನೋ.

**ಮಂದೋಷ್ಣ** (ನಾ). ನಸುಬೆಚ್ಚಗಿರುವುದು : "ಕೋಷ್ಣಂ, ಕವೋಷ್ಣಂ, ಮಂದೋಷ್ಣಂ, ಕದುಷ್ಣಂ-೪ ಸ್ವಲ್ಪ ಬಿಸಿಯ ಹೆಸರುಗಳು" (ಸಿದ್ಧಾಂತ. ೩೩). [ಸಂ.]

**ಮಂದ್ಯಾಳ** 'ಮಂದಿವಾಳ' ನೋ.

**ಮಂದ್ಯಾಳತನ** 'ಮಂದಿವಾಳತನ' ನೋ.

**ಮಂದ್ರ** (ಗು). ೧. (ಧ್ವನಿಗೆ ಸಂಬಂಧಿಸಿದಂತೆ) ಗಂಭೀರವಾದ: ಆಳವಾದ : ಶುಭಮುಹೂರ್ತದೊಳ್ ಮಂದ್ರ ಮಧುರ ಮನೋಹರ ಮಂಗಳಪಟಹಗೀತಾಶೀರ್ವಾದಕೋಳಾಹಳರವಂಗಳೆಸೆಯೆ (ಸುಕುಮಾ. ೦೦-೦೦೦ ವ) ; ಪೇಳ್ದನಾಶೀರ್ವಾದಮಂ, ಮಂದ್ರಗಂಭೀರ ಮಂದುಭಿಧ್ವನಿ ಸಭಾನಿಶ್ಶಬ್ದತೆಯ ಮಥಿಸಿ ಪೊಣ್ಮೆ (ಶ್ರೀರಾಮಾ. ೧೩-೩೩೦). (ನಾ). ೨. ತಗ್ಗಾದ ಧ್ವನಿ; ಕೆಳದನಿ : "ಮಂದ್ರಃ . . . ಮೆಲ್ಲಗೆ ನುಡಿಯಲ್ಪಡುವುದು" (ಗುರುಬಾ. ೭೬). ೩. (ಧ್ವನಿಯ)ಗಂಭೀರತೆ : ಗಾಂಭೀರ್ಯ : ಶೋಭಿಸಿತು ಸಂಧ್ಯೆ ತಾನುಮಾರಣ್ಯಾದ್ರಿಸಾಂದ್ರ ಸಾಯಂಧ್ವನಿಯ ಮಂದ್ರದಿಂ (ಶ್ರೀರಾಮಾ. ೨೬೦-೬೭೩). ೪. ಒಂದು ಬಗೆಯ ವಾದ್ಯ ; ಮೃದಂಗ. ೫. ಒಂದು ಜಾತಿಯ ಆನೆ. ೬. [ಸಂಗೀತ] ಮಂದ್ರ, ಮಧ್ಯ ಮತ್ತು ತಾರ ಎಂಬ ಮೂರು ಬಗೆಯ ಸ್ವರಸ್ಥಾಯಿಗಳಲ್ಲಿ ಒಂದು ; ತಗ್ಗಿನ ಸ್ಥಾಯಿ : ಒರ್ವಳ್ . . . ಮಂದ್ರತಾರಗೀತಿಯ ಪವಣೊಪ್ಪೆ . . . ವೀಣೆಯಂ ಮಿಡಿದಳ್ (ಶಾಂತಿಪು. ೯-೦೭೭) ; ಅಮರ್ದಂ . . . ಕೋಗಿಲೆ ಗಿಳಿ ತುಂಬಿ ಮಹೀಶನ ಕಿವಿಗಾಗಳ್ ಕ್ರಮದಿತ್ತುವು ತಾರಮಧ್ಯ ಮಂದ್ರಸ್ವರದಿಂ (ತಂತ್ರಕ. ೭-೯೩); ಮಾಯಮಬಲೆಯರು . . . ಯಥೋಚಿತ ತಾರಮಧುರ ಮಂದ್ರಂಗಳಿಂ ಪಾಡಿ ಭೂಪತಿಯ ಮಗುಡಪನು ತೋಳಿದರು (ಚೆನ್ನ. ೭-೬). ೭. ತಂಬೂರಿ, ವೀಣೆ ಮುಂತಾದ ವಾದ್ಯಗಳಲ್ಲಿ ತಗ್ಗಿನ ಸ್ಥಾಯಿಯಲ್ಲಿ ನುಡಿಯುವ ಒಂದು ತಂತಿ : ಬಲದಿಂದ ಎಡಕ್ಕೆ ನಾಲ್ಕು ತಂತಿಗಳು ಕ್ರಮವಾಗಿ ಪಂಚಮ, ಸಾರಣಿ, ಅನುಸಾರಣಿ ಮತ್ತು ಮಂದ್ರ ಎಂದು ಕರೆಯಲ್ಪಟ್ಟಿವೆ (ಸಂಗೀತಂ. ೦೦೦). [ಸಂ.]

**ಮಂಪರ** 'ಮರ್ಪು₂' ನೋ.

**ಮಂಪರು** 'ಮರ್ಪು₂' ನೋ.

**ಮಂರೇಜು** 'ಮಮರೇಜು' ನೋ.

**ಮಕ** 'ಮೊಗ' ನೋ.

**ಮಕಮಕ** (ನಾ). (ದೀಪ ಮೊದಲಾದುವು) ಮಂಕಾಗಿರುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ : ಹೊರಗೆ ಮುಚ್ಚಂಜೆ ಮಕಮಕ ಕವಿಯುತ್ತಿತ್ತು (ಕಮಸ. ೨೦೩). 'ಮಕಮಕಿಸು' ಪರಾ.

**ಮಕಮಕಿಸು** (ಕ್ರಿ). (ಬೆಳಕಿಲ್ಲದೆ) ಮಂಕಾಗು ; ಪ್ರಕಾಶಹೀನವಾಗು : ಕತ್ತಲೆಯ ಜವ್ವನಂ ಜಾಜಿಯೊಡನೆ ಮಿಱುಪ ತಾರಾಳಿ ಮಕಮಕಿಸಿದುವು (ಮದೇಪು. ೦೫-೯). [ ಮಕಮಕ + — ಇಸು₃ ]

**ಮಕಮಲ್ಲು** 'ಮಖಮಲ್ಲು' ನೋ.

**ಮಕರ₁** (ನಾ). ೧. ಒಂದು ಬಗೆಯ ಜಲಚರಪ್ರಾಣಿ ; ಮೊಸಳೆ: "ಮಕರ ಮೊಸಲುಗ್ರಪಾಠೀನಮಕ್ಕುಂ" (ಮಂಗರಾ. ೦೨೦-೭); ಕರಿಮಕರಂಗಳುಚ್ಚಳಿತ ಭಂಗುರತುಂಗತರಂಗಮಾಲೆಯಿಂ ಬಿರದನಾಗ್ರದಿಂದಿಱಿಯೆ (ಕಾವ್ಯಸಾ. ೭೮ ಕಾವ್ಯ೪); ಮಕರಂಗಳಂ ಭಯಂಕರ ಕರಿಗಳ್ ತೆಱಂಜೊಳೆವ ಮೀಂಗಳ ಸುಳ್ಳುವ ಕೈದುಗಳ್ ನಿರಾಕರಿಸಿರೆ ಪೋರೆದಪ್ಪಿ ಕವಿದತ್ತು ನರಾಧಿಪಸೈನ್ಯ ಸಾಗರಂ (ಶಂಕಪಾ. ೩-೬೮); ಅಬ್ಧಿಪಂ ಮಕರಮಂ . . . ಏಱೆ ನಭಕ್ಕೆ ಸಲ್ವುದುಂ (ಜಗಪ. ೦-೩೬). ೨. ಒಂದು ಬಗೆಯ ಮೀನು: "ಮತ್ಸ್ಯಭೇದಮಂ ಮಕರಮೆಂಬುದು" (ಶಬ್ದಮಂ. ೦೦೯-೩೮); ಕರಿಮಕರನಕ್ರ. . . ಜಳೂಕವ್ಯಾಳಕೋಳಾಹಳಧ್ವಾನಪೆರಸಿ ಜಲನಿಧಿ ಮೆಱೆದುದು (ಚಕರ. ೦-೩೩). ೩. ಕುಬೇರನ ನವನಿಧಿಗಳಲ್ಲಿ ಒಂದು : ಆ ಕುಬೇರನೇ ಪದ್ಮ ಮಹಾಪದ್ಮ ಶಂಖ ಮಕರ . . . ಖರ್ವಂಗಳೆಂಬ ನವನಿಧಿಗೊಡೆಯನಾಗಿ ಈಶ್ವರನಿಗೆ ಸಖನಾಗಿರ್ಪಂ (ಶಿವೇಶ. ೦೭೭). ೪. ಮೊಸಳೆಯಾಕಾರದಲ್ಲಿ ನಿಲ್ಲಿಸಿರುವ ಸೇನೆಯ ತುಕಡಿ. ೫. ಮೀನಿನ ಗುರುತುಳ್ಳ ಧ್ವಜ: ಪನೆಯುಂಬಂ ಮಿಗೆ ಕಣ್ಮಲರ್ ಮಕರಮಂ ಕ್ರೀಡಧ್ವಜಂ ಪೋಲೆ (ಗದಾಯು. ೦-೭). ೬. [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಒಂದು : ಅಮರಾಸೆಯುನಜ ಹರಿ ಧನುಮಮಾಸೆಯುಂ ವೃಷಭಕನ್ಯಕಾಮಕರಂ . . . ಆಳ್ಗುಂ (ಜಾತಕ. ೦-೨೯) ; ಶಕವರುಷದ ೧೧೮೩ನೆಯ ಮಕರದಲು ಬ್ರಿಹಸ್ಪತಿ ದುಂದುಭಿ ದುರ್ಮತಿಸಂವತ್ಸರ ಮಾರ್ಗಶಿರ ಸು ೬ ಮಂ (ಸೌಇಇ. IX–i, ೩೯೫-೬; 1261): ಮಕರಕ್ಕೆ ಗುರು ಬರಲು ಮಕರತೋರಣವಕ್ಕು (ಸರ್ವಜ್ಞ. ೦೫೮೯). ೭. [ನಾಟ್ಯ] ಹದಿಮೂರು ಬಗೆಯ ಸಂಯುತಹಸ್ತಗಳಲ್ಲಿ ಒಂದು; P "ಪತಾಕಹಸ್ತಗಳೆರಡರ ಹೆಬ್ಬೆರಳುಗಳನ್ನು ಮೇಲಕ್ಕೆ ನೀಡಿ, ಅಂಗೈಗಳನ್ನು ಕೆಳಮುಖಮಾಡಿ ಕೈಗಳನ್ನು ಒಂದರ ಮೇಲೊಂದು ಇಡುವುದು" (ಅಸ್ಯರಂ. ೨೯೫ ಗದ್ಯಾನುವಾದ) : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತಹಸ್ತಗಳು ಯಾವುವೆಂದರೆ–೧. ಅಂಜಲಿ. . . ೧೦. ಮಕರ ೧೧. ಗಜದಂತ ೧೨. ಅವಹಿತ್ಥ ಮತ್ತು ೧೩. ವರ್ಧಮಾನ (ಅಭಿನ. ೪೯). [ಸಂ.]

**ಮಕರ₂** (ನಾ). ದೇವತಾಮೂರ್ತಿ, ನವದಂಪತಿಗಳು, ಮೈನೆರೆದ ಹುಡುಗಿ ಮುಂತಾದವರನ್ನು ಕುಳ್ಳಿರಿಸಿ ಆರತಿಯೆತ್ತಲು ರಚಿಸಿದ ಮಂಟಪ: ಮಕರ ಸಹಿತ ಎಲ್ಲಾ ಕಟ್ಟಿ ತಯಾರ ಆಗೀತೆಲ್ಲಾ ? (ಶಿಸಗ. ೭೬): ಹಾಡು ಕೇಳುವುದರಲ್ಲಿ ಮೈಮರೆತ ಜನ ಮಕರದ ಕಡೆಗೆ ನೋಡುವಲ್ಲಿ ಅದಾವಾಗಲೋ ತಾರಕ್ಕ ಬಂದು ಕುಳಿತಿದ್ದಳು (ಶಿಸಗ. ೭೯).

[ ← ಮರಾ. ಮಖರ್ ]

**ಮಕರಂದ** (ನಾ). ೧. ಹೂವಿನ ರಸ; ಜೇನು; ಮಧು: "ಮಕರಂದಃ, ಮಧು— ಈ ೨ ಹೂವಿನ ಬಂಡು" (ಶಬ್ದಮ. ೩೦-೩೪); ನಂದನನಾನಾ ಪ್ರಸವಪ್ರಭೂತ ಮಕರಂದಾಮೋದಮುಂ ತಂದು (ಸುಕುಮಾ. ೪-೪೩): ಶರದಭ್ರಮೆಂಬ ಬೆಳ್ದಾವರೆಗಳ ಮಕರಂದರೇಣು ಪವನಾಹತಿಯಿಂ ಪರೆದು (ಜಗ. ೪-೬೨); ಆರ ವದನಾರವಿಂದಮಂ ನೋಡಿ, ಮಕರಂದಮಂ ಹೀರಿ, ಜನನಯನಾಳಿ ತೃಪ್ತಿಯರಿಯವೊ ಅದನ್ನೊಸೆದು ನೋಳ್ಪನ್ನೆಗಂ ಶಾಂತಿಯಿಲ್ಲೆನಗೆ (ಶ್ರೀರಾಮಾ. ೧೬೦-೨೬೪). ೨. [ಸಂಗೀತ] ಅಟ್ಟ ತಾಳದಲ್ಲಿ ಒಂದು ಭೇದ : ನಿಃಶಂಕ, ಶಂಖ, ಶೀಲ, ಚಾರ ನಂತರ ಮಕರಂದ ಮತ್ತು ವಿಜಯ— ಈ ಆರು ಭೇದಗಳನ್ನು ಅಟ್ಟತಾಳದಲ್ಲಿ ಹೇಳಿದೆ (ಕತಾಶ್ರ. ೬೩). [ಸಂ.]

**ಮಕರಂದಪ** (ನಾ). ಹೂವಿನ ರಸವನ್ನು ಕುಡಿಯು ಬದುಕು ವಂತಹುದು ; ಬಂಡುಣಿ ; ಜೇನುನೊಣ : ಕೃಷ್ಣನ್ನ ಪಾದಕಮಲದಲ್ಲಿ ಮಕರಂದಪನಂತೆ ನಲಿವೋದು ಭ್ರಾಂತೆ (ಶ್ರೀಕೃವಾ. ೩೬). [ಸಂ.]

**ಮಕರಂದಿ** (ನಾ). [ಸಂಗೀತ] ಒಂದು ರಾಗದ ಹೆಸರು : ಶ್ರೀರಾಗ . . . ಮಕರಂದಿ ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹರಿವ್ಯಾರ. ೨-೪೦). [ ? ]

**ಮಕರಕಂಠಿ** (ನಾ). ಮೊಸಳೆ ಅಥವಾ ಮೀನಿನ ಆಕಾರದ ಚಿತ್ರಗಳುಳ್ಳ ಒಂದು ಬಗೆಯ ಕೊರಳಿನ ಆಭರಣ : ತನಗೆ ಮಹಾರಾಜರು ಬಹುಮಾನವಾಗಿ ಕೊಟ್ಟ ತೋಡಾ, ಮಕರಕಂಠಿ ಮುಂತಾದ ಒಡವೆಗಳಿಂದ ಆತನನ್ನು ಅಲಂಕರಿಸಿ (ಗಾವಳ. ೬೮). [ಸಂ. ಮಕರಕಂಠೀ]

**ಮಕರಕುಂಡಲ** (ನಾ). ಮೊಸಳೆ ಅಥವಾ ಮೀನಿನ ಆಕಾರದ ಒಂದು ಬಗೆಯ ಕಿವಿಯ ಆಭರಣ : ಮಣಿಮಯಭೂಷಣ ಮಕರ ಕುಂಡಲಯುತ ಮಣಿವ ಭಕ್ತರ ಮಹದ್ಭಾಗ್ಯ (ಕಕಸಾಂ. ೬೨-೬೬) ; ಹರಿಹರನಿಗೆ . . . ಬಲಗಿವಿಯಲ್ಲಿ ನಾಗಕುಂಡಲ, ಎಡಗಿವಿಯಲ್ಲಿ ಮಕರ ಕುಂಡಲವೂ ಇವೆ (ಹೊಯ್ಸಳಾ. ೯೬). [ಸಂ.]

**ಮಕರಕೇತನ** (ನಾ). ೧. ಮೀನಿನ ಗುರುತುಳ್ಳ ಧ್ವಜ. ೨. ಮೊಸಳೆ ಮುಂತಾದ ಜಲಚರಗಳ ವಾಸಸ್ಥಾನ ; ಸಮುದ್ರ. ೩. ಮೀನಿನ ಗುರುತುಳ್ಳ ಧ್ವಜವುಳ್ಳವನು ; ಮನ್ಮಥ : ಮಲ್ಲಿಕಾರ್ಜುನಂ ಜನಿಯಿಸಿದಂ ಭೂವಲ್ಲಭಂ × × × ಗುಣಾವಾಸಂ ಮಕರಕೇತನಂ ಪುಟ್ಟುವ ವೋಲ್ (ಕವಿಅ. ೯೦-೧-೧೪ ; 1082): ಹೆಪಚುದಂ ತನಗಂಜಿ ಮಕರ ಕೇತನಂ (ಹಂಪೆಕ. ೩-೩) ; ಮಕರಕೇತನರತಿಗಳಲಿ ಹೇಸಿಕೆಗಳಂ ಹುಟ್ಟಿಸುವೆನು (ಬಸವ. ೪೦-೩೦). ೨, ೩ : ಭವನಂತೆ ಗಿರಿಸುತಾನ್ವಿತನೆಂದೆನಿಸಿ ಮನೋ ಭವನಂತೆ ಮಕರಕೇತನನಾಗಿ . . . ಅರ್ಣವಂ ಕಣ್ಗೊಳಿಪುದು (ಶ್ರೀರಾಜ. ೩-೨೬). [ಸಂ.]

**ಮಕರಕೇತು** (ನಾ). ೧. = ಮಕರಕೇತನ ೧. ೨. = ಮಕರಕೇತನ ೩ : ಉಪಹಸಿತ ಸನತ್ಕುಮಾರ ನಳಕೂಬರ ಮಕರಕೇತು ಸೌಂದರ್ಯನುಂ . . . ಅಪ್ಪ ಸ್ತ್ರಿಮಿತ್ರಸಾಗರಮಹೀವಲ್ಲಭಂಗೆ . . . ಅರಸಿಯ ರಾದರ್ (ಶಾಂತಿಪು. ೦-೬೦ ವ) ; ಸಕಲಜಗಜ್ಜನಮಂ ಮಕರಕೇತು ಗೆಲೆ (ಅಜಿಪು. ೬-೦೦) ; ಮಕರಕೇತುವರವಾತುಲಾನನೆ ಸಿಂಹಮಧ್ಯೆ ವೃಷಭ ಧ್ವಜಾರಿಯ ಪಟ್ಟದಾನೆ (ಕೃಷ್ಣಶಾ. ೬-೨೩). [ಸಂ.]

**ಮಕರಗುಬ್ಬಿ**, ಮಕರಡಿಬ್ಬಿ, ಮಕರದಿಬ್ಬಿ, ಮಕರಬಿಬ್ಬಿ (ನಾ). ೧. (ಹಿಂದೆ ಯುದ್ಧದ ಸಮಯದಲ್ಲಿ ಶತ್ರುಗಳ ಮೇಲೆ ಎಸೆಯುತ್ತಿದ್ದ) ಮೀನಿನಾಕಾರದ ಮೊಳೆಯಂತಿದ್ದ ಒಂದು ಸ್ಫೋಟಕವಸ್ತು : ಎತ್ತಿದ ಕೇತು ಸುತ್ತಿದ ಬೇವಿನ ದಂಡೆ ಮತ್ತಿರ್ದರ್ ದಸಿಗಳು ಬತ್ತರಿ ಸಿರ್ದ ಮಕರಗುಬ್ಬಿಗಳೊಪ್ಪೆ ಪೆತ್ತುದು ಪುರ ಶೌತಾಳವ (ಅಷ್ಟಂತ. ೦೮-೪೩). ಮಕರಡಿಬ್ಬಿ : ೧. ರಂಗಯ್ಯನ ಬಾಗಿಲ ಕಡೆ ತೈವರನ ಸೇನೆಯುವರು ಭಾರಿಯಾಗಿ ಮೊಹರ್ಚೆ ಕಟ್ಟಿ ಫಿರಂಗಿಯನ್ನೂ ಮಕರಡಿಬ್ಬಿಯನ್ನೂ ಹೊರಗಿನಿಂದ ಹೊಡೆಯುತ್ತಾ ಬಂದರು (ತಿಶ್ರವಾ. ೯೬). ೨. ಮಕರಡಿಬ್ಬಿ ಎಂಬ ಸ್ಫೋಟಕವಸ್ತುವನ್ನು ಎಸೆಯಲು ಬಳಸುತ್ತಿದ್ದ ಸಾಧನ : ಮಯ ರಚಿಸಿದನು ಕೋಟಾವಲಯ ಮಾಗಿಲಟ್ಟಳೆಯ ಕೊತ್ತಲಗಳ ಮಹಾಮೆಂಕಣೆಯ ಕೆದರುವ ಮಕರಡಿಬ್ಬಿಗಳಾ (ಅಸಂಶಾ. ೩-೩-೦೨) ; ಫಿರಂಗಿ ಮಕರಡಿಬ್ಬಿ ಮೊದಲಾದ ಯುದ್ಧಸಾಧನಗಳು (ಕೃವಾಸ. ೯). ಮಕರದಿಬ್ಬಿ : ೧. ಸೂತ್ರದೊಳಟ್ಟಿ ಸೂಸುವ ಮಕರದಿಬ್ಬಿ (ವ್ಯರಾಶಾ. ೨-೦೬). ೨. ಬದ್ದರ ಸಾರವಾರಿ ತೊಲೆ ತೂಗುವರ ಬಲೆ ಹಗ್ಗ ಮಕರದಿ[ಪಾಠಾಂ. ಬಿ]ಬ್ಬಿ ಸಲೆ ಮೆಚಿಮುವ್ವ ಮಾರ್ಗದೊಳಗೆ (ಕುಮಾರಾಂ. ೩೭-೩೬) ; ನೆಗೆವ ಮಕರದಿಬ್ಬ[ ಬ್ಬಿ ] ಹುಲಿಮುಖ ಡೆಂಕಣಿ ಮಿಗೆ ಚೋರ ಅಂಬುಗಂಡಿಗಳು ( ಬಸಪ. ೦-೪೦ ); ಮಕರದಿಬ್ಬಿ, ರೇಕವಿಸರ, ಗೋವಿ, ತುಪಾಕಿ ಮೊದಲಾದ ಆಯುಧಯಂತ್ರಜಾಲಗಳಿಂದಲೂ (ಕೃವಾಸ. ೯೬). ಮಕರಬಿಬ್ಬಿ : ೧. ಭಡಾಳಿಸಿರ್ದ್ದ ಮಕರಬಿಬ್ಬಿಗಳು ಗಬ್ಬಿಗಳು (ತೇರಮ. ೨-೨೬); ನಡೆಚಪ್ಪರವೇಣಿ ಭದ್ರಿಕೆ ನೆಲಗುಮ್ಮ ಬೆಡಗಿನ ಮಕರಬಿಬ್ಬಿಗಳು (ಶಾಗಳು. ೦೬-೨೦); ರಾಮಡೆಂಕಣೆ ಮಕರಬಿಬ್ಬಿಯನಾಯು ವಲಿ ಹೂಡಿದರು (ಕೊಲ್ಲಕ. ೨೪೦).

[ಮಕರ$_1$ + ಗುಬ್ಬಿ$_?$. / ತೆಲು. ಮಕರಬಿಬ್ಬಿ = ಮಕರತೋರಣ]

**ಮಕರಟೆಕ್ಕೆ** (ನಾ). ಮೀನಿನ ಚಿತ್ರವುಳ್ಳ ಬಾವುಟ; ಮೀನಧ್ವಜ; P ಮೈಸೂರಿನ ರಾಜರ ಮೆರವಣಿಗೆ, ದರ್ಬಾರು ಮುಂತಾದ ಸಂದರ್ಭ ಗಳಲ್ಲಿ ಸೇವಕರು ಎತ್ತಿ ಹಿಡಿಯುತ್ತಿದ್ದ ಬಿರುದಿನ ಸಂಕೇತಗಳಲ್ಲಿ ಒಂದು : ಬಿರುದಿನ ಹಾಳು ಡಮಾಮಿ ಮಕರಟೆಕ್ಕೆಯುರುತರ ರಾಜಚಿಹ್ನಗಳ ಪರಿಯ ತೋಜುತ (ಕಂಠೀ. ೩-೩೬); ಗರುಡಧ್ವಜ, ಮಕರಟೆಕ್ಕೆ . . . ಪಟುಪಾವಡೆ ಮುಂತಾದ ಬಿರುದುಗಳಿಂದಲೂ ( ಮಹಾವಂ. I. ೩೪ ); ಸಾಲ್ಗುಡಿ, ಮಕರಟೆಕ್ಕೆ, ಸತ್ತಿಗೆ, ಸೀಗುರಿ . . . ಕಂಠೀರವಾದಿ ಬಿರುದುಗಳು ಮುಂತಾದುವನ್ನು ಹಿಡಿದು ಊಳಿಗಗುಡುತ್ತ (ಪಟ್ಟಅ. ೩೦-೬). [ ಮಕರ$_1$ + ಟೆಕ್ಕೆ$_1$ (< ಟೆಕ್ಕೆಯ) ]

**ಮಕರಡಿಬ್ಬಿ** ' ಮಕರಗುಬ್ಬಿ ' ನೋ.

**ಮಕರತೋರಣ** (ನಾ). ೧. ಮೀನು, ಮೊಸಳೆ ಮುಂತಾದ ಆಕೃತಿ ಗಳುಳ್ಳ ಒಂದು ಬಗೆಯ ತೋರಣ ; P ದೇವಾಲಯದ ಶಿಲ್ಪಗಳಲ್ಲಿ ಅನೇಕ ಕಡೆಗಳಲ್ಲಿ ಇದನ್ನು ಕಡೆದಿರುತ್ತಾರೆ. ರಾಜರು ಮುಂತಾದವರ ಮೆರವಣಿಗೆಗಳಲ್ಲಿಯೂ ದೇವರ ಉತ್ಸವಾದಿಗಳಲ್ಲಿಯೂ ಇಂತಹ ತೋರಣಗಳನ್ನು ಉದ್ದಕ್ಕೂ ಹಿಡಿದು ನಡೆಯುವ ವಾಡಿಕೆ ಯುಂಟು : ವರುಣರೂಪಾರೂಢಮುಂ ಚಾಮರಮಯಮುಮಪ್ಪ ಮಕರತೋರಣಮಂ ನೋಡುತ್ತುಂ (ಶಾಂತಿಪು. ೩-೦೯ ವ); ಉತ್ತಂಭಿತಮಾನ ಸ್ತಂಭ ಮಕರತೋರಣವಿರಚಿತಂಗಳುಂ (ಚಂದ್ರಪ್ರ. ೨-೬೩ ವ); ದೇವಾಲಯದ . . . ಗೂಡುಗಳಿಗೆ ಪುಷ್ಪ ಅಥವಾ ಮಕರತೋರಣಗಳಿವೆ. ಗಂಧರ್ವ, ಯಾಳಿ, ಮುಂಕೊಡೆ, ಮಕರ, ಯಕ್ಷರು ಈ ತೋರಣಗಳಲ್ಲಿರುವರು (ಹೊಯ್ಸಳಾ. ೯೯). ೨. (ಅಲಂ) ಶುಭ ; ಮಂಗಳ : ಮಕರಕ್ಕೆ ಗುರು ಬರಲು ಮಕರತೋರಣವಕ್ಕು (ಸರ್ವಜ್ಞ. ೦೩೯೯). [ಸಂ.]

**ಮಕರದಿಬ್ಬಿ** 'ಮಕರಗುಬ್ಬಿ' ನೋ.

**ಮಕರಧ್ವಜ** (ನಾ). ೧. = ಮಕರಕೇತನ ೧. ೨. = ಮಕರಕೇತನ ೩ : "ಪ್ರದ್ಯುಮ್ನಃ, ಮಕರಧ್ವಜಃ . . . ಮನೋಭವಃ — ಈ ೨೮ ಕಾಮ (ದೇವ)ನ ಪೆಸರ್" (ಶಬ್ದಮ. ೭-೩೩) ; ಓರ್ವಳುತ್ತುಂಗಸೌಧೋತ್ತುಂಗ ದೊಳ್ ನಿಂದು ಮನುವಂಶಧ್ವಜನಂ ಮಕರಧ್ವಜನೆಂದು ಬಗೆದು (ಅಂಶು. ೦೦-೦೬ ವ); ಮಕರಧ್ವಜನಂತೆ ಸದಾಸನ್ನವಿಗ್ರಹನುಂ . . . ಪುರುಷೋತ್ತಮ ಪ್ರತಿನಿಧಿಯುಮೆನಿಸಿದ ಮಹಾನುಭಾವಂ ಶಾರಾಪೀಡನಿರ್ವಂ

(ಶಾಂತಿಪು. ೩೦೭). ೩. ಮೊಸಳೆಯ ಆಕಾರದಲ್ಲಿ ನಿಲ್ಲಿಸಿದ ಸೈನ್ಯ.–ಪಡೆ. [ಸಂ.]

**ಮಕರಪತಾಕ** (ನಾ). ೧. =ಮಕರಕೇತನ ೧. ೨. =ಮಕರಕೇತನ ೩ : ಮಕರಪತಾಕನಾರ್ಪ ವನಿತಾಕೃತಿವೆತ್ತುದೊ . . . ಎನೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ (ರಕೆಚ. ೩-೪೦). [ಸಂ. ಮಕರಪತಾಕಾ]

**ಮಕರಪತ್ರ** (ನಾ). ಸ್ತ್ರೀಯರು ಅಲಂಕಾರಕ್ಕಾಗಿ ಕೆನ್ನೆ, ಗಲ್ಲ, ಸ್ತನ ಮುಂತಾದ ಅಂಗಾಂಗಗಳ ಮೇಲೆ ಪರಿಮಳಯುಕ್ತವಾದ ಬಣ್ಣಬಣ್ಣದ ಪುಡಿ ಮುಂತಾದುವುಗಳಿಂದ ಮೀನು, ಮೊಸಳೆ ಬಳ್ಳಿ ಮೊದಲಾದ ಆಕಾರಗಳಲ್ಲಿ ಬರೆದುಕೊಳ್ಳುತ್ತಿದ್ದ ಚಿತ್ತಾರ; ಪತ್ರಭಂಗ : ಮಸುಳ್ದ ಮಕರಪತ್ರದ ಕದಪು . . . ಸೊಪ್ಪಾದಧರ ವೊಪ್ಪಿತಾ ಕಾಂತೆಗೆ (ಕೃಚಂಪ್ರಾ. ೧೧-೨೩). 'ಮಕರಿಕಾಪತ್ರ', 'ಮಕರಿಕೆ' ಪರಾ. [ಸಂ.]

**ಮಕರಬಿಬ್ಬಿ** 'ಮಕರಗುಬ್ಬಿ' ನೋ.

**ಮಕರಭೋಜನ** (ನಾ). ೧. ತಾನು ಮಾಡಿದ ಪಾಪದ ಫಲವಾಗಿ ತಿನ್ನುವ ಆಹಾರವು ಹುಳುಗಳಾಗಿ ಮಾರ್ಪಡುವುದು. ೨. ತಿನ್ನುವ ಆಹಾರವು ಹುಳುಗಳಾಗಿ ಮಾರ್ಪಡುವ ಪಾಪಿಷ್ಠವ್ಯಕ್ತಿ : ಶಿವ ಧರ್ಮದ ಕೆಡಿಸಿದವನು ಅಧರ್ಮಕ್ಕಳಿವನು ಕೂಡಲಸಂಗಮದೇವ ಸಾಕ್ಷಿಯಾಗಿ ಮಕರಭೋಜನನಾಗನೆ ಪಿನಾಕಕ್ಕರಾಯನು (ಬಸವ. ೬೨೩). [ಮಕರ್ + ಭೋಜನ]

**ಮಕರಮಾಸ** (ನಾ). ಸೌರಮಾನದ ಹತ್ತನೆಯ ತಿಂಗಳು : [ನವಿಲೇಶ್ವರ] ದೇವರಿಗೆ ಮನುಮತಸಂವತ್ಸರದ ಮಕರಮಾಸ ೧೮ನೆಯ ಸೋಮವಾರ ದಂದು . . . ಧ(ಂ)ರ್ಮ್ಮ (ಕೌಇಇ. IX-i, ೩೪೪-೯ ; 1176). [ಸಂ.]

**ಮಕರಮುದ್ರೆ** (ನಾ). ಮೀನು ಅಥವಾ ಮೊಸಳೆಯ ಆಕಾರವುಳ್ಳ ಒಂದು ಬಗೆಯ ಆಭರಣ : ಭುಜಕೀರ್ತಿ ಮರಕತಕಂಕಣಂ ತೋಳ ಭಾಪುರಿ ಮಕರಮುದ್ರೆಗಳನೂ ಲೀಲೆಯಿಂದಳವಡಿಸಿ (ಶಶಮಹಿ. ೩-೨೬). [ಸಂ. ಮಕರಮುದ್ರಾ]

**ಮಕರರಾಶಿ** (ನಾ). [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಒಂದು : ಮಕರರಾಶಿಯು ಅಂಗಾರಕನಿಗೆ ಕುಂಭರಾಶಿಯಂತೆಯೇ ಸಮರತ್ನಕ್ಷೇತ್ರ ವಾಗಿದ್ದರೂ . . . ಶುಭಫಲವೇ ಉಕ್ತವಾಗಿದೆ (ಜಾತಕ. ೧೭-೨೦ ೬೬೪). [ಸಂ.]

**ಮಕರವೃತ್ತ** (ನಾ). [ಭೂಗೋಳ] ಭೂಮಿಯ ಮೇಲೆ ಸಮಭಾಜಕ ವೃತ್ತಕ್ಕೆ ಸಮಾನಾಂತರವಾಗಿ ದಕ್ಷಿಣದಲ್ಲಿ ಇಪ್ಪತ್ತುಮೂರೂವರೆ ಅಕ್ಷಾಂಶಗಳ ಅಂತರದಲ್ಲಿ ಎಳೆದಿರುವಂತೆ ಭಾವಿಸಿರುವ ರೇಖೆ : ಮಕರಸಂಕ್ರಾಂತಿವೃತ್ತ : ವಿಷುವವೃತ್ತದ ದಕ್ಷಿಣಕ್ಕೂ ಉತ್ತರಕ್ಕೂ ೨೩½ ಅಂಶಗಳ ಅಂತರದಲ್ಲಿ ಒಂದೊಂದು ವರ್ತುಲಗಳನ್ನು ಕಲ್ಪಿಸುವರು ; ಅವುಗಳಿಗೆ ಯಥಾಕ್ರಮವಾಗಿ ಮಕರವೃತ್ತವೆಂತಲೂ ಕರ್ಕವೃತ್ತವೆಂತಲೂ ಹೆಸರುಗಳಿವೆ (ಮುಂಬಯಿ. ೬-೬೦). 'ಕರ್ಕವೃತ್ತ' ಪರಾ. [ಸಂ.]

**ಮಕರವ್ಯೂಹ** (ನಾ). ಮೊಸಳೆಯ ಆಕಾರದಲ್ಲಿ ಸೈನ್ಯವನ್ನು ನಿಲ್ಲಿಸುವ ಒಂದು ರಚನೆ : ಮಕರವ್ಯೂಹಮನೊಡ್ಡಿ ನಿಂದನಸುತಂ (ಅಪಂಪು. ೧೩-೯೪); ಅರಸನನುಜರು ಸಹಿತ ಕೃಷ್ಣನ ಬಿರಳ ಸನ್ನೆಯೊಳೈದೆ ಬಿಡೆ ಮೋಹರಿಸಿ ನಿಂದುದು ಮುರಿವ ಮಕರವ್ಯೂಹ ರಚನೆಯಲಿ (ಕುವ್ಯಾದ್ರೋ. ೪-೨೨). 'ಗರುಡವ್ಯೂಹ', 'ಪದ್ಮವ್ಯೂಹ' ಪರಾ. [ಸಂ.]

**ಮಕರಶೃಂಗಾರ** (ನಾ). ಮಕರಿಕಾಪತ್ರದ ಶೃಂಗಾರ,–ಅಲಂಕಾರ (?): ಭಿನ್ನರುಚಿಗಳಿಗೆಜಗದೆ ಕಾಮನ ಬೆಂಬಳಿವಿಡಿಯದೆ ಮಕರಶೃಂಗಾರವ ಮಾಡದೆ ಅಂಗನೆಯರ ಸಂಗವ ತೊಜದೊಡೆ ಶೀಲವಂತರೆಂಬೆನು (ಶಲಗೀತ. ೩-೧೬೯). [ಸಂ.]

**ಮಕರಸಂಕ್ರಮಣ** (ನಾ). ಸೂರ್ಯನು ಮಕರರಾಶಿಯನ್ನು ಪ್ರವೇಶಿಸುವ ದಿನ ಮತ್ತು ಅಂದು ಆಚರಿಸುವ ಹಬ್ಬ; ಎಳ್ಳು ಬೀರುವ ಹಬ್ಬ; ಪೊಂಗಲ್ : ಜನವರಿ ತಿಂಗಳ ೧೪ನೆಯ ದಿನಾಂಕಕ್ಕೆ ಸರಿಯಾಗಿ ಮಕರಸಂಕ್ರಮಣ ಹಬ್ಬ ಬರುತ್ತದೆ (ಶಾಹಬ್ಬ. ೧೬೭). [ಸಂ.]

**ಮಕರಸಂಕ್ರಾಂತಿ** (ನಾ). =ಮಕರಸಂಕ್ರಮಣ : ಮಕರಸಂಕ್ರಾಂತಿಯಂದು ಎಳ್ಳುಬೀರುವ ವಾಡಿಕೆ ಇದೆ (ರೂಢಿ). [ಸಂ.]

**ಮಕರಸಂಕ್ರಾಂತಿವೃತ್ತ** (ನಾ). = ಮಕರವೃತ್ತ : ವಿಷುವದ್ರೇಖೆಗೆ . . . ದಕ್ಷಿಣಕ್ಕೆ ಇಪ್ಪತ್ತು ಮೂರೂವರೆ ಅಕ್ಷಾಂಶಭಾಗಗಳದೂರದಲ್ಲಿ ಮಕರ ಸಂಕ್ರಾಂತಿವೃತ್ತವೂ (Tropic of Capricorn) ಇವೆ (ಭೂಗೋಳ. ೬): ಡಿಸೆಂಬರು ೨೨ನೆ ತಾರೀಖಿನ ದಿವಸ . . . ಸೂರ್ಯಕಿರಣ ನೇರವಾಗಿ ಮಕರ ಸಂಕ್ರಾಂತಿವೃತ್ತದ ಮೇಲೆ ಬೀಳುತ್ತದೆ (ಭೂವಿವ. ೦೩). 'ಕರ್ಕಾಟಕ ಸಂಕ್ರಾಂತಿವೃತ್ತ' ಪರಾ. [ಸಂ.]

**ಮಕರಾಂಕ** (ನಾ). = ಮಕರಕೇತನ ೩ : ಮಕರಾಂಕದ್ವಿಪಮದಪಟ್ಟಿಕೆ ಯೆನಿಸಿ ಕಪೋಲಮೂಲಮಂ ಮುಟ್ಟಿದುವಾ ಚಕಿತಾಕ್ಷಿಯ ಹರಿನೀಳಾಳಕಂಗಳ್ (ಶಂಪಾಶ. ೩-೯೪) ; ಮಕರಾಂಕಂ ಬಂದೊಡಂ ಮೆಚ್ಚದ ನಿರುಪಮಸೌಭಾಗ್ಯಸಂಪನ್ನೆಯಂ ಬಾಲಿಕೆ ನಿನ್ನಂ ಕಂಡು ಕಣ್ಸೋಲ್ತಿರದು ಮದನಾಸ್ತ್ರಾಗ್ನಿಸಂತಾಪದಿಂ × × × ನೀರ್ವನೆಯೊಳೊಡಲನಟ್ಟಾಡು ಪೋಲ್ ಮಾಡಿದ್ಯೆ (ರಕೆಚ. ೮-೨೬೯). [ಸಂ.]

**ಮಕರಾಕರ** (ನಾ). ಮೊಸಳೆ ಮುಂತಾದ ಜಲಚರಗಳ ವಾಸಸ್ಥಾನ : ಸಮುದ್ರ : ಹರಿವ ರಥಪದಧೂಳಿ ಮಕರಾಕರವ ಕುಡಿದುದು (ಕುವ್ಯಾಭೀ. ೪-೯೪). [ಸಂ.]

**ಮಕರಾಯನ** (ನಾ). ಸೂರ್ಯನು ಮಕರಸಂಕ್ರಾಂತಿವೃತ್ತದ ಮೇಲೆ ಬರುವ ಕಾಲ : ಡಿಸೆಂಬರು ೨೨ನೆ ತಾರೀಖಿನ ದಿವಸ . . . ಸೂರ್ಯ ಕಿರಣ ನೇರವಾಗಿ ಮಕರಸಂಕ್ರಾಂತಿವೃತ್ತದ ಮೇಲೆ ಬೀಳುತ್ತದೆ. ಇದನ್ನು ಮಕರಾಯನ (Inter solstice) ಎಂದು ಹೇಳುತ್ತೇವೆ (ಭೂವಿವ. ೦೩). 'ಕಟಕಾಯನ' ಪರಾ. [ಸಂ.]

**ಮಕರಿ** (ನಾ). ೧. ಹೆಣ್ಣುಮೊಸಳೆ. ೨. =ಮಕರಪತ್ರ. [ಸಂ. ಮಕರೀ]

**ಮಕರಿಕಾಪತ್ರ** (ನಾ). = ಮಕರಪತ್ರ : ಅಲಕಂ ಮಂದಾರಶೂನ್ಯಂ ಕದಪು ಮಕರಿಕಾಪತ್ರಶೂನ್ಯಂ (ಆದಿಪು. ೩-೦೩); ಆಸ್ಥಾನಮಂಟಪದಿಂ ಮಹೀಪಾಲನೆಬ್ಬುದುಮನೇಕಾಂಗದಮಕರಿಕಾಪತ್ರಾದಿಗಳಿಂ ಮಿಂಚು ಪೊಣ್ಮೆ ತಮ್ಮೊಳ್ ಪಳಂಚಲೆಯೆಯುಂ (ಶಾಂತಿಪು. ೬೭). [ಸಂ.]

**ಮಕರಿಕೆ** (ನಾ). = ಮಕರಪತ್ರ : "ಮೊಲೆ ಗಲ್ಲ ತೋಳ್ ಕೊರಲ್ಲಿ ಶ್ರೀವಿ ಸಜೀವಿಯಿಂ ಬರೆದ ಮಸೆ ಲತೆಗಳು ಪತ್ರವಲ್ಲಿ ಮಕರಿಕೆಯೆನಿಸ್ಕುಂ" (ಶಬ್ದಮ. ೦೦೦-೨೩) ; ಶ್ರೀವಿಜಯಾರ್ಧಾಚಳಖೇಚರಾವಳಿಮಣಿಮಕುಟ ಮಕರಿಕಾನಿಕಷಣಲೇಖಾವಿಳಸಿತಪದ ಕಮಲಂ (ಆದಿಪು. ೨-೦) : ಕಿವಿದೊಡವಿನ ಮುಕ್ತಾತತಿ ನಕ್ಷೋಡುಗಣಮೆನಿಸೆ ಕಜ್ಜಲಿಯ ಮಕರಿಕೆಯೆನೆ ತದ್ಯುವತಿಯ ನಯನೋತ್ಪಳದಂದವನೀಕ್ಷಿಸಲ್ಕೆದಿದಿಂದುಮೆನೆ ಕದಪೆಸೆಗುಂ (ರಾಜಶೇ. ೭-೩೩). [ಸಂ. ಮಕರಿಕಾ]

**ಮಕರಿಣಿ** (ನಾ). [ಸಂಗೀತ] ಆಲಾಪನೆಯಲ್ಲಿ ಒಂದು ವಿಧ ; P ಇದು ರಾಗಾಲಾಪನೆಯನ್ನು ಮುಗಿಸುವ ಖಂಡ. ಜೀವಸ್ವರದ ಸುತ್ತ ಹೆಣೆದ, ಸ್ಥಾಯಿಸ್ವರದಲ್ಲಿ ಮುಗಿಯುವ ಮೂರು ಆಲಾಪಾಂಶಗಳ ನಂತರ, ಅಂತಹುದೇ ಅಲ್ಪಸಂಚಾರವನ್ನು ಸ್ಥಾಯಿಯ ವ್ಯಾಪ್ತಿಯಲ್ಲಿ ನಡೆಸಿ ಮಧ್ಯಷಡ್ಜದಲ್ಲಿ ನ್ಯಾಸಮಾಡಿ ರಾಗಾಲಾಪನೆಯನ್ನು ಮುಕ್ತಾಯಮಾಡುವ ಕ್ರಮಕ್ಕೆ 'ಮಕರಿಣಿ' ಎಂದು ಹೆಸರು. ಇದಕ್ಕೆ 'ವರ್ತನೀ' ಎಂದೂ ಹೆಸರುಂಟು : ಪ್ರತಿಸ್ಥಾಯಿಯಲ್ಲೂ

ಜೀವಸ್ವರ ಹಿಡಿದು . . . ಮಂದ್ರಸ್ಥಾಯಿಯಲ್ಲಿ ಆಲಾಪನೆ ಮುಕ್ತಾಯ ಮಾಡುವುದೂ ಒಂದು ಕ್ರಮ. ಈ ಕ್ರಮ 'ಮಕರಿಣೀ' ಎಂದು ಹೆಸರು ಗೊಂಡಿದೆ (ಸಂಗೀತ. ೨೯); ಸ್ಥಾಯಿಯಲ್ಲಿರುವ ಅದೇ ಯಮಪನ್ನೇ ಲೋಕದಲ್ಲಿ ಮಕರಿಣಿಯೆಂಬ ಸಂಜ್ಞೆಯಿಂದ ಕರೆಯುತ್ತಾರೆ (ಚತುಶ್ರ. ೬೯).
[ಸಂ. ಮಕರಿಣೀ]

**ಮಕರಿಸು** (ಕ್ರಿ). ೧. ಕವಿ ; ಆವರಿಸು : ಮಕರಿಸದೆ ಮಾಯಾಪ್ರಪಂಚದೊಳಖಿಳನಿಷ್ಠಾಚಾರಶೀಲಪ್ರಕಟಿತರ್ಗಿತಪನೀವಂ (ಸದ್ಗುರು. ೦-೦೮) ; ಎಣಿಕೆ ಮನವನು ಮಕರಿಸುತಿದೆ (ತೊರಲಿ. ೩-೦೦-೩); ವಿಕರಿಸುವ ಮನದೊಳಗೆ ದುಗುಡವ ಮಕರಿಸಿದುದ ಕಾಣುತಬುಜಾಂಬಕನು ನಸುನಗುತುಸುರಿದರ್ದನು ಗೂಢಭಾವದಲಿ (ಸಿಶಾಗ. ೦೦-೬೦-೭). ೨. ಹೆಚ್ಚು ; ಅಧಿಕವಾಗು ; ವರ್ಧಿಸು : ನಾಟಿ ನಲಿದುದು ಚಿತ್ರವೀ ನಟನಾಟಕನ ಸಿಕ್ಕಿಸುವ ಬಗೆಯಲಿ ಮಾಟ ಮಕರಿಸಿ ಕಾಣಲಾದುದು ಮತ್ತೆ ಮಾಯೆಯಲಿ (ಶ್ರಕುಲ. ೭-೩೬); ಅಕುಟಿಲೆ ಕೇಳ್ ಪ್ರವರ್ತಕನಿಷೇಧಂ ನಿವರ್ತಕವೆ ವಿಹಿತವಿಂತುಭಯಮಾಗಿ ಮಕರಿಸುವೀ ಕರ್ಮವಳಿದು ನಿಂದಾತ್ಮಣವಕಲಂಕಪರಮಾತ್ಮಕನು ತಾನೆ (ಶರಪೋ. ೦-೦೬-೦೦) ; ದಾಸಿಮಯ್ಯನ ಮನದಲ್ಲಿ ಮಮಕಾರ ಮಕರಿಸಲು ಕಾರಣವೇನೆಂದು ಪೊಳೆಯಿತು (ಕಚಶ. ೩೩). ೩. ಗಾತ್ರವು ಹೆಚ್ಚಾಗು,– ದೊಡ್ಡದಾಗು: ಕಲಶೋದಕದಲಿಟ್ಟನು ಶಫರಿಯನು ತಂದನು ನಿಜಾಶ್ರಮಕೆ ಮಕರಿಸಿದುದನೊಂದುರಾತ್ರಿಗೆ ಮಕರಿಕಲಶೋದಕವನಸ್ಯಾಸಕತಿಯಲಿ ಸತ್ಯವ್ರತಂಗಿಂತೆಂದುದಳವಳಿದು (ಸಿಶಾಗ. ೬-೨೩-೦೨). ೪. ಹೊಳೆ; ಪ್ರಕಾಶಿಸು: ಚಕಚಕಿಸುತ ರನ್ನಗನ್ನಡಿಯಲ್ಲಿಲ್ಲಿ ಮಕರಿಸೆ ಸಾಲುಸಾಲಾಗಿ (ಛಕಶ. ೦೨-೦೯).
[ಮಕರ, + – ಇಸು]

**ಮಕರೇಶ** (ನಾ). ಮೊಸಳೆಯನ್ನು ವಾಹನವನ್ನಾಗಿ ಉಳ್ಳವನು ; ವರುಣ : ಮಕರೇಶ ಚಾರುಚಾಮರಮರುತಂ . . . ಇದೆಂದು ವಿತರ್ಕಿಪನ್ನವುಸ್ಫುರಿತ ದವಾನಳಂ ಸುಟ್ಟುದುದೊಯ್ಯನೆ ಪಶ್ಚಿಮದಿಗ್ವಾನಿಳಂ (ಜಗಅ. ೪-೨).
[ಸಂ.]

**ಮಕಾಂ** 'ಮುಕ್ಕಾಂ' ನೋ.

**ಮಕಾಡಿ** 'ಮೊಗ' ಪರಾ.

**ಮಕಾಡು** 'ಮೊಗವಡ' ನೋ.

**ಮಕಾಡೆ** 'ಮೊಗ' ಪರಾ.

**ಮಕಾನು** (ನಾ). ವಾಸಮಾಡುವ ಸ್ಥಳ; ಮನೆ ; ನಿವಾಸ : ಹೆಳವರು, ಮೂಕರು ಮುಂತಾದ ಜನರಿಗೆಲ್ಲಾ ಜೀವನವನ್ನು ಕಲ್ಪಿಸಿ, ಮಕಾನುಗಳಿಗೂ ಕೆಲವು ನಗದನ್ನೂ ಭೂಮಿಯನ್ನೂ ಕೊಟ್ಟು . . . ಸುಖವಾಗಿರುವಂತೆ ಆಳಿದರು (ಮಹಾಅಂ. I, ೦೯೦).
[←ಅರ. ಪಾರ. ಹಿಂ. ಮಕಾನ್ ; ಮರಾ. ಮಕಾಣ್]

**ಮಕಾಬಲಿ** 'ಮೊಕಾಬಿಲೆ' ನೋ.

**ಮಕಾರ** (ನಾ). ೧. ಕನ್ನಡವರ್ಣಮಾಲೆಯ ನಲವತ್ತೈದನೆಯ ಅಕ್ಷರ: ಮೇಲಣ ಹತ್ವಕ್ಕೆ ಮಕಾರಂ–ಬ್ರಹ್ಮ–ಬೊಮ್ಮ (ಕಶಬ್ದ. ೨೬೯ ವೃಯೋ); ವ್ಯಂಜನಗಳಲ್ಲಿ ಕಕಾರದಿಂದ ಮಕಾರದವರೆಗೆ ಇರುವ ಇಪ್ಪತ್ತೈದನ್ನು ನೋಡಿ (ಮಕ್ಕಮ. ೦೪). ೨. ಮದ್ಯ, ಮತ್ಸ್ಯ, ಮಾಂಸ, ಮೈಥುನ ಮತ್ತು ಮುದ್ರೆಗಳೆಂಬ ಮಕಾರದಿಂದ ಪ್ರಾರಂಭವಾಗುವ ಐದು ಬಗೆಯ ತಾಂತ್ರಿಕ ಆಚರಣೆಗಳಲ್ಲಿ ಪ್ರತಿಯೊಂದು : 'ಪಂಚಮಕಾರ' ಪರಾ.
[ಸಂ.]

**ಮಕಾಳ, ಮುಖಾಳ, ಮೊಖಾಳ** (ನಾ). ೧. ಮಸುಕು ; ಮಂಕು ; ಕಾಂತಿಹೀನತೆ : ತರಲನ ಮಕಾಳವಾದ ಸ್ಮೃತಿ ಸಜೀವಮೂರ್ತಿಯಾಗಿ ಹೈಮವತಿಯ ಹೃದಯದ ಗದ್ದುಗೆಯನ್ನೇರಿ ಕುಳಿತಿತು! (ಎರಕ. ೦೦೯). (ಗು). ೨. ಮಂಕಾದ ; ಕಾಂತಿಹೀನವಾದ : "ಮಕಾಳ-ಮಬ್ಬು, ಸ್ವಚ್ಛವಲ್ಲದ ; ಕಳೆಗುಂದಿದ ; ಬಾಡಿದ" (ಶಾಸಕೋ. ೨೬). ಮುಖಾಳ: ೧. ನಗರದಲ್ಲಿ ಹೊಳೆಯುವ ವಿದ್ಯುದ್ದೀಪದ ಹಾಗೆ ಹೊಳೆವ ಜೀವನದ ಮುಂದೆ ಹಳ್ಳಿಯ ಪಣತೆ 'ಮುಖಾಳ'ವಾಗಿ ಕಂಡಿತು (ಅರಿಯ. ೦೦೯) ; ಹೆಬ್ಬೆರಳಿನ ಗುರುತುಗಳು ಮುಖಾಳವಾಗಿ ತೋರತೊಡಗಿದ್ದವು (ಗಂಪೂಮ. ೨೦೯). **ಮೊಖಾಳ** : ೨. ನಾವು ಕಂಡ ತಿಂದು ಬದುಕುತ್ತಿರಲಾಗಿ ಈ ಮೊಖಾಳ ದೋರೆಗಳು . . . ಕಾಳುತಿಂದು ಬದುಕುತ್ತವೆ (ಮುಂಬಯ. ೬-೨೬೬).
[ ? ]

**ಮಕಿ** 'ಮುಕ್ಕಿ₁' ನೋ.

**ಮಕುಟ₁** 'ಮಗುಟ₁' ನೋ.

**ಮಕುಟ₂** (ನಾ). ೧. ತಲೆಯ ಮೇಲೆ ಧರಿಸಿಕೊಳ್ಳುವ ರತ್ನಖಚಿತವಾದ ಭೂಷಣ; ಕಿರೀಟ; ಮುಡಿ: "ಕಿರೀಟಂ, ಉಷ್ಣೀಷಂ, ಕೋಟೀರಂ, ಮುಕುಟಂ ಈ__೪ ಮ್ಕುಟಂ" (ಕಶಾಮು. ೯೩-೯೦೦); ಆತಂ ನಿಜಭುಜವಿಜಯಖ್ಯಾತಿಯನಾಳ್ದಾಳ್ದನಧಿಕಬಲನವನಿಪತಿವ್ರಾತಮಣಿಮಗುಟ ಕಿರಣದ್ಯೋತಿತಪಾದಂ ಸಪಾದಲಕ್ಷಕ್ಷಿತಿಯಂ (ಶಂಶಪ. ೦-೦೬); ನವಮಣಿಮಕುಟಕೇಯೂರದಾಭರಣದ . . . ಮೃಗಮದಸೊಬಗನಡಿಯಿಟ್ಟನಪ್ರತಿಮನ ವನೀಶನು (ಹತಕಾ. ೪-೨) ; ತಲೆಯುಪೊಲಿದ್ದರೆ ಗಂಡನು ಮನೆಯೊಳು ಸತಿಯೆ ಕಿರೀಟದವೊಲು ಮಕ್ಕಳುಮರಿಗಳು ಮಕುಟದ ಮಣಿಗಳು ಕಾವಲು ಆಳುಕಾಳ್ಗಳು (ಬಂಶಾಶ. ೨೨೦-೬೭). ೨. (ಅಲಂ) ಅಲಂಕಾರಪ್ರಾಯವಾದುದು ; ಶ್ರೇಷ್ಠವಾದುದು : ಪೂರ್ಣಜ್ಞಾನಿಯಾಗ ಮೌನವೇ ಮಕುಟವಾಗುವುದು (ದಾಶತಂ. ೨).
[ಸಂ.]

**ಮಕುಟಧರ** (ನಾ). ಕಿರೀಟವನ್ನು ಧರಿಸಿದವನು ; ರಾಜ : ಮಕುಟಧರಂ ಸಲೋಮಕರ್ಣಂ ಘಟಾಂತಿಮದ್ರೇಕ್ಕಾಣಂ (ಶಾಶ. ೦೯-೩೩) ; ಮಕುಟಧರರ್ ಮಳಯನೃಪಾಲಕ ಪಾಳವಮಹಿಪರೆಂಬ ವೀರರ್ (ಜಗಅ. ೯-೫).
[ಸಂ.]

**ಮಕುಟಬದ್ಧ** (ನಾ). = ಮಕುಟಧರ : ಮಹಾಮಂಡಳಿಕಪ್ರಮುಖ ಮಕುಟಬದ್ಧರ್ ಮಾಟ್ಟ ಚತುರ್ಮುಖಮಂ (ಅದಪು. ೦೫-೦೩ ವ). ಪುಂಡಲೀಕರ ಮಕುಟಬದ್ಧರ . . . ರಾಜಾಧಿರಾಜಕೇರಿಗಳು (ಜಾಗಕ. ೩-೬೦).
[ಸಂ.]

**ಮಕುಟಭಂಗ** (ನಾ). ೧. ಕಿರೀಟವನ್ನು ಒಡೆಯುವುದು, — ನಾಶಮಾಡುವುದು : ಮಕುಟಭಂಗಪ್ರತಿಜ್ಞೆಯಂ ತೀರ್ಚಲೆಂದು ಕುರುಕುಲಾಂತಕಂ ಮಾಮುನಕಂ ಮಸಗಿ (ಗದಾಯು. ೮-೩೭ ವ). ೨. ಸೋಲು ; ಅಪಜಯ : ಮಕುಟಭಂಗವ ಪಡೆದು ರಾವಣ ವಿಕಳನಾಗಿರೆ ಮಾಲ್ಯವಂತನು . . . ಬುದ್ಧಿಯ ಹೇಳಲೈತಂದ (ಳಾಂಆ. ೫೩-೦).
[ಸಂ.]

**ಮಕುಟಮಣಿ** (ನಾ). ೧. ಕಿರೀಟದಲ್ಲಿರುವ ರತ್ನ : ಒದೆದ ಭರದಿಂದ ಮುಚ್ಚಳಿಸಿದ ದುರ್ಯೋಧನನ ಮಕುಟಮಣಿಗಣವೆತ್ತಂ ಕೆದರಿದುವು (ಗದಾಯು. ೮-೪೦) ; ಮಕುಟಮಣಿ ಸೊರ್ಗಳೆನೆ ಮಸ್ತಕಸಹಿತಮ ನೆಗೆದು ತಿರುಗುವಾ ಪರಿಯಣಮೇಂ ಪ್ರಕಟಿಸಿದುದೊ ಕೃಷ್ಣನ ವಿಜಯಕಾಂತೆ ಗಾಕ್ಷಾಪಲಕ್ಷ್ಮಿ ನಿವಳಿಪ ತೆಜದಿಂ (ಜಗಅ. ೦೭-೫೪) ; ಸುರರ ಮಕುಟಮಣಿ ರಂಜಿತಚರಣಾಬ್ಜ ಶರಣಾಗು ಪ್ರಥಮಜಿನೇಶ (ಕರಕ. ೦-೦). ೨. (ಅಲಂ) ಶ್ರೇಷ್ಠನಾದವನು : ಕರ್ನಾಟಕಸಂಗೀತದ ಮಕುಟಮಣಿಗಳಾದ ಈ ತ್ರಿಮೂರ್ತಿಗಳು ಒಂದೇ ಕಡೆಯಲ್ಲಿ ನಡೆಸಿದ ಚಟುವಟಿಕೆಯ ಅದ್ಭುತಮೂಡಿಕೆಯನ್ನು ಮಾತುಗಳಲ್ಲಿ ಅಳವಡಿಸಲು ಸಾಧ್ಯವೇ ಇಲ್ಲ (ಸಂಗೀತ. ೬೦).
[ಸಂ.]

**ಮಕುಟಮಸ್ತಕ** (ನಾ). ಕಿರೀಟವನ್ನು ಧರಿಸಿರುವ ಶಿರಸ್ಸು, — ತಲೆ : ಆ ಪುರಂದರಸಂ ನತಭೂಮಿಪಾಲರ ಮಕುಟಮಸ್ತಕದ ನಿಜತೇಜೋರೂಪಕಮೆ ಪದ್ಮರಾಗದ ದೀಪದವೋಲ್ ಮೆರೆಯೆ ವಿನಂ ಯಶೌಘಂ ಮೆರೆವಂ

(ಹುಕೋಶ. ೨-೨) ; ನಿಮಿತ ಚಾತುರ್ಬಲವೆರಡು ನಿರ್ಘಯುದಲೊದಗಿತು ಮಕುಟಮಸ್ತಕಮಯಮಹೀತಳವೆನಲು ಹಳಚಿದು ಹೊಯ್ದುದುಭಯಬಲ (ಕುಮ್ಯಾದ್ರೋ. ೦೩-೪೯). [ಸಂ.]

**ಮಕುಟರತ್ನ** (ನಾ). = ಮಕುಟಮಣಿ ೧ : ಮಕುಟರತ್ನದ ಲಹರಿ ಖಡುಗದ ವಿಕಟಧಾರಾರಶ್ಮಿ ದೀಪಪ್ರಕರದಲಿ ಥಳಥಳಿಸೆ ರವಿಯುಪೊಲೆಸೆದನಾ ದ್ರೋಣ (ಕುಮ್ಯಾದ್ರೋ. ೧-೩೮). [ಸಂ.]

**ಮಕುಟವರ್ಧನ** (ನಾ). ಕಿರೀಟದಿಂದ ಹಿರಿಮೆಯನ್ನು ಪಡೆಯುವವನು ; ರಾಜ : ಕುಳ್ಳಿದೋರ್ಲಗದ ಮಕುಟವರ್ಧನರನೆಡಹುತುಂ ತಾಗುತುಂ . . . ಬಂದು ನಂಬಿಯಣ್ಣನ ಸಿಂಹಾಸನದ ಮುಂದೆ ನಿಲೆ (ನಂಬಿರ. ೬-೮೬) : ಕಾಮರ್ಣಕದ ಸ್ವಾಧ್ಯಾಯಸಿದ್ಧರು ಹತ್ತುಸಾವಿರ ಮಕುಟವರ್ಧನರು (ಕುಮ್ಯಾಭೀ. ೩-೯) ; ಮಕುಟವರ್ಧನರ ಮಂಡಳಿಕ ಮನ್ನೆಯರ ಗೇಹಂಗಳಂ (ಭಾವಚಂ. ೨-೦೪). [ಸಂ.]

**ಮಕುಟಸ್ವರ** (ನಾ). [ಸಂಗೀತ] ಕೃತಿಗೆ ಸೇರಿಸುವ ಸ್ವರಗಳ ಗುಂಪು : ಕೃತಿಯನ್ನು ಹಾಡುವಾಗ ಅನುಪಲ್ಲವಿ ಮತ್ತು ಚರಣದ ಪ್ರಾರಂಭದಲ್ಲಿ ಹಾಡುವ ಸ್ವರಗಳ ಸಮೂಹ : ಪ್ರತಿಭಾಗದ ರಾಗದಲ್ಲಿ ಚಿಟ್ಟೆಸ್ವರ ಹಾಡಿದ ಕೂಡಲೇ ಪಲ್ಲವಿಯ 'ಮಕುಟಸ್ವರ'ವೆಂಬ ಹೆಸರಾದ ಚಿಟ್ಟೆಸ್ವರ ಹಾಡಿ ಪಲ್ಲವಿಗೆ ಸೇರುವುದು ರೂಢಿಯಾಯಿತು . . . ಪಲ್ಲವಿಯ ಮಕುಟಸ್ವರದೊಡನೆ ಪಲ್ಲವಿಗೆ ಸೇರುವ ಮಾರ್ಗ ಏರ್ಪಾಡಾಗಿರುವುದು ಕಂಡುಬಂದಿದೆ (ಸಂಗೀಕಂ. ೬೬). P ೧. ಒಂದು ಕೃತಿಯ ಚಿಟ್ಟೆಸ್ವರದ ಕೊನೆಯಲ್ಲಿ ಅಥವಾ ಕಲ್ಪನಾಸ್ವರದ ಕೊನೆಯಲ್ಲಿ ಪುನರಾವರ್ತನೆಯಾಗುವ ಸ್ವರ ; ಮುಕ್ತಾಯ ಸ್ವರ. ೨. ಒಂದು ರಾಗಮಾಲಿಕಾಕೃತಿಯಲ್ಲಿ ಒಂದೊಂದು ಚರಣದ ನಂತರವೂ ಆಯಾ ರಾಗದಲ್ಲಿ ರಚಿತವಾಗಿದ್ದು ಪಲ್ಲವಿಯ ರಾಗಕ್ಕೂ ಅದರ ಧಾತುವಿಗೂ ಸಮಂಜಸವಾಗಿ ಸೇರಿಕೊಳ್ಳುವಂತೆ ನಿರ್ಮಿಸಿದ ಸ್ವರಸಮುಚ್ಚಯದ ಬಂಧ. [ಸಂ.]

**ಮಕ್ಕಡ**, ಮಂಕಡ (ನಾ). ೧. ಕೋತಿ; ಮಂಗ : ''ಮಕ್ಕಡಮೆಂದು ಮರ್ಕಟಂ'' (ಶಶಾ. ೩೦-೯೯); ಒಂದು ಮರನಿರೆ ಬಟ್ಟೆಯೊಂದು ಬಗೆದ ಡರ್ದು ಪೋಗುತ್ತಿರಲನಿತಱೊಳ್ ಮಕ್ಕಡದಿರವನಾಂತುದೆನ್ನಂಗವು (ಶಾಸೋಕು. ೩-೬೩); ಕಲಕಲಂಗೈವ ಮಕ್ಕಡಂಗಳ ವಂಗಡಂಗಳ್ (ಮುರಾತ. ೬-೨೫ ವ). **ಮಂಕಡ** : ೧. ಪುಲಿಯಿರ್ಕುಮಾನೆಯಿರ್ಕುಂ ಚಲದಂಕರ ಲೆಂಕ ! ನೀನೇ ಮಂಕಡನಾಗ ! (ರಾಮಾಶ್ವ. ೩೯-೨೮). ೨. ಮಲ್ಲಯುದ್ಧದ ಒಂದು ಪಟ್ಟು.–ವರಸೆ : ಕರವಲಯಕೋರೊರ್ಮೆ ತಳಹತ್ತಕೋರೊರ್ಮೆ ಸರಿಸ ಮಂಕಡಕೊರ್ಮೆ ಬಂಧಪಟ್ಟಿಸಕೊರ್ಮೆ. . . ಕಂಡ ಡೊಕ್ಕರಕೊರ್ಮೆ ಹರಿ ಕಮಲಭವರೊದಗಿದರ್ (ತಂಜ್ಞ. ೦೬-೩೯).

[< ಪ್ರಾ. ಮಕ್ಕಡ, ಮಂಕಡ./ಸಂ. ಮರ್ಕಟ]

**ಮಕ್ಕರಿ₁**, ಮಂಕಣಿ, ಮಂಕರಿ, ಮಂಕ್ರಿ (ನಾ). ೧. ಬಿದಿರು. ಈಚಲು ಮೊದಲಾದ ಕಡ್ಡಿಗಳಿಂದ ಹೆಣೆದ ಗೂಡೆ,–ಕುಕ್ಕೆ,–ಹೆಡಿಗೆ: ಮೇಲಣ ಷತ್ವಕ್ಕೆ ಕತ್ವಂ. . . ಮಷ್ಕರಿ–ಮಕ್ಕರಿ (ಶಮದ. ೨೬೩ ಪ್ರಯೋ) : P ಇಲ್ಲಿ ಸೂಚಿಸುವ 'ಮಷ್ಕರಿ' ರೂಪವು ಸಂಸ್ಕೃತಕೋಶಗಳಲ್ಲಿಲ್ಲ; ಬಾತ ಕೆಕ್ಕೆಯ ಬಲುಮಕ್ಕರಿಹೊಟ್ಟೆಯ . . . ನಳ್ಳಿಮೂಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ಪೇಖುಸಂ. ೬-೦೦೬); ತಡಿಕೆ ಮಕ್ಕರಿ ಸಹ ಬಹ ಕಾಮಾಟದ ಬಿಡು ಮಂದಿಗೆ ಲೆಕ್ಕವಿಲ್ಲ (ಕಂವಿ. ೦೦-೪೦); ಅವಳು ಒಗೆದು ಹಿಂಡಿದ ಬಟ್ಟೆಗಳನ್ನು ಮಕ್ಕರಿಯಲ್ಲಿಟ್ಟುಕೊಂಡು ಬಾವಿಯಿಂದ ಹೊರಕ್ಕೆ ಬಂದಳು (ತವ್ವಕ. X, ೬೬). **ಮಂಕಣಿ** : ೧. ಸಗಣಿ ಮಂಕಣಿಯನು ತೆಗದು ಕೊಂಡ್ಹೋಗಿ ಸಾರಿಸಿ ಕಣಪೂಣಗಿದಾ ಬಳಿಕ ರಾಗಿಯ ಹುಲ್ಲ ಹರವುತಿರು (ಅತ್ತೆಬ. ೩೦-೩೦). ೨. ಎತ್ತು, ಕತ್ತೆ ಮೊದಲಾದ ಪ್ರಾಣಿಗಳು ಸಾಮಾನುಗಳನ್ನು ಹೊರಲು ಅನುಕೂಲವಾಗುವಂತೆ ಬೆನ್ನಿನ ಎರಡು ಕಡೆಗೂ ಬರುವ ಹಾಗೆ ಬಿದಿರು, ಮರ ಮೊದಲಾದುವುಗಳಿಂದ ಮಾಡಿದ ಕುಕ್ಕೆಯಂತಹ ಸಾಧನ : ಮಂಕಣಿಹೊರುವಾ ಕೋಣನ ಮುಂದೆ ಮಹಾವೀಣೆಯನ್ನು ಹಿಡಿದು. . . ಬಾರಿಸೆ ತಿಳಿವುದೆ (ಶದಾವ. ೯೬-೩). ೩. ಜಲಾಶಯದಿಂದ ಕಾಲುವೆಗೆ ನೀರನ್ನು ಎತ್ತಿಹಾಕಲು ಉಪಯೋಗಿಸುವ ಬಿದಿರಿನ ಸಾಧನ : (ಕ್ಯಾಂಡರ್). **ಮಂಕರಿ** : ೧. ಮರಿಗಳಿಗನುಕೂಲವಾಗಿ ಚನ್ನಕ್ಕನು ಒಂದು ಮಂಕರಿಯಲ್ಲಿ ನೆಲ್ಲುಹುಲ್ಲನ್ನೂ ಬಟ್ಟೆಯ ಚಿಂದಿಯನ್ನೂ ಹಾಕಿ ಅಟ್ಟದ ಮೇಲಿಟ್ಟಿದ್ದಳು (ಕಂಕಥ. ೬೩); ಒಂದು ಸೇದುವ ಹಗ್ಗ ಮತ್ತು ಒಂದು ಮಂಕರಿ ಬೇಕು (ಕಳಹು. ೬೩). **ಮಂಕ್ರಿ** : ೧. ಮುತ್ತಿನ ಗುದ್ಲಲ್ಲಿ ಅಗೆಸ್ಯಾರು ಅರಸಣವ ಬೆಳ್ಳಿ ಮಂಕ್ರೀಗೇ ಬಯರ್ಸ್ಯಾರು (ಹುಟ್ಟಿಹ. ೦೬೩): ಗೌಡನ ಹೆಂಡತಿ ಕಡುಚೆಲ್ವೆ ಯಾದರೆ ಕಸದ ಮಂಕ್ರಿ ಹೊತ್ತು ತಂದಾಗ ಕಂಡೀತು (ಗಾದೆ).

[ < ಸಂ. ಮಸ್ಕರ./ತುಳು. ಮಕ್ಕರಿ; ತೆಲು. ಮಂಕೆನ; ತೊದ. ಮೊಕರಿ./ಮರಾ. ಮಾಂಕಣ ]

**ಮಕ್ಕರಿ₂** (ನಾ). ಸಂನ್ಯಾಸಿ ; ಯತಿ : (*). [<ಸಂ. ಮಸ್ಕರಿನ್]

**ಮಕ್ಕಳ್** 'ಮಗು' ಪರಾ.

**ಮಕ್ಕಳು** 'ಮಗು' ಪರಾ.

**ಮಕ್ಕಾಮಕ್ಕಿ** 'ಮಕ್ಕಿ₂' ಪರಾ.

**ಮಕ್ಕಿ₁**, ಮಕಿ, ಮಕ್ಕೆ, ಮೆಕ್ಕೆ₁ (ನಾ). ಬೆಳೆ ಹುಲುಸಾಗಿ ಬೆಳೆಯದಿರುವ ಎತ್ತರವಾದ ಜಮೀನು ; ಮೇಡುಗದ್ದೆ : ಕೊಸಿಗಗೊಳದ ಕೆಱೆಗೆರಡು ಮತ್ತರ್ಮಕ್ಕಿಯೊಳೆರಡುಮತ್ತರ್ (ಎಕ. VIII, ಸೊರಬ. ೬೦-೦೩; 938); ಮನೆಯ ಬಾಗಿಲ ಗದ್ದೆ ಮಕ್ಕಿ ಸಹ ಬಿತ್ತುವದು ಮುಡಿ ೬ ಅಂತು ಬಯಲು ಮಕ್ಕಿ ಸಹ ಬಿತ್ತುವದು ಮುಡಿ ೧೮ (ಸೌಇಇ. IX-ii, ೪೪೯-೦೩; 1444); ಗದ್ದೇಭೂಮಿಯಲ್ಲಿ ಮಕ್ಕಿ, ಬೈಲು, ಕಾರು ಎಂದು ಮೂರು ವಿಧವು (ಮುಂಬಗ್ಯಾ. ೩-೨೦೨). **ಮಕಿ** : ಆ ಭೂಮಿಯ ಮೇಲಣ ಮಕಿ ಬೀಜವರಿ ಸ ೫ ಉಭಯು ಕಾರಗದೆ ಮಕಿ ಸಹ ಬೀಜವರಿ ಸ ೧೦ (ಎಕ. VI, ಕೊಪ್ಪ. ೪೩-೨೨; 1547). 'ತಲೆಮಕ್ಕಿ' ಪರಾ. **ಮಕ್ಕೆ** : ಗದ್ದೆಯ ಮೇಲಣ ತೋಟ ಮನೆ ಮಕ್ಕೆ ಆರವೆ ಸಹಿತವಾಗಿ (ಎಇ. XXVII, ೦೬೦-೪೨; 1256); ಗದ್ದೆ ಅಲ್ಲಿ ಪಡುವ ಮಕ್ಕೆಯೆಲ್ಲಊ ಕಂನುವಕಟ್ಟೆಯ ಬಡಗಣಉ ಎರಡುಗದ್ದೆ (ಸೌಇಇ. IX-ii, ೪೦೩-೦೩; 1372). **ಮೆಕ್ಕೆ₁** : ಮಕ್ಕಿ ಮೂಡೆ ೩೦ ಮೆಕ್ಕೆ ಮೂಡೆ ೧೦ ಬಯಲು ಮೂಡೆ ೪೦ ಅಂತು ಬಾಳು ನಾಗಂಡುಗದಲು ಬಿತ್ತುವ ಮೂಡೆ ೮೦ (ಸೌಇಇ. IX-ii, ೪೦೬-೦೩; 1377); ಯಿಂತೀ ಚತುಃಸೀಮೆಯಿಂದೊಳಗುಳ್ಳ ಮನೆ ಬಾವಿ . . . ಮಕ್ಕಿ ಮೆಕ್ಕೆ ಬಯಲು (ಸೌಇಇ. IX-ii, ೪೨೩-೦೬; 1400); ಬೀಡಿನ ಟಗೆ ಮಯ್ಯನ ಬೆಟ್ಟು ಮೆಕ್ಕೆ ಮು ೨ (ಸೌಇಇ. ೦೯೩೦, ಕುಂದಾಪುರ. ೩೬೨-೦೪; 1499).

[ದೇ.॥ ತಮಿ. ಮಕ್ಕಿ = ಸುಣ್ಣಕಲ್ಲು ಸೇರಿರುವ ಭೂಮಿ ; ತುಳು. ಮಕ್ಕಿ = ಉಳುಮೆಕ]

**ಮಕ್ಕಿ₂**, ಮಚ್ಚಿ, ಮಚ್ಚು₇ (ನಾ). ನೊಣ ; ಮಕ್ಷಿಕ. **ಮಚ್ಚಿ** : " ಮಚ್ಚಿ = ನೊಳಂ, ನೊಣಂ " (ಶಮದ ಶಂ. ೨). **ಮಚ್ಚು₇** : " ನೊಳವು ಮಚ್ಚೆಂದಕ್ಕು" (ಶಬ್ದಕ. ೮೪) : ದ್ವಿತ್ವದ ಚಕಾರಕ್ಕೆ . . . ಮಕ್ಷಿ – ಮಚ್ಚು (ಶಮದ. ೨೬೨ ಪ್ರಯೋ).

**ಮಕ್ಕಿಕಾಮಕ್ಕಿ**, **ಮಕ್ಕಾಮಕ್ಕಿ** = ಒಂದು ಕೃತಿಯನ್ನು ಇರುವಂತೆಯೇ ನಕಲುಮಾಡುವುದು,—ಯಥಾವತ್ತಾಗಿ ಪ್ರತಿ ಮಾಡುವುದು ; P ಜನಜನಿತವಾಗಿರುವ ಒಂದು ಕಥೆಯ ಪ್ರಕಾರ ಒಬ್ಬ ಸುಲ್ತಾನನು ಪ್ರತಿಕಾರನೊಬ್ಬನಿಗೆ ಕುರಾನನ್ನು ಯಥಾವತ್ತಾಗಿ ಪ್ರತಿಮಾಡಲು ಆಜ್ಞೆಮಾಡಿದಾಗ, ಪುಟದ ಮಧ್ಯೆ ಸಿಕ್ಕು ಸತ್ತ

ನೊಣವಿದ್ದುದನ್ನೂ ಬಿಡದೆ ನೊಣದ ಚಿತ್ರವನ್ನು ಬರೆದನು. ಈ ಕಥೆಯನ್ನು ಅನುಸರಿಸಿ ಪ್ರಚಲಿತವಾಗಿರುವ ನುಡಿಗಟ್ಟು ಇದು : ಅವನು ಬರೆಯುವುದೆಲ್ಲ ಮಕ್ಕಿಕಾಮಕ್ಕಿ (ಕೂಕಿ); ಇಲ್ಲಿ ಕಾಣುವುದು ಕುಮಾರವ್ಯಾಸನ ಭಾವಗಳ ಇಲ್ಲವೆ ಶೈಲಿಯ 'ಮಕ್ಕಾ ಮಕ್ಕಿ' ತೆರದ ಶುಷ್ಕಾನುಕರಣವಲ್ಲ (ಕನಾತ. ೩೩೦); ಅಲ್ಲಿಯ ಕಥೆಯನ್ನೇ ಇಲ್ಲಿ ಮಕ್ಕಾಮಕ್ಕಿಯಾಗಿ ಅನುವರ್ತಿಸಿಲ್ಲ (ಹರಿಶ್ಚ. ೬ ಮುನ್ನು.೨).

[<ಪ್ರಾ. ಮಕ್ಖಿ. / ಸಂ. ಮಕ್ಷಿ./ಹಿಂ. ಮಕ್ಖೀ]

**ಮಕ್ಕಿಕಾಮಕ್ಕಿ** 'ಮಕ್ಕಿ$_2$' ಪರಾ.

**ಮಕ್ಕಿಗದ್ದೆ** (ನಾ). = ಮಕ್ಕಿ$_1$ : ಮಕ್ಕಳ ಕೆಲಸ ತಿಳಿಯದು. ಮಕ್ಕಿಗದ್ದೇ ಬೆಳೆ ತಿಳಿಯದು (ಗಾದೆ). [ಮಕ್ಕಿ$_1$ + ಗದ್ದೆ (<ಗಟ್ಟಿ)]

**ಮಕ್ಕಿಭೂಮಿ** (ನಾ). ಎತ್ತರವಾದ ಪ್ರದೇಶ ; ಮೇಡು : ಮಕ್ಕಿ ಭೂಮಿಯು –ಇದು ಎತ್ತರವಾದದ್ದು. ಇದರೊಳಗೆ ವರ್ಷದಲ್ಲಿ ಒಂದು ಬೆಳೆ ಮಾತ್ರ ಬರುವುದು (ಮುಂಬಯಿ. ೩-೨೦೨) ; ಕಾಗೇರಿತೋಡಿನ ಉತ್ತರಕ್ಕಿರುವುದು ಮಾರ್ಕೋಡು ಮಕ್ಕಿಭೂಮಿ (ದೇವಹೊ. ೩೩).

[ಮಕ್ಕಿ$_1$ + ಭೂಮಿ]

**ಮಕ್ಕು** (ನಾ). ದೀಪವು ಉರಿಯುವಾಗ ಅಥವಾ ಉರಿದಾದ ಮೇಲೆ ಬತ್ತಿಯ ತುದಿಯಲ್ಲಿ ಕಟ್ಟಿಕೊಳ್ಳುವ ಕಿಟ್ಟ,– ಕಾಡಿಗೆ : ಮುದುಕಿ ಅದೇ ಕಡ್ಡಿಯಿಂದ ದೀಪದ ಮಕ್ಕು ಹೊಡೆದು ಬತ್ತಿಯನ್ನು ಸ್ವಲ್ಪ ಚಾಚಲು . . . ಉರಿಯತೊಡಗಿತು (ಶ್ರಜಸ. ೭೭) ; ಕೋಣೆಯಲ್ಲಿಯ ಚಿಮಣಿಯ ಮಕ್ಕಿನಿಂದ ಹೊಗೆಯು ಯಮನ ಪಾಶದಂತೆ ಸುಳಿಸುಳಿಯಾಗಿ ಮೇಲೆದ್ದಿತ್ತು (ಕಾಗಳ. ೬೦). 'ಅಂಟುಮಕ್ಕು' ಪರಾ.

**ಮಕ್ಕುಹಿಡಿ** (ಕ್ರಿ). ಕಿಟ್ಟವುಂಟಾಗು ; ಕಾಡಿಗೆಗಟ್ಟು : ದೀಪಕ್ಕೆ ಮಕ್ಕುಹಿಡಿಯದ ಹಾಗೆ ನೋಡಿಕೊಂಡು ಸದಾ ಅದಕ್ಕೆ ತೈಲ ಒದಗಿಸುತ್ತ ಇರಲು ನೀಲಕಂಠನೇ ತಕ್ಕ ಪ್ರಹಾರಿ ಅಲ್ಲವೇ ? (ಇಶ್ರ್ವ. ೪೨೦) ; ಹೊತ್ತಿದ ಬತ್ತಿಗೆ ಮಕ್ಕುಹಿಡಿದಂತೆ ಆಗಿ ಕಾಂತಿ ಕಂದಿಹೋಗಿದೆ (ಹುಚ್ಚಾಟ. ೦೯). [ಮಕ್ಕು + ಹಿಡಿ$_1$ (<ಪಿಡಿ$_1$)]

**ಮಕ್ಕೆ** 'ಮಕ್ಕಿ$_1$' ನೋ.

**ಮಕ್ತೆ**, **ಮಖ್ತೆ** (ನಾ). ಗುತ್ತಿಗೆ : ಕಂಪೆನಿಯ ವ್ಯಾಪಾರದ ಮಕ್ತೆಯು ಸ್ಥಿರಗೊಳಿಸಲ್ಪಟ್ಟಿತು (ಹಿಂದುಇ. ೨೬೪) ; ಇವಳಿಗೆ ಬೇಕಾದವರು ನಮ್ಮ ಮನೆಗೆ ಬಂದರೆ ಮಾತಾಡುವ ಮಕ್ತೆ ಅವಳಿಗೆ (ಕ್ಷಿತಿ. ೩೩). **ಮಖ್ತೆ** : ಈಗ ಚೀನು, ಅಳ್ಳೀಕಾಯಿಗಳ ಮಖ್ತೆಯಾಗುತ್ತದೆ (ಶಳವ. ೩೦).

[←ಅರ. ಮಕ್ತಅ : ಹಿಂ. ಮರಾ. ಮಕ್ತಾ, ಮಖ್ತಾ]

**ಮಕ್ತೆದಾರ**, **ಮಕ್ತೇದಾರ** (ನಾ). ಗುತ್ತಿಗೆದಾರ : ಕೆಲವರು ವಕೀಲರೂ ವ್ಯಾಪಾರಸ್ಥರೂ ಮಕ್ತೆದಾರರೂ . . . ಕೆಲವರು ಸಾವಕಾರರು ಇರುತ್ತಾರೆ (ಕಹಾಗ. ೮೦) ; ಮಕ್ತೆದಾರನೂ ಹೆಚ್ಚು ಮಾತನಾಡಿಸಲಿಲ್ಲ (ಬಟ್ಟಹೊ. ೩೯). **ಮಕ್ತೇದಾರ** : ಇದಕ್ಕೆಲ್ಲ ಸಂಸ್ಕೃತಿಯ ಕ್ಷೇತ್ರದಲ್ಲಿ ಮಕ್ತೇದಾರರಾದ ಧರ್ಮಗುರುಗಳೂ ಸಾಮಾಜಿಕಕ್ಷೇತ್ರದಲ್ಲಿ ಮಕ್ತೇದಾರರಾದ ರಾಜರೂ ವಿರೋಧಿಸುವರು (ಮಾವಾರ. ೬೩). [←ಮರಾ. ಮಕ್ತೇದಾರ್]

**ಮಕ್ತೆಹಣ** (ನಾ). ಗುತ್ತಿಗೆ ಹಣ ; ಕರಾರುಹಣ : ಎಂಟು ಪಡದೆಗಳಿಗೆ ಕೂಡಿ ಒಟ್ಟು ಮಕ್ತೆಹಣ ಎಷ್ಟಾದೀತು (ಗಂಮೂದು. ೨೦೭).

[ಮಕ್ತೆ + ಹಣ (<ಪಣವು$_1$)]

**ಮಕ್ತೇದಾರ** 'ಮಕ್ತೆದಾರ' ನೋ.

**ಮಕ್ಷಿ** (ನಾ). ನೊಣ : ವ್ಯತ್ಯದ ಚಕಾರಕ್ಕೆ . . . ಮಕ್ಷಿ—ಮಚ್ಚು (ಶಮದ. ೨೬೨ ಪ್ರಯೋ) ; ಕಾಮಾಕ್ಷಿ ಏಕೆ ಮರುಳು ? ನಿನ್ನುದರದಿ ನಿಲ್ಲದು ಜೀರ್ಣವಾಗದಲೆ, ಈ ಮಕ್ಷಿ (ಪಪರಾ. v. ೩೩). [ಸಂ.]

**ಮಕ್ಷಿಕ** (ನಾ). ೧. ನೊಣ : ಮೊರೆದೆಚಿಪ ಮಶಕ ಮಕ್ಷಿಕಮಂ ಸೋವುತ್ತು ಮನವರತಮೋಲಗಿಸುತ್ತಿರ್ಪುದು ಭೂತಕೋಟಿ ದನಂಜನ ಗದೆಯಂ (ಜಗಬ. ೯-೩೯) ; ಅರಸ ಕೇಳೈ ನಿಮ್ಮ ಭೀಮನ ಪರಿಯನೀ ಸರ್ವಾಸ್ತ್ರಘಾತ ಸ್ಫುರಣಮದಕರಿ ಮಕ್ಷಿಕಾಸಂಘಾತದಂದದಲಿ ಕೆರಳಿ ಕವಿದನು (ಕುವ್ಯಾಕ. ೦೩-೨೦). ೨. ಜೇನುನೊಣ : "ಮಕ್ಷಿಕಂ ಜೇನ ನೊಣನಕ್ಕು" (ಮಂಗರಾ. ೫೨-೯). [ಸಂ.]

**ಮಕ್ಷಿಕೆ** (ನಾ). ೧. = ಮಕ್ಷಿಕ ೧ : ದಂಶಮಶಕಮಕ್ಷಿಕಾಭ್ರಮರಪತಂಗಾದಿ ಚತುರಿಂದ್ರಿಯಂಗಳ್ ಸ್ಪರ್ಶನರಸನಘ್ರಾಣಚಕ್ಷುರಿಂದ್ರಿಯಪರಿಚ್ಛಿತ್ತ್ಯುಪೇತಂಗಳಪ್ಪುವು (ತತ್ತ್ವಸೂ. ೯೮). ೨. =ಮಕ್ಷಿಕ ೨ : ಮಧುರಾಣಿ ಸಂಭ್ರಮದಿ ಮಕ್ಷಿಕಾಮಾಲೆ (ಅರಳು. ೪೨೩-೩). [ಸಂ. ಮಕ್ಷಿಕಾ]

**ಮಕ್ಷುರಕ** (ನಾ). = ಮಕ್ಷಿಕ ೧ : ಪರಿಮಳವನಳಿ ಓರ್ವನೊಲು ಮಕ್ಷುರಕ ಬಲ್ಲುದೆ (ಜೈಮಿತ. ೦-೨೬). [<ಸಂ. ಮತ್ಸರಕ]

**ಮಖ** (ನಾ). ಯಜ್ಞ ; ಯಾಗ : "ಯಾಗಃ . . . ಮಖಃ . . . ಸತ್ರಂ-ಈ ೧೨ ಯಾಗಂ" (ಹಲಾಯು. ೬೮-೨೬೦) : ಆ ಮಖದ ಮಾಹಾತ್ಮ್ಯಮಂ ಪೇಟ್ಟೊಡೆ (ಶಂಪಛಾ. ೬-೦೭ ಪ) ; ನಡೆತಂದನಪ್ರತಿಮನದಟನುರವಣೆಯಿಂದೆ ಸಮೆದ ಮಖಮಂ ಸುಡುವ ವೀರಭದ್ರನ ತೆಜದೆ (ಇಹರ. ದೇ. ೪೦-೨೦) ; ಸತ್ಯ ಶಿವ ಸೌಂದರ್ಯ ಮಖಕೆ ಕವಿಯ ಯಾಜನ (ಅಶಿಕ. ೨೦-೦೬).

ಮಖದಯ್ಯ=ಯಜ್ಞದ ಅಧಿಪತಿ; ದೇವತೆ : ಈ ಜ್ಞಾತಿಬಾಂಧವರ ಕೈಯಲರಿಗಳ ಹೊಯ್ದು ಶಿರನರಿದುಯ್ಯಲಾಡಿದವರ್ಗೆ ಮೇಣ್ ಮಖದಯ್ಯಗಳಿಗಾನೊಬ್ಬಳು (ಕುವ್ಯಾಶ. ೬-೨೬). ಮಖದೂಟ = ಯಜ್ಞದಲ್ಲಿ (ದೇವತೆಗಳಿಗೆ) ನೀಡುವ ಆಹಾರ; ಹವಿಸ್ಸು : ಸೊರ್ಕಿದ ದೈತ್ಯರಂ . . . ಮಖದೂಟಕೊಳಲ್ದು ಬಂದ ದೇವರ್ಕಳನಿಕ್ಕಿದಂ (ವೃಷವಿ. ೦೦-೮).

[ಸಂ.]

**ಮಖಜೆ** (ನಾ). ಯಜ್ಞದಿಂದ ಹುಟ್ಟಿದವಳು ; ದ್ರೌಪದಿ : ಮೃಡ ತಾಂ ಭಿಕ್ಷವ ಬೇಡನೇ ಮಖಜೆ ತಾಂ ತೊಟ್ಟಾಗಳೇ (ಸೋಮೇಶ. ೩೨).

[ ಸಂ. ಮಖಜಾ ]

**ಮಖತುರಗ** (ನಾ). ಯಜ್ಞದ ಕುದುರೆ ; ಯಾಗಾಶ್ವ : ಆವ ಮಖತುರಗಕ್ಕೆ ಬೆಂಬಲ್ವೋಪೆಯಾ ರಾಮನೊಲ್ಮೆ ನಿನಗೆ ರಕ್ಷೆಯಿರ್ಕೆ (ರಾಮಾಶ್ವ. ೪೯-೦೩). [ಸಂ.]

**ಮಖಧ್ವಂಸಿ** (ನಾ). ೧. (ದಕ್ಷನ) ಯಾಗವನ್ನು ನಾಶಪಡಿಸಿದವನು ; ಈಶ್ವರ : ಅಂಜದಿರಂಜದಿರು ವರವೇಷಬಾಹಿರವಲ್ಲ ಸತಿಯರೊಳಾದಿ ಪಾತಿವ್ರತ್ಯ ನಿನಗೆಂದನು ಮಖಧ್ವಂಸಿ (ಕುವ್ಯಾಶ. ೦೬-೩೦). ೨. ವೀರಭದ್ರ.

[ಸಂ. ಮಖಧ್ವಂಸಿನ್]

**ಮಖಪುರುಷ** (ನಾ). ಯಜ್ಞದ ದೇವತೆ; ಯಜ್ಞಪುರುಷ; ವಿಷ್ಣು : "ಹರಿ ಶೌರಿ. . . ಮಖಪುರುಷಂ ಜನಾರ್ದನಂ . . . ಗೋವಿಂದನಕ್ಕುಂ" (ಮಂಗರಾ. ೬-೦೭); ಮಖಪುರುಷನಿರ್ದ ದೆಸೆಗಭಿಮುಖನಾದೊಡೆ ಪೋಯ್ತುಘಂ (ಜಗಬ. ೩-೬೭). [ಸಂ.]

**ಮಖಮಲ್ಲು**, **ಮಕಮಲ್ಲು** (ನಾ). ಸೂಕ್ಷ್ಮನೆಯ್ಗೆಯ, ನಯವಾದ ಹೊರಮೈಯುಳ್ಳ ಒಂದು ಬಗೆಯ ರೇಷ್ಮೆಯ ದಪ್ಪಬಟ್ಟೆ ; ವೆಲ್ವೆಟ್ಟು : ಆಕೆಯ ಮೈಚರ್ಮ ಮಖಮಲ್ಲಿನ ಹಾಗೆ ಮೃದುತ್ವ ಪೊಂದಲು ಆ ಸಾಬೂನಿನ ವಿಪುಲ ನೊರೆಯೇ ಕಾರಣ (ಪಾರಿಗೇ. ೨೮೩); ಮಖಮಲ್ಲಿನಂಥ ಗುಂಜುಗಳುಳ್ಳ ಹತ್ತಿಯ ಬಟ್ಟೆ: (ರೇಷ್ಮೆ ಮತ್ತು ಹತ್ತಿಬೆರಕೆಯ) ಒಂದು ಬಗೆಯ ಮಿಶ್ರ ಮಖಮಲ್ಲು (velvet. ೩೦೪೩). **ಮಕಮಲ್ಲು** : ತಮ್ಮ ಕೋಣೆಯೊಳಗೆ ಹೋಗಿ ಕೆಂಪುಮಕಮಲ್ಲುಬಟ್ಟೆಯ ಉಡುಪುಗಳನ್ನು ಧರಿಸಿಕೊಂಡು ಬಂದರು (ಶ್ರವಾಶ. II. ೦೦).

[← ಪಾರ. ಮಖ್ಮಲ್; ಹಿಂ. ಮಖಮಲ್; ಮರಾ. ಮಖ್ಮಲ್, ಮಖಮಾಲ್, ಮಖ್ಮಲ್]

**ಮುಖಶಾಲೆ** (ನಾ). ಯಜ್ಞವನ್ನು ಮಾಡುವ ಸ್ಥಳ; ಯಾಗಮಂಟಪ : ಮಯನ ಮತದಲಿ ವಿಶ್ವಕರ್ಮನ ನಯವಿವೇಕದಲಮಲಮುಖಶಾಲೆಯನು ನಿರ್ಮಿಸಿದರು ಸುಲಕ್ಷಣಶಾಸ್ತ್ರಸೂತ್ರದಲಿ (ಕುವ್ಯಾಸ. ೬-೨೪) ; ಬಹು ಸಾಧನಂಗಳಿಂ ಭೂರಿಸಂಭಾರಸಂಗ್ರಹದಿಂದೆ ಬೇಕಾದ ವಸ್ತುಸಂಜಾತದಿಂ ಮುಖಶಾಲೆ ಕಣ್ಗೆಸೆದುದು (ಜೈಮಿಭಾ. ೩೩-೩೮) ; ಮುಖಶಾಲೆಯುಂ ರಚಿಸಿ ಯಜ್ಞಕುಂಡಂಗೈದು (ಶ್ರೀರಾಮಪು. ೦೦-೨೫೪). [ಸಂ. ಮುಖಶಾಲಾ]

**ಮುಖಶಿಖಿ** (ನಾ). ಯಜ್ಞಕುಂಡದಿಂದ ಏಳುವ ಬೆಂಕಿ ; ಯಾಗಜ್ವಾಲೆ: ಮುಖಶಿಖಿ ಮುಖಸಂಭವ ಲೋಹಮುಖರಂಗಳವೆನಿಪ ಪಟ್ಟಸಾಹಣದ ಹಯಂ ಮುಖಲೀನ ಖಲೀನೋತ್ಥಾನಖಣತ್ಕೃತಮೊದವೆ ನಿಂದುವಂದರಮನೆಯೊಳ್ (ಪುಲ್ಗಶೆ. ೯-೫). [ಸಂ. ಮುಖಶಿಖಿನ್]

**ಮುಖಾಡೆ** 'ಪೊಗ' ಪರಾ.

**ಮುಖಾರಿ** (ನಾ). = ಮುಖಧ್ವಂಸಿ ೧ : ಮುಖಾರಿಯುಸ್ಥಿರಪರದೈವದೊಳ್ ತೊಡರರದಿಂತು ಬರ್ದುಂಕಿದೆನ್ನೆ ಮಹೇಶ (ಶಂಖಾಶ. ೨೩). [ಸಂ.]

**ಮುಖಾಳ** ' ಮುಕಾಳ ' ನೋ.

**ಮುಖಿ** 'ಮುಗ್ಗೆ' ನೋ.

**ಮುಖೇಡಿ** ' ಮುಖಹೇಡಿ ' ನೋ.

**ಮುಖೇಡಿತನ** ' ಮುಖಹೇಡಿತನ ' ನೋ.

**ಮುಖ್ತೆ** ' ಮುಕ್ತೆ ' ನೋ.

**ಮಗ** (ನಾ). ೧. ಗಂಡ ಹೆಂಡತಿಯರ ಅಥವಾ ಗಂಡು ಹೆಣ್ಣಿನ ಪರಸ್ಪರ ಲೈಂಗಿಕಸಂಬಂಧದಿಂದ ಜನಿಸಿದ ಗಂಡುಸಂತಾನ ; ಪುತ್ರ ; ತನುಜ : ಶಾಸ್ತ್ರಪನ ಮಗ ದೇಪರೆಜೆಯ (ಎಕ. VIII. ಸೊರಬ. ೫೬೦-೨೮; 672); ಈ ಪೊಲಲ ಪ್ರಧಾನನಪ್ಪ ಶ್ರೇಷ್ಠಿ ಇಂದ್ರದತ್ತನೆಂಬೊಂ ಪದಿನಾಱುಂ ಕೋಟಿ ಕಸವರಮನೊಡೆಯನಾತನ ಮಗನೀತಂ (ವಡ್ಡಾರಾ. ೦೪-೪) : ಕೊಂದೆನ್ನ ಮಗನನಿಂ ಘಯದಿಂದಂ ರಸೆವೊಕ್ಕುಮಜನ ಗುಂಡಿಗೆ ಪೊಕ್ಕುಂ . . . ವೇಣಿವಂ ಬರ್ದುಕುವನೇ (ಶಂಖಶಾ. ೦೨-೦೨೦); ಸೂಳೆಯ ಮಗ ಮಾಳವ ಮಾಡಿದರೆ ತಾಯ ಹೆಸರಾಯಿತ್ತಲ್ಲದೆ ತಂದೆಯ ಹೆಸರಿಲ್ಲಾ (ಬಸವ. ೨೨೬) ; ವೇದಪುರುಷನ ಸುತನ ಸುತನ ಸಹೋದರನ ಹೆಮ್ಮಗನ ಮಗನ ತಳೋದರಿಯ . . . ಜಠರದಲಿ ಜನಿಸಿದನಾಗಿಮೂರುತಿ ಸಲಹೊ ಗದುಗಿನ ವೀರನಾರಯಣ (ಕುವ್ಯಾಆ. ೦-೨೩). ೨. ಹಿರಿಯರು ಕಿರಿಯ ಗಂಡುಮಕ್ಕಳನ್ನು ಕುರಿತು ಪ್ರೀತಿ , ವಿಶ್ವಾಸದಿಂದ ಮಾತನಾಡುವಾಗ ಬಳಸುವ ಶಬ್ದ : ಭಟ್ಟಾರಾ ಎನಗೆ ದೀಕ್ಷೆಯಂ ದಯೆಗೆಯ್ಯಿಮೆನೆ ಭಟಾರರೆಂದರೆಮಗಂತು ದೀಕ್ಷೆಯಂ ಕುಡಲಾಗಾ ಮಗನೆ (ವಡ್ಡಾರಾ. ೬೪-೦೩); ಭೀಮನಂದನನಸಾ ಪದದೊಳ್ ಯಮರಾಜನಂದನಂ ಕರೆದು ಮಗನೆ ನೀನಿಂದಿನಿರುಳಿನನುವರಮನೆನಗೆ ಗೆಲ್ದೀಯಲ್ವೇಚ್ಬುಮೆಂದೊಡೆ (ಶಂಖಶಾ. ೦೨-೬ ವ). ' ದತ್ತುಮಗ ', ' ಸಾಕುಮಗ ' ಪರಾ.

**ಮಗಂದಿರ್, ಮಗಂದಿರು** = ೧. ಗಂಡುಮಕ್ಕಳು : ಸಾಗರಸೇನೆಗಂ ಸಾಗರದತ್ತನುಂ ಸಮುದ್ರದತ್ತನುಮೆಂಬ ಮಗಂದಿರುಂ ಸಾಗರದತ್ತೆಯೆಂಬ ಮಗಳುಮಾದರ್ (ಚಾವುಂಪು. ೬೯); ಚಾವುಂಡನು ಕಳಚುರ್ಯ ಬಿಜ್ಜಳನ ಮಗಳಾದ ಸಿರಿಯಾದೇವಿಯನ್ನು ಮದುವೆಯಾಗಿ ಅವಳಲ್ಲಿ . . . ಇಬ್ಬರು ಮಗಂದಿರನ್ನು ಪಡೆದಿದ್ದನು (ಮೂರುಲು. ೬೪). ೨. ' ಮಗ ' ಎಂಬುದಕ್ಕೆ ಗೌರವಾರ್ಥವಾಗಿ ಬಳಸುವ ಬಹುವಚನ ರೂಪ : ಲೋಕಾದಿತ್ಯ ಎಳಅರಸಮ್ಮ ಗನ್ದಿ ಮ್ಮ ಲ್ಲಡಿಯುವರ್ ಕದಮ್ಬೂರಾ ನಾಲ್ವದಿನ್ಬರು . . . ಮುನಿಗಿತ್ತು (ಎಕ. X. ಕೋಲಾರ. ೬-೫; 760); ಮಹಾರಾಜರಾ ಮಗನ್ದಿರ್ ರಣಾವಳೋಕ ಶ್ರೀಕಮ್ಬಯ್ಯನ್ ಪೃಥುವೀರಾಜ್ಯಂಗೆಯೆ (ಎಕ. II. ೩೫-೩; 800). [ದೇ.॥ ತಮಿ. ಮಲ. ಮಕನ್; ತುಳು. ಮಗ, ಮಗೆ; ತೆಲು. ಮಗ, ಮೊಗ; ಪಾಲ್ತೊ. ಮಕ್]

**ಮಗಉಕೋಲ್** (ನಾ). ಭೂಮಿಯನ್ನು ಅಳೆಯುವ ಒಂದು ಬಗೆಯ ಅಳತೆಯ ಕೋಲು (?) : ಮಗಉಕೋಲಲು ಬಳಂಬುಗೆ ಯಿಮ್ಮತ್ತರು ನೆಲನೂ (ಎಇ. IV. ೫-೦೮; 11ನೆಯ ಶತ?). [ ? + ಕೋಲ್$_1$ ]

**ಮಗಂಬಡೆ** (ಕ್ರಿ). ಮಗನನ್ನು ಪಡೆ; ಪುತ್ರನನ್ನು ಹೊಂದು : ನೀನೆಮ್ಮಂ ಮಿಱಿದೆ ರಾಜ್ಯಾನುಷ್ಠಾನದೊಳೊಡಂಬಡೀಗಳ್ ನಿಜಸಂತಾನಕ್ಕೆ ಮಗಂಬಡೆಯೆ ತಪೋನಿಯಮಂ ಮಗನೆ ಕಡೆಯೋಳಿರ್ದಪುದಲ್ತೇ (ಆದಿಪು. ೪-೮೦); ಗಂಗಾನದಿಯೊಳು ಮಿಂದು ಲತಾಂಗಿ ಮಗಂಬಡೆದಳಪ್ಪ ಕಾರಣದಿಂದಂ (ಎಕ. VII. ಶಿವಮೊ. ೪-೦೦; 1122). [ಮಗ + ಪಡೆ$_1$]

**ಮಗಗೆಱೆ**[3] (ನಾ). ಒಂದು ಕೆರೆಯ ಹೆಸರು : ಪೂರ್ವಸ್ಯಾಮ್ ದಿಶಿ ಮಗಗೆಱೆ[3] (ಮ್ಯಆರ. ೧೯೨೪. ೮೦-೯೭; 799). [ಮಗ? + ಕೆಱೆ[3]]

**ಮಗಣ** (ನಾ). [ಛಂದ] ಮೂರು ಗುರುಗಳುಳ್ಳ ಒಂದು ಅಕ್ಷರ ಗಣ: (— — —) : ಗುರು ಲಘು ಮೂಱಿರೆ ಮನ ಗಣ . . . ಮಗಣಂ ಭೂಮಿಯೆನಿಕ್ಕುಂ (ಛಂದೋಂಬು. ೦-೩೯ ಅವತ); ಮಗಣ_ಓದಿಂದಂ, ಆನಂದಂ (ಛಬು. ೬೦). [ಸಂ.]

**ಮಗದುಮುಸಕ್ಕರೆ** ' ಮಗದುಮಿಸಕ್ಕರೆ ' ನೋ.

**ಮಗದುಮಿಸಕ್ಕರೆ,** ಮಗದುಮುಸಕ್ಕರೆ, ಮೊಗದುಂಸಕ್ಕರೆ (ನಾ). ನಸುಬಿಳುಪಾಗಿಯೂ ಹಿಟ್ಟಿನಂತೆಯೂ ಇರುವ ಒಂದು ಬಗೆಯ ಸಕ್ಕರೆ : ಕಾರಾ, ಮಗದುಮಿಸಕ್ಕರೆ, ತುಪ್ಪ, ಹಿಟ್ಟಿ, ಯಣ್ಣೆ ಮುಂತಾದ ಕಿರಾಣಿ ಜೀನಸಗಳು (ಮುಂಬಮ್ಯಾ. ೨೮). **ಮಗದುಮುಸಕ್ಕರೆ :** ಆ ಸಕ್ಕರೆಯಲ್ಲಿ ಜವಾರೀಸಕ್ಕರೆಗೆ ಮಗದುಮುಸಕ್ಕರೆ ಎನ್ನುತ್ತಾರೆ (ಕೃಷಿಶಾ. ೦೬೩). **ಮೊಗದುಂಸಕ್ಕರೆ :** "ಕಬ್ಬಿನ ಹಾಲನ್ನು ಕಾಯಿಸಿ, ಇಂಗಿಸಿ, ಕಾಕಂಬಿಯನ್ನು ಹೊರಡಿಸಿ, ತಯಾರಿಸಿದ ಕಚ್ಚಾಸಕ್ಕರೆ ; ಮೊಗದುಂಸಕ್ಕರೆ" (Muscovado. ೩೦೪೩) ; ಅರ್ಧಪಾಕವಾಗಿ ಕಾಯಿಸಿದ ಕಬ್ಬಿನ ಹಾಲಿಗೆ . . . ಮೊಗದುಂಸಕ್ಕರೆಯೆಂತಲೂ ಕೆಲವರು ಹೇಳವರು (ಸಿದ್ಧಾಂತಿ. ೨೮೬). [← ಮರಾ. ಮಗದುಮಿಸಾಖರ್]

**ಮಗಧ** (ನಾ). ೧. ಹೊಗಳುಭಟ್ಟ ; ಸ್ತುತಿಪಾಠಕ : ಕುಲದೇಟ್ಗೆಯಂ ಮಾಗಧರು ಸಾದರಮಾತ್ಮರ್ ನಿಯುಕ್ತವಾರ್ತೆಗಳಂ ನಿವೇದಿಸೆ (ಶ್ರೀರಾಶ. ೫-೫೬). ೨. ಪ್ರಸಿದ್ಧವಾದ ಐವತ್ತಾರುದೇಶಗಳಲ್ಲಿ ಒಂದು ; P ಈಗಿನ ಬಿಹಾರದ ದಕ್ಷಿಣದಲ್ಲಿದ್ದ ಒಂದು ದೇಶ : ಅಂಗ . . . ಮಗಧ . . . ಕರ್ನಾಟಕವೆಂಬೈವತ್ತಾಱುದೇಶಂಗಳಕ್ಕುಂ (ಜಿವೇಶ. ೦೯೫). [ಸಂ.]

**ಮಗಮಗ** (ನಾ). ಸುವಾಸನೆ ; ಪರಿಮಳ : ಹಾಸಿಗಿ ಮಗಮಗ, ಮುಂಚಕ ಝಗಝಗ, ನನ್ನ ಎದಿ ಮಾತ್ರ ಧಗಧಗ ಉರಿದೀತು (ನಾದಲೀ. ೫೪-೯). 'ಮಗಮಗಿಸು' ಪರಾ.

**ಮಗಮಗಿಸು** (ಕ್ರಿ). ಸುವಾಸನೆಯನ್ನು ಬೀರು ; ಕಂಪನ್ನು ಸೂಸು ; ಗಮಗುಟ್ಟು : ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ಬಗೆಯಱಿದು ನೀಡುಗುಂ ಮಾಲೆಗಾಱನಂ ಪೋಲ್ತು ದಗ್ರಮಾಲ್ಯಮಹೀಜಂ (ಆದಿಪು. ೫-೩೬) ; ಮಗಮಗಿಪ ಕರ್ಪೂರ ಕುಂಕುಮದ ಗರುಚಂದನ ಕರ್ದಮ (ಜಾಕ್ಷಾ. ೩-೨೬) ; ಮಣ್ಣು ಮೈಯ ಮಗು ಮೂಡಿದಾಗ ಮಗಮಗಿಸಿತಣ್ಣ ಮುಗಿಲು (ಸಖರ್ಗಾ. ೩೪-೦೫). 'ಗಮಗಮಿಸು' ಪರಾ. [ಮಗಮಗ + —ಇಸು$_3$]

**ಮಗಮೆ** (ನಾ). ೧. (ಹಿಂದೆ ದೇವಾಲಯ, ಛತ್ರ ಮುಂತಾದುವುಗಳ ಖರ್ಚಿಗಾಗಿ ವರ್ತಕರ ಮೇಲೆ ವಿಧಿಸುತ್ತಿದ್ದ) ಒಂದು ಬಗೆಯ ತೆರಿಗೆ : ಹೊವಕೆ ಹೊಂಬಳಿ ಮಗಮೆ ವಟ್ಟ ಕಟ್ಟಿಗೆ ಸಹ . . . ದಾನ ಧಾರಾಪೂರ್ವಕವಾಗಿ ಕೊಟ್ಟ ತಾಮ್ರಶಾಸನ (ಮ್ಯಆರ. ೦೯೩೩. ೨೩-೯೯; 1384) ; ಮಠದ ಧರ್ಮಕ್ಕೆ ಸಾರೋದ್ಧಾರವಾಗಿ ಅನ್ನಧಾನ ನಡದುಬರೂ

ರೀತಿಗೆ ನಾಲು ಮಗಮೆಯು ಉಂಟುಮಾಡಿದ ವಿವರಾ (ಮೈಸೂ. ೧೯೩೩. ೨೬-೦೬; 1751). ೨. ಹಿಂದೆ ಭೂಮಿಯಂ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಮಗಮೆ ಸುಂಕದಿಂದ ಧಾರಾಪೂರಕೆ ವರಹ ವೊಂದಕೆ ಮಗಮೆ ಹಾಗವಲಿ ಕವಲು ಸೂಜುವರಹ ದಣಾಯಕರ ಕೋಟೆಯ ಮಗಮೆ ವರಹವೊಂಧಕೆ ಹಾಗವಲಿ ಕವಲು ಮಗಮೆ ಯಿಪತಐದುವರಹ (ಎಕ. XIV, ಗುಂಡ್ಲುಪೇ. ೧೨೮-೬೨; ಸು. 1410) ; ಅರಮನೆಯಿಂದ ಬಂದ ಹದಿಕೆ ಹೊದಿಕೆ ಮಗಮೆ × × × ಸಿದ್ಧಾಯ ಮನೆವಾರ್ತೆ (ಮೈಸೂ. ೧೯೩೪, ೫೮-೨೩; 1434).

[← ಉರ್ದು. ಮಹ್ಕಮಾ ; ಅರ. ಮಹ್ಕಮಾ = ನ್ಯಾಯಕಚೇರಿ ; ಮರಾ. ಮಹ್ಕಮಾ = ನೌಕರರ ಮಂಡಲಿ. / ತಮಿ. ಮಕಮ್ಮೈ]

**ಮಗರಿ** (ನಾ). ಒಂದು ಬಗೆಯ ಬಟ್ಟೆ : ಮಿಗೆ ಬೆಲೆಯೇಱಿದ ಪೂಲಿಯ ಮಗರಿಯ ದೋರಿಯದ ಪಟಿಯ ತಳಿರ್ವಟ್ಟೆಯ ಕಾಡಿಗೆನೀರಿನ ಬಟ್ಟೆಯ ಮಬೀಗೆಗಳಿಂ ಸೋಲಿಪುವು ಸೀರೆವರದರ ಪಸರಂ (ಶಬ್ದಸಾ. ೩೮) : ಮಗರಿ . . . ಗಜಾವಳಿ ಮಂಡೋದರಿ ಮೆಚ್ಚಿನ ಸೀರೆಯ ಮಳಿಗೆಗಳಂ ಬಳುವಳನೆ ಬಳಸಿದುದನೆ ಮೂಸಿಗರಾಸುರದಿಂದೊಡರಿಸೆ (ಶುಮುರಾ. ೦೫-೩೮). [?]

**ಮಗರಿಗೆ** (ನಾ). ಸ್ತ್ರೀಯರು ಅಲಂಕಾರಕ್ಕಾಗಿ ಕೆನ್ನೆ, ಗಲ್ಲ ಮುಂತಾದೆಡೆಗಳಲ್ಲಿ ಬರೆದುಕೊಳ್ಳುವ ಚಿತ್ರ ; ಮಕರಪತ್ರ : ಕಪೋಲದೊಳ್ ಮಗರಿಗೆಯಂ ಬರೆದು (ರಾಮಾಶ್ವ. ೦೨೪-೫) ; ಸಸಿಗರೆಯೋ ತಿಮಿರವೆಣ್ಣ ಮೊಲೆ ಮಗರಿಗೆಯೋ (ತಂತ್ರಶು. ೦೦-೬೫). [ < ಮಕರಿಕೆ ]

**ಮಗರೂರಿ** (ನಾ). ಉದ್ಧಟತನ ; ಔದ್ಧತ್ಯ : ಈ ಚಿನ್ನವನ್ನು ಮಾತ್ರ ತರಬಾರದಿತ್ತು. ನಮ್ಮಿಂದ ಸ್ವಲ್ಪ ಮಗರೂರಿಯಾಯಿತು. ತಪ್ಪಾಯಿತು (ಶಾರುದಾ. ೧೧೨) ; ತಿರಕನಿಗೆ ಇಷ್ಟು ಸೊಕ್ಕೇ ? ನಾನು ಕರೆಸಿದರೆ ಬರುವುದಿಲ್ಲವೆ ? ಇಷ್ಟು ಮಗರೂರಿಯೇ? (ರಾಜಾರಾ. ೭೭).

[ ← ಅರ. ಮಗರೂರೀ, ಮಘರೂರೀ ; ಹಿಂ. ಮರಾ. ಮಗರೂರೀ ]

**ಮಗವು** ' ಮಗು ' ನೋ.

**ಮಗಳ್**, ಮಗಳು (ನಾ). ೧. ಗಂಡ ಹೆಂಡತಿಯರ ಅಥವಾ ಗಂಡು ಹೆಣ್ಣಿನ ಪರಸ್ಪರ ಲೈಂಗಿಕಸಂಬಂಧದಿಂದ ಜನಿಸಿದ ಹೆಣ್ಣುಸಂತಾನ : ಪುತ್ರಿ ; ಸುತೆ : " ದುಹಿತಾ, ತನಯಾ, ಪುತ್ರೀ – ಈ ೩ ಮಗಳ್ " (ಹಲಾಯು. ೯೩-೩೫೦) ; ಕಾಡಚ್ಚಿಯ ಮಗಳ್ ಕಾಡಬ್ಬೆ (ಎಕ. XI, ದಾವಣ ೧೭-೬; ೯೮೯) ; ಎನ್ನ ಮಗಳಂ ಕುಡೆವೆಮ್ಮ ಮಗಳ್ಗೆ ಪುಟ್ಟಿದಾತಂ ರಾಜ್ಯ ಕ್ಕೊಡೆಯನಂ ಪಿರಿಯ ಮಗನುಂ ಕ್ರಮಕ್ಕರ್ಹನುಮಪ್ಪೊಡೆ ಕುಡುವೆಂ (ಪಂಪಭಾ. ೧-೭೦ ವ) ; ಅನುಜೆಯೆನಿತ್ತು ನರಂಗಾತನ ತನಯಂಗಿತ್ತು ತನ್ನ ಮಗಳಂ (ಗದಾಯು. ೩-೪೨). ೨. ಹಿರಿಯರು ಕಿರಿಯ ಹೆಣ್ಣುಮಕ್ಕಳನ್ನು ಕುರಿತು ಪ್ರೀತಿ, ವಿಶ್ವಾಸದಿಂದ ಮಾತನಾಡುವಾಗ ಬಳಸುವ ಪದ : ಅರಸರೊಳಿಲೆ ನೀಂ ಸರಸಮನರಸಿಯುವೊಲಾಡುತಿರ್ಪೆ ನಿನಗಿದು ಗುಣಮೇ ಅರಸರ್ ಸರಸಮನಱಿವರೆ ಸರಸಮನಾಡರಸರಲ್ಲದವರೊಳ್ ಮಗಳೇ (ಶಬರ. ೩-೨೩೩) ; ಬಗೆಗೆಟ್ಟು ಸಾವ ಬಗೆಯಂ ಮಗಳೆ ಮಹಾಶ್ವೇತೆ ಬಗೆಯದಿರ್ (ಕಾದಂಬ. ೯೪೦) ; ಮಗಳೇ ನಿನ್ನಱಿಯುಮೆಯಿಂ ಬಗೆಯದೆ ನುಡಿದೆಮ್ಮನಿನಿತು ದುಃಖಂಗಳನುಬ್ಬೆಗಪೊದವಲುಂಡೆ (ನೇಮಿಪು. ೦೪-೦೦).

**ಮಗಳು** : ೧. ಮಂಡೋದರಿ ಕಪ್ಪೆಯ ಮಗಳು (ಐಸವ. ೫೯೦) ; ಮೇದಿನಿಯ ಸಲಿಸುವೆನು ನಿನ್ನಯ ಮಗಳ ಮಕ್ಕಳಿಗೆ (ಕುಮಾ.ಆ. ೨-೨೮) ; ಜಗದ ಪಾವನೆ ಭಾಗೀರಥಿ ನಿನ್ನ ಮಗಳಯ್ಯ (ಪುರಂದ. ದಾ. ೩-೯೯-೧) ; ತಾಯಿಯಂತೆ ಮಗಳು, ನೂಲಿನಂತೆ ಸೀರೆ (ಗಾದೆ). ೨. ಮಗಳೆ ಬಾ ಕೇಳ್ ಐದುಮಂತ್ರಾಳಿಗಳನಿವು ಸಿದ್ಧಪ್ರಯೋಗವು (ಕುಮಾ.ರ. ೩-೦೭) ; ಮಗಳೆ. ಪೇಳ್ವೆನಿದೊ ದುರ್ವಾರ್ತೆಯಂ (ಶ್ರೀರಾಮಾ. ೩೧-೦೯೯).

ಮಗಳ್ದಿರ್, ಮಗಳುದಿರು = ೧. ಹೆಣ್ಣುಮಕ್ಕಳು : ಕನಕಮಾಲೆಯುಮಾಕೆಯ ಮಗಳ್ದಿರಪ್ಪ ಕನಕಲತೆಯುಂ ಪದ್ಮಲತೆಯುಂ ಸೌಧರ್ಮ ಕಲ್ಪದೊಳ್ ಮೂವರುಂ ದೇವಿಯರಾಗಿ ಪುಟ್ಟಿದರ್ (ಶಾಪುಪು. ೧೯೪) : ಹರಡಿ ನೆಲಸಿದ ಮಗಳ್ದಿರಣುಗರು ತಾಯ ಕಾಯುತ ಬಿದ್ದರು (ಜೋಗಳು. ೩-೧೪) ; ಏಳು ಮಗಳುದಿರು ಚೋಳರಾಯನಿಗೆ (ಇಂಗೀತ. ೩೯-೦). ೨. 'ಮಗಳು' ಎಂಬುದಕ್ಕೆ ಗೌರವಾರ್ಥವಾಗಿ ಬಳಸುವ ಬಹುವಚನ ರೂಪ : ಶ್ರೀ ಪೃಥಿವೀವಲ್ಲಭ ಸಿಂಘಪೋತರಸರ ಮಗಳ್ದಿರ್ ಶ್ರೀ ಮಹಾದೇವಿ (ಎಕ. XI, ಚಳ್ಳಕೆ. ೩೩-೪ ; ಸು. 815).

[ ಮಗ + – ಅಳ್. / ತಮಿ. ಮಕಳ್ ; ಮಲ. ಮೋಳ್ ; ತುಳು. ಮಗಳು ]

**ಮಗಳು** ' ಮಗಳ್ ' ನೋ.

**ಮಗಳ್ಮಾ** (ನಾ). ೧. ಸ್ತ್ರೀರೂಪದ ಒಂದು ಪೌರಾಣಿಕ ಪ್ರಾಣಿ : ತುರಗಾರೋಹಕನೊರ್ಬಂ . . . ಅಶ್ವಕಂಧರವಂ ಮೊಕ್ಕನೆಪೋಗೆ ಪೊಯ್ದುಡೆಸೆದಿರ್ದಂತಾ ಶಿರಂ ಯೋಗಿನೀಶಿರದೊಳ್ ಪತ್ತಿಸಿದಂತೆ ಬಿರ್ದಡೆ ಮಗಳ್ಮಾವೆಂದವಂ ನೋಡಿದಂ (ಶಂತಂ. ೦೨-೬೩); ಕಾಲಜರೊಳಂ ಮತ್ತಂತೆಯುಂಕಾಲಜರೊಳಂ ಬೆರೆದು ತಾಂ ಮಗಳ್ಮಾಯೆನಿಸುತೆ ನೆಲದೊಳ್ವೋರ್ಪಳೆನುತ್ತ ವಾಗ್ಗಲನೆಯ ನಾಸಿಕಮನರಿದನಾ ವೀರೇಶಂ (ವೀರಶಿ. ೦೨-೫೮). ೨. ಗಂಡನೊಡನೆ ಇರುವವಳು (?) : ''ಮಗಳ್ಮಾಯೆಂದು ಗಂಡನಂ ಪತ್ತಿ ಬಿಡದಾಕೆ'' (ಕಮುದ. ನ. ೩೬೫). 'ಮಾಳ್ಮಕಿ' ಪರಾ.

[ದೇ.॥ ತಮಿ. ಮಕಣ್ಮಾ, ಮಕಣ್ಮೈ = ಸ್ತ್ರೀಸ್ವಭಾವ, ಸ್ತ್ರೀತ್ವ]

**ಮಗಿಮಾವು** (ನಾ). ''ಮಾವಿನ ಹಣ್ಣಿನ ಒಂದು ಜಾತಿ'' (ಶಾಸಕೋ. ೨೭): ಮಾವು ಗೇರ್ಮಾವು ಪುಳಿಮಾವು . . . ಮಗಿಮಾವು ಮಧುರಸಭರಿತ ಪರಿಮಳಿಪ ಸೀರುಚಿಯನೀವ ಮಾವು (ನವಮೋ. ೨೪-೪೯) ; ಮೂರೆಂಬ ತಿಂಗಳಿಗೆ ಮೂರೇನು ಬಗಿಸ್ಯಾಳ ಮೂಡಲ ದಿಕ್ಕಿನ ಮಗಿಮಾವ ತಿಂದೇನಂಬುವಳ (ಜೋಳಗೀ. ೯೩). [ಮಗಿ ? + ಮಾವು]

**ಮಗಿಲ್**, ಮಗಿಲು (ನಾ). ಪ್ರಾಕಾರ ; ಪೌಳಿ : ಆ ಮಗಿಲೊಳಮೆಯ್ಗೊಳೆ . . . ಲಕ್ಷ್ಮೀಮಂಡಪಮಿಂಬನಾಳ್ದು ಕಣ್ಗೆಸೆದಿಕ್ಕುಂ (ಪರ್ವತಶ. ೦೩-೫೩); ಮಾಸ್ಯದ ಮಗಿಲ್ ಹಸ್ತಂ ೪೦ ಬಣಂಬೆ ಹಸ್ತಂ ೪೦ (ಕೊಲ್ಹಾಪು. ೨೩-೩೨; 1209) : ಆ ಪುರಮಧ್ಯದೊಳಿರ್ಪುದು ಭೂಪನಿವಾಸದ ಮಗಿಲ್ . . . ವಿಚಿತ್ರಮಣಿಗಣಖಚಿತಂ (ಶಾಂತೀಶ್ವ. ೦-೦೩೪). 'ಪೊಮ್ಮಗಿಲ್' ಪರಾ. **ಮಗಿಲು** : ಗ್ರಾಮಾಸ(?)ರ್ ೨೦೦೦ ಮಗಿಲು ಗ್ರಿಹೇ ಹಸ್ತ ೪೦ (ಇಆ. XIV, ೦೪೦-೨೪ ; 12ನೆಯ ಶತ) ; ಮಗಿಲು ಬಾಗಿಲುವಾಡದೊಳಗಣ ಜಗಲಿ ಚಪ್ಪರದುಪ್ಪರಿಗೆ . . . ಗಣಿಕೆಯರೊಗ್ಗಿನಲಿ ಮೆಱೆದುದು ಸತಿಯ ಭವನ (ಐಸಪು. ೦೨-೮) ; ಮಂಡಳಿಸಿದ ಹೊನ್ನ ಮಗಿಲ ಮಧ್ಯದಲಿ ತ್ರಿಖಂಡ ಹರ್ಮ್ಯಗಳ ಹೊಂಗಳಸ (ಪೋಹಶ. ೨೦-೨೯). 'ಮದಿಲ್' ಪರಾ.

[ ದೇ.॥ ತೆಲು. ಮಗುಲು ]

**ಮಗಿಲು** ' ಮಗಿಲ್ ' ನೋ.

**ಮಗು**, ಮಂಗವು, ಮಗುವು (ನಾ). ೧. ಎಳೆಯ (ಹೆಣ್ಣು ಅಥವಾ ಗಂಡು) ಸಂತಾನ ; ಹಸುಳೆ ; ಶಿಶು ; ಏಕೆ ನಿರರ್ಥಕಂ ಮಗುವಿನಂದದೆ ಕೋಟಲೆಗೊಂಡೆನಕ್ಕಟ (ಕಾದಂಬ. ೬೨೩) ; ಮಗುವಿನ ಮುಕ್ಕಳಾಟಿಕೆ ಮಾರಿಯಾಯಿತು ವೈರಿರಾಯರಿಗೆ (ಕುಮಾದ್ರೋ. ೫-೩) ; ಮಗುವಿನ ಸುಖಕ್ಕಾಗಿ ತಾಯಿ ತನ್ನ ಸುಖವನ್ನು ತ್ಯಜಿಸಬಲ್ಲಳು (ರಮಣಿಸಾ. ೦೩೪). ೨. ದೊಡ್ಡವರು ಚಿಕ್ಕವರನ್ನು ಪ್ರೀತಿಯಿಂದ ಸಂಬೋಧಿಸುವಾಗ ಬಳಸುವ ಮಾತು: ಬಾ ಮಗು, ಊಟಕ್ಕೆ ಹೊತ್ತಾಯಿತು (ರೂಢಿ.) **ಮಗವು** : ೧. ''ಬಾಳಃ, ಪಾಕಃ . . . ಡಿಂಬಃ –ಈ ೯ ಮಗವು'' (ಹಲಾಯು. ೯೩-೩೪೮) ; ನೆಲಹಿನ ಮೊಸರಂತೆ ಬೆಸ್ಲೇಱದ ಮಗವಿನಂತೆ ಮಣಿಗಡಗದ ಕೀಲಿನಂತೆ (ಭವಶಂಪು. ೮-೦೪೭ ಅ೨೭) ; ಮಗವೀತಂ ಕೊಂಗುಗೊಳ್ವಂ ಗಡ ಗಜಘಟೆ

ಯುಂ ತಪ್ಪ ಸೀತಂ ಗಡ (ಎಕ. V. ಬೇಲೂರು. ೧೭-೪೬: 1136) **ಮಗುವು :** ೧. ಮಗುವು ತಾನಷೆ ತನ್ನ ಬಾಣಕೆ ಮಗುವೃತನ ಬೇಡಿಲ್ಲ (ಕುವ್ಯಾದ್ರೌ. ೫-೨೦) : ಮಗುವೃ ರಾಘವನೆಂದು ತಪ್ಪಿಸಿ ನುಡಿವ ನುಡಿ ನಿನಗೆ ನಿಗರವೇ (ತೊರವಾ. ೧-೯-೩೦).

**ಮಕ್ಕಳ್,** ಮಕಳು. ಮಕ್ಕಳು. ಮಗುಗಳು (ಬಹುವ) : p ಮಗ', 'ಮಗಳು' ಮತ್ತು 'ಮಗು'-ಮೂರಕ್ಕೂ ಬಹುವಚನದಲ್ಲಿ ಈ ರೂಪ ಬರುತ್ತದೆ : ೧. ಒಂದಕ್ಕಿಂತ ಹೆಚ್ಚು (ಹೆಣ್ಣು ಅಥವಾ ಗಂಡು) ಸಂತಾನ ; ಸಂತತಿ: ''ಮಕ್ಕಳೆನಲ್ಕೆ ಸಂತತಿಯೊಳಂ'' (ಶಬ್ದಾ. ೩೦) ; ಕೀರ್ತಿಧರನೆಂಬೊನರಸನಾತನ ಮಹಾದೇವಿಯರ್ಕಳ್ ಅರತಿ ರತಿಯೊಂಪೊರಾ ಇರ್ವರ್ಗಂ ಮಕ್ಕಳ್ ಧರ್ಮಘೋಷನುಂ ಧರ್ಮಕೀರ್ತಿಯುಂ (ವಡ್ಡಾ. ೧೦೨-೦೩) ; ಭೃತ್ಯರರಸುಗಳ್ಗೆ ಪೆಂಡಿರ್ಮಕ್ಕಳೋಪಾದಿಯಲ್ಲಿ ಸಂಪತ್ತಾದೊಡಂ ವಿಪತ್ತಾದೊಡಂ ಬಿಡರ್ (ಶಬ್ದಶಾ. ೪೨-೨೨) ; ತಂದೆ ಮಕ್ಕಳಿಗೆ ಬುದ್ಧಿಯ ಹೇಳುವಲ್ಲಿ ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ (ಬಸವ. ೬೩೪); ಓಡಿ ಬದುಕುವ ಹುಲುಪಜೀವಿತನ ಹೆಮ್ಮೆಯೋ ಕ್ಷತ್ರಿಯರ ಮಕ್ಕಳಿಗೆ (ಕುವ್ಯಾದ್ರೌ. ೨-೩೮) : ಮಕ್ಕಳಿದ್ದರೆ ಮನೆ, ಒಕ್ಕಲಿದ್ದರೆ ಊರು (ಗಾದೆ) ; ಮಗುಗಳ ಮಾಣಿಕ್ಯನ ಆಡಿಸಿದೆಶೋದೆ (ಪುರಂದ. ೪-೧೬೬-೧) ; ಮನೆಯ ಮಕ್ಕಳೆಲ್ಲ ಬಿಕ್ಕಿದರು. ಒಂದೆರಡು ಮಗುಗಳು ಗಾಬರಿಯಾಗಿ ಕೂತವು (ಕಮಲ. ೫೦೪). ೨. 'ಮಗ' ಎಂಬುದಕ್ಕೆ ಗೌರವಸೂಚಕವಾಗಿ ಬಳಸುವ ಬಹುವಚನ ರೂಪ : ಕರುವದ ಅಂಗೀರಸಗೋತ್ರದ ಇ(ಈ)ಶ್ವರನ ಕತ್ತಿಗನ ಮಕ್ಕಳು ನಾರಾಯಣಭಟ್ಟರಿಂಗೆ . . . ಮೂಡೆ ೧೦ (ಎಪಿ. XVII, ೦೬೨-೬೩ ; 1256) ; ಲಿಂಗಾದೀಕ್ಷಿತರ ಮಕಳು ತಿಂಮಣಭಟ್ಟರಿಂಗೆ ಗ ೬ . . . ಧಾರಾಪೂರ್ವಕವಾಗಿ ಶಿವಾರ್ಪಣವಾಗಿ ಬಿಟ್ಟೆಛೇವೆ (ಎಕ. VII, ಶಿವಮೊ. ೮೨-೨೨ : 1683). **ಮಕ್ಕಮಕ್ಕಳು. ಮಕ್ಕಳ ಮಕ್ಕಳ್, ಮಕ್ಕಳುಕ್ಕಳ್** = ವಂಶಪರಂಪರೆ; ಸಂತತಿ : ಚಂದ್ರಸೂರ್ಯರುಳ್ಳನಕಲೂ ಅವರ ಮಕ್ಕಮಕ್ಕಳು ತರಾಂತರವಲ್ಲೂ . . . ಪೊಕ್ಕಲಿದ್ದರು (ಎಕ. XII, ಶಿರಾ. ೬೬-೧೬; 1379) ; ಬೀರನೊಬಪ್ಪ ಪೆಚ್ಚಿ ಕಿಟ್ಟನಾಡ ಬಿರಿಯ ಬಿದಿರೂರ ಕಲ್ನಾಡುಗೊಟ್ಟಂ ಗಂಗನ ಮಕ್ಕಳ ಮಕ್ಕಳ್ವರೆಗಂ ಸಲ್ವಂ (ಎಕ. X, ಗೌರಿಬಿ. ೪-೨೪; 920) ; ಮನೆದೀವಿ ಮಕ್ಕಳಂ ಪಡೆದಬಳಾಜನಂ ನೆರೆದ ಮಕ್ಕಳ ಮಕ್ಕಳ ನೀಳ್ದದೊಂದು ದಾಂಗುಡಿವಿಡಿದೀವ ಚಾಗಂ . . . ವೃದ್ಧರಾಜ್ಯಮುಮದೇನೆಸೆದತ್ತೊ ತೊಡರ್ದಿರೆ (ಆದಿಪು. ೨-೨೪) ; ಪಂಣಮಾಂಡಹಗ್ಗಡೆಯರು ತಾವು ಕೊಣ್ಣುಕೊಟ್ಟ ಸಂದಾದೀವಿಗೆ ಸೊಡರೆಣ್ಣೆಗೆ ಆ ಸ್ಥಾನಿಕ ಗೋಣಿಯಜೀಯ ಪರದೇಸಿಯುಮಸವರ ಮಕ್ಕಳುಕ್ಕಳ ವಂಶೋದ್ಭವರ ವಸಂ ಹೊಂಗೆ ಹಾಗ ವಡ್ಡಿಯಿಂ ದೇವರ ಭಂಡಾರವಾಗಿ ಕೊಟ್ಟ ಗದ್ಯಾಣಂ ಮೂಜು (ಎಕ. XIV, ತಿರುಮ. ೨೭೦-೪; 1199). **ಮಕ್ಕಳ ತಾಯಿ** = (ಎಳೆಯ ಮಕ್ಕಳಿಗೆ ತಾಯಿಯಂತೆ ಅಗತ್ಯವಾದ) ಒಂದು ಬಗೆಯ ಔಷಧೀಯ ಗುಣವುಳ್ಳ ಬೇರು ; ಬಜೆ ; ಉಗ್ರಗಂಧಿ : ''ವಚಾ. ಉಗ್ರಗಂಧ . . . ಶತಪರ್ವಿಕಾ — ೫ ಬಜೇ ಹೆಸರುಗಳು. ಇವನ್ನು ಮಕ್ಕಳತಾಯಿಯೆಂತಲೂ ಕಮಣವ ಕಡ್ಡಿಯೆಂತಲೂ ಅನ್ನುವರು" (ಸಿದ್ಧಾಂತಿ. ೦೩೫). **ಮಕ್ಕಳ ಸಂತಾನಕಟ್ಟು** = ಆಸ್ತಿಯ ಹಕ್ಕು ಮಕ್ಕಳಿಗೆ ಬರುವ ನಿಯಮ; ಸಂತತಿಕಟ್ಟು : ಉತ್ತರದಲ್ಲಿರುವ ನಾಡವರೂ ದಕ್ಷಿಣದಲ್ಲಿರುವ ಬಂಟರೂ ಅಳಿಯಸಂತಾನಕಟ್ಟನ್ನೇ ಅನುಸರಿಸುತ್ತಾರೆ. ಪರಿವಾರ ಬಂಟರಿಗೆ ಮಕ್ಕಳ ಸಂತಾನಕಟ್ಟು (ತುಳುನಾ. ೫೦). 'ಅಳಿಯಸಂತಾನಕಟ್ಟು' ಪರಾ. **ಮಕ್ಕಳಾಟಿಕೆ** = ೧. ಮಕ್ಕಳ ಆಟದ ಸಾಮಾನು : ಆ ಅಂಗಡಿಯಲ್ಲಿ ಬಗೆ ಬಗೆಯ ಮಕ್ಕಳಾಟಿಕೆಗಳಿವೆ (ಲೋಕ). ೨. ಮಕ್ಕಳಂತೆ ವರ್ತಿಸುವುದು ; ಹುಡುಗಾಟ : ಮ ಗು ವಿ ನ ಮಕ್ಕಳಾಟಿಕೆ ಮಾರಿಯಾಯಿತು ವೈರಿರಾಯರಿಗೆ (ಕುವ್ಯಾದ್ರೌ. ೫-೩) ; ಹಾಗೆಲ್ಲ ಮಕ್ಕಳಾಟಿಕೆ ಮಾಡಬೇಡ (ನಡೆನು. ೩೩). **ಮಕ್ಕಳುಮರಿ, ಮಕ್ಕಳುಮರಿ** = ಸಣ್ಣ ಪುಟ್ಟ ಮಕ್ಕಳು : ಹೆಚ್ಚೆಗೆದು ಕೆಲಸಾರಿ ಮಕ್ಕಳುಮಜೀಗಳಿಗೆ ರಣವೇಕೆ (ಕುವ್ಯಾಕ. ೩-೦೬) ; ಅವರ ಮನೆತುಂಬ ಮಕ್ಕಳುಮರಿಗಳಿವೆ (ಲೋಕ). **ಮಕ್ಕಳೊಂದಿಗ** = ಅನೇಕ ಮಕ್ಕಳಿರುವ ವ್ಯಕ್ತಿ : ನಾವು ಮಕ್ಕಳೊಂದಿಗರು. ಒಕ್ಕಲು ಕುಳ. ದೇವರು (ವಿಶ್ವಕ. ೫೪-೩). **ಮಕ್ಕಳೊಂದಿಗಳು** = ಅನೇಕ ಮಕ್ಕಳಿರುವವಳು : ಕುಟುಂಬಿನೀ, ಪುರಂಧ್ರೀ . . . ಪುತ್ರಭೃತ್ಯಾದಿ ಕುಟುಂಬವುಳ್ಳ ಸ್ತ್ರೀಯ ಹೆಸರು, ಮಕ್ಕಳೊಂದಿಗಳು (ಸಿದ್ಧಾಂತಿ. ೧೬೮). **ಮಕ್ಕಳೊಂದಿಗಿತ್ತಿ** = ಮಕ್ಕಳೊಂದಿಗಳು : ಮಳೆರಾಯನ ಹೆಂಡತಿ ಮಕ್ಕಳೊಂದಿಗಿತ್ತಿ (ಜನಪು. ೪೦). **ಮಕ್ಕಳ್ಗಿಡು** = ಮಕ್ಕಳನ್ನು ಕಳೆದುಕೊಳ್ಳು : ರಾಮನುಂ ಧೂಮಂ ಸುತ್ತಿದಂತೆ ಜೀವಂಗಿಡಿಸಿ, ಲಕ್ಷ್ಮಣನುಂ ಮಕ್ಕಳ್ಗಿಟ್ಟರಂತೆ ಗೋಟುಂಡೆಗೊಳಿಸಿ (ಪಂಪರಾಮ. ೬-೯೫).

[ < ಮಗ./ತಮಿ. ಮಕವ್ಡ ]

**ಮಗುಂ** ' ಮೋಘಮ್ ' ನೋ.

**ಮಗುಗೊಲೆ** (ನಾ). ಶಿಶುವನ್ನು ಕೊಲ್ಲುವುದು : **ಶಿಶುಹತ್ಯೆ** : ನಾ ಮೊದಲೆ ಹೇಳಲಿಲ್ಲವೆ ? **ಈ** ಮಗುಗೊಲೆಯ ಕೆಲಸ ಬೇಡ ಎಂದು ? (ಶಂದ್ರಕ. ೨೫-೨೨). [ ಮಗು + ಕೊಲೆ ]

**ಮಗುಚು** 'ಮಗುಚ್ಚು' ನೋ.

**ಮಗುಚುಕಟ್ಟಿಗೆ** (ನಾ). (ಉಕ) (ಹಂಚಿನ ಮೇಲೆ ಬಿಸಿಯಾಗಿರುವ ದೋಸೆ ಮೊದಲಾದುವನ್ನು) ತಿರುವಿಹಾಕಲು ಉಪಯೋಗಿಸುವ ಮರದ ಅಥವಾ ಕಬ್ಬಿಣದ ಸಾಧನ ; ಕುರುಪಿ ; ಕಡಚಿ : ಸೀತಮ್ಮನು ಮಗುಚುಕಟ್ಟಿಗೆಯೊಡನೆ ಬರುವಳು (ಹುಚ್ಚಾಟ. ೨೭).

[ ಮಗುಚು (< ಮಗುಚ್ಚು) + ಕಟ್ಟಿಗೆ$_1$ ]

**ಮಗುಚುಕೈ** (ನಾ). = ಮಗುಚುಕಟ್ಟಿಗೆ : ಮಗುಚುಕೈಯ ತುದಿಯು ತೆಳುವಾಗಿದ್ದರೆ ದೋಸೆಯನ್ನು ತೆಗೆಯಲು ಸುಲಭವಾಗುವುದು (ಲೋಕ).

[ ಮಗುಚು (< ಮಗುಚ್ಚು) + ಕೈ$_2$ (< ಕಯ್$_2$) ]

**ಮಗುಟ$_1$,** ಮಕುಟ$_1$ (ನಾ). ೧. (ಮಡಿಗಾಗಿ ಉಡುವ) ನಾರು, ರೇಷ್ಮೆ ಮುಂತಾದುವುಗಳ ಧೋತ್ರ : ತರದ ಪಟ್ಟಾವಳಿಯ ಮಗುಟಗಳ ಹೇರ್ಗಳನು ತಂದು ದೇಶಂಗಳಿಂದ (ಕೃಷ್ಣಕ. ೨-೪೬) ; ಅನಂತರಾಯರು ಮಗುಟ ಉಟ್ಟು ಸಾಂಗವಾಗಿ ಪೂಜೆಮಾಡಿದರು (ಕಂಕಣ. ೦೨೨). ೨. (ಬಿಳಿಯ) ಉಣ್ಣೆಯ ಧಾವಳಿ : ಅಗಸೆಮರದಡಿಯಲ್ಲಿ ಮಗುಟ ಕಂಬಳಿ ಹಾಸಿ ಸೊಗಸು ಮಾಡ್ಯವರೆ (ಜಾನಗೀ. ೭೦). **ಮಕುಟ$_1$ :** ೧. ಬಿಸಿನೀರಿನಿಂದ ಸ್ನಾನಮಾಡಿಸಿ ಅವನಿಗೆ ಮಕುಟವನ್ನು ಮಡಿಯುಡುವುದಕ್ಕೆ ಕೊಟ್ಟು (ಕಥಾಮಂ. IV, ೦೨೩) ; ಶಾಲೆಗೆ ಹೋಗುವ ಮುನ್ನ ಅವನೇ ಮಕುಟವನ್ನು ಸುತ್ತಿಕೊಂಡು ಹೊಳೆಯಿಂದ . . . ನೀರು ತಂದು ಕೊಡುತ್ತಿದ್ದ (ಪುಂಶಪ್ರ. ೩೦೨). [ ದೇ.॥ ತೆಲು. ಮುಟಟ, ಮುಕ್ಕಟ ]

**ಮಗುಟ$_2$,** ಮಗುಡ$_1$ (ನಾ). ಕಿರೀಟ ; ಮಕುಟ : ಸಗುಣಗುಣಾಢ್ಯ ಭೂಪತಿಗಳೇಕಾಂತದಿ ಮಗುಟಗಳೊಂದೊಂದೊರಸಿ ಉಗುವ ಮಾಣಿಕ ಹೇಮರಜ ನೂಜುಕೋಟಿಗೆ ಮುಗಿದು ಕೊಟ್ಟಿಹರು ವೈಶ್ಯರಿಗೆ (ಮೋಹಕ. ೨೦-೩೫);ಅಳವಟ್ಟ ಮಣಿಯ ಕುಂದಣದ ಮಗುಟದ ಸೊಬಗಿನ, ಕಿಜುಜವ್ವನದ ಬಿಂಕದ, ನಡೆವೊಂದು ಗಾಡಿಯ ಪುಷ್ಕಲಂ . . . ಪೋಪಸರದೊಳ್ (ರಾಮಾಶ್ವ. ೪೬-೦೬). **ಮಗುಡ$_1$ :** ''ಮಗುಡವೆಂದು ಮಕುಟಂ" (ಶಬ್ದಮ. ೨೪-೫೦೫) : ಟಕಾರಕ್ಕೆ ಡಕಾರಂ . . . ಮಕುಟ — ಮಗುಡ (ಶಮದ. ೨೫೫ ಪ್ರಯೋ) ; ಪೊಸಬಾವನ್ನದಣ್ಣು ನಿಜುವಿಡಿದುಟ್ಟೊಳ್ಳುಡೆಯ ಸೊಗಸು ತಲೆಯ ಮಗುಡದಂದಂ . . . ಮನಂಗೊಂಡುದು (ಅದ್ಭುತ. ೩೩-೨೩).

[< ಸಂ. ಮಕುಟ ]

**ಮಗುಡ₁** 'ಮಗುಟ್ಚು₂' ನೋ.

**ಮಗುಡ₂** (ನಾ). ಒಂದು ಊರಿನ ಹೆಸರು : P ಈಗಿನ ಬಾದಾಮಿಯ ಸಮೀಪದ ಮಹಾಕೂಟ : ಬುಧವಾರದನ್ದು[ಂ] ಮಗುಡಕೆ ವಂದು ಸನ್ನಾಕೇಸ(ಶ್ವ)ರವು(ಮೂ)ನೆಲ್ಲುಂಗೆಯುಮಂ **ಕೊಟ್ಟ[ರು]** (ಇಆ. X, ೧೧೯-೯ : 934). [ ? ]

**ಮಗುಚ್ಚ್ಛು** 'ಮಗುಟ್ಚು' ನೋ.

**ಮಗುವು** 'ಮಗಂ' ನೋ.

**ಮಗುವುತನ** (ನಾ). ಎಳಮೆ ; ಬಾಲ್ಯ ; ಶೈಶವ : ಮಗುವುತನದಲಿ ಬೊಂಬೆಯಾಟಕೆ ಮಗುವನೇ ತಹೆನೆಂದು ಬಂದಳು (ಕುವ್ಯಾಆ. ೩-೧೭) ; ಜಗದ ಜೀವರ ಯಂತ್ರಮಯಮಾಹೆಗಳನಾಡಿಸಿ ತೋರ್ಪ ನಾಟಕಿ ಮಗುವುತನದಲಿ ಬಾಲಕರ ಕೇಳೀಕಲಾಪದಲಿ ಸೊಗಸುವುದು ಸೋಜಿಗವಲಾ (ತೊರರಾ. ೦-೯-೭೭). [ಮಗುವು (<ಮಗು) + —ತನ]

**ಮಗುಸಿ** (ನಾ). ಒಂದು ಊರಿನ ಹೆಸರು : ತಮ್ಮಿಜ್ಜಂ ಮಗುಸಿ ಮಾಕಳನ ದೇಗುಲಕ್ಕೆ ಮುಂದಿ × × × ಮಳ್ಗಟ್ಟಿಸಿದ (ಎಕ. VIII, ತೀರ್ಥ. ೯೭೯-೦೯ ; 954). [ ? ]

**ಮಗುಳ್** 'ಮಗುಟಿ₁' ನೋ.

**ಮಗುಳಿಚು** 'ಮಗುಟ್ಚು' ನೋ.

**ಮಗುಳು** 'ಮಗುಟಿ₁' ನೋ.

**ಮಗುಳೆ** 'ಮಗುಟಿ₃' ನೋ.

**ಮಗುಳ್ಚು** 'ಮಗುಟ್ಚು' ನೋ.

**ಮಗುಳ್ದು** 'ಮಗುಟಿ₁' ಪರಾ.

**ಮಗುಳ್ದಂ** 'ಮಗುಟ್ದು' ನೋ.

**ಮಗುಟಿ₁, ಮಗುಳ್, ಮಗುಳು** (ಕ್ರಿ). ಮಗುಳ್ದು, ಮಗುಟ್ದು (ಭೂತಕೃ). ೧. ಹಿಂತಿರುಗು ; ಮರಳು : "ಮಗುಟಿ₁—ನಿವರ್ತನೇ (ಹಿಂದಿರುಗು)" (ಶಮದ) ; ಶಂತನು ಪೊಟಲ್ಗೆ ಮಗುಟ್ದು ಬಂದವರಯ್ಯನಪ್ಪ ದಾಶರಾಜನಲ್ಲಿಗೆ ಕೂಸಂ ಬೇಡೆ ಪೆರ್ಗಡೆಗಳನಟ್ಟಿದೊಡೆ (ಪಂಭಾ. ೦-೭೦ ವ) : ಸೃಗಾಲತನಯನಂ ತದ್ರಾಜ್ಯದೊಳ್ ನಿಲಿಸಿ ಮಗುಟ್ದು ಬಂದು ಮಥುರಾಪುರದ ಪೊಜಪೊಟಲನೆಯ್ದಿದಲ್ಲಿ (ಜಗಬ. ೯-೭೩ ವ) ; ಮನದನ್ನಳಪ್ಪ ಕೆಳದಿಗೆಮಾನಸಮಂ ಮುಂದಿಟ್ಟು ಬಬಿಕ ಕಟಾಕ್ಷಿಬಿದೊಡವಳಾತನ ರೂಪುಗಂಡು ಕಣ್ಣಂ ಮನಕ್ಕಮುದ್ಧಾರವೆತ್ತು ಬೋಂಕನೆ ಮಗುಟ್ದಳ್ (ಮಹೋತ. ೨-೩೩). ೨. ಬೋರಲಾಗು ; ಮುಖ ಅಡಿಯಾಗು : 'ಪೆಡಂಮಗುಟಿ₁' ಪರಾ. **ಮಗುಳ್** : ೧. ಶ್ರೀಮತು ಕೃಷ್ಣಕನ್ನಹ ದೇವರು ಜೋತಿ ಜಾತ್ರೆಮಾಡಿ ಮಗುಳ ಬನ್ದು (ಕಶಾಇ. IX-i, ೭೯-೬; 11ನೆಯ ಶತ) ; ಅಲ್ಲಿಂ ಮಗುಳ್ದುಬರುತಾ ಬಳಿಯಲಾ ಮುನಿವರರ ಚರಣಂಗಳ ಕೆಲದಲಿಳಿಪಿದನು ಮಂಗಿಯ ಶವವನಾ ಭಟನು (ಶಾಕ್ಯಶಾ. ೨೦-೪೦). ೩. ಮಡಿಚು ; ಮಡಿಸು : ರಥದಲಿ ಮಗುಳ್ದ ಮಂಡಿಯ ದೃಷ್ಟಿಯೋರೆಯಬಾಗಿದವಯವದ . . . ಬಲುಗೈ ಕರ್ಣ ಮೂದಲಿಸಿದನು ಪವನಜನ (ಕುವ್ಯಾದ್ರೋ. ೦೩-೨೦). **ಮಗುಳು** : ೧. ಎನ್ನ ಮುಂದು ಮನೆಗೆ ಮಗುಳಿದ ಮಾಡದಿ . . . ಛೇಸರಳೆ ನಾನಿಲ್ಲದೆ ? (ಗಶಿಪಂ, ೩೪-೦೩).

**ಮಗುಟಿ₃, ಮಗುಳೆ** (ಅ). ಮತ್ತೆ ; ಪುನಃ ; ತಿರುಗಿ : ಬಡವರ್ಗೆಮಗೀವ್ರತಂಗಳ್ ಬಿಗೆಯ್ವುವು ಇವಂ ನಿನಗಿತ್ತವರ್ಗೆ ಮಗುಟಿ₃ ಕೊಟ್ಟು ಬರ್ಪಂ ಬಾ (ಚಾವುಂಪು. ೬೮) ; ನೀವೀ ಕಥೆಯಂ ಮಗುಟಿ₃ ಪೇಟಿರ್ ಬಳ್ಲಿರಿ (ಶಾಕಶಂ. ೨೦-೧೧) ; ಭೂಪಾಲಂ ಸೌಂದರವತಿಯುಂ ಭೋಂಕನೆ ಸಿಂಗರಿಸುವುದೆಂದುಸುರ್ದು ಮಗುಟಿ₃ ಕಬುಪಿದನವರಂ (ಉದ್ಭಟ. ೮-೨೦). ಮಗುಳೆ : ನೆಗೆಯಲುಘೆಯುಘೆ ಶಬ್ದ ಒಗೆಯೆ ದಂದುಭಿ ಶಿವಂ ಮಗುಳೆ ಮೂರ್ಧ್ನಿಘ್ರಾಣವೆಸಗಿ ಸುಡಿದಂ (ಶಾಪಂಶ. ೧-೬೬) : ಆಗಳಲ್ಲಿಂ ಮಗುಳೆ ನೆಲಸಿದ ಬೇಗದಲಿ ಸಿರಿವೊಳಲ ನರಹರಿ (ಸಂಭಕ. ೯-೦೨೮) ; ಕಗ್ಗಲ್ಲಗೊಸರ್ದುವಾ ಕೊಯ್ದು ಫಲತತಿ ಮಗುಳೆ ಫಲವಾದುವು . . . ಪಟ್ಟಲಪುಷ್ಪಿ ಘೂತಳದೊಳವತರಿಸಲು (ತಶ್ಚ. ೪-೩೪). 'ಮಗುಟ್ದಂ' ಪರಾ.

**ಮಗುಟಿ₃ಮಗುಟಿ₃, ಮಗುಳೆಮಗುಳೆ** (ದ್ವಿರುಕ್ತಿ) : "ಪ್ರತಿಕ್ಷಣಂ, ಅಭೀಕ್ಷ್ಣಂ, ಭೂಯಃ, ಅಸಕೃತ್, ಮುಹುಃ — ಈ ೫ ಮಗುಟಿ₃ ಮಗುಟಿ₃" (ಶಬ್ದಮ. ೧೨೦-೩೪) ; ದಿವ್ಯಾಹಾರಮಂ ಮಗುಟಿ₃ಮಗುಟಿ₃ ಬಡ್ಡಿಸೆ (ವಡ್ಡಾರಾ. ೯೯-೨೪) ; ಮಗುಳೆಮಗುಳೊಡ್ಡಿದನು ಹೇರಾಳದಲಿ ಧನವನು (ಕುವ್ಯಾಸ. ೦೪-೩೪). **ಮಗದೊಬ್ಬ**=ಮತ್ತೊಬ್ಬ ; ಬೇರೊಬ್ಬ : ಬ್ರಹ್ಮಶರ್ಮನೆಂಬ ವಿದ್ವಾಂಸನಿದ್ದನು. . . ಈತನ ಬಳಿಯಲ್ಲಿ ಒಬ್ಬ ಶಿಷ್ಯ ವ್ಯಾಕರಣವನ್ನೂ . . . ಮಗದೊಬ್ಬ ತರ್ಕವನ್ನೂ ಓದುತ್ತಿದ್ದರು (ಸಾಶಿಶಂ. VII, ೦೩). **ಮಗುಳೊಂದು**, **ಮಗದೊಂದು**=ಮತ್ತೊಂದು ; ಬೇರೊಂದು: ಎಚ್ಚರು ಬಹಳ ಪೋಪರೆ ಶಕ್ಯವಿಲ್ಲೆಂದು ಮಚ್ಚರವಳಿದು ಕೊಂಡಾಡಿ ಸ್ವಚ್ಛದಿ ಮಗುಳೊಂದು ಬುದ್ಧಿಯ ನೆನೆದುಕೊಂಡುಚ್ಚರಿಸಿದ ಮನದೊಳಗೆ (ವೀಹತ. ೦೦-೨೦); ಈ ಪ್ರಾಣಿಯ ಹಿಂದೆ ಅಂತಹುದೇ ಮತ್ತೊಂದು ಪ್ರಾಣಿ; ಅದರ ಹಿಂದೆ ಮತ್ತೊಂದು ; ಅದರ ಹಿಂದೆ ಮಗದೊಂದು (ಗಂಶ್ರ. ೩); ಕನ್ನಡಲಿಪಿಯ ಬೆಳವಣಿಗೆಯಲ್ಲಿ ಅದರ ಪ್ರಾರಂಭದಿಂದ ಕ್ರಿ.ಶ. ೫ನೆಯ ಶ.ದ ವರೆಗೆ ಒಂದು . . . ಕ್ರಿ.ಶ. ೧೪ನೆಯ ಶ. ದಿಂದ ೧೮-೧೯ನೆಯ ಶ.ವರೆಗೆ ಮಗದೊಂದು . . . ಹೀಗೆ ಐದಾರು ಮುಖ್ಯಮಜಲುಗಳನ್ನು ಕಾಣುತ್ತೇವೆ (ದ್ರಾಬಿ. ೬೨). [ <ಮಗುಟಿ₁ ]

**ಮಗುಟ್ಚು**, ಮಗುಚು, ಮಗುಚ್ಚ್ಛು, ಮಗುಳಿಚು, ಮಗುಳ್ಚು, ಮೊಗಚು, ಮೊಗುಚು (ಕ್ರಿ). ೧. ಹಿಂದಿರುಗಿಸು; ಮರಳಿಸು : "ಮಗುಟ್ಚು — ಪರಾವೃತ್ತೀಕರಣೇ (ಹಿಂದಿರುಗಿಸು)" (ಶಮದ); ತುರುವಂ ಮಗುಟ್ಚಿ (ಇಆ. ೧೯೪೭, ಹಾಸುಗ.೨೦೩-೩೩; 850) ; ಗೋಗ್ರಹಣದೊಳ್ ತನಗಾಗಿ ಕಾದಿ ತುರುವಂ ಮಗುಟ್ಚಿದುದುಮಂ ನೆನೆದು (ಪಂಭಾ. ೦೨-೦೭ ವ) ; ಬಿನ್ನಾಂಡಿ ತುರುವ ಮಗುಟ್ಚಿ ಸುರಗತಿಗೆ ಸನ್ದ (ಎಇಆ. ೦೯೯೦, ೨೩-೦೩; 1030). ೨. ಕಾರು; ವಾಂತಿಮಾಡು: ತೆಗೆದಂಬುಜಮಧುರಸಮಂ ಪಗಲೆಲ್ಲಂ ಕರಪುಟಂಗಳಿಂ ಪೀರ್ದುದನಾ ಗಗನಪಥಶ್ರಮದಿಂ ರವಿ ಮಗುಟ್ಚಿದಂತಾಯ್ತು ಮಿಸುಪ ಕೆಂಬಿಸಿಲುಗಳುಂ (ಕಾದಂಪೂ. ೩೦೦); ಆ ತಪನಂ ತಪನೀಯದೀಧಿತಿಪ್ರಸರಮನಟ್ಟಿಸಲ್ ನೆಟಿ₃ಯದಿಂತು ಮಗುಟ್ಚಿದನೆಂಬಿನಂ ವಿರಾಜಿಸಿದುವು ಪೊಂಬಿಸಿಲ್ (ಕುಸುಮಶ. ೪-೯); ಬಿಡಿ ಬಾಯ್ಗಳಿಂ ನೆಣನಂಗೆ ನೆತ್ತರುಚ್ಚಳಿಸೆ ಜಾದಿನ ಬೆಟ್ಟು ಮಗುಟ್ಚುವಂತೆ ಭಂಡಣದೆಡೆಯೊಳ್ ಪೊಣರ್ವ ಮಲವಾನೆಗಳಂ ಕಡಪಿತ್ತದೊಂದು ಮನ್ನಣೆ ವಡೆದಾನೆ (ಕಬ್ಬಿಕಾ. ೨೬೪). ೩. ಅರೆ ; ಸಣ್ಣಿಸು ; ತೇಯು : ತಮ್ಮ ಮುಂ ನೆರೆಪಿದಾಯುಷ್ಯಂಬರಂ ಮಾಯುಮಾಗದು ಮೆಯ್ ಸಣ್ಣಗೆಯೊಳ್ ಮಗುಟ್ಚಿದೊಡಮೇಂ ದುಃಖಿಕ್ಕವರ್ ನೋಂತರೋ (ಅದಿಪು. ೩-೯೩) : ಗಂಧನಿಷದ್ವರಕ್ಕೆ ನವಘುರ್ಮಂ ಗಾತ್ರದೊಳ್ ಪೊಣ್ಮೆ ಪಚ್ಚಳಿಸಲ್ ಕಟ್ಟಿ ಮಗುಟ್ಚುವರ್ ವರವಿಳಾಸೋದ್ಧಾಮೆಯರ್ ಭಾಮೆಯರ್ (ಕುಸುಮಶ. ೨-೦೦೭);ತೆರಳ್ದ ಕಂಪು ನೆಲದೊಳ್ ನಜುಸುಯ್ಗಳ ಗಾಳಿ ತೋಟಿಯುಂ ತೆಗೆದು ಮಗುಟ್ಚಿ ಕತ್ತುರಿ ಮಗುಟ್ಚುವರಲ್ಲಿಯ ಘಟ್ಟಿವಳ್ತಿಯರ್ (ಸೂಕ್ತಿಸು. ೪-೦೦೪). 'ಗಟ್ಟಿಮಗುಟ್ಚು' ಪರಾ. ೪. ನಂದಿಸು ; ಆರಿಸು : ಕಾಲನೊತ್ತಂಗಂ ತಂಬುಲವಿಕ್ಕಂಗಂ ತಲೆಯನಾಗುರಿಸಂಗಂ . . . ಬಾಲೆ ಸೊಡರಂ ಮಗುಟ್ಚಿಂಗಂ (ಮಂದಶ. ೦೦-೬೨). **ಮೊಗಚು** : ೧. ತುರು ಪರಿಯೆ ಕಾದಿ ತುರುವ ಮಗುಚಿ ಸುರಲೋಕಪ್ರಾಪ್ತನಾದ (ಎಕ. VII, ಶಿಕಾ. ೩೩೩-೩; 1200); ಜನಪ ಮಾಡಿದ ಹಂಗ ಮಗುಚುವಡೆನಗೆ

ಆಗ್ತದೆ (ತುಳಿಪು. ೯೩). **ಮೊಟ್ಟು$_3$** : ಬಿದಿರುಹಿಂಡಲಿನಾಚೆಗಿನ ಮೊಟ್ಟಿನ ಕಡೆ ಕಣ್ಣು ಹಾಯಿಸಿದರು (ಪ್ರಕೃ. ೩೭). [ ? ]

**ಮಟ್ಟೆಕಾಗೆ** (ನಾ). ಒಂದು ಬಗೆಯ ಕಾಗೆ : ಇದು ಕಾಗೆಯ ಮರಿಯೇನು ? ಅಥವಾ ಮಟ್ಟೆಕಾಗೆಯಂತೆ ಮಲೆನಾಡಿನ ಈ ಕಾಗೆ ಇಷ್ಟೇ ಚಿಕ್ಕದಾ ? ಎಂದು ಕೇಳಿದರು (ಶಾಕಿಗಿ. ೮೮). [ಮಟ್ಟೆ$_?$ + ಕಾಗೆ]

**ಮಟ್ಟೆಕೆ** ' ಮಡಕೆ ' ನೋ.

**ಮಟ್ಟೆಗ** (ನಾ). ಹಣೆಗೆ ಮೃತ್ತಿಕೆ, ಗೋಪೀಚಂದನ ಮೊದಲಾದುವುಗಳನ್ನಿಡುವವನು : ಒಡಲ ಮಟ್ಟೆಗ ದ್ವಿಜನನೆಡಮಟ್ಟೆಯೊಳು ಕಾಣಲೊಡನೆ ಭಸಿತವನು ಪ್ರೋಕ್ಷಿಪರು (ಶಿಸಂತ. ೨-೧೩೦) ; ಮಟ್ಟೆಗರು ತಮ್ಮೊಳಗೆ ಗುಜುಗುಜುಗುಟ್ಟುತುಂ ನಡೆತಂದಸಪ್ಪಂಬಟ್ಟು ಬಿಜ್ಜಳರಾಯನೊಡನಿಂತೆಂದು ಹೇಳಿದರು (ಬಸಪು. ೩೩-೩) ; ಪುರವೀಥಿಯೊಳು ಬರ್ಪ ಧೀವರನನೀಕ್ಷಿಸಿ ಮುನ್ನ ಗೇಹಮಂ ಪೊಕ್ಕು ಕುಕ್ಕುರಗೆ ಶಿವಮುದ್ರೆಯಂ ಮಾಡಿ ಕೂಡಿರೆ ಮಟ್ಟೆಗರು ಜಡಿಯೆ (ಶಾವತಂ. ೨-೨೩).

[ಮಟ್ಟೆ$_1$ + – ಗ$_2$]

**ಮಟ್ಟೆಬಡಕ** (ನಾ). = ಮಟ್ಟೆಗ : ಮಟ್ಟೆಬಡಕರ್ಕೈವರಿಗೆ ಮಡದಿಯಾಗುವುದು ಸಲ್ಲ ಪಟ್ಟೆಮಂಚಕೊಪ್ಪುವಂತೆ ಬಾರೆಯೆಂದನು (ಕುರಂಡ. ೩-೬೨-೧೦).

[ಮಟ್ಟೆ$_1$ + — ಬಡಕ$_2$ (< — ಬಡಿಕ$_2$)]

**ಮಟ್ಟೆಮಾವು** (ನಾ). ಒಂದು ಬಗೆಯ ಸಸ್ಯ : ವರುಣ (ಮಟ್ಟೆಮಾವು) ಇವು ಮಧುರ, ಸ್ವಲ್ಪ ಕಹಿ, ಕಫವಾತನಾಶಕ (ಅಷ್ಟಾಂಗ. ೧೩೯). [ ? ]

**ಮಟ್ಟು$_1$** ' ಮೊತ್ತು ' ನೋ.

**ಮಟ್ಟು$_2$** ' ಮಟ್ಟು$_1$ ' ನೋ.

**ಮಟ್ಟು$_3$** ' ಮಟ್ಟ ' ನೋ.

**ಮಟ್ಟು$_4$** ' ಮಟ್ಟೆ$_2$ ' ನೋ.

**ಮಟ್ಟು$_5$** (ನಾ). ವ್ಯವಸಾಯದ ಒಂದು ಉಪಕರಣ : ಕೃಷಿಯ ಒಂದು ಸಾಧನ : ಒಕ್ಕಲ ಮಕ್ಕಳು ತಮ್ಮ ಹೊಲದ ಮಟ್ಟುಗಳನ್ನು ಹೆಗಲ ಮೇಲೆ ಹೇರಿಕೊಂಡು . . . ಹಾಡುತ್ತ ಸಾಲಾಗಿ ಮನೆಗೆ ನಡೆದಿರುವರು (ಜಯಂತ. ೨೬೭). ' ಮುಟ್ಟು$_2$ ' ಪರಾ. [ ? ]

**ಮಟ್ಟುಗೊಳಿಸು** (ಕ್ರಿ). ಕಡಮೆ ಮಾಡು : ಶೀತೋಷ್ಣಗಳೆರಡರಿಂದೆಯುಂ ವಾತಮಂ ಮಟ್ಟುಗೊಳಿಸಿ ದೇಹಕ್ಕೆ ಸೌಖ್ಯಮನುಂಟುಮಾಡಿಕೊಳ್ಳಬೇಕು (ಕಾರಶಾಂ. ೦೬-೦೦೬) ; ಮಮಕಾರಂಗಳನೆಲ್ಲಾ ಮಟ್ಟುಗೊಳಿಸಿ ಸರ್ವತ್ರ ಬುದ್ಧಿಯಿಂದಾ ಸಾಧುಸಂಗವನೆಡೆಬಿಡದೆ (ತತ್ತ್ವಕ. ೧-೩).

[ಮಟ್ಟು$_2$ (< ಮಟ್ಟು$_1$) + ಕೊಳ್$_1$ + — ಇಸು$_3$]

**ಮಟ್ಟುಮಿಾರು** ' ಮಟ್ಟಮಿಾಱು ' ನೋ.

**ಮಟ್ಟುಮಿಾಱು** ' ಮಟ್ಟಮಿಾಱು ' ನೋ.

**ಮಟ್ಟೆ$_1$**, ಮೊಟ್ಟೆ$_1$ (ನಾ). ೧. ತಾಳೆ, ಈಚಲು, ತೆಂಗು ಮುಂತಾದ ಮರಗಳ ಗರಿ. – ಸೋಗೆ : ಮಟ್ಟೆಯಿಪ್ಪತ್ತೈದಾಗಿ ಹೊಂಬಾಳೆ ಬಿಟ್ಟಿತ್ತು (ಕಳಪ. II. ೨೨೬-೭೦). ' ಕುಚ್ಚುಮಟ್ಟೆ ', 'ಗೊದಮಟ್ಟೆ' ಪರಾ. ೨. ತೆಂಗಿನ ಸಿಪ್ಪೆ : ತೆಂಗಿನ ಮಟ್ಟೆಯುಂ ತಂದು (ಕೌತುಕಂ. ೩೦-೧); ಸಾವಿತ್ರಿ ನೀರು ಕಾಯಿಸುವುದಕ್ಕೆ ತೆಂಗಿನಕಾಯಿ ಮಟ್ಟೆ ಕವರಾಕಿದ್ದಳಂತೆ (ಪಪ್ಪುರು. ೦೩೧). ೩. ಹೊಂಬಾಳೆ : ' ಮಟ್ಟೆದೋಱು ' ಪರಾ. **ಮೊಟ್ಟೆ$_1$** : ೧. ತೆಂಗಿನ ಮರದಿಂದ ನಾಲ್ಕೈದು ಒಣಗಿದ ಮೊಟ್ಟೆ ಕೆಡವು (ರತ್ನ). ೪. ಒಂದು ಬಗೆಯ ಸಸ್ಯ : ಗುರಿಗೆ, ಮೊಟ್ಟೆ (ಪ್ರಕಿಗಿ. ೬೨-೧೯೯೧).

[ದೇ.॥ ತಮಿ. ಮಟ್ಟೈ ; ಮಲ. ತೆಲು. ಮಟ್ಟ]

**ಮಟ್ಟೆ$_2$** ' ಮೂಡೆ ' ನೋ.

**ಮಟ್ಟೆಗಟ್ಟು** ' ಮೂಡೆಗಟ್ಟು$_1$ ' ನೋ.

**ಮಟ್ಟೆದೋಱು** (ಕ್ರಿ). ಹೊಂಬಾಳೆ ಬಿಡು : ಮಟ್ಟೆದೋಱಿದ ತಂಗುಗಳ ಸಾಲಿಟ್ಟು ಬೆಳೆದಡಕೆಗಳ . . . ಫಲಭೂಜರಾಜಿಯು ಕಿತ್ತನಾ ಹನುಮ (ತೊರರಾ. ೩-೯-೩). [ಮಟ್ಟೆ$_1$ + ತೋಱು]

**ಮಟ್ಟೆಯ** ' ಮಟ್ಟ ' ನೋ.

**ಮಟ್ಟೆಸುಂಕ** (ನಾ). ಮೂಟೆಯ ಹೇರಿನ ಮೇಲೆ ಹಾಕುವ ಸುಂಕ, – ತೆರಿಗೆ : ಆಲಿದೆಱೆ ಆಡುದೆರೆ ಮಟ್ಟೆಸುಂಕ ಕಾವಲಿದೆಱೆ ಅಡಿದೆಱೆಯಿಪ್ಪೂಪುರದ ವೀರಭದ್ರದೇವರು ಅಂಗರಂಗಭೋಗಕ್ಕೆ ಸಲುಉ ಎಂದು ಲವಿಣಾಗ × × ಕೊಟ್ಟರಾಗಿ (ಎಕ. XIV. ಕೃಕ್ಷರಾ. ೮೦-೦೦ ; 1402).

[ ಮಟ್ಟೆ$_2$ (< ಮೂಡೆ) + ಸುಂಕ$_1$ ]

**ಮಟ್ಟೈಸು** ' ಮಟ್ಟಯಿಸು ' ನೋ.

**ಮಟ್ಯ**, ಮಟ್ಟ$_2$, ಮಟ್ಟು$_3$, ಮಟ್ಟೆಯ (ನಾ). ೧. [ಸಂಗೀತ] ಒಂದು ತಾಳದ ಹೆಸರು : ಬಳಿಕ -ಧ್ರುವ ಮಟ್ಯ [ಶಾತಾಂ. ಮಟಯ] . . . ಜಯಾಳವೆಂಬವೇ ಮೊದಲಾದ ನೂಱೊಂದು ತಾಳಂಗಳಾದೊಡೆ (ಎವೇಕ. ೦೯೨). **ಮಟ್ಟ$_2$** : ೧. ಮಟ್ಟ ಎಂಬುದು ವಿಶಿಷ್ಟವಾದ ತಾಳವನ್ನು ಸೂಚಿಸುವ ಹೆಸರು (ಪಾಡೋಜ. ೨೬೯) ; ಆದಿತಾಳದಿಂದ ಧ್ರುವ, ಮಟ್ಟ, ರೂಪಕ, ಝಂಪೆ, ತ್ರಿವುಡೆ, ಅಟ್ಟ, ಏಕತಾಳಗಳು ಹುಟ್ಟಿದವು (ಜುಕ್ಷಗಾ. ೨೩). **ಮಟ್ಟು$_3$** : ೨. ಪದ್ಯ ಅಥವಾ ಹಾಡನ್ನು ರಚಿಸುವ ಛಂದಸ್ಸಿನ ರೀತಿ, – ಕ್ರಮ : ರಗಳೆಯ ಮಟ್ಟನಲ್ಲಿ ತಾವು ಹಾಡಿ ಹೊಗಳಿರುವ ಪಾಂಡ್ಯ, ಚೋಳ, ಚೇರ, ಗುರ್ಜರರು ? ಅವರೂ ರಾಜರಷ್ಟೆ ? (ತುಂಗಭ. ೯೩) ; ಕನ್ನಡದಲ್ಲಿ ಕಾವ್ಯರಚನೆಗೆ ಇದುವರೆಗಿದ್ದ ಮಟ್ಟುಗಳೇ ಸಾಲುತ್ತಿರಲಿಲ್ಲವೆ ? (ಸವಿಾರೋ. ೦೬೯). ೩. ಹಾಡಿನ ದಾಟಿ: ಹಿಂದೆ ತಾನು ಕಲಿತ ಪ್ರತಿಯೊಂದು ನಾಟಕದ ಮಟ್ಟುಗಳನ್ನು ಶ್ರಾವ್ಯವಾಗಿ ಅಂದು ತೋರಿಸುತ್ತಿದ್ದ (ಕತ್ತಿ. ೬೩). **ಮಟ್ಟೆಯ** : ೧. ರಚ್ಚೆಯ ಮಟ್ಟೆಯ ಪಡಿಮಟ್ಟೆಯ -ಝಂಪೆಯುಮಡ್ಡತಾಳ ರೂಪಕಮೆಕ್ಕತಾಳಂಗಳೆಂಬ ಸಪ್ತತಾಳಂಗಳಂ ನಿವರ್ತನಗೆಯ್ದು (ಪಾರಪು. ೯-೦ ಪ). ' ಪಡಿಮಟ್ಟೆಯ ', ' ಪಡಿಮಟ್ಟೆಯ ' ಪರಾ. [< ಸಂ. ಮಠ್ಯ. / ತಮಿ. ಮಟ್ಟಿಯಮ್]

**ಮಠ** (ನಾ). ೧. ಸಂನ್ಯಾಸಿಗಳು ವಾಸಿಸುವ ಕುಟೀರ ; ಸಂನ್ಯಾಸಿಗಳ ವಾಸಸ್ಥಾನ ; ಆಶ್ರಮ : "ಬ್ರತಿಗಳಿರ್ಪ ಮನೆ ಮಠಮೆಂಬುದು" (ಹಣಯು. ೩೦-೦೪೩) ; " ವ್ರತಿಗಳಿಹ ಠಾವದು ಮಠಂ " (ಮಂಗರಾ. ೩-೭೬) ; ಸನ್ಯಾಸಿಗಳ ಮಠವೆಯ್ದೆ ಬೇಯಿತ್ತು (ಬಸಪು. ೩೬-೩೩). ೨. ಧಾರ್ಮಿಕಬೋಧನೆ, ಪ್ರಸಾರ ಹಾಗೂ ವಿದ್ಯೆಯ ಬೋಧನೆ, ಪ್ರಸಾರಗಳನ್ನು ನಡೆಸುವ ಆಧ್ಯಾತ್ಮಿಕಸಂಸ್ಥೆ ಅಥವಾ ವಿದ್ಯಾಕೇಂದ್ರ ; ವಿದ್ಯೆ, ಜ್ಞಾನ, ಮತ, ಧರ್ಮಗಳ ಪ್ರಸಾರಕಾರ್ಯವನ್ನು ನಡೆಸುವ ಸ್ಥಾನ : ಸಂಸ್ಥಾನ : " ಮಠಃ, ಛಾತ್ರಾದಿನಿಲಯಃ – ಗುರುಗಳೂ, ಶಿಷ್ಯರೂ, ಸನ್ಯಾಸಿಗಳು, ಬ್ರಹ್ಮಚಾರಿಗಳೂ ಇಂಥವರು ವಾಸಮಾಡುವ ಸ್ಥಳ, ಮಠ, ಯತಿಸ್ಥಳ " (ಸಿದ್ಧಾಂತಿ. ೦೦೦) ; ಆ ಮಠಂ ಪುರಾಣ ಕಮಠನಂತೆ ಸಕಳಲೋಕಾಧಾರಮುಂ . . . ಭವಾನೀಭವನದಂತೆ ಬ್ರಹ್ಮಚಾರಿಸದಾಚಾರಸಂಭಾವಿತಮುಂಮಾಗಿರ್ಪುದು (ಎಕ. VII. ಶಿಕಾರಿ. ೦೦೨-೩೭; 1156) : ನಮ್ಮ ಪೂರ್ವಿಕರಲ್ಲಿ ಹಲವರು ಉತ್ತರಾದಿಮಠದ ಸ್ವಾಮಿಗಳಾಗಿದ್ದರು (ಕಂಪಿ. ೨೯೯) ; ವಿಷ್ಣುತೀರ್ಥರು ಉಡುಪಿಯ ಅಷ್ಟಮಠಗಳ ಪೈಕಿ ಸ್ವಾದೀಮಠದ ಪೀಳಿಗೆಗೆ ಮೂಲಪುರುಷರಾದರು (ಕಥಾ. ೦೦೯). ೩. ಮಹಾವ್ಯಕ್ತಿಗಳು ದೇಹ ತ್ಯಜಿಸಿದ ಮೇಲೆ ಅವರ ಯಾವುದಾದರೂ ಕುರುಹನ್ನು ಪೂಜಿಸುವ ಸ್ಥಳ ; P ಕಾಲಕ್ರಮೇಣ ಬೆಳವಣಿಗೆ ಹೊಂದಿ ಸಾರ್ವಜನಿಕಸೇವೆ ಇತ್ಯಾದಿಯನ್ನು ನಡೆಸುವ ಸಂಘ, – ಸಂಸ್ಥೆ : ಚಿತೆಯಿಂದ ಚೈತ್ಯ, ಸ್ತೂಪ, ಮಠಗಳು ಮಹಾವ್ಯಕ್ತಿಗಳ ಭಸ್ಮಾವಶೇಷವನ್ನೋ ಮತ್ತಾವುದೇ ಅವರು ಬಳಸಿದ ಸಾಮಗ್ರಿಗಳನ್ನೋ ಇಟ್ಟು

ಪೂಜಿಸುವ ಸ್ಥಳಗಳಾದುವು (ಶಾಂತಿ. ೧೨೦); ಕಲ್ಕತ್ತದ ವಠಾಪನಗರದಲ್ಲಿದ್ದ ಹಾಳುಮನೆಯ ಮಠದ ಇಬ್ಬರು ತರುಣಸಂನ್ಯಾಸಿಗಳು. . . ದಕ್ಷಿಣೇಶ್ವರ ದಲ್ಲಿ ಧ್ಯಾನ ಜಪತಪಗಳಲ್ಲಿ ಕಳೆಯಲೆಂದು ಭವತಾರಿಣಿಯ ಸನ್ನಿಧಿಗೆ ಬಂದಿದ್ದರು (ಮುಕುಟ. ೩೬೦). ೪. (ಯಾತ್ರಾರ್ಥಿಗಳಿಗೆ, ಸಾಧುಸಂತರಿಗೆ ನಿರಂತರವಾಗಿ ಅನ್ನದಾನ ನಡೆಸುವ ದೇವಸ್ಥಾನ ಅಥವಾ ಮಠಕ್ಕೆ ಸೇರಿದ) ಭೋಜನಶಾಲೆ; ಅನ್ನಛತ್ರ : ಅವಾರಿ ಸತ್ರುವ ನಡಸುವಂತಾಗಿ ಲಕ್ಷ್ಮೀನಿಬಿಯವೆಂದ್ಬು ತನ್ನ ಹೆಸರಲು ಮಠಂ × × × [ಮಾ]ಡಿಸಿ (ಎ. XXX, ೩೭–೦೩; 1220); ಕಾಮದೇವನಾಯಕರು ಆಚಂದ್ರಾರ್ಕ ಸ್ಥಾಯಿಯಾಗಿ ಪ್ರತಿದಿವಸವೂ ಹಂನೆರಡು ಪ್ರಜೆ ಬ್ರಾಹ್ಮಣಭೋಜನಕ್ಕೆಂದು ಕಟ್ಟಿಸ್ತ ಮಠದ ಚತುಸೀಮೆಯ ವಿವರ (ಶಾಇ. VII, ೩೯೭–೦೩; 1387); ತುಟೀ ಕಟ್ಟಿದ ಮೇಲೆ ಮಠದ ಭೋಜನ ಯಾಕೆ ? (ಗಾದೆ). ೫. ಗುಡಿ ; ದೇವಾಲಯ : ಶ್ರೀಕೃಷ್ಣಮಠ : ಉಡುಪಿಯ ಕೇಂದ್ರಾಕರ್ಷಣೆಯಾದ ಶ್ರೀಕೃಷ್ಣದೇವಾಲಯ ಸಣ್ಣದಾದರೂ ಅಚ್ಚುಕಟ್ಟು (ಕರ್ಕೋ. II, ೩೬೮); ಗುರುವಾರ ರಾಯರ ಮಠದಲ್ಲಿ ವಿಶೇಷಪೂಜೆ ನಡೆಯುತ್ತದೆ (ರೂಢಿ). ೬. ನಿವಾಸ ; ವಾಸಸ್ಥಾನ : ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ ಆ ಭಕ್ತನು . . . ತನು ಕರಗಿ ಮನ ಕರಗಿ ನೋಡಿ ಮಾಡುವುದು ಭಕ್ತಿಸ್ಥಲ (ಬಸವ. ೮೬೪); ಸತ್ಯಸದ್ಭಕ್ತರ ಮಠವನರಸಿಕೊಂಡು ಹೋಗಿ ಲಿಂಗ ಮುಂತಾಗಿ ಭಕ್ತಿಭಿಕ್ಷೆಯ ಬೇಡುವೆ (ಅಲಂಪ್ರ. ೦೪೯–೦೩೩); ಹಾದೀಲಿ ಹೋಪೊ ಜಾಣ ಸಾರಗ ಹಿಂದೆ ಗ್ನಾನೀಸಿ ಹೋಪೋ ನವಿಲ್ಟೆಂಡೆ-ಸಾರಗದ್ದಿಂಡೆ ಜಾಣ ಗಿರಿಜೆಯ ಮಠವೆಲ್ಲಿ (ಹಗ್ಗ. ೨೩). ೭. (ಮುಖ್ಯವಾಗಿ ಬ್ರಾಹ್ಮಣಬಾಲಕರಿಗಾಗಿ ವಿಾಸಲಾಗಿರುತ್ತಿದ್ದ) ಪಾಠಶಾಲೆ ; ಶಿಕ್ಷಣಶಾಲೆ : ಗಿಳಿಗಳೋದುವ ಮಠ ನವಿಲ್ಗಳ ನರ್ತನನಿಳಯವು . . . ಎಂದೆನಲಾ ಪೊಳಲುಪವನಮೆಸೆದಿಹುದು (ಶಂಕರಾ. ೯–೩೨); ನಿಮ್ಮ ಮನೆ ಮಾಣಿಗೆ ವರ್ಷ ಐದು ತುಂಬಿಯಾಗುತ್ತದೆ. ನಮ್ಮ ಮಠಕ್ಕೆ ಕಳುಹಿಸ ಬಹುದಲ್ಲ (ಮುಕುಟ. ೦೬೯); ಊರ ದೇಗುಲದಲ್ಲಿ ಏಗಳ ಮಠವಿತ್ತು (ಶಾಕುತ್ತ. ೩೩). 'ಕೂಲಿಮಠ' ಪರಾ. ೮. (ಧರ್ಮಪ್ರಚಾರ ಮತ್ತು ಸಾರ್ವಜನಿಕಸೇವೆ ನಡೆಸುವ) ಕ್ರೈಸ್ತಮತೀಯರ ಧಾರ್ಮಿಕ ಸಂಸ್ಥೆ: ಕ್ರೈಸ್ತಮಿಷನರಿಸಂಸ್ಥೆ : ಕ್ರೈಸ್ತಮಠಯೆನಿಸಿಕೊಳ್ಳ ಬೇಕಾದರೆ ಅದು ಸ್ವಯಮಾಡಳಿತಸಂಸ್ಥೆಯಾಗಿದ್ದು ಧರ್ಮಸಭೆಯ ನಿಯಮಾವಳಿಯನುಸಾರ ಸ್ಥಾಪಿತವಾಗಿರಬೇಕು (ಕರ್ಕೋ. V, ೩೦೩). ೯. ವ್ಯಕ್ತಿಯ ಹೆಸರಿನ ಕೊನೆಯಲ್ಲಿ ಸೇರುವ (ಸ್ವಸ್ಥಳ ಅಥವಾ ಮನೆತನಕ್ಕೆ ಸಂಬಂಧಪಟ್ಟ) ಶಬ್ದ ; ಉದಾಹರಣೆಗೆ —'ಜವುಖಂಡಿ ಮಠ', 'ಮೈಸೂರುಮಠ', 'ಹಿರೇಮಠ', ಇತ್ಯಾದಿ. ೧೦. ಎತ್ತು ಗಳು ಎಳೆಯುವ ಗಾಡಿ. [ಸಂ.]

**ಮಠದೇಜಿ³** (ನಾ). ಮಠದ ಆದಾಯಕ್ಕೆ ಹಾಕುತ್ತಿದ್ದ ತೆರಿಗೆ : ಸೋಮಯ್ಯದೇವರ ಪುರದ ಮಠದೇಜಿಯ ಗದ್ಯಾಣ ನಾಲ್ವತ್ತು ಹೊನ್ನನು . . . ಕೊಟ್ಟರು (ಎಕ. VI, ತರೀಕೆ. ೯–೬; 1265).

[ ಮಠ + ತೆಜಿ³ ]

**ಮಠಪತಿ** (ನಾ). ಆಶ್ರಮದ ಮುಖ್ಯಸ್ಥ; ಮಠಾಧಿಪತಿ : ಅಷ್ಟ ವಿಧಾರ್ಚನೆ ಮಠಪತಿ ವಾಸ ವೈಷ್ಣವರಾಹಾರದಾನಕಂ ಬಿಟ್ಟ ದತ್ತಿ (ಎಕ. XIV, ನಾಗಮಂ. ೦೪೦–೬೬ ; ಶ. 1224); ಅಲ್ಲಿಯ ಮಠಪತಿಗಳಾದ ಚತುರಾನನ ಮತ್ತು ವಾಗೀಶ್ವರಪಂಡಿತರನ್ನು ಕಂಡನು (ಕರ್ನಾಸಂ. ೨೮).

[ಸಂ.]

**ಮಠವೃತ್ತಿ** (ನಾ). ಮಠಕ್ಕಾಗಿ ನೀಡಿದ ತೆರಿಗೆಯಿಲ್ಲದ ಭೂಮಿ: (ಕೃಷ್ಣಗ. II, ೩೬೬). [ಸಂ.]

**ಮಠಾಧಿಪತಿ** (ನಾ). ಆಶ್ರಮದ ಮುಖ್ಯಸ್ಥ.-ಗುರು ; P ಮಠಾಧಿ ಪತಿಗಳಿಗೆ ಬೇರೆ ಬೇರೆ ಮಠಗಳಲ್ಲಿ ಬೇರೆ ಬೇರೆ ಹೆಸರುಗಳಿರುತ್ತವೆ. ಉದಾಹರಣೆಗೆ ' ಗಿರಿ ', ' ತೀರ್ಥ ', ' ಭಾರತಿ ',—ಇತ್ಯಾದಿ : ಈತನಿಗೆ ಆಚಾರ್ಯ, ಕುಲಪತಿ, ಗುರು, ಜಗದ್ಗುರು, ಸ್ವಾಮಿ, ಯತಿ, ಯತೀಂದ್ರ, ದೇಶಿಕ, ದೇಶಿಕೇಂದ್ರ ಇತ್ಯಾದಿ ಹೆಸರುಗಳು ಇರುತ್ತವೆ. ಮಠಾಧಿಪತಿಗೆ ನಿಯತವಾದ ವೇಷಭೂಷಣಗಳುಂಟು (ಕರ್ಕೋ. XII, ೦೦೦೪) ; ಮಠಾಧಿಪತಿಯ ಪಾತಿತ್ಯಕ್ಕೆ ತಾನೂ ಹೊಣೆಯಾಗುವುದಾಯಿ ತೆಂಬ ವ್ಯಸನದಿಂದ ಬೆಂಡಾದನು (ವಾಗ್ದೇವಿ. ೯). [ಸಂ.]

**ಮಠಾಧೀಶ** (ನಾ).=ಮಠಾಧಿಪತಿ : ಮಠಕ್ಕೆ ಕರತಂದು ಮಹಮಠಾಪೂರ್ವಕ ಮಠಾಧೀಶರ ಭೇಟಿಯನ್ನು ಮಾಡಿಸಿದನು (ವಾಗ್ದೇವಿ. ೬೬). [ಸಂ.]

**ಮಠಾರಿ** (ನಾ). ಬಡಾಯಿ ಕೊಚ್ಚುವವಳು ; ಗರ್ವದ ಮಾತನಾಡು ವವಳು : ಒಳ್ಳೇ ಸುಂದರಿ, ಅದಕ್ಕೆ ತಕ್ಕ ಹಾಗೆ ಲಟಕಿ ನಡತೆಯಲ್ಲಿ, ಮಾತುಕಥೆಗಳಲ್ಲಿ ಬಹು ಮಠಾರಿ (ಅಮಾಲಿ. ೦೬೬).

[ ← ಮರಾ. ಮಠಾರಣೇ = ಗರ್ವಿಷ್ಠನಾಗು, ಉನ್ಮತ್ತನಾಗು. / ತೆಲು. ಮಿಟಾರಿ]

**ಮಠ್ಯ** (ನಾ). [ಸಂಗೀತ] ಒಂದು ತಾಳದ ಹೆಸರು : ಮಠ್ಯನೆಂಬ ಮೂರನೆಯ ಅಲಂಕಾರವನ್ನು ಈಗ ನಿರೂಪಿಸಲಾಗುವುದು (ತತುತ್ರ. ೨೮). 'ಮಠ್ಯತಾಳ' ಪರಾ. [ಸಂ.]

**ಮಠ್ಯತಾಳ** (ನಾ). = ಮಠ್ಯ : ಮಠ್ಯತಾಳದಲ್ಲಿ ರಚಿತವಾಗಿರುವುದಕ್ಕೆ ಮಠ್ಯ(ಅಲಂಕಾರ)ವೆಂಬ ಪ್ರಸಿದ್ಧಿಯಿದೆ (ತತುತ್ರ. ೨೮) : ಧ್ರುವತಾಳ, ಮಠ್ಯತಾಳ . . . ಏಕತಾಳ ಇವೇ ಸೂಳಾದಿ ಸಪ್ತತಾಳಗಳು (ಸಂಗೀತಂ. ೫೯).

[ಸಂ. ಮಠ್ಯತಾಲ]

**ಮಡ₁**, ಮಡ್ಡಿ₃, ಮಿಡಿ₃ (ನಾ). ೧. ಪಾದದ ಹಿಂಭಾಗ ; ಹಿಮ್ಮಡಿ : " ಹಿಂದೆ ಸೆಳೆವನಲ್ಲಿಯುಂ ಮಡದಲ್ಲಿಯುಂ ಪಾರ್ಷ್ಣಿಯೆಂಬುದು " (ಶಬ್ದಾನು. ೦೩೬–೩೭) ; ಮಡದೆಡೆ ನಾಲ್ದೆರಲುಂಗುಟದೆಡೆಯೊಗ್ಗೇಣಾಗೆ ನಿಲವು ಋಜ್ವಾಗತಮಂ ಗೆಡೆಗೊಳೆ ವಾಚಂ ಯಮತೆಯೊಳೊಡಂಬಡು ಪಡೆದು ನಿಂದನಾದಿಮುನೀಂದ್ರಂ (ಆದಿಪು. ೯–೫೯) : ಉಂಗುಟಮಂ ಮಹೀತಳದೊಳೂಜಿ ಮಡಂ ನಿಮಿರಲ್ಕೆ ನಿಚ್ಚಿ ನಿಂದಂ (ಜಗಂ. ೦೪–೭೩). ೨. ರಥದ ಚೌಕಟ್ಟು : ಸಿಡಿಲ್ ಪೊಡೆದಂತೊರ್ಮೆಯೆ ಸೂಸಿ ಪಾಱಿದ ಮಡಂ ಸುಗ್ಗಾದ ಕೀಲ್ . . . ಕಣ್ಗೊಂಡುದುಗ್ರಾಜಿಯೊಳ್ (ಪಂಪಭಾ. ೦೦–೯೦) ; ಕದನದೊಳಾರ್ದು ಸಾರ್ದಿಸೆ ಮಹಾರಥರಚ್ಚು ಸಿಡಿಲ್ದುದೀಸು ಸೂಸಿದುವರಗೀಲ್ ಕಟಿಲ್ದುದು ಮಡಂ ಕಡಿವೋದುವು (ಪಂಪಭಾ. ೦೩–೬೯) : ಪಾರ್ವರ ಕೇರಿಯಂತೆ ಚೆಂದಂಬಡೆದ ಮಡಬಿನೆಸೆದಂ ತೇರೆಸೆಸಂ (ಕಬ್ಬಿಗಾ. ೫೦) ; " ಮಡ = ಮಠ " (ಕನ್ನಡಾ. ೪೩೩). ಮಡ್ಡಿ₃ : ೧. ಒಡನಿದ್ದ ಸೇವಕರೆಲ್ಲರ ತೊಲಗಿಸಿ ಮಡಿ ಮುಟ್ಟ ಧೋತ್ರವನುಟ್ಟು . . . ನಡೆದನಾ ರಾಯ (ಭರತ. ೩–೫). ಮಿಡಿ₃ : ೧. ಮಿಡಿ ಮುಟ್ಟದ ಕೆಂಜೆಡೆಯವನ ಮೈಯಲ್ಲಿ ವಿಭೂತಿಯ ಧರಿಸಿದವನ (ಬಸವ. ೫೦೩) ; ನಡೆಪುತೆಡಹಿದ ವಟ್ಟದಾನೆಯ ಮಿಡಿಯ ಹೊಯ್ವರೆ ಜೀಯ (ಕುಮಾರವ್ಯಾ. ೦೬–೨೬). ೩. (ಕಾಲಿನ) ಮಿಾನಖಂಡ : ಮಿಡಿಯುಂ ಪಱಿಯಿಯುಂ ಮೂಳೆಯುಂ ಮುಱಿಯಿಯುಂ (ಆದಿಪು. ೦೨–೧೦ ವ) ; ಬಲ್ಲವರು ನಡೆವ ದಾರುವ ಮುಗ್ಗಿದಡೆ ನಡೆಸಿಕೊಂಬುದಲ್ಲದೆ ಮಿಡಿಯ ಹಱಿಯೆ ಹೊಯ್ದುವರುಂಟೆ ಲೋಕದೊಳಗೆ (ತತ್ವವ. ೮. ೦೩೫–೩೦೫) ; ದಾರುವ ಮುಗ್ಗಿದಡೆ ದಾಗೆಯಲಿ ಅದರಿಸಬೇಕಲ್ಲದೆ ಅದ ಗಾರು ಮಾಡಿ ಹೊಯ್ಯುವರೇ ಮಿಡಿಯನು (ಬೋಳಬಸ. ೫೨–೨೦೪) ; ಅಡಿ ಮಿಡಿ ತೊಡೆ ನಡುವಿನಿತಂ ಪಿಡಿವೆಡೆಯೊಳ್ ನಾಯನೊಂದು ಕೋಡೊಳ್ ಕ್ರೋಡಂ ಜಡಿವಡಸಿ ಪೊಡೆಯಲ್ (ಸುಕುಸು. ೩–೨೨೩). [ದೇ.⁹ ಮಲ. ಮಡಮ್ಬು ; ಕೊಡ. ಮಡಿ ; ತೆಲು. ಮಡಮು, ಮಡ್ಮ, ಮಡಿಮು]

**ಮಡ₂** 'ಮಡೆ₁' ನೋ.

**ಮಡ₃** 'ಮಟ' ನೋ.

Δ **ಮಡಂಗು** 'ಮಡಗು' ನೋ.

**ಮಡಂಬ,** ಮಟಂಬ (ನಾ). ದೇಶದ ಒಂದು ವಿಭಾಗ : ಗ್ರಾಮನಗರ ಖೇಡಖರ್ವಡಮಡಂಬಪತ್ತನದ್ರೋಣಾಮುಖಂಗಳಂ ವಿಹಾರಿಸುತ್ತುಂ (ವರ್ಧ್ಮಾ. ೬-೨) ; "ದೂರಸ್ಥಲ, ಸೀಮಾಂತದಲ್ಲಿರುವ ಪುರ" (ವರ್ಧ್ಮಾ. ಟಿಪ್ಪಣಿಗಳು. ೧೯೯) ; ಪಂಚಶತ ಗ್ರಾಮಪರೀತಂಗಳಪ್ಪ ಮಡಂಬಂಗಳುಮಂ (ಆದಿಪು. ೬-೬೩ ವ) ; ಗ್ರಾಮ ನಗರ ಖೇಡ ಖರ್ವ್ವಡ ಮಡಂಬದ್ರೋಣಾಮುಖಪುರಪತ್ತನ (ಎಕ. VII, ಶಿಕಾ೦. ೧೦೯-೬೬; 1181). **ಮಟಂಬ :** ಗ್ರಾಮನಗರಖೇಟಖರ್ವಟಮಟಂಬಪತ್ತನದ್ರೋಣಾಮುಖ ಸಂವಾಹನಿಚಯನಿಚಿತಮುಂ (ಜಗಖ. ೨-೧ ವ). [<ಪ್ರಾ. ಮಡಂಬ = ನಾಲ್ಕು ಕಡೆಗಳಲ್ಲಿ ಒಂದು ಯೋಜನದವರೆಗೆ ಯಾವ ಹಳ್ಳಿಯೂ ಇಲ್ಲದಿರುವ ಗ್ರಾಮ]

**ಮಡಕಾಲ್** 'ಮಡಗಾಲ್' ನೋ.

**ಮಡಕಿ,** ಮಟ್ಟಿಕೆ, ಮಡಿಕೆ₄, ಮಟಕಿ (ನಾ). ಒಂದು ಬಗೆಯ ದ್ವಿದಳ ಧಾನ್ಯ ; "ಅಕ್ಕಡಿಕಾಳು" (ಜಾನಕೋ. ೨೬) : ಜೋಳವಮಂ ನಿಖಿಲರೀವುದನು ನೀನರಿದರಿದು ಜೋಳಿಗೆಯೊಳೇಕೆ ಮಡಕಿಯನು ನೀಡಿದೆ ಗೌತ (ಮಾಸಾಂಶೀ. ೨೬-೨೮) ; ಮಡಕಿಯು ಬಿತ್ತ್ಯಾರ ಮಡಿಕಿಯು ಬೆಳೆದಾರ ಮಡಕಿಗೆ ನೀರ ತಿರುವ್ಯಾರ ಆ ಊರ ಬಿಡಿ ಕೇರು ಬಂದಾರ ಮದುವಿಗೆ (ಲೋಕಗೀ. ೨೬). **ಮಟ್ಟಿಕೆ :** ಹೆಸರು ಮಟ್ಟಿಕೆಗಳನ್ನು ತೊಳೆದು ತರೋಣ ನಡಿರಿ (ಅಕೋಕ. ೧೧೯). **ಮಡಿಕೆ₄ :** ನರುವಲು, ನಾರಲೆ, ನರವೆ, ಮುಸ್ನು, ಮಡಿಕೆ (ವ್ಯಾಕಿಗ. ೬೪-೧೩೦೦). **ಮಟಕಿ :** ಮುಂಗಾರಿಯ ಧಾನ್ಯವೆಂದರೆ . . . ಜೇರಿಗೆ, ಪುಂಡಿ, ಮಟಕಿ, ಉದ್ದು, ತಿಂಗಳದ ಅವರೆ, ಸಣಬು ಮೊದಲಾದ ಹದಿನೆಂಟು ಜೀನಸದ ಧಾನ್ಯಗಳಲ್ಲಿ ಕೆಲವು ಧಾನ್ಯಗಳು (ಕೃಚಿಕ್ರ. ೬೩). [ < ಸಂ. ಮಡಕ. / ಮರಾ. ಮಟಕೀ, ಮಡಗೀ ]

**ಮಡಕೆ₁** (ನಾ). ೧. ಮಣ್ಣಿನಿಂದ ಮಾಡಿದ ಪಾತ್ರೆ ; ಮಣ್ಣಿನ ಪಾತ್ರೆ: "ಉದಾ. ಸ್ಥಾಲೀ, ಚರುಃ, ಕುಂಭೀ, ಪಿಠರಂ, ಕುಂಡಂ — ಈ ೬ ಮಡಕೆ" (ಸಿರಾಯು. ೩೨-೦೩೯) : ಮಡಕೆಯು ಮಾಡುವರೆ ಮಣ್ಣೇ ಮೊದಲು (ಬಸವ. ೬೦) ; ಕುಡಿಯೊ ಗೆಳೆಯ ರಸಕೇನು ಕೊರತೆ ಏನುತಿ ಹದು ಮಡಕೆ ನೋಡಾ (ಅರಳು. ೦೦೩-೦೫). ೨. ಪಾತ್ರೆ ; ಭಾಜನ : ಮರದ ಕೆಬಗೆ ಪೊನ್ನ ಮಡಕೆಯೊಳ್ ಬೋನಮನೊಡ್ಡಿ (ವರ್ಧ್ಮಾ. ೯೯-೦೨). [ ದೇ.॥ ತಮಿ. ಮಟಾ, ಮಿಟಾ ; ಮಲ. ಮಿಡಾವ್ಯ, ಮಿಟಿಯಾವು; ತುಳು. ಮಡಕೆ ; ಕೂಇ. ಮಟಿ./ ಪ್ರಾ. ಮಡಕ್ಕ./ ಮರಾ. ಮಡಕೀ, ಮಡಕೇ ]

**ಮಡಕೆ₂** 'ಮಡಿಕೆ₂' ನೋ.

**ಮಡಗಾಲ್,** ಮಡಕಾಲ್ (ನಾ). ಮಂಡಿಯಿಂದ ಕಣಕಾಲಿನ ವರೆಗಿನ ಕಾಲಿನ ಭಾಗ: ಮಂಡಿಯಿಟ್ಟು ಪಿಂದೆ ಸಸಿನಂ ಮಡಗಾಲ್ಗಳಿಂದಿರೆ (ಪುಷ್ಪಪು. ೩-೩೦). **ಮಡಕಾಲ್ :** ಒಡಿಕೆಯರ್ ತೀವಿದ ಕೂರ್ಗಣೆ ಮಡ ಕಾಲ್ವರಮುಲಿವ ಕಜ್ಜಿ. . . ಪೆಡಂಗನೊಳ್‌ಕೋಳೆ ಧನುರ್ಧರರ್ ಪೆಣೆದೆಟ್ಟರ್ (ಪಂಪಭಾ. ೦೦-೬೦). [ ಮಡ₁ + ಕಾಲ್₁ ]

**ಮಡಗಿಸು** (ಕ್ರಿ). ಇರಿಸು ; ಇಡುವಂತೆ ಮಾಡು : ತಾವಡಿದೊಳೆಪ್ಪದ ಕೆಂದು ಬೇಜ್ ಮಡಗಿಸುವುದು ಮರ್ಯಾದೆಯುಜಿತು ನೀರ ಕೊಡಗಳ ಕಾಲ ಪಾಲಕಿಯರು (ಹರಿ. ೬-೨೩). [ ಮಡಗು + — ಇಸು₃ ]

**ಮಡಗು,** ಮಟಗು, ಮಟುಕು, ಮಡಂಗು, ಮಡುಗು, ಮೊಡಗು (ಕ್ರಿ). ೧. ಇಡು ; ಇರಿಸು : ಅಲರ್ಗಣೆಯಿಲ್ಲದೆ ಲೋಕಮನೊಲಿಸಿ ದವಂ ನಿನ್ನ ಬಸಿಜರೊಳುದಯಿಪ ಮದನಂ ಲಲನೆ ಮುಡಿ ಮಡಗದಂಬ ಪೊಲಲವರ್ಗಸಿಗವಿತ್ತಳೆಮುರಿ ಸಿರಿಮುಡಿಗೊರ್ವಳ್ (ಅನಂಪು. ೯-೯೯) : ಆ ಸುವತಿ ತಾಂಬೂಲಮಂ ಮುಂದೆ ಮಡಗಿ ಬಿಸ್ಸೈಸಿದಳು (ಸೌಂದಪು. ೦೬-೪೨) ; ಸತ್ತ್ವವನೆಲ್ಲಿ ಮಡಗಿದಿರಿ ಭಟರೆನುತೆ ಮೊದಲಿಸಿದಂ ವಿಳನ ಸೇನಾನಿ ಲಂಭನಂದು (ತಿರುಪು. ೨೪-೦೪) ; ಬಡವ ನೀ ಮಡಗಿದ ಹಾಗಿರು (ಗಾದೆ). ೨. ಬಚ್ಚಿಡು ; ಗೋಪ್ಯವಾಗಿಡು ; ಅಡಗಿಸು : "ಮಡಗು - ಗೋಪನೇ (ಮುಚ್ಚಿಡು) " (ಕವಮಾ) ; ಬಡತನವಾದಂದಿಗೆಂದೊಡವೆ ಗಳಂ ಮಡಗಬೇಡದೆಂತೆನೆ ಪೂಣ್ಕೆ ಕಿಡೆ ಮಡಗಿದೊಡವೆ ಕಿಡುಗು ಕಿಡದಲ್ತೆ ಪರಾರ್ಥವಾಗಿ ಕೊಟ್ಟವರರ್ಥಂ (ಪಂತಶಂ. ೩೦೦-೩) ; ಆಯುಷ್ಯವುಂಟು ಪ್ರಳಯವಿಲ್ಲೆಂದು ಅರ್ಥವ ಮಡಗುವಿರಿ (ಬಸವ. ೨೦೦). ೩. ಅಲುಗಾಡ ದಂತೆ ಇರಿಸು : ಚಲಿಸದಂತೆ ಇಡು : ಸಾಲದೆ ಮೇಣಸಿವ್ಯಾಧಿ ಜೇಪಾಳದ ಶಿರಂಳೊಂದುಭಾಗಮಾಗಿರೆ ಜಂಬೀರಾಳಿಯ ಫಲರಸದಿಂ ಪ್ರಕ್ಷಾಲಿಸಿ ತಮ್ರಸಮೊರಿಸಿ ಮಡಗೊಟುದಿನಂ (ಖಮಂದ. ೬-೩೦). ೪. ಉಳಿಸು : ಉಳಿಯುವಂತೆ ಮಾಡು : ಮನೆಹಾಳು. ಇನ್ನು ಬಾಕಿ ಏನು ಮಡಗವರೆ. ಎಲ್ಲಾ ಮಾಡಿಬಿಟ್ಟವರೆ (ಸಾಹೇಬ್. ೩೨೦). ೫. ಇಟ್ಟು ಕೊಂಡಿರು ; ರಖಾವು ಮಾಡಿಕೊಳ್ಳು : ನೀನೇಕೆ ಚಾಮುಂಡೀಯ ಮಡಗಿದ್ದೀಯಾ ? (ಜಾಡಗೀ. ೬೩). ೬. ಹೊಡೆ : ಬಡಿ : ತಪ್ಪಗೆ ಎರಡು ಮಡಗಬೇಕಾಗಿತ್ತು (ಅೀಮಣ. ೩೨). **ಮಟಗು:** ೭. ಗುದ್ದು ; ಮೊಟ್ಟು : ಶಿಕ್ಷಿಸಲು ಅವನ ತಲೆಯ ಮೇಲೆ ನಾಲ್ಕು ಮಟಗಿದೆನೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ (ಕಮಕ. ೩೩). **ಮಟುಕು :** ೮. ಗದರಿಸು ; ಜಬರಿಸು: ತಪ್ಪನ್ನು ತಿದ್ದಿಕೊಳ್ಳೋದಕ್ಕೇನೇ ನೀವಿಬ್ಬರೂ ಅವಕಾಶ ಕೊಡದೇ ನನ್ನ ಮಟುಕುತಾ ಇದ್ದರೆ (ಉಮಾಕ. ೯೦). **ಮಡಂಗು :** ೧. ಸುಪ್ರಬಿಯುಟ್ಟ ತಂದು ಮಡಂಗಿದಕ್ಷುಣ್ಣಮಾಂಸನಿಕಾಯಮಪ್ಪೊಟ್ಟುದುದಾ ಸುಚಕ್ರದೊಳುದ್ಭಟಾ (ಉದ್ಯಪಿ. ೩-೬೬). ೨. ನಿಜಗಮೆನಗು ಬೀಯಕ್ಕೆ ತಕ್ಕನಿತು ಪೊನ್ನಂ ಕೊಂಡು ಮಿಕ್ಕ ಪೊನ್ನನೆಲ್ಲಮನಲ್ಲಿಯೆ ಮಡಂಗುವಮೆನೆ (ಪಂಚತಂ. ೦೬೦-೦೨). ೯. ಸಂಕೋಚಗೊಳಿಸು ; ಹುದುಗಿಸು : ಸಮುತ್ಪಾದಿತ ಸದ್ಭಕ್ತಿಯುಕ್ತರು ಹಮ್ಮಿನಿಂದಿರುತಿಹರು ಕೆಲಬರು ತಮ್ಮತಮ್ಮೊಡಲುಗಳನಂತು ಮಡುಂಗಿ ಕೊಂಡಿಹರು (ಬಸಪು. ೦-೩೮). 'ಮುದುಕು₁' ನೋ. **ಮಡುಗು :** ೨. ಪ್ರತಿಲೇಖಿಸಿಕೊಳ್ಳದು ಮಡುಗುವುದು ಆದಾನ ನಿಕ್ಷೇಪಣಾ ಸಮಿತಿ ಯೆಂಬೊಂಬತ್ತನೆಯ ಮೂಲಗುಣಂ (ಶ್ರಾವಕಾ. ೬೨-೦) ; ವಿಶ್ವವಸ್ತುವಿ ಯೊಳಗೆ ಮಡುಗಿರಲ್ಕದ ಕಾವನಾವರೊಡೆಯರಿಲ್ಲದಿರಲಾಗ ದ್ರವ್ಯಂಗಳು ಪೊಡವಿಯಾಣ್ಮಳ್ತರಿಗೆ ಸಲುವುದೈ (ತುರಂಗ. ೯೦-೦೦). **ಮೊಡಗು :** ೧. ಹೆಬ್ಬಾಗಿಲ ಕಲ್ಲಲಿ ಕಟ್ಟಿಸಿ ಆ ಹೆಬ್ಬಾಗಿಲು ಮೊಡಗಿ ತಾವು ಕಟಿದ ಬಾಗರಸಮುವ್ರದ ಕೋಡಿ ಪರಿಯಂತರವಾಗಿ . . . ಕಟಿಸಿ (ಎಕ. XV, ಅರಸೀ. ೨-೨೬ ; 1515).

ಮಡಗಿಡು = ಜೋಪಾನವಾಗಿ ಇರಿಸು ; ಜೋಕೆಯಿಂದ ಇಡು ; ಕಾದಿರಿಸು : ಇರುಳ್ ತೊಟಿಲ್ದು ಭೈಕ್ಷಮಂ ತಂದು ಮಡಗಿಟ್ಟು ಪಗಲುಣ್ಬೊರಾದರ್ (ವರ್ಧ್ಮಾ. ೯೨-೮) ; ಮುನಿ ನೂಜಾಪಿಂಡ ಮುಮಾನಾಗಳ್ ಶೀವಿದ ಕಮ್ಮನಪ್ಪ ತುಪ್ಪದ ಕೊಡದೊಳ್ ಸಮಂತು ಮಡಗಿಟ್ಟೊಡೆ (ಪಂಪಭಾ. ೦-೦೩೦) ; ಸುರತ್ನಂಗಳಂ ಮಡಗಿಟ್ಟಪರ್ ಕರಂಡಕಂ (ಎಕ. VII, ಶಿಮಮೊ. ೪-೬೩; 1122). **ಮಡಗಿರಿಸು** = ಮಡಗಿಡು : ಅಂತು ಅರುಂ ಕೊಡದ ಕೊಳ್ಳದ ಗಂಗೆಯುಂ ಸ್ವೀಕೃತಂ ಮಾಡಿ ಜಡೆಯ ನಡುವೆ ಮಡಗಿರಿಸಿಟ್ಟಂ (ಧರ್ಮಾಮೃ. ೩-೬೬ ವ).

[ದೇ.॥ ತುಳು. ಮಡಗು, ಮಡುಗು]

**ಮಡಗೂಳ್** 'ಮಡೆಗೂಟಿರ್' ನೋ.

**ಮಡಗೂಟಿರ್** 'ಮಡೆಗೂಟಿರ್' ನೋ.

**ಮಡಗೆದಜು** (ಕ್ರಿ). ಕಾಲನ್ನು ಚಲಿಸು : ಪರಭೃತಂ ಕಾಯ್ದು ಕಿಟಿಗ್ಯಾಂಬಿ

ನೊಳ್ ಕೈಮಿಗೆ ಪೊಕ್ಕುರ್ವೀಟಿತೆ ತುಪ್ಪುಟ್ ಮಡಗೆದಲೆ ಕುಳಿರ್ಪೊ ಪುಗಿಲ್ ಪೋ ಪುಗಿಲ್ ಪೋಪುಗಿಲೆಂದಿಮ್ಮಾವಿನೊಳ್ ತನ್ನಾಲಿದುದುಲಿದು ತನ್ನಿಚ್ಚೆ ಯಿಂದನ್ಯಪುಷ್ಪಂ (ಅನಂತು. ೬-೬೩). [ಮಡ$_1$ + ಕೆದಱು$_1$ (< ಕೆದಱ್$_1$ )]

**ಮಡಚು** 'ಮಡಿಚು' ನೋ.

**ಮಡದಿ** (ನಾ). ೧. ಹೆಂಗಸು ; ಸ್ತ್ರೀ: ನಡೆ ನೋಟ ಸೊಲ್ಲೆಡೆಯಲ್ಲಿ ಒಂದು ಕಿಚ್ಚು ಮಡದಿ ಪುರುಷರೆಡೆಯಲ್ಲಿ ಒಂದು ಕಿಚ್ಚು (ದೀರಾಪ. ೦೬-೨೬) ; ಮಡದಿಯರಾಡುವ ಪದದೊಳ್ ಸಡಿಲ್ದ ಘನಕುಂತಳಾಳಿ ಪೋಲ್ದುದು . . . ರಾಹುಮಂಡಲಂಗಳ ತೇಜನಂ (ಗಂಕ. ೪-೩೦). ೨. ಹೆಂಡತಿ ; ಸತಿ : ನಿನ್ನ ಮಡದಿಗಿರಲೆಂದರೆ ಮಡದಿಯು ಕೃತಕ ಬೇಡ (ಬಸವ. ೨೦೦) : ರಾವಣನ ಮಡದಿಯನು ರಕ್ಕಸನು ಕದ್ದನು (ಕುಮ್ಮಾಕ. ೨೨-೩೦) : ಮಡದಿ ಹುಟ್ಟಿದ ಮನೆಯಲಿರುವವನು ಮೂರ್ಖ (ಭುಕಂಡ. ೦-೬೨-೨) : ಮನೆ ತಲುಪಿದೆ. ಮಡದಿ ಮುಗುಳುನಗೆಯ ಸ್ವಾಗತವಿತ್ತಳು (ಗಾಳಗು. ೬೮) [ದೇ.॥ ತಮಿ. ಮಟನ್ತೈ: ಮಲ. ಮಡಂದ; ತೆಲು. ಮಡಂತಿ, ಮಡಂದಿ]

**ಮಡವು** 'ಮಡಿಪ್ಪು' ನೋ.

**ಮಡಮುರಿ** (ಕ್ರಿ). ೧. ಹಿಮ್ಮೆಟ್ಟು : ಹಿಂಜರಿ : ಕಡುಹು ಮುಱಿದುದು ಕೌರವೇಂದ್ರನ ಪಡೆಯ ತಲೆಹರೆ ದಿಕ್ಕುಗೆಟ್ಟುದು ಮಡಮುರಿಯಲು ಗೈಸಿದರು ದುಶ್ಶಾಸನಾದಿಗಳು (ಕುಮ್ಮಾ.ಶ. ೬-೩೦). ೨. (ಅಲಂ) ಹಿಂದಕ್ಕೆ ಹೊರಳು, – ತಿರುಗು : ಜಡೆಯ ತುದುಕಿ ಪಿಡಿದೊಡನೆ ಘರಿಕ್ಕನೆ ಮಡಮುರಿದೆಸೆಪೊಳ್ಕೊಗದ . . . ಕೊಮರಿಯನೊಡಬಡಿಸುವುದು (ಹರಿ. ೬-೩೮) ; ಧ್ವನಿಯ ಕಡುಬೆಡಗಿನಿಂದರಿತು ಮಡ ಮುರಿಯುತ . . . ಒಪೆಯಂಗೆ ಪೇಳ್ವೆಪೆಂದು ನಡೆದರು (ಕುರಂಗ. ೬೪-೩೦). [ಮಡ$_1$ + ಮುರಿ$_1$]

**ಮಡಮುರಿವು** (ನಾ). (ಅಲಂ) ಹಿಂದೆಗೆಯುವಿಕೆ : ಓಲೆಯಂಕಾಱತನವೆ ಪ್ಪೊಡನೆ ನೀ ಪ್ಪೆಡೋಱೆ ಮಡಮುರಿವಿಲ್ಲದೆಚ್ಚಾಡಿದರೆ ಸಫಲವಿದು (ಕುಮ್ಮಾದ್ರೋ. ೩-೨೬). [ಮಡ$_1$ + ಮುರಿವು]

**ಮಡಲ್**$_1$ (ಕ್ರಿ). (ಬಳ್ಳಿಯಂತೆ) ಹಬ್ಬು ; ಬೆಳೆ : "ಮಡಲ್ –ವಲ್ಲಿ ವೃದ್ಧೌ (ಬಳ್ಳಿಹಬ್ಬು) " (ಶಮ) ; ಕಲ್ಪವಮೀಜದ ಪಕ್ಕದಿರ್ಕೆಲಂಬಿಡಿದು ಮಡಲ್ದು ತೋಱುವ ಲತಾಪಳಿಗಳ್ಗೆ ಣೆಯಾಪ್ತೊರಟ್ಟೆಲಂಬಿಡಿದು ಖಗೇಂದ್ರ ಸೋಲಗದೊಳಿರ್ದ ವಿಲಾಸವಿಲಾಸಿನೀಜನಂ (ಆದಿಪು. ೨-೪) : ದೊರೆವೆತ್ತು ಮಡಲ್ದು ಬಳ್ಳಿಮಲ್ಲಿಗೆಗಳ . . . ಅಗಣಿತಲೀಲೆ ನೋಟ್ಟ ಜನಮಾಳಿಗೆ ಸೋಲ ಮನುಂಟುಮಾಡುಗುಂ (ಸುಕುಮಾ. ೦-೬೨) ; ಪುತ್ರದೋಹಳದಿಂ ಸಮನಿಸಿ ದಾದ್ರೀಪನ ಭಾರವೆಂಬಮರ್ದಿನ ಮುಟಿಯಿಂ ಮಡಲ್ದು ನನೆಕೊನೆ[ವೋಗಿ] (ಅರ್ಜನೀ. ೦-೬೨ ವ).

**ಮಡಲ್**$_2$. ಮಡಲು$_1$. ಮಡಿಲು$_2$ (ನಾ). ೧. ಹರಹು ; ವಿಸ್ತಾರ ; ಹಬ್ಬುಗೆ : ದಾಳಿಂಬದ ಪಣ್ಗಳ ಕೆಸರಸದ ಪರಿಪೊನಲ್ ಪರಿನೀರಾಗೆಯುಂ ಕುರವೊತ್ತಿ ಬೆಳೆಯುತ್ತಿರ್ದ ಕರ್ಬಿನ ಮಡಲ್ಗಳುಮಂ (ಶಂತಕಂ. ೦೦೭-೧) ; ಇರ್ವಾಳ್ ಮೂವಾಳಿಕ್ಕಿರ್ದರ್ವರೆಯೊಳ್ ಬೆಳೆಗೆ ಸಾರೆ ಕೊಳೆ ಪಡವಟಿಗಳ್ ಕರ್ಬಿನ ಮಡಲಂತೆ ಕಮಲ್ದುರ್ವಿವ ಕೆಯ್ದೊಲ ಗಳೆಸೆಗುಮೋರೊಂಪೆಡೆಯೊಳ್ (ಕಾವ್ಯಾವ. ೨೦೭) ; ಒಡಲಂ ಸಂಸ್ಕೃತಿ ಲತಿಕೆಯ ಮಡಲಂ . . . ಬಿಡಲಱಿಯದಂಗೆ ನಿರ್ವೃತಿಯಿಂಟೇ (ಶಕ್ತಿ. ೦೩-೩೩). ೨. ಪೊದೆ : ಪೊದರು : "ಕ್ಷುಪಃ ಗುಚ್ಛಃ – ಈ ಎರಡು ಮಡಲ್" (ಶಬ್ದಮ. ೯೩-೪೭೩). ೩. ಬಳ್ಳಿ (?) : ಅಲರಲ ರ್ಗಣ್ ಮುಗುಳ್ನಗೆ ಮಡಲ್ ತೊಡೆ ತುಂಬಿ ಕುರುಳ್ ತಳಿರ್ ತಳಂ (ಶಂರಾ. ೩-೦೨) ; ಅಲಕಂ ತುಂಬಿ ತಳಂ ತಳಿರೆ ತೊಡೆ ಮಡಲ್ ತೋಳ್ ಶಾಖೆ ( ಜಗಪ. ೧೦-೬೦ ). ೪. ಕಂಬ : ಗೂಟ (?) : " ಧ್ರುವಂ ಶಂಬುಜ್ಯಂ ತಾಂ ಕೊಱೆಡಂ ಮಡಲ್[ಲ್] ತಾವುವೆನಿಸುಂ" (ವಸ್ತುಕೋ.

೩೦-೭). ೫. ಕೋಡುಗಲ್ಲು (?) : ವಿಜಯಾರ್ಧಶೈಲಪತಿ ಸವೆಯಿಸಿ ತಂದೋಳಿಯೆ ನಿಱಿಸಿದ ಬೆಳ್ಳಿಯ ಶಿಲಾವೀಡಿಗೆಪೊಲಿರ್ಪವಿದಱ ಮಡಲ್ಗಳ್ (ಶಾಂತಿಪು. ೨-೦೦೪). **ಮಡಲು**$_1$ : ೧. ಮಱುಜೀವಣಿಯ ಮಡು ದಿವಿಜರ ಬಾಯ್ಗುಲೊಱಿವ ಸುಧೆ ಚಿಂತಾಮಣಿಯ ಮೊಱಡಿಯುಂ . . . ತೋಱಿದಂ ವೃಷ್ಟಿಕಾರರೂಢನು (ಶಿದ್ಧರಾ. ೩-೪). ೬. ತಾಳೆ, ತೆಂಗು ಮುಂತಾದುವು ಗಳ ಗರಿ,-ಓಲೆ ; ಸೋಗೆ : 'ಮಡಲು' ಎಂದು ತೆಂಗಿನ ಮರದ ಗರಿಗೆ ಹೆಸರು (ಸಂಕೋಶ. ೦೭೮) ; ಪಡುವಣ ಕಡಲಿನ ತೆಂಗಿನ ಮಡಲಿನ ಮರೆಯಲಿ ಮೆರೆವುದು ನಾಡೊಂದು (ಪಕ್ಷಿ. ೧-೨) ; ನಾನು ಹಳ್ಳಿಕ್ಕೆ ಹೋಗಿ ಹೆಣೆಯಲು ಮಡಲು ತರಲೇ (ತ್ಯಾಗಮ. ೦೪). ೭. ತೆಂಗಿನ ಗರಿ ಯಿಂದ ಹೆಣೆದ ಚಾಪೆ : ಹಸಿ ತೆಂಗಿನ ಸೋಗೆಯೊಂದನ್ನು ಹಿಡಿದು ನಾನು ಮಡಲನ್ನು ಹೆಣೆಯುತ್ತಿದ್ದೆ (ಮಾನಕ್ಕ. ೨೩೨). **ಮಡಿಲು**$_2$ : ೧. 'ಮಡಿಲುಗಟ್ಟು' ಪರಾ. ೮. ಚಿಕ್ಕ ಕೊಂಬೆ ; ಕವಲು ; ಟಿಸಿಲು : ಕದಳಿಯ ಮಡಿಲು ಹೂಮಿಡಿ ತುಂಬಿತು (ಕಲಪು. ೦೨-೦೨).

**ಮಡಲಾಗು**= ಬೆಳೆ ; ವೃದ್ಧಿಯಾಗು : ವಿಶೇಷಮಪ್ಪ ಸನ್ಮಾತಗುಣ ದೋಳಿಯಿಂದೆ ಮಡಲಾಗಿ ದಿಗಂತಮನೆಯ್ದಿ ಪಲ್ಲ ಪಂಡಿತರ ವಿಳಾಸ ಕೀರ್ತಿಲತೆ ಪರ್ವಿದುದುರ್ವಿಗೆ ಚೋದ್ಯಮಪ್ಪಿನಂ (ಎಕ. VI (೩), ಕಾಗಮಂ. ೦೯-೩೮ ; 1118). [ < ಮಡಲ್$_1$./ ತಮಿ. ಮಟಲ್ ; ಮಲ. ಮಡಲ್. ಮಟ್ಟಲ್; ತುಳು. ಮಡಲ್, ಮಡ್ಲ ]

**ಮಡಲಿಡು** (ಕ್ರಿ). ೧. ಬೆಳೆ ; ವೃದ್ಧಿಯಾಗು : ಸವಿ ತವದಂತು ಬೇರ್ವಿಡಿದು ಪೆರ್ಚುರೆಗಂ ವನಮೆಯ್ದಿ ಸೇವ್ಯಮಾದ್ಯುವನಿಗೆ ಕೊಡೆ ಬೇರ್ವರಿದ ಸಾಲ್ಮಡಲಿಟ್ಟ ಕರ್ಪು ಪಲ್ಲವಿಸಿದಶೋಕಂ (ಪರ್ವಪು. ೨-೦೬). ೨. ಹಬ್ಬುವಂತೆ ಮಾಡು ; ಹಬ್ಬಿಸು : ನುಡಿ ಜೆಡಂಗಂ ಬೀಱಿ ರೀತಿ ವಿಖ್ಯಾತಿಯುಂ ಮಡಲಿಡೆ . . . ಕೃತಿಯುಂ ಶಿವಾರ್ಪಿತವನೆಸಗುವ ನಿನ್ನ ಸೈಪಿಂಗೆ ಸಾಟಿಯುಂಟೇ (ಶದ್ಧರಾ. ೦-೩೦). [ಮಡಲ್$_2$ + ಇಡು$_1$]

**ಮಡಲಿಱಿ** (ಕ್ರಿ). ೧. ಬೆಳೆ ; ವೃದ್ಧಿಯಾಗು ; ವ್ಯಾಪಿಸು : ದಟ್ಟೈಸಿ ಮಡಲಿಱಿದ ಕಾಳದೊಳು ನಡುವಿರುಳು . . . ಹುಳ್ಳಿ ಮೊಱೆಯಂ ಕಂಡಳು (ಪಶಕ. ೦೨-೨೦) ; ಭೂವರನ ಧವಳಕೀರ್ತಿ ಪ್ರಭಾಮಯವಾಗಿ ಪರಿಕಲಿಸಿ ಮಡಲಿಱಿದುದು (ವಾಪತಂ. ೩-೩೦). ೨. ಒಟ್ಟುಗೂಡಿಸು : ಒತ್ತೊತ್ತಾಗಿರುವಂತೆ ಮಾಡು ; ಸಾಂದ್ರಗೊಳಿಸು : ಕದಳೊಡೆದ ಬೆಳೆದ ಕಬವೆಯ ಕದಿರ್ಗಂಜಿಂಗೆಱಗಿ ಪಱಮೆಗಳ್ಗೆಱಿಯಿಸುಗುಂ ಮದನಂ ಮಡದಿ[ಲಿ]ಱಿದಿಱಿಪಿದ ಹೊಮಯುಂಬಿನ ಸರಲ ಗಱೆಯ ಪಿಳ್ಳನ ತೆಜನಂ (ಅನಂತು. ೦-೮೦) ; ತೊಡವೆನಿತೊಳವನಿತಕ್ಕಂ ಪಡಿಚಂದಂ ಮಾಡಿ ಕಾಂತೆ ಬಾರ್ ಪೂದೊಡವಂ ತೊಡೆ ತೊಟ್ಟ ಮರಲ ಸರಳಂ ಮಡಲಿಱಿದು ಮನೋಜನಡಸಿ ವಿರಹಿಯನೆಚ್ಚಂ (ಸೂಕ್ತಿಸು. ೦೦-೩೨). ೩. ಸಾಂದ್ರವಾಗು; ಒಟ್ಟುಗೂಡು : ತುಱುಗಿ ತೂಳುವ ಸಿಂಧ ಸೆಳೆ ಮಡಲಿಱಿದ ಝಲ್ಲರಿ ಪಲ್ಲವದ ನಿಡುದೆರೆಯ ಧವಳಚ್ಛತ್ರ ಚಮರದೊಳೊದಗಿತತಿರಥರು (ಕುಮ್ಮಾಶ. ೩-೦೩). [ ಮಡಲ್$_2$ + ಇಱಿ$_1$ ]

**ಮಡಲು**$_1$ 'ಮಡಲ್$_2$' ನೋ.

**ಮಡಲು**$_2$ 'ಮಡಿಲ್' ನೋ.

**ಮಡಲು**$_3$ (ನಾ). ಒಂದು ಬಗೆಯ ಮೀನು: ಸೀಗಡಿ ಕೊರವಂ. . . ಆನೆ ಮೂಗ ಮಡ[ಡ]ಲೆಂಬಗಣಿತ ಶಫರಾಳಿಗಳನೆ ತೆಗೆದರ್ ಬೇಡರ್ (ಕ್ರಿಶು. ೨೭-೯೦). [ದೇ.॥ ತುಳು. ಮಡಲ್‌ಮೀನ್ ]

**ಮಡಲುತುಂಬು** 'ಮಡಿಲುದುಂಬು' ನೋ.

**ಮಡಲ್ಗೊಳ್** (ಕ್ರಿ). ಬೆಳೆ; ಹಬ್ಬು; ವ್ಯಾಪಿಸು : ಮಡಲ್ಗೊಂಡ ಮಲ್ಲಿಗೆಯ ಮಂಡವಿಗಳೊಳಂ. . . ಬಿಟ್ಟ ಬೀಡು ಬರೆದಂತೆ ಕಂಡರಿಸಿದಂತೆ ಕಣ್ಗೆಸೆ ದಿರ್ದುದು (ಶಬ್ದರಾ. ೨೩೮). [ ಮಡಲ್$_2$ + ಕೊಳ್$_1$ ]

**ಮಡವಳಿಗೆ**. ಮದವಳಿಕೆ (ನಾ). (?) : ಶ್ರೀಮನ್ಮಹಾಮಂಡಳೇಸ್ವರಂ ಹಲ್ಲವರಸರ ಪಡಿಹಾಡಿ ನಾಗದೇವನಾಯ್ಕನ ಮಡವಳಿಗೆ ಬಾಕವಾನು. . . ಕೊಟ್ಟ ಮತ್ತರು (ಕರ್ನಾ. ೦೨೨-೨೮-೦೪; 1151). **ಮದವಳಿಕೆ**: ಆ ಸೀಮೆಯ ದೇವರ ಸ್ಥಾನಿಕರಲು ಸ್ಥಾನೀರ ಮನೆ ಮೊದಲಾದ ಮದವಳಿಕೆ ಸಲು ××× ಸರ್ವಮಾನ್ಯವಾಗಿ ಬಿಟೆವು (ಎಕ. X (S), ಮುಳ. ೯೪-೦೬: 1406). [ ? ]

**ಮಡವಾಯ್**, ಮಡುವಾಯಿ (ನಾ). ಸಣ್ಣಕಾಲುವೆಯ ತೂಬು.— ಮುಂಭಾಗ : ಹಿರಿಯ ಕೆರೆಯ ಬಡಗಣ ತುಂಬಿಂದ ಪತುವ ಮುಂದಾಗಿ ಪರಿವ ಪೊವಲ ಮಡವಾಯ ಗದ್ದೆ ಕಮ್ಮ ಇಪ್ಪತ್ತುಮಂ . . . ಸರ್ವನಮಸ್ಯ ಮಾನ್ಯಮಾಡಿಬಿಟ್ಟರು (ಕ್ಕೆ. XVIII, ೨೯೯-೨೪; 1177); ಮೊವಲೇರಿಯ ಮಡವಾಯಲ್ಲಿ ಮೂವತ್ತಯ್ದು (ಇ. ೦೯೪೬, ಪಾಪನಗ. ೨೦೨-೫೬: ೧). **ಮಡುವಾಯಿ** : ಜೌಗುಪ್ರಾಂತವಲ್ಲಿ . . . ತೂಬುಗಳು, ಮಡುವಾಯಿಗಳು, ಕಡಲ ಅಡ್ಡಗಟ್ಟುಗಳು—ಇವುಗಳ ವಿಚಾರಣೆ ನೋಡಿಕೊಳ್ಳುವುದಕ್ಕಾಗಿ ನಿಯಮಿತನಾದ ಅಧಿಕಾರಿ (Dike Reeve. ಇಂಗ್ಲಿ).

[ ಮಡ₂ ( <ಮಡೆ₁ ) + ಬಾಯ್ ]

**ಮಡಸಂದು** (ನಾ). ಹಿಮ್ಮಡಿಯ ಸಂದು; ಹಿಮ್ಮಡದ ಸಂದು : ಕಟಿ ಮೊದಲಾದ ಕೀಳುದೆಸೆಯಲ್ಲಿ ಸಂದಿನ ಭೇದ ಅಂಗುಲಿಸಂದು ಇಪ್ಪತ್ತು ಮಡಸಂದೆರಡು (ಸರ್ವಜ್ಞ. ೨೨-೦೦೦). [ ಮಡ₁ + ಸಂದು₁ ]

**ಮಡಸನ್ನೆ** (ನಾ). (ಕುದುರೆ ಸವಾರಿ ಮಾಡುವಾಗ) ಹಿಮ್ಮಡಿಯಿಂದ ತಿವಿದು ಅಥವಾ ಚುಚ್ಚಿ ಮಾಡುವ ಸನ್ನೆ.—ಸೂಚನೆ : ಮಡಸನ್ನೆ ಮನದೊಳಂಕುರಿಸುವಲ್ಲಿ ಮುನ್ನಂ ಪರಿದು (ಗಂಕ. ೬-೫೫ ಪ); ಸುತ್ತಿ ಕಟ್ಟಿದ ಬಲಪಲ್ಲವ ಕಂಡು ಧೀರೋತ್ತಮ ಮಡಸನ್ನೆಗೆಯ್ದು ಚಿಸ್ತ ನಲಿದು ತುರಗವನೇಜಿ. . . ಪರಸೇನೆಯ ತತ್ತಜೀವದಿನದು (ಜೈಮಿನಿ. ೫-೫೯); ನರೇಂದ್ರಂ ತುರಂಗಮಂ ಕರತಳಾಸ್ಫಾಳನಂಗೆಯ್ದು ಮಡಸನ್ನೆಯಂ ಮನದೊಳ್ ನೆನೆವಲ್ಲಿಂ (ರಾಜಶೇ. ೦೩-೭೭ ಪ). ‘ತೊಡೆಸನ್ನೆ’ ಪರಾ.

[ ಮಡ₁ + ಸನ್ನೆ₂ ]

**ಮಡಸಿ** (ನಾ). (ಉಕ) ಹೊಲಸು ಹೆಂಗಸು : ಆಕೆ ಬಟ್ಟೆಳು ಮಡಸಿ (ರೂಢಿ). [ಮಡಸು + — ಇ₂ ]

**ಮಡಸು** (ನಾ). (ಉಕ) ಹೊಲಸು ವ್ಯಕ್ತಿ: ಊರು ಕಾಯೋ ಹುಡುಗನ್ನ ಕಣ್ಮರಿ ಮಾಡಲಾಕ ಹಂಚಿಕೆ ಹಾಕ್ಯಾವ ಮಡಸಗೋಳು (ಗ್ರಾಮೀಣ. ೨೯೨). [ ? ]

**ಮಡಸುರ್** (ನಾ). ಒಂದು ಊರಿನ ಹೆಸರು : ಗಾವಣ್ಣ ಮಡಸುರ ಕಳ್ಳವೊ (ಮೈ.ಕಂ. ೦೯೨೩, ೬೦-೬: 933).

[ P ಇದು ‘ಮಡಸೂರ್’ ಎಂಬುವರ ಅಪಲಿಖಿತ ]

**ಮಡಸೋಂಕು** (ನಾ). ಹಿಮ್ಮಡಿಯ ಸ್ಪರ್ಶ : ಮಡಸೋಂಕಂ ಮನದಂಕೆಯುಂ ತಿಳಿದು ಶಿಕ್ಷಾಪ್ರೌಢಿಯೊಳ್ ನಾಡೆ ನೇರ್ಪಡೆಯುಂ (ಕುಸುಮಾ. ೬-೭೩). [ಮಡ₁ + ಸೋಂಕು₂]

**ಮಡಸ್ನನ** (ನಾ). ೧. (ಹರಕೆಯನ್ನು ತೀರಿಸಲು) ದೇವಸ್ಥಾನದ ಸುತ್ತಲೂ ಉರುಳುವ ಪ್ರದಕ್ಷಿಣೆ ; ಉರುಳುಸೇವೆ. ೨. (ಆಲಂ) ಹೊರಳುವಿಕೆ ; ಉರುಳಾಟ: “ಅಯ್ಯಯ್ಯೋ ಅಮ್ಮಾ ಹಾವು” ಎಂದು ಮುಳ್ಳಿನ ಮೋಟೆಯಲ್ಲಿ ಮಡಸ್ನನ ಹಾಕಹತ್ತಿದ (ಪಡಾವ. ೦೬೬).

[← ತುಳು. ಮಡಸ್ನನ, ಮಡಸನ ]

**ಮಡಾಸ** ‘ಮಡಾಸು’ ನೋ.

**ಮಡಾಸು**. ಮಡಾಸ (ನಾ). ಮುಸುಕು ; ಕವಚ : ಹೊದಿಕೆ : ಅದಕ್ಕೆಲ್ಲ ಹೊಸ ಪದ್ಧತಿಯಂತೆ ಕಬ್ಬಿಣದ ಮಡಾಸು ಮಾಡಲ್ಪಟ್ಟಿತ್ತು (ಅಂಬಿಕ. ೦೬೨). **ಮಡಾಸ** : ಬೀಸುವ ಕಲ್ಲಿಗೆ ಬಂಗಾರದ ಮಡಾಸವನ್ನು ಹಾಕಿಪರೂ ನೀವು ಹೇರಿಕೊಳ್ಳುವವರೆ (ಜೀವಂ. ೦೩೪).

[← ತುಳು. ಮಡಾಯುಸುನಿ = ಪುಸ್ತಕಕ್ಕೆ ಹೊದಿಕೆ ಹಾಕು ]

**ಮಡಿ₁** (ಕ್ರಿ). ೧. (ವಸ್ತ್ರ ಇತ್ಯಾದಿಗಳನ್ನು) ಮಡಿಕೆಯಾಗುವಂತೆ ಮಾಡು ; ಮಡಿಚು; ಮಡಿಸು : ಸವುರಣಾದ ಕೋವಣಮಂ ಮ[ಣಿಕಾಂ. ನಿ]ಡಿದುಟ್ಟಳಿಸಂ ಬಿಟ್ಟಾ ವಸುಧಾಧರನೆತಬಲವಿಸದ ಶಲಾಟದ ರಸಿಪ ಸ್ವಹ್ಯಸ್ಪನವಿತತಿ ನಡೆವುದತಿಮುದದಿಂದ (ಶಬ್ದ. ೦೯-೭೧); ಅಂತರಾಳದೊಳಡ್ಡಲಾಗಿ ವಟ್ಟೆಯ ಮಡಿವಂತೆ ಮೈಮಡಿದು ಹಾಜಾಪರು (ಧರಕ. ೬೩-೫೩): ನಾಗಾರಿಗಮನಾತ್ಮಜನ ಪಟ್ಟದಾನೆ ಪುನ್ನಾಗ ಸೌಗಂಧಿ ಕಡುಬಿಳಿದಾಗಿ ರಂಜಿಸುವ ನಾಗವಲ್ಲೀದಳವ ಮಡಿದೀವುತೈದಿದಳ್ ನಾಗಭೂಷಣನರಸಿಗೆ (ತಿರು. ೩೭-೩೭). ೨. ತಿರಿ : ಕೊಯ್ಯು ; ಕೀಳು : ಮಡಿದು ತಂದಿಟ್ಟ ಪೊಸನೆಯ್ದಿಲ ಕಾವನಾವಗಂ ಗೆಲ್ದ ರತ್ನಕುಂಡಲಂಗಳ ಪೊಳಪನೊಳಕೊಂಡಂತೆ ನಸುನೇಲ್ದ ಕರ್ಣಾಟೀ ಕರ್ಣಪೂರನ ಪಾಲೆಗಳುಂ ಸರಸ್ವತಿಯಾಡುವ ಲೀಲಾಂದೋಳದಂತಾದುವು (ಕಂಠಾ. ೨-೬೯ ಪ). ೩. ಬಾಗಿಸು : ಬಗ್ಗಿಸು : ದಿವ್ಯಜ್ಯೋತಿ ಮಡಿದಿತ್ತ ಪಾದಾಗ್ರಮನೇಜಿ (ಕರ್ಮ. ೫-೨೮). ೪. ಜೋತುಬೀಳು ; ನೇಲು : ಮಡಿದ ಕೊಪಕೆಗಳೊಡ್ಡಿ ದುರದೊಟ್ಟಿಡಿಯ ನಡುವಿನ . . . ನಾಯ್ ನೂಕಿದವು ಹಾಸದ ವಿಳಾಸದಲಿ (ಕುಮಾ.ರಾ. ೦೩-೨೦). ೫. ಕುಸಿ : ಕುಗ್ಗು : ಪೆಡತಲೆ ಕೀಲಿಸಿದಂತಿರೆ ಮಡಿದುಂ ಗೋಣ್ಕೊಡಗಿರಲ್ಕೆ ನಾಸಿಕದಿಂದ ಸುಡಿಯದೆ ಬಾಯ್ವಿಡೆ ದಪ್ಪಂ ವಾಘಗುಂ (ಜಿನದ. ೩-೯೬): ಘನೆಯ ಹೆಡೆಗಳು ಮಡಿದುವು (ಕುಮಾ.ರಾ. ೪-೩೩). ೬. ಬಾಗು ; ಬಗ್ಗು : ಓದವ ತಿಸುಳದ ಯೋಗದಂತದ ಮಡಿದ ಬಿಟ್ಟಾಂಗದ ಸೊಬಗಿನಿಂ ಜಡೆಯ ಶಂಕರನಿಂದ ಜಂಗಮರೂಪನಳವಡಿಸಿ (ಕಂಠಾ. ೩-೨೦). ೭. ಮುರುಟಿಕೊಳ್ಳು ; ಸೇದಿಹೋಗು : ತಚ್ಚಾಪದಿಂ[ದಾನೆಗಳ್ಗಂ ನುಡಿಯಲ್ಕಾಗಂದಿನಿಂ] ನಾಲಗೆ ಮಡಿದುದು (ಕಾದಂಬ. ೬೬). ೮. ಮುಚ್ಚಿಕೊಳ್ಳು ; ಮುಗಿ : ಅನಿಮಿಷರ ಕಣ್ಣೆವೆ ಮಡಿದುದು (ಶಾಕ್ರಾ. ೦೬-೬೯). ೯. ಸಾಯು ; ಮರಣಹೊಂದು ; ಪ್ರಾಣಬಿಡು : “ಮಡಿ – ಮರಣೇ, ಧೌತವಸ್ತ್ರೇ ಚ” (ಶಮಣಿ) ; ಶ್ರೀ ಅಬ್ಬಿ ಆಚಾರಿಯರ ಮಗನ್ನಾಗನ್ ಮಡಿದ (ಎಕ. IX, ಬೆಂಗಳೂ. ೩೬-೫; 750) ; ವಜ್ರಸಮಾನಮಪ್ಪ ಕೈಯಿಂದಂ ಕುಮಾರನಾತನ ತಗಲೆಯಂ ತಿವಿದೊಡಾತಂ. . . ಮಡಿದಂ (ವಡ್ಡಾ. ೫೯-೩೦); ತೊಂಬಯ್ಯಾಸಿರ್ವರ್ ನಿಮ್ಮಂಬಿನ ಬಂಬಲೊಳೆ ಮುಂಟುಬದ್ದರ್ ಮಡಿದರ್ (ಕಂಠಾ. ೦೦-೨೯); ವಿಪ್ಪಳಸಂಗ್ರಾಮದಲಿ ಮಡಿದನು ಫಲುಗುಣನ ತನಯ (ಕುಮಾ.ದ್ರೋ. ೬ ಸೂಚ). ೧೦. ಮುಗಿ ; ಕೊನೆಯಾಗು ; ಅಂತ್ಯವಾಗು : ಯುಗಜುಗ ಮಡಿವಂದು ದಿಗಿಲು ಭುಗಿಲೆಂದು ಮುಸುಕಿದ ಮಹಾಜ್ವಾಲೆ ಇದೇನೊ (ಸಿದ್ಧ.ವ.ಸ. ೦೯-೫೯).

**ಮಡಿಮಡಿ₁** (ದ್ವಿರುಕ್ತಿ) : ಪೇರುರ್ಬಿನ ಕಡಲ ನಡುವಿನೊಳೆಡೆಗೂಡೆ ಗುಡಿಗಟ್ಟಿ ಮಡಿಮಡಿದ ನಿಡುದೆರೆಯ ಲೀಲೆಗೆ ಪಡಿವರ್ಪೊಂದು ಗತಿಯ ಕುಡುರೆಗಳ ತಟ್ಟನಣೆದೊತ್ತುತುಂ (ರಾಜಶೇ. ೯೦-೨೩).

[ದೇ.॥ ತಮಿ. ಮಟಿ ; ತೆಲು. ಮಡಿಯು]

**ಮಡಿ₂** (ನಾ). ೧. ಮಡಿಚುವುದು ; ಮುದುರುವುದು : ‘ಕಾಲ್ಮಡಿ’ ಪರಾ. ೨. ಮಡಿಕೆ ; ಪದರ : (೯). ೩. ಪಟ್ಟು ; ಸಲ ; ಬಾರಿ : ‘ಅಯ್ವಡಿ’, ‘ಇರ್ಮಡಿ’ ಪರಾ. ೪. ಪರಿಶುದ್ಧತೆ ; ಶುಭ್ರತೆ ; ನೈರ್ಮಲ್ಯ : ಲೋಕದೊಳ್ ಮಡಿಯ ನಿರ್ಮಲಚಿತ್ತವೈ (ಸೋಮೇಶ. ೯೭) ; ಅಸೇಯ ಬಾವುಗನ ರೋಹುದುರಗನ ಕಳೆದು ಮಾಸಿದುವ ಮಡಿಯ ಮಾಡಿದ ಶಿವಯೋಗಿ ಶಾಶ್ವತನಕ್ಕು (ಸರ್ವಜ್ಞ. ೯೯೯). ೫. ಒಗೆದ ಬಟ್ಟೆ ; ಶುಭ್ರ ಮಾಡಿದ ವಸ್ತ್ರ : ನೀರಿಲ್ಲದ ಬೆಳಸಿನಂತೆ ಮಡಿಯಿಲ್ಲದ ಶೃಂಗಾರದಂತೆ (ಧರ್ಮಾಮೃ. ೦೯ ೦೬೦) ; ಒಗೆಯುತ್ತು

ಮಿರ್ಪ ಮಡಿವಳನ ಮುಂದಣ ಮಡಿಯುವವಂ ತನ್ನೊಡನೆಯು ಗೋವಳಿ ಗರುಟ್ಟ ಮೈಲಿಗೆಯುಮಂ ಮಧುಸೂದನಂ ಕಂಡು (ಅರ್ಧನೇ. ೯-೬೩ ವ); ದಿನವು ನಾನು ಮಿಂದು ಮಡಿಯನುಟ್ಟು ಗಂಧ ಪುಷ್ಪಾರ್ಚನೆಗಳ ಮಾಡೆನು (ಕುರಂಧ. ೦-೯-೦). ೬. ರೇಷ್ಮೆಬಟ್ಟೆ; ಪಟ್ಟೆವಸ್ತ್ರ: ತುಡಂಗೆ ನಿಟ್ಟೆಲುಂ ಪಂಚರತ್ನಂಗಳುಂ ಪೊಜಿಮಡೆ ತನ್ನುಡುವುಪ್ಪಟಂಗಳ್ ಮಡಿ ಯೊಳಾಗೆಯುಂ (ಕಂಶಕಾ. ೦೪-೩೩); ಮಡಿಯನುಡುವಂತೆ ಸವೆದಾ ಭರಣಮಂ ತುಡುವಂತೆ . . . ಕೊಲ್ಲದ ವ್ರತಮಂ ಕೈಕೊಂಡು (ಧರ್ಮಾಮೃ. ೦೦-೩). 'ನಾರುಮಡಿ' ಪರಾ. ೭. ಯಾವ ವಿಧವಾದ ಮೈಲಿಗೆ ಯೂ ಆಗಬಾರದೆಂಬ ಅಥವಾ ಮೈಲಿಗೆಯನ್ನು ಮುಟ್ಟಬಾರ ದೆಂಬ ಒಂದು ನಿಯಮ, — ಆಚಾರ: ಮಡಿ ಮಡಿ ಮಡಿಯೆಂದು ಅಡಿಗಡಿಗ್ಹಾಱುವೆ ಮಡಿ ಮಾಡುವ ಬಗೆ ಬೇಱುಂಟು (ಪುರಂಧ. ೦-೦೦೯-೦); ಸದಾಕಾಲ ಮಡಿಯಲ್ಲೆ ಇರುತ್ತಿದ್ದ ಅವರು ಮಕ್ಕಳ ಕೆಲಸ ನೋಡಿಕೊಳ್ಳ ಬೇಕಾದರೆ ಸುಮಿತ್ರೆಯ ನೆರವು ಬೇಕಾಗುತ್ತಿತ್ತು (ಏಸ್ಕ್ರ. ೩); ಈಗ ಸುಮಾರು ಹತ್ತು ವರ್ಷಕ್ಕೆ ಹಿಂದೆ ಅವರ ಮಡಿ ಇನ್ನೂ ಜೋರಾಗಿತ್ತು (ಗರುಡಾ. ೦೦೩). ೮. ಗಿಡ ಮರಗಳ ಸುತ್ತಲೂ ನೀರು ನಿಲ್ಲಲು ಮಾಡಿರುವ ಕಟ್ಟೆ; ಪಾತಿ: ತಂಪು ಎರಿಯಲ್ಲಿ ಜೋಟು ಗೇಣು ನೀರು ನಿಂತು ಅಲ್ಲಿ ಇವರಿ ಹೋಗುವ ಹಾಗೆ ಮಡಿಗಳನ್ನು ಮಾಡಬೇಕಾದರೆ ನಾಲ್ಕು ಐದು ಮಾರು ಅಗಲ ಹದಿನಾರು ಇಪ್ಪತ್ತು ಮಾರು ಉದ್ದ ಈ ಪ್ರಕಾರ ಮಡಿಮಾಡಿ . . . ಬೀಜ ಬಿತ್ತಬೇಕು (ಕೃಷಿಶ್ರ. ೬೨). ೯. ಹೊಲಗದ್ದೆಗಳಲ್ಲಿ ಬಾಳೆ, ಬತ್ತ, ಕಬ್ಬು, ಸೊಪ್ಪು ಇತ್ಯಾದಿ ಗಳನ್ನು ಬೆಳೆಯಲು, ಹಸನುಮಾಡಿ ಬದುಕಟ್ಟಿದ ಮಟ್ಟಸ್ಥಳ, — ಜಮೀನಿನ ಒಂದು ಭಾಗ.—ತುಂಡು: ಪುಣುಸೆ ಪುಗರಿಯೂ ಎಡೆಯ ಬಿಟ್ಟನ್ದ ವಳ್ಳಮೆ ಅನ್ನೆ ಬನ್ದು ಬಾಳೆಮಡಿಯೊಳ್ಕೊಡುಗುವರ್ (ಎಕ. IX (8), ಬೆಂಗಳೂ. ೦೩೦-೫೦; 828); ಭವನವಾಸಿಗರಂ ಕರಂ ದವನದ ಮಡಿಯಂ ದಾಟೆ ಪೊಕ್ಕಂತೆ ಮಾಡಿ (ಧರ್ಮಾಮೃ. ೭-೯೩); ಮಡಿಯೆಂಬುದು ಮರುಗದ ತಾಣದೊಳ್ (ಕಬ್ಬಿಗ. ೨೩); ಬದುವನ್ನು ಒಡೆದು ಮಡಿಗೆ ನೀರು ಬಿಟ್ಟರು (ಕಶಕೃ. ೧_೦೩). 'ನೆಲ್ಲುಮಡಿ' ಪರಾ. (ಗು). ೧೦. ಅನೆಯ: 'ನಾಲ್ಮಡಿ' ಪರಾ.

**ಮಡಿಮಡಿ₂** (ದ್ವಿರುಕ್ತಿ): ಮುನ್ನೂ ನೆತ್ತಮನಜಿಯದಿನಂತವರ ದಾಯಮನಾಡೆ ಮಡಿಮಡಿಗುಱುವುದುಂ (ಪಂಶಕಾ. ೬-೭೦ ವ). **ಮಡಿ ಅಡಿಗೆ** =ಯಾವ ವಿಧವಾದ ಮೈಲಿಗೆಯನ್ನೂ ಬೆರಸದೆ ಮಾಡುವ ಅಡಿಗೆ; ಮಡಿಯಿಂದ ಮಾಡುವ ಅಡಿಗೆ: ಮಡಿಅಡಿಗೆಯ ಮಾಡಿದೆನೆ ಅಕ್ಕ ಗುರುವಿಗೆ ನಾನೀಗ ಕಡೆಯು ಹಾದೆ (ತದಾಪ. ೭೮-೪). **ಮಡಿನೀರು** = ೧. ಸ್ನಾನ ಮಾಡಿಯಾದ ಮೇಲೆ ಶುದ್ಧಿಗಾಗಿ ಮತ್ತೊಮ್ಮೆ ಹಾಕಿಕೊಳ್ಳುವ, ಯಾವ ಮೈಲಿಗೆಯೂ ತಗಲದ ನೀರು; ಮೇಲುನೀರು: ಒಳಗ ನಡೀರಿ ಸುಂದರಕ್ಕ, ಮ್ಯಾಲೆ ಮಡೀನೀರು ಬೇಕಾದರೆ ನಮ್ಮ ಅತ್ತೆಯವರು ಹಾಕತಾರ (ವೃಹಿ. ೦೮). ೨. (ಯಾವ ವಿಧವಾದ ಮೈಲಿಗೆಯೂ ಸೋಕದಂತೆ) ಮಡಿಯಲ್ಲಿ ತುಂಬಿಡುವ ನೀರು: ಹಿತ್ತಾಳೆ ಬಿಂದಿಗೆಯಲ್ಲಿ ಮಡಿನೀರು ತುಂಬಿಟ್ಟಿದ್ದೇನೆ (ರೂಪ). ೩. ಮುಟ್ಟಾದ ಮೇಲೆ ಶುದ್ಧಿಗಾಗಿ ಹಾಕುವ ನೀರು. **ಮಡಿಯಾಗು** = ೧. (ಬಟ್ಟೆಯು ಒಗೆದರಿ) ಶುಭ್ರವಾಗು; ಶುದ್ಧವಾಗು: ಮಡಿಯಾದ ಸೀರೆಯನುಡುವಂತೆ ಮದುವೆಯಾದಳಂ ಮನೆಗೆ ತರ್ಪಂತೆ (ಧರ್ಮಾಮೃ. ೦೪-೪); ಮಾಸಲು ತೊಳೆಯೆ ಮಡಿಯಾದ ದುಪ್ಪಟದಂತೆ (ಸಮ್ಯಕ್ತ್ವ. ೦೦-೨೦). ೨. ಯಾವ ವಿಧವಾದ ಮೈಲಿಗೆಯನ್ನೂ ಬೆರಸದಿರು: ಭವಾನಿ ಮುಂಚೆ ಸ್ನಾನ ಮಾಡಿದರೆ ತಾನೇ ಮಡಿಯಾಗಿ ಅಡಿಗೆಯನ್ನು ಮುಟ್ಟ ಬಡಿಸಬಹುದು (ಪೊಸ್ತು. ೨೨). ೩. ವಿಧವೆಯು ಕೇಶ ಮುಂಡನ ಮಾಡಿಸಿಕೊಳ್ಳು: ಮಡಿಯಾಗುವ ಹಾಳುಕಲ್ಪನೆ ನಿನ್ನ ತಲೆಯಲ್ಲೂ ಸುಳಿಯಿತೇನು? (ಸಮಾಜ. ೨೦೭). **ಮಡಿಯುಟ್ಟುಕೊಳ್ಳು** = (ಸ್ನಾನ ಮಾಡಿ) ಒಗೆದು ಶುಭ್ರಮಾಡಿದ ವಸ್ತ್ರವನ್ನು ಧರಿಸು.— ತೊಡು: ಮಗುವಿಗೆ ಮೈ ತೊಳೆದು ಬಿಟ್ಟು, ನಾನೂ ಸ್ನಾನ ಮಾಡಿ ಮಡಿಯುಟ್ಟುಕೊಳ್ಳುತ್ತೇನೆ (ಪೊಸ್ತು. ೨೦). **ಮಡಿಹಿಡಿ** = ೧. ಏಕಾದಶಿಯಂದು ಶುದ್ಧೋಪವಾಸ ಮಾಡು. ಸ್ವಾಮಿಗಳಿಂದ ಮುದ್ರಾಧಾರಣೆ ಮಾಡಿಸಿಕೊಂಡು ಪರಿಶುದ್ಧ ವಾಗು: ಅವಳನ್ನೂ ಮಡಿಹಿಡಿದಿಲ್ಲವಾದ್ದರಿಂದ ಮನೆಯ ಹಿರಿಯರು ಅವಳು ಮಾಡಿದ ಅಡುಗೆ ತಿನ್ನುವಂತಿಲ್ಲ (ರೂಪ). ೨. (ಗಂಡನ ಮರಣಾ ನಂತರ ಹೆಂಡತಿಯು) ಕೇಶಮುಂಡನ ಮಾಡಿಸಿಕೊಳ್ಳು: ಸ್ತ್ರೀ ಸೌಂದರ್ಯಕ್ಕೆ ಆಧಾರವಾದ ಕೂದಲನ್ನು ತ್ಯಜಿಸಿ ಮಡಿ ಹಿಡಿದವಳ ಧರ್ಮ ಬುದ್ಧಿಯು ಎಷ್ಟು ದೊಡ್ಡದಾಗಿರಬೇಕು (ಮರುಜ. ೩). ೩. ಸ್ತ್ರೀಯು (ಮಧ್ಯ ವಯಸ್ಸಾದ ಮೇಲೆ) ಭಾದ್ರಪದಮಾಸದ ಶುಕ್ಲಪಕ್ಷದ ಪಂಚಮಿಯಂದು ಬರುವ ವ್ರತ (ಋಷಿಪಂಚಮಿ) ವನ್ನು ಆಚರಿಸಿ, ವಿಧಿಪೂರ್ವಕವಾಗಿ ವ್ಯವಹಾರದಲ್ಲಿ ಮೈಲಿಗೆಯನ್ನು ತ್ಯಜಿಸು. **ಮಡಿಹೆಂಗಸು** = (ಬ್ರಾಹ್ಮಣವರ್ಗದಲ್ಲಿ) ಗಂಡ ಸತ್ತನಂತರ ಕೇಶಮುಂಡನ ಮಾಡಿಸಿಕೊಂಡವಳು: ಗೋದಾವರಮ್ಮನೂ ಯಮುನಕ್ಕನಂತೆ ಮಡಿಹೆಂಗಸು (ಕೃಕೃ. ೦೪೯).

[ < ಮಡು₁. / ತಮಿ. ಮಟಿ; ಕೊಡ. ತುಳು. ತೆಲು. ಮಡಿ ]

**ಮಡಿ₃** 'ಮಡ₁' ನೋ.

**ಮಡಿಕಟ್ಟು** (ನಾ). ನೀರಾವರಿಭೂಮಿ; ಬದುಗಳನ್ನು ಕಟ್ಟಲು ಯೋಗ್ಯವಾದ, ಮಟ್ಟಸವಾದ ನೆಲ; "ಬೆಲೆಯುಳ್ಳ ಭೂಮಿ" (ಕಾವಳೋ. ೨೭): ಮಡುಭೂಮಿಯಾಗಿ, ಮಡಿಕಟ್ಟು ನೆಲವಾಗಿದ್ದರೆ ಮೊದಲು ಎಳ್ಳು, ಬಿತ್ತಿ . . . ಭೂಮಿಯ ಪರೀಕ್ಷಿಸಿ ಬಿತ್ತಬೇಕು (ಕೃಷಿಶ್ರ. ೨೭). [ ಮಡಿ₂ + ಕಟ್ಟು₂ ]

**ಮಡಿಕಾಡು** (ನಾ). = ಮಡಿಕಟ್ಟು (?): ಕಾಟಿಜಿಯರ್ಗೆ ಎರೆಕಾಡು ಇರ್ಪತ್ತೈಮತ್ತರು ತಲೆಪರಿಯೊಳು ಐವತ್ತು ಮತ್ತರ್ಕೆಸುಕಾಡುಂ ಕೀಟಿಕ್ಕಿಟಿ ಮೂವತ್ತಮರ್ಡಿಕಾಡುಂ ಉಱ್ತುಕ್ತರ್ಮಮಾ ಕಟಿಯಾ ಕೆಟಗೆ ಮತ್ತರ್ಕಯ್ಯುಂ ಇಪ್ಪತ್ತರ್ತ್ಣಾಮುಂ ಇದಕ್ಕೆ ಸಾಕ್ಷಿ (ಶಾಇ. IX-i. ೪೭-೭; ? ). [ ಮಡಿ₂ + ಕಾಡು₂ ]

**ಮಡಿಕಾಯಿ** (ನಾ). ಒಂದು ಬಗೆಯ ಕಾಯಿ: ನವಿಲಿನ ಗರಿ, ಮಡಿ ಕಾಯಿ, ಹತ್ತಿಯ ಬೀಜ, ಆಡಿನ ಕೂದಲು, ಕಹಿಬೇವಿನ ಎಲೆ, ಕಾಳು ಮೆಣಸು, ಇಂಗು, ನೆಲಗುಳ್ಳದ ಕಾಯಿ, ಜಟಾಮಾಂಸಿ, ಬಜೆ, ತುಪ್ಪ ಇವನ್ನು . . . ನಾಲ್ಕಾರು ಮಿನಿಟು ಹೊಗೆಹಾಕುವುದು (ವೈದ್ಯ. ೬).

[ ಮಡಿ ? + ಕಾಯಿ₄ ( < ಕಾಯ್₄ ) ]

**ಮಡಿಕೆ₁** (ನಾ). ೧. ಸುಕ್ಕು; ನೆರಿಗೆ: ಆತ್ಮನು ದೇಹವ ಬಿಟ್ಟು ಒಂದು ಗಳಿಗೆ ತೊಲಗಿರಲು ಆ ದೇಹ ಮಡಿಕೆಯಾಗಿ ಹುಳಿತು ನಾಯಿ ನರಿ ತಿಂಬ ಕಾರಣ ನಿಮ್ಮ ದೇಹ ಅಪವಿತ್ರ ಕಾಣಿರೊ (ಸರ್ವಶ. ೦೭೭-೮೫೯); ಕೂತುಕೊಂಡರೆ ಚಣ್ಣಕ್ಕೆ ಮಡಿಕೆ ಬೀಳುವವು (ಅಕ್ಕಮ್ಮ. ೨೩). ೨. ಮಡಿಸಿದುದು; ಪದರ: ಕಕಾರಕ್ಕೆ — ಮಡಿಕೆ, ಹಡಿಕೆ, ಕಾಣ್ಕೆ (ಶಬ್ದ. ೨೦೦ ಪ್ರಯೋ); ಅನಂತರ ರುಮಾಲಿಗೆ ಕೈಹಾಕಿ ಮಡಿಕೆಯಿಂದ ಒಂದು ಕಾಗದವನ್ನು ತೆಗೆದು . . . ರಾಣಿಯವರ ಕೈಗೆ ಕೊಟ್ಟ (ರಾಂಚ. ೩೯). ೩. ತುಂಡು; ಸೀಳು: ಭಾಗ: ಭೀಮನು ಅವನನ್ನು ನೆಲದ ಮೇಲೆ ಬೋರಲಾಗಿ ಕೆಡವಿ . . . ಅವನನ್ನು ಎರಡು ಮಡಿಕೆಯಾಗುವಂತೆ ಮುರಿದು ಬಿಟ್ಟನು (ವಕಣ. ೪೮).

[ಮಡಿ₁ + -ಕೆ / ತುಳು. ಮಡಿಕೆ]

**ಮಡಿಕೆ₂**, ಮಡಕೆ₂, ಮಡಿಗೆ₂ (ನಾ). ೧. ಉಳುಮೆಯ ಒಂದು ಸಾಧನ; ಕುಂಟೆ ; ಹಲುಬೆ : ನೇಗಲ ಮಡಿಕೆ. . . ನೊಗಗಳು ಶಿಲ್ಪಶಾಸ್ತ್ರಕ್ರಮದಂತೆ ಅನುವಾಗಿಯೂ ಬಲಾತ್ಕಾರವಾಗಿಯೂ ಇರಬೇಕು (ಕೃಷಿಶ. ೩೦); ಮೇಳಿ, ಕುಂಟೆ, ಕೂರಿಗೆ, ಮಡಿಕೆ ಮೊದಲಾದ ಭೂಮಿಯನ್ನುಳುವ ಸಲಕರಣೆಗಳೂ. . . ಬೆಳಕಿಗೆ ಬಂದುವು (ಕನ್ನಶಾ. ೦೩೦). ೨. ನೇಗಿಲಿನ ಹಿಡಿಕೆ : (ಕಸಂಗ್ರ. ೦೭). **ಮಡಕೆ₂** : ೧. ಮಡಕೆ ಕೂಡಿಸಿದ(ಗಳು) ಪೊಂದೆ ಪರಿಯಲಿ ಪೂಜಿಸುವುದು (ಅಟ್ಟಿಪು. ೯-೨೬ ಪ). **ಮಡಿಗೆ₂** : ೧. ಮಡಿಗೆ [ಶಾಶಾಂ. ಮಡಕೆ, ಮಡಿಕೆ]ಗೆ ಸಂದ ಕೂಡಿಗೆಯ ಭಗ್ನತೆಯುಂ ನಿಜಗೋತ್ರಹಾನಿ (ಅಟ್ಟಿಪು. ೯-೩೦). [ದೇ.॥ ತೆಲು. ಮಡಕ]

**ಮಡಿಕೆ₃** (ನಾ). ಒಂದು ಬಗೆಯ ಭೂಮಿ,-ಜಮೀನು : ಯಿಾ ಸ್ಥಳಾಂತ್ರಗಳಲ್ಲೂ ಬೆದ್ದಲುಗೆಯುವಂತ್ತ ಮಡಿಕೆ ೧ಕ್ಕೆ ವರ್ತ ನೆಲ್ (ಎಕ. XI, ಹಿಂಯೂ. ೬೬-೦೯; 1589) ; ವಿಂಗಡಿಸಿದ ವಿವರ ಮಡಿಕೆಯಿಂದ ಭತ್ತ ಖ ಹಿ ೨ (ಎಕ. VI, ಕೃಂಗೇ೦. ೦೦-೩೭೨ ಪುಟ; 1652); ದೊಡಗಿರ್ರಿಯನು ಮಡಿಕೆಹೊಲಾ ಸಾಲದು ಯಿಂದು ಅಂಸಲಾಗಿ (ಎಕ. XII. ಶಾಪುಗ. ೬೦-೦೦; 1705). [< ಮಡಿ₂]

**ಮಡಿಕೆ₄** 'ಮಡಕೆ' ನೋ.

**ಮಡಿಕೆಗೆಯ್**, ಮಡಿಕೆಗೈ (ಕ್ರಿ). ೧. ಮಡಿಚು ; ಮಡಿಕೆ ಮಾಡು : ಪಾವುಡಮುಂ ಕುಡುವೆನೆಂದು ಪೊದೆವ ಬಂಗಮುಂ ಬಿಯುತ್ತರಿಗೆಯಂ ಮಡಿಕೆಗೆಯ್ವಿನಂ (ಶಶಪು. ೬-೦೬೮ ಪ). **ಮಡಿಕೆಗೈ** : ೨. ಮುಚ್ಚಿಕೊಳ್ಳು : ಭರತಂ ಕಿವಿಗಳಂ ಮಡಿಕೆಗೈಯೆ (ರಾಮಾಶ್ವ. ೨೩-೦೨).

[ಮಡಿಕೆ₁ + ಕೆಯ್₁]

**ಮಡಿಕೆಗೈ** 'ಮಡಿಕೆಗೆಯ್' ನೋ.

**ಮಡಿಕೆವಲೆ** (ನಾ). ಪದರಗಳಿಂದ ಕೂಡಿರುವ ಒಂದು ಬಗೆಯ ಬಲೆ : ಗಾಢವಲೆ ಗೂಢವಲೆ ಮಡಿಕೆವಲೆ ಮುಂದಸಿನವಲೆಯ ಹೊಡೆಗಳ ಬೇಡವಡೆ ನೆರೆದುದು (ಶಶಕಾ. ೫-೬). [ಮಡಿಕೆ₁ + ಬಲೆ₁]

**ಮಡಿಕೋಲು** (ನಾ). (ಮುಟ್ಟಿದರೆ ಮೈಲಿಗೆ ಆಗುವುದೆಂಬ ಕಾರಣದಿಂದ) ಮಡಿಬಟ್ಟೆಯನ್ನು ಹರವಲು ಅಥವಾ ತೆಗೆಯಲು ಉಪಯೋಗಿಸುವ ಉದ್ದವಾದ ಕೋಲು : ಬಾಗಿಲಲ್ಲಿದ್ದ ಮಡಿಕೋಲನ್ನು ತೆಗೆದುಕೊಂಡು ಅವನು ಬೀದಿಗೆ ಹೊರಟನು (ಗರುಡಾ. ೦೩೦); ಮಡಿಕೋಲೊಳಿಹುದೊಂದು ಬಿಡಮ್ಯೊಳಿಹುದೊಂದು ಇಲ್ಲೆನಗುಡ ಮೂರನೆಯದು (ತಂಪ್ರ್ಯೀ. ೦೬೯-೫೯). [ಮಡಿ₂ + ಕೋಲು₁ (< ಕೋಲ್₁)]

**ಮಡಿಗದ್ದೆ** (ನಾ). ಚಚ್ಚೌಕವಾಗಿ ಭಾಗ ಮಾಡಿರುವ ಗದ್ದೆ : ನಾಡಗೌಡರ ಮಡಿಗದ್ದೆ. . . ನಿನ್ನ ಕಣ್ಣ ತುಂಬಲಾರವೆ (ಜಪ್ರ್ರಿ. ೫೩). 'ಗದ್ದೆ ಮಡಿ' ಪರಾ. [ಮಡಿ₂ + ಗದ್ದೆ (< ಗಱ್ದೆ)]

**ಮಡಿಗಿಂಟ** (ನಾ). ಶುಭ್ರವಾದ ವಸ್ತ್ರ ; ಮಡಿಬಟ್ಟೆ; ಚೌಕ : ಅಪ್ಪಾಜಿಯು ಮುಖ ತೊಳೆದುಕೊಂಡ ಮೇಲೆ ಒಂದು ಮಡಿಗಿಂಟದಿಂದ ಅವರ ಮುಖವನ್ನು ಒರಸಿ. . . ಮಲಗಿಕೊಳ್ಳಬೇಕೆಂದೆ (ತಂಗಾಳ್ಕ. ೦೨೩).

[ಮಡಿ₂ + ಗಿಂಟ]

**ಮಡಿಗಿವಿ** (ನಾ). ಮಡಿಚಿಕೊಂಡಿರುವ ಕಿವಿ ; ಮುದುಡಿಕೊಂಡಿರುವ ಕಿವಿ : ಕೊಂಕುಗುರ ಮಡಿಗಿವಿಯ ಕಿಡಿಗಣ್ಣುಳ. . . ಗಬ್ಬಿನಾಯ್ಗಳ ಹಾಸನುಗಿದು ಬಿಡೆ (ಜೈಮಿಶಾ. ೨೩-೯೭). [ಮಡಿ₂ + ಕಿವಿ₃]

**ಮಡಿಗುರುಳು** (ನಾ). ಕೊಂಕುಕೂದಲು ; ಮಡಿಸಿಕೊಂಡಿರುವ ಕೂದಲು: ಮಡಿಗುರುಳ ಮೈಸಿರಿಯ . . . ಹೊಂದೊಡಿಗೆಗಳ ಕಮನೀಯನೈತಂದೆಱಗಿದನು ಪದಕೆ (ಪಿಶಾಗ. ೭-೪-೦೭).

[ಮಡಿ₁ + ಕುರುಳು₁ (<ಕುರುಳ್₁)]

**ಮಡಿಗೆ₁** (ನಾ). ಪಾಳಿಗೆಯ ಮೇಲೆ ಗೋಡೆ ಕಟ್ಟಲು ತಳಪಾಯವಾಗಿ ಉಪಯೋಗಿಸುವ ಮರದ ಚೌಕಟ್ಟು : ನೆಲದ ಮೇಲೆ ಗದ್ದಿಗೆಕಲ್ಲುಗಳನ್ನು ಹಾಕಿ ಅವುಗಳ ಮೇಲೆ ಕಂಬಗಳನ್ನು ನಿಲ್ಲಿಸಿ ಮೇಲೆ ಮಡಿಗೆಯನ್ನು ಹೇರಿ ಮೊದಲನೇ ಅಂತಸ್ತು ಮಾಡುವರು (ಮುಂಬಯಿ. ೪-೦೦೬).

[ಮಡಿ₂ + – ಗೆ]

**ಮಡಿಗೆ₂** 'ಮಡಿಕೆ₂' ನೋ.

**ಮಡಿಗೊಳಿಸು** (ಕ್ರಿ). ಶುಭ್ರವಮಾಡು ; ಸ್ವಚ್ಛಪಡಿಸು : ಮಡುವಾಗು ನಲ್ಲಮ್ಮ ಒಕ್ಕಲಿಹ ಮಡಿವಳತಿ ಮಡಿಗೊಳಿಸೆನ್ನೆಂದೆ ರಾಮಚರಾಮ (ಅರಳು. ೪೩೯-೮); ನಿರ್ಜರರ ನಾಯಕನ ಅಣ್ಣ ದತ್ತಾತ್ರಯನ ಮನವನ್ನು ಮಡಿಗೊಳಿಸು ಮೇರೆವರಿದು (ಸಸ್ವ೮೮-೮) [ಮಡಿ₂ + ಕೊಳ್₁ + – ಇಸು₃]

**ಮಡಿಗೊಳು** (ಕ್ರಿ). ಶುಭ್ರವಾಗು ; ಸ್ವಚ್ಛವಾಗು : ಮಕ್ಕಳಿಗೆರೆವಾಗ ಮನ ಮಡಿಗೊಳುವುದು ಕಾವ್ಯಗಂಗೆಯ ಬಿಂದುವಿಳಿದು(೨೦೨ಾಶ. ೫೫-೬೪).

[ಮಡಿ₂ + ಕೊಳು₁ (<ಕೊಳ್₁)]

**ಮಡಿಚೀಲ** (ನಾ). ಪದರಗಳಿಂದ ಕೂಡಿದ ಚೀಲ : ನೊಸಲೊಳಗಿಟ್ಟ ಗಂದವು ಮಡಿಲೊಳಗೆ ಕಟ್ಟಿದ ಮಡಿಚೀಲವು ಹದವಗಳಿಂದ ಸೆಟ್ಟಿಗಳಿರುತಿಪರಲ್ಲಿ (ಅಂಜಕ. ೩-೬೦). [ಮಡಿ₂ + ಚೀಲ./ತಮಿ. ಮಟಿಚ್ಚೀಲೈ, ಮಟಿಚ್ಚೀಲೈ; ತುಳು. ಮಡಿಚೀರವು]

**ಮಡಿಚು**, ಮಡಚು (ಕ್ರಿ). ಮಡಿಕೆ ಮಾಡು ; ಮಡಿಸು : ವೀಳ್ಯದ ಮಡಿಚಾಗ ಕೇಡೆ ನಿಮ ಮನಸ (ಹಸುಶ. ೦೬) ; ಅವನ ಕಿವಿ ಮತ್ತು ಬಾಯಿ ಎರಡನ್ನು ಒಳಗೆ ಮಡಿಚಿ ಹೊಲಿದುಬಿಟ್ಟರೆ ಎರಡು ಆತಂಕಗಳು ಇಲ್ಲದಂತಾಗುತ್ತದೆ (ಬೀಳಕ್ನ. ೭೬). **ಮಡಚು** : ರೆಕ್ಕೆ ಮಡಚಿದಲಂಪು ಚಿಂಬಸುರ ಸೊಂಪು ಹಸುರು ಹೊಲದುಸುರಾಗಿ ಬೀಸುತಿರೆ ತಂಗಾಳಿ (ಕಾಲೂರ. ೭೭-೦೦೬); ಲಟ್ಟಿಸಿದ ಮೇಲೆ ಪರೋಟದ ಮೇಲೆ ಡಾಲ್ಡ ಸವರಿ. . . ಅರ್ಧದಿಂದ ಮಡಚಿ (ಅಡುಗೆ. ೦೦೫). [ಮಡಿ₁ + –ಚು₁./ತೆಲು.ಮಡುಚು]

**ಮಡಿಪು₁**, ಮಡಪು, ಮಡುಪು₁, ಮಡುಹು₁ (ಕ್ರಿ). ಕೊಲ್ಲು; ಸಾಯಿಸು; ಸಂಹರಿಸು : " ಮಡಿಪು – ಮಾರಣಕರಣೇ (ಕೊಲ್ಲು) " (ಶಮದಾ) ; ಪಳೆಯಾಜಿಕೊಳ್ದೇವನಾಟನ್ನಿಱಿದು ಮಡಿಪಿದೊಂ ಪಾಣ್ಡ್ಯನನ್ (ಎಕ. XI, ಚಿತ್ರದು. ೭೬-೭೭; 937); ಎಲ್ಲೆಡೆಗಳೊಳಂ ಪ್ರಾಣಿಗಳಂ ಮಡಿಪದೆ ನೋಯಿಸದೆ ಕಾವುದೆಂಬಂ ಜೈನಂ (ಸಮುಶ. ೫-೬). **ಮಡಪು**: ಮುತ್ತಿದರ್ ಕೆಡಪಿದರ್ ಕೊಡಪಿದರ್ ಮಡಪಿದರ್ (ತಂಕ್ಕೃ. ೩೦-೯೩); ಅವನ ಕಾಲ್ಗಳೆರಡನು ಪಿಡಿದು, ನಭಕ್ಕೆತ್ತಿ ನೂಱು ಹೋಳಪ್ಪಂತೆ ತಿಟ್ಟನೆ ತಿರುಗಿಸಿ, ಅಡಿಗಡಿಗಪ್ಪಳಿಸಿ ಮಡಪಿ ಮಾಣ್ದಾನು (ಕಗಪು. ೬೦; ವಿಷ್ಣುಕು). **ಮಡುಪು₁** : ಬಿಜ್ಜಳನ ಪಡೆಯಂ ಮಡುಪಿ [ಶಾಶಾಂ. ಹಿ] ನುತಿಸೆ ಮಗುಳ್ದಸುವನಿತ್ತು (ತಲಕ್ಕೃ. ೦-೦೭); ಮುನಿವರ ಕೇಳಿಂದು ಮೋಸದೊಳೀ ನಿನ್ನ ಮನೆಯ ಧೇನುವ ಮಡುಪಿದನು (ಕಹಕ್ನ. ೩-೨೫). **ಮಡುಹು₁** : ಹತ್ತುತಲೆಯ ರಾವಣನ ಒಂದೆ ಅಂಬಿನಲಿ ಮಡುಹಿದ (ಬಸವ. ೬೨೪); ಭಕ್ತವತ್ಸಲನೇವರಿಯೊಳೀ ಭಕ್ತನಂ ಮಡುಹಿದನಕಟ (ಬಸಕೃ. ೨೫-೨೨); ವಿಪ್ರರ ಮಡುಹಿದಾತನನಮಳ ಗುರುವಿನ ಮಡದಿಯರಿಗಳುಪಿದನ . . . ಗತಿಗಳಾಗಲಿ ರಣದೊಳೋಡಿದರೆ (ಕುವ್ಯಾದ್ರೋ. ೨-೬); ಮಾವನ ಮಡುಹಿದ ಶಕಟವ ಕೆಡಹಿದ (ತ್ರಿಕಂದ. ೦-೦೪೦-೪). [ಮಡಿ₁ + — ಪು₁]

**ಮಡಿಪ್ಪು₂**, ಮಡುಪು₂ (ನಾ). ಪದರ; ಮಡಿಕೆ : ಅವು ಅಗಲವಾದ ಮಡಿಪ್ಪುಗಳು (flaps). ಚುಚ್ಚಿ ಹೀರುವಾಗ ತಲೆ ಅಲ್ಲಾಡದಂತೆ ಆನಿಕೆಗೊಂಡಿವೆ (೪೬೭ಕ. ೬೦). **ಮಡುಪು₂** : ೨. ಸುತ್ತಿರುವುದು ; ಸುರುಳಿ : ಕರ್ಪೂರ ವೆರದ ಸುಣ್ಣ ಬೆಳ್ಳೆಲೆಯಾ ಮಡುಪು ಕೊಡುತವೂಳಿಗದ ಜನರು ಸಭಾಸದಗರ ನೋಡಿ ನಿಂದಿಹರು (ತಾಂದಶಾ. ೩-೯೩) ; ಕುಡಿನೀರ ಗಿಂಡಿ ವೀಳ್ಯದ ಮಡುಪು ಕಳಂಜಿ ಪಿಡಿದು (ಪಪರೋ. ೦೦-೦೭). [ಮಡಿ₂ + – ಪು₂./ತಮಿ. ಮಟಿಪ್ಪು ; ಮಲ. ಮಡಿಪ್ಪು; ತುಳು. ಮಡಿಪು ; ತೆಲು. ಮಡುಪು]

**ಮಡಿಪೆಟ್ಟಿಗೆ** (ನಾ). (ಸಾಮಾನ್ಯವಾಗಿ ಕೃಷ್ಣಾಜಿನ, ಓಲೆಯ ಗರಿ, ಬಿದಿರು ಮುಂತಾದುವುಗಳಿಂದ ಮಾಡಿದ) ಮಡಿಬಟ್ಟೆಗಳನ್ನಿಡುವ ಪೆಟ್ಟಿಗೆ : ಪಾರ್ವತಮ್ಮ . . . ಒಂದು ಮಡಿಪೆಟ್ಟಿಗೆಯನ್ನು ಕಂಕುಳಲ್ಲಿ ಇರುಕಿಕೊಂಡು ಹೊರಡಲನುವಾಗಿದ್ದಾಳೆ (ಅಜಾಶೂ. ೧). [ಮಡಿ$_2$ + ಪೆಟ್ಟಿಗೆ]

**ಮಡಿಮಡಿ$_1$** 'ಮಡಿ$_1$' ಪರಾ.

**ಮಡಿಮಡಿ$_2$** 'ಮಡಿ$_2$' ಪರಾ.

**ಮಡಿಮೆ** 'ಮೊಡವಿ' ನೋ.

**ಮಡಿಯಿಸು**, ಮಡಿಸು$_1$ (ಕ್ರಿ). ಕೊಲ್ಲು ; ಸಾಯಿಸು : ಮುಡಿಯುಂ ಪಿಡಿದೆಳೆದವನಂ ಮಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನ ಮುಡಿ ಬಿಸುಮಿನೆಗಂ ಮುಡಿಯಂ ಮುಡಿಯೆಂ (ಕಂಕಭಾ. ೬-೧೧) ; ನಿಸ್ಸಂಶಯಾಂಶ ದವತಾರಮೂರ್ತಿಯಿಂ ಲೋಕಲುಂಟಾಕರನಾದ ಪದದೊಳ್ ಮಡಿಯಿಸಲ್ವೇಡಿರ್ದಪ್ಪುದಪರವರನಂತಂತೆ ಮಡಿಯಿಪ್ಪುದು (ಜಗವಿ. ೯-೬೩ ವ). **ಮಡಿಸು$_1$** : ಸಕಲಚರಾಚರವ ಪಡೆವ ಪರಿರಕ್ಷಿಸುವ ಮಡಿಸುವಪತಿಬಲನು ಜಗದೊಡೆಯ ಶಿವನೊಪ್ಪಿರ್ದನು (ಸೌಂದಪು.೫-೨೦). [ಮಡಿ$_1$ + — ಇಸು$_3$]

**ಮಡಿಯೊತ್ತು** (ಕ್ರಿ). ಬಗ್ಗುವಂತೆ ಅದುಮು : ಎಮ್ಮ ಪಾಪಕರದೀ ಪೀನಾಂಗುಳೀಪರ್ವಮಂ ಭರದಿಂದಂ ಮಡಿಯೊತ್ತಿಂ (ಶೇಬಿಪು. ೧-೩೮). [ಮಡಿ$_1$ + ಒತ್ತು$_1$]

**ಮಡಿಲ್**, ಮಡಲು$_2$, ಮಡಿಲು$_1$ (ನಾ). ೧. ಸೀರೆ, ಉತ್ತರೀಯ ಮುಂತಾದುವುಗಳ ಎದೆ ಮುಚ್ಚುವ ಭಾಗ ; ಉಡಿ; ಸೋಗಿಲು : "ತೆರೆಪೊಡೆಯೆಂದುಂ, ಸೋಗಿಲೆಂದುಂ ಮಡಿಲ್" (ಶಬಾ. ೩೩-೩೯೬); ತನ್ನ ಮಡಿಲೊಳ್ ಮಣಿಸಿಕೊಂಡಿರ್ದ ಪಾಪುಗೆಯ ರನ್ನದೂರ್ಮಿಕೆಯ ಯಜ್ಞೋಪವೀತಮನಿರಿಸಿ (ಸಮ್ಯಕೌ. ೨-೯೩). **ಮಡಲು$_2$** : ೧. 'ಮಡಲುತುಂಬು' ಪರಾ. **ಮಡಿಲು$_1$** : ೧. ಅವಳು ಹಾಗೆ ಹೋಗಿ ಹೀಗೆ ಬಂದರೆ ಅವಳ ಮಡಿಲು ತುಂಬಾ ಸೊಪ್ಪು ಮುಡಿ ತುಂಬಾ ಹೂ (ಶಂತೇಪು. ೧). ೨. ತೊಡೆ : ಆ ಬಾಲಕಿಯು ತನ್ನ ತಾಯಿಯ ಮಡಿಲಲ್ಲಿ ತಲೆಯನ್ನಿಟ್ಟು . . . ಅಳಲಾರಂಭಿಸಿದಳು (ಕುಂವು. ೧). ೩. ಪಶುಗಳ ಯೋನಿ : ಊರ ಹೊಲವ ಮೇದ ಬಸವ ಕಾಡ ಕಟ್ಟೆಯ ನೀರ ಕುಡಿದು ಕಡೆಯಲಿದ್ದ ಪಶುವಿನ ಮಡಿಲ ಮೂಸಿ . . . ಕ್ರೀಡಿಸುವಂತೆ (ಸಿದ್ಧೇವ. ೪೦-೧೧೯). ೪. ಪ್ರದೇಶ ; ಪ್ರಾಂತ ; ಜಾಗ : ಶಿವರಾತ್ರಿಗೆ ದೇವರಿಗೆ ರಂಗಪೂ × × ಗೆಊ ಪೊಳಗಂಣ್ನ ಸುತ್ತಾ ಮಡಿಲಲು ಉದಯಪರಿಯಾರರ ಅಯನ ದೀವಿಗೆ (ಸೌಇಇ. IX – ii, ೯೦೭-೦೭; 1364) : ಮೂಡಕೇರಿ ಮನೆಯ ಕಟ್ಟೆ ಒಕ್ಕಲಾದ ಬಳಿಕ ದೇವ್ಯ [ದೇ]ವಾಲ್ಯದ [ತಂ]ಕಣ ಮಡಿಲ ಸರಿತದಿಂದ ಬಡಗಣ ಅಗಳಸೂ (ಸೌಇಇ. IX-ii, ೯೫೭-೩೯ ; 1455). ೫. (ಅಲಂ) ಆಶ್ರಯ ; ನೆಲೆ : ಪ್ರಕೃತಿಯ ಮಡಿಲಿನಲ್ಲಿ ಬೆಳೆದಳು (ಶಾಪ್ರಸ. ೪೯) ; ಗಿಡ್ಡನಾಯಕ ಆಗುಂಬೆಯ ಮಡಿಲಲ್ಲಿಯೇ ಹುಟ್ಟಿ ಅಲ್ಲಿಯೇ ಬೆಳೆದು . . . ಒಕ್ಕಲುತನ ಮಾಡಿದ್ದವನು (ಹಸುಹೂ. ೨೯೭).

[< ಮಡಿ$_2$. / ತಮಿ. ಮಟಿ; ಮಲ. ಮಡಿ; ತುಳು. ಮಟ್ಟೆಲ್]

**ಮಡಿಲಕ್ಕಿ** (ನಾ). (ಶುಭಸಮಾರಂಭದಲ್ಲಿ) ಹೆಣ್ಣುಮಕ್ಕಳ ಉಡಿಗೆ ತುಂಬುವ ಅಕ್ಕಿ, ಬೆಲ್ಲ, ಕುಪ್ಪಸದ ಖಣ, ತೆಂಗಿನಕಾಯಿ ಮೊದಲಾದುವು ; ಉಡಿಯಕ್ಕಿ : ಬಾಣಂತಿ ಅಕ್ಕಯ್ಯ ಮುಂದ್ಯಾಕೊಳ್ಳೀ ಗುತೀಯ ನಾನು ಹಿಡಿದಿದ್ದೆ ಮಡಿಲಕ್ಕಿ ಅಚ್ಚಿನ ಬೆಲ್ಲ (ಜಾಶರ. ೬೫): ಮಡಿಲಕ್ಕಿ ಹುಯ್ಯಿಸಿಕೊಂಡು ಸಡಗರದಿಂದ ಹೊರಟ ಹೆಣ್ಣು (ಪಪುಕು. ೧೧೫). [ಮಡಿಲ್ + ಅಕ್ಕಿ$_1$]

**ಮಡಿಲು$_1$** 'ಮಡಿಲ್' ನೋ.

**ಮಡಿಲು$_2$** 'ಮಡಲ್$_2$' ನೋ.

**ಮಡಿಲುಗಟ್ಟು** (ಕ್ರಿ). ಪೊದೆಯಂತೆ ದಟ್ಟವಾಗಿರು : ಒದಚಿದ ಭರವಸಕಾ ಬಂಧಿಸಿದ ಮುಡಿ ಕೆದಱದುದಾ ಬಂಧಕಿಯ ಒದವಿ ಮಡಿಲುಗಟ್ಟಿದಪಕೀರ್ತಿವಲ್ಲರಿ ಹೊದಱುಗೆದಱುವಂವದೊಳು (ಪೇಬಸಂ. ೧೯-೯೦).

[ಮಡಿಲು$_2$ (<ಮಡಲ್$_2$) + ಕಟ್ಟು$_1$]

**ಮಡಿಲುತುಂಬು** 'ಮಡಿಲುದುಂಬು' ನೋ.

**ಮಡಿಲುದುಂಬು**, ಮಡಲುತುಂಬು, ಮಡಿಲುತುಂಬು (ಕ್ರಿ). ಋತುಮತಿಯಾದ ಹುಡುಗಿ, ಛುದುವುಗಳು, ಚೊಚ್ಚಲುಗರ್ಭಿಣಿ ಮುಂತಾದವರಿಗೆ ಉಡಿತುಂಬು. — ಮಡಿಲಕ್ಕಿ ಹಾಕು : ಪೆಟ್ಟಿಗೆಯಲ್ಲಿ ತಂದ ಸಾಮಾನುಗಳನ್ನೆಲ್ಲಾ ಹೆಣ್ಣಿಗೆ ಮಡಿಲುದುಂಬುತ್ತಾರೆ (ಪಪೂರು. ೪೭). **ಮಡಲುತುಂಬು** : ಐದು ಫಲಗಳಂ ಸುವಾಸಿನಿಯರ ಕೈ ಮುಟ್ಟಿಸಿ ರಾಣಿಯ ಮಡಲುತುಂಬಿ (ಸೌಗಂಧಿ. ೩೦-೯); ಒಂದಚ್ಚು ಬೆಲ್ಲ ಎಲೆ ಅಡಿಕೆ ಇಷ್ಟನ್ನೂ ತೆಗೆದುಕೊಂಡು ಹೋಗಿ ಹುಡುಗಿಗೆ ಮಡಲುತುಂಬಿದರು (ಹುಟ್ಟಿಹ. ೧೨). **ಮಡಿಲುತುಂಬು** : ಮೈನೆರೆದಾಗ ಮಡಿಲುತುಂಬುವ ಪದ್ಧತಿ ಕೆಲವೆಡೆ ಕಾಣಬರುತ್ತದೆ (ಕಬಿಕೋ. XII, ೧೧೧೯).

[ಮಡಿಲು$_1$ (<ಮಡಿಲ್) + ತುಂಬು$_1$]

**ಮಡಿವಂತ** (ನಾ). ಮತೀಯ ಸಂಪ್ರದಾಯಗಳನ್ನು ಕಟ್ಟುನಿಟ್ಟಾಗಿ ಪಾಲಿಸುವವನು ; ಹೊಸಸಂಪ್ರದಾಯಗಳನ್ನು ಒಪ್ಪದವನು : ಪ್ರಾಯಶಃ, ಯಾವುದೋ ಕೆಲವು ಮಡಿವಂತರಾದ ವಿಚಾರಿಗಳ ವರ್ಗ ಮಾತ್ರ ಅದನ್ನು ತರಿಸಿ ಓದುತ್ತಿದ್ದಿರಬೇಕು (ಒಂಟಿದ. ೫); ಮಡಿವಂತರ ಮನೆಯಲ್ಲಿ ಹುಟ್ಟಿ ಬೆಳೆದ ನಾನು ಪಂಚಮಹಾಪಾತಕಗಳಲ್ಲಿ ಕುಸ್ತಿ ನೋಡುವುದೂ ಒಂದೆಂಬಂತೆ ನಡೆದುಕೊಳ್ಳಬೇಕಾಗಿತ್ತು (ಗಾಳಿಪ. ೬೫).

[ಮಡಿ$_2$ + — ವಂತ]

**ಮಡಿವಂತಿಕೆ** (ನಾ). ೧. ಶುಭ್ರಗೊಳ್ಳುವುದು : ನಿರ್ಮಲವಾಗುವುದು: ಎರಡು ಮೂರು ಬಕೀಟು ನೀರಾದರೂ ಅವನ ಮಡಿವಂತಿಕೆಗೆ ಸಾಕಾಗುತ್ತಿರಲಿಲ್ಲ (ಶರಸಂ. ೧೭). ೨. ಹೊಸ ಸಂಪ್ರದಾಯಗಳನ್ನು ಒಪ್ಪದಿರುವಿಕೆ ; ಆಚಾರವಂತಿಕೆ ; ಸಂಪ್ರದಾಯನಿಷ್ಠೆ : ಅವರು 'ಮಡಿವಂತಿಕೆ'ಯ ಮನೋಭಾವವನ್ನು ಲೋಕವ್ಯವಹಾರದ ಮಟ್ಟಿಗಾದರೂ ಸಡಿಲಿಸಬೇಕಾಗುತ್ತದೆ (ಸಭಾಲೋ. ೧೯೨); ಭಾಷೆಯಲ್ಲಿ ಮಡಿವಂತಿಕೆಯೆಂಬುದು ಎಷ್ಟರ ಮಟ್ಟಿಗೂ ಸಾಧ್ಯವಾಗದು (ಭಾಷಾಶಾ. ೧೧೨).

[ಮಡಿವಂತ + — ಇಕೆ]

**ಮಡಿವಂತೆ** (ನಾ). ಸಂಪ್ರದಾಯನಿಷ್ಠಳಾದ ಹೆಂಗಸು : ಅನುಸೂಯೆ ಬಹಳ ಮಡಿವಂತೆ ಹೆಂಗಸು (ಒಂಟಿದ. ೧೬೫). [ಮಡಿವಂತ + — ಎ$_2$]

**ಮಡಿವರ್ಗ** (ನಾ). ೧. ಒಗೆದ ಬಟ್ಟೆಗಳ ರಾಶಿ ; ಶುಭ್ರವಸ್ತ್ರಗಳ ಸಮೂಹ : ಮಡಿವರ್ಗಮಂ ಗೋವರ್ಗಳ್ಗೆ ಸೂಚಿಗೊಟ್ಟುಸಗವೊಟಿಯುಂ ಪೃಮ್ಯಲಿಡಿಸೆ ಪೊಚಲಂ ಪೃಮ್ಯಲಿಡಿಸಲೆಂದು ಪುರುಷೋತ್ತಮನಾ ಪುರದ ಗೋಪುರಮಂ ತಾಗೆವರೆ (ಅರ್ಜಸೇ. ೮-೯೦ ವ). ೨. ರೇಷ್ಮೆಬಟ್ಟೆಗಳ ರಾಶಿ : ಮಣಿ ಮಡಿವರ್ಗ ದೂರ್ವಾಂಬರ ಸಿತಾಕ್ಷತ ಧವಳ ಸರ್ಷಪ ವರ ಫಲಾವಳಿಯ ತರಿಸಿದನು (ಕುಮ್ಯಾಕ. ೧-೨೮); ಬಾಲದೊಡಿಗೆಯ ತೊಡಿಸಿ ಮೃದುತರದ ಮಡಿವರ್ಗಮಂ ಪಾಸಿ (ಸೌಂದಪು. ೩-೬). [ಮಡಿ$_2$ + ವರ್ಗ]

**ಮಡಿವಸನ** (ನಾ). ಒಗೆದ ಬಟ್ಟೆ; ಶುಭ್ರವಾದ ವಸ್ತ್ರ : ಮಡಿವಸನ ವನುಟ್ಟು ಪೂರ್ವದಿಗ್ವನಿತೆಯ ಮುಡಿಯೊಳು ಹೊತ್ತ ಹೊಂಗಳಸ ನಿಡನಿಂದ ರಥದ ಮೇಲಡರ್ಚಿದ ರನ್ನಗನ್ನಡಿಯಂತೆ ಸೂರ್ಯ ಮೂಡಿದನು (ಮೋಹತ. ೧೮-೧೧೯); ಮಜ್ಜನಂಗೈದು ಮಡಿವಸನಮಂ ಧರಿಸಿ (ಪಂಚವಾ. ೧೮-೩೦).

[ ಮಡಿ$_2$ + ವಸನ ]

**ಮಡಿವಸಲೆ**, ಮದವಸಲೆ (ನಾ). ಒಂದು ಬಗೆಯ ಬಸಲೆ : "ಮಡಿವಸಲೆ — ವರುಣ, ವರಣ, ಸೇತು, ತಿಕ್ತಶಾಕ, ಕುಮಾರಕ" (ಜಾವರ.೯). **ಮದವಸಲೆ:** "ವರುಣಃ . . . ಕುಮಾರಕಃ — ಇ ವಸಲೇಗಿಡ, ಮದವಸಲೇ

ಗಿಡ" (ಸಿದ್ಧಾಂತ. ೦೦೭): ಪಟ್ಟಿಗೆ . . . ಕರ್ಣಶೂಲವ್ಯಥೆಗೆಕ್ಕೆಯು ಮೂಲಗೆಯಾವುಂಡಲಗೆಯು ಮದ[ಪಾಠಾಂ. ಮರ]ವಸಲೆಗಳ ದಳದೊಳೊಂದಂ ಕಿವಿಯೊಳ್ (ಲೋಕೋಪ. ೯-೬೫). [ಮಡಿ$_2$+ಬಸಲೆ$_1$./ತೆಲು. ಮಟ್ಟುಬಚ್ಚಲಿ]

**ಮಡಿವಸೆ** (ನಾ). ಮದುವೆ ಮುಂತಾದ ಶುಭಕಾರ್ಯಗಳಲ್ಲಿ ಹಾಕುವ ಪೀಠ,— ಹಸೆಮಣೆ : ಇಳುಹಿದುದು ಕಮ್ಮೆಣ್ಣೆ ಹಾಯ್ಕಿತು ಹೊಳೆವ ಮಣೆ ಮಡಿವಸೆ (ತೊರವ. ೩-೩-೩೪). [ಮಡಿ$_2$ + ಪಸೆ$_2$]

**ಮಡಿವಳ,** ಮಡಿವಳ್ಳ, ಮಡಿವಾಳ$_1$ (ನಾ). ಬಟ್ಟೆಯನ್ನು ಒಗೆದು ಶುಭ್ರ ಮಾಡುವ ವೃತ್ತಿಯವನು; ಅಗಸ : ಕಮ್ಮಾರ ಸೋವನು ಮಡಿವಳ ಕಾಳಗನು (ಎಕ. VI, ತರೀಕೆರೆ. ೭-೫೭; 1061): ಒಗೆಯುತ್ತು ಮಿರ್ಪ ಮಡಿವಳನ ಮುಂದಣ ಮಡಿಯುಂ ಮಾಂ . . . ಕಂಡು (ಅರ್ಜುನ. ೯-೭೫ ವ); ಮಳಿಕ್ಕ—ಅಡಪವಳಂ. ಮಾಸವಳಂ. ಮಡಿವಳಂ (ಶಬ್ದ. ೦೯೯ ಸೂತ್ರ). **ಮಡಿವಳ್ಳ** : ಪಟ್ಟ ಚಿತ್ರಾವಟ್ಟ ಜೋಗಂ ಪಟ್ಟೆಯುಂ ದೇವಾಂಗ ಮೆಂಬ ವಸನಂಗಳನೇಂ ಗಟ್ಟಿಯಿಸುವವೊ ಮಡಿವಳ್ಳನ ಪಟ್ಟಿಯುತ್ತನನೆ ಪೋಲ್ತು ವಿಶದವಸನಾಂಗಕುಜಂ (ಆದಿಪು. ೩-೩೪): ನಡೆವರ್ ಮಾಪ್ಪನವಳ್ಳರ ಮಡಿವಳ್ಳರ ಮಾಳೆಗಾಜಿರಂವದೆ ದಿವಿಜರ್ (ಆದಿಪು. ೩-೯೦): ಅಡಪವಳಂ ಪಡೆವಳ್ಳಂ ಮಡಿವಳ್ಳಂ ಸಜ್ಜೆವಳ್ಳಂ (ಕಾವ್ಯಾವ. ೩೨೭). **ಮಡಿವಾಳ$_1$** : ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ (ಬಸವ. ೩೯೯); ಸುರನಿವಹ ಕುಸುಮವರುಷವ ಕರೆಯೆ ಮಡಿವಾಳ ಮಾಚಯ್ಯ ಬಸವಣ್ಣ ಸಹಿತಾಗ ತೋಟಿ ಬೊರೆದನ ವಿಮಲಚರಣಾಂಬುಜಕ್ಕೆ ಶರಣು (ಲಿಂಗಲೀ. ೩೭-೩೭).
[ಮಡಿ$_2$ + — ವಳ. / ತುಳು. ಮಡಿವಳೆ, ಮಡ್ಡೆಲೆ, ಮಡ್ಯಲೆ; ತೆಲು. ಮಡಿವೇಲು]

**ಮಡಿವಳಗಿತ್ತಿ,** ಮಡಿವಾಳಗಿತ್ತಿ (ನಾ). ಅಗಸಗಿತ್ತಿ : ಅವಳು ಕಾತ್ಯಾಯಿನಿಗೆ ಮಡಿವಳಗಿತ್ತಿಯು ಕೆಲಸ ಒದಗಿಸಿ ಕೊಡುವುದಾಗಿ ಹೇಳಿದಳು (ಪುನರು. ೯). **ಮಡಿವಾಳಗಿತ್ತಿ** : ಮಡಿವಾಳಗಿತ್ತಿ ಆ ಬಟ್ಟೆವನ್ನು ಗುಡಿಸಿ ತಕ್ಕೊಂಡು ಹೋಗುತ್ತಾಳೆ (ಪಡ್ಡುರು. ೯೯). [ಮಡಿವಳ + — ಗಿತ್ತಿ]

**ಮಡಿವಳತಿ** 'ಮಡಿವಳಿತಿ' ನೋ.

**ಮಡಿವಳವಕ್ಕಿ,** ಮಡಿವಾಳಹಕ್ಕಿ (ನಾ). ಒಂದು ಬಗೆಯ ಪಕ್ಷಿ : ಆ ಪ್ರಾತಃಪೂರ್ವಪ್ರತ್ಯೂಷೆಯ ನಿಶ್ಶಬ್ದತೆಗೆ ಸಿಳ್ಳಿರಿಯೆ ತೊಡಗಿತ್ತದೊಂದು ಮಡಿವಳವಕ್ಕಿ (ಶ್ರೀರಾಮಾ. ೪೮೦-೦೦). **ಮಡಿವಾಳಹಕ್ಕಿ** : ದೂರದ ಕಣಿವೆಯಲ್ಲಿ ಸಿಳ್ಳು ಹಾಕಲು ತೊಡಗಿದ್ದ ಮಡಿವಾಳಹಕ್ಕಿಯ ಗಾನವು ಹುಂಜನಿಗೆ ಕೇಳಿಸಿ (ಕಾನೂರು. ೪೨); ಅಡಗಿ ಕುಳಿತು ಮಡಿವಾಳಹಕ್ಕಿಯನ್ನು ಅನುಕರಿಸಿ ಹಾಡಿ ಪ್ರತ್ಯುತ್ತರ ಗಳಿಸಬಲ್ಲ (ಸ್ವಪ್ನಹೂ. ೨೪).
[← ತುಳು. ಮಡ್ಡೆಲಪಕ್ಕಿ]

**ಮಡಿವಳಿತಿ.** ಮಡಿವಳತಿ, ಮಡಿವಳ್ತಿ, ಮಡಿವಾಳಿತಿ (ನಾ). = ಮಡಿವಳಗಿತ್ತಿ : ಬಾಣಸಿಗಿತಿ, ಮಡಿವಳಿತಿ, ಘಟ್ಟಿವಳಿತಿ (ಕಾಶಾರೂ. ೦೯೮ ಟೀಕಾ). **ಮಡಿವಳತಿ** : ಮಡಿವಳತಿಯ ಕಣಿತಿಯ ಸೂಲಗಿತ್ತಿಯ ಸೂಳೆಯನು ಆಲೋಚನೆಗಂತರಂಗಕೆ ಬರಿಸದೆ ಮೇಲಟ್ಟಿಹುದು ಮೋರೆಯೊಳು (ಹರಿಶ. ೪-೪೪). **ಮಡಿವಳ್ತಿ** : ಮಡಿಯುಂ ಮಡಿವಳ್ತಿಯುಮೊಲ್ ಬಿಡದ ವೃತ್ತಾನ್ನಮನೊಲ್ಲು ಬಾಣಸಿಗಿತಿವೊಲ್ ಕುಡುತಿರ್ದಳ್ (ಕಾವ್ಯಾವ. ೩೩೦); ನಡೆಯುಪರನುಲೇಪನಮುಂ ಮಡಿಯುಂ ಮಾಲೆಯುಸಮರ್ತ್ಯಲೋಕದಮಂ ತಂದೆದೆವಿಡದೆ ಘಟ್ಟಿವಳ್ತಿಯು ಮಡಿವಳ್ತಿಯು ಮಾಲೆಗಾರ್ತಿಯುಂದದಿನರೆವಿರ್ (ತಂತ್ರಪು. ೦೦-೦೩೩). **ಮಡಿವಾಳಿತಿ** : ತನ್ನವರೊಲ್ಲದ ಸರಸತಿ ನವವಧು ಗಂಡನ ಮಡಿವಾಳಿತಿಯಾಗಿ ಹಿಂಡುಬಟ್ಟೆಗಳ ಹಿಂಡಲು ಬಂದಳು (ಗಣೇಶ. ೩೦-೭); ಆಗ ತಾನೇ ಸ್ನಾನಕ್ಕೆ ಹೋಗಿದ್ದ ಮಗುವನ್ನು ಮಡಿವಾಳಿತಿಯು ಒಳಗೆ ತರುತ್ತಿದ್ದಳು (ಮರಳು. ೧೦೯).
[ಮಡಿವಳ + — ಇತಿ$_1$ (< — ಇತ್ತಿ)]

**ಮಡಿವಳ್ತಿ** 'ಮಡಿವಳಿತಿ' ನೋ.

**ಮಡಿವಳ್ಳ** 'ಮಡಿವಳ' ನೋ.

**ಮಡಿವಾಗಲ್,** ಮಂಡಿವಾಗಲು, ಮಡಿಹಾಗಲ, ಮಂಡಿಹಾಗಲು, ಮಡುವಾಗಲ್, ಮಡುವಾಗಲ, ಮಡುವಾಗಲು (ನಾ). ಒಂದು ಬಗೆಯ ಸಸ್ಯ : ಮಡಿವಾಗಲದೊಪ್ಪೆಯೊಳೆಯ ನೀರುಳ್ಳಿಯ ಮಾವಿಡಿಗಳ ಪಸುಂಬರಿಯ ಸವಿದಪಗಿಸ ಬಾಡುಗಳ ನೆಲದೊಳೇಂ ಬೇಯ್ಸಿಸಿದರ್ (ಸೂಕ್ತಿಸು. ೦೩-೨೯). **ಮಡಿವಾಗಲು** : "ಕಂದವಲ್ಲಿ—ಮಡಿ (ಡು)ವಾಗಲು" (೭೩ಧಿ. ೨೩). **ಮಡಿಹಾಗಲ** : ಮಡಿಹಾಗಲ, ಗಿಡ್ಡಹಾಗಲ. ಕಾರ್ತಿಕಾಯಿ, ಕಾರ್ಚಿಬಳ್ಳಿ (ವೃಕ್ಷಶಿ. ೩೪-೧೦೯೩). **ಮಡಿಹಾಗಲು** : (೯). **ಮಡುವಾಗಲ್** : "ವಿಷಹಾರಿ ಕಂದೆಯೆನೆ ಮಡುವಾಗಲಕ್ಕು" (ಮಂಗರಾ. ೪೩-೪೭); ಹಿಡಿಹಿಡಿಕೆಯಾಚಕತ್ತರಿ ಮಡುವಾಗಲ್ ನೆಲ್ಲಿ ಗೋಣಿ ಕಿಱುನೆಲ್ಲಿಯ ಚೆಲ್ವೊಡರಿಸಿದೆಲೆಯಂಕೋಲದ ಗಿಡುವಳಿರುಪನಾಹವುಱಿವಿಷವುಂ ಕಳೆಗುಂ (ಶಬ್ದ. ೦೩-೭೭). **ಮಡುವಾಗಲ** : "ಅಂಗುಕಾ—ಮಡುವಾಗಲ" (೭೩೨. ೭); ಗಣಜಲದ ಬೇರು, ಮಡುವಾಗಲದ ಗೆಡ್ಡೆ, ಕತ್ತರಿಯ ಬೇರು, ಅಪ್ಪುಗೆಡ್ಡೆ. ಇವಂ ಅಕ್ಕಿಗಚ್ಚಿನಲ್ಲಿ ಅರೆದು ಪೂಸೆ ಬಾವು ಮಾಣ್ಗುಂ (ವೈದ್ಯಾ. ೭೭). **ಮಡುವಾಗಲು** : "ಕಂದಫಲಾ—ಹಾಗಲ, ಮಡುವಾಗಲು"(೭೩೨. ೨೩); ಭಾವಸಂಯುತವಾದ ಪಾಕುಜವಿಶ್ರಿತಂ ಮಡುವಾಗಲುಂ ಸೇವಿಸಿಂತಿ ವನಾಜ್ಯದಿಂ ಕಳೆಗುಂ ಸಮಸ್ತವಿಷಂಗಳಂ (ಖಗೇಂ. ೨೭).
[ಮಡಿ$_2$ + ಪಾಗಲ್$_1$?]

**ಮಡಿವಾಗಲು** 'ಮಡಿವಾಗಲ್' ನೋ.

**ಮಡಿವಾಸು** (ನಾ). ಒಗೆದ ಬಟ್ಟೆಯ ಹಾಸು ; ನಡೆಮಡಿ : ವಿಜಯ ರಾಘವನಹಿತವಿಜಯಕೆ ಬಿಜಯ ಮಾಡುವನೆಂದು ಬಂದಪರಜಕ ರಚಿಸಿದ ಮೆಲ್ಲಡಿಯ ಮಡಿವಾಸಿನತಿಶಯವೊ (ತೊರವ. ೭-೭-೭).
[ಮಡಿ$_2$ + ಪಾಸು$_2$]

**ಮಡಿವಾಳ$_1$** 'ಮಡಿವಳ' ನೋ.

**ಮಡಿವಾಳ$_2$** 'ಮಡಿವಾಳ' ನೋ.

**ಮಡಿವಾಳಗಿತ್ತಿ** 'ಮಡಿವಳಗಿತ್ತಿ' ನೋ.

**ಮಡಿವಾಳಹಕ್ಕಿ** 'ಮಡಿವಳವಕ್ಕಿ' ನೋ.

**ಮಡಿವಾಳಿತಿ** 'ಮಡಿವಳಿತಿ' ನೋ.

**ಮಡಿವು** (ನಾ). ಸಾವು ; ಮರಣ : ಮವನೀಗ್ರಳಿಂ ಬೆರಸು ನೇತ್ರರ ಪೆರ್ಮಟ್ಟಿಯಾಗೆ ಮುಖ್ಯಮಂತ್ರಿಗೆ ಮಡಿವಕ್ಕುಂ (ಲೋಕೋಪ. ೪-೦೨) ; ತಡೆದಿಲ್ಲಿ ನಿಂದೆನಪ್ಪೊಡೆ ಮಡಿವಾದಪುದು (ಧರ್ಮಾಮೃ. ೬-೯೦) ; ಇಂದು ಕೊಱೆಯಂಬಿನೊಳೀ ಕಾನನದ ಹೀನನಿಸೆ ಮಡಿವಾಯ್ತೇ (ನೇಮಿಪು. ೦೪-೧೦೦). [ಮಡಿ$_1$ + — ವು. / ತಮಿ. ಮಡಿವು]

**ಮಡಿವುಳಿಗ** (ನಾ). ಬಟ್ಟೆಯನ್ನು ಶುಭ್ರಮಾಡುವ ಸೇವೆ,—ಕೈಂಕರ್ಯ : ಬಿಡದಿವುಳಿಗದ ಲಿಂಗಣ್ಣ ಮಡಿವುಳಿಗದ ದೊಡ್ಡಯ್ಯ (ಎಕ. III (R), ಗುಂಡ್ಲುಪೇಟೆ. ೬೦-೩೫ ; 1087). [ಮಡಿ$_2$ + ಉಳಿಗ$_2$ (<ಊಳಿಗ)]

**ಮಡಿವೆಡೆ** (ನಾ). ಮಡಿಸಿಕೊಂಡಿರುವ ಹೆಡೆ : ವಾಸುಗಿಯ ಮಡಿವೆಡೆಯ ಕಿಳ್ಪುಂ ಧರೆಯನೊಬ್ಬೆರಲೊಳಾಳ್ವ . . . ರುದ್ರಗಣಮೆಡೆವಿಡದೆ ಕಣ್ಗೆಸೆದುದು (ತರಂಗ. ೨-೨೪). [ಮಡಿ$_1$ + ಪೆಡೆ]

**ಮಡಿವೆರಳು** (ನಾ). ಮಡಿಸಿದ ಬೆರಳು ; ಬಾಗಿಸಿದ ಅಂಗುಲಿ : ಬಲನೆಡನ ಮಡಿವೆರಳ ಮಾಡಿ ಮುಂದಲೆಯ ಲಘುವಾಗದಿರಿ (ಕುಮಾರ. ೨-೦೯); ಮಡಿವೆರಳ ಜಪಸರದ ಪುಲಿದೊಗಲುಡಿಯ ಕರದ ಕಮಂಡಲದ. . . ಮುನಿಯ ವೇಷವ ತೊಡಚಿಕೊಂಡಿಹ ಕಾಲನೇಮಿಪ್ಪಂತೆ ರಂಜಿಸಿದ (ತೊರವ. ೭ ೩೭-೭೯). [ಮಡಿ$_1$ + ಬೆರಳು (<ಬೆರಲ್)]

**ಮಡಿಸೀರೆ** (ನಾ). ೧. ಒಗೆದು ಸ್ವಚ್ಛಗೊಳಿಸಿದ ಸೀರೆ : ಮಡಿಸೀರೆಯಂತೆ ಗಟ್ಟಣೆಗೆ ಬಂದು ವೈಲಗೆಯಂತೊಗೆಹಕ್ಕೆ ಬಂದು (ರವರ್ಣವು. ೩-೭೭). ೨. ಸಾಮಾನ್ಯವಾಗಿ ಸಂಪ್ರದಾಯಸ್ಥರ ಮನೆಗಳಲ್ಲಿ ಹೆಂಗಸರು ದೇವರ ಪೂಜೆ, ಅಡುಗೆ ಮತ್ತು ಊಟ ಮಾಡುವ ಸಮಯಗಳಲ್ಲಿ ಉಡುವ ಅಗ್ಗದ ಸೀರೆ : ಸುನಂದ ಅತ್ತಿಗೆಗೆ ಮಯಿಲ್‌ಸೀರೆಯನ್ನು ತಾಯಿಗೆ ಮಡಿಸೀರೆಯನ್ನು ತೆಗೆದುಕೊಂಡಳು (ದೂಬಟ್ಟ. ೯೩). ೩. ಮಡಿಹೆಂಗಸರು ಉಡುವ ಕೆಂಪುಬಣ್ಣದ ಸೀರೆ. [ಮಡಿ$_2$ + ಸೀರೆ$_2$]

**ಮಡಿಸು$_1$** 'ಮಡಿಯಿಸು' ನೋ.

**ಮಡಿಸು$_2$** (ಕ್ರಿ). ಮಡಿಕೆ ಮಾಡು ; ಮಡಿಚು ; ಮದರಗೊಳಿಸು : ಪರಮಸಂಘ್ರಗಳ್ಗೆ ಬಿಚ್ಚದಂತು ಮ[ಶಾಕಾಂ. ಬಿ]ಡಿಸಿ ಘಳಿಗೆ ಮಾಡಿ . . . ಸಕಲಭಕ್ತಜನಕೆ ಮನದ ಮಡಿಂಗನೀವುತಿಪ್ಪನಲ್ಲಿ (ತಿರುತೊಂ. ದೇ. ೨೩೩-೦೫): ಸತಿ ಮಡಿಸಿ ನೀಡುವೆಲೆವಿಡಿದ ಕೈ ಬಸವಳಿದುದು (ಹಕಶಾ. ೬-೫೨) : ಫಣೀಂದ್ರನ ಫಣಾಮಂಡಲಂ ಬಿಜ್ಜಣಿಗೆಯುಂ ಮಡಿಸಿದಂತಾಯ್ತು (ತಿಪಶ. ೪೪-೨೦). [ಮಡಿ$_2$ + –ಸು$_2$]

**ಮಡಿಹಾಗಲ** 'ಮಡಿವಾಗಲ್' ನೋ.

**ಮಡಿಹಾಗಲು** 'ಮಡಿವಾಗಲ್' ನೋ.

**ಮಡು$_1$** (ಕ್ರಿ). ಹೊಂದಿಸು ; ಜೋಡಿಸು : "ಮಡು — ದೃಢಸಂಧಾನೇ (ಬಿಗಿಯಾಗಿಡು, ಒಟ್ಟಿಗಿಡು), ಅಗಾಧ ಜಲೇ ಚ" (ಕಮಾ೩) ; ಕರದೊಳ್ಬಿಲ್ಮಂಡಲಾಕಾರದಿನಿರೆ ಪೂಜಮಯ್ಮಂಗೆ ತೊಟ್ಟಂಬು ಮಟ್ಟಂತಿರೆ (ಅಪಂಶ. ೦೪-೦೭). 'ತಲೆವಡು' ಪರಾ. [ದೇ.॥ ತಮಿ. ಮಟು]

**ಮಡು$_2$, ಮಡುಹು$_2$** (ನಾ). ೧. ನದಿ· ಹೊಳೆ ಮುಂತಾದುವುಗಳಲ್ಲಿ ಆಳವಾದ ನೀರಿರುವ ಪ್ರದೇಶ : ಗಂಗಾಮಹಾನದಿಯ ನಡುವೆ ಮಡುವಿನೊಳ್ ಭಯಂಕರಮಾಗುತ್ತಿರ್ದ ತೆರೆಯನೊಡೆಯದಜಿಳೊಳ್ ಮುಳುಗಿದೊಡೆ (ಪಜ್ಞಾ. ೭೨-೦೪) ; ಜಗುನೆಯ ಮಡು ಗಂಗೆಯ ಮಡುವನಿನಿಸನನುಕರಿಸಿಕರ್ದು (ಪಂಶಭಾ. ೩-೭೬) ; ಪರಿವ ವೈತರಣಿಯ ಮಡುಗಳೊಳ್ ಪುಡುಕುನೀರರ್ದುವುದುಂ (ಸುಕುಮಚ. ೧೦-೪೭ ವ). ೨. ಕೊಳ ; ಸರೋವರ : 'ಮಡುನೀರ್', 'ಮಡುವೊಗು' ಪರಾ. ೩. ಪ್ರವಾಹ : ಒಡೆದ ನೆತ್ತಿಗಳಿಂದ ರಕುತದ ಮಡು ಹರಿಯೆ [ಶಾಕಾಂ· ಮಡ ಹರಿದು] (ಪಳತ. ೯-೨೭). ೪. ಹಳ್ಳ; ಕೊಳ್ಳ : ಕೋಣಂ ಪೊಕ್ಕ ಮಡುವಿನಂತೆ ಮನದೊಳ್ ಕದಡಿ (ಧರ್ಮಾಮೃ. ೧೦-೩೭): ಒಂದೊಂದು ಹನಿ ಬಿದ್ದು ನಿಂದಲ್ಲಿ ಮಡುವಕ್ಕು (ಸರ್ವಜ್ಞ. ೪೨೮). ೫. ಆಶ್ರಯಸ್ಥಾನ : ರಸದ ಮಡು ಪುಣ್ಯದಾಗರವೆನಿಪ ಸಿದ್ಧರಾಮನ ಕಥೆಗೆ ಕಾವ್ಯಮಂ ವಿರಚಿಸುವಡಪ್ಪಾದಶಸ್ಥಲವ ಪೊಗಳ್ವೆನೀಕೆ (ಸಿದ್ಧರಾ. ೦-೪); ಮದದ ಮಡು ಭೋಗೈಕನಿಧಿ ಸಂಪದದ ಜನ್ಮಸ್ಥಳ ಮನೋರಥದುದಯಗಿರಿ (ಕುಮ್ಮಾರ. ೦೨-೪). ೬. ಬಾವಿ, ಕೆರೆ ಮುಂತಾದುವುಗಳಿಂದ ನೀರಿನ ಪೂರೈಕೆಯುಳ್ಳ ಭೂಮಿ; ನೀರಾವರಿಭೂಮಿ : ಇರ್ಬ್ಬಣ್ಣಿಗ ಮಡುವಿನ ಮಣ್ಣುಮಂ ಕೊಣ್ಡು (ಪ್ಯಆಂ. ೦೯೩೯, ೭೭-೯; ೯೦೪); ×× ವರೆ ಮಡು ಖ ೨ ಬೀಜವರಿ ಗ ಭೂಮಿ (ಎಕ. VII, ಶಿವಮೊ. ೯೩-೦೯; ?). ಮಡುಹು$_2$: ೪. ನಂಜಿನ ಮಡುಹು ಹೆಬ್ಬುಲಿ ಕರಗಸಂಗಳು ಅಡಿಯನೂಡಿದರೊಡನೆ ನುಂಗುವ ಮೋಸಕೂಪಗಳು (ಕಾಶಿರಾ. ೦೭-೪೦); ಅಜ್ಞಾನ ಮಡುಹಿನಲಿ ಕೆಡೆದು (ಗಗಶಾ. ೦೩-೦೯). [ದೇ.॥ ತಮಿ. ಮಟು; ಮಲ. ಮಡು; ತೆಲು. ಮಡುವು, ಮಡುಗು· ಮಡ್ಗು, ಮಡ್ವು]

**ಮಡು$_3$** (ನಾ). (ಕರಾ) ಮರಗಳನ್ನು ಕಡಿಯುವ ಸಾಧನ; ಕೊಡಲಿ : ಗಿಡಗಳ ಬುಡಕ್ಕೆ ತುಕ್ರ ಮಡು ಬೀಸಿದ (ದಾಸಗಿ. ೬೭). [← ತುಳು. ಮಡು]

**ಮಡುಗಟ್ಟು, ಮಡುವುಗಟ್ಟು** (ಕ್ರಿ). ೧. ಆಳವಾಗಿ ನೀರು ನಿಲ್ಲು. ೨. ಸಮೃದ್ಧವಾಗು: ಅಧಿಕವಾಗು; ತುಂಬಿಕೊಳ್ಳು : ಗುಡಿಗಟ್ಟಿತು ಸೆಜೆ ಮಡುಗಟ್ಟಿತ್ತುಜಲನಾಥ ಸಂತೋಷರಸಂ (ಗಂಕ. ೩-೬೪); ಅರಿದೇಶದೊಳ್ ಭಯ ×× ಸಂ ಮಡುಗಟ್ಟಿದುದಾಗಳಾವಗಂ (ಎಕ. XI, ಹೊಳಕಾ. ೨೦-೯: 1278 ?) : ಮಡುಗಟ್ಟಿ ಸುರಿವ ನೆತ್ತರ ಕಡಲೊಳ್ ತೇಂಕಾಡುತಿರ್ಪ ರಥದೊಳ್ ಗಾಯಂಬಡೆದೆನಸು ಬಳಲುತಿರ್ದಂ (ಪಕಾ. ೨-೩೬). **ಮಡುವುಗಟ್ಟು**: ೨. ಕಣ್ಣುಗಳಲ್ಲಿ ನೀರು ಮಡುವುಗಟ್ಟಿ ಕೆಳಗೆ ಹರಿಯುತ್ತಿದ್ದವು (ಮೋಂಮ. ೬೨). [ಮಡು$_2$ + ಕಟ್ಟು$_1$]

**ಮಡುಗು** 'ಮಡಗು' ನೋ.

**ಮಡುಗೊರ್ವು** (ನಾ). (ಮಡುವಿನಲ್ಲಿ ನೀರು ತುಂಬಿರುವಂತೆ) ಸಮೃದ್ಧವಾಗಿರುವಿಕೆ : ಪೊಳೆವ ತನುಚ್ಛಾಯೆ ಮೆಯ್ವೆರ್ಚ ಕಚ್ಚಲ್ ಮಡುಗೊರ್ವಂ ತಾಳ್ದಿ . . . ಇರ್ದುದು ಮನಮುಹಿಷೀವೃಂದಮಾನಂದದಿಂದಂ (ಶಾಂತೀಶ. ೩-೯೮). [ಮಡು$_2$ + ಕೊರ್ವು$_2$]

**ಮಡುಗೊಳ್**, ಮಡುಗೊಳು (ಕ್ರಿ). ಸಮೃದ್ಧವಾಗು; ತುಂಬು: ಮಡುಗಟ್ಟು : ಕಿಜುಮಡುಗೊಂಡ ಬಂಡಿನೊಳಗೀಸಿ ಪೊದಟ್ಟಡಸಿರ್ದ ಕಾತ್ತೆಸಟ್ಟುಜುವದೊಳಿಪ್ಪಿ ಮೆಯ್ಯುರೆದು . . . ಪರಾಗಪುಂಜದೊಳ್ ಪಜಿವಡಿಸಿತ್ತು ಭೃಂಗಶಿಶು ನೀರಜದೊಳ್ ನಿಜಪಾಂಸುಕೇಳಿಯಂ (ಚಂದ್ರಪು. ೭-೩೦) ; ಎಳನೀರ್ಗಳ್ ಮಡುಗೊಂಡೋವುತ್ತುಮಿರ್ಪುವಲ್ಲಿಯ ಬನಮಂ (ಕಬ್ಬಿಗ. ೨೨). **ಮಡುಗೊಳು** : ಮನಮನವ ಎಳೆಗೊಂಡು ಮುಡಿವ ಮೂರ್ತಿ· ಸಮ್ಮೂರ್ತಿ ಮಡುಗೊಳುವ ಗುಡಿಯೊಳೇ ನಿನ್ನ ಕೀರ್ತಿ? (ಮಲೆದೇ. ೦೭-೦೦). [ಮಡು$_2$ + ಕೊಳ್$_1$]

**ಮಡುಗೊಳಿಸು** (ಕ್ರಿ). ಸಮೃದ್ಧವಾಗುವಂತೆ ಮಾಡು : ಆ ಕರುಣೆ ಬೆಳಗನೇ ನನ್ನೊಳಗೆ ಮಡುಗೊಳಿಸೆಯಾ ಹುರುಳ ಕಂಡು (ಮಲೆದೇ. ೩೯-೦೦). [ಮಡುಗೊಳ್ + — ಇಸು$_3$]

**ಮಡುಗೊಳು** 'ಮಡುಗೊಳ್' ನೋ.

**ಮಡುದಲೆಯ** (ನಾ). ತಲೆಯಲ್ಲಿ ಸಮೃದ್ಧವಾದ ನೀರನ್ನು ತಡೆ ಹಿಡಿದಿರುವವನು : ತಲೆಯಲ್ಲಿ ನದಿಯನ್ನು ಧರಿಸಿರುವವನು ; ಗಂಗಾಧರ ; ಶಿವ : ಕಾಳಗ ಬೆಂದುದೆಂದಸುರಾರಿ ಕಡುಲಜ್ಜೆಗೊಂಬನಿತಜಿಳು ಮಡುಮುಖ ಶೌರಿಯೊಳ್ ಕಾಳೆಗ ಬೇಡೆಂದು ಮಡುದಲೆಯನು ಕರೆಸಿದನು (ಮೋಹತ. ೩೯-೨೫). [ಮಡು$_2$ + ತಲೆ$_1$ + — ಅ$_7$]

**ಮಡುನೀರ್**, ಮಡುನೀರು (ನಾ). ಕೊಳದ ಜಲ; ಸರೋವರದ ನೀರು : ಮಡುನೀರ್ [ಶಾಕಾಂ· ಮಡುಗಿಡು] (ಶಬ್ದಾನು. ೩೮೦ ಪ್ರಯೋ). **ಮಡುನೀರು** : ಬಿಸಿಲ ಛಡಾಳದಿ ಬೆಂದರ್ಗೆ ಮಡುನೀರು ಸಸಿನೆಳಲಿದಿರ್ದಂತೆ (ಮೋಹತ. ೨೭-೦೭). [ ಮಡು$_2$ + ನೀರ್ ]

**ಮಡುನೀರು** 'ಮಡುನೀರ್' ನೋ.

**ಮಡುಪ್ಪು$_1$** 'ಮಡಿಪ್ಪು$_1$' ನೋ.

**ಮಡುಪ್ಪು$_2$** 'ಮಡಿಪ್ಪು$_2$' ನೋ.

**ಮಡುಪ್ಪುವೀಳ್ಯ** (ನಾ). ಮಡಿಚಿರುವ ತಾಂಬೂಲ ; ಸುರುಳಿ ಸುತ್ತಿರುವ ತಾಂಬೂಲ,— ವೀಳೆಯ : ಮಡುಪ್ಪುವೀಳ್ಯವು ಕೊಟ್ಟು ಕಳುಹುವರಲ್ಲಿ ನಾರಿಯರು (ಮುಕೋಶ. ೦೦೯).
[ ಮಡುಪ್ಪು$_2$ (< ಮಡಿಪ್ಪು$_2$) + ವೀಳ್ಯ$_6$ (< ವೀಳೆಯ) ]

**ಮಡುಬೇವು** (ನಾ). ಒಂದು ಬಗೆಯ ಬೇವು : ಪರ್ವತದ ಮಡುಬೇವಿನ ಕಾಯಿ, ಹಾಗಲದ ಗೆಡ್ಡೆ, ರುದ್ರಾಕ್ಷಿ ಇವು ಎಲ್ಲವನ್ನು ಮೊಲೆಹಾಲಲ್ಲಿ ತೇದು ನಾಲಿಗೆಗೆ ಲೇಪಿಸುವುದು (ಏವೈವಿ. ೧೦೦). [ ? + ಬೇವು$_1$ ]

**ಮಡುವಾಗಲ್** 'ಮಡಿವಾಗಲ್' ನೋ.

**ಮಡುವಾಗಲ** 'ಮಡಿವಾಗಲ್' ನೋ.

**ಮಡುವಾಗಲು** 'ಮಡಿವಾಗಲ್' ನೋ.

**ಮಡುವಾಯಿ** 'ಮಡವಾಯ್' ನೋ.

**ಮಡುವಿಲ್** (ನಾ). (?) : ಯುದ್ಧದೊಳ್ ಮಡುವಿಲ್ಮಾಡಿ ಮಹಾ ಪ್ರತಿಜ್ಞೆಯಿನರಾತಿಕ್ಷೇತ್ರಮಂ ಪೊರ್ದಿದಂ (ಅಜಿತ. ೬-೨೬). [ ? ]

**ಮಡುವುಗಟ್ಟು** 'ಮಡುಗಟ್ಟು' ನೋ.

**ಮಡುವೆ** 'ಮೊಡವಿ' ನೋ.

**ಮಡುವೊಗು** (ಕ್ರಿ). ಕೊಳವನ್ನು ಪ್ರವೇಶಿಸು ; ಸರೋವರವನ್ನು ಹೊಗು : ಕರೇಣುಚಯಂಬೆರಸು ದಂತಿ ಮಡುವೊಗುವಂತೆ (ಕಾವ್ಯಾ. ೯-೯೯). [ ಮಡು₂ + ಪೊಗು ]

**ಮಡುಹಿಸು** (ಕ್ರಿ). ಕೊಲ್ಲಿಸು ; ಸಾಯಿಸು : ಒಪ್ಪೆಯೆಮ್ಮುವನು ಮಡು[ಪಾಠಾಂ. ಡಿ]ಹಿಸಲ್ಕೆಂದೊಂದುಪಾಯಂಬಡೆದು ಲೇಸಾಯ್ತುಸಮವಿಷವಂ ಕುಡಿಸಿ ಕೊಂದೆಹೆನೆಂದು ನೆನೆದನು (ಬಸವ. ೩೮-೪೨).

[ ಮಡುಹು₁ (< ಮಡಿವು₁) + — ಇಸು₃ ]

**ಮಡುಹು₁** 'ಮಡಿವು₁' ನೋ.

**ಮಡುಹು₂** 'ಮಡ್ಡು₂' ನೋ.

**ಮಡೆ₁**. ಮಡ್ಡ₂ (ನಾ). ೧. ಬೇಸಾಯಕ್ಕಾಗಿ ನೀರನ್ನು ಒದಗಿಸಲು ಹಳ್ಳ ಅಥವಾ ನದಿಗಳಿಗೆ ಕಟ್ಟಲಾಗಿರುವ ಅಡ್ಡಗಟ್ಟೆ ; ಒಡ್ಡು ; ಅಣೆಕಟ್ಟು : (೬). ೨. ಗದ್ದೆಗಳಿಗೆ ನೀರು ಹಾಯಿಸಲು ನಾಲೆಯಲ್ಲಿ ಮಾಡಿರುವ ಕಂಡಿ ; ತೂಬು : (೬). ೩. ದೇವರ ನೈವೇದ್ಯಕ್ಕೆಂದು ಬಿಟ್ಟ ಗದ್ದೆ : ಇರ್ಕಣ್ಣುಗ ಕಬಿನಿಯುಂ ಒನ್ದು ತೋಟ್ಟಮುಂ ಇರ್ಕಣ್ಣುಗ ಮಡೆಯುಂ × × (ಎಕ. XII, ಹುಲ್ಯ. ೩೦-೮; ೯೬೦). 'ಮಡೆಭೂಮಿ' ಪರಾ. ೪. ದೇವತೆಗೆ ಅರ್ಪಿಸುವ ಆಹಾರ ; ನೈವೇದ್ಯ ; ಎಡೆ ; 'ಅರಿಸಿಣದ ಅನ್ನ, ತಂಬಿಟ್ಟು ಮುಂತಾದುವುಗಳನ್ನು ನೇಮದಿಂದ ಮಾಡುವ ದೇವರ ತಳಿಗೆ' (ಜಮ್ಮುಠು. ೩೩೦ ಟೀಕ) : ಕೊನೆಗೆ ತಾಯಿ ಪ್ರಸನ್ನಳಾಗಿ ಮಡೆಯ ಅನ್ನವನ್ನುಂಡು ಸುಖನಿದ್ರೆ ಮಾಡುತ್ತಾಳೆ (ಜಮ್ಮುಠು. ೩೨). 'ಮಡೆಹಬ್ಬ' ಪರಾ. ೫. ಎಂಜಲು ; ಉಚ್ಛಿಷ್ಟ : 'ಮಡೆಗೂಟು' ಪರಾ. ಮಡ್ಡ₂ : ೨. 'ಮಡವಾಯ್' ಪರಾ.

[ ದೇ.॥ ತಮಿ. ಮಟೈ ; ತುಳು. ಮಡೆ ; ತೆಲು. ಮಡ, ಮಡವ ]

**ಮಡೆ₂** (ನಾ). (ಕರಾ) ಹುಲ್ಲಿನ ಹಗ್ಗ : 'ಮಡೆಹಗ್ಗ' ಪರಾ. [ ? ]

**ಮಡೆಗೂಟು**, ಮಡಗೂಳ್, ಮಡಗೂಟು (ನಾ). ತಿಂದು ಮಿಕ್ಕ ಅನ್ನ ; ಎಂಜಲನ್ನ ; ಉಚ್ಛಿಷ್ಟ : ಈತನೊಳ್ ತೊಟ್ಟ ಕಿಂಕರಭಾವಂ ಸಮಗಕ್ಕಗೊಟ್ಟು ಮಡೆ[ ಪಾಠಾಂ. ಡ ] ಗೂಟುಣ್ಬಂದವಂ ಪೋಲದೇ (ಆದಿಪು. ೦೪-೩೨); ಮಡೆ[ ಪಾಠಾಂ. ಡ ]ಗೂಟು ಬೇಬುಡೆ ಬಾಯ ತಂಬುಲವಿಮಸ್ಪೃಶ್ಯಂಗಳೇನಲ್ಲಮೋ (ಶಂಕರಾಪ. ೯-೧೮೦). **ಮಡಗೂಳ್** : ಮೆಲ್ದ ಬಾಯ ತಂಬುಲಮೆಳಕೊಂಡು ವುಂಡ ಮಡಗೂಳುರದಂಕುಸವಾಗಿ ಕೊಯ್ದು ನುಣ್ಗಲೆಯಿವು ಕಾಗುವುವಲ್ಲದೆ ವಿರೋಧಿನೃಪರ್ ಚಕ್ಕಲದಂಕರಾವು ನೋಳ್ ಮಲೆದಿದಿರಾದಡಾ ಕುದುರೆ ಆನೆ ರಥಂ ನೆಜೆ ಕಾಯಲಾಪ್ಪುವೇ (ಎಕ. XI, ದಾವಣ. ೪೨-೩೦ ; 1162) ; ನೀನೊರ್ವಂ ಮುಡಿದ ಮುಡಿಯ ಬಾಸಿಗಮಾ ಮೆಯ್ಯೊಳ್ ತೊಡೆದನುಲೇಪನವುಟ್ಟು ಕಳೆದ ದುಪ್ಪಟಿಯೊಜಗಿದ ಹಕ್ಕೆ ಮಡಗೂಳೆಂತದಜಂ ನಿನ್ನೊಳಗಾನೊಡಮರೆವುದು ಮಾತ್ರವೇ (ಜಯ. ೦೬-೮). **ಮಡಗೂಟು** : ಕುರುಪ್ರಧಾನನೊಳ್ ಕಜುಪನೆ ನಿಚ್ಚಟಂ ಬಿಸುಟು ನಿನ್ನಯ ಪೇಬ್ದುದುಗೆಯ್ದು ಪಾಟಿಯುಂ [ಮೆಜೆಯೆಮ್ಮ] ಬಾಯ ತಂಬುಲದೊಳಂ ಮಡಗೂಟಿನೊಳಮಂಗವಲ್ಲಭಾ (ಶಂಕರಾ. ೦೪-೦೦); ಪೆಜರ ಮಡಗೂಟಿ ರಾಜ್ಯಕ್ಕೆಜಗಿದರ್ದು ತಮಗೆ ನಿಟ್ಟೆಯೆಂಬಂತೆ (ಆದಿಪು. ೨-೦೦೬). [ಮಡೆ₁ + ಕೂಟು₁]

**ಮಡೆಭೂಮಿ** (ನಾ). ಬತ್ತದ ಗದ್ದೆ : (ಕಸಂಗಾ. ೦೬). [ಮಡೆ₁+ಭೂಮಿ]

**ಮಡೆಯ** (ನಾ). ಏನೂ ತಿಳಿಯದವನು ; ದಡ್ಡ ; ಮೂರ್ಖ : ಮಡೆಯಂಗುತ್ತಮ ವಿದ್ಯೆ ಬೆಟ್ಟ (ಸೋಮೇಶ. ೮೩); ಮರುಳ, ಮಂಕ, ಮುಟ್ಠಾಳ, ಮಡೆಯ, ಮಡ್ಡಿ ಎಂಬ ಬಿರುದುಗಳನ್ನು ಹೊಂದಿದ್ದ ಐವರು ಶಿಷ್ಯರಿದ್ದರು (ಪಗಗ. ೦); ಅಪ್ರಯೋಜಕನುಂ ಮಡೆಯನುಂ ಆಗಿ ತೋರ್ಪುದುಂ ಪಲರ್ಗೆ ಕೆಲಸಕ್ಕೆ ಬಂದವುದು (ಐಶ್ವರ್ಯ. ೨೦-೪೪೦).

[ದೇ॥. ತಮಿ. ಮಟ್ಟೈಯನ್, ಮಟೈಯನ್; ಮಲ. ಮಡಯನ್ ; ತೆಲು. ಮಡಿಯ]

**ಮಡೆಹಗ್ಗ** (ನಾ). = ಮಡೆ₂ : ಕಾಲಿಗೆ ಕಟ್ಟಿದ ಮಡೆಹಗ್ಗ ಮೇಲೆ ಹತ್ತುತ್ತಿದ್ದಾಗ ತುಂಡಾಯ್ತು (ದೇಜಮ. ೩೮).

[ಮಡೆ₂ + ಹಗ್ಗ (<ಪಗ್ಗ)]

**ಮಡೆಹಬ್ಬ** (ನಾ). ಗ್ರಾಮದೇವತೆಗೆ ನೈವೇದ್ಯ ಸಮರ್ಪಿಸಿ ಆಚರಿಸುವ ಒಂದು ಹಬ್ಬ : ಹದಿನೈದನೇ ದಿನ ಮಡೇಹಬ್ಬ. . . ಅರಸಿಣದ ಹುಗ್ಗಿ ಅನ್ನವನ್ನು ಹೊಸಮಡಕೆಯಲ್ಲಿ ಮಾಡಿ, ಅದರ ಮೇಲೆ ಹೊಸ ಮುಚ್ಚಳ ಮುಚ್ಚಿ, ಮುಚ್ಚಳದ ಮೇಲೆ ತಂಬಿಟ್ಟು ಇಟ್ಟು. . . ಮಡೇ ಹೊತ್ತು ಹೋಗುತ್ತಾರೆ (ಜಮ್ಮುಠು. ೪೯). [ಮಡೆ₁ + ಹಬ್ಬ(<ಪರ್ಬ) ]

**ಮಡೆಹೊರಳು** (ಕ್ರಿ). ೧. (ದೇವರ ಸೇವೆಯ ಒಂದು ಅಂಗವಾಗಿ) ಮಡೆ ಹಾಕಿದ ಸ್ಥಳದಲ್ಲಿ ಹೊರಳು ; ದಿಂಡುರುಳು : ಸಂಕಟ ತಾಳಲಾರದೆ ಕಮಲಾ ಮಡೆ ಹೊರಳುವಂತೆ ಹೊರಳಿದ್ದಳು (ಶಿಂದಿಕ. ೦೪೮). ೨. (ಆಲಂ) ಸುತ್ತಿ ಹೊರಳು : ಐದಿ ಬಹ ಚತುರಂಗವಾಹಿನಿಯಾ ಹೊಂದಿದಿಳೆ ಕುಸಿದು. . .ಕೂರ್ವ ಮಡೆಪೊರಳೆಂದ[ಳದ] ಗಿರಿಯಲ್ಲಾಡಿದವು (ಜಜಶಾ. ೩೩-೩೩). [ಮಡೆ₁ + ಹೊರಳು₁ (<ಪೊರಳ್) ]

**ಮಡ್ಡ** (ನಾ). ೧. ಬುದ್ಧಿಯಿಲ್ಲದವನು ; ದಡ್ಡ ; ಪೆದ್ದ : ಶರಭಲೀಲೆಯೊಳು ಹರಿ ಮಡ್ಡನ ಭಂಗಿಸಿದನೆಂದು (ಶೀಲ್ಕತ್ತ. ೬-೦೬-೦೩); ದಡ್ಡರನ್ನು ಮಡ್ಡರನ್ನು ಆರಿಸಿ ಅವರಿಗನುಕೂಲವಾಗುವಂಥ ಶಿಕ್ಷಣಸಂಸ್ಥೆಗಳಲ್ಲಿ ವಿಶೇಷರೀತಿಯ ಶಿಕ್ಷಣ ಕೊಡಲು. . .ಸಾಧ್ಯವಾಯಿತು (ಶಿಕ್ಷಣ. ೩೬೨). (ಗು). ೨. ಬುದ್ಧಿಯಿಲ್ಲದ; ದಡ್ಡತನದ : ಮಡ್ಡಜೀವಿಗಳ ಕೈಯಲ್ಲಿ ದೊಡ್ಡ ಲಿಂಗವಿರ್ದಡೇನು (ಅಜಂಜೀ. ೨೬೮-೦೦) ; ಮಡ್ಡಜನ ಸ್ವಾಮಿ, ಬಾರುಕೋಲೆ ಸರಿ ಅವರಿಗೆ (ಕೆಳದು. ೬೨).

[ಮಡ್ಡಿ₂ (<ಮಡ್ಡಿ₃)+—ಅ₇. / ತಮಿ. ಮಟ್ಟನ್]

**ಮಡ್ಡತನ** (ನಾ). ದಡ್ಡತನ ; ಮೌಢ್ಯ : ಮಡಿ ಉಟ್ಟರೂ ಮಡ್ಡತನ ಬಿಡಲಿಲ್ಲ (ಗಾದೆ). [ಮಡ್ಡ + —ತನ]

**ಮಡ್ಡಮ್ಮ** 'ಮೇಡಂ' ನೋ.

**ಮಡ್ಡಿ₁**, ಮಂಡ₁, ಮಡ್ಡು₁, ಮಿಡ್ಡೆ, ಮೆಡ್ಡೆ (ನಾ). ೧. (ದ್ರವ ವಸ್ತುವಿನ ತಳದಲ್ಲಿ ನಿಲ್ಲುವ) ಗಟ್ಟಿಯಾದ ಭಾಗ ; ಗಷ್ಟು ; ಗಸಿ : ಹರಳೆಣ್ಣೆಯ ತಳದಲ್ಲಿರುವ . . . ಮಡ್ಡಿಯ ಗಟ್ಟಿಭಾಗ ಒಂದು ಅಡಕೆಯಷ್ಟನ್ನು . . . ಹೊಟ್ಟೆಗೆ ತೆಗೆದುಕೊಂಡು ಆಸನಕ್ಕೆ ಸವರಿದರೆ ಮೂಲದ ಅಂಕುರಗಳು ಹೋಗುವುವು (ಶಿಶು. ೪೬೮) ; ಈ ಮೂರು ವಸ್ತುಗಳನ್ನು . . . ಯಂತ್ರಗಳಿಂದಲೇ ಪುಡಿಮಾಡಿ, ನೀರಿನಿಂದ ಮಡ್ಡಿಯಾಗಿ ಮಾಡಿ ಕಾದರಿಸಬೇಕು (ಅಜೀವ. ೦೦೦). 'ಮಷ್ಟು' ಪರಾ. ೨. ಉಂಡೆ ; ಮುದ್ದೆ : ಹೆತ್ತ ತುಪ್ಪ ಸಕ್ಕರೆಯ ಮಡ್ಡಿ ಮೆದ್ದೆಯಾ (ಪಾಂಚಿಕ. ೦೩೯-೨). ೩. ತುಂಬಾ ಬೆಂದುದು ; ಗಿಂಜಲು : ನನಗೂ ಅಷ್ಟು ಹಸಿವಿರುವ ಹಾಗೆ ಕಾಣೆ. ಮಧ್ಯಾಹ್ನ ಅನ್ನ ಮಡ್ಡಿಯಾದುದಕ್ಕೋ ಏನೋ (ಮರಳು. ೨೮) ; ತೀರ ಹೆಚ್ಚಾಗಿ ಬೆಂದ ಆ ಮಡ್ಡಿಯನ್ನು . . . ಹೇಗೋ ನುಂಗಿ (ಮುಗಿಯ. ೨೯೮). ೪. ಕುದುರೆ, ದನ ಮೊದಲಾದುವುಗಳಿಗೆ ಹಾಕುವ ಮುಸುರೆ ; ಕಲಗಚ್ಚು : ಹಸುವಿಗಿಟ್ಟಳು ಹಾಲು ಓಗರ

ಬಿಳಿಮಡ್ಡಿಯ ಗಂಡಗೆ ಹಾಕಿ (ಪುರಂದ. ೧-೦೦೦-೬); ಕುದುರೆಗೆ ಕುದಿವ ಮಡ್ಡಿಯಂ ನೀಡಿಸಲು (ಗುರುಜಾ. ೨-೬); ಮಡ್ಡಿ ಕುದುರೆಗೆ ಲೇಸು (ಸರ್ಪಶಾ. ೦೦೩೩). ೫. ಮೃದುವಾದ ಅಂಟನ್ನು ಸ್ರವಿಸುವ ಒಂದು ಬಗೆಯ ಮರ: ಹಳದಿ ಪಾವಟೆ, ಐನ್ಪೆ, ಮಡ್ಡಿ (ವೃಕ್ಷಶಿ. ೩೩-೦೦೯೬). ಮರಗಳು . . . ಚೌನಂಗಿ, ಮಡ್ಡಿ, ಹೊಂಗೆ, ಗೇರು (ವಪ್ನುಪು. ೨೩೬). ೬. ಒಂದು ಬಗೆಯ ಸುಗಂಧದ್ರವ್ಯ: ಪರಿದಗರು ಮಡ್ಡಿ ಕಾಳಾಗರು ಧೂಪದ ಪೊಗೆ ತೆರಳ್ದು ಮುಂದಯಿಸಿದ ಕಪ್ಪುರದ ರಜಂ ಕೆದಱಿದ ಕಸ್ತುರಿ [ಯಾ ಕೆಸರಣಮದಾ]ದುದಾ ನೃಪಸಭೆಯೊಳ್ (ಪರ್ವಪಾ. ೩-೩೩); ಮಡ್ಡಿ ಎಂದರೆ ಸಾಂಬ್ರಾಣಿ (ವಪ್ನುಪು. ೦೩೬). 'ಹಾಲುಮಡ್ಡಿ' ಪರಾ. ೭. ಸುಗಂಧದ್ರವ್ಯದ ಮೇಲೆ ಹಾಕುವ ತೆರಿಗೆ: ಹುಲ್ಲುಹಣಾ ಪುಪ್ಪಿನ ಮೋಳೆ ಯಿಾಚಲ ಪೈರು ಮಡ್ಡಿ ಪತಂಗ ಪೊಪ್ಪಳಿ ಶೀಗೆ ಕೆಂಪುನೂಲು (ವೈಅಂ. ೧೯೩೯, ೪೨-೯೯; 1825). ಮುಂಡ₁: ೬. ಗುಗ್ಗುಳ ಧೂಪ, ಮುಂಡಧೂಪ, ಮಡ್ಡಿಧೂಪ, ಬಾಗಧೂಪ (ವೃಕ್ಷಶಿ. ೪-೩೯). ಮಡ್ಡು₁: ೧. ಜಿಡ್ಡುತುಪ್ಪಕ್ಕೆ ಮಡ್ಡು ಬಹಳ (ಗಾದೆ). ೮. ಹೊಟ್ಟು: ಉಮಿ: "ಮಡ್ಡು: ಗುಂಗು" (ಕನ್ನಶಾ. ೨೦೦). ೯. (ಆಲಂ) ಸೊಕ್ಕು: ಮದ: ರಾಜಕೀಯ ಅವರ ತಲೆಯಲ್ಲಿಯ ಮಾಮಲತ್ತಿಯ ಮಡ್ಡನ್ನು ಇಳಿಸಿ . . . ನಿರ್ಣಾಯಕ ಅಭಿಪ್ರಾಯ ಕೊಟ್ಟರು (ರಾಜಹ. I, ೦೬); ನೂರಾರು ವೇಷ ಕಳಿಸಿದಿರಿ ಮತ್ತ ಇಳಿಸಿದಿರಿ ಮಾನ ಬೆಳಿಸಿದಿರಿ (ಹಾಡುಜಾ. ೪೦-೦೬). 'ಜಿಡ್ಡು' ನೋ. ಮಿಡ್ಡೆ: ೩. ಅದೇನು ಅನ್ನ ಹಾಗೆ ಹಿಸುಕಿ ಹಿಸುಕಿ ನೋಡುತ್ತೀರಿ? ಮಿಡ್ಡೆಯೋ? ಸ್ವಲ್ಪ ನೀರು ಹೆಚ್ಚಾಗಿ ಬಿಟ್ಟಿತೇನೋ! (ತ್ರಿವೇಣಿ. ೦೪೦). ಮೆಡ್ಡೆ: ೩. ಗೆಡ್ಡೆಯ ಹೊಲ ಹೀನ ಗೊಡ್ಡುಹೆಂಡತಿ ಹೀನ ಮೆಡ್ಡೆಯ ಬೋನವೆ ಹೀನ (ಇಂಜಾಪ. ೯೬-೭೩).

[ದೇ.॥ ತಮಿ. ಮಣ್ಟಿ; ಮಲ. ಮಟ್ಟು; ತುಳು. ತೆಲು. ಮಡ್ಡಿ]

**ಮಡ್ಡಿ₂, ಮಡ್ಡು₂** (ನಾ). ೧. ಮೂಢ; ದಡ್ಡ: ಇದರಿಂದ ಮಡ್ಡಿ ಎಂದರೆ ಬುದ್ಧಿ ಚುರುಕಿಲ್ಲದ ವ್ಯಕ್ತಿ ಎಂಬ ಅರ್ಥ ಬಂದಿದೆ (ವಪ್ನುಪು. ೦೩೬); ಇಷ್ಟಾದರೂ ಮಡ್ಡಿ ಜನಾರ್ದನನಿಗೆ ಜಡ್ಡು ಹರಿಯಲಿಲ್ಲ (ಪುರಿಷಂ. ೯೮); ಮರುಳ, ಮಂಕ, ಮುಟ್ಠಾಳ, ಮಡೆಯ, ಮಡ್ಡಿ ಎಂಬ ಬಿರುದುಗಳನ್ನು ಹೊಂದಿದ್ದ ಐವರು ಶಿಷ್ಯರಿದ್ದರು (ಪಗಗ. ೦). 'ಮಡೆಯ' ಪರಾ. (ಗು). ೨. ಮೂಢತನದ; ತಿಳಿವಳಿಕೆಯಿಲ್ಲದ: ಆಯುಷ್ಯಕ್ಕೆ ಮಡ್ಡಿ ಜನರು ಏಕೆ ಆಶೆಪಡುವರೋ (ಪಂಯಾತ್ರ. ೨೮); ನೀನು ಮಡ್ಡಿ ಹುಡುಗ (ತೂಪುರಾ. ೩೩). ಮಡ್ಡು₂: ೨. ಹಳ್ಳಿಯವ್ರು ಮಡ್ಡುಜನಗಳಾ? (ಶೇರುಪು, ೨೯೩). [ದೇ.॥ ತಮಿ. ಮಟ್ಟಿ; ತೆಲು. ಮಡ್ಡಿ]

**ಮಡ್ಡಿ₃** 'ಮೊರಡ್ಡು₃' ನೋ.

**ಮಡ್ಡಿತನ** (ನಾ). = ಮಡ್ಡತನ: ಪುಳಕದಲಿ ಮೈಯುಬ್ಬಿ ಅಚ್ಚರಿಯ ಸವಿಯುತಿರೆ ಆಡಿ ಜರೆಯುವರೆಮ್ಮ ಮಡ್ಡಿತನಕಿವರು (ದ್ರಾಕ್ಷಿರಾ. ೨೦-೭); ಮದುವೆಯಾಗುವುದು ಮೂರ್ಖತನ; ಮಡ್ಡಿತನ (ಅಂಹೂ. ೩೭).

[ ಮಡ್ಡಿ₂ + – ತನ ]

**ಮಡ್ಡಿಮರ** (ನಾ). ಹಾಲುಮಡ್ಡಿಯನ್ನು ಉತ್ಪತ್ತಿಮಾಡುವ ಮರ: ಚಿಲ್ಲಧೂಪ, ಚಿಲಕಡಿ, ಗುಗ್ಗುಳಧೂಪ, ಮಡ್ಡಿಮರ, ಮಾದಿ, ಚಿತ್ತ, ಧೂಪ (ವೃಕ್ಷಶಿ. ೦೩-೨೩೬). [ ಮಡ್ಡಿ₁ + ಮರ₁ ]

**ಮಡ್ಡಿಸಾಂಬ್ರಾಣಿ** (ನಾ). ಬುದ್ಧಿಯಿಲ್ಲದವನು; ದಡ್ಡ: ಮಡ್ಡಿ ಸಾಂಬ್ರಾಣಿ. ಗುಣಿತಪದ. ಮಡ್ಡಿ ಎಂದರೆ ಸಾಂಬ್ರಾಣಿ. ಮಡ್ಡಿ ಪದದಂತೆ ಬುದ್ಧಿ ಚುರುಕಿಲ್ಲದ ಪ್ರಾಣಿ ಎಂಬ ಅರ್ಥದಲ್ಲಿ ಬಳಕೆಯಲ್ಲಿದೆ (ವಪ್ನುಪು. ೦೩೬); ನೀನು ಜಾಣ, ನಿನ್ನನ್ನು ಕಟ್ಟಿಸಿದರು. ನಾನು ತಿಳಿದೇ ಇದೆ ದಡ್ಡ, ಮಡ್ಡಿಸಾಂಬ್ರಾಣಿ (ಸಂಪ್ರಾರಾ. ೨೩); ಈ ಹಳ್ಳಿಯವರ ಹಾಗೆ ನಾನೂ ಮಡ್ಡಿಸಾಂಬ್ರಾಣಿ ಎಂದು ಹೇಳುವೆಯೇನು? (ಮುದ್ದುಮಣಿ. ೭೭). ಈ ಮಡ್ಡಿ ಮತ್ತು ಸಾಂಬ್ರಾಣಿ ಎಂಬ ಎರಡು ಶಬ್ದಗಳಿಗೂ ಸುಗಂಧ ದ್ರವ್ಯ ಮತ್ತು ತಿಳಿಗೇಡಿ ಎಂಬ ಅರ್ಥಗಳಿರುವುದರಿಂದ ಇದು ಚಮತ್ಕಾರದಿಂದ ಮಾಡಿದ ಒಂದು ಕೂಡುನುಡಿ.

[ ಮಡ್ಡಿ₂ + ಸಾಂಬ್ರಾಣಿ. / ತಮಿ. ಮಟ್ಟೆಯುಜಾಮ್ಬಿರಾಣಿ; ಮಟ್ಟೆಯಾನ್‌ಜಾಮ್ಬಿರಾಣಿ ]

**ಮಡ್ಡು₁** 'ಮಡ್ಡಿ₁' ನೋ.

**ಮಡ್ಡು₂** 'ಮಡ್ಡಿ₂' ನೋ.

**ಮಡ್ಡು₃** (ನಾ). ಪಶುಗಳ ಯೋನಿ: ಆಗ ತಾಯಿಕುರಿ ಅದರ ಮಡ್ಡು ಮೂಸಿ ತನ್ನ ಮರಿಯೇ ಅಲ್ಲವೇ ಎನ್ನುವುದನ್ನು ನೋಡಿಕೊಳ್ಳುತ್ತದೆ (ವಪೂರು. ೦೩). [ < ಮಡಿಲ್ ]

**ಮಡ್ಡು₄** (ನಾ). ೧. ಒಂದು ಬಗೆಯ ಚರ್ಮವಾದ್ಯ: ಪಟಹ ಮೃದಂಗ ಡಿಂಡಿಮ ಮಡ್ಡು[ಪಾಠಾಂ. ಡ್ಡ]ಜರ್ಝರ ಪಟು ಶಂಖಪಾಸ ಭೇರಿಗಳ ಜಟಿಳಿತನಾದವೆಸೆಯೆ ಕಂಪಭೂಪನ ಕಟಕ ನಡೆದುದು (ಕುರಾಶಾಂ. ೦೪-೬೯). ೨. ಒಂದು ಬಗೆಯ ಆಯುಧ (?): ಹೊಳೆವ ಮಡ್ಡು ಕಠಾರಿ ಡೊಂಕಣಿ . . . ಕಟಿಯ ಗಂಟೆಯ ದಳವನೀಕ್ಷಿಸು (ಕುವ್ಯಾಶೀ. ೩-೨೦); ಚಾರಿವರಿದನು ದನುಜ ಮಡ್ಡು ಕಠಾರಿಯಲಿ ಕರ್ಣಾಸ್ತ್ರ ಧಾರಾಸಾರದಲಿ ಮೈ ನೆನೆದು ಪೊಸಲಿಡುವರುಣವಾರಿಯಲಿ (ಕುವ್ಯಾದ್ರೋ. ೦೬-೪೭). [ಸಂ.]

**ಮಣ್, ಮಣು, ಮಣ್ಣು** (ನಾ). ೧. (ಬಿಸಿಲು, ಗಾಳಿ, ಮಳೆಗಳಿಂದ ಕಲ್ಲುಗಳು ಚೂರಾಗಿ ಉಂಟಾದ) ಸಣ್ಣನಾದ ಹುಡಿ; ಮೃತ್ತಿಕೆ: "ಮೃತ್, ಮೃತ್ತಿಕಾ – ಈ ೨ ಮಣ್" (ಹಲಾಯು. ೨೬-೩); ಐರಾವತದ ಹರವೃಷಭದ ಕೋಡ ಮಣ್ಣುಮನಾಕಾಶಗಂಗೆಯ ನೀರುಮಂ . . . ತಂದ ವಾರವನಿತಾಜನಕ್ಕಂ ಸಾಮಂತಚಕ್ರಕ್ಕಮುಂಡಲಿಕ್ಕಿ (ಪಂಪಭಾ. ೦೪-೧೬ ವ); ದರಿಯ ಮಣ್ಣಂ ಕೋಡೊಳೆತ್ತಿ ತಂದವರ ಮುಂದಿಕ್ಕುವ ಭದ್ರಗಜವ್ರಜ ಮುದಮಂ (ಪಂಶಂ. ೦೦೮-೨೦). 'ತಿರುಮಣ್' ಪರಾ. ೨. ಬೆಳೆ ಬೆಳೆಯುವ ಭೂಭಾಗ; ಜಮೀನು; ಗದ್ದೆ: ಕೊಟ್ಟೊನ್ನಾಗವಾಗ್ರವುಂ ಅದರ್ಕ್ಕೆ ಆ ಪುಸುರಾತದ ಕದ ಕೆಟಿಗೆ ದಸಕಣ್ಡುಗಂ ಮಣ್ಣದ ಬೂ ಒಡೆಯದು ತನಗೆಯುಂ (ಎಕ. X (೩), ಜಕ್ಕಿ. ೦೦೪-೦೩: ಸು. 500 ?): ಸ್ವಸ್ತಿಶ್ರೀ ಚೆನ್ನಯಮ್ಮರಸರ್ ದೇವರ್ಗ್ಗೆ ಮಣ್ಣಂ ಕೊಟ್ಟರ್ (ಎಕ. XI, ಚಿತ್ರದು. ೨೪-೦; ಸು. 500 ?); ಮಣ್ಣಿಲ್ಲದೆ ಬೆಳೆವೆನೆಂಬ . . . ಪಚ್ಚಪಸಿಯೆಗ್ಗನು ಪೋಲ್ಕುಂ (ಧರ್ಮಾಮೃ. ೦-೬೭). ಮಣು: ೧. ಮರ ದೇವರಲ್ಲ ಉರಿಯಲ್ಲಿ ಬೆಂದಿತ್ತು ಮಣು ದೇವರಲ್ಲ ನೀರಿನ ಕೊನೆಯಲ್ಲಿ ಕದಡಿತ್ತು (ಸರ್ವಜ್ಞ. ೬೨-೪೩೮); ಖಿಲ್ಲ ಪರವಾದಿ ಜೈನರನಿರದೆ ಸಂಹರಿಸಿ ಹಲ್ಲುಗಳ ಕಳೆದು ಮಣುವಿನ ಮೂಱು ಖಂಡುಗವನಲ್ಲಿ ಕಣಜಂ ಕಟ್ಟಿ ತುಂಬಿಸುವರು (ಪಬಸು. ೬೨-೪೦). ೨. ಮೂಲಸ್ಥಾನದ ಸೋಮಯದೇವರಿಗೆ ಖಂಡಿತವಾಗಿ ಗದೆ ಮಣುವಿನ ಮೂಗುಳ ಗದೆ ಹೊಲನು ಮೂಗುಳ (ಎಕ. X, ಬಾಗೇಪ. ೦೬-೨; 1391). ಮಣ್ಣು: ೧. ಮಾಯೆಯಾಡಿಸುವ ಮಣ್ಣ ರೂಪು ಕಪ್ಪಡದ ಹಾಪೆ ಕಲ್ಲ ಜಂತ್ರ ಹುಲ್ಲ ಬೊಂಬೆ (ಬಸರ. ೮-೧೩೮); ಕರಿಯ ನೋಂಪಿಗೆ ತನುಜರಿರ ನೀವೆ ತರಲು ಬೇಕ್ಕೆ ಮಣ್ಣನೆಂದರೆ ಹಿರಿದು ತಂದೊಟ್ಟಿದರು ಮಿಗೆ ಮೃತ್ತಿಕೆಯ ಗಿರಿಯಂತೆ (ಕುವ್ಯಾಆ. ೬೦೩. ೨೦-೯): ಮಣ್ಣಿಂದ ಕಾಯ ಮಣ್ಣಿಂದೆ ಮಣ್ಣಿಂದ ಸಕಲ ದರುಶನಗಳೆಲ್ಲ ಮಣ್ಣಿಂದ ಸಕಲವಸ್ತುಗಳೆಲ್ಲ ಮಣ್ಣು ಬಿಟ್ಟವರಿಗೆ ಆಧಾರವಿಲ್ಲ (ಪುರಂದ. ೨-೮೦ ಅನುಬಲ್ಲ). ೨. ಪಿಡಿಅ ಮಾದೇವಿಯಾಳುತ್ತಿರೆ ಅಲ್ಲಿ ಕೊಟ್ಟುದು ಪದಿರ್ಕಣ್ಡುಗ ಮಣ್ಣು ಬತ್ತದ ಮಣು (ಎಕ. XII, ಶಿರಾ. ೨೪-೩೮; 900); ಮಾಜಿಪಸುವಂ . . . ಕೊಟ್ಟಂ (ಎಕ. III (R), ಗುಂಡ್ಲುಪೇ. ೩೬-೦೦; 1049); ಮಣ್ಣು ಎಂದರೆ

ಭೂಮಿಗೆ ಮೇಲ್ಮುಸುಕಾಗಿರುವ, ಧೂಳಾಗುವ ಮತ್ತು ಸಸ್ಯಗಳಿಗೆ ಆಹಾರಭೂತವಾಗಿರುವ ಪದಾರ್ಥ (ವ್ಯವಸ. ೧). ೩. ಭೂಮಿ ; ನೆಲ : ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದು ಎಂದು ನೆನೆನೆನೆದು (ಮಹಾದೇ. ೨. ೦೯-೩೦) ; ಕಣ್ಣು ನೀಗುರ್ಗಳುಗುಳಸೊಗುತಡ್ಡಬಿದ್ದನು ಮಣ್ಣೊಳಾ ಗಜದ ಮುಂದವನು (ಕಠಕ. ೫೬-೫೫) ; ಮಣ್ಣಿನಿಂದ ಕೌರವ ಕೆಟ್ಟ, ಹೆಣ್ಣಿನಿಂದ ರಾವಣ ಕೆಟ್ಟ (ಗಾದೆ). ೪. ಧೂಳು : ಎಳ್ಳು, ಮತ್ತು ಅಗರಿ ಇವು ಘುಟ್ಟ (ಮಣ್ಣು ಕಸಾ) ತೆಗಿಯುವ ಜೀನಸುಗಳಿರುವುದರಿಂದ (ಮುಂಬಯಿ. ಪ್ರಸ್ತಾವನೆ .೨೯). ೫. (ಆಲಂ) ಅನಿತ್ಯವಾದುದು : ಎನ್ನ ಕಾಯ ಮಣ್ಣು ಜೀವ ಬಯಲು ಆವುದ ಹಿಡಿವೆನಯ್ಯ ದೇವ (ಮಹಾದೇ. ೫. ೦೯-೦೨).

**ಮಣ್ಣಾಂಗಟ್ಟಿ** = ೧. ಮಣ್ಣಿನ ಉಂಡೆ. — ಮುದ್ದೆ. ೨. (ಆಲಂ) ಕೆಲಸಕ್ಕೆ ಬಾರದುದು : ನಿರುಪಯೋಗಿಯಾದುದು : ಏನೋ ರಾಜ್ಯ ಕೊಳ್ಳೆ ಹೋಗುತ್ತೆ ಅಂದರೆ ಏನಿಲ್ಲ ಮಣ್ಣಾಂಗಟ್ಟಿ (ಶ್ಯಾಮಸುಸ್ಮೇ. ೬೭). **ಮಣ್ಣಾಗು** = ೧. ಮಣ್ಣು ಹತ್ತಿಕೊಳ್ಳು : ಧೂಳಾಗು : ಮಣ್ಣಾಯಿತ್ತು ಮೈಯು ಪೀತಾಂಬರವು (ಪುರಂದ. ೨-೨೦೦-೫) ; ಇಳಿವುದರೊಳು ಹೊಸಮರಸಿಯಿದೆಂದನು ಕುದುರೆಯಿಂದಿಳಿಗೆ ಬಿದ್ದವನು ಮಿಾಸೆಯು ಮಣ್ಣಾಗಲಿಲ್ಲವು ಬಿದ್ದರು ಎಂದುಕೊಂಡೇಳ್ದರಂತಹರು (ಅಂತಾಕ. ೨೩೫-೬೫). ೨. (ಆಲಂ) ಕೇಡುಂಟಾಗು : ಇಂದುವರೆಗಂ ತಂಗಿಯೆಂದು ಕರೆದಿಪ ಬಾಯ್ಗೆ ಮುಂದೆ ಮಣ್ಣಾಯ್ತು (ಕಾಂಚಿರ. ೦೬೮-೪೦೦). ೩. ಮಣ್ಣಿನಲ್ಲಿ ಸೇರು ; ಮಣ್ಣಿನಲ್ಲಿ ಒಂದಾಗು : ನಮ್ಮೊಂದಿರವಂತಿಂತುಟೆಂದೇನುಮುಜಿಯದೆ ಮಣ್ಣಾಗಿ ಕಲ್ಲಾಗುತುಂ. . . ಎಂತಕ್ಕೆ ಬಂದೆಂ ಸರಜನ್ಮಕ್ಕಯ್ಯ (ಕಲ್ಯಾಕ. ೨) ; ಗೊತ್ತಿಹುದೆಲ್ಲರಿಗೆಮ್ಮ ಭವಿಷ್ಯವು ನಾಳೆಗೆ ಮಣ್ಣಾಗಲಿಹೆವು (ಇಂಚಾಕ. ೦೪೨-೦೦೦). **ಮಣ್ಣಿಗೆ ಮಣ್ಣು ತಿನ್ನಿಸು** = (ಆಲಂ) ಕಷ್ಟಪಡಿಸು ; ಹಿಂಸೆಗೊಳಿಸು : ದೊಡ್ಡ ಮನುಷ್ಯನಂತೆ ಆವಾಗಲೂ ವೇಷವನ್ನು ತಾಳಿಕೊಂಡು. . . ಪೋಲೀಸಿನವರಿಗೆ ಮಣ್ಣಿಗೆ ಮಣ್ಣು ತಿನ್ನಿಸಬೇಕು (ಚಿನ್ನಚೇ. ೩೦). **ಮಣ್ಣಿಗೆ ಮಣ್ಣು ತಿನ್ನು** = (ಆಲಂ) ಕಷ್ಟಪಡು ; ಹಿಂಸೆಗೊಳ್ಳು : ಶತ್ರುಗಳೊಡನೆ ಹೋರಾಡಿ ಮಣ್ಣಿಗೆ ಮಣ್ಣು ತಿಂದು ಹೋಗಿರುವನು (ಚಿನ್ನಚೇ. ೦೩೦). **ಮಣ್ಣಿನ ಮಕ್ಕಳು** = ರೈತರು : ಮಣ್ಣಿನ ಮಕ್ಕಳು ನಾವು (ಮಣ್ಣಿನ ಮ. ೨೬೦). **ಮಣ್ಣು ತಿನ್ನು** = ೧. ಮಣ್ಣನ್ನು ಮುಕ್ಕು ; ಮಣ್ಣನ್ನು ತಿನ್ನು : ಕಂದಾ ಬೇಡವೊ ಮಣ್ಣು ತಿನ್ನಬೇಡವೊ (ಪುರಂದ. ೨-೨೦೪ ಪಲ್ಲವಿ). ೨. = ಮಣ್ಣಿಗೆ ಮಣ್ಣು ತಿನ್ನು : ಅವರೆಲ್ಲಾ ಮಣ್ಣು ತಿಂದು ಹೋಗುತ್ತಾರೆ (ಮಣ್ಣು ಹ. ೦೬೮). **ಮಣ್ಣು ತಿನ್ನೋ ಕೆಲಸ** = (ಆಲಂ) ನಿಕೃಷ್ಟವಾದ ಕೆಲಸ ; ಪೆಚ್ಚು ಕೆಲಸ : ನನಗೆ ಹೇಳದೇಲೇ ಮಣ್ಣು ತಿನ್ನೋ ಕೆಲಸ ಮಾಡಿ ಕೊಂಡಿದ್ದಾರೆ (ಕಲಕ. ೨೮೨). **ಮಣ್ಣುಬೀಳು** = ೧. ಧೂಳು ಉದುರು : ಕಣ್ಣಿಗೆ ಮಣ್ಣು ಬಿದ್ದು ಕೆಂಪಾಯಿತು (ಲೋಕ). ೨. (ಆಲಂ) ಹಾಳಾಗು ; ನಾಶವಾಗು : ನಿಮ್ಮ ದಮ್ಮಯ್ಯ. ಅಂತಹವುಗಳನ್ನು ಪ್ರಕಟಿಸಬೇಡೀಂದ್ರೆ. ಎಲ್ಲಾದರೂ ಕೆಲಸದ ಬಾಯಿಗೆ ಮಣ್ಣು ಬಿದ್ದೀತು (ಸಂಧ್ಯಾರಾ. ೦೩೫). **ಮಣ್ಣು ಮಸಿ** = ಕೆಲಸಕ್ಕೆ ಬಾರದುದು ; ಅಪ್ರಯೋಜಕವಾದುದು : ನಾನು ಕಾಣೆನೆ ಅವಳು ಕೊಳ್ಳುವುದು. ಸ್ನೋ, ಪೌಡರು, ಚೋಳಿಪೀಸು, ಮಣ್ಣುಮಸಿ (ವೈದೃಪಿ. ೧೨೪). **ಮಣ್ಣು ಮುಕ್ಕಿಸು** = ಮಣ್ಣಿಗೆ ಮಣ್ಣು ತಿನ್ನಿಸು : ಜಿಜಾಪುರದ ರಣದುಲ್ಲಾಖಾನನನ್ನು ಪಟ್ಟಣದ ಬಳಿ ಮಣ್ಣು ಮುಕ್ಕಿಸಿದ ವೀರ ಕುಮಾರಯ್ಯ (ತಪೀವ. ೦೦) : ಮೊಗಲ ಸಾಮ್ರಾಟ್ ಔರಂಗಜೇಬನನ್ನು ಮಣ್ಣು ಮುಕ್ಕಿಸಿದ ಮರಾಠಿಗರ ಭುಜಬಲ ಅಂತಃಕಲಹಗಳಿಂದ ಕುಗ್ಗಿ ಹೋಗಿತ್ತು (ಭಾರತ. ೪೨೫). **ಮಣ್ಣು ಮುಕ್ಕು** = ೧. ನೆಲದ ಧೂಳನ್ನು ತಿನ್ನು, – ಮುಕ್ಕು : ಬಲವಾದ ಉಕ್ಕಿನ ಕೈಗಳ ಹೊಡೆತದಿಂದ ಫಟ್ ಒಮ್ಮೆಲೆ ನೆಲಕ್ಕೆ ಬಿದ್ದನು. ನಗ್ಗು ಮುಳುಗಿದ ಅವನ ಬಾಯಿಯು ಮಣ್ಣು ಮುಕ್ಕಿತು (ಶಿಂಗಾಪ. ೯). ೨. (ಆಲಂ) ಕಷ್ಟಪಡು : ಭಂಗ ಪಡು : ಹಣಬರಹ ಎಂದು ಕುಳಿತಿದ್ದರೆ ಒಂದಲ್ಲ ಒಂದು ದಿನ ನಾವು ಮಣ್ಣು ಮುಕ್ಕುತ್ತೇವೆ (ಕಾವೇರಿ. ೬೭) : ವೈದ್ಯನು . . . ಮಣ್ಣುಮುಕ್ಕಿದವನಂತೆ ಬೆಪ್ಪಾಗಿ ಒಂದೆಡೆಯಲ್ಲಿ ನಿಂತು ಕೊಂಡಿದ್ದನು (ಚಿನ್ನಚೇ. ೦೬೫). ೩. ಹಾಳಾಗು ; ನಾಶವಾಗು : ಜಗತ್ತಿನಲ್ಲಿ ಸಾಮ್ರಾಜ್ಯಗಳನ್ನಾಳಿದ ದೊರೆಗಳೂ ಚಕ್ರವರ್ತಿಗಳೂ ಮಣ್ಣು ಮುಕ್ಕಿ ಹೋಗಿದ್ದಾರೆ (ಕುಂಜಕು. ೧೬೮). **ಮಣ್ಣು ಹೊರು** = ೧. ಮಣ್ಣು ತುಂಬಿರುವ ಮಂಕರಿಯನ್ನು ತಲೆಯ ಮೇಲೆ ಹೊತ್ತು ಕೊಳ್ಳು : ಮಣ್ಣು ಹೊರುವವ ತಲೆಗೆ ಬೆಣ್ಣೆ ಹಚ್ಚಿಕೊಂಡಂತೆ (ಗಾದೆ). ೨. (ಆಲಂ) ದುಡಿ ; ಶ್ರಮಿಸು : ಅವನಿನ್ನೂ ಬಹಳ ಮಣ್ಣು ಹೊರಬೇಕು (ಲೋಕ). ೩. (ಪಾಠವನ್ನು ಕಲಿಯಲು) ಶಾಲೆಗೆ ಹೋಗು : ಚಲಂ ಒಂದು ದಿನವೂ ಶಾಲೆಗೆ ಮಣ್ಣು ಹೊತ್ತಿರಲಿಲ್ಲ (ವಿಚಿತ್ರ. ೦೫೯). **ಮಣ್ಮಾಡು, ಮಣ್ಣು ಮಾಡು** = ೧. (ಆಲಂ) ಹೂಳು : ಸಮಾಧಿ ಮಾಡು : ಎತೆಯೊಕ್ಲೀಸ್ ಅಣ್ಣನನ್ ಮಣ್ ಮಾಡಿ ಕಿರ್ಬ್ಗನೆಲದ ಕಟೀರದರೊಳ್ ಪುಗಿಸಿ ಮನ್ನಿಸಿದನೆಂಬರ್ (ಅಂತಿಗೊ. ೩-೩೦) ; ಇಂದೊ ನಾಳೆಯೊ ಸಾಯುತ್ತಾಳೆ. ನಾನು ಇವಳನ್ನು ಮಣ್ಣು ಮಾಡಿ ಎಲ್ಲಿಯಾದರೂ ಹೊರಟು ಹೋಗುತ್ತೇನೆ (ಶ್ರೀರಾಮ. ೦೦೨). ೨. ಹಾಳು ಮಾಡು ; ನಾಶಪಡಿಸು : ಬಂಗಾರದಂತಹ ನಾ ಕೊಟ್ಟ ದಿನವನು ಮಣ್ಣುಮಾಡಿದೆಯೆಂದು . . . ನಿನ್ನನೆ ನೋಳ್ಪನು ದಿನಪನು ತಾ ಪೋಗುವಂದು (ಇಂಚಾಕ. ೦೪೯-೩೨).

[ದೇ.॥ ತಮಿ. ಮಣ್ ; ಮಲ. ಮಣ್, ಮಣ್ಣು ; ಕೊಡ. ಮಣ್ಣ್ ; ತೊದ. ಮೊಣ್ ; ತುಳು. ಮಣ್ಣು ; ತೆಲು. ಮನ್ನು, ಮನು]

**ಮಣ, ಮಣವು** (ನಾ). ೧. ತೂಕದ ಒಂದು ಪ್ರಮಾಣ ; (ಸುಮಾರು) ನಲವತ್ತುಸೇರು ; P ಈ ತೂಕದ ಪ್ರಮಾಣವು ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸವಾಗುತ್ತದೆ : ಆಸೆಗೈದು ಮಣದ ಆಹಾರವ ತಾನೆ ತಂದು ಕೊಡುವ ದೀನರೊಡೆಯ ಶ್ರೀನಿವಾಸದಯಾನಿಧಿ (ಪುರಂದ. ೦-೫೬-೨). ೨. (?) : ಕೈವರದೊಳ್ ಒಸ್ದು ಮಾನ್ಯಂ ಮಣಮುಂ ಮೂಗಣ್ಣುಗಂ . . . ಪಡೆದೊರ್ (ಎಕ. X (೪). ಶಕ್ತಿ. ೦೦೬-೬೩ ; 850). **ಮಣವು** : ೧. ಆಱು ಮಣವಿನಂಡಗೆಯ ತಂದೆತ್ತಿಕೊಳ್ಳೆನೆ (ಗುರುಚಾ. ೦೪-೫).

[←ಅರ. ಹಿಂ. ಮನ್ ; ಮರಾ. ಮಣ./ಸಂ. ಮಣ]

**ಮಣಕ$_1$, ಮಣಿಕ$_1$** (ನಾ). (ಪ್ರಾಯಕ್ಕೆ ಬರುತ್ತಿರುವ) ಹಸು, ಎಮ್ಮೆ ಮೊದಲಾದ ಪ್ರಾಣಿಗಳ ಕರು ; ಪಡ್ಡೆ ; ಕಡಸು : ಕಣಾಕದ ಕಡುಬಾಗಿ ಮಣಕವ್ಮೆ ಹಯನಾಗಿ ಕುಣಿಕುಣಿದು ಕಡೆವ ಸತಿಯಾಗಿ ಬೆಳವಲದ ಅಣಕ ನೋಡೆಂದ (ಸರ್ವಜ್ಞ. ೦೬೦೯) ; ಮಣಕಕೆ ಸೇರುತುಪ್ಪ ಮನಿಯೊಳಗಾದರೆ ಮಣಕಕೆ ಬಂದದೇನು (ಶಿಶ್ರಸು. ೩೩-೨). **ಮಣಿಕ$_1$** : ಪೊಸನಸೆಯ ಸೊವಡನಾಘ್ರಾಣಿಸಿ ಮಣಿಕದ ಮಿಡುಕುಗಚ್ಚೆಯೊಳ್ ಮೊಗವೆತ್ತುತೆಸೆದುದು ವೃಷವುಮುರರನೇಱಿಸುವವೊಲೇನುಂಟೆ ನಿಮಗಮಿಾ ಸುಖಮೆನುತಂ (ರಾಮಾವ. ೫-೯೩); ಮಣಿಕದ ನಸೆಗಸವಸದಿಂದಣಿಯರವಾಡುವ ಗವೇಂದ್ರನಂ ಸತಿ ಕಂಡಳ್ (ಅನಂಪು. ೪-೦೨೦). [ದೇ.॥ ತಮಿ. ಮಣಾಜ್ಯ = ಕುರಿಮರಿ]

**ಮಣಕ$_2$** 'ಮಣಕು' ನೋ.

**ಮಣಕ$_3$, ಮಣಗು$_2$** (ನಾ). ೧. ಮೊಸಳೆ ; ಮಕರ : ಇದ್ದಕ್ಕಿದ್ದಂತೆ ಮಣಕ ಬಂದು ಅವಳ ಕಾಲನ್ನು ಗಟ್ಟಿಯಾಗಿ ಕಚ್ಚಿ ನೀರಿಗೆ ಎಳೆಯಿತು (ಪದ್ಮಸ. ೨೫). **ಮಣಗು$_2$** : ೨. ಅಗಲವೂ ಮತ್ತು ಉದ್ದವೂ ಆದ ಒಂದು ಬಗೆಯ ಮಿಾನು. [← ತುಳು. ಮಣಂಗ್]

**ಮಣಕಾಲು** 'ಮೊಟಕಾಲ್' ನೋ.

**ಮಣಕು, ಮಣಕ$_2$, ಮಣಾಕು** (ನಾ). ೧. ಹಳೆಯ ಎಣ್ಣೆಯ ಜಿಡ್ಡಿನ ವಾಸನೆ ; ಕಮಟುವಾಸನೆ; ದುರ್ವಾಸನೆ : " ತಿಲ_ಸ್ನೇಹನೇ, ಮಣಕಿ

ನೊಳ್ " (ಶಾಶಕ್ಕ. ೨೨೬); ಆವ ಜಾತಿಯುದಾರೆಂದಱಿಯದೆ ಮಿಂದು ಮುಟುಂಕಿಯುಮಱಿಯದ ಮಣಕಿನ ಬಣಂಬೆಗಾನೆಱಗುವೆನೇ (ಮುಕೋತ. ೯-೯೯); ಅವರಂ ಕರದು ಮುಂಡೆಯೊಳ್ ಮಣಕೇಱಿರ್ದ ಜಡೆಗಳಂ ಲೋಚಂ ಮಾಡಿಸಿ (ಧರ್ಮಾಕ್ಷ. ೯-೦೯ ಪ). ೨. (ಆಲಂ) ದುರ್ಗುಣ: ಗುಣಕ್ಕೃತಿಯುನು ಕಿವಿಯಿರ್ದು ಕೇಳದ ಮಸವೆಣಿಸಿ ಮೆಚ್ಚದವರನಪ್ಪ ಮಣಕಿನಧಮಗೋದಿ ಪೇಳ್ವವ ಪೊಲ್ಲಸು ಪೆಣಕೆ ಪಾಡುವ ಸುಗಾಯಕನ (ವರ್ಧಕ. ೦-೨೨). ೩. ಹೊಲಸು; ಕೊಳೆ; ಕೊಳಕು: ತಲೆಯೊಳ್ ಶೀವಿದ ಹೇನು ಸೀರ್ಮಣಕನೆಂತುಂ ಬಾರ್ಚಿ ತಾಂ ತಳ್ದಿಯಾ ತಲೆಯಂ ನಿರ್ಮಳಮಪ್ಪಿನಂ ಪಣಿಗೆ ಮಾಟ್ಕುಂ (ಧರ್ಮಾಕ. ೦೦-೦೨). ಮಣಕ$_2$: ೨. ಅಣಕವನಾಡುತ ಐವರ ಕೊಡೆ ಸೆಣಸುತ ನಾಲ್ವರ ಕೈವಿಡಿದು ಮಣಕದಿಂದಲಿ ಆಱು ಮುಂದಿಯ ಕೂಡೆ ಉಣ ಕುಳಿತಲ್ಲಿ ಮೈಮಱೆದೆನಕ್ಕ (ಶಿವಗೀ. ೦೯೬-೬೯೯). ಮಣುಕು: ೩. ಬಾಳಿಕೆ ಬರುವುದೆಂದುಕೊಂಡ ಸೀರೆ ಆರು ತಿಂಗಳಿಗೇ ಹರಿಯುತ್ತ ಬಂದುವಲ್ಲದೆ ಮಣುಕು ಓಡಿದು ಗೂಬೆಯಾಗಿತ್ತು (ಬೆಳ್ಳಿ. ೦೬೦). [ದೇ.॥ ಮಲ. ಮಣಕ್ಕ = ವಾಸನೆಯುಂಟಾಗು, ವಾಸನೆ ಬರು; ತುಳು. ಮಣ, ಮಣಕ್ = ಅಂಟಿಕೊಳ್ಳುವ; ಜಿಗುಟಾಗಿರುವ ]

**ಮಣಗು$_1$** (ಕ್ರಿ). ಹತೋಟಿಗೆ ಬರು; ವಿನೀತನಾಗು; ವಿನಮ್ರನಾಗು: ಆ ಕಾಲದಲ್ಲಿ ಅಣಗಿ ಮಣಗಿ ಇದ್ದ ಮಹಮ್ಮದೀಯರನ್ನು 'ಮುಸಲಿಮಾನು' (ಮುದಿಮರ)ಗಳೆಂದು ಗೇಲಿ ಮಾಡಿದೆವು (ಸಾಹಿತ್ಯ. ೬೭). 'ಅಣಗು' ಪರಾ. [ದೇ.॥ ತೆಲು. ಮಡುಂಗು, ಮಣಂಗು]

**ಮಣಗು$_2$** 'ಮಣಕ$_3$' ನೋ.

**ಮಣಮಣ** (ನಾ). ಒಂದು ಅನುಕರಣ ಶಬ್ದ: ಬಾಯಲ್ಲಿ ಮಣಮಣ ಮಂತ್ರ! (ಶ್ಮಶಮೊ. ೩೦); ಅರೆತಾಸಿನ ತನಕ ತಾಳ್ಮೆಗೆಟ್ಟು ಮಣಮಣ ಅನ್ನುತ್ತಿದ್ದನು (ಶಾಂಕ್ರ. I. ೯೩೩).

**ಮಣಮಣಗುಟ್ಟು** (ಕ್ರಿ). ತನ್ನಷ್ಟಕ್ಕೇ ತಗ್ಗುಧ್ವನಿಯಲ್ಲಿ ಹೇಳಿಕೊಳ್ಳು; ಗುಣುಗುಣಿಸು: ತಂತ್ರ ಅರಿಯದೇ ಮಂತ್ರ ಮಣಮಣಗುಟ್ಟೀ (ಸೂರ್ಯಕಾ. ೩-೦೩). [ಮಣಮಣ + ಕುಟ್ಟು$_1$]

**ಮಣಮಣೆ** (ನಾ). ಒಂದು ಅನುಕರಣ ಶಬ್ದ: ರಣವು ದಾನವಕುಲವಿಹಿತವಾ ರಣವೂ ಹರಿಯೋ ಮಾರಿಯೋ ಮಂಡಣಿಸಿ ಕಳುಹಿದ ಕೃತ್ತಿಯೊ ಸುರರೆಮ್ಮ ವಲ್ಲಭರು ಸೆಣಸಿ ಮಡಿದರು ಶಿವಯನುತ ಮಣಮಣೆಯ ಹೊರಳುವ ದಾನವಿಯರುಬ್ಬಣವೆನಿಪ ಹಾಹಾರಘಸವಂಬರವನಲ್ಲಿಱಿಯೆ (ಶಿಭಾಗ. ೮-೦೭-೩೩).

**ಮಣಮಣಿಸು** (ಕ್ರಿ). = ಮಣಮಣಗುಟ್ಟು: ಗೆಣೆಯನ್ನ ಕಳಕೊಂಡ ಒಣಮಾರಿ ಮಾಡಿಕೊಂಡ ಮಣಮಣಿಸಿ ಊರ ತಿರುಗ್ಯಾಳೊ (ಜಪಗೀ. ೪೦). [ಮಣಮಣ + — ಇಸು$_3$]

**ಮಣಲ್**, ಮಣಲು, ಮರಳು$_2$, ಮಲರ್$_4$, ಮಳಲ್, ಮಳಲು$_2$ (ನಾ). (ಸಮುದ್ರ ಅಥವಾ ನದೀತೀರ, ಮರುಭೂಮಿ ಮೊದಲಾದ ಕಡೆಗಳಲ್ಲಿ ದೊರಕುವ) ಮಳೆ, ಬಿಸಿಲುಗಳ ಪ್ರಭಾವಕ್ಕೊಳಗಾಗಿ ಸಣ್ಣ ಸಣ್ಣ ಚೂರಾಗಿರುವ ಕಲ್ಲಿನ ಕಣಗಳ ರಾಶಿ; ಉಸುಕು; ಹೊಯಿಗೆ: "ಸಿಕತಾ, ವಾಳುಕಾ _ ಈ ೨ ಮಣಲ್" (ಶಬ್ದಮ. ೦೦೦-೯೬); ಮುಡಿಯ ಕುಚಯುಗದ ಜಘನದ ಕಡುವಿಣ್ಪಿಂ ಮಣಲೊಳಟ್ಟು ಬರೆ ಮೆಲ್ಲಡಿಗಳ್ (ಶಂಶಭಾ. ೭-೬೫); ಅಯ್ದುಪುರುಷಂಬರೆಗಂ ನೆಱೆ ತೋಡುಗುಪ್ಪುನೀರ್ ಮಣಲೊಱವಾಗಿ ಬಿರ್ಕುಂ (ಲೋಕೋಪ. ೫-೩೦); ಮಣಿಯಲ್ಲದ ಕಲ್ ಜ್ಯೋತಿಸ್ತೃಣಮಲ್ಲದ ಪುಲ್. . . ಮುತ್ತಿನ ಮಣಲಲ್ಲದ ಪುಣಿಲುಮಿಲ್ಲ ತತ್ಪರಿಸರದೊಳ್ (ಚಂದ್ರಪ್ರ. ೦೦-೯೦). ಮಣಲು: ಮಣಲ ಲಿಂಗ ವನಳ್ಕಱೆ ತೋಱೆ (ಚಂಚೀರ. ದೇ. ೨೯೩-೨೦); ಕಾಡವರೆ ಮಣಲು ಸುಣ್ಣಮಿ ಪೀಡಿತ ವಜ್ರೋಪಮಾನ ಶಿವ್ಯರೆನಿಸಿರ್ಕುಂ (ಜಪುದ. ೦೬-೨೬); ಮಣಲಿಂ ಮಹಾಲಿಂಗಮಂ ಮಾಡಿ (ಶಾಪತಂ. ೩-೦೬). ಮರಳು$_2$: ಗಂಗಾನದಿಯ ಶಾಖೆಯಾದ ಹೂಗ್ಲೀನದೀಮುಖದಲ್ಲಿಯೂ ಮರಳು ಹೀಗೇ ತುಂಬುತ್ತದೆ (ಸಸಾ. ೨೫). ಮಲರ್$_4$: ಮರಲ್ ಅರಲ್ ಎರಲ್ ಎಂಬಿವಱ ಮಾಧ್ಯರೇಫಕ್ಕೆ ಲತ್ವಮುಂ ಸಮುಚ್ಚಯಪದದಿಂದಂತ್ಯಲತ್ವಕ್ಕೆ ರೇಫಮುಮಾಗಿ ಮಲರ್ ಅಲರ್ ಎಲರ್ ಎಂದು ವಿಕಲ್ಪದಿನಕ್ಕು ಪಿರಿದೆಂಬುದಱಿಂ ಮರಲೆಂಬುದಱ ರೇಫಕ್ಕೆ ಣತ್ವಮುಮಾಗಿ ಮಣಲೆಂದು ಮುಂಟು (ಶಮುದ. ೨೯ ವೃತ್ತಿ). P ಈ ಶಬ್ದರೂಪವು ವಿರಳವಾಗಿದ್ದು, ಬೇರೆಯ ಕಾವ್ಯ ಪ್ರಯೋಗ ದೊರೆತಿಲ್ಲ. ಮಳಲ್: ಸಾಗರಿಕೆಯುಂ ಗಂಧೋದಕಕನಕದೀರ್ಘಿಕೆಗಳೊಳ್ ರನ್ನದ ಮಳಲ್ಗಳಂ ಸುರಿಯಲುಂ . . . ಕರೆದು ಪೇಟ್ವಿ ಮನೋಹರಾಲಾಪಂಗಳಂ ಕೇಳುತ್ತುಂ (ಕಾದಂಪೂ. ೦೦೦೬): ಮಳಲಂ ಪಿಱಿದೆಣ್ಣೆಯನಱಸುವ ನಿರ್ಬುದ್ಧಿಯುಮಂ ಪೋಲ್ಕುಂ (ಧರ್ಮಾಮೃ. ೬-೦೬೮); ಮಳಲೊಳ್ ತೈಲಂಗಳಂ ಹಿಂಡಲಕ್ಕು. . . ಕಱಿಯಲ್ ಬಕ್ಕುಗ್ರುದ ವ್ಯಾಘ್ರುಮಂ (ಸೋಮೇಶ. ೯೯). ಮಳಲು$_2$: "ಪುಳಿನಲು ಮಳಲು" (ಕಬ್ಬಿಗ. ೦೨); ಹಾಲ ತೊಱೆಗೆ ಬೆಲ್ಲದ ಕೆಸಱು ಸಕ್ಕರೆಯ ಮಳಲು ತವರಾಜದ ನೊರೆ ತೆರೆಯಂತೆ ಆದ್ಯರ ವಚನ (ಬಸವ. ೨೯೦): ಬಿಗೆ ಹುರಿದ ಬಿಸಿಯ ಮಳಲಂ ತರಿಸಿ ಬಾಯ್ಸುಂಬಿಸಿದಪೆಂ (ಬಸಪು.೦೦-೦೯). [ ದ್ರಾ॥ ತಮಿ. ಮಲ. ಮಣಲ್; ಕೊಡ. ಮಣ; ಕೋತ. ಮಣ್ಳ್; ಪರ್ಜಿ. ಮನ್ ]

**ಮಣಲಿ** (ನಾ). ಒಂದು ಊರಿನ ಹೆಸರು: ನೊಕ್ಕಿಗೋಡು ಮಣಲಿ ಮಕ್ಕಿಯುಸ್ಸ ಮುಮುವಕ್ಕಗ್ರಾಮ (ಮ್ಯಆರ. ೦೯೦೬, ೦೦-೦೦; 700); ಅತ್ತುವಳಿಗೆಯ ಮಣಲಿ ನಾಡ ಮೊರಸು ಹಂಸೆರಡು (ಎಕ. V, ಬೇಲೂರು. ೬೦-೨೩೬; 1117). [ ? ]

**ಮಣಲು** 'ಮಣಲ್' ನೋ.

**ಮಣಲೆ ?** (ನಾ). ಒಬ್ಬಾತನ ಹೆಸರು (?): ವಿನೋದಿಮಣಲೆಯರ ತಳಿಯೂರಾಳ್ವ ತಿಜ × (ಎಕ. III (R), ಗುಂಡ್ಲುಪೇ. ೯೩-೯: 750). 'ಶೌಚಮಣಲೆ' ಪರಾ. [ ? ]

**ಮಣಲೆವಾಡಿ**, ಮಳಲವಾಡಿ (ನಾ). ಒಂದು ಊರಿನ ಹೆಸರು: ನರಸಿಂಗೇಸ್ವರವ್ಮಾಡಿಸಿ ಮಣಲೆವಾಡಿಯನಭ್ಯನ್ತರಸಿದ್ಧಿಯಾಗೆ ಬಿಟ್ಟಂ (ಎಕ. XIV, ಮೈಸೂರು. ೦೨೬-೭; 900); ಶ್ರೀಮಬ್ಬೆಗಳದ ತೀರ್ಥಕ್ಕೆ ಮಣಲೆವಾಡಿಯನಪ್ರ್ವತರಂ ಶಿದ್ಧಿಯಾಗೆ ಬಿಟ್ಟು (ಎಕ. III, ಮೈಸೂರು. ೦೩-೦೦; 1128). ಮಳಲವಾಡಿ: ತಿಪ್ಪೂರು ಕನ್ನಂಬಾಡಿ ಮಳಲವಾಡಿಯೊಪ್ಪುವ ಮನ್ನೆಯರುಗಳು ತಪ್ಪದೆ ಲಗ್ಗೆಗೇಱಿದ ಖಳರನು ಕೊಲ್ವ ದಪ್ಪವನೇ ನೆಂಬೆನದನು (ಕಂಪಪ. ೦೯-೫೬). [ ಮಣಲೆ ? + ಪಾಡಿ$_2$ ]

**ಮಣಲ್ದಾಣ** (ನಾ). ಮರಳಿರುವ ಸ್ಥಳ; ಪುಳಿನ ಸ್ಥಳ: ಲತೆಯ ಪೊದಱ ಪುದುವಿಂ ಪೆಣೆದ ಮಣಲ್ದಾಣಂಗಳುಮಂ (ಕಾದಂಬ. ೨೬೬). [ ಮಣಲ್ + ತಾಣ ]

**ಮಣಲ್ದಿಂಟೆ**, ಮಳಲ್ದಿಂಟೆ (ನಾ). ಮರಳಿನ ದಿಬ್ಬ, —ದಿಣ್ಣೆ: ವೈತರಣಿಯ ಪಿರಿಯ ದರಿಯುಂ ಮೆಟ್ಟಿ ಸುಣ್ಮಣಲಂ ಮಣಲ್ದಿಂಟೆಗೆತ್ತಱ ಪರಿತಪ್ತ ಲೋಹರಜಸ್ಸಿಕಶಿಳತಳದೊಳ್ ಮೆಯ್ಯನೀಡಾಡುವುದುಂ (ಶಾಂತಿಪು. ೭-೯೦ಪ). ಮಳಲ್ದಿಂಟೆ: ಉರಿವರಿವ ಬಿಸಿಲ ಬೆಂಕಿಯ ಭರದೆ ಮಳಲ್ದಿಂಟೆ [ಪಾಠಾಂ. ಲ್ದೀಂಟೆ] ಕಾಯ್ದು ಸಿಡಿಯುತ್ತಿರೆ (ಜಗಪ. ೧೭-೭೯); ಉಱೆ ಮಳಲ್ದಿಂಟೆಯುಂ ಶ್ರೋಣಿ ಮಿಂಚುಂ ಚಪಲಾಂಗು . . . ಕಂಠಂ ಕಂಬುವುಂ ತಾಂ ಪಟುಯಲೆಸೆದಳಾ ಕಾಂತೆ (ಉದ್ಭಟ. ೬-೮೯). [ ಮಣಲ್ + ತಿಂಟೆ ( < ತಿಟ್ಟು$_3$ ) ]

**ಮಣಲ್ದಿಣ್ಣೆ**, ಮರಳುದಿಣ್ಣೆ (ನಾ). = ಮಣಲ್ದಿಂಟೆ: ಚಿನ್ನಯರ್ ಪಾಱುಗುಪ್ಪೆಯನಾಡುವ ಮಣಲ್ದಿಣ್ಣೆಯ ನೋಡಿ ಹಿಗ್ಗಿದರು

(ಶೋಚಕ. ೪-೩೪). **ಮರಳುದಿಣ್ಣೆ** : ಇವೆರಡು ತುದಿಗಳ ನಡುವೆ ಮರಳುದಿಣ್ಣೆಕಲ್ಲು ಸಾಲಾಗಿವೆ (ಭೂಬಿವ. ೩೪೭). [ ಮಣಲ್ + ದಿಣ್ಣೆ ]

**ಮಣಲ್ಲೂರ್** (ನಾ). ಒಂದು ಊರಿನ ಹೆಸರು : ಮಣಲ್ಲೂರ ರಜಾ ವಣ್ಣಾಕ × × × ಬೆಳ್ಗಿಟಿ ಎಮ್ಮಗೆ ಕೇಟ್ಟು (ಎಕ. XII, ತಿಪಟೂ. ೩೭-೪ ; 961). [ < ಮಣಲ್ ? + ಊರ್ ) ]

**ಮಣಲ್ಪಿಟಿ** (ಕ್ರಿ). ಮರಳನ್ನು ಹಿಂಡು : ಅದೃಶ್ಯರಾಗಿ ಪೋಗಿ ಮತ್ತಮಾ ಯಂದದಿಂ ಮುಂದೆ ಬಂದುಯ್ಯುಟ್ಟಿಯುಂ ನೀರ್ಗಡೆದುಂ ಮಣಲ್ಪಿಟಿಯುತ್ತುಮಿರ್ದುಂ ಮುನ್ನಿನಂತೆ ನುಡಿದೊಡೆ (ಧರ್ಮಾಮೃ. ೦೪–೦೦೪ ಪ). [ ಮಣಲ್ + ಪಿಟಿ ]

ಮಣವಾಳ್ಗೊಳಿ (ನಾ). ಒಂದು ಊರಿನ ಹೆಸರು : ಉಭಯಾತಯೋರ್ವ್ಮಣವಾಳ್‌ಗೊಳಿ ಮಣಗಿಯುರ್ನಿಧಿಪುರವತ್ ಮಣಲಿ ನೆರೆಣ್ಣೂರ್ ಪಡೆಪ್ಪುರ್ ವಾಸಿನಾವತ್ (ಪ್ರೀಆ. ೦೪೦೬,೦೦–೧೦ : 700). [ ? ]

**ಮಣವು** 'ಮಣ' ನೋ.

**ಮಣಿ₁** (ಕ್ರಿ). ೧. ಬಾಗು ; ಬಗ್ಗು : ಮಹಾನುಭಾವಿಗಳ ಸಂಗ ಮಣಿದ ಅಲಗಿನ ಮೊನೆಯು ಗುಣದಂತಿರಬೇಕು (ವಚನ. ೬೬–೩೩೦) ; ಇಂತು ಮದಿರಾಪಾನಮಂ ಮಾಡಿ . . . ಕುಣಿಯುತುಂ ಮಣಿಯುತುಂ . . . ಮನಂಗೊಳಿಪ ತದ್ವನಿತಾಜನಮಧ್ಯದಲ್ಲಿ (ಉದ್ಭಟ. ೩–೯೦ ಪ) ; ಮಣಿದು ಹಿಡಿದೆತ್ತಿದನು ರಾಯನ ಹಣೆಯನನುಪಮಕರುಣನಿಧಿ (ಕುಮಾ.ಶ. ೭–೨೩). ೨. ಕುಸಿ ; ಕುಗ್ಗು : ಮಣಿದುದಮರಾಚಲಂ . . . ಗುಣಿಯೊಳಿಳಿದುದು ವಿಂಧ್ಯಪರ್ವತಂ (ಶಂಕರ. ೦೦–೨೭). ೩. ವಂದಿಸು ; ನಮಸ್ಕರಿಸು : "ಮಣಿ—ನಮನೇ, ಭಯ, ರತ್ನಯೋಃ" (ಕರ್ಣ) ; ಅಣುರೇಣುಮಧ್ಯದಲಿ ಗುಣಭರಿತ ನೀನೆಂದು ಮಣಿವುತಿಪ್ಪೆನಯ್ಯ (ದೇವಾವ. ೨–೩); ನಾಗಭೂಷಣಚಿತ್ರವಲ್ಲಭೆಯಾದ ಶೈಲತನೂಜೆಯಿಂಬಾಗಿ ಕಣ್ಗೊಳಿಪಂಘ್ರಿಗಳ್ಗೆ ಸಮಂತುಟಾಂ ಮಣಿದಂ ಸತಿ (ಉದ್ಭಟ. ೭–೦೦೦) ; ಕರವ ನೊಸಲೊಳು ಚಾಚಿ ದಿಗುಪಾಲರಿಗೆ ಮಣಿದಳು (ಸಂಭವ. ೨೦–೦೩೭). ೪. ವಶವಾಗು : ಸಗ್ಗು ; ಹತೋಟಿಗೆ ಬರು ; ಅಧೀನವಾಗು : ಸಂಗರದೊಳ್ ಪೊಣರಿ ಪೆಸರ್ಗುಂದಿ ಮಣಿಯದೆ ರಣದೊಳ್ ಹರಿಯಂತೆ ನಿಂದರಂ ಸಂಗರದೊಳ್ . . . ನೀಂ ಗೆಲಿದೈ (ಶಬ್ದೋಂಬು. ೭–೨೭೭ ಉದಾಹರ); ಗಿರಿ(ಸಿರ)ಕರ್ಣಿ ನೀಲಿಜಂಜಿಗೆ ಸುರದಾಳಿಯ ಬಿತ್ತು ಗರ್ದುಗಿನೆಲೆಯೆಂಬವ ನೊಂದಿರೆ ಕೂಡಿ ತಿಂದೊಡಾತನೆ ಗರುಡನವಂಗಬ್ಬಿ ಬಳ್ಕಿ ಮಣಿಗುಂ ಫಣಿಗಳ್ (ಲೋಕೋಪ. ೦೦–೧೬); ಒಂದೆಡೆಯೊಳುಂಡೆನಪ್ಪೊಡೆ ಸಂದೀ ಬಲ್ವಿದ್ಯೆಯಾಗಲರಿಯದು ತಿರಿಮುಂಡಂವಲ್ಲದೆ ಮೆಯ್ಮಣಿಯದು (ಧರ್ಮಾಮೃ. ೦೩-೪೩); ಮಣಿದು ಬದುಕುವನಲ್ಲ ಹಗೆಯೊಳು (ಕುಮಾ.ಉ. ಓಅ. ೧೦–೪೭). ೫. ಅಂಜು ; ಹೆದರು ; ಭಯಪಡು : ಅಂತಣಿ ಮಣಿಯದೆ ಸೆಣಸಿ ಪೊಣರ್ದು ಕಿಡಿದು ಪೊಟ್ಟು ಕಾದಿ ನಿಂದಾಗಳ್ (ಶಂಕರ. ೦೦–೬೫ ಪ); ಮಣಿಯದೆ ಬಂದು ಗೊಂದಣಿಸಿದದ್ದಣದೊಡ್ಡಣಮುರ್ಬು (ಕೃಷ್ಣ. ೫-೦೨) : ರಣದೊಳವನಡಗೆಡೆದನಾದರೆ ಮಣಿಯದಿಱಿವವೆನು (ಕುಮಾ.ಭೀ. ೦–೩೬). ೬. ಬಾಗಿಸು ; ಬಗ್ಗಿಸು : ಉಡಲೊಂದು ವಸ್ತ್ರಮಂ ಬೇಡಿ ಪೊಟ್ಟೆ ಮಣಿಯದೆ ನಿಂದಿರ್ದ ನಂದಿಮಿತ್ರನಂ ನೋಡಿ (ಕೃಷ್ಣ.ಸ್ತ್ರ. ೯–೭ ಪ); ಮೈಮಣಿದಾಕಿ ತಿವಿದಾಡಿದರು ಸಬಳಿಗರು (ಕುಮಾ.ಭೀ. ೬-೦೭). ೭. ಒಪ್ಪಿಗೆ ಕೊಡು ; ಅಂಗೀಕರಿಸು ; ಸಮ್ಮತಿಸು : ಕಲಶೋದ್ಭವನ ಮತದಲಿ ಬಳಿಕ ಮಣಿದನು ಕೌರವರ ರಾಯ (ಕುಮಾ.ಭೀ. ೦–೦೪); ಹಿರಿಯರಿದ್ದಾರೆ, ಅವರ ತೀರ್ಪಿಗೆ ಮಣಿಯೋಣ (ಸಪ. ೩). ೮. ಇಣುಕು; ಕಾಣಿಸಿಕೊಳ್ಳು ; ತಲೆ ತೋರಿಸು : ಆಪತ್ತಿನೊಳ್ ಮಣಿದುಂ ನೋಡದ ಬಂಧುವೇತಕೆ (ಸೋಮೇ. ೧೩).

**ಮಣಿಮಣಿ** (ದ್ವಿರುಕ್ತಿ) : ಜೋಂಪಿಸುತೆ ತನು ಜೋಲೆ ಸಾತ್ವಿಕರಸಂ ಮಸಗೆ ಮಣಿಮಣಿದು ಕುಣಿಕುಣಿದು (ಬಸವ. ೩–೦೦೩). **ಮಣಿದಾಡು** = ವಂದಿಸು : ಕುಣಿದಾಡಲೀವುತಂ ಮಣಿದಾಡಲೀವುತಂ . . . ದೇವಾಂಗ ವಸ್ತ್ರಮಂ ದೇವರ್ಗೆ ಈವುತಂ (ಅನೇಕ. ದೇ. ೬೫–೦೩) ; ಪಶುಪಕ್ಷಿಗಳು ಉಲಿಉಲಿದು ಮಣಿದಾಡಿ ಭಕ್ತಿಯ ಹುಮ್ಮಸ್ಸನ್ನು ಹೊರಪಡಿಸುತ್ತವೆ (ಕನ್ನಡಾ. ೦೪೩). **ಮಣಿಬಲ್ಲತನ** = ಹೊಂದಿಕೊಳ್ಳುವ ಗುಣ : ಪ್ರೌಢವಾದ ಚಂಪೂರೂಪವನ್ನು ಕಂದವೃತ್ತಗಳನ್ನು ಬಳಸಿದ ಜೈನಕವಿಗಳ ಸಂಪ್ರದಾಯವು ಹಿಂದುಳಿದು ಷಟ್ಪದಿ ಸಾಂಗತ್ಯಗಳ ಹೊಸ ಸಂಪ್ರದಾಯ ರೂಢವಾದುದು ಕನ್ನಡಕವಿಗಳ ಮಣಿಬಲ್ಲತನಕ್ಕೆ ನಿದರ್ಶನವಾಗಿದೆ (ಕಸಾಚ. ೩೭೭).

**ಮಣಿ₂** (ನಾ). ಗಂಟೆ : 'ಮಣಿಯೋಱು', 'ಮಣಿವೊರಜೆ' ಪರಾ. [ದೇ.॥ ತಮಿ. ಮಲ. ತುಳು. ಮಣಿ; ಕೋತ. ಮಯ್ಣ್; ತೊದ. ಮೊಣಿ]

**ಮಣಿ₃** (ನಾ). ೧. ಬೆಲೆಬಾಳುವ ಹರಳು ; ರತ್ನ, ಮುತ್ತು, ವಜ್ರ ಮುಂತಾದುವು : ಮಣಿಕನಕಂ ವಸ್ತ್ರವಿಭೂಷಣಂಗಳಂ ಕೊಟ್ಟು ಪೆಂಡಿರೊಲ್ವರೆ ಗಂಡರ್ ಗುಣಮನೆ ಮೆಚ್ಚುವುದು (ಗದಾಯು. ೨–೫); ವರಮಣಿಗಳಿಂದೆಸೆವ ಮೌಳಿಯ . . . ಗಣಪತಿ ಮಾಡೆಮಗೆ ನಿರ್ವಿಘ್ನದಾಯಕವ (ಕುಮಾ.ಆ. ೦–೩). 'ನವಮಣಿ' ಪರಾ. ೨. ಹಾವಿನ ಹೆಡೆಯಲ್ಲಿರುವುದೆಂದು ಭಾವಿಸಲಾದ ಅಮೂಲ್ಯವಾದ ರತ್ನ ; ನಾಗಮಣಿ : ಪೆರ್ಬೆಡೆಯಿಂ ಮಣಿ ಸೂಸೆ . . . ಬೇಸಱಿಂ ತಿಣುಕಿದನಾನಲುಮ್ಮಳಿಸಿ ಶೇಷನಶೇಷಮಹೀವಿಭಾಗಮಂ (ಶಂಕರ. ೯–೯೯). ೩. (ಆಭರಣಗಳಲ್ಲಿ ಉಪಯೋಗಿಸುವ) ಮರ, ಗಾಜು, ಲೋಹ ಮೊದಲಾದುವುಗಳಿಂದ ತಯಾರಿಸಿದ, ಪೋಣಿಸಲು ಅನುಕೂಲವಾದ ದುಂಡನೆಯ ವಸ್ತು : ಎನಿತೊಳ್ಪಿತಾದೊಡು ಕಾಜಿನ ಮಣಿಗಳ್ ಪೊನ್ನ ತೊಡವನಿಟುಕೆಯ್ಯುವೆ (ಧರ್ಮಾಮೃ. ೬-೮೪) ; ತುಱುಗಾಹಿ ಕಾಜಿನ ಮಣಿಯ ಬಲ್ಲನು ಗಡ (ಕುಮಾ.ಕ. ೯–೦೪); ಅದು ಬಡವರೂ ಧರಿಸುವ ಬಿಳಿಯ ಮಣಿಗಳ ಸರವೆ ? (ಕಾಂಕಲಾ. ೭). ೪. ಜಪಮಾಲೆಯಲ್ಲಿ ಉಪಯೋಗಿಸುವ ತಾವರೆ ಬೀಜ, ರುದ್ರಾಕ್ಷಿ, ತುಲಸಿಯ ಮಣಿ ಇತ್ಯಾದಿ : ಮಣಿಯ ಕಟ್ಟಿ ಏವೆನಯ್ಯಾ ಮನ ಮುಟ್ಟದನ್ನಕ್ಕ (ಬಸವ. ೪೭೫); ಮಣಿಯನೆಣಿಸಿ ಕಾಲವ ಕಳೆಯಬೇಡ (ಅಪಶಂ. ೦೯೦–೬೫೫). 'ಜಪಮಣಿ' ಪರಾ. ೫. ಬಯಸಿದುದನ್ನು ಕೊಡುವುದೆಂದು ಭಾವಿಸಲಾದ ಸ್ವರ್ಗಲೋಕದ ರತ್ನ ; ಚಿಂತಾಮಣಿ : ಮಣಿ ಚಿಂತಿಸಲ್ಕೆ ಕೈಗೊಡುವುದಲ್ಲದಿರ್ದ್ದಡದು ತಾಂ ಕುಡದರ್ಥಿಜನಕ್ಕೆ ರಾಗದಿಂ (ಎಕ. VII, ಶಿಕಾರಿ. ೦೬–೦೭; 1158). ೬. ಕಣ್ಣಿನ ಗುಡ್ಡೆ ; ಕಣ್ಣಿನ ನಡುವಿನ ಕರಿಯ ಗೋಲ : 'ಕಣ್ಮಣಿ' ಪರಾ. ೭. (ಬೆನ್ನು)ಮೂಳೆಯಲ್ಲಿನ ಕೊಂಡಿ ; ಮೃದ್ವಸ್ಥಿಯ ಕೊಂಡಿ : ಬೆನ್ನು ಹುರಿಯ ಈ ಮಣಿಯನ್ನು ಸ್ವಲ್ಪ ಅಡಚಿ ಹಿಡಿ (ಮೂಕಬಾ. ೯೫). ೮. ಮೇಕೆಯ ಕೊರಳ ಮೊಲೆ. ೯. ಪುರುಷಜನನಾಂಗದ ತುದಿ. ೧೦. ಹೂಸು ; ಅಪಾನವಾಯು : "ಭಾಗಗಳಸ್ತನಾವಯವಭೇದ ಸುರತ್ನಮಪಾನವಾಯು ವೈರಾಗವಿನಮ್ರಮಿಂತು ಮಣಿಯುಕ್ತ" (ನಾನಾರ. ೩೯). ೧೧. ದೊಡ್ಡ ಮಣ್ಣಿನ ಪಾತ್ರೆ ; ಗುಡಾಣ. ೧೨. ಹಸ್ತದ ಮೂಲಭಾಗ ; ಮಣಿಬಂಧ ; ಮಣಿಕಟ್ಟು. ೧೩. ಶ್ರೇಷ್ಠವಾದುದು; ಉತ್ಕೃಷ್ಟವಾದುದು. ೧೪. ಶ್ರೇಷ್ಠನಾದವನು : ಮುನಿಮೌಳಿಗಳ ಮಣಿ ಪರಿತೋಷದಲಿ ತಿರುಗಿದ ತಪೋವನಕೆ (ಸಂಭವ. ೦೪–೨೬). 'ನಾಯಕಮಣಿ' ಪರಾ. ೧೫. (ಅಲಂ) ಅಚ್ಚುಮೆಚ್ಚಾದುದು ; ಪ್ರಿಯವಾದುದು : ನೋಳ್ಪರ ಕಣ್ಣ ಮಣಿಯುಂ . . . ಚಿಂತಿಸುವರ ಚಿಂತಾರತ್ನವೆನಿಪ ಸಂಗಮೇಶ್ವರನ[ಂ] ಕಪ್ಪಡಿಯ ಸಂಗಮ

ದೊಳೊಪ್ಪದಿಂದರ್ಚಿಸುತ್ತಮಿಪ್ಪ ಸೌಮ್ಯದೊಳು (ಸಿಂಧರ. ೪-೨). ೧೬. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : "ನಿಧಿ ಮಣಿ ಗ್ರಹ ರಂಧ್ರಮಿರಲು ಪೊಂಭತ್ತು" (ಮಂಗರಾ. ೦೦೪-೮).

**ಮಣಿ ಕಟ್ಟಿಸು** = (ಕೆಲವು ವರ್ಗಗಳಲ್ಲಿ, ಹೆಣ್ಣುಮಕ್ಕಳನ್ನು ಬಸವಿಯರಾಗಿ ಬಿಡುವ ಸಂಕೇತವಾಗಿ) ಕೊರಳಿಗೆ ಮಣಿಯ ಸರವನ್ನು ಕಟ್ಟಿಸು : ಅಂದು ಹರಿಜನರಲ್ಲಿ . . . ಕೆಲವು ಸಂದರ್ಭಗಳಲ್ಲಿ, ಹೆಣ್ಣುಮಕ್ಕಳು ಚೆಲುವೆಯರಾಗಿದ್ದರೆ, ಅವರಿಗೆ ಮಣಿ ಕಟ್ಟಿಸಿ ಅವರನ್ನು ಬಸವಿಯರನ್ನಾಗಿ ಮಾಡಬೇಕೆಂದು ಮೇಲ್ಜಾತಿಯ ಮುಂದಾಳುಗಳು ಆ ಹೆಣ್ಣುಮಕ್ಕಳ ತಂದೆ ತಾಯಿಗಳಿಗೆ ಪ್ರೋತ್ಸಾಹ ಮಾಡುತ್ತಿದ್ದರು (ಕಂಜಸಂ. ೦೦). ಮಣಿಕಟ್ಟು₁₁ = (ಕೆಲವು ವರ್ಗಗಳಲ್ಲಿ, ಹೆಣ್ಣುಮಕ್ಕಳನ್ನು ಬಸವಿಯರಾಗಿ ಬಿಡುವ ಸಂಕೇತವಾಗಿ) ಮಣಿಯ ಸರವನ್ನು ಕಟ್ಟು : ಭರಮಿ ಸ್ವಲ್ಪ ಧೈರ್ಯವನ್ನು ತಾಳಿ ಮಣಿಕಟ್ಟುವ ಪದ್ಧತಿ ಅಳಿಸಿ ಹೋಗುವ ಕಾಲದಲ್ಲಿ ಮಗಳಿಗೆ ಮಣಿಕಟ್ಟುವುದು ತರವಲ್ಲವೆಂದು ವಾದಿಸಿದಳು (ಕಂಜಸಂ. ೧೩೬). [ಸಂ.]

**ಮಣಿಕ₁** 'ಮಣಕ₁' ನೋ.

**ಮಣಿಕ₂** (ನಾ). ೧. ನೀರಿನ ಹರವಿ ; ಗುಡಾಣ : "ಮಣಿಕಃ, ಅಳಿಂಜರಃ– ಈ ೨ ಕೇಲು" (ಹಲಾಯು. ೩೩-೦೬೨). ೨. ಮೇಕೆಯ ಕೊರಳ ಮೊಲೆ. ೩. ಪುರುಷ ಜನನಾಂಗದ ತುದಿ. ೪. ಯೋನಿಯ ತುದಿ ; ಭಗಾಂಕುರ. ೫. ರತ್ನ. [ಸಂ.]

**ಮಣಿಕಂಕಣ** (ನಾ). ರತ್ನಖಚಿತವಾದ ಬಳೆ,—ಕಡಗ : ಕಂಕಣಕ್ಕೆ–ಗುಬ್ಬಿಗಂಕಣ, ಮಣಿಕಂಕಣ,. ಹಸ್ತಕಂಕಣ, ಹಿಂಡುಗಂಕಣ (ಕಪುರ. ೨೧೬ ಕ್ರಯೋ). [ಸಂ.]

**ಮಣಿಕಟಕ** (ನಾ). ೧. = ಮಣಿಕಂಕಣ. ೨. ರತ್ನಖಚಿತವಾದ ಬೆಟ್ಟದ ತಪ್ಪಲು. ೧, ೨ : ಮಣಿಮುಕುಟಂ ಶಿಖರಂ ಲಂಬಣೆಗೆಯ ಪೊಸಮುತ್ತು ನಿರ್ಝರಂ ಮಣಿಕಟಕಂ ಮಣಿಕಟಕಮಾಗೆ ತದ್ಗಿರಿಗೆಣೆಯಾದಂ ತನ್ನ ಪೆಸರೊಳಂ ವಿಜಯಾರ್ಧಂ (ಆದಿಪು. ೦೩-೦೩). [ಸಂ.]

**ಮಣಿಕಟ್ಟು₁₁** 'ಮಣಿ₃' ಪರಾ.

**ಮಣಿಕಟ್ಟು₂** 'ಮಣಿಗಟ್ಟು' ನೋ.

**ಮಣಿಕಳಶ** (ನಾ). ಬೆಲೆಬಾಳುವ ಹರಳುಗಳನ್ನು ಹೊಂದಿರುವ ಕಲಶ ; ರತ್ನಖಚಿತವಾದ ಕಲಶ: ಮಣಿಕುಟ್ಟಿಮದಿಂ ಮಣಿತೋರಣದಿಂ ಮಣಿಕಳಶದಿಂ ತಮಸ್ತೋಮನಿವಾರಣದೆಡೆಗಳಿಂ ಗೃಹಗ್ರಾಮಣಿಯನಪೇಕ್ಷಿಸವು ನೃಪಕುಮಾರಗೃಹಂಗಳ್ (ಮಲ್ಲಿಪು. ೨-೬೨).
[ಸಂ. ಮಣಿಕಲಶ]

**ಮಣಿಕಾರ** (ನಾ). ಮುತ್ತು, ರತ್ನ, ವಜ್ರಗಳ ಆಭರಣಗಳನ್ನು ಮಾಡಿ ವ್ಯಾಪಾರ ಮಾಡುವವನು ; ಅಕ್ಕಸಾಲಿ : "ವೈಕಟಿಕಂ ಮಣಿಕಾರಂ" (ಮಮ್ಮಕೋ. ೬೩-೬೪). [ಸಂ.]

**ಮಣಿಕಾಲ್** 'ಮೊಟಿಕಾಲ್' ನೋ.

**ಮಣಿಕಾಲು** 'ಮೊಟಿಕಾಲ್' ನೋ.

**ಮಣಿಕುಂಡಲ,** ಮಣಿಕುಂಡಳ (ನಾ). ಬೆಲೆಬಾಳುವ ಹರಳುಗಳಿಂದ ಮಾಡಿದ ಕಿವಿಯ ಆಭರಣ ; ರತ್ನಕುಂಡಲ : ಮಣಿಕುಂಡಲಮುಂ ಕವಚಂ ಮಣಿಯದ ಚಾರಿತ್ರಮುಗ್ರತೇಜಮುಮಿಾಯೊಳ್ಗುಣಮುಂ ಕಲಿತನ ಮುಖಮೇಂ ಪ್ರಣತಾರೀಸೂತಸುತನೊಳೊಡವುಟ್ಟುಗುಮೋ (ಕಂಕಥಾ. ೦೨-೯೬) ; ಮಣಿಕುಂಡಲಕಿರಣಂಗಳ್ ಸೆಣಸುವಿನಂ ನಖಮಯೂಖದೊಳ್ ದಶರಥಧಾರಿಣೀಪತಿಯ ಪದಪಯೋಜಪ್ರಣಮನಮನೊಡರ್ಚಿದಂ ವಿದುಚ್ಛರತಿಲಕಂ (ಕಂರಾಮಾ. ೬-೪೦). **ಮಣಿಕುಂಡಳ** : ಕಪೋಲರಂಗತಟದೊಳ್ ಕುಣಿಯಲ್ ಮಣಿಕುಂಡಳದ್ವಯಂ (ಪುಕ್ಷ್ಪು. ೩-೬೪). [ಸಂ.]

**ಮಣಿಕುಂಡಳ** 'ಮಣಿಕುಂಡಲ' ನೋ.

**ಮಣಿಕುಟ್ಟಿಮ** (ನಾ). ರತ್ನಖಚಿತವಾದ ನೆಲ : ತನ್ನಗಲ್ಕೆಗೆ ಬಿನ್ನನಿರ್ಪಂತೆ ಬಿನ್ನನಾಗಿರ್ಪ ವಿಮಾನದ ಮಣಿಕುಟ್ಟಿಮಭೂಮಿಗಳುಮಂ . . . ಭೋಂಕನೆ ಕಂಡು (ಆದಿಪು. ೩-೩ ವ) ; ಅಜಿತನಾಥಂ ಮಣಿಕುಟ್ಟಿಮಭೂಮಿಯೊಳ್ ಮನಂಗೊಳೆ ನಡೆದಂ (ಅಜಪು. ೫-೬೦) ; ಮಣಿಕುಟ್ಟಿಮಂಗಳಿಂ ಬಾಳೆಯ ರೊಟ್ಟಿಗಿನಿಂ ಸಕಲವೈಭವದಿಂದೆಸೆದಿರ್ಪುದಾ ಪುರಂ (ಜಗಪ. ೨-೩೪). [ಸಂ.]

**ಮಣಿಕುರುಜು** 'ಮಣಿಗುರುಜು' ನೋ.

**ಮಣಿಕೂಟ** (ನಾ). [ಜೈನ] ಮಾನುಷೋತ್ತರದ್ವೀಪದ ಒಂದು ಪರ್ವತದ ಹೆಸರು : ಖಚರದ್ವಯಂ ಮನೋಹರಮಣಿಕೂಟದೊಳ್ . . . ಅಂಗಜಕೇಳಿಲೀಲೆಯಿಂದಿರೆ (ಮಲ್ಲಿಪು. ೦೦-೦೦೯). [ಸಂ.]

**ಮಣಿಕೆ** (ನಾ). ನೀರಿನ ಹರವಿ,—ಗುಡಾಣ : "ಅಳಿಂಜರಂ ಮಣಿಕೆ [ಕಾಕಾ:. ಜೆ]ಪೆಂಸೆ ಕಲ್ಲೆ ನಾಮಂ" (ಮಂಗರಾ. ೬೨-೨೩). [ಸಂ. ಮಣಿಕ]

**ಮಣಿಖಚಿತ** (ಗು). ೧. ಬೆಲೆಬಾಳುವ ಹರಳುಗಳಿಂದ ಕೂಡಿದ : ರತ್ನಖಚಿತವಾದ : ಅರಸ ಬಂದನು ಮಣಿಖಚಿತಕೇಸರಿಯ ಪೀಠವ ನಡರಿದನು (ಕುವ್ಯಾಪಿ. ೦೦-೬). (ನಾ). ೨. ರತ್ನಖಚಿತವಾದುದು : ಕರಮಿಂಬಾಗಿರೆ ಚಾಮರಯುಗ್ಮಮದಾಗಳೆ ನಿಲೆ ದಿವ್ಯವಿಷ್ಟರಂ ಮಣಿಖಚಿತಂ (ಆದಿಪು.೦೪-೦೪೬). [ಸಂ.]

**ಮಣಿಗ** (ನಾ). ಒಂದು ಬಗೆಯ ಪಕ್ಷಿ : ಮಣಿಗನು ಗರುಡ . . . ಪೆರುವರ್ದವರೊಳೊಪ್ಪಿದವು (ಶಾಸ್ತ್ರಸಾ. ೫-೨೩). 'ರತ್ನಖಗ' ಪರಾ. [ ? ]

**ಮಣಿಗಂಟು** (ನಾ). ೧. ಕೈ ಹಾಗೂ ಮೊಳಕೈ ಕೂಡುವ ಜಾಗ ; ಮಣಿಯಂತಿರುವ ಸಣ್ಣ ಸಣ್ಣ ಮೂಳೆಗಳು ಕೂಡುವ ಜಾಗ : ಮೈಯನ್ನು ಅವಳ ಮಣಿಗಂಟಿಗೆ ಸವರಿ ಮುಖವೆತ್ತಿ ನೋಡಿತು (ಬಿಣ್ಣಮಾ. ೬೪) ; ಆ ಕೈಕಾಲುಗಳಿಗೂ–ನಡುವೆ ಮಣಿಗಂಟು, ಮೊಣಗಂಟುಗಳ ಸಂದಿದೆ (ಮುಕ್ತಾ. ೦೫೦). ೨. ಬಿಡಿಸಲ್ಪುದಕ್ಕಾಗದಂತಹ ಬಿಗಿಯಾದ ದಾರದ ಗಂಟು : ಪ್ರಯಾಣದ ಅನುಕೂಲಕ್ಕೆಂದು ಹಾಸಿಗೆಗೆ ಮಣಿಗಂಟು ಹಾಕಿರುವುದು ಈಗ ಬಿಚ್ಚುವುದಕ್ಕೆ ಆಗುತ್ತಿಲ್ಲ (ಲೂಪಿ).
[ಮಣಿ₃ + ಗಂಟು./ತುಳು. ಮಣಿಗಂಟ್]

**ಮಣಿಗಂಭ** (ನಾ). ಬೆಲೆ ಬಾಳುವ ಹರಳುಗಳಿಂದ ಕೂಡಿದ ಕಂಬ : ರತ್ನಖಚಿತವಾದ ಸ್ತಂಭ : ಶಂಬರವೈರಿಯೆಂದೆಂಬ ಕುಂಭಿಯ ಕಟ್ಟುವಿಂಬಿನ ಮಣಿಗಂಭದಂತೆ ಅಂಬುಜನೇತ್ರೆಯ ಪೊಂಬಾಳೆದೊಡೆಗಳು ತುಂಬಿದುವು ಕಣ್ಗೆ ಕೌತುಕವ (ಕಂಪಸಂ. ೯-೨೦). [ಮಣಿ₃ + ಕಂಭ]

**ಮಣಿಗಟ್ಟು,** ಮಣಿಕಟ್ಟು₂ (ನಾ). ೧. ಬೆಲೆಬಾಳುವ ಹರಳುಗಳಿಂದ ಮಾಡಿದ ಕಟ್ಟು ; ರತ್ನಖಚಿತವಾದ ಕಟ್ಟು : ಕಡುಗಲಿ ಕಾಮ ತನ್ನುಭಯಹಸ್ತದ ಗದೆಗಡರ್ಚಿದ ಮಣಿಗಟ್ಟನಂತೆ ಬಿಡಯವಿಲ್ಲದೆ ಕುಮರಿಯ ತೋಳ ಭಾಪುರಿ ಕಡಗ ಕಂಕಣವನಿಕ್ಕಿದರು (ಸೋಹಕ. ೨೩-೪೦) ; ಭರದಿ ಪೊಮ್ಮೊಡಿಗೆಯಪೊಂಗರಿಯ ವಿಸಿಖಮಂ ವಿರುಪ ಮಣಿಗಟ್ಟನಿಂದೇಮೊರೆವ ಧನುವಿಗೆ ತೊಡಿಸಿ (ಪಪುಸೋ.೦೨-೬೬). **ಮಣಿಕಟ್ಟು₂**: ೨. ಮುಂಗೈಯ ಹರಡು ; ಪಾಣಿಮೂಲ ; ಪ್ರಕೋಷ್ಠ : "ಪಾಣಿಬಂಧ, ಪಾಳಿ[ಣಿ] ಮೂಲ – ಈ ೨ ಮಣಿಕಟ್ಟು" (ಪಾಶಿಂ. ೦೨೦); ಒಸೆದು ಮಣಿಕಟ್ಟಂ ಎಡಗಯ್ಯಿಂ ಪಿಡಿದು (ಬಂಕ. ದೀ. ೦೯೨-೪); ಮಣಿಕಟ್ಟಿನಲ್ಲಿ ಯವರೇಖೆಯಿದ್ದರೆ ಯಜ್ಞಾದಿ ಫಲಕಣಪ್ರದವಾಗುವುದು (ಸಾಗಂರಿ. ೬೩೩-೯). ೩. = ಮಣಿಚೌಕಟ್ಟು : ಚಿಕ್ಕ ಮಕ್ಕಳು ಮಣಿಕಟ್ಟಿನ ಸಹಾಯದಿಂದ ಲೆಕ್ಕವನ್ನು ಸುಲಭವಾಗಿ ಕಲಿಯಬಹುದು (ಲೂಪಿ).
[ ಮಣಿ₃+ಕಟ್ಟು₂./ತಮಿ. ಮಣಿಕ್ಕಟ್ಟು; ತೆಲು. ಮಣಿಕಟ್ಟು, ಮನಿಕಟ್ಟು]

**ಮಣಿಗಡಗ** (ನಾ). =ಮಣಿಕಂಕಣ : ನೆಲಹಿನ ಮೊಸರಂತೆ . . . ಮಣಿಗಡಗದ ಕೀಲಿನಂತೆ (ರವಿಶಾಪ್ತ. ೬-೦೪೬ ಅಧಿಪ). [ ಮಣಿ₃ + ಕಡಗ₁ ]

**ಮಣಿಗಣ** (ನಾ). ಬೆಲೆಬಾಳುವ ಹರಳುಗಳ ಗುಂಪು : ರತ್ನಸಮೂಹ : ಅನೇಕನೃಪತಿಮಕುಟತಟಘಟಿತಮಣಿಗಣಕಿರಣಜಳಧಾರಾಧೌತಾವದಾತಪೂತ ಚರಣಾರವಿನ್ದರು[ಂ] (ಶಾಇ. XX, ೪೬-೨೬ ; 1072) : ವಸುಂಧರೆ ಮತ್ತಂ ರತ್ನಗರ್ಭೆಯೆಂಬೀ ಪೆಸರ್ಗಳ್ ದೊರೆವೆತ್ತುವೆಂದೊಡೇನಚ್ಚರಿಯಾದುದೊ ಧನದಜನಿತ ಮಣಿಗಣವರ್ಷಂ (ಶಂದ್ರಪು. ೧೦-೧೨೦). [ಸಂ.]

**ಮಣಿಗಣ್ಣ** (ನಾ). ಒಂದು ಬಗೆಯ ಮೀನು : ಹೆಗ್ಗಲು ಗಣೆ ಮಣಿಗಣ್ಣ ತೂತು ತೆಂತಲು ಸಿಸಿಲು ಬೊಂಪು ಸವಿವಾಯ ಗೊದಳೆ . . . ಆನೆಮೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದರು (ಪಶಾ. ೫-೯೩). [ ? ]

**ಮಣಿಗನ್ನಡಿ** (ನಾ). ರತ್ನಖಚಿತವಾದ ಕನ್ನಡಿ : ಎನ್ನೋರಗೆಯ ಚನ್ನೆಯರೊಲವಿಂ ಮಣಿಗನ್ನಡಿಯಂತಪ್ಪ ಸುತರ ಮನ್ನಿಸಿ ಮೊಲೆಯೂಡುಮರ್ಪರಿಸಿರಿಗವರೇಂ ನೋಂಪಿಯನೆಸಗಿದರೊ (ಶ್ರೀಪಾಂ. ೨-೩೪) ; ಹಣ್ಣು ಕಾಯ್ತೋರಿಸುವ ಮಣಿಗನ್ನಡಿಯ ನೆಳಲ ಮಾತನಾಡಿಸುವೆ (ಕಂಶ. ೩೬-೧೦).
[ಮಣಿ$_3$ + ಕನ್ನಡಿ$_1$]

**ಮಣಿಗರ್ಭೆ** (ನಾ). ಭೂಮಿ ; ವಸುಂಧರೆ ; ರತ್ನಗರ್ಭೆ : ತನ್ನಂ ಪೊತ್ತ ಮನ್ನಣೆಯಿಂ ಮುನ್ನಂ ಪೊರೆಯೇರಿಸಿ ಪೊರೆದ ಮಣಿಗರ್ಭೆಗಣಿಯುರಂಬಾಗಿ ಬಳ್ಕಿ ಮಣಿವ ಮಾಳ್ಕೆಯಿಂ (ಶಬಶಂ. ೨-೪೨ ವ). [ಸಂ. ಮಣಿಗರ್ಭಾ]

**ಮಣಿಗಲ್ಲು** (ನಾ). ಬೆಲೆಬಾಳುವ ಹರಳು ; ರತ್ನ : ಸುತ್ತಣ ಮಣಿಗಲ್ಲ ಹೊಂಗೋಟೆ ನೋಡಲು ತತ್ತಳಗೆಯ್ವುದಕ್ಷಿಗಳ (ಪೋಹಶ. ೩-೬).
[ಮಣಿ$_3$ + ಕಲ್ಲು (< ಕಲ್$_3$)]

**ಮಣಿಗಳಸ** (ನಾ). = ಮಣಿಕಳಶ : ಪೂರ್ವಾದ್ರಿಯೆಂಬ ದೇವಗೃಹದ ಮೇಲಿಟ್ಟ ಮಣಿಗಳಸ ಪೊಂಗಳಸ ರಜತಕಳಶಂಗಳೆನೆ ಚೆಲ್ವಾದುದು (ತಶಪು. ೯-೧೮). [<ಸಂ. ಮಣಿಕಲಶ]

**ಮಣಿಗಾರ** 'ಮಣಿಗಾಱ' ನೋ.

**ಮಣಿಗಾರ್ತಿ** (ನಾ). ರತ್ನಗಳನ್ನು ಮಾರುವವಳು : ಮಣಿಗಾರ್ತಿ, ಅಳುಗಾರ್ತಿ, ಸುಣ್ಣಗಾರ್ತಿ (ಶಾಶಾಶೂ. ೧೯೪ ಉದಾ) ; ಮರಮಲ್ಲಿಗೆ ಮೊಲ್ಲೆಗಳೊಳ್ ಬೆರಸಿದ ಮಧುಕರಕದಂಬದಿಂದಂ ನೀಲೋತ್ಕರಮಂ ಮೌಕ್ತಿಕಮಂ ಪೋಲ್ತಿರೆ ಮೆಱೆದಳ್ ಮಾಲೆಗಾರ್ತಿ ಮಣಿಗಾರ್ತಿಯ ಪೋಲ್ (ಗಂಶ. ೨-೪೬). [ಮಣಿಗಾಱ + – ತಿ$_1$ (< – ಇತ್ತಿ)]

**ಮಣಿಗಾಱ**, ಮಣಿಗಾರ (ನಾ). ಬೆಲೆ ಬಾಳುವ ಹರಳುಗಳನ್ನು ಮಾರುವವನು; ರತ್ನಪಡಿವ್ಯಾಪಾರಿ : ಚಲದಂಕರಾವುತಮಣಿಗಾಱ ನಾಗಿಶೆಟ್ಟಿಯುಮನ್ತು ಸಮಸ್ತನಗರ ಮುಮ್ಮುರಿದಣ್ಡಮುಂ (ಎಶಿ. V, ೩೪೨-೦೫; 1093) ; ಅಣಿಯರಮೆಸೆದೊಪ್ಪುರ್ಪ ಮಣಿಗಾಱರ ಕಂಚಗಾಱರೊಱೆಗಾಱರ ಶಿಂತಿಣಿ (ಕಾವ್ಯಾವ. ೩೨೯) ; ಮಣಿಯಂ ಮಾಡುವಂ ಮಣಿಗಾಱಂ (ಶಬ್ದಮ. ೨೯೯ ವೃತ್ತಿ). **ಮಣಿಗಾರ** : "ಮಣಿಗಾರ_ಮಣಿಕಾರ=ರತ್ನವ್ಯಾಪಾರಿ" (ತದ್ಭಕೋ. ೩೩) ; ಬಳೆಗಾರ ಮಣಿಗಾರ ಬಿಚ್ಚೋಲೆಯನ್ನು ಮಾರುವರು (ಪಪಪೂ. ೨-೪೬). [ ಮಣಿ$_3$ + – ಕಾಱ ]

**ಮಣಿಗಾಱಕೇರಿ** (ನಾ). ರತ್ನಪಡಿವ್ಯಾಪಾರಿಗಳ ಬೀದಿ : ಮಣಿಗಾಱಕೇರಿಯ ೩ ಸೆಟ್ಟಿಕಾಱರೂ ಸಮಸ್ತ ಪಲರೂ . . . ಇ ಧರ್ಮ್ಮವ ನಡಸುವರು (ಶಾಇ. VII, ೩೫೨-೦೮; ೯). [ಮಣಿಗಾಱ + ಕೇರಿ]

**ಮಣಿಗುಣ** (ನಾ). ೧. ರತ್ನದ ಗುಣ, – ಲಕ್ಷಣ. ೨. [ಛಂದ] ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾಗಿರುವ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹದಿನೈದನೆಯ ಅತಿಶಕ್ವರಿಯೆಂಬ ಛಂದಸ್ಸಿನ ಒಂದು ವೃತ್ತ: ಮನುಲಘುವಿರೆ ಗುರು ಮಣಿಗ[ಗು]ಣಮೆನಿಕುಂ (ಛಂಬು. ೯೪) ; ಇಂಥ ಸಂಸ್ಕೃತವೃತ್ತಗಳಲ್ಲಿ ಕುಮುಮ, ರಥೋದ್ಧತ, ಸ್ವಾಗತ, ಮತ್ತಕೋಕಿಲ, ವನಮಯೂರ, ಮಣಿಗ[ಗು]ಣ, ಮಲ್ಲಿಕಾಮಾಲೆ, ತರಳ ಮೊದಲಾದುವುಗಳನ್ನು ಹೆಸರಿಸಬಹುದು (ಛಂದೋಶಿ. ೩೦). [ಸಂ.]

**ಮಣಿಗುರುಜು**, ಮಣಿಕುರುಜು (ನಾ). ರತ್ನಖಚಿತವಾದ ಮಂಟಪ ; ರತ್ನಮಂಟಪ : ಬಾಗಿಲ್ವಾಡದ ಬಹುಮಣಿಗುರುಜಿನ ದೇಗುಲಗಳ ಪಲವುಂ ಶಿಖರಂಗಳ . . . ಮೇಗೆ ಮಿಸುಪ ಮಿಗಗಣ್ಣಬಲೆಯುರಸುರಾಗದಿ ನಿನಿವಿರಿದುಂ ನೋಡಿದರ್ . . . ವಸುಧಾವಲ್ಲಭನ (ಜಯುಕಾ. ೧೦-೫೦) ; ಕರುಮಾಡ ಮೇಗಣ ಮಣಿಗುರುಜೇಱಿ ಪರಿವ ಮೇಲಣ ಮುಗಿಲ್ಗೊನೆಯು ಪೊರೆ ಮುತ್ತಾಯ್ದು ಕೇವಣಿಸಿ ಕೊರಳ್ಗಲ್ಲಿಟ್ಟು ಪುರವನಿತೆಯರಾಡುತಿಹರು (ಶ್ರೀಪಾಲ. ೧-೮೩). **ಮಣಿಕುರುಜು** : ಗುಡಿ ಕಲಶ ಕನ್ನಡಿಯ ಹೊಂದಳಿಗೆದೋರಣದ ಸಡಗರದ ಪಂತಿಮಣಿಕುರುಜುಗಳ್ ಬಳಪಿಡಿದು (ಪರಶು. ೮-೨೦೦). [ ಮಣಿ$_3$ + ಕುರುಜು ]

**ಮಣಿಗೆ$_1$** (ನಾ). ಬಾಗುವಿಕೆ ; ಬಗ್ಗುವಿಕೆ : ಕುತುಕಿಗೆತ್ತಣ ಬಿಡುವು, . . . ಬಾಳ್ಬಳಿಯ ದಾರಿಗನಿಗೆ ಪಯಣದಾಯಾಸವನು ಮಣಿಗೆಯೊಳು ತೀರಿಸುತ ಮರಳಿ ಕಂತೆಯ ಹೆಗಲಿಗೇರಿಸಿ ನಿಲುವನೆ ? (ಮಶದೀ. ೨೨-೩). [ ಮಣಿ$_1$ + – ಗೆ ]

**ಮಣಿಗೆ$_2$** (ನಾ). ಮೂಳೆಯ ಗಂಟು ; ಪೃಷ್ಠಾಸ್ಥಿಯ ಗಂಟಿನ : ಎದೆಯಿಂದ ಎರಡು ರೆಟ್ಟೆಗಳಿಂದ ಕೊರಳ ನಡುವಣ ಮಣಿಗೆಗಳಿಂದ ಶೋಭೆಯು ಚೆನ್ನಾಗಿ ಕಾಣಿಸಲು (ಅಶ್ವಶಾ. ೭೮-೧೦). [ ಮಣಿ$_3$ + – ಗೆ ]

**ಮಣಿಘಟ್ಟ** (ನಾ). ಒಂದು ಊರಿನ ಹೆಸರು : ಮಣಿಘಟ್ಟಯ ಮಾಣಿಕಾಮೆಣ್ಡಮುದುಳ ಗಾವುಣ್ಡರ ಮಗಂ ಕಸವಯ್ಯ ಆಳ್ದೋನ ಬೆಸದೊಳ್ . . . ಕಾದಿ (ಎಶಿ. X, ಮುಳಬಾ. ೨೨೯-೪; 909). [ ? ]

**ಮಣಿಚೂಳಿಕೆ** (ನಾ). ರತ್ನಖಚಿತವಾದ ತುದಿ, – ಅಗ್ರಭಾಗ : ಬೆಲೆಬಾಳುವ ಹರಳುಗಳಿಂದ ಕೂಡಿದ ಶಿಖರ : ಈಶಾನೇಂದ್ರಂ . . . ಪದ್ಮರಾಗ(ದ) ಮಣಿಚೂಳಿಕೆಯಿಂದಂ ನಯನಮನೋಹರಮಪ್ಪ ಚಂದ್ರಕಾಂತಧವಳಾತಪತ್ರಮಂ ಪಿಡಿಯೆಯುಂ (ಶಾಂತಿಪು. ೧೦-೦೩ ವ).
[ ಸಂ. ಮಣಿಚೂಲಿಕಾ ]

**ಮಣಿಚೌಕಟ್ಟು** (ನಾ). "ಮಕ್ಕಳಿಗೆ ಲೆಕ್ಕ ಕಲಿಸುವುದಕ್ಕಾಗಿ ಬಣ್ಣದ ಗುಂಡುಗಳನ್ನು ತಂತಿಯ ಮೇಲೆ ಓಡಾಡುವಂತೆ ಅಳವಡಿಸಿರುವ ಚೌಕಟ್ಟು : ಮಣಿಚೌಕಟ್ಟು " (Abacus. ೨೦೪೬).
[ ಮಣಿ$_3$ + ಚೌಕಟ್ಟು ]

**ಮಣಿತ$_1$** (ನಾ). ೧. ಬಾಗುವುದು ; ಬಗ್ಗುವುದು : ಮಣಿತಂ, ಮಣಿವುದು ; ಕುಣಿತಂ, ಕುಣಿವುದು (ಶಬ್ದಮ. ೪೫೬ ವಾಕ್ಯ) ; ಈ ಬಿನ್ನಣಮಿಾಯೊಡಲ್ಮಣಿತಂ . . . ಶ್ರೀಚಿಕದೇವನೊಳ್ ಮೆಱೆಗುಂ (ಚಿಶಂ. ೪-೧೪೮) ; ಎನಿತೆನಿತೋ ಮಣಿತಗಳವು ಭಂಗಿಗಳವು ಭಣಿತ (ಕರುಣ್ಯಾ. ೬೦-೨). ೨. [ವ್ಯಾಕ] ಅಕ್ಷರಗಳಿಗೆ ಕಾಗುಣಿತದಲ್ಲಿ ಸೇರಿಸುವ 'ಉ' ಸಂಕೇತವಾದ ಕೊಂಬು (ು) : ಈ ವರ್ಣಗಳಲ್ಲಿಯ ಒಂದು ಮಣಿತವನ್ನು ತಪ್ಪಿಸಿ . . . ಅನೇಕರು ಬರೆಯುತ್ತಿದ್ದುದನ್ನು ಕಾಣುತ್ತೇವೆ (ಶಾಶಾಶಾ. ೧೦೫). [ಮಣಿ$_1$ + – ತ$_2$]

**ಮಣಿತ$_2$** (ನಾ). ಸುರತಧ್ವನಿ; ಗಳರವ : "ಮಣಿತವೆಂಬುದು ಗಳಧ್ವನಿ" (ಹಶಾದು. ೯೩-೪೦೫); ಸೀತ್ಕೃತಂ ಹೂಂಕೃತಂ ಘೂತ್ಕೃತಂ ಮಣಿತಮುತ್ತಿಷ್ಠೂತ್ಕೃತಂ . . . ಎನಿಪೀ ಚಮತ್ಕೃತಿಯನಱಿದು ರಮಿಸುವನೆ ಚದುರಂ (ಶಪಪ. ೮-೫೦); ಮಣಿತಂ ತನುಪ್ಪೊಳ್ಗಳದೊಳ್ಮಣಿತಂ ನೆಗಳ್ದಿರೆ ವಿಳಾಸಮುಮದೊರ್ಪ್ಪಿರೆ ಪೆಣ್ಮಣಿ ತನ್ನವರಶಿಚಿಂತಾಮಣಿ ತನ್ನರಪತಿಗೆ ತನ್ನ ಪರಿಜಿನೆ ನೆರೆದಳ್ (ರಾಜಶೇ. ೮-೯೯). [ಸಂ.]

**ಮಣಿತುತ್ತಿ** (ನಾ). ಒಂದು ಬಗೆಯ ಸಸ್ಯ : ಮಣಿತುತ್ತೀಗಿಡ. ಒಂಡೀಸೊಪ್ಪು (ವೃಶಿಗ. ೯೩-೮೬೨). 'ಮರತುತ್ತಿ' ಪರಾ.
[ಮಣಿ$_3$ + ತುತ್ತಿ$_1$./ತಮಿ. ಮಣಿತುತ್ತಿ]

**ಮಣಿತೊಂಡೆ** 'ಮಣಿದೊಂಡೆ' ನೋ.

**ಮಣಿತೋರಣ** (ನಾ). ಬೆಲೆಬಾಳುವ ಹರಳುಗಳಿಂದ ಕೂಡಿದ ತೋರಣ; ರತ್ನಖಚಿತವಾದ ತೋರಣ : ರಾಜಭವನದೊಳೆಸೆವ ಮಣಿತೋರಣಂಗಳಿಂ (ಆಪು. ೪-೭ ವಚನ); ವಿಳಮಿಂಚಂ ಮಣಿತೋರಣಾಂಶು ಮೊಬಗಂ ವಾದ್ಯಸ್ವನಂ . . . ಸಿರಾಕುಳದಿಂ ಪೋಲ್ತು (ಕುಕ್ಕುಪು. ೪-೩೭). [ಸಂ.]

**ಮಣಿದರ್ಪಣ** (ನಾ). = ಮಣಿಗನ್ನಡಿ : ಭರತಂ ಕಂಡಂ ಕೆನ್ನೆಯ ನೆರೆಯಂ ತಳದಳಿಸಿ ಪೊಳೆವ ಮಣಿದರ್ಪಣದೊಳ್ (ಆಪು. ೧೬-೬೦); ದೊರೆವೆತ್ತ ವಿಜಯವಾಮೇತರಭುಜದೊಳ್ ನಿಂದ ಬೀರಸಿರಿಯೆಸೆವ ನೆಟಿಲ್ ಸ್ಫುರಿಯಿಸೆ ಮೆಯ್ಯೊಳ್ ಪೋಲ್ತಂ ಹರಿನೀಳೋದ್ಯತ್ತ್ವಸನ್ನ ಮಣಿದರ್ಪಣಮಂ (ಶಾಂತಿಪು. ೨-೧೫). [ಸಂ.]

**ಮಣಿದಾರ** (ನಾ). ಮಣಿಗಳನ್ನು ಪೋಣಿಸಿದ ದಾರ : ಹಣವೇನು ಬಾತೆ ನಿನ್ನಯ ಗುಣವೆಂಬುದು ಮಣಿದಾರವಾಗೆನ್ನ ಮನವ ಕ್ಷಣದಲಿ ಬೀಜು ಗೊಂಡುದು (ಕಂಸವ. ೬-೦೬೯). [ಮಣ್$_3$ + ದಾರ$_1$]

**ಮಣಿದಿ** (ನಾ). ಒಬ್ಬಾತನ ಹೆಸರು (?) : ಸ್ವಸ್ತಿಶ್ರೀ ಮಹಾಮಂಡಳೇ ಮಣಿದಿಯುಂ ಸಿರಿವಚ್ಚನುಂ ಶ್ರೀಪುರುಷನುಂ . . . ಎಟಿದು ಸತ್ತರ್ (ಪ್ರಕಂ. ೦೯೪೪, ೬-೦; 808). [ ? ]

**ಮಣಿದೀಪ** (ನಾ). ೧. ರತ್ನಖಚಿತವಾದ ದೀಪ ; ರತ್ನದ ದೀವಿಗೆ : ತಳಿರುಯ್ಯಾಲ್ ಮಣಿದೀಪಪಂಜಿ . . . ಲತಾಮಂಟಪವೆಂಬಿವಿಲ್ಲದ ಜನಾವಾಸಂಗಳಿಲ್ಲಿಲ್ಲಿಯುಂ (ಕುಕ್ಕುಪು. ೨-೬೩) ; ಮಣಿದೀಪಾವಳಿಯನಮರಿ ಯರು ಪಿಡಿಯಲು (ಬಸವ. ೦೮-೬೩); ಕತ್ತಲೆಯ ಮನೆಗೆ ಮಣಿದೀಪ ಮಾದಂತೆ . . . ಕುಳಿಂದನ ಬಾಳ್ಕೆಗುತ್ತಮಕುಮಾರನಾದಂ ಚಂದ್ರಹಾಸಂ (ಜೈಮಿಭಾ. ೨೮-೬೩). ೨. ದೀಪದಂತೆ ಬೆಳಗುವ ರತ್ನ. [ಸಂ.]

**ಮಣಿದೆನೆ** (ನಾ). ಬೆಲೆಬಾಳುವ ಹರಳುಗಳಿಂದ ಕೂಡಿದ ಕೋಟೆಯ ತೆನೆ ; ರತ್ನಖಚಿತವಾದ ಬುರುಜು: ಮಣಿದೆನೆಗಳ ಮಾರ್ಪೊಳೆಪಂ ಫಣಿಪಸ್ಪಟೆಗೆತ್ತು ನೋಳ್ಪ ಖೇಚರಿಯರ ಕಣ್ಬೊಣರ್ಗಳ್ಮಾರ್ಪೊಳೆವಂದ ಮನಣಕಿಪುವಗಳಮಳ್ಜಳದೊಳಂಬುಚರಂಗಳ್ (ರಾಜಶೇ. ೨-೮೪) ; ಮಣಿದೆನೆ ಗಳೆಡೆಯೆಡೆಯೊಳುಡುಗಣಮಿರುಳೊಳ್ಪುಸುಳ್ದು ಪಾಲ್ಗಡಲ ಕಡೆವಾಗಳ್ಳ ಣಪನ ಮಣಿಯೆಡೆಯೆಡೆಯೊಳಗಣಿತಂ ಮುಕ್ತಾಳಿ ನೆಗೆವ ಭಾವಮನಾಳ್ಗುಂ (ಪ್ರಕಪ. ೪-೬೩). [ ಮಣ್$_3$ + ತೆನೆ$_1$ ]

**ಮಣಿದೊಂಡೆ**, ಮಣಿತೊಂಡೆ (ನಾ). ಒಂದು ಬಗೆಯ ತೊಂಡೆಯ ಕಾಯಿ : ಮಣಿದೊಂಡೆ, ಹಾವುಮೆಕ್ಕೆ, ಈ ಎರಡಜ ಬೇರಂ ನಿಂಬೇ ಹುಳಿಯಲ್ಲಿ ಅರೆದು ಗಾಯಕ್ಕೆ ಪೂಸೆ ವಿಷ ಕೆಡುಗು (ವಿಶ್ವವಿ. ೬೧). **ಮಣಿತೊಂಡೆ:** ಮಣಿತೊಂಡೆ, ಕಾಡುವಾವಟಿಬಳ್ಳಿ (ವ್ಯಾಶಿನಿ. ೫೩-೦೦೬೪). [ ಮಣ್$_3$ + ತೊಂಡೆ$_1$ ]

**ಮಣಿದೊಡವು** (ನಾ). ಬೆಲೆಬಾಳುವ ಹರಳಿನ ಒಡವೆ; ರತ್ನಖಚಿತವಾದ ಅಭರಣ : ಎಳಲತೆಯನಿಲನ ಸೋಂಕಿಂದಲರ ತೊಡಂಬೆಯನಿನಿಸುಳಿಯದೆ ಬಿದಿರ್ವಂದದಿ ಮಣಿದೊಡವೆಲ್ಲವನೀಡಾಡಿ (ಜಯಾ. ೨-೩೯) ; ನೊಸಲ ನಾಮದ ಗೆಜ್ಜೆವೆಜ್ಜೆ ಗಜಕುಂಭದ ಪೊಸಮುತ್ತಿನ ಮಾಣಿಕದೊಡವೆ ಎಸೆವ ತುರಾವಾಪೊಳೆಯೆನೆ ಬಿಯದಿಯರು ರಂಜಿಸಿದರಿರುಳ್ವೆಣ್ಗಳಂತೆ (ಶ್ರೀಶಾಂ. ೬-೩೪). [ಮಣ್$_3$ + ತೊಡವು]

**ಮಣಿನೂಪುರ** (ನಾ). ಬೆಲೆ ಬಾಳುವ ಹರಳುಗಳಿಂದ ಮಾಡಿದ ಕಾಲಂದುಗೆ; ರತ್ನಖಚಿತವಾದ ನೂಪುರ : ಮಣಿನೂಪುರ ಮಣಿಕಾಂಚೀ ಮಣಿಹಾರವಿಲಾಸಮೆಸೆಯೆ ಭಾಸುರವಿಖ್ಯಾಮಣಿಯಿಂ ಭಾಸ್ವಚ್ಚೂಡಾ ಮಣಿಯಿಂ ಪೋಲ್ತೆಸೆವಳಬಲೆ ಮಣಿಪುತ್ರಿಕೆಯಂ (ಆಪು. ೨-೨೮) ; ಹೊಂಬಳೆಗಳನು ಕೈಗೆ, ಕಿಂಕಿಣಿಗಾನಗೈವ ಮಣಿನೂಪುರಗಳನು ಕಾಲ್ಗೆ . . . ತೊಟ್ಟು (ಶಬ್ದಾಂಗ. ೦೯-೩೦೩). [ಸಂ.]

**ಮಣಿಪಾದ** (ನಾ). ಕಣಕಾಲು : ಬಲದ ಮಣಿಪಾದದಲ್ಲಿ ಪಟ್ಟವರ್ಧನನೆಂಬ ಗಣೇಶ್ವರನೆನಿಸಿರ್ಪಿರಿ ಅಯ್ಯ ಎಡದ ಮಣಿಪಾದದಲ್ಲಿ ಚಂದ್ರಶೇಖರನೆಂಬ ಗಣೇಶ್ವರನೆನಿಸಿರ್ಪರಯ್ಯ (ಸಿದ್ಧೇವ. ೬೪-೦೮೪). [ಸಂ.]

**ಮಣಿಪೀಠ** (ನಾ). ಬೆಲೆ ಬಾಳುವ ಹರಳುಗಳಿಂದ ಅಲಂಕೃತವಾದ ಪೀಠ ; ರತ್ನಖಚಿತವಾದ ಆಸನ : ಚಮರರುಹದ್ವಮಂ ಬೆಳೆಪ ಬೆಳ್ಗೊಡೆ ಪೂಮ[ಟೆ]ಭಾಪ್ರತಾನಮುತ್ತಮಮಣಿಪೀಠಮಿಂದ್ರಸಭೆಯೆಂಬಿವು ಘಾತಿಚತುಷ್ಕಘಾತದಿಂ ಸಮನಿಸೆ (ಶಾಂತಿಪು. ೪-೬೩) ; ಮಣಿಪೀಠಾರೂಢ ನುದ್ಯತ್ಸಚಿವಚಯಸಮಾಸೇವ್ಯಮಾನಂ . . . ಬಜ್ಜಳೇಂದ್ರಂ (ಪ್ರಶಪ. ೬-೨). [ಸಂ.]

**ಮಣಿಪುಂಖ** (ನಾ). ರತ್ನಖಚಿತವಾದ ಬಾಣದ ಹಿಳುಕು : ಮಣಿಪುಂಖ ಚಿತ್ರಭಾನುಪ್ರಣಿತವುಂ ಚಿತ್ರಭಾನುಶರಮುಂ ವಿಲಯೋಲ್ಬಣಚಿತ್ರಭಾನು ಶಿಖಿಯೊಳ್ ತೊಣೆಯೊನಿಪ್ಪುದನಸುರವೈರಿ ತೊಟ್ಟಾರ್ದೆಚ್ಚಂ (ಜಗಪು. ೦೩-೦೦೦). [ಸಂ.]

**ಮಣಿಪುತ್ರಿಕೆ** (ನಾ). ಬೆಲೆಬಾಳುವ ಹರಳುಗಳಿಂದ ಅಲಂಕೃತವಾದ ಬೊಂಬೆ; ರತ್ನಖಚಿತವಾದ ಬೊಂಬೆ : ಒಗೆತರ್ಪ ಘರ್ಮಜಲ ಬಿಂದುಗಳಿಂ ನಮಿತಾನನಾಬ್ಜೆ ಬೆಚ್ಚನೆ ಬಸಿವಿಂದುಕಾಂತಕರಸಂಕುಳಮೊಪ್ಪು ನವುಂಕಿ ಸೋಂಕಿ ಸೋಂಕಿನೊಳೊಸರ್ವಿಂದುಕಾಂತಮಣಿಪುತ್ರಿಕೆಯಂದದಿ ನೊಪ್ಪಿ ತೋಱಿದಳ್ (ಆಪು. ೪-೯೯). [ಸಂ. ಮಣಿಪುತ್ರಿಕಾ]

**ಮಣಿಪೂರ** (ನಾ). ೧. ಹೊಕ್ಕುಳು; ನಾಭಿ. ೨. [ಯೋಗ] ಶರೀರದೊಳಗಿನ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ ಎಂಬ ಆರು ಚಕ್ರಗಳಲ್ಲಿ ಒಂದು ; P ನಾಭಿಯಲ್ಲಿರುವ ಷಟ್ಚಕ್ರಾಂತರ್ಗತವಾದ ಒಂದು ಪದ್ಮ. ಇದು ಸುಷುಮ್ನಾನಾಡಿಯೊಳಗೆ ಷಟ್ಚಕ್ರಗಳ ಮಧ್ಯದಲ್ಲಿ ನಾಭಿಯಲ್ಲಿರು ವುದು : ಆಧಾರ ಸ್ವಾಧಿಷ್ಠಾನ ಮಣಿಪೂರ [ಕಾಶಾಂ. ಪೂರಕ] ಅನಾಹತ ವಿಶುದ್ಧಿ ಆಗ್ನೇಯುಮೆಂಬ ಷಟ್ಚಕ್ರಂಗಳುಂ (ವಿವೇಕ. ೦೩೪). [ಸಂ.]

**ಮಣಿಪೂರಕ** (ನಾ). = ಮಣಿಪೂರ ೨ : ಆಧಾರ ಸ್ವಾಧಿಷ್ಠಾನ ಮಣಿಪೂರಕ ಸ್ಥಾನವನಜಾಯರು (ಅವಕಂ. ೪೩-೦೮೯); ಸರಿಯಾಗಿಯೆ ಆಧಾರವನು ಬಳಕಲಿ ಮಿಾಱಿ ಸ್ವಾಧಿಷ್ಠಾನವನು ಅದ ಹಾರಿ ಮಣಿಪೂರಕವ ಅನಹತಕ್ಕೆದ ಬೇಕು (ಜ್ಞಾನಸಿಂ. ೦೫-೨೩). [ಸಂ.]

**ಮಣಿಪೂರಕಚಕ್ರ** (ನಾ). = ಮಣಿಪೂರ ೨ : ಅನಾಹತಚಕ್ರದಿಂದಾಯಿತ್ತು ಮಣಿಪೂರಕಚಕ್ರ (ಅಜಂಡೆ. ೨೩೯-೦೦೦) ; ಶರೀರದಲ್ಲಿರುವ ಷಟ್ಚಕ್ರಗಳಲ್ಲಿ . . . ಮಣಿಪೂರಕಚಕ್ರದಲ್ಲಿ ಶಿವಲಿಂಗ . . . ಆಧಾರಚಕ್ರದಲ್ಲಿ ಆಚಾರ ಲಿಂಗಗಳು ವಿರಾಜಿಸುತ್ತಿರುವುವು (ಕಾರಧ. ೨೩೩). [ಸಂ.]

**ಮಣಿಪ್ರವಾಳ** (ನಾ). ಸಾಮಾನ್ಯವಾಗಿ ಸಂಸ್ಕೃತಪದಗಳ ಜೊತೆಗೆ ಮಲಯಾಳ ಅಥವಾ ಇನ್ನಾವುದೇ ದೇಶೀಯಭಾಷೆಯ ಪದಗಳ ಬೆರಕೆಯಿಂದ ರಚಿತವಾದ ಒಂದು ಬಗೆಯ ಶೈಲಿ; P ಮಲಯಾಳದ ಪ್ರಾಚೀನಸಾಹಿತ್ಯದಲ್ಲಿ ಇದು ಬಹಳ ಕವಿಪ್ರಿಯವಾಗಿದ್ದಿತು : ಪಿಳ್ಳೈಲೋಕಾಚಾರ್ಯರು ಹದಿನೆಂಟು ವೇದಾಂತಗ್ರಂಥಗಳನ್ನು ತಮಿಳು ಸಂಸ್ಕೃತಮಿಶ್ರವಾದ ಮಣಿಪ್ರವಾಳವೆಂಬ ಭಾಷೆಯಲ್ಲಿ ರಚಿಸಿದರು (ಕಾರಧ. ೩೯೩) ; ಮಲಯಾಳಸಾಹಿತ್ಯದ ಭಾಷೆ ಮಣಿಪ್ರವಾಳವೆಂದು ಹೇಳಬಹುದು (ಕಾರಧ. ೪೦೩). [ಸಂ. ಮಣಿಪ್ರವಾಲ]

**ಮಣಿಬಂಧ** (ನಾ). ೧. ( ಅಲಂಕಾರಕ್ಕಾಗಿ ) ಮುತ್ತು, ರತ್ನ ಮುಂತಾದುವನ್ನು ಕಟ್ಟುವುದು. ೨. = ಮಣಿಗಟ್ಟು ೨ : "ಮಣಿಬಂಧ ಎಂಬುದು ಮಣಿಕಟ್ಟು" (ಶಬ್ದಾಯು. ೮೮-೩೭೪); ಮಣಿಬಂಧಂ ಮಣಿಯಿಂ ಕಟೀನಿಕಟಮಾ ಚೆಂಬೊನ್ನ ಚೆಲ್ವಪ್ಪ ಕಿಂಕಿಣಿಯಿಂ . . . ಅಲಂಕೃತನಾಗಿಯುಂ (ಶಾಂತಿಪು. ೦೦-೫೮) ; ಮಣಿಬಂಧದಲ್ಲಿ ಹೇಮರೇಖೆ

ಯಿದ್ದರೆ ಬಹುಭೂಷಿತನಾಗುವನು (ಶ್ರೀಗಂಧಿ. ೬೩೩-೨೦). ೩. [ನಾಟ್ಯ] ಮುಂಗೈಯನ್ನು ಚಲಿಸುವ ಒಂದು ವಿಧ ; P ಇದರಲ್ಲಿ ನಿಕುಂಚ. ಆಕುಂಚ. ಚಲ, ಭ್ರಮಿತ, ಸಮ ಎಂದು ಐದು ವಿಧಗಳಿವೆ : ಪ್ರಕಟನಿಕುಂಚಿತಮಾಕುಂಚಕಚಲಮುಂ ಭ್ರಮಿತಸಮಗಳುಂ ಪರಿಣತಿಯಿಂ ಸಖಿ ಕೇಳ್ ಮಣಿಬಂಧಂ ಕೌತುಕದಿಂದೈದುಂ ವಿಭೇದದಿಂ ರಂಜಿಸುಗುಂ (ಚಾಸ್ತರಂ. ೨-೦೩೦). [ಸಂ.]

**ಮಣಿಭವನ** (ನಾ). ರತ್ನಖಚಿತವಾದ ಸೌಧ : ಬಳ್ವಳಬಳೆದು ನಿಮಿರ್ದ ಕಾಡಿಗೆಗುಡಿಗಳ ಮಹೇಂದ್ರನೀಲಮರಕತಮಣಿಭವನಂಗಳ ವಿಜಯಕಟಕ ಸಮದಗಜಸಾಮಜಂಗಳ ಕರ್ಪುಗಳಿಲ್ಲಮಂ ನೆರಂಬಡೆದು (ಅಂಕೃ. ೦೨-೪ ವ) : ಮೆಱೆವ ಮಣಿಭವನವನು ರವಿಜಗೆ ತೆಜವು ಮಾಡಿದ (ಕೌಶಿಕಾ. ೪೪-೩೦). [ಸಂ.]

**ಮಣಿಮಕುಟ** (ನಾ). ರತ್ನಖಚಿತವಾದ ಕಿರೀಟ: ಶ್ರೀ ವಿಜಯಾರ್ಧಾಚಲ ಖಚರಾವಲಿ ಮಣಿಮಕುಟಮಕರಿಕಾನಿಕಷಣರೇಖಾವಿಲಸಿತಪದಕಮಲನಿಲಾ ವಂದ್ಯಯಶಂ ಸರಸ್ವತೀಮಣಿಹಾರಂ (ಅಂಕೃ. ೨-೧) ; ಕರೆಸಿದನು ಮಣಿಮಕುಟಕಿರಣದ ಗರುವರನು (ಕುವ್ಯಾಉ. ೬-೨೯). [ಸಂ.]

**ಮಣಿಮಾಡ** 'ಮಣಿವಾಡ' ನೋ.

**ಮಣಿಮಾಲೆ** (ನಾ). ೧. ಬೆಲೆಬಾಳುವ ಹರಳುಗಳ ಹಾರ; ರತ್ನದ ಹಾರ: ನೀರಜಜಾತ ವಿಸ್ತರಿಸಿ ದಂಡಮುಮಂ ಮಣಿಮಾಲೆಯಾಗಿ ವಿಸ್ತಾರಿಸಿ ಹಸ್ತದಿಂ ಪಿಡಿದು . . . ಜಪಿಸುತಿಪ್ಪಳ್ ಇರುಳ್ ಪಗಲ್ ಅವಳೋರ್ವಳಾ ಭಾರತಿ ನಮ್ಮ ಜಿಹ್ವದಲನಾವಿಳದಿಂದಿರುತಿಕ್ಕೆ ಸಂತತಂ (ಎಕ. XI, ದಾವಣ. ೩೯-೯ ; 1280). ೨. ಲಕ್ಷ್ಮಿ. ೩. ಸೌಂದರ್ಯ ; ಸೊಬಗು. ೪. [ಕಾಮಶಾ] ಒಂದು ಬಗೆಯ ದಂತಕ್ಷತ : ಪಲ್ಗಡೆ ಮತ್ತಾ ಗುರೊಳೆಳೆಯುಲದು ಬಿತ್ತರದ ಮಣಿಮಾಲೆ ಬಿಂದುಮಾಲೆ (ಜವ. ೭-೩೧): ಕಂಕುಳು ಹಣೆ ಕೊರಳು ಅದಕ್ಕೆ ಸಮಾನಂ ಮಣಿಯು ಬಿಂದುಮಾಲೆಯುಂ ಮಣಿಬಿಂದು ಮಾಲೆ.ಎಲ್ಲಾ ದ್ವಂದ್ವಾಂತದಲ್ಲಿ ಮಾಲಾಶಬ್ದ ಪ್ರತ್ಯೇಕ ಸಂಬಂಧಿಸಿದಡೆ ಮಣಿಮಾಲೆ ಎಂಬುದು (ಕಾಮಶಾ. ೨೨೬).

[ಸಂ. ಮಣಿಮಾಲಾ]

**ಮಣಿಮೇಖಲೆ**, ಮಣಿಮೇಖಳೆ (ನಾ). ರತ್ನಖಚಿತವಾದ ಡಾಬು : ಸತಿಯ ಪೊಜಮಾಱು ಕಾಮನ ಕೇಳೀನಗಮೆಂದೆಂಬನ ನುಡಿಯೇನುಚಿತ ಮಾಯ್ತೊ ಮಣಿಮೇಖಲೆಯಿಂ (ಕೃಕ್ಷು. ೩-೩೨) ; ನವರತ್ನ ಸುವರ್ಣ ಮಣಿಖಚಿತವಾದ ಮಣಿಮೇಖಲೆಯನ್ನು ನಡುವಿಗೆ ಇಟ್ಟರು (ಶಾಂಕರಾ. ೦೦೪). **ಮಣಿಮೇಖಳೆ** : ಪುಳಿನಸ್ಥಳಮಂ ಮಱೆಯಿಸಿ ತೊಳಗುವ ನಕ್ಷತ್ರ ಮಾಲೆಯಂತಿರೆ ಮಣಿಮೇಖಳೆ ಮದನಕುಂಭಿಕುಂಭಸ್ಥಳಮಂ ನೆನೆಯಿಸು ವುವಸಿಯಳಲಘುನಿತಂಬಂ (ಮಲ್ಲಿಪು. ೩-೬೦). [ಸಂ. ಮಣಿಮೇಖಲಾ]

**ಮಣಿಮೇಖಳೆ** 'ಮಣಿಮೇಖಲೆ' ನೋ.

**ಮಣಿಯ**, ಮಣಿಹ$_2$, ಮಣಿಹ್ಯ, ಮಣಿಕೆ$_2$, ಮಣೆಯ(ನಾ). ೧. ದೇವಾಲಯ, ಮಠ, ಅರಮನೆ, ಸುಂಕದ ಕಟ್ಟೆ ಮುಂತಾದುವುಗಳ ಉಸ್ತುವಾರಿಯ ಅಧಿಕಾರ,-ಪಾರುಪತ್ಯ : 'ಮಣಿಯಗಾಱ' ಪರಾ. ೨. ದೇವಾಲಯ, ಮಠ, ಅರಮನೆ, ಸುಂಕದ ಕಟ್ಟೆ ಮುಂತಾದುವುಗಳ ಉಸ್ತುವಾರಿ ಯನ್ನು ನೋಡಿಕೊಳ್ಳುವ ಅಧಿಕಾರಿ,-ಮೇಲ್ವಿಚಾರಕ,-ಪಾರುಪತ್ಯ ಗಾರ : ಗಣರಮ್ಮಂ ಮಣಿಯಂ ಪಶಿಷ್ಟ[ಷ್ಟ]ಕುಲಸಂಭೂತ ದ್ವಿಜನ್ಮೋತ್ರಮಂ (ಎಇ. XIII, ೦೬೯-೬ ; 888) ; ನಾಲ್ಕುವರುಷದಲ್ಲಿ ಬಸವ ಅರಮನೆಯ ಮನೆವಾರ್ತೆಯ ಮಣಿಯ ಆದನು (ಶಕರಾ. ೪೪). ೩. (ತಹಸೀಲ್ದಾರನ ಅಧೀನದಲ್ಲಿರುವ) ಕಂದಾಯದ ಕಚೇರಿ : (+). **ಮಣಿಹ$_2$** : ೧. ಶ್ರೀಹರಿಹರದೇವ[ರ] ಚತ್ರದ ಅವಸರದ ನೈವೇದ್ಯದ ತುಪ್ಪಕೆ ಸುಂಕ ತಳವಾಱಿಕೆ ಮಣಿಹ ಪಯಿಕ ಸಹ ಸರ್ವಮಾನ್ಯವಾಗಿ ಸಮರ್ಪಿಸಿ ಕೃತಾರ್ಥನಾದನು (ಎಕ. XI, ದಾವಣ. ೧೯-೨೬ ; 1561). ೪. ತೆರಿಗೆ : ಕಂದಾಯ : ಮಿಂಗಣಿ ಮಣಿಹ ಸುಂಕ ಪೊಮ್ಮು (ಎಕ. IX, ಶಿಲವಂ. ೩೨-೦೩ : 1763). **ಮಣಿಹ್ಯ**: ೪. ನಿಮ್ಮ ಕಡೆಯಿಂದಾ ಸರಕಾರಕ್ಕೆ ಸಲ್ಲತಕ್ಕಂಥಾ ಹಣ ಮಣಿಹ್ಯವನ್ನು ಕೊಡಗಿನ ತಾಲೂಕಿಗೆ ಕೊಟ್ಟು (ರಾಜೇಂದ್ರ. ೦೨೩). **ಮಣಿಕೆ$_2$** : ೧. 'ಮಣಿಗಾರ' ಪರಾ. **ಮಣೆಯ** : ೧. 'ಮಣಿಯಗಾಱ' ಪರಾ.

[ದೇ.॥ ತಮಿ. ಮಲ. ಮಣಿಯ: ತೆಲು. ಮಣಿಯ, ಮಣಿವ, ಮಣಿಗ]

**ಮಣಿಯಗಾಮುಂಡ** (ನಾ). ಒಬ್ಬಾತನ ಹೆಸರು : ಸೊಕ್ಕಗಾಮುಣ್ಡರುಂ ಎದೆಯಗಾಮುಣ್ಡರುಂ ಮೊಳೆಊದಾ ಮಣಿಯಗಾಮುಣ್ಡರುಂ (ಎಕ. VII, ಶಿಕಾ. ೧೩೪-೯ ; 685). [ಮಣಿಯ ? + ಗಾಮುಂಡ]

**ಮಣಿಯಗಾರ** 'ಮಣಿಯಗಾಱ' ನೋ.

**ಮಣಿಯಗಾಱ**, ಮಣಿಯಗಾರ, ಮಣಿಹಗಾಱ, ಮಣಿಹಾಱ, ಮಣಿಹ್ಯಗಾರ, ಮಣಿಗಾರ, ಮಣಿಗಾಱ, ಮಣೆಯಗಾಱ, ಮಣೆಹ ಗಾರ (ನಾ). ೧. ದೇವಸ್ಥಾನ, ಅರಮನೆ, ಸುಂಕದ ಕಟ್ಟೆ ಮುಂತಾದುವುಗಳ ಉಸ್ತುವಾರಿ ನೋಡಿಕೊಳ್ಳುವ ಅಧಿಕಾರಿ,-ಮೇಲ್ವಿಚಾರಕ,-ಪಾರುಪತ್ಯಗಾರ : ಬಣಗು ಕಮಲಜನದಕೆ ತಾನೇ ಮಣಿಯಗಾಱನು (ಹಂಪಾ. ೬೨). **ಮಣಿಯಗಾರ** : ೧. ಮಣಿಯಗಾರನ ಹಂಗು ಹಣಗಾರನಿಗೂ ಬೇಕು (ಗಾದೆ). **ಮಣಿಹಗಾಱ** : ೧. ವೇಸಿ ದಾಸಿ ಸುಂಕಿಗ ಮಣಿಹಗಾಱ ವಿದ್ಯಾವಂತ ಇಂತೀ ಐವರಿಗೆ ಲಿಂಗವ ಕಟ್ಟಿದಡೆ ಗುಡಿಯ ಮುಂದಣ ಸಿಂಗಾರಗಂಟೆ (ಶಸ್ವವ. ೪. ೯೯-೨೦೯) ; ಮಜ್ಜನ ವಾಳರ ಮಣಿಹಗಾಱರ . . . ಕೇರಿಗಳಿಂದಾ ಪುರ ಪಜ್ಜಳಿಸುತ ಮೆಱೆ ದಿಹುದು (ಕುಂಚಾಗಂ. ೪-೦೦೩). **ಮಣಿಹಾಱ** : ೧. ವಾಣಿಜವರನು . . . ಗಂಧರ್ವದತ್ತೆಯ ವರಸ್ವಯಂವರಕೆ ಪೊಳಲಿಗೈತಹುದೆಂದು ಸಾಱಿಸ ಲೊಲಿದು ಮಣಿಹಾಱರನು ಬೇಗದಿ ಕಳುಹಿ ತವನುಜ್ಞೆಯಲಿ ಶೃಂಗರಿಸಿದನಾ ಪುರವ (ಜೀವಂಕ. ೬-೨೦) ; ಮುನಿಪತಿಯ ಬಳಿಗೆ ಬಂದರು ಜನಕಭೂಪನ ಬಳಿಯ ಮಣಿಹಾಱರು ಮಹಾಮಂಗಳೆಜು ವಿಮಳವಿವಾಹ ಪತ್ರಿಕೆಸಹಿತ ಮಹಿಲದಲಿ (ತೊರರಾ. ೦-೦೨-೨). **ಮಣಿಹ್ಯಗಾರ** : ೧. ಸುಂಕದ ಮಣಿಹ್ಯಗಾರ ಶ್ಯಾನಭಾಗರ ಮಹಿತ್ತ (ಮೈಐಆ. ೦೯೩೩, ೩೧-೩೯; 1737); ಸುಂಕದ ಮಣಿಹ್ಯಗಾರು ನರಪರ್ಯ್ಯನವರು (ಎಕ. XVI, ಶಕ್ಕಪಾ. ೯೦-೩೪; 1802). **ಮಣಿಗಾರ** : ೧. ಸರ್ಕಾರದ ಗೌಡ ಸೇನಬೋವರಾಗಲಿ ಸುಂಕದ ಮಣೀಗಾರನಾಗಲಿ ಆರು ಯಿದಕ್ಕೆ ವಿಗಡ ಆಚರಿಸಿದರು ಅವರು ತಂದೆತಾಯಿಗಳ ವಾರಣಾಸಿಯಲಿ ಕೊಂದ ಪಾಪಕೆ ಹೋಹರು (ಎಕ. IX, ಚೊತ್ನಾ. ೩-೨೩ ; 1586) ; ಕೃಷ್ಣರಾಜವಡೆಯರವರು . . . ಸುಂಕ್ಕದ ಮಣಿಗಾರಗೆ ಬರಶೀ ಕಳುಹಿಸ್ತ ನಿರೂಪ (ಮೈಐಆ. ೦೯೩೬, ೨೦-೩ ; 1816) ; ಈ ಬಾಬುಗಳಲ್ಲಿ ಒಂದೊಂದಕ್ಕೆ ಒಬ್ಬೊಬ್ಬ ಮಣಿಗಾರ, ಶ್ಯಾನಭಾಗ, ಕೋಲುಕಾರ ಮುಂತಾದ ಜನಗಳನ್ನು ನೇಮಕ ಮಾಡಿ . . . ನಿಬಂಧನೆ ಮಾಡಿದರು (ಮಹಾಮಂ. I, ೦೨೪). **ಮಣಿಗಾಱ** : ೧. ಮಣಿಗಾಱರ ಕೇರಿ ಕಂಚುಗಾಱರ ಕೇರಿ (ಗೋಮುಲೀ. ೦-೬೬). ೨. ಸುದ್ದಿ ತರುವವನು ; ದೂತ : "ಸಂದೇಶಹರಃ, ದೂತಃ—ಈ ೨ ಮಣಿಗಾಱನ ಪೆಸರು" (ನಾಚಿರಾ. ೦೩೦). **ಮಣೆಯಗಾಱ** : ೧. ಮಣೆಯಗಾಱರೆಪ್ಪತ್ತೇಳು ಕೋಟಿ (ಕನಕ. ೨೩೦-೬). **ಮಣೆಹಗಾರ** : ೧. ಜವಳಿ ಲಾಭಾದಾಯದ ಚಾವಡಿ ಮಣಿಹಗಾರ ಹರಿದಾಸಯ್ಯಗೆ . . . ತಾಂಬ್ರಶಾಸನವನ್ನು ಬರೆಸಿ ಕೊಟ್ಟು ಯಿಧೇವೆ (ಮೈಐಆ. ೦೯೨೬, ೪೬-೨ ; 1171).

[ಮಣಿಯ + – ಕಾಱ. / ತಮಿ. ಮಣಿಯಕ್ಕಾರನ್ ; ಮಲ. ಮಣಿಯ ಕಾರನ್ ; ತುಳು. ಮಣಿಗಾರೆ, ಮಣಿಗಾರೆ ; ತೆಲು. ಮಣಿಯಗಾಡು, ಮಣಿಯಕಾಂಡು]

**ಮಣಿಯಮಸೆಟ್ಟಿ** (ನಾ). ಒಬ್ಬಾತನ ಹೆಸರು : ಚಬ್ಬಿಸೆಟ್ಟಿಯ ತಮ್ಮ ಮಣಿಯಮಸೆಟ್ಟಿ ತುಱುಗೊಳೆ ತುಱುವನಿಕ್ಕಿಸಿ ಸತ್ತು ಸಗ್ಗಕ್ಕೆ ಸನ್ದ (ಎಕ. IX, ದೊಡ್ಡಬ. ೧೦-೪ ; 920).

[ಮಣಿ$_?$ + ಅಮ (<ಅಮ್ಮ$_1$) + ಸೆಟ್ಟಿ]

**ಮಣಿಯವರೆ** (ನಾ). ಗುಂಡಾದ ಕಾಳುಗಳಿಂದ ಕೂಡಿರುವ ಒಂದು ಬಗೆಯ ಅವರೆ : ಮಣಿಯವರೆಯ ಕಾಳು ಅಡುಗೆಗೆ ರುಚಿಯಾಗಿರುತ್ತದೆ (ರೂಢಿ). [ಮಣಿ$_3$ + ಅವರೆ$_1$]

**ಮಣಿಯಾಲ** (ನಾ). ಒಂದು ಊರಿನ ಹೆಸರು : ತೆಂಕಾಯ್ ಮಣಿಯಾಲ ಕೊಲ್ಲಿಯ ಪಳ್ಳಮ ಪಡುವಾಯ್ ಪೆಗ್ಗೊರ್ಗಲ್ಲಿಯ ಸೀಮೆ (ಎಕ. III (R) ಮಗ್ಗಡ. ೯೦-೩೦ ; 760). [ ? ]

**ಮಣಿಯಿಸು**, ಮಣಿಸು (ಕ್ರಿ). ೧. ಸೋಲಿಸು : ಸಗ್ಗುವಂತೆ ಮಾಡು : ಕೊಯ್ಲೆವಿಂಡರಂ ಪಣಿದದಿಂ ಮಣಿಯಿಸುತ್ತೆ . . . ಎಸೆದುದಬಲಾಜನಂ (ಶಬ್ದಮ. ೬-೫೬) ; ಪಲರಾಯರ ಸಬ್ಬಸವಂ ಕಪರ್ದಿಜ್ವಲಿಸುವವರ ತಲೆವಣಿಯಂ ಮಣಿಯಿಸಿವಲಘುಭುಜಂ ವಿಕ್ರಮಕೌರವಜಯರಾಜಶಶಾಂಕನೊಳು (ಜಯಕಾ. ೬-೫). ೨. ನಮಸ್ಕರಿಸುವಂತೆ ಮಾಡು ; ಶರಣಾಗಿಸು : ಮಣಿಮಂತ್ರೌಷಧಿಯಿಂದ ನಿನ್ನಯ ಕಾಲ್ಗೆ ಮಣಿಯಿಸುವೆ ರಾಮನನು (ಕುಮಾರಾಮ. ೨೩-೪೯) ; ಮಣಿಯಿಸುವ ದೈವ ಘನವಾಗಿ ಜಗಕ್ಕೆಲ್ಲ ತ್ರಿಣಯನೆ ದೈವ (ಸರ್ವಜ್ಞ. ೨೩೭). **ಮಣಿಸು** : ೧. ತರುಣ ಹೇಳುವುದೇನು ದಾನವಹರನ ಹವಣೇನೆಂದಱಿಯೆ ಮಿಕ್ಕರಿಗಳೀ ದಶಮುಖನ ಮಣಿಸಲು ತಕ್ಕರಿಲ್ಲ (ತೊರರಾ. ೧-೬-೪೨). ೩. ಬಾಗುವಂತೆ ಮಾಡು ; ಬಗ್ಗಿಸು : ಕಣಕಾಲ ಕುಣಿಸುವಳು ಮೊಣಕಾಲ ಮಣಿಸುವಳು (ಸರ್ವಜ್ಞ. ೧೬೪೫) ; ತೊಲೆಯ ಕಟ್ಟಿಗೆ ; ಮಣಿಸಿದರೆ ಮುರಿಯುವದು (ಕಥಾಗ. ೩೪) ; ಹುಬ್ಬನು ಕುಣಿಸುತ ಕೈಯನು ಮಣಿಸುತ ಬಿಸಜಾಕ್ಷಿ ಮಾತನಾಡುವಳು (ಇಂಜಾತ. ೦೭೬-೨೭). [ಮಣಿ$_1$ + — ಇಸು$_3$]

**ಮಣಿಯೂರ್** (ನಾ). ಒಂದು ಊರಿನ ಹೆಸರು : ವಿಜಯಾದಿತ್ಯಮಙ್ಗಲ ಮಹಾಗ್ರಾಮದೊಳ್ ಕುಡಲ್ಕಣ್ಣನೂರು ಮಣಿಯೂರ ಚತುಸ್ಸೀಮೆ (ಎಕ. X, ಬೌರಿಂಗ್. ೪-೩ ; 950) ; ಭೀಮನದಿಯ ತಡಿಯ ಮಣಿಯೂರ ಅಪ್ಪಯಣವೀಡಿನೊಳ್ (ಇಇ. XIX, ೨೭೩-೩೪ ; 1054).

[ ಮಣಿ$_?$ + ಊರ್ ]

**ಮಣಿಯೋಱು** (ನಾ). ಗಂಟೆಯನ್ನು ಬಾರಿಸುವಾಗ, ಅದರ ನಾಲಗೆಯು ಅದಕ್ಕೆ ಕೊಡುವ ಹೊಡೆತದಿಂದ ಉಂಟಾಗುವ ಸದ್ದು : ಮದನ ಮದಕುಂಜರದ ಮಣಿಯೋಱಂ ಮಿಱುವ ರಾಜಹಂಸಕೂಜಿತಮುಂ (ಶಂರಾಪು. ೩-೮೦ ವ) ; ಮಣಿಯೋಱುಂ ಚೆಂಬೊನ್ನುಡೆಮಣಿಯುಲಿ ಗೆಲ್ದಿ ಗೆಲ್ವನಂಗರುಚಿಯಿಂದೈರಾವಣಮಂ ಕುಮಾರಚೂಡಾಮಣಿ ಲೀಲಾಮದದೊಳ್ಂ ಚತುರ್ದಂತದೊಳ್ಂ (ಶಂರಾಪು. ೩-೦೩೦).

[ ಮಣಿ$_2$ + ಏಱು$_4$ ( < ಏಱ್$_4$ ) ]

**ಮಣಿರಂಗ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹತ್ತನೆಯ ಪಂಕ್ತಿಯೆಂಬ ಛಂದಸ್ಸಿನ ಒಂದು ವೃತ್ತ : ಪಾದಪಾಶನ ಮಾರುತಯುಗ್ಮಂ ಪಾದದಂತದೊಳೀಶ್ವರನಕ್ಕುಂ ಕಾದಿರಲ್ ಯತಿಭೂತದೊಳಿರ್ದಂದೋದೆ ಕಲ್ಪುಮೆಲೇ ಮಣಿರಂಗಂ (ಛಂದೋಂಬು. ೨-೦೦೦). [ಸಂ.]

**ಮಣಿವಚ್ಚ** (ನಾ). ರತ್ನದ ಹರಳುಗಳಿಂದ ಮಾಡಿದ ಒಡವೆ : ರತ್ನಖಚಿತವಾದ ಆಭರಣ : ಅಬ್ಜಾಕ್ಷಿಯರ್ ಸೀತೆಯಂ ಕಮ್ಮೆಣ್ಣೆಯಂ ಪೂಸಿ ಮಿಸಿಸಿ ತುಱುಬಿಕ್ಕಿ ಕುಸುಮಗಳ ಮುಡಿಸಿ ಪೀತಾಂಬರವನುಡಿಸಿ ಮಣಿವಚ್ಚವಂ ತುಡಿಸಿ . . . ಕರೆತಂದರೋಲಗದ ಸಭೆಗೆ (ತ್ರಿಃರಾಶ. ೫-೫೦).

[ ಮಣಿ$_3$ + ವಚ್ಚ$_2$ ]

**ಮಣಿವಟ್ಟು** (ನಾ). ರತ್ನದ ಹರಳುಗಳಿಂದ ಅಲಂಕರಿಸಿದ ರೇಷ್ಮೆಬಟ್ಟೆ ; ರತ್ನಖಚಿತವಾದ ಪಟ್ಟಾವಳಿ : ನಾವು ಪಡೆದವು ಮಿಂಡಜಂಗಮದೇವರೆ ಮಗೊಲಿದಿತ್ತ ನವವಸನಾವಳಿಗಳಂ ದಿನದಿನದೊಳಿಂತುಟ್ಟು ಭೋಗಿಸುವ ಮಲಯಜಶ್ರೀ . . . ಚಂದ್ರಾತಪಂ ಭೂತಿಳಕಮುಂ ಮಣಿವಟ್ಟು ಪಿಂಜಾವಳಿಯು (ಬಸಪು. ೦೦-೨೪). [ ಮಣಿ$_3$ + ಪಟ್ಟು$_5$ ( < ಪಟ್ಟೆ$_2$ ) ]

**ಮಣಿವರೂಥ** (ನಾ). ರತ್ನಗಳಿಂದ ಅಲಂಕೃತವಾದ ರಥ ; ರತ್ನಖಚಿತವಾದ ರಥ : ಬಭ್ರುವಾಹನಂ ತರಹರಿಸುತ್ತಚ್ಚಱಿಕೆಗುಂದದೆ ಮಹಾಹವಕೆ ಬೇಱೊಂದು ಮಣಿವರೂಥವನಡರ್ದು (ಜೈಮಿಭಾ. ೨೨-೩೪). [ಸಂ.]

**ಮಣಿವಸರ** (ನಾ). ರತ್ನಗಳನ್ನು ಮಾರುವ ಅಂಗಡಿ : ಆಗಸಚುಂಬಿತ ಕರುಮಾಡ ಗುಡಿಗಳು ಬೇಗಲಲುಗೆ ವಾಯುವಿಂದ ತಾಗಿ ಭಗಣಗಳುದುರಿ ತಿಳಿಗೆಂಬವೊಲಾಗೆಸೆದುದು ಮಣಿವಸರ (ವರ್ಧತ. ೦-೦೦೬).

[ ಮಣಿ$_3$ + ಪಸರ ]

**ಮಣಿವಾಗಿಲ್** (ನಾ). ರತ್ನಗಳಿಂದ ಅಲಂಕರಿಸಿದ ಬಾಗಿಲು ; ರತ್ನಖಚಿತವಾದ ದ್ವಾರ : ಸಂದಣಿಸಿದ ಮಣಿವಾಗಿಲೊಳೊರ್ವ ಪುಳಿಂದನಿತಂಬಿನಿ . . . ಒಂದರಗಿಳಿಸಹಿತಂ ನಿಂದಿರ್ದಪಳ್ (ಜಯಕಾ. ೨-೨೦) ; ಕಂತುಕೇಳಿಯಾಂತೆಳೆಯಳೊಱಲ್ದು ಬಂದು ಮಣಿವಾಗಿಲೊಳೀಕ್ಷಿಸಿದಳ್ ಮಹೀಶನಂ (ರಾಜಶೇ. ೭-೯). [ ಮಣಿ$_3$ + ಬಾಗಿಲ್ ]

**ಮಣಿವಾಡ**, ಮಣಿಮಾಡ (ನಾ). ರತ್ನಗಳನ್ನು ಕೆತ್ತಿದ ಮಹಡಿ ; ರತ್ನಖಚಿತವಾದ ಸೌಧ : ಎಳವೆಂಡಿರನೊಳಕೊಂಡೆಸೆದಿರ್ಪ ಮಣಿವಾಡಂಗಳ ಸಾಲ್ಗಳಿಂ . . . ರಾಜವೀಧಿ ವಿರಾಜಿಸುತ್ತಿರ್ದುದು (ಉದ್ಭಟ. ೦-೪೯ ವ); ಮದಿಲೊಳು ಮಣಿವಾಡದೊಳು ಪೊಂಬಾಗಿಲ ತುದಿಯೊಳು ಪಟ್ಟಸಾಲೆಯೊಳು ಮದನನ ಪೆಂಡವಾಸವೆನಲಾ ಪುರಸುದತಿಯರವನ ನೋಡಿದರು (ತ್ರಿಃಶಾಂ. ೦೩-೩೪). **ಮಣಿಮಾಡ** : ರತ್ನಕಂಬಳಿಯಂ ಮಣಿಮಾಡದ ನೆಲೆಯೊಳಿರ್ದಾತ್ಮೀಯಮಾತ್ಮಜಂಗೆ ಕೆಲದೊಳಿರ್ದ ಪರಿಚಾರಕಿಯ ಕಯ್ಯೊಲಟ್ಟಿದಾಗಳ್ (ಸುಕುಮಾ. ೦೦-೦೦೮ ವ); ಅಡಿಕಿಲ್ಗೊಂಡೊಪ್ಪುವೇೞುಂ ನೆಲೆಗಳ ಮಣಿಮಾಡಂಗಳಿಂದಂ ವಿಚಿತ್ರಂಬಡೆದಿರ್ದುತ್ತುಂಗಕೂಟಂಗಳಿಂ . . . ಕೌತುಕಕ್ಕಂದೆಡೆಯಾಯ್ತು (ಶಾರಕು. ೦-೦೫೪) ; ಏಕಾರಣಮಿಾ ಮಣಿಮಾಡಮಿರ್ದಪುದೀ ಕುಧರಾಗ್ರದೊಳು (ತ್ರಿಃಶಾಂ. ೪-೭೦).

[ಮಣಿ$_3$ + ಮಾಡ$_1$]

**ಮಣಿವಾಳ** (ನಾ). ರತ್ನಗಳನ್ನು ಮಾರುವವನು ; ರತ್ನಪಡಿ ವ್ಯಾಪಾರಿ : ಲಲಿತಯಮುನೆಯೊಳುಡುನಿಕರ ಮಾರ್ಪೊಳೆವವೊಲು ನೀಲಾಂಬರದಿ ಮಣಿ ಬಳಸಿರಲು ಮಣಿವಾಳರಂಗಡಿಯೆಸೆದುವು (ಶಾಮಂತ. ೨-೨೯).

[ಮಣಿ$_3$ + — ವಾಳ$_3$ (<—ವಳ)]

**ಮಣಿವಿಭೂಷಣ** (ನಾ). ೧. ರತ್ನಖಚಿತವಾದ ಆಭರಣ. ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹದಿನೈದನೆಯ ಅತಿಶಕ್ವರಿ ಛಂದಸ್ಸಿನ ಒಂದು ವೃತ್ತ : ಪಾವಕೇಂದ್ರಶಶಿಯುಗ್ಮದಿನತ್ತ ಹುತಾಶನಂ ಭಾವಿಸುತ್ತಿರೆ ಪದಾಂತದೊಳಿರ್ದೊಡೆ ವಿಶ್ರಮಂ ಪೀವರಸ್ತನಭರಾನತಮಧ್ಯೇ ಕವೀಂದ್ರಸಂಭಾವಿತಂ ಮಣಿವಿಭೂಷಣಮೆಂದಱಿ ನೀನಿದಂ (ಛಂದೋಂಬು. ೨-೦೪೫). [ಸಂ.]

**ಮಣಿವೆಜ್ಜ** (ನಾ). ರತ್ನದ ಹರಳಿನಲ್ಲಿರುವ ತೂತು,–ರಂಧ್ರ : ಮಣಿವೆಜ್ಜದೊಳಡಗುವುದೆಯಾಕಾಶ (ತೊರರಾ. ೬-೫೩-೭೪). [ಮಣಿ$_3$ + ವೆಜ್ಜ ]

**ಮಣಿವೆಸ** (ನಾ). ರತ್ನದ ಹರಳುಗಳಿಂದ ಮಾಡಿದ ಕೆಲಸ ; ರತ್ನಗಳನ್ನು ಕೆತ್ತುವ ಕೆಲಸ : ವಿನಿರ್ಮಿಸಿದ ಸುಯ್ಯಾಣವೆಸದ ಕತ್ತರಿವೆಸದ ಮಣಿವೆಸದ ಮೇಲ್ಗಟ್ಟಿನೊಳಂ ಮವಪತ್ರೀಯ ಕಂಠಿಕಾಮಾಳೆಗಳಿನಿಪ್ಪ ವಿವಿಧಮಣಿತೋರಣಂಗಳೊಳಂ . . ಆಸದಳಮಾಗಿ (ವರ್ಧಪು. ೭-೩ ವ).

[ಮಣಿ$_3$ + ಬೆಸ$_1$]

**ಮಣಿವೆಳಗು** (ನಾ). ರತ್ನದ ಹರಳುಗಳಿಂದ ಉಂಟಾಗುವ ಬೆಳಕು; ರತ್ನಪ್ರಭೆ: ಬೀಳುಗೊಟ್ಟನು . . . ಜಾಳಿಗೆಯ ಮಣಿವೆಳಗುಗಳ ವೈಹಾಳಿಗಳ ವೈಡೂರ್ಯದೀಪ್ತಿ ನಿವಾಳಿಗಳ ಸುಪತಾಕೆ ಬೆಳಗುವ ಹೇಮರಥ ಸಹಿತ (ಕುಮಾ.ಅ. ೭-೧೧); ತೊಳತೊಳಗುವ ತೊಡವಿನ ಮಾಣಿಕಮಣಿ ವೆಳಗಿನ ಸೊಡರಾರತಿಯನು ಕಲ್ಲಿಸ ವಿಜಯಾಗರ್ಜಿಪಂತೆ ಕಿಂಪುರುಷರ ಲಲನೆಯರತಿರಂಜಿಸಿವರು (ಶ್ರೀಪಾ. ೧೪-೬೮); ಮಂಗಳಗೀತೆಯಂ ಪಾಡಿ ಮಣಿವೆಳಗಿನಾರತಿಯುಂ ಬೆಳಗುವ ಭಾಸುಭಾವೆಯಿಂ . . . ಪೆಂಪನಾಳ್ದು (ಕಬಕಂ. ೧-೬೯ ವ). [ಮಣಿ$_3$ + ಬೆಳಗು$_2$]

**ಮಣಿವೊರಜೆ** (ನಾ). ಸಣ್ಣ ಸಣ್ಣ ಗಂಟೆಗಳಿಂದ ಅಲಂಕೃತವಾದ ಹಗ್ಗ: ಆ ಕಂದರದೊಳು ಅಂತ ರತ್ನಂಗಳೀ ಮಣಿವೊರಜೆ ಕಳಧೌತಕಾಂತಿ ಪೊಂಜೂಲೆನೆ . . . ತಿರ್ದಿ ತೋರ್ಪ ಪಟ್ಟದ ದಂತಿಯಿಂದೆನಲ್ ಕನಕಾಚಲಂ ಮೆಱೆದುದು (ತಬಕು. ೩-೯). [ಮಣಿ$_3$ + ಪೊರಜೆ]

**ಮಣಿಶಿಲೆ** (ನಾ). ೧. ರತ್ನಗಳಿಂದ ಕೂಡಿದ ಕಲ್ಲು; ರತ್ನಗಳು ಹುದುಗಿರುವ ಶಿಲೆ: "ರತ್ನಶಿಲೆಯೆನಲ್ ಮಣಿಶಿಲೆ" (ಮಂಗರಾ. ೩೦-೭): ಬೆಳ್ದಾವರೆಗಳಲರ್ದಳೆಯದ ಕೊಳಂಗಳಂ ಮಣಿಶಿಲಾರೋಚಿಯಿಂ ಪೊಳೆಯು ದಚಲಂಗಳಂ . . . ಮುಳಿದಜಸಲಾಂ ಕಾಣೆನಾ ಮಹೀಮಂಡಲದೊಳು (ಶೃಬಾಶಾ. ೩-೯); ಚಾರುಮಣಿಶಿಲೆಯ ವಸುಗೆಸರ ಗಾರೆಯಲಿ ವಲವೇರಿ ರಚಿಸಿವರೊಯೆಂಬಂತೆ (ವಪಪೋ. ೩-೩೬). ೨. ಔಷಧಿಯಾಗಿಯೂ ಬಾಣ ಬಿರುಸುಗಳಿಗೆ ಸಿಡಿಮದ್ದಾಗಿಯೂ ಉಪಯೋಗಿಸುವ, ಕೆಂಪುಬಣ್ಣದ ಒಂದು ಬಗೆಯ ಖನಿಜ: "ಮನಶ್ಶಿಲಾ, ಮನೋಗುಪ್ತಾ, ಮನೋಹ್ವಾ, ನಾಗಜಿಹ್ವಿಕಾ — ೪ ಮಣಿಶಿಲೆಯ ಪೆಸರುಗಳು" (ಸಿವ್ಯಾಂತಿ. ೩೦೬): ಹೊಸ ಮಣಿಶಿಲೆ ಮೂಱು ತೂಕ (ಶಾಳ್ಯಸಾಂ. ೦೯); ಇಂಗಲಿಕವು ಮಣಿಶಿಲೆಯು ಅಂಗಡಿಯೊಳು ಮಾಱುತಿಹ ವ್ಯವಹಾರಿಗಳ್ ಕಂಗೊಳಿಸಿದರು (ಅಬ್ಬಿಲೂ. ೩-೬೬). ೩. ಒಂದು ಬಗೆಯ ಸಸ್ಯ: ಬರಿಪದಣೆ ಸುಣ್ಣಗಂದಿಗೆ ನಱುವಲ್ಲುಗಳುಂ ಮಣಿಶಿ[ಶಾಶಾಂ. ಸಿ]ಲೆ ಶಿವನ್ನಿಯು ಶತಾವರಿ ಪುಲಿಗಿಲ್ (ಅಶ್ವಶಾ. ೧೧-೬೦). [ಸಂ. ಮಣಿಶಿಲಾ]

**ಮಣಿಶುಕ್ತಿ** (ನಾ). ಒಂದು ಬಗೆಯ ಸುಗಂಧದ್ರವ್ಯ: ಆ ವೇದೀಸ್ಥಳದೊಳ್ . . . ನವಚಂದ್ರಕಾಂತಚಷಕಂಗಳ್ ಚಂದನಕ್ಷೋದದಿಂ ತೀವಿದುರ್ಂ ಮಣಿಶುಕ್ತಿಗಳ್ ಪರಿಮಳತ್ಕಾಶ್ಮೀರಸಾರಾಂಬುವಿಂ ತೀವಿದುರ್ಂ ಬಱಿದಿರ್ದ ವೋಲೆಸೆದುವಾದಂ ವರ್ಣಸಾಮಾನ್ಯದಿಂ (ಚಂದ್ರಪು. ೬-೫೪). [ಸಂ.]

**ಮಣಿಸರ** (ನಾ). ೧. ರತ್ನಗಳನ್ನು ಪೋಣಿಸಿ ಮಾಡಿದ ಸರ; ರತ್ನಹಾರ. ೨. ಗಾಜು, ಕಲ್ಲು, ಬೀಜ ಮುಂತಾದುವುಗಳಿಂದ ಮಾಡಿದ ಬಣ್ಣಬಣ್ಣದ ಮಣಿಗಳ ಹಾರ: ಕಲ್ಲಿನಿಂದ ಮಣಿಸರಗಳನ್ನು ಮಾಡುವ ವಿಧಾನವನ್ನು ಪರೀಕ್ಷಿಸಿದರೆ ಆಶ್ಚರ್ಯವಾಗದಿರಲಾರದು (ಶಾರದ. ೦೪); ಮಣಿಸರಕ್ಕೆ ಗತಿಯಿಲ್ಲದವ ಹಣ ದಕ್ಷಿಣೆ ಕೊಟ್ಟಾನೇ ? (ನಾದ). [ಸಂ.]

**ಮಣಿಸರವಳಿಗೆ** (ನಾ). ಗೋದಿಹಿಟ್ಟು ಅಥವಾ ರವೆಯನ್ನು ಹದವಾಗಿ ಕಲಸಿ ಮಾಡಿದ ಮಣಿಯಾಕಾರದ ಉರುಳೆ ಮತ್ತು ಅದರಿಂದ ಮಾಡಿದ ಪಾಯಸ: ಸರವಳಿಗೆ ಸಣ್ಣಸರವಳಿಗೆ ಮಣಿಸರವಳಿಗೆ ಪರಮಧುರ ಘೃಸಣಂಬಂ ಸಮೆದವಂ ಕೊಳಗ (ಬಸರ. ೭-೦೪); ಪೊಳೆವ ಶರಚ್ಚಂದ್ರಿಕೆಯೊಳ್ಮಿಟುಂಕಿ ಸಸುದೋರ್ಪ ತಾರೆಗಳ ತೆಱದಿಂ ಕಣ್ಗೊಳಿಸಿ ಮಗುಮಗಿಪ ಮಣಿಸರವಳಿಗೆಯ ಮಾಸುಸಮಾಸದಳಂ ಬಡ್ಡಿಸಿದರ್ (ಶಾಂತೀಶ್ವ. ೦೩-೩೭).
[ಮಣಿ$_3$ + ಸರವಳಿಗೆ]

**ಮಣಿಸಿಂಹಾಸನ** (ನಾ). ರತ್ನಖಚಿತವಾದ ಸಿಂಹಾಸನ: ಮಣಿಸಿಂಹಾಸನಮಸ್ತಕಾಭರಣಮಿಂದೇಕಾಗದೆಂದಾವ ಕಾರಣದಿಂ ಪೇೞನಿತೊಂದು ಪೊಱುತ್ತ ತಪೆದಿರ್ದಂ (ಕುಸುಮಾ. ೧-೫೭). [ಸಂ.]

**ಮಣಿಸಿಲೆ** (ನಾ). = ಮಣಿಶಿಲೆ ೨: ಮೈಲಿತುತ್ತ, ಇಂಗಲೀಕ, ಮಣಿಸಿಲೆ ಒಳಗೆ ನೀರು ಹಾಕಿ . . . ಇರಿಸುವುದು (ಐಶ್ವ.ವಿ. ೦೪). [< ಸಂ. ಮಣಿಶಿಲಾ]

**ಮಣಿಸು** 'ಮಣಿಯಿಸು' ನೋ.

**ಮಣಿಸೊಡರು** (ನಾ). ರತ್ನಖಚಿತವಾದ ದೀವಿಗೆ: ಇಕ್ಕೆಲದ ಮಣಿಸೊಡರುಗಳ ಮಾಣಿಕ್ಯ ಮಣಿಭಿತ್ತಿಗಳ . . . ತನಿವೆಳಗು ತಿಗೆವುದು ಜನದ ಕಣ್ಮನವ (ತಿಪಾಗ. ೧೧-೯೭-೦೯). [ಮಣಿ$_3$ + ಸೊಡರು (< ಸೊಡರ್)]

**ಮಣಿಸ್ತಂಭ** (ನಾ). ರತ್ನಗಳಿಂದ ಅಲಂಕರಿಸಿದ ಕಂಬ; ರತ್ನಖಚಿತವಾದ ಸ್ತಂಭ: ಪಸೆಯೊಳ್ ಪಾಸಿದ ಬೊಂಗಮುಲ್ಲವದ ದೇವಾಂಗಂ ಮಣಿಸ್ತಂಭದೊಳ್ ಪೊಸವತ್ಯಂಗಮಪೂರ್ವಮಾಗೆ (ಶಾಂತಿಪು. ೧೧-೬೮); ಚಂದ್ರಿಕೆಯನಿಳಿಪ ಧವಳಾರವೃಂದಂಗ[ಳ]ಂ ಇಂದ್ರನೀಲದ ಮಣಿಸ್ತಂಭ ನಿಳಯಂಗ[ಳ]ು . . . ತೋಱುತಂ (ನುಪರ. ೯-೯೨). [ಸಂ.]

**ಮಣಿಹ$_1$** (ನಾ). ೧. ಬಾಗುವಿಕೆ; ನಮನ; ವಂದನೆ: ಮಣಿಹವನು ನಾನೊಲ್ಲೆ ತಾಲಸಿಯ ಮಣಿಹವನು ನಾ ಬಲ್ಲೆ ಶೌರಿಯ ಮಣಿಹವನು ನಱ ಬಲ್ಲೆ ಗುರುಹಿರಿಯರ ಪದಾಂಬುಜಕೆ ಮಣಿಹವೊಂದಿಹ ಪರದೊಳೆಲ್ಲವು ಮಣಿಹಮಾಯ್ತೆನಗೀಗ (ಕೃಹಾವ. ೭-೧೩). ೨. (ಮಾಡಲೇಬೇಕಾದ) ಕೆಲಸ: ಕಾರ್ಯ; ಉದ್ಯೋಗ: ನೀ ಬೈಚಿಟ್ಟ ಬಯಕೆಯು ನಿನಗಿತ್ತೆ ನೀ ಕಳುಹಿದ ಮಣಿಹ ನಿನಗೆ ಸಂದಿತ್ತು (ಸಕವ. II. ೬೪೬-೮೪೦); ಪರಿಚರರಿಗೆಯು ನಾವು ಬೆಸಸಿದ ಪರಿಯಲಿ ಪೇಳ್ ನಿನ್ನ ಮಣಿಹಮೋಳರು ಹಮುಳವೆನುತುಂ ಶವಾಸನಂ ಕಳುಹಿದನು ಹರನು (ಬಸವು. ೪೦-೭೯); ಅನ್ನವಾಟಿಕೆಗಳೊಳ್ಪಾಕವಂ ಮಾಡಿಸುವ ಮಣಿಹಮಂ ಕೃತವರ್ಮಕಂ ಕಾಳ್ದನು (ಜೈಬಾಭಾ. ೩೯-೭). ೩. (ದೇವರು, ರಾಜ ಮುಂತಾದವರಿಗೆ ಮಾಡುವ) ಸೇವೆ; ಕೈಂಕರ್ಯ: ಮಣಿಹದಿಂದುಣಲುಂಟು ಕೇಳ್ಕೆ ಮಣಿಹದಿಂದುಡಲುಂಟು ನೋಡ್ಕೆ ಮಣಿಹದಿಂದೈಶ್ವರ್ಯವದು ಕೈಸೇರುವುದು ನಿನಗೆ ಮಣಿಹ ಲೇಸೆಲೆ ಮಗನೆ ಬರೆದೀ ಮಣಿಹವನು ಕಲಿ ಬಲ್ಲರಿಳೆಯೊಳು ಮಣಿಹದಿಂದಿನ್ನಿಲ್ಲ ಬದುಕೆಂದನು ಸುರಾರಾತಿ (ಕೃಹಾವ. ೭-೧೨).
[ಮಣಿ$_1$ + -ಹ$_2$ (< -ಪ$_2$)]

**ಮಣಿಹ$_2$** 'ಮಣಿಯ' ನೋ.

**ಮಣಿಹಗಾಱ** 'ಮಣಿಯಗಾಱ' ನೋ.

**ಮಣಿಹರ್ಮ್ಯ** (ನಾ). ರತ್ನಖಚಿತವಾದ ಸೌಧ, –ಭವನ: ಮಣಿಹರ್ಮ್ಯಸ್ಥಳದಿಂ ನರೇಂದ್ರನಿೞಿದಂ (ಮಲ್ಲಿಪು. ೮-೧೬೩); ಮಣಿಹರ್ಮ್ಯಶ್ರೇಣಿ ಕೇಳೀವನವಿಳಸಿತಮಾ ನವ್ಯಪುಷ್ಪೋಪಹಾರೋಲ್ಬಣಮೋಕಃಪ್ರಾಂಗಣಂ (ಶಾಂತೀಶ್ವ. ೧೩-೧೬೨); ಅಲ್ಲಿ ಮಣಿಹರ್ಮ್ಯಪ್ರಾಸಾದದ ಮೇಲೆ ರೋಹಿಣೀಸಹಿತನಾದ ಚಂದ್ರನ ಪೂಜೆ ನಡೆಯುವುದು (ಸಂನಾಟಿ. ೦೪೩). [ಸಂ.]

**ಮಣಿಹಾಗಲ** (ನಾ). ಮಣಿಯಾಕಾರದ ಮೃದುವಾದ ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಹಾಗಲಕಾಯಿ: ಬದನೆ ಪಡುವಲ ಮಣಿಹಾಗಲ (ಸೌಗಂಧಿ. ೩೭-೦೮). [ಮಣಿ$_3$ + ಹಾಗಲ (< ಪಾಗಲ್$_1$)]

**ಮಣಿಹಾರ** (ನಾ). = ಮಣಿಸರ ೧: ಓರೊರ್ವರ ಕೊರಲಿಂ ಮಣಿಹಾರವುಮಂ ತೆಗೆದು. . .ಓರೊರ್ವರ ಕೊರಲೊಳಿಕ್ಕಿದರ್ ಸಂಭ್ರಮದಿಂ (ಲೀಲಾವ. ೧೧-೪೪); ಮಣಿಹಾರ ಬೇಕೆ ಸೂಕರಗೆ (ಇಂತಾಶ. ೧೧೩-೬೨).
[ಸಂ.]

**ಮಣಿಹಾಱ** 'ಮಣಿಯಗಾಱ' ನೋ.

**ಮಣಿಹೆಂಪೆ** (ನಾ). ಅನಾನಸ್ ಹಣ್ಣು: P ಮಣಿಗಳನ್ನು ಪೋಣಿಸಲು ಅನಾನಸ್‌ಹಣ್ಣಿನ ಗರಿಗಳಿಂದ ತೆಗೆದ ನಾರನ್ನು ಉಪಯೋಗಿಸುತ್ತಾರೆ: ಹಣ್ಣುಹಂಪಲ್ಗಳಂ, ಸೌತೆಪಚ್ಚಡಿಗಳಂ, ಮಣಿಹೆಂಪೆಯಂ . . . ಬೆಣ್ಣೆಯಂ ಬಡಿಸಿ (ಶ್ರೀರಾಮಾ. ೨೭೦-೨೨೩). [ಮಣಿ$_3$ + ಹೆಂಪೆ$_1$]

**ಮಣಿಹ್ಯ** 'ಮಣಿಯ' ನೋ.

**ಮಣಿಹ್ಯಗಾರ** 'ಮಣಿಯಗಾಱ' ನೋ.

**ಮಣು** ' ಮಣ್ ' ನೋ.

**ಮಣುಕು** ' ಮಣಕು ' ನೋ.

**ಮಣುಗಸಾತ್ತ್ವ** (ನಾ). ಒಬ್ಬಾತನ ಹೆಸರು : ವಿಜ[ಸೆ]ಟ್ಟಿಗರಾ ಧರ್ಮ್ಮ ನಾಯಗನ್ ಮಣುಗಸಾತ್ತ್ವರ್ ಸರ್ವ್ವಪನ್ನು ಪುಲಿಯುರ್ಮ್ಮನ್ ಈ ಒಕ್ಕಲ್ ಪಡೆದುವು (ಎಕ. IX, ೨೩-೦೩; 800). [ ? ]

**ಮಣುದೆರೆ** (ನಾ). ಭೂಮಿಯ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಬೇಡಿಗೆ ಬೀಜವರು ಮಣುದೆರೆ ಮಗ್ಗದೆರೆ ಸುಂಕ ಸೊಡಿಗೆ (ಎಕ. X, ಕೋಲಾರ. ೨೯೭-೨೮; ?).

[ ಮಣು (< ಮಣ್) + ತೆರೆ$_3$ (< ತೆಱೆ$_3$) ]

**ಮಣೆ$_1$** (ನಾ). ೧. ಮರ, ಲೋಹ ಮೊದಲಾದುವುಗಳಿಂದ ಮಾಡಿದ ತಗ್ಗಾದ ಪೀಠ,–ಆಸನ : "ವಿಷ್ಟರಂ, ಪೀಠಂ, ಆಸನಂ—ಈ ೩ ಮಣೆ" (ಕರ್ಣಾಟು. ೩೨–೦೩೩); ಅಗ್ರಾಸನದೊಳುಳಿಂದು ಬಂದು ಮಣೆಯನೇಱಿ ದರ್ಪನಸಿಂತೆಂದಂ (ವಡ್ಡಾರಾ. ೦೬೩–೨೩); ಏಱಿದ ಮಣೆಯುದಯನಗಂ ತೋಱಿದ ಮುಖಬಿಂಬವಿದುಬಿಂಬಮಪಾಂಗಂ ವಿರಾಜಿದ ಚಂದ್ರಿಕೆಯೆನೆ . . . ಸೌಂದರಿಯೆಸೆದಳ್ (ಗಿರಿಜಾ. ೯-೦೫೬); ಮಣೆಗೆ ಮಂಡಿಸಿ ಕುಳಿತಂ ಬೌತಣದ ವಿದ್ಯೆಯ ಬಳ್ಳಿರಿ (ಕುಸ್ತ್ಯಾ. ೬-೦೨). ೨. ಚದುರಂಗ, ಚೆನ್ನೆ ಮುಂತಾದ ಆಟಗಳನ್ನಾಡುವುದಕ್ಕಾಗಿ ಚೌಕಾಕಾರದ ಮನೆಗಳು ಅಥವಾ ಗುಳಿಗಳನ್ನು ಒಳಗೊಂಡಿರುವ ಲೋಹ, ಮರ ಮುಂತಾದು ವುಗಳಿಂದ ಮಾಡಿದ ಹಲಗೆ : ಮದಕರಿಯ ಪರಿವ ಭರದಿಂದದಿರ್ದೊಡೆ ನೆಲನೊಡ್ಡಿ ನಿಂದ ಚದುರಂಗಮುಮೊರ್ಮೊದಲೆ ನಡುಗಿದುದು ಕೂಡಿದ ಚದುರಂಗದ ಮಣೆಯನಲ್ಗಿದಂತಪ್ಪಿನೆಗಂ (ಶಂಕರಾ. ೦೦-೬೦) 'ಚೆನ್ನೆಮಣೆ' ಪರಾ.

**ಮಣೆಹಾಕು** = ೧. ಪೀಠವನ್ನು ಕೊಡು; ಆಸನ ಹಾಕು : ಮಣೆ ಹಾಕಿ ತಟ್ಟೆಯಿಡು (ರೂಢಿ). ೨. (ಅಲಂ) ಗೌರವ ಕೊಡು; ಸನ್ಮಾನಿಸು : ಅಸತ್ಯಕ್ಕೆ ಮಣೆಹಾಕುವುದು ನನ್ನ ಜಾಯಮಾನಕ್ಕೆ ಬಂದಿಲ್ಲ (ಮುದ್ದು. ೫೦); ಮುಖ ನೋಡಿ ಮಣೆಹಾಕು (ಗಾದೆ). [ದೇ.॥ ತಮಿ. ಮಣೈ; ತುಳು. ಮಣೆ]

**ಮಣೆ$_2$** ' ಮಣೆಯ ' ನೋ.

**ಮಣೆಗಾರ** ' ಮಣೆಯಗಾಱ ' ನೋ.

**ಮಣೆಗಾರತನ** (ನಾ). ದೇವಸ್ಥಾನ, ಅರಮನೆ ಮುಂತಾದುವುಗಳ ಉಸ್ತುವಾರಿಯನ್ನು ನೋಡಿಕೊಳ್ಳುವ ಅಧಿಕಾರ : ರುಣವ ಕೊಟ್ಟವ ಮರುಂಟು ರುಣಮಾಡಿದವರುಂಟು ಮಣೆಗಾರತನವಿದರೊಳೆಂದಿಗೂ ಬೇಡ (ಶಿಗಣ. ೦೯). [ಮಣೆಗಾರ (< ಮಣೆಯಗಾಱ) + -ತನ]

**ಮಣೆಗಾರಿಕೆ** (ನಾ). = ಮಣೆಗಾರತನ : ಅವಳನ್ನು ಬರಾವ್ ಮಣೆಗಾರಿಕೆ ಮಾಡೋದೊಂದು ಬಾಕಿ (ಹುಲಿಮ. ೬೦).

[ಮಣೆಗಾರ (< ಮಣೆಯಗಾಱ) + — ಇಕೆ]

**ಮಣೆಗಾಱ** ' ಮಣೆಯಗಾಱ ' ನೋ.

**ಮಣೆಬಾಬು** (ನಾ). ಕಂದಾಯದ ವಸೂಲಿಯ ಬಾಬ್ತು : ಕುಲ್ಲು ಜಮಾ ಬಂದಿ ಐವಜಿಗೆ ಐನು ಸುವರ್ಣಾದಾಯಕ್ಕೆ ಹೊಲಗಂದಾಯವಿಷ್ಟು ಮಣೆ ಬಾಬು ತಪ್ಸೀಲು ಪ್ರಕಾರ ಐವಜು ಇಷ್ಟು (ಮಹಾಶಂ. II, ೭೨).

[ ಮಣೆ$_2$ ( < ಮಣೆಯ ) + ಬಾಬು$_1$ ]

**ಮಣೆಯ** ' ಮಣಿಯ ' ನೋ.

**ಮಣೆಯಗಾಱ** 'ಮಣಿಯಗಾಱ ' ನೋ.

**ಮಣೆಹಗಾರ** ' ಮಣೆಯಗಾಱ ' ನೋ.

**ಮಣ್ಕುಂದ** (ನಾ). ಒಂದು ಸ್ಥಳದ ಹೆಸರು : ಕೂಡಲೂರ ಬೋದರಿಯೂರ ಮಣ್ಕುನ್ದಕ್ಕೆ ಬಿಟ್ಟ ಸ್ಥಿತಿಕ್ರಮಮಾವುದು ಎನ್ನಡೆ (ಎಕ. IX, ಕನ್ನಪ. ೦೬೦–೩ ; 913). [ ಮಣ್ + ಕುಂದ$_3$ ]

**ಮಣ್ಕುಡಿಕೆ** (ನಾ). ಮಣ್ಣಿನಿಂದ ಮಾಡಿದ ಕುಡಿಕೆ : ಮುದ್ರಿಸಿದ ಮಣ್ಕುಡಿಕೆ ಕಿಡಿಗೊಂಡು ಸಿಡಿದು ರಾತ್ರಿಯ ನಭೋಭೋಗದಲಿ ಕರೆವಂತೆ ಪೋಲ್ ವರ್ಣಮಯನಕ್ಷತ್ರವೃಷ್ಟಿ ? (ತತ್ತ್ವಂಗ. ೬-೯೬೦).

[ ಮಣ್ + ಕುಡಿಕೆ$_1$ ]

**ಮಣ್ಕುಪ್ಪೆ** (ನಾ). ಸಮಾಧಿಯ ಮೇಲೆ ಕಟ್ಟುವ ಮಣ್ಣಿನ ದಿಬ್ಬ : ನಾನೆನ್ನ ಕಟ್ಟೊಳ್ಮೆಯಣ್ಣಂಗೆ ಮಣ್ಕುಪ್ಪೆಯಿಕ್ಕುವೆನ್ (ಅಂತಿಗೂ. ೯-೬೬).

[ ಮಣ್ + ಕುಪ್ಪೆ$_1$ ]

**ಮಣ್ಗಚ್ಚು** (ಕ್ರಿ). ಭೂಮಿಯನ್ನು ಹಿಡಿ ; ನೆಲಕಚ್ಚು : ಸೈನ್ಯಭಾರದಿಂ ಸೀರೆಯಂ ಸುತ್ತಿದಂತೆ ಸಿವುದಾದನಹಿರಾಜ್ಯನಖಿಳದಿಗ್ಗಜರಾಜಿಯುವೂಱಿ ಮಣ್ಗಚ್ಚಿದುವು (ವರ್ಧ. ೯೮-೨೨).

[ ಮಣ್ + ಕಚ್ಚು$_1$ ( < ಕರ್ಚು$_1$ ) ]

**ಮಣ್ಗಪ್ಪರ**(ನಾ). ಮಣ್ಣಿನಿಂದ ಮಾಡಿದ ಬಕ್ಕರೆ,—ಓಡು : ಮಣ್ಗಪ್ಪರದ ವರಸತ್ಯದಿಂ ಮೆಱೆವ ತಿರುನೀಲಕಂಠಗಳ ಚರಣಾಂಬುಜಕ್ಕೆ ಶರಣು (ಚಿತಂ. ೪೩-೦). [ ಮಣ್ + ಕಪ್ಪರ$_2$ ]

**ಮಣ್ಗೊಡು**, ಮಣ್ಣುಕೊಡು (ಕ್ರಿ). ೧. ನೆಲವನ್ನು ದಾನಮಾಡು ; ಭೂಮಿಯನ್ನು ಕೊಡು : ಎಱಿಯವೆ ದೇಗುಲ ಮಾಡಿಸಿ ಮಣ್ಗೊಟ್ಟಳ್ (ಎಕ. VII, ಶಿಕಾರಿ. ೯೩(೩)-೨೮ ; ಸು. 890 ?). **ಮಣ್ಣುಕೊಡು** : ೨. ಸತ್ತ ವ್ಯಕ್ತಿಯನ್ನು ಸಮಾಧಿ ಮಾಡುವುದಕ್ಕೆ ಮೊದಲು ದೇಹದ ಮೇಲೆ ಮಣ್ಣುಹಾಕು : ನಾನೂ ಬೇಕಾದಷ್ಟು ಮಂದಿಗೆ ಮಣ್ಣು ಕೊಟ್ಟೆ (ಆಮೂ. ೩) ; ಮುದುಕಿಗೆ ಮಣ್ಣುಕೊಡಲು ಹೋಗಿದ್ದ ಗಿರಿಯ ಆ ದಿನ ಇನ್ನೂ ' ನ್ಯಾರೆ ' ಮಾಡಿರಲಿಲ್ಲ (ಮುದ್ದುಹ. ೨೩).

[ ಮಣ್ + ಕೊಡು$_1$ ]

**ಮಣ್ಗೊಳ್** (ಕ್ರಿ). (ಅಲಂ) ನೆಲಸಮವಾಗು; ಹಾಳುಬೀಳು : ಮಣ್ಗೊಂಡ ತುಂತ್ತಲ್ಗಳಿಟ್ಟೆಡೆಯಂ ಬಿಟ್ಟಬಿದೇಗುಲಂಗಳೆಡೆಯಂ ಕಾದಿರ್ಪ ಪಾಣ್ಬರ್ಕಳುಂ (ಸಿಂಗ್ಗು. ೮-೦೬೩).  [ಮಣ್ + ಕೊಳ್$_1$]

**ಮಣ್ಣಱ** (ನಾ). ಧರ್ಮಕಾರ್ಯಕ್ಕಾಗಿ ಕೊಂಡುಕೊಂಡ ಭೂಮಿ (?): ಪೊನ್ನಱ ಕೊಟ್ಟು ಮಣ್ಣಱಂ ಕೊಣ್ಡುದು (ಎಕ. III (R), ಹೆಗ್ಗಡ. ೩೮-೦೦; 1021); ಪಟ್ಟವಾಳಿಯು ಪೊನ್ನಱ ಕೊಟ್ಟು ಮಣ್ಣಱ ಕೊಣ್ಡು ಬಿಡಿಸಿದಳ್ (ಎಕ. III, ತಂಜಪ. ೦೬೯–೨೨; 1092) ; ಕೆಲವು ದಕ್ಷಿಣ ಶಾಸನಗಳಲ್ಲಿ 'ಪೊನ್ನಱ ಕೊಟ್ಟು ಮಣ್ಣಱ ಕೊಂಡು' ಎಂಬ ಉಕ್ತಿಯು ಬರುತ್ತದೆ. ಭೂಮಿಯ ಸ್ವಲ್ಪಭಾಗವನ್ನು ಹಣ ಕೊಟ್ಟು ಕೊಂಡದ್ದನ್ನು ಈ ಉಕ್ತಿಯು ಹೇಳುತ್ತದೆ (ಕಶಾಅ. ೦೬೬). **P** ಕನ್ನಡಶಾಸನಗಳಲ್ಲಿ ಅನೇಕ ಕಡೆ ' ಪೊನ್ನಱ ', ' ಮಣ್ಣಱ ' ಎಂಬ ಶಬ್ದಸಮುಚ್ಚಯವು ಪ್ರಯೋಗ ಗೊಂಡಿದೆ. ಇವೆರಡೂ ಸಾಮಾನ್ಯವಾಗಿ ಜೊತೆಯಾಗಿ ಬರುವುದರಿಂದ 'ಧರ್ಮಕ್ಕಾಗಿ ಕೊಟ್ಟಹಣ','ಧರ್ಮಕ್ಕಾಗಿ ಕೊಂಡ ಭೂಮಿ' ಎಂಬರ್ಥ ವನ್ನು ಸೂಚಿಸಬಹುದೆಂದು ಕಾಣುತ್ತದೆ. [ಮಣ್ + ಅಱ$_2$? ]

**ಮಣ್ಣಾಟ** (ನಾ). ಮಣ್ಣಿನಲ್ಲಿ ಆಡುವ ಆಟ ; ದೂಳಾಟ : ಮಣ್ಣಾಟ ಬಿಟ್ಟು ಮನೆ ಕಟ್ಟಿನೋಡು, ಸಂಸಾರದಲ್ಲಿ ಹೂಡು (ಮುಕ್ತಕಂ. ೨೯-೦೯).

[ಮಣ್ಣು (< ಮಣ್) + ಆಟ]

**ಮಣ್ಣಿ** (ನಾ). ಮೊಲೆ : ಪಾರ್ವೋತಿಗೆ ಆ ಕರುಳಿನ ಪರಿಯೋ ಬಾರದು ; ತನ್ನ ಮಗುವಿಗೆ ಮಣ್ಣಿ ಉಣಿಸುವ ಯೋಗವೇ ಕೂಡಲೊಲ್ಲದು (ಹುಲಿಮ. ೦೬). 'ಅಮ್ಮಣ್ಣಿ$_1$' ಪರಾ.

[ದೇ.॥ ತಮಿ. ಮೊಣ್ಣಿ, ಮೊಳ್ಣಿ ; ತುಳು. ಮುಂಜ್ಞಾ, ಮುಂಜ್ಞೀ]

**ಮಣ್ಣಿಗ** (ನಾ). ಬೇಸಾಯದ ಭೂಮಿಯನ್ನು ಹೊಂದಿರುವವನು ; ಜಮೀನುದಾರ : ಕಕ್ಕರಸೆಯ ಮಣ್ಣಿಗಂ ಬೀರದ ಪೋಜಿಗಂ . . . ನಿರೂಪಿತ ನಾಗಿ ಪೆರ್ಗ್ಗಡೆತನಗೆಯ್ಯುತ್ತಂ (ಎಕ. VIII, ಸೊರಬ. ೯೭೬-೦೯ ; 954) ;

ಕಡೆಕೊಳಿಂದ ಮಣ್ಣಿಗಪ್ಪೊಂಬುಗ್ಗಲಂ (ಪ್ರೌಅಂ. ೦೯೩೪, ೩೯–೨೨ ; 11ನೆಯ ಶತ). 'ಅಯ್ಮಣ್ಣಿಗ' ಪರಾ. [ಮಣ್ + – ಇಗ]

**ಮಣ್ಣು** 'ಮಣ್' ನೋ.

**ಮಣ್ಣುಕೊಡು** 'ಮಣ್ಗೊಡು' ನೋ.

**ಮಣ್ಣುಗ** (ನಾ). = ಮಣ್ಣಿಗ : ಉಗ ಪ್ರತ್ಯಯಕ್ಕೆ — ನಾರುಗಂ . . . ಹೆಣ್ಣುಗಂ, ಮಣ್ಣುಗಂ (ಶಮದ. ೨೦೪ ಪ್ರಯೋ); ಪೆಣ್ಣೊಳ್ ಪ್ರವಣಂ ವ್ಯಾಕೃತಂ ಮೇಣ್ ಪೆಣ್ಣುಗಂ ಏವಂ ಮಣ್ಣುಗಂ (ಶಬ್ದಾನು. ४२४ ಪ್ರಯೋ). [ಮಣ್ + – ಉಗ]

**ಮಣ್ಣುಗಾಣಿಸು** (ಕ್ರಿ). ಹೂಳು ; ಸಮಾಧಿಮಾಡು : ಹೆಣವನ್ನು ಮಣ್ಣುಗಾಣಿಸಿ ಬರುವುದರೊಳಗೆ ಸಂಜೆಯಾಯಿತು (ರೂಢಿ). [ಮಣ್ಣು (< ಮಣ್) + ಕಾಣಿಸು]

**ಮಣ್ಣುಗೂಡು** (ಕ್ರಿ). (ಅಲಂ) ಹಾಳಾಗು ; ನಾಶವಾಗು : ತಪ್ಪು ರೈತ ಕಾಳೇಗೌಡನು ಆಡಿದ ಮಾತನ್ನು ಕೇಳಿ ಇದುವರೆಗೂ ಇದ್ದ ಆಸೆ ಧೈರ್ಯ ಎಲ್ಲಾ ಮಣ್ಣುಗೂಡಿತು ರಂಗರಾಯರಿಗೆ (ಮಗಮಾಂ. ೦೩೯) : ನಿನ್ನ ಮನೆತನದ ಘನತೆ ಗೌರವಗಳು ಮಣ್ಣುಗೂಡಿದವು (ಮುಂಗಾಮು. ४). [ಮಣ್ಣು (< ಮಣ್) + ಕೂಡು₁]

**ಮಣ್ಣುಣ್** (ಕ್ರಿ). (ಅಲಂ) ನಾಶವಾಗು ; ಹಾಳಾಗು : ಪರನ ಶೂಲ ಪ್ರಹಾರಗಳನ್ನು ಗಣಿಸದಿಹ ಧುರವಿಜಯನೀ ಸಮಯದೊಳು ನರನ ಶರದಿಂದ ಮಣ್ಣುಂಡುದೆಂತೊ (ಪಂಚಾರಾ. ೬–೬೦–೩೭). [ಮಣ್ಣು (< ಮಣ್) + ಉಣ್]

**ಮಣ್ಣುಣಿ** (ನಾ). ಮಣ್ಣನ್ನೇ ಆಹಾರವಾಗಿ ಉಳ್ಳದು ; ಎರೆಹುಳು : (*). [ಮಣ್ಣು (<ಮಣ್) + – ಉಣಿ]

**ಮಣ್ಣುಪಾಲು** (ನಾ). ೧. (ಅಲಂ) ನಾಶ ; ಹಾಳು. ೨. ಸಾವು ; ಮರಣ : ಎಣ್ಣೆ ಬೆಣ್ಣೆಯ ರಿಣವು ಅನ್ನವಸ್ತ್ರದ ರಿಣವು ಹೊನ್ನು ಹೆಣ್ಣಿನ ರಿಣ ತೀರಿದಾಕ್ಷಣದಿ ಮಣ್ಣುಪಾಲು (ಸರ್ವಜ್ಞ. ४೬೩).

**ಮಣ್ಣು ಪಾಲಾಗಿಸು** = (ಅಲಂ) ಹಾಳುಮಾಡು; ನಾಶಮಾಡು : ಮಕ್ಕಳ ಸುಖಸೌಕರ್ಯಗಳನ್ನು ಅಲಕ್ಷಿಸುವ ರಾಷ್ಟ್ರವು ತನ್ನ ಭವಿಷ್ಯವನ್ನು ಮಣ್ಣುಪಾಲಾಗಿಸುವುದರಲ್ಲಿ ಸಂದೇಹವಿಲ್ಲ (ಮಾಪಾ. ೬೨). **ಮಣ್ಣು ಪಾಲಾಗು** = (ಅಲಂ) ಹಾಳಾಗು ; ನಾಶವಾಗು : ನನ್ನ ಕೆಲಸ ಮಣ್ಣುಪಾಲಾಗುತ್ತೆ (ಶಿರಾಕ. ३); ನನ್ನ ಉತ್ಸಾಹವೆಲ್ಲ ಮಣ್ಣುಪಾಲಾದಂ ತಾಯಿತು (ಅಂಹೂ. ೨४). **ಮಣ್ಣುಪಾಲುಮಾಡು** = ೧. ಮಣ್ಣಿನಲ್ಲಿ ಸೇರಿಸು,–ಬೆರೆಯುವಂತೆ ಮಾಡು : ಮಗುವನ್ನು ಏಕೆ ಮಣ್ಣುಪಾಲು ಮಾಡಿ ಹೋಗುತ್ತೀರಿ ? (ಪಕಥಾ. ३४३). ೨. (ಅಲಂ) ಹಾಳುಮಾಡು: ಕುರುಡ ಮುದುಕಿಯೊಬ್ಬಳನ್ನು ಯಾರೋ ಹಾಯ್ದು ಕಾಳು ಚೆಲ್ಲಿ ಅವಳ ಹೊಟ್ಟೆಯ ಕರುಳನ್ನೇ ಮಣ್ಣುಪಾಲುಮಾಡಿ ಮಾಯವಾಗಿದ್ದರು (ಳಪಕ. ೯೯). [ಮಣ್ಣು (<ಮಣ್) + ಪಾಲು₂ (<ಪಾಲ್₂)]

**ಮಣ್ಣುಪ್ಪು** (ನಾ). ಉಪ್ಪಿನ ರುಚಿಯಿರುವ ಮಣ್ಣು ; ಚೌಳುಪ್ಪು : ವಿಜಾಪುರಜಿಲ್ಲೆಯಲ್ಲಿಯೂ ಡೋಣಿಯ ದಂಡೆಯ ಮೇಲೆ ಪೂರ್ವದಲ್ಲಿ ಮಣ್ಣುಪ್ಪು ಬಹಳ ಹುಟ್ಟುತ್ತಿತ್ತು (ಳಪಾಗ. ೨೯). [ಮಣ್ಣು (< ಮಣ್) + ಉಪ್ಪು₁]

**ಮಣ್ಣುಬೊಂಬೆ** (ನಾ). ಮಣ್ಣಿನಿಂದ ಮಾಡಿದ ಗೊಂಬೆ : ಮಣ್ಣು ಮಣ್ಣಿನೊಳುದಿಸಲದರಿಂ ಮಣ್ಣುಬೊಂಬೆಗಳಾಗಿ ರಂಜಿಸಿ ಮಣ್ಣಿನಾ ಹಾರದಲೆ ಜೀವವ ಹೊರೆದವುಪಚರಿಸಿ (ಜಂಪಾ. ೯३). [ಮಣ್ಣು (<ಮಣ್) + ಬೊಂಬೆ]

**ಮಣ್ಣುಮುಕ್ಕ** 'ಮಣ್ಮುಕ್ಕ' ನೋ.

**ಮಣ್ಣುರೂಹು** (ನಾ). ಮಣ್ಣಿನಿಂದ ಮಾಡಿದ ಆಕಾರ : ಅಂಗದ ಕುಜುಹಿನ ನೆಮ್ಮುಗೆಯುಪ್ಪ ಲಿಂಗವು ಕಲಸಿದ ಮಣ್ಣುರೂಹಿಂಗೆ ಈಡಾಗದೆಂದಜಿದಡೆ ಆ ಲಿಂಗ ಭವಪಾಶವ ಗೆಲ್ಲುವುದು (ಬೋಳಬಸ. ೫೭–೨३೭). [ಮಣ್ಣು (<ಮಣ್) + ರೂಹು (<ರೂಪು)]

**ಮಣ್ಣುಹುಳ** 'ಮಣ್ಣುಹುಳು' ನೋ.

**ಮಣ್ಣುಹುಳು, ಮಣ್ಣುಹುಳ** (ನಾ). ಮಣ್ಣಿನಲ್ಲಿ ವಾಸಿಸುವ ಹುಳು ; ಎರೆಹುಳು : ಮಣ್ಣುಹುಳು, ಎರೆಹುಳು (Earth Worm. ಇಂಕಂ). **ಮಣ್ಣುಹುಳ** : ಮಣ್ಣುಹುಳವನ್ನು ರೈತನ ಗೆಳೆಯ ಎಂದು ಹೇಳುತ್ತಾರೆ (ರೂಢಿ). [ಮಣ್ಣು (<ಮಣ್) + ಹುಳು (<ಪುೞು)]

**ಮಣ್ಣುಳಿಗ** (ನಾ). = ಮಣ್ಣುಹುಳು : ಉಳಿಗ ಪ್ರತ್ಯಯಕ್ಕೆ . . . ಮಣ್ಣೊಳ್ ಜೀವಿಸುವ ಪಾವು ಮಣ್ಣುಳಿಗಂ (ಶಮದ. ೨೦೦ ಪ್ರಯೋ) ; ಭೋಗಿ ಬಾಪನ್ನದಿಂಪಿಗಾನಂದಿಪಂತೆ ಮಣ್ಣುಳಿಗನಾನಂದಿಪುದೆ (ಪುದೀಪು. ೧–೧೬); ಬಿಲಜೀವಿ–ಮಣ್ಣುಳಿಗನೀ ನನಗೆ ಸ್ವರ್ಗವೀರದ ವಜ್ರಾಯುಧ ಪ್ರಯೋಗವು ಹೀಗೆ ಅವತರಿಸಿದುದು ನನ್ನ ಭಾಗ್ಯೋದಯವಲ್ಲದಿಲ್ಲ (ಮಂತ್ರಕ. ೦೨೬–೦೬). [ಮಣ್ಣು + –ಉಳಿಗ₃]

**ಮಣ್ಣೂಡಿಸು** (ಕ್ರಿ). (ಅಲಂ) ಮಣ್ಣು ಮುಕ್ಕಿಸು ; ವ್ಯರ್ಥಗೊಳಿಸು : ನನ್ನ ಹೆಸರುಂ ಜಗದಿ ನಿನ್ನಿಂ ಚಿರಸ್ಥಾಯಿಸುವೆನೆಂಬ ಪಂಥಕೇಂ ಮಣ್ಣೂಡಿಸಲೆ ? (ಹಚ್ಚರ. ३४–३४). [ಮಣ್ + ಊಡಿಸು]

**ಮಣ್ಣೆ** (ನಾ). ಒಂದು ಊರಿನ ಹೆಸರು : ಮಣ್ಣೆಗ್ರಾಮಾಧಿಪತಿ (ಎಕ. VI. ಮೂಡಿಗೆ. ३೬–३೭; 749). [ ? ]

**ಮಣ್ಣೆತ್ತು** (ನಾ). ಮಣ್ಣಿನಿಂದ ಮಾಡಿದ ಎತ್ತು : ಮಣ್ಣುಬಸವ : ಕಾರಹುಣ್ಣಿಮೆ ಕರಿ ಹರಿದು ಮಣ್ಣೆತ್ತು ನೀರನು ಕುಡಿದವು (ಶಿಂಮು. ೦೨–३).

**ಮಣ್ಣೆತ್ತಿನ ಅಮಾವಾಸ್ಯೆ** = ಜ್ಯೇಷ್ಠ ಬಹುಳ ಅಮಾವಾಸ್ಯೆ : ಜ್ಯೇಷ್ಠಬಹುಳಅಮಾವಾಸ್ಯೆಯನ್ನು ಮಣ್ಣೆತ್ತಿನ ಅಮಾವಾಸ್ಯೆ ಎನ್ನುವರು (ಜಾಹಬ್ಬ. ೯३). [ಮಣ್ಣು (< ಮಣ್) + ಎತ್ತು₂ (<ಎಱು₁)]

**ಮಣ್ಣೆಯ** 'ಮನ್ನೆಯ' ನೋ.

**ಮಣ್ಣೊಡಲ** (ನಾ). ಮಣ್ಣಿನಿಂದ ಆದವನು ; ಮರ್ತ್ಯ ; ಮನುಷ್ಯ : ಚೋದ್ಯಮೇನೆಂಬೆನಾ ಮಣ್ಣೊಡಲರಲ್ಲಿ ತೊದಲಲಮ್ಮನಿಬರನಿಬರು ಮೂಗರಲ್ಲಿ (ಗಿಳಿಬಿಂ. ೦೨३–४೦). [ಮಣ್ಣು (< ಮಣ್) + ಒಡಲ್ + – ಅ₇]

**ಮಣ್ಣೊಡ್ಡ** (ನಾ). ಒಡ್ಡರಲ್ಲಿ ಒಂದು ಪಂಗಡ ; ಮಣ್ಣಿನ ಕೆಲಸ ಮಾಡುವವನು : (*). 'ಕಲ್ಲೊಡ್ಡ' ಪರಾ. [ಮಣ್ಣು (< ಮಣ್) + ಒಡ್ಡ₁]

**ಮಣ್ಣೋಡು** (ನಾ). = ಮಣ್ಗಪ್ಪರ : ಇವರು ನನ್ನ ಕೈಯಲ್ಲಿ ಕೊಟ್ಟ ಮಣ್ಣೋಡು ನಾನಿಟ್ಟ ಸ್ಥಳದಲ್ಲಿಯಿಲ್ಲ (ತುರಾಬಿ. ೬೦). [ಮಣ್ಣು (< ಮಣ್) + ಓಡು₂]

**ಮಣ್ಪಡಿ** (ಕ್ರಿ). ಮಣ್ಣಾಗು ; ತುಕ್ಕುಹಿಡಿ : ಭೂಮಿಯೊಳಗೆ ಹೂಳ್ದ ಲೋಹ ಮಣ್ಪಡಿವುದು ಹೇಮ ಮಣ್ಪಡಿವುದೇ (ಶಪಚ. ೨–३೨). [ಮಣ್ + ಪಿಡಿ₁]

**ಮಣ್ಪೆಱು** (ಕ್ರಿ). ಭೂಮಿಯನ್ನು ಪಡೆ ; ಜಮೀನನ್ನು ಹೊಂದು : ರಾಗಮೊದವೆ ಬೆಲೆವೆಣ್ ಪೆಣ್ಣಂ ಪೆತ್ತಂತಿರೆ ಪಾರ್ವಂ ಮಣ್ಪೆತ್ತಂತಿರೆ ಪಿರಿದು ಸಂತಸಂ ಮಿಗೆ (ಧರ್ಮಾಮೃ. ೦–೦३೭); ಕಣ್ಪೆತ್ತು ಸೂರ್ಯನಂ ಕಾಣದಿರ್ದಂ ಪ್ರಭುವೆ ಮಣ್ಪೆತ್ತು ಬೆಳೆಯಲ್ಲದೀಚುಪೋದಂ ವಿಭುವೆ (ಪಾಗಲ. ದೇ. ೨೬೦–೦೬). [ಮಣ್ + ಪೆಱು₁]

**ಮಣ್ಮಣಸು** (ನಾ). ಮಂಕು ; ನಿಸ್ತೇಜ : ಸೈಂಧವರ ಲಾವಣ್ಯ ಮಣ್ಮಣಸು, ಮಣ್ಣುಗೂಡಿತು ಕಣಸು (ಸೂರ್ಯಕಾ. ४೯–೦೭). [< ಮಣ್ ? ]

**ಮಣ್ಮಳಿ$_1$** (ಕ್ರಿ). ಕಷ್ಟಪಡು ; ಕೋಟಲೆಗೊಳ್ಳು (?) : ಮಾನಸದ ಗುಣದೊಳುಂ ಮಣ್ಮಳಿದುಪುಸಿರುವತಿಹೀನಂ ಮಹಾದೀನರೊಳಗೆ ಪರಿಪೂಜ್ಯ ನಿಪನೇನೆಂದು ಕಡೆಗಣ್ಣ ನೋಡದೆನ್ನಂ ಪಾಲಿಸು (ಶೃಶುಃಕ್ಷ. ೬-೦೨೮). [?]

**ಮಣ್ಮಳಿ$_2$** 'ಮಣ್ಮಾಟಿ' ನೋ.

**ಮಣ್ಮಳಿಗೊಳ್**, ಮುಮ್ಮಳಿಗೊಳ್. ಮುಮ್ಮಳಿಗೊಳು, ಮುಮ್ಮುಳಿಗೊಳ್, ಮುಮ್ಮುಳಿಗೊಳು (ಕ್ರಿ). ೧. ಭಯಂಕರವಾದ ರೀತಿಯಲ್ಲಿ ಸಾಯು,—ಮರಣಹೊಂದು : ಈಶ್ವರನಿಂ ಮುನ್ನಮೆ ಮಣ್ಮಳಿಗೊಂಡ ಮದನಂಗಾ ಮಱುಪುಟ್ಟು ಪಡೆಯಿಸಲೊಡಪಿದ ಜೀವನವಾಯುವಿದು (ಜಯಶಾ. ೦-೩೦); ಪೊಡಲೆ ಮೋಹರದೊಳ್ ಮಣ್ಮಳಿಗೊಂಡದಟರರಸು ಮಕ್ಕಳ ಹೆಟ್ಟುಗೆಯರ್ ಮುಂದದಿಂ ತೋಳ್ಗುಡೆ ಬೇಪ ಪಲವು ಕುಂಡಂ ಕಣ್ಗೊಪ್ಪಿದುವು (ಜಯಶಾ. ೬-೨೮). **ಮುಮ್ಮಳಿಗೊಳ್** : ೨. ತಳಮಳಗೊಳ್ಳು ; ಸಂಕಟಕ್ಕೆ ಗುರಿಯಾಗು : ಅಂತಿದಂ ಕೇಳ್ದು ಸಭೆ ಮಱುಗಿ ಮುಮ್ಮಳಿಗೊಂಡು (ತಿರುಕ. ದೇ. ೧೭-೦೬). **ಮುಮ್ಮಳಿಗೊಳು** : ೨. ಕಾಮನಂಬಿಂ ಮುಮ್ಮಳಿಗೊಳುತ್ತೆ ಮಂದಾನಿಲನಿಂ ಮಲ್ಲಳಿಗೊಳುತ್ತೆ . . . ಮನಂ ಕೊರಗುತ್ತಮಿರೆ (ಪಂಬಿಕ. ೬೨-೦೧೮). **ಮುಮ್ಮುಳಿಗೊಳ್** : ೨. ಮುಸುಕಿರ್ದ ಭವಬಂಧನವ ತೆಗೆದು ಕಳೆವಂತೆ ಮುಸುಕಂ ತೆಗೆದನಲ್ಲಿ ನೋಳ್ಪರದೆ ನೋವಂತೆ ತೆಗೆಯೆ ಬೆನ್ನಿಂದಲಗುರಕ್ಕೆ ಮೂಡಿರೆ ಕಂಡು ಬೆಗಡುಗೊಳುತೆಲ್ಲರುಂ ಮಱುಗಿ ಮುಮ್ಮುಳಿಗೊಂಡು (ಶೀಬಿಕ. ದೇ. ೬೬-೦೬); ಪಿಂಡೊಡೆದು ಗಜಸೇನೆ ಮುಮ್ಮುಳಿಗೊಂಡು ಮುರಿದುದು (ಕುಮ್ಮ.ಕ. ೦೦-೦೮). **ಮುಮ್ಮುಳಿಗೊಳು** : ೨. ತಿಳಿಯೆ ತಕ್ಷಕಕುಳಿಕ ಮುಖ್ಯರು ಬಲವದಹಿರಿಪುಭೀತಿಯಲಿ ಮುಮ್ಮುಳಿಗೊಳುತ್ತಿಹರು (ಶಿಶಾಗ. ೩-೦೦-೩೦); ರಿಪುಸೇನೆಗಳ್ಮುರಿಯೆ ಪರಕೆ ಭಯಗೊಂಡು ಮುಮ್ಮುಳಿಗೊಳು ತಿರಲ್ಪಾರ್ಥನಂ ಕೋಪಗೊಂಡು ರವಿತನಯನಂ ತಾಕಿದನು (ಕುರುಗ. ೭೦-೪೯). [ಮಣ್ಮಳಿ$_2$ (< ಮಣ್ಮಾಟಿ) ಕೊಳ್$_1$]

**ಮಣ್ಮಾಟಿ**, ಮಣ್ಮಳಿ$_2$, ಮುಮ್ಮಾಟಿ, ಮುಮ್ಮಳಿ, ಮುಮ್ಮಳಿ, ಮುಮ್ಮುಳಿ (ನಾ). ೧. ರೂಪುಗೆಟ್ಟ ಸಾವು : ಭಯಂಕರವಾದ ಮರಣ : "ಮಣ್ಮಾಟಿ ರೂಪಟಿದ ಸಾವು" (ಕಪಾಡ. ೭೦. ೦). **ಮಣ್ಮಳಿ$_2$** : ೧. ಅಣ್ಣಣ್ಣೆಂದೆಂಬರನುಜಪೊಕ್ಕರ ಪೆಣ್ಮಕ್ಕಳ ಪುಲ್ಬಿಡಿದರ ಮಣ್ಮಳಿಯನು ಮಾಳ್ಪವರ ಭೀರತೆಯಿಂ ಬೆಳ್ಮಾನಿಸರಪ್ಪವರ್ಗೆ (ಶ್ರೀಶಾಂ. ೯-೬೭). **ಮುಮ್ಮಾಟಿ** : ೧. "ಮುಮ್ಮಾಟಿ ರೂಪಟಿದಿರ್ದ ಸಾವು" (ಕರ್ಣಾಶ. ೦೭). **ಮುಮ್ಮುಳಿ** : ೨. ತಳಮಳ ; ಸಂಕಟ : 'ಮುಮ್ಮುಳಿಕೆ' ಪರಾ. **ಮುಮ್ಮಳಿ** : ೧. "ಮುಮ್ಮಳಿಯೆನಿಸೆ ರೂಪಳಿದ ಸಾವು" (ಶಾರಸ. ೩೭). ೨. ನೆಪ್ಪಿ ಕಟ್ಟಾಸುರದ ದೃಷ್ಟಿವಿಕರ್ಮದುಪ್ಪಟೆಯಿಂದ ಋಷಿಗಳ ಮುಮ್ಮಳಿಯುಗೊಳಿಸುವನು ದಿನದಿನಕವನು ಜಡವಾಗ (ಅಂಬಿಕಾ. ೬-೦೩). 'ಮುಮ್ಮಳಿಗೊಳ್' ಪರಾ. ೩. ಕೇಡು ; ನಾಶ ; ಹಾನಿ : ಕೋಪದುತ್ತುಂಗತೆಯೊಳೊಪ್ಪದಿರಲಪ್ಪುದೇ ದೇವತಾಸಭೆಗೆಮುಮ್ಮಳಿತಪ್ಪದು (ಪಂಚಾಂಶ. ೩-೦೭-೨೯). ೪. ಕ್ಷೋಭೆ ; ಗೊಂದಲ ; ವಿಪ್ಲವ : ಓಡುತದೆ ಅಳೊಡೆಯನನು ಬೀಸಾಡಿ ತಾಯಿಗೆ ಮಕ್ಕಳಾಗದೆ ಕೂಡೆ ಮುಮ್ಮಳಿಮಸಗುತದೆ (ಕುಮ್ಮ.ಕ. ೨೪-೦೮). **ಮುಮ್ಮುಳಿ** : ೨. 'ಮುಮ್ಮುಳಿಗೊಳ್' ಪರಾ.

ಮಣ್ಮಾಟಿಯಾಗು, ಮುಮ್ಮಾಟಿಯಾಗು, ಮುಮ್ಮಳಿಯಾಗು, ಮುಮ್ಮಾಟಿಯಾಗು — ಭಯಂಕರವಾದ ಸಾವಿಗೆ ಈಡಾಗು : ತೇರ್ ತೇರನಾನೆಯು ಮಾನೆಯುಂ ಹರಿಹರಿಯನಾಂತಾಗಳ್ ನಿಂದಣ್ಮಿ ಮಣ್ಮಾಟಿಯಾಪ್ಪುದುಂ (ಶಾಂತಿಪು. ೩-೬೩); ಉತ್ಸಾಹಮನಪ್ಪುಕೆಯ್ದುಱಿದು ಪೋಗದೆ ಮಣ್ಮಾಟಿಯಾಗೆ ವಾಹಕರಟ್ಟೆಯುಂ ತುರಗದಟ್ಟೆಯುಮಾಡಿಮವಾಜಿರಂಗದೊಳ್ (ಶಂಶಾವಿ. ೦೩-೬೩); ತುರಗಸೇನೆಗಳಂತೆರಡುಂ ಕರಂ ಪರಿಸಿ ಮುಮ್ಮಾಟಿಯಾಗಿರೆ ಕಂಡು (ನೇಮಿಪು. ೦೦-೦೬೯); ಮಂದಿ ಮುಮ್ಮಳಿಯಾಯಿತೀ ಕಪಿವೃಂದ ಕಂಪಿಸಿತು (ತೊರವೆ. ೬-೮-೬೦); ಅಶ್ವರನಂಗಳು ತವೆಮ್ಮಳಿಚಿದು ಮುಮ್ಮಾಟಿಯಪ್ಪರ್ (ಅಶ್ವಿಮ. ೬-೨೩). [?]

**ಮಣ್ಮಾಟಿವೋಗು**, ಮುಮ್ಮಳಿಯೋಗು (ಕ್ರಿ). ಭಯಂಕರವಾದ ಮರಣಕ್ಕೆ ತುತ್ತಾಗು : ಅಂದಂದು ದೇವರ್ಕಳೊಳದಿರ್ಚಿ ಮಣ್ಮಾಟಿವೋದ ರಕ್ಕಸರೊಳವಗೆಯು ಪಾಪದ ಪೊತ್ತವೋ ಎನೆ ... ಕರ್ಗಚ್ಚಲೆ ಮುಸುಂಕಿದತ್ತು (ರಾಮಾಶ್ವ. ೦೦೯-೨೩). **ಮುಮ್ಮಳಿಯೋಗು** : ಕೂಡೆ ಮುಮ್ಮಳಿಯೋದುದೀ ಶರ ರಭಾಡಿಯಲಿ ಚತುರಂಗಬಲವಕ್ಕಾಡಿತೇನೆಂಬೆನು ಯುಧಿಷ್ಠಿರ ನೃಪನ ಪರಿವಾರ (ಕುಮ್ಮ.ಗ. ೯-೪೨). [ಮಣ್ಮಾಟಿ + ಪೋಗು$_1$ (< ಪೋ$_1$)]

**ಮಣ್ಮಾಟಿಸು**, ಮುಮ್ಮಳಿಸು, ಮುಮ್ಮಾಟಿಸು, ಮುಮ್ಮುಳಿಸು (ಕ್ರಿ). ೧. ತಳಮಳಗೊಳ್ಳು; ಸಂಕಟಪಡು : ಶೈಳಮನೆತ್ತುವುದುಂ ಗೋಪಾಳಂ ಫಣಮಣಿಗಳೆಸೆಯೆ ಮಣ್ಮಾಟಿಸುವ ಪಾತಾಳಾಹಿವಿತತಿ ಪಾವಿನ ಪೇಟಿಗೆಯಂ ತೆಱೆದ ತೆಱದಿನೇಂ ತೋಱಿದುವೋ (ಅರ್ಗಸೇ. ೪-೦೩). **ಮುಮ್ಮಳಿಸು** : ೨. ಹೊಯ್ದಾಡು; ಕ್ಷೋಭೆಗೊಳ್ಳು : ಮುಮ್ಮಳಿಪ ನೊರೆ ಬುದಬುದವನೊಡೆಗಲಸಿ ಕದಡ ಕಂಗಳವಟ್ಟ ಲಹರಿಗಳ ಲಗ್ಗೆಯಿಂದೆಸವ ನದಿಯೊಪ್ಪವನದೇವೊಗಳ್ವೆನು (ಹಕಶಾ. ೦೦-೨೯). **ಮುಮ್ಮಾಟಿಸು** : ೧. ಮುಮ್ಮಾಟಿಸಿ ಪಾಂಡವಕೌರವಬಲದ [ಕಲಿಕೆ]ಯ ಪ್ರಧಾನನಾಯಕರ್ಕಳ್ . . . ಕೆಯ್ಮಿಕ್ಕು ಕಾವಲ್ ನಡೆತರ್ಪವೇಗದೊಳ್ (ಶಂಶಭಾ. ೦೩-೩೭ ವ). ೨. ಮುಮ್ಮಾಟಿಸಿದ ಪಲವುಂ ರಾಜಚಿಹ್ನಂಗಳ್ಂ ಬೆಳ್ಗೊಡೆಗಳ್ ತಳ್ತೊಪ್ಪು ದೇಂ ಕಣ್ಗೊಳಿಸಿದುದೊ ವಿಪ[ಕ್ಷ]ತ್ರಿಕಚ್ಛತ್ರಪಿಂಡಂ (ಶಂಶಭಾ. ೦೩-೩೮). **ಮುಮ್ಮುಳಿಸು** : ೧. ನೂತನನಿಳುಹಿ ಹಯಪ್ಪೋಡಿದವು ಮುಮ್ಮುಳಿಸಿ ತನಗುದಿಗುದಿದು ಕೋಟಲೆಗೊಂಡುದರಿಸೇನೆ (ಕುಮ್ಮ.ದ್ರೋ. ೦೯-೩೭). [ಮಣ್ಮಾಟಿ + – ಇಸು$_3$]

**ಮಣ್ಮುಕ್ಕ**, ಮಣ್ಣುಮುಕ್ಕ (ನಾ). ಮಣ್ಣನ್ನು ಆಹಾರವಾಗಿ ಉಳ್ಳ ಒಂದು ಬಗೆಯ ಹಾವು : ಮಣ್ಮುಕ್ಕಹಾವು . . . ಎಂದು ಪಲವು ತರದ ಹಾವುಗಳುಂಟು (ಮುಂಬಿಯ. ೨-೩೩). **ಮಣ್ಣುಮುಕ್ಕ** : ನಿರ್ವಿಷ ಸರ್ಪಗಳಲ್ಲಿ ಪೆಬ್ಬಾವು ಶ್ರೇಷ್ಠ. ಇವಲ್ಲದೆ ಮಣ್ಣುಮುಕ್ಕ . . . ಹಸುರು ಹಾವು ಮುಂತಾದ ಜಾತಿಗಳು ಪಲವುಂಟು (ಕಶಾಗ. ೬೭). 'ನೆಲಮುಕ್ಕ' ಪರಾ. [ಮಣ್ + ಮುಕ್ಕು$_1$]

**ಮತ** (ನಾ). ೧. ಅಭಿಪ್ರಾಯ : ಮನೋಗತ : ಆಶಯ : ಇನ್ನು ಸೇನಾಪತಿಯದಾರ್ಗೆ ನಿನ್ನ ಮತವೇನುದಯವಾಗದ ಮುನ್ನ ಬವರವ ಹಿಡಿಯಬೇಹುದು ವೈರಿರಾಯರಲಿ (ಕುಮ್ಮ.ದ್ರೋ. ೦-೩೪); ಹನುಮನ ಮತವೇ ಹರಿಯ ಮತವು ಹರಿಯ ಮತವೇ ಹನುಮನ ಮತವು (ಪುರಂದ. ಭಾ. ೦-೪೮ ಪಲ್ಲವಿ); ನಿರಹಂಕಾರಭಾವದಲ್ಲಿ ನಿಸ್ಸಂಕುಚಿತ ವಿಕಸಿತ ಸ್ವಭಾವದಲ್ಲಿ ಈ ಜೀವಿಯೇ ಸಮಷ್ಟಿರೂಪಿ, ಇದು ಗೀತೆಯ ಮತ (ಭಾರತ. ೦೦೩). ೨. ಉದ್ದೇಶ : ಗುರಿ. ೩. ಆಲೋಚನೆ ; ವಿಚಾರ : ಚಿಂತನೆ : ನಮ್ಮ ಪಕ್ಷದ ದೇವ ನೀ ಕೇಳಯ್ಯ ಮತವನು ಸುಧೆಯ ತಾ ಸಹಿತ (ಸಂಶಕ. ೩-೦೦೯). ೪. (ಹಿಂದು, ಜೈನ, ಕ್ರೈಸ್ತ, ಬೌದ್ಧ ಮೊದಲಾದ ವಿವಿಧ ಧರ್ಮಗಳಲ್ಲಿ) ಯಾವುದಾದರೊಂದು ಧರ್ಮದ ದೈವವನ್ನು ನಂಬಿ ಅನುಸರಿಸುವ ಮಾರ್ಗ ಮತ್ತು ಆಯಾ ಧರ್ಮಗಳಲ್ಲಿ ವಾಡಿಕೆಯಾಗಿರುವ ಧರ್ಮಸಂಬಂಧವಾದ ಆಚಾರ. — ಸಂಪ್ರದಾಯ : ಇತರ ಮತದವರಲ್ಲಿ ಪರಮತಸಹಿಷ್ಣುತೆ ಇಲ್ಲದುದರಿಂದ ಅವುಗಳ ಬೆಳವಣಿಗೆಗೆ ತಡೆಯುಂಟಾಗಿದೆ (ಭಾರಜ. ೩೨೯). 'ಮತಾಂತರ' ಪರಾ. ೫. ತತ್ತ್ವ : ಸಿದ್ಧಾಂತ : ಮತಗಳಾರದೊಳಾವುದರೊಳಾಗಾವನತಿಭಕ್ತಿಯನು ಮಾಡೆ ಮಗುಳಾ ಹಿತದೊಳಾ ರೂಪಿಂ ಪತಿಕರಿಸುವೆ (ಅಂಬಿಕ. ೦-೦೦೦) ; ಮತಕಾಗಿ ಮಡಿವರು ಮತಕಾಗಿ ಸಿಡಿವರು ಮತಕಾಗಿ ಬದುಕರು ಜನರು (ಜಂಶಾಕ. ೦೩೭-೬೩). ೬. ಚುನಾವಣೆ

ಮುಂತಾದ ಸಂದರ್ಭಗಳಲ್ಲಿ ಜನರು ತಮ್ಮ ಆಯ್ಕೆಯನ್ನು ಕುರಿತು ಸೂಚಿಸುವ ಅಭಿಪ್ರಾಯ ಅಥವಾ ಅಂಥ ಅಭಿಪ್ರಾಯವನ್ನು ಗುರುತಿಸಿರುವ ಚೀಟಿ ; ಓಟು : ಉಮೇದುವಾರರನ್ನು ತಿಳಿದು ಮತವನ್ನು ಕೊಡಲು ಅನುಕೂಲ (ರಾಯುಳ. ೯೦) ; ಪ್ರತಿಯೊಬ್ಬನಿಗೂ ಎಷ್ಟೆಷ್ಟು ಮತಗಳು ಬಂದಿವೆಯೋ ಅಷ್ಟನ್ನು ಮಾತ್ರ ಇತರರಿಗೆ ಹಂಚಬೇಕು (ಕವಿಕೋ. VII, ೩೪೯).

**ಮತಕೊಡು** = ಮತವನ್ನು ಚಲಾಯಿಸು ; ಓಟುಮಾಡು : ಕೆಲವು ಸಲ ಒಂದು ಪಕ್ಷದವರು . . . ಇತರ ಮತದಾರರು ಮತ ಕೊಡಲು ಸಮಯ ಸಿಗದಂತೆ ಮಾಡಬಹುದು (ಕವಿಕೋ. VII, ೩೩೯). **ಮತಚಲಾಯಿಸು** = ಮತಕೊಡು : ಬಹಿರಂಗವಾಗಿ ಮಾತ್ರ ಬಾಯಿ ಹೇಳಿಕೆಯ ಮೂಲಕ ಮತಚಲಾಯಿಸುವ ಪದ್ಧತಿ . . . ೧೯೩೦ರ ವರೆಗೂ ಇದ್ದಿತ್ತು (ಕವಿಕೋ. VII, ೩೯೩). **ಮತನೀಡು** = ಮತಕೊಡು : ಇತರ ದೇಶಗಳಲ್ಲಿ ಕೂಡ ಹಲವರು ಮತನೀಡದಿರುವುದು ಅಧ್ಯಯನದಿಂದ ತಿಳಿದು ಬಂದಿದೆ (ಕವಿಕೋ. VII, ೩೩೩). **ಮತಹಾಕು** = ಮತಕೊಡು : ಮತಹಾಕುವ ಸಾಧನಕ್ಕೆ (ಬ್ಯಾಲಟ್) ಶಲಾಕಾ ಎಂದು ಹೆಸರಿತ್ತಂತೆ (ಕವಿಕೋ. VII, ೩೯೩). [ಸಂ.]

**ಮತಂಗ** (ನಾ). ೧. ಆನೆ ; ಗಜ : ಇದೆ ಗದಾದಂಡದ ಹತಿಗೆ ಮುಗ್ಗಿದ ಮತಂಗ ವರೂಥಚಯವಿಲ್ಲಿದೆ (ಶಾವ್ಯರತ್ನ. ೦೩-೨). ೨. ಮೋಡ ; ಮುಗಿಲು. ೩. ಒಬ್ಬ ಋಷಿಯ ಹೆಸರು : ಸುಮೇರುಪರ್ವತದಲ್ಲಿ ಅತ್ರಿ . . . ಮತಂಗ . . . ಉಪಮನ್ಯು ಮೊದಲಾದಷ್ಟಾಶೀತಿಸಹಸ್ರಋಷೀಶ್ವರರ್ಗನಂತಾಶ್ರಯಂಗಳುಂ (ಐವೇಳ. ೦೭೩) ; ಮತಂಗಮುನಿಶಾಪದಿಂ ಬಾರನ್ಕೆಸಲೆ ಗರುಡನಳಿಯ ಮೇಲೆ (ಕೃವಿಲಾ. ೨೯-೨೨). [ಸಂ.]

**ಮತಂಗಜ** (ನಾ). ೧. ಆನೆ : ಗಜ : ಆಕೆಯ ಹಾವಭಾವವಿಳಾಸ ವಿಭ್ರಮ ಕಟಾಕ್ಷೇಕ್ಷಂಗಳ್ ಮನಮನೊನಲಿಸೆಯುಮೆರ್ದೆಯಂ ಕಸಲಿಸೆಯುಮನಂಗ ಮತಂಗಜಕೋಳಾಹಳಾಕುಳೀಕೃತಾಂತರಂಗನಾಗಿ (ಶಂಶಥಾ. ೯-೭೯ ಪ) ; ಸಮನಾಗಿ ಕೂಡಿ ಕಟಿಪೆರಸು ಮತಂಗಜಕಿಕ್ಕೆ ಶೂಲೆ . . . ಅರುಚಿತ್ವಮೆಂಬವಂ ಮಾಣಿಸುಗುಂ (ಲೋಕೋಪ. ೯-೨೯೭) ; ಮುಂಗುಡಿಯ ಮುಜುದೊಕಿ ಘೀಮಂಗಂಘವಿಸಿದನು ಕ್ಷೇಮಧೂರ್ತಿ ಮತಂಗಜದ ಮೇಲೆಸುತ ಬಲುನಾರಾಚಸೋನೆಯುಲಿ (ಕುಮ್ಯಾಳ. ೨-೦೭). ೨. ಒಬ್ಬ ರಾಕ್ಷಸನ ಹೆಸರರ : ಮತಂಗಜಾಸುರನು ಮುಂದುಗೆಡಸಿದಪತ್ತ ವೇತಕೆ (ಐಸಘು. ೦೬-೨೨). [ಸಂ.]

**ಮತಂಗಿ** (ನಾ). ದುರ್ಗೆಯ ಒಂದು ಹೆಸರು : ಸಮಿತಂ ಕರತಳದೊಳಿಟ್ಟು ಶುಭಮಂತ್ರೋಕ್ತದಿ ಮತಂಗಿಯ ಧ್ಯಾನಿಸುತ ಕೊಂಡು (ಜಂಳವಾ. ೦೯-೦೨). [<ಸಂ. ಮಾತಂಗೀ]

**ಮತಕಟ್ಟೆ** 'ಮತಗಟ್ಟೆ' ನೋ.

**ಮತಕ್ಷೇತ್ರ** (ನಾ). ಓಟಿನ ಹಕ್ಕು ಪಡೆದ ಜನರಿರುವ ಪ್ರದೇಶ : ಚುನಾವಣೆಯ ಕ್ಷೇತ್ರ : ಅಧಿಕಾರಿಗಳ . . . ಆಯ್ಕೆ ಸ್ಥಾನಿಕವಲ್ಲದ, ಎಂದರೆ ವಿವಿಧ ತಂಡಗಳ (ಟ್ರೈಬ್ಸ್) ಮತಕ್ಷೇತ್ರದಿಂದ ಆಗುತ್ತಿತ್ತು (ಕವಿಕೋ. VII, ೩೯೯). [ಸಂ.]

**ಮತಗಟ್ಟೆ**, ಮತಕಟ್ಟೆ (ನಾ). ಓಟುಹಾಕಲು ಗೊತ್ತುಮಾಡಿದ ಸ್ಥಳ ; ಬೂತು : ಒಂದು ಪಕ್ಷದವರು ತಮ್ಮ ಬೆಂಬಲಿಗರನ್ನೇ ಮೊದಲು ಮತಗಟ್ಟೆಗೆ ತಂದು ನಿಲ್ಲಿಸಿ ಇತರ ಮತದಾರರು ಮತಕೊಡಲು ಸಮಯ ಸಿಗದಂತೆ ಮಾಡಬಹುದು (ಕವಿಕೋ. VII, ೩೩೯). **ಮತಕಟ್ಟೆ** : ಸತ್ತ ದನದಂತೆನ್ನ ಎಳೆಯ ಬೇಡ ಮತಕಟ್ಟೆ ತನಕವೂ ಎಳೆಯಬೇಡ (ಅರಕೋ. ೦೩). [ಮತ + ಕಟ್ಟೆ$_1$]

**ಮತಗಣನೆ** (ನಾ). ಓಟುಗಳ ಎಣಿಕೆ : ಮತಗಣನೆಯಾಗುವಾಗಲೂ ಅಕ್ರಮವಾಗಬಹುದು (ಕವಿಕೋ. VII, ೩೩೯). [ಸಂ. ಮತಗಣನ]

**ಮತಘರ್ಷಣೆ** (ನಾ). ೧. ಅಭಿಪ್ರಾಯಗಳ ತಿಕ್ಕಾಟ, – ಚರ್ಚೆ : ಅಂದಂದು ಮತಘರ್ಷಣೆಗಳ ದುರಂತಘಟನೆಗಳು ನಡೆದುಹೋಗುತ್ತಿವೆ (ಕಿಕ್ಷ. ೬೯). ೨. ಜಾತಿ ಅಥವಾ ಧರ್ಮಗಳ ತಾಕಲಾಟ: ಮತಘರ್ಷಣೆಗೆ ಆ ಸ್ಥಳದಲ್ಲಿ ಅವಕಾಶವೇ ಇರಲಿಲ್ಲ (ಕೂ೨). [ಸಂ. ಮತಘರ್ಷಣ]

**ಮತಚೀಟಿ** (ನಾ). ಗುಪ್ತವಾಗಿ ತನ್ನ ಅಭಿಪ್ರಾಯವನ್ನು ಸೂಚಿಸಲು ಚುನಾವಣೆಯಲ್ಲಿ ಉಪಯೋಗಿಸುವ ಪತ್ರ, – ಚೀಟಿ : ಮತಚೀಟಿಗಳ ಮೇಲೆ ನಮೂದಿಸಲಾದ ಪ್ರಥಮಪ್ರಾಶಸ್ತ್ಯ (ಅಧಿಮಾನ) ಮತಗಳಿಗೆ ಅನುಗುಣವಾಗಿ ಮೊದಲು ಅವುಗಳ ಎಣಿಕೆ ಮಾಡಲಾಗುತ್ತದೆ (ಕವಿಕೋ. VII, ೩೯೯). [ಮತ + ಚೀಟಿ$_2$ (< ಚೀಟು$_2$) ]

**ಮತದಾನ** (ನಾ). ಓಟುಕೊಡುವುದು, – ಹಾಕುವುದು : ಎಲ್ಲರೂ ಕೂಡಿ ಕಾರ್ಯಕಾರಿಮಂಡಲದಲ್ಲಿ ಇರಬೇಕಾದವರ ಒಂದು ಪಟ್ಟಿ ತಯಾರು ಮಾಡುವ, ಮತದಾನ, ಗುಪ್ತಮತದಾನ ಬೇಡ (ಐರು೩. ೦೩೯). [ಸಂ.]

**ಮತದಾರ** (ನಾ). ಚುನಾವಣೆಯಲ್ಲಿ ತನ್ನ ಅಭಿಪ್ರಾಯವನ್ನು ಚೀಟಿಯ ಮೂಲಕ ತಿಳಿಸುವವನು ; ಓಟುದಾರ : ಮತದಾರರುಗಳಿಂದ ನೇರವಾಗಿ ನಿರ್ವಾಚಿತರಾದ . . . ಸದಸ್ಯರುಗಳಿರತಕ್ಕುದು (ಕಾರಾಪ. ೯೦); ಇದರಿಂದಲೇ ತಮ್ಮ ಮತದಾರರ ವಿಶ್ವಾಸ ಗಳಿಸಿಕೊಂಡರೆನ್ನಬಹುದು (ಅಪಾ. ೦೦೭). [ಮತ + – ದಾರ$_4$]

**ಮತದಾರಕ್ಷೇತ್ರ** (ನಾ). = ಮತಕ್ಷೇತ್ರ : ರಾಷ್ಟ್ರವ್ಯವಸ್ಥೆಯ ಪ್ರತಿರಂಗದಲ್ಲೂ ಮತದಾರಕ್ಷೇತ್ರದಲ್ಲಿ, ಸಂಸತ್ತಿನಲ್ಲಿ, ಮಂತ್ರಿಸಂಪುಟದಲ್ಲಿ, ಪಕ್ಷಗಳು . . . ನಿರ್ದೇಶನದ ತತ್ತ್ವಗಳನ್ನು ನೀಡುತ್ತ ಬಂದಿವೆ (ರಾಜಕ. ೨). [ಮತದಾರ + ಕ್ಷೇತ್ರ]

**ಮತಪತ್ರ** (ನಾ). = ಮತಚೀಟಿ : ಕಳೆದ ವಾರ ನಡೆದ ಚುನಾವಣೆಯ ಮತಪತ್ರಗಳ ಎಣಿಕೆ ನಡೆಯುತ್ತಿದೆ (ಕೂ೩). [ಸಂ.]

**ಮತಪೆಟ್ಟಿಗೆ** (ನಾ). ಮತಹಾಕಲು ಇಟ್ಟಿರುವ ಪೆಟ್ಟಿಗೆ : ಓಟಿನ ಪೆಟ್ಟಿಗೆ : ಮತಪೆಟ್ಟಿಗೆಗಳನ್ನು ಸಾಗಿಸುವಾಗ ವಿವಿಧ ಹಂತಗಳಲ್ಲಿ ಅವನ್ನು ಬದಲಾಯಿಸಬಹುದು (ಕವಿಕೋ. VII, ೩೩೯). [ಮತ + ಪೆಟ್ಟಿಗೆ]

**ಮತಪ್ರಚಾರ** (ನಾ). (ಯಾವುದಾದರೊಂದು) ಮತದ ತತ್ತ್ವಗಳ ಪ್ರಚಾರ : ಮುಸ್ಲಿಮರು ಹಿಂದಿನ ರಾಜಕೀಯಬಲವನ್ನು ಈಗ ಕಳೆದುಕೊಂಡಿದ್ದರೂ ಮತಪ್ರಚಾರದ ಹುಮ್ಮಸ್ಸು ಏನೂ ಕಡಮೆಯಾಗಿಲ್ಲ (ಇಸ್ಲಾಂಸಂ. ೨೭). [ಸಂ.]

**ಮತಪ್ರವರ್ತಕ** (ನಾ.) (ಯಾವುದಾದರೊಂದು ಮತಕ್ಕೆ ಸಂಬಂಧಿಸಿದ) ತತ್ತ್ವವನ್ನು ನಿರೂಪಿಸುವವನು ; ಸಿದ್ಧಾಂತಸ್ಥಾಪಕ : ಈಶ್ವರಸಂಕಲ್ಪವೇ ಪ್ರಕೃತಿನಿಯಮವೆಂದು ಅರಿಯುವ ವಿಚಾರಪರತೆ ಮತಪ್ರವರ್ತಕರಲ್ಲಿರಲಿಲ್ಲ (ಜುಕ್ಯಾರ. ೦೦ ಶಿ೬೬). [ಸಂ.]

**ಮತಭೇದ** (ನಾ). ಭಿನ್ನಾಭಿಪ್ರಾಯ ; ಅಭಿಪ್ರಾಯಭೇದ : ಮತಭೇದವುಂಟು ಮಾಧವಭಕ್ತಿಗಿದಕಾ ಮತಭೇದವೂ ಮಗುಳಿಲ್ಲ (ಹರಿ. ೨-೯) ; ಟೀಕಕರ ವೇದಾಂತದ ವಿಷಯವಾಗಿ ಎಷ್ಟೋ ಮತಭೇದವಿರಬಹುದು (ರಮ್ಯಶಾ. ೦೩೯). [ಸಂ.]

**ಮತಭ್ರಷ್ಟ** (ನಾ). ತತ್ತ್ವದಿಂದ ದೂರವಾದವನು ; ಸಿದ್ಧಾಂತವನ್ನು ಬಿಟ್ಟವನು. [ಸಂ.]

**ಮತಲಪ್** 'ಮತಲಬ್' ನೋ.

**ಮತಲಪು** 'ಮತಲಬ್' ನೋ.

**ಮತಲಬ್**, ಮತಲಪ್, ಮತಲಪು, ಮತಲಬು (ನಾ). ಅಭಿಪ್ರಾಯ : ಅಭಿಮತ : ಮತಲಬ್ ಅಂತ ಎಲ್ಲಿ ಅಂದೆ ಮಾದಲ್ಕ ನಾನು ?

(ದೀಶತ. II, ೪೪೦). **ಮತಲಪ್ :** ಸರದಾರವರ ಹಾಪಿಯೊಡನೆ ಕವಲು ಬರೆದು ಕೊಟ್ಟು ಮತಲಪ್ ಅಲಬತ್ ತಿಳಿಸಿ ಇದ್ದೇನೆ (ತಾಪಾಪಂ. ೨೨೬). **ಮತಲಪು :** ಟೀಪುಸುಲ್ತಾನರು . . . ನಾನಾಪ್ರಕಾರ ವಿರುದ್ಧ ಮಾಡುವ ಮತಲಪಿನಲ್ಲಿ ಇದ್ದಾರೆ (ರಾಕೇಂದ್ರ. ೩೪). **ಮತಲಬು :** ಇದಕ್ಕೆ ಮುಂದೆ ಬರೆಯುವ ಮತಲಬು ಸಾಕ್ಷಿ ಇದೆ (ರಾಕೇಂದ್ರ. ೦೦೩) : ಈಗಲೆ ಅಪರಾಧಿಗಳ ಅರ್ಜಿಯ ಮತಲಬಿನ ಮೇಲೆ ಭಾರವಿಟ್ಟು ಅವನ ಅರಿಕೆಯನ್ನು ನಡಿಸೋಣ (ವಾಗ್ದೇಬಿ. ೦೬೮).

[← ಅರ. ಮತ್‌ಲಬ್ : ಹಿಂ. ಮರಾ. ಮತಲಬ್]

**ಮತಲಬು** 'ಮತಲಬ್' ನೋ.

**ಮತಸಹಿಷ್ಣುತೆ** (ನಾ). ಬೇರೆಯ ಮತದ ಬಗೆಗೆ ಇರುವ ಸಹನೆ. — **ಸ್ಮರಣೆ :** ಭಾರತೀಯರಲ್ಲಿ ಮತಸಹಿಷ್ಣುತೆ ಬೆಳೆಯಲು ಮತವಿಚಾರದಲ್ಲಿ ಭಾರತೀಯರು ಅನುಸರಿಸಿರುವ ಸಂಶೋಧನೆಯ ಮನೋಭಾವ ಇನ್ನೊಂದು ಮುಖ್ಯಕಾರಣ (ಭಾರದ. ೩೨೬). [ಸಂ. ಮತಸಹಿಷ್ಣುತಾ]

**ಮತಸ್ಥ** (ನಾ). ಒಂದು ಮತವನ್ನು ನಂಬಿ ಆ ಮತದ ಸಂಪ್ರದಾಯಕ್ಕೆ ಬದ್ಧನಾದವನು : ಆಯಾಯ ಮತಸ್ಥರಿಗೆ ಆಯಾಯ ಆಹಾರವು ಸ್ವಾಭಾವಿಕವೇ ಸರಿ (ಶ್ರೀಚಿತ್ರ. ೨೬೩) ; ದೇವಾನಾಂಪ್ರಿಯ ರಾಜನು ಸರ್ವ (ಪಾಷಂಡ) ಮತಸ್ಥರನ್ನೂ ಸನ್ಯಾಸಿಗಳನ್ನೂ . . . ಗೌರವಿಸುತ್ತಿರುವನು (ಭಾರದ. ೩೩೦). [ಸಂ.]

**ಮತಸ್ಥಾಪನೆ** (ನಾ). (ಯಾವುದಾದರೊಂದು ಹೊಸ) ತತ್ತ್ವ. ಆಚಾರ. ಸಂಪ್ರದಾಯಗಳನ್ನು ರೂಢಿಗೆ ತರುವಿಕೆ : ಇಂಥ ಮತಸ್ಥಾಪನೆ ಮಾಡುವುದೆಂದರೆ ನಾನೊಬ್ಬ ಸಂತನಾಗಿಯೇ ಮಾರ್ಪಡಬೇಕಾಗಿತ್ತು (ಸ್ವಾತಿ. ೦೮೧). [ಸಂ. ಮತಸ್ಥಾಪನ]

**ಮತಾಂತರ** (ನಾ). ೧. ಭಿನ್ನಾಭಿಪ್ರಾಯ : ವ್ಯಾಖ್ಯಾನಕಾರನು ಕೇಶಿರಾಜನು ಹೇಳದೆ ಬಿಟ್ಟಿರುವುದನ್ನು ಮತಾಂತರಸೂತ್ರದಿಂದ ಸ್ಪಷ್ಟಗೊಳಿಸಿರುವುದು ಸಂದೇಹಕ್ಕೆಡೆಯಿಲ್ಲದಾಗಿದೆ (ಶಬ್ದಾಶಾಂ. ೬೮). ೨. ಒಂದು ಮತವನ್ನು ಬಿಟ್ಟು ಮತ್ತೊಂದು ಮತವನ್ನು ಸೇರುವಿಕೆ: ಮೊಗ್ಗಲಿಪುತ್ತ ತಿಸ್ಸನು (ಅಶೋಕನನ್ನು ಬೌದ್ಧಧರ್ಮಕ್ಕೆ ಮತಾಂತರಗೊಳಿಸಿದವನು . . . ರಕ್ಷಿತನನ್ನು ವನವಾಸಿಗೂ (ಈಗಿನ ಬನವಾಸಿ) ಬೌದ್ಧಧರ್ಮ ಪ್ರಚಾರಕ್ಕೆ ಕಳುಹಿಸಿಕೊಟ್ಟನು (ಕಶಾಇ. ೦೦೩); ಕ್ರೈಸ್ತ ಮಹಮ್ಮದೀಯ ಮತಗಳಲ್ಲಿ ಮತಾಂತರಹೊಂದಿ ಮದುವೆಯಾಗಲು ಅವಕಾಶವಿದೆ (ಬಂಕಿಮ. ೨೦೩). [ಸಂ.]

**ಮತಾಂಧ** (ನಾ). ತಾನು ನಂಬಿರುವ ಮತವೇ ಎಲ್ಲ ಮತಗಳಿಗಿಂತ ಶ್ರೇಷ್ಠವೆಂಬ ಕುರುಡು ನಂಬಿಕೆಯುಳ್ಳವನು : ಇತರ ಮತಗಳ ಒಳ್ಳೆಯ ಅಂಶಗಳನ್ನು ಕಾಣದವನು : ಭಿನ್ನಮತದವರು ಮಾಡಿದ . . . ಟೀಕೆಗಳನ್ನು ಲಕ್ಷಿಸದಿದ್ದರೆ ಮತಾಂಧರಾಗಿ ನಾವು ತಿಳಿದಿದ್ದೇ ಸತ್ಯ, ಮಾಡಿದ್ದೇ ಧರ್ಮ ಎಂಬ ದುರಹಂಕಾರ ನಮ್ಮಲ್ಲಿ ಬೆಳೆಯಲು ಅವಕಾಶವಾಗುತ್ತದೆ (ಭಾರದ. ೩೩೦). [ಸಂ.]

**ಮತಾಚಾರ** (ನಾ). ಯಾವುದಾದರೊಂದು ಮತದ ಸಂಪ್ರದಾಯದ ಅನುಷ್ಠಾನ.—**ಆಚರಣೆ :** ಬ್ರಹ್ಮಚಾರಿ ಯತಿ ದೀಕ್ಷಿತರಿಗೆ ಸೂತಕಾದಿ ಹೊಲೆಗಳಿಲ್ಲವೆಂಬುದು ಮೊದಲಾದಾಚಾರಭೇದಮಿರ್ಪುದರಿಂ ಮತಾಚಾರ . . .ಮೊದಲಾದವುಗಳಂ ತಿಳಿದು (ಶಿವೇಶ. ೦೮೬) ; ಧರ್ಮಾಚರಣವು ಕೇವಲ ಕಾಯಕ್ಲೇಶದ ಕಲಾಪವೂ ಅಲ್ಲ ; ಕೆಲವು ಉತ್ಸಾಹಿಗಳು ಹೇಳುವಂತೆ ಬರಿಯ ಮತಾಚಾರವೂ ಅಲ್ಲ (ಆರ್ಯಾಪ. ೪೨). [ಸಂ.]

**ಮತಾಧಿಕಾರ** (ನಾ). ಓಟುಮಾಡುವ ಅಧಿಕಾರ : ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ಮತಾಧಿಕಾರಕ್ಕೆ ಕನಿಷ್ಠ ವಯೋಮಿತಿ ೧೮–೨೫ ವರ್ಷ (ಕಿವಿಕೋ. VII. ೩೪೩). [ಸಂ.]

**ಮತಾನುಯಾಯಿ** (ನಾ). (ಯಾವುದಾದರೊಂದು) ಮತದ ಆಚಾರ. ವಿಚಾರ ಸಂಪ್ರದಾಯಗಳನ್ನು ಅನುಸರಿಸುವವನು : ಈ ಮತಾನುಯಾಯಿಗಳನ್ನು ಮಲಾಮತೀಯ (ನಿಂದ್ಯರು) ಎಂದು ಕರೆಯುತ್ತಿದ್ದರು (ವಿಶ್ವಾಂಸಂ. ೨೬೦). [ಸಂ. ಮತಾನುಯಾಯಿನ್]

**ಮತಾಪು** 'ಮಹತಾಪು' ನೋ.

**ಮತಾಯಿ** (ನಾ). (ಕರಾ) ಅಲೆ ; ತರಂಗ : ತೆರೆ : ನಾನು ಜಲ್ದಿ ಬೂವಿ, ಲಂಗರು ಬಿಟ್ಟು ದೋಣಿ ನಿಲ್ಲಿಸುತ್ತೇನೆ. ಎಷ್ಟು ಮತಾಯಿ ಬಂದರೂ ಈ ದೋಣಿ ಮುಳುಗದು (ಪ್ರಂಚಾ. ೪೬). [← ತುಳು. ಮತಾಯಿ]

**ಮತಾವಲಂಬಿ** (ನಾ). (ಯಾವುದಾದರೊಂದು) ಮತವನ್ನು ಅವಲಂಬಿಸಿರುವವನು : ಭಾರತೀಯರು ಇಸ್ಲಾಂಮತಾವಲಂಬಿಗಳನ್ನು ಕುರಿತು ಮಾತನಾಡುವಾಗ ಅವರನ್ನು ತುರುಕರು ಎಂದು ಕರೆಯುವುದುಂಟು (ಭಾರದ. ೪೦೩). [ಸಂ. ಮತಾವಲಂಬಿನ್]

**ಮತಿ** (ನಾ). ೧. ತಿಳಿಯುವ ಶಕ್ತಿ : ಜ್ಞಾನ : ತಿಳಿವಳಿಕೆ : "ಪ್ರೇಕ್ಷಾ . . .ಮತಿಃ. . .ಉಪಲಬ್ಧಿಃ — ಈ ೧೩ ಬುದ್ಧಿ" (ಹಲಾಯು. ೩೩-೦೬೪) ; ಕ್ಷಿತಿಯೊಳ್ಮಿಥ್ಯಾಮಾರ್ಗಂ ಸತತಂ ಸನ್ಮಾರ್ಗಮಾವುದೆಂದರಿಯದ ಸಂಸೃತಿಯ ಮನುಜಂಗೆ ಕಣ್ಣಂ ಮ[ಶಾಂತಿಪು. ಗ]ತಿಯುಮಂ ದೆಂತುಟಲ್ತೆ ಜಿನರಾಜಮತಂ (ಸಮುಕ. ೩-೨೮) ; ಮತಿಯಿಲ್ಲದ ಮರುಳ ನಾಸಯ್ಯ (ಬಸವ. ೨೩೬) ; ಮತಿಯು ತಾಂ ಸತ್ಯ ಶುಭಗಳ ನವನವಾಂಶಗಳ ಗತಿಯ ನರಸುತ ನಡೆಯೆ (ಮಂಕುತ. ೨೨೮). ೨. ಅಭಿಪ್ರಾಯ : ಆಶಯ : ಮೇಲಿನ ಐದು ದರ್ಶನಗಳಲ್ಲಿಯ ಕುಂದುಕೊರತೆಗಳನ್ನು ನಿವಾರಿಸಿಕೊಂಡು ಸರ್ವಸಮ್ಮತವಾಗುವಂತೆ ವಿಚಾರಿಸುವುದರಿಂದ ಅವರ 'ಮತಿ' ಯೇ ಮತವಾಗಿ ಪ್ರಸಿದ್ಧವಾಯಿತು (ಭಾರದ. ೦೩೦). ೩. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು : ಮತಿ ನಿರ್ವೇದಾವಹಿತ್ಥಶ್ರಮ ಮದಜಡತಾಗ್ಲಾನಿ . . . ಇವಿಂತೆಯ್ದು ಸಂಚಾರಿಭಾವಂ (ಕಾವ್ಯಾವ.೬೪೩) : ಮತಿ . . . ಅಪಸ್ಮಾರಗಳೆಂಬ ಮೂವತ್ತುಮೂರು ಸಂಚಾರೀಭಾವಂಗಳಿಂ ಪರಿವರ್ಧಿಸಿ (ಶಿವೇಶ. ೨೨೬) ; ಶಾಸ್ತ್ರಾದಿಗಳ ಸಹಾಯದಿಂದ ಒಂದು ನಿಶ್ಚಯಕ್ಕೆ ಬರುವುದು ಮತಿ (ಭಾರಮೀ. ೩೪೬). ೪. [ಯೋಗ] ಹೃದಯಕಮಲದಲ್ಲಿರುವ ಹನ್ನೆರಡು ದಳಗಳಲ್ಲಿ ಒಂದು : ಹೃದಯಕಮಲದಲ್ಲಿರುವ ೧೨ ದಳಗಳಲ್ಲಿ ೧೨ ರೂಪಗಳು, ಅವು ಶಕ್ತಿ, ಪ್ರತಿಷ್ಠಾ, ಸಂವಿತ್, ಸ್ಫೂರ್ತಿ, ಪ್ರವೃತ್ತಿ, ಪರಾ, ವಿದ್ಯಾ, ಮತಿ, ನಿಯತಿ, ಮಾಯಾ, ಕಾಲ, ಪುರುಷ — ಹೀಗೆ ೧೨ ರೂಪಗಳು (ಪಶಾರ. ೪-೨೩ ತಾತ್ಪರ್ಯ). ೫. [ಜೈನ] ಎಂಟು ವಿಧವಾದ ಜ್ಞಾನಗಳಲ್ಲಿ ಒಂದು ; P "ತಿಳಿದ ವಿಷಯವನ್ನು ಮನನ ಮಾಡುವುದು : ಬಾರಿಬಾರಿಗೂ ಚಿಂತಿಸುವುದು" (ಕೈಪಕೋ. ೦೪೮) : ಕುಮತಿ ಕುಶ್ರುತ ವಿಭಂಗ ಮತಿ ಶ್ರುತಿ ಅವಧಿ ಮನಃಪರ್ಯಯ ಕೇವಲಜ್ಞಾನವಿಕಲ್ಪದಿಂ ಜ್ಞಾನಮಷ್ಟವಿಧಂ (ತತ್ತ್ವಸೂ. ೦೬). [ಸಂ.]

**ಮತಿಗಿಡಿಸು** 'ಮತಿಗೆಡಿಸು' ನೋ.

**ಮತಿಗಿಡು** 'ಮತಿಗೆಡು' ನೋ.

**ಮತಿಗೆಡಿಸು, ಮತಿಗಿಡಿಸು** (ಕ್ರಿ). ತಿಳಿವಳಿಕೆಯು ಪ್ರಯೋಜನಕ್ಕೆ ಬರದಂತೆ ಮಾಡು ; ಅರಿವುಗೆಡಿಸು : ಭ್ರಾಂತಿಗೊಳಿಸು : ಬೆಂದ ಮನವೆನ್ನ ಮತಿಗೆಡಿಸಿ ಕಾಡಿತ್ತು (ಬಸವ. ೪೯) ; ಈ ಸತಿ ಮಾಯೆಯಲ್ಲಿ ಮತಿಗೆಡಿಸಿ ಕೆಡಿಸಿದಳುದಿಸಿ ರಕ್ಕಸರ (ತೊರೆರಾ. ೩-೮-೨೨); ಅತಿನಿಡಿಯ ಕಂಗುಡಿಯ ಹೊಯಿಲಿಂ ಮತಿಗೆಡಿಪ ಬೆಳೆವೆಣ್ಗಳೊಪ್ಪಿದ ರತುನನೆಲೆಯುಪ್ಪರಿಗೆ ತರತರದಿ ಮೆರೆದಿಹುದು (ಹಾಕ್ಷಾ. ೨-೦೦). **ಮತಿಗಿಡಿಸು :** ಮದ್ದು ಕಾಣಿಕೆಯಂತೆ ಪಿತ್ಥದಂತೆ ನಾಯ ಪಾಲಂತೆ ಮತಿಗಿಡಿಸುವ ಪೆಂಡಿರುಮಂ (ರಕೋಶ್ಚು. ೪-೨೩) : ಸೂಸಕದ ಸೂಳೆರಬ್ಬರವಾದುವಪ್ಪರಂ

ಮತಿಗಿಡಿಸಿತ್ತು ದಿಟ್ಟ ಸಜ್ಜೆಗೆಯ್ದುದು . . . ಗಾಡಿಕಾರ್ತಿಯುಗ (ಅನ್ಯಾವ. ೬೦). [ಮತಿಗೆಡು + — ಇಸು₃]

**ಮತಿಗೆಡು,** ಮತಿಗಿಡು (ಕ್ರಿ). ತಿಳಿವಳಿಕೆಯು ಪ್ರಯೋಜನಕ್ಕೆ ಬರದಂತೆ ಆಗು : **ಅರಿವಿಲ್ಲದಾಗು** : ಮತಿಗೆಟ್ಟು ಮಗಳ ಸಂಸ್ಕೃತಿಲತೆಯೊಳ್ ತೊಡರಲ್ಕೆ ನೀನಿವಂ ನೆಗೞ್ದೌ (ಆದಿಪು. ೩-೩೯) ; ಮತಿಗೆಟ್ಟಿನು ಮನದ ವಿಕಾರದಿಂದ ಧೃತಿಗೆಟ್ಟಿನು ಕಾಯವಿಕಾರದಿಂದ (ಬಸವ. ೯೩). **ಮತಿಗಿಡು :** ಕಳ್ಳುಡಿದರಂತೆ ಮತಿಗಿಡುತ್ತುಂ (ಧರ್ಮಾಮೃ. ೧-೧೬೦). [ಮತಿ + ಕೆಡು₁]

**ಮತಿಗೇಡಿ** (ನಾ). ತಿಳಿವಳಿಕೆಯಿಲ್ಲದಿರುವ ವ್ಯಕ್ತಿ; ಬುದ್ಧಿಗೇಡಿ ; **ಅರಿವುಗೇಡಿ** : ಬೇಡವೆಂದು ನಿವಾರಿಸಲು ಮತಿಗೇಡಿ ಛಲದಲಿ ಮೂಗನುಜ್ಜಿಯೋಗಾಡಿದಂತಭಿಮಾನವಂ ನೀಗಿ (ಜಸವು. ೨೨-೪೦) ; ಹೇಯವೀ ಸಂಸಾರವೆನ್ನದೆ ಮೋಹಿಸುವ ಮತಿಗೇಡಿ ಮಾನವ ಸಾಯಸಿಯೆ ಸಟೆಮಾತು (ಹಂಶಾ. ೭೯). [ಮತಿ + ಕೇಡಿ₁]

**ಮತಿಜ್ಞಾನ** (ನಾ). "ಇಂದ್ರಿಯಗಳ ಅಥವಾ ಮನಸ್ಸಿನ ಮೂಲಕ ವರ್ತಮಾನಕಾಲದ ಪದಾರ್ಥಗಳನ್ನು ತಿಳಿಯುವುದು. ಜ್ಞೇಯ ಪದಾರ್ಥ ಮತ್ತು ಇಂದ್ರಿಯವಿಶೇಷದ ಸನ್ನಿಕರ್ಷದಿಂದ ಮನಸ್ಸಿನಲ್ಲಿ ಉತ್ಪನ್ನವಾಗುವ ವಸ್ತುಬೋಧ" (ಜೈಪಕೋ. ೧೯೬) : ಇರ್ಪತ್ತೊಂದು ಮತಿಜ್ಞಾನಭೇದವುಮಂ . . . ಯಥೋಚಿತವಿಧಿಯಿಂ ನೋಂತು (ಆದಿಪು. ೩-೪೦ ವ); ಪಂಚೇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಆತ್ಮನಿಗೆ ಆಗುವ ಜ್ಞಾನವು ಮತಿಜ್ಞಾನವು (ಜೈಪತ. ೩೬೬). [ಸಂ.]

**ಮತಿಪ್ರಕಾಶ** (ನಾ). ತಿಳಿವಳಿಕೆಯು ಗೋಚರವಾಗುವಿಕೆ ; ಜ್ಞಾನೋದಯ : ವ್ಯಾಕರಣ ಕಾವ್ಯಾದಿಗಳಂ ಪೇಳುತ್ತೆ ಮಕ್ಕಳ್ಗೆ ಮತಿಪ್ರಕಾಶಕ್ಕಂ ಜ್ಯೋತಿಷ್ಮತೀತೈಲಮಂ ಮಾಡಿ ಕುಡಿಕೆಯೊಳಿಟ್ಟು ಮಂದಮತಿಯಾಗಿರ್ದರಿಗೆ ಅರೆಬಿಂದುಮಾತ್ರಮಂ ಕುಡುತ್ತುಮಿರ್ಪುದಂ (ಧರ್ಮಾಮೃ. ೩೨). [ಸಂ.]

**ಮತಿಬವಣೆ** (ನಾ). ತಿಳಿವಳಿಕೆಯು ಕೆಡುವುದು : ಬುದ್ಧಿಭ್ರಮಣೆ : ದಿವಿಜರಿಪುಗಳು . . . ಕವಲುವರಿಯುವ ಚಿತ್ತದಲಿ ಸಂಭವಿಸಿದುಂದ್ರಿಯ ಭಾವದಲಿ ಮತಿಬವಣೆಗೊಳದಿರ್ದರು ನಿರಾಹಾರದ ಸುನಿಷ್ಠೆಯಲಿ (ಜರಂ. ೪-೦೬). [< ಸಂ. ಮತಿಭ್ರಮಣ]

**ಮತಿಭೂಮ** (ನಾ). **ಅತ್ಯಧಿಕ** ತಿಳಿವಳಿಕೆಯನ್ನು ಪಡೆದಿರುವವನು ; ಅಪಾರಜ್ಞಾನವುಳ್ಳವನು : ಮತಿಭೂಮನಾ ಶ್ರೀರಾಮನುದ್ದಾಮನಾ ವೀರಲಕ್ಷ್ಮಣನುಮಾ ಅಲ್ಪಮಂ ಕೇಳುತಿರ್ದಾರ್ (ಶ್ರೀರಾಮಾ. ೦೯೭-೦೯೯).
[ ಸಂ. ಮತಿಭೂಮನ್ ]

**ಮತಿಭ್ರಮಣೆ** (ನಾ). = ಮತಿಬವಣೆ : ಆತನಿಗೆ ಮಕ್ಕಳ ಅನಾದರಣೆಯಿಂದ ಮತಿಭ್ರಮಣೆಯುಂಟಾಗಿರುವುದು (ಕಪಕ. ೩೯). [ ಸಂ. ಮತಿಭ್ರಮಣಾ ]

**ಮತಿಭ್ರಷ್ಟ** (ನಾ). = ಮತಿಗೇಡಿ : ಕಾಣುತ್ತ ಕಡೆಗಣಿಸಿ ಕಡಿಸಿಯುಜಿಸುವ ಮತಿಭ್ರಷ್ಟ ನಾನಯ್ಯ (ಬಸವ. ೩೦೫). [ಸಂ.]

**ಮತಿಮಂತ** (ನಾ). ತಿಳಿವಳಿಕೆಯುಳ್ಳವನು ; ಬುದ್ಧಿವಂತ : ರೇವದಾಸ ವೀಸೋತ್ತರದೀಕ್ಷಿತರ ಗುಣಂಗಳನೆಣಿಸುವ ಮತಿಮಂತರ ನಾನದೆಲ್ಲಿಯುಂ [ಕಣ್ಣ]ಜಾಯೆ (ಎಇ. XIII, ೩೩೦-೦೨; ೨೭೨). [ ಸಂ. ಮತಿಮತ್ ]

**ಮತಿಮಂದ** (ನಾ). ಮಂಕುಬುದ್ಧಿಯವನು ; ಅಜ್ಞಾನಿ : ಮತಿಮಂದನಾಗಿ ಗತಿಯ ಕಾಣದೆ ಇರ್ದೆನಯ್ಯಾ ಹುಟ್ಟುಗುರುಡನ ಕಯ್ಯ ಕೋಲ ಕೊಟ್ಟು ನಡೆಸುವಂತೆ ನಡೆಸಯ್ಯಾ ಎನ್ನ (ಬಸವ. ೨೩೫): ಅಹಂಕಾರ ಮಮಕಾರಗಳಿಂದ ಮತಿಮಂದನಲ್ಲಾ ನೋಡಾ ಭಕ್ತನು (ಸಿದ್ಧೇಶ. ೨೦೩-೬೩೯). 'ಮಂದಮತಿ' ಪರಾ. [ಸಂ.]

**ಮತಿಮಱೆ**[2] (ಕ್ರಿ). = ಮತಿಗೆಡು : ಶಾ ಮತಿಮಱೆದನಕಟಾ ಕೆಟ್ಟೆನು (ಕಭಾಗ. ೧೦-೨೩-೬). [ ಮತಿ + ಮಱೆ₁ ]

**ಮತಿವಂತ** (ನಾ). = ಮತಿಮಂತ : ಪುರಾಣಚೂಡಾಮಣಿಯೆಂದಿಂತು ಪೆಸರಿಡುಗುಮೋ ಮತಿವಂತಂ ಕವಿಚಕ್ರವರ್ತಿ ಸಮೆದೀ ಕೃತಿಯಂ (ಶಾಂತಿಪು. ೦೨-೫೬) ; ಆನಂದದಿಂ ಭಕ್ತತತಿಗೀವ ಮತಿವಂತನೆನಿತು ಭಕ್ತರ್ಬಂದೊಡನಿತು ಮೊರೆಯೋಜಂವಂ (ನೇಶ. ದೇ. ೯೯-೯).
[ ಸಂ. ಮತಿವತ್ ]

**ಮತಿವಂತೆ** (ನಾ). ತಿಳಿವಳಿಕೆಯುಳ್ಳವಳು; ಬುದ್ಧಿವಂತೆ : ಮತಿವಂತೆಯು ಧರ್ಮಜ್ಞೆಯು . . . ಸತ್ಯಾನ್ವಿತವಚನೆಯು ಕಥೆಯನೆ ಪೇಟ್ಗತಿಶಯದಿಂ ತನ್ನ ವಧುಗೆ (ಮುದಾ. ೬-೦೯). [ಮತಿವಂತ + — ಎ₂]

**ಮತಿವಿಕಲ,** ಮತಿವಿಕಳ (ನಾ). ತಿಳಿವಳಿಕೆಯು ನಾಶವಾಗಿರುವ ವ್ಯಕ್ತಿ; ಅರಿವುಗೇಡಿ : ತನ್ನ ತೀರದ ಚಿಂತೆಯಲ್ಲಿ ಮತಿವಿಕಲನಾಗಿದ್ದ ವಾಜಶ್ರವಸನಿಗೆ ಆ ಸಣ್ಣ ಮಾತೂ ಅರ್ಥವಾಗದೆ, ಕೆಣಕಿದ ಹುಲಿಯಂತೆ ಹರಿಹಾಯ್ದ (ನಕಂಬ. ೨೯). **ಮತಿವಿಕಳ :** ಸಕಲಧರ್ಮದ ಸಾರವನು ಮತಿವಿಕಳನಾಗದೆ ಚಿತ್ತವಿಸು (ಕುಮಾವ್ಯಾ. ೪-೦೫); ಸುತರ ಪರರೆಡೆಗಿತ್ತು ನಂಬಿದ ಸತಿಯ ತಂದಡವಿಯಲಿ ಮಲಗಿಸಿ ಮತಿವಿಕಳನಾದೆನು (ಶಕಕ. ೬-೩); ಕಾಪಿನ ಭಟರ್. . . ಗತಿಯಂ ಕಾಣದೆ ಮತಿವಿಕಳರಾಗೆ (ರಾಮಾಶ್ವ. ೦೩೫-೩೦).
[ಸಂ.]

**ಮತಿವಿಕಳ** 'ಮತಿವಿಕಲ' ನೋ.

**ಮತಿವಿಕಳತನ** (ನಾ). ತಿಳಿವಳಿಕೆಯಿಲ್ಲದಿರುವುದು : ಅಜ್ಞಾನ : ಬುದ್ಧಿಹೀನತೆ : ಸತ್ತ ನೀನೆಲವೆಲವೊ ಕರದಪೆ ಮೃತ್ಯುವನು ಮತಿವಿಕಳತನ ನಿನಗತ್ಯಧಿಕತರವಾಯ್ತಲಾ ಹೇಳವಡೆ ಬುದ್ಧಿಯನು (ಕಭಾಗ. ೫-೭-೧೦); ಕ್ಷಿತಿಯನೆಲ್ಲವ ಸೋತು ಜೂಜೊಳು ಪತಿ ಬನಕೆ ಬಂದೆನ್ನನಗಲಿದ ಮತಿವಿಕಳತನದಿಂದ ತಿರುಗುತ ಬಂದೆ ತಪ್ಪುಡಿಗೆ (ಶಕಕ. ೫-೫೬).
[ ಮತಿವಿಕಳ ( = ಮತಿವಿಕಲ ) + — ತನ ]

**ಮತಿವಿಕಳತೆ** (ನಾ). = ಮತಿವಿಕಳತನ : ಮತಿವಿಕಳತೆಯಿಲ್ಲದೆಯುಂ ಹುತವಹಯುತಮಾಗೆ ಬಗೆದ ಗತಿಯಂ ಪಡೆಗುಂ ಸತತಮದು . . . ತಪ್ಪುಗುಮೋ (ಹಂಶತಂ. ೨೬೨-೦೬). [ ಸಂ. ಮತಿವಿಕಲತಾ ]

**ಮತಿವಿದ** (ನಾ). ಬುದ್ಧಿವಂತ : ತಿಳಿದವನ ಮತಿವಿದನ ಭಾಷಾವಳಿ ಲಿಪಿಜ್ಞನ ಸಾಕ್ಷರನ . . . ಸಂಧಿವಿಗ್ರಹರೆನಿಸಬೇಕು (ಕುಮಾವ್ಯಾ. ೩-೮೯).
[ ಸಂ. ಮತಿವಿದ್ ]

**ಮತಿವಿಹೀನತೆ** (ನಾ). = ಮತಿವಿಕಳತನ ; ಇತರರಂ ಕೂಡಿಪ್ಪುದೆಲ್ಲೆನೆ ಮತಿವಿಹೀನತೆಯಲ್ಲದೇ ಗುರುಮತವಹುದೆ ಕೇಳ್ (ಬಸವ. ೬೦-೩೭).
[ ಸಂ. ಮತಿವಿಹೀನತಾ ]

**ಮತಿಹೀನ** (ನಾ). = ಮತಿಗೇಡಿ : ಮತಿಹೀನರಪ್ಪ ಮನುಜರ್ ಪತಂಗವೃತ್ತಿಯನೆ ಕೊಂಡು ಕೊನೆಯುತ್ತಿರ್ಪರ್ (ಹಂಶತಂ. ೨೦೭-೦) ; ಮತಿಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು (ಹಂಶಾ. ೪೯) : ಯತಿಗಳೆಂಬವರ ಮತಿಹೀನರ ಮಾಡಿತ್ತು ನೋಡಾ ಮನವು (ಅಲಂದೇ. ೨೫೭-೬). [ಸಂ.]

**ಮತೀಯ** (ಗು). ೧. ತತ್ತ್ವಕ್ಕೆ ಸಂಬಂಧಿಸಿದ ; ಸಿದ್ಧಾಂತಕ್ಕೆ ಸಂಬಂಧಿಸಿದ : ಭರತವರ್ಷದ ಮತೀಯ ಇತಿಹಾಸದಲ್ಲಿ ಈ ಸಂಪ್ರದಾಯಕ್ಕೆ ವಿಸ್ತಾರವಾದ ಆಖ್ಯಾಯಿಕೆಯೇ ಇದೆ (ಶಾರದ. ೨೬೨) ; ಸಂಸ್ಕೃತಮಹಾಕಾವ್ಯಗಳಲ್ಲಿ ಸಾರ್ವಜನಿಕ ಮಹಾಕಾವ್ಯ (Secular Poetry) ಐತಿಹಾಸಿಕ ಮಹಾಕಾವ್ಯ (Historical Poetry) ಮತೀಯ ಮಹಾಕಾವ್ಯ (Religious Poetry) ಎಂಬ ಮೂರು ಭಾಗಗಳಿವೆ (ಶಾರದ. ೪೫೦). ೨. ಜಾತಿಗೆ ಸಂಬಂಧಿಸಿದ ; ಕೋಮುವಾರು : ಹಿಂದೂ ಮುಸ್ಲಿಂ ಸಂಬಂಧಗಳು ಮತೀಯಕ್ಷೇತ್ರದಲ್ಲಿ ಹೇಗೋ ಹಾಗೆ ರಾಷ್ಟ್ರೀಯ ಕ್ಷೇತ್ರದಲ್ಲೂ ಕೂಡಿಕೊಳ್ಳುತ್ತಿವೆ (ಇತ್ಯಾಂಸಂ. ೨೬). (ನಾ). ೩. **(ಯಾವುದಾದರೊಂದು) ಮತಕ್ಕೆ ಸೇರಿದವನು : ಈ ಮತೀಯರ ಸಂಖ್ಯೆ** ನೂರಕ್ಕೆ ಎಪ್ಪತ್ತು (ಇತ್ಯಾಂಸಂ. ೨೯). [ಸಂ.]

**ಮತ್ತೈಕ್ಯ** (ನಾ). ಅಭಿಪ್ರಾಯದ ಒಮ್ಮತ ; ಏಕಮತ : ಲಘುಚಿಪ್ಪೆಯಂತೂ ನೇರವಾದ ಗೆರೆಯೆಂಬುದು ಮತ್ತೈಕ್ಯವುಳ್ಳ ವಿಚಾರವಾಗಿದ್ದು ಅದರ ಸ್ವರೂಪನಿರ್ಣಯದಲ್ಲಿ ತೊಡಕಿಲ್ಲ (ಸಂಕೀರ್ಣ. ೦೦೦). [ಸಂ.]

**ಮತ್ಕುಣ** (ನಾ). ೧. ರಕ್ತವನ್ನು ಹೀರಿ ಜೀವಿಸುವ ಒಂದು ಬಗೆಯ ಕೀಟ : ತಗಣೆ : ಪರಿತಂದು ತಿಂದು ಮಂಚಾಂತರದೊಳ್ ತಚ್ಛಿದ್ರ ಭಾಗಮಂ ಪೊಕ್ಕುದತಿತ್ವರಿತಗತಿ ಮತ್ಕುಣಂ (ಶಂಕಕಂ. ೦೩೦-೦೦); ಕುಂಥು ಘುಣ ಮತ್ಕುಣ ದಂಶ ಮಶಕ . . . ಕ್ರಿಮಿಕೀಟಕಾದಿ ತ್ರೀಂದ್ರಿಯಂಗಳ್ (ಕತ್ತ್ರೈ. ೯೬) ; ತನ್ನ ಕಡಿಯ ಬಂದ ಮತ್ಕುಣಗಳ ನೊಸಲ ಕಣ್ಣಿನಿಂದು ರುಪಲ್ (ಶಾಸೋಕ. ೦೦-೦೩). ೨. ಗಡ್ಡವಿಲ್ಲದ ಮನುಷ್ಯ. ೩. ಕೋರೆಹಲ್ಲಿಲ್ಲದ ಆನೆ. ೪. ಕೋಣ ; ಮಹಿಷ. ೫. ತೆಂಗಿನ ಮರ. [ಸಂ.]

**ಮತ್ತ₁** 'ಮತ್ತಲ್' ನೋ.

**ಮತ್ತ₂** (ಗು). ೧. ಮದವೇರಿದ : ಅಮಲೇರಿದ : 'ಮತ್ತಕೋಕಿಲ' ಪರಾ. ೨. ಕಾಮಾತುರದಿಂದ ಕೂಡಿದ ; ನಸೆಯೇರಿದ. ೩. ಸಂತೋಷದಿಂದ ಮೈಮರೆತ. ೪. ಕೆರಳಿದ ; ರೋಷಾವೇಶದಿಂದ ಕೂಡಿದ. (ನಾ). ೫. ಮದವೇರಿದವನು ; ಅಮಲೇರಿದವನು ; ಉನ್ಮತ್ತ : ಎಲೆ ಮತ್ತ ನೀನಿಂತು ನಗೆಗೀಡಾದ ನುಡಿಗಳಂ ನುಡಿಯುತ್ತ ಮನೆಗೆ ಮುಳಿಸನಾದೊಡಂ ಪುಟ್ಟಿಸಲಿಲ್ಲಂ (ಕಾದಂಸಂ. ೩೭೪) ; ಮತ್ತನತಿಶ್ರಾಂತನು ಪ್ರಮದೋನ್ಮತ್ತನತಿಕುಪಿತಾನನನು . . . ಕ್ಷುತ್ತೃ ಘನವಾಗುಳ್ಳ ನಿಂತೀ ಹತ್ತು ಜನವಾಹಾಗ ಧರ್ಮದ ತತ್ತ್ವವಣೆಗಳನರಿಯರೈ (ಕುಮಾ.ಭಾ. ೩-೭೭) ; ಹೋರಾಡುವುದಕ್ಕೆ ಮೊದಲು ಅವರು ಮದ್ಯಪಾನದಿಂದ ಮತ್ತರಾಗುವರು (ಕರ್ನಾಟ. ೩೦). ೬. ಒಂದು ಬಗೆಯ ಸಸ್ಯ : ಉಮ್ಮತ್ತಿ : ಧತ್ತೂರ. ೭. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹತ್ತನೆಯ ಪಂಕ್ತಿ ಎಂಬ ಛಂದಸ್ಸಿನ ಒಂದು ವೃತ್ತ : ಮುನ್ನಂ ಧಾತ್ರೀಶಶಿಪವನೇಶೋತ್ಪನ್ನಂ ನಿಲ್ಕುಂ ಯತಿ ಯುಗದೊಳ್ ಸೇವ್ಯಂ ಸವ್ಯಂ ಭೂತಳಕಿದು ಪೂಜ್ಯಂ ಭಿನ್ನಾಬ್ಜಾಕ್ಷೀ ಪೆಸರಿಂ ಮತ್ತಂ (ಛಂದೋಂಬು. ೨-೦೦೯). [ಸಂ.]

**ಮತ್ತಂ** (ಅ). ೧. ಪುನಃ ; ಮತ್ತೆ : ನುಡಿಯಿಸಿ ಕೇಳ್ಗುರ ಹರಿಗನ ಪಡೆಮಾತನೆ ಮಾತು ತಪ್ಪೊಡಂ ಮತ್ತಮದಂ ನುಡಿಯಿಸುಗುಂ ಮೊದಲಿಂದೆ (ಪಂಪಭಾ. ೪-೩೭) ; ಜಘನ್ಯಶರೀರಮಂ ಕೈಕೊಂಡು ಪುಟ್ಟಿ ಮತ್ತಮಾಯೆಡೆಯೊಳ್ ಪಲವುಂ ಸೂಟಿಗ್ ಲಘು ಜನ್ಮಾವಗಾಹದಿಂ ಪುಟ್ಟಿ (ಸುಕುಮಾ. ೬-೬ ವ) ; ನಾನಾವಿಧದಿಂ ದೂಷಿಸಿ ಮತ್ತಂ ಸ್ವೈರಿಸಲಾಜಿದೆ (ಧರ್ಮಾಮೃ. ೦-೦೦೯). ೨. ಅಲ್ಲದೆ ; ಇನ್ನು : ಕುಜಾತವರಲ್ಲದೆ ಮತ್ತಂ ಪೆಱರುಂ ತಂತಮ್ಮ ನುಡಿಯೊಳ್(ಲ್ಲರ್) ಜಾಣರ್ (ಕವಿರಾ. ೦-೩೯) ; ಮತ್ತಂ ಮುತ್ತ ಕುರುಂಡತತಮಣಿಗಳ ಕೈಯುಂ ಬಿಡಿದುಯ್ದುಪರ ಗುಹೆಗಳಂ ಪುಗಿಪ ಪೊಱಮಡಿಪ ಚಪಳಕಪಿಗಳುಮಂ . . . ನೋಡಿ (ಪಂಪಭಾ. ೦-೦೦೩ ವ) ; ಬಿಟ್ಟ ದತ್ತಿ ತಟ್ಟಿಕೆಱೆ ಸರ್ವ್ವಬಾಧಾಪರಿಹಾರ ಮತ್ತಂ ಬಸದಿಯಿಂ ತೆಂಕಣಕೆಱೆಯ ಕೆಳಗೆ ತಳವೃತ್ತಿ ಗದ್ದೆ (ಎಕ. VII, ಶಿಕಾಪು. ೪-೭೦ ; 1122). [<ಮತ್ತು₂]

**ಮತ್ತಕ** (ನಾ). ೧. ತಲೆ ; ಶಿರ : ರತ್ನಮಣಿಮಕುಟಂಗಳೈದನು ಮತ್ತಕದೊಳಳವಡಿಸಿ (ಪ್ರಭುಲಿ. ೩-೪). ೨. ತುದಿ ; ಶಿಖರ ; ಅಗ್ರ : ಅಂತ ವರಂಬೆರಸು ಕರಂ ಸಂತಸದಿಂ ಸಾರ್ದು ಯಾದವಾದ್ರಿಯನೊಡವಂದಿಂತಂಬಿಣಿಗೆಗಳದ ವಟಮಂ ತಟ್ಟಲೋಳಿರಿಸಿ ಪತ್ತಿದಂ ಮತ್ತಕಮಂ (ತಕಪ. ೩-೬೦). [ < ಪ್ರಾ. ಮತ್ಥಗ, ಮತ್ಥಯ./ ಸಂ. ಮಸ್ತಕ ]

**ಮತ್ತಕಗೊಳ್** (ಕ್ರಿ). ತಲೆಯಲ್ಲಿ ಒಳಗೂಡಿರು : ತಲೆಯಲ್ಲಿರು : ಮತ್ತಕಗೊಂಡ ಬಟ್ಟಕಿಱುಚಂಡಿಕೆ ಸುತ್ತಿದ ಪೊನ್ನ ಮೊಗ್ಗೆಗಳ್ (ತಕಪ. ೩-೯೯). [ಮತ್ತಕ + ಕೊಳ್₁]

**ಮತ್ತಕಾಶಿನಿ** (ನಾ). ಮೋಹವನ್ನುಂಟುಮಾಡುವವಳು ; ಚೆಲುವೆ : ಸುಂದರಿ : "ವರಸ್ತ್ರೀ ಮತ್ತಕಾಶಿ [ ಶಾಕಾಂ. ಬಿ] ನೀ — ಈ ೨ ಒಳುವೆಂಗೂಸು" (ಹಲಾಯು. ೬೦-೩೩೫); ಮತ್ತೆ ಗೊಳ್ಳೆಂದುದು ನೃಪಾಲನ ಮತ್ತಕಾಶಿನಿಯರು (ಕುಮಾ.ಕ. ೦೨-೩೯) ; ಮತ್ತಕಾಶಿನಿಯರ್ನೆರೆದುನ್ಮತ್ತ ರಾವಣಂ ನೆಗೆದನಂಬರಕೆ (ತ್ರೀರಾಪಟ್ಟ. ೨೯೭-೩೦೭). [ಸಂ. ಮತ್ತಕಾಶಿನೀ]

**ಮತ್ತಕಾಸಿನಿ** (ನಾ). = ಮತ್ತಕಾಶಿನಿ : ಉತ್ತರಾಪಥದಲ್ಲಿ ಬಳಿಕ ವಿಯತ್ತರಂಗಿಣಿ ಯಮುನೆ ದಾತನ ಮತ್ತಕಾಸಿನಿ ಕೂಡಿದೆಡೆಯೊಳು ಶ್ರೀಗಿರಿಯ ಜಡೆಯೊಳ್ (ಏಕೀಶ. ೦೩-೦೪) ; ಉತ್ತಮರಘುಕುಲರಘುರಾಯನಾತ್ಮಜೆ ಮತ್ತಕಾಸಿನಿ ಇಪ್ಪಳು ಕನ್ನಿಕೆಯಾಗಿ (ಕರ್ನಾಕ. ೨೩೫). [ಸಂ. ಮತ್ತಕಾಸಿನೀ]

**ಮತ್ತಕೋಕಿಲ** (ನಾ). ೧. ಮದವೇರಿದ ಕೋಗಿಲೆ ; ಸೊಕ್ಕಿದ ಕೋಗಿಲೆ: ಬಹಿರುದ್ಯಾನಾಂತರದೊಳ್ ಸಪಸೋದಿತ ಮತ್ತಕೋಕಿಲೋಚ್ಚೈರ್ಧ್ವಾನಂ ಮುಹುರಾಕರ್ಣಿಸಿ (ಕವಿರಾ. ೦-೩೫). ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹನ್ನೆರಡನೆಯ ಜಗತಿ ಯೆಂಬ ಛಂದಸ್ಸಿನ ಒಂದು ವೃತ್ತ: ಸುರಪುರೇಂದುದಿವಸಾಧಿಪಾಗ್ನಿಗಳ್ ಬರೆ ದಿಶಾಗಜದೊಳಾ ವಿರಾಮಮುಂತಿರೆ ಪೆಸರ್ಗೆಗಟ್ಟ ನಾಕಿಯಂತೆವೊಲ್ ನಿರುಪಮಂ ಕೆಳದಿ ಮತ್ತಕೋಕಿಲಂ (ಛಂದೋಂಬು. ೨-೦೩೦) ; ೧೨ನೆಯ ಜಗತಿಯಲ್ಲಿ . . . ನಭಜರಂಗಳಿರೆ ಮತ್ತಕೋಕಿಲಂ (ಕೈಶಿ. ೬೦). [ಸಂ.]

**ಮತ್ತಗಜ** (ನಾ). ಸೊಕ್ಕಿದ ಆನೆ ; ಮದವೇರಿದ ಗಜ : ಮತ್ತಗಜಂಗಳ ಕೋಡಂ ಕತ್ತರಿವಿಗಮಂ . . . ಕಾಣ್ಕೆಯನಿತ್ತು (ಸೂಕ್ತಿಸು. ೩-೮೮) ; ಸುತ್ತುಬೇಲಿಯ ಮಧ್ಯದಲಿ ಹಯ ಮತ್ತಗಜ ರಥ ಗೋಮಹಿಷಿ ವರ ಸೈರಿಭದ ಚಯಕೆ . . . ಇರವಾಯ್ತು (ಕುಮಾ.ಕ. ೬-೦೩). [ಸಂ.]

**ಮತ್ತತನ** (ನಾ). ಸೊಕ್ಕು ; ಉನ್ಮತ್ತತೆ : ಸಂಸಾರವೆಂಬ ಡಾಗು ಎನ್ನ ಮತ್ತತನದಲ್ಲಿ ಕೊಂದಿತ್ತು (ಬಸವೇಶವ. ೯೭-೦೯೩) ; ಅವದಿರ ಕೃತ್ಯವನು ನೀನಱಿಯದಕಟಾ ಮತ್ತತನದಲಿ ನುಡಿವೆ ಅವರಾರೆಂದು ಭಾವಿಸದೆ (ಸುತ್ತಾಸಂ. ೩-೨೪). [ಮತ್ತ₂ + — ತನ]

**ಮತ್ತತೆ** (ನಾ). = ಮತ್ತತನ : "ಮತ್ತತೆಗೆ ಮಣಿವೆಂಬ ನಾವು" (ಕಶ್ಯಕ್ಕ. ೬೦); ಧರೆಗೆಸೆದತ್ತು ತಾರಕನ ದುರ್ಗತಿ ತಾರಕನೇಳ್ಗೆ ತಾರಕಾಸುರನ ಪೊಡರ್ಪು ತಾರಕನ ಮತ್ತತೆ (೧೦೪. ೬-೦೦) ; ಪ್ರಾಯಶಃ ಈಗ ನನಗೆ ಮತ್ತತೆ ಉಂಟಾಗಿರಬಹುದು (ಶಕಜಾ. ೦೩೬). [ಸಂ. ಮತ್ತತಾ]

**ಮತ್ತತ್ವ** (ನಾ). = ಮತ್ತತನ : ಸದ್ಭಕ್ತ ದೈವವೆಂದು ಅರ್ಚಿಸುವ ಠಾವಿನಲ್ಲಿ ಮತ್ತತ್ವ ದುಶ್ಚಾರಿತ್ರ ಪಗಡೆ ಪರಿಹಾಸಕತನ . . . ಇವೆಲ್ಲವ ಬಿಡಬೇಕು (ಬಸವೇಶವ. ೩೩-೨೨೩). [ಸಂ.]

**ಮತ್ತದ್ವಿಪ** (ನಾ). = ಮತ್ತಗಜ : ಕಾವರ್ಮುಗಿಲ ನೀರ್ಪೊನಲ್ ಕೋಶದಿಂದಂ ಮದಂ ಸುರಿಯುತ್ತಿರ್ಪುದುಮೊಪ್ಪೆ ಚಕ್ರಿಯ ಮನಂಗೊಂಡತ್ತು ಮತ್ತದ್ವಿಪಂ (ಆದಿಪು. ೦೨-೩೩). [ಸಂ.]

**ಮತ್ತಮದ** (ನಾ). ಅಧಿಕವಾದ ಅಮಲು ಏರಿರುವವನು ; ಮದೋನ್ಮತ್ತ : ನಿಜಕುಪಿತಾಂಬುಜಮಧುರಂ ರಜ್ಜೋಪವಮಾನಮೂರ್ತಿ ಮತ್ತಮದ ನಂತಿರೆ (ಶಾಂತಿಪು. ೯-೩೦). [ಸಂ.]

**ಮತ್ತಮಯೂರ** (ನಾ). ೧. ಮದವೇರಿದ ನವಿಲು : ಸೊಕ್ಕಿದ ಮಯೂರ : ಅಂಬುದಧ್ವನಿಗೆ ಪೆರ್ಚಿದ ಮತ್ತಮಯೂರದಂತೆ (ಶಾಂತಿಪು. ೩-೩೬). ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹದಿಮೂರನೆಯ ಅತಿಜಗತಿಯೆಂಬ ಛಂದಸ್ಸಿನ ಒಂದು ವೃತ್ತ : ಎತ್ತಂ ಧಾತ್ರೀವ್ಯೋಮ ಪಯೋವಾಯು ಹರರ್ಕಳ್ ಪತ್ತಿರ್ದಾಗಳ್ಪಂದು ವಿರಾಮಂ ನಿಧಿಯೊಳ್ಪೆಯ್ವತ್ತೊಪ್ಪುತ್ತುಂ ಬಂದಿರೆ ಸಂದಿರ್ದುದು ವೃತ್ತಂ ಮತ್ತೇಭೇಂದ್ರೋದ್ಧಾಗಮಿನಿ ಕೇಳ್ ಮತ್ತಮಯೂರಂ (ಛಂದೋಂಬು. ೨-೦೪೪). [ಸಂ.]

**ಮತ್ತಮಾತಂಗ** (ನಾ). ೧. = ಮತ್ತಗಜ. ೨. [ಸಂಗೀತ] ಒಂದು ಬಗೆಯ ತಾಳ : ಚಾಚಪುಟ . . . ಮತ್ತಮಾತಂಗ. . . ಜಯಾಳವೆಂಬವೇ ಮೊದಲಾದ ನೂಱೊಂದು ತಾಳಂಗಳು (ಪಂಪಭಾ. ೦೯೨). [ಸಂ.]

**ಮತ್ತರ್** 'ಮತ್ತಲ್' ನೋ.

**ಮತ್ತರನಱ** (ನಾ). ಒಂದು ಸ್ಥಳದ ಹೆಸರು : ಪೊನ್ನೆದೆಱ ಆಳಗನ ಪಳ್ಳ ಎತ್ತುರಾಳ ಸರಿಗನ ಗಟ್ಟ ಮತ್ತರನಱಯಿಂ ನಿಱುಗಲು (ಎಕ. VI ತರೀಕೆ. ೬೭–೦೩; ೫೫೫). [ ? ]

**ಮತ್ತರು** 'ಮತ್ತಲ್' ನೋ.

**ಮತ್ತರ್ವಣ** (ನಾ). ಭೂಮಿಯ ಮೇಲಿನ ಒಂದು ತೆರಿಗೆ : ಪತ್ತು ಪರಿಸಂಬಱಂ ಮತ್ತರ್ಪ್ಪಣಂ ಉಟ್ಕಗೂರ್ವ್ವಱನ್ನು ಮಾಣಲಾಗ (ಸೌಇಇ. XI-i. ೪೩-೦೯ ; 970). [ಮತ್ತರ್ (< ಮತ್ತಲ್) + ಪಣ್ಣ₃]

**ಮತ್ತಲ್**, ಮತ್ತ₁, ಮತ್ತರ್, ಮತ್ತರು, ಮತ್ತಲು (ನಾ). ಭೂಮಿಯ ಒಂದು ಅಳತೆ : ಕೆಳಗೆ ಎಣ್ಬು ಮತ್ತಲ್ ಗಱದ್ (ಇಆ. XI. ೭೦–೦೯ ; 567) ; ಅಯ್ಮತ್ತಲ್ ಕೆಯ್ಯಂ ಕೊಟ್ಟರ್ (ಎಕ. VIII. ಸೊರಬ. ೯೩–೪; 876): ದೇವಾರಕ್ಕ ಪಕ್ಕಲಿಯೊಳ್ ನಾಲ್ಕು ಮತ್ತಲ್ಕೆಯ್ಯಂ ಕೊಟ್ಟಳ್ (ಎಕ. VII. ಶಿಕಾ. ೨೦೯–೦೮ ; 918). **ಮತ್ತ₁** : ಮಾಳಿರಾಸಿಗನು . . . ಜೀಯರ ಮೆಚ್ಚಿ ೧ ಗುಯ್ಮಲಂ ೩ ಮತ್ತ ಕೆಯ್ಯುಮಂ ಬಿಟ್ಟರ್ (ಎಕ. XI, ಮೊಳಕಾ. ೨೭-೭ ; 962) ; ಪಂಚಕೇಶ್ವರಕ್ಕ ಮತ್ತ ೬ ಘಳಾರಿಗೆ ಮತ್ತ ೬ ಭಟ್ಟಗೆಯಿ ಮತ್ತ ೬ ಚಟ್ಟಗೆಯಿ ಮತ್ತ ೬ (ಸೌಇಇ. IX-i. ೭೪–೮ ; 981) ; ಸ್ವಯಂಪಾಕಿಸ್ವಾಮಿಗಳ್ಗೆ ಮತ್ತ ೧ ದವಸಿಗರಿಗೆ ಮತ್ತ ೧ ಹೂದೋಟದ ಮಾಲೆಗಾರಗೆ ಕಮ್ಮ ೨೦ (ಎಕ. VII. ಶಿಕಾ. ೦೫೩–೬೨ ; 1158). **ಮತ್ತರ್** : ಒರ್ಮತ್ತರ್ಕೆಯುಱುಂ (ಮ್ಮಆ. ೦೯೪೦, ೨೯–೩ : 797) ; ತಪೋಧನರ ಸತ್ರಕ್ಕೆ ಮತ್ತರ್ಪ್ಪನ್ನೆರಡು ಅಯ್ಯುಗಾವುಣ್ಡನ ದೇಗುಲಕ್ಕೆ ಮತ್ತರ್ಯ್ದು ಮನೆಯೊನ್ದು ಅದಿತ್ಯದೇವರ್ಗ್ಗೆ ಮತ್ತರ್ಯ್ದು (ಎಇ. XX. ೬–೦೭ ; 1012). **ಮತ್ತರು** : ಸುಗನ್ಧವರ್ತಿ ಸೀಮೆಯಿನ್ದ ಪಡುವಲು ಪಿರಿಯ ಕೋಲಲು ಮತ್ತರು ೬ (ಸೌಇಇ. XX, ೦೩–೪ : 875) : ಪ್ರಭುಗಳ ಮಾನ್ಯದಿಂ ಮೂಡಲು ಪದಿಮೂಱು ಗೇಣ ಬೆಂಕೊಳ್ವ ಕೋಲ ಮತ್ತರು ನೂಱು (ಎಇ. XXVII. ೦೫–೪೭ ; 1114) : ಅಳತೆ ಗೋಲುಗಳ ಸಹಾಯದಿಂದ ಹೊಲವನ್ನು 'ಮತ್ತರು' ಮತ್ತು 'ಕಮ್ಮ' ('ಕಂಬ')ಗಳೆಂಬುದಾಗಿ ಅಳೆಯುತ್ತಿದ್ದರು (ಕಶಾ. ೩೯೩). **ಮತ್ತಲು** : ಮೂಱು ಮತ್ತಲು ಕಿಸುಕಾಡು (ಎಇ. XV. ೩೩೨–೨೪ ; 1028) ; ತಳವೃತ್ತಿ ಗದ್ದೆ ಗಳೆಯ ಮತ್ತಲು ಮೂಱು ಬೆದ್ದಲೆ ಗಳೆಯ ಮತ್ತವಾಱು (ಎಕ. VII. ಶಿವಮೊ. ೪–೭೦ ; 1122). 'ಮಟ್ಟ₁' ಪರಾ.

[ ದೇ.॥ ತಮಿ. ಮಱ್ಱುವಾ = ನದಿಯ ಪಕ್ಕದಲ್ಲಿ ಇಳಿಜಾರಾಗಿರುವ ಪ್ರದೇಶ ; ಮಲ. ಮತ್ತವಾ = ನದಿಯ ಬಳಿಯ ತಗ್ಗುನೆಲ. / ಮರಾ. ಮತ್ತರ್ ]

**ಮತ್ತಲು** 'ಮತ್ತಲ್' ನೋ.

**ಮತ್ತಲ್ಲಿ** (ನಾ.) [ನಾಟ್ಯ] ಹದಿನಾರು ಬಗೆಯ ಮಾರ್ಗಭೌಮಚಾರಿಗಳಲ್ಲಿ ಒಂದು; "ಕಣಕಾಲುಗಳನ್ನು ಸ್ವಸ್ತಿಕ ಮಾಡಿ ಪಾದಗಳನ್ನು ನೆಲದ ಮೇಲೆ ಸಮನಾಗಿರಿಸಿ ಅರ್ಧತ್ರ್ಯಸ್ರದಿಂದ ಚರಣಗಳನ್ನು ಹಿಂದಕ್ಕೂ ಮುಂದಕ್ಕೂ ಚಲಿಸುವುದು" (ರಾಸ್ಕಲಂ. ೩೦೭ ಗದ್ಯಸೂಚಾಪ) : ಸಮಪಾದ . . . ಮತ್ತಲ್ಲಿ, ಉತ್ಸ್ಯಂದಿತ . . . ಊರೂದ್ವೃತ್ತ ಈ ಹದಿನಾಱು ಮಾರ್ಗಭೌಮಚಾರಿಗಳು (ರಾಸ್ಕಲಂ. ೬–೦೭ ವ). [ ಸಂ. ಮತ್ತಲ್ಲೀ ]

**ಮತ್ತವಾರಣ** (ನಾ). ೧. ಮದವೇರಿದ ಆನೆ : ದೈತ್ಯಕುಲಕದಳೀವನಮತ್ತವಾರಣನವಱ ಮತ್ತವಾರಣಸ್ಥಿತಿಯುಮಂ . . . ಮೆಚ್ಚಿ (ಜಗಪು. ೬–೭೩ವ) ; ಉತ್ತರೆಯ ಮನೆಯಿಂದ ಶಶಿಕುಲಮತ್ತವಾರಣ ಬಂದನಾಭೀಮಾಗ್ರಜನ ಹೊರೆಗೆ (ಕುವ್ಯಾಭಿ. ೯–೩೨). ೨. ಭವನದ ಸುತ್ತಲಿರುವ ಆವರಣ,– ಬೇಲಿ. ೩. ಕೈಸಾಲೆ : ಜಗಲಿ : ತಂತಮ್ಮ ಮನೆಗಳ ಮುಂದಣ ಪಚ್ಚೆಯ ಜಗಲಿಗಳೊಳಂ ಮಣಿಮಯಮತ್ತವಾರಣಂಗಳೊಳಂ . . . ನೆರೆದಿರ್ದ ಪೆಂಡವಾಸದೊಳ್ವೆಂಡಿರಂ ಕಂಡು (ಸುಕಥಾ. ೪–೮೪ ವ) ; ಸೇವಕರಾಜಪುತ್ರಂ ಬಂದೊಂದು ಮತ್ತವಾರಣದೊಳ್ ಕುಳ್ಳಿರ್ದು (ಚಂದ್ರಪ್ರ. ೬–೮೨ ವ). ೪. ರಥದಲ್ಲಿ ಯೋಧನು ಬಿಲ್ಲು ಹಿಡಿದು ಯುದ್ಧಕ್ಕೆಂದು ನಿಲ್ಲುವ ಭಾಗ : ಆ ದಿವ್ಯರಥದ ಸಮೀಪಕ್ಕೆ ಬಂದು . . . ದೈತ್ಯಕುಲಕದಳೀವನಮತ್ತವಾರಣನವಱ ಮತ್ತವಾರಣಸ್ಥಿತಿಯುಮಂ . . . ನಿಜಾಗ್ರಜಂಗೆ ತೋಱ ನಾಡೆಯುಂ ಮೆಚ್ಚಿ (ಜಗಪು. ೬–೭೩ ವ). ೫. ಗೋಡೆಯಲ್ಲಿ ರಚಿಸಿದ ಶಂಕುವಿನಾಕಾರದ ರಚನೆ ; ಕಪೋತಪಾಲಿಕೆ. ೬. ಒರಗುದಿಂಬು : " ಮತ್ತವಾರಣಮೆನಲ್ ಮಲಗುದಲೆಗಿಂಬು " (ಮಂಗರಾ. ೬೦-೦೬). [ಸಂ.]

**ಮತ್ತವಾರಣಿ** (ನಾ). = ಮತ್ತವಾರಣ ೩ : ಇದರ ಎರಡು ಪಕ್ಕದಲ್ಲಿಯೂ ರಂಗಶೀರ್ಷದ ಬಾಗಿಲುಗಳಿಗೆ ಎದುರಾಗಿ ೮ ೮ ಹಸ್ತ ಅಳತೆಯುಳ್ಳ ಒಂದೊಂದು " ಮತ್ತವಾರಣಿ " ಅಥವಾ ಮಂಟಪವಿರುತ್ತದೆ (ಸಂನಾಟ. ೨೩).

[ < ಮತ್ತವಾರಣ ]

**ಮತ್ತವೂರ್** (ನಾ). ಒಂದು ಊರಿನ ಹೆಸರು ; P ಈಗಿನ ಚಿಕ್ಕಮಗಳೂರು ಜಿಲ್ಲೆಯ ಮತ್ತಾವಾರ : ಸಿದ್ಧಾಯವಲ್ಲಿ ಭತ್ತನೂಳ ನೆಟ ವಿನಯಾಯಿತನೂ ಪಂಪೆಟ್ರೆಗಳ ಮತ್ತವೂರ ಬಸದಿಗೆ ಬಿಟ್ಟಂ (ಮ್ಮಆ. ೦೯೩೨, ೦೬–೨೭; ೧೭(?)). 'ಮಟ್ಟವುರ' ಪರಾ.

[ ? + ಊರ್ ]

**ಮತ್ತಸ್ಖಲಿತ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು : ಸಲೆ ಮತ್ತಸ್ಖಲಿತಂ . . . ಸ್ವಸ್ತಿಕರೇಚಿತಮಿಂತುಂ ವಿಸ್ತರಮಾದಂಗಹಾರ ಮೂವತ್ತೆರಡುಂ (ರಾಸ್ಕಲಂ. ೫-೫). [ಸಂ.]

**ಮತ್ತಾಕ್ರೀಡ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು : ಮತ್ತಾಕ್ರೀಡಂ . . . ಸ್ವಸ್ತಿಕರೇಚಿತಮಿಂತುಂ ವಿಸ್ತರಮಾದಂಗಹಾರ ಮೂವತ್ತೆರಡುಂ (ರಾಸ್ಕಲಂ. ೫-೪). [ಸಂ.]

**ಮತ್ತಾಕ್ರೀಡೆ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಇಪ್ಪತ್ತುಮೂರನೆಯ ವಿಕೃತಿ ಛಂದಸ್ಸಿನ ಒಂದು ವೃತ್ತ : ಮುನ್ನಂ ಭೂಮಿ ದ್ವಂದ್ವಾಕಾಶಂ ಸುರಪುರಗಣತತಿಯಿನಿರೆ ಬಱಕ್ಕನ್ನುತ್ತಂ ಚಕ್ರಧರಂ ಶರ್ವಂ ವಸುವಿರಚಿತ ಮುಹಯುತಿ ಲಲಿತಪದೋತ್ಪನ್ನಂ ವೃತ್ತಂ ಭಿನ್ನಾಬ್ಜಾಕ್ಷೀ ಗುರುಜನಮತದಿನಿದತಿಶಯನುತಮಿಂತೆನ್ನಿಂದಾಯ್ತು ಮತ್ತಾ[ ಪಾಠಾಂ. ವೃತ್ತಂ ] ಕ್ರೀಡಾಹ್ವಯಮಿದನಱವುದು (ಛಂದೋಂಬು. ೨–೦೮೮). [ಸಂ. ಮತ್ತಾಕ್ರೀಡಾ]

**ಮತ್ತಾಣ** (ನಾ). ಒಂದು ಸ್ಥಳದ ಹೆಸರು : ಅನ್ತೆ ಬನ್ದು ಎಡಕೆಱಗಾಲ ಮೂಡಣ ಭಾಗದ ಮತ್ತಾಣಯಿಂ ಅನ್ತೆ ಬನ್ದು ಪನಿಯಾಲ ಕಾಲ ಬಡ[ಗ]ಣ ಬೇಲಿಯಿಂ (ಎಕ. III. ನಂಜನ. ೦೩೯–೦೪ ; 915 ?). [ ? ]

**ಮತ್ತಾಲಂಬ** (ನಾ). (ಸೌಧದ ಸುತ್ತಲೂ ಕಟ್ಟಿರುವ) ಕಟಕಟೆ : ಆವರಣ : ವಿಚಿತ್ರಪುತ್ರಿಕಾಕಲಿತಮತ್ತಾಲಂಬಸಂಭೃತಮುಂ . . . ಎನಿಸಿ . . . ಆ ಕರುಮಾಡಮೊಪ್ಪುಗುಂ (ಮಲ್ಲಿಪು. ೨-೭೪). [ಸಂ.]

**ಮತ್ತಾಳಿ** (ನಾ). ಮದವೇರಿದ ದುಂಬಿ ; ಸೊಕ್ಕಿದ ಅಳಿ : ನವನಿರ್ಯತ್ಸಹಕಾರವಾರಿ ಮದಮುಂ ತತ್ಪಲ್ಲವಂ ಕರ್ಣಪಲ್ಲವಮುಂ ಪೂತೆಳಗೊಂಬು ಕೊಂಬನಳಿ ತದ್ಗಂಡಸ್ಥಳೋದ್ದೇಶಸಂಭವಮತ್ತಾಳಿಯನೆಯ್ದೆ ಪೋಲೆ (ಶಾಂತಿಪು. ೯–೦೪೨), [ಸಂ. ಮತ್ತಾಲಿ]

**ಮತ್ತಿ₁** 'ಮಟ್ಟಿ₁' ನೋ.

**ಮತ್ತಿ₂** 'ಮಟ್ಟಿ₂' ನೋ.

**ಮತ್ತಿಕ** 'ಮಂದ್ರಿಕ' ನೋ.

**ಮತ್ತಿಕಾಯ್** 'ಮತ್ತಿಗಾಯ್' ನೋ.

**ಮತ್ತಿಗಾಯ್, ಮತ್ತಿಕಾಯ್** (ನಾ). ೧. ಮತ್ತಿಯ ಮರದ ಕಾಯಿ. ೨. ಮತ್ತಿಯ ಕಾಯಿಯ ಆಕಾರದಲ್ಲಿ ಮಾಡಿದ ಒಂದು ಬಗೆಯ ಆಭರಣ: ಅರಳೆಲೆ ಮತ್ತಿಗಾಯ್ ಪುಲಿಯುಗುರ್ ನವರತ್ನದ ಕಂಕಣ . . . ಒಪ್ಪಿರೆ (ಶಂಬಾಪು. ೩-೧೪೦). **ಮತ್ತಿಕಾಯ್ :** ೨. ಕೆಂಜೆಡೆ ಮತ್ತಿಕಾಯ್ ಪುಲಿಯುಗುರು ಕಡಗಂ . . . ರಂಜಿಸೆ . . . ಕಣ್ಗೆಸೆದಂ ಭುವನೈಕಮೋಹನಂ (ಶರ್ಬಪು. ೧೨-೫೯). 'ಮಾಂಗಾಯ್' ಪಠಾ. [ಮತ್ತಿ₁ (<ಮಟ್ಟಿ₁) + ಕಾಯ್₄]

**ಮತ್ತಿನಾಲಿಗೆ** (ನಾ). ಮಚ್ಚೆಯಿರುವ ನಾಲಗೆ; ▶ ಸಾಮಾನ್ಯವಾಗಿ ನಾಲಗೆಯ ಮೇಲೆ ಮಚ್ಚೆಯಿರುವವರು ಆಡುವ ಮಾತುಗಳು ನಿಜವಾಗುತ್ತವೆ ಎಂಬ ನಂಬಿಕೆಯಿದ್ದು, ಅವರ ಬಾಯಿಯಿಂದ ಕೆಟ್ಟ ಮಾತುಗಳು ಬಾರದಂತೆ ಜನರು ಎಚ್ಚರಿಕೆ ವಹಿಸುತ್ತಾರೆ : ಅವಳದು ಮತ್ತಿನಾಲಿಗೆ. ಆಡಿದ್ದು ನಡೆದು ಬಿಡುತ್ತದೆ (ಕೂ).
[ಮತ್ತಿ₂ (< ಮಚ್ಚೆ₂) + ನಾಲಿಗೆ (< ನಾಲಗೆ) ]

**ಮತ್ತಿವಿಡಿ** (ಕ್ರಿ). (?) : ಮುಂತೆ ರಾಜಿಸುವ ಬತ್ತೀಸಾಯುಧಗಳ ಪಂಥದ ಮತ್ತಿವಿಡಿದರು ಸಂತತ ಓರಿಯೂರ ತಮ್ಮಣನಾಯಕನೊಂತಾದ ಬಲ ವೈದಿದುಮು (ಶಂಕಶಿ. ೧೧-೦೫). [ಮತ್ತಿ₁ + ಓಡಿ₁]

**ಮತ್ತು₁** (ನಾ). ಅಮಲು; ಮದ; ಸೊಕ್ಕು : "ಪ್ರಮದಾ ಮತ್ತೇಂದು" (ಶಬ್ದಾರ. ೬೫); ಬರವೇಟಿ. . . ಭರದಿಂ ಸುಬ್ಬುರುಮಾಲನಂ ಗದುಗನಂ ಮತ್ತುಳ್ಳ ಪೆರ್ವಾಯ್ಗಳಂ (ಪಕಡಂ. ೬೬); ಇತರರೂ ಮೊಸರನ್ನದ ಮತ್ತಿನಿಂದ ತೂಕಡಿಸಿಕೊಂಡು ಒರಗಿದರು (ಹಸಿಹೂ. ೬೬). [<ಸಂ. ಮತ್ತ]

**ಮತ್ತು₂** (ಅ). ಅಲ್ಲದೆ : ಜೊತೆಗೆ : ಷಷ್ಠೀವಿಭಕ್ತಿಯ ರೂಪಗಳಿಗೂ ಕೃದಂತನಾಮಗಳ ವಿಶೇಷಣರೂಪಗಳಿಗೂ ಊ-ಊ ಎಂಬುವು ಸೇರುವುದಿಲ್ಲ. ಇವನ್ನು ಕೂಡಿಸಬೇಕಾದರೆ 'ಮತ್ತು' ಎಂಬ ಅವ್ಯಯವನ್ನು ನಡುವೆ ಉಪಯೋಗಿಸಬೇಕು (ಹುರ್ಯ ಶ. ೦೬೦); ದಾಸಪ್ಪ, ಕೆಂಪಿ ಮತ್ತು ಮಕ್ಕಳು ಗೋಣಿಚೀಲ ಬಿಚ್ಚಿ ಪಯಣದ ರೊಟ್ಟಿ ಎರಡೆರಡು ತಿಂದರು (ಪಪೂ್ಕರು. ೨೬೫).

**ಮತ್ತಿನ, ಮರ್ತಿನ** = ಉಳಿದ : ಬೇರೆಯ: ಎಲ್ಲರಿಂ ಪಿರಿಯಾಕೆ ನಿನ್ನನಲ್ಲದೆ ಪೆಱರನೊಲ್ಲೆನೆಂದಿರೊಡೆ ಮತ್ತಿನಿರ್ವರುಮಂ ಮದುವೆಯಂ ಮಾಡಿ (ಶಂಶಿಭಾ. ೦-೭೯ ವ) : ವಿಸ್ತಾರಿತಚಾರುಕೀರ್ತಿ ನಿನಗಾದ್ಯೋರರೆ ಮತ್ತಿನ ಮಣ್ಣಳೇಶ್ವರರು (ಶಾಶಾ. XI-i, ೦೦೩-೦೫; 1074); ಮತ್ತಿನ ಮರ್ತ್ಯರೇನನಜೀವರ್ . . . ಗುಣಾಗ್ರಣಿ ರೇವದಾಸ ವೀಸೋತ್ತರ ಸೋಮಯಾಜಿಗಳಿನೂರ್ಜಿತಮಾಯ್ತು ಧರಾಮರಾನ್ವಯಂ (ಎ. XIII, ೩೩೦-೦೫;929). ▶ ಇದು 'ಮತ್ತಿನ' ಎಂಬುದರ ಅಪಲಿಖಿತವಿರಬಹುದು. **ಮತ್ತೊಂದು** = ಬೇರೊಂದು; ಇನ್ನೊಂದು: ಇತ್ತ ಮತ್ತೊಂದು ದಿವಸಮಾ ಸಭಾಮಂಟಪದೊಳ್ ಧರ್ಮರಾಜಂ ತನ್ನ ನಾಲ್ವರ್ ತಮ್ಮಂದಿರೊಡನೆ ದೇವೇಂದ್ರಲೀಲೆಯಿಂದೋಲಗಂಗೊಟ್ಟಿರೆಯಿರೆ (ಶಂಶಿಭಾ. ೬-೫ ವ) ; ಪಾಂಡವನಂದನರು ಮತ್ತೊಂದು ದೆಸೆಯಲ್ಲಿ ಮುಂದು ವರಿದರು (ಕುಮಾರರ್ತ್ರಿ. ೨-೬೦). **ಮತ್ತೊಮ್ಮೆ** = ಇನ್ನೊಮ್ಮೆ ; ಇನ್ನೊಂದು ಸಾರಿ : ತಾನೇ ಶಿವನೆಂದು ಕುಱುಹ ತೋಱುವ ಹಾಗೆ ಮರ್ತ್ಯದಲ್ಲಿ ಸುಳಿದನಲ್ಲದೆ ಕುಱುಹುಂಟೆ ಶರಣಂಗೆ ಮತ್ತೊಮ್ಮೆ ಅಱಿವು ಮಱಹುಂಟೆ (ಅದಶ. ಶು. ೦೬೩-೩೦೬); ಪರಮೋತ್ಸಾಹದಿಂದುಕ್ಕಿ ಮೈಯುಕ್ಕಿ ಇಂದುವಳಿಯ ಕೃಪೆಗೆ ಮತ್ತೊಮ್ಮೆ ಮೈಯುಕ್ಕಿ (ಬಿಶರ. ೦-೩೬).
[ ದೇ.₈ ತಮಿ. ಮಲ. ಮಱ್ಱು ]

**ಮತ್ತೆ₁** (ನಾ). ಮದವೇರಿದವಳು; ಉನ್ಮತ್ತೆ : ಅತ್ತಿತ್ತ ನೋಡದೆ ಅವಮತಿಗೈಯದೆ ಮತ್ತೆಯಾಗದೆ ಮಱೆತಿರದೆ ಅತ್ತೆ ಮಾವಂದಿರಾಣತಿಯ ನಾಲಿಪುದು (ಶಬಿ. ೯-೦೦). [ಸಂ. ಮತ್ತಾ]

**ಮತ್ತೆ₂** (ಅ). ೧. ಬಳಿಕ ; ನಂತರ; ಆಮೇಲೆ : ಇನ್ನಂತೆ ಮತ್ತೆ ಬಟಿವಿಂಗೆ ಮುಂ ನಿಲೆ ತಾಂ ಮೇಣ್ ಪೆಱಂ ಗಡಂ ಗಳಮೂದಂ ಕೆನ್ನನಿಲ್ಲೆಂದಿವನೆಂದುಂ ನಿಱಿಸಲ್ಕಲ್ಲದೆಡೆಗಳೊಳ್ ಕಲ್ಲದಿಂ (ಕಶಿಣ. ೨-೦೩); ಮತ್ತಾ ಪುರೋಹಿತಂ ನಾಲ್ಕು ವೇದಮುಮಾಱಂಗಮುಂ ಪದಿನೆಂಟುಂಧರ್ಮಶಾಸ್ತ್ರಂಗಳುಮಂ ಬಲ್ಲೊಂ (ವಡ್ಡಾರಾ. ೬೩-೦೯); ಅರಸನ ಕದಪು ಕೈಯಲಿ ಕೇಲಿಸಿತು ಹೇಳಿದನು ಸಂಜಯ ಮತ್ತೆ ಮೇಲಣ ರಣದ ವಾರ್ತೆಯನು (ಕುಮಾಕ. ೦-೨). ೨. ಪುನಃ; ತಿರುಗಿ : ಜೈನಮಾರ್ಗಮಂ ಕಾಣದೆ ಮುನ್ನ ಕಟಕಟ ಕೆಟ್ಟೆ ನೀ ಮತ್ತೆ ಕೆಡದಿರು (ಸಮಶ. ೩-೫೮); ಭಾವಿಸುವೊಡೆ ತಲೆಯಲ್ಲಿ ಮತ್ತೆ ಪುಲ್ಮೊಳೆದಪುದೇ (ರಪರ್ವಕು. ೦-೦೩೬); ಜಮದಗ್ನಿ ರಾಮನು ಮತ್ತೆ ಕೊಡಲಿಯ ಮಸೆದು ಹೊಕ್ಕನು ಚಿತ್ರವಿಸು ನೆಱೆ ಕಡಿದನಾತನ ಸೈನ್ಯಕಾನನವ (ಸಂಶಿಶ. ೨೬-೫೦).

**ಮತ್ತೆಮತ್ತೆ, ಮಮ್ಮತ್ತೆ** (ದ್ವಿರುಕ್ತಿ) : ಪೊತ್ತು ಪೊತ್ತಿಗೆ ಮತ್ತೆ ಮತ್ತೆ ಬಲವತ್ತರದೊಳೊತ್ತಿಡಿದು ಸುತ್ತಲೆತ್ತೆತ್ತಲುಂ ಕೆತ್ತವೋಲ್ಮುತ್ತಿ ಮುಸುಕಿತ್ತು ಕಗ್ಗತ್ತಲೆ ಧರಿತ್ರಿಯಂ (ಕೈಬಶಾ. ೨೬-೬); ಮೊದಮೊದಲು ಭಾಸವಾದ ಗೆಲವೆಂಬುದು ಮಮ್ಮತ್ತೆ ಸೋಲವಾಗಿ ಪರಿಣಮಿಸುತ್ತದೆ (ಚಾರ್ತಿಸು. ೦೦೫). [ಮತ್ತು₂ + — ಎ₄]

**ಮತ್ತೇಭ** (ನಾ). ಸೊಕ್ಕಿದ ಆನೆ ; ಮತ್ತ ಗಜ : ಮಿನಾಂಕಮತ್ತೇಭ ಚಾಮರಮೋ ನಂದನಲಕ್ಷ್ಮಿಯೊಳ್ಗೆಯೊ ತಾಂ ಮಂದಾನಿಲಂ ಶಂಕಣಂ ಬರೆ (ಕಾದಂಪೂ. ೭೪೦); ಪರರಾಯರ್ಗಳ ಸೇನೆಯಂ ಗೆಲಿದು ಮತ್ತೇಭಂಗಳಂ ಸೀಳ್ದು ತನ್ನರಿಯೆಂದೆಂಬರನೊಕ್ಕಲಿಕ್ಕುವ ಭಟರ್ಗಂ ಗಂಜಿ ಕೇಬುನ್ನಾಯ್ಗಳಂ ನಿರುತಂ ಭೋಜ್ಯವಿಶೇಷಮಿತ್ತು ಪೊರೆವರ್ (ಸೋಮೇಶ. ೬೫). [ಸಂ.]

**ಮತ್ತೇಭವಿಕ್ರೀಡಿತ** (ನಾ). ೧. ಮದಿಸಿದ ಆನೆಯ ಆಟ; ಮತ್ತಗಜದ ಕ್ರೀಡೆ : ಮುಸಕಂ ಕಾಯ್ದು ಜಮ ಜಮಗವಿಂದಿರೊಳ್ ನೋಡಲ್ಕಗುರ್ವಾಗೆ ಮಾಂದಿಸಿಮಾ ವಂದುದು ಕೊಂದುದೇಂದು ಭಯದಿಂ ವಿಪ್ರರ್ ತರಳ್ದೋಡೆ. . . ಆಶ್ರಮಕ್ಕಂತು ಬೇವಸಮಂ ಮಾಡುವುದಾಯ್ತುದೊಂದು ವಿಭವಂ ಮತ್ತೇಭವಿಕ್ರೀಡಿತಂ (ಶಂಶಿಭಾ. ೮-೩೬). ೨. [ಛಂದ] ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಇಪ್ಪತ್ತನೆಯ ಕೃತಿಯೆಂಬ ಛಂದಸ್ಸಿನ ಒಂದು ವೃತ್ತ : ಅಬ್ಧಿವೇಷ್ಟಿತಭೂಚಕ್ರದೊಳೆಂತು ಮೇರುಗಿರಿಯಿಂ ಮತ್ತೊಂದು ಶೈಲೇಂದ್ರಮುನ್ನತಮಿಲ್ಲಂತುಟು ನಾಕಿಗಂಗೆನುತುಮಿಾ ಮತ್ತೇಭವಿಕ್ರೀಡಿತಂ ಪ್ರತಿಯಿಂದಿಂತು ತಗುಳ್ದು ಕೊಂಡುಕೊನೆಗಂ ವಿಶ್ವಂಭರಾಮಂಡಲಂ (ಛಂದೋಂಬು. ೦-೨೬) ; ಶ್ವಸನೇಂದುಜ್ವಲನಾಮರಾಮನಿ ಜಲಂ ದೈತ್ಯಾರಿ ಕಾಮಾಂತಕ ಪ್ರಸರೋಪ್ಯದ್ಗಣದಿಂ ತ್ರಯೋದಶಯತಿಪ್ರಸ್ತಾರಮಾಗಿರ್ದೊಡೀ ವಸುಧಾಚಕ್ರದೊಳೆಯ್ದೆ ಸಂದುದು ಕರಂ ಮತ್ತೇಭವಿಕ್ರೀಡಿತಂ (ಛಂದೋಂಬು. ೨-೦೬೫); "ಖ್ಯಾತ ಕರ್ಣಾಟಕಂ" ಎಂದು ಹೊಗಳಿಸಿಕೊಳ್ಳುವ ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ. . . ಎಂಬ ಆರು ವೃತ್ತಗಳೇ ಕರ್ನಾಟಕ ಕಾವ್ಯರಂಗದಲ್ಲೆಲ್ಲ ಹರ್ಷಿಸಲು ನಿಂತ ಸಂಸ್ಕೃತಜನ್ಯ ವೃತ್ತಗಳು (ಸವಾಛೊ. ೦೬೦). ೧, ೨ : ಗಿರಿದುರ್ಗಂಗಳನೇಱಿಯುನ್ನತ ಪುರದೊಳ್ ರತ್ನಾಳಿಕೇರಾಂಬುವಂ ಮರವಾಯ್ದೊಡ್ಡಿರೆ ಕೊಂಡು ಬಂದುದ ಪರಾಂಭೋರಾಶಿಯೊಳ್ ಪುಟ್ಟುಗಪ್ಪುರದೊಳ್ಪುದಿಯನೊಟ್ಟಿಕೊಂಡು ದದಱಿಂ ಮತ್ತೇಭವಿಕ್ರೀಡಿತಂ ದೊರೆವೆತ್ತಮ್ಮನ ಗಂಧವಾರಣಮಿದೇನನ್ವರ್ಥಮಾಗಿರ್ದುದೋ (ಗದಾಯು. ೦-೩೬). [ಸಂ.]

**ಮತ್ತೋಪಚಾರ** (ನಾ). (ಕಾಮಾತುರದಿಂದ) ಮದಿಸಿದ ವ್ಯಕ್ತಿಗೆ ಮದವಿಳಿಯಲು ಮಾಡುವ ಉಪಚಾರ : ಮದನೇಭಕ್ಕಾವುದೊಂದು ಬಾಜಮೆಂತಡು ಕೊಳಂ ಮಾಱಿ ತೆಂಗಾಳಿ ನಾಲ್ಕಭ್ಯುದಿತಂ ಹಿಂದೋಳ

ಮಯ್ಯುದ್ಧೃತ ಪಿಕಕುಳಮಾಲುನ್ನತಾಶೋಕಮೇಲುನ್ಮದಕೀರವ್ರಾತಮೆಂಟು ಚ್ಚಳಿತಪಕುಳಮೊಂಭತ್ತುಲರ್ ಪತ್ತು ತತ್ಕಾಮಂದಿ ಪನ್ನೊಂದುತ್ಪಳಂ ಪನ್ನೆರಡಳಿ ಪದಿಮೂಱಪ್ಪೆ ಮತ್ತ್ರೋಪಚಾರಂ (ಶಾಂತಿಪು. ೯-೯೯). [ಸಂ].

**ಮತ್ಥವಟ್ಟಗೆ** (ನಾ). ತಲೆಗೆ ಸುತ್ತಿಕೊಳ್ಳುವ ವಸ್ತ್ರ : ರುಮಾಲು, ಪೇಟ ಮೊದಲಾದ ವಸ್ತ್ರ : ಮತ್ಥವಟ್ಟಗೆ, ಕಥಾಯಂ (ಕತ್ಥಾಯಂ) (ಶಬ್ದ. ೦೫ ವೃತ್ತಿ). [<ಸಂ. ಮಸ್ತಪಟ್ಟಿಕಾ]

**ಮತ್ವ** (ನಾ). ಮ ಎಂಬ ಅಕ್ಷರ : ಮಕಾರ : ವಿತತ ನಪುಂಸಕಲಿಂಗ ದ್ವಿತೀಯೆಯೊಳ್ ನತ್ವಮತ್ವವಿಧಿ ಮತ್ವಮೆ ಸಂಗತಿವಡೆಗುಂ ಸಂಸ್ಕೃತದೊಳ್ (ಶಬ್ದ. ೦೦೬). [ಸಂ.]

**ಮತ್ಸ** (ನಾ). ಮೀನು : ' ಮತ್ಸಕಲ್ಲು ' ಪರಾ. [ಸಂ.]

**ಮತ್ಸಕಲ್ಲು** (ನಾ). ಮೀನಿನ ಆಕಾರವನ್ನು ಕಂಡರಿಸಿದ ಕಲ್ಲು, ತೊಲೆ, ಕಂಬ ಇತ್ಯಾದಿ : ಬೇಲೂರ ಶ್ರೀಚೆಂನಕೇಶವನಾಥದೇವರ ಶುಕನಾಸಿಕೆಯ ಮತ್ಸಕಲ್ಲುಗಳ ಜೀರ್ಣಕ್ಕೆ ಕೊಟ್ಟ ಉಕ್ಕಂವದ ನಾಲ್ಕು ಕಂಬವನು ನಿಲ್ಸಿ ಜೀರ್ಣ್ಣವನುದ್ಧರ್ಸಿದೆನು (ಎಕ. V, ಬೇಲೂರು. ೫೨-೦೫ ; 1381).
[ಮತ್ಸ + ಕಲ್ಲು ( < ಕಲ್$_3$) ]

**ಮತ್ಸರ** (ನಾ).೧. ಹೊಟ್ಟೆಕಿಚ್ಚು ; ಕರುಬು: ಮತ್ಸರಮುಮೋರಗಕ್ಕಮಾಗ್ರಹ ಮಹಾಗ್ರಹಕ್ಕಂ ಕೋಪಮುಮಾನೇಕಪಕ್ಕಂ ಪಕ್ಕಾಗೆ ತನ್ನನೊಪ್ಪಿಸುವುದು ಮತಿವಂತಂಗೆ ಪುರುಷಾರ್ಥಮಲ್ತು (ಶಾಂತಿಪು. ೩-೬೨ ವ); ಮದಮತ್ಸರವುಳ್ಳವಂಗೆ ಹೃದಯಶುದ್ಧವೆಲ್ಲಿಯದೊ (ಬಸವ. ೦೦೯). ೨. ವೈರ ; ದ್ವೇಷ: ಮಸಿದುದಿತ್ತಂಡಕ್ಕೆ ಮತ್ಸರವಸಮಸಂಗರವೀಗ ನೀತಿಯುಸುಱಿವರ ಮಸಗಾಣನೇ ಕೌರವಮಹೀಶ್ವರನು (ಕುಮಾ.ಉ. ೦೮-೨೩). ೩. ಕೋಪ ; ಕ್ರೋಧ : ' ಮತ್ಸರಿಸು ' ಪರಾ. [ಸಂ.]

**ಮತ್ಸರಿ** (ನಾ). ಇತರರ ಏಳಿಗೆಯನ್ನು ಕಂಡು ಕರುಬುವವನು ; ಹೊಟ್ಟೆಕಿಚ್ಚಿನ ವ್ಯಕ್ತಿ : ಸೀತೆಯ ರೂಪವನ್ನು ನೋಡಿ ಮತ್ಸರಿಗಳೂ ಕುಲಾಂಗಾರರೂ . . . ಆದ ರಾಜರಿಗೆ ಅಭಿಲಾಷೆಯು ಉತ್ಪನ್ನವಾಗಿ, ಅವರು ಸಿಟ್ಟಿಗೆದ್ದರು (ಕುಶಲ. ೬೯) ; ಪರಿಸಲಪ್ಪುದೆ ನರರು ಮತ್ಸರಿಯ ಸಂಕಟವ ? (ಜೈಮಿನಿ. ೨೦೧). [ಸಂ. ಮತ್ಸರಿನ್]

**ಮತ್ಸರಿಗ** (ನಾ). = ಮತ್ಸರಿ : " ಮತ್ಸರಿಗನು ದೋಷಗ್ರಾಹಿಯೆನಿಸಿಕ್ಕು" (ಶಬ್ದಮ. ೯೯-೯). [ಮತ್ಸರ + — ಇಗ]

**ಮತ್ಸರಿಸು** (ಕ್ರಿ). ೧. ಕರುಬು ; ಅಸೂಯೆ ಪಡು; ಹೊಟ್ಟೆಕಿಚ್ಚು ಪಡು : ಸುರುಚಿರಸಾಲಭಂಜಿಕೆ ಬಿಮಂತರ್ದರದೊಳ್ ಪೊಳೆಯುತ್ತಿರಲ್ಕೆ ಮತ್ಸರಿಸಿದಳ್ . . . ಲತಾಂಗಿಯುಟಲ್ದು ಬಾಡಿದಳ್ (ಕಾದಂಬ. ೫೨) ; ತರುಣಿಯರ ಮೋಹನದಲುಜು ಮತ್ಸರಿಸದವರಾರರಸ (ಕೊರಡಾ. ೯-೨-೨೫). ೨. ರೇಗು : ರೋಷಗೊಳ್ಳು : ನಡುನಿರುಳಾಕಾಶಮಾರ್ಗದಿ ದೈತ್ಯರು ಮುಡುಮುಡು ಹಳಚಿ ಮತ್ಸರಿಸಿ ಕಡಿದಾಡುವ ಖಡ್ಗಧಾರೆಯಿಂದುದಿರ್ವ ಕಿಂಗಿಡಿಗಳ ನೋಡುತೆಯ್ದಿದಳು (ಮೋಹನ. ೨೯-೦೩). ೩. ಹುರುಡಿಸು ; ಸ್ಪರ್ಧಿಸು; ಪೈಪೋಟಿ ನಡೆಸು: ಇಳಿದರು ನೀರೊಳುಜು ಮತ್ಸರಿಸಿವರು ಪ್ರಣಯಪ್ರತಾಪವನೊಬ್ಬರೊಬ್ಬರಲಿ (ಕೊರಡಾ. ೨-೬-೫).
[ಮತ್ಸರ + — ಇಸು$_3$]

**ಮತ್ಸ್ಯ** (ನಾ). ೧. ಮೀನು : "ಮೀನಂ ಝಷಂ. . . ವೈಸಾರಿಣಂ ಮತ್ಸ್ಯಮೆನೆ ಮೀನ್ಗೆ ನಾಮಂ" (ಶಬ್ದಮ. ೦೨೧-೬); ಓರಿದು ಮೊಸಳೆಯು ಮತ್ಸ್ಯ ನುಂಗಿಯೂ ಬಾಯಿದೋಱದಲ್ಲಾ (ಅವತಂ. ೩೦೩-೦೩೨೦); ಜಲವ ತಪ್ಪಿದ ಮತ್ಸ್ಯ ಬದುಕುವುದೆ ಸೋಜಿಗ (ಬಸವ. ೩೬೭). ೨. ವಿಷ್ಣುವಿನ ದಶಾವತಾರಗಳಲ್ಲಿ ಮೊದಲನೆಯದು : " ಆ ಮತ್ಸ್ಯನಾ ಕೂರ್ಮನಾ ವರಾಹಂ. . . ಕೃಷ್ಣನೆಂದಾತನವತಾರ ಹತ್ತನಿಕ್ಕುಂ" (ಶಬ್ದಮ. ೬-೦೯). ೩. ಒಂದು ದೇಶದ ಹೆಸರು : ಕಮ್ಮಯ್ಯರುಂ. . . ಮತ್ಸ್ಯದೇಶಮುಂ ಪುಗುತಂದರ್ (ಕಂಶಬ್ದಾ. ೮-೩೦ ವ); ಮಗಧ ಪಾಂಚಾಲ ಮತ್ಸ್ಯ ಕುರಂಗ ವಂಗ ಕಳಿಂಗ ಬಂಗಾಳ (ಬಸವ.೬-೦೨). ೪. ಆ ದೇಶದ ರಾಜ : ವಿರಾಟ : ಪಾಂಡುತನೂಜರ್ ತಲೆದೋಱರೆ ರಾಗಮುಗುಂದಲೆಯುಂ ಪೊಂಪುಳಿಯುಂ ಮಾಯ್ತು ಮತ್ಸ್ಯಂಗಾಗಳ್ (ಕಂಶಬ್ದಾ. ೯-೯); ನಿರ್ಮದನು ಮತ್ಸ್ಯನ ಪುರಿಗೆ ಯತಿವೇಷದಲಿ ಬಂದನು (ಕುಮಾ.ವಿ. ೦-೦೬). ೫. ಪ್ರಸಿದ್ಧವಾದ ಪದಿನೆಂಟು ಮಹಾಪುರಾಣಗಳಲ್ಲಿ ಒಂದು : ಕ್ರಮವಾಗಿ ಹದಿನೆಂಟು ಪುರಾಣಗಳ ಹೆಸರುಗಳು : (೧) ಬ್ರಹ್ಮ. . . (೧೬) ಮತ್ಸ್ಯ, (೧೭) ಗರುಡ, (೧೮) ಬ್ರಹ್ಮಾಂಡ (ಭಾರತ. ೦೩೬). ೬. [ಜ್ಯೋತಿ]ಹನ್ನೆರಡು ರಾಶಿಗಳಲ್ಲಿ ಕೊನೆಯದು ; ಮೀನರಾಶಿ : ಜಾಲದ ಎಡಮಗ್ಗುಲಲ್ಲಿರುವ ರಾಶಿ ಮತ್ಸ್ಯ (ನಕ್ಷತ್ರ. ೩೦). ೭. [ನಾಟ್ಯ]ಸಂಯುತಹಸ್ತಗಳಲ್ಲಿ ಒಂದು ಬಗೆ : ಅಭಿನಯದರ್ಪಣದಲ್ಲಿ—೧. ಅಂಜಲಿ, ೨. ಕಪೋತ . . . ೧೭. ಮತ್ಸ್ಯ, ೧೮. ಕೂರ್ಮ (ಅಭಿನ. ೯೮). [ಸಂ.]

**ಮತ್ಸ್ಯಂಡಿ** (ನಾ). ಬೆಲ್ಲವಾಗುವುದಕ್ಕೆ ಸ್ವಲ್ಪ ಮುಂಚೆ ತೆಗೆಯುವ ಕಬ್ಬಿನ ಹಾಲಿನ ಪಾಕ; ಕಾಕಂಬಿ : "ಮತ್ಸ್ಯಂಡಿ ಖಂಡಸಕ್ಕರೆಯುಕ್ಕು" (ಶಬ್ದಮ. ೬೯-೯); "ಕಲ್ಲುಸಕ್ಕರೆ ಪುಟಿಕೆ ಆಗುವ ಹಾಗೆ ಕಾಯಿಸಿದ ಕಬ್ಬಿನ ಹಾಲಿಗೆ ಮತ್ಸ್ಯಂಡಿಯೆಂತಲೂ . . . ಹೆಸರುಗಳು" (ಸಿದ್ಧಾಂತಿ. ೨೮೬). [ಸಂ. ಮತ್ಸ್ಯಂಡೀ]

**ಮತ್ಸ್ಯಕೃಷಿ** (ನಾ). ಮೀನುಗಾರಿಕೆ; ಮೀನುಸಾಕಣೆ : " (ಕೃತಕವಾಗಿ) ಮೀನು ಬೆಳೆ; ಮತ್ಸ್ಯಕೃಷಿ" (Pisciculture. ಇಂಕಿ). [ಸಂ.]

**ಮತ್ಸ್ಯಕ್ಷೇತ್ರ** (ನಾ). (ನದಿ, ಕೆರೆ, ಸಮುದ್ರ ಇತ್ಯಾದಿಗಳ) ನೀರಿನಲ್ಲಿ ದೊರೆಯುವ ಮೀನು ಮೊದಲಾದ ಜಲಚರ ವಸ್ತುಗಳನ್ನು ಸಂಗ್ರಹಿಸುವ ಸ್ಥಳ : "ಮತ್ಸ್ಯಕ್ಷೇತ್ರ; ಜಲವಸ್ತುಸಂಗ್ರಹ (ಸ್ಥಳ, ಸಂಸ್ಥೆ, ಉದ್ಯೋಗ)" (Fishery. ಕತ್ರಿ. ೮೯). [ಸಂ.]

**ಮತ್ಸ್ಯಧ್ವಜ** (ನಾ). ೧. ಮೀನಿನ ಗುರುತಿರುವ ಪತಾಕೆ. ೨. ಮೀನಿನ ಗುರುತನ್ನು ಪತಾಕೆಯಲ್ಲಿ ಉಳ್ಳವನು; ಮನ್ಮಥ. [ಸಂ.]

**ಮತ್ಸ್ಯನ್ಯಾಯ** (ನಾ). ದೊಡ್ಡಮೀನು ಸಣ್ಣಮೀನನ್ನು ಹಿಡಿದು ನುಂಗುವುದು : P ಬಲಿಷ್ಠನಾದವನು ಅಶಕ್ತನನ್ನು ಹಿಡಿದು ಪೀಡಿಸುವುದು ಎಂಬುದು ಲೋಕರೂಢಿ : ದಂಡಧರರಿಲ್ಲದಂದು . . . ಅಂತ ದುಷ್ಟಬಲವದ್ಘನಗ್ರಸನದಿಂ ದುರ್ಬಲಜನದೊಳ್ ಮತ್ಸ್ಯನ್ಯಾಯಂ ಪ್ರವರ್ತಿಸುಗುಂ (ಅಂತಿ. ೯-೬೯ ವ). [ಸಂ.]

**ಮತ್ಸ್ಯಪಿತ್ತ** (ನಾ). ಒಂದು ಬಗೆಯ ಔಷಧದ್ರವ್ಯ: ಕಟುಕರೋಹಿಣಿ: "ಮತ್ಸ್ಯಪಿತ್ತಮೆನೆ ಕಟುಕರೋಹಿಣಿ" (ಶಬ್ದಮ. ೯೨-೩೮) ; "ಕಟುಃ . . ; ಮತ್ಸ್ಯಪಿತ್ತಾ, ಕೃಷ್ಣಭೇದೀ, ಚಕ್ರಾಂಗೀ, ಶಕುಲಾದನೀ—ಈ ಕಟುಕರೋಹಿಣಿಯ ಹೆಸರುಗಳು . . . ಇದು ಭೇದಿಯಾಗುವ ಗ್ರಂಥಿಕದ್ರವ್ಯ" (ಸಿದ್ಧಾಂತಿ. ೦೩೦). [ಸಂ. ಮತ್ಸ್ಯಪಿತ್ತಾ]

**ಮತ್ಸ್ಯಪುರಾಣ** (ನಾ). ಹದಿನೆಂಟುಮಹಾಪುರಾಣಗಳಲ್ಲಿ ಒಂದು : ಬ್ರಹ್ಮಪುರಾಣ . . . ಮತ್ಸ್ಯಪುರಾಣ ಗಾರುಡಪುರಾಣ ಬ್ರಹ್ಮಾಂಡಪುರಾಣವೆಂಬವೇ . . . ಹದಿನೆಂಟು ಮೂಲಪುರಾಣಂಗಳ್ (ಬವೀಕ. ೯) ; ಮತ್ಸ್ಯಪುರಾಣದಲ್ಲಿ, ಸಾತ್ವಿಕಪುರಾಣಗಳಲ್ಲಿ ವಿಷ್ಣುಮಹಾತ್ಮ್ಯವೂ . . . ನಿರೂಪಿತವಾಗಿದೆ (ಭಾರತ. ೦೩೬). [ಸಂ.]

**ಮತ್ಸ್ಯಬಂಧನ** (ನಾ). ಮೀನು ಹಿಡಿಯುವ ಒಂದು ಸಾಧನ ; ಗಾಳ : "ಬಡಿಶಂ, ಮತ್ಸ್ಯಬಂಧನಂ — ೨ ಗಾಳಕ್ಕೆ ಹೆಸರುಗಳು" (ಸಿದ್ಧಾಂತಿ. ೯೦). [ಸಂ.]

**ಮತ್ಸ್ಯಬಂಧಿ** (ನಾ). ಗಾಳಹಾಕುವವನು ; ಬೆಸ್ತ : "ಕೈವರ್ತಃ, ಧೀವರಃ, ದಾಶಃ, ಮತ್ಸ್ಯಬಂಧೀ, ಜಾಳಿಕ — ಈ ೫ ಜಾಲಗಾರಂ" (ಪದಾರ್ಥ. ೯೬-೯೯೦). [ಸಂ. ಮತ್ಸ್ಯಬಂಧಿನ್]

**ಮತ್ಸ್ಯಬಂಧಿನಿ** (ನಾ). ಮೀನು ಹಿಡಿಯುವ ಸಾಧನ ; ಮೀನಿನ ಬಲೆ : "ಆನಾಯಃ, ಜಾಳಃ, ಕುವೇಣೀ, ಮತ್ಸ್ಯಬಂಧಿನೀ – ಈ ೪ ಬಲೆ" (ಶಬ್ದಮ. ೯೭-೪೧೦). [ಸಂ. ಮತ್ಸ್ಯಬಂಧಿನೀ]

**ಮತ್ಸ್ಯಯಂತ್ರ** (ನಾ). ಮಹಾಭಾರತದ ದ್ರೌಪದೀಸ್ವಯಂವರ ಸಂದರ್ಭದಲ್ಲಿ ರಾಜಕುಮಾರರ ಶಸ್ತ್ರಚಾತುರ್ಯವನ್ನು ಅಳೆಯಲು ಏರ್ಪಡಿಸಿದ್ದ ಮತ್ಸ್ಯವೆಂಬ ಲಕ್ಷ್ಯದ ಸಾಧನ : ಮಹಾಭಾರತದ ಕತೆಯಲ್ಲಿ ಮತ್ಸ್ಯಯಂತ್ರದ ಭೇದನವು ಒಂದು ಮುಖ್ಯ ಆಖ್ಯಾನ (ರೂಢಿ). [ಸಂ.]

**ಮತ್ಸ್ಯರೂಪ** (ನಾ). ಮೀನಿನ ಆಕಾರವನ್ನು ಹೊಂದಿದವನು : ಮತ್ಸ್ಯಾವತಾರಿ : ಮತ್ಸ್ಯರೂಪನಾಗಿ ಮನಸು ಕಾಣಿಸಿಕೊಂಡು ಮಕ್ಕಳ ತಿದ್ದಿದ್ದ ಹೇಳಲೆ (ಪುರಂದ. ರಾ. ೩-೦೧೩-೧). [ಸಂ.]

**ಮತ್ಸ್ಯರೇಖೆ** (ನಾ). [ಸಾಮುದ್ರಿ] ಅಂಗೈಯಲ್ಲಿ ಇರುವ ಮೀನಿನ ಆಕಾರದ ಚಿಹ್ನೆ ; ಇದು ಐಶ್ವರ್ಯಸೂಚಕಚಿಹ್ನೆಯೆಂದು ಹೇಳಲಾಗುತ್ತದೆ : ಪುರುಷನ ಹಸ್ತದಲ್ಲಿ ಮತ್ಸ್ಯರೇಖೆಯಿರಲು ಲಕ್ಷಾಧಿಪತಿಯಾಗುವನು (ಸಾಮು. ೩೩-೦೩); ಸ್ತ್ರೀಯರ ಹಸ್ತದಲ್ಲಿ ಮತ್ಸ್ಯರೇಖೆಯಿರಲು ಸೌಭಾಗ್ಯವತಿಯಾಗುವಳು (ಸಾಮು. ೦೩೯-೯). [ಸಂ. ಮತ್ಸ್ಯರೇಖಾ]

**ಮತ್ಸ್ಯಸುತ** (ನಾ). ವಿರಾಟರಾಜನ ಮಗ ; ಉತ್ತರಕುಮಾರ : ಸಾರಥಿ ಮಾಡು ಮತ್ಸ್ಯಸುತನುತ್ತರನಂ (ಕಂಕಭಾ. ೮-೯೭). [ಸಂ.]

**ಮತ್ಸ್ಯಾದ** (ಗು). ಮೀನನ್ನು ತಿನ್ನುವ. [ಸಂ.]

**ಮತ್ಸ್ಯಾವತಾರ** (ನಾ). ೧. ವಿಷ್ಣುವಿನ ದಶಾವತಾರಗಳಲ್ಲಿ ಒಂದನೆಯದು : ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆವಂ ಮತ್ಸ್ಯಾವತಾರಕ್ಕೆನಂ ತುಹಿನಾದ್ರೀಂದ್ರವನೊತ್ತುಗೊಂಡು ನಡೆವಂ (ಶಂರಾವಿಷ.೭-೯೪); ಪರಿಹರಿಸಿ ಮತ್ಸ್ಯಾವತಾರವನುರಗಕಟಕಂ ಸುತ್ತಿದನಲಾ ಶಿರಸಿನಲಿ (ಬಸವ. ೩೪-೯೨) ; ಮತ್ಸ್ಯಾವತಾರದಲ್ಲಿ ವೇದೋದ್ಧಾರದ ಪ್ರಸಂಗವು ವರ್ಣಿತವಾಗಿದೆ (ಭಾರತ. ೦೧೩). ೨. = ಮತ್ಸ್ಯರೂಪ : ಮತ್ಸ್ಯಾವತಾರಗೆ ಮಂದರೋದ್ಧಾರಗೆ . . . ಆರತಿಯೆತ್ತಿರೆ (ಪುರಂದ. ರಾ. ೦-೦೩೩-೧). [ಸಂ.]

**ಮತ್ಸ್ಯೇಶ** (ನಾ). ಮತ್ಸ್ಯದೇಶದ ಅರಸ: ವಿರಾಟರಾಜ : ಮನದೊಳಗಳುಕಿದರು ಮತ್ಸ್ಯೇಶನರಸಿಯರು (ಕುಮಾ.ವಿ. ೦-೩೭). [ಸಂ.]

**ಮತ್ಸ್ಯೋದ್ಯಮ** (ನಾ). ಮೀನುಗಾರಿಕೆಯ ಉದ್ಯೋಗ: ಮೀನು ಸಾಕಣೆ : "ಮತ್ಸ್ಯೋದ್ಯಮ ; ಮೀನುಗಾರಿಕೆ" (Fishery. ಪತ್ರಿ.ಶ. ೩೯). [ಸಂ.]

**ಮಥನ** (ನಾ). ೧. ಕಡೆಯುವಿಕೆ; ಮಂಥನ. ೨. ಪೀಡೆ. ಹಿಂಸೆ. ೩. ಕೊಲೆ: ವಧೆ. ೪. ಕೊಂದುಹಾಕಿದವನು ; ಸಂಹಾರಕ : ರಾವಣಾಸುರಮಥನ . . . ಕಾವುದಾನತಜನವ ಗದುಗಿನ ವೀರನಾರಯಣ (ಕುಮಾ.ಕ. ೦-೦). ೫. ತಿಕ್ಕಾಟ; ಘರ್ಷಣೆ: ಮರಮರ ಮಥನದಿಂದ ಅಗ್ನಿ ಪುಟ್ಟಿ ಆ ಮರನೆಲ್ಲವ ಸುಡದಿಪ್ಪುದೆ (ಬಸವ. ೯೯೨). ೬. ಜಗಳ; ಕಾದಾಟ : ಮರ್ತ್ಯರೊಳ್ ಮಥನಂ ಪೆಗ್ಗಳವಲ್ಲವೈ (ಸೋಮೇಶ. ೯೬); ಅತಿಯುಕ್ತಿಯುಳ್ಳವರು ಮಥನಕ್ಕೆಯುಳುಕುವರು (ಪವನೋ. ೨-೯೦). ೭. ಆಲೋಚನೆ: ವಿಚಾರ : ಮಥಿಸಲು ಉದ್ಭವಿಸುವುದು ಮತಿಯೊಳೇ ಪರತತ್ತ್ವಮದರಿಂ ಮಥನವನೆ ಪೊರಗೊಳಗೆ ಲಂಬಿಸಿ ಸಿದ್ಧನಾಗು (ಗಗನಾ. ೦೬-೩೯). ೮. ಚರ್ಚೆ; ವಾದ; ತರ್ಕ : ಮಥನದ ಲೀಲೆಯಲ್ಲಿ ಹುಟ್ಟುವುದೆ ಬ್ರಹ್ಮವು ಶ್ರುತಿ ಸ್ಮೃತಿಗಳಿಗೆ ಅಳವಡದು ನೋಡಾ (ಅನಸಂ. ೨೩೩-೦೦೨೦). [ಸಂ.]

**ಮಥನಿಸು** (ಕ್ರಿ). ೧. **ಕಡೆ: ಕಲಕು; ಕದಡು** : ಆ ಘಟೋತ್ಕಚನು ಮಥನಿಸುವ ಬಲಜಲಧಿಯ ಗನ್ನಗತಕದಿ ಕೊಲುವ ಪರಿಭವದ ವಿಷವು ಗಳನ್ನು ಸೈರಿಸಲಾರದಿವರು ಚಡುಳೀತಿಯಿಂ ಕರ್ಣನಂ ಪೊರೆಪೊಕ್ಕರ್ಕೈ (ತುರಂಗ. ೩೭-೪೩). ೨. ತಿಕ್ಕು; ಉಜ್ಜು : ಮರಮರ ಮಥನಿಸಿ ಕಿಚ್ಚು ಹುಟ್ಟಿ ಸುತ್ತಣ ತರುಮರಾದಿಗಳ ಸುಡಲಾಯಿತ್ತು (ಮಹಾದೇ. ಎ. ೩೯-೦೭೦); ಅತಿಮಥನಿಸಿದರೆ ಶ್ರೀಗಂಧದೊಳು ಕಿಚ್ಚು ಪ್ರತಿಫಲಿಸುವುದಲ್ಲೆ (ಶರತ. ೦೪-೮೭). ೩. ಘರ್ಷಣೆಯಾಗು; ತಾಕಲಾಟವುಂಟಾಗು : ಫಲುಗುಣಂಗೆ ದುಶ್ಶಾಸನಂಗಂ ಮಥನಿಸಿತು ಕಲಿಘಟೋತ್ಕಚನೊಡನೆ ಭಗದತ್ತ ತಾಗಿದನು (ತುರಂಗ. ೯೭-೨೪). ೪. ಕಾಳಗ ಮಾಡು; ಹೋರಾಡು : ದೇವತೆಗಳ ನಂಬುಗೆವಡೆದ ರಕ್ಕಸರ ಕಂಬುಚಕ್ರಾಂಕಿತ ನಿನ್ನೊಳು ಮಥನಿಸಿ ಮುಂಬರಿದರು ಮಮಪುರಿಗೆ (ಮೋಹತ. ೩೭-೩೯); ಮಥನಿಸುತ ಬರೆ ಫಲುಗುಣನ ಮರಳಿ ರಿಪುಸೇನೆ ಎತಿಬೊಳಾಪರಿಸೆ (ತುರಂಗ. ೭೯-೪). ೫. ವಾದ ಮಾಡು; ಚರ್ಚಿಸು : ಮನದ ಮುಖದ ಗಂಟಿಕ್ಕಿಕೊಂಡು ಕಂಡಕಂಡವರೊಡನೆ ಮಥನಿಸುತ್ತಿಪ್ಪವರ ಲಿಂಗೈಕ್ಯಪದವು ಕಾಡುತ್ತಿದ್ದಿತು (ಕವನೋ. ೬೮-೬). 'ಮಥಿಸು' ಪರಾ. [ಮಥನ + — ಇಸು]

**ಮಥಿ** (ನಾ). ಕಡೆಗೋಲು : ಮಂತು. [ಸಂ.]

**ಮಥಿಕ** (ನಾ). ಕಡೆಯುವವನು: ಮಥಿಸುವವನು : ಆಯೆನುತ ಮೊಳಗುವ ಸಿಂಹನಾದದಲಿ ತೊಡಗಿದರು ಮಥನವನು ಮಥಿಕರು ಬಿಡದೆ ಘೂರ್ಮಿಸಿ ದುಗ್ಧನಿಧಿ ಘೋಳಿಡಲು (ತಿಣಾಗ. ೮-೯-೦). [ಸಂ.]

**ಮಥಿತ** (ಗು). ೧. ಕಡೆದ ; ಮಥಿಸಿದ : ದಾನವಾಚಳಮಥಿತಸೇನಾಂಭೋನಿಧಿಯ ಪರಿಭವದ ವಿಷಮುರಿಗಾ ನರೇಂದ್ರನಿಕಾಯ ಪೊಕ್ಕುದು ರವಿಸುತನ ಮಣಿಯ (ಕುಮಾ.ದ್ರೋ. ೦೩-೦೪). ೨. ನಾಶಗೊಳಿಸಿದ. (ನಾ). ೩. ನೀರು ಬೆರಸದೆ ಕಡೆದ ಮೊಸರು; ತಕ್ರ : "ಮಥಿತಮಾ ತಕ್ರ ಮೆಂದೊಡಳೆ" (ಶಬ್ದಮ. ೩೪-೩); ನೀರನೆರೆಯದೆ ಕೆನೆಯ ತೆಗೆದು ಕಡೆದುದು ಮಥಿತವೆಂಬ ಮಜ್ಜಿಗೆ (ಲೀಮುಸೂ. ೨೬). [ಸಂ.]

**ಮಥಿತಾರ್ಥ** (ನಾ). ವಾದವಿವಾದಗಳಿಂದ ಹೊಮ್ಮುವ ತತ್ತ್ವ: ಮುಖ್ಯಾರ್ಥ : ಇದಿಷ್ಟು ಈ ಉಪದೇಶದ ಮಥಿತಾರ್ಥ (ಕೃಸಮ. ೩೪೪). [ಸಂ.]

**ಮಥಿಯಿಸು** 'ಮಥಿಸು' ನೋ.

**ಮಥಿಸು, ಮಥಿಯಿಸು** (ಕ್ರಿ). ೧. ಕಡೆ : ಮಂಥನ **ಮಾಡು** : ಮಂದರಂ ಮಥಿಸಲ್ ಕ್ಷೀರಸಮುದ್ರದೊಳ್ ಬಹುವಿಷಂ ತಾಂ ಪುಟ್ಟದೆ (ಸೋಮೇಶ. ೯೮) ; ತಳಮಳವಿದೇನಿಳೆಗೆ ? ದೇವ ದನುಜರ್ ಮಥಿಸೆ ಜಳನಿಧಿಯೊಳಾದಂತೆ ಸುಧೆಗೆ ಪೀಠಿಕೆಯೀಂ ? (ಮಂಕುತಿ. ೦೭). ೨. ತಿಕ್ಕು ; ಉಜ್ಜು ; ಘರ್ಷಿಸು : ಮಾತಿಂಗೆ ಮಾತು ಮಥಿಸಲ್ಕೆ ಬಿದ್ದಿ ಬಂದು ಆತು ಕೊಂಡಿಹುದು (ಸರ್ವಜ್ಞ. ೦೩೪೮) ; ಮಥಿಸಿ ಮಥಿಸಲು ಪುಟ್ಟುವುದಲ್ಕೆ ಸುತನೆ ಕಾಷ್ಠದಲಗ್ನಿ (ಗಗನಾ. ೦೬-೩೯). ೩. ವಾದಿಸು ; ವಾಗ್ವಾದ ನಡೆಸು : ನೀನೊಡಮನೆಂದಜಾದೀಶ್ವರ ನಿಮ್ಮ ಪರ್ಚಿಸುತ್ತಿರದಿರದೆಲ್ಲರೊಳ್ ಮಥಿಸಿ ತರ್ಕಿಸಿ ನೋಯಿಸಿ ನೋಯುತ್ತುಂ ವೃಥಾ ನೆರೆಮನೆಗಳ್ತು ಕಣ್ಗೆಡುವರೇಂ ಮರುಳ್ಗೊಂಡರೊ (ಶಂಕಾಶ. ೭೩). ೪. ವಿವೇಚಿಸು ; ಆಲೋಚನೆ ಮಾಡು : ಕೃತಿಯಂ ಸಮಧರಿಸುವುದು ಸುಕವಿಯ ಮತಿಗೆ ಮಂಗಳವೀವುದಧಿಕರು ಮಥಿಸುವುದು (ಕುಮಾ ಕ. ೦-೦೬) ; ಇಂತಿವನಾತ್ತ ವಿವೇಕಶಕ್ತಿಯಿಂ ಮಥಿಸಿ ಜಡಾಂಗಮುಂ ಬಿಸುಟು . . . ಸತ್ತ್ವಘಗತನಪ್ಪಂ (ಶತಕ. ೦೯೬-೯೭) ; ಹರೆದುದೀ ವೃತ್ತಾಂತವಿದನಾದರಿಸಿದಳಲ್ಲೆ ಪೂರ್ವ ಮಾಯಾತರುಣಿ ಮಂಥರೆ ಮಥಿಸಿ ಮನದಲಿ ಪೂರ್ವಸೂಚಿತವ (ತೊರಂಗ. ೩-೦-೨೦). **ಮಥಿಯಿಸು:** ೩. ಪರಸಮಯಸ್ಥರೆಲ್ಲಂ . . . ಮಂಚಣಪಂಡಿತರಂ ಬರಿಸಿ ತಮ್ಮತಮ್ಮ ಶಾಸ್ತ್ರೋಕ್ತಿಯುಕ್ತಿಯಿಂದರೆ ಬೇಟಿವೇಟ್ ಮಸಗಿ ಮಥಿಯಿಸೆ (ಕೃಕಸಂ. ೩೭-೩೭ ಬ). ೫. **ನೋಯಿಸು ; ಪೀಡಿಸು** : ಅಪಹರಿಸಿದಳೀ ಕಾಮಿನಿ ಲಪನಶ್ರೀಯಿಂದಮೆನ್ನ ಚೆಲ್ವಂ ತಾನೆಂಬಪಕಾರ

ರೋಷದಿಂ ಶಶಿಯಂಪಾರಕರಪಾತದಿಂದೆ ಮಥಿಯಿಸುತಿರ್ಪಂ (ಚಂದ್ರಕೃ. ೩-೧೩೪). 'ಮಥನಿಸು' ಪರಾ.

[ ಮಥನ + — ಇಸು₃ ]

**ಮದ** (ನಾ). ೧. (ಮಾದಕದ್ರವ್ಯಸೇವನೆಯಿಂದುಂಟಾಗುವ) ಅಮಲು : ಮತ್ತು. ೨. ಮರುಳು : ಬುದ್ಧಿಭ್ರಮಣೆ. ೩. ತೀವ್ರವಾದ ಕಾಮದ ಬಯಕೆ; ವಿಷಯಾಭಿಲಾಷೆ. ೪. ಸಂತೋಷಾತಿಶಯ ; ಉತ್ಸಾಹ : ಉಲ್ಲಾಸ : ರಮಣೀನಿವಹಕ್ಕೆ ಕಾಮಕಾತರತೆಯುಂ ಸಂಗಜಂಗೆ ಮದಮುಂ ಜನದೃಷ್ಟಿಗಪೂರ್ವತುಷ್ಟಿಯುಂ . . . ಇತ್ತನಂದು ಚಿತ್ತಂಬಿಸೆ ಸಸತ್ಕ್ಯಮಾರ ನೀಳಕೂಬರ ಕಂತುಸಿಭಂ ನೃಪಾತ್ಮಜಂ (ಪುಶ್ಯಪು. ೪-೬೦). ೫. ಸೊಕ್ಕು : ದರ್ಪ : "ದರ್ಪಂ ಮದಂ ಬಲಮಹಂಕಾರಮವಲೇಪ ಮೆನಿಸೆ ಗರ್ವಮುಂ" (ಮಂಗರಾ. ೧೩೦-೧೬) : ಮದಮಳಿದು ನಿಜಮುಳಿದ ಬಳಿಕ ಅದು ಸತ್ಯ ಕಾಣಾ (ಬಸವ. ೯೬೬): ಸರ್ಪಥಾ ಮದ ಮಾನ ಮತ್ಸರ ಕೇಡು ಮರ್ತ್ಯರಿಗೆ (ಅಮೃತ. ೨-೩೮). ೬. ನವಯೌವನ ; ಏರುಜವ್ವನ. ೭. ಮದ್ಯ ಮೊದಲಾದ ಮಾದಕಪೇಯ. ೮. ಜೇನುತುಪ್ಪ. ೯. ಬೆದೆಯೇರಿದ ಆನೆಯ ಗಂಡಸ್ಥಳದಿಂದ ಸುರಿಯುವ ದ್ರವ : ಮದೋದಕ : "ದಾನಮೆನೆ ಮದ ಮೆನಿಸಿಕ್ಕುಂ" (ಮಂಗರಾ. ೯೬-೦); ಕಾಮ್ಗಳಿಂದಮಿಂಬಾಗಿರೆ ಸೋರ್ವ ಸೋನೆ ಮದಮಾಗಿರೆ ಮಾವಿನ ಬಂದ ಕೋಡೆ ಕೋಡಾಗಿರೆ ಕೋಡು ಗೊಂಡು ಪರಿದತ್ತು ವಸಂತಗಜಂ ವಿಯೋಗಿಯಂ (ಶಂಕಥಾ. ೨-೧೩) ; ಮದಮಂ ಗಂಡಸ್ಥಳೋದೀರ್ಣಕಂಪದೊಳಂ ಸೇವಿಸಿ ತುಂಬಿಗಳ್ ತಣಿದುವು (ಪುಶ್ಯಪು. ೧೦-೧೧). ೧೦. ತುಂಬಿ: ಭ್ರಮರ. ೧೧. ಹತ್ತಿ; ಕಾರ್ಪಾಸ. ೧೨. ನೀರಿನ ತೆರೆ : ಅಲೆ : "ಅಳಿಗಳೊಳು ಪ್ರಾಯದೊಳು ಕಾರ್ಪಾಸ ದೊಳು ಮತ್ತಗಜದ ದಾನದೊಳ್ ಮದಮೆಂಬ ನಾಮಮಕ್ಕುಂ" (ಮಂಗರಾ. ೦೩೦-೯೯): "ಅಳಿ ಗಜದಾನ ವೀಚಿ ವಿಪ್ರಂ ನವಯೌವನಮುಂ ಮದಾಹ್ವಯಂ" (ಜಾನಾರ. ೧೦೯). ೧೩. ವೀರ್ಯ : ರೇತಸ್ಸು. ೧೪. ಒಂದು ಬಗೆಯ ಸುಗಂಧ ದ್ರವ್ಯ: ಕಸ್ತೂರಿ : 'ಮದಲೇಖೆ' ನೋ. ೧೫. ಚೆಲುವಾದುದು. ೧೬. ಒಂದು ಬಗೆಯ ಓಷಧೀಸಸ್ಯ : ಕಾಂವಲ್, ಮದ. ಉಪ್ಪಾತಿ (ವೈಶಿಗ. ೦೧-೦೬೩). ೧೭. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು: "ಮದ್ಯಪಾನ ದಿಂದ ಉಂಟಾಗುವ ಉಲ್ಲಾಸಸಹಿತವಾದ ವ್ಯಾಮರವು, ಮದ" (ಛಾರಚಾ. ೩೯೬): ಮತಿಸಿವೇಶವಾದಪಿತ್ಥಕ್ರಮಮದಜಡತಾಗ್ಲಾನಿ . . . ವ್ಯಾತಿಗಳಿವಿಂತೆಪ್ಪ ಸಂಚಾರಿಭಾವಂ (ಕಾವ್ಯಾವ. ೭೯೩). ೧೮. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : ದುರಿತಾಷ್ಟಕಕರ್ಮಂ ವಸು ಕರಿ ದಿಙ್ನಾಗಂ ಷುದಪದನುಷ್ಟುಪ್ಪಂದಂ . . . ಅರಯೆಯೆಂಟಕ್ಕೆ ನಾಮಂ (ವ್ಯವಹಾ. ೯-೮).

ಮದಂಕಲಿಗಳ್? = ಒಂದು ಬಿರುದು : ಗುಣರತ್ನಾಕರಂ ಸತ್ಯ ಕಾನೀನಂ ಪರಬಲದಣಾಮ ದ್ರೋಹರ ಸೂಳಂ ಮದಂಕಲಿಗಳ್ಳಂ (ಎಕ. XI, ದಾವಣ. ೦೨೪-೧೩; ಸು. 1042?). **ಮದದಾನೆ, ಮದ್ದಾನೆ** = ಮದವೇರಿದ ಆನೆ; ಸೊಕ್ಕಿದ ಆನೆ : ಮದದಾನೆ ಬನಮಂ ಪಸುಗೂಸು ಮೊಲೆಯಂ ಪೆಣ್ಗೂಸು ತವರ್ಮನೆಯಂ . . . ನೆನೆವಂತು (ಧರ್ಮಾಮೃ. ೩-೦೯೦): ಮದ್ದಾನೆಗೆ ಸಿಂಹ ಮಲೆತಂತೆ ಸುಭಟಾನಿರುದ್ಧ ನಿಂದಿರ್ದ ಘೀಳಿಸದೆ (ವೋಸಕ. ೩೩-೦೮). **ಮದದಾನೇಧವಳ** = ಒಂದು ಬಿರುದು : ಆರೋಪಕ ತ್ರಿನೇತ್ರಂ ಮದದಾನೇಧವಳಂ ಬ್ಯಾಳಗಜಮಲ್ಲಂ (ಎಕ. V, ೦೬-೨೦; 1019).

[ಸಂ.]

**ಮದಕರಿ** (ನಾ). ಮದವೇರಿದ ಆನೆ; ಸೊಕ್ಕಿದ ಆನೆ : ಮದಕರಿಯ ಪರಿವ ಭರದಿಂದದಿರ್ದೊಡೆ ನೆಲನೊಡ್ಡಿ ನಿಂದ ಚತುರಂಗಮುಮೊರ್ಮೆಯದೆ ನಡುಗಿದುದು (ಶಂಕಥಾ. ೧೦-೬೦): ಸಿಂಗಕ್ಕೊಳಿದ ಮದಕರಿಯಂತೆ ಆನು ಜಂಗಮಕ್ಕೊಳಿದೆನಯ್ಯಾ (ಬಸವ. ೩೯೦) : ಸರ್ಪಾಸ್ತ್ರಘಾತಸ್ಫುರಣಮದಕರಿ ಮಂಕ್ಷುಕಾಸಂಘಾತದಂದದಲಿ ಕೆರಳಿ ಕವಿದನು (ಕುಮ್ಯಾಕ. ೧೩-೨೦).

ಮದಕರಿದನುಜಹರ = ಆನೆಯ ರೂಪದ ರಾಕ್ಷಸನನ್ನು ಕೊಂದ ವನು; ಶಿವ : ಕರಿಯ ಗೋವಳತಿ ಮದಕರಿದನುಜಹರಗೆ ಭಿಕ್ಷವ ನೀಡಿ ಮುಂಗಾರ ಸಿರಿಯಂತೆ ಕಣ್ಗೆಸೆದಳು (ಭಕ್ಷರತ. ೩-೨೯). [ಸಂ. ಮದಕರಿನ್]

**ಮದಕಲ** (ಗು). ೧. (ಮತ್ತೇರಿದಂತೆ) ಮೃದುವಾಗಿಯೂ ಮಧುರ ವಾಗಿಯೂ ಧ್ವನಿ ಮಾಡುವ : ಮದಕಲ[ಶಾತಾಂ. ಳ]ಹಂಸೆಯ ಓಂಡಿದೆ ಪೊಮಟ್ಟಿ ಚಮರೀಜವಾಗೆ (ಅಜಪು. ೦೦-೬೩). (ನಾ). ೨. ಮದವೇರಿದ ಆನೆ. [ಸಂ.]

**ಮದಕಾರಿ** (ನಾ). (ಕರಾ) ಪಿರೇಬೇನೆ : ಕುಷ್ಠರೋಗ.

[← ತುಳು. ಮದಕರಿ]

**ಮದಗ** 'ಮದಗ್ಗು' ನೋ.

**ಮದಗಂಧ** (ನಾ). ೧. ಆನೆಯ ಮದೋದಕದ ವಾಸನೆ: ಮದಗಂಧದಿಂದೆ ಸಪ್ತಚ್ಛದಗಂಧಮನೀ ವನೇಭಮಾಘ್ರಾಣಿಸಿ ಪೆರ್ಚಿದ ಮಸಕದಿಂದೆ ಪಾಯಲೊಡರ್ಪುಗೆಯ್ವುದು ನೋಡ ವನವೇದಿಕೆಯಂ (ಅಜಿತ. ೦೦-೬೨) : ಮದಗಂಧಸಾರಸಪ್ತಚ್ಛದಂಗಳಿಂ ಪುದಿದು ಬೆಳೆದ ತಾಪಿಂಛದ ಪೆರ್ವೊದಱ ಕರಿಶಂಕೆಯಿಂ ಪಾಯ್ದುದಱಿಯೊಳ್ ಹರಿವಿತತಿ ಬಂಜೆವಡಿವುದು ಮುಳಿಸಂ (ಚಂದ್ರಪು. ೩-೩೦); ಮದಗಂಧಕ್ಕನ್ಯವನ್ಯದ್ವಿರದತತಿ ಬೆನ್ನಿತ್ತು ಮತ್ತೆಲ್ಲಿಯುಂ ನಿಲ್ಲದೆ ಶಂಕೋದ್ರೇಕದಿಂ ದೆಸೆಯ ಕಡೆವರಂ ಪೋದವು (ಪಾರ್ಶ್ವಪು. ೪-೦೩೦). ೨. ಹಿತಕರವಾದ ಸುವಾಸನೆ : ಮದಗಂಧಮನೋಹರಿ ಸಂಮದಕಾರಿಣಿ . . . ಸುಖದಾಯಿನಿಯೆನಿಸಿದ ಮದಿರಾವಧುವಿರ್ದಳಾ ಕದಂಬದ್ರುಮ ದೊಳ್ (ಜಗಪು. ೮-೨೩). [ಸಂ.]

**ಮದಗಂಧಿ** (ನಾ). ಮದೋದಕದ ವಾಸನೆಯುಳ್ಳ ಒಂದು ಬಗೆಯ ಸಸ್ಯ : ಚಂಪಕಸಪ್ತಪರ್ಣಮದಗಂಧಿಯಂ . . . ತರಿಸಿ ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇವಂ ಪೂಜಿಪುಟ್ಟನೇಜಿ ಜಯಮಂ ಜಯಪರ್ವತಯಾನ ನಾಗಮುಂ (ಶಾಂತಿಪು. ೧೨-೦೪೪ ಅ). [ಸಂ. ಮದಗಂಧಿನ್]

**ಮದಗಜ** (ನಾ). = ಮದಕರಿ : ಮದಗಜಜೃಂಭಿತಧ್ವನಿ ತುರಂಗಮಹೇಷಿತ ಘೋಷದೊಳ್ ಪೊದಱಿಕ್ಕೊದವೆ (ಶಂಕಥಾ. ೯-೨೬) : ಮದಗಜದ ರದನಮಂ . . . ಮುಱಿವಂದದೆ ಮುಱಿಯೆ ಪೊಯ್ದು ನಿಜಖಡ್ಗದೆ ತತ್ಖಡ್ಗಮಂ (ಜಗಪು. ೬-೯೯) : ಕುದುರೆ ಹಾಯ್ದುವು ಕಂಡ ಮುಖದಲಿ ಮದಗಜಾವಳಿ ಜೋಡಿಸಿದವು (ಕುಮ್ಯಾಕ. ೨೦-೨). [ಸಂ.]

**ಮದಗಜಗಮನೆ** (ನಾ). ಮದದಾನೆಯಂತೆ ನಿಧಾನವಾಗಿ ನಡೆಯುವವಳು: ಗೋವರ್ಧನಕಂದರದೊಳ್ ಶಿಖಿನರ್ತನಂಗಳಂ ನೋಡು ಮದನಮದಗಜ ಗಮನೇ [ಶಾತಾಂ. ಲಲಿತಕೇಕಾನ್ವಿತಮಂ] (ಶಾಂತಿಪು. ೩-೦೩೦) : ಮದಗಜ ಗಮನೆಯಂ . . . ಹಾವಭಾವಲಾವಣ್ಯದ ನೆಲೆಯಂ . . . ಕಂಡು (ಧರ್ಮಾಮೃ. ೦೦-೪೦). [ಸಂ. ಮದಗಜಗಮನಾ]

**ಮದಗಜಗಾಮಿನಿ** (ನಾ). = ಮದಗಜಗಮನೆ : ಮದಗಜಗಾಮಿನಿ . . . ಜಿನಚೈತ್ಯಾಲಯಮಂ ಮುದದಿಂದಂ ಪಲವನರ್ತಿಯಿಂ ಮಾಡಿಸು ನೀಂ (ಧರ್ಮಾಮೃ. ೩-೨೬೪) : ಮದಗಜಗಾಮಿನಿ ಕಾಮಿನಿ ಬಂದಳು ಲೀಲೆಯಿಂದಲಸ ಭಾವದೊಳು (ಇಂದ್ರಾಕ. ೯೮-೮೦). [ಸಂ. ಮದಗಜಗಾಮಿನೀ]

**ಮದಗಡ** (ನಾ). ೧. ಸರ್ಕಾರವು ವ್ಯವಸಾಯದ ಸೌಕರ್ಯಗಳಿಗಾಗಿ ರೈತರಿಗೆ ಬಡ್ಡಿಯಿಲ್ಲದೆ ಕೊಡುವ ಸಾಲ : "ಮದಗಡ-ತಗಾಯಿ" (ಜಾಪಕೋ. ೨೬). ೨. ತೆರ ; ಕನ್ಯಾಶುಲ್ಕ : ಆಗ ಗಂಡಿನವರು ಹೆಣ್ಣಿಗಾಗಿ "ಮದಗಡ"ವನ್ನು ಪಂಚಾಯ್ತರ ಎದುರಿಗೇ ಕೊಡುವರು (ಹುಟ್ಟಿಪ. ೯). [? + ಕಡ₁]

**ಮದಗು₁** (ಕ್ರಿ). ಕೆರೆಯಲ್ಲಿ ನೀರುತುಂಬಿ ಕೋಡಿ ಹರಿದುಹೋಗು : ಮಳೆಯಿಂದಾಗಿ ನಮ್ಮೂರ ಕೆರೆ ಮದಗುತ್ತಿದೆ (ಕೊಡ).

**ಮದಗು₂, ಮದಗ** (ನಾ). ೧. ಕೋಡಿ ; ತೂಬು : (+). ೨. ಕೆರೆ ; ಕೊಳ ; ತಟಾಕ : ಚನ್ದ್ರಸೂರ್ಯಕಾಲವ್ಬರಂ ಸಲ್ವನ್ತು ಕೊಟ್ಟರ್ ಮದಗಿನ ಮಣ್ಣು ಮೇಗೆ ಒನ್ದು ಕೊಲಿಮೆಗೆ ಒರ್ಕ್ಕಣ್ಣಾಗ ಮಣ್ಣು (ಶಾಇತ. IX–i, ೧೪-೧೭ ; 883). **ಮದಗ** : ೧. ಮದಗದೊಳಗೆ ನೀರು ಗಳಗಳನಿಳಿವಂತೆ ಮದಗಜಹಯರಥಸೇನೆ ಕದುಬಿ ಮೊತ್ತದಿ ಪೊಜಮಡುತಿವ್ದುದಾ ಗುಹೆಯುದರದಿಂದುತ್ತರಧರೆಗೆ (ಶಶಿ. ೪೯-೨೯). ೨. ಗಣ್ಣೆಯ ಮಾದೆಯನಾಯಕ್ಕನು ಮದಗವನು ಮಾಡಿಸಿ ಕೋಡಿಯನು ಕಟ್ಟಿಸಿ ಯಿ ಕೆಱೆಯ ಕಲುಕಟ್ಟಿಯನು ಕಟ್ಟಿಸಿದರು (ಎಕ. XVI. ಗುಬ್ಬಿ. ೧೯-೭; 1366) ; ಆ ಸದಾಶಿವರಾಯನಾಯಕಂ . . . ಮಾವಣವೊಡೆಯರ ಮುಖದಿಂ ಮದಗದ ಕೆಲಸಮಂ ಸಂಪೂರ್ಣಮನಾಗಿಸಿ . . . ಅಧಿಕಸನ್ಮಾನಂಬೆತ್ತಂ (ಕೆಳನೃ. ೨-೩೯) ; ನನ್ನ ಮಾನಸದ ಮದಗವೆ ಮುಳುಗಿ ನೋಡಿದೆ, ದಿಟ್ಟಿಸಿ ನೋಡಿದೆ (ಉದ್ಯಾನ. ೧೦೦-೭).

[ದೇ.॥ ತಮಿ. ಮತಕು ; ತುಳು. ಮದಗ ; ತೆಲು. ಮದುಗು, ಮದುವು, ಮದುವು]

**ಮದಗೊಬ್ಬು** (ನಾ). ಅಹಂಕಾರ ; ಸೊಕ್ಕು ; ಗರ್ವ : ಮಕರೇಶ ನೀನಿಂದು ಮುಳಿದು ಮದಗೊಬ್ಬಿನಲಿ ವೈರವ ಬೆಳಸಿ ಕೆಣಕಿದೊಡಾ ನೃಪಾಲಕತಿಲಕ ತೆಕ್ಕುವನೇ ವಿವೇಕಕೆ ಮನವ ಮಾಡು (ಕೂರಂಗ. ೩-೭-೯೦).

☞ ಇದು ಒಂದೇ ಅರ್ಥದ ಎರಡು ರೂಪಗಳು ಸೇರಿ ಆದ ಶಬ್ದ.

[ ಮದ + ಕೊಬ್ಬು₂ (< ಕೊರ್ವು₂) ]

**ಮದಚಳೆ** (ನಾ). ಮದದಿಂದ ಚಂಚಲೆಯಾಗಿರುವವಳು : ಮದಚಳೆಯಾಗಿ ನೀರ್ವೊಗೆವ ಖೇಚರಕಾಂತೆಯ ಹಸ್ತದಿಂ ಬಟಲ್ದಿದ ನವರೌಪ್ಯಕುಂಭಮೆ ತರಂಗಿತನಾಕತರಂಗಿಣೀಪ್ರವಾಹದೊಳಿದೆ ಕಾಣಲಾದಪುದೆನಲ್ . . . ಪೊಳೆಯುತಿರ್ದುದು ಚಂಡಮರೀಚಿಮಂಡಲಂ (ಶಗಧಿ. ೯-೭೨).

[ಸಂ. ಮದಚಲಾ]

**ಮದಜಲ, ಮದಜಳ** (ನಾ). ಸೊಕ್ಕೇರಿದ ಆನೆಯ ಗಂಡಸ್ಥಳದಿಂದ ಸುರಿಯುವ ರಸ ; ದಾನರಸ ; ಮದೋದಕ : ಮದಜಲಧಾರೆಯಿಲ್ಲದ ದಿಶಾಗಜದಂತೆ . . . ಸೀತೆಯಿಲ್ಲದ ರಘುವಂಶರಾಮನಿರೆ ನೋಡಿದ ನಾಕುಲನಾಗಿ ಲಕ್ಷ್ಮಣಂ (ಕಂರಾಪತಂ. ೯-೦೩೨) ; ಶೈಲದೆಡಬಲದೊಱತೆಯೆನೆ ಸುಕಪೋಲದಲಿ ದಾರಿಡುವ ಮದಜಲಧಾರೆಗಳ . . . ಶುಂಡಾಲವನು ನೋಡಿದರು (ಕುಮ್ಮಾರ. ೧೧-೦೯). **ಮದಜಳ** : ಮದಜಳನಿರ್ಝರವಾರಣದಿಂ ಸೊದೆವಳಿವರಮನೆಯುಂ ಬಳಸಿದಾನೆಸಾಲುಗಳೆಸೆಗುಂ (ವರ್ಧಮಾ. ೨-೬೩) ; ಮದಜಳನೀಳಕಂಠಕಳಿತಂ ವಿಷಮಾನಳಭೀಮಲೋಚನಂ . . . ಕಣ್ಗೊಪ್ಪವಿದ ಶೋಭೆಯಂ ಕುಡುತಮಿರ್ಪುದು (ಪಾರ್ಶ್ವಪು. ೯-೦೩೨). [ಸಂ.]

**ಮದಜಳ** 'ಮದಜಲ' ನೋ.

**ಮದಡ, ಮಡಡ** (ನಾ). ೧. ದಡ್ಡ : ಬುದ್ಧಿಹೀನ ; ಮಂದಮತಿ : ಮದಡನಿವನೆಂದೆನ್ನ ಗದಱಿದಿ (ಮನೋಂಬ. ೭-೬) ; ಮದಡರೆನಿಪೆನ್ನ ಭಕ್ತಗಾರ್ಜ್ಜೆಯಂ ಮಾಳ್ಪನಪ್ಪಾ (ಸಿದ್ಧಪು. ೭-೬೦) ; ಮದಡನೇತಕೆ ಭಾಷೆ ಕಂದುಕುಂದಿಲ್ಲದ ಬಹುಪ್ರಗಲ್ಭಾನ್ವಿತ ಸುಕಂದನಂ . . . ಪಾಲಿಸು (ಶ್ರೀಕೃಷ್ಣ. ೩-೦೦೯) ; ಉದಯಕಾಲದಿ ಈ ಪದವ ಪಠಿಸಲು ಮದಡನಾದರೂ ಜ್ಞಾನ ಉದಯವಾಹುದೋ (ಜಗನ್ನಾ. ೦೩೩). **ಮಡಡ** : ೧. ಗ್ರಂಥದರ್ಥಂಗಳಂ ಶಾಸ್ತ್ರಮನ್ನರಿಪೆ ಮಡಡ ನಾನೂ [ಪಾಠಾಂ. ಶಾಸ್ತ್ರಗಳನರಿಯದಾ ಜಡನೂ] ತಿಳಿಯಲಿವರ ಗುಣಾಗುಣಂಗಳಂ (ತುರಂಗ. ೧-೦೨). ೨. ಜಡಸ್ವಭಾವದವನು ; ಅಲಸಿ : ಗಜಬಜವಿದೇನೆನುತ ನಿದ್ರೆಯ ಮಡಡರೊಳಗೊಳಗಱಿದರೀತನ ಭುಜಬಲಕೆ ಮಲೆತವರ ಕಾಣೆನು ಸ್ಯಂಜಯಾದಿಗಳ (ಕುಮ್ಮಾರ. ೯-೩೩) ; ಆ ಶಂಖುಮಱವನು ನಿಜವನಿಂದಾನ್ವಿಸಲು ಕುಬೇರರು ಮಡಡರೀ ಪವಮಾನವರುಣರದಾವನಱತದಲಿ ವಿಜಿತತಿಮಿರವೆನಿಪ್ಪ ಸೋಮಾಂಬುಜಸಖರು ತಾವಱಯರೇತಕೆ (ಶಶಾಂಗ. ೭-೩-೨೯).

[ಮದಡು + – ಅ₇. / ತಮಿ. ಮಟಟನ್ = ದುಷ್ಟ ; ತುಳು. ಮದಡೆ ; ತೆಲು. ಮದಟ]

**ಮದಡತನ** (ನಾ). ದಡ್ಡತನ ; ಅವಿವೇಕ : ಮದಡತನವಿದು ಬೇಡ ನೀವಿಪ್ಪುದು ವಿಚಾರಿಸೆ ನೀತಿಯಲ್ಲ (ತಿಮ್ಮಕಾಂ. ೯-೬೮) ; ಘನತರೌಷಧಿಯ ಕುಲಕೆ ಶಿವನೇ ಪತಿಯೆನಿಪ್ಪುದಂ ತಿಳಿಯದೇ ಮದಡತನದಿಂದೆ ಸವಿದ ಲಲಿತಾನ್ನಸಿಕ್ಥಕಬಳಮದತ್ತಿವಣ್ಣಲ್ತೆ (ಪಾರ್ಶ್ವಪು. ೯-೧೦೭).

[ಮದಡ + –ತನ./ತೆಲು. ಮದಟತನಮು]

**ಮದಡು, ಮಡಡು** (ನಾ). ೧. ದಡ್ಡತನ ; ಅವಿವೇಕ : (+). ೨. ಅವಿವೇಕದಿಂದ ಕೂಡಿದುದು ; ತಿಳಿಗೇಡಿಯಾದುದು : ಗಂಡಸರ ಬುದ್ಧಿ ಬಲು ಮದಡು (ಸ್ತ್ರೀಬು. ೨೦೯) ; ಅವನ ಬುದ್ಧಿ ಮದಡು (ಪ್ರಪಂ. ೩೦೦). (ಗು). ೩. ಮೂರ್ಖತನದ ; ತಿಳಿಗೇಡಿಯಾದ : ಮದಡು ಮಾನವ ನಿನ್ನ ಉದರಚಿಂತೆಯ ಬಿಡು (ಪುರಂದ. ೦೩೩-೯). **ಮಡಡು** : ೪. ಕೆಲಸಕ್ಕೆ ಬಾರದುದು ; ಅಪ್ರಯೋಜಕವಾದುದು : ಮಡಡು ಮಣಕನೋದಿಯೋದಿ ಸುಜನರೆಲ್ಲರು ರೀತಿಗೆಟ್ಟರು (ಶಿವಗೀ. ೦೦೭-೩೭೭). ೫. ಜಡಸ್ವಭಾವದ ವ್ಯಕ್ತಿ ; ಅಲಸಿ : ಧಾತುಗಾಣಸಿಕೊಳದ ಮಡಡುಗಳ್ ಗೊಡಡುಗಳ್ . . . ಸತಿಯರ್ (ಜಿನಂ. ೨-೩೯).

[ದೇ.॥ ತುಳು. ಮದಡ್, ಮದಡ್ಡೆ]

**ಮದತು** 'ಮದತ್ತು' ನೋ.

**ಮದತೇಗ** (ನಾ). ಒಂದು ಬಗೆಯ ತೇಗದ ಮರ: ಕೋಲ್ತೇಗ, ಮದತೇಗ, ಕಾಡುಕಣಿಗಲು (ವೃಕ್ಷಶಿ. ೩೦-೩೯೯). [ಮದ + ತೇಗ₁ (<ತೇಗು₄)]

**ಮದತ್ತು, ಮದತು, ಮದದ್, ಮದ್ದತು, ಮದ್ದತ್ತು** (ನಾ). ೧. ನೆರವು ; ಸಹಾಯ : ತಾವುಯೆಷ್ಟು ಮೆಹರ್ಬಾನಗಿ ಮದತ್ತು ಮಾಡಲಾದೀತೋ ಅಷ್ಟು ಮದತ್ತು ಮಾಡಬೇಕು (ರಾಜೇಂದ್ರ. ೩೦). ೨. ನೆರವು ನೀಡುವವನು ; ಸಹಾಯಕ : ನಾನು ವಿಪ್ಲವಕಾರರಿಗೆ ಮದತ್ತಾಗಿದ್ದೇನೆಂದೂ ತುಫಾನು ಬಂದರೂ ಬರಬಹುದು (ರಾಂಡ್. ೨೨೩). **ಮದತು** : ೧. ಕಮತಿಗ್ಯಾ ನಿನ್ನ ಮದತಿಗೆ ಇದ್ದೇ ಇರುತ್ತಾನೆ (ದೀಪಹ. II, ೦೦೩). **ಮದದ್** : ೧. ಇಯಜ್‌ಖಾನರು ಸರ್ಕಾರೀ ಹಣವನ್ನು ಅಪಹರಿಸಿಕೊಂಡು ಹೋಗಲು ಮದದ್ ಮಾಡಿರುತ್ತಾರೆ (ರಾಂಡ್. ೬೩). **ಮದ್ದತು** : ೧. ಲೋಕಲ್‌ಫಂಡು . . . ಸರಕಾರೀ ಮದ್ದತು, ಮ್ಯುನಿಸಿಪಾಲಿಟಿಯವರಿಂದ ಬರುವ ಮದ್ದತು . . . ಕೆಲವು ಭೂಮಿಯ ತೆರಿಗೆ ಮುಂತಾದ ಕಿರುಕುಳಬಾಬುಗಳಿಂದ ಜಮೆಯಾಗುತ್ತದೆ (ಕಥಾಗ. ೩೯೩). **ಮದ್ದತ್ತು** : ೧. ಅಪರಾಧ ನಡೆಸಲಿಕ್ಕೆ ಚಂಚಲನೇತ್ರರು ಮದ್ದತ್ತು ಮಾಡಿದರೆಂದು ಬರೆದಿತ್ತು (ವಾಗ್ಭೂ. ೦೨೩) ; ಈ ಅಧಿಕಾರಿಗಳಾದರೂ . . . ಅಡ್ಡಿ ಅಡಚಣೆಗಳನ್ನು ಈ ಜಮೀನುದಾರರ ಮದ್ದತ್ತಿನಿಂದ ಸರಿಪಡಿಸಿಕೊಳ್ಳುತ್ತಿದ್ದರು (ಪಾಪಕ. ೯೨).

[ ← ಅರ. ಹಿಂ. ಮದದ್ ; ಮರಾ. ಮದತ್, ಮದದ್ ]

**ಮದದ್** 'ಮದತ್ತು' ನೋ.

**ಮದದೂಷಿತ** (ನಾ). ಮತ್ತಿನಿಂದ ಭ್ರಷ್ಟನಾದವನು : ಅಪರಾಜಿತನಿಪ ಗಂಧದ್ವಿಪಂ ಮೊಗಂದಿರಿದು ಅನ್ನ ಬಲಮನ ತುಟಿದತ್ತುಪಕಾರಿಗೆ ಮದದೂಷಿತನಪಕಾರಂಗೆಯ್ವನೆಂಬುದೊಂದಚ್ಚರಿಯೋ (ಶಾಂತಿಪು. ೯-೨೦).

[ಸಂ.]

**ಮದದ್ವಿಪ** (ನಾ). = ಮದಕರಿ : ಕಾರ ಮುಗಿಲ್ಗಳಿಂ ಪೊಳೆವ ಮಿಂಚುಗಳಿಂ ಸುರಕಾರ್ಮುಕಂಗಳಿಂ . . . ನೀರದಮಾರ್ಗಮಂಡಲಮದೇನೆಸೆದತ್ತೊ

ಮದದ್ವಿಪಾವೃತಂ ವೀರಭಟಾಸ್ತ್ರರುಕ್ಪರಿವೃತಂ ಮಣಿಭೂಷಣಕಾಂತಿ ಸಂವೃತಂ (ಶಂಪ್ರಪು. ೨-೧೦೩). [ಸಂ.]

**ಮದದ್ವಿಲಸಿತ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು : ಎಸೆವ ಮದಸ್ಖಲಿತಂ ಕೇಳ್ ವಿಸುಗುವ ಮತ್ತಲ್ಲಿ ನಾಡೆ ತಲಸಂಸ್ಫೋಟಪ್ರಸರಮಿವಂ ಪಲಸೂಳಿಂ ಪಸರಿಸಿ[ರೆ] ನಿಕುಟ್ಟನಾಖ್ಯಮುಮೂರೂರ್ಧ್ವವೃತ್ತಂ ಕರಿಹಸ್ತ ಕಟೀಛಿನ್ನದ ಕರಣಂಗಳನೇಳನೊಂದುಗೂಡಲ್ ಮತ್ತಂ ತರಳಾಕ್ಷಿ ಮದದ್ವಿಲಸಿತದುರುತರಮೆನಿಪಂಗಹಾರಮಕ್ಕುಂ ತರುಣೀ (ಶಾಸ್ತ್ರಸಂ. ೩-೨೭). [ಸಂ.]

**ಮದನ₁** (ನಾ). ೧. ಅಮಲೇರಿಸುವ ಮದ್ಯ ಮುಂತಾದ ಪಾನೀಯ. ೨. ಕಸ್ತೂರಿ : ಗೊಲ್ಲನು ನದಿಯ ಸ್ನಾನವ ಮಾಡಿಕೊಂಡು ಮದನ ತಿಲಕವ ಫಣೆಯೊಳಿಟ್ಟು (ಗೋಪಾತು. ೩-೨೪). [ಸಂ. ಮದನಾ]

**ಮದನ₂** (ಗು). ೧. ಅಮಲೇರಿಸುವ ; ಮತ್ತು ಬರಿಸುವ. ೨. ಹರ್ಷಗೊಳಿಸುವ ; ಉಲ್ಲಾಸಗೊಳಿಸುವ. (ನಾ). ೩. ಮನ್ಮಥ : ಕಾಮ : "ಅನಿಮಿಷಂ . . . ಮಾರನೆನೆ ಮದನನಕ್ಕು" (ಶಂಗಣಾ. ೬-೨೨) ; ಮದನನ ಕೈದುವೆಲ್ಲಿದನಸಂಗನ ಕೈಪೊಡೆಯೆಲ್ಲಿದಂ (ಅಪು. ೩-೧೩); ಮದನಂ ರೂಪಿಂಗೆ ದಾಸಂ ಮನೆಗೆ ನೃಪನ ಪುಣ್ಯೋದಯಂ ದಾಸನರ್ಕಂ ಮದವತ್ತೇಜಂಗೆ ದಾಸಂ ವಿಧು ವದನಯಶಃಶ್ರೀಗೆ ದಾಸಂ ಕೃತಾಂತಂ ಕದನಕ್ರೋಧಕ್ಕೆ ದಾಸಂ (ಅರ್ಧನೇ. ೧-೬೮) ; ಜನಪ ಶಂತನು ಮರುಳಾಗೊಂಡನು ಮದನನೆಸುಗೆಯುಲಿ (ಕುಪ್ಪಾಆ. ೨-೨೪). ೪. ಕಾಮ ; ವಿಷಯಾಸಕ್ತಿ. ೫. ವಸಂತಋತು. ೬. ತುಂಬಿ : ಭ್ರಮರ. ೭. ಜೇನುಮೇಣ. ೮. **ಉಮ್ಮತ್ತ** : ಧತ್ತೂರ : "ದರ್ಪಕನೊಳುನ್ಮತ್ತಸುಮ್ಮತ್ತದೊಳವನಿರುಹಪೊಪ್ಪೆ ಮ ದ ನಾ ಖ್ಯ ವ ಕ್ಕು " (ಶಂಗಣಾ. ೧೩೦-೯೯) : ಖದಿರಂ ಮದನಂ ಕರಿಕಕ್ಕೆ . . . ಗುಗ್ಗುಳಂ ಮತ್ತಮನೇಕವೃಕ್ಷತತಿಯಿಂದೆಸೆದಿರ್ದುದು ತದ್ವನಾಂತರಂ (ನಳಹಂ. ೬೦). ೯. ಖದಿರವೃಕ್ಷ. ೧೦. ಬಕುಳವೃಕ್ಷ : 'ಮದನಾಕ್ರಾಂತ' ಪರಾ. ೧೧. [ಕಾಮಶಾ] ಆಲಿಂಗನದ ಪ್ರಕಾರಗಳಲ್ಲಿ ಒಂದು. ೧೨. [ಛಂದ] ವಿಷ್ಣುಗಣ : ಜಯಕೀರ್ತಿಯು 'ಬ್ರಹ್ಮ' 'ವಿಷ್ಣು' 'ರುದ್ರ'ಗಣಗಳ ಬದಲಾಗಿ 'ರತಿ' 'ಮದನ' 'ಶರ' ಗಣಗಳ ಹೆಸರಿನಲ್ಲಿ ಲಕ್ಷಣ ಹೇಳಿದ್ದಾನೆ (ಛಂದೋಅ. ೦೩೨). ೧೩. [ಜ್ಯೋತಿ] ಜನ್ಮಲಗ್ನದಿಂದ ಏಳನೆಯ ಸ್ಥಾನ.

ಮದನವಿರೋಧಿ=ಶಿವಸ್ವರೂಪನಾದವನು ; ಒಂದು ಬಿರುದು : ಮದನವಿರೋಧಿಯೆಂನ್ನನೆ ವಿರೋ[ಧಿ]ಗೆ ಬನ್ನುಜನಕ್ಕೆ ವಜ್ರಶೈಳದ ನಡೆಗೋಟೆಯನ್ನನೆ . . . ಎಂದಪುದೀ ಧರೆ ರಾಚಮಲ್ಲನಂ (ಶಾಇಇ. XVIII, ೯೯-೩೭ ; 1019). [ಸಂ.]

**ಮದನಕದನ** (ನಾ). ಸುರತ : ಮನ್ಮಥಕ್ರೀಡೆ. [ಸಂ.]

**ಮದನಕಯ್, ಮದನಕೈ, ಮದನಗೆಯ್, ಮದನಿಕೆ** (ನಾ). ೧. ದೇವಸ್ಥಾನ, ಅರಮನೆ ಮುಂತಾದುವುಗಳ ಕಂಬಗಳ ಬೋದಿಗೆಗೆ ಜೋಡಿಸಿರುವ ಅಲಂಕಾರಮಯವಾದ ಸ್ತ್ರೀವಿಗ್ರಹ : ಲಲಿತ ಸ್ತಂಭಕದಂಬಮಂ ಮದನಕಯ್ಯಂ ಲೋವೆಯಂ ದ್ವಾರಚಿತ್ರಲತಾಬಂಧಮನುಭ್ರಭಿತ್ತಿಯನಧಿಷ್ಠಾನಾದಿಯಂ ಬೇಜಬೇಜೋಲವಿಂ ಬಣ್ಣಿಸಿ ಪೇಳಲಾನಜೀಯೆಂ (ಶಾಇಇ. VII, ೦೯೬-೨೮ ; 1630). **ಮದನಕೈ** : ೧. ಚಿತ್ರಮಯದ ಗೋಡೆ ಕಂಭ ಜಾವಡಿ ಹೊನ್ನ ಪುತ್ಥಳಿ ಮದನಕೈ ರತ್ನ ತೆತ್ತಿಸಿದಮಲಬೋದಿಗೆ ಲೋವೆ ಪಲಗೆಯೊಳ್ಪುತ್ತಿನ ಕುಚ್ಚುಗಳ್ ಮೆಱೆಯೆ (ವೀರಶತ. ೦೬-೦೪) ; ಬಜ್ಜರದ ಕಂಭಮುಱೆ ತೊಳಪ ವೈಡೂರ್ಯದ ಮದನಕೈ ವಿಱುಪ ಗೋಮೇದಕದ ಬೋದಿಗೆಗಳ . . . ಪೊನ್ನ ಪೊದಕೆ ರಂಜಿಸಿತು ಚಾವಡಿಯು ಚೌರಸದೆಡೆಯೊಳು (ಕೈಶಿಪಾ. ೦೭-೨೩) ; ಎನ್ನ ಒಡಲೇ ನಿಮಗೆ ದೇವಾಲಯ ಎನ್ನ ತೋಳುಗಳೆರಡು ಉಸ್ಸನದ ಮದನಕೈ (ಸುಜಾಶಿ. ೦೭-೦). ೨. (ಕರಾ)ನೆಲದಲ್ಲಿ ಹೂತಿಟ್ಟ ನಿಧಿಯನ್ನು ಸೂಚಿಸುವುದೆಂದು ನಂಬಲಾಗುವ ಮರದ ರೆಂಬೆ : ಅದಕ್ಕೆ ಎಷ್ಟು ಮದನಕೈಗಳು ಇವೆ ನೋಡು. ಅಷ್ಟಿಯಲ್ಲಿ ಕೊಪ್ಪರಿಗೆ ಇದ್ದರೆ ಮಾತ್ರ ಮರಗಳಿಗೆ ಮದನಕೈ. ಬೇರೆ ಮರಗಳಿಗುಂಟೇನು ಹಾಗೆ ? (ಚಾರಿ. ೪೭).

**ಮದನಗೆಯ್** : ೧. ಮದನಗೆಯ್ಯ [ಶಾಕಾಂ. ಗೈಯ] ಬಾಗಿಲ್ವಾಡದ ಸಿಂಗರದೊಂವು ದೇಗುಲಂ ಕಣ್ಗೆಡ್ಡವಾಗಿ ರಂಜಿಕುಂ (ರಾಜಶೇಶ್ಯ. ೫೪-೨೫).

**ಮದನಿಕೆ** : ೧. ಪಚ್ಚೆಯ ಲೋವೆ ಮಾಣಿಕದ ಮದನಿಕೆ (ಶಂಬಾಕಾಂ. ೩-೬೩) ; ಬೇಲೂರಿನ ಕಂಬಗಳ, ಮೇಲಿರುವ "ಮದನಿಕೆ" ವಿಗ್ರಹಗಳನ್ನು ಕೆತ್ತಿದವರು ನಿಜವಾಗಿಯೂ ಶಿಲ್ಪಶ್ರೇಷ್ಠರು (ಪ್ರವಾಸ್ತು. ೪೮).

ಮದನಕೈಬೊಂಬೆ = ಮದನಕಯ್ : ಈ ಸ್ತಂಭಗಳ ಬೋದಿಗೆಯ ಮೇಲೆ ಸೂರಿಗೆ ಊರೆಯಾಗಿ ಸುಂದರವಾದ ಮೂರ್ತಿಗಳು ಕೆತ್ತಿ ನಿಲ್ಲಿಸಲ್ಪಟ್ಟಿವೆ. ಇವುಗಳಿಗೆ ಸಂಸ್ಕೃತದಲ್ಲಿ ಸಾಲಭಂಜಿಕೆಗಳೆಂದೂ . . . ಕನ್ನಡದಲ್ಲಿ ಮದನಕೈಬೊಂಬೆಗಳೆಂದೂ ಹೆಸರು (ಪ್ರವಾಸ್ತು. ೯೯). [?]

**ಮದನಕಲಹ** (ನಾ). = ಮದನಕದನ : ಮದಗಜಂ . . . ಮದನಕಲಹದೊಳೊಲ್ದು ಕೊಸರಿ ಪೆಣಗುವ ಸತಿಯಂತೆವೊಲ್ ಪೆಣಗಿದುವು ಶಿವನೊಳು (ಕರಾತ. ೦-೦೦-೩೬). [ಸಂ.]

**ಮದನಕಲೆ, ಮದನಕಳೆ** (ನಾ). ಶೃಂಗಾರ ಕಲೆ ; ರತಿಚಾತುರ್ಯ : ಮಾನಿನಿಗೆ ಮದನಕಲೆಗಳಂ ತೋಱುಸಿದನವನಂದು ಸಮರತಿಯೊಳು (ಕೈಬಿಶಾ. ೦೦-೨೨). **ಮದನಕಳೆ** : ಮದನಕಳಾಕುಶಲೆಯಿರಂ ಮದನಮಹೀಪಾಳಭಾಗ್ಯಸೌಭಾಗ್ಯೆಯಿರಂ ಕನ್ಯಾರತ್ನಮಂ ಕುಡುವುದಕ್ಕದುವೆ ಸಂಚರಂ (ಪಾರ್ಶ್ವಪು. ೬-೩೦); ನಯಮಧುರವಂ ಬೀಱೆ ನೀನನ್ನಯಿಪ ಮದನಕಳೆಗಳನೆನ್ನ ತನುಳ ಮಂಚದ ತುದಿಯ ಕಾಲಲಿ ಕಟ್ಟಿಸು (ಬಸಪು. ೪೨-೦೬). [ ಸಂ. ಮದನಕಲಾ ]

**ಮದನಕಳೆ** 'ಮದನಕಲೆ' ನೋ.

**ಮದನಕಾಮೇಶ್ವರಿಲೇಹ** (ನಾ). ಒಂದು ಬಗೆಯ ಕಾಮೋದ್ದೀಪಕ ರಾಸಾಯನಿಕ ಚೂರ್ಣ : ಮದನಕಾಮೇಶ್ವರಿಲೇಹ . . . ಸಕಲ ರೋಗಹರ. ಕಾಮೇಶ್ವರನಿಂದ ನಿರ್ಮಿತವಾದದ್ದು (ಕಾಮಶಾ. ೨೩೬).

[ಮದನಕಾಮೇಶ್ವರಿ₀ (ಪ←ಮರಾ. ಮದನಕಾಮೇಶ್ವರ)+ಲೇಹ]

**ಮದನಕಾಮೇಶ್ವರಿಹೂ, ಮದನಕಾಮೇಶ್ವರಿಹೂವು** (ನಾ). ಧತ್ತೂರದ ಹೂವು : (ಪ್ರಶಿಗ. ೨೯-೩೩೬). **ಮದನಕಾಮೇಶ್ವರಿಹೂವು** : ಮದನಕಾಮೇಶ್ವರಿಹೂವು ಹಾಲಿನಲ್ಲಿ ಮರ್ದಿಸುವುದು (ಕಾಮಶಾ. ೨೬೩).

[ ಮದನಕಾಮೇಶ್ವರಿ₀ + ಹೂ₂ (< ಪೂ₂) ]

**ಮದನಕಾಮೇಶ್ವರಿಹೂವು** 'ಮದನಕಾಮೇಶ್ವರಿಹೂ' ನೋ.

**ಮದನಕಾಯ** (ನಾ). ಮನ್ಮಥನಂತೆ ಸುಂದರವಾದ ದೇಹವುಳ್ಳವನು : ಬದಗನಿದಿರಾದನು ಜಯಶ್ರೀಮದನಕಾಯನು ಕಪಟದಾಯನು ವಿದಿತ ಮಾಯನು ರಣದಜೇಯನು ಕೌರವರ ರಾಯ (ಕುಪ್ಪಾಶೀ. ೫-೦೦).

[ಸಂ.]

**ಮದನಕೇಳಿ** (ನಾ). ಕಾಮಕ್ರೀಡೆ ; ರತಿಕೇಳಿ : ವಸಂತದೊಳ್ಮದನ ಕೇಳೀಸೂತ್ರಮಂ ಪಾರದೋದಿದ ಕೀರಂ . . . ಶೀತಾಂಶು ತೀವಿದ ನೆಯ್ದಿಲ್ಗೊಳನಲ್ಲದಿಲ್ಲೆನೆ ಜನಂ ಚಿತ್ತೋತ್ಸವಾಲಂಬನಂ (ಮಲ್ಲಪು. ೨-೩೭); ಚಿತ್ರಮಪ್ಪ ಮದನಕೇಳಿಯಿಂದೆ ಪೆಂಪಿನುದಯದಿಂದೆ ವಧ್ಯಮೆಯನು ಗೆಲುವುದು (ಜನವ. ೫-೦೦). [ ಸಂ. ಮದನಕೇಳಿ ]

**ಮದನಕೈ** 'ಮದನಕಯ್' ನೋ.

**ಮದನಕೈಹಲಗೆ** (ನಾ). (ದೇವಾಲಯಂ ಮುಂತಾದುವುಗಳ ಕಂಬಗಳ ಬೋದಿಗೆಗಳ ಮೇಲೆ ಕೆತ್ತಿರುವ) ಸುಂದರಸ್ತ್ರೀವಿಗ್ರಹದ ಕೆತ್ತನೆಯುಳ್ಳ ಆಧಾರವನ್ನು ಹೊಂದಿರುವ ನಾಗಂದಿಗೆ : ಗಂಗಕ್ಕ . . .

'ಮದನಕೈಹಲಗೆ'ಯಲ್ಲಿರಿಸಿದ್ದ ಹಾಲಿನ ಗಿಂಡಿಗೆ ಕೈಕೊಂಡು ಹೋಗುವಾಗ ಹಾಲೆಲ್ಲ ಚೆಲ್ಲಿಹೋಯಿತು (ಚಿ.ಶ. ೯೬).
[ ಮದನಕೈ (< ಮದನಕಯ್) + ಹಲಗೆ (< ಪಲಗೆ) ]

**ಮದನಗಂಟಿ** (ನಾ). ಒಂದು ಬಗೆಯ ಸಸ್ಯ : ಮದನಬುಡಮೊಗಿಡ, ಮೇದನಾಗಿಡ, ಮದನಗಂಟಿ (ವೈ.ಶಿ. ೦೪-೨೩೫).
[ ಮದನ₂ + ಕಂಟಿ₂ ]

**ಮದನಗೃಹ** (ನಾ). ಸ್ತ್ರೀಯ ಜನನೇಂದ್ರಿಯ ; ಯೋನಿ : ಮದನಗೃಹದೊಳಲರ್ವುದು ಜನಿವುದು ಪೊದೆವುದು ಪಿಡಿದೇಳ್ವುದೆನಿವುವವನ ಪದಮೊದವಿರೆ ಮಾಣದೆ ಹಸ್ತಕ್ಷೋಭದಿನಾಗಿವುದು (ಜಜವ. ೬-೨೪). [ಸಂ.]

**ಮದನಗೆಯ್** 'ಮದನಕಯ್' ನೋ.

**ಮದನಗೇಹ** (ನಾ). = ಮದನಗೃಹ : ವಿಟರಕ್ಷಿ ಪರಿದಾಡುತಿಹ ವಾರಿಯೋ ಮದನಗೇಹದ ಮೇರೆಯೋ ಎಂಬ ತೆಱದಿ ತ್ರಿವಳಿಗಳೆಸೆದವು (ಶ್ರೀ.ಕರಾ. ೯-೮). [ಸಂ.]

**ಮದನಚೇಷ್ಟೆ** (ನಾ). ವಿಷಯಾಭಿಲಾಷೆಯಿಂ ಮಾಡುವ ಹಾವಭಾವ; ಶೃಂಗಾರ ಚೇಷ್ಟೆ : ಅರ್ಭಕತನದಲಿ ಮದನಚೇಷ್ಟೆಯಲಿ ದುರ್ಬುದ್ಧಿ ಮಾಡುವವಳೆ ಶುದ್ಧ ಹೊಲತಿ (ಪುರಂದ. ೧-೦೦೬-೫).
[ ಸಂ. ಮದನಚೇಷ್ಟಾ ]

**ಮದನಚ್ಛತ್ರ** (ನಾ). [ಕಾಮಶಾ] ಒಂದು ನಾಡಿಯ ಹೆಸರು : ಮದನಾಂದೋಳನ ಮದನಚ್ಛತ್ರ ಪೂರ್ಣಚಂದ್ರಾದಿ ನಾಡೀಮರ್ಮಜ್ಞರಿಂ (ವಿವೇಕ. ೦೬೪). [ಸಂ.]

**ಮದನಜನಕ** (ನಾ). ಮನ್ಮಥನ ತಂದೆ ; ವಿಷ್ಣು : ಮದನಜನಕನಾಗಿ ಮಹಿಮೆ ತೋಱುವ ಪದುಮನಾಭನಾಗಿ ಮೆಱೆವ ನಮ್ಮ ಪುರಂದರವಿಠಲನ ಹರುಷದಿ ಕರೆವ (ಪುರಂದ. ಪಾ. ೩-೬೯-೩). [ಸಂ.]

**ಮದನಜನಕತ್ವ** (ನಾ). ೧. ಕಾಮಭಾವನೆಯನ್ನುಂಟುಮಾಡುವಿಕೆ. ೨. ಮನ್ಮಥನ ತಂದೆಯಾಗಿರುವಿಕೆ. ೧, ೨ : ವಿಧೃತ ಮದನಜನಕತ್ವಮಾಗಿಯುಂ ಕಮಲೋತ್ಸವಕಾರಿಯಲ್ತು (ತಂದ್ರ.ಪು. ೪-೪೨ ವ). [ಸಂ.]

**ಮದನಜಲ** (ನಾ). ೧. ವೀರ್ಯ : ರೇತಸ್ಸು. ೨. ಸಂಭೋಗ ಸಮಯದಲ್ಲಿ (ಸ್ತ್ರೀಯು) ಸ್ರವಿಸುವ ದ್ರವ ; ಮನ್ಮಥದ್ರವ : ನೀರೊಳಗಳ್ಕಿದ ನೆವದಿಂದಾ ರೂಪನಿದಾನನಂ ಮೃಗಾಕ್ಷಿಯರಪ್ಪರ್ ಸಾರೆ ಬಿಡುತಂದು ಕೂಡಲ್ ನೀರಂತಿರೆ ಬೆರಸೆ ಮದನಜಲಮುಂ ಜಲಮುಂ (ಶಾಂತಿಪು. ೬-೪೨) ; ಅವಳಾಗಲು ಮದನಜಲವಂ ಬಿಡುವಳು (ಕಾಮಶಾ. ೨೩೨). [ಸಂ.]

**ಮದನಜ್ವರ** (ನಾ). ವಿರಹವ್ಯಥೆಯಿಂದ ಉಂಟಾಗುವ ಜ್ವರ : ಕಾಮಜ್ವರ. [ಸಂ.]

**ಮದನತಾಪ** (ನಾ). = ಮದನಜ್ವರ : ಮಱಿದೊಱಗಿದಳು ಮದನತಾಪದಿಂದಾಗ ಮಱುಮಾತುಗುಡದಿರ್ದಳವಳು (ಕುಮಾರಾಮ. ೨೩-೬೫). [ಸಂ.]

**ಮದನದಹನ** (ನಾ). ಮನ್ಮಥನನ್ನು ಸುಟ್ಟವನು ; ಶಿವ : ಮದನದಹನಂಗಾದುದೆನ್ನ ನಿಮಿತ್ತದಿಂದೀಗ ಇದಱುಪದ್ರವಂ (ಬಸವು. ೦೩-೨೬). [ಸಂ.]

**ಮದನದ್ರವ** (ನಾ). = ಮದನಜಲ ೨ : ತೆಗೆದಪ್ಪಿದೊಡುನ್ನಿದ್ರಾಂಭೋಜಾಸ್ಯೆಗೆ ಮದನದ್ರವಮುಂ ಕಣ್ಣ ನೀರುಮುಣ್ಮಿದುವಾಗಳ್ (ಆದಿಪು. ೦೨-೪೪). [ಸಂ.]

**ಮದನಧರ್ಮ** (ನಾ). ಮನ್ಮಥನ ಬಿಲ್ಲು : ಬೆದರ್ದೆರಳೆಗಂಗಳ ಮದನಧರ್ಮದೊಲು ಪುರ್ಬಿನ . . . ಬಿಡಬಾಸೆಯೆಳೆವೆಣ್ಣಳೆಸೆದಿರ್ದರು (ಶ್ರೀ.ಕರಾ. ೬-೦೦). [ಸಂ.]

**ಮದನಧ್ವಂಸಿ** (ನಾ). ೧. = ಮದನದಹನ. ೨. [ಛಂದ] ರುದ್ರಗಣದ ಹದಿನಾರು ಪ್ರಭೇದಗಳಲ್ಲಿ ಒಂದು : ರುದ್ರಗಣಮೆಂತೆಂದೊಡೆ : ೧. ಗಂಗಾಧೀಶಂ . . . ೧೦. ಮದನಧ್ವಂಸಿ (ಛಂದೋಂಬು. ೫-೨೪೦ ವ).
[ಸಂ. ಮದನಧ್ವಂಸಿನ್]

**ಮದನಪತತ್ರಿ** (ನಾ). ಮನ್ಮಥನ ಬಾಣ : ಮದನಪತತ್ರಿ ನಿನ್ನ ದೆಸೆಗಾಣದು ಮೋಹಮಹಾಹಿ ನಿನ್ನನಣ್ಮದು (ಕಂರಾಪು. ೫-೯).
[ಸಂ. ಮದನಪತತ್ರಿನ್]

**ಮದನಪತಾಕೆ** (ನಾ). ಮನ್ಮಥನ ಧ್ವಜ : ಮದನಪತಾಕೆ ಚುಂಬಿಸೆ ವಿಯನ್ಮಯಿಮಂ ಸ್ಮರಚಾಪಟಂಕೃತಂ ಪುದಿಯೆ ದಿಗಂತಮಂ (ಕಂರಾಪು. ೫-೪೬) ; ಮೊದಲೊಳು ಮೇನಕೆಯುದರದೊಳಾಕೆ ಉದಿಸಿದ ಕನ್ಯಕೆ ಮದನಪತಾಕೆ (ಶಾಕುಂತ. ೨೪ ಅಡಿ). [ಸಂ. ಮದನಪತಾಕಾ]

**ಮದನಪಿತ** (ನಾ). ೧. ಮನ್ಮಥನ ತಂದೆ ; ವಿಷ್ಣು. ೨. ಕೃಷ್ಣ : "ಮದನಪಿತನೊಳು . . . ಕಪ್ಪಿನೊಳು ಕೃಷ್ಣಪಕ್ಷ" (ಮುಂಗರಾ. ೦೫೧-೫೫) : ಇದನೆ ಕೃಪೆಮಾಡೆನಗೆ ಮದನಪಿತ ಪುರಂದರವಿಟ್ಠಲರಾಯ (ಪುರಂದ. ಪಾ. ೬೩-೪-೩).
[ < ಸಂ. ಮದನಪಿತೃ ]

**ಮದನಫಲ**, ಮದನಫಳ (ನಾ). ಒಂದು ಬಗೆಯ ಮುಳ್ಳುಗಿಡದ ಹಣ್ಣು ; ಮಂಗಾರೆ : ಮದನಫಲಂ ಸೊರೆ ಕಜ್ಜುತ್ತಿ ದಂತಿ ಪಿಪ್ಪಲಿ ಗುಡಂ ಯವಕ್ಷಾರಮುಮಂ ಮಿದಿದಿಡುಗೆ ಯೋನಿಯೊಳ್ ಕಾದಿಸಿ ದುಗ್ಧದಿಂ ತಾನವಳ್ ರಜಸ್ವಲೆಯಕ್ಕುಂ (ರೋಕೋ. ೯-೦೬೩). **ಮದನಫಳ** : ಮದನಫಳಂ ಬಜೆ ರಾಜೆ ದೇವದಾರೆಯೆಂಬಿವನೆ ಗಂಧದ ಜಲದೆ ಮೇಣಲ್ಲದೊಡೆ ಶರಪುಂಖಿಯಜಮೂತ್ರದೆ ಕುಡಿದೊಡಿಲಿಯ ವಿಷಮುವಿಷಮುಪಶಮಿಕುಂ (ರೋಕೋ. ೦೦-೩೪). [ಸಂ.]

**ಮದನಫಳ** 'ಮದನಫಲ' ನೋ.

**ಮದನಬಾಧೆ** (ನಾ). ಕಾಮದಿಂದ ಉಂಟಾಗುವ ತಾಪ : (ಮದನಬಾಧೆಯನ್ನು ಅಭಿನಯಿಸಿ) ಎಲೈ ಪೂಜ್ಯನಾದ ಪುಷ್ಪಾಯುಧನೇ . . . ಕಾಮಿಜನರನ್ನು ನೀವು ಚೆನ್ನಾಗಿ ವಂಚಿಸುವಿರಿ ! (ಶಾಕುಂತ. ೩೨-೦).
[ ಸಂ. ಮದನಬಾಧಾ ]

**ಮದನಬುಡಮೊಗಿಡ** (ನಾ). ಒಂದು ಬಗೆಯ ಔಷಧೀಸಸ್ಯ : ಮದನಬುಡಮೊಗಿದ, ಮೇದನಾಗಿಡ, ಮದನಗಂಟಿ (ವೈ.ಶಿ. ೦೪-೨೩೫).
[ ಮದನ₂ + ಬುಡಮೆ ( < ಬುಡುಮೆ) + ಗಿಡ ( < ಗಿಡು) ]

**ಮದನಮಂಟಪ** (ನಾ). ಮಲಗುವ ಕೋಣೆ ; ಶಯ್ಯಾಗೃಹ : ಸುಪ್ರಕಾಶದಿ ಬೆಳಪ ಧವಳಾರಸೌಧರತ್ನಪ್ರತತಿಯಿಂ ರಚಿತಭಿತ್ತಿಭವನಹರ್ಮ್ಯಸುಪ್ರೇಮದಿಂ ಕೇಳು ಸಜ್ಜೆ ಗೋಪುರನಿಳಯ ಮದನಮಂಟಪ ಭವಂತೀ (ನವಮೋ. ೦೬-೩೨). [ < ಸಂ. ಮದನಮಂಡಪ ]

**ಮದನಮಂದಿರ** (ನಾ). ೧. = ಮದನಮಂಟಪ : ಮಣಿಮಯದಿ ಬೆಳಗುವ ಮದನಮಂದಿರದಿ ರೂಢಿವೆತ್ತ ಮಳಮ್ಮಯಿತಳ್ಪದೊಳು ಪವಡಿಸಲು (ನವಮೋ. ೦೬-೦೮). ೨. = ಮದನಗೃಹ : ಸ್ತ್ರೀಯರ ಮದನಮಂದಿರ ಬಂಧನಕ್ಕೆ — ಮಾಯಿಫಳ ಜಾಯಿಪತ್ರೆ ಅರದು ಪೊಟ್ಟಣವಂ ಕಟ್ಟಿ ಮಾರ್ಗಸ್ಥಳಕ್ಕೆ ಮಡುಗೆ ಏಳುದಿನ ಇಟ್ಟರೆ ಬಿಗಿಯಾಗಿ ಬಂಧನವಹುದು (ಕಾಮಶಾ. ೨೬೨). [ಸಂ.]

**ಮದನಮಸ್ತ** (ನಾ). ೧. (ಔಷಧಕ್ಕೆ ಬಳಸಲಾಗುವ) ಅಡವಿಸೂರಣ ಗೆಡ್ಡೆಯ ಒಣಗಿದ ತುಂಡು : ಮುಂಬಯಿ ಮಣದ ಮೇಲೆ ಧಾರಣೆ ಇರತಕ್ಕ ಜೀನಸಗಳು. ೧, ಅಕ್ರೋಡ . . . ೨೧, ಮದನಮಸ್ತ (ಮುಂಬಯ್ಯ. ೧೦೬). ೨. ಸಂಪಗೆಜಾತಿಯ ಒಂದು ಬಗೆಯ ಪರಿಮಳದ ಹೂವು. [ ← ಹಿಂ. ಮದನಮಸ್ತ್ ]

**ಮದನಮುಸ್ತಿ** (ನಾ). ಒಂದು ಬಗೆಯ ಪೊದೆಯಾಕಾರದ ಗಿಡ ಮತ್ತು ಅದರ ಹಸುರುಬಣ್ಣದ ಹಾಗೂ ಕಡುಸುವಾಸನೆಯುಳ್ಳ ಹೂವು :

ಮದನಮಸ್ತಿಯ ಪರಿಮಳಕ್ಕೆ ಹಾವುಗಳು ಬರುತ್ತವೆಂದು ಹೇಳುತ್ತಾರೆ (ಕಿಟ್ಟೆಲ್). [ < ಮದನಮಸ್ತ ? ]

**ಮದನಯುದ್ಧ** (ನಾ). = ಮದನಕದನ : ಮೋಹನವೆಂಬುದು ಮದನ ಯುದ್ಧವೆಂಬುದು ಸುರತಕ್ಕೆ ಪೆಸರು (ಕಾಮಶಾ. ೨೪೦). [ಸಂ.]

**ಮದನರಸ** (ನಾ). = ಮದನಜಲ ೨ : ಮದನರಸಂ ಮದನರಸಂ ಪೊದಟ್ಟುದೆನಿಸುವಿನಮಮರಿ ನರ್ತಿಸೆ ಚೆಲ್ವಂ ಪುದಿದುಜಘನಸ್ಥಳಿಯೊಳೆಸೆದುದು ತರುರೋಜಸರೋಜಮುಕುಲಯುಗಸಂಚಲನಂ (ಅದಿಪು. ೬–೦೪) ; ಮದನ ರಸಪ್ಲವಂ ಕವಿಯೆ ತಣ್ಣಸನಾಗದೆ ತೃಷ್ಣೆಗಿಂಬುಕೆಯ್ಯದೆ ಪಗೆಗೊಂಡು ಪೋಪುದು ಸಮುದ್ರದ ಮಧ್ಯದ ಬಾಳೆ ಕೆಯ್ಗೆವರ್ಪುದುಮಂ . . . ಇಚ್ಛೆ ಯುಪನಿಚ್ಛೆಯಿಪೊಂ ಹಯಶೃಂಗಚಾಪಮಂ (ಶಾಂತಿಪು. ೬–೧೭). [ಸಂ.]

**ಮದನರಿಪು** (ನಾ). ಮನ್ಮಥನ ಶತ್ರು ; ಶಿವ : ಧನುವ ಕೊಂಡನು ಮದನರಿಪು ತಿರುಹಿದನು ಬೆರಳಲಿ ಪಾಶುಪತಶರವ (ಕುಮಾ. ಭಾ. ೬–೩೬). [ಸಂ.]

**ಮದನವತಿ** (ನಾ). [ ಛಂದ ] ಅಂಶಗಣಬದ್ಧವಾದ ದೇಶ್ಯವೃತ್ತಗಳಲ್ಲಿ ಒಂದು : ಮದನವತಿಯ ಲಕ್ಕಣಮಂ ಪೇಳ್ವೆಂ ಮದನನ ತಂದೆಯ ಗಣ ಮವು ವಿಷಯದೋಳೆರೆ ಗುರು ಮುಂದೊದವಿರೆ . . . ಮದನಹರತ್ರಯದಿಂ ಹರಿ ಕಡೆಪಡೆ ಮದನವತೀ (ಛಂದೋಂಬು. ೩–೨೩೩). [ಸಂ. ಮದನವತೀ ]

**ಮದನವತಿಗ** (ನಾ). ಮದನವತಿ ವೃತ್ತದಲ್ಲಿ ಕೃತಿರಚನೆಮಾಡಿ ದವನು : ಮದನವತಿಗಂ — ಮದನವತೀತಿ ವೃತ್ತವಿಶೇಷಃ ತತ್ಕರ್ತಾ (ಶಬ್ದಾನು. ೪೧೨ ವ್ಯಾಖ್ಯಾ.). [ ಮದನವತಿ + —ಇಗ ]

**ಮದನವಿಕಾರ** (ನಾ). ಕಾಮದಿಂದ ಮನಸ್ಸಿನಲ್ಲಿ ಉಂಟಾಗುವ ವ್ಯತ್ಯಾಸ : ಮದನವಿಕಾರಮಂ ಮೆಚ್ಚಿದ ಪಾರಿವಮಿಲ್ಲದ ರಾಜಕೀರಮಿಲ್ಲದ . . . ಸೂಳೆವನೆಯಿಲ್ಲದವಿಲ್ಲವು ಸೂಳೆಗೇರಿಯೊಳ್ (ಮಲ್ಲಿಪು. ೨–೩೭). [ಸಂ.]

**ಮದನವೈರಿ** (ನಾ). = ಮದನರಿಪು : ಮದನವೈರಿಯ ಭಕ್ತಿಯಂ ತೋಱದವನೋ ಭವಪಾಶಮಂ ಪಱಿದವನೋ (ಬಸವು. ೪೦–೪೪). [ಸಂ. ಮದನವೈರಿನ್ ]

**ಮದನಶರ** (ನಾ). ಮನ್ಮಥನ ಬಾಣ : P ಇಲ್ಲಿ ಕೊಟ್ಟಿರುವ ಪಟ್ಟಿ ಯಲ್ಲಿರುವ ಶಬ್ದಗಳನ್ನು ಕಾಮನ ಐದು ಬಾಣಗಳೆಂದು ಭಾವಿಸ ಲಾಗಿದೆ. "ಇಷು–೫ : (ಅ) ಅರವಿಂದ, ಅಶೋಕ, ಚೂತ, ನವ ಮಲ್ಲಿಕಾ, ನೀಲೋತ್ಪಲ (ಅಮರ. ೧–೧–೨೮–೨೯). (ಆ) ಸಮ್ಮೋಹನ, ಉನ್ಮಾದನ, ಶೋಷಣ, ತಾಪನ, ಸ್ತಂಭನ (ಭಾರತ–ಶಕದ್ರು. IV–೧೫). ದ್ರವಣ, ಶೋಷಣ, ತಾಪನ, ಮೋಹನ, ಉನ್ಮಾದನ (ಶಕದ್ರು. IV–೧೫). ಉನ್ಮಾದನ, ಮದನ, ಮೋಹನ, ಸಂತಾಪನ, ವಶೀಕರಣ (ವಿಚಿಂ. ೪–೩೮೨)" (ಶೃಂಗಾ. ೬೪) : ಮೃದುತರವರ್ಣವೆ ಕೆನ್ನಂ ಮದನಶರಾನೀಕಮೊಯ್ಯ ನೊಲವಾ ಪಡೆಗುಂ (ಕಬಿರಾ. ೩–೧೦೦) ; ಭಾಳಾಕ್ಷನಂ ಲಕ್ಷಿಸಿ ನೋಡಿ . . . ಭಲದಿಂದೆಚ್ಚಂ ಪಂಚೇಷು ಮದನಶರದಿಂದಾಗಳ್ (ಗಿರಿಜಾ. ೬–೨೮). [ಸಂ.]

**ಮದನಶಾಸ್ತ್ರ** (ನಾ). ಕಾಮಕಲೆ : ಮದನಶಾಸ್ತ್ರದೊಳಬ್ಜವದನೆ ಕೇಳ್ ನಾಲ್ದೆಱದ ಸುದತಿಯರ ಜಾತಿಯಿಂತೆಂದೊಱೆವೆನು (ಜವಜ. ೨ ಸಂಧಿ) ; ಪದುಮನಾಭನು ಪುರದ ಚದುರೆಯರಿಗೆ ತಾನು ಮದನಶಾಸ್ತ್ರವ ಪೇಳುತ ಮುದದೊಳಗಿರಲು (ಕೃಷ್ಣರಂ. ಚಾ. ೪–೭೩–೦೦). [ಸಂ.]

**ಮದನಸದನ** (ನಾ). ರತಿಕ್ರೀಡೆಯ ಗೃಹ ; ಶಯ್ಯಾಗೃಹ : ಮದನಸದ ನೋದ್ಯೋಗಸ್ಥಾನಂಗಳೊಳ್ ಸುಜಾಂಗನಾವದನಮದಿರಾಮೋದ ಸ್ವೇದಾಂಬುವಂ ತವೆ ಪೀರ್ದು . . . ನೀಲೋತ್ಪಲಂಗಳ ಕಂಪಿನೊಳ್ ಪುದಿದು ಪುರದೊಳ್ ತೀವಿತ್ತಂ ಪ್ರಭಾತಸಮೀರಣಂ (ಅಜಪು. ೬–೭೩). [ಸಂ.]

**ಮದನಸುಖ** (ನಾ). ಕಾಮಸುಖ ; ರತಿಸೌಖ್ಯ : ಮದನಸುಖಕ್ಕೆ ತಾನೆ ನೆಲೆ ಪೆಂಡಿರೊಳೆಂಬಿನಮಂತುಟೊಂದು ನೋಟದ ತೆಱಂ . . . ಸತ್ಯಭಾಮೆ ಗೊಡಗೂಡೆ ಮುರಾರಿಗೆ ಕೂಡಿತುತ್ಸವಂ (ಜಗ. ೧೦–೩೬). [ಸಂ.]

**ಮದನಹರ** (ನಾ). ೧. ಮನ್ಮಥನನ್ನು ಕೊಂದವನು ; ಶಿವ : ಮದನ ಹರ ನಿಮ್ಮುಚಲಭಕ್ತಿ ಸುಪದವಿಯಂ ಕೃಪೆಯಿಂ ಪ್ರಸಾದಿಸಿ ಸಲಹು (ಬಸವ. ೨–೨೪) : ಮದನಹರನೆದಿರಿನಲಿ ಕೈಮುಗಿದು ಪ್ರೀಚಾಚಿ ಬೇಡಿದಳ್ ಮದನ ಕೃಪೆಯಂ ನಾರಿ (ತತ್ವಾಂಗ. ೨೩–೬೯೬). ೨. ಮನ್ಮಥನನ್ನು ನಾಶ ಗೊಳಿಸಿದವನು ; ಜಿನ : ಮದನಹರಂ ತಪೋಗ್ರಹಣದಿಂದೆ ತಗುಳ್ದೊಡೆ ಮಾಡದಂತೆ ನಿಂದುದಜಾಂ (ಶಾಂತಿಪು. ೧೦–೦೦೪). ೩. [ ಛಂದ ] ರುದ್ರಗಣ : ಮದನಹರತ್ರಯದಿಂ ಹರಿ ಕಡೆಪಡೆ ಮದನವತೀ (ಛಂದೋಂಬು. ೩–೨೩೩). [ಸಂ.]

**ಮದನಾಂತಕ** (ನಾ). = ಮದನಹರ ೧ : ಅರಸನಾಕ್ಷಣದೊಳಾ ಮದ ನಾಂತಕನ ಸದುಭಕ್ತನಂ ಕರೆತರಿಸಿಯಿಂತೆಂದ (ಬಸವು. ೩೩–೪೨) ; ತ್ರಾಹಿ ಮದನಾಂತಕ ಪುರತ್ರಯದಾಹ ಹರಶಂಕರ ಮಹೇಶ (ಕುಮಾ. ಭಾ. ೬–೪೩). [ಸಂ.]

**ಮದನಾಂದೋಳನ** (ನಾ). [ಕಾಮಶಾ.] ಒಂದು ನಾಡಿಯ ಹೆಸರು : ಮದನಾಂದೋಳನ ಮದನ ಚ್ಛತ್ರ ಪೂರ್ಣಚಂದ್ರಾಕೃತಿ ನಾಡೀಮುರ್ವಾಜ್ಞರಿಂ (ಬವಳ. ೦೮೪). [ಸಂ. ಮದನಾಂದೋಲನ ]

**ಮದನಾಂದೋಳಿಕ** (ನಾ). = ಮದನಾಂದೋಳನ : ನಾಲಗೆಯ ತುದಿಯಿಂ ಮದನಾಂದೋಳಿಕನಾಡಿಯಂ ಹಲವು ಬಾರಿ ಅಲ್ಲಾಡಿಸುವುದು (ಕಾಮಶಾ. ೨೬೯). [ಸಂ. ಮದನಾಂದೋಲಿಕ]

**ಮದನಾಂಬು** (ನಾ). = ಮದನಜಲ ೨ : ಮದನಾಂಬುಪ್ಲವದುರ್ಕು ಮಗ್ಗದೆ . . . ಸುಸಿಲಿಂದಾ ಪಾಣ್ಬೆಯುರ್ಕಿಗಿದರ್ (ಶಾಂತೀಶ್ವ. ೧೦–೨೬). [ಸಂ.]

**ಮದನಾಕ್ರಾಂತ** (ನಾ). ೧. ಕಾಮಬಾಧೆಗೆ ಒಳಪಟ್ಟವನು. ೨. ಬಕುಳ ವೃಕ್ಷಗಳಿಂದ ಆವೃತವಾದುದು. ೧, ೨ : ಅದು . . . ವಿರಹಿಜನ ದಂತೆ ವಿವಿಧಪಲ್ಲವಾನಿಲವೀಜ್ಯಮಾನಮುಂ ಮದನಾಕ್ರಾಂತಮುಂ . . . ಎಸೆವುದು (ಕಾದಂಪೂ. ೦೦೦). [ಸಂ.]

**ಮದನಾಗಮ** (ನಾ). = ಮದನಶಾಸ್ತ್ರ : ಚತುರರೋದಿಸಿದ ಮದ ನಾಗಮಂಗಳಂ ಪದಂಗುಟ್ಟಿ ಪರಮಪಂಡಿತಂಗಳೆನಿಪ ಪಂಜರದ ಪಂಡಿತವಕ್ಕಿ ಗಳೊಳಂ (ಪುಷ್ಪ. ೨–೭೭ ವ) ; ದಿವ್ಯಾಂಗಿಯೆಂದೆನಿಪ ಸತ್ಕುವರಿ ಯವ್ವನದಿ ತಾ ಪಿಂಗದೆ ಮದನಾಗಮಪನುಮಾವಾಗವೋದುತ್ತಿರಲು (ಪವವೋ. ೯–೨೫). [ಸಂ.]

**ಮದನಾತುರ** (ನಾ). ಕಾಮದ ತೀವ್ರ ಅಭಿಲಾಷೆ ; ಕಾಮಾತುರ : ಮದನಾತುರ ಕೈಮಿಗಾಲ್ದೊಡೆಯೊಳೆ ಹದುಳಿಸವೇಕಲ್ಲದಿಂತು ಇದಿರಿಗೆ ಕಾಣಿಪುದುಚಿತವೆ ರತ್ನಾಜಿ (ಕುಮಾರರಾಮ. ೨೩–೯೩) : ಮೈ ಪುಳಕದಿಂದ ಪೊಣ್ಮೆ ಮದನಾತುರಂ ತಲೆದೋಱೆ . . . ಪೆಣ್ಮಾಣದಂಚಿದುಪ್ಪುಳ್ಳಾಸಿಗೆಳೆದೊಯ್ಯು ಆನಿಯನಂ ಬಲ್ಪಿನಿಂದೆ (ಕೃಷ್ಣಾ. ೧೦–೦೪). [ಸಂ.]

**ಮದನಾತುರೆ** (ನಾ). ಕಾಮೋದ್ರೇಕಗೊಂಡವಳು ; ಕಾಮಾತುರೆ : ಮದನಾತುರೆಯಪ್ಪನ್ನೀ ಹೃದಯದ ರಾಗವನೆ ಪರ್ಚುಗೊಂಡಂತಿರೆ ಕೆಂಪೊದವಿದ ಪಡುವಣದೆಸೆಗೆಯ್ದುವನರುಣಾರುಚಿಪ್ರಕಾಶನಪ್ಪ ದಿನೇಶಂ (ಕಾದಂಪೂ. ೬೦೬). [ಸಂ. ಮದನಾತುರಾ]

**ಮದನಾನಲ**, ಮದನಾನಳ (ನಾ). ಕಾಮದಿಂದ ಉಂಟಾದ ತಾಪ : ಕಾಮಾಗ್ನಿ : ಹೃದಯದೊಳೆರ್ವ ವಲ್ಲಭೆಯನೀಕ್ಷಿಸಲೆಂದೊಳಪೊಕ್ಕು ಮೆಯ್ಗೆ ಪರ್ಬಿದ ಮದನಾನಲಂಗಿಗಿದು ಭೋಂಕನೆ ಮೆಯ್ಗರೆದಿರ್ಪವೆಂಬಿ ನಂ . . . ಅಡಂಗಿದುವು ಶರೀರದೊಳ್ ವಿರಹದಿಂದಖಿಳೇಂದ್ರಿಯಾ ಮುನೀಂದ್ರನಾ (ಕಾದಂಪೂ. ೬೨೯). **ಮದನಾನಳ** : ಮದನಾನಳನೇೞದೆ ಮಾಣದೆಂದು ಮನವೆಂಬ ಮನೆಯ ಮೇಗಬ್ಜಜನೆತ್ತಿದ ಕೊಡಗಳೆಂತಿರಿಸೆ ದುವು ಸುದತಿಯ ಲಾವಣ್ಯಾಪರಿಪೂರ್ಣಕುಚಂಗಳ್ (೦೯ಾವ. ೬–೭೩). [ಸಂ.]

**ಮದನಾರಾತಿ** (ನಾ). ೧. ಮನ್ಮಥನ ವೈರಿ ; ಶಿವ : ಮದನಾರಾತಿಶಿರಶ್ರೀಪಾವನೆಯುಂ ... ಯಜ್ಞನೆಯ್ದಿದನುತ್ತುಂಗತರಂಗೆಯುಂ ಶಫರಲೋಲಾಪಾಂಗೆಯುಂ ಗಂಗೆಯುಂ (ಶಂಶಕಂ. ೮. ೦೬೭-೯೬೪). ೨. ಮನ್ಮಥನ ಶತ್ರು ; ಜಿನ : ಮದನಾರಾತಿಯ ಮುನ್ನಿನುತ್ಸವಕೆ ಬರ್ಪಂದಲ್ಲಮಿಾಯೊಪ್ಪವಿಲ್ಲಿದು ಮತ್ತೊಂದು ಮದೇಭಶೋಭೆ . . . ಎಂಬಂತೆಸೆದುರ್ವಿಗೇಂ ಪಡೆದುದೋ ದೇವಾಗಮುಂ ರಾಗಮುಂ (ಕೃಷ್ಣಕೃ. ೦೯-೪೮). [ಸಂ.]

**ಮದನಾರಿ$_1$** (ನಾ). ಮದವುಳ್ಳ ಹೆಣ್ಣು ; ಸೊಕ್ಕಿದ ಹೆಣ್ಣು : ಮಗ ನಿನ್ನ ಹಾಲಾಕ ಮಂಗಿಲ ಮುಟ್ಟಿತ ಜೀವ ಮದನಾರಿ ನನ್ನ ಸೊಸಿ ಬಂದು ನಡಿವಾಗ ಮಗ ನಿನ್ನ ಮನವು ಎರಡಾಗಿ (ಕನ್ನಜಾ. ೦೦೨).

[ಸಂ. ಮದನಾರೀ]

**ಮದನಾರಿ$_2$** (ನಾ). ೧. =ಮದನಾರಾತಿ ೧ : ಆ ರಜತಗಿರಿಶಿಖರದೊಳ್ ಮದನಾರಿಯುಂ ಗೌರಿಯುಂ ಮಂಚಿತಲೀಲಾರಚಿತಸುಖಸಂಕಥಾಪ್ರಿಯಕೌತುಕದೊಳಿರಲು (ಶಕಪು. ೦-೩೨) ; ಆರು ಕೊಟ್ಟರು ಶರವಣದ ಮದನಾರಿಯೋ ನಿಮ್ಮಯ್ಯನಹ ಜಂಭಾರಿಯೋ (ಕುವ್ಯಾಮ್ರ್ಯ. ೨೪-೦೩); ಎಲ್ಲಿಗೊಯ್ದಪನೀ ಸುರಥನ ತಲೆಯಂ ಗರುಡಂ . . . ಕೋಡು ಬಾರೆಂದು ಮದನಾರಿ ಬೆಸಸ (ಕೃಬಿಕಾ. ೦೯-೦೯). ೨.= ಮದನಾರಾತಿ ೨ : ಮದನಾರಿ ನಾಲ್ವೆರಲ್ ಮುಟ್ಟದೆ ಜಿನಪತಿವರ್ಧಮಾನಂ . . . ಒಪ್ಪುತ್ತಿರ್ದಂ (ವರ್ಧಕೃ. ೦೩-೦೦೨).

[ಸಂ.]

**ಮದನಾವತಾರ** (ನಾ). ೧. ಮನ್ಮಥನ ರೂಪು,–ಆಕಾರ : ಹಾರಂಗಳೊಳೆಸೆವೀ ಮಣಿಹಾರಂ ಮದನಾವತಾರಮೆನಿಸಿದ ನಿನ್ನಾಕಾರಕೆಣೆಯಕ್ಕುಂ (ಕಾದಂಬ. ೦೦೬). ೨. ಗೌರವಸೂಚಕವಾದ ಒಂದು ಬಗೆಯ ಛತ್ರಿ : ಮದನಾ[ಪಾಠಾಂ. ಮದನನ]ವತಾರವುಂ ಕನಕದಂಡಚಾಮರಮುಮನ್ನದೇಭಮನುತ್ತುಂಗದ ಛತ್ರಗಾವೆಯುಂ ಪಡೆದುದಾತ್ತಕವಿತಿಲಕನೆನಿಸಿದಂ ಕವಿರತ್ನಂ (ಅಜಪು. ೦೨-೩೦). [ಸಂ.]

**ಮದನಾವಸ್ಥೆ** (ನಾ). ಕಾಮಲಾಲಸೆಯಿಂದ ಉಂಟಾಗುವ ಸ್ಥಿತಿ ; ಕಾಮಾವಸ್ಥೆ ; ಮದನಾವಸ್ಥೆಯನೆಯ್ದಿ ತನ್ನೃಪತಿ ಕಂಡಂ ಬಂದನೆಂದಾರು ಮೆನ್ನವೆ (ಕುಸುಚಾ. ೯-೯೩); ಆ ತಾಮ್ರತುಂಡಂ ಮದನಾವಸ್ಥೆಯಿಂದಂ ಮೂರ್ಛೆವೋಗಿ ಮೈಮರೆದೊಡಿಂಗಿರ್ಪ ತತ್ಕುಮಾರಿಯುಂ ಕಂಡು ನುಡಿದುದು (ಉದ್ಭಟ. ೬-೬೮ ಪ). [ ಸಂ. ಮದನಾವಸ್ಥಾ ]

**ಮದನಾವಾಸ** (ನಾ). ಮನ್ಮಥನ ನಿವಾಸ : ಇದೆ ಸಾರಂ ಸ್ವರ್ಗಲೋಕಕ್ಕೆ . . . ವಿಭವಕ್ಕಾಲಯಂ ಲೀಲೆಗುದ್ಯನ್ಮದನಾವಾಸಂ (ಶಾಂತಿಪು. ೭-೨೪).

[ಸಂ.]

**ಮದನಾವೇಶ** (ನಾ). ಉತ್ಕಟವಾದ ಭೋಗಾಸಕ್ತಿ ; ಕಾಮೋದ್ರೇಕ : ಇದಚೊಳ್ ಖೇಚರಕಿನ್ನರಾಮರಯುಗಂ ನಾನಾವಿನೋದಂಗಳಿಂ ಮದನಾವೇಶಕರಂಗಳಂ ಸಲಿಸುತುಂ . . . ತಳ್ತಿರೆ ಕಾಮರಾಗಮಯಮಾಯ್ತೇನೀ ನಗಂ ರಮ್ಯಮೋ (ಆದಿಪು. ೯-೦೦೬). [ಸಂ.]

**ಮದನಾಸ್ತ್ರ** (ನಾ). ಕಾಮನ ಬಾಣ : ಮದನಾಸ್ತ್ರಂ [ಕ]ರ ಸಾಣೆಗಾಣಿಸಿದುದೆಂಬಂತಾಗೆ ನಿನ್ನೊಂದು ಕಂದಿದ ಮೆಯ್ಯನ್ನಯ ತೋಳೊಳೊಂದೆ ಸಿರಿಯುಂ ನೀನುಯ್ಯು ತೊಬ್ಬಾ[ಳ್ವ] ರಾಗದಿನೆನ್ನೊಳ್ ಸುತಮಿರ್ಪುದು (ಶಂಶಪಾ. ೮-೬೬) ; ಮದನಾಸ್ತ್ರಂ ನಿಜಮೂರ್ತಿ ಮೋಹನಶರಂ ಸೌಭಾಗ್ಯಸಂಪತ್ತಿ . . . ಆಗೆ ದಿಟಂ ದರ್ಪಕನಾದದಿಂದೊಲಿಸಿದಂ ವಿದ್ಯಾಧರಸ್ತ್ರೀಯರಂ (ಪಾರ್ಶ್ವಪು. ೬-೨೭). [ಸಂ.]

**ಮದನಿ** (ನಾ). ೧. ಒಂದು ಬಗೆಯ ಮಲ್ಲಿಗೆಯ ಬಳ್ಳಿ ಮತ್ತು ಅದರ ಹೂವು ; ದುಂಡುಮಲ್ಲಿಗೆ : "ದುಂಡುಮಲ್ಲಿಗೆಯು ಮದನಿಯಕ್ಕುಂ" (ಶಬ್ದಮ. ೩೮ ೨೪) ; ಮದನಿಯ ಪೊಸಮಾಲೆಗಳ ಮೇಳಗಳಿಂ . . . ಕಣ್ಣತಿಮಂಗಳಮಂ ಮಾಡುತ್ತುಂ (ಉದ್ಭಟ. ೩-೨೨). ೨. ಇರವಂತಿಗೆ ; ಅತಿಮುಕ್ತ. ೩. ಒಂದು ಬಗೆಯ ಸುಗಂಧದ್ರವ್ಯ ; ಕಸ್ತೂರಿ.

[ ಸಂ. ಮದನೀ ]

**ಮದನಿಕೆ** 'ಮದನಕಯ್ದು' ನೋ.

**ಮದನ್ಕೆ** (ನಾ). ಒಂದು ಊರಿನ ಹೆಸರು : ಎಣ್ಬನೂಱಯ್ವತ್ತೊಮ್ಬತ್ತನೆಯ ವರಿಷದನ್ದು ಮದನ್ಕೆಯೊಳಿಱಿದು ಪರದೇವನು ಪೆರ್ಮ್ಮಡಿಯ ನೊಟಮ್ಬನು ಮೆಟ್ಟಿಭ' ದಯೆಗೇದ XXX (ಎಕ. X (ಸ), ತಂಜಾವು. ೦೬೩-೫ ; 937). [ ? ]

**ಮದಪಟ್ಟಿಕೆ** (ನಾ). ಆನೆಯ ಗಂಡಸ್ಥಳದಿಂದ ಇಳಿಯುವ ಮದೋದಕದ ರೇಖೆ ; ಮದಲೇಖೆ : ಮಕರಾಂಕದ್ವಿಪಮದಪಟ್ಟಿಕೆಯೆನಿಸಿ ಕಪೋಲಮೂಲಮಂ ಮುಟ್ಟಿದುವಾ ಚಕಿತಾಕ್ಷಿಯ ಹರಿನೀಳಾಳಕಂಗಳ್ (ಶಂಖಾಪಾ. ೩-೯೪). [ ಸಂ. ಮದಪಟ್ಟಿಕಾ ]

**ಮದವನೆ** (ನಾ). (?) : ಶ್ರೀಪುರದಾ ಬಡಗಣ ಪಡುವಣ ಕೋಣಾಳ್ಪನ್ದೇವಂಗೇರಿ ಮದವನೆ ಒಂದುಂ (ಎಕ. VII (R), ನಾಗಮಂ. ೦೪೯-೬೯: 776). [ ? ]

**ಮದಮುಖ** (ನಾ). ಸೊಕ್ಕಿನಿಂದ ಕೂಡಿರುವವನು ; ಗರ್ವಿಷ್ಠ : "ಮದಮುಖರೆನೆ ದರ್ಪಮುಖರು" (ಶಾರಕ. ೨೪) : ಮದಮುಖನೆಡಬಲನ ನೋಡಿದರೆ ರಕ್ಕಸಕೋಟಿ ಜೀಯೆನುತ ಸಿಡಿಲ ಸೆಟೆ ಬಿಟ್ಟಂತೆ ಭುಜವನು ಹೊಡೆದು ಮುಂಚಿತು (ಕುವ್ಯಾಮ್ರ್ಯ. ೦೩-೪೭); ಕದಿರಮಾನನು ಜಲಹುಖಾನರೆಂದೆಂಬ ಮದಮುಖಿಖಾನರೇಜುದರು (ಕುಮಾಸಾಂ. ೨೦-೦೯). [ಸಂ.]

**ಮದರಂಗ** 'ಮದರಂಗಿ' ನೋ.

**ಮದರಂಗಬಾಳೆ** (ನಾ). ಕೆಂಪುಬಣ್ಣ ಹಾಗೂ ಸುವಾಸನೆಯಿಂದ ಕೂಡಿದ ಒಂದು ಬಗೆಯ ಬಾಳೆ : (ಕ).

[ ಮದರಂಗ (< ಮದರಂಗಿ) + ಬಾಳೆ$_1$ (< ಬಾಟ[3]) ]

**ಮದರಂಗಿ, ಮದರಂಗ, ಮಧುರಂಗಿ** (ನಾ). ೧. ಒಂದು ಬಗೆಯ ಗಿಡ ಮತ್ತು ಅದರ ಎಲೆ : ಗೋರಂಟೆ : ಗೋರಂಟ, ಮದರಂಗಿ (ವ್ಯಾಶಿ. ೯೯-೯೬೪) ; ಮದರಂಗಿಬೀಜ ಒಂದುರೂಪಾಯಿ ತೂಕ (ಕಾಪುಕಾ. ೨೬೭); ಸುತ್ತುಮುತ್ತು ಮಾದರಂಗಿ, ನಡುವೆ ಮಾಧವಿಯ ಬಳ್ಳಿಮಾಡ (ಕವೀಳ. ೨೨-೯). ೨. ಹೆಣ್ಣುಮಕ್ಕಳು ಅಲಂಕಾರಕ್ಕಾಗಿ ಉಗುರು, ಕೈ ಮತ್ತು ಪಾದಗಳಿಗೆ ಹಚ್ಚಿಕೊಳ್ಳುವ ಗೋರಂಟಿಎಲೆಯ ಕೆಂಬಣ್ಣದ ರಸ ; ಮೆಹಂದಿ : ತುಟಿಯ ತಂಬುಲ ಉಗುರ ಮದರಂಗಿಯೋ (ಸಜನೀ. ೯-೩೮) ; ಮದರಂಗಿ ಮುಗುರಿನಲಿ ಸಾರಂಗಿ ಬಾರಿಸುತ ಬೋರಂಗಿ ಚಿತ್ರಾಂಗಿ ಭೋರಿಡುತಿರೆ (ಛಾವಜ. ೦೭-೩೨೩). **ಮದರಂಗ** : ೩. ಕೆಂಪುಬಣ್ಣ : 'ಮದರಂಗ ಬಾಳೆ' ಪರಾ. **ಮಧುರಂಗಿ** : ೧. "ರುಧಿರೆಯೆನೆ ಮಧುರಂಗಿ" (ಮಂಗರಾ. ೩೩-೦೩) ; ಓಂಗದೆ ಕಡಲೆಯ ಹುಳಿ (ಮ)ಧುರಂಗಿಯ ಬಿತ್ತಕ್ಕಿ ಗರ್ಚಿನೀವುದು ಸಿತದಿಂ ತೆಂಗಿಂಗಾ ಕ್ಷೀರವಿಷಕ್ಕಂ ಗಣಜಲೆ ವಜ್ರಿಯೆಸೆವ ಹಾಲುಂ ಸಿತದಿಂ (ಜವಾದ. ೨-೮೭).

[ ← ತುಳು. ಮದರೆಂಗಿ, ಮದಿರೆಂಗಿ, ಮದ್ರೆಂಗಿ ]

**ಮದರದನಿ** (ನಾ). ಸೊಕ್ಕೇರಿದ ಆನೆ ; ಮದಗಜ : ಸಾರ್ಚಿದ ಮದರದನಿಗೆ ಹರಿ ನಿಲ್ಲದೆ ನಿಚ್ಚಟಗಲಿಗೆ ಪೆಸರ ಕಲಿ ನಿಂದಪನೇ (ಶಾಂತಿಪು. ೨-೧೦೯) ; ಮದರದನಿ ಕಂಭಮಂ ಕಿಟ್ತಿದಿರೆ ನೆಲಂ ಭೋರನೆಯ್ತರಲ್ (ನೇಮಿಪು. ೩-೦೦೦) ; ಸದಕಿವನು ಬಳಿಕಾತ ರಣಕೊದಗಿದ ಮಹಾರಥಮಂಡಳಿಯ ಮದರದನಿಗಳ ಮಾವುತರ ರಾವ್ತರ ಹಯದ ಕಾಲಾಳ (ತೊರೆರಾ. ೬-೪೩-೮). [ ಸಂ. ಮದರದನಿನ್ ]

**ಮದರಸ** (ನಾ). ಮದೋದಕ ; ಮದಜಲ : ಮದರಸವೊಕ್ಕುದಿಲ್ಲಿ ಕರಿ ಪೋಪುದು ಸಿಂಗದ ಬಟ್ಟೆ ನೋಳ್ಪೊಡಿಂತಿದು (ಶಂಶಂ. ೩-೪೬). [ಸಂ.]

**ಮದರಾಸ್‌ವಲ್ಲಿಗೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು: ಇಬ್ಬನಿ ಪರಲೆ, ಇಟ್ಟೇವು, ಯಿಸಗ, ಮದರಾಸ್‌ವಲ್ಲಿಗೆ (ಕ್ಕು ಶಿಗ. ೨೩-೪೦೬). [ ಮದರಾಸ್$_6$ + ವಲ್ಲಿಗೆ ]

**ಮದರಿಕಲ್** (ನಾ). ಒಂದು ಊರಿನ ಹೆಸರು : ಶ್ರೀಬೇವಿಗೆ ಮುತ್ತರಸರ ಮಗನು ಫೊಲೆಯಮ್ಮನ ಮದರಿಕಲ್ಲನಾಳುತ್ತುಮ್ ಬಿಸುಮರಸರ ದೇಗುಲಕೆ ಕೊಟ್ಟ ಕಯ್ಯು ಪನ್ನಿರ್ಪ್ಪತ್ತು (ಎಕ. XI. ತಳ್ಕ. ೩೩-೨೦; 815). [ ? + ಕಲ್$_3$ ]

**ಮದಲಗಿತ್ತಿ** 'ಮೊದಲಗಿತ್ತಿ' ನೋ.

**ಮದಲಿಂಗ** (ನಾ). ಮದುವೆಯ ಹುಡುಗ; ಮದುಮಗ : ಕೊಟ್ಟೆಪಸು ಪಗ್ಗಮನಂದುಜಿ ಕಿಳ್ತುಕೊಂಡು ತಾಂ ಓಡಿ ಬಂದಿಜಿದು ಕೊಂದುದಾ ಗಾಡಿಕಾಜಿ ಮದಲಿಂಗನಂ (ಹಾರಿಸ. ೨-೯-೩೩) ; ಮದಲಿಂಗನೇ ಬ್ಯಾಡ ಅಂದ್ರೆ ಮದುವೆ ಯಾರಿಗೆ ಮಾಡಲಿ ? (ಸಂಪಕೋ. ೦೬೬).

[< ಮದುವಳಿಗ]

**ಮದಲಿಂಗಿ** (ಸ್ತ್ರೀ). ಮದುವೆಯ ಹುಡುಗಿ : ಮದುಮಗಳು : ನನ್ನ ಮುದ್ದುಗೌರೀ . . . ಓ ನನ್ನ ಮುದ್ದು ಮದಲಿಂಗೀ (ತುಂಗಭ. ೫೬).

[ಮದಲಿಂಗ + — ಇ$_2$]

**ಮದಲೂರ್** (ನಾ). ಒಂದು ಊರಿನ ಹೆಸರು : ಕಕ್ಕರ ಮದಲೂರೆಜಿದು ತೊಱುಗೊಣ್ಡೊಡೆ ತಿಪ್ಪಣಿಮಾರ ಶ್ರೀಪೋಜಿ ತಿಪ್ಪಣಿಯೂರುಳ್ಳಗಿ . . . ಪಲರನೆಜಿದು ಸಗಪೋಜಿದನ್ (ಎಕ. X. ಬಿಳ್ಕ. ೩೨-೩; ಸು. 870 ?) ; ರಾಮಚಣ್ದ್ರಫಳಾರಗ್ಗೆ ಮದಲೂರು ಮಳಗವಾಡಿಯುಮಂ ... ಕೊಟ್ಟರ್ (ಎಕ. XI. ಹಿರ್ಯದು. ೬೪-೨೪; 968) ; ಸ್ವಸ್ತಿಶ್ರೀಮನು ಗಗ್ಗರೊಕ್ಕಲಾ ಮದಲೂರ ಕಾಪ್ಪನ್ತೊಱುಗೊಳೊಳ್ ಬಿದು ಸತ್ತು ಸಗ್ಗ ಅದನ್ಪವಕ್ಕ ಮೂಕೂಮಣ್ಣು ಕಜನಿ ಪರಿಹಾರ ಕೊಟ್ಟರ್ (ಎಕ. X. ಕೋಲಾರ. ೦೬೨-೩ : ಸು. 1000 ?). [ಮದಲ್ ? + ಊರ್]

**ಮದಲೇಖೆ** (ನಾ). ೧. ಆನೆಯ ಕಪೋಲದ ಮೇಲೆ ಮದೋದಕವು ಹರಿದುದರಿಂದಾದ ಗೆರೆ, — ಪಟ್ಟೆ : ಮದಲೇಖೆಗೆ ಸದೃಶಂ ಮೃಗ ಮದತಿಳಕಂ ಕರಿಕರಕ್ಕೆ ಸರಿ ಕರಂ (ಪಾರ್ಶ್ವಪು. ೯-೪೦). ೨. ಕಸ್ತೂರಿ ಮುಂತಾದ ಸುಗಂಧದ್ರವ್ಯಗಳಿಂದ ಹೆಂಗಸರು ತಮ್ಮ ದೇಹದ ಮೇಲೆ ಬರೆದುಕೊಳ್ಳುವ ಚಿತ್ರ ; ಪತ್ರಭಂಗ; ಮಕರಿಕೆ : ಅಭಿನವ ಮದಲೇಖಾಲಾಲಿತಂ . . . ಪ್ರಸ್ಫುರದ್ಭರ್ಮವಾರಿಪ್ರಭವಪರಿಸೆದ್ದುದಂತಾ ಕಾಂತೆಗಾ ಕಾಂತಸಂಗಂ (ಶಂಖಾ. ೩-೨೮). [ಸಂ. ಮದಲೇಖಾ]

**ಮದಲೋಲ** (ಗು). ಮತ್ತು ಬರಿಸುವಂತೆ ಚಂಚಲವಾದ : ವದನ ಮಿದಲ್ಲಂಬುರುಹಂ ಮದಲೋಲವಿಲೋಚನಂಗಳಲ್ಲಮಿವಳಿಗಳ್ (ಕಬಿರಾ. ೩-೨೪). [ಸಂ.]

**ಮದವ** 'ಮದೆವ' ನೋ.

**ಮದವಟ್ಟಿಗೆ** (ನಾ). ಜಡೆಗಟ್ಟಿದ ತಲೆಗೂದಲು : " ಮದವಟ್ಟಿಗೆದು ಕಡ್ಡಣಾ ಎನೆ ತಾನೆ ಜಡೆಗಟ್ಟು " (ಅಲ್ಲಕ. ೩೨). [ ? ]

**ಮದವಟ್ಟೆ** (ನಾ). ೧. = ಮದಲೇಖೆ ೧ : ಕಾರ ತಂದಲ್ಪೊಲ್ಲಗು ವೆಟ್ಟುಂ ಮದವಟ್ಟೆ[ಪಾಠಾಂ. ವರ್ಕೆ]ಯಿಂ ... ಏಂ ಜನಕಂಗೆ ಹರ್ಷಜನಕಂ ತಾನಾಯ್ತೊ ವಸ್ತಧ್ವಿಪಂ (ಶಂಖಚರಿ. ೪-೦೦೯). ೨. = ಮದಲೇಖೆ ೨ : ಪರಿಜಿಯೊಳ್ಪರಿಚಯಂಬಡೆದ ಮದವಟ್ಟೆಯುಂ ಮದವಟ್ಟೆಯೊಳೊಡಂ ಬಟ್ಟ ವಿಪುಳಕಪೋಳತಳಲಿಖಿತವಿಚಿತ್ರಪತ್ರಲೇಖೆಯುಂ (ಅರಿಕೃ. ೪-೪೦ ವ); ಆಕೆಯ ಕಪೋಲದೊಳಾ [ನ]ವಧೂಮಲೇಖೆ . . . ಕತ್ತುರಿಯೊಳ್ ಮದ ವಟ್ಟೆಯಂ ಪಿಲಾಸದೆ ತೆಗೆದಂತೆ ಒಣ್ಗಿಸಿದ ತೋಱಿದುದಾ ಕದನತ್ರಿಣೇತ್ರನಾ (ಕಂಕಣ. ೩-೬೬). [ಮದ + ಪಟ್ಟೆ$_3$]

**ಮದವಟ್ಟೆದೆಗೆ** (ಕ್ರಿ). ಕೆನ್ನೆಯ ಮೇಲೆ ಕಸ್ತೂರಿ ಮುಂತಾದ ಸುಗಂಧ ದ್ರವ್ಯಗಳಿಂದ ಚಿತ್ರವನ್ನು ಬರೆ.—ಮಕರಿಕಾಪತ್ರವನ್ನು ರಚಿಸು : ಪರಿಜೆಯನೊಗ್ಗುಡಿಸುವ ಕತ್ತುರಿಯಿಂ ಮದವಟ್ಟ[ಟ್ಟೆ]ದೆಗೆವ ಜೊಟ್ಟ ಡುವ ಕುಚಾಂತರದೊಳ್ ಹಾರಮನೆಳಸುವ [ಯು]ರವಿಂ ಸ್ವಾಧೀನಪತಿ ಕರಂ ಬಗೆಗೊಂಡಳ್ (ಶಬ್ದಮ. ೯-೮೬); ಮದವಟ್ಟ[ಟ್ಟೆ]ದೆಗೆದಿಟ್ಟ ಕತ್ತುರಿಯ ಚೆಲ್ವ ಕೊರಲೊಳಿಕ್ಕಿದ ಕರಿಯ ದಂಡೆಯೊಳೆರಡೆಡೆ ಬರೆ ಮಾಡಿದ ಮಲ್ಲಿಗೆಯ ಪರಿಮಳಕ್ಕಮಡಸಿದ ಕಪ್ಪುರದ ಪಪ್ಪುಕಕ್ಕಂ ಮಱದುಂಬಿವಿಂಡು ಮುಂದೆ ಮಂಡಳಿಸಿ ಕಟ್ಟ ಬರೆ (ಅಜಿತಪು. ೨-೨೮ ವ). [ಮದವಟ್ಟೆ + ತೆಗೆ$_1$]

**ಮದವಡಿ** (ನಾ). ಒಂದು ಜಲಾಶಯದ ಹೆಸರು : ಮದವಡಿತಟಾಕಸ್ಯ ದಕ್ಷಿಣಭಾಗ ತತ ಕೊಮರತಟಾಕಸ್ಯ ದಕ್ಷಿಣಭಾಗ (ಮ್ಯಅಂ. ೧೯೪೨,೬೫-೦೦೯ ; 819). [ ? ]

**ಮದವಡೆ** (ಕ್ರಿ). ಸೊಕ್ಕೇರು ; ಮದವೇರು : ಅಬಿಳಮ್ಮಗ ಮದವಡೆದ ಪಂಚೆಗಳಂಚರವ ಬೀಜಿದವು ಕೊಳಗಳಲಿ (ತೊರವೆ. ೪-೬-೧೦).

[ ಮದ + ಪಡೆ$_1$ ]

**ಮದವಣಿಗ** 'ಮದುವಳಿಗ' ನೋ.

**ಮದವಣಿಗತನ** 'ಮದುವಣಿಗತನ' ನೋ.

**ಮದವಣಗಿತ್ತಿ** 'ಮದುವಳಗಿತ್ತಿ' ನೋ.

**ಮದವಣಿಗೆ** 'ಮದುವಳಿಗೆ' ನೋ.

**ಮದವಸಲೆ** 'ಮಡಿವಸಲೆ' ನೋ.

**ಮದವಳ್** 'ಮದೆವಳ್' ನೋ.

**ಮದವಳಗಿತ್ತಿ** 'ಮದುವಳಗಿತ್ತಿ' ನೋ.

**ಮದವಳಿಕೆ** 'ಮಡವಳಿಗೆ' ನೋ.

**ಮದವಳಿಗ** 'ಮದುವಳಿಗ' ನೋ.

**ಮದವಳಿಗೆ** 'ಮದುವಳಿಗೆ' ನೋ.

**ಮದವಳಿಗೆಕಲು** (ನಾ). ಮಹಾಸತಿಕಲ್ಲು ; ಮಾಸ್ತಿಕಲ್ಲು : ಗಉಡ ಮಾಡಿಸಿದ ಮದವಳಿಗೆಕಲು (ಮ್ಯಅಂ.೦೯೨೮. ೮೮-೦೪ ;1399).

[ ಮದವಳಿಗೆ ( < ಮದುವಳಿಗೆ ) + ಕಲು$_1$ ( < ಕಲ್$_3$ ) ]

**ಮದವಾದಿ** (ನಾ). ಸೊಕ್ಕಿನಿಂದ ವಾದ ಮಾಡುವವನು ; ಪಾಖಂಡಿ : ಇವ(ದಾ)ನಟಿದೊನ್ ಪಾರ್ಶ್ವನಕ್ಕೆ ಮದವಾದಿ ಅಕ್ಕೆ ಬಾರಣ(ಣಾ)ಸಿವದ ಸಾಸಿರಕವಿಲೆಯಂ ಕೊನ್ದೊನಕ್ಕು (ಎಕ. X. ೦೬೬-೬ ; 17 ಶತಮಾನ).

[ಸಂ. ಮದವಾದಿನ್ ]

**ಮದವಾರಣ** (ನಾ). ೧. = ಮದರದನಿ : ಗೈರಿಕರಸಾರ್ದ್ರಮಂ ಸಿಂಧೂರದೆ ತಲೆವ[ಜಿ]ದುದಂ ಕರಂ ಕಂಡಾಂ ಸಂಧ್ಯಾರಾಗದೊಳಜಿಯದೆ ಮದವಾರಣಮಂ ಸೋಂಕಿ ಕೆಲದೊಳೊಯ್ಯನೆ ಪೋದೆಂ (ಕಬಿರಾ. ೩-೯೨) ; ಎನಿತು ಮದವಾರಣಾ ಕ್ರೋಧಿನಿ ಪೊಕ್ಕುಂ ಸಿಂಹಪೋತಮಂ ಗೆಲ್ಗುಮೆ (ಶಾಂತಿಪು. ೪-೩೦) ; ವೀರರಿಪುಕದಳೀವನಕೆ-ಮದವಾರಣನು ಫಲುಗುಣತನ ಯನುದಾರಪದ್ಮವ್ಯೂಹದಲಿ ಗೆಲಿದನು ಕುಮಾರಕರ (ಕುಮ್ಯಾದ್ರೋ. ೫ ಸೊತಿ). ೨. ಸೊಕ್ಕನ್ನು ಇಳಿಸುವವನು ; ಗರ್ವಭಂಗಮಾಡುವವನು : ಅನ್ಯ ನರೇಂದ್ರಗಂಧವಾರಣಮದವಾರಣಾಂ ವಿಜಯಕಾರಣನಮ್ಮನ ಗಂಧವಾರಣಂ (ಗದಾಯು. ೦-೦೬). ೩. ಪ್ರೀತಿಯಿಂದ ಚಿಕ್ಕವರನ್ನೂ ಆಪ್ತರನ್ನೂ ಕುರಿತು ಸಂಬೋಧಿಸುವ ಒಂದು ಪದ : ಗುಣವಹುದು ನಿನಗಿಂದು ಕಾಲದಿನಮಣಿಯ ದೀಕ್ಷಿತನಾಗು ಮದವಾರಣನೆ ದೀಕ್ಷಿತನಾಗು (ಕುಮ್ಯಾಕ. ೬-೨೬) ; ತಿಣಕಿಗನ ತೆಗೆದಪ್ಪಿ ಮದವಾರಣನೆ ಕುಳ್ಳಿರೆನುತ್ತ ನೋಡಿದಳು ಸಹೋದರನ (ಕುಮ್ಯಾಪಿ. ೨-೪೦). [ಸಂ.]

**ಮದವಾರಿ** (ನಾ). = ಮದರಸ : ಕರೀಂದ್ರಸಂಕುಳಮದವಾರಿಧಾರೆಗಳ ಪೆರ್ಮಳೆಯೊಳ್ ರಣಮೆಂಬ ರಾತ್ರಿಯೊಳ್ ಸಲೆ ಬರುತಿರ್ಪಳೆಂದುಮಭಿ ಸಾರಿಕೆಯಂದದೆ ರಾಜ್ಯಲಕ್ಷ್ಮಿ ತನ್ನೊಲವಿನೊಳ್ (ಅಜಿತಪು. ೦೩). [ಸಂ.]

**ಮದವಿ** (ನಾ). ಒಂದು ಬಗೆಯ ಬೆಲೆಬಾಳುವ ರೇಷ್ಮೆಬಟ್ಟೆ : ಪಸರಿ ಗಬ್ಬುಳ ನೀಲಿಗಂಧ ಸಂಧ್ಯಾರಾಗ ಕುಸುಮಿ ಯಾವಂಚಿ ದೋರಿಯ ನಾಗ ವಟ್ಟೆ ಪುಲ್ಲಿ ಸುವರ್ಣಪಟ ಮದವಿ ಮಂಜಿಷ್ಠೆ ದೇವಾಂಗವೆಂದು ಪಟಭೇದ ಮಕ್ಕುಂ (ಶುಂಗಶಾ. ೦೦೦-೨೮). [ ← ಮರಾ. ಮದವೀ ]

**ಮದವಿಕಳ** (ನಾ). ಸೊಕ್ಕಿನಿಂದ ಅರಿವುಗೆಟ್ಟವನು ; ಮದಾಂಧ : 'ಮದವಿಕಳತನ' ಪರಾ. [ಸಂ. ಮದವಿಕಲ]

**ಮದವಿಕಳತನ** (ನಾ). ಸೊಕ್ಕಿನಿಂದ ಅರಿವುಗೆಡುವುದು : ಪಮಪನಾಭನೆ ತಾನಲಾ ಹರಹರ ಮಹಾದೇವ ಉದಿಸಿದನು ನರನಾಗಿ ತಾನೀ ಹದನನರಿ ಯದೆ ತಪ್ಪಿದೆನಲಾ ಮದವಿಕಳತನದಿಂದ ಕೆಟ್ಟೆನು (ಶಭಾಗ. ೩-೬-೦೭). [ಮದವಿಕಳ + — ತನ]

**ಮದವಿಕಾರ** (ನಾ). ಮದ್ಯಸೇವನೆಯಿಂದುಂಟಾಗುವ ಅಮಲು. — ಮತ್ತು : ಪಿಷ್ಟೋದಕಗುಡಧಾತಕೀಸಂಯೋಗದಿಂದಮೆಂತು ಮದ ವಿಕಾರಮೆಸೆದಪ್ಪುದಂತೆ ಕಾಯಾಕಾರಪರಿಣತಪೃಥ್ವ್ಯಪ್ತೇಜೋವಾಯು ಗಳತ್ತಣಿಂ ಬಂದು ಗರ್ಭಾದಿಮರಣಪರ್ಯಂತಂ ತದಾತ್ಮಕಂ ಚೈತನ್ಯಂ ಪುಟ್ಟುಗುಂ (ಅದಿಪು. ೨-೯ ವ). [ಸಂ.]

**ಮದವಿರಹಿತ** (ನಾ). ೧. ಮದಜಲವಿಲ್ಲದಿರುವ ಆನೆ. ೨. ಗರ್ವ ವಿಲ್ಲದಿರುವವನು. ೧, ೨ : ಮದವಿರಹಿತನೆನಿಸಿಯುಮುದಿತದಾನಿ (ಶಾಂತಿಪು. ೦-೭೦). [ಸಂ.]

**ಮದವಿಹ್ವಳಿತ** (ನಾ). ಸೊಕ್ಕಿನಿಂದ ಉದ್ವಿಗ್ನವಾದುದು ; ಅಮಲೇರಿ ಉನ್ಮತ್ತವಾದುದು: ಅರಸಂ . . . ಆನೆಯನೇಱಿ ಅಡವಿಗೆ ಪೋದೊಡದು ಮದವಿಹ್ವಳಿತನಾಗಿ ಮೆಯ್ಯಱಿಯದೆ ದಿಶಾಪಟ್ಟಂಗೊಂಡೊಂದೆಸೆಗೆ ಕೊಂಡೋಡಿ . . . ಪರಿಯೆ (ವಡ್ಡಾರಾ. ೦೦೦-೦೩). [ಸಂ. ಮದವಿಹ್ವಲಿತ]

**ಮದವೆ** (ನಾ). (?) : ಇ ಠಾಣಾನ್ತರದ ಸೀಮೆಯ ಮದವೆ ಪತ್ತ ಕೊಸ್ಟಲ ಸುಂಕವ ಬಿಟ್ಟರು (ಕೆ್ಷ. IV, ೩೪-೨೩ : 1109). [ ? ]

**ಮದವೆಳಸು** (ಕ್ರಿ). ಸೊಕ್ಕೇರು ; ಮದೋನ್ಮತ್ತವಾಗು : ಇಪ್ಪತ್ತು ಸಾವಿರ ಪಾಯ್ದಳ ಮದವೆಳಸಿದ ಕರಿಗಳೈವತ್ತು ಸಲೆ ಕುದುರೆಗಳ ಮೇಳದ ರುದ್ರಗಣಭೂಪ ತಳುವದೆ ಬಂದನು (ಕಂಪಹ. ೩-೨೪). [ ಮದ + ಬೆಳಸು$_1$ (< ಬೆಳೆಯಿಸು) ]

**ಮದವೇಱು** (ಕ್ರಿ). ಮದವನ್ನು ಹೊಂದು ; ಸೊಕ್ಕು : ಸ್ವೇಚ್ಛಾನು ರೋದೋನ್ಮತ್ತ ಮದವೆತ್ತಾನೆಯಂತನಿವಾರಿತೋದ್ಧತವೃತ್ತಿಯಲಿ ಕೊರ್ಬಿ (ಬಸಪು. ೪೦-೬). [ಮದ + ಏಱು$_1$]

**ಮದವೇತಂಡ** (ನಾ). = ಮದರದನಿ : ಅಕ್ಷೋಹಿಣೀನಾಯಕಂ . . . ಮದಗಳಿತ ಗಂಡಪ್ರಚಂಡಮದವೇತಂಡಮನಣೆದು ಬಿಟ್ಟೆಕ್ಕಿದಾಗಳ್ (ಕಂಕಶಾ. ೧೨-೬೬ ವ) ; ಕಂಡಣೆದು ನೂಂಕೆ ಮದವೇತಂಡಮಂ . . . ಗೆಲ್ಲಂಗೊಂಡಂ ಬಗೆಗೊಳ್ವ ತೆಱದೆ ವಿಜಯಾಂಗನೆಯಂ (ಶಾಂತಿಪು. ೩-೩೩). [ಸಂ.]

**ಮದವೇರು** 'ಮದವೇಱು' ನೋ.

**ಮದವೇಱಿಸು** (ಕ್ರಿ). ಸೊಕ್ಕೇಗೇಳುವಂತೆ ಮಾಡು : ಹರನ ಮನೋರಥಮಂ ಮದವೇಱಿಪಂತೆ ಪಾರ್ವತಿಗೆ ಸುವಾಸಿನಿಯರ್ ಸಿಂಗರಮಂ ಮಾಡಿ (ಗಿರಿಕ. ೦೦-೪೩ ವ). [ಮದವೇಱು + — ಇಸು$_3$]

**ಮದವೇಱು**, ಮದವೇರು (ಕ್ರಿ). ೧. ಬೀಗು ; ಹೆಮ್ಮೆಪಡು : ಎನಗೆ ಜಗತ್ತ್ರಯೀಜನಮುಕರಾವಳಿಗೀ ವಿಟಪೀತ್ರಯೀಪ್ರಸೂನನಿಕರವಾದುವೆಂದು ಮದನಂ ಮನದೊಳ್ ಮದವೇಱಿ ಪೇಱಿದತ್ತನುಪಮಸೌರಭಂ . . . ಕುರವಕಂ ತಿಲಕಂ ವಕುಲಂ ನಿರಾಕುಲಂ (ಚಂದ್ರಪ್ರ. ೭-೩೩) ; ತನಿಮದವೇಱಿ ನಿಮ್ಮಲ್ಲಿ ಸೆಣಸಿದೆನು ಸೇನಾಧಿಪತ್ಯದಲಿ (ಕುವ್ಯಾದ್ರೋ. ೦-೨೪). ೨. ಉಕ್ಕು ; ಉಬ್ಬರಹೊಂದು : ಮದವೇಱಿದಂಬುಧಿಯ ಸಲಿಲ ದುಬ್ಬರಕೆನಬರೆ ಪಾರ್ಸಳೆರು ಹೇಳಾ ತಾಯೆ (ಕೃಲಾ. ೩-೬-೩೧).

**ಮದವೇರು** : ೩. ಮತ್ತಿನಿಂದ ಕೂಡಿರು ; ಅಮಲೇರು : ಹೂವಿನ ಬಂಡುಂಡು ಮದವೇರಿದಳಿವಿಂಡು ಮೊರೆಯುವ ನಾದವಿದೆಲ್ಲ (ಇಂಶಾಕ. ೦೪೪-೯). [ ಮದ + ಏಱು$_1$ (< ಏಱ್$_1$) ]

**ಮದಸಿಂಧುರ** (ನಾ). = ಮದರದನಿ : ಹರಿಬದಲಿ ಹೊಕ್ಕರಡುಸಾವಿರ ತುರಗ ಬಿದ್ದವು ನೂಱುಮದಸಿಂಧುರಕೆ ಗುಥನವಾಯ್ತು (ಕುವ್ಯಾಗ. ೨-೩೩) ; ಅದೊಂದು ನೀಲಪರ್ವತಂ . . . ಸಿಂಧೂರವಿಲಿಪ್ತಮದಸಿಂಧುರಗಂಡ ಮಂಡಲದೊಂದು ಪಾಂಗಿನಿಂ ತೋರ್ಪ ತಟ್ಟಲಿಂ . . . ಮನೋಜ್ಞಂ (ರಾಮಾಶ್ವ. ೭೨-೨೦). [ಸಂ.]

**ಮದಸ್ಖಲಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : P "ಕಾಲುಗಳನ್ನು ಸ್ವಸ್ತಿಕದಂತಿರಿಸಿ, ಸ್ವಸ್ತಿಕವನ್ನು ಬಿಡಿಸಿ ಕ್ರಮ ವಾಗಿ ಪ್ರಸರಿಸುತ್ತ, ಕೈಗಳಿಂದ ದೋಲಹಸ್ತವನ್ನು ಮಾಡಿ, ತಲೆಯನ್ನು ಪರಿವಾಹಿತದಿಂದ ಸುತ್ತಿಸುವುದು" (ಲಾಸ್ಯರಂ. ೩೦೩ ನಟ್ಯಸಾರ) : ಚರಣಂ ಸ್ವಸ್ತಿಕಮಂ ಪಡೆದಿರದೆ ಕ್ರಮದಿಂದೆ ಪಸರಿಸುತ್ತಿರೆ ಮತ್ತಂ ಕರಂಗಳೆರಡುಂ ಡೋಲದೆ ಪರಿವಾಹಿತ ಶಿರದೆ ಕೇಳ್ ಮದ ಸ್ಖಲಿತಮಕ್ಕುಂ (ಲಾಸ್ಯರಂ. ೪-೦೬೪). [ಸಂ.]

**ಮದಸ್ಥಾನ** (ನಾ). ಅಮಲುಬರುವ ಸ್ಥಳ : ಹೆಂಡದಂಗಡಿ : ಮಡ ವಾನೆ : "ಶುಂಡಾ, ಪಾನಂ, ಮದಸ್ಥಾನಂ....೩ ಮದ್ಯಪಾನ ಮಾಡುವ ಮನೆಯ ಪೆಸರು, ಗಿಡ್ಡಂಗಡಿ" (ಸಿಡ್ಯಾಂತಿ. ೩೦೬). [ಸಂ.]

**ಮದಹಸ್ತಿ** (ನಾ). = ಮದರದನಿ : ಮದಹಸ್ತಿಯಿಱಿವ ಘಾಯಂಗಳ . . . ಜೇಡನಾಯಕರು ನೆರೆದರು (ಹಕಶಾ. ೩-೩) ; ಮದಹಸ್ತಿಬಲಯುತಂ ಹಸ್ತದಿಂ ಮಸ್ತಕದಿಸಂತೆ ಪದಗದೆಯಿಂದೆ ತಳ್ಳಿದನ್ (ಶ್ರೀರಾಮಪ. ೨೮೧-೮೦). [ಸಂ. ಮದಹಸ್ತಿನ್]

**ಮದಾಂಧ** (ಗು). ೧. ಮದದಿಂದ ಕುರುಡಾದ ; ಮತ್ತಿನಿಂದ ಮುಂದು ಗಾಣದ : ಕುರುಕುಳನಂದನಂ ಪವನನಂದನನೆಂಬ ಮದಾಂಧಗಂಧ ಸಿಂಧುರಮೆ ಕಱುತ್ತು ಪಾಯೆ ಪಡಲಿಟ್ಟವೊಲಾದುದು (ಕಂಪಶಾ. ೦೩-೧೨) ; ಅರಸಂ . . . ಮದಾಂಧಸಿಂಧುರಮನೇಱಿ ಚತುರಂಗಬಲಮನೊಂದು ಮಾಡಿಕೊಂಡು ನಿಂದು (ಕಂತಕಂ. ೨೩೩-೮). (ನಾ). ೨. ಗರ್ವದಿಂದ ವಿವೇಕವನ್ನು ಕಳೆದುಕೊಂಡವನು : ದಶಕಂಧರಂ ಮದಾಂಧಂ ಧರ್ಮಾ ನುಗನಲ್ಲಂ (ಕಂರಾಮಾ. ೦೦-೦೭೦) ; ಈ ಮದಾಂಧನನೊಯ್ದು ಕೆಡಹುವ ಭೂಮಿಪತಿಯಂಘ್ರಿಯಲಿ (ಕುವ್ಯಾಅ. ೨೨-೩೪). [ಸಂ.]

**ಮದಾಂಧಕ** (ನಾ). = ಮದಾಂಧ ೨ : ಅಱಿದಱಿದುಂ ಮತಿಭ್ರಮಿತನಾದ ಮದಾಂಧಕನಾನೆ ಕಂಡುಕಂಡೆಱಗದ ಮೂಳನಾನೆ ಕುಱಿವಾನಿಸನಾನೆ (ಕಬಕಂ. ೩-೦೯). [ಸಂ.]

**ಮದಾಂಧತೆ** (ನಾ). ಸೊಕ್ಕಿನಿಂದ ಉಂಟಾದ ಅವಿವೇಕ : ಕರಿ ಕೇಸರಿಯಂ ಕೆಣಕಿದ ಪರಿಯಂ ಪರುಟವಿಸದಿರ್ ಮದಾಂಧತೆಯಿಂದೆ (ಕಬಕಂ. ೪-೨೯). [ಸಂ. ಮದಾಂಧತಾ]

**ಮದಾತ್ಯಯ** (ನಾ). ಮದ್ಯಪಾನದಿಂದುಂಟಾಗುವ ಒಂದು ಬಗೆಯ ರೋಗ : ಮದಾತ್ಯಯವೆಂಬ ರೋಗವು ದೋಷತ್ರಯದಿಂದಲೂ, ರಕ್ತದ ಹೆಚ್ಚುಗೆಯಿಂದಲೂ, ಮದ್ಯಪಾನದಿಂದಲೂ, ವಿಷಪ್ರಯೋಗದಿಂದಲೂ ಉಂಟಾಗಿಕ್ಕುಂ (ಕಕಪ್ಯ. ೨೬೦). [ಸಂ.]

**ಮದಾನೇಕಪ** (ನಾ). = ಮದರದನಿ : ಆ ಕಾನನಮಂ ಪುಗುತಂದು ಮದಾನೇಕಪದೊಂದು ಪಿರಿಯ ಕಡುಪಂ ಕಂಡಂ (ಕಂರಾಮಾ. ೦೦-೦೩೮). [ಸಂ.]

**ಮದಾವ್ಮ** (ನಾ). ಒಬ್ಬಾತನ ಹೆಸರು : ಇದಾ [ಪ]ಡದೊರ್ . . . ಕೊಡಲ್ಸೆಟ್ಟಿಯರಾ ಮದಾವ್ಮನ್ ವಿಜ[ಸೆ]ಟ್ಟಿಗರಾ ಧರ್ಮ್ಮನಾಯಗನ್ (ಎಕ. IX, ೨೩-೧೨ ; ಹು. 800). [ ಮದ$_1$ + ಅವ್ಮ$_1$ ]

**ಮದಾಲಸ** (ಗು). ೧. ಮಾದಕವಸ್ತು ಸೇವನೆಯಿಂದ ಜಡವಾದ. ೨. (ಯೌವನದ) ಸೊಕ್ಕಿನಿಂದ ಜಡವಾದ, -ಮಂದವಾದ : ಅಮಿತಮದಾಲಸಾಂಗಜಮತಂಗಜಮೋ ನಡೆಗೊಂಡನಂಗ ಜಂಗಮಲತೆಯೋ . . . ಕಾಂತೆ ಬಸಂತಕಾಂತೆಯೋ (ಶಾಂತಿಪು. ೩-೧೯) ; ಮಿಾಂಗಳ ನೊರ್ಮೆ ಕೈರವಮನೊರ್ಮೆ ಚಕೋರಮನೊರ್ಮೆ . . . ಬಾಲೆಯ ಮದಾಲಸಮುಗ್ಧವಿಶಾಲಸಸ್ಮಿತಾಪಾಂಗಮುಗುಟ್ಟುವು (ಮಲ್ಲಿ ೬-೭೦). (ನಾ). ೩. [ನಾಟ್ಯ] ಮೂವತ್ತೈದು ದೇಶೀಯಭೌಮ ಚಾರಿಗಳಲ್ಲಿ ಒಂದು ; "ಕಾಲುಗಳನ್ನು ಒಂದೇ ಕಡೆ ಸ್ಥಿರವಾಗಿಡದೆ ಮತ್ತನಂತೆ ಚಲಿಸುವುದು" (ಲಾಸ್ಯರಂ. ೩೨೨ ಗದ್ಯಾನುವಾದ) : ಎರಡು ಪದಂಗಳ್ ನಿಲ್ಲದೆ ಕರ ಮದಿಸಿದನಂತಿರಲ್ ಮದಾಲಸನಾಮಂ (ಲಾಸ್ಯರಂ. ೬-೭೬). [ಸಂ.]

**ಮದಾಳಿ** (ನಾ). (ಮಕರಂದ ಪಾನದಿಂದ) ಕೊಬ್ಬಿದ ತುಂಬಿ : ಸೋರ್ವ ಸೊನೆಯುಂ ಸರಿಯೆಂದು ಮದಾಳಿಮಾಳೆಯುಂ ಕಾರ್ಮುಗಿಲೆಂದು . . . ಮಯೂರಕೋಟಿಗಳ್ ಕಾರ್ಮುಕಮೆಂದು ನರ್ತಿಸುವುವು (ಸುಕುಮಾ. ೧೦-೩೮). [ಸಂ. ಮದಾಲಿ]

**ಮದಿಕ** 'ಮದ್ದಿಕ' ನೋ.

**ಮದಿಪು** (ನಾ). ೧. ಗೌರವ ; ಮರ್ಯಾದೆ : ಸ್ಥಾನಸ್ಥಾನದಿ ನಮಗೆ ಮದಿಪು ಮಾನ ಕೊಟ್ಟರು ಚೌಟರು (ಕುಪು. ೧೮-೧೩). ೨. ಬೆಲೆ ; ಕಿಮ್ಮತ್ತು : ನಾಡಿಗೊಡೆಯನು ಚಂದ್ರನಾಥನು ಬೀಡುಮದಿಪನು ಇದು ವನು (ಕುಪು. ೨೦-೩೮). [ದೇ. ॥ ತಮಿ. ಮಲ. ಮತಿಪ್ಪು ; ತುಳು. ಮದಿಪು ; ತೆಲು. ಮದಿಂಪು, ಮತಿಂಪು]

**ಮದಿಮಾಳು** (ನಾ). ಮದುವೆಹೆಣ್ಣು ; ವಧು : ನಿಮ್ಮೊಡನೆ ಮಾತ ನಾಡುತ್ತ ಕುಳಿತರೆ ಮಂಗು ಮದಿಮಾಳಾದೀತು (ಚಾರ್ಗ. ೯).

[ ← ತುಳು. ಮದ್‍ಮಾಳ್ ]

**ಮದಿರ**$_1$ (ನಾ). [ನಾಟ್ಯ] ಸಂಚಾರಿಭಾವಸೂಚಕವಾದ ಇಪ್ಪತ್ತು ಬಗೆಯ ನೋಟಗಳಲ್ಲಿ ಒಂದು ; ಇದು ತರುಣ, ಮಧ್ಯಮ ಮತ್ತು ತೀವ್ರ ಎಂದು ಮೂರುವಿಧವಾಗಿವೆ : ಒರ್ದಿರ್ದ ಕಂಗಳತಿ ವಿಸ್ತರವಾಗದ ನೋಟಮುರ್ಬಿದಾಲಿಗಳಿಂದಂ . . . ಕಿಱುಸೊಕ್ಕಿನಿಂದೆ ರಂಜಿಸೆ ಮದಿರಂ (ಲಾಸ್ಯರಂ. ೩-೫೯). [ಸಂ. ಮದಿರಾ]

**ಮದಿರ**$_2$ (ಗು). ೧. ಅಮಲೇರಿಸುವ ; ಮದವೇರಿಸುವ : 'ಮದಿರಾಕ್ಷಿ' ಪರಾ. ೨. ಸಂತೋಷಕರವಾದ. (ನಾ). ೩. ಕೆಂಪುಹೂವುಗಳನ್ನು ಬಿಡುವ ಒಂದು ಬಗೆಯ ಖದಿರವೃಕ್ಷ. [ಸಂ.]

**ಮದಿರಾಕ್ಷಿ** (ನಾ). ನೋಡಿದವರಿಗೆ ಮತ್ತೇರಿಸುವಂಥ ಕಣ್ಣುಗಳುಳ್ಳವಳು ; ಸುಂದರವಾದ ಕಣ್ಣುಗಳುಳ್ಳವಳು : ನಿಧಿಯಂ ಕಂಡಂತೊಳಗಿಡೆ ಮದಿರಾಕ್ಷಿಯನಿಂದ್ರನಿಡಿದ ನನೆಗಣೆಯಿಂ ತೀವಿದ ದೊಣೆಗೆಣೆಯಾಗೆರ್ದೆ ಕೋಟ್ಟುದಿಗೊಳೆ ಸೈರಿಸದುಪೇಂದ್ರನವಳೊಳ್ ನೆರೆದಂ (ಶಾಂತಿಪು. ೬-೭೩) ; ಮದಿರಾಕ್ಷಿ ನಿನ್ನೊಳಲ್ಲದೆ ಹೃದಯ ಪೆರಳಲ್ಲಿ ಸೇರದಿರ್ಪುದು (ಶಾಕುಂತ. ೯೦-೭೦). [ಸಂ. ಮದಿರಾಕ್ಷೀ]

**ಮದಿರಾಪಾಂಗ** (ನಾ). ೧. ಮೋಹಕವಾದ ಕಡೆಗಣ್ಣೋಟ. ೨. = ಮದಿರ$_1$ : ಮದಿರಾಪಾಂಗಂ ತ್ರಿವಿಧಮನೊದವಿರ್ಕುಂ ತರುಣಮೆಂದು ಮಧ್ಯಮಮೆಂದುಂ ಪುದುಗೊಂಡ ತೀವ್ರಮೆಂದುಂ ಸುದತೀ ಕೇಳ್ ಬೇಱೆ ಬೇಱೆ ಭಾವಮೆನಿಕ್ಕುಂ (ಲಾಸ್ಯರಂ. ೩-೪೮). [ಸಂ.]

**ಮದಿರಾಪಾನ** (ನಾ). ಅಮಲೇರಿಸುವ ಮದ್ಯ ಮುಂತಾದ ಪಾನೀಯ ಗಳ ಸೇವನೆ : ಮದಿರಾಪಾನಕ್ಕೆ ಮೆಯ್ದೂರದೆ . . . ಏಕಾಂತದೊಳ್ ನಿಲ್ಲದಿರಾಂ ಬರ್ಪನ್ನವಾಯಂ ನಿನಗಿದು ವಿಗತಾಪಾಯಮಪ್ಪೊಂದುಪಾಯಂ (ಜಗ. ೧೩-೧೨೬). [ಸಂ.]

**ಮದಿರಾಮದ** (ನಾ). ಮದ್ಯದ ಅಮಲು : ಆಮಿಾಳನಮಂ ಕಣ್ಗಳೊಳಾ ಮನದೊಳಗೊಸಗೆಯುಂ ಶರೀರದೊಳೆತ್ತಂ ರೋಮಾಂಚಕಂಚುಮಂ ಮದಿರಾ ಮದವಾಗಿಸೆ ತೆಗಟ್ಟನಾಕೆಯ ನುಡಿಯೊಳ್ (ಕವಿರಾ. ೩-೯) ; ಹೃದಯ ಪ್ರಮೋದಮದಿರಾಮದದಿಂ ಮೆಯ್ಮಱೆದು ಮೇಲುದಂ ಮಱೆ ದಿರ್ದಡಿಧುದು ಪಱೆ ಮಾಣ್ದೊಡಂ ಮಾಣದೆ ಮೆಚ್ಚಿದ ತೆಱದಿನಾಪ್ತ ವೃದ್ಧಕದಂಬಂ (ಶಪ್ಪು. ೯-೩೬). [ಸಂ.]

**ಮದಿರಾರಸ** (ನಾ). ಹೆಂಡ ; ಸುರೆ : ಇಂತು ಶೌಂಡಿಕರೆಲ್ಲರುಂ ಶುಂಡಾ ಸಾಮರ್ಥ್ಯಮಂ ಕೊಂಡಾಡುತ್ತುಮಿರ್ದನವರತಂ ಮದಿರಾರಸದ ಮದವೇಱೆ . . . ಮತಿಗೆಟ್ಟು ಕಳವಳಿಸುತ್ತಿರಲ್ (ಪಾರಪು. ೧೦-೧೩೯ ವ). [ಸಂ.]

**ಮದಿರೆ**$_1$ 'ಮದುರೆ' ನೋ.

**ಮದಿರೆ**$_2$ (ನಾ). ೧. ಅಮಲೇರಿಸುವ ಮದ್ಯ ಮುಂತಾದ ಪೇಯ : "ಮೈರೇಯಮಾಸವಂ ಮಧು ಮಾಧವಂ ಸೀಧು ಸೀರೆ ಸುರೆ ಮದಿರೆ . . . ಕಲ್ಯಮೆನೆ ಕಳ್ಳೆನಿಕ್ಕುಂ" (ಮಂಗರಾ. ೬೩-೮) ; ನೀಂ ಕುಡಿವ ಮದಿರೆ ನೀನೊತ್ತು ತಿರುವಧರಂ ಮುಗಿಪೊಲೆಲ್ಲಂ ಮುಗಿಯೆ ನಾಚ್ಚಿಯಲಿ, ಬೆದರಂ ಮಾಣ್ದದಂ ನಂಬು (ಗೀ೭೦. ೧೨೦-೩೩). ೨. = ಮದಿರ$_1$ : ಒಂದಿನಿಸು ಬಾಗಿದೆವೆಯುಂ ಸಂಧಿಪ ತಡಬಡಿಸಿ ನೋಳ್ಪ ತಿರುಗುವ ತಾರೆಯನೊಂದುವ ಕಣ್ಮಧ್ಯ ಮುಮದು ಬಂದೆಸೆದೊಡೆ ಮಧ್ಯಮೆಂಬ ಮದಿರೆಯೆನಿಕ್ಕುಂ (ಲಾಸ್ಯರಂ. ೩-೪೦). [ಸಂ. ಮದಿರಾ]

**ಮದಿರೇಕ್ಷಣ** (ನಾ). ಮಾದಕವಾದ ನೋಟ : ಕುಣಿಸಿದತ್ತಲ್ಪಲಾಂಗೂಲಮಂ ಶಕ್ರಧನು ರಮಣೀಯಮಂ, ವಿಸ್ಮಯೋತ್ಫುಲ್ಲಮಾಗಲ್ಕೆ ರುಚಿರಾನನಾ ರಾಮದಯಿತೆಯಾ ಮದಿರೇಕ್ಷಣಂ (ಶ್ರೀರಾಮಾ. ೨೩೨-೧೦೩). [ಸಂ.]

**ಮದಿರೇಕ್ಷಣೆ** (ನಾ). ಮೋಹಗೊಳಿಸುವ ಕಣ್ಣುಗಳುಳ್ಳವಳು ; ಸುಂದರಿ : ಅಪ್ಸರಾಂಗನಾನ್ವಯದೊಳ್ ಪುಟ್ಟಿದಳಲ್ಲಿ ಮದನಮದವತಿ ಮದಿರೇಕ್ಷಣೆ ಮದಿರೆಯೆಂಬ ಕನ್ಯಾರತ್ನಂ (ಕಾದಂಪೂ. ೯೭೨).

[ಸಂ. ಮದಿರೇಕ್ಷಣಾ]

**ಮದಿರೋನ್ಮತ್ತ** (ಗು). ೧. ಮದ್ಯಪಾನದಿಂದ ಮೈಮರೆತ; ಅಮಲೇರಿದ : ಮದಿರೋನ್ಮತ್ತನಿಳಿಂಪ ಕಿಂಪುರುಷ ಕಾಂತಾರಬ್ಧಸಂಗೀತಮೊಪ್ಪಿದುದಲ್ತೇ . . . ಶ್ರೀರಮ್ಯಹೈಮಾಚಳಂ (ಸಂಕಥಾ. ೭-೭೨). (ನಾ). ೨. ಸೊಕ್ಕಿನಿಂದ ಮೈಮರೆತವನು : ತಮ್ಮುಮನಿಂತಿದಿರುಮನೇನೆಂದಱೆಯರ್ ಮದಿರೋನ್ಮತ್ತರಪೊಲವನಿಪಾಲರುಂ (ಚಂದ್ರಪು. ೧೦-೧೦೭). [ಸಂ.]

**ಮದಿಲ್**, ಮದಿಲ, ಮದಿಲು (ನಾ). ೧. (ಮನೆ ಮುಂತಾದುವುಗಳ ಒಳಭಾಗದಲ್ಲಿ ಕೊಠಡಿ, ಹಜಾರ ಇತ್ಯಾದಿಗಳನ್ನು ಪ್ರತ್ಯೇಕಿಸುವಂತೆ ಸೂರಿನವರೆಗೂ ಕಟ್ಟುವ) ಗೋಡೆ ; ಭಿತ್ತಿ : (*). ೨. ಕೋಟೆ ಮುಂತಾದುವುಗಳ ಸುತ್ತಲೂ (ರಕ್ಷಣಾರ್ಥವಾಗಿ) ಕಟ್ಟುವ ಗೋಡೆ; ಪ್ರಾಕಾರ ; ಪೌಳಿ : ಬಳಸಿದ ಕಂಚಿನ ಮದಿಲ್ಗಳೊಳಗೆ ಮಣಿಮಯ ಭವನಾವಳಿ ತೊಳಗಿ ಬೆಳಗೆ (ಸಂಪಥಾ. ೯-೧೦ ರಗಳೆ) ; ವಸುದೇವನರಮನೆಯ ಮದಿಲಂ ವಿದ್ಯಾಧರಕರಣದಿಂ ಪೊಸಂತಿಲಂ ದಾಂಟುವಂತೆ ದಾಂಟಿ (ಅರ್ಜನೇ. ೩-೧೮ ವ) ; ಅಗುಂಟಿ ಮದಿಲ್ ಬಾಗಿಲ್ ಬಿಯ್ಯಗಮೆಂಬಿವಱಿಂದ ಕಾವ ಕಾಪೇವುದೊ (ನೀತಿಮಂ. ೨-೨೬) ; ಪೊಗೆ ಅದೇನ್ ಕಾಣ್, ತ್ರಿಜಟೆ ? ಏಳುತಿದೆ ಮದಿಲವೊಲ್ ಮುಗಿಲನ್ನೆಗಂ! (ಶ್ರೀರಾಮಾ. ೬೯೮-೧). **ಮದಿಲ** : ೨. ಸುಮ್ಮಾನದಿಂದ ಖೇಚರಿಯರು ಮದಿಲವ ಗಮ್ಮನೆ ಬಂದೇಱಿದರು (ಜ್ಞಾನಸ. ೯-೧೩೯). **ಮದಿಲು** : ೨. ಕರುಮಾಡಗಳನೇಱೆ ಮದಿಲುಗಳನು ಹತ್ತಿ ಮರಗಳ ಕೊನೆಗಳನಡರಿ (ಚಂದ್ರಸಾಂ. ೦೩-೧೦೩) ; ಸುತ್ತ ಬಳಸಿದ ಮದಿಲು ವಾಯುಪಥವನು ಒತ್ತರಿಸುವುದನವರತ (ಅಪಂಕ. ೧-೧೯೦).

[ದೇ. ॥ ತಮಿ. ಮಲ. ಮತಿಲ್ ; ತುಳು. ಮದಿಲು, ಮದುಲು ; ತೆಲು. ಮಮತು, ಮಗುಲು]

ಮದಿಲ್ ' ನೋ.
ಮದಿಲ್ ' ನೋ.
ನಾ). ಕಳ್ಳು ; ಹೆಂಡ ; ಮದ್ಯ : "ಮೈರೇಯಂ . . . ಕಾದಂಬರಿ ಪರಿಸ್ರವಣಿ ಕಲ್ಯಮೆನೆ ಕಳ್ಳಿನಿಕ್ಕುಂ" (ಮಂಗರಾ. ೬೩-೮).
[ಸಂ. ಮದಿಷ್ಠಾ]
ು). ೧. ಅಮಲೇರು : ಮತ್ತಿನಿಂದ ಕೂಡಿರು : ಮದಿಸಿ ಕಾಣದೆ ಮಡುಹಿದ ಗಜೇಂದ್ರಂ ಸತ್ತುದಾಗಳೆ (ಚಕ್ರಪು. ೨೨-೨೦) ; ಮದಿಸಿ ಹವದ ಗಜ ಘರಿಪದವಿಘಾತಿಗೆ ಕೆಡೆವವೊಲು ಕೆಡೆದೊದೆದು ಕೊಂದ ಸಾಕಂಪದಲಿ ಕಳನೊಳಗೆ (ಕೊರಗಾ. ೬-೦೮-೨೬). ೨. ಗರ್ವಿಸು ; ರಿಸು : ಹಿಮನಗಸುತೇಶನು ಮದಿಸಿದಾತನ ಬಗೆಯನಱಿದು (ಚಕ್ರಪು. ೩. [ಗಣಿತ] ಕೂಡಿಸು ; ಸಂಕಲಿಸು : ಬೆರಸು, ಮ ದಿಸು. ಕೂಡು, ಬತಂ ಇಂತಿನಿತುಂ ಕೂಡೂದಕ್ಕೆ ಹೆಸರು (ವ್ಯವಹಾ. ೫).
[ಮದ + —ಇಸು$_3$]
(ಗು). ನನ್ನ ; ನನಗೆ ಸಂಬಂಧಿಸಿದ : ಮದನಂ ಮದೀಯ ಶಮುದಾವಹಂ (ಕಬಿರಾ. ೩-೬೬) ; ಮದೀಯ ಸವಿನಾಹಿತ್ರಮುಂ . . . ಶಿಲ್ಲ (ಕಾದಂಬ. ೩೪೬) ; ಇದು ವಿನೋದವಲೇ ಮದೀಯಾಭ್ಯುದಯ (ಕುಮ್ಮಾ. ೨-೦೮). [ಸಂ.]
ನಾ). (ಕರಾ) ಭೂತಾರಾಧನೆಯಲ್ಲಿ ಭಕ್ತನ ಪರವಾಗಿ ನು ಆಡುವ ಮಾತು : ಭೂತಕ್ಕೆ ಗಗ್ಗರವಿಟ್ಟು ನಂತಾಗ ಭಟ್ಟರು 'ಮದು' ಅಥವಾ 'ನುಡಿಗಟ್ಟು' ಹೀಗಿರುತ್ತದೆ (ದಂಬಿನಾ. ೦೪).
[←ತುಳು. ಮದು]
ನಾ). ೧. ಚೈತ್ರಮಾಸ; ವಸಂತಋತು :" ಮದುವೆನೆ ಚೈತ್ರ" . ೨೦). 'ಮದುರಿತು' ಪರಾ. ೨. ಜೇನುತುಪ್ಪ : "ಮದು— ಜೇನು" (ಕನ್ನಕೋ. ೩೩). [<ಸಂ. ಮಧು]
ನಾ). ಒಂದು ಬಗೆಯ ತೆರಿಗೆ : ಕರಡಿ ಹಳಿಯ ಚತುಸೀಮೆ ದ ಬಿಡುಗಳಿಗೆ ಸಲುವ ಗ್ರಾಮ ೧ ಱ ಮಗ್ಗದೆಱ ಮದು ಭಡಗಿ ಅಸಗ ನಾವಿಂದ ಕುಂಭಾರ ಮಾದೆಗ ಕಯ್ಯಗಾಣ ಎತ್ತುಗಾಣ (s), ಸಂಗಳೂ. ೦೩೨-೪; 1408). [ ? ]
ಯ (ನಾ). ಒಬ್ಬಾತನ ಹೆಸರು : ಕಣ್ಣಮ್ಮಯ್ಯನ ಮಗ ಯ್ಯನುಂ ಮದುಕಮ್ಮಯನುಂ (ಎಕ. X, ಕೋಲಾರ. ೫೭-೯;
[ ? ]
ನಾ). ಒಂದು ಮನೆತನದ ಹೆಸರು (?) : ಬದಿರಿಯರುಮ್ ನುಮ್ ಕೋನಪ್ಪರುಮ್ ಸಾಕ್ಷಿ (ಮೈ.ಆ. ೦೯೦೬; ೦೩-೦೦: 720).
[ ? ]
(ನಾ). ಮದುವೆಯ ಗಂಡು ; ಮದುವಣಿಗ ; ವರ : ಈ ದುವಮಗನ ನಿವಾಸಕ್ಕೆಂದು ಚೊಕ್ಕಮಯ್ಯ ಒಂದು ಅರಮನೆ ಕಟ್ಟಿಸಿದನು (ತವಾ. ೫೮); ಮದುವೆ ಮುಗಿದರೂ ಮದುಮಗನ್ನ ಲ್ಲ (ಗಾದೆ).
ಮುಮಕ್ಕಳು, ಮದವಕ್ಕಳ್, ಮದವಕ್ಕಳು, ಮದುವಕ್ಕಳ್ = ವೆಯಾಗುವ ಗಂಡು ಹಾಗೂ ಹೆಣ್ಣು ; ವಧೂವರರು : ಯ ನಂತರ ಮದುಮಕ್ಕಳನ್ನು ನೆಂಟರಿಷ್ಟರು ಬರಮಾಡಿಕೊಂಡು ವುದು ವಾಡಿಕೆ (ಜಾತಕ. ೫೮); ಪ್ರೇಮದ ಮಾತಿಗೆ ಹೊಸಮದು ಹೊಸ ಅರ್ಥವನು ವಾಚಿಸುವರು (ಇಂಚಾಪ. ೩೭-೭೦); ನೆಂಬ ಮಂತ್ರಿಯುರ್ಕೆವದಿಂದವರ ಪೇಟ್ದು ಮದವಕ್ಕಳಂ ನಿರಾಕರಿಸಿ . ೪೦-೨೫); ಮದವಕ್ಕಳನಿಂದಿದಿರ್ಗೊಳ್ವುದೆಂದು . . . ಪೇಟುವ ೮-೮೭); ಮೆಱೆದರ್ ಲೇಸೆನೆ ಮದುವಕ್ಕಳ್ ಸುದಿಲಾಸದಿ ಮೆಟ್ಟಕ್ಕಿ ಗೂಡೆಗಳೊಳುತ್ಸವದಿಂ (ಉದ್ಭಟ. ೮-೫೮); ಹೋಮಾನಳನಂ ಮದುವಕ್ಕಳ್ ವಿಸುಪ ಲಾಜೆಯಿಂ ಪೂಜಿಸಿದರ್ (ಜಗಪ. ೦೦-೦೩೩).
[< ಮದುವೆ + ಮಗ]
ಮದುಮಗಳ್, ಮದುಮಗಳು (ನಾ). ಮದುವೆಯ ಹೆಣ್ಣು ; ಮದುವಣಗಿತ್ತಿ; ವಧು: ಕಾದಿಪೊಡಲ ಮದುಮಗಳ್ ತೆಣರುತಿಹಳೆಲ್ಲಿ? (ಕಾಂಚರ. ೦೫೩-೩೬೬). ಮದುಮಗ್ಳು : ಮದುಮಗಳ ಕಣ್ಣಿನ ಬಗೀ ಚಂದಿರನ ನಗಿಸುತ್ತ ಹರಿದದ (ನಾದಲ. ೬೪-೦೫); ಮದುಮಗಳ ಕಾಂತಿ ಅವಳ ಮುಖದಲ್ಲಿ ಮಿನುಗುತ್ತಿತ್ತು (ರಂಗಕೋ. ೨೦೯).
[< ಮದುವೆ + ಮಗಳ್]
ಮದುಮಗಳು 'ಮದುಮಗಳ್' ನೋ.
ಮದುಮನೆ (ನಾ). ಮದುವೆಯ ಮನೆ : ತಡೆಯಲ್ಕಾಱದ ಕಣ್ಣೀರ್ ಪೊನಲನ್ ನೋಡುತೆ . . . ಮಸಣದ ಮದುಮನೆ ಪುಗುವಾ ಮಗಳನ್ (ಅಂತಿಗೊ. ೩೭-೭೪೬). [< ಮದುವೆ + ಮನೆ]
ಮದುರಿತು (ನಾ). ವಸಂತಋತು : ಮಕ್ಕಳ ಮುದ್ದುವೆರೆದ ನುಡಿ ಮದುರಿತು ಚೊಕ್ಕಳಕೆಯ ನವಚಂದ್ರಿಕೆಯೆನೆ ಹೃದಯಕ್ಕೆ ವಿಲಾಸಮನೀವುದು ಸತ್ಯಘುರಾಜನ ಸವಿವಾತು (ಜಮೀ. ೧-೭೪).
[ಮದು$_2$ + ರಿತು (< ಋತು$_1$]
ಮದುರೆ, ಮದಿರೆ$_1$ , ಮಧುರೆ$_1$ (ನಾ). ಹಿಂದೆ ಪಾಂಡ್ಯರ ರಾಜಧಾನಿಯಾಗಿದ್ದ ಒಂದು ಊರಿನ ಹೆಸರು ; P ಈಗಿನ ತಮಿಳುನಾಡಿನ ಮಧುರೆ : ದಕ್ಷಿಣಭಾಗದಾ ಮದುರೆ ಉಯ್ಯನಿತಾವ × ರಾಪದೆ ಪಾವು ಮುಟ್ಟಿದೋನ್. . . ರಮ್ಯಸುರಲೋಕಸುಕಕ್ಕೆ ಭಾಗಿ (ಎಕ. II (R). ೨೪-೦; ಸು. 700). ಮದಿರೆ$_1$. ಮಧುರೆ$_1$ : ಧುರದೊಳು ಮಧುರೆಯ ತಿರುಮಲ ನಾಯಕನನುರು ವಾಹಿನಿಯ ಮುಱಿದಿಱಿದು ಹರುಷದೆ ಪಿಡಿದಾನೆಗಳ ಶಾಲೆ ಮೆಱೆದುವು (ಕಂಠೀ. ೬-೨೯).
ಮದಿರೆಗೊಂಡ = ಮದಿರೆಯೆಂಬ ಪಟ್ಟಣವನ್ನು ಗೆದ್ದವನು; ಒಂದು ಬಿರುದು : ಸ್ವಸ್ತಿಶ್ರೀ ಮದಿರೆಗೊಣ್ಡ ಕೊಪ್ಪರಗೇಶರಿವರ್ಮ್ಮಂಗೆ ಪರಿಷವಿರ್ಪ್ಪತ್ತೊಮ್ಬತ್ತಱೊಳ್ಪಯ್ದ ಕೂರ ರಾವಿನಾಡ ಮಾರ್ಯ್ಯಮ್ಮ ಮಮ್ಮ××ಗಣಿಪ ರಾಮ ತುಱುವನಿಕ್ಕಿಸಿ ಅೞ್ಚಿ ಸತ್ತನ್ (ಎಕ. X, ಮುಳಬಾ. ೨೦೩-೦; 934). [ ← ತಮಿ. ಮತುರೈ ]
ಮದುರೆಗಿಳ್ (ನಾ). ಒಂದು ಊರಿನ ಹೆಸರು: ಮದುರೆಗಿಳಾ ವೆಲ್ಲ ಸಮ್ಮಂಗೆ ಕೊಟ್ಟೋದು ಕಣ್ಣುಗದಯ್ಯಳ ಕಟನಿಯುಂ (ಎಕ. X, ಮುಳಬಾ. ೪೦-೬; 767). [ ? ]
ಮದುವಣ (ನಾ). ಮದುವೆಯಂ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ: ಪದಿಕೆ ಸುಂಬಳ ಉಳುವರಿ ಆ ಮದುವಣ ಮುರ ಮೊಲಕ್ಕಮುಬಲಾಳ ದೇವನಾಣೆ ಕಾಹು ಚಂದ್ರಾರ್ಕ್ಕತಾರಂಬರಂ (ಮೈ.ಆರ. ೦೯೩೮, ೪೨-೦೨; 1036). [ < ಮದುವೆ + ಪಣ$_3$ ]
ಮದುವಣಗಿತ್ತಿ 'ಮದುವಳಿಗಿತ್ತಿ' ನೋ.
ಮದುವಣಿಗ 'ಮದುವಳಿಗ' ನೋ.
ಮದುವಣಿಗತನ, ಮದವಣಿಗತನ (ನಾ). ಮದುಮಗನಾಗಿರುವಿಕೆ : ದೇವೋತ್ಸುಂಗಂ . . . ಮದುವಣಿ[ಪಾಠಾಂ. ಮದವನಿ]ಗತನಮುನುಱ ನಟಯಿಸುತ್ತಂ (ಗಿರಿ. ೦೦-೯೫). ಮದವಣಿಗತನ : ಮದವಣಿಗತನದ ದೇಸೆಯಿಂ ವಿಲಾಸಂಬಡೆದ ಬಾಲಸಹಕಾರನಂದನಂ ವನಪಾಲಂ ನೃಪಾಲ ಪರಿಜಾತನನಿತ್ತಲವಧಾರಿಸಿಮೆಂದು ತೋಱೆ (ಅಪಂಪು. ೭-೬ ವ).
[ ಮದುವಣಿಗ ( < ಮದುವಳಿಗ ) + — ತನ ]

**ಮದುವಳ್** 'ಮದೆವಳ್' ನೋ.

**ಮದುವಳ** (ನಾ). ಮದುವೆಯ ಹುಡುಗ ; ವರ : 'ಮದುವಳಿಗ' **ಪರಾ.** [ < ಮದುವೆ + — ವಳ ]

**ಮದುವಳಿಗ**, ಮದವಣಿಗ, ಮದವಳಿಗ, ಮದುವಣಿಗ (ನಾ). = ಮದುಮಗ : ಮದುವೆಗೆ ಕೂಡಿದ ಬಂಧುಗಳೆಲ್ಲರು ಮದುವಳಿಗನ ಮದುವಳಿಗಿತ್ತಿಯ ಕಾಣದೆ ಕದನವಾಯಿತ್ತು ಮದುವೆಯ ಮನೆಯಲ್ಲಿ (**ಪೋಲವಾ. ೯೦-೩೭೦**); ಈ ಮದಹಸ್ತಿಯನೀ ಹಳುವಿನೊಳೇಱದಾ ಮಹಿಮನೆ ನಿನ್ನ ಸುತೆಗೆ ಪ್ರೇಮದ **ಪೊಸಮದುವಳಿಗನಾಗುವನು** (**ನೇಮಿಸಂ. ೯-೨೬**); ಚಂದ್ರಹಾಸ. . . ಒಪ್ಪುವ ಬಾಸಿಗದ ಮದುವಳಿಗನಾಗಿದ್ದ (**ಜೈಮಿ. ೦೬೯**). **ಮದವಣಿಗ :** ಆ ವಿಭು ಜಿನಚಂದ್ರಂ ಲಕ್ಷ್ಮೀಮತಿಯುಂ ಮದುವೆನಿಂದು ಪೊಸಮದವಣಿಗಂ ದೇವೇಂದ್ರನ ಶಚಿಯ ವಿಳಾಸಾವಿಷ್ಕೃತ ವಿವಿಧ ವಿಭವಮಂ ಮಸುಳಿಸಿದಂ (**ಶಾಂತಿಪು. ೬-೦೨೦**); ಮದವಣಿಗನಿಲ್ಲದೆ ದಿಬ್ಬಣಂ ಪೋಪೆನೆಂಬಂತೆ (**ಧರ್ಮಾಮೃ. ೯-೫೦**); ಪೊನ್ನದಳವಡರಿದ ಮದವಣಿಗನ ಮುಂದೆಯ್ದುವ ನೃಪತಿಲಕರ ಪಲವು ಕೊಡೆಯಾಗಸಮಂ ಮುಂದಲಿಸುತ್ತಂ ನಡೆತರೆ (**ಜಗುಕಾ. ೬-೨೬**). **ಮದವಳಿಗ :** ಮದವಳಿಗನಿಲ್ಲದೆ ಮದುವೆಯಂ ಮಾಡುವೆನೆಂಬ. . . ಪೆರ್ಗಾವಿಲನಂ ಪೋಲ್ತುಂ (**ಧರ್ಮಾಮೃ. ೫-೦೦೬ ಅಣು**): ಲಿಂಗವೆ ಮದವಳಿಗನಾದ ನಾನು ಮದವಳಿಗೆ[**ಪಾಠಾಂ.** ಮದವಣಗಿತ್ತಿ]ಯಾದೆನು (**ಮಹಾದೇ. ಬ. ೦೦೩-೨೫೬**) ; ನಮ್ಮ ನಾದನಿ ಮದವಳಿಗ ನೀನಾದರೊಡಹುಟ್ಟಿದನು ನೀನಹೆಯೆನಗೆ (**ಕುಮಾ.ಠ. ೨೨-೧೭**) ; ಎಸೆವ ಬಾಸಿಗದ ಮದವಳಿಗನಾಗಿರ್ದಂ ಕುಳಿಂದಜಂ (**ಕೈವಲ್ಯ. ೩೦-೫೯**). **ಮದುವಣಿಗ :** ಹಸೆಯ ಮೇಲೆ ಮದುವಣಿಗನ ತಂದು ನಿಲಿಸಲೊಡನೆ ಶಶಿವದನೆ ಬಂದು ಕೈವಿಡಿದಳು (**ಅವತಂ. ೨೦-೮೬**) ; ಮದುವಣಿಗನಾದ ಕುವರ ಹರುಷದಿ ಚಿತ್ರಮಂಟಪದ ನೋಡುತ್ತೈತರಲು (**ಸ್ತ್ರೀಧರ್ಮ. ೨೦-೨೦**) ; ಇವನು ಯಾರೋ ಮೆಲ್ಲಗೆ ಮದುವಣಿಗನ ಹಾಗೆ ಬರುತ್ತಿದ್ದಾನೆ (**ಡಾಕ್ಟರು. ೯೨**). [ ಮದುವಳ್ ( < ಮದೆವಳ್ ) + — ಇಗ ]

**ಮದುವಳಿಗಿತ್ತಿ**, ಮದವಣಿಗಿತ್ತಿ, ಮದವಳಗಿತ್ತಿ, ಮದುವಣಗಿತ್ತಿ, ಮದುವಣಿಗಿತ್ತಿ (ನಾ). ೧. ಮದುವೆಯ ಹೆಣ್ಣು ; ವಧು : ಮದುವಳಿಗನ ಮದುವಳಿಗಿತ್ತಿಯ ಕಾಣದೆ ಕದನವಾಯಿತ್ತು ಮದುವೆಯ ಮನೆಯಲ್ಲಿ (**ಪೋಲವಾ. ೯೦-೩೭೦**). **ಮದವಣಿಗಿತ್ತಿ:** ೧. ಮೊದಲ ದಿನದ ಮದವಣಿಗಿತ್ತಿಯಂತೆ ಕಾವೇರಿ ಮಾಸ್ತರ ಸನಿಯದಲ್ಲಿ ಕುಳಿತಳು (**ಕಾವೇರಿ. ೦೦೯**). **ಮದವಳಗಿತ್ತಿ :** ೧. ಮದವಳಿಗ ಮದವಳಗಿತ್ತಿಯು ಮುಟ್ಟದೆ . . . ನೋಡುತ್ತ ಬಟ್ಟಬಯಲಾಯಿತ್ತು (**ಪೋಲವಾ. ೧೯೬-೬೩೬**). **ಮದುವಣಗಿತ್ತಿ :** ೧. ಗುಂಡಮಬ್ಬೆ ಮದುವಣಗಿತ್ತಿಯಂತೆ ಸಿಂಗರಿಸಿಕೊಂಡಳು (**ದಾಸಕಂ. ೦೫೬**): ನರ್ಸ್ . . . ಮದುವಣಗಿತ್ತಿಯಂತೆ ಶೃಂಗರಿಸಿಕೊಂಡಿದ್ದಳು (**ಬೀಸದ. ೯೯**). ೨. ಹೆಂಡತಿ : ಕನಕವರ್ಷನು ಮಾವನ ಮನೆಯಲ್ಲಿ ಏಳುದಿನವಿದ್ದು ತನ್ನ ಹೊಸಮದುವಣಗಿತ್ತಿಯೊಡನೆ ರಾಜಧಾನಿಗೆ ಹಿಂತಿರುಗಿದನು (**ಕಸಂ. ೦೫೬**). **ಮದುವಣಿಗಿತ್ತಿ :** ೧. ಹೊಸಮದುವಣಿಗಿತ್ತಿಯಾದ ನಿನಗೆ ಮನವೊಪ್ಪುವಂತೆ ಧರಿಸಲು ಒಳ್ಳೆಯ ಒಡವೆಗಳನ್ನೂ ಸೀರೆಗಳನ್ನೂ ತರುವೆನು (**ಕಬಿ. ೯೯**). [ಮದುವಳಿಗ + — ಇತ್ತಿ]

**ಮದುವಳಿಗೆ**, ಮದವಣಿಗೆ, ಮದವಳಿಗೆ (ನಾ). ೧. = ಮದುವಳಿಗಿತ್ತಿ ೧: ಮದುವಣಿಗನಾರೋ ಮದುವಳಿಗೆ ಯಾರೋ ಮದುವೆಯ ನಡುವೆ ಮರಣ ವಡ್ಡಬಿದ್ದಿತ್ತು (**ಅವತಂ. ೦೩೬-೬೨೯**); ನಾಂದೀಮುಖದೊಸಗೆಗೆ ಕಜ್ಜಿಯ್ಯ ದೆಂದು ಮದುವಳಿಗೆಯಲ್ಲಿಗಟ್ಟದೊಡೆ (**ಬಂಧಂ. ೯-೬ ವ**). **ಮದವಣಿಗೆ :** ೧. ಮದವಣಿಗೆಯುಂ ಕಂಡು ಮದುವೆಗೊಡಂಬಡುವಂತೆ (**ಧರ್ಮಾಮೃ. ೦೯-೧೩೦**). ೨. ಹೆಂಡತಿ ; ಪತ್ನಿ : ಯಿಾತನ ಮದವಣಿಗೆ ಚಿಂನಮಾಂಬಾ (**ಎಕ. XVI. ಶಾಪುಗ. ೦೦೦-೫; 1653**). **ಮದವಳಿಗೆ :** ೧. ಪೊಸಮದವಳಿಗೆಯಪ್ಪುದಱಿಂ ತಾಡಿಸಲಿವೇೞ್ಕುಮೆಂದು ನೆಱೆಯೆ ಪಸದನಂಗೊಳಿಸೆ (**ಶಂಕಚಾ. ೩-೯೬ ವ**) ; ಐದುಮಾನವ ಕುಟ್ಟಿ ಒಂದುಮಾನವ ಮಾಡು ಕಂಡಾ ಮದವಳಿಗೆ ಇದು ನಮ್ಮ ಬಾಳುವೆ ಮದವಳಿಗೆ ಇದು ನಮ್ಮ ವಿಸ್ತಾರ ಮದವಳಿಗೆ (**ಜಸವ. ೯೬೬**); ಮದುವೆಯಾಯಿತು ಬಲನ ಜೀಯದಂದದಲಿ ಪೂಡಿದ ರಥವನೇಱಿಸಿ ಮದವಳಿಗೆ ಸಹಿತರ್ಜುನನ ಕಳುಹಿದನು ಮುರವೈರಿ (**ಕುಮಾ.ಠ. ೦೯-೩೯**). ೨. ಆರಾಧ್ಯರು ಸಂಗಯ್ಯ ಆರಾಧ್ಯರ ಮದವಳಿಗೆ ಬೊಪ್ಪವ್ವೆ (**ಎಕ. VII. ಹನ್ನಗಿ. ೩೨-೨೯೯; 1050**); ನಾಗಶರ್ಮನ ಮದವಳಿಗೆ ತ್ರಿವೇದಿ ಬನದೊಳಗಣ ನಾಗರಂ ಪೂಜಿಸಲು . . . ಬರಲ್ (**ಧರ್ಮಶ್ರೀ. ೬-೨೬ ವ**) ; ಪೊಸಮದವಳಿಗೆಯ ರತಿಯಲ್ಲಿ ಜಾಡ್ಯ ಝಾಡಿಸಿಹೋಯ್ತು ಗೆಲುವಾಯ್ತು ಮನಕೆ (**ಭರತ. ೯೦-೦೬೫**). [ ಮದುವಳಿಗ + — ಎ₂ ]

**ಮದುವಾಸು** (ನಾ). ಮದುವೆಯಾದ ನಂತರ ನಿಷೇಕಕ್ಕೆ ಸಿದ್ಧಗೊಳಿಸಿದ ಹಾಸುಗೆ : ಇಲ್ಲೀಗಳ್ ಬಂದನಿದೋ ಹಯ್‌ಮೋನ್ . . . ತನ್ನಿನ್ ಕವರ್ದ್ದು ಮದುವಾಸಿಂಗೆ (**ಅಂತಿಗೂ. ೨೯-೫೯೨**).

[ < ಮದುವೆ + ಪಾಸು₂ ]

**ಮದುವಿ** ' ಮದುವೆ ' ನೋ.

**ಮದುವೆ**, ಮದುವಿ (ನಾ). ಗಂಡು ಹೆಣ್ಣನ್ನು ಗಂಡಹೆಂಡಿರೆಂದು ಘೋಷಿಸುವ ಒಂದು ಧಾರ್ಮಿಕವಿಧಿ ಮತ್ತು ಸಮಾರಂಭ ; ವಿವಾಹ ; ಪರಿಣಯ ; ಲಗ್ನ : "ಉಪಯಾಮಃ . ಪರಿಣಯನಂ, ಪಾಣಿಗ್ರಹಣಂ, ವಿವಾಹಃ. ಉದ್ವಾಹಃ — ಈ ೫ ಮದುವೆ" (**ಹಲಾಯು. ೮೦-೩೯೨**) ; ಉತ್ತಮಕುಲದವರ್ಗಳ್ಗೆ ಕುಲಜರಲ್ಲದವರೊಡನೆ ಮದುವೆಯೊಳ್ ತೊಟ್ಟ ನಣ್ಪುಗಳಕ್ಕುಂ (**ವಡ್ಡಾರಾ. ೮೬-೦೬**) ; ಮದುವೆಯ ಮಾಡಿದರು ನಮ್ಮವರೆನ್ನ ಮದುವೆಯ ಮಾಡಿದರು (**ಮಹಾದೇ. ಬ.೩೫-೬೬**); ಕಮಲಮುಖಿಯರ ಮೂವರನು . . . ಭೀಷ್ಮನು . . . ತಮ್ಮಂಗೆ ಮದುವೆಯ ಮಾಡಲನುವಾದ (**ಕುಮಾ.ಠ. ೨-೩೩**) ; ಮನೆ ಕಟ್ಟಿನೋಡು, ಮದುವೆ ಮಾಡಿನೋಡು (**ಗಾದೆ**). **ಮದುವಿ :** ಭಾವ ಶಿವದೇವಕ್ಕಿಗಳ್ ಯುವರಾಣಿಯುಂ ಕೈಕೊಣ್ಡು ಪೋಷಿಸಿ ಮದುವಿಯುಂ ಮಾಡಿ (**ಸೌಇಇ. X1-i. ೬೯-೦೭ ; 1029**) ; ಕೂಳಸಮುದ್ರಂ ಪೊಂನಂ ಮಾಣಿಗೆ ಮದುವಿಗೆ ಮಂನಿಸಿ ಕುಡೆ ನಾಮುಮಾಯಿತು ದಾನವಿನೋದಂ (**ಎಕ. VIII, ಸಾಗರ. ೦೦೯-೭೦; 1042**).

**ಮದುವೆ ಮಾಸರಿ** = ಮದುವೆ ಮುಂತಾದ ಸಮಾರಂಭ : ಮದುವೆ ಮಾಸರಿ ಇದ್ದ ದಿನ ಸ್ವಲ್ಪ ಹೆಚ್ಚು ಕಾಸಾದರೆ ಮೂಗಿನವರೆಗೆ ಕುಡಿದೇ ಗುಡಿಸಲನ್ನು ಕಾಣಬೇಕು (**ಕಳಕು. ೯೩**). [ ದೇ.೫ ತಮಿ. ಮತುವೈ; ತುಳು. ಮದುಮೆ; ಕೋತ. ಮದ್ವ್]

**ಮದುವೆಕಂಕಣ** (ನಾ). ವಿವಾಹಕಾಲದಲ್ಲಿ ಮದುಮಕ್ಕಳ ಕೈಗೆ ಕಟ್ಟುವ ಅರಿಸಿನದ ಬೇರನ್ನೊಳಗೊಂಡ ಹಸಿಯ ದಾರ : (**೯**).

[ಮದುವೆ + ಕಂಕಣ ]

**ಮದುವೆಗಂಡು** (ನಾ). ವಿವಾಹವಾಗುವ ಹುಡುಗ ; ಮದುಮಗ ; ವರ : ಮಲ್ಲಣ್ಣನು . . . ರೇಶಿಮೆಯ ನಿಲುವಂಗಿ, ಷರಾಯಿ, ರುಮಾಲುಗಳನ್ನೂ ವಲ್ಲಿಯನ್ನೂ ಧರಿಸಿ ಮದುವೆಗಂಡಿನ ಹಾಗೆ ಓಡಾಡುತ್ತಿದ್ದಾನೆ (**ಮಲ್ಲಿ. ೯೬**). [ ಮದುವೆ + ಗಂಡು ]

**ಮದುವೆಗಟ್ಟಿಪು**, ಮದುವೆಗಟ್ಟುಪು (ಕ್ರಿ). ವಿವಾಹಕ್ಕೆ ಬಂದ ನಂಟರಿಷ್ಟರನ್ನು ಬೀಳ್ಕೊಡು.— ಕಳಿಸು : ಪರಮಜಿನಸವನಜಳನಿರ್ಝರಮುಂ ಸುರಬಲಪಯೋಧಿಕಳಕಳಮುಂ ಮಾಣ್ದರೆ ನೋಡೆ ಬಿನ್ನನಿರ್ದುದು ಸುರಶೈಳಮದೊಂದು ಮದುವೆಗಟ್ಟಿಪಿದ ಮನೆವೊಲ್ (**ಆದಿಪು. ೬-೧೦೬**) ; ತನ್ನಗಲ್ಕೆಯಿಂ ಗಂಧರ್ವರಾಜನಂದನೆಗೆ ಶೀತೋಷ್ಣಭವನಮದು ಮದುವೆ

ಗಟ್ಟಿಪಿದ ಮನೆಯಂತೆ ನಿರ್ವೃತ್ತಮಹೋತ್ಸವಮಾಗಿರ್ದುದು (ಕಾದಂಬ. ೧೯೦). **ಮದುವೆಗಟ್ಟಿಪ್ಪು :** ಜನಪಿತೃಗಳ್ ಜನತನಯಂ ಜಿನೇಂದ್ರ ತಪರೆಲ್ಲರೊಡನೆ ತಳರಲೊಡಂ ಬಿನ್ನನೆಯಾಗಿ ಮದುವೆಗಟ್ಟಿಪಿದ ಮನೆಯಂ ದರಿನಿರ್ದಂದದಯೋಧ್ಯಾನಗರಂ (ಆದಿಪು. ೬-೯೦).

[ ಮದುವೆ + ಕಟ್ಟಿಪ್ಪು$_1$ ]

**ಮದುವೆಗಟ್ಟುಪ್ಪು** 'ಮದುವೆಗಟ್ಟಿಪ್ಪು' ನೋ.

**ಮದುವೆಗುಡು** (ಕ್ರಿ). ವಿವಾಹಮಾಡಿಕೊಡು ; ಲಗ್ನಮಾಡಿಕೊಡು : ಎನ್ನ ಮದುವೆಗುಡುವಂದೇನುವಂ ಬಳುವಳಿಯಂ ಕೊಟ್ಟರಿಲ್ಲ (ಜಾವುಂಶು. ೨೩೮). [ ಮದುವೆ + ಕುಡು$_1$ ( < ಕೊಡು$_1$ ) ]

**ಮದುವೆಗೆಯ್** (ಕ್ರಿ). ಲಗ್ನಮಾಡು ; ಮದುವೆಮಾಡು : ಭೋರನೆ ಮದುವೆಗೆಯ್ದಪಿರೊ (ಐಸಪು. ೩೬-೦೫). [ ಮದುವೆ + ಕೆಯ್$_1$ ]

**ಮದುವೆಚಪ್ಪರ** (ನಾ). ಮದುವೆಯ ಮನೆಯ ಮುಂದೆ ಹಾಕುವ ಹಸಿರುವಾಣಿ ಚಪ್ಪರ : ಮದುವೆಚಪ್ಪರದಲ್ಲಿ ಮದುಮಗನೇ ಜಾಣ (ಗಾದೆ); ಮನೆಯ ಮುಂದೆ ಮದುವೆಚಪ್ಪರವನ್ನು ವಿಶಾಲವಾಗಿ ಹಾಕಿಸಿದ್ದಾರೆ (ಹೂ೨). [ ಮದುವೆ + ಚಪ್ಪರ ]

**ಮದುವೆದೆರಿಗೆ** (ನಾ). ಮದುವೆಮಾಡುವವರು ತೆರಬೇಕಾದ ಹಣ,– ತೆರಿಗೆ: (೧) ಮನೆದೆರಿಗೆ...(೧೭) ಮದುವೆದೆರಿಗೆ. (೧೮) ಉಪ್ಪಿನ ಮೇಳೆ, (೧೯) ಕೌದಿಯ ತೆರಿಗೆ — ಈ ಮೇರೆಗೆ ಹತ್ತೊಂಬತ್ತು ಬಾಬುಗಳನ್ನು ರೈತರಿಗೆ ನಿಷ್ಕರ್ಷೆಮಾಡಿಸಿ (ಮುಹಾವಂ. I, ೦೨೪).

[ ಮದುವೆ + ತೆರಿಗೆ ( < ತೆಱಗೆ ) ]

**ಮದುವೆದೆಱೆ** (ನಾ). = ಮದುವೆದೆರಿಗೆ : ಮಗ್ಗದೆಱೆ ಮದುವೆದೆಱೆ ಪೊಳವಾಱು . . . ಅಡಿದೆಱೆ (ಎಕ. XIV, ಕೃಷ್ಣರಾ. ೬೦-೯ ; 140z).

[ಮದುವೆ + ತೆಱೆ$_3$]

**ಮದುವೆನಾಳ್** (ನಾ). ಮದುವೆಯ ದಿವಸ ; ವಿವಾಹದ ದಿನ : ಸುಗ್ಗಿಯೊಳ್ ಮದುವೆನಾಳ್ (ಕಾಲಿದ. ೭೩-೦೩೩). [ಮದುವೆ + ನಾಳ್$_1$]

**ಮದುವೆನಿಲ್, ಮದುವೆನಿಲ್ಲು** (ಕ್ರಿ). ವಿವಾಹಮಾಡಿಕೊಳ್ಳು ; ಲಗ್ನವಾಗು : ಅರಸಂ ತನ್ನ ಪೆರ್ಗಡೆಗಳಿಂದಂ ಕೂಸಂ ಬೇಡಿ ಪೆತ್ತು ಮದುವೆ ನಿಂದು (ವಡ್ಡಾರಾ. ೧೧೦-೦೪); ಶಾಂತಾತ್ಮ ಮದುವೆನಿಲ್ . . . ಜಗತೀಸಂತತಿ ನಿಲೆ ನಿನ್ನ ಧರ್ಮಸಂತತಿ ನಿಲ್ಕುಂ (ಆದಿಪು. ೬-೦೩) ; ಕುಮಾರನಧಿಕೋತ್ಸಾಹಾವಗಾಹಂ ಪ್ರಭಾವತಿಯೆಂಬಗ್ಗದ ಕನ್ನೆಯಂ ಮದುವೆನಿಂದಂ (ಶಂಬ್ರಪು. ೪-೦೨). **ಮದುವೆನಿಲ್ಲು :** ಆನುರಾತುರದೊಳು ಮದುವೆ ನಿಂದೆನು ಅಂದು ಭೃಮಕನುಖದೊಳು ಸಂದು (ಇಂಜಾಪ. ೨೦೩-೫೨).

[ಮದುವೆ + ನಿಲ್]

**ಮದುವೆನಿಲಿಸು** (ಕ್ರಿ). ಲಗ್ನಮಾಡು ; ವಿವಾಹ ಮಾಡಿಕೊಡು : ಅರಸನು . . . ನೃಪಾತ್ಮಜೆಯರನು ಸುಮುಹೂರ್ತದೊಳು ಕುವರಗೆ ಮದುವೆನಿಲಿಸಿದನು (ಜೈಭಾ. ೪-೭). [ಮದುವೆನಿಲ್ + —ಇಸು$_3$]

**ಮದುವೆನಿಲ್ಲು** 'ಮದುವೆನಿಲ್' ನೋ.

**ಮದುವೆನಿಱಿಸು** (ಕ್ರಿ). = ಮದುವೆನಿಲಿಸು : ಸಕಲವಿಷ್ಟಪಪ್ರಣುತನ ನೀತನಂ . . . ಈ ಮಹೀತಳರಾಜ್ಯದೊಳ್ ನಿಱಿಸುವುದುಂ ಮದುವೆನಿಱಿಸುವುದುಂ ಎನಗಳಕ್ಕುಮಪ್ಪುದು (ಆದಿಪು. ೬-೬ ವ). [ಮದುವೆ + ನಿಱಿಸು$_1$]

**ಮದುವೆನೆರೆ** (ಕ್ರಿ). ವಿವಾಹಸಂಬಂಧದ ಮೂಲಕ ಕೂಡು ; ಪಾಣಿಗ್ರಹಣದ ಮೂಲಕ ಒಂದಾಗು : ಕಾದಂಬರಿಯೊಳ್ ಮದುವೆ ನೆರೆದು . . . ಸಂತೋಷದಿಂ ಬಂದುಚ್ಚೈಸಿದುಂ ಪುಗುವೆಂ (ಕಾದಂಬ. ೪೩೪) : ಷೋಡಶಸಹಸ್ರಸುರಕನ್ಯೆಯರಂ ದನುಜಪುರಸ್ಥೆಯರಂ ಮದುವೆ ನೆರೆದಪೆಂ (ಇಗಪು. ೧೦-೮೯). [ಮದುವೆ + ನೆರೆ$_1$]

**ಮದುವೆಮಂಟಪ** (ನಾ). ವಿವಾಹ ನಡೆಯುವ ಮಂಟಪ, — ಸ್ಥಳ : ಆಮಲ್ದಾರರು ಮದುವೆಮಂಟಪಕ್ಕೆ ಬಂದು ವಧುವರರಿಗೆ ಆಶೀರ್ವದಿಸಿ, ತಾಂಬೂಲ ತೆಗೆದುಕೊಂಡು ಹೋದರೆ . . . ಸರ್ಟಿಫಿಕೇಟು ಕೊಟ್ಟ ಹಾಗೆ (೪೦ಪ. ೦೯೩). [ಮದುವೆ + ಮಂಟಪ]

**ಮದುವೆಮನೆ** (ನಾ). ವಿವಾಹ ನಡೆಯುವ ಮನೆ : ದೊಡ್ಡಮನೆ ಅಣ್ಣಯ್ಯ ಊಟಕ್ಕೆ ಬರೋದಿಲ್ಲವಂತೆ ಅಂತ ಗೊತ್ತಾದರೆ ಸಾಕು. ಮದುವೆ ಮನೆಯ ಯಜಮಾನ ಯಜಮಾನಿಗೆ ತಾಪತ್ರಯ ಶುರುವಾಯಿತು ಅಂತಲೇ (ಪಪ್ಪುರು. ೭೮) ; ಮದುವೆಮನೆಗಲಾಟೆ ತಪ್ಪೆಯೋಕಾಗೋದಿಲ್ಲ (ಬೂದಿಟ್ಟಿ. ೦೭). [ಮದುವೆ + ಮನೆ]

**ಮದುವೆಯಾಯ** (ನಾ). = ಮದುವೆದೆರಿಗೆ : ಮದುವೆಯಾಯ ಮಾನ್ಯ(ಣ್ಯ) ಪಡಿಯದೆ ತಿಪ್ಪೆಸುಂಕ ಅಷ್ಟಭೋಗ ತೇಜ ಸಾಂಮ್ಯ (ಸಾಮ್ಯ) (ಗೌ)ಡುಗಳಿಗೆ . . .ಕೊಟ್ಟರು (ಎಕ. XXIII, ೦೯೫-೬೦ ; 1865).

[ಮದುವೆ + ಆಯ$_7$]

**ಮದುವೆಹೆಣ್ಣು** (ನಾ). ವಿವಾಹವಾಗುವ ಹುಡುಗಿ ; ಮದುಮಗಳು : ವಧು: ಮದುವೆಹೆಣ್ಣಿನ ಅಥವಾ ಗಂಡಿನ ಅಪ್ಪಅವ್ವಂದಿರಿಗೆ ಚಪ್ಪರದ ರಾತ್ರಿಯೆಲ್ಲಾ ನಿದ್ದೆಯಿಲ್ಲ (ಪಪ್ಪುರು. ೭೯). [ಮದುವೆ + ಹೆಣ್ಣು(<ಪೆಣ್)]

**ಮದೆ** (ನಾ). ಮರೆ ; ತೆರೆ : ಆಳಸುವ ದನಿ ಬಳಸುವ ಮದೆಕೊಳಿಸುವ ಕೋಡಜಕ ಮೊಱೆಯ ತಳಿಗೊರ್ಬುಗಳೊಳ್ ಗಿಳಿ ಮರಳ್ದರಗಿಳಿ ಪೆಣ್ಗಿಳಿ ನೆಳಮಾವಿಟ್ಟಿಸಿದುದು ರತಿಯ ಜಕ್ಕಂದೋಟವಂ (ಅಶಂಪು. ೬-೮೦) ; ನೆರೆಯ ಕಟ್ಟಾಳೊಪ್ಪನೊಲ್ಮೆಯಿಂ ಬಳಿವಿಡಿದು ಮರದ ಮೇಲ್ಮದೆಕಟ್ಟಿ ಬೇಟೆಯುಳಿಯಾದುದು (ಕಾಲಿದ. ೬೫-೦೭೨). [ದೇ.? ತುಳು. ಮದೆ]

**ಮದೆವ, ಮದವ** (ನಾ). ೧. ಮದುವೆಯ ಗಂಡು; ಮದುಮಗ; ವರ: ಸೌಸ್ನಾತಿಕರುಂ . . . ಪುರಂಧ್ರೀವರ್ಗಮುಂ ಬಂದು ಕನಕಪೀಠಸ್ಥಿತರಪ್ಪ ಮದೆವಂಗಂ ಮದೆವಳ್ಗಮಾದ್ರಾಕ್ಷತಾರೋಪಣಂಗೆಯ್ದರ್ (ಶಾಂತಿಪು. ೬-೦೬ ವ). **ಮದವ :** ೨. ಗಂಡ; ಪತಿ: ಕ್ಲೇಶಿಯೆನಿತುಮಾಕೆಯ ಮದವಂ (ಜಾತಿ. ೨೨-೦೭) ; ಮಗಳ ಮದವನಂ ಜಾಮಾತೃವೆಂಬುದು (ಶಬ್ದಮ. ೬೩-೩೫೦). [<ಮದುವೆ + – ಅ$_7$]

**ಮದೆವಳ್, ಮದವಳ್, ಮದುವಳ್** (ನಾ). ೧. ಮದುವೆಯ ಹೆಣ್ಣು ; ಮದುಮಗಳು ; ವಧು : ಆ ಮದೆವಳ್ ರಕ್ಕಸನಲ್ಲಿಗೆ ಬಂದೇನೆನ್ನಂ ನೀ ಮೆಚ್ಚಿದಂತು ಮಾಡೆಂದು ತನ್ನಂ ತೋಱಿದೊಡೆ (ವಡ್ಡಾರಾ. ೦೩-೨೩): ಸೌಸ್ನಾತಿಕರುಂ . . . ಪುರಂಧ್ರೀವರ್ಗಮುಂ ಬಂದು ಕನಕಪೀಠಸ್ಥಿತರಪ್ಪ ಮದೆವಂಗಂ ಮದೆವಳ್ಗಮಾದ್ರಾಕ್ಷತಾರೋಪಣಂಗೆಯ್ದರ್ (ಶಾಂತಿಪು. ೬-೦೬ ವ). **ಮದವಳ್:** ೧. ಪೊಸಮದವಳುಮಾಕೊಳ್ವ ಗೊವರನುಂ ನಡೆದೇಂ ಪತ್ತಿದರೊ ಪದೆದಾ ಸುಜನವ್ಯದುಸ್ಸತಂ ತಮಗೆ ನೇಸೆಯುನೆ ಸೂಸುವಿನಂ (ಲೀಲಾವ. ೦೩-೨). **ಮದುವಳ್ :** ೨. ಹೆಂಡತಿ ; ಪತ್ನಿ : ಸೊಸೆ ಮದು[ಶಬ್ದಂ. ದ]ವಳ್ಳೆಜ್ಜೆ ಮುತ್ತಚ್ಚಿ . . . ಎಂಬೀ ಪೊಱೆಯ ವನಿತೆಯರ್ ಜನ್ಮಜನ್ಮಂಗಳೊಳ್ ತಾಮ ಗಡಂ ಬೇಱಾಗಿ ಪುಟ್ಟಿದರ್ (ಶಾಂತಿಪು. ೬-೯೭). [ಮದೆವ + – ಅಳ್$_4$]

**ಮದೇಭ** (ನಾ). = ಮದಕರಿ : ಮದನಮದೇಭಂ ಕಡಿಕೆಯ್ವನ್ನೆಗಂ ಸಲ್ಗುಮಾದ ಬೀರಂಗಳುಂ (ಆದಿಪು. ೨-೯೭) ; ವಿಭ್ರಾತಿಸಿ ತುಳಿವ ಸೀಳುವ ನವಮದೇಭದ ಸಮರ ಸೋಲಿಸಿತಮರರಾಶಿಗಳ (ಕುಮಾ.ಭಾ. ೪-೭೬). [ಸಂ.]

**ಮದೇಭಗತಿ** (ನಾ). ೧. ಸೊಕ್ಕಿದ ಆನೆಯ ನಡಗೆ. ೨. ಸೊಕ್ಕಿದಾನೆಯಂತೆ ನಡಗೆಯುಳ್ಳವನು : ಹಾ ಮಗನೇ . . . ಹಾ ಮದೇಭಗತಿ (ರಾಜಶೇ. ೦೩–೦೦೬). [ಸಂ.]

**ಮದೇಭಗಮನೆ** (ನಾ). = ಮದಗಜಗಮನೆ : ಮದೇಭಗಮನೆಯರು ಸರ್ವೇಶ್ವರನ ಸರ್ವಾಂಗಶೋಭನವನೀಕ್ಷಿಸುತ . . . ಬೆಂಬುತ್ತಿದರಲಾ (ವೀಕೃಷ್ಣ. ೫-೦-೦೬). [ಸಂ. ಮದೇಭಗಮನಾ]

**ಮದೇಭಗಾಮಿನಿ** (ನಾ). = ಮದಗಜಗಮನೆ : ರಾಜಮುನೀಶ್ವರಂಗೆ ಮಾದೇವಿ ಮದೇಭಗಾಮಿನಿ ಜಗತ್ತ್ರಿತಯಾಂಬಿಕೆ ನಾಮದಿಂದಮೈರಾವಥು (ಶಾಂತಿಪು. ೯-೦೫೩). [ಸಂ. ಮದೇಭಗಾಮಿನೀ]

**ಮದೋತ್ಕ** (ಗು). ಸೊಕ್ಕಿದ ; ಅಮಲೇರಿದ : ಇತ್ತ ವಸಂತನಿತ್ತ ಮಲಯಾನಿಲನಿತ್ತ ಮಧುವ್ರತಾಳಿ ಮತ್ತಿತ್ತ ಮದೋತ್ಕಕೋಕಿಲ ಕದಂಬಕಮೆಯ್ದೆ ವಿಜೃಂಭಿಸಿತ್ತು (ಕಾದಂಬ. ೬೬೩). [ಸಂ.]

**ಮದೋತ್ಸವ** (ನಾ). ೧. ಪ್ರಣಯದ ಉಲ್ಲಾಸ : ಕಾಮಾಸಕ್ತಿ : ಮದೋತ್ಸವದೆ ಕೋಗಿಲೆವೆಣ್ ಗಳುಮಂ ನೆಗೆಟ್ಟುವಂತನುವಿಪ ಸೊರ್ಕಿನಿಂ ಪಿಕನಿನಾದೆ ಪೆಣ್ಗಳ್ ಗಳುಮಂ ನೆಗಟ್ಟುವಳ್ (ಕಾವ್ಯಸಾ. ೯೭೪). ೨. ಮಾವಿನ ಹಣ್ಣು. [ಸಂ.]

**ಮದೋದಕ** (ನಾ). = ಮದರಸ : ಮದದಿಂ ಮನೋಹರಮಪ ಕಪೋಲಸ್ಥಳದಲ್ಲಿಯ ಮದೋದಕಲೋಭದಿಂ ಸೊರ್ಕಿ ತಿರುಗುತಿರ್ದ ತುಂಬಿಗಳ್ ಪಾದತಳದಿಂದೊದೆದೊಡಂ ಆ ಹಸ್ತಿ ಅತಿಬಲನಾದೊಡಂ ಕೋಪಮನೆಯ್ದುದು (ಪಂಚತಂ. ೮. ೪೦-೦೦). [ಸಂ.]

**ಮದೋದಯ** (ನಾ). ೧. (ಆನೆಗೆ) ಮದೋದಕವುಂಟಾಗುವಿಕೆ. ೨. ಅಹಂಕಾರ ಉಂಟಾಗುವಿಕೆ ; ಗರ್ವ ಉಂಟಾಗುವಿಕೆ : ಆದಿಬ್ರಹ್ಮರ ಕೊಟ್ಟ ಮೇದಿನಿಗಾನೊಡೆಯನಾತನರಸಿನಿಮಿರಿಂದಿಂದಾದೊಡಮೇನೆನಗೆಂಬ ಮದೋದಯದೊಳ್ ದೇವ ಬಾಹುಬಲಿ ಬಲಿದಿರ್ದಂ (ಆದಿಪು. ೦೪-೦೮). ೧, ೨: ಮದೋದಯಂ ಮದನನೊಳಂ ಮತ್ತಗಜದೊಳಂ . . . ಪ್ರಸನ್ನಭಾವಂ ಜಲದೊಳಂ ಜನದೊಳಮಾದ ಶರತ್ಸಮಯದೊಳ್ (ಜಗನ್ನಾ. ೪-೬೩ ವ). [ಸಂ.]

**ಮದೋದ್ಗಂಧ** (ನಾ). (ಆನೆಯ) ಮದಜಲದ ಅತಿಶಯವಾದ ವಾಸನೆ : ಸ್ಕಂದಾವಾರೇಭ ಮದೋದ್ಗಂಧಾವಿಳೆಯಂ ಕವೇರಕನ್ನಿಕೆಯಂ ಶತ್ರುಸಿಂಧುಪತಿಗಿಂಬಾಂದತಿಸಂಧಿಸಿದಂ ನೃಪತಿ ಬಿಟ್ಟು ತದುಭಯತಟದೊಳ್ (ಶಾಂತಿಪು. ೧೦-೨). [ಸಂ.]

**ಮದೋದ್ಧತ** (ಗು). ೧. ಮದ್ಯಪಾನದಿಂದ ಅಮಲೇರಿದ.—ಮತ್ತೇರಿದ. ೨. ಅಹಂಕಾರದಿಂದ ಉನ್ಮತ್ತವಾದ,—ಉದ್ಧಟವಾದ : ಮದೋದ್ಧತ ಮಕುಟಬದ್ಧ ಚೂಡಾಮಣಿಕಿರಣಚರಣಾಲಕ್ತಕರಾಗಮುಂ . . . ತನಗೆ ಸಹಜಾಭರಣಮಾಗೆ (ಪಂಪಭಾ. ೩-೨೧೮). (ನಾ). ೩. ಮದ್ಯಪಾನದಿಂದ ಅಮಲೇರಿದವನು.—ಮತ್ತೇರಿದವನು : ವನೋದದೊಳ್ ಮರಿಗ್ದರು ಜನದೊಳಗೆ ಮದಿರಾಮದೋದ್ಧತರು (ಕಾವ್ಯಾವ. ೨೮-೨೯). ೪. ಅಹಂಕಾರದಿಂದ ಉನ್ಮತ್ತನಾದವನು: ಉದ್ಧಟ. [ಸಂ.]

**ಮದೋದ್ರಿಕ್ತ** (ಗು). ೧. ಕಾಮೋದ್ರೇಕವುಳ್ಳ : ಕಾಮೋದ್ವೇಗವುಳ್ಳ. ೨. ಗರ್ವದಿಂದ ಉಬ್ಬಿದ.—ಉದ್ರೇಕಗೊಂಡ ; ಗರ್ವಿಷ್ಠನಾದ. [ಸಂ.]

**ಮದೋದ್ರೇಕ** (ನಾ). ೧. ಮದ್ಯಪಾನದಿಂದ ಉಂಟಾದ ಅತಿಶಯವಾದ ಕಾಮೋದ್ವೇಗ : ಮದಿರಾಪಾನಮಂ ಮಾಡುತುಂ ತನ್ಮದೋದ್ರೇಕದಿಂದುರ್ಕಿ ಸೊರ್ಕಿಮಿಕ್ಕು ಮಿಥುನಂಗನೆಯುರ್ಕಂಗೊಳಿಸಿರ್ದರು (ಅನ್ನಾಥ. ೩-೮೩ವ). ೨. ಅತಿಯಾದ ಗರ್ವ : (೬). [ಸಂ.]

**ಮದೋದ್ರೇಕಿ** (ನಾ). ಅತಿಶಯವಾದ ಕಾಮೋದ್ವೇಗವನ್ನುಳ್ಳವನು : ಮದೋದ್ರೇಕಿಯಾದಾ ಮಹೀವಲ್ಲಭಂಗುರ್ಬಿದುತ್ತುಂಗಮೋಹಾಭವಂ . . . ನೋವಿದಂ ಮಾಡಿ ಚಂದ್ರಂ (ಉದ್ಭಟ. ೩-೦೪). [ಸಂ. ಮದೋದ್ರೇಕಿನ್]

**ಮದೋನ್ಮತ್ತ** (ಗು). ೧. ಮದ್ಯಪಾನದಿಂದ ಅಮಲೇರಿದ. ೨. ಗರ್ವದಿಂದ ಅವಿವೇಕಿಯಾದ. ೩. (ಆನೆಯು) ದಾನಜಲ ಹೊಮ್ಮುವುದರಿಂದ ಹುಚ್ಚೆದ್ದ,—ಕ್ರೋಧಗೊಂಡ : ಶಿವಿರಮಂ ಬೆನ್ನಟ್ಟಿ ಪಾಮಗಳಿಂದೊರಸಿತ್ತೇನತಿಜೋದ್ಯಮೋ ವಿಧು ಮದೋನ್ಮತ್ತೇಭವಿಕ್ರೀಡಿತಂ (ಚಂದ್ರಪ್ರ. ೯-೩೩). (ನಾ). ೪. ಮತ್ತೇರಿದವನು: ಅಮಲೇರಿದವನು : ಮದ್ದುಗುಣಿಕೆಯ ತಿಂದ ಮದೋನ್ಮತ್ತರ ಉನ್ಮತ್ತ ತೋಜದಿರಯ್ಯ (ಅಜಂತಾ. ೬೪-೨೦). ೫. ಅಹಂಕಾರಿ; ಗರ್ವಿಷ್ಠ : ತಾಂ ಪಿತೃಮಿತ್ರ ಮದೋನ್ಮತ್ತನಾಗಿ ಧರ್ಮದೊಳ್ ಬಹಿರ್ಮುಖನುಂ. . . ಮೋಕ್ಷದೊಳ್ ನಿರಪೇಕ್ಷಕನುಮಾಗಿ (ಪಂಚತಂ. ೨೮-೬). [ಸಂ.]

**ಮದೋಹರ** (ನಾ). ಒಂದು ಬಗೆಯ ಭಕ್ಷ್ಯ : ಅತಿರಸಕೆ ಗದ ಅಗಲ ೩೫೦ ಉದ ೫೦ ಬೀಜವು ೧ ೧ ೦ ಬುದಕೆ ನೈರುತ್ಯದಲು ಮದೋಹರಕೆ ಗದೆ ಅಗಲ ೩೨ ಉದ ೫ ಬೀಜವರಿ ೩೦॥ ೦ (ಎಕ. XI. ಹೊಳಲ್ಕೆ. ೬-೨೩: 1528).

[? ಇದು 'ಮನೋಹರ' ಎಂಬುದರ ಅಪಲಿಖಿತವಿರಬಹುದು ]

**ಮದ್ಗು** (ನಾ). ೧. ಒಂದು ಬಗೆಯ ಕಾಗೆ; ನೀರುಕಾಗೆ : "ಮದ್ಗುಃ, ಜಳವಾಯಸಃ—ಈ ೨ ನೀರ ಕಾಗೆ" (ಹಲಾಯು. ೪೨-೯೬); ಶುಕ ಶಾರಿಕಾ ಮದ್ಗು ಸುಪರ್ಣಾದಿ ಪಕ್ಷಿಸಮೂಹಗಳಂ (ಶಾರದಾಂ. ೩೬-೨೬೪). ೨. ಒಂದು ಬಗೆಯ ಮೀನು ; ಹೆಮೀನು : "ಶೃಂಗೀ, ಮದ್ಗುಃ, ಅವಾಗುಃ, ಸಂದ್ಯಾವರ್ತಕಿ—ಈ ೪ ಮೊದಲಾಗುಳ್ಳವು ಹೆಮೀನ್" (ಹಲಾಯು. ೦೦೯-೩೬). [ಸಂ.]

**ಮದ್ಗುರ** (ನಾ). ಒಂದು ಬಗೆಯ ಮೀನು : "ಮದ್ಗುರಃ—ಮೂಪಾಗಲೂ ಮುಳಗಿಕೊಂಡಿರುವ ಮೀನು" (ಶಬ್ದಮಣಿ. ೦೩.೬೨). [ಸಂ.]

**ಮದ್ದಕ** 'ಮದ್ದಿಕ' ನೋ.

**ಮದ್ದತು** 'ಮದತ್ತು' ನೋ.

**ಮದ್ದತ್ತು** 'ಮದತ್ತು' ನೋ.

**ಮದ್ದಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮತ್ ಎಱೆಯಪಗಾವುಣ್ಡನು ಮದ್ದಯ್ಯನು ಬನ್ನಿಲ್ಲಿ ಮೃತಕೊಣ್ಡಾರ್ (ಎಕ. II. ೪೭೮ ; 950). [ ? + ಅಯ್ಯ$_1$ ]

**ಮದ್ದರಿ** 'ಮದ್ದರ್' ಪರಾ.

**ಮದ್ದಲಿಸು** (ಕ್ರಿ). ಮದ್ದಲೆಯನ್ನು ಬಾರಿಸಿ ಶಬ್ದವನ್ನುಂಟುಮಾಡು : ಊರೂರ ಮದ್ದಲಿಸಿ ಸಾರಿ ಹಿಪ್ಪರ ಹೆಸರ ಏರೂತ ಪರವೂತ ಗಿರಿ ಮೇಲೆ ಕಂಬಿಯವರು ನೀರು ನೀಡೂತ ಜನರಿಗೆ (ಸಿದ್ಧಕ. ೩-೩೪). [ ಮದ್ದಲೆ$_1$ + – ಇಸು$_3$ ]

**ಮದ್ದಲೆ$_1$, ಮದ್ದಳಿ, ಮದ್ದಳೆ$_1$** (ನಾ). ಒಂದು ಬಗೆಯ ಚರ್ಮವಾದ್ಯ; ಮೃದಂಗ ; ಮುರಜ : " ಮದ್ದಲೆ(ಳೆ). ಮದಲೆ—ಮರ್ದಲ=ಒಂದು ಚರ್ಮವಾದ್ಯ" (ತದ್ಭವಕೋ. ೩೩); ದಣಧ್ವಣಧಿತ್ತ ಮದ್ದಲೆಯ ಕಿವಿಯೊಳಗೆ ಘನಸೂರು ಹಿಡಿಯೆ ಗುಂಡನಿಗೆ (ಕನ್ನಡಾ. ೦೯೬). ಮದ್ದಳೆ : 'ಮದ್ದಳೆಕಾಱ' ಪರಾ. ಮದ್ದಳೆ$_1$ : "ಮುರಜಂ ಮೃದಂಗಮೆನೆ ಮದ್ದಳೆಯೆನಿಕ್ಕು" (ಮಂಗರಾ. ೨೪-೬); ಕಾವ್ಯರಚನೆ. . .ಪೀನಂ ಪರುಷತರವಾಕ್ಯವೊತ್ತುಂ ಗರಡೆಯ ಮದ್ದಳೆಯ ಜರ್ಝರಧ್ವನಿಗಳವೊಲ್ (ಕವಿರಾ. ೦-೩೩); ಹುಟ್ಟುವಾತ ಮದ್ದಳೆಯ ಕಟ್ಟಿದ ನಡೆವಾತ ತಾಳವನೊತ್ತಿದ (ಸರ್ವಜ್ಞ. ೪೪-೨೨೯); ಭೇರಿ ಮದ್ದಳೆ ಸಂಕು ನಗಾರಿ ಹೆಗ್ಗಾಳೆಗಳ್ ಚೀರಿದುವುಲಿ ದೇಗುಲದಿ (ಮೋಹತ. ೦೮-೬).

ಮದ್ದಳೆಯ ಹಣ=ಮದ್ದಳೆಗರು ತೆರಬೇಕಾದ ತೆರಿಗೆ : ಅಪುತ್ರಿಕ ದ್ರವ್ಯದ ವಶವಸ್ಥದೊಳಂ ಪುಟ್ಟಿದ ದ್ರವ್ಯಮುಮಂ ಕಳೆ ಮದ್ದಳೆಯ ಹಣಮುಮಂ ದೇಯಿಂಗೆಱೆಗೆ (ಎಕ. XX. ೬೮-೪೦; 1012).

[<ಪ್ರಾ. ಮದ್ದಲ./ ಸಂ. ಮರ್ದಲ]

**ಮದ್ದಲೆ$_2$** 'ಮದ್ದಾಲೆ' ನೋ.

**ಮದ್ದಳಿ** 'ಮದ್ದಲೆ$_1$' ನೋ.

**ಮದ್ದಳೆಕಾಜಿ** (ನಾ). ಮದ್ದಳೆಯನ್ನು ಬಾರಿಸುವವನು: ತ್ರಿಕಾಲಭೋಗಂ ಮಾಡುವ ಪಾಳವಿಗಳಿರ್ವ್ವರು ಮದ್ದಳೆಕಾಜರು ನಾಲ್ವರ್ಗ್ಗಂ ಮತ್ತರು[ಳಿ]ಂ (ಕೆಇ. ೯-೩-೩೨೫; 1062). [ಮದ್ದಳೆ (<ಮದ್ದಲೆ$_1$) + -ಕಾಜಿ]

**ಮದ್ದಳಿಗ** (ನಾ). ಮದ್ದಳೆಯನ್ನು ಬಾರಿಸುವವನು : "ಮದ್ದಳಿಗನೇ ಮಾರ್ದಂಗಿಕನಕ್ಕುಂ" (ಶಕುಹಿ. ೬೩); ಸಂಗತಿಗಳಂ ಸೂಸುವ ಮದ್ದಳಿಗರಿಂ (ಗಿರಿಕ. ೨-೧೦೫ವ); ವೃತ್ತಮದ ಮದ್ದಳಿಗಂಗೆ ಮತ್ತ ೭ (ಕೊಲ್ಹಾಶಾ. ೨೦ ೨-೦೬: 1278); ಮದ್ದಳಿಗಂ ಮದ್ದಳೆಯಂ ಕೂರ್ಪ ಸಲ್ಲಳಂತೆ ತೊಡೆಯೊಳಳವಡಿಸಿ (ರರ್ಮಕ. ೨-೨೩ ವ). [ಮದ್ದಳೆ$_1$ (< ಮದ್ದಲೆ$_1$) + -ಇಗ]

**ಮದ್ದಳಿಗಿತಿ** (ನಾ). ಮದ್ದಳೆಯನ್ನು ಬಾರಿಸುವವಳು : ಇತಿಗೆ_ಚಾಮರಿಗಿತಿ, ಮದ್ದಳಿಗಿತಿ, ಆವುಜಿಗಿತಿ (ಶಮಠ. ೨೦೮ ಪ್ರಯೋ).

[ಮದ್ದಳಿಗ + -ಇತಿ$_1$ (<-ಇತ್ತಿ)]

**ಮದ್ದಳೆ$_1$** 'ಮದ್ದಲೆ$_1$' ನೋ.

**ಮದ್ದಳೆ$_2$** 'ಮದ್ದಾಲೆ' ನೋ.

**ಮದ್ದಳೆಗ** (ನಾ). = ಮದ್ದಳಿಗ : ಹಲವು ಕತ್ತರದ ಕಳಾಸವನಜಾಂದು ಮದ್ದಳೆಗ ಕೇಳಿಸಿ ನಿಂದನೊಡನೆ (ಭರತ. ೧೨-೩೬).

[ಮದ್ದಳೆ$_1$ (< ಮದ್ದಲೆ$_1$) + -ಗ$_2$]

**ಮದ್ದಾನೆ** 'ಮದ' ಪರಾ.

**ಮದ್ದಾಲೆ, ಮದ್ದಲೆ$_2$, ಮದ್ದಳೆ$_2$** (ನಾ). ಒಂದು ಬಗೆಯ ಸಸ್ಯ : ಏಳೆಲೆಬಾಳೆ : ಸಪ್ತಪರ್ಣ, ಜಂತಾಲಮರ, ಮದ್ದಾಲೆ, ಏಳೆಲೆಬಾಳೆ, ಕೋಡಾಲೆ, ಬಂತಲೆ (ವ್ಯಕಿಗ. ೫-೮೩) ; ಬೆಳ್ವಾಲೆ, ಮದ್ದಾಲೆ, ನೇರಲು . . . ಗಗನಚುಂಬಿತ ವೃಕ್ಷಗಳು (ಕಂಜಕಂ. ೨). **ಮದ್ದಲೆ$_2$**: ಬಳಬೂತಾಳ, ಮದ್ದಲೆ (ವ್ಯಕಿಗ. ೬೮-೧೩೯೪). **ಮದ್ದಳೆ$_2$** : (ವ್ಯಕಿಗ. ೪೭-೮೨೯). [ ? ]

**ಮದ್ದಿಕ,** ಮತ್ತಿಕ. ಮದಿಕ. ಮದ್ದಕ (ನಾ). ಊರೊಟ್ಟಿನ ಆಸ್ತಿ ; ಸಾರ್ವಜನಿಕ ಸ್ವತ್ತು : ಈ ಗ್ರಾಮ ಮದ್ದಿಕದಲ್ಲಿ ಪೂರ ಮುಂದಣ ಹೊಸ್ತಾಗಿ ಕಟ್ಟಿಸಿದ ಮಂಟಪಕ್ಕೆ (ಎಕ. III. ಶ್ರೀರಂಗ. ೧೩-೫೪ : 1663) ; ಗ್ರಾಮಸ್ಥರು ದಂಡದೋಷಗಳಿಂದ ಬಂದ ಮೊತ್ತವನ್ನು ಮದ್ದಿಕದ ಹಣ ಎಂದು ಗ್ರಾಮದ ಭಂಡಾರಾನಲ್ಲಿಟ್ಟು ಅದನ್ನು ದೇವಸ್ಥಾನ ಧರ್ಮಛತ್ರ ಮುಂತಾದವುಗಳನ್ನು ಕಟ್ಟುವುದಕ್ಕೆ ಉಪಯೋಗಿಸುತ್ತಿದ್ದರು (ಶಾಭೈಪ. ೦೬). **ಮತ್ತಿಕ** : ಶ್ರೀರಾಮನವಮಿಉತ್ಸವದ ಕಟ್ಲೆ ನಡೆಯುವನ್ತೆ ಕೂಡ್ಲೂರು ಶಾನಬಾಗ ಕಪನಿಪತಯ್ಯನವರಿಂದ ಕ್ರಯಲಬ್ಧವಾಗಿ ಬನ್ದ ಮತ್ತಿಕದ ತೆಂಗಿನ ತೋಟವನ್ನು ಪೊಪ್ಪಿಸಿ ಇದೇನೆ (ಎಕ. IX, ಶನ್ನಕ. ೦೦೬-೦೯ ; 1828). **ಮದಿಕ** : ನಿಂಮ ಪೂರ ಮದಿಕಕೆ ಸಲುವ ಹರಯುವ ಹಂದಿಮನಿಯ ಸರಹಿನ ಭೂಮಿಯನು (ವ್ಯಇಲ. ೦೯೩೦, ೬೪-೦೦ : 1396). **ಮದ್ದಕ**: ಅದನ್ನು ಮದ್ದಕದಲ್ಲಿಟ್ಟು ಎಲ್ಲರೂ ಉಪಯೋಗಿಸಿಕೊಳ್ಳಬೇಕು (ಬಾಕತ ೬೬).

**ಮದ್ದಕದ ಗೋಡೆ** = "(ಪ್ರತ್ಯೇಕಿಸುವ, ಎರಡು ಮನೆಗಳ ಮಾಲೀಕರಿಗೂ ಸೇರಿದ) ಮದ್ದಕದ ಗೋಡೆ" (Party-Wall. ಇಂಕ). [< ಸಂ. ಮಧ್ಯಕ]

**ಮದ್ದಿಕ್ಕು** (ಕ್ರಿ). ೧. ವಶೀಕರಣಕ್ಕಾಗಿ ಔಷಧಿಯನ್ನು ನೀಡು : ಮರುಳುಗೊಳಿಸು : ಮನಸೋತು ಗೋಪಿಯರು ಮೆಚ್ಚಿ ಮದ್ದಿಕ್ಕಿದರೇ (ಪುರಂದ. ೦-೮೯ ಅನುಪಲ್ಲವಿ). ೨. ವಿಷಹಾಕು : ಮದ್ದಿಕ್ಕಿ ಕೊಲ್ಲುವವ ಮಾರಿ ಹೊಲೆಯ (ಪುರಂದ. ೦-೦೬೮-೩). [ಮದ್ದು (<ಮರ್ದು) + ಇಕ್ಕು]

**ಮದ್ದಿಡಿ** (ಕ್ರಿ). ಸಿಡಿಮದ್ದು ತುಂಬು ; ಮದ್ದಿನಿಂದ ತುಂಬಿಸು : ಮದ್ದಿಡಿದ ಮಣ್ಕುಡಿಕೆ ಕಿಡಿಗೊಂಡು ಸಿಡಿಯೆ (ತತ್ವಾಂಗ. ೬-೦೬೦).

[ಮದ್ದು (< ಮರ್ದು) + ಇಡು$_2$]

**ಮದ್ದಿನಸೊಪ್ಪು** (ನಾ). ಒಂದು ಬಗೆಯ ಔಷಧೀಸಸ್ಯ: ಮರುಳುಮಾತಂಗಿ. ಮದ್ದಿನಸೊಪ್ಪು (ವ್ಯಕಿಗ. ೬೯-೧೬೦೬). [<ಮದ್ದು + ಸೊಪ್ಪು$_2$]

**ಮದ್ದಿಮಬಿಸಿಗೆ** 'ಮಧ್ಯಮಬೀಸಿಗೆ' ನೋ.

**ಮದ್ದಿಮೆ** (ನಾ). ನಡುತರವಾದುದು : ಪಟುತ್ವ ಕಡಿಮೆಯಾದುದು : ರ್ಮ್ಯಾನಿಯಾನ ತಾಯಿ . . . ಮುದುಕಿಯಾದವಳು . . . ಕಣ್ಣು ಮದ್ದಿಮೆಯಾಗುತ್ತಾ ನಡೆದುವು (ಜನಪ್ರ. ೬೩) ; ಕಣ್ಣು ಸ್ವಲ್ಪ ಮದ್ದಿಮೆ (ಶೇಮು. ೦೯೬). [< ಸಂ. ಮಧ್ಯಮ]

**ಮದ್ದೀಡು** (ನಾ). (ಇತರರಿಗೆ ಕೇಡುಂಟು ಮಾಡಲು) ಆಹಾರದಲ್ಲಿ ಸೇರಿಸಿ ಹಾಕುವ ವಿಷ : ಇಕ್ಕುಮದ್ದು ; ಕೈಮಸಕ : ಗುಣಹೊಂದಿದವರೆಲ್ಲರಿಗೂ ಮದ್ದೀಡಿನ ಚಿಹ್ನೆಗಳು ಏಕರೀತಿಯಾಗಿರುತ್ತವೆ. ನಾಲಿಗೆ ರುಚಿಯಾಗಿರುತ್ತದೆ. ಆದರೆ ಹಸಿವಿರುವುದಿಲ್ಲ (ಮನೋಸಂ. ೭೮) ; ಬೈರವ್ವನಿಗೆ ಯಾರೋ ಮದ್ದೀಡುಮಾಡಿದ್ದರಂತೆ (ಮನೋಸಂ. ೧೫೩).

[ಮದ್ದು (< ಮರ್ದು) + ಈಡು$_1$]

**ಮದ್ದು** 'ಮರ್ದು' ನೋ.

**ಮದ್ದುಕತ್ತಿ** (ನಾ). ವಿಷವನ್ನು ಲೇಪಿಸಿದ ಬಿಡ್ಗ : ಖಾಸಾ ಮದ್ದುಕತ್ತಿ ಮಂದು, ಕಠಾರಿ ಮಂದು, ಬಾಂಕ ಮಂದು (ರಾಜೇಂದ್ರ. ೫೬).

[ ಮದ್ದು (< ಮರ್ದು) + ಕತ್ತಿ ]

**ಮದ್ದುಗಾರ** (ನಾ). ಔಷಧಿಯನ್ನು ಮಾಡುವವನು : ಮದ್ದುಗಾರನ ಹಾಸ್ಯ (ಹಾಸ್ಯಮಂ. ೧೨). [ಮದ್ದು (<ಮರ್ದು) + -ಕಾರ$_1$ (<-ಕಾಜ)]

**ಮದ್ದುಗಾರಿಕೆ** (ನಾ). ಔಷಧವನ್ನು ಮಾಡುವಿಕೆ : ಆಚಾರ್ಯ, ನಮ್ಮ ಪಾಳೆಯದೊಳಿಹರಾರ್ಯರರಿಯದ ಮದ್ದುಗಾರಿಕೆಯ ಬಲ್ಲ ಮಾತ್ರವರು ಕೇಳುಗುರೊಂವನುಳಿದು ಬೆರಳಿಗೆ ಬೆರಳ ಬೆಳಸಲಾರ್ಪರು (ಹರ್ಷ. ೪೫-೨೦೫).

[ ಮದ್ದುಗಾರ + -ಇಕೆ ]

**ಮದ್ದುಗಾರ್ತಿ** (ನಾ). ೧. ಔಷಧಿಯನ್ನು ಮಾಡುವವಳು. ೨. ವಿಷವಿಕ್ಕುವವಳು : ಕೈಮಸಕನ್ನು ಹಾಕುವವಳು : ಬೆಟ್ಟೆಯರು ಮಟಮಾಯೆಗಳು ಬಲು ಮದ್ದುಗಾರ್ತಿ [ಪಾಕಾಂ. ಕಾತಿ]ಯರು (ಬಸಕೃ. ೪೦-೫೬).

[ ಮದ್ದುಗಾರ + -ತಿ$_1$ (< -ಇತ್ತಿ) ]

**ಮದ್ದುಗುಣಿಕೆ** 'ಮರ್ದುಗುಣಿಕೆ' ನೋ.

**ಮದ್ದೂರು** 'ಮಬ್ಬೂರ್' ನೋ.

**ಮದ್ದೆಚ್ಚು** (ಕ್ರಿ). ಔಷಧವನ್ನು ಲೇಪಿಸು : ಸರಳಂತ ಪುಲಿಯೊಂದು ಕಣ್ಬೇನೆಯೊಳು ಬಿರ್ದು ಪೊರಳುತಿರಲು ವೈದ್ಯನೊರ್ವ ಭರದಿ ಮದ್ದೆಚ್ಚಲಂದಾ ಪುಲಿ ಮಾಡಿದೊಂದಿರವ ಕೇಳ್ದಜೀಯೆಯ ರಾಯ (ಪಾಗಳು. ೦೯-೫೪).

[ ಮದ್ದು (< ಮರ್ದು) + ಎಚ್ಚು ]

**ಮದ್ಯ** (ಗು). ೧. ಅಮಲೇರಿಸುವ. (ನಾ). ೨. ಕಳ್ಳು, ಹೆಂಡ, ಮದಿರೆ ಇತ್ಯಾದಿಯಾದ ಅಮಲೇರಿಸುವ ಪಾನೀಯ : "ಮೈರೇಯ ಮಾಸವಂ ಮಧು ಮಾಧವಂ ಸೀಧು . . . ಮದಿರೆ ಮದ್ಯಂ ಕಾಪಿಶಾಯನಂ ವಾರುಣಿ ಮದಿಷ್ಟೆ ಕಾದಂಬರಿ ಪರಿಸ್ರುತಿ ಕಲ್ಯಮೆನೆ ಕಳ್ಳೆನಿಕ್ಕುಂ" (ಮಂಗರಾ. ೬೫-೮) ; ಮದ್ಯ ಮಧು ಮಾಂಸವೆಂಬಿವನಾದ್ಯಂತಂ ತೊಜೆವುದು (ಸಂಕಜೆಪ. ೫-೪೦) ; ಅಂಗದಿಚ್ಚೆಗೆ ಮದ್ಯ ಮಾಂಸವ ತಿಂಬರು ಕಂಗಳಿಚ್ಚೆಗೆ ಪರವಧುವ ನೆರೆವರು ಲಿಂಗಲಾಂಛನಧಾರಿಯಾದಲ್ಲಿ ಫಲವೇನು (ಬಸವ. ೦೦೬) ; ಮದ್ಯದ ಉಗ್ರವಾಸನೆ ಹೊರಡುತ್ತಿತ್ತು (ವೋಹಾ. ೪೩೨). ೩. ಅಮೃತ : ಕಟ್ಟುಪ್ಪ ವಿಷದ ಮದ್ಯದ ಪುಟ್ಟಿದ ನೆಲೆ. ಜಳಧಿಯಂ ಪೊಗಳದೆ ಸಿಹಿ ಮಟ್ಟಿಮ[ರು] ರಾಜಮಲ್ಲಂ ಕಟ್ಟಿಸಿದಜಗೆಜ ಸಮುದ್ರದಿಂ ಮಿಗಿಲಲ್ತೆ (ಕಇ. XVIII, ೪೪-೫೬ ; 1019). [ಸಂ.]

**ಮದ್ಯಗೋಷ್ಠಿ** (ನಾ). ಮದ್ಯಪಾನ ಮಾಡುವವರ ಕೂಟ ; ಪಾನಕೂಟ.

[ ಸಂ. ಮದ್ಯಗೋಷ್ಠೀ ]

**ಮದ್ಯಪ** (ನಾ). ಹೆಂಡವನ್ನು ಕುಡಿಯುವವನು ; ಮದ್ಯಪಾನ ಮಾಡುವವನು. [ಸಂ.]

**ಮದ್ಯಪಾನ** (ನಾ). ಹೆಂಡ ಕುಡಿಯುವುದು : ಉಟ್ಟುದನು ಮಱೆದು . . . ನಿಲ್ಲೀ ನಿಟ್ಟಿಗೆ ನೆಲೆಯಾದುದು ಬಾಯ್ಬಿಟ್ಟೊದಱುವ ಮದ್ಯಪಾನ ಮತ್ತಜನೌಘಂ (ಬಾರತ. ೧೦-೧೪೧). [ಸಂ.]

**ಮದ್ಯಪಾಯಿ** (ನಾ). = ಮದ್ಯಪ : ಹಂಪರ್‌ಖಾನನು . . . ಮದ್ಯಪಾಯಿಯೂ, ವಿಲಾಸಿಯೂ, ವಿಷಯಾಸಕ್ತನೂ ಆಗಿದ್ದ ನವಾಬನಿಗೆ ಆಪ್ತಸೇವಕನಾಗಿ ರಾಜ್ಯದ ಆಗುಹೋಗುಗಳಲ್ಲಿ ಮಹತ್ವದ ಪಾತ್ರವಹಿಸಿದ್ದನು (ರಾಣ್ಯೋದ. ೧೯೩). [ಸಂ. ಮದ್ಯಪಾಯಿನ್]

**ಮದ್ಯಪಿ** (ನಾ). = ಮದ್ಯಪ : ಬಳರಿಯ ಸೋಂಪಿಗೆ ಬೀದಿಗೆ ಮೞೆವರ ಮನೆಗಳ್ಗೆ ಮದ್ಯಪಿಗಳಲ್ಲಿಗೆ ಕೋಮಳೆಯಂ ಪೋಗಲ್ಕಿತ್ತಡೆ ಬಳರಿಗೆ ಪುಯ್ಯಲಿಡಹೋದ ಕುಱಿಯಂತಕ್ಕುಂ (ಮದಹ. ೬-೨೬) ; ಪೊಡವಿಪನ ವಾಕ್ಯದೊಳು ಹುಸಿಯ ನೀಂ ಪಿಡಿದೆಯಾದಡೆ ನಾನು ಮುನಿತನವನುಳಿದು . . . ಮದ್ಯಪಿಯಾಗಿ ತೆಂಕಮುಖವಹೆನು (ಪಕಣ. ೦೪-೦೪) ; ಱೆಕ್ಕಟಿಂ ಮಸಗಿ ಕುಣಿದಾಡುತ್ತುಮಿರ್ದ ಮದ್ಯಪಿಗಳ ಮಧುಪಾನಕೇಳೀವಿಜೃಂಭಣಬಹಳ ಕೋಳಾಹಳಕುತೂಹಳಮಂ ಧರ್ಮನಾಥಕುಮಾರಂ ನೋಡಿ ನೋಡಿ ನಗುತ್ತುಂ (ಶಾಂತಿ. ೧೦-೧೪೦ ವ). [ಸಂ. ಮದ್ಯಪಿನ್]

**ಮದ್ಯಮುಬಿಸಿಗೆ** 'ಮಧ್ಯಮುಬೀಸಿಗೆ' ನೋ.

**ಮದ್ಯವ್ರತ** (ನಾ). ಹೆಂಡ ಮೊದಲಾದುವನ್ನು ಸೇವಿಸಕೂಡದೆಂಬ ವ್ರತ : ಹುಳಿತವಾದ ಮೊಸರು ಮಜ್ಜಿಗೆಯನು ಅಂಬಿಲವನು ಬಿಡುವುದು ಬಿಡದೆಯಿದ್ದರೆ ಮದ್ಯವ್ರತಕ್ಕೆ ಅಪಚಾರವಹುದು (ಸಾಗಾರ. ೩೧). [ಸಂ.]

**ಮದ್ಯಸಾಕ್ಷಿಕ** (ನಾ). ಮದ್ಯವನ್ನು ಸಾಕ್ಷಿಯಾಗಿಟ್ಟುಕೊಂಡಿರುವಿಕೆ : ಮದ್ಯಸಾಕ್ಷಿಕವಾಗಿ ನಾವು ಕಳೆತನಕ್ಕೆ ಮೊದಲು ಮಾಡಬೇಕು. ಆದುದರಿಂದ ನಡೆ, ಮದ್ಯದ ಅಂಗಡಿಗೆ ಹೋಗೋಣ (ಮತ್ತವಿ. ೭೬). [ಸಂ.]

**ಮದ್ಯಸಾರ** (ನಾ). ೧. ತೀಕ್ಷ್ಣವಾದ ಮದ್ಯ : "ತೀಕ್ಷ್ಣಮದ್ಯ, ಮದ್ಯಸಾರ, ಸಾರಾಯಿ" (spirit. ೩೦೪೩). ೨. (ತೀಕ್ಷ್ಣವಾದ ಮದ್ಯವನ್ನು ಪಯೋಗಿಸಿ ಮಾಡುವ) ಒಂದು ಬಗೆಯ ದ್ರಾವಣ : ಹಚ್ಚಿದ ಕೂಡಲೆ ಇಂಗಿ ಹೋಗುವ ಮದ್ಯಸಾರವನ್ನು ಜೀವಿಶುದ್ಧೀಕರಣ (Sterilization)ಕ್ಕೆ ಉಪಯೋಗಿಸಬೇಕು (ಕೀಟಶಾ. ೭೦) ; ಸರಿಯಾದ ನರಕ್ಕೆ ಮದ್ಯಸಾರವನ್ನು ಚುಚ್ಚಿ ಹೊಗಿಸಿ ತಲೆಯ ಮೇಲಿರುವ ನೋವನ್ನು ಕಳೆಯಬಹುದು (ಶರೀರಶಾ. I, ೪೯೭). [ಸಂ.]

**ಮದ್ಯಸೇವೆ** (ನಾ). = ಮದ್ಯಪಾನ : ಕೊಲೆಯುಮಸತ್ಯಮುಂ ಕಳವು ಮನ್ಯಸತಿಸ್ಪೃಹೆಯುಂ ವಿನೋದಮುಂ ಸಲೆ ಮಧು ಮದ್ಯಸೇವೆಯುಂ ಮಧುವರ್ಗಂ (ಧರ್ಮಾಮೃ. ೩-೯). [ಸಂ. ಮದ್ಯಸೇವಾ]

**ಮದ್ಯಾಂಗ** (ನಾ). [ಜೈನ] ಭೋಗಭೂಮಿಯಲ್ಲಿರುವ ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; (ಮದವನ್ನುಂಟುಮಾಡದ) ನಾನಾ ವಿಧವಾದ ಪಾನೀಯಗಳನ್ನು ಕೊಡುವ ಕಲ್ಪವೃಕ್ಷ : ಕುಡಿದೊಡೆ ನೋರ್ಗಿಸದ್ಯವು ನಾಣ್ಗೆಡಿಸದವು ಮನಕ್ಕಲಂಪನೀವುವು ರತಮಂ ನಡೆಯಿಪ್ಪವೆನಿಸುವ ಮಧುಗಳನೆಡೆಯುಡುಗದೆ ಕುಡುಗುಮುಚಿತ ಮದ್ಯಾಂಗಕುಜಂ (ಆದಿಪು. ೩-೩೨) ; ಮದ್ಯಾಂಗಮೆಂಬುದು ಮದವಿಕಾರಮನಾಗಿಸದೆ ನಾನಾ ವಿಧ ಪಾನವಿಶೇಷಂಗಳನಿತ್ತು ದಂಪತಿಗೆ ರಾಗಮಂ ಪುಟ್ಟಿಸುವುದು (ಶಾಪುಂಪು. ೯). [ಸಂ.]

**ಮದ್ಯಾರ್ಕ** (ನಾ). = ಮದ್ಯಸಾರ ೨ : ಅದು ಎಣ್ಣೆಯೊಳಗೂ ಮದ್ಯಾರ್ಕದೊಳಗೂ ಬಲುಬೇಗ ಕರಗುವುದು (ಮುಂಬಯಿ. ೪-೬೨).
[ಮದ್ಯ + ಅರ್ಕ$_1$ (< ಅರಕ$_1$)]

**ಮದ್ರ** (ನಾ). ೧. ಸುಖ ; ಸಂತೋಷ. ೨. ಒಂದು ದೇಶದ ಹೆಸರು : ಮ[ಹಾಭಾ. ಮಾ]ದ್ರವಸುಧರೇಂದ್ರರೌದ್ರವಿದ್ರಾವಣ ಪರಾಕು (ದಾಶರಥಿ. ೩-೧ ಕ). [ಸಂ.]

**ಮದ್ರಸ** (ನಾ). ಒಂದು ಬಗೆಯ ಔಷಧೀ ಸಸ್ಯ : ಮದ್ರಸ. ಕಾಡರಳಿ (ವೈದ್ಯನಿ. ೩೭-೭೩೪೩). 'ಮಧುರಸೆ' ಪರಾ. [ ? ]

**ಮದ್ಲೆಮರ** (ನಾ). ಒಂದು ಬಗೆಯ ಮರ : (ವೈದ್ಯನಿ. ೩೫-೭೭೩).
[ ಮದ್ಲೆ$_0$ + ಮರ$_1$]

**ಮಧು** (ಗು). ೧. ಸವಿಯಾದ ; ರುಚಿಯಾದ. ೨. ಸುಖಕರವಾದ : ಆಹ್ಲಾದಕರವಾದ. (ನಾ). ೩. ಜೇನುತುಪ್ಪ : "ಸಾರಘಂ. ಮಾಕ್ಷಿಕಂ . . . ಮಧು, ಪುಷ್ಪರಸಃ –ಈ ೫ ಜೇನ ತುಪ್ಪಂ" (ಪಲಾಯು. ೧೦೨-೯೭೭): ರುಚಿಯೊಳು ಮಧುರವು ಮಧುವಹುದದಕಿಂತ ಮಧುರವು ತಾನಹುದಮೃತ (ಇಂತಾಕ. ೨೨೨-೯೬). ೪. ಹೂವಿನ ರಸ : ಮಕರಂದ : "ಮಕರಂದಃ. ಮಧು—ಈ ೨ ಪೂವಿನ ಬಂಡು" (ಪಲಾಯು. ೩೦-೩೪). 'ಮಧುಕರ' ಪರಾ. ೫. ಅಮಲೇರಿಸುವ ಪಾನೀಯ ; ಕಳ್ಳು : ಮದ್ಯ: ಮಧು ಸೀತುಂ ಕಟು ಸೀದು ಪೋ ಪುಳಿತ ಕಳ್ಳಲ್ತು (ಶಂಕಥಾ. ೪-೬೮) ; ಕಂಸವಧುಗಳ್ ಮಧುವಂ ಕುಡಿವೊಂದು ಕಾಳಭೂಜಾಳಿಯ ತೀವ್ರ ಘೋರರವವಲ್ಲಿಗೆ ಪೋಗಲೆ ಬಾರದು (ಜಗಾ. ೪-೩೯). ೬. ನೀರು. ೭. ಸಕ್ಕರೆ. ೮. ಸವಿ ; ಮಾಧುರ್ಯ. ೯. ಹಾಲು ಮತ್ತು ಹಾಲಿನಿಂದ ಉತ್ಪನ್ನವಾಗುವ ಪದಾರ್ಥ. ೧೦. ಜೇನುಹುಟ್ಟು. ೧೧. ಜೇನು ಮೇಣ. ೧೨. ಚೈತ್ರಮಾಸ : "ಚೈತ್ರಮಾಸಮಂ ಮಧುವೆಂಬುದು" (ಪಲಾಯು. ೦೯-೦೦೪). ೧೩. ವಸಂತ ಋತು : ನೋಟ್ಪಂ ಬೆಲೆಗೊಟ್ಟು ತಾರ ಮಧುವಂ ಮಲಯಾನಿಲನಂ ಮನೋಜನಂ ಕೌಮುದಿಯಂ (ಅರ್ಜನೀ. ೨-೪೫) ; ಅರಸುಮಗಂ ನಡೆದಂ ಮದನಂ ಮಧುಗೂಡಿ ನಡೆವ ತೆಱದಿ (ಜಯನೃ. ೪-೧). ೧೪. ವಿಷ್ಣುವಿನಿಂದ ಹತನಾದ ಒಬ್ಬ ದೈತ್ಯ ; ಈವನು ವಿಷ್ಣುವಿನ ಕರ್ಣಮಲದಿಂದ ಹುಟ್ಟಿದವನೆಂದು ಹೇಳುತ್ತಾರೆ : ಮಧುಕೈಟಭಪ್ರಳಯಸಮವರ್ತಿ ಜಯ (ಜಗಾ. ೩-೦೦೩ ಕಗೆ); ಈತನಾ ಮಧುಕೈಟಭನ ಮುಱಿದಾತ (ಕುಮಾ.ರಾ. ೯-೩೪). ೧೫. ಅಶೋಕವೃಕ್ಷ. ೧೬. ಜೀವನಿಯೆಂಬ ಸಸ್ಯ. ೧೭. ತುಂಬಿ : ಭ್ರಮರ. ೧೮. ಹೆಜ್ಜೇನು : ಮಧು ತಾಕಿ ಬಿದ್ದವರಿಗೆ:– ಕಿಱುನೆಲ್ಲಿಯ ಸಮೂಲವಂ ತಂದು ಎಳನೀರಲ್ಲಿ ಅರೆದು ಎಳನೀರಲ್ಲಿ ಕವಡಿ ಕೊಳ್ಳಲು ಉರಿತ ನಿಲ್ಲುವದು (ವೈದ್ಯಾ. ೦೩೪). ೧೯. ತವರ : "ತವರ ಪರಾಗ ಭ್ರಮರಂ ತವೆ ದೈತ್ಯರ್ ಕ್ಷುದ್ರ ಚೈತ್ರಮಾಸಂ ಸುರೆ ಜೇನ್ ಪವಣಿಸಲಮೃತಂ ತೀವಿದ ನವಸಂಖ್ಯೆಯ ಪೆಸರುವೊಪ್ಪೆ ಮಧುಶಬ್ದಂಗಳ್" (ನಾನಾರ್ಥ. ೪೨) ; "ದನುಜಾಮೃತವಂಶ ಪರಾಗ ಭೃಂಗ ಕ್ಷುದ್ರಾಸವ ಚೈತ್ರಮಾಸ ಮಧುವೆಂಬಿವಕಂ" (ನಾನಾರ. ೧೪). [ಸಂ.]

**ಮಧುಕ** (ಗು). ೧. ಸವಿಯಾದ ; ಮಧುರವಾದ. ೨. ಇಂಪಾದ : ಕರ್ಣಮಧುರವಾದ. ೩. ಜೇನುತುಪ್ಪದ ಬಣ್ಣವುಳ್ಳ. (ನಾ). ೪. ಇಪ್ಪೆಮರ: "ಇಪ್ಪೆ ಮಧುಕಂ" (ಮಂಗರಾ. ೪೨-೩೮); ಎಲವಂ ಸಂಪಗೆ . . . ಮತ್ತಿ ಮಧುಕಂ ಮಗ್ಗಾರೆ . . . ಒಪ್ಪುಗುಮಾ ವನಾಂತದೊಳ್ (ರಾಜಶೇ. ೩-೩೬); ಪಲಾಶ ಪಿಪ್ಪಲ ಮಧುಕ ಹೊನ್ನ ಕದಂಬ ಗುಗ್ಗುಳ ನಾಗ ಪುನ್ನಾಗ (ಉತ್ತರ. ೦೦-೪). ೫. ಅಶೋಕವೃಕ್ಷ. ೬. ಒಂದು ಬಗೆಯ ಪಕ್ಷಿ. ೭. ಒಂದು ಬಗೆಯ ಸಸ್ಯ ; ಜ್ಯೇಷ್ಠಮಧು ; ಯಷ್ಟಿಮಧುಕ : ಅತಿಮಧುರ : "ಆ ಮಧುಕಮೆನೆ ಯಷ್ಟಿಮಧುಕಮೆನಿಸಿಕ್ಕು" (ಮಂಗರಾ. ೪೦-೩೭) ; ಮಧುಕಂ ಮಧೂಕಪುಷ್ಪಂ ಮಧುಶರ್ಕರೆ ಕೋಷ್ಠಮೆಂಬಿವಂ ಮೊದಲೊಳ್ ಪೂಟ್ಕಿ (ಲೋಕೋಪ. ೭-೪೦). ೮. ತವರ. ೯. ಹೊಗಳುಭಟ್ಟ ; ಸ್ತುತಿಪಾಠಕ. ೧೦. ಅಮೃತಬಳ್ಳಿ. [ಸಂ.]

**ಮಧುಕವ್ಯೋಜ** (ನಾ). ಒಬ್ಬಾತನ ಹೆಸರು : ಮಧುಕವ್ಯೋಜರುಂ ಬೆಣ್ಣೆಗೇಸಿಯುಂ ಎಱೆಯಮ್ಮನುಂ ಇನ್ನಿವರಿಬ್ದುಕೊಟ್ಟೋರ್ (ಎಕ. VI, ೫೪ಮು. ೩-೦೦; ೫೦೪೫). [ಮಧುಕ + ಅಮ್ಮ$_1$ + ಓಜ$_1$ (<ಒವರ್ಜ)]

**ಮಧುಕರ** (ನಾ). ೧. ದೊಡ್ಡ ಗಾತ್ರದ ಕಪ್ಪುಬಣ್ಣದ ದುಂಬಿ; ಭ್ರಮರ: "ಷಟ್ಪದಂ ಮಧುಕರಂ ಮಧುಪಮಾ ಭ್ರಮರಪುಂಸ್ಕಂ" (ಶಬ್ದಮ. ೩೨-೧೦); ವಲ್ಲಕೀಗೇಯದ ದನಿ ಮಾಣಲ್ಕೆ ಗೀತದವಸಾನದೊಳುನ್ಮದಮಧುಕರಸ್ವನಂ ಮಾಣ್ದದ ಕುಮುದಿನಿಯಂತೆ ಕಾಂತೆ ಕಣ್ಗೆಸೆದಿರ್ದಳ್ (ಕಾದಂಪೂ. ೬೪) : ಮಂದೈಸಿ ನೆಗೆದ ಕೆಂಧೂಳಿಯಿಂದೆ ಮುಂದುಗೆಟ್ಟು ಮೊರೆವ ಮಧುಕರಂಗಳುಂ (ಪುಶ್ಯ. ೨-೪೯ ವ). ೨. ಕಾಮುಕ; ವಿಟ; ಸ್ತ್ರೀಲಂಪಟ. [ಸಂ.]

**ಮಧುಕರವೃತ್ತಿ** (ನಾ). ತುಂಬಿಯು ನಾನಾವಿಧವಾದ ಹೂಗಳಿಂದ ಮಧುವನ್ನು ಸಂಗ್ರಹಿಸಿ ತರುವಂತೆ, ಬೇರೆ ಬೇರೆ ಮನೆಗಳಿಂದ ಭಿಕ್ಷಾನ್ನವನ್ನು ತರುವ ವೃತ್ತಿ,–ಉದ್ಯೋಗ: ಮಧುಕರವೃತ್ತಿ ನನ್ನದು ಅದು ಬಲು ಚೆನ್ನದು (ಪುರಂದ. ೨-೪ ಪಲ್ಲವಿ). [ಸಂ.]

**ಮಧುಕರಿ** (ನಾ). ೧. ಹೆಣ್ಣುದುಂಬಿ; ಭ್ರಮರಿ: ಮಧುಕರಿ ನವಾಮ್ರದೊಳ್ ಪಾಯ್ದುಮಲವದೊಳ್ ಪಾಯ್ದುಪುದೇ (ಶಾಂತಿಪು. ೫-೦೫೬): ಹಂಸರುತಿ ಮಧುರಮಧುಕರೀಝಂಕಾರಂ . . . ಇತ್ತುವು ಸುಖಪ್ರಬೋಧಮನಾಗಳ್ (ಮಲ್ಲಿಪು. ೪-೩೮). ೨. ನಾನಾಬಗೆಯ ಹೂಗಳಿಂದ ದುಂಬಿ ರಸವನ್ನು ಸಂಗ್ರಹಿಸುವಂತೆ, ಬೇರೆಬೇರೆ ಮನೆಗಳಿಂದ ಭಿಕ್ಷಾನ್ನವನ್ನು ತರುವುದು; ಭಿಕ್ಷೆ: ವಿದ್ಯಾರ್ಥಿಗಳು ಮಧುಕರಿಯಿಂದ ತರುವ ಅನ್ನ ಒಪ್ಪತ್ತಿನ ಊಟಕ್ಕೂ ಸಾಲದು (ಮುಗಿಪು.೬); ನೀನು ಮಧುಕರಿ ಬೇಡುವಿಯಾ? (ಕವಲು. ೨೦). ೩. ಒಂದು ಬಗೆಯ ಚರ್ಮರೋಗ; ಕುಷ್ಠರೋಗ: ಪಾಳನಿಗೆ ಮುದಿವಯಸ್ಸಿನಲ್ಲಿ ಮಧುಕರಿ ಬೇನೆ ಬಂದಿತು. ನಾನು ಅವನನ್ನು ಕಾಣುವಾಗ ಆತನ ಬೆರಳೊಂದೂ ಉಳಿದಿರಲಿಲ್ಲ (ಹುಚ್ಚುಬ. ೬೨). ೪. [ಸಂಗೀತ] ಒಂದು ರಾಗದ ಹೆಸರು: ಕೌಶಿಕೆ ವೇಳಾವಳಿ . . . ಮಧುಕ[ರಾಣಾಂ. ಕಾ]ರಿ . . . ಸಮುಸೋಧರೆಯೆಂಬ ಮೂವತ್ತುನಾಲ್ಕು ಭಾಷಾಂಗದಿಂದಾದ ರಾಗಂಗಳು (ಬಿವೇಕ. ೦೬೯). [ಸಂ. ಮಧುಕರೀ]

**ಮಧುಕೋಶ** (ನಾ). ೧. ಜೇನುಗೂಡು. ೨. ಮದ್ಯಪಾನಮಾಡುವ ಪಾತ್ರೆ: ಮದ್ಯಪಾತ್ರೆ. ೧, ೨: ಪಾನಪ್ರದೇಶದಂತೆ ಪರಿಗತಮಧುಕೋಶಶತಮುಂ (ಕಾದಂಸ್ತಾ. ೮೨೦). [ಸಂ.]

**ಮಧುಕ್ರಮ** (ನಾ). ೧. ಮಿತಿಮೀರಿ ಕುಡಿಯುವುದು: "ಮಧುವಾರಃ, ಮಧುಕ್ರಮಃ– ೨ ಹಲವು ತಡವೆ ಮದ್ಯಪಾನ ಮಾಡುವ ಕ್ರಮದ ಹೆಸರುಗಳು" (ಸಿದ್ಧಾಂತಿ. ೪೦೮). ೨. ಜೇನುಹುಟ್ಟು. [ಸಂ.]

**ಮಧುಗುಡಿಗ** (ನಾ). ಮದ್ಯಪಾನಮಾಡುವವನು: ಇದನಸುರ ಮಧುಗುಡಿಗ ಯುವ್ವನಿಗ ಮದನಗ್ರಹವ್ಯಾಧಿಗಂ ಮಂತ್ರೌಷಧಿಲ್ಲದೆಂಬುದು ಸಹಜವಾಯ್ತು (ಪಂಪಸೋ. ೯-೦೭). [ಮಧು + ಕುಡಿ₁ + –ಗ₂]

**ಮಧುಗುಡುಹಿ** (ನಾ). (ಹೂವಿನ) ಮಕರಂದವನ್ನು ಹೀರುವಂಥದು: ತುಂಬಿ: ಪರಪುಟ್ಟಗಳು ಬಂದುಗಲಸಾತಿಹ ಮಧುಗುಡುಹಿ ಷವಿಮೆಗಳ ಶಿವನಣುಗನೊದಸಿದಾ ಕರಹೀನವೆರೆಯ ಮೊಲದಿಕ್ಕೆವಿಂಡುಗಳ ನೆಲೆಗಟ್ಟು (ಗುಕಪ. ೨-೯೮). [ಮಧು + ಕುಡುಹಿ (< ಕುಡಿಹಿ)]

**ಮಧುಗೋಷ್ಠಿ** (ನಾ). ಮದ್ಯಪಾನಮಾಡುವವರ ಕೂಟ: ಸಂಗ್ರಮಧುಗೋಷ್ಠಿಯುಂ ಪರವಿ ಕಾಯು ಗಜೋತ್ಕರಮುಂ ಘಟಾಂಕಿತಂ (ಜಾನಕಿ. ೦೦೦). [ಸಂ. ಮಧುಗೋಷ್ಠೀ]

**ಮಧುಗ್ರಂಥಿ** (ನಾ). "ಮಕರಂದ ಸ್ರವಿಸುವ ಅಂಗ: ಮಧುಗ್ರಂಥಿ: ಮಕರಂದಗ್ರಂಥಿ" (Nectary. ಸಂಕಪ). [ಸಂ. ಮಧುಗ್ರಂಥಿನ್]

**ಮಧುಘೃತ** (ನಾ). ಜೇನುತುಪ್ಪ: ಮಧುಘೃತವ ಇಕ್ಕಿ ನೆಕ್ಕಲು ಖಡ್ಗಧಾರೆಗೆ ಸಿಕ್ಕಿ ನಾಲಗೆ ಸೀಳುವಂದದಲಾಕ್ಕಿ ವಿಷಯಸುಖಕ್ಕೆಳಸಿ ಕಡುದುಃಖ ಬಡುತಿಹರು (ಅಮೃತ. ೨-೩೨). [ಸಂ.]

**ಮಧುಚಂದ್ರ** (ನಾ). ವಿವಾಹವಾದ ತರುಣದಲ್ಲಿ ನವದಂಪತಿಗಳು ಕೈಗೊಳ್ಳುವ ವಿಹಾರ: ನೂತನದಂಪತಿಗಳು ಹಳ್ಳಿಯಲ್ಲಿ ತಮ್ಮ ಮಧುಚಂದ್ರವನ್ನು ಸಂತೋಷವಾಗಿ ಕಳೆದರು (ಅಕಪ. ೦೯೭).

[☞ ಇದು ಇಂಗ್ಲೀಷಿನ 'Honeymoon' ಎಂಬುದರ ಅನುವಾದರೂಪ]

**ಮಧುತೆಂಗು** (ನಾ). ಒಂದು ಬಗೆಯ ತೆಂಗು: "ಮಧುನಾಳಿಕೇರಃ— ಮಧುತೆಂಗು" (೬ಸಂ. ೦೨೨). 'ಮಧುಫಲ' ಪರಾ. [ಮಧು + ತೆಂಗು₃]

**ಮಧುದೂತಿ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು; ಅದಿರ್ಗಂತಿ; ಅದಿಮುಕ್ತೆ; ಮಾಧವಿ: ಮುದದಿಂದಂ ಮಧುದೂತಿಯುಂ ಮೊಗಮಲರ್ಚುತ್ತುಂ . . . ವಸಂತರಾಜನೊಸೆದೇಳ್ತಂದು (ಗೀಳ. ೬-೪೦); ಮೊಡವೆಗಳಂತೆ ಮೂಡೆ ಪೊಸಮೊಗ್ಗೆಗಳಾ ಮಧುದೂತಿಯಲ್ಲಿ . . . ಜವ್ವನಮುನಾಂತವೊಲಾ ವನಲಕ್ಷ್ಮಿ ತೋರ್ಜಿದಳ್ (ರಾಜಕೀ. ೯-೪೮). [ಸಂ. ಮಧುದೂತೀ]

**ಮಧುದ್ರವ** (ನಾ). ೧. ಕೆಂಪುಹೂಗಳನ್ನು ಬಿಡುವ ಒಂದು ಬಗೆಯ ಮರ. ೨. ಕಳ್ಳು; ಮದ್ಯ: ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮಂ ಸವಿದೀಂಟುವಲ್ಲಿ ತನ್ನಧರದ ರಾಗದೊಳ್ ಪೊರೆದುದಂ ಮಧುವಂ ಬೆಱಗಾಗಿ ನೋಡುತುಂ ಮಧುರಸಮಲ್ತು ಕುಂಕುಮರಸಂ ದಿಟಮೆಂದು ಬಟ್ಟಕ್ಕೆ ಶಂಕೆ ತನ್ಮಧುರಸುಗಂಧದಿಂ ತೊಲಗೆ ಸೇವಿಸಿದಳ್ ಮಧುವಂ ನಿಜೇಚ್ಛೆಯಿಂ (ಜಗಪ. ೦೬-೦೦೬). [ಸಂ.]

**ಮಧುದ್ರುಮ** (ನಾ). ೧. ಹಿಪ್ಪೆಮರ: ಮಧೂಕವೃಕ್ಷ: "ಮಧೂಕಃ, ಗುಡಪುಷ್ಪಃ, ಮಧುದ್ರುಮಃ, ವಾನಪ್ರಸ್ಥಃ, ಮಧುಷ್ಠೀಲಃ – ೫ ಬಿಪ್ಪೇಗಿಡ, ಹಿಪ್ಪೇಮರ" (ಸಿದ್ಧಾಂತಿ. ೦೦೮). ೨. ಮಾವಿನ ಮರ. [ಸಂ.]

**ಮಧುನಾಶ** (ನಾ). ಒಂದು ಬಗೆಯ ಬಳ್ಳಿ: "ಸಣ್ಣಗರಸೆಹಂಬು, ಮಧುನಾಶ, ಹಿರಿಯ ಕಾಗೆದೊಂಡೆ" (ಸಸ್ಯ. ೬೭); ಸಣ್ಣಗೆರಕಪಂಬು, ಮಧುನಾಶ (ವೃಕ್ಷಿಗ. ೪೧-೬೦೬). [ಸಂ.]

**ಮಧುನಾಳ** (ನಾ). ಒಂದು ಬಗೆಯ ಭಕ್ಷ್ಯ: ಎಷ್ಟಮಷ ಪೊಂದಟ್ಟಿಗಳೊಳಿನಿದಿಷ್ಟರಿಗೆ ಮಧುನಾಳ ಮಂಡಗೆ ಪೇಣಿ ನಲ್ಗೈದ ಲಡ್ಡುಗೆಯ ಬಿಚ್ಚೂರಿಗೆಗಳಂ ಬಡ್ಡಿಸಿದರಂಗನೆಯರು (ಮುದೇಪು. ೦೬-೨೪). [ ? ]

**ಮಧುಪ** (ನಾ). ೧. ತುಂಬಿ; ಭ್ರಮರ: "ಮಧುಕರಃ, ಮಧುಪಃ, ಮಧುವ್ರತಃ . . . ದ್ವಿರೇಫಃ—ಈ ೧೩ ತುಂಬಿ" (ಕರಾಯು. ೪೩-೦೦೦); ಮೃಗಯಾವ್ಯಾಜದಿನೊರ್ಮೆ ಶಂತನು ತೊಟಬ್ರವರ್ಷಂ ಪಳಂಚಲ್ಕೆ ತನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ ಸೋಲ್ತು (ಕುಮಾಭಾ. ೦-೬೦); ಕಿದಱುವ ಪೂವಲಿಗೆಱಗಿತು ಸುತ್ತುಂ ಮದ ಮಧುಪಾವಳಿಗಾವರಿಸುತ್ತುಂ (ಜಂದ್ರಪು. ೪-೬೨ ರಗಳೆ). ೨. ಮದ್ಯಪಾನಮಾಡುವವನು: ಹೆಂಡ ಕುಡಿಯುವವನು: ಆ ಮಧುಪರೆಲ್ಲರು ಹೀಗೆ ಆ ಪಾನೋತ್ಸವದಲ್ಲಿ ನಿಮಗ್ನರಾಗಿರುವಾಗ ಔರಂಗಜೇಬುಸುಲ್ತಾನನು . . . ಮುರಾದನ ತಂಬುವಿನ ಕಡೆಗೆ ಬಂದನು (ಶಿರಂಗ. ೦೪೩). ೧, ೨: ಎನ್ನ ದಾನವೀಂದ್ರಾಗಳುಂ ಮಧುಪಾಶ್ರಯುಂ ಧರೆಗವ್ಯವಚ್ಛಿನ್ನದಾನವಿಂದ್ರಾಗಳುಂ ವಿಬುಧಾಶ್ರಯುಂ ಗೆಲೆವಂದನೆನ್ನನ್ನಿಜೋನ್ನತಿಯಿಂದಮೀ ಪತಿಯೆಂದು ಮೆಚ್ಚಿ ವಿನಾಯಕಂ ಪಾನ್ನಿಮಿಚರ್ಗೆ ಕಬ್ಬಮುಂ ನಯದಿಂ (ಕುಕಭಾ. ೦-೬); ಚಿತ್ರಜನ್ನ ನೋಡ ನಿಜಾಪ್ತವರ್ಗವಳವಂ ಮಲಯಾನಿಲನಸ್ಥಿರಂ ರಣಕ್ರೀಡೆಗೆ ನಿಲ್ವನೇ ಪರಭೃತಂ ನಿನಗಪ್ಪನೆ ಯುದ್ಧದೊಳ್ಬಿಗುರ್ತೋಡದೆ ಮಾಣ್ಬನೇ ಮೃಗಧರಂ ಮಧುಪಂ ಕದನಕ್ಕೆ ಯೋಗ್ಯನೇ (ಕುಂಜಾಪು. ೦-೨೩). [ಸಂ.]

**ಮಧುಪಪ್ರಸಂಗಿ** (ನಾ). ೧. ತುಂಬಿಗಳಲ್ಲಿ ಅನುರಕ್ತವಾದುದು. ೨. ಮದ್ಯಪಾನ ಮಾಡುವವರ ಜೊತೆಗೆ ಸ್ನೇಹವುಳ್ಳುದು. ೧, ೨: ಜಡಾವಸಥಂ ಚಿಃ ಮಧುಪಪ್ರಸಂಗಿ ಖರದಂಡಂ ಮತ್ತನುತ್ತಬ್ಧಮಂ ಬಿಸುಟುತ್ಯುತ್ತಮವಿಂತುಂಟೆಂದು ಬಿರಿದಂ ಸಂತೋಷದಿಂ ವಾಣಿ ಬಂದು

ಸಮಂತಿರ್ಕೆ . . . ಜಿಹ್ವಾಗ್ರದೊಳ್ ರಂದ್ರನಾ(ಜಗಪಿ. ೧-೬).
[ ಸಂ. ಮಧುಪಪ್ರಸಂಗಿನ್ ]

**ಮಧುಪರ್ಕ** (ನಾ). ಮೊಸರು, ತುಪ್ಪ, ನೀರು, ಜೇನುತುಪ್ಪ, ಸಕ್ಕರೆ — ಈ ಐದರ ಮಿಶ್ರಣ; ೪ ದೇವತಾರ್ಚನೆಯಲ್ಲಿ ಹೇಳಿರುವ ಷೋಡಶೋಪಚಾರಗಳಲ್ಲಿ ಮಧುಪರ್ಕದ ಅರ್ಪಣೆಯೂ ಒಂದು. ಪೂಜ್ಯರಾದ ಅತಿಥಿಗಳಿಗೆ ಹಾಗೂ ವಿವಾಹಕಾಲದಲ್ಲಿ ವಧುವಿನ ತಂದೆಯ ಮನೆಗೆ ಬರುವ ವರನಿಗೆ ಸತ್ಕಾರಪೂರ್ವಕವಾಗಿ ಇದನ್ನು ಅರ್ಪಿಸುವುದು ಸಂಪ್ರದಾಯ : ಸದೀತಸೂಜಂ ಭಾರದ್ವಾಜಂಗೆ . . . ಅರ್ಘ್ಯಮೆತ್ತಿ ಮಧುಪರ್ಕ ಪೇತ್ರಾಸನ ತಾಂಬೂಲ ದಾನಾದಿಗಳಿಂ ಸಂತಸಂಬಡಿಸಿ (ಶಂಕಪು. ೨-೩೨ ವ); ಅರ್ಘ್ಯಪಾದ್ಯೋತ್ಕರದ ಮಧುಪರ್ಕಾ ಸನಾದಿಯಿನರಸ ಮಾಡಿದನು (ಕುಮ್ಯಾಭ. ೧೮-೨೩). [ಸಂ.]

**ಮಧುಪರ್ಣಿ** (ನಾ). ೧. ಅಮೃತಬಳ್ಳಿ : ಅಮೃತಬಳ್ಳಿ, ಮಧುಪರ್ಣಿ (ವೈಶಿಗ. ೬೩-೧೩೨೬). ೨. ನೀಲಿ ಗಿಡ. ೩. ಶಿವನೆ ಮರ.
[ ಸಂ. ಮಧುಪರ್ಣೀ ]

**ಮಧುಪರ್ಣಿಕೆ** (ನಾ). ೧. ಒಂದು ಬಗೆಯ ಮರ; ಶಿವನೆಮರ : "ಗಂಭಾರೀ, ಸರ್ವತೋಭದ್ರಾ, ಕಾಶ್ಮರೀ, ಮಧುಪರ್ಣಿಕಾ, ಶ್ರೀಪರ್ಣೀ, ಭದ್ರಪರ್ಣೀ, ಕಾಶ್ಮರ್ಯಃ—೭ ಶೀವನೆಯ ಮರದ ಹೆಸರು. ಕೆಲವರಿದಕ್ಕೆ ಕುಂಬಳಿಗಿಡವೆಂದು ಅರ್ಥಹೇಳುವರು" (ಸಿದ್ಧಾಂತಿ. ೧೨೦). ೨. ನೀಲಿಗಿಡ. ೩. ಅಮೃತಬಳ್ಳಿ. [ ಸಂ. ಮಧುಪರ್ಣಿಕಾ ]

**ಮಧುಪಾತ್ರ** (ನಾ). ಮದ್ಯಪಾನ ಮಾಡುವ ಬಟ್ಟಲು; ಮದ್ಯಪಾತ್ರೆ : "ಮಧುಪಾತ್ರಂ ಚಷಕಂ" (ಪಸು ಕೋ. ೪೦-೨೬). [ಸಂ.]

**ಮಧುಪಾತ್ರೆ** (ನಾ). = ಮಧುಪಾತ್ರ : ಮಧುಪಾಲಿಕೆಯೊರ್ವಳ್ ನವ ಮಧುಪಾತ್ರೆಯನೊಲ್ದು ಬಾಯ್ಗೆ ತರಲ್ (ಅದ್ವಪು. ೩-೭೬) ; ಮರಕತದ ಮಧುಪಾತ್ರೆ ನೀಲದ ಕರಗ ವೈಡೂರಿಯದ ಪಡಿಗದ ಚರರು ತಂದೊಟ್ಟಿದರು(ಕುಮ್ಯಾಗ. ೪-೧೩). [ ಸಂ. ಮಧುಪಾತ್ರ ]

**ಮಧುಪಾನ** (ನಾ). =ಮದ್ಯಪಾನ : ಗಾಳಿಗೆ ಮಾತನಾಡುವರು ಹಾಜಿದ ಹಕ್ಕಿಗೆ ಪೋಹರೆಂಬರ್ . . . ಉಟ್ಟುದಂ ಕಳೆದು ನೆತ್ತಿಗೆ ಸುತ್ತುವರಬ್ಬ ಬಿಯಿಂದೆ ಕಾಟಕ್ಕೋಟಿಗಳಾಗಿ ಕೂಗುವರದೇಂ ಮಧುಪಾನದ ಸೊಕ್ಕಾ ಸಾಲದೇ (ಸುಕುಸು. ೧೩-೩೦); ಬಿಡದೆ ಮಧುಪಾನಮಂ ಮಾಡಿ . . . ಸೊಗಯಿಸಿದರು (ಕೃವಿಪಾ. ೩೦-೧೬). [ಸಂ.]

**ಮಧುಪಾನಗೋಷ್ಠಿ** (ನಾ). ಮದ್ಯವನ್ನು ಕುಡಿಯುವವರ ಕೂಟ.— ಗುಂಪು : ಇರೆ ಪದ್ಮರಾಗಚಷಕಂ ನಿಜಹಸ್ತತಳಾಗ್ರದೊಳ್ ಮನೋಹರಿ . . . ನವೋದಿತಚಂದ್ರಬಿಂಬಮಂ ಧರಿಯಿಸಿದಿಂದ್ರದಿಗ್ವನಿತೆಯಂತೆಸೆದಳ್ ಮಧುಪಾನಗೋಷ್ಠಿಯೊಳ್ (ಜಗಪಿ. ೧೩-೧೧೩) ; ಕಾಮಿನಿ ನಯದಿಂ ಕರಂ ನಲಿದು ನರ್ತಿಸಿದಳ್ ಮಧುಪಾನಗೋಷ್ಠಿಯೊಳ್ (ಶೃಂಗಾರ. ೧-೪೩).
[ ಸಂ. ಮಧುಪಾನಗೋಷ್ಠೀ ]

**ಮಧುಪಾಯಿ** (ನಾ). ೧. ತುಂಬಿ. ೨. ಮದ್ಯಪಾನ ಮಾಡುವವನು.
[ಸಂ. ಮಧುಪಾಯಿನ್]

**ಮಧುಪಿಂಗಳ** (ನಾ). ಜೇನುತುಪ್ಪದಂತಹ ಹೊಂಗೆಂಪು ಬಣ್ಣ : ಶಾರದ ನೀರದಾಕೃತಿಯ ಮೆಯ್ ಮಧುಪಿಂಗಳಮಪ್ಪ ದಿಟ್ಟಿ . . . ಒಪ್ಪಿದುದಾ ಗಜೇಂದ್ರದಾ (ತಂದ್ರಪು. ೦೨-೬೬). [ಸಂ. ಮಧುಪಿಂಗಳ]

**ಮಧುಪಿಚ** (ನಾ). ಬೇವಿನ ಮರ ಮತ್ತು ಅದರ ಹಣ್ಣು : ಮಧುಪಿಚವ ಮಧುರಕ್ಕೆ ಸಮಗಟ್ಟುವರೆಯೆನ್ನ ಹೃದಯದಜ್ಞಾನಹಂಕಾರವಂ ತವಿಸುತಂ ಹ್ರುದುವಾಕ್ಯ ಸುಗುಣಿ ನಿರಹಂಕಾರಿಯೆನಿಸು (ಕೃಚಪು. ೭-೨೩೨). [?]

**ಮಧುಪುಷ್ಪ** (ನಾ). ೧. ಒಂದು ಬಗೆಯ ಮರ ಮತ್ತು ಅದರ ಹೂವು ; ಬಕುಳ : ಬಕುಳದ ಹೂವಿಗೂ ಮಂಬಿಗೂ ಗಾಢವಾದ ನಂಟು. ಇದರಿಂದಲೇ ಈ ಹೂವಿಗೆ ಮಧುಪುಷ್ಪವೆಂಬ ಅನ್ವರ್ಥನಾಮ(ಪಸುಪೂ. ೪೦೦). ೨. ಅಶೋಕವೃಕ್ಷ. ೩. ಶಿರೀಷವೃಕ್ಷ; ಬಾಗೆ. ೪. ಹಿಪ್ಪೆಮರ. [ಸಂ.]

**ಮಧುಪೂರ** (ನಾ). ಈಚಲಮರ : "ಮಧುಪೂರದೊಳಿರೀಚಲು" (ಮಂಗರಾ. ೩೩-೦೩). [ಸಂ.]

**ಮಧುಪ್ರಸಂಗ** (ನಾ). ವಸಂತಋತುವಿನ ಸಮಯ : ಆ ಪ್ರಸ್ತಾವ ದೊಳ್ ಆ ಮಧುಪ್ರಸಂಗರಾಗರಸತರಂಗಿತೆಯಾದ ವನಲಕ್ಷ್ಮೀವಿಲಾಸಮಂ ವನಪಾಲಕನವನಿಪಾಲಕಂಗಱಿಪಲೆಂದು (ಮಲ್ಲಿಪು. ೩-೪೮ವ). [ಸಂ.]

**ಮಧುಪ್ರಿಯ** (ಗು). ೧. ಜೇನುತುಪ್ಪವನ್ನು ಮೆಚ್ಚುವ. (ನಾ). ೨. ತುಂಬಿ ; ಭ್ರಮರ. ೩. ಚೈತ್ರಮಾಸ. ೪. ಆಕರ್ಷಕವಾದ ಕಣ್ಣು. ೫. ವಸಂತನ ಮಿತ್ರ ; ಮನ್ಮಥ. ೬. ವಿಟ. ೭. ಈಶ್ವರ. ೮. ಬಲರಾಮ: "ವಿಟರುಂ ಬಲರಾಮಂ ಧೂರ್ಜಟಿಯಾಜಿಡಿ ಚೈತ್ರಮಾಸ ಪ್ರದ್ಯುಮ್ನನು ತಾ ಚಟುಲಾಕ್ಷಿಗಿದೇಳೆ ಪೆಸರುಂ ಪಟುತರ ವಾದುದು ಮಧುಪ್ರಿಯಾಖ್ಯೆಯ ನಾಮಂ" (ನಾನಾರ್ಥ. ೬೯) : "ಕಾಮ ಪಾಲ ಮದನ ನೇತ್ರ ಚೈತ್ರ ಶಿವ ಭೃಂಗಭುಜಂಗ ಮಧುಪ್ರಿಯಾಖ್ಯೆಯಂ" (ನಾನಾರ್ಥ. ೩೦). [ಸಂ.]

**ಮಧುಪ್ರೇಮಿ** (ನಾ). ಕಾಮ : ಮನ್ಮಥ : "ಪುಷ್ಪಾಯುಧಂ ಅನಿಮಿಷಧ್ವಜ ನನಂಗಾ ಮಧುಪ್ರೇಮಿ ಪುಷ್ಪಸನಂ ರತಿಪ್ರಭು . . . ಎನೆ ಮದನನಕ್ಕು" (ಮಂಗರಾ. ೬-೨೨). [ಸಂ. ಮಧುಪ್ರೇಮಿನ್]

**ಮಧುಪ್ಲುತ** (ನಾ). ಜೇನುತುಪ್ಪದೊಡನೆ ಬೆರೆತುದು ; ಮಧುಪರ್ಕ : ಈ ವಿಧದಿ ಮಧುಪ್ಲುತದ ನಿನಗೀವೆವೆಲೆ ಪೃಥ್ವೀಶಯೆಂದು ದ್ವಿಜಾವಳಿಗೆ (ಅರಾಮ. ೨-೯-೪೯). [ಸಂ.]

**ಮಧುಫಲ** (ನಾ). ೧. ಒಂದು ಬಗೆಯ ದ್ರಾಕ್ಷೆ. ೨. ಒಂದು ಬಗೆಯ ತೆಂಗು : "ಮಧುಫಲಃ — ಮಧುತೆಂಗು, ಪಣ್ಣಿನ ವಾಲೆ" (೬ಶಿ. ೦೨೦). [ಸಂ.]

**ಮಧುಭೇದ** (ನಾ). ಮಧುವೆಂಬ ರಾಕ್ಷಸನನ್ನು ಸೀಳಿದವನು : ವಿಷ್ಣು : ಮಧುಭೇದಮನದಿಷ್ಟವರದ . . . ಸಂಗಮೇಶ್ವರ ರಕ್ಷಿಸನ್ನ ಸತತಂ (ಶ್ರೀಶರಾ. ೬-೧). [ಸಂ.]

**ಮಧುಮಂಚ** (ನಾ). ನವದಂಪತಿಗಳ ನಿಷೇಕಕ್ಕಾಗಿ ಸಿದ್ಧಪಡಿಸಿದ ಮಂಚ : ಎಳೆಹರೆಯದ ನವವಧುವಿನ ಪಾಣಿಗ್ರಹಣಮಾಡಿ ಆಗಳೆಯ ಮಧುಮಂಚಕ್ಕೆ ಅವಳನ್ನು ಒಯ್ಯುತ್ತಿದ್ದರೊ ಎಂಬಂತೆ, ಮಹಾಋಷಿವಾರ ಮನಸ್ಕರಾಗಿದ್ದರು (ಮಲವು. ೪೦೯). [ಸಂ.]

**ಮಧುಮಂಟಪ** (ನಾ). ಚೆಲುವಾದ ಮಂಟಪ : ಬಣ್ಣಕಾಗದದ ಮಧು ಮಂಟಪವ ಮಾಡಿ ಮಣ್ಣ ಬೊಂಬೆಯ ದೇವರೆಂದು ಕೊಂಡಾಡಿ,ಅಣ್ಣನನು ಬದುಕಿಸಿಕೊಡೆಂದು ವರ ಬೇಡಿ,ಕಣ್ಣೀರ್ ಮಿಡಿದ ನೆನಹು ವಿನಾಪುದು ನಯನವಾ (ಕಾವ್ಯ. ೨೩-೬). [<ಸಂ. ಮಧುಮಂಡಪ]

**ಮಧುಮಕ್ಷಿಕೆ** (ನಾ). ಜೇನುನೊಣ : "ಸರಘಾ, ಮಧುಮಕ್ಷಿಕಾ—ಈ ೨ ಜೇನ ನೊಣ" (ಶಬ್ದಮ. ೪೩-೦೦೨). [ಸಂ. ಮಧುಮಕ್ಷಿಕಾ]

**ಮಧುಮತಿ** (ನಾ). ೧. ಸವಿಯಾದುದು. ೨. ಪ್ರಿಯವಾದವಳು. ೩. ಒಂದು ಬಗೆಯ ಬಳ್ಳಿ. ೪. [ಯೋಗ] ಸಂಪ್ರಜ್ಞಾತಸಮಾಧಿ ಸಿದ್ಧಿಗಳಲ್ಲಿ ಒಂದು : ಒಂದನೆಯ ಮಧುಮತಿಯೋ ಋತಂಭರಾ ಎಂದು ಹೇಳಲ್ಪಡುವುದು. ಇಲ್ಲಿ ಅಭ್ಯಾಸ ವೈರಾಗ್ಯದಿಂದ ರಜಸ್ತಮಸ್ಸುಗಳು ಪ್ರಾಯಃ ಕ್ಷೀಣವಾಗಿ ಸುಖಪ್ರಕಾಶಮಯವಾದ ಚಿತ್ತದ ಭಾವನೆಯಿಂದ ವಿಶದಪ್ರಕಾಶ ಸ್ವರೂಪಚಿತ್ತ ಸಿದ್ಧಿಯಾಗುವುದು (ಹಿಂತಶಾ. ೦೦೮).
[ಸಂ. ಮಧುಮತೀ]

**ಮಧುಮತ್ತ** (ಗು). ೧. ಮದ್ಯಪಾನದಿಂದ ಅಮಲೇರಿದ : ನಿಮಿರ್ದಕ್ಷಿ ಗಳ್ಗೆ ರಾಗದ್ಯುಮಣಿಸೇವೆಯಿಂ ನೆಗೆದಿರೆ ರಂಜಿಸಿದರ್ ಮಧುಮತ್ತಕಾಂತೆಯರ್

(ಜಗು. ೧೬-೧೦೯). (ನಾ). ೨. ಮದ್ಯಪಾನಮಾಡಿ ಮತ್ತೇರಿದವನು : ರಘುನಂದನನ ನರ್ತಿಸಲ್ ತೊಡಗಿದನು ಭಾವದ ಸಮಾಧಿಯಿಂ ಮಧುಮತ್ತನಂತೆ (ಶ್ರೀರಾಪಟ. ೩೭-೨೯೭). [ಸಂ.]

**ಮಧುಮಥನ** (ನಾ). ೧. ಮಧುವೆಂಬ ರಾಕ್ಷಸನನ್ನು ಸಂಹರಿಸಿದವನು; ಕೃಷ್ಣ : ಅಂತಾ ಬಾಲೆ . . . ಮಧುಮಥನನ ಕಣ್ಣಿಂ ಬಂಚಿಸಿ . . . ವನವನಿದ್ದೊಮೆಂದು (ಶಂಕಪಾ. ೩.೦೦ ಪ). ೨. ವಿಷ್ಣು : ಕಪ್ಪಾದ ವಿಂಧ್ಯವು ಬಿಳಿಯೋಡದಿಂದೆಸೆವುದಿದು ಹಾಲ್ಗಡಲ ಕಡೆಹದೊಳೊಗೆದ ತುಂತುರಿನೊಳು ತೊಪ್ಪಿದ ಆ ಮಧುಮಥನನಂತೆ (ಗಾಭಾಸ. ೨-೧೭). [ಸಂ.]

**ಮಧುಮರ್ದನ** (ನಾ). ೧. = ಮಧುಮಥನ ೧ : ಖಳನಿದಿರಾಗಿ ಮಧುಮರ್ದನನ ಹಳಚಿದನು (ಕುಮ್ಮಾ. ೧೦-೭೭). ೨. [ಜೈನ]ವಾಸುದೇವ; ಕೃಷ್ಣ : ಬಲಭದ್ರಂ ಮಧುಮರ್ದನಂಗೆ ಬಟಿಕಂ ಚಕ್ರೇಶಪಟ್ಟಂ ಜಗತ್ತಿಲಕ ತಾನೆನೆ ಕಟ್ಟಿ (ಅಪಂಪ್ರ. ೦೯-೩೦). [ಸಂ.]

**ಮಧುಮಹೋತ್ಸವ** (ನಾ). ವಸಂತಮಾಸದ ಉತ್ಸಾಹ,-ವಿಜೃಂಭಣೆ: ತೆಂಕಣಗಾಳಿ ಸೋಂಕಿದೊಡಂ . . . ಮಧುಮಹೋತ್ಸವಮಾದೊಡಂ . . . ನೆನೆವುದೆನ್ನ ಮನಂ ವನವಾಸಿದೇಶಮಂ (ಶಂಕಪಾ. ೪-೩೦). [ಸಂ.]

**ಮಧುಮಾಧವಿ** (ನಾ). ೧. ವಸಂತಕಾಲದಲ್ಲಿ ಅರಳುವ ಹೂವು : ವಸಂತದೊಳ್ ಮಧುಮಾಧವಿ ಮಕರಂದಿಯಾದುದು (ಶಬ್ದಾರ. ೨-೯೦). ೨. ಒಂದು ಬಗೆಯ ಮಾದಕಪಾನೀಯ. ೩. [ಸಂಗೀತ] ಒಂದು ರಾಗದ ಹೆಸರು : ರಾಗ ಮಧುಮಾಧವಿ (ಶಜಗೊ. ೦೯೩-೭) ; ಮಧುಮಾಧವಿ ಶಂಕರಾಭರಣ . . . ವರಾಳಿ ನಾಗವರಾಳಿ ನಾಗದಿವಿ ಕರ್ನಾಟಕಬಂಗಾಳ ಮೇಬಿಪ್ಪತ್ತೇ ರಾಗಾಂಗದಿಂದಾದ ರಾಗಂಗಳು (ಚವೀಕ. ೦೩೩).
[ಸಂ. ಮಧುಮಾಧವೀ]

**ಮಧುಮಾಸ** (ನಾ). ವಸಂತಋತು : ನೀಂ ಬರೆ ಭುವನಂಗಳೊಳ್ ನೆಗಟ್ಟುದೀ ಮಧುಮಾಸಂ (ಆದಿಪು. ೦೦-೦೦೦) ; ಜೀವಂ ಮಧುಮಾಸಕೆ ತೋಷಾವಹಮಿದು ಕೋಕಿಲಕ್ಕೆ (ಶಾಕುಂತ. ೭೯-೦೩೩); ಮತ್ತ ಮಧುಮಾಸವಿದು ಬನ್ನಿರೆಂದು ಸಾರುತ (ಕೃಚರಿ. ೯೯-೯). [ಸಂ.]

**ಮಧುಮಿತ್ರ** (ನಾ). ೧. ವಸಂತನ ಗೆಳೆಯನಾದ ಮನ್ಮಥ; ಕಾಮ : " ಕಾಮಂ [ಸಿರಿಗಂಪರಂ] ರತಿಮನೋಹರಂ ಮಧುಮಿತ್ರಂ " (ವಸ್ತುಕೋ. ೩-೨೩) ; ಮಧುಮಿತ್ರ ಜಗಜ್ಜೈತ್ರಾಯುಧಗೃಹವೆನೆ ವಿಕಚವಿಚಕಿಳಂ ಸೊಗಯಿಸುಗುಂ (ಕಂದ್ರಪು. ೬-೩೦) ; ಇದು ಮಧುಮಿತ್ರ ಮತ್ತಗಜರಾಜಿಯೊ ನೋಡಿದು ಪುಷ್ಪಚಾಪಸೌಖ್ಯದ ಸುರವಲ್ಲರೀತತಿಯೊ . . . ಪೇಳೆನೆ ಬಂದುದು ಭಾಮಿನೀಜನಂ (ರಾಜಶೇ. ೦೦-೦೨). ೨. ಮಕರಂದಪ್ರಿಯ ; ತುಂಬಿ ; ಭ್ರಮರ. ೩. ವಸಂತಋತು : ವಸಂತಮಾಸ. ೪. ಬಲರಾಮ. ೫. ಶಿವ : ಈಶ್ವರ : " ರುದ್ರನೊಳ್ ಸ್ಮರನೊಳೆಯೊಳು ವಸಂತನೊಳ್ ಬಲಭದ್ರನೊಳ್ ಮಧುಮಿತ್ರನಕ್ಕು " (ಮಂಗರಾ. ೦೩೦-೯೩). [ಸಂ.]

**ಮಧುಮಿತ್ರತೆ** (ನಾ). ೧. ಜೇನಿನಂತೆ ಸವಿಯಾಗಿರುವಿಕೆ. ೨. ಕಾಮನ ಅಸ್ತಿತ್ವ. ೧, ೨: ಅತನುತ್ವಂ ಜಘನದೊಳುನ್ನತಕುಚದೊಳನಲ್ಪ ವರ್ತಕತ್ವಂ ಮಧುಮಿತ್ರತೆ ವಚನದೊಳಿರೆ ಕಾಂತಾತತಿ ಪಡೆಮದೆ ಕಾಮಿನೀಸಮಾಖ್ಯೆಯನಿಳೆಯೊಳ್ (ರಾಜಶೇ. ೦೨-೩೯). [ಸಂ. ಮಧುಮಿತ್ರತಾ]

**ಮಧುಮೂತ್ರ** (ನಾ). ಸಿಹಿಮೂತ್ರರೋಗ ; ಸಕ್ಕರೆರೋಗ : ವ್ಯಕ್ತಿ . . . ಮೂತ್ರದಲ್ಲಿ ಸಕ್ಕರೆ ಹೋಗುವ ರೋಗ (ಮಧುಮೂತ್ರ) . . . ಲಕ್ಷ್ವ, ಅರ್ಧಾಂಗವಾತ, ಅದರ ಇತರ ರೂಪಗಳು — ಇವುಗಳಿಗೆ ತುತ್ತಾಗುತ್ತಾನೆ (ಶವಶೋ. I. ೪೦). [ಸಂ.]

**ಮಧುಮೇಹ** (ನಾ). = ಮಧುಮೂತ್ರ : ಮಧುಮೇಹವುಳ್ಳವರು ಪಥ್ಯ ಮಾಡಬೇಕು (ರೂಢಿ). [ಸಂ.]

**ಮಧುಯಷ್ಟಿಕೆ** (ನಾ). ೧. ಜ್ಯೇಷ್ಠಮಧು ; ಅತಿಮಧುರ : "ಮಧುಕಂ, ಕ್ಲೀತಕಂ, ಯಷ್ಟಿಮಧುಕಂ, ಮಧುಯಷ್ಟಿಕಾ — ೪ ಅತಿಮಧುರದ ಹೆಸರುಗಳು " (ನಿಘಂಟು. ೦೩೩). ೨. ಕಬ್ಬು. [ಸಂ. ಮಧುಯಷ್ಟಿಕಾ]

**ಮಧುರ** (ಗು). ೧. ಸವಿಯಾದ ; ಸಿಹಿಯಾದ ; ರುಚಿಯಾದ : ಎಲ್ಲಿ ಷಡುರಸಮಯದ ಭೋಜನವೆಲ್ಲಿ ಮಧುರಫಲೌಘದುಬ್ಬರ . . . ಅಲ್ಲಿ ನಿನ್ನುರವಣೆಗಳೊಪ್ಪುವದು (ಕುಮ್ಮಾರ್ಜು. ೦೩-೬೩). ೨. ಸುಖಕರವಾದ ; ಹಿತವಾದ ; ಆಪ್ಯಾಯಮಾನವಾದ : ಶರತ್ಕಾಲ ಮಧ್ಯಾಹ್ನವೆಂದು ಮಧುರತಾಪದಲ್ಲಿ ವರವಾನನು . . . ನಿದ್ರೆಹೋಗಿಬಿಟ್ಟರುವಂತಿದೆ (ಶಿಂಭಿ. II, ೩೩೩). ೩. ಇಂಪಾದ ; ಕರ್ಣಾನಂದಕರವಾದ : ಮಂಗಳಗಾಯಕಾಮಧುರಗಾನದಿನೆಚ್ಚರನೆಯ್ದಿ . . . ಅಂಗನೆ ಬಂದಳಂಗಜನ ಮಂಗಳಲಕ್ಷ್ಮಿಯೆನಲ್ (ಪುಷ್ಪಪು. ೩-೦೨೦). (ನಾ). ೪. ಸವಿಯಾದುದು; ಸಿಹಿಯಾದುದು : ಸಣ್ಣಂ ನಡು ತಿಣ್ಣಂ ಮೊಲೆ ಬಣ್ಣಂ ಪಸುರ್ವೆಸಟಿ ಬಣ್ಣವಧರಂ ಮಧುರಂ . . . ಬಣ್ಣಿಸಲ್ಕರಿದಪ್ಪ ಜಂಗಮಾಕೆಯ ರೂಪಂ (ಕಾವ್ಯಸಾ. ೨೮೦ ಕೂರ್ತ್ರಕ) ; ಬದುಕು ಸಾರ್ಥಕ ಮಧುರಮಾಯ್ತು ಶಿಶು ಸನ್ನಿಧಿಯ ಪ್ರೇಮಸೌಂದರ್ಯಮಹಿಮೆಯಲಿ (ಶ್ರೀರಾಪಟ. ೨೩-೬೦). ೫. ತವರ : " ಮಧುರಂ ತ್ರಪುವೆನಲು ವಂಗಮನೆ ತವರಂ " (ಶುಂಗರಾ. ೩೦-೩). ೬. ಕೆಂಪುಬಣ್ಣದ ಕಬ್ಬು : ರಸದಾಳಿಕಬ್ಬು : ಹಿಪ್ಪೆಗೆ ರುಚಿಯುಂಟೇ ಮಧುರಕ್ಕಲ್ಲದೆ (ಸೋಮಪಾ. ೦೨೦-೯೭೨). ೭. ಕಾಕಬಿ. ೮. ಒಂದು ಬಗೆಯ ಮಾವು. ೯. ಬಾದಾಮಿಯ ಗಿಡ. ೧೦. ಕಾಡು ಎಲಚಿ; ಆಡವಿ ಬೋರೆ : (*). ೧೧. ಅಕ್ಕಿ : (*). ೧೨. ಒಂದು ಬಗೆಯ ಗೋಧಿ ; ಸಣ್ಣಗೋಧಿ : (*). ೧೩. ಬಡೇಸೋಪು : (*) . ೧೪. ಸಿಂದಿಗಿಡ ; ಈಚಲು : (*). ೧೫. ಚನ್ನಂಗಿ : ಕಡಲೆ : (*). ೧೬. ಧರ್ಮನಾಥಪುರಾಣವೆಂಬ ಚಂಪೂಕಾವ್ಯವನ್ನು ಬರೆದ ಒಬ್ಬ ಕನ್ನಡದ ಕವಿ : ಕವಿ ಮಧುರನ ಮಾತುಗಳೇಂ ಸವಿಯೋ (ಧರ್ಮನಾ. ೦-೭೯). ೧೭. [ಕಾವ್ಯಮೀ] ಹತ್ತುಬಗೆಯ ಕಾವ್ಯಗುಣಗಳಲ್ಲಿ ಒಂದು ; P ಇದಕ್ಕೆ ' ಮಾಧುರ್ಯ 'ವೆಂತಲೂ ಹೆಸರು : ಅಗ್ರಾಮ್ಯ ವಚನ ವೃತ್ತಿ ಸಮಗ್ರರಸಾಪೂರ್ಣಮಪ್ಪುದದು ಮಧುರಂ (ಕಾವ್ಯಾವ. ೩೦೯). ೧೮. [ಸಂಗೀತ] ರಾಗದ ಲಕ್ಷಣಗಳಲ್ಲಿ ಒಂದು : ಸ್ವರ ಶ್ರುತಿ ಗಮಕಂಗಳಿಂ ಪುಟ್ಟಿದ ಗೀತಮಾದೊಡೆ ಸ್ವರ ಸುಸ್ವರ ಸುರಾಗ ಮಧುರ ಅಕ್ಷರ ಅಲಂಕಾರವೆಂಬಾಱು ಲಕ್ಷಣಮುಳ್ಳುದಾಗಿಹುದು (ಚವೀಕ. ೦೩೭). ೧೯. ಮೂರು ಸ್ವರಭೇದಗಳಲ್ಲಿ ಒಂದು : "ತಾರಮೆನಲುಚ್ಚದಾ ಧ್ವನಿಯಕ್ಕು ಮಧುರಮೆನೆ ಸಾರದಾ ಧ್ವನಿಯಕ್ಕು ಮಂದ್ರವೆಂದೆನಲು ಗಂಭೀರದಾ ಧ್ವನಿಯಕ್ಕು" (ಶುಂಗರಾ. ೨೩ ೩) ; ಯಥೋಚಿತ ತಾರ ಮಧುರ ಮಂದ್ರಂಗಳಿಂ ಹಾಡಿ (ಹಕಕಾ ೬-೬); ತಾರ ಮಧುರ ಮಂದ್ರ ತ್ರಯಂಗಳಂ ನಾಭಿ ಉದರಕಂಠವೆಂಬ ತ್ರಿಸ್ಥಾನವಱಿದು . . . ಪಾಡುವ ಗಾಯಕೋತ್ತಮರಿಂ (ಚಶಾತ. ೨-೦೦ ಪ). [ಸಂ.]

**ಮಧುರಂಗ** (ನಾ). ಒಂದು ಬಗೆಯ ಬಾಳೆ : ರಸಬಾಳೆ ಪುಟಬಾಳೆ ರಾಜಬಾಳೆ ಸಕ್ಕರೆಯೆಸೆವಾ ದೇವಾಳೆ ಕಬ್ಬಾಳೆ ಹಸುರುಗುಂದದ ಪಚ್ಚೆನಾಡಪು ಮಧುರಂಗ ಪಸರಿಸಿ ಮೆಱೆದುವರ್ತಿಯಲಿ (ಶಂಪಾ. ೩-೯೭) ; ಬಾಳೆಯ ಜಾತಿಗಳು — ರಾಜರಸಬಾಳೆ, ಪುಟ್ಟಬಾಳೆ (ಪುಟ್ಟ ಸುಗಂಧಬಾಳೆ). ಮಧುರಂಗ, ಗುಜ್ಜ (ಪಮ್ಮಕು. ೨೩೭). [ ? ]

**ಮಧುರಂಗಿ** ' ಮದರಂಗಿ ' ನೋ.

**ಮಧುರಕ** (ಗು). ೧. ಸವಿಯಾದ ; ಮಧುರವಾದ. (ನಾ). ೨. ಒಂದು ಬಗೆಯ ಗಿಡ ; ಹಕ್ಕಿಸಿಳ್ಳೆ : " ಕೂರ್ಚಶೀರ್ಷಃ, ಮಧುರಕಃ, ಶೃಂಗಃ, ಹ್ರಸ್ವಾಂಗಃ, ಜೀವಕಃ—೫ ಜೀವಕವೆಂಬುವ ಔಷಧ, ಹಕ್ಕಿಸಿಳ್ಳೆಗಿಡ" (ನಿಘಂಟು. ೦೪೩). [ಸಂ.]

**ಮಧುರತೆ** (ನಾ). ಸವಿ ; ಮಾಧುರ್ಯ : ಮಧುಕಂ ಮಧೂಕಪುಷ್ಪಂ ಮಧು ಶರ್ಕರೆ ಕೋಷ್ಮಮೆಂಬಿವಂ ಮೊದಲೊಳ್ ಪೂಣ್ಕೆಧಿಕಫಲವಾಗಿ ಪಡೆಗುಂ ಮಧುರತೆಯಿ [ ಯ ]ಂ (ಶೋಕೋಶ. ೬-೪೦). [ಸಂ. ಮಧುರತಾ]

**ಮಧುರತ್ವ** (ನಾ). ಸವಿ ; ಮಾಧುರ್ಯ. [ಸಂ.]

**ಮಧುರಧನ್ವ** (ನಾ). ಮನ್ಮಥ ; ಮದನ : ಮನಸಿಜನ ಮುದ್ರೆ ಮನ್ಮಥನಾಣೆ ಮಧುರಧನ್ವನ ಗಾಮಂ (ಶೀಲ್ಯ ತ. ೨-೭).
[ ಸಂ. ಮಧುರಧನ್ವನ್ ]

**ಮಧುರಭಾಷಿಣಿ** (ನಾ). ಸವಿಯಾದ ಮಾತನ್ನಾಡುವವಳು ; ಇಂಪಾಗಿ ನುಡಿಯುವವಳು : ಆ ಭೂರಮಣಂ ಬೆಸಗೊಳೆ ಕರವಾರಿಜಮಂ ಮುಗಿದು ಮಧುರಭಾಷಿಣಿ ನುಡಿದಳ್ (ರಾಜಶೇ. ೩-೬೫) ; ಕೇಳ್ದಳಿತ್ತನ ಸೂಯೆ ಮಧುರಭಾಷಿಣಿ ಜನಕಜಾತೆಯು ವದನದಿಂ ಸ್ವಯಂವರದ ವೃತ್ತಮಂ (ಶ್ರೀರಾಪಟ್ಟಾ. ೧೭೯-೬೨). [ ಸಂ. ಮಧುರಭಾಷಿಣೀ ]

**ಮಧುರರವ** (ನಾ). ಇಂಪಾದ ಧ್ವನಿ : ವಿದಿತ ಸಮಸಂಸ್ಕೃತೋದಿತ ಪದಂಗಳೊಳ್ಪುದಿದು ಬೆರಸಿ ಬರೆ ಕನ್ನಡದೊಳ್ ಮುದಮುಸವು ತರ್ಕಮತಿಶಯ ಮೃದಂಗಸಂಗೀತಕಾದಿ ಮಧುರರವಂಬೋಲ್ (ಶಬ್ದಾ. ೦-೩೫); ಮುಂದೆ ಬಂದೋದುವ ಮಂಗಳಪಾಠಕರ ಜಯಜಯಾದಿ ಮಧುರರವಂಗಳೊಳಮತಿಕ್ಷುಭಿತಮಾದಾಸ್ಥಾನಮಂಟಪದಿಂ ಮನುಜೇಂದ್ರಂ ಪೊಱಮಟ್ಟು (ಕಾದಂಪೂ. ೬೭). [ಸಂ.]

**ಮಧುರರಸ** (ನಾ). ೧. ಕಬ್ಬಿನ ಹಾಲು; ಕಬ್ಬಿನ ರಸ : ಸವಿಪೊಡೆ ಮಧುರರಸಂಬೊಲ್ ಕಿವಿಗಿನಿದಾಗಿರ್ಪ ವಚನವಿರಚನೆ ಮಧುರಂ (ಶಬ್ದಾ. ೨-೬೦). ೨. ಸವಿಯಾದ ದ್ರವಾಹಾರ : ಊಟದಲ್ಲಿ ಮೊದಲು ಮಧುರರಸಗಳನ್ನೂ . . . ಅಂತ್ಯದಲ್ಲಿ ಹುಳಿ ಮೊದಲಾದ ಮಿಶ್ರದ್ರವ್ಯಗಳನ್ನೂ ಭುಂಜಿಸಿದರೆ ಶೀಘ್ರವಾಗಿ ಜೀರ್ಣಿಸಿ ಬಲವನ್ನುಂಟುಮಾಡುವುದು (ಸಕವೃ. ೫೦). [ಸಂ.]

**ಮಧುರಸ** (ನಾ). ೧. ಕಬ್ಬು. ೨. ಜೇನುತುಪ್ಪ : ಆಗೊಂದು ಈಗೊಂದು ಹನಿಯನಿತ್ತರೆ ಸಾಕು ಹನಿಸದಿರು ಮಧುರಸವ ನನ್ನ ಮೇಲೆ (ಕರೊ್ಯಂ. ೪-೨). ೩. ಕಳ್ಳು ; ಮದ್ಯ : ವಿಧುಮುಖಿ . . . ಮಧುರಸಮುಲ್ಲು ಕುಂಕುಮರಸಂ ದಿಟಮೆಂದು ಬಟ್ಟಿಕ್ಕೆ ಶಂಕೆ ತನ್ಮಧುರಸ ಗಂಧದಿಂ ತೊಲಗೆ ಸೇವಿಸಿದಳ್ ಮಧುವಂ ನಿಜೇಚ್ಛೆಯಿಂ (ಜಗಪ. ೧೬-೧೦೬). [ಸಂ.]

**ಮಧುರಸೆ** (ನಾ). ೧. ಒಂದು ಬಗೆಯ ಸಸ್ಯ; ಕುರಟಗೆಗಿಡ : "ಮೂರ್ವಾ, ದೇವೀ, ಮಧುರಸಾ, ಮೋರಟಾ, ತೇಜನೀ, ಸ್ರವಾ. ಮಧೂಲಿಕಾ, ಮಧುಶ್ರೇಣೀ, ಗೋಕರ್ಣೀ, ಪೀಲುಪರ್ಣೀ— ೧೦ ಹೆಗ್ಗುರುಟಿಕೆಯ ಹೆಸರುಗಳು" (ಸಿದ್ಧಾಂತಿ. ೧೩೦). ೨. ದ್ರಾಕ್ಷೆ: "ಮೃದ್ವೀಕಾ. ಗೋಸ್ತನೀ, ದ್ರಾಕ್ಷಾ, ಸ್ವಾದ್ವೀ, ಮಧುರಸಾ—೫ ದ್ರಾಕ್ಷೆ ಹೆಸರುಗಳು" (ಸಿದ್ಧಾಂತಿ. ೧೩೬). ೩. ಹಾಲುತೊಟ್ಟಿನ ಗಿಡ. [ಸಂ. ಮಧುರಸಾ]

**ಮಧುರಾಲಾಪ**, ಮಧುರಾಳಾಪ (ನಾ). ೧. ಸವಿಯಾದ ಮಾತು,— ಸಂಭಾಷಣೆ : ಗಂಭೀರವಾದ ಈತನ ಆಕೃತಿಯನ್ನೂ ಮಧುರಾಲಾಪಗಳನ್ನೂ ನೋಡಿದರೆ ಪ್ರಭುವಿನಂತೆ ಕಾಣುವನು ( ಶಾಕುಂತ. ೧೩-೨ ). **ಮಧುರಾಳಾಪ:** ೧. ವಿದಿತಾಸ್ಪದಮುತ್ತರಮಾರ್ಗವರ್ಗ ಮಧುರಾಳಾಪಂ (ಶಬ್ದಾ. ೨-೬೨); ಈತನನು ಮಧುರಾಳಾಪದಲಿ ಮಾತಾಡಿಸುವೆನು (ತೊರವೆ. ೩-೪-೧೬). ೨. ಸವಿಯಾಗಿ ಮಾತಾಡುವವನು : ಭೂಪಂ ಬೆಸಗೊಳೆ ಮಧುರಾಳಾಪಂ ಬಿನ್ನವಿಕುಂ (ಶಾಂತಿಪು. ೫-೩೦). [ಸಂ.]

**ಮಧುರಾಳಾಪ** 'ಮಧುರಾಲಾಪ' ನೋ.

**ಮಧುರಿಕೆ** (ನಾ). ಒಂದು ಬಗೆಯ ಸೊಪ್ಪು; ಸಬ್ಬಸಿಗೆ : "ಶಾಲೇಯಃ. ಶೀತಶಿವಾ. ಛತ್ರಾ, ಮಧುರಿಕಾ, ಮಿಸಿಃ, ಮಿಶ್ರೇಯಾ—೬ ಸಬ್ಬಸಿಕೇ ಹೆಸರುಗಳು" (ಸಿದ್ಧಾಂತಿ. ೧೩೬). [ಸಂ. ಮಧುರಿಕಾ]

**ಮಧುರಿಪು** (ನಾ). ಮಧು ಎಂಬ ರಾಕ್ಷಸನ ಶತ್ರು: ವಿಷ್ಣು : "ವಿಷ್ಣುಃ . . . ಮಧುರಿಪು . . . ವತ್ಸಲಾಂಛನಃ —ಈ ೩೯ ವಿಷ್ಣುದೇವರ ಹೆಸರುಗಳು" (ಸಿದ್ಧಾಂತಿ. ೦೬). [ಸಂ.]

**ಮಧುರಿಪುಜ** (ನಾ). ವಿಷ್ಣುವಿನ ಮಗ; ಮನ್ಮಥ : ಮಧುಸೇವನೆಯಿಂ ಸೊರ್ಕಿತೆ ಮಧುಪಂ ಸುಮನಃಪ್ರಚಯಮನಲೆದೊಡೆ ಶಿಖಿಯೊಳ್ ಮಧುರಿಪುಜನ ಬೆಸದಿನದಂ ಮಧು ದಂಡಿಪ ತೆಱದೆ ಮುತ್ತವಲರೊಳ ದೆಸೆಗುಂ (ರಾಜಶೇ. ೯-೫೦). [ಸಂ.]

**ಮಧುರೆ**[1] 'ಮದುರೆ' ನೋ.

**ಮಧುರೆ**[2] (ನಾ). ೧. ಒಂದು ಬಗೆಯ ಸಸ್ಯ; ಕಾಡು ಸಬ್ಬಸಿಗೆ : "ಶತಪುಷ್ಪಾ, ಸಿತಚ್ಛತ್ರಾ, ಅತಿಚ್ಛತ್ರಾ, ಮಧುರಾ, ಮಿಸಿಃ, ಅವಾಕ್ಪುಷ್ಪೀ, ಕಾರವೀ—೭ ಕಾಡು ಸಬ್ಬಸಿಕೇ ಹೆಸರು" (ಸಿದ್ಧಾಂತಿ. ೧೪೭). ೨. ಅತಿ ಮಧುರ : ಮಧುಯಷ್ಟಿಕೆ. ೩. ಹುಳಿತ ಗಂಜಿ. ೪. ಉತ್ತರ ಭಾರತದ ಮಥುರಾಪಟ್ಟಣ; ಶ್ರೀಕೃಷ್ಣನ ಜನ್ಮಸ್ಥಳ : ಮಧುರೆಯೊಳಾ ಜೀವಂಜಸೆ ಕುಧರಧರಂ ತನ್ನ ಕಾಂತನಂ ಕೊಂದೊಡೆ ತನ್ನಧು ಕೊಂದವನಂ ಕೊಲ್ಲದೊಡಧಮೆಯೆನಾನೆಂದು ಮುಕ್ತಕೇಶದೊಳಿರ್ದಳ್ (ನೇಮಿಪು. ೭-೨) ; ಸೋದರಮಾವನ ಮಧುರೆಲಿ ಮಡುಹಿದ ಯಶೋದೆ ನಂದನ ನೀ ಬಾರೋ (ಪುರಂದ. ೦-೧೩ ಪಲ್ಲವಿ). ೫. [ಸಂಗೀತ] ಋಷಭದಿಂದ ಹುಟ್ಟುವ ಶ್ರುತಿಗಳಲ್ಲಿ ಒಂದು : ಮಧುರೆ, ಯಾಮಳೆ, ಏಕಾಕ್ಷರಿಯೆಂಬ ಮೂಱು ಶ್ರುತಿಗಳೀ ಋಷಭಸ್ವರದಿಂ ಜನಿಸಿದವು (ಬಿವೇಕ. ೦೮೬). ೬. [ಕಾವ್ಯಮೀ] ಅನುಪ್ರಾಸದ ಒಂದು ಪ್ರಕಾರ : ತಂತಮ್ಮ ವರ್ಗದಂತ್ಯದೊಳಂತಾ ವರ್ಗಂಗಳಮಳ್ಗಲಾಗಿರೆ ಮೇಣತ್ಯಂತಂ ಸರೇಫ ಸಂಯೋಗಾಂತರಮುಮದೋದವೆ ಮಧುರೆಯೆಂಬುದದಕ್ಕುಂ (ಕಾವ್ಯಾವ. ೫೬೨). [ ಸಂ. ಮಧುರಾ ]

**ಮಧುರೋಕ್ತಿ** (ನಾ). ಸವಿಯಾದ ಮಾತು ; ಇಂಪಾದ ನುಡಿ : ಉತ್ಸವದಿಂದೆ ಹಾಸ್ಯರಸಮಾ ಮಧುರೋಕ್ತಿಗಳಿಂದಮುಲ್ತೆ (ಶಬ್ದಾ. ೨-೪೮) ; ಅರಸ ವಸುದೇವನನು ಮಧುರೋಕ್ತಿಯಲಿ ಮನ್ನಿಸಿದ (ಕುಮಾರ. ೦೦-೬೦) ; ಮಧುರೋಕ್ತಿಯಿಂದೆ ಮಮವಕ್ಕಳಂ ಮನ್ನಿಸಿ . . . ಜಾಮಾತನಂ ಮಂತ್ರಿ ಕರೆದಿಂತೆಂದನು (ಕೈಮಿಶಾ. ೩೦-೩೭). [ಸಂ.]

**ಮಧುವಲ್ಲಿ** (ನಾ). ೧. ಅತಿಮಧುರ ; ಮಧುಯಷ್ಟಿಕ. ೨. ಒಂದು ಬಗೆಯ ದ್ರಾಕ್ಷೆ. ೩. ಮಾದಲದ ಹಣ್ಣು ; ಸಕ್ಕರೆಗಂಚಿ : " ಮಧು ವಲ್ಲಿಯುರೆಮಾದಲಂ " (ಮಂಗರಾ. ೪೦-೩೩). [ ಸಂ. ಮಧುವಲ್ಲೀ ]

**ಮಧುವಿಕಾರಿ** (ನಾ). ವಸಂತಮಾಸದಲ್ಲಿ ಮಾವಿನ ಹೂವಿನ ಮಕರಂದ ಪಾನದಿಂದ ಚಿತ್ತವಿಕಾರವನ್ನು ಹೊಂದಿದುದು : ಮಧುವಿಕಾರಿ ಕೋಗಿಲೆ ಕಿಸುಗಣ್ಣಾವೆ ನೀಂ (ಮಲ್ಲಿಕ. ೩-೩೨). [ ಸಂ. ಮಧುವಿಕಾರಿನ್ ]

**ಮಧುವಿಡಿ** (ಕ್ರಿ). ಜೇನನ್ನು ಕೂಡಿಡು : ಅರೆವಿರಿದ ಕಮಲಗಳನಾರ್ಕೈದು ಪ್ಪುಮರಾಳಿ ಹರುಷದಿ ತದ್ರಸವ ಸವಿದು ಮಧುವಿಡುವಂತೆ (ಪಪವಿ.ಶಿ. ೭-೪).
[ ಮಧು + ಇಡಿ[1] ]

**ಮಧುವಿಹಂಗ** (ನಾ). ಹೂವಿನ ಮಕರಂದದಿಂದ ಬದುಕುವ ಹಕ್ಕಿಯಂತಹ ಕೀಟ : ಅಲರ್ವಕ್ಕಿ ; ತುಂಬಿ : ಮಣಿಕುಟ್ಟಿಮತಳದ ಪೂವಲಿಯುಂ ಬಿಟ್ಟು ಪಾಱುವ ಮಧುವಿಹಂಗಂಗಳ ಹುಂಕಾರದೊಳಂ . . . ಅತಿಕ್ಷುಭಿತಮಾದಾಸ್ಥಾನಮಂಟಪದಿಂ ಮನುಜೇಂದ್ರಂ ಪೊಱಮಟ್ಟು (ಕಾದಂಪೂ. ೬೭). [ಸಂ.]

**ಮಧುವ್ರತ** (ನಾ). ತುಂಬಿ ; ಭ್ರಮರ : "ಮಧುಕರಃ, ಮಧುಪಃ, ಮಧುವ್ರತಃ. . .ದ್ವಿರೇಫಃ —ಈ ೧೩ ತುಂಬಿ" (ಹಲಾಯು. ೪೩-೦೦೦) ; ರತಿಗೆ ಮುಡಿಯಲ್ಕೆ ಮದನಂಗೆ ತುಱುಂಬಲ್ಕಿರ್ದುದೆಂದು ವಧು ಸುಟೀವ ಮಧುವ್ರತಮುಮನಲೆದಪೆನೆಂಬೀ ಪ್ರತೀತಿಗಿರುಮಂತಿಯಂತೆ ನೋಂತಲ

ರೊಳವೇ (ಆದಿಪು. ೧೧-೧೧೭) ; ಆಸವಾಸಕ್ತಿ ಮಧುವ್ರತದೊಳ್ (ಚಂದ್ರಪ್ರ. ೩-೯೫); ಸುಕವಿ ಮಧುವ್ರತನಿಕರಮನೆಱಗಿಸುವ ಚೂತಮಂಜರಿ ಕುಕವಿಪ್ರಕರ ಮಧುಪಕ್ಕೆ ಕೃತಿ ಚಂಪಕಮಂಜರಿಯೆನಿಸೆ ಪೇೞ್ದಪಂ ಗುಣವರ್ಮಂ (ಪುಷ್ಪದಂ. ೧-೬೦). [ಸಂ.]

**ಮಧುಶಿಗ್ರು** (ನಾ). ಕೆಂಪುಹೂ ಬಿಡುವ ನುಗ್ಗೆಗಿಡ : "ಮಧುಶಿಗ್ರು, ಅಸೌರಕ್ತಃ—ಕೆಂಪುಹುವ್ವುಗಳುಳ್ಳ ನುಗ್ಗೇಗಿಡದ ಹೆಸರು" (ಸಿದ್ಧಾಂತಿ. ೧೧೪). [ಸಂ.]

**ಮಧುಶ್ರೇಣಿ** (ನಾ). ಕುರಟಿಗೆ ಗಿಡ : " ಮೂರ್ವಾ, ದೇವೀ . . . ಮಧುಶ್ರೇಣೀ, ಗೋಕರ್ಣೀ, ಪೀಲುಪರ್ಣೀ–೧೦ ಹೆಗ್ಗುರುಟಿಕೆಯು ಹೆಸರುಗಳು " (ಸಿದ್ಧಾಂತಿ. ೧೩೦). [ಸಂ. ಮಧುಶ್ರೇಣೀ]

**ಮಧುಷ್ಠೀವ** (ನಾ). ಹಿಪ್ಪೆಮರ ; ಮಧೂಕವೃಕ್ಷ : "ಮಧೂಕಃ, ಗುಡಪುಷ್ಪಃ, ಮಧುದ್ರುಮಃ, ವಾನಪ್ರಸ್ಥಃ, ಮಧುಷ್ಠೀವಃ–೫ ಯಿಪ್ಪೆ ಗಿಡ, ಹಿಪ್ಪೇಮರ" (ಸಿದ್ಧಾಂತಿ. ೧೧೪). [ಸಂ.]

**ಮಧುಸಂಗ** (ನಾ). ೧. ವಸಂತಮಾಸದ ಸಮಾಗಮ. ೨. ಮದ್ಯದ ಸಂಪರ್ಕ. ೧, ೨ : ತನುಲತೆಗಂಕುರಂ ತಳಿರಲರ್ ಮಧು ಸಂಗದೊಳಾಯ್ತು ಚೋದ್ಯಮೆಂದೆನೆ ಮಧುಪಾನಜಾತಪುಳಕೇಕ್ಷಣ ಶೋಣಿಮ ಘರ್ಮಬಿಂದುಗಳ್ ತನಗೆಸೆಯಲ್ . . . ಪಿಕನಿನಾದೆ ಪೆಱಳ್ ಗಱಪಂ ನೆಗೞ್ಚಿದಳ್ (ಜಗನ್ನಾ. ೧೭-೧೧೭). [ಸಂ.]

**ಮಧುಸಂಗತಿ** (ನಾ). ೧. = ಮಧುಸಂಗ ೧. ೨. = ಮಧುಸಂಗ ೨. ೧, ೨ : ಅಬ್ಜನಿ ತನ್ನ ಪರಾಗಮೆಂಬ ತಂಬುಲವಂಗೆ ನಕ್ಕಪಳ್ ವಿಕೃತಿಯಂ ಮಧುಸಂಗತಿ ಮಾಡದಿರ್ಕುಮೋ (ಜಗನ್ನಾ. ೧೪-೨೩). [ಸಂ.]

**ಮಧುಸಖ** (ನಾ). ವಸಂತಋತುವಿನ ಮಿತ್ರ ; ಕಾಮ ; ಮನ್ಮಥ : ವಿರಹಿಗಳಂ ಪಿಂಗೆ ತೆಗೆದೆಚ್ಚು ಬಱಲ್ದ ಮಧುಸಖನ ಸುಯ್ಯೆಲರ್ವೊಲ್ ಸೊಗಯಿಸಿ ಪೊತ್ತಲರ್ಗಂಪಂ ನೆಗೆದುಱೆ ತಣ್ಣೆಲರದಿನಿಸು ತೀಡಿತ್ತಾಗಳ್ (ಕಾದಂಬ. ೧೭೪). [ಸಂ.]

**ಮಧುಸಾರಥಿ** (ನಾ). ವಸಂತನನ್ನು ಸಾರಥಿಯನ್ನಾಗಿ ಮಾಡಿಕೊಂಡವನು ; ಕಾಮ. [ಸಂ.]

**ಮಧುಸೂದನ** (ನಾ). ೧. ತುಂಬಿ. ೨. ಮಧು ಎಂಬ ರಾಕ್ಷಸನನ್ನು ಸಂಹರಿಸಿದವನು; ಕೃಷ್ಣ : ಮನದ ಹರುಷದಿ ನಗುತ ಮಧುಸೂದನನು ನುಡಿದನು (ಕುಮಾ.ಭಾ. ೬-೬೯); ಯಾದವ ನೀ ಬಾ ಯದುಕುಲನಂದನ ಮಾಧವ ಮಧುಸೂದನ ಬಾರೊ (ಪುರಂದ. ೧-೧೩ ಪಲ್ಲವಿ); ವಾರಣನಗರಿಗೀಗ ನಮ್ಮೊಡನೆ ನಡೆತರಲಿ ದ್ವಾರಕೆಯೊಳಿರ್ದ ಜನರೆಲ್ಲರುಂ. . . ಎಂದು ಮಧುಸೂದನಂ ನೇಮಿಸಿದನು (ಜೈಮಿ. ೭-೧). [ಸಂ.]

**ಮಧುಸೇಕ** (ನಾ). ಮದ್ಯವನ್ನು ಚಿಮುಕಿಸುವುದು ; ಮದ್ಯಸಿಂಚನ ; P ಸುಂದರಸ್ತ್ರೀಯರು ತಮ್ಮ ಬಾಯಿಂದ ಮದ್ಯವನ್ನು ಮುಕ್ಕುಳಿಸಿ ಬಕುಳವೃಕ್ಷದ ಮೇಲೆ ಉಗುಳುವುದರಿಂದ ಅದು ಪುಷ್ಪಭರಿತವಾಗುವುದೆಂಬುದು ಒಂದು ಕವಿಸಮಯ : ಅಣುವ್ರತಮಂ ಮುನಿವರನೊಳ್ ಕೈಕೊಂಡ ತೆಱದೆ ಮಧುಸೇಕಮನಾದರಿಸದೆ ವಕುಳಂ ಮುಕುಳ ಮನರಲಂ ಧರಿಸಿದುದಾ ಕೊಂಬುಕೊಂಬಿನೊಳೆಲ್ಲಂ (ಚಂದ್ರಪ್ರ. ೨-೯೨). 'ದೋಹದ' ಪರಾ. [ಸಂ.]

**ಮಧುಸೇವನೆ** (ನಾ). ೧. ಮದ್ಯಪಾನ ; ಮದಿರಾಸೇವನೆ. ೨. ಮಕರಂದದ ಪಾನ. ೧, ೨ : ಮಧುಸೇವನೆಯಿಂ ಸೊರ್ಕಿತೆ ಮಧುಪಂ ಸುಮನಃಪ್ರಚಯಮನಲೆದೊಡೆ ಶಿಖಿಯೊಳ್ ಮಧುರಿಪುಜನ ಬೆಸದಿನದಂ ಮಧು ದಂಡಿಪ ತೆಱದೆ ಮುತ್ತದಲರೊಳದೆಸೆಗುಂ (ರಾಜಶೇ. ೯-೩೦). [ ಸಂ. ಮಧುಸೇವನ ]

**ಮಧುಸೇವೆ** (ನಾ). ಮದ್ಯಪಾನ : ಕಣ್ಣೆವರಂ ನಿಮಿರ್ದಕ್ಷಿಗಳ್ಗೆ ರಾಗಂ ಮಧುಸೇವೆಯಿಂ ನೆಗೞ್ದೆ ರಂಜಿಸಿದರ್ ಮಧುಮತ್ತಕಾಂತೆಯರ್ (ಜಗನ್ನಾ. ೧೬-೧೧೪). [ಸಂ. ಮಧುಸೇವಾ]

**ಮಧೂಕ** (ನಾ). ಹಿಪ್ಪೆಮರ : ಮಧುಕಂ ಮಧೂಕಪುಷ್ಪಂ ಮಧುಶರ್ಕರೆ ಕೋಷ್ಠಮೆಂಬಿವಂ ಮೊದಲೊಳ್ ಪೂಟ್ಟಧಿಕಫಲಮಾಗಿ ಪಡೆಗುಂ ಮಧುರತೆಯಂ [ಯ]ಂ (ಲೋಕೋಪ. ೬-೪೦) ; ಮಾವು ಮಧೂಕ ಕುಟ ಕಲ್ಲತ್ತಿ . . .ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೋರಾ. ೩-೦-೨೭). [ಸಂ.]

**ಮಧೂಚ್ಛಿಷ್ಟ** (ನಾ). ಜೇನುಮೇಣ : "ಮಧೂಚ್ಛಿಷ್ಟಂ, ಸಿಕ್ಥಕಂ–೨ ಜೇನುಮೇಣದ ಪೆಸರು" (ಸಿದ್ಧಾಂತಿ. ೩೦೭). [ಸಂ.]

**ಮಧೂದ್ಗಮ** (ನಾ). ವಸಂತಕಾಲದ ಆರಂಭ : ಸುಗಂಧಬಂಧುರ ಮಲಯಾನಿಲಾಗತಿ ಮಧೂದ್ಗಮಮಂ ವಿಕಸಲ್ಲತಾಂತಮಂಜರಿ ಫಲದೇಟ್ಗಿಯಂ ನೆರೆಯೆ ಪೇೞ್ವವೊಲೀ ಸಮವಸ್ಥಿ ತಾನೆ ದೇವರ ಬರವಂ ನಿರಾಕುಳಮೆ ಪೇೞ್ದಪುದೆನ್ನ ಮನಕ್ಕೆ ನಿಕ್ಕುವಂ (ಕಾದಂಬ. ೩೮೭). [ಸಂ.]

**ಮಧೂಪಚಯ** (ನಾ). ಜೇನನ್ನು ಕೂಡಿಡುವಿಕೆ ; ಜೇನಿನ ಸಂಗ್ರಹ : ಜೇನುನೊಣದ ಮಧೂಪಚಯವವಕಿಲ್ಲಲೇ ಸರ್ವಾಪಹಾರವು ಪರರಿಗಾ ಕೌರವನ ಸಿರಿ (ಕುಮಾ.ಭಾ. ೪-೧೧). [ಸಂ.]

**ಮಧೂಲಕ** (ನಾ). ೧. ನೀರುಹಿಪ್ಪೆಮರ : "ಮಧೂಲಕಃ, ಜಲಜೇಅತ್ರ–ನೀರುಹಿಪ್ಪೆಮರ" (ಸಿದ್ಧಾಂತಿ. ೦೨೪). ೨. ಜೇನುತುಪ್ಪ. ೩. ಸಿಹಿ ಮತ್ತು ಕಹಿ ಮಿಶ್ರವಾದ ಕಷಾಯ. [ಸಂ.]

**ಮಧೂಲಿಕೆ** (ನಾ). ಒಂದು ಬಗೆಯ ಸಸ್ಯ ; ಕುರಟಿಗೆ ಗಿಡ : "ಮೂರ್ವಾ . . . ಮಧೂಲಿಕಾ, ಮಧುಶ್ರೇಣೀ, ಗೋಕರ್ಣೀ, ಪೀಲುಪರ್ಣೀ–೧೦ ಹೆಗ್ಗುರುಟಿಕೆಯ ಹೆಸರುಗಳು" (ಸಿದ್ಧಾಂತಿ. ೧೩೦). [ಸಂ. ಮಧೂಲಿಕಾ]

**ಮಧೂಳಿ** (ನಾ). ೧. ಒಂದು ಬಗೆಯ ಮಲ್ಲಿಗೆ; ಇರವಂತಿಗೆ ಹೂವು : ಮಾಳಿಯೊಳುದ್ಭ್ರಮದ್ಭ್ರಮರಭಾರವಿಭಗ್ನಮಧೂಳಿ ಮಾಲತೀ ಮಾಳಿ ಮನಕ್ಕೆವಂದೆಸೆದುದು (ಶಾಂತಿಪು. ೩-೩೭). ೨. ಮಾವಿನ ಮರ. ೩. ಒಂದು ಬಗೆಯ ಸಸ್ಯ; ಅತಿಮಧುರ. ೪. ಒಂದು ಬಗೆಯ ನಿಂಬೆ. ೫. ಪರಾಗ. [ ಸಂ. ಮಧೂಲೀ ]

**ಮಧ್ಯ₁** (ಗು). ೧. ನಡುವಿನ ; ನಡುವೆ ಇರುವ. ೨. ನಡುತರದ ; ಮಧ್ಯಮ ತರಗತಿಯ. ೩. ಯಾವ ಪಕ್ಷಕ್ಕೂ ಸೇರದ ; ನಿಷ್ಪಕ್ಷಪಾತಿಯಾದ. ೪. ನ್ಯಾಯವಾದ ; ಸರಿಯಾದ ; ಸಮರ್ಪಕವಾದ. (ನಾ). ೫. ನಡುವಿನ ಭಾಗ : ಮೊದಲು ಕಡೆ ಮಧ್ಯಗಳ ಬಲ್ಲವ ಮದನಜನಕನು ನೀನು (ಹಂಸಾ. ೯೩) ; ಕಥೆಗೆ ಒಂದು ಆದಿ, ಮಧ್ಯ, ಅಂತ್ಯಗಳಿರಬೇಕು (ಅಂಕಾ. ೧೨೪). ೬. ದೇಹದ ಮಧ್ಯಭಾಗ; ಸೊಂಟ ; ಟೊಂಕ ; ನಡು : ನೋಡೆ ಕುಮಾರಿಯ ಬಳ್ಕುವ ಮಧ್ಯಂ ನಾಡೆ ಮನೋಜ್ಞಂ (ಸುಕುಮಾ. ೩-೩೦ ರಗಳೆ) ; ಮೇಲುಂದನು ಮಧ್ಯಕ್ಕೆ ಸುತ್ತಿ ಕಾಸಿಯ ಬಿಗಿದು (ಪದ್ಮಪು. ೨೪-೩೪) ; ಕ್ಷಾಮವು ಮಧ್ಯವು ಅಕೃಶವು ಜಘನವು . . . ಸುಂದರವೀಕೆಯ ತನುವು ( ಇಂದಾಪ. ೦೭೪-೩೭ ). ೭. ಕೆಳಮಟ್ಟವೂ ಅಲ್ಲದ, ಉತ್ತಮ ಮಟ್ಟವೂ ಅಲ್ಲದ ಸ್ಥಿತಿ. ೮. [ಸಂಗೀತ] ದ್ರುತ, ಮಧ್ಯ, ವಿಳಂಬಗಳೆಂಬ ಮೂರು ಲಯಗಳಲ್ಲಿ ಒಂದು : ಲಯದಲ್ಲಿ ದ್ರುತ (ಹೆಚ್ಚಿನ ವೇಗ), ಮಧ್ಯ (ಹೆಚ್ಚೂ ಅಲ್ಲದ, ನಿಧಾನವೂ ಅಲ್ಲದ) ಮತ್ತು ವಿಳಂಬ (ನಿಧಾನ) ಎಂದು ಮೂರು ವಿಧ (ಸಂಗೀಸಂ. ೩೭). ೯. ತಾರ, ಮಧ್ಯ, ಮಂದ್ರಗಳೆಂಬ ಮೂರುಬಗೆಯ ಸ್ವರಸಪ್ತಕಗಳಲ್ಲಿ ಒಂದು : ಕೋಗಿಲೆ ಗಿಳಿ ತುಂಬಿ ಮಹೇಶನ ಕಿವಿಗಳಗಳ್ ಕ್ರಮದಿತ್ತುವು ತಾರಮಧ್ಯಮಂದ್ರಸ್ವರದಿಂ (ಚಂದ್ರಪ್ರ. ೭-೬೨); ವರ ಮಂದ್ರ ಮಧ್ಯ ತಾರಸ್ವರದಿಂದಂ . . . ಪಾಡಿದನಾ ಗುರು ವಿಶ್ವೇಶ್ವರನ ಮಹಿಮೆಯಂ ಮುನಿತಿಲಕಂ (ವೀರಶಿ. ೬-೯೧).

೧೦. [ಗಣಿತ] ಹದಿನಾರು ಅಂಕೆಗಳಿಂದ ಕೂಡಿದ ಒಂದು ದೊಡ್ಡ ಸಂಖ್ಯೆ : ಅಂಕೆಗಳ ಶ್ರೇಣಿ ಹದಿನೆಂಟರವರೆಗೂ ಹೋಗುತ್ತದೆ. ಈ ಹದಿನೆಂಟು ಶ್ರೇಣಿಗಳು ಯಾವುವೆಂದರೆ, ಏಕ- ದಶ, ಶತ- ಸಹಸ್ರ- ಅಯುತ- ಲಕ್ಷ- ಪ್ರಯುತ- ಕೋಟಿ- ನ್ಯರ್ಬುದ- ಪದ್ಮ- ಖರ್ವ- ನಿಖರ್ವ, ಮಹಾಪದ್ಮ- ಶಂಖ- ಸಮುದ್ರ, ಮಧ್ಯ- ಅಂತ್ಯ- ಪರಾರ್ಧ (ಶ್ರಬಾತ. I, ೨೫೭). [ಸಂ.]

**ಮಧ್ಯ₂** (ಅ). ನಡುವೆ : ನವರಾತ್ರೀ ಮಧ್ಯ ಶಿವರಾತ್ರಿ ಬಂದೀತೇ ? (ಗಾದ). [ < ಮಧ್ಯ₁ ]

**ಮಧ್ಯಂತರ** (ನಾ). ೧. ನಡುವಿನ ಕಾಲ ; ಮಧ್ಯಕಾಲ : ಇವುಗಳ ಮಧ್ಯಂತರದಲ್ಲಿ ಆವನ ಮತ್ತೆರಡು ಗ್ರಂಥಗಳು ಪ್ರಕಟವಾಗಿವೆ (ಶ್ರಬಂಧ. ೧೦೨) ; ಮಧ್ಯಂತರದಲ್ಲಿ ಟೀಕೆಕರು ಮಿಶನರಿಯ ಕೆಲಸ ಬಿಟ್ಟು ಕೊಟ್ಟು ರಾಹುರಿಯಲ್ಲಿ ಬಂದು ನೆಲಸಿದ್ದರು (ಸ್ವಕೃತಿ. ೩೯೯). ೨. ನಾಟಕ, ವಾಕ್ಚಿತ್ರ ಅಥವಾ ಸಂಗೀತಕಚೇರಿಗಳಲ್ಲಿ ನಡುವೆ ಅಲ್ಪವಿಶ್ರಾಂತಿಗಾಗಿ ಕೊಡುವ ಬಿಡುವು ; ವಿರಾಮ : ಮಧ್ಯಂತರವನ್ನೆಲ್ಲ ಮಾತಿನಲ್ಲಿಯೆ ಕಳೆಯುವಿರೋ- ಸ್ವಲ್ಪ ಕಾಫಿ ಗೀಫಿ ಕುಡಿಯುವಿರೋ? (ರಂಗ). P ಇದು ವ್ಯಾಕರಣಶುದ್ಧವಲ್ಲದ ರೂಪ. ಬಹುಶಃ ಇದು ಇಂಗ್ಲಿಷಿನ 'Interval' ಎಂಬ ಶಬ್ದಕ್ಕೆ ಮಾಡಿಕೊಂಡಿರುವ ಭಾಷಾಂತರರೂಪವಿರಬಹುದು. [ ಮಧ್ಯ + ಅಂತರ ]

**ಮಧ್ಯಂದಿನ** (ನಾ). ೧. ಹಗಲಿನ ಮಧ್ಯಭಾಗ : ಮಧ್ಯಾಹ್ನ : ಯುವರಾಜಂ . . . ಮಧ್ಯಂದಿನಸಮಯ ಸಂತಪ್ತತಪನಮಂಡಲಮಂ ನೋಡಿ (ಶಾಂತಿಪು. ೬-೮ ವ); ಆಗಡೆ ಪೊಣ್ಮತ್ತಲ್ಲಿ ಮಧ್ಯಂದಿನಸಮಯ ಸಮುದ್ಭೂತಶಂಖಪ್ರಣಾದಂ (ಕಾದಂಸಂ. ೬೬); ಮಧ್ಯಂದಿನದ ಬಿಸಿಲೆ ಬೆಳ್ದಿಂಗಳಂತಾಗೆ (ಕಂಠಾಪರಾ. ೨-೦೯). ೨. ನಡುವೆ ಇರುವಂಥದು ; ಮಧ್ಯಸ್ಥವಾದುದು : "ಮಧ್ಯಮಂ- ಮಧ್ಯಮಿಾಯಂ, ಮಧ್ಯಂದಿನಂ— ಈ ೩ ನಡುವಣದು" (ಕರಾಮು. ೦೨೭-೯೦). [ಸಂ.]

**ಮಧ್ಯಕ** (ನಾ). ಸಾಮೂಹಿಕ ಸ್ವತ್ತು; ಉಭಯಸಾಮಾನ್ಯವಾದುದು: ಮೂಡಲು ಮಧ್ಯಕದಂಗಡಿಯು (ಸೊಂಕಶಾ. ೦೯೩೦, ಬಾಗೆಪಾಡಿ. ೧೦೩-೪೯; 1165). 'ಮಂದ್ಧಿಕ' ಪರಾ. [ಸಂ.]

**ಮಧ್ಯಗ** (ಗು). ನಡುವೆ ಇರುವ ; ಮಧ್ಯಸ್ಥವಾದ. [ಸಂ.]

**ಮಧ್ಯಗತ** (ಗು). ೧. = ಮಧ್ಯಗ : ಸಮಾಸಂ ನೆಗಟ್ದಂ ನೆಜ಼ಿ ಪೋಕುಂ ಮಧ್ಯಗತವಿಭಕ್ತಿಗಳವಜಿಲೋಳ್ (ಶಮತ. ೧೬೨). (ನಾ). ೨. ತೀರ ಹತ್ತಿರವೂ ಅಲ್ಲದ, ಬಹಳ ದೂರವೂ ಅಲ್ಲದ ಸ್ಥಳದಲ್ಲಿರುವವನು : ಬರಲು ಕಂಡಹೆ ವಂದಿಸುತಲಂತರಿಸಿ ಮಿಗೆ ಹತ್ತಿರವೆನಿಸದತಿ ತರದ ದೂರದ ಸಾರದೀ ಪರಿ ಮಧ್ಯಗತನೆನಿಸಿ . . . ಬೆಸಸಿದನರವರಿಸದಾಕ್ಷಣಾಕೆ ಮಾಡುವ ನವನೆ ಸೇವಕನು (ಕುವ್ಯಾಅ. ೩-೦೦೬). [ಸಂ.]

**ಮಧ್ಯಗತಿ** (ನಾ). ಮಧ್ಯಮವಾದ ವೇಗ : ತೀವ್ರವೂ ಅಲ್ಲದ, ನಿಧಾನವೂ ಅಲ್ಲದ ವೇಗ : ಚಿತ್ತಕ್ಕೆ ಹಗರಿರುಳು ಮಧ್ಯಗತಿಯಲ್ಲಿಯೂ ತೆಗೆದುಕೊಂಡಾಹಾರವು ಜೀರ್ಣವಾಗುವುದು (ಸಕಪ್ಪ. ೦೫). [ಸಂ].

**ಮಧ್ಯತ್ರಾಣ** (ನಾ). ಶರೀರದ ಮಧ್ಯಭಾಗವನ್ನು (ಸೊಂಟವನ್ನು) ರಕ್ಷಿಸುವ ಕವಚ : ಬಿಲ್ಲು ತೀರು . . . ಕರತ್ರಾಣ, ಶಿರಸ್ತ್ರಾಣ, ಪದತ್ರಾಣ . . . ವೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿ ಸಾಧನವಿಶೇಷಂಗಳಿಂದಲುಂ (ಬಿವೇಳ. ೨೬೨). [ಸಂ.]

**ಮಧ್ಯದೇಶ** (ನಾ). ೧. ಮಧ್ಯದಲ್ಲಿರುವ ಪ್ರದೇಶ : ನಡುವಿನ ಜಾಗ. ೨. ಸೊಂಟ ; ನಡು. ೩. ಹೊಟ್ಟೆ : ಉದರ. ೪. ಆಕಾಶದ ನಟ್ಟನಡುವಿನ ಭಾಗ,–ನಡುನೆತ್ತಿ. ೫. ಭರತಖಂಡದ ನಟ್ಟನಡುವಿನ ಭಾಗ ; ಹಿಮಾಲಯ ಮತ್ತು ವಿಂಧ್ಯಪರ್ವತಗಳ ನಡುವಿನ ಪ್ರದೇಶ : ಮಧ್ಯದೇಶನೇತ್ರ ದುರ್ಧರಶೌರ್ಯಮರ್ದನ ಪರಾಕು (ಹಾದಕಂ. ೩-೦ ವ). [ಸಂ.]

**ಮಧ್ಯನಾಡಿ** (ನಾ). ದೇಹದಲ್ಲಿರುವ ಹನ್ನೆರಡು ನಾಡಿಗಳಲ್ಲಿ ಒಂದು : ಮಧ್ಯನಾಡಿಯಲ್ಲಿ ಗೋಮತಿ (ಹಸಾರ. ೬-೦೯ ತಾತ್ಪರ್ಯ). [ ಸಂ. ಮಧ್ಯನಾಡೀ ]

**ಮಧ್ಯನಾಡಿಕೆ** (ನಾ). = ಮಧ್ಯನಾಡಿ : ಮಹಾಸುಖಸಂಶ್ರಯ ಮಧ್ಯನಾಡಿಕಾ ವಿವರ ದ್ಯುತಪ್ರವಾಹದನೆ ಪೀರ್ವ ವಿಳಾಸಮಗುಂಬಮಾತನೊಳ್ (ಶಬಸಂ. ೨-೯೬). [ ಸಂ. ಮಧ್ಯನಾಡಿಕಾ ]

**ಮಧ್ಯಪ್ರಾಚ್ಯ** (ನಾ). ಅರಬ್ಬೀಗಣರಾಜ್ಯವೇ ಮೊದಲಾದ ದೇಶಗಳುಳ್ಳ ಪ್ರದೇಶ : ಪಾಶ್ಚಾತ್ಯದೇಶಗಳ ದೃಷ್ಟಿಯಿಂದ ಪೂರ್ವಕ್ಕೆ ಇರುವ ದೇಶಗಳೆಲ್ಲ ಪ್ರಾಚ್ಯ (Middle-east. ಶಕ್ತಿ. ೫೫). [ಸಂ.]

**ಮಧ್ಯಬಿಂದು** (ನಾ). ೧. ಕೇಂದ್ರಭಾಗ : ಮಧ್ಯಬಿಂದು ಬೀಸಿದ ಕರಗೆ ಓಗೊಟ್ಟು ಆದರ ಕಡೆಗೆ ಧಾವಿಸುವ ಬಯಕೆ (ಬಳಶೀ. ೦೫೯). ೨. [ರೇಖಾಗ] ವರ್ತುಳದ ಕೇಂದ್ರಬಿಂದು ; ತ್ರಿಜ್ಯಗಳೆಲ್ಲ ಕೂಡಿಕೊಳ್ಳುವ ಬಿಂದು : ವಿಶ್ವದೀ ವರ್ತುಲದ ಮಧ್ಯಬಿಂದುವಿನಲ್ಲಿ . . . ನೂರುತೇಜದ ಗೋಲ ತಿರುಗುತಿವೆ ಪರಿಘದಲಿ ಊರುಗೋಲಿಗೆ ಸಾಕ್ಷಿ ನಕ್ಷತ್ರವೀಧಿ (ಪಿಶುಮು. ೨೦-೨೦). [ಸಂ.]

**ಮಧ್ಯಮ** (ಗು). ೧. ನಡುವೆ ಇರುವ ; ನಡುವಿನ ; ಮಧ್ಯಸ್ಥವಾದ : ತದ್ಗಿರೀಂದ್ರ ಮಧ್ಯಮಕೂಟದಿಂದಂ ಸಮುತ್ತು ತೆಂಕಮೊಗದೆ ಬಂದು (ಆದಿಪು. ೦೩-೬೯ ವ). ೨. ಎರಡರ ನಡುವೆ ಬರುವ. ೩. ನಡುತರದ : ಉತ್ತಮವೂ ಅಲ್ಲದ ಅಥವಾ ಕೀಳೂ ಅಲ್ಲದ. ೪. ಮಧ್ಯಗಾತ್ರದ ; ತೀರ ದಪ್ಪವೂ ಅಲ್ಲದ ಅಥವಾ ತೀರ ತೆಳುವೂ ಅಲ್ಲದ. ೫. ಯಾವ ಪಕ್ಷಕ್ಕೂ ಸೇರದ. (ನಾ). ೬. ದೇಹದ ಮಧ್ಯಭಾಗ ; ನಡು ; ಸೊಂಟ : "ಅವಲಗ್ನಂ, (ವಿ)ಲಗ್ನಂ, ಮಧ್ಯಂ, ಮಧ್ಯಮಂ—ಈ ೪ ನಡು" (ಕರಾಮು. ೮೫-೩೬೩). ೭. ನಡುವೆ ಇರುವುದು ; ನಡುವಿನದು : "ಮಧ್ಯಮಂ, ಮಧ್ಯಮಿಾಯಂ, ಮಧ್ಯಂದಿನಂ — ಈ ೩ ನಡುವಣದು" (ಕರಾಮು. ೦೨೭-೯೦). ೮. ಉತ್ತಮವಲ್ಲದಿದ್ದರೂ ಕಳಪೆಯಲ್ಲವೆನಿಸಿದುದು : ಉತಮನೆಲಕ್ಕೆ ಪಣ ೨ ಮಧ್ಯಮಕ್ಕೆ ಪಣ ೧ (ಶಾಇ. XVIII, ೪೦-೦೭ : ೨೨೦) ; ತಾ ಮಾಡುವುದು ಉತ್ತಮ, ಪಗ ಮಾಡುವುದು ಮಧ್ಯಮ, ಆಳು ಮಾಡುವುದು ಹಾಳು (ಕೀತಿಸಂ. VIII, ೭); ಉತ್ತಮವಾದುವು ಹರೆಯದ ದಿನಗಳು . . . ಮುಂದಿನ ದಿನಗಳು ಮಧ್ಯಮಾಧಮಗಳು (ಬಂಗಾಶ. ೨೦೨-೪೯). ೯. ಕುಂತೀಪುತ್ರರಲ್ಲಿ ನಡುವಿನವನು; ಭೀಮಸೇನ : ಮಧ್ಯಮನೆಂದರೆ ಪಾಂಡವರಲ್ಲಿ–ಕೌಂತೇಯರಲ್ಲಿ–ಮಧ್ಯಮ. ಭೀಮ (ಸಂಪಾಟಿ. ೯೩). ೧೦. ಮಾಂಡಲಿಕ; ಮಂಡಲಾಧಿಪತಿ : "ಮಧ್ಯಮಃ, ಮಂಡಳೇಶ್ವರಃ— ಈ ೨ ಮಂಡಳಿಕಂ" (ಕರಾಮು. ೭೦-೨೭೮). ೧೧. [ಸಂಗೀತ] ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದವೆಂಬ ಏಳುಸ್ವರಗಳಲ್ಲಿ ನಾಲ್ಕನೆಯ ಸ್ವರ : ಷಡ್ಜವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಂಗಳೆಂಬ ಸಪ್ತಸ್ವರಮುಮಂ (ಅಜಿತ. ೩-೨೮ ವ). ೧೨. ಮಂದ್ರ, ಮಧ್ಯಮ ಮತ್ತು ತಾರಗಳೆಂಬ ಮೂರು ಬಗೆಯ ಸ್ಥಾಯಿಗಳಲ್ಲಿ ಒಂದು : ಮಂದ್ರ ಮಧ್ಯಮ ತಾರ ಸ್ವರಗರ್ಭ . . . ಪರಾಕು (ಹಾದಕಂ. ೩-೧ ವ). ೧೩. ಷಡ್ಜ, ಮಧ್ಯಮ, ಗಾಂಧಾರಗಳೆಂಬ ಮೂರು ಬಗೆಯ ಗ್ರಾಮಗಳಲ್ಲಿ ಒಂದು : ಷಡ್ಜ ಮಧ್ಯಮ ಗ್ರಾಮಗಳೂ ಅವುಗಳಿಂದ ಉದ್ಭವವಾದ ರಾಗಪದ್ಧತಿಯ ಪೂರ್ವರೂಪವಾದ ಜಾತಿಗಳು . . . ಇವುಗಳನ್ನೆಲ್ಲಾ ವಿವರಿಸಿದ್ದಾನೆ (ಬಾರತ. ೫೩೮). 'ಮಧ್ಯಮಗ್ರಾಮ' ಪರಾ. [ಸಂ.]

**ಮಧ್ಯಮಗಾಂಧಾರಿ** (ನಾ). [ಸಂಗೀತ] ಒಂದು ರಾಗದ ಹೆಸರು : **ಗಾಂಧಾರಿ ರಕ್ತಗಾಂಧಾರಿ** ಮಧ್ಯಮಗಾಂಧಾರಿ . . . **ಕೌಶಿಕಿಯೆಂಬ** ಷಡ್ತ್ರೀ ಮಧ್ಯಮಗ್ರಾಮದಿಂದಾದ ರಾಗಂಗಳು (ವಿವೇಕ. ೧೮೬).

[ಸಂ. ಮಧ್ಯಮಗಾಂಧಾರೀ]

**ಮಧ್ಯಮಗ್ರಾಮ** (ನಾ). [ಸಂಗೀತ] ಷಡ್ಜ, ಮಧ್ಯಮ, ಗಾಂಧಾರ ಗಳೆಂಬ ಮೂರುಬಗೆಯ **ಗ್ರಾಮಗಳಲ್ಲಿ ಒಂದು : ಆ ರಾಗೋತ್ಪತ್ತಿಗೆ** ಷಡ್ಜಗ್ರಾಮಂ ಮಧ್ಯಮಗ್ರಾಮ ಗಾಂಧಾರಗ್ರಾಮಮೆಂಬ ಗ್ರಾಮತ್ರಯಂ ಗಳುಂಟು (ವಿವೇಕ. ೧೮೬). [ಸಂ.]

**ಮಧ್ಯಮಜ್ವರ** (ನಾ). ಜ್ವರಗಳಲ್ಲಿ ಒಂದು ಪ್ರಕಾರ; ಹತ್ತುರಾತ್ರಿಗಳ ವರೆಗೆ ಮುಂದುವರಿಯುವ **ಜ್ವರ** : ಏಳುರಾತ್ರಿಪರ್ಯಂತರ ತರುಣ ಜ್ವರವೆನಿಸಿಕೊಂಬುದು. ಹತ್ತುರಾತ್ರಿಪರ್ಯಂತರ ಮಧ್ಯಮಜ್ವರವೆನಿಸಿ ಕೊಂಬುದು. ಅದರ ಮೇಲೆ **ಪುರಾಣ**ಜ್ವರವೆನಿಸಿಕೊಂಬುದು (ವೈದ್ಯಸಾ. 1, ೫೩). [ಸಂ.]

**ಮಧ್ಯಮಣಿನ್ಯಾಯ** (ನಾ). [ತರ್ಕಶಾ] ಲೌಕಿಕನ್ಯಾಯಗಳಲ್ಲಿ ಒಂದು ; ಹಾರದ ಮಧ್ಯದಲ್ಲಿರುವ ಮಣಿಯು ಹಾರದ ಎರಡು ಭಾಗಗಳಿಗೂ **ಶೋಭೆಯನ್ನು ಉಂಟುಮಾಡುವಂತೆ** ಮಧ್ಯದಲ್ಲಿರುವ **ಒಂದು** ಪದವು **ಹಿಂದಿನ** ಹಾಗೂ ಮುಂದಿನ **ವಾಕ್ಯ ಅಥವಾ ವಾಕ್ಯಾಂಶಕ್ಕೆ** ಅನ್ವಯಿಸುವುದು : " ಧರ್ಮಬ್ರಹ್ಮಜಿಜ್ಞಾಸಯೋಃ " ಎಂಬುದು ಮಧ್ಯಮಣಿನ್ಯಾಯದಿಂದ **ಹಿಂದಿನ ವಾಕ್ಯಕ್ಕೂ ಈ ವಾಕ್ಯಕ್ಕೂ** ಅನ್ವಯಿಸುವ ಹಾಗಿದೆ (ಬ್ರಸ್ಮಭಾ. ೦೦ ೮೩೭). [ಸಂ.]

**ಮಧ್ಯಮತನು** (ನಾ). ೧. ಸ್ಥೂಲವಲ್ಲದ, **ಕೃಶವಲ್ಲದ,** ಮಧ್ಯಮ ಗಾತ್ರದ ದೇಹ. ೨. **ಸ್ಥೂಲತೆ, ಕೃಶತೆಗಳಿಲ್ಲದ ನಡುವಿನ ಗಾತ್ರದ ದೇಹವುಳ್ಳವನು** : ಮೃದುಮಧ್ಯಮತನು ಹಿತಮಿತಮೃದುವಚನಂ **ಲಲಿತಮಧುರಸುಂದರವೇಷಂ** (ಅಪು. ೧-೨೯). [ಸಂ.]

**ಮಧ್ಯಮತ್ವ** (ನಾ). ಉತ್ತಮ ಮತ್ತು ನೀಚಗುಣಗಳ ಮಧ್ಯದ ಗುಣ: ಎಟ್ಟರೆ ಬೇಗಮಂತದಂ ಕರೆದಿರದೀವುದುತ್ತಮತೆ ಬೇಡಿದೊಡೀವುದು ಮಧ್ಯಮತ್ವಮೆಯ್ದುರೆ ತದಧೀಶ್ವರಂ ಬಟೀಕಮಂತವನೀವುದು ನೀಚವೃತ್ತಿ (ತಂಪ್ರಕೌ. ೯-೦೦೪). [ಸಂ.]

**ಮಧ್ಯಮಪಾಂಡವ** (ನಾ). ಪಾಂಡುರಾಜನ ಐವರು ಮಕ್ಕಳಲ್ಲಿ ನಡುವಿನವನು ; **ಅರ್ಜುನ** : ಜನರು ಇವನೇ 'ಮಧ್ಯಮಪಾಂಡವ' ಎಂದರು ; ಮಹೇಂದ್ರನ ಮಗ ಎಂದರು (ವಚಭಾ. ೨೩). [ಸಂ.]

**ಮಧ್ಯಮಪಾತ್ರ** (ನಾ). ೧. [ಕಾವ್ಯಮೀ] ರೂಪಕಗಳಲ್ಲಿ ಬರುವ **ಉತ್ತಮ, ಮಧ್ಯಮ, ನೀಚ ಎಂಬ ಮೂರುಬಗೆಯ ಪಾತ್ರಗಳಲ್ಲಿ ಒಂದು ; ಪುರೋಹಿತ, ಮಂತ್ರಿ ಮೊದಲಾದ ಪಾತ್ರ** : ನಡೆದು **ಹೋದ** ಮತ್ತು ಮುಂದೆ ನಡೆಯುವ **ಕಥಾಂಶಗಳನ್ನು** ಮಧ್ಯಮಪಾತ್ರಗಳ ಮೂಲಕ ಸಂಕ್ಷೇಪವಾಗಿ ಸೂಚಿಸುವುದು, ಇದೇ 'ಶುದ್ಧವಿಷ್ಕಂಭ'. ಮಧ್ಯಮಪಾತ್ರಗಳೂ ನೀಚಪಾತ್ರಗಳೂ ಸೇರಿ ಸೂಚಿಸಿದರೆ ಅದಕ್ಕೆ 'ಸಂಕೀರ್ಣವಿಷ್ಕಂಭ' ಅಥವಾ 'ಮಿಶ್ರವಿಷ್ಕಂಭ' ವೆಂದು ಹೆಸರು (ಕಾವ್ಯಮೀ. ೨೦೩). ೨. [ಜೈನ] ದಾನವನ್ನು ಸ್ವೀಕರಿಸಲು ಯೋಗ್ಯವಾದ ಉತ್ತಮ, **ಮಧ್ಯಮ** ಮತ್ತು ಜಘನ್ಯವೆಂಬ ಮೂರುವರ್ಗಗಳಲ್ಲಿ ಒಂದು ಮತ್ತು ಆ **ವರ್ಗಕ್ಕೆ ಸೇರಿದ ವ್ಯಕ್ತಿ** : ಪಾತ್ರಮುತ್ತಮ ಮಧ್ಯಮ ಜಘನ್ಯಭೇದದಿಂ ತ್ರಿವಿಧಮಕ್ಕುಮಲ್ಲಿ ದರ್ಶನವಿಶುದ್ಧನುಂ ಶೀಲಸಂಪನ್ನ ನುಮಪ್ಪ ಸಂಯುತನುತ್ತಮಪಾತ್ರಂ ಶ್ರೀಸಮ್ಯಗ್ದರ್ಶನವಿಶುದ್ಧನುಮಣು ವ್ರತಧಾರಿಯುಮಪ್ಪ ಶ್ರಾವಕಂ ಮಧ್ಯಮಪಾತ್ರಂ (ಅಪು. ೦೦-೯ ವ).

[ಸಂ.]

**ಮಧ್ಯಮಪುರುಷ** (ನಾ). [ವ್ಯಾಕ] ಪ್ರಥಮ, ಮಧ್ಯಮ ಮತ್ತು ಉತ್ತಮಗಳೆಂಬ ಮೂರುಬಗೆಯ ಸರ್ವನಾಮಗಳಲ್ಲಿ ಒಂದು ; ನೀನು, ನೀವು ಎಂಬ ಸರ್ವನಾಮಗಳು ; ಯುಗಪದುಕ್ತಿಗುತ್ತಮ ಪುರುಷಂ ಪರಮದನುಳಿದಿರೆ ಮಧ್ಯಮಪುರುಷಂ (ಶಮದ. ೨೨೩) : ನೀನು, ನೀವು ಎಂಬುವು . . . ಮಧ್ಯಮಪುರುಷಸರ್ವನಾಮಗಳು (ಮಧ್ಯಮ. ೨೯). [ಸಂ.]

**ಮಧ್ಯಮಬೀಸಿಗೆ, ಮದ್ದಿಮಬಿಸಿಗೆ,** ಮದ್ಯಮಬಿಸಿಗೆ (ನಾ). ಸರ್ವಜಿತು ಸಂವತ್ಸರದಿಂದ ಪರಾಭವಸಂವತ್ಸರದ ವರೆಗೆ ಇರುವ ಇಪ್ಪತ್ತು ವರ್ಷಗಳ ಅವಧಿ ; ಅರುವತ್ತುಸಂವತ್ಸರಗಳಲ್ಲಿ ಮಧ್ಯದ ಇಪ್ಪತ್ತು ಸಂವತ್ಸರಗಳ ಅವಧಿ : ಶಾಲಿವಾಹನ ಶಕವರುಷ ಸಾ ೧೫೭೪ ಕಲಿವರುಷ ಸಾ ೪೭೫೩ ಮಧ್ಯಮಬೀಸಿಗೆ ಸಂವಸ್ತರ ನಂದನಸಂವಸ್ತರದ ಮಾಘ ಶುಧ ೫ ಭಾನುವಾರದಲ್ಲು (ಎಕ. XI, ಚತ್ರದು. ೬೪-೫; 1653). **ಮದ್ದಿಮಬಿಸಿಗೆ:** ಮೊಮ್ಮೋಜನ ಕಟಿ‌ಯು ಹಿಂದೆ ಕಂ ೮೫ ಸೆಕವರುಸದ ಮದ್ದಿಮಬಿಸಿಗೆಯು ಸುಭ[ಕ್ರಿತು]ಸಂವತ್ಸರ (ಎಕ. XVI, ತಕ್ಷಣ. ೬೨-೫೬ ; 1242). P ಈ ಶಾಸನದಲ್ಲಿ ಬಂದಿರುವ 'ಬಸಿಗೆ' ಎಂಬುದು 'ಬಿಸಿಗೆ' ಎಂಬುದರ **ಅಪಲಿಖಿತ. ಮದ್ಯಮಬಿಸಿಗೆ** : ಶಾಲಿವಾಹನಶಕೆಯುಲಿ ೧೫೮೨ ವರುಷದ ಮೇಲೆ ನಡವ ಮದ್ಯಮಬಿಸಿಗೆಯುಲಿ ಪ್ಲವಸಂವತ್ಸರದ ಭಾದ್ರಪದ ಶುಧ ೨ ಲೂ (ಎಕ. IX (8), ದನ್ನಕ. ೬೬-೩ ; 1660). 'ಅಧಮಬೀಸಿಗೆ' ನೋಡಿ. [ ಮಧ್ಯಮ + ಬೀಸಿಗೆ$_3$ (< ಬೇಸಗೆ) ]

**ಮಧ್ಯಮವರ್ತಿ** (ಗು). ೧. ನಡುವೆ ಇರುವ ; ಮಧ್ಯದಲ್ಲಿರುವ. (ನಾ). ೨. ನಡುವೆ ಇರುವುದು : ಶಚೀಮಹಾದೇವಿಯುಂ **ಲೋಕಪಾಲರುಂ** . . . ಅಮ್ಮಗೂತ್ತರೆಗಳೊಳ್ ಮಧ್ಯಮವರ್ತಿಯಪ್ಪ ಸರ್ವಾರ್ಥಸಿದ್ಧಿಯಹಮಿಂದ್ರರುಂ (ಶಾಂತಿಪು. ೦೨-೪೩ವ).

[ಸಂ. ಮಧ್ಯಮವರ್ತಿನ್]

**ಮಧ್ಯಮಾವತಿ** (ನಾ). [ಸಂಗೀತ] ಒಂದು ರಾಗದ ಹೆಸರು : ರಾಮಕ್ರಿ . . . ಮಧ್ಯಮಾವತಿಯೆಂಬ ಮೂವತ್ತಾಱುರಾಗಂಗಳೇ ಮುಖ್ಯ ವಾಗಿ . . . ಪ್ರಸಿದ್ಧಿಗೊಂಡಿರ್ಪುವು (ವಿವೇಕ. ೨೩೪) ; ಮಧ್ಯಮಾವತಿ:- ೨೮ನೇ ಮೇಳಕರ್ತ ಹರಿಕಾಂಬೋಜಿಯ ಜನ್ಯ . . . ಉಪಾಂಗರಾಗ, ಔಡವರಾಗ. ಸಕಲಸನ್ಮಂಗಳಪ್ರದರಾಗ (ಸಂಗೀತಂ. ೧೪೫).

[ಸಂ. ಮಧ್ಯಮಾವತೀ ]

**ಮಧ್ಯಮಾಯ** (ಗು). ೧. ನಡುವಿನ : ಮಧ್ಯದಲ್ಲಿರುವ. (ನಾ). ೨. ನಡುಭಾಗ ; ಮಧ್ಯಭಾಗ ; ಮಧ್ಯ : " ಮಧ್ಯಮಾಯಮೆನೆ ಮಧ್ಯಮೆನೆ ನಡುವಕ್ಕುಂ " (ಮಂಗರಾ. ೦೩೫-೩೮). [ಸಂ.]

**ಮಧ್ಯಮೆ** (ನಾ). ೧. ನಡುಬೆರಳು : ಮಧ್ಯದ ಬೆರಳು : "ಮಧ್ಯಮಾ_ ನಡುಬೆರಳು " (ಸಿದ್ಧಾಂತ. ೦೯೩). ೨. ವಿವಾಹಯೋಗ್ಯಳಾದ **ಹೆಣ್ಣು** : ಪ್ರಾಯಸ್ಥೆ ; ಮೈನೆರೆದ ಹೆಣ್ಣು : " ಮಧ್ಯಮಾ, ದೃಷ್ಟರಜಾಃ – ೨ ಹೊಸದಾಗಿ ಮೈನೆರೆದ ಹುಡುಗಿಯ ಹೆಸರುಗಳು " (ಸಿದ್ಧಾಂತ. ೦೬೯); ಕನ್ನಿಕೆಯರ್ ಮಧ್ಯಮೆಯರ್ ಸನ್ನುತಸುಕುಮಾರಿಯರತಿತರುಣೀನಿವಹಂ ಸನ್ನೆಯೊಳರಸನ ಸಂಗಡಮುನ್ನತಜಲಕೇಳಿಗೆಂದು ನಿಂದರ್ ಕ್ರಮದಿಂ (ಹರಿಶ್ಚ. ೪-೨೦). ೩. ತಾವರೆಯ ಬೀಜಕೋಶ. ೪. ಮೂಲಾಧಾರ ದಿಂದ ಹುಟ್ಟುವ ನಾದರೂಪವರ್ಣಕ್ಕೆ ಅರ್ಥಬೋಧಕ ಶಬ್ದನಿಷ್ಪತ್ತಿಯ ವರೆಗೆ ಉಂಟಾಗುವ ನಾಲ್ಕುಸ್ಥಿತಿಗಳಲ್ಲಿ ಮೂರನೆಯದು : ಪರೆ, ಪಶ್ಯಂತಿ, ಮಧ್ಯಮೆ, ವೈಖರಿಗಳು ಶಬ್ದಚತುಷ್ಟಯಗಳು (ಶಿವಾಕೋ. ೦೫೩-೨೪೦). ೫. [ಕಾವ್ಯಮೀ] (**ಕೋಪ** ಅಥವಾ ಪ್ರಸನ್ನತೆಗಳ ವಿಷಯದಲ್ಲಿ) ಉತ್ತಮೆ, ಮಧ್ಯಮೆ ಹಾಗೂ ಅಧಮೆ ಅಥವಾ ಜಘನೆ ಎಂಬ ಮೂರುವಿಧವಾದ ನಾಯಿಕೆಯರಲ್ಲಿ ಎರಡನೆಯವಳು : ಉತ್ತಮೆ ಮಧ್ಯಮೆ ಜಘನೆಯರೆಂಬ ತ್ರಿವಿಧಕೋಪಪ್ರಸಾದಲಕ್ಷಣಲಕ್ಷಿತ

ಲಲನೆಯುರಿಂ (ಶಬೇಕ. ೨೨೯). ೬. [ಕಾಮಶಾ] ರತಿಭೇದ ದೃಷ್ಟಿಯಿಂದ ವಿಂಗಡಿಸಿದ ಮೂರುಬಗೆಯ ಸ್ತ್ರೀವರ್ಗಗಳಲ್ಲಿ ಒಂದು ವರ್ಗಕ್ಕೆ ಸೇರಿದವಳು : ಸುರತದಲ್ಲಿ ಮಧ್ಯಮವಾದ ವೇಗಾಸಕ್ತಿಯುಳ್ಳವಳು: ಮಧ್ಯವೇಗಿನಿ : ಪೊಂಬಣ್ಣ ಪೊಳೆವ ಪಲ್ಲು ಉಗುರು ಕಂಗಳು ದೊಡ್ಡಿತ್ತಾದವಳು . . . ಇವಳು ಪಿತ್ತಪ್ರಕೃತಿಯವಳು ಮಧ್ಯಮೆ (ಸಸುಜ. ೨೦೩). ೭. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರುಬಗೆಯ ಛಂದಸ್ಸುಗಳಲ್ಲಿ ಮೂರನೆಯದು : ಅಲ್ಲಿ ಉಕ್ತೆ ಅತ್ಯುಕ್ತೆ ಮಧ್ಯಮೆ[ಪಾಠಾಂ. ಮಧ್ಯೆ] . . . ಎಂದಿಪ್ಪತ್ತಾಱುಂ ಛಂದಂಗಳಕ್ಕುಂ (ಛಂದೋಂಬು. ೧-೪೭ ವ). [ಸಂ. ಮಧ್ಯಮಾ]

**ಮಧ್ಯರಾತ್ರಿ** (ನಾ). ನಡುರಾತ್ರಿ : ನಟ್ಟಿರುಳು : "ಅರ್ಧರಾತ್ರ ನಿಶೀಥಯೆನೆ ಮಧ್ಯರಾತ್ರಿ [ಪಾಠಾಂ. ತ್ರಿ]ಯುಕ್ಕುಂ" (ಮಂಗರಾ. ೩೦-೭) : ಮಧ್ಯರಾತ್ರಿಯಾಗುವಾಗ ಎಲ್ಲರ ಮುಖಗಳು ಸಂಜೆಮಲ್ಲಿಗೆಯಂತೆ ಅರಳಿದ್ದವು (ಮರಳು. ೩೦೦). [ಸಂ.]

**ಮಧ್ಯಲೋಕ** (ನಾ). ಊರ್ಧ್ವ, ಮಧ್ಯ ಮತ್ತು ಅಧೋಲೋಕಗಳೆಂಬ ಮೂರುಲೋಕಗಳ ನಡುವಿನ ಲೋಕ : ಮರ್ತ್ಯಲೋಕ; ಭೂಮಿ : ನೆಲಸಿರ್ದಪ್ಪುದಧಸ್ಥಳಂಬಿಡಿದಧೋಲೋಕಂ ಸಮಂತೆಯ್ದೆ ಸುತ್ತಲುಮಿರ್ದಪ್ಪುದು ಮಧ್ಯಲೋಕಮೆಸೆದಿರ್ದಾ ಚೂಳಿಕಾಭಾಗದಾದಲಿಯೊಳ್ ನಿಂದಪುದೂರ್ಧ್ವಲೋಕಂ (ಆಪು. ೧-೩೦). [ಸಂ.]

**ಮಧ್ಯವರ್ತಿ** (ಗು). ೧. ನಡುವೆ ಇರುವ : ಮಧ್ಯದಲ್ಲಿರುವ : ಸುರಪರಿಷನ್ಮಧ್ಯವರ್ತಿ ಸುಧರ್ಮೇಂದ್ರಂ ಧರ್ಮನಿರೂಪಣಾಪ್ರವಣನಿಂತೆಂದು (ಶಂರಾಮಾ. ೧೭-೯೩ ವ); ಶ್ರೀಕಾಂತ — ಕಾಮಿನಿಯರು ನನ್ನ ಗತಜೀವನದ ಮಧ್ಯವರ್ತಿ ಬಿಂದುಗಳು (ಮುಂಚ್ತ. ೯). (ನಾ). ೨. ಮಾಧ್ಯಮ : ಅನಾದೃಶವಾದ ಸಂಗೀತಮೇಳವೊಂದನ್ನೇ ಚಿತ್ರಕಲೆಯು ಮಧ್ಯವರ್ತಿಗೆ ಭಾಷಾಂತರಿಸಿದಂತಿದೆ (ಶಾರದ. ೩೨೩); ಶಬ್ದವು ಕಿವಿಗೆ ಕೇಳಬೇಕಾದರೆ ಎಲ್ಲಾದರೂ ಒಂದು ಕಡೆ ಉಂಟಾಗುವ ಸ್ಪಂದನಗಳನ್ನು ಕಿವಿಯ ಬಳಿಗೆ ತಲುಪಿಸಬಲ್ಲ ಮಧ್ಯವರ್ತಿಯೊಂದು (medium) ಅವಶ್ಯಕ (ಭೌತವಿ. ೧೦೩). ೩. ಇಬ್ಬರು ವ್ಯಕ್ತಿ ಅಥವಾ ಎರಡು ಪಕ್ಷಗಳ ನಡುವೆ ಸಂಬಂಧವನ್ನು ಕಲ್ಪಿಸಿ ವ್ಯವಹಾರ ಮಾಡುವವನು ; ದಲ್ಲಾಳಿ : ಮಧ್ಯವರ್ತಿಗಳನ್ನು ಕಡಮೆಮಾಡಿದರೆ ಅದರಿಂದ ರೈತನಿಗೆ ಬಹಳ ಪ್ರಯೋಜನವುಂಟು (ವ್ಯಶಮ. ೬೭). ೪. ವ್ಯವಹಾರ ತೀರ್ಪಿಗಾಗಿ ವಾದಿಪ್ರತಿವಾದಿಗಳ ಮಧ್ಯೆ ನಿಲ್ಲುವ ಪಂಚಾಯತದಾರ ; ಮಧ್ಯಸ್ಥ. [< ಸಂ. ಮಧ್ಯವರ್ತಿನ್]

**ಮಧ್ಯವೇಗ** (ನಾ). [ಕಾಮಶಾ] ರತಿಭೇದದೃಷ್ಟಿಯಿಂದ ವಿಂಗಡಿಸಿದ ಮೂರು ಪುರುಷವರ್ಗಗಳಲ್ಲಿ ಮಧ್ಯದ ವರ್ಗಕ್ಕೆ ಸೇರಿದವನು : ಸುರತದಲ್ಲಿ ಮಧ್ಯಮವಾದ ವೇಗಾಸಕ್ತಿಯುಳ್ಳವನು : ವೇಗಗತಿಯಿನಾಯ್ತು ಮಂದವೇಗ ಮಧ್ಯವೇಗ ಚಂಡವೇಗವೆಂಬ ಪೆಸರು ಪುರುಷರಿಂಗೆ ಸುರತದೊಳ್ (ಜಪವ. ೪-೪೭); ಕಾಮುಕಭೇದದಿಂ ಮಂದವೇಗ ಮಧ್ಯವೇಗ ಚಂಡವೇಗನೆಂದು ಪುರುಷರು ಮೂರುಪ್ರಕಾರ (ಕಾಪಾಶಾ. ೨೦೦). [ಸಂ.]

**ಮಧ್ಯವೇಗಿ** (ನಾ). = ಮಧ್ಯವೇಗಿನಿ : ತೂಗಿದಂದದಿಂದೆ ಮಂದವೇಗಿ ಮಧ್ಯವೇಗಿ ಚಂಡವೇಗಿಯೆಂಬುದಾಮದಜಲೆಯರ್ಗೆ ನಲ್ಲಳೆ (ಜಪವ. ೪-೩೭). [< ಸಂ. ಮಧ್ಯವೇಗಿನೀ]

**ಮಧ್ಯವೇಗಿನಿ** (ನಾ). [ಕಾಮಶಾ] ರತಿಭೇದದೃಷ್ಟಿಯಿಂದ ವಿಂಗಡಿಸಿದ ಮೂರು ಸ್ತ್ರೀವರ್ಗಗಳಲ್ಲಿ ಮಧ್ಯದ ವರ್ಗಕ್ಕೆ ಸೇರಿದವಳು ; ಸುರತದಲ್ಲಿ ಮಧ್ಯಮವಾದ ವೇಗಾಸಕ್ತಿಯುಳ್ಳವಳು : ಮಂದವೇಗಿನಿ ಮಧ್ಯವೇಗಿನಿ ಚಂಡವೇಗಿನಿ [ಪಾಠಾಂ. ಮಂದವೇಗಿ, ಮಧ್ಯವೇಗಿ, ಚಂಡವೇಗಿ] ಯರೆಂಬ ರತಿಭೇದಕಾಂತೆಯರಿಂ (ಶಬೇಕ. ೧೯೩). [ಸಂ. ಮಧ್ಯವೇಗಿನೀ]

**ಮಧ್ಯಸಂಚ** 'ಮಧ್ಯಸಂಚು' ನೋ.

**ಮಧ್ಯಸಂಚು, ಮಧ್ಯಸಂಚ** (ನಾ). ೧. [ಸಂಗೀತ] ವಾದ್ಯವಾದನದ ಬೆಡಗುಗಳಲ್ಲಿ ಒಂದು : ತಳಸಂಚು ಮಧ್ಯಸಂಚುಪ್ಪರದ ಸಂಚುಗಳನಳವಡಿಸಿ . . . ತಾಳಾನುಗತವಾಗಿ ಬಾಜಿಸುತೆ (ಶದ್ವರಾ. ೩-೩೪). ೨. [ನಾಟ್ಯ] ನೃತ್ಯವಿನ್ಯಾಸಗಳಲ್ಲಿ ಒಂದು : ತಳಸಂಚು ಮಧ್ಯಸಂಚುಪ್ಪರದ ಸಂಚು ಮಂಜುಳವಾಗೆ ನಿಡುಗಣ್ಣ ಥಳಥಳವನಾಡಲು . . . ದೇಶಿಯನಾಡಿದಳು ಪರವೆನಾಚಿ (ಸೌಂದಪು. ೯-೧೦). **ಮಧ್ಯಸಂಚ** : ೩. ಖಡ್ಗಯುದ್ಧದ ಒಂದು ವರಸೆ : ವಿಜಾಪ ತಳಸಂಚದೊಳು ಮೊನೆಯನು ತೋಜಿ . . . ಮಧ್ಯಸಂಚಕೆ ಸಿಲುಕಿ ಕೈಮಾಡಿ ಜಾಜಿ (ಕುಮಾರಾ. ೪-೨೨). [ಮಧ್ಯ + ಸಂಚು₂]

**ಮಧ್ಯಸಂಧಿ** (ನಾ). [ವ್ಯಾಕ] ಪ್ರಕೃತಿ ಮತ್ತು ಪ್ರತ್ಯಯಗಳನ್ನು ಸೇರಿಸಿದಾಗ ಆಗುವ ಸಂಧಿ ; ಪದಮಧ್ಯಸಂಧಿ : ಮರವು, ಮರವನ್ನು ಎಂಬೀ ರೂಪಗಳ ಮಧ್ಯಸಂಧಿಯನ್ನು ಬೇರ್ಪಡಿಸುವಾಗ ಕೆಲವರು . . . "ವಕಾರಾಗಮ" . . . ಎನ್ನುವುದುಂಟು. ಇದು ಸರಿಯಲ್ಲ (ಸಂಕೋಪ್ರ. ೪೯). [ಸಂ.]

**ಮಧ್ಯಸಂಧ್ಯೆ** (ನಾ). ಹಗಲು ಹಾಗೂ ಇರುಳು ಎರಡರ ಸಂಧಿಕಾಲ ; ಮುಂಜಾವ ಮತ್ತು ಮುಚ್ಚಂಜೆ : "ಇರುಳ ಪಗಲೆರಡಱಿಡೆ ಮಧ್ಯಸಂಧ್ಯಾಖ್ಯೆಯಕ್ಕು" (ಮಂಗರಾ. ೨೦-೭). [ಸಂ. ಮಧ್ಯಸಂಧ್ಯಾ]

**ಮಧ್ಯಸ್ತ** (ನಾ). ವಾದಿ, ಪ್ರತಿವಾದಿಗಳ ನಡುವೆ ವ್ಯವಹರಿಸುವವನು : ಮಧ್ಯಸ್ತ ಪರಿಕಲ್ಪಿತ ಗ ೩ (ಪ್ಕಆಂ. ೧೯೩೪. ೨೭-೧೯; 1403); ಮಧ್ಯಸ್ತ ಇಲ್ಲದ ಊರಲ್ಲಿ ಮಧ್ಯಾಹ್ನ ಇರಬಾರದು (ಗಾದೆ).

**ಮಧ್ಯಸ್ತಮಾಡು** = ರಾಜಿಮಾಡು : ಶೇಷಗಿರಿರಾಯನ ಮುಖಾಂತ್ರ ಮಧ್ಯಸ್ತಮಾಡಿ ಶರಬಿಡಿಸಿಕೊಂಡು (ತ್ಯದಶ. ೨೩). [< ಸಂ. ಮಧ್ಯಸ್ಥ]

**ಮಧ್ಯಸ್ತಿಕೆ** (ನಾ). ಎರಡುಪಕ್ಷಗಳು ಅಥವಾ ಇಬ್ಬರು ವ್ಯಕ್ತಿಗಳ ನಡುವೆ ಸಂಧಾನಮಾಡುವುದು.– ವ್ಯವಹರಿಸುವುದು : ಮನಸ್ಸಿನ ಸಂಕಲ್ಪಕ್ಕಿಂತ ಬೇರೆಯಾದ ಪ್ರೇರಣಾಶಕ್ತಿಯು ಯಾವುದೋ ಒಂದು ರೀತಿ ಮಧ್ಯಸ್ತಿಕೆಯನ್ನು ವಹಿಸದಿದ್ದರೆ ನಮಗೆ ಕೆಲಸವು ತಿಳಿದಿದ್ದರೂ ಮಾಡಲಾರೆವು (ಶಾರದ. ೨೬೦); ಇದರಲ್ಲಿ ನನ್ನ ಮಧ್ಯಸ್ತಿಕೆ ಯಾಕೆ ಬೇಕೋ ಶಿವಾ (ರಂಗರೋ. ೧೦೩). [ಮಧ್ಯಸ್ತ + – ಇಕೆ]

**ಮಧ್ಯಸ್ಥ** (ಗು). ೧. ಮಧ್ಯದಲ್ಲಿರುವ ; ನಡುವೆ ಇರುವ : ಮಧ್ಯಸ್ಥ ವಸ್ತುವಿನ ಸಹಾಯವಿಲ್ಲದೆ ನೇರವಾಗಿ ಸರ್ವತಂತ್ರಸಿದ್ಧಾಂತದಂತೆ ಪ್ರತ್ಯಕ್ಷ ಜ್ಞಾನ ಮಾಡಿಕೊಳ್ಳಬಹುದಾದರೆ, ವಿಚಾರಧಾರೆಯೆನ್ನುವುದು ಮನೋವಿಜ್ಞಾನದ ವಿಷಯವೇ ಸರಿ (ಶಿವಾಕ್ಮ. ೪೦). ೨. ಮಂದವಾದ; ಕ್ಷೀಣವಾದ. (ನಾ). ೩. ಯಾವ ಪಕ್ಷಕ್ಕೂ ಸೇರದವನು ; ತಟಸ್ಥ; ಉದಾಸೀನ. ೪. ಮಧ್ಯದಲ್ಲಿ ನೆಲಸಿದವನು; ನಡುವೆ ನೆಲಸಿರುವವನು: ಮಹೀತ್ರಳಮಧ್ಯಸ್ಥನೆನಂತುಮಲ್ಲದೆಯುಮಿಂದ್ರಾವಾಸಮಂ ಮುಟ್ಟಿದಂ (ಸುಕುಮಾ. ೧-೬೩). ೫. ವಾದಿ, ಪ್ರತಿವಾದಿಗಳ ನಡುವೆ ವ್ಯವಹರಿಸುವವನು: ನ್ಯಾಯವಿಚಾರಣೆಮಾಡುವುದರಲ್ಲಿ ಮಧ್ಯಸ್ಥನಾಗಿ ನಿಂತು ವಿಷಯಗಳನ್ನು ಮಂಡಿಸುವವನು (ಲಾಯರ್) (ಕುಳುವಾ. ೧೪೩). ೬. [ಜೈನ] "ಶ್ರೋತೃಲಕ್ಷಣ—ವಸ್ತುವಿಚಾರದಲ್ಲಿ ವಕ್ತೃ ಹೇಳಿದ ಮಾತಿನ ಗುಣದೋಷಗಳಲ್ಲಿ ಗುಣವನ್ನು ಮಾತ್ರ ಸ್ವೀಕರಿಸುವವನು" (ತ್ರಿಶಕೋ. ೧೪೪) : ಮಧ್ಯಸ್ಥನೆಂಬೊಂ ವಸ್ತುವಿಚಾರದೊಳಾ ವಕ್ತೃ ಪೇಳ್ದ ಗುಣದೋಷಂಗಳೊಳು ದೋಷಮಂ ಕೊಂಡೆಸಗದೆ ಪತ್ತುವಿಟ್ಟು ಗುಣಮನೆ ಕೈಕೊಳ್ವಂ (ಶಾಪುಂಪು. ೭). [ಸಂ.]

**ಮಧ್ಯಸ್ಥಗಾರ** (ನಾ). ೧. ಯಾವಕಡೆಗೂ ಸೇರದೆ ನಿಷ್ಪಕ್ಷಪಾತವಾಗಿರುವವನು : ಭಾರತದ ಮುಖ್ಯನ್ಯಾಯಾಧಿಪತಿಯವರಿಂದ ನಿಯುಕ್ತವಾಗತಕ್ಕ ಮಧ್ಯಸ್ಥಗಾರರು ನಿರ್ಧರಿಸತಕ್ಕಂಥ ಅಂಶವಾನವನ್ನು . . .

ಪಾವತಿಮಾಡತಕ್ಕುದು (ಶಾಧಾಪ. ೧೬೭). ೨. ಎರಡುಪಕ್ಷ ಅಥವಾ ವ್ಯಕ್ತಿಗಳ ನಡುವೆ ಇದ್ದು ಕೆಲಸಮಾಡುವವನು; ಮಧ್ಯವರ್ತಿ : ನನಗೆ ಈ ಮಧ್ಯಸ್ಥಗಾರನ ಕುತರ್ಕ ಸರಿಬೀಳಲಿಲ್ಲ (ಹಸುಷೂ. ೩೨೫).

[ಮಧ್ಯಸ್ಥ + – ಕಾರ$_1$ (<— ಕಾಱ)]

**ಮಧ್ಯಸ್ಥತೆ** (ನಾ). ಪಕ್ಷಪಾತವಿಲ್ಲದಿರುವಿಕೆ : ಪರಮಾರ್ಥಮಂ ಮಧ್ಯಸ್ಥತೆಯುಮನವಧಾರಿಸುವಾಗಳ್ (ಶಾಂತಿಪು. ೪-೧೦೨ವ). [ಸಂ. ಮಧ್ಯಸ್ಥತಾ]

**ಮಧ್ಯಸ್ಥಿಕೆ** (ನಾ). = ಮಧ್ಯಸ್ತಿಕೆ : ಎಲ್ಲರೂ ಕೂಡಿ ಅದೊಂದು ಮಧ್ಯಸ್ಥಿಕೆಯನ್ನು ಇಕ್ಕಡೆಯ ಒಪ್ಪಿಗೆಯಂತೆ ಮಾಡಿದರಂತೆ (ಶೀರಬಾ. ೦೯); ಈಗ ರಾಮಣ್ಣ ಅವರ ಮನೆಗೆ ಹೋದರೆ ನಾನೇ ಅವನನ್ನು ಮಧ್ಯಸ್ಥಿಕೆಗೆ ಕಳಿಸಿದೆನೆಂದು . . . ತಿಳಿದುಕೊಳ್ಳುತ್ತಾರೆ (ವ್ಯಹಾಗ. ೩೩೦): ಜೈನದರ್ಶನವಾದರೆ ಇತರ ಯಾವ ಮಧ್ಯಸ್ಥಿಕೆಯೂ ಇಲ್ಲದೆ ಆತ್ಮನಿಗೆ ನೇರಾಗಿ ಲಭಿಸುವ ಜ್ಞಾನವನ್ನು ಮಾತ್ರ ಪ್ರತ್ಯಕ್ಷವೆಂದು ಹೇಳುತ್ತದೆ (ಕಕ್ಪ್ರಾ. ೦೪೬).

[ಮಧ್ಯಸ್ಥ + —ಇಕೆ]

**ಮಧ್ಯಾಜಿರ** (ನಾ). ನಡುವಿನ ಅಂಗಳ : ಭಾಸ್ವದ್ಭಿತ್ತಿಯುಂ ಸುತ್ತಿರೆ ಸುರುಚಿರಚಿತ್ರಂ ಹರಿದ್ರತ್ನಮಧ್ಯಾಜಿರಮುಂ ಮುಕ್ತಾವಲೀರಂಗವಲಿ ಬಳಸೆ . . . ಚೆಲ್ವಂಗಾದುದುತ್ತುಂಗಗೇಹಂ (ಶಂರಾಪಿ. ೩-೧೦೩). [ಸಂ.]

**ಮಧ್ಯಾಹ್ನ** (ನಾ). ಹಗಲಿನ ಮೂರುಭಾಗದಲ್ಲಿ ನಡುವಿನ ಕಾಲಾವಧಿ ; ನಡುಹಗಲು: ಮಧ್ಯಾಹ್ನಮಾಲಿಸಿತು ನಿಶ್ಶಬ್ದವಿಸ್ಮಯಭ್ರೂಮುದ್ರೆಯಿಂ (ಶ್ರೀರಾಪ. ೨೩೬-೨೬೩) ; ಒಂದುದಿನ ಬೆಳಗ್ಗೆ . . . ಒಂದುದಿನ ಮಧ್ಯಾಹ್ನಕ್ಕೆ ಹೀಗೆ ಅನಿಯಮಿತವಾಗಿ ಊಟ ಮಾಡಬಾರದು (ಮುಂಬಯು. ೪-೩೩).

ಮಧ್ಯಾಹ್ನ ಮಲ್ಲಿಗೆ = ಒಂದು ಬಗೆಯ ಮಲ್ಲಿಗೆಹೂವು ; ನಡುಹಗಲಿನಲ್ಲಿ ಹೂಬಿಡುವ ಮಲ್ಲಿಗೆಜಾತಿ : ಭಾಸ್ಕರಂ ನಡುವಡು ವಣಾಕಾಶಕೆಳೆಯೆ, ಬಿಸಿಲಿನ ಬೇಗೆ ತವೆಯೆ, ಜುಂಯ್ಯನೆ ಗಾಳಿ ಬೀಸೆ. ಮಧ್ಯಾಹ್ನಮಲ್ಲಿಗೆಯರಳೆ (ವ್ಯಶಾಪ. ೬೪-೨೬೩). 'ಸಂಜೆಮಲ್ಲಿಗೆ' ಹೋ. ಮಧ್ಯಾಹ್ನ ಮೀರು = ೧. ನಡುಹಗಲು ಕಳೆದುಹೋಗು ; ಸಂಜೆಯಾಗು : ಊಟವಾಗುವ ಹೊತ್ತಿಗೆ ಮಧ್ಯಾಹ್ನ ಮೀರಿತ್ತು (ಕೂಶ). ೨. (ಅಲಂ) ಪ್ರಾಯಕಳೆ ; ವಯಸ್ಸಾಗು : ಆಕೆಗೆ ಇದ್ದ ಒಬ್ಬನೇ ಒಬ್ಬ ಮಗನಿಗೂ ಮಧ್ಯಾಹ್ನ ಮೀರಿತ್ತು (ಕೆಲವು. ೨೯). ಮಧ್ಯಾಹ್ನ ಸಾಗಿಸು = (ಅಲಂ) ಜೀವನೋಪಾಯಮಾಡು ; ಹೊಟ್ಟೆಹೊರೆ : ಪತ್ರಿದಾರಿಯ ಉದ್ಯೋಗವನ್ನೇ ಮಾಡಿ ಮಧ್ಯಾಹ್ನ ಸಾಗಿಸಬೇಕೆಂಬ ಕನಿಷ್ಠ ವೃತ್ತಿಯ ಪ್ರಾಣಿಯು ಅವನಾಗಿರಲಿಲ್ಲ (ಅಂಡಕೆ. ೧೮). [ಸಂ.]

**ಮಧ್ಯಾಹ್ನರೇಖೆ** (ನಾ). [ಭೂಗೋಳ] "ಭೂಗೋಳಧ್ರುವಗಳೆರಡೂ . . ಬಿ ಮಧ್ಯಬಿಂದುವನ್ನೂ ಹಾದುಹೋಗುವ ವೃತ್ತರೇಖೆ" (Meridian. ಇಂಕೊ) : ಧ್ರುವಗಳ ಮಾರ್ಗವಾಗಿ ಭೂಮಿಯ ಸುತ್ತಲೂ ಬರೆಯಲ್ಪಟ್ಟಿವೆ ಎಂದು ಭಾವಿಸಲ್ಪಟ್ಟಿರುವ ರೇಖೆಗಳಿಗೆ "ಮಧ್ಯಾಹ್ನರೇಖೆಗಳು (Meridians)" ಎಂದು ಹೆಸರು (ಭೂಗೋಳ. ೬) : ಸೂರ್ಯನು ಮಧ್ಯಾಹ್ನಕ್ಕೆ (೧೨ ಗಂಟೆ) ನಡುದಾರಿಯಲ್ಲಿರುತ್ತಾನೆ. ಆ ಕಾಲವನ್ನು ನಾವು ಮಧ್ಯಾಹ್ನರೇಖೆಯನ್ನು ದಾಟುವ ಸಮಯವೆಂದು ಹೇಳುತ್ತೇವೆ (ಭೂಶಿಪ. ೩). [ಸಂ. ಮಧ್ಯಾಹ್ನರೇಖಾ]

**ಮಧ್ಯೆ$_1$** (ನಾ). ೧. [ಕಾವ್ಯಮೀ] ನಾಯಿಕೆಯರ ಭೇದಗಳಲ್ಲಿ ಒಂದು; ನಡುಹರೆಯದ ಹೆಂಗಸು : ಸ್ತ್ರೀಯರಲ್ಲಿ ಯೌವನ ಮತ್ತು ಸಂಸಾರಾನುಭವದ ಮೇಲೆ ಮುಗ್ಧೆ, ಮಧ್ಯೆ, ಪ್ರಗಲ್ಭೆ ಎಂದು ಮೂರುವಿಧ (ಕ್ಛಬಿ. ೨೦೦). ೨. [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಮೂರನೆಯದು : ಉಕ್ತೆ ಅತ್ಯುಕ್ತೆ ಮಧ್ಯೆ . . . ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೧-೪೬ ವ): ಉಕ್ತೆ ಅತ್ಯುಕ್ತೆ ಮಧ್ಯೆ (ಕ್ಛಬಿ. ೭೮). ೩. =ಮಧ್ಯಮೆ ೫ : ಶ್ಲಥೆ ಘನೆಯೆರೆರಡುಗುಣಮೊಂದಿ ತೋಱಿರಲವಳೆ ಮಧ್ಯೆಯೆನಿಸಿರ್ಪಳ್ (ಶಶಪ. ೫-೩): ಶ್ಲಥೆ ಮಧ್ಯೆ ಮಾನೆಯೆರೆಂಬ ಆಕಾರಯುಕ್ತ ಸೀಮಂತಿನಿಯರಿಂ (ಶಿವೇಳ. ೦೮೨) ; ಮೊದಲು ಸ್ರವಿಸಿದಡೆ ಶ್ಲಥೆ ನಡುವೆ ಸ್ರವಿಸಿದಡೆ ಮಧ್ಯೆ ಕಡೆಗೆ ಸ್ರವಿಸಿದಡೆ ಘನೆ (ಕಾಮಶಾ. ೫೦೦). [ಸಂ. ಮಧ್ಯಾ]

**ಮಧ್ಯೆ$_2$** (ಅ). ನಡುವೆ: ಮಧ್ಯದಲ್ಲಿ : ಮೆರೆವುದು ವಿಷಯಮಧ್ಯೆ ರಾಜಧಾನಿ ಅಯೋಧ್ಯೆ (ಶ್ರೀರಾಪ. ೬-೦೫೬). [ಸಂ. ಮಧ್ಯೆ, ಮಧ್ಯೇ]

**ಮಧ್ಯೈಕನಾಡಿ** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳನ್ನು ವಿಧ್ಯುಕ್ತವಾಗಿ ಮೂರುಸಾಲುಗಳಲ್ಲಿ ಬರೆದಾಗ ಮಧ್ಯದ ಸಾಲಿನಲ್ಲಿ ಬರುವ ನಕ್ಷತ್ರಗಳು ; ಭರಣಿ, ಮೃಗಶಿರ, ಪುಷ್ಯ, ಪುಬ್ಬೆ, ಚಿತ್ತೆ, ಅನೂರಾಧೆ, ಪೂರ್ವಾಷಾಢ, ಧನಿಷ್ಠ, ಉತ್ತರಾಭಾದ್ರ – ಈ ನಕ್ಷತ್ರಗಳು ಮಧ್ಯೈಕನಾಡಿ ನಕ್ಷತ್ರಗಳು. ಒಂದೇ ನಾಡಿಯಲ್ಲಿರುವ ತರುಣತರುಣಿಯರಿಗೆ ವಿವಾಹ ಕೂಡದೆಂಬ ನಂಬಿಕೆಯಿದೆ. [ಸಂ. ಮಧ್ಯೈಕನಾಡೀ]

**ಮಧ್ವಮತ** (ನಾ). ಮಧ್ವಾಚಾರ್ಯರು ಸ್ಥಾಪಿಸಿದ ಮತ ; ದ್ವೈತಮತ : ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡ (ಕುರಂಪ. ೦-೨೦೪ ಕಲ್ಲ). 'ಮಾಧ್ವಮತ' ಪರಾ. [ಸಂ.]

**ಮಧ್ವಾಸವ** (ನಾ). ೧. ಮಾದಕಪಾನೀಯ : ಮದ್ಯ. ೨. ಹಿಪ್ಪೆ ಹೂವಿನ ಹೆಂಡ : "ಮಧ್ವಾಸವಃ, ಮಾಧವಕಃ, ಮಧು – ೩ ಹಿಪ್ಪೆ ಹುವ್ವಿನ ಹೆಂಡದ ಹೆಸರು" (ಸಿದ್ಧಾಂತ. ೩೦೮). [ಸಂ.]

**ಮನ್‌ಸಬ್** (ನಾ). ಇರಾದೆ : ವಿಚಾರ : ಯೋಚನೆ : ಈ ಗರೀಬ ಬಾಳಯಗಾರ ಏನ ಕೊಟ್ಟಾನು ? ನವಾಬಸಾಹೇಬರು ಜಹಗೀರ್ ಕೊಡುವ ಮನ್‌ಸಬ್ ಮಾಡಿದಾರೆ (ಶಾಗಾ. ೩೩).

[←ಅರ. ಮನ್‌ಸೂಬಹ್ ; ಹಿಂ. ಮರಾ. ಮನ್‌ಸೂಬಾ]

**ಮನ್‌ಸಬ್‌ದಾರ, ಮನಸಬದಾರ** (ನಾ). ಒಬ್ಬ ದೊಡ್ಡಅಧಿಕಾರಿ : ಮಂತ್ರಾಲೋಚನಸಭೆ ಎಂಬ ಮನ್‌ಸಬ್‌ದಾರರೂ ಸಹಾ ಇರುತಿದ್ದರು (ಇಕ್ರಾ. ೮ ಬಭೋರ್‍ಬ್ರಾಕ). **ಮನಸಬದಾರ** : ನಿನ್ನ ಸ್ವಾಮಿಯಾಗುವವನು ಐದುಸಾವಿರ ಸೀಮೆಗೆ ಮನಸಬದಾರನಾಗುವನು (ಕಶಾಕಂ. ೩೬); ಮಬಾರಕನನ್ನು ಕ್ಷಮಿಸಿ ಅವನನ್ನು ದೊಡ್ಡ ಮನಸುಬದಾರನಾಗಿ ಮಾಡಿದನು (ಶಂಕಮು. ೩೨೪). [←ಪಾರ. ಹಿಂ. ಮನ್‌ಸಬ್‌ದಾರ್]

**ಮನ್‌ಸಬ್‌ದಾರಿ** (ನಾ). (ಮನ್‌ಸಬ್‌ದಾರನ) ಹುದ್ದೆ ; ಪದವಿ : ಅಧಿಕಾರ : ನನಗೊಂದು ಮನ್‌ಸಬ್‌ದಾರಿಯನ್ನು ಕೊಡುವೆನೆಂದು ದಿವಾನಸಾಹೇಬರು ಹೇಳಿದ್ದರು (ಕ್ರೀಮುಪಿ. ೯೯).

[←ಅರ. ಹಿಂ. ಮನ್‌ಸಬ್‌ದಾರೀ]

**ಮನ** (ನಾ). ೧. ಅಂತರಂಗ : ಚಿತ್ತ ; ಮನಸ್ಸು : ಮನದೊಳ್ ಜನಿಯಿಸುಗುಮವಂಗೆ ವಿಲಿವಿಭಂಗಜ್ಞಾನಂ (ಆದಿಪು. ೩-೮೫) ; ಮನವು ಬೇಚೊಲ್ಲ ಶಿವಭಕ್ತ ಮನವಾ ಪುರಕೆ (ತರಂರ. ದೇ. ೩-೧೫); ಮೊಗದ ದುಗುಡವಿದೇನು ಮನದುಬ್ಬೆಗವಿದೇನು . . . ಎಂದು ಬೆಸಗೊಳಲು (ಕೂಶರಾ. ೦-೪-೭) ; ಮೌನದಿಂದ ಮನವ ಗೆಲ್ಲು (ಅನಕೇ. ೦೭-೬). ೨. ಇಷ್ಟ ; ಅಪೇಕ್ಷೆ : ತೀರ್ಥಯಾತ್ರೆಗೆ . . . ಮನಮುಳ್ಳರ್ಬರಲಕ್ಕುಂ (ರಾಮಾಶ್ವ. ೭೮-೦೦). ೩. ಭಾವನೆ ; ಕಲ್ಪನೆ. ೪. ಬುದ್ಧಿ ; ಚಿಚ್ಛಕ್ತಿ. ೫. ಉದ್ದೇಶ ; ಆಶಯ. ೬. ಆಸಕ್ತಿ : ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ (ಬಸವ. ೨೩೩).

ಮನಕ್ಕೆ ತರು = ಮನಸ್ಸಿಗೆ ತಂದುಕೊಳ್ಳುವಂತೆ ಮಾಡು ; ಗಮನಕೊಡುವಂತೆ ಮಾಡು : ನೆಗೆಯುತ್ತುಮಿರ್ಪ ತುಂಬಿಗಳುಮಂ ಮನಕ್ಕೆ ತರಲಾತರ್ಪವು (ಶಂರಾಪಿ. ೩-೭೭). ಮನಕ್ಕೆ ವರ್, ಮನಕೆ ಬರು =

ಮನಸ್ಸಿಗೆ ಬರು ; ಇಷ್ಟವಾಗು : ಬಳೆದ ಮುನಿಸಿನೊಳ್ ಕಿಚ್ಚನಾದ ಕಣ್ ದೆಸೆಗೆ ಕೆಂಪನೊದವಿಸಿಮದು ದಿಗ್ವನಿತೆಯರ್ಗೆ ರಕ್ತಬಲಿಯಂ ಮನಕ್ಕೆ ವರೆ ಬಳೆದ ಮುನಿಸೆ ಕುಡುವಂತಾಗಳ್ (ಆದಿಪು. ೧೪-೨೩) ; ಕಳುಹು ನೀನೆನ್ನ ಮನಕೆ ಬಂದವೆ ತುಪ್ಪವದೆ ನೆಲಹಿನ ಗಡಿಗೆಯುಲಿ . . . ತಂದಪೆಂ (ಬಸವ. ೦೪-೦೦) ; ಮನದೊಳಸುವರ್ತಾನಿಸದೆ ನೇಮುವವನೆನಗೆ ಕರುಣಿಸು ತಾಯೆ ತಾತನ ಮನಕೆ ಬಹುದಿದು (ತೊರವೆ. ೨-೩-೨೨). **ಮನದನ್ನ** = ೧. ಪ್ರೀತಿಪಾತ್ರನಾದವನು : ಆತ್ಮೀಯ : ತನ್ನ ಮನದನ್ನನಪ್ಪ ಸಾರಥಿಯಂ ಚೋದಿಸಲ್ವೇಟ್ಟು (ಆದಿಪು. ೧೨-೭೪ ವ); ಮನದನ್ನರಪ್ಪ ಸೇವಕ ವನಿತಾವಳಿವೆರಸು ಮಿತ್ರ ಮೇಧಾವಿಳಂ . . . ಪಾರ್ಶ್ವದೊಳ್ ಕುಳ್ಳಿರೆಯುಂ (ಶಾಂತಿಪು. ೧೧-೦೬) ; ತನ್ನ ಮನದನ್ನರಪ್ಪ ಬಸಂತ ಮೆಲ್ಲೆಲರ್ಗಳೆಂಬ ಕೆಳೆಯರೊಡನೆ . . ಬರಲಿದೆಂದು ಪೇಟಿ (ಕವ್ಯಕಾ.೦೯೬) : ಕಂಡು ನಾತಿಸಿವರ ಮನದನ್ನನೊಡನಾ ಶರಣರುಂಡು ಮಿಕ್ಕಾ ಶೇಷವಂ ಶಿವಗಿತ್ತು (ಶಾವೆತಂ. ೪-೩೬). ೨. ಪ್ರಿಯ : ಇನಿಯ : "ಕಾದಲಂ, ನಲ್ಲಂ, ಇನಿಯಂ, ಪ್ರಿಯಂ, ಮನದನ್ನಂ—ಈ ೫ ಪ್ರಿಯಂಗೆ ಪೆಸರ್" (ಕರಸಾ.೬೨-೩೯೯); ಮನದನ್ನ ನೆಡೆಗಂಗಜಂವೆರಸು ನಡೆತಂದು ( ಪಂಪು. ೩೫-೨೦ ) ; ಆನೀ ಮನದನ್ನನ ಕೈಪಿಡಿವುದರ್ಕೆ ಪೊದಲ್ ಎನ್ನಯ ಜನಕನಪ್ಪ ಜನಕನೆಡೆಯೊಳಿರ್ದುದಂ ಬಲ್ಲಿರೆ (ಅಮ್ಮಕ. ೩೯). ೩. ಮನಸ್ಸಿಗೆ ಬಂದುದು; ಇಷ್ಟವಾದುದು : ಅಕ್ಕ ನಿಜ ಪ್ರಿಯಂಗೆ ಮನದನ್ನದೆ ನೀಂ ಬೆಸಕೆಯ್ವುದಾಗಳುಂ (ಚಂದ್ರಪು. ೬-೮೬). **ಮನದನ್ನಳ್** = ೧. ಪ್ರೀತಿಪಾತ್ರಳಾದ ಗೆಳತಿ ; ಸಖಿ : ತನ್ನ ಮನದನ್ನಳಪ್ಪ ಕಳದಿಗೆ ನಿವೇದ್ಯದೊಳಿಂ ಸುಖೀಭವತು ಎಂಬಂತುಸಿರ್ದ(ಶಾಂತಿಪು. ೮-೭೮ ವ) ; ನಾಣ್ಚಿ ನೋಡಿದಳ್ ತಾಮ್ಮನದನ್ನಳಪ್ಪ ಕಳಭಾಷಿಣಿಯಂ ನಯನತ್ರಿಭಾಗದಿಂ (ಚಂದ್ರಪು. ೩-೬೨); ಮನದನ್ನಳಪ್ಪ ತನ್ನನುಚರೆ ಹರ್ಷವರ್ಧನೆಯ ವಕ್ತ್ರಮನೀಕ್ಷಿಸಿದಳ್ (ಶಾಂತಿಪು. ೩-೫೦). ೨. ಪ್ರಿಯೆ; ನಲ್ಲೆ: "ಮನದನ್ನಳ್ ಕಾದಲೆಯೆಂದಿನಿಯಳ್" (ಕವಿಕಂ. ೧೬೨). **ಮನದನ್ನೆ** = ೧. ಪ್ರೀತಿಪಾತ್ರಳಾದವಳು : ಅಪದಿರು ಮನದನ್ನೆ ಎನಗೆ ಇದಿರಾಪದಿರು (ನಾಗರ. ೬೩-೦). ೨. ಹೆಂಡತಿ ; ಪತ್ನಿ : "ಮನದನ್ನೆಯೆನಲು ಭಾರ್ಯೆ" (ಕಕರ. ೮೬): ಮನದನ್ನೆಯೆನಿಸುವಂಗನೆ ತನೂಜಂ ವಿಲಾಸಿನಿಯರಾಪ್ತರ್ . . . ಮೊದಲಾದವರ್ವೆರಸು ಘನವಾದ್ಯನಿನದದೊಳ್ ವಿನಯಪೂರ್ಣವಂ . . . ನಡೆತರೆ (ಪಟ್ಟಾ. ೮-೬); ತಮ್ಮ ಮನದನ್ನೆಯ ನೆನಪು ಮಾಡಿಕೊಳ್ಳುತಾ ನಿಂತುಬಿಟ್ಟರು (ಶಾಂತಲಾ. ೩೬೪). **ಮನದ ಮಂಡಿಗೆ** = (ಅಲಂ) ವಾಸ್ತವವಲ್ಲದುದು; ಬರಿಯ ಕಲ್ಪನೆಯದು : ಎರಡು ಭಾಷೆಗಳಿಗೆ ಏಕಲಿಪಿಸಾಧನೆಯೆಂಬುದು ಮನದ ಮಂಡಿಗೆಯಾಗಿ ಉಳಿಯುವುದು (ಕಂಬಾರಿಫ. ೬). **ಮನದರಸಿ** = ಮನಸ್ಸಿನ ಒಡತಿ: ಹೃದಯೇಶ್ವರಿ : ನಿನ್ನನ್ನು ಬಿಟ್ಟು ಅರೆಗಳಿಗೆಯೂ ಇರದಂತಾಗಿದೆ ಮನದರಸಿ (ಕಂಕುವು. ೩೫). **ಮನದೆಗೊಳ್** = ೧. ಮನಃಪೂರ್ವಕ ವಾಗಿ ಅಂಗೀಕರಿಸು ; ಮನಸಾರೆ ಒಪ್ಪು : ಈತನಳುರ್ಕೆಯುಂ ಮನುರ್ಕೆಯಂ ಕಿಡಿಸಿ ಗೆಲ್ವೆಮೆಂದು ನುಡಿದ ಮಂತ್ರಿಗಳ ಮಾತಂ ಮನದೆ ಗೊಂಡು (ಆದಿಪು. ೦೩-೫೮ ವ). ೨. ಬಯಸು; ಇಷ್ಟಪಡು ; ಮೆಚ್ಚು : ಅಂತು ಬಂದ ಮಂದಮಾರುತನ ಕಂಪುಮಂ ಮನದೆಗೊಂ[ಡಾ ಕೊಂ]ಡಾ ಮಾರುತನ ಸೌರಭ್ಯದ ಬಟ್ಟೆವಿಡಿದು ಮಾಲಾಕಾರಪರಿವೃಢನ ಮಂದಿರಮಂ ಸಸಹೋದರಂ ದಾಮೋದರಂ ಪುಗುವುದುಂ ( ಜಗಚಿ. ೬-೦೨ ವ ). **ಮನದೆಗೊಳಿಸು** = ಮನಸ್ಸಿಗೆ ಹಿಡಿಸು ; ಮನಸ್ಸನ್ನು ಆಕರ್ಷಿಸು : ಪಿನಿಯಂ ಸಹಜಂ ಕೃತ್ರಿಮಮೆನಿಸಿದವವು ಬೇಜಿವೇಜಿ ವಿನ್ಯಾಸನಮಂ ಮನದೆಗೊಳಿಸುವುವು (ಆದಿಪು. ೦೪-೬೩). [ಸಂ. ಮನಸ್]

**ಮನಂಕಿಡು** 'ಮನಂಗೆಡು' ನೋ.

**ಮನಂಗಡಡು** (ಕ್ರಿ). ಮನಸ್ಸು ಕಲಕು ; ತಳಮಳಗೊಳ್ಳು : ರೋಷ ವಶಿತು ಮನಂಗದಡಿ ಲಜ್ಜಿಸುತ ತಲೆವಾಗಿ (ರಸಪು. ೨೦-೨೪).
[ ಮನ + ಕದಡು$_1$ ]

**ಮನಂಗಲ್** (ಕ್ರಿ). ಇನ್ನೊಬ್ಬರ ಮನಸ್ಸನ್ನು ತಿಳಿದುಕೊಳ್ಳು : ಇತರರ ಅಭಿಪ್ರಾಯವನ್ನು ಅರಿತುಕೊಳ್ಳು : ನೀನೀಕೆಯುಮಂ ನಿನ್ನ ಬಲ್ಲ ಮಾಟಕ್ಕೆಯೊಳೆಲ್ಲಮೆಲ್ಲಂದದೊಳವೊಡಂಬಡಿಸಿ ಮನಂಗಲ್ವುದೆಂದು ನಿಯೋಜಿಸಿ ಪೋದಂ (ಆದಿಪು. ೩-೨೬ ವ). [ ಮನ + ಕಲ್$_1$ ]

**ಮನಂಗಲಿ**, ಮನಗಲಿ (ನಾ). ಮಾನಸಿಕವಾಗಿ ಶೂರನಾದವನು : ನೆಗಂ ಬಗೆದೊಡಿದರೊಂದು ಪೊಟ್ಟು[ಮೊಂದರ್ಕಮಿ]ದಿರ್ಕಲಾಜಿದ ಮನಂಗಲಿಗಳ್ ಕವನತ್ರಿಣೇತ್ರನಾ (ಪಂಪಭಾ. ೮-೦೦೮). **ಮನಗಲಿ** : 'ಮನಗಲಿತನ' ಪದಾ. [ ಮನ + ಕಲಿ$_2$ ]

**ಮನಂಗಾಣ್**, ಮನಗಾಣ್, ಮನಗಾಣು (ಕ್ರಿ). ೧. ಮನಸ್ಸನ್ನು ತಿಳಿ ; ಅಭಿಪ್ರಾಯವನ್ನು ಗ್ರಹಿಸು : ಜಲದೇವತೆಗಳಪ್ಪೊಡಂ ಮನಂಗಾಣ್ಬರೆಂದು ಬಿಧಾನಮನೀಡಾಡುವಂತೆ ಕೂಸಂ ಗಂಗೆಯೊಳೀಡಾಡಿ ಬಂದರ್ (ಪಂಪಭಾ. ೧-೯೫ ವ) ; ದೇಹಂ ಕರಂ ಕೊರಗಿ ಕಡುಬಡವಾಗಿ ನೀರ್ಗಿಡುಗೊಂಡ ಕಮಲಿನಿಯಂತಿರ್ದ ಕಾಮಿನಿಯಂ ಕಂಡು ಮನಂಗಾಣಲಾಜದೇಕಾಂತಕೆ ಕರೆದು (ಲೀಲಾವ. ೭-೮೩ ವ); ಮಾತಾಡಿ ಮನಂಗಾಣ್ಬೆನೆಂದು ಮಂತ್ರಿವರಂ ಮಾತಾಡಿಸಿಯುಂ ಮಾತಾಡದೆ ನೋಡದೆ ಕಂದರ್ಪ ದೇವನಿರುತಿರುತಿರ್ದಂ (ಶಬ್ದಮ. ೮-೦೨೦). ೨. ಚಿತ್ತಕ್ಕೆ ತೋರು ; ಮನಸ್ಸಿಗೆ ಬರು : ನಿಮ್ಮ ಮನಂಗಂಡಂತೆ ಆಂ ವರ್ತಿಪೆಂ ದಿಟಂ (ಅದ್ಭುತ. ೩೬). **ಮನಗಾಣ್** : ೨. ಮನಗಂಡ ಒಂದು ಪೆಂಡೀ ಕಟ್ಟಿಕೊಂಡು ಬರತೀನಿ (ಪಂಜಯ. ೮). ೩. (ಖಚಿತವಾಗಿ) ತಿಳಿದು ಕೊಳ್ಳು ; (ಸ್ಪಷ್ಟವಾಗಿ) ಗ್ರಹಿಸು : ನಿಜವಾದ ವಿಷಯವನ್ನು ನಾನು ಮನಗಂಡೆ (ಜತಕ. ೨೨) ; ಹುಡುಗರನ್ನು ಅಂಕೆಯಲ್ಲಿಡದಿದ್ದರೆ . . . ಸಂಚಕಾರ ತರುವರೆಂದು ಕಳಸಾಪುರದ ಹಿರಿಯರು ಮನಗಂಡರು (ಕಳಸು. ೬೯). **ಮನಗಾಣು** : ೩. ಈಗ ನೀತಿಯನುಸರಿಸುವರೆ ಮನಗಾಣಸೇ ಕೌರವಮಹೀಶ್ವರನು (ಕುಮ್ಯಾಭಿ. ೦೦-೨೩) : ಇದು . . . ಜೀವಾತ್ಮ ಮತ್ತು ಪರಮಾತ್ಮ ಇವುಗಳಿಗೆ ಇರುವ ವ್ಯತ್ಯಾಸವನ್ನು ಮನಗಾಣುವಂತೆ ಮಾಡುತ್ತದೆ (ತತ್ತ್ವಬ್ರಾ. ೦೦). [ಮನ + ಕಾಣ್]

**ಮನಂಗಾಪು** (ನಾ). (ಅಲಂ) ಮನಸ್ಸಿನ ನಿಗ್ರಹ– ಸಂಯಮ : ಏಕೆ ಮನಂಗಾಪಟೀಪು ಬಂದು ಮುಟ್ಟಿದೆಯೋಪನೆ ನೀನೆನ್ನ ಪಾಪಕರ್ಮವು ಪೆಯ್ಯಂ (ಪಂಪಭಾ. ೨-೨೦). [ಮನ + ಕಾಪು]

**ಮನಂಗಿಡಿಸು** 'ಮನಂಗೆಡಿಸು' ನೋ.

**ಮನಂಗಿಡು** 'ಮನಂಗೆಡು' ನೋ.

**ಮನಂಗುಂದು**, ಮನಗುಂದು (ಕ್ರಿ). ಧೈರ್ಯಗುಂದು ; ಎದೆಗುಂದು ; ಉತ್ಸಾಹ ಕುಗ್ಗು : ಈಗಳೇ ತೋರ್ಪುದೇನಾ ಜ್ಯೋತಿರ್ಲೋಕಂ ಮನಂಗುಂದದಿರಿಮಿವು ಮನಸ್ತಾಪಮಂ ಮಾಡವು (ಆದಿಪು. ೬-೩೩) ; ನಿಸಿತ ಶೂಲಶ್ಯೂಕನಿಪತಿಗೆ ಕುಸಿಯದೇ ಕಂದದೆ ಮನಂಗುಂದದೆ (ಬಸವ. ೩೯-೬೪) ; ರಾಮಂ ಮನಂಗುಂದಿದನೇ (ಅಮ್ಮಕ. ೪೯). **ಮನಗುಂದು** : ಅನಿಲಜನ ಘಾತಕ್ಕುಪಾಯವ ನೆನೆನೆನೆದು ಮನಗುಂದಿ (ಕಂಭಕ. ೦೬-೩೨) ; ಸೋಲದಲಿ ಮನಗುಂದಿ ಹಾಯ್ದರು ಬಿಟ್ಟ ಮಂಡೆಯಲಿ (ಪಳತ. ೯-೩೨) ; ಚಿತ್ರರೇಖೆಯ್ಯಿತಂದು ವಿಲಾಸವಳಿದು ಮನಗುಂದಿ ಪೂಸರಲನಲೆಗೊಳಗಾದ ತನ್ನೊಡತಿಯನಾಸರ ಕಂಡು ನುಡಿದಳು (ಕಂಪವಿ. ೧೦-೦).
[ಮನ + ಕುಂದು$_1$]

**ಮನಂಗುಡು** 'ಮನಂಗೊಡು' ನೋ.

**ಮನಂಗೂಡು**, ಮನಗೂಡು (ಕ್ರಿ). ಮನಸ್ಸು ಒಂದಾಗು, — ಬೆರೆ : ಜಲಕೇಳಿಯೊಳೋತು ಮನಂಗೂಡಿ ನೋಡಿಯಾಡುತ್ತ (ಗಿರಿಜ. ೪-೩೩).

**ಮನಗೂಡು :** ಕಾರ್ಯಕ್ಕೆ ಪ್ರತಿಫಲ ಬಂದರೂ ಬಾರದಿದ್ದರೂ ಸರಿಯೆ ಎಂಬ ಭಾವನೆ ಮೈಗೂಡಿ ಮನಗೂಡಿ ಹೋಗುವುದು (ಧರ್ಮಸಾ. ೧೦೬). [ಮನ + ಕೂಡು₁]

**ಮನಂಗೆಡಿಸು.** ಮನಂಗಿಡಿಸು (ಕ್ರಿ). ಧೈರ್ಯಗುಂದಿಸು ; ಎದೆಗೆಡಿಸು : ಮನಂಗೆಡಿಪ ಪುಲಿಯಿಂ ರೌದ್ರಾಕಾರಂಗಳಿಂ (ಧರ್ಮಾಮೃ. ೨-೨೨೯). **ಮನಂಗಿಡಿಸು :** ಪಾಂಡವರಂ ರಣದಿನೊಳ್ ಪೊಕ್ಕ ನರಿಯಂತೆ ಮನಂಗಿಡಿಸಿ (ಧರ್ಮಾಮೃ. ೬-೯೫). [ಮನ + ಕೆಡಿಸು₁]

**ಮನಂಗೆಡು.** ಮನಂಕಿಡು. ಮನಂಗಿಡು (ಕ್ರಿ). ೧. ಮನಸ್ಸು ಹಾಳಾಗು.- ಕೆಟ್ಟುಹೋಗು : ಕೇಳ್ದು ಮನಂಗೆಟ್ಟು ಮಹಾದುಃಖದಿಂದವಿರಲಾಜದೆ ಬಾಯ್ಬಿಟ್ಟೊಳಱಿ (ಧರ್ಮಾಮೃ. ೩-೨೩೯). ೨. ಧೈರ್ಯಗೆಡು: ಅಧೀರವಾಗು : ಎರಡು ಕಯ್ಯಿಂ ಮಸಗಿ ಮನಂಗೆಟ್ಟು ಮರುಳನ್ವೊಲ್ಸುತ್ತಿ ಱಿಸುತ್ತುಂ (ಧರ್ಮಾಮೃ. ೧-೧೬೫); ಸಲೆ ಮಾಯಾಮೋಹವಾಚ್ಛಾದಿಸೆ ನೆಱೆ ಧೃತಿಗೆಟ್ಟೆಂ. . . ಮಿಗೆ ಮನಂಗೆಟ್ಟೆನಾನುರ್ಬುಗೆಟ್ಟೆಂ ತಲೆಗೆಟ್ಟೆಂ ತಂದೆ (ರಕ್ಷಾಶ. ೫೩). **ಮನಂಕಿಡು :** ೧. ಇಚ್ಛೆಯುಣಮಿಲ್ಲದೊಡಂ ತೆಗೆದಲ್ ಕರಂ ಮನಂಕಿಡೆ ಪೊಸತಪ್ಪುದೊಂದು ಒಡಿಗಂಕುಶವಿಟ್ಟು ಮರಳ್ಚುವಂದದಿಂ (ಶಾಂಪು. ೬೬೨). **ಮನಂಗಿಡು :** ೧. ಓಡಿ ಬೋಡಾಗಿ ಪೋಗದರಾರಟುಕದ ರಾವ್ಮರ್ನನಂಗಿಡದರಾಸ್ಸರ್ವ್ವಸ್ವಮಂಕೆತ್ತು (ಎಇ. XX. ೧೨೮-೬ : 1187). ೨. ಒಡೆಗುಮಜಾಂಡಮಿನ್ನಿನಿಸು ಜೀವ್ವೊಡೆದಾಗಳೆ ಬೊಮ್ಮನುಂ ಮನಂಗಿಡುಗುಂ (ಶಂಕರಾ. ೨-೬೬); ಪಿಡಿದು ತಳಾಱರೋವದೆ ಕನಲ್ದು ಮನಂಗಿಡೆ ಕಟ್ಟಿ (ಧರ್ಮಾಮೃ. ೧೨-೨೩೯); ಪೆರ್ಬುಲಿ ಪಾಯ್ದಡೆ ರಾಮವೇದೊಡಾರಳವ[ಡ]ದಾವ್ಮರ್ನನಂಗಿಡವರ್ (ಎಕ. XI· ಚಿತ್ರದು. ೧೩-೯೦; 1124). [ಮನ + ಕೆಡು₁]

**ಮನಂಗೆಯ್** (ಕ್ರಿ). ಮನಸ್ಸುಮಾಡು : ನಿರ್ಧರಿಸು : ಸಂಕಲ್ಪಿಸು : ವಿಭೀಷಣ . . . ಸುಗ್ರೀವಾದಿಗಳುಂ ಮಗುಳ್ದು ಕಾದಲ್ ಮನಂಗೆಯ್ದು ಬರೆ (ಕುಮಾರಾ. ೭೯-೦೪೯ ವ). [ಮನ + ಕೆಯ್₁]

**ಮನಂಗೊಡು.** ಮನಂಗುಡು, ಮನಗುಡು, ಮನಗೊಡು (ಕ್ರಿ). ಮನಸ್ಸುಕೊಡು ; ಗಮನಿಸು : ಚಿತ್ತವಿಡು : ಯುವರಾಜಾಭಿಮುಖ ಹೃದಯೆಯಾಗಿ ಮನಂಗೊಟ್ಟು ಪ್ರೇಮಪರದಿನಸ್ವತಂತ್ರೀಕೃತೆಯುಂ . . . ವಿನಿಸಿ (ಕಾದಂಬ. ೯೩); ಸಂಗಮುಖಮುಸವಿಾರಣಕ್ಕೆ ಮನಂಗೊಡುತ (ಚಕ್ರಪು, ೨೬-೪೩). **ಮನಂಗುಡು :** ಬೆಸಗೊಳೆ ಮಱುಮಾತುಗುಡದೆಯುಂ ಮನಂಗುಡದೆಯುಮಿರೆ ನಮಗಿ (ಅಜಿಪು. ೩-೨೩ ವ); ಅಪಂದಿರ ಮಾತಂ ಕೇಳಲುಂ ನೀಂ ಮನಂಗುಡಲ್ವೇಡ (ಶಬ್ದಮ. ೯೩-೧). **ಮನಗುಡು:** ಮಂಗಳಾರತಿಗೆ ಮನಗು[ಡಾತಂ· ಗೊ]ಡಲೇಳ್ಳಿ (ಕಪಸಾ. ೧೨-೩೦ ರಗಳೆ). **ಮನಗೊಡು:** ಬಾರುಲತೆಯೊಡನೆ ಓಡುವುದು ಬರೆಯುವುದು. . . ಇವೇ ಮೊದಲಾದ ಸಂಗತಿಗಳಿಗೆ ಅವನು ಇನ್ನು ಮೇಲೆ ಮನಗೊಡತಕ್ಕುದ (ಇಕ್ಷ್ವಕ. ೨೬೯). [ಮನ + ಕೊಡು₁]

**ಮನಂಗೊಳ್.** ಮನಗೊಳ್ (ಕ್ರಿ). ೧. ಮನಸ್ಸನ್ನು ಸೆಳೆ.– ಆಕರ್ಷಿಸು : ಜಾಡದ ಬಾಸಿಗಮುಂಪೆಚಿಲ್ಪೋಡದ ದಿವ್ಯಾಂಬರಂ ಮನಂಗೊಳೆ (ಅಜಿಪು. ೬-೪೦). ೨. ಮನಸ್ಸಿನ ಆಕರ್ಷಣೆಗೆ ಒಳಗಾಗು.– ಸೆಳೆತಕ್ಕೊಳಗಾಗು: ಅಂತು ಕಂಡು ಮನಂಗೊಂಡತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡೆ (ಪಂಪಭಾ. ೧-೯೬ ವ) : ಪಳುಕಿನ ಭಿತ್ತಿಯೊಳ್ ಪೊಳೆವುತಿರ್ದ ನಿಜಪ್ರತಿಬಿಂಬದೊಳ್ ಮನಂಗೊಳೆ ನುಡಿದೇಕೆ ಪೇೞ್ ನಗಿಸುವವರ್ (ಶಾಂಪು. ೧೦೦೮). ೩. ಶೋಭಿಸು : ಒಪ್ಪು : ತನುರೋಮರಾಜಿ ವಿಲಸದ್ದೂರ್ವಾಂಕುರಾಭಂ ಮನಂಗೊಳೆ ಚಂಚನ್ ನಿಜ ಪಂಚವರ್ಣ ಪಡೆಗುಂ ಚಿತ್ರಾಂಗನಾಶಂಕೆಯುಂ (ಅಜಿಪು. ೨-೪೪). ೪. ಮನಸ್ಸಿಗೆ ತಂದುಕೊಳ್ಳು ; ಮೆಚ್ಚು : ಬೇಗಾಗಿ ಸೋಲ್ತು ಪೊಸರೂಪಂ ಮನಂಗೊಂಡು ಇರ್ದರುಂ ಸೋಲ್ತರೊರ್ವರ್ಗಂ ಪುಷ್ಪದತ್ತಂಗೆ (ಸಂಪಶ. ೦-೪೪); ಕೃತಿಯುಂ ಕೇಳ್ದರ್ ಮನಂಗೊಂಡಿದಚ್ಚರಿಯಾಯ್ತೆಂಬರ್ (ದಶಸಾ. ೦-೯). ೫. ಮನಸ್ಸಿಗೆ ಹಿಡಿಸು, —ಹತ್ತು: "ಮನಂಗೊಳ್–ಚಿತ್ತವಿಮೋಹನೇ (ಮನಸ್ಸಿಗೆ ಹತ್ತು)" (ಕವಿರಾ) ; ಆ ನಳಿನಾಸ್ಯೆಯು ಗೆಯ್ದುದೊಂದು ಶುಶ್ರೂಷೆ ಮನಂಗೊಳೆ ಕೊಟ್ಟಂ [ದು]ರ್ವಾಸಂ ವಿಳಸಿತಮಂತ್ರಾಕ್ಷರಂಗಳಂ ದಯೆಯಿಂದಂ (ಶಂಕರಾ. ೦-೬೯) : ಪತಿಹಿತಮಮ್ಮನಂಗೊಳೆ ನೃಪಂ ನೃಪಕಾರ್ಯವಿಚಾರದೊಳ್ಬೃಹಸ್ಪತಿಯೆನೆ . . . ನೆಗಟ್ದು (ಎಕ. VIII, ಸೊರಬ. ೪೭೪-೨೩ ; 954). ೬. ಇಷ್ಟಪಡು : ಬಯಸು : ಅಪೇಕ್ಷಿಸು : ನಿರ್ವೇಗಪರಾಯಣಂ ಮನಂಗೊಂಡು ಪವಿತ್ರಶ್ರಾವಕವ್ರತಂಗಳೊಳೊಣರ್ದಂ (ಶಾಂತಿಪು. ೦-೯೭) ; ವಿನಯದಿಂದೆಱಗಿ ಮನಂಗೊಂಡಾ ಯತಿಪತಿಯೊಳ್ ಕೈಕೊಂಡನಮ ಕಾಂಪಮಾಂಸವಿರತಿವ್ರತಮಂ (ಧರ್ಮಾಪು. ೦೬-೫೬) ; ಇಳೆಗೆ ಶಿವಭಕ್ತಿಯುಂ ತೀವಲ್ ಮನಂಗೊಂಡು . . . ಪುಟ್ಟಿದಂ (ಬಸವ. ೦-೦೨೪). ೭. ಸಂತುಷ್ಟವಾಗು : ಸಂತೋಷಪಡು : ಆದಿಮಧ್ಯಾವಸಾನದೊಳೆಲ್ಲಿಯುಮೆಬಲದ ಕಲಿತನದಳವಿಂಗೆ ಮನಂಗೊಂಡು (ಪಂಪಭಾ. ೦೩-೬೫ ವ) ; ವಿಳಾಸಂಬೆರಸೊಳ್ವುವೆತ್ತನವನೀಚಕ್ರಂ ಮನಂಗೊಳ್ವಿನಂ (ಎಕ. VII, ಶಿಕಾರಿ. ೫೭-೬೩ ; 1115) : ಆ ಪುಂಡರೀಕಷಂಡಮಂ ಪುಂಡರೀಕಲೋಚನಂ ಕಂಡು ಮನಂಗೊಂಡು (ಆಗಪು. ೧೦-೬೩ವ) : ಅಂತು ಮನಂಗೊಳೆ ನೋಱ್ಪಿನಂ (ಪುಷ್ಪಪು. ೩-೬೬ ವ). **ಮನಗೊಳ್ :** ೧. ಮನಗೊಂಬ ವಸ್ತ್ರಭೂಷಣಮಾಲ್ಯಾನುಲೇಪನಮ ತಂದರು ಕುಮಾರಿತಿಗೆ (ಮೋಹತ. ೨೩-೧೧). ೩. ಮನಗೊಂಬ ಘಸಿತ ಗಂಧಾಕ್ಷತೆ ಭಾಳಲಾಂಛನವೆತ್ತುವವನೀಸುರರು (ಮೋಹತ. ೩-೪೫). ೬. ಗೆಡೆವಚ್ಚುವರ್ ಮನಗೊಂಡೊಡ ನೊಡನೋರಂತು ತಗುಳ್ದು ರ್ಘೀಂಕರಿಸಿದೊಡೆ (ಪಂಪರಾ. ೨-೬೩); ದ್ರೋಣ ಮನಗೊಂಡಿಱಿಪಡಂಬುಜಪಾಣಿಯಿದಿರೇ (ಕುಮಾರವ್ಯಾ. ೪-೬). [ಮನ + ಕೊಳ್₁]

**ಮನಂಗೊಳಿಸು.** ಮನಗೊಳಿಸು (ಕ್ರಿ). ೧. ಮನಸೆಳೆ: ಆಕರ್ಷಿಸು: ನೆಗಟ್ದರಸಂ ಮನಂಗೊಳಿಸೆ ಮಾರ್ಗಮೊಡಂಬಡೆ ದೇಸೆ ತಪ್ಪಮಂ ಬಗೆಗೊಳಲಿಂತು ಪೇೞ್ದುದು ಮಹೀಭುಜಸಾರ್ಥಕಂ (ಗದಾಯು. ೦-೩೬) : ಮನಂಗೊಳಿಸರ್ಪರಸಂಗರಾಜ ಧಾರಾಗ್ರಪರಾಳಭಂಜಿಕೆಗಳಂತಬಿವಟ್ಟಿಗೆಯೊಳ್ ಲತಾಂಗಿಯರ್ (ಪುಷ್ಪಪು. ೨-೨೦). ೨. ಆಹ್ಲಾದವನ್ನುಂಟುಮಾಡು ; ಆನಂದಪಡಿಸು ; ಸಂತೋಷಪಡಿಸು : ಭೂವಲ್ಲಭನಂ ಮನಂಗೊಳಿಸಿದಂ ಶೌರ್ಯಾರ್ಜಿತಂ ಮಲ್ಲಪಂ (ಅಜಿಪು. ೦-೩೦) ; ಮರಳ್ದೆವೆಯಿಕ್ಕದಾಂ ಮನಂಗೊಳಿಪ ಮುನೀಂದ್ರನಾನನಮನೀಕ್ಷಿಸುತಂ ಪೊಡೆವಟ್ಟೆನಿಚ್ಚಱಿಂ (ಶಾಂಪು. ೭೫೪) ; ಇಂದ್ರದಿಶಾವಧೂಟಿ ನಿಜಭಾಳದೊಳೊಲ್ದು ಮನಂಗೊಳಿಪ್ಪ ತಚ್ಚಂದ್ರಮನೆಂಬ ಚಂದನದ ಬೊಟ್ಟುಮರ್ಚಿ (ಉದ್ಭಟ. ೦೦-೩೦). ೩. ಮನವೊಲಿಸು ; ಒಪ್ಪುವಂತೆ ಮಾಡು : ಆ ಮಹೋದಾರೆಯುದಾರತೆಯೆ ಮನಂಗೊಳಿಸಿದಪ್ಪುದು (ಕಾದಂಬ. ೪೦೪). ೪. ಶೋಭಿಸು ; ಒಪ್ಪು : ಅಳಂಕಾರಮುಮನೊಳಕೊಣ್ಬ ಜನಂಗಳಿಂ ಮನಂಗೊಳಿಸುತ್ತಿರ್ಪುದು (ಎಇ. XIII. ೩೩೬-೪೭ ; 929) : ಮುತ್ತಿನ ಮಂಟಪಂ ಮನಂಗೊಳಿಪ ವಿತಾನಪಂಕ್ತಿ . . . ಎಂಬಿವಱಿಂ ವಿವಾಹಮಂಗಳಮದು ಕುಂತಿ ಮಾದ್ರಿಗಳೊಳ್ಚರಿಯಾದುದು ಪಾಂಡುರಾಜನಾ (ಕುಶಲ. ೦-೦೦೭) : ಉಂಗುಟವಿಡಿದು ಮಸ್ತಕಪರಿಯಂತ ಮನಂಗೊಳಿಸುವ ಭೂಷಣಗಳ ಹಿಂಗದಿತ್ತವನ ಪಂಚಿಸಿ (ಕಂಪಿಪು. ೨-೦೦೦). **ಮನಗೊಳಿಸು :** ೩. ರಾಜಮರಾಳಮತ್ತೇಭ ಸಂಕುಲಕೆ ಸರೋಜಾಂಘ್ರಿಯುಗದ ಸದ್ಗತಿಯು ಮಾಜದೆ ಮನಗೊಳಿಸುವ ಪೊಲು ನಡೆಗೊಂಡುವಾ ಜಾಣೆಯು ಸುಲೀನಿವಹ (ಮೋಹತ. ೪೦-೩೬). ೪. ರಾಮಣೀಯಕವೆತ್ತ ಚೆಂದಳಿರ್ ವಿಡಿಯಿಂದೆ ಮಾಮರ ಮನಗೊಳಿಸಿದುವು (ಮೋಹತ. ೨೪-೪೪). [ಮನಂಗೊಳ್ + — ಇಸು₃]

**ಮನಂದಣಿ,** ಮನತಣಿ, ಮನದಣಿ (ಕ್ರಿ). ಮನಸ್ಸಿಗೆ ತೃಪ್ತಿಯಾಗು : ಸಿಂಹಾಸನವೇಱ ಮನಂದಣಿವುತ್ಸವದಿಂದೋಲಗಮಿರ್ದಂ (ಜಯನೃ. ೩-೦) ; ಫುಲ್ಲಶರಕೇಳಿಯುಂ ಮನಂದಣಿಯೆ ತನು ಕರಗಲನುಭವಿಸಿ (ರಾಜಶೇ. ೧-೯೩೫ ವ). **ಮನತಣಿ :** ಕೊಡುವ ಕೊಳ್ಳುವ ಬಗೆಗಳೊಡವೆರೆದು ಮನ ತಣಿಯೆ (ಕಾರಾಂತ. ೬೧-೦೨೬). **ಮನದಣಿ :** ಮನದಣಿದು ಹರುಷದೊಳು ಕೊಂಡಾಡಿದಂ (ದೀಕ್ಷಾಬೋ. ೧೦೨-೮) : ಮನದಣಿದು ಕಣ್ದಣಿದು ಹರುಷಾಶ್ರುಗಳುಗುತ್ತಿರಲು (ಬಸವ. ೨೯-೧೬) ; ಅನುಪಮಿತಧನರತುನ ಭಂಡಾರವನು ತೆಗತೆಗಸಿ ಮನದಣಿಯೆ ಯಾಚಕರಿಗಿತ್ತುದನೆನಗೆ ಬಣ್ಣಿಸಲಳವೆ (ಚನ್ನಬ. ೬-೦೮). [ಮನ + ತಣಿ$_1$]

**ಮನಂದರ್,** ಮನತರು, ಮನದರ್ (ಕ್ರಿ). ಮನಸ್ಸುಮಾಡು ; ಆಸೆಪಡು ; ಅಪೇಕ್ಷಿಸು : ಈ ತಪಕ್ಕಮ್ಮ ಮನಂದರಲ್ ನಿಮಗೆ ಸಲ್ಲದು (ಆದಿಪು. ೯-೬೮) ; ಪಾಲಿಂಗೆ ಬೆರ್ಚಿ ತುಪ್ಪಕ್ಕನಿಸಪ್ಪೊಡಂ ಮನಂದರಲಾಱದೆ (ಧರ್ಮಾಮೃ. ೦-೧೬೨) ; ನರನಾಥಂ ಮೃಗಯಾವಿನೋದದೊಳವಂ ನೋಡಲ್ ಮನಂದಂದಪಂ (ಪಳಕಂ. ೬೬). **ಮನತರು :** ಬರೆದು ಕೊಡುವೆನು ಸ್ಥಿರ ಚರಾಸ್ತಿಯ ಉಂಬಳಿ ಎಂದುಸುರಿ ಮನತಂದು ಬಿರುಮನ ಕಂದನಹ ಕಡೆಕಂಜಿಮಾ ಒಂದನುಳುಹಿದ ಹಿಂದೆ ಕಳುಹಿದ ಇಂದುನಾಥಾಧೀಶನು (ಶಿವಪು. ೨೦-೯೨). **ಮನದರ್ :** ಕಡಿಪೆನಿಂದೆ ಮನದಂದಾ ನರಗಂ ಸುತ್ತಿದ ಕೊಟುಂಬಸಹಿತಂ (ಎಕ. VII, ಶಿವಮೊ. ೬೮-೩೬ ; 1291) ; ಉರಿವನೆಯ ಬೀಡಾರದಲಿ ಬಿಡಿಸಲ್ಕೆ ಮನದಂದ (ಕುಮಾ.ಅ. ೮-೬೧); ಕಾವ್ಯಸ್ವರೂಪವನ್ನು ಮನದಂದು ಸ್ಥೂಲವಾದ ವಿಭಾಗಗಳನ್ನು ಮೇಲೆ ಸೂಚಿಸಲಾಗಿದೆ (ಕಮೀ. ೨). [ಮನ + ತರ್]

**ಮನಂದೀವು** (ಕ್ರಿ). ಮನಸ್ಸುತುಂಬು ; ಮನಸ್ಸಿಗೆ ತೃಪ್ತಿಯಾಗು : ಕಣ್ತೀವಿ ನೋಡಿ . . . ಮನಂದೀವಿ ನೆನಪಿನೊಳಗಿಟ್ಟು (೧೦೯. ೩-೦೦೯ ವ). [ಮನ + ತೀವು]

**ಮನಂದೆಗೆ** (ಕ್ರಿ). ಮನಸ್ಸನ್ನು ಹಿಂತೆಗೆದುಕೊಳ್ಳು ; ಹಿಮ್ಮೆಟ್ಟು ; ಹಿಂಜರಿ : ಸಿದ್ಧರ್ ಸಮರಕೇಳಿಗಪ್ರಸಿದ್ಧರೆನಿಸಿ ಮನಂದೆಗೆಯೆಯುಂ ಸಾಧ್ಯರ್ ಪೇಳಲಸಾಧ್ಯರೆನಿಸಿ ಬೆಂಗೊಟ್ಟೋಡೆಯುಂ (ಜಗ. ೦೩-೭೭ ವ). [ಮನ + ತೆಗೆ$_1$]

**ಮನಂದೋಱು** (ಕ್ರಿ). ಮನಸ್ಸನ್ನು ತೋರಿಸು : ಮನಸ್ಸಿನಲ್ಲಿ ಇದ್ದುದನ್ನು ಹೇಳು ; ಮನಸ್ಸಿನ ಆಶಯವನ್ನು ವ್ಯಕ್ತಪಡಿಸು : ಇಂದುವರಂ ದೇವರ ಮನಂ ನೊಂದಪುದೆಂದು ಮನಂದೋಱದಿರ್ದಳ್ (ಕಾದಂಪೂ. ೩೯೯). [ಮನ + ತೋಱು]

**ಮನಂಬಡು** (ಕ್ರಿ). ೧. ಮನಸ್ಸುಮಾಡು ; ಒಪ್ಪು; ಸಮ್ಮತಿಸು : ರಾಗಮರ್ಥಿಯೊಳೆ ಸೌಂದರಿಯುಂ ಕುಡೆ ಬಂಧುಗಳ್ ಮನಂಬಡೆ ಕಡುರಯ್ಯ ಮಾಯ್ಮಮಿತತೇಜನೊಳಂದು ವಿವಾಹಮಂಗಳಂ (ಆದಿಪು. ೮-೩೩); ಮನಕೆ ಮಂದೊಳುಮೆಂಡಿರೊಳ್ಸಿರೆಮೆಂ ಮನಂಬಿ[ಡ]ದೆ ನಿಚ್ಚಲುಂ (ಧರ್ಮಾಮೃ. ೩-೯೫). ೨. ಅಂತರಂಗಕ್ಕೆ ತೃಪ್ತಿಯಾಗು : ಮನದಣಿ : ಪುಣ್ಯಾಸ್ರವ ಕಾರಣರಂ ಬಿಹಿತಾಸ್ರವಮುನಿಪತಿಗಳಂ ಮನಂಬಿ[ಡ]ದೆ ಕಂಡು (ಆದಿಪು. ೩-೩೬). [ಮನ + ಪಡು$_1$]

**ಮನಂಬಯಸು** (ಕ್ರಿ). ಅಂತರಂಗವು ಬಯಸು,-ಅಪೇಕ್ಷಿಪಡು : ಅನ್ನು ಮಹಾಪೂಜೆಯುಂ ಮಾಡಿ ಮನಂಬಯಸಿ ನೋಡಿ ಕುಳ್ಳಿರ್ದ (ಕೌಶಿ. XX. ೯೮-೩೩; 1078 ?); ವಿರಚಿಸುವೆ ಮನಂಬಯಸೆ ಮಲ್ಲಿಜಿನೇಂದ್ರಮಹಾ ಪ್ರಬಂಧಮಂ (ಮಲ್ಲಿಪು. ೦-೩೩): ಎಳಮಿಸಿಲಂ ಮನಂಬಯಸಿ ಕಾಯೆ (ಜಗ. ೦೪-೯). [ಮನ + ಬಯಸು$_1$]

**ಮನಂಬರ್** (ಕ್ರಿ). ಅಂತರಂಗವು ಆಸೆಪಡು ; ಮನಸ್ಸಿಗೆ ಬರು : ಮದನಾನುರಾಗಂ ಕೈಗಣ್ಮೆ ಮನಂಬಂದ ಬಂಧದಿಂ ಸವಿ ಸವಿಯದ ಸುಖಸೊಗಮನನುಭವಿಸಿ (ರಾಜಶೇ. ೦-೦೩೩ ವ). [ಮನ + ಬರ್(< ವರ್)]

**ಮನಂಬಸು** (ಕ್ರಿ). ಅಂತರಂಗವು ಎರಡು ಬಗೆಯಾಗು ; ಸಂಶಯಕ್ಕೆ ಒಳಗಾಗು : ಯುವರಾಜ ಮನಂಬಸದೊರ್ಮೆಗೆ ಸಲಿಪುದೆಮ್ಮ ಮಂದು ಗಣ್ಯನಪಂ (ಆದಿಪು. ೦೪-೦೦೪): ಮನಂಬಸದೆ ಬರ್ಪುದು ನೀಮೆನೆ (ಶಂಕರಾ. ೪-೪): ದನುಜನ ಮಾಯೆಯೊಂದಿನಿಸು ಬೇಗದಿನೊರ್ಮೆಯೆ ಮಾಯಮಾಗೆ . . . ಇದು ಮೂರ್ಛೆಯೊಂದು ಸಂಜನನಮೊ ನಿದ್ರೆಯೋಟ್ಬರವೊ ಮುನ್ನಜೀವಂತುಟುಮಲ್ಲದೆಂದು ತಜ್ಞನಮನಿತುಂ ಮನಂಬಸುತು ಮಿರ್ದುದು (ತಂದ್ರಪು. ೩-೬). [ಮನ + ಪಸು$_1$]

**ಮನಂಬಿಡು** (ಕ್ರಿ). ಮನಸ್ಸಿನ ನಿರ್ಧಾರವನ್ನು ಕಳೆದುಕೊಳ್ಳು; ಧೈರ್ಯಗೆಡು ; ಎದೆಗುಂದು : ಅಸುವಂ ಬಿಡೆ ತನುಜನಂ ನೋಡಿ ತಾಯ್ಬಾಯ್ ಬಿಡದೆ ವೈದ್ಯರನೀಗ ಕರೆಯೆನ್ನದೆ ಮನಂಬಿಡದೆ ಕಡಿಕ ಹುಳು ಕಚ್ಚಿತ್ತು ಮಗನಂ ಸುಡುಸುಡೀ ಸಂಸಾರವೆನ್ನದೆ (ಬಸವ. ೪೮-೯). [ಮನ + ಬಿಡು$_1$]

**ಮನಂಬೀಱು** (ಕ್ರಿ). = ಮನಂಬಿಡು : ಜೀವೊಡೆಯ ವೈರಿಗಜಂಗಳಜಂಗಳಂತೆ ಕಾಯ್ವಾಱಿದುವಾ ಖಗೇಶ್ವರನ ಕಟ್ಟು ಕಟಿಲ್ಲುದು ಪೇಚರರ್ ಮನಂಬೀಱಿದರ್ (ಕಾಂತಿಪು. ೪-೪). [ಮನ + ಬೀಱು]

**ಮನಂಬುಗಿಸು** (ಕ್ರಿ). ೧.ಮನಸ್ಸಿಗೆ ತಿಳಿಯುವಂತೆ ಮಾಡು; ಮನದಟ್ಟು ಮಾಡು : ಅಣುಬ್ರತಾದಿಗಳನನಾಕುಲಂ ಬೆಸಸಿದಂ ಮುನಿಪುಂಗವನಾನವಂ ಮನಂಬುಗಿಸಿದೆಂ (ಸುಕುಮಾ. ೩-೪೬): ಆಕಾರ ಜೀವ ಸಂಸ್ಕಾರಚನೆಯೊಳು ಮುನ್ನಮಂಕಸಂದ್ಯಷ್ಟಿಯಿಂದಂ ಮನಂಬುಗಿಸಲ್ವೇಡೆ (ಗಣಮ್ಯಸಾ. ೩೩-೩). ೨. ಮನಸ್ಸು ಒಪ್ಪು,-ಮೆಚ್ಚು : ನಾಗಕನ್ನೆಯರುಂ ತಾನುಂ ಮನಂ ಬುಗಿಸುವಂತೆ ಮಜ್ಜನಂಬುಗಿಸಿ (ಶಂಕರಾ. ೪-೦೬ ವ). ೩. ಗಮನಿಸು; ಲಕ್ಷಿಸು : ಪೆರ್ಮೆಯನಾರ್ ಮನಂಬುಗಿಸರೀ ಬಂಧನಂದನನಂದಮಂ (ಶಳಿ. ೦-೮೦). [ಮನಂಬುಗು + — ಇಸು$_3$]

**ಮನಂಬುಗು,** ಮನಬೊಗು (ಕ್ರಿ). ೧. ಅಂತರಂಗವನ್ನು ಪ್ರವೇಶಿಸು : ಚಿತ್ತಕ್ಕೆ ನಾಟು : ನೆಟ್ಟನಿಗನ ಸಾಹಸಮೊರ್ಮೆಗೊರ್ಮೆ ಕೆಲದವರ ಮಾತಿನೊಳ್ ತನ್ನ ಮನಂಬು[ಕಾಕಾಂ. ಮಿ]ಗೆ (ಶಂಕರಾ. ೬-೪೩) : ಗುಹಾಂತದೊಳ್ ಕಂಡು ಮನಂಬುಗೆ ತಂದು ತನ್ನ ರಥಮಂ ಸೊಗಯಿಸಿ ಪೂದಲ್ಕೆ (ಶೀಲಮ. ೩-೭೮) : ಲಕ್ಷಣಾಚಾರ್ಯರ್ ಪೇೞಿಂದು ಬೆಸಸೆ ಮನಂಬುಗುವಂತೆ ಪೇೞ್ದಂ (ಕಮ. ೩ ವೃತ್ತಿ). ೨. ಮನಸ್ಸನ್ನು ಸೆಳೆ,-ಆಕರ್ಷಿಸು : ಅಲರಂಬುಪೊಲಿಳಸ[ಿ] ಪಾಟಲಲೋಲವಿಲೋಚನಂ ಮನಂಬುಗೆ ನಳತೋಳ [ಕೋ]ಳಿಸೆಯೆ ಘಟ್ಟಿಮಗುಳ್ಚುವ ಘಟ್ಟವಳ್ಳಿಯುಂ . . . ಭೋಂಕನೆ ಕಂಡು (ಶಂಕರಾ. ೮-೩೯); ತೊವಲ್ಮುಡಿಯ ಸೊಗಸು ತಳರ್ನಡೆಯ ಗಾಡಿ ಮನಂಬುಗೆ ಕಣ್ಗಂಬಾದರಾ ಲಂಬಾಲಕರ್ ಬಾಲಕರ್ (ರಾಮಾಶ್ವ. ೦೩೦-೨೯). ೩. ಮನಸ್ಸಿಗೆ ತೃಪ್ತಿಯಾಗು ; ಮನದಣಿ : ಭೂದೇವಿಯುಂ ಮನಂಬುಗೆ ಪೂಜೆಗೆಯ್ದು ಬಾಳಿಗಳ್ ಮೆಚ್ಚಿದುವು (ಕರ್ಣಾ. ೮-೩೩) ; ಮಧುಮಾಸದೊಳ್ ಕೈವಂದ ಮಾಮರನೆಳದಳಿರಂ ಮನಂಬುಗೆ ಸವಿದು (ರಾಮಾಶ್ವ. ೨೩-೦೨). **ಮನಬೊಗು :** ೧. ಆ ನಿಮ್ಮ ಮನಬೊಗು ವನ್ನಕ್ಕ ನೀವೆನ್ನ ಮನಬೊಗುವನ್ನಕ್ಕ ಕಾಯುಗುಣಂಗಳ ಕಳೆದವಂಗೆ ಶರಣೆಂಬೆ ಕೂಡಲಸಂಗಮದೇವಾ (ಬಸವ. ೩೦೨).
[ ಮನ + ಪುಗು (< ಪೊಗು) ]

**ಮನಂಬೊಯ್** (ಕ್ರಿ). ಮನಸ್ಸಿಗೆ ತಿಳಿಯುವಂತೆ ಮಾಡು; ಮನದಟ್ಟು ಮಾಡು : ಮಿಥ್ಯಾಮಾರ್ಗಮಂ ಪೊರ್ದಿ ರೂಢಿಯ ಸದ್ಧರ್ಮದೊಳತ್ತಿರ್ ವಟ್ಟವನುಮಂ ಮತ್ತಂ ಮನಂಬೊಯ್ದು ಜೈನಯತೀಂದ್ರೋತ್ತಮರೆಂದು ನಿಟ್ಟಿಗೊಳಿಸಲ್ಕೆಂತುಂ ಪೆಱರ್ಗಲ್ಲರೇ (ಸಮಾಶ. ೪-೪೩). [ಮನ + ಪೊಯ್$_2$]

**ಮನಂಬೊರೆ** (ಕ್ರಿ). ಅಂತರಂಗವನ್ನು ಸಂತೋಷಪಡಿಸು; ಹೃದಯಕ್ಕೆ ಸಂತೋಷವನ್ನುಂಟುಮಾಡು : ಮಂದಿರಮಂ ಪೊಕ್ಕು ಸುಪುಷ್ಪಮಸ್ತು

ಸೀತೆಯು ಪಸರವಾಗಿ ತೋರುವುದು (ಐಕಾವಂ. ೭೦). 'ಮೈಗಳ್ಳ' ಪರಾ. [ಮನ + ಕಳ್ಳ$_1$]

**ಮನಗಳ್ಳತನ** (ನಾ). ಮನಸ್ಸಿನಲ್ಲಿ ವಿಚಾರಮಾಡಲು ಆಲಸ್ಯಪಡುವುದು ; **ವಿಚಾರಹೀನತೆ** : ನಾವು ಮನಗಳ್ಳತನವನ್ನು ಬಿಟ್ಟು ವಿಚಾರ ಮಾಡಲಿಕ್ಕೆ ಬೇಕು (ಐಕಾವಂ. ೦೩). 'ಮೈಗಳ್ಳತನ' ಪರಾ. [ಮನಗಳ್ಳ + — ತನ]

**ಮನಗಾಣ್** 'ಮನಂಗಾಣ್' ನೋ.

**ಮನಗಾಣಿಕೆ** (ನಾ). ಮನಸ್ಸಿಗೆ ಸ್ಪಷ್ಟವಾಗುವಿಕೆ : ತಮ್ಮತಮ್ಮ ಮತ ನಿಜವೆಂದು ಮತ್ತೊಮ್ಮೆ ಕೊನೆಯ ಮನಗಾಣಿಕೆಯಾಯಿತು (ಅರಾಶ. ೬೪). [ಮನಗಾಣ್ (< ಮನಂಗಾಣ್) + — ಇಕೆ]

**ಮನಗಾಣಿಸು** (ಕ್ರಿ). ಮನವರಿಕೆ ಮಾಡಿಕೊಡು: ಮನದಟ್ಟುಮಾಡಿಸು: ಒಂದೇಶದ ವ್ಯಾಪಾರವು ಸುವ್ಯವಸ್ಥಿತವೂ ಅಭಿವೃದ್ಧಿಕರವೂ ಆದ ರಚನಾ ಕ್ರಮಗಳಿಂದ ಕೂಡಿದ್ದಿರಬೇಕೆಂಬ ಮುಖ್ಯಾಂಶವನ್ನು ಮನಗಾಣಿಸುತ್ತದೆ (ವಪಾಇ. ೩೯): ಸಂಸ್ಕೃತವು . . . ಅಮೃತವಾಣಿಯಾಗಿ ಕಂಗೊಳಿಸುತ್ತಿದೆ ಯೆಂಬುದನ್ನು ಅಷ್ಟೇನೂ ಕಷ್ಟವಿಲ್ಲದೆ ಮನಗಾಣಿಸಬಹುದು (ಕವಪರೋ.೦೨೯). [ಮನಗಾಣ್ (<ಮನಂಗಾಣ್) + — ಇಸು$_3$]

**ಮನಗಾಣು** 'ಮನಂಗಾಣ್' ನೋ.

**ಮನಗುಂದು** 'ಮನಂಗುಂದು' ನೋ.

**ಮನಗುಡು** 'ಮನಂಗೊಡು' ನೋ.

**ಮನಗುಣ** (ನಾ). ಮನಸ್ಸಿನ ಗುಣ ; ಅಂತರಂಗದ ಸ್ವಭಾವ : **ಚಿತ್ತವೃತ್ತಿ** : ಅಂತರಂಗದಲ್ಲಿ ಸುಳಿದಾಡುವ ತನುಗುಣಾದಿಗಳ ಮನಗುಣಾದಿಗಳ ಪ್ರಾಣಗುಣಾದಿಗಳ ಕಳೆವಲ್ಲಿ ಶರಣರಹರೆ (ಅವತಂ. ೯೦–೪೦೪). [ಸಂ.]

**ಮನಗುದಿ** (ನಾ). ಅಂತರಂಗದ ಸಂತಾಪ ; ಮನಸ್ಸಿನ ಬೇಗೆ : ತನ್ನ ಒಳಗಿನ ಮನಗುದಿಯನ್ನು ತನ್ನೊಳಗೇ ಇರಿಸಿಕೊಂಡು, ಎಂದಿನಂತೆ ಮನೆಯಲ್ಲಿ ಓಡಿಯಾಡತೊಡಗಿದಳು (ಕಲ್ಲಣ. ೦೦೪). [ಮನ + ಕುದಿ$_3$]

**ಮನಗೂಡು** 'ಮನಂಗೂಡು' ನೋ.

**ಮನಗೆಲವು** (ನಾ). ಅಂತರಂಗದ ಸಂತೋಷ : ಆತನಂಬೈದಾಜಿ ಮನ್ನಿಸಿ ಸೋತವೊಲು ಮನಗೆಲವ ಮಾಡಿ ನಿಶಾತಶರದಿಂದಿಳುಹಿದನು ಶಲ್ಯಾನುಜನ ಶಿರವ (ಕುವ್ಯಪೋಸ್ರ. ೩-೩೪). [ಮನ + ಗೆಲವು (< ಗೆಲ್ವು)]

**ಮನಗೊಡು** 'ಮನಂಗೊಡು' ನೋ.

**ಮನಗೊಳ್** 'ಮನಂಗೊಳ್' ನೋ.

**ಮನಗೊಳಿಸು** 'ಮನಂಗೊಳಿಸು' ನೋ.

**ಮನತಣಿ** 'ಮನಂದಣಿ' ನೋ.

**ಮನತರು** 'ಮನಂದರ್' ನೋ.

**ಮನದಟ್ಟು$_1$** (ಕ್ರಿ). ಅಂತರಂಗವನ್ನು ತಾಕು ; ಚೆನ್ನಾಗಿ ತಿಳಿ : ಸ್ಪಷ್ಟವಾಗಿ ಗೊತ್ತಾಗು : ಹುಟ್ಟಿತಾಗಳೆ ನಸುನಗೆ ಮೊಗದೊಳು ಮನದಟ್ಟಿತಾತಗೆ ಚಕ್ರಧರನೆ (ಶರತ. ೦–೦೨೩); ಕೇಳಿದೊಡನೆಯೇ ರಸಭಾವಗಳು ಮನದಟ್ಟುವ ಶಬ್ದಾರ್ಥಗಳ ಜೋಡಣೆ (ಸಾಹಿಪೀ. ೦೨೮). [ಮನ + ತಟ್ಟು$_1$]

**ಮನದಟ್ಟು$_2$**, ಮಂದಟ್ಟು (ನಾ). ಮನವರಿಕೆಯಾಗುವುದು : ಚೆನ್ನಾಗಿ ತಿಳಿಯುವುದು : ಯುದ್ಧವೇ ಪ್ರಾಪ್ತವಾಗುತ್ತದೆಂದು ನಗರದ ನವಾಬರಿಗೆ ಮನದಟ್ಟಾಗಿದೆ (ಚಿಲಕ. ೪೩) ; ನನಗೇನೋ ಧರ್ಮದ ಸಿದ್ಧಾಂತಗಳು ಚೆನ್ನಾಗಿ ಮನದಟ್ಟಾಗಿದ್ದುವು (ಅಯುಕ. ೩೭) . **ಮಂದಟ್ಟು** : ಈ ಬಾಬತ್ತು ಇಲಾಖೆಗಳ ಹುಕುಂಗಳನ್ನು ಮಂದಟ್ಟುಮಾಡಿಕೊಂಡಿರಬೇಕಾದುದು ಅವಶ್ಯಕವಾಗಿದೆ (ನ್ಯಾಪತ. ೭೦); ಈಶನಿಗೆ ಜಾತಿಯಿಲ್ಲವೆಂಬ ತತ್ವವನ್ನು ಜನರಿಗೆ ಮಂದಟ್ಟಾಗುವಂತೆ ತನ್ನ ವಚನಗಳಲ್ಲಿ ಬೋಧಿಸಿದನು (ಶರತ. ೪೦೨). [ಮನ + ತಟ್ಟು$_2$]

**ಮನದಣಿ** 'ಮನಂದಣಿ' ನೋ.

**ಮನದನ್ನ** 'ಮನ' ಪರಾ.

**ಮನದನ್ನೆ** 'ಮನ' ಪರಾ.

**ಮನದರ್** 'ಮನಂದರ್' ನೋ.

**ಮನದಿರುಹು** (ಕ್ರಿ). ವಿಮುಖವಾಗು; ವಿರೋಧವಾಗು : ರಘುನಾಥ ಸೀತೆಯು ವಿರೆಯಿಂದೊಡಗೊಳ್ಳು. ನೀ ಮನದಿರುಹಿದರೆ ಶಿವನಾಣೆ (ಕೌಶಿಚ. ೪೩–೩೦). [ಮನ + ತಿರುಹು$_1$ (< ತಿರಿಪು$_1$)]

**ಮನದೆಱೆ** (ಕ್ರಿ). ಮನಸ್ಸಿನಲ್ಲಿರುವುದನ್ನು ಬಿಚ್ಚಿಹೇಳು : ಸಂಗನ ಶರಣರು ಮನದೆಱೆದು ಮಾತನಾಡಿದರೆ ಲಿಂಗವ ಕಾಣಬಹುದು (ಬಸವ. ೮೭೦). [ಮನ + ತೆಱೆ$_1$]

**ಮನದೊಡಕು** (ನಾ). ಮನಸ್ಸಿನ ಗೊಂದಲ : ಬಿಡಿಸಿದನು ಬಳಿಕವರವರ ಮನದೊಡಕನನುಪಮ . . . ಅನುನಯೋಕ್ತಿಯಲಿ (ಕೊರಲಾ. ೨–೩–೨೯). [ಮನ + ತೊಡಕು$_3$ (< ತೊಡಂಕು$_3$)]

**ಮನಧರ್ಮ** (ನಾ). ಮನಸ್ಸಿನ ಪ್ರವೃತ್ತಿ; ಮನೋಧರ್ಮ : ನೀನೆನ್ನೊಳಗಿಹನೆಂಬೆನೆ ಮನಧರ್ಮವ ಮಱೆಯಿಸಿ, ಹೀನನೊಳ್ಪಹನಾದಹನೆ (ಮನೋಧಮ. ೪–೦೩). 'ಮನೋಧರ್ಮ' ಪರಾ. [ಸಂ.]

**ಮನನ** (ನಾ). ಅಂತರಂಗದಲ್ಲಿ ಆಲೋಚಿಸುವುದು : ಮನಸ್ಸಿನಲ್ಲಿ ಮಾಡುವ ಚಿಂತನೆ : ಮನನದಿಂ ಶ್ರವಣದಿ ನಿಧಿಧ್ಯಾಸನದಿನಿವುಗಳನೊತ್ತಿ (ಕುವ್ಯಾಕ. ೦೩–೦೭): ಶ್ರವಣ ಮನನ ನಿಧಿಧ್ಯಾಸನವೆಂಬಿವೇ ಕ್ರಮದಿಂದ ಅಜ್ಞಾನಾದಿಗಳಿಗೆ ವಿರೋಧಿತ್ರಯಂಗಳವರಲ್ಲಿ . . . ಶ್ರುತ್ಯರ್ಥವನೇ ಯುಕ್ತಿಯಲಿ ಚಿಂತನಂಗೈವುದೇ ಮನನವೆನಿಸುವುದು (ವಿವೇಕ. ೪೭): ಜ್ಞಾನ . . . ಇದರಲ್ಲಿ ಶ್ರವಣ, ಮನನ ಮತ್ತು ನಿಧಿಧ್ಯಾಸನ ಎಂಬ ನಿರಂತರವಾದ ಆವೃತ್ತಿ ಸಹಿತವಾದ ಮೂರು ಅಂಗಗಳಿರುವುವು (ಪಾಕತ$_4$. ೯೦೨). [ಸಂ.]

**ಮನನಿಸು** (ಕ್ರಿ). ಚಿಂತನೆಮಾಡು ; ಆಲೋಚಿಸು : ನೆನದೊಳಂ ಕನದೊಳಂ ಮನನಿಸುವೆ (ಗೀಪಾಂ. ೬–೦೦೦); ಕೆಲವು ಸಣ್ಣಕಥೆಗಳನ್ನು ಗುಣಿಸಿದ್ದೇನೆ, ಕೆಲವು ನಾಟಕಗಳನ್ನು ಮನನಿಸಿದ್ದೇನೆ (ಕಂಪಾಕಾ. ೧೨). [ಮನನ + — ಇಸು$_4$]

**ಮನನೀಯ** (ಗು). ೧. ಧ್ಯಾನಿಸಲು ಅರ್ಹವಾದ. — ಯೋಗ್ಯವಾದ. (ನಾ). ೨. ಚಿಂತಿಸಲು ಯೋಗ್ಯವಾದುದು; ಮನನಮಾಡಲು ಅರ್ಹವಾದುದು : "ಮನನಂ, ಮನನೀಯಂ, ಮಂತವ್ಯಂ — ಈ ೩ ನೆನೆಯಲ್ಪಡುವುದು" (ಶಾಶಕ. ೨೦೨) ; ಇಲ್ಲಿ ಕವಿಯ ಚಮತ್ಕಾರದ ಹೇಳಿಕೆಯು ಮನನೀಯವಾಗಿದೆ (ಕಪ್ರತಾ. ೦೯೭). [ಸಂ.]

**ಮನನೋಯು** (ಕ್ರಿ). ಮನಸ್ಸಿಗಾದ ನೋವಿನಿಂದ ವ್ಯಥೆಪಡು : ಬಱಿದೆ ಮನನೋಯದಿರು ಸಾಕು (ಕುವ್ಯಾದ್ರೋ. ೦–೭); ನಿನಗುಪಟಳಗಳುಂಟೇ ಬಱಿದೆ ಮನನೋಯದಿರು ನೀನು (ಪಳಶ. ೦–೦೩). [ಮನ + ನೋಯು (< ನೋ)]

**ಮನಪೆಚ್ಚು** 'ಮನಪೆರ್ಚು' ನೋ.

**ಮನಪೆರ್ಚು**, ಮನಪೆಚ್ಚು (ಕ್ರಿ). ಅಂತರಂಗವು ಉಬ್ಬು : ಉತ್ಸಾಹಗೊಳ್ಳು : ಕಲಬಲದಿ ಪಾಲ್ಗೊಂಡು ನಿಂದಿಹ ಪೂರ್ಣಯಿಂದುವದನೆ ಯರನೀಕ್ಷಿಸುತ ಮನಪೆರ್ಚಿ ಸಾನಂದದಿಂದೈತಂದು . . . ಸುಖಾಸನದೊಳು ಸಂದು ಸನ್ಮೂರ್ತಿಗೊಂಡಿರಲು (ಪವಮೋ. ೦೬–೪೨). **ಮನಪೆಚ್ಚು** : ಎಚ್ಚರ ಪರಾಕು ಉಬ್ಬುಲು ಕಳಿಯಿಸಿ ಮನಪೆಚ್ಚಿ . . . ವರಕರದಿ ಸನ್ನೆಗೈದಂ ಕರೆಯಲು (ಪಪಮೋ. ೨೦–೨೦). [ಮನ + ಪೆರ್ಚು$_1$]

**ಮನಬರಡ** 'ಮನಬಚಿಡ' ನೋ.

**ಮನಬಚಿಡ**, ಮನಬರಡ (ನಾ). ಅಂತರಂಗದಲ್ಲಿ ಹುರುಳಿಲ್ಲದವನು : ಮಾನಸಿಕಧೈರ್ಯ ಅಥವಾ ಸ್ಥೈರ್ಯಗಳಿಲ್ಲದವನು : ಅರಿವಿಲ್ಲದ

ವೆಲ್ಲಿಯುವು ನೀವ್ ಮನಬಿಡದೆರ್ (ಕುಮಾ.ಕ. ೧–೦೮). **ಮನಬರಡ** : ಧೀರ ರಾವವರಿಗೆ ರಾಜ್ಯವೇ ಹೊರತು, ಮನಬರಡರಿಗಲ್ಲ, ಅಂಜುಬುರುಕರಿಗಲ್ಲ (ರಾಜಶೇ. ೬). [ಮನ + ಬಿಡು]

**ಮನಬಿಚ್ಚು** (ಕ್ರಿ). = ಮನದೆರೆ : ಅವರು ನನ್ನಲ್ಲಿ ಮನಬಿಚ್ಚಿ ಮಾತಾಡು ವಂತೆ ನಿಮ್ಮೊಡನೆ ಮಾತಾಡಲಾರರು (ಹಾಹುತ್. ೯೬). [ಮನ + ಬಿಚ್ಚು₁ (< ಬಿರ್ಚ್)]

**ಮನಬೀಸರ** (ನಾ). ಮನಸ್ಸಿಗೆ ಅಹಿತವಾದುದು : ಮನಬೀಸರವೆಂಬ ಗಾಳಿ ಬೀಸಿತ್ತು ವಿದ್ಯಾಮುಖದ ಜ್ಯೋತಿ ನಂದಿತ್ತು ಕತ್ತಲಲ್ಲಿ ಗತಿಯು ಕಾಣದೆ ದುಮ್ಮಾನ ನೆರೆಗೊಂಡಿತ್ತು (ಅವಾಂ. ೪೦–೦೭೦). [ಮನ + ಬೀಸರ]

**ಮನಬೊಗು** 'ಮನಂಬುಗು' ನೋ.

**ಮನಭಂಗ** (ನಾ). ಮನಸ್ಸಿನ ನ್ಯೂನತೆ : ಚಾಂಚಲ್ಯ : ಅಸ್ಥಿರತೆ : ಅಂಗಭಂಗ ಮನಭಂಗವಳಿದು ನಿಮ್ಮ ಸಂದಿಂಗೊಮ್ಮೆ ನೆರೆವೆನೋ ಚನ್ನಮಲ್ಲಿ ಕಾರ್ಜುನಾ (ಹುಹಾರೇ. ೩. ೦೪೦–೩೦೭); ಮನಭಂಗವಾದಂದು ಘನನಿದ್ರೆ ಹೋದಂದು . . . ಮರಣವದು ತನಗೆ ಬಂತೆಂದ (ಸರ್ವಜ್ಞ. ೦೫೩೦). 'ಮನೋಭಂಗ' ಪರಾ. [ಸಂ.]

**ಮನಮಾನಿ** (ಗು). ಬೇಕಾದಷ್ಟು ; ಯಥೇಚ್ಛ : ನಮ್ಮ ಮನಮಾನಿ (ಬಹಳ) ಕೆಲಸಿರತ್ತಿತೆ ಎಂದು ಅಲ್ಲಿಂದ ಹೊರಬಿದ್ದ ಆ ಪ್ಯರೆಕ್ಷರು! (ಹುಕೀ. ೪೦). [← ಹಿಂ. ಮನಮಾನೀ = ಇಷ್ಟಬಂದ ಹಾಗೆ ಕೆಲಸ ಮಾಡುವ ಸ್ವಭಾವ ; ಸ್ವೇಚ್ಛಾಚಾರ]

**ಮನಮಾರ್**, ಮನವಾರ್ (ಕ್ರಿ). ಮನಸ್ಸಿಗೆ ತೃಪ್ತಿಯಾಗು. **ಮನವಾರ್**. 'ಕಣ್ಣಾರ್', 'ಕೈಯಾರ್' ಪರಾ.

**ಮನಮಾರೆ** · **ಮನವಾರೆ** = ಮನಸಸ್ಸು ತಣಿಯುವ ತನಕ: ಮನಸ್ಸಿಗೆ ತೃಪ್ತಿಯಾಗುವಂತೆ : ಅಂತು ಕಣ್ಣಾರೆ ನೋಡಿ ಮನಮಾರೆ ಪೊಗಟಿ (ಅಜಿ. ೪–೦೩ ೩); ನಮ್ಮವರೆಲ್ಲರುಮಂ ಮನಮಾರೆ ತೋಱಿದು (ಧರ್ಮಾಮೃ. ೬–೩೦); ಅನುಭಾವಿಗಳ ಅನುಭಾವ ಮನವಾರೆ ವೇಧಿಸಿದವರಿಗೆ ಜನನವಿಲ್ಲ (ಶೀವಾಶ. ೨೪–೪೦); ಭೀಷ್ಮರ ಕೋಲ ಗುರುವಿನ ಹಲಿಬವನು ಮನವಾರೆ ಹೊತ್ತಿಪಲ (ಕುಮಾ.ಕ. ೮–೩೪). [ಮನ + ಆರ್₂]

**ಮನಮಾಱಿ** (ನಾ). ಮನಸ್ಸನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳದೆ ಇತರರ ಅಧೀನಕ್ಕೆ ಕೊಟ್ಟವನು: ನೀಱ ಪೊಕ್ಕಳು ಕಂಡಳಾ ಮನ ಮಾಱಿಗಳ ಮಂತಿಯನು ಕುಳ್ಳಿರಿ ಬೇಱ ನೀವೆಲೆ ದೈತ್ಯಕುಲಪಾಲಕರಿರ . . . ಎನುತ್ತ ನಗೆಯನು ತೋಱ ನುಡಿದಳು (ದಹಿಗ. ೮–೪–೨೪). [ಮನ + ಮಾಱು₁ + – ಇ₃]

**ಮನಮಿಗು** 'ಮನಂಮಿಗು' ನೋ.

**ಮನಮಿಡು**, ಮನವಿಡು (ಕ್ರಿ). ಮನಸ್ಸಿಡು ; ಬಯಸು ; ಆಸೆಪಡು : ಇಂದ್ರಿಯಸುಖಕ್ಕೆ ನಾಡೆ ಮನಮಿಟ್ಟು ಸರ್ವಸ್ವಮಂ ಜರತ್ತೃಣಸಮಾನಮಾಗೆ ಬಗೆದು (ಹುಳುಹು. ೦೦–೩೦). **ಮನವಿಡು** : ನಿನಗಾನಂತ್ಯ ಮನವಿಟ್ಟೆನ್ನ ದುಶ್ಚರಿತಕ್ಕೆ ವಿಧಿಯುಂಟೆ (ಬಸವ. ೪೩–೪); ದುಸ್ತರತೂಪಕೆ ಸಿಂಹವು ಬಿದ್ದರು ಭರದೆ ಮದಗಜಕುಂಭವಿದಾರಣಕಾರ್ಯಕೆ ಮನವಿಡುವುದನು ಮಾಣುವುದೆ (ಇಂತಾಶ. ೬೨–೪೮). [ಮನ + ಇಡು₁]

**ಮನಮಿಡುಕು** (ಕ್ರಿ). ಕಳವಳಿಸು ; ಮನಸ್ಸು ಖೇದಗೊಳ್ಳು : ಒಡೆದ ದುಗುಡದಲರ್ಜುನನು ಮನಮಿಡುಕಿದನು (ಕುಮಾ.ದ್ರೋ. ೦೪–೨೪). [ಮನ + ಮಿಡುಕು₁]

**ಮನಮುಟ್ಟು** (ಕ್ರಿ). ೧. ಮನಸ್ಸಿಗೆ ತಿಳಿ, — ಅರಿವಾಗು : ಮನ ದಟ್ಟಾಗು : ಮನುಜರೆಲ್ಲರಿಗೆ ನೀನೊಂದು ವಿಷಯವನು ಮನಮುಟ್ಟು ವಂತೆ ಕಲಿಸುವೆ ಜಗದೊಳದನು ? (ಕವಿತ. ೦೪–೭); ಜನಜೀವನದ ಅನುಭವವನ್ನು ಸ್ವಾರಸ್ಯವನ್ನೂ ಮನಮುಟ್ಟುವ ರೀತಿಯಲ್ಲಿ ಸಂಕ್ಷೇಪವಾಗಿ ಹೇಳಿರುವುದೇ ಗಾದೆ (ಸುಭಾಗ. ೭೦). ೨. ಮನಸ್ಸು ಒಪ್ಪು : ಅಂತರಂಗವು ಒಪ್ಪು : ಲಿಂಗದಲ್ಲಿ ಮನಮುಟ್ಟಿ ನಿಲ್ಲಿರಲು ಅದೇ ಅರ್ಪಿತ (ಅವಪ. ೨೩–೬೨); ಮನಮುಟ್ಟಿ ದುರಾಚಾರ ಮಾಳ್ಪರನು ಸಿ ಕಾಡು (ಶೂಂ. ೨–೩–೦); ಮನಬಂದ ಹೆಣ್ಣನ್ನು ವಿವಾಹವಾಗಿ ಕರೆದಿತ್ತು ಮನಮುಟ್ಟಿ ಬಾಳ್ವೆ ಮಾಡಿದರೆ ಅಮೃತದ ಕೆನೆಯು ಸವಿದಂತೆ (ಸರ್ವಜ್ಞ. ೦೬೯೯). [ಮನ + ಮುಟ್ಟು₁]

**ಮನಮುನಿಸು** (ನಾ). ಅಂತರಂಗದ ಸಿಟ್ಟು ; ಮನಸ್ಸಿನ ಕೋಪ : ಬರಸೊರಸು ವಿಗೆ ಮಾಸಿದುದಿತ್ತಂಡಕ್ಕೆ ಮನಮುನಿಸು (ಕುಮಾ.ಕ. ೦೬–೩೦): ಹೆಸರು ಕೇತುವೆನಲ್ಕೆ ವಿಗೆ ರವಿಶಶಿಗಳನು ಮನಮುನಿಸಿನಲಿ ಭಕ್ಷಿಸಲು ಬಯಸು (ಶಿವಾಗ. ೩–೦೦–೦೫). [ಮನ + ಮುನಿಸು₂]

**ಮನಮುರಿ** (ಕ್ರಿ). ೧. ಮನಸ್ಸನ್ನು (ಬೇರೆಯ ಕಡೆಗೆ) ತಿರುಗಿಸು : ವನಿತೆಯುಮುಂ ನಂಟರುಮಂ ಜನಕನುಮಂ ಪೆತ್ತ ತಾಯುಮಂ ವೃತ್ತಿ ಯುಮುಂ ಮನಮುರಿದು ತೊಱದು (ಧರ್ಮಾಮೃ. ೬–೬೯); ರಾಯ ಮನ ಪೊಲಿದೇಱಿಸಿದರೇಱುವುದು ದೊರೆ ಮನಮುರಿಯೆ ಕುಂದುವುದು (ಕುಮಾ.ಕ. ೧–೨೪). ೨. ಬುದ್ಧಿಗೆ ವ್ಯಾಯಾಮ ಕೊಡು : ಬುದ್ಧಿ ಯನ್ನು ಅಧಿಕವಾಗಿ ಉಪಯೋಗಿಸು : ನಾವು ಪ್ರಯತ್ನವುರಿದು ಪುರುಷಾರ್ಥವನ್ನು ಮಾಡಲಿಕ್ಕೆ ಬೇಕು . . . ಇವರು ಮನಮುರಿದು ವಿಚಾರಮಾಡಲಿಕ್ಕೆ ಬೇಕು (ವಿಚಾರ. ೦೩). [ಮನ + ಮುರಿ₁]

**ಮನಮುರುಕ** (ನಾ). ತಿರಸ್ಕಾರ ; ಕಡೆಗಣಿಸುವಿಕೆ : ವಿಮರ್ಶಕರಾದ ಉದಾತ್ತಹೃದಯರಿಗೆ ಅಂಥ ಮನಮುರುಕವಿರಲಾರದು (ದಾಸೋಪ. ೯೯). [ಮನ + ಮುರುಕ₁ (< ಮುಱುಕ₂)]

**ಮನಮೆಚ್ಚು₁** (ಕ್ರಿ). ಅಂತರಂಗವು ಒಪ್ಪು : ಕೈಬಿಚ್ಚಿ ತೋರಿಸು ಮನ ಮೆಚ್ಚಿ ಕೊಡುವನು ದೇವನು (ಅಂಬಿಕ. ೨೩೮–೬೯). [ಮನ + ಮೆಚ್ಚು₁]

**ಮನಮೆಚ್ಚು₂** (ನಾ). ಅಂತರಂಗಕ್ಕೆ ಒಪ್ಪುವುದು ; ಅಪೇಕ್ಷಿಸುವುದು : ಇಳೆಯ ವಲ್ಲಭರೆನಿಪ ರಾಜಾವಳಿಯ ಮನಮೆ [ಶಾಶಾಂ. ಮ]ಚ್ಚುಗಳ ಸುರ್ವೀಲಲನೆ ಮೆಱದಳು (ಕುಮಾ.ಕ. ೦೮–೦೯); ಅಕುಟಿಲರ ಮನಮೆ [ಶಾಶಾಂ. ಮ]ಚ್ಚು ಶಿವನಿಘಕುತರುವ್ಯ ಹವಚ್ಚು ಶಿವಸುಖಕರ ಮೆಚ್ಚು (ತೊರೆಬ. ೧–೦–೧೧). [ಮನ + ಮೆಚ್ಚು₂]

**ಮನಮೊಸೆ**, ಮನವೊಸೆ (ಕ್ರಿ). ಅಂತರಂಗವು ಒಪ್ಪು – ಮೆಚ್ಚು : ಮನ ಮೊಸೆದು ನಡವನಪ್ಪೊಡೆ ಮನಕತದಿಂ ನೋವನಲ್ಲಿಯುಂ ಪೊರ್ದದೆ (ಧರ್ಮಾಮೃ. ೦೦–೬); ಮನಮೊಸೆದು ಮಾಡಿಸೋಂದಂ ಜಿನಾಲಯಮಂ ಬೂವಿದೇವ ಧರ್ಮಧುರೀಣ (ಎಕ. XII. ತಿಪಟೂ. ೯೩–೧೩ ; 1174). **ಮನವೊಸೆ** : ಮಾಡಿಸುವೆಂ ಮನವೊಸೆದಾ ವೈಶಂಪಾಯನಂಗೆ ಮದುವೆಯ ಯೊಳ್ವಿವಾಹೋತ್ಸವಮಂ (ಕಾದಂಬ. ೩೩೭); ಆ ತ್ರಿವಿಧಭಕ್ತಿಗೆ ಮನವೊ ಸೆದು ತಿರುವಾಕರೀಶನು ಭಕ್ತಿತೇಜದಲಿ (ಬಸವ. ೯೯–೩೩). [ಮನ + ಒಸೆ]

**ಮನರಂಜನೆ** (ನಾ). ಮನಸ್ಸನ್ನು ಸಂತೋಷಗೊಳಿಸುವುದು ; ಮನೋರಂಜನೆ : ಅದು ಮನರಂಜನೆಯಲ್ಲ ; ಅತಿಘೋರವಾದ ಶಿಕ್ಷೆ (ಮುಹಾಶಾ. ೦೨೪). 'ಮನೋರಂಜನೆ' ಪರಾ. [ಸಂ. ಮನರಂಜನ]

**ಮನವರಿಕೆ** (ನಾ). ಅಂತರಂಗಕ್ಕೆ ಚೆನ್ನಾಗಿ ತಿಳಿಯುವಿಕೆ ; ಮನಸ್ಸಿಗೆ ಅರಿವಾಗುವಿಕೆ : ಸೈರಿಸಾಲಬನುರವಣೆಯು ವಿಗೆ ತೀರುವುದೆ ಮನವರಿಕೆ ಯಲ್ಲಿಯ ಪಾರಕೇಣಿಯ ಸಾಲವೀ ಘಟ್ಟಿರನು ತಾ ಕೊಲಲು (ಕೆಹುಚಾ. ೨೩–೨೩); ತಾನು ಪಾರಾಗುವುದು ಸಾಧ್ಯವಿಲ್ಲವೆಂಬ ಮನವರಿಕೆಯೂ ಆಗಿದ್ದ ರಿಂದ . . . ಕೇಳಿದ (ಕವಿತ. ೨೬೩); ಇದರ ಮನವರಿಕೆಯು ನನಗೆ ಈಗಾಗಲೇ ಆಯಿತು (ಹವಕಿ. ೪೪). [ಮನ + ಅರಿಕೆ (< ಅಱಕೆ)]

**ಮನವರಿಸು** (ಕ್ರಿ). ಅಂತರಂಗಕ್ಕೆ ತಿಳಿಯುವಂತೆ ಮಾಡು ; ಮನಸ್ಸಿಗೆ ಬರುವಂತೆ ಮಾಡು : ಅನವರತದೊಳೀತನ ತೆಕ್ಕೆಯೊಳಪ್ಪ ಮನತೆಯು

ಸುಕೃತದೇಗೆಯು ಮನವನಿಸುವೊಡಳವಲ್ಲವೆನ್ನಯ ಷಣ್ಮುದನುವಿನ ಬೆಳಸಂತಿಹುದೊ (ಶಂಶವಿ. ೯-೦೦೬).

[ಮನ + ಬರ್ (< ವರ್) + —ಇಸು₃]

**ಮನವಾರ್** 'ಮನವಾರ್' ನೋ.

**ಮನವಾರತೆ** 'ಮನೆವಾರ್ತೆ' ನೋ.

**ಮನವಾರ್ತೆ** 'ಮನೆವಾರ್ತೆ' ನೋ.

**ಮನವಾರ್ತೆ** 'ಮನೆವಾರ್ತೆ' ನೋ.

**ಮನವಿ,** ಮನವೆ, ಮನುವೆ (ನಾ). ೧. ಬೇಡಿಕೆ; ಬಿನ್ನಹ; ವಿಜ್ಞಾಪನೆ: ಇದೆ ಕೊನೆಯ ಮನವಿಯೊಡೆಯಾ (ಗಿರಶಿಂ. ೬೨-೬೩); ಆ ವ್ಯಕ್ತಿಯು ತನ್ನ ಪರವಾಗಿ ಮನವಿಯನ್ನು ಮಾಡಿಕೊಳ್ಳಲು . . . ಅವಕಾಶ ಕೊಡತಕ್ಕುದು (ಕಾರಾಶ. ೨೯); ವಾಚಕರಲ್ಲಿ ಮತ್ತೊಂದು ಮನವಿ (ಕುಲೀಪ. ೬). ೨. ಲಿಖಿತವ ಮೂಲಕ ಮಾಡಿಕೊಳ್ಳುವ ಅರಿಕೆ; ಅರ್ಜಿ: ನಾವು ನಮ್ಮ ಮನವಿಯನ್ನು ಕಳುಹಿಸಿದರೆ ಅವರಿಂದ ಉತ್ತರ ಬರಲು ತಡವಾಗುತ್ತದೆ (ಕೃತಾಶ. ೬೦); ಅವರಿಗೆ ಬೇಬಲ ಕೊಟ್ಟಿದ್ದರೆ ಅವರ ಮನವಿಗೆ ಹೆಚ್ಚು ಬಲ ಸಿಕ್ಕುತ್ತಿದ್ದಿತು (ಜಾಗ್ರತಿ. ೯೯). **ಮನವೆ:** ೧. ಅವಳು ನ್ಯಾಯಸ್ಥಾನಕ್ಕೆ ಮನವೆಯನ್ನು ಬರೆದುಕೊಂಡ ಳಂತೆ (ಕೃಗೃಂಶ. ೦೩೯). **ಮನುವೆ:** ೧. ನವಯುವತಿಯರ ಮನುವೆಯು ಶ್ರೀಕೃಷ್ಣನ ಕಿವಿಗೆ ಸೂಚಿಸಲ್ಪಡುವಂತೆ (ಕೃಕೃಗೋ. ೯-೩೦). ೨. ಅರ್ಜಿ ಎನ್ನುವುದಕ್ಕೆ ಬದಲಾಗಿ ಮನುವೆ ಎಂತಲೇ ಬರೆಯಬೇಕು (ಕೂಕುಂಶ. ೦೬೨).

[ ?. / ತಮಿ. ಮಣು ; ತೆಲು. ಮನವಿ]

**ಮನವಿಕ್ಕು** (ಕ್ರಿ). ೧. ಮನಸ್ಸನ್ನು ಇಡು; ಇಷ್ಟಪಡು; ಬಯಸು: ಮುನಿಸತಿಗೆ ಮನವಿಕ್ಕಿದನು ಸುರನಾಥ (ಕೊರಿರಾ. ೬-೦೨-೦೬); ಕುಮುದವನೆ ವಿಕಾಸಿಸುವಂ ಹಿಮಕಿರಣಂ ತಾವರೆಯನೆ ರವಿಮರಲಿಸುವಂ ಯಮಿವರ ಪರಕಾಂತಾಸಂಗಮದೊಳ್ ಮನವಿಕ್ಕರಲೆ ಜಿತೇಂದ್ರಿಯರಿಳೆಯೊಳ್ (ಜಾಕುಂಶ. ೬೨-೦೨೬). ೨. ಮನಸ್ಸನ್ನು ಜೋಲು ಬಿಡು; ಹತಾಶೆಹೊಂದು; ಆಸೆಯನ್ನು ಕಳೆದುಕೊಳ್ಳು: ನೀಂ ಮರ್ದ ತರ್ಪೆಯಿಂಬಾಸೆಯಿಂ ಜೀವಮಂ ಪಿಡಿದಿರ್ಪಳ್ ನೀಂ ಬಜಾದೆ ಬಂದುದನಜಿವಾಗಳೆ ಮಜಾಕಳಸಿ ಮನವಿಕ್ಕಿ ದಳಪ್ಪುದೆ ಬಟಿಕ್ಕಸಾಧ್ಯಮುಕ್ಕುಂ (ಶಂತಿಶಂ. ೨೬೦-೯೧); ಬಂದು ಜವನಿಕೆಯೊಳಗೆ ನಿಂದು ಮನವಿಕ್ಕುತ್ತೆ (ಬಸಶ. ೩-೬೬). [ಮನ + ಇಕ್ಕು]

**ಮನವಿಡು** 'ಮನವಿಡು' ನೋ.

**ಮನವಿದಾರ** (ನಾ). ಅರ್ಜಿಯನ್ನು ಸಲ್ಲಿಸುವವನು; ಅರ್ಜಿದಾರ: ಮಿತ್ರರನೇಕರು ಮನವಿದಾರರ ಪರವಾಗಿ ಆಗ್ರಹಪೂರ್ವಕವಾಗಿ ಮಾತನಾಡಿದರು (ಜಾಹಿತ. ೨೨). [ಮನವಿ + —ದಾರ್₂]

**ಮನವಿಭೇದ** (ನಾ). ಮನಸ್ಸಿನಲ್ಲಿ ಇರುವ ಭೇದಭಾವ; ಪಕ್ಷಪಾತ: ಎನಗೆ ಶಿವಪಾರ್ವತಿನವರೊಳು ನೀನನುವಿನಲ್ಲದೆ ಬೇಡ' ನಿನ್ನಲಿ ಮನವಿಭೇದವ ಬಲ್ಲೆನೇ ಬಾಯೆನುತ ಕೈವಿಡಿದ (ಕುಬ್ಬಾ.ಶಿ. ೩-೬೯). [ಸಂ.]

**ಮನವಿಳಿ** (ಕ್ರಿ). ಮನಸ್ಸು ಇಳಿಮುಖವಾಗು; ನಿರುತ್ಸಾಹಗೊಳ್ಳು; ಮನಗುಂದು: ಘನವೆನಿಪ್ಪಾರೋಗಣೆಯನೊರ್ಜಿಸಿತು ಬಾಲಂಗಿಸ್ಕಲಾಜದ ಮನವಿಳಿವಳೆಂದದೆ ದಯಾರಸಂಭರಿತಚಿತ್ತ (ಬಸಪು. ೬-೩೨).

[ಮನ + ಇಳಿ₁ (< ಇಟಿ)]

**ಮನವಿಳುಹು** (ಕ್ರಿ). ಮನಸ್ಸನ್ನು ಇಳಿಬಿಡು; ನಿರುತ್ಸಾಹಗೊಳ್ಳು; ಅಧೀರಗೊಳ್ಳು: ಎಲೆ ಮರುಳೆ ರಾಧೇಯ ಘಡ ಮನವಿಳುಹದಿರು ತಪ್ಪೇನು ಸೋಲುವು ಗೆಲವು ದೈವಾಧೀನ (ಕುಬ್ಬಾ.ಕ. ೦೩-೨೦).

[ಮನ + ಇಳುಹು₁ (<ಇಟಿಪು)]

**ಮನವೀ** (ಕ್ರಿ). ಮನಸ್ಸು ಕೊಡು; ಅಪೇಕ್ಷೆಪಡು: ಬೆಳಗುಜಾವದ ಬಳಲಿದ್ರೆಗೆ ಮನವಿತ್ತು (ಕಂಶಃ. ೦೩-೬). [ಮನ + ಈ₂]

**ಮನವುಕ್ಕು** (ಕ್ರಿ). ಮನಸ್ಸು ಉತ್ಸಾಹಗೊಳ್ಳು: ಬೆಕ್ಕಸಂಬಟ್ಟಕ್ಕಜಂ ಬಿಂಗೆ . . ., ಮನವುಕ್ಕಿ ಬಿಜ್ಜಳನಿರ್ದನು (ಬಸಪು. ೩೦-೨೯).

[ಮನ + ಉಕ್ಕು₁ ( <ಉರ್ಕು₁ )]

**ಮನವುಬ್ಬು** (ಕ್ರಿ). = ಮನವುಕ್ಕು: ಮುಗ್ಧು ಭಾವನೆನುತ ಪ್ಯೊಯೊಲಚಿಸಲಿ ಮನವುಬ್ಬಿ ನಿಂದಿದಳಧಿಕಹರುಷದಲಿ (ಕೆ.ಶಿರಾ. ೮-೦೦-೩); ಶ್ರೀಶಾರದಾಂಬೆ ಯನದೆ ಮೊದಲಿಗೆ ನೋಡಿ ಮ್ಮೆಯುಬ್ಬಿ ಮನವುಬ್ಬಿ ಮಣಿದ (ಇಂಶಾಶ. ೦೭-೬೩). [ಮನ ಉಬ್ಬು₁ ( <ಉರ್ಬು₁ )]

**ಮನವೂಜು** (ಕ್ರಿ). ಮನಸ್ಸನ್ನು ನೆಲೆಗೊಳಿಸು: ಮಿಜಾಜುದೆನೆ ಶಿವನಾಜ್ಞೆಯಂ ಮನವೂಜುದೆನೆ ಮಜುವನ್ಯದೈವಕೆ (ಬಸಪು. ೯೩-೦೬). [ಮನ + ಊಜು₁]

**ಮನವೆ** 'ಮನವಿ' ನೋ.

**ಮನವೆರಗು** 'ಮನವಜಗು' ನೋ.

**ಮನವೆಳಸು** (ಕ್ರಿ). ಮನಃಪೂರ್ವಕವಾಗಿ ಬಯಸು; ಇಚ್ಛಿಸು: ವಿಂಗೆ ಸುಪಿಸುರಿಗುಸಿರುತ ಸಂತಾನದ ಬಗೆಗಾಗ ಮನವೆಳಸಿದಳು (ಕಂಶವಿ. ೯-೯೬).

[ಮನ + ಎಳಸು₁]

**ಮನವೇಜಗು,** ಮನವೆರಗು (ಕ್ರಿ). ಮನಸ್ಸಿನಲ್ಲಿಯೇ ನಮಿಸು: ಈ ವೃತ್ತಾಂತವಂ ತಾನಜಿದು ಬಾಚಪ್ಯಂಗಳಂ ಮನವೆಜಗಿ ಬಿನ್ನಹವಾಗಿ ಬರವೇಳ್ದಟ್ಟಿದೊಡೆ (ಬಸಪು. ೩೬-೬೯). **ಮನವೆರಗು:** ದೇವಂಗಳೆರಗಿ ಮನವೆರಗಿ ಸುವ್ವಿ (ಕಿಅಳಗಿಂ. ೦೭). [ಮನ + ಎಜಗು₁]

**ಮನವೇಗ** (ನಾ). ಮನಸ್ಸು ಚಲಿಸುವಷ್ಟು ವೇಗ; ಮನೋವೇಗ: ಮೂಸ್ಗದಿಂದೊಮ್ಮೆ ಮನವೇಗದಿಂದೊಮ್ಮೆ ಅಕ್ರಮದೊಳೊಮ್ಮೆ ಪರಿವಿಡಿಯಿಂದಲೊಮ್ಮೆ . . . ಬೊಬ್ಬಿಡುತೆ (ತರು. ದೇ. ೩-೬); ಅರರೆ ಮನವೇಗವನು ಮಿಜಿದ ಮರುತನಂದನನು (ಕಾಶಿರಾ. ೯-೯೯). 'ಮನೋವೇಗ' ಪರಾ. [ಸಂ.]

**ಮನವೊಂದು** (ಕ್ರಿ). ಮನಸ್ಸಿಗೆ ಒಪ್ಪಿಗೆಯಾಗು: ವಿನಯದಿಂ ಜಂಗಮಾವಳಿಗೆ ಬಂದು ಪಾದಾರ್ಚನೆಗಳಂ ಮನವೊಂದಿ ಮಾಡಿ (ಬಸಪು. ೩೦-೨೦).

[ಮನ + ಒಂದು₁]

**ಮನವೊಪ್ಪು** (ಕ್ರಿ). ಮನಸ್ಸು ಒಪ್ಪು.- ಇಷ್ಟವಾಗು: ಹೊಸ ಮದುವಣಗಿತ್ತಿಯಾದ. ನಿನಗೆ ಮನವೊಪ್ಪುವಂತೆ ಧರಿಸಲು.ಒಳ್ಳೆಯ ಒಡವೆಗಳನ್ನೂ ಸೀರೆಗಳನ್ನೂ ತರುವೆನು (ಕಶಿಶ. ೯೯). [ಮನ + ಒಪ್ಪು₁]

**ಮನವೊಲಿ** (ಕ್ರಿ). = ಮನವೊಪ್ಪು: ನಮಿಸುತಂ ಕಂಪಿಸುತ ಮನವೊಲಿದು ಹೊಗಳುತಂ (ಬಸರ. ೩-೦೦೬); ರಾಯ ಮನವೊಲಿದೇಜಿಸಿದ ರೇಜಾವುದು ಬೊರೆ ಮನಮುಜಿಯೆ ಕುಂದುವುದು (ಕುಬ್ಬಾ.ಕ. ೦-೨೯); ರಾಜನ ಚೆಲುವನೀಕ್ಷಿಸಿ ನಲಿದು ಕೊಂಡಾಡಿದರು ಮನವೊಲಿದು (ಜಶಕ. ೩-೦೬); ಲಕ್ಷವೇನುಂ ಬೇಡ ಮನವೊಲಿದು ನೀಡಿ (ಕುಸ್ಪ. ೦೩-೩).

[ಮನ + ಒಲಿ₁ (<ಒಲ್₁)]

**ಮನವೊಲಿಸು** (ಕ್ರಿ). ಮನಸ್ಸು ಒಪ್ಪುವಂತೆ ಮಾಡು: ಅವಳೇ ಅಲ್ಲದೇ ನಿರ್ಮಲೆಯನ್ನು ಕಾರವಾರಕ್ಕೆ ಕಳಸುವಂತೆ ನನ್ನ ಮನವೊಲಿಸಿದ್ದು (ಕೂಕುಂಶ. ೨೪). [ಮನ + ಒಲಿಸು]

**ಮನವೊಸೆ** 'ಮನವೊಸೆ' ನೋ.

**ಮನವೋ,** ಮನವೋವು (ಕ್ರಿ). = ಮನವೊಪ್ಪು: ರಂಭೆ . . . ಭೂತನಾಥನ ನಿಳಯಮಂ ಮನವೋತು ತೋಜಿದೊಡೆ (ಬಸಪು. ೯೦-೨೦). **ಮನವೋವು:** ತಮತಮಗೆಲ್ಲರುಂ ಮನವೋವಿ ಲಿಂಗೈಕ್ಯರುಗಳು ಕಂಡು (ಬಸಪು. ೩೮-೦೩). [ಮನ + ಓ₂]

**ಮನವೋವು** 'ಮನವೋ' ನೋ.

**ಮನಶ್ಶಾಸ್ತ್ರ** (ನಾ). ಮನಸ್ಸಿನ ವ್ಯಾಪಾರ ಮತ್ತು ಅವುಗಳ ಸ್ವರೂಪವನ್ನು ತಿಳಿಸುವ ಶಾಸ್ತ್ರ; ಮನೋವಿಜ್ಞಾನ: ತತ್ತ್ವಶಾಸ್ತ್ರವೆಂದರೆ

ಮನಶ್ಶಾಸ್ತ್ರವೆಂಬ (Psychology) ಅಭಿಪ್ರಾಯವು ಕೂಡ ಕೆಲವು ತಾತ್ವಿಕರಲ್ಲಿ ಕಂಡುಬಂದಿತು (ಭೌತಶಾ. ೫); ಮನಶ್ಶಾಸ್ತ್ರದಲ್ಲೂ, ಭೌತಶಾಸ್ತ್ರದಲ್ಲೂ ಆದ ಅಪಾರಸಂಶೋಧನೆಗಳು . . . ಅಧಿಕಪ್ರಭಾವಯುತವಾಗಿದ್ದವು (ಜುಶ್ರಾ. ೨೨ ಜುಲೈ). [ಸಂ.]

**ಮನಶ್ಶಾಸ್ತ್ರಜ್ಞ** (ನಾ). ಮನಶ್ಶಾಸ್ತ್ರವನ್ನು ಬಲ್ಲವನು : ಧಾರಣಾಶಕ್ತಿಯ ಅಭ್ಯಾಸ ಈ ರೀತಿಯಲ್ಲಿ ಹೊರಗಿನಿಂದ ಒಳಗೆ ಸಂಚಾರಿತವಾಗುವುದು ಸಾಧ್ಯವೇ ಎಂಬುದನ್ನು ಮನಶ್ಶಾಸ್ತ್ರಜ್ಞರು ವಿಚಾರ ಮಾಡತಕ್ಕದ್ದಾಗಿದೆ (ಪ್ರಬಂ. II, ೩೯). [ಸಂ.]

**ಮನಶ್ಶಿಲೆ** (ನಾ). ಕೆಂಪುಬಣ್ಣದ ಒಂದು ಬಗೆಯ ಖನಿಜ; ಗೈರಿಕಧಾತು : ಮಣಿಶಿಲೆ : "ಮನಶ್ಶಿಲಾ, ಮನೋಗುಪ್ತಾ, ಮನೋಹ್ವಾ, ನಾಗಜಿಹ್ವಿಕಾ – ೪ ಮಣಿಶಿಲೆಯ ಹೆಸರುಗಳು" (ಬಿಡ್ಯಾಚಿ. ೩೦೬); "ಕರವೀರಿಕಾ–ಮನಶ್ಶಿಲೆ" (ಚಿಕಂ. ೨೬). [ಸಂ. ಮನಃಶಿಲಾ]

**ಮನಸಂಚು** (ನಾ). ಅಂತರಂಗದ ಹಂಚಿಕೆ ; ಮನಸ್ಸಿನ ಉದ್ದೇಶ : ಒಬ್ಬೊಬ್ಬರನೊಬ್ಬರಳುಕಿಸುವಪಟುಗಂಗಳ ಹಬ್ಬದಲಿ ಮನಸಂಚು ತಪ್ಪಿತಸಾಧ್ಯಚಿಂತೆಯಲಿ (ಶಂಪ್ರಾ. ೦೩-೯). [ಮನ + ಸಂಚು₁]

**ಮನಸಬದಾರ** 'ಮನ್‌ಸಬ್‌ದಾರ' ನೋ.

**ಮನಸರಿ** (ನಾ). ಮನಸ್ಸು ಕಾರ್ಯಪ್ರವೃತ್ತಗೊಳ್ಳದಿರುವಂತೆ ಮಾಡುವ ವಿಧಾನ ; ಆಲಸ್ಯ : ಇನ್ನು ನಾನು ಮಾಡತಕ್ಕ ಕೆಲಸದಲ್ಲಿ ಮನಸರಿ ಮಾಡಲಿಕ್ಕಾಗದು (ಕೇಶ್ರಾ. ೯೩) ; ಗುಪ್ತಗೃಹದ ಬಾಗಿಲವನ್ನಿಕ್ಕಿಕೊಳ್ಳಲಿಕ್ಕೆ ಮರೆತೆ . . . ಇಕ್ಕಿಕೊಂಡರಾಯಿತೆಂದು ಮನಸರಿಮಾಡಿದೆ (ಅಬಕ. ೦೬೦). [?. /ತೆಲು. ಮನಸರಿ = ಮನಸ್ಸು]

**ಮನಸಲ್** (ಕ್ರಿ). ೧. ಮನಸ್ಸು ಪರವಶವಾಗು ; ಮನಸೋಲು : ಮನಸಂದಾ ದಮಿತಾರಿ ಗಾಣಿಕಿಯರಂ ಬೇಟ್ಟಿಂದದಿಂದಟ್ಟಿ ದೂತನನಂತೀತನನೊಯ್ಯನೆಮ್ಮೊಳಗನೇನಾರಯ್ಯನೋ (ಶಾಂತಿಪು. ೨-೩೦) ; ಯೋಜನಗಿತ್ತಿಯಂಬಿಗಿತ್ತಿಗೆ ಮನಸಂದಂ . . . ಮುನಿನಾಥಂ (ರಪುರಾ. ೭-೨೩) ; ಮನಸಂದಳಾ ಖಳನನುಜೆ ಸೋತಳು ಭೀಮಸೇನಂಗೆ (ಕುಪ್ರಾ. ೯-೦೨) ; ಮೌನದಲಿ ಪತಿಯಂಘ್ರಿಧ್ಯಾನದಲಿ ಮನಸಂದು ಸತಿ ಘನಕಾನನಕೆ ಗಮಿಸಿದಳು (ಜೈಭಾ. ೪-೪೯). ೨. ಮನಸ್ಸು ಮಾಡು; ನಿರ್ಧರಿಸು: ನೀರೆಚೆಯಲೆಂದು ಮನಸಂದು ನಡೆತಂದು ಪೂಗೊಳನ ಪೊಕ್ಕು . . . ಈಸಾಡಿ ಹೊಳೆದಾಡಿ ತಣಿದು ತಡಿಯಂ ಪತ್ತಿದಂ ಕಿವಿಯಾಗಿ ಸವಿದು ಸಹಿತ (ಕೋಳೂಚ. ೨-೮೩). ೩. ಮೆಚ್ಚು : ಒಲಿ : ತನ್ನ ಕಂಡ ಕನಸುಗಳಂ ಮನಸಂದು ಮಿಸುಕುವ ಮನಮಾನನುಭವಿಸಿ (ಅನಂತಪು. ೯-೦೨೬ ವ). [ಮನ + ಸಲ್₁]

**ಮನಸಾರ್** (ಕ್ರಿ). ಮನಸ್ಸಿಗೆ ತೃಪ್ತಿಯಾಗು.

ಮನಸಾರ, ಮನಸಾರೆ=೧. ಅಂತರಂಗಪೂರ್ವಕವಾಗಿ: ಶ್ರೀದೇವಿಯು ಅತ್ಯಂತಲಾವಣ್ಯವತಿಯೆಂದು ನಾನು ಮನಸಾರ ಒಪ್ಪುತ್ತೇನೆ (ಶ್ರೀರಾಮ. ೦೩): ಆ ರಾಜ್ಯವನ್ನು ನಾನು ಮನಸಾರ ಚಿಪ್ಪುಸುಲ್ತಾನನಿಗೆ ಬಿಟ್ಟಿರುತ್ತೇನೆ (ರಾಂಚ. ೦೯). ೨. ಮನಸ್ಸು ತೃಪ್ತಿಯಾಗುವ ತನಕ; ಮನದಣಿಯುವಂತೆ : ಪ್ರಾಸವ ಕೂಡಿಸಿ ಬರೆದೆ ಮನಸಾರೆ ತ್ರಾಸವಾಗದ ಹಾಗೆ ಹೀಗೆ (ಜಂಪಾಶ. ೬೯-೦೦) ; ಆತ ತಿಮ್ಮಪ್ಪನನ್ನು ಮನಸಾರೆ ರಕ್ಷಿಸಿದ (ಮುಂಗಾರು. ೬೦). [ಮನಸು + ಆರ್₂]

**ಮನಸಿಜ** (ನಾ). ೧. ಅಂತರಂಗದಲ್ಲಿ ಹುಟ್ಟಿದವನು: ಕಾಮ; ಮನ್ಮಥ : ಅಜಾಚಿತ್ತವೋದುದೀ ಮನಸಿಜನೆಂಬ ಪಾತಕನಸಂತಪಹಾಸ್ಯಮನೆಯ್ದಬಿಕ್ಕುವೇ (ಆದಿಪು. ೮೪೬) ; ಮನಸಿಜನ ಮಾಯೆ ವಿಧಿವಿಳಸನದ ನೆರಂಬಡೆಯ ಕೊಂದು ಕೂಗದೆ ನರರಂ (ಯಶೋಚ. ೨-೬೦); ಮತ್ತಮಲ್ಲಿ ಮನಸಿಜನ ಬಿಲ್ಲ ಬೀಜದಿಂ ಬೆಳೆಯದಿಕ್ಷುದಂಡಮಿಲ್ಲ (ಪುಷ್ಪಪು. ೯-೨೦ ವ). ೨. ಪ್ರೀತಿ, ಅನುರಾಗ : ಎಂತು ನೋರ್ಪಡಂ ಮನಸಿಜದಿರ್ಕದಾಣವೆಸಿಸಿತ್ತೆಸದೀ ನಿಡುನೇಗಿಲರ್ವಿಯೊಳು (ಶಿಇ. IV, ೦೩-೫೯; 1165). ೩. ಕನ್ನಡದ ಒಬ್ಬ ಕವಿಯ ಹೆಸರು : ನೆಗಟ್ದಸಗನ ಮನಸಿಜನ ಚಂದ್ರಭಟ್ಟನ ಕೃತಿಗಳ್ (ಶಂಕರಂ. ೬. ೪-೨೩); ಗುಣನಂದಿಯ ಮನಸಿಜನಸಗನ . . . ಸುಮಾರ್ಗವಿದಚ್ಚೋಳ್ ಲಕ್ಷ್ಯಂ (ಕವಿರಾ. ೫). ೪. ಒಬ್ಬಾತನ ಹೆಸರು : × ಸೇನಅಡಿಗಳ್ಗೆ ಮನಸಿಜರಾ × × ಗನಾ ಅರಸಿಬೆರೆ ಎತ್ತಿ (ಎಕ. II, ೩೫-೫; 800). ೫. [ಜೈನ] ಬಾಹುಬಲಿಯ ಹೆಸರುಗಳಲ್ಲಿ ಒಂದು : ಚಿತ್ತಜಂ ಚಿತ್ತಭವಂ ಮನಸಿಜನನಂಗನಂಗಜನೆನೆ ನೆಗಟ್ದುವು ಬಾಹುಬಲಿಗೆ ಪಲವುಂ ಪೆಸರ್ಗಳ್ (ಆದಿಪು. ೯-೫೩). [ಸಂ.]

**ಮನಸಿಜಕ್ರೀಡೆ** (ನಾ). ಮನ್ಮಥಲೀಲೆ: ಕಾಮಕೇಳಿ : ವಸಂತಕಾಲದಲ್ಲಿ ಕಸ್ತೂರಿಯಿಂದ ಕೂಡಿ ತೇದ ಗಂಧವನ್ನು . . . ಲೇಪನಮಾಡಿದ್ದಲ್ಲಿ . . . ಮನಸಿಜಕ್ರೀಡೆಗೆ ಜನ್ಮಭೂಮಿಯಾಗಿರುವುದು (ಸಕಪ್ಪ. ೯೦). [ಸಂ. ಮನಸಿಜಕ್ರೀಡಾ]

**ಮನಸಿಜಗಲೆ** (ನಾ). ಮನ್ಮಥಕೇಳಿಗೆ ಉತ್ತೇಜನಕಾರಿಯಾದ ಕಾಮಕಲಾಸ್ಥಾನ : ಹೊಳೆವಕ್ಷಿಗಳಿಂದ ನಿಟ್ಟಿಸು ಮನಸಿಜಗಲೆಯ ಜಾಣಕೆ ಕೈನೀಡೊ (ಕಂಪಿಂ. ೦೦-೩೫). [ಮನಸಿಜ + ಕಲೆ₃]

**ಮನಸಿಜಾರಿ** (ನಾ). ಮನ್ಮಥನ ಶತ್ರು; ಮದನಾರಿ: ಶಿವ : ಮನಸಿಜಾರಿಯ ಭಕ್ತ ಜಕ್ಕಣಾಚಾರ್ಯನದ ನೋಡಿ (ಚೆನ್ನರಾ. ೦-೯೦). [ಸಂ.]

**ಮನಸು** (ನಾ). ಅಂತರಂಗ : ಬಗೆ : ಚಿತ್ತ : ಮುಸುಕು ತೊಳೆಯಬೇಕು ಈ ಮನಸಿನ ಮುಸುಕು ತೊಳೆಯಬೇಕು (ಪುರಂದ. ೪-೫೯ ಪಲ್ಲ) : ರಾಜಮಧುಪರ ಮನಸು ಭ್ರಮಿಸಹತ್ತಿತ್ತು (ಕೃಷ್ಣಾಕು. ೦-೫) ; ಮನೆ ಕಟ್ಟಬಹುದು ಮನಸು ಕಟ್ಟಕೂಡದು (ಗಾದೆ).

ಮನಸಿನ ಮಂಡಿಗೆ = (ಅಲಂ) ವಾಸ್ತವದ ಅನುಭವಕ್ಕೆ ಸಿಗದಂಥದು ; ಬರಿಯ ಕಲ್ಪನೆಯಲ್ಲಿರುವಂಥದು: ಮನಸಿನ ಮಂಡಿಗೆ ಮೆಲ್ಲುವೆ ನಾನು (ಪದಪಾ. I, ೯೦೦). [ಸಂ. ಮನಸ್]

**ಮನಸುಬ**, ಮನಸುಬೆ (ನಾ). ೧. ವಿಚಾರ : ಯೋಚನೆ : ಇರಾದೆ : ಈ ಮನಸುಬಕ್ಕೆ ನಿನಗೆ ಮಂಜಿ ಇದ್ದರೆ ಒಂದು ಕೈಕಾಗದ ಆಣೆ ಭಾಷೆ ಹಾಕಿ ಬರೆದು ಕಳುಹಿಸಬೇಕು (ರಾಜೇಂದ್ರ. ೫೫). ೨. ಉಪಾಯ ; ಹಂಚಿಕೆ; ಯುಕ್ತಿ : ಅದನ್ನು ಸಾಧಿಸಿ ಬಂದುಬಸ್ತು ಮಾಡಿಕೊಳ್ಳಬೇಕುಯೆಂಬದಾಗಿ ಮನಸುಬ ಮಾಡಿ (ರಾಜೇಂದ್ರ. ೫). ಮನಸುಬೆ : ೧. ನಾವೇ ಬರುತ್ತೇವೆಂದು ಎರಡು ಮೂರು ಕಾಗದ ಬರದಾಗ್ಯೂ ಬರೋಣ ಆಗಲಿಲ್ಲ. ಕೆಲವು ಮನಸುಬೆ ಮಾಡತಕ್ಕದು ಇದೆ (ಮುದ್ರ. ೨೦-೯). [←ಅರ. ಮನ್ಸುಬಹ್ ; ಹಿಂ. ಮನ್ಸುಬಾ; ಮರಾ. ಮನ್ಸುಬಾ, ಮನ್ಸುಭಾ, ಮನ್ಸೋಬಾ]

**ಮನಸುಬೆ** 'ಮನಸುಬ' ನೋ.

**ಮನಸೂಕತನ** (ನಾ). ಉದಾರಗುಣ; ತ್ಯಾಗ : ಅವನ ಕೆಟ್ಟಕೆಲಸಗಳು ಅವನ ಮನೋವಿಕಾರದಿಂದ ಹುಟ್ಟುತ್ತಿದ್ದವು. ಅವನ ಒಳ್ಳೆಯ ಕೆಲಸಗಳು ಅವನ ಮನಸೂಕತನದಿಂದುಂಟಾಗುತ್ತಿದ್ದವು (ಮೋಚಾರ. ೦೦೦).

[ಮನಸೂಕ₀ (p ← ಅರ. ಹಿಂ. ಮನ್‌ಸೂಖ್) + — ತನ]

**ಮನಸೂರ** (ನಾ). ಒಂದು ಮನೆತನದ ಹೆಸರು (?) : ಶ್ರೀ ಮಹಾಮಲಿಬಾಣರಸರ್ ಪೃಥಿವೀರಾಜ್ಯಗೆಯೆ ಮನಸೂರರಳಿಕಯ್ಯ ಮಗನನ್ನಾಭುಕಯ್ಯ ತಂಬಿಗೆ ವಸನ್ತನ್ . . . ತನ್ನನಾಳ್ದ ಪ್ರಭುಮೋರು ಬೆಸಸೆ (ಎಕ. X, ಶ್ರೀನಿವಾ. ೫-೪ ; 7೫0). [ ? ]

**ಮನಸೆಳೆ** (ಕ್ರಿ). ಅಂತರಂಗವನ್ನು ಆಕರ್ಷಿಸು ; ಚಿತ್ತವನ್ನು ವಶಪಡಿಸಿಕೊಳ್ಳು : ಕುಡಿನೋಟ ಬೀರುತ ಮೋಹಗೆ ತೋರುತ ಬಳಿನಿಂದು ಮನಸೆಳೆದವಳು (ಜಂಪಾಶ. ೦೬೬-೨೬); ಭಾರತೀಯಸಂಗೀತ . . . ಜನರ ಮನಸೆಳೆದು ಮೆಚ್ಚುಗೆಯನ್ನು ಗಳಿಸುತ್ತಿರುವುದರಿಂದ (ಸಂಗೀತ. V, ಮುನ್ನುಡಿ). [ಮನ + ಸೆಳೆ₁]

**ಮನಸೊತಿ ?** (ನಾ). ಒಂದು ಬಗೆಯ ದಾನ.–ಕೊಡುಗೆ (?): ಬರಮಸಮುದ್ರದ ಕೋಟೆ ಮಾಡಿದಕೆ ಗಳ್ಳಿಲೋರ ಚಂದಿಲಯ × × ಮಾಡಿಕೊಟ ಮನಸೊತಿ ಮನಾಸೊತಿ ಆಚಂದ್ರಾರ್ಕ್ಕ × × ಉಳಸಕ . . . ಸೊತಿ ಉಣ್ಣುಕೊಣ್ಣು (ಎಕ. XI, ಜಗಳೂ. ೩೭–೭; 1672). [ ? ]

**ಮನಸೋಕ್ತ** (ಅ). ಮನಸ್ಸಿಗೆ ಬಂದ ಹಾಗೆ; ಇಷ್ಟಬಂದಂತೆ: ತಿರುಗಾಡಲು ಹೋಗಿ ಕೆಲಕಾಲ ಮನಸೋಕ್ತವಾಗಿ ಅವಳೊಡನೆ ಮಾತಾಡು ವುದು (ಕಮಪ. ೨೭); ವೆಂಕಟರಮಣ ಮನಸೋಕ್ತ ನಕ್ಕ ನಗುವೇ ಆ ಕೆಲಸ ವನ್ನು ಮಾಡಿ ಮುಗಿಸಿತ್ತು (ಮೂರುರಾ. ೧೯೩). [← ಮರಾ. ಮನಸೋಕ್ತ]

**ಮನಸೋಲ್, ಮನಸೋಲು** (ಕ್ರಿ). ಮನಸ್ಸು ಮರುಳಾಗು.–ಪರವಶ ವಾಗು: ಸವಿನುಡಿಗೆ ಮನಸೋತು ವಿರಹದ ತವಕದಲಿ ಹೇವರಿಸಿ ನುಡಿದನು ನೃಪತಿ ಖಗಪತಿಗೆ (ನಳಚ. ೨–೨೭): ತನುಜಾತನೆಂಬುದನರಿಯದಲೆ ಮನಸೋತು ಕೂಡುವ ಪಶುಗಳು (ಐನೃ.ಕೃ. ೮೭–೪೪); ಸದ್ಗುಣಗಳಿಗೆ ಮನಸೋತು ಆಕೆಯನ್ನು ವರಿಸಿದರು (ಕೃಮಹ. ೯). **ಮನಸೋಲು**: ರಾತ್ರಿಯ ಆಕಾಶದ ಸೊಬಗನ್ನು ನೋಡಿಯೂ ಅದಕ್ಕೆ ಮನಸೋಲದಿರು ವವರು ಯಾರೂ ಇರಲಾರರು (ನಕ್ಷತ್ರ. ೨): ಪಂಚೇಂದ್ರಿಯಗಳ ವೃತ್ತಿಗೆ, ಸ್ನೇಹ ವಿಶ್ವಾಸಗಳಿಗೆ ಅವರು ಮನಸೋಲುವರು (ಸಾಪಿಜೀ. ೧೦).

[ಮನ + ಸೋಲ್]

**ಮನಸೋಲು** ‘ಮನಸೋಲ್’ ನೋ.

**ಮನಸ್ಕರಿಸು** (ಕ್ರಿ). ೧. ಅಂಗೀಕರಿಸು; ಮನಸ್ಸಿಗೆ ತಂದುಕೊಳ್ಳು: ಆ ಮಾತನ್ನು ಮನಸ್ಕರಿಸಿ ರಾಯನು ಶೀಮೆಯ ಪ್ರಜೆಗಳಿಗೆ ಅನ್ಯಾಯ ಅಪದ್ಧಾಳ ಮಾಡದೆ ನ್ಯಾಯವಾಗಿ ರಾಜ್ಯವಾಳುತ್ತಿದ್ದನು (ಕಣಾಮ. IV, ೧೨೦). ೨. ಬಯಸು; ಅಪೇಕ್ಷಿಸು: ಹೊತ್ತುಹೊತ್ತಿಗೆ ಅವರ ಕೊಂಡಾಡುತ ಹತ್ತುವರಿಗಿಂತಲೂ ಅಧಿಕಮನಸ್ಕರಿಸುವೆನು ಚಿತ್ತವಿಸ ಪಿತ ನಿನ್ನ ಸ್ತೋತ್ರ ಪಠಿಸದಲಿ (ಎವಾಕ್ಕ. ೦೦೪–೨).

[ಮನಸ್ಕರಣ + –ಇಸು]

**ಮನಸ್ಕಾರ** (ನಾ). ಅಂತರಂಗದ ಇಚ್ಛೆ: “ಮನಸ್ಕಾರಃ, ಚಿತ್ತಾಭೋಗಃ– ಮನಸ್ಸಿನ ವಿಶಾಲತೆ, ಅಂದರೆ ಇಚ್ಛೆಯ ಹೆಸರು” (ಸಿದ್ಧಾಂತ. ೪೪). [ಸಂ.]

**ಮನಸ್ಖಲನ** (ನಾ). ಮನಸ್ಸಿನ ಉತ್ಸಾಹ ಕುಗ್ಗುವುದು: ಆಸಕ್ತಿ ಕಡಮೆ ಯಾಗುವುದು: ಚಕ್ರಿ . . . ಮನಸ್ಖಲನವಾಗಿ ವಿಸ್ಮಯಂಬಟ್ಟು (ಆದಿಪು. ೧೪–೩೭). [ಸಂ. ಮನಃಸ್ಖಲನ]

**ಮನಸ್ತಾಪ** (ನಾ). ೧. ಮನಸ್ಸಿನ ತಳಮಳ; ವ್ಯಥೆ: ಆಗದವರ ವ್ಯವಹಾರದಲ್ಲಿಯೂ ಸಂಪರ್ಕದಲ್ಲಿಯೂ ಹೆಣ್ಣಿಗೆ ಮನಸ್ತಾಪವಾಗುವ ದುಂಟು (ಕನ್ನಡಿ. ೨೦೦). ೨. ದ್ವೇಷ; ಹಗೆತನ: ಕೃಷ್ಣೆಗೆ ಮಿಗೆ ದೊರೆ ಕೊಳಿಸದೆ ಕೋಪಮುಮಂ ಮನಸ್ತಾಪಮುಮಂ (ಗದಾಯು. ೧–೩೯): ಮೂರು ತಲೆಗಳ ಹಿಂದೆ ಆದೇನೋ ಮನಸ್ತಾಪ ಬಂದಿತ್ತಂತೆ (ಹಸುಹೊ. ೩೩೩). ೩. ವಿರಹದಿಂದಾದ ಬೇನೆ.–ನೋವು: ಮನ್ಮಥಶಿಖಿಜ್ವಾಲಾಳಿ ತಪ್ತೀಜಿ ಬೇಯದೆ ಕಾಯ್ದೋಡಿದ ಜೋಳದಂತಲರ್ದೊಡಾ ಕಂಪುಂ ಮನಸ್ತಾಪಮುಂ ಪುದಿದೆತ್ತಂ ಬರೆ ಸಂದ್ ಪೊದಟ್ಟು (ಕಾವ್ಯಸಾ. ೫೮೯ ಕಾದ್ರ೪). ೪. ವಿರಸ; ವೈಮನಸ್ಯ: ನೀವು ಹೀಗೆ ಮಾಡಿದರೆ ನಮ್ಮಿಬ್ಬರಿಗೆ ಮನಸ್ತಾಪ ವಿದೆಯೆಂದು ಯಾರೂ ನಂಬುವುದಿಲ್ಲ (ಅಯೋಗ. ೨೫); ಒಂದೆಡೆಯಲ್ಲಿದ್ದರೆ ಮನಸ್ತಾಪಗಳು ಹೆಚ್ಚುಬಹುದೆಂದು ಪ್ರಭುಗಳು ಬಿಡೆಬಿಟ್ಟು ಕಲಿಯು ವಾಣಗೂ . . . ಆಧಿಪತ್ಯವನ್ನು ಕೊಟ್ಟು ಅವರುಗಳನ್ನು ಅಲ್ಲಲ್ಲಿ ಇರಿಸಿದರು (ಶಾಂಕಲಾ. ೧೨೫). [ಸಂ.]

**ಮನಸ್ಥಿತಿ** (ನಾ). ಅಂತರಂಗದ ಅವಸ್ಥೆ: ಮನಸ್ಸಿನ ಸ್ಥಿತಿ: ಬಯಸಿದ್ದು ದೊರಕದೆ ಅವರ ಮನಸ್ಥಿತಿ ಕೆಟ್ಟಿದೆ (ರೂಢಿ). [ಸಂ. ಮನಃಸ್ಥಿತಿ]

**ಮನಸ್ಥೈರ್ಯ** (ನಾ). ಮನಸ್ಸಿನ ದೃಢತೆ.–ಕೆಚ್ಚು: ವಾತ ಮಾಡುವಾಗ ಮನಸ್ಥೈರ್ಯವಿಲ್ಲದೆ ನಡುಗುವುದು (ಶಿಕ್ಷಣ. ೬೭೨).

[ಸಂ. ಮನಃಸ್ಥೈರ್ಯ]

**ಮನಸ್ವಿ₁** (ನಾ). ೧. ಸ್ವಾಭಿಮಾನಿ; ನಿರ್ಧಾರವುಳ್ಳ ವ್ಯಕ್ತಿ: ಆನತ ರಿಪುನಿಕರನಂ ಮನಸ್ವಿಯುಮಂತಾ ಮಾನಸರನಾರುಮಂ ಮನಳೇನುಂ ಮುಟ್ಟಲ್ಲದಂತು ಬಗೆವುದು ದೋಷಂ (ಕರಾ. ೩–೦೭೨). ೨. ಬುದ್ಧಿವಂತ; ವಿವೇಕಿ. [ಸಂ. ಮನಸ್ವಿನ್]

**ಮನಸ್ವಿ₂** (ಅ). ಮನಸ್ಸಿಗೆ ಬಂದಂತೆ: ನಿರಾತಂಕವಾಗಿ: ಸ್ವೇಚ್ಛೆ ಯಾಗಿ: ಓನೆ ನಂಬರ್ ಹುಡುಗನನ್ನು ಮನಸ್ವಿ ಹೊಡೆದಳು (ಕಸರು. ೯); ಊರ ಹಿರಿಯರನ್ನು ಮನಸ್ವಿ ಬೈದು ತಮಗಾದ ತಾಪವನ್ನು ವ್ಯಕ್ತ ಪಡಿಸಿದರು (ಮಣಿದ. ೦೦೯). [< ಮನಸ್ವಿ₁]

**ಮನಸ್ವಿನಿ** (ನಾ). ೧. ಸ್ವಾಭಿಮಾನವುಳ್ಳವಳು. ೨. ಬುದ್ಧಿವಂತಳಾದ ಹೆಣ್ಣು; ಬುದ್ಧಿವಂತೆ. [ಸಂ. ಮನಸ್ವಿನೀ]

**ಮನಸ್ಸಂಭವ** (ನಾ). ಅಂತರಂಗದಲ್ಲಿ ಹುಟ್ಟಿದವನು; ಮನ್ಮಥ: ಅಂಭೋಜಾಸನನ ಮನಸ್ಸಂಭವನಾದಂ ಸಮಸ್ತಮುನಿಜನನುತಪಾದಾಂ ಭೋಜನನುಮ (ಕಇಅ. ೧–೨–೭; 1058). [ಸಂ.]

**ಮನಸ್ಸಾಕ್ಷಿ** (ನಾ). ಅಂತರಂಗದ ಒಪ್ಪಿಗೆ: ಮನಸ್ಸಿನ ಸಾಕ್ಷಿ: ಈ ಕಾಲದಲ್ಲಿ ಮನಸ್ಸಾಕ್ಷಿಯಿಂದ ದುಡಿಯುವ ಜನ ಅಪರೂಪ (ರೂಢಿ). [ಸಂ.]

**ಮನಸ್ಸು** (ನಾ). ೧. ಅಂತರಂಗ; ಬಗೆ; ಚಿತ್ತ: ಮನಸ್ಸು ಪಿತಜಿಂದ ಅಜಿವುದು ಅಂಗವ (ವಿಶ್ವಪಾ. ೪೭–೦೯೨): ಬುದ್ಧಿ, ಅಹಂಕಾರ, ಮನಸ್ಸು ಎಂಬ ಮೂರು ಅಂತಃಕರಣಗಳು (ಪ್ರಪಾ. ೬೦). ೨. ಜ್ಞಾನೇಂದ್ರಿಯ; ಅಂತಃಕರಣ. ೩. ಬುದ್ಧಿ; ವಿವೇಕ. ೪. ಕಲ್ಪನೆ; ಭಾವನೆ. ೫. ಅಪೇಕ್ಷೆ; ಆಸೆ: ನನಗೆ ನಿನ್ನ ಮೇಲೆ ಮನಸ್ಸಾಗಿದೆ (ವಕಪಾ. ೩೭). ೬. ಆಲೋಚನೆ. ೭. ಬುದ್ಧಿ; ಚಿಚ್ಛಕ್ತಿ. ೮. ಗಮನ; ಆಸಕ್ತಿ.

ಮನಸ್ಸಿಗೆ ಹಚ್ಚಿಕೊಳ್ಳು = ಯಾವುದಾದರೊಂದು ವಿಷಯವನ್ನು ಕುರಿತು ತೀವ್ರವಾಗಿ ಯೋಚಿಸು.– ಹೆಚ್ಚು ಚಿಂತೆಗೊಳ ಗಾಗು: ಅಂತಹ ಕ್ಲೇಶವನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ (ಕದಾಕು. ೯೩): ಅಣ್ಣ ಆ ಘಟನೆಯನ್ನು ಮನಸ್ಸಿಗೆ ಹಚ್ಚಿಕೊಂಡಂತೆ ತಾನು ಹಚ್ಚಿ ಕೊಂಡಿರಲಿಲ್ಲ (ವಾಕ್ಯ. ೩೦). ಮನಸ್ಸಿಗೆ ಹತ್ತಿಸಿಕೊಳ್ಳು = ಮನಸ್ಸಿಗೆ ಹಚ್ಚಿಕೊಳ್ಳು: ಸಂತೋಷ. ಮಾವಿ . . . ಒಂದನ್ನೂ ಮನಸ್ಸಿಗೆ ಹತ್ತಿಸಿ ಕೊಳ್ಳದೆ ಎಲ್ಲರೊಡನೆಯೂ ನಗುನಗುತ್ತ ಇರುತ್ತೇನೆ (ವತಪಾ. ೦೦). ಮನಸ್ಸಿಗೆ ಹಿಡಿ = ಇಷ್ಟವಾಗು: ಅವರ ಸ್ವಭಾವ ಸ್ವಲ್ಪವೂ ಮನಸ್ಸಿಗೆ ಹಿಡಿಯುವುದಿಲ್ಲ (ರೂಢಿ). ಮನಸ್ಸು ಕಲ್ಲುಮಾಡಿಕೊಳ್ಳು: ಮನಸ್ಸನ್ನು ದೃಢಗೊಳಿಸು; ಹಿಂಜರಿಯದಿರು: ಅವರು ಮನಸ್ಸನ್ನು ಕಲ್ಲುಮಾಡಿಕೊಂಡು ಆ ದುಃಖವನ್ನು ಸಹಿಸಿದರು (ರೂಢಿ). ಮನಸ್ಸು ಜೋಲುಬಿಡು = ಉತ್ಸಾಹಗುಂದು; ನಿರಾಸಕ್ತವಾಗು: ಶಾಂತಿಯು ಮನಸ್ಸು ಜೋಲುಬಿಟ್ಟು ಗಂಡನನ್ನು ಹಿಂತಿರುಗಿ ಕಳುಹಿಸಿ (ಬಂಕಿಮ. ೨೭೧). ಮನಸ್ಸುಮುರಿ = ಮನಸ್ಸು ಕೆಡು.– ಹಾಳಾಗು: ವಿಶ್ವಾಸ ವಿಲ್ಲದಂತಾಗು: ನನಗೆ ಅವನ ವಿಷಯದಲ್ಲಿ ಈಚೆಗೆ ಮನಸ್ಸು ಮುರಿದಿದೆ (ರೂಢಿ). ಮನಸ್ಸು ಹಗುರಾಗು = ಮನಸ್ಸಿನ ಭಾರವು ಕಡಮೆಯಾಗು; ನಿರಾತಂಕವಾಗು; ಸಮಾಧಾನವಾಗು: ಕೆಲವು ವೇಳೆಯ ನಂತರ ಮನಸ್ಸು ಹಗುರಾಗಲು ಶ್ಯಾಮನು ಹೇಳಿದನು (ಶ್ಯಾಮಾ. ೮). ಮನಸ್ಸು ಹಾಕು = ಆಸಕ್ತಿವಹಿಸು; ತೋರು: ಲಕ್ಷ್ಯವಿಡು: ಇವಳು ಸಂಸಾರದಲ್ಲಿ ಇಷ್ಟೇಕೆ ಮನಸ್ಸುಹಾಕುತ್ತಾಳೆಂದು ಟೀಕಿಸುವುದು. ಅವರು ಸಂಸಾರ ದಲ್ಲಿ ಮನಸ್ಸುಹಾಕುವುದಿಲ್ಲವೆಂದೇ ನನಗೆ ಆ ಪ್ರಸಂಗ ಬಂದಿದೆ (ಸ್ಮೃತಿ. ೦೨೫).

[ಸಂ. ಮನಸ್]

**ಮನಹತ್ತುಗೆ** (ನಾ). ವಿಶ್ವಾಸ : ಚಿತ್ತಜಾರಿಯು ಗೆಲಿದನಾಕ್ಷಣವಿತ್ತನಾಗ ತ್ರಿಶೂಲವನು ಮನಹತ್ತುಗೆಯಲಾ ಚಂದ್ರಹಾಸನನವರ ಮಹಿಮೆಗಳ (ಉತ್ತ.ಕ. ೯-೪೨). [ ಮನ + ಹತ್ತುಗೆ ( < ಪತ್ತುಗೆ ) ]

**ಮನಹೀನ** (ನಾ). ಮನಸ್ಸಿನ ಸ್ಥೈರ್ಯವಿಲ್ಲದವನು : ಚಂಚಲಚಿತ್ತ: ಅಳಿಮನದವಗೆ ಶಿವದೀಕ್ಷೆಯ ಕೊಟ್ಟರೆ . . . ಮನಹೀನನ ಮಿಸಲ ಕಾಯ್ದುರಿಸಿದಂತೆ (ಬಸವ. ೯೨); ಮನಹೀನನೈ ನೀನಕಟ ಸಂಜಯ (ಕುಮ್ಮ.ಗ. ೩-೩೦). [ಸಂ.]

**ಮನಹೇಡಿ** (ನಾ). =ಮನಹೀನ : ರಣಹೇಡಿ ಮನಹೇಡಿಗಳ ಕುಲದಲ್ಲಿ ಜನಿಸಿದನು (ಕೃಷ್ಣಾ.ಕು. ೫-೧೫). [ ಮನ + ಹೇಡಿ ( < ಪೇಡಿ$_1$ ) ]

**ಮನಾಯಿ** (ನಾ). ಅಡ್ಡಿ ; ಪ್ರತಿಬಂಧ : ಕಟ್ಟಿಗೆಗಳನ್ನು ಕಡಿಯಲಿಕ್ಕೆ ಮನಾಯಿ ಆಗಿದ್ದಲ್ಲಿ ಇವನ್ನು ಕಡಿಯಲಾಗದು (ಕಶಾಗಿ. ೫೦. ೦೩); ಮೇಣಾವನ್ನು ಕಾಣಬೇಕೆಂದರೆ ಅದಕ್ಕೂ ಮನಾಯಿ (ಸಂಸ್ಕೃ. ೦೫೦).

[ ← ಹಿಂ. ಮನಾಹೀ ; ಮರಾ. ಮನಾಈ ]

**ಮನಾರ್** ‘ಮಿನಾರು’ ನೋ.

**ಮನಿಯಾರ್ಡರ್** ‘ಮನಿಯಾರ್ಡರು’ ನೋ.

**ಮನಿಯಾರ್ಡರು, ಮನಿಯಾರ್ಡರ್** (ನಾ). ೧. ಒಬ್ಬರು ಮತ್ತೊಬ್ಬರಿಗೆ ಅಂಚೆಯ ಮೂಲಕ ಹಣ ಕಳುಹಿಸಲು ಅನುಕೂಲವಿರುವ ಅಂಚೆಇಲಾಖೆಯ ಚೆಕ್ಕು : ಅಡಿಕೆ ಬಿಟ್ಟು ೯ ಮಣವಿತ್ತೆಂದೂ ಅದರ ಹಣ ೧೪೪ ರೂಪಾಯಿಗಳನ್ನು ಕಳುಹಿಸಿದ್ದೇನೆಂತಲೂ ಮನಿಯಾರ್ಡರು ಕೂಪನ್ನಿನಲ್ಲಿ ಬರೆದು ಹಣವನ್ನು ಅವರಿಗೆ ಕಳಿಸಿಬಿಟ್ಟನು (ಅವತಂ. ೯೬). **ಮನಿಯಾರ್ಡರ್** : ೨. ಅಂಚೆಇಲಾಖೆಯ ಚೆಕ್ಕಿನ ಮೂಲಕ ಅಂಚೆಯಲ್ಲಿ ಒಬ್ಬರು ಮತ್ತೊಬ್ಬರಿಗೆ ಹಣ ಕಳುಹಿಸುವುದು : ಆವಾಗೇ ನಾವರೂ ಹಣ ಮನಿಯಾರ್ಡರ್ ಕಳಿಸಿದೆಯೋ ಏನೋ (ಮಹಾಗ. ೬೬) : ಶೀಘ್ರವೇ ಮನಿಯಾರ್ಡರ್‌ನಿಂದ ಹಣ ಕಳಿಸುತ್ತೇನೆ (ತ್ರಿಶಂಂ. ೪೮).

[ ← ಇಂ. Moneyorder ]

**ಮನೀಷಿ** (ನಾ). ೧. ತಿಳಿದವನು ; ಪ್ರಾಜ್ಞ ; ಪಂಡಿತ : ತಿಳಿಯದಿಹುದು ಮನೀಷಿಗಳ್ಪರ ಕುಲದ ಪಾರಂಪರ್ಯವಹ ನಡವಳಿ (ಎವೇಕ. ೫-೪೪) ; ಈತ ರಾಮಮೋಹನನಂತೆ ಮಹಾಮನೀಷಿಯೂ ಆಗಿರಲಿಲ್ಲ (ಶಾರದ. ೩೨೦); ಕ್ರಿಯಾವೇತ್ತನಾದವನು ಅಗ್ನಿಯಲ್ಲಿ ದೇವರನ್ನು ಕಂಡರೆ ಮನೀಷಿಯಾದವನು ಹೃದಯದಲ್ಲಿ ಕಾಣುತ್ತಾನೆ (ತಿಂಪಸ. ೦೦೯ ಅಡಿಟಿ). ೨. ಪೂಜ್ಯ. [ ಸಂ. ಮನೀಷಿನ್ ]

**ಮನೀಷೆ** (ನಾ). ೧. ಬುದ್ಧಿ ; ಅರಿವು : ಋಷಿಗಳು ಮನೀಷೆಯಿಂದ ಹೃದಯವನ್ನು ಹೊಕ್ಕು ಅಸತ್ತಿನಲ್ಲಿ ಸತ್ತಿನ ಮೂಲವನ್ನು ಕಂಡುಕೊಂಡರು (ಶಾರದ. ೨೬). ೨. ಆಸೆ : ಅಪೇಕ್ಷೆ : ಅವನನ್ನು ಈ ಕೈಗಳಿಂದ ಗುದ್ದಿ ಕೊಲ್ಲದ ಹೊರತು ನನ್ನ ಮನೀಷೆಯು ತೃಪ್ತಿಯಾಗಲಿಕ್ಕಿಲ್ಲ (ಅಂಬಿಕ. ೦೬೯) ; ಶಾವೇ ರಂಟೆ ಕುಂಟೆ ಎತ್ತು ಆಳು ಹೋಳು ಇಟ್ಟು ವಿಧಿಪೂರ್ವಕವಾಗಿ ಒಕ್ಕಲುತನ ಮಾಡಬೇಕೆಂದು ಅವರ ಮನೀಷೆ (ತ್ರಿವಶಿಕ್ತ. ೯೯). ೩. ಆಲೋಚನೆ ; ಉದ್ದೇಶ : ಅವಳ ಪರಿಹಾಸವನ್ನು . . . ತೊಡೆದುಹಾಕುವ ಮನೀಷೆಯಿಂದ ನಾನು ಉತ್ತರಿಸಿದೆನು (ಪೀವಂಶ. ೦೦೨). [ಸಂ. ಮನೀಷಾ]

**ಮನು** (ನಾ). ೧. ಮಂತ್ರ : "ಮನುಃ, ಮಂತ್ರವುಂ, ದೇವತಾಭೇದವುಂ" (ನಾಕಕ. ೨೦೨) ; ವಿಮಲಪಂಚಾಕ್ಷರೀಮನುವನೊರೆವುತೆ (ಶಬ್ದಾ. ೭-೧೦). ೨. ಮನುಷ್ಯಕುಲದ ಮೂಲಪುರುಷ ; ☞ ಮನುಸ್ಮೃತಿ ಎಂಬ ಪ್ರಸಿದ್ಧವಾದ ಧರ್ಮಶಾಸ್ತ್ರವನ್ನು ಬರೆದ ರಾಜ; ಸೂರ್ಯವಂಶದ ಮೂಲಪುರುಷ : ವೇದಗಳಿಗೆ ಓಂಕಾರವಿದ್ದಂತೆ ರಾಜರಿಗೆ ಮನು ಮೊದಲಿಗನು (ಕೂಂ). ೩. ಬ್ರಹ್ಮನ ಮಾನಸಪುತ್ರರಲ್ಲಿ ಒಬ್ಬ : ☞ ಸ್ವಾಯಂಭುವ, ಸ್ವಾರೋಚಿಷ, ಔತ್ತಮಿ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ರೌಚ್ಯದೇವಸಾವರ್ಣಿ ಮತ್ತು ಇಂದ್ರಸಾವರ್ಣಿ ಎಂಬಿವರು ಹದಿನಾಲ್ಕು ಮನುಗಳು. ಈ ಹೆಸರುಗಳಲ್ಲಿ ಕೆಲವು ಕಡೆ ವೈವಿಧ್ಯವು ಕಂಡುಬರುತ್ತದೆ : ವಿದ್ಯಾಧರರು ವಸುಗಳು ಮನುಗಳಾದಿತ್ಯರು ಭುಜಂಗಮರು . . . ಎಸೆದರು ರೋಮದ ಕುಳಿಯ ಜೌಕದಲಿ (ಕುಮ್ಮ.ಉ. ೯-೩೯). ೪. [ಗಣಿತ] ಹದಿನಾಲ್ಕು ಎಂಬ ಸಂಖ್ಯೆಯ ಸಂಕೇತ : "ಮನು ಭುವನ ಹದಿನಾಲ್ಕು" (ಶುಂಗರಾ. ೦೦೪-೯).

**ಮನುಜಾಗರನ್** = ಮನುಧರ್ಮವನ್ನು ಎಚ್ಚರದಿಂದ ಪಾಲಿಸುವವನು : ಒಂದು ಬಿರುದು : ಊಸರ ವೈರಿಕನ್ ಏಡಿಪೆಟ್ಟರಾಯಿಳನ್ನು ಗೋಳನ್ನ ಮನುಜಾಗರನ್ ಅಣ್ಣನ ವಶಿಗನ್ (ಪ್ಮಆಂ. ೦೯೩೯, ೨೨-೧೫ : 750). [ಸಂ.]

**ಮನುಕಮಯ್ಯ** (ನಾ). ಒಬ್ಬಾತನ ಹೆಸರು : ಈ ಧರ್ಮ್ಮಂ ಇರುಗಪ್ಪಯ್ಯಗೊನ್ನು ಮನುಕಮಯ್ಯಂಗಂ ಅಪ್ಪಯ್ಯಗನ್ನೊನ್ನು ಭಾಗಂ ಸಲ್ವುದು (ಎಕ. X. ಕೋಲಾರ. ೫೬-೦೫; 925). [ಮನುಕ$_?$ + ಅಮ (< ಅಮ್ಮ$_1$) + ಅಯ್ಯ$_1$]

**ಮನುಕುಲ** (ನಾ). ಮನುವಿನ ವಂಶ ; ಮನುಷ್ಯಜಾತಿ : ಮನುಕುಲಮಿಂದು ಪುಣ್ಯಮಯಮಾದುದು (ವರ್ಧಪು. ೯-೬) : ದೂರದೂರ ಬೇರು ಚಾಚಿ ಟೊಂಗೆ ಚಿಸಿಲು ಮನುಕುಲ (ಶಿಂಮು. ೨೫-೦೦). [ಸಂ.]

**ಮನುಚರಿತ** (ನಾ). ೧. ಮನುವಿನ ನಡವಳಿಕೆಯಂತಹ ಶ್ರೇಷ್ಠವಾದ ನಡವಳಿಕೆ : ಮನುಚರಿತಕ್ಕೆ ವೃತ್ತಿ ನೃಪನೀತಿಗೆ ಪಂಚಿಕೆ . . . ಪರಮಾರ್ಥ ವಿವೇಕದ ಭಾಗ್ಯಮೆಂದೊಡಾ ಜನಪತಿರತ್ನಶೇಖರನ ರಾಜಗುಣಂ ಬುಧಸೇವ್ಯಂ (ಅಸಂಪು. ೩-೨೦). ೨. ಮನುವಿನಂತೆ ಶ್ರೇಷ್ಠವಾದ ನಡವಳಿಕೆಯುಳ್ಳವನು.- ಶುದ್ಧವಾದ ಚಾರಿತ್ರ್ಯವುಳ್ಳವನು : ಅನಿಮಿತ್ತನಾಂಧವಂ ಮನುಚರಿತಂ ಧವಳಯಶೋನಿಧಿಯೆನೆ ಪೆಂಪುವಡೆದು (ತಿಇಇ. V, ೮೪೫-೨೩; 1066). [ಸಂ.]

**ಮನುಜ** (ನಾ). ಮನುಷ್ಯ ; ಮಾನವ : "ಮನುಷ್ಯಃ . . . ಮನುಜಃ . . . ಎಟ್-ಈ ೧೨ ಮಾನಸರ್" (ಪರಾಯು. ೫೫-೦೬೩) : ಮನುಜಂಗೆ ಕೌತುಕಾವಹಮಿನಿತೊಂದಾಶ್ಚರ್ಯಂ (ಕಾದಂಪೂ. ೬೯೬) ; ಮರುಳಾಟವೇಕೋ ಮನುಜ ಕೂಗಾಟವೇಕೋ (ಶ್ರೀರಂದ. ೦-೩೦ ಕಲ್ಲಿದ) ; ಮನುಜರೊಲ್ಮೆಯಃ ಸವಿಯನೊಂದಿನಿತುಮಂ ಕಾಣದೆ (ಶ್ರೀರಾಮಾ. ೨೨-೫೯೫).

**ಮನುಜಮಾಂಧಾತ** = ಮಾನವಶ್ರೇಷ್ಠ ; ಒಂದು ಬಿರುದು : ಮಹಾಮಂಡಲೇಶ್ವರನುದ್ವಾರವಮಹೇಶ್ವರಂ . . . ಸಂಗ್ರಾಮಗರುಡಂ ಮನುಜಮಾನ್ಧಾತಂ (ಎಕ. VII. ಶಿಕಾರಿ. ೦೩೩-೦೨; 1068) : ಸಂಗ್ರಾಮಗರುಡಂ ಮನುಜಮಾನ್ಧಾತಂ ಕೀರ್ತಿವಿಖ್ಯಾತಂ . . . ಪುರಿಗೆಱೆ ಮಾನೂಜಿಂ . . . ಸುಖದಿನಾಳುತ್ತಮಿರೆ (ತಿಇಇ. XX. ೯೩-೮; 1074). [ಸಂ.]

**ಮನುಜಕಂಠೀರವ** (ನಾ). ಮನುಷ್ಯರಲ್ಲಿ ಸಿಂಹದಂತಿರುವವನು ; ಪರಾಕ್ರಮಿ : ಇವನ ಬಲ್ಲೈ ಭೀಮನೋ ಭೈರವನೊ ಭರ್ಗನೊ ಮನುಜಕಂಠೀರವನೊ ಕಾಲಾಂತಕನೊ ಕೋಳಾಹಳವಿದೇನು (ಕುಮ್ಮ.ಕ. ೦೨-೦೪). [ಸಂ.]

**ಮನುಜಗತಿ** (ನಾ). [ಜೈನ] ದೇವ, ಮಾನವ, ತಿರ್ಯಕ್ ಮತ್ತು ನಾರಕಗಳೆಂಬ ಚತುರ್ಗತಿಗಳಲ್ಲಿ ಒಂದು : ಧರ್ಮಾಧರ್ಮಕ್ರಿಯೆಗಳ ನೆಮ್ಮಂ ಜೀವಕ್ಕೆ ಮನುಜಗತಿಯೊಳೆ ಮಾಬ್ಕುಂ (ಅದಿಪು. ೫-೭೮) ; ಮನುಜಗತಿ ಗತಿಗಳೊಳ್ ಪಾವನಂ (ಶಂಖವಾ. ೦೩-೪೯). [ಸಂ.]

**ಮನುಜತನ** (ನಾ). ಮನುಷ್ಯತ್ವ : ರೋಮರೋಮದೊಳಿಡಿದಜಾಂಡ ಕೋಟಿಗಳಿಹ ಮಹಾಮಹಿಮೆ ತಾನೆತ್ತ ನರನ ಸಂಗಡ ತಿರುಗುವೀ ಮನುಜತನವೆತ್ತ (ಕೃಬಿಆ. ೩೩-೫). [ಮನುಜ + — ತನ]

**ಮನುಜತೆ** (ನಾ). = ಮನುಜತನ : ಅವನ ಮನುಜತೆಯು ತನು ನೋಟ್ಟವರೊಳ್ ಮಾಣಸಿದುದಾವಮೆಮೆಯಿಕ್ಕುವುದಂ (ಚಂದ್ರಪು. ೪-೯೩). [ಸಂ. ಮನುಜತಾ]

**ಮನುಜತ್ವ** (ನಾ). = ಮನುಜತನ : ತಗುಳ್ದು ನೆಗಟದೆ ತಪದೊಳ್ ಮನುಜತ್ವಮಫಲಮಾಯ್ತು (ಕವಿರಾ. ೩-೦೦೦). [ಸಂ.]

**ಮನುಜಪತಿ** (ನಾ). ಮನುಷ್ಯರ ಒಡೆಯ : ಅರಸು ; ರಾಜ : ಶಿವಭಕ್ತಿಪ್ರಯುಕ್ತನು ಮನುಜಪತಿ ವಿದ್ಯಾಯುಧಾನ್ವಿತ ಘನಭುಜಾಯುತ ನಾಗುತ (ಬಸವು. ೫೦-೫೨). [ಸಂ.]

**ಮನುಜಾತ** (ನಾ). = ಮನುಜ : ಉದ್ವೇಗತ್ವಮುಂ ಕೂಡುಗುಂ ಮನುಜಾ ತಂಗವರೋಹಿಯಂತ್ತು ವರೆಯೊಳ್ ಪದ್ಮಪ್ರಿಯಪುತ್ರನಾ (ಶಾಕಾ. ೯-೩೦). [ಸಂ.]

**ಮನುಜಾಧೀಶ** (ನಾ). = ಮನುಜಪತಿ : ಮನುಜಾಧೀಶಸಮೂಹಸಂಚ ರಣದಿಂ . . . ಅಲಯಮಾಯ್ತುದೊಂದು ಪಿರಿದಂ ಚೆಲ್ವಿಂಗೆ ರಾಜಾಲಯಂ (ಅಜಿತ. ೯-೩೬). [ಸಂ.]

**ಮನುಜೆ** (ನಾ). ಮಾನವಸ್ತ್ರೀ : ಬೆಸಗೊಳಲು ಮನುಜೆಯಲ್ಲಂ ಮನುಜೆಯೂ ನರ್ಥವಿಷಯದಾಪೇಕ್ಷೆಯಿಂ ಕೊಂಡೊಯ್ದು ಕೊಂದೆನು (ಪತಿಶಾ. ೦೩-೬). [ಸಂ. ಮನುಜಾ]

**ಮನುಜೇಂದ್ರ** (ನಾ). = ಮನುಜಪತಿ : ಮನುಜೇಂದ್ರಕೋಟಿಕೋಟೀಗಣ ಕೋಟಿಗಾ ಸ್ತವಿತಸಾಗರನಾಗರವಾಗದಿರ್ಪಮೇ (ಶಾಂತಿಪು. ೦-೬೮). [ಸಂ.]

**ಮನುಪೀಳಿಗೆ** (ನಾ). = ಮನುಕುಲ: ಜಜಿವುದೇ ಮನುಪೀಳಿಗೆಯು ಸುರಗಿರಿ ದಿಳೀಪಾಸ್ವಯದ ಸುರತರು ಮಾಜಿದುದೇ (ಕೊರಾ. ೩-೦೨-೩೩). [ಮನು + ಪೀಳಿಗೆ]

**ಮನುಮಥ**₁, ಮನುಮಥ (ನಾ). ಕಾಮ; ಮದನ; ಮನ್ಮಥ : ಬಿರಯು ಗಳಂ ಬಿರ್ಚಿಸಲಿದೆ ಪರಮಾಸ್ತ್ರ ಮನುಮಾತಂಗೆನಿಪ್ಪ ವಸಂತಂ ಬರಲೊಡನೆ (ಕಾದಂಬ. ೬೮೦). **ಮನುಮಥ** : ಅಳುಕಿದರು ಮನುಮಥನ ಗರುಡಿಯು ಬಲುದುಗಾಜರು (ಉತ್ತರಾ. ೦-೨೬) : ವಿಗಡ ನಳಕೂಬರ ಜಯಂತ ವಸಂತ ಮನುಮಥ ಚಾರುಚಂದ್ರಮರ ಮರುಳುಮಾಡುವ . . . ವನಿತೆಯರೊಪ್ಪಿ ದರು (ಕೊರಾ. ೧-೫-೨೬). [ <ಸಂ. ಮನ್ಮಥ ]

**ಮನುಮತ**₂ (ನಾ). ಮನುವಿನಿಂದ ರಚಿತವಾದ ಧರ್ಮಶಾಸ್ತ್ರ : ಮನು ಮತಮುಂ ವೇದಾಂತಾದ್ಯನೇಕಧರ್ಮಾಗಮಂಗಳಂ ಕಲ್ತು (ಮಹಾ. ೮-೨೫). [ಸಂ.]

**ಮನುಮಥ** 'ಮನುಮತ₁' ನೋ.

**ಮನುಮಥಮಥನ** (ನಾ). ಕಾಮನನ್ನು ನಾಶಮಾಡಿದವನು : ಶಿವ : ಪ್ರಥಿತಪರುಷಿತಚಿತ್ತರಹ ಮನುಮಥಮಥನಪದಭಕ್ತವಿತತಿಗೆ ಪೃಥುಳ ಭಕ್ತಿಯೊಳಾಗ ವಂದಿಸಿ (ಬಸವು. ೦೮-೦೦೬). [ಮನುಮಥ ( <ಮನುಮತ₁) + ಮಥನ]

**ಮನುಮಾರ್ಗ** (ನಾ). ೧. ಮನುವು ಹಾಕಿ ಕೊಟ್ಟಿರುವ ದಾರಿ : ಮನು ಧರ್ಮಶಾಸ್ತ್ರದಲ್ಲಿ ಹೇಳಿರುವ ಆಚಾರ : ಮನುಮಾರ್ಗದೋಳೇಕಾ ವರದಿನದೊಳ್ನಯಂಗೆ ವಿಪ್ರಜನ ಸಮುಚಿತವಾದೆನ್ನಿನೆ ಸಚಿವಂ ವೈರಂಪಾ ಯನನೆಂಬೀ ಪೆಸರಿಟ್ಟಂ (ಶಾಂತಿಪು. ೪೩೨). ೨. ಮನುವಿನ ಹಾದಿಯಲ್ಲಿ ನಡೆಯುವವನು: ಮನುಧರ್ಮಶಾಸ್ತ್ರವನ್ನು ಅನುಸರಿಸುವವನು : ಭೂವಿನುತಯಶಂ ದ್ವಿಜವಂದ್ಯಂ ಮನುಮಾರ್ಗಂ ಮಲ್ಲಿಮಯ್ಯನಗ್ರತನೂಜಂ (ಸಂಪ್ರಾಸಂ. ೧-೦೯). [ಸಂ.]

**ಮನುಮಾರ್ಗನಿಪುಣ** (ನಾ). ಮನುಧರ್ಮಶಾಸ್ತ್ರದ ತಿಳಿವಳಿಕೆಯಲ್ಲಿ ಕೋವಿದನಾದವನು : ಮನುಮಾರ್ಗನಿಪುಣನೆನಿಸಿದ ನಿನಗಾವಿಶಾ ರಾಜ ಮಾರ್ಗಮಂ ತೋಜಿ ಜಗಜ್ಜನಕೆ ನಗೆಯಲ್ತೆ (ಅಜಿತ. ೬-೦೨). [ಸಂ.]

**ಮನುವಂಶ** (ನಾ). = ಮನುಕುಲ : ನೀನೊರ್ಬನೈ ಮನುವಂಶಕ್ಕೆ ಲಲಾಮ ಸಪ್ಪನುಜನೈ (ಅಜಿತ. ೦೪-೦೩೨). [ಸಂ.]

**ಮನುವಂಶಧ್ವಜ** (ನಾ). ಮನುಷ್ಯಕುಲದಲ್ಲಿ ಶ್ರೇಷ್ಠನಾದವನು : ಮತ್ತೊರ್ವಗುತ್ತುಂಗಸೌಧೋತ್ಸಂಗದೊಳ್ ನಿಂದು ಮನುವಂಶಧ್ವಜನಂ ಮಕರಧ್ವಜನೆಂದು ಬಗೆದು (ಅಜಿತ. ೦೦-೦೬ ವ). [ಸಂ.]

**ಮನುವೆ** 'ಮನವಿ' ನೋ.

**ಮನುಷ್ಯ** (ನಾ). = ಮನುಜ : "ಮನುಷ್ಯಾಃ, ಮಾನುಷಾಃ . . . ನರಾಃ — ಇವು ಮನುಷ್ಯನ ಹೆಸರು" (ಶಾಸಾ. ೦೦೬); ಮತಕ್ಕೆ ಬಂದಭ್ಯಾಗತರಲ್ಲಿ ನಡವ ಮನುಷ್ಯರಾಹಾರದಾಸಕ್ಕ . . . ಜೋಳ ಕೊಳಗವೊಂದು (ಎಇ. XX. ೦೦೬-೫೦ ; 1167); ಮುಕ್ತಿಯೋಗ್ಯರಲ್ಲಿ ದೇವ- ಮನುಷ್ಯ- ಪಿತೃ- ಚಕ್ರವರ್ತಿ, ಮನುಷ್ಯೋತ್ತಮ ಎಂದು ಐದು ವಿಧಗಳು (ಹಿಂದಶಾ. ೨೮೬). [ಸಂ.]

**ಮನುಷ್ಯಗತಿ** (ನಾ). = ಮನುಜಗತಿ : ಮನುಷ್ಯಾಯುಷ್ಯ ಮನುಷ್ಯಗತಿ ತತ್ಪ್ರಾಯೋಗ್ಯಾನುಪೂರ್ವಿ . . . ಉಚ್ಚೈರ್ಗೋತ್ರ ತೀರ್ಥಕರನಾಮಂ ಗಳೆಂಬ ಪದಿಮೂಜು ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಅಜಿತ. ೦೬-೪೪ ವ). [ಸಂ.]

**ಮನುಷ್ಯಜಾತಿ** (ನಾ). = ಮನುಕುಲ : ಬೇಜುಂಟೆ ಮನುಷ್ಯಜಾತಿ ತಾನೊಂದೆ ವಲಂ (ಆದಿಪು. ೦೫-೦೪). [ಸಂ.]

**ಮನುಷ್ಯತ್ವ** (ನಾ). ಮನುಷ್ಯನ ಧರ್ಮ ; ಮಾನವಸ್ವಭಾವ : ಮನುಷ್ಯ ನಿಗೆ ಮನುಷ್ಯತ್ವ ಬಂದುದು ಬುದ್ಧಿಯ ಬೆಂಬಲದಿಂದ (ಗ್ರಾಹಾ. ೦). [ಸಂ.]

**ಮನುಷ್ಯಧರ್ಮ**₁ (ನಾ). ೧. ಮನುಷ್ಯನ ನಡವಳಿಕೆಯುಳ್ಳವನು. ೨. ಕುಬೇರ. ೧ - ೨ : ಮನುಷ್ಯಧರ್ಮನಾಗಿಯುಂ ಧನಾಧ್ಯಕ್ಷನಲ್ಲು ಕಾಮಾಧ್ವಂಸಿಯಾಗಿಯುಂ ತ್ರಿಲೋಚನನಲ್ಲು (ಜಗಪಿ. ೮-೦೦ ವ). [ ಸಂ. ಮನುಷ್ಯಧರ್ಮನ್ ]

**ಮನುಷ್ಯಧರ್ಮ**₂ (ನಾ). ಮನುಷ್ಯನು ಅನುಸರಿಸಬೇಕಾದ ಧರ್ಮ : ನನ್ನ ಪುತ್ರಧರ್ಮ, ಮನುಷ್ಯಧರ್ಮಗಳೆರಡೂ ಸಾಧನೆಯಾಗುವಂತೆ ಮಾಡುವ ದಾರಿ ಯಾವುದಾದರೂ ಇದೆಯೇ ? (ಕಿಶಂಶಾ. ೦೩೬). [ಸಂ.]

**ಮನುಷ್ಯಪ್ರಯತ್ನ** (ನಾ). ಮನುಷ್ಯನ ಶ್ರಮ,– ಯತ್ನ : ಮನುಷ್ಯ ಪ್ರಯತ್ನ ಭಗವಂತನ ಕೃಪೆ ಇವನ್ನು ಮಿೀರಿ ಗ್ರಹಗಳ ಗತಿ ಜೀವನವನ್ನು ನಡೆಸುವುದಿಲ್ಲ (ಶಳಶಾ. ೦೪೦) ; ಮನುಷ್ಯ ಪ್ರಯತ್ನದಿಂದ ಯಾವುದೂ ಐದಲಾಗಲ್ಲ (ಶ್ರಕೃ. ೪೦). 'ಪುರುಷಪ್ರಯತ್ನ' ಪರಾ. [ಸಂ.]

**ಮನುಷ್ಯಯಜ್ಞ** (ನಾ). ಪಂಚಯಜ್ಞಗಳಲ್ಲಿ ಒಂದು : ಅತಿಥಿ ಸತ್ಕಾರ: ವೇದಾಧ್ಯಯನರೂಪ ಬ್ರಹ್ಮಯಜ್ಞ ಅಗ್ನಿಹೋತ್ರರೂಪ ದೇವಯಜ್ಞ ಅತಿಥಿ ಪೂಜಾರೂಪ ಮನುಷ್ಯಯಜ್ಞ ಪಿತೃತರ್ಪಣರೂಪ ಪಿತೃಯಜ್ಞ ಭೂತಬಲಿ ರೂಪ ಭೂತಯಜ್ಞ ಎಂಬೀ ಪಂಚಮಹಾಯಜ್ಞಂಗಳಂ ನಡೆಸುತ್ತ (ವಿವೇಕ. ೦೨೦). [ಸಂ.]

**ಮನುಷ್ಯಲೋಕ** (ನಾ). ಮಾನವರು ವಾಸಿಸುವ ಲೋಕ : ಮರ್ತ್ಯ ಲೋಕ : ಅದು ದಿವಿಜೇಂದ್ರಲೋಕಮಿದು ನುನ್ಮಥರೂಪ ಮನುಷ್ಯಲೋಕಂ (ಅಜಿತ. ೪-೦೯). [ಸಂ.]

**ಮನುಷ್ಯವಾಹ್ಯ** (ಗು). ೧. ಮನುಷ್ಯರಿಂದ ಹೊರಲ್ಪಡುವ; ಮಾನವರು ಹೊರುವಂಥ. (ನಾ). ೨. ಮನುಷ್ಯರು ಹೊರುವಂಥದು : ಮನುಷ್ಯ ವಾಹ್ಯಮಪ್ಪ ಚತುರಂತಯಾನವನೇಜಿಸಿ (ಶಾಂತಿಪು. ೪-೪೦ ವ). [ಸಂ.]

**ಮನುಸ್ಮೃತಿ** (ನಾ). ಮಾನವ ವ್ಯವಹಾರವನ್ನು ಕುರಿತ ಧರ್ಮಗ್ರಂಥ : ಕೃತಯುಗದಲ್ಲಿ ಮನುಸ್ಮೃತಿಧರ್ಮವೇ ಮುಖ್ಯವಾಗಿಹುದು (ವಿವೇಕ. ೬);

ಸ್ಮೃತಿಗಳಲ್ಲಿ ಪ್ರಾಚೀನವಾದ ಮನುಸ್ಮೃತಿಯು ಕ್ರಿ.ಪೂ. ೩೦೦ ರಿಂದ ಕ್ರಿ.ಶ. ೨೦೦ ಮಧ್ಯದಲ್ಲಿ ರಚಿತವಾಗಿರಬೇಕೆಂದು . . . ನಿರ್ಧರಿಸಿದ್ದಾರೆ(ಭಾರಿದ. ೫೦).

[ಸಂ.]

**ಮನೂಕ** (ನಾ). ಒಣಗಿದ ಕಪ್ಪುದ್ರಾಕ್ಷಿ : ಗೋಡಂಬಿ, ಮನೂಕ . . . ಹತ್ತೆಂಟು ಹಣ್ಣುಗಳ ಶೀಕರಣೆಯನ್ನು ತಿನ್ನುವಾಗ ವಸಂತರಾಯನ ಆವರ ವಿನಯಗಳು **ಉಕ್ಕೇರಿದವು** (ಗಂಪಶಾಯ. ೨೦೩).

[←**ಅರ.** ಮುನಕ್ಕಾ : **ಮರಾ.** ಮನುಕಾ]

**ಮನೆ** (ನಾ). ೧. ವಾಸಿಸುವ ಜಾಗ : ಆಶ್ರಯಸ್ಥಾನ : ಬೀಡು : ರಾಜಪುರುಷರ್ಮನೆಗಳೊಳ್ ಪೀಡಿಲ್ಲಾದುದು (ಎಕ. XIV. ೧೯೦-೬; ೭೨೦): ಮನೆಯಿಂದಂ ಮನೆಗೆಂದು ಪೋಪ ತೆಱದಿಂ ಪೋಣ್ ನೂಕಿ ಪಾಸಂಬ ಮಾತಿನ ಪಾಂಗಿಂದೆ (ಅದಿಪು. ೫-೬೦) : ಮನೆ ನೋಡಾ ಬಡವರು ಮನ ನೋಡಾ ಘನ (ಬಸವ. ೩೨೫); ನಾನಾವಿದ್ಯೆಗಳ ಗಟ್ಟಿವಾಳರ ಮನೆಗಳೊಪ್ಪಿದುವು (ಸೋಹಚ. ೩-೩೦). ೨. ವಂಶ ; ಮನೆತನ : ಅಂದು ದೇವಕಿ ಪಡೆಯೆ ಕೃಷ್ಣನು ನಂದಗೋಪಿಯ ಮನೆಯ ಬೆಳವುತ ಬಂದ ಪೂತನಿ ಮುಖ್ಯರನು ಬಾಲ್ಯದಲಿ ಮರ್ದಿಸಿದ (ಜಾಕ್ಷಾ. ೨೦ ಪ್ರಾ). ೩. ಸಂಸಾರ: 'ಮನೆಖರ್ಚು' ಪರಾ. ೪. ಪಗಡೆ. ಚೌಕಾಬಾರ. ಕುಂಟೆಬಿಲ್ಲೆ ಮೊದಲಾದ ಆಟಗಳ ಚೌಕಾಕಾರದ ಸ್ಥಳ : ದಾಗ ಬಿದ್ದು ಎರಡು ಮನೆಗಳನ್ನೆ ನನ್ನ ಕಾಯಿ ದಾಟಿದರೆ ನಾನೇ ಗೆಲ್ಲೋದು (ರೂಢ). ೫. [ಸಂಗೀತ] ಹಾರ್ಮೋನಿಯಂ, ಪಿಯಾನೋ ಮೊದಲಾದ ವಾದ್ಯಗಳಲ್ಲಿರುವ. ಬೆರಳಿನಿಂದ ಒತ್ತಿದರೆ ಸ್ವರವನ್ನು ಹೊಮ್ಮಿಸುವ ಸ್ಥಾನ.

**ಮನೆ ತೊಳೆ**=ಮನೆಯನ್ನು ಹಾಳುಮಾಡು.—ನಾಶಮಾಡು: ಅಳಿಯ ಮನೆ ತೊಳೆದು (ಗಾದೆ). **ಮನೆ ತೊಳೆದುಕೊಳ್ಳು**=ಮನೆಯನ್ನು ಹಾಳುಮಾಡಿಕೊಳ್ಳು.— ನಾಶಮಾಡಿಕೊಳ್ಳು : ನಾನು ಮನೆತೊಳೆದುಕೊಳ್ಳಲೂ ಸಿದ್ಧ(ಶಾಕುಂತ. ೬೭). **ಮನೆ ಪಾಲಾಗು**=ಕುಟುಂಬದ ಅಣ್ಣ ತಮ್ಮಂದಿರು ಬೇರೆಯಾಗು ; ಅವಿಭಕ್ತಕುಟುಂಬವು ವಿಭಕ್ತವಾಗು : ದಾನಮ್ಮ ಹೆಗ್ಗಡತಿಯವರು . . . ಮನೆಪಾಲಾಗುವುದನ್ನೂ ಮುಕುಂದಯ್ಯ ಬೇರೆ ಹೋಗುವುದನ್ನೂ ವಿರೋಧಿಸಿದ್ದರು (ಮಲೆಮ. ೬೩೯). **ಮನೆ ಮಾಡು**=೧. ಮನೆಯನ್ನು ಕಟ್ಟು.—ನಿರ್ಮಿಸು: ಪೆರ್ಗಣಮನಿಕ್ಕಿ ಮನೆ ಮಾಡುವಂದದಮಕ್ಕುಂ (ಧರ್ಮಾಮೃ. ೩-೧೨೨). ೨. ನೆಲೆಯಾಗಿ ನಿಲ್ಲು: ನಿಟಿಲಭ್ರೂಮಧ್ಯದಲ್ಲಿ ನಿಟಿಲಾಕ್ಷ ಮನೆ ಮಾಡಿ . . . ಶಿವಯೋಗಿ ನಿಟಿಲಾಕ್ಷನಕ್ಕುಂ (ಸರ್ವಜ್ಞ. ೫೯೯) : ಅದರ ನೋವು ಚಿರಸ್ಥಾಯಿಯಾಗಿ ಹೃದಯದಲ್ಲಿ ಮನೆಮಾಡಿಕೊಂಡಿತ್ತು (ತರೇವ. ೨೦೩). **ಮನೆಮಾರು** = ಬೀಡು ಮತ್ತು ಅದಕ್ಕೆ ಸಂಬಂಧಿಸಿದ ಸಾಮಾನು : ಮನೆಮಾರು ಹೆಣ್ಣು ಮಣ್ಣನು ಬಿಟ್ಟು ಬರುವರೆ (ತಪೆರಾ. ೫-೦೫೬): ಬಸವೇಶ್ವರನು . . . ಮನೆಮಾರು ಬಿಟ್ಟು ಕಲ್ಯಾಣಪುರಕ್ಕೆ ಹೋದನು (ಮುಂಬಶು. ೬-೦೦೯). **ಮನೆಮುರಿ** = ಕುಟುಂಬವನ್ನು ಹಾಳುಮಾಡು.— ನಾಶಮಾಡು : ಇನ್ನೊಂದು ಸಲ ಇಂಥ ಮನೆಮುರಿಯುವ ಕೆಲಸಕ್ಕೆ ಹೋಗಿ ಸಿಕ್ಕರೆ. . . ನಿನ್ನ ವಿಷದ ಹಲ್ಲು ಕೀಳಿಸಿ ಹಾಕಿಬಿಡುತ್ತೇನೆಂದು ಹೇಳಿದೆ (ಕಲಿ. ೨೩೮). **ಮನೆಯಂ ತಿದ್ದು** ಸಂಸಾರವನ್ನು ಸರಿಪಡಿಸು ; ಮನೆಯ ವ್ಯವಹಾರವನ್ನು ಕ್ರಮಪಡಿಸು : ಇವರ ಮನೆಯಂ ತಿದ್ದಿ ನಮ್ಮ ಕೊನೆಯಂ ಸಾಧಿಪನಿತರೊಳೆ ದೇಹಿಗೇರ ಗತಿಯುಮುದೊ (ಶ್ರೀರಾಪಟ. ೩೦೨-೦೯). **ಮನೆಯಳಿಯ** = ಅತ್ತೆಮಾವಂದಿರ ಮನೆಯಲ್ಲಿಯೇ ನೆಲಸಿರುವ ಅಳಿಯ: P ಸಾಮಾನ್ಯವಾಗಿ ಗಂಡುಮಕ್ಕಳಿಲ್ಲದವರು ಮಗಳಿಗೆ ಮದುವೆಮಾಡಿ ಅಳಿಯನನ್ನು ಮನೆಯಲ್ಲಿಯೇ ಉಳಿಸಿಕೊಳ್ಳುತ್ತಾರೆ: ಭೂಲೋಲ ಕೇಳಗ್ನಿ ಮನೆಯಳಿಯನಾಗಿಪ್ಪಂ ನೀಲಧ್ವಜಂಗೆ (ಜೈಮಿಭಾ. ೬-೨೫); ಹೂವಳ್ಳಿ ಮನೆಗೆ ಬೇರೆ ಯಾವ ಗಂಡೂ ದಿಕ್ಕಿಲ್ಲವಾದ್ದರಿಂದ ಮುಕುಂದಯ್ಯನೆ ಮನೆಯಳಿಯನಾಗಿ ಯಜಮಾನ್ಯ ವಹಿಸಬಹುದು (ಮಲೆಮ. ೬೩೮). **ಮನೆಯಳಿಯತನ** = ಮನೆಯಲ್ಲೇ ಅಳಿಯನನ್ನು ಇಟ್ಟುಕೊಳ್ಳುವ ಸಂಪ್ರದಾಯ : ವೈವಸ್ವತಂ ಮನೆಯಳಿಯತನದೊಳಿರುತಿಹಂ ಭೂವರಂಗೆ (ಜೈಮಿಭಾ. ೨೭-೩). **ಮನೆಯಾಕೆ** = ೧. ಮನೆಯ ಯಜಮಾನಿ : ಆ ಮನೆಯಾಕೆ ಭಿಕ್ಷವ ತಂದವನು ನಿಲ್ಲಿಸುತ (ಕುಮಾರಾ. ೦೫-೪). ೨. ಹೆಂಡತಿ ; ಮಡದಿ : ಅದನ್ನು ನೋಡಿದ ಕೂಡಲೆ ನಮ್ಮ ಮನೆಯಾಕೆ. . . ತನಗೇ ಬೇಕೆಂದು ಹಟಹಿಡಿದಳು (ಹುಂಗಶ. ೦೨೦). **ಮನೆಯಾಣ್ಮ** = ೧. ಮನೆಯ ಯಜಮಾನ. ೨. ಗಂಡ : ಇವು ಮನೆಯಾಣ್ಮನಂ ಮಾಱುವಂದ ಮಲ್ಲದೆ ಪೂಮಾಱುವಂದಮಲ್ತು (ಶಂಶಭಾ. ೪-೯೧ ವ) ; ಪದ್ಮಿಂದಂ ಮನೆಯಾಣ್ಮ[ಶಾ.ಣಾ. ೪]ನಂ ಮಜ್ಜನಂ ಚಾರುಸುಭೋಜನಂ ಮನದಿಂದಂ ನಡೆ ನೋಡಿ (ಸಮಾದ. ೫ ೫೫). **ಮನೆವಕ್ಕಳ್** = ಮನೆಯ ಆಳು : ಅರುಬದಿನ ಮನೆವಕ್ಕಳ್ ಬಾಕದು ತುಱುಗೊಳೊಳ್ ಸ್ವರ್ಗಸ್ಥನಾದಂ (ಎಕ. XI, ಹೊಳಲ್ಕೆ. ೬೭-೫; ೨೭೫). **ಮನೆವಾಳ್** = ಮನೆಯನ್ನು ನಾಶ ಮಾಡುವಂತಹುದು : ಮತ್ತೇನು ಕಲಿಸ್ತ್ರೀವಿಲ್ಲ ಮನೆವಾಳು ವಿದ್ಯೆ (ಸಂವತೋ. ೬೩). 'ಮನೆಹಾಳ', 'ಮನೆಹಾಳಿ' ಪರಾ. **ಮನೆಹಿಡಿ** = ೧. ಮನೆಯಲ್ಲಿಯೇ ಉಳಿ : ಮನೆ ಬಿಟ್ಟು ಕದಲದಿರು : ಅವರು ಹೊರಗೆ ಓಡಾಡಲು ಶಕ್ತಿಯಿಲ್ಲದೆ ಕೆಲವು ದಿನಗಳಿಂದ ಮನೆಹಿಡಿದು ಬಿಟ್ಟಿದ್ದಾರೆ (ರೂಢ). ೨. ವಾಸಿಸಲು ಮನೆಯನ್ನು ಗೊತ್ತು ಮಾಡಿಕೊಳ್ಳು : ಬೇರೆ ಕಡೆಗೆ ಮನೆ ಹಿಡಿಯ ಬೇಕೆಂದರೆ ಇಂಗ್ಲೆಂಡಿನ ವರ್ಣದ್ವೇಷ ಅಡ್ಡ ಬರುತ್ತದೆ (ಹೊಸಕ್ಷಿ. ೨೯೦).

[**ದೇ.** ತಮಿ. ಮನೈ ; ಮಲ. ಮನ ; **ಕೊಡ.** ತುಳು. ಮನ ]

**ಮನೆಕಟ್ಟು** 'ಮನೆಗಟ್ಟು' ನೋ.

**ಮನೆಖರ್ಚು** (ನಾ). ಸಂಸಾರದ ವೆಚ್ಚ : ಮನೆಖರ್ಚಿಗೆ ಹಣ ಕೊಡುವಾಗ ಜಗಳ್ ತೆಗೆಯುವವರು (ಕುಂಕುಮ. ೯೩).

[ ಮನೆ + ಖರ್ಚು (< ಕರ್ಚು$_3$) ]

**ಮನೆಗಟ್ಟು**, ಮನೆಕಟ್ಟು (ಕ್ರಿ). ೧. ಮನೆಯನ್ನು ನಿರ್ಮಾಣಮಾಡು : ಹಳುವದಲಿ ಮನೆಗಟ್ಟಿದರು ದಿಗಧಿಪರು (ತಪಾಗ. ೬-೯-೦೦). ೨. ನೆಲೆಯಾಗಿ ನಿಲ್ಲು ; ನೆಲಸು ; ಒಕ್ಕಲಾಗು : ಸಿರಿ ನಿಂದಳ್ ಮನೆಗಟ್ಟಿ ಪೇರುರದೊಳ್ (ವರ್ಧಪು. ೭-೩೬) ; ಮದನಂ ಮನೆಗಟ್ಟಿದನಲ್ಲಿ (ಕಮಠ. ೦೦೯ ಪ್ರಹೋ); ಭೀಷ್ಮನ ಹೃದಯದಲಿ ವೈರಾಗ್ಯ ಮನೆಗಟ್ಟಿತ್ತು ನಿಮಿಷದಲಿ (ಕುಮಾರಾ. ೦೦-೨). **ಮನೆಕಟ್ಟು**: ೧. ಮೆಚ್ಚಿನಿಂ ಮನೆಕಟ್ಟಿಯೊಕ್ಕಲಾಗದ ಮುನ್ನ ಕಿಚ್ಚಿಡಿದ ಮನೆಯಾಯಿತು (ಶಾಬಶರ. ೦೦೭-೩೦೯) ; ಅದನ್ನರಿಯದೆ ನಾವು ಗಾಳಿಯಲ್ಲಿ ಮನೆಕಟ್ಟಿಹೋಗುತ್ತೇವಷ್ಟೆ (ಕುಸುಶಂ. ೨೫೬).

[ಮನೆ + ಕಟ್ಟು$_1$]

**ಮನೆಗಡೆ** (ಕ್ರಿ). ಮನೆಯಿಂದ ಹಾಯ್ದು ಹೋಗು : ಮನೆಬಿಟ್ಟು ಹೊರಬೀಳು : ಗಂಡನಿಕ್ಕಿದ ಪಡಿಯನುಂಡು ಮನೆಗಡೆಯದಿಪ್ಪವಳು ಪತಿವ್ರತೆಯಲ್ಲದೆ . . . ನೆರೆಮನೆಗೆ ಹೋಗುವ ಬಲ್ಲಾಳಗಿತ್ತಿಗೆ ಪತಿಭಕ್ತಿ ಅಳವಡುವುದೆ ಅಯ್ಯ (ಅಪವ. ೨೦-೦೭). [ಮನೆ + ಕಡೆ$_2$]

**ಮನೆಗಾಪು** (ನಾ). ಮನೆಯ ಕಾವಲು : ಗೃಹರಕ್ಷಣೆ : ತನೂಜೆಯಂ ಕರೆದು . . . ನಿಜನೇಹದಿ ನಿರೀಕ್ಷಿಸಿ ಮನೆಗಾಪಿಂಗಿರಿಸಲೆಂದಿಂತೆಂದಂ (ಪ್ರಶಾ. ೯-೬೯ ವ). [ಮನೆ + ಕಾಪು]

**ಮನೆಗಾರ್ತಿ** (ನಾ). ಮನೆಯ ಯಜಮಾನಿ ; ಮನೆಯ ಒಡತಿ : ಆಕೆಯೇ ಮನೆಗಾರ್ತಿ. ಪಾದ್ರಿಯವರು ಹೆಂಡತಿಯನ್ನು ಕಳೆದುಕೊಂಡು ಆರು ವರ್ಷಗಳಾಗಿದ್ದವು (ಗಂಪಶಾಯ. ೮೪).

[ಮನೆ + —ಕಾರ$_1$ (<—ಕಾರ) + —ತಿ$_1$ (<—ಇತ್ತಿ)]

**ಮನೆಗೆಡು** (ಕ್ರಿ). ಮನೆಯಿಲ್ಲವಾಗು ; ಆಶ್ರಯತಪ್ಪು : ಮನೆಯಿಲ್ಲ ಮಾರಿಲ್ಲ ಮನೆಗೆಟ್ಟು ನೆಲೆಗೆಟ್ಟು ಕಾಡುಬೀಡಾದರೆಂ (ಶ್ರೀರಾಮಾ. ೨೬೦-೦೦). [ಮನೆ + ಕೆಡು$_1$]

**ಮನೆಗೆಡುಕ** (ನಾ). ಮನೆಯನ್ನು ಹಾಳುಮಾಡುವವನು : ಮನೆ ಮುರುಕ : ನಿಮ್ಮ ಅರಸರು ನನ್ನ ಮನೆಗೆಡುಕ ಅಂತ ಹೇಳಿದರು (ಶಕರಾ. ೨೨೨). [ಮನೆ + ಕೆಡುಕ]

**ಮನೆಗೆಲಸ** (ನಾ). ಮನೆಯಲ್ಲಿ ಮಾಡಬೇಕಾದ ಕೆಲಸ ; ಗೃಹಕೃತ್ಯ : ಮನೆಗೆಲಸವಂ ಮಾಡಲಾಜದೆ ತನು ಬಳಲಿ (ಬಸವ. ೨೬-೩೯); ಇನ್ನು ಮೇಲೆ ಸ್ಕೂಲು ಬಿಟ್ಟು ಮನೆಗೆಲಸವನ್ನೇ ಇನ್ನೂ ಚೆನ್ನಾಗಿ ಕಲಿತುಕೊ (ಶಿಕಾ. ೩೦). [ಮನೆ + ಕೆಲಸ]

**ಮನೆಗೈ** (ಕ್ರಿ). ಮನೆಯನ್ನಾಗಿ ಮಾಡು ; ಆವಾಸವಾಗಿಸು : ಸೌಧಾವಾಸಕಳಸುವಾ ಪುರಂಬಲಜರ್ . . . ವೃಕ್ಷಮೂಲಮಂ ಮನೆಗೈವರ್ (ಶಾಕುಂತ. ೧೦೬-೦೮೩). [ಮನೆ + ಗೈ (<ಕೆಯ್$_1$)]

**ಮನೆತನ** (ನಾ). ೧. ಕುಲ ; ವಂಶ ; ಸಂತತಿ : ಇರಬೇಕ್ಕೆ, ಮಕ್ಕಳ ಚೆಲು ಮನೆತನವು (ಕೇಪು. ೬-೩); ನಮ್ಮ ಮಹಾರಾಜರ ಮನೆತನವನ್ನು ತಣ್ಣಗೆ ಇಟ್ಟಿರಲಿ (ಕಳಜು. ೯೮). ೨. ಸಂಸಾರ; ಗೃಹಕೃತ್ಯ : ಕುರುಡು ಹೆಂಡತಿಯೊಡನೆ ಮನೆತನ ಹೇಗೆ ನಡೆಯಿಸಬೇಕು (ಇಕ್ಷ್ವಕ. ೨೦೨).

**ಮನೆತನ ಮಾಡು** = ಸಂಸಾರವನ್ನು ನಿರ್ವಹಿಸು : ಮನೆತನ ಮಾಡುವುದಕ್ಕೆ ತಕ್ಕಷ್ಟು ಹಣವಿಲ್ಲ (ಮುಂಬಯಿ. ೩-೨೮೯). [ಮನೆ + – ತನ]

**ಮನೆತಾಣ** 'ಮನೆದಾಣ' ನೋ.

**ಮನೆತುಂಬಿಸು** 'ಮನೆದುಂಬಿಸು' ನೋ.

**ಮನೆತುಂಬು** 'ಮನೆದುಂಬು' ನೋ.

**ಮನೆದಪ್ಪು** (ಕ್ರಿ). ೧. ಆಶ್ರಯವಿಲ್ಲದಂತಾಗು; ನೆಲೆತಪ್ಪು: ಮನೆದಪ್ಪುವುದೆ ನನ್ನ ಸುಮನೋರಥಂ (ಅನೇಕ. ೩೨-೮). ೨. ಹೆಣ್ಣು ಗಂಡನ ಮನೆ ಬಿಟ್ಟು ತೌರುಮನೆ ಸೇರುವಂತಾಗು : ಮನೆದಪ್ಪಿ ಬಂದ ಮಗಳಿಗೆ ನಾವು ಆಶ್ರಯ ನೀಡಬೇಕಾಗಿದೆ (ರೂಢಿ). [ಮನೆ + ತಪ್ಪು$_1$]

**ಮನೆದಳ, ಮಂದಳ** (ನಾ). ಮನೆಕಟ್ಟುವ ಸ್ಥಳ ; ನಿವೇಶನ : ಇದಕ್ಕೆ ಸಲುವ ಮನೆದಳ ಹಿತ್ತಲು ತಿಪ್ಪೆಗುಂಡಿ ಹಕ್ಕಲು ಸಹವಾಗಿ (ವ್ಯಕಿಲ. ೦೯೨೮. ೩೨-೦೬ : 1708) : ಆತನಿಗೆ ಮನೆದಳ ಬಹಳ ಸುಲಭದರದಲ್ಲಿ ಸಿಕ್ಕಿತಂತೆ (ಅಲಿವು. ೦೯೩). **ಮಂದಳ** : ಭೀಮಣ್ಣನು ಮೊದಲು ತನ್ನ ಮಂದಳದಲ್ಲಿ ಒಂದು ಭಾವಿ ತೆಗೆಸಿದ (ಶ್ರೀಕಥ. ೦೩೪). [ಮನೆ + ತಳ (=ತಲ)]

**ಮನೆದಾಣ, ಮನೆತಾಣ** (ನಾ). =ಮನೆದಳ : ಮನೆದಾಣಮುಂ ಪಲಗೆ ಗಣ್ಯಂ ಮೊದಲಾಗೆ ಕಬನಿಯುಂ ವಡಗಣ್ಣಾನೀಮೆ (ಎಇ. XXI, ೦೬೮-೦೧ ; ಕನಿಮು ೩೩); ಮಾದಣ್ಣನಿಗೆ ಕೋಟೆಹಾಳಿನ ಮನೆದಾಣದಲ್ಲಿ ಗಂಟು ಸಿಕ್ಕಿತಂತೆ ! (ಶಿಳುಮ. ೧೩೬). **ಮನೆತಾಣ** : ಮನೆಯು ಮನೆತಾಣಂ ಅಸ್ಯ ದಾನಸಾಕ್ಷಿಣಃ ಅಷ್ಟಾದಶಪ್ರಕೃತಯಃ (ಎಕ. VII (R). ಶಾಸವು೦. ೦೯೯-೬೦ : 776) ; ಮನೆತಾಣವಿಮ್ಮತ್ತ್ರದುರ್ಗಾದ್ಯಾದೇವಿಯು ಮನೆಯಿನ್ತೀಕಮಾ [ಜಟಿ] ಗೆಜ್ಞಿಯ ತೆಂಕಣ ಕಡೆಗೋಡಲ್ಲಿ ಒಳಗೆ ಒಮ್ಮತ್ತ್ರತೆರ್ಗ್ಗಣ್ಣದಾ ನೆಲಾ (ಕಇ. II, ೩-೩ ; 859). [ಮನೆ + ತಾಣ]

**ಮನೆದೀವು** (ಕ್ರಿ). (ಮಕ್ಕಳಿಂದ) ಮನೆಯು ತುಂಬು : ಮನೆದೀ[ವಾಅಂ. ತೀ]ವಿ ಮಕ್ಕಳ್ಗಂ ಪಡೆದಬಳಿಜನಂ (ಅಂಧ್ರ. ೨-೨೪). [ಮನೆ + ತೀವು]

**ಮನೆದುಂಬಿಸು, ಮನೆತುಂಬಿಸು** (ಕ್ರಿ). ವಧುವನ್ನು ಹೊಸದಾಗಿ ಮನೆಗೆ ಬರಮಾಡಿಕೊಳ್ಳು; ಗೃಹಪ್ರವೇಶಮಾಡಿಸು : ಒಸಗೆವಾಡಂ ಪಾಡುತ ಕಡುಚದುರೆಮರಾಳಿಮರೊಲವಿಂ ಮನೆದುಂಬಿಸಿದರ್ ವಿಭವದೊಳು (ಜಯಂಶಾ. ೮-೪೦); ವಿಘ್ನವಿಲ್ಲದೆ ಮನೆದುಂಬಿಸಬೇಕೆಂದು ಲಗ್ನವ ಪೇಳ್ದನಸುಜಗೆ (ಮೋಹತ. ೦೩-೦೩). **ಮನೆತುಂಬಿಸು** : ಮದುವಣಗಿತ್ತಿಯನ್ನು ಮನೆ ತುಂಬಿಸಿಕೊಂಡರು (ಮಃಮುಳಾ. ೨೬). [ಮನೆ + ತುಂಬಿಸು]

**ಮನೆದುಂಬು, ಮನೆತುಂಬು** (ಕ್ರಿ). ೧. ನವವಧುವು ಹೊಸದಾಗಿ ಮನೆಯನ್ನು ಪ್ರವೇಶಿಸು ; ಗೃಹಪ್ರವೇಶಮಾಡು : 'ಮನೆದುಂಬಿಸು ' ಪರಾ. **ಮನೆತುಂಬು** : ೧. ಸೊಸೆ ಬರಲು ಮಹಾದೇವಿಯವರು ಮನೆತುಂಬಿತೆಂದು ಗೊಣಗಿದರು (ಜಯಂತ. ೪೦೩). ೨. (ವಸ್ತುವಿಶೇಷಗಳು) ಮನೆಯಲ್ಲಿ ಭರ್ತಿಯಾಗು : ಜೆಡಿಯನಾಯನಾರ್ಗಂ ಬುಸ್ಕಜನ್ನಿದೇವಿಯರ್ಗಂ ಸಂತಸದೊಳುಡಲ್ ಕೊಟ್ಟು ಮನೆತುಂಬಿದ ಹೊನ್ನು ಪೊಯ್ಯು (ಸಂಬರ. ೨-೯೮). [ಮನೆ + ತುಂಬು$_1$]

**ಮನೆದೆರಿಗೆ** (ನಾ). ಮನೆಯ ಮೇಲೆ ಹಾಕುವ ತೆರಿಗೆ.—ಕಂದಾಯ : ಆದರೊಳು ಮನೆದೆರಿಗೆಯು ಹೆಚ್ಚಿರಲೂ (ಶರಾಶ. ೧೦-೩); ಹೆಚ್ಚಾಗಿ ಮನೆದೆರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು (ಮಃಶಾವು. I, ೦೨೪); ಗದ್ದೆಕರ ಬೆದ್ದಲುಗಂದಾಯ ಕಾಡಾರಂಬ ಮನೆದೆರಿಗೆ (೨ಲ್ಯ. ೦೩೩-೩). [ಮನೆ + ತೆರಿಗೆ (< ತೆಱಿಗೆ)]

**ಮನೆದೆಱೆ** (ನಾ). = ಮನೆದೆರಿಗೆ : ತಿಪ್ಪೆಸುಂಕ ಮನೆದೆಱೆ ಪಾರಿಖಾಯ (ಬೆಂಕಶಾ. ೦೯೩೬. ಸಿಂದಗಿ. ೪೦-೪೩; 1097); ಆ ಪೊಕಲ ಕದಂಬಾ ಮನೆದೆಱೆ ಬಿಟಿ ಬೇಗಾರ ಕಾಣಿಕೆ ಕಡಾಯ (ಎಕ. X. ಮುಳಬಾ. ೦೬೨-೦೮; 1496). [ಮನೆ + ತೆಱೆ$_3$]

**ಮನೆದೇವತೆ** (ನಾ). ವಂಶದ ದೇವತೆ ; ಕುಲದೇವತೆ : ಮನೆದೇವತೆಯ ಮುನಿಸೊ (ಶಿಗಂ೦. ೦೬೯-೦೨). [ಮನೆ + ದೇವತೆ]

**ಮನೆದೇವರು** (ನಾ). = ಮನೆದೇವತೆ : ಘನವಾದೊಡವೆ ಕೈಸೇರುವ ಪರಿಯಂತ ಮನೆದೇವರೆಂದುಪಚರಿಸು (ಕಂಸವಿ. ೬-೦೩೦). [ಮನೆ + ದೇವರು (< ದೇವರ್)]

**ಮನೆದೈವ** (ನಾ). = ಮನೆದೇವತೆ : ಮನೆದೈವಂಗಳೆನಗೆ ಸನ್ನಿದವಾದೊಡೆನ್ನ ಮೂಗು ಮುನ್ನಿನಂತಾಗಲಿ (ಶಂತಶಂ. ೬೬-೦೨); ಮನೆದೈವ ಕುಲದೈವ ಎನಗೆ ನಿಮ್ಮ ವರಯ್ಯಾ (ಬಸವ. ೩೭೩); ನೀವೆನ್ನ ಕುಲದೈವ ಮನೆದೈವವಲ್ಲದೆ ಮತ್ತೆ ಕುಲದೈವ ಮನೆದೈವ ಇಲ್ಲವಯ್ಯಾ ಎನಗೆ (ಅಣಂದೀ. ೫೨-೬೪). [ಮನೆ + ದೈವ]

**ಮನೆದೊಂಡ** (ನಾ). ಮನೆಯ ಸೇವಕ,—ಆಳು : ಅಸವಸದೆ ಮನೆದೊಂಡರೆಲ್ಲರೀ ತೆಱದಿಂದೆ ನಿಸದಮುನಿಶಂ ಬರ್ಪರ್ (ಅರಾತ. ೨-೨-೦೦). [ಮನೆ + ತೊಂಡ$_1$]

**ಮನೆದೊತ್ತು** 'ಮನೆದೊಟ್ಟು' ನೋ.

**ಮನೆದೊಟ್ಟು, ಮನೆದೊತ್ತು** (ನಾ). ಮನೆಗೆಲಸಮಾಡುವ ತೊತ್ತು; ಮನೆಯಾಳು : ಪೋದ ಮಾರಿಯನ್ನಳೆ ಮನೆದೊಟ್ಟು ಸೀಕರ್ಣರಡಿಯನ್ನಳೆ ನಾದುನಿ (ಶಂಶಶಾ.೪-೯೮). **ಮನೆದೊತ್ತು** : ನಿಮ್ಮ ಮನೆದೊತ್ತಿನ ಮಗಳು ಕೇಳಿಮ್ಮುವಂ ಕೇಳ್ಮಾಡಿದಳ್ (ಬಸವ. ೩೩-೩೩); ಏನೆಲವೊ ಮಾರೀಚ ಮಾಡಿಯುದೇನು ಮನೆದೊತ್ತಲ್ಲವೇ (ತೊರಾ. ೩-೬-೪೯). [ಮನೆ + ತೊಟ್ಟು]

**ಮನೆಪಟ್ಟಿ** (ನಾ). = ಮನೆದೆರಿಗೆ : ಇವರ ಆದಾಯದ ಸಾಧನಗಳು ಮನೆಪಟ್ಟಿ, ಛಕಡೀಪಟ್ಟಿ, ಹೊರಗಿಂದ ಬರುವ ಮಾಲಿನ ಮೇಲೆ ಜಕಾತಿ ಮುಂತಾದವುಗಳುಂಟು (ಕಥಾಗಿ. ೪೦೦). [ಮನೆ + ಪಟ್ಟಿ$_2$]

**ಮನೆಪಾಠ** (ನಾ). ವಿದ್ಯಾರ್ಥಿಗಳಿಗೆ (ಮನೆಯಲ್ಲಿ) ಖಾಸಗಿಯಾಗಿ ಹೇಳುವ ಪಾಠ : ಮನೆಪಾಠ ಹೇಳಿ ಜೀವನಯಾಪನೆ ಮಾಡಿಕೊಳ್ಳುತ್ತಿದ್ದನು (ಕ್ಷಿಪರು. ೩೨೩). [ಮನೆ + ಪಾಠ$_2$]

**ಮನೆಬದುಕು** (ನಾ). ಮನೆಯ ಕೆಲಸ ; ಗೃಹಕೃತ್ಯ : ಗರತೀ ನೀ ಮನೆಬದುಕ ನೋಡಿ ನೂಲಿನೆಳೆಗಳ ಮಾಟಮಾಡಿ ನೆಯ್ದೆ (ಜಂಗೀಕ. ೬೪-೦೭).
[ ಮನೆ + ಬದುಕು$_2$ (< ಬರ್ದುಕು$_2$) ]

**ಮನೆಬಾಗಿಲು** 'ಮನೆವಾಗಿಲ್' ನೋ.

**ಮನೆಮಗತಿ** 'ಮನೆಮಗತ್ತಿ' ನೋ.

**ಮನೆಮಗತ್ತಿ,** ಮನೆಮಗತಿ , ಮನೆವಗತಿ (ನಾ). ಮನೆಯಲ್ಲಿ ಹುಟ್ಟಿದವನಂತೆಯೇ ಇದ್ದು, ಕೆಲಸ ಮಾಡಿಕೊಂಡಿರುವ ವ್ಯಕ್ತಿ: ವಂಶಪಾರಂಪರ್ಯವಾಗಿ ಬಂದ ಮನೆಯ ಆಳು : ಸಿಯಗೆಲ್ಲರಾ ಮನೆಮಗತ್ತಿಸ್ಸಲ್ಲಹನಾ ಬೆಸಸಿ (ಎಕ. XVI, ತುಮಕೂ. ೮೦-೩; 750); ಪೆರ್ಮಾನಡಿಗಳ ಮನೆಮಗತ್ತಿನ್ ಅಗರಯ್ಯಂ (ಎಇ. VI, ೪೩-೪; 840). **ಮನೆಮಗತಿ :** ಬಿಸಮಾನೆಂಬೋ ಮನೆಮಗತಿ ಆತ ನಟ್ಟ ಕಲಕೆ ಓರ್ಮ್ಮತ್ತು ಕೆಯ್ಯ ಕೊಟ್ಟೋರ್ (ಎಕ. XI, ಹಳ್ಳಿ. ೩೩-೯; 815); ಸ್ವಸ್ತಿಶ್ರೀ ಗೊಗ್ಗಿಯ ಮನೆಮಗತಿ ಬೋಚಗ ಧರ್ಮ್ಮಸೆಟ್ಟಿ . . . ಸತ್ತಂ (ವ್ಯಕಂ. ೧೯೩೩, ೪೦-೦ : 900). **ಮನೆವಗತಿ :** ಶ್ರೀಮಂತ್ ನಾಗತರನ ಮನೆವಗತಿ ಪೆರ್ಮ್ಮಣಸೆಟ್ಟಿ ಬೆಂಗುಳೂರ ಕಾಳೆಗದೊಳೆಳ್ಳಾಗತರನ ಮಗಂ ಬುಟ್ಟಣಪತಿ ಸತ್ತಂ (ಎಕ. IX (ಇ). ಬೆಂಗಳೂ. ೦೮೨-೨; ಸು. 850); ಸ್ವಸ್ತಿ ಶ್ರೀ ಪೆರ್ಮಾಡಿಯ ಮನೆವಗತಿ ನೀಲಬ್ಬೆಯ ಮಗಂ ರಾಚಮ್ಮನ ಧರ್ಮ್ಮಂ (ಎಕ. III (R), ಹಂಜನ. ೨೪೨-೦ ; 970). [ಮನೆ + ?]

**ಮನೆಮಗವು** (ನಾ). = ಮನೆಮಗತ್ತಿ : ಮಾರಿದಾಸರಿಯತಮ್ಮನ್ ನಾಗತರಾಸರಾ ಮನೆಮಗವು . . . ಪಡೆಸಾಳ್ ಎಱೆದು ಬಿಟ್ಟನ್ (ಎಕ. XVI, ತುಮಕೂ. ೯೩-೯ ; ?). [ಮನೆ + ಮಗವು (< ಮಗು)]

**ಮನೆಮಾತು** (ನಾ). ೧. ಮನೆಯಲ್ಲಿ ಆಡುವ ಭಾಷೆ : ಮಾತೃಭಾಷೆ : ತಾಯಿನುಡಿ : ದಾಸರು ಕನ್ನಡದಲ್ಲಿ ಗ್ರಂಥರಚನೆ ಮಾಡುವುದಕ್ಕೆ ಅವರ ಮನೆಮಾತು ಕನ್ನಡವೆಂಬುದೇ (ಹದಾ. ೩೩೭) ; ಮನೆಮಾತಿನಲ್ಲಿ ಹೇಳಿಂದು ಯಾರಾದರೂ ಬಲಾತ್ಕರಿಸಿದರೆ ಅವನಿಗೆ ಮಂಕು ಕವಿದುಬಿಡುತ್ತಿತ್ತು (ಸಮಾಲೋ. ೦೨೦). ೨. ಎಲ್ಲರಿಗೂ ತಿಳಿದ ವಿಷಯ ; ಪ್ರತಿ ಮನೆಯ ಲ್ಲಿಯೂ ಮಾತನಾಡಿಕೊಳ್ಳುವ ವಿಚಾರ : ರಾಜನರ್ತಕಿಯರು ನಾಡಿಗೆ ಸಲ್ಲಿಸಿದ ಸೇವೆ, ತ್ಯಾಗ ವಿಜಯನಗರರಾಜ್ಯದಲ್ಲೆಲ್ಲಾ ಮನೆಮಾತಾಯಿತು (ಕಂಕಾಮು. ೪೭) ; ಬಿಡಿಮೊಳೆಗಳಿಂದ ಮುದ್ರಿಸುವುದನ್ನು ಕಂಡುಹಿಡಿದ ವನು ಗೂಟೆನ್ಬರ್ಗ್ ಎಂಬುದು ಮುದ್ರಣಪ್ರಪಂಚದಲ್ಲಿ ಮನೆಮಾತಾಗಿದೆ (ಮುದ್ರಕ. ೯). [ ಮನೆ + ಮಾತು$_1$ ]

**ಮನೆಮುಟ್ಟು$_1$** (ಕ್ರಿ). ಮನೆಯನ್ನು ಸೇರು : ಅಲ್ಲಿಂದ ತನ್ನ ಪಿಪಾಯಿ ಯೊಡನೆ ಮನೆಮುಟ್ಟಿದ (ಕಿಚಕಾ. ೭೦). [ಮನೆ + ಮುಟ್ಟು$_1$]

**ಮನೆಮುಟ್ಟು$_2$** (ನಾ). ೧. ಮನೆಯ ಸಾಮಾನು : ಗೃಹೋಪಕರಣ : ಕನಕದ ರಜತದ ಕಾಂಸ್ಯದ ಮನೆಮುಟ್ಟುರಿ[ಜೈಕಾಂ. ಮಣ್ಣಿ೦] ಮುಟ್ಟಿ ಕರಗಿ ಕಣ್ಣಟ್ಟುವು (ಜಂಬಾವಿ. ೦೨-೦೫೨). ೨. ಮನೆಯನ್ನು ಕಟ್ಟುವ ಸಾಧನ : ಹೊಸದಾಗಿ ಮನೆ ಕಟ್ಟಿಸಲು ಮನೆಮುಟ್ಟು ಒದಗಿಸಿಕೊಳ್ಳ ಬೇಕಾಗಿದೆ (ರೂಢಿ). [ ಮನೆ + ಮುಟ್ಟು$_2$ ]

**ಮನೆಮುಟ್ಟುಗೋಳು** (ನಾ). ಮನೆಯನ್ನು ಸ್ವಾಧೀನಕ್ಕೆ ತೆಗೆದು ಕೊಳ್ಳುವುದು,–ವಶಕ್ಕೆ ತೆಗೆದುಕೊಳ್ಳುವುದು : ಅರಸನಾಗ್ರಹದಿ ಮನೆ ಮುಟ್ಟುಗೋಳು ಕೊಂಡು (ರಾಶಕ. ೦೦-೪೩) ; ಧನಂಗಳಂಮನೆಮುಟ್ಟು ಗೋಳಾಗಿ ಕೆಳೆಯುತ್ತ (ಶಾಗಂರ. ೧೯೦-೩).
[ ಮನೆ + ಮುಟ್ಟುಗೋಳು ]

**ಮನೆಮುರುಕ** (ನಾ). ಮನೆಮುರಿಯುವವನು ; ಮನೆಹಾಳ : ಮನೆ ಮುರುಕನಾದಂಥಾ ಪುರುಷನು . . . ಶುಭಗಳನ್ನೈದಲಾರದೆ (ಕೃವಾಲಿ. ೦೦೭); ಹುಚ್ಚುಹುಚ್ಚಾಗಿ ಮನೆಮುರುಕ, ರಾಕ್ಷಸ . . . ಮುಂತಾದ ಶಬ್ದಗಳಿಂದ ಬೆಳ್ಳೀಗೌಡರನ್ನು ಬಹಳ ಬೈದಳು (ಕಂಜಕಂ. ೩೨).
[ ಮನೆ + ಮುರುಕ$_1$ ( < ಮುಱುಕ$_2$) ]

**ಮನೆಮುರುಕಿ** (ನಾ). ಮನೆಯನ್ನು ಹಾಳುಮಾಡುವವಳು ; ಸಂಸಾರ ವನ್ನು ಒಡೆಯುವವಳು : ಮನೆಮುರುಕೀ, ಬೆಳ್ಳಿ ಹೋಯಿತು, ಬಂಗಾರಹೋಯಿತು ! ಮಾನಮರ್ಯಾದೆ ಎಂದೋ ಹೋಯಿತು (ತುಂಬಕೊ. ೨೩). [ ಮನೆಮುರುಕ + – ಇ$_2$ ]

**ಮನೆಮುರುಕುತನ** (ನಾ). ಮನೆಯನ್ನು ಹಾಳುಮಾಡುವ ಸ್ವಭಾವ : ನೀಗಲಾಡಿಸುತ ಮನೆಮುರುಕುತನವನ್ನು ಬೇಗದಿಂ ಕರುನಾಡ ಹರಕುತನ ವನ್ನು ಕಳೆದು ಹಿರಿದಾಗೋಣ ಸೀಮೆಯನು ದಾಟಿ (ನು. ೪೦-೬).
[ ಮನೆ + ಮುರುಕು$_3$ (<ಮುಱುಕು) + – ತನ ]

**ಮನೆಮೂಳ** (ನಾ). ೧. ಹೊರಗೆ ಓಡಾಡಲು ಶಕ್ತಿಯಿಲ್ಲದೆ ಮನೆ ಯಲ್ಲೇ ಇರಬೇಕಾದ ವ್ಯಕ್ತಿ: ಸೊಸೆ ಗಂಡನ ಸ್ವೈರಾಚಾರಕ್ಕೆ ಬಲಿಯಾಗಿ ಮನೆಮೂಳ ಆಗಿದ್ದಾಳೆ (ಕಥಾಪು. ೩೯). ೨. "ಮನೆಯಲ್ಲೇ ಮೂರು ಹೊತ್ತು ಇರುವ (ಅಭ್ಯಾಸದ ಮನುಷ್ಯ) : ಮನೆಮೂಳ(ಳ)" (Stay-at-home. ಇಂಕಶ). [ ಮನೆ + ಮೂಳ$_1$ ( <ಮೂಳ ) ]

**ಮನೆಮೂಳಿ** (ನಾ). ಮನೆಯಲ್ಲೇ ಕುಳಿತಿರುವ ವ್ಯಕ್ತಿ : ಸೋಮಾರಿ : ಇವಳಿಂದಲೇ ಅಲ್ಲವೆ ಕೈಗೆ ಬಂದ ಮಗ ಮನೆಮೂಳಿಯಾಗಿ ಕುಳಿತಿರುವುದು (ಹೂಸಕ್ಕ. ೨೦). [ ಮನೆಮೂಳ + –ಇ$_3$ ]

**ಮನೆಯಟ್ಟು** (ನಾ). ಒಂದು ಬಗೆಯ ತೆರಿಗೆ (?) : ಏಟ್ಟುಮನೆ ಹತ್ತ ಕೊಂಡು ಮನೆಯಟ್ಟು ಯಾಸೂಯಿಪ್ಪಟ್ಟಣದಲಿ (ಎಕ. IX, ಕಾನಕಾ. ೭-೦೭; 1316 ?). [ ಮನೆ + ? ]

**ಮನೆಯಾಳ್,** ಮನೆಯಾಳು (ನಾ). = ಮನೆದೊತ್ತಿ : ಘನರಾದ ತುರುಕರು ಕಂಠೀರವೇಂದ್ರನ ಮನೆಯಾಳ್ಗಳಿಂದ ಮಡಿದರು (ಕಂಶವಿ. ೨೩-೩೯) . **ಮನೆಯಾಳು :** ಅವರ ಮನೆಯಲ್ಲಿ ನಾಲ್ವರು ಮನೆಯಾಳು ಗಳು ಇದ್ದಾರೆ (ರೂಢಿ). [ ಮನೆ + ಆಳ್$_3$ ]

**ಮನೆಯಾಳು** ' ಮನೆಯಾಳ್ ' ನೋ.

**ಮನೆವಗತಿ** ' ಮನೆಮಗತ್ತಿ ' ನೋ.

**ಮನೆವಣ,** ಮನೆಹಣ (ನಾ). = ಮನೆದೆಱೆ : ಏರಿಯ ಕೆಱೆಗೆ ಮನೆ ವಣಮುಮಂ (ಇಎ. ೦೯೪೭, ಕಾಮಗೆರ್. ೨೩೭-೦೪; 974) ; ಕಾವಾರಂಭ ನೀರಾ ರಂಭ ಸುಂಕ ಸಿದ್ದಾಯ ಮನೆವಣ ಸಹವಾಗಿ ಶಿವಾರ್ಪಿತ ಮಾಡಿ ಕೊಟ್ಟ ದಾನಶಾಸನ (ಎಕ. XII, ತಕ್ಕಶಾ. ೩೮-೩೯ ; 1669 ). **ಮನೆಹಣ :** ಮಗ್ಗ ಮನೆಹಣ ಹೊಗೆಹಣ ಸುಂಕ ಸುವರ್ನಾದಾಯ (ಎಕ. XII, ಕುಣಿಗ. ೪-೧೮; 1671): ಶಾಸನಗಳಲ್ಲಿ ಬರುವ ತೆರುವಣಗಳು :– ತೆರು . . . ದೇವರ ಧರ್ಮ, ಮನೆಹಣ, ಹೊಗಹಣ (ಕುಕ್ಕಬಾ. ೨೭೦).
[ ಮನೆ + ಪಣ$_3$ ]

**ಮನೆವಯನ್** (ನಾ). ಮನೆಯ ವಸು : ನಯಮೆತ್ತಿನನುಡಿಯೆಂ ಜಾಣ್ಮೆಯ ನಾವಗಮಿಸಿಯನೆರ್ದೆಯನಿರ್ಕೆಳಗೊಳ್ವೀ ಮಯಣನ ಗೆಳೆಯನಿಪಳ ಮನೆ ವಯನೆನಿಕುಂ ಮುಪ್ಪೆದಪ್ಪುಗರ ಹಸುವಾಗಳ್ (ಲೀಲಾ. ೬-೧೨೩).
[ಮನೆ + ವಯನ್]

**ಮನೆವಾಗಿಲ್,** ಮನೆಬಾಗಿಲು (ನಾ). ೧. ಮನೆಯ ದ್ವಾರ : "ದ್ವಾರ ಮೆನಲು ಮನೆವಾಗಿಲಕ್ಕುಂ" (ಶಬ್ದಮ. ೩೯-೦೨). **ಮನೆಬಾಗಿಲು :** ೧. ಧನಲಕ್ಷ್ಮಿಪೂಜೆಯಾ ದಿನವಾದುದೆಂದು ಮನೆಬಾಗಿಲಿಗೆ ನಾವು ಬಂದಿರುವೆ ವಿಂದು (ಕಂಥ. ೦೩-೨). ೨. ಮನೆಯ ಮುಂಭಾಗ : ಯಿಂತೀ ಚತುಃ ಸೀಮೆಯಿಂದೊಳಗುಳ್ಳ ಮನೆಬಾವಿ ಮನೆಬಾಗಿಲ ಗದ್ದೆ ಮನೆಯ ಹಿಂದಣ ಬೆಟ್ಟು . . . ಸಹಿತವಾಗಿ . . . ಧಾರೆಯನೆರದು ಕೊಟ್ಟರು (ಕೌಇಇ. IX-ii, ೪೨೩-೦೭; 1400). [ಮನೆ + ಬಾಗಿಲ್]

**ಮನೆವಾರ** (ನಾ). = ಮನೆದಳ: ಗುಡಿ ಮುಂದಣ ಮನೆವಾರ ಸಹ ನಡಸ ಹೇ ಶಾಸನಭಾವ ಹಳ್ಳಿ ತಿಂಪಾಪಗೆ . . . ತಾಕೀತಿ ಮಾಡಿಸಿ ನಯನಾಡಿ ಬರಸಿಕೊಟ್ಟ ತಾಂಬ್ರಶಾಸನಾ (ಮೈಆ. ೭೯೨೯, ೬-೨೭; 1873).

[ಮನೆ + ವಾರ್೩]

**ಮನೆವಾರತೆ** 'ಮನೆವಾಟ್ಟಿ೩' ನೋ.

**ಮನೆವಾರ್ತೆ** 'ಮನೆವಾಟ್ಟಿ೩' ನೋ.

**ಮನೆವಾರ್ತೆಗ** (ನಾ). ಗೃಹಕೃತ್ಯವನ್ನು ನೋಡಿಕೊಳ್ಳುವವನು : ಮೂಱು ಬರವುವಿಲ್ಲ ಮೂಮ್ಮ್ರನೆವಾರ್ತೆಗರ ಮನೆ ಪೊಕ್ಕತ ಪನ್ನೆರಡು ಗದ್ಯಾಣ ದಣ್ಡ (ಸೌಇ. IX-i, ೬೬-೩೨: 992).

[ಮನೆವಾರ್ತೆ (< ಮನೆವಾಟ್ಟಿ೩) + – ಗ೨]

**ಮನೆವಾರ್ತೆಗಾರ** (ನಾ). = ಮನೆವಾರ್ತೆಗ : ಬಂದೂಕುಧಾರಿಗಳ ಮನೆ ವಾರ್ತೆಗಾರ (ಹೋರಕ. ೯೩).

[ಮನೆವಾರ್ತೆ (< ಮನೆವಾಟಿ೩) + – ಕಾರ೧ (< – ಕಾಜ)]

**ಮನೆವಾರ್ತೆಗೆಯ್**(ಕ್ರಿ). ಮನೆವಾರ್ತೆಯನ್ನು ನೋಡಿಕೊಳ್ಳು: ಸಂಸಾರ ನಡೆಸು : ಕರಪದ ಸೂಳೆ ಸುತ್ತುವಳೊ ಕುತ್ತುವಳೋ ಮನೆವಾರ್ತೆಗೆಯ್ವ [ಶಾಕಾಂ. ಗೇಪ]ಳೋ (ಸೂಕ್ತಿಸು. ೮-೩೬೬; ಅಪಂಕ. ೮-೯೮ ನೋ).

[ಮನೆವಾರ್ತೆ (< ಮನೆವಾಟಿ೩) + ಕೆಯ್೧]

**ಮನೆವಾಳು** 'ಮನೆವಾಟು' ನೋ.

**ಮನೆವಾಳ್ತನ** (ನಾ). ೧. ಮನೆಯ ನಿರ್ವಹಣೆ; ಸಂಸಾರದ ಜವಾಬ್ದಾರಿ: ಮನೆವಾಳ್ತನದೊಳು ಬಲುಬಲು ದಕ್ಷೆ ಅವಳಾಳ್ತನದೊಳ್ ನಮ್ಮಯ ರಕ್ಷೆ (ಗಹೇಕ. ೩-೩೨). ೨. ಮಗಳಿಗೆ ಮದುವೆ ಮಾಡಿ ಅಳಿಯ, ಮಗಳನ್ನು ಮನೆಯಲ್ಲೇ ಇಟ್ಟುಕೊಳ್ಳುವುದು : P ಸಾಮಾನ್ಯವಾಗಿ ಒಬ್ಬಳೇ ಮಗಳು ಅಥವಾ ಗಂಡುಸಂತಾನವಿಲ್ಲದವರು ತಮ್ಮ ಒಬ್ಬಳೇ ಮಗಳಿಗೆ ಮದುವೆ ಮಾಡಿ ಅಳಿಯನನ್ನು ಮನೆಯಲ್ಲೇ ಇಟ್ಟು ಕೊಳ್ಳುತ್ತಾರೆ : ಗಂಡ ಸತ್ತ ಆಕೆ ಇದ್ದ ಒಬ್ಬಳೇ ಮಗಳನ್ನು ಮದುವೆ ಮಾಡಿ ಅಳಿಯನನ್ನು ಮನೆವಾಳ್ತನಕ್ಕೆ ಇಟ್ಟುಕೊಂಡಿದ್ದಳು (ಸಮ್ಮರು. ೨೯೨).

[ಮನೆವಾಳು (< ಮನೆವಾಟು) + – ತನ]

**ಮನೆವಾಳ್ತಿ** 'ಮನೆವಾಟ್ಟಿ೩' ನೋ.

**ಮನೆವಾಟು**, **ಮನೆವಾಳು** (ನಾ). ಸಾಂಸಾರಿಕ ಜೀವನ : ಗೃಹಸ್ಥ ಜೀವನ : ತತ್ತ್ವವೇದಿಗಳುಂ ಮನೆವಾಟನಾಸೆವಡಲಾಗದು (ಶಾಂತಿಪು. ೯-೬೨ ವ); ಮನೆವಾಟ್ಟಿಲ್ಲದು ಕಾವಥೇನು ಕಜ್ಜದಂತೆ (ಅಪಂಕ. ೮-೨೯). **ಮನೆವಾಳು**: ಮನೆವಾಳು ಸಾಕಾಯ್ತು ಮುನಿವಾಳು ಬೇಕಾಯ್ತು (ಭರತ. ೩೨-೦೦೯).

**ಮನೆವಾಟ ದಮ್ಮ** = ಗೃಹಸ್ಥಧರ್ಮ : ಮನೆವಾಟ ದಮ್ಮವಮೆಲ್ಲದುಂ ನೀನೆ ಬಲ್ಲೆ (ಕಂತಕಂ. ೦೩೦-೬). [ಮನೆ + ಬಾಟು೩]

**ಮನೆವಾಟ್ಟಿ**೩, ಮನವಾರತೆ, ಮನವಾರ್ತೆ, ಮನವಾಟ್ಟಿ, ಮನೆವಾರತೆ, ಮನೆವಾರ್ತೆ, ಮನೆವಾಳ್ತಿ (ನಾ). ೧. ಮನೆಯ ಕೆಲಸ : ಗೃಹಕೃತ್ಯ: ಪೆಜತಣ ಮನೆವಾಟ್ಟಿಯುಂ ಮಾಜಿದರ್ (ವಡ್ಡಾರಾ. ೦೩೦-೨೩) ; ಕೆಮ್ಮನಿನ್ನೆಂತುಮೇಂ ಮನೆವಾಟ್ಟಿಯುಂ ಬೆಸಸಲ್ ಬಂದೆಮೋಧಿಪಾ (ಕಂಕಥಾ. ೦೨-೮೯) ; ದೇವತೆಯುಮ್ಮನೆವಾಟ್ಟಿಯ್ಯ ನೊಡಚುರ್ಗುಂ (ಕಥಾ. ೩-೦೨೬). **ಮನವಾರತೆ** : ೧. ಕ್ರತುಶತದ ಕೈಗೊಣಿಕೆಯ ದೀಕ್ಷಿತರ ಸಿರಿಯಂತರಪ ಮನವಾರತೆಯದೆಂತುಟೊ ಕಾಣಬೇಹುದು (ಕುಮ್ಮಾಕ. ೭-೯) ; ಮನೆಗೆ ಮನವಾರತೆಗೆ ಪಿತ್ರಿಕ ವನಿತೆಮರಿಗಭಿಲಾಷೆವಡದೆ (ಕೋಗಯು. ೨-೧೦). **ಮನವಾರ್ತೆ**: ೧. ನಾನು ಒಂದು ಮನವಾರ್ತೆಗಾಗಿ ಹೋಗಿ ಬರುತ್ತೇನೆ (ಕನಕ. ೯). **ಮನವಾಟ್ಟಿ** : ೧. ಚಿಕದೇವನಾ ಹಿಮಾಚಲ ರಘುವೀರ ಸೇತುವರೆಗಂ ತಿಳಿಗುಂ ಮನವಾಟ್ಟಿಯೆಂಬಿನಂ (ಚಿಕೌ. ೯-೦೦೯). **ಮನೆವಾರತೆ** : ೧. ನಿನ್ನಯ ಕಾಂತ ತಿರುಗದ ವಾರಿಯ ಹೋದಾತ ಬಹನೆ ರಾಜಾಂಗಣದ ಮನೆವಾರತೆಯ ವಿಚಾರಿಪುದೆಂದರಾಳಿಯರು (ಪೋಹಾ. ೯-೭೮). **ಮನೆವಾರ್ತೆ** : ೧. ಪಿರಿದೊಂದು ಮನೆವಾರ್ತೆ [ಧಾಕಾ. ಬಿಟ್ಟಿ]ಯುಂಟಪ್ಪಂ ಕಾಣದೆ ಪೋಗಲೀಯಾಸೇಗಳ ಪೋಗಿ ನಿನ್ನಲ್ಲಿಗೆ ಬಂದಪೆಂ (ಕವ್ಯಾಕಾ. ೦೬-೬) : ನಿನಗೊಂದೋಲೆಗೆ ಕೀರ್ತಿಯೊಂದು ಮನೆವಾರ್ತೆಗಿದೇ ನೆಂದರಸ ಬಳೆಯೆ ನುಡಿದಪಂ (ಅಪು. ೦೯-೩೦) ; ಲೋಕವಿದಿತ ಮನೆ ಲೋಕರುದ್ಧಾರಣವೆ ಮನೆವಾರ್ತೆ (ಸೂಕ್ಮಕಾ. ೨-೯೩) ; ಮಕ್ಕಳಿಲ್ಲ ಮನೆವಾರ್ತೆ ಮಾಡಿದರೆ ಅಪ್ಪಗ್ಯಾಕೆ ಇಬ್ಬರು ಹೆಂಡರು ? (ಗಾದೆ). **ಮನೆವಾಳ್ತಿ** : ೧. ಎನ್ನ ಪರಿಚರ್ಯೆಗೆ ಅನುಕೂಲೆಯಾಗಿರ್ದು ಮನೆ ವಾಳ್ತಿಯುಂ ಸಾಗಿಪುದು (ಕೈಬಾಹಾ. ೦೨-೨೯) ; ಮನೆವಾಳ್ತಿಯಬಿಯಿಪ ಮರುಳಾಪೆಣ್ಣೇ ಕೃತಿಯನೆ ಮನಪೊಲಿದೋದಿದೊಡೆ . . . ಚಾತುರ್ಯ ಪಡೆವಳು (ಹುಾ. ೦-೩೯). ೨. ಮನೆಗೆಲಸದವನು ; ಮನೆಯಾಳು ; ಊಳಿಗದವನು : ಪತ್ರಿಕೆಯನ್ನು ತಂದಿದ್ದವನು ತನ್ನ ಪೂರ್ವದ ವೈರಿಯಾದ ಮನೆವಾಳ್ತಿಯೇ ಆಗಿದ್ದರಿಂದ . . . ಹಿಡಿದುಕೊಂಡು ಚೆನ್ನಾಗಿ ಪ್ರಹರಿಸಿದನು (ಕಪಿ. ೩೩). [ಮನೆ + ಬಾಟ್ಟಿ೩]

**ಮನೆವುಗು** 'ಮನೆವೊಗು' ನೋ.

**ಮನೆವೆಂಡತಿ**. ಮನೆಪೆಂಡತಿ (ನಾ). ಮನೆಯ ಹೆಂಗಸು : ಗೃಹಿಣಿ : ಮನೆ ನಿನಗೆ ನಂದಗೋಪಾಲನ ಮನೆ ತುಱುಗಾರ್ತಿ ನಿನಗೆ ಮನೆವೆಂಡತಿ (ಕಂಕಥಾ. ೬-೩೨) ; ಮನೆವೆಂಡತಿಯೊ ನಾನೊತ್ತೆಸೂಳೆಯೊ ನಿನಗೆ (ಬಸಪು. ೯೦-೯೬). **ಮನೆಪೆಂಡತಿ** : ವಾಲಗಾಱರ ಮನೆಪೆಂಡತಿ ಗುಱುಗಱುವ (ಸೌಇ. IX-i. ೩೭೦-೯೦ ; 1255). [ಮನೆ + ಪೆಂಡತಿ (<ಪೆಂಡಿತಿ)]

**ಮನೆವೆಕ್ಕು** (ನಾ). ಮನೆಯಲ್ಲಿ ಸಾಕಿದ ಬೆಕ್ಕು: ಮನವೆಕ್ಕಾಗಿ ಜನಿಯಿಸಿ ಕಪೋತಮಿಥುನಮಂ . . . ಕೊಂದಂ (ಜಗಚ. ೨೩-೨).

[ಮನೆ + ಬೆಕ್ಕು (<ಬೆಕ್ಕರ್)]

**ಮನೆವೆಗ್ಗಡೆ** 'ಮನೆವೆರ್ಗಡೆ' ನೋ.

**ಮನೆವೆಣ್**, ಮನೆವೆಣ್ಣು (ನಾ). = ಮನೆವೆಂಡತಿ : ದೈನ್ಯವೆರೆದ ವಚನಂ ಗಳನುಸಿರುವ ಮನೆವೆಣ್ಗಳ್ ಸೊಗಸಿದುದು (ಜಗಚ. ೦೨-೦೩). **ಮನೆವೆಣ್ಣು** : ಬಿಡುವೆಣ್ಣು ಬೆಲೆವೆಣ್ಣು ಬೆಸವೆಣ್ಣು ಮನೆವೆಣ್ಣುಗಳೆ ಯೆಂದು ರಾಮನನು ಬಿಡದೆ ನೋಡಿದರು (ಕುರಾಕಾಂ. ೩೬-೬೯) ; ಬೆಲೆ ವೆಣ್ಣು ಬೆಸವೆಣ್ಣು ಮನವೆಣ್ಣು ಬಿಡುವೆಣ್ಣು . . . ಮಿಂಡಿವೆಂಗಳು ಭೂಲಲನೇಶನ ನೋಡಿದರು (ಸೂಮ್ಮತ. ೦-೬೩). [ಮನೆ + ಪೆಣ್]

**ಮನೆವೆಣ್ಣು** 'ಮನೆವೆಣ್' ನೋ.

**ಮನೆವೆರ್ಗಡೆ**, ಮನೆವೆಗ್ಗಡೆ (ನಾ). ಮನೆಯ ಮೇಲ್ವಿಚಾರಕ : ಗೃಹ ಕೃತ್ಯಗಳ ವಹಿವಾಟು ನೋಡಿಕೊಳ್ಳುವವನು : ಅರಸಂಗೆ ಮನೆವೆರ್ಗಡೆ ಮುದ್ರಾಂಕಿತಮಪ್ಪ ಪಾಯಸದ ಮುದ್ರೆಯುಂ ಕಳೆದು (ಶಾಂತಿಪು. ೨-೨೨ ವ) ; ಮನೆವೆರ್ಗಡೆ ಕೇತಮನಾಯಕ (ಸೌಇ. IX-i, ೮೮-೦೨ ; 1024) ; ಮನೆವೆರ್ಗಡೆಯಂತೆ ಪೇಸಱಂ ಮಾಡದನುಂ (ರಕುರಪು. ೩-೯೯). **ಮನೆವೆಗ್ಗಡೆ** : "ಮನೆವೆಗ್ಗಡೆ ಅಂತರ್ವಂಶಿಕಂ" (ಶಬ್ದಮ. ೬೦-೨೬೩) ; ವ್ಯವಹಾರವಿಶಾರದಂ ಬಹುವ್ರತಪಥನೆನಿಪಾತನಲ್ತೆ ಮನೆವೆಗ್ಗಡೆ ಭೂಪತಿ ಗಪ್ಪುದೊಪ್ಪುಗುಂ (ಸೂಕ್ತಿಸು. ೦೬-೨೯). [ಮನೆ + ಪೆರ್ಗಡೆ೧]

**ಮನೆವೊಗು**. ಮನೆವುಗು. ಮನೆಹೊಗು (ಕ್ರಿ). ಗೃಹವನ್ನು ಪ್ರವೇಶಿಸು: ಮನೆಯೊಳಗೆ ಹೋಗು : ಪೇಡಿಯಾಗಿ ಮತ್ಸ್ಯನ ಮನೆವೊಕ್ಕ ಪಾರ್ಥನನೆ ಪಾರ್ಥನೆನಲ್ಕೊರೆ ಗಂಡರೆಂಬರೇ (ಗದಾಯು. ೩-೩೨). **ಮನೆವುಗು** : ಪೆಱಸ ಮನೆವುಗುವುದು (ಕಜೀ. ೦-೦೩-೯). **ಮನೆ ಹೊಗು** : ಎಲ್ಲರು ನಕ್ಕರು ನಾಚಿ ಮನೆಹೊಕ್ಕಳು ಧೀರು (ಜಂಕಾಕ. ೦೯೯-೯). [ಮನೆ + ಪೊಗು]

**ಮನೆಸರಕು** (ನಾ). ಸಂಸಾರಕ್ಕೆ ಬೇಕಾದ ವಸ್ತು : ಮನೆಯು ಸಾಮಾನು : ಪೊಸಸಕ್ಕರೆ, ಮನೆಸರಕು (ಕಬ್ಬಿ. ಸು. ೬೭ ಕ್ರ ಪೋ). [ಮನೆ + ಸರಕ್ಕು]

**ಮನೆಸುಂಕ** (ನಾ). = ಮನೆದೆರಿಗೆ : ಮನೆಸುಂಕ ನೆಜೆಮುಲವತ್ತಿಯು ಸುಂಕವನಿತಂ (ಕೃ.ಅಂ. ೦೯೪೦. ೨೯-೪ ; 1173). [ಮನೆ + ಸುಂಕ$_1$]

**ಮನೆಹಣ** 'ಮನೆವಣ' ನೋ.

**ಮನೆಹಾಳ** (ನಾ). ೧. ಮನೆಯನ್ನು ಹಾಳುಮಾಡುವವನು ; ಮನೆ ಮುರುಕ : ಮನೆಹಾಳನ ಮನೆಯಲ್ಲಿ . . . ಸೇರಿದ್ದನೆಂಬ ಸಂಗತಿ (ಪುಜರು. ೩೩೦). ೨. ನಾಯಿ : "ಮನೆಹಾಳನಿನಲು ಕುಕ್ಕುರನಕ್ಕು" (೪೫೮. ೦೨೪). (ಗು). ೩. ಕೆಡುಕುಬುದ್ಧಿಯು ; ದುಷ್ಟತನದ : ಮನೆಹಾಳ ಬುದ್ಧಿಯನ್ನು ಎಷ್ಟು ದಿನಗಳಿಂದ ಅಭ್ಯಾಸಮಾಡಿದ್ದಿರಿ (ಪ್ರಪ್ರ. ೩೪) ; ಪೋಲೈನವಿ ಸಲ್ಲಿಸಿದ್ದ ಮನೆಹಾಳ ಡೈರೆಕ್ಟರ್ ನೀತಿಬಾಹಿರನಾಗಿದ್ದನು (ಪುಜರು. ೩೩೩). [ಮನೆ + ಹಾಳು ( < ಪಾಟು ) + — ಅ$_7$]

**ಮನೆಹಾಳಿ** (ನಾ). ಮನೆಯನ್ನು ನಾಶಮಾಡುವವಳು : ಸಂಸಾರ ಮುರಿಯುವವಳು : ನಿಂಗೋದು ಮೊಗಾನು ಹೆತ್ತುಕೊಡ್ಲಿಲ್ಲ . . . ಮನೆಹಾಳಿ, ಮನೆಹಾಳಿ ಅವ್ವ (ಸವಿಶಿಂ. ೩೩೨). [ಮನೆಹಾಳ + —ಇ$_3$]

**ಮನೆಹೆಂಡತಿ** 'ಮನೆವೆಂಡತಿ' ನೋ.

**ಮನೆಹೊಗು** 'ಮನೆವೊಗು' ನೋ.

**ಮನೋಗತ** (ಗು). ೧. ಮನಸ್ಸಿನಲ್ಲಿರುವ; ಹೃದಯದೊಳಗಿರುವ : ಎನ್ನ ಮನೋಗತಧ್ವಾಂತಬಂಧಮುಳಿಜೆತ್ತಿಲ್ಲಂ (೪೭೦೩. ೨-೬೭). (ನಾ). ೨. ಅಂತರಂಗದಲ್ಲಿರುವ ಆಶಯ, -ಅಭಿಪ್ರಾಯ : ಮನೋಗತಮುಂ ವಚೋಗತಂ ಮಾಡಿ (ಶಾಂತಿಪು. ೬-೦೦೭ ಪ); ನಿಜಮನೋಗತಮನಿಂತೆಂದು (ಚಂದ್ರಪ್ರ. ೪-೦೪ ಪ). [ಸಂ.]

**ಮನೋಗತಿ** (ನಾ). ಮನಸ್ಸಿನ ಗಮನ ; ಮನಸ್ಸಿನ ವೇಗ : ತತ್ಕಾಲ ವೇಳೆಗಳಂ ಮನೋಗ[ಶಾಕಾಂ.ರ]ತಿ ಭಾವನೆಯುನಿಜಿದು (೭೫ಪು. ೪೦-೦೭). [ಸಂ.]

**ಮನೋಗದ** (ನಾ). ಮನಸ್ಸಿನ ಚಿಂತೆ : ಚಿತ್ತದ ವ್ಯಥೆ : ಕಾತುದು ಭೀತಿವಲ್ಲರಿ ಮನೋಗದಮುಂ ತಜಿಸಂದು ನಿಂದುದು. . . ಚಿಂತಾತುರ ನಾಗಿ ಬೆಸ್ಸಳಿಸಿ ಬೀವಸಮುಂ ತಳೆದಂ ಧನಂಜಯಂ (ಶಬಶಂ. ೪-೦೦೩). [ಸಂ.]

**ಮನೋಗಮನ** (ನಾ). = ಮನೋಗತಿ : ರಣಾಜಿರಂಗದಂತೆ ಮನೋಗಮನವಾಜಿರಂಜಿತಮುಂ (ರಾಜಶೇ. ೩-೦೭ ಪ). [ಸಂ.]

**ಮನೋಗುಪ್ತಿ** (ನಾ). [ಜೈನ] ಮನೋಗುಪ್ತಿ, ವಚನಗುಪ್ತಿ ಮತ್ತು ಕಾಯಗುಪ್ತಿಗಳೆಂಬ ಗುಪ್ತಿತ್ರಯಗಳಲ್ಲಿ ಒಂದು ; "ಸುಖದುಃಖಗಳಿಗೆ ವಶವಾಗದೆ ಸರ್ವರಲ್ಲಿಯೂ ಸಮತಾಭಾವವನ್ನು ತೋರಿ ಆತ್ಮಕಲ್ಯಾಣವನ್ನು ನೆನೆಯುವುದು" (ಕೈಶಕೋ. ೨೦೦) : ಮನಗುಪ್ತಿ ವಚನಪ್ರವೃತ್ತಿಯನ್ನು ತಡೆಯುವುದು ; ಮನೋಗುಪ್ತಿ (ಮನಃ ಪ್ರವೃತ್ತಿಯನ್ನು ತಡೆಯುವುದು) (ಕೈಪ. ೬೮). [ಸಂ.]

**ಮನೋಗ್ಲಾನಿ** (ನಾ). ಮನಸ್ಸಿಗೆ ಉಂಟಾಗುವ ದುಃಖ ; ಮನೋವ್ಯಥೆ : ಅಂತೇಕಾಂತದೊಳ್ ತಮ್ಮ ತಂದೆಯ ಮನೋಗ್ಲಾನಿಯಂ ಪಜಿವಡೆ ನುಡಿದು (ಸುಕುಮಾ. ೭-೯ ಪ) ; ಜನಿತಜನಮನೋಗ್ಲಾನಿನಿದಾಘಂ ನಿವಾಘಂ (ಚಂದ್ರಪು. ೯-೩೬); ಬಿಡು ಮನೋಗ್ಲಾನಿಯನು ಸತಿ ಕೆಡೆನುಡಿದು ದೆಲ್ಲವನೆನಗೆ ಸೈರಿಸು ಮಡದಿಯರಲೀಸುಂಬು ಗುಣ (ಕುವ್ಯಾಕು. ೬-೩೦). [ಸಂ.]

**ಮನೋಜ** (ಗು). ೧. ಮನಸ್ಸಿನಲ್ಲಿ ಹುಟ್ಟಿದ. (ನಾ). ೨. ಇಚ್ಛೆ; ಬಯಕೆ. ೩. ಕಾಮ ; ಮನ್ಮಥ : ಮನೋಜವಿನಾಶದಿನಟ್ಟ ತನ್ಮನೋಹರಿಯ ಪೊದಟ್ಟ ಕಣ್ಬನಿಗಳಂತಮಲಸ್ಫಟಿಕಾಕ್ಷಮಾಲೆ (ಕಾದಂಪೂ. ೭೩೩); ಶ್ರೀಜಗದೀಶ್ವರನೊಳ್ ಮನೋಜ ಕಲಹಂದಾಳ್ವೆಗ್ಗಿಗೀಪಾವ (ಸಿ.ಶಿಮೊ.೫. ೪೩). [ಸಂ.]

**ಮನೋಜನಿತ** (ಗು). ಮನಸ್ಸಿನಲ್ಲಿ ಹುಟ್ಟಿದ : ಮನೋಜನಿತ ಮುದ ನನಿಲತನಮನನನ್ಯತಮಚಿನಪ್ರಪಂಚನಿಂತಿರೆ ನುಡಿದಂ (೪೭೦೩. ೨-೬೨). [ಸಂ.]

**ಮನೋಜಯ** (ನಾ). ೧. ಮನಸ್ಸಿನ ಗೆಲುವು. ೨. ಮದುವೆಯ ನಿಶ್ಚಿತಾರ್ಥ : ಮನೋಜಯಕ್ಕೆ ಹೋದಾಗ ಶಕುನಗಳು ಸರಿಯಾದರೆ ಹೆಣ್ಣಿನ ಮನೆಯಲ್ಲಿ ಹೆಣ್ಣು ಕೇಳುವ 'ಪರಸ್ತಾಪ'. . . ಆಗುತ್ತದೆ (ಜಪ್ಪನೃರು. ೬೦). [ಸಂ.]

**ಮನೋಜವ** (ನಾ). ಮನಸ್ಸಿನ ವೇಗ : ಜ್ಯೋತಿರ್ವನಮುಂ ಮನೋಜವ ವಿನೆಯ್ದಿ (ಶಾಂತಿಪು. ೬-೩೪). [ಸಂ.]

**ಮನೋಜಸೂದನ** (ನಾ). ೧. ಮನ್ಮಥನನ್ನು ನಾಶಮಾಡಿದವನು. ೨. ಶಿವ : ನೊಸಲೊಳ್ ಕಣ್ಣುಳ್ಳ ಮನೋಜಸೂದನಂ ಪೆಜನದಾವನಾನೆ ವಲ್ (ಜಗಪ. ೩-೪೭). [ಸಂ.]

**ಮನೋಜಹರ** (ನಾ). = ಮನೋಜಸೂದನ ೨ : ಮನೋಜಹರ ಮನೋಹರನೆಂಬ . . . ಕಡುಸಲುಗೆಯ ಬಿರುದಿನ ಬಮುಧಿಭದ ಕಪಳಾರವಂ ದೆಸೆದೆಸೆಗೆ ಪರಿಯೆ (ನಂಜಶ. ೬-೨೨). [ಸಂ.]

**ಮನೋಜಾಗಮ** (ನಾ). ಕಾಮಶಾಸ್ತ್ರ ; ಮದನಾಗಮ : ಅಂಬರಚರ ಮಿಥುನರತಾಡಂಬರದೊಡನೊಗೆದ ಸಗದ ಮಾರ್ದನಿ ಕಿವಿಗಂ ತಿಂಬಿ ಮನೋಜಾಗಮಗುರುವೆಂಬುದನೊಡನೆಂಬ ಶಿಷ್ಯನಂ ಪೋಲ್ತಿರ್ದುಂ (ಶಾಂತಿಪು. ೨-೧೦೨). [ಸಂ.]

**ಮನೋಜಾಡ್ಯ** (ನಾ). ಮನಸ್ಸಿನ ದೌರ್ಬಲ್ಯ ; ಮನೋರೋಗ : ನಮ್ಮಲ್ಲಿಯ ಮನೋಜಾಡ್ಯ, ಸ್ವಾರ್ಥ . . . ನಮ್ಮ ದಾಸ್ಯಕ್ಕೆ ಕಾರಣವಾಗಿದೆ (ವರ್ಮಿಶಾ. ೫೨). [ಸಂ.]

**ಮನೋಜಾತ** (ಗು). ೧. ಮನಸ್ಸಿನಿಂದ ಹುಟ್ಟಿದ. (ನಾ). ೨. ಕಾಮ ; ಮನ್ಮಥ : ಭರತೆಚಮೂಪಂ ಮನೋಜಾತರೂಪಂ (೬೪. VI. ೩೪ಪು. ೦೬೦-೦೬೪ ; 1137). [ಸಂ.]

**ಮನೋಜ್ಞ** (ಗು). ೧. ಸುಂದರವಾದ : ಚೆಲುವಾದ : ಮುಂತೆ ಕನ್ನಿಕೆ ಸುರರಾಜನ ಮುಂದೆ ಮಾಲೆಯಿಡಿದ ಮನೋಜ್ಞಸಿತಸಿಂಧುವಾರ ಮಾಲೆಯನಿಟಿಕುಂ (ಶಾಂತಿಪು. ೦೦-೯೬) ; ಮಮುನಾಸದಿ . . . ತೆಗೆಮುಟ್ಟವೊಲೆ ಮನೋಜ್ಞಾಂಬರಮನಿಸಿದುದಂಬುನಿಧಾನಂ (ರಾಜಶೇ. ೦_೯೦). (ನಾ). ೨. ಚೆನ್ನಾಗಿರುವಂಥದು : ಮನೋವೇದ್ಯವಾದುದು : " ಸುಂದರಂ . . . ಮನೋಜ್ಞಂ, ಮಂಜು, ಮಂಜುಳಂ ೧೨ ಸೊಗಸಾದದ್ದು, ಚೆನ್ನಾಗಿರುವಂಥಾದ್ದು " (ಸಿದ್ಧಾಂತಿ. ೩೩೬) ; ಈ ಎಲ್ಲ ಅನುಭವವೂ ಮನೋಜ್ಞವಾದುದು ಎಂದರೆ ಮನೋವೇದ್ಯವಾದುದು (ಕಾಂಶ. ೯೭). [ಸಂ.]

**ಮನೋಜ್ಞತೆ** (ನಾ). ಚೆಲುವು : ರಮಣೀಯತೆ : ಅಭಿಜ್ಞಾರೇಖೆ ಗಳೆನಿಸಿ ಮನೋಜ್ಞತೆಯ ತ್ರಿವಳಿರೇಖೆ ತಳೆದೆಸೆದಿರ್ಕುಂ (ಚಂದ್ರಪು. ೦೨-೨೩). [ಸಂ. ಮನೋಜ್ಞತಾ]

**ಮನೋಜ್ಞೆ** (ನಾ). ೧. ಚೆಲುವೆ ; ಸುಂದರಿ : ಆತನ ಮನೋಜ್ಞೆ ಸುಮತಿಯುಮಜಿದಂ ಪೊತ್ತುಮಪೊಲಸ್ಸಯಂ ದೊರೆವೆತ್ತಿರೆ ಪರಸೇನನೆಂಬ ಮಗನಂ ಪೆತ್ತಳ್ (ಶಾಂತಿಪು. ೯-೩೮). ೨. ಒಂದು ಬಗೆಯ ಗೈರಿಕ ಧಾತು ; ಮಣಿಶಿಲೆ. ೩. ಮಾದಕಪಾನೀಯ : ಮದ್ಯ. ೪. ಜೀರಿಗೆ. [ಸಂ. ಮನೋಜ್ಞಾ]

**ಮನೋದಯಿತೆ** (ನಾ). ೧. ಪ್ರಿಯೆ ; ಮನದನ್ನೆ. ೨. ಹೆಂಡತಿ ; ಪತ್ನಿ : ಶ್ರೀಮದಯಿತನ ಬಾಯಿಕನ ಮನೋದಯಿತೆಗೆ . . . ತಾವಾದರ್ ತನಯರ್ (ಎಕ. II, ೦೪೯-೪; ಸು. ೯೫೦). [ಸಂ. ಮನೋದಯಿತಾ]

**ಮನೋದಾರ್ಢ್ಯ** (ನಾ). ಮನಸ್ಸಿನ ದೃಢತೆ : ಚಿತ್ತದ ಸ್ಥಿರತೆ : ಇಂದ್ರ ಮತ್ತು ಅಗ್ನಿಯು ಶಿಬಿಯ ಮನೋದಾರ್ಢ್ಯವನ್ನು ಪರೀಕ್ಷಿಸುವುದ ಕ್ಕೋಸ್ಕರ ಅವನಿಗೊಂದು ಧರ್ಮಸಂಕಟವನ್ನು ತಂದಿಡುತ್ತಾರೆ (ಶಾರದ. ೧೦೩). [ಸಂ.]

**ಮನೋದುಃಖ** (ನಾ). ಮನಸ್ಸಿನ ಚಿಂತೆ : ಮನೋವ್ಯಥೆ : ಎನಿತುಂ ಪರಿಗ್ರಹದ ತೊಡರ್ವಾನಿತೆ ಮನೋದುಃಖಂ (ಅಜಿಪು. ೩-೬೨). [ಸಂ.]

**ಮನೋಧರ್ಮ** (ನಾ). ಮನಸ್ಸಿನ ಗುಣಸ್ವಭಾವ : ಚಿತ್ತವೃತ್ತಿ : ಮನೋಧರ್ಮವೆಂದರೆ ಪ್ರತಿಜೀವಿ ಭಿನ್ನವಾದ ಸ್ವಭಾವ ಸಂಸ್ಕಾರಗಳಿಗೆ ಅನುರೂಪವಾದ ವೃತ್ತಿಪ್ರವೃತ್ತಿಗಳು, ಇಷ್ಟಾನಿಷ್ಟಗಳು (ಅರ್ಚ. ೧೨). [ಸಂ.]

**ಮನೋನಂದನ** (ನಾ). ಮನಸ್ಸಿಗೆ ಸಂತೋಷವನ್ನುಂಟುಮಾಡು ವಂಥದು : ಚಿತ್ತಕ್ಕೆ ಆನಂದಕರವಾದುದು : ಭದ್ರಶಾಲದಿಂ ಸಂಧಿಸಿ ನಿಂದ ನಂದನದಿನೊಪ್ಪುವ ಸೌಮನಸಾಖ್ಯದಿಂ ಮನೋನಂದನಮಪ್ಪ ಪಾಂಡುಕದಿನಾ ಗಿರಿರಾಜವಿಲಾಸಮುಚ್ಚಿಯುಂ ತಂದುದು (ಶಾಂತಿಪು. ೫-೨). [ಸಂ.]

**ಮನೋನಿಗ್ರಹ** (ನಾ). ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವುದು: ಪುರುಷನೆದುರು ಸ್ತ್ರೀ ಮಾಯೆ ಸ್ತ್ರೀಯೆದುರು ಪುರುಷ ಮಾಯೆ. ಹೀಗಿದ್ದರೂ ಮನೋನಿಗ್ರಹವೇ ಆತ್ಮಬಲ (ಕರ್ಣಕ. ೬೬). [ಸಂ.]

**ಮನೋನಿವಾಸ** (ನಾ). ಮನಸ್ಸನ್ನು ನೆಲೆಯಾಗಿ ಉಳ್ಳವನು: ಮನ್ಮಥ: ಮನೆಮನೆದಪ್ಪದೊಪ್ಪಿದುದು . . . ಮನೋನಿವಾಸನಿಂಚಿನ ಕಥೆ ಮನ್ಮಥ ಕ್ಷಿತಿಪನಾರ್ಪ ಮನೋಜನ ಮಂಗಳೋತ್ಸವಂ (ರಾಜಶೇ. ೧೧-೭೯). [ಸಂ.]

**ಮನೋನುರಾಗ** (ನಾ). ಮನಸ್ಸಿನ ಪ್ರೀತಿ ; ಅಂತಃಕರಣದ ಅನುರಾಗ: ಈಗೆ . . . ಕಿಂನರಪಂನಗಯಕ್ಷರಾಕ್ಷಸ ಪ್ರಭುತುಳಪಂದಿತಂ ಹರಿಹರೇಶ್ವರ ನೊಲ್ದು ಮನೋನುರಾಗಮಂ (ಕಇ. IV, ೦-೫; 1204); ಏನು ಬೆಸಸಿನ ಗೇನು ಹದ ನಿಮಗೀನು ಮಗನುಪಚಾರವೇಕೆ ಮನೋನುರಾಗದಲಜಾಹಿ ಯೆಂದನು ಪಾರ್ಥನೂರ್ವಶಿಗೆ (ಕುಮ್ಯಾಭಾ. ೬-೦೯). [ಸಂ.]

**ಮನೋನೈರ್ಮಲ್ಯ** (ನಾ). ಮಾನಸಿಕ ಸ್ವಚ್ಛತೆ : ಚಿತ್ತಶುದ್ಧಿ : ಶಿವನು ಸದ್ಭಕ್ತನಿಗೆ ನೀಡಬಲ್ಲ ಸದವಕಾಶವನ್ನು ಕಾಯುತ್ತಿರುವನು. . . ಮನೋ ನೈರ್ಮಲ್ಯ, ಪಾಪಭೀರುತ್ವಗಳೇ ಈ ಅವಕಾಶಗಳು (ಕಿ.ಬಿ. ೬೬). [ಸಂ.]

**ಮನೋನ್ಮನಿ** (ನಾ). ೧. ಪಾರ್ವತಿ : ಪ್ರಮಥನೀ ಮನೋನ್ಮನೀ ನೆರೆ ರಾಜಿಸುಗುಪ್ತ ಮಾತೃ ಭುವನೀ (ಪಾಲ್ಕುಶು. ೬-೪-೦೬); ಮಹೇಶ್ವರಿ ಮನೋನ್ಮನಿ ಜಗನ್ಮಾತೆ (ಕಸಮ. ೧-೬-೩). ೨. ಶಕ್ತಿಯರಲ್ಲಿ ಒಬ್ಬಳು: ಆಂಬಿಕೆ ಗಣಾನಿ ಈಶ್ವರಿ ಮನೋನ್ಮನಿ ಎಂಬ ಚತುರ್ದಳ ಶಕ್ತಿಯರಿರ್ಪರು (ಅನುಭ. ೨೮೦-೪೮). ೩. [ಯೋಗ] ಅವಸ್ಥಾತ್ರಯಗಳಲ್ಲಿ ಒಂದು : ಉನ್ಮನಿ ಮನೋನ್ಮನಿ ಸಹಜಾವ್ಯವಸ್ಥಾತ್ರಯಂಗಳುಂ (ಏಕೋ. ೦೫೪). [ಸಂ. ಮನೋನ್ಮನೀ]

**ಮನೋಬಲ** (ನಾ). ಮನಸ್ಸಿನ ಶಕ್ತಿ : ಆತ್ಮಬಲ : ತನ್ನ ಚಾತುರ್ವರ್ಣಂತ ಬಲವಂಬೀರೊಡಂ ಮನೋಬಲವಂಬೀಯದೆ (ಶಾಂತಿಪು. ೪-೩೨ ವ). [ಸಂ.]

**ಮನೋಭಂಗ** (ನಾ). ಮನಸ್ಸಿನ ಆಸೆಯ ನಾಶ : ನಿರಾಶೆ : ಸೇನಾ ಭಂಗದಿಂದಂ ಮನೋಭಂಗಮುಮಪ್ಪಂತು ಪುಸಿವಾರ್ತೆಯಂ ಪೇಳ್ದಂ (ಸುಕುಮಾ. ೬-೮ ವ). [ಸಂ.]

**ಮನೋಭವ** (ಗು). ೧. ಅಂತರಂಗದಲ್ಲಿ ಉಂಟಾಗುವ : ಮನಸ್ಸಿನಲ್ಲಿ ಹುಟ್ಟುವ. (ನಾ). ೨. ಕಾಮ : ಮನ್ಮಥ : "ಪ್ರದ್ಯುಮ್ನ . . . ಮನೋಭವ—ಈ ೨೮ ಕಾಮ(ದೇವ)ನ ಪೆಸರ್" (ಶಬ್ದಮ. ೨-೩೩) : ದಿವಿಜನೋ ಫಣಿನಾಯಕನೋ ಮನೋಭವನಿವಂ (ಕಬಿರಾ. ೧-೧೯೦); ಮನೋಭವನೊಲಗೆಲಸ ಬಲುಹಾಯ್ತು (ಕುಮ್ಯಾಭಾ. ೨-೮೨). [ಸಂ.]

**ಮನೋಭವಿತ್ವ** (ನಾ). [ಶೈವ] ಒಂದು ಬಗೆಯ ಕ್ರಿಯಾಶಕ್ತಿ; ಅತಿಶಯ ವಾದ ಶೀಘ್ರತೆಯನ್ನುಂಟುಮಾಡುವ ಶಕ್ತಿ : ಮನೋಭವಿತ್ವ, ಕಾಮ ರೂಪಿತ್ವ ಮತ್ತು ವಿಕ್ರಮಧರ್ಮಿತ್ವ ಎಂಬಿವೇ ಈ ಮೂರುವಿಧ. ಅತಿಶಯವಾದ ಶೀಘ್ರತೆಯನ್ನುಂಟುಮಾಡುವ ಶಕ್ತಿಯು ಮನೋಭವಿತ್ವ (ಪಾಶಪ. ೬೨೬). [ಸಂ.]

**ಮನೋಭಾವ** (ನಾ). ಅಂತರಂಗದ ಭಾವನೆ : ಆಲೋಚನೆ : ನೊಳಂ ಬರ ಈ ಸ್ವತಂತ್ರಮನೋಭಾವವು ಅವರು ಪೋಷಿಸಿದ ಸಾಂಸ್ಕೃತಿಕ, ಧಾರ್ಮಿಕಜೀವನಕ್ಷೇತ್ರದಲ್ಲಿ ಎದ್ದುಕಾಣುತ್ತದೆ (ನೊಳಂಬ. ೬೪). [ಸಂ.]

**ಮನೋಭಿಲಷಿತ** (ಗು). ೧. ಬಯಸಿದ ; ಇಚ್ಛಿಸಿದ : ಮಹಾಬಲ ಖಚರೇಂದ್ರಂ . . . ಮನೋಭಿಲಷಿತವಿಷಯಸುಖಾನುಭವನಿರತನುಮಾಗಿ (ಆದಿಪು. ೨-೨೩ ವ). (ನಾ). ೨. ಅಪೇಕ್ಷೆ ; ಬಯಕೆ : ಆತನ ಪುಟ್ಟಿದಿಂ ಬಟ್ಟಿಯುಂ ಕಾಮಧೇನು ಮನೋಭಿಲಷಿತಮಪ್ಪುದಂ ಕುಡುವುದು (ಕಾಪುಂಶ. ೫೯). [ಸಂ.]

**ಮನೋಭಿಲಾಷೆ** (ನಾ). ಅಪೇಕ್ಷೆ ; ಬಯಕೆ : ನಾನು ಯಾವಾಗಲಾದರೂ ನಿನ್ನ ಮನೋಭಿಲಾಷೆಯನ್ನು ಉಪೇಕ್ಷಿಸಿದ್ದೇನೆಯೆ ? (ಶಾಂತಲಾ. ೨೯೬). [ಸಂ. ಮನೋಭಿಲಾಷ]

**ಮನೋಭಿವಾಂಛಿತ** (ನಾ). = ಮನೋಭಿಲಷಿತ ೨ : ಹರನಿಲ್ಲಿಗೆ ಬರಲಿ ಕರುಣಿಸಲಿ ನಿನ್ನ ಮನೋಭಿವಾಂಛಿತವ (ಕುಮ್ಯಾಭಾ. ೪-೪೬). [ಸಂ.]

**ಮನೋಮುಕ್ತ** (ನಾ). ಮನಸ್ಸಿನ ಕೋಟಲೆಗಳಿಂದ ಬಿಡುಗಡೆ ಹೊಂದಿದವನು : ಅಜ್ಞಾನ ಅಂತರಂಗದಲ್ಲಿ ಭರಿತವಾಗಿಪ್ಪುದಾಗಿ ಮನೋ ಮುಕ್ತನು ನೀನು ನೋಡಯ್ಯ (ಅವತಂ. ೨೩೦-೦೦೯೬). [ಸಂ.]

**ಮನೋಮುಕ್ತಿ** (ನಾ). ಮನಸ್ಸಿನ ಕೋಟಲೆಗಳಿಂದ ದೂರವಾಗುವುದು: ಕಲ್ಪಿತಗುಣ ನಾಸ್ತಿಯಾಯಿತ್ತೆ ಬಸವಾ ಮನೋಮುಕ್ತಿಯಾಯಿತ್ತೆ [ಶಾಕಾಂ. ಮುಕ್ತವಾಯಿತ್ತೇ] ಸಂಗಯ್ಯನ ಗುರುಬಸವಾ (ನೀಲಸ. ೨೪-೦೦). [ಸಂ.]

**ಮನೋಮುದ** (ನಾ). ಮನಸ್ಸಿನ ಸಂತೋಷ : ಸಾಹಸಭೀಮಂಗೆ ಮನೋಮುದಂಬೆರಸು ಕೃಷ್ಣಂ ಕಟ್ಟಿದಂ ಪಟ್ಟಮಂ (ಗದಾಯು. ೧೦-೨೨). [ಸಂ.]

**ಮನೋಮೂರ್ತಿ** (ನಾ). ಮನಸ್ಸಿನಲ್ಲಿ ನಿಂತ ಆಕಾರ : ಮನವನಿತ್ತು ನಿಮ್ಮ ಕಂಡಿಸೆನೆಂದಡೆ ಮನೋಮೂರ್ತಿ ನೀನು (ಮೋಳಿಗ. ೨೯೩-೫೭). [ಸಂ.]

**ಮನೋಯೋಗ** (ನಾ). [ಜೈನ] ಯೋಗತ್ರಯಗಳಲ್ಲಿ ಒಂದು : ಭಾವನೆಯ ಉತ್ಪತ್ತಿಗಾಗಿ ಯತ್ನಿಸುವುದು : ಯೋಗತ್ರಯಗಳು ಆತ್ಮನಲ್ಲಿ ಸ್ಪಂದನವನ್ನು ಉಂಟುಮಾಡುತ್ತವೆ. ಭಾವನೆಯ ಉತ್ಪತ್ತಿಗಾಗಿ ಯಾವ ಪ್ರಯತ್ನ ನಡೆಯುವುದೋ ಅದೇ ಮನೋಯೋಗವು (ಜೈಸಧ. ೩೯೮). [ಸಂ.]

**ಮನೋರಂಜನ** (ನಾ). ಮನಸ್ಸನ್ನು ರಂಜಿಸುವುದು.— ವಿನೋದ ಪಡಿಸುವುದು : ಲೋಕದಲ್ಲಿರುವ ಸಮಸ್ತಪ್ರಜೆಗಳ ಮನೋರಂಜನವ ಮಾಡುವುದು (ಕಗಪ. ೦೦೨ ಉತ್ತರಕಾಮಿಕತಂತ್ರ). [ಸಂ.]

**ಮನೋರಂಜನಿಹೂಬಳ್ಳಿ** (ನಾ). ಒಂದು ಬಗೆಯ ಹೂವಿನ ಬಳ್ಳಿ : ಮನೋರಂಜನಿಹೂಬಳ್ಳಿ, ಕಂದಾಳಸಂಪಿಗೆ (ವೃಕ್ಷಶಿ. ೪-೦೫೪).

[ ಮನೋರಂಜನಿ$_{0}$ + ಹೂ$_{2}$ ( < ಪೂ$_{2}$ ) + ಬಳ್ಳಿ ]

**ಮನೋರಂಜನೆ** (ನಾ). = ಮನೋರಂಜನ : ಜನರು ಅವನ ಕಥೆಯ ಮನೋರಂಜನೆ ಮಾಡಿಕೊಂಡ ಮೇಲೆ ಮಾದಲಿಸುತ್ತಿದ್ದರು (ಕಂಬಪು. ೩೬). 'ಮನರಂಜನೆ' ಪಠಾ. [ ಸಂ. ಮನೋರಂಜನ ]

**ಮನೋರಥ** (ನಾ). ೧. ಮನಸ್ಸಿನ ಬಯಕೆ, – ಅಪೇಕ್ಷೆ : ದೊರೆವಡೆ ದಿವ್ಯದಿವ್ಯರ ಮನೋರಥಮಂಗಳಂ (ಶಾಂತಿಪು. ೦-೬೯); ಇಂತು ರಮೆಯು

ಮನೋರಥಂಗಳ ಸಂತಸಮನೀವುತ್ತ ಲಕ್ಷ್ಮೀಕಾಂತನೆಸೆದಿರೆ (ಕಾಶಿಖಂ. ೧೧-೫೬) ; ತನ್ನ ಆ ಮನೋರಥ ಕೈಗೂಡಬಹುದೆಂದು ನಾಗಕ್ಕನ ಹೃದಯ ಹರ್ಷಿತವಾಯಿತು (ಮರಳು. ೬೧೮). ೨. ಬಯಕೆಯು ಈಡೇರಿದವನು: ಅಪೇಕ್ಷೆಯು ನೆರವೇರಿದವನು : ಸಫಲಮನೋರಥನಾಗಿ ಹಿಂದಿರುಗಿದ ವಾಜಶ್ರವಸನನ್ನು ಕಂಡು ವಿಶ್ವವಾರಾದೇವಿಗೆ . . . ಸಂತೋಷವಾಯಿತು (ವಿಶಂಪಾ. ೩೪). [ಸಂ.]

**ಮನೋರಥಮಹೀರುಹ** (ನಾ). ಇಷ್ಟಾರ್ಥವನ್ನು ಪೂರೈಸುವುದೆಂದೂ ಕೇಳಿದುದನ್ನು ನೀಡುವುದೆಂದೂ ನಂಬಲಾದ ವೃಕ್ಷ : ಕಲ್ಪವೃಕ್ಷ : ತೋಯಜನಾಭಂ . . . ವತ್ಸಕುಲಮಂ ಕಾದಂ ಕಾದು . . . ಮನೋರಥ ಮಹೀರುಹಂ ನಾಕಿಗಳಾ (ಜಗಧಿ. ೩-೭೭). [ಸಂ.]

**ಮನೋರಥವಡೆ** (ಕ್ರಿ). ಬಯಸಿದುದನ್ನು ಪಡೆ ; ಇಷ್ಟಾರ್ಥವನ್ನು ಹೊಂದು : ರಥಾಂಗಾವಳಿ ಮನೋರಥವಡೆಯೆ ರವಿಯುದಯಾಚಲಕ ಒಂದ (ಕುವ್ಯಾ.ದ್ರೋ. ಒಪ್ಪ. ೧-೯೩ ಅಪಶ್ರ). [ಮನೋರಥ + ಪಡೆ$_1$]

**ಮನೋರಥಸಿದ್ಧಿ** (ನಾ). ಬಯಕೆಯು ಈಡೇರುವುದು ; ಅಪೇಕ್ಷೆಯು ಪೂರ್ಣಗೊಳ್ಳುವುದು : ಏಕಾಗ್ರತೆಯಿಂದ, ಸಾಧನೆಯನ್ನು ಮಾಡಿ ಅವರಿಗೆ ಮನೋರಥಸಿದ್ಧಿಯುಂಟಾಯಿತು (ಉಜ್ಞ). [ಸಂ.]

**ಮನೋರಮ** (ಗು). ಸುಂದರವಾದ ; ಚೆಲುವಾದ. [ಸಂ.]

**ಮನೋರಮಣ** (ನಾ). ಮನಸ್ಸಿನ ಒಡೆಯ ; ಪ್ರಿಯಕರ ; ಮನದನ್ನ: ಹೂಂಕೃತಪ್ರಣವಮೊಪ್ಪೆ ಶರೀರಮನೊಕ್ಕು ತನ್ಮನೋರಮಣನ ಸನ್ನಿಧಾನ ಮನುಪಾರ್ಜಿಪ ಯೋಗಿನಿಯಂತಿರೊಪ್ಪಿದಳ್ (ಕಾವ್ಯಸಾ. ೬೬೩). [ಸಂ.]

**ಮನೋರಮಮುದ್ರೆ** (ನಾ). [ಶೈವ] ಜಪತಪ ಅನುಷ್ಠಾನದ ಸಂದರ್ಭ ದಲ್ಲಿ ಆಚರಿಸುವ ಮುದ್ರೆಗಳಲ್ಲಿ ಒಂದು : ಅಸ್ತ್ರಮುದ್ರೆ . . . ಮನೋರಮಮುದ್ರೆ . . . ಸಂಹಾರಮುದ್ರೆಯೆಂಬ ಸಕಲಮುದ್ರಾ ಲಕ್ಷಣವನರಿವ (ಶಿವ. ೯೩). [ಸಂ. ಮನೋರಮಮುದ್ರಾ]

**ಮನೋರಮೆ** (ನಾ). ಮನಸ್ಸನ್ನು ರಮಿಸುವವಳು ; ಮನದನ್ನೆ : ಪ್ರಿಯೆ : ಪಕ್ಷಿಗಾನದಿಂದೆಸ್ತರಂತೆ ನಿದ್ರಿತ ಮನೋರಮೆಯ ತೋಳ್ತಳ್ಕೆಸರೆ ಯಿಂದ ಬಿಡಿಸಿಕೊಂಡು (ತತ್ತ್ವಗ. ೫೦-೧೩೬೩).

[ಸಂ. ಮನೋರಮಾ]

**ಮನೋರುಜೆ** (ನಾ). ಮಾನಸಿಕ ಕಾಯಿಲೆ : ಚಿಂತೆ : ವಿದ್ಯೆ ಚಿತ್ರರಿಪ ಶಿಶಿರಕ್ರಿಯೆಯಂ ತನ್ನ ಮನೋರುಜೆಗವಕ್ರಿಯೆಯಾಗೆ ಕಂಡು (ಚಂದ್ರ.ಕ. ೮-೬೬ ವ). [ಸಂ. ಮನೋರುಜಾ]

**ಮನೋರೋಗ** (ನಾ). = ಮನೋರುಜೆ : ತಾಯಿಗಾದ ಮನೋರೋಗಕ್ಕೆ ಕಾರಣ ಯಾರೆಂದು ಅಣ್ಣತಂಗಿಯರಿಗೆ ಗೊತ್ತು (ಕೀವತೀತ. ೨೩); ಮನೋರೋಗ – ಅದೊಂದೆ ; ಹತ್ತುವರ್ಷದಿಂದ . . . ಬೆಂದುಹೋಗಿದೆ ಅವರ ದೇಹ – ಜೀವ ಎರಡೂ (ವೀರಮೋ. ೬೯). [ಸಂ.]

**ಮನೋವಲ್ಲಭ** (ನಾ). ಪ್ರಿಯತಮ : ಪ್ರಾಣಕಾಂತ : ಮನೋವಲ್ಲಭ ನಲ್ಲಿಗೆ ವಂದು ತವಧರ್ಮಸನವನಾಳಂಕರಿಸಿ (ಅಜಿತ. ೬-೨೬ ವ) ; ಬಂದು ಮನೋವಲ್ಲಭನ ಸಿಂಹಾಸನಾರ್ಧಕ್ಕಲಂಕಾರಮಾಗಿರ್ದು (ಧರ್ಮ.ಪು. ೩-೦೨೨ ವ).

[ಸಂ.]

**ಮನೋವಲ್ಲಭೆ** (ನಾ). ಪ್ರಿಯತಮೆ : ಪ್ರಿಯೆ : ನೀನುಂ ಕುಬೇರಂಗೆ ರತಿಯೆಂಬ ಮನೋವಲ್ಲಭೆಯಪ್ಪೆ (ಶಾಂತಿಪು. ೯-೯೭ ವ) ; ಗೋವಿಂದನ ನೋಟದಲ್ಲಿ . . . ತನ್ನ ಮನೋವಲ್ಲಭೆಯ, ಸಕಲಸೌಂದರ್ಯವನ್ನು ಹೀರಲೇ ಎಂಬ ಅವರ್ಣನೀಯಕಾತರತೆಯಿತ್ತು (ಚಿಕ. ೬೯).

[ಸಂ. ಮನೋವಲ್ಲಭಾ]

**ಮನೋವಿಕಾರ** (ನಾ). ಚಿತ್ತವಿಕಲ್ಪ ; ಬುದ್ಧಿಭ್ರಮಣೆ : ಮಬ್ಬು : ಹೊಲಬುಗೆಟ್ಟ ಮನೋವಿಕಾರದ ಮಾತುಗಳನಾಡಿಸುತಿಸಹಮಾದೆ (ಚಿಕ. ೯೦-೫೩); ಮರುದಿನ ಅವರಿಗೆ ಜ್ವರ ಸ್ವಲ್ಪ ಇಳಿದಿದ್ದರೂ ಮನೋವಿಕಾರ ವೇನೂ ಇಳಿದಂತೆ ತೋರುತ್ತಿರಲಿಲ್ಲ (ಅಬಚಿಕ. ೬೩೩). [ಸಂ.]

**ಮನೋವಿಕಾಸ** (ನಾ). ಬುದ್ಧಿಶಕ್ತಿಯ ಅಭಿವೃದ್ಧಿ : ಕ್ರಮವಾಗಿ ಬೌದ್ಧಿಕ ಮತ್ತು ದೈಹಿಕಶಿಕ್ಷಣಗಳಿಂದ ಮನುಷ್ಯನಿಗೆ ಮನೋವಿಕಾಸ . . . ಉಂಟಾಗುವಂತೆ (ಸಂಗೀತ. ೩). [ಸಂ.]

**ಮನೋವಿಜ್ಞಾನ** (ನಾ). = ಮನಶ್ಶಾಸ್ತ್ರ : ಲೇಖಕ ಮನೋವಿಜ್ಞಾನದಲ್ಲಿ ತಾನು ಒಂದು ಅದ್ಭುತಸಿದ್ಧಾಂತವನ್ನು ಸ್ಥಾಪನೆ ಮಾಡಿದ ಬಗೆಯನ್ನೇ ಉದಾಹರಣೆಯಾಗಿ ತೆಗೆದುಕೊಂಡು, ತನ್ನ ಮನೋವಿಶ್ಲೇಷಣೆ ಮಾಡಿದ್ದಾನೆ (ಚಿಕ. ೧೧). [ಸಂ.]

**ಮನೋವಿರತಿ** (ನಾ). ಅಂತರಂಗದ ವೈರಾಗ್ಯ ; ನಿರಾಸಕ್ತಿ : ಸ್ಮೃತಿಸತ್ವ ತತ್ವದೊಳ್ ನುತಿ ಜಿನೇಂದ್ರಪದಾಬ್ಜದೊಳಕ್ಕೆ ತಮ್ಮ ಗುಣಸ್ತುತಿಶತದೊಳ್ ಮನೋವಿರತಿ ಭೋಗಕದಂಬದೊಳ್ . . . ಸಮಸಂದಿರೆ (ಶಂಕ್ರ.ಪು. ೯-೩೦).

[ಸಂ.]

**ಮನೋವಿಶ್ಲೇಷಣೆ** (ನಾ). ಮನಸ್ಸಿನ ಆಲೋಚನೆಗಳನ್ನು ಒಳ ಹೊಕ್ಕು ನೋಡುವುದು ; ಅಂತರಂಗದ ಭಾವನೆಗಳನ್ನು ವಿಶ್ಲೇಷಿಸಿ ನೋಡುವುದು : ಲೇಖಕ ಮನೋವಿಜ್ಞಾನದಲ್ಲಿ ತಾನು ಒಂದು ಅದ್ಭುತ ಸಿದ್ಧಾಂತವನ್ನು ಸ್ಥಾಪನೆ ಮಾಡಿದ ಬಗೆಯನ್ನೇ ಉದಾಹರಣೆಯಾಗಿ ತೆಗೆದು ಕೊಂಡು, ತನ್ನ ಮನೋವಿಶ್ಲೇಷಣೆ ಮಾಡಿದ್ದಾನೆ (ಚಿಕ. ೧೧).

[ಸಂ. ಮನೋವಿಶ್ಲೇಷಣ]

**ಮನೋವೃತ್ತಿ** (ನಾ). = ಮನೋಧರ್ಮ : ಪಶ್ಚಿಮೇತ್ಯಾಚಾರ ಮನೋವೃತ್ತಿಯಪ್ಪ ಕಾಮತಂತ್ರಮುಮಂ (ಶಾಂತಿಪು. ೧೧-೯೦); ಬುದ್ಧಿಶಕ್ತಿ ಯನ್ನು ಮೆಟ್ಟಿ ನಿಲ್ಲುವ ಬೇರೊಂದು ಬಗೆಯ ಮನೋವೃತ್ತಿ ಬೇಕಾಗ ಬಹುದು (ಮೋಕ್ಷಪು. ೯೨). [ಸಂ.]

**ಮನೋವೇಗ** (ನಾ). ೧. ಮನಸ್ಸು ಚಲಿಸುವ ವೇಗ: ಚಿತ್ತವೃತ್ತಿ ಕಾರ್ಯಮುಖವಾಗುವ ಶೀಘ್ರತೆ. ೨. [ಯೋಗ] ರಾಜಸಯೋಗದ ಹತ್ತುಬಗೆಯ ಸಿದ್ಧಿಗಳಲ್ಲಿ ಒಂದು : ಕೇಳನೂರ್ಮಿಯುಮೊಂದು ಮತ್ತೆಯುಂ ಕೇಳು ದೂರಶ್ರವಣಮೆರಡದು . . . ಮನೋವೇಗ ಕೇಳು ನಾಲ್ಕದು ಕಾಮರೂಪವು ಕೇಳು ತಾನೈದೆಲೆ ಗುಹನೆ ನೀ ಕೇಳು (ಜ್ಞಾಸಿಂ. ೨೦-೩೩). [ಸಂ.]

**ಮನೋವೇದನೆ** (ನಾ). ಮನಸ್ಸಿನ ನೋವು ; ಚಿಂತೆ : ನನ್ನ ವ್ಯಾಧಿಗೂ ಮರಣಕ್ಕೂ ಕಾರಣ ನನ್ನ ಮನೋವೇದನೆಯೇ (ಕ್ರಿಶಾಚ. ೦೯).

[ಸಂ. ಮನೋವೇದನಾ]

**ಮನೋವೇದ್ಯ** (ನಾ). ಮನಸ್ಸಿಗೆ ತಿಳಿಯುವಂಥದು : ಈ ಎಲ್ಲ ಅನುಭವವೂ ಮನೋಜ್ಞವಾದುದು ಎಂದರೆ ಮನೋವೇದ್ಯವಾದುದು (ಸೌಂದರ. ೯೭). [ಸಂ.]

**ಮನೋವೇಧಕ** (ಗು). ೧. ಮನಸ್ಸಿಗೆ ನೋವುಂಟುಮಾಡುವ : ಮನ ಮುಟ್ಟುವ. (ನಾ). ೨. ಮನಸ್ಸಿಗೆ ನಾಟುವಂಥದು : ಅರ್ಜುನನ ವಿವೇಕವನ್ನು ಚಿತ್ರಾಂಗದೆಯೆಡೆಗೆ ಮೋಹಿಸಿದ ಗೀತ ಮನೋವೇಧಕವಾಗಿ ಕಾಣಿಸಿತು (ಸ್ವಕೃಮ. ೩೩೭). [ಸಂ.]

**ಮನೋವೈಜ್ಞಾನಿಕ** (ಗು). ಮನೋವಿಜ್ಞಾನಕ್ಕೆ ಸಂಬಂಧಿಸಿದ ; ಮನಶ್ಶಾಸ್ತ್ರಕ್ಕೆ ಸೇರಿದ : ಅದು ಕಾವ್ಯಾತ್ಮಕಪ್ರತಿಭೆಯು ಮನೋ ವೈಜ್ಞಾನಿಕ ಘಟನೆಯನ್ನುಂಟುಮಾಡುವ ದೃಷ್ಟಿಯನ್ನು ಸ್ಪಷ್ಟವಾಗಿ ಗ್ರಹಿಸುವುದು (ಕ್ರಿಪಂಚ. ೦೩೦). [ಸಂ].

**ಮನೋವೈಶಾಲ್ಯ** (ನಾ). ಮನಸ್ಸಿನ ವಿಶಾಲತೆ. – ದೊಡ್ಡತನ : ಅಂಥ ಮನೋವೈಶಾಲ್ಯ ಇಂದು ಜಗತ್ತಿಗೆ ಅನಿವಾರ್ಯವಾಗಿದೆ (ಚಿಕ. ೨೯).

[ಸಂ.]

**ಮನೋವ್ಯಥೆ** (ನಾ). ಮನಸ್ಸಿಗೆ ಉಂಟಾಗುವ ಅತೀವದುಃಖ,-ವ್ಯಸನ : ಅಂತೆ ಸಂತೈಸುವಳು ಮನೋವ್ಯಥೆಯೆಲ್ಲಮಂ ಧೈರ್ಯವಾಕ್ಯಂಗಳಿಂ (ಶ್ರೀರಾಪಟ್ಟಾ. ೨೬೩-೩೦೨). [ಸಂ. ಮನೋವ್ಯಥಾ]

**ಮನೋವ್ಯಾಧಿ** (ನಾ). = ಮನೋರುಜೆ : ಅಲ್ಲೋಲಕಲ್ಲೋಲವಾದ ಮನಸ್ಸಿನ ನೆಮ್ಮದಿ ತಂದೀಯುವ ಗುಣದಿಂದ ಸರ್ಪಗಂಧಿ ಮನೋವ್ಯಾಧಿಗಳಿಂದ ನರಳುವವರನ್ನು ಸೂರೆಗೊಂಡಿತು (ಹಸುಹೊ. ೦೬೭). [ಸಂ.]

**ಮನೋವ್ಯಾಪಾರ** (ನಾ). ಮನಸ್ಸಿನಲ್ಲಿ ನಡೆಯುವ ವ್ಯವಹಾರ,-ಚಟುವಟಿಕೆ : ಕಾವಿಂಗಳ ಮನೋವ್ಯಾಪಾರವು ಚೇಷ್ಟೆಗೆ ಪ್ರತಿರೂಪವಾದುದು (ಕಾಕುಂತ. ೦೬-೩). [ಸಂ.]

**ಮನೋಹರ** (ಗು). ೧. ಸೊಗಸಾದ ; ರಮಣೀಯವಾದ; ಚೇತೋಹಾರಿಯಾದ : ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ (ಆದಿಪು. ೭-೦೨೬); ಮನ್ನಣೆಕಾಱ ಮನೋಹರರೂಪ . . . ಸನ್ನುತ ಮತಿದೋಱು (ಶಠತ. ೪೨-೦). (ನಾ). ೨. ಸುಂದರವಾದುದು ; ಸೊಗಸಾದುದು : ಕಂಡರೆ ಮನೋಹರವಪ್ಪಾ ಕಾಣದಿದ್ದರೆ ಅವಸ್ಥೆ ನೋಡಯ್ಯ (ಬಸವ. ೩೭೦). ೩. ಚೆಲುವ : ಸುಂದರ : ಮನೋಜಹರ ಮನೋಹರನೆಂಬ . . . ಕಡುಸಲುಗೆಯ ಬಿರುದಿನ ಬಹುವಿಧದ ಕಹಳಾರವಂ ದೆಸೆದೆಸೆಗೆ ಪರಿಯೆ (ಸಂಬರ. ೬-೨೨) ; ಮಂದರೋದ್ಧರ ಬಂದ ಮಾಮಾನೋಹರ ಬಂದ ವೃಂದಾವನಪತಿ ಗೋವಿಂದ ಬಂದ (ಪುರಂದ. ೦-೯೬-೨). ೪. ಕಡಲೆಹಿಟ್ಟು, ಬೆಲ್ಲಗಳಿಂದ ತಯಾರಿಸುವ ಒಂದು ಬಗೆಯ ತಿನಿಸು; ಬೂಂದಿ : ಪಾಯಸಕ್ಕೆ ಮನೋಹರದ ಕಾಳು ಹಾಕಿದ್ದರು (ಕಥಾ). ೫. ಕುಂದವೃಕ್ಷ. ೬. ಸುವರ್ಣ ; ಚಿನ್ನ.

ಮನೋಹರದುಂಡೆ = ಬೂಂದಿಯ ಉಂಡೆ ; ಲಾಡು : ಕರಜಿಗೆ ಕಾಯಿತಿರಸ ಮನೋಹರದುಂಡೆ ತಜಗು ಚಕ್ಕುಲಿ (ಪ್ರಾಪತ. ೨-೦೩೭).

[ಸಂ.]

**ಮನೋಹರತೆ** (ನಾ). ಚೆಲುವು ; ಸೌಂದರ್ಯ : ಮೊರೆದು ನೊರೆಗರೆದು ಮಿರುಮಿರುಗಿ ಶಿಲೆಯಿಂ ಶಿಲೆಗೆ ಚಿಮ್ಮಿ ನೆಗೆಯುವ ತೊರೆಯ ಲೀಲೆಯ ಮನೋಹರತೆ . . . ನೆಯ್ದಲಿ ಜಗನ್ಮೋಹನಜಾಲಮಂ (ತಿಕ್ರಾಂಗ. ೨೯-೬೦೪). [ಸಂ. ಮನೋಹರತಾ]

**ಮನೋಹರಿ** (ನಾ). ೧. ಚೆಲುವೆ ; ಸುಂದರಿ : ನೆಲಸುಗೆ ನಿನ್ನ ವಕ್ಷದೊಳೆ . . . ಮನೋಹರಿ ರಾಜ್ಯಲಕ್ಷ್ಮಿ (ಆದಿಪು. ೦೪-೩೩೦); ಇದೆ ನವಪದ್ಮರಾಗಜಪಕಂ ನಿಜಹಸ್ತತಳಾಗ್ರದೊಳ್ ಮನೋಹರಿ ತಳಿದೊರ್ಗಂಗಲಂ ತಳೆದ ಕೋಮಳವಲ್ಲರಿಯಂತೆ (ಜಗನ್ನಾ. ೦೬-೦೦೩). ೨. ಹೆಂಡತಿ : ಪತ್ನಿ : ಸಿಂಧುರೇಂದ್ರಮಂ . . . ನರೇಂದ್ರಚಂದ್ರಂ ನಿಜಮನೋಹರಿಯೊಡನಾರೋಹಿಸಿ ರಾಜವೀಥಿಯೊಳ್ಪರ್ಗಗಳ್ (ರಾಜಶೇ. ೦೦-೦೦ ವ).

[ಸಂ. ಮನೋಹರೀ]

**ಮನೋಹಾರಿ** (ನಾ). ಮನಸೆಳೆಯುವಂಥದು ; ಚಿತ್ತಾಕರ್ಷಕವಾದುದು : ಕ್ಷೀರಾಬ್ಧಿಯ ನೀರಲ್ಲವೆ ಧೀರನ ಮಜ್ಜನಕೆ ಪೆಱವು ನೀರ್ ತಗುಮೆಂದಾ ವಾರಾಶಿವರಂ ಸುರಜನದಾರಿ ಮನೋಹಾರಿ ನೀಳ್ದುವೆರಡುಂ ಕೆಲದೊಳ್ (ಆದಿಪು. ೭-೬೨). [ಸಂ. ಮನೋಹಾರಿನ್]

**ಮನ್ನ** (ನಾ). ಮೂಕ : ಮನ್ನಗೆ ತುಟಿ ಸನ್ನೆ ಕಿವ್ಡಗೆ ಕೈ ಸನ್ನೆ ಹೆಡ್ಡಗೆ ಬಡಿಗೆಯ ಸನ್ನೆ (ಜಂಜಾಪ. ೯೦-೩೬). [ ? ]

**ಮನ್ನಣೆ** (ನಾ). ೧. ಗೌರವ ; ಮರ್ಯಾದೆ : ಮೆಲ್ಲನೆ ಬಿಂದಪ್ಪ ಗಾರವದ ಮೈಮೆಯ ಮನ್ನಣೆಯೋಳಿಗಳ್ ಕರಂ ಮನಮುನಲರ್ಚೆ (ಸಂಕಥಾ. ೦೪-೯೩); ಇಲ್ಲಿಯೇ ಮನ್ನಣೆಗಾಸೆಪಟ್ಟು ಮುಂದಣ ಫಲಮಂ ಕಿಡಿಸದಿರ್ (ಜೀವಸಂ. ೩೬-೨); ಮನ್ನಣೆಗೆ ಮನವಿಕ್ಕಿದೊಡೆ ಸಂಪನ್ನಸಚ್ಯುತನಾಕೆ ಕೇಳೆನೆ (ಸಂಭರ. ೦೩-೩೯). ೨. ರಿಯಾಯಿತಿ ; ಮಾನ್ಯ : ಆ ತೋಂಟಕೆ ಸುಂಕವಪನ್ನಾಯ ಸಮಸ್ತವುಂ ಮನ್ನಣೆ (ಶಾಇಶಾ. XI-i, ೬೯-೪೦; 1033).

[?. / ಪ್ರಾ. ಮಾಣಣ. / ಸಂ. ಮಾನನ. / ತೆಲು. ಮನ್ನನ]

**ಮನ್ನಣೆಕಾಱ** (ನಾ). ಮನ್ನಣೆಗೆ ಪಾತ್ರನಾದವನು ; ಗೌರವಾನ್ವಿತ ವ್ಯಕ್ತಿ : ಮನ್ನಣೆಕಾಱ ಮನೋಹರರೂಪ ಲೋಕೋನ್ನತ ಕೋಮಲ ಚರಿತ ಸನ್ನುತ ಮತಿದೋಱು (ಶಠತ. ೪೨-೦). [ಮನ್ನಣೆ + — ಕಾಱ]

**ಮನ್ನಣೆಗೆಡು** (ಕ್ರಿ). ಗೌರವವು ಹಾಳಾಗು : ಮರ್ಯಾದೆ ಹೋಗು : ಮನ್ನಣೆಗೆಟ್ಟು ಮಾನಾಪಹರಣವಾಗಿ (ಶ್ರೀಶಂಕ. ೨-೩೦).

[ಮನ್ನಣೆ + ಕೆಡು$_1$]

**ಮನ್ನಣೆಗೈ** (ಕ್ರಿ). ಗೌರವಿಸು ; ಮಾನ್ಯಮಾಡು : ಬೀರವ ನುಡಿದ ಮೂವರ ವಾಕ್ಯವ ಕೇಳಿ ಮಾರ ಮನ್ನಣೆಗೈವನವರ (ಮೋಹತ. ೬-೨೪); ಪರಿಪರಿ ಮರಿಯಾದೆಯಿಂದ ಮನ್ನಣೆಗೈಯೆ ಸಿರಿಮಂಡಲಿಕರಿಗೆಲ್ಲ (ಕಂಠೀ. ೩-೩೪); ಶರನಿಧಿಯು ತುಹಿನಾದ್ರಿಜಾತಪ್ರಿಯಬಾಂಧವನೆನುತ್ತ ಮನ್ನಣೆಗೈವನು (ವಂಕಾರಾ. ೩-೦-೪೩). [ಮನ್ನಣೆ + ಗೈ (< ಕೆಯ್$_1$)]

**ಮನ್ನಣೆಗೊಳ್** (ಕ್ರಿ). ಸನ್ಮಾನವನ್ನು ಹೊಂದು : ಗೌರವವನ್ನು ಪಡೆ : ಮನ್ನಣೆಯ ಮಂಡಳಿಕರು . . . ಮನ್ನಣೆಗೊಂಬ ಭಟರು ಮೊದಲಾದರು ತನ್ನ ನೇಮದೊಳೊದಗಿದರು (ಅಂಜತ. ೭-೦೨೦).

[ ಮನ್ನಣೆ + ಕೊಳ್$_1$ ]

**ಮನ್ನಣೆಯಾಳ್** (ನಾ). ರಾಜನ ಸಭಾಸದರಲ್ಲಿ ಒಂದು ಪದವಿಯುಳ್ಳವನು ; ಮಾನ್ಯವ್ಯಕ್ತಿ : ರಾಯರಾವುತರ ಗಜಾರೋಹಕರ ಮಾಂಡಲಿಕರ ಮನ್ನಣೆಯಾಳ್ಗಳ ದಿಟ್ಟವಾರಿಯ ಧೀರರ ಪಾತಕರ ಗಣಿಕೆಯರ ಇಟ್ಟಣಿಸಿದ ಕಟ್ಟಣಕಾರರಾಸ್ಥಾನದೊಳು (ವಿಕೆರ. ೬-೨೦). [ ಮನ್ನಣೆ + ಆಳ್$_3$ ]

**ಮನ್ನಣೆವಡೆ** (ಕ್ರಿ). ಗೌರವವನ್ನು ಪಡೆ ; ಮರ್ಯಾದೆಯನ್ನು ಹೊಂದು : ಮನ್ನಣೆವಡೆದ ಕೀರ್ತಿಖ್ಯಾತಿಯಂತೆ (ರಡರ್ಣಪ್ಪ. ೩-೦೨೩); ಪೊನ್ನ ಪುತ್ತಳಿಯಂತೆಸೆವ ಮನ್ನಣೆವಡೆದ ಪಟ್ಟದ ರಾಣಿ (ಹರಿ. ೧-೨೨);

[ ಮನ್ನಣೆ + ಪಡೆ$_1$ ]

**ಮನ್ನಣೆವೆಱು** (ಕ್ರಿ). = ಮನ್ನಣೆವಡೆ : ಮನ್ನಣೆವೆತ್ತ ಪೇೞದ ಕೆಳದಿಯರ್ (ಕಬ್ಬಿಗ. ೩೧೩) ; ಮನ್ನಣೆವೆತ್ತ ಪನ್ನಿಬ್ಬರು ಮಹಾಮಾತ್ಯರೊಳಗಗ್ರೇಶ್ವರನೆನಲು ಬಿರಿಯ ಗದ್ದುಗೆಯಲ್ಲಿ ಬಳ್ಳಿರಿಸಿ (ಬಸವ. ೩-೬೩); ಮನ್ನಣೆವೆತ್ತ ಸಾಧ್ವಿಯರ ಮಹಿಮೆಗಳ ಸನ್ನುತಿಸುವಡೆ ಎನ್ನಳವೆ (ಹಂಬ. ೨-೦೦). [ ಮನ್ನಣೆ + ಪೆಱು$_1$]

**ಮನ್ನಳಿ** 'ಮನ್ನಟಿ' ನೋ.

**ಮನ್ನಳಿಪಟ್ಟು** (ನಾ). ಕುಸ್ತಿಯಲ್ಲಿ ಒಂದು ಪಟ್ಟು : ಕುತ್ತಿಗೆಯ ಮೇಲೆ ಕೈಯನ್ನೂರಿ ಅಮುಕುವುದು : (ಪಟ್ಟೆಯವನತ್ತ . . . ತೋಂಡಾಂಗುಟ್ಟಿಯ ಹೆಗ್ಗತ್ತಿಗೆ ದಕ್ಷಿಣಹಸ್ತವನ್ನೆತ್ತಿ ಬಿನ್ನಣದಿಂದವುಂಕಿ, ಹಠಾತ್ತಾಗಿ ಸ್ತಂಭಿತನಾಗಿ ದಿಂಡುಬೀಳುತ್ತಿದ್ದ ಆತನನ್ನು ಕಯ್ಯುದ್ದು ಹಿಡಿದು, ಮೆಲ್ಲಗೆ ಬೆನ್ನೆ ಮಲಗಿಸಿ, ಎದ್ದ) ಮನ್ನಳಿಪಟ್ಟು ಅದು (ಮಂತ್ರಕ. ೦೦೩-೨೨). [ ಮನ್ನಳಿ (< ಮನ್ನಟಿ) + ಪಟ್ಟು$_2$ ]

**ಮನ್ನಟಿ, ಮನ್ನಳಿ** (ನಾ). ಕೊರಲ ಹಿಂದಿನ ನರಗಳ ಗುಂಪು : ಕ್ಷಳಕ್ಕೆ— . . . ಅರ್ಗಳಂ — ಅಗುಳಿ, ಮನ್ಯಾಳಿ — ಮನ್ನಟಿ (ಶಮದ. ೨೦ ಪ್ರಯೋ). ಮನ್ನಳಿ : "ಮನ್ನಳಿ —ಮನ್ಯಾಳಿ (ಮನ್ಯಳಿ)" (ತದ್ಭಕೋ. ೩೪); ಯತ್ವಕ್ಕೆ ನತ್ವಂ—ಕನ್ಯಕಾ—ಕನ್ನಿಕೆ; ಮನ್ಯಾಳಿ—ಮನ್ನಳಿ (ಶಮದ. ೨೬೬ ಪ್ರಯೋ). [ < ಸಂ. ಮನ್ಯಾಲೀ ]

**ಮನ್ನಾ** (ನಾ). ೧. ಅಡ್ಡಿ ; ಪ್ರತಿಬಂಧ. ೨. ವಿನಾಯಿತಿ ; ರದ್ದು : ಕಾಲೇಜಿನಲ್ಲಿ ಅವನಿಗೆ ಫೀ ಮನ್ನಾ ಆಗಿತ್ತು (ಕಥಾ). 'ಮನಾಯಿ' ಪರಾ.

ಮನ್ನಾಮಾಡು, ಮನ್ನಮಾಡು = ೧. ರದ್ದುಮಾಡು ; ವಿನಾಯಿತಿ ಕೊಡು : ಆ ಚಿತ್ರಕ್ಕೆ ಮನರಂಜನೆಯ ತೆರಿಗೆಯನ್ನು ಮನ್ನಾ ಮಾಡಿದ್ದಾರೆ

(೬೦೦). ೨. ತಡೆಹಿಡಿ; ಪ್ರತಿಬಂಧಿಸು : ಸ್ಪರ್ಧೆಪರೀಕ್ಷೆಗಳನ್ನು ಮನ್ನಮಾಡುವುದಾಗಿ ತೀರ್ಮಾನಿಸಿದ್ದರಂತೆ (ಕಂಕ. ೨೬೦).

[ ← ಅರ. ಮನ್‌ಅ; ಹಿಂ. ಮರಾ. ಮನಾ ]

**ಮನ್ನಾರು** (ನಾ). ಒಡೆಯ, ಪ್ರಭು ಎಂಬರ್ಥದಲ್ಲಿ (ದೇವರನ್ನು ಕುರಿತು) ಮಾಡುವ ಸಂಬೋಧನೆ : ಮನ್ನಾರು ಕೃಷ್ಣಗೆ ಮಂಗಳ ಜಗವ ಮನ್ನಿಸಿದೊಡೆಯಗೆ ಮಂಗಳ (ಪುರಂದ. ೫-೦೩೯ ಪಲ್ಲವಿ); ಚೆಲುವ ವರದರಾಜ ಮನ್ನಾರು ನರಸಿಂಹ ಕೊಳಲ ಗೋಪಾಲರೊಪ್ಪಿದರು (ಕಂಠಿ. ೬-೯೧).

[<ಸಂ. ಮಾನ್ಯ. / ತಮಿ. ಮನ್ನನಾರ್, ಮನ್ನಾರ್; ತೆಲು. ಮನ್ನನಾರು, ಮನ್ನಾರು]

**ಮನ್ನಾರ್ಥ** (ನಾ). (?) : ಉರುವಿಗೆ ಗ್ರಾಮಸ್ಯ ಮನ್ನಾರ್ಥ [೦] ತಸ್ಮಿನ್ನೇವ ಗ್ರಾಮೇ ಪಞ್ಚಶನ್ನಿವರ್ತ್ತನ ಪರಿಮಾಣಞ್ಚ ಕ್ಷೇತ್ರಞ್ಚ ದತ್ತಂ (ಕಇ. II, ೩-೩೯; 693). [ ? ]

**ಮನ್ನಿಸು** (ಕ್ರಿ). ೧. ಗೌರವಿಸು ; ಮರ್ಯಾದೆಮಾಡು ; ಆದರಿಸು : ಏನುಂ ತೊದಳಿಲ್ಲದಿತ್ತು ಮನ್ನಿಸಿದಂ ಸನ್ಮಾನಪುರಸ್ಸರಂ (ಆದಿಪು. ೦೩-೦೨) ; ಆಳರಸೆಂಬ ಭೇದಮೆಮ್ಮುರ್ಬರೊಳಂ ಪಲ್ಲಟಿಸಿತೆಂಬಿನಂ ಮನ್ನಿಸಿದಂ (ಕಾದಂಬ. ೬೦೫); ಅಸುರನ ಚರನೆಂದಪಮಾನಿಸುಗುಮೊ ಮೇಣ್ ಭಕ್ತನೆಂದು ಮನ್ನಿಸುಗುಮೊ . . . ಕೃಷ್ಣಂ (ಜಗ. ೫-೬೫). ೨. (ದುಃಖ, ಕೋಪ ಮೊದಲಾದುವನ್ನು) ಶಮನಗೊಳಿಸು ; ಸಮಾಧಾನಮಾಡು : ರಕ್ತಜಲದಿಂ ಕೋಪಾನಳನಂ ಮನ್ನಿಸದಿನ್ನುಂ ಗಳಗಳಿತ ಸಕೋಪನಿರ್ಝ ತೆಜದಿಂದಿರ್ದ್ದೆ (ಗದಾಯು. ೧-೩೬); ನಯೋಕ್ತಿಯಲಿ ಮುನಿ ಹರಸಿ ಸಂತಾನಾಭಿವೃದ್ಧಿಯ ಸಾರಸೌಖ್ಯತೆಯ ಅರಸನನು ಮನ್ನಿಸಿ . . . ಅಭಯವಿತ್ತನು ಋಷ್ಯಶೃಂಗಮುನಿ (ತೊರವೆ. ೧-೬-೦೭). ೩. ತಪ್ಪನ್ನು ಗಣಿಸದಿರು ; ಕ್ಷಮಿಸು : ಬಾಯ್ಗೆ ಬಂದನಿತುಮಂನಮಾರಾರಿ ಬಯ್ಯೆ ಸೈರಿಸಿ ನೂಱೆಂಬನಿತುವರಂ ಮನ್ನಿಸಿ (ಶಂಕರಾ. ೬-೬೩); ಕುಲದಿಂ ಕೆಟ್ಟವರನಣ್ಣ ನೀಂ ಮನ್ನಿಪುದೇ (ಧರ್ಮಾಮೃ. ೧-೦೦೩); ಆ ನೀಚನಾದ ರಾವಣನೇ ಆದರೂ ನಮಗೆ ಶರಣಾಗತನಾಗಿ ಬಂದಲ್ಲಿ ನಾವು ಮನ್ನಿಸಿ ರಕ್ಷಿಸುವುದೇ ಸಿದ್ಧ (ನಿಕಿಶಂ. XIV, ೧೮). ೪. ಒಪ್ಪು ; ಲೆಕ್ಕಿಸು : ಅಂಗೀಕರಿಸು : ಅರಸಿ ನಾರಾಯಣದತ್ತೆಯ ಮಿಥ್ಯಾವೇಷಮಂ ಕಂಡು [ಮನ್ನಿಸದು]ದಾಸೀನಂಗೆಯ್ದಿರ್ಪುದುಂ (ಧರ್ಮಾಮೃ. ೪-೦೯೬); ಬಸಂತನ ಮಂತಣದ ಮಾತು ಸೊರ್ಕಾನೆ ಮಂತಣಿಯ ಮಾದಂತನ ಮಾತು ಮನ್ನಿಸುವಂತೆ ಮನ್ನಿಸಿ (ಲೀಲಾ. ೦೬೦); ಕರೆದು ಮನ್ನಿಸಿ ಕೂಡಿಮೊಡೀ ಕುವರನ ಸುರತದ ಸುಖವಿನ್ನೆಂತೋ (ಕಂಸಿ. ೯-೦೦೬). ೫. ದಯಪಾಲಿಸು ; ಅನುಗ್ರಹಿಸು : ಪಿರಿದಂ ಮನ್ನಿಸಿ ನಡಪುತ್ತಿರೆ ಪರಮರಹಸ್ಯಭೂಮಿಯೆನಿಸಿದಳಿಂತೀ ಪಲಚಾರಕೆ (ಕಾದಂಬ. ೫೨೨) ; ಮನ್ನಿಸುಗೆ ಕೃತಿಗೆ ಸೌಭಾಗ್ಯೋನ್ನತಿಯಂ (ಪುಷ್ಪ. ೦-೨೫) ; ಅವುದೆಮಾಗ ಭ್ಯುದಯವದ ನೀನಾವ ಪರಿಯಲಿ ಮನ್ನಿಸಿದಪರೆಜೀವ ಕೌರವವಂಶವೇ ಸಪ್ರಾಣಿಸುವುದು (ಕುಮ್ಮಾರ. ೫-೦೯).

[ಮನ್ನಣೆ +—ಇಸು./ತೆಲು. ಮನ್ನಿಂಚು, ಮನ್ನಿಂಪು]

**ಮನ್ಯು** (ನಾ). ಸಿಟ್ಟು ; ಕೋಪ : "ಮನ್ಯು—ಮನ್ಯು=ದೈನ್ಯ, ಕೋಪ" (ತದ್ಭಕೋ. ೩೯); ಅಣ್ಣಂ ಮನದೊಳ್ಳ ಮನ್ಯು ಮಿಗೆಯುಂ ಬಗೆಗೊಳ್ಳದೆ ನೀಂ ದೀಕ್ಷೆಗೊಂಡೆ (ಎಕ. II, ೨೩೯-೫೦ ; 1180). [<ಸಂ. ಮನ್ಯು]

**ಮನ್ನೆ** 'ಮನ್ನೆಯ ' ನೋ.

**ಮನ್ನೆಪೇಟ** 'ಮಾನ್ಯಪೇಟ' ನೋ.

**ಮನ್ನೆಪೇಡ** ' ಮಾನ್ಯಪೇಟ ' ನೋ.

**ಮನ್ನೆಗಾಳೆ** ' ಮನ್ನೆಯಗಹಳೆ ' ನೋ.

**ಮನ್ನೆಯ, ಮಣ್ಣೆಯ, ಮನ್ನೆ** (ನಾ). ೧. ಗೌರವ; ಮರ್ಯಾದೆ : ' ಮನ್ನೆಯಗಹಳೆ ' ಪರಾ. ೨. ಗೌರವಕ್ಕೆ ಪಾತ್ರನಾದವನು; ಮನ್ನಣೆಗೆ ಯೋಗ್ಯನಾದವನು: ಮಾನ್ಯ : ಹಗಿಸಿದಂ ಬೇಗದಿಂ ಮಣಿ ವರೂಥಮಂ ಕೆಲಬಲದ ಮನ್ನೆಯರ ಗಡಣದಿಂದೆ (ಜೈಮಿಭಾ. ೪-೨೭). ೩. ಮಾಂಡಲಿಕ; ಸಭಾಸದ : "ಮನ್ನೆಯ —ಮಾನ್ಯ = ಮರ್ಯಾದಿತ, ಮಾಂಡಲಿಕ" (ತದ್ಭಕೋ. ೩೯); ಮಣ್ಣ ಕೋಟೆಯಂ ನಂಬಿ ಕಲ್ಲ ಕೋಟೆ ಯನೊಡೆವ ಮನ್ನೆಯನುಮಂ (ಧರ್ಮಾಮೃ. ೪-೩೦); ಕೆಲಬಲದ ಮನ್ನೆಯರ ಕೈವೀಸಿ . . . ಪಾರ್ಥನಿದಿರಾದ (ಕುಮ್ಮಾರ. ೬-೦೩); ತೋಟ ತೋಟಿಗಾಸೆ ಕೋಟಿ ಮನ್ನೆಯಗಾಸೆ (ಸರ್ವಜ್ಞ. ೦೯೦೬). ೪. ನಾಯಕ ; ಮುಖಂಡ : ಮನ್ನೆಯರಾಳಂತೆ ಕಾದಿಯಲಸದೆ (ಶಂಕರಾ. ೫-೯೬ ಪ). ೫. ದಾನವಾಗಿ ಕೊಡುವ ಭೂಮಿ ; ಉಂಬಳಿ : ಅನ್ತವರ್ಮನ್ನೆಯದೊಳ್ಸರ್ವ್ವ ಸಮಸ್ಯಮುಂ . . . ಪಡೆದು (ಸೌಇಇ. XI-i, ೯೫-೯೬; 980); ಮನ್ನೆಯ ಚಟ್ಟಂ ಬಿಟ್ಟಂ ಮನ್ನೆಯಮಂ (ಇಆ. XVIII, ೨೬೯-೪೦; 994); ಕುಡಿಗೆರೆಯ ಮನ್ನೆಯವೊಳಗಾಗಿ ಸರ್ಬ್ಬಾಭ್ಯಂತರಸಿದ್ಧಿಯಿಂದ ಕೊಟ್ಟಂ (ಎಕ. VII, ಶಿಕಾ೦. ೫೩-೨೬; 1027). ೬. ನಾಡಿನ ಒಂದು ಭಾಗ ; ಮಂಡಲ : ಶ್ರೀ ಮುಳುಗುನ್ದ ಪನ್ನೆರಡಱ ಮನ್ನೆಯಂ ಕೊಜಲಗುನ್ದಂ (ಸೌಇಇ. XI-i, ೯೬-೦೦; 994); ಕೋಗಳಿಯಯ್ನೂಱ ಮಂನೆಯಮನೇಕಾಧಿಷ್ಟಿತಂ ಸುಖದಿ ನಾಳುತ್ತಮಿರೆ (ಸೌಇಇ. IX-i, ೨೯೮-೦೫ ; 1147). **ಮಣ್ಣೆಯ** : ೭. ಒಂದು ಬಗೆಯ ತೆರಿಗೆ : ಮಗ್ಗದೆಱೆ ಮಣೆಯ ಕಬಲವದೆಱೆ (ಎಕ. IX, ಕಾವಕಾ. ೬೨-೨೮; 1277). **ಮನ್ನೆ** : ೧. 'ಮನ್ನೆಗಾಳೆ' ಪರಾ. ೫. ಕಱಿಯ ರಾಚಮಲ್ಲ ಮನ್ನೆ ಬೇಡಿದೊಳರೆನೆಲನುಂ ಭಣ್ಡಾರವುಮಂ ಕೊಟ್ಟಾನೆಂದು ಬನ್ದು ಭುವನಾದಿತ್ಯಂ ಬರೆ (ಎಕ. III (R), ಹೆಗ್ಗಡ. ೨೩-೪; ಸು. 10ನೆಯ ಶತ).

**ಮನ್ನೆಯ ಗಂಡ, ಮನ್ನೆಯರ ಗಂಡ**=ಮುಖಂಡರನ್ನು ಮೀರಿಸುವ ಶೂರ; ಒಂದು ಬಿರುದು : ಎಲ್ಲಾ ಕಿರಾತಸಂಕುಲದ ಗುಜು ನೆಜುದು ದಿಂದು ಹದುಳದಿಂದರಸ ಮನ್ನೆಯ ಗಂಡನಾಗು ಬೇಗದೊಳೆಂದಡೆ (ಹಕಾ. ೬-೦೯); ಕೊಂಡು ಬರುತಿದೆ ಘಟಿರು ಮನ್ನೆಯ ಗಂಡನಾಗ್ಯೆ ಜೀಯ ಎನೆ (ಕುಮ್ಮಾರದ್ರೋ. ೬-೨೩); ಗಂಡರ ಗಂಡನಾಹವವ ಗಂಡನುಂ . . . ಕೂಡಿ ತಪ್ಪುವ ಮ(ಂ)ನ್ನೆಯರ ಗಂಡನು (ಸೌಇಇ. IX-i, ೨೬೬-೩೫; 1183). **ಮನ್ನೆಯಗೊಡತಿ** = ಒಂದು ಬಿರುದು : ಮ(ಂ)ನ್ನೆಯಗೊಡತಿ ಜಗದ್ದಳ ಹಲುವಾಗಿಲ ಮ(ಂ)ನ್ನೆಯ ನಾಚಿದೇವರ್ಸರು (ಸೌಇಇ. IX-i, ೩೬೮-೦೦; 1279). **ಮನ್ನೆಯದ ಹೊನ್ನು**=ಮಾನ್ಯವಾಗಿ ಬಿಟ್ಟ ತೆರಿಗೆಯ ಹಣ : ತನಗೆ ನಡವ ಮನ್ನೆಯದ ಹೊನ್ನೊಳಗೆ ದೇವರ ನಂದಾದೀವಿಗೆಗೆ ಬಿಟ್ಟ ಗದ್ಯಾಣ ಒಂದು (ಸೌಇಇ. IX-i, ೨೦೬-೪೦; 1122). **ಮನ್ನೆಯ ಬಂಗಾಱ**= ಒಂದು ಬಿರುದು: ಸಹಜಮನೋಜ ಹಯವತ್ಸರಾಜ [ಕೊಂಗ]ಮನ್ನೆಯ ಬಂಗಾಱ ಮಾವನಂಕಕಾಱ (ಸೌಇಇ. XI-i, ೯೬-೨೦; 1062). **ಮನ್ನೆಯ ಬೇಂಟೆಕಾಱ** = ಒಂದು ಬಿರುದು : ಏಕಾಂಗವೀರನಸಹಾಯಸೂರ ಮಂನೆಯ ಬೇಂಟೆಕಾಱ ಅಂಣನ ಗಂಧವಾರಣನು (ಎಕ. XVI, ತಕ್ನಾ. ೬೨-೨೮; 1242). **ಮನ್ನೆಯಭೇರುಂಡ** = ಒಂದು ಬಿರುದು : ಮೂವಡಿ ಗಣ್ಡಂ ಮನ್ನೆಯಭೇರುಣ್ಡ ನಾಮಾದಿ ಸಮಸ್ತಪ್ರಸ(ಶ)ಸ್ತಿಸಹಿತಂ (ಎಇ. XII, ೨೬೯-೮; 1040). **ಮನ್ನೆಯ ಸಿಂಗ** = ಮುಖಂಡರಲ್ಲಿ ಸಿಂಹದಂತಿರುವವನು ; ಒಂದು ಬಿರುದು : ಪರಬಳಕೃತಾಸ್ತಂ ಸಾಹಸೋತ್ತುಂಗಂ ಮನ್ನೆಯಸಿಂಗ ನಾಮಾದಿ ಸಮಸ್ತಪ್ರಶಸ್ತಿಸಹಿತಂ . . . ಜಯಕೇಶಿಅರಸರ್ (ಸೌಇಇ. XX, ೯೭-೨೩; 1074). [< ಸಂ. ಮಾನ್ಯ]

**ಮನ್ನೆಯಗಹಳೆ, ಮನ್ನೆಗಾಳೆ** (ನಾ). ಗೌರವಸೂಚಕವಾಗಿ ಊದುವ ಒಂದು ಬಗೆಯ ಕಹಳೆ : ಚಿನ್ನತಿತ್ತಿರಿ. . . ಹೆಗ್ಗಾಳೆ ಮನ್ನೆಯಗಹಳೆ . . . ಮೊಳಗಲು (ರಾಮಾ. ೬-೭೦); ಮನ್ನೆಯಗಹಳೆ ಚಂಬಕವಱೆ

ಬೊಂಬುಳಿ ಚಿನ್ನತಿತ್ತಿರಿ (ಶಂಶಾಖಾ. ೦೦-೨೯). **ಮನ್ನೆಗಾಳೆ** : ಪೊಱವ ತಂಬಟ ಭೇರಿ ಘಂಟೆ ಜಯಘಂಟೆಗಳ ಗಿಡಬಿಡ ಬುರುಗು ಮನ್ನೆಗಾಳೆ ಪೆರ್ಗಾಳೆಗಳ (ಶಬಂ. ೬-೯). [ಮನ್ನೆಯ + ಕಹಳೆ]

**ಮನ್ನೆಯಗೆಱೆ** (ನಾ). ಮಾನ್ಯವಾಗಿ ಕಟ್ಟಿಸಿದ ಕೆರೆ : ರಾಮೇಶ್ವರ ದೇವರ ಹೂದೋಂಟದಿಂ ಮೂಡಣಹಾದರಿಯ ಮಣಲು ಮತ್ತರೆರಡು ಮನ್ನೆಯಗೆಱೆಯ ಕೋಡಿಯಿಂ ತೆಂಕ ತೋಟಗಟ್ಟು ಮತ್ತರೊಂದು (ಕ್ಶಾಇ. IX-i. ೩೨೯-೩೪; 1209). [ಮನ್ನೆಯ + ಕೆಱೆ]

**ಮನ್ನೆಯದೆಱೆ** (ನಾ). ದತ್ತಿಯಾಗಿ ನೀಡಿದ ಭೂಮಿಯ ಮೇಲೆ ಹಾಕುತ್ತಿದ್ದ ತೆರಿಗೆ : ಮಂನೆಯಸಾಮ್ಯದೊಳ್ ಬಿಟ್ಟ ಮನ್ನರ್ಣೆಯೆನ್ನಂ ದೊಡೆ ಮನ್ನೆಯದೆಱೆ ಆಳಿವಸಕಾಯ. . . ಮೊದಲಾಗಿ. . . ಸರ್ವಬಾಧ ಪರಿಹಾರಂ ಕಾದು ನಡೆಯಿಸುವರ್ (ಕ್ಶಾಇ. XI-i. ೬೩-೨೦ ; 1042); × × × ಕರಣಂಗಳ ಕಾಣ್ಕೆಯೆಂದು ಮನ್ನೆಯದೆಱೆಯೆಂದರುವಣವೆನ್ದು . . . ಕೊಣ್ಣಾವರ್ಚಣ್ಣಾಳರ್ (ಕ್ಶಾಇ. IX-i. ೨೯೯-೩೭; 1164). 'ಮಾನ್ಯದೆಱೆ' ಪಠಾ. [ಮನ್ನೆಯ + ತೆಱೆ₃./ತೆಲು. ಮನ್ನಿಯತೀಱು]

**ಮನ್ನೆಯಪನ್ನಸು** (ನಾ). ಶೇಕಡ ಐವತ್ತರಷ್ಟು ತೆರಿಗೆ ವಿನಾಯಿತಿ ಯುಳ್ಳ ಮಾನ್ಯದ ಜವಿಾನು : ಸತ್ರಕ್ಕೆ ಮಲ್ಲರಸ ಬಿಟ್ಟ ಕೆಯಿ ಬೀಳ್ಕುಂಟೆಯ ದಾರಿಯಿಂ ಬಡಗ ಗವಱೇಶ್ವರ ದೇವಗೆಯಿಂ ಪಡುವ ಮಂನೆಯ ಪಂಸಸು (ಕ್ಶಾಇ. IX-i. ೨೩೨-೯೦; 1148).

[ಮನ್ನೆಯ + ಪನ್ನಸು]

**ಮನ್ನೆಯವಣ** (ನಾ). =ಮನ್ನೆಯದೆಱೆ : ಹೆಬ್ಬಾಳು ಪನ್ನೆರಡಱೊಳಗಣ ಮಣಿಯೂರ ಮನ್ನೆಯವಣವಂ . . . ಶ್ರೀ ಚೆಂನಕೇಶವದೇವರ್ಗ್ಗೆ ಧಾರಾಪೂರ್ಬ್ಬಕಂ ಕೊಟ್ಟರು (ಕ್ಶಾಇ. XV. ೩೩-೩೦; 1147).

[ಮನ್ನೆಯ + ಪಣ್ಣ]

**ಮನ್ನೆಯವಳಿ** (ನಾ). ಮಾನ್ಯರ ವಂಶ; ಮಾಂಡಲಿಕರ ಕುಲ : ಮನ್ನೆಯ ವಳಿಯೊಳತಿಸ್ಪುತನುಂನತಯಶಾಶ್ರಿಶಾಶ್ರಯಂ ಕ ಲಿ ಕಾ ಲೋ ೀ ತ್ಪ ೦ ನ ಲಾಕುಳೀಶನೆನಿಪಂ (ಎಇ. XX. ೦೦೬-೩೯ ; 1167).

[ಮನ್ನೆಯ + ಬಳಿ₂ (<ಬಟ್ಟಿ₃) ]

**ಮನ್ನೆಯಪೊಲ** (ನಾ). ಮಾನ್ಯವಾಗಿ ಬಿಟ್ಟ ಹೊಲ : ಅಂತು ಹೇಱಿಗೆ [ನಡೆ]ವೆಲೆ ೨೦೦ ಅಲ್ಲಿಯ ಮನ್ನೆಯಪೊಲದೊಳಗೆ ಅರುಪಣದಿಱುವ ಅಜ್ಜುನೇಶ್ವರಂ ಬಸದಿಯಂ [ಮೂಡಿಂ] ಬಿಟ್ಟ ಗದ್ಯಾಣ ೨ (ಕ್ಶಾಇ. XX. ೫೫-೫೩; 1071). [ಮನ್ನೆಯ + ಪೊಲ]

**ಮನ್ನೆಯಸಾಮ್ಯ** (ನಾ). ಮಾನ್ಯದ ಒಡೆತನ, – ಸ್ವಾಮ್ಯ : ಅಲ್ಲಿಯ ಬಳಗವೊಲದ ಮನ್ನೆಯಸಾಮ್ಯದ ಮಾನ್ಯಪೊಲದೊಳಗೆ . . . ಧಾರಾಪೂರ್ವಕಂ ಮಾಡಿ ಬಿಟ್ಟ ನೆಲಂ ಮತ್ತರು ೧೫೦ಕ್ಕೆ ನಿಬನ್ಧವರು ಪಣಂ ಗದ್ಯಾಣ ೧ (ಕ್ಶಾಇ. XX. ೨೦-೩೯; 1089) ; ಇನ್ನಱುಪಗ್ಗಾವುಣ್ಡು ಗಳ್ಳಿಟ್ಟು ಘಂನೆಯಸಾಮ್ಯದೊಳ್ ಬಿಟ್ಟ ಮನ್ನರ್ಣೆಯೆನ್ನೆನ್ದೊಡೆ ಮಂನೆಯದೆಱೆ . . . ತಂಬುಲಂ ಮೊದಲಾಗಿ . . . ಕಾದು ನಡೆಸುವರ್ (ಕ್ಶಾಇ. XI-i. ೬೩-೦೯ ; 1042). [ಮನ್ನೆಯ + ಸಾಮ್ಯ₁]

**ಮನ್ಮಥ** (ನಾ). ೧. ಕಾಮ ; ಮದನ : "ಪ್ರದ್ಯುಮ್ನಃ . . . ಮನ್ಮಥಃ . . . ಮನೋಭವಃ — ಈ ೨೮ ಕಾಮ(ದೇವನ) ಪೆಸರ್" (ಶಬಾಯು. ೬-೩೬); "ಬಂಡುಣಿವೆದೆಯನು . . . ಕಾವ ಜತಿಗಳವಗೆಯನೆನೆ ಮನ್ಮಥನ ನಾವುಮುಕ್ಕುಂ" (ಕನ್ನ್ಕ್ಕೆ. ೬); ನಯನಂ ನೀಳಸರೋಜಭಾಸಿ . . . ಬಾಹುಯುಗಂ ಮನ್ಮಥಪಾಶಭಾಸಿ (ಶಂಕುಮಾ. ೩-೩೩) ; ಸಂಯಮವ ಸಾಧಿಸಿ ಮತ್ತೆ ನುಡಿದೋರಿದಲ್ ಮನ್ಮಥನ ಶಿಷ್ಯ (ಶಶ್ಯಾಂಗ. ೩೯-೦೦೩೭). ೨. ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತೊಂಬತ್ತನೆಯದು: ಪ್ರಭವ ವಿಭವ . . . ಮನ್ಮಥ . . . ಅಕ್ಷಯವೆಂದಱುವತ್ತು ತೆಱನಾಗಿಪುದು (ಎಚಿೀ. ೨೬೭). ೩. ಒಂದು ಮಠದ ಹೆಸರು ; ಬೆಳವಲಪುರ : ಚಂದನ . . . ಪುನ್ನಾಗ ಇಂದ್ರವಾಣಿಯು ಮನ್ಮಥ ಬಿಲ್ವ ಪಾಲಾಶ ದಿಂದಲಾ ನಂದನವೆಸೆದುದು (ಶಶೀ. ೨೭-೩). [ಸಂ.]

**ಮನ್ಮಥಚಕ್ರ** (ನಾ). [ಕಾಮಶಾ] ಯೋನಿಯ ಒಂದು ಭಾಗ : ಯೋನಿ ಯಂಕುರ : ಭಗದ ಮೇಲೆ ಮೂಗಿನಂತೆ ಯವ್ವನ ಅಂಗಸ್ಥಾನ ಮದ ಗಳಿಂದಾದ ಅನೇಕ ಮದಗಳಿಹವು. ಅವು ಪ್ರತಿದಿನ ತಮ್ಮ ಶ್ಲಥವನುಗುಳು ತ್ತಿರೆ ಶುಕ್ಲದಂತೆ ಬೆಣ್ಣೆಯಂತೆ ಸ್ರವಿಸುವದು. ಅದರ ದೊಡ್ಡ ತೀಟೆಗೆ ಕಾರಣವಪ್ಪುವದರಿಂ ಕಾಮಶರೆಗಳೊಡನರ್ವವದರಿಂ ಮನ್ಮಥಚಕ್ರವೆಂಬುದು (ಕಾಮಶಾ. ೨೪೦). [ಸಂ.]

**ಮನ್ಮಥಭೂಮಿ** (ನಾ). [ಕಾಮಶಾ] ಕಾಮಕಲಾಸ್ಥಾನ : ಬೆನ್ನು ಬದಿ ತಿಗಂ ಮೊಲೆಗಳು ನಡುನೆತ್ತಿ ಐದುಂ ಮನ್ಮಥಭೂಮಿಗಳು (ಕಾಮಶಾ. ೨೪೦).

[ಸಂ.]

**ಮನ್ಮಥಾರಿ** (ನಾ). ಮನ್ಮಥನ ಶತ್ರು ; ಶಿವ : ನಮಿಸಿದನ್ ಮನ್ಮಥಾರಿಗೆ ಮನ್ಮಥನ ಬಂದಿ (ಶ್ರೀಶಿಕಾ. ೩೭೬-೩೨೩). [ಸಂ.]

**ಮನ್ಮಥಾವಸ್ಥೆ** (ನಾ). ಪರಸ್ಪರ ಅನುರಕ್ತರಾದ ಸ್ತ್ರೀಪುರುಷರು ಅಗಲಿದಾಗ ಅನುಭವಿಸುವ ವಿರಹವ್ಯಥೆ ; ಇದು ಹತ್ತು ತೆರನಾಗಿರುವುದು : "ತನ್ನ ನಾಯಕನ ವಿರಹದಿಂ ಚಿತ್ರದೊಳು ಅವನ ಪ್ರತಿಮೆಯಂ ನೋಡುವದು ಒಂದು. ಅವನಲ್ಲಿ ಯಾವಾಗಲೂ ಮನಸ್ಸು ಇಟ್ಟು ತಿರುಗುವದು ಎರಡು. ಅವ ಕಾಲದಲ್ಲಿಯೂ ಸಮಾಗಮ ಬಯಸು ವದು ಮೂರು. ಸರ್ವಕಾಲದಲ್ಲಿಯೂ ಅವನ ನೆನಹಿನಿಂ ನಿದ್ರೆಗೆಯ್ಯದೆ ಯಿರುವದು ನಾಲ್ಕು. ಅವನಲ್ಲಿ ವಿರಹದಿಂ ಭೋಜನಾದಿಗಳಿಲ್ಲದೆ ವೇಗದೊಳು ಕಾರ್ಶ್ಯವ ಹೊಂದಿರುವದು ಐದು. ಅವನಲ್ಲಿ ವಿರಹದಿಂ ಗಂಧಮಾಲ್ಯಾದಿ ಗಳಂ ಬಿಡುವದು ಆರು. ದೇಹಾಭಿಮಾನವಂ ಬಿಟ್ಟು ನಾಚಿಕೆ ಇಲ್ಲದೆ ಇರುವದು ಏಳು. ಪ್ರಜ್ಞೆ ಪರಿತಪ್ಪಿ ಮೂರ್ಛೆ ಪೋಪುದು ಎಂಟು. ಹುಚ್ಚು ಹಿಡಿದಂತೆ ವಿಕಾರ ಹೊಂದಿ ಇರುವದು ಒಂಭತ್ತು. ಅತಿವ್ಯಸನದಿಂ ಮೃತಿಯಂ ಹೊಂದುವದು ಹತ್ತು. ಈ ಪ್ರಕಾರ ಹತ್ತು ಬಗೆಯಾ ದಂಥಾ ಮನ್ಮಥಾವಸ್ಥೆಗಳನಿಸುವವು" (ಕಾಮಶಾ. ೨೯೭) ; ಎಲೆ ಅನಸೂಯೆ ಇವಳ ಮನ್ಮಥಾವಸ್ಥೆ ಮಿಾರುತ್ತಾ ಬಂದಿತು (ಶಾಕುಂತ. ೩೭-೦೦).

[ಸಂ. ಮನ್ಮಥಾವಸ್ಥಾ]

**ಮನ್ಯ** (ನಾ). ಕೊರಳು ; ಹೆಗ್ಗತ್ತು : "ಕೊರಳು ಮನ್ಯಂ ಗಳಂ ಧಮನಿ ಕಂಧರ ಶಿರೋಧರವುದಾ ಗ್ರೀವಮೆನಿಸಿಕ್ಕು" (ಶಂಗಂನಿ. ೯೩-೬).

[ಸಂ. ಮನ್ಯಾ]

**ಮನ್ಯಪಣ** (ನಾ). = ಮನ್ನೆಯದೆಱೆ : ದಂಡವೃಂದಿಗೆ ಪಡರಕಱುಕು × × ಬೆದ್ದಾಯ ಮುಂತಾಗಿ ಮನ್ಯಪಣ (ಎಕ. XIV. ಕೃಷ್ಣರಾ. ೨೬-೩೨ ; ?).

[< ಮನ್ನೆಯ + ಪಣ್ಣ]

**ಮನ್ಯಾಸ್ತಂಭ** (ನಾ). ಕುತ್ತಿಗೆಯನ್ನು ಸರಾಗವಾಗಿ ಆಡಿಸಲಾಗದ ಒಂದು ಬಗೆಯ ವಾಯುರೋಗ ; ಕುತ್ತಿಗೆ ಸೆಡೆತ : ಪರಿಪಕ್ವಮಾದ ಗರ್ದುಗಿನ ತಿರುಳುಂ ಶುಂಠಿಯುಮನರೆದು ನಸ್ಯಂಗೆಯ್ದೊಡಿರಲೀಗುಮೆ ಮಾನ[ಮನ್ಯಾ]ಸ್ತಂಭರೋಗಮುಂ ಬಾಹುಮೆಂಬಿಮಂ ಗ್ರಂಥಿಯುಮುಮಂ (ಕೋಕೋಶ. ೯-೦೦೦) ; ಅಮರದವಳ್ಳಿ, ಔಡಲದ ಬೇರು . . . ಕಷಾಯ ಹಾಕಿ ಕುಡಿಯೆ ಸಂಧಿಗಳನ್ನಿವಾತ, ಮಾನ್ಯ[ಮನ್ಯಾ]ಸ್ತಂಭ . . . ಸಂದುವಾತ ಸಹ ಮಾಣ್ಗು (ಸಕಸ್ಯ. ೦೫೨). [ಸಂ.]

**ಮನ್ಯು** (ನಾ). ೧. ಕೋಪ ; ಸಿಟ್ಟು : ಎಂದರಸಂ ನುಡಿವುದುಮಾ ಸುಂದರಿಗಂತಂತೆ ಮನ್ಯು ಮಿಕ್ಕು ಮನಸ್ತಾಪಂ ದಳ್ಳಿಸೆ (ಜಗ್ಗಿಕ. ೯-೦೨) ; ಬಾಲನೊಳ್ ಮನ್ಯು ತಕ್ಕುದೆ ಪೇಳ್ (ಪಶ್ಯೃತು. ೦-೭-೩೬). ೨. ದುಃಖ ; ಅಳಲು ; ವ್ಯಥೆ : ಸಹೋದರಶೋಕದೊಳ್ ಮನ್ಯು ಮಿಕ್ಕು ಸ್ಥಿರಿಸ

ಲಾಜದೆ (ಕುಶಲ. ೦೪–೯ ಟ); ಮನವೊಳದಾಗೆ ಮನ್ಯು ಮಿಗೆ ತಳ್ತೆಮೆಯಿಂ ಕರೆಗಣ್ಣ ಸೂಸೆ ಕಣ್ಬನಿ (ಕುಠಾಕೂ. ೯–೦೦೬); ಪತ್ತುವಿಡು ಮನ್ಯುವಂ ದೈನ್ಯಮಂ (ಶ್ರೀರಾಕೂ. ೨೯೩–೨೩೩). ೩. ದೈನ್ಯ; ದೀನತೆ. ೪. ಅಹಂಕಾರ; ಗರ್ವ. ೫. ಕುದುರೆಯ ಒಂದು ಅಂಗದ ಹೆಸರು; ಕಂಠನಾಳದ ಎರಡೂ ಕಡೆಗಳ ಭಾಗದ ಹೆಸರು: ನಡುಕಂಠ ನಾಳಿಯಿರ್ಕೆಲದೆಡೆಗಂ ಮನ್ಯುವದೆನಿಪ್ಪ ಪೆಸರೆಸದಿರ್ಕುಂ (ಅಶ್ವಶಾ. ೯–೨೬). ೬. ಯಜ್ಞದ ಕೊನೆ; ಯಾಗದ ಅಂತ್ಯ: "ದೈನ್ಯದಲಿ ಯಜ್ಞೋತ್ಸಾರದಲಿ ಕೋಪದಲಿ ಮನ್ಯುವೆಂದೆಂಬುದು" (ಹುಂಗಣ. ೦೪೩–೨೪). ೭. ಒಡೆಯ; ಯಜಮಾನ. ೮. ದೊಡ್ಡ ಸೈನ್ಯ. ೯. ಇಂದ್ರಿಯ. ೧೦. ಮುಖ. ೧೧. ಕಣ್ಣೀರು: "ದೈನ್ಯದಿ ಯಜ್ಞದಂತ್ಯ ಬಾಷ್ಪಜಲಂಗಳೊಳಾಳ್ದನೊಳ್ಮಹಾ ಸೈನ್ಯದೊಳಾಸ್ಯದೊಳ್ಮಿಪುಳದೊಳ್ಕಡುಗೋಪದೊಳಿಂದ್ರಿಯಂಗಳೊಳ್ ಮನ್ಯುವೆನಿಕ್ಕುಂ" (ಶಾಪಾರ. ೩೭). [ಸಂ.]

**ಮನ್ಯೂದ್ಗತ** (ಗು). ದುಃಖಭಾರದಿಂದ ಕೂಡಿದ; ಶೋಕಭರಿತವಾದ: ಮನ್ಯೂದ್ಗತಕ್ಷೋಭದಿಂ ಕಂಪಿಸುತಂ (ಅರಂಅ. ೫೪೨); ರಿಪುನೃಪ ಕುಲಾಂಗನಾಜನಮನ್ಯೂದ್ಗತಬಾಷ್ಪಸಲಿಲಧಾರಾಪ್ರತಾನದಿಂ ಕೀರ್ತಿವಲ್ಲಿಯಂ ಬೆಳೆಯಿಸಿದಂ (ಕುಠಾಕೂ. ೦–೦೩೬). [ಸಂ.]

**ಮನ್ವಂತರ** (ನಾ). ೧. (ಪುರಾಣದಲ್ಲಿ ಹೇಳಿರುವ ಹದಿನಾಲ್ಕು ಮನುಗಳಲ್ಲಿ) ಒಬ್ಬ ಮನುವಿನ ಆಳ್ವಿಕೆಯ ಕಾಲ; ☞ ಮನುಷ್ಯರ ನಾಲ್ಕುಯುಗಗಳು ಸೇರಿದರೆ ಒಂದು ದೈವಯುಗ. ಇಂತಹ ಎಪ್ಪತ್ತೊಂದು ದೈವಯುಗಗಳು ಸೇರಿದರೆ ಒಂದು ಮನ್ವಂತರ: ಆತನಿಂ ಬಟಿಯಮುಸಂಖ್ಯೇಯವರ್ಷಪ್ರಮಿತಮನ್ವಂತರಾತಿಕ್ರಮದೊಳ್ ಪದಿನಾಲ್ಕನೆಯಮನು ಪುಟ್ಟಿದಂ (ಆದಿಪು. ೬–೩೩ ಟ); ಆದಿಯ ಮನ್ವಂತರದೊಳಶೀತಿಭಾಗಿಪಲ್ಯದೊಳಾ ಮನ್ವಂತರದಶಮಾಂಶಂ ಮನ್ವಂತರವಕ್ಕುಂ (ಕಂಠಾಕೂ. ೦–೯೯); ಮನ್ವಂತರಗಳ ಭಾಗ್ಯವ ತೆಗೆಸಿ . . . ಹಕ್ಕಿ ಹಾರುತಿದೆ ನೋಡಿದಿರಾ (ಗಂ. ೩೭–೨). ೨. (ಅಲಂ) ಪರಿವರ್ತನೆಯ ಕಾಲ; ಹೊಸಯುಗ: ಬಹುಮಟ್ಟಿನ ಸುಧಾರಣೆಯು ಇಂಗ್ಲಿಷ್ ವಿದ್ಯಾಮನ್ವಂತರದಿಂದ ತೊಡಗಿದ್ದು (ಜಾಕುದಾ. ೨೫); ಈ ಸಾಹಿತ್ಯದ ಹೊಸ ಮನುಗಳು ಈ ಯುಗದಲ್ಲಿ ಹೊಸ ಮನ್ವಂತರವನ್ನು ಸ್ಥಾಪಿಸಿದರು (ಜಾಹಿಸ. ೮). [ಸಂ.]

**ಮನ್ವಾದಿ** (ನಾ). ೧. = ಮನ್ವಂತರ ೧: ಒಂದು ವರ್ಷದಲ್ಲಿ ೯೬ ಶ್ರಾದ್ಧಗಳು ಬರುವುವು. ಅವು ಯಾವುವೆಂದರೆ ಮನ್ವಾದಿಗಳು ೧೪, ಯುಗಾದಿ ೪ (ತತ್ತ್ವ. ೪–೨೨ ತಾತ್ಪರ್ಯ). ೨. = ಮನ್ವಂತರ ೨: ಸಮರ್ಥರ ಆಗಮನದ ದಿವಸವು ಶಿವರಾಯನ ಪರಿವಾರಕ್ಕೆ ದೊಡ್ಡ ಮನ್ವಾದಿಯಂತೆ ಆಯಿತು (ಛತ್ರಪ. ೯). [ಸಂ.]

**ಮನ್ಸಬ್** (ನಾ). ೧. ಅಧಿಕಾರ; ಹುದ್ದೆ; ಪದವಿ. ೨. (ಸೈನ್ಯದ) ಅಧಿಕಾರಿ: ಐದುಸಾವಿರಸೇನೆಗೆ ಮನ್ಸಬ್‌ನನ್ನಾಗಿಟ್ಟು . . . ರಾಜನೆಂಬ ಬಿರುದನ್ನೂ ಕೊಟ್ಟನು (ಛತ್ರ. ೨೪).

[ ← ಅರ. ಹಿಂ. ಮರಾ. ಮನ್‌ಸಬ್ ]

**ಮಫ್ತಿ** (ನಾ). ಅಧಿಕಾರದ ಸಮವಸ್ತ್ರವಿಲ್ಲದೆ ಸಾಧಾರಣ ಉಡುಪಿನಲ್ಲಿರುವುದು: ಮಫ್ತಿಯಲ್ಲಿ ಟಿಕೆಟ್ ಇಲ್ಲದ ಪ್ರಯಾಣಿಕರನ್ನು ಪತ್ತೆ ಹಚ್ಚುವ . . . ಶಂಕೆಯೂ ಆಯಿತು (ಕೃದ್ಯ. ೨೪).

[ ← ಅರ. ಪಾರ. ಮಫ್ತೀ ]

**ಮಫ್ಲರ್** (ನಾ). ಬೆಚ್ಚಗಿರಲು ಕೊರಳ ಸುತ್ತಲೂ ಸುತ್ತಿಕೊಳ್ಳುವ ಉಣ್ಣೆಯ ಬಟ್ಟೆ; ಕಂಠವಸ್ತ್ರ: ತಲೆಗೆ ಮಫ್ಲರ್ ಕಟ್ಟಲಾ ಸರಸೂ (ಕೋಟಿಪಾ. ೨೨). [ ← ಇಂ. Muffler ]

**ಮಬ್ಬಿಗ** 'ಮರ್ಬಿಗ' ನೋ.

**ಮಬ್ಬಿಟ್** (ಕ್ರಿ). ಮಂಕಾಗು; ಮಬ್ಬು ಆವರಿಸು: ನಿಯೋಗಮಂಗುಂದಲೆಯಾಯ್ತು ತೇಜ ಮಬ್ಬಿಟ್ಟದುದು (ಕವಿ. V. ೦೪–೩೬; 1099).

[ ಮಬ್ಬು (< ಮರ್ಬ್$_{2}$) + ಇಟ್$_{2}$ ]

**ಮಬ್ಬು** 'ಮರ್ಬ್$_{2}$' ನೋ.

**ಮಬ್ಬುಗಣ್ಣು** (ನಾ). ಮಸುಕಾದ ದೃಷ್ಟಿಯುಳ್ಳ ಕಣ್ಣು; ಸರಿಯಾಗಿ ಕಾಣಿಸದ ಕಣ್ಣು: ಅರಿವುಗನ್ನಡಿಯ ಶುದ್ಧೀಕರಣದ ಕಾರ್ಯ ಅಥವಾ ಅರಿವಿನ ಮಬ್ಬುಗಣ್ಣಿಗೆ ಕನ್ನಡಕ (ಸಂಕೋಥ. ೦೬೯).

[ಮಬ್ಬು (< ಮರ್ಬ್$_{2}$) + ಕಣ್ಣು (< ಕಣ್)]

**ಮಬ್ಬುಗತ್ತಲು** 'ಮಬ್ಬುಗತ್ತಲೆ' ನೋ.

**ಮಬ್ಬುಗತ್ತಲೆ, ಮಬ್ಬುಗತ್ತಲು** (ನಾ). ಮಸುಕುಮಸುಕಾದ ಕತ್ತಲೆ; ನಸುಗತ್ತಲೆ: ಮಬ್ಬುಗತ್ತಲೆಯಾದರೂ ರಂಗನೂ ಬರಲಿಲ್ಲ (ರಂಗಕೋ. ೧೩); ಮಬ್ಬುಗತ್ತಲೆ ಕವಿಯಿತು (ಕಳಹು. ೫). ಮಬ್ಬುಗತ್ತಲು: ದೂರದಲಿ ಯಾರೋ ಮಬ್ಬುಗತ್ತಲಲಿ ಹುಬ್ಬುಗೈಹಚ್ಚಿ ನೋಡುತ್ತಿದ್ದಾರೆ, ಹೊರಳಿ ಹೊರಳಿ (ಚೆಲಮು. ೦೩–೦೯); ಹಾಗೆಯೇ ಮಬ್ಬುಗತ್ತಲಾಯಿತು (ಅಕಪಾ. ೨೫೦).

[ ಮಬ್ಬು (< ಮರ್ಬ್$_{2}$) + ಕತ್ತಲೆ$_{1}$ (< ಕಟ್ತಲೆ)]

**ಮಬ್ಬುಚರ** (ನಾ). ನಿಶಾಚರ; ರಾಕ್ಷಸ: ಮಬ್ಬುಚರನು ಅಲ್ಪದಾನವನ್ನೇ ಇತ್ತು, ಹೆಬ್ಬಾಗಿಲ ಮುಂದೆ ಇಟ್ಟನದಕೊ (ಕೋಳ್ವದೀ. ೨೩–೩).

[ ಮಬ್ಬು (< ಮರ್ಬ್$_{2}$) + ಚರ ]

**ಮಬ್ಬುದಾರಿ** (ನಾ). ಕತ್ತಲೆ ಮುಸುಕಿದ ದಾರಿ: ಮಬ್ಬುದಾರಿಯಲ್ಲಿ . . . ದೊಡ್ಡ ಬಟ್ಟೆಯೊಂದನ್ನು ಹಾಸಿದಂತೆ ಕಂಡುಬಂದಿತು (ಹಸುಹೊ. ೦೯೦). [ ಮಬ್ಬು (< ಮರ್ಬ್$_{2}$) + ದಾರಿ]

**ಮಬ್ಬುವಿಡಿ** (ಕ್ರಿ). ಮಂಕಾಗು; ಮಸುಕಾಗು: ಒಬ್ಬರ ಕಣ್ಣಿಗೊಂದಾಳು ಸಾವಿರವಾಗಿ ಮಬ್ಬುವಿಡಿದು ಕಾಣಿಸಲು (ಕಂಕಪ. ೧೪–೯೧).

[ಮಬ್ಬು (< ಮರ್ಬ್$_{2}$) + ಪಿಡಿ$_{1}$ ]

**ಮಬ್ಬೆದೆ** (ನಾ). ೧. ಮಂಕಾದ ಮನಸ್ಸು. ೨. ಅಜ್ಞಾನ ತುಂಬಿದ ಮನಸ್ಸು: ಏಕನ್ನ ಮಬ್ಬೆದೆಗೆ ಮೂಡೆ 'ಆತ್ಮಾನಂ ವಿದ್ಧಿ' ಎಂಬೀ ಸತ್ಯದರಿವೆಯ ಮ್ಲಾನಂ? (ಗಳಿದಂ. ೩೬–೦೦).

[ ಮಬ್ಬು (< ಮರ್ಬ್$_{2}$) + ಎದೆ (< ಎರ್ದೆ) ]

**ಮಮ** (ಗು). ೧. ನನ್ನ; ನನಗೆ ಸಂಬಂಧಿಸಿದ: ಮಮಕರ್ತ ಕೂಡಲಸಂಗನ ಶರಣರು (ಬಸವ. ೫೯೩); ಇರೆ ನಿದ್ರಾಸಕ್ತಿಯಿಂದಂ ಮಮ ಭುಜಯುಗದೊಳ್ ಕಾಮಿನೀಯುಗ್ಮವು (ರಮುಕ. ೯–೦೬); ಕೃಪಾಕರ ದಕ್ಷ ಶಿಕ್ಷಣದಕ್ಷ ಮಮರಕ್ಷ (ಐಸಕು. ೨–೦೬). (ನಾ). ೨. 'ನನಗೆ ಒಪ್ಪಿಗೆಯಾಗಿದೆ' ಎಂಬುದನ್ನು ಸೂಚಿಸುವ ಪದ: ಈ ವಾದವನ್ನು ಕೈಮುಟ್ಟಿ 'ಮಮ' ಎನ್ನಬಹುದು (ಜಾಕೋಚ. ೦೦೦). ☞ ಇದು ಸಂಸ್ಕೃತದ 'ಅಸ್ಮದ್' ಶಬ್ದದ ಷಷ್ಠೀವಿಭಕ್ತಿಏಕವಚನದ ರೂಪ. ಇದೀ ವಾಕ್ಯಾರ್ಥದಲ್ಲಿ ಒಮ್ಮೊಮ್ಮೆ ಉಪಯೋಗವಾಗುತ್ತದೆ. [ಸಂ.]

**ಮಮಕರಿಸು** (ಕ್ರಿ). ೧. ಅಹಂಕರಿಸು; ಬೀಗು; ಗರ್ವಿಸು: ಐಶ್ಯದ ಮಾಟದಲಿ ಮಮಕರಿಸಿ ಮಕರಿಸಿ ಮೆಚ್ಚಿದನಲ್ಲಮನು (ಶ್ರಭುಲೀ. ೦೦–೨೪); ಕಾಯಸಿದ್ಧಿಯ ಪಡೆದೆನೆಂದೆಂದಿಗುಂ ಮರಣಮಿಲ್ಲೆಂದು ಬಟಿಟದೆ ಮಮಕರಿಸದಿರು ಮೋಹದಿಂದೆ (ಸಿದ್ಧೇಪು. ೫–೨೯). ೨. ಮಮಕಾರವನ್ನು ತೋರು; ಪ್ರೀತಿಸು: ನೃಪರೀ ರಾಜ್ಯಸಂಪದವ ಮಮಕರಿಸಿದರು (ಐರಾಗ. ೯–೧೫–೪); ಬಾಹ್ಯಕರ್ಮಕ್ಕೆ ಮಮಕರಿಸದೆ (ಗೀತ್ರಪು. ೫–೦೩).

[<ಮಮಕಾರ + —ಇಸು$_{3}$]

**ಮಮಕಾರ** (ನಾ). ೧. ನನ್ನದೆಂಬ ಭಾವನೆ; ಸ್ವಾರ್ಥಪರತೆ. ೨. ಅಹಂಕಾರ; ಗರ್ವ: ಕೊಂದೆ ನಾನೆನಗಾಯ್ತು ಪಾತಕವೆಂದು ಮನದಲಿ ಮಜುಗುವಾತನ ಬಂದಿಯಲಿ ಹೊಕಗೊಂಬವಾಹಂಕಾರ ಮಮಕಾರ ಕೇದು

ಕಲೆ ತನನೆತ್ತಣದು (ಶಾಬ್ದ್ಯ. ೩-೪೪); ಅಹಂಕಾರವ್ಯಕ್ತಿಯಿಂದ ಮಮಕಾರ ಭಾವದಿಂದ ಜೀವಿಯು ಶಿವನಿಂದ ವಿಭಿನ್ನಸಂಸಾರಿಯಾಗಿದ್ದಾನೆ (ಚಾಕರ. ೦೦೬). ೩. ಮೋಹ ; ಪ್ರೀತಿ : ಭೂರಿ ಮಮಕಾರದಲಿ ನೃಪರು ವಿಚಾರಿಸದೆ ಧರೆಯೆಮ್ಮದೆಂದೇ ನಾರಕದ ಸಾಮ್ರಾಜ್ಯಕೈದುವರು (ಶಾಬ್ದ್ಯಣ. ೦-೨೯). [ಸಂ.]

**ಮಮಕಾರಗೈ** (ಕ್ರಿ). ಪ್ರೀತಿಯನ್ನು ತೋರಿಸು : ನವಿರಾಜನಬಲೆಯರ್ ಬಹಲ್ಲಿಗವರೊಳು ಮಮಕಾರಗೈದಿರ್ದುದೆಂದು ರಮಣಿಯರ್ಗಾಸಂರಿ ಭೋಜನ ಶಾಲೆಗೆಯ್ದಿದನು (ಶಠಚ. ೪೨-೬೯).

[ಮಮಕಾರ + ಗೈ (<ಕಯ್$_1$)]

**ಮಮಟಿ**, ಮಮ್ಮಟಿ (ನಾ). ವ್ಯವಸಾಯದ ಒಂದು ಉಪಕರಣ ; ಮಣ್ಣನ್ನು ಅಗೆದು ತೆಗೆದುಹಾಕುವ ಸಾಧನ; ಗುದ್ದಲಿ : (ಎಕಮ್ಮ. ೫೪. ೨೯). **ಮಮ್ಮಟಿ** : ಮಣ್ಣಗೆಲಸದವರಿಗೆ ಕೋಲುಗುದ್ದಲಿ ಮಮ್ಮಟಿ ಗಳನ್ನು ಕಳಿಸಿಕೊಡಬೇಕು (ಜಾಶಿ). [←ತಮಿ. ಮಮ್ಮಟ್ಟಿ]

**ಮಮತತ್ವ** (ನಾ). =ಮಮಕಾರ ೧ : ಕುಲಛಲ ಶೀಲ ನೈಷ್ಠಿಕ ಇದ ದೃಷ್ಟಿಸಿ ಕೊಂಡಿಪ್ಪ ಕಟ್ಟು ಮನುಜರಿಗೆ ನಿಜತತ್ವದ ಮಾತೇಕೆ ಅದರೆತ್ತ ಹೋರುವ ಮಮತತ್ವವೈಸೆ ನಿತ್ಯತ್ವವಿಲ್ಲ (ಬೋಳಬಸ. ೨೫-೦೦೩). [ಸಂ.]

**ಮಮತೆ** (ನಾ). ೧. ನನ್ನದು ಎಂಬ ಅಭಿಮಾನ ; ಮಮಕಾರ : ದೇಹ ವೆಂಬುದನಿತ್ಯ . . . ಬಿಡು ಸಂದೇಹವನಹಮ್ಮಮತೆಗಳ ಬೀಳ್ಕೊಟ್ಟು ಕೋಡೆಂದ (ಶಾಬ್ದ್ಯರ್ನ್ಯಿ. ೭-೨೭); ಮಮತಾಪೇಕ್ಷಿತದ ಪೊರೆಯ ಪರಿದಂದು ಅರಳ್ದುದರಿವಿನ ಕಣ್ಣು (ಶುಂಕಾಳ. ೩೯೨). ೨. ಪ್ರೀತಿ ; ವಾತ್ಸಲ್ಯ : ಕರುಣದ ಮಮತೆ ಮಿಗೆ ಮಧುರೋಕ್ತಿಯಲಿ ನುಡಿಸಿದನು ನೃಪವರನ (ಕೊಠಾ. ೦-೪-೩); ಮಂಥರೆಯು ಈ ಮಮತೆಯಾವರ್ತದೊಳ್ ... ಸಿಲ್ಕಿ (ತ್ರೀಣಾಶು. ೨೭-೬೦೨). ೩. ದರ್ಪ ; ಕೊಬ್ಬು. [ಸಂ. ಮಮತಾ]

**ಮಮತ್ವ** (ನಾ). = ಮಮಕಾರ ೧ : ಮೆಯ್ಯ ಮಮತ್ವಂ ಪಚ್ಚಿಪಡೆ ಪಚ್ಚಿಸುಟ್ಟು ಪೋದುದು (ಸುಕುಶು. ೦೨-೪೨); ಸ್ವಾರ್ಥವನ್ನು ಕಳೆದುಕೊಂಡು ಮಮತ್ವವನ್ನು ಅಹಂಕಾರವನ್ನು ದೂರಮಾಡು (ವರ್ಣಾ. ೦೩೨). [ಸಂ.]

**ಮಮರೇಜು**, ಮಂರೇಜು (ನಾ). ಕುದುರೆಯನ್ನು ಚೋದಿಸಲು ಸವಾರ ತನ್ನ ಹಿಮ್ಮಡಿಗೆ ಅಳವಡಿಸಿಕೊಳ್ಳುವ ಮುಳ್ಳಿರುವ ಸಾಧನ ; ಹಿಮ್ಮಡಿಮುಳ್ಳು ; ತಿವಿಮುಳ್ಳು : ಮದನನ ಕೈಲಿದ್ದ ಚಾವಟಿಯನ್ನು, ಅವನ ಕಾಲಿನಲ್ಲಿದ್ದ ಮಮರೇಜನ್ನು ಕಂಡು, ಈ ಆಯುಧಗಳ ತಂಟೆಯಿಂದ ಕುದುರೆಯು ಪಕೋಟ ತಪ್ಪಿರಬೇಕೆಂದು ತಿಳಿದುಕೊಂಡನು (ಸುಚುತ. ೨೫೪). **ಮಂರೇಜು** : ಅಶ್ವಗಳಿಗೆ . . . ಎಷ್ಟು ಹೊಡೆದರೂ ಮಂರೇಜಿನಿಂದ ಎಷ್ಟು ತಿವಿದರೂ ಕಾಲ ಎತ್ತಿ ಇರಿಸು ವುದೇ ಕಷ್ಟವಾಗಿತ್ತು (ಹುಸುಗ. ೩೫).

[ ← ಹಾರ. ಮಿಹಮಿಾರ್ಜ್ ; ಮರಾ. ಮಂಬರೇಜ್ ]

**ಮಮ್ಮ** 'ಮರ್ಮ$_1$' ನೋ.

**ಮಮ್ಮಕ್ಕಳು** 'ಮೊಮ್ಮಗು' ಪರ್ಯಾ.

**ಮಮ್ಮಗ** 'ಮೊಮ್ಮಗ' ನೋ.

**ಮಮ್ಮಗಳು** 'ಮೊಮ್ಮಗಳು' ನೋ.

**ಮಮ್ಮಗು** 'ಮೊಮ್ಮಗು' ನೋ.

**ಮಮ್ಮಟಿ** 'ಮಮಟಿ' ನೋ.

**ಮಮ್ಮನೆ** 'ಮಮ್ಮಲನೆ' ನೋ.

**ಮಮ್ಮಲ** 'ಮಮ್ಮಲಂ' ನೋ.

**ಮಮ್ಮಲಂ**, ಮಮ್ಮಲ, ಮಲಮಲ$_1$, ಮಲಮಲಂ, ಮಲುಮಲ (ಅ). ಅತಿಶಯವಾಗಿ; ವಿಶೇಷವಾಗಿ: ಇಂತು ಮಮ್ಮಲಂ ಮಱುಗಿಪರಲ್ತೆ . . . ನೃಪಧಾತ್ರಿಯೊಳ್ (ಗಾದಂಪು. ೫೬೪) ; ಕಳವಳಿಸಿ ಕಂಗೆಟ್ಟು ಮಮ್ಮಲಂ ಮಱುಗುತ್ತೆ (ತಿಂಶ್ಯ.೦೦-೫೨). **ಮಮ್ಮಲ** : ರಾಜ್ಯಂ ನಷ್ಟರಾಜವಾದುದರ್ಕೆ ಮಮ್ಮಲ[ಪಾಠಾಂ. ಮಲುಮಲ]ಮಱುಗಿ ಯೋಜನಗಂಧಿ ಸಿಂಧುಪುತ್ರ ನನಿಂತೆಂದಳ್ (ಕಂಕಥಾ. ೦-೮೦ ವ). **ಮಲಮಲ$_1$** : ದುಶ್ಶಳೆ ಕೇಳ್ದು ಮಲ ಮಲ ಮಱುಗಿ ತನ್ನಣ್ಣನಲ್ಲಿಗೆ ವಂದು (ಕಂಕಥಾ. ೦೦-೦೨೨ ವ) ; ಮಲಮಲ ಮಱುಗಿ, ಕರ್ಮಸಂತಾಪದ ಕುಲವ ಕೆಡಿಸಬೇಕೆಂದು (ಕರ್ಣಕ. ೬-೫೫). **ಮಲಮಲಂ** : ನೆನೆದು ಮಲಮಲಂ ಮಱುಗುವುವು (ಬಸ.೬-೦೦೮). **ಮಲುಮಲ** : 'ಮಲುಮಲನೆ' ಪರ್ಯಾ. [ ? ]

**ಮಮ್ಮಲನೆ**, ಮಮ್ಮನೆ, ಮಲಮಲನೆ, ಮಲುಮಲನೆ (ಅ). ಅತಿಶಯ ವಾಗಿ : ವಿಶೇಷವಾಗಿ : ಆ ವಾಕ್ಯಮಂ ಕೇಳಿ ಮಮ್ಮಲನೆ ಮಱುಗುತ್ತೆ (ಅರಾತ. ೦-೬-೦೫) : ಅರಿಯದರೆಂದು ಮಮ್ಮಲನೆ ಮರುಗುವೆಯ (ಶಿವಗೀ. ೯೬-೨). **ಮಮ್ಮನೆ** : ಎನಲು ಮಮ್ಮನೆ ಮರುಗಿ ಚಿಂತಾಪಸಧಿಯೊಳು ಮೈ ಮುಳುಗಿ (ಅಪಂಶಾ. ೦-೦೬-೦೬). **ಮಲಮಲನೆ** : ಸಪ್ತಸಾಗರ ಸಲಿಲದೊಳ್ ಮಲಮಲನೆ ಮಱುಗುವ ಜಲಚರಚಕ್ರದಿಂ (ಗದಾಯು.೬-೨೦ ವ); ಮಲಮಲನೆ ಮಱುಗುತ್ತವನಿಯೊಳು ತೊಳಲಲು (ಬಸಪು. ೦೫-೨೯). **ಮಲುಮಲನೆ** : ಕಲಬರ್ತಮ್ಮೆಂಜಲನೂಡೆ ದುಃಖದತಿಶಯಬಲೆಯೊಳ್ ಮಲುಮಲನೆ ಮಱುಗಿ ಸಿಲ್ಕಿರ್ದವಳಂ ಕಂಡು (ಸುಕುಮಾ. ೪-೬೦) : ಸ್ತ್ರೀವೇದದಿಂ ಜೆಗ್ಗತ್ತಿಯಾಗಿ ಪುಟ್ಟಿ . . . ಮಲುಮಲನೆ ಮಱುಗಿ ನವೆಯುತ್ತಿರ್ಪಂ (ಸುಕುಮಾ. ೫-೦೩). [ಮಮ್ಮಲ (< ಮಮ್ಮಲಂ) + –ಅನೆ$_1$]

**ಮಮ್ಮಟ್** 'ಮಣ್ಮಟ್' ನೋ.

**ಮಮ್ಮು**, ಮೊಮ್ಮು (ನಾ). (ಮಕ್ಕಳ ಭಾಷೆಯಲ್ಲಿ) ಊಟ.–ಆಹಾರ : ಸುಮ್ಮನೆ ಇದ್ದೇನು ಅಮ್ಮಿಯ ಬೇಡೆನು ಮಮ್ಮು ಉಣುತೇನೆ ಅಮ್ಮ ಅಳುವುದಿಲ್ಲ (ಜಾಶಿ. ೦-೦೭೦ ಅಜ್ಞಾತ). **ಮೊಮ್ಮು** : ಮೊಮ್ಮು ಮಾಡಿಸು ತ್ತೀನಿ ಬಾ ಪುಟ್ಟಾ (ಜಾಶಿ).

**ಮಮ್ಮುಳಿ** ' ಮಣ್ಮಟ್ ' ನೋ.

**ಮಮ್ಮುಳಿಕೆ** (ನಾ). ತಳಮಳ ; ಸಂಕಟ : ವಿಜಯವಿಠಲ ಎನ್ನ ಮಮ್ಮುಳಿಕೆ ಹರಿಸು (ಹರಿದಾಸ. ೦೦೭-೧).

[ಮಮ್ಮುಳಿ (< ಮಣ್ಮಟ್) + –ಕೆ]

**ಮಯ$_1$** (ನಾ). ೧. ಒಂಟೆ. ೨. ಕುದುರೆ. ೩. ಹೇಸರಗತ್ತೆ. ೪. ರಾಕ್ಷಸರ ಶಿಲ್ಪಿಯ ಹೆಸರು ; ವಿಶ್ವಕರ್ಮನ ಅಣ್ಣ : ಕಲ್ಯಾಣಮಂಟಪಮಂ ಕೌತುಕಾವಹಮಪ್ಪಂತೆ ಮಯ ಮಾಂಡವ್ಯರಂ ಪಳಿವ ಶಿಲ್ಪವಿದ್ಯಾವಿಶಾರದರಿಂ ರಚಿಸುತಿರ್ದಂ (ರಾಶೇ. ೭-೯೬ ವ). ೫. ಒಂದು ಬಗೆಯ ಪಕ್ಷಿ ; ಗರುಡ (?) : "ನೃಪಬಗವೆಸಲ್ ಮಮಮಯ್ಯ" (ಶಬ್ದಮ. ೩೨-೬). [ಸಂ.]

**ಮಯ$_2$** (ನಾ). ತುಂಬಿರುವುದು ; ವ್ಯಾಪಿಸಿರುವುದು : ಮಣ್ಣಿಂ ಹಿಡಿದು ಪೊನ್ನುಗಳ ಮಯವಾಗೆಸೆಯಲಚ್ಚರಿವಡುತ (ಬಸಪು. ೨೯-೩೨) ; ಫಲುಗುಣನ ಮಯವಾಯ್ತು ಬಿಳತಳತಂತ್ರ (ಶಾಬ್ದ್ಯರ್ನ್ಯಿ. ೬೦-೬). [p ಇದು ಸಂಸ್ಕೃತದಲ್ಲಿ ಪ್ರತ್ಯಯರೂಪ. ಈ ಪ್ರಯೋಗಗಳಲ್ಲಿ ನಾಮಪದ ವಾಗಿ ಬಳಕೆಯಾಗಿದೆ]

**–ಮಯ$_3$** (ಪ್ರ). 'ತುಂಬಿದ', 'ವ್ಯಾಪ್ತವಾದ' ಎಂಬ ಅರ್ಥವನ್ನು ಕೊಡುವ ಒಂದು ಸಂಸ್ಕೃತಪ್ರತ್ಯಯ ; p ಕೆಲವುಕಡೆ ಕನ್ನಡ ಶಬ್ದಗಳಿಗೂ ಈ ಪ್ರತ್ಯಯವು ಸೇರಿದೆ: 'ಪೆಣಮಯ' ಪರ್ಯಾ.[ಸಂ.]

**ಮಯಕ**, ಮೈಕ (ನಾ). ೧. ಅಸಹಜವಾದ ಮಂಕು, — ಅಲಸಿಕೆ : ಅಸಹಜವಾದ ಅತಿನಿದ್ರೆ, ಅತಿಸುಸ್ತು. ಮಯಕ, ಮಂಕು, ಅಲಸಿಕೆ, ಮಾಂದ್ಯ (comaa: ಶಂಕಭ) ; ಅಫೀಮನ್ನು ಸೇವಿಸಿದವ . . . ಮಂಪರ ಗೊಳ್ಳುವನು. ತೂಕಡಿಕೆಯಿಂದ ನಿದ್ದೆ, ಮಯಕ (ಕೋಮ), ಕೊನೆಗೆ ಉಸಿರಾಟವೇ ನಿಂತು ಸಾಯುವನು (ಶರೀರ. I, ೩೭೭). **ಮೈಕ** : ೨. ಮೂರ್ಛೆ ; ಬವಳಿ : ಗುರುಗಳು ಪಾಪಕಾಡುವುದಕ್ಕೊ ಪ್ರಾಣವಿಲ್ಲದೆ

ಮೈಕದಿಂದ ಸೊಪ್ಪಾಗಿ ಬಿದ್ದಿದ್ದರು (ಪಗಗ. ೬೩) ; ನೀರಿನೊಳಗೆ ಹಾಕಿದುದರಿಂದ ಗುರುಗಳಿಗೆ ಮೈಕವು ಸ್ವಲ್ಪಮಟ್ಟಿಗೆ ನೀಗಿತು (ಪಗಗ. ೬೭).
[ದೇ.॥ ತಮಿ. ಮಲ. ಮಯುಕ್ಕಮ್ ; ತೆಲು. ಮುಮುಕ, ಮೈಕ]

**ಮಯಣ**, ಮೇಣ (ನಾ). ೧. ಜೇನುಹುಟ್ಟಿನಿಂದ ಸಿಗುವ ಒಂದು ಬಗೆಯ ಅಂಟುದ್ರವ್ಯ : "ಸಿಕ್ಥಕಮೆಂಬುದು ಮಯಣಂ" (ಶಬಾಯು. ೯೦-೯೦೦); ಸಂಗೀತ ಸಭಿಕರ ಹೃದಯಗಳನ್ನು ಮಯಣದಂತೆ ಕರಗಿಸಿತು (ಶಿತ. ೬೪). ೨. ಧಾನ್ಯಗಳ ಹಿಟ್ಟು ಮೊದಲಾದುವುಗಳಿಂದ ತಯಾರಿಸುವ ಒಂದು ಬಗೆಯ ಅಂಟುದ್ರವ್ಯ; ಸರಿ : ಮೃತ್ತಿಕೆಯ ಕಿಟ್ಟದಿಂದ ಮಯಣದ ಕರುವಿಟ್ಟು (ಪುರಾಣ. ೨೬೩-೫೩); ಅಜಾವು ಮಯಣಕ ಭಕ್ತಿ ಮಯರಸವೆಱಿವ ಪುತ್ಥಳಿಯೆನಲು (ಕುಮ್ಮಾಣ. ೬-೦೩). ೩. ಮನ್ಮಥ : "ಕುಡುವಿಲ್ಲ ... ಜೊನ್ನೊಡಲನಳಿಯುಂ ದಪ್ಪಕಂ ಮಯಣನೇಂಬಿವಿಂತೊಡನೆ ಮನ್ಮಥನಾಮವು" (ಕಬ್ಬಿಮಂ. ೮); ನಯವೆತ್ತಿನಿನುಡಿಯಿಂ ಜಾಣ್ಮೆಯಿನಾವ ಗಮಿನಿಯನೆರ್ದೆಯನಿರ್ಕುಳಿಗೊಳ್ವೀ ಮಯಣನ ಗೆಳೆಯೊವಿಳೆ ಮನವಮನ ನಿಕುಂ ಮುಪ್ಪುದಪ್ಪಗರ ಹಸುವಾಗಳ್ (ಶೀಲ. ೬-೦೨೩); ಮುನಿಗಳಂ ಓಸವಮಯಣನ ಕಣೆಯು ಕೂರಂಬಿನೇಱಿನೊಳು ಸಾವಂತೆ ಮಾಡುಮುದದಿಂ (ಕೃಕುಕ. ೪-೩೩). ೪. ಒಂದು ಬಗೆಯ ಹಕ್ಕಿ ; ಮೈನಾ : ದಕ್ಷಿಣದೊಳ್ ಸರಿ ವರ್ತಕಂ ಗೂಗೆ ಮೇಣ್ ಮಯಣಂ ನಯದಿಂದಂ ಸಾರ್ದು ಸರಂಗುಡೆ . . . ಮನಸ್ಸಿದ್ಧಿಯನಾಗಳೆ ಉಂಟುಮಾಡುಗುಂ (ಓಲೋ. ೦೨-೦೬). **ಮೇಣ** : ೧. "ಸಿಕ್ಥಕಂ ಮೇಣಮುದು" (ಚುಂಗಿನಾ. ೦೦೩-೦೪); ತಿಳಿದುಪ್ಪದೊಳಗೆ ಯವಲಕ್ಕಿಯುಮನರೆದು ಕುಡಿಕೆಯೊಳಗೆ ತೊಡೆದಿರಿಸಿದೊಪ್ಪಲ ಜೇನ ಹೊಸ ಮೇಣದೊಳಗದಱ ನಾಲ್ಕಡಿಯ ಬೆರಕೆಯಿಲ್ಲದ ಕುಸುಬೆಯೆಣ್ಣೆಯಂ ಕಾಸಿಕೊಂಡು (ಸೂಪಶಾ. ೨-೨೦); ಪುರಿದೊಗಲ ಪೂಱ್ ಜೇನುತುಪ್ಪದ ನಳಗೆ ಮೇಣದ ಮುದ್ದೆ (ಹಾಸ್ಯ. ೦೬-೬). ೨. ಒಲೆಗಲ್ಲ ರಜವ ಮೇಣದೊಳೊತ್ತಿ ತೆಗೆದ ಕರಗಿ ಸುವರ್ಣಬಂದುಗವನೆರೆದ ಯಾಚಕರಿಗೆ ಹಂಚಿ ಕುಡುವ ಚಿನ್ನವರದರೊಪ್ಪಿದರು (ಓಲತಕ. ೩-೨೮); ವೆಣದು ಮೇಣದ ಬೊಂಬೆಯೆರಡು ಮೈಸೋಂಕಿ ಸಾವಣ್ಗೆಯ್ದ ವಜ್ರರಿಯೆಂಬೆ (ಚಿಶ. ೦೦-೯೬). ೫. ಕೆಲವು ಜಾತಿಯ ಮರಗಳಿಂದ ದೊರಕುವ ಒಂದು ಬಗೆಯ ಅಂಟು ; ರಾಳ : ಸಾಜ್ಯ ಶಾಲ್ಮಲಿ ಪಿಚ್ಛೆಯಾ - ತುಪ್ಪದೊಡನೆ ಕೂಡಿದ ಬೂರುಗದ ಮೇಣದಿಂದ (ವಾತಚಿ. ೨-೨-೨೪ ಪ); ಓಮ, ಹಿಪ್ಪಲಿಮೂಲ . . . ಇದರ ಎಂಟರೊಳೊಂದು ಭಾಗ ಬೇಲದ ಮರದ ಮೇಣ ಇಷ್ಟನೂ ಮರ್ದಿಸಿ . . . ತೆಗೆದುಕೊಳ್ಳಲು ಸಕಲವಾದ ಗ್ರಹಣಿಯೂ ಮಾಣ್ಗುಂ (ಸಕಶ. ೩೪೩).

**ಮಯಣದ ಬಟ್ಟೆ**=ನೀರು ಇಳಿಯದಂತೆ ಮೇಣ ಸವರಿ ಮಾಡಿದ ಒಂದು ಬಗೆಯ ಬಟ್ಟೆ; ತಾಡಪತ್ರಿ; ಮೇಣಗಪ್ಪಡ; ಟಾರ್‌ಪಾಲ್ : ಸಾಮಾನುಗಳನ್ನು ಕಟ್ಟಿ ಅದನ್ನು ಮಯಣದ ಬಟ್ಟೆಯಿಂದ ಮುಚ್ಚಿ ಬಿಗಿದಿದೆ (ಮ್ಯಜಂ. ೩೯). **ಮಯಣದ ಬತ್ತಿ**, **ಮೇಣದ ಬತ್ತಿ** = ಮಯಣದಿಂದ ತಯಾರಿಸಿದ ಬತ್ತಿ ; ಮೋಂಬತ್ತಿ : ನಾನು ತಂದ ಮಯಣದ ಬತ್ತಿಯ ಬೆಳಕಿನಲ್ಲಿ ವಿಪುಲವಾದ ಧನರಾಶಿಯ ಚೀಲಗಳು . . . ಕಣ್ಣಿಗೆ ಬಿದ್ದವು' (ಏಂಕ್ಷ. ೦೫೯) ; ಚರ್ಚ್‌ಗಳಲ್ಲಿ ಹಚ್ಚಿಸುವ ಮೇಣದ ಬತ್ತಿಗಳ ತಯಾರಿಕೆಯಲ್ಲೂ ಇದರ ಬಳಕೆಯುಂಟು (ಕಂಕೋ. VIII, ೩೩೩).
[< ಸಂ. ಮದನ. / ಪ್ರಾ. ಮಯಣ./ತುಳು. ಮಯಣ, ಮಾಯಣ. ತೆಲು. ಮೈನಮು ; ಕೋಲಾ. ಪಾಯ್ಮ. ಮೇಣಪ್]

**ಮಯಣಕಾವು**, ಮಯಿಣಕಾವು (ನಾ). (?) : ಪಿಪಬಲದ ಮಯಣಕಾವು ಹೊಳಹಿನ ಕಡಲ ತೆರೆವೆರೆಯುದತಿಬಮದಿಯ ಬಿಡೆಯ ಮುಪ್ಪಾಳಿಗಳ ಸೂಟಿಯ ಸರಳ ಸೋಪಿನಲಿ (ಕುಮ್ಮಾಭ. ೬-೨). **ಮಯಿಣಕಾವು** : ತರಣಿಯೌರಸಪುತ್ರನೀತನ ಕರಿಯರಳು ಮಯಿಣಕಾಮದೆಱೀದ ಕರುವಿನಂದದಲಸುರ ನಿದಿರೊಳಂದಾರಿಗಪಮಾನ (ಕುಮ್ಮಾದ್ರೋ. ೨೦೩. ೦೬-೫೪ ಆಪಕ್ವ). [ ? ]

**ಮಯಿ** (ನಾ). (?) : ಬಾಳಿಂಗೆ ತೆಱುವ ತೆಱು ಬಾರಕೊರ ಪರಿವರ್ತನಕೆ ಸಲುವ ಮುಂಕಾಟಿಗೂ ಯಾ ಬಾಳ ಅಕಿಯು ಒಳಗೆ ಗುಂಡುಮಾನಿಯಾಕನ ಧರ್ಮ (ಶಾಇಇ. IX-ii, ೪೨೨-೦೬ : 1430) : ಗೋರಾ ಸೋಜರು ೪,೦೦೦ ಬಾರು ೬,೦೦೦ ಮಯಿ ತೋಪುಖಾನೆ ಸರಂಜಾಮು (ಕೃಚರ. ೪೪). [ ? ]

**ಮಯಿಂದ**, ಮಾಇಂದ, ಮಯ್ದ್ದ, ಮೆಂದ, ಮೈಂದ (ನಾ). ಒಬ್ಬಾತನ ಹೆಸರು : 'ಮಯಿಂದಡಿ' ಪರಾ. **ಮಾಇಂದ** : ಸ್ವಸ್ತಿಶ್ರೀ ಮಾಇಂ ಸೊಬಮ್ಮನ್ ಗಜ್ಜಬಸಸಿರವು ಅಳೆ (ಎಕ. IX (8), ಹೊಸಕೋ. ೯-೧ : 875). **ಮಯ್ದ್ದ** : 'ಮಯ್ದ್ದಗಾವುಂಡ' ಪರಾ. **ಮೆಂದ** : 'ಮೆಂದಮ್ಮ', 'ಮೆಂದಯ್ಯ' ಪರಾ. **ಮೈಂದ** : 'ಮೈಂದವಾಟಿ' ಪರಾ.
[< ಸಂ. ಮಹೇಂದ್ರ]

**ಮಯಿಂದಡಿ** (ನಾ). ಒಬ್ಬಾತನ ಹೆಸರು : ಸೊಬಂಬವಡಿಗಂ ರಾಚಮಲ್ಲ[ಂ] ಮಯಿಂದ್ದಡಿ ಗುಂಡಿಗೆಗ್ಗ[ಳ್] ಎನೆಬರು ಸಮಸ್ತಬಲಂ ಬೆಜಿಸಿ ಬಿಟ್ಟೊಡೆ (ಎಇ. XXIV, ೦೯೦-೭ ; 885). [ಮಯಿಂದ + ಅಡಿ₁]

**ಮಯಿಂದಮಯ್ಯ** (ನಾ). ಒಬ್ಬಾತನ ಹೆಸರು : ಗಾವುಣ್ಣಗಣ್ಣಯ್ಯನುಂ ಬಿಜ್ಜವರು ಮಯಿಂದಮಯ್ಯನೆಱಿಯುಮ್ಮನುಂ (ಎಕ. XI, ಹೊಳಲ್ಕೆ. ೩೦-೦೨; ೫೬೩). [ಮಯಿಂದ + ಅಮ (< ಅಮ್ಮ₁) + ಅಯ್ಯ₁]

**ಮಯಿಂದಮರಸ**, ಮಯ್ದ್ದಮರಸ (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಮಯಿಂದಮರಸ ಪೃಥಿವೀರಾಜ್ಯಂಗೆಯ್ಯ (ಪ್ರಕಂ. ೦೯೨೬, ೬೩-೦ : ೨೫ಡು ೫೫). **ಮಯ್ದ್ದಮರಸ** : ಮಯ್ದ್ದಮರಸರ ಸೂಳೆ ಕಾಡಚ್ಚೆ (ಎಕ. XI, ಚಾಕಬಾ. ೦೬-೫ ; 886). [ಮಯಿಂದ + ಅಮ (< ಅಮ್ಮ₁) + ಅರಸ₁]

**ಮಯಿಂದವಾಳೆ**, ಮೈಂದವಾಟಿ (ನಾ). ಒಂದು ಬಗೆಯ ಬಾಳೆ ; ಮಹೇಂದ್ರಬಾಳೆ: ಪಣ್ತು ತಣ್ಗೊಲೆವ ಮಯಿಂದವಾಳೆ ಪನಸೋತ್ತರಿಮೂರ್ತ ಬೆಡಂಗನಾಪಗಂ ತಳಿದಿರೆ (ಶಾಇಇ. XI-ii, ೦೫೨-೦೨ : 1103). **ಮೈಂದವಾಟಿ** : ಗೊಲೆಯೊಳ್ಪಣ್ಗಿದ ಮೈಂದವಾಟಿ (ಕಾಕ್ಕ. ೦೦-೬೬); ಕರಿಯ ಕರ್ಬಿನ ಕಾವಿನೆಳಮೈಂದವಾಟಿಯೊಲೆಯು ಬಿಜ್ಜಣಿಗೆಗಳಿಂ ಬೀಸಲ್ವೇಱ್ಬ (ಕಂಕಲ. ೫-೬ ಪ) ; ಸಹಜಕವಿಯ ಮಹಾನ ರಚನೆಯಂತೆನಿದಪ್ಪ ಮೈಂದವಾಟಿಗಳುಮಂ (ಧರ್ಮಾಮ್ಮ. ೦೪-೨೬). 'ಮಿಂದವಾಟಿ', 'ಮಹೇಂದ್ರಬಾಳೆ' ಪರಾ. [ಮಯಿಂದ + ಬಾಳೆ₁ (< ಬಾಟಿ)]

**ಮಯಿಗಲಿ** 'ಮೆಯ್ಗಲಿ' ನೋ.

**ಮಯಿಗಲಿತನ** 'ಮೆಯ್ಗಲಿತನ' ನೋ.

**ಮಯಿಣಕಾವು** 'ಮಯಣಕಾವು' ನೋ.

**ಮಯಿದುನ** 'ಮೈದುನ' ನೋ.

**ಮಯಿಭೋಗ** 'ಮೈಭೋಗ' ನೋ.

**ಮಯಿರ** (ನಾ). (?) : ಉದ್ದಂಡನವನೆಂದು ನೃಪಸುತರೆಲ್ಲರು ಬಿಡದೆ ಹೊಯ್ಯಲು ನಗುತಿರಲವರು ಬಿದ್ದನು ತಾನೆಂದು ಮಯಿರನವರುಗಳೊಡ್ಡಾನು ಕೈಕಾಲು ಮುರಿಯ (ಕಾಪೂಕ. ೪-೯೬). [ ? ]

**ಮಯಿಲತುತ್ತ** 'ಮೈಲತುತ್ತ' ನೋ.

**ಮಯಿಸಾಲ** 'ಮೈಸಾಲ' ನೋ.

**ಮಯೂಖ** (ನಾ). ೧. ಕಿರಣ ; ರಶ್ಮಿ : ನಘುಮಾಸದರ್ದುವಾವ ನರೇಂದ್ರ ತಾಪಸತಪೋಮಯೂಖಾವಳಿಗಳ್ (ಪಂಪಭಾ. ೯-೦೪); ಸೋಮಮಯೂಖ ಸಂಭವೆಯರಪ್ಪ ಅಚ್ಚರಸಿಯರ್ (ಚಾಂದ್ರಪು. ೬೦೪); ಮಹೇಂದುಮಯೂಖ ಮಾನಕೋಪಸಕಪಾಣಿಮನ್ಮವನಮುಂ ಮಾಗಿಸುತ್ತಿರೆ (ಕುಕ್ಕು. ೧೬-೦೦೪); ಶ್ರೀಮದಮೃತಮಯೂಖಲೇಖಾವತಂಸಂ . . . ನಂದಿಗೀಶ (ರಕ್ಷಾಕ. ೧-೦). ೨. ಹೊಳಪು ; ಕಾಂತಿ ; ಪ್ರಭೆ : ಮಣಿಕಿರೀಟಕಿರಣದಿಂ ತದೀಯ ಪದನಖಮಯೂಖಮಂ ಕೊರ್ವಿಸೆ (ಪುಣ್ಯಾಶ. ೬-೦೭೩ ಪ); ಚರಣಸ್ಫುರನ್ನಖ

ಮಯೂಖದ ಬೆಳ್ಪುವಹಾರಪುಷ್ಪಮಂ ದ್ವಿಗುಣಿಸೆ (ಜಗ. ೨-೭೩). ೩. ಉರಿ ; ಜ್ವಾಲೆ : "ಕಿರಣಮುಂ ಕೀಲಂ ಮಯೂಖಾಂಕಿತಂ" (ಶಾಶಾಕ. ೯೬); ಕೋಕಪ್ರಸರಂ ಸೀಯಲ್ ಮಯೂಖಂ (ಚಶಂ. ೬-೨೭). [ಸಂ.]

**ಮಯೂರ** (ನಾ). ೧. ನವಿಲು : ಪರಭೃತಮಯಮುಂ ಮಯೂರಮಯಮುಮಾಗಿ (ಶಾರಂಘ. ೮೨೬) ; ಮಯೂರನವಬರ್ಹಾಳಂಕೃತಂ . . . ಶೌರಿ ಘನಾಗಮಂಬೊಲೆಸೆದಂ (ಜಗಂ. ೪-೩೬); ಕೇಗಿ ತನ್ನೊಂದಾಡಂಬರದಿ ಮಯೂರಂ ತಾಂಡವಕ್ಕಾರಂಭಿಸಲೊಡಂ (ರಾಜಶೇ. ೪೨-೦೮). ೨. ಓಮ; ಅಜವಾನ. ೩. ಒಂದು ಬಗೆಯ ಸಸ್ಯ: ಉತ್ತರಣೆ ಗಿಡ. ೪. ದೇವತೆಗಳಲ್ಲಿ ಒಂದು ಪಂಗಡ : ಮಯೂರರು . . . ದನುಜರೆಯ್ದೆ ನೆರೆಯಿತು ತಮ್ಮ ಪರಿವಾರ ಸಹಿತ (ಹಶಕ. ೧೪-೧): ಗಂಧರ್ವ ವಿದ್ಯಾಧರ ಮಯೂರಾಸುರ ವಿಯಚ್ಚರ ಪಕ್ಷಿ ರಾಕ್ಷಸರು (ಶಿಶು. ೬-೩೨). ೫. ಸಂಸ್ಕೃತದ ಒಬ್ಬ ಕವಿಯ ಹೆಸರು : ಬಾಣ ಮಯೂರನಂತೆ ಬಣ್ಣಿಸಬಲ್ಲನೆ (ಬಶಪ. ೩೦೯). ೬. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾಗಿರುವ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಒಂಬತ್ತನೆಯ ಬೃಹತಿ ಎಂಬ ಛಂದಸ್ಸಿನ ಒಂದು ವೃತ್ತ : ಅಮರಗಣಮಾತತೋಯಂ ಸಮನಿಸಿರೆ ನಾಮದಿಂದಂ ಗಮಿಸಿತಿದಂ ನಾಕಿಯಿಂದಂ ರಮಣಿಮಣೀ ನೀಂ ಮಯೂರ (ಛಂದೋಂಬು. ೨-೦೦೩). ೧. ೬ : ಹರಿಣೀ ಮತ್ತೇಭವಿಕ್ರೀಡಿತಂ ಲಲಿತ ಮಯೂರಾನ್ವಿತಂ ಛಂದಮಂ . . . ಪೋಲ್ವು ಚೆಲ್ವಾಯ್ತುರಣ್ಯಂ (ರಾಜಶೇ. ೩-೬೩). [ಸಂ.]

**ಮಯೂರಕ** (ನಾ). ೧. ನವಿಲು. ೨. ಒಂದು ಬಗೆಯ ಸಸ್ಯ: ಉತ್ತರಣೆ. ೩. ಮೈಲುತುತ್ತ : "ಮಯೂರಕಃ—ಮಯೂರತುತ್ಥ" (೬ಕಂ. ೦೨೪). [ಸಂ.]

**ಮಯೂರಕಂಠ** (ನಾ). ಮೈಲುತುತ್ತ : "ಮಯೂರಕಂಠಂ ಕರ್ಪರಿಯೆನಿಕ್ಕು" (ಮಂಗರಾ. ೪೩-೪೨). [ಸಂ.]

**ಮಯೂರಕೊಂಡಿ** (ನಾ). ಒಂದು ಸ್ಥಳದ ಹೆಸರು : ತದ್ದಕ್ಷಿಣತಃ ಓಜ್ಜಗೆಗ್ರಾಮಪಥಾನ್ನಿರ್ಗತ ಜಳಪ್ರವಾಹಂ ತತಃ ಪಾವಕದಿಶಿ ಮಯೂರಕೊಂಡಿ (ಶಾಶಾ. XX, ೬-೨೨ : ೭೩೦). [ಮಯೂರ + ಕೊಂಡಿ]

**ಮಯೂರಗಮನ** (ನಾ). ನವಿಲಿನ ಮೇಲೆ ಸಂಚರಿಸುವವನು: ಷಣ್ಮುಖ. ಮಯೂರಗಮನ ಪಿತ = ನವಿಲುವಾಹನನಾದ ಷಣ್ಮುಖನ ತಂದೆ; ಶಿವ : ಘನಮಯೂರಗಮನ ಪಿತಂ ಕರುಣಿಸುವನೆಂದೊ (ಬಸಪು. ೪೩-೪೪). [ಸಂ.]

**ಮಯೂರತುತ್ಥ** (ನಾ). ಒಂದು ಬಗೆಯ ಖನಿಜಲವಣ: ಮೈಲುತುತ್ತ: "ಮಯೂರಿಕಾ — ಮಯೂರತುತ್ಥ" (೬ಕಂ. ೧೦೯) ; ಮಯೂರತುತ್ಥ, ಬಳುಗಾರ . . . ಇವಿಷ್ಟನು ಪಂದಿಸಿ (ವೈದ್ಯಸಾ. ೧. ೦೦೩). [ಸಂ.]

**ಮಯೂರಧ್ವಜ** (ನಾ). ೧. ನವಿಲಿನ ಗುರುತಿರುವ ಬಾವುಟ : ದನುಜೋತ್ತಮನ ಮಯೂರಧ್ವಜವ ಕಡುರಮ್ಯಮಾಗಿ (ಹಶವೋ. ೨-೩೬). ೨. ಷಣ್ಮುಖ. ೩. ವಿಷ್ಣುಭಕ್ತನಾದ ಮಣಿಪುರದ ಒಬ್ಬ ರಾಜನ ಹೆಸರು : ಮಹಾಗುಣಿತ ಮಯೂರಧ್ವಜಂ ಮಂತ್ರಿಗೀಂತೆಂದನು (ಜೈಮಿ. ೨೩-೩೪). [ಸಂ.]

**ಮಯೂರನಾಡಿ** (ನಾ). ಶರೀರದಲ್ಲಿನ ಒಂದು ನಾಡಿಯ ಹೆಸರು : ಮಯೂರನಾಡಿ, ಮಂಡಕನಾಡಿ, ಭಲ್ಲುಕನಾಡಿ . . . ಇಂತೀ ನಾಡಿಗಳೊಳಗುದ ಶರೀರ (ಶಶ. ೪೮೦). [ಸಂ.]

**ಮಯೂರಪದ** (ನಾ). [ಕಾಮಶಾ] ಒಂದು ಬಗೆಯ ನಖಕ್ಷತ : ನವಿಲು ಕಾಲಿನ ಆಕಾರವುಳ್ಳ ಉಗುರುಗಾಯ : ಸುರತಸಮಯದಲಳೆಯ ಕೊರೆದ ರೇಖೆಗಳ ಚಿತ್ತರದಿಂ ಮಯೂರಪದಮೆನಿಸಿರ್ಪುದು (ಶಶಶ. ೬-೪೦). [ಸಂ.]

**ಮಯೂರಪಿಂಛ** (ನಾ). ನವಿಲುಗರಿ : ಅಂಗರಾಗಪರಿಮಳಪ್ಪಬದ್ದ ಮಂಡಲಾಳೀರಂಜಿತಮಯೂರಪಿಂಛಾತಪತ್ರನುಂ (ಶಾರಂಘ. ೦೬೬). [ಸಂ.]

**ಮಯೂರಲಲಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; "ಕೈಗಳನ್ನು ರೇಚಿತಮಾಡಿ ಸ್ವಾಭಾವಿಕವಾಗಿರಿಸಿ, ಚೇಳಿನ ಬಾಲದಂತೆ ಕಾಲನ್ನು ಹಿಂದಕ್ಕೆತ್ತಿ ಪೃಷ್ಠವನ್ನೂ ಬಗ್ಗಿಸಿ ಸುತ್ತುವುದು" (ಶಾಸ್ತ್ರರ. ೩೦೦ ಗದ್ಯಭಾಗ) : ಮಯೂರಲಲಿತ: ಕರ್ಪೂರದಂ ರೇಚಿತಮಂ ಗೆಯ್ಯುತ್ತಂ ಬಿಟ್ಟು ಸಬ್ಬಿರಲ್ಕಂ ಮತ್ತಂ ರಯ್ಯಮೆನೆ ತೇಳ ಬಾಲದ ಪೈಪರೊಳ್ ತ್ರಿಕ ಬಾಗಿ ತಿರುಗೆ ಕೇಕೀಲಲಿತಂ (ಶಾಸ್ತ್ರರಂ. ೪-೦೪೦). [ಸಂ.]

**ಮಯೂರಶಿಖಿ**. ಮಯೂರಸಿಖೆ (ನಾ). ಒಂದು ಸಸ್ಯದ ಹೆಸರು : ಅರಸಿನ, ಮಯೂರಶಿಖಿ, ಶುಂಠಿ . . . ಚೂರ್ಣವ ಮಾಡಿ (ಸಕವೈ. ೩೬೪). **ಮಯೂರಸಿಖೆ** : "ಮಧೂಕಪರ್ಣಾ—ಮಯೂರಸಿಖೆ, ನೆಲಗಡಮ" (೬ಕಂ. ೦೨೦). [< ಸಂ. ಮಯೂರಶಿಖಾ]

**ಮಯೂರಸಿಖೆ** 'ಮಯೂರಶಿಖಿ' ನೋ.

**ಮಯೂರಸಿಲೆ** (ನಾ). ಒಂದು ಬಗೆಯ ಧಾತು : ಮಯೂರಸಿಲೆಯುಂ ಒಂದೇ ವರ್ಣದ ಹಸುವಿನ ಹಾಲಲ್ಲಿ ಕುಡಿಯೆ ಗರ್ಭಮಕ್ಕುಂ (ವೈದ್ಯಾ. ೬). [ಮಯೂರ + ಸಿಲೆ]

**ಮಯೂರಾಂಡರಸನ್ಯಾಯ** (ನಾ). [ತರ್ಕಶಾ] ಒಂದು ಬಗೆಯ ನ್ಯಾಯ; ☞ ನವಿಲಿನ ಮೊಟ್ಟೆಯಲ್ಲಿ ಸೂಕ್ಷ್ಮರೂಪದಿಂದ ಇದ್ದ ಪಾದ, ಪಕ್ಷ, ವರ್ಣ ವೈಚಿತ್ರ್ಯಾದಿಗಳು ಸ್ಥೂಲವಾಗಿ ವ್ಯಕ್ತವಾಗುವುದು : ಶಿವನು ತನ್ನಲ್ಲಿಯೇ ಸೂಕ್ಷ್ಮವಾಗಿ ಅಡಗಿದ್ದ ವಿಶ್ವವನ್ನು ಹೊರಹೊಮ್ಮಿಸಿ ಪ್ರಕಾಶಪಡಿಸುತ್ತಾನೆ. ಈ ವಿಧವಾದ ಸೃಷ್ಟಿಯನ್ನು ಮಯೂರಾಂಡರಸನ್ಯಾಯಕ್ಕೆ ಹೋಲಿಸುವರು (ಶಾರದ. ೩೦೨). [ಸಂ.]

**ಮಯೂರಾಸನ** (ನಾ). ೧. ನವಿಲಿನ ಆಕಾರದ ಮೇಲೆ ಪೀಠವಿರುವಂತೆ ಮಾಡಿರುವ ಆಸನ; ☞ ಹಿಂದೂದೇಶದಲ್ಲಿ ಇದು ಮೊಗಲರ ಕಾಲದಲ್ಲಿ ಸುಪ್ರಸಿದ್ಧವಾಗಿತ್ತು. ೨. [ಯೋಗ] ಒಂದು ಆಸನದ ಹೆಸರು : ಗರುಡಾಸನ ಮಯೂರಾಸನ . . . ಅರ್ಧಾಸನಾದಿ ಎಂಭತ್ತಾಲ್ಕು ಆಸನಭೇದಂಗಳು (ಏಕೋ. ೦೪೪); ಮುಖ್ಯವಾದ ಆಸನಗಳು: ೧. ಉತ್ತಾನಾಸನ . . . ೧೬. ಮಯೂರಾಸನ (ಶಾಕರ. ೦೬೬). [ಸಂ.]

**ಮಯ್ದ** 'ಮಯಿಂದ' ನೋ.

**ಮಯ್ದಗಾವುಂಡ** (ನಾ). ಒಬ್ಬಾತನ ಹೆಸರು : ಶ್ರೀಮದ್ಧಿವ್ಯಶಕ್ತಿಪಣ್ಣಿತ ಭಟಾರರ ಮಯ್ದಗಾವುಣ್ಡನುಂ ಪಾದಮೂಲಮುಂ ಪನ್ನಿರಡಣಿ ಪಣ್ಣಕ್ಕಳು ಬಿಟ್ಟು (ಎಕ. X (೩), ಶ್ರೀಬ. ೨೬-೬ ; ೨ಶಡು ೩೩).
[ಮಯ್ದ (<ಮಯಿಂದ) + ಗಾವುಂಡ (< ಗಾಮುಂಡ)]

**ಮಯ್ದಮರಸ** 'ಮಯಿಂದಮರಸ' ನೋ.

**ಮಯ್ದುನ** 'ಮೆಯ್ದುನ' ನೋ.

**ಮಯ್ದುನತನ**, ಮೈದುನತನ (ನಾ). ೧. ಗಂಡನ ಅಥವಾ ಹೆಂಡತಿಯ ತಮ್ಮನಾಗಿರುವಿಕೆ. ೨. ಸಹೋದರಿಯ ಮಗನಾಗಿರುವಿಕೆ : (೪). **ಮೈದುನತನ** : ೩. ಸೋದರತ್ತೆಯ ಮಗನಾಗಿರುವಿಕೆ : ಇನತನೂಜನ ಕೂಡೆ ಮೈದುನತನದ ಸರಸವನೆಸಗಿ ರಥದೊಳು ವಸುವಿರಿಪು ಬರಸೆಳೆದು ಕುಳ್ಳಿರಿಸಿದನು ಪೀಠದಲಿ (ಕುಮ್ಯಾಭಾ. ೦೦-೨).
[ಮಯ್ದುನ (< ಮೆಯ್ದುನ) + — ತನ]

**ಮಯ್ಯು**. ಮಯ್ಯಿ (ನಾ). ಗಾಬರಿ ; **ಗೊಂದಲ** : "ಮಯ್ಯಿನೆ ತಳತಳಿಸುವ ಭಾವಂ" (ಅಕಾ. ೪. ೧. ೮೨); ನಂಬಿ ಬದುಕುವನೆಂದು

ಮಯ್ಮೆನಿಂದುಡೆ ಪರಿದುಮಂಬಲಿಸುತ (ಶಾಂತಿ. ೯೯-೦೯೬). ಮಯ್ಮೆ₂ : ಸುಡದೆದೆಯ ಕೆಚ್ಚುಗಳ ಕಿಚ್ಚಲ್ತೆ ಮಯ್ಮೆ (ಶಾಂತಿ. ೦೦೯-೨೨೩). [?]

**ಮಯ್ಮೆ₁**, ಮೆಯ್ಮೆ, ಮೈಮೆ (ನಾ). ೧. ಶ್ರೇಷ್ಠತೆ ; ಹಿರಿಮೆ ; ಘನತೆ: ಮನ್ನಿಸಿ ಮಯ್ಮೆ [ಪಾಠಾಂ. ಮೆಯ್ಮೆ, ಮೈಮೆ]ಯಿಂ ಮೆರೆದು ಪುಂಸವನಂ ಮೊದಲಾಗೆ ತಕ್ಕುವಂ ತನ್ನನಿಮಿಳ್ಗೆ ಮಾಡಿಸಿದಂ (ಮಲ್ಲಿ. ೯-೦೦೯). **ಮೆಯ್ಮೆ** : ೧. ಸಕಳ ಜಗತ್ತಿಳಿಕನುಚಿದಿರ್ದ ಮೆಯ್ಮೆಯ ವಿಳಾಸಮೆಮಗಾಗಿ ತನಿಲ್ಲದಂತೊಪ್ಪುಗುಮೋ (ಅಜಿತ. ೬-೧೦೭) ; ಪರಿಜನಪಾರಿಜಾತಲತೆ . . . ಪಮಾರಸವಾರ್ಧಿ ಸುಧಾಂಶುಲೇಖೆಯೆಂಬರ ನುಡಿಗಳ್ಗೆ ಪರ್ಪೆನಿಪ ಪೈಳಲದೇವಿಗೆ ಮೆಯ್ಮೆಯೊಪ್ಪದೇ (ಎ. XIII, ೩೦೬-೭೩; 1125) ; ನಿನ್ನ ನಿಜಮುಕ್ತಿಗಂ ಮೆಯ್ಮೆಗಂ ತಚ್ಛಾಪಮನುಕೂಲಂ (ಶಬ್ದರಾ. ೩-೩೬). ೨. ಪ್ರಭಾವ ; ಶಕ್ತಿ : ಇವರಜಿಮಂತಿವರಾರ್ಪಿಂತಿವರೆಳಸಿಂತಿವರ ಗೆಯ್ಮೆ ಮೆಯ್ಮೆಗಳಿಂತೆಂದವರಿಂಗಿತವಂ ತಿಳಿವ (ಅಶ್ವ. ೦೯೮-೦೩) ; ಆ ಸಂಜೆಗೆಯೆ ನಿನ್ನ ಸೂರಾನೆಮೆಯ್ಮೆಯುಂ ತೋಳ್ಗೈದಿದೆ ಕಣಾ (ಶ್ರೀರಾಮ. ೨೨೦-೨೯೦). **ಮೈಮೆ** : ೧. " ಮೈಮೆಯೆನಲ್ ಮಹಿಮೆ" (ಶಬ್ದಾ. ೯೯); ದೋರ್ವಲಕ್ಕಂ ಮೈಮೆಗಂ ಮೋಕ್ಷಕ್ಕಂ ಮಹಾಸಮುದ್ರದೊಳ್ ಪಾಪಾ ನದಿಗಳ್ ಕೂಡುವಂತೇಬಕ್ಷೋಹಿಣೀಬಲಂ ಕೂಡಿ ನಡೆಯೆ (ಕುಶಲ. ೯-೯೩ ಬ) ; ಮೈಮೆಯನೀತು ಜಗತ್ತ್ರಯಕ್ಕೆ ಮಾಡಿಪುದು (ಪುಷ್ಪ. ೧-೯೯) ; ದೇವಮಾನವರ ಭಂಗಿ ಬೇರ್ಪಡಿಸಿ ತೋರಿಸಿಹುದೆ ಮೈಮೆ (ಅರಳು. ೯೩೩-೨). ೨. ಜಾಗದ ಯಾಗದ ಭೋಗದ ಮೈ [ಪಾಠಾಂ. ಮಹಿ]ಮೆಗೆ ಸುಯೋಧನಂ ಬೆಱಗಾದಂ (ಕುಶಲ. ೬-೬೬) ; ಮೈಮೆ ಮಡಿಯಿತ್ತುತ್ಸಾಹವಿಂಗಿತ್ತು (ಗಿರಿ. ೮-೬೨) ; ಮೆರೆಯುತಿಪ್ಪವು ನೂರಾರು ಮೈಮೆಗಳು ಸೃಷ್ಟಿಯಲಿ (ಮಂಕು. ೬೨೦). [ಸಂ. ಮಹಿಮನ್]

**ಮಯ್ಮೆ₂** ' ಮಯ್ಮ ' ನೋ.

**ಮಯ್ಲ** ' ಮೈಲಿ₁ ' ನೋ.

**ಮಯ್ಲತೆಗೆ** ' ಮೈಲಿತೆಗೆ ' ನೋ.

**ಮಯ್ಲ**, ಮೈಲು₁. ಮೈಲ್₁ (ನಾ). ನವಿಲು ; ಮಯೂರ : " ಮಯ್ಲ(ಮ್ಲ)- ಮಯೂರ = ನವಿಲು " (ಕರ್ನಾ. ೩೯). **ಮೈಲು₁** : ' ಮೈಲುವಾಹನ ' ಪರಾ. **ಮೈಲ್₁** : ಮಚ್ಚರದಾಪುವಂ ಮಱೆದು ಕೈದುಗಳಂ ತೊಱೆದಟ್ಟು ತೊಟ್ಟು ಪೆಟ್ಟಿಚ್ಚಮೊಡಂಬಡಂ ಪಡೆದು ಮೈಲೆಯ ನಚ್ಚನೆಯಂತೆ ಸೂಳುಮಂ ಬಿಚ್ಚಿಸಿ . . . ಬಾಗಿಲ್ಗಳ್ ಪುಳ್ಗಳ್ಚಿ ಪುಗುತಿರ್ಪರ್ (ಅಜಿತ. ೦೩-೯೭).

[ದೇ. ತಮಿ. ಮಲ. ಮಯಿಲ್; ತುಳು. ಮೈರ್ ; ಕೊಡ. ಮಯ್ಲ; ತುರ್ಜಿ. ಮನೀಲ್. / ಸಂ. ಮಯೂರ]

**ಮಯ್ಸಱು** ' ಮೆಯ್ಸಱು ' ನೋ.

**ಮಯ್ಸೂರ್**, ಮಹಿಶೂರು, ಮಹಿಸೂರು, ಮಹೀಶೂರು, ಮೈಸೂರು (ನಾ). ಒಂದು ನಾಡಿನ ಹೆಸರು ; P ಕರ್ನಾಟಕರಾಜ್ಯದ ಈಗಿನ ಪ್ರಸಿದ್ಧವಾದ ನಗರ : ಅನ್ತೆ ಸನ್ದು ಬಳವಗೆಯ ದೀಣೆಯೋ ಅನ್ತೆ ಸನ್ದ ಮಯ್ಸೂರ ಬಿಟ್ಟಿಯ ಕಲ್ತಿಪ್ಪೆಯೋ . . . ಅಂತೆ ಕಗ್ಗಲ್ಲ ಸರದುವಿಡಿದು ಬನ್ದ ಕಗ್ಗಲ್ಲ ಮೊಱಡೆ (ಎ. XXXVI. ೦೦೯-೦೭೦; 962). **ಮಹಿಶೂರು** : ಸಹಜಬಲದೊಡನೆ ಬಂದರ್ ಮಹಿಶೂರಿಂ ರಾಮದೇವರ ಜೀಯರ್ (ಚಿತ್ರ. ೨-೯೬) ; ಚಾಮರಾಜನಗರ ಮಹಿಶೂರು ಮುಂತಾದ ಸ್ಥಲಂಗಳಲ್ಲಿ ದೇವರಿಗೆ ಸಮರ್ಪಿಸಿದ ರತ್ನಮಯಂಗಳಾದ ಕೃಷ್ಣರಾಜಮುದ್ರಿಗಳೆಂಬ ಭೂಷಾರತ್ನ (ಎಕ. V (R). ಮೈಸೂರು. ೩೭-೦೩ : 1829). **ಮಹಿಸೂರು** : ಆ ಪುರದಲ್ಲಿಯೂ ಮಹಿಸೂರ ದೇವ × × ರಾಜಮಹಿಕೆ ತ್ರಿಯಂಬಕದೇವರಲ್ಲಿ ಪರ್ವತೈಯನವರೂ ನಿಲಿಸಿದ ಧಂಮ್ಮಶಿಲ್ಪಾಶಾಸನ (ಎಕ. III (R). ಗುಂಡ್ಲುಪೇ. ೦೩೩-೨೯ ; 1492). **ಮಹೀಶೂರು** : ಮಹೀಶೂರ ಶ್ರೀಕೃಷ್ಣರಾಜವಡೆಯರೈಯನವರು ವೆಂಕಟರಾಮಯಗೆ ಬರೆಸಿಕೊಟ್ಟ ಕ್ರಯ ಭೂದಾನ ತಾಂಮ್ರದ ಶಾಸನದ ಕ್ರಮವೇಕೆಂದರೆ (ಎಕ. III (R), ಕೊಳ್ಳೇಗಾ. ೩೦೭-೭ ; 1761). **ಮೈಸೂರು** : ಮೈಸೂರ ಹೊಯ್ಸಳಗೌಂಡ ಕುಂಬಗೌಂಡ ... ಮೈಸುನಾಡ ಸಮಸ್ತ ಪ್ರಭುಗೌಂಡುಗಳು ಕುಮಾರನ ಬೀಡಿನ ಶ್ರೀಬೆಂಬೇಸ್ವರದೇವರಿಗೆ ಪೂರ್ಬ್ಬಮರಿಯಾದೆಯಿಂ ನಡವದೇವದಾನ (ಮೈಕಂ. ೦೯೩೬. ೯೨-೭; 1176); ಸೃಷ್ಟಿಯೊಳಗೆ ಮೈಸೂರು ಪಟ್ಟಣದ ನೃಪಕುಲದೇವತೆಯೆನಿಸಿದ ಬೆಟ್ಟದ ಚಾಮುಂಡಿಯಿಹಳು (ಕುಮಾ. ೨-೩೮). P ' ಮಹಿಷ ' ಎಂಬುವರ ತದ್ಭವವಾಗಿ ' ಮಯ್ಸ ' ಎಂಬ ರೂಪವು ಬೆಳೆದು ಬಂದಿರಬೇಕೆಂದು ಕೆಲವು ವಿದ್ವಾಂಸರ ಅಭಿಪ್ರಾಯವಿದೆ. [ಮಯ್ಸ₁₀ (P < ಸಂ. ಮಹಿಷ) + ಊರ್]

**ಮಯ್ಸೂರ್ನಾಡು**, ಮೈಸುನಾಡು (ನಾ). ಒಂದು ನಾಡಿನ ಹೆಸರು : ಇದರ್ಕೆ . . . ಮಯ್ಸೂರ್ನಾಡೆಪ್ಪತ್ತು ಬಳ್ಳವಿನಾಡು ಸಾಕ್ಷಿ (ಎಕ. VI, ಕಡೂರು. ೯-೨೨ ; 990). **ಮೈಸುನಾಡು** : ಮೈಸುನಾಡು ಸಪ್ತತಿ ಮಧ್ಯೆ ಬಱಕೋಡು ನಾಮಗ್ರಾಮ (ಇಕ. VIII, ೨೦೩-೭೦ ; 10 ನೆಯ ಶತ ?) : ಬೃಹವಾರದನ್ದು ಮೈಸುನಾಡ ಬೆಲೂಕುನ್ದನಾಡ × × ಮೆಯ . . . ಮಗ ಚಾಮಗಲುಣ್ಡನ × × × (ಎಕ. III, ನಂಜನ. ೦೨೩-೭; 1109 ? ).

[ಮಯ್ಸೂರ್ + ನಾಡು]

**ಮರ₁** (ನಾ). ೧. ದೊಡ್ಡದಾಗಿ ಬೆಳೆದ ಸಸ್ಯ ; ವೃಕ್ಷ ; ತರು : " ವೃಕ್ಷಃ . . . ದ್ರುಮಃ, ಪಾದಪಃ- ಈ ೧೯ ಮರಂ " (ಶಬ್ದಮ. ೨೯-೨೩) : ಆಮೋದಕುಸುಮಸಮಿತಿಯನಾ ಮರಗಳೊಳ್ಗಾಯ್ದು ಕೊಯ್ದುವಿಲ್ಲಿಗೆ ಬರ್ಪಂ (ಕವಿರಾ. ೩-೦೩೩); ಪೂವಿನ ಪೊಸಗೊಂಚಲಿಂ ಮರನಿದೇನೆಸೆದಿರ್ದಪೊ (ಕುಶಲ. ೦-೦೦೬); ಸುರತರು ಕಾಡ ಮರನಾಯ್ತು (ಕುಮಾ.ದ್ರೋ. ೦೯-೩೨). ೨. (ಸಾಮಾನುಗಳನ್ನು ಮಾಡಲು ಬಳಸುವ) ವೃಕ್ಷದ ತುಂಡು : ಚೌಬೀನೆ : ನೂಲ ತಲೆಯೊಳ್ ಕೀಲಂ ಬೆಟ್ಟಿರ್ದ ಮರನಂ ಕಂಡದಱ ಮೇಲೆ ಕುಳ್ಳಿರ್ದು (ಕುಶಲ. ೩೦-೭); ತಗುಳ್ದು ಮರಂಗಳನ್ನೊಟ್ಟಿ ಕೀಟಿನಿಟ್ಟೇಱಿ (ಸುಕುಮಾ. ೩-೦೬). (ಗು). (ಅಲಂ) ೩. ದಟ್ಟವಾದ : 'ಮರಗಟ್ಟಿಲೆ', ' ಮರಗಾಡು ' ಪರಾ. ೪. ಒರಟಾದ; ಬಿರುಸಾದ : ' ಮರಗಬ್ಬು ' ಪರಾ. ೫. ದೊಡ್ಡ : ' ಮರಸರ್ಪ ' ಪರಾ. ೬. (ಅಲಂ) ನೀರಸವಾದ : ' ಮರವಾಳ್₁ ' ಪರಾ.

ಮರಗುಜ್ಜು = (ಅಲಂ) ಬಹಳ ಕುಳ್ಳು : ಸುರಪತಿಯ ತಮ್ಮನಾಗುದಿಸಿ ಮರಗುಜ್ಜಾಗಿ ಪರಿ ಬಲಿಯ ಬಂಧಿಸಿ (ಕಂಠಿ. ೩-೬೩). ಮರದ ಜಡೆ = ಆಲ ಮುಂತಾದ ಮರಗಳ ಕೊಂಬೆಗಳಿಂದ ಇಳಿಬಿದ್ದ ಬೇರು,—ಜಟೆ; ಬೀಳಲು : "ಮರದ ಜಡೆಯೆನೆ ಮರದ ಬೀಳಕ್ಕುಂ" (ಕಬಿರ. ೯೭). ಮರದ ಬಿಟ್ಟಿ, ಮರನ ಬಿಟ್ಟಿ = ಒಂದು ಬಗೆಯ ತೆರಿಗೆ ; ಹಿರಿಯರ ಮನೆಯಿಂದ ಬಂದ ಬಿಟ್ಟಿ ಬಿಡಾರ ಮರದ ಬಿಟ್ಟಿ ಕ್ರಯ ಕಡ್ಡಾಯ (ಎಕ. VII. ಶಿಕಾರಿ. ೬೧-೨೯ ; 1431) ; ಕ್ರಯ ಕಡ್ಡಾಯ ಬಿಟ್ಟಿ ಬಿಡಾರ ಸೇಸೆ ಮರನ ಬಿಟ್ಟಿ ಜೋಡಿ ಗ್ರಾಸ (ಮೈಕಂ. ೦೯೯೦, ೩೭-೯೯; 1399). ಮರಗಾಗು = ಮರಗಟ್ಟು ; ಜೋಮು ಹಿಡಿ : ವಾಘೆಯಲಿ ಕೈ ಬಿಗಿದುದಂಕಣೆದೊಡಕಿನಲಿ ಮರನಾದವಂಘ್ರಿಗಳು (ಕುಮಾ.ಗ. ೨-೦೩). ಮರಮಟ್ಟು = ಮರ, ಗಿಡ, ಪೊದೆ ಮೊದಲಾದುವು : ಕಂಗೆಡುತ ಕೆಲರು ಮರಮಟ್ಟುಗಳನೇಱುತು (ಕೌರವ. ೨೩-೦೩) ; ರಾಮೇಶ್ವರಲಿಂಗವನ್ನು ಕಂಡು ಅಲ್ಲಿದ್ದ ಮರಮಟ್ಟು ಗಿಡಗಳನ್ನು ಕಡಿಸಿ ಮೈದಾನ ಮಾಡಿಸಿ (ಕೆಳದಿ. ೨-೧೯). ಮರಮುಂಡು = ಮರಮಟ್ಟು : ಉತ್ತರವಾದುಪತ್ತಣಿಂ ಕಲ್ಗುಂಡು ಮರಮುಂಡು ಬುಡಪೇರುಕೊಂಬೆಗಳ್ (ಶ್ರೀರಾಮ. ೬೯೬-೯೦೦). ಮರಮುಟ್ಟು = ಮರದಿಂದ ಮಾಡಿದ ಸಾಮಾನು ; ಮರದ ಸಾಮಾನು : ಹೂಡಿದೆಲು ಮರಮುಟ್ಟು ಮಾಂಸದ ಗೋಡೆ ಚರ್ಮದ ಹೊದಿಕೆ ನರದ ಕೊಡೆ ಹಿಂಡಿಗೆ

ಬಿಗಿದ ಮನೆಯೊಳಗಾತ್ಮನಿರುತಿರಲು (ಹಂಸ. ೬೫) ; ಮನೆಯನ್ನು ಕೆಡವಿ ಮರಮುಟ್ಟುಗಳನ್ನೆಲ್ಲಾ ಮಾರಿಕೊಂಡಿದ್ದರು (ಅರಿಟು. ೦೬೦). **ಮರ ಹೊಡೆ** = ಉತ್ತ ಭೂಮಿಯನ್ನು ಮರದ ಸಾಧನದಿಂದ ಸಮಮಾಡು : ಹೊಲಕ್ಕೆ ನಾಳೆ ಮರ ಹೊಡೆಯಬೇಕು (ಜಾ). [ ದೇ.॥ ತಮಿ. ಮಲ. ಮರಮ್ ; ತುಳು. ಕೊಡ. ಮರ ; ತೆಲು. ಮ್ರಾನು, ಮಾನು ; ಪರ್ಜಿ. ಮೆಂ ; ಗೊಂಡಿ. ಮರಾ. ಕುೞ. ಮ್ರಹ್ನು ; ಕುವಿ. ಮ್ರಾನು ]

**ಮರ೨** 'ಮೊಱ' ನೋ.

**ಮರಂಗಡಿ**, ಮರಗಡಿ (ಕ್ರಿ). ಮರವನ್ನು ಕತ್ತರಿಸು ; ವೃಕ್ಷವನ್ನು ಕಡಿ : ತಮ್ಮ ಮೇಲೆ ತಾವೆ ಮರಂಗಡಿದರೆಂಬಂತೆ (ಹಂಸಕಂ. ೨೦೬-೦೦). **ಮರಗಡಿ** : ವಿರೋಧಿಗೆ ಮಾಱೂಪೊ ತನ್ನ ಮೇಲೆ ತಾಂ ಮರಗಡಿಪೊಂ (ಶಾಂತಿಪು. ೨-೯೦). [ ಮರ$_1$ + ಕಡಿ$_1$ ]

**ಮರಂಗಲ್** (ನಾ). ಒಂದು ಸ್ಥಳದ ಹೆಸರು : ಮರಂಗಲ್ಲೊಡೆಯ ಕಣ್ಣ ಮ್ಮಯ್ಯನಾ ಮಗನ್ ವಿಲಗಣ್ಣಯ್ಯನು . . . ತೊಱಗೊಳೊಳ್ ಸತ್ತೋ (ಎಕ. X, ಬಂಗಾ. ೩೯-೫ ; ೯೦೦) ; ಕಳ್ಳಪರಿಯ ಮರಂಗಲ್ಲೊಳ್ ಪನ್ನಿ ಕೆರ್ಱೆಳ ಗಟ್ಟಿ (ಎಕ. X (೪), ಶಾಗೇಪ. ೯೩-೬ ; ೧೦ನೆಯ ಶತ). [ ? ]

**ಮರಂದ** (ನಾ). ಹೂವಿನ ಬಂಡು ; ಮಕರಂದ : ಪಸಿದಳಿವ್ರಜಕೆ ಮರಂದದಱಿಸನೂಡಲ್ಬಿರ್ಚಾಡ್ವುದೆನೆಯಲರ್ವಂಬುಜಾಳಿಯಸೆಗುಂ ಸರ ದೊಳ್ (ಚಿತ್ರ. ೫-೯-೬) ; ಮರಂದಮಂ ಪೀರ್ವ ಮಧುಕರಂ (ಅಶಿಮ. ೦೬೩). [ ಸಂ. ]

**ಮರಂದಲೆ** (ನಾ). ಒಂದು ಸ್ಥಳದ ಹೆಸರು : ಶ್ರೀಮತ್ ಮಾರಸಿಂಘ ದೇವ ಸತ್ಯವಾಕ್ಯಪೆರ್ಮ್ಮಾನಡಿಗಳ್ಮರನ್ದಲೆಮಯ್ಯ್ಯಾದಿಯುಳುತ್ತಮಿರೆ (ಎಕ. V, ಅರಸೀ. ೨೩೬-೫ ; 971). [ ? ]

**ಮರಂಬಡು** 'ಮರವಡು' ನೋ.

**ಮರಅಕ್ಕಿಬುಹುಲ್ಲು** (ನಾ). ಒಂದು ಬಗೆಯ ಸಸ್ಯ : ಮರಅಕ್ಕಿಬು ಹುಲ್ಲು, ಪರಂಗಿ ಅಕ್ಕಿ ಹುಲ್ಲು (ಬ್ಯಾಸಿ. ೬೫-೦೫೩೦). [ ಮರ$_1$ + ಅಕ್ಕಿಬು$_2$ + ಹುಲ್ಲು ( < ಪುಲ್ ) ]

**ಮರಕಟ** (ನಾ). ಕೋತಿ ; ಮರ್ಕಟ : ಮರಕಟ ಕುಣಿವಂತೆ ಮನಸು ಇಂದ್ರಿಯಗಳುವಕ್ಕಟವಾಗಿ ಕುಣಿದು ಕಂಗೆಡಿಸುತ್ತಿದೆ (ತೀರ್ಥ. ೦೩೬). [ < ಸಂ. ಮರ್ಕಟ ]

**ಮರಕಟಧ್ವಜ** (ನಾ). ಕೋತಿಯ ಗುರುತಿರುವ ಬಾವುಟ ; ಕಪಿಧ್ವಜ : ಮರಕಟಧ್ವಜವಿಟ್ಟು ಧರ್ಮದೊಳಿರುವುದು (ಜಪಾ. ೬೯-೫೦). [ < ಸಂ. ಮರ್ಕಟಧ್ವಜ ]

**ಮರಕಟ್ಟು$_1$** 'ಮರಗಟ್ಟು$_1$' ನೋ.

**ಮರಕಟ್ಟು$_2$** 'ಮರಗಟ್ಟು$_2$' ನೋ.

**ಮರಕತ** (ನಾ). ನವರತ್ನಗಳಲ್ಲಿ ಒಂದು ; ಪಚ್ಚೆ : "ಪಸುರ್ವಣಿಯುಂ ಪಾಗವರಲ್ ಪೆಸರಿಂ ಮರಕತಮವಕ್ಕು" (ಅಭಿಂ. ೫೨) ; ಕೋಮಾವಳನ ನೆಯ್ದ ಸಂದಿಸುವಪೊಲಾ ಮರಕತಮಣಿವರ್ಣಂ ಕರಪರಿಘದಿಸೊಡನೊಡನೆ ತಾಳ್ಪಿದಂ ತಿಳನೀರಂ (ಆದಿಪು. ೦೯-೦೦೬) ; ಅರಗಿಳಿಯ ಪಸುರ್ಪಿಂದಂ ಮರಕತಮಯಮೆನಿಪ ಪೊನ್ನಪಂಜರಮಂ ಪೊತ್ತು (ಕಾದಂಬ. ೩೬) ; ಪವಳದ ಪಡಿಯಿಂ ಮರಕತದೊಂದು ಕಳಸದಿಂ ತಾರಗೆವಟ್ಟೆ ಮುಟ್ಟೆ (ರಾಜಶೇ. ೫೯-೨೩). [ಸಂ.]

**ಮರಕತವಟ್ಟೆ** (ನಾ). ಹಸುರು ಬಟ್ಟೆ, —ವಸ್ತ್ರ: ಚರಣದೊಳೆಸೆವ ಚಿಮ್ಮಿಯ ಕೆಂಪು ಬಿಗಿದುಟ್ಟ ಮರಕತವಟ್ಟೆ ಮೂಂದಳಿರು ಸಿರದಲಿ ಮೆಱೆಯೆ (ಕೋಹಕ. ೦೯-೩೨). [ ಮರಕತ + ಬಟ್ಟೆ$_2$ ]

**ಮರಕತವರ್ಣ** (ನಾ). ಪಚ್ಚೆಯ ಬಣ್ಣ ; ಹಸುರು : ಮರಕತವರ್ಣಮಂ ತರುಣವೇಣಾತನುಚ್ಛವಿಯಿಂದೆ ವಜ್ರಮಂ ಸುರುಚಿರಮಪ್ಪ ಮುತ್ತನಿಜ ದಂತಚಯಂಗಳದೊಂದು ಕಾಂತಿಯಿಂ ಮರಗಸದೃಕ್ಷಮಪ್ಪ ಕೆಚ್ಚಿಂ ಹರಿನೀಳವ ಸೊಪ್ಪೆ ಹೋಲ್ತಳಂತಿರೆ ಸತಿ ರತ್ನದೊಂದೆಣೆಗೆ[ವಂದಳು](ಎಕ. XII, ಕಕ್ಕಿಜಾ. ೯೩-೦೯; 1171). [ಸಂ.]

**ಮರಕಬ್ಬು** 'ಮರಗಬ್ಬು' ನೋ.

**ಮರಕಲ**, ಮರಕಾಲ (ನಾ). ೧. ಬೆಸ್ತ: ಮೀನುಗಾರ : ಮೊಗೇರರ ಜಾತಿಯ ಸಾಮಾನ್ಯ ಹೆಸರು ಮರಕಲರು ಎಂಬುದಾಗಿದೆ (ತುಳುಜಾ. ೨೨೯). **ಮರಕಾಲ** : ೧. ಬಲೆ ನೆಯ್ದು ಮರಕಾಲ ಬಟ್ಟೆ ನೆಯ್ದಾನೇ ? (ಗಾದೆ). ೨. ನಾವಿಕ; ಅಂಬಿಗ : ಕಾಸರುಕೋಡಿಂಗೆ ತಗದು ಬಂದಲಿ ಆ ಉಂಮರ ಮರಕಾಲರು. . . ಬಳಿಗೆ ಬಂದು (ಕಇ. I, ೯೮-೬; 1427); ಓದಂತೆ ಮರ ಕಾಲರು ಹಡಗಿನ ವ್ಯವಹಾರದಿ ಗಳಿಸಿದ ಹಣವ . . . ತೂಗುವರು (ಮೋಹತ. ೩-೨೯); ಮರಕಾಲರಲ್ಲಿ ಹಲವರು ಪಾಂಡಿಗಳಲ್ಲಿ ಪರದೇಶದ ವ್ಯಾಪಾರ ಮಾಡಿ ಪಾಂಡಿ ಎಂಬ ಹೆಸರನ್ನು ಗಳಿಸಿಕೊಂಡಿದ್ದರು(ತುಳುಜಾ.೫೯). [ದೇ.॥ ತಮಿ. ಮರಕ್ಕಲನ್ ; ತುಳು. ಮರಕಲೆ, ಮರಕಾಲೆ]

**ಮರಕಾಲ** 'ಮರಕಲ' ನೋ.

**ಮರಕಾಲು** 'ಮರಗಾಲ್' ನೋ.

**ಮರಕಾಲ್ತಿ** (ನಾ). ಬೆಸ್ತರ ಹೆಂಗಸು ; ಮೀನುಗಾತಿ : ಹೋಯ್ ಮರ ಕಾಲ್ತಿ, ಮೀನು ಹ್ಯಾಗೆ ? (ಹೊಸಕ್ಷ. ೯೯). [ಮರಕಾಲ( <ಮರಕಲ) + —ತಿ$_1$ ( < — ಇತ್ತಿ)]

**ಮರಕಾಳಗ** (ನಾ). ಮರಗಳನ್ನೇ ಆಯುಧವಾಗಿ ಹಿಡಿದು ಮಾಡುವ ಯುದ್ಧ: ಬಕ ಭೀಮರಿಗೆ ಮರಕಾಳಗ ಬಹಳ ಹೊತ್ತು ನಡೆಯಿತು (ಪಕಪಾ. ೯೮). [ ಮರ$_1$ + ಕಾಳಗ ( <ಕಾಳೆಗ) ]

**ಮರಕಿ** (ನಾ). ಒಂದು ಬಗೆಯ ಭೂಮಿ (?): ಹೊಸ ಊರ ನಾಗಣಪೆಗ್ಗಡೆ ಬೀಜ ಹೊಂನ್ನ ತೆಗೆದುಕೊಂಡು ತಂನ ಮೂಲದ ಮೇಲೆ ಕುಳಕ್ಕೆ ಬರಸಿ ಕೊಟ್ಟ ಭೂಮಿ ಮರಕಿ ಗೋಡಲೂ ಕಾರಗದ್ದೆ (ಕ್ಯಾಅ. ೦೯೩೯, ೦೯-೦೬ ; 1516). [ ? ]

**ಮರಕಿಚ್ಚು** 'ಮರಗಿಚ್ಚು' ನೋ.

**ಮರಕು** 'ಮಱುಗು' ನೋ.

**ಮರಕುಟಿಕ** 'ಮರಕುಟಿಕ' ನೋ.

**ಮರಕುಟುವಕ್ಕಿ**, ಮರಕುಟುವಕ್ಕಿ (ನಾ). = ಮರಕುಟಿಕ : ಇಲಿಗಂ ಮರ ಕುಟವಕ್ಕಿಗಮುಲಸದೆ ಕರ್ಮಕುತ್ತೆ ಕಡಿಯುತಿರ್ಪುದೆ ಸಹಜಂ (ಧರ್ಮಾಮೃ. ೦-೯೬). **ಮರಕುಟುವಕ್ಕಿ** : "ಶತಪತ್ರಃ, ದಾರ್ವಾಘಾಟಃ — ಈ ೨ ಮರ ಕುಟುವಕ್ಕಿ" (ನಾಶಿರಾ. ೦೦೯). [ಮರ$_1$ + ಕುಟು$_1$ + ಪಕ್ಕಿ]

**ಮರಕುಟಿಕ**, ಮರಕುಟಿಕ, ಮರಕುಟಿಗ, ಮರಕುಟುಗ (ನಾ). ಮರ ವನ್ನು ಕೊರೆಯುವ ಒಂದು ಬಗೆಯ ಪಕ್ಷಿ : ಪಾಱುವೆಂಡತಿಯಂತೆ ಪೊಱಸು ಬಡಗಿಯಂತೆ ಮರಕುಟಿಕಂ . . . ಎಂದಿಂತುಮನೇಕಪಕ್ಷಿಜಾತಿಗಳಿಂ ತಕ್ಕನೆ ತೀವಿದ ಪಟುಮ (ಬಂಹಂ. ೨-೩೯ ಪ). **ಮರಕುಟಿಕ** : ಮಿಾಸ್ಪಲಿಗ ಮರಕುಟಿಕ ಚಾಣಾಂಕೆ (ಬಣ್ಣಂಗ. ೦೦-೫). **ಮರಕುಟಿಗ** : ಗಿಳಿ ಪರ್ಣ ಮರವಂ ಮರಕುಟಿಗಂ ಪೊಱೆಲೆ (ಹೊಕ್ತಸು. ೩-೦೯೬); ಮರಕುಟಿಗ ಕಬ್ಬಕ್ಕಿ ಕೊಟ್ಟುಗ . . . ಮೊದಲಾದಖಿಳಖಗಾಳಿ ಬಿದ್ದು ಮರಿಯೊಳಗೆ (ಕುಮಾರ. ೨೦-೫೯); ಮರಕುಟಿಗ ಚಂಬೋತ ಶುಕ (ತೊರವೆ. ೩-೦-೩೨). **ಮರಕುಟುಗ** : ಮರಕುಟುಗ ಕಟ್ಟುಱುಕ ಹಂಸೆ (ಸಾಳ್ವಭಾ. ೫-೨೩). [ ಮರ$_1$ + ಕುಟಿಕ$_1$ ]

**ಮರಕುಟಿಗ** 'ಮರಕುಟಿಕ' ನೋ.

**ಮರಕುಟುಗ** 'ಮರಕುಟಿಕ' ನೋ.

**ಮರಕುಟುವಕ್ಕಿ** 'ಮರಕುಟುವಕ್ಕಿ' ನೋ.

**ಮರಕೂಟವಕ್ಕಿ** (ನಾ). ಒಂದು ಬಗೆಯ ಜಲಚರಪಕ್ಷಿ : "ಉತ್ಕ್ರೋಶಃ,

ಕುರರಃ — ಈ ೨ ಮರಕೊಟವಕ್ಕಿ" (ಶಬ್ದಮ. ೪೨-೯೩). 'ಸರಕೊಟವಕ್ಕಿ' ಪರಾ. [ ? + ಪಕ್ಕಿ/ಪ ಇದು ಟೀಕಾಕಾರನು ರೂಪಿಸಿರುವ ಶಬ್ದ ವಿರಬಹುದೆ ? ]

**ಮರಕೆಸ** (ನಾ). ಕೆಸವಿನಲ್ಲಿ ಒಂದು ಬಗೆ : ದಾರಿಯಲ್ಲಿ ಅಷ್ಟು ಮರಕೆಸ ಕಂಡು "ನೋಡಲ್ಲಿ ಪತ್ರೊಡೆಗೆ ಲಾಯಕ್ಕಾಗಿದೆ" ಎಂದರು (ಕ್ರಿಕೃ. ೯೬).
[ ಮರ್$_{1}$ + ಕೆಸ (< ಕೆಸವು) ]

**ಮರಕೊಡಿ** (ನಾ). ದೇವಸ್ಥಾನದ ಮುಂದಿನ ಧ್ವಜಸ್ತಂಭ; ಕೊಡಿಮರ : ದೊಡ್ಡದೊಡ್ಡ ಮರಬಳ್ಳಿಗಳು . . . ಮರಕೊಡಿಗಳ ಸಾಲಿರದಂತೆ ಕಂಡವು (ಚಕುಮೊ. ೬೯). [ಮರ$_{1}$ + ಕೊಡಿ$_{2}$]

**ಮರಕೋತಿ** (ನಾ). ಮರವನ್ನು ಹತ್ತಿ ಇಳಿದು ಆಡುವ ಆಟ ; ಗಿಡ ಮಂಗನಾಟ (ಉಕ) : ಪರಿವರಿಯಾಟಂ ತಿರಿಕಲ್ಗಿರೆ ಮರೆ ಮರಕೋತಿ ಸೆಂಡು ಚಾರುಂಬಳೆ (ಚಂದ್ರಶು. ೬-೯೦) ; ಅಲ್ಲಿ ಮರಕೋತಿ ಆಡುತ್ತಿದ್ದುದು . . . ಜ್ಞಾಪಕವಿದೆ (ತೊಸ್ಕಿ. ೦೨೩). [ಮರ$_{1}$ + ಕೋತಿ]

**ಮರಗಟ್ಟು$_{1}$**. ಮರಕಟ್ಟು$_{1}$ (ಕ್ರಿ). (ರಕ್ತಚಲನೆ ನಿಂತು) ಕೈಕಾಲು ಮರದಂತಾಗು : ಜೋಮು ಹಿಡಿ ; ಜಡವಾಗು : ಕಾಲು ಕೂತು ಕೂತು ಮರಗಟ್ಟಿತ್ತು (ಸಂಪ್ರಕ. ೬೭) ; ಎದೆನಡುಗುತ್ತಿರುವಂತಿದೆ . . . ಕೊಡೆ ಮರಗಟ್ಟಿದಂತಿದೆ (ಚಕಥಾ. ೨೯೨). **ಮರಕಟ್ಟು$_{1}$** : ದೆವರಿ ಕೈಕಾಲುಗಳೆಲ್ಲ ಒಮ್ಮೆಲೇ ಮರಕಟ್ಟಿದಂತಾದವು (ಹಳ್ಳಿಹಾ. ೩೦) ; ಈ ನೋಟವನ್ನೆಲ್ಲಾ ನೋಡಿ ಮರಕಟ್ಟಿದವನಂತೆ ತಟಸ್ಥನಾಗಿದ್ದ (ತಿಣ್ಣಕು. ೬೩): ನಮ್ಮ ಕಾಲುಗಳು ಮರಗಟ್ಟಿಹೋಗಿವೆ (ಕೃಲಾಳ. ೩೯). [ಮರ$_{1}$ + ಕಟ್ಟು$_{1}$]

**ಮರಗಟ್ಟು$_{2}$**, ಮರಕಟ್ಟು$_{2}$ (ನಾ). ೧. ಮರದ ಬುಡದ ಸುತ್ತ ನೀರು, ಗೊಬ್ಬರ ಹಾಕಲು ಮಾಡಿದ ಪಾತಿ ; ಆಲವಾಲ : ಮರಗಟ್ಟೆಂಬಂತೆ ಸುತ್ತಿಂ ಮೊದಲೊಳಜಗರಂ ಸುತ್ತೆ (ಶಾಂತಿಪು. ೦೨೦). **ಮರಕಟ್ಟು$_{2}$** : ೨. ಈಚಲು ಮರಕ್ಕೆ ಮಡಕೆಯನ್ನು ಕಟ್ಟಿ ಹೆಂಡವನ್ನು ಇಳಿಸುವ ಕೆಲಸ : ಪತ್ತಾಕ್ಷಿಂದ ಮರಕಟ್ಟು ಕೆಲ್ಸಮಾಡ್ತೆ. ಈಗ ಕಳ್ಳಂಗಡಿ ಕಂತ್ರಾಟು ಮಾಡ್ತೆ (ಚಂತಿಕೊ. ೯೦). ೩. ಮರದ ಕಟ್ಟಡ ವಿರುವಂಥದು : ಸಿರಿಗುಪ್ಪೆಪೊಳಾದರವಿಂ ಮರಕಟ್ಟಿನ ಒರಿಯ ಬಾವಿ ಯುಂ ಕೆಡಿಸುವುದಸ್ಸರಿಪಿಸಿ ಮಾಡಿ (ಎಇ. XI-ii. ೦೩೪-೨೨; 1087). [ಮರ$_{1}$ + ಕಟ್ಟು$_{2}$]

**ಮರಗುಡವ** (ನಾ). ಒಂದು ಬಗೆಯ ಕಡವದ ಮರ : "ಕಾ[ಕಾ]ಕ್ಷಃ — ನಾಗಲು, ಕಬ್ಬು, ಮರಗುಡವ" (ಓಕರ. ೩೦).
[ ಮರ$_{1}$ + ಕಡವ$_{1}$ (< ಕಡಂಬ) ]

**ಮರಗಸಿ** 'ಮರಂಗಸಿ' ನೋ.

**ಮರಗಡೆ** (ನಾ). ಒಂದು ಬಗೆಯ ಸಸ್ಯ : ಅರುಣಸೂರುಗ, ಮರಗಡೆ (ಚನ್ನಶಿಗ. ೨೩-೪೨೩) ; ಮರಗಡೆಸೊಪ್ಪನ್ನು ಅಕ್ಕಿಗಚ್ಚಿನಿಂ ತೊಳೆದು ಆ ರಸವಂ ಹಿಂಡಿ, ಶೋಧಿಸಿಕೊಂಡು ದೇಹಾನುಗುಣವರಿತು ತೆಗೆದುಕೊಳ್ಳುವುದು (ಸಳಕ್ಕ. ೦೯೬). 'ಮರ್ಕಟಿ' ಪರಾ. [ ? ]

**ಮರಗುಡಿಟ್ಟುಹುಲ್ಲು** (ನಾ). ಒಂದು ಬಗೆಯ ಹುಲ್ಲು : ಪಕ್ಕಿವಾರ್ಜಿ ಹುಲ್ಲು, ಮರಗಡಿಟ್ಟುಹುಲ್ಲು (ಚನ್ನಶಿಗ. ೦೦-೦೬೬).[? + ಹುಲ್ಲು (< ಪುಲ್)]

**ಮರಗತ್ತಲೆ** 'ಮರಗಟ್ಟಲೆ' ನೋ.

**ಮರಗತ್ತಿ** (ನಾ). ಮರದಿಂದ ಮಾಡಿದ ಕತ್ತಿ : ಮರಗತ್ತಿಯಿಂದ ಮೂಗು ಕೊಯ್ಯಲು ಸಾಧ್ಯವೇ ? (ಕೂಡ). 'ಮರವಾಳ್$_{2}$' ಪರಾ.
[ ಮರ$_{1}$ + ಕತ್ತಿ ]

**ಮರಗಬ್ಬು**, ಮರಕಬ್ಬು (ನಾ). ೧. ಒಂದು ಬಗೆಯ ಬಿರುಸಾದ ಕಬ್ಬು : ವಿಸುಪಿ ಮರಗಬ್ಬು ಕರಿಯ ಮರಗಬ್ಬಿನೊಳೊಸರ್ವ ರಸಮುಂ ಹೀನವು (ಸೂಶಾ. ೨-೩೦). **ಮರಕಬ್ಬು** : ೨. ಲಾಳಕಡ್ಡಿ : "ವೀರಂ, ವೀರತರಂ — ೨ ಮರಕಬ್ಬಿನ ಹೆಸರುಗಳು. ಕೆಲವರು ಲಾಳಕಡ್ಡಿಯೆನ್ನುವರು. ಕೆಲವರು ಹುಲ್ಲಾಳೇಕಡ್ಡಿಯೆನ್ನುವರು" (ನಿಘಂ. ೦೩೦).
[ ಮರ$_{1}$ + ಕಬ್ಬು$_{2}$ (< ಕರ್ಬು$_{1}$) ]

**ಮರಗಯ್**. ಮರಗೈ (ನಾ). ಮರದಿಂದ ಮಾಡಿದ ಕೈ : ಕಯ್ಯಂ ಕಡಿದು ಮರಗಯ್ಯಂ [ಕಟ್ಟಿ]ಕೊಳ್ವ . . . ಗಾವಿಲನಂತಾಗಿ (ವಡ್ಡಾರಾ. ೦೪-೦೦೬). **ಮರಗೈ** : ಪು[ರಾತಂ. ವೊ] ರಗಾಲು ಮರಗೈ (ವೈಕಸಂ. I, ೨೦೩): ಕರೆದು ಬಾಧ್ಯರೀಯದ ಕೈ ಮರಗೈ ಮರಾಳ್ಗೆ (ಚಿತಾ. ೦೯).
[ ಮರ$_{1}$ + ಕಯ್$_{2}$ (< ಕೆಯ್$_{2}$) ]

**ಮರಗಸ** (ನಾ). ದೊಡ್ಡದಾಗಿ ಬೆಳೆದ ಕಳೆ : ಕಯ್ಯ ಮರಗಸಂ ಪುಲ್ಲಸಮೆಂಬೆರಡುಮಂ ಕಳೆದು ಪದದೊಳ್ ಬಿತ್ತಲೊಡಂ ಮನದೊಳುಳ್ಳ ರಾಗದ್ವೇಷಮೆಂಬೆರಡುಮಂ ಕಳೆದು ಶುದ್ಧಚಾರಿತ್ರದೊಳ್ ಪತ್ತದೊಡ ಮಾತಂಗೆ ಬೆಳಸುಮಿಾತಂಗೆ ಸುಗತಿಯುಮೆಂತಕ್ಕುಂ (ಧರ್ಮಸಂ. ೩೬-೦೩ ಪ).
[ ಮರ$_{1}$ + ಕಸ ]

**ಮರಗಳ್ಳಿ** (ನಾ). ಒಂದು ಬಗೆಯ ಕಳ್ಳಿ; ಮರದಂತೆ ಬೆಳೆಯುವ ಕಳ್ಳಿ : ಬೇಲಿಯಲ್ಲಿ ಮರಗಳ್ಳಿ ಬೆಳೆದುಕೊಂಡಿದೆ (ಕೂಡ). 'ಎಲೆಗಳ್ಳಿ' ಪರಾ. [ ಮರ$_{1}$ + ಕಳ್ಳಿ$_{2}$ ]

**ಮರಗಱುಕೆ** (ನಾ). ಒಂದು ಬಗೆಯ ಗರಿಕೆ : ಕಱುಕೆ ಮರಗಱುಕೆ ಕವಲುಂಗಱುಕೆ ಕವಲ್ಗೊಟ್ಟ ಹಂಚಿ (ಸೂಕ್ತಿಸು. ೩-೨೯); ಮರಗಱುಕೆಯ ಬಳ್ಳಿಯ ಪೆರ್ಗುರುಟಿಗೆಯುಂ ಬ್ರಹ್ಮದಂಡೆಯುಂ (ಕಬ್ಬಿಗ. ೦೬-೩೮).
[ ಮರ$_{1}$ + ಕಱುಕೆ$_{1}$ ( < ಕಱುಂಕೆ) ]

**ಮರಗಟ್ಟಲೆ**. ಮರಗತ್ತಲೆ (ನಾ). ದಟ್ಟವಾದ ಕತ್ತಲೆ ; ಕಗ್ಗತ್ತಲೆ : ತುಱುಗಿವೆಗಣ್ಣ ಕಾಂತಿ ಮರಗಟ್ಟಲೆಯಂ ಬೆದಱಿಟ್ಟು ತೋಱಿವಾಯ್ದಿಱಿ ಕಿಸುಸಂಜೆವೀಱಿ (ಶಗಂ. ೦೬-೨೩). **ಮರಗತ್ತಲೆ** : ಚಲಿಪ ತರಳಾಪಾಂಗರೋಚಿಯುಲಿ ಮುಸಿದುದಾ ಮರಗತ್ತಲೆಯ ಮೈಸಿರಿ (ತೊರರಾ. ೦-೩-೪೩).
[ ಮರ$_{1}$ + ಕಟ್ಟಲೆ ]

**ಮರಗಾಡು** (ನಾ). ದಟ್ಟವಾದ ಕಾಡು : ಅರಿನೃಪನಾವ ಜವನಿಕೆ ಮಱೆಯೊಳಡಂಗಿದನೊ ತೃಣವನದೊಳಿಱುಬಿನಲಿ ಮೆಳೆಸಂದಣಿಗಳಲಿ ಮರಗಾಡಿನಲಿ ಮೃಗಗಣದ ನೆಲೆಯಲಿ ಕಾಣೆರಲೆ ನೀವೆಂದನಾ ಭೀಮ (ಕುಮ್ಮಾಗ. ೪-೩೦) ; ಇಕ್ಕೆಯ ಹಕ್ಕಿಯಾಡುಂಬೊಲನ ಮರಗಾಡುಗಳೊಳಗೆ ಕಟ್ಟುಲುಹುದೋಱದೆ ಪೊಕ್ಕುದಲಗಕೆ ಶಬರಸಂದೋಹ (ತೊರರಾ. ೩-೩-೦೦). [ ಮರ$_{1}$ + ಕಾಡು$_{2}$ ]

**ಮರಗಾಣ** (ನಾ). ಮರದಿಂದ ಮಾಡಿದ ಎಣ್ಣೆ ತೆಗೆಯುವ ಗಾಣ: (೪). 'ಕಲ್ಗಾಣ' ಪರಾ. [ ಮರ$_{1}$ + ಗಾಣ$_{1}$ ]

**ಮರಗಾಪು** (ನಾ). ಮರದ ರಕ್ಷಣೆ, — ಆಶ್ರಯ : ಹೊಳೆಹೊಳೆದಡಗುವ ಮಿಾಂಬುಳುಗಳು ಕಾವಳಗೊಂಡ ಮರಗಾಪಿ[ನಾಶಂ ವಿ]ನೊಳು ಹೊಳೆವವು ಕಾರ ಕಾಮುರ್ಗಿಲೆಡೆಯೊಳು ಥಳಥಳಿಪ ಮಿಂಚಿನ ತೆಱನಾಗಿ (ತ್ರಿಣಾಂ. ೬-೩೭).
[ ಮರ$_{1}$ + ಕಾಪು ]

**ಮರಗಾಲ್**, ಮರಕಾಲು, ಮರಗಾಲು (ನಾ). ಎತ್ತರದ ನಿಲುವಿನಲ್ಲಿ ಓಡಾಡಲು ಸಾಧ್ಯವಾಗುವಂತೆ, ಮರದಿಂದ ಮಾಡಿದ, ಕಾಲಿಗೆ ಕಟ್ಟಿಕೊಳ್ಳುವ ಒಂದು ಬಗೆಯ ಸಾಧನ : ಜಾತ್ಯಶ್ವಮಂ ಬಿಟ್ಟು ಮರಗಾಲಂ ಕೊಳ್ವ . . . ಗಾವಿಲನಂತಾಗಿ (ವಡ್ಡಾರಾ. ೦೪-೦೦೬). **ಮರಕಾಲು** : ಸ್ತ್ರೀವೇಷವು ಆ 'ಮರಕಾಲಿ' ನಿಂದಲೆ ರಂಗದೊಳಗೆ ಪ್ರವೇಶಿಸಿ . . . ಕಾಣುವುದು (ಯಾತಿಗು. ೩೬). **ಮರಗಾಲು** : ಮರಗಾಲಲಟ್ಟಿ ಸದೆದು ನೋಡಯ್ಯ ಇಂದೆನ್ನ ಒಕ್ಕತನ ಹೋದರೆ ಹೋಗಲಿ ಮರಗಾಲ ಬಿಟ್ಟೆನಾದರೆ ಕೂಡಲಸಂಗಾ ನಿಮ್ಮಾಣೆ (ಬಸವ. ೬೨೦).

**ಮರಕಾಲಿನಾಟ** = ಯಕ್ಷಗಾನದಲ್ಲಿ, ಮರಗಾಲನ್ನು ಕಾಲಿಗೆ ಅಳವಡಿಸಿ ಕುಣಿಯುವ ಒಂದು ಬಗೆಯ ಕುಣಿತ : ಚಪ್ಪರಮಂಚದಾಟ ಎಂಬುದು ಈ ಸ್ತ್ರೀಪಾತ್ರದ ನರ್ತನಗಳೊಳಗೊಂದು. ಈ ಕುಣಿತಕ್ಕೆ ಅಟ್ಟೀಗೆಯಾಟ, ಅರೆಪಾವಿನಾಟ, ಮರಕಾಲಿನಾಟ ಎಂಬ ನಾಮಾಂತರಗಳೂ ಇವೆ (ಜಾತೀಗಸು. ೩೩). [ಮರ$_1$ + ಕಾಲ್$_1$./ತಮಿ. ಮಲ. ಮರಕ್ಕಾಲ್]

**ಮರಗಾಲು** 'ಮರಗಾಲ್' ನೋ.

**ಮರಗಾವು** (ನಾ). ಮರದಿಂದ ಮಾಡಿದ ಹಿಡಿಕೆ : ಕಯ್ನಾಡಿ ನೆರೆಯು ಸೈನಿಕನೊಬ್ಬನ ಸಬಳವನ್ನೀಸಿಕೊಂಡು, ಅದರ ಅಲಗಿನಡಿಯೆಡೆಯಲ್ಲಿ ಕಾಲ್ಕೊಟ್ಟು ತಾನೇ ಮುರಿದು, ಉಳಿದ ಮರಗಾವನ್ನು ಕೊಂಡು ಪರೀಕ್ಷಿಸಿ (ಐರುಗಂ. ೩೩-೦೪). [ಮರ$_1$ + ಕಾವು$_3$]

**ಮರಗಾಳಿ** (ನಾ). ಬಿರುಸಾದ ಗಾಳಿ ; ಚಂಡಮಾರುತ : ಆ ಸಾಮ್ರಾಜ್ಯವು ಪತನ ಹೊಂದಿದ ಮೇಲೆ ಮರಗಾಳಿಯ ಬಿರುಬಿಗೆ ಸಿಕ್ಕ ನೆಲದಲ್ಲಿ ಹಾಳು ಬೀಳುಗಳು ಎಲ್ಲ ಕಡೆಗೆ ಕಾಣುವಂತೆ ಜನಜೀವನ ದಿಕ್ಕೆಟ್ಟಿತು (ಕನಾಇ. ೩೪೩). [ಮರ$_1$ + ಗಾಳಿ$_1$]

**ಮರಗಿ** 'ಮರವಿ' ನೋ.

**ಮರಗಿಚ್ಚು**, ಮರಕಿಚ್ಚು (ನಾ). ೧. ಮರದೊಳಗೆ ಇರುವುದೆಂದು ನಂಬಲಾದ ಮಂದಾಗ್ನಿ : ಕರಮೆ ನೀರಡಿಕೆ ಮಿಗೆ ತಟ್ಟಾಡಿಸುತ್ತ ಬರೆ ಮರಗಿಚ್ಚಿನಂತೆ ಪಸಿವೊಳಗೊಳಗೆ ಸುಡುತ ಬರೆ (ಜಾತಂತ. ೯-೦೭೨ ರಗಳೆ). ೨. ಸೌದೆಯಿಂದಾದ ಬೆಂಕಿ : ಇದಱೊಡನೆ ಬಲು ಮರಗಿಚ್ಚು ನೊಟ್ಟದು ಸುಡಿಯೆನುತ ನೇಮಿಸಿದ (ಕೊರಣ. ೩-೬-೮). **ಮರಕಿಚ್ಚು** : ೩. ಕಾಡುಕಿಚ್ಚು : ಸಂಚರಿಸುತಿದೆ ವಾಯು, ದಳ್ಳುರಿಯುತಿದೆ ಮರಕಿಚ್ಚು ನಿನ್ನಿಂದಲೇ (ಕಂಪು. ೨೬-೪). [ಮರ$_1$ + ಕಿಚ್ಚು]

**ಮರಗಿವಿ** (ನಾ). ಮರಗಟ್ಟಿ ಕೇಳಿಸದಂತಿರುವ ಕಿವಿ ; ಕಿವುಡುಕಿವಿ : ಅವನ ಮರಗಿವಿಗೆ ಈ ಕೀರಲುದನಿ ಕೇಳಿಸುವುದಿಲ್ಲ (ರೂಢಿ). [ಮರ$_1$ + ಕಿವಿ$_3$]

**ಮರಗುದುರೆ** (ನಾ). ಮರದಿಂದ ಮಾಡಿದ ಕುದುರೆ : ಮರಗುದುರೆಯಲಿ ಮರವ ಮರೆತು ಮಕ್ಕಳು ಕುದುರೆಯಾಡುವೊಲು (ಹಕ್ಕಿ. ೬-೨) ; ಓಡಿಸುವ ಮರಗುದುರೆಯಲಿ ತೃಪ್ತಿ ದೊರೆತು ಆಡುವಾ ಭರದಲಿ ಅಪಾಯವನು ಮರೆತು (ಕಂಪು. ೩೩-೩). [ಮರ$_1$ + ಕುದುರೆ]

**ಮರಗುಬ್ಬಿ** (ನಾ). ಒಂದು ಬಗೆಯ ಗುಬ್ಬಚ್ಚಿ : (?). [ಮರ$_1$ + ಗುಬ್ಬಿ$_1$]

**ಮರಗುಲಿ** (ನಾ). ಮರವನ್ನು ಕತ್ತರಿಸುವಂಥದು ; ಕೊಡಲಿ : 'ಮರಗುಲಿತನ' ಪರಾ. [ಮರ$_1$ + – ಕುಲಿ$_1$]

**ಮರಗುಲಿತನ** (ನಾ). ಮರಗಳನ್ನು ಕತ್ತರಿಸುವ ಉದ್ಯೋಗ : ರೂಢಿವೆತ್ತಿಹ ರಾಜಕುವರರಿಗೀಡಪ್ಪ ಕಜ್ಜವನು ನೆನೆಯದೆ ಕಾಡ ಮರಗುಲಿ[ಜಾಕಾಂ. ಏ]ತನವು ಕ್ಷತ್ರಿಯಜಾತಿಗುತ್ತಮವೆ (ಜಾಗತ. ೦೦-೬). [ಮರಗುಲಿ + – ತನ]

**ಮರಗುಳಿ** 'ಮರೆಗುಳಿ' ನೋ.

**ಮರಗೂಡು** (ನಾ). ಮರದಿಂದ ಮಾಡಿದ ಬೋನು ; ಮರದ ಪಂಜರ : ಒಳಪೊಕ್ಕು ಮರಗೂಡಿನಲಿ ಸಿಲುಕಿದ ಹುಲಿಯವೋಲ್ (ಕುವ್ಯಾಶ. ೮-೩೩). [ಮರ$_1$ + ಗೂಡು]

**ಮರಗೂಳ** 'ಮರಗೂಟಿ' ನೋ.

**ಮರಗೂಟಿ**, ಮರಗೂಳ (ನಾ). ಮರವನ್ನೇ ಆಹಾರವಾಗಿ ಉಳ್ಳವನು; ಅಗ್ನಿ : "ಮರಗೂಟಂ . . . ಎಲರ್ಗೆಳೆಯಂ – ಈ ೧೩ ಅಗ್ನಿ" (ಕಚಾ. ೪೪-೩೩); ಆಂ ಬಣ್ಣಿಪ ರತಿಗೆ ಮಿಂದ ಮರಗೂಟನೊಂದು ಪೆಯ್ಯೊಗರ್ (ರಾಷಟ್ಟ. ೬೪-೦೩). **ಮರಗೂಳ** : "ಮರಗೂಳನೆನಲು ವಹ್ನಿ" (ಕಶರ. ೬೪); ಜಾಣ್ಮಾತುಗರು ಪೇಳ್ದ ಸೌಂದರನ ಕಥೆಯನೆಳೆವೆಣ್ಮಡಗೆ ಮರಗೂಳ ಜೊನ್ನೊಡಲ ನೇಸಱೊಳ್ ಕಣ್ಮಲರಸಂ ಕೊರ್ತು (ಶೀರಘು. ೦೦-೨) ; ಅರಲಿಚನಾರಿಂದ . . . ಮರಗೂಳ ಮೆಯ್ಗೆಣ್ಣಿಚ್ಚರರು ಮಱುಮಱುಪುಟ್ಟಾಂತು ಮೆಯ್ನೆತ್ತರು (ಕಕಜಾಂ. ೦೩-೬೪).

ಮರಗೂಟಿ ಮಗ=ಅಗ್ನಿಯ ಪುತ್ರ; ಸ್ಕಂದ ; ಕಾರ್ತಿಕೇಯ : "ನವಿಲ್ದೇರಂ . . . ಮರಗೂಟಿ ಮಗಂ—ಈ ೪ ಕಾರ್ತಿಕೇಯಂಗೆ ಪೆಸರ್" (ಕಕಜಾ. ೦-೩). [ಮರ$_1$ + ಕೂಟುರ್$_1$ + – ಅ$_7$]

**ಮರಗೆ** 'ಮರವಿ' ನೋ.

**ಮರಗೆಡ್ಡೆಸೊಪ್ಪು** (ನಾ). ಔಷಧವಾಗಿ ಬಳಸುವ ಒಂದು ಬಗೆಯ ಸೊಪ್ಪು : ರಕ್ತವಮನಕ್ಕೆ :—ಮರಗೆಡ್ಡೆಸೊಪ್ಪು, ಮರಹತ್ತಿಸೊಪ್ಪು, ಈ ಎರಡನ್ನೂ ಸಮಾನವಾಗಿ ತೆಗೆದುಕೊಂಡು ತುಳಿದು ಒಂದು ಸೊಲ್ಲಗೆ ರಸವ ತೆಗೆದುಕೊಂಡು ಶೋಧಿಸಿಕೊಂಡು ಆ ರಸವನ್ನು ಕುಡಿಸುವುದು (ಐವ್ಯಶಿ. ೬೦). [ಮರಗೆಡ್ಡೆ ? + ಸೊಪ್ಪು$_2$]

**ಮರಗೆಣಸು** (ನಾ). ಒಂದು ಬಗೆಯ ಗೆಣಸು ; ಒರಟುಗೆಣಸು : ಕೇರಳೀಯರಿಗೆ ತಾಪಿಯೋಕವೇ ಆಧಾರಾಹಾರವಾಗಿಬಿಟ್ಟಿದೆ . . . ಕನ್ನಡ ಸೀಮೆಯ ಕೆಲವೆಡೆಗಳಲ್ಲಿ ಇದನ್ನು ಮರಗೆಣಸು ಎಂದೂ ಕರೆಯುತ್ತಾರೆ (ಹಸುಹೂ. ೦೩೦). [ಮರ$_1$ + ಗೆಣಸು (< ಗೆಬಸು)]

**ಮರಗೆತ್ತನೆ** (ನಾ). ಮರದಲ್ಲಿ ಕೊರೆಯುವ ಕೆಲಸ : ಗ್ರಂಥವೊಂದು . . . ಕ್ರಿ. ಶ. ೯೫೩ರಲ್ಲಿ ಈ ಮರಗೆತ್ತನೆಯ ಮುದ್ರಣದಿಂದ . . . ಹೊರಬಿದ್ದಿತು (ಮುದ್ರಕ. ೦೦). [ಮರ$_1$ + ಕೆತ್ತನೆ (<ಕೆತ್ತಣ)]

**ಮರಗೆರಸಿ** (ನಾ). ಮರದ ಸುತ್ತ ಒಂದು ಎಲ್ಲೆಯನ್ನು ಕಟ್ಟಿಕೊಂಡು ಮರದ ಮೇಲೆ ಹತ್ತಿ ಇಳಿದು ಆಡುವ ಆಟ (?) : ಅಂತಾ ಕೂಸುಗಳ್ ಕೂಸಾಟವಾಡುತ್ತಿರ್ದೊಂದುದಿವಸಂ ಮರಗೆರಸಿಯಾಡಲೆಂದು . . . ಆಲದ ಮರದ ಮೊದಲ್ಗೆ ವಂದು (ಕುಂಜಕಾ. ೨-೩೦ ಪ) ; ಮರಗೆರಸಿ ಕುಳಿಲ್ವೆಂಡು ಬಟ್ಟು ತಿಱಿಕಲ್ಲಟ್ಟುಂಗರೆ ಹೊಣೆಗುಂಡೆಂಬಿವನಾ ಮುರಹರನಲ್ಲಲ್ಲಿಗಾಡುತುಂ ಬರಲ್ (ಜಗು. ೪–೪೪). [ಮರ$_1$ + ಕೆರಸಿ]

**ಮರಗೆಲಸ** (ನಾ). ಮರದಿಂದ ಸಾಮಾನುಗಳನ್ನು ತಯಾರಿಸುವಿಕೆ ; ಬಡಗಿಯ ಕೆಲಸ : "ಮರಗೆಲಸ ; ಬಡಗಿಯ ಉದ್ಯೋಗ" (Carpentry. ೩೦೪೩); ಮರಗೆಲಸಕ್ಕೆ ಅಸದೃಶವಾಗಿ ಒಗ್ಗಿ ಹೋಗಿರುವ ಚೌಬೀನೆ ತೇಗ (ಹಸುಹೂ. ೨೪೦). [ಮರ$_1$ + ಕೆಲಸ]

**ಮರಗೇಡಿ** (ನಾ). ಮರೆವು ಸ್ವಭಾವದ ವ್ಯಕ್ತಿ : ಬಹಳ ಮರಗೇಡಿ ನೀನು (ರಸ್ತ್ರ. ೬೬). [< ಮರವು + ಕೇಡು + – ಇ$_3$]

**ಮರಗೈ** 'ಮರಗಯ್' ನೋ.

**ಮರಗೊಂಬು** (ನಾ). ೧. ಮರದ ಕೊಂಬೆ,—ರೆಂಬೆ : ಮರಗೊಂಬ ನೊತ್ತಿಸೊಳವುಂಕಿದ ಸಲ್ಲದ ಮುಷ್ಟಿ (ಶರ್ಗಪು. ೬-೩೦) ; ಮರಗೊಂಬಿನಿಂ ಬಡಿಯಲಡಗುವರ್ ನಡುಗುವರ್ (ಕೆಂಪು. ೨೬-೨೬) ; ಮರಗೊಂಬಂ ಮುಱಿದಾಂತು ನೀಳ್ದ ಕರದಿಂ (ಕರಕಂ. ೩-೫೬). ೨. = ಮರಕೋತಿ : ವಿನೋದರಸದ ಬಸದಿಂ ಮರಗೊಂಬನಾಡುತಿರ್ದ ವೀರಜಿನಕುಮಾರನಂ . . . ಕಂಡು (ಶರ್ಗಪು. ೦೪-೬೬ ಪ); ವಿಶಾಲ ಆಲದ ಮರದೊಳು ಮರಗೊಂಬನಾಡುತ ಲೀಲೆಯೊಳಿರ್ದನು (ಶರ್ಗಕ. ೦೦-೧೨). [ಮರ$_1$ + ಕೊಂಬು$_1$]

**ಮರಗೊನೆ** (ನಾ). = ಮರಗೊಂಬು ೧ : ಮುಂದೆ ಬರಬರಲೊಂದು ತರುವಿನ ಕೆಳಗೆ ರಾಜರ ವೃಂದ ಕುಳ್ಳಿರ್ದ ಛಂದವನು ತಾನಱಿದು ಮರಗೊನೆಯ ನರನು ಕಂಡನು (ಸಂಶಕ. ೦೪-೦೦). [ಮರ$_1$ + ಕೊನೆ$_2$]

**ಮರಗೊರಲೆ** 'ಮರಗೊಳಲೆ' ನೋ.

**ಮರಗೊಳಲೆ**, ಮರಗೊರಲೆ (ನಾ). ಒಂದು ಬಗೆಯ ಪಕ್ಷಿ : ಹರಡೆ ಗೀಜಗ ಮರಗೊಳ[ಜಾಕಾಂ. ದ]ಲೆ ಕಾಬುರಲೆ ಲಾವುಗೆ ಗೌಜು ಪಾರಿವ . . .

ಮೊದಲಾದಖಿಳಖಗಕುಲ ಬಿದ್ದುದುರಿಯೊಳಗೆ (ಕುಮ್ಯಾ. ೨೦-೩೩) ; ವಲಿಯು ಭಾರದ್ವಾಜ . . . ಶಿಖಿ ಮರ[ರ]ಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡೆಂದ (ತೊರರಾ. ३-೦-३३). **ಮರಗೊರಲೆ** : ಸಾಳುವಂ ಮರಗೊರಲೆ . . . ಚಲಿವಿಲಿಗ ಕಂಬುಂತ . . . ಕಬ್ಬಕ್ಕಿಗಳು ಮುಂತಾದ ಪ್ರಾಣಿಗಳನುರಿ ದಹಿಸಿತು (ತುರಂಗ. ೦೬-೩೭).

[ ಮರ$_1$ + ಕೊರಲೆ$_2$ ]

**ಮರಗೋಡು** (ನಾ). ೧.=ಮರಗೊಂಬು ೧ : ತೊಲಗೆ ಬಿಸಿಲ್ ನೆಟಲ್ಗೆ ತಲೆಯುಂ ಮರಗೋಡೆಲೆ ಕೂಡೆ ಕುತ್ತಿ ಕಟ್ಟಲೆ ಕವಿದಂದದಿಂ ಕವಿಯೆ (೦೯ಪಾವ. ೬-೬೪) ; ತನಿಗಂಪನೀಯದಿವೆ ಮರಗೋಡಿನೊಳ್ ಮಲರ್ (ಶ್ರೀಣಾಪು.೩೬-೨೦೭). ೨. ಕುದುರೆಯ ಜೀನಿನ ಮುಂಭಾಗದಲ್ಲಿ, ಮರದಿಂದ ಮಾಡಿದ ಕೊಂಬಿನಾಕಾರದ, ಎತ್ತರಿಸಿರುವ ಭಾಗ: ಚಕ್ರವರ್ತಿ ಮಿಥ್ಯಾತ್ವಮೆಂಬ ಕುದುರೆಯನೇಱಿ ರಾಗದ್ವೇಷಮೆಂಬ ಕೀಲಿಂ ಪಿಡಿದು ಬಹುಕಾಂಕ್ಷೆಯೆಂಬ ಕವಣೆಯಂ ಮೆಟ್ಟಿ ಸದ್ಧರ್ಮದ್ವೇಷಮೆಂಬ ಮರಗೋಡಂ ಮಲಗಿ (ಧರ್ಮಾಮೃ. ೦೦-೬೩ ಅಖ) ; ಲಾಯದಲಿ ಲಂಬಿಸಿದ ಪೊಲು ವಾನಾಯುಜದ ಸಾಲೆಸೆದುದೊಱಗಿದ ರಾಯರಾವ್ತರ ಮಣಿಮಕುಟ ಮರಗೋಡನೋಲೈಸೆ (ಕುಮ್ಯಾದ್ರೋ. ೦೬-೯) ; ಹೊನ್ನ ಮರಗೋಡುಗಳ ಮೇಲಡಗೆಡದು ನಿದ್ರಾಮುಗುದರುದರು ರಾವುತರು ತೂಕಡಿಸಿದವು ತುರಗ (ಕುಮ್ಯಾವಿ. ೬-೯೪). [ಮರ$_1$ + ಕೋಡು$_5$]

**ಮರಚಟ್ಟಿ** (ನಾ). ಬಿದಿರಿನಿಂದ ಹೆಣೆದ ತಟ್ಟೆ : ಸಿಬ್ಬಲ ಮರಚಟ್ಟಿಗಳನ್ನು ಚರಿಗೆಯ ಬಾಯಿಗೆ ಅನಿಸಿ ಒತ್ತಿ, ಅನ್ನ ಬಸಿಯಲು (ಮರಪು. ೩೦೦).

[ಮರ$_1$ + ಚಟ್ಟಿ$_1$]

**ಮರಚಪ್ಪರಿಕೆ** (ನಾ). ಒಂದು ಬಗೆಯ ಸಸ್ಯ : (ವೈಕಿಗ. ೬೯-೦೨೯೩).

[ಮರ$_1$ + ಚಪ್ಪರಿಕೆ$_0$]

**ಮರಚಲು** 'ಮಱುಚಲು' ನೋ.

**ಮರಜ** (ನಾ). ಒಬ್ಬಾತನ ಹೆಸರು : ದುಗ್ಗಬ್ಬೆ ತುಮ್ಬು ಮಾಡಿಸಿದಾಳ್ ಮರಜನ್ ಬೆಸಗೆಯ್ದು (ಎಕ. X (೩), ಮುಳಬಾ. ೩೦೬-೭ ; ೨ನೆಯ ೫೪). [?]

**ಮರಡಿ** 'ಮೊರಡು'$_2$ ನೋ.

**ಮರಣ** (ನಾ). ೧. ಜೀವಹೋಗುವಿಕೆ ; ಸಾವು ; ಮೃತ್ಯು: ಮರಣದ ಜನ್ಮದ ನಿಗಳಂ ನಿರಾಕುಳಂ ಪತ್ತುವಿಡುವಿನಂ (ಅದಿಪು. ೦೦-೫೯) ; ಹಾಳು ಗೆಟ್ಟೋಡುವ ಆಳು ನಾನಲ್ಲಯ್ಯಾ ಕೇಳು . . . ಮರಣವೆ ಮಹಾನವಮಿ (ಬಸವ. ೬೯೮) ; ಮರಣವಾಯಿತು ಮಾವ ಮಾರೀಚಂಗೆ (ಕೌಶಿರಾ. ೦೯-೨೨); ಮಾನವನಿಗೆ ಮರಣ ತಪ್ಪಿದ್ದಲ್ಲ (ನಸಂ. ೩೬). ೨. ವತ್ಸನಾಭಿಯೆಂಬ (ಉಗ್ರವಾದ) ಒಂದು ಬಗೆಯ ವಿಷ : "ಮರಣಂ — ವತ್ಸನಾಭ" (೬ತಂ. ೦೦೩). ೩. [ಕಾಮಶಾ] ವಿರಹದ ಹತ್ತುಅವಸ್ಥೆಗಳಲ್ಲಿ ಕೊನೆಯದು : ಅಭಿಲಾಷೆ ಚಿಂತೆ ಸಂಸ್ಮೃತಿ ಗುಣಗುಣನುತಿ ಸಂತಾಪನ ಕ್ರಿಯಾದ್ವೇಷ ವಿಕಳ ಮೌನ ಮೂರ್ಛೆ ಮರಣಮೆಂಬ ದಶಾವಸ್ಥಾದಿ ವಿಚಾರಪರಂ (ವಿವೇಕ. ೦೯೪). ೪. [ಕಾವ್ಯಮೀ] ಮೂವತ್ತುಮೂರು ಸಂಚಾರೀಭಾವಗಳಲ್ಲಿ ಒಂದು : ಲಜ್ಜೆ ಆವೇಗ ಶಂಕೆ ಮರಣ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ ಪರಿವರ್ಧಿಸಿ (ವಿವೇಕ. ೨೨೭). [ಸಂ.]

**ಮರಣಂಗೆಯ್** (ಕ್ರಿ). ಸಾಯು ; ಅವಸಾನಹೊಂದು : ಜೀಯ ನಿಮಗಂ ನಿನ್ನೆ ನಮಿಸಿದ ತೋಯಜಾನನೆ ಇಂದು ಮರಣಂಗೆಯ್ದಳು (ಬಸವ. ೩೨-೯೨). [ ಮರಣ +-ಕೆಯ್$_1$ ]

**ಮರಣಕಾಲ** (ನಾ). ಸಾಯುವ ಸಮಯ ; ಜೀವ ಹೋಗುವ ಹೊತ್ತು : ಕಂದರ್ಪನಾಶ್ರಯ ವಸಂತಕಾಲಕ್ಕೆ ಗೋವಿಂದನಾಶ್ರಯವು ಮರಣಕಾಲದೊಳು (ತೊರಂ. ೩೩೩-೦). [ಸಂ.]

**ಮರಣಗಾಲ** (ನಾ).=ಮರಣಕಾಲ : ಕೇಡುಗಾಲಕ್ಕೆ ಬುದ್ಧಿ ಇಲ್ಲ. ಮರಣಗಾಲಕ್ಕೆ ಮದ್ದು ಇಲ್ಲ (ಗಾದೆ). [ ಮರಣ + ಕಾಲ ]

**ಮರಣದಂಡನೆ** (ನಾ). ಪ್ರಾಣ ತೆಗೆಯುವ ಶಿಕ್ಷೆ ; ಗಲ್ಲು : ಭಗತ್‌ಸಿಂಗ್ ಅವರಿಗೆ ಮರಣದಂಡನೆ ನೀಡಲಾಯಿತು (ಅತ್ಮಾಕ. ೦೯೯); ಐಗುಪ್ತೇಯನು ಹಿಂತಿರುಗದಿದ್ದರೆ ಮರಣದಂಡನೆಯಾಗುವುದು (ಮುಡಸ. ೪೭).

[ಸಂ. ಮರಣದಂಡನ]

**ಮರಣದೀಕ್ಷಿತ** (ನಾ). ಜೀವ ನೀಗಿಕೊಳ್ಳಲು ವ್ರತ ಆಚರಿಸುವವನು ; ಸಾಯಲು ಸಿದ್ಧನಾದವನು : ಅರಸ ನೀ ಪ್ರಾಯೋಪವೇಶದಿ ಮರಣದೀಕ್ಷಿತನಾದೆ ಗಡ (ಕುಮ್ಯಾ. ೨೦-೬೪). [ಸಂ.]

**ಮರಣದೇವತೆ** (ನಾ). ಸಾವಿನ ಅಧಿದೇವತೆ ; ಮೃತ್ಯುದೇವತೆ : ಮಿತ್ತು ಮಾರಿಯು ಮರಣದೇವತೆಯೆತ್ತಲಡಗಿದೆ (ಕೌಶಿರಾ. ೩೭-೦೦).

[ಸಂ. ಮರಣದೇವತಾ]

**ಮರಣಧರ್ಮ** (ನಾ). ಸಾಯುವುದು ಸ್ವಭಾವವಾಗಿರುವುದು : ಜೀವಾತ್ಮನು . . . ತಾನು ಮಾತ್ರ ಮರಣಧರ್ಮವಿಲ್ಲದೆ . . . ತೃಪ್ತನಾಗಿ ಸಂಚರಿಸುತ್ತಾನೆ (ಮುಕ್ಮಾರ. ೨೬೩). [ಸಂ. ಮರಣಧರ್ಮನ್]

**ಮರಣಮೂಢ** (ನಾ). ಸಾಯುವ ಕಾಲ ಸಮೀಪಿಸಿದುದರಿಂದ ಬುದ್ಧಿಯು ಮಂಕಾದ ವ್ಯಕ್ತಿ : ಮನದಿ ವಚನದಿ ತಪ್ಪು ಮಾಡಿದ್ದ ರೆನ್ನನ್ನು ವನಿತೆ, ಕುವರಿಯು, ಮಗಳು, ಮರಣಮೂಢಳು ಎಂದು ಮನದಿ ತಿಳಿಯುತ ಮನ್ನಿಸುವುದು (ಕೃಪ್ಮಾಕು. ೬-೦೭). [ಸಂ.]

**ಮರಣಪಡು** (ಕ್ರಿ). ಸಾಯು ; ಗತಿಸು : ಮರಣಪಟ್ಟರು ಮಾರಿಗಿಪ್ಪರು ಧರ್ಮಭ್ರಷ್ಟರು (ಕೌಶಿರಾ. ೦೨-೦೩). [ಮರಣ + ಪಡು$_1$]

**ಮರಣಪಡೆ** (ಕ್ರಿ). = ಮರಣಪಡು : ಮರಣಪಡೆದಂಗೆ ಬಲಿಗೊಟ್ಟ ಕೆಂಗೂಳು ಹರಹಿರೆ ಕೆಂಪಿನ ಹೂವು . . . ತರುಣಿ ಕಂಡಳು ಸುಡುಗಾಡ (ಜೀವಂಗಾಂ. ೬-೩). [ ಮರಣ + ಪಡೆ$_1$ ]

**ಮರಣವಾರ್ತೆ** (ನಾ). ಸಾವಿನ ಸುದ್ದಿ ; ನಿಧನದ ವರ್ತಮಾನ : ಕೋಲ ಗುರುವಿನ ಮರಣವಾರ್ತಾಕಾಲಸರ್ಪನ ತಂದು ಸಂಜಯ ಹೇಳಿಗೆಯ ನೀಡಾಡಿದನು ಧೃತರಾಷ್ಟ್ರನಿದಿರಿನಲಿ (ಕುಮ್ಯಾಕ. ೦-೦).

[ಸಂ. ಮರಣವಾರ್ತಾ]

**ಮರಣಶಾಸನ** (ನಾ). ೧. ಸಾಯಿಸಲು ನೀಡುವ ಅಪ್ಪಣೆ ; ಕೊಲ್ಲಲು ಮಾಡುವ ಆಜ್ಞೆ : ನೀವು ಅವನ ಮರಣಶಾಸನವನ್ನೇ ಬರೆಯತೊಡಗಿದ್ದೀರಿ (ರಂಗರೊ. ೨೦೦); ಮನಸ್ಸಿನಲ್ಲೇ ಅವನ ಮರಣಶಾಸನವನ್ನು ಬರೆದೆ (ಏಕಾಹೊ. ೩೩). ೨. ಉಯಿಲು ; ಮೃತ್ಯುಪತ್ರ. [ಸಂ.]

**ಮರಣಸಂಕಟ** (ನಾ). ಸಾಯುವ ಕಾಲದಲ್ಲಿ ಉಂಟಾಗುವ ತಳಮಳ,— ವೇದನೆ : ಅಯ್ಯಾ ಧರ್ಮಾತ್ಮನೇ ನನಗೆ ಕ್ಷುತ್ತಿನಿಂದ ಮರಣಸಂಕಟ ಉಂಟಾಗಿದೆ (ನೀತಿಶಂ. X, ೦೦). [ಸಂ.]

**ಮರಣಹೊಂದು** (ಕ್ರಿ). = ಮರಣಪಡು : ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಅನೇಕ ಜನ, ಅದು ಲಭ್ಯವಾಗುವ ಮುಂಚೆಯೇ ಮರಣಹೊಂದಿದರು (ರೂಢಿ). [ಮರಣ + ಹೊಂದು$_1$ (< ಪೊರ್ದು) ]

**ಮರಣೋತ್ತರ** (ಗು). ಸಾವಿನ ನಂತರದ ; ಸತ್ತ ಮೇಲಿನ : ಮೃತ್ಯು, ಮರಣೋತ್ತರ ಜೀವನ ಇತ್ಯಾದಿ ವಿಷಯಗಳೂ 'ಗೀತಾಂಜಲಿ'ಯಲ್ಲಿ ಬಂದಿವೆ (ಕೃಶಂಠ. ೦೦೦). [ಸಂ.]

**ಮರಣೋತ್ತರಪರೀಕ್ಷೆ** (ನಾ). ಸತ್ತ ನಂತರ ಮಾಡುವ (ವೈದ್ಯಕೀಯ) ತಪಾಸಣೆ ; ಶವಪರೀಕ್ಷೆ : ಮರಣೋತ್ತರಪರೀಕ್ಷೆಯಲ್ಲಿ ಅದು ಕೊಲೆಯೆಂಬುದು ಸಾಬೀತಾಯಿತು (ರೂಢಿ). [ಸಂ. ಮರಣೋತ್ತರಪರೀಕ್ಷಾ]

**ಮರತಾಬೆ** (ನಾ). ಅಂತಸ್ತು ; ಸ್ಥಾನ ; ಪದವಿ : ಆ ಪುತ್ರರ ಮರತಾಬೆಗೆ ಸರಿಯಾಗಿ ಉತ್ತರದರಬಾಜೆ ಪೇಷ್ ಬತೇರಿಯ ಮೇಲೆ ೨೧

ತೋಪುಗಳನ್ನೂ ರಾಜಾಂಗಕ್ಕೆ ತಕ್ಕ ಮರ್ಯಾದೆಗಳನ್ನೂ ನಡೆಸಿದ ನಂತರ (ಕುಹಾಸಂ. II, ೧೨೦). [← ಅರ. ಮರಾತಿಬ್; ಮರಾ. ಮರಾತಬ್]

**ಮರತುಗುರುವಣಿ** (ನಾ). ಒಂದು ಬಗೆಯ ಸಸ್ಯ : ಗುರುಮಣಿ, ಮರತ್ತುಗುರುವಣಿ (ಪ್ಸ್ಯಶಿಗ. ೩೩–೬೩೨). [ ? + ಗುರುವಣಿ]

**ಮರತುತ್ತಿ** (ನಾ). ಒಂದು ಬಗೆಯ ಸಸ್ಯ : ಸಣ್ಣಸೊಪ್ಪು, ತೊರಣಿ, ಮರತುತ್ತಿ (ಪ್ಸ್ಯಶಿಗ. ೯೩–೬೬೦). [ಮರ$_1$ + ತುತ್ತಿ$_1$]

**ಮರತುಳಸಿ** (ನಾ). ಒಂದು ಬಗೆಯ ತುಳಸಿ: ಹೆದ್ದುಂಬೆಗಿಡ, ಮರತುಳಸಿ (ಪ್ಸ್ಯಶಿಗ. ೩೭–೦೦೯೯). [ಮರ$_1$ + ತುಳಸಿ (=ತುಲಸಿ)]

**ಮರದಣಬೆ** (ನಾ). ಒಂದು ಬಗೆಯ ಅಣಬೆ ; ಮರಗಳ ಮೇಲೆ ಬೆಳೆಯುವ ಅಣಬೆ : (*). [< ಮರ$_1$ + ಅಣಬೆ (<ಅಳಂಬೆ)]

**ಮರದರಸಿನ** ' ಮರದರಿಸಿನ ' ನೋ.

**ಮರದರಿಸಿನ**, ಮರದರಸಿನ (ನಾ). ಒಂದು ಬಗೆಯ ಅರಿಸಿನ : " ಪೀತದ್ರುಃ, ಕಾಲೇಯಃ, ಹರಿದ್ರಕಃ . . . ಪರ್ಜನೀ – ಈ ೭ ಮರದರಿಸಿನ " (ಅಭಿಧಾ. ೦೦೦) ; ನೆಲಗುಳ್ಳ, ಮರದರಿಸಿನ, ಕರ್ಪೂರ ಶುಂಠಿ . . . ಮುಳ್ಳುಕೊಗ್ಗೀಬೇರು ಇವಿಷ್ಟನೂ . . . ಕಷಾಯ ಕಾಸಿ . . . ಕುಡಿಸಲು ತ್ರಿದೋಷದಿಂದುಂಟಾದ ಸ್ವರಭಂಗ ಶಮನ (ಕೃರ್ಕಶಾ. I. ೦೬೬). **ಮರದರಸಿನ** : " ಮರದರಸಿನಂ ದ್ರಾರ್ವೀಸಾಹ್ವಂ ಪಚಂಪಚಿ ದಾರುಕಂ " (ಕಸ್ತುಕಸ. ೩೭–೨೩). [<ಮರ$_1$ + ಅರಿಸಿನ]

**ಮರದಾನಿ** (ನಾ). ಗಂಡಸರ ಗುಂಪು.–ಸಮೂಹ : ಒಳಗೆ ಹೋದರೆ ರಾಣಿವಾಸದವರ ಜನಾನಿ, ಹೊರಗೆ ಬಂದರೆ ಶಿವನ್ನಯ್ಯನವರ ಮರದಾನಿ (ಕುಗಹ. ೩೯). [← ಹಿಂ. ಮರ್ದಾನಾ = ಪುರುಷರಿಗೆ ಸಂಬಂಧಿಸಿದ, ವೀರೋಚಿತವಾದ; ಮರಾ. ಮರ್ದಾಣೀ, ಮರ್ದಾನೀ = ಪುರುಷರಿಗೆ ಸಂಬಂಧಿಸಿದ]

**ಮರದಾವರೆ** (ನಾ). ಒಂದು ಬಗೆಯ ತಾವರೆ: ಬೆಟ್ಟದಾವರೆ : " ಮರದಾವರೆಯುಮೆಂದು ಕೊಸಗೆಂದು ಬೆಟ್ಟದಾವರೆ " (ಕಾಸ್ಯಕ. ೦೯). [ ಮರ$_1$ + ತಾವರೆ ( <ತಾಮರೆ) ]

**ಮರದಿಗುಡು** (ನಾ). ಮರದ ತೊಗಟೆ.–ಸಿಪ್ಪೆ : ಇದೆ ವನಮಹಿಷನುದ್ದಿ ಕೊಂಡ ಮರದಿಗುಡು (ಕೃಬಿಶಾ. ೨೬–೯೯). [ ಮರ$_1$ + ತಿಗುಡು$_1$ ]

**ಮರದುದಿ** (ನಾ). ಮರದ ತುದಿ.– ಕೊನೆ : ಪೆಳವಂ ಮರದುದಿಯ ಮಹಾಫಳವಂ ಪಿಂಗೆ ಬಯಸುವಂತೆ (ಕಂಶಂ. ೨–೮೭). [ಮರ$_1$ + ತುದಿ]

**ಮರದುಱುಗಲ್** (ನಾ). ಮರಗಳ ಸಮೂಹ ; ತೋಪು : ಪರ್ವತದ ಮೇಲೆ ಕಱಂಗಿ ಕಟ್ಟಲಿಸಿದ ಮರುದುಱುಗಲ ನಡುವೆ (ಸಂಶಶಾ. ೬–೦೩ ವ) ; ಕೊಸಗಿನ ಮರದುಱುಗಲರಲ್ದೆಸೆವಂತೆಸೆದಿರ್ಪೆಡೆಯಲ್ಲಿ ಬಜ್ಜರಮಸುರು (ಜಗಂ. ೯–೦೦೭) ; ಒತ್ತರಿಸಿ ಬೆಳೆದ ಮರದುಱುಗಲ್ಗಿರದೆಱಗಿ ಮುಱಿವ ಕರಿಕರಕಂಬಿ (ಶಾಂತೀ. ೬–೨೯ ವ). [ಮರ$_1$ + ತುಱುಗಲ್ (<ತುಱುಂಗಲ್)]

**ಮರದೆ** (ನಾ). ಗಂಡಸು ; ಪುರುಷ : ನಾಲ್ಕುಜಾತಿ ಮುಸಲ್ಮಾನರ ಮರದೆ ಅದ್ಮಿ ಶಿಪಾಯಿಗಳ ಬೇರು ಕೊಡಗಿನ ಸೀಮೆವಳಗೆ ನೆಟ್ಟು (ರಾಜೇಂದ್ರ. ೮೩೦). [ ← ಪಾರ. ಮರ್ದ್; ಹಿಂ. ಮರದ್ ಮರ್ದ್]

**ಮರದೇರಣ** (ನಾ). ಒಂದು ಬಗೆಯ ಸಸ್ಯ : "ಬಧಿರಃ—ಮರದೇರಣ, ಭೂತೃಣಭೇದ" (ಬಿಶಿಧಿ. ೦೦೩) ; ಮರದೇರಣಸೊಪ್ಪಿನ ರಸ, ಬೋಳ ತರದ ಸೊಪ್ಪಿನ ರಸ (ಸಕಚ್ಕ. ೨೦೭). [ಮರ$_1$ + ತೇರಣ$_1$]

**ಮರನ** (ನಾ). ಒಬ್ಬಾತನ ಹೆಸರು (?) : ಮರನಾನು ಪೊಕುಂಯಾನು ಕೊಡಂಗಿಯಾನು ಪೊಱಗಾಗಲೆ ಸಲೆವ್ಹಗೆಯ ಭಾಗ ಕಂಮರ ಮಸನ್ತಕುವರ (ಎಕ. VIII, ಸೊರಬ. ೩೭೦–೨೯; ೬೯೨). [ ? ]

**ಮರನಾಯಿ** (ನಾ). ತನ್ನನ್ನು ಒರಗಿದವರ ರಕ್ತವನ್ನು ಹೀರುವುದೆಂದು ನಂಬಲಾದ ಒಂದು ಬಗೆಯ ಮರ; ಇದು ಮಾಂಸಾಹಾರಿ ಸಸ್ಯವಿರಬಹುದು : ' ಒರಗಿಕೊಂಡ ಕೂಡಲೇ ಪ್ರಾಣಹೀರುವ ಮರನಾಯಿ ' ಎಂಬ ಮರಗಳು ಇರುತ್ತವೆಯಂತೆ ಕಾಡಿನಲ್ಲಿ (ಬೆಳುಪು. ೨೨೬). [ಮರ$_1$ + ನಾಯಿ$_1$]

**ಮರನೆಲ್** (ನಾ). ಒಂದು ಬಗೆಯ ಬತ್ತ ; ದಪ್ಪನೆಲ್ಲು : ಬೆಳದಪ್ಪ ನೆಲ್ ಬರಲುಮಾಧೀಶಂಗೆ ಅಲ್ಲಿ ಬಂದೋಗರದ ನೆಲ್ಲೆಲ್ಲವೀಶಂಗೆ ಮರನೆಲ್ಕನೀಯಿಸದ ನೆಲ್ ಬಜಲ್ ನೆಲ್ಬರಲು ತರುಣಿಗಂ ತನಗಂ ಪ್ರಸಾದಸುಖವಾಗಿರಲು (ಅಂಕ. ರೇ. ೦೬೨–೦೩). [ಮರ$_1$ + ನೆಲ್]

**ಮರನೆಲ್ಲಿ** (ನಾ). ಒಂದು ಬಗೆಯ ನೆಲ್ಲಿ : ಅಲ್ಲಿಂ ಪಡುವ ಮರನೆಲ್ಲಿಯ ಗುಂಡು ಅಲ್ಲಿಂ ಪಡುವ ಮೆಟ್ಟಬೆ . . . ಅಲ್ಲಿಂ ಮೂಡಲ್ಕೆಂಬರಿಯ ಹಳ್ಳಮುಂ ಸೀಮೆ ಕೂಡಿತ್ತು (ಎಕ. II, ೩೨೭–೭೭; 1181). [ಮರ$_1$ + ನೆಲ್ಲಿ]

**ಮರಪಟ್ಟಡಿ** (ನಾ). ಬಡಗಿಯು ಮರಗೆಲಸಮಾಡಲು ಅಡಿಯಲ್ಲಿ ಇಟ್ಟುಕೊಳ್ಳಲು ಬಳಸುವ ಮರದ ಹಲಗೆ : "ಉದ್ಘನಃ . . . ಬಡಗಿಯವನು ಮರಕೆಲಸ ಮಾಡುವದಕ್ಕಾಗಿ ತನ್ನ ಮುಂದೆಯಿಟ್ಟುಕೊಂಡಿರುವ ಮರಪಟ್ಟಡಿಯೆಂಬ ಅಡಿತುಂಡು" (ಸಿದ್ಧಾಂತಿ. ೩೬೭). ' ಪಟ್ಟಡಿಮರ ' ಪರಾ. [ಮರ$_1$ + ಪಟ್ಟಡ$_1$]

**ಮರಪ್ಪ** (ನಾ). ಒಬ್ಬಾತನ ಹೆಸರು : ಕೆಱಗಾಲೆ ಮದವ ಮುತ್ತರಸರ ಮರಪ್ಪನ್ ಪರಮಿಳ್ಳಿ ಎಱಿತು ವೀರಸ್ವರ್ಗಂ ಪೊಕ್ಕಂ (ಎಕ. XII, ಕುಣಿಗ. ೯೭–4; 750). [ಮರ$_1$ + ಅಪ್ಪ$_1$]

**ಮರಫ, ಮರ್ಫ** (ನಾ). ಒಂದು ಬಗೆಯ ಚರ್ಮವಾದ್ಯ ; ಡೋಲು : ಕೊಂಬು, ತಮಟೆ, ತಾಸಾ, ಮರಫ, ತಾಸಾ ಓಲಗದವರು (ಚಾಮುರಾ. ೬೯). ಮರ್ಫ : ಕಹಳೆ, ಭೂರ್ಗ, ತುತೂರಿ, ನೌಬತು, ತಾಸಾ, ಮರ್ಫ, ಬಾಜಾ ಭಜಂತ್ರಿ (ಗುರುದ. ೦೦). [ ← ಪಾರ. ಮರಾ. ಮರ್ಫ]

**ಮರಬಾಳೆ** 'ಮರಪಾಟಿ[3]' ನೋ.

**ಮರಬಿಲ್ಲು** 'ಮರವಿಲ್' ನೋ.

**ಮರಮರ** (ನಾ). ಒಂದು ಅನುಕರಣ ಶಬ್ದ: ಅವಸರಅವಸರವಾಗಿ ಮುಂದೆ ನಡೆದನು. ಆದರೆ ಆತನ ಜೀವ ಮರಮರ ಅಂದಿತು (ಕಪಪ. ೩).

**ಮರಮರನೆ** (ಅ). ಒಂದು ಅನುಕರಣಾವ್ಯಯ : ಬಾಯಮುದು ಭರದಿಂದ ಮುರಿಯುತಿರೆ ಮರಮರನೆ ಮರುಗುತ್ತೆ (ಕುರಕ್ಷ. ೨೯–೦೦) ; ಇರುವ ಎರಡು ಹೊಲಗಳಲ್ಲಿ ಒಂದನ್ನು ಕೊಟ್ಟು ಮರಮರನೆ ಮರುಗುತ್ತ ಮನೆಗೆ ನಡೆದಳು ಮಹುಮತಿ (ಕುಕ್ಕಬ. ೯). [ಮರಮರ + — ಅನೆ$_1$]

**ಮರಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ : ಮರಮಲ್ಲಿಗೆ ಅಚ್ಚು ಸಣ್ಣಮಲ್ಲಿಗೆ ಮೊದಲಾದವು ... ಕೊಂಬೆಗಳಂ ನೆಟ್ಟಾಗ್ಯೂ ಹುಟ್ಟುವುವು (ಶಾಗಂ. ೯೨೩–೦೨). [ಮರ$_1$ + ಮಲ್ಲಿಗೆ]

**ಮರಮಸಕ** (ನಾ). ಅತ್ಯಧಿಕವಾದ ಆವೇಶ. — ರಭಸ : ಮದವಂ ಪೊಕ್ಕುಂ ಮರಮಸಕದಿಂ ಮರವಾಯ್ದು ಮರದುಱುಗಲಂ ಕಿಟ್ಟೀಡಾಡುವಲ್ಲಿ (ಅರ್ಗೀಕೀ. ೩–೦೦೬ ವ). [ಮರ$_1$ + ಮಸಕ$_1$]

**ಮರಮಳೆ** (ನಾ). ದೊಡ್ಡಮಳೆ; ಭಾರಿಮಳೆ : ದಿವಿಜಪತಿ ಮರಮಳೆಯಂ ಕಱೆಯುತ್ತಿರೆ (ತ್ರಿಶೂಶ. ೦೦–೨೭) ; ಒಂದು ಪಕ್ಷದಲ್ಲಿ ಮರಮಳೆಯಾಗಿ ಪುನಃ ಜಡಿಮಳೆಯಾದರೆ ಸ್ವಲ್ಪ ಹಸಿಯಾಗುತ್ತದೆ (ಕೃಶಾಸ್ತ್ರ. ೩೭). [ಮರ$_1$ + ಮಳೆ (< ಮೞೆ[3])]

**ಮರಮಿಟಲ** (ನಾ). ಒಂದು ಬಗೆಯ ಸಸ್ಯ: ತುಳಸಿಸೊಪ್ಪು, ಮರಮಿಟಲದ ಸೊಪ್ಪು, ಹತ್ತಿಯ ಎಲೆ ಇವಿಷ್ಟನು ಹಸುವಿನ ಹಾಲಿಂದ ಅರೆದು ಕಪ್ಪೆ ಕಚ್ಚಿದ ಗಾಯಕ್ಕೆ ಪೂಸಲು ಕ್ಷಣಾರ್ಧದಲ್ಲಿ ಅದಱ ವಿಷ ಪರಿಹರವಹುದು (ಕೃರ್ಕಶಾ. II. ೨೨೦). [ಮರ$_1$ + ಮಿಟಲ (< ಮಿಟಲಿ)]

**ಮರಮೆಣಸು** (ನಾ). ಒಂದು ಬಗೆಯ ಮೆಣಸು; ದೊಡ್ಡ ಮೆಣಸು : (*). [ಮರ$_1$ + ಮೆಣಸು (< ಮೆಣಸು)]

**ಮರಮೊಗ** (ನಾ). ಮರದಿಂದ ಮಾಡಿದ ಮುಖದ ಆಕಾರ; ಮರದ ಮುಖವಾಡ : ಎನಿತಾನುಂ ತೆಱದ ರೂಪುಗಳಂ ಕೈಕೊಂಡು ಮರಮೊಗಂಗಳನಿಟ್ಟು ಬಂದು ಮುಂದೆ ಆಡಿಯುಂ (ವಡ್ಡಾರಾ. ೦೦೯-೦೪).
[ಮರ$_1$ + ಮೊಗ]

**ಮರಮೊದಲ್** (ನಾ). ೧. ಮರದ ಅಡಿ; ಮರದ ಕೆಳಗಿನ ಪ್ರದೇಶ : ಲಲನೆಯ ಕಪೋಲಮಂ ಪೋಲಲೆಂದು ಕುಸಿದಿಂದ್ರಿಯಂಗಳಂ ಮರಮೊದಲೊಳ್ ನೆಲಸಿ ವನವಾಸದೊಳ್ ನವೆದಲ್ಲಿವಳ್ಳಿಗಳೆಲೆಗಳೆಂತುಮೇಂ ಪೋಲ್ತಪುವೇ ? (ಮಲ್ಲಿಪು. ೩-೭೭); ಮುನೀಂದ್ರಂ ಬೇರೂಱಿದ ಬೀಟಲಂತೆ ಮರಮೊದಲಿರ್ದಂ (ಚಂದ್ರಪು. ೦೦-೦೪). ೨. ಮರದ ಬೊಡ್ಡೆ,–ಕಾಂಡ: ಮಿನುಗುವ ಪೊಸಮಣಿಗಂಬಮೆ ಮರಮೊದಲೆನೆ ಬಲ್ಲೊಲೆಯೆಲ್ಲಂ ಬಹುಶಾಖೆಗಳೆನೆ . . . ಕೃತ್ರಿಮವಿಹಗಾವಳಿ ಶುಕಪಿಕಮೆನಲಾ ಮಂಡಪಮಾತಿ ಶೋಭಿಸಿದುದು (ಶಬರಶಾ. ೪-೩೦). [ಮರ$_1$ + ಮೊದಲ್$_1$]

**ಮರಮ್ಮ** (ನಾ). ಒಬ್ಬಾತನ ಹೆಸರು : ಮಲಗಾಱರ ಕುನ್ದಮಾಸಿಯ ಮಗಂ ಮರಮ್ಮ ಬರೆದ ಲಿಕಿತಂ (ಎಕ. VIII, ಸೊರಬ. ೨೨-೦೦; 800).
[ಮರ$_2$ + ಅಮ್ಮ$_1$]

Δ **ಮರರ್ಚು** 'ಮರಲ್ಚು' ನೋ.

**ಮರಲ್$_1$, ಮರಳ್, ಮರಳು$_1$, ಮಲರ್$_1$** (ಕ್ರಿ). ೧. ಹಿಂದಕ್ಕೆ ಬರು ; ಹಿಂತಿರುಗು : "ಮರಲ್ – ಪರಾಙ್ಮುಖೇ, ಪೃಷ್ಠೇ ಚ" (ಶಮದ); ಪೆರ್ದೆರೆಗಳೆಯ್ದೆ ಕುಲಾದ್ರಿಗಳೊಳ್ ಪಳಂಚಿ ತೂಳ್ದೊಡನೆ ಮರಲ್ದವೋಲ್ ಕೆಡೆಯೆ (ಶಂಕಚಾ. ೬-೯೦) ; ಭೂತಪಿಶಾಚಕೋಟಿಯುಂ ನೆಱೆ ತಣಿಯುಣ್ಡು ಚೆಣ್ಡು ಮರಲ್ದಿನ್ನುಮದಕ್ಕಿಸಲಾಱವೆನ್ದೊಡೆನ್ನನಱಿಯಿರೆ ವಿಕ್ರಮಾಮಂ (ಎಕ. XVI, ಶಕ್ಕನಾ. ೯೬-೨೭; 1170); ಕಿಱುದುದಿನ ಮಿಮರ್ದು ಮರಲ್ದು ಬರಲಕ್ಕುಂ (ರಾಮಾಶ್ವ. ೨೦-೨೪). ೨. ಹೊರಳು; ತಿರುಗು : ದೇಸೆ ವಿಳಾಸಮಂ ಪುದುಂಗೊಳಿಸೆ ಮರಲ್ದು ಕನ್ನೆ ನಡೆನೋಡಿ (ಶಂಕಚಾ. ೪-೪೦) ; ಚಂಚುವಿಂ ಚಲ್ಲೆವೊಯ್ದು ನಖದಿಂ ನಲಿಗೆದಱಿ ಕೋಡಗಱಿಯಿನೀಡಿಱಿದು ಮುಡಿಯಿಂ ಮರಲೆವಾಯ್ದು ತಿಱಿಗದಿರಂ ಮಱಿವಕ್ಕಿಗೆ ನೂಂಕಿ (ಆಪಂಪು. ೭-೯೦ ವ). ೩. ಮನಸೋಲು : ಜನಪ್ರತತಿ ಮರಲ್ದು ನೋಡಿದುದು ನಿಂದು ವಿವಾಹಗೃಹೈಕದೇಶದೊಳ್ (ಚಂದ್ರಪ್ರ. ೭-೭೭) ; ನೆನೆಯುತ್ತುಂ ಪೂಜಿಸುತ್ತುಂ . . . ಮರಲ್ದೀಕ್ಷಿಸುತ್ತುಂ (ರಸ್ಸಾಕ. ೭೩). ೪. ಹಿಮ್ಮೆಟ್ಟು ; ಹಿಂದೆಗೆ : ಮರಲ್ವ ಮೇಲ್ವರಿವ . . . ಬನ್ನಣಮೊಪ್ಪೆ ಪಗಲ್ತು ಕಾದಿದರ್ (ಕಬಿಕಂ. ೪-೭೪) ; ಸುತ್ತಿ ಬರ್ಪ ಮೇಣ್ಮಣಿವ ಮರಲ್ವ ಕೀರ್ತಿಸುವ . . . ಭಕ್ತವೃಂದಮೆಸೆದಿರ್ದುದು (ವೃಷಬ. ೦೭-೪೬). ೫. ಜೋಲು : ಎಱಕೆ ಮರಲ್ದು ಗೋಣ್ಮುರಿದು ಚಂಚುಪುಟಂ ತೆಱೆದಳ್ಳವಾಱೆ ಬಂದೆಱಗುವುವಲ್ಲಿ . . . ಲಂಬಣದ ಮುತ್ತುಗಳಂ ಮುಟೆಗೆತ್ತು ಚಾತಕಂ (ಆಪಂಪು. ೭-೯೩). **ಮರಳ್** : ೧. ನಮ್ಮರಸಂ ಮರಳ್ದಂಬುಕೆಯ್ಗಂ (ಗದಾಯು. ೦-೫೭); ಪ್ರಜಾಪ್ರಶಂಸಾಶೀರ್ವಚನನಿಚಯಂಗಳನಂಗೀಕರಿಸಿ ಮರಳ್ದು ಬರುತಂ (ವರ್ಧಪು. ೩-೪೪ ವ); ವೇದವ್ಯಾಸಮುನಿ ಧರ್ಮಪುತ್ರನಂ ಬೋಧಿಸಿ ಮರಳ್ದನಾ ರಾತ್ರಿಯೊಳ್ (ಕೃಬಾಶಾ. ೨-೪೭). ೪. ಪರಮಜ್ಞಾನಿ ಮರಳ್ವನೇ ಪೆಱರ್ಗೆ (ಪುಷ್ಪಪು.೦೩-೯೦). ೬. (ಗಿರಿಗಿರಿ) ಸುತ್ತು ; ತಿರುಗು : ಎರ್ದೆಗೆಟ್ಟೆನೀಗಳೀ ದಿಟ್ಟಿ ಮರಳ್ದು ನಂದಿದಪುದೆನ್ನುಮನಾಸಱಿದಪ್ಪೆನಿಲ್ಲ (ಕಾದಂಪೂ. ೦೯೭) ; ಮಸ್ತಕಗಳೆರಡುಂ ಕೆಯ್ಯೊಳಂ ಮರಳ್ವನಮೊತ್ತೆ (ಮಹಾಪೀ. ೭-೯೬ ವ); ಮಂದರಗತಿಯಿಂ ಮರಳ್ದು ಸುಟ್ಟಿದಾಡುಗುವಲ್ಲಿ ಮರಾಳಮಂಡಳಂ (ಕಾವ್ಯಸಾ. ೦೦೪). ೭. (ನೀರು ಮೊದಲಾದ ದ್ರವಪದಾರ್ಥಗಳು) ಕುದಿ : ಬಲ್ಬಸಿಲಿಂದೆ ಕಡುಗಾದ ಬಾಣಲಿಯೆಣ್ಣೆಯೊಳೆಬುಧಿ ಹೂಣಿಸಿ ಕುದಿಗೊಂಡು ಮರಳ್ದುದು (ಮೋಹಕ. ೦೯-೪೩). **ಮರಳು$_1$**: ೧. ಅದು ಶುದ್ಧಿಯ ಮಾಡ ಹೋದಾತ ನಿನ್ನೂ ಮರಳನು (ಅಪಕಂ. ೦೮೦-೯೦೦) ; ತುಂಬಿ ತುಳುಕದ ಬಸವ ತಾಗಿ ಮರಳದ ಬಸವ (ಬಸವ. ೯-೯೯) ; ಱೆಕ್ಕೆಯ ಕೊಡಹಿ ಹಾಱೆತುವೊಡನೆ ಮರಳಿತು ಧರೆಗೆ (ಪಳಕ. ೨-೨೦); ತಿಂಗಳಾರಕೆ ಮರಳಿ ಬಹೆನೆಂಬ ಭಾಷೆಯಂ ಭಾವಿಸುತೆ, ಭಾಮಿನಿ . . . ನಡೆದಳ್ ಶಿಬಿರದೆಡೆಗೆ (ಶತ್ರುಂಗ. ೫೭-೦೫೩೩). ೬. ತಲೆ ತಿರುಗಿ ತುಟಿಯೊಣಗಿ ಕಂಗಳ ಬಳೆ ಮರಳಿ ಬಸವಳಿಯೆ (ಕುಮಾರಭ್ರೋ. ೫-೩೩); ಆಲದೆಲೆಯೊಳ್ ಮಲಗಿಯೊಮ್ಮೆ ಮುಳುಗುತ್ತೊಡನೆ ತೇಲುತೊರ್ವನೆಯುಗುಳ್ನೀರನುಗುಳುತ್ತೆ ಕಣ್ಣಾಲಿಗಳ್ ಮರಳಲ್ ಮಹಾವಿಷ್ಣು ಮನದೊಳ್ ಭಯಂಗೊಳುತ (ಜಿಬಿಪು. ೪೭-೩೦). ೭. ಕಾಫಿಗೆ ನೀರು ಮರಳುತ್ತ ಇದೆ (ಮಾರ್ಗದ. ೦೪೯). **ಮಲರ್$_1$** : ೧. "ಮಲರ್ – ಪರಾಙ್ಮುಖೇ (ಹಿಂದಿರುಗು), ಪೃಷ್ಠೇ ಚ" (ಶಮದ).

ಮರಳಿಮರಳಿ, ಮರಮರಳಿ (ದ್ವಿರುಕ್ತಿ) : ನೆರೆದ ಪುಣ್ಯದಿನಪ್ಪ ಸರಸೀಜಜಪ್ರಮುಖರುರುಳ್ವರಾ ನರಕದೊಳು ಮರಳಿಮರಳಿ (ಸಾಪಂಚ. ೩-೪೯) ; ಮರಳಿಮರಳಿ ಯುಧಿಷ್ಠಿರನ ಮನದಿರವ ಭೀಮನ ಖತಿಯ . . . ಅಡಿಗಡಿಗೆ ಕೇಳಿದು ಮಱುಗಿದನು ನೃಪತಿ (ಕುಮಾರಅ. ೧೭-೭); ಹೊರಳಿ ನೋಡು ಮರಮರಳಿ ನೋಡು ಒಳಗರಳಿ ನೋಡು ನೋಟ (ಅರಳು. ೪೦೪-೦೦). **ಮರಳಿ** = ಪುನಃ ; ತಿರುಗಿ : ಆಳ್ದನ ಬೆಸನಂ ಮರಳಿ ಕೇಳದ ಬೆಸಗಲಿಗಳುಮಂ (ಗದಾಯು. ೯-೩೪ ವ) ; ಮರಳಿ ಬಿಜಯಂಗೆಯ್ವುದು ಶರಣಾಶರಣಾರ್ಥಿ (ಮಹಾದೇ. ಬ. ೫೫-೦೪೮); ಮರಳಿ ತನ್ನರಮನೆಗೆ ಬಂದು ರಾಜಾಂಗಣದೊಳ್ನಿಂದು (ಶಾಂತಪು. ೨-೭೬ ವ) ; ಮರಳಿ ನೀ ಯತ್ನಿಸು ಕಾರ್ಯವು ಫಲಿಸುವುದತಿಸುಲಭದೆ ಜಯವಹುದು (ಇಂಶಾಕ. ೦೫೪-೫೯).
[ದೇ.॥ ತಮಿ. ಮಱಙ್ಙು; ಮಲ. ಮಱಿಯು; ಕೊಡ. ಮರಿ; ತೆಲು. ಮರಲು, ಮಳ್ಳು, ಮಱಲು]

**ಮರಲ್$_2$** 'ಮಲರ್$_2$' ನೋ.

**ಮರಲ್$_3$** 'ಮಲರ್$_3$' ನೋ.

**ಮರಲ್ಚು, ಮರರ್ಚು, ಮರಳಿಚು, ಮರಳ್ಚು, ಮಲರ್ಚು** (ಕ್ರಿ). ೧. ಹಿಂತಿರುಗಿಸು; ಹಿಮ್ಮೆಟ್ಟಿಸು: "ಮರಲ್ಚು–ಪರಾಙ್ಮುಖೀಕರಣೇ"(ಶಮದ); ತೊಲಗದ ಜವ್ವನಂ ತವದ ಮೆಚ್ಚು ಮರಲ್ಚುವ ನೋಟಂ (ಆದಿಪು. ೫-೪೨); ಬಿಚ್ಚತಂ ನಲಿವ ನಿಳಿಂಪನಿಕರಮಂ ಮರಲ್ಚಿ (ವರ್ಧಪು. ೦೪-೪೭ ವ) ; ನಿನ್ನ ಮಾತುಗಳ್ ಎನ್ನನ್ ಮನೆಗೆ ಮರಲ್ಚುವುದು ಸ್ಪಷ್ಟಮೇ (ಬಿದ್ಯಶ್ರ. ೨೦-೪೪೪). ೨. ತಿರುಗಿಸು ; ಹೊರಳಿಸು : ಆತ್ಮಚಂಚುವಂ ನಿಡುಗೊರಲಿಂ ಮರಲ್ಚಿ ನಿಜಪಕ್ಷದೊಳೊಯ್ಯನೆ ಸಾರ್ಚಿ (ರಾಜಶೇ. ೭-೯). Δ **ಮರರ್ಚು** : ೧. ಬಿನ್ನಲಗೆಱೆಯ ದನವ ಕೊಣ್ಡು ಹೋಹಲ್ಲಿ ಆರಿಯರೊಡನೆ ಕಾದಿ ಮರರ್ಚಿದನು (ಎಕ. XI, ದಾವಣ. ೦೨೫-೨;?). **ಮರಳಿಚು** : ೧. ಮುರಹರ ರಥವ ಮರಳಿಚು ಮರಳಿಚ್ಚೆ ರಥ ಮುಂಚುವುದೋ ಮನ ಮುಂಚುವುದೊ ಎಂದ (ಕುಮಾರಕ. ೦೪-೦೨). **ಮರಳ್ಚು** : ೧. ಇಚ್ಚೆಯಣಮಿಲ್ಲದೊಡಂ ತೆಗೆದಳ್ ಕರಂ ಮನಂ ಕಿಡೆ ಪೊಸತಪ್ಪುದೊಂದು ಪಿಡಿಗಂಕುಶಮಿಟ್ಟು ಮರಳ್ಚುವಂದದಿ (ಕಾದಂಪೂ. ೭೭೨) ; ಮರಳ್ಚಿ ಸಿಂಹಮನೆನಿಪ್ಪ ಘನಧ್ವನಿಯಾಯ್ತರಣ್ಯದೊಳ್ (ಗಂಕ. ೦-೮೩). **ಮಲರ್ಚು** : ೩. ಮುಖ ಮೇಲಾಗುವಂತೆ ಮಾಡು; ಅಂಗಾತವಾಗಿರಿಸು: ನೆಲದೊಳೋರಂತಾಗೆ ಮಲರ್ಚಿಕ್ಕಿಯುರ್ಚಿದಿಂ ತಗುಳ್ದು ನಾಭಿವರೆಗಂ ಬಸಿಱಿಂ ಪೋಟ್ದು (ವಡ್ಡಾರಾ. ೫೦-೪) ; "ಮಲರ್ಚಿಕ್ಕಿ–ಹೊಟ್ಟೆಯಡಿಯಾಗಿ ಮಲಗಿಸಿ" (ವಡ್ಡಾರಾ. ೨೨೦ ಟಿಪ್ಪಣಿಗಳು). [ಮರಲ್$_1$ + — ಚು$_1$]

**ಮರಲ್ವಿಲ್ಲ** (ನಾ). ಹೂವಿನ ಬಿಲ್ಲುಳ್ಳವನು ; ಮನ್ಮಥ : ಅಮರ್ದುಗೊರಲೀಸರಂ ಮೆಯ್ಯಮರ್ದ ಮರಲ್ವಿಲ್ಲನಿಟ್ಟೆತ್ತವಿಲಿ ತಣ್ಗದಿರಂ ಸಮಸಂದು ಬಾಟ್ವ ಜಗಮಂ ಸಮೆವಲರಿಚನೇಟೆಗ್ದಾಟೆಗ್ಗಿ ಚಿಕದೇವೇಂದ್ರಂ (ಅಪ್ರತಿ. ೪೭-೦೪). [ಮರಲ್$_3$ (<ಮಲರ್$_3$) + ಬಿಲ್ಲು$_1$ (<ಬಿಲ್$_2$) + — ಅ$_7$]

**ಮರಲ್ಸರವಿ** (ನಾ). ಹೂವಿನಿಂದ ಕಟ್ಟಿದ ಹುರಿ ; ಹೂವಿನ ದಂಡೆ : ಆಗಸಕ್ಕೇಣಿಯುಕ್ಕುವೆಂಬರಂಬುಧಿಯು ಬೇಗ ದಾಂಟುವೆವೆಂಬರಾ ಮರಲ್ಸರವಿಯಲಿ ನಾಗಗಳ ಕಟ್ಟಿ ಮೆಟ್ಟುವೆವೆಂಬ ದುಷ್ಟವಂಚಕರ ಮಾತಂ ಕೇಳಿ (ಅಕ್ರೂಚ. ೫-೨-೬). [ಮರಲ್$_3$ (< ಮಲರ್$_3$) + ಸರವಿ$_2$]

**ಮರವ** (ನಾ). ಒಂದು ಬಗೆಯ ಪಕ್ಷಿ : ದುರಿಸೆ ಗಿಳಿ ವರ್ದು ಮರವಂ ಮರಕುಟಿಗಂ ಪುಜಿಲೆ . . . ಮುನ್ನೀ ಗಿರಿವರದೊಳ್ಪುಟ್ಟಿ ನೆಗಟ್ದುವು (ಸೂಕ್ತಿಸು. ೩-೧೯೬). [ ? ]

**ಮರವಜ್ರ** (ನಾ). (ಮರಮುಟ್ಟುಗಳಲ್ಲಿ ಬಿರುಕುಂಟಾದ ಕಡೆಯಲ್ಲಿ, ಅದನ್ನು ಮುಚ್ಚಲು ಉಪಯೋಗಿಸುವ) ಒಂದು ಬಗೆಯ ಅಂಟು : ಅವನ ರೆಪ್ಪೆಗಳು ಮರವಜ್ರದ ಸರಿಯನ್ನು ಬಳಿದಂತೆ ಬಿಗಿದುಕೊಂಡಿವೆ (ಶುಕಾಯು. ೫೭). [ಮರ$_1$ + ವಜ್ರ]

**ಮರವಡ** (ನಾ). ಅಮೇಧ್ಯವನ್ನು ಹಾಕುವ ಸಾಧನ (?) : ಕಕ್ಷವೆಂಬುದು ಕವುಚಿನ ತವರುಮನೆ ಅಮುಳೋಕ್ಯವೆಂಬುದು ಬಾಯ ಬಗದಳ ಮುಖಸಿಜ್ಜೆಯೆಂಬುದು ಪಾಂಡುರೋಗ ಕರಸ್ಥಳವೆಂಬುದು ಮರವಡದ ಕುಳಿ (ಅಶತಂ. ೧೯೬-೯೪೨) ; ಮಲದ ಮರವಡ ಮೂತ್ರದಾಗರವೆಲು ತೊಗಲು ನರಮಾಂಸಮಯ ಕ್ರಿಮಿಕುಲದ ಜನ್ಮಸ್ಥಾನ ಕಾಯವಿದು (ಪಿಶಾಗ. ೧೧-೧೦-೬). [ಮರ$_1$ + < ಪಡುಸು$_?$]

**ಮರವಡು**, ಮರಂಬಡು (ಕ್ರಿ). ೧. ಚಲನೆಯಿಲ್ಲದಿರು ; ನಿಶ್ಚಲವಾಗಿರು ; ಸ್ತಬ್ಧವಾಗಿರು : ಮರವಟ್ಟು ಕುಡದೆ ಕಲ್ಪಮಹೀಜಂ ನಿಂದುವು (ಅಂಕೃ. ೬-೭೪) ; ಅತ್ತ ಸುಭದ್ರೆಯುಮೊಡಲುರಿಯುತ್ತಿರೆ ಮರವಟ್ಟು ವಿಜಯನಿರ್ದತ್ತಲೆ ನೋಡುತ್ತಿರೆ ಸುಸಾಳಭಂಜಿಕೆಗೆತ್ತುದು ಕೆಳದಿಯರ ತಂಡವಾಕೆಯ ರೂಪಂ (ಪಂಪಭಾ. ೫-೫೪) ; ಸರಸವಾಡುವುದು ಸರಿಯಲ್ಲೆಂದುಳಿದರೆ ಮರವಡುವಳು ಮರದ ಬೊಂಬೆಯ ಮಾಟದೊಳು (ಹರಿ. ೬-೩೦). ೨. ಜೋಮು ಹಿಡಿ : ಮೆಯ್ ಮರವಟ್ಟಂತಿರೆ ನೋಡೆ ಪೇಟು ನರಡಿಯಾಯ್ತೆಂದು ನಿಶ್ಚೈಸಿ (ಕೋಕೋಶ. ೯-೨೦೭). **ಮರಂಬಡು** : ೧. ಕಂಡು ಕಣ್ ನಟ್ಟು ಕಾಲ್ ನಟ್ಟು ನಿಂದನು ಮರಂಬಟ್ಟು (ಶ್ರೀರಾಮಾ. ೮-೧೯೬). ' ಮಱವಡು ' ಪರಾ. [ಮರ$_1$+ಪಡು$_1$]

**ಮರವಡೆ** (ನಾ). ವೃಕ್ಷಗಳ ಆದಾಯದ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಮಾವಡೆ ಮರವಡೆ ಕುಳವಡೆ ಸಾರಡೆ . . . ಸಂತೆ ಉಂಟಾದ ಹಲ ಉಪಾಧಿಗಳೂ ಸಹ ಸೇರ್ಸಿ ಕೊಟ್ಟೆವು (ಸೌಇಇ. IX-ii, ೯೩೩-೮ ; 1470) ; ತೋಟ ತುಡಿಗೆ ಗದೆ ಬೆದಲು ಮಾವಡೆ ಮರವಡೆ ನಿಧಿ ನಿಕ್ಷೇಪ (ಎಕ. X, ಶುಳಬಾ. ೦-೩೬ ; 1541). 'ಮಾವಡೆ' ಪರಾ.

[← ತಮಿ. ಮರವಟ್ಟೈ]

**ಮರವಣೆ** (ನಾ). ಮರದಿಂದ ಮಾಡಿದ ಆಸನ, – ಪೀಠ : ಪೊಸವೆಸರ್, ಎಳವಿದಿರ್, ಮರವಣೆ (ಕಾಪಾಕೂ. ೩೦ ಉದಾ) ; ಮರವಣೆ[ಪಾಠಾಂ. ಣಿ]ಗಂ ಬೀಣೆಗವಂತರವಾವುದೊ (ಕಾವ್ಯಾವ. ೬೫). [ಮರ$_1$ + ವಣೆ$_1$]

**ಮರವಲಗೆ** (ನಾ). ಮರದ ಹಲಗೆ : ಶರಧಿಮಧ್ಯದಿ ಹಡಗೊಡೆದು ಮುಳುಗಲಾ ಮರವಲಗೆಯ ಪಿಡಿದವನು ಭರದಿ ತಡಿಯ ಸಾರ್ದು (ಜೀವಂಧಾಂ. ೯-೯). [ಮರ$_1$ + ಪಲಗೆ]

**ಮರವಳಿ** (ನಾ). ಮರಗಳಿಂದ ಬರುವ ಉತ್ಪನ್ನ ; ಮರದಿಂದ ದೊರಕುವ ಹಣ್ಣು, ಕಾಯಿ, ಎಲೆ ಮುಂತಾದುವು : ಸೊಪ್ಪಿನ ತೋಟ ತಿಪ್ಪೇಹಳ್ಳ ಶ್ರೀಗಂಧ ಹೊರತಾದ ಮರವಳಿ (ಹುಬ್ಬಹ. ೩) ; ಆ ಊರುಗಳ ನೆಲಕರ ಮರವಳಿಗಳನ್ನು ಬಿಟ್ಟದ್ದು ಹಾಗಿರಲಿ (ಸಪತ. ೬೩). [ಮರ$_1$ + — ವಳಿ$_3$]

**ಮರವಳಿಕಂದಾಯ** (ನಾ). ಮರಗಳ ಉತ್ಪನ್ನದ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಹೊಲದಲ್ಲಿರುವ ಹುಣಸೆ ಹಲಸಿನ ಮರಗಳಿಗೆ ಮಾತ್ರ ಫಲವಿದ್ದಂತೆ ೧ ಹಣದಿಂದ ೨ ಹಣದ ವರೆಗೆ ಮರವಳಿಕಂದಾಯವನ್ನು ನಿಷ್ಕರ್ಷೆಮಾಡಿದರು (ಮಹಾಸಂ. I, ೦೨೩). [ಮರವಳಿ+ಕಂದಾಯ]

**ಮರವಳಿವಟ್ಟ** (ನಾ). = ಮರವಳಿಕಂದಾಯ : ಕಾಡಾರಂಬ ಮನೆದೆರಿಗೆ ಮರವಳಿವಟ್ಟ . . . ಎನ್ನುತ . . . ಕೊಸವೊದಲಿಲ್ಲದೆ ಹಣ ಹೊನ್ನು ತೆರುತಿರಬೇಕು (ಪಟ್ಟಿಕ. ೦೫೫-೬). [ಮರವಳಿ + ವಟ್ಟ]

**ಮರವಾನಸ**, ಮರವಾನಿಸ (ನಾ). ಮರದಿಂದ ಮಾಡಿದ ಗಂಡಸಿನ ವಿಗ್ರಹ : ಪೊಯ್ವ ಸಿಡಿಲ್ ಕಾರಿರುಳೊಳಗುರ್ವಂ ಪಡೆದಿರೆ ಮರವಾನಸನೆನೆ ತಪಸ್ವಿ ಮರವೊದಲಿರ್ದಂ (ಆದಿಪು. ೬-೩೨); ದುಃಖಿಂಗೆಯ್ವರ ನಡುವಿರ್ದಂ ಧರ್ಮಕಥಾಶ್ರವಣದಿಂ ನಿಶ್ಚಳನಾಗಿರ್ದರಸನಂ ಕಂಡಿದೇನೀಯರಸಂ ಮರವಾನ [ಪಾಠಾಂ. ನಿ] ಸನೊ ಮೋಣ್ ಲೆಪ್ಪದರಸನೊ ಪೇಟಿಂ (ಜೀವಸಂ. ೨೫-೯೬ ವ). **ಮರವಾನಿಸ** : ನಿನಗಿನಿತುಂ ಕರುಣಮಿಲ್ಲ ಮರವಾನಿಸನೈ (ಸುಂದ. ೨-೯೩) ; ಅಗಲ್ದು ಪೋದಂ . . . ಎನಸುಂ ಮರವಾನಿಸನಾದ ನೆಂಬಿನಂ (ಕೃಷ್ಣಕೃ. ೦೩-೯೬). [ಮರ$_1$ + ಮಾನಸ$_1$ (< ಮಾನುಸ)]

**ಮರವಾನಸಿ** (ನಾ). ಮರದಿಂದ ಮಾಡಿದ ಹೆಂಗಸಿನ ವಿಗ್ರಹ : ನೋಡ ಮಾನಸಿಯಣಮಲ್ಲಳೀಕೆ ಮರವಾನಸಿ[ಪಾಠಾಂ. ಸೆ]ಯಾಗಿಯುಮಾದುದೊಂದು ಮಾನಸಿಕೆ (ಆದಿಪು. ೦೨-೩೮). [ಮರವಾನಸ+ —ಇ$_2$]

**ಮರವಾನಸೆ**, ಮರವಾನಿಸೆ (ನಾ). = ಮರವಾನಸಿ : ಆ ನುಡಿಯೆಂದೆಂಬ ಶೂಲ . . . ಮಾನಸವನು ಕೀಲಿಸಲಂದವಳು ಮರವಾನಸೆಯಂತಿರ್ದಳಾಗ (ಶುಕಾಶಾಂ. ೩೬-೦೦೫). **ಮರವಾನಿಸೆ** : ಅರವಿಂದವಕ್ತ್ರೆ ಕೋಪಮಳೆ ಕಡುಗಾಡಿಕಾರ್ತಿ ಮರವಾನಿಸೆಯೆಂಬುದನುಂಟುಮಾಡಿದಾ (ಧರ್ಮಾಮೃ. ೩-೦೮೦) ; ಮರವಾನಿಸೆಯಂದದಮನನುಕರಿಸಿದಳೋ ಎನಲಸಿಯಳ್ ಮೆಯ್ಮಱೆದುಱೆ ಬೆಱಗಾದಳ್ ನೃಪಸುತನಂ ನೋಡಿ (ಜಗನ್ನಾ. ೯-೨೨). [ ಮರವಾನಸ + —ಎ$_2$ ]

**ಮರವಾನಿಸ** 'ಮರವಾನಸ' ನೋ.

**ಮರವಾನಿಸೆ** 'ಮರವಾನಸೆ' ನೋ.

**ಮರವಾಯ್** (ಕ್ರಿ). ೧. ರಭಸದಿಂದ ನುಗ್ಗು; ಜೋರಾಗಿ ಡಿಕ್ಕಿ ಹೊಡೆ: ದೆಸೆಗಳ್ಗೆ ಬೆರ್ಚಿ ಮಾರ್ಕೊಳುವ ವನಮಹಿಷಗಳಿಂ ಮದಹಸ್ತಿಯಂತೆ ಮರವಾಯ್ವ ಪುಲಿಗಳನತಿಭಯಂಕರಾಕಾರಮಪ್ಪ ದ್ವೈತವನಕ್ಕೆ ಬಂದು (ಪಂಪಭಾ. ೭-೨೯ ವ); ವನಮಂ ಪೊಕ್ಕು ಮರಮುಸಕದಿಂ ಮರವಾಯ್ದು ಮರದುಱುಗಲಂ ಕಿಱ್ತೀಡಾಡುವಲ್ಲಿ (ಅರ್ಜುನಿ. ೫-೦೦೩ ವ). ೨. ಮರವನ್ನು ಹತ್ತು: ಕುಳಿಲೆಂದು ಮರವಾಯ್ದು ಬಿನದಿಪುದು (ಕಶಿಸ. ೬೯-೫೫೬). [ ಮರ$_1$ + ಪಾಯ್$_1$ ]

**ಮರವಾಲೆ**, ಮರಹಾಲೆ (ನಾ). ಒಂದು ಬಗೆಯ ಮರ: "ಜೀವವೃಕ್ಷ—ಮರವಾಲೆ" (ಓಸಧಿ. ೬೩). **ಮರಹಾಲೆ**: " ಯಶಸ್ಕರೀ–ಮರಹಾಲೆ " (ಓಸರಿ. ೦೩೦). [ ಮರ$_1$ + ಪಾಲೆ$_2$ ]

**ಮರವಾವು** (ನಾ). (ಮರದಲ್ಲಿ ವಾಸಿಸುವ) ಒಂದು ಬಗೆಯ ಹಾವು: ಅರಗಿಳಿಗಳೆರಡು ತಮ್ಮಯ ಶಿಶುವಂ ಮರವಾವು ಪಿಡಿಯೆ ಸಾಯಲ್ ಪರಿದುಂ ದುಃಖದೊಳಳುತ್ತಮಿರಲ್ (ತ್ರಿಪುಂ. ೦೦-೯೦) ; ನರಿ ಪೂತಿಪೆಕ್ಕು ನಕುಲಂ ಮರವಾವುಗಳೆಂಬಿವಾಗಳುಂ ಕರಮೆಸೆದಿರ್ಪನಂ ಮೆಱೆದುದಾ ವಿಪಿನಂ ವಿಪಿನದ್ಧಕಂದರಂ (ಕಬಿಕಂ. ೩-೩೪). 'ಅರವಾವು' ಪರಾ.

[ ಮರ$_1$ + ಪಾವು$_1$ ]

**ಮರವಾಳ್$_1$** (ನಾ). ೧. ಮರದ ಜೀವನ; ವೃಕ್ಷದ ಬಾಳು. ೨. (ಅಲಂ) ನೀರಸವಾದ ಬಾಳು,–ಜೀವನ : ನಲ್ಮೆ ಹೂ ಹಣ್ಣಲ್ತೆ ಮರವಾಳ್ಗೆ ಗೆಲ್ಲಂ (ಕಾಂಚಿರ. ೭೩-೦೩೦). [ಮರ$_1$ + ಬಾಳ್$_2$ (<ಬಾಟ್$_3$)]

**ಮರವಾಳ್$_2$** (ನಾ). ಮರದ ಕತ್ತಿ,– ಖಡ್ಗ : ಕರವಾಳಂ ಮಸೆವಂದದೆ ಮರವಾಳಂ ಮಸೆಯೆ ಕೂರಿತಕ್ಕುಮೆ (ಗದಾಯು. ೨-೩೩) ; ಸುರಿಗೆ[ಯಿ]

ನಾಡು[ಗುಮಂಡಾ] ಮರವಾಳಂ ಕೊಂಡು ಬೀಸುತಿರ್ಕುಂ (ಬಂಹಂ. ೩-೨೬).

[ಮರ್₁ + ಬಾಳ್₃]

**ಮರವಾಟಿ³**, ಮರಬಾಳೆ (ನಾ). ಒಂದು ಬಗೆಯ ಬಾಳೆ; ಕಾಡುಬಾಳೆ: "ಕಾಷ್ಠಕದಳೀ–ಮರವಾಟಿ³" (೬೩ಧಿ. ೩೨). **ಮರಬಾಳೆ**: ಆ ರಾಮ ನಾಮದಿಂ ಕಂಗೊಳಿಸಿ . . . ಮರಬಾಳೆ ಕಲ್ಯಾಣ ಬೂದಿಬಾಳೆಗಳೆಂದೆಲೆಸೆದಿರ್ದುದು (ಶಶಮೂ. ೨೫–೯೯). [ಮರ್₁ + ಬಾಟಿ³]

**ಮರವಿ**, ಮರಗಿ, ಮರಗೆ, ಮರಾಯಿ, ಮರಿಗೆ (ನಾ). (ಮರ, ಬಳಪದ ಕಲ್ಲು ಅಥವಾ ಮಣ್ಣಿನಿಂದ ಮಾಡುವ) ಅಗಲವಾದ ಬಾಯಿಯುಳ್ಳ ಪಾತ್ರೆ: ಲಂಕರೊಕ್ಕಲಲ್ಲಿ ಆಱುತಿಂಗಳ್ಗೆ ಮಣೆತಿವಿಗೆ ಮರವಿಯೆಂಬ ವೊಂದಕ್ಕಂ ವರ್ಷಕ್ಕೆ ಮಂಚವೊಂದಕ್ಕಂ ಅಲ್ಲವರಸಿನಂ ಶುಂಠಿ ಬೆಳ್ಳುಳ್ಳಿ ಬಜೆ ಭದ್ರಮುಸ್ತೆಯೆಂಬಿವು ಮೊದಲಾಗಿ ತೂಗಿ ಮಾಱುವ ಭಣ್ಡಂಗಳ್ಗೆ ಹೇಱಿಂಗಯ್ವಲಂ (ಎಇ. XIX, ೩೩–೨೬; 1135). **ಮರಗಿ**: "ಅವಗಾಹಮೆನೆ ಮರಗಿಯಕ್ಕು" (ಮಂಗನಾ. ೩೩–೨೬). **ಮರಗೆ**: ಯದುವಿನ ತಾಯಿ ಕಲ್ಲಿನ ಮರಗೆಯಲ್ಲಿ ಮಸಾಲೆ ಕುಟ್ಟುತ್ತಾ ಇರುತ್ತಾಳೆ (ನಾಹೇಶ್. ೫೯೫). **ಮರಾಯಿ**: ನೀರು ಅಕ್ಕಚ್ಚು ಕುಡಿಯಲು ಅಲ್ಲಲ್ಲಿ ಮಣ್ಣಿನ ಮರಾಯಿಗಳನ್ನು ಕುತ್ತಿಗೆಯ ವರೆಗೆ ಹೂಳಿರುವರು (ಬಾಳಿ. ೪೦). **ಮರಿಗೆ**: ಎತ್ತುಗಳು ಮರಿಗೆ ಕಡೀತಾ ಅದಾವೆ! . . . ಮೇವು ಹಿರಕೊಂಡು ಬಂದು ಹಾಕ್ರಿ (ಕಳುಹು. ೦೫೬); ಎಲ್ಲರೂ ಹೆಣ್ಣು ಹೆತ್ತರೆ ಮಾರವ್ವ ಮರಿಗೆ ಹೆತ್ತಳು (ಗಾದೆ). [ದೇ.॥ ತಮಿ. ಮರವೈ; ಮಲ. ಮರವಿ; ತುಳು. ಮರಾಯಿ]

**ಮರವಿಲ್**, ಮರಬಿಲ್ಲು (ನಾ). ಒಂದು ಬಗೆಯ ಬಿಲ್ಲು; ಬಿದಿರಿನ ಬಿಲ್ಲು: ತೊಟ್ಟಿಕ್ಕವಡಂ ಮರವಿಲ್ ಕಟ್ಟಿದ ಪಣೆಕಟ್ಟು ಬೇಂಟೆವಱಿ³ (ಶಂಕಥಾ. ೫–೩೬); ಕರಿಂಕುವಱಿದ ಬಿಂಜದಡವಿಯಂತೆ ಕರ್ಗನೆಗನಿತು ಕೊಳು ವೇಱಿಸಿದ ಮರವಿಲ್ಲುಂ ಪಿಡಿದ ದೋಣೆಯುಂ (ಪರ್ವಷಾ. ೪–೯೨ ವ). **ಮರಬಿಲ್ಲು**: ಮರಬಿಲ್ಲು ಬಾಣ ಬಡಿಕೋಲುವಲೆಯು ಜಾಯಿಲಗಳಂ ಪಿಡಿದು . . . ಅಗಣಿತದ ಲುಬ್ಧಕರು ಬಂದು ನಿಂದು (ಶಶಮೂ. ೦೬–೦೨); ಕಾವಲ ಮಂದಿಗಳು ಇವರನ್ನು ಕಂಡು ಬಾಗಿಲ ಕದಗಳ ಹಾಕಿ ಹಗೆಗಳನ್ನು ಮರಬಿಲ್ಲಿನಲ್ಲಿ ಇಟ್ಟು ಗುಲ್ಲು ಮಾಡಿದರು (ಕಕೃಶಾ. ೨೦). [ಮರ್₁+ಬಿಲ್₃]

**ಮರವೀಣೆ** (ನಾ). ಮರದಿಂದ ಮಾಡಿದ ವೀಣೆ: ಕುಣಿದಿಲ್ಲ ಕೊರಳು ಮಣಿದಿಲ್ಲ ಬೆರಳು ಮರವೀಣೆ ಮಿಡಿಸಲಹುದೇ (ಹೃದಕ. ೩೯–೪).

[ಮರ್₁ + ವೀಣೆ₁]

**ಮರವು** 'ಮಱವು' ನೋ.

**ಮರವುಟ್ಟು** (ನಾ). ಮರದಿಂದ ಮಾಡಿದ ಹುಟ್ಟು: ತೆಗೆ ಹಿಮುವನೆಂದು ಮರವುಟ್ಟಿನಿಂ ತೆಗೆಯಿಸಲ್ (ಮಲುರ. ಹ. ೦೬೫–೦೦). [ಮರ್₁ + ಪುಟ್ಟು₃]

**ಮರವುಣಿ** (ನಾ). ಮರವನ್ನು ದಹಿಸುವಂತಹುದು; ಬೆಂಕಿ: ತಳಿರಂಬನಂ ಮರವುಣಿಗೆ ಬೀಳ್ದಂ (ಶಂಬಿಪಾ. ೨೦–೫೪). [ಮರ್₁ + –ಉಣಿ]

**ಮರವೂರ್**, ಮಱವೂರ್ (ನಾ). ಒಂದು ಊರಿನ ಹೆಸರು: ನಗರೂರ ಬೆಳ್ಳಿಯರುಂ ಮರವೂರ ವಣ್ಣಾಕರುಂ. . . ನರಸಾಕ್ಷಿ (ಪೈಕಂ. ೦೫೨೬. ೦೦೮–೯೫; 726). **ಮಱವೂರ್**: ನೀತಿಮಾರ್ಗ್ಗ ಪೆರ್ಮ್ಮನಡಿಗಳ್ ಸ್ವರ್ಗ್ಗ ಮೇಱಿದನ್ದು ಮಱವೂರ ಬಯಿಯಮ್ಮಂ ಕಿಚ್ಚುವೊಕ್ಕಂ (ಎಕ. V, ಅರಕ. ೨೬–೦೦; 915). 'ಮರೂರ್' ಪರಾ. [ಮರ್₁ + ಊರ್]

**ಮರವೆ** 'ಮಱವೆ' ನೋ.

**ಮರವೈ** (ನಾ). (ಕೆರೆ, ಕಟ್ಟೆಗಳ) ನೀರು ಹೋಗುವ ಕಂಡಿ; ತೂಬು: ಶ್ಯಾಮಣ್ಣನವರು ಊರಿನ ದೊಡ್ಡಕೆರೆಯನ್ನು ದುರಸ್ತು ಮಾಡಿಸಿ, ಅದಕ್ಕೆ ಒಂದು ಮರವೆಯನ್ನು ಕಟ್ಟಿಸಿದರಷ್ಟೆ (ಊರುಳ. ೬೩).

[ದೇ.॥ ತೆಲು. ಮರವ, ಮರುವ]

**ಮರವೆಗೊಡು** (ಕ್ರಿ). (ರುಚಿ ಕಂಡುಹಿಡಿಯಲು ಅಶಕ್ತವಾಗಿ) ಮರಗಟ್ಟಿದಂತಾಗು; ಜಡ್ಡುಗಟ್ಟು: ಬಾಯಿಯಲ್ಲಿ ಅಂಟುಗೂಡಿ, ಕಹಿಯಾಗಿ, ಮರವೆಗೂಡಿ . . . ಅಡಿಗಡಿಗೆ ಶೀತವೂ ತೋರುತ್ತ ಈ ಲಕ್ಷಣಗಳೊಡಗೂಡಿ ಪೂರ್ವದೇ ಶ್ಲೇಷ್ಮಪಿತ್ತಜ್ವರವೆನಿಸಿಕೊಳ್ಳುವುದು (ಸಕವೈ: ೪೦).

[ಮರವೆ₁ (< ಮಱವೆ) + ಕೊಡು₁]

**ಮರವೆಸ**, ಮರವೆಸನ (ನಾ). ಮರದಿಂದ ಯಾವುದಾದರೂ ವಸ್ತುವನ್ನು ತಯಾರಿಸುವುದು ಮತ್ತು ಹಾಗೆ ತಯಾರಿಸಿದ ವಸ್ತು; ಮರಗೆಲಸ ಮತ್ತು ಅದರಿಂದ ತಯಾರಿಸಿದ ವಸ್ತು: ಅಯ್ಯಣಂ ಮರವೆಸದೊಪ್ಪುವಿಟ್ಟಗೆಯ ದನ್ತದ ಚಿತ್ರದ ಶಾಸ್ತ್ರಯುಕ್ತಮಾಗಿರೆ ಬೆಸಗೆಯ್ದು (ತಇ೨. XI–ii, ೦೨೬–೫೫; 1082); ಕರು ಕರುವಿಂಗೆ ಕಣ್ದೆಱವಿ ಕಲ್ಸಿದೊಟಿಗೆ ನಚ್ಚನಚ್ಚು ಕಂಡರಣೆಗೆ ಮಂಡನಂ ಮರವೆಸಕ್ಕೆ (ಮಲ್ಲಿಕ. ೨–೬೬). **ಮರವೆಸನ**: ಜೀರ್ಣ್ಣವಾದ ಮರವೆಸನವನು ಬಲಿಯಿಸೆಂದು ಹೇಳಿದಲ್ಲಿ (ಎಕ. V, ಬೇಲೂರು. ೨೪–೩; 1298). [ಮರ್₁ + ಬೆಸ₁]

**ಮರವೆಸನ** 'ಮರವೆಸ' ನೋ.

**ಮರಸಕಾಗೆ** (ನಾ). ಒಂದು ಬಗೆಯ ಸಸ್ಯ: ಮರಸಣೆ, ಮರಸಕಾಗೆ, ಮುಂಡಿಗಿಡ (ವೈಕಿಶಿ. ೫–೭೮). [? + ಕಾಗೆ]

**ಮರಸಣೆ** (ನಾ). ಒಂದು ಬಗೆಯ ಸಸ್ಯ: ಮರಸಣೆ, ಮರಸಕಾಗೆ, ಮುಂಡಿಗಿಡ (ವೈಕಿಶಿ. ೫–೭೮). [ ? ]

**ಮರಸಣಿಗೆ** (ನಾ). ಒಂದು ಬಗೆಯ ಸಸ್ಯ; ಕೆಸುವಿನ ಜಾತಿಯ ದೊಡ್ಡಗಿಡ; ಇದರ ಗೆಡ್ಡೆಯನ್ನು ಮೇಲೋಗರಕ್ಕೆ ಬಳಸುತ್ತಾರೆ: ಮರಸಣಿಗೆಯ ಗಡ್ಡೆಯ ತಿಂದೇ ತಿಂದು ಗಂಟಲೆ ಕಟ್ಟಿಹುದು (ಜಾಪನೀ. ೬೬); ಎರಡುಕೋಲುದ್ದದ ಮರಸಣಿಗೆ ಅವರ ಮನೆಗೆ ಮುಟ್ಟಿಸಿ (ಹಹಸ. ೯೯).

[ <ಮರಸಣೆ ? ]

**ಮರಸದ** (ನಾ). ಒಂದು ಬಗೆಯ ಸಸ್ಯ: ಮರಸದ, ಬಗುಲಿ, ಹಂಜರಿಕೆ ಕುಚ್ಚು, ಮರಸುತ್ತುಬಳ್ಳಿ (ವೈಕಿಶಿ. ೦೬–೨೯೩). [ ? ]

**ಮರಸರಿಗೆ** (ನಾ). ಮರದ ಪಾತ್ರೆ (?): ಅಂತಾಕಿಗಳ್ ತೂಗಿ ತೊನೆವ ತೊನೆಪಂಗಳುಮಂ ಮರಸರಿಗೆವಿಡಿದು ಬಿಲ್ಲಿಡಿದಾಡುವ ಬೂತಾಟಂಗಳುಮಂ ನೋಡಿ (ಶಂಕಥಾ. ೪–೮೦ ವ); "ಮರಸರಿಗೆವಿಡಿದು–ದೊಡ್ಡ ಚೆಂಬನ್ನು ಹಿಡಿದುಕೊಂಡು (!)" (ಶಂಕಟೀ. ೦೬೪). [ಮರ್₁ + ಚರಿಗೆ₁]

**ಮರಸರ್ಪ** (ನಾ). (ಆಕಾಶದಲ್ಲಿ ಕಾಣಿಸುವ ಉತ್ಪಾತಸೂಚಿಯಾದ) ದೊಡ್ಡಹಾವು; ರಾಹು! ಮರಸರ್ಪಂ ಮೂಡೆ ಮೂಡಲ್ ನೃಪತಿಗೆ . . . ಅಪಾಯಂ (ಲೋಕೋಪ. ೪–೪೦); ಮರಸರ್ಪನೊಗೆಯೆ ಕಾಳೆಗ ಮಕ್ಕುಂ (ಲೋಕೋಪ. ೪–೪೨). [ಮರ್₁ + ಸರ್ಪ]

**ಮರಸಲ್ಲು** (ಕ್ರಿ). ಚಲನೆಯಿಲ್ಲದಾಗು: ಮೈಯೊಳಗೆ ಮರಸಂದು ಮಸಗಾಡಿದೆನು ಮಿಡುಕಿಗೆ ನಾನು (ಕೃದಶ. ೦೪–೫).[ಮರ್₁ + ಸಲ್ಲು(<ಸಲ್₁)]

**ಮರಸು₁** 'ಮಱಿಯಿಸು' ನೋ.

**ಮರಸು₂** 'ಮಱಸು₂' ನೋ.

**ಮರಸುಕಟ್ಟು** (ಕ್ರಿ). ಕಾಡಿನಲ್ಲಿ ಪ್ರಾಣಿಗಳನ್ನು ಬೇಟೆಯಾಡಲು ಮರದ ಮೇಲೆ ಅಡಗಿ ಕುಳಿತುಕೊಳ್ಳಲು ಅಟ್ಟವನ್ನು ಕಟ್ಟು: ಮರವನ್ನು ಹತ್ತಿ ಮರಸುಕಟ್ಟಿ ಕುಳಿತು ಹೊಡೆಯುವುದು (ಎಳಕ. ೩೩).

[ಮರಸು₂ (< ಮಱಸು₂) + ಕಟ್ಟು₁]

**ಮರಸುಕೂರು** (ಕ್ರಿ). ಕಾಡಿನಲ್ಲಿ ಪ್ರಾಣಿಗಳನ್ನು ಬೇಟೆಯಾಡಲು, ಮರದ ಮೇಲೆ ಕಟ್ಟಿರುವ ಮರಸಿನ ಮೇಲೆ ಕುಳಿತುಕೊಳ್ಳು: ಪಣ್ಮರಕೆ ಮರಸುಕೊತವರಂತೆ, ಮೋನದಿಂದೆಲ್ಲರಿಂ ರಾಮಾದಿಗಳ್ ನಿಟ್ಟಿಸಿರೆ (ಶ್ರೀರಾಪಾ. ೭೦೩–೭೨); ಕಾಡಿನಲ್ಲಿದ್ದ ಒಂದು ಹಣ್ಣಿನ ಮರಕ್ಕೆ ಮರಸು ಕೂರಲು ಹೋಗಿದ್ದನು (ಕಾಪೂರು. ೯೯).

[ಮರಸು₂ (< ಮಱಸು₂) + ಕೂರು₂ ( < ಕೂರ್₃)]

**ಮರಸುತ್ತು**, ಮಲಸುತ್ತು, ಮಲಸೂತ್ರ (ನಾ). ೧. ತಿರುಪಿನಾಕಾರದ ಒಂದು ಬಗೆಯ ಬಾಣ (?) : ಮರಸುತ್ತನಿಸಲೊಡಂ ಭೋರ್ಗರೆದೈತರ್ಪಾ ಸರಲ್ಗಳಂ ಖಂಡಿಸುತಂ ಬರುತಿರ್ದುವು . . . ನಿಶಿತವಿಶಿಖಾವಳಿಗಳ್ (ಕಂಕ್ರಂ. ೬-೩೩) ; ಮರಸುತ್ತನೆಚ್ಚು ತತ್ಸಚರರ ಶರಸಂಘಾತವೆಲ್ಲಮಂ ಖಂಡಿಸಿ (ಕುಮಾವ್ಯಾ. ೧೦-೩೩). ೨. ತಿರುಪು ; ತಿರುಗಣೆ : ಇದಕ್ಕೆ ಮರಸುತ್ತಿನ ನಿಯಮವೆಂದು (cork screw rule) ಹೆಸರು (ಶಾತಂ. ೩೬೨). **ಮಲಸುತ್ತು** : ೨. ಮೊಳೆ ಮಾಡಲಿಕ್ಕೆ ತಿಳಿಯದ ಕಮ್ಮಾರ ಮಲಸುತ್ತು ಮಾಡಿಯಾನೇ ? (ಗಾದೆ). **ಮಲಸೂತ್ರ** : ೨. ಈ ಕೊತ್ತಳಗಳ ಬಳಿಯಲ್ಲಿ ಪೊಳಮೈಯಲ್ಲಿ ಮಲಸೂತ್ರದಂಥ ಜನೆಯಲ್ಲಿ ಮೇಲೆ ಯೇರಲಿಕ್ಕೆ ಪಾವಟಗೆಗಳಿರುತ್ತವೆ (ಕೆಶಾಗೆ. ೩೪೦) ; ಮಲಸೂತ್ರದೊಳಗಿಂದ ಕೊಳವೆಯನ್ನು ತಿರುವಿ (ಮುಂಶಾ. ೫-೬೨).
[ದ್ರಾ. ತೆಲು. ಮರಚುಟ್ಟು, ಮಲುಚುಟ್ಟು. / ಮರಾ. ಮಳಸುತ್ರ, ಮಳಸ ಊತ್ರ, ಮಲಸೂತ್ರ]

**ಮರಸುತ್ತುಬಳ್ಳಿ** (ನಾ). ಒಂದು ಬಗೆಯ ಸಸ್ಯ : ಮರಸದ, ಬಗುಲಿ, ಹುಪರಿಕೆಕುಚ್ಚು, ಮರಸುತ್ತುಬಳ್ಳಿ (ಸ್ಯಶಿಗ. ೦೬-೨೯೨).
[ಮರ$_1$ + ಸುತ್ತು$_1$ + ಬಳ್ಳಿ]

**ಮರಸುಬಾಗಿಲು** (ನಾ). "ಗೋಡೆಯಲ್ಲಿ ಪ್ರತ್ಯೇಕವಾಗಿದ್ದಂತೆ ತೋರದ ಹಾಗೆ . . . ಬಣ್ಣ ಹಾಕಿದ, ಗೋಡೆಯ ಮುಖಕ್ಕೆ ಸಮನಾಗಿಟ್ಟಿರುವ ಬಾಗಿಲು : ಮರಸುಬಾಗಿಲು" (Jibdoor. ೩೦೪೦).
[ಮರಸು$_2$ (< ಮಱಸು$_2$) + ಬಾಗಿಲು (< ಬಾಗಿಲ್)]

**ಮರಸುಬೇಟೆ** (ನಾ). ಮರೆಯಲ್ಲಿ ಅಡಗಿಕೊಂಡು ಮಾಡುವ ಬೇಟೆ : ಮರಸುಬೇಟೆ : ಇದರಲ್ಲಿ ಬೇಟೆಗಾರನು ಕಾಡಿನಲ್ಲಿ ಪ್ರಾಣಿಗಳು ತಿರುಗಾಡುವ ಕಡೆಯಲ್ಲಾಗಲೀ, ಯಾವುದಾದರೊಂದು ಹಣ್ಣಿನ ಮರದಲ್ಲಾಗಲೀ ಮರೆ ಮಾಡಿಕೊಂಡು ಕುಳಿತು ಪ್ರಾಣಿಗಳನ್ನು ಕಾಯುತ್ತಾನೆ (ಮುಬೇ. ೬) ; ಹತ್ತಾರು ಜನರನ್ನು ಬಲಿ ತೆಗೆದುಕೊಂಡಿದ್ದ ಹುಲಿ . . . ಮರಸುಬೇಟೆಯಲ್ಲಿ ನಿಷ್ಣಾತನಾಗಿದ್ದ ಸಂಕಪ್ಪನ ರಕ್ತ ಹೀರಿತ್ತು (ಸಕಥಾ. II, ೬೨೨೯).
[ಮರಸು$_2$ (< ಮಱಸು$_2$) + ಬೇಟೆ (< ಬೇಂಟೆ)]

**ಮರಸೌತೆ** (ನಾ). ಒಂದು ಬಗೆಯ ದೊಡ್ಡಜಾತಿಯ ಸೌತೆ : (ಸ್ಯಶಿಗ. ೮೦-೦೬೩೬). [ಮರ$_1$ + ಸೌತೆ (< ಸವುತೆ)]

**ಮರಹಟ್ಟೆ** 'ಮರಾಟ' ನೋ.

**ಮರಹತ** 'ಮರಾಟ' ನೋ.

**ಮರಹತ್ತಿ** (ನಾ). ಮರವಾಗಿ ಬೆಳೆಯುವ ಒಂದು ಬಗೆಯ ಹತ್ತಿ ; ದೊಡ್ಡಹತ್ತಿ : ಮರಹತ್ತಿಯ ಬೇರನು ಅಗಿದು ಕಿವಿಯಲ್ಲಿ ಉರುವಲು ವೃಶ್ಚಿಕ ಹರಾ (ಶಿಕಶ. ೦೬-೨) ; ಇದರಲ್ಲಿ ಮತ್ತೊಂದು ಪ್ರಕಾರದ ಮರಹತ್ತಿ ಎಂದು, ಕರಿ ಹತ್ತಿ ಎಂದು ಎರಡು ವಿಧಗಳುಂಟು (ಕೃಶಿಕ್ರ. ೩೯).
[ಮರ$_1$ + ಹತ್ತಿ$_1$ (< ಪಟ್ಟಿ)]

**ಮರಹಮ್ಮತ್** 'ಮರಾಮತ್ತು' ನೋ.

**ಮರಹಮ್ಮತ್ತು** 'ಮರಾಮತ್ತು' ನೋ.

**ಮರಹರಳು** (ನಾ). ಒಂದು ಬಗೆಯ ಔಡಲ ಗಿಡ ; ದೊಡ್ಡಹರಳು : ದೊಡ್ಡಹರಳು, ಬೆಟ್ಟಹರಳು, ತುರುಕಹರಳು, ಮರಹರಳು, ಕಾಡುಹರಳು (ಸ್ಯಶಿಗ. ೯೬-೯೯೩) ; ತಂಗಡಿ, ಕಕ್ಕೆ, ಮರಹರಳು, ಕಸ್ತೂರಿ ಜಾಲಿ, ಬನ್ನಿ (ಸಸ್ಯಶು. ೨೩೬). [ಮರ$_1$ + ಹರಳು (< ಪರಲ್)]

**ಮರಹಱುವೆ** 'ಮರಹಱುಹೆ' ನೋ.

**ಮರಹಱುಹೆ**, ಮರಹಱುವೆ (ನಾ). ಒಂದು ಬಗೆಯ ಹರುವೆಸೊಪ್ಪು : "ಮರಹಱುಹೆ ಆಕಾಕರ್ಣಿಕೆಯುಕ್ಕು" (ಮುಗಣಾ. ೩೫-೦೯). **ಮರಹಱುವೆ**: (ಶ).
[ಮರ$_1$ + ಹಱುಹೆ]

**ಮರಹಾಟ** 'ಮರಾಟ' ನೋ.

**ಮರಹಾಟಮೊಗ್ಗೆ** 'ಮರಾಟಿಮೊಗ್ಗು' ನೋ.

**ಮರಹಾಲೆ** 'ಮರವಾಲೆ' ನೋ.

**ಮರಹು** 'ಮಱವು$_2$' ನೋ.

**ಮರಹುಣಿಸೆ** (ನಾ). ಒಂದು ಬಗೆಯ ದೊಡ್ಡಜಾತಿಯ ಹುಣಿಸೆ : "ತಿಂತ್ರಿಡೀಕಂ, ಚುಕ್ರಂ, ವೃಕ್ಷಾಮ್ಲಂ — ೩ ಮರಹುಣಿಸೇಹಣ್ಣು, ಹುಳಿಹಣ್ಣು" (ಸಿದ್ಧಾಂತಿ. ೨೬೯). [ಮರ$_1$ + ಹುಣಿಸೆ (< ಪುಳಿಸೆ)]

**ಮರಳ್** 'ಮರಲ್$_1$' ನೋ.

**ಮರಳಚ್ಚು** (ನಾ). ಮರಳಿನಲ್ಲಿ ಬರೆದು ಹೊಡಿದ ಒಂದು ಬಗೆಯ ಅಚ್ಚು : ಕಂಟ ಅಥವಾ ಚೂಪಾದ ಮರಗಡ್ಡಿಯಿಂದ ಕೊರೆದ ಮರಳಚ್ಚಿನಲ್ಲಿ ಎರಕ ಹೊಯ್ದು ಈ ಶಾಸನವನ್ನು ತಯಾರಿಸಲಾಗಿದೆ (ಶಾಶಕ. ೦೬).
[ಮರಳು$_2$ (< ಮಣಲ್) + ಅಚ್ಚು$_3$]

**ಮರಳಿ** (ನಾ). ಒಂದು ಬಗೆಯ ಸಸ್ಯ : ಕೊಗ್ಗಲಿ, ಮರಳಿ, ಕೋಳಂಜಿ, ವಜ್ರನೀಲಿ (ಸ್ಯಶಿಗ. ೬೯-೦೫೦೬). 'ಮರಳಿ' ಪರಾ. [ ? ]

**ಮರಳಿಚು** 'ಮರಲ್ಚು' ನೋ.

**ಮರಳಿಸು** (ಕ್ರಿ). ೧. ಹಿಂತಿರುಗಿಸು ; ವಾಪಸ್ಸು ಬರುವಂತೆ ಮಾಡು : ಚಿತ್ತವೆನಗೊಬ್ಬನಲಿ ಸಿಲುಕಿತು ಮರಳಿಪೊಡೆ ಕಮಲಾಕ್ಷಗಳವಲ್ಲ (ಕಲಕ. ೩-೩೩); ಬಸವಣ್ಣನು ಪೋಗಲದನುಸಿರೆ ಮರಳಿಸಿ ಚೆನ್ನಬಸವಣ್ಣನೊಪ್ಪಿರ್ದನು (ಕಂಕ್ರ. ೬ ಸೂತ್ರ). ೨. ಸಂತೈಸು ; ತಿರುಗಿಸು : ಶಂಕಿನಿಯೆಂಬ ದೇವತೆ ಒಡಿದೊಡಾ ಕೂಸು . . . ಬೆಚ್ಚುಗುಂ, ಕಣ್ಣ ಮರಳಿಸುಗುಂ, ವಿಕಾರವೆರಸಿ ನೋಡುಗುಂ (ಶಾಂಶ. ೦೩೨-೬). ೩. (ನೀರು ಮೊದಲಾದ) ದ್ರವ ಪದಾರ್ಥಗಳನ್ನು ಕುದಿಸು : ಸ್ನಾ ಹತ್ತಿಸಿದವರು ಒಂದು ಕೊಳಗ ನೀರು ಮರಳಿಸಿ . . . ಎಂದರು (ಹಂಯಾತ್ರೆ. ೮).
[ಮರಳು$_1$ (<ಮರಲ್$_1$) + — ಇಸು$_2$]

**ಮರಳು$_1$** 'ಮರಲ್$_1$' ನೋ.

**ಮರಳು$_2$** 'ಮಣಲ್' ನೋ.

**ಮರಳುಉಮ್ಮತ್ತಿ** 'ಮರುಳುಮ್ಮತ' ನೋ.

**ಮರಳುಗಲ್ಲು** (ನಾ). ಕೆಂಪು ಮರಳಿನಿಂದಾಗುವ ಒಂದು ಬಗೆಯ ಕಲ್ಲು: ಈ ಹಜಾರವು ಸುಮಾರು ೮೨ ಮರಳುಗಲ್ಲುಕಂಬಗಳಿಂದ ಕೂಡಿ ಮರದ ಮೇಲ್ಛಾವಣಿಯನ್ನು ಹೊಂದಿತ್ತು (ಕಾಕಪ. ೯೯೯); ಇಂಥ ಪ್ರದೇಶವು ಒಂದು ಕಾಲದಲ್ಲಿ ಮೇಲಕ್ಕೆ ತಳ್ಳಲ್ಪಟ್ಟರೆ, ಅದೇ ಮರಳುಗಲ್ಲಿನ (Sandstone) ಬೆಟ್ಟವೆನಿಸುವದು (ಶಾಂಕ್ರ. I, ೦೩೬).
[ಮರಳು$_2$ (<ಮಣಲ್) + ಕಲ್ಲು (<ಕಲ್$_2$)]

**ಮರಳುಗಾಡು** 'ಮರಳ್ಗಾಡು' ನೋ.

**ಮರಳುಚಿಗಟ** (ನಾ). ಒಂದು ಬಗೆಯ ಸಣ್ಣ ರೆಕ್ಕೆ ಹುಳು,—ಚಿಗಟ : ನೀರಿನ ಅಂಚಿನಲ್ಲಿರಬಹುದಾದ ಸಣ್ಣನಳ್ಳಿ, ಸೊಳ್ಳೆಮರಿಗಳು, ಮರಳುಚಿಗಟ ಮುತ್ತಿತರ ಕೀಟಗಳನ್ನು ಆರಿಸಿ ತಿನ್ನುತ್ತವೆ (ಪಕ್ಷಿ. ೫೦).
[ಮರಳು$_2$ (<ಮಣಲ್) + ಚಿಗಟ (<ಚಿಕ್ಕುಟ)]

**ಮರಳುದಲೆ** (ನಾ). ಹಿಂದಿರುಗುವಿಕೆ ; ವಾಪಸ್ಸಾಗುವಿಕೆ : ಶುನಾಧಿಯ ವಡಬಾನಳನ ದಳ್ಳುರಿಯ ವರ್ಮವ ತಿವಿವ ತುಂಬಿಗೆ ಮರಳುದಲೆಯುಂಟಾ ದಡದು ಭವಭವದ ಪುಣ್ಯಫಲ (ಕುಮಾವ್ಯಾ. ೯-೯೬); ಕಂಗಳ ಮರಳುದಲೆಯನು ಮಾಣಿಸುವ ಬಹುಶಿಲ್ಪಕೌಶಲದ ಪುರವಿಭವಲಕ್ಷ್ಮಿಯನು ಕಂಡು (ಬಕಾಗ. ೩-೧೧-೧೦). [ಮರಳು$_1$ (<ಮರಲ್$_1$) + — ತಲೆ$_2$]

**ಮರಳುದಿಣ್ಣೆ** 'ಮಣಲ್ದಿಣ್ಣೆ' ನೋ.

**ಮರಳುಪಾಡಿ** (ನಾ). (?) : ತಿಳ ೨ ಮರಳುಪಾಡಿ ಬಿಡೆಕಾರಾ ಮೂ ೩ (ಶಾಇ. ೦೯೩೦, ಶುಂಗಳ. ೩೩೮-೯ ; 1228). [ ? ]

**ಮರಳುಮತ್ತ** 'ಮರುಳುಮ್ಮತ್ತ' ನೋ.

**ಮರಳೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು : ಆಗಿನ ಕಾಲದ ತೋಟಗಳಲ್ಲಿ ಅವರು ಹೆಚ್ಚು ಪ್ರೀತಿಯಿಂದ ಬೆಳೆಸುತ್ತಿದ್ದ ಹೂಗಳೆಂದರೆ ಪಾದರಿ . . . ಮರಳೆ, ಮಲ್ಲಿಗೆ, ಸಂಪಿಗೆ, ಕೇತಕಿ ಮುಂತಾದವು (ಪಾಚೀ. ೩೩). 'ಮರಳಿ' ಪರಾ. [ ? ]

**ಮರಳೊತ್ತು** (ಕ್ರಿ). ಹಿಂದಕ್ಕೆ ಒತ್ತು; ಹಿಮ್ಮೆಟ್ಟಿಸು : ಮೇರುಗಿರಿಯಂ ಮರಳೊತ್ತುವ ವಜ್ರವಹ್ನಿಯಿಂ ತಳದೊಳಗಿರ್ದಿಲಾಗೆ ಪೊಸೆದಿಕ್ಕುವ . . . ಅಳವಂ ಸಮಂತು ತಳೆದಂ (ಶಂಧ್ರುಕ್ಷ. ೩-೨೬).

[ಮರಳ್ (< ಮರಲ್$_1$) + ಒತ್ತು$_1$]

**ಮರಳ್ಗಾಡು, ಮರಳುಗಾಡು** (ನಾ). ಉಸುಕು ತುಂಬಿದ ಪ್ರದೇಶ ; ಮರುಭೂಮಿ : ನಿನ್ನ ಮೈಯ ಮರಳ್ಗಾಡಿನಲ್ಲಿ . . . ಅರಸಿ ನೋಡು ! (ಕಲ್ಯಾಣ. ೨-೦೩); ಮರಳ್ಗಾಡಿನಲ್ಲಿ ಬಿಸಿಲ್ಗುದುರೇನೇ ನಿಜವಾದ ನೀರೂಂತ ನಂಬಿ . . . ಪ್ರಾಣಬಿಟ್ಟಿದ್ದಾರೆ (ಪರಮೋ. ೦೯). **ಮರಳುಗಾಡು** : ಮರಳುಗಾಡಿನಲ್ಲಿ ತಣ್ಣೀರಿನ ಕೊಳ ಗೋಚರಿಸುವಂತೆ ಮುಂದೆ ಒಂದಾನೊಂದು ಕಾಲಕ್ಕೆ ಆ ಸಂಪತ್ತೂ ದೊರೆಯಬಹುದು (ಸಂಚಿರು. ೦೯) ; ನಿರ್ಜನವಾದ ಮರಳುಗಾಡನ್ನು ನಮ್ಮ ಸ್ಮೃತಿಪಥದಲ್ಲಿ ಎಳೆದು ತಂದು ನಿಲ್ಲಿಸಬಲ್ಲಷ್ಟು ಶಕ್ತಿಯುಕ್ತವಾಗಿದ್ದು (ರೂಪು. ೦೯).

[ಮರಳು$_2$ (<ಮಣಲ್) + ಕಾಡು$_3$]

**ಮರಳ್ಚು** 'ಮರಲ್ಚು' ನೋ.

**ಮರಾಟ, ಮರಹಟ್ಟ, ಮರಹತ, ಮರಹಾಟ, ಮರಾಠ, ಮಾರಾಟ**$_2$ (ನಾ). ಮಹಾರಾಷ್ಟ್ರವೆಂಬ ಒಂದು ದೇಶ ಮತ್ತು ಅಲ್ಲಿಯ ಜನ : ಪೊಣರ್ದು ಪೊಣರ್ದು ಮರಾಟರ್ ತಣದಾ ತಳ್ಳಿಯನೆ ಬಿಟ್ಟು ತಟ್ಟನೆ ತಳರ್ದರ್ (ಅಕ್ರಾತಿ. ೩೪-೩೬). **ಮರಹಟ್ಟ**: ನರ್ಮದಾ ಗೋದಾ ಪರಿಸರದ ವರೆಗೂ ಅಲ್ಲಲ್ಲಿ ನೆಲಸಿರಬೇಕೆಂಬುವನ್ನು ಸೂಚಿಸುವ ವಿದರ್ಭದ 'ಮರಹಟ್ಟ' ಎಂಬ ದೇಶೀಯ ಪರ್ಯಾಯನಾಮವು ಐತಿಹಾಸಿಕ ಮಹತ್ವದ್ದಾಗಿದೆ (ಕರ್ನಾಟಿ. ೩೨). **ಮರಹತ** : ಮರಹತನಜಿಕೆಯ ಕಡುಗಲಿ (ಜಯುಕಾ. ೭-೪). **ಮರಹಾಟ** : 'ಮರಹಾಟಮೊಗ್ಗೆ' ಪರಾ. **ಮರಾಠ** : ಮರಾಠರಲ್ಲಿ ಪೇಷ್ವೆಮನೆತನ ಪ್ರಸಿದ್ಧವಾದುದು (ಕೂಶಿ). **ಮಾರಾಟ**$_2$ : ಲಾಟ ಪಾಂಚಾಳ . . . ಸ್ತ್ರೀರಾಜ್ಯ ಕೊಂಗು ಮಾರಾಟ ಮೊದಲಾದ ದೇಶದ ಶರಣಸಂಕುಲಂ ಬರುತಿರ್ದುದುತ್ಸವದೊಳು (ಚರಿತ್ರೆ. ೩-೫೦); ಹಿರಿಯರ ಕಲೆಯಿಂ ದೊರಕಿತು ಮಾರಾಟರ ರಾಜ್ಯೋದಯವು (ಹುತಿಕ.೦೬೩). [←ಮರಾ. ಮರಾಠಾ; ಹಿಂ. ಮರಹಟಾ, ಮರಹತಾ, ಮರಾಠಾ./ಪ್ರಾ. ಮರಹಟ್ಟ, ಮರಟ್ಠ./ಸಂ. ಮಹಾರಾಷ್ಟ್ರ]

**ಮರಾಟಿ, ಮರಾಠಿ** (ಗು). ೧. ಮಹಾರಾಷ್ಟ್ರದೇಶಕ್ಕೆ ಸಂಬಂಧಿಸಿದ; ಮಹಾರಾಷ್ಟ್ರದ: (೩). (ನಾ). ೨. ಮಹಾರಾಷ್ಟ್ರದ ಜನ ಮತ್ತು ಅವರ ಭಾಷೆ: ಆ ಕಾಲದಲ್ಲಿ ಮರಾಟಿಯವರು ಓದುಬರೆಹವನ್ನು ಕಲಿವುದರಲ್ಲಿ ಅಷ್ಟು ಅಕ್ಕರೆಯುಳ್ಳವರಾಗಿರಲಿಲ್ಲ (ಚಿತ್ರಿ. ೨೭). ೩. ಹಳದಿಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಔಷಧೀಸಸ್ಯ : 'ಮರಾಟಿಮೊಗ್ಗು' ಪರಾ. **ಮರಾಠಿ** : ೧. ಲಗ್ನದ ವಿಧಾನಗಳು ಮರಾಠೀಜನರಂತೆ ಆಗುತ್ತವೆ (ಕಥಾಗ. ೦೭೫). ೨. ಮರಾಠಿಯಲ್ಲಿ ಪತ್ರ ವ್ಯವಹಾರ ಮಾಡಿ ಮರಾಠಿ ಪಟ್ಟಿಗಳನ್ನು ಬೇಡಿಸುವವರಿಗೆ ನೂರಕ್ಕೆ ಒಂದು ರೂಪಾಯಿ ಅಡತಿ ಬದ್ದೀತು (ಹುಂಡಿಬ್ಯಾ. ೨೭) ; ಅರ್ಥಾತ್ ಮಾತೆಲ್ಲ ಮರಾಠಿಯಲ್ಲಿತ್ತು (ಸಚಿತ್ರ. ೩೦೬).

[← ಮರಾ. ಮರಾಠೀ; ಹಿಂ. ಮರಹಟೀ, ಮರಹಠೀ, ಮರಾಠೀ./ಪ್ರಾ. ಮರಹಟ್ಠೀ]

**ಮರಾಟಿಮೊಗ್ಗು, ಮರಹಾಟಮೊಗ್ಗೆ** (ನಾ). (ಮಸಾಲೆ ಅಥವಾ ಔಷಧಿಗೆ ಬಳಸುವ) ಒಂದು ಬಗೆಯ ಸಸ್ಯದ ಮೊಗ್ಗು ; ಒಂದು ಬಗೆಯ ಸಂಬಾರಪದಾರ್ಥ : ಮರಾಟಿಮೊಗ್ಗು, ಚೀನಾಸೋಂಪು (ವ್ಯಕಿಪ. ೪೩-೬೬೦). **ಮರಹಾಟಮೊಗ್ಗೆ** : ಕರ್ಪೂರಚೂರ್ಣ ಮತ್ತೆ ಮರಹಾಟಮೊಗ್ಗೆಯು . . . ಮರ್ದಿಸಿದ ತಾಂಬೂಲವುಮನಿತ್ತು (ನವಮೋ. ೨೭-೮೫).

[ಮರಾಟಿ + ಮೊಗ್ಗು$_3$ (< ಮೊಗ್ಗೆ)./ತಮಿ. ಮರಾಟ್ಟಿಮೊಕ್ಕು; ತೆಲು. ಮರಾಟಿಮೊಗ್ಗ]

**ಮರಾಠ** 'ಮರಾಟ' ನೋ.

**ಮರಾಠಿ** 'ಮರಾಟಿ' ನೋ.

**ಮರಾಮತ್ತು, ಮರಹಮ್ಮತ್, ಮರಹಮ್ಮತ್ತು** (ನಾ). ೧. ಸರಿಪಡಿಸುವಿಕೆ; ದುರಸ್ತಿ; ಜೀರ್ಣೋದ್ಧಾರ: ತ್ರಿಕೂಟಾಚಲದ ಮೂರು ಶಿಖರಗಳು . . . ಮರಾಮತ್ತು ತತ್ತ್ವಗಳಿಂದ ನೋಡಿದರೆ ಅಷ್ಟು ಭದ್ರವೆಂದು ಕಂಡುಬರುವುದಿಲ್ಲ (ಹೊಯ್ಸಳಾ. ೦೭). **ಮರಹಮ್ಮತ್**: ೨. ಕಟ್ಟಡ ನಿರ್ಮಾಣ ; ವಾಸ್ತುರಚನೆ : ರುರ್ಕಿ ಎಂಬ ಊರಿನಲ್ಲಿ ಇಂಜನೀರಿಂಗ್‌ಕಾಲೇಜ್ ಅಂದರೆ ಮರಹಮ್ಮತ್ ವಿಷಯಗಳನ್ನು ಬೋಧಿಸುವ ಪ್ರಖ್ಯಾತ ಪಾಠಶಾಲೆ ಇದೆ (ಭೂಗೋಳ. ೫೫). **ಮರಹಮ್ಮತ್ತು** : ೧. ನೀ ಬೇಗ ಮರಹಮ್ಮತ್ತು ಮುತ್ಸದ್ದಿಯನು ಕರದುಕೊಂಡ್ಹೋಗಿ (ಕರ್ನಾಟಿ. ೩೦-೪೦) ; ಮುಜರಾಯಿ, ಮರಹಮ್ಮತ್ತು ಇವು ಆ ಕಾಲದಲ್ಲಿ ಖರ್ಚಿನ ಮುಖ್ಯವಾದ ಬಾಬುಗಳು (ಮಹಾಕಂ. II. ೬೧).

ಮರಾಮತ್ತುಇಲಾಖೆ, ಮರಹಮ್ಮತ್‌ಇಲಾಖೆ=ಲೋಕೋಪಯೋಗಿ ಇಲಾಖೆ : ಮರಾಮತ್ತು ಇಲಾಖೆಗೂ ಕಾರ್ಮಿಕ ಇಲಾಖೆಗೂ ಪತ್ರಗಳನ್ನು ಬರೆದು . . . ವಿಚಾರಿಸಿದರು (ಹಸುಹೂ. ೫); ರಸ್ತೆಯುದ್ದವನ್ನು ಎಷ್ಟು ಜಾಗರೂಕತೆಯಿಂದ ಮರಹಮ್ಮತ್‌ಇಲಾಖೆಯವರು ಅಳೆದಿರುವರೋ . . . ಯಾರೂ ಇಲ್ಲವೆನ್ನುವ ಹಾಗಿಲ್ಲ (ಹಿಮಾಲಯ. ೨೭೪).

[←ಅರ. ಹಿಂ. ಮರಮ್ಮತ್]

**ಮರಾಯಿ** 'ಮರವಿ' ನೋ.

**ಮರಾಲ, ಮರಾಳ**$_1$ (ಗು). ೧. ಮೃದುವಾದ ; ಕೋಮಲವಾದ. (ನಾ). ೨. ಹಂಸಪಕ್ಷಿ. ೩. ಕಾಡಿಗೆ ; ಅಂಜನ. ೪. ಕುದುರೆ. ೫. ಮೋಡ ; ಮೇಘ. ೬. ಖಳ ; ಕಪಟಿ. ೭. ಕಾರಂಡದ ಪಕ್ಷಿ. ೮. ದಾಳಿಂಬೆಗಿಡಗಳಿರುವ ವನ. **ಮರಾಳ**$_1$ : ಅಪರಾಬ್ಧಿಗೆ ಬರ್ಪ ಜರನ್ಮರಾಳವೋ ಪರಿದುಮನಲ್ಕೆ ಮೆಲ್ಲನಿಬಿದತ್ತು . . . ಶಶಾಂಕಮಂಡಲಂ (ಕಾದಂಪೂ. ೦೩೭) ; ಮೆಲ್ಲಡಿಯಿಡುವ ಮೃದುಗತಿಗೆ ಮರಾಳಂಗಳ್ ಮನವಿಕ್ಕೆ (ಸಂಚರ. ೦೪-೨೫); ಮಯೂರ ಮರಾಳ . . . ಕುರರೀಪ್ಲವ ಪ್ರಕರದಿಂದೆ ವಿರಾಜಿಕುಮುನ್ನತಂ ವನಂ (ಹರಿಶ್ಚ. ೪-೭೨). ೪. "ಮರಾಳಂ ಹಯ್ಯಂ" (ಕರ್ನಾಟ. ೩). ೯. [ನಾಟ್ಯ] ನೃತ್ಯದ ಒಂದು ಗತಿ : ದೇಶೀಯ ಭೌಮಚಾರಿಗಳಲ್ಲಿ ಒಂದು ; ❧ "ನಂದ್ಯಾವರ್ತಸ್ಥಾನಕದಲ್ಲಿ ನಿಂತುಕೊಂಡು ಒಂದು ಕಾಲಿನ ಮುಂಗಾಲನ್ನೂ ಇನ್ನೊಂದು ಕಾಲಿನ ಹಿಮ್ಮಡಿಯನ್ನೂ ರೇಚಿತ ಮಾಡಿ ನಡೆಯುತ್ತ ಪಾದಗಳನ್ನು ಮುಂದಕ್ಕೆ ಪ್ರಸರಿಸುವುದು" (ಶಾಸ್ತ್ರರಂ. ೩೨೦ ಗದ್ಯಾನುವಾದ) : ಪದಮೆರೆಡುಂ ನಂದ್ಯಾವರ್ತದ ಠಾಣದೆ ನಿಂದು ಮಡಮನಗ್ರಮನೊಳ್ಪಿಂದೊದವಿ ರೇಚಿತದೆ ನಡೆಯಲ್ ಪದಬಿಂ ಮುಂತಣ್ಗೆ ನೀಡಲದುವೆ ಮರಾಳಂ (ಶಾಸ್ತ್ರರಂ. ೬-೩೫). [ಸಂ.]

**ಮರಾಲಕ** (ನಾ). ಹಂಸ ; ಮರಾಲ : ಚಣಮರಾಲ [ಕಾಶಿಂ. ೯]ಕಗಮನೆ ಬಂದಳು (ಬಸವ. ೫೦-೦೦). [ಸಂ.]

**ಮರಾಲಪದಿ, ಮರಾಳಪದಿ** (ನಾ). ಒಂದು ಬಗೆಯ ಸಸ್ಯ; ಹಂಸಪಾದಿ: "ಹಂಸಪಾದಿ . . . ಮರಾಲಪದಿ, ಧೃತಮಂಡಲಿ" (ಸಸ್ಯಶಿ. ೩೪).

**ಮರಾಳಪದಿ**: "ತ್ರಿಪದಿ ಧೃತಮುಂಡಳಿ ಮರಾಳಪದಿಯೆನೆ ಹಂಸಪಾದಿ" (ಛಂಗಂ. ೩೨-೩೯). [ಸಂ. ಮರಾಲಪದೀ]

**ಮರಾಲಯಾನೆ**, **ಮರಾಳಯಾನೆ** (ನಾ). ಹಂಸದಂತೆ ಮಂದಗತಿಯಲ್ಲಿ ನಡೆಯುವವಳು ; ಮೃದುವಾದ ನಡಗೆಯುಳ್ಳವಳು : (೯). **ಮರಾಳಯಾನೆ** : ಸುಚಾವ ಮರಾಳಯಾನೆಯರಪಾಂಗಮರೀಚಿಚಯಂ ತ್ರಿವರ್ಣಮಂಕ ಗಟಿಯಿಸೆ (ಶಂಶ್ರ.ಕೃ. ೭-೦೦೯). [ಸಂ. ಮರಾಲಯಾನಾ]

**ಮರಾಳ₁** 'ಮರಾಲ' ನೋ.

**ಮರಾಳ₂** 'ಮಲಾರ₂' ನೋ.

**ಮರಾಳಗತಿ** (ನಾ). = ಮರಾಲಯಾನೆ : ಮರಾಳಗತಿಗಳ್ ಚಕ್ರಾಂಕ ವಕ್ಷೋಜಮಂಡಳೆಯರ್ ವರ್ತಿಸಿದರ್ ಕುಮಾರನ ಮನಶ್ಶ್ರೀಸಾರಕಾಸಾರದೊಳ್ (ಪುಶ್ಯ.ಕೃ. ೦೨-೦೦೨). [ಸಂ. ಮರಾಲಗತಿ]

**ಮರಾಳಗಾಮಿನಿ** (ನಾ). = ಮರಾಲಯಾನೆ : ವಾರಿಜಾನನೆಗೆ ಮರಾಳಗಾಮಿನಿಗೆ . . . ಸೀಮೆಯೂಯ್ತು ಜೀವನದಭಿಲಾಷೆ ಕಂತುಪರಿತಾಪದೊಳ್ (ಪುಶ್ಯ.ಕೃ. ೯-೬೯). [ಸಂ. ಮರಾಲಗಾಮಿನೀ]

**ಮರಾಳತೂಳ** (ನಾ). ಹಂಸದ ತುಪ್ಪುಳ : ಹಂಸತೂಲ : ಶಯನಸ್ಥಾನದೊಳ್ ದುಕೂಲಪ್ರಚ್ಛದಾಚ್ಛಾದಿತ ಮರಾಳತೂಳಶಯ್ಯಾತಳಮನಲಂಕರಿಸಿದಲ್ಲಿ (ಶಗು. ೦೦-೩೯ ವ). [ಸಂ. ಮರಾಲತೂಲ]

**ಮರಾಳನ್ಯಾಯ** (ನಾ). [ತರ್ಕಶಾ] ಲೌಕಿಕನ್ಯಾಯಗಳಲ್ಲಿ ಒಂದು ; ಹಂಸವು ನೀರು ಬೆರೆತ ಹಾಲಿನಲ್ಲಿ, ಹಾಲನ್ನು ಮಾತ್ರ ಹೀರಿಕೊಂಡು ನೀರನ್ನು ತೊರೆಯುವ ಕ್ರಮ ; ಹಂಸಕ್ಷೀರನ್ಯಾಯ : ಪಾಪ ಪುಣ್ಯಂಗಳಂ ಸೆರೆ ಮರಾಳನ್ಯಾಯಮಪ್ಪಾಗ್ಯದೆ ವಿಂಗಡಿಪ . . . ಸಾಗರದ ಪಯೋಳಿಹ ಗಂಭೀರ ಗುಣ್ಪನಿಂ ತನ್ಪನಿಂ ಕೇಳವನಿಪಾಲತಿಲಕ (ಶಂಗಾರ. ೨-೦-೪೦). [ಸಂ. ಮರಾಲನ್ಯಾಯ]

**ಮರಾಳಪದಿ** 'ಮರಾಲಪದಿ' ನೋ.

**ಮರಾಳಯಾನೆ** 'ಮರಾಲಯಾನೆ' ನೋ.

**ಮರಾಳಿ** (ನಾ). ಹೆಣ್ಣುಹಂಸ : ಅಗಟಿಸ್ ಪಾರ್ಥಿಯಂ ಕೀಟ್ಬಡಿಕಂ ನಾನಾಮರಾಳೀಬಹುಳಕಳಕಳಧ್ವಾನಸಂತಾನದಿಂದಂ (ಶಗು. ೨-೦೮); ಸರಸಿರುಹಂಗಳಿಂದಿಚಿಪ ಪುತ್ರಮರಾಳಿಗಳಂತೆ (ಅಪಂಕೃ. ೬-೩). [ಸಂ. ಮರಾಲೀ]

**ಮರಿ** 'ಮಱಿ' ನೋ.

**ಮರಿಗಂಚಿ** (ನಾ). ಮದುವೆಯಲ್ಲಿ ನಡೆಸುವ ಒಂದು ಸಂಪ್ರದಾಯದ ಆಚರಣೆಯ ವಿಧಿ ; ಕಿರಿಗಂಚಿಯ ಮೂರನೇದಿನ ನಡೆಸುವ ಶಾಸ್ತ್ರ : ಇಲ್ಲಿಗೆ ಕಿರಿಗಂಚಿ ಮುಗಿಯಿತು. ಮೂರನೆಯ ದಿನ ಮರಿಗಂಚಿ. ಹೆಣ್ಣಿನ ಮನೆಯಲ್ಲಿ ಗಂಡಿಗೆ . . . ಆರತಿಎತ್ತುವುದು ಮುಂತಾದ ಶಾಸ್ತ್ರಗಳು ನಡೆಯುತ್ತವೆ (ವಪ್ನಕು. ೦೦೩). 'ಕಿರಿಗಂಚಿ' ಪರಾ. [ ? ]

**ಮರಿಗಣಮರ** (ನಾ). ಒಂದು ಬಗೆಯ ಮರ : " ಚರ್ಮರಂಗಾಮರಿಗನಮರ " (೬ಶಂ. ೩೩). [ ? + ಮರ₁ ]

**ಮರಿಗೆ** 'ಮರವಿ' ನೋ.

**ಮರಿಚ** (ನಾ). ಒಂದು ಬಗೆಯ ಸಂಬಾರಪದಾರ್ಥ ; ಮೆಣಸು : " ವೇಲಪ್ಲಂ, ಮರಿಚಂ, ಊಷಣಂ– ಈ ೩ ಮೆಣ (ಬ)ಸು " (ಶಬ್ದಾಯು. ೦೦೦-೯೬೨) ; ಕುರರಕುಲತುಂಡಖಂಡಿತಮರಿಚಲತಾಪ್ರಚಯರುಚಿರನವಪಲ್ಲವದಿಂ . . . ಸೊಗಯಿಸುಗುಂ (ಕಾದಂಪೂ. ೯೩); ಮರಿಚವ್ಯಾಕೀರ್ಣವರ್ಣಂ ಕುರರತನುವಂ . . . ಕೊರ್ವಿಸೆ ಸೊಗಯಿಪುದೀ ಕಾನನೋದ್ದೇಶಂ (ಪುಶ್ಯ.ಕೃ. ೩-೬೯). [ಸಂ.]

**ಮರಿದುಂಬಿ** 'ಮಱಿದುಂಬಿ' ನೋ.

ಮರಿಪಿಟ್ಟು (ನಾ). ಒಂದು ಬಗೆಯ ಆಭರಣ (?) : ಮುಡಿಯೊಳಿಡುವ ಮಾಲೆಗಳುಂ ಕಿವಿಯೊಳಿಡುವೋಲೆಗಳುಂ ಮರಿಪಿಟ್ಟು [ಶಾಶಾಂ. ಮರೆವ ಪಟ್ಟ] ಅರುಪಿಂಗಳ]ಗಳುಮಿಟ್ಟುಕೊಳ್ವ ಬೊಟ್ಟುಗಳುಂ ಮಿಡಿವ ಕಾಡಿಗೆಗಳುಂ . . . ಮರಿಪಿಟ್ಟುಗಳಿಂ ತೀವುವ ನನೆಯಕ್ಕಿಗಳುಂ . . . ಎಸೆಯೆ (ಅಂಶಾಶ. ೬-೬೮ ವ). [ ? ]

**ಮರಿಪುಗೊಳ್** (ಕ್ರಿ). ಸುವಾಸನೆಯನ್ನು ಪಡೆ : ಕಂಪಿನ ಕಣಿಯ ನೊಡೆದಂತೆ ಕೆಂಪಿನ ಕಂಪಿನ ಮಂಜರಿಯಂತೆ ಮಂಜರಿಸಿ ಮಗಮಗಿಸಿ ಮರಿಪುಗೊಂಡು ಸೊಬಗು ಕೊಂಬುಗೊಂಡರಿಸಿನದ ಕೊಂಬುಗಳಂ ಸೊಪ್ಪುಗಟ್ಟಿ (ಅಂಶಾಶ. ೦೨-೬೭ ವ). [ <ಮರು₂ + ಕೊಳ್₁]

**ಮರಿಮಗ** 'ಮಱಿಮಗ' ನೋ.

**ಮರಿಮಗಳು** (ನಾ). ಮೊಮ್ಮಗನ ಮಗಳು ; ಪ್ರಪೌತ್ರಿ : ಇವಳು ಅವರ ಮರಿಮಗಳು (ರೂಢಿ). [ಮರಿ (<ಮಱಿ)+ ಮಗಳು(<ಮಗಳ್)]

**ಮರಿಮಿಂಚು** (ನಾ). ಮಿಂಚಿನ ತುಂಡು : ಚಿಮ್ಮಿದುದು ಜಿಂಕಿಮರಿಯೊಂದು . . . ಕರಿಮುಗಿಲ್ಗಳ್ಬದಿಂದೊಗೆವ ಮರಿಮಿಂಚಿನಲ್ (ಶಶ್ಯಾಂಗ. ೩-೬೩). [ ಮರಿ (<ಮಱಿ) + ಮಿಂಚು₂ ]

**ಮರಿಮೀಸು** 'ಮಱಿಮೀಸ್' ನೋ.

**ಮರಿಮೊಮ್ಮ** (ನಾ). ಮೊಮ್ಮಗನ ಮಗ: ನಿನ್ನಪ್ಪ ಮುತ್ತಪ್ಪ ಮುತ್ತಜ್ಜರೆಲ್ಲರುಂ . . . ನಿನ್ನ ಮಗ ಮೊಮ್ಮ ಮರಿಮೊಮ್ಮರೊಳು ಜೀವಿಪ್ಪರ್ (ಮುಂಕುಕ. ೩೪೯). [ಮರಿ (< ಮಱಿ) + ಮೊಮ್ಮ ( <ಮರ್ಮ₁)]

**ಮರಿಯಸೆ** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀ ಬಿಜಯಿತನು ಮರಿಯಸೆಯೊಳ್ ಭಗವತಿಯಂ ಪದಿಷ್ಠಗೆಯ್ದಿದೊಡೆ (ಬ್ಯಾಅ. ೦೬೨೯, ೩೮-೨; ೩ಹಯ ೫೩). [ ? ]

**ಮರಿಯಾದಿ** 'ಮರಿಯಾದೆ' ನೋ.

**ಮರಿಯಾದೆ**, **ಮರಿಯಾದಿ** (ನಾ). ೧. ಎಲ್ಲೆ; ಗಡಿ; ಸೀಮೆ : ಮರಿಯಾದೆಗಿಕ್ಕಿದ ಬೆಟ್ಟವಿದ್ದುದು ಮಾಲ್ಯವಂತಗಿರಿ (ಅಬ್ದಾಸ. ೩-೩೨). ೨. ಗೌರವ; ಮನ್ನಣೆ : ಭೂತಳಾಧಿಪ ಮುನಿದು ಪೇಳೆನಿದರ್ದನೆಂಬೆನೀತಗಿದು ಮರಿಯಾದೆಯೆನೆ (ಜಕಾ. ೦೦-೯); ನಿಮ್ಮೊಳಿಹುದೆಮಗಾವ ಮರಿಯಾದೆಗಳು ದೂರದ ಸೇವೆ ತಾ ನಮಗುಚಿತವೆಂದಮ (ಶ್ರಕುಅ. ೩-೩೨). ೩. ಅರ್ಹತೆ; ಯೋಗ್ಯತೆ; ಔಚಿತ್ಯ : ಅವರವರ ಮರಿಯಾದೆ ವೇಳೆಯೊಳವರವರ ಸತ್ಕರಿಸಿ (ಶಶಶ. ೩-೩೦), ೪. ಮಾನ್ಯ; ಕೊಡುಗೆ : ಹಂನೆರಡು ಹೊಂನ ಮರಿಯಾದೆ ಕೋಲುಕೋಳಗ ದೇವರಿಗೆ. . . ಕೊಟ್ಟರು (ಅಶಾ. XXIII, ೦೯೩-೬೦; 1256). ೫. ಪದ್ಧತಿ ; ನಿಯಮ ; ಸಂಪ್ರದಾಯ : ಈ ಮರಿಯಾದೆಯನಬೆವ್ವೊರ್. . . ಕೊನ್ದಾರ್ (ಎಕ. VI, ಕೊಪ್ಪ. ೩೯-೦೯; 675); ವಿಟ್ಟು [ಬಿ]ದಿರೂಸ್ವರ್ಗಗ್ಗಸ್ತೆಜೀಯ ಮರಿಯಾದೆ ಕೊಟ್ಟರ್ (ಎಕ. III (R), ತಿಂಶಪ. ೦೨೯-೯; 810); ಆ ಮರಿಯಾದೆಯಲ್ಲಿ ಬಿಬಿದೊಳಂ ಕುಳದೊಳಂ ಕ್ಷಳದೊಳಂ ಲಕಾರದೊಳಂ ಪ್ರಾಸಕ್ಕೆ ಸಲ್ಲದು (ಕಮಶಾ. ೯೦). ೬. ರೀತಿ ; ತರಹ : ಎಲಚಿಯ ತನಿವಣ್ಣಿನ ಮರಿಯಾದೆಯ ಕದರಗೆ . . . ಕಣ್ಣವಲ್ಲಯೆಂಬರು (ಅಶ್ವಕ್ಕ. ೨-೨೦ ಟೀಕು); ಗುಲುಗಂಜಿಯ ಮರಿಯಾದೆಯಲ್ಲಿ ಒಳಗೆ ವಿಷವ ತುಂಬಿಕೊಂಡು, ಹೊರಗೆ ರಮ್ಯವಾದಂಥಾ ಸ್ತ್ರೀಯರುಗಳಲ್ಲಿ ಮನುಷ್ಯನು ಹೇಗೆ ವಿಶ್ವಾಸವ ಮಾಡಬೇಕು ? (ಬಶ್ವಂ. ೬೯-೦೯). **ಮರಿಯಾದಿ** : ೫. ಬಣಗಾವುಣ್ಣ ಬಾಳ್ಗಟ್ಟು ಮರಿಯಾದಿಯೊಳೆ ಸಲ್ವುದು (ಎಕ. IV (R), ಶಾಕುರಾ. ೨೪೬-೦೦; ?). [< ಸಂ. ಮರ್ಯಾದಾ]

**ಮರಿಯಾನೆ** 'ಮಱಿಯಾನೆ₁' ನೋ.

**ಮರಿಯಿಕ್ಕು** (ಕ್ರಿ). ೧. (ಪ್ರಾಣಿ ಪಕ್ಷಿಗಳು) ಮರಿಯನ್ನು ಹಾಕು,— ಈಯು : ಹಲವು ಹಾಡಿನ ಹಕ್ಕಿ ಹಲವು ಭಾವದ ಹಕ್ಕಿ ಬಂದಿಲ್ಲಿ ಬೀಡನು ಬಿಟ್ಟು ಚಿಲಿಪಿಲಿಯೆನುತಿವೆ ಮರಿಯಿಕ್ಕಿ ಮುದವುಕ್ಕಿ (ಅಂಶಾಶ. ೬೩-೪). ೨. (ಅಲಂ) ಮುಂದುವರಿ; ಸಾಗು : ಮುಂದೆ ಮಾತು ಮರಿಯಿಕ್ಕಿದವು (ಕಂದುಶಿ. ೬೩). [ಮರಿ (< ಮಱಿ) + ಇಕ್ಕು]

**ಮರಿಹಕ್ಕಿ** 'ಮಱಿವಕ್ಕಿ' ನೋ.

**ಮರೀಚ** (ನಾ). = ಮರಿಚ : ಪಲ್ಲವಿಕೆಯಿಂ ಭವನಹರಿಣಂಗಳ್ಗೆ ಮರೀಚ ಪಲ್ಲವದಳಂಗಳಂ ನೀಡಲುಂ. . . ಪೇೞ್ವ ಮನೋಹರಾಲಾಪಂಗಳಂ ಕೇಳುತ್ತುಂ (ಶಾಂತೀಪು. ೧೧೧೬). [ಸಂ.]

**ಮರೀಚಿ** (ನಾ). ೧. ಕಿರಣ ; ರಶ್ಮಿ : "ಉಸ್ರಃ . . . ಮರೀಚಿಃ . . . ಗೌಃ—ಈ ೩೨ ರಶ್ಮಿಗಳ ಪೆಸರ್" (ಶಬ್ದಮ. ೯-೩೯) ; ಪ್ರಚಂಡ ಮಾರ್ತಾಂಡನಲರ್ಚುಗೆನ್ನ ಹೃದಯಾಂಬುಜಮಂ ನಿಜವಾಙ್ಮರೀಚಿಯಿಂ (ಶಂಕಪು. ೧-೪); ದಿನಕರಮರೀಚಿಯಿಂದಾದಪ್ಸರಸಿಯೊಳುದಿಸಿದ ಗೌರಿಗಂ . . . ಹಂಸಂಗಂ ಮಗಳಾಗಿ ಮಹಾಶ್ವೇತೆಯೆಂಬ ಪೆಸರಿಂ ನೆಗೞ್ತೆವೆತ್ತಳ್ (ಕಾದಂಪು. ೬೯೪). ೨. ಬೆಳಕು ; ಕಾಂತಿ : ತೋರಮುತ್ತಿನ್ನೈಸರದ ಮರೀಚಿಯಿಂ ಸಿರಿಯ ತಾಯ್ವನೆ ರಾಮನ ಪೇರುರಂ ಮನೋಹರ ಮೆನಿಸಿತ್ತು (ಶಂರಾಪ. ೩-೧೫೪). ೩. ಬಿಸಿಲುಗುದುರೆ ; ಮೃಗಜಲ : ಬಯಲ ಮಱಿಯಲಡಗಿರ್ದ ಮರೀಚಿಯಂ[ಪಾಠಾಂ. ಮರೀಚನಂ, ಮರೀಚಕನಂ]ತೆ . . . ಗುಹೇಶ್ವರಾ ನಿಮ್ಮ ನಿಲವು (ಅವಚಂ. ೧-೪); ಬಾಂಬೊಳೆ ಬತ್ತಿತ್ತು ಮರೀಚಿ ಪೊಣ್ಮದುದರಣ್ಯಂ ಬೆಂದುದಾ ಗ್ರೀಷ್ಮದೊಳ್ (ರಾಜಶೇ. ೫-೩೬). ೪. ಕೃಪಣ; ಜಿಪುಣ. ೫ ಸ್ವಾಯಂಭುವಮನುವಿನಿಂದ ಸೃಷ್ಟಿಯಾದ ದಶಪ್ರಜಾಪತಿಗಳಲ್ಲಿ ಅಥವಾ ಬ್ರಹ್ಮನ ಮಾನಸ ಪುತ್ರರಲ್ಲಿ ಒಬ್ಬ ಮಹರ್ಷಿಯ ಹೆಸರು : "ಕಪಿಲಂ ಮರೀಚಿ . . . ಸುಮಾಂಡವ್ಯರೆಂದು ತಪಗೆಯ್ದು ಮುಖ್ಯಋಷಿಯರೆನಿಕ್ಕು" (ಜಂಗರಾ. ೬೬-೧೧); ಅತ್ರಿ . . . ಮರೀಚಿ . . . ಉಪಮನ್ಯು ಮೊದಲಾದಷ್ಟಾಶೀತಿಸಹಸ್ರಋಷೀಶ್ವರರ್ಗನಂತಾಶ್ರಯಂಗಳುಂ (ಶಿವೇಳ. ೨೧೬). [ಸಂ.]

**ಮರೀಚಿಕಾಜಲ** (ನಾ). ಸೂರ್ಯನ ಕಿರಣಗಳಿಂದುಂಟಾಗುವ ನೀರಿನ ಭ್ರಮೆ ; ಬಿಸಿಲುಗುದುರೆ : "ಬಿಸಿಲ್ಗುದುರೆಯುಮಿರದೆ ಬಯಲ್ಗೊಱೆ ಮರೀಚಿಕಾಜಲಮಕ್ಕುಂ" (ಕಬಿಕಂ. ೪೨); ಮರೀಚಿಕಾಜಲದ ವಳಿಯಂತೆ . . . ಆ ಸಂಗ ನಿಃಸಂಗ ಐಕ್ಯಸ್ಥಲ (ಶೂನ್ಯಸಂ. ೧೧೩-೪೪೬); ಪರಿವೃತ್ತಿರ್ಪ ಮರೀಚಿಕಾಜಲ . . . ತೋಱುವ್ಯೆಸಿರಿ ಪುಲ್ಲಗ್ರದ ತುಂತುಱ್ಱಿ (ಸೋಮೇಶ. ೪೦). [ಸಂ.]

**ಮರೀಚಿಕೆ** (ನಾ). = ಮರೀಚಿಕಾಜಲ : ನೀರಡಿಕೆಗೆ ಮರೀಚಿಕೆಯಿಂದ ತಣಿವಹುದೆ (ಕೌಶಿರಾ. ೩೮-೧೨); ಜಳಜಸಖಂ ಜಳಕಿರಣಾವಳಿಯಂ ಪಿಳಿದಂತೆ ಪೋಲ್ ಮರೀಚಿಕೆ[ಪಾಠಾಂ. ಕಿ] ಮೆಱೆಗುಂ (ರಾಜಶೇ. ೫-೩೯). [ಸಂ. ಮರೀಚಿಕಾ]

**ಮರೀಚಿಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು : ಸನತ್ಕುಮಾರಪುರಾಣ . . . ಮರೀಚಿ[ಪಾಠಾಂ. ಮರೀಚ, ಮಾರೀಚ, ಮಾರೀಚ್ಯ]ಪುರಾಣ ಭಾರ್ಗವಪುರಾಣಮೆಂಬವೇ ಆಯಾಯ ನಾಮಧೇಯ ಮುಳ್ಳವರಿಂ ನಿರೂಪಿತಂಗಳಾದ ಹದಿನೆಂಟು ಉಪಪುರಾಣಂಗಳು (ಶಿವೇಳ. ೯). [ಸಂ.]

**ಮರೀಚಿಮಾಲಿ** (ನಾ). ಕಿರಣಗಳಿಂದ ಆವೃತನಾದವನು ; ಸೂರ್ಯ : ದ್ವಾದಶಗಣಸರಸ್ಸರೋಜವಿದಳನಶೋಭಾಪ್ರಭಾವಪ್ರಸವಪಾರೀಣದಿವ್ಯವಚನ ಮರೀಚಿಮಾಲಿರೋಚಿರ್ನಿಚಯತ್ರಿಜಗಚ್ಚೂಡಾಮಣಿ (ಶಾಂತೀಪು. ೯-೬೯ ವ). [<ಸಂ. ಮರೀಚಿಮಾಲಿನ್]

**ಮರು₁** 'ಮಱು₁' ನೋ.

**ಮರು₂** (ನಾ). ಸುವಾಸನೆಯ ಎಲೆಗಳನ್ನುಳ್ಳ ಒಂದು ಬಗೆಯ ಸಸ್ಯ ; ಮರುಗ : "ಮರು ಮರುವಕಂ ಫಣಿರ್ಜಕವಕ್ಕು" (ಜಂಗರಾ. ೩೯-೨೬). [< ಸಂ. ಮರುವ./ತಮಿ. ಮರು]

**ಮರು₃** (ನಾ). ೧. ನೀರಿಲ್ಲದ ಪ್ರದೇಶ ; ಮರಳುಗಾಡು : "ಮರುಃ, ಧನ್ವಾ—ಈ ೨ ನೀರಿಲ್ಲದ ಭೂಮಿ" (ಶಬ್ದಮ. ೨೬-೩) ; ಸಂಕಷ್ಟಗಳ ಮರುವ ದಾಂಟಿಸಿ ಪಾರಗಾಣಿಸುವ ಒಂಟೆ ಇವನು (ಗೋಲ್ಗೊಥಾ. ೨-೪೬) ; ಜೀವನದ ದೃಶ್ಯ ಮರುವಿನ ಬಿಸಿಲ್ಗುದುರೆ (ಮಂಕುತಿ. ೯೧೯). ೨. ಶಿಲೆ; ಬಂಡೆ. ೩. ಕೆಂಪುಗೋರಂಟಿ ಗಿಡ. ೪. ಒಂದು ದೇಶ ಮತ್ತು ಅಲ್ಲಿ ವಾಸಿಸುವ ಜನ : ಹಮ್ಮೀರ ಡೊಕ್ಕಾರ ತುರುಷ್ಕ ಮರುಪ್ರಭೃತಿ ಭೂಪಾಲಕರಿಂ ಭಯಾನಕರಸಮುಂ . . . ನೆಗಟುತ್ತುಮಿರೆ (ಜಗಂ. ೨-೩೯ ವ) ; ವಿದರ್ಭ ಸೌರಾಷ್ಟ್ರ ಕುರು ಮರು ಪಂಚಪಾಂಚಾಳ (ಎಕ. V. ಬೇಲೂರು. ೩-೯೩; 1397 ?). [ಸಂ.]

**ಮರುಂಗುಳಿ** (ನಾ). (?) : ಹುಲಿಗಿಲ ಬೇರ್ . . . ಕಡುಸಿಗೆಯ ಬೇರ್ ಮರುಂಗುಳಿಯೊಳಗ್ಗಲಿಸಿರೆಯುರುಜೆಮಕ್ಕು ಬಲವರ್ಧಮಕ್ಕುಮಗ್ನಿದೀಪನ ಮಕ್ಕುಂ (ಕಲ್ಯಾಕಾ. ೪-೨೨). [ ? ]

**ಮರುಕ** 'ಮಱುಕ' ನೋ.

**ಮರುಕಗೊಳ್ಳು** (ಕ್ರಿ). ಕನಿಕರವನ್ನು ತೋರು ; ದಯಮಾಡು : ನಮ್ಮ ಸ್ಥಿತಿಯನ್ನೂ ಅಂತಸ್ತನ್ನೂ ಕಂಡುಕೊಂಡು ಅವರು ನಮ್ಮ ಮೇಲೆ ಮರುಕಗೊಂಡರು (ಕೃಕಾಶ. ೧೧೬).
[ಮರುಕ (< ಮಱುಕ) + ಕೊಳ್ಳು₁ (< ಕೊಳ್₁)]

**ಮರುಕರ** (ನಾ). ಒಂದು ದೇಶದ ಹೆಸರು : ಮರುಕರವಿಷಯೇ ಗ್ರಾಮಂ ಕೂಡಲೂರನ್ನಾಮಸಂಜ್ಞಿತಮ್ (ಪ್ರಾಲಿಂ. ೧೯೩೦, ೯೯-೧೦ ; 475). 'ಮಱುಗರೆ' ಪರಾ. [ ? ]

**ಮರುಕಲುಗಿಡ** (ನಾ). ಒಂದು ಬಗೆಯ ಸಸ್ಯ : (ಪ್ರಾಶಿಗ. ೫೬-೧೧೧೯).
[ಮರುಕಲು₁ + ಗಿಡ (< ಗಿಡು)]

**ಮರುಕಳಿ** 'ಮಱುಕಳಿ' ನೋ.

**ಮರುಕಳಿಕೆ, ಮರುಕೊಳಿಕೆ** (ನಾ). ಮತ್ತೆ ಬರುವಿಕೆ ; ಪುನರಾವರ್ತನೆ : ಮೊದಲ ಚರಣದಲ್ಲಿ ಮೂಲದ ಪ್ರಾಸದ ಮರುಕಳಿಕೆ ಹೋಯಿತು (ಪಾಶಗೀ. ೯೮). **ಮರುಕೊಳಿಕೆ** : ಗತಜೀವನ ಅದೆಷ್ಟೇ ಸಹಜವಾಗಿರಲಿ . . . ಪ್ರಸಕ್ತ ಪರಿಸ್ಥಿತಿಯಲ್ಲಿ ಅದರ ಮರುಕೊಳಿಕೆಯೇ ಸಾವಿಗೀಡೆಯಾಗು ವಂತಿತ್ತು (ಕುಪರು. ೩೯೩).
[ ಮರುಕಳಿಸು (< ಮಱುಕಳಿಸು) +—ಇಕೆ ]

**ಮರುಕಳಿಸು** 'ಮಱುಕಳಿಸು' ನೋ.

**ಮರುಕು₁** 'ಮಱುಗು' ನೋ.

**ಮರುಕು₂** 'ಮಱುಕ' ನೋ.

**ಮರುಕೂಳೆ** 'ಮಱುಕೂಳೆ' ನೋ.

**ಮರುಕೆದೆ** 'ಮರುಗೆರ್ದೆ' ನೋ.

**ಮರುಕೊಳಿಕೆ** 'ಮರುಕಳಿಕೆ' ನೋ.

**ಮರುಕೊಳಿಸು** 'ಮಱುಕಳಿಸು' ನೋ.

**ಮರುಗ, ಮರುಗು₃** (ನಾ). ಸುವಾಸನೆಯ ಎಲೆಗಳುಳ್ಳ ಒಂದು ಬಗೆಯ ಸಸ್ಯ : "ಸಮೀರಣಃ, ಮರುವಕಃ . . . ಜಂಬೀರಃ — ಈ ೫ ಅಜ್ಜಗೆ. ಕೆಲಕಬರು ಮರುಗವೆಂಬರು" (ಶಾಶಬ್ದ. ೧೧೯); ಮರುಗ ಮಲ್ಲಿಗೆ ಪಚ್ಚೆ ಮುಡಿವಾಳಕ್ಕೆ ಪರಿಮಳದುದಕವನೆಱೆದವರಾರಯ್ಯ (ಸುಜಾದೇ. ೨೯ ೧೧-೩); ಮರುಗ ಮಾಲತಿ . . . ಕರವೀರಾದಿ ಗಿಡುಲತೆಯ ಪರಿಪರಿಯ ಹೂದೋಟಗಳ ಹೊಯ್ದೊಱಸಿದನು (ಕೊಡರಾ. ೫-೪-೧೬); ಮರುಗವೂ ನಮ್ಮ ದೇಶದ ಗಿಡವಲ್ಲ (ಪಾಶಗಿ. ೩೯). **ಮರುಗು₃** : ದವನಂ ಮರುಗಿನ ಮಡಿಯೊಂದೊಂದಱಲಯ್ದು ಈ ಧರ್ಮ್ಮವನಯ್ನೂತ್ತಱುವರುಂ ಕಾದು ನಡೆಯಿಸುವರ್ (ಕೌಇಷ. XI-i, ೧೧೮-೨೦; 1069).
[< ಪ್ರಾ. ಮರುಅಗ, ಮರುಅಅ./ ಸಂ. ಮರುವಕ]

**ಮರುಗಳಿಗೆ** 'ಮಱುಗಳಿಗೆ' ನೋ.

**ಮರುಗಿಸು** 'ಮಱುಗಿಸು' ನೋ.

**ಮರುಗು₁** 'ಮಱುಗು' ನೋ.
**ಮರುಗು₂** 'ಮಱುಕ' ನೋ.
**ಮರುಗು₃** 'ಮರುಗ' ನೋ.
**ಮರುಗೆರ್ದೆ, ಮರುಕೆದೆ** (ನಾ). ಕನಿಕರವುಳ್ಳ ಮನಸ್ಸು; ದಯಾರ್ದ್ರ ಹೃದಯ : ಸಂತೈಸಿದನ್ ಮರುಗೆರ್ದೆಯ ರಾಘವೇಂದ್ರಂ (ಶ್ರೀರಾಮ. ೩೦೫-೩೫). **ಮರುಕೆದೆ:** ಆ ಮರುಕೆದೆಯ ಬಿಲ್ಲುಸುಳೆ ತನ್ನ ಕೋಮಲಕರದ ಕಿಸಲಯೋಪಮಮೃದುಲರೋಚಿಯ ಬೆರಲ್ಗಳಿಂ ಸೋಂಕಿ ಸಂತಯ್ಸುದುದೊ ಸೀತೆಯ ತಪಃಕ್ಲಾಂತಚರಣಾರವಿಂದಗಳಂ (ಶ್ರೀರಾಮ. ೯೯೬-೭). [ಮರುಗು₂ (<ಮಱುಕ) + ಎರ್ದೆ]
**ಮರುಚಣ** (ನಾ). ಮುಂದಿನ ಕ್ಷಣ; ತಕ್ಷಣ : ಬಂದು ಈ ಚಣದೊಳು ಸಂದು ಮರುಚಣದೊಳು ಪ್ರತಿಭೆಯು ನೀ ಕಾಡಬಹುದೆ (ಶಂಖಾತ. ೨೦೦-೩೬); ಹೇಸಿ ಜನ್ಮಕೆ ರೋಸಿ ಆತ್ಮಹತ್ಯೆಗೆ ಒಲಿವೆ ಮರುಚಣವೆ ಕೇಳುವೆನು ಜೀವನದ ಗಾನ (ಜಿಜ್ಞಾಸೆ.೩-೮). [ಮರು₁ (<ಮಱು₁) + ಚಣ₁]
**ಮರುಚಲು** 'ಮಱುಚಲು' ನೋ.
**ಮರುಚುನಾವಣೆ** (ನಾ). ಸಾರ್ವತ್ರಿಕ ಚುನಾವಣೆಯ ನಂತರ ಕೆಲವು ಸಲ ಬೇರೆಬೇರೆ ಕಾರಣಗಳಿಗಾಗಿ ಮತ್ತೆ ನಡೆಯುವ ಚುನಾವಣೆ : ಒಬ್ಬ ಸದಸ್ಯ ತೀರಿಕೊಂಡುದರಿಂದ ಮರುಚುನಾವಣೆ ನಡೆಯಬೇಕಾಗಿದೆ (ಲೂ). [ಮರು₁ (<ಮಱು₁) + ಚುನಾವಣೆ]
**ಮರುಚ್ಚಾಪ** (ನಾ). ಗಾಳಿಯಂತೆ ಘನಸ್ವರೂಪವಿಲ್ಲದ ಬಿಲ್ಲು; ಇಂದ್ರಚಾಪ : ಮದನವೇಗೆ ತತ್ಪತಿಗೆ ಮರುಚ್ಚಾಪದೊಳವುಧಿಪ ಮಿಥ್ಯಾರೂಪದೊಳಂ ಮಾಡದಿರ್ ಗುಣಾರೋಪಣಮಂ ಎನೆ (ಕಂಠೀರ. ೯-೩೮); ಮರುಚ್ಚಾಪಮೆಂಬ ವಿಚಿತ್ರಾಂಬರದೊಂದು ಚೆನ್ನಮಿಳಿಯುಂ ಮಿಂಚೆಂಬ ಕೊಂಬುಂ ಕರಾಳವೆನಲ್ ಗರ್ಜಿಸಿದತ್ತಗಲ್ದಿನಿಯರಂ ಕಾರೆಂಬ ಮಾರದ್ವಿಪಂ (ಜಗ. ೯-೨೨). [ಸಂ.]
**ಮರುಚ್ಛಿಲ್ಪಿ** (ನಾ). ದೇವತೆಗಳ ಶಿಲ್ಪಿ : ಕಲ್ಪಜಪತಿ ಬೆಸಸೆ ಮರುಚ್ಛಿಲ್ಪಿಗಳುದ್ಯಾನಗೇಹಮಂ ಸಮೆದರತಿಸ್ವಲ್ಪಸಮಯದೊಳ್ (ಕುವಲ. ೦೩-೩೬). [ಸಂ. ಮರುಚ್ಛಿಲ್ಪಿನ್]
**ಮರುಜ** (ನಾ). ೧. ಒಂದು ಬಗೆಯ ಪರಿಮಳದ್ರವ್ಯ; ನಖಿ ಎಂಬ ಗಂಧದ್ರವ್ಯ. ೨. ಒಂದು ಬಗೆಯ ಮರ : (೦). [ಸಂ.]
**ಮರುಜನ್ಮ** (ನಾ). ಇನ್ನೊಂದು ಹುಟ್ಟು; ಪುನರ್ಜನ್ಮ : ಹೊಸಬನಾ ನರನು ಕರಣತಪನೆಗಳಳಿಯೆ, ಕಾರಣವದೇನಿರಲಿ ಮರುಜನ್ಮವಾತ್ಮಂಗೆ (ಮಂಕುತಿ. ೭೬೬). [ಮರು₁ (<ಮಱು₁) + ಜನ್ಮ]
**ಮರುಜೀವಣ** 'ಮಱುಜೀವಣ' ನೋ.
**ಮರುಜೀವಣೆ** 'ಮಱುಜೀವಣೆ' ನೋ.
**ಮರುಜ್ಜವ** (ನಾ). ಗಾಳಿಯ ರಭಸ; ವಾಯುವೇಗ : ಮರುಜ್ಜವದಿನಜ್ಜಾಸುರಂ ಮಸಗಿ ರಾಸಭಂ ಬಂದುಮಾ ವಾಸವಸೈನ್ಯಮಂ . . . ಪಡಲ್ವಡಿಸುತ್ತುಮಿರೆ (ಜಗ. ೯-೩೯ ೩). [ಸಂ.]
**ಮರುಟಪಾಲು** (ನಾ). ಪತ್ರ ಮುಟ್ಟಿದ ತಕ್ಷಣವೇ ಬರೆಯುವ ಕಾಗದ; ಮಾರೋಲೆ : ಮರುಟಪಾಲಿಗೆ ಬರೆದು ತಿಳಿಸಿ (ಹುಚ್ಚುಮ. ೯೦). [ಮರು₁ (<ಮಱು₁) + ಟಪಾಲು]
**ಮರುತ** (ನಾ). ೧. ಗಾಳಿ; ವಾಯು : ಮರುತಸುರುಬುನು ತಾಳು ತೀಳುತೋಲಾಡುತ್ತ ವಿರಮಿಸಾ ಲೀಲೆಯಲಿ (ಮಂಕುತಿ. ೯೦೪). ೨. ಗಾಳಿಯ ಅಧಿದೇವತೆ; ವಾಯುದೇವ : "ಸುರರಾಜನಗ್ನಿ . . . ಮರುತಂ ಕುಬೇರನೀಶಂ ದಿಶಾಧಿಪರು" (ಮಂಗರಾ. ೦೭-೦೪). ೩. ಒಂದು ಬಗೆಯ ವಾಹನ; ೪ ಭರತನ ವಾಹನಕ್ಕೆ ಇದ್ದ ಹೆಸರು ಇರಬಹುದು : ಮರುತವನೇಜ್ ಬಪ್ಪವನಿಗೆ ತಳುವೆಂತೆ (ಭರತ. ೯೯-೩೦). ೪. [ಛಂದ] ಒಂದು ಗಣದ ಹೆಸರು; ಸಗಣ (U U –) : "ಗುರು ಕಡೆಯೊಳಿರಲು ಮರುತನಕ್ಕು" (ಮಂಗರಾ. ೦೦೭-೨೦). [ಸಂ.]
**ಮರುತಕ** (ನಾ). = ಮರುತ ೧ : ನಭದೊಳ್ ಪೂವಟ್ಟೆ ಭೂಮಿಯೊಳ್ ಮರುತಕಂ . . . ಒಪ್ಪುತ್ತಿರೆ ಬಂದಂ ಲೋಕನಾಥಂ ಸ್ವಯಂಪ್ರಭತೀರ್ಥೇಶ್ವರಂ (ಶಾಂತಿಪು. ೦-೯೦). [ಸಂ.]
**ಮರುತಜ** (ನಾ). ಗಾಳಿಯ ಅಧಿದೇವತೆಯಾದ ವಾಯುವಿನ ಪುತ್ರ; ಹನುಮಂತ : ಬಾಗುರೇ ಪೂತು ಮರುತಜ (ಕೌಶಿಕ. ೩೬-೩೯). [ಸಂ.]
**ಮರುತದಂಡಾವರ್ತ** (ನಾ). ವರ್ತುಲಾಕಾರವಾಗಿ ಸುತ್ತಿಬರುವ ಗಾಳಿ; ಸುಂಟರಗಾಳಿ : ಅವುದೇನಿರದ ಬಯಲಿನೊಳೊಂದು ಮರುತದಂಡಾವರ್ತ ತೋರುವಂತೆ (ಮಹೀಶ. ೨-೦೨). [ಸಂ.]
**ಮರುತಪಂಚಕ** (ನಾ). ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎಂಬ ಪಂಚವಾಯುಗಳು; ಪಂಚಪ್ರಾಣಗಳು : ಧರಣಿ ಮೊದಲೆನೆ ಭೂತಪಂಚಕ ಮರುತಪಂಚಕ ವಿಷಯುಮಿಂದ್ರಿಯ ಕರಣ ವಿಪ್ಪತ್ತೈದು ತತ್ತ್ವಾತ್ಮಕನ ಚಿಂತಿಸಿದ (ಉದ್ಭಾಟ. ೩-೦). [ಸಂ.]
**ಮರುತಾಸ್ತ್ರ** (ನಾ). ವಾಯುಮಂತ್ರವನ್ನು ಅಭಿಮಂತ್ರಿಸಿ ಬಿಡುವ ಬಾಣ : ಖಳ ಮರಳಿ ಮರುತಾಸ್ತ್ರವನು ಬಿಟ್ಟನು (ಕೌಶಿಕ. ೩೬-೩೭). [ಸಂ.]
**ಮರುತ್ಕುಜ** (ನಾ). ದೇವತರು; ಕಲ್ಪವೃಕ್ಷ : ವಿಜಿಗೀಷುವೆನಿಸಿದಾ ಭೂಭುಜವಲ್ಲಭ ಮೇರುಮೇಖಲಾಲಕ್ಷ್ಮಿ ಮರುತ್ಕುಜಮಂ ಪಡೆದುದೊ ಪೇಟೆಸೆ ವಿಜಯಾಂಬಿಕೆ ಪಡೆದಳಜಿತಭಟ್ಟಾರಕರಂ (ಕಂಠೀರ. ೦೦-೬೪). [ಸಂ.]
**ಮರುತ್ತನಯ** (ನಾ). ೧. ಗಾಳಿಯ ಅಧಿದೇವತೆಯಾದ ವಾಯುವಿನ ಮಗ. ೨. ಹನುಮಂತ. ೩. ಭೀಮಸೇನ : ತತ್ತನಯಂ ಘನಶೌರ್ಯಮರುತ್ತನಯಂ ವಿತರಣಾಂಶು ಮತ್ತನಯಂ . . . ಬೊಪ್ಪದೇವಭೂಪಂ ನೆಗೞ್ದಂ (ಎಕ. XI, ದಾವ. ೩೨-೩೭ ; 1160). [ಸಂ.]
**ಮರುತ್ತರಂಗಿಣಿ** (ನಾ). ದೇವಲೋಕದ ನದಿ; ದೇವಗಂಗೆ; ಮೃಡಂಪಾವ್ ರ್ಸ ತೀ ಸ್ಪ್ಸ್ಯ ಹೆಯಂ ಬಿಟ್ಟು ಮರುತ್ತರಂಗಿಣಿಯನಂಬಾಲಿಂಗನಂ ಮಾಡುವಂ (ಕಂಠೀರ. ೭-೯೮); ವಂದೇಭೋತ್ತರಮಾಂಟ ಮರುತ್ತರಂಗಿಣೀಜಳಮಂ ಪೂತ್ಕರಿಸೆ (ಧರ್ಮಾ. ೬-೦೦೯). [ಸಂ. ಮರುತ್ತರಂಗಿಣೀ]
**ಮರುತ್ತ್ರಿಕ** (ನಾ). [ಜೈನ] ಘನೋದಧಿ, ಘನವಾತ ಮತ್ತು ತನುವಾತ ಎಂಬ ಮೂರು ವಾತಗಳು : ಅಧನಾದ್ಯನಿಧನಗುಣಯುತಮುದಕ್ತತ್ರಿಮಮದು ಮರುತ್ತ್ರಿಕಾವೇಷ್ಟಿತಂ (ಆದಿಪು. ೦-೯೯). [ಸಂ.]
**ಮರುತ್ಪಥ** (ನಾ). ವಾಯುಮಾರ್ಗ; ಆಕಾಶ : ಮರುತ್ಪಥದೊಳ್ ಮಿಳ್ಳಿಸೆ ಪಟುಗೆ ರಥಂ ರಥಗಳೊಳರ್ದಿರ್ಚಿ ತಾಗಿದುವಾಗಳ್ (ಕಂಠೀರ. ೦೨-೬೮); ಶರುಧಿಯಲ್ಲಿ ವೃಕ್ಷತತಿಯಲ್ಲಿ ಮರುತ್ಪಥದಲ್ಲಿ ಪಂಕಜಾಕರದೆಡೆಯಲ್ಲಿ ತಳ್ತ ತಿಳಿಜೊನ್ನಮಂ (ರಾಜಶೇ. ೦೩-೯೩). [ಸಂ.]
**ಮರುತ್ಪಾಲಕ** (ನಾ). ದೇವತೆಗಳನ್ನು ಕಾಪಾಡುವವನು; ದೇವೇಂದ್ರ : ತ್ರೈಲೋಕ್ಯಪಾಲಕಂ ಗೋಪಾಲಕನಾಗಿರ್ದ ಲೀಲೆಯಂ ಕಂಡು ಮರುತ್ಪಾಲಕನೆನಗಕ್ಷಿಸಹಸ್ರಾಲಂಬನಮಿಂದು ಸಫಲಮೆಂದೀಕ್ಷಿಸಿದಂ (ಜಗ. ೯-೦೦೦). [ಸಂ.]
**ಮರುತ್ಸಖ** (ನಾ). ೧. ವಾಯುವಿನ ಗೆಳೆಯ; ಅಗ್ನಿ. ೨. ದೇವೇಂದ್ರ : "ಬಿಡೌಜಃ . . . ಪುಲೋಮಾರಿ, ಮರುತ್ಸಖಃ– ಈ ೧೬ ಇಂದ್ರನ ಹೆಸರು" (ಶಬ್ದಾ. ೩೬-೩೦). [ಸಂ.]
**ಮರುದಂಪಟ್ಟೆ** (ನಾ). ಒಂದು ಬಗೆಯ ಔಷಧೀ ಸಸ್ಯ : ಹುಲ್ಲು, ಮರುದಂಪಟ್ಟೆ (ಕ್ಷ್ವಶಿ. ೩೭-೦೦೦೩). 'ಮರುದು' ಪರಾ. [?]

**ಮರುದಶನ** (ನಾ). ಗಾಳಿಯನ್ನು ಆಹಾರವಾಗಿ ಉಳ್ಳುದು ; ಹಾವು : ಶರಣಾಗಣಹರಣ ಮರುದಶನಭರಣ (ಶ್ರೀತಾ. ೨೦-೯೨). [ಸಂ.]

**ಮರುದಿಂಡಲು** (ನಾ). ಶೋಭನದ ಮರುದಿವಸ ಮಾಡುವ ಸಮಾರಂಭ : ನಾಳಿನ ಮರುದಿಂಡಲು ಮುಗಿಸಿಕೊಂಡು ಹೋಗುವಿರಂತೆ (ಮೂ). [ಮರು$_1$ (< ಮಱು$_1$) + ದಿಂಡಲು$_2$]

**ಮರುದಿನ** 'ಮಱುದಿನ' ನೋ.

**ಮರುದಿಬ್ಬಣ** (ನಾ). ಮದುವೆಯಿಂದ ಹಿಂತಿರುಗುವ ಬಂಧುಮಿತ್ರರ ಗುಂಪು ; ವಿವಾಹಾನಂತರ ಹಿಂತಿರುಗುವ ದಿಬ್ಬಣ : ದುಗ್ಗಮ್ಮನಿಲ್ಲದ ಪ್ರಯಾಣ ಮದುವಳಿಗೆಯಿಲ್ಲದ ಮರುದಿಬ್ಬಣದಂತೆ (ಗಂಗಾಳ್. ೩). [ಮರು$_1$ (< ಮಱು$_1$) + ದಿಬ್ಬಣ (< ಬಿರ್ದಿನ)]

**ಮರುದಿವಸ** 'ಮಱುದಿವಸ' ನೋ.

**ಮರುದಿಷ್ಟ** (ನಾ). ೧. ವಾಯುವಿಗೆ ಆಪ್ತನಾದವನು ; ಅಗ್ನಿ. ೨. [ಛಂದ] ಒಂದು ಗಣದ ಹೆಸರು ; ಸಗಣ (∪∪–) : ಆಱು ಮಾತ್ರೆಗಳಕ್ಕುಮೋಜೆಯೊಳ್ ಕರಿ ಸಂಖ್ಯಾತದ ಮಾತ್ರೆ ಯುಗ್ಮದೊಳ್ ಮರುದಿಷ್ಟಲಗಂ ತದಂತದೊಳ್ ಬರೆ ವೈತಾಳಿ (ಛಂದೋಂಬು. ೩-೨೦೯). [ಸಂ.]

**ಮರುದು** (ನಾ). ಒಂದು ಬಗೆಯ ಮರ ; ಅರ್ಜುನವೃಕ್ಷ : ಇದರ ದಕ್ಷಿಣಕ್ಕಿರುವ ಮರುದು (ಅರ್ಜುನ) ಮರ (ಜಾನ. ೬). 'ಮರುದಂಪಟ್ಟಿ' ಪರಾ. [ದೇ.೩ ತಮಿ. ಮರುತು]

**ಮರುದೂರ್** (ನಾ). ಒಂದು ಊರಿನ ಹೆಸರು : ಸಮಣರು ಮರುದೂರ ಮಾರನ್ದಿಯರ್ ವದಿಜ್ಞ(?)ದರ್ (ಇಇ. XIV. ೨೩೨-೩೭ ; ೨ ಕಿಯ ೫೫). [? + ಊರ್]

**ಮರುದ್ಗಣ** (ನಾ). ಪ್ರಾಣ, ಅಪಾನ, ವ್ಯಾನ, ಉದಾನ ಮೊದಲಾದ ನಲವತ್ತೊಂಬತ್ತು ವಾಯುಗಳ ಸಮೂಹ : ಪ್ರಾಣಾಪಾನವ್ಯಾನೋದಾನ ಮುಖ್ಯೈಕೋನಪಂಚಾಶನ್ಮರುದ್ಗಣ . . . ಘನಪಾದ್ಯನಿಮಿಷರನು ಸದಾಮರಾಗದಿ ಧೇನಿಪುದು (ಹರಿ. ೩-೩೦). [ಸಂ.]

**ಮರುದ್ಗಿರಿ** (ನಾ). ದೇವತೆಗಳ ಬೆಟ್ಟ ; ಮೇರು : ಮರುದ್ಗಿರಿಯಲ್ಲಿ ಘನಘಟಾವಳಿ ಸುರಿದುದು ಪಯಮಂ ಮೃದಂಗನಿನದಸ್ತನಿತಂ (ಚಂದ್ರ ಪು. ೦೨-೦೩೯). [ಸಂ.]

**ಮರುದ್ದಿಶೆ** (ನಾ). ವಾಯುದೇವತೆಯ ದಿಕ್ಕು ; ವಾಯುವ್ಯ : ಎಸೆದಂ ಮರುದ್ದಿಶೆಯ ಬಾಗಿಲೊಳಿರ್ಪ ಕಪಾಲಿಪ್ಪಿರವಂ (ಕಬಿಕಂ. ೦-೬೨). [ಸಂ. ಮರುದ್ದಿಶಾ]

**ಮರುದ್ವರ** (ನಾ). ದೇವೇಂದ್ರ : ಅನತಿಶಯಪುಣ್ಯಪುಣ್ಯಾರ್ಜಿತತತ್ಪರನಾ ಮರುದ್ವರಂ . . . ಇಂತ್ಯತಂದಂ (ಚಂದ್ರ ಪು. ೯-೩೭). [ಸಂ.]

**ಮರುದ್ವಾದ್ಯ** (ನಾ). ಊದುವ ವಾದ್ಯ ; ಸುಷಿರವಾದ್ಯ : ನಾದೀ, ತುರುವ, ಬಕುರ ಮುಂತಾದ ಮರುದ್ವಾದ್ಯಗಳೂ ಹೆಸರಿಸಲ್ಪಟ್ಟಿವೆ (ಸಂಗೀತ. ೦೦೬). [ಸಂ.]

**ಮರುಧರೆ** (ನಾ). ಮರುಭೂಮಿ ; ಮರಳುಗಾಡು : ಮಳೆ ಹೊಯ್ದ ತೆರನಾಯ್ತು ಮಂಥರೆಯ ಮರುಧರೆಗೆ (ಶ್ರೀರಾಮ. ೨೩-೬೦೭). [ಸಂ. ಮರುಧರಾ]

**ಮರುನುಡಿ$_1$** (ಕ್ರಿ). ಪ್ರತ್ಯುತ್ತರ ಕೊಡು ; ಜವಾಬು ನೀಡು : ತಿರಸ್ಕಾರವನ್ನೆಲ್ಲ ಸ್ಮರಿಸಿಕೊಂಡು ಮರುನುಡಿಯದೆ . . . ಆಲೋಚಿಸುತ್ತಿದ್ದನು (ಕಿಟ್. ೦); ಆಕೆ ಮರುನುಡಿಯದೆ ಒಪ್ಪಿದಳು (ಹಳ್ಳಿ ಜಾ. ೨೫). [ಮರು$_1$ (< ಮಱು$_1$) + ನುಡಿ$_1$]

**ಮರುನುಡಿ$_2$** (ನಾ). ಪ್ರತ್ಯುತ್ತರ ; ಜವಾಬು : ಒಂದುದಿನ ಅವನು ಮರುನುಡಿಯಿತ್ತ (ಹುಸಕೂ. ೦೦). [ಮರು$_1$ (< ಮಱು$_1$) + ನುಡಿ$_2$]

**ಮರುನುಡಿಸು** (ಕ್ರಿ). ತರ್ಜುಮೆಮಾಡು ; ಅನುವಾದಮಾಡು : ಮುಸ್ಲಿಂತತ್ವಗಳನ್ನು ಪಾಶ್ಚಾತ್ಯಭಾಷೆಗಳಿಗೆ ಮರುನುಡಿಸಿ ಹರಡಿದರು (ಇಸ್ಲಾಂಕಿ. ೨೩೩). [ಮರು$_1$ (< ಮಱು$_1$) + ನುಡಿಸು (< ನುಡಿಯಿಸು)]

**ಮರುನ್ನದಿ** (ನಾ). ದೇವನದಿ ; ಗಂಗೆ : ಕಣ್ಗಿಂಬಾದ ಚಾಂದ್ರಪ್ರಭಂ ರೂಪಂ ದಿವ್ಯಪಚೋವಮರುನ್ನದಿಯಿನೆಮ್ಮೊಳ್ ಮಾಟ್ಕೆ ನ್ನೈರ್ಮಲ್ಯಮಂ (ಚಂದ್ರ ಪು. ೦-೦). [ಸಂ. ಮರುನ್ನದೀ]

**ಮರುನ್ನಿಷೇವಣ** (ನಾ). ಗಾಳಿಯನ್ನು ಮಾತ್ರ ಸೇವಿಸುವುದು : ಶಿವ ಶಿವ ಸತ್ತ್ವಮೆಂತಟೊ ತಪಸ್ವಿಗಿವಂಗೆ ಮರುನ್ನಿಷೇವಣಂ ಸಮನಿಸೆ ದಂಡಿಸಿದರ್ಗಡಲೊಳೆದ್ದ್ರಕಂ (ಕಬಿಕಂ. ೯-೮೫). [ಸಂ.]

**ಮರುನ್ಮಾರ್ಗ** (ನಾ). = ಮರುತ್ಪಥ : ಪುಂಡರೀಕಂ ಕಪಿಂಜಲಕಂ ಕೈಗಂಡಲಿಷ್ಟವಿತ್ರನೆ ಬರುತ್ತಿರ್ದಂ ಮರುನ್ಮಾರ್ಗದಿಂ (ಕಾದಂಬ. ೬೯೨). [ಸಂ.]

**ಮರುಪತ್ರ** (ನಾ). ಪ್ರತಿಯಾಗಿ ಬರೆದ ಕಾಗದ ; ಮಾರೋಲೆ : ಐತಾಳರು ಮರುಪತ್ರ ಬರೆದ ಮಾರನೆಯ ದಿನವೇ ಸೋಮಯಾಜಿಯವರು ಕೋಟೇಶ್ವರಕ್ಕೆ ಬಂದರು (ಚೋಮ. ೬೯). [ಮರು$_1$ (< ಮಱು$_1$) + ಪತ್ರ]

**ಮರುಪಾತ** (ನಾ). (ಕರಾ) ಒಂದು ಬಗೆಯ ಗೇಣಿ : ಕಡೆಗೆ ಮುನ್ನೋಟು ಎಂಬಲ್ಲಿ ಮರುಪಾತಕ್ಕೊಂದು ಜಾಗ ಕೊಡುವದಿದೆಯೆಂದು ತಿಳಿದುಬಂತು (ಜಗುಬ. ೬೭). [ ? ]

**ಮರುಪು** (ನಾ). ಖಡ್ಗಯುದ್ಧದ ಒಂದು ವರಸೆ (?) : ರಥದಿಂ ಧುಮುಕಿ ನಿಮಿಷಾರ್ಧದಲಿ ಕೊಂಡನು ಹರಿಗೆ ಖಂಡೆಯವ ಗಮಕದಿಂ ಪದುಪಾಡು ನಿಂದು ಭ್ರಮಿಸಿ ತಿರುಹಿನ ಮರುಪಿನಂದದ ಸಮತೆಯಿಂ ಪುಟನೆಗೆದು ತಿಳಿದನು ಪವನನಂದನನ (ಕರ್ಣಾ. ೬-೯-೨೨). [ ? ]

**ಮರುಪ್ರಯಾಣ** (ನಾ). ಪ್ರಯಾಣದಲ್ಲಿ ಮಧ್ಯೆ ಸ್ವಲ್ಪಕಾಲ ತಂಗಿ ಮತ್ತೆ ಮುಂದುವರಿಸುವ ಪಯಣ ; ಮಧ್ಯೆ ನಿಂತು ಮತ್ತೆ ಬೆಳೆಸುವ ಪ್ರಯಾಣ : ಈ ಸಹೋದರರು . . . ತಮ್ಮ ಮರುಪ್ರಯಾಣವನ್ನು ಆರಂಭಿಸಿದರು (ಕೃಶಾ. II. ೩); ತಂಗಿದೆಡೆಯಲ್ಲೆಲ್ಲ . . . ದಾನಧರ್ಮ ಮಾಡಿ ಮರುಪ್ರಯಾಣ ಮಾಡುತ್ತಿದ್ದಳು (ದಾಸಕ. ೦೮೩). [ಮರು$_1$ (< ಮಱು$_1$) + ಪ್ರಯಾಣ]

**ಮರುಬಾಳು** 'ಮಱುವಾಳ್' ನೋ.

**ಮರುಬೆಳೆ** (ನಾ). ಮತ್ತೆ ಬೆಳೆಯುವಿಕೆ ; ಎರಡನೆಯ ಬೆಳೆ : ಪರಮತತ್ತ್ವಜ್ಞಾನಿಯೊಡರಿಸುವ ಕರುಮಗಳು ಮರುಬೆಳೆಗೆ ಬಿತ್ತಲ್ಲ (ಮಂಕುತ. ೬೯೬). [ಮರು$_1$ (< ಮಱು$_1$) + ಬೆಳೆ$_2$]

**ಮರುಭೂಮಿ** (ನಾ). ನೀರಿಲ್ಲದ ಪ್ರದೇಶ ; ಮರಳುಗಾಡು : ಹುದಿದ ಮರುಭೂಮಿಯಲಿ ಮಾನ್ಯನು ಖದಿರನು (ಲಾಕ್ಯಸ. ೦೦-೫೯) ; ರಸವಿಲ್ಲದಿಹ ಬಾಳಿಗರಮನೆಯು ಮರುಭೂಮಿ (ಶ್ರೀರಾಮ. ೦೫೯-೩೩). [ಸಂ.]

**ಮರುಮಾತು** 'ಮಱುವಾತು' ನೋ.

**ಮರುಮೈ** 'ಮಱುಮೆಯ್' ನೋ.

**ಮರುವ$_1$** 'ಮುರುವ' ನೋ.

**ಮರುವ$_2$** (ನಾ). = ಮರುಗ : ಮದನರಾಗವರ್ಧನಕರಮಾ ಮರುವಂ ಕರ್ಣಾಳಿಮುಮಿರೆ ಮರುಳಲ್ಲವೆ ಕುಸುಮನಿಚಯದೊಳ್ ಪಾಯ್ವಳಿಗಳ್ (ಅಜಿತ. ೦೦-೦೨೩). [ಸಂ.]

**ಮರುವಂದನೆ** (ನಾ). ವಂದನೆಗೆ ಪ್ರತಿಯಾಗಿ ಮಾಡುವ ವಂದನೆ ; ಪ್ರತಿನಮಸ್ಕಾರ : ರಾಜಾಗಂಗಾಧರರಾಯನು . . . ಪ್ರಜೆಗಳ ವಂದನೆಗಳನ್ನು ಸ್ವೀಕರಿಸುತ್ತಾ, ಅವರಿಗೆ ಮರುವಂದನೆಗಳನ್ನು ಅರ್ಪಿಸುತ್ತಾ . . . ತೆರಳುತ್ತಿದ್ದನು (ಭ್ರಮಾ. ೩೭). [ಮರು$_1$ (< ಮಱು$_1$) + ವಂದನೆ]

**ಮರುವಕ** (ನಾ). = ಮರುಗ : ಮಾಲ್ಯಾಂಗಮೆಂಬುದು ಜಾತಿಕೇತಕಿಮರುವಕಪ್ರಭೃತಿ ಸರ್ವರ್ತುಕಥಾಮವಿಶೇಷಂಗಳನೀವುದು (ಜಾವುಂಕ್ಕೆ. ೯). [ಸಂ.]

**ಮರುವಗಲ್** 'ಮಱುವಗಲ್' ನೋ.

**ಮರುವರ್ಷ** (ನಾ). ಮಾರನೆಯ ವರ್ಷ ; ತರುವಾಯದ ವರ್ಷ : ಮರುವರ್ಷ ಸಂಸಾರಿಯಾದೆನು ನಾನೆನೆ ಅಂಕುರಿಸಿತು ಹೊಸ ಕುತ್ತು (ಇಂಜಾಕ. ೩೩-೫೫). [ ಮರು$_1$ ( < ಮಱು$_1$ ) + ವರ್ಷ ]

**ಮರುವಸತಿ** (ನಾ). ಪುನಶ್ಚೈತನ್ಯವನ್ನು ಪಡೆಯಲು ಒದಗಿಸುವ ವಸತಿ ; ಪುನರ್ವಸತಿ : "ಪುನರ್ನಿವೇಶನ ; ಮರುವಸತಿ" (Rehabilitation. ಶಶ್ರಿಪಿ. ೬೯). [ ಮರು$_1$ ( < ಮಱು$_1$ ) + ವಸತಿ ]

**ಮರುವಸಲ** 'ಮಱುವಸಲ' ನೋ.

**ಮರುವಳಿ** (ನಾ). ಮದುವೆಯ ನಂತರ ಗಂಡಿನ ಕಡೆಯವರು ತಮ್ಮ ಮನೆಯಲ್ಲಿ ಬೀಗರಿಗೆ ಮಾಡುವ ಔತಣ ; ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೆ ಮತ್ತು ಕುಲಸ್ಥರಿಗೆ ಕೊಡುವ ಭೋಜನ : (ಎಸವ್ನ. XII, ೯). [?]

**ಮರುವಾಚಲುಮರ** (ನಾ). ಒಂದು ಬಗೆಯ ಮರ : ಚೆಲ್ಲ, ಚೆಳ್ಳ, ಮರುವಾಚಲುಮರ, ಹೊಳೆದಾಸವಾಳ (ವೃಶಿn. ೯೯-೯೭೩).

[ ಮರುವಾಚಲು ? + ಮರ$_1$ ]

**ಮರುವಾಳು** 'ಮಱುವಾೞ್' ನೋ.

**ಮರುವುಟ್ಟು** 'ಮಱುವುಟ್ಟು' ನೋ.

**ಮರುಸರಸ್ಸು** (ನಾ). ಬಿಸಿಲುಗುದುರೆ ; ಮರೀಚಿಕೆ : ಕಾಮರೂಪಿಯ ಕಾಣಲೆಳಸಿದ ಕಪಿಧ್ವಜರ ದೃಷ್ಟಿಯ ತೃಷೆಗೆ ನಭದ ನೀಲವೆ ಮರುಸರಸ್ಸಾಯ್ತು ! (ಶ್ರೀಣಾಪಶು. ೫೩೨-೦೦೨). [ ಸಂ. ಮರುಸರಸ್ ]

**ಮರುಸವಾಲು** (ನಾ). ೧. ಸವಾಲಿಗೆ ಪ್ರತಿಯಾಗಿ ಹಾಕುವ ಸವಾಲು ; ನಾನು ನಕ್ಕು ಮರುಸವಾಲಿಟ್ಟೆ (ತಂದುಬಿ. ೬೩) ; ತಾಯಿಯು ಮರುಸವಾಲು ಹಾಕಿದರು (ಚುಪೋಸಂ. ೨೦೯). ೨. ಪಾಟೀಸವಾಲು ; ಅಡ್ಡವಿಚಾರಣೆ : ಪಾಟೀಸವಾಲು, ಮರುಸವಾಲು, ಅಡ್ಡವಿಚಾರಣೆ (Cross-eXamination. ಶಶ್ರಿಪಿ. ೨೮). [ ಮರು$_1$ ( < ಮಱು$_1$ ) + ಸವಾಲು ]

**ಮರುಸ್ಥಳ** (ನಾ). = ಮರುಭೂಮಿ : ಮರುಸ್ಥಳದ ಮಾಳದೊಳ್ . . . ಬೇಮವರ್ಗೆ ಜೋಂಪವಿಮ್ಮಾವು ನಿರ್ಝರಾಂಬು ದೊರೆಕೊಳ್ವವೊಲ್ (ಅರಿಕ್ರ. ೦೩-೯೬); ಮರವಟ್ಟಿದೆ ಮೈ, ಮನವು ಮರುಸ್ಥಳ, ಮರುಗುತ್ತಿರುವೆ ಜಾರೈ (ಕ್ರೌಂಚಕ್ಕ. ೯೬-೦೬). [ಸಂ. ಮರುಸ್ಥಲ]

**ಮರುಹುಟ್ಟು** 'ಮಱುವುಟ್ಟು' ನೋ.

**ಮರುಳ್$_1$** (ಕ್ರಿ). ೧. ಭ್ರಾಂತಿಗೊಳ್ಳು ; ಭ್ರಮೆಗೊಳ್ಳು : ಇಂದುಕಳಾಮರೀಚಿರುಚಿರೋಜ್ಜ್ವಲಬಾಲಮೃಣಾಳಮಂ ಮರುಳ್ದೊಂದನೆ ಕರ್ಚಿ ತದ್ವಿಪದಿಂದೆರಡುಂ ಬರೆ ಪೀರ್ವವೋಲ್ (ಕಾದಂಪೂ. ೮೦೦). ೨. ಮೋಹಕ್ಕೊಳಗಾಗು ; ಮರುಳಾಗು : ಎರೆದಿಂತುಟ್ಟಿಲೆಮೆಟ್ಟಿ ಕನ್ನೆ ಬೞಿಯಂ ಬಂದಳ್ ಮರುಳ್ದು (ಶಂಕಶಾ. ೫-೨೯); ಅನ್ಯನಾರಿಗೆ ಮರುಳ್ದಡಮಾಹವದೊಳ್ ಮರಲ್ದಡಂ (ಎಕ. VII. ಶಿಕಾ. ೦೩೬-೩೦; 1070); ಕಿನ್ನರರ್ದರ್ಶರಥಕ್ಷಿತಿನಾಥನ ಬೀರದೇಟ್ಗಿಯಂ ಪಾಡೆ ಮರುಳ್ದು ಕೇಳ್ವ ಪದದೊಳ್ . . . ಈಡಾಡುವನಾ ನಮೇರುಕುಸುಮಸ್ತಬಕಂಗಳ ಕರ್ಣಪೂರಮಂ (ಶಂರಾಮಾ. ೩-೦೬). [ದೇ.॥ ತಮಿ. ಮರುಳ್; ಮಲ. ಮರಿಳು; ತುಳು. ಮರ್ಲ್]

**ಮರುಳ್$_2$**, ಮರುಳು (ನಾ). ೧. ಭ್ರಮೆ ; ಭ್ರಾಂತಿ: 'ಮರುಳ್ಗೊಳ್' ಪರಾ. ೨. ಬುದ್ಧಿಭ್ರಮೆ ; ಹುಚ್ಚು : ಪಗೆಗಳನ್ ಪಗೆವುದು ಮರುಳೆನಲ್, ನಾನ್ ಮರುಳನೆನ್ (ಬದ್ಕಶ್ರ. ೫೨-೧೦೨೬). 'ಮರುಳ್ತನ' ಪರಾ. ೩. ಪ್ರೀತಿ ; ಮೋಹ : 'ಮರುಳ್ಗೊಳ್' ಪರಾ. ೪. ದಡ್ಡತನ ; ಅಜ್ಞಾನ; ಮೌಢ್ಯ: ಪುರುಳಿರದುರನ್ ಮಱೆಮಂ ಸೊಲ್ಲರ್ ಮರುಳಿರವ ಮಾಸಱಿತ ಕಾಣ್ಕೆಯವರ್ (ಕುಱಳ್. ೦-೨೦-೯). ೫. ಬುದ್ಧಿಭ್ರಮಣೆಯಾದ ವ್ಯಕ್ತಿ : ಕೊಳದೊಳಗುೞಿದಿರ್ದು ಮರುಳೆ ಬರ್ದುಕಲ್ ಬಗೆವಾ (ಗದಾಯು. ೭-೦೦); ಮರುಳಂತೆ ಮರುಳೆ ತಲೆಯುಂ ಪರಪಿರದೆ ಮನೋಸಾರಾಗದಿಂ ಮುಡಿ ಮುಡಿಯಂ (ರಪರ್ಾವ್ಕ. ೩-೧೨೬). ೬. ದಡ್ಡ ; ತಿಳಿಗೇಡಿ: ಮೂರ್ಖ: ಗಗನತಳಕುಸುಮಮನೆ ಬಯಸಿ ಮರುಳ್ಗೊಂಡು ಮಱುಗುವ ಮರುಳಂತೆ . . . ಸ್ವಯಂಪ್ರಭೆಯಂ ನೆನೆನೆನೆದು (ಆದಿಪು. ೩-೦೦ ವ); ಸೋರ್ಕೆ ಮೂರ್ಖತನದಿಂ ಕಾಣಂ ಪೊರಸೇಱದಂತೆ ನುಡಿವೈ ಮರುಳಂ ಪೆಜರೊಳರೆ ಲೋಕದೊಳ್ ನಿನ್ನಿಂದಂ (ರಪರ್ಾವ್ಕ. ೯-೦೩೩); ಕೇರಿಲ್ಲದೆ ಕಣ್ದೆಱೆವಿನೆಗಂ ಬರೆವೆನೆಂಬ ಮರುಳಂ ಪೋಲ್ತೈ (ಕಬ್ಬಿಕಾ. ೦೬೦). ೭. ಬುದ್ಧಿಯನ್ನು ಮಂಕಾಗಿಸುವ ಮದ್ದು : 'ಮರುಳಿಕ್ಕು', 'ಮರುಳುಣ್' ಪರಾ. ೮. ಭೂತ ; ದೆವ್ವ ; ಪಿಶಾಚಿ : "ಪಿಱಿತಿನಿಯೆನಲ್ ಮರುಳ್" (ಕಬ್ಬಿಕೈ. ೯೦) ; ಮರುಳ್ಗೆ ಧೂಪಮಂ ತೋಱಿದ ಮಾಟ್ಕೆಯಿಂ (ಶಂಕಶಾ. ೭-೦೦); ಬೇವ ಪೆಣಕೆ ಕೋಪದಿಂ ಪೋರ್ವ ಮರುಳ್ಗಳಂ . . . ಈಕ್ಷಿಸಿದಂ ಪ್ರತಿರೂಪಶೂದ್ರಕಂ (ಕಾವ್ಯಸಾ. ೫೩೯); ಮರುಳ್ಗಳ ತಂಡದಲಿ ತಱಿದೊಟ್ಟಿದನು ಮಿಕ್ಕಾದ ನಾಯಕರ (ಕೊರಡಾ. ೬-೧೭-೨೨). ೯. ವಿರುದ್ಧವಾದುದು; ಪ್ರತಿಯಾದುದು : 'ಮರುಳಾಟ' ಪರಾ. ಮರುಳು : ೨. ಲೋಕವೆಂಬ ಮಾಯೆಗೆ ಶರಣಚಾರಿತ್ರ ಮರುಳಾಗಿ ತೋಱುವುದು (ಮಪಾದೇ. ೨. ೫೯-೦೯೭); ದಿನದಿನಕೆ ಬಾಲಕನ ಮರುಳದು ಘನಕೆ ಘನವಾಯಿತ್ತು (ಪಿಶಾಗ. ೫-೬-೦೦); ಕಂಡುದನೆ ನಾ ಕಂಡು ಕೇಳಿದ ಕೇಳಿ ಮರುಳಿಗೆ ಕುಣಿದೆ (ಅರಳು. ೦೯-೦). ೩. ಕರುಳು ಒಂದಾದರೇನು ಮರುಳು ಒಂದೋ ? (ಗಾದೆ). ೫. ಮರುಳು ಕಂಡ ಕನಸಿನ ಪರಿಯಂತೆ ಶಿವಾಚಾರ (ಬಸವ. ೯೩೯). ೬. ಲಿಂಗಾಂಗಸಮರಸದ ನಿರ್ಗುಣಪೂಜೆಯ ನೆಸಗಲಱಿಯದ ಭಿನ್ನಜ್ಞಾನ ಭಿನ್ನಪೂಜೆಯನೆಸಗುವ ಮರುಳುಗಳಿಗೆ ಆರು ಮೆಚ್ಚುವರು (ಮುದವಾ. ೩೮-೫೯); ದೊರೆಕೊಂಡ ನಿಧಿಯನೊದೆದು ಕಳೆವ ಮರುಳನಂತೆ ಗರ್ವದಿನವಜ್ಞೆಗೆಯ್ದು (ಪರ್ಶಪು. ೧೦-೫೯ ವ). ೮. "ಮರುಳೆನಲ್ ಭ್ರಮೆ ಪಿಶಾಚಿಗಳಕ್ಕುಂ" (ಕಕಕ. ೯೬) ; ಹರನ ಕೊರಳಲ್ಲಿಪ್ಪ ಕರೋಟಿಮಾಲೆಯ ಶಿರದ ಲಿಖಿತವ ಕಂಡು ಮರುಳುತಂಡಗಳು ಓದಿ ನೋಡಲು (ಬಸವ. ೫೩೯); ಕುಣಿವುತಿರ್ದುವು ಮರುಳುಗಳು ಮದಿರಾವಿಕಾರದಲಿ (ಕೊರಡಾ. ೬-೩೬-೯೬); ಸಂತಸದಿ ರಣಭೂಮಿಯೊಳು ಕುಣಿದಾಡುತಿರ್ದುವಾ ಮರುಳ ಪಡೆ (ಸಾಳ್ವಭಾ. ೨೫-೨೩). (ಗು). ೧೦. ದಡ್ಡತನದಿಂದ ಕೂಡಿದ; ತಿಳಿಗೇಡಿಯಾಗಿರುವ : ಅಂಡಜ ಉದ್ಭಿಜ ಕಾರಾಮಂಡಲದೊಳಗೊಂದು ನಾದವ ಕಂಡೆನು ಅಖಂಡಿತನಿರ್ಣಯವಱಿಯದ ಲೋಕದ ಮರುಳು ಮಾನವರೆತ್ತ ಬಲ್ಲರು (ಶಿವಗೀ. ೭೮-೩೭೭).

**ಮರುಳ ಕಯ್, ಮರುಳ ಕೈ** = ೧. = ಮರುಳ್ಗೆಯ್$_1$ ೧ : ಬಿತ್ತರಿಸಲೇಂ ಮರುಳ ಕಯ್ಯುವಣಿಯಿಡುಗಲ್ಲ ಮೊತ್ತವಾ ಪುರದೊಳಲ್ಲ (ಪದ್ಮಣ. ೩-೨೧) ; ತೊಲೆ ತಳಿವರ ಸೂಲ ಹರಿಗೆ ಬದ್ದರಬಂಡಿ ಬಲೆ ಹಗ್ಗ ಮರುಳ ಕೈ . . . ಸಲೆ ಮೆಱೆದವು ದುರ್ಗದೊಳಗೆ (ಕುಂದಾಸಾ. ೯೨-೩೬). ೨. = ಮರುಳ್ಗೆಯ್$_2$ ೨ : ಕಮ್ಮುಂದೊಡೆ ಮಂದಾರದ ಕಯ್ಯುಂ ಮುಂತ್ರೀಂದ್ರಲಕ್ಷ್ಮಣಾಂಕನ ಕಯ್ಯುಂ ಕಯ್ಯಲ್ಲದುಳಿದ ಮನುಜರ ಕಮ್ಯೆಂಬುಳು ಮರುಳ ಕೈಗಳೆತಱ ಕೈಗಳ್ (ಶಾಇಇ. IV. ೨೬೭-೯೬; 1360).

**ಮರುಳಾಗಿಸು** = ಮೋಹಗೊಳಿಸು ; ಆಕರ್ಷಿಸು : ಲಾಸ್ಯರಸದಿಂ ಮರುಳಾಗಿಸುವಳ್ (ದಕಳು. ೮-೩೩); ಈ ತಲ್ಲೀನತೆಗೆ ಕಲಾಕೃತಿ ನಮ್ಮನ್ನು ಮರುಳಾಗಿಸುವುದೇ ಕಾರಣ (ಶಾಂದಸ. ೬೩). **ಮರುಳಾಗು** = ೧. ಭ್ರಮೆಗೊಳ್ಳು ; ಭ್ರಾಂತಿಗೊಳ್ಳು : ಮರಳಿದನ್ ಪಾಳೆಯಕೆ ಮರುಳಾಗುತಾನರಂ ಸಂದೇಹಮಂ ತಮಿಸಿ, ತನ್ನೆದೆಯ ಸಂತೈಸುತೆ (ಶಶ್ರಾಂಗ. ೬೯-೨೦೩೯). ೨. ಮೋಹಗೊಳ್ಳು; ಆಕರ್ಷಣೆಯನ್ನು ಹೊಂದು : ನವಯೌವನೆ

ಮರುಳಾದೆಂಬಾತಂಗೆ (ಕಾದಂಪೂ. ೯೬೨ ರಗಳೆ) ; ಪರಸತಿಗೆ ಮರುಳಾದೆ ನೀನು (ಕೌರಾ. ೧೯-೧೯). ೩. ಬುದ್ಧಿಗೇಡಿಯಾಗು ; ತಿಳಿಗೇಡಿಯಾಗು : ಮರುಳಾಗದೆನ್ನ ನುಡಿಗುತ್ತರಮಂ ಮುನ್ನಿತ್ತು ಕುಡಿಯೆ ಕಜ್ಜಂ ನಿನಗುತ್ತರಿಸುಗುಮಂತಲ್ಲ[ದಿವಂದಿ]ರಂತೆ ನೀನುಂತೆ ಮೂರ್ಖ ನಾಗದಿರರಸಾ (ಶಂಶಧಾ. ೬-೯೭) ; ಮಾಯೆಯ ಮದ್ದಿನಲಿ ಮರುಳಾಗಿ ಮದನನ ಹೊದ್ದಿದನು . . . ಮುನಿಪ (ತೊರರಾ. ೦-೩-೩೭) ; ಅತಿ ಘೋರತಪವೆಮ್ಮದದನು ನೀನಱಿಯದೆ ಮತಿಗೆಟ್ಟು ಮರುಳಾಗದಿರು (ಹರಿಶ. ೨-೯೦). ೪. ಹುಚ್ಚಾಗು : ಓದಿ ಓದಿ ಮರುಳಾದ ಕೂಚು ಭಟ್ಟ (ಗಾದೆ). **ಮರುಳುಜಡೆ** = ಹಸುಗೂಸುಗಳ ತಲೆಯಲ್ಲಿ, ಮಾಯಾಶಕ್ತಿಯುಳ್ಳ ಅತಿಮಾನುಷವ್ಯಕ್ತಿಯು ಬಂದು ಹೆಣೆ ಯುತ್ತದೆಂದು ನಂಬಲಾದ ಜಡೆ ; ಸಣ್ಣಸಣ್ಣದಾಗಿ ಹೆಣೆದು ಕೊಂಡಿರುವ ಕೂದಲಿನ ಗಂಟು : ಇಷ್ಟಾಗಿ ಶಾಸ್ತ್ರಕ್ಕೆ ಹತ್ತು ಕೂದಲು ; ಒಂದು ಮರುಳುಜಡೆ, ಅದೂ ಬ್ರಹ್ಮಗಂಟು ! (ದೀಶವು. ೯೦-೨೯). **ಮರುಳ್ಗಳೆಱೆಯು** = ಭೂತಗಳ ಒಡೆಯು : ಈಶ್ವರ ನಾದೊಡಮೇಂ ಮರುಳ್ಗಳೆಱೆಯನೆ (ತಿಳಿ. ೦-೩೮). **ಮರುಳ್ಮಾಡು, ಮರುಳುಮಾಡು** = ೧. ಮೋಹಗೊಳಿಸು ; ಮರುಳುಗೊಳಿಸು : ಕಾಮದೇವನಯ್ದಲರಂಬಿನ ಶಕ್ತಿಗಳುಮನೊಂದುಮಾಡಿ ಲೋಕಮೆಲ್ಲಮಂ ಮರುಳ್ಮಾಡಲೆಂದು ಪೆಣ್ಮಾಡಿದನಕ್ಕುಂ (ಶಂಶಧಾ. ೮-೬೩ ವ) ; ರುದ್ರಗಣ ಪ್ರಮಥಗಣರೆಂಬರ ಮಾಯೆ ಮರುಳ್ಮಾಡಿ ಕಾಡುವಂದು . . . ನಾನು ಮಾಯಾಕೋಳಾಹಳನಾಗಿರ್ದೆ ಕಣಾ (ಅವಶಂ. ೨೬೨-೦೨೩೦) ; ಸರ್ವಬುದ್ಧಿ ಗಳೊಳಾತನ ಮರುಳ್ಗು ಮಾಡುತ್ತಿರಿ ಹೋಗಿ (ಹಶಣ. ೬-೨) ; ವಿಟವಿದೂ ಷಕರ ಕಣ್ಬೇಟದಿ ಮರುಳುಮಾಡುವರು (ಪೋಹಶ. ೦೮-೯೮). ೨. ಮಂಕಾಗಿಸು ; ಮಂಕುಗೊಳಿಸು : ಆ ಅಪರಿಚಿತನು ಬಂದು ನನ್ನನ್ನು ಮರುಳ್ಮಾಡಿ ನನ್ನ ಆಸ್ತಿಯನ್ನೆಲ್ಲಾ ಸೆಳಕೊಂಡನು (ಮಣಿಸ. ೨೮).

[ < ಮರುಳ್$_1$. / ತಮಿ. ಮಲ. ಮರುಳ್ ; ತುಳು. ಮರುಳು ; ತೆಲು. ಮರುಲು, ಮರ್ಲು ]

**ಮರುಳ, ಮಳ್ಳ** (ನಾ). ೧. ತಿಳಿಗೇಡಿ ; ದಡ್ಡ ; ಅಜ್ಞಾನಿ : ಸರೋಜಾತಾದಿ ನಿಸ್ಸಾರವಸ್ತುಗಳೊಳ್ ಪೋಲಿಸುವಂತುಟೇಂ ಮರುಳನೇ ರೂಪಂ ವಿಚಿತ್ರಾಂಗಿಯಾ (ಅದಿಪು. ೬-೬೩) ; ಮಾಯದ ಬಲೆಯಲ್ಲಿ ಸಿಲುಕಿದ ಮರುಳ ನಾನೆಂದಱಿದ ಪರಿಯ ನೋಡಾ (ಅವತಂ. ೯-೦೦) ; ಸುಯೋಧನಾದಿ ಮರುಳರ ಮಾತು ಗ್ರಾಹ್ಯವಲ್ಲ (ರಾಜಸೂ. ೯೩). ೨. ಹುಚ್ಚುಹಿಡಿದವನು ; ಬುದ್ಧಿಭ್ರಮಣೆಯಾದವನು : ಮರುಳನಂತೆ ತನ್ನೊಳ್ತಾನೆ ನುಡಿಯುತ್ತುಂ (ಧರ್ಮಾಮೃ. ೦-೦೬೦) ; ಪಗೆಗಳನ್ ಪಗೆವುಥು ಮರುಳೆನಲ್, ನಾನ್ ಮರುಳನೆನ್ (ಬದ್ಧಕ್ರ. ೯-೦೦೨) ; ವಸ್ಕೊಷನು ದ್ರಾಕ್ಷಾರಸವನ್ನು ಒಲೆನಿನ್‌ಗೆ ತಂದು ಕೊಟ್ಟು ಮರುಳನಂತೆ ನಗುತ್ತಾ ಹೊರಗೆ ಹೋದನು (ಮರಿಣಾ. ೬೮). ೩. ಒಬ್ಬಾತನ ಹೆಸರು : ಸಂಪ್ರಾಪ್ತೋ ಮರುಳ ಇತಿ ಪ್ರಸಿದ್ಧನಾಮಾ (ಪ್ಯಅಂ. ೦೯೨೦. ೦೦-೯೩ ; 967) ; ಪೆಸರ್ವೆತ್ತಾ ಮರುಳಂ ತನ್ನೃಪತಿಲಕನ ಪಿರಿಯ ಮಗಂ (ಎಳ. VII. ಶಿವಮೊ. ೩೯-೦೯ ; 1122). **ಮಳ್ಳ** : ೧. ಕೇಳೋ ಕಳ್ಳಾ, ಮುದ್ದಿನ ಮಳ್ಳಾ (ಕಶಪು. ೨-೦೨) ; ನಾ ಏನು ಅಷ್ಟ ಮಳ್ಳ ಇದ್ದೀನ್ಯಂತ ತಿಳದಿರೇನು ? ; (ದೀಶಹ. II, ೦೨೦). (ಗು). ೪. ತಿಳಿಗೇಡಿ ಯಾದ ; ಏನೂ ಅರಿಯದ : ದಾದಲ್ಯಾ ತೀರ ಮಳ್ಳ ಗಿರಾಕಿ ಎಂದು ಭಾವಿಸಿ . . . ಅಂತರವನ್ನು ಕಂಡಿರಬಹುದಾಗಿತ್ತು (ದೀಶಹ. II, ೦೯).

[ಮರುಳ್$_2$ + — ಅ$_7$]

**ಮರುಳಡೆ** (ಕ್ರಿ). ಭ್ರಾಂತಿಯನ್ನು ಹೊಂದು : ಮರುಳಡೆದು ನಡೆವಿರಚು ನೀಂಗಳ್ (ಬದ್ಧಕ್ರ. ೩೬-೦೨೯೬). [ಮರುಳ್$_2$ + ಅಡೆ$_3$]

**ಮರುಳವತ್ತ** 'ಮರುಳುಮ್ಮತ' ನೋ.

**ಮರುಳಯ್ಯ** (ನಾ). ೧. ದಡ್ಡ ; ತಿಳಿಗೇಡಿ : ಉಯ್ಯ ಕೈವಿಡಿದು ತಂಡುಲವ ಬಿಸುಟ ಮರುಳಯ್ಯರ ಮಾರ್ಗವೇನಲ್ತೆ (ಧಿಶ. ೩-೮೦). ೨. ಭೂತಗಳ ಒಡೆಯ ; ಶಿವ : ಮರುಳಯ್ಯ (ಮರುಳುಗಳ ಅಯ್ಯನಾದ ಶಿವನು) (ಪಾಡೋಜ. ೯೯). ೩. ಒಬ್ಬಾತನ ಹೆಸರು : ಆತನ ಮರ್ಮಂದಿರ್ ಮರುಳಯ್ಯಂ ಬೂತುಗ ಪೆರ್ಮಾಡಿ (ಎಳ. VII, ಶಿವಮೊ. ೯-೯೭ ; 1122). [ಮರುಳ್$_2$ + ಅಯ್ಯ$_1$]

**ಮರುಳಾಟ** (ನಾ). ೧. ಭ್ರಮೆಯಿಂದ ಮಾಡುವ ಕೆಲಸ ; ಹುಚ್ಚಾಟ : ಮಾಸಿದ ಹೇಮಕುಂಭದಂತೆ ಸಾಧಕನ ಮರುಳಾಟದಂತೆ (ರಮಣಾಮೃ. ೮-೯೯); ಮಂಕುಹೆಣ್ಣಿನ ಮರುಳಾಟವು ನಿಂತಾಗ ಗಂಡಿಗೆ ದೊರೆವುದು ಸಿದ್ಧಿ (ಇಂಶಾಶ. ೨೦೬-೨೩). ೨. ಅವಿವೇಕದ ವರ್ತನೆ ; ಬುದ್ಧಿಗೇಡಿತನ : ನೀನವರುಮನವರ ದೈವಮುಮಂ ಕೊಂಡಾಡುವ ಮರುಳಾಟಕ್ಕನಗೆ ಪಿರಿದುಂ ವಿಸ್ಮಯಮಾದಪುದು (ರಮಣಾಮೃ. ೦-೮೦೪); ನಿನ್ನಯ ಮೈದುನರ ಮರುಳಾಟಕಿನ್ನನು ಕಾಯ್ದುಕೊಳ್ಳ ಕೃಷ್ಣ (ಕುವ್ಯಾಸ. ೦೯-೦೦೯) ; ಮರುಳಾಟವೇಕೋ ಮನುಜ ಕೂಗಾಟವೇಕೋ (ಪುರಂದ. ೦-೩೦ ಶಲ್ಲಬ). ೩. ಪಿಶಾಚಿಗಳ ಆಟ,–ಲೀಲೆ : ಕೊಳ್ಗುಳಮೊಳ್ ಮರುಳಾಟವಾಡುವಾಂ ಮರುಳೆನೊ ವಿಕ್ರಮಾರ್ಜುನನೊಳೊಲ್ಲದೆ ಸಂಧಿಯನಾರ್ಕೆ ಕೆಟ್ಟ ನೀಂ ಮರುಳಯೊ ಪೇಟ (ಶಂಶಧಾ. ೦೩-೩೩); ವಿವಿಧನೃತ್ಯವ ನೋಡುವಕ್ಷಿಗೆ ಸವಸಿಸಿತೆ ಮರುಳಾಟ (ಜೀವಂಶ. ೩-೩). ೪. ವಿರುದ್ಧವಾಗಿ ನುಡಿ ಯುವಿಕೆ ; ವ್ಯತ್ಯಾಸವಾಗಿ ಹೇಳುವಿಕೆ : "ವಿಪ್ರಲಂಭಃ , ವಿಷವಾದಃ– ಈ ೨ ಮರುಳಾಟದ ಹೆಸರು'' (ನಾತರಾ. ೯೮). [ಮರುಳ್$_2$ + ಆಟ]

**ಮರುಳಾಟಿಕೆ** (ನಾ). ಹುಚ್ಚಾಟ ; ಮರುಳುತನ : ಲಕ್ಷ್ಮಿಗೆ ಇವೆಲ್ಲವೂ ಒಮ್ಮೊಮ್ಮೆ ಮರುಳಾಟಿಕೆ ಎಂದೆನಿಸುತ್ತದೆ (ಮುಗಿದು. ೦೦).

[ಮರುಳ್$_2$ + ಆಟಿಕೆ]

**ಮರುಳಾಡು** (ಕ್ರಿ). ೧. ಮೂರ್ಖತನಕ್ಕಾಗಿ ಹಾಸ್ಯಮಾಡು, –ಗೇಲಿ ಮಾಡು : ಬಿಯಗರ ಮನೆಯೊಳಿದಂ ಕಂಡೊಡೆ ಮರುಳಾಡುವರದಱಿಂ ಕಿಱಿದಾಗಿಯುಣ್ಬುದು (ಧರ್ಮಶ. ೯-೨೩ವ) ; ಹೊಱಗೆ ಕೃಷ್ಣನ ಕರೆದಿವೆಲ್ಲವ ನಱುಹಿದಡೆ ಮರುಳಾಡಿದನು (ಕುವ್ಯಾಆ. ೦೯-೩೩). ೨. ಹೀಯಾಳಿಸು ; ನಿಂದಿಸು ; ಜರೆ : ಸಖಿಯನು ಮರುಳಾಡುತಿರ್ದಳು ಮೋಹಿನೀದೇವಿ (ಶೃಭುಂಗ. ೩-೬೦). [ಮರುಳು (<ಮರುಳ್$_2$) + ಆಡು$_1$]

**ಮರುಳಾಣ್ಮ** (ನಾ). ಭೂತಗಳ ಒಡೆಯ ; ಶಿವ : ''ಮರುಳಾಣ್ಮಂ ಶೂಲಿಯಲ್ಲುಂಟು'' (ಕರ್ಣಾಶ. ೯೦). [ಮರುಳ್$_2$ + ಆಣ್ಮ (<ಆಳ್ಮ)]

**ಮರುಳಿ, ಮಳ್ಳಿ$_1$** (ನಾ). ೧. ಅವಿವೇಕಿಯಾದವಳು ; ಬುದ್ಧಿಗೇಡಿ : ಮುನೀಶ್ವರನ ಮಂತ್ರಮೋದೊರೆಯೆಂದಾ[ಂ] ಮರುಳಿಯೆನೆಯಱಿದು ಮಱಿಯದೆ ಬರಿಸಿದೆಂ (ಶಂಶಧಾ. ೦-೯೩). ೨. ಮರುಳಾದವಳು: ಮೋಹ ಗೊಂಡವಳು : ನಾನು ಈಗ ಶ್ರೀಗುರುಕಾರುಣ್ಯವನ್ನು ಪಡೆಯುವುದಕ್ಕೆ ಕಾತರಳಾಗಿರುವ ಮರುಳಿ (ಶುಂಗಪ.೯೩); ಧೈರ್ಯಾವ ಕಳೆದಾನ, ನನ್ನೊಂದ ತೀರ ಮರುಳಿಯ ಮಾಡ್ಯಾನ (ಮುಕ್ತಿಕಾ. ೯೬-೩). ೩. (ವಶೀಕರಣಕ್ಕೆ ಬಳಕೆಯಾಗುವ) ಒಂದು ಬಗೆಯ ಸಸ್ಯ : ''ಪಿಶಾಚಿಕಾ–ಕಾಸರಿಕೆ, ನಸುಗುನ್ನಿ, ಮರುಳಿ'' (ಓಷಧಿ. ೯೮) ; ಮರು [ಶಾಣಂ. ರ]ಳಿಯ್ಯೆದೆಲೆನಾಗ . . . ಇವಱ ತಿರುಳಿಣ್ಣೆಯಜವೂತ್ರಮುರಗದಂಷ್ಟ್ರಂ ಕೂಡಿದುರುತ್ತೈಲ ಮಿನಿತು ಸೋಂಕಲ್ಕೆ ವಶ್ಯಂ (ಶವವ. ೦೩-೯೮). ೪. ಒಂದು ಬಗೆಯ ಪಕ್ಷಿ. ೧, ೪ : ಬಡಗಿಯಂತೆ ಮರಕುಟಕಂ ಬುದ್ಧಿಗೆಟ್ಟಳಂತೆ ಮರು [ಶಾಣಂ.ರ]ಳಿ . . . ಎಂದಿಂತುಮನೇಕಪಕ್ಷಿಜಾತಿಗಳಿಂ (ಬಂಶಂ. ೨-೩೮ವ). **ಮಳ್ಳಿ$_1$** : ೫. ಜಾಣತನವಿದ್ದೂ ಇಲ್ಲದಂತೆ ನಟಿಸುವವಳು ; ಅಮಾಯಕತನ ತೋರ್ಪಡಿಸುವವಳು : ನಿಮ್ಮ ಮುಂದೆಲ್ಲ ಆಕೆಯು

ಅರಿಯದ ಮಳ್ಳಿಯಂತೆ ಸುಮ್ಮನೆ ಕೂಡ್ರುತ್ತಾಳೆ (ಕೋಹಿಜೀ. ೨೯) ; ಮತ್ತೆ ಅವನ ಮನೆಗೆ ಯಾಕೆ ಹೋಗುತ್ತೀಯೆ ಮಳ್ಳಿ! (ರಂಗಕೋ. ೬೪).

[ಮರುಳ + —ಇ]

**ಮರುಳಿಕ್ಕು** (ಕ್ರಿ). ಬುದ್ಧಿಯನ್ನು ಮಂಕುಗೊಳಿಸುವ ಮದ್ದನ್ನು ಆಹಾರದಲ್ಲಿ ಸೇರಿಸು.– ಬೆರಸು : ನೀವೆಕ್ಕಾನುಂ ಮರುಳ್ಗೊಂಡಿರೋ: ಮರುಳಿಕ್ಕಿ ಅಟ್ಟುಪದನುಂಡಿರೋ ಪೇಟಿಂ (ಹರಿಚ. ೦೪೬-೦೯).

[ ಮರುಳ್$_2$ + ಇಕ್ಕು ]

**ಮರುಳಿಸು** (ಕ್ರಿ). ಮೋಹಗೊಳಿಸು; ಮರುಳುಗೊಳಿಸು : ಧೃತ ಯೌವನಂ ಮರುಳಿಸಲ್ಕಾನಾರ್ತುಮತ್ಕಂಠಸೌಂದರಕಾಂತಾಜನಮಂ ಮರುಳ್ಪುದಣಮಿಲ್ಲ (ಅಂತ. ೬-೩) ; ಮುತ್ತಂ ಮುಕ್ಕುಳಿಸಿದ ಪವಳದಂತೆ ಮರುಳಿಸುವಂಗಂ (ಅರಸೀ. ೪-೭೭). [ ಮರುಳ್$_2$ + —ಇಸು$_3$ ]

**ಮರುಳು** 'ಮರುಳ್$_2$' ನೋ.

**ಮರುಳುಗುಟ್ಟು** (ಕ್ರಿ). = ಮರುಳಾಡು ೧ : ಮರುಳೆ ಕಾದದ ಕಟ್ಟಿದೆಮ್ಮನು ಬಿಡದೆ ಬಯಸಿದೆಯಿದನು ಕೇಳ್ದೊಡೆ ಮರುಳುಗಟ್ಟದೆ ಮಾಣ್ಬರೇ ನಿಮ್ಮಣ್ಣತಮ್ಮದಿರು (ಕುಮ್ಯಾಭಾ. ೦-೪೦).

[ ಮರುಳು (< ಮರುಳ್$_2$) + ಕುಟ್ಟು$_1$ ]

**ಮರುಳುಗೈ** 'ಮರುಳ್ಗೆಯ್$_2$' ನೋ.

**ಮರುಳುಗೊಳ್** 'ಮರುಳ್ಗೊಳ್' ನೋ.

**ಮರುಳುಗೊಳಿಸು** 'ಮರುಳ್ಗೊಳಿಸು' ನೋ.

**ಮರುಳುಣ್** (ಕ್ರಿ). ಬುದ್ಧಿಯನ್ನು ಮಂಕುಗೊಳಿಸುವ ಮದ್ದನ್ನು ಬೆರಸಿದ ಆಹಾರವನ್ನು ಸೇವಿಸು : ಮರುಳುಂಡ ಮನುಷ್ಯನ ಇರವಿನ ಪರಿಯಂತೆ ವಿವರವನರಿಯಬಾರದು ನೋಡಾ ಶಿವಜ್ಞಾನ (ಅಹಂ. ೯೬-೪೪೨). [ ಮರುಳ್$_2$ + ಉಣ್ ]

**ಮರುಳುತನ** 'ಮರುಳ್ತನ' ನೋ.

**ಮರುಳುನುಡಿ** (ನಾ). ತಿಳಿಗೇಡಿತನದ ಮಾತು : ಮರುಳುನುಡಿಗಳು ಸಮ್ಮಿವಿಷ್ಣು ನೀವ್ ಪರಮನೀತಿಯ ಧರ್ಮಶಾಸ್ತ್ರದ ನಿರುತರು (ತೊರಭಾ. ೨-೦-೨೯). [ ಮರುಳು (< ಮರುಳ್$_2$) + ನುಡಿ$_2$ ]

**ಮರುಳುಮಾತು** (ನಾ). ಮರುಳುಗೊಳಿಸುವ ಮಾತು : ಭ್ರಮೆಯನ್ನುಂಟುಮಾಡುವ ಮಾತು : ಬಲುದಿನಕೆ ಬಂದಿಹನು. . . ನಾಲ್ಕು ದಿನ ನಿಲ್ಲಿಸಮ್ಮಾ ಮರುಳುಮಾತುಗಳಾಡಿ ನುಸುಳಿ ಪೋಗುವನಮ್ಮ (ಶಶೀಗೀ. ೨೭-೩). [ ಮರುಳು (< ಮರುಳ್$_2$) + ಮಾತು$_1$ ]

**ಮರುಳುಮ್ಮತ, ಮರಳುಉಮ್ಮತ್ತಿ, ಮರಳುಮತ್ತ, ಮರುಳಮತ್ತ** (ನಾ). ಒಂದು ಬಗೆಯ ಸಸ್ಯ ; ಮದ್ದುಗುಣಿಕೆ ಗಿಡ ; ದತ್ತೂರ : ಜಡಮತಿಗೆ ಮರುಳುಮ್ಮತವನಿಕ್ಕಿದೊಡೆ ಸುಕಲೆಯಪ್ಪುದೆ (ಕೃಬಿಶಾ. ೨-೩೩). **ಮರಳುಉಮ್ಮತ್ತಿ** : (ಕ್ಯಾಶಿ. ೬೯-೦೬೦೫). **ಮರಳುಮತ್ತ** : ಮರಳು ಮತ್ತ : ಈ ಸೊಪ್ಪಂ ಚೂರ್ಣವಂ ಮಾಡಿ ಸಕ್ಕರೆಯುಂ ಬೆರಸಿ ದಿನ ಒಂದಕ್ಕೆ ಮೂಱು ಬೆರಳಂ ಸೇವಿಸಲು ಹೊಟ್ಟೆಯೊಳಗಿನ ಗಡ್ಡೆ ಗುಣ (ಶಿವ್ಯಶಿ. ೬). **ಮರಳಮತ್ತ** : ಕರಿಉಮ್ಮತ್ತದ ಬೇರು, ಮರುಳಮತ್ತದ ಬೇರು, ಮರುಳಮತ್ತದ ಬೀಜ. . . ಇಷ್ಟನ್ನೂ ಬೇಱೆ ಬೇಱೆ ಚೂರ್ಣವ ಮಾಡಿ . . . ಆಮಲಕಪ್ರಮಾಣ ಜೇನುಕೂಡಿ ಕೊಳ್ಳಲು ಮದ ತಿಳಿವುದು (ಶಿವ್ಯಶಿ. ೯೮). [ ಮರುಳು (< ಮರುಳ್$_2$) + ಉಮ್ಮತ (<ಉಮ್ಮತ್ತ). / ತೆಲು. ಮರುಲುಮ್ಮೆತ ]

**ಮರುಳುವೆಣ್ಣು** (ನಾ). ಅವಿವೇಕಿಯಾದ ಹೆಣ್ಣು ; ದಡ್ಡಿ : ಮನೆವಾಳ್ತೆಯಱಿಯದ ಮರುಳುವೆಣ್ಣೀ ಕೃತಿಯನೆ ಮನಪೊಲಿದೋದಿದೊಡೆ . . . ಚಾತುರ್ಯವಡೆವಳು (ಹಂಪ. ೦-೪೩).

[ ಮರುಳು( < ಮರುಳ್$_2$) + ಪೆಣ್ಣು ( < ಪೆಣ್ ) ]

**ಮರುಳ್ಗವಿ** (ನಾ). ತಿಳುವಳಿಕೆಯಿಲ್ಲದ ಕವಿ ; ಅವಿವೇಕಿಯಾದ ಕವಿ : ಹಾಮದ್ಧಗವಿತೆಯಂ ಮಾಡಿ ಮಹಾವ್ಯವಸಾಯಂಗೆಯ್ವ ಮರುಳ್ಗವಿಗಳ್ಗಾವೇಂ ಗುಣಾರ್ಥರಂ ಮಸುಳಿಸರೇ (ಗದಾಯು. ೪-೪೦). [ಮರುಳ್$_2$ + ಕವಿ$_5$]

**ಮರುಳ್ಗಡೆ** (ಕ್ರಿ). ಅವಿವೇಕದ ಮಾತನ್ನಾಡು ; ದಡ್ಡತನದ ಮಾತನಾಡು : ಕೇಳೆಲೆ ನಿನ್ನದೇ ಧರ್ಮವೆಂದು ನಿನ್ನದೊಂದು ರೂಪೆಂದು ಮುಂದಱಿಯದೆ ಮರುಳ್ಗಡೆವರೆ (ಬಸವ. ೯-೦೩೦). [ಮರುಳ್$_2$ + ಕಡೆ$_1$]

**ಮರುಳ್ಗೆಯ್$_1$** (ಕ್ರಿ). ಮೋಹವನ್ನುಂಟುಮಾಡು ; ಆಕರ್ಷಿಸು : ನಾಗೊಸರ್ವ ಮರುಳ್ಗೆಯ್ವ ಚಿತ್ರಿನಿಯರುಗಳೊಪ್ಪಿದರು (ಮೋಹತ. ೦೬-೪೦). [ಮರುಳ್$_2$ + ಕೆಯ್$_1$]

**ಮರುಳ್ಗೆಯ್$_2$, ಮರುಳುಗೈ, ಮರುಳ್ಗೈ** (ನಾ). ೧. ಹಿಂದೆ ಕೋಟೆ ಕಾಳಗದಲ್ಲಿ ಬಳಸುತ್ತಿದ್ದ ಕೈಆಕಾರದ ಒಂದು ಬಗೆಯ ಆಯುಧ : ಅಂಕಕ್ಕೆ ಬರ್ಪ ರಾಯರ ಗಂಡನೆಂಬ ಡೆಂಕಣಿ ಮರುಳ್ಗೆಯ್ಗಳೊಡನೆ ಭೋಂಕೆನೆ ಎಡೆವ ಲಾಳಿಯ ಬಿಲ್ಲು ಬೆಟ್ಟುಗಳ ಸಂಕುಲವಿದಾವಣದಲ್ಲಲ್ಲಿ (ಮೋಹತ. ೨೦-೯). **ಮರುಳುಗೈ** : ೧. ಝಗಝಗಿಸುವ ಪೇರಿಟ್ಟ ಮರುಳುಗೈಗಳುಗುಳುತಿರ್ದುವು ಕೆಂಗಿಡಿಗಳ (ಕಂಶಿ. ೦೦-೦೩೦). **ಮರುಳ್ಗೈ** : ೧. ಡೆಂಕಣಿ ಮರುಳ್ಗೈಯಿಂದಂ ಕೋಟೆ ಏಗಿಲಾಗಿ ಮನೆಕೆ ರಂಜಿಸಿತು (ಅಮ್ಯೂ. ೩-೬೩). ೨. ಕೃತ್ರಿಮವಾದ ಕೈ : ಬರೆಯುವ ಕೈ ಬಂಧುಗಳಂ ಪೊರೆಯದ ಕೈ . . . ಪರಗೈ ಮರುಳ್ಗೈಗಳಂತೆ (ಶಿತಿಶಾ. ೦೯). [ಮರುಳ್$_2$ + ಕೆಯ್$_3$]

**ಮರುಳ್ಗೈ** ' ಮರುಳ್ಗೆಯ್$_2$ ' ನೋ.

**ಮರುಳ್ಗೊಳ್, ಮರುಳುಗೊಳ್** (ಕ್ರಿ). ೧. ಭ್ರಮೆಗೊಳಗಾಗು ; ಭ್ರಾಂತಿಗೊಳ್ಳು : ಎಲ್ಲಿರ್ದಯೆಂದಱಸುತ್ತಂ ಮರುಳ್ಗೊಂಡು ಪ್ರಳಾಪಂಗೆಯ್ಯುತ್ತಂ (ಪಜ್ಞಾಶಾ. ೩೯-೦೭) ; ಗಗನತಳಕುಸುಮಮನೆ ಬಯಸಿ ಮರುಳ್ಗೊಂಡು ಮಱುಗುವ ಮರುಳಂತೆ . . . ಸ್ವಯಂಪ್ರಭೆಯುಂ ನೆನೆನೆಸೆದು (ಆದಿಪು. ೩-೦೦೫) ; ಪಂಚಬಾಣನ ರೂಪ ಜಾರೆಂದು ಮರುಳ್ಗೊಂಡು ಚಂಚಲಾಕ್ಷಿಯ ತುಡುಕಿದಳು (ಮೋಹತ. ೨೭-೩೦). ೨. ಪರವಶಗೊಳ್ಳು : ಪತ್ರಲೇಖೆ ತತ್ಪ್ರಭಾಮಂಡಲಗಳತಹಿಮ ಸ್ಪರ್ಶದಿಂ ಲಬ್ಧಸಂಜ್ಞೆಯಾಗಿ ಮರುಳ್ಗೊಂಡಂತೆ ಇಂದ್ರಾಯುಧಮಿರ್ಪೆಡೆಗೆ ಪರಿತಂದು (ಕಾದಂಬ. ೩೦೫). ೩. ಒಲಿ ; ಮೋಹಗೊಳ್ಳು : ನಿನ್ನಯ ಚಿತ್ರಪಟವ ಕೊಂಡುಯ್ದು ತೋಱಿದ ಮುನ್ನ ಮರುಳ್ಗೊಂಬನವನು (ಮೋಹತ. ೩೦-೨೦). ೪. ಸಂಭ್ರಮಗೊಳ್ಳು ; ಸಡಗರಿಸು : ಜಾತಕರ್ಮೋತ್ಸವದೊಳ್ ಪರಿಜನಮುಂ ಪುರಜನಮುಮೊಸಗೆ ಮರುಳ್ಗೊಂಡು ನಿರ್ಭರಕ್ರೀಡಾರಸಪರವಶರಾದಾಗಳ್ (ಆದಿಪು. ೬-೦೦೨ ವ) ; ನೃತ್ಯಪ್ರವೃತ್ತಚಾರಣಗಣಮುಮೊಸಗೆ ಮರುಳ್ಗೊಂಡು ಪೋರ್ಗರೆದು ನಲಿದು ನರ್ತಿಸುತ್ತವೊಡನೆ ಬರವರೆ (ಕಾದಂಪೂ. ೪೨೯) ; ಒಸಗೆ ಮರುಳ್ಗೊಂಡಾಡುವ ರಸಭಾವಾತ್ಮೆಯರ ನೂಪುರಂಗಳ ದನಿಯುಂ . . . ಒದವಿಸಿತು ಮದನಚಾಪಧ್ವನಿಯಂ (ಕುಶ್ಯಕು. ೦೨-೨೨). **ಮರುಳುಗೊಳ್** : ೧. ಮರುಳುಗೊಂಡನು ರಾಮ ನೋಡಾ (ಕೌಶಿಶಾ. ೪೩-೪೦). ೩. ಲೋಕದೊಳು ವಿಖ್ಯಾತಕೀರ್ತಿಯು ನಾಕಿ ಯೋಗ್ಯನು ಸೂರ್ಯಪುತ್ರಿಗೆ ಮರುಳುಗೊಂಡಿರಲು (ಸಂಕಶ. ೦೨-೦೦) ; ಅರರೆ ಮನ್ಮಥನೀ ಸತಿಯಲವ ತರಿಸಿದನೊ ಶಿವ ಎನುತ ಮನದಲಿ ಮರುಳುಗೊಂಡನು . . . ಅಸುರೇಂದ್ರ (ತೊರಭಾ. ೩-೯-೨೮) ; ವಿತಕೆ ಮರುಳುಗೊಂಡರ್ಥಿಸಿದೆ ತನ್ನನು ಧರಣಿಪಾಲಕುಮಾರಿ ಕಾಣದೆ ನಿಜವನು (ಚಿಶಾಗ. ೦೦-೮೩-೦೯). ೫. ಹುಚ್ಚುಹಿಡಿ ; ಬುದ್ಧಿಭ್ರಮಣೆಯಾಗು : ಕುರುಡರು ಕಾಣ್ಬರು ಮೂಕರು ನುಡಿವರು ಮರುಳುಗೊಂಡವರು ತಿಳಿವರು (ಕಾಂತೀಶ. ೦೦-೮೯); ಮರುಳು ಗೊಂಡು ಸತ್ತ ನಾಯು ಬಲದ ಬದಿಯೊಲುದಿನ ಮೇಲೆ ಸಾಧ್ಯವಾಗುವ ಸ್ತ್ರೀ

ವಾಮಮಂ ಬರೆದು ಬಿಳಿಎಕ್ಕೆಯ ಕಟ್ಟಿಗೆಯ ಕೆಂಡದಿಂ ಕಾಸಲು ವಶಮಪ್ಪಳು (ಶಾಖಾ. ೩೬೨). [ಮರುಳ್$_2$ + ಕೊಳ್$_1$]

**ಮರುಳ್ಗೊಳಿಸು, ಮರುಳುಗೊಳಿಸು** (ಕ್ರಿ). ೧. ಭ್ರಾಂತಿಗೊಳಗು ಮಾಡು; ಭ್ರಮೆಗೊಳಿಸು: ಮದಹಿಡಿಸಿ, ಮರುಳ್ಗೊಳಿಸಿ, ಇರುಳುಗವಿಸಿ, ಮುಚ್ಚುವಳು, ಕಣ್ಣಾಳಿಸಿ, ಮಣ್ಣೊಳಿಪಳು (ಜಾಶಾ. ೭-೦೯೫); ಆಗಳೆನ್ನ ಮನ ಮನೊಲ್ದ ಇನಿದು ಸೊಲ್ಲ ಸೆಳೆಯುವೇನ್ ಇನಿಸುವೆನ್ನ ಮರುಳ್ಗೊಳಿಸ ಲಾಜಿದಯ್ (ಅದ್ವಶ್ರ. ೦೦-೨೦೩). ೨. ಮೋಹಗೊಳಿಸು ; ಆಕರ್ಷಿಸು: ರೂಪೆ ಗಡಂ ನೋಡಲೊಡಂ ಮರುಳ್ಗೊಳಿಸುಗುಂ ವಿದ್ಯಾಧರಸ್ತ್ರೀಯರಂ (ಅಂಪು. ೦-೭೯) ; ಗಿಳಿಯುಂ ಮೊದಲಾಗಿ ನಡಪಿದರನಱಿದು ಮರುಳ್ಗೊಳಿಸುವುದವಱಚ್ಛ್ಯಸುವ ಫಳಮಿಂತಂತನಿತುಮಾದುದಿಲ್ಲಾ ಖಳನೊಳ್ (ಶಾಪಂಶಾ. ೯೮೩) ; ಕಟಾಕ್ಷರೋಚಿಯಿಂ ರಾಜಪುತ್ರರಂ ಮರುಳ್ಗೊಳಿಸಿ ಸಾಲ್ಗೊಂಡು ನಿಂದ ವಾರಾಂಗನೆಯರಿಂ (ರಾಕಶೇ. ೫-೦೯ ಪ). **ಮರುಳುಗೊಳಿಸು** : ೨. ಚಲುವ ನರ್ತನದ ಪೆಣ್ಗಳು ಸಭಾಸ್ಥಳವ ಮರುಳುಗೊಳಿಸಿದರೆನೆಂಬೆ (ಕಂಕಪ. ೨೦-೦೦೩). [ಮರುಳ್ಗೊಳ್ + — ಇಸು$_3$]

**ಮರುಳ್ಚು** (ಕ್ರಿ). ಮೋಹಗೊಳಿಸು ; ಆಕರ್ಷಿಸು : ನಾಗಶಯ್ಯೆಯೊಳ್ ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣವನಂ ಮರುಳ್ಚಿದಳ್ (ಕಂಪಶಾ. ೯-೦೭); ವನಿತೆಯರಂ ಮರುಳ್ಚುವ ಸಮಾಕೃತಿಯಿಂ ಸುಮನೋಭಿವೃದ್ಧಿಯಂ ಜನಿಯಿಪ ಶೀಲದಿಂ . . . ವಿಭು ಲಕ್ಷ್ಮೀದೇವನೆಸೆವಂ (ಎಕ. XIII, ೨೯-೦೦ ; 1204) ; ನೀಂ ಕುಮಾರಿಯನಿಂತು ಮಚ್ಚಿಸಿ ಮರುಳ್ಚಿ ಧನಂಗೊಡದಿಪ್ಪುದೊಪ್ಪವೇ (ಕೃಶಪ. ೨೯-೦೯). [ಮರುಳ್$_1$ + — ಚು$_1$]

**ಮರುಳ್ತನ, ಮರುಳುತನ, ಮಳ್ಳತನ** (ನಾ). ೧. ಹುಚ್ಚು; ಬುದ್ಧಿಭ್ರಮೆ : ಮರುಳ್ತನಂ ನಿನತು ಬಲ್ಬೆಳೆದ ಕರತ್ರಮೆನೆ ತೋರ್ಪುದೆನಗೆ (ಅದ್ವಶ್ರ. ೫೨-೦೦೨೭). ೨. ದಡ್ಡತನ ; ಮೌಢ್ಯ : ಈತನೊಳ್ ಇದಿರ್ಚಿ ಕಾದುವ ಮರುಳ್ತನಂ ಬೇಡ (ಅಂಪು. ೦೩-೫೭ ಪ); ನಿಮ್ಮೊಳ್ ಕೂಡಿದೆನ್ನ ಮರುಳ್ತನಮಲ್ಲದೆ ನಿಮ್ಮೊಳಿನಿತುಂ ದೋಷಮಿಲ್ಲ (ಶಂಕಶಂ. ೯೫-೯). ೩. ಪಿಶಾಚಿಯಾಗಿರುವಿಕೆ : ಬಂಧುಮತ್ಸರದೊಳೆ ಪೈರಮಂ ಪಡೆದು ಭೀಮನನಿನ್ನಿತರ್ಕೆ ತಂದ ನೀಂ ಮರುಳನೊ ಭೂತಕೋಟಿವೆರಸಾಹವರಂಗದೊಳಾಡುತಿರ್ಪ ತಾಂ ಮರುಳನೊ ನೋಟ್ಪಿವಿರ್ವರ ಮರುಳ್ತನವುಂ ಫಣಿರಾಜಕೇತನಾ (ಗದಾಯು. ೯-೫೫). **ಮರುಳುತನ** : ೨. ಮರುಳುತನದಲಿ ವ್ಯರ್ಥನಾದೆನಲಾ ಮಹಾದೇವ (ಕುಪ್ರಾಕ. ೬೦೩. ೭-೦೦೩); ಏಕೆ ನಿನಗೀ ಮರುಳುತನದವಿವೇಕ (ಕೊಕಾ. ೫-೩-೫೦); ಆತನ ನುಡಿಗೇಳಿ ಈ ತನಕ ಇಲ್ಲಿ ಕುಳಿತುದೇ ನಮ್ಮ ಮರುಳುತನ (ಕಾಂಯು. ೦೯). **ಮಳ್ಳತನ** : ೨. ಮುದ್ದಾಂ, ಮಳ್ಳತನವನ್ನು ಪ್ರದರ್ಶಿಸುವ ಡಾವಿನಿಂದ, ನಾನೂ. . . ಬಾತಮಿ ಒಪ್ಪಿಸಿದ್ದೆ (ಜೀಕಪ. II, ೦೯). [ಮರುಳ್$_2$ + — ತನ]

**ಮರುಳ್ನಗೆ** (ನಾ). ದೆವ್ವದ ನಗೆ ; ಪಿಶಾಚಿಯ ನಗು : ಇಂಚರದ ಕೊರಲು ಭಿರಿದು ಕಠೋರಭೇರಿಯಾಗುತಿದೆ ! ಚೆಲುವೆಯರ ಮುಗುಳ್ನಗೆಯು ಮರುಳ್ನಗೆಯುದಾಗುತಿದೆ ! (ಪಾಂಚಜ. ೩೫-೦೦). [ಮರುಳ್$_2$ + ನಗೆ]

**ಮರುಳ್ಪಡೆ** 'ಮರುಳ್ವಡೆ' ನೋ.

**ಮರುಳ್ಬೂದಿ** (ನಾ). ಬುದ್ಧಿಯನ್ನು ಮಂಕುಗೊಳಿಸುವ ಬೂದಿ ; ಮಂಕುಬೂದಿ : ವಸ್ತುಥಾಂಕನೆಂದೆಂಬ ಕೌಳಿಕಂ ಜನವಶ್ಯದಾ ಮರುಳ್ಬೂದಿ ಕವಿಸಿದಂತಿರುತಿರ್ಪ ಜೊನ್ನದೊಳ್ (ಶಶು. ೬-೫೦).
[ಮರುಳ್$_2$ + ಬೂದಿ]

**ಮರುಳ್ಮಸಗು** (ಕ್ರಿ). ಹುಚ್ಚು ಕೆರಳು ; ಹುಚ್ಚೇರು : ಒರ್ವರೊರ್ವರಂ ನಂಬದ ಬಗೆಯಿಂ ಕನಕಾಸ್ಪದಮಿಲ್ಲದೆಯುಂ ಮರುಳ್ಮಸಗಿ ಪಸುಗೆಟ್ಟು ಪಸಿಯ ಬಡಿಗೆಗಳನೆತ್ತಿಕೊಂಡು (ಆರಾಕ. ೯-೦೦೯ ಪ).
[ಮರುಳ್$_2$ + ಮಸಗು]

**ಮರುಳ್ವಡೆ, ಮರುಳ್ಪಡೆ** (ನಾ). ೧. ದೆವ್ವಗಳ ಗುಂಪು ; ಪಿಶಾಚಿಗಳ ಸಮೂಹ : ವಾಜಿಯುಂ ವಾಹಕರುಂ ಮರುಳ್ವಡೆಯುಮಾಗಡೆ ತಮ್ಮೊಡನಾಡೆ ರಾಗದಿಂ (ಕಂಪಾಪು. ೦೩-೬೫). ೨. ಶಿವನ ಪರಿವಾರ; ಪ್ರಮಥಗಣ : ಕರಮೆಸೆದಂ ಪಲತೆಱದ ಮರುಳ್ವಡೆಯ ನಡುವುಮಾಪತಿರುದ್ರಂ (ಶಾಪ್ರಾಕ. ೬೦೦). **ಮರುಳ್ಪಡೆ** : ೧. ಗಜಮಾಂಸಮನುರ್ಚ್ಚಿ ತಿಂದು ಕೂಗಿಡುವ ಮರುಳ್ಮರುಳ್ಪಡೆಯನಟ್ಟುವ ಸಿದ್ಧಗಣಂ (ಎಕ. VIII, ಸೊರಬ. ೦೯೯-೦೦; 1033 ?); ಪಂದಲೆಯ ತಿಱಿಕಲ್ಲಾಟದಿಂ ಮರುಳ್ಪಡೆಗೆ ನಲವೆರ್ಚಿಸುತುಂ (ರಾಪಾಕ. ೯೯-೦೯). [ಮರುಳ್$_2$ + ಪಡೆ$_2$]

**ಮರುಳ್ವಣಗು** (ನಾ). ತುಚ್ಛವಾದ ಪಿಶಾಚಿ : ಸೊಣಗಂಗಳ ಸೊಣವುತ ಮರುಳ್ವಣ [ಪಾಠಾಂ. ಳೆಗೂ]ಗುಗಳು ಒಣದಲೆವೋಡ ಹಿಡಿದು ರಕ್ಕಸರುಂಬ ಹೆಣನ ಭಿಕ್ಷವ ಬೇಡುತಿಹರು (ತ್ರಿಪಾಂ. ೬-೦೭). [ಮರುಳ್$_2$ + ಪಣಗು$_2$]

**ಮರುಳ್ವೋಗು** (ಕ್ರಿ). ಭ್ರಮೆ ಹೊಂದು ; ಭ್ರಾಂತಿಗೊಳ್ಳು ; ಮರುಳಾಗು : ಸವಿನುಡಿಯ ಕಳ್ಪಿಂಟಿ ಮರುಳ್ವೋಗೆಯಮ್ಮ ನೀನಾತಂಗೆ (ತ್ರೀರಾಪಾ. ೬೦-೨೦೦). [ಮರುಳ್$_2$ + ಪೋಗು$_1$ (<ಪೋ$_1$)]

**ಮರೂರ್** (ನಾ). ಒಂದು ಊರಿನ ಹೆಸರು : ಮರೂರು ಕುಪ್ಪಾಡಿಯ ನೆಟಲ ಗುಡಿಸಿದ ತ್ರೈಲೋಕ್ಯವೀರಕೆ ಕೊಟ್ಟ ಮಣ್ಣು ಇರ್ಖಂಡುಗ (ಎಕ. IX, ಬೆಂಗಳೂ. ೯೦-೬; 820). [ ? + ಊರ್ ]

**ಮರೆ$_1$** 'ಮಱೆ$_1$' ನೋ.

**ಮರೆ$_2$** 'ಮಱೆ$_2$' ನೋ.

**ಮರೆ$_3$** (ನಾ). ಒಂದು ಬಗೆಯ ಜಿಂಕೆ : "ನ್ಯಂಕುಃ, ರಂಕುಃ—ಈ ೨ ಮರೆ" (ಪದಾಯು. ೩೯-೭೭); ಪರಿವ ಕಡವಿನ ಕಾಡೆಮ್ಮೆಯ ಮರೆಯ ಪಿಂಡುಗಳುಮಂ . . . ಪಾಯ್ವ ಸಿಂಗಂಗಳುಮಂ ಕಂಡು (ಕಂಕಪಾ. ೫-೯೮ ಪ) ; ಕರಡಿ ಕಡವೆ ಕಾಡೆಮ್ಮೆ ಸೊಣಗ ಮೊಲ ಮರೆ . . . ಎರಡು ತಲೆಯ ಪಕ್ಕಿಯಿನೊಪ್ಪಿದುದಾ ದಾರುಣಮಪ್ಪಡವಿ (ಪಯಶಾ. ೦೫-೨೯).
[ದೇ.೩ ತಮಿ. ಮರೈ]

**ಮರೆಕನ್ನಡ** 'ಮಱೆಗನ್ನಡ' ನೋ.

**ಮರೆಗರೆ** (ಕ್ರಿ). ೧. ಅಡಗಿರು ; ಬಚ್ಚಿಟ್ಟುಕೊಂಡಿರು : ಪಲಾಯನಕ್ಕಾಗಿ ಮರೆಗರೆದು ಹೊಂಚುತ್ತಿರುವ ವೀರಶತ್ರು (ಪಟ್ಟಾಳ. ೦೨೩-೦೯). ೨. ಮುಚ್ಚು ; ಮರೆಮಾಡು : ಅರುಣಕಿರಣದ ಜವನಿಕೆಯ ಮರೆಗರೆದು ಬಹ ದಿನಕರನ ಬಿಜಯದ ಭರವನರಿದುಲಿಯುತ್ತಿಹುವು ಕಲರವದ ಖಗನಿಕರ (ಕಪಾ. III, ೦೬೬ ಹರಿಹರಾಷ್ಟಕ). [ ಮರೆ$_2$ (< ಮಱೆ$_2$) + ಕರೆ$_3$ ]

**ಮರೆಗುಳಿ, ಮರಗುಳಿ** (ಗು). ಮರೆಯುವ ; ಸ್ಮರಣೆಯನ್ನು ಕಳೆದುಕೊಳ್ಳುವ : ಮರೆಗುಳಿ ಸ್ವಭಾವದವನು ನನ್ನ ಕೈಗೆ ಈ ಹಳೆಕೊಡೆಯನ್ನು ಅರ್ಪಿಸಿ ಹೋಗಿರುವುದೂ ಸಾಧ್ಯವಿದೆ (ಜೀಕಪ. ೬೩); ಮರೆಗುಳಿ ಸ್ವಭಾವದವರೂ, ಮರೆವಿನ ಸೋಗಿನವರೂ ರೇಲ್ವೆಯ ಪತ್ರಿಕೆಗಳನ್ನು ಶಿರಸ್ತ್ರಾಣದ ಒಡಲಲ್ಲಿಯೊ, ಕೋಟಿನ ಒಳಕಿಸೆಯಲ್ಲಿಯೊ, ತುರುಕಿಬಿಡುವ ಸಂಭವವುಂಟು (ಗಾಳಿಪ. ೩೯). **ಮರಗುಳಿ** : 'ಮರೆ' ಧಾತುವಿಗೆ—ಆ ಸ್ವಭಾವವುಳ್ಳ—ಎನ್ನುವ ಅರ್ಥದಲ್ಲಿ'ಗುಳಿ' ತದ್ಧಿತಪ್ರತ್ಯಯ ಸೇರಿದಾಗ—'ಮರಗುಳಿ' —ಎನ್ನುವ ಶಬ್ದ ಸಿದ್ಧವಾಗುತ್ತದೆ (ಶಾಜಾಶಾ. ೦೩೫).
[ಮರೆ$_1$ (<ಮಱೆ$_1$) + — ಗುಳಿ$_3$]

**ಮರೆಗೆಯ್** (ನಾ). ಕಣ್ಣಿಗೆ ಕಾಣದ ಕೈ : ಇನಿವೊಳ್ಪಿಂ ಸುಡಿಬ್ಬಿಟ್ಟು ಬಿನ್ನನಿರ್ದಿರ್ಪ ಮರೆಗೆಯ್ಗೊಳ್ಳ್ದ ಪಾಸೆಗೆವೋಲಲುಗುಗೊಂಡೆನ್ನನಿಂಗಿತದಿಂದೆ ಮುಂಬಡಿಸೆ (ಸಂಕಪ. ೩೫-೦೮೫). [ಮರೆ$_1$ (< ಮಱೆ$_1$) + ಕೆಯ್$_2$]

**ಮರೆಗೊಡು** (ಕ್ರಿ). ಆಶ್ರಯವನ್ನು ಕೊಡು : ಬೆಟ್ಟಪ್ಪನ ಹಸುಳೆಗಳನ್ನು ಕರೆತರಿಸಿಕೊಂಡು ಮರೆಗೊಟ್ಟು ಅಕ್ಕರಿಂದ ನಡಪಿ (ಕುಂತ್ರಪ. ೦೮-೬).
[ಮರೆ$_2$ (< ಮಱೆ$_2$) + ಕೊಡು$_1$]

**ಮರೆಗೊಳ್** 'ಮಱೆಗೊಳ್' ನೋ.

**ಮರೆಗೊಳು** 'ಮಱೆಗೊಳ್' ನೋ.

**ಮರೆಗೋಡು** (ನಾ). ಜಿಂಕೆಯ ಕೊಂಬು : ಪುರುಷಾಕಾರದ ರೂಪಂ ಮರೆಗೋಡಂ ಕಾಣಲೊಡನೆಯಾ ಮರೆವೆಣ್ಣಚ್ಚರಸೆಯ ರೂಪಂ ತಳೆದು (ಕಇ. I. ೨೫-೨೦; 1186). [ಮರೆ$_3$ + ಕೋಡು$_5$]

**ಮರೆದೆಗೆ** 'ಮಱೆದೆಗೆ' ನೋ.

**ಮರೆನುಡಿ** 'ಮಱೆನುಡಿ' ನೋ.

**ಮರೆಪಡೆ** (ಕ್ರಿ). ಆಶ್ರಯವನ್ನು ಹೊಂದು; ಶರಣುಹೊಗು : ಮಲ್ಲಿಕಾರ್ಜುನದೇವರ ಶ್ರೀಪಾದದಲ್ಲಿ ಪದ್ಮಸಂನಿಧಿಗಾಗಿ ಮರೆಪಡೆಯ ಬೇಕೆಂದು ಮಾಡಿದಂಥಾ ಧರ್ಮ್ಮ (ಎಕ. XII. ಗುಬ್ಬಿ. ೨೯-೪೦; 1420). [ಮರೆ$_2$ (< ಮಱೆ$_2$) + ಪಡೆ$_1$]

**ಮರೆಬೀಳು** (ಕ್ರಿ). = ಮರೆಪಡೆ : ವ್ಯಾಡನ ಮರೆಬಿರ್ದಡಂ ಪಿಡಿದೆಳೆದು ತಹೆವು (ಶಬಸೋ. ೦೨-೩೬); ನಾ ನಿಮ್ಮ ಮರೆಬಿದ್ದೆ ಗುರುವೆ (ಕೃ.ಚಾರ. ೪೩-೯೯); ಮರೆಬಿದ್ದವನನ್ನು ಬೆನ್ನಿಗೆ ಕಟ್ಟಿಕೊಳ್ಳುವುದು ಸ್ವಭಾವ (ಹುಬ್ಬಿ.ಕ. ೦೯೩). [ಮರೆ$_2$ (< ಮಱೆ$_2$) + ಬೀಳು$_1$ (< ಬೀೞ್$_1$)]

**ಮರೆಮಾಚು** 'ಮಱೆಮಾಜು' ನೋ.

**ಮರೆಮಾಜು** 'ಮಱೆಮಾಜು' ನೋ.

**ಮರೆಮೈ** 'ಮಱೆಮೆಯ್' ನೋ.

**ಮರೆವಲೆ** (ನಾ). ಜಿಂಕೆಯನ್ನು ಹಿಡಿಯುವ ಒಂದು ಬಗೆಯ ಬಲೆ : ಎರಳೆವಲೆ ಹಂದಿವಲೆ . . . ಮರೆವಲೆಗಳು . . . ನೇಣ್ವಲೆ ಮೊಕರವಲೆ ಬೇಡರ ಸಿರದೊಳೊಪ್ಪಿದುದು (ಶಾಬ್ಬಶಾ. ೫-೦೯). [ಮರೆ$_3$ + ಬಲೆ$_1$]

**ಮರೆವಿಡಿ** (ನಾ). ಹೆಣ್ಣುಜಿಂಕೆ ; ಹರಿಣಿ : ಮುನೀಂದ್ರಂ . . . ಪೋಪೋಣ್ಮುವ ರೇತಸ್ಕಳನೆಗೆ ನಾಣ್ಚುತತಿದುಃಖಾಂನ್ವಿತನಬ್ಜದಳದೊಳಂತದನಾಂತಂ ಮರೆವಿಡಿಯಾಘ್ರಾಯಿಸೆ . . . ಮರೆವೆಣ್ಣ ಗರ್ಭದಿಂದವತರಿಸಿದನೊರ್ವ್ವಂ ಕುಮಾರಕಂ (ಕಇ. I. ೨೫-೨೦; 1186). [ಮರೆ$_3$ + ಪಿಡಿ$_3$]

**ಮರೆವು** 'ಮಱವು' ನೋ.

**ಮರೆವುಗೇಡಿ** (ನಾ). = ಮರೆಗುಳಿ : ಅವನೊಬ್ಬ ಮರೆವುಗೇಡಿ. ಈಗ ಹೇಳಿದ್ದನ್ನು ಇನ್ನೊಂದು ಕ್ಷಣವಲ್ಲಿ ಮರೆತುಬಿಡುತ್ತಾನೆ (ರೂಢಿ). [ಮರೆವು (< ಮಱವು) + ಕೇಡಿ$_1$]

**ಮರೆವುಗೇಡಿತನ** (ನಾ). ಮರೆಯುವಿಕೆ ; ಜ್ಞಾಪಕವಿಲ್ಲದಿರುವುದು : ವಿಚಾರವಮಗ್ನತೆಯಲ್ಲಿ ಕೊಂಚಕೊಂಚ ಮರೆವುಗೇಡಿತನವೂ ಕೂಡಿರುತ್ತದೆ (ಮುಂಗಾರು. ೮೨). [ಮರೆವುಗೇಡಿ + — ತನ]

**ಮರೆವೆಣ್** (ನಾ). = ಮರೆವಿಡಿ : ಆ ಮರೆವೆಣ್ಣಚ್ಚರಸೆಯ ರೂಪಂ ತಳೆವಂಬರಕ್ಕೆ ಪಾಱಿಮುದ(ದು) (ಕಇ. I. ೨೫-೨೦; 1186). [ಮರೆ$_3$ + ಪೆಣ್]

**ಮರೆವೋಗು, ಮರೆಹೋಗು, ಮೊರೆಹೋಗು, ಮೊಱೆಯೋಗು** (ಕ್ರಿ). ಆಶ್ರಯಿಸು : ಗೌರಿ ಕೋಕಿಲೆಯಾಗಿ ಬಂದು ಯಜ್ಞಕುಂಡದ ಸಮಿಪದಲ್ಲಿ ತನುಮನೋಧನಂಗಳಂ ಬೇಡಿದ ಬ್ರಾಹ್ಮಣರ್ಗೀವೆನೆಂಬನ ಮರೆವೋಗೆ (ಕಾಕಳ್ಳ. ೦೦೩). **ಮರೆಹೋಗು :** ವಿದ್ಯಾರ್ಥಿಗಳು ಗೈಡುಗಳಿಗೆ ಮರೆ ಹೋಗುವುದನ್ನು ತಪ್ಪಿಸಬೇಕು (ರೂಢಿ). **ಮೊರೆಹೋಗು :** ಅರಿಯದ ವೈರಾಗ್ಯ ಹರಿಹಿಕೊಂಬುದಕಿಂತ ಅರಿತು ಮೊರೆಹೋಗಿರೊ ಗೋಪಾಲ ವಿಠಲನ್ನ (ಹಗದಾ. ೩೯) ; ಅರ್ಜುನನು . . . ಶ್ರೀ ಕೃಷ್ಣನ ಮೊರೆಹೋಗುತ್ತಾನೆ (ರರ್ಸಾಸಾ. ೦೩೪). **ಮೊಱೆಯೋಗು :** ಅಗ್ನಿ ಹರಿಯ ಮೊಱೆಯೋಗೆ ಕರುಣಾದಿಂದಲಿ ಕೇಳಿ ಹರಿ ಬಂದ (ತೀರ್ಥಸು. ೨೬೦). [ ಮರೆ$_2$ (< ಮಱೆ$_2$) + ಪೋಗು$_1$ (< ಪೋ$_1$) ]

**ಮರೆಸಲ್** (ಕ್ರಿ). ಆಶ್ರಯವನ್ನು ಹೊಂದಂ, — ಪಡೆ : ಇದ್ದಸೆಯಿ ನಿದ್ದೊರೆಗೆಳೆದ್ದು ಮುಂಬೆರೆಯ ಒಂದನಿನ್ನೊಂದು ಮರೆಸಂದು ಹರಿವಂತೆ (ಗಿಳಿಬಿಂ. ೫೬-೩೬). [ಮರೆ$_2$ (< ಮಱೆ$_2$) + ಸಲ್$_1$]

**ಮರೆಸು** ' ಮಱೆಯಿಸು ' ನೋ.

**ಮರೆಹುಯಿಲು** ' ಮಱೆವುಯಿಲ್ ' ನೋ.

**ಮರೆಹೊಗು** ' ಮಱೆವೊಗು ' ನೋ.

**ಮರೆಹೋಗು** 'ಮರವೋಗು' ನೋ.

**ಮರೇ** ' ಮರ್ಯೋ ' ನೋ.

**ಮರೋ** ' ಮರ್ಯೋ ' ನೋ.

**ಮರೋಲಿ** (ನಾ). (?) : ಮರೋಲಿ, ಚೇಳುಂಗಟ್ಟದ — ಮರೆ, ಮರಸು, ತಪ್ಪಲುಕಿಬ್ಬೆ (ಶಕ್ಕಶಾ. ಅನುಬಂಧ II. ೫). [ ? ]

**ಮರ್ಕಟ** (ನಾ). ೧. ಒಂದು ಬಗೆಯ ಪ್ರಾಣಿ ; ಕೋತಿ ; ಮಂಗ : ಜರದಂಥತಾಪಸರ ಕಯ್ಯಂ ಪಿಡಿದೆಡಪಲೀಯದೆ ನಡೆಯಿಸುವ ಚಪಳ ಮರ್ಕಟಂಗಳಂ . . . ಸೊಗಯಿಸುವುದು (ಕಾದಂಪೂ. ೨೨೨) ; ಮರನನೇಱಿದ ಮರ್ಕಟನಂತೆ ಹಲವು ಕೊಂಬೆಗೆ ಹಾಯುತಲಿದೆ ಬೆಂದ ಮನವ ನಾನೆಂತು ನಂಬುವೆನಯ್ಯಾ (ಬಸವ. ೩೩) ; ಉರಿವ ಕಿಚ್ಚನು ಬಿಚ್ಚಿ ಬೀಸಿದ ತೆಜವಲುಱಿ ಅಟ್ಟಿದನು ಮರ್ಕಟರ (ಕೌಶಿರಾ. ೨೦-೩೯). ೨. ಜೇಡರ ಹುಳು. ೩. ಒಂದು ನರಕದ ಹೆಸರು : ಮರ್ಕಟ . . . ಗಂಡಕವೆಂಬೈದು ಮಂತ್ರಿನರಕಂಗಳ ಸಹಾಯದಿಂ ಮಹಾಪದ್ಮವೆಂಬರಸುನರಕವಿಹುದು (ಚಿವೇಕ. ೦೮೦). ೪. (ಆಲಂ) ಮಂಕ ; ತಿಳಿಗೇಡಿ : "ಮರ್ಕಟಗೆ ಮಂಕನೆನಿಕುಂ" (ಕಕರ. ೦೨೦) ; ಇಂತೀ ಗುಣ ಸತ್ಯವಂತರಿಗಲ್ಲದೆ ಮಿಕ್ಕನ ಮರ್ಕಟ[ಪಾಠಾಂ. ಮುಕ್ಕಟನಾಥ]ರಿಗೆಲ್ಲಿಯದೋ (ಪೋಳಿವಚ. ೫೫-೨೨೬). ೫. [ಕಾಮಶಾ] ಒಂದು ಬಗೆಯ ರತಿಬಂಧ : ಕಾಲ ನೀಡಿ ಕುಳ್ಳಿರ್ದ ಬಾಲೆಯೊಪ್ಪುವೆರಡುತೊಡೆಯ ಮೇಲೆ ಪುರುಷನಂತೆ ಕುಳ್ಳಿರ್ದು ತನ್ನಯ ಕಾಲನಿಟ್ಟು ಸಮ್ಮುಖದೊಳು ಲಾಲಿಸುತ್ತೆ ರಮಿಸಲದುವೆ ಲೋಲನೇತ್ರ ಕೇಳು ಮರ್ಕಟಾಖ್ಯವೆನಿಪ್ಪುದು (ಜಪವ. ೯-೯೯). [ಸಂ.]

**ಮರ್ಕಟಕ** (ನಾ). = ಮರ್ಕಟ ೧ : "ಬಲೀಮುಖಃ, ಮರ್ಕಟಕಃ . . . ವಾನರಃ — ಈ ೧೧ ಕೋಡಗಂ" (ಹಲಾಯು. ೩೯-೬೮). [ಸಂ.]

**ಮರ್ಕಟಕಿಶೋರನ್ಯಾಯ** (ನಾ). [ತರ್ಕಶಾ] ತಾಯಿಕಪಿಯನ್ನು ಮರಿ ಕಪಿಯು ಅಪ್ಪಿಕೊಂಡಿರುವಾಗ, ತನ್ನ ತಾಯಿ ತನ್ನನ್ನು ರಕ್ಷಿಸುತ್ತದೆ ಎಂಬ ಭಾವನೆಯುಳ್ಳ ದೃಷ್ಟಾಂತ ; P ಹಾಗೆಯೇ ಪರಮಾತ್ಮನನ್ನು ದೃಢವಾಗಿ ನಂಬಿದ ಭಕ್ತನನ್ನು ಆಶ್ರಯದಾತನಾದ ದೇವರು ಕೈಬಿಡುವುದಿಲ್ಲ ಎಂಬುದಕ್ಕೆ ದೃಷ್ಟಾಂತ : ದೃಷ್ಟಾಂತಗಳ ಮೂಲಕ ಜೀವಾತ್ಮ ಪರಮಾತ್ಮರ ಸಂಬಂಧವನ್ನು ವಿವರಿಸುವಾಗ ಮರ್ಕಟ-ಕಿಶೋರ ನ್ಯಾಯ, ಮಾರ್ಜಾಲ-ಕಿಶೋರ ನ್ಯಾಯ ಎಂದು ಹೇಳುವುದುಂಟು (ಭಾರದ. ೨೬೯). 'ಮಾರ್ಜಾಲಕಿಶೋರನ್ಯಾಯ' ಪರಾ. [ಸಂ.]

**ಮರ್ಕಟಚಿಹ್ನ** (ನಾ). ಕೋತಿಯ ರೂಪ (?) : ಧ್ವಜ ಮಕುಟ ಸಿತಾತಪತ್ರಾದಿಗಳೊಳ್ ಮಣಿಮಯಮಪ್ಪ ಮರ್ಕಟಚಿಹ್ನದೊಳ್ ಮುನಿವರನಂ ಪೂಜಿಸಿ (ಪದ್ಮರಾ. ೦೬೩-೪). [ಸಂ.]

**ಮರ್ಕಟತನ** (ನಾ). ಕಪಿಯ ಸ್ವಭಾವ ; ಚಂಚಲಚಿತ್ತ : ಮನದ ಮರ್ಕಟತನವೆಂತು ಮಾಣ್ಬುದೆನ್ನಾ (ಬಸವ. ೪೦) ; ಬಾಲಬುದ್ಧಿಗೆ ಪ್ರಶ್ನಾಸ್ವಾತಂತ್ರ್ಯ ಕೊಡುವುದು ಮರ್ಕಟತನಕ್ಕೆ ಪಟ್ಟ ಕಟ್ಟಿದಂತೆಯೇ (ಶಿಕಂದಾ. ೪೯). [ ಮರ್ಕಟ + — ತನ ]

**ಮರ್ಕಟಧ್ವಜ** (ನಾ). ೧. ಕೋತಿಯ ಚಿಹ್ನೆಯಿರುವ ಬಾವುಟವನ್ನು ಹೊಂದಿದವನು. ೨. ಅರ್ಜುನ : ಪೊಣರ್ದರುರ್ಬಿ ವೃಷಧ್ವಜ ಮರ್ಕಟಧ್ವಜರ್ (ಶಬಂ. ೪-೬೨). [ಸಂ.]

**ಮರ್ಕಟನಾಡಿ** (ನಾ). ಒಂದು ನಾಡಿಯ ಹೆಸರು : ಮಯೂರನಾಡಿ . . . ಮರ್ಕಟನಾಡಿ . . . ಸಂತೋಷನಾಡಿ ಇಂತೀ ಪ್ರಥಮನಾಡಿ ಯೊಳಗಾದ ಶರೀರದಲ್ಲಿ ತೋಱುವ ನಾಡಿ ಜೀರ್ಣಪರ್ಣದಂತೆ (ಸಕವ. III, ೨೬೬–೩೦೩). [ಸಂ.]

**ಮರ್ಕಟಬಂಧ** (ನಾ). ಸ್ವಲ್ಪವೂ ಅಲ್ಲಾಡದಂತಹ ಬಿಗಿಯಾದ ಬಂಧನ ; ಕೋಡಗಗಟ್ಟು ; ಹೆಡಮುರಿಗೆ : ತದೀಯಶೌರ್ಯ ಮನೆತ್ತಂಗೋಲ್ಗೊಳ್ವಂತೆ ಮೇಗಣಿಂ ಮೇಗೆ ಪಿಡಿದೆತ್ತಿಕೊಂಡು ಮರ್ಕಟ ಬಂಧದಿಂ ಕಟ್ಟಿ ತಂದು (ಶಾಂತಿಪು. ೧೦–೧೬೪ ವ). [ಸಂ.]

**ಮರ್ಕಟವಿಲಾಸ** (ನಾ). ಕಪಿಯಂತೆ ಚೇಷ್ಟೆಮಾಡುವ ವ್ಯಕ್ತಿ : ದುರುಳರುರವಣಿಸಿದರು . . . ಮರ್ಕಟವಿಲಾಸರು ಧುರರಚಿತಪರಿಹಾಸರಭಿ ಜನಕುರುವಿನಾಶಕರು ತಾವಕರು (ಕುಮಾರವ್ಯಾ. ೦೨–೨೮). [ಸಂ.]

**ಮರ್ಕಟಿ** (ನಾ). ೧. ಒಂದು ಬಗೆಯ ಸಸ್ಯ ; ನಸುಗುನ್ನಿಗಿಡ: "ನಸುಕುನ್ನಿ ಮರ್ಕಟಿಯಾತ್ಮಗುಪ್ತೆಯುಕ್ಕಾ" (ಮಂಗರಾ. ೪೩–೪೩); "ಷಡ್ಗ್ರಂಥಿ – ಬಜೆ, ಮರ್ಕಟಿ" (ಓಷಧಿ. ೦೬೩). ೨. ಹೆಣ್ಣುಕಪಿ. ೩. ಓಮ; ಅಜವಾನ. [ ಸಂ. ಮರ್ಕಟೀ ]

**ಮರ್ಕೂಂ** (ನಾ). ಬರವಣಿಗೆ ಅಥವಾ ಲಿಖಿತದ ಸಂಖ್ಯೆ : ಅವನ್ನು ದಾಖಲೆ ಮಾಡದೆ ಇಟ್ಟುಬಿಡುತ್ತಿದ್ದರು. ದಾಖಲೆ ಮಾಡಿದರೂ ಯಾವ ಮರ್ಕೂಂನ ಹುಕುಂ ಎಂದು ಬರೆಯುತ್ತಿರಲೇ ಇಲ್ಲ (ಪದ್ಮರು. ೦೩೩); "ಮರ್ಕೂಂನ ಹುಕುಂ : ಇಂಥ ನಂಬರಿನ (ಮರ್ಕೂಂನ) ಆರ್ಡರು (ಹುಕುಂ)" (ಪದ್ಮರು. ಕೋಶ). [← ಅರ. ಮರಾ. ಮರ್ಕೂಂ=ಲಿಖಿತ]

**ಮರ್ಗಿಸು** 'ಮಟ್ಟಿಗಿಸು' ನೋ.

**ಮರ್ಗು** 'ಮಟ್ಟು' ನೋ.

**ಮರ್ಚಿಸು** 'ಮೆಚ್ಚಿಸು' ನೋ.

Δ **ಮರ್ಚು$_1$** 'ಮೆಚ್ಚು$_1$' ನೋ.

Δ **ಮರ್ಚು$_2$** 'ಮೆಚ್ಚು$_2$' ನೋ.

**ಮರ್ಚುಗೆ** 'ಮೆಚ್ಚುಗೆ' ನೋ.

**ಮರ್ಜಿ** (ನಾ). ೧. ಇಷ್ಟ ; ಆಸಕ್ತಿ : ಈ ಯಾವ ಕಾರ್ಯಕ್ಕೂ ದೊಡ್ಡ ಸರಕಾರದ ಮರ್ಜಿಯೂ ತಮ್ಮ ಮರ್ಜಿಯೂ ಯಾವ ಮೇರೆ ಇದೆಯೋ ಆ ಮೇರೆ ಹಾಜರು ಇದ್ದೇವೆ (ರಾಜೇಂದ್ರ. ೦೨೬) ; ಯಕ್ಷಗಾನದ ಮೇಲೆ ಮರ್ಜಿಯಿದ್ದ ಶ್ರೀಪತಿಗೆ ಈ ನಾಟಕದಲ್ಲಿ ಪಾತ್ರವಿರದಿದ್ದರೂ . . . ಅವನಿಗೆ ಖಯ್ಯಾಲಿ (ಸಂಸ್ಕಾರ. ೬೩) ; ಮದುವೆ ಮಾಡಿಕೊಡುವವರ ಮರ್ಜಿ, ಮಾಡಿಕೊಳ್ಳುವವರ ಮರ್ಜಿ (ಗಾಳಿ. ೨೩). ೨. ಸ್ವಭಾವ : ಅವರದ್ದು ಮುಟ್ಟಿದರೆ ಮುನಿಯುವ ಮರ್ಜಿ (ಕಜಾ. XVIII, ೬೬೪) ; ಕುಮಾರಗೂ ಸಮಾರನಿಗೂ ಪರಸ್ಪರ ಮರ್ಜಿ ಗೊತ್ತಿರಬೇಕು (ರಾಜ್ಯಶಾ. ೨೩೭) ; ನನಗೆ ಹಳ್ಳಿಯ ಹುಡುಗಿಯ ಮರ್ಜಿಯ ಪರಿಜ್ಞಾನವಿಲ್ಲ (ಕಂಕ. ೯೭). ೩. ಅನುಗ್ರಹ ; ಪ್ರಭಾವ : ಫಕೀರನು ಅವರ ಮರ್ಜಿ ಸಂಪಾದಿಸಿ ಅವರಲ್ಲಿಯೆ ನೌಕರಿಗಾಗಿ ನೆಲಸಿದನು (ಕಂಸಂ. ೩೩) ; ಮೇಲಿನವರ ಮರ್ಜಿಪಡೆದು ತುಸುದಿನದಲ್ಲಿಯೇ ಕಾಯಂ ಆದನು (ಗುರುಮಾಯಿ. ೨೯೭). ೪. ರೀತಿ ; ಗತ್ತು : ಕೊಳಗದಲ್ಲಿ ಅಪ್ಪಯ್ಯ ಭತ್ತವನ್ನು ಅಳೆಯುವಾಗ ಎಣಿಸುವ ಮರ್ಜಿಯಲ್ಲಿ ಅವರ ಲೆಖ್ಖ ನಡೆದಿತ್ತು ! (ಸಂಸ್ಕಾರ. ೩೩).
[←ಅರ. ಮರ್ಝೀ ; ಹಿಂ. ಮರಜೀ, ಮರ್ಜೀ ; ಮರಾ. ಮರ್ಜೀ]

**ಮರ್ತಬೆ** (ನಾ). ೧. ಸಲ ; ಬಾರಿ. ೨. ಸಂದರ್ಭ ; ಅವಕಾಶ ; ಸಮಯ : ಅದರ ವಡಂಬಡಿಕೆ ಸಂತೋಷದ ಮರ್ತಬೆ ದೋಸ್ತಿ ಕಲಮಿ ನಿಂದಾ ಬಹಳ ಸಲಾ ಬರದು ಇದ್ದೇವೆ (ರಾಜೇಂದ್ರ. ೦೨೦).
[←ಅರ. ಮರ್ತಬಹ್ ; ಹಿಂ. ಮರ್ತಬಾ]

**ಮರ್ತ್ಯ** (ಗು). ೧. ಸಾವಿಗೊಳಗಾಗುವ ; ಮರಣಹೊಂದುವ. (ನಾ). ೨. ಮನುಷ್ಯ ; ಮಾನವ : "ಮನುಷ್ಯಃ, ಮಾನುಷಃ, ಮರ್ತ್ಯಃ . . . ಈ ೧೨ ಮಾನಸರ್" (ಹಲಾಯು. ೩೩–೨೬೬) ; ಜಗಜ್ಜನಕನಂ ಶಿಶು ವೆಂಬುದೊ ಮರ್ತ್ಯನೆಂಬುದೊ (ಶಾಂತಿಪು. ೦೦–೯೨) ; ಮರ್ತ್ಯರೊಳ್ ಮಥನಂ ವೆಗ್ಗಳವಲ್ಲವೈ (ಸೋಮೇಶ. ೯೯) ; ಇಳೆಯ ಮರ್ತ್ಯರು . . . ಫಲುಗುಣಗೆ ಸರಿಯೆಂಬವರ ಬಾಯ್ ಹುಳಿವುದೋ (ಕುಮಾವಿ. ೮–೩೬). ೩. ಮಾನವರು ವಾಸಿಸುವ ಲೋಕ ; ಭೂಲೋಕ : ಈಗಳೀ ಮರ್ತ್ಯದೊಳಗೊರ್ವ ಪೊಸಮಗನಂ ಪಡೆದವು (ಪಂಬಿರ. ೧೨–೦೨೪) ; ಮರ್ತ್ಯವನೋವಿ ಮನುಜರೆಲ್ಲರಂ ನಿಜಭಕ್ತಿಯುಕ್ತಿಯಲಿ ಪಾವನತ್ವವನಿತ್ತು ಪಾಲಿಸಿ ಕಾವುದು (ಬಸವ. ೦–೬೦) ; ಶಿವಶರಣೆಯರಾಗಿ ಮರ್ತ್ಯಕ್ಕೆ ಬಂದು ಪವಾಡಗಳನ್ನು ಮೆರೆಯುವಂಥವರು (ಕರ್ನಾಕ. ೬೦). [ಸಂ.]

**ಮರ್ತ್ಯಜನ್ಮ** (ನಾ). ಮನುಷ್ಯನಾಗಿ ಹುಟ್ಟುವುದು ; ಮಾನವಜನ್ಮ : ದುರ್ಲಭಂ ಮರ್ತ್ಯಜನ್ಮಂ (ಸುಕುಮಾ. ೩–೩೪). [ಸಂ. ಮರ್ತ್ಯಜನ್ಮನ್]

**ಮರ್ತ್ಯದೇಹ** (ನಾ). ಮನುಷ್ಯಶರೀರ : ಮರ್ತ್ಯದೇಹದೊಳಲ್ಲಿ ಸುಳಿವುದು ಭಾರವೆಂದರು ಚರರು ಫಲುಗುಣಗೆ (ಕುಮಾಸ. ೩–೬೪). [ಸಂ.]

**ಮರ್ತ್ಯಲೋಕ** (ನಾ). ಮಾನವಲೋಕ ; ಭೂಲೋಕ : ಮರ್ತ್ಯಲೋಕ ವೆಂಬುದು ಕರ್ತಾರನ ಕಮ್ಮಟವಯ್ಯ (ಬಸವ. ೦೩೩). [ಸಂ.]

**ಮರ್ದಕ** (ನಾ). ಘಾತಿಸುವವನು ; ನಾಶಮಾಡುವವನು : ಕೃತಾಂತ ಮರ್ದಕನೊಳಲ್ಪಧನುರ್ವಿಶಿಖಂಗಳಿಂ ಜಯೋತ್ಸುಕತೆಯೊಳೆಚ್ಚು ಗೆಲ್ವ ಬಗೆಯಾಂತನು (ಕಬಸಂ. ೪–೦೨೬). [ಸಂ.]

**ಮರ್ದನ** (ನಾ). ೧. ಪುಡಿಮಾಡುವುದು ; ಚೂರ್ಣಮಾಡುವುದು. ೨. ಉಜ್ಜುವುದು; ತಿಕ್ಕುವುದು. ೩. (ಕೈಕಾಲು, ಮೈಯನ್ನು) ಒತ್ತುವುದು ; ಹಿಸುಕುವುದು : ಪಾದಗಳನ್ನು ಮರ್ದನಮಾಡಿಸಿಕೊಳ್ಳುವುದರಿಂದ ಶ್ರಮಪರಿಹಾರವೂ . . . ಶರೀರಪುಷ್ಟಿಯೂ ಇವೆಲ್ಲಾ ಉಂಟಾಗುವುವು (ಸಕವ. ೩೯). ೪. ನಾಶಮಾಡುವುದು : ಆ ಮಧುಕೈಟಭಮದ ಮರ್ದನರುಧಿರಾರುಣಚಕ್ರಿಚರಣಮಂ ನೆನೆಯಿಸುಗುಂ (ಕಾದಂಪೂ. ೨೬). ೫. ಹಿಂಸಿಸುವುದು ; ನೋಯಿಸುವುದು : ಮರ್ದನ . . . ದುರ್ಭೋಗ್ಯ ನಾನಾವಿಧಾಸಂಖ್ಯಾತತೀವ್ರವೇದನಾರೂಪಂಗಳಾಗಿ (ವಿವೇಕ. ೦೯೦). ೬. ನಾಶಮಾಡುವವನು : 'ಮಲ್ಲಮರ್ದನ' ಪರಾ.

**ಮರ್ದನಮಾಡು** = ಕೊಲ್ಲು ; ಸಾಯಿಸು : ಅವರು ನೂರೊಂದು ಜನವಿದ್ದರೂ ಅವನೊಬ್ಬನೇ ಎಲ್ಲರನ್ನೂ ಮರ್ದನಮಾಡಿಬಿಡುವನು (ವಕಥಾ. ೦೬). [ಸಂ.]

**ಮರ್ದನಿಗ** (ನಾ). ಮೈ ಒತ್ತುವವನು : "ಸಂವಾಹಕಂ ಮರ್ದನಿಗಂ" (ಮಂಗರಾ. ೧೧೧–೨). [ಮರ್ದನ + – ಇಗ]

**ಮರ್ದಲ, ಮರ್ದಳ** (ನಾ). ಒಂದು ಬಗೆಯ ಚರ್ಮವಾದ್ಯ; ಮದ್ದಳೆ ; ಮೃದಂಗ : ವನಗಜಧ್ವನಿ ಮರ್ದಲಸ್ವನಂ ಪೇಲಾವಿಪಿನಕೀಚಕವೆ ಸುಷಿರವು (ಶಬ್ದಮಾ. ೧೦–೦೬೩). **ಮರ್ದಳ** : ಆ ವಾದ್ಯವಿದ್ಯಾಧಿಕರ್ ಮರ್ದಳಮನುರ್ದಿ ಮಯೂರಮಾರ್ಜನೆಯಿಂದನಿಬರ ಮನಮನಾವರ್ಜಿಸಿ . . . ಪಾಡಿದರ್ (ತಕವಿ. ೬–೦೩೪ ವ). [ಸಂ.]

**ಮರ್ದಳ** 'ಮರ್ದಲ' ನೋ.

**ಮರ್ದಳೆ** (ನಾ). ಒಂದು ಬಗೆಯ ಚರ್ಮವಾದ್ಯ ; ಮೃದಂಗ : ಪಟು ಪಟಹತುಣವಭಂಭಾಮರ್ದಳೆಝಲ್ಲರಿ . . . ವಂಶವೀಣಾಸ್ವರಂಗಳೆಸೆಯೆ (ಪಂಪರಾ. ೯೩–೨೮). [ಸಂ. ಮರ್ದಲ]

**ಮರ್ದಳೆಕಾಱ** (ನಾ). ಮದ್ದಳೆಯನ್ನು ನುಡಿಸುವವನು : ತ್ರ್ಯಂಕ್ಯ ಆಲಿಂಗ್ಯ ಊರ್ಧ್ವಕವೆಂಬ ತ್ರಿವಿಧಕ್ರಮವಱಿದು ನುಡಿಸುವ ಕಡುಜಾಣರಪ್ಪ ಮರ್ದಳೆಕಾಱರಿಂ (ವಿವೇಕ. ೨೯೦). [ಮರ್ದಳೆ + – ಕಾಱ]

**ಮರ್ದಿತ** (ಗು). ೧. ಪುಡಿಪುಡಿಮಾಡಿದ. ೨. ತಿಕ್ಕಿದ ; ಉಜ್ಜಿದ. (ನಾ). ೩. [ನಾಟ್ಯ] ಒಂದು ನೃತ್ಯಭೇದ; ᴘ ''ಅಡಿಯನ್ನು ಅಡ್ಡ ಮಾಡಿ ನೆಲವನ್ನು ಒರಸುವುದು'' (ಲಾಸ್ಯರಂ. ಗದ್ಯಾನುವಾದ. ೨೩೮) ; ಮೇದಿನಿಯನಡ್ಡಪಾದದಿನಾದರದಿಂದೊರಸೆ ಮರ್ದಿತಾಖ್ಯಮೆನಿಕ್ಕುಂ(ಲಾಸ್ಯರಂ. ೨-೧೦೯). [ಸಂ.]

**ಮರ್ದಿಸು** (ಕ್ರಿ). ೧. ಒತ್ತು ; ಅಮುಕು : ತುಟೀದಂ – ಕಾಲೊಳ್ ಮರ್ದಿಸಿದಂ (ಚಮಿತ. ಹಂ. ೨). ೨. ನಾಶಮಾಡು : ಕೊಂಕಣ ಮಲೆಯಾಳ ಕೊಡಗುಭೂಪಾಲರ ಬಿಂಕವ ಮರ್ದಿಪ ಶೂರ (ಕಂಸಾ. ೧-೨೩). ೩. ಕೊಲ್ಲು ; ಸಾಯಿಸು : ಭೂತಳಾಧೀಶ್ವರನಪ್ರಿಯರಂ ಮರ್ದಿಸಿ ಧರೆಯಂ ಜಯಲಕ್ಷ್ಮೀಧಾಮನಾಗಿ ಪರಿರಕ್ಷಿಸುಗುಂ (ಕಂಕಶಂ. ೨೦೨-೧೭) ; ತಲವಜ್ರಾಘಾತದಿಂ ಮರ್ದಿಸಿ ರಜಕನಂ . . . ಪೊಕ್ಕಂ ದನುಜನ ಪೊಟಲಂ ಸಾಗ್ರಜನ್ಮಂ ಮುಕುಂದಂ (ಜಗಪ. ೬-೧೧) ; ಶಂಬರಾಸುರನ ಮರ್ದಿಸಲಾಗಿ . . . ಜಂಭಾರಿಮುಖ್ಯನಿರ್ಜರರ್ಕೆತಂದು ದಿವ್ಯಾಂಬರಗಳನಿತ್ತರೊಲಿದು (ಪೋಹಚ. ೦೩-೯). [ಮರ್ದನ + – ಇಸು$_3$]

**ಮರ್ದು**, ಮಂದ್ದು, ಮದ್ದು (ನಾ). ೧. ಔಷಧ : "ಮರ್ದೆಂದೌಷಧಿ" (ಶಬ್ದಾಶ. ೧೭) ; ಮರ್ದುಂ ಮಂತ್ರಮುಮಿಷ್ಟದೇವತೆಗಳುಂ ದಿವ್ಯಾಸ್ತ್ರಮುಂ . . . ಮಿತ್ರರ್ಕಳುಂ ಮಿಟ್ಟು ಮೇಲೆದ್ರ್ಯಗಳ್ ಶರಣಪ್ಪೊಡೇಕೆ ಮಡಿದರ್ ಪನ್ನಿರ್ವರುಂ ಚಕ್ರಿಗಳ್ (ಪಂಪಭಾ. ೦೯೩-೦೩) ; ಎಮಗಂ ನಿಮಗಂ ಮೂಡುವ ಮುಟುಗುವ ದಂದುಗಮಾಡಿದ ಹೊಲನುಂಡ ಮರ್ದು ಕಂಡ ವಿಚಾರಂ (ಯಶೋಚ. ೦-೩೨). ೨. (ಆಹಾರದೊಡನೆ ಬೆರಸಿ ಕೊಡುವ) ಒಂದು ಬಗೆಯ ನಂಜು ; ಕೈಮಸಕು : ಮರುಳೋ ಮರ್ದೋ ಮಾಟಮೋ ನಿರವಿಸಿ ನೆಲೆಗೆಯ್ದು ಕಾಪುಗೊಳಿಪುದು ಭರದೊಳ್ (ಚಶಪ. ೬-೭೨). ೩. ನಿವಾರಣೋಪಾಯ ; ಪರಿಹಾರ : ನೀರ ದಳಿದಂಗೆ ತುಪ್ಪಂ ಮರ್ದೇ (ಪುಷ್ಪ. ೭-೩೬); ಮರ್ದಲ್ತು ಪೊಲೆಗೆ ಪೊಲೆ (ಅಶ್ವಶಾ. ೦೩-೪೦೨). **ಮಂದ್ದು** : ೧. ಓಡಬೇಕೆಂದು ಮಂದು ತಿಂದು ತೊಕಡಿಸಿ ಬಿದ್ದಿಯಲ್ಲವೆ (ಕಥಾಮಂ. IV. ೯೬). ಮದ್ದು : ೧. ಕುತ್ತಕ್ಕೆ ಮದ್ದನಿಕ್ಕದೆ [ಪಾಠಂ. ಮದ್ದುಮಾಡದೆ] ಕುತ್ತಂ ಪೋಗೆಂದೊಡಂತೆ ಪೋಕುಮೆ (ಸಮಚ. ೧೧-೮೭) ; ಒಡಲಿನೊಳು ಮುಚಿದಿದ್ದ ಸಬಳವನುಡಿಯಲೀಯದೆ ಕೀಳ್ವ ಮದ್ದನು ಗಿಡವ . . . ಹಸ್ತಿವೈದ್ಯರ ಗಡಣವುಭಯದೊಳೆಸೆವವು (ಕುಮಾಭೀ. ೩-೪೦) ; ಮದ್ದ ನಾವ್ ತರಹೇಳಿದರೆ ಕಿತ್ತದ್ರಿಯನು ತಂದೀ ವಿವೇಕದ ಮುದ್ದುತನವನು ನೋಡಿದ್ಯೆ (ಕೊರಾ. ೬-೩೭-೬೨). ೨. ಮಕ್ಕಳಿಗೆ ಬೆಣ್ಣೆಯೊಳ್ ಮದ್ದಿಕ್ಕುವವೊಲ್ (ಸಮುಚ. ೩-೩೮) ; ಈತನ ಸುಳಿವು ತೋಜುವದಿಲ್ಲ ಮಾಯಾಲಲನೆಯಿಕ್ಕಿದ ಮದ್ದು ಜೀವರಿಗೆಂದನಾ ಭೀಷ್ಮ (ಕುಮಾಸ. ೯-೩). ೩. ಅನ್ಯಾಯಮಾಯಿತು ಇದಕೇನು ಮದ್ದು (ಪುರಂದ. ೨-೩೩-೨) ; ಗುಳಿಗೆಯಿದು ಆ ಖಗನ ಕಟ್ಟನು ಕಳೆದ ಮದ್ದಾದಪುದು (ಜೈಮಿ. ೧೭-೧೬); ಇದಕ್ಕೆಲ್ಲ ಒಂದೇ ಮದ್ದಿದೆ (ಮುಂಗಾರು. ೧೦೮). ೪. ವಶೀಕರಣಗೊಳಿಸುವ ಸಾಧನ : ನುಡಿಯ ಮಾತಿನ ಮುದ್ದು ಶಿವನನೊಲಿಸುವ ಮದ್ದು ತಾನೆನಲ್ ಶಿವೆ ಮೆಱೆದಳು (ಚಂಪು. ೩೭-೨೨). ೫. ಅಗ್ನಿಸ್ಫೋಟಕ ; ಸಿಡಿಮದ್ದು : ಹಾಯ್ಕು ಮರುವುರಿವ ಮದ್ದಿನ ತಿತ್ತಿಯಂ (ಚಂಪು. ೯೨-೯೩); ಕರಿಯ ಮದ್ದಿನ ಪೊಟ್ಟಣಗಳ ಹೊತ್ತಿಸಿ ಭರದಿಂದ ಮೇಲಿಡುತಿರಲು (ಕಂಪಂ. ೦೯-೭೩). ೬. ಪಟಾಕಿ : ಅನೇಕರು ದೀಪಾವಳಿಯಲ್ಲಿ ಮದ್ದು ಸುಡಲು ಬಹಳ ಹಣ ಖರ್ಚುಮಾಡುತ್ತಾರೆ (ರೂಢಿ).

ಮದ್ದರೆ = (ಅಲಂ) ಪ್ರತೀಕಾರೋಪಾಯವನ್ನು ಮಾಡು : ಪರಶುರಾಮನ ಪಟುತನಕೆ ಮದ್ದರೆದೆನೆಂಬೀ ನಿಟಿಲನೇತ್ರನ ಭುಜಬಲಕೆ ಸವಡೋಳಿ ಗಡ ನೀವು (ಕುಮಾಭೀ. ೯-೬೨); ಮಾಯಾಪುಳಿಂದಶ್ರತಿ ಮದ್ದರೆದುದಖಿಳಮೃಗಸಂತತಿಗೆ (ಕಬಕ್ಕೆ. ೩೩-೨೬). ಮದ್ದಿನ ತಿಲಕ = ವಶೀಕರಣಗೊಳಿಸುವ ಬೊಟ್ಟು,–ತಿಲಕ : ನಿನ್ನ ಹೊದ್ದಿ ತಳ್ಳಂಕದಿಂ ತವಕಿಸಬೇಕೊಂದು ಮದ್ದಿನ ತಿಲಕದಿಂದವನ (ಕುಬಾಸಾಂ. ೨೩-೩೮). ಮದ್ದು ಹಾಕು = ಕೈಮಸಕು ಹಾಕು : ಆರೋ ಏನೋ ಮದ್ದು ಹಾಕಿರಬೇಕು. ಮದ್ದುಗುಣಿಕೆಯಿಕ್ಕಿರಬೇಕು (ಕಟ್ಟೆ. ೯೩-೨). ಮರ್ದಿನ ಕೂಟ್ = ಔಷಧಿಯನ್ನು ಸೇರಿಸಿ ಬೇಯಿಸಿದ ಅನ್ನ; ಪಥ್ಯದ ಆಹಾರ: ತನಗುಳ್ಳ ವ್ಯಾಧಿಯುಮರ್ಗೆಂಟೆಂಬುದನಱಿದು ತನಗೆಂದು ಮಾಡಿದ ಮರ್ದಿನ ಕೂಟನವರ್ಗೆ ಬಡ್ಡಿಸಿದೊಡೆ (ಪಂಪಭಾ. ೦೭೦-೦೯).

[ದೇ.॥ ತಮಿ. ಮರುನ್ತು ; ಮಲ. ಮರುನ್ನು ; ತುಳು. ಮುರ್ದ್ ; ಕೊಡ. ಮದ್ದ್ ; ತೆಲು. ಮಂದು ; ಕೋಲಾ. ಮಾಯ್ಕು. ಮಂದ್ ; ಪರ್ಜಿ. ಮರುದೆ ; ಕುಡುಖ್. ಮಂದರ್ ; ಮಲ್ತೊ. ಮಂದ್ರು]

**ಮರ್ದುಂಗೂಟ್**, ಮರ್ದುಗೂಟ್ (ನಾ). ಔಷಧಿಯನ್ನು ಸೇರಿಸಿ ಬೇಯಿಸಿದ ಅನ್ನ ; ಪಥ್ಯದ ಆಹಾರ : ಮರ್ದುಂಗೂಟ್, ಮರ್ದುಗೂಟ್ (ಶಬ್ದಾಮ. ೩೬೯ ಪ್ರಯೋ). **ಮರ್ದುಗೂಟ್** : ಮೇಲಿನ ಪ್ರಯೋಗವನ್ನು ನೋಡಿ. [ಮರ್ದು + ಕೂಟ್$_1$]

**ಮರ್ದುಗುಣಿಕೆ**, ಮದ್ದುಗುಣಿಕೆ (ನಾ). ಒಂದು ಬಗೆಯ ಸಸ್ಯ ; ದತ್ತೂರ ; ಉನ್ಮತ್ತ : "ಮರ್ದುಗುಣಿಕೆಯೆಂದು ಉನ್ಮತ್ತಂ" (ಶಕಸಾ. ೬೭-೩೨೪). **ಮದ್ದುಗುಣಿಕೆ** : "ತಱಿಸಂದುಮ್ಮತ್ತ ಮದ್ದುಗುಣಿಕೆಯುಮಕ್ಕುಂ" (ಕಬಕಂ. ೨೦೯) ; ಉರಗನ ವಿಷಮೇಱಿದರುಂ ಸಿರಿಯುಳ್ಳರು ಮದ್ದುಗುಣಿಕೆಯಂ ತಿಂದವರುಂ . . . ಧರೆಯೊಳ್ ಮೆಯ್ಯಱಿಯರು (ರಮಾಪ್ರಮ. ೯-೦೯೮) ; ಮದ್ದುಗು [ಪಾಠಂ. ಮತ್ತಿಕು] ಣಿಕೆಯ ತಿಂದು ಸೊಕ್ಕಿದಂಗೆ ಕಾಪ್ಪ ಲೋಹಾದಿಗಳೆಲ್ಲಂ ಪೊಂಬಣ್ಣಮಾಗಿ ತೋರ್ಪಂತೆ (ಜೀವಸಂ. ೦೨೩-೬ ಪ); ಮದ್ದುಗುಣಿಕೆಯ ತಿಂದ ಮದೋನ್ಮತ್ತರ ಎನ್ನತ್ತ ತೋಱದಿರಯ್ಯ (ಅಶಂತಃ. ೬೪-೨೦). [ಮರ್ದು+ಕುಣಿಕೆ$_6$]

**ಮರ್ದುಗೂಟ್** 'ಮರ್ದುಂಗೂಟ್' ನೋ.

**ಮರ್ದುಣಿಸು** (ನಾ). ಪಥ್ಯದ ಊಟ ; ಮದ್ದಿನ ಊಟ : ಬಿರ್ದುಣಿಸಂ ಮರ್ದುಣಿಸೆಂಬಂತಿರುಂಡು ಸಜ್ಜೆವನೆಗೆ ಪವಡಿಸಲ್ಕೆಂದು ಪೋದಂ (ರಾಜಶೇ. ೭೩-೦೩). [ಮರ್ದು+ಉಣಿಸು$_3$]

**ಮರ್ದುಮಿ** 'ಮರ್ದುಮಿಾ' ನೋ.

**ಮರ್ದುಮಿಾ**, ಮರ್ದುಮಿ (ನಾ). ಗಂಡುತನ ; ಪೌರುಷ : ಕೋಟೆ ಕೆಡವಿ ಹಲ್ಲಾ ಮಾಡಿದಾಗ್ಯೂ ಪಾಳೆಗಾರನು ಮರ್ದುಮಿಾಯಿಂದ ನಿರ್ವಹಿಸಲಾರದೆ (ಹೈದರ. ೩೩). **ಮರ್ದುಮಿ** : ತಮ್ಮ ಮರ್ದುಮಿ, ತಮ್ಮ ಲಡಾಯಿ, ತಮ್ಮ ಪರಾಕ್ರಮವನ್ನು ನೋಡಿ ಬಹಳ ಸಂತೋಷಪಟ್ಟೆವು (ಶತ್ರುಪ. ೯೬). [←ಪಾರ. ಹಿಂ. ಮರಾ. ಮರ್ದುಮಿಾ]

**ಮರ್ದುವೇಟ್** (ಕ್ರಿ). ಔಷಧಿಯನ್ನು ಸೂಚಿಸು: ಆರ್ತನ ತೆಱನಱಿಯದೆ ಮರ್ದುವೇಟ್ವ ಬೆಜ್ಜನ ತೆಱದಿಂ (ಕಬರಾ. ೪-೦೩೦). [ಮರ್ದು+ವೇಟ್]

**ಮರ್ದೂರ್** 'ಮಜ್ದೂರ್' ನೋ.

**ಮರ್ಫ** 'ಮರಫ' ನೋ.

**ಮರ್ಬಿಗ**, ಮಬ್ಬಿಗ (ನಾ). ಕತ್ತಲೆಯಲ್ಲಿ ಸಂಚರಿಸುವವನು; ನಿಶಾಚರ ; ರಾಕ್ಷಸ : "ರಕ್ಕಸರ್ ಮರ್ಬಿಗರ್, ಚುಕ್ಕಿಗುವರರ್, ಮೊದಲ ಸಗ್ಗಿಗರ್ —ಈ ೪ ರಕ್ಕಸರ ಪೆಸರ್" (ಕಕಾ. ೯೬-೨೨) ; ಮರ್ಬಿಗರುರ್ಬಿನಿಂ ಜರ್ಬುತೆಬ್ಬಟ್ಟಿ . . . [ಬರ್ಬಿ ರಣಾಂಗದೊಳ್ಮಸ್ಕೋವಿ]ದಂಗವನಾರ್ಬಣ್ಣಿಪರು (ಕಕಾಂ. ೦೯-೬೬) ; ನಡೆಮಾಡವನಡದರ್ದು ಹಯುವನುಯ್ದ ಮರ್ಬಿಗನಂ ತಱಿಬಿ (ರಾಜಶೇ. ೧೧೧-೦೮). **ಮಬ್ಬಿಗ** : "ಮಬ್ಬಿಗರ್ ತಿಳಿಯಲಿಳೆಗೆ ರಕ್ಕಸರಕ್ಕು" (ಕಬ್ಬಿಗ. ೧೧) ; ಭರದೆ ಮಬ್ಬಿಗ ಮಬ್ಬಿನುರುಬಾಣವಮಂ ಬಿಡಲ್ ಹರಸೂನು ರವಿಯ ಬಾಣದಲಿ ಸಂಹರಿಸಿ

. . . ಶರವೆಂಟಱಿಂದಿಟ್ಟನು (ಕಸುಕ. ೩-೬-೬೭) ; ಬಿಡುಗಣ್ಣವರ್ ಮರ್ಬಿಗರ ನೊಂಕಿ ಸೆಣಸುಡಿ (ಶಾಂತೀಶ. ೦೯೦-೩೦೩).

[ ಮರ್ಬ ( < ಮರ್ಮ₂ ) + – ಇಗ ]

**ಮರ್ಬ** 'ಮರ್ಮ₂' ನೋ.

**ಮರ್ಬದಿಂಗಳ್** (ನಾ). ಕಾಂತಿಹೀನವಾದ ಚಂದ್ರಬಿಂಬ : ಪರ್ಬಿದ ತ್ರಂಬುಧಿಯ ಮೇಲೆ ಮರ್ಬದಿಂಗಳ್ ಮಂಜುಜೊನ್ನಂ (ಶ್ರೀರಾಪು. ೬೦೦-೪೪೪). [ ಮರ್ಬ ( < ಮರ್ಮ₂ ) + ತಿಂಗಳ್ ]

**ಮರ್ಬವೆಳಗು** (ನಾ). ಮಂಕಾದ ಬೆಳಕು ; ಮಸುಕಾದ ಬೆಳಕು : ಜವದಿನುಷಃಕಾಲವೃಷಂ ತವೆ ಕದಡಿದುದೆನಿಸಿ ಮರ್ಬವೆಳಗಂ ಕಳೆದೊಪ್ಪುವ ಬಾಂಗೆಱೆಯೊಳ್ (ರಾಜಶೇ. ೦೨-೦೨).

[ ಮರ್ಬ (< ಮರ್ಮ₂) + ಬೆಳಗು₂ ]

**ಮರ್ಮ₁**, ಮಮ್ಮ, ಮೊಮ್ಮ (ನಾ). ಮಗನ ಅಥವಾ ಮಗಳ ಮಗ ; ಮೊಮ್ಮಗ : ಶ್ರೀವತ್ಸಗೋತ್ರಂ ಗುಣ್ಡಕಬ್ಬ ನಿಡುಂಗೊಣ್ಡೆಯಬಿಭಿಮಾನ ಚನ್ದ್ರನ ಮರ್ಮ್ಮಂ (ಶಾಸಸಂ. ೯-೦ ; ಸು. 950) ; ಮಾಹುಮಸೆಟ್ಟಿಯ ಮಗನತಿಸಾಹಸಿಕಂ ನೆಗಟ್ದ ಧೋಯಿಪಯ್ಯನ ಮರ್ಮ್ಮಂ (ಎಕ. XIX, ೨೨೦-೨೬ ; 1037). ಮಮ್ಮ : ಶ್ರೀಕಿಟ್ಟೂಲಿಯ ಮಮ್ಮ ಅಣ್ಣಂಗರಸರ ಮಗ ಕಲಿಗಂಗಂ ಅಯಪ್ಪದೇವನೊಳ್ಕಾದಿ ಕಳಿಕಟ್ಟಿಯೊಳ್ಸತ್ತ (ಎಕ. VI, ಕಡೂರು. ೦೯೦-೦ ; ಸು. 919) ; ಅಮ್ಮ ನೀಂ ಮಮ್ಮನೆಯಪ್ಪೈ (ಆದಿಪು. ೨-೨೦) ; ಕೊಂಗಣಿಗಾವುಣ್ಣನ ಮಮ್ಮ ಮಾರಮಡೆಯನ ಮಗಂ (ಎಕ. VI (R), ಗುಂಡ್ಲುಪೇ. ೫೬-೦೩ ; 1049). ಮೊಮ್ಮ : ನವನಿಧಿವಲ್ಲಭ ನಾನತದಿವಿಜಗಣಂ ನೆಗಟ್ದ ನಾಭಿರಾಜನ ಮೊಮ್ಮಂ (ಆದಿಪು. ೦೩-೬೩) ; ಬಕಾಸುರನ ಮೊಮ್ಮನಪ್ಪ ಜಟಾಸುರನ ಮಕ್ಕಳಪ್ಪ ಹಲಾಯುಧ ಮುಸಲಾಯುಧ ಕಾಲನೀಲರೂಕ್ಷರಾಕ್ಷಸರುಮಂ . . . ಕಂಡು (ಗದಾಯು. ೪-೬೩ ಪ); ವಜ್ರಾಯುಧನ ಮೊಮ್ಮನ ರಥವ ನಿದರ್ಪಯದಲಿ ಮುತ್ತಿದರು ಕುರುಸೇನಾಮಹಾರಥರು (ಕುಮಾವ್ಯಾ. ದ್ರೋ. ೫-೨೪).

[ ದೇ.₁ ತಮಿ. ಮರುಮಾನ್, ಮರುಕನ್ = ವಂಶದಲ್ಲಿ ಹುಟ್ಟಿದವನು ; ತುಳು. ಮರ್ಮಾಯಿ = ಒಡಹುಟ್ಟಿದವಳ ಮಗ ; ಕೋಲಾ. ನಾಯ್ಕಿ. ಮರ್ಗ ; ಪರ್ಜಿ. ಮೆರ್ಮ, ಮೆರಿಯ ]

**ಮರ್ಮ₂** (ನಾ). ೧. ದೇಹದ ಆಯಕಟ್ಟಿನ ಸ್ಥಳ ; ಶರೀರದ ಸೂಕ್ಷ್ಮವಾದ ಭಾಗ : "ಆಯುಃ – ಮರ್ಮಂ" (ಕಾಕ್ಕ. ೦೦೯) ; ಕಯ್ದುವುಳ್ಳುಗುಂ ಮರ್ಮಮಂ (ಶಾಂತಿಪು. ೭-೯೪). ೨. ಅವಯವಗಳ ಕೀಲು ; ಅಸ್ಥಿಸಂಧಿ. ೩. ಅಂತರಂಗ ; ಹೃದಯ ; ಮನಸ್ಸು : ಮೂದಲಿಸಿ ಮರ್ಮವನಿಱಿವ ಸುರಗಿ ಕಣಾ ಸದಾ ಪಾಂಚಾಲೆ ಪವನಜರು (ಕುಮಾವ್ಯಾ. ೮. ೨೦-೨೪) ; ನನ್ನ ಮಾತಿನ ಸಿಡುಕು ಅವನ ಮರ್ಮ ಮುಟ್ಟಿತು (ಅಂಶೂ. ೦೦೬). ೪. ರಹಸ್ಯ ; ಗುಟ್ಟು : ಲೋಗರ ಮರ್ಮವನ್ನೆದೆ ಭೇದಿಪೊಂದಿರವೆ ಪೊದಳ್ದ ಜಾನಮನೆ (ರಾಜಶೇ. ೦-೪೦) ; ಭಕ್ತಿಯ ಮರ್ಮವನಱಿಯೆ . . . ನಾನು (ಅನಂದೀ. ೬೦-೬೯) ; ಗುಣವಂತನೊಡನೆ ನಿನಗಿರುವ ಕೆಲಸದ ಮರ್ಮವನ್ನು ನಾನು ಬಲ್ಲೆ (ಅರ್ಧಾಂಶ. ೦೦೫). ೫. ಅಂತರಾರ್ಥ ; ಗೂಢಾರ್ಥ : ಕಾವ್ಯದ ಮರ್ಮ ತಿಳಿಯಬೇಕಾದರೆ ಚೆನ್ನಾಗಿ ಮನನ ಮಾಡಬೇಕು (ಕಥಾ). ೬. ರಹಸ್ಯವಾಗಿ ಕಾರ್ಯ ನಿರ್ವಹಿಸುವವನು ; ಇತರರಿಗೆ ತಿಳಿಯದಂತೆ ಮರೆಯಲ್ಲಿದ್ದು ಪ್ರಭಾವ ಬೀರುವವನು : ಕೃತಘ್ನನು ಘಾತಕನು ಮರ್ಮನು . . . ದೈವದ್ರೋಹಿಯೆಂಬುದು ಭೂತಳದೊಳೀ ನರಕ ಚಿತ್ರ್ಯಸು (ಕುಮಾವ್ಯಾ. ಶಾ. ೪-೪೦) ; ತತ್ಪುರದ ಮರ್ಮರುಂ ನಿರ್ಮೂಲನಂಗೆಯ್ದು . . . ಪೊರಮಟ್ಟು ಪುರವನುಂ ನಡೆಗೊಂಡನು (ಕಕಕು. ೩೬-೦೬). [ಸಂ. ಮರ್ಮನ್]

**ಮರ್ಮಕೆಣಕು** (ಕ್ರಿ). ಅಂತರಂಗವನ್ನು ಚುಚ್ಚು : ಮೃದುವಾಗಿ ಆಡಿದ ಮಾತುಗಳಾದರೂ ಅವುಗಳಲ್ಲಿ ಮರ್ಮಕೆಣಕುವ ಅರ್ಥ ಕಂಡ ಜೋಶಿಯವರು . . . ಕಿಡಿಕಿಡಿಯಾಗಿ (ಬೂರುಪಾ. ೪೦). [ಮರ್ಮ₂ + ಕೆಣಕು₁]

**ಮರ್ಮಘಾತ** (ನಾ). ದೇಹದ ಸೂಕ್ಷ್ಮಭಾಗಕ್ಕೆ ಬೀಳುವ ಹೊಡೆತ ; ಶರೀರದ ಆಯಕಟ್ಟಿಗೆ ಬೀಳುವ ಏಟು : ಮದವೆತ್ತಿ ಮೆಟ್ಟಿದರೊರೊಬ್ಬರ ಮರ್ಮಘಾತದಲಿ (ಕುಮಾವ್ಯಾ. ಸ. ೨-೦೦೦). [ಸಂ.]

**ಮರ್ಮಘಾತಕ** (ನಾ). ಅಂತರಂಗಕ್ಕೆ ಬೀಳುವ ಪೆಟ್ಟು, —ಆಘಾತ ಧರ್ಮವಾಗಲಿ ಮೇಣು ರಣದಲಧರ್ಮವಾಗಲಿ ಖಾತಿಯಲಿವರ ಮರ್ಮಘಾತಕವಾಯ್ತು (ಕುಮಾವ್ಯಾ. ಗ. ೦೦-೫೬). [ಸಂ.]

**ಮರ್ಮಘಾತುಕ** (ನಾ). ಅಂತರಂಗಕ್ಕೆ ಹೊಡೆತ ನೀಡುವವನು ವಿಶ್ವಾಸಘಾತಕ : ಎಲವೊ ಕೃಷ್ಣಾ ! ಮರ್ಮಘಾತುಕಾ ! (ಅಕ್ಕಾ. ೦೫-೩೦೬). [ಸಂ.]

**ಮರ್ಮಜ್ಞ** (ನಾ). (ಬಾಳಿನ) ಗುಟ್ಟನ್ನು ಅರಿತವನು ; (ಜೀವನದ) ರಹಸ್ಯವನ್ನು ತಿಳಿದವನು : ಮರ್ಮಜ್ಞಂ ವ್ಯವಸಾಯಿನಂ . . . ಎಂಬುದರ್ಥಶಾಸ್ತ್ರಸದ್ಭಾವಂ (ಪಂಚಪಾ. ೨-೪೦ ಪ) ; ಲೋಕಸ್ಥಿತಿಯನುಲ್ಲಂಘಿಸುವ ಮರ್ಮಜ್ಞರ ವಿರೋಧಿಸುವ . . . ಕ್ಷಿತಿಪನವ ಮೂಢಾತ್ಮನೈ (ಕುಮಾವ್ಯಾ. ಉ. ೩-೪೬) ; ಅಂತಹ ವಾತಾವರಣವನ್ನು ಕಲ್ಪಿಸುವುದರಲ್ಲಿ ಸಂಯಮಿಗಳಾದ ತತ್ವಜ್ಞರೂ ಮರ್ಮಜ್ಞರೂ ಬಹುಗಂಭೀರವಾಗಿ ಯೋಚಿಸುತ್ತಿದ್ದಾರೆ (ಜೀಪಾಕ್ಕ. ೩೬೬೪). [ಸಂ.]

**ಮರ್ಮಭೇದ** (ನಾ). ರಹಸ್ಯವನ್ನು ಭೇದಿಸುವಿಕೆ : ಅರಿಗೆ ತಮ್ಮ ವಿಭೀಷಣಾಂಕನು ಒರೆದು ಕೊಡುವನು ಮರ್ಮಭೇದವ (ಕೌಶಿಪಾ. ೨೩-೮). [ಸಂ.]

**ಮರ್ಮಭೇದಕ** (ನಾ). ಮನಸ್ಸಿಗೆ ತಾಗುವಂಥದು ; ಮಾರ್ಮಿಕವಾದುದು : ಮರ್ಮಭೇದಕವಾದ ಈ ಮಾತನ್ನು ಕೇಳಿ ಧೃತರಾಷ್ಟ್ರನು ಶಕುನಿಯ ಸಲಹೆಗೆ ಸಮ್ಮತಿಸಿದನು (ಪಪಭಾ. ೪೦). [ಸಂ.]

**ಮರ್ಮಭೇದಿ** (ಗು). ೧. ಅಂತರಂಗವನ್ನು ಭೇದಿಸುವ ; ಮಾರ್ಮಿಕವಾದ. ೨. ಗುಟ್ಟನ್ನು ಹೊರಗೆಡಹುವ ; ರಹಸ್ಯವನ್ನು ಭೇದಿಸುವ. (ನಾ). ೩. ಅಂತರಂಗವನ್ನು ಚುಚ್ಚುವಂಥದು ; ಮಾರ್ಮಿಕವಾದುದು : ನಾನು ಮನೆಯ ಕಡೆ ಬಂದರೆ ಮರ್ಮಭೇದಿಯಾದ ಆಲೋಚನೆಗಳು ಎದುರಿಗೆ ಬಂದು ನಿಲ್ಲುವುವು (ಶಾಂತ್ರಿ. ೩). ೪. ಗುಟ್ಟನ್ನು ಹೊರಗೆಡಹುವಂಥದು ; ರಹಸ್ಯವನ್ನು ಕಂಡುಹಿಡಿಯುವಂಥದು : ಅವಳ ಕಟಾಕ್ಷವು ಸ್ಥಿರವಾದುದು ಹಾಗೂ ಮರ್ಮಭೇದಿಯಾದುದು (ಕಪಾಸಂ. ೪೪). ೫. ಬಾಣ. [ಸಂ. ಮರ್ಮಭೇದಿನ್]

**ಮರ್ಮರ** (ನಾ). ವಸ್ತ್ರ, ಎಲೆ ಮುಂತಾದುವು ಅಲುಗಾಡುವುದರಿಂದ ಉಂಟಾಗುವ ಶಬ್ದ : "ತಱಗೆಲೆಗಳ ದನಿಯಂ ಮರ್ಮರಮೆಂಬುದು" (ಶಬ್ದಾಯು. ೨೩-೦೫೦) ; ಕೇಳಿಸಿತು ಕಡಲ ಮೊರೆ ಹಕ್ಕಿಯಿಂಚರಮಂತೆ ತರುಮರ್ಮರಂ (ಶ್ರೀರಾಪು. ೩೩೪-೪೬) ; ಇರುಳ ಮೋಡ ಮರ್ಮರದಲಿ ನಿನ್ನ ನಲ್ಮೆನುಡಿಯನೆಣಿಸಿ (ಕಬಿಶಾ. ೦೨೦-೦೫). [ಸಂ.]

**ಮರ್ಮರಪತ್ರ** (ನಾ). ಮರ್ಮರ ಎಂದು ಸದ್ದುಮಾಡುವ ಎಲೆ : ಮರ್ಮರಪತ್ರಮಂಬುತಳಮಂ ನಡುವಂತಿರೆ ನಟ್ಟೊಡೆ (ಶಾಂತಿಪು. ೭-೯೪). [ಸಂ.]

**ಮರ್ಮರಿಸು** (ಕ್ರಿ). ಮರ್ಮರ ಎಂದು ಸದ್ದುಮಾಡು : ಸ್ವರ್ಗದ ನಂದನವೃಕ್ಷಗಳೆಲ್ಲ ಮಧುರನಾದದಿಂದ ಮರ್ಮರಿಸುತ್ತವಂತೆ (ಇಸ್ಲಾಂಸಂ. ೨೬೪). [ಮರ್ಮರ + — ಇಸು₁]

**ಮರ್ಮರೋಗ** (ನಾ). ದೇಹದ ಸೂಕ್ಷ್ಮಸ್ಥಳಕ್ಕೆ ತಗುಲುವ ರೋಗ ; ಗುಹ್ಯರೋಗ : ಧರ್ಮಸ್ಥಳಕ್ಕೆ ಯಾತ್ರೆ ಹೋಗಿದ್ದಾಗ . . . ಆಡಿದ ಆಟಗಳ ಪರಿಣಾಮವಾಗಿ ಹೆಗ್ಗಡೆಯವರಿಗೆ ಮರ್ಮರೋಗ ಪ್ರಾಪ್ತವಾಗಿತ್ತು (ಮರಿಮ. ೩೬೫). [ಸಂ.]

**ಮರ್ಮಸ್ಪರ್ಶಿ** (ನಾ). ಅಂತರಂಗಕ್ಕೆ ತಾಕುವಂಥದು; ಹೃದಯಸ್ಪರ್ಶಿಯಾದುದು : ಗಾಯತ್ರಿ ತನ್ನ ವಿಕಲತೆಯನ್ನು ಮರ್ಮಸ್ಪರ್ಶಿಯಾಗಿ ಬರೆದಿದ್ದಳು (ಶ್ರೀಪತ್ರ. ೨೦೪). [ಸಂ. ಮರ್ಮಸ್ಪರ್ಶಿನ್]

**ಮರ್ಮಳ್** (ನಾ). ಮಗನ ಅಥವಾ ಮಗಳ ಮಗಳು ; ಮೊಮ್ಮಗಳು: ಬೆಳ್ವೊಲವಣ್ಣಿಗೆಱೆಯ ಜೋಯಿಸಸಿಂಘನ ಮರ್ಮಳಬ್ಬಣಬ್ಬೆಯ ಮಗಂ (ಶಾಸಸಂ. ೯-೦ ಸು. 950) ; ಚಕ್ರವರ್ತ್ತಿತಿಲಕಂ ತ್ಯೆಲಂಗೆ ಮಮ್ಮರ್ಳ್ ಪೊಡಪ್ಪಿದ ಸತ್ಯಾಶ್ರಯಚಕ್ರವರ್ತ್ತಿಯ ಮಗಳ್ (ಎಇ.XVI, ೨೬-೦ ; 1010). [ಮರ್ಮ₁ + — ಅಳ್₅]

**ಮರ್ಮಾಹತ** (ನಾ). ೧. ಅಂತರಂಗಕ್ಕೆ ಉಂಟಾಗುವ ವೇದನೆ,— ಆಘಾತ : ಅದು ಅತ್ಯಂತ ಕ್ರೂರ ಮತ್ತು ಮರ್ಮಾಹತವಾಗಿರಲೂ ಎಡೆ ಇದೆ (ಪ್ರಬಂ. ೦೯೭). ೨. ಅಂತರಂಗಕ್ಕೆ ಪೆಟ್ಟು ಬಿದ್ದ ವ್ಯಕ್ತಿ: ಅಂದಿನ ನೆನಪಿಗೆ ಯಶೋಧರೆ ಮರ್ಮಾಹತಳಾಗುವಳು (ಶ್ರೀಂಶಧ. ೩೭-೦೪): ಮರ್ಮಾಹತನಾದ ಆ ಮಾಣಿ ಅಲ್ಲಿ ನಿಲ್ಲದಾದ (ಹೊಸಕ್ಷಿ. ೩೨). [ಸಂ.]

**ಮರ್ಮಿ** (ನಾ). ಗುಟ್ಟಿನ ವ್ಯಕ್ತಿ : ಸಾಗರನ ಬಿಗುಹು ಮಹಾತಿಶಯಮೈಯಿವನನಂಜಿಸಲಾತಗಳು ಮರ್ಮಿಗಳು (ಕುವ್ಯಾಉ. ೧-೨೦). [ಸಂ. ಮರ್ಮಿನ್]

**ಮರ್ಮಿಗ** (ನಾ). ರಹಸ್ಯವನ್ನು ಬಲ್ಲವನು : "ಮರ್ಮಿಕ (ಮರ್ಮಿಗ)— ಮಾರ್ಮಿಕ = ರಹಸ್ಯ ಬಲ್ಲವ" (ಶಬ್ಧಕೋ. ೩೯) ; ಪ್ರಖ್ಯಾತಪೂತತ್ರಿವಿಧ ಭಕ್ತಿಸ್ಥಲದ ಮರ್ಮಿಗನ . . . ನುಂಗಿಕೊಂಡಿಂತುಗುಳದಿದ್ದಹನಿನ್ನು ಸೈರಿಸನು (ಬಸಪು. ೩೭-೪೦). [ಮರ್ಮ₂ + — ಇಗ]

**ಮರ್ಮೋದ್ಘಾಟನ** (ನಾ). ೧. ಅಂತರಂಗದ ಆಳಕ್ಕೆ ಚುಚ್ಚುವುದು; ಮನಸ್ಸನ್ನು ನೋಯಿಸುವುದು : ನಿನ್ನ ಮಹಿಮೆಗಿದು ನಡೆವಳಿಯೋ ಎಂದು ಮರ್ಮೋದ್ಘಾಟನಂಗೆಯ್ದು (ಶಂಕಾಪು. ೯-೦೪೩ ವ). ೨. ರಹಸ್ಯವನ್ನು ಭೇದಿಸುವುದು; ಗುಟ್ಟನ್ನು ರಟ್ಟು ಮಾಡುವುದು. [ಸಂ.]

**ಮರ್ಮೋದ್ಘಾಟನೆ** (ನಾ). = ಮರ್ಮೋದ್ಘಾಟನ ೧ : ಯಾವ ಕೆಲಸ ಮಾಡಿದರೂ ಆಕ್ಷೇಪಣೆಮಾಡಿ ಮರ್ಮೋದ್ಘಾಟನೆ ಮಾಡುವ ಚಾಳಿ ಬರು ಬರುತಾ ಹುಟ್ಟುಗುಣವಾಗುತಾ ಬಂತು (ಪೂಪುರಾ. ೦೦೩). [ಸಂ. ಮರ್ಮೋದ್ಘಾಟನ]

**ಮರ್ಯಾದಸ್ತ** (ನಾ). ಗೌರವವುಳ್ಳ ವ್ಯಕ್ತಿ; ಮಾನ್ಯ ವ್ಯಕ್ತಿ : ಮರ್ಯಾದಸ್ತ ಹೆಂಗಸರೊಡನೆ ಹೇಗೆ ವರ್ತಿಸಬೇಕೆಂಬುದೂ ತಿಳಿಯುವುದಿಲ್ಲವೆ ನಿಮಗೆ ? (ಕುಸುಸಂ. ೬೨). [<ಮರ್ಯಾದೆ + — ಸ್ತ]

**ಮರ್ಯಾದಸ್ಥ** (ನಾ). = ಮರ್ಯಾದಸ್ತ: ನಿನ್ನ ತಂದೆ ಮೂಂಬ್ಯಾರಿಗಳು ತುಂಬಾ ಮರ್ಯಾದಸ್ಥರು (ಪುಂಗಾಪು. ೪). [<ಮರ್ಯಾದೆ + — ಸ್ಥ]

**ಮರ್ಯಾದಿತ** (ನಾ). ಪರಿಮಿತವಾದುದು : ಸೀಮಿತವಾದುದು : ಒಟ್ಟಾರೆ ಸಾಗುವಳಿಗೆ ಯೋಗ್ಯವಾದ ನೆಲದ ಪ್ರಮಾಣವು ಮರ್ಯಾದಿತವೇ ಸರಿ (ಪೂಪಾದ. ೦೪೬); ಭಾರತೀಯವೆಂದು ಮರ್ಯಾದಿತವಾಗಿ ಕೆಲವರು ತಿಳಿದುಕೊಂಡ ಸಂಸ್ಕೃತಿಗೆ ಬೌದ್ಧರೂ ಜೈನರೂ ತಂತಮ್ಮ ರೀತಿಯಲ್ಲಿ ಇದಿರುಬಿದ್ದಂತೆ ವೀರಶೈವರೂ ಸ್ವತಂತ್ರವಾಗಿ ಬಂಡು ಹೂಡಿದರು (ಕವಪ. ೦೪). [ಸಂ.]

**ಮರ್ಯಾದೆ** (ನಾ). ೧. ಮೇರೆ; ಎಲ್ಲೆ; ಗಡಿ : ಅಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೇ (ಶಂಕಾಪು. ೯-೬೭); ಶ್ರೀ ಮನು ಮಹಾಮಂಡಳೇಶ್ವರಂ . . . ರಾಜ್ಯಂಗೆಯ್ಯುತ್ತುಂ ಕೋಗಳಿಯಲಿರ್ದ್ದು ಮರಂದಲೆ ಮರ್ಯ್ಯಾದೆಯಾಗೆ ನಾಡನಾಳುತ್ತಮಿರೆ (ಸೌಇಇ. IX-i, ೨೯೦-೯; 11ನೆಯ ಶತ). ೨. (ಕಾಲ, ಅವಧಿ ಇತ್ಯಾದಿಗಳ) ಗಡು; ಪರಿಮಿತಿ : ಈ ಪ್ರಸರಣಕ್ಕೆ ಮರ್ಯಾದೆಯುಂಟು, ಕೆಲವು ಮರ್ಯಾದೆಯ ವರೆಗೆ ಪ್ರಸರಣವಾಗುತ್ತ ನಡೆದು ಮುಂದೆ ಮೊದಲಿನ ರೂಪ ಬದಲಾಗುತ್ತದೆ (ಪುಂಬಿಯ. ೩-೦೨೦). ೩. ದಡ ; ತೀರ : "ಮರ್ಯಾದಾ, ಕೂಲದೇಶಃ — ಈ ೨ ತಡಿ" (ಹಲಾಯು. ೦೦೮-೩೨). ೪. ಗೌರವ ; ಮನ್ನಣೆ : ಪ್ರತಿನಿಮಿಷವನ್ನೂ ಉಪಯುಕ್ತವಾದ ಕೆಲಸದಲ್ಲಿ ವೆಚ್ಚ ಮಾಡುವುದರಿಂದ ವಾಸ್ತವಿಕಸುಖವೂ ಮರ್ಯಾದೆಯೂ ದ್ರವ್ಯವೂ ದೊರೆಯುವವು (ಪುಂಬಿಯ. ೪-೦೯೦); ನನ್ನ ಪ್ರಯೋಗದ ವಿಚಾರ ಬೇರೆಯವರಿಗೆ ಗೊತ್ತಾದರೆ ನನ್ನ ಮರ್ಯಾದೆ ಮೂರುಕಾಸಾಗುತ್ತದೆ (ಶಂಜಕಂ. ೦೭೪). ೫. ಪದ್ಧತಿ ; ನಿಯಮ ; ಕ್ರಮ : ಮೂಱನೆಯ ಶ್ರಾಹೆಗೆ ತೆಱೆನೆಱೆದು ಮೂಱುಗದ್ಯಾಣಮಂ ಪತ್ತಿಗೆ ತಿಱುವರೆಲ್ಲಾ ಕಾಲಕ್ಕಮಿದುವೆ ಮರ್ಯ್ಯಾದೆ (ಸೌಇಇ. IX-i, ೭೭-೨೩; 992); ವಾಸುದೇವಯ್ಯನುಂ ಮಲ್ಲಯ್ಯನುಂ ಪೂರ್ವಸಾಸನಮರ್ಯಾದೆ ಕೊಟ್ಟರ್ದ್ದುದೆಂದು ಬಿನ್ನಪಂಗೆಯ್ಯಲು (ಸೌಇಇ. XX, ೩೦-೨೦; 1088); ಈಗಲೀ ಮರ್ಯಾದೆಯಲಿ ಶರಣಾಗತರ ಸೇವೆಯೊಳು ಹೊಂಪುಳಿಯಾಗಿ ಬಾಳುವರೇಸು ಧನ್ಯರೋ (ಹಂಶಾ. ೧೭).

**ಮರ್ಯಾದೆ ಕಳೆ** = ಗೌರವವನ್ನು ಹಾಳುಮಾಡು ; ಅವಮಾನವಾಗುವಂತೆ ಮಾಡು : ತಾಯಿ ಹೀಗೇಕೆ ಮರ್ಯಾದೆ ಕಳೆಯುವ ಕೆಲಸ ಮಾಡಿದಳು (ಹೊಸಕ್ಷಿ. ೬೦). [ಸಂ. ಮರ್ಯಾದಾ]

**ಮರ್ಯೋ, ಮರೇ, ಮರೋ** (ಅ). (ಉಕ) ಖಂಡಿತವಾಗಿ : ಮರ್ಯೋ ಬ್ಯಾಡ ಮಾರಾಯಾ (ಗ್ರಾಮೂಯ. ೨೬೦); ಗಂಗಕ್ಕಾ, ನೀ ಮರ್ಯೋ ಹೋಗಬ್ಯಾಡ (ಶೆಂದಯ. ೨೦). **ಮರೇ** : ಸುಬಾಸ ಕಾಫಿಭವನದ ತನಕ ನನ್ನಿಂದ ಬರೋದು ಮರೇ ಆಗುವಂತಿಲ್ಲ (ಶೆಂದುಬಿ. ೬೪). **ಮರೋ** : ಆದರ ವಾಸನೆ ತಡೆಯಲಾಸಲ್ಲ! ಮರೋ ಒಲ್ಲೆ (ಬೀರಬ. ೯೨). [ ? ]

**ಮರ್ವು₁** (ಕ್ರಿ). ಕತ್ತಲೆಯನ್ನುಂಟುಮಾಡು ; ಮಸುಕಾಗಿಸು : ಪರ್ವಿತ್ತು ನೇಮಿಸಲ್ಪದರಜಂ ದೆಸೆದೆಸೆಗೆ ಮರ್ವಿತ್ತು ಪರಕಲಿಸೆ ಚತುರಂಗಸೇನೆ (ಶೀರಪು. ೪-೦೪). [ < ಮರ್ವು₂ ]

**ಮರ್ವು₂, ಮಂಪರ, ಮಂಪರು, ಮಬ್ಬು, ಮಬ್ರು, ಮೊಬ್ಬು** (ನಾ). ೧. ನಸುಗತ್ತಲೆ; ಮಸುಕು : "ಮರ್ವೆನೆ ತಮಂ" (ಕರಾಶಬ್ದ. ೩೭); ತಮಾಲವನಂಗಳ ಮರ್ವು ಪರ್ವಿ ಕರ್ವುಡುಗಳೊಳೆಯ್ದೆ (ಕಾದಂಪೂ. ೬೩೯): ಮೆಯ್ಯಂ ಜಳೂಕಾವಳಿಗಳ್ ಪೀರ್ವಲ್ಲಿ ಮರ್ವುರ್ವಿಸೆ ಸಿಡಿದು ಸಿಡಿಲ್ ಬಂದು ಪೊಯ್ವಲ್ಲಿ ಹೈಮಾಚಳಮಿರ್ಪಂತಾಗಳಿರ್ದ[ಂ]. . . ಯೋಗಿನಾಥಂ (ಸುಕುಮಾ. ೪-೯); ಘೋರತರಂ ಮರ್ವು ನಾಡೆ ಪರ್ವಿದುದಾಗಳ್ (ಪುಣ್ಯಾಸ್ರ. ೦೦-೦೯). **ಮಂಪರ** : ೨. ಅರೆನಿದ್ದೆಯ ಸ್ಥಿತಿ; ಜೊಂಪು : ನಿದ್ರೆ ಬಾರದು . . . ಬರಿಯ ಕಳವಳದ ಮಂಪರ (ಪಪರಾ. V, ೬೩); ಮಧ್ಯಾಹ್ನದ ಹೊತ್ತು ನನಗೆ ಸ್ವಲ್ಪ ಮಂಪರ ಬಂದ ಹಾಗಿತ್ತು (ಪಿನ್ನುಹಿಂ. ೬೦). **ಮಂಪರು** : ೨. ನನಗೆ ಸ್ವಲ್ಪ ಮಂಪರು ಕವಿದಂತೆ ಆಗುತ್ತಿತ್ತು (ಧರ್ಮಶ್ರೀ. ೦೨೩); ರೋಗಿಯು ಕಣ್ಣುಮುಚ್ಚಿ ಮಲಗಿದ್ದರು. ಅವರಿಗೆ ಮಂಪರು ಹತ್ತಿತ್ತು (ಪಂಕಪ. ೩೨೯). **ಮಬ್ಬು** : ೧. "ಮ[ಪಾಠಾಂ. ಮೊ]ಬ್ಬೆನಲ್ ಕತ್ತಲೆ" (ಶಾರಪ. ೬) ; ಕೋಕಮಿಥುನಂ ಪಾರ್ಶ್ವಸಿರಲ್ ಮಬ್ಬು ಪಿಂಗುವುದೇ (ಪಳಸಂ. ೩೯೭): ಫಲುಗುಣನಾದಡದ ಕೊಳ್ಳೆನುತ ಕೊಳ್ಳಿಯೊಳಿಟ್ಟನಗ್ನಿಯ ನೆನೆದು ಮಂತ್ರಿಸಲುರಿಮುಖದ ಕಾರ್ಪೊಗೆಯ ಮ[ಪಾಠಾಂ. ಮೊ]ಬ್ಬಿನಲಿ . . . ಮುತ್ತಿತು ರಥವನು (ಕುವ್ಯಾಆ. ೦೦-೩೩); ಸಾಯಂಕಾಲ ಮಬ್ಬಾದರೆ ಮನೆಯಿಂದಾಚೆಗೆ ಹೋಗುವುದಕ್ಕೆ ಹೆದರುವ ನೀನು ದಳವಾಯಿ ಆಗ್ತಿಯೊ (ಶಂಗಾಳ. ೩). ೩. ಒಂದು ಬಗೆಯ ಜೂಜಿನ ಆಟ : ರಾತ್ರಿ ಹಗಲು ಅವನಿಗೆ ನಿದ್ರೆಯೇ ಇಲ್ಲ. ಮಬ್ಬು ಆಡುತ್ತಾನೆ. ಲೆಕ್ಕಮುಕ್ಕಿ ಆಡುತ್ತಾನೆ (ಶೋಹಿಪೀ. ೩೩). ೪. (ಆಲಂ) ಮಂಕ; ತಿಳಿಗೇಡಿ : ನಾ ಯಾರಿಗೆ ಮತ ಕೊಟ್ಟರೂ ತನಗೇ ಕೊಟ್ಟೇನೀ ಅಂತ ತಿಳೀತದ ಈ ಮಬ್ಬು (ಅಕ್ಕಪು. ೯೩).

**ಮರ್ಬು :** ೧. "ಮರ್ಬು ತಮಂಧದೊಳ್" (ಶಬ್ದಾ. ೨೦); ಪುದಿದೆತ್ತಂ ಮರ್ಬನುರ್ಬು ಪರ್ಬಿತ್ತುಗಳ್ (ಕಾದಂಬ. ೦೯೦); ಪೊಳಿಂದ ಬಲಂ. . . ಮರ್ಬು ಮಸಗಿದಂತೆ ಸಡಗರಿಸಿ (೧೦೪. ೦-೭೯ ವ). ೫. ಜಡತೆ; ಮಂಕು : ಒದವಿದ ಚಿಂತೆ ಪೆರ್ಚೆ ಪಸಿವಿಲ್ಲದೆ ಮರ್ಬೆರ್ದೆಯುರ್ಬೆ ನಿದ್ರೆಯಿಲ್ಲದೆ ಬಗೆ ಬೆರ್ಚೆ. . . ಕನಲ್ದು (ಆದಿಪು. ೦೨-೩೩). **ಮೊಬ್ಬು :** ೧. ಹಬ್ಬಿದಾಲತಮಾಲತರುಗಳ ಮೊ [ಪಾಠಾಂ, ನೊ] ಬ್ಬುಗಳ ಹೆಮ್ಮೆಳೆಯ ಹರಹುಗಳ . . .ಕಾಂತಾರದೊಳಗಿವರಬ್ಬರಿಸುತ್ತೈದಿದರು (ತೊರವೆ. ೩-೦-೭). ೫. ನಿದ್ರೆಯ ಮೊಬ್ಬಿನಿಂ ಮಲಗಿರಲು (ಸೌಗಂಧಿ. ೨೪೯-೦೦); ನಿದ್ರೆಯ ಮೊಬ್ಬಿನಲ್ಲಿ ಕೈಗೆ ಆಯುಧಗಳು ಸಿಕ್ಕದೆ ಅವುಗಳನ್ನು ಹುಡುಕುವುದರಲ್ಲಿದ್ದರು (ರೇಖಿಣಿ. ೯೦). ೬. ಅಜ್ಞಾನ ; ಮಾಯೆ : ಜ್ಞಾನದಿಂ ಮೊಬ್ಬೆಲ್ಲ ಕಿಡುಗು (ಸರ್ವಜ್ಞ. ೪೩೯) ; ಪರರ ಅನ್ನವನುಂಡು ಮೊಬ್ಬಿನಲಿ ದಿನಗಳೆದೆ (ಬಿಡಾಳ. ೦೦೪-೩).

[ದೇ.॥ ತಮಿ. ಮಪ್ಪು; ತುಳು. ಮಪ್ಪು, ಮಬ್ಬು, ಮರ್ಬು; ತೆಲು. ಮಬ್ಬು, ಮ್ರಬ್ಬು]

**ಮರ್ಷ** (ನಾ). ಸಹಿಸಿಕೊಳ್ಳುವುದು ; ತಾಳ್ಮೆ : "ಮರ್ಷಃ, ಕ್ಷಮಾ . . . ಸಹಿಷ್ಣುತಾ—ಈ ೫ ಸೈರಣೆ" (ಹಲಾಯು. ೦೨೦-೪೦). [ಸಂ.]

**ಮರ್ಷಿ** (ನಾ). ಸಹಿಸುವವನು ; ತಾಳಿಕೊಳ್ಳುವವನು.

[ಸಂ. ಮರ್ಷಿನ್]

**ಮಲ್** 'ಮಲ್ಲು' ನೋ.

**ಮಲ₁, ಬಲ₂** (ಗು). ಎರಡನೆಯ ಅಥವಾ ಬೇರೆಯ : 'ಮಲದಾಯ್', 'ಮಲಮಗ' ಪರಾ. **ಬಲ₂ :** 'ಬಲತಾಯಿ' ಪರಾ. 'ಮಱು₁' ಹೋ.

**ಬಲಅಕ್ಕ** = ತನಗಿಂತ ದೊಡ್ಡವಳಾದ, ತಂದೆಯ ಬೇರೆ ಹೆಂಡತಿಯ ಮಗಳು : ಅವನಿಗೆ ಒಬ್ಬಳು ಬಲಅಕ್ಕ ಇರುವಳು (ರೂಢಿ). **ಬಲಅಣ್ಣ** = ತನಗಿಂತ ದೊಡ್ಡವನಾದ, ತಂದೆಯ ಬೇರೆ ಹೆಂಡತಿಯ ಮಗ : ವೀರರಾಜರವರ ಬಲಅಣ್ಣನ ಚಿಕ್ಕಕುಮಾರರು ಒಬ್ಬರು ಕೆಲವು ಕುಟುಂಬ ಮಕ್ಕಳು ಸಹ ಉಳಕೊಂಡು ಪಿರಿಯಾಪಟ್ಟಣದಲ್ಲು ಇರುತ್ತ ಇದ್ದರು (ರಾಜೇಂದ್ರ. ೨೯). **ಬಲತ್ತೆ** = ತನ್ನ ಮಾವನ ಬೇರೆಯ ಹೆಂಡತಿ ; ಗಂಡನ ಬಲತಾಯಿ : ಮೈಸೂರವರ ಮನೆತನದಲ್ಲಿ ಪುಟ್ಟಿದ ತನ್ನ ಬಲತ್ತೆ ದೇವಾಜಮ್ಮಣ್ಣಿಯವರ ಒಬ್ಬ ಪುತ್ರನ ವಂಶವು ನಡೆಯಲಿ (ಮಹಾಸಂ. I. ೪೭). **ಬಲಸೊಸೆ** = ತನ್ನ ಗಂಡನ ಬೇರೆಯ ಹೆಂಡತಿಯ ಸೊಸೆ ; ಬಲಮಗನ ಹೆಂಡತಿ : ಆಕೆ ಬಲಸೊಸೆಯನ್ನು ತುಂಬ ವಾತ್ಸಲ್ಯದಿಂದ ಕಂಡುಕೊಂಡಿದ್ದಾರೆ (ರೂಢಿ). [ದೇ.॥ ತೆಲು. ಮಲು]

**ಮಲ₂** (ನಾ). ಒಂದು ಬಗೆಯ ಸಸ್ಯ : "ದೂರಾನುಗತಃ—ಮಲ. ನೆಲಜೇವು. ಹೆದ್ದುಱುಚೆ" (೬ಕಧಿ. ೨೯). [ಸಂ. ಮಲಾ]

**ಮಲ₃, ಮಳ** (ನಾ). ೧. ಕೊಳೆ ; ಹೊಲಸು : ಮಲಮಂಗರಾಗಮಂಬರವಲಯಂ ದಿವ್ಯಾಂಬರಂ . . . ಎನೆ ಮುಕ್ತಿಲಲನೆಯನೊಲಿಸಲ್ ಕೈಗೈದು ನಿಂದನಜಿತಮುನೀಂದ್ರಂ (ಅಜಿತ. ೭-೪) ; ಮಲಮಂ ಧರಿಯಿಸಿ . . . ಪಲ್ಲಂ ಸುಲಿಯದೆ ಮಿಾಯದೆ ಮಿಳ್ಳದೆ ಕುಲದಿಂ ಕೆಟ್ಟವರನಣ್ಣ ನೀಂ ಮನ್ನಿಪುದೇ (ಧರ್ಮಾಮೃ. ೦-೦೦೩). ೨. ಶರೀರದಿಂದ ಹೊರಬರುವ ಹನ್ನೆರಡು ಅಶುಚಿದ್ರವ್ಯಗಳಲ್ಲಿ ಒಂದು; ಹೇಲು ; ಅಮೇಧ್ಯ; P ಕೊಬ್ಬು, ವೀರ್ಯ, ರಕ್ತ, ಮಜ್ಜೆ, ಮೂತ್ರ, ಪುರೀಷ, ಕಿವಿಯ ಗುಗ್ಗೆ, ಸಿಂಬಳ, ಕಫ, ಕಣ್ಣೀರು, ಕಣ್ಣಿನ ಪಿಸುರು, ಬೆವರುಗಳೆಂಬಿವು ಹನ್ನೆರಡು ಅಶುಚಿದ್ರವ್ಯಗಳು : "ವರ್ಚಃ, ಉತ್ಸರ್ಗಃ . . . ಪುರೀಷಂ, ಮಲಂ-ಈ ೧೨ ಪಿಷ್ಟೆ" (ಹಲಾಯು. ೦೦೩-೦೫) ; ಮಲವು ಪುರುಷನಿಗೆ ಅನಾದಿಯಾಗಿರುವ ಅಶುದ್ಧಿ (ಹಿಂದೂಧ. ೨೯೭). ೩. ತುಕ್ಕು; ಜಂಗು. ೪. ಪಾಪ ; ಪಾತಕ : ಇಲ್ಲಿ ಮನದ ಮಲ ಹರಿವಂತೆ ಅಲ್ಲಿ ಮೆಯ್ ಶುದ್ಧಿಯಾಗದು (ಚುಕೋರ. ೦೭). ೫. ಕಳಂಕ ; ದೋಷ : ಮಲ ಎಂದರೆ ದೋಷ (ಶಾಕಶ್ಮ. ೬೨೯). ೬. ಧಾರ್ಮಿಕಕಾರ್ಯಗಳ ಆಚರಣೆಗೆ ಅಶುಭವಾಗಿರುವುದು : 'ಮಲಮಾಸ' ಪರಾ. ೭. ವಜ್ರದ ಒಂದು ದೋಷ : ಮಲವು ಎಂದರೆ ವಜ್ರದಲ್ಲಿ ಹಳ್ಳ ಬೀಳುವುದು (ಸೌಗಂಧಿ. ೩೭೪-೩೩). ೮. ಶರೀರದ ವಾತ, ಪಿತ್ತ ಮತ್ತು ಕಫಗಳೆಂಬ ಮೂರು ರಸಧಾತುಗಳು. ೯. [ವೀಶೈ] ಐದುವಿಧವಾದ ಪಾಶಗಳಲ್ಲಿ ಒಂದು : 'ಮಲಪಾಶ' ಪರಾ. ೧೦. ಜೀವನಿಗೆ ಅಂಟಿಕೊಳ್ಳುವ ಮೂರು ಬಗೆಯ ದೋಷ : 'ಮುಮ್ಮಲ' ಪರಾ. **ಮಳ :** ೧. ಆ ಇರುಳ್ ಪಿರಿದೊಂದು ಮಟ್ಟೆ ಕೊಂಡು ಮೆಯ್ಯ ಮಳಮೆಲ್ಲಮಂ ಕರ್ಚಿ ಕಳೆದು ಪಾಷಾಣಮೆಂಬ ಮಡುವಂ ನೀರ್ ಪೊಕ್ಕಾಗಳ್ (ವಡ್ಡಾರಾ. ೦೦೭-೨); ಖಳೇವರ್ಮರಾಜನೊದವಿದ ಬಳಮಂ ಕಿಡಿಸಲ್ಕೆವೇಡಿ ತೊಟ್ಟಿರ್ದಾ ಕತ್ತಳೆಮಂ ಪೋಲ್ತುದು ನೋಡಲ್ ಮಳಮೋರಂತಮರ್ದು ಕೂಡೆ ಸರ್ವಾಂಗಮುಮಂ (ಧರ್ಮಾಮೃ. ೩-೨೬೭). ೨. "ಅಮೇಧ್ಯಮವಸ್ಕರಂ ಶಕೃದ್ಗೂಥಂ ವಿಷ್ಟೆ ಮಳಂ ಪುರೀಷಮುಚ್ಚಾರಮದಕ್ಕುಂ" (ಶಬ್ದಮಣಿ. ೬೨-೩೦). ೪. "ದುರಿತಂ ಪಾಪಂ. . . ಮಳಂ ದುಷ್ಕರ್ಮಂ" (ಶಬ್ದಮಣಿ. ೨೦-೦೨). ೫. ಈ ವರ ಧರ್ಮದಿಂದಘಕುಲಂ ಕಿಡುಗುಂ . . . ಮಳಂ ಕಿಡುಗುಂ (ಧರ್ಮಾಮೃ. ೭-೯೦). [ಸಂ.]

**ಮಲಂಗಿಸು, ಮಲಗಿಸು** (ಕ್ರಿ). ೧. ಶಯನಗೊಳ್ಳುವಂತೆ ಮಾಡು; ಶಯನಗೊಳಿಸು : ಪೊಳೆವ ತಣ್ಗದಿರ್ಗಲ್ಲ ಪಸೆಯೊಳೇಳೆಲೆವಾಳೆಯೆಳೆಯೆಲೆಯ ಪಚ್ಚಡಿಸಿ. . . ಕಾಂತೆಯ ಮಲಂಗಿಸಿ (ಶಬ್ದರಾ. ೬-೯೨). ೨. ಹಸ್ತಾವಲಂಬನವನ್ನು ಪಡೆ; ಹಸ್ತಾವಧಾನ ಹೊಂದು : ಕೆಳದಿಯರ ಕೆಯ್ಯೊಳ್ ಮೆಯ್ಯಂ ಮಲಂಗಿಸಿ ಮೆಲ್ಲಮೆಲ್ಲನಡಿಯಿಡುವಾಗಳ್ (೧೦೪. ೩-೭೭ ವ). ೩. ನಾಶವಾಗುವಂತೆ ಮಾಡು; ನಾಶಗೊಳಿಸು : ಚೋಳನ ಮೇಲೆ ನೀಡಿ ಕರಮಂ ಪದಪಲ್ಲವಮಂ ಕಳಿಂಗಭೂಪಾಲನ ಮೇಲೆ ನೀಡಿ ಮಗಧಾವನಿಪಾಲಕನಂ ಮಲಂಗಿಸಲ್ ಲೀಲೆಯೊಳಿರ್ಪೆನೆಂಬ ಮನಮುಳ್ಳೊಡೆ ಪೂಜಿಸು. . . ಚತುರ್ಮುಖಶಾಂತಿನಾಥನಂ (ಧರ್ಮಾಮೃ. ೩-೭೪). **ಮಲಗಿಸು :** ೧. ಕರ್ಪುರದ ಕವಳದ ಯಂತ್ರುರಕ್ಷೆಯಲವನಿಪನ ಸಂತೈಸಿ ಮಲಗಿಸುತ (ಕುಮಾರ. ೦೦-೩೭); ಮಜ್ಜನಂಗೈಸಿ ಮಡಿಯಂ ಪೊದಿಸಿ ಮೆಲ್ಪಾಸಿನೊಳ್ಮಲಗಿಸುವರಳ್ತಿಯಿಂ (ಕೃಷ್ಣಾಶ್ವ. ೨೯-೨೦); ಮಲಗಿಸು ಬಾ ಅಪ್ಪ ಹಾಗಾದರೆ (ಕಂಗಾಳ. ೦೩೩). ೪. ಓರೆಯಾಗಿ ಇಡು; ಒರಗಿಸು : ಬಸಿದ ಬಲುದಸಿಗಳಂ ಮಲಗಿಸಿ ಮರಂಗಳನಿರಿಸಿ ಎಡೆಗೆಡೆಗೆ . . . ಪೊಸದುರ್ಗಮಂ ಪಾಟಿಸಿ ಪಿರಿಯ ಸಡಬಾವಿಗಳನಗುಳಿಸಿದನದಱೊಳಗೆ (ಬಸವ. ೦೭-೦೦). [ಮಲಂಗು₁ + — ಇಸು₃]

**ಮಲಂಗು₁, ಮಲಗು₁** (ಕ್ರಿ). ೧. ಒರಗು; ಆತುಕೊಳ್ಳು : "ಮಲಗು, ಮಲಂಗು—ಉಪಧಾನಾವಲಂಬೇ, ಉಪಧಾನೇ ಚ (ತಲೆದಿಂಬು)" (ಕವಿಮಾ) ; ಖುರಮಣಿಕೆಯೊಳ್ ಕಾಲನಿಕ್ಕಿ ಮಂದುರದ ಮುಂಡಿಗೆಯಂಮಲಂಗಿ ಕೌತುಕಂಬೆರಸು ಕೇಯೂರನನಿಂತೆಂದಂ (ಕಾದಂಬ. ೦೯೭); ಪಳಿಕಿನ ಚೌಪಳಿಗೆಯ ನೀಲಶಿಲಾಸ್ತಂಭಮಂ ಮಲಂಗಿ . . . ನಿಖಿಲಜನಮನಃಪೀಠದೊಳ್ಮನಸಿಜಂ ಪ್ರತಿಷ್ಠೆಗೆಯ್ದು ರತಿಯಂತೆ ನಿರತಿಶಯಮಾಗಿರ್ಪುದುಂ (ಕಂಠಾಮ. ೩-೩೭ ವ). ೨. ಶಯನಗೊಳ್ಳು; ಶಯನಿಸು : ಅಲರ್ದಪ್ಪಂ ನಿಮಿರ್ದ ಲತೆಯ ಮೇಲೆ ವಿಳಾಸಂ ನಿಲೆ ನೀಡಿ ಕಾಲನರೆಬರ್ ಮಲಂಗಿದರ್ ಪೊಳೆವ ತಳಿತ ಬೊಂದರಿಗೆಗಳೊಳ್ (ಆದಿಪು. ೦೨-೭೭). ೩. ನಿದ್ರಿಸು ; ನಿದ್ದೆಮಾಡು : ಅತ್ತ ಮಲಂಗಿದಳೀ ಮನೆಯುತ್ತಲ್ ಸುಟ್ಟೆವವನುಪೊರ್ವನಿಲ್ಲಮೆನುತ್ತಂ . . . ಅರಳಿಗಂಗೆ ಮಿಗೆ ಸೂಚಿಸಿದಳ್ (ಉದ್ಭಟ. ೦೦-೦೦೦) ; ಭೃಂಗಮಿಥುನಮಂಭೋರುಹದೊಳಗೆ ಮಲಂಗಿ ಬಳಿಕ್ಕಾ ನಿದ್ರೆತಿಳಿಯೆ ಪಕ್ಷಂಗೆದಱುವ ಭಂಗಿಯ

ಕಡುಚಲ್ವಂ ನೆನೆಯಿಸುತೊಪ್ಪಿದುವು (ಜಯಸಾ. ೨-೪೩). ೪. ಕೂಡು ; ಸಂಭೋಗಿಸು : ಇನಿಯಳ ಮೇಲೆ ಕಾಮಾಸಕ್ತಿಯಿಂ ಕೊಳಲೆಂದು ಮಲಂಗಿ (ಧರ್ಮಾಮೃ. ೬-೧೬೦). ೫. ತಬ್ಬು ; ಆಲಿಂಗಿಸು : ಮಾವಂ ಮಲಂಗಿದ ಮಲ್ಲಿಕಾಲತೆಯು ಪೂಗತರು ಕೈಗೊಟ್ಟ ನಾಗಲತೆಯು . . . ಬಾಳ್ವೊಂಪವ ಬಳಸು ವಿಳಸವಾದ ರತ್ನರಚಿತಕೃತಕಾಚಲಂಗಳೊಳ್ (ಅನಂಪು. ೧೧-೨೪ ವ). ೬. ಕ್ರಿಯಾಶೂನ್ಯವಾಗು ; ನಿಷ್ಕ್ರಿಯವಾಗು : ಹರಿಣಾಂಬಕಿ ಮತ್ತ್ರಿಯೆ ಪರಿಪರಿಯಿಂ ಬೋಧಿಸಿದೊಡಂ ಮಲಂಗಿದು ದಾಗಳ್ ಒರೆದಪೆನೇನಂ ಹತಮನಂ (ಕಾಕಂತ. ೬೨-೧೩೮). ೭. ನಿಲ್ಲು ; ಸ್ಥಗಿತಗೊಳ್ಳು ; ಅಡಗು : ನಿತುಸುಯ್ ಮಲಂಗಿ [ಪಾಠಾಂ· ಮಲಗಿ] ಸರ್ವಾಂಗಂ ಸಡಿಲ್ದು . . . ಮೂರ್ಛಿತರಾಗಿ (ನಂಚಿರ. ೧೪-೩೦). **ಮಲಗು₁** : ೧. "ಮಲಗು, ಮಲಂಗು _ ಉಪಧಾನಾವಲಂಬೇ, ಉಪಧಾನೇ ಚ (ತಲೆದಿಂಬು)" (ಕಮಧಾ) ; ಕುಳ್ಳಿರ್ದನು ಮಹೀಪತಿ ಮಾನಿನಿಯ ಮಲಗಿ (ಕುವ್ಯಾಕ. ೦೩-೦೦). ೨. ವಿಷಯವೆಂಬ ರಸವ ಕುಡಿದು ಅಜ್ಞಾನವೆಂಬುದೊಂದ ಹಾಸಿಗೆಯಲ್ಲಿ ಮಲಗಿ ಮೂರ್ಛೆ ತಿಳಿಯದೆ ಇಪ್ಪುದ ಕಂಡು (ಅದವ. ೦೩-೨೬) ; ಆಲದೆಲೆಯ ಮೇಲೆ ಮಲಗಿದ ಶಿಶುವೇ (ಪುರಂದ. ೦-೨-೨೮) ; ಅಚ್ಚ ಪೂರಾಯಗಾಯದೊಳ್ ಮೈಮಱೆದು ಕಣ್ಮುಚ್ಚುತೆ ಪರೂಥದೊಳ್ಮಲಗಲ್ಕೆ ಕಂಡು (ಕೃಶಾಶಾ. ೬-೪೫). ೩. ಕಂದನೇಕೆ ಮಲಗನೆ ಕೇಳೆಲೆ ಸಖಿ (ಪುರಂದ. ೨-೫೪ ಪಲ್ಲ). ೮. ಬಾಗು ; ಓಲು ; ಜೋತುಬೀಳು : ತಳಿತ ಚೂತದ ಸಸಿಗಳವನಿಗೆ ಮಲಗುವಂತಿರೆ ರಾಜಪುತ್ರರು . . . ಎಸೆದರು ಸಾಲ ಶಯನದಲಿ (ಕುವ್ಯಾದ್ರೋ. ೫-೬೪). ೯. (ಅನಾರೋಗ್ಯದಿಂದ) ಹಾಸುಗೆ ಹಿಡಿ; ಅಸ್ವಸ್ಥವಾಗು : ಬರಬರುತ್ತಾ ಖಾಯಿಲೆ ಹೆಚ್ಚಾಗಿ ಅವರು ಪೂರ್ತಿ ಮಲಗಿಯೇ ಬಿಟ್ಟರು (ಕೂಪು).

[ದೇ.॥ ತುಳು. ಮಲಗು, ಮಲೆಂಗು ; ಕೊಡ. ಮಲಂಗ್ ; ಕುಇ. ಮಲ್ಗ, ಮಲ್ಗಿ]

**ಮಲಂಗು₂**, **ಮಲಗು₂** (ನಾ). ಒರಗಿಕೊಳ್ಳುವ ಸಾಧನ : ಒರಗು ದಿಂಬು ; ಲೋಡು : ಅವನಿಪಾಳಕನಲರ್ಗಳ ತಲೆಗಿಂಬಿನಿಂದ ಮಲರ ಮಲಂಗಿಂದಲರ ದಳಂಬದಿನಿಂಬಾದಲರ್ವಾಸಿನ ಮೇಲೆ ಲೀಲೆಯಿಂ ಕುಳ್ಳಿರ್ದಂ (ಪಾರ್ಶ್ವ. ೯-೩೦) ; ಮಂಟಪದ ನಡುವೆ ಚಂದ್ರಿಕೆಯ ಚೆಂಪೆಯುಮನೆತ್ತಿದಂತೆ ಸೊದೆವಟ್ಟಯದ ಲೋವೆಯ ಮುತ್ತಿನ ಲಂಬಣದ ಮಲಂಗು (ಅನಂಪು. ೮-೬ ವ) ; (ಕಣ್ಮುಚ್ಚಿ, ಹಿಂದಣ ಮಲಂಗಿಗೆ ಒರಗಿಕೊಳ್ವನು) (ಚಿಟ್ಟಿಕ. ೦೬-೦೩). **ಮಲಗು₂** : ಸಂಜಯನರಸನನು ಕುಳ್ಳಿರಿಸಿ ಬೆನ್ನಿಗೆ ಚಾಚಿದನು ಮಲಗ (ಕುವ್ಯಾಕ. ೦-೯) ; ಮಿನಾಂಕನಿದ್ದನು ಮಲಗ ತಾನೊಱಗಿ ಸುಮ್ಮಾನದೊಳು (ಭರತ. ೪೬-೬೪) ; (ಶಾಂತನಾಗಿ ಕಟ್ಟಾಸರಿಂದ ಕಣ್ಮುಚ್ಚಿ ಮಲಗನ್ನು ನೆಮ್ಮಿರುವನು) (ಚಿಟ್ಟಿಕ. ೦೬೩-೦೦). [<ಮಲಂಗು₁]

**ಮಲಂಗುಮೂಡೆ**, **ಮಲಗುಮೂಡೆ** (ನಾ). = ಮಲಂಗು₂ : ಕಮಳ ಕಂಚಿಕಸೂಚಿಯಿಂ ಕಮಳಸೂತ್ರಮಂ ಕೋದು ಪೊಲಿದಿರಿಸಿದ ಮಲಂಗುಮೂಡೆಯುಂ ಮೋಡಿಯೊಳೊಱಗಿ (ರಾಜಶೇ. ೦-೦೩೫ ವ). **ಮಲಗುಮೂಡೆ** : ಸೊಗಯಿಸುವ ರಂಗಮಂಟಪದೊಳೆಸೆವಡೆದ ಗದ್ದುಗೆ ಮಲಗುಮೂಡೆಗಳ ನಡುವೆ ಕುಳ್ಳಿರ್ದು (ಸೌಂದಕ. ೬-೫೫) ; ಶಾನೆಸೆವ ಮಂಡಲಾದ್ರಿಯ ಮಲಗುಮೂಡೆ . . . ಗಗನವೇ ಸತ್ತಿಗೆಯಂದಾಯಿತು (ಚೀಕ್ಕೃಪು. ೨-೦೦ ೦೫) ; ಮುತ್ತಿನ ಗದ್ದುಗೆ ಮಲಗುಮೂಡೆಯೊಳು ಬೆನ್ನೊತ್ತಿ ಮಂಡಿಸಿದಳಾ ಕುಮರಿ (ಪೋತಹತ. ೨೬-೮). [ಮಲಂಗು₂+ಮೂಡೆ]

**ಮಲಕಟ್ಟು** 'ಮಲಗಟ್ಟು' ನೋ.

**ಮಲಕಾಡುಹತ್ತಿ** (ನಾ). ಒಂದು ಬಗೆಯ ಸಸ್ಯ : (ಪ್ರೀಶಿಗಿ. ೪೩-೬೪೯).
[ಮಲ ? + ಕಾಡುಹತ್ತಿ]

**ಮಲಕಿಸು** (ಕ್ರಿ). ಅಲುಗಾಡಿಸು; ಆಡಿಸು : ಕುಲುಕಿಸಿ ಕೈಕೈ ಮಲಕಿಸಿ ಮೈ ಮೈ (ಗಂ. ೦೨೨-೦೦). [ಮಲಕು₁ + —ಇಸು₃]

**ಮಲಕು₁**, **ಮಲುಕು₁** (ಕ್ರಿ). ೧. ಚಲಿಸು; ಅಲ್ಲಾಡು : ದೊಡ್ಡಮ್ಮ ಗುಡಿ ಮುಂದೆ ಕಬ್ಬಿಣದುಯ್ಯಾಲೆ ಕಳ್ಳರು ತೂಗಿದರೆ ಮಲಕೊಲ್ದು (ಜಗೀಕ. ೦೩); ಹಾರುವರ ಕೇರಿಯ ತೇಗದ ತೇರು ಯಾರ್ಯಾರು ನೂಕಿದ್ರು ಮಲಕೊಲ್ದು ಯಾರ್ಯಾರು ನೂಕಿದ್ರೂ ಮಲಕದ ತೇರು ಗೊರವೂರ ಹೊಲೆಯರು ಮುಟ್ಟಿದ್ರೆ ನಲಿಯುವ ತೇರಿಗ್ಹೋಗೋಣ ಬನ್ನೀರೆ (ಗರುಪಾ. ೬೩). **ಮಲುಕು₁** : ೨. ಚಂಚಲವಾಗು: ಮಲುಕಿ ಸೂಳೆಯ ನೆಚ್ಚಿ ಮನೆಯೊಳು ಸಲುವ ಹೆಂಡಿರ ಬಿಟ್ಟು ಪೋಪುದು ಚಲುವೇನೈಯ್ಯ (ಕಂಕ. ೮೬-೬).

[ದೇ.॥ ತೆಲು. ಮಲಯು ; ಪರ್ಜಿ. ಮೆಲ್ ; ಗೊಂಡಿ. ಮರ್ಲ್ಲಾನಾ, ಮರ್ಲ್ವಾನಾ]

**ಮಲಕು₂**, **ಮಲುಕು₂** (ನಾ). ೧. ಜೋಡಣೆ ; ಹೆಣಿಗೆ : ಮಾತಿಗೆ ಮಲಕಿಲ್ಲ ನೀತಿಗೆ ತೊಡಕಿಲ್ಲ (ಜನಗೀ. ೫೩); ಮುಮುಕೆಯ ಮಾತಿನ ಮಲಕಿನಲ್ಲಿಯೇ ಆತ ಸುತ್ತುತ್ತ ಬಂದಿದ್ದ (ಅಕಾಶಕ. ೦೫೮); ವಿಚಾರವು ಮಾತಿನ ಮಲಕೂ ಅಲ್ಲ . . . ವಿಚಾರವು ವಿಚಾರಿಯ ಅನುಭೂತಿಯನ್ನೂ ವಿಷಯದ ಗುಣವನ್ನೂ ಏಕಜೀವ ಮಾಡುವ ಕಲೆಯು (ಚಿವಾಮು. ೬೦). ೨. ಗಂಟು ; ಕುಣಿಕೆ : ದಾರವನ್ನು ಕೈಯಲ್ಲಿ ತೆಗೆದುಕೊಂಡು ಎಳೆದರು ಮಲಕು ಬಿಡಲೇ ಒಲ್ಲದು (ಕಶಪು. ೫-೮); ಮಲಕು ಬಿಡಲಿ ನಿನ್ನ ಸೂತ್ರಾ (ಮುಕ್ತಕಂ. ೬೩-೨). 'ಮುರಿಮಲಕು' ಪರಾ. ೩. ಮಣಿ ಮುಂತಾದುವನ್ನು ಪೋಣಿಸಿ ಹೆಣೆದಿರುವ (ತೋರಣದಂಥ) ಒಂದು ಬಗೆಯ ಅಲಂಕಾರ ವಸ್ತು : ಉಟ್ಟ ಪೀತಾಂಬರವಲೆಸೆವ ಮಲಕಿನ ಚಾರುಕಟ್ಟನಿಂ ಬಿಗಿದ ಮಣಿಮೇಖಲೆಯ ಕಿರಣದಿಂ (ತುರಂಗ. ೮೬-೨೮). ೪. ತಲೆಯ ಮೇಲೆ ಧರಿಸುವ ಒಂದು ಬಗೆಯ ಆಭರಣ ; ಶಿರೋಭೂಷಣ : ರಂಗನ ಶಿಖಿಗೆ ಸುತ್ತಿದ ಮುತ್ತುಮಲಕಿನ ಸಿಂಗರಗಳನೇನನೆಂಬೆ (ಕೃಷ್ಣಗೊ. ೨-೪೪) ; ಕಡಗ ಸರಪಣಿ ಸಾರಸನ ಶಿರಕಿಡುವ ಮಲಕುಗಳಿಂದ . . . ಪದ ನಡನಡುಗುತಲಿ ನಡೆತರುವ ಶಿಶುಗಳ ಬೆಡಗ ನೋಡುತಲೆಸೆದಳು (ಜಪಶಾ. ೬-೦೯) ; ತಲೆಯ ಮೇಲೆ ಮಲಕು : ಸೊಗಸಾಗಿ ಕಟ್ಟಿರುವ ತುರುಬಿಗೆ ಒಂದು ಜಡೆಬಿಲ್ಲೆ (ಮುಕ್ತಿ. ೪೦). ೫. ಒಂದು ಬಗೆಯ ಕಂಠಾಭರಣ ; ಸರ ; ಹಾರ : ಕಂದುಗೊರಲಿನ ಬೆಳ್ಗೊರಲೊಳ್ ಜಾಗವರಲ ಮಲಕನಮರ್ಚಿ (ರಾಮಾಶ್ವ. ೦೩೦-೦೦). ೬. (ಮಣಿ ಮುಂತಾದುವುಗಳನ್ನು ಪೋಣಿಸಿ ಇಳಿಬಿಟ್ಟ) ತೋರಣ: ಮುತ್ತಿನ ಮಲಕಿನ ಜಾಲಂದರದ ಗವಾಕ್ಷದೊಳ್ ಮೆಲ್ಲಮೆಲ್ಲನೆ ನೋಡುತ್ತ . . . ಈರ್ವರ್ ಪುರುಷರಂ ಕಂಡು (ಶೌಗಂರಿ. ೩೩೯-೬). ೭. [ನಾಟ್ಯ] ಒಂದು ಬಗೆಯ ನೃತ್ಯಭಂಗಿ : ಮಲಕು ಕತ್ತರಂ ತುಳಿಲೆನಿಪ್ಪವು ಲೇಸು ವಡೆಯೆ ತಾಂಡವವನಾಡುತಿರ್ದನೀಶ್ವರನ ಸಮ್ಮುಖದೊಳು (ರೇವಣ. ೩೨-೪೮). **ಮಲುಕು₂** : ೮. ಹಿಡಿತ ; ಪಟ್ಟು : ಈ ಮಲುಕಿಗೂ ಮಣಿಯಲಿಲ್ಲ ಈ ಪಂಡಿತಪುಂಗವ ! (ತುಂಗಭ. ೬).

ಮಲಕಿನ ತೆನೆ = ಹೆಣಿಗೆಯ ರೀತಿಯಲ್ಲಿರುವ ಕೋಟೆಯ ಗೋಡೆಯ ಮೇಲುಭಾಗದ ರಚನೆ,– ತೆನೆ : ಮೂಡಣ ನಿಟ್ಟು ೧ಕ್ಕೆ ನೀಳ ೨೬೭ ಮಾರು ಮಲಕಿನ ತೆನೆ ೩೩೦ . . . ಈ ಮೇರೆಗೆ ಅಳತೆಯಂ ಮಾಡಿ (ಮಹಾಪಂ. I, ೯೦); ಬಿರಿಕುಬಿಟ್ಟಿರುವ ಮಲಕಿನ ತೆನೆಗೆ ಸ್ವಲ್ಪ ಪಶ್ಚಿಮವಾಗಿ_ಇದಕ್ಕಿಂತ ದೊಡ್ಡ ಕೊರಕಲಾಗಿ ಹೋಗಿದೆ (ಚಿಟ್ಟಿಕ. ೬೮-೦೬). ಮಲಕು ಬೀಳು = ಜೋಡಣೆಯಾಗು : ಮಾತಿಗೆ ಮಾತು ಮಲಕು ಬಿದ್ದು ಬಾಪಣ್ಣ ಮನೆಯಲ್ಲಿ ಉಳಿದ (ಅಕಾಶಕ. ೬೮).

[ದೇ.॥ ತಮಿ. ಮಲುಕ್ಕು ; ತುಳು. ಮಲಕ್ ; ತೆಲು. ಮಲುಗು, ಮಲ್ಕು ]

**ಮಲಕುಗೊಳ್** (ಕ್ರಿ). ಗಂಟಾಗು ; ತಿರಿಚಿಕೊಳ್ಳು : ಮಲಕುಗೊಂಡ ಸುರತ್ನಹಾರಂಗಳನು ಸರಿಸಕೆ ತಂದು (ಅನಂತಾ. ೬-೦-೬೩).
[ಮಲಕ್ಕು$_2$ + ಕೊಳ್$_1$]

**ಮಲಕುಟ** (ನಾ). ಗುದದ್ವಾರ : ನವಮಣಿದೇಶದ ನಿಟ್ಟೆಲುವಿಂಗಂ ಆಸರಿಸುಗು ಮಲಕುಟಂ ತಿಕಂ ತಾಮೆಂದುಂ (ಅಶ್ವಶಾ. ೯-೯೯). [ ? ]

**ಮಲಗಟ್ಟು, ಮಲಕಟ್ಟು** (ನಾ). ಮಲವಿಸರ್ಜನೆಯಾಗದಿರುವುದು : ಮಲಬದ್ಧತೆ : ಅಜೀರ್ಣ, ಮಲಗಟ್ಟು, ನರಗಳ ಹಿಮ್ಮುರಿಗೆಗಳು (ರಿಫ್ಲೆಕ್ಸಸ್) ಅತಿಯಾಗಬಹುದು (ಕವಿಕೋ. I, ೬೯೩). **ಮಲಕಟ್ಟು** : ಅಜೀರ್ಣ, ಮಲಕಟ್ಟು . . . ಈ ಬೇನೆಯನ್ನು ಕೆರಳಿಸುತ್ತವೆ (ಕವಿಕೋ. I, ೯೯೬). [ಮಲ$_3$ + ಕಟ್ಟು$_2$]

**ಮಲಗದೆ** (ನಾ). ಒಂದು ಬಗೆಯ ಭೂಮಿ : ಬಯಲುಗದೆ ಒಂದಕಂ ಬಿತ್ತುವದು ನಾಲ್ವತ್ತರಲಿ ಮು ೯ ಮನೆ ಮಲಗದೆ ಅನುಭಸಹಿತ ಯಾ ಬಾಳಗೇಣಿ (ಶಾಶ್ವ. IX-ii, ೯೩೨-೨೦; 1450). 'ಮಲ್ಲಗದ್ದೆ' ಪರಾ.
[ ? ]

**ಮಲಗಿಸು** 'ಮಲಂಗಿಸು' ನೋ.

**ಮಲಗು$_1$** 'ಮಲಂಗು$_1$' ನೋ.

**ಮಲಗು$_2$** 'ಮಲಂಗು$_2$' ನೋ.

**ಮಲಗು$_3$** (ನಾ). ಒಂದು ಬಗೆಯ ಮೀನು : ಬಿಳಿಚ ಚಿಪ್ಪಲು ಮಲಗು ಹೆಮ್ಮಲಗು . . . ಗಿಜಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹತಶಾ. ೩-೪೬).
[ ದೇ.॥ ತಮಿ. ಮಲಜ್ಞು ; ತೆಲು. ಮಲಗು ]

**ಮಲಗುದಾಣ** (ನಾ). ಮಲಗುವ ಸ್ಥಳ,—ಜಾಗ : ಮಲಗುದಾಣಂ ತೊಯ್ದರೆಯ ಸಜ್ಜೆ ! (ಶ್ರೀರಾಮಪಾ. ೬೯-೩೦೦).
[ಮಲಗು$_1$ (< ಮಲಂಗು$_1$) + ತಾಣ]

**ಮಲಗುಮಾಡ** (ನಾ). ಮಲಗುವ ಮಹಡಿ,—ಉಪ್ಪರಿಗೆ : ಪೂಗಳಂ ಸಮೆದು ತೋರ್ಪ ಚಾವಡಿ ಮಲಗುಮಾಡಂಗಳು . . . ಕಣ್ಗೆಸೆದುದೇನೆಂಬೆನು (ಕಂಕ್ಷಿ. ೪೩-೨೬). [ಮಲಗು$_1$ (< ಮಲಂಗು$_1$) + ಮಾಡ$_1$]

**ಮಲಗುಮೂಡೆ** 'ಮಲಂಗುಮೂಡೆ' ನೋ.

**ಮಲತಂಗಿ, ಬಲತಂಗಿ** (ನಾ). ತನಗಿಂತ ಚಿಕ್ಕವಳಾದ, ತಂದೆಯ ಬೇರೆಯ ಹೆಂಡತಿಯ ಮಗಳು : ಗೋಪಾಲ . . . ರಾಧಕ್ಕನ ಮಲತಂಗಿಯಾದ ಯಮುನೆಗೆ ದೂರದ ಮೈದುನನಾಗಬೇಕು (ಆಮೋಲ. ೬೦). **ಬಲತಂಗಿ** : ಅವಳ ಬಲತಂಗಿ ಇನ್ನೂ ಚಿಕ್ಕವಳು (ರೂಢಿ).
[ಮಲ$_1$ + ತಂಗಿ$_1$ (< ತಂಗೆ)]

**ಮಲತಂದೆ** 'ಮಲದಂದೆ' ನೋ.

**ಮಲತಮ್ಮ, ಬಲತಮ್ಮ** (ನಾ). ತನಗಿಂತ ಚಿಕ್ಕವನಾದ, ತಂದೆಯ ಬೇರೆಯ ಹೆಂಡತಿಯ ಮಗ : ಕೃಷ್ಣವರ್ಮನು ಅವನ ಮಲತಮ್ಮನಾಗಿರ ಬಹುದು (ಕನಾಗಿ. ೨೨). **ಬಲತಮ್ಮ** : ಅವನ ಬಲತಮ್ಮ ಒಳ್ಳೆಯ ಹುಡುಗ (ರೂಢಿ). [ಮಲ$_1$ + ತಮ್ಮ]

**ಮಲತಾಯ್** 'ಮಲದಾಯ್' ನೋ.

**ಮಲತಾಯಿ** 'ಮಲದಾಯ್' ನೋ.

**ಮಲತ್ರಯ** (ನಾ). ೧. ಶರೀರದಿಂದ ಹೊರಬೀಳುವ ಸ್ವೇದ, ಮೂತ್ರ ಮತ್ತು ಪುರೀಷಗಳೆಂಬ ಮೂರುಬಗೆಯ ಅಶುಚಿದ್ರವ್ಯಗಳು ; P "ಮಲ–ಸ್ವೇದ, ಮೂತ್ರ, ಪುರೀಷ (ಚರಕ. III, ಮುನ್ನುಡಿ)" (ಶ್ರೀತತ್ತ್ವ. ೩೨೪). ೨. [ವೀಶೈ] ಆಣವ, ಮಾಯಾ ಮತ್ತು ಕಾರ್ಮಿಕ ವೆಂಬ ಮೂರು ಬಗೆಯ ಮಲಗಳು : ಆಣವ ಮಾಯಾ ಕಾರ್ಮಿಕವೆಂಬ ಮಲತ್ರಯವನುಳಿದು (ಅವವ. ಶು. ೦೬೮-೨೯೭) ; ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳನೆ ಘಂಜಿಸಿ (ಅಬಂಚೆ. ೬೩-೪೮).
[ಸಂ.]

**ಮಲದಂದೆ, ಮಲತಂದೆ** (ನಾ). ಯಾರನ್ನಾದರೂ ದತ್ತುಸ್ವೀಕಾರ ಮಾಡಿ ಕೊಂಡಿರುವ ವ್ಯಕ್ತಿ ; ಪಾಲಕಪಿತೃ : "ಮ[ಪಾಠಾಂ. ಬ]ಲದಂದೆ ದ್ವಿವಪ್ಪ [ಪ್ರ]ತ್ರವಕ್ಕುಂ" (ಮಂಗರಾ. ೯೨-೦೨). **ಮಲತಂದೆ** : (೯). [ಮಲ$_1$ + ತಂದೆ]

**ಮಲದಾಯ್, ಬಲತಾಯಿ, ಬಲದಾಯಿ, ಮಲತಾಯ್, ಮಲತಾಯಿ, ಮಲದಾಯಿ** (ನಾ). (ತಂದೆಯ) ಎರಡನೆಯ ಅಥವಾ ಬೇರೆಯ ಹೆಂಡತಿ ; ತಾಯಿಯ ಸವತಿ : "ಉಪಮಾತೆಯೆನೆ ಮ[ಪಾಠಾಂ. ಬ]ಲ ದಾಯೆನಿಕ್ಕುಂ" (ಮಂಗರಾ. ೯೨-೦೨) ; ಹಳೆಯ ವರವನು ಬೇಡಿ ಪಟ್ಟವನುಳುಹಿ ಮಲದಾಯ್ಮಗನನಡವಿಗೆ ಕಳುಹೆ (ಕೌಶಿರಾ. ೯-೦೦). **ಬಲತಾಯಿ** : ಅವನ ಬಲತಾಯಿ ತಗಡೂರು ಚನ್ನಾಜಮ್ಮಯ್ಯನ ಪುತ್ರರು . . . ಆ ಲಕ್ಷ್ಮೀಕಾಂತಯ್ಯನಂ ಹೊಡೆದು ಹಾಕಿ (ಮಹಾಪಾ. I, ೯೬). **ಬಲದಾಯಿ** : ಬಂಜೆ ಬೇನೆಯನಜೆಸಿವಳೇ ಬಲದಾ[ಪಾಠಾಂ. ತಾ]ಯಿ ಮುದ್ದ ಬಲ್ಲಳೆ (ಮಹಾದೇ. ೨. ೦೯೦-೩೦೯). **ಮಲತಾಯ್** : ಮಲತಾಯ್ಗೆ ಳಾತ್ಮಜ ರೆಂಬುದಿಲ್ಲದೆ ಸರ್ವರೆಳಸಿ ನಿನ್ನೊಡನಿರುತಿಹರ್ಶೆ (ಶಠತ. ೯೩-೦೨೨). **ಮಲತಾಯಿ** : ಬೈದು ಮಲತಾಯಿಯಡವಿಗೆ ನೂಕಲು (ಭರಂಚ. ೨-೬೦-೦); ಮಂಗಲೇಶನು ದುರ್ಲಭದೇವಿಯನ್ನು ಸ್ವಗುರುಪತ್ನೀ ಎಂದು ಕರೆದುದರಿಂದ ಆಕೆಯು ಅವನ ಮಲತಾಯಿಯಾಗಿರಬಹುದು (ಕನಾಗಿ. ೩೨) ; ತಂದರಲ್ಲ ನನಗೆ ಸವತಿಯನ್ನೂ ಮಕ್ಕಳಿಗೆ ಮಲತಾಯಿಯನ್ನೂ (ಕುಂಕುಮ. ೬೦). **ಮಲದಾಯಿ** : ಮಲದಾಯಿ ಮನೆ ಹೊಲಬುವಡಿಸಲೆಂದಾ ನಿನ್ನ ಹೆತ್ತನೆ (ಕೌಶಿರಾ. ೩-೩೬).

**ಮಲತಾಯಿಧೋರಣೆ** = (ಅಲಂ) ಪಕ್ಷಪಾತ ; ವಂಚನೆ : ಈ ಕಚೇರಿಯ ವಿಭಾಗಕ್ಕೆ ಸಂಬಂಧಿಸಿದ ಮುಖ್ಯಸಂಸ್ಥೆ ಮೊದಲಿನಿಂದಲೂ ಈ ವಿಭಾಗವನ್ನು ಮಲತಾಯಿಧೋರಣೆಯಿಂದಲೇ ನಡೆಸಿಕೊಂಡಿದೆ (ರೂಢಿ).
[ ಮಲ$_1$ + ತಾಯ್ ]

**ಮಲದಾಯಿ** 'ಮಲದಾಯ್' ನೋ.

**ಮಲದೇಹಿ** (ನಾ). ಕೊಳೆಯಾದ ದೇಹವುಳ್ಳವನು : ನಿನಗೆ ಮಜ್ಜನವ ಮಾಡುವಲ್ಲಿ ನಾನು ಮಲದೇಹಿ ನೀನು ನಿರ್ಮಲದೇಹಿ (ಪೋಲವಚ-೪೬-೦೩೦).
[ ಸಂ. ಮಲದೇಹಿನ್ ]

**ಮಲಧರ** (ನಾ). [ಜೈನ] ಸ್ನಾನ ಮಾಡದೆ ದೇಹದಲ್ಲಿ ಕೊಳೆಯನ್ನು ಹೊಂದಿರುವ ಸಂನ್ಯಾಸಿ : "ಜೈನರ್ ದಿಗಂಬರರ್ ಜೀವಕರ್ ಮಲಧರರ್ ತಾಪಜೀವರ್ ಕ್ಷಪಣರೆನೆ ಗುರುಗಳಕ್ಕು" (ಮಂಗರಾ. ೬೬-೦). [ಸಂ.]

**ಮಲಧಾರಿ** (ನಾ).=ಮಲಧರ : " ನಗ್ನಾಟಃ . . . ಮಲಧಾರೀ. . . ಸಾಧುಃ– ಈ ೧೦ ಸವಣನ ಪೆಸರ್ " (ಕಲಾಢು. ೩೬-೦೯೯) ; ಎವುಗೆ ಮಲಧಾರಿಸಿದ್ಧಾಂತಮುನೀಶ್ವರಚರಣಸರಸೀಜಾತಂ . . . ಜಯನಂದಿಮುನಿ ಕ್ರಮಕಮಳಮೀಗೆ ಬೋಧೋದಯಮಂ (ಅಧಿಪು. ೦-೦೩) ; ತಜುಬು ದಲೆಗಳ . . . ತಟ್ಟುಗಳ ಹಗರಣಿಗರೊ ಎನಲು ಮಲಧಾರಿಗಳು ಗಜಬಜಿಸಿ ನೆರೆವುತ್ತ (ಏಕಪು. ೩೦-೫೩). [ ಸಂ. ಮಲಧಾರಿನ್ ]

**ಮಲನಾಗರು** 'ಮಲರೋಗ' ನೋ.

**ಮಲನೀರು** 'ಮೊಲೆನೀರು' ನೋ.

**ಮಲನೂರ್** (ನಾ). ಒಂದು ಊರಿನ ಹೆಸರು : ಶ್ರೀ ಮಲನೂರ ಪಟ್ಟನಿಗುರವಡಿಗಳ ಶಿಷ್ಯರ್ ಉಗ್ರಸೇನಗುರವಡಿಗಳ್ ಒನ್ದುತಿಙ್ಗಳ್ ಸಂನ್ಯಸನಂ ನೋನ್ತು ಮುಡಿಪ್ಪಿದಾರ್ (ಎಕ. II, ೨೩-೦ ; ಸು. 700).
[ ? + ಊರ್ ]

**ಮಲಪ** (ನಾ). ಒಂದು ಬಗೆಯ ವಾದ್ಯಪ್ರಬಂಧ ; ವಾದ್ಯಗಳ ವಾದನದಲ್ಲಿ ಬರುವ ಒಂದು ಬಗೆಯ ಸಂಯೋಜನೆ : ಕಪುತಂದೆಂಕಾರಂ

ಮಲಪವದೆ[ಶಾಕಾಂ.ಫೆ] ತುಡುಂಕೊತ್ತು ಜೋಕೆಯಂತರಿ ಜತಿ ರಿಗ್ಗವಣೆ ಪಹರಣೆಯೆನಿಪ್ಪೀ ಪ್ರಬಂಧಮಂ (?) ಶ್ರೋತ್ರಬಂಧುವೆನೆ ಬಾಜಿಸಿದರ್ (ಶಾರ್ಙ್ಗವು. ೧೨-೨೦). [ಸಂ.]

**ಮಲಪಾಶ** (ನಾ). ಪಂಚಪಾಶಗಳಲ್ಲಿ ಒಂದು : ಪಾಶಪದಾರ್ಥವು . . . ಮಲಪಾಶ ಮಾಯಾಪಾಶ ಕರ್ಮಪಾಶ ಬಿಂದುಪಾಶ ತಿರೋಧಾನ ಪಾಶಮೆಂದು ಪಂಚಪ್ರಕಾರವಾಗಿರ್ಪುವು (ವಿವೇಕ. ೦೬೩). [ಸಂ.]

**ಮಲಪು₁** (ನಾ). ಕೆಸರು : ಬಾವಿಗೋ ಕೆರೆಗೋ ಒಂದು ಪಾತ್ರವಾಗಲಿ ವಿಶಿಷ್ಟವಾದೊಂದು ವಸ್ತುವಾಗಲಿ ಬಿದ್ದಿರುವಾಗ ಅನ್ವೇಷಣಕಾರನು ಅದಕ್ಕಿಳಿಯುತ್ತಾನೆ. ಮೊದಲು 'ಮಲಪು' (ಕೆಸರು)ನೆಡೆಯಲ್ಲಿ ಕಾಲ ಬೆರಳಿನಿಂದ 'ಪರಡಿ' ಅದರ ಗುರಿಯನ್ನು ಪ್ರತೀಕ್ಷಿಸುತ್ತಾನೆ (ನಾಡೋಜ. ೨೫೩). [←ತುಳು. ಮಲಂಪು, ಮೊಲಂಪು]

**ಮಲಪು₂**, ಮಲೆಪು₂ (ನಾ). = ಮಲಪ : ಪಾಡು ಪದಂ ಪರಿವಡಿ ಪೊತ್ತು ಕೌತಂ ಮಲಪೆಂಬೀ ಮಾರ್ಗಶಬ್ದಂಗಳುಂ . . . ಜತಿಜೋಕೆಯೆಂಬ ದೇಸೆಯ ಶಬ್ದಂಗಳಸೆಯೆ ಬಾಜಿಸುತ್ತಿರೆಯುಂ (ಶಾಂತೀಶ್ವ. ೦೬-೬೬ ವ) ; ಪಾಡುಗಳ ನಡವು ಬೀಳದಂತೆ ನುಡಿಸಿ ಮಲಪು ರಿಗ್ಗವಣೆ ಒಡ್ಡಾಸರ ಪಡಿಸಣ ಚಮತ್ಕಾರ ಶಬ್ದ ಶೃಂಗಾರ ಝೇಂಕಾರಂ ಮೊದಲಾದ ವಾದ್ಯಪ್ರಬಂಧಗಳಲ್ಲಿ (ಚಿಕೂಪಾ. ೮೦ ವ). **ಮಲೆಪು₂** : ಮಲೆಪು ಪಬ್ಬಿರಣೆ ಕೌತುಕಳಕೋತ್ತರಂಗಳಿಂ ಕೌತುಕದ ಬಾಜನೆಯೊಳೆಸಗಿದುವೆನಿಸಿ ಬಾಜಿಸುತ್ತಿರೆಯುಂ (ಶಾಂತೀಶ್ವ. ೬-೯೩ ವ). [<ಸಂ. ಮಲಪ. /-ತಮಿ. ಮಲ್ಲೈಪ್ಪು = ಒಂದು ಬಗೆಯ ನೃತ್ಯ; ತೆಲು. ಮಲಪು = ನರ್ತನ]

**ಮಲಬತ್ರ** (ನಾ). (?) : ಈ ಸಂತೆಯ ಸ್ಥಳಗಳಿಂದ ಹೇರಳವಾಗಿ ಮೆಣಸನ್ನೂ ಮಲಬತ್ರವನ್ನೂ (ವೀಳೆಯದೆಲೆ ?) ತೆಗೆದುಕೊಂಡು ಹೋಗಲು ದೊಡ್ಡ ದೊಡ್ಡ ಹಡಗುಗಳು ಬರುತ್ತವೆ (ಕೃಪಾಇ. I, ೯೯). P 'ತಮಾಲ' ಮತ್ತು 'ತಾಂಬೂಲ' ಎಂಬ ಶಬ್ದಗಳ ಉಚ್ಚಾರಣೆಯಲ್ಲಿ ಪಾಶ್ಚಾತ್ಯರಿಗೆ ಉಂಟಾದ ಗೊಂದಲದಿಂದ ಈ ಶಬ್ದವು ಬಂದಿದೆ. [←ಇಂ. Malabathrum]

**ಮಲಬದ್ಧತೆ** (ನಾ). ಸರಿಯಾಗಿ ಮಲವಿಸರ್ಜನೆಯಾಗದಿರುವ ರೋಗ : ನಾರು ಹೆಚ್ಚಾಗಿರುವ ಹಣ್ಣುಹಂಪಲು . . . ಸೇವಿಸುವುದರಿಂದ ಗರ್ಭಿಣಿಗೆ ಮಲಬದ್ಧತೆ ತಪ್ಪುತ್ತದೆ (ಗೃಹಆ. ೯೯) : ವೀರ್ಯ(ಧಾತು)ನಾಶದಿಂದ ರಕ್ತವು ಕ್ಷಯಿಸುವುದು . . . ಈ ಮೇರೆಗೆ ಮಲಬದ್ಧತೆಯೆಂಬ ದುರ್ಧರ ರೋಗವು ಬಂದು ಸೇರುವುದು (ಬ್ರಹ್ಮಜೀ. ೦೪೩). [ಸಂ. ಮಲಬದ್ಧತಾ]

**ಮಲಬದ್ಧರೋಗ** (ನಾ). ಸರಿಯಾಗಿ ಮಲವಿಸರ್ಜನೆಯಾಗದಿರುವ ಒಂದು ಬಗೆಯ ರೋಗ : ಕೊಡಸಿನೆಲೆಯ ಗುಣ . . . ವಿಶೇಷವಾದ ಮಲಬದ್ಧರೋಗ, ಕುಷ್ಠರೋಗ ಮೊದಲಾದವುಗಳನ್ನು . . . ನಾಶ ಮಾಡುವುದು (ಸಕವ್ವ. ೯೬). [ಸಂ.]

**ಮಲಬಾಧೆ** (ನಾ). ೧. ಮಲವಿಸರ್ಜನೆ ಮಾಡಬೇಕೆಂಬ ದೈಹಿಕ ಸೂಚನೆ. ೨. ಮಲವಿಸರ್ಜನೆ : ಈ ಮಧ್ಯೆ ಗುರುವಿಗೆ ಮಲಬಾಧೆಗೆ ಅವಸರವಾಯಿತು (ಸೀತಿಕಂ. IV, ೨೯). [ಸಂ. ಮಲಬಾಧಾ]

**ಮಲಮಗ** (ನಾ). ಪುರುಷನ ಬೇರೆಬೇರೆ ಪತ್ನಿಯರ ಮಕ್ಕಳಲ್ಲಿ ಯಾರಾದರೂ ಒಬ್ಬ.

**ಮಲಮಕ್ಕಳು** (ಬಹುವ) : ಸಾವಿರದ ಮೇಲೆ ಐನೂರ ಕೊಟ್ಟರು ಮಲಮಕ್ಕಳಿರುವ ಮನೆ ಬೇಡ (ಹ್ಯಾಡು. ೬೪) ; ಕುಟುಂಬದೊಳಗೆ ಒಬ್ಬರಿಗೊಬ್ಬರು ಅಸೂಯೆಪಡುವವರು ಮಲತಾಯಿ ಮಲಮಕ್ಕಳು (ಕನ್ನಡಾ. ೦೦೪). [ಮಲ₁ + ಮಗ]

**ಮಲಮಗಳು** (ನಾ). ಪುರುಷನ ಬೇರೆಬೇರೆ ಪತ್ನಿಯರ ಮಕ್ಕಳಲ್ಲಿ ಯಾರಾದರೂ ಒಬ್ಬ ಮಗಳು ; ಬಲಮಗಳು : ಉಪವಾಸ ಕೆಡವಿ ಮಲಮಗಳ್ನ ಮನ್ಯಾಗ ಕೊಲ್ಲತಿದೀ ಅಂತ ಆ ಹುಡಿಗೀ ಅಪ್ಪ ಆಕಿನ್ನ ತಂದು ನಮ್ಮ ಮನೀಗೆ ಆಟ್ಟಿವ (ಸವಜೀ. ೨೦೪).
[ಮಲ₁ + ಮಗಳು (<ಮಗಳ್)]

**ಮಲಮಲ₁** 'ಮಮ್ಮಲಂ' ನೋ.

**ಮಲಮಲ₂** 'ಮಲಮಲಿ' ನೋ.

**ಮಲಮಲಂ** 'ಮಮ್ಮಲಂ' ನೋ.

**ಮಲಮಲನೆ** 'ಮಮ್ಮಲನೆ' ನೋ.

**ಮಲಮಲಿ**, ಮಲಮಲ₂, ಮಲಮಲ್ಲು (ನಾ). ಒಂದು ಬಗೆಯ ನವಿರಾದ ಬಿಳಿಯ ಬಟ್ಟೆ : ಮಲ್ಲು ; ಮಸ್ಲಿನ್‌ಬಟ್ಟೆ : ಬಂಗಾಳ ದೇಶದೊಳಗಿನ ಡಾಕ ಎಂಬ ಪಟ್ಟಣದಲ್ಲಿ ಹುಟ್ಟುವ ಜಿನುಗಾದ ಮಲಮಲಿಯು ದಿಗ್ದೇಶಕ್ಕೆ ಹೆಸರಾಗಿದೆ (ಮುಂಬಯಿ. ೪-೨೬) ; ಗೌಡರು . . . ಬಿಳಿಯ ಮಲಮಲಿಯ ಅಂಗಿಯೊಂದನ್ನು ಹಾಕಿಕೊಂಡಿದ್ದಾರೆ (ಸಪದಾ. I, ೨೩೯). **ಮಲಮಲ₂** : ಬಂಗಾಲದ ಮಲಮಲಬಟ್ಟೆಗಳು ದೇಶದಲ್ಲಿ ಸರ್ವೋತ್ಕೃಷ್ಟವಾಗಿ ಮೆರೆಯುತ್ತಿದ್ದವು (ಬಾಬಿಕಾ. ೨೦). **ಮಲಮಲ್ಲು** : ಉಣ್ಣೆಯ, ರೇಶಿಮೆಯ, ಮಲಮಲ್ಲಿನ, ಸುತ್ತೂ ಹರವಿಕೊಳ್ಳುವ ಅಂಗಿಗಳು . . . ಕಣ್ಮುಂದೆ ಬಂದುಬಂದು ಹೋದವು (ಇಕ್ಷ್ವ. ೦೬೩).
[← ಹಿಂ. ಮರಾ. ಮಲ್‌ಮಲ್]

**ಮಲಮಲ್ಲು** 'ಮಲಮಲಿ' ನೋ.

**ಮಲಮಜುಗು** (ಕ್ರಿ). ಬಹಳವಾಗಿ ಕನಿಕರಿಸು,— ಮರುಗು : ಜುಪಿಯೆರಂ ಪೊರ್ದಿದನಪ್ಪೊಡೆ ನಮಗಿಲ್ಲನೆಂದು ಮನದೊಳ್ ಮಲಮಜುಗಿ (ಧರ್ಮಾಮೃ. ೬-೩೩); ಸಭಾಜನವೈದೆ ಮಲಮಜುಗಲಾಯೆಂದಳು (ಶಾಪಿಸಂ. ೬-೩೩). [< ಮಮ್ಮಲ + ಮಜುಗು]

**ಮಲಮಾತಂಗಿ** (ನಾ). ಕೆಂಪುಹಣ್ಣುಗಳನ್ನು ಬಿಡುವ ಒಂದು ಬಗೆಯ ಪೊದೆ : (?). [?. / ತೆಲು. ಮರುಲುಮಾತಂಗಿ, ಮರ್ಲು ಮಾತಂಗಿ = ಉನ್ಮತ್ತ]

**ಮಲಮಾಸ** (ನಾ). ರವಿಸಂಕ್ರಮಣ ಬರದಿರುವ ತಿಂಗಳು ; ಅಧಿಕ ಮಾಸ ; P ಧಾರ್ಮಿಕಕ್ರಿಯೆಗಳನ್ನು ಆಚರಿಸದಿರುವ ಅಶುಭವಾದ ತಿಂಗಳು : ಅಶುಭಮಾಸ. [ಸಂ.]

**ಮಲಯ**, ಮಳಯ (ನಾ). ೧. ಬೆಟ್ಟ; ಪರ್ವತ : "ಮಲಯಃ, ಮಲಯಃ — ಈ ೨ ಬೆಟ್ಟ" (ಶಾಶಕ್ಕ. ೦೦೩). ೨. ಭಾರತದೇಶದ ದಕ್ಷಿಣದಿಕ್ಕಿನಲ್ಲಿರುವ, ಶ್ರೀಗಂಧದ ಮರಗಳಿಂದ ಆವೃತವಾಗಿರುವ ಬೆಟ್ಟದ ಸಾಲು ; P ಇದು ಜಂಬೂದ್ವೀಪದ ಸಪ್ತಕುಲಪರ್ವತಗಳಲ್ಲಿ ಒಂದು : ಮಲಯಮೇಖಲೆಯಂತೆ ಚಂದನಪಲ್ಲವಾವತಂಸೆಯುಂ . . . ಎನಿಸಿದೆಜಂಬವ್ವನೆಯ ರೂಪಾತಿಶಯಮಂನೆಮೆಯಿಕ್ಕದೆ ನೋಡುತ್ತಂ (ಕಾದಂಪೂ. ೯೯) ; ಮಲಯಕ್ಷ್ಮಾಧರಮೇಖಳಾಪರಿಗತಶ್ರೀಖಂಡಷಂಡಂಗಳೊಳ್ ನಲವಿಂದೊಂದಿ ಬಟಲ್ದ ಭೋಗಿಮಿಥುನಂಗಳ್ (ಚಂದ್ರಕೌ. ೬-೪೦); ಚಂದನವಲ್ಲದೆ ಮಿಕ್ಕಿನ ತರುಗಳಿಲ್ಲದ ಮಲಯಭೂಧರದ ಪೆಂಪೆನಿತು (ಬಸವ. ೦೯-೨೬). ೩. ಮಲಯಪರ್ವತದ ಸಮೀಪದ ಒಂದು ದೇಶದ ಹೆಸರು ; ಮಲಬಾರುಪ್ರಾಂತ ; ಮಲಯಾಳಸೀಮೆ : ಪಾಂಡ್ಯ ತುಳುವ ಮಲಯ ಮಲಯಾಳ . . . ಕೇರಳ ಮುಖ್ಯಾವಾರ ದೇಶಂಗಳೊಳೆಸೆವ ಜಂಗಮವು (ಬಸವ. ೬-೦೬). **ಮಳಯ** : ೨. ಮಳಯೋತ್ತುಂಗಾಗ್ರದಿಂ ತೆಂಬೆಲರ್ವೆಲರಿಂ . . . ವಸಂತೋಚ್ಛಳಿತಂ ಕಂದರ್ಪನೊಪ್ಪಂಬಡೆವ ತೆಜದಿನಾ ಮಂತ್ರಿಭಾಣಿಕ್ಯನಿಂ ಭೂತಳದೊಳ್ ಸಂಸೇವ್ಯನಾದಂ ಸರಸಕೃತಿಕಲಾನರ್ತಕೀನೃತ್ಯರಂಗಂ (ಅಜಿತಪು.೦-೦೦೬); ಮಳಯಾಯಾತಸಮೀರಸಂಚಳಲತಾಸಂತಾನಕಂ ತಮ್ಮರಲ್ಗಳನೊಂದೊಂದಱ ಮೇಲೆ ಕೆಂದಲರ್ಗಳಿಂ ಸೂಸಿತ್ತೆನಲ್ ಕೇಳಿಸಂಚಳೆಯರ್ ತುಳ್ಕಿದರೊರ್ವ-

ರೊರ್ವರೊಳೆತಿಸ್ವಚ್ಛಾಂಬುವಂ (ಶಗಪಿ. ೦೪-೯೭). ೩. ಮಳಯೊಂಧ್ರಾರ್ಬುದವ ಮಾಗಧ . . . ಸಿಂಹಳದೇಶಾಧಿಪರಂ ಭಯಂಗೊಳಿಸಿದಂ ವಿಕ್ರಾಂತದಿಂ ರೇಚಿಗಂ (ಮುದಶಿ. ೦-೦೦) ; ಮಳಯ ಮಹೇಂದ್ರ ವಿಂಧ್ಯ . . . ನಿರ್ಮಳ ನಿಷಧಪ್ರದೇಶದ ಮಹೀಭುಜರಂ ಬರವೇಟ್ಟು (ಸಳಕಂ. ೨೨೩). P ಇದು ದ್ರಾವಿಡಶಬ್ದವಾಗಿದ್ದು ಪ್ರಾಕೃತದ ಮೂಲಕ ಸಂಸ್ಕೃತಕ್ಕೆ ಹೋಗಿರಬೇಕೆಂದು ಭಾಷಾವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ. [ಸಂ.]

**ಮಲಯಜ**, ಮಳಯಜ (ನಾ). ೧. ಮಲಯಪರ್ವತಪ್ರದೇಶದಲ್ಲಿ ಹುಟ್ಟುವ ಮರ ; ಶ್ರೀಗಂಧದ ಮರ ; ಚಂದನವೃಕ್ಷ. ೨. ಶ್ರೀಗಂಧ; ಚಂದನ : "ಮಲಯಜಮಿರದದು ಬಾವನ್ನಮೆಂದು ಸಿರಿಕಂಡಮೆನಲ್" (ಕಬಿಕಂ. ೫೩) ; ಕಾಡ ತರುವಿಗೆ ಪರಮಗಂಧವನೂಡದೇ ಮಲಯಜವು (ಕೌಶಿರಾ. ೩೭-೯೭); ಮಲಯಜದ ಮರದೊಳಗೆ ಸಲೆ ಗಂಧವಿಪ್ಪಂತೆ (ಹರ್ವಶ್ರ. ೦೩೯). ೩. ಶ್ರೀಗಂಧದ ಕೊರಡು ; ಚಂದನದ ಕೊರಡು : ಕರಿದಾದೊಡೆ ಕತ್ತುರಿಯುಂ ಮುರುಡಾದೊಡೆ ಮಲಯಜಂಗಳಂ . . . ಇಟ್ಟೆಕೆಯ್ವರೆ ಮರುಳೇ (ಮುಕೋಶ. ೨-೪೨). **ಮಳಯಜ** : ೧. "ಚಂದನಂ, ಮಳಯಜಂ, ಶ್ರೀಖಂಡ(ಃ)ಂ, ರೋಹಿಣೇದ್ರುಮಃ — ಈ ೪ ಸಿರಿಗಂಧಂ" (ಶಬ್ದಮ. ೯೯-೯೯೦). ೪. ಶ್ರೀಗಂಧದ ಕೊರಡನ್ನು ತೇದು ತೆಗೆದ ಗಂಧ : ವಾರಿಜ ಮಳಯಜ ಮಳಯಸಮೀರಣಂ . . . ಬಾರಿಸಲಜಿವೆ ದಲವನ ದಾಹಜ್ವರಮಂ (ಆದಿಪು. ೨-೦೩) ; ಮಳಯಜಮಿಶ್ರಶೀರ್ಥಜಲಧಾರೆಗಳಿಂ ಶಶಿಕಾಂತಕಾಂತಮಂಗಳಕಲಶಾಂಶುಧಾರೆಗಳನಿರ್ಮಿಡಿಸಿತ್ತು ವಿವಾಹಮುಖ್ಯಮಂಗಳಸವನಂ ವಿಳಾಸವತಿ ಸೀತೆಗೆ (ಕಂರಾಪು. ೫-೩೯) ; ಮಳಯಜದ ಮೊಲೆಯ ಕುಂಕುಮದಳಕದ ಕತ್ತುರಿಯ ಬಣ್ಣವಣ್ಣಿಗೆ ಕೊಳದೊಳ್ ತಳರ್ದಿರೆ ಜಳರುಹಮುಖಿಯರ್ ಜಳಕೇಳಿಯ ನೆವದಿಂ ದೂಳಿಚಿತ್ರಂ ಬರೆದರ್ (ಮುಕೋಶ. ೪-೬). [ಸಂ.]

**ಮಲಯರುಹ**, ಮಳಯರುಹ (ನಾ). ೧. ಶ್ರೀಗಂಧದ ಮರ ; ಚಂದನವೃಕ್ಷ : ಫಣಿಧರನೊಳ್ವಿಷಂ ಮಲಯರುಹದೊಳನಲಾರ್ಚಿ ನಿನ್ನ ವದನೋದರದೊಳ್ ಪರುಷತರವಚನಮಪ್ಪುದು ದುರವಾಪಂ (ಕಬಿರಾ. ೩-೭೯) ; ತುರಗಗಳಂ ಕಾನನಮಲಯರುಹಗತಂ . . . ಸೂಕರವದನಂ ಕರ್ಕಟಾದಿಮದ್ರೇಕ್ಕಾಣಂ (ಜಾತಕ. ೦೯-೦೦). **ಮಳಯರುಹ** : ೨. ಚಂದನದ ಕೊರಡು : ಮಳಯರುಹಂ ಬೇಳ್ಪನಿತುಂ ತಿಳಿಯಲ್ಕೊಲ ಘಾಂಡಮೂರ್ತಿ ನಿನ್ನಯ ಮೊಳಕೈಯೊಳಗಿದೆ ತೇದರ್ಪಿಸು (ಕೃಶೃಂ. ೩೪-೦೦). ೩. ತೇದ ಚಂದನ ; ಚಂದನಗಂಧ : ಮಳಯರುಹದ ಕರ್ಪೂರದ ಪಳಕಿನ ಪನಿನೀರ ಕದಳಿದಳದಿಜಿಸಿಲ ತಣ್ಣಳಸದ ಶಿಳಿನೀರ್ಗಳ ಶೀತಳತೆಯಿನವನಿಪನನಾಪ್ತರುಜ್ಜೀವಿಸಿದರ್ (ಅನಂಪು. ೦೦-೬೬). [ಸಂ.]

**ಮಲಯಾಚಲ** (ನಾ). = ಮಲಯ ೨ : "ಮಲಯಾಚಲಮಿನ್ನುಂ . . . ಬಾವನ್ನಮೆಟ್ಟುಮೆನಲದು ಸಲ್ಗುಂ" (ಕಬಿಕಂ. ೫೦) ; ಹೇಗೆ ಮಲಯಾಚಲ ಗಂಧಸಂಸರ್ಗದೆ ಚಂದನವಪ್ಪುದಿಂಧನವು (ಇಂಜಾಶ. ೬೭-೬೯). [ಸಂ.]

**ಮಲಯಾನಿಲ**, ಮಳಯಾನಿಲ, ಮಳಯಾನಿಳ (ನಾ). ಮಲಯಪರ್ವತದಿಂದ ಬೀಸುವ ಸುಗಂಧಪೂರಿತವಾದ ತಂಗಾಳಿ : ಮಲಯಾನಿಲನುಂ ಮಲಯಜಜಲಮುಂ ಶಶಿಕಿರಣಮುಂ ವಿಯೋಗಿಗಳೆರ್ದೆಯೊಳ್ನೆಲಸಿದರ್ವು (ಕಬಿರಾ. ೩-೩೨) ; ನೋಟ್ಪಂ ಬೆಲೆಗೊಟ್ಟು ತಾರ ಮಧುವಂ ಮಲಯಾನಿಲನಂ ಮನೋಜನಂ ಕೌಮುದಿಯಂ (ಅರ್ಧನೇ. ೦-೪೫) ; ಮಾರಿ ಮಲಯಾನಿಲಂ ನವನೀರಜವನಮೆಂಬ ಕೆಂಡದೊಳ್ ದಂಡನಮಸ್ಕಾರಂ ಬಂದಪಂ (ಮುಕೋಶ. ೦-೩೬). **ಮಳಯಾನಿಲ**: ಮಳಯಾನಿಲನಿಂದಲುಗುವ ಸೆಳೆಗೊಂಬಿನ ಪಣ್ಣನಂತುಮಿಂತುಂ ಕರ್ದುಕಲ್ಕಳವಳಿಪರಗಿಳಿ ಪೋಲ್ತುದು ಮಾಳಿದೋಪಳ ಪವನಚುಂಬನೋತ್ಸುಕವಿಟಸಂ (ಸೂಕ್ತಿಸು. ೦೦-೫೯). **ಮಳಯಾನಿಳ** : ತೊಳಪೆಳೆವೆಜಿಯುಂ ಮೊರೆವಳಿಕುಳಂಗಳುಂ ಮೆಲ್ಲನೆಸಪ ಮಳಯಾನಿಳನುಂ ಮುಳಿಸಂ ಕಟಲ್ಚಿ ಕಳೆದುವು . . . ಕಾಮಿಗಳಾ (ಕಬಿರಾ. ೨-೬೦) ; ಏನಾಡಿಸಿದನೋ ಮಳಯಾನಿಳನರ್ತಕಂ ಲತಾನರ್ತಕಿಯಂ (ಆದಿಪು. ೦೦-೯೦). [ಸಂ.]

**ಮಲಯಾಳ** 'ಮಲೆಯಾಳ' ನೋ.

**ಮಲಯೋದ್ಭವ**, ಮಳಯೋದ್ಭವ (ನಾ). = ಮಲಯರುಹ ೩ : ಅಂತು ತನ್ನೋರೆಗಳ್ವೆರಸು ದಾಘುಮ್ಮಿಜಿದೋಲಾಡುವಲ್ಲಿ . . . ಬೆಳರ್ವಟ್ಟು ನಿಂದುದೊಂದೆಡೆ ಮಲಯೋದ್ಭವಪ್ರಸರದಿಂ . . . ಸರಸೀವಿಭಾಗದೊಳ್ (ಶಾಂತಿಪು. ೬-೨೯). **ಮಳಯೋದ್ಭವ** : ಮಳಯೋದ್ಭವ ಶೈಲೋದ್ಭವ ಸಲಿಲಂ ಸಿತಮಗರು ಕುಷ್ಮಚೂರ್ಣದಿನಿಂಬಾಗಿರೆ ಮಾಡಿ ಬತ್ತಿಯಂ ಸೊಡರ್ವೆಳಗುಗೆ ಮನೆಯೊಳಗೆ ಕಂಪು ಪೊಂಪುಟಿಯಕ್ಕುಂ (ಲೋಕೋಪ. ೬-೩೪); ವಿದಳಿತಪುಷ್ಪಮಾಲಿಕೆಗಳಿಂ ಮಳಯೋದ್ಭವದಿಂ ತೊಳಪ್ಪ ರನ್ನದ ತೊಡವಿಂದಳಂಕರಿಸಿ . . . ಬಾಯಿನಂಗಳಂ ಮುದದೊದವಿಂದಮಿತ್ತು ಮೆಚ್ಚಿದರ್ (ಚಂದ್ರಪು. ೬-೯೦). [ಸಂ.]

**ಮಲಯ್ಯ** (ನಾ). ಒಬ್ಬಾತನ ಹೆಸರು : ಶ್ರೀನಾಗತಿಯಮ್ಮನ ಮಗಂ ಮಲಯ್ಯಂ (ಎಕ. IV (R), ಎಳಂದೂ, ೦೯೬-೨; 1000). [ಮಲೆ$_?$ + ಅಯ್ಯ$_{61}$]

**ಮಲರ್$_1$** 'ಮರಲ್$_1$' ನೋ.

**ಮಲರ್$_2$**, ಮರಲ್$_2$, ಮಲರು$_1$ (ಕ್ರಿ). ೧. ಹೂವು ಅರಳು. — ವಿಕಾಸವಾಗು : ಫುಲ್ಲಶರಂಗಿಸುವೆಡೆಗಿವೆ ನಲ್ಲಂಬುಗಳೆನಿಸಿ ತುಱುಗಿ ಮಲರ್ದಲರ್ದಸೆವೀ ಮೊಲ್ಲೆಯುಮೊಲಿಸಿದ ನಲ್ಲರ ಲಲ್ಲೆಯುಮೊರಂತೆ ಮನಮುಮಂ ಸೋಲಿಸದೇ (ಆದಿಪು. ೦೨-೦೦೦); ತನ್ನಂ ತಾನಾಜಿದೊಯ್ಯನೆ ಕಣ್ಮಲರ್ಮಲರೆ ನೃಪನಂ ಭೋಂಕಲ್ ಮೇಲ್ವಾಯ್ದು ತಳ್ತಿರದಪ್ಪಿದಳ್ (ಕಾದಂಬ. ೬೯೬) ; ವದನವು ಮಲರ್ದ ಹೊಂದಾವರೆಯ (ಜಗನ. ೦೨-೩೬). **ಮರಲ್$_2$** : ೧. ಅದಿರ್ಮುತ್ತೆ ಮರಲ್ದರಲ್ದ ಮಲ್ಲಿಗೆ ನನೆಗರ್ಚಿ ಕಾಕಳಿಯೊಳಾಣತಿಗೆಯ್ವ ಮದಾಳಿ ಪೋ ಪು[ಗ]ಲ್ಪು[ಗ]ಲೆನುತಿರ್ಪ ಪಕ್ಕಿ ಮಾನವಮಂ ಕವರುತ್ತಿರೆ (ಕಂಕಥಾ. ೫-೩೫) ; ಎಳೆಯೊಳ್ಪಳೆದಡರ್ದು ದಿಶಾವಳಿಯಂ ದಾಂಗುಡಿ ಮರಲ್ದು ಪಲ್ಲವಿಸಿ (ಎಕ. VII, ಶಿಕಾ. ೦೫೦-೪೭ ; 1047). ೨. ಉಬ್ಬು ; ಉತ್ಸಾಹಗೊಳ್ಳು : ದಿವ್ಯಮುನಿಯುಂ ಮೃಗಮಾಗಿ ಮರಲ್ದು ಕೂಡೆ (ಕಂಕಥಾ. ೦-೨೦೦) ; ಮುಂಡಾಡುಗೆ ಮುದ್ದಿಸುಗೆ ಮರಲ್ದಪ್ಪುಗೆ ಕೆಯ್‌ಕೊಂಡೀ ಕಾವ್ಯಮಂ (ಗಿಂಕ.೦-೦೦). **ಮಲರು$_1$** : ೧. ಅಃ ಇಂತ ನಾನರಳಿದರೆ ಧನ್ಯನಲ್ತೆ ? ಬೆಳಕು ಮೂಡೆ ಮಲರಿ, ಮುಳುಗೆ ಮಾಗುಳಿ (ಅಶೋಕ. ೨೩-೦೩) ; ಇದ್ದಂತೆ ಇರುವಿಪ್ಪುದಪ್ಪುದಾಯಿತು ಮಲರಿ (ಕರುಶ್ರಾ. ೬-೦೨). [ದೇ.॥ ತಮಿ. ಮಲರ್ ; ಮಲ. ಮಲರು ; ಬ್ರಾಹೂಈ. ಮಲಿಂಗ್]

**ಮಲರ್$_3$**, ಮರಲ್$_3$, ಮಲರು$_2$ (ನಾ). ಹೂವು ; ಪುಷ್ಪ : "ಮಲರೆಂದು ಮೇಣರಲೆಂದು ಪುಷ್ಪಕ್ಕೆ ನಾಮಮಕ್ಕುಂ" (ಕದ್ವಿಕೈ. ೨೦) ; ಗಲಪುವ ಗಿಳಿ ಬಗ್ಗಿಪ ಪಿಕ ಮಲರೊಳ್ ಮೊರೆವಳಿ . . . ಸುಟಿವ ಹಂಸೆಯುಮಳುಂಬಮೆನೆ ರಯ್ಯಮೆಂತುಮಾರಯ್ಯೆ ಬನಂ (ನೇಮಿಪು. ೬-೩೨) ; ಪಿಕನಿನಾದೆಯರೊಲ್ದು ಸುರಗಿಯ ಮಲರ್ಗಳಂ . . . ತಿಱಿವರ್ (ಉದ್ಭಟ. ೯-೫೩). **ಮರಲ್$_3$** : "ಅಲರ್, ಅರಲ್, ಮರಲ್, ಮಲರ್ — ಈ ೪ ಪುಷ್ಪಂ" (ಕಶಾ. ೫೪-೦೬೬) ; ಪೊಂಬಟ್ಟೆಯಂ ತವಮುಡರೇ ಮೆಲ್ದೊಂಗಲ್ಮರಲಿ ತುಱುಂಬರ್ . . . ದೇವಿಯರ್ (ಪಳಿ. ೩-೩೯) ; ಕಣ್ಮರಲ್ ಕೆಂಪಾದುವೇಕೆ (ರಾಮಾಶ್ವ. ೨-೨) ; ಮರಲಂ ನೋಯಿಸದಿನಿಸುಂ ಮರಂದಮಂ ಪೀರ್ವ ಮಧುಕರಂಬೋಲ್ (ಶಿಕಾಮಂ. I, ೦೬೩). **ಮಲರು$_2$** : ಹೂ ಹೋಗಿ ಮಿಡಿಯಾಗಿ ಹಣ್ಣು ದೊರೆತಾಗ ಮರಕ್ಕೆ ಮಲರು ಬಂದುದು ಸಾರ್ಥಕ (ದಕ್ಷಿಪ. ೨೯) ; ಮಲರು ಅರಳಿದ ಒಂದೆರಡು

ಗಂಟೆಗಳಲ್ಲಿ ದಳವಲಯ ಉದುರಿ ಹೋಗುತ್ತದೆ (ಹಸುಹೂ. ೧೬೦).
[<ಮಲರ್$_2$. / ತಮಿ. ಮಲ. ಮಲರ್]

**ಮಲರ್$_4$** 'ಮಣಲ್' ನೋ.

**ಮಲರಂಬು** (ನಾ). ಹೂವಿನ ಬಾಣ ; ಪುಷ್ಪಶರ : ಈ ಮಾಟ್ಕೆಯಿನಾ ದೆಚ್ಚ ಮಲರಂಬುಗಳ್ ಗೋಱುಗಳ್ಗೆ ತೆತ್ತಿಸಿದ ಕಲ್ಲಂಬುಗಳಪ್ಪುದುಂ (ರಾಮಾಶ್ವ. ೩೯-೩). [ಮಲರ್$_3$ + ಅಂಬು$_2$]

**ಮಲರಗ** (ನಾ). ಒಂದು ಬಗೆಯ ಸಸ್ಯ : ಮಲರಗ, ನಗತ್ತೆ (ವೈ.ಶಿ. ೪೦-೬೯೮). [ ? ]

**ಮಲರಹಿತ**, ಮಳರಹಿತ (ಗು). ೧. ಕೊಳೆಯಿಲ್ಲದ ; ನಿರ್ಮಲವಾದ. ೨. ದೋಷವಿಲ್ಲದ ; ನಿಷ್ಕಳಂಕವಾದ. (ನಾ). ೩. ಪಾಪರಹಿತನಾದವನು ; ನಿಷ್ಕಳಂಕ ವ್ಯಕ್ತಿ : ಪೆಱತೊಂದೆಡೆಯೊಳ್ ಮಲರಹಿತರ್ ಬಂದು ಧರಾಲಲನಾಧೀಶಂಗೆ ವಿನತಮಸ್ತಕರಾದರ್ (ಆದಿಪು. ೦೩-೦೦); ಮಲರಹಿತನನೂನದಯಾನಿಲಯಂ . . . ಶಿವಭೂತಿಯೆಂಬ ಪಾರ್ವಂ ಬರುತಂ (ಶಂತಕಂ. ೦೦೬-೨೦). **ಮಳರಹಿತ :** ೨. ಮಳರಹಿತ ಪಂಚಗುರುಗಳ ವಿಳಸಿತಮೆನಿಸಿರ್ಪ ಪಂಚಪದಸಂಚಯನಿರ್ಮಳಿನಮಣಿ ದೀಪಕಳಿಕಾವಳಿ ಬೆಳಗುತಿರ್ಕೆ ಮನ್ಮನೋಮಂದಿರಮಂ (ಶಾಂತೀಶ್ವ. ೦-೬). ೩. ಮಳರಹಿತನೊರ್ವ ವಿಳಸನ್ಮಳನೊರ್ವ ಪೆಱಂ ಸದಾಚ್ಛನ್ನೈ ನೀಂ ಬೇಗಂ ತಿಳಿವುದುಮಾ ಕದಡುವುದುಂ ಕುಳುಂಪೆಯೊಳ್ ನೆಗೞ್ಗುಮುದಧಿಯೊಳ್ ನೆಗೞ್ವುದೇ (ಶಾಂತಿಪು. ೦೦-೯೩). ೪. ದೋಷರಹಿತವಾದುದು; ನಿರ್ಮಲವಾದುದು : ಮಳರಹಿತಮಪ್ಪ ತಪಮುಂ ತಳೆದಪವರ್ಗಕ್ಕೆ ಸಲ್ವ ಮಾನವಗತಿಯುಂ ತಳೆವೊಡೆ ದಿವಿಜಾಯುಷ್ಯಂ ಗಟ್ಟಿಯಿಪ ತೆಱನಾವುದು (ಶಂರಾಪಾ. ೦೬-೪೩). [ಸಂ.]

**ಮಲರಿಸು** (ಕ್ರಿ). (ಹೂವು) ಅರಳುವಂತೆ ಮಾಡು : ವಿಕಸಿಸುವಂತೆ ಮಾಡು : ಭಕ್ತಜೀವನಲತೆಯಂ ಒಲವಿಂ ಮಧುವೊಲ್ ಕೊನರಿಸಿ ಮಲರಿಪುದೀ ನಖವಿರಾಜಿತಾರುಣಹಸ್ತಂ (ವಸ್ತವಂ. ೨೨-೯೦).
[ ಮಲರ್$_3$ + — ಇಸು$_3$ ]

**ಮಲರು$_1$** 'ಮಲರ್$_2$' ನೋ.

**ಮಲರು$_2$** 'ಮಲರ್$_3$' ನೋ.

**ಮಲರೋಗ**, ಮಲನಾಗರು, ಮಲ್ಲಾಗರು, ಮಲ್ಲೋಗರ, ಮೊಲನಾಗರ, ಮೊಲನಾಗರು, ಮೊಲೆನಾಗ, ಮೊಲೆನಾಗರ, ಮೊಲೆನಾಗರು, ಮೊಲ್ಲಾಗರ (ನಾ). ೧. ಸೆಳವು ಬಂದು, ಬಾಯಲ್ಲಿ ನೊರೆಯು ಉಂಟಾಗಿ, ಪ್ರಜ್ಞೆತಪ್ಪಿ ಬೀಳುವ, ನರಗಳಿಗೆ ಸಂಬಂಧಿಸಿದ ಒಂದು ಬಗೆಯ ಕಾಯಿಲೆ ; ಅಪಸ್ಮಾರ : ಶೀತೋಷ್ಣ ಮಲರೋಗ ಭೀತಿ (ಶಿವಾಶ್ವ. ೩೪-೪) ; ಲಾಂಗಮನ್ನನಿನ್ನೂ ಸತ್ತಿರುವದಿಲ್ಲವೆಂದೂ ಇವನಿಗೆ ಮಲರೋಗ ಬರುತ್ತಿರುವದೆಂದೂ ತರ್ಕಿಸಿದನು (ಅಂಬಿಕೆ. ೬೦) ; ಅವರಿಗೆ ಆಗಾಗ್ಗೆ ಹೀಂಗೆ ಆಗ್ತದೆ ! ಮಲರೋಗ ! (ಮಲೆಮ. ೨೪). **ಮಲನಾಗರು :** ೧. ಲಲನೆಯರೊಲುಮೆ ತನಗೆಂಬ ಮನುಜಂಗೆ ಮಲನಾಗರೆಂದ (ಸರ್ವಜ್ಞ. ೦೬೬೦). **ಮಲ್ಲಾಗರು :** ೧. ಇವನಿಗೆ ಮಲ್ಲಾಗರು ಬರ (ಪಪೂರು. ೨೩೬). **ಮಲ್ಲೋಗರ :** ೧. ಕರೆದು ಹೆಣ್ಣ ಕೊಟ್ಟರೆ ಮಲ್ಲೋಗರ ಬಂತು ಎಂಬ ಗಾದೆಗೆ ಸರಿಯಾಯಿತು (ಕರೂಟಿ. ೪೦) ; ಕರೆದು ಹೆಣ್ಣು ಕೊಟ್ಟರೆ ಮಲ್ಲೋಗರ ಬಂತಂತೆ (ಗಾದೆ). **ಮೊಲನಾಗರ :** ೧. ಹರಿಣಾಂಕಾರ್ಕಜರಿರ್ದೊಡೊಂದೆ ಗೃಹದೊಳ್ ನೋೞ್ಪಂದು ಧಾತ್ರೀಸುತಂ ದೊರೆಕೊಳ್ಗುಂ ಮೊಲನಾಗರ (ಜಾತಕ. ೨೦-೨೩) . **ಮೊಲನಾಗರು:** ೧. ಮಾಯಾಮೋಹವೆಂಬ ಮೊಲ(ಮೊಲೆ)ನಾಗರು ಹಿಡಿದು ಬಿಡದು ನೋಡಾ (ಸಿದ್ಧೇವ. ೦೬೬-೬೩) ; ಚೋಳಭೂವರನಣುಗಿಯುಂ ಪಿಡಿದ ಮೊಲನಾಗರಂ ಬಿಡಿಸಿ (ಬಾಸೋಪು. ೯-೦೦೬). **ಮೊಲೆನಾಗ :** ೧. ಇಷ್ಟೆಯ ಕೆಚ್ಚಂ ನಸ್ಯಂಗೆಯ್ಕೆ ವದನರೋಗಂ ಮೊಲೆನಾಗಂ ನಾಗವಿಷಂ ಕಿಡುಗುಂ (ಲೋಕೋಪ. ೯-೨೬). ೨. ಒಂದು ಬಗೆಯ ಗ್ರಹ; ಅಪಸ್ಮಾರಗ್ರಹ : ಲೋಗರ ಬಗೆಗೋದಿನೊಳನುರಾಗಮನಾಗಿಸದೊಡೋದಿದಂಗೋದಿದೊಡೋದಾಗದು ಪೇೞ್ಕುಮೆ ಮೊಲೆನಾಗಂ ಕಿವಿಗಿವುಡುಮೀೞ್ವಿನಂ ಗಟಿಪದುದೇ (ಲೀಲಾವ. ೦-೨೦) ; ಮೆಟ್ಟಿದ ಮೊಲೆನಾಗಂ [ಪಾಠಾಂ. ನಾಗಾಸುರಂ, ಮೊಲನಾಗಂ] ಪಾದರಕ್ಷೆಗಳಾಗೆ (ಸಂಬರ. ೬-೨೦); ಕಲೆವಂತನಲ್ಲದ ವಿಟನಿಂದ ಕಾಡುವ ಮೊಲೆನಾಗ ಲೇಸು (ಭರತ. ೪೬-೩೩). **ಮೊಲೆನಾಗರ:** ೧. ಬೇವಿನ ಹರಳು, ಇಂಗು . . . ಅರೆದು ಗುಳಿಗೆಯಂ ಮಾಡಿ ಭೂನಾಗರ ಹಣ್ಣಿನ ರಸದಲ್ಲಿ ನಸ್ಯಮಂ ಮಾಡೆ ಹದಿನಾಲ್ಕುತೆಱದ ಮೊಲೆನಾಗರ ಮಾಣ್ಗುಂ (ಪಿಪ್ಪಶ. ೦೬೬). **ಮೊಲೆನಾಗರು :** ೧. ಆ ನಾಡ ಚೋಳನಣುಗಿಯ ಪಿಡಿದ ಹಿರಿಯ ಮೊಲೆನಾಗರಂ ಬಿಡಿಸಿ (ಪೀಶ್ವಶ. ೪-೯-೦೦). **ಮೊಲ್ಲಾಗರ :** ೧. ಅರೆತಲೆಬೇನೆ . . . ಮೊಲ್ಲಾಗರದ (ಎಪಿಲೆಪ್ಸಿ) ರೋಗಿಗಳಲ್ಲೂ ಕಾಣಿಸಿಕೊಳ್ಳಬಹುದು (ಕವಕೋ. I.೪೯೬). p ೧೦ನೆಯ ಶತಮಾನದ 'ಜಾತಕತಿಲಕಂ' ಎಂಬ ಗ್ರಂಥದಲ್ಲಿ 'ಅಪಸ್ಮಾರ' ಎಂಬ ಅರ್ಥದಲ್ಲಿ 'ಮೊಲನಾಗರ' ಎಂಬ ಶಬ್ದರೂಪ ಪ್ರಯೋಗವಾಗಿದ್ದರೂ ರೋಗದ ಸಂಬಂಧವನ್ನು ಎತ್ತಿತೋರಿಸುವ ಉದ್ದೇಶದಿಂದ ಇಲ್ಲಿ 'ಮಲರೋಗ' ಎಂಬ ಶಬ್ದರೂಪವನ್ನು ಮುಖ್ಯೋಲ್ಲೇಖವನ್ನಾಗಿ ಪರಿಗಣಿಸಿದೆ.
[ಮಲ$_?$ + ರೋಗ]

**ಮಲರೋಗಿ** (ನಾ). ಮೂರ್ಛೆರೋಗ ಬರುವವನು ; ಅಪಸ್ಮಾರ ರೋಗಿ : ಮಾತುಮಾತಿಗೆ ಮೂರ್ಛೆಹೋಗುವ ಈ ಮಲರೋಗಿಯನ್ನೇಕೆ ನನ್ನ ಕೊರಳಿಗೆ ಕಟ್ಟುವಿರಿ (ಹುಚ್ಚಾಟ. ೬೨). [ಮಲರೋಗ + —ಇ$_3$]

**ಮಲರ್ಚು** 'ಮರಲ್ಚು' ನೋ.

**ಮಲರ್ವಿಲ್ಲು** (ನಾ). ಹೂವಿನ ಬಿಲ್ಲು ; ಪುಷ್ಪಚಾಪ : ಎಲೆ ಚೂತಾಂಕುರ ನಿನ್ನಂ ಮಲರ್ವಿಲ್ಲಂ ತಳೆದ ಕಾಮದೇವಂಗಿತ್ತಂ (ಶಾಕುಂತ. ೮೦-೦೩೪).
[ಮಲರ್$_3$ + ಬಿಲ್ಲು$_1$ (<ಬಿಲ್$_2$)]

**ಮಲವ** 'ಮಲೆಪ' ನೋ.

**ಮಲವದಿಕೆ** (ನಾ). ಹೇರಿನ ಮೇಲೆ ಹಾಕುವ ಒಂದು ಬಗೆಯ ತೆರಿಗೆ(?): ಬಿಟ್ಟ ಕೊಟ್ಟಣವನುಪಸುಂಕ ಮಲವದಿಕೆ ಸೊಲ್ಲಗೆ ಕವಣ ಕಡ್ಡಾಯದಂಕ ತಳವರಿಕೆ (ಸಿಂಗಿರಾ. ೨೨-೨೬). [<ಮಳವ$_1$ ? + ಪದಿಕೆ (<ಪೊದಕೆ$_2$)]

**ಮಲವಿಸರ್ಜನೆ** (ನಾ). ಶರೀರದ ಒಳಗಿರುವ ಹೇಸಿಗೆಯನ್ನು ದೇಹಾಂಗವೊಂದರ ಮೂಲಕ ಹೊರಹಾಕುವ ಕ್ರಿಯೆ : ಎಷ್ಟೋ ರಾತ್ರಿ ಮಲವಿಸರ್ಜನೆಗೆ ಅದೇ ಮರದಡಿ ಕುಳಿತಿದ್ದೇನೆ (ದೇವಹಂ. ೩೩).
[ಸಂ. ಮಲವಿಸರ್ಜನ]

**ಮಲವೇಗ** (ನಾ). ಅನೇಕಸಲ ಮಲವಿಸರ್ಜನೆ ಆಗುವ ರೋಗ ; ಭೇದಿ ; ಅತಿಸಾರ : ಕರಿಎಮ್ಮೆ ಹಾಲನ್ನು . . . ಸ್ವಲ್ಪ ಸೈಂಧವ ಲವಣವನ್ನು ಸೇರಿಸಿ ಮೂರುವೇಳೆ ಕೊಟ್ಟರೆ ಗ್ರಹಣೀ, ಮಲವೇಗಗಳು ಬಹಳವಾಗಿ ಹೋಗುವುದು (ಸಕವ್ಯ. ಶಂ. ೪೬೬). [ಸಂ.]

**ಮಲವೇಱು** (ಕ್ರಿ). ಕೊಳೆಯಾಗು : ಮೈ ಮಲವೇಱಿತ್ತೆಂದು ಮಿಾಯಲಾಗದು (ರತ್ನಾಕಮ್ಮ. ೦-೦೩೪). [ಮಲ$_3$ + ಏಱು$_1$ (< ಏಱ್$_1$)]

**ಮಲವೊರಲ್** (ನಾ). (?) : ನೆಲವಿನೊಳ್ ಮೊಸರ್ಗಂದಲಂಕಂಡು . . . ಮಣೆಯಂ ಮಲವೊರಲಂ ಮಕ್ಕಳಂ ಕುಳ್ಳಿರಿಸಿ ಪಗಲೇಱೆ ನಿಂದು ಕಂದಲಂ ಕುಟುಂಕೆ (ಶಳವಂ. ೬೯-೦೦). [p ಇದು 'ಮರವೊರಲ್' ಎಂದಿರಬಹುದು]

**ಮಲಶುದ್ಧಿ** (ನಾ). = ಮಲವಿಸರ್ಜನೆ : ಬಸ್ತಿಯ ನಿತ್ಯಪ್ರಯೋಗದಿಂದ ವಿಲಕ್ಷಣ ಮಲಶುದ್ಧಿಯಾಗಿ ಅವಳ ಹುಚ್ಚು ಕಡಿಮೆಯಾಗಹತ್ತಿತು (ಬ್ರಿಹ್ಮಶ್ರೀ. ೦೪೬). [ಸಂ.]

**ಮಲಶೂಲೆ** (ನಾ). ಮಲಬದ್ಧತೆಯಿಂದ ಮಲವಿಸರ್ಜನೆಯಾಗುವಾಗ ಗುದದಲ್ಲಿ ಉಂಟಾಗುವ ನೋವು : ಹಿಂಗ್ವಾದಿಚೂರ್ಣ . . . ಕೊಳ್ಳೆ ಮಲಶೂಲೆ, ಗುಲ್ಮಶೂಲೆ, ಮಹೋದರ, ಮಲಬಂಧ . . . ಎಲ್ಲಾ ಮಾಣ್ಗುಂ (ವಿಶ್ವ.ಬಿ. ೫೮). [ಸಂ. ಮಲಶೂಲ]

**ಮಲಶೋಧನೆ** (ನಾ). ೧. = ಮಲವಿಸರ್ಜನೆ. ೨. ಭೇದಿಗೆ ತೆಗೆದು ಕೊಳ್ಳುವ ಔಷಧ ; ವಿರೇಚನ : ತಲೆಸಿಡಿತಕ್ಕೆ ಮಲಶೋಧನೆ ಕೊಂಡ ಹಾಗೆ (ಗಾದೆ). [ಸಂ. ಮಲಶೋಧನ]

**ಮಲಸಂಬಂಧ** (ನಾ). ಎರಡನೆಯ ಸಂಬಂಧ : ಮಲಸಂಬಂಧದ ಹುಡುಗಿಯನ್ನೂ ಕೊಟ್ಟಿರಬೇಕು. ಅವಳಿಗೆ ತಂದೆ ತಾಯಿ ಯಾರೂ ಇಲ್ಲವೇ ? (ಕೀಶ್ರಕ್ಥ. ೨೪). [ಮಲ$_1$ + ಸಂಬಂಧ]

**ಮಲಸೀಮೆ** (ನಾ). ಬೆಟ್ಟಗುಡ್ಡಗಳ ಪ್ರದೇಶ ; ಮಲೆನಾಡು : ಮಲ ಸೀಮೆ ಹೆಣ್ಣಿಗೆ ಮಂಡೇ ಸೀಗೇಕಾಯಿ (ನಾಶದ. ೦೫); ಮಲಸೀಮೆಯಿಂದ ಒಂದು ಕಂತೆ ಬೆತ್ತವನ್ನೂ ತರುತ್ತಿದ್ದರು(ಕಳಹು. ೫೪). 'ಬಯಲುಸೀಮೆ' ಪರಾ. [<ಮಲೆ$_3$ + ಸೀಮೆ]

**ಮಲಸುತ್ತು** 'ಮರಸುತ್ತು' ನೋ.

**ಮಲಸೂತ್ರ** 'ಮರಸುತ್ತು' ನೋ.

**ಮಲಹ** 'ಮಲೆಪ' ನೋ.

**ಮಲಹರ** (ನಾ). ಪಾಪವನ್ನು ಪರಿಹರಿಸುವವನು ; ಶಿವ : ಮಲಹ ರಾತ್ಮಕಮಂತ್ರಮಂ ನೆಱೆ ಕಲಿತು ಬಹುಮಂತ್ರಂಗಳಂ ತಾಂ ಕಲಿವುದುತ್ಕಟ ಪಾಪವಲ್ತೆ ಸಹಜಭಕ್ತರ್ಗೆ (ಬಸವು. ೩-೪೭) ; ತಿಳಿವು ನೀನೆನಗೆ . . . ಮಲ ಹರನಾ ಶರಣರಾ ಕಥೆಯುಂ (ಶ್ರೀಶರಾ. ೦-೫೦). [ಸಂ.]

**ಮಲಹರಾದ್ರಿ** (ನಾ). ಶಿವನ ವಾಸಸ್ಥಾನ ; ಕೈಲಾಸಪರ್ವತ : ದಶ ಮುಖನಲುಗಿಸಿದ ಮಲಹರಾದ್ರಿಯು ಗುಂಪೆನಿತು ಘನ (ಬಸವು. ೦೯-೨೭). [ಸಂ.]

**ಮಲಹರಿ$_1$** (ನಾ). [ಸಂಗೀತ] ಒಂದು ರಾಗದ ಹೆಸರು : ನಿರ್ಮಲ ನಿತ್ಯನನಾದಿಜಿನನ ಮಲಹರಿಯಿಂದ ಪಾಡಿದರು ಕೇಳ್ವರ ಕರ್ಮಮಲ ಹಱಿ ವಂತೆ ಗಾಯಕರು (ಧರ್ತ. ೦-೭೮); ಮಲಹರಿ–೧೫ನೇ ಮೇಳಕರ್ತ ಮಾಯಾ ಮಾಳವಗೌಳದಲ್ಲಿ ಜನ್ಯ. ಉಪಾಂಗರಾಗ. ಹೆಸರಿನಲ್ಲೇ ಸೂಚಿತವಾಗು ವಂತೆ ಸಕಲಪಾಪಪರಿಹಾರಕರಾಗ (ಸಂಗೀಶಂ. ೦೩೯). [ಸಂ. ಮಲಹರೀ]

**ಮಲಹರಿ$_2$** 'ಮಲಾರ$_3$' ನೋ.

**ಮಲಹಾರಿ** (ನಾ). =ಮಲಹರಿ$_1$ : ಶಂಕರಾಭರಣದೊಳ್ ಸೌರಾಷ್ಟ್ರ ಭೈರವಿ ಯಾಗಿರ್ಕು . . . ಕಾಳಿಂದಿಯೊಳ್ ಮಲಹಾರಿ ಕಲ್ಯಾಣಿಯಾದಪುದು (ಹಬ್ಬಾರ. ೨-೯೦ ವ). [< ಸಂ. ಮಲಹರೀ]

**ಮಲಾ** (ನಾ). ಒಂದು ಅಳತೆ (?) : ಗಾಣ ೧ ಪಡಿಯದೆ ೧ ಹಟ್ಟಾ ೧ ಮಲಾ ೧ ಗೃಹ ಹಸ್ತ ೨೪ ಜಿನಾಲೇ ಭೂಮಿ ೪೦೦ (ಇಕ. XIV, ೦೪೦–೨೮; 12ನೆಯ ಶತ). [ ? ]

**ಮಲಾಪಹ** (ನಾ). ದೋಷನಿವಾರಣೆ ಮಾಡುವವನು : ಪ್ರೋದ್ಯತ್ ತಮೋಹರ ಚಿತ್ಪ್ರಭಾಂಗನು ಕಲಿಮಲಾಪಹನು (ಬಸವು. ೩-೭). [ಸಂ.]

**ಮಲಾಮತ್** 'ಮಲಾಮತ್ತು' ನೋ.

**ಮಲಾಮತಿ** 'ಮಲಾಮತ್ತು' ನೋ.

**ಮಲಾಮತು** 'ಮಲಾಮತ್ತು' ನೋ.

**ಮಲಾಮತ್ತು**, ಮಲಾಮತ್, ಮಲಾಮತಿ, ಮಲಾಮತು (ನಾ). ೧. ತೊಂದರೆ ; ವಿಪತ್ತು : ಈ ಮಲಾಮತ್ತು ಬಂದು ಇದ್ದಂಥಾದ್ದು ಮಹಾದೇವನ ಕಟಾಕ್ಷದಿಂದ ಪರಿಹಾರವಾಯಿತು (ರಾಕೇಂದ್ರ. ೫೯) ; ಒಳ್ಳೆ ಮಲಾಮತ್ತಾಯ್ತಲ್ಲಪ್ಪಾ ! ಇದೇನು ಬಂತು ಗಿರಾಚಾರ ನನಗೆ (ಮುಲಮು. ೦೨೭). ೨. ಸೊಕ್ಕು ; ಗರ್ವ : ಅವನ ಮಲಾಮತ್ತು ಸೀಮೆ ಗಾಗಿ ಮಿಗುತ್ತೆ (ರೂಢಿ). **ಮಲಾಮತ್** : ೧. ಮಾಡುವುದು ಕುಶಾಮತ್, ಆಗುವುದು ಹಜಾಮತ್, ಇದೆಲ್ಲಿಯ ಮಲಾಮತ್ ? (ಗಾದೆ). **ಮಲಾಮತಿ** : ೧. ಇದೆಂತಹ ಮಲಾಮತಿ ಬಂತಪ್ಪ, ಇವತ್ತು ಯಾರ ಮೋರೆ ನೋಡಿ ಎದ್ದಿದ್ದೆನೋ (ಮೂರುರಾ. ೦೭೭) ; ಈಗಲೇ ಮೈತುಂಬ ಸಾಲ ಮಾಡಿಕೊಂಡು ಮಲಾಮತಿ ಮಾಡಿ ಕೊಂಡಿದ್ದಾನಂತೆ (ಮುಗಿಯು. ೨೮೯). ೩. ಸೋಜಿಗ ; ಆಶ್ಚರ್ಯ : ದೀವಿಗೆಯ ಕೆಳಗೆ ಕತ್ತಲೆಯೆಂಬ ಗಾದೆಯಂತೆ ಏನೋ ಮಲಾಮತಿ (ಸೋಜಿಗ) ಆಗಿರುತ್ತದೆ (ಬೀರಬ. ೪೨). **ಮಲಾಮತು** : ೧. ಹೋಯಿತು ಒಂದು ಮಲಾಮತು, ಇದ್ದವರು ಸಲಾಮತು (ವಿಧಿವ್ಯ. ೦೫೮). [← ಅರ. ಹಿಂ. ಮಲಾಮತ್, ಮಲಾಮತೀ]

**ಮಲಾಮೆ** (ನಾ). ೧. ಬೆಲೆ ಇಳಿದು ಹೋಗುವುದು ; ಅಗ್ಗ : ಅದು ಕೊಳ್ಳುವವರಿಲ್ಲದೆ ಮಲಾಮೆಯಾಗಿತ್ತು (ಸೂಮರಾ. ೦೨೫). ೨. ಜಂಭ : ಅಹಂಕಾರ : ಈಗೀಗ ಅವನಿಗೆ ತುಂಬಾ ಮಲಾಮೆ (ರೂಢಿ). [← ಪಾರ. ಮಲಾಮ್]

**ಮಲಾರ$_1$**, ಮಲ್ಲಾರ (ನಾ). ಬಳೆಗಳನ್ನು ಒಟ್ಟಾಗಿ ಕಟ್ಟಿದ ಗೊಂಚಲು; ಬಳೆಸರ : ಬಳೆಯ ಮಲಾರಕ್ಕೆ ಶರಣುಮಾಡಿ, ಹೆಣ್ಣು . . . ಬಳೆ ತೊಡಿಸಿಕೊಳ್ಳುತ್ತಾಳೆ (ಜನ್ನುರು. ೭೭). **ಮಲ್ಲಾರ** : ಮದುವೆಯ ಹೆಣ್ಣು ಮೊದಲು ಬಳೆಯ ಮಲ್ಲಾರವನ್ನು ಪೂಜಿಸಿದ ನಂತರ ಐದುಜನ ಮುತ್ತೈದೆಯರಿಗೆ ಬಳೆ ತೊಡಿಸುತ್ತಾರೆ (ರೂಢಿ).

ಮಲ್ಲಾರಪೂಜೆ = ಮದುವೆ, ಗೌರಿಪೂಜೆ ಮೊದಲಾದ ಮಂಗಳ ಪ್ರಸಂಗಗಳಲ್ಲಿ ಬಳೆಗಾರನ ಬಳೆಯ ಗೊಂಚಲನ್ನು ಮುತ್ತೈದೆಯರು ಪೂಜಿಸಿ ಹೊಸಬಳೆಗಳನ್ನು ತೊಟ್ಟುಕೊಳ್ಳುವ ಒಂದು ಸಾಂಪ್ರ ದಾಯಿಕ ವಿಧಿ : ಬೇಗ ಬೇಗ ಮಲ್ಲಾರಪೂಜೆಯನ್ನು ಮಾಡಿಸಿ (ರೂಢಿ).

[ದೇ.॥ ತಮಿ. ಮಲಾರ; ತೆಲು. ಮಲಾರ, ಮಲ್ಲಾರ./ಸಂ.ಮಾಲಾಹಾರ ?]

**ಮಲಾರ$_2$**, ಮರಾಳ$_2$, ಮಳಾರ (ನಾ). ೧. ಕುದುರೆ ಮೊದಲಾದ ಪ್ರಾಣಿಗಳ ಜೀನನ್ನು ಬಿಗಿಗೊಳಿಸಲು ಅವುಗಳ ಒಡಲಿಗೆ ಬಿಗಿಯುವ ತೊಗಲಿನ ಅಥವಾ ಬಟ್ಟೆಯ ಪಟ್ಟಿ ; ತಂಗುಪಟ್ಟಿ : (*). **ಮರಾಳ$_2$** : ೧. "ಮರಾಳಂ (ಮಳಾರಂ) = ಕುದುರೆಯ ಪಟ್ಟಿ" (ಕಮದ. ಶಂ. ೨). **ಮಳಾರ**: ೧. "ಮಳಾರಮೆನೆ ಕುದುರೆಗಳ ವ[ಪ]ಟ್ಟೆಯಕ್ಕುಂ" (ಕಬ್ಬಕ್ಕೆ. ೭೭). ೨. ಕುದುರೆಯ ಕಡಿವಾಣ : "ಮಳಾರಮೆನಲ್ಕೆ ಕುದುರೆಕಡಿವಾಣ" (ಕಶರ. ೯೫). [ ? ]

**ಮಲಾರ$_3$**, ಮಲಹರಿ$_2$ (ನಾ). ಒಂದು ಬಗೆಯ ವಾದ್ಯ : ಮಲಾರ ಸಾರಿ ಹೊಡೆವ ಜಯಭೇರಿ . . . ಭೋರಿಭೋರಿಡುತ ಮೊರೆದವು (ಸೌಂದರಾ. ೭-೯). **ಮಲಹರಿ$_2$** :ವೀರರ ಮೂಗಿಗೆ ಕವಡೆಯ ನೀರ್ತರಿಸಿ ಡವುಡೆ ಜೀಗಟೆ ಮಲಹರಿಯ ಜಾಡಿಸಿಕೊಂಬ ಪ್ರವೃಷೆಯರಿರ್ದರಿಕ್ಕೆಲದಿ (ಪೋಚಹಕ. ೨೦–೩೯). [ ? ]

**ಮಲಿನ**, ಮಳಿನ (ಗು). ೧. ಕೊಳೆಯಾದ ; ಮಲಿನವಾದ ; ಕೊಳ ಕಾದ : 'ಮಲಿನಾಂಬರ' ಪರಾ. ೨. ದೋಷದಿಂದ ಕೂಡಿದ ; ಕಳಂಕಿತವಾದ. ೩. ಕಪ್ಪಗಿರುವ ; ಮಸುಕಾದ. ೪. ಮಂಕಾದ ; ಮ್ಲಾನವಾದ : ಅಶ್ರುಮಲಿನಾಸ್ಯನಾತನುಂ ನೆಲದಿಟ್ಟಿ ಯಾಗಿ . . . ಎನಲ್ (ಶ್ರೀರಾಮಾ. ೩೦೪–೩೪೫). (ನಾ). ೫. ಕೊಳೆ ; ಕಲ್ಮಶ ; ಹೊಲಸು : ಮಲವೇನೊ, ಹೊಲೆಯೇನೊ ! ಮಲಿನದಲಿ ನೆನೆ ಶುಚಿಯ (ಮಂಕುಕ. ೯೩೦). ೬. ದೋಷ ; ಪಾಪ : ಸೃಷ್ಟಿಯೊಳಾವ ಬೆಟ್ಟಗಳೆನ್ನ ತೆಱನೊಳು ಬಿಟ್ಟು ಮನದ ಮಲಿನವನು[ಪಾಕಾಂ. ತೆಯ] ಇಷ್ಟದೇವಗೆ ಮನೆಯಾಯ್ತೆಂದು ನಿರ್ಮಲವಟ್ಟಿಹುದಾ ರಜತಾದ್ರಿ (ಶ್ರೀಕೃಸಾಂ. ೭–೭೨) ; ಮಲಿನವಿಲ್ಲದ ಮನದಿಂದಾ ನಿಷ್ಕಲನ

ನಿರ್ಮಲನಿತ್ಯನನಾದಿಜಿನನ ಮಲಹರಿಯಿಂದ ಪಾಡಿದರು (ಭರತ. ೧-೭೮). ೭. ಕೊಳಕುಬಟ್ಟೆ : ವರನ ಬಳಿಗೈತರುತ ಮಲಿನವ ಧರಿಸಲಾಗದು (ಕೌಶಿರಾ. ೪೩-೧೩). ೮. ದೋಷಿ ; ಪಾಪಿ : ಮಲಿನರನೆ ಪೊರ್ದುವೈ ನಿರ್ಮಲರತ್ತಲ್ಪೊರ್ದಲೊಲ್ಲೆ (ಗದಾಯು. ೯-೧೦). **ಮಳಿನ :** ೨. ಆಗಳೆ ಮಳಿನಾತ್ಮಪದಾಭಾಗಮನಿರದಲಸದಲೆದು ಶಿಲೆಯೊಳ್ ಪೊಯ್ಯುದ್ಯೋಗದಿ ನರ್ಹದ್ದೀಕ್ಷೆಗೆ ಪೋಗದೆ ಮೆಯ್ದುಂದಂ (ಶಾಂತಿಪು. ೭-೯೭). ೯. ಕಪ್ಪು ಬಣ್ಣ ; ಕರಿದು : ಅಳಿಮಳಿನಂ ಶಶಿಕಳಂಕಮೇಂ ರಂಜಿಸಿತೋ (ರಾಜಶೇ. ೦೦-೩೭). [ಸಂ.]

**ಮಲಿನತೆ**, ಮಳಿನತೆ (ನಾ). ೧. ಕೊಳೆಯಾಗಿರುವಿಕೆ ; ಹೊಲಸಾಗಿರುವಿಕೆ : "ಮಲಿನತೆ ಜರಾಯುಗಳು ಮಾಸು" (ಶಬ್ದಮಂ. ೦೦೦). ೨. ಕಪ್ಪು ಛಾಯೆ ; ಕತ್ತಲು : ಬೆಳ್ಪಂ ಬೆಳಗುಮನಾಗಸಕ್ಕೆ ನಿಜಮಲಿನತೆಯುಮುಮಂ ಬಿಡಿಸಿ ಮತ್ತಸಂಗನುಮಂ ಬೇಱೆ ಜನಕ್ಕೆ ತೋಱಿದುದು ಬೆಳ್ದಿಂಗಳ್ (ಚಂದ್ರಪು. ೬-೯೨). **ಮಳಿನತೆ :** ೩. ಕಳಂಕ ; ದೋಷ : ನಿರ್ಮಲನಲ್ಲದೊರ್ವನಿಂದಂ ಮಳಿನತೆ ಪೊರ್ದುವುದೆ ವಿಮಳಸದ್ವರ್ಗಕ್ಕಂ (ಧರ್ಮಾಮೃ. ೬-೨೪೦) ; ಮಳಿನತೆಯುಂ ತಳೆಯಲ್ ನಿರ್ಮಳಮುನಿಯುಂ ಪೊರ್ದಿ ಸೇವೆಗೆಯ್ದುದು ಶಶಿಮಂಡಲಮೆನೆ ತಪಸಿಯ ಕೆಲದೊಳ್ ತೊಳಗುವ ಪಳುಕಿನ ಕಮಂಡಲುಂ ಕರಮೆಸೆಗುಂ (ತ್ರಿಷಷ್ಟಿ. ೦-೭೩). [ಸಂ. ಮಲಿನತಾ]

**ಮಲಿನತ್ವ**, ಮಳಿನತ್ವ (ನಾ). ೧. ದೋಷ ; ಕುಂದು ; ಕಳಂಕ : ಕ್ಷಯಿತ್ವ, ವಿಲಾಸಶೂನ್ಯತ್ವ, ಮಲಿನತ್ವ ಮುಂತಾದ ಅವಗುಣಗಳಿಂದ ನಿಕೃಷ್ಟನೇ ಸರಿಯೆಂಬ . . . ಅರ್ಥ ಹೊರಡುತ್ತದೆ (ಧ್ವನ್ಯಾಲೋ. ೦೦೯). **ಮಳಿನತ್ವ :** ೨. ಕಪ್ಪುಬಣ್ಣ. ೧, ೨ : ಪಟು ವಸ್ತ್ರಾವಳಿಯೊಳ್ ಪರಾಭವಮುಮಾ ಸಂವತ್ಸರವ್ರಾತದೊಳ್ ಮಳಿನತ್ವಂ ಪರಪುಷ್ಟಸಂತತಿಗಳೊಳ್ . . , ವರ್ತಿಪುವಂತವಿಲ್ಲ ನರರೊಳ್ ತದ್ದೇಶದೊಳ್ (ಶಬ್ದಾನು. ೦-೩೭). [ಸಂ.]

**ಮಲಿನದೃಷ್ಟಿ** (ನಾ). [ನಾಟ್ಯ] ನೃತ್ಯಮಾಡುವಾಗ ತೋರುವ ಒಂದು ಬಗೆಯ ನೋಟ ; ₱ "ದೃಷ್ಟಿಸಿ ನೋಡಿ ರೆಪ್ಪೆಗಳನ್ನು ಅರ್ಧ ಮುಚ್ಚಿ ಪುನಃ ರೆಪ್ಪೆಯ ರೋಮಗಳನ್ನು ಅದಿರಿಸುತ್ತ ಕಡೆಗಣ್ಣನ್ನು ಕೆಂಪಗೆ (ಮಬ್ಬು) ಮಾಡಿ ನೋಡುವುದು" (ಲಾಸ್ಯರಂ. ೨೭೯ ಗದ್ಯಾನುವಾದ) : ಮಿಗೆ ನೋಡಿ ಮರಳ್ದು . . . ಕಟಾಕ್ಷರಾಗದಿನೊಗುಮಿಗೆ ನೋಡಲ್ಕೆ ಮಲಿನದೃಷ್ಟಿಯೆನಿಕ್ಕುಂ (ಲಾಸ್ಯರಂ. ೩-೨೭). [ಸಂ.]

**ಮಲಿನಾಂಬರ** (ನಾ). ಮಾಸಿದ ವಸ್ತ್ರ ; ಕೊಳಕುಬಟ್ಟೆ : ಮಲಿನಾಂಬರ ವೇಷ್ಟಿತೆ . . . ತಳೆವಳ್ ಘಟಮಂ (ಜಾತಕ. ೦೯-೩೨) ; ಮಲಿನಾಂಬರ ವನೊಗೆವರಾರ್ (ಹಕಶಾ. ೦-೨೨) ; ಧರಿಸಿದ ಮಲಿನಾಂಬರದಿಂ ಕೊರಗಿದ ಮೊಗದಿಂದೆ . . . ಎನ್ನಯ ಚಿರವಿರಹವ್ರತಮಂ ಸುಶೀಲೆ ತಾಂ ತಳೆದಿರ್ಪಳ್ (ಶಾಕುಂತ. ೦೦೬-೧೮೪). [ಸಂ.]

**ಮಲಿನಿ** (ನಾ). ಮುಟ್ಟಾದ ಹೆಂಗಸು ; ರಜಸ್ವಲೆ : "ಮಲಿನೀ, ಪುಷ್ಪವತೀ, ಋತುಮತೀ . . . ಹೊಲೆಯಾದವಳ ಹೆಸರುಗಳು. ಮುಟ್ಟಾದವಳು" (ಸಿದ್ಧಾಂತ. ೦೭೨). [ಸಂ. ಮಲಿನೀ]

**ಮಲಿಮ್ಲುಚ**, ಮಳಿಮ್ಲುಚ₁ (ನಾ). ೧. ಕಳ್ಳ ; ತಸ್ಕರ : "ಚೋರಃ . . . ಮಲಿಮ್ಲುಚಃ — ೧೦ ಕಳ್ಳನ ಹೆಸರುಗಳು" (ಸಿದ್ಧಾಂತ. ೩೦೪). ೨. ಪಂಚಮಹಾಯಜ್ಞಗಳನ್ನು ಮಾಡದ ಬ್ರಾಹ್ಮಣ. ೩. ರಾಕ್ಷಸ. ೪. ಸೊಳ್ಳೆ. ೫. ಗಾಳಿ. ೬. ಅಧಿಕಮಾಸ ; ಮಲಮಾಸ. **ಮಳಿಮ್ಲುಚ₁ :** ೧. "ಏಕಾಗಾರಿಕಃ . . . ಚೋರಃ, ಮಳಿಮ್ಲುಚಃ . . . ಸ್ತೇನಃ — ಈ ೧೦ ಕಳ್ಳಂ" (ಹಲಾಯು. ೩೭-೦೮೩). [ಸಂ.]

**ಮಲೀಮಸ**, ಮಳೀಮಸ (ಗು). ೧. ಕೊಳಕಾದ ; ಹೊಲಸಾದ. ೨. ಕಪ್ಪಾದ. ೩. ಕಳಂಕದಿಂದ ಕೂಡಿದ ; ದೋಷಪೂರ್ಣವಾದ. ೪. ಕ್ಷುದ್ರವಾದ ; ನೀಚತನದ : ವದನಸುಧಾಂಶುಬಿಂಬದ ಕಳಂಕದ ಬಿತ್ತುಗಳಂತೆ . . . ನೀಳ್ದವಾ ಸುದತಿಸಮಗ್ರನಗ್ರಜನಿರಲ್ ಪಟ್ಟಗಂಜದೆ ಪಾಪಭೀರುವಾಗದೆ ಭರತಂಗೆ ರಾಜ್ಯಭರಮಂ ಕುಡವೇಳ್ದ ಮಲೀ[ಮಾಸ. ೪೯] ಮಸೋಕ್ತಿಗಳ್ (ಪಂಪಭಾ. ೬-೯೭). (ನಾ). ೫. ಕೊಳೆ ; ಹೊಲಸು : "ಮಲೀಮಸಂ ಕಿಲ್ಬಿಷಂ" (ಮಂಗರಾ. ೧೩೦-೨೩). **ಮಳೀಮಸ :** ೩. ನಿಜದಿಂ ಜಟಮುಟಿಕಂ ಜ್ವಳನಜಟಿ ಕರಂ ಕುಟಿಳವೃತ್ತನಾತನಸದಳಂ ಸುಜನರೆನೆ ನೆಗ[ಟ್ದಾ] ವಿನು[ತ]ಜನರೊಳಂ ಮಾಡುಗುಂ ಮಳೀಮಸ ಮತಿಯುಂ (ಧರ್ಮಾಮೃ. ೪-೦೦). ೬. ಕಳಂಕ ಹತ್ತಿದವನು ; ದೋಷಿ : ವಿಷಯಾಮಿಷಕಾಂಕ್ಷಿಯೆ ತಿಣ್ಣಮಾಗೆ ಮತಿಗೆಟ್ಟು ಮಳೀಮಸನಾದಂ (ಸುಕುಮಾ. ೮-೩೭). [ಸಂ.]

**ಮಲುಕು₁** 'ಮಲಕು₁' ನೋ.

**ಮಲುಕು₂** 'ಮಲಕು₂' ನೋ.

**ಮಲುಮಲ** 'ಮುಮ್ಮಲಂ' ನೋ.

**ಮಲುಮಲನೆ** 'ಮುಮ್ಮಲನೆ' ನೋ.

**ಮಲುವು** (ನಾ). ಪ್ರವಾಹದ ಎಳೆತ ; ಸೆಳವು : ಪ್ರವಾಹದ ಮಲುವನ್ನು ನೋಡಿಕೊಂಡು ಅದರ ಗುಂಟ ತಾಳ್ಮೆಯಿಂದ ಈಸುತ್ತ . . . ದಡಕ್ಕೆ ಹತ್ತಿದ (ಗ್ರಾಮಾಯ. ೩೯೪). [ ? ]

**ಮಲೂಲು** (ನಾ). ಉದಾಸೀನ ; ನಿರುತ್ಸಾಹ.

**ಮಲೂಲತನ** = ಉತ್ಸಾಹವಿಲ್ಲದಿರುವಿಕೆ ; ನಿರುತ್ಸಾಹ : ನಿನ್ನ ಮಲೂಲತನಕ್ಕೇನೆನ್ನಲಿ ನನ್ನನೆ ರಾಧಾನರ್ತಕಿಯೆನ್ನುವೆ ನೀನಲ್ಲವೆ ರಾಧೆ ? (ನವಿಲ. ೪೪-೦೦). [ ← ಅರ. ಮರಾ. ಮಲೂಲ್]

**ಮಲೆ₁** (ಕ್ರಿ). ೧. ಉದ್ಧಟತನದಿಂದ ಕೂಡಿರು ; ಬೀಗು ; ಗರ್ವಿಸು : "ಮಲೆ-ಔದ್ಧತ್ಯೇ(ಅತಿಗರ್ವಪಡು), ದನೇ ಚ" (ಕಮುಧಾ) ; ಅದಿರದದಿರ್ಚಿ ತಳ್ತೞಿಯಲೀ ಮಲೆದೊಡ್ಡಿದ ಚಾತುರಂಗಮೆಂಬುದು ನಿಸಗೊಡ್ಡಿನಿಂದುದು (ಪಂಪಭಾ. ೦೦-೭೪) ; ಮಲೆವ ದೈತ್ಯರ ಗಂಡ . . . ಕೊಲಲೊಡರ್ಚುವ ಮಿತ್ತುವಿನ ಗಂಡನ ಪಾದಜಲರುಹಯುಗವ ನೋಡಿದರು (ಮೋಹತ. ೪೨-೪೦). ೨. ಕೊಬ್ಬು ; ಮದಿಸು : ಮಲೆಯುತ್ತೊಲೆಯುತ್ತೆ ಸುತ್ತಿ . . . ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೦೦೦೨). ೩. ಎದುರಿಸು ; ಪ್ರತಿಭಟಿಸು ; ಇದಿರುಬೀಳು : ಹುಲಿಗೆ ಮಲೆ ದಳ್ಳುರಿಯೊಳಡಗು ಹೋಗೆಂದೊಡೆಯನು ಬೆಸಸಿದಡೆ ನಾನಾಱೆನೆನಬಾರದು (ಹಕಶಾ. ೦೦-೩೪) ; ಅಕಟ ಸಿಂಹಕೆ ಮಲೆತುದೋ ಜಂಬುಕನು (ಕುಮಾರವ್ಯಾ. ೨-೪೦) ; ಭ್ರಮೆಯಿಂ ಮಲೆತೆಯಾದರೆ ನಿನ್ನ ಗಂಟಲ ಬಳೆಯ ಕಳೆಚುವೆನು (ಅಂಬಿಗ. ೦೪-೩೨).

**ಮಲಪರ್**, ಮಲೆದರ್, ಮಲೆವರ್ (ಬಹುವ) = ಎದುರು ಬಿದ್ದವರು ; ಪ್ರತಿಭಟಿಸಿದವರು : ಮಲಪರ ತಲೆಯೊಳ್ ಬಾಳಿಡುವಂ (ಎಕ. II, ೦೩೨-೦೨ ; 1123) ; ಮಲೆವರಂ ಕೊಂದುಗ್ರಮತ್ತೇಭಸಂಘಮನಾದಂ ಪಿಡಿದಂ (ಎಇ. XX, ೦೧೩-೨೨ ; 1167) ; "ಮಾರ್ಪರ್=ಮಲೆವರ್" (ಕಮುದ. ಶಂ. ೨). **ಮಲಪರೊಳುಗಂಡ**, **ಮಲಪರೊಳ್ಗಂಡ**, **ಮಲೆಪರೊಳು ಗಂಡ** = ಪ್ರತಿಭಟಿಸುವವರಿಗೆ ಮಹಾಶೂರನಂತಿರುವವನು ; ಒಂದು ಬಿರುದು : ಸಮರಪ್ರಚಂಡ ಮಲಪರೊಳುಗಂಡ (ಎಕ. VI, ಕಡೂರು, ೨-೪ ; 1110) ; ಮಲರಾಜರಾಜಂ ಮಲಪರೊಳ್ಗಂಡಂ ಕದನಪ್ರಚಂಡಂ (ಮ್ಯಆರಿ. ೦೯೩೫, ೪೯-೫೪ ; 10ನೆಯ ಶತ ?) ; ಮಲೆಪರೊಳುಗಂಡಂ . . . ಶ್ರೀವೀರಬಲ್ಲಾಳದೇವರು (ಎಕ. VII, ಶಿಮೊ. ೫-೦೯ ; 1217). **ಮಲವರ ಮಾರಿ ನಿಷ್ಕ** = ಒಂದು ಬಗೆಯ ನಾಣ್ಯ : ಪ್ರತಿವತ್ಸರಂ ಷಡ್ವಿಂಶತಿ ಮಲವರ ಮಾರಿ ನಿಷ್ಕಂ ? (ಮುಂಬಯಿ. IX, ೨೪೩-೬ ; 1186). **ಮಲೆತಿರ್**, **ಮಲೆದಿರ್** = ಉದ್ಧಟತನದಿಂದಿರು ; ಸೊಕ್ಕಿನಿಂದ ಕೂಡಿರು : ಜಂಗಮವಸತಿ

ಮನ್ನಿಸದೆ ಮಲೆತಿರ್ದನಾದೊಡೆ ನಿನ್ನ ಪಾದಕೆ ದೂರನಾದಪೆ (ತ್ರಿಭುಂ. ೦೬–೪೬) ; ಇಡು ಕಲ್ಲಿಂ ಮಲೆದಿರ್ಪ ಪೆರ್ಗರಡಿಯುಂ . . . ಪಿಡಿ ಸಾರಂಗಮಂ (ತ್ರಿಷಿ. ೨೭–೩೨). **ಮಲೆಪರ ಮಾರಿಯ ಕೋಲ್** = ಒಂದು ಆಳತೆಯ ಕೋಲು : ಅದರ್ಕೆ ಬಿಟ್ಟ ಮಲೆಪರ ಮಾರಿಯ ಕೋಲೊಳ್ಳಾಲ್ಕು ಮತ್ತರು (ಕ್ಶಾಇ. XI-I, ೬೩–೪೪ ; 1028). **ಮಲೆವರ ಮಾರಿ** = ಪ್ರತಿಭಟಿಸುವವರಿಗೆ ಮಾರಿಯಂತೆ ಉಗ್ರನಾಗಿರುವವನು: ಮುನಿದೆನಾದರೆ ಕೋಟಿಕೃಷ್ಣಾರ್ಜುನರ ಕೊಂಬೆನೆ ರಣಕೆ ದುರ್ಯೋಧನಗೆ ಮಲೆವರ ಮಾರಿ ಪಾಂಡವಮೇಘಪವಮಾನ ತನಗೆ ಸರಿ ಯಾರಿಲ್ಲ (ಕುಪ್ರಾ.ಶ. ೯–೦೮). **ಮಲ್ಲಹರ ಮಾರಿಯ ಕೋಲ್** = ಮಲೆಪರ ಮಾರಿಯ ಕೋಲ್ : ಮುಳುಗುಂದದ ಮಲ್ಲಹರ ಮಾರಿಯ ಕೋಲೊಳ್ಸರ್ವ್ವನಮಶ್ಯಂ ಬಿಟ್ಟ ಕೆಯ್ಮತ್ತರ್ ೨ (ಕ್ಶಾಇ. XI-ii, ೦೫೨–೩೮ ; 1103). ᑭ ಇದು "ಮಲೆಪರ ಮಾರಿಯ ಕೋಲ್" ಎಂಬುದರ ಅಪಲಿಖಿತ.

[ದೇ.॥ ತಮಿ. ಮಲ್ಯೈ ; ತೆಲು. ಮಲಯು]

**ಮಲೆ₂** (ಕ್ರಿ). ಬಗ್ಗಡವಾಗು ; ರಾಡಿಯಾಗು : ಬಾವಿಯೊಳಗಿನ ನೀರು ಮೇಲಿಮೇಲೆ ಮೆಚ್ಚಾಗುತ್ತಿದ್ದರೆ ಅದು ಮಲೆಯುವುದಿಲ್ಲ, ಸ್ವಚ್ಛವಿರುತ್ತದೆ (ಮುಂಬಯಿ. ೩–೦೩೮) ; ಕಳೆದ ಬಿಟ್ಟಿ ತೊಳೆದಂತೆ ಪರಿದುಹೋಗುವುದು ಮಲೆತ ಕೊಳಕು (ಸೂರ್ಯಶಾ. ೦೩–೬). [ದೇ.॥ ಮಲ. ಮಲಿಕ್ಕ]

**ಮಲೆ₃** (ನಾ). ೧. ಬೆಟ್ಟ ; ಪರ್ವತ : ಮಲೆಗಳ ಮೇಲಿರ್ದಾಂ ಪೆರ್ವೊಲೆಗಳ ಮೇಲಿರ್ದರಧಿಕದುಶ್ಚಾರಿತ್ರರ್ (ಧರ್ಮಾಮೃ. ೬–೭೨) ; ಪೆರ್ವುರನೊಳ್ ಸೆಲೆಯೊಳ್ ಮಲೆಯೊಳ್ ಮಲೆದು ಕಾದಿದಂ (ರಾಪಾಶ್ಕ. ೦೪೦–೨೫). ೨. ಬೆಟ್ಟವನ್ನು ಆವರಿಸಿರುವ ಕಾಡು : ಅವನಿಯೊಳ್ ಕಾಳಹಸ್ತಿಯ ಮಲೆಯೊಳೆಯ್ದ ನೀವವತರಿಸಿ ಮೃಗಗಳಾಗಿರೆ ನಿಮ್ಮ ದೇಹಮಂ ತಂದರ್ಪಿಪಂ ಸಾದರಂ ತವಽದಿಂದೆಮ್ಮ ಕಿಂಕರಂ (ಮುಕ್ತಾಪ. ೬–೯೨). ೩. ಬೆಟ್ಟಸೀಮೆಯ ಪ್ರದೇಶ ; ಮಲೆನಾಡಿನ ರಾಜ್ಯ : ಮಲೆಯುಂ ಮಂಡಲಮುಂ ಬೆಳರ್ಚುವಂತು ಕೊಂಡಾಡುವ ನಾಲ್ವರು ಮನುಜರೊಳಗೆ ನೆಗಟ್ದರಿಗನ ತೇಜಮೆ ತೊಳಗಿ ಬೆಳಗೆ (ಶಂಕರ. ೪–೦೦ ರಗಳೆ) ; ಪರಚಕ್ರಭೈರವಂ ರಾಯದಣ್ಣಗೋಪಾಳಂ ಮಲೆಯ ಮಣ್ಡಳಿಕ ಮೃಗಶಾರ್ದೂಳಂ (ಕ್ಶಾಇ. XI-i, ೦೦೩–೯ ; 1074) ; ಒಡನೆ ನಿಟ್ಟಿಸಿ ನೋಡುವರಿಗಗೋಚರವಿಡಿದಾಗ ಬಲುಮಲೆಯೊಳಗೆ ಅಡಗಿಕೊಂಡಿಹ ಪಾಲು ಪರೆಯ ಸಾಧಿಸುವೊಡೆ ಮೃಡನಿಗಸಾಧ್ಯವೇವೇಳ್ದೆ (ಶಂಪಿ. ೦೮–೪೪). ೪. ಬೆಟ್ಟದಲ್ಲಿ ವಾಸಿಸುವ ಜನ : ಮಲೆ ತಲೆದೋಜಿದೆಂದುದನೆ ಕೊಟ್ಟು ದಡಂಗಪಡಂಗಿ ಬಂದೊಡೆ (ಶಂಕರ. ೨–೯೦). ೫. ಒಂದು ಊರಿನ ಹೆಸರು : ಮಲೆಸಾಸಿರ್ವ್ವರುಮಾನ್ಪುರ್ವ್ವಗಾ ಮಯ್ಯಾಮರಿಗರುಂ ಇದಕ್ಕೆ ಕಾವು ಇದನಟಿದೊಂ . . . ಪಞ್ಚಮಹಾಪಾತಕನಕ್ಕುಂ (ಎಕ. I (R), ೯೬–೦೦ ; 888).

**ಮಲರಾಜರಾಜ** = ಬೆಟ್ಟಪ್ರದೇಶದ ರಾಜರಿಗೆ ರಾಜನಾದವನು ; ಒಂದು ಬಿರುದು : ಸಮ್ಯಕ್ತ್ವಚೂಡಾಮಣಿ ಮಲರಾಜರಾಜಂ ಮಲಪರೊಳ್ಗಂಡಂ ಒದನಪ್ರಚಂಡಂ (ಮೈಅಂ. ೦೯೩೫, ೪೯–೩೩ ; 10ನೆಯ ಶಕ ?).

[ದೇ.॥ ತಮಿ. ಮಲ್ಯೈ; ಮಲ. ತೆಲು. ಮಲ ; ಕೊಡ. ತುಳು. ಮಲೆ ; ಕೋಲಾ. ಮಾಲೆ, ಮಾಲೇ ; ಪರ್ಜಿ. ಮಲಂಗ್ ; ಗಡಬ. ಮಲೆ]

**ಮಲೆಕೋಡು** (ನಾ). ಬೆಟ್ಟದ ತುದಿ ; ಶಿಖರ : ಬಾನಾಡಿಯುಲಿವ ಮಲೆಕೋಡಿನಿಂದ ಕೆಳಗುರುಳಿ ನೂಲು — ನೀರು (ಚಿಂ. ೩೦–೦೩).

[ಮಲೆ₃ + ಕೋಡು₁]

**ಮಲೆಗ** (ನಾ). ಬೆಟ್ಟಸೀಮೆಗೆ ಸೇರಿದವನು ; ಮಲೆನಾಡಿನವನು : ಒಂದುಕೆಲದೊಳ್ಮಲೆಗರೊನ್ದುವೆರೆದೆಲ್ಲರ್ ಸನ್ನಣಸಿ ಕಾಳಗಕೆ ಮುನ್ದು ಪರಿವನ್ನಂ (ಎಕ. VI, ಶ್ರೀರಂಗ-೬೪–೭೮ ; 722). [ಮಲೆ₃ + —ಗ₂]

**ಮಲೆಗಾಳಿ** (ನಾ). ಬೆಟ್ಟದ ಮೇಲಿಂದ ಬೀಸುವ ಗಾಳಿ ; ತಂಗಾಳಿ : ಪ್ರಾಣದ ಒಗರಷ್ಟು ಹಿಂಡಿತು ಹಿಂದಲಿಗೆ ಮಾಗದದ ಮಲೆಗಾಳಿ ಮುಂದೆಳೆದಿತು (ಸಬಿಗಿ. ೩೦–೩೭೦). [ಮಲೆ₃ + ಗಾಳಿ₁]

**ಮಲೆಗೊಡಗೆ** (ನಾ). ಬೆಟ್ಟದ ಪ್ರದೇಶದ ಜಮೀನಿನ ಮೇಲೆ ಹಾಕುವ ತೆರಿಗೆ (?) : ಮಲೆಗೊಡಗೆಗಳಿಂದ ತೆಱುವ ವರಹ ಗದ್ಯಾಣ ೨೦ ಹೊನ್ನು ಹ ೬ (ಮೈಅಂ. ೦೯೩೩, ೨೪–೪೭ ; 1387).

[ ಮಲೆ₃ + ಕೊಡಗೆ (< ಕೊಡಂಗೆಯ್₂) ]

**ಮಲೆಜೇನ್** (ನಾ). ಒಂದು ಬಗೆಯ ಜೇನು ; ಬೆಟ್ಟದ ಜೇನು : ಪುಲಿಗಾಗಿ ಕೆಲರೇಳೆ ಕೆಲರಡಗಿಗೆನೆ ನಷೆಯೆ ಕೆಲರು . . . ಮಲೆಜೇನ್ಗೆ ಪೊರಟ ಹರ್ ಬಗೆಯುತೊಂದೊಂದಂ (ಕಾಂಚಿ. ೯೦–೦೭೭). [ಮಲೆ₃ + ಜೇನ್₁]

**ಮಲೆತರ್** (ಕ್ರಿ). ಮದಿಸಿ ಬರು : ಪುಲ್ಲೆಗಾಟಿಸಿ ಮಲೆತರ್ಪೆರಲೆಯ ಸೋಲವುನಟ್ಟಿಯೊಳರಿಕೇಸರಿ ನಿಂದು ನೋಟ್ಪುದೊಂದರಸಲ್ತೇ (ಶಂಕರ. ೩–೪೪). [ಮಲೆ₁ + ತರ್]

**ಮಲೆದುರ್ಗ** (ನಾ). ಬೆಟ್ಟದ ಮೇಲಿರುವ ಕೋಟೆ : ಮುಡಿಯೆಂಬ ಮಲೆದುರ್ಗ ಜಲದುರ್ಗ ತನುರುಚಿಯುವಟಿ ನೆಲೆಯಾದ ಯುವತಿಯರಂಗ ದೇಶದ ದಿವ್ಯಬಲವಿರ್ದ ನಿನಗಳವಾಯ್ತೆ (ಶರ್ಧಶ. ೦೨–೦೯).

[ ಮಲೆ₃ + ದುರ್ಗ ]

**ಮಲೆನಾಡಿಗ** (ನಾ). ೧. ಬೆಟ್ಟಗಾಡಿನಲ್ಲಿ ವಾಸಿಸುವವನು ; ಮಲೆನಾಡಿನವನು. ೨. (ಆಲಂ) ಕೋತಿ ; ಮರ್ಕಟ : ಮಲೆನಾಡಿಗನೆಂದೊಡಾವಂ ? . . . ಮಲೆಯೊಳೆ ನೆಲೆಗೊಂಡಿರ್ಪ ನಾಳ್ಗೆಯ್ಯ ದೇವರ್ (ರಾಪಾಶ್ಕ. ೮೯–೨೦). [ಮಲೆನಾಡು + — ಇಗ]

**ಮಲೆನಾಡು** (ನಾ). ಬೆಟ್ಟಗುಡ್ಡಗಳಿಂದ ಕೂಡಿದ ಪ್ರದೇಶ; ಬೆಟ್ಟದ ಸೀಮೆ : ಮಲೆನಾಡಂ ಪೋಲ್ವ ನಾಡುಗಳ್ (ಶಬ್ದಾ. ಸು. ೩೨೬ ವ್ಯಾಖ್ಯಾ) ; ಅಲ್ಲವರಿಷಣವುಂಟು ಬೆಲ್ಲ ಬಿಳಿಯೆಲೆಯುಂಟು ಒಳ್ಳೆ ಹಲಸುಂಟು ಮೆಲ್ಲಲ್ಕೆ ಮಲೆ[ಶಾಕಾಂ. ಲ]ನಾಡನಲ್ಲೆನ್ನಬಹುದೆ (ಸರ್ವಜ್ಞ. ೦೬೨೪) ; ಹದಿನಾಡ ಮೊದೆನಾಡ ಮಲೆನಾಡ ಮನ್ನೆರ ಬೆದರಿಸಿ . . . ಮೈಸೂರಯಲ್ಲೆಯ ಮೆಟ್ಟಿ ಒದಗಿ ಬಂದನು ಕಡೆಗಡಿಗೆ (ಕಂಠೀರ. ೩–೦೯). [ ಮಲೆ₃ + ನಾಡು ]

**ಮಲೆನಾಡುಗ** (ನಾ). = ಮಲೆನಾಡಿಗ ೧ : ಪೊಯ್ದಿಱಿದರ್ ಮಹಿಶೂರ ರೆನಿಸಿ ಮಲೆನಾಡುಗರಂ (ಅಪ್ರತಿ. ೩೨–೫). [ ಮಲೆನಾಡು + — ಗ₂]

**ಮಲೆಪ**, ಮಲವ, ಮಲಹ (ನಾ). ೧. ಬೆಟ್ಟಗಾಡಿನ ಅರಸು ; ಬೆಟ್ಟ ಸೀಮೆಯ ರಾಜ : ಕಾವನ್ನಾರ್ಲ್ವವರ್ಮ್ಮಲೆಪರುಂ (ಇಇ. VI· ೦೦೨–೦೯ ; 777?) ; ನಕುಳನುಂ ತೆಂಕಣದೆಸೆಯ ಮಲೆಪರಂ ಮಂಡಳಿಕರುಮನಸಿಯ ರಾಗೆ ಕಪರ್ದಕೊಂಡು (ಶಂಕರ. ೬–೩೨ ವ) ; ಮಲೆವ ಮಲೆಪರ್ಕಳಕ್ಕಿಮ ಬಲ್ಲಿದ ಬಳಾನ್ವಿತರ್ ಪಾಹೀಪರಕ್ಕಿಮ (ಸುಕುಮಾ. ೯–೭೨) ; ಈ ಸಮಯ ವನ್ನೇ ಕಾಯುತ್ತಿದ್ದ ಕೆಲವು ಮಲೆಪರು . . . ದ್ವಾರವತಿಯನ್ನು ಸೂರೆ ಮಾಡಲು ಬಂದರು (ಕಾಂತಲಾ. ೦೫೬). **ಮಲವ**: ೨. ಮಲೆಯಾಳದೇಶಕ್ಕೆ ಸೇರಿದವನು : "ತೆಲುಂಗನಾಂಧ್ರನೆನಿಕ್ಕು ತಿಗುಳ ದ್ರಾವಿಡನಕ್ಕು ಮಲಹ ಮಲವನೆನಿಕ್ಕು" (ಮುಂಗಣ. ೦೦೨–೭). ೩. ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದ ಅರಸು : ಕೆಳದಿಯ ಅರಸರು ಮಲವರೆಂದು ಹೇಳುವುದುಂಟು. ಮಲವರು ಹಟ್ಟಿಕಾರರಲ್ಲಿ ಅಗ್ರೇಸರರು (ಕರ್ನಾಭೂ. ೦೫೩). **ಮಲಹ** : ೨. "ಮಲಹ ಮಲವನೆನಿಕ್ಕು" (ಮುಂಗಣ. ೦೦೨–೭); ಮಲಹರ ತಲೆಯುಂ ಧಾಳಿಯಿಟ್ಟೆಬ್ಬಿ . . . ಪಾಣ್ಡ್ಯನಂ ಖಣ್ಡಿಸಲ್ . . . ಬಂದನೇ ತಾನೆಂಬಂತೆ ಬಂದಂ (ಕ್ಶಾಇ. XX, ೪೯–೦೯; 1076?) ; ಚೋಳ ಬಾ ಮಲಹ ಬಾ ಹವ್ವ ಬಾ ಕುಂತಳಪಾಲಕ ಬಾ ಕಳುಹಿಸಿಕೊ . . . ನಿರ್ಜರ ಬರ್ಬರಪತಿ ನಡೆಯೆಂದು ವಿಸರ್ಜಿಸಿದರು ಸರ್ವನೃಪರ (ಶರತ. ೩೩–೦೦೦). [ ಮಲೆ₃ + — ಪ₂ ]

**ಮಲೆಪ್ಪು₁** (ನಾ). ೧. ಸೊಕ್ಕು ; ಅಹಂಕಾರ : ಅಬರ್ದರೆಗಟಿಗೆಯ ಜಾದಿಯ ಮಲೆಪ್ಪುಂ ಮಲ್ಲಿಗೆಯ ಪೊಂಕಮುಂ ಬಟಿಕವನಾರ್ತಲೆಯೊಳ್ ತಾಳ್ದುವರ್ (ಆದಿಪು. ೧೧-೦೦೮) ; ಮುಖವೆತ್ತಿ ಮುಡುಹು ಎದೆಗಳನ್ನಗಲಿಸಿ ಮೆಯ್ಯುಬ್ಬಿಸಿ ಮೋಡಿಯ ಮಲೆಪ್ಪಿನಿಂದ ನೆಟ್ಟಗೆ ನಿಲ್ಲು (ಪಟ್ಟಶ. ೧೦೬-೨೧). ೨. ಪ್ರತಿಭಟನೆ ; ವಿರೋಧ : ತಂಗಿಗೊದಗಿದಪಮಾನವೆಮ್ಮಯ ಕುಲಕೆ ನಾಣ್ಗೇಡು; ಬಡಗಲೆಸೆದಿಹ ಮಲೆಪ್ಪು, ತೆಂಕಣದ ಗೌರವಕೆ (ಶ್ರೀರಾಪದ. ೨೨೦-೨೯೩). [ಮಲೆ₁ + – ಪ್ಪು₂]

**ಮಲೆಪ್ಪು₂** 'ಮಲಪ್ಪು₂' ನೋ.

**ಮಲೆಪೊಡವಿ** (ನಾ). = ಮಲೆನಾಡು : ಹಬ್ಬಿ ಹಸರಿಸಿತುಬ್ಬಿತಡವಿ ದಟ್ಟ ಯ್ಸಿದಾ ದಿಟ್ಟ ಮಲೆಪೊಡವಿ (ಶ್ರೀರಾಪದ. ೧೪೦-೮೩೨).

[ಮಲೆ₃ + ಪೊಡವಿ (< ಪೃಥುವಿ)]

**ಮಲೆಯ** (ನಾ). ೧. ಬೆಟ್ಟಗಾಡಿನಲ್ಲಿ ನೆಲಸಿದವನು; ಮಲೆನಾಡಿನವನು : ಕಿವಿಗೊಟ್ಟನಾ ಕಲಿ ಮಲೆಯನುಲಿಗೆ (ಶ್ರೀರಾಪದ. ೨೬೯-೦೦೮). ೨. ಮಲಯ ದೇಶಕ್ಕೆ ಸೇರಿದವನು : ಮಲೆಯಾಳದವನು : ಒಂದಿರವಿನೊಳ್ಕೊಡಗ ರೊಂದುಕೆಲದೊಳ್ಮಲೆಯರೊಂದುಪೆರೆದು (ಅಶ್ರಾ. ೬-೭). ೩. ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದ ವ್ಯಕ್ತಿ: ನೆಲ್ಲೂರ ಮಲೆಯರ ಕಿಜಿಯಮನ ಮಗ . . . ದೇಗುಲಮುಂ ಮಾಡಿಸಿ ಸಾಸನಮುಂ ನಿಱಿಸಿದಂ (ಎಕ. VIII, ಸೊರಬ. ೪೭೦-೯; 1012). [ಮಲೆ₃ + – ಅ₇]

**ಮಲೆಯರಸ** (ನಾ). ಪರ್ವತರಾಜ; ಹಿಮವಂತ : ಹಿರಿದು ಸಂಗಡ ಮಲೆಯರಸನ ಮಗಳೊಳಗೆನ್ನ ಸರಕುಮಾಡನೆನುತ್ತ ಗಂಗಾಭವಾನಿ ಮುನಿದಿರಲು (ಅಕ್ಷಾಕ. ೨-೧). [ಮಲೆ₃ + ಅರಸ₁]

**ಮಲೆಯರಾಜಕ್ಕ** (ನಾ). ಒಬ್ಬಾತನ ಹೆಸರು : ಮಲೆಯರಾಜಕ್ಕಂ ಮಾವನಂ ಕೊನ್ದಪಮ್ ಕಣ್ದು ಕಾದಿ ಇಬ್ಬರುಮ್ ಕೊನ್ದು (ಎಕ. VIII, ಸೊರಬ. ೩೨೯-೩; 985). [ ? ]

**ಮಲೆಯಾವರಿಕೆ** (ನಾ). ಒಂದು ಬಗೆಯ ಸಸ್ಯ : ಮಲೆಯಾವರಿಕೆ, ಸೊಗಡುತಗಚೆ (ವೃಶಿ. ೭೦-೦೪೩೪). [ಮಲೆ₃ + ಆವರಿಕೆ]

**ಮಲೆಯಾಳ**, ಮಲಯಾಳ, ಮಳೆಯಾಲ, ಮಳೆಯಾಳ (ನಾ). ೧. ಒಂದು ದೇಶದ ಹೆಸರು; ಈ ಇಂದಿನ ಕೇರಳರಾಜ್ಯ : ಚೋಳಿಕ ಲಾಳ ಗೌಳ ಮಲೆಯಾಳ ತೆಲುಂಗ ಕಳಿಂಗ . . . ಆದಿ ಭೂಪಾಳಕರ್ ಅಂಜಿ ಬೆಚ್ಚಿ ಬೆಸಕೆಯ್ಯೆ (ಕೌಇ. XX, ೦೪೨-೯; 1165); ತುಳುವ ಮಲಯ ಹುಲಿಯಾಳ ಕರ್ಣಾಟ . . . ದೇಶಂಗಳೊಳೆಸೆವ ಜಂಗಮವು (ಬಸವು. ೬-೦೮) ; ಕೊಂಕಣ ಮಲೆಯಾಳ ಕೊಡಗು ಭೂಪಾಲರ ಬಿಂಕವ ಮರ್ದಿಪ ಶೂರ (ಕಂಸವ. ೦-೨೩). ೨. ದ್ರಾವಿಡಭಾಷೆಗಳಲ್ಲಿ ಒಂದಾದ, ಆ ದೇಶದ ಭಾಷೆ : ದ್ರಾವಿಡ ಭಾಷೆಗಳಲ್ಲಿ ಸಂಸ್ಕೃತದ ಪ್ರಭಾವ ಮಲೆಯಾಳದಲ್ಲೇ ಹೆಚ್ಚು (ದ್ರಾವಿವಿ. ೦೦೮). **ಮಲಯಾಳ** : ೧. ಮಲಯಾಳಧರಾಧಿಪ ಶಿರೋಚ್ಛೇದಕುಲಿಶದಂಡ ಪರಾಕು (ಮಾದಕು. ೩-೦ ವ). ೩. ಕೇರಳದೇಶಕ್ಕೆ ಸೇರಿದವನು : "ನಾಯಃ—ಕುಕ್ಕುರನು; ಮಲಯಾಳನು" (ಅಕ್ಕ. ೦೩೮). **ಮಳೆಯಾಲ** : ೩. ಮಳೆಯಾಲರು ತೆರುವ ಗ ೩.೨ (ಎಕ. XV, ಬೇಲೂರು. ೨೯೮-೭೨; 1279). **ಮಳೆಯಾಳ** : ೩. ಬೇಡರ ರೂಢಿ ತಗ್ಗಿತು ಮಳೆಯಾಳರು ಪಾಪಳಿದಿರ ದೋಡಿದರು (ಕಂಸವ. ೦೬-೨೩).

[ದೇ.॥ ತಮಿ. ಮಲೈಯಾಳಮ್ ; ಮಲ. ಮಲಯಾಳ; ತುಳು. ಮಲಯಾಳ, ಮಲೆಯಾಲ; ತೆಲು. ಮಳಯಾಳಮು]

**ಮಲೆಯಾಳಿ** (ನಾ). ೧. = ಮಲೆಯಾಳ ೨ : ಇವರು . . . ಮಲೆಯಾಳೀ ಭಾಷೆಯನ್ನಾಡುವರು (ಕರಾಗೆ. ೨೪೪). ೨. = ಮಲೆಯಾಳ ೩ : ಈ ಊರಿನಲ್ಲಿ ಮಲೆಯಾಳಿಗಳೂ ನೆಲೆಸಿದ್ದಾರೆ (ಅದೇ).

[ದೇ.॥ ತಮಿ. ಮಲೈಯಾಳಿ; ತುಳು. ಮಲಯಾಳಿ]

**ಮಲೆಯಾಳು** (ನಾ). ಗುಡ್ಡಗಾಡಿಗೆ ಸೇರಿದವನು ; ಪರ್ವತವಾಸಿ : ಆ ವೀರಮಾರ್ತಾಂಡನು ಗುಡ್ಡಗಾಡುಪ್ರದೇಶದಲ್ಲಿರುವ ಮಲೆಯಾಳು ಗಳನ್ನು ಕಲೆಹಾಕಿ ತನ್ನ ಸುತ್ತಲು ಬಿಲ್ಲಾಳುಗಳ ಸಮೂಹವನ್ನು ಬಳಸಿ ಕೊಂಡನು (ಕವೀರ. ೪). [ಮಲೆ₃ + ಆಳು₃ (<ಆಳ್₃)]

**ಮಲೆಯಿಸು** (ಕ್ರಿ). ಪ್ರತಿಭಟಿಸುವಂತೆ ಮಾಡು ; ಎತ್ತಿಕಟ್ಟು : ಮಲೆಯದುದಂ ಮಲೆಯಿಸಲುಂ ಮಲೆದುದಂ ತೊಲಗಿಸಲುಂ . . . ಆನೆ ಬಲ್ಲಂ (ಕಂಶಠಾ. ೩-೪೩ ವ). [ಮಲೆ₁ + – ಇಸು₃]

**ಮಲೆಯೆರಲ್** 'ಮಲೆಯೆಲರ್' ನೋ.

**ಮಲೆಯೆಲರ್**, ಮಲೆಯೆರಲ್ (ನಾ). ಬೆಟ್ಟದ ಕಡೆಯಿಂದ ಬೀಸುವ ಗಾಳಿ; ಮಲಯಮಾರುತ : ಮಲೆಯೆಲರಲೆಪ್ಪು. . . ಕೋಗಿಲೆಯ ಜಡಿಪ್ಪು ಪೊಡೆನೆಗಲ್ಚಿನಂ (ಆತಪು. ೨-೦೪). **ಮಲೆಯೆರಲ್** : ತಣ್ಪಿನಿಯಂ ಚಂದನ ಗಂಧಮುಂ ಮಲೆಯೆರಲ್ಬಂದೀಯೆ (ಅರ್ಜನೀ. ೨-೩೬). [ಮಲೆ₃ + ಎಲರ್]

**ಮಲೆವಕ್ಕಿ** (ನಾ). ಬೆಟ್ಟದಲ್ಲಿ ವಾಸಿಸುವ ಹಕ್ಕಿ; ಮಲೆನಾಡಿನ ಹಕ್ಕಿ : ಇತರ ಕವನಗಳಲ್ಲಿ ಜೇನೆ, ಕಾಜಾಣ, ಗಿಳಿ, ಕಾಮಳ್ಳಿ, ಪಿಕಳಾರಿ, ಕೋಗಿಲೆ, ಮಲೆವಕ್ಕಿಗಳ ಉಲ್ಲೇಖ ಬರುತ್ತಿದೆ (ಸಾಸವಾ. ೯೮). [ಮಲೆ₃ + ಪಕ್ಕಿ]

**ಮಲೆಸೇನ** (ನಾ). ಬೆಟ್ಟಗಾಡಿನಲ್ಲಿರುವ ಗಿಡುಗ, — ಡೇಗೆ : ಅರಣ್ಯ ದಲ್ಲಿರುವ . . . ಕಡವೆ ಸಾರಂಗ ಕಪಿ ಗಿಣಿ ಮಲೆಸೇನ . . . ಮುಂತಾದ ಅನೇಕ ಮೃಗಪಕ್ಷಿಗಳನ್ನು ಚೆನ್ನಾಗಿ ಕಾಪಾಡುತ್ತಿದ್ದರು (ಮಹಾಪಂ. I, ೦೬೨).

[ಮಲೆ₃ + ಸೇನ₂]

**ಮಲೆಸೌತೆ** (ನಾ). ಒಂದು ಬಗೆಯ ಸೌತೆ : "ಕಂದಾರುಃ— ಮಲೆಸೌತ್ತೆ, ದರಿಕಂದ, ರಕ್ತಪಿಂಡಾಲು" (ಓಶಂ. ೨೦). [ಮಲೆ₃ + ಸೌತೆ (<ಸವುತೆ)]

**ಮಲೆಹ** (ನಾ). ಪ್ರತಿಭಟನೆ ; ವಿರೋಧ : ಮಾರಿಯೊಡನೆಯೆ ಮಲೆ [ಪಾಠಾಂ. ಲ]ಹ ಸುಖಿವ್ಯೆ (ಶಿಭಾಗ. ೩-೦-೦೧).

[ಮಲೆ₁ + – ಹ₃ (< – ಪ₂)]

**ಮಲೆಹೆಗ್ಗ** (ನಾ). ಒಂದು ಬಗೆಯ ಸಸ್ಯ : ಹೆಗ್ಗ, ಮಲೆಹೆಗ್ಗ (ವೃಶಿ. ೪೪-೬೭೩). [ಮಲೆ₃ + ಹೆಗ್ಗ]

**ಮಲೇರಿಯ** (ನಾ). ಒಂದು ಬಗೆಯ ಸೊಳ್ಳೆಯ ಕಡಿತದಿಂದ ರೋಗಾಣುಗಳು ರಕ್ತದಲ್ಲಿ ಸೇರಿ ಉಂಟಾಗುವ ಜ್ವರ : ಚಳಿಜ್ವರ : ಮಲೇರಿಯಾಪರತಂತ್ರಜೀವಿಯು ಕೆಂಪುರಕ್ತಕಣಗಳ ಒಳಗೆ ಜೀವಿಸುತ್ತವೆ (ಕರಜೀ. ೧೩). [← ಇಂ. Malaria]

**ಮಲ್ತೊ** (ನಾ). ದ್ರಾವಿಡಭಾಷೆಗಳ ಗುಂಪಿಗೆ ಸೇರಿದ ಒಂದು ಭಾಷೆ : ದ್ರಾವಿಡಭಾಷೆಗಳ ಗುಂಪಿಗೆ ಸೇರಿದ ಮತ್ತೊಂದು ಮುಖ್ಯವಾದ ಭಾಷೆ ಯೆಂದರೆ ಮಲ್ತೊಭಾಷೆ (ದ್ರಾವಿವಿ. ೦೬೩).

ಮಲ್ನೀರು 'ಮೊಲೆನೀರು' ನೋ.

**ಮಲ್ಫೂಫ**, ಮಲ್ಫೂಫಿ (ನಾ). ಲಕೋಟೆಯ ಒಳಗಿಡುವ ಪತ್ರ ಮತ್ತು ಅದರೊಡನೆ ಲಗತ್ತಿಸಿದ ಇತರ ಪತ್ರ : ನನ್ನ ಲಕೋಟೆಯೊಳಗಿನ 'ಮಲ್ಫೂಫ ನಮ್ಮ ಧನಿಯ ವಿಳಾಸಕ್ಕೆ ಇತ್ತು. ಅದನ್ನು ಅವರ ಬಳಿಗೆ ಕಳುಹಿಸಿದ್ದೇನೆ (ಶಿಶಾವು. ೦೬೯). **ಮಲ್ಫೂಫಿ** : ಮಲ್ಫೂಫಿ ಹಾಕಿದರೆ ಹಾಕಿದರು, ಬಿಟ್ಟರೆ ಬಿಟ್ಟರು (ವಮ್ಮರು. ೦೩೩).

[← ಅರ. ಹಿಂ. ಮರಾ. ಮಲ್ಫೂಫ್]

**ಮಲ್ಫೂಫಿ** 'ಮಲ್ಫೂಫ' ನೋ.

**ಮಲ್ಲ** (ಗು). ೧. ದಕ್ಷವಾದ; ಸಮರ್ಥವಾದ : 'ಮಲ್ಲಗಿಳಿ' ಪರಾ. (ನಾ). ೨. ಬಾಹುಬಲದಿಂದ ಕಾದುವವನು; ಕುಸ್ತಿಪಟು; ಜಟ್ಟಿ : "ಕೆಸಜುಂಕರೆನಲ್ಕೆ ಮಲ್ಲರೊಳ್" (ಶಬ್ದಾ. ೨೭) ; ಸುಯೋಧನನ ಮಲ್ಲಂ ವಿಷಮರ್ಪರನೆಂಬಂ ತನ್ನ ಮಲ್ಲರೆಲ್ಲರುಮಂ ಕೊಂದೊಡೆ (ಕಂಶಠಾ. ೬-೩೭ ವ); ಅಖಾಡದೊಳ್ ಪೊಕ್ಕು ಬಾಹಪ್ಪಲಿಸಿ ಬಲ್ಪುದೋಱಿಸಿದ ಮಲ್ಲನ

ನುಬ್ಬುರ್ತ್ತೊಯ್ಯನೊಳಪೊಕ್ಕು ಮಿಕ್ಕು ಪರಿದಿಕ್ಕಿ (೧೦೪. ೨-೧೧೫ ವ); ತಗರ ಕಾದಿಸುವ ಮಲ್ಲರ ಹೋರಿಸುತ್ತಿಹ . . . ರಾಜಪುತ್ರರು ಸೊಗಸಿದರು (೪೦ಪಿ. ೨-೬೬). ೩. ಬಲಶಾಲಿ; ಬಲಾಢ್ಯ: ಮುಂದಾಂಪರಾರುಮಿಲ್ಲ ದಿಕ್ಕಿ ಗೆಲ್ದ ಮಲ್ಲನಿರ್ದಂತಿರ್ದಾಗಳ್ (ಶಂಶಖ. ೦೨-೨೪ ವ): ಮಲ್ಲ ಭೀಷ್ಮನು ಪುರಕೆ ತಂದವರೆಲ್ಲರನು ತಮ್ಮಂಗೆ ಮದುವೆಯು ಮಾಡಲನುಗೈದ (ಸಂಭಶ. ೦೩-೩೫). ೪. ಗಟ್ಟಿಗ ; ದಕ್ಷ : 'ಪರಟಿಮಲ್ಲ' ಪರಾ. ೫. ಒಬ್ಬಾತನ ಹೆಸರು : ಮಲ್ಲ ಪರಿಯೊಡನೆ ತಾಗಿ ಕಾದಿ ಸಗ್ಗಿಯಾದವನ್ (ಎಕ. IX, ಶ್ರೀಬವಾ. ೦೯-೩; ಸು. 800). ೬. ಮಲ್ಲಿಕಾರ್ಜುನನೆಂಬ ಒಬ್ಬ ಕನ್ನಡ ಕವಿಯ ಹೆಸರು : ಮಲ್ಲಬುಧನಿಂದಂ ಕಾವ್ಯಸಾರಂ ಜಗನ್ನುತಮಾಯ್ತು (ಸೂಕ್ತಿಸು. ೦-೨೪). [ಸಂ.]

**ಮಲ್ಲಂತಿಗೆ** (ನಾ). ದ್ವಂದ್ವಯುದ್ಧಮಾಡುವವನು ಸೊಂಟಕ್ಕೆ ಕಟ್ಟಿಕೊಳ್ಳುವ ವಸ್ತ್ರದ ಪಟ್ಟಿ; ಕಾಸೆ : ಸಾಹಸಭೀಮಂ ಮಲ್ಲಂತಿಗೆಯ ನಪ್ಪೊಡಂ ಸಡಲಿಸದವನನವಯವದೊಳಿಂತೆಂದಂ (ಶಂಶಖ. ೩-೦೬ ವ) ; ಹಾಸಿದ ಪಸೆಯ ಮೇಲೆ ಮಲ್ಲಂತಿಗಿಱಿದಱಿದು ಕುಳ್ಳಿರ್ದು ಕಯ್ಯಿಕ್ಕಿಕೊಂಡಿರ್ದಮಂ (ಅರ್ಜನೀ. ೫-೨೮ ವ); ನಿನ್ನನೀ ಮನೆಯೊಳಗೆ ದಿಟದ ದೇವತೆಯಂತೆ ಮಲಗಿ ಮಲ್ಲಂತಿಗಿಱಿದು ಕುಳ್ಳಿರಲೀಯೆಂ (ಅರ್ಜನೀ. ೭-೫೦ ವ).

[< ಸಂ. ಮಲ್ಲವಸ್ತ್ರಿಕಾ]

**ಮಲ್ಲಕಂಭ** 'ಮಲ್ಲಗಂಭ' ನೋ.

**ಮಲ್ಲಕಳ** 'ಮಲ್ಲಗಳ' ನೋ.

**ಮಲ್ಲಕಾಳಗ** 'ಮಲ್ಲಗಾಳೆಗ' ನೋ.

**ಮಲ್ಲಖಂಡ** (ನಾ). ಒಂದು ಬಗೆಯ ಔಷಧಿ : ಕರ್ಪೂರಶಿಲಾಜಿತುಭಸ್ಮ, ಅತಿಮಧುರ . . . ಮಲ್ಲಖಂಡ ಇವನ್ನು ಸಮವಾಗಿ ಮರ್ದಿಸಿ ಜೇನು ತುಪ್ಪದೊಡನೆ ಕೊಡಲು ಬಹುಮೂತ್ರ ನಿಲ್ಲುವುದು (ಸಕಪ್ರ. ಶಂ. ೪೯೮).

[ ? ]

**ಮಲ್ಲಗ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಎಲ್ಲಾಯಿ ಯಕನಾತಿ ಬನದ ಶಂಕರಿ ಮಲ್ಲಗ ಜಟ್ಟಿಂಗ (ವಿಶಾಸು. ೫೮-೨). [ ? ]

**ಮಲ್ಲಗಂಟು** (ನಾ). ದ್ವಂದ್ವಯುದ್ಧ ಮಾಡುವವನು ತನ್ನ ಸೊಂಟಕ್ಕೆ ಕಟ್ಟಿಕೊಳ್ಳುವ ನಡುಕಟ್ಟು : ಉಟ್ಟ ಮಲ್ಲಗಂಟಿನ ತೊಡರ್ಚಿದುಡೆಗಂಟೆಯು . . . ಕಟ್ಟಣಕದ ಸಿಂಗರಂಬೆರಸಿ ಬೀರಸಿರಿಯಂ ಬೀಱಿ (೧೦೪. ೬-೫೫ ವ); ನಿಱಿಯುಡಿಗೆಯಲಿ ಮಲ್ಲಗಂಟಿನ ಸೆಱಗ ಮೋಹಿಸಿ ಬೆರಳ ದರ್ಭೆಯ ಹಱಿದು ಬಿಸುಟನು (ಕುವ್ಯಾದ್ರೋ. ೯-೦೫); ಮಗಧ ರಾಜನನ್ನು ಮಲ್ಲಗಂಟನಲ್ಲಿ ತುಡುಕಿ ಹಿಡಿದು ರಭಸದಿಂದ ತಿರುವಿ ಎಸೆದನು (ರಾಜಸೂ. ೨೫). 'ಮಲ್ಲಂತಿಗೆ' ನೋ. [ಮಲ್ಲ + ಗಂಟು]

**ಮಲ್ಲಗಂಡಿಕೆ** (ನಾ). ಜಟ್ಟಿಯ ಪರಾಕ್ರಮ, –ಶೌರ್ಯ : ಕಲಿಯುಗದ ಈ ಭೀಮನ ಮಲ್ಲಗಂಡಿಕೆಯ ಮೆಯ್ಸಿರಿಯಲ್ಲಿ ಅಳಿವರಿಕೆಗೊಳ್ಳಬಹುದಹುದು (ಮಂತ್ರಕ., ೮೮-೦೫). [ಮಲ್ಲ + ಗಂಡಿಕೆ$_1$]

**ಮಲ್ಲಗಂಬ** 'ಮಲ್ಲಗಂಭ' ನೋ.

**ಮಲ್ಲಗಂಭ**, ಮಲ್ಲಕಂಭ, ಮಲ್ಲಗಂಬ (ನಾ). ೧. ಜಟ್ಟಿಗಳು ಕಸರತ್ತು ಮಾಡಲು ಗರಡಿಮನೆಯಲ್ಲಿ ನೆಟ್ಟಿರುವ ಕಂಬ. ೨. ಆನೆಗಳನ್ನು ಕಟ್ಟುವ ಕಂಬ: ಮದಕರಿಗಳು ಕಟ್ಟಿದ ಮಲ್ಲಗಂಭವನೊಡೆದು ಕೆಡಹಿಕೊಂಡಾಗ . . . ದೆಸೆದೆಸೆಗೈದಿ ಹದಗೆಟ್ಟೋಡಿಯಾಡಿದುವು (ಕಂಪಿ. ೧೫-೯೨). **ಮಲ್ಲಕಂಭ** : ೨. ಒಂದು ಮೂಲೆಗೆ ಮಲ್ಲಕಂಭವಿದ್ದು ಅದರ ಬುಡಕ್ಕೊಂದು ಬೆಳ್ಳಿಯ ಸರಪಳಿಯನ್ನು ಭದ್ರವಾಗಿ ಬಂಧಿಸಿದ್ದರು (ರಕ್ತರ್ನ್ರ. ೩೩೦). ೩. ಮಲ್ಲಗಂಬದ ಮೇಲೆ ಮಾಡುವ ಕಸರತ್ತು : ಎಲ್ಲಿಯ ಬಾಲಕ ? ನನಗಿಂತ ಹಿರಿಯನು. ಮಲ್ಲಕಂಭ, ಕುಸ್ತಿ ಇತ್ಯಾದಿಗಳನ್ನು ಮಾಡುತ್ತಾನೆ (ಪೂರಾಣಿ. ೦೬). **ಮಲ್ಲಗಂಬ** : ೧. ಶಂಬರವೈರಿಯೆಂದೆಂಬ ಮಲ್ಲನ ಮಲ್ಲಗಂಬವನಿರದಿಳಿಕೆಯ್ವ ಇಂಬುವಡೆದ ತೊಡೆಗಳ ನೀಱಿವನಾರು (ಕುಠಾಸಾಂ. ೨೨-೫೨). ೩. ಮುಂಜಾನೆ ಮಾಡುವ ವ್ಯಾಯಾಮದಲ್ಲಿ 'ದಂಡ', ಉಟಾಬಸಿ, ಓಡುವದು, ಮಲ್ಲಗಂಬ, ಲೋಡು ತಿರುವುವದು ಮುಂತಾದವುಗಳೂ . . . ಬರುತ್ತವೆ (ಬ್ರಹ್ಮಜೀ. ೨೦೦).

[ಮಲ್ಲ + ಕಂಭ]

**ಮಲ್ಲಗಚ್ಚೆ** (ನಾ). (ದ್ವಂದ್ವಯುದ್ಧ ಮಾಡುವವನಂತೆ) ನಿರಿಯನ್ನು ಹಿಂದಕ್ಕೆ ಹೊರಳಿಸಿ ಬಿಗಿದು ಕಟ್ಟುವ ಕಚ್ಚೆ; ವೀರಗಚ್ಚೆ : ಕರದಿ ಬಿಲ್ಲಂ ಪಿಡಿದು ಮೇಣುಟ್ಟು ಮಲ್ಲಗಚ್ಚೆಯ ಪೀತವಸನಮಂ, ತಿರುಗುತಿರೆ ಚಿತ್ರಾಂಗಿ, ಕಾನನದ ರಾಣಿ ತಾನೆಂಬವೋಲ್ (ಚಿತ್ರಾಂಗ. ೩-೬೯).

[ಮಲ್ಲ + ಕಚ್ಚೆ]

**ಮಲ್ಲಗದ್ದೆ** (ನಾ). ಒಂದು ಬಗೆಯ ಭೂಮಿ : ಯಿ ನಾಲ್ಕುಗಡಿಯಿಂದೊಳಗೆ ಮನೆ ಠಾಉ ಮಲ್ಲಗದ್ದೆ ಮತ್ತಗದ್ದೆ ಮಿಕ್ಕ ಸಹಾ ನಾಗಂಡುಗದ್ದೆ ಮು ೧೦ (ಸೌಇಇ. IX–ii, ೪೬೫–೦೦; 1472).

[ಮಲ್ಲ ? + ಗದ್ದೆ (< ಗಱ್ದೆ)]

**ಮಲ್ಲಗಳ**, ಮಲ್ಲಕಳ (ನಾ). ದ್ವಂದ್ವಯುದ್ಧ ನಡೆಯುವ ಸ್ಥಳ ; ಅಖಾಡ; ಕುಸ್ತಿಕಣ : ಇಂದ್ರಧನುವೆ ಪೋಗವೆ ನಿಂದತ್ತನೆ ಪಂಚರತ್ನಮಯಮಂದನಮಾಲಿಕೆ ಮಲ್ಲಗಳದ ಬಾಗಿಲೊಳೆಸೆಗುಂ (ಜಗಪಿ. ೬–೪೦). **ಮಲ್ಲಕಳ** : ಆ ಊರ ಮಲ್ಲಕಳದಲ್ಲಿ ಹೋರಿ ಹೊಯ್ದಾಡಿ (ಶಿಗಪ. ೪೫–೦೩).

[ಮಲ್ಲ + ಕಳ$_3$]

**ಮಲ್ಲಗಾಸೆ** (ನಾ). = ಮಲ್ಲಗಚ್ಚೆ : ಮಲ್ಲಗಾಸೆಯ ತೆಗೆದುಟ್ಟು ನಲಿದು ಭರದಲ್ಲಿ ವಜ್ರಾಂಗಿಯ ತೊಟ್ಟು . . . ನಡೆತಂದರು ನಿಲ್ಲದೆ ಕಲಿವೀರಭಟರು (ಜೀವಂಸಾಂ. ೫–೩೫); ಕಪ್ಪಿನ ಭುಜಂಗಚರ್ಮದ ಮಲ್ಲಗಾಸೆಯಿಂದೆಸೆದ ವನಚರರೆಱಿಯರಂ ಕಂಡಳು (ಪುರೀಪು. ೩೦–೨೩); ಜಗಜಟ್ಟಿಗಳ ತೆರದಿಂದೆ ಮಲ್ಲಗಾಸೆಯ ಬಿಗಿದು (ನವಮೋ. ೨೪–೫೫). [ಮಲ್ಲ + ಕಾಸೆ$_1$]

**ಮಲ್ಲಗಾಳಗ** 'ಮಲ್ಲಗಾಳೆಗ' ನೋ.

**ಮಲ್ಲಗಾಳೆಗ**, ಮಲ್ಲಕಾಳಗ, ಮಲ್ಲಗಾಳಗ (ನಾ). ಜಟ್ಟಿಗಳು ಮಾಡುವ ಯುದ್ಧ; ಬಾಹುಯುದ್ಧ; ದ್ವಂದ್ವಯುದ್ಧ : ಮಲ್ಲಗಾಳೆಗ ಮಲ್ಲಘಾತು . . . ಎಂದು ಸೊಬಗಿಡದ ತತ್ಸಮಕೆ ಕನ್ನಡ ಸಕ್ಕದಂಗಳಲಿ ಕ್ರಮದಿಂದ ತೋರ್ಪುದಾಹರಣೆಯಕ್ಕುಂ (ಕದ್ವಿಕ್ರ. ೯೯); ಇಂತಿರ್ವರುಂ ಸೋಲುಗೆಲವುಗಾಣದೆ ಗದೆಗಳಂ ತೊಱೆದು ಮಲ್ಲಗಾಳೆಗಕೆಳಸುತಿರಲು (ತೊರೆಭಾ. ೦೬–೩೫). **ಮಲ್ಲಕಾಳಗ** : ಆ ಕಾಲದಲ್ಲಿ ಮಲ್ಲಕಾಳಗ ಮೊದಲಾದ ಪ್ರದರ್ಶನಪಂದ್ಯಗಳು ನಡೆಯುತ್ತಿದ್ದುದು ಆ ಬಯಲುರಂಗಭೂಮಿಯಲ್ಲಿಯೇ (ಕಶಕ್ರ. ೫–೦೪೪). **ಮಲ್ಲಗಾಳಗ** : ಮಲ್ಲ – ಮಲ್ಲಗಾಳೆಗ (ಮಲ್ಲಗಾಳಗ), ಮಲ್ಲಮುರಾಂತಕ, ಮಲ್ಲಘಾತು (ಕಮಿಪ. ೨೯೮ ಪ್ರಯೋ).

[ಮಲ್ಲ + ಕಾಳೆಗ]

**ಮಲ್ಲಗಿಳಿ** (ನಾ). (ಮಾತನಾಡುವುದರಲ್ಲಿ) ಸಮರ್ಥವಾದ ಗಿಳಿ : ಕಲ್ಲದಾಡುವ ತೆಲ್ಲಯಿಸಿದ ಮಲ್ಲಗಿಳಿಯ ಸವಿನುಡಿಗೆ . . . ಬೆಲ್ಲಂಗೋಲ್ವಲ್ಲನ ಮಲ್ಲಿಗೆಸರಲ ಬಲ್ಲಣೆಗೆ ತಲ್ಲಣಂಗೊಂಡು (ರಾಪಾಶ್ಚ. ೬೩–೪). [ಮಲ್ಲ + ಗಿಳಿ]

**ಮಲ್ಲಡಿ** (ನಾ). ಒಬ್ಬಾತನ ಹೆಸರು : ಲೋಕಾದಿತ್ಯ ಎಳಅರಸಮ್ಮಗಂದಿ ಮಲ್ಲಡಿಯುಂ ಕದಂಬೂರಾ ನಾಲ್ವದಿಂಬರು (ಎಕ. X, ಕೋಲಾರ. ೬–೫; 760). [ಮಲ್ಲ + ಅಡಿ$_1$]

**ಮಲ್ಲಣೆ** 'ಮಲ್ಲಟಿ' ನೋ.

**ಮಲ್ಲಣೆಗೊಳ್** 'ಮಲ್ಲಟಿಗೊಳ್' ನೋ.

**ಮಲ್ಲಣಿಸು** 'ಮಲ್ಲಳಿಸು' ನೋ.

**ಮಲ್ಲತುಂಬಿ** (ನಾ). ಗೋಡೆಗಳಿಗೆ ಮಣ್ಣು, ಸಿಮೆಂಟು ಮುಂತಾದುವುಗಳನ್ನು ಮೆತ್ತಿ ನಯಮಾಡುವುದು ; ಗಿಲಾವು : ಹರಕುಮುರುಕಾಗಿ,

ಬೀಳಲಿದ್ದ ಮನೆಗೆ ನಲವತ್ತುರೂಪಾಯಿ ವೆಚ್ಚಮಾಡಿ, ಹೋದ ತಿಂಗಳವೇ ಮಲ್ಲತುಂಬಿ ಮಾಡಿಸಿದ್ದಳು (ತೇರು. ೬೩). [ ? ]

**ಮಲ್ಲದಾಳ** (ನಾ). ಮಲ್ಲಯುದ್ಧದಲ್ಲಿ ಜಟ್ಟಿಗಳು ತೊಡೆ ಮತ್ತು ತೋಳುಗಳನ್ನು ತಟ್ಟಿ ಸದ್ದು ಮಾಡುವುದು : ಪಳುಕಿನ ಕೋಡುಗಲ್ಗಳೊಳ್ ಪೊಳೆವ ತಮ್ಮ ನೆಟಲೆ ನೆರೆದ ಮಲ್ಲರ ನೆರವಿಯಾಗಿಯುಂ ನಿಕುಂಜೋಪಾಂತಜರ್ಝರನಿರ್ಝರಧ್ವನಿಯೆ ಮಲ್ಲದಾಳಮಾಗಿಯುಂ (ಶಂಪ್ರಕೃ. ೫-೭೭ ವ).

[< ಸಂ. ಮಲ್ಲಶಾಲ =ಸಂಗೀತದಲ್ಲಿಯ ಒಂದು ಬಗೆಯ ತಾಳ]

**ಮಲ್ಲಪ** (ನಾ). ಒಬ್ಬಾತನ ಹೆಸರು : ಕಾವಳಿಯರಣುಗಯ್ಯ ತನ್ನ ತಮ್ಮ ನೊಟಪ್ಪುರಸನ ಮಲ್ಲಪ [ಮ]ನ್ನಟಿ ಕಾದು ಮನ್ನಟಿ ಕೊನ್ದು ಪಾ × × × (ಎಕ. IX, ಹೊಸಕೋ. ೯೮-೩; ಸು. 980 ?).

[ಮಲ್ಲ + ಅಪ (<ಅಪ್ಪ$_1$)]

**ಮಲ್ಲಪಡಿ** (ನಾ). (?) : ಬೆರಕವೆಳಗಿಂ ಸುರಧನುವಿನ ಹೊರಜೆ ಹತ್ತಿದೈರಾವತಕ್ಕೆ ವೈರಮನೊಡರ್ಚೆ ಮಲ್ಲಪಡಿಯ ಪಱಿಯ ದತ್ತಿಗುಲ್ಲಾಳದಿಂ ನಡೆದು ತೋಱೆ ಹಿಂಗಾಲ್ನಿಂದ ಸೂಟಾನೆಗಳ ತಾಳವಟ್ಟಮಂ ಪಿಡಿದು ಪಿಂದಣ್ಗೆ ಚಿಗಿದು (ಅಪಂಶ. ೨-೨೭ ವ). [ ? ]

**ಮಲ್ಲಪಳಿ** (ನಾ). ಜಟ್ಟಿಯು ಧರಿಸುವ ಉತ್ತಮವಾದ ವಸ್ತ್ರ : ಕಟ್ಟದ ದಟ್ಟಿ ಚಲ್ಲಣದ ಉಟ್ಟ ಮಲ್ಲಪಳಿಯ ಈ ವೇಷದಿಂದ ಕೆಮ್ಮಣ್ಣುಮಟ್ಟಿಯಲ್ಲಿ ವೀರಾಸನದಲ್ಲಿ ಕುಳ್ಳಿರುತ್ತ (ಏಗಹ. ೩೦-೨೨). [ಮಲ್ಲ + ಪಳಿ$_4$ (<ಪಟಿ$_5$)]

**ಮಲ್ಲಮರ್ದನ** (ನಾ). (ಚಾಣೂರನೆಂಬ) ಜಟ್ಟಿಯನ್ನು ನಾಶಪಡಿಸಿದವನು ; ಕೃಷ್ಣ : ನಿಲ್ಲಬೇಕಯ್ಯ ನೀ ಮಲ್ಲಮರ್ದನ ಸಿರಿವಲ್ಲಭ ಎನ್ನ ಹೃದಯದಲ್ಲಿ ಸತತ (ಪುರಂದ. ಧಾ. ೧-೧೧೭ ಕಲ್ಲಿ). [ಸಂ.]

**ಮಲ್ಲಯುದ್ಧ** (ನಾ). = ಮಲ್ಲಗಾಳೆಗ : ಒಂದುದಿವಸಂ ವಿರಾಟಂ ನೆಲದೊಳುಳ್ಳ ಮಲ್ಲರೆಲ್ಲರುಮಂ ಬರಿಸಿ ಮಲ್ಲಯುದ್ಧಮಂ ನೋಡೆ (ಪಂಭಾ. ೮-೫೭ ವ); ಕಾಹುರದ ಕಲಿಗಳೊಡವೆರಸಿ ಹೊಯ್ದಾಡಿದರ್ಬಾಹುನಖಮುಷ್ಟಿಕೇಶಾಕೇಶಿಮಲ್ಲಯುದ್ಧದ ಹತಾಹತಿಗಳಿಂದೆ (ಜೈಮಿಭಾ. ೨೭-೬); ಕಾಳಗಕ್ಕೆ ಸಿದ್ಧನಾಗು ಎಂದು ನುಡಿದು ಮಲ್ಲಯುದ್ಧಕ್ಕೆ ಮಾತು ಕೊಟ್ಟನು (ರಾಜಕಥಾ. ೨೩). [ಸಂ.]

**ಮಲ್ಲರಂಗ** (ನಾ). ಮಲ್ಲಯುದ್ಧ ಮಾಡುವ ಸ್ಥಳ ; ಕುಸ್ತಿಕಣ ; ಅಖಾಡ : ಅನ್ನೆಗಂ ಮಲ್ಲರಂಗಕ್ಕವತರಿಸಿ ನಿಂದು (ಜಗಪು. ೬-೫೮ ವ). [ಸಂ.]

**ಮಲ್ಲಲ್** (ನಾ). ಮಧ್ಯಭಾಗವು ಹಳ್ಳವಾಗಿರುವ (ಮಣ್ಣಿನ) ಪಾತ್ರೆ : ಅನಿಬರುಮಂ ನೆಲಮನೆಯೊಳಿಕ್ಕಿ ಮಲ್ಲಲ್ ಪುಗುವನಿತು ಬಾಗಿಲಂ ಮಾಡಿ ಪ್ರತಿದಿನಕ್ಕೊಂದು ಮಲ್ಲಲ ಕೂಳುಮನೊಂದು ಮೊಗವೆ ನೀರುಮಂ . . . ನೀಡಿದೊಡೆ (ವಡ್ಡಾರಾ. ೧೬೨-೧೧).

[ದೇ.॥ ತಮಿ. ಮಲ್ಲವ್, ಮಲ್ಲೈ; ಮಲ. ಮಲ್ಲ, ಮಲ್ಲಿಕ; ತೆಲು. ಮಲ್ಲ; ಗೊಂಡಿ. ಮಾಲ್ಕೀ ; ಪರ್ಜಿ. ಮಲ್ಲಕ]

**ಮಲ್ಲವಱೆ** (ನಾ). ಒಂದು ಬಗೆಯ ರಣವಾದ್ಯ; ಜಟ್ಟಿಕಾಳಗ ನಡೆಯುವಾಗ ಬಾರಿಸುವ ಹರೆ : ಮಲ್ಲವಱೆಗಳು ಮೊಳಗಲಪ್ರತಿಮಲ್ಲರೋಲಗದಿದ್ದೆಸೆಗೆ ಜನವೆಲ್ಲ ಕುಳ್ಳಿರಲೆಸೆವ ಮಂಚಗಳಲಿ (ಶಭಾಗ. ೧೧-೩೮-೩೫). [ಮಲ್ಲ + ಪಱೆ$_1$]

**ಮಲ್ಲವಾತು** (ನಾ). ಜಟ್ಟಿಕಾಳಗದಲ್ಲಿ ಮಲ್ಲರರು ಮಾಡುವ ವೀರೋದ್ಗಾರ, ಮೂದಲಿಕೆ ಮುಂತಾದುವು : ಮಲ್ಲ—ಮಲ್ಲಗಾಳೆಗ (ಮಲ್ಲಗಾಳಗ), ಮಲ್ಲಮುರಾಂತಕ, ಮಲ್ಲವಾತು (ಶಮುವ. ೨೯೮ ಕ್ರಿಯೋ).

[ಮಲ್ಲ + ಮಾತು$_1$]

**ಮಲ್ಲವಿದ್ಯೆ** (ನಾ). ಜಟ್ಟಿಕಾಳಗವನ್ನು ಮಾಡುವ ಕಲೆ ; ಕುಸ್ತಿವಿದ್ಯೆ : ಕೇಸರಿಗೆ ಶೌರ್ಯ್ಯದೊಳ್ ದೊರೆ ಕೇಸರಿ ಬಹುಬಂಧ ಮಲ್ಲವಿದ್ಯಾಬಲದೊಳ್ ಶಾಸಿತಮುಷ್ಟಿಕ ಚಾಣೂರಾಸುರನೊರ್ಬ್ಬನೆ ಸಮಾನಂ (ಎಕ. V, ಅರಸೀ. ೧೮-೨೫; 1140); ಭುಜಬಲವಱಿವೆನಗ್ಗದ ಮಲ್ಲವಿದ್ಯೆಯಲಿ (ಕುವ್ಯಾಪ. ೧-೨೨). [ಸಂ. ಮಲ್ಲವಿದ್ಯಾ]

**ಮಲ್ಲವೋರ್** (ಕ್ರಿ). ಜಟ್ಟಿಕಾಳಗ ಮಾಡು ; ಕುಸ್ತಿ ಮಾಡು : ಮಲ್ಲವೋರ್ವೊಡೆ ಬಲ್ಲಿದರೆನಗಿಲ್ಲ ಮಲ್ಲರವನಿಪ ಪೆಸರಿಂ ವಲ್ಲಲನೆಂ (ಪೇಬಿಚ. ೧೧-೦೨೯); ಗಜಮಲ್ಲನೊಳ್ ಪ್ರತಿಮಲ್ಲಂ ಮಲ್ಲವೋರ್ದು ಸಿಂಹನಾದದಿನಾರ್ದ್ದು (ಅರ್ಧನೇ. ೬-೯೯ ವ). [ಮಲ್ಲ + ಪೋರ್$_1$]

**ಮಲ್ಲವೋರ್ಕೆ** (ನಾ). ಕುಸ್ತಿ ; ಮಲ್ಲಯುದ್ಧ : (ಮಲ್ಲವೊ[ವೋ]ರ್ಕೆ) ಮೊದಲಾದ ರಾಗದ್ವೇಷಹೇತುಗಳಂ ನೆಗಟ್ವುದುಂ ಕಾಯುಗತನುಮಕ್ಕುಂ (ಶಸಾರ. ೩೦೯). [ಮಲ್ಲ + ಪೋರ್ಕೆ]

**ಮಲ್ಲಶಾಲೆ** (ನಾ). ಕುಸ್ತಿಯನ್ನು ಕಲಿಸುವ ಮನೆ ; ಗರಡಿ : ಮನವಿದೊಂದು ಮಲ್ಲಶಾಲೆ (ವಿಜವ. ೯೮-೧). [ಸಂ. ಮಲ್ಲಶಾಲಾ]

**ಮಲ್ಲಶ್ರಮ** (ನಾ). ಜಟ್ಟಿಕಾಳಗ : ಸಾಕಿದೇತಕೆ ಮಲ್ಲಶ್ರಮದಲಿ ನೂಕಿ ನೋಡುವೆವಿನ್ನು ಕೈದುಗಳೇಕೆ ದೃಢಮುಷ್ಟಿಪ್ರಹಾರಪ್ರಕಟಸತ್ವರಿಗೆ (ಕುವ್ಯಾಕ. ೧೯-೩೯). [ಸಂ.]

**ಮಲ್ಲಸಾಲೆ** (ನಾ). = ಮಲ್ಲಶಾಲೆ : ಬಣ್ಣಬಣ್ಣದ ಜೀವ ಕತಕತನೆ ಕುದಿಯುವವು ಮನೆಯಾಯ್ತು ಮಲ್ಲಸಾಲೆ (ಗಂ. ೫೦-೧೬).

[< ಸಂ. ಮಲ್ಲಶಾಲಾ]

**ಮಲ್ಲಳಿ** ' ಮಲ್ಲಟಿ ' ನೋ.

**ಮಲ್ಲಳಿಕಾಱ** ' ಮಲ್ಲಟಿಗಾಱ ' ನೋ.

**ಮಲ್ಲಳಿಗಡಲ್** (ನಾ). ಕ್ಷೋಭೆಗೊಂಡ ಸಮುದ್ರ : ಅಡಕಿಲುದೆರೆಗಳುಲಿದು ಹಳಚಲು ಮೊಱಹು ಮೊಱೆದು ಕಡೆದು ಮಲ್ಲಳಿ [ಪಾಠಾಂ. ಣಿ]ಗಡಲನೊಡೆಗಲಸಿ ಕುಡಿದು ಮೊಱೆವಡಸಿ . . . ಮೊಱೆದುದರರೆ ಪಶ್ಚಿಮವಸನಿಧಿ (ಸೋಮಕ. ೧-೬೦). [ಮಲ್ಲಳಿ (< ಮಲ್ಲಟಿ) + ಕಡಲ್$_2$]

**ಮಲ್ಲಳಿಗಾರ್ತಿ** ' ಮಲ್ಲಟಿಗಾರ್ತಿ ' ನೋ.

**ಮಲ್ಲಳಿಗಾಱ** ' ಮಲ್ಲಟಿಗಾಱ ' ನೋ.

**ಮಲ್ಲಳಿಗೊಳ್** ' ಮಲ್ಲಟಿಗೊಳ್ ' ನೋ.

**ಮಲ್ಲಳಿಸು, ಮಲ್ಲಣಿಸು** (ಕ್ರಿ). ೧. ವೃತ್ತಾಕಾರವಾಗಿ ಚಲಿಸು; ಸುತ್ತು; ತಿರುಗು : ನಡೆಗುಂ ಕುಲಾಲಚಕ್ರದ ಕಡೆಯೊಳ್ ಮಲ್ಲಳಿಪ ಕೀಲದಂತೆ (ಧರ್ಮಾಮೃ. ೨-೨-೭೦). ಮಲ್ಲಣಿಸು : ೨. (ಮೃಗವು ಬೇಟೆಗಾರನಿಂದ ತಪ್ಪಿಸಿಕೊಳ್ಳಲು) ಸುತ್ತಾಡು ; ಅಲೆದಾಡು : ಪುಲ್ಲೆಯ ಹಿಂಡು ಮಲ್ಲಣಿಸಿ ತಲ್ಲಣಗೊಂಡವು (ಸೂಕ್ತಿಸು. ೩-೧೧೭). ೩. ಹಿಂಸಿಸು ; ಪೀಡಿಸು : ಮಲ್ಲಣಿಪ ಜಾಡ್ಯಮುಂ ಜಕ್ಕುಲಿಪ ತೊದಲುಮಂ ನಿಲ್ಲಲೀಯದು (ಲಿಂಗಪು. ೮-೪೭). [ಮಲ್ಲಳಿ (< ಮಲ್ಲಟಿ) + — ಇಸು$_3$]

**ಮಲ್ಲಟಿ, ಮಲ್ಲಣಿ, ಮಲ್ಲಳಿ** (ನಾ). ೧. ತಿರುಗಾಟ ; ಸುತ್ತಾಟ : " ಮಲ್ಲಟಿ = ಶರೀರವ್ಯಾಕುಲತೆ ; ಸುತ್ತಿ ಬರ್ಪುದು " (ಕಮುಪ. ಕಂ. ೧). ' ಮಲ್ಲಟಿಗಾರ್ತಿ ' ಪರಾ. ೨. ದೇಹಕ್ಕೆ ಉಂಟಾಗುವ ರೋಗ ಮುಂತಾದ ತೊಂದರೆ : " ಮಲ್ಲಟಿ—ಶರೀರವ್ಯಾಕುಲತೆ ; ಸುತ್ತಿ ಬರ್ಪುದು " (ಕಮುವ. ಕಂ. ೧). ೩. ಭಯ ; ಹೆದರಿಕೆ ; ಅಂಜಿಕೆ : " ಅಗುರ್ವು . . . ಮಲ್ಲಟಿ, ತಲ್ಲಟಿಂ, ಅದಿರ್ಪು— ಈ ೧೦ ಭಯಂ " (ಕಶಾ. ೫೭-೨೨೩); " ಮಲ್ಲಟಿ ಬೆಜ್ಜರ ಬೆಬ್ಬಳ ತಲ್ಲಟ . . . ನಿಲ್ಲದೆ ಭಯನಾಮ " (ಕಬಕಂ. ೧೧೬). ೪. ಗುಂಪು ; ಸಂದಣಿ : ಲಸತ್ಪ್ರಭಾತ ಸಮಿಾರಂ . . . ಪೊವಟ್ಟ ಪೊಂಪುಟಿಯೊಳುಂ ಪೊಂಗಿ ಝೇಂಕರಿಪ ಮಱಿಯ ಮಲ್ಲಟಿಗಳೆಱಕೆಗಳಲ್ಲಿ . . . ಪೊಕ್ಕು (ಅದ್ಭುಪ. ೧೧-೦೨೯). ' ಮಲ್ಲಟಿಗೊಳ್ ', ' ಮಲ್ಲಟಿದಿರಿ ' ಪರಾ. ೫. ತುಂಬಿ ; ಭ್ರಮರ : " ಅಲರ್ವಕ್ಕಿ, ಬಂಡುಣಿ, ಪಱಮೆ, ಮಲ್ಲಟಿ . . .

ಮುಯ್ಯೆರಪಡಿ – ಈ ೭ ಫುಮರಂ" (ಕಲಾ. ೩೩-೧೯೮). **ಮಲ್ಲಣೆ.** ೨. 'ಮಲ್ಲಣೆಸು' ಪರಾ. ೬. ಮಂಡಲಾಕಾರವಾಗಿ ಸುತ್ತಿ ಮಾಡುವ ನೃತ್ಯ : ರಾಸಕ್ರೀಡೆ : ಗೊಲ್ಲಗೊಲ್ಲತಿಯರಲ್ಲಿಯ ಸಾಕಿನೆ ಸಲ್ಲಿಸಿದೆಯೊ ಮಲ್ಲಣೆಯೆಲ್ಲ ? (ಗೀತಾ. ೪೪-೭). ೭. ಗೊಂದಲ : ಗಜಿಬಿಜಿ : ತತ್ಪುರೀಜನದ ಪೊದಟ್ಟು ತಲ್ಲಣದ ಮಲ್ಲಣೆ ಬೀದಿಯೊಳಾದುದದ್ಭುತಂ (ಶರ್ಕಾ. ೩-೩). ೮. ಅಲ್ಲೋಲಕಲ್ಲೋಲ ; ಕ್ಷೋಭೆ : ಘುಲ್ಲವಿಸಿ ನೀಪೀಗ ಕರ್ಮದ ಮಲ್ಲಣೆ[ ಣಿ ]ಯು ಕಡುಗಡಲ ಬಿಬುಹೊಯ್ಲಿಗೆನ್ನನು ಸಲಿಸುವರೆ (ಸದ್ಭ.ರು. ೦-೨೦). **ಮಲ್ಲಳಿ :** ೧. ಇಂತಿಲ್ಲಿಯಾ ಮಲ್ಲಳಿಯು ದಂದುಗಕೆ ಸಿಲ್ಕಿ ದುಃಖಿಸಿದಪರ್ (ಸಂಸಹ. ೩೪-೨೦೨). ೮. 'ಮಲ್ಲಳಿ ಗಡಲ್' ಪರಾ. ೯. ಆಶ್ಚರ್ಯ ; ಬೆರಗು : "ಸಮೂಹ ಬೆರಗುಗಳು ಮಲ್ಲಳಿಯೆನಿಪ್ಪವು" (ಕಲರ. ೮೭). [ದೇ.॥ ತೆಲು. ಮಲ್ಲಡಿ]

**ಮಲ್ಲಟಿಗಾರ್ತಿ**, ಮಲ್ಲಳಿಗಾರ್ತಿ (ನಾ). (ಕೆಲಸವಿಲ್ಲದೆ) ಅಲೆದಾಡುವವಳು; ತಿರುಗಾಡುವ ಸ್ವಭಾವದ ಹೆಂಗಸು: "ಮಲ್ಲಟಿಗಾರ್ತಿಯೆನೆ ಸುತ್ತಿಬರ್ಪಾಕೆಯೆಂದು ಪೇಟ್ವರ್ ಸುಗುಣರು" (ಕಬ್ಬಿ. ೨೭). **ಮಲ್ಲಳಿಗಾರ್ತಿ :** "ಮಲ್ಲಳಿಗಾರ್ತಿಯೆನಲು ತಿರುಗಾಡುವ ಸ್ತ್ರೀಯುಕ್ಕು" (ಕಲರ. ೮೭).

[ ಮಲ್ಲಟಿಗಾಜ + – ತಿ$_1$ (< – ಇತ್ತಿ) ]

**ಮಲ್ಲಟಿಗಾಜ**, ಮಲ್ಲಳಿಕಾಜ, ಮಲ್ಲಳಿಗಾಜ (ನಾ). ೧. ಸುತ್ತಾಡುವವನು; ಅಲೆದಾಡುವವನು : 'ಮಲ್ಲಟಿಗಾರ್ತಿ' ಪರಾ. **ಮಲ್ಲಳಿಕಾಜ:** ೨. ಕ್ಷೋಭೆಯನ್ನುಂಟುಮಾಡುವವನು ; ತಳಮಳವನ್ನುಂಟುಮಾಡುವವನು : ಜವ್ವನದ ಸೂಜಿಕಾಜಂ ಮನದ ಮಲ್ಲಳಿ[ಶಾಕಾಂ. ಣಿ] ಕಾಜಂ ಚಿತ್ತದ ದಳವುಳಿಕಾಜಂ ಬಂದಂ (ಸಂಶರ. ೦೨-೩೯). **ಮಲ್ಲಳಿಗಾಜ:** ೩. (ದಟ್ಟಹೆಜ್ಜೆಯಿಟ್ಟು) ನಡೆದಾಡುವವನು : ನಳನಳಿಸಿ ಬೆಳೆವುತಿಪ್ಪ ಅರಳೆಲೆಯರಸಂ ಮಾಗಾಯ್ಗಳ ಮಲ್ಲಳಿಗಾಜಂ ಪೊಂಗುಡಗದ ಲಿಂಗವಂತಂ (ಬಸರ. ೧೦-೦೦೩). [ ಮಲ್ಲಟಿ + – ಕಾಜ ]

**ಮಲ್ಲಟಿಗೊಳ್**, ಮಲ್ಲಣೆಗೊಳ್, ಮಲ್ಲಳಿಗೊಳ್ (ಕ್ರಿ). ೧. ಭಯಗೊಳ್ಳು; ತಲ್ಲಣಗೊಳ್ಳು : ಮುಳಿದಪ ವಾಯ್ಗಳಿ ಮಲ್ಲಟಿಗೊಂಡೊಳಸಾರ (ಕಬ್ಬಿ. ೩೦೧). ೨. ಗುಂಪುಗೂಡು ; ಒಟ್ಟಾಗು : ಕಲ್ಲ ಗವಿಯೊಳಗೆ ಕಟ್ಟಲೆ ಮಲ್ಲಟಿಗೊಂಡಿರ್ದ ತಜದಿನಿರ್ಪುವು (ಸೂಕ್ತಿಸು. ೩-೦೩೨). ೩. ಪಕ್ಕಕ್ಕೆ ಸರಿ,—ಚಲಿಸು : "ಮಲ್ಲಟಿಗೊಂಡುದು ಸರಿದು ದೋಸರಿಸಿದುದು" (ಕಬಳ. ೨೩೨). **ಮಲ್ಲಣೆಗೊಳ್ :** ೧. ದೇವ ದೇವ ಜನನಮರಣಕ್ಕಂಜಿದೆಂ ಮಾಯೆಗೆ ಮಲ್ಲಣೆ [ಶಾಕಾಂ. ಳಿ]ಗೊಂಡೆಂ ತಾಪತ್ರಯಕ್ಕೆ ತಲ್ಲಣಿಸಿದೆಂ (೬೩೮. ಹ. ೨೦೭-೭). ೪. ಕ್ಷೋಭೆಗೊಳ್ಳು: ತಳಮಳಗೊಳ್ಳು : ಬಸವರಾಜಂ ಪೊಗಳ್ತೆಗೆ ತಲ್ಲಣಿಸಿ ತಗ್ಗಿ ಮಲ್ಲಣೆಗೊಂಡಾಗಳಾಗಳನ ಸಂಗತಿಗೆ ಪೊಸಹೊಸಗೀತಮಂ ಕೇಳಿಸುತ್ತಿರ್ದ ಸಮಯದೊಳು (ಬಸರ. ೮-೭೦); ಮನದೊಳ್ ಮಲ್ಲಣೆಗೊಂಡು ದುಶ್ಶಾಸನಾದಿ ದುರ್ಯೋಧನಸಹೋದರರ್ . . . ಪಾಂಚಾಲರಾಜ ಬಾಲಕನನೊತ್ತರಿಸುತ್ತುಂ ಮುತ್ತುವುದಂ ಕಂಡು (ಮಹಾಸೀ. ೦೨-೨೦೩ ವ). **ಮಲ್ಲಳಿಗೊಳ್ :** ೧. ತಲ್ಲಣಿಸಿ ಮಲ್ಲಳಿಗೊಂಡು ಪೋಳಲೊಳಗಣ ಬಾಲವಿಹಂಗಂಗಳನೆಲಕೆಯೊಳಿಜುರಕಿಕೊಂಡು ಪಾಟಲನುವಾಗಿ ತೂಜಲ್ಗೊಂಬಿನೊಳಿರ್ಪ ವಿಹಂಗಸಂಕುಳದಿಂದ (ಗಂಕ. ೦-೦೨೮ ವ); ಶಿವಪ್ರಕಂಪನಮೆರ್ದೆಗಾಗೆ ತಲ್ಲಳಿಸಿ ಮಲ್ಲಳಿಗೊಳ್ವರರಾತಿಭೂಪರರ್ (ರಾಜಶೇ. ೩-೦೩). ೨. ಸಂಪಗೆಯ ಕಂಪಿಂಗೆ ಕಂಪಿಸಿ ಮಲ್ಲಳಿಗೊಂಡೊಲ್ಲದೆ ಪೊಗಂದಿರುವಿ ಪರಿತಂದು ಸಾಗರದಿಂ ಪೂದೋಂಟದ ಪ್ರಸೂನದಲ ಮನಂಡಲೆದು ಬಂಡುಣ್ಬಲ್ಲಿ (ಗಂಕ. ೨-೭೦ ವ); ಕಣ್ಗೊಳಿಂ ಮುಯ್ಯೊಳಂ ತಪ್ಪಂ ಬೆಲ್ಲೆ ಎಲ್ಲರೆರ್ದು ಮಲ್ಲಳಿ[ಶಾಕಾಂ. ಣಿ]ಗೊಂಡು ಘೊಳ್ಳೆಂದು ಬೆಳ್ಳ ವೃದ್ಧವಣಮೇಶ್ವರನಂ ಮುತ್ತಿಕೊಂಡೆತ್ತಲ್ (ಸಂದ್ರ. ೭-೪೩). [ ಮಲ್ಲಟಿ + ಕೊಳ್$_1$ ]

**ಮಲ್ಲಟಿದಿರಿ** (ಕ್ರಿ). ಗುಂಪಾಗಿ ಸುತ್ತಾಡು : ಅಲ್ಲಿಗಲ್ಲಿಗೆ ಮಲ್ಲಟಿದಿರಿವ ಪಲ್ಲ ಬಲ್ಲಿಗೆ ಕಲ್ಲದಾಡುವ ತೆಲ್ಲಯಿಸಿದ ಮಲ್ಲಿಗೆಯ ಸವಿನುಡಿಗೆ . . . ಬೆಲ್ಲಂಗೋಲ್ವಿಲ್ಲನ ಮಲ್ಲಿಗೆಸರಲ ಜಲ್ಲಣಿಗೆ ತಲ್ಲಣಂಗೊಂಡು (ರಾಜಶೇ. ೭೩-೩). [ ಮಲ್ಲಟಿ + ತಿರಿ$_1$ ]

**ಮಲ್ಲಾಗರು** 'ಮಲರೋಗ' ನೋ.

**ಮಲ್ಲಾಚಾರಿ** (ನಾ). ಒಬ್ಬಾತನ ಹೆಸರು : ಬರೆದಂ ಇಳ್ವಡೆ ಮಲ್ಲಾಚಾರಿ (ಎಕ. XIV. ಎಡತೊ. ೮೪-೪೩ : ಸಂ. ೨೧೦). [ಮಲ್ಲ + ಆಚಾರಿ]

**ಮಲ್ಲಾಮಲ್ಲಿ** (ನಾ). ೧. ಜಟ್ಟಿಗಳು ಮಾಡುವ ಯುದ್ಧ : ಭೀಮಸೇನ ಸಹದೇವ ನಕುಲ ಯುಧಿಷ್ಠಿರ ಘಟೋತ್ಕಚಾದಿಗಳೊಡನೆ ಮಲ್ಲಾಮಲ್ಲಿಯಾಗಿ ಕಾದುವ ದುಂಘಸಂಭವನಲ್ಲಿಗೆ ದುರ್ಯೋಧನಂ ಬಂದು (ಕಂಕಣಾ. ೧೦-೯೭ ವ): ಮಲ್ಲಾಮಲ್ಲಿಯೊಳಾಸ್ಥರಿಮಲ್ಲರನಾಹವದೊಳೊತ್ತಿ ಗೋಳ್ಸುರಿಗೊಳ್ವ ಬಲ್ಲಾಳ್ತನದಿನ್ನಾಹವಮಲ್ಲನ ಭುಜಾಮಣ್ಡಿಯನಿಸಿ ಧ(೦)ಲ್ಲಂ ನೆಗಳ್ದಂ (ಸೌಇಇ. XI-i. ೩೨-೭ : 1007) ; ಮಲ್ಲಾಮಲ್ಲಿ ನಟಾನಟಿಗಳ ಮಾಡಿ ನಲ್ಲದಿವಳು ಬಿಡಳೆನ್ನ (ಕುರಾಶಾಂ. ೭೨-೦೨೦). ೨. ಹುರುಡು ; ಸ್ಪರ್ಧೆ : ಪ್ರತಿಸ್ಪೋಟಿ : ಅಂತುಭಯಮವರೂಥಿನಿಯ ವರೂಥಂಗಳ್ ಮಲ್ಲಾಮಲ್ಲಿಯಾಗೆ ಕಾದುವಾಗಳ್ (ಕಂಕಣಾ. ೧೦-೯೦ ವ) ; ಸಿಂಗಣನೃಪನ ಹಯಶ್ರೇಣಿ ಕಲ್ಪಾಂತಧಾರಾಧರ ಮಲ್ಲಾಮಲ್ಲಿಯೊಳು ಯಾದವಗಜಘಟಿಯೊಳು ತಳ್ತುದು (ಸೌಇಇ. IX-i. ೩೪೭-೨೩ ; 1226) ; ಈ ದೇಶದಲ್ಲಿ ಅಧಿಕಾರಲಾಲಸೆಯ ಮಲ್ಲಾಮಲ್ಲಿಯಲ್ಲಿ ಶಿಷ್ಟರಾರು ? ದುಷ್ಟರಾವು ? (ಕಂಕಸಂ. ೭ ಮುಖ್ಯ). ೩. ದುಃಖದ ತೀವ್ರತೆಯಿಂದ ಮಾಡುವ ಗೋಳಾಟ : ಕರ್ಣಂಗಳಿಗ ಮಂಗಲಧ್ವನಿಗಳು ನೆರವುವಬಲೆಯರ ಮಲ್ಲಾಮಲ್ಲಿಯಂ ಪಿಂಗದೊತ್ತೊತ್ತೆಯಿಂ ಮೆಯ್ಯನೊತ್ತುವ ಜನದ ಜಂಗುಳಿಯು ಕಾಲೂಜಲರಿದೆನಿಸಿ ನೆರೆದ ಹಬವಂಗದಸ್ತಿಗಳನಾರಯ್ಯುತ್ತ ಹೊಕ್ಕನಾ ಸುತಗಾಡನವನೀಶನು (ಶಾಕಾ. ೦೦-೪೧). [ಸಂ.]

**ಮಲ್ಲಾರ** 'ಮಲಾರ$_1$' ನೋ.

**ಮಲ್ಲಾರತೋರಣ** (ನಾ). ಬಳಿಮಲ್ಲಾರದ ಆಕಾರದ ಕುಚ್ಚುಗಳಿರುವ ತೋರಣ : ಮೇಲೆ ಪುಷ್ಪತೋರಣ, 'ಮಲ್ಲಾರ' ತೋರಣಗಳವೆ (ಸೂಹುವಾ. ೪೭). [ಮಲ್ಲಾರ (< ಮಲಾರ$_1$) + ತೋರಣ]

**ಮಲ್ಲಾಳಿ** (ನಾ). ಒಂದು ಬಗೆಯ ಮರ : ಮಲ್ಲಾಳಿ, ಅಬನಾಸಿ, ತಂಬುರುಸು (ವೃಶಿಗ. ೩೦-೭೦೦) ; ಮರಗಳು :—ಹೆಬ್ಬಲಸು, ಕರೇ, ಮಲ್ಲಾಳಿ, ಕೂವೆ (ನಮ್ಮಸು. ೨೩೭). [ ? ]

**ಮಲ್ಲಿ** (ನಾ). ೧. ಮಲ್ಲಿಗಜಾತಿಯ ಒಂದು ಬಗೆಯ ಬಳ್ಳಿ ಮತ್ತು ಸುಗಂಧಯುಕ್ತವಾದ ಅದರ ಹೂವು : ಜಾದಿ ಪೊಸಪಾದರಿ ಕೇದಗೆ ಮೊಲ್ಲೆ ಮಲ್ಲಿ ಮಂದಾರಮಪಾರಚೂತಲತೆಯೂಥಿಕೆ ಸಂದ ವಸಂತದೂತಿ (ಶರ್ಕಾ. ೦೩-೯೭) ; ಮಲ್ಲೀಕುಸುಮಾಮೋದಿತಧಮ್ಮಿಲ್ಲೆ (ರಾಜಶೇ. ೪-೦೨) ; ಮಲ್ಲೀವಲ್ಲೀಕುಂಜಪುಂಜರಂಜಿತನಾದೊಂದು ಮುನಿಗಳಾಶ್ರಮದ ಪೂಜಿವಳಿಯದ ತೋಂಟದೊಳಾಟದ ಕಿಜುಪರೆಯದ ಕುವರರಿರ್ವರವಟಿಂ ತಡೆದು ಹಬುದುಂ ಕಟ್ಟಿದರ್ ಗಡ ! (ರಾಜಶೇ. ೦೪೮-೩). ೨. ಒಂದು ಬಗೆಯ ಸಸ್ಯ : "ಅಪಾಷ್ಟರ್ಣ – ಮಲ್ಲಿ. ಹಬ್ಬುಕಜುಕೆ" (೬೩ಧ. ೯). ೩. ಒಂದು ಬಗೆಯ ಮಣ್ಣಿನ ಪಾತ್ರೆ : "ಕಳಸಿಗೆ ಕೌಶಿಕ ಮಲ್ಲಿಯೆನಿಸಿಕ್ಕು [ಶಾಕಾಂ. ಮಲ್ಲಿಗೆಯೆನಿಕ್ಕು]" (ಕುಂಗರಾ. ೭೨-೨೩). ೪. ಒಬ್ಬಾಕೆಯ ಹೆಸರು : ವಿದ್ಯಾಧರಯ್ಯ ಮಲ್ಲಿ ಪೊಸವೃಗ್ಗೆ ಕೊಟ್ಟ ಸ್ಥಿತಿಕ್ರಮಂ (ಎಕ. VI. ಕಡೂರು. ೯-೩ ; ಸಂ. ೪೦೦ ?) ; ಅಲ್ಲೇ ನ್ಯಾಯ ಇಲ್ಲೇ ಕಂಡಿತು. ಕೊಳ್ಳೀ ಮಲ್ಲಿ ಕೊಂಕುಳ ಕೂಸ (ಗಾದೆ).

೫. ದೀಪವನ್ನು ಹಿಡಿದಿರುವ ಹೆಂಗಸಿನ ವಿಗ್ರಹ : ಎಲೆಲೆ ! ದೀಪದ ಮಲ್ಲಿ . . . ನೀನೆ ಕಂಚಿನ ಬೊಂಬೆ ? ಅಲ್ಲ, ಮಿಂಚಿನ ಹಂಬೆ ! (ದೀಕವು. ೧೯-೧). 'ದೀಪ್ತ' ಪಠಾ. ❡ ಈ ಅರ್ಥದ ಪ್ರಯೋಗದ ವ್ಯುತ್ಪತ್ತಿ ದೇಶ್ಯವೇ ಎಂಬುದು ವಿಚಾರಣಾರ್ಹ. ೬. [ಜೈನ] ಒಬ್ಬ ತೀರ್ಥಂಕರನ ಹೆಸರು : ಮಲ್ಲಿನಾಥ : ವೃಷಭ ಅಜಿತ . . . ಮಲ್ಲಿ ಮುನಿಸುವ್ರತ ನಮಿ ನೇಮಿ ಪಾರ್ಶ್ವ ವರ್ಧಮಾನರೆಂಬಿಪ್ಪತ್ತುನಾಲ್ವರ್ ತೀರ್ಥಂಕರರ್ (ಶಾಪುಂಕೃ. ೪೦೨) ; ಗಂಧಕುಟಿಯೊಳ್ ಕರಮೆಸೆದಂ ಭುವನವಲ್ಲಭಂ ಮಲ್ಲಿಜಿನಂ (ಮಲ್ಲಿಪು. ೧೪-೨೦೩). [ಸಂ. ಮಲ್ಲಿ, ಮಲ್ಲೀ]

**ಮಲ್ಲಿಕ** (ನಾ). ಕಂದುಬಣ್ಣದ ಕೊಕ್ಕು ಮತ್ತು ಕಾಲುಗಳಿರುವ ಒಂದು ಬಗೆಯ ಹಂಸ : "ಕಾಲ್ಮೊಗಂ ಮಾಸೆ ಮಲ್ಲಿಕಾಖ್ಯಂ" (ಮಂಗರಾ. ೫೧-೭). [ಸಂ.]

**ಮಲ್ಲಿಕಾಕ್ಷ** (ನಾ). ೧. ಒಂದು ಬಗೆಯ ಕುದುರೆ ; ಬಿಳಿಯ ಕಣ್ಣಿರುವ ಕುದುರೆ : "ಬಿಳಿಯ ಕಣ್ಣಿರೆ ಮಲ್ಲಿಕಾಕ್ಷನಕ್ಕುಂ" (ಮಂಗರಾ. ೬೨-೧೫) ; ನಯನಂಗಳ್ ತೊಳಗುವ ಬೆಳ್ಪಿಯ ಕಣ್ಣಂ ಪೋಲೆ ಮಲ್ಲಿಕಾಕ್ಷಂ (ಅಶ್ವಶಾ. ೨-೩೭). ೨. = ಮಲ್ಲಿಕ : "ಮಾಸಿದ ಕಾಲ್ಮೊಗಂಗಳಿಂ ಮಲ್ಲಿಕಾಕ್ಷಂಗಳೆಂಬುದು" (ಹರಾಯು. ೪೨-೯೯). [ಸಂ.]

**ಮಲ್ಲಿಕಾಮಾಲೆ** (ನಾ). ೧. ಮಲ್ಲಿಗೆ ಹೂವಿನ ಹಾರ. ೨. [ಛಂದ] ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರುಛಂದಸ್ಸುಗಳಲ್ಲಿ ಹದಿನೆಂಟನೆಯ ಧೃತಿ ಎಂಬ ಛಂದಸ್ಸಿನ ಒಂದು ವೃತ್ತ : ಸಂದುದಿಂತಿದು ಮಲ್ಲಿಕಾಮಾಲೆಯೆಂಬುದು (ಛಂದೋಂಬು. ೨-೧೬೮) : ಸಂಸ್ಕೃತವೃತ್ತಗಳಲ್ಲಿ ಕುಮುದ . . . ಮಲ್ಲಿಕಾಮಾಲೆ ತರಳ ಮೊದಲಾದವುಗಳನ್ನು ಹೆಸರಿಸಬಹುದು (ಛಂದೋವಿ. ೫೦). [ಸಂ. ಮಲ್ಲಿಕಾಮಾಲಾ]

**ಮಲ್ಲಿಕಾಮೋದ** (ನಾ). ಮಲ್ಲಿಗೆಯ ಸುವಾಸನೆಯು ಹರಡುವಂತೆ ಹರಡುವ ಕೀರ್ತಿಯುಳ್ಳವನು: ❡ ಚಾಳುಕ್ಯರಾಜನಾದ ಎರಡನೆಯ ಜಯಸಿಂಹನ ಒಂದು ಬಿರುದು : ಮಾರ್ತ್ತಂಡಭೀಮಂ ಮಲ್ಲಿಕಾಮೋದಂ ಕೀರ್ತ್ತಿವಿದ್ಯಾಧರಂ (ಸೌಇಇ. XX, ೨೦-೮ : 1019) ; ಚಾಳುಕ್ಯಾಭರಣಂ ಮಲ್ಲಿಕಾಮೋದಂ ಮಾರ್ತ್ತಂಡಭೀಮಂ ರಾಯಗಜಕೇಸರಿ (ಎಕ. VII, ಶಿಕಾ. ೦೨೬-೭ ; 1030). [ಸಂ.]

**ಮಲ್ಲಿಕಾರ್ಜುನ** (ನಾ). ೧. ಶಿವನ ಒಂದು ಹೆಸರು : ರಾಜವಟ್ಟಿ ವೀರಭದ್ರ ಬರಟಹಳಿ ಮಲ್ಲಿಗವಡ ಇವರ ಕುಲದೇವರು ಮಲ್ಲಿಕಾರ್ಜುನ (ಎಕ. III (R), ಗುಂಡ್ಲುಪೇ. ೬೦-೭೩ ; 1126) ; ಕಲ್ಲರಳಿ ಹೂವಾಗಿ ಎಲ್ಲರಿಗೆ ಬೇಕಾಗಿ ಮಲ್ಲಿಕಾರ್ಜುನನ ಶಿರಕ್ಕೆ ಬೇಕಾಗಿ ಬಲ್ಲವರು ಹೇಳಿ (ಸರ್ವಜ್ಞ. ೨೦೨೬). ೨. ಈಗಿನ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಶ್ರೀಶೈಲದಲ್ಲಿ ಸ್ಥಾಪಿತವಾಗಿರುವ ಶಿವಲಿಂಗದ ಹೆಸರು : ಶ್ರೀಶೈಲಕ್ಕೆ ಹೋಗಿ ಮಲ್ಲಿಕಾರ್ಜುನನ ದರ್ಶನಮಾಡಿಕೊಂಡು ಬರಬೇಕೆಂದಿದ್ದೇನೆ (ಕಾ). ೩. ಒಬ್ಬಾತನ ಹೆಸರು : ಮಲ್ಲಿಕಾರ್ಜ್ಜುನಜಿಗ್ಗಯುದ್ಧಪ್ರಬುದ್ಧವೈರಿ × × × ನನ್ನಂ ನಮಿತವಿಧ್ವಂಸಕಂ (ಎಕ. IV (R), ಎಳಂದೂ. ೦೬೩-೯ ; 919). [ಸಂ.]

**ಮಲ್ಲಿಕಾವಸಂತ** (ನಾ). [ಸಂಗೀತ] ಒಂದು ರಾಗದ ಹೆಸರು : ಮಲ್ಲಿಕಾವಸಂತರಾಗದಲ್ಲಿ ಕೃತಿರಚನೆಮಾಡಿದವರಲ್ಲಿ ಮೊತ್ತಮೊದಲಿಗರು ಪಲ್ಲವಿ ಶೇಷಯ್ಯರ್‌ಅವರು (ಸಂಗೀಶ. ೯೮). [ಸಂ.]

**ಮಲ್ಲಿಕೆ** (ನಾ). ೧. ಒಂದು ಬಗೆಯ ಬಳ್ಳಿ ಮತ್ತು ಅದರ ಸುಗಂಧಯುಕ್ತವಾದ ಬಿಳಿಯ ಹೂವು : "ತೃಣಶೂಲ್ಯಂ, ಮಲ್ಲಿಕಾ, ಭೂಪದೀ, ಶೀತಭೀರುಃ—ಈ ೪ ಮಲ್ಲಿಗೆ" (ನಾಪಶಾ. ೧೦೮). ೨. ಮಣ್ಣಿನಿಂದ ಮಾಡಿದ ಒಂದು ಬಗೆಯ ಪಾತ್ರೆ : "ಕಳಸಿಗೆ ಕಾಶಿಕೆ ಮಲ್ಲಿಕೆ ಮಲ್ಲಿ ಮಲ್ಲಿಗೆಯೆನಿಕ್ಕುಂ" (ಮಂಗರಾ. ೬೨-೨೩). ೩. ದೀಪಸ್ತಂಭ. [ಸಂ.ಮಲ್ಲಿಕಾ]

**ಮಲ್ಲಿಕ್ಕು** (ಕ್ರಿ). ಮಲ್ಲನಂತೆ ದ್ವಂದ್ವಯುದ್ಧಕ್ಕೆ ಆಹ್ವಾನಿಸು : ಚಾಣೂರ ಮಲ್ಲನೊಳ್ ಮಲ್ಲಿಕ್ಕುವುದಕ್ಕೆ ಶ್ರಮಮಂ ಮಾಡುವಂತೆ ಗಜಮಲ್ಲನೊಳ್ ಪ್ರತಿಮಲ್ಲಂ ಮಲ್ಲವೋದರ್ (ಅರ್ಥನೇ. ೮-೮೪ ವ). [ಮಲ್ಲ + ಇಕ್ಕು]

**ಮಲ್ಲಿಗೆ** (ನಾ). ೧. = ಮಲ್ಲಿಕೆ ೧ : "ಮಲ್ಲಿಗೆ ವಿಚಕಿಳಂ" (ಮಂಗರಾ. ೩೮-೨೪); ಬಿರಿದ ಮಲ್ಲಿಗೆಗಂಜೊಡಂ . . . ಮಧುಮಹೋತ್ಸವಮಾದೊಡ ಮೋನನೆಂಬೆನಾರಂಕುಸವಿಟ್ಟೊಡಂ ನೆನೆವುದೆನ್ನ ಮನಂ ವನವಾಸಿದೇಶಮಂ (ಪಂಪಭಾ. ೪-೩೦) ; ಮರುಗ ಮಲ್ಲಿಗೆ ಪಚ್ಚೆ ಮುಡಿವಾಳಕ್ಕೆ ಪರಿಮಳದುದಕವ ನೆರೆಚಿದವರಾರಯ್ಯ (ಮಹಾದೇ. ಶ. ೧೧-೩); ಮರುಗ ಮಲ್ಲಿಗೆ ಕೆಂಜಾಜಿ ಸಂಪಿಗೆಗಳ ಪರಿಮಳಪುಷ್ಪದ ಮಾಲೆ ಮೆರೆದುವು (ಕಂಸಂ. ೨೦-೩೩). ೨. = ಮಲ್ಲಿಕೆ ೨ : "ಕಳಸಿಗೆ ಕಾಶಿಕೆ ಮಲ್ಲಿಗೆಯೆನಿಸಿಕ್ಕು [ಪಾಠಾಂ. ಮಲ್ಲಿಯೆನಿಸಿಕ್ಕು]" (ಮಂಗರಾ. ೬೨-೩೨). [< ಪ್ರಾ. ಮಲ್ಲಿಅ./ಸಂ. ಮಲ್ಲಿಕಾ]

**ಮಲ್ಲಿಗೆಗೋಲ** (ನಾ). ೧. ಮಲ್ಲಿಗೆಯ ಹೂವನ್ನು ತನ್ನ ಬಾಣವನ್ನಾಗಿ ಮಾಡಿಕೊಂಡವನು ; ಮನ್ಮಥ : ಮೃಗಪಕ್ಷಿಗಳಿರಾ ಮಲ್ಲಿಗೆಗೋಲನ ಕಂಡರೆ ತೋರಿರೆಂದು ನೊಲ್ಲಿಸಿದಳು (ಮೋಹತ. ೯-೩೫). ೨. [ಜೈನ] ಬಾಹುಬಲಿ : ನಲ್ಲದು ನನಗೀಗ ಬಹುವಕೆ ಹೋಗೆಂದು ಮಲ್ಲಿಗೆಗೋಲನಾಡಿದನು (ಭರತ. ೯೬-೨೨). [ಮಲ್ಲಿಗೆ + ಕೋಲ್₁ + — ಅ₇]

**ಮಲ್ಲಿಗೆಬಾಣ** (ನಾ). = ಮಲ್ಲಿಗೆಗೋಲ ೧ : ಸೊಗಯಿಸುವ ಶಕುನಿ ಮುಂಚಮ ನೋಡಿರಯೊಲಿದು ಮಲ್ಲಿಗೆಬಾಣನದನು ಕಲ್ಲನೆಯೋರಿ (ಪಪಮೋ. ೧೯ ೧೮). [ಮಲ್ಲಿಗೆ + ಬಾಣ₁]

**ಮಲ್ಲಿಗೆವಾವಿ** (ನಾ). ಒಂದು ಊರಿನ ಹೆಸರು : ಮಲ್ಲಿಗೆವಾವಿ ಅಂತೆ ಬರೆ ಪಾಲ್‌ಗೊವ್ವು ಎಂಬ ಪುಣಸೆ ಅಂತೆ ಬರೆ (ವ್ಯಾಉ. ೦೯೨೦, ೦೦-೦೮೭; 967). [ಮಲ್ಲಿಗೆ + ಬಾವಿ]

**ಮಲ್ಲಿನಾಥ** (ನಾ). [ಜೈನ] ಇಪ್ಪತ್ತುನಾಲ್ಕುಜನ ತೀರ್ಥಂಕರರಲ್ಲಿ ಒಬ್ಬ : ರಾಗದ ಪೆರ್ಚಂದಭಿಷೇಕಮಂ ದಿವಿಜನಾಥಂ ಮಲ್ಲಿನಾಥಂಗೆ ಮಾಡಿದನೆಂಟುಂದೆಸೆಯುಂ ಪಳಂಚಲೆವಿನಂ ಗಂಭೀರಭೇರೀರವಂ (ಮಲ್ಲಿಪು. ೦೩-೦೭೭). [ಸಂ.]

**ಮಲ್ಲಿನಾಥಿ** (ನಾ). ೧. ಮಲ್ಲಿನಾಥನೆಂಬ ಪ್ರಸಿದ್ಧವಿದ್ವಾಂಸನು ಸಂಸ್ಕೃತಕಾವ್ಯಗಳಿಗೆ ಬರೆದ ವ್ಯಾಖ್ಯಾನ,— ಟೀಕೆ. ೨. (ಆಲಂ) ವಿವರಣೆ ; ವ್ಯಾಖ್ಯಾನ : ಕಂಡ ಏತಕ್ಕಂಬ ಟಿಗ್ಗೆ ಹೆಚ್ಚಿನ ಮಲ್ಲಿನಾಥಿ ಬೇಕಾಗಲಿಲ್ಲ (ಅಕಗ. ೨೩೪); ನಗೆಯ ಮಾತಿಗೆ ಮಲ್ಲಿನಾಥಿ ಏಕೆ ? (ಶಿಂಪುತ. ೦ ಮುನ್ನು೩). [<ಸಂ. ಮಲ್ಲಿನಾಥೀಯ]

**ಮಲ್ಲಿಯೂರ್** (ನಾ). ಒಂದು ಊರಿನ ಹೆಸರು : ಪಶ್ಚಿಮಭಾಗಾವಸ್ಥಿತ ಮಲ್ಲಿಯೂರ್ಗ್ರಾಮಮಧಿವಸತಿ (ವ್ಯಾಉ. ೦೯೩೯, ೩೦-೨೦; 670). [ಮಲ್ಲಿ + ಊರ್]

**ಮಲ್ಲಿಸೇನ** (ನಾ). ಒಬ್ಬಾತನ ಹೆಸರು : ಮಲ್ಲಿಸೇನಭಟಾರರ ಗುಡ್ಡಂ ಚಟಿಇಇಗ್ಗಯ್ಯಂ ತೀರ್ತ್ಥಮಂ ಬನ್ದಿಸಿದಂ (ಎಕ. II, ೪-೧ ; ಸು. 900). [ಸಂ.]

**ಮಲ್ಲು**. ಮಲ್ (ನಾ). ಒಂದು ಬಗೆಯ ತೆಳುವಾದ, ಬಿಳಿಯ ಹತ್ತಿ ಬಟ್ಟೆ : ಮೈಯಲ್ಲಿ ಬಿಳಿಯ ಮಲ್ಲಿನ ಷರ್ಟು, ಉಟ್ಟುದು ಮರ್ಸ್‌ರೈಜ್ ಧೋತರ (ಜನಪ. ೩೪). ಮಲ್ : ಲಾಂಗ್‌ಕ್ಲಾತ್, ಚೀಟಿ, ವಾಯಿಲ್, ಮಸ್ಲಿನ್, ಮಲ್ — ಇವನ್ನು ಸಾದಾನೆಯ್ಗೆ ಉಪಯೋಗಿಸಿ ನೇಯುವರು (ಗ್ರಹಂ. ೭೩). 'ಮಸ್ಲಿನ್' ಪಠಾ.

[← ಇಂ. Mull / ❡ ಇದು ಹಿಂದಿಯ 'ಮಲ್‌ಮಲ್' ಎಂಬುದರ ಸಂಕ್ಷಿಪ್ತರೂಪ]

**ಮಲ್ಲುಕ₁** 'ಮಲ್ಲುಗ' ನೋ.

**ಮಲ್ಲುಕ₂** (ನಾ). ಅಧಿಪತಿ : ಆ ನರಲೋಕಪಾಲಕನ ಖಾನ ವಜೀರ ಮಲ್ಲುಕರ ಲೆಕ್ಕಿಸಬಾರದೇನೆಂಬೆನವನ ಸಂಪದವ (ಕುಮಾರಾಂ. ೧೭-೨೩); ತೆಱಪ್ಪ ಜೋಡಿಟ್ಟೊಡವೆ ಪಿಡಿದ ಬಾಳೆಲ್ಲಮಂ ಮಲ್ಲುಕರ್ ಬಿಟ್ಟುಬೀೞ್ವರ್ಶರ್ವಾಂ ತಾಮೆ ಮಂತಂದಳೆದು (ಶಶಿ. ೨-೦೦೬).

[ ← ಅರ. ಹಿಂ. ಮಲಿಕ್ ; ಮರಾ. ಮಲೀಕ]

**ಮಲ್ಲುಕಪದವಿ** (ನಾ). ಅಧಿಪತಿಯ ಸ್ಥಾನ : ಸುರುತಾಳನು ಬಾದುರನನ್ನು ಸನ್ಮಾನಿಸಿ, ಅವನಿಗೆ ಮಲ್ಲುಕಪದವಿಯನ್ನು ಕಟ್ಟಿದನು (ಕುಮಾರಾಂ. ೯೭).

[ಮಲ್ಲುಕ₂ + ಪದವಿ]

**ಮಲ್ಲುಗ**, ಮಲ್ಲುಕ₁ (ನಾ). ೧. ಒಬ್ಬಾತನ ಹೆಸರು : ದೋರಬ್ಬೆಯ ಮಗಂ ಮಲ್ಲುಗ ಕೊಟ್ಟುಯಲ್ಪರಿದು ತುಱುವಂ ಸೆೞೆಯುಮನಿಕ್ಕಿಸಿ ಕಾದಿ ಸತ್ತಂ (ಎಕ. XII, ತಿಪಟೂ. ೩೩-೪; ೩೩೦). **ಮಲ್ಲುಕ₁** : ೨. ಶ್ರೇಷ್ಠನಾದ ಮಲ್ಲ,– ಜಟ್ಟಿ: ಆ ಪಟ್ಟಣದೊಳಗೆ ಅತಿರಥರು ಮಹಾರಥರಿಹರು ಸಾಮಂತ ಮಲ್ಲುಕರಿಹರು (ನವರ. ೨೦೩-೯೨೬). [ಮಲ್ಲ + – ಉಗ]

**ಮಲ್ಲೆ** 'ಮೊಲ್ಲೆ' ನೋ.

**ಮಲ್ರೋಗರ** 'ಮಲರೋಗ' ನೋ.

**ಮವಕುಫ್** 'ಮೋಕೂಫ್' ನೋ.

**ಮವಲಂಗಮರ** (ನಾ). ಒಂದು ಬಗೆಯ ಮರ : ಆದಿರಾಜ . . . ಮವಲಂಗಮರ, ಹೊಳೆನೆಕ್ಕಿ, ನೆರವಂಬಳೆ, ತುಡೆಮುದಿರಂಗಿ, ಹೊಡ್ಡೆಲೆನಗೆ (ಪ್ರುತಿಗ. ೨೩-೪೭೭). [ಮವಲಂಗ ? + ಮರ₁]

**ಮವಾಳ** (ನಾ). ಸರಕಾರದ ಧೋರಣೆಗಳನ್ನು ವಿರೋಧಿಸದೆ ಹೊಂದಾಣಿಕೆಯಿಂದಿರುವ ರಾಜಕೀಯಪಕ್ಷ ; ಮುಂದಗಾಮಿಪಕ್ಷ : ಒಂದು ವೃಷ್ಟಿಯಿಂದ ಮನುಕುಲವೆಂಬ ಶಾಸನಸಭೆಯಲ್ಲಿ ಅವಳು 'ಮವಾಳ' ಇಲ್ಲವೆ ಲಿಬರಲ್‌ಪಕ್ಷದವಳು (ನವಾಜ. ೦೩೩೦). [ ← ಮರಾ. ಮವಾಳ]

**ಮವಾಳಿತನ** (ನಾ). ನಯ ; ನಾಜೂಕು : ಒಕ್ಕಲುತನದಿಂದ ಔದ್ಯೋಗಿಕ ಕೆಲಸಗಾರಿಕೆಗೆ ಹಳ್ಳಿಯ ಮುಂಕುತನದಿಂದ ಪಟ್ಟಣದ ಮವಾಳಿತನಕ್ಕೆ ಹೊರಡುವ ಹೊಲಗೇಡಿ ಒಕ್ಕಲ ವರ್ಗ (ವಾಣಾದ. ೦೯೩).

[ಮವಾಳಿ₀ ( P ← ಮರಾ. ಮವಾಳೀ) + – ತನ ]

**ಮವಿಂದಿ** (ನಾ). ಒಂದು ಸ್ಥಳದ ಹೆಸರು : ತನ್ನನಾಳ್ವ ಪ್ರಭುಮೋರು ಬೆಸಸೆ ಮವಿಂದಿಯೂಱುಳ್ಕ್ಯಾಡುಪಟ್ಟಿಯ ಸಮಸ್ತಬಲಮು ಮೋಗೆಟ್ಟಿರೆ . . . ಇಱಿದೋಡಿಸಿ ಬಿಟ್ಟನ್ (ಎಕ. X, ಶ್ರೀನಿವಾ. ೬-೬, ಸಂ. ೭೩೦). [ ? ]

**ಮವುಜೆ** 'ಮೌಜೆ' ನೋ.

**ಮವುರಿ** 'ಮೌರಿ₁' ನೋ.

**ಮಶಕ** (ನಾ). ಸೊಳ್ಳೆ : ಖಾಂಡವವನಮೆಲ್ಲಮಂ ತಟ್ಟಿ ಮೆಡಱೆ ಮಶಕ ಮಾತ್ರಮುಪ್ಪೊಡಂ ಮಿಸುಕಲ್ ಛಿದ್ರಮಿಲ್ಲದಂತಾಗೆ ಶರಪಂಜರದೊಳ್ ಮುಚ್ಚಿ ಮುಸುಕಿದಾಗಳ್ (ಪಂಪಭಾ. ೩-೯೭ ವ) ; ಪತ್ತಿದ ನೆತ್ತರ ಪೊಲಸಿಂದೆತ್ತಂ ಮೊಱೆದಱಪ ಮಶಕ ಮಕ್ಷಿಕಮುಂ ಸೋವುತ್ತುಂ (ಜಗವಿ. ೯-೩೯) ; ಅಖಿಲಸಾಮ್ರಾಜ್ಯಮುಮಂ ಶಕಕಣೆಗೆಂಡು ಬಿಟ್ಟಮಲಪ್ರವೃತ್ತಿಯಿಂ ಶಿವನೊಳೊಡವೆರೆದರ್ (ಶಬ್ದಾ. ೨-೩೭). [ಸಂ.]

**ಮಶಕಾರಿ** (ನಾ). ಸೊಳ್ಳೆಯ ಶತ್ರು : ಜೇಡ : "ಮಶಕಾರಿ ಗುಣ ಪೃಷ್ಠಮೆನೆ ಜೇಡನೆನಿಸಿಕ್ಕು" (ಮಂಗರಾ. ೪೯-೦೪). [ಸಂ.]

**ಮಶವಾಳ** 'ಮಸಿವಾಳ' ನೋ.

**ಮಶಾಣ** 'ಮಸಣ' ನೋ.

**ಮಶಾಲು**, ಮಷಾಲ್. ಮಷಾಲು (ನಾ). ದೀವಟಿಗೆ ; ಕಕ್ಕಡ : ಪಂಜು : ಜ್ವಲಿಸುವ ಮಶಾಲು ಯಾವ ಮದುವೆಗೆ ಹಾದಿ ತೋರುವುದೊ (ಹರಿಂಶ. I, ೩೭೯) ; ಆ ಮಶಾಲುಬೆಳಕಿನಲ್ಲಿ ಖಾನನು ಆ ಇಬ್ಬರು ರಾಣಿಯರನ್ನೂ ನೋಡಿದನು (ವೀರಿಶ್. ೩೯೨). **ಮಷಾಲ್.** **ಮಷಾಲು** : ಮಷಾಲು ಕಿಡಿಯಿಟ್ಟು ಆರಿತು (ನಕಕ. ೯೨) ; ದೇವಸ್ಥಾನದಿಂದ ಮಷಾಲುಗಳನ್ನೂ ತರಿಸಿ, ಹೊಳೆಯ ಕರೆಯನ್ನು ಬೆಳಕಾಗಿ ಮಾಡಿಸಿ, ತೆಪ್ಪಗಳನ್ನು ತಿರಮುಕೂಡ್ಲಿಗೆ ಬಿಡಿಸಿದ (ಕಂಸ. ೩೩೦)."

**ಮಷಾಲ್‌ಚೋರಿ** = ಪಂಜುಗಳ್ಳರು ಮಾಡುವ ದರೋಡೆ : ಪಂಜುಗಳ್ಳತನ : (ಕೃಸ್‌ಗ. II. ೩೩೩).

[ ← ಅರ. ಮಶ್‌ಅಲ್ ; ಹಿಂ. ಮರಾ. ಮಶಾಲ್ ]

**ಮಶಿ** 'ಮಸಿ' ನೋ.

**ಮಶಿಕಾಣಿಕೆ** 'ಮಸಿಕಾಣಿಕೆ' ನೋ.

**ಮಶೀತಿ** 'ಮಸೀದಿ' ನೋ.

**ಮಶೀದಿ** 'ಮಸೀದಿ' ನೋ.

**ಮಶೀಪ** (ನಾ). (?) : ಪಕ್ವವೆಂದರೆ ಮಶೀಪ ಅದಕ್ಕಾಧಾರವು ಉತ್ತರಗರ್ಭವು (ಶಾಹಟೀ. ೨-೩-೦೩ ವ). [ ? ]

**ಮಶ್ರು** (ನಾ). ಒಂದು ಬಗೆಯ ರೇಷ್ಮೆಬಟ್ಟೆ : ರೇಶಿಮೆ, ಊರ್ಣ, ಮಶ್ರು, ಕಿನಕಾಫ ಮೊದಲಾದ ಅಂಗಡಿಗಳು ಅಂದವಾಗಿ ಕಾಣುತ್ತವೆ (ಮಂಜುಕ. ೮). [ ← ಅರ. ಮಶರೂಅ; ಹಿಂ. ಮಶರೂ, ಮಸರೂ ; ಮರಾ. ಮಶರೂ, ಮಶ್ರೂ, ಮಸರೂ ]

**ಮಷಾಲ್** 'ಮಶಾಲು' ನೋ.

**ಮಷಾಲಚಿ** 'ಮಷಾಲ್ಚಿ' ನೋ.

**ಮಷಾಲು** 'ಮಶಾಲು' ನೋ.

**ಮಷಾಲ್ಚಿ**, ಮಷಾಲಚಿ (ನಾ). ದೀವಟಿಗೆಯನ್ನು ಹಿಡಿಯುವವನು ; ಪಂಜಿನವನು : ಬೋಯಿ, ಮಷಾಲ್ಚಿ . . . ಸಂಗೀತಗಾರ ಮೊದಲಾದವರು ಅಲ್ಲಾಹಿದಷಾಗಿದ್‌ಪೇಷಾಕಚೇರಿ ದಾಖಿಲ್ (ಮಷಾವಂ. I. ೨೨೮). **ಮಷಾಲಚಿ** : ನೀನೊಂದು ಮೇಣದ ಬತ್ತಿಯನ್ನು ಹಿಡಿದು ಮಷಾಲಚಿಯಾಗಿ ಬೆಳಕನ್ನು ತೋರುತ್ತ ನನ್ನ ಹಿಂದೆ ಬಾ (ರೇವೇಶ್. ೦೩೦).

[← ಪಾರ. ಹಿಂ. ಮಶಾಲ್‌ಚೀ ; ಮರಾ. ಮಶಾಲಚೀ, ಮಶಾಲಜೀ]

**ಮಷಿ** (ನಾ). ೧. ಶಾಯಿ; ಮಸಿ. ೨. = ಮಷಿವಿದ್ಯೆ : ಮಷಿಯೆಂಬ ಲಿಪಿಕರ್ಮದಿಂ ಜೀವಿಸುವರೇ ಕರಣಿಕರು (ಪುರುಷ. ೭೯). ೩. ಇದ್ದಿಲು : ಅಸಿ ಮಷಿ ಕುರಿ(ಷ) ಪಿಡಿ ಪಿಡಿಕಲ್ ಕುಸಿಯುಂ ಪುರಿಯೋಡು ಕೋಡು ಕಾವಲಿ ಸುಲಿಯುಂ ಬೆಸಗೊಂಬರ್ ಪಿಡಿದಿರೆಯುಂ ಪುಸಿವರ ಶೂಲಂ ಜಗಕ್ಕೆ ಮುಟಿಯಿಸ್ಲೆಂದು (ಅಭ್ಯಕು. ೦-೪೪). 'ಮಷೀಚಿತ್ರ' ಪರಾ. ೪. ದೀಪದ ಕಪ್ಪು ; ಕಾಡಿಗೆ. 'ಮಸಿ' ಪರಾ. [ಸಂ.]

**ಮಷಿವಿದ್ಯೆ** (ನಾ). ಶಾಯಿಯಿಂದ ಬರೆಯುವ ವಿದ್ಯೆ : ಕರಣಿಕ ವೃತ್ತಿ : ಅಸಿಮಷಿಕೃಷಿವಣಿಗ್ವಿದ್ಯಾಶಿಲ್ಪಕರ್ಮಂಗಳಿಂ . ಶುದ್ಧವೃತ್ತಿಯಿಂದರ್ಥೋಪಾರ್ಜನಂಗೆಯ್ವ ವಾರ್ತೆಯುಂ (ಆದಿಪು. ೦೩-೦೩ ವ). [ಸಂ. ಮಷಿವಿದ್ಯಾ]

**ಮಷೀಚಿತ್ರ** (ನಾ). ಇದ್ದಿಲಿನಿಂದ ಬರೆದ ಚಿತ್ರ ; ಮಸಿಯಿಂದ ಬರೆದ ಚಿತ್ರ : ಹುಲಿಯೂ ಅಲ್ಲಿಯೆ ಕುಳಿತು ತನ್ನ ಹಿಂಗಾಲಿನಿಂದ ಕುತ್ತಿಗೆ ತುರಿಸಿಕೊಳ್ಳುತ್ತಿರುವುದು ಬೆಂಕಿಗೆ ಎದುರಾಗಿ ಮಷೀಚಿತ್ರದಂತೆ ಕಾಣುತ್ತಿದೆ (ಮಲೆಮ. ೨೩೭). [ಸಂ.]

**ಮಷ್ಕರಿ** 'ಮಸ್ಕರಿ₂' ನೋ.

**ಮಷ್ಟು** (ನಾ). ಗಸಿ ; ಗಷ್ಟು : ಮಡ್ಡಿ : ದೃಷ್ಟಿಚುಕ್ಕೆಯದೊಂದನೆಲ್ಲ ಚೆಂದಂಗಳ್ಗಿಟ್ಟಿಹನು ಪರಮೇಷ್ಠಿ . . . ಮಷ್ಟು ಸೃಷ್ಟಿಗೆ ಬೊಟ್ಟು (ಮಂಕುತಿ. ೪೪೭); ಮಳೆ, ನದಿಗಳಿಂದ ಕೊಚ್ಚಲ್ಪಟ್ಟಾಗ ಇವು (ಅದುರುಗಳು) ಈಗಿನ ನದಿಗಳ . . . ಪಾತ್ರಗಳಲ್ಲಿ ಒಟ್ಟುಗೂಡುತ್ತವೆ. ಇಂತಹ ಬಂಡು (ಮಷ್ಟು)ಗಳಿಗೆ ಮೆಕ್ಕಲು ಮಣ್ಣಿನ ಬಂಡುಗಳು ಎಂದು ಹೆಸರು (ಶೂಚಿಶ. ೦೩೭). 'ಮಡ್ಡಿ₁' ಪರಾ.

[←ತೆಲು. ಮಷ್ಟು, ಮಸಟು, ಮಸಡು, ಮಸ್ಟು]

**ಮುಸ** (ನಾ). ಕೋಪ : ರೋಷ : ನಾಲ್ಕುದೆಸೆಗಳಿಗೆ ಮುಸದಿಂದ ನೋಡಿ ಹಲು ಮಣಿಸಲು (ಅಕ್ಕಬಿ. ೭-೧೨ ಟೀಕೆ) ; ಅಸಮಾಸಮರಂಗಳೊಳ್ ಮಿಗೆ ಮುಸಂ ಬೆಸಂಗಿಡಿಸಿ ಕುತುಮಶಾಹನ ಪೌಜಂ ಪೆಸರ್ವಡೆದಿರ್ಪಂ ರಾಯಂ (ಶಶಿ. ೩-೬೭). [<ಸಂ. ಮುಶ]

**ಮುಸಂಗು** 'ಮುಸಗು' ನೋ.

**ಮುಸಕ**$_1$. ಮುಸಕು$_1$ (ನಾ). ೧. ಆಧಿಕ್ಯ : ಹೆಚ್ಚಳ : ಅತಿಶಯ : ಎನಗೀವುದು ನಿನ್ನ ಸಕದ ಮುಸಕಮುಸೆ ಪೋಲ್ವ ಮಗನಂ ಮಘವಾ (ಶಂಶಾ. ೧-೦೩೯) : ಪುಸಿನುಡಿಯ ವಿಷವಿಪಾಕದ ಮುಸಕದೆ ಮುಂಬಿರೋಗಮಾದಪ್ಪೋಲಿನಿತಾನುಂ ಬಿಸವಲ್ಲದುಸಿರ್ವರೆಂದುಂ ಪೊಸಸಿರಿಯಿಂ ಮೈಮೆವೆತ್ತ ಮಾಪ್ದು ಮನುಷ್ಯರ್ (ಕಾದಂಪೂ. ೩೬೨); ಬಿಸಿಪ ರಕುತವ ಬಳಿದು ಖಾತಿಯ ಮುಸಕವಲಿ ಕೈಮುಚಿದು ಮಿಗೆ ದಳ್ಳಿಸುತ ಹೊಗರಿಡುತ . . . ಪುನರಪಿ ಕಚಿದ ನಂಭುಗಳ (ಕುವ್ಯಾಭೀ. ೯-೩೯). ೨. ರಭಸ ; ವೇಗ : ಭೀಮನ ಧಾಳಿ ಹೆಚ್ಚಿತು ಹೊಸತು ದಶಕದ ಮುಸಕ ಮಿಗಿಲಾಯ್ತು (ಕುವ್ಯಾಕ. ೦೯-೧); ಕುಸುಮುಸಾಯಕನ ಕೋದಂಡಟಂಕಾರದ ಮುಸಕಮುನಿಂಚರದಿಂದ ಮುಸುಳಿಪ ಮುಚಿದುಂಬಿಗಳಾ ಬನದೊಳಗೆಸೆದಿಹವು (ಕುರಾಸಾಂ. ೩-೨೬). ೩. ಅಬ್ಬರ ; ಆರ್ಭಟ : ಗುರುಲಿಂಗಜಂಗಮುವಶದಲಿಂತಿರುತಿರಲಿಕೆ . . . ಮಾಯೆಯ ಮುಸಕವೆಲ್ಲವು ಮಾದು ಹೋಹುದು (ಪ್ರಭುಲೀ. ೦೮-೩) ; ಮೆಚಿದುದಿದಿರಲಿ ನಿಖಿಳನದಿಗಳ ಮುಂಚುಕವನು ಮುಸುಳಿಸುವ ಮುಸಕದ ನಿಚಿಸಿನಲಿ ನೀರುಬ್ಬುಗಳ ನಿರ್ಘೋಷದಬ್ಬರದ . . . ಗೋದಾವರಿ (ತೊರರಾ. ೩-೦-೪೭). ೪. ಉಗ್ರತೆ : ತೀಕ್ಷ್ಣತೆ : ಮುಸಕದ ಹಾಲಾಹಲದೊಡನೆಸವಿಂದುವಲೇವೆ ಪುಟ್ಟಿಪಂದದಿನಾ ರಾಕ್ಷಸನೊಡನೆ ಪುಟ್ಟಿ ದೇವಕಿ ವಸುದೇವಂಗರಸಿಯಾಗಿ ಸುಖದಿಂದಿರ್ದಳ್ (ಜಗ. ೨-೩೯). ೫. ಉತ್ಸಾಹ ; ಹುರುಪು : "ಮುಸಕಂ ವಿಜೃಂಭಣಂ" (ಕರ್ಣಾಪ. ೬೭) ; ಉಚಿದವರಾರಾತನ ಮುಸಪ ಮುಸಕದೆಸಕಮುನಿಬೀಪರ್ (ಕಾವ್ಯಸಾ. ೨೩೯ ಕೂಡ್ರ) ; ಒಂದುದೆವಸವೊಂದು ಮಾಯಾಮತ್ತಹಸ್ತಿ ಮುಸಕಂ ಕಾಯ್ಪು ಜವಂ ಜವಂಗಮಿದಿರೊಳ್ ನೋಡಲ್ಕಗುರ್ವಾಗೆ ಮಾಂದಿಸಿಮಾವಂದುದು ಕೊಂದುದೆಂದು ಭಯದಿಂ ವಿಪ್ರರ್ ತೆರಳ್ದೋಡೆ (ಶಂಶಾ. ೮-೩೭) : ಮುಸಕದಿನೆಯ್ದಿ ಕೇಸರಿಯನಿಕ್ಕಿದ ತಕ್ಕನದಾರ್ಗೆ ಮೆಚ್ಚಿ ಬಣ್ಣಿಸಿದಪಿರ್ (ವರ್ಧಪು. ೯-೭೯). ೬. ತಳಮಳ ; ಕ್ಷೋಭೆ : ಸಾಗರದ ಮುಸಕದಿಂದುದಯಿಸಿದ ಬೊಬ್ಬುಳಿಗಳು (ಶಬಪು. ೦೨-೨೦). ೭. ಸಿಟ್ಟು ; ರೋಷ : ಉಡಿಯೆ ರಥಂ ಕೀಲಿಸೆ ಕುದುರೆ ಮುಚಿಯೆ ಪಟುವಿಗೆ ಮುಸೀದಿಸೆಚ್ಚಿಚ್ಚನೊಂದೆ ಸರಲೊಳ್ ನೊಸಲಂ (ಶಂಶಾ. ೧೦-೯೯): ಹಲಧರನ ಮುಸಕವನು . . . ಬಲಿಮುಘನನೀಕ್ಷಿಸುತ . . . ಇದಿರಲಿ ನಿಂದು ಹಿಡಿದನು ಬಲನ ಬಲಗಯ್ಯ (ಕುವ್ಯಾಗ. ೮-೨೮) : ನಿಷ್ಠುರದ ಸಿಂಹದ ಮುಸಕವನು ಸೈರಿಸುವುದೆ ಎಳಹುಲ್ಲೆ (ಅಂಬಿಶಾ. ೩-೨೦). ೮. ಕಾಂತಿ ; ತೇಜಸ್ಸು : ಮುಸುಕುವುದು ಮುಗಿಲೊಮ್ಮೆ ಸೂರ್ಯನ ಮುಸಕ ಮಿಗಿಲಹುದೊಮ್ಮೆ (ಕುವ್ಯಾಕ. ೧೧-೩೭). 'ಮುಸ ಕಂಗುಂದಿಸು' ಪರಾ. ೯. ಆಹಾರದೊಡನೆ ಬೆರಸಿ ಕೊಡಬಹುದಾದ ಒಂದು ಬಗೆಯ ಮಂದವಿಷ ; ಇಕ್ಕುವಂದ್ದು : 'ಕೆಯ್ಮುಸಕ' ಪರಾ. ಮುಸಕು$_1$ : ೯. ಮುಸಕಿಗೆ : – ತುಜಾಮೆಯ ಸೊಪ್ಪನ್ನು ಹಿಸುಕಿ ಮೂಸಿದರೆ . . . ಎಂತಹ ಕೈಮುಸಕು ಸಹ ಮಾಣ್ಗುಂ (ಚಿಪ್ಕಚಿ. ೭೮). [< ಮುಸಗು]

**ಮುಸಕ**$_2$. ಮುಸಗೆ (ನಾ). ೧. ಸೊಳ್ಳೆ : ಮುಸಕಮುನಾಂತಿಫಕುಳಮುಂ ಮುಸಕ ಮುನೊರಸುವಪೊಲೊರಸುವುದು ನಿಜಕರದಿಂ (ಶಾಕ್ತ್ರಪು. ೪-೧೩೪). ಮುಸಗೆ : ೨. ಸಸ್ಯವನ್ನು ಹಾಳುಮಾಡುವ ಒಂದು ಬಗೆಯ ಶಿಲೀಂಧ್ರ : ಬೂಷ್ಟು ; ಕಾಡಿಗೆರೋಗ : ಮುಸಗೆ ಮೂಡಿದ ಹೊಲನು ದುಷ್ಟಪ್ರಸರದೇಳಿಗೆ ಪಾಪಿಯೋಲಗ ಹುಸಿಯ ಬಾಳುವೆ . . . ಹಸನ ಕೊಡುವುದೆ (ಕುವ್ಯಾಆ. ೮-೪೮) ; ಮೂರ್ಖನೃಪನ ಸಿರಿ ಮುಸಗೆಯ ಬೆಳೆಯುಂತಾಗ ದೇನಿಹುದೆ (ರಾಮಚಿ. ೧೪-೦೪೭). [<ಸಂ. ಮಶಕ]

**ಮುಸಕಂಗುಂದಿಸು** (ಕ್ರಿ). ಕಾಂತಿಗುಂದಿಸು : ಕಳಾಹೀನವಾಗಿಸು : ಚೋಳಿಯ ನಾಡು ಸೂಜಿಗೊಂಡಾತನಂ ಮುಸಕಗಿಗುಂದಿಸಿ ವಾರ್ಧಿಯುಂ ಪುಗಿಸಿದಂ ಶ್ರೀಬ್ರಹ್ಮದಂಡಾಧಿಪಂ (ಶಾಶಾ. IX-i, ೨೬೭-೦೬ : 1154).
[ಮುಸಕ$_1$ + ಕುಂದಿಸು]

**ಮುಸಕಂಗುಂದು** (ಕ್ರಿ). ೧. ರಭಸವು ಕುಗ್ಗು ; ಆವೇಶವು ಕಡಿಮೆಯಾಗು : ಮುಸಕಂಗುಂದದೆ ಪಾಯ್ವರಾತಿಶರಸಂಘಾತಂಗಳಂ ಕೂಡೆ ಖಂಡಿಸಿ (ಶಂಶಾ. ೧೨-೦೪೩) ; ಮುಸಕಂಗುಂದದರಾತಿಪಾರ್ಥಿವರ ಕಾಂತಾನೇತ್ರನೀರೇಜದೊಳ್ ಬಿಸುನೀರಂ . . . ನೋಡಿ (ಲೀಲಾವ. ೧-೯೮). ೨. ತೀವ್ರತೆಯು ಕಡಮೆಯಾಗು; ಉಗ್ರತೆಯನ್ನು ಕಳೆದುಕೊಳ್ಳು: ವಸುಧೆಯೊಳೆ ಶಿವದ್ರೋಹಮುನೆಸಗಿದನಂ ಕಂಡು ಸೈರಿಸುವನಾವನವಂ ಮುಸಕಂಗುಂದದ ಪಾಪಪ್ರಸರಕೆ ಪಕ್ಕಾಗಿ ಭವಸರೋಧಿಯೊಳಾಳ್ಗುಂ (ವೃಷಭ. ೪೨-೦೨). [ಮುಸಕ$_1$ + ಕುಂದು$_1$]

**ಮುಸಕಂಗೊಳ್** (ಕ್ರಿ). ೧. ಅಧಿಕಗೊಳ್ಳು ; ಅತಿಶಯವಾಗು : ತಣ್ಪುಸುಣ್ಪೆಂಪುಗಳ್ ಮುಸಕಂಗೊಂಡಿರೆ (ಶಶಿ. ೦-೦೧). ೨. ಉತ್ಸಾಹಗೊಳ್ಳು : ಸುರತಾಲಯದೊಳ್ ಮುಸಕಂಗೊಂಡಮುರ್ದಪ್ಪಿ ಚಪ್ಪಲರ್ದ ವಕ್ಷೋಜದ್ವಯಂ (ಹಸ್ತಿಮ. ೧೭-೩೭). ೩. ಕೋಪಗೊಳ್ಳು : ದಾನವರಿಪು ಮುಸಕಂಗೊಂಡಂ (ಜಗಚಿ. ೩-೭೩). [ಮುಸಕ$_1$ + ಕೊಳ್$_1$]

**ಮುಸಕಂಬೆಱು** (ಕ್ರಿ). ಆವೇಶಗೊಳ್ಳು : ಅಮುಳ್ಗಳ್ ಕರಂ ಮುಸಕಂ ಬೆತ್ತಡೆಪೊಕ್ಕು ಮಿಕ್ಕದಟರಾದಾರ್ದರ್ಬಚ್ಚರಾ ಕರ್ಣನಂ (ಶೀಚಿಪು. ೦೨-೦೦೩): ಪಶುವಂದುಂ . . . ಮುಸಕಂಬೆತ್ತವನೀಶಪೆರ್ಬಲ ಬರಲ್ಕಂಡೋಡಲ್ (ಶೃರಪು. ೯-೭೮). [ಮುಸಕ$_1$ + ಪೆಱು$_1$]

**ಮುಸಕು**$_1$ 'ಮುಸಕ$_1$' ನೋ.

**ಮುಸಕು**$_2$ 'ಮುಸುಕು' ನೋ.

**ಮುಸಗ** (ನಾ). ಆಯುಧಗಳನ್ನು ಹರಿತಮಾಡುವವನು : ಮುಸಗಿ ಮುಂದಣ ಬಡಗಿ ಕಮ್ಮಾಟಿ . . . ಮುಸಗ ಮುಚ್ಚಿಗ . . . ಹರದರ ಕೇರಿಗಳಲುಬ್ಬಿಸಿದನುಬ್ಬಿಚಿದಬ್ಬರಿಸಿ ಕಪಿ ಹವ್ಯವಾಹನನ (ತೊರರಾ. ೩-೮-೫೨). [< ಮುಸೆ$_1$ + – ಗ$_2$]

**ಮುಸಗಿಸು** (ಕ್ರಿ). ರೇಗಿಸು ; ಕೆರಳಿಸು : ದುರ್ಜನರಂ ಮುಸಗಿಸಲಾಗದು (ಸೀಶಾ. ೨೮-೮೨). [ಮುಸಗು + – ಇಸು$_3$]

**ಮುಸಗು**, ಮುಸಂಗು (ಕ್ರಿ). ೧. ಹೆಚ್ಚಾಗು ; ಅತಿಯಾಗು ; ಅಧಿಕಗೊಳ್ಳು : ದಿವಿಜಗಣಂ ಕಾರೊಕ್ಕಲೆಂದೊಡುಚಿದವರಾರಾತನ ಮುಸಪ ಮುಸಕದೆಸಕ ಮುನಿಬೀಪರ್ (ಕಾವ್ಯಸಾ. ೨೩೯ ಕೂಡ್ರ) ; ಮುಸಗಿದುದು ಬೇನೆಯುಂ ಮಾಣಿಸು ದೇವತೆಯೆಂದು ಪರಕೆಯಂ ನುಡಿದೊಡೆ ಮಾಣಿಸುವಳೆ ದೇವತೆ ವೇದನೆಯ (ಸಮುಚ. ೯-೦೦೪) ; ವಿಸ್ತರದ ಗುಜುಗುಜು ಮುಸಗಿದುದು ಕಾಂತಾ ಕದಂಬದಲಿ (ಕುವ್ಯಾಆ. ೦೪-೩೩) : ಇಂತು ನನ್ನನು ಕವಿದ ದುಃಖ ನಿನ್ನೆಯ ಇರುಳು ಮರಳಿ ಮುಸಗಿತು, ನನ್ನ ಆತ್ಮವನು ಮುಳುಗಿಸಿತು (ಮುಕೋಲ. ೪). ೨. ಹರಡು ; ಆವರಿಸು : ಆದಂ ಕೇಳಲೊಡನೆನ್ನ ನೆತ್ತಿಯೊಳುರಿ ಮುಸಗಿದಂತಾಗೆ (ಕಾಪಂಚ ೩೭೦) ; ಹೊತ್ತಿ ಹೊಗೆದು ದಳ್ಳುರಿ ಮುಸಗೆ (ಚಿಕ್ಕರಾ. ೭-೨೨) : ತಪಃಪ್ರಭಾವಮೊಂದೇಟಗ್ಗಿವೆತ್ತು ದೆಸೆದೆಸೆಯೊಳಂ ಮುಸಗೆ ಕಂಡು (ರಾಮಾಶ್ವ. ೩೭-೦೯). ೩. ಪ್ರಕಟವಾಗು ; ಹೊರಹೊಮ್ಮು : ದೈತ್ಯಬಲಪುಳಿದಡಿಯಿಡಲು ಮೇಲುಸುರು ಮುಸಗಿತು ಫಣಿಪ ಕಮಠರಿಗೆ (ಕುವ್ಯಾದ್ರೋ. ೦೫-೪೭) ; ಖಿಳ ಕಪಿ ಮುಸಗೆ ಕಿತ್ತೆತ್ತಿದನು ಮೃತ್ಯುಂಜಯನ ಗಿರಿಯ (ತೊರರಾ. ೦ ೮-೩೨) ; ಉರಿ ಮುಸಗಿತು ನಾಸಿಕದಲ್ಲಿ ಕೆಂಗಿಡಿ ಸುರಿವಕ್ಷಿಯಿಂದೆ ನಂದೀಶ . . . ಗರುಡನ ನೆತ್ತಿ ಬಿರಿವಂತೆ ಶಿವಿನು ಬೊಬ್ಬಿಱಿದ (ಮೋಹತ. ೩೮-೩೫). ೪. ರಭಸವನ್ನು ಹೊಂದು ;

ತೀವ್ರಗೊಳ್ಳು : ಮಸಗಿದುದಾತ್ಮಪಾಮೃತತರಂಗಿಣಿ ಪೌರಜನಾಂತರಂಗದೊಳ್ (ಮಲ್ಲಿ. ೯-೧೨೯); ನೆಲನನುಗ್ಗಡಿಪ ಕಂಚುಕಿಗಳಬ್ಬರ ಮಸಗಿತಾ ಸಭೆಯೊಳು (ತಲಕ. ೬-೧೮). ೫. ಆತುರಪಡು ; ಉದ್ವೇಗಗೊಳ್ಳು: ಪಡಿದಲಾಜದೆ ಪಣ್ಣಂ ಮಸಗಿ ಪಡರ್ತಿಂದು ಸಾಯೆ ಕಂಡು (ರಹಶಾಸ್ತ್ರ. ೨-೧೮೬) ; ಅಪ್ರತಿಮಲ್ಲದೈಮದ ಸೆಲೆಯುನಜಿಯದ ಮಿಲ್ಲಭೂಪರು ಮಸಗಿದರು ಗುಜುಗುಜಿಸ ಗಾಢವಲಿ (ಶಬ್ದಾಕ. ೯-೬೩). ೬. ಉತ್ಸಾಹಗೊಳ್ಳು ; ಹುರುಪೇರು : "ಮಸಗು – ವಿಜೃಂಭಣೇ" (ಶಮಣ) ; ಆರ್ ಮಿಕ್ಕು ಬರ್ದುಂಕುಪನ್ನರಿಮರ್ಗೆಂಬಿನೆಗಂ ಮಸಗಿತ್ತು ರಾಜಕಂ (ಶಂಶಕಾ. ೩-೬೬) ; ಎಸಗುವ ವಾವಮಸುಖಂಗಳ ದೆಸೆಗೆಸಗದೆ ಮಸಗದೆ ಸಗದಿರ್ದೆಡೆಯಿಂದಿರ್ದಸದೃಶದಿವಿಜಸುಖಾಮೃತರಸದಿಂ ತನ್ನಿಂದೆ ತಾನೆತಣ್ಣನೆ ತಣಿದಂ (ಸುಕುಮಾ. ೧೨-೯೬) ; ತ್ರೈಲೋಕ್ಯಮಲ್ಲಂ ಮಸಗಿ ಮುಳಿದು ಮೇಲೆತ್ತಿದಂ (ಎಕ. VII, ಶಿಕಾ. ೧೧೦-೧೨; 1070). ೭. ಕ್ಷೋಭೆಗೊಳ್ಳು; ಉಕ್ಕೇರು : ಅನಿಬರುಮುತ್ಪಾತಮರುದಾಭಿಘಾತೋದ್ಧೂತ ಪಯೋನಿಧಿಗಳಂತೆ ಮಸಗಿದರಾಗಳ್ (ಆದಿಪು. ೦೯-೬) ; ಮರ್ಬು ಪೂತು ಭಾಪೆನುತ . . . ಭಟರುಲಿಯೆ ಲಹರಿಯ ಸಾಗರದ ಸೌರಂಭದಂತಿರೆ ಮಸಗಿತಾಸ್ಥಾನ (ಶಬ್ದಾದರ್ಶ. ೦-೩೬) ; ಗೊಳ್ಳೆಂದು ನಗೆಯ ತೆರೆ ನೊರೆಯುಕ್ಕಿ ಮಸಗಿ ತುತ್ಸಾಹದಿಂ ಪಾಂಡವದಳದ ಜಳಧಿ (ತತ್ರಾಂಗ. ೬೬-೨೦೨೦). ೮. ಕೆರಳು ; ರೇಗು; ಉದ್ರೇಕಗೊಳ್ಳು : ಪ್ರತ್ಯಂತವಾಸಿಗಳಪ್ಪರಸುಗಳ್ ಮಸಗಿದೊಡೆ ಮಂತ್ರಿಯ ಗುಣವುಂ ನೆನೆದು ಬೆಸಗೊಂಡಂ (ಪಡ್ಮರಾ. ೦೬೨-೨೦); ಮಸಗಿದ ಮದಾಂಧಗಂಧಸಿಂಧುರದಂತೆ ಧೆಸೆಗೆ ಮಸಗಿದ ವಾಯುಪುತ್ರನಂ ಧರ್ಮಪುತ್ರಂ ಸಂತೈಸಿ (ಶಂಶಕಾ. ೯-೨೯ ವ) ; ವಿಗಡಬಸವಂ ಮಸಗಿ ಲಳಿಯೆದ್ದು ತತ್‌ಕ್ಷಣಂ ಚಿಗಿಯಲ್ ತೊಡರ್ದ ದಾಮಂಗಳೆಲ್ಲಂ ಪರಿದುವು (ತಿಂಕು. ೯೯-೦೬). ೯. ಎದುರುಬೀಳು ; ಮೇಲೆಬೀಳು : ಮಸಗಿ ಬಳಿಕಾವರ್ತರ ಬೆಸದಿಂದಂ ಬಂದ ಮೇಘಮುಖರಂ ತೂಳ್ದೋಡಿಸೆ (ಆದಿಪು. ೦೯-೩೬) ; ಹಸಿದ ಹೆಬ್ಬುಲಿ ಮಸಗಿದರೆ ಮೃಗವಿಸರವೇನಹುದರಸ (ಶಬ್ದಾದರ್ಶ. ೦೬-೨೬). ೧೦. ಕಾಂತಿಯುಕ್ತವಾಗು ; ಶೋಭಿಸು : ಚಂದ್ರೋದಯಮಿನ್ನೆಸೆದಪುದೆನೆ ನಸುವೆಳಗಿಂ ಮಸಗಿದುದಿನಿಸಿಂದ್ರದಿಗ್ವಧೂಮುಖಬಿಂಬಂ (ಕಾದಂಬ. ೬೭೬). ಮಸಂಗು : ೭. ಪೊಸಲ್ ಮಸಂಗಿ ಸುರಿತರ್ಪರುಣಾಂಬುಸುವೃಷ್ಟಿ(ಯ ?) ಬಲ್ಪು ಮೆರ್ಬಿಳಸನೆ . . . ಪಳಂಚವರಿ ವರ್ಲದುರ್ವರಾಧಿಪರ್ (ದಕಹ. ೨-೨೨). P ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ.

ಮಸಮಸಗು (ದ್ವಿರುಕ್ತಿ) : ಈ ಇಂದಿನ ಮಹಾರಾಜನು . . . ಶ್ರೀಮನ್ಮಹೀಶೂರಯಾದವಪ್ರಭುವಂಶಕ್ಕೆ ಕೊಡಲಿಯು ಕಾವೆ ಆಗಿ, ಮಸಮಸಗುತ್ತಿದ್ದಾನೆ (ಮುಂತ್ರಕ. ೬೬-೦). [ದೇ.॥ ತೆಲು. ಮಸಗು]

ಮುಸಗೆ ' ಮಸಕ$_2$ ' ನೋ.

ಮುಸಜೀದ ' ಮಸೀದಿ ' ನೋ.

ಮುಸಜೀದಿ ' ಮಸೀದಿ ' ನೋ.

ಮಸಣ, ಮಶಾಣ, ಮಸಾಣ, ಸ್ಮಶಾನ (ನಾ). ಶವಗಳ ಅಂತ್ಯಸಂಸ್ಕಾರವನ್ನು ನಡೆಸುವ ಸ್ಥಳ ; ಸುಡುಗಾಡು ; ರುದ್ರಭೂಮಿ : "ಮಸಣ ಪೆಸಲು ಸ್ಮಶಾನಂ" (ಕಶರ. ೦೨೮); ಆಕೆಯಂ ಬೆಳ್ಮಾಡೊಳ್ ಮಸಣದೊಳ್ ಕೊಂಡುಪೋಗಿಕ್ಕಿ (ಪಡ್ಮರಾ. ೦೦೨-೯); ನರಕವ ನೆಲೆ . . . ಮಸಣದ ಪುಟ್ಟು ಪಾಪದೆಜ ಪಾತಕದಾಗರಮದು ನೆನೆವರ್ಗೆ ಭಯಂಕರಂ (ಕಾದಂಬ. ೬೯೬) ; ಮಸಣದ ದಾರಿಯುಳಲು ಪುಟ್ಟಿಸಿದುದು (ತ್ರೀಶಾಂ. ೮-೪). ಮಶಾಣ : ಮಕ್ಕಳಿಲ್ಲದ ಮನೆ ಮಶಾಣ ಎಂಬ ಹಾಗೆ ಬರೀ ಮನೆ ಆಯಿತು (ಕಥಾಸಂ. IV, ೬೫). ಮಸಾಣ : ಕಟ್ಟೀ ಕೆಳಗೆ ಹೋದ ನೀರೂ ಮಸಾಣಕ್ಕೆ ಹೋದ ಹೆಣ್ಣೂ ಹಿಂತಿರುಗಿ ಬರುತ್ತವ್ಯೋ ? (ಹುಲ್ಯಹ. ೧೬೬). ಸ್ಮಶಾನ : "ಮಸಣ (ಮಸಾಣ)—ಸ್ಮಶಾನ = ಸುಡುಗಾಡು" (ಕರ್ನಕೊ. ೩೯) : ಬಂಧುಜನಗಳು ಸ್ಮಶಾನದವರೆಗೆ ಬರುವರು (ತತ್ವಶಿ. ೦೯-೬) ; ಮನೋಭಾವವಿಲ್ಲದ ವ್ಯಕ್ತಿಗೆ ಅವೆಲ್ಲ ಸ್ಮಶಾನಸದೃಶ (ಕಿಶೃರ. ೩೮೮).

ಮಸಣದೊಡೆಯ = ಸುಡುಗಾಡಿನ ಅಧಿಪತಿ; ಶಿವ: ಮಸಣದೊಡೆಯನ ಸೇರ್ದನಾ ಬಸವಪ್ಪಶಾಸ್ತ್ರಿ (ಶಾಕುಂತ. ೬ ಅರಿಕ್ಕಾದು). ಮಸಣಮೌನ, ಸ್ಮಶಾನಮೌನ = ೧. ಸ್ಮಶಾನದಲ್ಲಿ ಆವರಿಸಿರುವ ನಿಶ್ಶಬ್ದತೆ. ೨. (ಅಲಂ) ಜೀವಂತಿಕೆಯಿಲ್ಲದೆ ನಿಶ್ಶಬ್ದವಾಗಿರುವ ವಾತಾವರಣ : ತಾವು ಅನ್ಯೋನ್ಯವಾಗಿರದೆ, ಮಾತುಕಥೆ ಕೂಡ ಇಲ್ಲದೆ, ಮಸಣಮೌನದಿಂದ ದಾರುಣಜೀವನವನ್ನು ಜೀವಿಸುವುದು ಸಾವಿಗಿಂತ ಕಡೆ ! (ಬಂಕಿರು. ೨೦೨) ; ಮಸಣಮೌನ ಎಲ್ಲವನ್ನೂ ನುಂಗಿ ನೊಣೆದಿದೆ (ಹಂಗೀಶ. ೨೩); ಸಾಮರಸ್ಯವಿಲ್ಲದ ಅವರ ಸಂಸಾರವನ್ನು ಸ್ಮಶಾನಮೌನ ಆವರಿಸಿಕೊಂಡಿದೆ (ಕಅ).

[<ಪ್ರಾ. ಮಸಾಣ. / ಸಂ. ಶ್ಮಶಾನ]

ಮಸಣಕಬ್ಬೆ 'ಮಸಣಿಕಬ್ಬೆ' ನೋ.

ಮಸಣಗಾಡು (ನಾ). ಸುಡುಗಾಡು ; ರುದ್ರಭೂಮಿ : "ಶ್ಮಶಾನಂ, ಪಿತೃವನಂ—ಈ ೨ ಮಸಣಗಾಡು" (ಹಲಾಯು. ೦೦೫-೦೬) ; ತಾಯಿಯಿದ್ದಡೆ ಮಸಣಗಾಡಿಗೆ ಕಳುಹುವಳೆ ಮಗನ (ಬಸವ. ೦೫-೯).

[ಮಸಣ + ಕಾಡು$_2$]

ಮಸಣಗಾಹಿ (ನಾ). ಶ್ಮಶಾನವನ್ನು ಕಾಯುವವನು ; ಶಿವ : ತಿರುಕಂ ಮಸಣಗಾಹಿ ಹಾವಾಡಿಗನೆಲುಮಾಲೆಗೊರಲ ಗೊರವಂ ನೋಡಲೆನಗೆ ಪಾಸಟಿಯೆ (ಕಿಬಪು. ೩೦-೩೬) . [ಮಸಣ + ಕಾಹಿ]

ಮಸಣಬಟ್ಟೆ ' ಮಸಣವಟ್ಟಿಗೆ ' ನೋ.

ಮಸಣಬ್ಬೆ (ನಾ). ಒಂದು ಕ್ಷುದ್ರದೇವತೆಯ ಹೆಸರು : ಕರೆಯದೆ ಕಾಡಿ ಕಂಟಿಸುವ ಕೂಂಟಣಿಯಂ ಮಸಣಬ್ಬೆ[ಪಾಠಾಂ. ನೊಣಗಬ್ಬೆ, ನೊಣಗಜ್ಜಿ]ತಿಂಗೆ (ಕಾವ್ಯಸಾ. ೯೯೦ ; ಅಲಾಪ. ೨-೦೦೬ ನೋ). ' ಮಸಣಿಕಬ್ಬೆ ' ಪರಾ.

[<ಮಸಣ + ಅಬ್ಬೆ$_1$]

ಮಸಣಯಾತ್ರೆ (ನಾ). ಹೆಣವನ್ನು ಶ್ಮಶಾನಕ್ಕೆ ಕೊಂಡೊಯ್ಯುವುದು ; ಅಂತಿಮಯಾತ್ರೆ : ಮಣಿಪುರದರಮನೆಯ ಕನಕವಪ್ರದಿಂ ಪೊರಮಟ್ಟು ನಡೆದುದು ಮಸಣಯಾತ್ರೆ (ಶತ್ರಾಂಗ. ೬೮-೨೯೩೬). [<ಸಂ. ಶ್ಮಶಾನಯಾತ್ರಾ]

ಮಸಣವಟ್ಟಿ 'ಮಸಣವಟ್ಟಿಗೆ' ನೋ.

ಮಸಣವಟ್ಟಿಗೆ, ಮಸಣಬಟ್ಟೆ, ಮಸಣವಟ್ಟಿ, ಮಸಣವಟ್ಟೆ, ಮಸವಟಿಗೆ (ನಾ). ಶವಗಳ ಅಂತ್ಯಸಂಸ್ಕಾರವನ್ನು ಮಾಡುವ ಸ್ಥಳ; ಸುಡುಗಾಡು; ಶ್ಮಶಾನ : "ಸೊಡಬಲಿಯೆಂದೆನಲ್ ಮಸಣವಟ್ಟಿಗೆಯೊಳ್" (ಕಶರಕ. ೬೬); ಊರ ಪೊಜಗಣ ಮಸಣವಟ್ಟಿಗೆಯೊಳಿರಲು (ಶಂಬಕ. ೬-೫೫); ಪಾಣ್ಬನಂ ಕೊಂಡುಪೋಗಿ ಪುರದ ಪೊಱಪೊಬಲ ಮಸಣವಟ್ಟಿಗೆಯ ಮಧ್ಯದೊಳು ವಧಿಯಿಸುವುದು (ಕುಶಾಸ್ತ್ರ. ೫-೨೯ ವ); ಮಸಣವಟ್ಟಿಗೆಯೊಳಗೆ ಮಾರಿ ಕಾವಲು ಕಾಯ್ದು ಚೆನ್ನಿಗನಿಹನು (ತುರಂಗ. ೩೨-೩೨). ಮಸಣಬಟ್ಟೆ, ವೇತಾಳ ತನ್ನ ಮಸಣಬಟ್ಟೆಗೆ ಹೊರಟಂತೆ ಕೇಶವಭಟ್ಟರು . . . ಹೊರಟು ಹೋದರು (ಶಿರಾಕ. ೩೯). ಮಸಣವಟ್ಟಿ : ಮಾದಿಗವೇಷದೊಳಂ ದಿನದಿನಂ ಮೊದಲಾಗಿಯಾ ಮಸಣವಟ್ಟಿ[ಪಾಠಾಂ. ವಟ್ಟಿಗೆ]ಯಂ ಕಾದಿರ್ದಂ (ಕುಶಾಸ್ತ್ರ. ೨-೯೪ ವ). ಮಸಣವಟ್ಟೆ : ಶಿಶುವನಿರಿಸಿ ಮಱಿಯಾಗಲವರು ಸಟ್ಟಿ ಮಸಣವಟ್ಟೆಯಲಿ ಶಬವನು ಬಿಸುಟಲ್ಲಿ ನೋಡಲು ತಳಿರ ಹಾಸಿನ ಮೇಲೆಸೆವ ಬಾಲಕನನು ಕಂಡ (ಶೀಲಂಹಿಂ. ೬-೨೮); ಮಿಸುಪ ನಾಟಕಶಾಲೆಗಳನು ಮಸಣವಟ್ಟೆಗೆ ಸೆಱೆಮನೆಗೆಣೆಗಂಡು ಯೋಚಿಸಿದೆನು (ಕರಕ. ೮೦-೦೯); ಜನಾನಖಾನೆ ಮಸಣವಟ್ಟೆಯಾಯಿತು (ಕೂಬಿಜಾ. ೦೦೦). ಮಸವಟಿಗೆ : ಕಳ್ಳರಿಂ ಕಡಿವಡೆದು ಭೂಸುರಂ ಮಸವಟಿಗೆಯಲ್ಲಿ ಬಿದ್ದಸುಗಳೆವ ಕಾಲದೊಳು ಶುನಿ ಬೂದಿಯಲ್ಲಿ ಪಟ್ಟಿರ್ದ ಬಂದವನ ಪೆಣಯಂ

ಮೆಟ್ಟಿಲು (ರಾಳಕ. ೯-೫೩). P ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ. 'ಮುಸಣವಾಟಿ' ಪರಾ. [<ಸಂ. ಶ್ಮಶಾನವಾಟಿಕಾ]

**ಮುಸಣವಟ್ಟಿ** 'ಮುಸಣವಟ್ಟಿಗೆ' ನೋ.

**ಮುಸಣವಾಟಿ** (ನಾ). = ಮುಸಣವಟ್ಟಿಗೆ : ಅದನ ದಾಟಿ ಆ ಮುಸಣವಾಟಿ, ಎಡಕಾಗಿ ಅದರ ಆಚೆ ಕಾಮ ತನ್ನ ಪಚ್ಚಂಗಿ ಹಾಸಿಧಾಂಗೆಲ್ಲಿ ನೀರ ಪಾಚಿ (ಗಂಗಾಕ. ೯೭-೫). 'ಮುಸಣವಟ್ಟಿಗೆ' ಪರಾ. [<ಸಂ. ಶ್ಮಶಾನವಾಟೀ]

**ಮುಸಣವಾಡಗೆ** (ನಾ). ಶ್ಮಶಾನದಲ್ಲಿ ಹೆಣವನ್ನು ಸಂಸ್ಕಾರಮಾಡಲು ಕೊಡಬೇಕಾದ ಬಾಡಿಗೆ,-ಶುಲ್ಕ : ಹೆಣನುಟ್ಟುದಂ ಮುಸಣವಾಡಗೆಯ ಹಾಗವನು ಕೊಟ್ಟಿಲ್ಲದೇನೆಂದಡಂ ಬಿಡೆನು (ಹರಶ. ೦೨-೩೭).
[ಮುಸಣ + ಬಾಡಗೆ]

**ಮುಸಣಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಗಂಡ ಶಿವಲಿಂಗ ದೇವರ ಭಕ್ತ, ಹೆಂಡತಿ ಮಾರಿ ಮುಸಣಿಯ ಭಕ್ತೆ (ಶಿಸಪ. ೦೦೯); ಮುಸಣದಾ ಮಾತಮ್ಮನೆಂಬವಂ ಮುಸಣಿಯುಂ ಕುಣಿಸೆ (ತಂಶು. ೫೭-೨೦); ರೋಗಾದಿಗಳ ಪೀಡೆಯಾದರೆ ಮಾರಿ, ಮುಸಣಿ ಮೊದಲಾದ ದೇವತೆಗಳೂ ಬೇಕು (ಕನ್ನಡ. ೦). [ಮುಸಣ + — ಇ₂]

**ಮುಸಣಿಕಬ್ಬೆ**. ಮುಸಣಕಬ್ಬೆ (ನಾ). = ಮುಸಣಿ : ಮುಸಣಿಕಬ್ಬೆಯ ಗೋಪುರದಿಂ ತೆಂಕ (ಮುಂಬರಾ. XII. ೦೬-೫೯; 1023). **ಮುಸಣಕಬ್ಬೆ** : ಬಡಗಲು ಮುಸಣಕಬ್ಬೆಯ ಕೊಂಡದ ತೆಂಕಣಗಡ (ಕರ್ನಾ. IV. ೯೨-೮೯; 1239); ಮಾರಿಕಬ್ಬೆ ಮುಸಣಕಬ್ಬೆ . . . ಮೊದಲಾದ ವ್ಯಂತರಂಗಳುಂ (ತ್ರಿವರ್. ೦೦೯-೨೨). 'ಮುಸಣಬ್ಬೆ' ಪರಾ. [< ಮುಸಣಿ + ಅಬ್ಬೆ₁]

**ಮುಸಣಿಗೆ** (ನಾ). = ಮುಸಣಿ : ಮರವೀಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮುಸಣಿಗೆಯೆನಿಪ್ಪ ಕೊಟಿದೆಯ್ವಂಗಳ್ (ಸಮುಶ. ೯-೦೨೯).
[< ಮುಸಣಿ]

**ಮುಸಣಿಸು** 'ಮುಸುಳಿಸು' ನೋ.

**ಮುಸಬು** (ನಾ). ಕೆಂಪುಮಣ್ಣಿನ ಭೂಮಿ : ಕೆಬ್ಬೆ : ಮುಸಬು ಸೌಳು ಮಡಿಯೊ (ಹಂದರ. ೦-೫೭); ಕೆಂಪು, ಮುಸಬು, ಸವಳು, ಕರಲು, ಕರಕಿಯ ಮತ್ತು ಮುಂತಾದವಾದರೂ . . . ಬಾವಿಗಳು ಇದ್ದಲ್ಲಿಯಾಗಲಿ ನೆಲ್ಲುಗದ್ದೆ ಗಳನ್ನು ಮಾಡಿಕೊಳ್ಳಬೇಕು (ಕೃಶಿಶ್ರ. ೫೫). [ ? ]

**ಮುಸಮುಸ** (ನಾ). ಮಬ್ಬು; ಮುಸುಕು : "ಮುಸಮುಸವಾದುದೆಂದು ಬೆಳಗಬೇಡುದು" (ಕೆರಾ. ೫೭-೨೦೭). 'ಮುಸಮುಸನೆ' ಪರಾ.
[ < ಮುಸಕು₂ ? ]

**ಮುಸಮುಸನೆ** (ಅ). ಒಂದು ಅನುಕರಣಾವ್ಯಯ: ಮಬ್ಬಾಗಿ: ಮುಸುಕಾಗಿ: ಪಾಂಸುಪಟಲಂ ಮುಸುಳಿಸೆ ಮುಸಮುಸನೆ ತೋಱುವವಸರದೊಳ್ ಪೋಲ್ತೆಸೆದುದು ಧುಂತ್ರಿ ಪೊಗೆ ಪುಗೆ ಪಸುಪಾಸಿದ ಪೊಗೆಯ ಚಿತ್ರಭಿತ್ತಿಯು ತೆಱದಿಂ (ಪುಶ್ಪಪು. ೫-೪೦).

**ಮುಸಮುಸನಾಗು** = ೧. ಮಬ್ಬಾಗು ; ಮಂಕಾಗು : ಮುಂಬಗ ಲೊಳಗೆ ಮುಸಮುಸನಾದ ತಾರೆಯ ಬಳಗದಂದದಿ (ಕಂಜಕ. ೨-೨). ೨. ಕಡಮೆಯಾಗು: ಕುಗ್ಗು : ತನ್ನೊಳಾದೊಲವಿನೆಸಕಂ ಮುಸಮುಸನಾಗ ಮತ್ತೊರ್ವನೊಳ್ ಮನಕ್ಕೆಡಮಾಡುವಳ್ . . . ಒಲ್ದೆನೆಂದು ರೋಸದಿಂ ಪುಸಿಮಾಟ್ದುದು (ಕಂಪ್ರಶು. ೮-೫೯ ವ). [ ಮುಸಮುಸ + — ಅನೆ₁ ]

**ಮುಸರಾವ್ಯಾಪಾರ** (ನಾ). ವಜ್ರ ಮುಂತಾದ ರತ್ನಗಳ ವ್ಯಾಪಾರ ; ರತ್ನಪಡಿವ್ಯಾಪಾರ : ಮುಸರಾವ್ಯಾಪಾರದಿಂದ ಅವರು ಶ್ರೀಮಂತರಾದರು (ಜಾ). [ಮುಸರಾ₀ (P < ಸಂ. ಮುಸಾರ = ಮರಕತ) + ವ್ಯಾಪಾರ]

**ಮುಸಲ** 'ಮುಸಲಾ' ನೋ.

**ಮುಸಲತ್** 'ಮುಸಲತ್ತು' ನೋ.

**ಮುಸಲತಿ** 'ಮುಸಲತ್ತು' ನೋ.

**ಮುಸಲತ್ತು**. ಮುಸಲತ್, ಮುಸಲತಿ, ಮುಸಲಿಯತು (ನಾ). ಒಳಸಂಚು ; ಪಿತೂರಿ ; ಹಂಚಿಕೆ : ಜನರಾಲ್ ಸಾಹೇಬರ ಸಂಗಡ ಮುಸಲತ್ತು ಮಾಡಿ ಟೀಪುಸುಲ್ತಾನರಿಗೆ ಜವಾಬು ಬರೆದ ವಿವರ (ರಾಕೇಂದ್ರ. ೯೦); ಎಲ್ಲಾ ವಿನೋ ಒಂದು ಮುಸಲತ್ತಿಗೆ ಸೇರಿಕೊಂಡ ಹಾಂಗೆ ಕಾಣ್ತದೆ (ಮುಳಿಮು. ೬೯೬). **ಮುಸಲತ್** : ಕಂಪೆನಿ ಓಡಿಸ್ಬಿಡಬೇಕೂಂತ ಮುಸಲತ್ ಮಾಡಿದ್ರು (ಅನಾಬಿ. ೬೯). **ಮುಸಲತಿ** : ಗ್ರಾಮದ ಮುಸಲತ್ತಿಯೊಳ್ನಿಸ್ಸೀಮ ಪ್ರತಿಭಟರನಲೆದು ತತ್ಕೋಂಟೆಯುಮಂ ಭೂಮಿಪತಿಲಕಂ ರಿಪುಕುಲಭೀಮಂ ಶಿವಭೂಪನಾಜಿಯೊಳ್ಸಾಧಿಸಿದಂ (ಕೆಳನೃ. ೬-೪೩). **ಮುಸಲಿಯತು**: ಇಬ್ಬರು ಜನರಾಲ್‌ಸಾಹೇಬರು ಮುಸಲಿಯತು ಮಾಡಿದರು (ರಾಕೇಂದ್ರ. ೯೨).
[← ಅರ. ಹಿಂ. ಮುಸಲಹತ್; ಮರಾ. ಮುಸಲತ್, ಮುಸ್ಲತ್]

**ಮುಸಲಾ**. ಮುಸಲ (ಅ). ಒಂದು ವೇಳೆ, ಅಕಸ್ಮಾತ್, ಎಂಬರ್ಥಗಳಲ್ಲಿ ಬಳಸುವ ಒಂದು ಅವ್ಯಯ : ಮುಸಲಾ ಒಬ್ಬ ರೈತನು ಪ್ರಾರಂಭಕ್ಕೆ ನಾಲ್ಕುವರಹ ಕಂದಾಯ ಕೊಡುವಂಥಾವನು . . . ಒಂದು ವರಹಾ ಎರಡು ವರಹ ಕಮ್ಮಿಮಾಡಿಸಿಕೊಂಡು ಇದ್ದಲ್ಲಿಯೂ (ಮುಹಾಶಂ. II, ೬೦); ಒಂದ್ವೇಳೆ ಹೂವಳ್ಳೀಲಿ ಮುಸಲಾ ನಾನೆ ನಿಂತು ಗದ್ದೆತೋಟದ ಕೆಲಸ ಎಲ್ಲಾ ಮುಗಿಸಬೇಕಾಗಿ ಬಂದರೆ ಅಲ್ಲೀಗೆ ಬರ್ತಿರೇನೊ (ಮುಳಿಮು. ೬೦೭). **ಮುಸಲ** : ಮುಸಲ ದೊಡ್ಡ ಆನೆ . . . ಬಂದಿತು ಎಂದುಕೋ ಅಗ್ಗ (ಮುರುಶ. ೦೦೯); ಮುಸಲ ಇವು ಯಾವುದಕ್ಕೂ ಸೇರದೆ ಉದಾಸೀನರಾಗಿರತಕ್ಕವರು ಇದಕ್ಕೆ ಸೇರಲೇ ಇಲ್ಲ (ಸಾಂಘಿಕ. ೩೯).
[← ಅರ. ಹಿಂ. ಮುಸಲ್ಲ, ಮುಸಲನ್, ಮುಸಲಾ]

**ಮುಸಲಿಯತು** 'ಮುಸಲತ್ತು' ನೋ.

**ಮುಸವಟಿಗೆ** 'ಮುಸಣವಟ್ಟಿಗೆ' ನೋ.

**ಮುಸವರಿ** (ನಾ). ಒಂದು ಬಗೆಯ ತೆರಿಗೆ : ನೆರೆವರಿ ವರಾಡ ಕಡ ಮುಸವರಿ . . . ಸಂಜಾಯಿತನಿಲಗಳ ಪರಿವಿಡಿಯಂ ನಿಲಿಸಿ ಸೀಮೆಯುಂ ರಕ್ಷಿಸಿದಂ (ಕೆಳನೃ. ೬-೨೯). 'ನೆರೆವರಿ' ಪರಾ. [ಮುಸ ? + ವರಿ₁]

**ಮುಸಾಣ** 'ಮುಸಣ' ನೋ.

**ಮುಸಾರಿ**. ಮುಸಾರೆ (ನಾ). ಕೆಂಪುಮಣ್ಣಿನ ಭೂಮಿ : ಕೆಬ್ಬೆ : ಮುಸಾರಿ ಕೇಸರಿ ಮೊರಡಿಯ ಜಮೀನುಗಳಾದರೂ ಅಂಥ ಹೊಲಗಳಿಗೆ ನಟ್ಟು ಕಡಿಸಿದ ಮರ್ಷ ಬಿಳಿಯ ಎಳ್ಳು ಬಿತ್ತಬೇಕು (ಕೃಶಿಶ್ರ. ೨೭); ಸೀಗೆಹುಣ್ಣಿಮೆಗಾ ಮುಸಾರಿಯು ಹಸುರು ಪುಷ್ಪದ ತೆರೆಯಿತು (ಕಲಿಮು. ೦೨-೧೦). **ಮುಸಾರೆ** : (೯). [← ಮರಾ. ಮುಸಾರ್ = ಉತ್ತಮ ಬೆಳೆಯನ್ನು ನೀಡುವ, ಮರಳುಮಿಶ್ರಿತಭೂಮಿ]

**ಮುಸಾರಿಭೂಮಿ** (ನಾ). = ಮುಸಾರಿ : ಗುಡ್ಡಗಳ ನೆರೆಪ್ರದೇಶವು ಕೆಂಪು ಮಣ್ಣಿನದಿರುತ್ತದೆ. ಇದಕ್ಕೆ ಮುಸಾರಿಭೂಮಿ ಎಂದೆನ್ನುತ್ತಾರೆ (ಮುಂಬಳಿ. ೨೯); ಇಲ್ಲಿ ಎಲ್ಲ ಕಡೆಗೂ ನಾವು ಕಾಣುವುದು ಕರೆಯ ನೆಲವನ್ನಲ್ಲ; ಕೆಂಪುನೆಲ ಇಲ್ಲವೆ 'ಮುಸಾರಿ' ಭೂಮಿ (ಶಾಶಾಶ. ೯೦). [ಮುಸಾರಿ + ಭೂಮಿ]

**ಮುಸಾರಿಸು** (ಕ್ರಿ). ಹರಡು ; ವ್ಯಾಪಿಸುವಂತೆ ಮಾಡು (?) : ಕಡೆಗಣ್ ನುಣ್ಬೆಳಗಂ ಮುಸಾರಿಸುವಿನಂ ಬೆಳ್ದಿಂಗಳಂ ಜೋಲ್ದು ಪೂಮುಡಿ ಮಂದಾನಿಳನಂ ದಳಂಗೊಳಿಪಿನಂ . . . ಕುಳ್ಳಿರ್ದ ತನ್ವಂಗಿಯಂ ಕಂಡು (ಅಸಂಪು. ೯-೮). [P ಇದು 'ಪ್ರಸಾರಿಸು' ಎಂಬುದರ ಅಪಲಿಖಿತ ವಿರಬಹುದು]

**ಮುಸಾರೆ** 'ಮುಸಾರಿ' ನೋ.

**ಮುಸಾಲೆ** (ನಾ). ಆಹಾರಪದಾರ್ಥಗಳನ್ನು ರುಚಿಗೊಳಿಸಲು ಉಪ ಯೋಗಿಸುವ ಮೆಣಸು, ಜೀರಿಗೆ, ಧನಿಯ, ಚೆಕ್ಕೆ ಮುಂತಾದ ಸಂಬಾರವಸ್ತು ಮತ್ತು ಇವುಗಳನ್ನು ಹುರಿದು ಕುಟ್ಟಿದ ಪುಡಿ : ಕೇರಿಕೇರಿಯೊಳು ಗಂಡಿಗೆ ಮುಸಾಲೆದ್ರವ್ಯಂಗಳಂ ಮಾರುತಿರ್ದಪನು (ಕರಿಂ.

೧೯೦-೩ ವ) ; ಅಡುಗೆಮನೆಗಳಲ್ಲಿ . . . ಮಸಾಲೆ ಅರೆಯುವ ಕಲ್ಲು. ಪೊರಕೆ, ಬ್ರಶ್ಶುಗಳನ್ನಿಡಲು ನಾಗೊಂದಿಗೆ ಇತ್ಯಾದಿ ಸೌಲಭ್ಯಗಳಿರುತ್ತವೆ (ಅಮೆಶ್. ೨೬) ; ಜೀವನದ ಪಾಕದಲ್ಲಿ ವಿನೋದವು ಮಸಾಲೆಯಂತಿದೆ (ಕಥೆ. ೨೪) ; ಕೋಳಿ ಕೇಳಿ ಮಸಾಲೆ ಅರೆಯುತ್ತಾರೆಯೆ? (ಗಾದೆ).

**ಮಸಾಲೆದೋಸೆ** = ಚಟ್ನಿ, ಈರುಳ್ಳಿ, ಆಲೂಗಡ್ಡೆ ಪಲ್ಯವನ್ನು ಒಳಗಡೆ ಇಟ್ಟು ಬೇಯಿಸಿ ಮಡಿಚಿದ ಒಂದು ಬಗೆಯ ದೋಸೆ: ಅಮ್ಮ, ನನಗೆ ಮಸಾಲೆದೋಸೆ ಬೇಕು (ಕಕಥೆ. ೩-೩); ಉಪಾಧ್ಯಾಯರೊಬ್ಬರು ಮಸಾಲೆದೋಸೆಯನ್ನು ಕಟ್ಟಿ ತಂದಿದ್ದರಂತೆ (ಶಿಕ್ಷರ. ೨೮೪). **ಮಸಾಲೆಪುಗ್ಗೆ** = ಮಸಾಲೆ ದ್ರವ್ಯಗಳನ್ನು ಹಾಕಿಮಾಡಿದ ಪಕೋಡ : ಆತ ಹೆಂಡದಂಗಡಿಯಲ್ಲಿ ಮಸಾಲೆಪುಗ್ಗೆಗಳನ್ನು ತಿಂದ ಸಂಗತಿ . . . ಹೇಗೆ ಗೊತ್ತಾಗಬೇಕು (ಕೊಂಬಲು. ೧೩೯). **ಮಸಾಲೆವಡೆ** = ಈರುಳ್ಳಿ ಮುಂತಾದುವನ್ನು ಸೇರಿಸಿ ತಯಾರಿಸಿದ ಒಂದು ಬಗೆಯ ವಡೆ: ಇಂದು ಮಾಡಿದ್ದ ಮಸಾಲೆವಡೆ ತುಂಬ ರುಚಿಯಾಗಿತ್ತು (ರೂಢಿ).

[← ಅರ. ಮಸಾಲಿಹ್; ಪಾರ. ಮಸಾಲಹ್; ಹಿಂ. ಮರಾ. ಮಸಾಲಾ]

**ಮಸಿ, ಮಶಿ** (ನಾ). ೧. ಕರಿಯ ಬಣ್ಣ : ಕಪ್ಪು : ಮೆಯ್ಯೆಲ್ಲಂ ಮಷಿಯಂ ಪೂಸಿ ಬೋಟಿದರೆವೆರಸು . . . ಬರ್ಪೊನಸರಸಂ ಕಂಡು (ಪಚಾ.ರಾ. ೧೦೪-೧೩) ; ಮಸಿಯುಂ ಪೊಂಜಿಸಿದಂತುಟಪ್ಪ ತನು . . . ಉಗ್ರವಿಲೋಚನಂ (ಶಂಪಾ. ೬-೨೬) ; ನರೆ ಮುಸುಂಕಿದ ತಲೆಗಿರದೆ ಮಸಿಯ ಪೂಸಿ (ಅಂಜತ. ೩-೧೫೨). ೨. ಇದ್ದಿಲು ; ಕರಿ : ಪೊನ್ನಂ ಬಿಟ್ಟು ಮಸಿಯಂ ಕಟ್ಟುವೆಗ್ಗನಂ ಪೋಲ್ವೆಂ (ಧರ್ಮಾವ್ಯ. ೩-೨೧) ; ಮಸಿಯನೇಸುಕಾಲ ಬೆಳಗಿದರೇನು ಬಿಳಿದಾಗಬಲ್ಲುದೆ (ಬಸವ. ೩೮೨) ; ಪಿಡಿವಡೆ ಕೈಗೆ ಪೊನ್ನು ಮಸಿಯಪ್ಪುದೆನಿಪ್ಪ ದರಿದ್ರನೊಮ್ಮೆ ಪೆಂಪುಡುಗದ ದಾನದೊಂದು ಫಲದಿಂ . . . ಧನ್ಯವೆಸರಂ ತಳೆದಿರ್ದಂ (ಪುಣ್ಯಾಸ್ರ. ೧೨-೧೨). ೩. ಒಲೆಯ ಮೇಲಿಟ್ಟ ಪಾತ್ರೆಯ ತಳಕ್ಕೆ ಅಂಟಿರುವ ಅಥವಾ ಒಲೆ, ದೀಪದ ಹೊಗೆ ಮುಂತಾದುವುಗಳಿಂದ ಕಟ್ಟುವ ಕಪ್ಪು ಕಲೆ; ಕರಿಕು : ಕಡುಲೇಸೆಂದೋಡಂ ಪಿಡಿದೊಡೆ ಕೈ ಮಸಿಯಪ್ಪ ಮಾರ್ಗದಿಂ ದುರ್ಜನರಂ ಕಡುಮೋಪದಿನೊಳಕೊಂಡಿರ್ದೊಡೆ ಕೆಡುಗುಂ ತನ್ನೊಳಾದ ಗುಣಮೆನಿತ ನಿತುಂ (ಧರ್ಮಾವ್ಯ. ೨-೯೬) ; ಮಸಿಯೆಂಬುದು ಹುರಿಯೋಡಿಂಗೆ (ಅಪಂಥ. ೨-೨೮ ವ) ; ವದನಕ್ಕೆ ಮಸಿ ಸುಣ್ಣವ ಬರೆಯಿಸಿಕೊಂಡ ಚದುರೆವೆಣ್ಣಲ್ಲವೆ ನೀನು (ಕಂನವಿ. ೬-೧೫೬). ೪. ಅಂಜನ : ಕಾಡಿಗೆ : ಮಸಿಯಿಂದಂ ಜಗಮೆಲ್ಲಮಂ ದಿತಿಸುತಂ ಮುಂ ಪೊಟ್ಟಿನೋ . . . ಎಂಬ ಬಗೆಯಿಂ . . . ಕವಿದತ್ತಂದಾ ಮಾಘೀಮಂ ತಮಂ (ಶಂಪ್ರಾ. ೪-೪೯). ೫. ಇದ್ದಿಲು ಅಥವಾ ಕಾಡಿಗೆಯಿಂದ ಬರೆದ ಚುಕ್ಕೆ ಅಥವಾ ಗೆರೆ : ಸಾವಿರ ಚಿತ್ತಾರ ಒಂದು ಮಸಿ ನುಂಗಿತು (ಗಾದೆ). ೬. ಬರೆಯಲು ಬಳಸುವ ಕಪ್ಪು, ನೀಲಿ ಮೊದಲಾದ ಬಣ್ಣದ ದ್ರವ; ಶಾಯಿ: ಉಪಾಧ್ಯಾಯಂಗೆ ಕಟ್ಟೊಯ ಕೂಟಿಂ ಮಸಿಯುಂ ತುಪ್ಪಮುಮುನಾಣಲ್ಕೊಟ್ಟು (ಪಚಾ.ರಾ. ೬೩-೨೦) ; ಮದನಂ ಮಸಿಯೊಳ್ ಬರೆದಿಟ್ಟ ತನ್ನ ತಕ್ಕಿನ ಪೆಸರಕ್ಕರಂಗಳೆನಿಸಿರ್ದುವು ಮತ್ತಮಧುವ್ರತಾಳಿಗಳ್ (ಶಾಂತಿಪು. ೬-೦೨೩) ; ಮಸಿಯೆಂಬುದು ಬರೆವುದು (ಹಗಾರ. ೬೯೮). ೭. ಬಂದೂಕಿಗೆ ಹಾಕುವ ಮದ್ದು, – ಇದ್ದಿಲುಪುಡಿ : ಸೆಟ್ಟರು ಕೋವಿಗೆ . . . ಮಸಿಯನ್ನು ಹಾಕಿ, ಅದರ ಮೇಲೆ ಕತ್ತ್ರವನ್ನು ಗಜದಲ್ಲಿ ಇಡಿಯುತ್ತಿದ್ದಾಗ . . . ಹುಂಜವು ಲಬಿಲಿಬಿ ಒದ್ದಾಡಿಕೊಂಡಿತು (ಕಾಮೂರು. ೪೬). ೮. ಮಾಸಿದುದು ; ಕೊಳೆಯಾದುದು : ಮಸಿಯಾಯುವೆಯಾಪರಿಸಿ ಬೆಳಗುವ ನೂತ್ನರತ್ನದ ಪರಿಯೊಳು . . . ಶಬರಚರ್ಮಾವೃತಮೆನಿಸಿ ಮೆಱೆದು (ಬಸಪು. ೪೪-೧) ; ಮಸಿಯ ಕಪ್ಪಟದಿಂದ ಮಾಸಿದ ಕುಸುಮಕೇಶಗಳೊಡನೆ ದೇವೋತ್ತಮರೊಳಪದೆಶಿಪು ಪಸಿಸಿಯಿರೆ (ಸಂಭಕ. ೩-೬೯). 'ಮಸಿಗಪ್ಪಡ' ಪರಾ. **ಮಶಿ** : ೧. ದೃಷ್ಟಿಚಕ್ಕೆಯದೊಂದನೆಲ್ಲ ಜಂದಂಗಳ್ಗಿಟ್ಟಿಹನು ಪರಮೇಷ್ಠಿ, ಶಶಿಗೆ ಮಶಿಯವೋಲು (ಮಂಕುಕ. ೪೯೬). ೬. 'ಮಶಿಕಾಣಿಕೆ' ಪರಾ. ೯. (ಆಲಂ) ಕಳಂಕ : 'ಮಸಿಹೆಣ್ಣು' ಪರಾ.

**ಮಸಿ ನುಂಗಿಹೋಗು** = (ಆಲಂ) ಹಾಳಾಗು : ಈ ಶಾಲೆಯೊಂದರೆ ಮೊದಲು ಗುಡಿಯೂರಿನಲ್ಲಿ ಎಷ್ಟು ಹೆಸರುವಾಸಿಯಾಗಿತ್ತು . . . ಎಲ್ಲಾ ಮಸಿನುಂಗಿಹೋಯ್ತು (ಕಾವೇರಿ. ೮೮). **ಮಸಿ ಬಳಿ** = (ಆಲಂ) ಅಪಮಾನ ಮಾಡು : ಕಳಂಕವುಂಟುಮಾಡು : ಶಿಕ್ಷಕರು ತಮ್ಮ ವಕ್ಷತೆಗಳಲ್ಲಿ ಮಸಿಬಳಿಯುವರೋ ಎಂಬ ಭೀತಿ (ಶಿಕ್ಷದ. ೬೬೬) ; ನೀನು ಈ ಸ್ಥಿತಿಗೆ ಬಂದು ನಕ್ಕವರ ಮುಖಕ್ಕೆ ಮಸಿ ಬಳಿದೆಯಲ್ಲಾ ಅಷ್ಟೇ ಸಾಕು (ಅಶಮಾ. ೧೫೨). **ಮಸಿಯ ಗುಳ್ಳೆ** = ಮಸಿಯ ಕುಡಿಕೆ : ಬಟ್ಟತರ ಮಸಿಯ ಗುಳ್ಳೆಯ ಲಕ್ಕಣಿಕೆ ಬಳಿಯ ಪತ್ರಗಳನ್ನು ಪಿಡಿದು (ನವಮೋ. ೨೬-೧೪). **ಮಸಿಯಾಗು** = ೧. ಒಲೆಯ ಮೇಲಿಟ್ಟ ಪಾತ್ರೆಯ ತಳ ಮುಂತಾದುವುಗಳ ಕರಿಕು ಹತ್ತಿಕೊಳ್ಳು : ಅಭ್ಯಾಸವಿಲ್ಲದೆ ಅಡಿಗೆಯ ಕೆಲಸಕ್ಕೆ ತೊಡಗಿ ಅವಳ ಸೀರೆಯೆಲ್ಲ ಮಸಿಯಾಗಿದೆ (ರೂಢಿ). ೨. ಇದ್ದಿಲಾಗು : ಪಿಡಿವಿಧಿಯೆ ಕರಗುವ್ವುದು ಬಯ್ಕೊಡೆ ಮಸಿಯಾಗಿರ್ಪುದಲ್ಲದಿರ್ದೊಡೆ ಪೆಜಗಾರ್ಗಡೆ ಬಂದಪೆನೆಂಬುದು ಗಡ ಸುಡು ಧನಮೆ ಜಗಕ್ಕೆ ದುಃಖಸಾಧನಮಲ್ತೆ (ತಂತ್ರಪು. ೯-೦೨). **ಮಸಿಯಿಡು** : ೧. ಕಪ್ಪು ಬೊಟ್ಟನ್ನು ಹಚ್ಚು : ಮನಸಿಜಮಂತ್ರಾಕ್ಷರಮಂ . . . ಬರೆಯಲ್ಕೊಂಬಲಗೆಗೆ ಮಿಸುಗುವ ಮಸಿಯಿಡುವಂದದೆ ನೊಸಲೊಳ್ ಪ್ಪ್ಯುಗಮಂದ ಮಿಂಕ್ಕಿನಳು (ಜಯಕಾ. ೨-೩೯). ೨. (ಆಲಂ) ಕಳಂಕಗೊಳಿಸು : ತಾನೇ ತನ್ನನ್ನು ಮಸಿಯಿಡಲೀ ನಯವನು ಗೈದನು (ಶಕಾಹಾ. ೦೩-೩೩). **ಮಸಿಯುರುಳೆ** = ಮುದ್ರಣಯಂತ್ರದಲ್ಲಿ ಅಚ್ಚುಮೊಳೆಗಳ ಮೇಲೆ ಉರುಳಿ ಮಸಿಯನ್ನು ಸವರುವ ಸಾಧನ : ಆ ಭಾಗಗಳು ಮಾತ್ರ ಮುದ್ರಣಯಂತ್ರದ ಮಸಿಯುರುಳೆಗಳಿಗೆ (Rollers) ತಾಗಿ . . . ಯಂತ್ರದಚಿತ್ರದಿಂದ ಕಾಗದದ ಮೇಲೆ ಮುದ್ರಿಸಲ್ಪಡುತ್ತವೆ (ಮುದ್ರಕ. ೨). **ಮಸಿಯೂಟ** = ಮದುವೆಯಲ್ಲಿ ಬೀಗರಿಗಾಗಿ ಏರ್ಪಡಿಸುವ ಭೋಜನ; ಬೀಗರೂಟ(?): ಮದುಮಗಳ ಅಣ್ಣ ತರತಾನ ಮಸಿಯೂಟ (ಬೋಳಗ. ೪೩). **ಮಸಿಹಚ್ಚು** = ಮಸಿಬಳಿ : ಆ ಹೆಸರಿಗೆ ಗುಮಾಸ್ತರು ಮಸಿ ಹಚ್ಚುತ್ತಿದ್ದಾರೆ (ಜವಾಸಾ. ೬೨). P ಸಂಸ್ಕೃತಕೋಶಗಳಲ್ಲಿ 'ಮಸಿ', 'ಮಷಿ' ಮತ್ತು 'ಮಶಿ' ಎಂಬ ಮೂರು ರೂಪಗಳು ಇದ್ದರೂ ಜ್ಞಾಪಕಗಳು, ಪ್ರಯೋಗಗಳು ಮತ್ತಿತರ ಆಧಾರಗಳಿಂದ 'ಮಸಿ', 'ಮಶಿ' ರೂಪಗಳನ್ನು ದೇಶ್ಯ ಮತ್ತು ಅವರ ಪರ್ಯಾಯರೂಪಗಳೆಂದೂ 'ಮಷಿ' ರೂಪವನ್ನು ದ್ರಾವಿಡದಿಂದ ಸಂಸ್ಕೃತಕ್ಕೆ ಹೋಗಿರುವ ಸಾಧ್ಯತೆಗಳಿದ್ದರೂ ಸಂಸ್ಕೃತದಲ್ಲಿ ಪ್ರಾಚೀನ ಪ್ರಯೋಗಗಳಿರುವುದರಿಂದ ಸಂಸ್ಕೃತವೆಂದೂ ತೀರ್ಮಾನಿಸಿ ಪ್ರತ್ಯೇಕ ಉಲ್ಲೇಖಗಳಾಗಿ ಕೊಟ್ಟಿದೆ.

[ದೇ.॥ ತಮಿ. ಮಲ. ಮೈ; ತುಳು. ಮಜಿ, ಮೈಯಿ; ಕೊಡ. ಮಸಿ; ತೆಲು. ಮಸಿ. / ಸಂ. ಮಷಿ]

**ಮಸಿಕಟ್ಟು** 'ಮಸಿಗಟ್ಟು' ನೋ.

**ಮಸಿಕಡ್ಡಿ** (ನಾ). ಶಾಯಿಯಲ್ಲಿ ಅದ್ದಿಕೊಂಡು ಬರೆಯುವ ಒಂದು ಬಗೆಯ ಸಾಧನ ; ಲೆಕ್ಕಣಿಕೆ ; ಲೇಖನಿ : ಶಾನುಭೋಗರು ಮಸಿಕಡ್ಡಿಯಿಂದ ಬರೆಯುತ್ತಿದ್ದರು (ರೂಢಿ). [ ಮಸಿ + ಕಡ್ಡಿ ]

**ಮಸಿಕಪ್ಪಡ** 'ಮಸಿಗಪ್ಪಡ' ನೋ.

**ಮಸಿಕಾಣಿಕೆ, ಮಶಿಕಾಣಿಕೆ** (ನಾ). ಶಾನುಭೋಗರು ಹೊಲದ ಲೆಕ್ಕಪತ್ರಗಳನ್ನು ಬರೆದುಕೊಟ್ಟುದಕ್ಕಾಗಿ ರೈತರಿಂದ ವಸೂಲು ಮಾಡುವ ಕಾಣಿಕೆ, – ಸಂಭಾವನೆ : ಅವಿದ್ಯಾವಂತರಾದ ರೈತರು

ಶಾನುಭೋಗರಿಗೆ ಮಸಿಕಾಣಿಕೆಯನ್ನು ಕೊಟ್ಟು ಲೆಕ್ಕಪತ್ರಗಳನ್ನು ಬರೆಸಿ ಕೊಳ್ಳುತ್ತಿದ್ದರು (ಜಾ). **ಮಶಿಕಾಣಿಕೆ:** ಎಲ್ಲಾ ಶಾನುಭೋಗರೂ ರೈತರಿಂದ "ಮಶಿಕಾಣಿಕೆ" ಎಂಬುದಾಗಿ ವಸೂಲ್ಮಾಡುತ್ತಾರೆ (ಗರುಡಾ. ೧೦೩).
[ ಮಸಿ + ಕಾಣಿಕೆ (< ಕಾಣ್ಕೆ) ]

**ಮಸಿಕುಡಿಕೆ** (ನಾ). ಶಾಯಿಯನ್ನು ತುಂಬಲು ಉಪಯೋಗಿಸುವ ಗಾಜು ಅಥವಾ ಪಿಂಗಾಣಿಯ ಭರಣಿ : ದವುತಿ : ತಳದ ಕೆರೆ ತರೆದ ಮಸಿಕುಡಿಕೆಯಂತೆ (ಪಪಂ. ೨೭-೬). [ ಮಸಿ + ಕುಡಿಕೆ₁ ]

**ಮಸಿಗಟ್ಟು**, ಮಸಿಕಟ್ಟು (ಕ್ರಿ). ಕೊಳೆಯಾಗು ; ಮಾಸು : ಪೋತೀ ಬಾಯಿಯು ತನ್ನ ಮಸಿಗಟ್ಟಿದ ಹಸ್ತಗಳಿಂದ ಕಣ್ಣೀರನ್ನು ಒರೆಸಿಕೊಳ್ಳುತ್ತಾ . . . ಉತ್ತರವಿತ್ತಳು (ಯೂರಾಪ. ೩೯೦). **ಮಸಿಕಟ್ಟು :** ತನ್ನ ಪತ್ನಿಯ ಮುಖ ದಿನದಿನಕ್ಕೆ ಮಸಿಕಟ್ಟಿದ ಕನ್ನಡಿಯಂತಾಗುತ್ತಿದ್ದುದು ಆತನ ಕಣ್ಣಿಗೂ ಕಂಡಿತ್ತು (ಬೆಸಂಪ. ೧೮). [ ಮಸಿ + ಕಟ್ಟು₁ ]

**ಮಸಿಗತ್ತಲೆ** (ನಾ). ಕಪ್ಪನೆಯ ಕತ್ತಲು ; ಕಗ್ಗತ್ತಲೆ : ಚಿನ್ನೆ . . . ಮಸಿಗತ್ತಲೆಯ ಕೊಳದ ಕಟ್ಟನೊಡೆಯುತ್ತೆ ಕಬ್ಬೊಗಸಲ ಪರಿಯುಸುವಂತೆ ತುರುಬು ಸಡಿಲಿಸಿ ಬೀಸಿದಳ್ ಕೇಶಪಾಶಮಂ (ಶಿಶ್ರಾಂಗ. ೩೩-೮೯೬).
[ಮಸಿ + ಕತ್ತಲೆ₁ ( < ಕಚ್ಚಲೆ) ]

**ಮಸಿಗಪ್ಪಡ**. ಮಸಿಕಪ್ಪಡ (ನಾ). ಮಾಸಿದ ಬಟ್ಟೆ ; ಕೊಳೆಯಾದ ವಸ್ತ್ರ : ಮಸಿಗಪ್ಪಡವ ಪೊದೆದು ತುಱುಬಿಕ್ಕಿ ನರೆವಲೆಗೆ ಮುಸುಕಿಟ್ಟು... ಮುದುಪಾರ್ವರ್ಲೊಂದೆಸೆಯೊಳು (ಹರಿಶ್ಚ. ೪-೨೭) ; ಮಸುಳ್ದರೆ ಕಾಂತಿ ನೀಳಪಟದಿಂ ಮಸಿಗಪ್ಪಡದಿಂದೆ ರತ್ನಮಂ ಮುಸುಕುವ ಭಂಗಿಯಿಂ ಮುಸುಕನಿಕ್ಕಿ (ಶಾರ್ಙ್ಗಕ. ೧೦-೧೯). **ಮಸಿಕಪ್ಪಡ :** ಒಡಲ ಹತ್ತಿದ ಮಣ್ಣು ಮಸಿಕಪ್ಪಡದ ಕಂದಿದ ಜನ್ನಿವಾರದ . . . ಅವಧೂತ (ಶಿಕಾಗ. ೩-೬-೦೩). [ ಮಸಿ + ಕಪ್ಪಡ ]

**ಮಸಿದೊಡೆ** (ಕ್ರಿ). ಕಪ್ಪನ್ನು ಬಳಿ ; ಕಪ್ಪುಬಣ್ಣವನ್ನು ಹಚ್ಚು : ನೆರೆವಲೆಗೆ ಮಸಿದೊಡೆದು ತೆರೆಗೋಡೊಡಲನು ಕತ್ತಲೆಯ ಮಱೆಗೆಯ್ದು ಬಾ...ಜಾಣಯೆಂಬಾ ಹಣ್ಣು ಮುದುಕಿಸೂಳೆಯರೆಸೆವರು (ತೊರ. ೧೦-೬೬).
[ ಮಸಿ + ತೊಡೆ₁ ]

**ಮಸಿದೌತಿ** (ನಾ). = ಮಸಿಕುಡಿಕೆ : ನೆರೆಹೊರೆಯ ಮಕ್ಕಳು ಕೂಡಿ ಅವರ ಮಸಿದೌತಿಯನ್ನು ಉರುಳಿಸಿದರು (ಸ್ವ.ಚಿತ. ೩೯).
[ ಮಸಿ + ದೌತಿ (< ದವುತಿ) ]

**ಮಸಿಪಾತ್ರೆ** (ನಾ). ೧. ಸೀದು ಕರಿಕಾದ ಪಾತ್ರೆ ; ಕಪ್ಪು ಹಿಡಿದ ಪಾತ್ರೆ : ಕೆಲಸದವಳು ಮಸಿಪಾತ್ರೆಗಳನ್ನು ಚೆನ್ನಾಗಿ ತೊಳೆದಿಲ್ಲ (ಜಾ). ೨. = ಮಸಿಕುಡಿಕೆ : "ದೌತಿ ಮಸಿಪಾತ್ರೆಯುಕ್ಕ್ಯ" (ಪಂಗರಾ. ೦೦೩-೦೩).
[ಮಸಿ + ಪಾತ್ರೆ]

**ಮಸಿಬುದ್ಧಿ** 'ಮಸಿಬುರುಡೆ' ನೋ.

**ಮಸಿಬುರುಡೆ**. ಮಸಿಬುಡ್ಡಿ (ನಾ). = ಮಸಿಕುಡಿಕೆ: (೧). **ಮಸಿಬುದ್ಧಿ :** ಕೈಲಿದ್ದ ಸಾಮಾನುಗಳನ್ನು—ಕಂಚಿನ ತಂಬಿಗೆ, ಮಸಿಬುಡ್ಡಿ . . . ಇತ್ಯಾದಿ ಹೆಂಡತಿಯ ಮೈಮುಖಕ್ಕೆ ಗುರಿಯಿಟ್ಟು ಬೀಸಿ ಎಸೆಯುವ ಬಹದ್ದೂರರೂ ಇದ್ದಾರೆ (ಹುತ್ತುಹು. ೦೨). [ಮಸಿ + ಬುರುಡೆ]

**ಮಸಿಮುಸುಡ** (ನಾ). ಕಪ್ಪುಮುಖವುಳ್ಳವನು ; ಕರಿಯ : ಅಸಿಲತೆ ರಣಧೌತಮದೀ ಮಸಿಮುಸುಡನ ಜೀವ ಕಪ್ಪಿನಿಂ ಕಂದಿದೊಡೆಚ್ಚೆಸೆಯ ನಡರ್ದೆನ್ನ ಕೀರ್ತಿಪ್ರಸರದ ಕುಡಿ ಕೈಪೆಸೊರೆಯ ಕುಡಿಯವೊಲಕ್ಕುಂ (ಜಗನ್ನಾ. ೨-೩೩). [ಮಸಿಮುಸುಡು + —ಅ₇]

**ಮಸಿಮುಸುಡು** (ನಾ). ಕಪ್ಪನೆಯ ಮುಖ : ಮಸಿಮುಸುಡಿನ ಮಾಳಿ ಮನೆಯ ಗಂಡನು ಬಿಡೆ (ಕಂಕ. ೯೬-೦).
[ಮಸಿ + ಮುಸುಡು (<ಮುಸುಂಡು)]

**ಮಸಿವಣ್ಣ** (ನಾ). ೧. ಕರಿಯ ಬಣ್ಣ : ಕಪ್ಪು : ಪೆತ್ತವರಸಗಲಿ ಕಾಳಕಾಲಿಯಮದೊಳಗೊಡಲಂ ಪೊರೆದುಂ ಮೆಯ್ಮಸಿವಣ್ಣಮನಾಂತನವರತಂ ನುಡಿವಡೆಯದೆ ಪಿಕಮಿರ್ದುವು (ಜಯಸಾ. ೩-೩೯) ; ನಿನ್ನ ಮಸಿವಣ್ಣದೀ ಚೆಲುವಿನೆಡೆಗೆ ಸೋಲ್ವರು ಗೊಲ್ಲತಿಯರು (ಶಾಕ್ವಶಾ. ೨೩-೨೭) ; ತತ್‌ಕ್ಷಣ ದೊಳಗೆ ಮಸಿವಣ್ಣಮಾಯ್ತು ಬ್ರಹ್ಮಾಂಡಂ (ತೊರ. ೪೦-೨೯). ೨. (ಅಲಂ) ವ್ಯರ್ಥವಾದುದು : ನಿರರ್ಥಕವಾದುದು : ಹುಸಿವವನ ಬೇಹಾರ ಕಸ ಹತ್ತಿದಾರಂಬ ವಿಷಯವುಳ್ಳವನ ಗುರುತನವು ಇವು ಮೂಱು ಮಸಿವಣ್ಣ (ಸರ್ವಜ್ಞ. ೯೩). [ಮಸಿ + ಬಣ್ಣ]

**ಮಸಿವಾವಾಳ** 'ಮಸಿವಾಳ' ನೋ.

**ಮಸಿವಾಳ**. ಮಶವಾಳ, ಮಸಿವಾವಾಳ, ಮಸ್ಸಿವಾಳ, ಮಸ್ಸೀವಾರ, ಮಸ್ಸೀವಾಲ (ನಾ). ಒಂದು ಬಗೆಯ ಮರ : ಬೈಲುಸೀಮೆಯ ಅಡವಿ ಯಲ್ಲಿ ಸಾಧಾರಣವಾಗಿ ಎಲ್ಲ ಕಡೆಯಲ್ಲಿಯೂ ಜಾಲಿ . . . ಮಸಿವಾಳ, ಮಲಗಲಿ, ದಿಂಡಲ. ಅತ್ತಿ ಮುಂತಾದವುಗಳು ದೃಷ್ಟಿಗೆ ಬೀಳುತ್ತವೆ (ಶೀವ. ೩೦). **ಮಶವಾಳ :** ಮಶವಾಳ (ಮಾಂಥರಿ) . . .ಬೆಳಗಾವಿ, ವಿಜಾಪುರ ಜಿಲ್ಲೆಗಳಲ್ಲಿ ಬೆಳೆಯುತ್ತದೆ (ಕರಾಗ. ೯೬). **ಮಸಿವಾವಾಳ :** (೧). **ಮಸ್ಸಿವಾಳ :** ಮರಗಳು . . . ಬೇವು, ಹುಚ್ಚುಬೇವು, ಹೆಬ್ಬೇವು, ಮಸ್ಸಿವಾಳ, ಸುಗ್ಗಿ (ಕವ್ಯಮ. ೨೩೬). **ಮಸ್ಸೀವಾರ :** ಮಸ್ಸೀವಾಲ, ಮಸ್ಸೀವಾರ, ಕಂಚಿಬೊಗ್ಗಿ (ಮೈಶಿಗ. ೩೩-೦೦೬೧). **ಮಸ್ಸೀವಾಲ :** 'ಮಸ್ಸೀವಾರ' ಉಲ್ಲೇಖದ 'ಪ್ಮೈಶಿಗ' ಪ್ರಯೋಗವನ್ನು ನೋಡಿ. 'ಅಂಟುವಾಳ', 'ಕಂಚುವಾಳ' ಪರಾ. [ ? ]

**ಮಸಿಹೆಣ್ಣು** (ನಾ). (ಅಲಂ) ನೀತಿಗೆಟ್ಟವಳು : ಕಳಂಕಿನಿ : ವ್ಯಸನದ ದೆಸೆಯಿಂದ ಮಸಿಹೆಣ್ಣನೊಶವಾಗಿ ಹುಸಿದು ಹೋಗುವಳ ಒಡನಾಡಿ ತಾ ನುಗ್ಗು ನುಸಿಯಾದ ಕಾಣೊ (ಸರ್ವಜ್ಞ. ೦೬೯೦).
[ಮಸಿ + ಹೆಣ್ಣು (<ಪೆಣ್)]

**ಮಸೀತಿ** 'ಮಸೀದಿ' ನೋ.

**ಮಸೀದಿ**, **ಮಶೀತಿ**, ಮಶೀದಿ. ಮಸಜೀದ, ಮಸಜೀದಿ. ಮಸೀತಿ, ಮಸೀದೆ, ಮಸುದಿ, ಮಸೂತಿ, ಮಹಜಿದಿ (ನಾ). ಮುಸಲ್ಮಾನರ ಪ್ರಾರ್ಥನಾಮಂದಿರ : ಭುವನಗಿರಿ ದುರ್ಗದಲ್ಲು ಕಟಿಸ್ತ ಮಸೀದಿಗೆ ಕೊಟ ಧರ್ಮಶಾಸನ (ಎಕ. VII. ಶಿಕಾರಿಪ. ೩೮-೯; 1627); ಅವಳನ್ನು ನಗರ ಪ್ರಾಂತದಲ್ಲಿದ್ದ ಒಂದು ಸಣ್ಣ ಮಸೀದಿಗೆ ಕರೆದುಕೊಂಡು ಹೋಗಿ ಮೌಲ್ವಿ ಸಾಕ್ಷಿಗಳ ಮುಂದೆ ಕುರಾನಿಗೆ ಅನುಸಾರವಾಗಿ ಮದುವೆಯಾಗಿ ಅವಳ ಶಯ್ಯಾ ಗೃಹಕ್ಕೆ ತಂದು ಬಿಟ್ಟುಹೋದನು (ಬಂಕಿಮ. ೨೨೯). **ಮಶೀತಿ :** ಬನಾರೀಸ್ . . . ಗಂಗಾನದಿಯ ಮೇಲಿದೆ. ಅನೇಕ ದೇವಾಲಯಗಳೂ ಮಶೀತಿಗಳೂ ಇವೆ (ಭೂಗೋಲ. ೩೯). **ಮಶೀದಿ :** ಕೂಡಿದವರೆಲ್ಲರೂ ಮಶೀದಿಯಲ್ಲಿ ಭೋಜನ ಮಾಡಿಕೊಂಡು ಮನೆಗೆ ಹೋಗುತ್ತಾರೆ (ಮುಂಬಯಿ. ೬-೨೭). **ಮಸಜೀದ :** ಮುಸಲಮಾನರ ಮಸಜೀದಗಳಿಗೆ ಸೋಪಾನಗಳು ಕಟ್ಟಲ್ಪಡುತ್ತಿದ್ದವು (ಕೋಪಿಮೂ. ೬). **ಮಸಜೀದಿ :** ಗುಡಿ ಚರ್ಚು ಮಸ ಜೀದಿಗಳ ಬಿಟ್ಟು ಹೊರಬನ್ನಿ (ಕೋಗಿಲೆ. ೨೮-೦). **ಮಸೀತಿ :** ನಮಾಜಿಗೆ ಹೋಗಿ ಮಸೀತಿ ಮೇಲೆ ಬಿದ್ದ ಹಾಗಾಯಿತು (ಹುಟ್ಟಿಹ. ೦೯೦). **ಮಸೀದೆ :** ಆ ಹೊತ್ತು ಮಸೀದೆಗಳೆಲ್ಲ ಗಮಗಮಿಸಿದವು (ಪ್ರ.ಬಿ. ೦೪) ; ಮಸೀದೆಯಿಂದ ಮುಕ್ರಿಗಳು ನಿನಗೆ ಆದೇಶ ಕಳಿಸಿದರೂ ನೀನು ಕೇಳಲಿಲ್ಲ (ಮುಂಗಾರು. ೦೦). **ಮಸುದಿ :** ಆ ತುರುಕರು . . . ಗರುಡನ ಕಂಬವಂ ಮುಱಿದು ಮಸುದಿಯಂ ಕಟ್ಟಿಸುವರು (ಶಂಕೃ. ೬೨-೪೪). **ಮಸೂತಿ :** ತಾವರೆಗೆರೆ ಹೊಂದಿ ಕಟಿಸಿದ ಮಸೂತಿಯ ಧರ್ಮಕೆ ಕೊಟ (ಎಕ. VIII. ಸಾಗರ. ೦೦೬-೦೦; 1631); ಆಗ ಆ ಬಾದಶಹನು ಮಸೂತಿಯೊಳಗೆ ನಮಾಜ ಮಾಡುತ್ತಿದ್ದನು (ರಾಕಹಂ. ೪೪). **ಮಹಜಿದಿ :** ಕಾಜಿಮಹಾಮ್ಮೊದಿನ್

ಯೆಂಬವಗೆ ಪೂರ್ವಾರಭ್ಯವಾಗೆ ಮಹಜಿದಿಗೆ ಯಿನಾಮವಾಗಿ . . . ಕಲು ನೆಟ್ಟು ಹೊಲ ೨ (ಎಕ. VII (೮), ಶಕ್ತಿಗ. ೬೩–೯; 1821).

[← ಪಾರ. ಮಸ್ಜಿದ್ ; ಹಿಂ. ಮಸಜಿದ್, ಮಸೀತ್, ಮಸೀದ್ ; ಮರಾ. ಮಶೀದ್, ಮಸೀದ್]

**ಮಸೀವೆ** ' ಮಸೀದಿ ' ನೋ.

**ಮಸುಕು.** ಮಸಕು₂ (ನಾ). ಮಬ್ಬು : ನಮ್ಮೂರಿನ ಪಣೆಯಲ್ಲಿ ವಿದ್ಯಾಭ್ಯಾಸದ ಬರಹವು ಮಸುಕಾಗಿ ಕಾಣುತ್ತಿತ್ತು (ಹುಟ್ಟೂಹ. ೭); ಕೆಲುಬು ಪ್ರಾಯವಾಗಿ ಬರಹ ಮಸುಕಾಗಿ ಕಾಣತೊಡಗಿತು (ಹಾಘುಕ. ೦೦೩). **ಮಸಕು₂** : ಮಸಕು ಮುಂಜಾವದಲಿ ನಿದ್ರೆತಿಳಿದೆದ್ದು (ವಿಶೇಗೀ. ೨೯–೧೦); ಮೊದಲಿನ ನಿಜವಾದ ಆಧ್ಯಾತ್ಮ ಮಸಕಾಯಿತು (ಕಕ್ಕಶಾ. ೩೩೯).

ಮಸುಕುಮಸಕು, ಮಸಕುಮಸಕು (ದ್ವಿರುಕ್ತಿ) : ಶಿಶಿರಋತು, ಸಂಜೆ . . . ಹಜಾರದಲ್ಲಿ ಮಸುಕುಮಸಕಾದ ಕತ್ತಲೆ (ರಾಪಶಾಪ. ೦೦೦) ; ಹಿಂದೆ ನಮಗೆ ಮಸಕುಮಸಕಾಗಿ ಕಾಣುತ್ತಿದ್ದ ನಕ್ಷತ್ರ, ಈಗ . . . ಸ್ಥಿರವಾಗಿ ನಿಲ್ಲುವುದು ಸಾಧ್ಯವಾಗುತ್ತದೆ (ಆಕಾಶ. ೭). [ದೇ.॥ ತಮಿ. ಮಚಙ್ಕಲ್ ; ಮಲ. ಮಯಕ್ಕು, ಮಯಲ್, ಮಯಿಪ್ಪು, ಮಯ್ಯಲ್ ; ತುಳು. ಮಸಕು, ಮಸುಕು, ಮಸ್ಕ್ ; ತೆಲು. ಮಸಕ]

**ಮಸುದಿ** 'ಮಸೀದಿ' ನೋ.

**ಮಸುರ** (ನಾ). ಒಂದು ಬಗೆಯ ದ್ವಿದಳಧಾನ್ಯ : ಕಡಲೆ : ಯಜುರ್ವೇದದ ಕಾಲಕ್ಕೆ ಬತ್ತ, ಮಸುರ (Pulses) ಇವು ಹೇರಳವಾಗಿದ್ದುವು (ಕಲ್ಬಾ. ೪೯). [ಸಂ.]

**ಮಸುರಿಗೆ** ' ಮಸೂರಿಗೆ ' ನೋ.

**ಮಸುಳ್,** ಮಸುಳು (ಕ್ರಿ). ಕಾಂತಿಹೀನವಾಗು ; ಮಂಕಾಗು : "ಮಸುಳ್-ವಿಗತಪ್ರಭಾಯಾಂ (ಕಳೆಗುಂದು)" (ಶಮದ) : ವಿಭೂಷಣಂಗಳೊಳ್ ತೀಡುವ ರಶ್ಮಿಗಳ್ ಮಸುಳ್ದುವು (ಆದಿಪು. ೩–೩) ; ಕೆಂಪೇರಿದ ರಳ್ಗಣ್ಣ ಕಡೆಪರೆದ ಕುರುಳಾಂತ ಸುಂಪುವಣೆ ಮಸುಳ್ದ ತಿಲಕಂ (ಶಾಂಪು. ೦೯–೨೭) : ತೊಡೆಯಡಗಿನಿಂದೆ ನೊಂದೊಸರುತ್ತೆ. ಕೆಬಸುರಿದು. ಕಿಂಡದಿನ್ ಪೊಗೆಯುಟ್ಟು ಚಟಚಟಿಸಿ ಮಸುಳ್ದತ್ತು (ಶಂಕಗ.೨. ೯೩–೯೩೦). **ಮಸುಳು** : ಮಸುಳಿದವು ತಾರೆಗಳು (ಕುವೆಂರಾ. ೨–೦೩) ; ತಮಿಸ್ರೆಯ ತಾರಕೆಯು ಮೈವೆಳಗು ಮಸುಳಿದವು (ಕೃರಾ. ೦–೮೯೦). [ದೇ.॥ ತಮಿ. ಮಚಙ್ಕು ; ಮಲ. ಮಯಙ್ಙು ; ತುಳು. ಮಜಕು, ಮಯುಕು, ಮಸ್ಕು]

**ಮಸುಳ** (ನಾ). ಕಪ್ಪುಬಣ್ಣದವನು : ಕವಿವ ಮದಾಳಿಯಿಂ ಮಸುಳನಾಗಿ ಪಯೋಜರಜಂಗಳೊಳ್ ಕವಿಲ್ಗವಿಲನುಮಾಗಿ ಬಂದ ಮಲಯಾನಿಲಂ (ಶಂಪುರಾ. ೨–೦೯). [ಮಸುಳ್ + — ಅ₇]

**ಮಸುಳಿಸು,** ಮಸಣಿಸು (ಕ್ರಿ). ೧. ಮಂಕಾಗು : ನಿಸ್ತೇಜಗೊಳ್ಳು : ಮಸುಳಿಸದ ತೇಜ ಮಾಸದ ಕೀರ್ತಿ . . . ಸಹಜವೆನಿಸಿ ರಾಜಸುತರ ಹರಿಶ್ಚಂದ್ರಭೂಭುಜನ ಸುಖದೊಳಿರಲು (ಹರಿಶ. ೦–೯೯) ; ಪಗಲ ಸುಧಾಸೂತಿ ಮಸುಳಿಸಿರ್ಪಂತವರೊಳ್ ಸೊಗಸುವ ಶರೀರಕಾಂತಿಯೊಳೊಗೆದಿರ್ದಂ ನವಕುಮಾರಕಂ ನೃಪನಿದಿರೊಳ್ (ವಕಿ. ೨–೦೨೩) ; ಮೆಯ್ಯದೀಧಿತಿ ಮಸುಳಿಸದು (ಕುವೆಂರಾ. ೬೦೩. ೬–೬೧ ಅಡಿಟಿಪ್ಪ). ೨. ಮಂಕಾಗುವಂತೆ ಮಾಡು ; ನಿಸ್ತೇಜಗೊಳಿಸು : ತೊಟ್ಟ ತುಡುಗೆಗಳ್ ಕೌಸ್ತುಭರತ್ನಮನೋರೆರೊಂದೆ ಮಸುಳಿಸೆ (ಶಂಶಭಾ. ೩–೨೭) ; ಬಿಸುಗದಿರನ ಕಡುಗಾಯ್ಪಿಂ ಮಸುಳಿಸಿದವು . . . ಕಾಪನೆಟ್ಟಲರ್ಗಣೆಗಳ್ (ಕಬ್ಬಿಗ. ೩೦೦) : ಇನಕಿರಣಂಗಳ ಮಸುಳಿಪ ರತ್ನಕಾಂಚನಮಂಚಮೃದುತಲ್ಪದಲಿ ವನಜದಳಾಯತೇಕ್ಷಣೆ ಮಂಡಿಸಿದಳು (ಕೋಹಕ. ೨೭–೩೨). ೩. ಅಡಗು ; ಕಾಣದಾಗು : "ಮಸುಳಿಸಿತೆಂದಡಂಗಿತರ್ಕ್ಕಂ" (ಕಬ್ಬಿಕ. ೭೧) ; ತೆಳುವಸುಬುಪೊರೆಯೇಜವು . . . ತ್ರಿವಳಿಯ ರೇಖೆ ಮಸುಳಿಸದು (ಶಾಕ್ಟಾ. ೩೨–೩೯);

ಮುನಿಗಳ ಪ್ರಾಣಮಂತ್ರಾದಿಗಳ್ ಮಸುಳಿಸಿದವು (ತುರಂಗ. ೭–೧೦). ೪. ಕುಗ್ಗು ; ಕಡಮೆಯಾಗು : ಇನ್ನಾಂ ಮುಳಿದೊಡೆನ್ನ ಜಸಂ ಮಸುಳಿಸುಗುಂ (ಶಂತಕಂ. ೦೬೦–೦೩) ; ಕುಂಡಪ ನಿಟ್ಟಿಸಿ ಬಿಸಿ ಮಸುಳಿಸಿ ಬಿಬಿನಡುಗಲು (ಬೀರೇಶ. ೦–೬೮) ; ಲೋಕಂಗಳೊಳ್ಪರಮಶಿವಭಕ್ತಿ ಮಸುಳಿಸಿದುದಲ್ಲಿಗೆ ಪೋಗಿ ನಿರುತದಿಂದುದ್ಧರಿಸು (ಬಾಸೋಪು. ೯–೯). ೫. ಕುಗ್ಗಿಸು ; ಕಡಮೆಮಾಡು : ಅವರ ವಾಗ್ಗರ್ವಮಂ ಮುರಿದು ಜಿಹ್ವಾಸ್ತಂಭನಂಗೆಯ್ದು ಖರ್ವಮತಿಶಕ್ತಿಯಂ ಮಸುಳಿಸಿ (ಶಪ್ತರಾ. ೯–೨೪). ೬. (ಆಲಂ) ನಾಶಮಾಡು : ಬಲಿಮುಖರ ಬಲದಿ ಸೀತಾಲಲನೆಯ ನೊಯ್ದ ಸುರನಸುವ ಮಸುಳಿಸಿ . . . ಸಲಹಿದನವರಂ (ಪಪ್ಪಶಾ. ೬–೨೦೮). **ಮಸಣಿಸು** : ೧. ನಾನು ಈ ತೊಡಕಿನೊಳಗೆ ಬಿದ್ದಿದ್ದೇನೆ, ಬುದ್ಧಿ ಮಸಣಿಸಿದೆ (ಜಂಶಾ. ೭೮). ೨. ಅವನ ಹವಣಿಕೆಯು ಅವನ ಅರಿವನ್ನು ಮಸಣಿಸಿದ್ದಲ್ಲದೆ ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕೆಂಬ ನಾಣ್ಣುಡಿಯನ್ನು ಅವನ ಕಣ್ಣಿನಿಂದ ಮರೆಮಾಡಿತು (ಬೀರಬ.೩೯). [ಮಸುಳ್ + — ಇಸು₃]

**ಮಸುಳು** ' ಮಸುಳ್ ' ನೋ.

**ಮಸುಳ್ಕೆ** (ನಾ). ಕಾಂತಿಹೀನತೆ ; ಮಬ್ಬು : ' ಮಸುಳ್ಕೆವೆಱು ' ಪರಾ. [ಮಸುಳ್ + — ಕೆ]

**ಮಸುಳ್ಕೆವೆಱು** (ಕ್ರಿ). ಮಬ್ಬಾಗಿರು ; ಪ್ರಕಾಶವಿಲ್ಲದಿರು : ಪಸರಿಪ ತಮದಿಂ ರಜದಿಂ ಮಸುಳ್ಕೆವೆತ್ತಿರದೆ ದೆಸೆಗಳುಂ ದಿಗ್ದೇವೀವಿಸರದ ಮೊಗದೊಡನೆನಸುಂ ಪ್ರಸನ್ನಭಾವಮನದೇಂ ಪುದುಂಗೊಳಿಸಿದುದೋ (ತಂತ್ರಕ. ೦೭–೯೭). [ಮಸುಳ್ಕೆ + ಪೆಱು₁]

**ಮಸುಳ್ಚು** (ಕ್ರಿ). = ಮಸುಳಿಸು ೨ : ಮಾಜಿಾಂತ ವಿಶ್ರಾಂತರಾಜಪುತ್ರನಂ ಸರಲ ಸೋನೆಯಿಂ ಕಿವುಳ್ಚಿ ಮಸುಳ್ಚಿ . . . ತಡೆದಂ (ರಾಪಶಾಕ. ೯೦–೧೨). [ಮಸುಳ್ + — ಚು₁]

**ಮಸೂತಿ** ' ಮಸೀದಿ ' ನೋ.

**ಮಸೂದೆ** (ನಾ). (ಶಾಸನಸಭೆ ಮೊದಲಾದುವುಗಳಲ್ಲಿ) ಸಭೆಯ ಅಂಗೀಕಾರಕ್ಕಾಗಿ ಇಡುವ ಠರಾವು : ಗೊತ್ತುವಳಿ : ಕೇಂದ್ರಶಾಸನಸಭೆಯಲ್ಲಿ . . . ಒಂದು ಮಸೂದೆಯನ್ನು ತಂದರು (ಶಿಕ್ಷರ. ೭೩೩); ಬಹುಪತ್ನೀತ್ವವನ್ನು ಜಾರಿಗೆ ತರುವ ಮಸೂದೆ ಬಿದ್ದುಹೋಯಿತೂನ್ನು (ಕಂಕಣ. ೦೦೨)). [← ಅರ. ಮುಸ್ವದ್, ಮಸವ್ವಿದಾ ; ಹಿಂ. ಮಸವಿದಾ, ಮಸೌದಾ ; ಮರಾ. ಮಸುದಾ, ಮಸೋದಾ, ಮುಸ್ವಿದಾ]

**ಮಸೂರ** (ನಾ). ೧. ಒಂದು ಬಗೆಯ ದ್ವಿದಳಧಾನ್ಯ ; ಕಡಲೆ : "ಮಾಂಗಲ್ಯಕಃ, ಮಸೂರಃ — ಈ ೨ ಚಣಗೆ" (ಹಲಾಯು. ೯೩–೯೨೭) ; ಶ್ರಾದ್ಧಕ್ಕೆ . . . ರಾಜಮಾಷಂ ಮಸೂರಮಲಸಂದೆ ಕಡಲೆಯಿವನರ್ಪಂಗಳ್ (ವಿಶ್ವಪು. ೩–೩–೦೭೩) ; ಮಸೂರಾದಿ ಶಿಂಬಿಧಾನ್ಯಂ (ಅಶ್ವಂಪ. ೦೦೩–೦೩). ೨. ಬೇಳೆಯ ಆಕಾರದಂತೆ ಹೊರಉಬ್ಬುಳ್ಳ ಗಾಜು ; ಲೆನ್ಸು : ಮೇರೆಗಳು ಗೋಳದ ಭಾಗಗಳಾಗಿದ್ದರೆ ಅಂತಹ ಮಧ್ಯವರ್ತಿಭಾಗಗಳನ್ನು ಮಸೂರಗಳೆಂದು (Lenses) ಕರೆಯುತ್ತಾರೆ (ಭೌತಶಾ. ೦೬೩); ವಿವಿಧ ಕನ್ನಡಿಗಳು ಮತ್ತು ಮಸೂರಗಳು ಉಪಯೋಗದಲ್ಲಿದ್ದುವು (ಕಕ್ಕಶಾ. ೩೦೦). [ಸಂ.]

**ಮಸೂರಿಕ** (ನಾ). = ಮಸೂರ ೧ : "ಮಸೂರಿಕಂ ಪೇಟಲ್ ಚಣಂಗಿ ಬಿಂಡಿಕಮೆಂಸಲು ಕಡಲೆ" (ಹುಂಗರಾ. ೦೦೦–೯). [ಸಂ. ಮಸೂರಿಕಾ]

**ಮಸೂರಿಕೆ** (ನಾ). ೧. ಒಂದು ಬಗೆಯ ದ್ವಿದಳಧಾನ್ಯ : ಕಡಲೆ : ನೀವಾರಶಿಲಾತಸೀಮಸೂರಿಕಾಕುಲತ್ಥ . . . ವಿವಿಧಧಾನ್ಯಭೇದಂಗಳುಂ (ಆದಿಪು. ೬–೭೨ ವ). ೨. ಶರೀರದ ಮೇಲಿನ ಕಪ್ಪುಮಚ್ಚೆ ; ಸಂಗಾತಿ : ತಿಳುವಸೂರಿಕಾದಿ ಶುಭವ್ಯಂಜನರಂಜಿತಪ್ರಶಸ್ತಾಪಯವಂಗಳುಮಂ . . . ನೋಡಿ (ಶಂರಾಪಶಾ. ೩–೧೯೩ ವ) : ಪರಮನ ಪರಮೌದಾರಿಕಶರೀರಮೊಪ್ಪ

ದುದು . . . ತಿಲಮಸೂರಿಕಾಪ್ರಮುಖಸವಶತವ್ಯಂಜನಂಗಳೊಳ್ ಕೂಡಿ (ಕಕೃಪು. ೦೨-೭೮ ವ). ೩. ಸಿಡುಬು ; ಮೈಲಿ : ಮಸೂರಿಕೆಯ ಪೂರ್ವಚಿಹ್ನೆಗಳ ಕಂಡಾಗಲೇ ಲಂಘನವನೂ ವಮನವನೂ ಮಾಡಿಸುವುದು (ವೃಕೃಸಾ. I. ೭೭೩). ೪. ಪರದೆ ; ತೆರೆ : ಸೊದೆವಟ್ಟೆಯದ ಲೋವೆಯ ಮುತ್ತಿನ ಲಂಬಣದ ಮಲಂಗು ಭಂಗವಡೆದ ಕುಸುಮದೆಸಟ ಮಸೂರಿಕೆಯ ಮೇಲೆ (ಅಸಂಪು. ೬-೭ ವ). ೫. ಸೊಳ್ಳೆಯ ಪರದೆ. ೬. ತಲೆಹಿಡುಕಿ ; ಕುಂಟಣಿ. [ಸಂ. ಮಸೂರಿಕಾ]

**ಮಸೂರಿಗೆ**, ಮಸುರಿಗೆ (ನಾ). ೧. =ಮಸೂರಿಕೆ ೧: ತೊವರಿ ಗೋದುವೆ ಜೋಳಮುದ್ಗ ಪೆಸಱ್ ಮಸೂರಿಗೆ ಗುಂಜಿಯೆಂಬಿವಱೊಳೊಂದಱೊಳಾದ ತೈಲಮಂ . . . ತಂದು ಪೂಸುವುದು (ರೋಕೋಶ. ೯-೦೦೩). **ಮಸುರಿಗೆ** : ೨. = ಮಸೂರಿಕೆ ೪ : ಅಲರ ಮಸುರಿಗೆಯೊಳಸು ದುಗಳ್ಳಲರ್ವಪ್ಪಂ ನಿದಿರ್ದ ಲತೆಯ ಮೇಲೆ ವಿಳಾಸಂ ನಿಲೆ ನೀಡಿ ಕಾಲಂ (ಆದಿಪು. ೦೦-೭೩) ; ವಿಸಟ ಪಸರಂಗಳ ಮಸುರಿಗೆಗಳಾಗೆಯುಂ ಕಂದಳಿರ ಗೊಂದಳಂಗಳ ಚೊಂದರಿಗೆಗಳಾಗೆಯುಂ (ಚಂಪ್ರಪು. ೩-೮೭ ವ).

[<ಸಂ. ಮಸೂರಿಕಾ]

**ಮಸೃಣ** (ಗು). ೧. ಮೆತ್ತನೆಯ ; ಮೃದುವಾದ : ಅವಱೊಳತಿ ಮಸೃಣಕುಸುಮಪ್ರವಾಳದ ಪೊಳೆವ ಗೊಂಚಲಂ ಸಂಚಳಿಸಿ ಪೊಳೆವ ಮಿಂಚಿನ ಗೊಂಚಲೆಂದುಂ . . . ಅಘಿಶುಕೆಯುನುಂಟುಮಾಡುಗುಂ (ಸುಕುಮಾ. ೦೦-೩೭ ವ) ; ಮುನಿಪದರಾಜೀವದ ಕೆಲದೊಳ್ ವೇತ್ರಲತಾವೃತಪೆಸೆದತ್ತು ಮಸೃಣಪೀಠಭಗುಳುಚ್ಚಿಂ (ಚಂಪ್ರಪು. ೯-೨೩). ೨. ನಯವಾದ ; ನುಣು ಪಾದ : ಏಕೇಂದ್ರನೀಲಶಿಲಾತಲಘಟಿತಮಸೃಣತಳಮುಂ (ಆದಿಪು. ೦೦-೨೨ ವ); ವಿಂಶತಿಸಹಸ್ರಸೋಪಾನಪಂಕ್ತಿವಿಭ್ರಾಜಿತಮುಮಪ್ಪ ಮಸೃಣರುಚಿರಭೂತಳ ಮೂದುದಲ್ಲಿ ಜಾತರೂಪಗೋಪುರಂಗಳ ನಾಲ್ಕುಱಿಂ ಪರಿನಿಷ್ಕೃತಮಾಗಿ(ವರ್ಧಮಾ. ೦೩-೩೭ ವ). ೩. ಸ್ನಿಗ್ಧವಾದ ; ಮನೋಹರವಾದ : ಅದಱ ಬಾಪಚ್ಚ ದಚ್ಚೊದೂಸುಕಾರಿಯಪ್ಪ ಮಸೃಣವರ್ಣಪ್ರಸರಮೋಳಾಪವೈಚಿತ್ರ್ಯಮುಂ ಚಿತ್ರಕಳಾವಿಶಾರದಂ ಪರಿಭಾವಿಸುತ್ತುಮಿರ್ದನ್ನೆಗಂ (ಚಂಪ್ರಪು. ೪-೫೦ ವ). ೪. ಪ್ರೇಮಪೂರ್ಣವಾದ ; ಅನುರಾಗದಿಂದ ಕೂಡಿದ : ಮಸೃಣ ಕಟಾಕ್ಷದಿಂ ಕುಮುದದೊಳ್ಸಟಂ ಕಱವಂತಿರಂಘ್ರಿವಿನ್ಯಸನದಿನಬ್ಜಮಂ ಕಿವಱುವಂತಿರೆ . . . ಒರ್ವಳಾಡಿದಳ್ (ಜಗದ. ೫-೦೭). [ಸಂ.]

**ಮಸೃಣಿತ** (ಗು). ಮೃದುವಾದ ; ಮೆತ್ತನೆಯ : ಅನೇಕಮುಕುಟಬದ್ಧ ಮಣಿಮುಕುಟಮಣಿಕರ್ಷಣಮಸೃಣಿತಚರಣಂ (ಆದಿಪು. ೬-೭೨ ವ) ; ಸಕಲಸಾ ಮಂತಮಣಿಮುಕುಟಮರೀಚಿಮಸೃಣಿತಚರಣಾರವಿಂದನಪ್ಪ ಧರ್ಮನಂದನನಂ ಕಂಡು (ಪಂಪಭಾ. ೯-೮೮ ವ). [ಸಂ.]

**ಮಸೆ$_1$** (ಕ್ರಿ). ೧. (ಹೊಳಪು ಬರುವಂತೆ) ಉಜ್ಜು : ತಿಕ್ಕು : "ಮಸೆ-ಘರ್ಷಣೇ, ಸ್ವಲ್ಪಕ್ಷತೇ ಚ (ಸಣ್ಣಗಾಯ)" (ಶಮದ) ; ಪಗೆ ಸುಗಿವನ್ನೆಗಂ ಮಸೆವ ವೀರಭಟರ್ಕಳ ರೌದ್ರಮಪ್ಪ ಕಯ್ದುಗಳಂ . . . ಕೆಂಗಿಡಿಗಳ್ ಪಳಂಚಿ (ಪಂಪಭಾ. ೦೦-೩೫) ; ರೇಣುಹತ್ತಿದ ರವಿಯ ಮಸೆಯಲು ಸಾಣೆಗಿಕ್ಕಿತೊ . . . ಬಿಲುಜಾಣರುರವಣೆ ಲಜ್ಜಿಸಿತು ಲೋಕದ ಧನುರ್ಧರರ (ಕುಮಾವ್ಯಾ. ೪-೦೭). ೨. ಹರಿತಗೊಳಿಸು ; ಚೂಪುಮಾಡು : ಬೆಳ್ಪಸೆಯೆ ಮಸೆದ ಮದನನ ಬಾಳಂತಾದುವು ಪೊಳೆವೊಳ್ದಡೆ (ಪಂಪಭಾ. ೨-೪೨) ; ತಮೋವೈರಿವಿಜಯಕ್ಕೆ ಮಸೆದಸಿಧಾರೆವೊಲಪರಾಜಿತಂ ವಿರಾಜಿತನಾದಂ (ಶಾಂತಿಪು. ೪-೦೦೯) ; ತೊಂಡ ಗಿಳಿಗಳು ಚುಂಚುಮಂ ಮಸೆಯೆ (ಹತಕಾ. ೩-೦೪) : ಜಮದಗ್ನಿರಾಮನು ಮತ್ತೆ ಕೊಡಲಿಯ ಮಸೆದು ಹೊಕ್ಕನು (ಸಂಪಶ. ೨೭-೫೦). ೩. ಸ್ಪರ್ಧೆಹೂಡು : ಹುರುಡಿಸು : ಕ್ಷೋಣೀಶ್ವರರಿರ್ವರುಮಂ ಪೂಣಿಸಿ ಮಸೆಯಲ್ಕೆ ಬಗೆದು . . . ಪೋದ ಕೆಯ್ಯೊಳ್ ಮಗುಳ್ಚಿಂ (ಅಜಿಪು. ೦೩-೨೩) ; ಫಲ್ಗುಣನೊಡನೆ ಕದನವ ಮಸೆವರೇ (ಕುಮಾವ್ಯಾ. ಸಭಾ. ೦೫-೪೦) ; ಪೊಸಮಾವಶೋಕೆಯೊಳ್ ಮಱಿದುಂಬಿ ಕೋಗಿಲೆಯೊಳೆಸೆವ ಸಂಪಗೆ ಪೊಚ್ಚಪೊಂದಾವರೆಯೊಳ್ . . . ಗಿಳಿವಿಂಡು ಬನಸಿರಿಯೊಳು ಮಸೆದುವು (ಶೃಖಾ. ೬-೪). ೪. ತೀವ್ರಗೊಳ್ಳು ; ರಭಸಗೊಳ್ಳು : ಯದುಮಗಧಸೈನ್ಯಯುಗದೊಳ್ ಕದನಂ ಮಸೆದೊತ್ತೆ (ಜಗದ. ೭-೪೬) ; ಪುಸಪಳಿಪಿಂ ಪ್ರಿಯಾನನಮನೀಕ್ಷಿಸಲುದ್ಯತೆಯಾಗಿ (ಚಂದ್ರಪು. ೩-೭೭) ; ಪರಿಕರರು ಪರಿಕರರೊಡನೆಯಿರಲೊರಸೊರಸು ಮಿಗೆ ಮಸೆವುದು ಕಣಾ (ಕುಮಾವ್ಯಾ. ೮-೫೦). ೫. ದ್ವೇಷಿಸು : ಬಸವ ಬಸವಾಯೆಂದಡೆ . . . ಮಸೆವ ಹಗೆಗಳು ನಂಟರಪ್ಪರು (ಬಸಪು. ೬-೨೫). ೬. ನಾಶಮಾಡು : ನಾನೇ ಸೈನ್ಯ ತೆಗೆದುಕೊಂಡುಹೋಗಿ ಮೂರೇದಿನಗಳಲ್ಲಿ ಮಸೆದು ಬರುತ್ತೇನೆ (ಚಾಂಕರ. ೦೯೨).

ಮಸೆದಾಟ, **ಮಸವಾಟ** = ೧. ಘರ್ಷಣೆ ; ತಿಕ್ಕಾಟ : ನಮ್ಮ ಸಂಸ್ಕೃತ ನಾಟಕಗಳ ಕಡೆ ತಿರುಗಿದರೆ . . . ವ್ಯಕ್ತಿ ಶಕ್ತಿಗಳ ಮಸೆದಾಟವಿಲ್ಲದೆ ಇಲ್ಲ (ಕಾವ್ಯಸ. ೨). ೨. ಕಲಹ ; ಹೋರಾಟ : ಯೋಧರೊಡನೆ ತನಗೀ ಮನ್ನಣೆಯಾದ ಮಸದಾಟವಂ ನೆನೆದು (ಗೊರೂಭಾ. ೭-೧೯೦).

[ದೇ.॥ ತಮಿ. ಮಾಚು ; ತುಳು. ಮಸೆ, ಮಸಿ ; ಕೋಲಾ. ನಾಯ್ಕಿ. ಮಾಚ್ : ಪರ್ಜಿ. ಮಯ್ಪ್ : ಗೊಂಡಿ. ಮಸೀತಾನಾ, ಮೆಸಿಯನ]

**ಮಸೆ$_2$** (ನಾ). ೧. ಹರಿತ : ಚೂಪು : ಪೊಸಮಸೆಯ ಬಾಳ ಪೊಳೆಪುಂ ಪಸುಪೊನ್ನ[ರ]ತಿಯ ತೊಳಗಿ ಬೆಳಗುವ ಮಿಂಚುಂ ದೆಸೆದೆಸೆಗ[ಳೊ]ಳೆಸದಿರೆ (ವರ್ಧಮಾ. ೪-೪೩) ; ಪೊಸಮಸೆಯ ಕೂರಲಗಾತನ ಕಂಠದಲಿ ಹಾರಮಾಗಿ ಪೇಟಿ (ಕುಮಾವ್ಯಾಸ್ರ. ೭-೦೦ ವ) ; ಎಪ್ಪತ್ತೇಳುಕೋಟಿಯ ಭಟರ ದೇಹವ ಕೀಲಿಸಿದ ಹೊಸಮಸೆಯ ಸರಳಿಂದಸುರ ಕಡುಮುಳಿದು (ಕೌಶಿಕಾ. ೦೯-೦೩). ೨. ಹೊಳಪು ; ಕಾಂತಿ : "ತೊಳಗು, ಬೆಳಗು . . . ಮಸೆ — ಈ ೧೪ ಕಾಂತಿ" (ಕಶಸಾ. ೫೫-೨೦೨) ; ಗಗನಚರಗಜಾರೋಹಕರಂಕುಶದ ಮಸೆಗಳ್ ಗಗನತಲಮನಾವರಿಸೆ ರಣಕ್ಷೋಣಿಗೆ ನಡೆದರ್ (ಪಂಪಭಾ. ೦೩-೨೯ ವ) ; ಪೊವಟ್ಟೆ ಬೆಳ್ಮಸೆವಿಡಿಲ್ ರಣದೇವತೆಯಟ್ಟಹಾಸದಂತೊಗೆಯೆ (ಜಗದ. ೭-೭೬). ೩. ಉದ್ರೇಕ ; ಆವೇಶ : ಬಲಿದ ದಂಡೆಯ ಮಸೆಯ ಬಯಸಿಕೆಲುಳಿಯ ಮೈಗಳ ಲವಣಿಸಾರರು . . . ಕಾದಿದರು (ಕುಮಾವ್ಯಾದ್ರೋ. ೦೪-೦೩); ಕರ್ಣಾರ್ಜುನರೊಳಗಿನ ಮನಕತದ ಮಸೆ ಏರಿತಷ್ಟೆ (ನಾಡೋಜ. ೦೭೦). ೪. ದ್ವೇಷ : ಹಗೆ : ಹುಸಿನುಸುಳಟಮಟಕಾಂಕ್ಷೆ ಹದಿರು ಗನ್ನಮಸೆವಾಟ ಪಾಱಪೆಡಗ್ಗಳಿಕೆ ಮುಸುಕುವ ಕಸಕಳಿಗಳ ಕಿತ್ತು ಗುರುರಾಯ ಸಸಿಗಳ ಸಲಹುವ ಕಾಂತೆ (ಅಮುಶಾಂ. ೪-೦೩೯). ೫. (ಸಣ್ಣ) ಗಾಯ : ಇಸುವಿಡುವ ಪೊಯ್ಲ ಕುತ್ತುವ ಮಸೆಯುಂ ಪತ್ತಿಸುವ ಕೈದುವಿನ್ನಣಮುಂ ಬಿಡಾಕ್ಷಿಸಲಾಗ ಸುತರನಾ ದುವ್ರ್ಯಾಸನಂ ದೋಷಕರನೆಂಬನುತ್ತಮಚ್ಯನಂ (ಸಮುಕ. ೫-೦೨೫) ; ಸುಬಳದ ಮಸೆಗಳು ಪಿಂಗದೆ ಪೋಲ್ತಿಸೆದಿರ್ದಪ್ಪ . . . ಸಾಸನಲಿಪಿಯಂ (ಎಕ. XVI, ತಕ್ಕಾ. ೯೬-೩೫ ; 1170) : ಮಸೆಯ ಮೈಗಳೊಳೊಱವುತಿರ್ದುವು ಬಿಸಿರಕುತ (ಕುಮಾವ್ಯಾದ್ರೋ. ೦೪-೯). [<ಮಸೆ$_1$]

**ಮಸೆಕಲ್**, ಮಸೆಕಲ್ಲು (ನಾ). ಆಯುಧಗಳನ್ನು ಹರಿತಗೊಳಿಸಲು ಬಳಸುವ ಉಜ್ಜುವ ಕಲ್ಲು : ಮಸೆಕಲ್ಲ ಕುದುರೆ ಬಾಚಿಯ ಪೊಸತನಿಸುವ ಕೊಡಲಿಯುಳಿಯನೊರ್ಕಂದದೊಳಂ ಉಸಿರೆಂದಾ ಗುಣಕಂತಿಕೆಗಸಮಸಮಸ್ಯ ಮನೆ ಕೊಟ್ಟನಭಿನವಪಂಪಂ (ಕಬಿಕ. I. ೦೨೪). **ಮಸೆಕಲ್ಲು** : ಕುಡುಗೋಲು, ಮಚ್ಚು ಮುಂತಾದ ಆಯುಧಗಳನ್ನು ಇಳಿಸಿ, ಮಸೆಕಲ್ಲಿನ ಮೇಲೆ ಮಸೆದು ಇಟ್ಟುಕೊಳ್ಳುತ್ತಾರೆ (ಜಪ್ಪಕು. ೪೯). [ಮಸೆ$_1$ + ಕಲ್$_3$]

**ಮಸೆಕಲ್ಲು** 'ಮಸೆಕಲ್' ನೋ.

**ಮಸೆಗಣೆ** (ನಾ). ಹರಿತವಾದ ಬಾಣ : ತುದಿವೆರಳಂಬುಗೊರೆಗೇಱಿಸುವ ಬಿಲು . . . ಮಸೆಗಣೆಯ ಬತ್ತಳಿಕೆ (ಕುಮಾವ್ಯಾಆ. ೩-೬) ; ಪೆಣ್ಣಾಲಗೆಯೆ ನೋಡೆ ಮಸೆಗಣೆಯ ದೊಣೆಯಲ್ತೆ (ಕಾಕಾರ.೦೨೯-೨೭೫). [ಮಸೆ$_2$ + ಕಣೆ$_1$]

**ಮಸೆಗಾಣ್** (ಕ್ರಿ). (ಸಣ್ಣ) ಗಾಯವನ್ನು ಹೊಂದು : ರವಿಯ ಮಗ ಮಸೆಗಂಡನಶ್ವತ್ಥಾಮ ಮೈಮಱೆದ (ಕುಮಾ.ಭಿ. ೯-೧೧) : ಮಸೆಗಂಡ ಕ್ರೋಡನಂತಸುರಸುರೆ ಘರ್ಜಿಸುತೆ (ಶ್ರೀರಾಸು. ೧೬).

[ ಮಸೆ$_2$ + ಕಾಣ್ ]

**ಮಸೆಗಾಣಿಸು** (ಕ್ರಿ). ಗಾಯಗೊಳಿಸು ; ಕ್ಷತಗೊಳಿಸು : ಮೂಱಕ್ಷೋಣಿ ಸೈನ್ಯವನೊರಸಿದನು ಮಸೆಗಾಣಿಸಿದನಗ್ಗದ ಮಹಾರಥರ (ಕುಮಾ.ದ್ರೋ. ೯-೨೬) ; ಸಾವಿರ ಬಲಾಸರಳ್ಗಳನೆಚ್ಚು ಮಸೆಗಾಣಿಸಿದನನಿಬರನು (ಕೃಷ್ಣಗಧಾ. ೨೨-೨೫).

[ ಮಸೆಗಾಣ್ + — ಇಸು$_3$ ]

**ಮಸೆಗೆಡು** (ಕ್ರಿ). ತೀಕ್ಷ್ಣತೆಯನ್ನು ಕಳೆದುಕೊಳ್ಳು ; ಹರಿತವಿಲ್ಲದಾಗು ; ಮೊಂಡಾಗು : ಮಸೆಗೆಟ್ಟ ಕೊಡಲಿಯ ಹೊಯಿಲಂತೆ ಕರ್ಮವ ನಸುದಱಿ ಮಾಳ್ಪುದು ಧರ್ಮ ಮಸೆಯುಳ್ಳ ಕೊಡಲಿಯ ಹೊಯಿಲಂತೆ ಕರ್ಮವ ಕುಸುರಿದಱಿವುದೀಗ ಶುಕ್ಲ (ಭರತ. ೬೯-೪೪). [ಮಸೆ$_2$ + ಕೆಡು$_1$]

**ಮಸೆಗೊಳ್** (ಕ್ರಿ). ಹರಿತವಾಗು ; ಚುರುಕಾಗು : ನ್ಯಾಯಶಾಸ್ತ್ರದ ಅಧ್ಯಯನ ಹಾಗೂ ಅದರ ಪ್ರಯೋಗದಿಂದ ಆ ಬುದ್ಧಿಶಕ್ತಿಯು ಮಸೆಗೊಂಡು ಅತ್ಯಂತ ತೀಕ್ಷ್ಣವಾಯಿತು (ದಾಶಪ. ೭೯). [ಮಸೆ$_2$ + ಕೊಳ್$_1$]

**ಮಸೆಗೋಲು** (ನಾ). = ಮಸೆಗಣೆ : ರಕ್ಕಸನು . . . ಪರಿಘದಲಿಟ್ಟನಿನ ಕುಲನ . . . ಮಸೆ [ಪಾಠಾಂ. ಸಮ]ಗೋಲ್ಗೈದಱಲಿ ಶತಚೂರ್ಣವಾಗಲು ಕಡಿದನಾ ರಾಮ (ತೊರವೆ. ೬-೨೬-೪೦) ; ಹುಸಗೆಟ್ಟೆನು ಧೃತಿ ಕುಂದಿತು ಕಾವನ ಮಸೆಗೋಲು ನಾಂಟಿದುವೆದೆಯ (ಕಂಪ. ೯-೧೬೦).

[ಮಸೆ$_2$ + ಕೋಲು$_1$ (< ಕೋಲ್$_1$)]

**ಮಸೆತ** (ನಾ). ೧. ತೀಕ್ಷ್ಣತೆ; ಚುರುಕು : ತಾನು . . . ನೂರು, ಸಾವಿರ, ಆಡುವ ನಾಲಿಗೆಯ ಮಸೆತವನ್ನು ಎದುರಿಸಿ ಬದುಕಬೇಕಾಗಿದೆ (ಬೀಶಹ. II, ೦೩೦). ೨. ಉದ್ರೇಕ; ಆವೇಶ : ವನಚರನ ಸುಡುವಂತೆ ನೋಡಿದ ಮನದ ಮಸೆತದಲಿ (ಕಿರಾತ. ೪೪-೪೨). [ಮಸೆ$_1$ + — ತ$_2$]

**ಮಸೆದೋಱು** (ಕ್ರಿ). ಗಾಯಗೊಳಿಸು : ಮದನ ಮಸೆದೋಱಿದನು ಹೂಗಣೆ ಹೃದಯವನು ತಾಗಿದುದು (ಕುಮಾ.ಭಿ. ೨-೬). [ಮಸೆ$_2$+ತೋಱು]

**ಮಸೆಪ** (ನಾ). = ಮಸೆತ ೧ : ಬಾದರಾಯಣನವರೆಚ್ಚ ಹೊಸಮಸೆಪದ ಬಾಣಗಳನು ಕುಸುರಿದಱಿದು (ಕುರಾಸಾಂ. ೦೬-೦೯೩). [ಮಸೆ$_1$ + — ಪ$_2$]

**ಮಸೆಪು** (ನಾ). ಉಜ್ಜುವಿಕೆ; ತಿಕ್ಕಾಟ : ಗಗನಿನದಕ್ಕೆ ಕಾತರಿಪ ಕಂಠ ಮನೊಯ್ಯನೆ ಸಂತವಿಟ್ಟು ಪೈಗಳ ಮಸು[ಸೆ]ಪಿಂಗೆ ಪೈಮಱೆವ . . . ಪಾಣ್ಬೆಯ ಜಾಣ್ಮೆ ಸಾಲದೇ (ರಾಜಶೇ. ೧೦-೩೫). [ಮಸೆ$_1$ + — ಪು$_2$]

**ಮಸೆಯ** (ನಾ). (?) : ಕೊಣ್ಡುಪೋಗೆ ಮಸೆಯರ ಗಡಿ ತಱುವನೂಳಿಸಿದೋರಣದೊಳ್ಬಿಟ್ಟು ಸಂಗತಿಗೆ ತನ್ಸೊನ್ (ಎಕ. VIII, ಸೊರಬ. ೨೦೨-೫; 955).

[ ? ]

**ಮಸೆಯಂಬು** (ನಾ). = ಮಸೆಗಣೆ : ಪೊಸಮಸೆಯಂಬುಗಳ್ ದೆಸೆಗಳಂ ಮಸುಳ್ವನ್ನಗಮೆಯ್ದೆ ಪಾಯೆ (ಶಂಕಚಾ. ೦೦-೬೫) ; ಮಸೆಯಂಬು ಪೆಟಲ ಗುಂಡುಗಳ ಎಸೆವ ಪೆರ್ಮಳೆಗಱೆಯುತ ಜೊಬ್ಬಿಱಿದು (ಕಂಪ. ೦೯-೪೯).

[ಮಸೆ$_2$ + ಅಂಬು$_2$]

**ಮಸೆಯಿಸು**, ಮಸೆಸು (ಕ್ರಿ). ಹರಿತಗೊಳಿಸು; ಚೂಪುಮಾಡು : ಮಸೆಯಿಸುಗುಳ್ಳ ಕೆಯ್ದುಗಳಂ (ಶಂಕಚಾ. ೧೦-೩೨); ಉಗುರಂ ಮಸೆಯಿಸಿ (ರಘುಶಾಸ್ತ್ರ. ೫-೯೪); ಕೈದುಗಳ ಘಾಸಿಯೂನದೆ ಮಸೆಯಿಪ ಭಟರಿಂದ ವಿಲಾಸವಡೆದುದುಭಯಬಲ (ಕುರಾಸಾಂ. ೦೯-೧೦೭). **ಮಸೆಸು** : ಅಸಿಯ ಮಸೆಸುವ ಮಱದ ಲೌಡಿಯ ಬೆಸುವ . . . ವೀರಭಟರೊಪ್ಪಿದರು ಕಟಕದಲಿ (ಕುಮಾ.ಶ. ೫-೩೬); ಅಸಮಾಕ್ಷನೊಳು ವೈರವ ತೊಟ್ಟು ರ್ಝುಷಕೇತು ಮಸೆಸಿದ ಮಾರ್ಗಣೆಯಂತೆ . . . ನನೆಗಳೊಪ್ಪಿಹವು (ಅಂಶಪ. ೨-೯೦). [ ಮಸೆ$_1$ + — ಇಸು$_3$ ]

**ಮಸೆವಡು** (ಕ್ರಿ). ಪೊಳಪನ್ನು ಹೊಂದು; ಕಾಂತಿಯನ್ನು ಪಡೆ : ಮಸೆವಟ್ಟುಜ್ವಲದರ್ಪಣಂ ಪೊಸದಳಿರ್ ಪೂಮಾಲೆ ಶೇಷಾಕ್ಷತಂ ಬಿಸಸೂತ್ರಂ . . . ತನ್ನೊಳೊಪ್ಪೆ (ಜಗನ್ನಾ. ೧೦-೯೬). [ಮಸೆ$_2$ + ಪಡು$_1$]

**ಮಸೆವು** (ನಾ). ಸಾಣೆಹಿಡಿಯುವಿಕೆ : ಸಹಿಸಿದ ಹಸಿವು ಆಯಿತು ಆತ್ಮದ ಖಡ್ಗಕೆ ಮಸೆವು (ಸುಜೀತ. ೫-೬). [ಮಸೆ$_1$ + —ವು]

**ಮಸೆವೆಳಗು** (ನಾ). ಆಯುಧಗಳನ್ನು ತಿಕ್ಕುವುದರಿಂದುಂಟಾಗುವ ಕಾಂತಿ, — ಪೊಳಪು: ವಸುಧೇಶರನಾತ್ಮಭೂರಿಭಾಂಕೃತರವದಿಂ ಮಸೆವೆಳಗಿಂ ನಗುತಿರ್ಪಂತೆಸೆದುವು ಬೆನ್ನಟ್ಟುತಿರ್ಪ ಕೃಷ್ಣಶರಂಗಳ್ (ಜಗನ್ನಾ. ೬-೧೦೪). [ ಮಸೆ$_1$ + ಬೆಳಗು$_2$ (< ಬೆಳಕು$_2$) ]

**ಮಸೆವೆಱು** (ಕ್ರಿ). ಹರಿತವಾಗು; ಚೂಪಾಗು : ಹೊಸಮಸೆವೆತ್ತ ಖಡ್ಗದಲಿ ಕುಸಿವೆತ್ತು ಖಳನ ಮಸ್ತಕವ ಕೀಳ್ಪಡಿಸಿ ರಂಜಿಸೆ (ಮೋಹಕ. ೦೧-೬೬); ಪೊತ್ತ ಮಸೆವೆತ್ತ ಬಲ್ಗತ್ತಿಗಳ ಕಿತ್ತು ಭಟರೆತ್ತಿ ಜಡಿಯುತ್ತಿರಲ್ಕೆ (ಕೃಬಿಾ. ೪-೦೯).

[ ಮಸೆ$_2$ + ಪೆಱು$_1$ ]

**ಮಸೆವೊಗರ್** (ನಾ). = ಮಸೆವೆಳಗು : ಕರ್ಣಜನ ಕಣೆಗಳಂ ಕತ್ತರಿಸಿ ಪೊಸಮಸೆವೊಗರ್ನಭೋಮಂಡಲವನಂಡಲೆಯಲು (ಕೃಬಿಾ. ೬-೬೦).

[ ಮಸೆ$_1$ + ಪೊಗರ್ ]

**ಮಸೆಸು** 'ಮಸೆಯಿಸು' ನೋ.

**ಮಸ್ಕರ** (ನಾ). ಬಿದಿರು ; ಬೊಂಬು : "ತ್ವಚಿಸಾರಃ, ಚಪಃ ... ಮಸ್ಕರಃ —ಈ ೭ ಬಿದಿರ್" (ಹಲಾಯು. ೩೪-೫೦). [ಸಂ.]

**ಮಸ್ಕರಿ$_1$** (ನಾ). ಬಿದಿರಿನ ದಂಡವನ್ನು ಹಿಡಿದ ಸಂನ್ಯಾಸಿ,– ಯತಿ : "ತಾಪಸಂ ಕರ್ಮಂದಿ ಮಸ್ಕರಿ ವ್ರತಿ ಭಿಕ್ಷುವಾ ಪರಾಶರಿ ತಪಸ್ವಿಯೆನಿಕ್ಕು" (ಮಂಗರಾ. ೬೩-೯). [ ಸಂ. ಮಸ್ಕರಿನ್ ]

**ಮಸ್ಕರಿ$_2$, ಮಷ್ಕಿರಿ** (ನಾ). ತಮಾಷೆ ; ಗೇಲಿ : ಎಲ್ಲಿ ಕೂತ ಮರಯೇರಿ ಮಾಡಲಿಕ್ಕೆ ಮಸ್ಕರಿ . . . ಗೋವಿಂದ ಅನಿಸಿದ ಗೋವರ್ಧನಾ (ಜಾನಪ. ೧೦೦); ಎಂಥ ಮಸ್ಕರೀ ಮಾತ ಇದು (ಕಂಚಿ. ೨೦೦). **ಮಷ್ಕಿರಿ**: ಇದೇನು ಕ್ಲೀಷೆಯೋ ಮಷ್ಕಿರಿಯೋ ! (ಅರಿಬು. ೫೩) ; ನನ್ನ ಜೊತೆ ಮಷ್ಕಿರಿ ಮಾಡ ಬೇಡ (ರೂಢಿ).

[←ಅರ. ಮಸ್ಖರಾ; ಹಿಂ. ಮಸ್ಕರೀ, ಮಸಖರೀ; ಮರಾ. ಮಸ್ಕರೀ]

**ಮಸ್ಕರಿಮಾರ್ಗ** (ನಾ). ಸಂನ್ಯಾಸಿಯ ಸಂಪ್ರದಾಯ : ಆ ದ್ವಿಜಾನ್ವಯ ಸಱವುಂ ವಿನಯಮುಂ ತನ್ನೊಡವುಟ್ಟಿ ಪುಟ್ಟಿ ಬಳೆದು ಪೂರ್ವಸ್ಥಿತಿಯೊಳೆ ಮಸ್ಕರಿಮಾರ್ಗದೊಳೆಸಗಿ (ಪಾರ್ವತಿ. ೬-೦೬ ವ). [ಸಂ.]

**ಮಸ್ಕರಿಸಮಯ** (ನಾ). = ಮಸ್ಕರಿಮಾರ್ಗ : ಆತನ ಪೆಂಡತಿ ದುರ್ಮನಸ್ಕೆ ಮಸ್ಕರಿಸಮಯಮಂ ಪಿಡಿದಿರ್ಪಳ್ (ಶಂರಾಪು. ೯-೩ ವ). [ಸಂ.]

**ಮಸ್ಕಾ** (ನಾ). ಬೆಣ್ಣೆ ; ನವನೀತ.

**ಮಸ್ಕಾಹೊಡೆ** = (ಆಲಂ) ಬೆಣ್ಣೆಹಚ್ಚು : ಓಲೈಸು : ಯಾವ ಕೆಲಸವಾಗಬೇಕಾದರೂ ಅವನಿಗೇ ಮಸ್ಕಾಹೊಡೆಯಬೇಕು (ರೂಢಿ).

[←ಪಾರ. ಮಸ್ಕ್, ಮಸ್ಕಹ್; ಹಿಂ. ಮಸ್ಕಾ, ಮಸಕಾ; ಮರಾ. ಮಸಕಾ]

**ಮಸ್ತ** (ನಾ). ತಲೆ ; ಶಿರಸ್ಸು : ನಾಭಿಯಿಂದುರಂಬರೆಗಂ ಪಿತ್ತದ ತಾಣಮುರದಿನಾ ಮಸ್ತದ ವರೆಗಂ ಕಫದ ತಾಣಮಕ್ಕುಂ ನಿರುತಂ (ಲೋಕೋಪ. ೯-೨) : ಪ್ರಥಿತಗುಣಗಣಾವಾಸನುರ್ವೀಶಮಸ್ತನ್ಯಸ್ತಾಂಘ್ರಿದ್ವಂದ್ವನೇಂ ರಾಜಿಸಿದನೋ (ಕಶಿಲ. ೭೪-೦೨-೪ ; 1170) ; ತತ್ಪುಣ್ಯಾಂಬುವಂ ಪೊತ್ತು ಮಸ್ತದೊಳ್ (ಅಪಂಪು. ೯-೯೬). [ಸಂ.]

**ಮಸ್ತಕ** (ನಾ). ೧. ತಲೆ; ಶಿರಸ್ಸು : "ಮುಂಡಃ, ಉತ್ತಮಾಂಗಃ, ಮಸ್ತಕಃ . . . ಮೂರ್ಧಾ, ಕಂ—ಈ ೮ ಮಂಡೆ" (ಹಲಾಯು. ೯೫-೩೬೪); ತೀರ್ಥೋದಕಂಗಳಿಂದಯ್ವರುಂ ಪವಿತ್ರೀಕೃತಮಸ್ತಕರಾಗಿರ್ದು (ಶಂಕಚಾ. ೬-೦೦ ವ); ರವಿಕುಲದ ರಾಯಂ . . . ನಿಜಸತಿಯು ತೋರ

ದೊಡೆಗಳ ಮೇಲೆ ಲಲಿತಮಣಿಮಕುಟಮಂಡಿತಮಸ್ತಕವನೆಳಸಿ ಮಗ್ಗು ಲಿಕ್ಕಿದನಾಗಳು (ಹಕಗ. ೬-೩೦); ಅವನ ಮಸ್ತಕ ಬಿರಿದು ಬೀಳಲಿ (ಕುವ್ಯಾಸ್ತ್ರೀ. ೦೯-೯೨); ಪುಸ್ತಕದಿ ದೊರೆತರಿವು ಮಸ್ತಕದಿ ತಳೆದ ಮಣಿ (ಮಂಕುತ. ೬೩). ೨. ತುದಿ; ಶಿಖರ: ಸಂಜೆಯೊಳಿನನಸ್ತಾದ್ರಿಯ ಮಂಜುಳಮಸ್ತಕ ದೊಳೊಪ್ಪುವಂತತಿಶಯದಿಂ ಕಂಜಾಕ್ಷಿಯ ಮಂಡೆಯೊಳ್. . . ಮಾಡೆಮಣಿ ನೆಲೆಸಿರ್ಕುಂ (ಹರಿಶ್ಚ. ೨-೪೩); ನೋಡುತ ನಡದ ವಿಪುಲಾಚಲದ ಮಸ್ತಕದಿ (ಮುಲ್ಲಾಣ. ೨-೯). [ಸಂ.]

**ಮಸ್ತಕಸ್ನೇಹ** (ನಾ). ೧. ಮೆದುಳು: "ತಲೆಯ ಮೆದುಳಿಂಗೆ ಮಸ್ತಿಷ್ಕಮಾ ಮಸ್ತಕಸ್ನೇಹಮೆಂಬಾಖ್ಯಮಕ್ಕುಂ" (ಶಂಗಣ. ೦೬೬-೬). ೨. ಮೆದುಳಿನಲ್ಲಿರುವ ನೆಣ. [ಸಂ.]

**ಮಸ್ತಕಾಭಿಷೇಕ** (ನಾ). [ಜೈನ] ಜಿನವಿಗ್ರಹದ ತಲೆಯ ಮೇಲೆ ನೀರು, ಹಾಲು ಮುಂತಾದ ದ್ರವಪದಾರ್ಥಗಳನ್ನು ಎರೆದು ವಿಧಿಪೂರ್ವಕ ವಾಗಿ ಮಾಡಿಸುವ ಸ್ನಾನ: ಶ್ರವಣಬೆಳ್ಗೊಳದಲ್ಲಿ ಗೋಮಟೇಶ್ವರನ ಮಸ್ತಕಾಭಿಷೇಕವು ಹನ್ನೆರಡುವರ್ಷಗಳಿಗೆ ಒಂದು ಬಾರಿ ನಡೆಯುವುದು (ಶುರ್ಧ್ಯಶು. ೯೯). [ಸಂ.]

**ಮಸ್ತಿ** (ನಾ). ೧. ಸೊಕ್ಕು: ಗರ್ವ: ಮದ: ಇಷ್ಟು ಮಸ್ತಿ ತುಂಬಿದ ಹೆಣ್ಣಿಗೆ ಅಂತಿಂತಹ ಹುಡುಗ ಉಳಿಯೋಗದವನೆ? (ಮೂರುದಾ. ೨೨೦); ಅವನ ಮಸ್ತಿ ಎಷ್ಟಿದೆಯೆಂಬುದನ್ನು ನಾಳೆಯೇ ನೋಡುತ್ತೇನೆ (ಕರಾಶ. ೬೬). ೨. ಆನೆ, ಒಂಟೆ ಮೊದಲಾದ ಪ್ರಾಣಿಗಳ ಮದಾವಸ್ಥೆ: ಮಗನೇ ಮಸ್ತಿಯ ಹಸ್ತಿ ಮಮತೆಯ ಮಗನೆ ಶಿವನಿಂದೊಗೆದ ಸಿಂಹದ ಮರಿಯೆ ಕೇಳು (ಮುದೇಶ. ೬-೯೦); ಮಸ್ತಿಳಿದ ಹಸ್ತಿಯೊಲು ಕಣ್ದೆರೆದು (ಕಠಟು. ೨೩-೦). [←ಪಾರ. ಹಿಂ. ಮರಾ. ಮಸ್ತೀ]

**ಮಸ್ತಿಷ್ಕ** (ನಾ). ಮೆದುಳು: "ತಲೆಯ ಮೆದುಳಿಂಗೆ ಮಸ್ತಿಷ್ಕಮಾ ಮಸ್ತಕಸ್ನೇಹಮೆಂಬಾಖ್ಯಮಕ್ಕುಂ" (ಶುಂಗಣ. ೦೦೬-೬); ಗಜಮಸ್ತಕ ಮಸ್ತಿಷ್ಕದಿನಜೀರ್ಣಮಾಯ್ತೆಂದು ಲಂಘನಂಗೆಯ್ದವೋಲೇಂ ಗಜರಿಪು ಲಂಘಿಸಿದುದೊ (ಅಪಕು. ೯-೨೬); ಲಕ್ಷ್ಮಣಂ ರಾಷ್ಟ್ರಕಂಟಕನಂ ಬಾಟ್ದಲೆ ಗೊಂಡನುಯ್ವನಿಭಮಂ ಪಂಚಾನನಂ ಹಸ್ತಿಮಸ್ತಕಮಸ್ತಿಷ್ಕರಸಾನುರಕ್ತ ರಸನಂ ಮಾರ್ಕೊಂಡು ಕೊಂಡುಯ್ವವೋಲ್ (ಶಂರಾಶು. ೭-೬೨). [ಸಂ.]

**ಮಸ್ತು**$_1$ (ನಾ). ಮಜ್ಜಿಗೆ: "ದಧಿಮಂ(ತ)ಥಃ, ಮಸ್ತು—ಈ ೨ ಮಜ್ಜಿಗೆ" (ಹರಾಯು. ೩೪-೦೬೬). [ಸಂ.]

**ಮಸ್ತು**$_2$ (ನಾ). ವಿಪುಲ; ಅಧಿಕ; ಹೇರಳ: ಕೈದುಗಳ ಮಸ್ತಾಗಿ ಹೊಸದಾದುದಂ ತರಿಸಿ ಸುಗ್ಗಾದುದಂ ಕಳುಪಿ ಹಸಮಾಡಲು (ಕುರಂಗ. ೩೬-೯೨); ಮಸ್ತಾಗಿ ಹಣ ಉಂಟಾ? (ಅಭಿಶಾ. ೬); ಮಳೆಯ ಜೋರಿಗೆ ಕೂಣಿಗೆ ಮಸ್ತಾಗಿ ಬಿದ್ದಿದ್ದುವು ಹತ್ತು ಮೀನು! (ಶುರಿಶು. ೬೪೬). [←ಪಾರ. ಮರಾ. ಮಸ್ತ್]

**ಮಸ್ಲಿನ್** (ನಾ). ಒಂದು ಬಗೆಯ ತೆಳುವಾದ ಬಟ್ಟೆ: ಬಹು ಸೂಕ್ಷ್ಮ ನೆಯ್ಗೆಯ ಹತ್ತಿಯ ಬಟ್ಟೆ; P ಹಿಂದೆ ಮೆಸೊಪೊಟೋಮಿಯಾ ದೇಶದ ಮೊಸಲ್ ಎಂಬಲ್ಲಿ ಈ ಬಟ್ಟೆ ನೇಯುತ್ತಿದ್ದುದರಿಂದ ಈ ಹೆಸರು ಬಂದಿದೆ: ಏನು ಬೆಳ್ಳಗೆ ಎಷ್ಟು ತೆಳ್ಳಗೆ ಮಳೆಯ ಮಸ್ಲಿನ್ ಪರದೆಯು (ಕಂಶು. ೦೦-೯); ಚೀಟಿ, ವಾಯಿಲ್, ಮಸ್ಲಿನ್, ಮಲ್ ಇವನ್ನು ಸಾಧಾರಣವಾಗಿ ಉಪಯೋಗಿಸಿ ನೇಯುವರು (ಗೃಹಶಿ. ೬೪). 'ಮಲ್ಲು' ಪರಾ. [←ಇಂ. Muslin]

**ಮಸ್ಸಿ** (ನಾ). ಒಂದು ಬಗೆಯ ಮರ: ಮಸ್ಸಿ, ಕುರುವಾಡಿ, ನೇರಲುತಾರೆ (ಶ್ಯಾಶಿ. ೩-೯೨). [?]

**ಮಸ್ಸಿವಾಳ** 'ಮಸಿವಾಳ' ನೋ.

**ಮಸ್ಸೀವಾರ** 'ಮಸಿವಾಳ' ನೋ.

**ಮಸ್ಸೀವಾಲ** 'ಮಸಿವಾಳ' ನೋ.

**ಮಹ**$_1$ (ನಾ). ಏಳು ಲೋಕಗಳಲ್ಲಿ ನಾಲ್ಕನೆಯದು: "ಬಿತ್ತರದ ಭೂರ್ಭುವಂ ಸ್ವರ್ಮಹಂ ಜನ ತಪಂ ಸತ್ಯಮೆಂದೇಟು ಮೇಲಣ ಲೋಕಮಕ್ಕು" (ಮಂಗಣ. ೦೦-೬೨). [ಸಂ. ಮಹಸ್]

**ಮಹ**$_2$ (ನಾ). ೧. ಒಸಗೆ; ಉತ್ಸವ; ಹಬ್ಬ: "ಉತ್ಸವಃ. ಮಹಃ. ಕ್ಷಣಃ—ಈ ೩ ಒಸಗೆ" (ಹರಾಯು. ೦೨೬-೬೮); ಸಕಲವಿನೇಯಜನಂಗಳ್ ಮಾಟ್ಪ ಮಹವೆಂಬ ಪೂಜೆಯುಮಂ (ಸುಕುಮಾ. ೬-೨೩ ಶ); ಗೋಪವೃದ್ಧರ್ ಮಹೇಂದ್ರಮಹಮಂ ಮಾಣ್ದು ಗಿರೀಂದ್ರಮಹಮನೊಡಂಬಟ್ಟರ್ (ಜಗಶಿ. ೯-೬೯ ಶ). ೨. ಯಾಗ; ಯಜ್ಞ. ೩. ತೇಜಸ್ಸು; ಕಾಂತಿ. ೪. ಎಮ್ಮೆ; ಮಹಿಷ. ೫. ಶ್ರೇಷ್ಠವಾದ ತತ್ತ್ವ; ಪರತತ್ತ್ವ: ಅರಿವು ಮಹದಲ್ಲಿ ಬೆರಸುವಾಗ ವಾರಿಶಿಲೆ ನೋಡನೋಡಲಿಕ್ಕೆ ನೀರಾದಂತೆ (ಪ್ರಭುಶಾ. ೨೬೦-೩); ಮನವು ಮಹದಲ್ಲಿ ನಿಂದುದೆ ಲಿಂಗ (ಲಿಂಗವ. ೦೪-೩೦). [ಸಂ.]

**ಮಹಂತ** (ನಾ). ೧. ಆದರಕ್ಕೆ ಪಾತ್ರನಾದ ವ್ಯಕ್ತಿ: "ಮಹಂತಃ = ಪೂಜ್ಯಂ" (ಕಾಶ್ಯ. ೨೮೪); ಭಾಸುರತೇಜ[ರು] ಮಹಂತರೆನಿಸಿದ ಸೂರ್ವರು ಕೇಶವಮಹೇಶದೇವರ ಲೇಸೆನಿಸಿದ ಪೂಜೆಗಿತ್ತರುಪೂರ್ಜಿತ ಧರೆಯಂ (ಎ೩. XVIII. ೦೮೩-೯೦; 1097); ನಿಜಮನಜಿದ ನಿಶ್ಚಿಂತನೆ ಮರಣವ ಗೆಲಿದ ಮಹಂತನೆ (ಅಶಸಂ. ೦೪೯-೬೪೬); ಅಖಿಳರಿಗಚಿಮನೀವ ಮಹಾಂತನೆನಿಸಿದ ಸಿದ್ಧರಾಮಯ್ಯಂಗೆ ಶರಣಾರ್ಥಿ (ಶ್ರಶುಶೀ. ೦-೯). ೨. ದೇವಸ್ಥಾನ, ಮಠ ಮೊದಲಾದುವುಗಳ ಮೇಲ್ವಿಚಾರಕ; ಧರ್ಮಾಧಿಕಾರಿ: ಈ ವೃದ್ಧಮಹಾಪುರುಷನಾರು ಎಂಬುದಾಗಿ ದೇವಾಲಯದ ಮಹಂತರನ್ನು ಕೇಳಿದನು (ಶ್ರೀಶಾಯು. ೬). 'ಮಹಾಂತ' ಪರಾ. P ಸಂಸ್ಕೃತದ 'ಮಹತ್' ಶಬ್ದವು ವ್ಯಾಕರಣಸೂತ್ರಗಳ ಪ್ರಭಾವದಿಂದ ಅನೇಕ ಬೇರೆ ಬೇರೆ ರೂಪಗಳನ್ನು ಪಡೆಯುವುದ ರಿಂದ ಇಲ್ಲಿ ಅನುಕೂಲಕ್ಕಾಗಿ ಅವೆಲ್ಲವನ್ನೂ ಬೇರೆ ಬೇರೆ ಮುಖ್ಯ ಉಲ್ಲೇಖಗಳಾಗಿ ಕೊಡಲಾಗಿದೆ. ಉದಾ: 'ಮಹಂತ', 'ಮಹತಿ$_1$', 'ಮಹತ್ತು', 'ಮಹಾ', 'ಮಹಾಂತ' ಇತ್ಯಾದಿ. [ < ಸಂ. ಮಹತ್]

**ಮಹಂತು**, **ಮಾಹತ್ತು** (ನಾ). = ಮಹಂತ ೧: 'ಮಹಂತುಬೋಗು' ಪರಾ. **ಮಾಹತ್ತು**.

**ಮಾಹತ್ತಿನ ಮಠ** = ವೀರಶೈವಮಹಾನುಭಾವಿಗಳಿರುವ ಮಠ: ಶಿವನಸಮುದ್ರದ ವೀರೇಶ್ವರನ ಗುಡಿ ಯತಿಮಠವನು ಮಾಹತ್ತಿನ ಮಠವ ಮಾಡಿ (ಎಕ. XIV. ಶುಳಶ. ೦೦೧-೮; 1604). [ < ಮಹಂತ ]

**ಮಹಂತುಬೋಗು** (ಕ್ರಿ). ಮಹಂತನಾಗು; ಪೂಜ್ಯನಾಗು: ಮಾಸಿ ಉಂಡವರೆಲ್ಲಾ ಮಹಂತುಬೋದರು ದೇಹ ಉಂಡವರೆಲ್ಲಾ ದೇವರ ಪೂಜಿಸಿದರು (ಸರ್ಜಶ. ೨೯-೦೯೪). [ಮಹಂತು + ಪೋಗು$_1$ ( < ಪೋ$_1$)]

**ಮಹಂತೆ** (ನಾ). ಶ್ರೇಷ್ಠಳಾದವಳು; ಪೂಜ್ಯಳಾದವಳು: ಆತ್ಮಾಯತ ಪತಿಭಕ್ತೆ ನಾಗಿಕಬ್ಬೆ ವಿಶೇಶಶ್ರೀಯುತೆ ಮಹಂತೆ ನಿ[ಚ್ಚಂ] ಶ್ರೀಯ[ಸ್ಕರ] ಮೂರ್ತಿ (ಎಇ೩. V. ೬೯೯-೦೬; 1097). [ಮಹಂತ + — ಎ$_2$]

**ಮಹಚ್ಚರಿ** (ನಾ). ಅತಿಯಾದ ಸೋಜಿಗ; ಅತ್ಯಾಶ್ಚರ್ಯ: 'ಮಹಚ್ಚರಿಪಡು' ಪರಾ. [ < ಮಹಾ + ಅಚ್ಚರಿ$_3$ ]

**ಮಹಚ್ಚರಿಪಡು** (ಕ್ರಿ). ಅತಿಯಾಗಿ ಸೋಜಿಗಪಡು; ಅತ್ಯಾಶ್ಚರ್ಯ ಪಡು: ಸುದತಿ ಬಳಿಕಾ ವೃದ್ಧನನು ಕಾಣದೆ ಮಹಚ್ಚರಿಪಡಲು (ಜೈಮಿಂಶ. ೦೯-೪೦). [ಮಹಚ್ಚರಿ + ಪಡು$_1$ ]

**ಮಹಜರ್** 'ಮಹಜರು' ನೋ.

**ಮಹಜರು**, ಮಹಜರ್, ಮಾಜರು (ನಾ). (ಕೊಲೆ, ಕಳವು ಮುಂತಾದ ಅಪರಾಧಗಳ ವಿಚಾರದಲ್ಲಿ) ತಪಾಸಣೆ ಮಾಡಿದವರೆಲ್ಲರೂ ಸಹಿ ಮಾಡಿದ ವಿವರವಾದ ವರದಿ; ಪಂಚನಾಮೆ: ಆ ಮಹಜರಿಗೆ

ಪಟೇಲನು ದಸ್ತುಖತ್ತನ್ನು ಹಾಕಿ ಅಲ್ಲಿ ಹಾಜರಿದ್ದವರ ದಸ್ತುಖತ್ತುಗಳನ್ನು ಹಾಕಿಸಿ . . . ರವಾನಿಸಬೇಕು (ಗ್ರಾಮಕ. ೩೪) : ಶವದ ಮಹಜರುಕ್ರಮ ನಡೆಯಬೇಕಾಗಿತ್ತು (ಹಾಳೂರು. ೨೦೨). **ಮಹಜರ್** : ಈ ದಿನ ಮಹಜರ್ ನಡೆಸುತ್ತಾರೆ (ತಕ್ರಕೂ. ೧೩೦). **ಮಾಜರು** : ಮಾಜರು ಮಾಡಲು ಪೋಲೀಸಿನವರು ಬರುತ್ತಾರೆಂಬ ಸುದ್ದಿ ಕಾಗೆಹಿಡಿಗೆಸದ ಕಲ್ಲಾಗಿತ್ತು (ಕಾಮೂರು. ೪೯೬).

[ ←ಅರ. ಮಹಜರ್, ಮಹರ್ಝರ್; ಹಿಂ. ಮರಾ. ಮಹಜರ್ ]

**ಮಹಜಿದಿ** 'ಮಸೀದಿ' ನೋ.

**ಮಹಡಿ** 'ಮಾಡ$_1$' ನೋ.

**ಮಹಡಿಮನೆ** 'ಮಾಡಿಮನೆ' ನೋ.

**ಮಹತಾಪು,** ಮತಾಪು (ನಾ). ೧. ಪ್ರಕಾಶಮಾನವಾಗಿ ಕಿಡಿಗೆದರಿ ಉರಿಯುವ ಒಂದು ಬಗೆಯ ಸುಡುಮದ್ದು: ಬೆಳಗಿದವು ಶತಕೋಟಿ ಪಂಜಿನ ಹೊಳಪಿನೊಳು ಮಹತಾಪುಗಳ ಸದ್ದೆಳಗಿನೊಳು (ಶರಶು. ೧೩–೨೪); ಹಗಲುಬತ್ತಿಯು ಬಾಣ ಬಿರಿಸು ಮಹತಾಪುಗಳು ಬಗೆಬಗೆಯಿಲಾಲುಗಳು ಸಾಲುದೀವಟಿಗೆ (ಕೃತ್ಯಶಿ. ೩–೧೦). **ಮತಾಪು** : ೧. ಹೊರಗೆ ಮತಾಪಿನ ಬೆಳಕಿನ ಜತೆಯೊಳು ಹೊಳೆದುವು ತಾರೆಗಳೊಳಗೆ (ಚಂದ್ರಟೀ. ೮–೩೦). ೨. ಒಂದು ಬಗೆಯ ಯುದ್ಧದ ಸಾಧನ : ಸಣ್ಣ ತೋಪುಗಳು, ರಾಮಚಂಗಿಗಳು, ರಾಮಬಾಣಗಳು, ಮತಾಪುಗಳು, ತಾರಾಮಂಡಲ, ಭೂಚಕ್ರ, ರಣಗಾಡಿಗಳು ಮೊದಲಾದ ಯುದ್ಧೋಪಕರಣಗಳನ್ನೆಲ್ಲ ಎಣಿಸಿದುದಾಯಿತು (ಐಕ್ಯರು. ೦೨).

[←ಪಾರ. ಹಿಂ. ಮಹತಾಬ್; ಮರಾ. ಮಹತಾಪ್, ಮಾಹತಾಬ್]

**ಮಹತಿ$_1$** (ನಾ). ೧. ಹಿರಿಮೆ ; ಘನತೆ ; ಮಹತ್ವ: ಕಡುತಪವನ್ನು ಮಾಡಿದ ಪುಣ್ಯಫಲವಿಂದು . . . ಮೂಜಗದೊಡೆಯನೇ ನಿನ್ನಡಿಯ ದರುಶನ ಪಡೆದ ಮೂಲಕ ನಮಗೆ ದೊರೆಯಿತು ಮಹತಿ ಪೆರ್ಚಿದುದು (ಶಾರ್ದೂ. ೩–೦೬) ; ಕಾಯಕದ ಮಹತಿಯೂ ಇದೇ ಮಾತನ್ನು ಹೇಳಿದೆ (ಶರಣ. ೪೨೨). ೨. ಒಂದು ಬಗೆಯ ಬಿಕ್ಕುಳುರೋಗ : ಬಿಕ್ಕುಳು ರೋಗವು ಅನ್ನಜೆ, ಕ್ಷುದ್ರಜೆ, ಮಹತಿ, ಯಮಳೆ, ಗಂಭೀರೆ ಎಂದು ಐದು ತೆರನು . . . ಮಹತಿ ಎಂಬ ಬಿಕ್ಕಳು ಬರುತ್ತಲೆ ಎಚ್ಚರವಂ ತಪ್ಪಿಸಿ ವಾಕ್ಯನು ಸ್ತಂಭಿಸುವುದು (ಸಕವೈ. ೨೪೦). [<ಸಂ. ಮಹತ್]

**ಮಹತಿ$_2$** (ನಾ). ೧. ಒಂದು ಬಗೆಯ ವೀಣೆ. ೨. ಏಳುತಂತಿಗಳುಳ್ಳ ನಾರದನ ವೀಣೆ : ಮಹತೀ–೧ ನಾರದನ ವೀಣೆ. ಅಧಿಕವಾದ್ದು ೨ (ಸಂಗೀತ. ೩೯೧) : ಸರಸ್ವತಿ 'ಕಚ್ಛಪಿ' ಎಂಬ ವೀಣೆಯನ್ನೂ ನಾರದರು 'ಮಹತೀ' ಎಂಬ ವೀಣೆಯನ್ನೂ ನುಡಿಸುತ್ತಿದ್ದರೆಂದು ಇತಿಹಾಸ ಪುರಾಣಗಳು ತಿಳಿಸುತ್ತವೆ (ಸಂಗೀತಂ. ೩೦೦). ೩. ಒಂದು ಬಗೆಯ ಸಸ್ಯ : ಹೆಗ್ಗುಳ್ಳದ ಗಿಡ.

[ಸಂ. ಮಹತೀ]

**ಮಹತೋಮಹೀಯ** (ನಾ). ಪೂಜ್ಯರಲ್ಲಿ ಪೂಜ್ಯನಾದವನು : ಸರ್ವ ಶ್ರೇಷ್ಠ: ಅವನೊಬ್ಬನಣೋರಣೀಯನದಾವನುರುಮಹತೋಮಹೀಯನು (ಶುಶ್ರಾ. ೬–೬೩) ; ಅಣೋರಣೀಯನ ಮಹತೋಮಹೀಯನ ಅಪ್ರಮೇಯನ ಅಡಿಸುವಳೆಸೋದೆ (ತುರಂಗ. ೮–೧೬೬–೨).

[ಸಂ. ಮಹತೋಮಹೀಯಸ್]

**ಮಹತ್ಕಾರ್ಯ** (ನಾ). ದೊಡ್ಡ ಕೆಲಸ ; ಭಾರಿಕಾರ್ಯ : ಅವನ ಮಹತ್ಕಾರ್ಯಗಳೆಲ್ಲವನ್ನೂ ಪಟ್ಟಿಮಾಡಿ ಹೇಳುವುದು ಸಾಧ್ಯವಿಲ್ಲ (ದೀಕಸ್ತ. ೨೯). [ಸಂ.]

**ಮಹತ್ತತ್ತ್ವ** (ನಾ). ೧. [ತತ್ತ್ವಶಾ] ಸಾಂಖ್ಯರು ಹೇಳಿರುವ ಇಪ್ಪತ್ತೈದು ಪದಾರ್ಥಗಳಲ್ಲಿ ಎರಡನೆಯದು ; ಮೂಲಪ್ರಕೃತಿಯಿಂದ ಹುಟ್ಟುವ ತತ್ತ್ವ : ತತ್ತ್ವನಿಪ ವಾಚ್ಯದಲಿ ಶಬಲತೆವೆತ್ತ ಬ್ರಹ್ಮದಲಾಯಿತ್ತು ಸದಸದ್ವ್ಯಕ್ತಿಯಾದವ್ಯಕ್ತವದೆಂದೀ ಮಹತ್ತತ್ತ್ವ (ಅಪ್ಯಕ. ೪–೧೦) ; ಅಹಂಕಾರತತ್ತ್ವಮುಂ ಮಹತ್ತತ್ತ್ವಮುಂ ಕೂಡಿ ಇರ್ಪತ್ತುಮೂಜುಂ ತತ್ವಂಗಳುಂ ಪ್ರಕೃತಿಯೊಳಡಂಗಿ (ಶಿಲಾ. ೧೧). ೨. [ವಿಶಿಷ್ಟಾ] ಇಪ್ಪತ್ತುದ್ರವ್ಯಗಳಲ್ಲಿ ಒಂದು : ಗುಣತ್ರಯ, ಮಹತ್ತತ್ತ್ವ, ಅಹಂಕಾರ . . . ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಹಿಂದಶಾ. ೨೭೩). [ಸಂ.]

**ಮಹತ್ತಮ** (ನಾ). ೧. ಅತ್ಯಧಿಕವಾದುದು : ಇದು ಚಕ್ರಯುಗಕ್ಕಗಲ್ಪಲಿಕ್ಕಿದ ಕಿಸುರ್ವಕ್ಕೆ ಕರ್ಪುಗೆಯೆನಿಪ್ಪಸಮಾಯಿತ್ತು ಮಹತ್ತಮಂ ತಮಂ (ಸಂಪ್ರಶು. ೮–೦೯). ೨. ಹಿರಿಯ : ಶ್ರೇಷ್ಠ : ಪ್ರತ್ಯಯವನಿನ್ನುಜಸಲೇಕೆ ಮಹತ್ತಮನವರ ಪುಣ್ಯನಾಮದ ಕೀರ್ತನದ ಮಹಾತ್ಮ್ಯವನು ದಿಟ ನೀವೆ ಕಂಡಿರಲ್ಲೆ (ಬಭಾಗ. ೬–೩–೩೦).

ಮಹತ್ತಮಸಾಮಾನ್ಯಅಪವರ್ತನ = [ಗಣಿತ] ಎರಡು ಅಥವಾ ಅಧಿಕ ದತ್ತಸಂಖ್ಯೆಗಳೆಲ್ಲವನ್ನೂ ಭಾಜಿಸತಕ್ಕ ಅತ್ಯಧಿಕ ಅಪವರ್ತನ : ಎರಡು ಅಥವಾ ಅಧಿಕ ದತ್ತಸಂಖ್ಯೆಗಳೆಲ್ಲವನ್ನೂ ಭಾಜಿಸತಕ್ಕ ಅತ್ಯಧಿಕ ಅಪವರ್ತನಕ್ಕೆ ಅವುಗಳ ಮಹತ್ತಮ ಸಾಮಾನ್ಯ ಅಪವರ್ತನ (ಮ.ಸಾ.ಅ.) ಎಂದು ಹೆಸರು (ಆಂಕಗ. I, ೩). [ಸಂ.]

**ಮಹತ್ತರ** (ಗು). ೧. ಅತಿಶಯವಾದ ; ಮಿಗಿಲಾದ : ವಾಕ್ಸೀಮೆಯಂ ದಾಂಟುತಾ ಮಹಾಕಾಂಕ್ಷೆಯ ಮಹತ್ತರಪ್ರಾರ್ಥನಾಹೃದಂ ದೀರ್ಘಭಾವ ಪ್ರವಾಹದ ಮೌನಮಾತ್ರದಲಿ ಪರಿಣಮಿಸಿದತ್ತು! (ಶ್ರೀರಾ. ೨೬–೨೦೦); ಪತಿಯ ಮಹತ್ತರ ಬದಲಾವಣೆ ಅವಳಿಗೊಂದು ದೊಡ್ಡ ಸಮಸ್ಯೆ (ಕಮ್ಮಟ. ೬೩). (ನಾ). ೨. ಹಿರಿದಾದುದು ; ಶ್ರೇಷ್ಠವಾದುದು : ದೇಶವ್ಯಾಪ್ತಿಯಿಂದ ಅಣು, ಮಹತ್, ಮಹತ್ತರ ಮೊದಲಾದ ವ್ಯವಹಾರಗಳು ಕೂಡುವುವು (ಹಿಂದಶಾ. ೮೦); ಅವರು ಸಾಧಿಸಿದ ಕಾರ್ಯ ಅತಿ ಮಹತ್ತರವಾದುದು (ಧರ್ಮಶಾ. ೦೩೯). ೩. ಗೌರವಕ್ಕೆ ಪಾತ್ರನಾದವನು ; ಶ್ರೇಷ್ಠ ; ಹಿರಿಯ : ಸುಮತಿಯೆಂಬ ಮಂತ್ರಿಮಹತ್ತರನಿಂತೆಂದಂ (ಶಾಂತಿಪು. ೩–೬೨ ವ) ; ಕೂಡೆ ಶಾಶಾಂಕಿಮಂದಿರದೊಳ್ ಪೂರ್ಣಸುಹೃತ್ತನೂಜ ಪರಿವಾರಂ ಸೌಖ್ಯಯುಕ್ತಂ ಮಹತ್ತರಂ . . . ಅಕ್ಕುಂ ನರಂ (ಜಾತಕ. ೦೬–೨೬). ೪. ಮುಖ್ಯಾಧಿಕಾರಿ ; ಹೆಗ್ಗಡೆ : 'ಮಹತ್ತರಿಕೆ$_1$' ಪರಾ.

[ಸಂ.]

**ಮಹತ್ತರದೇವಿ** (ನಾ). [ಜೈನ] ಹದಿನಾರು ಕಲ್ಪಗಳಲ್ಲಿದ್ದು, ಆಯಾ ವಿಮಾನಗಳಲ್ಲಿ ಹುಟ್ಟುವ ಭವ್ಯಜೀವಿಗಳಿಗೆ ತಿಳಿವಳಿಕೆಯನ್ನು ಕೊಡುವ ಹದಿನಾರು ಜನಸಾಮಾನಿಕದೇವತೆಯರಲ್ಲಿ ಪ್ರತಿಯೊಬ್ಬಳು : ಬಿಡುಮುತ್ತಿನ ಸೇಸೆಗಳುಂಬೆರಸು ಮಹತ್ತರದೇವಿಯರ್ ಬಂದು ಪೊಡೆವಟ್ಟು (ಆದಿಪು. ೩–೬೬ ವ). [ಸಂ. ಮಹತ್ತರದೇವೀ]

**ಮಹತ್ತರಿ** (ನಾ). ಆಶೀರ್ವಾದ, ಸ್ವಸ್ತಿವಾಚನಗಳನ್ನು ತಿಳಿದಿರುವ ವೃದ್ಧಸ್ತ್ರೀ : ಕೆಲರಂ ದೌವಾರಿಕಸ್ಥಾನದೊಳ್ ಕೆಲರಂ ಜಾಣ್ನುಡಿಯೊಳ್ ಮಹತ್ತರಿಯರಂ ಮಾದೇವಿಯಪ್ಪೈಸಿದಳ್ (ನಾಥಪು. ೬–೬೩).

[ಸಂ. ಮಹತ್ತರೀ]

**ಮಹತ್ತರಿಕೆ$_1$** (ನಾ). ಮುಖ್ಯಾಧಿಕಾರಿಯ ಪದವಿ ; ಹೆಗ್ಗಡೆತನ : ದಂಡನಾಯಕಂಭೂಪಾಲನನ್ನವುರ ಮಹತ್ತರಿಕೆಯ ಸಮ್ಮರಸಂ (ಶಾಸಕ. ೪೯–೦೩; 1164). [ಮಹತ್ತರ + –ಇಕೆ]

**ಮಹತ್ತರಿಕೆ$_2$** (ನಾ). = ಮಹತ್ತರದೇವಿ : ವಿಕಟಕೂಟಾಧೀಶೆಯರಪ್ಪ ರುಚಕೆರುಚಕಾಸ್ಯೆ ರುಚಕಾಂತೆರುಚಕಪ್ರಭೆಯೆಂಬೀ ನಾಲ್ವರುಂ ದಿಕ್ಕುಮಾರಿಕಾಮಹತ್ತರಿಕೆಯರುಮಂ ಧರ್ಮಾನುರಾಗದಿಂ ಸೌಧರ್ಮೇಂದ್ರಂ . . . ಮಹತ್ತರಿಯರಾಗಲು ಬೆಸಸುವುದುಂ (ಆದಿಪು. ೬–೩ ವ).

[ಸಂ. ಮಹತ್ತರಿಕಾ]

**ಮಹತ್ತು** (ಗು). ೧. ಹಿರಿಯದಾದ ; ಶ್ರೇಷ್ಠವಾದ. (ನಾ). ೨. ಹಿರಿದು ; ಶ್ರೇಷ್ಠವಾದುದು : ಅಣುವಿಂಗೆ ಅಣು ಮಹತ್ತಿಂಗೆ ಮಹತ್ತಾದ ಮಹಾಲಿಂಗದೊಳಗೆ ಶರಣನಿರ್ವನು (ಅಲಂದೇ. ೩೩೭-೪೭) ; ಮಹತ್ತು ಮಹತ್ತನ್ನು ಗುರುತಿಸುತ್ತದೆ (ಕೂಪ್ಮಕು. ೦೦೮). ೩. ಶಾಕ್ತ ಮತದ ಇಪ್ಪತ್ತುನಾಲ್ಕು ತತ್ವಗಳಲ್ಲಿ ಒಂದು : ಐದು ಭೂತಗಳು . . . ಅಹಂಕಾರ, ಮಹತ್ತು, ಮೂಲಪ್ರಕೃತಿ – ಇವೇ ಇಪ್ಪತ್ತನಾಲ್ಕು ತತ್ವಗಳು (ಶಾರದ. ೨೨೨). [ಸಂ. ಮಹತ್]

**ಮಹತ್ತ್ವ** (ನಾ). ೧. ಹಿರಿಮೆ ; ಘನತೆ ; ಶ್ರೇಷ್ಠತೆ : ಅಜಂಗಂ ಜನಕಂ ರಕ್ಷಕನಂತಕನೆನಿಸಿದೆ ಕೇಳ್ ಪೊಗಟ್ವರಳವೆ ನಿನ್ನ ಮಹತ್ತ್ವಂ (ಜಗಂ. ೩-೯೭). ೨. ಸಾಮರ್ಥ್ಯ. ೩. ಪ್ರಾಮುಖ್ಯತೆ : ಆ ಸಣ್ಣ ವಿಷಯಕ್ಕೆ ಯಾಕೆ ಮಹತ್ತ್ವ ಕೊಡಬೇಕು ? (ರೂಢಿ). [ಸಂ.]

**ಮಹತ್ಪಂಚಮೂಲ** (ನಾ). [ವೈದ್ಯಶಾ] ಬೆಲ್ಲವತ್ತ, ನರುವಲ, ಶಿವನಿ, ಪಾದರಿ ಮತ್ತು ಹೆಮ್ಮರ ಈ ಐದು ಬಗೆಯ ಮರಗಳ ಔಷಧೀಯ ಗುಣವುಳ್ಳ ಬೇರುಗಳು : ಬೆಲ್ಲವತ್ತದ ಬೇರು, ನರುವಲದ ಬೇರು, ಶಿವನಿಬೇರು, ಪಾದರಿಬೇರು ,ಹೆಮ್ಮರದ ಬೇರು ಇವು ಮಹತ್ಪಂಚಮೂಲ ವೆನಿಸಿಕೊಂಬುವು (ವೈದ್ಯಶಾ. I, ೩೩). 'ಮಹಾಪಂಚಮೂಲ' ಪರ್ಯಾ. [ಸಂ.]

**ಮಹತ್ವ** (ನಾ). ೧. = ಮಹತ್ತ್ವ ೧ : ವೇದೋಪನಿಷತ್‌ಕಾಲದ ಸಂಸ್ಕೃತಕ್ಕೂ ಅನಂತರದ ಸಂಸ್ಕೃತಕ್ಕೂ ಹೋಲಿಸಿದಾಗ, ಈ ಮಾತಿನ ಮಹತ್ವ ಮನವರಿಕೆಯಾಗುತ್ತದೆ (ದ್ರಾವಿಡ. ೯೩೩). ೨. ದೊಡ್ಡದು : ಹಿರಿದು : ನಾವೊಂದು ಮಹತ್ವದ ಕೆಲಸದಲ್ಲಿ ತೊಡಗಿದ್ದೇವೆ (ರೂಢಿ). ೩. = ಮಹತ್ತ್ವ ೨ : ದೇವತಾತ್ಮನಾದ ಸವಿತೃವಿನ ಸಂಚಾರಮಾರ್ಗವನ್ನೇ ಅನುಸರಿಸಿ ಇತರ ದೇವತೆಗಳೆಲ್ಲರೂ ಶಕ್ತಿಯೊಡಗೂಡಿದ ಮಹತ್ವವನ್ನು ಪಡೆಯುತ್ತಾರೆ (ಋಗ್ವೇ. ೦೭೦). ೪. ಪ್ರಾಮುಖ್ಯತೆ : ಅವರು ಅವಳ ಮಾತಿಗೆ ಹೆಚ್ಚಿನ ಮಹತ್ವ ಕೊಡಲಿಲ್ಲ (ಹಳ್ಳಿಹಾ. ೦೦೮). [<ಸಂ. ಮಹತ್ತ್ವ]

**ಮಹತ್ವತೆ** (ನಾ). ಹಿರಿಮೆ ; ಘನತೆ : ದೇವ ನಿಮ್ಮ ಮಹತ್ವತೆಯನಾ ದೇವದೇವನೆ ಬಲ್ಲನು (ಬಸವ. ೩೯-೭೨). [<ಸಂ. ಮಹತ್ತ್ವ ತಾ]

**ಮಹತ್ವಾಕಾಂಕ್ಷಿ** (ನಾ). ಹಿರಿದಾದ ಆಸೆಯುಳ್ಳವನು ; ಮಹತ್ತರವಾದ ಆಕಾಂಕ್ಷೆಯುಳ್ಳವನು : ಅವರನ್ನೆಲ್ಲಾ ನಾನು ಅರಿಯಬೇಕು ಎನ್ನುವಷ್ಟು ಮಹತ್ವಾಕಾಂಕ್ಷಿ ನಾನಲ್ಲ (ಮೂರುದಾ. ೨೭೧). [<ಸಂ. ಮಹತ್ತ್ವಾಕಾಂಕ್ಷಿನ್]

**ಮಹತ್ವಾಕಾಂಕ್ಷೆ** (ನಾ). ಮಹತ್ವಪೂರ್ಣವಾದ ಆಸೆ ; ದೊಡ್ಡ ಅಪೇಕ್ಷೆ : ನನ್ನ ಮಹತ್ವಾಕಾಂಕ್ಷೆಯು ಇಷ್ಟು ದೂರ ಎಂದೆಂದಿಗೂ ಓಡಲಾರದು (ವೃಶಿ. ೦೨). [< ಸಂ. ಮಹತ್ತ್ವಾಕಾಂಕ್ಷಾ]

**ಮಹದುದ್ಯಮ** (ನಾ). ೧. ದೊಡ್ಡ ಪ್ರಯತ್ನ ; ಮಹಾಯತ್ನ. ೨. ಮಹಾಸಾಹಸಿ ; ಮಹಾಪ್ರಯತ್ನಶೀಲ : ಆಕೆಯ ಸುತರು ಮಹದುದ್ಯಮರು (ಕುಮಾ.ಉ. ೬-೨೦). [ಸಂ.]

**ಮಹದ್ಬ್ರಹ್ಮಚರ್ಯ** (ನಾ). ೧. ಶ್ರೇಷ್ಠವಾದ ಬ್ರಹ್ಮಚರ್ಯ. ೨. [ಜೈನ] ಉಪಾಸಕಗುಣಸ್ಥಾನಗಳೆಂದು ಪ್ರಸಿದ್ಧವಾಗಿರುವ ಹನ್ನೊಂದು ಬಗೆಯ ಸಾಧನೆಗಳಲ್ಲಿ ಒಂದು : ಸಮ್ಯಕ್ತ್ವಂ ಸದ್ವ್ರತೌಘಂ . . . ಮಹದ್ಬ್ರಹ್ಮಚರ್ಯಂ . . . ಭೂಮ್ಯುದ್ದಿಷ್ಟಪ್ರದೇಶ ತ್ಯಜನಮುಖಿಪುದೇಕಾದಶಂ ಪೇಚರೇಂದ್ರಾ (ಶಾಂತಿಪು. ೭-೩೦). [ಸಂ.]

**ಮಹನವಮಿ** 'ಮಹಾನವಮಿ' ನೋ.

**ಮಹನೀಯ** (ಗು). ೧. ಗೌರವಕ್ಕೆ ಪಾತ್ರವಾದ : ಸುಪ್ರಸಿದ್ಧವಾದ : ಅಂತಮೇಯಮಹನೀಯಮಹಿಮನುಂ ಕುಂತಳರಾಜ್ಯಲಕ್ಷ್ಮೀಲತಾವಸಂತನುಂ . . . ಎನಿಸಿದ . . . ಮಧುವಪರಸಂ ನಿಜಜನಕನೆನಿಸಿದ (ಶಾಸ. ೫-೨-೦೯೨ ; 1058) ; ನಿನ್ನ ಮಹನೀಯಪ್ರಬಲಿತೋತ್ಸನ್ನನಿಜ ಗುರುಭಕ್ತಿಯುತಮಹಿಮೋನ್ನತಿಕೆಯನದಾರು ಬಲ್ಲರು (ಬಸವ. ೩೯-೭೭). (ನಾ). ೨. ಮನ್ನಣೆಗೆ ಪಾತ್ರನಾದವನು ; ಕೀರ್ತಿವಂತ. [ಸಂ.]

**ಮಹನೃಪತಿ** (ನಾ). ಮಹಾರಾಜ ; ದೊಡ್ಡ ಅರಸ : ಆ ನಾಚಿದಣ್ಣನಾಥನನೂನಗುಣಾ ಚಕ್ರವರ್ತ್ತಿ ದಯೆಯಿಂ ಬೆಸಸಲು ತಾನೇಯು[ಮಾ][ಮಹ]ನೃಪತಿಗೆ ಮಾನಸನೆನೆ ನಿಖಿಳಮಂತ್ರಿಪದಮಂ ತಳೆದ (ಎಪ. XXVIII, ೩೯-೨೯; 1082). [< ಸಂ. ಮಹಾನೃಪತಿ]

**ಮಹಬೂಬಿ** (ನಾ). ಒಂದು ಚಿನ್ನದ ನಾಣ್ಯ : "ಐದುಸಾವಿರ ಮಹಬೂಬಿ. ಕೊಡುವೆಯಾ ?" ಎಂದನು. (ಮಹಬೂಬಿ ಎಂದರೆ ಚಿನ್ನದ ನಾಣ್ಯ. ಸುಮಾರು ಹತ್ತು ರೂ. ಬಾಳುವುದು) (ದೇಶಾಂಕ. ೯೯).
[← ಅರ. ಹಿಂ. ಮಹಬೂಬಾ = ಪ್ರೇಯಸಿ]

**ಮಹಮನೆ** 'ಮಹಾಮನೆ' ನೋ.

**ಮಹಮೇರು** (ನಾ). ದೊಡ್ಡದಾದ ಮೇರುಪರ್ವತ ; ಮಹಾಮೇರು : ಅಂದು ಮಹಮೇರುಶೃಂಗದ ಕೆಳಗಣಂತರದೊಳೊಂದುಗುಹೆಯೊಳಗಿರ್ದು ಮಾತಾಡುತಿರೆ ಪಂಚಸುರವರರು ತಂತಮ್ಮೊಳು (ತುರಂಗ. ೯೩-೦೩). [< ಸಂ. ಮಹಾಮೇರು]

**ಮಹಮ್ಮದೀಯ** 'ಮುಹಮ್ಮದೀಯ' ನೋ.

**ಮಹರಾಜ** (ನಾ). ೧. ದೊಡ್ಡ ರಾಜ : (೪). ೨. ಅಡುಗೆಮಾಡುವವನು ; ಅಡುಗೆಭಟ್ಟ : ದೇಸಾಯರಿಗಾಗಿ ವಿಮಲೆಯು ಮಹರಾಜನನ್ನು ಕರೆದು ಅಡಿಗೆ ಮಾಡಿಸಿದಳು (ಸಮಾಜ. ೩೦೯).
[←ಹಿಂ. ಮಹರಾಜ್, ಮಹಾರಾಜ್. / ಸಂ. ಮಹಾರಾಜನ್]

**ಮಹರಾಯ** 'ಮಹಾರಾಯ' ನೋ.

**ಮಹರಾಯತಿ** 'ಮಹಾರಾಯಿತಿ' ನೋ.

**ಮಹರ್ಧಿಕ** (ನಾ). ತುಂಬ ಪ್ರಭಾವವುಳ್ಳವನು : ಭಾಸುರದೇವಕೋಟಿ ವಿಭುವಪ್ಪ ಮಹರ್ಧಿಕನಪ್ಪ ವಾಸವಂಗಾಸನಕಂಪಮಂ ಪಡೆದು (ಆದಿಪು. ೦೭-೬೦) ; ನಿಡಿಗನುಂ ರಾಜಕಪೋತಮುಂ . . . ಮುಡುಪಿ ಭವನಾಮರ ಲೋಕದೊಳ್ ಮಹರ್ಧಿಕರವರಾದರ್ (ಶಾಂತಿಪು. ೯-೯೯ ವ). [ಸಂ.]

**ಮಹರ್ಲೋಕ** (ನಾ). ಏಳು ಊರ್ಧ್ವಲೋಕಗಳಲ್ಲಿ ನಾಲ್ಕನೆಯದು : ಪರಮಜಂಗಮದಲ್ಲಿ ಹದಿನಾಲ್ಕುಲೋಕಂಗಳಡಂಗಿವವು. . . ವಕ್ಷದಲ್ಲಿ ಮಹರ್ಲೋಕ (ಅಲಂದೇ. ೦೯೨-೦೨೪). [ಸಂ.]

**ಮಹರ್ಷಿ** (ನಾ). ಶ್ರೇಷ್ಠನಾದ ಋಷಿ : ಮಹಾತಪಸ್ವಿ : ಶ್ರೀರಾಮ ಕಥೆಯಂ ಮಹರ್ಷಿ ನಾರದವೀಣೆಯಿಂ ಕೇಳ್ದು (ಶ್ರೀರಾಮಾ. ೧-೧); ಮಹರ್ಷಿಗಳ ಸಂದೇಶವನ್ನು ಲೋಕಕ್ಕೆ ಪ್ರಕಾಶಪಡಿಸುವವರಾದ್ದರಿಂದ ವ್ಯಾಖ್ಯಾಕಾರರ ಪ್ರಭಾವವೂ ಅತಿಶಯವಾದದ್ದೆ (ಋಗ್ವೇ. ೯೯ ಟೀಕು). [ಸಂ.]

**ಮಹಲ್** 'ಮಹಾಲು' ನೋ.

**ಮಹಲಕರಿ** 'ಮಹಾಲಕರಿ' ನೋ.

**ಮಹಲದಾರ** (ನಾ). ಮಹಲಿನ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವ ಅಧಿಕಾರಿ : ಜೋಪದಾರ, ಮಹಲದಾರ, ನಖೀಬ . . . ಸಂಗೀತಗಾರ ಮುಂತಾದವರು (ಮಹಾಮ. I, ೨೨೮) : ಒಂದು ದಿನ ಅಲಿಆದಿಲ್‌ಷಾಹನ ಮಹಲದಾರನು . . . ತಾನು ಬಂದಿರುವ ವಿಷಯವನ್ನು ಅರಸರಿಗೆ ಹೇಳಿ ಕಳುಹಿಸಿದನು (ಬಿಜ್ಜರು. ೧).
[ಮಹಲ್ (< ಮಹಾಲು) + – ದಾರ್]

**ಮಹಲು** 'ಮಹಾಲು' ನೋ.

**ಮಹವುರುಮೆ** (ನಾ). ಒಂದು ಬಗೆಯ ದೊಡ್ಡ ವಾದ್ಯ : ಸುಸ್ವರಪೂರಿತ ಮಹವುರುಮೆಗಳೆಚ್ಚರಿಸುವಾಗ (ಕೋಶತ. ೭-೦೭). [< ಮಹಾ + ಉರುಮೆ]

**ಮಹಸೂಲು** (ನಾ). ೧. ಕಂದಾಯ ; ತೆರಿಗೆ ; ಸುಂಕ : ಈ ಮಹಸೂಲಿನಲ್ಲಿ ಸ್ಥಳ ಖರ್ಚು ಹೋಗಲಾಗಿ ಬಾಕಿ . . . ವಸೂಲು ಮಾಡಿಕೊಂಡು (ಮಹಾಪಂ. II, ೬೬); ಸರಕುಗಳ ಮೇಲೆ ಸುಂಕ ತೆಗೆದುಕೊಳ್ಳಬೇಕೆಂಬ ಅರ್ಥವುಳ್ಳ ರೆವಿನ್ಯೂ—ಆಕ್ಟು (ಮಹಸೂಲು ಖಾತೆಯ ಸಂಬಂಧದ ಆಕ್ಟು) (ಇಂಗ್ಲಂಡ. ೨೦೬). ೨. ಜಮೀನಿನಿಂದ ಬರುವ ಆದಾಯ,—ಹುಟ್ಟುವಳಿ: ಕೋರುವಾಲನ್ನು ಗೌಡರಿಗೆ ಪಾಟ್ಟಿಸಿ ತನ್ನ ಪಾಲಿನ ಮಹಸೂಲಿನಲ್ಲಿ ಮಿತವ್ಯಯದಿಂದ ಜೀವನ ಸಾಗಿಸಿ ಮಾಯಪ್ಪ . . . ಖಾತೇದಾರನಾಗಿದ್ದ (ಮಲೆಮ. ೧೧೯). [←ಅರ. ಹಿಂ. ಮರಾ. ಮಹಸೂಲ್]

**ಮಹಸೂಲುದಾರ** (ನಾ). ಕಂದಾಯವನ್ನು ವಸೂಲು ಮಾಡುವವನು : (*). [ಮಹಸೂಲು + —ದಾರ,./ ಹಿಂ. ಮಹಸೂಲದಾರ್=ಕಂದಾಯವನ್ನು ತೆರುವವನು]

**ಮಹಳ, ಮಾಹಳ, ಮಾಳ್ಯ, ಮಾಳಯ** (ನಾ). ೧. ಭಾದ್ರಪದ ಕೃಷ್ಣಅಮಾವಾಸ್ಯೆ ಮತ್ತು ಅಂದು ಸರ್ವಪಿತೃಗಳಿಗೆ ಮಾಡುವ ಶ್ರಾದ್ಧ : "ಮಹಳ—ಮಹಾಲಯ = ಒಂದು ಪಿತೃಹಬ್ಬ" (ಶಬ್ದಕೋ. ೩೯) ; ಮಹಳದ ಪಕ್ಷದೊಳೊಂದುದಿವಸಂ . . . ಆಕಂಠೋಪ್ಪಂಬರ ಮುಂಡೊಯ್ಯನೆ ಪಾರ್ವಂ ಬಂದಾ ಕೂಡನ ಕೆಟಗೆ ಪಟ್ಟಿರ್ದಾಗಳ್ (ಕಂಕಕಂ. ೦೮೩-೨೩) ; ಎರ್ಮೆಯ ಪೋರಿಯನಿಕ್ಕಿದನೂರ್ವಾರಿಗೆ ಮತ್ತಮದನೆ ಮಹಳಕ್ಕಿತ್ತಂ (ಯಶೋಚ. ೩-೫೬). **ಮಾಹಳ** : ೧. ಮಾಹಳ ಪಿತೃಕಾರ್ಯಂ ಮೊದಲಾದ ನಿಮಿತ್ತಂಗಳಂ ಮಾಟ್ಪಲ್ಲಿ (ಶಬ್ದರ. ೪). ೨. ಅಮಾವಾಸ್ಯೆಯ ಸಮಯ (?) : ನೆಟಿಲೊಳ್ ತಲೆಗಾಣದೊಡಂ ನೆಟಿಲೊಳ್ ರೌ(ಧ)ದ್ರಂಗಳಾಗಿ ತೋಱುವೊಡಂ ಮಾಹಳವಲ್ಲದೆ ಕಂಡುವೊಡಂ ಕಟಿಯೆ ಕರಂ ರೂಪುಗೆಟ್ಟಿರಲ್ ಮರಣಭಯಂ (ಅಕ್ಷರಾ. ೬-೩೫). **ಮಾಳ್ಯ** : ೧. "ಮಾಳ-ಮಹಾಲಯ" (ಶಬ್ದಕೋ. ೩೫) ; ಸೂಳೆಯ ಮಗ ಮಾ[ಪಾಠಾಂ. ಮಹ]ಳವ ಮಾಡಿದರೆ ತಾಯ ಹೆಸರಾಯಿತಲ್ಲದೆ ತಂದೆಯ ಹೆಸರಿಲ್ಲ (ಬಸವ. ೨೨೬) : ಹಾರುವ ಮಾಳವ ಕಂಡಂತೆ . . . ತಾನು ಚನ್ನಬಸವಣ್ಣನ ಪಾದಕಮಲವ ನೋಡಿ ಹರುಷಿತನಾದೆ (ಸಿದ್ಧ.ಶ. ೨೦-೦೦೪) ; ಮರುಳುಹಾರುವರು . . . ಮಾಳದ ಮನೆಯ ಓರಿದು ಚೌಕದ ಮಣೆಯ ಕುಳಿತುಂಬ ವಿದ್ಯೆಯನ್ನರಿವಿರಲ್ಲದೆ ನಿಮಗೆ ತಿಳಿಯದೀ ಸಂಗರದ ಮಾತು (ತುರಂಗ. ೩೬-೦೩). **ಮಾಳಯ** : ೧. ಭಟನಲ್ತು ಭಟ್ಟಂ ; ಕೊಂದುದು ಬಿಲ್ಲಲ್ತು ಪುಲ್ ; ಬಂದುದು ಕಾಳೆಗದ ಮೊನೆಗಲ್ತು ಮಾಳಯದ ಮನೆಗೆಂದಂ (ರಾಮಾಶ್ವ. ೧೨-೦೬). [< ಸಂ. ಮಹಾಲಯ]

**ಮಹಳಪಕ್ಷ, ಮಾಳಪಕ್ಷ** (ನಾ). ಭಾದ್ರಪದ ಬಹುಳಪಕ್ಷ,— ಕೃಷ್ಣಪಕ್ಷ: ಮುನ್ನಮೆ ಸತ್ತರಂ ಪಿತರ ಪಿತಾಮಹರ್ಕಳೆಂದವರ್ಗೆ ಮಹಳ [ಪಾಠಾಂ. ಮಹಾ] ಪಕ್ಷದೊಳ್ಪಂಚಭಕ್ಷ್ಯ ಪಾಯಸತುಪ್ಪಮಂ ಪೆಱಗಿರ್ಕೆ ಸ್ವರ್ಗಮಾದನೇಕ ಗತಿಗಳೊಳಿರ್ದ ಪಿತಾಮಹಾಪಿತರ್ಕಳ ಬಸಿರ್ತೀವಲಕ್ಕು ಗಡಂ (ಧರ್ಮಾಶ. ೯-೬೨ ವ) ; ಬೌದ್ಧಂ . . . ಯಜ್ಞವಿಧಿಯೊಳಂ ಮಹಳಪಕ್ಷದೊಳಂ ಪಿತೃಕಾರ್ಯದೊಳಂ ವಿವಾಹೋತ್ಸವದೊಳಂ ಪಶು ಮೊದಲಾಗೊಡೆಯ ಪ್ರಾಣಿಗಳಂ ಕೊಂದವಶ್ಯಂ ತಿನಲಕ್ಕುಂ (ರಕ್ಷಾ. ೦-೦೦ ವ). **ಮಾಳಪಕ್ಷ** : ಭಾದ್ರಪದಕೃಷ್ಣಪಕ್ಷವನ್ನು 'ಮಾಳಪಕ್ಷ' ಎಂದು ಕರೆಯುವರು (ಹುಬ್ಬ.ಹ. ೬೨).
[ಮಹಳ + ಪಕ್ಷ]

**ಮಹಾ** (ಗು). ೧. ದೊಡ್ಡ ; ಹಿರಿಯ : 'ಮಹಾಪರಿಷೆ', 'ಮಹಾಮಂಗಳಾರತಿ' ಪರಾ. ೨. ಶ್ರೇಷ್ಠ ; ಉತ್ಕೃಷ್ಟ : 'ಮಹಾಪಾರುವ' ಪರಾ. ೩. ಸಮೃದ್ಧವಾದ ; ಹೆಚ್ಚಾದ : 'ಮಹಾಬೆಳಗು' ಪರಾ. (ನಾ). ೪. ದೊಡ್ಡದು ; ಮಹತ್ತ್ವವಾದುದು : ಇದೇನು ಮಹಾ ! ಅಷ್ಟು ಹೋಗುವುದಕ್ಕೆ ಆಗದಿದ್ದರೆ ನಾನೇ ಹೋಗುತ್ತೇನೆ (ಕಂಠಾಪು. ೦); ಅದೇನು ಮಹಾ ! ಯಾರು ಬೇಕಾದರೂ ಆ ಕೆಲಸವನ್ನು ಮಾಡಬಹುದು (ರೂಢಿ). ೫. ಬಹಳ ; ತುಂಬ ; ಹೆಚ್ಚು : P ಈ ರೂಪವು ಕೆಲವು ಸಲ ಕನ್ನಡಶಬ್ದಗಳೊಡನೆ ಕೂಡಿದಾಗ ಅವ್ಯಯದಂತೆ ಪ್ರಯೋಗವಾಗುತ್ತದೆ : ತಾನು ಮಹಾ ತಿಳಿದವಳು ಅಂತ ಅವಳು ಅಂದುಕೊಂಡಿದ್ದಾಳೆ (ರೂಢಿ). ೬. ದೊಡ್ಡ ಮನುಷ್ಯ ; ಶ್ರೇಷ್ಠ ವ್ಯಕ್ತಿ : ಅವನು . . . ಮೇಷ್ಟರುಗಳಿಗೆ ಕಾಕಹೊಡೆದು ಪ್ರಶ್ನೆಗಳನ್ನೆಲ್ಲ ಮೊದಲೇ ತಿಳಿದುಕೊಂಡು ಬಿಟ್ಟು ಮಹಾ ಅಂತ ನಮ್ಮೆದುರಿಗೆಲ್ಲ ಜಂಬ ಮಾಡ್ತಾನೆ (ಶ್ಯಾಮಸ್ವೀ. ೪). P ಸಂಸ್ಕೃತದ 'ಮಹತ್' ಎಂಬ ಶಬ್ದವು ಸಮಾಸಗಳ ಮೊದಲಲ್ಲಿ ಕೆಲವು ಸಲ 'ಮಹಾ' ಎಂಬ ರೂಪವನ್ನು ಹೊಂದುತ್ತದೆ.
[< ಸಂ. ಮಹತ್]

**ಮಹಾಂಗ** (ನಾ). ೧. ಒಂಟೆ : "ಉಷ್ಟ್ರಃ . . . ಮಹಾಂಗಃ ಒಂಟೆಯ ಹೆಸರುಗಳು" (ಸಿದ್ಧಾಂತಿ. ೨೯೬). ೨. ಒಂದು ಬಗೆಯ ಇಲಿ. ೩. ಶಿವನ ಒಂದು ಹೆಸರು. [ಸಂ.]

**ಮಹಾಂತ** (ಗು). ೧. ಅಧಿಕವಾದ ; ಹೆಚ್ಚಿನ ; ಅತಿಶಯವಾದ : ಅಭಿಮನ್ಯು ಮಹಾಂತಪರಾಕ್ರಮದಿ . . . ಸೂರೆಗೊಂಡೆನು ನಿಮ್ಮ ಪಾರ್ಥದಿ ದುರ್ಗವ ಪೌರುಷವ ನೋಡೆಂದಾ (ಅಭಿಕ. ೯). ೨. ವಿಶಾಲವಾದ ; ವಿಸ್ತಾರವಾದ : ಅಂತಹೀನಮಹಾಂತಸಂತತಮವಿಶ್ರಾಂತ ಜಲಧಿಯ ಬೃಹನ್ನೀಲಿಮಾವಿರಾಡ್‌ರಂಗದೊಳ್ . . . ಗಿರಿಯ ಪಂಕ್ತಿಗಳ್ ಪರ್ವಿದುವು (ಶ್ರೀರಾಮಾ. ೦೪೦-೪೨೪). (ನಾ). ೩. ವಿಶಾಲವಾದುದು : ವಿಸ್ತಾರವಾದುದು : ನಿಶ್ಚಲಮುಂ ಮಹಾಂತಮುಮಮಗಾಹಿತ ಸಮಸ್ತಪದಾರ್ಥಮುಮಾದ ಗಗನಮಂಡಲಮಂ . . . ನೋಡುತ್ತಿರ್ಪನ್ನೆಗಂ (ಕಂದ್ರಶ. ೯-೪ ವ). ೪. ಹೇರಳ ; ಯಥೇಚ್ಛ ; ಸಮೃದ್ಧಿ : ಧೃತರಾಷ್ಟ್ರನ ಮಹಾಂತವಾದ ಭೋಗವನ್ನು ನೋಡು. ನಮ್ಮ ಬದುಕನ್ನೂ ನೋಡು (ಶೀಕ್ಷ.ಶ. ೦೪೫). ೫. ಮಹಾತ್ಮ ; ಶ್ರೇಷ್ಠ ; ಪೂಜ್ಯವ್ಯಕ್ತಿ : ಇದು ಕಾರಣ ಗುಹೇಶ್ವರಲಿಂಗವ ತನ್ನೊಳಱಿದೆನೆಂಬ ಮಹಾಂ[ಪಾಠಾಂ. ಹಂ]ತಂಗೆ ಸತ್ಕ್ರಿಯಾಚರಣೆಯೇ ಸಾಧನೆ ಕಾಣ ಭೋ (ಅವತಂ. ೧೬೯-೬೬೧) ; ಕೇಶಿರಾಜಯ್ಯಂ ಮಹಾಂತನು ಮಾದಿರಾಜಯ್ಯಂ ಮೊದಲೆನಿಪ್ಪ ಕಟಕದೊಳಗಿರುತಮಿಹ ಸರ್ವಲಿಂಗವಂತರು . . . ಬರೆ (ಬಸಪು. ೬೦-೯) ; ಎನ್ನಯ ಭಾಗ್ಯವೇ ತನುವ ಪಡೆದಂತೆ ಕೈಕೊಂಡವೊಲು ಬಂದೆ ಮಹಾಂತ (ಶಿಲಾಗ. ೪-೬-೩೬). [<ಸಂ. ಮಹತ್]

**ಮಹಾಂತು** (ನಾ). ಅತ್ಯಂತ ಶ್ರೇಷ್ಠವಾದುದು : ನಾದಬಿಂದುಕಳಾತೀತವಾದ ಪರವಸ್ತುವೆ ಮಹಾಂತು ನೋಡಾ ಶ್ರುತಿತತಿಗಸಾಧ್ಯವಾದ ಪರವಸ್ತುವೆ ಮಹಾಂತು ನೋಡಾ (ಅಲಂದೇ. ೩೦೦-೬೬). [<ಮಹಾಂತ]

**ಮಹಾಂಧಕಾರ** (ನಾ). ಕಗ್ಗತ್ತಲೆ ; ಗಾಢಾಂಧಕಾರ : ಕಲ್ಪಾಂತದಲಿ ಬಿಡಬಿರಿದುದೀ ಬ್ರಹ್ಮಾಂಡ . . . ಇನಶಶಿಕಿರಣವಿಲ್ಲ ಮಹಾಂಧಕಾರ ಸಭಾರವಾಯ್ತು (ಕುಮಾರ. ೦೪-೨೨) ; ದಿಕ್ಚಕ್ರದೋಳ್ ಕಾಳಾಭೀಳಮಹಾಂಧಕಾರವೆಸೆಗುಂ ಕಣ್ಣಾಲ್ಗೆ ತಾವೀಯದೇ (ಹಮ್ಮೀರ. ೩-೦೬). [ಸಂ.]

**ಮಹಾಂಬುಜ** (ನಾ). ೧. ಒಂದು ನರಕದ ಹೆಸರು : ರೌರವ ಧ್ವಾಂತ . . . ಮಹಾಂಬುಜ ಕಾಲಸೂತ್ರಗಳೆಂಬವೇ ಎಂಟು ನರಕಂಗಳು (ಶಿವೇಶ. ೧೬೯). ೨. [ಗಣಿತ] ಒಂದು ದೊಡ್ಡ ಸಂಖ್ಯೆ ; ಒಂದು ಲಕ್ಷಕೋಟಿ. [ಸಂ.]

**ಮಹಾಕಂದ** (ನಾ). ಬೆಳ್ಳುಳ್ಳಿ, ಹಸಿಶುಂಠಿ ಮುಂತಾದ ಗಡ್ಡೆ ಮತ್ತು ಅದರ ಸಸ್ಯ : "ಮಹಿಷೀಕಂದಃ—ಮಹಾಕಂದ" (೬೫೦. ೦೨೨). [ಸಂ.]

**ಮಹಾಕಲ್ಪ** (ನಾ). ೧. ಅತಿದೀರ್ಘವಾದ ಒಂದು ಕಾಲಚಕ್ರ ; ಬ್ರಹ್ಮನ ಆಯುಸ್ಸಿನ ನೂರು ವರ್ಷಗಳಷ್ಟು ಕಾಲ. ೨. ಶಿವನ ಹೆಸರುಗಳಲ್ಲಿ ಒಂದು. ೩. [ದ್ವೈತ] ಸೃಷ್ಟಿಕಾಲದ ಒಂದು ಭಾಗ ; ಅಣುವಿನಿಂದ ಹಿಡಿದು ಮಹತ್ತಿನ ವರೆಗೆ ಸೃಷ್ಟಿಸುವ ಕಾಲ : ಸೃಷ್ಟಿ

ಕಾಲದಲ್ಲಿ ಮಹಾಕಲ್ಪ ಮತ್ತು ಬ್ರಹ್ಮಕಲ್ಪವೆಂದು ಎರಡುವಿಧ. ಮಹದಾದಿ ಅಂಡಪರ್ಯಂತ ಸೃಷ್ಟಿಕಾಲವು ಮಹಾಕಲ್ಪ (ಹಿಂರಶಾ. ೨೬೪). 'ಬ್ರಹ್ಮಕಲ್ಪ' ಪರಾ. [ಸಂ.]

**ಮಹಾಕಲ್ಯಾಣ** (ನಾ). ೧. ಅತ್ಯಂತ ಮಂಗಳಕರವಾದುದು.– ಶುಭಕರವಾದುದು. ೨. [ಜೈನ] ಜಿನಶಿಶುವು ಭೂಮಿಯಲ್ಲಿ ಹುಟ್ಟಿದಾಗಿನಿಂದ ನಿರ್ವಾಣ ಹೊಂದುವವರೆಗೆ ಆತನ ಜೀವನದಲ್ಲಿ ನಡೆಸುವ ಐದು ಬಗೆಯ ಮಂಗಳಕರವಾದ ಉತ್ಸವಗಳಲ್ಲಿ ಪ್ರತಿಯೊಂದು : ಚತುರ್ವಿಧದೇವನಿಕಾಯಂ. ಪುರುದೇವಪರಿನಿರ್ವಾಣಮಹಾಕಲ್ಯಾಣಪೂಜಾನಿರ್ವರ್ತನಾಭಿಲಾಷಿಯಾಗಿ . . . ಅರ್ಚಿಸಿ (ಆದಿಪು. ೧೬–೩೦ ವ). 'ಪಂಚಕಲ್ಯಾಣ' ಪರಾ. [ಸಂ.]

**ಮಹಾಕವಿ** (ನಾ). ಮಹಾಕಾವ್ಯವನ್ನು ರಚಿಸಿದವನು : ಸಜ್ಜನಮಾನ್ಯಂ ಸುಭಗಂ ಮಹಾಕವಿ . . . ಮೃಗಪೋದ್ಭವಂ (ಶಾಶಂ. ೧೬–೮೦) : ಬಹುಶಾಸ್ತ್ರಪ್ರಜ್ಞನಪ್ಪ ಮಹಾಕವಿಯುಂ ಕಂಡೊಡೆ ದಗ್ಧವಾಣಿಯವನೆಂದಿಂ ತಾರ್ದು ಹಾಸ್ಯೋಕ್ತಿಯಿಂ ಕವಿಗಳ್ ವರ್ತಿಪರಲ್ಲದಾವ ಬೊಜಿ ಮುಟ್ಟಿಂದೆಂತವರ್ ವರ್ತಿಪರ್ (ಸೂಕ್ತಿಸು. ೧–೩೭); ಅವನು ಉಳಿದೆಲ್ಲ ವಿಷಯಗಳಲ್ಲಿ ಮಹಾಮನಸೂ ಮಹಾಕವಿಯೂ ಆಗಿ ಈ ವಿಷಯದಲ್ಲಿ ಅಸಹನೆ, ಅಸೂಯೆ, ಆಕ್ರೋಶಗಳನ್ನು ತೋರಿದ್ದರೆ ಅದು ಅವನ ಅಧಃಪಾತವಾಗದೇ ? (ತಮ. ೨೨). [ಸಂ.]

**ಮಹಾಕಾಯ** (ಗು). ೧. ಭಾರಿದೇಹವುಳ್ಳ; ದೊಡ್ಡ ಶರೀರದ : ಅನುಕಂಪ್ಯರೂಪ್ಯ ಕನಕಾಂಬರರತ್ನಾಭರಣಭಾರಧಾರಣಧೌರೇಯಮಹಾಕಾಯವೈಪಧಿಕನಿಕರಮುಮಂ . . . ಬರಿಸಿ ಕುಳ್ಳಿರಿಸಿ (ಚಂದ್ರಪು. ೩–೮೩ ವ). (ನಾ). ೨. ದೊಡ್ಡ ಶರೀರವುಳ್ಳುದು : ಹಿತಾಹಿತವಿವೇಕವಿಕಳತೆಯಿಂ ತಮ್ಮಂ ತಾಮೆ ಕಟ್ಟಿಸಿಕೊಳ್ವ ಮಹಾಕಾಯಂಗಳಪ್ಪ ಕರಿಪತಿಗಳಿಂದಂ (ಆದಿಪು. ೨–೧೧ ವ); ಅನುಪಮಬಲಂ ಮಹಾಕಾಯನೆನಗೆ ಪಿರಿದುಂ ಸಹಾಯನೆಂದೇನಾನುಂ ಮನದೊಳ್ ನೆನೆವೈ (ಶಂಶತಂ. ೧೧೦–೯). ೩. ದೊಡ್ಡ ಶರೀರವುಳ್ಳವನು. ೪. ಆನೆ : ಗಜ. ೫. ಈಶ್ವರನ ಅನುಚರರಲ್ಲಿ ಒಬ್ಬ : ನಂದಿ. [ಸಂ.]

**ಮಹಾಕಾರ್ಪಾಸಚೂರ್ಣ** (ನಾ). ಹುರಿದ ಹತ್ತಿಯ ಕಾಳು ಮೊದಲಾದುವುಗಳಿಂದ ಮಾಡುವ ಒಂದು ಬಗೆಯ ಚೂರ್ಣ : ಹುರಿದ ಹತ್ತಿಪರಳೆ ಬೀಜ ಗ ೩ ತೂಕ . . . ಮಾದಳದ ಹಣ್ಣಿನ ಕೇಸರ ಗ ೧ ತೂಕ. ಸಹ ಚೂರ್ಣಂ ಮಾಡಿ . . . ಸೇವಿಸಲು ಪೈತ್ಯರೋಗ . . . ಅತಿಸಾರ ಮುಂತಾದ ಸಕಲರೋಗವೂ ಗುಣಮಕ್ಕುಂ (ಸಳವೈ. ೧೯೫). [ಸಂ.]

**ಮಹಾಕಾಲ.** ಮಹಾಕಾಳ (ನಾ). ೧. ಶಿವನ ರೂಪಗಳಲ್ಲಿ ಒಂದು: ಲಯಕಾರಕನಾದ ಶಿವ : "ಅಷ್ಟಮೂರ್ತಿಃ, ಅಹಿರ್ಬುಧ್ನಃ, ಮಹಾಕಾಲಃ . . . ಅಗ್ನಿಲೋಚನಃ–೧೨ ಶಿವನ ಹೆಸರುಗಳು" (ಚಿತ್ರಂ೦೨. ೧೯). ೨. ಶಿವನ ಪ್ರಮಥಗಣದಲ್ಲಿ ಒಂದು ವರ್ಗ ಮತ್ತು ಆ ವರ್ಗಕ್ಕೆ ಸೇರಿದವನು. ೩. ಅತ್ಯಧಿಕವಾದ ಕಪ್ಪುಬಣ್ಣ. ೪. ಸೂರ್ಯನು ಕಾಣದಂತೆ ಮೋಡ ಮುಚ್ಚಿಕೊಂಡಿರುವ ದಿನ; ದುರ್ದಿನ. ೫. ಕಟುಹೃದಯವುಳ್ಳವನು; ಕ್ರೂರಿ. ೬. ಒಂದು ಬಗೆಯ ಮರ: ಗೇರು: ಭಲ್ಲಾತಕ. ೭. ವಿಷದ ಹಣ್ಣುಗಳನ್ನು ಬಿಡುವ ಒಂದು ಬಗೆಯ ಮರ ; ಕಿಂಪಾಕ ; ಕಾಂಜೀರ : "ಭಲ್ಲಾತಕಂ ದುರ್ದಿನಂ ಶಿವನುಂ ತತ್ಪ್ರಮಥಾದಿಭೇದಮುಸಿತಂ ಕ್ರೂರಂ ಮಹಾಕಾಲ[ಶಾಶಾಂ. ೪]ಮಕ್ಕುಂ" (ನಾನಾರ. ೯೮). ೮. ಉಜ್ಜಯಿನೀಕ್ಷೇತ್ರದಲ್ಲಿರುವ ಪ್ರಸಿದ್ಧವಾದ ದ್ವಾದಶಜ್ಯೋತಿರ್ಲಿಂಗಗಳಲ್ಲಿ ಒಂದು : ಉಜ್ಜಯಿನಿಯ ಮಹಾಕಾಲ ದೇವಸ್ಥಾನದಲ್ಲಿ. ನರ್ತಕಿಯಿದ್ದ ವಿಷಯವನ್ನು ಕಾಳಿದಾಸನು ನಿರೂಪಿಸುತ್ತಾನೆ (೪ಶಾ. ೦೬೦). ೯. ವಿಷ್ಣುವಿನ ಹೆಸರುಗಳಲ್ಲಿ ಒಂದು. ೧೦. ಈಶ್ವರನ ಅನುಚರರಲ್ಲಿ ಒಬ್ಬ: ನಂದಿ. ೧೧. "ಭೂತ. ವರ್ತಮಾನ, ಭವಿಷ್ಯತ್ ಎಂಬ ವಿಭಾಗವಿಲ್ಲದ ಅವಿಚ್ಛಿನ್ನಕಾಲ" (ತನ್ಮಪ. ೪. ೩೩೬) : ಮಹಾಕಾಲದಲ್ಲಿ ನಿಮ್ಮಿಂದ ನೀವೆ ಸ್ವಯಂಭುವಾಗಿರ್ದಿರಯ್ಯಾ ಒಂದನಂತಕಾಲ (ತನ್ಮಪ. ೪. ೭–೦೨).

**ಮಹಾಕಾಳ :** ೧. "ಪಶುಪತಿ ಪ್ರಮಥರ್ ಕಪ್ಪುಂ ಸಸಿನದಿ ಗೇರ್ ಕ್ರೂರರೈದು ಮಹಾಕಾಳಂ" (ನಾನಾಶಂ. ೦೨೩). ೨. ಪಾತೂಲಾಗಮವನೇ ಮೊದಲು ಶಿವರುದ್ರನು ಮತ್ತಮನಿಂ ಮಹಾಕಾಳನೆಂದಿದಂ (ಎಪೇಳ. ೩೪); ಪೊಡೆಯುತ್ತುಂ ಪೇತ್ರದಿಂದಿಟ್ಟಣಿಸ ದನುಜರಂ . . . ಗೀತನೃತ್ತಕ್ಕೆಡೆಯಪ್ಪಂತಲ್ಲಿ ಕೋಲಾಹಲಮನುಡುಗಿಸುತ್ತುಂ ಮಹಾಕಾಳನಿರ್ದಂ (ರಾಜಶೇ. ೦೪–೦೬೩). ೩. ಎರಡುಂ ಭಾಗದೊಳಿರ್ದ ಮಹಾಕಾಳರೂಪಮಂ ನಿಂದು ನೋಡುತ್ತುಂ (ಶಾಂತಿಪು. ೩–೧೯ ವ). ೮. "ಕಿಂಪಾಕಃ, ಮಹಾಕಾಳಃ–ಈ ೨ ಕಾಂಜೀರಂ" (ಹಲಾಯು. ೩೪–೩೦). ೧೨. ಕಗ್ಗತ್ತಲೆ; ಗಾಢಾಂಧಕಾರ : ಭೂತಗಣದ ಮೇಳದಲ್ಲಿ ಮಹಾಕಾಳದಾಳದಲ್ಲಿ ಸತಿಪತಿಯರ ಜೋಡಿಯೊಂದು ಕುಣಿಯುವುದನು ಕಂಡಿತು (ಗಾ. ೦೦೫–೬). ೧೩. ಆಗಮಗಳಲ್ಲಿ ಒಂದು : ಕಾಲದಹನರೌರವೋತ್ತರಕೌಮಾರ ಕಾಳ ಮಹಾಕಾಳ ಇಂದ್ರಾಗಮಮೆಂದು ರೌರವಾಗಮದಾಬ್ಭೇದಂಗಳು (ಎಪೇಳ. ೬೬). ೧೪. [ಜೈನ] ಚಕ್ರವರ್ತಿಯ ಬಳಿಯಿರುವ ನವನಿಧಿಗಳಲ್ಲಿ ಒಂದು : ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಆದಿಪು. ೦೫–೩ ವ) : ಕಾಳ ಮಹಾಕಾಳ . . . ಶಂಖ ಸರ್ವರತ್ನಂಗಳೆಂಬೊಂಬತ್ತು ನಿಧಿಗಳುಮನನುಕ್ರಮದೊಳರ್ಚಿಸಿ (ಚಂದ್ರಪು. ೩–೧೧೧ ವ). [ಸಂ.]

**ಮಹಾಕಾಲಿ.** ಮಹಾಕಾಳಿ (ನಾ). ೧. ಆದಿಶಕ್ತಿಯ ರೂಪಗಳಲ್ಲಿ ಒಂದು; ದುರ್ಗೆ. ೨. [ಜೈನ] ಹದಿನಾರು ಜನ ವಿದ್ಯಾದೇವತೆಗಳಲ್ಲಿ ಒಬ್ಬಳು. **ಮಹಾಕಾಳಿ :** ೧. ಮಹಾಕಾಳಿಯೆಂಬ ಶಕ್ತಿಸಮ್ಮೇಳನದಿಂ . . . ಈಶಾನ್ಯದ ಬಾಗಿಲಲ್ಲಿ ಸಂಹಾರಭೈರವನಿರ್ದಂ (ಎಪೇಳ. ೨೩೪); ಲಲಿನೆಯುರ ಮೃದುವಾದ ಕೈಬೆರಳುಗಳನ್ನು ಕತ್ತರಿಸಿ . . . ಹೊತ್ತು ಬರುತ್ತಿರುವ ಮಹಾಕಾಳಿಯೆಂದು ವರ್ಣಿಸುತ್ತಿದ್ದರೋ ಏನೋ (ಹಸುಹೂ. ೩೯೫). [ಸಂ. ಮಹಾಕಾಲೀ]

**ಮಹಾಕಾವ್ಯ** (ನಾ). ೧. ಶ್ರೇಷ್ಠವಾದ ಕಾವ್ಯ : ವ್ಯಾಸ ವಾಲ್ಮೀಕಿ ಕಶ್ಯಪಪ್ರಭೃತಿವಿರಚಿತಂಗಳಪ್ಪ ಮಹಾಕಾವ್ಯಂಗಳೊಳಂ . . . ವಿವಿಧಾಯುಧಂಗಳೊಳಮತಿಪ್ರವೀಣ[ನು]ಂ . . . ಆಗಿ (ಶಂಶಭಾ. ೨–೩೪ ವ) ; ಮಹಾಕಾವ್ಯಕ್ಕೆ ಒಪ್ಪುವ ಘನವಾದ ಘಟನೆಗಳೇ ರಾಮಾಯಣದ ಕಥಾವಸ್ತುವಾಗಿದೆ (ಶಾರದ. ೬೬) ; ಮಹಾಕಾವ್ಯ – ೫ : ಕಾಳಿದಾಸನ ರಘುವಂಶ ಮತ್ತು ಕುಮಾರಸಂಭವ, ಭಾರವಿಯ ಕಿರಾತಾರ್ಜುನೀಯ, ಮಾಘನ ಶಿಶುಪಾಲವಧ, ಶ್ರೀಹರ್ಷನ ನೈಷಧಚರಿತ (ಶ್ರೀವತ. ೩೨೫). ೨. ಅಷ್ಟಾದಶ ವರ್ಣನೆಗಳಿಂದ ಕೂಡಿರುವ ಕಾವ್ಯ; P ಆಧುನಿಕವಿಮರ್ಶಕರು ವಿಶ್ವದ ಮಹಾಕಾವ್ಯಗಳನ್ನು ಅಭ್ಯಾಸಮಾಡಿ ಅಂತಹ ಕಾವ್ಯರೀತಿಯನ್ನು ಬೇರೆಯ ರೀತಿಯಲ್ಲಿ ವಿವರಿಸುತ್ತಾರೆ. EPIC ಎಂಬ ಹೆಸರುಳ್ಳ ಅಂತಹ ಕಾವ್ಯದಲ್ಲಿ ಸಾಹಸಮಯವಾದ ಕ್ರಿಯೆಯೂ ವ್ಯಕ್ತಿಗಳೂ ತದ್ಯುಕ್ತವಾದ ಭಾಷಾಪ್ರಯೋಗವೂ ದೀರ್ಘಕಥೆಯೂ ಇದ್ದು, ಅವರ ಆವರಣ ಪ್ರಾಚೀನವಾದುದಾಗಿರಬೇಕು. ಉದ್ದೇಶ ಉದಾತ್ತವಾಗಿಯೂ ವಸ್ತುಸಂವಿಧಾನವು ಸರಳವಾಗಿಯೂ ಇದ್ದು, ಪೌರಾಣಿಕ ಸಾಂಪ್ರದಾಯಿಕ ವಿವರಣೆಗಳು ತುಂಬಿರಬೇಕು. ಧೀರೋದಾತ್ತನಾಯಕನಿದ್ದು, ಅವನಿಗೆ ಅತಿಮಾನವ ದೈಹಿಕಶಕ್ತಿಯೋ, ಶೀಲಸ್ವಭಾವವೋ ಮಾನಸಿಕ

ಉದಾತ್ತತೆಯೋ ಪ್ರಕೃತಿಸಿದ್ಧವಾಗಿರಬೇಕು. ಕಥೆಯಲ್ಲಿ ಅತಿ ಭೌತಿಕಪ್ರಭಾವಗಳು ಕ್ರಿಯಾಮುಖವಾಗಿರಬೇಕು. ಇಲಿಯಡ್, ಒಡಿಸ್ಸಿ, ಆಯಾವತ, ಪ್ಯಾರಡೈಸ್ ಲಾಸ್ಟ್ ಮುಂತಾದ ಕಾವ್ಯಗಳು ಈ ರೀತಿಯಲ್ಲಿ ಪ್ರಸಿದ್ಧವಾಗಿವೆ. ಕನ್ನಡದಲ್ಲಿ ಶ್ರೀರಾಮಾಯಣ ದರ್ಶನಂ, ಭಾರತಸಿಂಧುರಶ್ಮಿ ಮೊದಲಾದುವುಗಳನ್ನು ಈ ದೃಷ್ಟಿಯುಲ್ಲಿ ಪರಿಶೀಲಿಸಬಹುದು : ಕೀರ್ತಿ ನೆಗಟ್ಬಂತೀ ಲೋಕದೊಳ್ ಬಲ್ಮೆ ರಂಜಿಸೆ ಬಲ್ಲರ್ಗೆಡೆಗೊಂಡು ಬಣ್ಣಿಸೆ ಮಹಾಕಾವ್ಯಂಗಳೊಳ್ ಮೆಟ್ಟಿ ಬಣ್ಣಸುವೆಂ ಪುಣ್ಯಪುರಾಣಮಂ ಜತಮನೋಜಾತಾಜಿತಸ್ವಾಮಿಯಾ (ಅಜಿಪು. ೦-೯೬). 'ಅಷ್ಟಾದಶವರ್ಣನೆ' ಪರಾ. [ಸಂ.]

**ಮಹಾಕಾಳ** 'ಮಹಾಕಾಲ' ನೋ.

**ಮಹಾಕಾಳಿ** 'ಮಹಾಕಾಲಿ' ನೋ.

**ಮಹಾಕುಲ** (ನಾ). ೧. ಶ್ರೇಷ್ಠವಾದ ಮನೆತನ ; ದೊಡ್ಡ ಪೀಳಿಗೆ : ಅವರು ಮಹಾಕುಲದವರು. ಅವರನ್ನು ಕದಲಿಸಲು ನನ್ನ ಕೈಲಾಗದು (ಹತ್ತುಮು. ೧೯). ೨. ಶ್ರೇಷ್ಠವಂಶದಲ್ಲಿ ಹುಟ್ಟಿದ ವ್ಯಕ್ತಿ. [ಸಂ.]

**ಮಹಾಕ್ರತು** (ನಾ). ೧. ದೊಡ್ಡಯಾಗ ; ಯಜ್ಞ : ನಿತ್ಯ ಮಾಡುವರಗ್ನಿಹೋತ್ರಂಗಳ ಮಹಾಕ್ರತುವ . . . ನಿಟ್ಟೆಯುಲಿ ರಾಕ್ಷಸವಿಪ್ರಗೃಹಗಳಲಿ (ಕೌಶಿರಾ. ೩೯-೭). ೨. [ಗಣಿತ] ಸಂಖ್ಯೆಯು ಸ್ಥಾನಗಳಲ್ಲಿ ಮೂವತ್ತಾರನೆಯು ಸ್ಥಾನ ಮತ್ತು ಮೂವತ್ತಾರು ಅಂಕೆಗಳುಳ್ಳ ಒಂದು ದೊಡ್ಡಸಂಖ್ಯೆ : ಎಕ್ಕಂ, ದಾಹಂ . . . ಕ್ರತು, ಮಹಾಕ್ರತು . . . ಮಹಾಪರಿಮಿತ – ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬-೨೭); ಕ್ರತು ಮಹಾಕ್ರತುವೆಂಬಿವೇ ಉಗ್ಗಡಣೆಗಳು (ಶಿವೇಶ. ೭). [ಸಂ.]

**ಮಹಾಕ್ಷಪಟಲಿಕ** (ನಾ). (ತನ್ನ ಕೈಕೆಳಗೆ ಅನೇಕ ಕರಣಿಕರನ್ನು ಹೊಂದಿರುವ) ನ್ಯಾಯ ಮತ್ತು ಆಯವ್ಯಯಗಳಿಗೆ ಸಂಬಂಧಿಸಿದ ದಾಖಲೆಗಳಿರುವ ಇಲಾಖೆಯು ಮುಖ್ಯಸ್ಥ : (ಶಾಸಕ. ೦೬). [ಸಂ.]

**ಮಹಾಕ್ಷಿತಿ** (ನಾ). [ಗಣಿತ] ಸಂಖ್ಯೆಯು ಸ್ಥಾನಗಳಲ್ಲಿ ಇಪ್ಪತ್ತೆರಡನೆಯು ಸ್ಥಾನ ಮತ್ತು ಇಪ್ಪತ್ತೆರಡು ಅಂಕೆಗಳುಳ್ಳ ಒಂದು ದೊಡ್ಡ ಸಂಖ್ಯೆ: ಎಕ್ಕಂ, ದಾಹಂ . . . ಕ್ಷಿತಿ, ಮಹಾಕ್ಷಿತಿ . . . ಮಹಾಪರಿಮಿತ – ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬-೨೫). [ಸಂ.]

**ಮಹಾಕ್ಷೋಣಿ** (ನಾ). [ಗಣಿತ]ಸಂಖ್ಯೆಯು ಸ್ಥಾನಗಳಲ್ಲಿ ಹದಿನೆಂಟನೆಯು ಸ್ಥಾನ ಮತ್ತು ಹದಿನೆಂಟು ಅಂಕೆಗಳುಳ್ಳ ಒಂದು ದೊಡ್ಡ ಸಂಖ್ಯೆ : ಎಕ್ಕಂ, ದಾಹಂ . . . ಕ್ಷೋಣಿ, ಮಹಾಕ್ಷೋಣಿ . . . ಮಹಾಪರಿಮಿತ ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬-೨೫). [ಸಂ.]

**ಮಹಾಕ್ಷೋಭ** (ನಾ). [ಗಣಿತ] ಸಂಖ್ಯೆಯು ಸ್ಥಾನಗಳಲ್ಲಿ ಇಪ್ಪತ್ತನಾಲ್ಕನೆಯು ಸ್ಥಾನ ಮತ್ತು ಇಪ್ಪತ್ತುನಾಲ್ಕು ಅಂಕೆಗಳಿರುವ ಒಂದು ದೊಡ್ಡಸಂಖ್ಯೆ : ಎಕ್ಕಂ, ದಾಹಂ . . . ಕ್ಷೋಭ, ಮಹಾಕ್ಷೋಭ . . . ಮಹಾಪರಿಮಿತ-ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬-೨೬). [ಸಂ.]

**ಮಹಾಖರ್ವ** (ನಾ). [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಹದಿನಾಲ್ಕನೆಯ ಸ್ಥಾನ ಮತ್ತು ಹದಿನಾಲ್ಕು ಅಂಕೆಗಳುಳ್ಳ ಒಂದು ದೊಡ್ಡ ಸಂಖ್ಯೆ : ಎಕ್ಕಂ, ದಾಹಂ . . . ಖರ್ವ, ಮಹಾಖರ್ವ . . . ಮಹಾಪರಿಮಿತ—ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬-೨೪). [ಸಂ.]

**ಮಹಾಗಣ** (ನಾ). ೧. ದೊಡ್ಡಗುಂಪು.—ಸಮೂಹ. ೨. [ಗಣಿತ] ಒಂದು ದೊಡ್ಡಸಂಖ್ಯೆ. ೩. [ವೀಶೈ] ಶ್ರೇಷ್ಠನಾದ ಜಂಗಮ,—ಶರಣ : ಎನಗೆ ಮರ್ತ್ಯಲೋಕದ ಮಹಾಗಣಗಳುಂಟು ಇದುಕಾರಣ ಕೂಡಲಸಂಗಮದೇವರ ಲೋಕವ ಹಂಚಿಕೊಳ್ಳಿ ನಿಮನಿಮಗೆ (ಬಸವ. ೭೬೦) ; ಇದಂ ಚೋಳದೇಶದ ಮಹಾಗಣಂಗಳಱಿವುದು (ಶಂಬಸ. ೭-೦೦೪). [ಸಂ.]

**ಮಹಾಗನಿ** (ನಾ). ಒಂದು ಬಗೆಯ ಮರ; ✿ ಕಂದುಬಣ್ಣದ ಛಾಯೆಯುಳ್ಳ ಈ ಮರವನ್ನು ಪೀಠೋಪಕರಣಗಳನ್ನು ಮಾಡಲು ಹೆಚ್ಚಾಗಿ ಬಳಸುತ್ತಾರೆ : ಹೆಬ್ಬೇವು, ಮಹಾಗನಿ (ವ್ಯಶಿಗಿ. ೭೩-೦೯೮೮) ; ಅವುಗಳ ಪೈಕಿ . . . ಉಡುಪಿನ ಬೀರುವೊಂದಿತ್ತು. ಅದನ್ನು ಮಹಾಗನಿ ಮರದಿಂದ ಮಾಡಿತ್ತು (ಕೃಪರು. ೩೦೮). [← ಇಂ. Mahogony]

**ಮಹಾಗಾರೆ** (ನಾ). ಒಂದು ಬಗೆಯ ಮರ : ಮಹಾಗಾರೆ, ಬೆಟ್ಟಮಂಗರೆ (ವ್ಯಶಿಗಿ. ೭೫-೦೩೩೫). [ಮಹಾ + ಕಾರೆ$_1$]

**ಮಹಾಗ್ರಹ** (ನಾ). ೧. ಪ್ರಬಲವಾದ ಭೂತ,ಪಿಶಾಚಿ ಮುಂತಾದ ದುಷ್ಟ ಶಕ್ತಿ : ಇದು ಜತುಮುದ್ರಾಮುದ್ರಿತಮಿದು ನಿಬಿಡಸ್ಯೂತಮಿದು ಮಹಾಗ್ರಹಧೃತಮಿಂತಿದು ಲೋಹಪಿನದ್ಧಮೆನಿಪ್ಪುದು ಪರಕೃತಿನುತಿಯೊಳಖಿಳ ಖಿಳಜನವಕ್ತ್ರಂ (ಶಂಧ್ರಪು. ೦-೪೦) ; ಈ ಮಹಾಗ್ರಹಗಳು ತಮಗೆ ಇಷ್ಟ ಬಂದ ಹಾಗೆ ಲೋಕಗಳಲ್ಲಿ ಕೋಟಿ ತೆಜಂಗಳು ಉಳ್ಳವುಗಳಾಗಿ ಕ್ರೀಡಿಸುತ್ತಲಿರುವವು (ವೈದ್ಯಶಾ. II, ೬೨). ೨. ಸೂರ್ಯ. ೩. ಶನಿಗ್ರಹ. ೪. ರಾಹು. [ಸಂ.]

**ಮಹಾಗ್ರೀವ** (ನಾ). ಉದ್ದವಾದ ಕುತ್ತಿಗೆಯುಳ್ಳುದು ; ಒಂಟೆ. [ಸಂ.]

**ಮಹಾಘಟಿಕಾಸ್ಥಾನ** (ನಾ). ಉನ್ನತವ್ಯಾಸಂಗಕ್ಕಾಗಿ ಸ್ಥಾಪಿಸಿದ ದೊಡ್ಡ ವಿದ್ಯಾಪೀಠ,—ವಿದ್ಯಾಸಂಸ್ಥೆ : ಶ್ರೀಮತು ಹೆಂಜೆರು ಪಟ್ಟಣದ ಮಹಾಘಟಿಕಾಸ್ಥಾನ ಶ್ರೀನೊಣಂಬೇಶ್ವರದೇವರ ಸಂನಿಧಾನದಲಿ (ಎಕ. XII, ಶಿರಾ. ೨೩-೦೦೦; 1167). [ಸಂ.]

**ಮಹಾಘನ** (ನಾ). ಪರವಸ್ತು ; ದೇವರು : ನೀನಿರಿಸಿದ ಮನದಲ್ಲಿ ನಾನಂಜಿನಯ್ಯಾ ಮನವು ಮಹಾಘನಕ್ಕೆ ಶರಣಗತಿವೊಕ್ಕುದಾಗಿ (ಬಸವ. ೬೨೯); ಮಹಾಘನವನಱಿದಲ್ಲಿಯೇ ತ್ರಿವಿಧವೂ ಸಮರ್ಪಣ (ಪೋಳಶೂ. ೩೭-೦೫೬). [ಸಂ.]

**ಮಹಾಚಂಡ** (ನಾ). ೧. ಅತಿಯಾದ ಉದ್ವೇಗವುಳ್ಳವನು. ೨. ಯಮನ ಇಬ್ಬರು ಅನುಚರರಲ್ಲಿ ಒಬ್ಬ. ೩. ಶಿವನ ಒಬ್ಬ ಅನುಚರನ ಹೆಸರು. ೪. ಒಂದು ನರಕದ ಹೆಸರು : ಸಕಲಶಲ್ಯಸಿಂಹಗಜಾನನವ್ಯಾಘ್ರವೆಂಬೈದು ಮಂತ್ರಿನರಕಂಗಳ ಮೇಳದಲ್ಲಿ ಮಹಾಚಂಡವೆಂಬರಸುನರಕವಿಹುದು (ಶಿವೇಶ. ೦೩೨). [ಸಂ.]

**ಮಹಾಚೀನ** (ನಾ). ಚೀನಾದೇಶದಲ್ಲಿ ತಯಾರಾದ ಒಂದು ಬಗೆಯ ಉತ್ತಮವಾದ ರೇಷ್ಮೆಬಟ್ಟೆ ; ಚೀನಾಂಬರ : ಪವನಪರಿಸಂಚಳ ಸಮಿಾಚೀನ ಚೀನಮಹಾಚೀನಾದಿ ಪೀವರಜೀವರಂಗಳೆಂಬ ಕರತಳಂಗಳಿಂ ಕೆಯ್ವಾಸಿ . . . ಕರೆವಂತಿರ್ಪುದುಂ (ಶಾಧಪು. ೦೨-೨೦೫). [ಸಂ.]

**ಮಹಾಚೀನಿ** (ನಾ). = ಮಹಾಚೀನ : ಲಿಂಗಕ್ಕೆ ಪರಿಪರಿಯ ಪೂಜೆಗೆಂದನು ಮಾಡಿ ತರಿಸಿದ ಮಹಾಚೀನಿಯೆನಿಪ ವಸ್ತ್ರಾಳಿಯುಂ. . . ತರಿಸುತಂ (ಅಜೀಶ. ದೇ. ೮೨-೨೦). [< ಸಂ. ಮಹಾಚೀನ]

**ಮಹಾಚೂರ್ಣ** (ನಾ). ಒಂದು ನರಕದ ಹೆಸರು : ಮಹಾಚೂರ್ಣ. . . ತಪ್ತತೈಲಮಯುವೆಂಬೈದು ಮಂತ್ರಿನರಕಂಗಳ ಸಹಚರ್ಯದಿಂ ಪಂಚಕೋಣವೆಂಬರಸುನರಕವಿಹುದು (ಶಿವೇಶ.. ೦೩೩). [ಸಂ.]

**ಮಹಾಛಂದಸು** (ನಾ). [ಛಂದ] ದೀರ್ಘಕಥನಕಾವ್ಯಕ್ಕೆ ಹೊಂದುವಂತೆ ರೂಪುಗೊಂಡಿದ್ದು, ಐದುಮಾತ್ರೆಯ ಗಣಗಳ ಪ್ರಯೋಗದಲ್ಲಿ ವೈವಿಧ್ಯವನ್ನು ಪಡೆದಿರುವ ಸರಳರಗಳೆಯ ಅನ್ಯರೂಪ ; ✿ ಶ್ರೀ ಕೆ. ವಿ. ಪುಟ್ಟಪ್ಪನವರು ತಮ್ಮ 'ಶ್ರೀರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಉಪಯೋಗಿಸಿರುವ ಈ ಛಂದಸ್ಸನ್ನು 'ಮಹಾಛಂದಸ್ಸು' ಎಂದು ಕರೆದು ಅದರ ವೈವಿಧ್ಯವನ್ನು ವಿವರಿಸಿದ್ದಾರೆ : ಶ್ರೀ ಕುವೆಂಪುವ ಸೃಜಿಸಿದೀ ಮಹಾಛಂದಸಿನ ಮೇರುಕೃತಿ, ಮೇಣ್ ಜಗದ್ಭವ್ಯ ರಾಮಾಯಣಂ ! (ಶ್ರೀರಾದ. IV, ೨೬). [ಸಂ. ಮಹಾಛಂದಸ್]

**ಮಹಾಛಂದಸ್ಸು** (ನಾ). = ಮಹಾಛಂದಸು : ಕುವೆಂಪು ಅವರು ಮಹಾಛಂದಸ್ಸಿನಲ್ಲಿ ತಮ್ಮ 'ಶ್ರೀರಾಮಾಯಣದರ್ಶನಂ' ಮಹಾಕಾವ್ಯವನ್ನು ಬರೆದಿದ್ದಾರೆ (ಕೂಶ). [ಸಂ. ಮಹಾಛಂದಸ್]

**ಮಹಾಜನ** (ನಾ.) ೧. ಜನಸಾಮಾನ್ಯರ ಗುಂಪು ; ಜನಸಮೂಹ : ದುರಾತ್ಮವಾತ್ಮೀಯಭವನದೊಳ್ ಸದಾಕಾಲಂ ಮಹಾಜನಕ್ಕೆ ಸಹಸ್ರಭೋಜನ ಮನಿಕ್ಕುಮಂ (ಶಬ್ದಮ. ೨-೬೯ ವ). ೨. (ಊರಿನ) ಪ್ರಮುಖ ಜನ; ಹಿರಿಯ ಜನ : ಈ ಮಹಾಜನವವರ ಕೈಯೊಳು ಗ್ರಾಮವಹಿಯಲು ಕೊಟ್ಟು ಕೇಡಂ. . . ಪೇಳ್ವೆನು (ಬಸವ. ೫೬-೨); ತಿರುವಂಜಿಕಳನಾಥನೊಲವಿಂದೆ ಬರೆಲುತ್ಸವದೊಳಲ್ಲಿನ ಮಹಾಜನ ನೆರೆದಿರ್ದಿರ್ವಂದತಿಹರುಷದೆ ಪರಸಿ ಮಂತ್ರಾಕ್ಷತೆಗಳ ನೀಡೆ (ತ್ರಿಶು. ೧೦-೫). ೩. ಊರಿನ ಪಂಚರು,– ಪಂಚಾಯಿತಿ ಸದಸ್ಯಮಂಡಲಿ : ಇಂತಿನಿತುಮಂ . . . ಊರೊಡೆಯ ಪ್ರಮುಖ ಮಹಾಜನಮುಂ ರಕ್ಷಿಸುವರ್ (ಕಶಾ. XX, ೪೫-೩೨; 1071); ಮಹೇಶ್ವರ ಹಾಗು ಮಹಾಜನರೊಂದಿಗೆ ಸಮಾನವಾದ ಅಧಿಕಾರಿಗಳಾಗಿದ್ದ ಸ್ಥಾನಿಕರು ಅವರೊಂದಿಗೇ ದೇವಸ್ಥಾನಕ್ಕೆ ಬರುತ್ತಿದ್ದ ಹಣದ ಹಾಗೂ ಬೆಳೆಯ ಕಾಣಿಕೆಗಳನ್ನು ಸ್ವೀಕರಿಸುತ್ತಿದ್ದರು (ಕುಳವಾ. ೧೦೨). ೪. ಅಗ್ರಹಾರದಲ್ಲಿಯ (ಆದಾಯದಲ್ಲಿ ಪಾಲನ್ನು ಪಡೆಯುವ) ವೇದಶಾಸ್ತ್ರಪಾರಂಗತರಾದ ಬ್ರಾಹ್ಮಣವಿದ್ವಾಂಸರು : [ಗಾ]ವಡಿವಾಡದ ಮಹಾಜನ (ಅ) ಐವ[ರಿ]ನ್ಪ × [ಕಾ]ಲಂ ಕಟ್ಟಿ ತುಪ್ಪದ [ತೆ]ಱೆಯು . . . ದಾನಗೊಟ್ಟ (ಕಶಾ. XI-i, ೦೩-೦೦; 869); [ಸಿ]ಸುಳಹಾಟಿಯ್ವದಿಂಬರು ಮಹಾಜನ ಮಹಮಧಾರಿಸಿ × × × (ಕಶಾ XI-i, ೦೪-೦೦; 872). ೫. ಧರ್ಮದಲ್ಲಿ ಆಸಕ್ತಿಯುಳ್ಳ ಜನ : ಮಹಾಜನವೆಂದರೆ ಕ್ಷುದ್ರಪ್ರಯೋಜನದಲ್ಲಿ ದೃಷ್ಟಿಯಿಲ್ಲದೆ ಧರ್ಮದಲ್ಲೇ ದೃಷ್ಟಿಯುಳ್ಳವರೆಂದರ್ಥ (ಹಿಂದಶಾ. ೦೫೨). ೬. ವ್ಯಾಪಾರಿ ; ವರ್ತಕ. ೭. ಒಂದು ಜನಾಂಗದ ಅಥವಾ ವ್ಯವಹಾರದ ಮುಖಂಡ. [ಸಂ.]

**ಮಹಾಜವ** (ನಾ). ೧. ಬಹಳ ವೇಗವುಳ್ಳದು. ೨. ಜಿಂಕೆ. [ಸಂ.]

**ಮಹಾಜಾಲಿ** (ನಾ). ಹಳದಿಯ ಹೂಗಳನ್ನು ಬಿಡುವ ಒಂದು ಬಗೆಯ ಸಸ್ಯ : "ಮಹಾಜಾಲೀ, ಪೀತಕಃ – ಹಚ್ಚಗಿರುವ ಹುವ್ವಗಳುಳ್ಳ ಕಾಡು ಹೀರೇಗಿಡ" (ಸಿದ್ಧಾಂತಿ. ೦೫೯). [ಸಂ. ಮಹಾಜಾಲೀ]

**ಮಹಾಜ್ಞಾನ** (ನಾ). ಅಪಾರವಾದ ತಿಳಿವಳಿಕೆ; ಅತಿಶಯವಾದ ಅರಿವು : ಜ್ಞಾನ ವಿಜ್ಞಾನ ಸುಜ್ಞಾನ ಮಹಾಜ್ಞಾನ ಅಪರಜ್ಞಾನ ಇಂತೀ ಪಂಚಜ್ಞಾನವ ದಹ್ಯಮಾಡಿ ಬ್ರಹ್ಮಲಿಖಿತವ ತೊಡೆವಂತೆ ಧರಿಸುವದೆ ತ್ರಿಪುಂಡ್ರ (ಮೋಳಿಕಾ. ೦೩೪-೫೯೧); ಜ್ಞಾನ ಸುಜ್ಞಾನ ಮಹಾಜ್ಞಾನ ಎಂಬ ವೃತ್ತಿ ಜ್ಞಾನಂಗಳು ಇಲ್ಲದಂದು . . . ನಿಜಜ್ಞಾನಮೂರ್ತಿ ನೀನೆಯಯ್ಯಾ (ಸಿದ್ಧೇಶ. ೬-೨೬). [ಸಂ.]

**ಮಹಾಜ್ಞಾನಿ** (ನಾ). ೧. ಅಪಾರವಾದ ತಿಳಿವಳಿಕೆಯುಳ್ಳವನು; ಮಹಾವಿದ್ವಾಂಸ : ಸಾಕ್ರಟೀಸನು ಮಹಾಜ್ಞಾನಿಯೆಂದೆನಿಸಿಕೊಳ್ಳುವನು (ಮುಂಶಿಯ. ೪-೧೮೨). ೨. ಮಹಾಮುನಿ. ೩. ಶಿವ; ಮಹಾದೇವ. [ಸಂ. ಮಹಾಜ್ಞಾನಿನ್]

**ಮಹಾಜ್ವರ** (ನಾ). ಒಂದು ಬಗೆಯ ತೀವ್ರವಾದ ಜ್ವರ : "ಧರ್ಮಮುಷ್ಣಂ ಮಹಾಜ್ವರವೆಂದೆನಿಕ್ಕು" (ಮಂಗರಾ. ೦೦೪-೪); ಮಹಾಜ್ವರಕೆ:– ಬೆಲ್ಲವತ್ತದ ಹಣ್ಣು, ಶ್ರೀಗಂಧ, ಯಷ್ಟಿಮಧುಕ ಇವನ್ನು ಹಳೇನೀರಲ್ಲಿ ತೇದು ಕುಡಿಯೆ ಜ್ವರ ಬೆವರುವದು (ಪವೈಶಿ. ೦೦೦). [ಸಂ.]

**ಮಹಾಜ್ವಾಲ** (ಗು). ೧. ಅಧಿಕವಾಗಿ ಜ್ವಲಿಸುತ್ತಿರುವ,– ಪ್ರಕಾಶಿಸುತ್ತಿರುವ. (ನಾ). ೨. [ಜೈನ] ಒಂದು ಬಗೆಯ ಮಂತ್ರವಿದ್ಯೆ : ಅಮಿತತೇಜಂ . . . ಮಹಾಜ್ವಾಲಮುಮಂ ಸರ್ವವಿದ್ಯಾಚ್ಛೇದನಮುಮೆಂಬೆರಡು ವಿದ್ಯೆಯುಮಂ ಸಾಧಿಸಲೆಂದು ಪೋದಂ (ಶಾಪುಂಕ. ೦೯೦). [ಸಂ.]

**ಮಹಾತರು** (ನಾ). ೧. ದೊಡ್ಡಮರ ; ಎತ್ತರವಾದ ಮರ. ೨. ಒಂದು ಬಗೆಯ ಮರ; ಚಂದನವೃಕ್ಷ : "ಸರಳಂ ಪೀತದ್ರು ಮಹಾತರುವಕ್ಕುಂ" (ಶಬ್ದಮ. ೩೬-೨೦). ೩. ಕಳ್ಳಿಗಿಡ. [ಸಂ.]

**ಮಹಾತಲ**, ಮಹಾತಳ (ನಾ). ಏಳು ಅಧೋಲೋಕಗಳಲ್ಲಿ ಆರನೆಯದು : "ಅತಲಃ, ವಿತಲಃ, ಸುತಲಃ, ಮಹಾತಲಃ, ರಸಾತಲಃ, ತಳಾತಲಃ, ಪಾತಾಲಃ, ಈ ೭ ಅಡಿಯಣ ಲೋಕಂ" (ಕಾಶಕ. ೨೬೧). **ಮಹಾತಳ** : ಪಾದತಳದಲ್ಲಿ ಅತಳಲೋಕ . . . ಜಾನುವಿನಲ್ಲಿ ಮಹಾತಳಲೋಕ . . . ಮೂರ್ಧ್ನಿಯಲ್ಲಿ ಸತ್ಯಲೋಕ ಇಂತೀ ಈರೇಳುಲೋಕಂಗಳ ತನ್ನೊಳಗಿಂಬಿಟ್ಟುಕೊಂಡು (ಅಕಂಡೇ. ೦೪೧-೦೨೪). [ಸಂ.]

**ಮಹಾತಳ** ' ಮಹಾತಲ ' ನೋ.

**ಮಹಾತಾರಕ** (ನಾ). ಮೋಕ್ಷದಾಯಕವಾದ ಒಂದು ಮಂತ್ರ : ತಾರಕದ ಯೋಗವಿಚಾರದ ಸಾರಸಂಗ್ರಹವೆನಿಸಿದ ಮಹಾತಾರಕವ ಬೋಧಿಸಿದ ಗಗನಾಕಾರ ಗುರುಸುತ್ತರ್ಗೆ (ಗಗಶಾ, ೨೦ ಸೂತ್ರ). [ಸಂ.]

**ಮಹಾತುಮ** (ನಾ). ಶ್ರೇಷ್ಠನಾದವನು ; ಘನವಂತ : ಹರಿನಂದನಂ ಸಹದೇವ ಸಾತ್ಯಕಿ ಮಹಾತುಮ ಘಟೋತ್ಕಚಂ ದ್ರುಪದಸುತನವ ಯುಧಿಷ್ಠಿರನೆಂದು ಭ್ರಾಂತಿಯಿಂದ ಆತು ತಮ್ಮೊಳು ತಾವೆ ಕಡುಮುಳಿದು ,. . . ನೀಗಾಡಿದರು ನಿಜಬಲವನು (ತುರಂಗ. ೫೩-೫೩).

[< ಸಂ. ಮಹಾತ್ಮನ್]

**ಮಹಾತೇಜ** (ಗು). ೧. ಬಹಳ ತೇಜಸ್ಸುಳ್ಳ. ೨. ಅಧಿಕವಾದ ಪರಾಕ್ರಮದಿಂದ ಕೂಡಿದ. (ನಾ). ೩. ಅಗ್ನಿ. ೪. ಪಾದರಸ. ೫. ಅಧಿಕವಾದ ಕಾಂತಿ. ೬. ಶೂರ ; ಪರಾಕ್ರಮಿ. ೭. ಷಣ್ಮುಖ ; ಕಾರ್ತಿಕೇಯ : " ಗೌರೀಪುತ್ರಃ . . . ಮಹಾತೇಜಾಃ , ಶರಜನ್ಮಾ(ಚ ಕಥ್ಯತೇ) – ಈ ೨೦ ಕಾರ್ತಿಕೇಯನ ಪೆಸರ್ " (ಹಲಾಯು. ೫-೨೦). ೮. ವಿಷ್ಣು. ೯. ಶಿವ. ೧೦. ಹರಳುಗಿಡ. ೧೧. ಚಿತ್ರಮೂಲದ ಗಿಡ. [ಸಂ. ಮಹಾತೇಜಸ್]

**ಮಹಾತೈಲ** (ನಾ). ೧. ಅಮೂಲ್ಯವಾದ ತೈಲ,–ಎಣ್ಣೆ. ೨. ಮನುಷ್ಯನ ಶರೀರದ ಕೊಬ್ಬಿನ ಸಾರ : ನರತೈಲಮುಂ ಮಹಾತೈಲಮೆಂದು ನರಮಾಂಸಬಲಿಯುಂ ಮಹಾಮಾಂಸಬಲಿಯೆಂದು . . . ನುಡಿವಂತೆ ಭೀಮನಂ ಮಹಾರಥನೆಂದು ನುಡಿಯಲ್ಕಕ್ಕುದೆ ಮಲಂ (ಗದಾಯು. ೩-೫೭ ವ). [ಸಂ.]

**ಮಹಾತ್ಮ** (ನಾ). ೧. ಶ್ರೇಷ್ಠವಾದ ಆತ್ಮವುಳ್ಳವನು ; ಸತ್ಪುರುಷ ; ಘನವಂತ : " ಉದಾತ್ತಃ, ಉದೀರ್ಣಃ, ಮಹಾತ್ಮಾ, ಉದಾರಃ – ಈ ೪ ಹಿರಿಯಂ " (ಹಲಾಯು. ೫೯-೨೦೧); ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲದೊಡಾಳ್ದನಾಳ್ ಸರೋಗನರೋಗಂ ಶ್ರಮರಹಿತಂ ಕ್ಲೇಶಕೃತ ಶ್ರಮನೆಂಬೀ ಲೋಕಯಾತ್ರೆ ಕಿಡದೆ ಮಹಾತ್ಮಾ (ಶಾಂತಿಪು. ೬-೦೪೦); ಆ ಮಹಾತ್ಮರ ಮೆಲ್ಲಡಿಗಳಿಗೆ ಭೂಮಿತಳವೊಂದಲು ನಮಿಸುತಂ (ಬಸವ. ೨೫-೨); ಭರತಂ ಮಹಾತ್ಮನೆಸೆದನು ದಿವ್ಯತೇಜಸ್ವಿ, ತ್ಯಾಗಬುದ್ಧಿಯಲಿ, ನಿರ್ವೇಗದಲಿ (ಶ್ರೀರಾಮಾ. ೨೬-೬೯೩). ೨. ಪರಮಾತ್ಮ. ೩. ಬುದ್ಧ, ಗಾಂಧಿ ಮುಂತಾದ ಕೆಲವೇ ಶ್ರೇಷ್ಠವ್ಯಕ್ತಿಗಳಿಗೆ ಅನ್ವಯಿಸುವಂತೆ ಬಳಸುವ ಗೌರವಸೂಚಕವಾದ ಶಬ್ದ : ಮಹಾತ್ಮರು ಇಂದು ಅಮರರಾಗಿದ್ದಾರೆ (ಅಮುಗಾಂ. ೭೫); ಸಿದ್ಧಾರ್ಥನು ಜ್ಞಾನೋದಯವನ್ನು ಹೊಂದಿ ಮಹಾತ್ಮಬುದ್ಧನಾದನು (ಕೂಡಿ). [ ಸಂ. ಮಹಾತ್ಮನ್ ]

**ಮಹಾತ್ಮಕ** (ನಾ). ಉದಾತ್ತನಾದ ವ್ಯಕ್ತಿ ; ಶ್ರೇಷ್ಠನಾದವನು : ಸಂಧಿತ್ರಯದೊಳಗಭವಗೆ ವಂದಿಸಿದ ಮಹಾತ್ಮಕರ್ಗೆ ಬಹುಕರ್ಮಂಗಳ್ ಬೇದು ಕೈವಲ್ಯಪದಕಂ ಸಂದಿಹರ್ (ಪಪ್ಪಶಾ. ೬-೪೦). [ಸಂ.]

**ಮಹಾತ್ಮೆ** (ನಾ). ೧. ಹಿರಿಮೆ ; ಘನತೆ. ೨. ಉದಾತ್ತವಾದ ಮನಸ್ಸು : ಅಸಮಭಕ್ತಮಹಾತ್ಮೆಯಂ ಭಾವಿಸಿ ಶರಣುವೊಗುವರ್ಗಳಂ ಪಾಲಿಸದಿಹುದೆ ಕುಂದೀಶಭಕ್ತಿಗೆ (ಬಸವ. ೪೬-೫೦). [< ಸಂ. ಮಾಹಾತ್ಮ್ಯ]

**ಮಹಾದಂಡನಾಯಕ** (ನಾ). ಮುಖ್ಯಸೇನಾಧಿಪತಿ,–ದಳಪತಿ : ಇದನ್ನು ಹೊಯಿಸಳಸೇನೆಯ ಮಹಾದಂಡನಾಯಕ ಗಂಗರಾಜನ ಮಗ ಬಮ್ಮ

ಚಮೂಪನು . . . ಕಟ್ಟಿಸಿದುದಾಗಿ ಹೇಳಿದೆ (ಸವತ. VI, ಶ್ರಣ್ಯಪ); ಪ್ರೌಢದೇವರಾಯನು ರಾಜ . . . ಲಕ್ಕಣದಂಡೇಶ, ಜಕ್ಕಣಾಚಾರ್ಯರು ಪ್ರಧಾನಾಮಾತ್ಯ ಮತ್ತು ಮಹಾದಂಡನಾಯಕರು (ಶಕ. ೩೯೬). [ಸಂ.]

**ಮಹಾದಣ್ಣಾಯಕ** (ನಾ). = ಮಹಾದಂಡನಾಯಕ : ನಾಡನೊಡೆಯ ಭರಮಹೆಗ್ಗಡೆ ರಾಜ್ಯದ ಮಹಾದಣ್ಣಾಯಕನಿಗಾಗಿ ಸರ್ವಸಿದ್ಧಿತಿಗಳನ್ನೂ ಮಾಡಿದ್ದನು (ಸವತ. ೬೩). [< ಸಂ. ಮಹಾದಂಡನಾಯಕ]

**ಮಹಾದಾನ** (ನಾ). ೧. ಶ್ರೇಷ್ಠವಾದ ದಾನ. ೨. ಹದಿನಾರು ಬಗೆಯ ಶ್ರೇಷ್ಠವಾದ ದಾನ ; ಷೋಡಶದಾನ ; P ಮಹಾದಾನದ ಹೆಸರು ಮತ್ತು ಸಂಖ್ಯೆಗಳಲ್ಲಿ ಬೇರೆ ಬೇರೆ ಅಭಿಪ್ರಾಯಗಳಿವೆ. "ಮಹಾದಾನಗಳು – ೮ : ತಿಲ, ಲೋಹ, ಹಿರಣ್ಯ, ಕಾರ್ಪಾಸ, ಲವಣ, ಸಪ್ತಧಾನ್ಯ, ಕ್ಷಿತಿ (ಭೂ), ಗೋ (ಗರುಡ. ೮-೨೩. ೩೪). ಮಹಾದಾನಗಳು–೧೦ : ಕನಕ, ಅಶ್ವ, ತಿಲ, ಹಸ್ತಿ, ದಾಸಿ, ರಥ, ಭೂಮಿ, ಗೃಹ, ಕನ್ಯಾ. ಕಪಿಲಾಧೇನು (ಅಗ್ನಿಪು. ೨೦೯-೨೪). ಮಹಾದಾನಗಳು—೧೬ : (ಅ) ತುಲಾಭಾರ, ಹಿರಣ್ಯಗರ್ಭ, ತಿಲಪರ್ವತ, ಸುವರ್ಣಮೇದಿನಿ, ಕಲ್ಪಪಾದಪ, ಗಣೇಶೇಶ, ಸುವರ್ಣಧೇನು, ಲಕ್ಷ್ಮೀ, ತಿಲಧೇನು, ಗೋಸಹಸ್ರ, ಹಿರಣ್ಯಾಶ್ವ, ಕನ್ಯಾ, ಹಿರಣ್ಯವೃಷಭ, ಗಜ, ಲೋಕಪಾಲಾಷ್ಟಕ, ತ್ರಿಮೂರ್ತಿಪ್ರತಿಮಾದಾನ (ಲಿಂಗಪು. ಉತ್ತ. ೨೮-೪೪). (ಆ) ತುಲಾಪುರುಷ, ಹಿರಣ್ಯಗರ್ಭ, ಬ್ರಹ್ಮಾಂಡ, ಕಲ್ಪವೃಕ್ಷ, ಗೋಸಹಸ್ರ, ಸ್ವರ್ಣಕಾಮಧೇನು, ಸ್ವರ್ಣಾಶ್ವ, ಸ್ವರ್ಣಗಜ, ಸ್ವರ್ಣರಥ, ಪಂಚಲಾಂಗಲ, ಭೂ, ವಿಶ್ವಚಕ್ರ, ಕಲ್ಪಲತಾ, ಸಪ್ತಸಾಗರ, ರತ್ನಧೇನು, ಮಹಾಭೂತಘಟ (ಹೇಮಾದ್ರಿ. ಮತ್ಸ್ಯಪು. ಸಂಖ್ಯಾರ. ೨೭೭)." (ಶ್ರೀತತ್ತ್ವ. ೩೨೬) : "ಪ್ರವಾರಣಮೆಂಬುದು ಮಹಾದಾನಂ" (ಹಲಾಯು. ೧೨೭-೯೬); ಪಲವೆಡೆಗಳೊಳಂ ಮಹಾಧ್ವಜಮನೆತ್ತಿಸಿ ಮಹಾದಾನಂಗೆಯ್ದು ನೆಗಟ್ದ ಗಂಗವಿದ್ಯಾಧರಂ (ಎಕ. II, ೩೯-೦೦೩ ; 974); ಸೋಮಗ್ರಹಣ ಉತ್ತರಾಯಣಸಂಕ್ರಾಂತಿಯನ್ನು ಮಹಾದಾನನಿಮಿತ್ತಂ . . . ಸರ್ವನಮಸ್ಯವಾಗಿ ದೇವರ್ಗ್ಗೆ ಬಿಟ್ಟರ್ (ಕೌಇಇ. XX, ೬೦-೨೦ ; 1109) ; ಮೊಡಕಶ್ರೇಷ್ಠಿ . . . ಅರ್ಧಮಾಸದ ಕಾಲ ಮಹಾದಾನವನ್ನು ನಡಸಿದನು (ಹನ್ನುಮ. ೦೬). [ಸಂ.]

**ಮಹಾದಾನಿ** (ನಾ). ಉದಾರವಾಗಿ ದಾನವಮಾಡುವವನು ; ಅತ್ಯಂತ ದಾನಶೀಲನಾದವನು : ಅಂದಿಂಗೆಳೆಯ ನೀನು ಪಳಿಯ ನಾನು ಮಹಾದಾನಿ ಕೂಡಲಸಂಗಮದೇವಾ (ಬಸವ. ೨). [ಸಂ. ಮಹಾದಾನಿನ್]

**ಮಹಾದಾಹ** (ನಾ). ೧. ಅತಿಯಾದ ಬಾಯಾರಿಕೆ. ೨. ಒಂದು ನರಕದ ಹೆಸರು ; ತೀಕ್ಷ್ಣವಾದ ದಾಹವನ್ನುಂಟುಮಾಡುವ ನರಕ : ಸೂಚೀಮುಖ . . . ಮಹಾದಾಹ ಸಂತಾಪಂಗಳೆಂಬಿವೇಳುಂಟು ಮಹಾನರಕಂಗಳು (ವಿವೇಕ. ೦೫೦). [ಸಂ.]

**ಮಹಾದುಃಖ** (ನಾ). ೧. ಹೆಚ್ಚಾದ ಸಂಕಟ ; ಅತಿಯಾದ ಶೋಕ,— ಅಳಲು : ತಂದನೂರಿಗವಳಂ . . . ಮುಂದಣ ಮಹಾದುಃಖದಾವಾನಳಕೆ ತನ್ನ ಕಿರುಗಜ್ಜದಾ ಒಂದೆ ಕಿಡಿಯ ಮುನ್ನಡಿಯಿಡುವ ವಿಧಿ ವಿಲಾಸದಲಿ! (ಶ್ರೀರಾಮ. ೨೨-೩೬೬). ೨. ಒಂದು ನರಕದ ಹೆಸರು : ಅಸ್ಥಿಭಂಗ . . . ಮಹಾದುಃಖ [ಪಾಠಾಂ. ಮಹಾದುಃಖಜ]ವೆಂಬೈದು ಮಂತ್ರಿನರಕಂಗಳಿಂ ರಂಜಿಸಿ ಅಪ್ಪಭೌಮವೆಂಬರಸುನರಕವಿಪ್ಪುದು (ವಿವೇಕ. ೦೫೩). ೩. [ಜೈನ] ಶಾರೀರಿಕ, ಮಾನಸಿಕ, ಕ್ಷೇತ್ರಜ, ಅನ್ಯೋದೀರಿತ ಮತ್ತು ರಾಕ್ಷಸೋದೀರಿತ ಎಂಬ ಐದು ಬಗೆಯ ದುಃಖಗಳು. [ಸಂ.]

**ಮಹಾದೇವ** (ನಾ). ೧. ಎಲ್ಲ ದೇವರುಗಳಿಗೂ ದೇವನಾಗಿರುವವನು; ಪರಮಾತ್ಮ. ೨. ಶಿವನ ಹೆಸರುಗಳಲ್ಲಿ ಒಂದು: "ಈಶಾನಃ . . . ಮಹಾದೇವಃ, ಮೃಡಃ, ನೀಲಲೋಹಿತಃ–ಈ ೪೫ ಮಹಾದೇವರ ಪೆಸರ್" (ಹಲಾಯು. ೪-೦೩); ಶ್ರೀವಧುವಂ ಪಯೋಧಿಮಥನೋದ್ಭವವಸ್ತುಸಮೂಹದೊಳ್ ಮಹಾದೇವಸಮೇತಮಿರ್ದಸುರರುಂ [ಸುರರುಂ] ಕುಡೆ ತನ್ನ ಮೆಚ್ಚುಗೊಂಡಾವನಶೇಷಭೂಭುವನಮಂಡಲವಲ್ಲಭನಾದ ದೇವನೀಗಾವಗಮೆಮ್ಮ ಬೇಟ್ಟ ವರದುನ್ನತಿಯಂ ಸುಕವೀಂದ್ರವಲ್ಲಭಂ (ಶಂದೋಂಬು. ೦-೦); ಅವರ ಪ್ರಸಾದದ ಘನಮಹಿಮೆಯಲಿ ಮುನ್ನ ಕೊಂಡೊಯ್ಯನೆ ಮಹಾದೇವನ ಪುರಕೆ ಭಕ್ತೀಸನಗರಿಗಳ (ಬಸಪು. ೫೭-೪) ; ನಿಮ್ಮ ಇಷ್ಟದಂತೆಯೇ ಮಹಾದೇವನು ನಡಸಿಕೊಡುವನು (ಶಾಂತಲಾ. ೦೪೩). ೩. ವಿಷ್ಣು. ೪. ಒಬ್ಬ ಜೈನಯತಿಯ ಹೆಸರು : ಮಹಾದೇವನ್ಮುನಿಪು[ಂ]ಗವನ್ನದರ್ಪ್ಪಿ ಕಳುಪೆರ್ದ್ದಪಂ ಮಹಾತವನ್ಮರಣಮಪ್ಪೆ (ಎಕ. II (R), ೯೦-೦ ; 7ನೆಯ ೩೩). [ಸಂ.]

**ಮಹಾದೇವಿ** (ನಾ). ೧. ಶಿವನ ಪತ್ನಿಯಾದ ಪಾರ್ವತಿಯ ಹೆಸರುಗಳಲ್ಲಿ ಒಂದು : "ರುದ್ರಾಣೀ . . . ಮಹಾದೇವೀ ಗಿರಿಜಾ. ಮೇನಕಾತ್ಮಜಾ –ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೪-೦೬) ; ಪರವಧುವನು ಮಹಾ[ ಪಾಠಾಂ. ಮಹಾ]ದೇವಿಯೆಂಬೆ (ಬಸವ. ೪೯೩). ೨. ಲಕ್ಷ್ಮಿ. ೩. ರಾಜನ ಪಟ್ಟದ ರಾಣಿ,–ಅಗ್ರಮಹಿಷಿ ; ಮಹಾರಾಣಿ : ದುಗ್ಗಮಾರ ಎಱೆಅಪ್ಪೋ ಕುವಳಾಲನಾಡು ಮೂನೂಱುಮರ್ ಗಜ್ಜುಖಸಾಸಿರ ಮುಮಾಳೆ ಅವರಾ ಮಹಾದೇವಿ ಕಣ್ಬಾಟಬ್ಬೆ ಆಗಳಿಯಾಳೆ (ಎಕ. X, ಮುಳಬಾ. ೬೦-೩ ; 767) ; ಅದನಾಳ್ವೊಂ ಪ್ರಜಾಪಾಳನೆಂಬೊನರಸನಾತನ ಮಹಾದೇವಿ ಸುಪ್ರಭೆಯೆಂಬೊಳ್ (ವಡ್ಡಾರಾ. ೬೦-೦೩); ಆತನ ಮಹಾದೇವಿ ನಯನಮನೋಹರಿ ಮನೋಹರಿಯೆಂಬಳ್ (ಆದಿಪು. ೦-೬೦ ವ). [ಸಂ. ಮಹಾದೇವೀ]

**ಮಹಾದ್ವಾರ** (ನಾ). (ದೇವಸ್ಥಾನ, ಕೋಟೆ, ಅರಮನೆ ಮೊದಲಾದುವುಗಳ) ಹೆಬ್ಬಾಗಿಲು; ಮುಖದ್ವಾರ : ಪುರಮಹಾದ್ವಾರಾಗ್ರಿಮಸ್ಥಾನದೊಳ್ ಲೋಳತ್ಕೇತುಚಯಂ ವಿಮಾನನಿಚಯಂ ನಿಂದತ್ತದೆತ್ತೆತ್ತಲುಂ (ಶಂಪ್ರ.ಕೃ. ೬-೦೮); ಮಹಾದ್ವಾರ : ಇದು ದೇವಾಲಯದ ಕಟ್ಟಡವನ್ನು ಪ್ರತ್ಯೇಕಿಸಿ ಪ್ರಾಕಾರದ ಗೋಡೆಗೆ ಹೊಂದಿಕೊಂಡು ಇರುತ್ತದೆ. ಇದು ಭವ್ಯವಾಗಿಯೂ ಇದರ ಮೇಲ್ಗಡೆ ಎತ್ತರವಾದ ಗೋಪುರವನ್ನುಳ್ಳದ್ದಾಗಿಯೂ ಇರುತ್ತದೆ (ಮೈವಾಸ್ತು. ೩೪) [ಸಂ.]

**ಮಹಾಧೇನು** (ನಾ). ಯಾಗದ ಹಸು : "ಮಹಾಪೇಯಿಯೆನೆ ಮಹಾಧೇನು" (ಮಂಗರಾ. ೩೩-೩). [ಸಂ.]

**ಮಹಾಧ್ವಕೃತಿ** (ನಾ). ಮಹಾಕಾವ್ಯ ; ಶ್ರೇಷ್ಠವಾದ ಕೃತಿ : ತಡೆಯದೆ ಮಹಾಧ್ವಕೃತಿಗಳನೊಡರಿಸಲಾರ್ಪಾತನಲ್ಲರಿಂದಂ ಬಲ್ಲಂ (ಶಬ್ದಾ. ೦-೦೬). [ಸಂ.]

**ಮಹಾಧ್ವಜ** (ನಾ.) ೧. ಮುಖ್ಯವಾದ ಬಾವುಟ,—ಧ್ವಜ : ನಾಲ್ಸಾಸಿರದ ಮೂನೂಱೆರ್ಪತ್ತು ಮಹಾಧ್ವಜಂಗಳಿಂದಂ . . . ಪರಿವಾರಧ್ವಜಂಗಳಿಂದ ಮೆಸೆವ ಪತಾಕಾವನಿತಳಮೊಂದು ಯೋಜನಮಗಲಂ (ಆದಿಪು. ೦೦-೩೩ ವ) ; ಮಹಾಧ್ವಜದೊಜ್ಜರದೇಕಶಂಖರವಿಶಶಿಬಿಂಬಧ್ವಜದ ಧವಳಾತಪತ್ರಧ್ವಜದೊಳಗನೆ ನಡೆಯೆ (ಶಾಂತಿಪು. ೦೦-೦೫೦). ೨. ಒಂಟೆ. [ಸಂ.]

**ಮಹಾನಂದ** (ನಾ). ೧. ಅತ್ಯಧಿಕವಾದ ಸಂತೋಷ,—ಹಿಗ್ಗು : ಮಹಾಕಾಲದಲ್ಲಿ . . . ಮಹದ ಮಹಾನಂದದಲುಕ್ಕಾಡಿ ಮತ್ತಲ್ಲಿಯೇ ಲಯವಾಗಿರ್ದರಿ (ಕನ್ನತ. ೪. ೬-೧೨). ೨. ಮುಕ್ತಿ ; ಮೋಕ್ಷ : "ಕೈವಲ್ಯಂ, ನಿರ್ವಾಣಂ . . . ಮೋಕ್ಷಃ, ಮಹಾನಂದಃ – ಈ ೧೧ ಮೋಕ್ಷದ ಪೆಸರ್" (ಹಲಾಯು. ೨೦-೧೨೪). [ಸಂ.]

**ಮಹಾನಕ** (ನಾ). ದೊಡ್ಡನಗಾರಿ ; ಐದುಬಗೆಯ ಮಹಾವಾದ್ಯಗಳಲ್ಲಿ ಒಂದು : ನೆಗಳ್ದತ್ತು ಮಹಾನಕಸ್ವನಾಡಂಬರಮೊಪ್ಪೆ

ಸೂಸಿದುದು ಪೂಮಳೆ ಶಂಕರಸಂಕ್ರಿಯೊಳ್ (ಶಂಕಂ. ೩-೩೩). 'ಪಂಚ ಮಹಾನಕ' ಪರಾ. [ಸಂ.]

**ಮಹಾನಕ್ಷತ್ರ** (ನಾ). ಮೃಗಶಿರ, ಮಖ, ಸ್ವಾತಿ ಮತ್ತು ಅನುರಾಧಾ ಎಂಬ ನಾಲ್ಕು ನಕ್ಷತ್ರಗಳು. [ಸಂ.]

**ಮಹಾನಖರ** (ನಾ). ವರ್ತಕರ ದೊಡ್ಡಸಂಘ, – ಸಂಸ್ಥೆ : ಪೆಣ್ಣುಬುವಿನ ಪಣ್ಣುಮಟಸ್ಥಾನಮುಂ ಮಹಾನಖರಮು ಸಹಿಯಾಗಿ (ಎಕ. XII. ಶಿರಾ. ೩೯-೪೩ ; ೩೩೦). [ ಮಹಾ + ನಖರ$_1$ ( < ನಕರ$_1$ ) ]

**ಮಹಾನಗ** (ನಾ). ೧. ದೊಡ್ಡಬೆಟ್ಟ ; ಅಗಾಧವಾದ ಪರ್ವತ. ೨. ಕುಲಪರ್ವತಗಳಲ್ಲಿ ಒಂದು : ಶಂಖಕೂಟ ಮಹಾನಗ . . . ಶೈಲೇಂದ್ರವೆಂಬ ಪದಿನೇಳು ಕುಲಗೋತ್ರಂಗಳೇ ಪೂರ್ವೋಕ್ತ ಸುಪಾರ್ಶ್ವವೆಂಬ ಕುಲಪರ್ವತಕ್ಕೆ ಬಡಗಣದಿಕ್ಕಿನಲ್ಲಿಹವು (ಶಿವಕ. ೦೬೩). ೩. [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಇಪ್ಪತ್ತೆಂಟನೆಯ ಸ್ಥಾನ ಮತ್ತು ಇಪ್ಪತ್ತೆಂಟು ಅಂಕೆಗಳಿರುವ ಒಂದು ದೊಡ್ಡ ಸಂಖ್ಯೆ : ಏಕ್ಕಂ, ದಾಹಂ . . . ನಗ, ಮಹಾನಗ . . . ಮಹಾಪರಿಮಿತ — ಈ ೪೦ ಸ್ಥಾನದ ಉಗ್ಗಡಣೆ (ವ್ಯಶಗಾ. ೬-೨೬). [ಸಂ.]

**ಮಹಾನಗರ** (ನಾ). ೧. ದೊಡ್ಡಪಟ್ಟಣ : ನಮ್ಮ ಮೂಡೂರು ಹಿಂದೆ ಒಂದು ಮಹಾನಗರವಾಗಿತ್ತು (ಮೂಕಜ್ಜಿ. ೦೦೦). ೨. ಸ್ಥಳೀಯ ಆಡಳಿತಾಧಿಕಾರವನ್ನು ಹೊಂದಿರುವ ಪುರಸಭೆ, – ಪೌರಸಂಸ್ಥೆ : ಶ್ರೀಮದ್ವರ್ಮಪೊಳಲ ಪದಿನಬುವರ್ಸ್ಸೆಟ್ಟಿಯರ್ಗ್ಗೆ ಮಹಾನಗರಂಗಳ್ಗಂ ಪಾದಪೂಜೆಯುಂ ಕೊಟ್ಟು (ಕೌಇಇ. XI–ii. ೦೭೩-೩೩ ; 1126). [ಸಂ.]

**ಮಹಾನಟ** (ನಾ). ೧. ಒಳ್ಳೆಯ ಅಭಿನಯ ಮಾಡುವ ವ್ಯಕ್ತಿ ; ಅಭಿನೇತೃ ; ಶ್ರೇಷ್ಠನಟ : ರಂಗಭೂಮಿಯಲ್ಲಾಗಲೀ ಚಲನಚಿತ್ರರಂಗದಲ್ಲಾಗಲೀ ಮಹಾನಟನೊಬ್ಬನು ಕಾಣಸಿಗುವುದು ಆಗೊಮ್ಮೆ ಈಗೊಮ್ಮೆ ಮಾತ್ರ (ಕೂಃ). ೨. ಶಿವನ ಹೆಸರುಗಳಲ್ಲಿ ಒಂದು : "ಅಷ್ಟಮೂರ್ತಿಃ . . . ಮಹಾನಟಃ . . . ಅಗ್ನಿಲೋಚನಃ – ೧೨ ಶಿವನ ಹೆಸರುಗಳು" (ಸಿಶ್ಯಾಶಿ. ೦೯). [ಸಂ.]

**ಮಹಾನದ** (ನಾ). ೧. ದೊಡ್ಡನದಿ,—ಹೊಳೆ. ೨. (ಪಶ್ಚಿಮಾಭಿಮುಖವಾಗಿ ಹರಿಯುವ) ದೊಡ್ಡ ಗಂಡುಹೊಳೆ : ಮಹಾನದಾವಗಾಹನಸಮುಯಸಾದ್ರೋಣಿಸಂಕ್ರಮಾದಿವಿಧಾನಪ್ರಾಗಲ್ಭ್ಯನುಂ (ಅದಿಪು. ೦೦-೩೪). [ಸಂ.]

**ಮಹಾನದಿ** (ನಾ). ೧. ದೊಡ್ಡಹೊಳೆ : ನದಿ ; ☛ ಭಾರತದ ಹಲವು ನದಿಗಳನ್ನು (ಪವಿತ್ರವಾದ) ಮಹಾನದಿಗಳೆಂದು ಪರಿಗಣಿಸಲಾಗಿದೆ. ಇವುಗಳ ಬಗೆಗೆ ಭಿನ್ನಾಭಿಪ್ರಾಯಗಳಿವೆ: ಪೆಜಗಿಸಿದಾಗಿ ಮುಂತಗಲಿತಪ್ಪದಜಿಂದೆ. . . ಸಪ್ತಮುಖದಿಂದೆ ವಿಷೋನ್ನತಿಯಿಂದೆ ಭೋಗದೊಳ್ ತುಬಿಗಿರವಿಂದೆ ಪೋಲ್ಪುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಾ. ೭೯೭ ಕೂಪ್ರಳ). ೨. ಒಂದು ನದಿಯ ಹೆಸರು : ಮಹಾನದಿಗೆ ಹಿರಾಕುಡ್ ಬಳಿ ೧೭ ಮೈಲಿಗಳ ಉದ್ದದ ಅಣೆಕಟ್ಟು ನಿರ್ಮಾಣವಾಗಿದೆ (ಶಶಂ. ೩೨) ; ಮಹಾನದಿ–ಮಧ್ಯಪ್ರಾಂತಗಳಲ್ಲಿ ಹುಟ್ಟಿ ಮೊದಲು ಉತ್ತರಕ್ಕೂ ಅನಂತರ ಪೂರ್ವಕ್ಕೂ ಹರಿದು . . . ಬಂಗಾಳಕೊಲ್ಲಿಗೆ ಬೀಳುತ್ತದೆ (ಭೂಕಟ. ೦೩೪). ೩. [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಇಪ್ಪತ್ತಾರನೆಯ ಸ್ಥಾನ ಮತ್ತು ಇಪ್ಪತ್ತಾರು ಅಂಕೆಗಳುಳ್ಳ ಒಂದು ದೊಡ್ಡ ಸಂಖ್ಯೆ : ಏಕ್ಕಂ, ದಾಹಂ . . . ಮಹಾನದಿ . . . ಮಹಾಪರಿಮಿತ —ಈ ೪೦ ಸ್ಥಾನದ ಉಗ್ಗಡಣೆ (ವ್ಯಶಗಾ. ೬-೨೩). [ಸಂ. ಮಹಾನದೀ]

**ಮಹಾನರಕ** (ನಾ). ೧. ದೊಡ್ಡನರಕ. ೨. ಎಂಟು ನರಕಗಳ ಒಂದು ಗುಂಪಿನ ಹೆಸರು ; ☛ ಈ ನರಕದ ಗುಂಪು ಮತ್ತು ಸಂಖ್ಯೆಗಳ ಬಗೆಗೆ ಭಿನ್ನಾಭಿಪ್ರಾಯಗಳಿವೆ: ರೌರವಾದಿ ಮೂವತ್ತೆರಡು ಮುಖ್ಯ ನರಕಂಗಳಿಪ್ಪವವಾವೆಂದೊಡೆ ನಾಲ್ಕು ನಾಲ್ಕು ಭಾಗದಿಂದೆಂಟೆಂಟೆನಿಸಿ ನರಕ ಮಹಾನರಕ ರಾಜನರಕ ರಾಜರಾಜೇಶ್ವರನರಕಂಗಳೆನಿಸಿಪ್ಪವು (ಶಿವಕ. ೧೩೦). [ಸಂ.]

**ಮಹಾನವಮಿ** (ನಾ). ನವರಾತ್ರಿಯ ಒಂಬತ್ತನೆಯ ದಿನ ಮತ್ತು ಅಂದು ಆಚರಿಸುವ ಹಬ್ಬ ; ಆಶ್ವಯುಜ ಶುದ್ಧ ನವಮಿ : ಹಾಳು ಗೆಟ್ಟೋಡುವ ಆಳು ನಾನಲ್ಲಯ್ಯಾ ಕೇಳು ಕೂಡಲಸಂಗಮದೇವಾ ಮರಣವೆ ಮಹಾನವಮಿ (ಬಸವ. ೬೯೯); ಯಾ ಹಣವಿನ ಬಡ್ಡಿಯಲ್ಲಿ ಮಹಾನವಮಿಯ ಹತ್ತುದಿನದ ಸೇವೆಯನು ನಡಸಿಕೊಂಡು ಬರಲುಳ್ಳವರೂ (ಎಕ. IV (R). ಎಳಂದೂ. ೦೯೬-೦೭ ; 1667) ; ಈ ದಿನ ಮೊದಲು ಮಹಾನವಮಿಯ ಸಾಯಂಕಾಲದವರೆಗೂ ಓಲಗವು ಬೆಳೆವಂತೆಯೂ . . . ಕಟ್ಟುಮಾಡಿಸಿದರು (ಮಹಾಶಂ. I. ೩೭). ☛ ನವರಾತ್ರಿಯ ಹಬ್ಬದ ಸಂದರ್ಭದಲ್ಲಿ ಒಂಬತ್ತನೆಯ ದಿನದಂದು ಯುದ್ಧೋಪಕರಣಗಳಿಗೂ ಕೆಲಸಗಾರರು ಉಪಯೋಗಿಸುವ ಸಲಕರಣೆಗಳಿಗೂ ಪೂಜೆಮಾಡುವ ರೂಢಿ ಇದೆ. ಇದನ್ನು ' ಆಯುಧಪೂಜೆ ' ಎಂದೂ ಕರೆಯುತ್ತಾರೆ.

ಮಹಾನವಮಿ ದಿಬ್ಬ = ಹಿಂದೆ ಹಂಪೆಯಲ್ಲಿ ಆಯುಧಪೂಜೆಯನ್ನು ಮಾಡುತ್ತಿದ್ದ ಒಂದು ಸ್ಥಳ : ಹಂಪೆಯಲ್ಲಿರುವ ಮಹಾನವಮಿ ದಿಬ್ಬವು ಹಿಂದೆ ಸಿಂಹಾಸನದ ಜಗತಿಯಾಗಿತ್ತೆಂದೂ . . . ಹೇಳುತ್ತಾನೆ (ಬಾರದ.ಶಂ೭). ಮಹಾನವಮಿಮಂಟಪ = ಮೈಸೂರರಸರು ಮೈಸೂರಿನಲ್ಲಿ ಆಯುಧಗಳನ್ನಿಟ್ಟು ಪೂಜೆಮಾಡುತ್ತಿದ್ದ ಒಂದು ಮಂಟಪ : ಹೈದರನು ಸ್ವಲ್ಪ ಸೈನ್ಯದೊಡನೆ ಮಹಾನವಮಿಮಂಟಪದ ಬಳಿ ಇದ್ದನು (ಒಡೆ. ೮೩). [ಸಂ. ಮಹಾನವಮೀ]

**ಮಹಾನಸ** (ನಾ). ೧. (ಹೊರೆಯನ್ನು ಸಾಗಿಸುವ) ದೊಡ್ಡಬಂಡಿ,— ಗಾಡಿ. ೨. ಅಡುಗೆಮನೆ ; ಪಾಕಶಾಲೆ : "ಪಾಕಸ್ಥಾನಂ, ರಸವತೀ, ಮಹಾನಸಂ – ಈ ೩ ಬಾಣಸಿನ ಮನೆ" (ಹಲಾಯು. ೪೯-೦೪೦) ; ನಿರಂತರವಾಗಿ ಮೇಲಕ್ಕೆ ಹೋಗುತ್ತಿರುವ ಧೂಮವು ಅಗ್ನಿಸಂಬಂಧವುಳ್ಳದು ಎಂದು ಮಹಾನಸ ಮೊದಲಾದುವುಗಳಲ್ಲಿ ನಿಶ್ಚಯಿಸಿ . . . ಅಗ್ನಿ ಇರುವುದು ಎಂದು ತಿಳಿಯುವುದು (ಶಾತತ್ತ್ವ. ೩೯೨). [ಸಂ.]

**ಮಹಾನಸಿಕ** (ನಾ). ಅಡುಗೆಯವನು ; ಬಾಣಸಿಗ : ಗೀರ್ವಾಣಮಹಾನಸಿಕನಿಕರಮುಮಂ ದೇವಸ್ನಪನಕಾರಿಕಾನಿಕಾಯಮುಮಂ ನಿಯೋಜಿಸಿ (ಶಾಂತಿಪು. ೦೦-೯೦ ವ). [ಸಂ.]

**ಮಹಾನಸುಗುನ್ನಿ** (ನಾ). ದೊಡ್ಡಜಾತಿಯ ಒಂದು ಬಗೆಯ ನಸುಗುನ್ನಿ : "ಕರಿ–ಮಹಾನಸುಗುನ್ನಿ, ಕೋಟಿಕುಟುಮ" (ಬಿಶಾ. ೨೯). [ಮಹಾ + ನಸುಗುನ್ನಿ]

**ಮಹಾನಾಟ್ಯ** (ನಾ). ಪ್ರಳಯತಾಂಡವ : ಕೇಳು ಮತ್ತಮಿಯ ಪೂರ್ವಾದಿ ಮಹಾನಾಟ್ಯವಾಡುಕಾವೇಶದಿಂದನಲಂಬಕವ ತೆಲೆಯುಲು (ಶಶಮೋ. ೭-೪೬). [ಸಂ.]

**ಮಹಾನಾಡು** (ನಾ). ಪುರಸಭೆ ; ಪೌರಸಂಸ್ಥೆ : ಯಿಂತು ಸಮಸ್ತರಳ ಮುಖ್ಯವಾಗಿ ಸೆಡಂಬಾಳಲು ಮಹಾನಾಡಾಗೀ (ಗ) ನೆರ[ದು] (ಎಇ. XIX, ೩೭-೦೯ ; 1144) ; ಸೆಟ್ಟಿಯರುಂ ಸೆಟ್ಟಿಗುತ್ತರು ಮುಂಮುರಿದಂಡ ಸಾಗರಂಗಳುಂ ಕುಂಜುವತ್ತಿಯಲ್ಲಿ ಮಹಾನಾಡಾಗಿರ್ದ್ದು (ಕೌಇಇ. IX–i, ೩೪೦-೬ ; ತು. 1195). [ಮಹಾ + ನಾಡು]

**ಮಹಾನಾಮ್ನೀವ್ರತ** (ನಾ). ವೇದಾಭ್ಯಾಸದ ಕಾಲದಲ್ಲಿ ಸಾಮವೇದದ ಒಂದು ಪರಿಶಿಷ್ಟವಾದ 'ಮಹಾನಾಮ್ನೀ' ಎಂಬಲ್ಲಿನ ಋಕ್ಕುಗಳನ್ನು ಪಠಿಸುವ ಒಂದು ವ್ರತ : ಮಹಾನಾಮ್ನೀವ್ರತ, ಮಹಾವ್ರತ, ಉಪನಿಷದ್ವ್ರತ, ಗೋದಾನವ್ರತ ಈ ನಾಲ್ಕೂ ವೇದವ್ರತಗಳು. ಇವನ್ನು ಕ್ರಮವಾಗಿ ಹದಿಮೂರನೇ ಹದಿನಾಲ್ಕನೇ ಹದಿನೈದನೇ ಹದಿನಾರನೇ ವಯಸ್ಸಿನಲ್ಲಿ ಮಾಡುವುದು (ಆರ್ಯಧ. ೦೨೭). [ಸಂ.]

**ಮಹಾನಾಯ್ಗ** (ನಾ). ಶ್ರೇಷ್ಠನಾದ ಮುಖಂಡ ; ಮಹಾನಾಯಕ : ಶ್ರೀಗಂಗಮಹಾನಾಯ್ಗರಾ ಮಗನ್ಮಾಬೆಯನ್ನಿರಟ್ಟಿ ತುಱುಗೊಳೊಳ್ಕಾದಿ ತುಱುವನಿಕ್ಕಿಸಿ ಸುರಲೋಕದ ಭೋಗಿ ಆದನ್ (ಎಕ. IX. ಹೊಸಕೋ. ೯೯-೧ ; ಕಾ. 720) ; ಪೃಥುವೀಪರಮೇಶ್ವರಮಹಾನಾಯ್ಗರ ರೇಚಯ್ಯನ ಮಗನ್ (ಎಕ. XV. ಹೊಳೆ. ೬೮-೯; ಕಾ. 950). [< ಸಂ. ಮಹಾನಾಯಕ]

**ಮಹಾನಾಮಿ** 'ಮಹಾನಾಮಿ' ನೋ.

**ಮಹಾನಿದ್ರೆ** (ನಾ). ಸಾವು ; ಮರಣ : ದೀರ್ಘನಿದ್ರೆಯಂ ಮಹಾನಿದ್ರೆ ಯೆಂದು ದೀರ್ಘಪ್ರಾಣಮಂ ಮಹಾಪ್ರಾಣಮೆಂದು . . . ನುಡಿವಂತೆ ಭೀಮಸನಂ ಮಹಾರಥನೆಂದು ನುಡಿಯಲ್ಕಕ್ಕುದೆ ವಲಂ (ಗದಾಯು. ೩-೫೭ ವ). 'ದೀರ್ಘನಿದ್ರೆ' ಪರಾ. [ಸಂ. ಮಹಾನಿದ್ರಾ]

**ಮಹಾನಿಧಾನ** (ನಾ). ೧. ವಿಪುಲವಾದ ಸಂಪತ್ತು; ಮಹದೈಶ್ವರ್ಯ : ದಿವ್ಯಮಹಾನಿಧಾನಮಿದಿರೊಳ್ ಕೋಳ್ಗೋದುದೋ ಪೇೞಿಮೆಂಬುದನೆಂ ಬನ್ನೆಗಂ . . . ಕೊಟ್ಟಳ್ಗಡಂ (ಸುಕುಮಾ. ೧೦-೯೩). ೨. ವಿಪುಲವಾದ ಸಂಪತ್ತನ್ನು ಹೊಂದಿದವನು : ಆ ತಂದೆಯು ಭಕ್ತನ ವಿದ್ಯಾತಿಶಯ ಮಹಾನಿಧಾನನನ್ನಯಮುಪಮಾತೀತಂ (ಶಾಂತಿಪು. ೦-೯೦). [ಸಂ.]

**ಮಹಾನಿಧಿ** (ನಾ). [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಇಪ್ಪತ್ತಾರನೆಯ ಸ್ಥಾನ ಮತ್ತು ಇಪ್ಪತ್ತಾರು ಅಂಕೆಗಳುಳ್ಳ ಒಂದು ದೊಡ್ಡ ಸಂಖ್ಯೆ : ಎಕ್ಕಂ ದಹಂ . . . ನಿಧಿ ಮಹಾನಿಧಿ . . . ಮಹಾಕ್ರತುವೆಂಬಿವೇ ಉಗ್ಗ ಡಣೆಗಳು (ಎಪೀಕ. ೭). [ಸಂ.]

**ಮಹಾನಿನದ** (ನಾ). ೧. ದೊಡ್ಡ ಶಬ್ದ; ಅತಿಶಯವಾದ ನಾದ.__ಧ್ವನಿ. ೨. ಪಂಚಮಹಾವಾದ್ಯಗಳ ನಾದ : 'ಪಂಚಮಹಾನಿನದ' ಪರಾ. [ಸಂ.]

**ಮಹಾನಿಲ** (ನಾ). ೧. ರಭಸವಾದ ಗಾಳಿ; ಸುಂಟರಗಾಳಿ. ೨. [ಜೈನ] ಭೂಲೋಕವನ್ನು ಸುತ್ತಿರುವ ವಾಯು : ಎಂಟುಂ ಪೊಡವಿಗಳಂ ತಾಳ್ದಿದುಪೋಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ (ಶಾಂತಿಪು. ೦೨-೫೦). [ಸಂ.]

**ಮಹಾನೀಲ** (ನಾ). ೧. ಗಾಢವಾದ ನೀಲಿಯ ಬಣ್ಣ ; ಕಡುನೀಲಿಬಣ್ಣ. ೨. ಒಂದು ಬಗೆಯ ನೀಲರತ್ನ; ಇಂದ್ರನೀಲಮಣಿ. [ಸಂ.]

**ಮಹಾನೀಲಿ** (ನಾ). ಒಂದು ಬಗೆಯ ಗಿಡ ಮತ್ತು ಅದರ ಬೇರು : ದಾಸಾಳದ ಹೂ, ಆದರ ಚಿಗುರು, ಮಹಾನೀಲಿ ಇವಂ ಸಮಭಾಗವಾಗಿ ಅಂಬಿಲದಲ್ಲರೆದು ಕೊಡಲು ಘನ್ನೆತ್ತರು ನಿಲ್ಗುಂ (ಸಕವೈ. ೧೯೬). [ಸಂ. ಮಹಾನೀಲೀ]

**ಮಹಾನು** (ನಾ). ಮಹಾತ್ಮ ; ಮಹಾನುಭಾವ ; ಪೂಜ್ಯ : ದುಃಖಾತಿ ರೇಕದ ಹೇಯದೊಡಲನು ಜಾತಮಾಡುವರೇನು ಮಹಾನುಗಳೆಂದಳಿಂದು ಮುಖಿ (ಜಿಭಾಗ. ೦೦-೦೫-೦೩). [< ಸಂ. ಮಹಾನ್]

**ಮಹಾನುಭಾವ** (ನಾ). ೧. ಹಿರಿಮೆ; ಶ್ರೇಷ್ಠತೆ; ಔನ್ನತ್ಯ : ಧರಣೇಂದ್ರ ನವರ ಮಹಾನುಭಾವಮುಮನಾದಿದೇವನೊಳಾದುದೊಂದು ನಿರ್ಭರ ಭಕ್ತಿಯುಮಂ ಮೆಚ್ಚಿ ನಿಜರೂಪಮಂ ತೋಱಿದಾಗಳ್ (ಆಪು. ೯-೧೦೯ ವ); ಮಹಾನುಭಾವದಿನೇದಿಂತಱಿಪೆಯುಮಱಿವಂ ಕೆಯ್ಕೊಳಲಱಿಯು (ಯು)ರಿ ಬಟುಯುಂ ವಿಮೋಹವಶದಿಂ ಕಿಱಿಯರ್ (ಜೀವಸಂ. ೧೯೬-೩); ಈ ತನುವಿಡಿದು ಮಂತ್ರದ ಮೂಲವ ಕಂಡೆ ಈ ತನುವಿಡಿದು ನಿಮ್ಮ ಶರಣರ ಮಹಾನುಭಾವವ ಕಂಡೆ (ಶಿಖಂಶೇ. ೦೯೯-೦೯೭). ೨. ಅತಿಶಯವಾದ ಅನುಭಾವ ; ಪರಮಾತ್ಮನ ಸಾಕ್ಷಾತ್ಕಾರ : ಗುರುಲಿಂಗಜಂಗಮದಿಂದೆ ಪಾದೋದಕಪ್ರಸಾದವಾಯಿತ್ತು ಆ ಭಾವವೆ ಮಹಾನುಭಾವವಾಗಿ ಎನಗೆ ಮತ್ತೆ ಬೇಱೆ ಪ್ರಸಾದವೆಂಬುದಿಲ್ಲ (ಬಸವ. ೬೭೭); ಅಂಗಕ್ಕೆ ಆಚಾರವೆ ಚೆಲುವು ಮನಕ್ಕೆ ಮಹಾನುಭಾವವೆ ಚೆಲುವು ಆತ್ಮಂಗೆ ಅಱುಹೆ ಚೆಲುವು (ಅಕಂಡೇ. ೨೯೦-೫೯). ೩. ಮಹಾವ್ಯಕ್ತಿ; ಮಹಾಪುರುಷ : ಆ ಮಹಾನುಭಾವಂ ತನ್ನ ರಾಜ್ಯಾಭಿವೃದ್ಧಿಯೊಳ್ ಕಸವರದೊಳ್ ಜಸಮಂ . . . ಕೊಳ್ವುದೊಲಸಾರದೊಳ್ ಸಾರಮಂ ಮಹೀಪತಿ ಕೊಂಡಂ (ಶಾಂತಿಪು. ೯-೦೨೯ ವ) ; ಮಹಾನುಭಾವರ ತೋಱಿದು ಎನಗೆ (ಬಸವ. ೯೯೦); ಮಹಾನುಭಾವನ ದರುಶನದಿ ಮಜ್ಜನ್ಮ ಸಫಲವಮ್ಮಕ್ಕ ಕೈಮುಗಿದು (ಕುಮಾ. ಭಾ. ೮-೬೩). [ಸಂ.]

**ಮಹಾನುಭಾವಿ** (ನಾ). ಮಹಾ ಅನುಭಾವವನ್ನು ಪಡೆದವನು : ಅಜ್ಞಾನಸುಜ್ಞಾನಗಳೆರಡೂ ಶಿವನೆಂದರೆ ಶಿವಜ್ಞಾನಿಗಳು ಮೆಚ್ಚುವರೆ ಶಿವ ಶಕ್ತಿಗಳೆರಡೂ ನೀನೆ ಎಂದರೆ ಮಹಾನುಭಾವಿಗಳು ಪರಿಣಾಮಿಸುವರೆ (ಅಪಸಂ. ೫೬೦-೦೦೯೦). [ಸಂ. ಮಹಾನುಭಾವಿನ್]

**ಮಹಾನೈವೇದ್ಯ** (ನಾ). ೧. ಪಂಚಪಕ್ವಾನ್ನ ಮುಂತಾದುವನ್ನು ದೇವರಿಗೆ ಅರ್ಪಿಸುವುದು : ದೇವರಿಗೆ ಮಹಾನೈವೇದ್ಯವಾದ ವೇಳೆ ಮಂಗಳಾರತಿಯ ಹೊತ್ತಿಗೆ ಎಲ್ಲರೂ ಅಲ್ಲಿ ಸೇರಿದ್ದರು (ಲೂಪ). ೨. ದೇವರಿಗೆ ಅರ್ಪಿಸುವ ಪಂಚಪಕ್ವಾನ್ನ ಮುಂತಾದುವು. [ಸಂ.]

**ಮಹಾನೈಷ್ಠಿಕ** (ನಾ). ಬ್ರಹ್ಮಚರ್ಯವೇ ಮೊದಲಾದ ತಪೋನಿಯಮ ಗಳನ್ನು ಕಟ್ಟುನಿಟ್ಟಾಗಿ ಪಾಲಿಸುವವನು ; ಅತ್ಯಂತ ನಿಷ್ಠಾವಂತ : ಕರ್ಮಾತ : ಈ ತಪೋಧನನಪ್ಪೊಡೆ ಮಹಾನೈಷ್ಠಿಕಂ ಮತ್ತಮಿಾತಂಗೀ ಕನ್ನೆಯೆಂತುಂ ಮಗಳಾಗಳ್ (ಶಂಕಸಂ. ೨೫೯-೩). [ಸಂ.]

**ಮಹಾಪಂಚಮೂಲ** (ನಾ). [ವೈದ್ಯಶಾ]ಬೆಲ್ಲವತ್ತ, ನರುವಲ, ಗುಳ್ಳ, ಪಾದರಿ ಮತ್ತು ಶಿವನ್ನಿ ಎಂಬ ಐದು ಬಗೆಯ ಔಷಧದ ಬೇರುಗಳು : ಬೆಲ್ಲವತ್ತದ ಬೇರು, ನರುವಲದ ಬೇರು, ಗುಳ್ಳದ ಬೇರು, ಪಾದರಿ ಬೇರು, ಶಿವನ್ನಿಬೇರು __ ಇಂತೆಂಬ ಮಹಾಪಂಚಮೂಲ . . . ಲಘುಪಂಚಮೂಲ ಕೂಡ ದಶಮೂಲವೆಂಬ ಈ ಬೇರುಗಳನ್ನು . . . ಸಣ್ಣ ನಾಗರೆದು ಕಷ್ಯಂ ಮಾಡೆ ಸನ್ನಿಪಾತರಿ ಮಾಣ್ಗುಂ (ಸಕವೈ. ೦೯೦). 'ದಶಮೂಲ', 'ಪಂಚಮೂಲ' ಪರಾ. [ಸಂ.]

**ಮಹಾಪಥ** (ನಾ). ೧. ಹೆದ್ದಾರಿ; ರಾಜಮಾರ್ಗ : ಮಹಾಪಥ—ಮಹಾಪಥ (ಕಶಬ್ದ. ೨೯೦ ಕ್ರಯೋ). ೨. ಸ್ವರ್ಗದ ದಾರಿ : 'ಮಹಾಪಥಗಮನ' ಪರಾ. ೩. ಸಾವು ; ಮರಣ : 'ಮಹಾಪಥಂಬೋಗು' ಪರಾ. ೪. ಶಿವ; ಈಶ್ವರ. [ಸಂ.]

**ಮಹಾಪಥಂಬೋಗು** (ಕ್ರಿ). ಸಾಯು ; ಮರಣಹೊಂದು : ಎನೋ ಬನಮಂ ಕುಡಲ್ವೇೞ್ಕುಮಿಾಯದಂದು ಅಂ ಮಹಾಪಥಂಬೋಪಂ (ಶಾಪುಂಪು. ೦೯೭). [ಮಹಾಪಥ + ಪೋಗು$_1$ (< ಪೋ$_1$)]

**ಮಹಾಪಥಗಮನ** (ನಾ). ಸ್ವರ್ಗಕ್ಕೆ ಮಾಡುವ ಪ್ರಯಾಣ : ವಿಮಲ ಮಾನಸರಾಗಿ ಮೋಹಭ್ರಮೆಗಳನು ತೊಲಗಿಸಿ ಮಹಾಪಥಗಮನವನು ಮಾಡಿದರು ಪಾಂಡುನೃಪಾಲನಂದನರು (ಕುಮಾ.ಭಾ. ೦ ಸೂಚನ). [ಸಂ.]

**ಮಹಾಪದ** (ನಾ). (?) : ಮಣಿಪದ ಮಹಾಪದಂಗಳಮೆತೆಯ ಪದಿನೆಂಟುತೆಱದ ಧಾನ್ಯಗಳಿಪ್ಪಾ ಕಣಜಂಗಳ ಸಾಲುಗಳಿಂ ಗಣಿಸುವವರಿ ದೆನಿಸಿ ಮೆಱೆವವಾ ಪುರದೆಡೆಯೊಳ್ (ರಶಾಸ. ೫-೭೭). "ಒಂದು ಬಗೆಯ ಧಾನ್ಯ (?)" (ರಶಾಪ. ಕೋಶ). [ ? ]

**ಮಹಾಪದ್ಮ** (ನಾ). ೧. ಬಿಳಿಯ ತಾವರೆ. ೨. ಕುಬೇರನ ನವನಿಧಿ ಗಳಲ್ಲಿ ಒಂದು : ಆ ದಿಕ್ಪಾಲಕರೊಳಾ ಕುಬೇರನೇ ಪದ್ಮ ಮಹಾಪದ್ಮ ಶಂಖ ಮಕರ ಕಚ್ಛಪ ಮುಕುಂದ ಕುಂದ ನೀಲ ಚರ್ಚಂಗಳೆಂಬ ನವನಿಧಿ ಗೊಡೆಯನಾಗಿ ಈಶ್ವರನಿಗೆ ಸಖನಾಗಿರ್ಪಂ (ಎಪೀಕ. ೦೬೭). ೩. ಪ್ರಸಿದ್ಧ ವಾದ ಎಂಟುಬಗೆಯ ಹಾವುಗಳಲ್ಲಿ ಒಂದು : "ಘನದನಂತಂ ವಾಸುಕಿ ಪ್ರಬಲ ತಕ್ಷಕಾಖ್ಯನು ಸುಕಾರ್ಕೋಟಕಂ ಪದ್ಮಂ ಮಹಾಪದ್ಮನೆನೆ ಶಂಖ ಪಾಳಂ ಕುಳಿಕನೆಂದು ನಾಗರಕುಲಂಗಳೆಂಟಕ್ಕೆ ನಾಮಂ" (ಪಂಗಶಾ. ೦೯೯-೯);

ರಾಜಾವರ್ತದ ಬಿಳಿದುಗಳು ಬೆನ್ನಿನಲ್ಲಿ ಉಳ್ಳದು ಮಹಾಪದ್ಮ ನೆನಿಸಿಕೊಂಬುದು (ಅಶ್ವ. ೨-೩). ೪. ಅಷ್ಟದಿಗ್ಗಜಗಳಲ್ಲಿ ಒಂದು. ೫. ಕುಬೇರನ ಒಬ್ಬ ಕಿನ್ನರ ಅನುಚರ. ೬. ಒಂದು ನರಕದ ಹೆಸರು : ಜಲೂಕ ಮಹಾವ್ಯಾಘ್ರ ಮರ್ಕಟ ಕರ್ಕಟ ಗಂಡಕವೆಂಬೈದು ಮಂತ್ರಿನರಕಂಗಳ ಸಹಾಯದಿಂ ಮಹಾಪದ್ಮವೆಂಬರಸುನರಕವಿಹುದು (ಅವೇಶ. ೦೫೩). ೭. [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಹದಿಮೂರನೆಯ ಸ್ಥಾನ ಮತ್ತು ಹದಿಮೂರುಅಂಕೆಗಳಿಂದ ಕೂಡಿದ ಒಂದು ದೊಡ್ಡಸಂಖ್ಯೆ : ಏಕ್ಕಂ, ದಾಹಂ . . . ಪದ್ಮ, ಮಹಾಪದ್ಮ . . . ಮಹಾಪರಿಮಿತ–ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬-೨೫) ; ಏಕ್ಕಂ ದಹಂ . . . ಪದ್ಮ ಮಹಾಪದ್ಮ . . . ಮಹಾಕ್ರತುವೆಂಬಿವೇ ಉಗ್ಘಡಣೆಗಳು (ಅವೇಶ. ೭). [ಸಂ.]

**ಮಹಾಪರಾಧ** (ನಾ). ದೊಡ್ಡತಪ್ಪು : ಎಲೆ ದುರಾತ್ಮ ಮಹಾಪರಾಧವ ಬೆಳಸುವರೆ (ಶಬ್ದಾ. ೩-೨೫) ; ನಾನು ಮಾಡಿದ ಮಹಾಪರಾಧವೇನು ? (ಹರಿಶಾ. ೨೫೫). [ಸಂ.]

**ಮಹಾಪರಾಧಿ** (ನಾ). ದೊಡ್ಡತಪ್ಪನ್ನು ಮಾಡಿರುವವನು : ನಾನು ಮಹಾಪರಾಧಿ (ಪಟಿಶಾ. ೨೬೧). [ಸಂ. ಮಹಾಪರಾಧಿನ್]

**ಮಹಾಪರಿಮಿತ** (ನಾ). [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ನಲವತ್ತನೆಯ ಸ್ಥಾನ ಮತ್ತು ನಲವತ್ತುಅಂಕೆಗಳಿಂದ ಕೂಡಿದ ಒಂದು ದೊಡ್ಡ ಸಂಖ್ಯೆ : ಏಕ್ಕಂ, ದಾಹಂ . . . ಪರಿಮಿತ, ಮಹಾಪರಿಮಿತ– ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬-೨೭). [ಸಂ.]

**ಮಹಾಪರಿಷೆ** (ನಾ). ದೊಡ್ಡಜಾತ್ರೆ : ಮಹೋತ್ಸವ : ಇದಕ್ಕೆ ಸಕ್ಷಿಳೆ ಬೆಳ್ಗನ್ನೂರುಂ ಕಿಜುವೆಳ್ಗನ್ನೂರುಂ . . . ನಗರಲ ಪನ್ನಿರ್ವ್ವರು ಮಹಾಪರಿಷೆಯುಂ ಎಡೆನಾಡ ಮುಪ್ಪನ್ಸರ್ಬ್ಬಿಗ್ಗಮುಣ್ಡುಗಳುಂ ಸಕ್ಷಿ (ಎಕ. III (R). ನಂಜನ. ೨೩೯-೫; ಸು. 10ನೆಯ ಶತ).

[ಮಹಾ + ಪರಿಷೆ (< ಪರಿಸ$_1$)]

**ಮಹಾಪರೂತ** (ನಾ). ದೊಡ್ಡಬೆಟ್ಟ : P ಇದು ಈಗಿನ ಶ್ರವಣಬೆಳಗೊಳದ ಚಂದ್ರಗಿರಿ : ಈ ಮಹಾಪರೂತದುಳ್ ಅಕ್ಷಯಕೀರ್ತ್ತಿ ತುನ್ತಕದ ವಾದ್ರ್ಗಿಯ ಮೇಲದು ನೋನ್ತು ಭಕ್ತಿಯಿಮ್ ಅಕ್ಷಿಮಣಕ್ಕೆ ರಮ್ಯಸುರಲೋಕಸುಕಕ್ಕೆ ಭಾಗಿಅ × × × (ಎಕ. II, ೨೦-೨ ; ಸು. 700).

[< ಸಂ. ಮಹಾಪರ್ವತ]

**ಮಹಾಪಸಾಯತ** 'ಮಹಾಪಸಾಯ್ತ' ನೋ.

**ಮಹಾಪಸಾಯಿತ** 'ಮಹಾಪಸಾಯ್ತ' ನೋ.

**ಮಹಾಪಸಾಯ್ತ**, ಮಹಾಪಸಾಯುತ, ಮಹಾಪಸಾಯಿತ (ನಾ). ಹಿಂದೆ ರಾಜನ ಬಳಿ ಇರುತ್ತಿದ್ದ ಒಬ್ಬ ಅಧಿಕಾರಿ : ಸ್ವಸ್ತಿಶ್ರೀಮನುಮಹಾಪಸಾಯ್ತರುಮಪ್ಪ ವಾಮಣಮಲ್ಲಣನವರು ಕೊಂಗಿಂಗೆ ಧಾಳಿಯ ಹರಿವಲ್ಲಿ (ಕ್ಯಾಕೋ. ೦೯೩೦, ೩೫-೪ ; 1156). **ಮಹಾಪಸಾಯುತ** : ಶ್ರೀಮನುಮಹಾಪಸಾಯುತ ತಿರ್ಮಮಪ್ಪ × × ಧಿಕಾರಿ ಸಂಭುದೇವಂಣನವರ × × (ಎಕ. II (R), ೨೯೯-೯; 1279). **ಮಹಾಪಸಾಯಿತ** : ಕಂನಡ ಪೆರಿಲಾಳ ಸಂಧಿವಿಗ್ರಹಿ ಮಹಾಪಸಾಯಿತಂ ಬಾಹತ್ತರನಿಯೋಗಾಧಿಪತಿಯಪ್ಪ ಬನವಸೆನಾಡ ದಣ್ಡನಾಯಕಂ ಚೊಳಿಕಿಯ ಕೇಸಿಮಯ್ಯಂಗಳ ಬೆಸದಿಂ (ಕಇ. IV, ೦೯-೯ ; 1172); ಶ್ರೀಮನ್ಮಹಾಪಸಾಯಿತಂ ವ್ಯೆಯಿಲರದೇವರ ದಿವ್ಯಶ್ರೀಪದಾರಾಧಕ (ಎಕ. XVI, ತಿಪಟೂ. ೦೫೭-೦೦ ; ?). [ಮಹಾ + ಪಸಾಯ್ತ]

**ಮಹಾಪಾತಕ** (ನಾ). ೧. ಘೋರವಾದ ಪಾಪ,–ದೋಷ; ಪಂಚಮಹಾಪಾತಕಗಳಲ್ಲಿ ಯಾವುದಾದರೂ ಒಂದು : ಅದಾನಳಿಪೊನ್ಗೆ ಮಹಾಪಾತಕವಾ (ಕ್ಯಾಕೋ. ೦೯೩೬, ೦೬-೦೫; ಸು. 450); ಪಾತಕಮಹಾ [ಶಾತಾ. ಹತ್ತು] ಪಾತಕವ ಮಾಡಿದವನು ಸನ್ಯಕ್ಷರ ಮನೆಗೆ ಹೋಗಿ ಅವರೊಕ್ಕ ಪ್ರಸಾದವನಾಯ್ದುಂಡರೆ ಸಕಲಬ್ರಹ್ಮಹತ್ಯಾದಿಪಾತಕ ಪರಿಹಾರವು (ಬಸವ. ೯೬೯) ; ಎಲೆ ತಾಯಿಯಿ ದುಸ್ತರಮಹಾಪಾತಕವನೆಂತುತ್ತರಿಸುವೆನು ಮುಂದೆ (ಬಸವು. ೯೫-೨೫). ೨. ಘೋರವಾದ ಪಾಪಕಾರ್ಯವನ್ನು ಮಾಡಿದವನು ; ಪಂಚಮಹಾಪಾತಕಗಳಲ್ಲಿ ಯಾವುದಾದರೊಂದು ಪಾತಕವನ್ನು ಮಾಡಿದ ವ್ಯಕ್ತಿ : ಬಟಾರಿಕುಲದೊನಳು ಕದಮ್ಬನ್ಕಳ್ದೋನ್ ಮಹಾಪಾತಕನ್ (ಕ್ಯಾಕೋ. ೦೯೩೬, ೦೬-೦೩ ; ಸು. 450); ಯಿ ಧರ್ಮವ ಕಿಡಿಸಲು ಮನವದಂದ ಮಹಾಪಾತಕಗೆ ಸಹಸ್ರಕವಿಲೆಯು ಬ್ರಾಹ್ಮಣರ ಗಂಗೆಯು ತಡಿಯು ಕೊಂದ ಪಾತಖ (ಎಕ. VI, ಕಡೂರು. ೦೫೯-೭ ; 1206). 'ಪಂಚಮಹಾಪಾತಕ' ಪರಾ. [ಸಂ.]

ಮಹಾಪಾತಕಿ (ನಾ). = ಮಹಾಪಾತಕ ೨ : 'ಪಂಚಮಹಾಪಾತಕಿ' ಪರಾ. [ಸಂ. ಮಹಾಪಾತಕಿನ್]

ಮಹಾಪಾತ್ರ (ನಾ). ಮಹಾಮಂತ್ರಿ ; ಪ್ರಧಾನ ಹೆಗ್ಗಡೆ : ಶ್ರೀ ತೆಉಡಾಬೆಹಾರ ಮಹಾಪಾತ್ರ ಶ್ರೀಸೋಮಶಿಲಾದೆಉರಾಹುತರಾಯ ಮಹಾಪಾತ್ರ (ಎಕ. XIV, ಗುಂಡ್ಲುಪೇ. ೦೩೨-೩ ; 1540).

[ಸಂ. ಮಹಾಪಾತ್ರ]

ಮಹಾಪಾಪ (ನಾ). = ಮಹಾಪಾತಕ ೧ : ನೀವು ಮಾಡಿದ ಮಹಾಪಾಪವನ್ನು ನಾನೇಕೆ ವಿವರಿಸಬೇಕು ? (ಕಾವೇಂ.೨೦೭); ಅದು ಮಹಾಪಾಪವೆಂದು ನನಗೆ ಭಾಸವಾಗುತ್ತದೆ (ಹಿಂಕಿರು.೦೩). ' ಪಂಚಮಹಾಪಾಪ ' ಪರಾ.

[ಸಂ.]

ಮಹಾಪಾಪಿ (ನಾ). = ಮಹಾಪಾತಕ ೨ : ಕೀಚಕ ಅನ್ನೋನು ಒಬ್ಬ ಮಹಾಪಾಪಿ (ಪಳುಬು. ೨೦೭). [ಸಂ. ಮಹಾಪಾಪಿನ್]

ಮಹಾಪಾರುವ (ನಾ). ಶ್ರೇಷ್ಠನಾದ ಬ್ರಾಹ್ಮಣ : ಯಾ ಧರ್ಮವ ನಾವನಾನುಂ ಪ್ರತಿಪಾಳಿಸಿದ ಮಹಾಪಾರುವರ್ಗ್ಗೆ ಸಹಸ್ರಕವಿಲೆಯ ಕೋಡು ಕೊಳಗಂ ಸುವಂನದಲ್ಲಿ ಕಟಿಸಿ ಗಂಗೆಯ ತಡಿಯ ದಾನ ಮಾಡಿದ ಫಲ (ಎಕ. VI. ಕಡೂರು. ೦೫೪-೭ ; 1206). [ಮಹಾ + ಪಾರುವ (< ಪಾರ್ವ)]

ಮಹಾಪುರಾಣ (ನಾ). ೧. ಸೃಷ್ಟಿ, ದೇವತೆ ಹಾಗೂ ಪಿತೃಗಳ ವಂಶದ ವಿವರ, ಮನ್ವಂತರ ಮುಂತಾದ ವಿಷಯಗಳ ನಿರೂಪಣೆಗಳನ್ನೊಳಗೊಂಡ, ಸಂಸ್ಕೃತದಲ್ಲಿ ರಚಿತವಾದ (ಹದಿನೆಂಟು) ಮುಖ್ಯಪುರಾಣ: ಮಹಾಪುರಾಣಗಳಿಗೆ ಹತ್ತುಲಕ್ಷಣಗಳಿರುತ್ತವೆ (ಶಾರದ. ೦೩೫). ೨. [ಜೈನ] ಜಿನಸೇನಾಚಾರ್ಯ ಮತ್ತು ಗುಣಭದ್ರಾಚಾರ್ಯರಿಂದ ರಚಿತವಾದ ತ್ರಿಷಷ್ಟಿಶಲಾಕಾಪುರುಷರನ್ನು ಕುರಿತ ಸಂಸ್ಕೃತಪುರಾಣಗ್ರಂಥ : ಜಿನರ್ಗಂ ತ್ರಿಕಾಲಯೋಗಂ ಜಿನರ್ಗಂ ಸ್ವಾಧ್ಯಾಯಮಯ್ದುವಾಸವಿಂತಿಗಳುಂ ಜಿನರ್ಗವೊಳವುಳ್ಳೊಡಂ ನೆಟಿಯೆ ನೋಡಿ ನಂಬುಗೆ ಮಹಾಪುರಾಣದೊಳೆ ಬುಧರ್ (ಆಪ್ತು. ೦೨-೩೦). [ಸಂ.]

ಮಹಾಪುರುಷ (ನಾ). ೧. ಮೂವತ್ತೆರಡುಲಕ್ಷಣಗಳಿಂದ ಕೂಡಿದ ಶ್ರೇಷ್ಠನಾದ ಮನುಷ್ಯ; ಮಹಾತ್ಮ : ಪಟುವರುಮಂ–ತವಿಸಿ ಕಟು ಯದುಟುವಳನಾದಂ ಪಟುಕಯ್ದು ತೊಟ್ಟನುಟುದಂತುಟುದ ಮಹಾಪುರುಷ ರಜಿುಯುದುಟುದರೆ ಸಿರಿಯುಂ (ಕವಿರಾ. ೩-೦೭೫); ಚಕ್ರವರ್ತಿಪದಮುಂ ತನಗಾವಗಮಾದೊಡಾ ಮಹಾಪುರುಷನದಂ ಜರತ್ತೃಣಗಣಾನುಗುಣಂ ಪಲಮೆಂದೆ ಪೇಸಿದಂ (ಆದಿಪು. ೩-೭೮); ಭಾರತದ ಇತಿಹಾಸ ಮಹಾಪುರುಷರ ಆವಿರ್ಭಾವವನ್ನು ಪ್ರಕಾಶಪಡಿಸುತ್ತಿದೆ (ಮುಕ್ತಾರ. ೦೦೫ ಹಿಂ೦೪). ೨. ಮಹಾತ್ಮನಾದ ಋಷಿ : ಹಿರಿಯ ಬಿರುದಿನ ಮುದ್ರೆಯಿದು. . . . ಮೇಲುಳ್ಳ ಸರ್ವಸ್ವವಿದು ನೋಡಿಕೋ ಮಹಾಪುರುಷ ಎಂದು ವರಕೌಶಿಕಂ ಗೊಪ್ಪಗೊಟ್ಟು (ಹರಿಶ್ಚಾ. ೯-೪). ೩. ವಿಷ್ಣು. [ಸಂ.]

ಮಹಾಪುರುಷೆ (ನಾ). ಶ್ರೇಷ್ಠಳಾದವಳು : ಎಲ್ಲಿಯದು ಪೇಳಾ ಮಹಾಪುರುಷೆ ಈ ಫಲಂ (ಗಾಂಧ. ದೇ. ೨೬೩-೭). [ಸಂ. ಮಹಾಪುರುಷ: ]

**ಮಹಾಪೂಜೆ** (ನಾ). ವ್ರತಸಮಾಪ್ತಿಯಂಥ ವಿಶೇಷಪ್ರಸಂಗದಲ್ಲಿ ಅತ್ಯಂತಸಂಭ್ರಮದಿಂದ ಮಾಡುವ ಪೂಜೆ : ಸಹಸ್ರಕೂಟಮೆಂಬ ಜಿನಾಲಯಮಂ ಮಾಡಿಸಿ ಅದರ್ಕನವರತಂ ಮಹಾಪೂಜೆಯುಮಂ ಮಹಿಮೆಯುಮಭಿಷೇಕಂಗಳುಮಂ ಸಲಿಸುತಿರ್ಪೊಂ (ವಡ್ಡಾರಾ. ೩೨-೨೦); ಭರತೇಶ್ವರ ಚಕ್ರವರ್ತಿ ವಿನಯಜನಸಮೇತಂ ಬಂದು . . . ಮಹಾಮಹಮೆಂಬ ಮಹಾಪೂಜೆಯಂ ಮಹಾವಿಭೂತಿಯಿಂ ಪದಿನಾಲ್ಕುದಿವಸಂಬರಂ ನಿರಂತರಂ ಮಾಡೆ (ಆದಿಪು. ೦೬-೯೯ ವ). [ಸಂ. ಮಹಾಪೂಜಾ]

**ಮಹಾಪೂರ** (ನಾ). (ಅತಿವೃಷ್ಟಿಯಿಂದಾಗಿ ನದಿಯಲ್ಲಿ ಉಂಟಾಗುವ) ಉಬ್ಬರ; ನೆರೆ; ಪ್ರವಾಹ : ಈ ಕಾಲಸೆಂಬುವ ಪ್ರಾಣಿ. . . ನದಿನದಿಯ ಗರ್ಭವ ಹೊಕ್ಕು, ಮಹಾಪೂರದಲಿ ಹೊರಬಂದು ನರ್ಮದೆಯಲ್ಲಿ ತುಡಿವ ತಬಲವಾಗಿದ್ದಾನೆ (ನಂಪು. ೩೦-೭); ಆ ಮಾತಿನಲ್ಲಿ. . . ಪ್ರೀತಿಯ ಮಹಾಪೂರವೇ ಹರಿದುಬರುವಂತಿತ್ತು (ವಾತ್ಸಲ್ಯ. ೭೪). [ಸಂ.]

**ಮಹಾಪ್ರತೀಹಾರ** (ನಾ). (ಅರಮನೆಯ) ಪ್ರಧಾನದ್ವಾರಪಾಲಕ : ಹಿರಿಯ ದ್ವಾರಪಾಲಕ : ಆಗಳ್ ಮಹಾಪ್ರತೀಹಾರಂ ಪಾಸಿದುತ್ತರೀಯ ವಸನದೊಳ್ ಕುಳ್ಳಿರ್ದು (ಚಂದ್ರಪ್ರ. ೫-೨೪ ವ). [ಸಂ.]

**ಮಹಾಪ್ರಧಾನ** (ನಾ). ರಾಜನಿಗೆ ಸಹಾಯಕನಾಗಿರುತ್ತಿದ್ದ ಒಬ್ಬ ಹಿರಿಯ ಅಧಿಕಾರಿ : ಶ್ರೀಮನ್ಮಹಾಪ್ರಧಾನ ಹಿರಿಯ ದಂಡಾಧಿಪ (ಎಕ. II (R), ೫೭೮-೫೭; 1094); ಶ್ರೀಮನ್ಮಹಾಪ್ರಧಾನಂ ಸರ್ವಾಧಿಕಾರಿ ಪಿರಿಯ ದಂಡನಾಯಕಂ ಭರತಿಮಯ್ಯಂಗಳುಂ (ಎಕ. II (R), ೭೦-೦೦೦; 1163). [ಸಂ.]

**ಮಹಾಪ್ರಬಂಧ** (ನಾ). ೧. ದೊಡ್ಡದಾದ ಸಾಹಿತ್ಯಕೃತಿ; ಮಹಾಕಾವ್ಯ : ಮುನ್ನಿನ ಕಬ್ಬಮನೆಲ್ಲಮಿಕ್ಕಿ ಮೆಟ್ಟಿದುವು ಸಮಸ್ತಭಾರತಮುಮಾದಿಪುರಾಣಮಹಾಪ್ರಬಂಧಮುಂ (ಶಂಕರಾ. ೧೪-೫೯); ಪಟಿಗಬ್ಬಮೆಲ್ಲಮಂ ಠಕ್ಕಿಸಿ ತಿಂದು ಕಂಬಳದ ಮಾಟ್ಕೆಯ ಮಾಡುವೆನೆಂಬ ಸಾಸಿಗಂಗಕ್ಕಟ ಪೂಣ್ದು ನಿರ್ವಹಿಪುದೇನರಿದಾಯ್ತೆ ಮಹಾಪ್ರಬಂಧಮುಂ (ಸೂಕ್ತಿಸು. ೦-೩೭). ೨. ಅಭ್ಯರ್ಥಿಯು ವಿಶ್ವವಿದ್ಯಾನಿಲಯದ ಡಾಕ್ಟರೇಟ್ ಪ್ರಶಸ್ತಿಗಾಗಿ ಒಂದು ನಿರ್ದಿಷ್ಟ ವಿಷಯದ ಬಗೆಗೆ ಬರೆದು ಸಲ್ಲಿಸುವ ಸಂಶೋಧನಾತ್ಮಕ ಬರವಣಿಗೆ,–ಗ್ರಂಥ ; ನಿಬಂಧ : ಇತಿಹಾಸದ ಬಗೆಗಿನ ಅವರ ಮಹಾಪ್ರಬಂಧಕ್ಕೆ ಮೈಸೂರುವಿಶ್ವವಿದ್ಯಾನಿಲಯದ ಡಾಕ್ಟರೇಟ್ ಪ್ರಶಸ್ತಿ ದೊರೆತಿದೆ (ರೂಢಿ). [ಸಂ.]

**ಮಹಾಪ್ರಭು** (ನಾ). ೧. ಹಿರಿಯ ಯಜಮಾನ,–ಒಡೆಯ. ೨. ರಾಜ ; ಅರಸು. ೩. ಮುಖ್ಯಾಧಿಕಾರಿ ; ಪ್ರಧಾನಾಧಿಕಾರಿ : ಮಹಾಪ್ರಭುಮಾದಿರಾಜಪ್ರಮುಖಮಹಾಜನಂಗಳ್ಕೆನೂರ್ವ್ವರನುಮತದಿಂ ಬಿನ್ನಪಂಗೆಯ್ಯಲ್ (ಎಇ. V, ೧೮-೩೭; 1161). ೪. ಶಿವ. ೫. ವಿಷ್ಣು. ೬. ಇಂದ್ರ. ೭. ದೊಡ್ಡಸಾಧು. ೮. ರಾಜರು, ಹಿರಿಯರು ಮುಂತಾದವರನ್ನು ಸಂಬೋಧಿಸುವಾಗ ಬಳಸುವ ಒಂದು ಗೌರವ ಸೂಚಕ ಪದ : ಮಹಾಪ್ರಭುಗಳೇ ! ನನಗೊಂದು ಸಂಶಯವು ಬಂದಿದೆ (ಶ್ರೀರಾಮ. ೨೪೯). [ಸಂ.]

**ಮಹಾಪ್ರಲಯ. ಮಹಾಪ್ರಳಯ** (ನಾ). ಕಲ್ಪದ ಕೊನೆಯಲ್ಲಿ ಆಗುವುದೆಂದು ನಂಬಲಾದ, ಜಗತ್ತಿನ ಸಂಪೂರ್ಣನಾಶ : ಸಕಳಮಂ ಸಂಹರಂಮಾಡಿ ಬಿಂಕದುನ್ನತಿಯುಂ ಪ್ರಕಟಿಪ ಭಯಂಕರಂಗೆ ಮಹಾಪ್ರಲ[ಶಾಕಾಂ.೪]ಯ ಭಯದಿಂ ಕೆಡೆವುತಂ ಕೆಡೆವುತಿಹ ಬಡದೈವಗಳು ಸರಿಯೆ (ಬಸವ. ೫೪-೨೩); ಪ್ರಪಂಚದ ಸಂಹಾರವೇ ಪ್ರಲಯ. ಮಹಾಪ್ರಲಯ ಮತ್ತು ಅವಾಂತರ ಪ್ರಲಯವೆಂದು ಪ್ರಲಯ ಎರಡು ವಿಧ. ಬ್ರಹ್ಮಾಂಡ ಮೊದಲು ತ್ರಿಗುಣ ಪರ್ಯಂತ ಪ್ರಲಯವು ಮಹಾಪ್ರಲಯ (ಹಿಂದಸಾ. ೨೮೪). **ಮಹಾಪ್ರಳಯ** : "ಸಂವರ್ತಃ . . . ಸಂಹಾರಃ, ಮಹಾಪ್ರಳಯಃ– ಈ ೯ ಪ್ರಳಯಕಾಲಂ" (ಹಲಾಯು. ೨೦-೦೦೭); ರಸಾಯನದೋಗರಂಗಳು ನಿಮ್ಮ ಭಾಗವಿದಾಗಿ ಹಾಲಾಹಲ ಮಹಾಪ್ರಳಯದ ಗರಳವೆಮ್ಮ ಭಾಗವೇ (ಬಸವ. ೫೭-೪೭); ಜಗಕ್ಕೆ ಪ್ರಳಯ ಮಹಾಪ್ರಳಯಂಗಳುಂಟು (ಅಬಂಡೀ. ೦೦೫-೭೦). [ಸಂ.]

**ಮಹಾಪ್ರಸಾದ** (ನಾ). ೧. ಅತಿಶಯವಾದ ದಯೆ,– **ಕರುಣೆ** ; ಅಧಿಕವಾದ ಅನುಗ್ರಹ : ಚರಣಭಜಕಕುಟುಂಬನೆಂಬೀ ಬಿರುದ ಪಾಲಿಸಿಬಿನ್ನಹವನವಧರಿಸಿ ಕಾಣಿಸಿಕೊಡುವುದೆಮಗೆ ಮಹಾಪ್ರಸಾದವನು (ಕುಮಾ.ಭಿ. ೦೦-೩೮). ೨. ದೇವರಿಗೆ ಅರ್ಪಿಸಿದ ಅನ್ನ ಮೊದಲಾದುವು: ಗುರುಲಿಂಗ ಜಂಗಮದಿಂದೆ ಪಾದೋದಕಪ್ರಸಾದವಾಯಿತ್ತು, ಆ ಭಾವವೇ ಮಹಾಪ್ರಸಾದವಾಗಿ ಎನಗೆ ಬೇಱೆ ಪ್ರಸಾದವೆಂಬುದಿಲ್ಲ (ಬಸವ. ೪೭೦). ೩. **ಹಿರಿಯರು**, ಪೂಜ್ಯರು ಅನುಗ್ರಹಿಸಿ ಕೊಟ್ಟ ಪವಿತ್ರವಾದ ವಸ್ತು : **ದೇವ**ಭವದೀಯಾಗ್ರಜಂ ರಾಜಾಧಿರಾಜಂ ನಿಮಗಟ್ಟಿದ **ಮಹಾಪ್ರಸಾದಂ** ಬಿನ್ನಪಮೆಂದು ಮುಂದಿಟ್ಟು (ಆದಿಪು. ೦೪-೪೩ ವ); **ಈ ಆಪತ್ಕಾಲದಲ್ಲಿ** ಇದೇ ಒಂದು ಮಹಾಪ್ರಸಾದವೆಂದು ಆತನು ಅದರ ಪ್ರಚಾರಕ್ಕೆ ನಿಂತನು (ಚತಸ. ೯೦). ೪. ಹಿರಿಯರು ಹಾಗೂ ಪೂಜ್ಯರ ಮಾತಿಗೆ ಒಪ್ಪಿ ಗೌರವಸೂಚಕವಾಗಿ 'ಹಾಗೆಯೇ ಆಗಲಿ', 'ತಮ್ಮ ಚಿತ್ತ' ಎಂಬರ್ಥದಲ್ಲಿ ಬಳಸುವ ಒಂದು ಶಬ್ದ : ವಿಭು ನಿಸೃಷ್ಟಾರ್ಥನನಾಸನದೊಳ್ ಕುಳ್ಳಿರಿಮೆನೆ ದೂತನುಮೊಸೆದು ಮಹಾಪ್ರಸಾದಮೆಂದಭಜಾತಂ ಕುಳ್ಳಿರ್ದು (ಶಾಂತಿಪು. ೨-೭೪) ; ದೇವ ವನಮಹತ್ತರಂ . . . ಬಾಗಿಲೊಳಿರ್ದಪನೆಂಬುದುಂ ಬರವೇಱೆನೆ ಮಹಾಪ್ರಸಾದಮೆಂದೊಡಗೊಂಡು ಬಂದೊಡೆ (ಚಂದ್ರಪ್ರ. ೨-೭೫). [ಸಂ.]

**ಮಹಾಪ್ರಸಾದಿ** (ನಾ). [ವೀಶೈ] ಷಟ್ಸ್ಥಲಗಳಲ್ಲಿ ಮೂರನೆಯದಾದ ಪ್ರಸಾದಿಸ್ಥಲವನ್ನು ಸಾಧನೆಯಿಂದ ಮುಟ್ಟಿದವನು : ಅಲ್ಲಲ್ಲಿ ತಾಗಿದ ಸುಖವನಲ್ಲಲ್ಲಿಯೆ ಲಿಂಗಾರ್ಪಿತವ ಮಾಡಬಲ್ಲನಾಗಿ ಕೂಡಲಚನ್ನಸಂಗಯ್ಯಾ ಆತನೆ ಮಹಾಪ್ರಸಾದಿ (ಚನ್ನವ. ೪. ೩೭೪-೭೭೦). [ಸಂ. ಮಹಾಪ್ರಸಾದಿನ್]

**ಮಹಾಪ್ರಸ್ಥಾನ** (ನಾ). ೧. ಸಾವು ; ಮರಣ. ೨. ಮರಣದೀಕ್ಷೆಯನ್ನು ಕೈಗೊಂಡು ಉತ್ತರದಿಕ್ಕಿಗೆ ಮಾಡುವ ದೀರ್ಘಪ್ರಯಾಣ : ಅದನು ಕೇಳುತ ಧರ್ಮಜನು ಶೋಕದಲಿ ಮಮ್ಮಲಮರುಗಿ ವೈರಾಗ್ಯದಿ ಮಹಾಪ್ರಸ್ಥಾನವನು ವಿರಚಿಸುವೆನೆಂದೆಣಿಸಿ ತ್ರಿದಶಪತಿಯ ಕುಮಾರನನು ನುಡಿಸಿದನು (ತಿಮ್ಮಮ. ೧-೨); ಯುಧಿಷ್ಠಿರನು ತನ್ನ ಸಹೋದರರು ಮತ್ತು ಪತ್ನಿಯೊಡನೆ ಮಹಾಪ್ರಸ್ಥಾನ ಮಾಡುತ್ತಾನೆ (ಭಾರದ. ೦೦೦). [ಸಂ.]

**ಮಹಾಪ್ರಳಯ** 'ಮಹಾಪ್ರಲಯ' ನೋ.

**ಮಹಾಪ್ರಾಣ** (ನಾ). ೧. ಕಾಗೆಯ ಜಾತಿಗೆ ಸೇರಿದ ಒಂದು ಬಗೆಯ ದೊಡ್ಡಪಕ್ಷಿ.— ಡೊಂಬಕಾಗೆ. ೨. ಅತಿಶಯವಾದ ಶಕ್ತಿ,– ಸತ್ತ್ವ : 'ಮಹಾಪ್ರಾಣತೆ' ನೋ. ೩. ಶರೀರದಲ್ಲಿರುವ ಒಂದು ಬಗೆಯ ವಾಯು : "ಮೇಲು ಕೆಳಗಂ ನೋಡುವುದು ದೇವದತ್ತಮಕ್ಕು . . . ಕೈಕಾಲ ಗತಿಯಲ್ಲಿಹುದು ವಿಶ್ವವಕ್ಕೊತ್ತಿ ಹಿಡಿಯುವುದು ಮಹಾಪ್ರಾಣಮಕ್ಕುಂ" (ಮಂಗರಾ. ೦೭-೧೩). ೪. [ವ್ಯಾಕ] ಉಚ್ಚಾರಣೆಗೆ ಹೆಚ್ಚು ಉಸಿರು ಬೇಕಾಗುವ ಖ, ಘ, ಛ, ಝ, ಠ, ಢ, ಥ, ಧ, ಫ, ಭ–ಎಂಬ ಅಕ್ಷರಗಳು : ಪೀಡನಪ್ರಯತ್ನಾಶ್ರಯದಿಂ ದೊರೆಕೊಂಡ ಸಂಖ್ಯೆಯೊಳಮನುಕರಣದೊಳಂ ವರ್ತಿಕುಂ ಮಹಾಪ್ರಾಣಂಗಳ್ (ಕಾವ್ಯಾವ. ೨೨) ; ವರ್ಗದ್ವಿತೀಯವರ್ಣಂ ವರ್ಗಚತುರ್ಥಾಕ್ಷರಂ ಮಹಾಪ್ರಾಣಂ (ಶಮದ. ೦೪). ೫. ಮಹಾಪ್ರಾಣಾಕ್ಷರಗಳನ್ನು ಉಚ್ಚರಿಸಲು ಬೇಕಾಗುವ ಹೆಚ್ಚು ಉಸಿರು : ದೀರ್ಘಪ್ರಾಣಮಂ ಮಹಾಪ್ರಾಣಮೆಂದು ಸ್ನುಹಿವೃಕ್ಷಮಂ ಮಹಾವೃಕ್ಷಮೆಂದು ನುಡಿವಂತೆ ಭೀಮನಂ ಮಹಾರಥನೆಂದು ನುಡಿಯಲ್ಕಕ್ಕುದೆ ಮಲಂ (ಗದಾಯು. ೩-೫೭ ವ). [ಸಂ.]

**ಮಹಾಪ್ರಾಣತೆ** (ನಾ). ಅತಿಶಯವಾದ ಬಲ,_ ಕಸುವು; ಮಹಾ ಸಾಮರ್ಥ್ಯ : ಸಕಳಶ್ರಮಂಗಳಿಂದಂ ವೃಕೋದರನ ತೆಱದಿನಂದು ಶೈಶವದೊಳ್ [ಲೋಕಕೆ ಚಿತ್ರಮಪ್ಪಿನಂ] ರಾಜಕುಮಾರಂ ತಾಳ್ದಿದಂ ಮಹಾಪ್ರಾಣತೆಯಂ (ಕಾದಂಪೂ. ೪೩೭). [ಸಂ. ಮಹಾಪ್ರಾಣತಾ]

**ಮಹಾಪ್ರಾತಿಹಾರ್ಯ** (ನಾ). [ಜೈನ] ಜಿನನ ಎಂಟು ಮಂಗಳಕರವಾದ ಲಾಂಛನಗಳು : 'ಅಷ್ಟಮಹಾಪ್ರಾತಿಹಾರ್ಯ' ಪರಾ. [ಸಂ.]

**ಮಹಾಘಣ** (ನಾ) [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಮೂವತ್ತು ನಾಲ್ಕನೆಯ ಸ್ಥಾನ ಮತ್ತು ಮೂವತ್ತುನಾಲ್ಕುಅಂಕೆಗಳಿಂದ ಕೂಡಿದ ಒಂದು ದೊಡ್ಡ ಸಂಖ್ಯೆ : ಎಕ್ಕಂ. ದಾಹಂ . . . ಮಹಾ ಘಣ. ಕ್ರತು . . . ಮಹಾಪರಿಮಿತ-ಈ ೪೦ ಸ್ಥಾನದ ಉಗ್ಗಡಣೆ (ತ್ರಿಶಸಾ. ೬-೨೭) ; ಎಕ್ಕಂ . . . ಘಣೆ ಮಹಾಘಣೆ ಕ್ರತು ಮಹಾಕ್ರತು ವೆಂಬಿವೇ ಉಗ್ರ್ಘಡಣೆಗಳು (ಏಪಳ. ೭). [ಸಂ. ಮಹಾಘಣನ್]

**ಮಹಾಫಲ** (ನಾ). ೧. ದೊಡ್ಡಗಾತ್ರದ ಹಣ್ಣು. ೨. ಒಳ್ಳೆಯ ಪ್ರಯೋಜನವುಳ್ಳುದು ; ಹೆಚ್ಚು ಉಪಯೋಗಕರವಾದುದು : ಅರಿಯಿರ್ಕೆ ಆ ಪಿಂಡಪಾತದ್ವಯಂ ಪಿಂಡಪಾತಾಂತರದಿನೆನಿತೂ ಆಯುಷ್ಕರಂ, ಯಶಸ್ಕರತರಂ, ಸುಖಕರಂ, ಸ್ವರ್ಗಂಕರಂ, ಮಹಾಫಲತರಂ ! (ವೃಕಾಜ. ೭೪-೨೩೭). ೩. ಒಂದು ಬಗೆಯ ಸಸ್ಯ ಮತ್ತು ಅದರ ಹಣ್ಣು : ಮಾದಳ, ಅರೆಮಾದಳ, ಮಾದವಾಳ, ಮಹಾಫಲ (ವೈಶಿಗ. ೨೨-೪೦೭). ೪. ಒಂದು ಬಗೆಯ ಮರ ; ಬಿಲ್ವಪತ್ರೆ. [ಸಂ.]

**ಮಹಾಬಲ** (ಗು). ೧. ಬಹಳ ಶಕ್ತಿಶಾಲಿಯಾದ ; ಅತ್ಯಂತ ಸಾಮರ್ಥ್ಯವುಳ್ಳ. (ನಾ). ೨. ಗಾಳಿ ; ವಾಯು : "ಪವನಃ, ಶ್ವಸನಃ . . . ಹರಿಃ, ಮಹಾಬಲಃ_ ಈ ೨೦ ಗಾಳಿಯ ಪೆಸರ್" (ಕಠಾಯು. ೦೪-೭೭). ೩. ದೊಡ್ಡ ಸೈನ್ಯ ; ಅಪರಿಮಿತವಾದ ಸೇನೆ : ಅಗಿವ ಪಟಹ ಮೃದಂಗ ಕಹಳಾದಿಗಳ ಕಳಕಳರಭಸ ದಶದಿಕ್ಕುಗಳ ಮಾತಾಡಿಸೆ ಮಹಾಬಲ ತೆರಳಿತಿಭಪುರಿಯ (ಕುವ್ಯಾಶೀ. ೦-೪೭); ನಿರಾಯುಧ ಲತಾಂಗಿಯರ ಲಾವಣ್ಯವಿಕ್ರಮವನಬಲಾ ಮಹಾಬಲವನುರೆ ಹಾರಿ ಚೈತ್ರವಾಹಿನಿ ಬರುತಲಿರೆ (ಜತ್ಯಾಂಗ. ೦೭-೪೭೦). ೪. ಶಿವ: ಅತಿಬಲಂ ಮಹಾಬಲ . . . ಭಸ್ಮಾಂತಕಂ (ಬಿಕ್ಕವು. ೬-೪-೨೨). ೫. ಬುದ್ಧ. [ಸಂ.]

**ಮಹಾಬಲೆ** (ನಾ). ಒಂದು ಬಗೆಯ ಸಸ್ಯ : ''ರಾಜಬಲಾ—ಮಹಾಬಲೆ, ಪ್ರಸಾರಿಣಿ'' (ಪಿಕಥ. ೦೩೬). [ಸಂ. ಮಹಾಬಲಾ]

**ಮಹಾಬಿಲ** (ನಾ). ೧. ದೊಡ್ಡ ಗುಹೆ ಅಥವಾ ದೊಡ್ಡ ಹಳ್ಳ. ೨. ಆಕಾಶ ; ಅಂತರಿಕ್ಷ : "ವಿಹಾಯಸಃ . . . ಮಹಾಬಿಲಂ—೭ ಆಕಾಶದ ಹೆಸರುಗಳು'' (ಸಿದ್ಧಾಂತಿ. ೨೭); ಅಮಿತಾಯುಷ್ಯಂ ದೊರೆಕೊಂಡ ಮನುಷ್ಯಂಗಖಿಳಮಂತ್ರ ದಿವ್ಯೌಷಧಿಸಿದ್ಧಿ ಮಹಾಬಿಲಪ್ರವೇಶಂ . . . ದೊರೆಕೊಳ್ಗುಂ (ಜಾತಕ. ೬-೦೭). [ಸಂ.]

**ಮಹಾಬೆಳಗು** (ನಾ). ೧. ಹೆಚ್ಚಾದ ಪ್ರಕಾಶ ; ಅಧಿಕವಾದ ಕಾಂತಿ.— ಬೆಳಕು. ೨. [ವೀಶೈ] ಚೈತನ್ಯಸ್ವರೂಪನಾದವನು ; ಪರಮಾತ್ಮ: ಸ್ಥೂಲ ಸೂಕ್ಷ್ಮದೊಳಗೆ ಬೆಳಗು ಮಹಾಬೆಳಗಾಗಿ ಹೊಳೆವ ಜ್ಞಾನಜ್ಯೋತಿ ದಳಗಳೆಲ್ಲವ ಮೀಱಿ ಸೆಳಲ ನುಂಗಿದ ಬಿಸಿಲಿನೊಳಗೆ ಚಂದ್ರಮನುದಯ (ಅವಶಂ. ೧೭೦-೭೭೪). [ಮಹಾ + ಬೆಳಗು₂]

**ಮಹಾಬ್ರಾಹ್ಮಣ** (ನಾ). ೧. (ವೇದಾಭ್ಯಾಸ ಮಾಡಿರುವ) ಧರ್ಮಿಷ್ಠನಾದ ಬ್ರಾಹ್ಮಣ : ಇದನಳಿದಂಗನಿತು ತೀರ್ತ್ಥದೊಳಂ ಸಾಸಿರಕವಿಲೆಯುಮಂ ಸಾಸಿರಮಹಾಬ್ರಾಹ್ಮಣರುಮಂ ಸಾಸಿರದಿವ್ಯತಪೋಧನರುಮನಳಿದ ಪಂಚಮಹಾಪಾತಕನಕ್ಕುಂ (ಶಾಇಇ. XX. ೨೪-೪೨ ; 1034). ೨. (ಆಲಂ) ಬ್ರಾಹ್ಮಣನ ಹೆಸರಿಗೆ ಕಳಂಕಪ್ರಾಯನಾದವನು. [ಸಂ.]

**ಮಹಾಭಾಗ** (ಗು). ೧. ಬಹಳ ಅದೃಷ್ಟದಿಂದ ಕೂಡಿದ : ಸುದೈವವುಳ್ಳ. ೨. ಶ್ರೇಷ್ಠವಾದ : ಬಹಳ ಉತ್ತಮವಾದ. ೩. ಪವಿತ್ರವಾದ ; ಶುದ್ಧವಾದ ; ನಿರ್ಮಲವಾದ. (ನಾ). ೪. ಬಹು ಅದೃಷ್ಟವಂತ ; ಸುದೈವಿ. ೫. ಅತ್ಯಂತ ಶ್ರೇಷ್ಠನಾದವನು ; ಮಹಾನುಭಾವ ; ಘನವಂತ : ಸ್ವಾಗತಮೋ ನಿನಗೆ ಮಹಾಭಾಗನೆ ಮದ್ಭೂಮಿಗೆಂತು ಬಂದಯ್ (ಕಾದಂಪೂ. ೬೯೯); ಆಕೆಯ ಪೇೞ್ದ ನಾಗಳೆ ಕತಿಪಯವಿಯಚ್ಚರರ್ವೆರಸು ಮಹಾಭಾ [ಜಾತ. ಭೋ]ಗಂ ಪೊಕ್ಕಂ ಪುರಮಂ (ಶಂರಾಪಾ. ೦೦-೭೭) ; ಅಂತಹ ಮಹಾಭಾಗರ ಕೈಹಿಡಿಯುವುದೆಂದರೆ ಎಷ್ಟು ನೋಂಪಿಗಳ ಫಲವೋ ! (ಶಾಂತಲಾ. ೬೭). [ಸಂ.]

**ಮಹಾಭಾರತ** (ನಾ). ೧. ಭರತವಂಶದ ಪಾಂಡುಪುತ್ರರಿಗೂ ಧೃತರಾಷ್ಟ್ರಪುತ್ರರಿಗೂ ಕುರುಕ್ಷೇತ್ರದಲ್ಲಿ ಹದಿನೆಂಟು ದಿನಗಳವರೆಗೆ ನಡೆದ ಮಹಾಯುದ್ಧ : ಮಹಾಭಾರತಕ್ಕಾದಿಯಾಯ್ತು ಬ್ಬದಳಾಕ್ಷೀ ಪೇೞ ಸಾಮಾನ್ಯಮೆ ಬಗೆಯೆ ಭವತ್ಕೇಶಪಾಶಪ್ರಪಂಚಂ (ಶಂಕರಾ. ೦೨-೦೩೭); ಕೇವಲ ಹದಿನೇಳುವರ್ಷದ ಬಾಲಕ ಶತ್ರುಗಳ ಈ ಮಹಾಸೇನೆಯನ್ನು ಸೋಲಿಸಿ, ಅದ್ಭುತಜಯ ಗಳಿಸಿದ್ದು ಪ್ರಭುಗಳಿಗೆ ಮಹಾಭಾರತದ ವೀರ ಅಭಿಮನ್ಯುವನ್ನು ಜ್ಞಾಪಕಕ್ಕೆ ತಂದಿತು (ಶಾಂತಲಾ. ೦೭೭). 'ಭಾರತ' ಪರಾ. ೨. ಭರತವಂಶದ ಪಾಂಡು ಮತ್ತು ಧೃತರಾಷ್ಟ್ರನ ಮಕ್ಕಳಾದ ಪಾಂಡವ, ಕೌರವರ ನಡುವಿನ ದ್ವೇಷ, ಸ್ಪರ್ಧೆ ಮತ್ತು ಯುದ್ಧ ಮೊದಲಾದುವನ್ನು ಕುರಿತು, ಹದಿನೆಂಟುಪರ್ವಗಳಲ್ಲಿ ವೇದವ್ಯಾಸರು ಬರೆದ ೨,೧೫,೦೦೦ ಸಾಲುಗಳಿರುವ ಸಂಸ್ಕೃತದ ಒಂದು ಮಹಾಕಾವ್ಯ : ಮಹಾಭಾರತವು ಭಾರತೀಯವಾಙ್ಮಯದಲ್ಲಿ ಅಸದೃಶವಾದ ಒಂದು ಮಹಾಗ್ರಂಥ (ಶಾರದ. ೪೩). ೩. ವೇದವ್ಯಾಸರು ರಚಿಸಿದ ಮಹಾಭಾರತದ ಪ್ರೇರಣೆಯಿಂದ ಕನ್ನಡದ ಮಹಾಕವಿಯಾದ ಕುಮಾರವ್ಯಾಸನು ರಚಿಸಿದ 'ಕರ್ನಾಟಕಭಾರತಕಥಾಮಂಜರಿ' ಎಂಬ ಕಾವ್ಯ ; ಗದುಗಿನ ಭಾರತ : ಶ್ರೀ ಮುಕುಂದಾರ್ಪಣವೆನಿಸಿ ಶತಭೂಮಿ ದೇವರಿಗಿತ್ತ ಫಲವಹುದೀ ಮಹಾಭಾರತದೊಳೊಂದಕ್ಷರವ ಕೇಳ್ದಂಗೆ (ಕುವ್ಯಾಆ. ೦-೨೦). ೪. ಮಹಾಭಾರತದ ಕತೆಯ ಪ್ರವಚನ : ದೇವರಾಜವಡೆಯರವರು ನಮ್ಮ ಕೈಯ್ಯ ಮಹಾಭಾರತವ ಕೇಳಿ . . . ಧಾರೆಯನೆಱದು ಕೊಟ್ಟ ನರಸೀಪುರದ ಹೋಬಳಿ ಮಂದಗೆರೆಸ್ಥಳದ ನಾಟನಹಳ್ಳಿ (ಎಕ. VI (R), ಕೃಕ್ರಾ. ೦೭-೦೫ ; 1678). ೫. (ಆಲಂ) ದೊಡ್ಡಕತೆ : ಅವರದ್ದೇ ಒಂದು ಮಹಾಭಾರತ (ಮೂಕಜ್ಜಿ. ೪೬). [ಸಂ.]

**ಮಹಾಭಾಷ್ಯ** (ನಾ). ೧. ದೊಡ್ಡವ್ಯಾಖ್ಯಾನ. ೨. ಪಾಣಿನಿಯ ವ್ಯಾಕರಣಸೂತ್ರಗಳಿಗೆ ಪತಂಜಲಿಯು ಬರೆದಿರುವ ವಿವರವಾದ ವ್ಯಾಖ್ಯಾನ : ಅತ ಏವ ಮಹಾನ್ ಪತಂಜಲಿರಪಿ ಮಹಾಭಾಷ್ಯೆ (ಶಶಾಸು. ಪುಟ. ೦೪) ; ಪತಂಜಲಿಮಹರ್ಷಿಯ ಮಹಾಭಾಷ್ಯದಲ್ಲಿ ಅಕ್ಷರದ ಪ್ರಸ್ತಾಪವಿದೆ (ದ್ರಾವಿಶಿ. ೪೩). [ಸಂ.]

**ಮಹಾಭೂತ** (ನಾ). (ಜಗತ್ತಿನ ನಿರ್ಮಾಣಕ್ಕೆ ಸಾಧನವಾದ) ಮೂಲ ವಸ್ತು : ಗುದಸ್ಥಾನದಲ್ಲಿ ಆಧಾರಚಕ್ರ ಪೃಥ್ವಿಯೆಂಬ ಮಹಾಭೂತ ಚತುಃಕೋಣೆ ಚಾದಳಪದ್ಮ ಅಲ್ಲಿಹ ಅಕ್ಷರ ನಾಲ್ಕು ದ ಶ ಷ ಸ (ಅವಶಂ. ೪೭೦೩೮). 'ಪಂಚಮಹಾಭೂತ' ಪರಾ. [ಸಂ.]

**ಮಹಾಭೋಗ** (ನಾ). ೧. ಅಧಿಕವಾದ ಸಂತೋಷದಿಂದ ಕೂಡಿದುದು; ಅತ್ಯಾನಂದದಿಂದಿರುವುದು. ೨. ವಿಶಾಲವಾದ ಪ್ರಾಂಗಣವನ್ನು ಹೊಂದಿರುವುದು. ೧, ೨: ಬಗೆಯೆ ಬಹುಭೂಮಿಕಂ ಮಾನಗುಣೋನ್ನತಿಸಂಯುತಂ ಮಹಾಭೋಗಂ ತನ್ನ ಗರಜನಾವಳಿಯುಂ ಹರ್ಮ್ಯಗೃಹಾವಳಿಯುಮೆಂದೊಡೊಳ್ಪನೇವಣ್ಣಿಪುದೋ (ತಂದ್ರಪು. ೩. ೦೬).

೩. ಅತ್ಯಂತ ಸಂತೋಷದಿಂದ ಕೂಡಿರುವವನು ; ಪರಮಸುಖಿ. ೪. ದೊಡ್ಡ ಹೆಡೆಯನ್ನು ಹೊಂದಿರುವುದು ; ವಿಶಾಲವಾದ ಹೆಡೆಯುಳ್ಳುದು. ೩, ೪: ಸುಖೋನ್ಮುಖಮಹಾಭೋಗಂ ಸುಭೋಗೀಂದ್ರ ನೋಲ್ ಖ್ಯಾತಂ ನಾಲ್ಮಡಿ ಕೃಷ್ಣರಾಯನರಪಂ (ಕೃಸೂಪು. ೩-೩೨).
[ ಸಂ. (ಮಹಾ + ಭೋಗ ; ಮಹಾ + ಆಭೋಗ) ]

**ಮಹಾಭೋಗಿ** (ನಾ). ಅತ್ಯಂತ ಸುಖಿಯಾದವನು ; ಪರಮಸುಖಿ : ಆ ಮಹಾಯೋಗಿ ಗುಣಂಗಳಂ ಪಾಲಿಸಿದಂ ಈ ಮಹಾಭೋಗಿ ನೆಲನಂ ಪರಿಪಾಲಿಸಿದಂ (ಅಂತ್ಕೃ. ೬-೨೪ ವ). [ಸಂ. ಮಹಾಭೋಗಿನ್]

**ಮಹಾಮಂಗಲ**, ಮಹಾಮಂಗಳ (ನಾ). ಅತ್ಯಂತ ಮಂಗಳಕರವಾದ ಕೆಲಸ ; ಶುಭಕಾರ್ಯ : ಇಳುಹಿದುದು ಕಮ್ಮೆಣ್ಣೆ ಹಾಯ್ಕಿತು ಹೊಳೆವ ಮಣಿಮಡಿವಸೆ ಮಹಾಮಂಗಲದ ಮಜ್ಜನಕುಷ್ಣಜಲ ಹೊಂಗೊಡದ ಲಿಳುಹಿದವು (ಕೃಚಂ. ೩-೩-೩೪). **ಮಹಾಮಂಗಳ** : ಉಪ್ಪವಡಿಸುವುದು ಮಜ್ಜಿಕೆಯು ಪಪ್ಪಕರೊಡನಾಡಿಗಳ್ ಪ್ರಬೋಧಿಸಿದರ್ ಮೇಲಪ್ಪ ಪದ ರಚನೆಯಿಂ ದೊರೆಯಪ್ಪ ಮಹಾಮಂಗಳಪ್ರಬೋಧನೆಯಿಂದಂ (ಶಾಂತಿಪು. ೩-೬೩). [ಸಂ.]

**ಮಹಾಮಂಗಳ** 'ಮಹಾಮಂಗಲ' ನೋ.

**ಮಹಾಮಂಗಳಾರತಿ** (ನಾ). ದೇವಸ್ಥಾನಗಳಲ್ಲಿ ಎಲ್ಲ ಪೂಜೆಗಳೂ ನಡೆದ ನಂತರ ದೇವರ ವಿಗ್ರಹಕ್ಕೆ ಮಾಡುವ ದೊಡ್ಡ ಮಂಗಳಾರತಿ ಅಥವಾ ಮನೆಗಳಲ್ಲಿ ವ್ರತಾದಿಗಳ ಕೊನೆಯಲ್ಲಿ ದೇವರಿಗೆ ಮಾಡುವ ದೊಡ್ಡ ಆರತಿ : ಮಹಾಮಂಗಳಾರತಿಯಾಗುತ್ತಿರುವಾಗ . . . ರಾಜಮಾತೆಯ ಕಣ್ಣೊನೆಗಳಲ್ಲಿ ನೀರಿಟ್ಟಿತು (ಶಾಂತಲಾ. ೨೪). [ಮಹಾ + ಮಂಗಳಾರತಿ]

**ಮಹಾಮಂಡಲ**, ಮಹಾಮಂಡಳ (ನಾ). ೧. ವಿಸ್ತಾರವಾದ ಪ್ರದೇಶ ; ವಿಶಾಲವಾದ ಎಡೆ : ಶಾಂತಗಾಂಭೀರ್ಯದಲಿ, ಭದ್ರರೂಪದಲಿ, ತನುಕಾಂತಿಯಲಿ ಮೆರೆದನಾ ಶ್ರೀರಾಮಚಂದ್ರನಂಬರಮಹಾಮಂಡಲಮ ಮೂರ್ತಿವೆತ್ತಂತೆ (ಶ್ರೀರಾಮಾ. ೨೬-೬೮೩). ೨. ದೊಡ್ಡ ಪ್ರಾಂತ್ಯ : 'ಮಹಾಮಂಡಲೇಶ್ವರ' ಪರಾ. **ಮಹಾಮಂಡಳ** : ೨. 'ಮಹಾ ಮಂಡಳಪತಿ', 'ಮಹಾಮಂಡಳೇಶ್ವರ' ಪರಾ. [ಸಂ.]

**ಮಹಾಮಂಡಲೇಶ್ವರ**, ಮಹಾಮಂಡಳೇಶ್ವರ (ನಾ). (ರಾಜನಿಗೆ ಮಾತ್ರ ಅಧೀನನಾದ) ಪ್ರಮುಖ ಆಡಳಿತಾಧಿಕಾರಿ ; ದೊಡ್ಡ ಪ್ರಾಂತ್ಯಾಧಿಕಾರಿ ; ಮಹಾಮಂಡಲಿಕ : ಶ್ರೀಮನ್ಮಹಾಮಂಡಲೇಶ್ವರ ಚಂಗಾಳ್ವಶ್ರೀಕಂಠರಸುಗಳು . . . ಭೂಮಿಯನು ಸರ್ವಮಾನ್ಯವಾಗಿ ಕೊಟ್ಟರು (ಎಕ. I (R). ೪೩-೨ ; 1544). **ಮಹಾಮಂಡಳೇಶ್ವರ** : ಮಹಾಮಂಡಳೇಶ್ವರರ್ಮಾಟ್ಟಿಂದ್ರಕೇತುವೆಂಬ ಪೂಜೆಯುಂ (ಸುಕುಮಾ. ೬-೨೩ ವ); ಶ್ರೀಮನುಮಹಾಮಣ್ಡಳೇಶ್ವರ ತ್ರಿಭುವನಮಲ್ಲ (ಎಕ. I(R). ೪೦-೩೦; 12ನೆಯ ಶತ) ; ಶ್ರೀಮನ್ಮಹಾಮಂಡಳೇಶ್ವರ ಶ್ರೀವೀರನಂಜರಾಯ ವೊಡೆಯರ ನಿರೂಪದಿಂ . . . ಕೊಟ್ಟ ಸಿಲಾಸಾಸನ (ಶ್ಮಕಂ. ೦೯೯೬. ೨೪-೪ ; 1538). [ಸಂ.]

**ಮಹಾಮಂಡಳ** 'ಮಹಾಮಂಡಲ' ನೋ.

**ಮಹಾಮಂಡಳಪತಿ** (ನಾ). = ಮಹಾಮಂಡಲೇಶ್ವರ : ಏ ಮಾತೊ ಕೋಟಿಕೋಟಿಗ್ರಾಮಾಧಿಪರೆನಿಗೆ ಮುಂದೆ ನುಡಿದು ಜಗಚ್ಚೂಡಾಮಣಿಗೆ ಮಕುಟಬದ್ಧಮಹಾಮಂಡಳಪತಿಗಳಾದರೆಣ್ಬಾಸಿರ್ವರ್ (ಶಾಂತಿಪು. ೦೦-೦೦೩).
[ಸಂ. ಮಹಾಮಂಡಲಪತಿ]

**ಮಹಾಮಂಡಳಾಚಾರ್ಯ** (ನಾ). [ಜೈನ] ಜೈನಸಂಘದ ಮುಖ್ಯಸ್ಥ : ಜೈನ ಮಠದ ಪ್ರಮುಖ ಅಧಿಕಾರಸ್ಥಾನದಲ್ಲಿರುವ ವ್ಯಕ್ತಿ, ಆಚಾರ್ಯ : ಅದರ್ಕೆ ನಯಕೀರ್ತಿಸಿದ್ಧಾನ್ತಚಕ್ರವರ್ತಿಗಳಂ ಮಹಾ ಮಂಡಳಾಚಾರ್ಯ್ಯರನಾಚಾರ್ಯ್ಯವರ್ಮ್ಯಾಡಿ (ಎಕ. II (R). ೪೬೬-೫೬ ; 1159) ; ಶ್ರೀಮತು ಮಹಾಮಂ(ಂ)ಡಳಾಚಾರ್ಯ್ಯರು ಕಮಳದೇವರ ಸಿಷ್ಯ ಕುಲೋಕಾಚಾರ್ಯ್ಯರು (ಎಕ. V (R). ತಿಕುಪು. ೦೯೦-೨; ಸು. 14ನೆಯ ಶತ). [ಸಂ. ಮಹಾಮಂಡಲಾಚಾರ್ಯ]

**ಮಹಾಮಂಡಳಿಕ** (ನಾ). = ಮಹಾಮಂಡಲೇಶ್ವರ : ಚಕ್ರವರ್ತಿಗಳ್ ಮಾಟ್ಟ ಕಲ್ಪವೃಕ್ಷಮುಂ ಮಹಾಮಂಡಳಿಕಪ್ರಮುಖಮಕುಟಬದ್ಧರ್ ಮಾಟ್ಟ ಚತುರ್ಮುಖಮುಂ . . . ಬೆರಸಾರ್ಯ ಷಟ್ಕರ್ಮಂಗಳಂ ನಿಮಗಿವು ಕುಲಾಚಾರಂಗಳೆಂದಱಿಯೆ ಪೇಟ್ದು ಕೈಕೊಳಿಸಿ(ಆದಿಪು. ೦೩-೦೩ ವ); ಸುಳಿದು ಹರಿಮೇಖಲೆಯ ಮೋಹರದೊಳಗೆ ಮುಗ್ಗಿದಿರ್ಕೆ ಮಹಾ ಮಂಡಳಿಕರಿರ ಘಡ ಹೋಗಿರೆ ನೀವೆ (ಕುಮಾರವ್ಯಾ. ೪-೩೦).
[ ಸಂ. ಮಹಾಮಂಡಲಿಕ ]

**ಮಹಾಮಂಡಳೇಶ್ವರ** 'ಮಹಾಮಂಡಲೇಶ್ವರ' ನೋ.

**ಮಹಾಮಂಡಳೇಸ್ವರ** (ನಾ). = ಮಹಾಮಂಡಲೇಶ್ವರ : ಶ್ರೀಮನು ಮಹಾಮಣ್ಡಳೇಸ್ವರ ತ್ರಿಪುರಾಧೀಸ್ವರ . . . ಅನೇಕ ನಾಮಾವಳೀ ಮುಖ್ಯನಪ್ಪ ದುದ್ದರಸಂ . . . ಶಿವಲೋಕಪ್ರಾಪ್ತನಾಗಲ್ (ಎಕ. I(R), ೬೨-೩ ; 1095); ಶ್ರೀಮನ್ಮಹಾಮಣ್ಡಳೇಸ್ವರಂ ವೀರಚೋಳಕೊಂಗಾಳ್ವ ದೇವ ಪ್ರಿಥಿವೀರಾಜ್ಯಂಗೆಯ್ಯುತ್ತಿರೆ (ಎಕ. I (R). ೬೭-೦ ; 1175).
[ < ಸಂ. ಮಹಾಮಂಡಲೇಶ್ವರ ]

**ಮಹಾಮಂತ್ರ** (ನಾ). ೧. (ವೇದ, ಆಗಮ ಮುಂತಾದ) ಪರಮ ಪವಿತ್ರವಾದ ಮಂತ್ರ : ಕೇಳಿಸಿಕೊಂಡ ಆ ಮಹಾಮಂತ್ರಗಳನ್ನು ವಟು ಸ್ವರೋಚ್ಚಾರಪೂರ್ವಕ ಸಿದ್ಧಿಸಿಕೊಂಡನು (ಶಾಂತಲಾ. ೩೬). ೨. [ವೀಶೈ] 'ನಮಃಶಿವಾಯ' ಎಂಬ ಮಹಾಮಂತ್ರ; ಪಂಚಾಕ್ಷರಿಮಂತ್ರ : ಮಹಾಮಂತ್ರಾಂತರಂಗಂ ಸಮುಚಿತವಿಧಿಯಿಂ ಪೂಜಿಸುತ್ತಿರ್ದನಾನಂದ ಮನಾದಂ ಪೊರ್ದಿ ಗೌರೀರಮಣನಡಿಗಳಂ ಶೈವವಿದ್ಯಾಸಮುದ್ರಂ (ರಾಜಶೇ. ೦೨-೨). [ಸಂ.]

**ಮಹಾಮಂತ್ರಿ** (ನಾ). ಸಚಿವಶ್ರೇಷ್ಠ; ಮಹಾಪ್ರಧಾನ : ಮಹಾ ಮಂತ್ರಿಯ ಮಗಂ ಅರಸರ ಮೈದುನಂ ಪೃಥುಮನೆಂಬನಲ್ಲಿಗೆ ವರೆ (ಶಾಪುಂಪು. ೬೯); ಗುರುತನುಜ . . . ಕೃತವರ್ಮ ಭಗದತ್ತರು ಮಹಾ ಮಂತ್ರಿಗಳು ಬಂದರು ರಾಯನೋಲಗಕೆ (ಕುಮಾರವ್ಯಾ. ೦-೮೩).
[ ಸಂ. ಮಹಾಮಂತ್ರಿನ್ ]

**ಮಹಾಮತ್ಸ್ಯ** (ನಾ). ದೊಡ್ಡಗಾತ್ರದ ಮೀನು : ಮೀಂಗಳಳತೆ ಯೋಜನದಗಲಂಗಳವಂ . . . ನುಂಗುವುವೊಳವೃದಧಿಯೊಳ್ ಮಹಾ ಮತ್ಸ್ಯಂಗಳ್ (ಶಬ್ದಸಾ. ೭೭). [ಸಂ.]

**ಮಹಾಮನೆ**, ಮಹಮನೆ, ಮಾಮನೆ (ನಾ). ೧. ದೊಡ್ಡಮನೆ; ಭವ್ಯವಾದ ಸೌಧ ; ಅರಮನೆ : ಎಮಗೆ ನಾಲ್ಮಡಿಯಾದ ಜೀವಿತ ಮಸಿತ್ತು ಸರ್ವಮಹಾಮನೆಯ ಮೆಚ್ಚಕಾದಾಯಕೊಡೆತನವ ಸಮನಿಸಿದ ರೆಂದು ಮಹಿಗೆಂತು ಸರಿಗಾಣಿಸುವನು (ರಾಘಶ. ೦೪-೪೪); ಭಾರತ ಸಂಸ್ಕೃತಿಯ ಮಹಾಮನೆಯಲ್ಲಿ ತಮ್ಮ ಕೆಲಸ ಎಷ್ಟು ಮಹತ್ತ್ವದ್ದೆಂಬುವನ್ನು . . . ಕಲೆ, ಸಂಸ್ಕೃತಿ, ದಾನ — ಎಲ್ಲವೂ ಒಂದೇ ಕೊರಳಿನಿಂದ ಸಾರುತ್ತಿವೆ (೪೭ಗಾ. ೦೦೬). ೨. [ವೀಶೈ] ಅತಿಪವಿತ್ರ ವಾದ ಕ್ಷೇತ್ರ; ಮಹಾಪುಣ್ಯಸ್ಥಳ : ಚೆನ್ನಯ್ಯನ ಮಗ ನಾನು ಕೂಡಲಸಂಗನ ಮಹಾಮನೆಯೊಳು ಧರ್ಮಸಂತಾನ ಭಂಡಾರಿ ಬಸವಣ್ಣನು (ಬಸವ. ೩೪೬); ಮರ್ತ್ಯಲೋಕದ ಮಹಾಮನೆ ಹಾಳಾಗಿ ಹೋಗಬಾರ ದೆಂದು ಕರ್ತನಟ್ಟಿದನಯ್ಯ ಒಬ್ಬ ಶಿವಶರಣನ (ಅಪಸಂ. ೨೨೨-೦೦೦೬). ೩. ಕಲ್ಯಾಣಪಟ್ಟಣದಲ್ಲಿದ್ದ ಬಸವಣ್ಣನವರ ಮನೆ,—ನಿವಾಸ ; ಆ ದೇಶದ ನಾನಾಭಾಗಗಳಿಂದ ಕಲ್ಯಾಣಕ್ಕೆ ಬರುತ್ತಿದ್ದ ಶರಣ ಸಮೂಹಕ್ಕಾಗಿ ದಾಸೋಹಕಾರ್ಯ, ಶರಣರ ಪೂಜಾಕಾರ್ಯ

ಮುಂತಾದುವು ನಡೆಯುತ್ತಿದ್ದ ಸ್ಥಳ : ಗುಹೇಶ್ವರನ ಶರಣ ಸಂಗನ ಬಸವಣ್ಣನ ಮಹಾಮನೆಯ ಕಂಡು ಧನ್ಯನಾದೆನು ಕಾಣಾ (ಅವಚಂ. ೩೩೩-೧೦೦೮) ; ನಿಮ್ಮ ಶರಣ ಸಂಗನ ಬಸವಣ್ಣನ ಮಹಾಮನೆಗೆ ನಮೋ ನಮೋ ಎಂದು ಬದುಕಿದೆನು (ಸಿದ್ಧವ. ೪. ೩೬೪-೯೬೬). ೪. (ಆಲಂ) ಅರಿವಿನ ಮನೆ,—ನೆಲೆ ; ಜ್ಞಾನದ ಸ್ಥಾನ : ಮಹಾಮನೆಯ ಮಂಟಪದಲ್ಲಿ ನಾಲ್ಕು ನಡುವಣ ಕಂಭದ ನಡುವಣ ಕಂಭದಲ್ಲಿ ಒಂದೊಬಿಲೆ ಮನೆಯ ಮಾಡಿತ್ತು (ಶಕಸಂ. ೩೬೨-೦೮). **ಮಹಮನೆ :** ೨. ಮಲ್ಲಿಕಾರ್ಜುನನ ಮಹಮನೆಯ ಶೋಭನಕೆ ತಳುವಿಲ್ಲದೀ ವೈಶಾಖಪೌರ್ಣಮಿಗೆ ಬೇಗ ದಿಂದೆಲ್ಲವಳವಡಬೇಹುದು (ಸಿದ್ಧರಾ. ೬-೪೮) ; ಮರ್ತ್ಯವನ್ನೆ ಮಹಮನೆಯು ಗೈದ ಮೃತ್ಯುಂಜಯನ ಚರಣ (ಸಂಕು. ೩೬-೯). ೩. ಅರಮನೆಯಂ ಪೊಱಮಟ್ಟು ತನ್ನ ಮಹಮನೆಗೆ ಬಪ್ಪಲ್ಲಿ (ಬಸರ. ೬-೩೯) ; ಈ 'ಮಹ ಮನೆ'ಯು ಬಸವಣ್ಣನವರ ಪ್ರಸಾದನಿಲಯವಿರಬೇಕು (ಶಶ್ವಜಾ. ೦೩೩). **ಮಾಮನೆ :** ೩. ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಬಸವಣ್ಣನಿದ್ದ ಕ್ಷೇತ್ರವೇ ಅವಿಮುಕ್ತಕ್ಷೇತ್ರವಯ್ಯ ಇದು ಕಾರಣ ನಿಮ್ಮ ಶರಣ ಬಸವಣ್ಣನ ಮಾಮನೆಗೆ [ಪಾಠಾಂ. ಶ್ರೀಪಾದಕ್ಕೆ] ನಮೋನಮೋ ಎಂದು ಬದುಕುವೆನಯ್ಯಾ (ಚುಚಾಸಾ. ೦೩-೪೬). [ಮಹಾ + ಮನೆ]

**ಮಹಾಮಹ** (ಗು). ೧. ಬಹುಬೆಲೆಯುಳ್ಳ ; ಅತ್ಯಂತ ಶ್ರೇಷ್ಠವಾದ : ಅಲ್ಲಿಯ ಮಹಾಮಹಸಂಪದಂ . . . ಮಿಳಿರ್ದ ಕೇತನರಾಜಿ ಕರಂ ವಿರಾಜಿಸಲ್ (ಎಕ. XIII, ೩೩೦-೩೯ ; ೯೨೨) ; ಮಹಾಮಹಚಿತ್ರನ ಮನ್ಮಥಾರಿ ರೂಪನ ಚಿಕವೀರದೇವನ . . . ಕೊಂಡಾಡಿ ಕೂರ್ಮೆಯಿಂದಿಂತೆಂದರ್ (ರಾಜಶೇ. ೦-೬೬). (ನಾ). ೨. ದೊಡ್ಡ ಉತ್ಸವ, —ಹಬ್ಬ. ೩. [ಜೈನ] "ಚತುರ್ಮುಖಮಂಟಪದಲ್ಲಿ ಮಕುಟಬದ್ಧರಾಜನು ಮಾಡುವ ಜಿನೇಶ್ವರನ ಮಹಾಪೂಜೆ" (ಆದಿಪು. ಕೈಪಿಡಾಂಶಾಕಿಶ ಶಬ್ದಕೋಶ) : ಜಿನಭವನದೊಳೆಂಟುದಿವಸಂಬರಂ ಮಹಾಮಹಮೆಂಬ ಜಿನಮಹಿಮೆಯಂ ಮಹಾವಿಭೂತಿಯಿಂ ಮಹಾಬಲಂ ಮಾಡಿದಿಂಬಟಿಯಂ (ಆದಿಪು. ೨-೪೯ ವ) ; ಮುಖ್ಯ ಸೌಖ್ಯಭಾಜನನಮರಂ ತ್ರಿಲೋಕತಿಲಕಂಗೆ ಮಹಾಮಹಮಂ ಪೂರ್ಣಚಿದಂ (ಶಾಂತಿಪು. ೬-೩೦) ; ಜನ್ಮನಕ್ಷತ್ರವೂ ವರ್ಷವರ್ಧನಮಹಾಮಹವೂ ಕೂಡಿದಾಗ ಪುದಲ್ನಾಡರಾಷ್ಟ್ರದಲ್ಲಿ ಕೋದೆಂಜೆರುವು ಎಂಬ ಗ್ರಾಮವನ್ನು . . . ಕೊಟ್ಟನು (ಕಶಾಶಾ. ೦೯೩). [ಸಂ.]

**ಮಹಾಮಹಿಮ** (ನಾ). ೧. ಅತಿಶಯವಾದ ಮಹತ್ತ್ವ, — ಘನತೆ : ಸಮಸ್ತಲೋಕಶಿಖಾಮಣಿ ಮಹಾಮಹಿಮಪ್ರಾಪ್ತರೆಂಬುದು ಲೋಕಂ (ಶಬಾಶ. ೦-೦). ೨. ಬಹುಶ್ರೇಷ್ಠನಾದವನು ; ಮಹಾಘನವಂತ : ಶಂಕೆಯಿಲ್ಲದ ಮಹಾಮಹಿಮ ನೋಡಯ್ಯಾ ಕೂಡಲಸಂಗನ ಶರಣನುಪಮಾತೀತ ನೋಡಯ್ಯಾ (ಬಸವ. ೯೬೪) ; ದುರ್ವಾರಸಂಸಾರಸಾಗರಮಂ ದಾಂಟಿಸುವಾ ಮಹಾಮಹಿಮನಂ ಪೆತ್ತಂಗಿದೇಂ ಚಿತ್ರಮೇ (ಶಗು. ೩-೦೦).

[ ಸಂ. ಮಹಾಮಹಿಮನ್ ]

**ಮಹಾಮಹಿಮೆ** (ನಾ). = ಮಹಾಮಹ ೨ : ಜಗಜ್ಜನಜಂಗಮಕಲ್ಪವೃಕ್ಷಂ ಕಲ್ಪವೃಕ್ಷಮೆಂಬ ಮಹಾಮಹಿಮೆಯಂ ಮಹಾಪೂತಜಿನಾಲಯದೊಳ್ ಮುನ್ನಂ ಮಾಡಿ (ಆದಿಪು. ೪-೩೦ ವ). [<ಸಂ. ಮಹಾಮಹ]

**ಮಹಾಮಹೋಪಾಧ್ಯಾಯ** (ನಾ). ೧. ಹಿರಿಯ ಅಥವಾ ಶ್ರೇಷ್ಠನಾದ ಬೋಧಕ, — ಶಿಕ್ಷಕ. ೨. ಹಿಂದಿನ ಕಾಲದಲ್ಲಿ ರಾಜ್ಯದ ಆಡಳಿತಗಾರರು ಭರತಖಂಡದಲ್ಲಿ ಉದ್ದಾಮ(ಸಂಸ್ಕೃತ)ವಿದ್ವಾಂಸರಿಗೆ ಕೊಡುತ್ತಿದ್ದ ಒಂದು ಬಿರುದು : ಇವೊತ್ತು ನಿಜವಾದ ಮಹಾಮಹೋಪಾಧ್ಯಾಯನನ್ನು ನೋಡಿದೆ ! (ಶ್ರೀರಾಂಕ. ೩೬೦). [ಸಂ.]

**ಮಹಾಮಾಂಡಳಿಕ** (ನಾ). = ಮಹಾಮಂಡಲೇಶ್ವರ : ಸಗರಂ . . . ಚಾಮೀಕರಸುವರ್ಣನುಮೆನಿಸಿ ಪದಿನೆಂಟುಲಕ್ಷಪೂರ್ವ ಕುಮಾರಕಾಲಂ ಪೋಗೆ ಮಹಾಮಾಂಡಳಿಕನಾಗಿ ಮತ್ತಂ ಪದಿನೆಂಟುಲಕ್ಷಪೂರ್ವೆಯಿಂ ಸಕಲಚಕ್ರವರ್ತಿಯಾಗಿರ್ದಂ (ಜೀವಸಂ. ೦೬-೯). [ಸಂ. ಮಹಾಮಾಂಡಲಿಕ]

**ಮಹಾಮಾಂಸ** (ನಾ). ೧. ಮನುಷ್ಯದೇಹದ ಮಾಂಸ ; ನರಮಾಂಸ : ನಿಜಜೀವಂ ಪರಲೋಕದೊಳ್ನಿಜಮಹಾಮಾಂಸಂ ಪಿಶಾಚಾಸ್ಯದೊಳ್ . . . ನಿಜಕಾಯಂ ಕುರುಭೂಮಿಯೊಳ್ನೆಲಸೆ (ಗದಾಯು. ೩-೩) ; ಅಗ್ನಿಕುಂಡದಲ್ಲಿ ಸುಡುತ್ತಿದ್ದ ಮಹಾಮಾಂಸದ ವಾಸನೆ ಎಲ್ಲೆಲ್ಲೂ ಹರಡಿ, ರಾಜಧಾನಿಯೆಲ್ಲ ಶ್ಮಶಾನಧೂಮಮಯವಾಯಿತು (ಬಾಂಕಲಾ. ೩೪೦). ೨. ನರಮಾಂಸವೆನ್ನುವುದನ್ನು ತಿಳಿಸಲು ವ್ಯಂಗ್ಯವಾಗಿ ಉಪಯೋಗಿಸಿರುವ ಪರ್ಯಾಯೋಕ್ತಿ : ಅಂತು ನರಮಾಂಸಮಂ ಮಹಾಮಾಂಸಮೆಂದು ನರಮಾಂಸಬಲಿಯಂ ಮಹಾಮಾಂಸಬಲಿಯೆಂದು ದೀರ್ಘನಿದ್ರೆಯಂ ಮಹಾನಿದ್ರೆಯೆಂದು ದೀರ್ಘಪ್ರಾಣಮಂ ಮಹಾಪ್ರಾಣಮೆಂದು ಸ್ನುಹಿವೃಕ್ಷಮಂ ಮಹಾವೃಕ್ಷಮೆಂದು ನುಡಿವಂತೆ ಭೀಮನಂ ಮಹಾರಥನೆಂದು ನುಡಿಯಲ್ಕಕ್ಕುದೆ ವಲಂ (ಗದಾಯು. ೩-೩೬ ವ). [ಸಂ.]

**ಮಹಾಮಾತುಶ್ರೀ** (ನಾ). ರಾಜಮಾತೆ ಮುಂತಾದವರನ್ನು ಸಂಬೋಧಿಸುವಾಗ ಗೌರವಸೂಚಕವಾಗಿ ಬಳಸುವ ಶಬ್ದ : ಕಳಲೆ ಶ್ರೀ ಲಕ್ಷ್ಮೀಕಾಂತಸ್ವಾಮಿಯವರ ದೇವಸ್ಥಾನಕ್ಕೆ ಮಹಾಮಾತುಶ್ರೀ ಲಕ್ಷ್ಮಂಮಣಿಯವರ ಸೇವೆ (ಪ್ರಶಾ. ೦೯೪೬, ೩೮-೦; 1750).

[<ಸಂ. ಮಹಾಮಾತುಃಶ್ರೀ, ಮಹಾಮಾತೃಶ್ರೀ]

**ಮಹಾಮಾತೃಶ್ರೀ** (ನಾ). = ಮಹಾಮಾತುಶ್ರೀ : ಸಿಂಹಾಸನದಲ್ಲಿ ಮುಹೂರ್ತಮಾಡಿರುವ ದೊರೆಗಳವರಂ ನೋಡಬೇಕೆಂಬ ಇಚ್ಛೆಯಿಂದ ಮಹಾಮಾತೃಶ್ರೀಯವರು ಮೊದಲಾದ ಅಂತಃಪುರಸ್ತ್ರೀಜನರೆಲ್ಲರೂ ತಮ್ಮ ತಮ್ಮ ಮರ್ಯಾದಾನುಸಾರವಾಗಿ ಸಿಂಹಾಸನಕ್ಕೆ ನಮಸ್ಕರಿಸಿ ಅಂತಃಪುರಕ್ಕೆ ತೆರಳಲು (ಮಹಾಮಂ. I, ೩೩). [ಸಂ.]

**ಮಹಾಮಾತೋಶ್ರೀ** (ನಾ). = ಮಹಾಮಾತುಶ್ರೀ : ಮಹಾಮಾತೋಶ್ರೀಯವರಿಗೆ ಈ ನನ್ನ ಭಕ್ತಿಪೂರ್ವಕ ವಿಜ್ಞಾಪನೆಯನ್ನು ತಿಳಿಸಬೇಕು (ಕಲಪ. ೪೩೬). [ಇದು 'ಮಹಾಮಾತೃಶ್ರೀ' ಎನ್ನುವುದರ ಅಶುದ್ಧರೂಪ]

**ಮಹಾಮಾತ್ಯ** (ನಾ). ಪ್ರಧಾನನಾದ ಅಮಾತ್ಯ ; ಸಚಿವಶ್ರೇಷ್ಠ : ಹೊಯ್ಸಳರಾಜ್ಯದ ಮಹಾಮಾತ್ಯನಾಗಿ ನನಗೆ ಇಲ್ಲಿ ಕುಳ್ಳಿರುವ ಅರ್ಹತೆಗೆ ಇರುವಷ್ಟೇ ಗೌರವ ನಿಮ್ಮದೂ ಅಲ್ಲವೆ ? (ಸಚಿತ. ೦೬೨); ಮಹಾಮಾತ್ಯರು ಮಾತನಾಡಲು ಇಚ್ಛಿಸುತ್ತಿರುವರೆಂದು ತಿಳಿದ ಸಭೆ ನಿಶ್ಶಬ್ದವಾಯಿತು (ಶಾಂತಲಾ. ೪೬). [ಸಂ.]

**ಮಹಾಮಾತ್ರ** (ಗು). ೧. ಅಳತೆಯಲ್ಲಿ ದೊಡ್ಡದಾದ. ೨. ಅತಿಶ್ರೇಷ್ಠವಾದ. (ನಾ). ೩. ಪ್ರಧಾನನಾದ ಅಮಾತ್ಯ : "ಮಹಾಮಾತ್ರನೆನಲುಂ ಪ್ರಧಾನನಕ್ಕುಂ" (ಚುಂಗಶಾ. ೬೯-೩); ರಾವಣನ ಸಾಮಂತಯೋಧಮಹಾಮಾತ್ರಾದಿಗಳ್ ರಾಮಲಕ್ಷ್ಮಣರಂ ಬಂದು ಕಾಣೆ (ಶಾಪುಂಪು. ೩೦೪). ೪. ಗಜಶಾಲೆಯ ಮುಖ್ಯಸ್ಥ ; ಮಾವಟಿಗರ ಯಜಮಾನ : ತದೀಯಾನೇಕಪಮಹಾಮಾತ್ರಂ ರಾಜಗುಪ್ತನೆಂಬೊನಾತನಧೀತಸಕಳಶಾಸ್ತ್ರನಾಗಿಯುಂ ವಿತ್ತಹೀನಂ (ಶಾಂತಿಪು. ೯-೬೩ ವ). ೫. ಮಾವುತ ; ಮಾವಟಿಗ : "ಗಜಾಜೀವಃ, ಮಹಾಮಾತ್ರಃ – ಈ ೨ ಆನೆಯ ವೈದ್ಯಂ" (ಹಲಾಯು. ೩೮-೬೨) ; 'ಹಲಾಯು' ಟೀಕಿನಲ್ಲಿರುವ 'ಆನೆಯ ವೈದ್ಯ' ಎಂಬ ಅರ್ಥ ತಪ್ಪಾಗಿದೆ. 'ಗಜಾಜೀವ' ಹೋ ; ಪಡಿಯಱಂ ಪೊಡೆವಟ್ಟು ಮಹಾಮಾತ್ರಂ[ಪಾಠಾಂ. ತ್ಯಂ] ಬಾಗಿಲೊಳ್ಬಂದಿರ್ದಪನೆನೆ ಬರವೇಟೆಂಬುದುಮಾರೋಹಕಂ ಬಂದು (ಅರ್ಜುನ. ೯-೩೩ ವ). ೩. ೫: ಪ್ರತಾರಣಂ ನಾವೆಯೊಳ್, ರುಕ್ಮಮಾಕುತೆ ಮಹಿಯೊಳ್ ಮಹಾಮಾತ್ರಪ್ರವರ್ತನಂ ಸೃಣಿಯೊಳಲ್ಲದಿಲ್ಲವೆಲ್ಲಿಯುಂ (ಚಂದ್ರಪ್ರ. ೩-೯ ವ). [ಸಂ.]

**ಮಹಾಮಾಯೆ** (ನಾ). ೧. ಹೆಚ್ಚಾದ ಭ್ರಮೆ,–ಭ್ರಾಂತಿ. ೨. ಪ್ರಪಂಚವು ವಾಸ್ತವಿಕವೆಂಬಂತೆ ಸೃಷ್ಟಿಸಲು ಕಾರಣವಾದ ಮಾಯೆಯ ಶಕ್ತಿ : ಹರಿ ಮಹಾಮಾಯೆ ತಾನೆಂದು ಒರೆವನಲ್ಲದೆ ನಿಜವನೊರೆಯನು (ಏಕಪ್ರ. ೩೬–೨೬). ೩. ದುರ್ಗೆಯ ಹೆಸರುಗಳಲ್ಲಿ ಒಂದು.
[ಸಂ. ಮಹಾಮಾಯಾ]

**ಮಹಾಮಾರಿ** (ನಾ). ೧. ದುರ್ಗೆಯ ಒಂದು ಹೆಸರು. ೨. ಸಾವನ್ನು ಉಂಟುಮಾಡುವಂಥ ಪ್ಲೇಗು, ಕಾಲರಾ ಮುಂತಾದ ಭಯಂಕರ ವಾದ ಅಂಟುರೋಗ : ತಂಗಳ ಅಥವಾ ಹಳಸಿದ ಅನ್ನವನ್ನು ತಿನ್ನುವ ವನಿಗಾದರೂ ಮಹಾಮಾರಿಯೂ ಮತ್ತುಳಿದ ರೋಗಗಳೂ ಬೇಗನೆ ಬರುತ್ತವೆ (ಶ್ರೀಕೃ. ೦೨೩). [ಸಂ. ಮಹಾಮಾರೀ]

**ಮಹಾಮುದ್ರೆ** (ನಾ). [ಯೋಗ] ಪೂಜೆ ಮತ್ತು ಜಪಾನುಷ್ಠಾನದಲ್ಲಿ ಬಳಸುವ ಒಂದು ಬಗೆಯ ಹಸ್ತ ಮತ್ತು ಪಾದವಿನ್ಯಾಸ ; ಮಂತ್ರ ಶಾಸ್ತ್ರಪ್ರಸಿದ್ಧವಾದ ಒಂದು ಬಗೆಯ ಹಸ್ತ ಮತ್ತು ಪಾದಮುದ್ರೆ : ಅಸ್ತ್ರಮುದ್ರೆ ಚಕ್ರಮುದ್ರೆ ಮಹಾಮುದ್ರೆ . . . ಸಂಹಾರಮುದ್ರೆಯೆಂಬ ಸಕಲಮುದ್ರಾಲಕ್ಷಣವನರಿದು (ಶಿವೇಶ. ೯೩); ಆಸನಗಳಲ್ಲದೆ ಆಸನಗಳಿಂದ ಬೇರೆಯಾಗದೆ ಇರುವ ಕೆಲವು ಕ್ರಿಯೆಗಳುಂಟು. ಅವುಗಳನ್ನು ಮುದ್ರೆ ಗಳೆಂದು ಹೇಳುತ್ತೇವೆ. ಅಶ್ವಿನೀಮುದ್ರಾ, ಮಹಾಮುದ್ರಾ ಮೊದಲಾದು ವುಗಳು ಕ್ರಮವಾದ ಅಭ್ಯಾಸದಿಂದ ವಿಚಿತ್ರಫಲಗಳನ್ನು ಕೊಡುವವುಗಳಾಗಿ ರುತ್ತವೆ (ಭಾರಿದ. ೦೫೩). [ಸಂ. ಮಹಾಮುದ್ರಾ]

**ಮಹಾಮುನಿ** (ನಾ). ೧. ಶ್ರೇಷ್ಠನಾದ ಋಷಿ : ಮಾರ್ಕಂಡೇಯ ಮಹಾ ಮುನಿ ಸ್ವೇಚ್ಛಾಮರಣಿಯೆನಿಸಿಕೊಂಡನಲ್ಲದೆ ಲಿಂಗದ ನಿಜವನರಿಯನು (ಏಕಪ. ೯೩೭). ೨. ಬುದ್ಧ. ೩. ಅಗಸ್ತ್ಯಋಷಿ. ೪. ಕೊತ್ತುಂಬರಿ ಗಿಡ ಮತ್ತು ಅದರ ಧಾನ್ಯ. [ಸಂ.]

**ಮಹಾಮುಸ್ತೆ** (ನಾ). ಒಂದು ಬಗೆಯ ಸಸ್ಯ ; ಭದ್ರಮುಸ್ತೆ : "ಭದ್ರಮುಸ್ತಾ–ಮಹಾಮುಸ್ತೆ" (೬ಕಧಿ. ೬೦೦). [ಸಂ. ಮಹಾಮುಸ್ತಾ]

**ಮಹಾಮೆಕ್ಕೆ** (ನಾ). ಒಂದು ಬಗೆಯ ಮೆಕ್ಕೆಗಿಡ : ಕಕ್ಕೆಯೆಳನಾಗ ಮಹಾ[ಪಾಠಾಂ. ಮಹರ]ಮೆಕ್ಕೆ . . . ಲೊಕ್ಕಿಯೆನಿಪ್ಪವಟಿ ಬೇರ್ಗಳಂ ಕೊಂಡು (ಶಿವಪ. ೦೬–೩೭). [ಮಹಾ + ಮೆಕ್ಕೆ₃]

**ಮಹಾಮೇದ** (ನಾ). = ಒಂದು ಬಗೆಯ ಔಷಧೀ ಸಸ್ಯ : ಮಹಾ ಮೇದ (ಪ್ರಶಿಣ. ೩೦–೯೬೩). [ಸಂ.]

**ಮಹಾಮೇದೆ** (ನಾ). = ಮಹಾಮೇದ : "ವಸುಚ್ಛಿದ್ರಾ–ಮಹಾ ಮೇದೆ" (೬ಕಧಿ. ೦೯೮): ಕಾಕೋಳಿ, ಮೇದೆ, ಮಹಾಮೇದೆ . . . ಚೂರ್ಣಿಸಿ ಹಾಕಿ ಕಾಸಿ ಹದವಲ್ಲಿ ಇಳುಹಿ . . . ಸೇವಿಸಲು . . . ಉನ್ಮಾದ ಪರಿಹರವಹುದು (ಕೃಶ್ರಕಾ. II. ೩೪). [ಸಂ. ಮಹಾಮೇದ]

**ಮಹಾಮೋಹ** (ನಾ). [ತತ್ತ್ವಶಾ] ಅಜ್ಞಾನದ ಐದುವಿಧಗಳಲ್ಲಿ ಒಂದುಪ್ರಕಾರ : ಅಜ್ಞಾನವು ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ ಎಂದು ಐದು ವಿಧ . . . ವಿಷಯಗಳಲ್ಲಿರುವ ಆಸಕ್ತಿಯೇ ಮಹಾಮೋಹ (ಭಾಕತ್ತ್ವ. ೩೨೮). [ಸಂ.]

**ಮಹಾಯಜ್ಞ** (ನಾ). ೧. ದೊಡ್ಡಯಾಗ. ೨. ಗೃಹಸ್ಥನು ದೇವತೆ ಗಳ ಪ್ರೀತ್ಯರ್ಥವಾಗಿ ಪ್ರತಿದಿನವೂ ಮಾಡಬೇಕಾದ ಧಾರ್ಮಿಕ ಕೃತ್ಯ : 'ಪಂಚಮಹಾಯಜ್ಞ' ಪರಾ. [ಸಂ.]

**ಮಹಾಯಾತ್ರೆ** (ನಾ). (ವಾರಣಾಸಿ ಮುಂತಾದ ಕಡೆಗಳಿಗೆ ಮಾಡುವ) ಪವಿತ್ರವಾದ ಯಾತ್ರೆ,–ಪ್ರಯಾಣ : ಅವರು ಮಾಡುವ ಭೋಜನವು ಆ ಪರಮಾತ್ಮನಿಗೆ ನೈವೇದ್ಯವು ; ತಿರುಗುವುದೆಲ್ಲಾ ಮಹಾಯಾತ್ರೆ (ಕಥಾ. ೨೯೩). [ಸಂ. ಮಹಾಯಾತ್ರಾ]

**ಮಹಾಯಾನ** (ನಾ). ೧. ದೊಡ್ಡವಾಹನ. ೨. [ಬೌದ್ಧ] ಬೌದ್ಧಮತದ ಒಂದು ಶಾಖೆ : ಈ ಮಾಧ್ಯಮಿಕಸಂಪ್ರದಾಯಕ್ಕೆ ಮಹಾಯಾನ ವೆಂದೂ ಯೋಗಾಚಾರ ಸಂಪ್ರದಾಯಕ್ಕೆ ಹೀನಯಾನವೆಂದೂ ಹೆಸರುಗಳು ಉಂಟಾದುವು (ಹಿಂದಣ. ೨೫); ಮಹಾಯಾನದಲ್ಲಿ ಐತಿಹಾಸಿಕಪುರುಷ ಗೌತಮಬುದ್ಧನನ್ನು ಅವತಾರಪುರುಷನೆಂದು ಪರಿಗಣಿಸಿ ಅವನಿಗೆ ದೇವತ್ವದ ಪಟ್ಟವನ್ನು ಕಟ್ಟಲಾಯಿತು (ಕಾಲ. ೦೦೯); ನಿರ್ವಾಣಕ್ಕೆ ಹೆಚ್ಚು ಜನರನ್ನು ಒಯ್ಯುವ ಯಾನವಾದ್ದರಿಂದ ಇದಕ್ಕೆ 'ಮಹಾಯಾನ'ವೆಂದೂ ಕೇವಲ ಕೆಲವೇ ಜನರನ್ನು ನಿರ್ವಾಣಕ್ಕೆ ಒಯ್ಯುವ ಯಾನವಾದ್ದರಿಂದ ಅದಕ್ಕೆ 'ಹೀನಯಾನ'ವೆಂದೂ ವ್ಯವಹರಿಸುವುದು ರೂಢಿ (ಭಾರಿದ. ೨೦೪). [ಸಂ.]

**ಮಹಾಯುದ್ಧ** (ನಾ). ರಾಷ್ಟ್ರ, ರಾಷ್ಟ್ರಗಳಿಗೆ ನಡೆಯುವ ಘೋರವಾದ ಯುದ್ಧ.— ಕಾಳೆಗ : ಜಗತ್ತು ಮಹಾಭೀತಿ ಕಳವಳಗಳಿಂದ ಎದುರು ನೋಡುತ್ತಿದ್ದ ಪೀಡೆ. ದ್ವಿತೀಯ ಮಹಾಯುದ್ಧವೆಂಬ ಹೆಸರಿನಿಂದ ಅಂದು, ಹೀಗೆ ಆರಂಭವಾಯಿತು (ಕುಹಾಯು. ೩೦). [ಸಂ.]

**ಮಹಾಯೋಗ** (ನಾ). ಸ್ಥಿರವಾದ ಧ್ಯಾನ : ತನಗಾವ ಹಾನಿಯು ಇಲ್ಲದೊಂದೇ ಪ್ರಕಾರಮಾದ ಪ್ರತ್ಯಗಾತ್ಮಬ್ರಹ್ಮದಲ್ಲಿ ಮನೋಲಯ ವಹುದೇ ಮಹಾಯೋಗಮಕ್ಕುಂ (ಶಿವೇಶ. ೩೦). [ಸಂ.]

**ಮಹಾಯೋಗಿ** (ನಾ). ೧. ಶ್ರೇಷ್ಠನಾದ ಯೋಗಿ : ಆ ಮಹಾಯೋಗಿ ಗುಣಂಗಳಂ ಪಾಲಿಸಿದನೀ ಮಹಾಭೋಗಿ ನೆಲನಂ ಪರಿಪಾಲಿಸಿದಂ (ಆದಿಪು. ೩–೨೪ ವ) ; ಸನಕ . . . ಸನತ್ಸುಜಾತರೆಂಬ ಬ್ರಹ್ಮನ ಮಾನಸಪುತ್ರರಾದ ಮಹಾಯೋಗಿಗಳು ವೈಕುಂಠಕ್ಕೆ ಬಂದರು (ಶಿಶಿತಂ. IV. ೦೨). ೨. ಶಿವ. ೩. ವಿಷ್ಣು. ೪. ಕೋಳಿ. [ಸಂ. ಮಹಾಯೋಗಿನ್]

**ಮಹಾರಜತ** (ನಾ). ೧. ಚಿನ್ನ; ಬಂಗಾರ : "ಗೈರಿಕ ನಿಷ್ಕ ಹಿರಣ್ಯ ಮಹಾ ರಜತ ಸ್ವರ್ಣ ಕರ್ಬುರ ರಾಷ್ಟ್ರಾಪದಮಿನ್ನೀರಂತಜ್ ಜಾಬೂನದಮಾರ್ತಯ ಗಾಂಗೇಯ ಶಬ್ದಿತಂ ಕಲ್ಯಾಣಂ" (ಚನ್ನುಕೋ. ೨೪–೭). ೨. ಭಾರವಾದ ಒಂದು ಬಗೆಯ ಬಿಳಿಯ ಲೋಹ ; ಪ್ಲಾಟಿನಂ : ಮಹಾರಜತ (ಪ್ಲಾಟಿನ)ವೆಂಬ ಧಾತುವು ಎಂಥಾ ಕಿಚ್ಚಿನೊಳಗೂ ಕರಗುವುದಿಲ್ಲ (ಪಂಚಾಯು. ೬–೦೦). [ಸಂ.]

**ಮಹಾರಜನ** (ನಾ). ೧. ಕುಸುಂಬೆಯ ಗಿಡ ಮತ್ತು ಅದರ ಹೂವು : "ಮಹಾರಜತ[ನ]ಂ, ಕುಸುಂಭಂ–ಈ ೨ ಕುಸುಂಬೆ"(ಹಲಾಯು. ೦೦೦–೯೬೩); "ಕಮಲೋತ್ತರಂ, ಕುಸುಂಭಂ, ವಹ್ನಿಶಿಖಂ, ಮಹಾರಜನಂ–೪ ಕುಸುಂಬಾ ಬಣ್ಣದ ಹುವ್ವು" (ಸಿದ್ಧಾಂತಿ. ೩೦೩). ೨. ಚಿನ್ನ. [ಸಂ.]

**ಮಹಾರತ್ನ** (ನಾ). ಶ್ರೇಷ್ಠವಾದ ಮಣಿ ; ಅಮೂಲ್ಯವಾದ ರತ್ನ. [ಸಂ.]

**ಮಹಾರಥ** (ನಾ). ೧. ದೊಡ್ಡರಥ. ೨. ರಥದಲ್ಲಿದ್ದುಕೊಂಡೇ (ತನ್ನನ್ನೂ ತನ್ನ ಸಾರಥಿಯನ್ನೂ ಕುದುರೆಗಳನ್ನೂ ರಕ್ಷಿಸಿ ಕೊಂಡು) ಏಕಾಂಗಿಯಾಗಿ ಹತ್ತುಸಾವಿರ ಯೋಧರೊಡನೆ ಯುದ್ಧ ಮಾಡುವವನು : ರಥಿಗಳನಗ್ರಸ್ಥಿತಸಾರಥಿಗಳನಿಸೆ ಸೀರಪಾಣಿ ಸಲೆ ರಥದ ಮನೋರಥದೊಡನೆ ಮುಡಿದರಂದತಿರಥ ಸಮರಥರಾ ಮಹಾರಥಾರ್ಧರಥ ರ್ಕಳ್ (ಶಾಂತಿಪು. ೪–೦೨); ಅನಿಲಜನುಂ ಧೃಷ್ಟದ್ಯುಮ್ನನುಮಂತಕತನಯನುಮಂ ಮಹಾಸಾತ್ಯಕಿ ವತ್ಸ್ಯನ ಸೂನು ಶಿಖಂಡಿ ವ್ಯಾಸನ ಮತದಿಂದಜುವರುಂ ಮಹಾರಥರಲ್ತೇ (ಗದಾಯು. ೩–೩೦) ; ಭೀಷ್ಮ . . . ವೀರಕರ್ಣ ದ್ರೋಣ ಗೌತಮ ಭೂರಿಬಲ ಗುರುಸೂನು ಶಕುನಿ ಮಹಾರಥಾದಿಯ ಕೂಡಿಕೊಂಡನು ನರನ ಸಂಗರಕೆ (ಕುಮ್ಯಾವ್ಯಾ. ೭–೨೭). ೩. [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ನಲವತ್ತನೆಯ ಸ್ಥಾನ ಮತ್ತು ನಲವತ್ತು ಅಂಕೆಗಳಿಂದ ಕೂಡಿದ ಒಂದು ದೊಡ್ಡ ಸಂಖ್ಯೆ : ಏಕ್ಯಂ, ದಾಹಂ . . . ರಥ, ಮಹಾರಥ . . . ಮಹಾಪರಿಮಿತ – ಈ ೪೦ ಸ್ಥಾನದ ಉಗ್ಗಡಣೆ (ಕೃಶಕಾ. ೬–೨೬).
[ಸಂ.]

**ಮಹಾರಾಜ** (ನಾ). ೧. ರಾಜಶ್ರೇಷ್ಠ ; ಅನೇಕ ರಾಜರಲ್ಲಿ ಮುಖ್ಯನಾದವನು ; ಚಕ್ರವರ್ತಿ ; ಸಾಮ್ರಾಟ : ಸ್ವಸ್ತಿಶ್ರೀಗೊಂಗುಣಿ ಮಹಾರಾಜ ಶ್ರೀಪುರುಷ ಪೃಥುವೀರಾಜ್ಯ ವಿಜಯಸಂವತ್ಸರ ಯಿಪ್ಪದಾ ಎಣ್ಟನೆಯೊಳು ಶಿವಮಾರ ಕದಮ್ಬೂರಂ ಆಳೆ (ಎಕ. X, ಕೋಲಾರ. ೬-೦ : 753) : ಮಹಾರಾಜನನ್ನೆಲ್ಲರೂ ಬಲ್ಲರು ಆ ರಾಜನು ಆರನೂ ಅಜ್ಞಿಯನು (ಉಂಕ. ೪. ೦೫-೨೮) ; ಯದುರಾಯರು ಕರ್ಣಾಟಕದೇಶಾಧೀಶ್ವರರಾದ ಈ ಮೈಸೂರು ಮಹಾರಾಜರವರ ವಂಶಕ್ಕೆ ಮೂಲಪುರುಷರಾದರು (ಮುಹಾಕಂ. I, ೩). ೨. ಗುಜರಾಥೀ, ಜೈನ ಮುಂತಾದ ಮತದ ಸಾಧುಗಳು ಮೊದಲಾದ ಹಿರಿಯರನ್ನು ಸಂಬೋಧಿಸುವಾಗ ಬಳಸುವ ಒಂದು ಗೌರವಸೂಚಕವಾದ ಶಬ್ದ : 'ಮಹಾರಾಜ'ಎಂಬುದು ಮಹಾರಾಷ್ಟ್ರದಲ್ಲಿ ಸಾಧು ಸಂತರಿಗಿರುವ ಬಿರುದಾವಳಿ (ದೇಶದೂ. ೬೭). ೩. ಅಡುಗೆಯವನು ; ಬಾಣಸಿಗ : ನಾನು ನಮ್ಮ ಮಹಾರಾಜನನ್ನು ಕಳಿಸಿ ಕೊಟ್ಟಿದ್ದೇನೆ. ಅವನೇ ಅವರ ಮನೆಯಲ್ಲಿ ಅಡಿಗೆ ಮಾಡುತ್ತಾನೆ (ಶಂಕಃ. ೦೨) ; ದೇಸಾಯಿಯರಿಗಾಗಿ ವಿಮಲೆಯು 'ಮಹಾರಾಜ' (ಅಡಿಗೆಯವ) ನನ್ನು ಕರೆದು ಅಡಿಗೆ ಮಾಡಿಸಿದಳು (ಕಮಚಿ. ೩೦೯). [ಸಂ. ಮಹಾರಾಜನ್]

**ಮಹಾರಾಜಯ್ಯ** (ನಾ). ಒಬ್ಬಾತನ ಹೆಸರು : ಬಿಮ್ಮಚನೂರ ಮಹಾರಾಜಯ್ಯನುಂ ಮೋಳಿಯನೂರ ದೇವಯ್ಯನುಂ . . . ಧರ್ಮ್ಮರಾಸಿಭಟಾರರ ಕಾಲಂ ಕರ್ಚ್ಚಿ ಕೊಟ್ಟ ಸ್ಥಿತಿ ಯಾವುದೆನ್ಗೊಡೆ (ಎಕ. XI, ಚಿತ್ರದು. ೭೩-೨೦ ; 937). [ ಮಹಾರಾಜ + ಅಯ್ಯ$_{61}$ ]

**ಮಹಾರಾಜರಾಜಶ್ರೀ** (ನಾ). = ಮಹಾರಾಜಶ್ರೀ. [ಸಂ.]

**ಮಹಾರಾಜಶ್ರೀ** (ನಾ). ಗೌರವಾಸ್ಪದರನ್ನು ಕುರಿತು ಬರೆಯುವಾಗ ಬಳಸುವ ಸಾಂಪ್ರದಾಯಿಕ ಹಾಗೂ ಗೌರವಸೂಚಕವಾದ ಮಾತು : ಕನ್ನಡದಲ್ಲಿ . . . ಮಹಾರಾಜಶ್ರೀ ಮೊದಲಾದ ಶಬ್ದಗಳನ್ನೂ . . . ಪತ್ರ ಸ್ವೀಕರಿಸತಕ್ಕವರ ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯ ಉಂಟು (ಮುಂಬಯಿ. ೯-೬೪). [ಸಂ.]

**ಮಹಾರಾಜಿಕ$_1$** (ನಾ). ೧. ವಿಷ್ಣು. ೨. (ಪಾತಾಳಲೋಕದಲ್ಲಿ ವಾಸ ಮಾಡುವ) ಉಪದೇವತೆಗಳ ಒಂದು ವರ್ಗ : "ಆದಿತ್ಯಾಃ . . . ಮಹಾರಾಜಿಕಾಃ, ಸಾಧ್ಯಾಃ, ರುದ್ರಾಃ, ಗಣದೇವತಾಃ — ಗಣದೇವತೆಗಳ ಹೆಸರುಗಳು" (ಸಿಜ್ಞಾಕಿ. ೦೫). [ ಸಂ. ]

**ಮಹಾರಾಜಿಕ$_2$** (ನಾ). ದೊಡ್ಡಗೊಂದಲ, – ದೊಂಬಿ, – ಮುತ್ತಿಗೆ : ಸಿರುಮಿಸೆಟ್ಟಿಯವರು . . . ದೇವರಾಯ ಮಹಾರಾಯರು ಅಸ್ತಮಾನಕ್ಕೆ ಸಂದು ಮಹಾರಾಜಿಕವಾದಲ್ಲಿ ಗೂಳೆಯವಾಗಿ ಕೊಡಕಣಿಗೆ ಬಂದು (ಎಕ. VIII, ಸೊರಬ. ೦೬-೯; 1449) ; ಶ್ರೀ ವೀರಪ್ರತಾಪ ಅಚ್ಯುತರಾಯ ಮಹಾರಾಯರೂ ಸುಖಸಂಕಥಾವಿನೋದದಿಂ ಪೃ(ಪೃ)ಥ್ವೀರಾಜ್ಯಂಗೆಯು ಉ(ವು)ತ್ತಂ ಯಿರಲು ಮಹಾರಾಜಿಕದಿಂದಲೂ ಬಾದಾಮಿಯ ದುರ್ಗಲೂ (ವೂ) . . . ಖಿಲವಾಗಿ ಯಿರಲಾಗಿ (ಇಇ. V, ೦೯-೮ ; 1533). [ಮಹಾ + ರಾಜಿಕ]

**ಮಹಾರಾಜ್ಞಿ** (ನಾ). = ಮಹಾರಾಣಿ ೧ : ಮಹಾರಾಜ್ಞೀ ಮಹಾದೇವಿಯವರ ಸನ್ನಿಧಾನದಿಂದ ಒಸಗೆ (ಜಾಂಕಲಾ. ೦). [ಸಂ. ಮಹಾರಾಜ್ಞೀ]

**ಮಹಾರಾಣಿ** (ನಾ). ೧. ಪಟ್ಟಾಭಿಷಿಕ್ತಳಾದ ರಾಜನ ಪತ್ನಿ ; ಪಟ್ಟಮಹಿಷಿ : ತಮ್ಮ ಮಹಾರಾಣಿಗೆ ತಲೆ ಬಾಗಿ ಭಕ್ತಿ ವಿಶ್ವಾಸಗಳಿಂದ ನಮಸ್ಕರಿಸಿದರು (ಜಾಂಕಲಾ. ೦೬೬). ೨. ಒಡತಿ ; ಮುಖ್ಯಾಧಿಕಾರಿಣಿ : ಯಾವ ರಾಜ್ಯದಲ್ಲಿರಲಿ, ಯಾವ ರಾಜರ ರಾಜ್ಯವಾಗಿರಲಿ, ಅಲ್ಲಿರುವ ಮಾಡಿಕೈಯವರಿಗೆಲ್ಲಾ "ಬೀಬಿ" ಯೇ ಮಹಾರಾಣಿ ! (ಬೆಂಚ್. ೨೦೯). [<ಸಂ. ಮಹಾರಾಜ್ಞೀ]

**ಮಹಾರಾಣುವೆ** (ನಾ). ದೊಡ್ಡಪರಿವಾರ ; ಹಿರಿಯ ಪರಿವಾರ : ಮಹಾರಾಣುವೆಯ ಬಿಟ್ಟು ಬಂದು ಮತ್ತೆ ಒಡೆಯರು ಭಕ್ತರಲ್ಲಿ ರಾಣಿವಾಸವೆಂದು ಕಟ್ಟುವೆಟ್ಟುಂಟೆ (ಸೋಕಹಾ. ೩೭-೨೪೦). [ಮಹಾ + ರಾಣುವೆ]

**ಮಹಾರಾಯ, ಮಹರಾಯ, ಮಾರಾಯ** (ನಾ). ೧. ಮಹಾರಾಜ ; ದೊರೆ : ನೀವವಧರಿಸಿ ಬಿಜ್ಜಳಮಹಾರಾಯ ಒಲ್ಲಿದಂ ಬಸವಯ್ಯ ಗಂಜುವೆವು (ಬಸಪು. ೫೮-೨೦) ; ಈ ಪ್ರಕಾರವಾಗಿ ಹರಿಶ್ಚಂದ್ರಮಹಾರಾಯನು ಕೇಳಲು (ಹಮಕ. ೦೪). ೨. (ಆಲಂ) ದೊಡ್ಡಮನುಷ್ಯ : ಗೌರವಾರ್ಹ ವ್ಯಕ್ತಿ ; ಸಂಭಾವಿತ ; ℘ ಸಾಮಾನ್ಯವಾಗಿ ವ್ಯಂಗ್ಯ, ಸಲುಗೆ, ಗೌರವ ಇತ್ಯಾದಿ ಭಾವನೆಗಳನ್ನು ಸೂಚಿಸಿ, ಸಂಬೋಧಿಸುವಾಗ ಬಳಸುವ ಪದ : ಮಹಾರಾಯ, ಆ ಸುರಳಿಯನ್ನು ಗೋಡೆಗೆ ಒರಗಿಸಿ ಇಡಬೇಡ (ಸಂಟಿರು. ೪೫) ; ಒಂದಲ್ಲಾ ಎರಡಲ್ಲಾ ಮೂರು ಬಾರಿ ತಿರುಪತಿ ತೋರಿಸಿದ್ರು ಮಹಾರಾಯ ಅಳಿಯಾ (ಹಕಿನ್ನಂದ. ೨೨) ; ನಿನ್ನ ಚರ್ಮ ವಲ್ಲಾದರೂ ಹೋಗಲಯ್ಯಾ ಮಹಾರಾಯಾ, ಆ ಸಮುದ್ರದ ವಿಷಯ ಮೊದಲು ಹೇಳು (ಕಾಲಿಮು. ೬). **ಮಹರಾಯ** : ೨. ಎಲ್ಲಾ ವಿಮರ್ಶಕರ ತಲೆ ಮೇಲೆ ಹತ್ತಿ 'ಅತ್ಯತಿಷ್ಠದ್ದಶಾಂಗುಲಂ' ಆಗಿರುವೆಯಂತೆ. ಬೇಡ ಮಹರಾಯಾ (ಕಂಮು. ೨೬-೨೬) ; ಬರುವುದಿಲ್ಲ ಮಹರಾಯಾ (ಪುರಕಿ. ೭೯). **ಮಾರಾಯ** : ೧. ರಾಜೇನ್ದ್ರಚೋಳಬ್ರಹ್ಮಮಾರಾಯರ್ ಇ ಯೂರ ಸೋಮೇಶ್ವರದೇವರ್ಗ್ಗೆ . . . ದರ್ಮದತ್ತಿಯಾಗೆ ಬಿಟ್ಟರ್ (ಎಕ. XI, ಹಂಕಾರು. ೩೦-೧೨ ; 1047) ; ಮಾರಾಯರೆಮ್ಮ ಕೇರಿಯ ದಾರಿಯೊಳಂ ಬರ್ಪುದೆಮ್ಮ ಭಾಗ್ಯೋದಯಂ (ಶಕಾ. ೬-೦೬೬) ; ಮಾರಾಯಂ ಮೊದಲಿಂ ನಾಲ್ಮಡಿಯಾಗಿ ದಾನಧರ್ಮಾದಿ ಸತ್ಕಾರ್ಯಂಗಳನೆಸಗಿದಂ (ಅಚ್ಯುಕ. ೩-೦೨). ೨. ನಾರದಮುನಿ ಮಾರಾಯ ಬಂದಿಳಿದ (ಮೋಹಕ. ೦೦-೩) ; ನಾ ಒಲ್ಲೆ ಮಾರಾಯಾ ನಿನ್ನ ಕಾಫೀ (ದೀಹಕ. II, ೨೨೭) ; ಮಾರಾಯನಾಗಿ ಹೋಗಿ ಬಾರಪ್ಪ (ಮುಹಾಗ. ೦೫೩). ೩. ಗಂಡ ; ಪತಿ : ಮಾರಾಯರು ಬೈದರ ಬಾರಾವು ಕಣ್ಣೀರು ಮಾರಾಯರ ತಮ್ಮ ಮೈದುನ ಬೈದರ ಮಾಡಿಲ್ಲದ ಮಳೆಯು ಸುರಿದಂಗ (ಕಜ್ಞಾ. ೯೯). [<ಸಂ. ಮಹಾರಾಜನ್]

**ಮಹಾರಾಯುತಿ** 'ಮಹಾರಾಯಿತಿ' ನೋ.

**ಮಹಾರಾಯಿತಿ, ಮಹರಾಯಿತಿ, ಮಹಾರಾಯುತಿ, ಮಹಾರಾಯ್ತಿ, ಮಾರಾಯಿತಿ, ಮಾರಾಯ್ತಿ** (ನಾ). ೧. (ಆಲಂ) ದೊಡ್ಡಮನುಷ್ಯಳು ; ಸಂಭಾವಿತೆ ; ℘ ಸಾಮಾನ್ಯವಾಗಿ ವ್ಯಂಗ್ಯ, ಸಲುಗೆ, ಗೌರವ ಇತ್ಯಾದಿ ಭಾವನೆಗಳನ್ನು ಸೂಚಿಸಿ, ಸಂಬೋಧಿಸುವಾಗ ಬಳಸುವ ಪದ : ಇಷ್ಟು ಮೊದಲೇ ಏಕ ಹೇಳಿ ಬಿಡಲಿಲ್ಲ, ಮಹಾರಾಯಿತಿ? (ಕಮಕ. ೯೦). **ಮಹರಾಯಿತಿ** : ೧. ಹೋಗೇ ಮಹರಾಯಿತಿ, ಅವನೇನಾದರೂ ಕೋಟಿಸಿಕೊಂಡಾನು ಸದ್ಯ (ರೂಹಕ. ೩೨೭). **ಮಹಾರಾಯುತಿ** : ೧. ಹಾಗೆ ಬಾ ಮಹಾರಾಯುತಿ. ಕಾರಂಜಿ ನೋಡುವದಕ್ಕಾದರೂ ಹೋಗೋಣ (ಹಕಿನ್ನಂದ. ೪೮). **ಮಹಾರಾಯ್ತಿ** : ೧. ಏ ! ಮಹಾರಾಯ್ತೀ ತುಸು ತಡೆ (ಕರುಣಾ. ೦೩). **ಮಾರಾಯಿತಿ** : ೧. ನಿನ್ನ ದಮ್ಮಯ್ಯ ಕಾಡಿಯೇ ಮಾರಾಯಿತಿ (ಜಾಲಕ. ೩೩). ೨. ಮಹಾರಾಣಿ : ಆ ಮಾರಾಯಿತಿಯುಂ . . . ನಾರಾಯಣನಂ ಮನೋವಾಕ್ಕಾಯವೃತ್ತಿಗಳಿಂ ಭಜಿಸುತಿರ್ದಳ್ (ಅಚ್ಯುಕ. ೪-೦೩). **ಮಾರಾಯ್ತಿ** : ೧. ಹೋ ನಿರ್ಸಯಾ, ಇದೆಂಥಾದ್ದು ಮಾರಾಯ್ತಿ (ಚೋಕ್ಕ. ೫೩). [ ಮಹಾರಾಯ + – ಇತಿ$_1$ (< – ಇತ್ತಿ) ]

**ಮಹಾರಾಯ್ತಿ** 'ಮಹಾರಾಯಿತಿ' ನೋ.

**ಮಹಾರಾಷ್ಟ್ರ** (ನಾ). ೧. ದೊಡ್ಡದೇಶ : ಈ ಮಹಾರಾಷ್ಟ್ರಕ್ಕೆ ತಾನೀ ಭೂಮಿವಲ್ಲಭನಲ್ಲದೇ ಮತ್ತೀ ಮಹಿಯೊಳಗೆ ಹೇಳಲಿಲ್ಲ (ಬಸಪು. ೫೦-೦೭).

೨. ಭಾರತದಲ್ಲಿ ಪಶ್ಚಿಮಭಾಗದಲ್ಲಿ ಇರುವ ಮರಾಠಿದೇಶ ಮತ್ತು ಅಲ್ಲಿಯ ಜನ : ಮಹಾರಾಷ್ಟ್ರದ ಸಂಬಂಧವು ಕರ್ನಾಟಕಕ್ಕೆ ಅತಿ ನಿಕಟವಾಗಿದೆ (ಮಹಾಹಿ. ೦). [ಸಂ.]

**ಮಹಾರಾಷ್ಟ್ರಕ** (ನಾ). = ಮಹಾರಾಷ್ಟ್ರ ೧ : ೯೯೦೦೦ ಗ್ರಾಮಗಳನ್ನೊಳಗೊಂಡ ಮೂರು ಮಹಾರಾಷ್ಟ್ರಕಗಳಿಗೆ ಅಧಿಪತಿಯಾದನು (ಕರ್ನಾಅ. ೩೩). ೨. ಮರಾಠಿದೇಶಕ್ಕೆ ಸಂಬಂಧಿಸಿದುದು. [ಸಂ.]

**ಮಹಾರಾಷ್ಟ್ರೀ** (ನಾ). ಪ್ರಾಕೃತ ಭಾಷೆಗಳಲ್ಲಿ ಒಂದು ; ಮಹಾರಾಷ್ಟ್ರದ ಭಾಷೆ ; ಮರಾಠೀಭಾಷೆ : ಆ ಅಪಭ್ರಂಶ 'ಮಹಾರಾಷ್ಟ್ರೀ' ಎಂದರೆ ಇಂದಿನ 'ಅರಿಯ' ಮಾತಿನ ತಾಯಿ (ಕರ್ನಾಟ. ೦೦೭). [ಸಂ.]

**ಮಹಾರುದ್ರ** (ನಾ). ೧. ಶಿವನ ಒಂದು ಹೆಸರು : ಕಾವೇರಿ ತೀರದಲ್ಲಿ ಮಹಾರುದ್ರಹೋಮವು ನಡೆಯಿತು (ಕೂಶಿ). ೨. ಅಗ್ನಿಗೆ ಹೋಮ ಮಾಡುವಾಗ ಅಥವಾ ಶಿವಲಿಂಗಕ್ಕೆ ಅಭಿಷೇಕ ಮಾಡುವಾಗ ರುದ್ರಾಧ್ಯಾಯವೆಂಬ ವೇದಭಾಗವನ್ನು ಹನ್ನೊಂದು ಸಲ ಪುನರುಚ್ಚರಿಸುವುದು : ಶಾತಾತಪಸ್ಮೃತಿ—೨೭೪ ಶ್ಲೋಕಗಳು ಅತಿರುದ್ರ, ಮಹಾರುದ್ರ ವಿಧಾನಗಳು, ಪ್ರಾಯಶ್ಚಿತ್ತ (ಕಾರಿದ. ೬೭). [ಸಂ.]

**ಮಹಾರುದ್ರಾಭಿಷೇಕ** (ನಾ). ಶಿವರಾತ್ರಿ ಮೊದಲಾದ ಪುಣ್ಯದಿನಗಳಲ್ಲಿ ರುದ್ರಸೂಕ್ತವನ್ನು (ಏಕಾದಶ ವಾರ) ಪಠಿಸುತ್ತ ಶಿವಲಿಂಗಕ್ಕೆ ಮಾಡುವ ಅಭಿಷೇಕ : ಅವರು ಶಿವರಾತ್ರಿಯಂದು ಮಹಾರುದ್ರಾಭಿಷೇಕವನ್ನು ಬಹಳ ವಿಜೃಂಭಣೆಯಿಂದ ಮಾಡಿಸಿದರು (ಕೂಶಿ). [ಸಂ.]

**ಮಹಾರೋಗ** (ನಾ). ಭಯಂಕರವಾದ ರೋಗ ; ಮಹಾವ್ಯಾಧಿ : ಡಾಕ್ಟರರು ಆಚಾರ್ಯರ ಬೆನ್ನನ್ನು ಪರೀಕ್ಷಿಸಿದರು, ಅದು ಮಹಾರೋಗವಲ್ಲ, ಬರಿ ಚರ್ಮರೋಗ (ಸಬುಹ. ೯೯೩). 'ದೊಡ್ಡರೋಗ' ಪರಾ. [ಸಂ.]

**ಮಹಾರೌಪ್ಯ** (ನಾ). ಚಿನ್ನ ; ಬಂಗಾರ : "ಮಹಾರೌಪ್ಯಂ=ಚಿನ್ನಂ" (ಶಾಶ್ಯ. ೨೯೦). [ಸಂ.]

**ಮಹಾರೌರವ** (ನಾ). ಒಂದು ನರಕದ ಹೆಸರು : "ತಪನಃ, ಅವೀಚಿಃ, ಮಹಾರೌರವಃ . . . ಕಾಲಸೂತ್ರಂ—ಇವು . . . ಆ ನರಕಭೇದಂಗಳ ಹೆಸರುಗಳು" (ಸಿದ್ಧಾಂತಿ. ೬೯); ಲೋಹಸ್ತಂಭ . . . ಮಹಾರೌರವ ಮಹಾಪದಾನುಗವೀಚಿಗಳೆಂಬವೇ ರಾಜರಾಜೇಶ್ವರನರಕಂಗಳಕ್ಕುಂ (ವಿಶೀಳ. ೦೫೨). [ಸಂ.]

**ಮಹಾರ್ಬುದ** (ನಾ). [ಗಣಿತ] ಹತ್ತು ಅರ್ಬುದ ; ನೂರು ಕೋಟಿಯ ಸಂಖ್ಯೆ. [ಸಂ.]

**ಮಹಾಲಕರಿ, ಮಹಲಕರಿ** (ನಾ). ಹೋಬಳಿಗೆ ಸಂಬಂಧಿಸಿದ ಜಮಾಬಂದಿ, ಬಂದೋಬಸ್ತು ಮುಂತಾದುವುಗಳನ್ನು ನೋಡಿಕೊಳ್ಳಲು ಸರ್ಕಾರದಿಂದ ನಿಯುಕ್ತನಾದ ಅಧಿಕಾರಿ : ಮಹಾಲಿನ ಮುಖ್ಯಾಧಿಕಾರಿಯು ಮಹಾಲಕರಿಯು (ಕಹಾಗ. ೩೬೬) ; ತಾಲ್ಲೂಕುಗಳಿಗೆ ಮಾಮಲೇದಾರರಿರುವಂತೆ ಪೇಟೆಗೆ 'ಮಹಾಲಕರಿ' ಎಂಬ ಅಧಿಕಾರಸ್ಥನಿರುವನು (ವಿಶಾಖೂ. ೩೮) ; ತಾಲೂಕಿನಲ್ಲಿ ಮಾಮಲೇದಾರನು ಮಾಡುವ ಕೆಲಸಗಳನ್ನೇ ಮಹಾಲಿನ ಮಹಾಲಕರಿಯು ಮಾಡುತ್ತಾನೆ (ಶಿಳಿಶ. ೬೨). **ಮಹಲಕರಿ** : ವಿಜಯನಗರಸಾಮ್ರಾಜ್ಯದ ಉನ್ನತಸ್ಥಿತಿಯಲ್ಲಿ ಉತ್ತಂಗಿಯು ಊರ್ಜಿತಸ್ಥಿತಿಯಲ್ಲಿತ್ತು. ಅಲ್ಲಿ ಮಹಲಕರಿ ಕಚೇರಿಯಿದ್ದು ಸುತ್ತಲೂ ಭದ್ರವಾದ ಕೋಟೆಯಿತ್ತು (ಗ್ರಾಕುಹಂ. ೨). [←ಮರಾ. ಮಹಾಲ್‌ಕರೀ]

**ಮಹಾಲಕ್ಕುಮಿ, ಮಾಲಕುಮಿ** (ನಾ). = ಮಹಾಲಕ್ಷ್ಮಿ ೧ : ಮಹಾಲಕ್ಕುಮಿದೇವಿಯರ ಮುಂದುವೊಂದು ನಂದಾದೀಪ (ಎಕ. VI, ಕಡೂರು. ೦೩-೩ ; 1518). **ಮಾಲಕುಮಿ** : "ಇಂಗಡಲಣುಗಿ, ಸಿರಿ, ಮಾಲಕುಮಿ_ಈ ೩ ಲಕ್ಷ್ಮಿಗೆ ಪೆಸರ್" (ಕಶಸಾ. ೯೭-೦೦) ; "ಸಿರಿಯೆನೆ ಮಾಲಕುಮಿಯೆನೆ ಮಹಾಲಕ್ಷ್ಮಿಯೊಳಂ" (ಕರ್ನಾಅ. ೩). [<ಸಂ. ಮಹಾಲಕ್ಷ್ಮೀ]

**ಮಹಾಲಕ್ಷ್ಮಿ** (ನಾ). ೧. ವಿಷ್ಣುವಿನ ಹೆಂಡತಿಯೂ, ಐಶ್ವರ್ಯದ ಅಧಿದೇವಿಯೂ ಆದ ದೇವತೆ : ಮಹಾಲಕ್ಷ್ಮೀಲಬ್ಧವರಪ್ರಸಾದ [ಮ್ಯೂ]ಬುರಾಯಾಸ್ಥಾನ ಚಮತ್ಕಾರ ಬಗೆಕಾಱ (ಸೌಇಇ. XX, ೩೬-೭ ; 1056) ; ಮಹಾಲಕ್ಷ್ಮೀ__ಮಾಲಕುಮಿ (ಕಬುದ. ೨೯೦ ಪ್ರಯೋ). ೨. ಸರಸ್ವತಿ. ೩. ದುರ್ಗೆ. ೪. ಐಶ್ವರ್ಯ ; ಸಿರಿ ; ಸಂಪತ್ತು. ೫. ನವರಾತ್ರಿಯ ಪೂಜೆಯ ವೇಳೆಯಲ್ಲಿ, ದುರ್ಗೆಯ ಅವತಾರವೆಂದು ಸಾಂಕೇತಿಕವಾಗಿ ಕೂರಿಸುವ ಮೈನೆರೆಯದ ಹುಡುಗಿ. [ಸಂ. ಮಹಾಲಕ್ಷ್ಮೀ]

**ಮಹಾಲತಾಂಗ** (ನಾ). [ಜೈನ] ಕಾಲವನ್ನು ಸೂಚಿಸುವ ಒಂದು ಪ್ರಮಾಣ ; ಕಾಲಗಣನೆಯಲ್ಲಿ ಒಂದು ಪ್ರಕಾರ : ಎಂಬತ್ತುನಾಲ್ಕು ಲಕ್ಷ ಪೂರ್ವಾಂಗಗಳಿಂದ ನಯುತಾಂಗವು . . . ಮಹಾಲತಾಂಗ, ಮಹಾಲತಾ ಎಂಬಿವು ಕ್ರಮದಿಂದ ಆಗುತ್ತವೆ (ಕೃಶಶ. ೩೦೬). [ಸಂ.]

**ಮಹಾಲತೆ** (ನಾ). [ಜೈನ] ಕಾಲವನ್ನು ಸೂಚಿಸುವ ಒಂದು ಪ್ರಮಾಣ : ಇದೇ ರೀತಿ ಎಂಬತ್ತು ನಾಲ್ಕು ಮತ್ತು ಎಂಬತ್ತು ನಾಲ್ಕು ಲಕ್ಷಗುಣಿತಕ್ರಮದಿಂದ ಕಮುದಾಂಗ . . . ಮಹಾಲತಾ ಎಂಬಿವು ಕ್ರಮದಿಂದ ಆಗುತ್ತವೆ (ಕೃಶಶ. ೩೦೬). [ಸಂ. ಮಹಾಲತಾ]

**ಮಹಾಲಯ** (ನಾ). ೧. ದೇವಸ್ಥಾನ; ಗುಡಿ. ೨. ಆಶ್ರಯಸ್ಥಾನ. ೩. ದೊಡ್ಡಮನೆ ; ಭವನ ; ಸೌಧ. ೪. ಬ್ರಹ್ಮಲೋಕ. ೫. ಪರಮಾತ್ಮ. ೬. ಮಹಾಪ್ರಳಯ ; ವಿಶ್ವಪ್ರಳಯ. ೩, ೬ : ನೆಗಬ್ದ ಮಹಾಲಯವಲ್ಲದೆ ನೆಗಬ್ದ ಮಹಾಲಯವದಿಲ್ಲ (ಕೃಶ್ಯ. ೨-೪). ೭. ಭಾದ್ರಪದ ಬಹುಳ ಅಮಾವಾಸ್ಯೆ ; ಸರ್ವಪಿತೃಅಮಾವಾಸ್ಯೆ : ಮಹಾಲಯ ಪುಣ್ಯದಿವಸದಿ . . . ಪುರಂದರವಿಠಲ ಇಲ್ಲಿ ಒಲಿವ ಇದ ಚರಿಸೆ (ಪುರಂದ. ೫-೦೬೦-೯೮); ೧ ವರ್ಷದಲ್ಲಿ ೯೬ ಶ್ರಾದ್ಧಗಳು ಬರುವವು. ಅವು ಯಾವುವೆಂದರೆ ಮನ್ವಾದಿಗಳು ೧೪, ಯುಗಾದಿಗಳು ೪, ಭಾದ್ರಪದ ಬಹುಳ ಪ್ರತಿಪದ ಮೊದಲು ಬಹುಳ ಅಮಾವಾಸ್ಯೆಯವರೆವಿಗೂ ಮಹಾಲಯ ಶ್ರಾದ್ಧ ೧೫ . . . ಮೃತತಿಥಿ ೧ (ಜಪಾರ. ೪-೨೨ ಶಾಸ್ತ್ರರ್ಥ). **ಮಹಾಲಯಾಅಮಾವಾಸ್ಯೆ**=ಮಹಾಲಯ ೭ : ಭಾದ್ರಪದ ಬಹುಳ ೩೦ನೆಯ ತಿಥಿಯನ್ನು ಮಹಾಲಯಾಅಮಾವಾಸ್ಯೆ,ಸರ್ವಪಿತೃ ಅಮಾವಾಸ್ಯೆ, ನವರಾತ್ರಿಅಮಾವಾಸ್ಯೆ ಮುಂತಾಗಿ ಹೆಸರಿಸಿದೆ (ಕಾಜ್ಞ. ೦೨೯). [ಸಂ. (ಮಹಾ + ಆಲಯ ; ಮಹಾ + ಲಯ)]

**ಮಹಾಲಿಂಗ** (ನಾ). ೧. ಶಿವನ ಹೆಸರುಗಳಲ್ಲಿ ಒಂದು : ಕನ್ನೆಯಲ್ಲಿ ಕೈವಿಡಿದೆನು ನಿಮ್ಮಲ್ಲಿ ನೆರೆದೆನು ಮನ್ನಿಸು ಕಂಡಾ ಮಹಾಲಿಂಗವೇ (ಬಸವ. ೫೦೬). ೨. [ವೀಶೈ] ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗ ಎಂಬ ಆರು ಬಗೆಯ ಲಿಂಗಗಳಲ್ಲಿ ಒಂದು : ಆಚಾರಲಿಂಗವಿಡಿದು ಗುರುಲಿಂಗವ ಕಾಣಬೇಕು . . . ಪ್ರಸಾದಲಿಂಗವಿಡಿದು ಮಹಾಲಿಂಗವ ಕಾಣಬೇಕು (ಅವಶಂ. ೦೬೮-೬೫೭) ; ಮಹಾಲಿಂಗವು ಹೃದಯಾಕಾಶವನ್ನೂ . . . ಆಚಾರಲಿಂಗವು ಪ್ರಾಣೇಂದ್ರಿಯವನ್ನೂ ಆಶ್ರಯಿಸಿದವು (ಕಾಕಿದ. ೨೫೩). **ಮಹಾಲಿಂಗ ಕಪನಿ** = "ವಿರಕ್ತರು ಹಾಕಿಕೊಳ್ಳುವ ಕಾವಿಯ ನಿಲುವಂಗಿ" (ಕರಣ. ೨೪-೮). [ಸಂ.]

**ಮಹಾಲಿಂಗನಬಳ್ಳಿ** (ನಾ). ಒಂದು ಬಗೆಯ ಬಳ್ಳಿ : "ಮಹಾಲಿಂಗನ ಬಳ್ಳಿ . . . ಲಿಂಗಕೊಂಡೇಬಳ್ಳಿ, ಪಚಗುರಿಯಾ" (ಸಸ್ಯಶಿ. ೨೩). [<ಮಹಾಲಿಂಗ + ಬಳ್ಳಿ]

**ಮಹಾಲು, ಮಹಲ್, ಮಹಲು, ಮಾಲು** (ನಾ). ೧. ಅರಮನೆ, ದೇವಾಲಯ ಮುಂತಾದುವುಗಳಂತಿರುವ ವಿಶಾಲವಾದ ಕಟ್ಟಡ ; ಭವನ ; ಹರ್ಮ್ಯ : ಮಹಾಲಿನೊಳಗಿನ ದೊಡ್ಡಕನ್ನಡೀ ಒಡೆದನು

(ಮುಂಬಯಿ. ೪-೧೯೬) ; ಇಲ್ಲಿಯ ಗುಡಿಗೋಪುರಗಳೂ ಮಹಾಲು ಮಂದಿರಗಳೂ ಕೆರೆಕಟ್ಟೆಗಳೂ ಕರ್ಮಕೌಶಲದ ಪ್ರದರ್ಶಕ (ವಿಜಾಪುಂ. ೧೦). ೨. ತಾಲ್ಲೂಕಿಗಿಂತ ಸಣ್ಣದಾದ ಒಂದು ಆಡಳಿತವಿಭಾಗ ; ಹೋಬಳಿ : ಕೆಲವು ಹಳ್ಳಿಗೆ ಕೂಡಿ ಮಹಾಲೆಂಬ ಹೆಸರುಂಟು, ಆ ಮಹಾಲಿನ ಮುಖ್ಯಸ್ಥಳದಲ್ಲಿ ಮಹಾಲಿನ ಬುದ್ಧಿವಂತನನ್ನು ಗೊತ್ತುಮಾಡುವರು (ಕಭಾಗ. ೧೩೦) ; ತಾಲ್ಲೂಕು ದೊಡ್ಡದಿದ್ದಲ್ಲಿ ಅದರೊಳಗೆ ಮಹಾಲು ಎಂಬ ವಿಭಾಗವನ್ನು ಮಾಡಿರುತ್ತಾರೆ (ಕಳಪ. ೬೨). ೪. ಕಂದಾಯ : (ಕಿಸಂಗ್ರಾ. ೧೫೩). ಮಹಲ್ : ೧. ಇಂತರಮನೆಯಂ ರಚನೆಗೈಸಿ ತದುಪಯುಕ್ತಮಾದ ಬೊಕ್ಕಸ ಭಂಡಾರ ಲಾಯ ಗಜಾಶ್ವಶಾಲೆಯುಗ್ರಾಣ ಪಣತ ಮುಂತಾದ ಮಹಲ್ಗಳಂ ನಿರ್ಮಾಣಂಗೆಯ್ಸಿ (ಕಳಪ್ಪ. ೧-೧೧೫). ಮಹಲು: ೧. ರಾಜ ಕಾರ್ಯದಲ್ಲಿ ಮಹಲಿಗೆ ಬರುವುದು ಹೊತ್ತಾಗಿ ಹೋಯಿತು (ದೌಲತ್. ೧೦೮) ; ನಾನೂ ಮಹಲುಗಳಲ್ಲಿ ವಾಸಿಸುತ್ತಿದ್ದೆ (ಶ್ರೀಕಾಶ. ೦೬೮). ೨. "ನಾಡು, ಬೀಡು, ಹಟ್ಟಿ (ಪಟ್ಟಿ, ಪೇಠ), ಮಹಲು, ದೇಶ ವಿಷಯ, ಸೀಮೆ" (ಕಂಪಾಹು. ೮೭).

ಮಾಲು : ೧. ಸೆಲ್ಕ ಸುಟ್ಟಾಂಗಾತು ಕೋಲು ಮುರಿದ್ಹಾಂಗಾತು ಕಟ್ಟಿಸಿದ ಮಾಲೆಲ್ಲ ತಟ್ಟನೆ ಬಿದ್ಹಾಂಗಾತು (ಕನ್ನಜಾ. ೯೦) ; ರಂಗ ಕಿತ್ತೂರ ಮಾಲ ಹೊಕ್ಕು ನೋಡುಣ ಬಾರ ಮಾಲ ಮಾಲೆಲ್ಲ ಕನ್ನಡಿ ಮಲಸರ್ಜ ಮಾಲ ಕಟ್ಟಿಸಿ ಇರಲಿಲ್ಲೊ (ಜನಗೀ. ೨೬); ನೀಲಮಾಣಿಕ್ಯ ಬಿಗಿದ ಗೋಪುರ ಆಣಿಮುತ್ತಿನ ಕಲಶ ಕನ್ನಡಿ ಮಾಲುಗಳ ನಿರ್ಮಿಸಿದ ಮನೆಗಳ ಸೋಳಸಾಸಿರವ (ಕರ್ನಾಕ. ೨೮೬).

[ ← ಪಾರ. ಮಹಲ್; ಅರ. ಮಹಲ್ಲ್; ಹಿಂ. ಮಹಲ್, ಮಹಲ್ಲ್, ಮಹಾಲ್ ; ಮರಾ. ಮಹಲ್, ಮಹಾಲ್ ]

**ಮಹಾವರ್ತಕ** (ನಾ). ಹಿರಿಯವ್ಯಾಪಾರಿ ; ದೊಡ್ಡವರ್ತಕ : ಮಹಾ ವರ್ತಕರಿಗೆ, ಶ್ರೇಷ್ಠಿಗಳಿಗೆ, ಪುರಪ್ರಮುಖರುಗಳಿಗೆ, ಅರಮನೆಗಳಂತಹ ನಿವಾಸಗಳು ಮೊದಲುಗೊಂಡು . . . ನಿರ್ಮಾಣವಾದುವು (ಶಾಂತಲಾ. ೯೯).

[ಸಂ.]

**ಮಹಾವಲಿ** (ಗು). ಮಹಾಪರಾಕ್ರಮಿಯಾದ : ಸ್ವಸ್ತಿಶ್ರೀಮಹಾವಲಿ ವಾಣರಸರ್ ಪ್ರಿಥುವೀರಜ್ಯಜಿಗ್ಗೆಯೆ (ಎಕ. X (8), ಶಂತಾಮು. ೧೬೯-೧ ; ಸು. 800). [ <ಸಂ. ಮಹಾಬಲಿನ್ ] .

**ಮಹಾವಾಕ್ಯ** (ನಾ). ೧. ದೀರ್ಘವಾದ ವಾಕ್ಯ ; ದೊಡ್ಡವಾಕ್ಯ. ೨. [ತತ್ತ್ವಶಾ] ಬ್ರಹ್ಮತತ್ವವನ್ನು ಗರ್ಭೀಕರಿಸಿಕೊಂಡಿರುವ, ತತ್ತ್ವಮಸಿ ಮುಂತಾದ ಉಪನಿಷದ್ವಾಕ್ಯಗಳಲ್ಲಿ ಒಂದು : ಮಹಾ ವಾಕ್ಯವೆಂಬ ವೇದಾಂತವಾಕ್ಯಗಳ ಉಪದೇಶದಿಂದ ಬ್ರಹ್ಮಸಾಕ್ಷಾತ್ಕಾರವು ಲಭಿಸುವುದೆಂದು ಸಿದ್ಧಾಂತ (ಹಿಂದಶಾ. ೨೨೦) ; "ತತ್ವಮಸಿ" ಮುಂತಾದ ವಾಕ್ಯಗಳು ತತ್ವವನ್ನು ತಿಳಿಸುತ್ತವೆ. ಇವು ಬ್ರಹ್ಮಸ್ವರೂಪವನ್ನು ತಿಳಿಸುವು ದರಿಂದ ಮಹಾವಾಕ್ಯವೆನ್ನುತ್ತಾರೆ (ಶಾರದ. ೨೩೭). [ಸಂ.]

**ಮಹಾವಾತ** (ನಾ). ೧. ಬಿರುಗಾಳಿ. ೨. = ಮಹಾನಿಲ ೨ : ನಿಗೋದಂಬೆರಸು ಸಪ್ತಭೂಮ್ಯಾದಿಪರ್ಯಂತಮಪ್ಪ ಗತಿಪಂಚಕಸ್ಥಾನಂ ಲೋಕಾಕಾಶಂಗಳ್ ಸಂಗತಂಗಳಾಗೆಯಿದುವಂ ಧರಿಯಿಸಿ ನಿಂದ ಮಹಾ ವಾತಂಗಳ್ ಮೂಜಕ್ಕುಂ (ಶಾಂತಿಪು. ೦೨-೧೦ ವ). [ಸಂ.]

**ಮಹಾವಾತ್ಯೆ** (ನಾ). = ಮಹಾವಾತ ೧ : ದುರ್ಯಶಃಪಾಂಶುಪ್ರಸರ ಮಹಾವಾತ್ಯೆ [ಶಾಶಾಂ. ತೆ]ಯುಮಪ್ಪ ಪಾತಕಿಯೊಳ್ ಲಕ್ಷ್ಮಿಯೊಳತಿಕಾತರ ಕಾಪುರುಷಗಣನೆಯೊಳ್ ನೆರೆಯಲ್ಕಿಂತೀತನೆ ಬಗೆಗಾಂ ಪುರುತನುಜಾತರ ಬಗೆದುದನೆ ಬಗೆವೆನಬ್ಬಿಪಂ ಬಗೆಯೆಂ (ಆದಿಪು. ೦೪-೦೨೨ ವ).

[ಸಂ. ಮಹಾವಾತ್ಯಾ ]

**ಮಹಾವಾದ್ಯ** (ನಾ). ರಾಜಮರ್ಯಾದೆಯನ್ನು ಸೂಚಿಸುವ ಸಲುವಾಗಿ ಬಾರಿಸುತ್ತಿದ್ದ ದೊಡ್ಡ ಅಥವಾ ಶ್ರೇಷ್ಠವಾದ ವಾದ್ಯ; ಭೇರಿ, ಶಂಖ, ಕಹಳೆ, ಗಂಟೆ ಮತ್ತು ವೀಣೆಯೆಂಬಿವು ಐದು ಬಗೆಯ ವಾದ್ಯಗಳು : 'ಪಂಚಮಹಾವಾದ್ಯ' ಪರಾ. [ಸಂ.]

**ಮಹಾವಾಹಿನಿ** (ನಾ). ೧. ದೊಡ್ಡನದಿ ; ಮಹಾನದಿ : ಚತುರ್ದಶ ಮಹಾವಾಹಿನಿಗಳಿಂದಮೆಸೆದು . . . ನೆಗಟ್ದುದಿಳೆಗೆ ಜಂಬೂದ್ವೀಪಂ (ಆದಿಪು. ೦-೪೮ ವ); ಬೆಳ್ನೊರೆವಿಂಡಂ ತಾಳ್ದಿದ ಪೆರ್ದೆರೆವಿಂಡುಗಳೆಸೆವುದಾ ಮಹಾವಾಹಿನಿಯೊಳ್ (ಚಂದ್ರಪ್ರ. ೧೦-೫೦). ೨. ದೊಡ್ಡಸೈನ್ಯ ; ಮಹಾ ಸೇನೆ : ಬಳವತ್ತ್ವತ್ಯಂತಭೂಪಾಳನಿಕರ ಮಹಾವಾಹಿನೀವಾಹಿನೀಸಂಕುಳ ಮತ್ಯುತ್ಸಾಹದಿಂದಂ ಪುಗೆ (ಆದಿಪು. ೦೩-೪೫) ; ಮಹಾವಾಹಿನೀಸಮೇತರಾದ ಕೃಷ್ಣದೇವರಾಯರು ತಟ್ಟನೆ ಬಂದು ರಾಯಚೂರನ್ನು ಮುತ್ತಿದಾಗ (ರಾಬಿಜ. ೨೬೨). [ಸಂ. ಮಹಾವಾಹಿನೀ]

**ಮಹಾವಿದ್ಯಾಲಯ** (ನಾ). ಉಚ್ಚಶಿಕ್ಷಣದ ವಿದ್ಯಾಸಂಸ್ಥೆ; ಕಾಲೇಜು : ನನ್ನ ಆಪ್ತಬಂಧುಗಳೊಬ್ಬರು ಮಹಾವಿದ್ಯಾಲಯದ (College) ಪ್ರಾಚಾರ್ಯರು (ಕಥಕ. ೧೬). [ಸಂ.]

**ಮಹಾವಿದ್ಯೆ** (ನಾ). ೧. ಅಸಾಧಾರಣವಾದ ವಿದ್ಯೆ ; ಅತಿಶಯವಾದ ಜ್ಞಾನ,-ತಿಳಿವಳಿಕೆ : ಮುನ್ನಿನ ತಮ್ಮ ವಿದ್ಯಾಧರರಾದಂದಿನ ಮಹಾ ವಿದ್ಯೆಗಳ್ ಮುಂ ನೆರಪಿದಗಣ್ಯಪುಣ್ಯಮುಂ ತನ್ನ ಪೊರ್ದುವಂತಾನುಂ. . . ಸಮನಿಸೆ (ಶಾಂತಿಪು. ೨-೨೭ ವ). ೨. ಲಕ್ಷ್ಮಿ. ೩. ದುರ್ಗೆ.

[ಸಂ. ಮಹಾವಿದ್ಯಾ]

**ಮಹಾವಿಭೂತಿ** (ನಾ). ೧. ಅತಿಶಯವಾದ ವೈಭವ : ಸತತಂ ಪೆರ್ಚುತ್ತು ನಿಜಾಯತಿಯೊಡನೆ ಮಹಾವಿಭೂತಿ ಪರಮೋದಯನಾ (ಕವಿರಾ. ೩-೦೫೫) ; ಮಹಾವಿಭೂತಿಯಿಂದಂ ಪಾಣಿಗ್ರಹಪುರಸ್ಸರಂ ಸಂಧ್ಯಾವಳಿಯಂ ಕುಮಾರಂಗೆ ಕೊಟ್ಟಳ್ (ಪಡ್ಮರಾ. ೬೦-೨೮) ; ಭರತೇಶ್ವರಚಕ್ರವರ್ತಿಯುಂ . . . ಮಹಾ ಮಹಮೆಂಬ ಮಹಾಪೂಜೆಯುಂ ಮಹಾವಿಭೂತಿಯುಂ ಪದಿನಾಲ್ಕುದಿವಸಂ ಬರಂ ನಿರಂತರಂ ಮಾಡೆ (ಆದಿಪು. ೦೬-೪೯ ವ). ೨. ಅಸಾಧಾರಣ ಸಾಮರ್ಥ್ಯವನ್ನು ಪಡೆದ ವ್ಯಕ್ತಿ ; ಮಹಾತ್ಮ ; ಮಹಾನುಭಾವ : ಜಗತ್ತಿನ ಉದ್ಧಾರಕ್ಕಾಗಿ ಮಹಾವಿಭೂತಿಗಳು ಶ್ರಮಿಸುತ್ತಾರೆ(ರೂಢಿ). [ಸಂ.]

**ಮಹಾವಿಷ** (ನಾ). ೧. ತೀಕ್ಷ್ಣವಾದ ನಂಜು ; ಭಯಂಕರವಾದ ವಿಷ : ಅಮೃತಮಥನಂ ಮಾಡುತಿರಲು . . . ಭುಗುಭುಗಿಲ್ ಛಿಳಿಛಿಟಲ ನೊಗೆದುದು ಮಹಾವಿಷಂ (ಸಂಬರ. ೦-೦೩). ೨. ಎರಡು ಬಾಯಿಗಳುಳ್ಳ ಒಂದು ಬಗೆಯ ಹಾವು ; ಎರಡು ತಲೆಯ ಹಾವು. ೩. ಒಂದು ಬಗೆಯ ವಿಷ ; ೯ ಕೆಲವು ವಿಷಗಳು ಭಯಂಕರವಾದ ವಿಷಗಳೆಂದು ಪರಿಗಣಿತವಾಗಿವೆ : "ಮಹಾವಿಷ ೫. ಸೋಮಲ, ಹರತಾಳ, ಮನಶೀಳ, ವತ್ಸನಾಭ, ಸರ್ಪವಿಷ (ಶಾಲಿನಿ-ಸಂ. ೬೩) ; ಮಹಾ ವಿಷ- ೯. ಕಾಲಕೂಟ, ಬಚನಾಗ, ಶೃಂಗಕ, ಪ್ರದೀಪನ, ಹಲಾಹಲ, ಬ್ರಹ್ಮಪುತ್ರ, ಹರಿದ್ರ, ಸಕ್ತುಕ, ಸೌರಾಷ್ಟ್ರಿಕ (ಯೋಗ ರತ್ನಾಕರ-ಸಂ. ೬೩)" (ಶ್ರೀಪತ್ಯ. ೩೩೪). [ಸಂ.]

**ಮಹಾವಿಷ್ಣು** (ನಾ). ತ್ರಿಮೂರ್ತಿಗಳಲ್ಲಿ ಒಬ್ಬನಾದ ವಿಷ್ಣು : ಮಾಯೆ ತೋರ್ದುದಜಿಂ ಮಹಾವಿಷ್ಣುವಿಂಗಾದೊಡಂ ಮಾನುಷಜನ್ಮಮಾದುದು ಗಡ (ಅಮೃತ. ೦೬-೮) ; ಮಹಾವಿಷ್ಣುವಿನಂತೆ ನೀನಾಗು (ಶಾಂತಲಾ. ೩೭).

[ಸಂ.]

**ಮಹಾವೀರ** (ನಾ). ೧. ಬಹಳಶೂರ ; ಅಧಿಕವಾದ ಶೌರ್ಯವುಳ್ಳವನು: ತನ್ನಲ್ಲಿರುವ ಅಮೂಲ್ಯತಮವಾದ ವಸ್ತುವೊಂದನ್ನು ಕೌಶಿಕನು, ಅದರಲ್ಲೂ ಪ್ರಬಲನಾಗಿ ಇತರರು ಯಾರಿಗೂ ಸಗ್ಗದ ಮಹಾವೀರನು ಕೇಳುತ್ತಿರುವನಲ್ಲ (ಮಹಾಬ. ೦). ೨. ಒಬ್ಬಾತನ ಹೆಸರು : ಸ್ವಸ್ತಿಶ್ರೀ ಮಹಾವೀರ ಅಬ್ದುಆತಮ್ಮಡಿಗಳ ಸನ್ಯಸನದಿನತಮ್ಮಜ್ಜಯಾ ನಿಸಿಧಿಗೆ (ಎಕ. II, ೦೫-೦ ; ಸು. ೭೫೦ ೬೫). ೩. [ಜೈನ] ವರ್ತಮಾನಕಾಲದ ಇಪ್ಪತ್ತುನಾಲ್ಕು

ತೀರ್ಥಂಕರರಲ್ಲಿ ಒಬ್ಬ ; ಇಪ್ಪತ್ತನಾಲ್ಕನೆಯ ತೀರ್ಥಂಕರ : ಶ್ರೀವರ್ಧಮಾನ ಸನ್ಮತಿದೇವ ಮಹಾವೀರ ವೀರಮುಖ್ಯ ಸಮಸ್ತೋರ್ವೀ ವಳಯವಿನುತ ದಶಶತಪಾವನನಾಮಂಗಳಿಂ ಜಿನ ತಳೆದೆಸೆದಂ (ವರ್ಧಚ. ೧೬-೩೦). [ಸಂ.]

**ಮಹಾವೃಕ್ಷ** (ನಾ). ೧. ದೊಡ್ಡಮರ ; ಘೆಮ್ಮರ : ವೀರಶೈವಮತವು ಶೈವಮತವೆಂಬ ಮಹಾವೃಕ್ಷದಿಂದೊಡಮೂಡಿದ ಪ್ರಧಾನಶಾಖೆಯಾಗಿರುತ್ತದೆ (ಶಾರದ. ೨೯೦) ; ನೆಟ್ಟ ಆಲದ ಕೊಂಬೆ ಚಿಗುರಿತು. ಇನ್ನು ಇದು ಮಹಾವೃಕ್ಷವಾಗಬೇಕು (ಮಹಾಣ. ೯೦). ೨. ಒಂದು ಬಗೆಯ ಸಸ್ಯ : ಮುಂಡಗಳ್ಳಿ : " ಮಹಾವೃಕ್ಷಃ, ಸ್ನುಹಿಃ — ಈ ೨ ಮುಂಡಗಳ್ಳಿ" (ಹಲಾಯು. ೩೩-೪೪) ; ಸ್ನುಹಿವೃಕ್ಷಮಂ ಮಹಾವೃಕ್ಷಮೆಂದು ನುಡಿವಂತೆ ಭೀಮನಂ ಮಹಾರಥನೆಂದು ನುಡಿಯಲ್ ತಕ್ಕುದೆ ವಲಂ (ಗದಾಯು. ೩-೫೭ ವ). [ಸಂ.]

**ಮಹಾವೃದ್ಧಿ** (ನಾ). ೧. ಅತಿಶಯವಾದ ಏಳಿಗೆ,– ಅಭ್ಯುದಯ. ೨. ಒಂದು ಬಗೆಯ ಔಷಧಮೂಲಿಕೆ : "ವೃದ್ಧಿಯೆಂತಲೂ ಮಹಾವೃದ್ಧಿಯೆಂತಲೂ ಪ್ರಸಿದ್ಧಮೂಲಿಕೆ" (ಸಿದ್ಧಾಂತಿ. ೦೩೭). [ಸಂ.]

**ಮಹಾವ್ರತ** (ನಾ). ೧. ದೊಡ್ಡವ್ರತ ; ಶ್ರೇಷ್ಠವಾದ ವ್ರತ : ಮಹಾನಾಮ್ನೀವ್ರತ, ಮಹಾವ್ರತ, ಉಪನಿಷದ್ವ್ರತ, ಗೋದಾನವ್ರತ ಈ ನಾಲ್ಕು ವೇದವ್ರತಗಳು (ಆರ್ಯಧ. ೦೨೭). ೨. ಶ್ರೇಷ್ಠನಾದ ಋಷಿ ; ಮಹಾಮುನಿ : ಸಂದ ಭುವನಪ್ರಾಪ್ತಿಯಿಂದಾನಂದದಿಂದಿಹರಾ ಮಹಾವ್ರತರೊಂದುವರು ಆ ಶುದ್ಧವಿದ್ಯಾತತ್ತ್ವಪದವ (ಗಗಚಾ. ೬-೬೩). ೩. [ಜೈನ] ಸಾಧುಗಳು ಪಾಲಿಸಬೇಕಾದ ಮುಖ್ಯವಾದ ನಿಯಮ ; ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಪರಿಗ್ರಹ ತ್ಯಾಗವೆಂಬಿವು ಐದು ಬಗೆಯ ಮುಖ್ಯವಾದ ನಿಯಮಗಳು : ಮಹಾಬಳಂ ಮಹಾವ್ರತದಿಂದನ್ವಿತಮತಿ ಸಮಾಧಿಗುಪ್ತವ್ರತಿಯುಪದೇಶದೊಳ್ ಪುಟ್ಟಿದಂ ಪ್ರಾಣತದೊಳ್ (ಆದಿಪು. ೩-೭೭); "ಹಿಂಸಾದಿ ಐದು ಪಾಪಗಳನ್ನು ಸ್ವತಃ ಮನಸ್ಸಿನಿಂದ ಮತ್ತು ಮಾತಿನಿಂದ ಮಾಡದಿರುವುದು, ಮಾಡಿಸದಿರುವುದು ಮತ್ತು ಒಪ್ಪಿಗೆ ಕೊಡದಿರುವುದು. ಹೀಗೆ ಒಂಬತ್ತು ಪ್ರಕಾರದ ಹಿಂಸಾದಿ ಪಾಪಗಳ ತ್ಯಾಗವು ಮಹಾವ್ರತವು" (ಆದಿಪು. ಕೋಶ) ; ಈ ವ್ರತಗಣಮಣಮಾದೊಡಣುವ್ರತಮಾ ಶ್ರಾವಕಂಗೆ ಗುರುತರವಿಧಿಯಿಂ ಪ್ರವ್ರಜಿತದೆ ನಿಲೆ ನೆಲಸೆ ಮಹಾವ್ರತಮಕ್ಕುಂ ಜಿನಾಗಮಾಂಭೋನಿಧಿಯೊಳ್ (ಶಾಂತಿಪು. ೭-೬); 'ಪಂಚಮಹಾವ್ರತ' ಪರಾ. 'ಅಣುವ್ರತ' ನೋ. ೪. [ಶೈವ] ವಾಮಾಚಾರಪಂಥದಲ್ಲಿ ಒಂದು ಪ್ರಭೇದ : ಶ್ರೀರುದ್ರರಿಂ ರಚಿತಂಗಳಾದ ಪಾಶುಪತ ಕಾಪಾಲಿಕ ಮಹಾವ್ರತಂಗಳೆಂಬವೇ ಅತಿಮಾರ್ಗಿಕಶಾಸ್ತ್ರತ್ರಯಂಗಳವಜ್ಜಿಲ್ಲಿ . . . ಮಹಾವ್ರತವೇ ಅಸ್ಥಿಧಾರಣಾದಿಗಳಂ ವಿವರಿಸುತ್ತಿರ್ಪಂ (ಏಕೋರ. ೦೩). [ಸಂ.]

**ಮಹಾವ್ರತಿ** (ನಾ). ೧. = ಮಹಾಮುನಿ ೧. ೨. ಶರಣ ; ಭಕ್ತ : ಅಯ್ಯಾ ನಿಮ್ಮ ಮಹಾವ್ರತಿಗಳನಗಲಿ ಬರ್ದುಂಕಲಾರೆನು (ಬಸವ. ೩೭೮). ೩. ಶಿವ. ೪. [ಜೈನ] ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಪರಿಗ್ರಹತ್ಯಾಗಗಳೆಂಬ ನಿಯಮಗಳನ್ನು ಪಾಲಿಸುವವನು : ಸಲೆ ಮಹಾವ್ರತಿ ಐದಣುವ್ರತಗಳನೊಸೆದು ಕುಡೆ ಪಿಂಧ್ಯಕನ ಮನವೊಲಿದು ನಲಿದು ಮಹಾಪ್ರಸಾದವೆನುತ್ತ ಕೈಕೊಂಡ (ಶಾಲ್ಯಶಾ. ೫-೪೫). ೫. [ಶೈವ] ವಾಮಾಚಾರಪಂಥದ ಮಹಾವ್ರತ ಎಂಬ ಪ್ರಭೇದಕ್ಕೆ ಸೇರಿದವನು : ಕಾಳಾಮುಖಿ ಕಂಗೆಟ್ಟ ಮಹಾವ್ರತಿ ಮದವೇಜಿಸಿದ (ತನ್ನವ. ೪. ೨೫೦-೫೪೫); ಕಾಪಾಲಿಕರಿಗೆ 'ಮಹಾವ್ರತಿ' ಎಂಬುದು ಮತ್ತೊಂದು ಹೆಸರು ಅಷ್ಟೆ (ಕೇಶಿರ. ೦೫೨). [ಸಂ. ಮಹಾವ್ರತಿನ್]

**ಮಹಾಶಂಖ** (ನಾ). ೧. ಶ್ರೇಷ್ಠವಾದ ಶಂಖ ; ದೊಡ್ಡಶಂಖ : ಮಯನತಿಮುದದಿ ಬಳಿಕಾ ದೇವದತ್ತಾಖ್ಯದ ಮಹಾಶಂಖವನು ಪಾರ್ಥಗೆ ಕೊಟ್ಟು ಕೈಮುಗಿದ (ಕುಮ್ಯಾಸ. ೦-೦೩). ೨. ಹಣೆ ; ಲಲಾಟ. ೩. ಮನುಷ್ಯನ ಮೂಳೆ. ೪. ಕುಬೇರನ ನವನಿಧಿಗಳಲ್ಲಿ ಒಂದು. ೫. [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಇಪ್ಪತ್ತನೆಯ ಸ್ಥಾನ ಮತ್ತು ಇಪ್ಪತ್ತು ಅಂಕೆಗಳಿಂದ ಕೂಡಿದ ಒಂದು ದೊಡ್ಡಸಂಖ್ಯೆ : ಏಕ್ಕಂ, ದಾಹಂ . . . ಶಂಖ, ಮಹಾಶಂಖ . . . ಪರಿಮಿತ, ಮಹಾಪರಿಮಿತ– ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬-೨೫). [ಸಂ.]

**ಮಹಾಶಬ್ದ** (ನಾ). ೧. ದೊಡ್ಡ ಶಬ್ದ,—ಸದ್ದು. ೨. ಶ್ರೇಷ್ಠವಾದ ವಾದ್ಯಧ್ವನಿ : 'ಪಂಚಮಹಾಶಬ್ದ' ಪರಾ. [ಸಂ.]

**ಮಹಾಶಯ** (ನಾ). ೧. ದೊಡ್ಡಮನಸ್ಸುಳ್ಳವನು ; ಉದಾರ ಹೃದಯಿ ; ಮಹಾತ್ಮ : "ಮಹೇಚ್ಛಃ, ಮಹಾಶಯಃ — ೨ ಘನವಾದ ಮನಸ್ಸುಳ್ಳವನ ಹೆಸರು" (ಸಿದ್ಧಾಂತಿ. ೩೨೩). ೨. ಪುರುಷರನ್ನು ಸಂಬೋಧಿಸುವ ಒಂದು ಗೌರವಸೂಚಕ ಪದ : ಸುಮ್ಮನೆ ಯಾಕೆ ನಿಂತಿದ್ದೀರಿ ಮಹಾಶಯ ! (ಮುಕ್ತ್ಯರ. ೨೭೩). ೩. ಸಮುದ್ರ. [ಸಂ.]

**ಮಹಾಶಾಲಿ, ಮಹಾಶಾಳಿ** (ನಾ). ಸುವಾಸನೆಯಿಂದ ಕೂಡಿರುವ ಒಂದು ಬಗೆಯ ದಪ್ಪ ಬತ್ತ : ಹುಯೆನ್–ತ್ಸಾಂಗನು (ಕ್ರಿ.ಶ. ೭ನೇ ಶತಮಾನ) 'ಮಹಾಶಾಲಿ' ಎಂಬ ಭತ್ತದ ಜಾತಿಯನ್ನು ಹೇಳುವಾಗ ಅದರ ಅನ್ನವು ಸುವಾಸನೆಯಾಗಿತ್ತೆಂದೂ . . . ಬರೆದಿದ್ದಾನೆ (ಶಾಸಗಿ. ೦೪). ಮಹಾಶಾಳಿ : "ರಕ್ತಶಾಳಿಃ, ಮಹಾಶಾಳಿಃ, ಕಳಮಃ — ಇವು ಮೊದಲಾಗುಳ್ಳುವು ಕಳಮೆಯ ಭೇದಂ" (ಹಲಾಯು. ೯೫-೪೨೭). [ಸಂ.]

**ಮಹಾಶಾಳಿ** 'ಮಹಾಶಾಲಿ' ನೋ.

**ಮಹಾಶಿವರಾತ್ರಿ** (ನಾ). ಮಾಘಬಹುಳ ಹದಿನಾಲ್ಕನೆಯ ತಿಥಿಯಂದು ಆಚರಿಸುವ ಶಿವಪೂಜೆಯ ಉತ್ಸವ,–ಶಿವರಾತ್ರಿ : ಮಹಾಶಿವರಾತ್ರಿಯ ಮಹಿಮೆಯ ಬಗೆಗೆ ಶಿವಲೀಲಾಮೃತದಲ್ಲಿ ಒಂದು ಕತೆಯಿದೆ (ಶಾಹಬ್ಬ. ೦೭೭). [ಸಂ.]

**ಮಹಾಶೀರ್ವಾದ** (ನಾ). ಯಾಗ, ವ್ರತ, ಉತ್ಸವ, ವಿವಾಹ ಮುಂತಾದ ಸಂದರ್ಭಗಳಲ್ಲಿ ಕಾರ್ಯಕ್ರಮದ ಕೊನೆಯಲ್ಲಿ ಪುರೋಹಿತಾದಿಗಳು ಸಂಬಂಧಪಟ್ಟವರಿಗೆಲ್ಲ ಮಾಡುವ ಮಂತ್ರಪೂರ್ವಕ ಆಶೀರ್ವಾದ : ಬಳಿಕ ಶೇಷಹೋಮ ಮಹಾಶೀರ್ವಾದಗಳು ನಡೆದವು (ಶಾಂತಲಾ. ೦೦೪). [ಸಂ.]

**ಮಹಾಶುಕ್ರ** (ನಾ). [ಜೈನ] ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಲಾಂತವ, ಮಹಾಶುಕ್ರ, ಸಹಸ್ರಾರ, ಆನತ, ಪ್ರಾಣತ, ಆರಣ ಮತ್ತು ಅಚ್ಯುತ ಎಂಬ ಹನ್ನೆರಡು ಕಲ್ಪಗಳಲ್ಲಿ ಏಳನೆಯದು : ತನುಮಂ ತಂದು ಮಹಾವ್ರತಕ್ಕುಚಿತ ಕಾಯಕ್ಲೇಶದಾಚಾಮ್ಲವರ್ಧನಮಂ ನೋಂತು ಸಮಾಧಿ ಕೈಕೊಳೆ ಮಹಾಶುಕ್ರಕ್ಕೆ ಸಂದೀತನಿಂದ್ರನಿವಂ ತತ್ಪ್ರತಿಮಂ ಪ್ರತೀಂದ್ರನೆನೆ (ಆದಿಪು. ೩-೭೬). [ಸಂ.]

**ಮಹಾಶೂದ್ರ** (ನಾ). ೧. ಒಳ್ಳೆಯ ಸ್ಥಿತಿವಂತನಾದ ಶೂದ್ರ. ೨. ದನಗಾಹಿ ; ಗೊಲ್ಲ. ೩. ಒಕ್ಕಲಿಗರಲ್ಲಿ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು : "ಆಭೀರಃ, ಮಹಾಶೂದ್ರಃ – ಈ ೨ ಕುಡಿಯೊಕ್ಕಲಿಗಂ" (ಹಲಾಯು. ೯೭-೪೩೨). [ಸಂ.]

**ಮಹಾಶೂದ್ರಿ** (ನಾ). ೧. ದನಕಾಯುವವಳು ; ಗೊಲ್ಲತಿ. ೨. ದನಕಾಯುವವನ ಅಥವಾ ಗೊಲ್ಲನ ಹೆಂಡತಿ : "ಆಭೀರೀ, ಮಹಾಶೂದ್ರೀ . . . ಗೊಲ್ಲನ ಹೆಂಡತಿಯಾದವಳಿಗಾದರೂ ಹೆಸರುಗಳು" (ಸಿದ್ಧಾಂತಿ. ೦೭೦). [ಸಂ. ಮಹಾಶೂದ್ರೀ]

**ಮಹಾಶೃಂಗಿ** (ನಾ). ಒಂದು ಕುಲಪರ್ವತದ ಹೆಸರು : ಸುಗಂಧಿ ಶಿಖಿ . . . ಮಹಾಶೃಂಗಿ . . . ಪಾರಿಜಾತಮೆಂಬ ಪದಿನಾಲ್ಕು ಕುಲಾಚಲಂಗಳೇ ಪೂರ್ವೋಕ್ತವಿಪುಳಮೆಂಬ ಕೀಲಕಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿಹವು (ಖಗೋಳ. ೨೦೩). [ಸಂ. ಮಹಾಶೃಂಗಿನ್]

**ಮಹಾಶೈಲ** (ನಾ). ೧. ದೊಡ್ಡ ಬೆಟ್ಟ. ೨. ಒಂದು ಕುಲಪರ್ವತದ ಹೆಸರು : ಮಹಾಶೈಲ . . . ಹಿಮಾದ್ರಿಗಳೆಂಬ ದಶಕುಲಪರ್ವತಂಗಳೇ ಪೂರ್ವೋಕ್ತ ಗಂಧಮಾದನಮೆಂಬ ಕೀಲಕಪರ್ವತಕ್ಕೆ ತೆಂಕಣದಿಕ್ಕಿನಲ್ಲಿಹವು (ಖಗೋಳ. ೦೭೨). [ಸಂ.]

**ಮಹಾಶೈವ** (ನಾ). [ವೀಶೈ]ಅನಾದಿ, ಆದಿ, ಮಹಾ, ಅನು, ಅವಾಂತರ, ಪ್ರವರ ಮತ್ತು ಅಂತರಗಳೆಂಬ ಏಳು ಬಗೆಯ ಶಿವಪಾರಮ್ಯತತ್ತ್ವಗಳಲ್ಲಿ ಒಂದು; ೲ "ದೀಕ್ಷೆ ಹೊಂದಿದ ಶಿವದ್ವಿಜರು ಮಹಾಶೈವರು" (ಶಿವಾಕೋ. ೨೦೭): ಆ ದೀಕ್ಷಾವಿಶೇಷಯುಕ್ತಮಾದ ಅನಾದಿಶೈವ ಆದಿಶೈವ ಮಹಾಶೈವ . . . ಅಂತರಶೈವಮೆಂಬವೇ ಸಪ್ತಶೈವಂಗಳು (ಖಗೋಳ. ೬೬). [ಸಂ.]

**ಮಹಾಶೋಕ** (ನಾ). ೧. ಅಧಿಕವಾದ ದುಃಖ ; ಹೆಚ್ಚಾದ ಅಳಲು,— ಸಂಕಟ : ಚಂದ್ರನಖಿಯು ಇದರಿಂದ ಮಹಾಶೋಕಸಂತಪ್ತಳಾಗಿ ಪತಿಯಾದ ಖರನೊಂದಿಗೆ ದೂರುವಳು (ಅಭಿನ. ೪೪). ೨. ದೊಡ್ಡದಾದ ಅಶೋಕ ವೃಕ್ಷ. ೧, ೨ : ಭೂರುಹದೊಳನೇಕಾಗ್ರತೆ ನವಾರಾಮದೊಳ್ ಮಹಾಶೋಕಂ ವಸಂತದೊಳ್ಮಾ ರಹಿತಮುಂಟಲ್ಲದಿಲ್ಲಮಿವು ಮತ್ತೆಲ್ಲಿಯುಂ ಧರ್ಮಜನ ನೆಲದೊಳು (ಕಪಿಚಾ. ೨-೪).

[ಸಂ. (ಮಹಾ + ಶೋಕ; ಮಹಾ + ಅಶೋಕ)]

**ಮಹಾಶ್ವೇತೆ** (ನಾ). ೧. (ಬಿಳಿಯ ಹೂವುಗಳನ್ನು ಬಿಡುವ) ಒಂದು ಬಗೆಯ ಸಸ್ಯ : "ಕ್ಷೀರವಿದಾರೀ, ಮಹಾಶ್ವೇತಾ . . . ಕಣೇನೆಲಗುಂಬಳದ ಹೆಸರುಗಳು" (ನಿಘಂ. ೦೫೭). ೨. ದುರ್ಗೆ. ೩. ಸರಸ್ವತಿ. ೪. ಬಿಳಿಯ ಸಕ್ಕರೆ. ೫. ಸಂಸ್ಕೃತದಲ್ಲಿ ರಚಿತವಾದ ಬಾಣನ ಕಾದಂಬರಿಯಲ್ಲಿ ಬರುವ ಸುಪ್ರಸಿದ್ಧವಾದ ಒಂದು ಪಾತ್ರದ ಹೆಸರು : ತಾತಂ ಮಹಾಶ್ವೇತೆಯೆಂದೆನುತಾಗಂ ಬೆರಸಿಟ್ಟನೆನ್ನ ಪೆಸರಂ ಗಂಧರ್ವೇಶ್ವರಂ (ಕಾದಂಪೂ. ೭೦೭). [ಸಂ. ಮಹಾಶ್ವೇತಾ]

**ಮಹಾಸಂಧಿವಿಗ್ರಹಿ** (ನಾ). ಪರರಾಷ್ಟ್ರಗಳೊಂದಿಗೆ (ಯುದ್ಧ, ಶಾಂತಿ ಸನ್ನಾಹ ಮೊದಲಾದುವುಗಳ ಬಗೆಗೆ) ವ್ಯವಹರಿಸುವ ಅಧಿಕಾರವುಳ್ಳ ಮಂತ್ರಿಗಳಲ್ಲಿ ಹಿರಿಯನಾದವನು : ಬಾಹುಬಲಿಕುಮಾರಂಗೆ ಲೇಖ ಮನುನ್ನಯುಖರತ್ನಾಭರಣಪ್ರಾಭೃತಸಮೇತಂ ಅಟ್ಟುವಂತು ಮಹಾಸಂಧಿವಿಗ್ರಹಿಗೆ[ಪಾಠಾಂ. ವಿಗ್ರಹಾಧಿಪತಿಗೆ] ಬೆಸಸಿದಾಗಳ್ (ಆದಿಪು. ೦೪-೪೩ ವ).

[ಸಂ. ಮಹಾಸಂಧಿವಿಗ್ರಹಿನ್]

**ಮಹಾಸಚಿವ** (ನಾ). ಮುಖ್ಯನಾದ ಮಂತ್ರಿ ; ಪ್ರಧಾನನಾದ ಸಚಿವ : ಆಗ ಪಂಚಪ್ರಧಾನರಲ್ಲಿ ಗಂಗರಾಜರೇ ಮಹಾಸಚಿವರಾದರು (ಚಾಂಶಲಾ. ೦೯). [ಸಂ.]

**ಮಹಾಸತಿ** (ನಾ). ೧. ಮಹಾಪತಿವ್ರತೆ,— ಸಾಧ್ವಿ : ನಿನ್ನನ್ನರ್ ಮಹಾಸತಿಯರಾರುಮಿಲ್ಲ (ಸುಕುಮಾ. ೭-೨೪ ವ); ಇವರೆಲ್ಲರೂ ಮಹಾಸತಿಗಳು ಮತ್ತು ವೀರಾಗ್ರಣಿಗಳು (ಕುಠಾಕಿ. ೦೭). ೨. ಪತಿಯ ಚಿತೆಯಲ್ಲಿ ಸಹಗಮನವನ್ನು ಮಾಡಿದವಳು : ಮಾರದೇವನ ರಮಣೀಮನೋಹರಿ ಮಹಾಸತಿ ಶೀಲಗುಣೌಘ ಭೂಮಿಕಾಮಿನಿ ಮಹಾದೇವಿ ತಂನ್ನ ವರನೊಳು ಪ್ರತಿಪನ್ನದಿ ಸಂದಳಾ ದಿವಂ (ಎಕ. VII(R). ಪಾಗಳುಂ. ೦೭೦-೯; 11ನೆಯ ಶತ).

**ಮಹಾಸತಿಯಾಗು** = ಪತಿಯ ಚಿತೆಯಲ್ಲಿ ಸಹಗಮನ ಮಾಡು : ಪೋಚಿದೇವನು ಕೇತಮಲ್ಲ ಕುಂತಳದೇಶದ ಗವುಡಿನಾಡ ತವುಟಿಯ ಮೇಲೆ ಬಂದು . . . ಕಾದಿ ಸತ್ತೊಡೆ ಆತನ ಸತಿ ವಿಜಯು × × × ಮಹಾಸತಿಯಾದಳು (ಕ್ಷಿಅಂ. ೧೯೨೪, ೬೬-೦೦; 1399). [ಸಂ. ಮಹಾಸತೀ]

**ಮಹಾಸನ** (ನಾ). ೧. ಅತ್ಯಮೂಲ್ಯವಾದ ಪೀಠ ; ಶ್ರೇಷ್ಠವಾದ ಆಸನ : ಮಹಾಬಲನುಂ . . . ತನ್ನ ವರ್ಷವರ್ಧನದಿನದೊಳು ಮಹಾಸನಾಸೀನನೋಲಗಂಗೊಟ್ಟಿರ್ದುದುಂ (ಚಾಪುಂಪು. ೦೩). ೨. ಆನೆಯ ಮೇಲೆ ಕುಳಿತುಕೊಳ್ಳಲು ಹಾಕುವ ಭದ್ರಾಸನ ; ಅಂಬಾರಿ ; ಹೌದಾ : "ಅಂಬಿಕೆ ಮಹಾಸನಮಾರ್ಗ" (ಮಂಗರಾ. ೪೭-೩). [ಸಂ.]

**ಮಹಾಸನ್ನಿಧಾನ** (ನಾ). ರಾಜರು, ಮಠಾಧಿಪತಿಗಳು ಮುಂತಾದ ಹಿರಿಯ ವ್ಯಕ್ತಿಗಳನ್ನು ಕುರಿತು ಹೇಳುವಾಗ ಗೌರವಸೂಚಕವಾಗಿ ಬಳಸುವ ಪದ : ನನಗೆ ಜಾಗ್ರತೆಯಾಗಿ ಊರಿಗೆ ಹೋಗಬೇಕಾದ ಕಾರ್ಯವಿರುವುದರಿಂದ, ಮಹಾಸನ್ನಿಧಾನದಲ್ಲಿ ನನಗೆ ಅನುಜ್ಞೆಯನ್ನು ದಯೆಪಾಲಿಸಿ ನನ್ನನ್ನು ಕಳುಹಿಸಿಕೊಡಬೇಕು (ಕಂಠ. ೨೦). [ಸಂ.]

**ಮಹಾಸಭೆ** (ನಾ). ೧. ವಿಶಾಲವಾದ (ಊಟದ) ಹಜಾರ,— ಶಾಲೆ. ೨. ದೊಡ್ಡ ಸಭೆ,— ಗೋಷ್ಠಿ. ೩. ರಾಜನ ಆಸ್ಥಾನ ; ದರ್ಬಾರು : ಶುಭದಿನ ರಾಮಣೀಯಕಲಗ್ನದಲಿ ಹೊಕ್ಕನು ಮಹಾಸಭೆಯ (ಕುಮಾವ್ಯಾ. ೯-೦೯). ೪. ಯಾವುದಾದರೊಂದು ಸಂಸ್ಥೆಯ ಎಲ್ಲ ಸದಸ್ಯರು ಸೇರುವ ಸಭೆ : "ಸರ್ವಸದಸ್ಯಸಭೆ, ಮಹಾಸಭೆ, ಜನರಲ್ ಅಸೆಂಬ್ಲಿ" (General Assembly. ಪತ್ರಿಕಾ. ೭). [ಸಂ. ಮಹಾಸಭಾ]

**ಮಹಾಸಹೆ** (ನಾ). ಒಂದು ಬಗೆಯ ಸಸ್ಯ : "ಕೊಂಡೆ . . . ಮಹಾಸಹೆ, ನೆಲರುದ್ರಾಕ್ಷಿ, ಬಿಳಿರುದ್ರಾಕ್ಷಿಹೂ" (ಪಶ್ಚಾ. ೬೬). [ಸಂ. ಮಹಾಸಹಾ]

**ಮಹಾಸಾಂಘಿಕ** (ನಾ). [ಬೌದ್ಧ]ಬೌದ್ಧಮತದ ಒಂದು ಶಾಖೆ ಮತ್ತು ಆ ಶಾಖೆಗೆ ಸೇರಿದ ವ್ಯಕ್ತಿ : ಬುದ್ಧನು ಪರಿನಿರ್ವಾಣ ಪಡೆದ ನೂರು ವರುಷಗಳ ವೇಳೆಗೆ ಮೂಲಸಂಘವು ಎರಡಾಗಿ ಒಡೆಯಿತು. ಅವರಲ್ಲಿ ಸಂಪ್ರದಾಯವನ್ನು ಪಾಲಿಸಿದವರು "ಸ್ಥವಿರವಾದಿ"ಗಳೆಂದೂ ಸಂಪ್ರದಾಯದಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಿಕೊಂಡವರು "ಮಹಾಸಾಂಘಿಕರೆಂದೂ" ಹೆಸರಾದರು (ಕಾಅದ. ೨೦೪). [ಸಂ.]

**ಮಹಾಸಾಗರ** (ನಾ). ೧. ಅತ್ಯಂತ ವಿಶಾಲವಾದ ಸಮುದ್ರ ; ದೊಡ್ಡ ಕಡಲು : ನೀನು ಇನ್ನು ಸಂಸಾರವೆಂಬ ಮಹಾಸಾಗರದೊಳಗಿಂದ ದಾಟಿ ಹೋಗತಕ್ಕವನು (ಮುಂಜಯು. ೯-೫೯); ಪ್ರಕ್ಷುಬ್ಧವಾದ ಮಹಾಸಾಗರದಂತೆ ಮೆರೆಯುತ್ತ ಬಂದ ಸೈನ್ಯವು ನಿರ್ಮೂಲವಾಗಿ, ಕೌಶಿಕನ ಜೀವವುಳಿಯುವುದು ಕಷ್ಟವಾಯಿತು (ಮುಹಾಅ. ೨೬). 'ಹಿಂದೂಮಹಾಸಾಗರ' ಪರಾ. ೨. [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಮೂವತ್ತೆಂಟನೆಯ ಸ್ಥಾನ ಮತ್ತು ಮೂವತ್ತೆಂಟು ಅಂಕೆಗಳಿಂದ ಕೂಡಿದ ಒಂದು ದೊಡ್ಡ ಸಂಖ್ಯೆ : ಏಕ್ಕಂ, ದಾಹಂ . . . ಸಾಗರ, ಮಹಾಸಾಗರ, ಪರಿಮಿತ, ಮಹಾಪರಿಮಿತ – ಈ ೪೦ ಸ್ಥಾನದ ಉಗ್ಗಡಣೆ (ಗಣಿತಸಾ. ೬-೨೭); ಏಕ್ಕಂ ದಹಂ . . . ಸಾಗರ ಮಹಾಸಾಗರ . . . ಮಹಾಶ್ರುತುಮೆಂಬಿವೇ ಉಗ್ಗಡಣೆಗಳು (ಖಗೋಳ. ೭). [ಸಂ.]

**ಮಹಾಸಾಮಂತ** (ನಾ). (ಒಬ್ಬ ರಾಜನ ಕೈಕೆಳಗಿರುವ) ಅಧೀನ ರಾಜರಲ್ಲಿ ಮುಖ್ಯನಾದವನು : ಸಾಮಂತ ಮಹಾಸಾಮಂತರ್ಗೆ ಸ್ವಾಮಿಯಪ್ಪೀ ಪೃಥ್ವೀಶ್ವರಂ ಬಂದೆನ್ನುಮನರ್ಚಿಸಿ ಬಂದಿಸಿ ನೀಚವೃತ್ತಿಯಿಂ ಕಿಂಕರ್ವಾಣಂಗೆಯ್ದಪ್ಪಂ (ಪಶ್ಚಾರಾ. ೭೯-೨೦); ಸ್ವಸ್ತಿಸಮಧಿಗತಪಂಚ ಮಹಾಸಬ್ದ ಮಹಾಸಾಮಂತ ಅಗ್ರಗಣ್ಯ (ಎಕ. II, ೫೬-೦ ; ಸು. 1100); ಮಹಾಸಾಮಂತ_ಮಾಸಾವಂತ (ಕಪುದ. ೨೪೦ ಕ್ರಯೋ); ಮಹಾಸಾಮಂತ ಸಾಮಂತರುಗಳೂ . . . ಅಧಿಕಾರಿಗಳೂ ಲಗ್ನಕ್ಕೆ ದಯಮಾಡಿಸಿ, ವಧೂವರರನ್ನು ಹರಸಿದರು (ಚಾಂಶಲಾ. ೨೦೩). [ಸಂ.]

**ಮಹಾಸಾವಂತ, ಮಾಸಾವಂತ** (ನಾ). = ಮಹಾಸಾಮಂತ : ಮಹಾಸಾವಂತಂ_ಮಾಸಾವಂತಂ (ಕಪುದ. ೯. ೪೦೭ ಕ್ರಯೋ). **ಮಾಸಾವಂತ** :

ಮನ್ನೆಯರ ಮಾಸಾಮಂತರ ಪಸಾಯ್ತರ ಬಟಿಸಲ್ವ ತುಟೀಲಾಳ್ಗಳಙ್ಕಣದೊಳಿಡ್ಡಣಮಾಗೆ ಕೀಲಿಸಿದ ಕಿಱುಗೆಜ್ಜೆಯ ದನಿಗಳೊಳಂ (ಕಬ್ಬಿಗ. ೪೪); ಮಹಾಸಾಮಂತ_ಮಾಸಾಮಂತ (ಕಮುದ. ೨೯೦ ಶ್ರಹೊ೬); ಮಾಸಾಮಂತರ ಬೆನ್ನ ಮುನ್ನ ಕಲದೊಳ್ಪೋಟುಾಯ್ದರೆತ್ತೆತ್ತಲುಂ (ಪ್ರಸೂವು. ೪-೩೯).
[<ಸಂ. ಮಹಾಸಾಮಂತ]

**ಮಹಾಸಿರಿವಂತ** (ನಾ). ೧. ಬಹಳಶ್ರೀಮಂತ. ೨. ಒಬ್ಬಾತನ ಹೆಸರು : ಬೆಳ್ವೊಲಂ ಮೂಱನುಱುಮಂ ಮಹಾಸಿರಿವನ್ತನಾಳೆ (ಎಇ. XXVI, ೬೨-೧೧; 906). [ಮಹಾ + ಸಿರಿವಂತ]

**ಮಹಾಸೇನ** (ನಾ). ೧. ದೊಡ್ಡಸೈನ್ಯವನ್ನು ಹೊಂದಿರುವ ಸೇನಾಪತಿ. ೨. ಷಣ್ಮುಖನ ಹೆಸರುಗಳಲ್ಲಿ ಒಂದು : "ಗೌರೀಪುತ್ರಃ . . . ಮಹಾಸೇನಃ, ಮಹಾತೇಜಾಃ, ಶರಜನ್ಮಾ (ಚ ಕಥ್ಯತೇ) _ ಈ ೨೦ ಕಾರ್ತಿಕೇಯನ ಪೆಸರ್" (ಶಠಾಯು. ೩-೨೦). ೩. ಉದಯನ ಕಥಾಪ್ರಪಂಚದ ಪ್ರಸಿದ್ಧರಾಣಿಯಾದ ವಾಸವದತ್ತೆಯ ತಂದೆಯ ಹೆಸರು : ಇವಳೇ ಮಹಾಸೇನನ ಪುತ್ರಿಯಾದ ವಾಸವದತ್ತೆ ! (ಸ್ವಪ್ನವಾ. ೬೨). [ಸಂ.]

**ಮಹಾಸೌಷಿರ** (ನಾ). ಹಲ್ಲಿಗೆ ಉಂಟಾಗುವ ಒಂದು ಬಗೆಯ ರೋಗ ; ಒಂದು ಬಗೆಯ ದಂತರೋಗ : ಮಹಾಸೌಷಿರ ಎಂಬ ದಂತರೋಗವಲ್ಲಿ ಹಲ್ಲುಗಳು ಅಲ್ಲಾಡುವುವು. ಕಟವಾಯಿಗಳು ಒಡೆವವು. ಕೀವು· ರಕ್ತ ಸುರಿವದು (ವೈದ್ಯಶಾ. II, ೧೨೪). [ಸಂ.]

**ಮಹಾಸ್ತ್ರ** (ನಾ). ಅತ್ಯಂತ ಶಕ್ತಿಯುತವಾದ ಅಸ್ತ್ರ. – ಆಯುಧ. – ಬಾಣ : ಖಶಿಯಿಂದೆ ಫಲುಗುಣಂ ಪೂಡಿದ ಮಹಾಸ್ತ್ರಮಂ ಶತಪತ್ರಲೋಚನಂ ಕಂಡು . . . ಬೆಸಸಲುನ್ನತಪರಾಕ್ರಮಿ ಧನುಜಯನಾದ್ರ್ಯಕಿವಿವರೆಗೆ ತೆಗೆದೆಚ್ಚನಾ ಶರವನು (ಜೈಮಿಭಾ. ೦೩-೩೬). [ಸಂ.]

**ಮಹಾಸ್ರಗ್ಧರ** (ನಾ). [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರುಬಗೆಯ ಛಂದಸ್ಸುಗಳಲ್ಲಿ ಇಪ್ಪತ್ತೆರಡನೆಯದಾದ ಆಕೃತಿ ಎಂಬ ಛಂದಸ್ಸಿನ ವೃತ್ತ : ಲಘುದ್ವಯ ಶ್ರಿಗುರುವಿಂದಕ್ಕುಂ ಮಹಾಸ್ರಗ್ಧರಂ (ಛಂದೋಂಬು. ೨-೨೦೦ ಅಡಿಟಿಪ್ಪ). [ಸಂ. ಮಹಾಸ್ರಗ್ಧರಾ]

**ಮಹಾಸ್ರಗ್ಧರೆ** (ನಾ). = ಮಹಾಸ್ರಗ್ಧರ : "ಎರಡು ಲಘು ಮೂಱು ಗುರುವಿರೆ ಮಹಾಸ್ರಗ್ಧರಾಖ್ಯಂ" (ಮಂಗರಾ. ೦೦೬-೨೨) ; ಮರುದಾಕಾಶದ್ವಯೇಂದ್ರಾ**ನಿಲ**ಹುತವಹಯುಗ್ಮಾಂಗಜಾರಾಶಿಯರ್ಕರ್ಗಳ್ ಬರೆ ಪಕ್ಷಸ್ಥಾನದೊಳ್ ನಿಲ್ವಿರೆ ವಿರತಿ ಮಹಾಸ್ರಗ್ಧರಾ ನಾಮವೃತ್ತಂ (ಛಂದೋಂಬು. ೨-೦೬೩); ಶಾರ್ದೂಲವಿಕ್ರೀಡಿತ . . . ಸ್ರಗ್ಧರೆ, ಮಹಾಸ್ರಗ್ಧರೆ _ ಎಂಬ ಆರುವೃತ್ತಗಳೇ ಕರ್ನಾಟಕ ಕಾವ್ಯರಂಗದಲ್ಲೆಲ್ಲ ನರ್ತಿಸಲು ನಿಂತ ಸಂಸ್ಕೃತ ಜನ್ಯ ವೃತ್ತಗಳು (ಕಕಾಛಂ. ೦೬೦). [ಸಂ. ಮಹಾಸ್ರಗ್ಧರಾ]

**ಮಹಾಸ್ವಾಮಿ** (ನಾ). ೧. ಮಹಾಪ್ರಭು ; ಮಹಾರಾಜ : ಆಳ್ವ ಮಹಾಸ್ವಾಮಿಯವರಿಗೆ ಈ ವಿಷಯವನ್ನು ಶ್ರುತಪಡಿಸಿ ಇದಕ್ಕೋಸ್ಕರ ತಮಗುಂಟಾದ ಸಂತೋಷವನ್ನೂ ತಿಳಿಸಿದರು (ಮಹಾವಂ. II, ೦೨೨). ೨. ರಾಜರು, ಗುರುಹಿರಿಯರು, ಅಧಿಕಾರಿಗಳು ಮುಂತಾದವರನ್ನು ಸಂಬೋಧಿಸುವಾಗ ಬಳಸುವ ಒಂದು ಗೌರವಸೂಚಕಪದ : ನಾನು ಬಳ್ಳ ಅಕ್ಕಿ ಅನ್ನ ಊಟ ಮಾಡುತ್ತೇನಂತೆ, ಮಹಾಸ್ವಾಮಿ (ಕಲಿಸಿ. ೭೯). [ಸಂ. ಮಹಾಸ್ವಾಮಿನ್]

**ಮಹಾಹವ** (ನಾ). ಭಾರಿಯುದ್ಧ ; ಘೋರಕದನ : ಪೊಳೆವ ಮಿಂಚುಗಳಂತಿರೆ ಕೇತುಗಳ್ ಜಳದವೃಂದದವೋಲಿರೆ ಹಸ್ತಿಗಳ್ ಗುತಧಾರೆಗಳಂತಿರೆ ಪತ್ರಿಗಳ್ ಬಳಸಿ ಕಾರ್ಗೆ(ಣೆ)ಯಾಯ್ತು ಮಹಾಹವಂ (ಕಬಿರಾ. ೧-೦೪೪). [ಸಂ.]

**ಮಹಾಹವಧ್ವನಿ** (ನಾ). ೧. ಉಗ್ರವಾದ ಕದನದ ಸದ್ದು. ೨. ಯಾಗದಲ್ಲಿ ದೇವತೆಗಳನ್ನು ಆಹ್ವಾನಿಸುವ ಧ್ವನಿ. ೧, ೨ : ನೆರೆದ ವಿಸಂವಾದಂ ಪಂಜರಶುಕತತಿಯೊಳ್ ಕುಲಾಲಗೇಹಂಗಳೊಳಂ ಪರಚಕ್ರಭ್ರಾಂತಿಗಳಧ್ವರದೊಳ್ ನೆಗಟ್ದುಂ ಮಹಾಹವಧ್ವನಿನಿಯತಂ (ಕಬಿರಾ. ೩-೧೦೦). [ಸಂ. (ಮಹಾ + ಆಹವ + ಧ್ವನಿ; ಮಹಾ + ಹವ + ಧ್ವನಿ)]

**ಮಹಾಹಿತ** (ನಾ). ೧. ಅಪ್ತಗೆಳೆಯ ; ಪರಮಸ್ನೇಹಿತ. ೨. ಕಡುಹಗೆ ; ಪರಮಶತ್ರು. ೧, ೨ : ಈ ಚಂದ್ರಹಾಸಂ ಮಹಾಹಿತನೆಮಗೆ ಮೇಲೆ ನಮ್ಮ ಸೀಮೆಗೆ ಅರಸಾದಪಂ (ಜೈಮಿಭಾ. ೩೦-೨೫).
[ಸಂ. (ಮಹಾ + ಹಿತ ; ಮಹಾ + ಅಹಿತ) ]

**ಮಹಾಳಿ** (ನಾ). (ಕರಾ) ಅಡಕೆಮರಕ್ಕೆ ತಗುಲುವ ಒಂದು ಬಗೆಯ ರೋಗ : ಸಾವಿರದೊಂಭೈನೂರ ಮೂವತ್ತನಾಲ್ಕರಲ್ಲಿ ಪ್ರಾರಂಭವಾದ ಅಡಿಕೆ ಮಹಾಳಿ ಕೊಳೆರೋಗದಿಂದಾಗಿ ಅಡಿಕೆ ಬೇಸಾಯಗಾರರು ಜರ್ಝರಿತರಾಗಿದ್ದರು (ಕುರುಕಾ. ೦೩೬). 'ಕೊಳೆರೋಗ' ಪರಾ. [ ? ]

**ಮಹಿ** (ನಾ). ೧. ಭೂಮಿ ; ಪೃಥ್ವಿ : "ಸ್ಥಿರೆ ಧರಣಿ . . . ಮಹಿ ಜಗತಿ . . . ಭೂ ಗೋತ್ರೆ ನೆಲಂ" (ವಸ್ತುಕೋ. ೨೬-೧) ; ಮುನ್ನಿನ್ನ ಚಕ್ರೇಶ್ವರರಾರ್ ನಿಷ್ಕಂಟಕಂಮಾಡಿದರೆನೆ ಮಹಿ ನಿಷ್ಕಂಟಕಂ ಮಾಡಿ ಚಕ್ರೇಶ್ವರರತ್ನಂ ಸನ್ನತಂ ಪಾಳಿಸಿದನತಿಬಳಂ ವಿಕ್ರಮಾದಿತ್ಯದೇವಂ (ಎಇ. XVI, ೫೯-೪ ; 1081) ; ಅಹಿರಾಜಂ ದ್ವಿಸಹಸ್ರಜಿಹ್ವನಱಿಯಂ ವ್ಯಾವರ್ಣಿಸಲ್ ಬಲ್ಲನೇ ಮಹಿಯೊಳ್ ಮಾನವನೊಂದೆ ನಾಲಗೆಯೊಳಂತಾ ಭೂಭುಜಾಗಾರಮಂ (ಜಗಎ. ೨-೩೬). ೨. ರಾಜ್ಯ ; ದೇಶ.
[ಸಂ. ಮಹಿ, ಮಹೀ]

**ಮಹಿಕೆ** (ನಾ). ಹಿಮ ; ಮಂಜು : "ಮಹಿಕೆ–ಬರ್ಫ, ಮಂಜು" (ಗಂಗಾವು. ೨೫೨). [ಸಂ. ಮಹಿಕಾ]

**ಮಹಿಚಕ್ರ** (ನಾ). ಭೂಮಂಡಲ ; ಪೃಥ್ವಿ : ಮಹಿಚಕ್ರಕ್ಕಿದು ಜೋದ್ಯಮಲ್ತೆನಿಸುವಂತ್ರಾರ್ತೀವೃದುಂ ಕಂಡು ಸಸ್ಪೃಹರೆಲ್ಲಂ ಗೆಳೆಗೊಂಡು ಬಣ್ಣಿಸುವರ್ (ಅಜಪು. ೦೨-೦೨). [ಸಂ.]

**ಮಹಿಜ** (ನಾ). [ಜ್ಯೋತಿ] ಅಂಗಾರಕ ; ಮಂಗಳಗ್ರಹ : ತಾರೆ ಸಪ್ತಮಿದಿನದಿ ತಾರೇಶ ಮಹಿ[ಪಾಠಾಂ. ಮಹ] ಜಂಗೆ ಹೋರದಲೆ ಹೋದಡವನಿರ್ದ ಜಗಕೆ ಹೆಮ್ಮಾರಿ ಕಾಣಯ್ಯ (ಸರ್ವಜ್ಞ. ೦೫೯೩). [ಸಂ.]

**ಮಹಿತ** (ಗು). ೧. ಗೌರವಾರ್ಹನಾದ ; ಪೂಜ್ಯನಾದ : ಇಚ್ಛಾಮಾತ್ರದಿಂದಂ ವಿಕೃತಿಗಳನೆಯ್ದಿಸುವ ಮಹಿತಮಹಾಮಹಿಮನೀತ (ಬಸಪು. ೩೦-೪೫) ; ದನುಜಸಂಹೃತಿಶಕ್ತಿಧರಂ ಪ್ರಭಾಕರಂ ಮಹಿತಮಹೋದಯಂ (ರಾಜಶೇ. ೦-೮). ೨. ಶ್ರೇಷ್ಠವಾದ ; ಹಿರಿಮೆಯುಳ್ಳ ; ಘನತೆಯಿಂದ ಕೂಡಿದ : ಮಹಿತಭಕ್ತಿಯ ಸಹಜಮುಗ್ಧಿಯನೀಶ್ವರಂ ತಾಂ ಮೆಱೆಯಿಸುವೆನೆಂದು (ಬಸಪು. ೦೫-೦೬) ; ತೊಂತಗವಿತೆಯ ಗುಚ್ಛೇಂ ವಿಹಿತನಿಜಲಲಿತಮಂಜುಲಮಹಿತಾತುಳಸುಪ್ರಬಂಧದೊಳ್ಪಿಂಗೆಣೆಯೆ (ಹರಿಶ್ಚ. ೦-೨೫). (ನಾ). ೩. ಪೂಜ್ಯವ್ಯಕ್ತಿ ; ಮನ್ನಣೆಗೆ ಯೋಗ್ಯನಾದವನು : ಅಪ್ರತಿಮತಪಶ್ರೀಮಹಿತನಯಸೇನಮಹಾಮುನಿಪತಿಶಿಷ್ಯರಜಿತಸೇನಾಚಾರ್ಯರ್ (ಶಾಪುಂಶು. ೩); ಜನಪತಿಪೂಜೆಯಂ . . . ಜನಕತನೂಜೆ ಪೇಟ್ದು ತೆಱದಿಂ ನೆಗಟ್ಚಿಂದು ಪುರೋಹಿತಂಗೆ ಸಜ್ಜನಮಹಿತಂಗೆ ಪೇಟ್ದಂ (ಶಂರಾವು. ೦೫-೮೪). [ಸಂ.]

**ಮಹಿತನಯ** (ನಾ). ೧. ಭೂಮಿಯ ಮಗ. ೨. [ಜ್ಯೋತಿ] ನವಗ್ರಹಗಳಲ್ಲಿ ಒಂದು ; ಅಂಗಾರಕ : ಮಹೀಶ್ವರಂ ಮೇಣ್ ಮಹೀಶ್ವರಾಧೀಶಸಮಂ ಮಹಿತನಯಂ ನೆಲಸಿರೆ ಮೃಗಗೃಹದೊಳ್ ತನ್ನನುಜನೆನಿಸುಗುಂ (ಜಾತತಿ. ೦೬-೨೦). [ಸಂ.]

**ಮಹಿತಳ** (ನಾ). ೧. ಭೂಮಂಡಲ : ಸೋಮೇಶ್ವರನವತರಿಸಿದನೀ ಮಹಿತಳತಿಳಕಮೆನಿಪಲಂದಾಪುರದೊಳ್ (ಎಇ. XXVIII, ೩೩-೨ ; 1082).

೨. ನೆಲ ; ಭೂಮಿ : ಮಹಿತಳಲುಠಿತೋತ್ಥಿಮಂ . . . ಆ ಮಹಿಪಂ ಪೀತಾಂಬುವನಂದು ಹಯುವನಾಸನ್ನವಿಟಪಿಯೊಳ್ ನಿಯಮಿಸಿದಂ (ಕಾದಂಪೂ. ೬೪೬). [ಸಂ. ಮಹಿತಲ]

**ಮಹಿಧರ** (ನಾ). ೧. ಭೂಮಿಯನ್ನು ಹೊತ್ತಿರುವುದು : ಪರ್ವತ : ಕಾಂಚನಶೈಲಾಧೀಶನೋ ಹೈಮವತಮಹಿಧರಾಧೀಶನೋ ಪೇಟಿಂ (ಅಜಪು. ೯-೬೮) ; ಹಿಮವತ್ಕುತ್ಕೀಳದೊಳ್ ಮಂದರಮಹಿಧರದೊಳ್ . . . ಚೈತ್ಯಾವಾಸಪೂಜೋತ್ಸವದಿನಗಲನಲ್ಲಿಂದಮೆಂದುಂ ಸುರೇಂದ್ರಂ (ಸುಕುಮಾ. ೯-೯೦). ೨. (ಕೂರ್ಮಾವತಾರರೂಪದಿಂದ) ಭೂಮಿಯನ್ನು ಹೊತ್ತವನು ; ವಿಷ್ಣು : ಎಳೆಯುಂ ವಿಕ್ರಮದಿಂ ತರಲ್ ಮಹಿಧರಂ ಮುನ್ ಪಂದಿಯಾದಂತೆ ಪೋದೆಳೆಯುಂ ದ್ವಾಯಿಗರಂ ಪಡಲ್ವಡಿಸಿ ಕೊಂಡಾ ಳಲ್ಕಮಾದೇವದಿಂ . . . ಬೃಹಂದಳೆಯಾದಂ ನರಂ (ಪಂಪಭಾ. ೬-೩೩). [ಸಂ.]

**ಮಹಿಭುಜ** (ನಾ). ಭೂಮಿಯನ್ನು ಅನುಭವಿಸುವವನು ; ರಾಜ : ಸೊಗಯಿಸೆ ಸಿಂಹನಂದಿಯುಮನಿಂದಿತೆಯುಂ ತನುಜನ್ಮಜನ್ಮಭೂಮಿ ಗಳವರಿಂದಮಾ ಮಹಿಭುಜಂ ಕರಮೊಪ್ಪಿದಂ (ಶಾಂತಿಪು. ೬-೬೦). [ಸಂ. ಮಹಿಭುಜ್]

**ಮಹಿಮ** (ನಾ). ೧. ಹಿರಿಮೆ ; ಘನತೆ ; ಸಾಮರ್ಥ್ಯ. ೨. ಹಿರಿಮೆ ಯುಳ್ಳವನು ; ಘನವಂತ ; ಮಹಾತ್ಮ : ಇಂತಪ್ಪ ಮಹಿಮನುಂಟೆ (ಸಿದ್ಧರಾ. ೦-೨೯) ; ರುದ್ರನೆನಿಪ್ಪ ಮಹಿಮಂಗೆ ಹುಟ್ಟಿಸುವ ರಕ್ಷಿಸುವ ಭಕ್ಷಿಪ ಕಟ್ಟಳೆಯನಳವಡಿಸಿ ಪಟ್ಟವ ಕಟ್ಟಿ ಕರುಣಿಸಿ ಮೆರೆದ ಗುರು ಗುಹೇಶ್ವರನು (ಶೂಸಂ. ೦-೨೦) ; ಯೋನಿಜನಲ್ಲದ ಮಹಿಮಂ . . . ನಿನಗೆ ಪುತ್ರನಾದಪನು (ಹರಿಶ್ಚ. ೨-೦೩). [ಸಂ. ಮಹಿಮನ್]

**ಮಹಿಮಾಕರ** (ನಾ). ಹಿರಿಮೆಗೆ ನೆಲೆಯಂತಿರುವವನು ; ಮಹಿಮೆ ಯುಳ್ಳವನು ; ಘನವಂತ : ಭರತಾವನೀಶ್ವರಂ ಗುರು ಪಿರಿಯಣ್ಣಂ ಚಕ್ರವರ್ತಿ ಮಹಿಮಾಕರಂ (ಆದಿಪು. ೦೯-೦೦೨); ನಿನ್ನವತಾರಂಕೃತಿಯನರ್ಚಿಪರ್ ಮಹಿಮಾಕರ ಪರಮಾರ್ಥಮಾರ್ಗ ಲಕ್ಷ್ಯಂ ನಿನ್ನಾ (ಜಗಾ. ೩-೦೦೬). [ಸಂ.]

**ಮಹಿಮಾನತೆ** (ನಾ). ಲೋಕಪೂಜ್ಯತೆ : ಮಾನನಿಧಿಗಳು ಸುಕೃತಿಗಳು ಮಹಿ ಮಾನತೆಯಲಿರುತಿಪ್ಪರದನಾನೇನ ಹೇಳುವೆ ಮಾದರಸ ಮಾದಾಂಬಿಕೆಯ ರಿರವ (ಶ್ರೀಜೀ. ೯-೦೦). [ಮಹಿ + ಮಾನ + _ತೆ]

**ಮಹಿಮೆ** (ನಾ). ೧. ಹಿರಿಮೆ ; ಔನ್ನತ್ಯ ; ಮಹಾತ್ಮೆ : "ಪ್ರಮೆಯೆನಲ್ ಮಹಿಮೆ" (ಶಕುಶಿ. ೬೮) ; ಮಹಿಮೆ ಜಗತ್ರಯಪ್ರಭೃತಿಗಾಸ್ಪದಮಾದು ದಿರ್ದರ್ಮಗ್ಗಳಂ ಮಹಿಮೆಯನಾರೊ ಮಾಟ್ಪರ್ (ಶಾಂತಿಪು. ೦೦-೦೦೨) : ಸಿದ್ಧರಾಮತಂದೆಗಳ ಮಹಿಮೆ . . . ಎನ್ನೊಳಗೆಂದಿಪ್ಪುದೊ (ಅದವ. ೦೭-೩೯). ೨. ವೈಶಿಷ್ಟ್ಯ : ಆ ಸಾಮಾನ್ಯ ಅನ್ನವನ್ನು ಬಡಿಸುವುದರಲ್ಲಿಯೇ ಭಟ್ಟನಿಯ ಮಹಿಮೆ ಕಾಣಿಸುತ್ತಿತ್ತು (ಶಾಂತಲೆ. ೬೩). ೩. ಅಷ್ಟಸಿದ್ಧಿಗಳಲ್ಲಿ ಒಂದು ; ತನ್ನ ಇಚ್ಛೆಯಂತೆ ಆಕಾರವನ್ನು ದೊಡ್ಡದಾಗಿ ಪರಿವರ್ತಿಸಿ ಕೊಳ್ಳುವ ಒಂದು ಬಗೆಯ ವಿದ್ಯೆ : ಅಣಿಮಾ ಮಹಿಮಾ . . . ವಶಿತ್ವೇಶಿತ್ವಾಪ್ರತಿಹತತ್ವ ಕಾಮರೂಪಿತ್ವಾದಿಭೇದದಿಂ ಕ್ರಿಯಾಗೋಚರರ್ಧಿ ಬಹುವಿಧಂ (ಶತ್ರ. ೦೭೯) ; ಅವಧಿಜ್ಞಾನಿಯುಮಣಿಮಾ ಗರಿಮಾ ಮಹಿಮಾ . . . ಎಂಬಷ್ಟಗುಣಮಣಿಭೂಷಿತನುಮಾಗಿ (ಶ್ರಾ. ೦೦೯); ಬ್ರಹ್ಮಾಂಡಾದಿ ಶಿವಾಂತಮಾದ ಮೂವತ್ತಾರುತತ್ತ್ವಂಗಳಂ ಪೊರೆಗೆ ವ್ಯಾಪಿಸಿ ವರ್ತಿಸುವದೇ ಮಹಿಮೆ (ಏಕೋ. ೨೩೨). ೪. [ಜೈನ] ಪೂಜೆ ; ಅರ್ಚನೆ ; ಆರಾಧನೆ : ನಿಜಗೃಹೋದ್ಯಾನದ ಜಿನಭವನದೊಳೆಂಟುದಿವಸಂಬರಂ ಮಹಾಮಹಮೆಂಬ ಮಹಿ[ ಪಾಠಾಂ. ಜಿನಮಹಿ] ಮೆಯಂ ಮಹಾವಿಭೂತಿಯಿಂ ಮಹಾಬಲಂ ಮಾಡಿದಿಂ ಬಟೆಯಿಂ (ಆದಿಪು. ೨-೯೯೪); ಮಹಿಮೆಯನಾ ಮಹೀತಳಚಕ್ರಿಮ ಕೃತ್ರಿಮ ಚೈತ್ಯಗೇಹದೊಳ್ ಮಹಿತಮೆನಲ್ ಮಹಾಮಹದ ಪೂಜೆಯ ನೋಡೆಯಿನಂದು ಮಾಡಲ್ (ಪಾರ್ಶ್ವ. ೦-೦೩೩). [ಸಂ. ಮಹಿಮನ್. ಮಹಿಮಾ]

**ಮಹಿಮೆವಡೆ** (ಕ್ರಿ). ಘನತೆಯನ್ನು ಹೊಂದು; ಹಿರಿಮೆಯಿಂದ ಕೂಡಿರು: ಮಹಿಮೆವಡೆದಿಂತು ಸೊಗಯಿಸುವ ಹೇಮಕುತ್ಕೀಳದಿಂದೆ ತೆಂಕಣದೆಸೆಯೊಳ್ ಮಹಿ ಭರತಂ ಷಟ್ಖಂಡಾವಹಂ (ಸುಕುಮಾ. ೦-೬೮). [ಮಹಿಮೆ + ಪಡೆ₁]

**ಮಹಿಮೆವೆಱು** (ಕ್ರಿ). = ಮಹಿಮೆವಡೆ : ಆ ವಿಯುತ್ತಳವದಿರೆ ನೆಗೆದು ಮಹಾವಿಭವದಿಂದೊತ್ತಿ ನಡೆಯಲು ದೇವನಿಚಯಂ ಪೊಗಳಲುದ್ದೀಪಿತ ಮಹಿಮೆವೆತ್ತು ಹರಗಣಾವಳಿಯಾಜ್ಞೆಯಂ ತತ್‌ಶಿರದೊಳಾಂತು . . . ಪೋದನು (ಬಸವಪು. ೯೯-೬೨) ; ಬಹುಕಾಲಕಾಗಿ ನನ್ನೊಡೆಯನ ಕಂಡೆನೊ ಮಹಿಮೆವೆತ್ತೆನೊಯೆನುತೆಯ್ದಿ ಮಹಿಪನ ಮುಂದುಡುಗೊರೆಯನಿರಿಸಿ ಗಹಗಹನೆಱಗಿದಳು ಕಾಳಿಂದಿ (ಭರತೇ. ೩೭-೬೬). [ಮಹಿಮೆ + ಪೆಱು₁]

**ಮಹಿಶೂರು** 'ಮಯ್ಸೂರ್' ನೋ.

**ಮಹಿಷ** (ನಾ). ೧. ಕೋಣ : "ಮಹಿಷಂ, ಸೈರಿಭಃ, ರಕ್ತಾಕ್ಷಃ, ಕಾಸರಃ, ಲುಲಾಯಃ – ಈ ೫ ಕೋಣಂ" (ಕರಾಯು. ೩೮-೬೯); ಕರಿ ಮಹಿಷ ಮೇಷ ಮಲ್ಲಸ್ವರೂಪದಿಂ ತಮಗೆ ತಾಮೆ ಪೋರೆ ಸೂರರ್ಕಳ್ (ಅಜಪು. ೩-೮೦). ೨. ದುರ್ಗೆಯಿಂದ ಹತನಾದ ಒಬ್ಬ ರಾಕ್ಷಸನ ಹೆಸರು. ತಾರಕನ ಕೈಟಭನ ಮಹಿಷನ . . . ಜಜ್ಞಾ ರಕ್ತನವಿವನೊಬ್ಬನಲಿ ಕೈವಾರವೇ ನೆಱೆ ಕಾಣಲಾಯ್ತೆಂದುದು ಸುರಸ್ತೋಮ (ಕುಮಾರವ್ಯಾ. ೦೩-೬೭). ೩. ಒಂದು ನರಕದ ಹೆಸರು : ಶುನಕ ಶೂಕರ ಅಜ ಮಹಿಷ ಅವಿಕವೆಂಬೈದು ಮಂತ್ರಿನರಕಂಗಳ ನಡುವೆ ಚಂಡಕೋಳಾಹಳವೆಂಬರಸುನರಕವಿಹುದು (ಏಕೋ. ೦೩೨).

ಮಹಿಷಪುತ್ರ = (ಆಲಂ) ದಡ್ಡ ; ಹೆಡ್ಡ : ಚಿತ್ರಗುಪ್ತರು . . . ನಿನ್ನ ಪತ್ರ ಕರದಲಿ ಪಿಡಿದು ಈ ಮೂರ್ಖನರ ಮಹಿಷಪುತ್ರನೆಂದು ನಸುನಗುವರಲ್ಲೋ ಪ್ರಾಣಿ (ಏದಾಕೃ. ೯೮-೦೭). [ ಸಂ.]

**ಮಹಿಷನಾಥ** (ನಾ). ದಿಕ್ಪಾಲಕರಲ್ಲಿ ಒಬ್ಬ ; ಕೋಣವನ್ನು ವಾಹನ ವನ್ನಾಗಿ ಉಳ್ಳವನು ; ಯಮ : ಪ್ರಥಮಪ್ರಾಕಾರದೊಳಗಣ ಮಹಾ ವೀಥೀಭಾಗದೊಳಮರನಾಥಮಹಿಷನಾಥಸರಿನ್ನಾಥ ಧನನಾಥಸನಾಥಮಪ್ಪ ದಿಕ್ಪಾಲರ ಕೇಳೀಪ್ರಾಸಾದಂಗಳೆಂದಂ (ಅಜಪು. ೭-೨೦೪). [ಸಂ.]

**ಮಹಿಷಮಂಡಲ** (ನಾ). = ಮಯ್ಸೂರ್ : 'ಎರುಮೈ_ನಾಡು' ಎಂಬುದು ಮಹಿಷ_ಮಂಡಲವಾಗಿ ಪರಿವರ್ತನವಾಯ್ತೆಂದು ಹೇಳಲಾಗುತ್ತದೆ (ಕರ್ನಾಟಿ. ೦೫೨). [ಸಂ.]

**ಮಹಿಷಯುದ್ಧ** (ನಾ). ಕೋಣಗಳನ್ನು ಹುರಿದುಂಬಿಸಿ ಹೋರಾಡಿಸುವ ಒಂದು ಬಗೆಯ ಪಂದ್ಯ : ಮಲ್ಲಮೇಷಾದಿಯುದ್ಧಂಗಳಂ ನೋಡುತ್ತುಂ . . . ರಂಜಿಸುವ ಮಹಿಷಯುದ್ಧಂಗಳಂ ಕಾಣುತ್ತುಂ. . . ಪುರಮಂ ಸರ್ವಸಂಭ್ರಮದೊಳಂ ಪೊಕ್ಕು (ನಂಬಿಶ. ೩-೩೮). [ಸಂ.]

**ಮಹಿಷಾಕ್ಷ** (ನಾ). ಒಂದು ಬಗೆಯ ಮರ ಮತ್ತು ಅದರ ಅಂಟು; ಲೋಬಾನ : "ಪುರಾಖ್ಯಂ, ಮಹಿಷಾಕ್ಷಃ, ಗುಗ್ಗುಳಃ, ಫಲಂಕಷಃ–ಈ ೪ ಗುಗ್ಗುಳಂ" (ಕರಾಯು. ೦೦೦-೯೬೬); ಹೇಮಮಾಕ್ಷಿಕ. . . ಮಹಿಷಾಕ್ಷ, ಗುಗ್ಗುಳ, ಮಣಿಶಿಲೆ, ಪಾದರಸ ಇಷ್ಟನು ಸಮಾಂಶವಾಗಿ ಎಮ್ಮೆಯ ಹಾಲಿಂದ ಮರ್ದಿಸಿ ಏಳುದಿನ ಮುಖಕ್ಕೆ ಲೇಪವಂ ಮಾಡಲು ಮುಖದ ಕಪ್ಪು ತೀರುವದು (ವೈದ್ಯಸಾ. II, ೦೯೬). [ಸಂ.]

**ಮಹಿಷಾಕ್ಷಿ** (ನಾ). = ಮಹಿಷಾಕ್ಷ : "ಗುಗ್ಗುಳಂ ಮಹಿಷಾಕ್ಷಿ ಕೌಶಿಕಾಖ್ಯಂ" (ಮಂಗರಾ. ೯೩-೯೨); ಮಹಿಷಾಕ್ಷಿಯೊಪ್ಪಲವ ತಂದು ಮೂಜಮಸರದೊಳುಂ ಬಾಲೇಂದುವಿನೌಳಗೆ ಕೊಡುತಿರಲು (ಬಸವಪು. ೯೯-೨೮). [ <ಸಂ. ಮಹಿಷಾಕ್ಷ ]

**ಮಹಿಷಾಸುರ** (ನಾ). = ಮಹಿಷ ೨: ಮಿಂಸ್ಗಳಂತೆ ಗಾಳದೊಳ್ ತೊಡರ್ದಿರ್ದ ಪಾದರಿಗರಿಂ ಮಹಿಷಾಸುರನಂತೆ ಸೂಲದೊಳ್ ನೊಂದು ನರಳ್ವ ಕಳ್ಳರಿಂ . . . ಅತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೯ ಕೂರ್ದ್ರ೪); ಮೇಲೆವಾಯ್ವ ಮಹಿಷಾಸುರನಂ ತವೆ ಕೊಂದಳಾವಳಾ ಭಗವತಿ ಕೂರ್ತು ಬೀರಸಿರಿಯಾಗೆ ಭುಜಾಸಿಗೆ ನಾಗವರ್ಮನಾ (ಛಂದೋಂಬು. ೧-೪). [ಸಂ.]

**ಮಹಿಷಾಸುರಮರ್ದಿನಿ** (ನಾ). ಮಹಿಷಾಸುರನನ್ನು ಕೊಂದವಳು; ದುರ್ಗೆ; ಚಾಮುಂಡಿ: ನವರಂಗದಲ್ಲಿರುವ ಗೂಡುಗಳಲ್ಲಿ ಲಕ್ಷ್ಮೀನಾರಾಯಣ . . . ಮಹಿಷಾಸುರಮರ್ದಿನಿ ವಿಗ್ರಹಗಳು ಇರಿಸಲ್ಪಟ್ಟಿವೆ (ವ್ಯಾಸಸ್ಮ. ೧೦೬). [ಸಂ. ಮಹಿಷಾಸುರಮರ್ದಿನೀ]

**ಮಹಿಷಿ** (ನಾ). ೧. ಎಮ್ಮೆ: "ಮಹಿಷಿ ಕಾಸರಿಯೆನಲ್ಕೆಮ್ಮೆಯಕ್ಕುಂ" (ಶಬ್ದಮಣಿ. ೩೩-೭); ಪುರುಹೂತಾರ್ಚಿತನಂಶದೊಳ್ ವಿಬುಧಧಾತ್ರೀನಾಥ ಧರ್ಮಾಕರೋತ್ಕರದಿಂ ಭಾರ್ಗವನಂಶದೊಳ್ ಮಹಿಷಿ[ಪಾಠಾಂ. ಷ]ಗೋವಾಣಿಕ್ಯಂ ರೂಪ್ಯಾದಿಯಿಂ. . . ಸಂತತಮಾ ವಿಲಗ್ನಜನಿತಂಗಾಜೀವನಂ ಕೂಡುಗುಂ (ಜಾತಕ. ೧೧-೩). ೨. ಪಟ್ಟದ ರಾಣಿ; ಅಗ್ರಮಹಿಷಿ: "ಕೃತಾಭಿಷೇಕಾ, ಮಹಿಷೀ — ಈ ೨ ಪಟ್ಟದರಸಿಯರ್" (ಶಬ್ದಾಯು. ೬೯-೩೨೬); ಮೊದಲು ಧೃತರಾಷ್ಟ್ರನ ಮಹಿಷಿ ರೋಷದಲಿ ಯಾದವರೆಲ್ಲ ಳಿವಂದದಲಿ ಶಾಪವ ಕೊಟ್ಟುದನು ನೆನೆನೆನೆದು ಚಿತ್ತದಲಿ ಬೆದಜುತಿರ್ದುದು ಸಕಲಜನ (ತಿಮ್ಮಕವಿ. ೦-೧೬). ೩. ಅರಸಿ; ರಾಣಿ: ದೇವೇಂದ್ರನು . . . ಕಲಶದಲ್ಲಿದ್ದ ಅಮೃತೋದಕದಿಂದ ಪ್ರಭುಗಳಿಗೂ ಇಬ್ಬರು ಮಹಿಷಿಯರಿಗೂ ಅಭಿಷೇಕಮಾಡಿದನು (ಶಾಂತಲಾ. ೯೪). ೧, ೩: ಶುದ್ಧಾಂತನಿಳಯದುತನೇಕಮಹಿಷೀಸಮೇತಮುಂ ನೀಳಾಬ್ಜನಾಳದಂತೆ ನಿಷ್ಕಂಟಕಾತ್ಮಮುಂ . . . ಎಂಬ ಮಹನೀಯ ಮಹಿಮೆಯಂ ತಳೆದು (ಧರ್ಮಪು. ೯-೩೦ ವ). ೪. ಉನ್ನತಸ್ಥಾನದಲ್ಲಿರುವ ಸ್ತ್ರೀ. ೫. (ಉಕ) ಒಂದು ಮನೆತನದ ಅಡ್ಡಹೆಸರು. [ಸಂ. ಮಹಿಷೀ]

**ಮಹಿಷಿಕ** (ನಾ). ಕೋಣ; ಮಹಿಷ: ಬಿಳಿಯ ಗಜಂ ತಗರ್ ಮಹಿಷಿಕಂ ಮನುಜಂ ಮಕರಂ ಮೃಗಂ ಸಮುಜ್ಜ್ವಳಿತತುರಂಗಮಂ ವೃಷಭಮೆಂಬಿವ ನೇಱಿ ಸಮಸ್ತಸೈನಿಕರ್ ಬಳಸಿರಲಿಂದ್ರನಗ್ನಿಯಮ . . . ಅಖಿಳ ದಿಕ್ಪತಿಗಳ್ ನಡೆದರ್ ನಿಜಾಶೆಯೊಳ್ (ಶಾಂತಪು. ೦೬-೩೨೭). P ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. [ ? ]

**ಮಹಿಷೀರಸ** (ನಾ). (ರಾಣಿಯರು ಲೇಪಿಸಿದ್ದ) ಒಂದು ಬಗೆಯ ಸುಗಂಧಲೇಪ (?): ಅಡರೆ ಕಪಲ್ಪುದೊಂದೆಡೆ ಮೃಗೋದ್ಭವದಿಂ ಬೆಳರ್ಪಟ್ಟು ನಿಂದುದೊಂದೆಡೆ ಮಲಯೋದ್ಭವಪ್ರಸರದಿಂ ಕದಡಿಂ ಕಡುಕೆಂಕಮಾದುದೊಂದೆಡೆ ನವಕುಂಕುಮದ್ರವದಿನರ್ಪಿತ ಕರ್ಪೂರದಿರ್ಪನಾಳ್ದುದೊಂದೆಡೆ ಪರಿಮಿಶ್ರಿತಾರ್ದ್ರಮಹಿಷೀರಸದಿಂ ಸರಸೀವಿಭಾಗದೊಳ್ (ಶಾಂತಿಪು. ೯-೨೯). 'ಗೋರಸ' ನೋ. [ಸಂ.]

**ಮಹಿಷ್ಠ** (ಗು). ೧. ಅತಿದೊಡ್ಡದಾದ; ಬೃಹತ್ತಾದ; ಬಹು ಹಿರಿಯ. (ನಾ). ೨. ಘನತೆ; ಹಿರಿಮೆ: ಅಸಮಭಕ್ತಿಮಹಿಷದಿಂ ವರ್ತಿಸುತಿರಲು ತಾಂ (ಬಸವ. ೩೩-೧೧). [ಸಂ.]

**ಮಹಿಸೂರು** 'ಮಯಿಸೂರ್' ನೋ.

**ಮಹಿಳಾಮಂಡಳ** (ನಾ). ಹೆಂಗಸರ ಪುರೋಭಿವೃದ್ಧಿಗೆ, ಅವರೇ ಸ್ಥಾಪಿಸಿ ನಡೆಸುವ ಸಂಘ, — ಸಮಾಜ; ಸ್ತ್ರೀಸಮಾಜ: ಧಾರವಾಡದ ಮಹಿಳಾಮಂಡಳದಿಂದ ದಿಲ್ಲಿಯ ಲೋಕಸಭೆಯವರೆಗೆ ನಿಮ್ಮ ಕಾರ್ಯಕ್ಷೇತ್ರ ವ್ಯಾಪಿಸಿರುವಾಗ (ಕರ್ನಾಟ. ೩. ಮುಮ್ಮು೨). [ಸಂ. ಮಹಿಲಾಮಂಡಲ]

**ಮಹಿಳಾಮಂಡಳಿ** (ನಾ). = ಮಹಿಳಾಮಂಡಳ: ಮಹಿಳಾಮಂಡಳಿಯಲ್ಲಿ ಸ್ವಾಮಿಗಳ ಉಪನ್ಯಾಸವೇರ್ಪಟ್ಟಿತು (ಧರ್ಮಸಾ. ೯೮). [ಸಂ. ಮಹಿಲಾಮಂಡಲೀ]

**ಮಹಿಳೆ** (ನಾ). ೧. ಹೆಂಗಸು; ಹೆಣ್ಣು; ಸ್ತ್ರೀ: "ರಾಮಾ, ವಾಮಾ . . . ಮಹಿಳಾ, ಲಲನಾ . . . ಯುವತಿಃ — ಈ ೨೮ ಸ್ತ್ರೀಯರ್" (ಶಬ್ದಾಯು. ೭೯-೩೨೮); ಮಹಿಳಾಸಹಿತಂ ವಾಹನಸಹಿತಂ . . . ನಿಜ ವಿವಿಧಾಯುಧಸಹಿತಂ ನಿಲವೇಟ್ಟು ನೆಲೆಯೊಳಿರೆ ದಿಗಧೀಶರ್ (ಶಾಂತಿಪು. ೧೧-೩೨); ಮಹಿಳೆ[ಪಾಠಾಂ. ಲೆ]ಯರೊಳಭಿಮಾನಗಿತ್ತಿಯನೆನ್ನ ನೀನಱಿಯ (ಬಸವ. ೨೮-೨೦). ೨. ಹೆಂಡತಿ; ಪತ್ನಿ: "ದಾರಂ ಕಳತ್ರಂ . . . ಪತ್ನಿ ಮಹಿಳೆಯೆನೆ ಹೆಂಡತಿಗೆ ನಾಮಮಕ್ಕುಂ" (ಶಬ್ದಮಣಿ. ೯೦-೬). [ಸಂ. ಮಹಿಲಾ]

**ಮಹೀಗೃಹ** (ನಾ). ನೆಲದ ಅಡಿಯಲ್ಲಿ ಕಟ್ಟಿರುವ ಮನೆ; ನೆಲಮನೆ: ಎಸೆವ ಪವಡಿಸುವ ಮನೆ ಚಿತ್ರಸಾಲೆ ಸುರತಾಲಯಂ ಮಹೀಗೃಹಂ . . . ಗುಣಣಿಸಾಲೆಯೆಂಬಿನಿತುಮಂ ಗೃಹಾಂಗಂ ಕುಡುಗುಂ (ಶಾಂತಿಪು. ೬-೬೦೬); ಕುಸುಮಾಸ್ತ್ರಶಸ್ತ್ರಚಯಕೋಶ ಮಹೀಗೃಹಮಂತದಲ್ತು (ಚಂದ್ರಪ್ರ. ೭-೦೨೭). [ಸಂ.]

**ಮಹೀಚಕ್ರ** (ನಾ). ಭೂಮಂಡಲ; ಪೃಥ್ವಿ: ಪುಂಡರೀಕಂಗೆ ಸಾಮಾದಿಗಳಿಂ ನಿಷ್ಕಂಟಕಂಮಾಡಿದನಖಿಲಮಹೀಚಕ್ರಮಂ ವಜ್ರಜಂಘಂ (ಆದಿಪು. ೩-೨೧). [ಸಂ.]

**ಮಹೀಚರ** (ನಾ). ಭೂಮಿಯಲ್ಲಿ ಸಂಚರಿಸುವವನು; ಮನುಷ್ಯ: ಸಕಲಮಹೀಚರಖೇಚರನಿಕಾಯಸೇವ್ಯತೆಗೆ ವೃದ್ಧಸೇವಿತ್ವಮೆ ಯೋಜಕಮಾದುದು (ಶಾಂತಿಪು. ೨-೩೯). [ಸಂ.]

**ಮಹೀಜ** (ನಾ). ೧. ಮರ; ವೃಕ್ಷ: ಕಡುಪಿನೆ ಪೊತ್ತು ಪಾಸಱೆಯ ನೆಪ್ಪುರೆ ಭೀಮನುಮೊತ್ತಿ ಕಿಟ್ಟು ಬೇರೊಡನೆ ಮಹೀಜಮೊಂದನಿಡೆಯುಂ ಬಿಡೆ ಪೊಯ್ಯೆಯುಂ (ಕುಮಾರ. ೩-೧೮); ನೆಳಲುಗೆಟ್ಟ ಮಹೀಜದಂತುಜ್ವಳಿಪ ಲಿಂಗಪರಾಙ್ಮುಖರನಾಗಳು ಭಜಿಸಿ ಭವಬಂಧನಕ್ಕೊಳಗಾಗದಂತಿಹನು (ಬಸವ. ೩೦-೩೦). ೨. [ಜ್ಯೋತಿ] ನವಗ್ರಹಗಳಲ್ಲಿ ಒಂದು; ಅಂಗಾರಕ. [ಸಂ.]

**ಮಹೀತಲ**, ಮಹೀತಳ (ನಾ). ೧. ರಾಜ್ಯ: ಜ್ಞಾನಸಂಬಂಧಿ ಬಂದು ಪೊಂಡ್ಯಮಹೀತಲ[ಪಾಠಾಂ. ಳ] ದೊಳಾನಂದದಿಂ ಸರ್ವಪ್ರಮಾಣದೊಳೊಂದೆ ದೃಷ್ಟಪ್ರತ್ಯಯಂಗಳೊಳೀಶ್ವರನೆ ಎಂದು ವಸುಮತಿಯೊಳ್ ಪ್ರತಿಷ್ಠಿಸಿ (ಬಸವ. ೩೦-೩೦). **ಮಹೀತಳ**: ೧. ಮಹೀತಳಾಧೀಶ್ವರಂ ನಿಜ ಮನೋರಮಾಗರ್ಭದಿಂ ಮಹೋತ್ಸವಾನಂದಮಂ ತಳೆದು (ರಕು. ೧-೭೦). ೨. ನೆಲ; ಭೂಮಿ: ಪ್ರಜಾಪತಿಮಹೀಪಾಲನಂ ದ್ವಾರಪಾಲಕನಂದರ್ಶಿತಂ ಕಂಡು ಮಹೀತಳಾಶ್ಲಿಷ್ಟ ಲಲಾಟಪಟ್ಟನೆಱಗಿ ಪೊಡಮಟ್ಟು (ಶಾಂತಿಪು. ೩-೩೦ ವ). [ಸಂ.]

**ಮಹೀತಳ** 'ಮಹೀತಲ' ನೋ.

**ಮಹೀಧರ** (ನಾ). ೧. ಭೂಮಿಯನ್ನು ಹೊತ್ತಿರುವುದು; ಪರ್ವತ; ಬೆಟ್ಟ: ಹಿಮವನ್ಮಹಾಹಿಮವನ್ನಿಷಧನೀಲರುಗ್ಮಿಶಿಖರಿಗಳೆಂಬ ವರ್ಷಧರ ಮಹೀಧರಂಗಳಿಂದಂ . . . ಎಸೆದು (ಆದಿಪು. ೦-೯೮ ವ); ಖಿರಿದರ್ ಮುಃಖಿಗಳ್ ಪರ್ಣಕುಟಿಯಿರ್ದೆಡೆಗೆ, ರಮ್ಯಸಾನುಮಹೀಧರೋನ್ನತಿಗೆ (ತೊರವೆರಾಮಾ. ೦೭೮-೯೩೩). ೨. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ: ರುತುಮೈದು ಮಹೀಧರಮೈದು ನಾಗ ಮತ್ತೈದು (ಭಾಸ್ಕರ. ೦೪-೩). [ಸಂ.]

**ಮಹೀಧ್ರ** (ನಾ). = ಮಹೀಧರ ೧: ಮಹೀಧ್ರದೊಳ್ ಮಸಕಮಂ ಕೈಕೊಂಡು ಶಾಖಾಸಮುಚ್ಚಯದೊಳ್ ಸಂದಣಿಗೊಂಡು . . . ಉಣ್ಮಿದುದು ಮೇಘೋನ್ಮುಕ್ತಧಾರಾರವಂ (ಕಾದಂಬ. ೩೩೩); ತಾರಮಹೀಧ್ರೋಪಾಂತ್ಯದೊಳ್ಸಂತತಮಮರನಿಕಾಯಾನ್ವಿತಂ . . . ವಿಶ್ರುತಾಕೃತಿಮಚೈತ್ಯಾವಾಸಪೂಜೋತ್ಸವದಿನಗಲನಲ್ಲಿಂದಮೊಂದುಂ ಸುರೇಂದ್ರಂ (ಸುಕುಮಾರ. ೯-೯೦). [ಸಂ.]

**ಮಹೀಧ್ರಾಸ್ತ್ರ** (ನಾ). (ಶತ್ರುಗಳ ಮೇಲೆ) ಬೆಟ್ಟಗಳನ್ನು ಸುರಿಸುವು ದೆಂದು ನಂಬಲಾದ ಅಸ್ತ್ರ ; ಪರ್ವತಬಾಣ : ತಿಮಿರಾಸ್ತ್ರಕ್ಕಂಶು ಬಾಣಂಗಳಂ . . . ತುಂಗಮಹೀಧ್ರಾಸ್ತ್ರಕ್ಕೆ ಚಂಡಾಶನಿನಿಶಿತನಿಕಾಯಂಗಳಂ ತೊಟ್ಟು (ವರ್ಧಮಾ. ೪-೯೩). [ಸಂ.]

**ಮಹೀನಾಥ** (ನಾ). ಭೂಮಿಯ ಒಡೆಯ ; ಅರಸ ; ಭೂಪತಿ : ಆ ಮುನಿನಾಥಂ ತ್ರಿಗುಪ್ತಿಯೊಳ್ ನೆರೆದನೀ ಮಹೀನಾಥಂ ಮಂತ್ರಗುಪ್ತಿ ಯೊಳ್ ನೆರೆದಂ (ಆದಿಪು. ೬-೨೪ ವ). [ಸಂ.]

**ಮಹೀಪತಿ** (ನಾ). = ಮಹೀನಾಥ : ಜಿತವಿಶ್ವಕರ್ಮಪರಿನಿರ್ಮಿತ ಕೃತಿಯಂ ತ್ರಿಃಪ್ರದಕ್ಷಿಣಾಗೆಯ್ದು ಮಹೀಪತಿ ಗಂಧಕುಟಿಯನಾ ಜಿನಪತಿ ಯಿದಿರೊಳ್ ನಿಂದು (ಶಾಂತಿಪು. ೬-೦೩೭) ; ಹರನೇತ್ರವಹ್ನಿಯೊಳಡಬಳವ ಸುಡಬಗೆದೆಲಾ ಮರುಳೆ ಮಹೀಪತಿಯೆ (ಕುಮಾ.ಕೆ. ೦೪-೩೭). [ಸಂ.]

**ಮಹೀಪಾಲ** (ನಾ). ಭೂಮಿಯನ್ನು ರಕ್ಷಿಸುವವನು ; ರಾಜ : ಬಿಜ್ಜಳ ಮಹೀಪಾಲಂ . . . ಬಸವವಿಭುವಂ ಕಾಣ್ಬ ಕಾಂಕ್ಷೆಯಲಿ . . . ನಡೆವು ತಿರಲು (ಬಸವ. ೩-೦೩) ; ಕಳಸ ಕನ್ನಡಿ ಸಹಿತ ನಡೆಯಲಿ ನಳಿನವದನೆಯ ರೆಂದು ನೇಮಿಸಿದನು ಮಹೀಪಾಲ (ಕುಮಾ.ರಾ. ೭-೦೭). [ಸಂ.]

**ಮಹೀಬುಧ** (ನಾ). ಭೂಸುರ ; ಬ್ರಾಹ್ಮಣ : ಗುರುವಿರೋಧ ಮಹೀ ಬುಧರ ಮತ್ಸರವು . . . ಶರಣಜನಪಾಂಡಿತ್ಯವೆಂಬಿವನರವರಿಸದಂಗೈಸೆ ಭೂಪನ ಸಿರಿಗೆ ಮೊಳೆಯದೆ ಕೇಡು (ಕುಮಾ.ರಾ. ೩-೭೯). [ಸಂ.]

**ಮಹೀಭುಜ** (ನಾ). = ಮಹಿಭುಜ : ಮಹೀಭುಜನೆಯ್ದಿದಂ ಫಳವಿನವ್ರ ಮಹೀಜಸಹಸ್ರಘಾಟಮನುತ್ಪಲಖೇಟಮಂ (ಆದಿಪು. ೪-೩೬); ಮಹೀ ಭುಜಮೌಳಿಮಣಿಬ್ರಜಪ್ರಭಾಲಿಂಗಿತಪಾದಪೀಠಂ (ಶಾಇ. XX' ೪೭-೭ ; 1072). [ಸಂ. ಮಹೀಭುಜ್]

**ಮಹೀಭೃತ್ತು** (ನಾ). ೧. ಭೂಮಿಯನ್ನು ಹೊತ್ತಿರುವುದು : ಬೆಟ್ಟ : ಮಂದರಮಹೀಭೃನ್ಮೇಖಿಲಾನಂದನಕ್ಕಾ ವಿದ್ಯಾಧರಚಕ್ರವರ್ತಿ ಜಿನ ಪೂಜೋತ್ಸಾಹದಿಂ ಪೋದಂ (ಶಂಖಾಪು. ೦೦-೧೯೭). ೨. ಭೂಮಿಯನ್ನು ಆಳುವವನು : ರಾಜ ; ದೊರೆ : ಓಳಿಯೊಳಿರ್ದ ಮಹೀಭೃನ್ಮೌಳಿ ಯೊಳೆಸೆದಾಸತಾರಿ ಸೊಗಯಿಸುಗುಂ ತಾರಾಳಿಯೊಳೆಸೆವ ಹಿಮದ್ಯುತಿ ಮಾಳೆವೊಲ್ (ಶಾಂತಿಪು. ೨-೪೪). ೧, ೨ : ತಮಗಾಜ್ಞಾವಶಮಾದುದುನ್ನತ ಮಹೀಭೃತ್ಕೋಟಿ ಬಿಣ್ಪುಮರ್ದತ್ತೀ ಧರೆಗೆಯ್ದೆ ತಮ್ಮ ಮುಖದೊಳ್ ಷಟ್ತ್ರಿಕರ್ಮವಾರಾಸಿವಿಭ್ರಮಮಾಪೋಶನಮಾತ್ರಮಾದುದೆನಲ್ (ಎಕ. V. ಕನ್ನರಾ. ೦೪೯-೩೨ ; 1125 ; ಶಾಸಮು. ೩೫೦ ನೋ). [ಸಂ. ಮಹೀಭೃತ್]

**ಮಹೀರುಹ** (ನಾ). = ಮಹೀಜ ೧ : ಅದು ಮದದಂತಿದಂತಮುಸಲ ಪ್ರವಿಭಗ್ನಮಹಾಮಹೀರುಹಾಸ್ಪದಂ (ಶಂಖಾ. ೩-೦೦) ; ಮಹೀರುಹದಗ್ರ ದಲಿ ಸಂಚರಿಸುತಿಹ ಖಗವಿಷ್ಟೆ ಬಿದ್ದುದು ಮೇಲೆ ಭೂಸುರನ (ಕುಮಾ.ಆ. ೦೩-೨). [ಸಂ.]

**ಮಹೀಲತೆ** (ನಾ). ಮಣ್ಣುಹುಳು ; ಎರೆಹುಳು : "ಮಹೀಲತಾ, ಗಂಡೂಪದಃ, ಕಿಂಚುಲಕಃ _ ೩ ಎರೆಬುಹುಳುವಿನ ಹೆಸರುಗಳು" (ಸಿದ್ಧಾಂತ. ೮೩). [ ಸಂ. ಮಹೀಲತಾ ]

**ಮಹೀವಲ್ಲಭ** (ನಾ). = ಮಹೀನಾಥ : ಸ್ತಿಮಿತಸಾಗರ ಮಹೀವಲ್ಲಭಂಗೆ ... ವಸುಂಧರೆಯುಂ ವಸುಮತಿಯುಮೆಂಬರರಸಿಯರಾದರ್ (ಶಾಂತಿಪು. ೧-೬೦ ವ); ಪುಲ್ಲಿಕ್ಕಿ ಪೋಗೆ ಪಥಿಕರ್ಮೆಲ್ಲನೆ ಸುಡಲಾಐದಗ್ನಿ ಹಿಮಸಮಯಮ ಹೀವಲ್ಲಭನತ್ತಣಿನಗಿದೇಂ ಪುಲ್ಲಂ ಕರ್ಚಿದುದೊ ಪೇಳೆನಲ್ತಳ್ತಿಸೆಗುಂ (ರಾಜಶೇ. ೯-೨೭). [ಸಂ.]

**ಮಹೀವಳಯ** (ನಾ). ಭೂಮಂಡಲ; ಪೃಥ್ವಿ: ಮಹೀವಳಯದೊಳೆಂದುಂ ನೆರೆಯೆ ಸಜ್ಜನರ ರತಿ ಲೇಸು (ಪುರಾ. ೬-೯). [ ಸಂ. ಮಹೀವಲಯ ]

**ಮಹೀಶ** (ನಾ). = ಮಹೀನಾಥ : ನರಪತಿಯ ಹೊರೆಗಾ ಸಮಯದಲಿ ನೆರೆದು ಜೈನರು ಬೌದ್ಧರುಂ ಧಿಕ್ಕರಿಸಿ ಬಂದಿಂತೆಂದು ಹೇಳಿದರಾ ಮಹೀಶಂಗೆ (ಬಸವ. ೩೦-೨೦) ; ಆ ಮಹೀಶಕ್ರತುವರದೊಳುದ್ದಾಮಮುನಿಜನರಚಿತ ಮಂತ್ರಸ್ತೋಮಪುಷ್ಕಲಪೂತಪುಣ್ಯಜಲಾಭಿಷೇಚನದ ಶ್ರೀಮುಡಿಗೆ ಕೈಯಿಕ್ಕಿ ದನು (ಕುಮಾ.ಸ. ೦೪-೭೭). [ಸಂ.]

**ಮಹೀಶೂರು** 'ಮಯ್ಸೂರ್' ನೋ.

**ಮಹೀಶ್ವರ** (ನಾ). ಭೂಮಿಯ ಒಡೆಯ ; ಅರಸ : ಆ ಮಹೀಶ್ವರ ನುಂತುಂ ವಿಜಗೀಷು ಚಾರರಹಿತಂ ವಿಶ್ವೇಕ್ಷಣಂ (ಶಾಂತಿಪು. ೦೦-೦೦೯) ; ಅತಿವೃದ್ಧರೆಂದೆಱಗಿದಂ ಕಪಿ ಮಹೀಶ್ವರನನು (ತೊರವೆರಾ. ೨೭-೪೭). [ಸಂ.]

**ಮಹೀಸುತ** (ನಾ). ೧. ಭೂಮಿಯ ಮಗ. ೨. ನರಕಾಸುರ. ೩. [ಜ್ಯೋತಿ] ನವಗ್ರಹಗಳಲ್ಲಿ ಒಂದು ; ಅಂಗಾರಕ : ನಿರ್ಮಲಾಂ ಚಂದ್ರಮಾಃ ಕೀರ್ತಿಂ ಮಂಗಲಾನಿ ಮಹೀಸುತಃ (ಎಕ. V(R), ಬ್ಯಸೂರು. ೯೭-೨೦ ; ?). [ಸಂ.]

**ಮಹೀಸುರ** (ನಾ). ಭೂಸುರ ; ಬ್ರಾಹ್ಮಣ : ದಂಡಿಗೆಯನೇಱಿಸಿ ನಿಗಮವಿದಪಂಡಿತನು ಕೈಗೊಟ್ಟವರನೊಡಗೊಂಡು ಬರುತಿರಲಾ ಮಹೀ ಸುರರ್ಕೈಸು ದೂರದಲಿ ಕಂಡು (ಬಸವ. ೩೩-೯) ; ಮಹೀಪಾಲಕ ಶಿರೋಮಣಿ ಪುರಕೆ ಮರಳೆಂದರು ಮಹೀಸುರರು (ಕುಮಾ.ಸ. ೦೩-೩). [ಸಂ.]

**ಮಹೀಸ್ಪೃಶ** (ನಾ). ೧. ಕೃಷಿಮಾಡುವವನು ; ಬೇಸಾಯಮಾಡುವ ವನು. ೨. ವೈಶ್ಯಕುಲಕ್ಕೆ ಸೇರಿದವನು ; ವೈಶ್ಯ : "ವಿಶನೂರುಭವ ತ್ರಿತಯಜಾತನಾರ್ಯಂ ಮಹೀಸ್ಪೃಶನೆನಲು ವೈಶ್ಯನಕ್ಕು" (ಮಂಗರಾ. ೦೦೨-೧). [ ಸಂ. ಮಹೀಸ್ಪೃಶ್ ]

**ಮಹುರಿ** 'ಮೌರಿ' ನೋ.

**ಮಹುಳಿ** (ನಾ). ವ್ಯಂಗ್ಯವಾದ ಮಾತು ; ಚುಚ್ಚುನುಡಿ ; ಮೂದಲಿಕೆ : ನಳಿನಮುಖಿ ಮಹುಳಿಯಲಿ ಮೂದಲಿಸಿ ಕೊಯ್ದಳು (ಕುಮಾ.ಉ. ೨೦-೩೭) ; ಫಲುಗುಣ ಮೊಳೆನಗೆಯ ಮಹುಳಿಯಲಿ ವರುಣಾಸ್ತ್ರವ ಪ್ರಯೋಗಿಸಿದ (ಕೋಗಿಲು. ೨೭-೩೨). [?. / ಮರಾ. ಮವಾಲೀ = ಪುಂಡ, ದುಷ್ಟ]

**ಮಹೇಂದ್ರ** (ನಾ). ೧. ದೇವತೆಗಳ ಒಡೆಯ ; ಇಂದ್ರ ; ದೇವೇಂದ್ರ : ಭೋಗೀಂದ್ರಭೋಗಂ ಮಹೇಂದ್ರಮಹೈಶ್ವರ್ಯಮಿವೆಲ್ಲಮಧ್ರುವಂ (ಆದಿಪು. ೦೦-೬೦); ಮಹೇಂದ್ರವಂದ್ಯ ತ್ರಾಹಿ (ಕುಮಾ.ಸ. ೯-೪೨) : ಕೊಡದು ಮಹೇಂದ್ರಾ–ಅರುಂಧತಿ, ವಾಮದೇವ ಅತ್ರಿಗಳಲ್ಲದೆ ಇನ್ನು ಯಾರೂ ತಪಸ್ವಿಗಳಿಲ್ಲವೆ? (ಮಹಾಇ. ೦೨೪). ೨. ಮುಖಂಡ; ನಾಯಕ. ೩. ಸಪ್ತ ಕುಲಪರ್ವತಗಳಲ್ಲಿ ಒಂದು. ೪. [ಜೈನ] ಮಹೇಂದ್ರಕಲ್ಪದಲ್ಲಿರುವ ಇಂದ್ರ : ಅನುದಿನಮಿಾ ಗತವ್ಯಜಿನಂ ಜಿನೇಂದ್ರಪೂಜಾವಿಧಾನಮಂ ಮಾಡಿ ಮಹೇಂದ್ರನುಮನೊಡನಿಱಿಸಿ ನಾಕಮನನಾಥಮೆನಿಸಿದಂ (ಶಾಂತಿಪು. ೩-೦೦೬). [ಸಂ.]

**ಮಹೇಂದ್ರಕಲ್ಪ** (ನಾ). [ಜೈನ] ಹದಿನಾರುಸ್ವರ್ಗಗಳಲ್ಲಿ ನಾಲ್ಕನೆ ಯದು : ಸಮಾಧಿವಡೆದು ಮಹೇಂದ್ರಕಲ್ಪದೊಳ್ ಸಪ್ತಸಾಗರೋಪಮ ಪ್ರಮಿತಜೀವಿತನೆಂ ಸಾಮಾನಿಕದೇವನಾಗಿ ಪುಟ್ಟಿದಂ (ಆದಿಪು. ೩-೩೦ ವ). [ಸಂ.]

**ಮಹೇಂದ್ರಜಾಲ**, ಮಹೇಂದ್ರಜಾಳ (ನಾ). ೧. ಅರುವತ್ತುನಾಲ್ಕು ವಿದ್ಯೆಗಳಲ್ಲಿ ಒಂದು ; ಗಾರುಡಿ ; ಯಕ್ಷಿಣೀವಿದ್ಯೆ : ಕ್ರೂರಾಸ್ತ್ರಪಾತ ಚಿತ್ರಮಹಾರಣ ಮಹೇಂದ್ರಜಾಲ ರೌದ್ರಾದಿರಸಂ . . . ಅಭಿವ್ಯಂಜಿಸುಗುಂ (ಕಾವ್ಯಾವ. ೬೪೦); ಇಂದ್ರಜಾಲ ಮಹೇಂದ್ರಜಾಲ . . . ಮಂತ್ರ ತಂತ್ರ ಸಿದ್ಧಿ ಇವೆಲ್ಲವ ಕಲಿತಡೇನೋ (ಮುದ್ರಾಮ. ೪೩-೬೦). ೨. ಕಪಟ ; ತಂತ್ರ ; ಮೋಸ : ಕಾಲಕರ್ಮ ಮಹೇಂ[ಪಾಠಾಂ. ಹೇಂ]ದ್ರಜಾಲ ವಿಲೋಲ ನಿರ್ಮೂಲನನಹಿತಕುಲಪೇಳನಂ ಪರದೈವಕೋಳಾಹಳ ಕಳಾಶಾಲಿ

(ಶಶಪು. ೨೩-೪). 'ಇಂದ್ರಜಾಲ' ಪರಾ. **ಮಹೇಂದ್ರಜಾಳ** : ೧. ಬೀಱುದುದಬಳಾಜನಂ ನೃಪವರಂಗೆ ಮನೋಜಮಹೇಂದ್ರಜಾಳಮಂ (ಪಂಪ. ೬-೩೩). [ಸಂ.]

**ಮಹೇಂದ್ರಜಾಲಿಗ** (ನಾ). ಯಕ್ಷಿಣೀವಿದ್ಯೆಯನ್ನು ಬಲ್ಲವನು ; ಇಂದ್ರಜಾಲಿಕ ; ಗಾರುಡಿಗ : ಪಲವುಂ ಚೋದ್ಯಂಗಳಂ ವಿಕ್ರಿಯಾಬಳದಿಂದಾಡಿ ಮಹೇಂದ್ರಜಾಲಿಗನುಮಂ ಪೋಲ್ತಂ ಸುರಾಧೀಶ್ವರಂ (ಆದಿಪು. ೬-೧೨೨).
[ಮಹೇಂದ್ರಜಾಲ + - ಇಗ]

**ಮಹೇಂದ್ರಜಾಳ** 'ಮಹೇಂದ್ರಜಾಲ' ನೋ.

**ಮಹೇಂದ್ರಬಾಳೆ** (ನಾ) ಒಂದು ಬಗೆಯ ಬಾಳೆ : "ಎಳವೆಂಬುದಿವಾಟಿಯು —ಎಳೆಯುದಾದ ಮಹೇಂದ್ರಬಾಳೆಯು" (ಶಂಕರೀ. ೦೯೦).
[ಮಹೇಂದ್ರ + ಬಾಳೆ₁ (<ಬಾಟಿ³)]

**ಮಹೇಚ್ಛ** (ನಾ).= ಮಹೇಚ್ಛ ೩ : ಅರ್ಹನ್ ಶ್ರೀಮಾಧವೇಂದ್ರಂ ಗನಘುತನಯನ್ ವಿಷ್ಣುರಾಜನ್ ಮಹೇಚ್ಛನ್ (ಪ್ರಿಂಅಂ. ೦೯೨೦. ೨೪-೩ : ೬ನೆಯ ಶತ). [<ಸಂ. ಮಹೇಚ್ಛ]

**ಮಹೇಚ್ಛ** (ಗು). ೧. ಉದಾತ್ತವಾದ ; ಉದಾರಮನಸ್ಸುಳ್ಳ. ೨. ಉನ್ನತವಾದ ಧ್ಯೇಯಗಳನ್ನುಳ್ಳ ; ದೊಡ್ಡಗುರಿಯನ್ನು ಹೊಂದಿರುವ. (ನಾ). ೩. ಉದಾರಮನಸ್ಸಿನವನು ; ಧಾರಾಳಿ : "ಮಹೇಚ್ಛಃ. ಮಹಾಶಯಃ—೨ ಘನವಾದ ಮನಸ್ಸುಳ್ಳವನ ಹೆಸರು. ಧಾರಾಳಿಗೂ ಹೆಸರು" (ಸಿದ್ಧಾಂತ. ೩೨೩). ೪. ಉನ್ನತಧ್ಯೇಯವನ್ನು ಹೊಂದಿರುವವನು : "ಮಹೋತ್ಸಾಹಃ, ಮಹೋದ್ಯೋಗಃ, ಮಹೇಚ್ಛಃ, ಮಹಾಮನಾಃ — ಈ ೪ ಹೆಚ್ಚಾಳು" (ಹಲಾಯು. ೩೬-೨೦೦). [ಸಂ.]

**ಮಹೇರಣೆ** (ನಾ). ಒಂದುಬಗೆಯ ಮರ ; ತದುಕಿನ ಮರ : "ಗಜಭಕ್ಷ್ಯಾ, ಸುವಹಾ, ಸುರಭಿಃ, ರಸಾ, ಮಹೇರಣಾ . . . ಹ್ರಾದಿನೀ— ೮ ತದುಕಿನ ಗಿಡದ ಪೆಸರು. ಅನೇಬ್ಯಾಲ" (ಸಿದ್ಧಾಂತ. ೦೯೦).
[ಸಂ. ಮಹೇರಣಾ]

**ಮಹೇಶ** (ನಾ). ೧. ಮಹಾದೇವ ; ಶಿವ : ಜೈನರೆಲ್ಲರು ನೆರೆದು ನಮ್ಮೂರೊಳು ಮಹೇಶನ ಗೊರವರ್ನಿರ್ಗಹನೆೊರ್ಬನಂ ತಗುಳ್ವೆಂದವೆಂದೆನುತ (ಬಸವಪು. ೩೦-೨೪); ಆವನಾ ಪರಮಮಹೇಶಶಾಸನಮನುರ್ವರೆಯೊಳ್ಕಿಗೆ ಮಿರ್ಪನನ್ನ (ರಾಜಶೇ. ೦೩-೨೪). ೨. [ವೀಶೈ] (ಮೋಕ್ಷಸಾಧಕವಾದ) ಆರುಸ್ಥಲಗಳಲ್ಲಿ ಒಂದು ; ಷಟ್ಸ್ಥಲಗಳಲ್ಲಿ ಎರಡನೆಯದು : ವಿಶ್ವಾಸದ ಮೂಲಕ ಉಂಟಾಗುವ ನಿಷ್ಠೆಯ ಹಂತ, — ಸ್ಥಾನ ; ಮಹೇಶ್ವರಸ್ಥಲ : ಈ ಭಕ್ತಿಮಾರ್ಗವನ್ನು ಅನುಸರಿಸುತ್ತಾ ಹೋದರೆ ಕ್ರಮವಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಆಧ್ಯಾತ್ಮಿಕಸ್ಥಾನಗಳನ್ನು ಹೊಂದುತ್ತಾನೆ (ಭಾರತ. ೨೦೭). [ಸಂ.]

**ಮಹೇಶ್ವರ** (ನಾ). ೧. = ಮಹೇಶ ೧ : ಶಾಶ್ವತಾಯ ಮಹೇಶ್ವರಾಯ ಗಿರೀಶ್ವರಾಯ . . . ನಮೋ ಗುರು ಸಂಗಮೇಶಾಯ (ಬಸವಪು. ೬೦-೯೬). ೨. = ಮಹೇಶ ೨ : ಪ್ರಸಾದ ಮಹೇಶ್ವರ ಸನ್ಮತವಾಗಿ ಮಹೇಶ್ವರ ಭಕ್ತ ಸನ್ಮತವಾಗಿ . . . ಆರಾರ ಚಿತ್ತಕ್ಕೆ ಹೆಚ್ಚು ಕುಂದಿಲ್ಲದೆ ನಿಶ್ಚಿಂತನಾದೆಯಲ್ಲಾ (ಮೋಳಿಗೆ. ೦೩೪-೩೦೬). ೩. ಷಟ್ಸ್ಥಲಗಳಲ್ಲಿ ಎರಡನೆಯ ಹಂತದಲ್ಲಿರುವವನು ; ಮಹಾಹೇಶ್ವರಸ್ಥಲದಲ್ಲಿರುವವನು : ವಿಶ್ವಾಸದಿಂದ ಭಕ್ತನಾಗಿ ಆ ವಿಶ್ವಾಸದೊಳಗಣ ನೈಷ್ಠೆಯಿಂ ಮಹೇಶ್ವರನಾಗಿ . . . ನಿರ್ಭಾವಪದದೊಳು ನಿಂದ ಭೇದವೇ ಐಕ್ಯಸ್ಥಲ (ವಚನ. I. ೦೦೬-೩). ೪. [ಯೋಗ] ಷಟ್ಚಕ್ರಗಳ ಅಧಿದೇವತೆಗಳಲ್ಲಿ ಒಬ್ಬ : ಈ ಚಕ್ರಗಳಿಗೆ ಅಧಿದೇವತೆಗಳಿದ್ದಾರೆ. ಅವರು ಅನುಕ್ರಮವಾಗಿ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಮಹೇಶ್ವರ ಇವರು ಇರುವರು (ಶಿವಾಕೋ. ೩೯).
[ಸಂ.]

**ಮಹೇಶ್ವರಜ್ವರ** (ನಾ). ೧. ಮಹೇಶ್ವರನು ಅಭಿಮಾನಿದೇವತೆಯಾಗಿರುವ ಜ್ವರ : ಅಂತು ತಾಗಿದ ಮಹೇಶ್ವರಜ್ವರಮಂ ಕಂಡು ಕನಲ್ದು ಕಂಸಾರಿ ವೈಷ್ಣವಜ್ವರಮಂ ಬಿಡಲಾ ವೈಷ್ಣವಜ್ವರಂ ಮಹೇಶ್ವರಜ್ವರದೊಳ್ ಕಾದಿ ಪಿಡಿದು ತಂದು ಮುಂದಿಟ್ಟುದು (ಜಗಂ. ೦೬-೦೬ ಪ). 'ವೈಷ್ಣವಜ್ವರ' ಹೋ. ೨. ಒಂದು ಬಗೆಯ ಜ್ವರ : ಆಗಳ್ ಕುರುಧ್ವಜನಿಗೆ ಭಯಜ್ವರಮುಂ ಮಹೇಶ್ವರಜ್ವರಮುಂ ಬರೆ ಬರ್ಪುದಾರಮಹೇಶ್ವರನ ರಥದ ಬರವಂ ಕಂಡು (ಶಂಶಕಾ. ೦೦-೦೯೬ ಪ) ; ಕಟುಕರೋಹಿಣಿ . . . ಸುಗಂಧಿಯ ಬೇರು, ಇವಂ ಪ್ರತ್ಯೇಕ ಒಂದು ತೂಕ . . . ಕೊಡಲು, ಸಕಲಕ್ಷಯವ್ಯಾಧಿ, ಮಹೇಶ್ವರವ್ಯಾಧಿ, ಮಹೇಶ್ವರಜ್ವರ ಹರ (ಬಸ್ಯಿ.ವಿ. ೨೬). 'ಮಹಾಹೇಶ್ವರಜ್ವರ' ಪರಾ. [ಸಂ.]

**ಮಹೇಶ್ವರವ್ಯಾಧಿ** (ನಾ). ಒಂದು ಬಗೆಯ ರೋಗ : ಕಟುಕರೋಹಿಣಿ . . . ಸುಗಂಧಿಯ ಬೇರು, ಇವಂ ಪ್ರತ್ಯೇಕ ಒಂದು ತೂಕ . . . ಕೊಡಲು, ಸಕಲಕ್ಷಯವ್ಯಾಧಿ, ಮಹೇಶ್ವರವ್ಯಾಧಿ, ಮಹೇಶ್ವರಜ್ವರ ಹರ (ಬಸ್ಯಿ.ವಿ. ೨೬).
[ಸಂ.]

**ಮಹೇಶ್ವರಸ್ಥಲ** (ನಾ). = ಮಹೇಶ ೨ : ಚತುರ್ವಿಧಫಲಪ್ರಾಪ್ತಿಯನನುಭವಿಸದೆ ವಸ್ತುವ ಕಾಂಬ ನಿಶ್ಚಯವೇ ಮಹೇಶ್ವರಸ್ಥಲ (ವಚನ. I. ೦೦೬-೪) ; ಮಹೇಶ್ವರಸ್ಥಲ ಲಿಂಗನಿಷ್ಠಾಸ್ಥಲ . . . ಭಕ್ತದೇಹಿಕ (ಲಿಂಗ) ಸ್ಥಲ ಈ ೯ ಮಹೇಶ್ವರಸ್ಥಲಂಗಳು (ಅಂದೇ. ೨೩೦-೦೦೪) ; ಶಿವಲಿಂಗದ ಜ್ಞಾನಶಕ್ತಿಸ್ಫುರಣದಿಂದ ಗುರುಲಿಂಗವು ಜನಿಸಿತು ಅದರ ಉಪಾಸನೆಗಾಗಿ ಮಹೇಶ್ವರಸ್ಥಲವುಂಟಾದುದು (ಶಿವಾಕೋ. ೪೪ ಅಡಿ). [ಸಂ.]

**ಮಹೇಶ್ವರಿ** (ನಾ). ಪಾರ್ವತಿಯ ಹೆಸರುಗಳಲ್ಲಿ ಒಂದು ; ದುರ್ಗೆ : "ಉಮೆ ಪಾರ್ವತಿ . . . ಮಹೇಶ್ವರಿ ಕಾಳಿಯೆಂಬಿವಂಬಿಕೆಯ ಪೆಸರ್" (ವಸ್ತುಕೋ. ೩-೦೬) ; ಆಂ ಮಹೇಶನಾಶ್ರಯಂಗೆಯ್ದಿರ್ಪವಳ್ ಎನ್ನಂ ಮಹೇಶ್ವರಿಯೆಂದುಂ, ಆದಿಶಕ್ತಿಯೆಂದುಂ ಕರೆವರ್ (ಅದ್ಭುತ. ೩೩-೦೬).

ಮಹೇಶ್ವರಿವುಪದ್ರ = ಒಂದು ಬಗೆಯ ಅಂಟುಜಾಡ್ಯ (?) : ಶೀಮೊವಳಗೆ ಮಹೇಶ್ವರಿವುಪದ್ರದಿಂದ ವಾಂತಿಭ್ರಾಂತಿಯಾಗಿ ಜನರು ಮೃತವಾಗುತ್ತಯಿದ್ದಲ್ಲು (ಎಕ. VI (R). ಕಾಂತವಕುರ. ೨೩-೦೬; 1818).
[ ಸಂ. ಮಹೇಶ್ವರೀ ]

**ಮಹೈಶ್ವರ್ಯ** (ನಾ). ಅಧಿಕವಾದ ಸಂಪತ್ತು ; ಅತ್ಯಧಿಕವಾದ ಸಿರಿ : ಅಮರೇಂದ್ರೋನ್ನತಿ ಖೇಚರೇಂದ್ರವಿಭವಂ ಭೋಗೀಂದ್ರಭೋಗಂ ಮಹೇಂದ್ರಮಹೈಶ್ವರ್ಯಮಿವೆಲ್ಲಮಧ್ರುವಂ (ಆದಿಪು. ೦೦-೬೦). ೨. ಅತ್ಯುಚ್ಚವಾದ ಪ್ರಭುತ್ವ ; ಪರಮಾಧಿಕಾರ. [ಸಂ.]

**ಮಹೋಕ್ಷ** (ನಾ).೧.ದೊಡ್ಡ ಎತ್ತು ; ಬಲವಾದ ಎತ್ತು : "ಮಹೋಕ್ಷಃ, ಉಕ್ಷತರಃ _ ಈ ೨ ಬಲ್ಲೆತ್ತು" (ಹಲಾಯು. ೪೪-೦೦೦); ಅಚ್ಯುತೇಂದ್ರಂ . . . ಗಜ ತುರಗ ರಥ ಪದಾತಿ ಮಹೋಕ್ಷ ಗಂಧರ್ವ ನಟೀವಿಕಲ್ಪಿತ ಮಾದೇಟುಂ ಪಡೆಯುಂ . . . ತನಗೆ ಪ್ರಸಿದ್ಧಮಾಗೆ (ಶಾಂತಿಪು. ೪-೦೦೦ ಪ). ೨. ಶಿವನ ವಾಹನ ; ನಂದಿ : 'ಮಹೋಕ್ಷಗ' ಪರಾ. [ಸಂ.]

**ಮಹೋಕ್ಷಗ** (ನಾ). ನಂದಿಯ ಮೇಲೆ ಸಂಚರಿಸುವವನು ; ಶಿವ : ಅಕ್ಷಯಾಯ ಮಹೋಕ್ಷಗಾಯ . . . ಮದ್ರಕ್ಷಣಾಯ ನಮೋ ನಮೋ (ಬಸವಪು.೬೦-೯೬). [ಸಂ.]

**ಮಹೋಗ್ರಾಣೆ** (ನಾ). (ರಾಜ್ಯದ) ಉಗ್ರಾಣದ ಮುಖ್ಯಾಧಿಕಾರಿ : ಪೌರೋಹಿತಂ . . . ಮಹೋಗ್ರಾಣಿ ಭಂಡಾರಿ ಸೇನಾನಾಯಕಂ . . . ತಳವಾರನೆಂಬಿವರು ಭೂರಮಣರಲ್ಲಿ ವಿನಿಯೋಗಮಂ ತಾಳ್ದು ಪದಿನೆಣ್ಬರ್ ಪ್ರಧಾನರೆನಿಕುಂ (ಮಂಗರಾ. ೯೦-೦೦). [ಮಹಾ + ಉಗ್ರಾಣಿ]

**ಮಹೋತ್ಸವ** (ನಾ). ೧. ಭಾರಿಉತ್ಸವ ; ದೊಡ್ಡಸಮಾರಂಭ : ಆಭರಣದ ಮಾಣಿಕಂಗಳ ಪೊದೆಪ್ಪರುಣಾಂಶುಗಳಿಂದಮಂದು ಪಿಂಜರಿತ

ಪಿಶಂಗಿತಾರುಣಿತದಿಙ್ಮುಖಿಮಾದುದು ತನ್ಮಹೋತ್ಸವಂ (ಆದಿಪು. ೬-೧೧೩); ಆ ಮಹೋತ್ಸವವೇಳುದಿನವಭಿರಾಮರಂಜಿತವಾಯ್ತು (ಕಾವ್ಯಾಸ. ೧-೧೯). ೨. ಅತಿಯಾದ ಸಂಭ್ರಮ,– ಉತ್ಸಾಹ; ಅಧಿಕವಾದ ಸಡಗರ,– ವಿಜೃಂಭಣೆ : ಸರ್ವತೋಭದ್ರವೆಂಬ ಮಹಾಮಹಿಮೆಯಿಂ ಮಹೋತ್ಸವ ದಿಂದೆಂಟುದಿವಸಂಬರಂ ಮಾಡಿ (ಆದಿಪು. ೧೬-೬೨ ವ); ಪ್ರೇಮಂ ಪ್ರೀತಿ ಮಹೋತ್ಸವಂ ಪ್ರಮೋದಂ ಸಮಗತಿಯಿಂದೊಂದಿ ಕುಂದದಿರ್ಕನವರತಂ (ವಸ್ತುಕೋ. ೯೬-೨); ಅತಿಮನೋಹರಮೆನಿಪ ವಾಜಿಯಂ ಕಂಡು ಹರ್ಷಿತನಾಗಿ ನೋಡುತಿರ್ದಂ ಕಲಾವಿದನಪ್ಪ ಮಾರುತಿ ಮಹೋತ್ಸವದೊಳು (ಜೈಮಿಭಾ. ೪-೯). ೩. ಅತಿಯಾದ ಸಂತೋಷ; ಅಧಿಕವಾದ ಹಿಗ್ಗು : ನಿಜನಾಥನ ಮಾತೆಂಬಿದುರೋಚಿ ಕುಡೆ ಹೃತ್ಕುಮುದಶ್ರೀಗೆಂದುಮಿಲ್ಲದ ಮಹೋತ್ಸವಮಂ (ಪುಷ್ಪಪು. ೯-೧೦೨). [ಸಂ.]

**ಮಹೋತ್ಸಾಹ** (ನಾ). ೧. ಅತಿಯಾದ ಉತ್ಸಾಹ,– ಹುರುಪು : ಶಾಂತಿನಾಥಕಥೆಯಂ ಲೇಸಪ್ಪಿನಂ ಸರ್ವದೇವಕವೀಂದ್ರಂ ಬರೆವಂ ಬುಧರ್ ಪೊಗಟ್ಟಿನಂ ತನ್ನಂ ಮಹೋತ್ಸಾಹದಿಂದಂ (ಶಾಂತಿಪು. ೦೨-೮೦); ಮುರಾರಿ ವತ್ಸಕುಲಮಂ ಕಾದಂ ಮಹೋತ್ಸಾಹದಿಂದಂ (ಜಗವಿ. ೪-೬೦). ೨. ಅತಿಯಾದ ಉತ್ಸಾಹವುಳ್ಳವನು; ಅತ್ಯುತ್ಸಾಹಿ : "ಮಹೋತ್ಸಾಹಃ, ಮಹೋದ್ಯೋಗಃ, ಮಹೇಚ್ಛಃ, ಮಹಾಮನಾಃ– ಈ ೪ ಹೆಚ್ಚಾಳು" (ಹಲಾಯು. ೩೯-೨೯೦). [ಸಂ.]

**ಮಹೋದಧಿ** (ನಾ). ದೊಡ್ಡಸಮುದ್ರ; ವಿಸ್ತಾರವಾದ ಕಡಲು : ತ್ವದ್ವಚನಮಹೋದಧಿಯೊಳ್ ಕಿಱಿದನಱಿವುದಂ ನುಡಿವೆಂ (ಶಾಂತಿಪು. ೨-೩೭); ಗಂಗೆಯು ಮಹೋದಧಿಯಂತೆ ವಿಸ್ತಾರವಾಗಿ ಹರಿಯುತ್ತಿತ್ತು (ವಚಭಾ. ೩೨೭). [ಸಂ.]

**ಮಹೋದಯ** (ನಾ). ೧. ಅಧಿಕವಾದ ಏಳಿಗೆ,–ಅಭಿವೃದ್ಧಿ; ಮಹೋನ್ನತಿ : ವಿದ್ಯಾನಂದಸ್ವಾಮಿಯ ಮಹೋದಯಂ ಕೇವಳಮೇ (ಪುಷ್ಪಪು. ೧-೨೩). ೨. ಅತ್ಯಂತ ಹಿರಿಮೆಯಿಂದ ಕೂಡಿರುವುದು; ಘನತೆಯುಳ್ಳುದು : ಅಸಹಾಯಸಾಹಸವಿನೋದಿ ವಿವಿಕ್ತಚಿತ್ರಪ್ರಸವಪ್ರಕಾಶಿತ ಮಹೋದಯತತ್ವಸತ್ವ . . . ನಿರ್ಮಲಯಶೋವಿವಿಧಾವತಂಸಂ (ಕವಿರಾ. ೩-೨೨೯). ೩. ಒಳ್ಳೆಯ ಅದೃಷ್ಟ; ಸುದೈವ. ೪. ಹಿರಿಮೆ : ಶ್ರೇಷ್ಠತೆ. ೫. ಅಧಿಕವಾದ ಸಂತೋಷವನ್ನು ಹೊಂದಿರುವುದು ಅಥವಾ ಕೊಡುವಂಥದು. ೬. ಮೋಕ್ಷ; ಕೈವಲ್ಯ. ೭. ಪ್ರಭು; ಒಡೆಯ : ಮಹಿತಮಹೋದಯಂ ಕಮಳಬಂಧುರಸಸ್ಮಿತವಕ್ತ್ರಭಾಸುರಂ (ರಾಜಶೇ. ೦-೮). ೮. ಸುದೈವಿ; ಪುಣ್ಯಶಾಲಿ; ಭಾಗ್ಯವಂತ : ಮಹೋದಯನೆಂಬುದು ದೇವಭಕ್ತನೆಂಬುದ್ರು ಪತಿಭಕ್ತನೆಂಬುದು ಜಗದ್ವಳಯಂ ಪಡೆವಳ್ಳತ್ಯೈಲಪನು (ಅಜಿತ. ೧೨-೨೩). ೯. ಗಣ್ಯವ್ಯಕ್ತಿ; ಮಹಾಶಯ : ಉಪನಿಷತ್ತುಗಳನ್ನು ಕುರಿತು ಮಾಡಿದ ಭಾಷಣಮಾಲೆಯನ್ನು ಕೇಳಿ ಮ್ಯಾಕ್ಸ್‌ಮೂಲರ್ ಮಹೋದಯನ ಗಮನ ಆ ಕಡೆಗೆ ಹರಿಯಿತು (ಶಾರದ. ೪೭); ಗವ್ಹರ್ನರ್ ಮಹೋದಯರು ಸ್ವಯಂ ರಾಜ್ಯ ತಿಲಕವನ್ನಿಡಲು ಬರುವವರಿದ್ದಾರೆ (ಶ್ರೀಮಾತ್ರ. ೨೩೩). ೧೦. ಮೊಸರು ಮತ್ತು ಜೇನುತುಪ್ಪಗಳ ಮಿಶ್ರಣ.

**ಮಹೋದಯಪುಣ್ಯಕಾಲ** = ಮಾಘ ಅಥವಾ ಪುಷ್ಯಮಾಸದ ಸೋಮವಾರದಂದು ಸೂರ್ಯೋದಯದಲ್ಲಿ ಅಮಾವಾಸ್ಯೆಯು ಆರಂಭವಾದಾಗ ಶ್ರವಣನಕ್ಷತ್ರವು ಮಧ್ಯ ಮತ್ತು ವ್ಯತೀಪಾತದ ಕೊನೆ ಇವುಗಳ ಯೋಗವಾಗುವ ಒಂದು ಪುಣ್ಯಕಾಲ,–ಪವಿತ್ರವಾದ ಸಮಯ. [ಸಂ.]

**ಮಹೋದರ** (ಗು). ೧. ದೊಡ್ಡಹೊಟ್ಟೆಯುಳ್ಳ : ಬೊಜ್ಜು ಹೊಟ್ಟೆಯಿಂದ ಕೂಡಿದ. (ನಾ). ೨. ದೊಡ್ಡಹೊಟ್ಟೆ : ಮತಿಯುಳ್ಳೊಡಿವನಸುರಟಲಿಗೊದಗಿಸಿದ ಕೂಳನತಿಮಹೋದರಕಡಸಿಕೊಂಬನೇ (ಜೈಮಿಭಾ. ೨-೩೮). ೩. ಹೊಟ್ಟೆಉಬ್ಬಿಕೊಳ್ಳುವ ಒಂದು ಬಗೆಯ ರೋಗ; ಜಲೋದರ : ಮಹೋದರ, ಕಾಮಾಲೆ ಮುಂತಾದ ರೋಗಗಳು ಕಾಣಿಸಿದಲ್ಲಿಯೇ . . . ಪ್ರತೀಕಾರವಂ ಮಾಡಬೇಕು (ಸಕವೈ. ೨೨); ಯಜ್ಞದಲ್ಲಿ ಮಗನನ್ನು ಅರ್ಪಿಸದೆ ಇದ್ದದ್ದರಿಂದ ವರುಣನ ಶಾಪದ ಫಲವಾಗಿ ಹರಿಶ್ಚಂದ್ರನಿಗೆ ಮಹೋದರವುಂಟಾಯಿತು (ಶಾರದ. ೫೦). ೪. ರಾಮನಿಂದ ಹತನಾದ ಒಬ್ಬ ರಾಕ್ಷಸನ ಹೆಸರು : ಪರಸೈನ್ಯದ ಸುದರ್ಶನಗಜವ ಮುಱಿದು ಮಹೋದರನ ಕೆಡಹಿದನು ಕಲಿನೀಲ (ತೊರರಾ. ೬-೫೩ ಸೂಚನೆ). [ಸಂ.]

**ಮಹೋದ್ಯಮ** (ನಾ). ೧. ಅತಿಯಾದ ಪ್ರಯತ್ನ; ಉದ್ಯೋಗಶೀಲತೆ. ೨. ದೊಡ್ಡ ಉದ್ಯಮ : ವ್ಯಾಪಾರ ಕೈಗಾರಿಕೆಗಳ ಮಹೋದ್ಯಮಗಳೂ, ಆಹಾರ ಅಭಯ ಔಷಧ ಶಾಸ್ತ್ರದಾನಗಳೂ . . . ಒಂದೇ ಕೊರಳಿನಿಂದ ಸಾರುತ್ತಿವೆ (ಕಬಿಸಾ. ೦೦೯). ೩. ಅತಿಯಾದ ಉತ್ಸಾಹ : "ಮಹೋದ್ಯಮ ಮುತ್ಸಾಹವೃತ್ತಿ" (ವಸ್ತುಕೋ. ೦೦೩-೨೩). ೪. ಹೆಚ್ಚು ಕ್ರಿಯಾಶಕ್ತಿಯುಳ್ಳವನು; ಕಠಿಣಕಾರ್ಯಗಳಲ್ಲಿ ತೊಡಗುವವನು : "ಮಹೋತ್ಸಾಹಃ, ಮಹೋದ್ಯಮಃ– ೨ ದುಷ್ಕರವಾದ ಪ್ರಯೋಜನಗಳಲ್ಲೇ ಉದ್ಯೋಗವುಳ್ಳವನ ಹೆಸರು" (ಸಿದ್ಧಾಂತಿ. ೩೨೩). [ಸಂ.]

**ಮಹೋದ್ಯಮಿ** (ನಾ). ಉದ್ಯೋಗಶೀಲಪ್ರವೃತ್ತಿಯುಳ್ಳವನು; ಯಾವಾಗಲೂ ಕಾರ್ಯತತ್ಪರನಾಗಿರುವವನು : ನಿಪುಣಂ ಮಹೋದ್ಯಮಿ ನಿಗೂಢಾಂಸಂ ಧನುರ್ಗೇಹಜಂ (ಜಾತಿ. ೦೭-೯). [ಸಂ. ಮಹೋದ್ಯಮಿನ್]

**ಮಹೋದ್ಯೋಗ** (ನಾ). ೧. = ಮಹೋದ್ಯಮ ೧ : ಆಹವ ಮಹೋದ್ಯೋಗಕ್ಕೆ ಬೆಱಗಾಯ್ತು ಸುರಕಟಕ (ಕುಮಾವ್ಯಾ. ೪-೦). ೨. = ಮಹೋದ್ಯಮಿ : "ಮಹೋತ್ಸಾಹಃ, ಮಹೋದ್ಯೋಗಃ, ಮಹೇಚ್ಛಃ, ಮಹಾಮನಾಃ — ಈ ೪ ಹೆಚ್ಚಾಳು" (ಹಲಾಯು. ೩೯-೨೦೦). [ಸಂ.]

**ಮಹೋನ್ನತ** (ಗು). ೧. ಅತ್ಯಂತ ಎತ್ತರವಾದ; ಬಹು ಔನ್ನತ್ಯದಿಂದ ಕೂಡಿದ. (ನಾ). ೨. ಬಹುಶ್ರೇಷ್ಠವಾದುದು : ಬೇಲೂರಿನಲ್ಲಿ ವಿಜಯನಾರಾಯಣನನ್ನು ಪ್ರತಿಷ್ಠಿಸಿದ ಮಹೋನ್ನತವಾದ ದಿನ ಅದು (ಸವತಿ. ೩). ೩. ಉತ್ತಮ ವ್ಯಕ್ತಿ; ಉದಾತ್ತ ವ್ಯಕ್ತಿ : ಇನ್ನೊಬ್ಬರನ್ನು ಪ್ರಶಂಸಿಸುವುದು ಮಹೋನ್ನತರ ಲಕ್ಷಣ (ಶಾಂತಲಾ. ೯೯). ೪. ತಾಳೆಮರ. [ಸಂ.]

**ಮಹೋನ್ನತಿ** (ನಾ). ೧. ಅಧಿಕವಾದ ಹಿರಿಮೆ,– ಶ್ರೇಷ್ಠತೆ : ನಿನ್ನ ದಯೆವೆರಸು ನೋಟ್ಟ ಮಹೋನ್ನತಿಯುಂ ಸತ್ಪ್ರಸಾದಮುಂ ಕಿಱುಕುಳನಪ್ಪೆನ್ನೊಂದಿಗನೊಳನುಚಿತಂ (ಶಾಂತಿಪು. ೩-೯); [ರಾ]ಜಲದೇವಿಯ ಮಹೋಂನತಿಯೆಂತೆನೆ (ಎಪಿಇಇ. XX, ೨೦೩-೨೦ ; 1247). ೨. ಅತ್ಯುಚ್ಚಸ್ಥಾನ; ಪರಮಪದವಿ. [ಸಂ.]

**ಮಹೋನ್ನತಿಕ್ಕೆ** (ನಾ). ಅಧಿಕವಾದ ಹಿರಿಮೆ; ಮಹೋನ್ನತಿ : ಜಲಜಾತವಿರೋಧಿಗೆ ಶೀತಳಮೊಪ್ಪುಗುಮಾಗಳೆಂತು ತಾನಂತೆ ಮಹೀತಳದೊಳುಪಾಸಕನಪ್ಪಂಗಳ ವ ಟ್ಟೊ ಪ್ಪು ಗು ಮಹೋನ್ನತಿಕ್ಕೆಯು ದಾನಂ (ರಪರ್ಣವು. ೬-೨೨೩).

[ ಮಹೋನ್ನತ + – ಇಕ್ಕೆ$_2$ (< –ಇಕೆ) ]

**ಮಹೋಪಕಾರ** (ನಾ). ಅಧಿಕವಾದ ಸಹಕಾರ,– ನೆರವು; ದೊಡ್ಡ ಉಪಕಾರ : ಸಿಂಹಾಸನವು . . . ತಮ್ಮ ಸ್ವೀಕೃತಪುತ್ರರಿಗೆ ವಂಶಪಾರಂಪರ್ಯವಾಗಿ ಲಭಿಸುವಂತೆ ಮಾಡಿದ ಮಹೋಪಕಾರಕ್ಕೆ ತಾವು ಗೌರವಪೂರ್ವಕವಾಗಿ ಕೃತಜ್ಞರೆಂಬುದನ್ನು ಅವರ ಸನ್ನಿಧಿಯಲ್ಲಿ ಬಿನ್ನವಿಸುವುದು (ಮಹಾವಂ. II, ೦೨೨). [ಸಂ.]

**ಮಹೋರಗ** (ನಾ). ದೊಡ್ಡಹಾವು; ಮಹಾಸರ್ಪ : ಒಡನೆ ಸುರಾಸುರರ್ ಕನಕಪರ್ವತಮಂ ಕಡೆಗೋಲ ಮಾಡಿ ಮೇಣ್ ಷಡೆ ಪಲವಪ್ಪ ವಾಸುಕಿಮಹೋರಗನಂ ಕಡೆಗಣ್ಣಿಮಾಡಿ ಪಾಲ್ಗಡಲನುಪಾಯದಿಂ ಕಡೆಯೆ (ಕಾವ್ಯಸಾ. ೯೩೮ ಟಿಪ್ಪಣಿ) ; ಮತ್ಸರಮಹೋರಗಕ್ಕಮಾಗ್ರಹಮಹಾಗ್ರಹಕ್ಕಂ . . . ತನ್ನನೊಪ್ಪಿಸುವುದು ಮತಿವಂತಂಗೆ ಪುರುಷಾರ್ಥಮಲ್ತು (ಶಾಂತಿಪು. ೩-೬೨ ವ). [ಸಂ.]

**ಮಹೌಷಧ** (ನಾ). ೧. ಶ್ರೇಷ್ಠವಾದ ಔಷಧಿ. ೨. ಒಂದು ಬಗೆಯ ಬೇರು ; ಶುಂಠಿ : "ಶುಂಠೀ, ನಾಗರಂ, ಮಹೌಷಧಂ, ವಿಶ್ವಭೇಷಜಂ-ವಿಶ್ವಾ_ಈ ೫ ಶುಂಠಿ" (ಹಲಾಯು. ೦೦೦-೪೬೦). ೩. ಒಂದು ಬಗೆಯ ವಿಷಸಸ್ಯ : "ಮಹೌಷಧಂ – ವತ್ಸನಾಭಿ" (ಓಷಂ. ೦೦೬). ೪. ಬೆಳ್ಳುಳ್ಳಿ. ೫. ಅತಿಬಜೆ. ೬. ಹಿಪ್ಪಲಿ. [ಸಂ.]

**ಮಹೌಷಧಿ** (ನಾ). ೧=ಮಹೌಷಧ ೧. ೨. ಶ್ರೇಷ್ಠವಾದ ಸಸ್ಯ : ಫಲಪಾಕವಿರಾಮಂಗಳಪ್ಪ ಗರ್ಭಷಷ್ಟಿವ್ರೀಹಿಯವಗೋಧೂಮಾದಿ ಮಹೌಷಧಿ [ಪಾಠಾಂ. ಧ]ಗಳುಂ (ಆದಿಪು. ೬-೭೦ ವ) ; ಮಹೌಷಧಿಗಳ್ಕಂಗೊಳಿಸಿರೆ ಪಲ್ಲವತತಿ ಸಂಗಳಿಸಿರೆ ಮಣಿಪೂರ್ಣಕುಂಭಮೊಪ್ಪಿದುದು (ಚಾಚ್ಚಕೇ. ೬-೦೦). ೩. ಗರಿಕೆ ; ದೂರ್ವೆ. [ಸಂ.]

**ಮಳ** 'ಮಲ$_3$' ನೋ.

**ಮಳಗವಾಡಿ** (ನಾ). ಒಂದು ಊರಿನ ಹೆಸರು : ರಾಮಚನ್ದ್ರಭಟಾರರ್ಗ್ಗೆ ಮಡಲೂರು ಮಳಗವಾಡಿಯುಮಂ ಕಾಲಂ ಕರ್ಚ್ಚಿ . . . ಕೊಟ್ಟರ್ (ಎಕ. XI, ಚಿತ್ರದು. ೬೪-೨೪; 968). [ಮೆಳಗ$_0$ + ಪಾಡಿ$_2$]

**ಮಳಬಿಯ**, ಮಳಬ್ರಿಯ, ಮಳವೆಯ (ನಾ). ಒಂದು ಬಗೆಯ ತೆರಿಗೆ : ಅಂತು ಅಯ್ವದಶಕಕ್ಕಂ ಮಳಬಿಯ ಸಿದ್ಧಾಯ ಸುಂಕ ಪಾಣ ಆಗಾಂತುಕ ಸರ್ವ್ವಬಾಧೆ ಪರಿಹಾರವಾಗಿ ಅಯ್ವತ್ತುಹೊನ್ನಂ . . . ಧಾರಾಪೂರ್ವಕಂ ಮಾಡಿ ಕೊಟ್ಟ ದತ್ತಿ (ಎಕ. V, ಹಾಸನ. ೭೦-೫೭ ; 1173) ; ಎರಡು ಮನೆಗೆ ಹಣ ಅಯ್ದು ಊರಿಂಗೆ ಮಳಬಿಯ ಹಣ ಮೂಱು (ಎಕ. II, ೩೩೫-೫೬ ; 1195). **ಮಳಬ್ರಿಯ** : ಇದಱ ಮಳಬ್ರಿಯಕ್ಕೆ ಹತ್ತು ಗದ್ಯಾಣ ಪೊನ್ನ ವ್ರಿದ್ಧಿಯಿಂ ನಡೆವನ್ತಾಗಿ (ಪ್ರಾಆಂ. ೦೯೪೦, ೩೬-೪೩; 1103); ಮಳಬ್ರಿಯ ಏನು ಬಂದಡಂ ಆ ಸ್ಥಳದಾಚಾರ್ಯ್ಯರು ತಾವೇ ತೆತ್ತು ನಿರ್ನ್ನಯಿಸುವರು (ಎಕ. II, ೩೩೩-೦೬; 1206); ಆ ಸೋಮನಾಥಪುರಕ್ಕೆ ಉರುತ್ಯವಾಗಿ ಬಂದ ಪದಿಕೆ ಹೊರಣೆ ಹೊದಿಕೆ ಮಳಬ್ರಿಯವೊಳಗಾಯಿತ್ತಾಯೇನು ಬಂದಡಂ (ಎಕ. III, ತಿರುಮ. ೯೬-೪೩ ; 1300). **ಮಳವೆಯ** : ಕುದುರೆಸುಂಕ ಪುರದ ಪದಿಕೆ ಕಿಱುಕುಳ ಮಳವೆಯ . . . ಯಿವನು . . . ಮಹಾಪ್ರಭು ಗೌಡಗಳು ಆಚಂದ್ರಾರ್ಕ್ಕ ಸರ್ವಮಾನ್ಯವಾಗಿ ಬಿಟ್ಟ ಸರ್ವ್ವ ಬಾಧಾಪರಿಹಾರವಾಗಿ ಧಾರಪೂರ್ವ್ವಕಂ ಮಾಡಿಕೊಟ್ಟ ಶಾಸನ (ಎಕ. V (R). ಮೈಸೂರು. ೦೦೯-೩೫ ; ಸು. 13ನೆಯ ಶತ). 'ಮಳವರಿ' ನೋ.
[ಮಳ ? + ಬಿಯ]

**ಮಳಬ್ರಿಯ** 'ಮಳಬಿಯ' ನೋ.

**ಮಳಮಳ$_1$** 'ಮಟಿಮಟಿ' ನೋ.

**ಮಳಮಳ$_2$**, ಮಳಮಳಿ (ನಾ). ೧. ಬೇಗುದಿ ; ತಳಮಳ : ಆತನ ಮನಸ್ಸಿನಲ್ಲಿ ಮಳಮಳವು ನಡದೇ ಇತ್ತು (ಶಚಿಪ. ೩೦). **ಮಳಮಳಿ** : ೨. ಓಕರಿಕೆ ಬರುವ ಸ್ಥಿತಿ ; ಉಬ್ಬಳಿಕೆ ; ಹೊಟ್ಟೆತೊಳಸು : ಗಟಗಟ ಸೋಡಾ ಕುಡಿದ. ಆದರೆ ಅದರಿಂದ ನೆಮ್ಮದಿ ಎನ್ನಿಸಲಿಲ್ಲ. ಬದಲು ಹೊಟ್ಟೆಯಲ್ಲಿಯ ' ಮಳಮಳಿ' ಹೆಚ್ಚೇ ಆಯಿತು (ಮೂರುದಾ. ೦೬೩).
[←ಮರಾ. ಮಳಮಳ, ಮಳಮಳೀ]

**ಮಳಮಳಿ** 'ಮಳಮಳ$_2$' ನೋ.

**ಮಳಮಳಿಕೆ** (ನಾ). ತಳಮಳ ; ಬೇಗುದಿ : ಮನಸ್ಸಿನ ಮಳಮಳಿಕೆ ಆಕೆಗೆ ಓಡೆ ಕೊಡತೊಡಗಿತು (ಇಪ್ಪತ್ತ. ೨೩೪). [ಮಳಮಳ$_2$ + — ಇಕೆ]

**ಮಳಮಳಿಸು$_1$** 'ಮಟಿಮಟಿಸು' ನೋ.

**ಮಳಮಳಿಸು$_2$** (ಕ್ರಿ). ೧. ತಳಮಳವಾಗು ; ಸಂಕಟವಾಗು : ಆಗಳಿಂದು ನನಗೆ ನೆನಸಿದರ ಮಳಮಳಸ್ತದ (ಹೊಸಂಸಾ. ೦೩೫). ೨. ಓಕರಿಕೆ ಬರುವಂತಾಗು ; ಹೊಟ್ಟೆತೊಳಸು : ನಿಮ್ಮ ಸಂಗೀತವು ಆರಂಭವಾದ ಕೂಡಲೇ ನನ್ನ ಹೊಟ್ಟೆಯಲ್ಲಿ ಮಳಮಳಿಸತೊಡಗುತ್ತದೆ (ಸೀನಾಹ. ೯೦).
[ಮಳಮಳ$_2$ + — ಇಸು$_3$]

**ಮಳಯ** 'ಮಲಯ' ನೋ.

**ಮಳಯಜ** 'ಮಲಯಜ' ನೋ.

**ಮಳಯಮಹೀಜ** (ನಾ). ಗಂಧದ ಮರ ; ಚಂದನವೃಕ್ಷ : ನೆಗಟ್ದೀ ಕರ್ಪೂರ ಕಾಳಾಗರು ಮಳಯಮಹೀಜಂಗಳ್ (ಶಂಕಭಾ. ೪-೨೩).
[ಸಂ. ಮಲಯಮಹೀಜ]

**ಮಳಯರುಹ** 'ಮಲಯರುಹ' ನೋ.

**ಮಳಯಸಮೀರಣ** (ನಾ). ಮಲಯಪರ್ವತದಿಂದ ಬೀಸುವ ತಂಗಾಳಿ : ವಾರಿಜ ಮಳಯಜಮಳಯಸಮೀರಣ . . . ಮೃಣಾಳಾದಿಗಳುಂ ಬಾರಿಸಲಾಱವೆ ದಲವನ ದಾಹಜ್ವರಮಂ (ಆದಿಪು. ೨-೦೩).
[ಸಂ. ಮಲಯಸಮೀರಣ]

**ಮಳಯಾನಿಲ** 'ಮಲಯಾನಿಲ' ನೋ.

**ಮಳಯಾನಿಳ** 'ಮಲಯಾನಿಲ' ನೋ.

**ಮಳಯೋದ್ಭವ** 'ಮಲಯೋದ್ಭವ' ನೋ.

**ಮಳರಹಿತ** 'ಮಲರಹಿತ' ನೋ.

**ಮಳಲ್** 'ಮಣಲ್' ನೋ.

**ಮಳಲಕಂತೆ** (ನಾ). ಒಂದುಬಗೆಯ ಬತ್ತ : ಕೊಡಗು ಮಳಲಕಂತೆ ಹರಹಿನ ಡುಣ್ಣಗಳೊಡನೊಪ್ಪುತಿಹ ಬೈರಾವಳಿಯ ಕಡುಸೊಬಗಾಂತಿಹ ಚಂದ್ರೋದಯಶಾಲಿಯೆಡೆವಿಡದೆಸೆದುವರ್ತಿಯಲಿ (ಕಂಪಂ. ೫-೬೦). ಪ ಮರಳಕಾಂತಿ ಅಥವಾ ಮಣಲಕಾಂತಿ ಎಂಬ ಹೆಸರಿನ ಕೆಂಪು ಬತ್ತವು ರೂಢಿಯಲ್ಲಿದೆ. [ ? ]

**ಮಳಲತ್ತಿ** (ನಾ). ಒಂದು ಬಗೆಯ ಅತ್ತಿಮರ : "ಅಜೋಕ್ಷ–ಮಳಲತ್ತಿ" (ಓಷಂ. ೨). [ಮಳಲ್ (<ಮಣಲ್) + ಅತ್ತಿ$_1$]

**ಮಳಲದರಸಿ** (ನಾ). ಔಷಧಕ್ಕಾಗಿ ಬಳಸುವ ಒಂದು ಬಗೆಯ ಗಿಡ ಮೂಲಿಕೆ : "ಗಿರಿಜಾನುಜಾ_ಮಳಲದರಸಿ" (ಓಷಧಿ. ೪೬).
[< ಮಳಲ್ + ದರಸಿ]

**ಮಳಲವಾಡಿ** 'ಮಣಲೆವಾಡಿ' ನೋ.

**ಮಳಲಸೌತೆ** (ನಾ). ಒಂದು ಬಗೆಯ ಸೌತೆ : "ವಾಲುಕೀ–ಮಳಲಸೌತೆ" (ಓಷಂ. ೦೫೦). [< ಮಳಲ್ + ಸೌತೆ (< ಸವುತೆ)]

**ಮಳಲಹುಚ್ಚತ್ತಿ** (ನಾ). ಒಂದು ಬಗೆಯ ಅತ್ತಿಮರ : "ಲಘುಸದಾಫಲಃ_ಮಳಲಹುಚ್ಚತ್ತಿ" (ಓಷಂ. ೦೪೩). [< ಮಳಲ್ + ಹುಚ್ಚತ್ತಿ]

**ಮಳಲಿ** (ನಾ). ಒಂದು ಬಗೆಯ ಮೀನು : ಬೆಳಿಯಾನೆ ಮಳಲಿ ಕೂಡಿಲು ಚಕ್ರ ಗೆಂಡ . . . ಗಿಱಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಚಕಾ. ೫-೪೬). [ ? ]

**ಮಳಲು$_1$** 'ಮಟಿಲ್' ನೋ.

**ಮಳಲು$_2$** 'ಮಣಲ್' ನೋ.

**ಮಳಲು$_3$** (ನಾ). ಒಂದು ಬಗೆಯ ಸಸ್ಯ : "ಮಹಾಶ್ಲಕ್ಷ್ಣ – ಮಳಲು" (ಓಷಂ. ೦೦೭). [ ? ]

**ಮಳಲ್ಗೊಳ** (ನಾ). ಕೊಳದಂತೆ ಕಾಣುವ ಮರಳಿನ ರಾಶಿ; ಮರೀಚಿಕೆ: ಕರೆದುದು ನಿರಾಶೆಯ ನಡುವೆ ದೂರದಾಶೆಯ ತೆರದಿ, ಹೊಳಕು ತಿಳಿನೀರ್ಗಳಿಂ

ಕಣ್ಗೊಳಿಸಿ ನಂಬಿಪಾ ಬಿಸಿಲಿಚ ಮಳಲ್ಗೊಳಂ (ಶ್ರೀರಾಪು. ೩೭೮-೪೩೦).
[ಮಳಲ್ (< ಮಣಲ್) + ಕೊಳ್$_2$]

**ಮಳಲ್ದಿಂಟೆ** 'ಮಣಲ್ದಿಂಟೆ' ನೋ.

**ಮಳವ$_1$** 'ಮಳವೆ' ನೋ.

**ಮಳವ$_2$, ಮಳಿವೆ$_2$** (ನಾ). ಒಂದು ಪ್ರದೇಶದ ಹೆಸರು : ಬಾದುಂಬೆಯ ಹಳ್ಳದಿಂ ಮೂಡಲು ಮಳವದ ಮಕ್ಕಿ ಗುಣಿಗನ ಮತ್ತರ್ ೧ (ಸೌಇಇ. IX-i, ೧೬೩-೩೮; 1099); [ಮಗರ] ಸೋಮನಾಥದೇವರ ಮಳವದಿಂ ತೆಂಕಲು ಮತ್ತರು ೧ (ಸೌಇಇ. XX. ೨೦೮-೪; ೧). **ಮಳಿವೆ$_2$** : ಕಲಿದೇವರಿಗೆ ಮಾಲುಮಂಡಗೆಗೆ ಕೊಟ್ಟ ಮತ್ತರು ೬ ತೋಟ ಮತ್ತರು ಕೆಳಗಣ ಮಳಿವೆ ಸಹಿತ . . . ಕೊಟರು (ಸೌಇಇ. XX, ೨೦೮-೦೪; ೧). [ ? ]

**ಮಳವರಿ** (ನಾ). ಒಂದು ಬಗೆಯ ತೆರಿಗೆ : ಕೋಣೆಗೋಡ ಗ್ರಾಮ ೧ಕೆ ಪ್ರಾಕುರೇಪೆ ಸಿದ್ಧಾಯದಿಂದ ಗ . . . ಮಳವರಿಯಿಂದ ಗ (ವ್ಯಆಾ. ೦೯೩೬, ೨೬-೨೦ ; 1708). 'ಮಳಬಿಯ' ಹೋ. [ಮಳ್$_?$ + ವರಿ$_1$]

**ಮಳವಿ** 'ಮಳವೆ' ನೋ.

**ಮಳವೆ, ಮಳವ$_1$, ಮಳವಿ, ಮಳಿವೆ$_1$** (ನಾ). ೧. (ಸರಕಿನ) ಮೂಟೆ : ಗಂಟು ; ಪೆಂಡಿ : ಮಳವೆಗೆ ಪಟ್ಟ ಪದಿನಾಱು ಪಲಂ (ಎಇ. IX, ೨೨-೭; ಸು. 800) ; ನೂಲ ಮಳವೆಗೆ ವಿ ೨ ॥ (ಕಇಆ. ೦೦೪-೮-೩೬ ; 1076); ಹತ್ತಿಯ ಮಳವೆಯಲು ವೀಸ ಸೀರೆಯ ಮಳವೆಯಲು ಬೇಳೆ (ಎಕ. XI, ಹಳ್ಳಿ. ೨೦-೩೮ ; 1087). **೨. ರಾಶಿ ; ಒಟ್ಟಿಲು** : ಬಿಡು ಮುತ್ತಿನ ಪೇಜುಗಳಂ ತಡೆಯದೆ ಕರ್ಪೂರದ ಪಿರಿಯ ಮಳವೆಗಳಂ ತಂದಿಡು (ಸುಕುಮಾ. ೧೦-೯೦) ; ಶಿಲೆಯ ಮಳವೆ ಹಡವಿನ ಮಳವೆ ಅರಿಷಣ ಮಳವೆ ಅಲ್ಲದ ಮಳವೆ (ಶಾಸಕ. ೩೭-೪ ; ಸು. 1200) ; ಬಿಗಿದ ಮಳವೆಯನೆಣ್ಣ ಗೊಪ್ಪರಿಗೆಗಳೊಳದ್ದಲಿ ಗಳಿಗಳಲಿ ಸೀರೆಗಳ ಸುತ್ತಲಿಯೆಂದು ಕೈವೀಸಿದನು ಕಲಿದ್ರೋಣ (ಕುವ್ಯಾದ್ರೋ. ೦೫-೩೨). **ಮಳವ$_1$** : ೧. × × × ತ್ತಿಯ ಮಳವಕೆ ಅ × × × ಹತ್ತಿ (ಪೋಕಶಾ. ೦೯೩೦. ಶಾಗವಾಡ. ೩೬-೭ : 1148). **ಮಳವಿ** : ೧. ಬಿಳಿಜವಳಿ ಎಂಭತ್ತಱ ಮಳವಿ ಒಂದಕ್ಕೆ ಅಡ್ಡಪಟ ನೂಲ ತೊಲೆ (ಎಕ. V, ಬೇಲೂರು. ೬೫-೮೬ ; 1382). **ಮಳಿವೆ$_1$** : ೧. ಅರಿಸಿನ ಹೇರಿಂಗೆ ಪಲ ೨ ಸೀರೆಯ ಮಳಿವೆಗೆ ವೀಸ × (ಎಕ. XII, ಶಾಪುಗ. ೪೩-೪೩; ಸು. 1150). [ ? ]

**ಮಳವೆಯ** 'ಮಳಬಿಯ' ನೋ.

**ಮಳಹಿಗ** (ನಾ). ಸೇವಕ (?) : ನಿಮ್ಮ ಪಶು ನಿಮ್ಮ ಮಳಹಿಗ ನಿಮ್ಮ ಕೆರ್ಪ ತಹ ನಿಮ್ಮಂಗಳವನುಡುಗುವಂ (ಲಂಗಪು. ೨೩-೮). [ ? ]

**ಮಳಾರ** 'ಮಲಾರ$_2$' ನೋ.

**ಮಳಿ, ಮಳ್ಳಿ$_2$** (ನಾ). ಚಿಪ್ಪುಳ್ಳ ಒಂದು ಬಗೆಯ ಜಲಚರಪ್ರಾಣಿ : ಮಳಿಯು ಒಮ್ಮೆ ಹತ್ತಿಯಿಟ್ಟರೆ ಸಾವಿರಾರು ಇಡುವುದು (ಬಾಂಕ್ರ. II-೯೩೬); ನಾನು ಆ ದಿನ ರಾತ್ರಿ ಮಳಿಯ ಓಡು ಬೀಸಾಡುವುದಕ್ಕೆ ತೆಂಗಿನ ಕಟ್ಟೆಯ ಹತ್ತಿರ ಬಂದಿದ್ದೆ (ಕಲ್ಯಸ. ೦೫). **ಮಳ್ಳಿ$_2$** : ಇದೇ ಜಾತಿಯ ಇನ್ನೊಂದು ತರದ ಹುಳಕ್ಕೆ ನಮ್ಮ ದೇಶದಲ್ಲಿ ನಾವು ಮಳ್ಳಿ ಎಂದೆನ್ನುತ್ತೇವೆ (ಮುಂಬರು. ೫-೦೦). [ ? ]

**ಮಳಿಗೆ** 'ಮಳಿಗೆ' ನೋ.

**ಮಳಿನ** 'ಮಲಿನ' ನೋ.

**ಮಳಿನತೆ** 'ಮಲಿನತೆ$^1$' ನೋ.

**ಮಳಿನತ್ವ** 'ಮಲಿನತ್ವ' ನೋ.

**ಮಳಿಮ್ಲುಚ$_1$** 'ಮಲಿಮ್ಲುಚ' ನೋ.

**ಮಳಿಮ್ಲುಚ$_2$** (ನಾ). ಕಪ್ಪಾದುದು : ಮೇಚಕ ಸರಸಿಜವಿಜಯವಿಲೋಚನ ಮತಿವಿಭ್ರಮಂ [ತಳೆದ] ಪೂರ್ವ[ಮ]ದಾಲೋಚಿದರ್ವಾಳರುಚಿನಿಚಿಳಂ ಕಾಚ ಮಣಿದ್ಯು[ತಿ] ಮಳಿಮ್ಲುಚಂ ಕಚಮುಮಳಾ (ವರ್ಧಮಾ. ೦೨-೨೯).
[P ಇದು 'ಮಳೀಮಸ' ಎಂಬುದರ ಅಪಲಿಖಿತವಿರಬಹುದು]

**ಮಳಿಷ್ಠ** (ನಾ). ಬಹುಹೊಲಸಾಗಿರುವವನು,– **ಕೊಳಕ** : ರವಿಜಂ ವೃಶ್ಚಿಕಸಂಸ್ಥನಾಗೆ ಚಪಲಾಂಗಂ . . . ಶನಿಗೇಹದೊಳ್ ನಿಲೆ ಮಳಿಷ್ಠಂ (ಜಾತಕ. ೦೭-೩೩). [ಸಂ. ಮಲಿಷ್ಠ]

**ಮಳೀಮಸ** 'ಮಲೀಮಸ' ನೋ.

**ಮಳೆ** 'ಮಱೆ$^3$' ನೋ.

**ಮಳೆಗರೆ** 'ಮಳೆಗಱೆ$^3$' ನೋ.

**ಮಳೆಗಱೆ$^3$, ಮಳೆಗರೆ** (ಕ್ರಿ). ೧. ಮೋಡವು ಕರಗಿ ಆಕಾಶದಿಂದ ನೀರು ಸುರಿ : ಮಳೆ ಬರು : ಮಳೆಗಱೆವುದು ಬೆಳೆ ಪೆರ್ಚುವುದು . . . ಪಳಿವಿಲ್ಲದ ಪತಿವ್ರತೆಯರ ನಡತೆಯ ಬಳದೊಳೆಂಬರು ಬಲ್ಲವರು (ಪಂಪ. ೨-೪); ವರ್ಷರ್ತು ಹರ್ಷಮನೆರಚುವಂತೆ ಕಾರ್ಮುಗಿಲ್ ಮುತ್ತಿ ಗಗನವನ್ನೆಡೆ ಮಳೆಗರೆಯೆ (ಜಾಕ್ಕಾಂಗ. ೭೦-೦೯೫೮). ೨. ಧಾರಾಕಾರವಾಗಿ ಸುರಿ ; ಅಧಿಕವಾಗಿ ವರ್ಷಿಸು : ನಟ್ಟಡವಿಯಲ್ಲಿ ಕೆಂಡದ ಮಳೆಗಱೆದು ಊರಡವಿಯನೊಂದಾಗಿ ಸುಟ್ಟಿತ್ತು ನೋಡಾ (ಅದವ. ೪೧-೦೦೬); ದೇವಾವಳಿ ಗಳಾಕಾಶದಿಂದವೆ ಹೂವಿನಲಿ ಮಳೆಗಱೆದರಾ ಕುಂತೀಕುಮಾರರಿಗೆ (ಸಂಶಕ. ೨೦-೦೪೦). **ಮಳೆಗರೆ** : ೧. ಎಮ್ಮೆ ಮೇಲೆ ಮಳೆಗರೆದ ಹಾಗೆ (ಗಾದೆ). ೨. ಅವನ ಮೇಲೆ ಪ್ರಶಂಸೆಯ ಮಾತುಗಳೂ ಮಳೆಗರೆದುವು (ಕಡ್ಡಿ. ೪೦). [ ಮಳೆ (< ಮಱೆ$^3$) + ಕಱೆ$^3_1$ ]

**ಮಳೆಗಾಡು** (ನಾ). ಒಂದೇಸಮನೆ ಸುರಿಯುವ ಮಳೆಯಿಂದ ಬೆಳೆಯುವ ದಟ್ಟವಾದ ಕಾಡು : ಆಗುಂಬೆಯ ಸುತ್ತುಮುತ್ತಲಿನಂಥ ಅರಣ್ಯಕ್ಕೆ rain forest –ಮಳೆಗಾಡು–ಎಂಬ ಪರಿಭಾಷೆಯನ್ನು ಉಪಯೋಗಿಸುತ್ತೇವೆ (ಹಸುಹೂ. ೨೬೩). [ ಮಳೆ (< ಮಱೆ$^3$) + ಕಾಡು$_2$ ]

**ಮಳೆಗಾಲ** 'ಮಱೆಗಾಲ' ನೋ.

**ಮಳೆಗುಟಕ** (ನಾ). ಮಳೆನೀರನ್ನು ಕುಡಿದು ಬದುಕುವುದೆಂದು ನಂಬಲಾದ ಒಂದು ಬಗೆಯ ಹಕ್ಕಿ ; ಚಾತಕ : "ಸಾರಂಗಃ, ಸ್ತೋಕಕಃ, ಚಾತಕಃ–ಇ ಮಳೇಗುಟಕನ ಹಕ್ಕಿ, ಚಾತಕಪಕ್ಷಿ" (ಸಿದ್ಧಾಂತಿ. ೦೫೮).
[ ಮಳೆ (< ಮಱೆ$^3$) + ಕುಟುಕ$_3$ ]

**ಮಳೆನಕ್ಷತ್ರ** (ನಾ). [ಜ್ಯೋತಿ] ಮಳೆ ಬರಲು ಸಹಾಯಕವಾಗುವಂತೆ ಸೂರ್ಯನು ತನ್ನ ಸಂಚಾರದಲ್ಲಿ ಬಂದು ಸೇರುವ ನಕ್ಷತ್ರಪ್ರದೇಶ, P "ಮಳೆನಕ್ಷತ್ರಗಳು–೧೬ : ಅಶ್ವಿನಿ, ಭರಣಿ, ಕೃತ್ತಿಕೆ, ರೋಹಿಣಿ, ಮೃಗಶಿರ, ಆರ್ದ್ರಾ, ಪುನರ್ವಸು, ಪುಷ್ಯ, ಆಶ್ಲೇಷ, ಮಘೆ, ಪುಬ್ಬೆ, ಉತ್ತರೆ, ಹಸ್ತ, ಚಿತ್ತೆ, ಸ್ವಾತಿ, ವಿಶಾಖ (ಪಂ)" (ಶ್ರೀವತ್ಸ. ೩೩೭) : ಮಹಾನಕ್ಷತ್ರವನ್ನು ಮಳೆನಕ್ಷತ್ರವೆಂದು ಕರೆಯುವುದೂ ವಾಡಿಕೆಯಾಗಿದೆ (ನಕ್ಷತ್ರ. ೪೯). [ ಮಳೆ (< ಮಱೆ$^3$) + ನಕ್ಷತ್ರ$_1$ ]

**ಮಳೆನೀರು** 'ಮಱೆನೀರ್' ನೋ.

**ಮಳೆಬಿಲ್ಲು** 'ಮಳೆವಿಲ್ಲು' ನೋ.

**ಮಳೆಮರ** (ನಾ). ಒಂದು ಬಗೆಯ ಮರ : (ವ್ಯಶಿಗ. ೩೪-೬೫೩).
[ ಮಳೆ (< ಮಱೆ$^3$) + ಮರ$_1$ ]

**ಮಳೆಮಾಡು** (ನಾ). ಮಳೆಗೆ ಮರೆಯಾಗಿ ಕಟ್ಟಿರುವ ಮೇಲ್ಹಾವಣಿಯ ಚಪ್ಪರ : ಒಂದು ಮಳೆಮಾಡನ್ನು ಹಾಕಿಸಿ, ಒಂದು ಕಾಫಿ ಹೋಟೆಲು ತೆರೆದು ಕೊಡಬೇಕು (ಸ್ವಸ್ವಹೂ. ೩೭) ; ಮಳೆಗಾಲ ಬಿಟ್ಟಿಲ್ಲ . . . ಅಷ್ಟು ತೊಂದರೆ ಯಾದರೆ ಹೆಣ್ಣಿನ ಕಡೆಯವರು ಒಂದು ಮಳೆಮಾಡನ್ನು ಕಟ್ಟಿಸಲಾರರೇ ? (ಜಗುಕ. ೫೯). [ ಮಳೆ (< ಮಱೆ$^3$) + ಮಾಡು$_2$ (< ಮಾಡ$_1$ ) ]

**ಮಳೆಮುಗಿಲು** (ನಾ). ಮಳೆಯನ್ನು ಸುರಿಸುವ ಮೋಡ ; ಕಾರ್ಮುಗಿಲು : ಮಳೆಮುಗಿಲ ಮುಟ್ಟುವುವು ಬೆಟ್ಟಗಳು ನೆಗೆದು (ಇಂಗೀತ. ೪೮-೦೦);

ಮಳೆಮುಗಿಲ ವೇಣಿಯುಲಿ ಮಳೆಬಿಲ್ಲ ಹಾರಂ (ಸಂಶ. ೩೦-೩).
[ಮಳೆ (< ಮಱೆ³) + ಮುಗಿಲು (< ಮುಗಿಲ್⁶) ]

**ಮಳೆಮೋಡ** (ನಾ). = ಮಳೆಮುಗಿಲು : ವಿರಹಿಗಳೆಡೆಯನು ಬಿರಿಸುವ ಮಳೆಮೋಡ ಗಗನದೊಳಿದ್ದಿದೆ ನೋಡ (ಇಂಶಾಕ. ೯೦-೯೦).
[ಮಳೆ (< ಮಱೆ³) + ಮೋಡ₁]

**ಮಳೆಯಂಗಿ** (ನಾ). "ಮಳೆಯ ನೀರಿಳಿದು ಒದ್ದೆಯಾಗದ ಬಟ್ಟೆಯಲ್ಲಿ ಹೊಲಿದಿರುವ ಉದ್ದನೆಯ ಅಂಗಿ ; ನೀರಿಳಿಯದ ಬಟ್ಟೆಯ ಅಂಗಿ ; ಮಳೆಯಂಗಿ"(Rain-Coat. ಇಂಕೋ) : ಒಳಗೆ ಮಳೆಯಂಗಿಯಲಿ ಹುಟ್ಟುಬತ್ತಲೆ ಹೆಣ್ಣು (ಶಿಶಾಂ. ೭೯-೦೩). [ಮಳೆ (< ಮಱೆ³) + ಅಂಗಿ₂]

**ಮಳೆಯಾಲ** 'ಮಲೆಯಾಳ' ನೋ.

**ಮಳೆಯಾಳ** 'ಮಲೆಯಾಳ' ನೋ.

**ಮಳೆರಾಯ** (ನಾ). ಮಳೆಯ ಅಧಿದೇವತೆ ; ಇಂದ್ರ : ಬೋರೆನ್ನು ಮಳೆರಾಯ (ತಂಜಾವ. ೦೩೯-೪) : ಬರಗಾಲ ಬಂದಾಗ ನಮ್ಮ ಜನಪದ ಭಕ್ತಿಯಿಂದ ಮಳೆಯ ಅಧಿಪತಿಯಾದ ಮಳೆರಾಯನನ್ನು ಆರಾಧಿಸುತ್ತದೆ (ಕಜಕ. ೦೯೩) ; ಹುಯ್ಯೋ ಹುಯ್ಯೋ ಮಳೆರಾಯ ಹೂವಿನ ತೋಟಕ್ಕೆ ನೀರಿಲ್ಲ (ಜಾಪ.).

**ಮಳೆರಾಯನ ಪೂಜೆ** = ಮಳೆಯನ್ನು ಬಯಸಿ ಇಂದ್ರನನ್ನು ಕುರಿತು ಮಾಡುವ ಪೂಜೆ, — ಉತ್ಸವ : ನಮ್ಮ ಜನರಲ್ಲಿ ಮಳೆರಾಯನ ಪೂಜೆಯಲ್ಲಿ ನಂಬಿಕೆ ಉಳಿದುಕೊಂಡಿದೆ (ಕಜಕ. ೦೯೩).
[ಮಳೆ (< ಮಱೆ³) + ರಾಯ]

**ಮಳೆವನಿ** 'ಮಱೆವನಿ' ನೋ.

**ಮಳೆವಿಲ್ಲು, ಮಳೆಬಿಲ್ಲು** (ನಾ). ಕಾಮನ ಬಿಲ್ಲು ; ಇಂದ್ರಧನುಸ್ಸು : ಪರಮಾತ್ಮನಾರೆಂದು ತಿಳಿಯಲೆಳಸುವೆಯಾ . . . ಮಳೆವಿಲ್ಲಿನುಯ್ಯಾಲೆಯಲಿ ತೂಗುತಿಹನು (ಗೀತಂ. ೩-೦೦) ; ಮಳೆವಿಲ್ಲ ಓಡಿಮುಡುಗಿ ಸೆಳೆಮಿಂಚ ಮುಸೆಮುಸೆದು (ಕಾಂಶಾರ. ೪೩-೭೦). **ಮಳೆಬಿಲ್ಲು** : ಅರ್ಜುನನು . . . ಮಿಂಚು ಮಳೆಬಿಲ್ಲುಗಳಿಂದೊಡಗೂಡಿದ ಮೇಘದಂತೆ ಕಾಣಿಸಿಕೊಂಡನು (ವಕಥಾ. ೨೩) ; ಮಧುರಮೋಹನಮಾಯೆ ಮುಂಗಡೆ ಮಳೆಬಿಲ್ಲಿನ ಬಣ್ಣದ ಹಾಸನಲಿ ಕಟ್ಟಿ ಚುಂಬಿಸಿ ಸೆಳೆದಿತ್ತು (ಶಾಂತಜ. ೩೩-೮). P ಇದು ಇಂಗ್ಲೀಷಿನ 'Rain-bow' ಎಂಬುದರ ಅನುವಾದ.
[ ಮಳೆ (< ಮಱೆ³) + ಬಿಲ್ಲು₁ (<ಬಿಲ್₂) ]

**ಮಳೆಸಗಡೆ** (ನಾ). ಒಂದು ಬಗೆಯ ಸಸ್ಯ : "ವಾಲುರ್ಸಿ, ಮಳೆಸಗಡೆ . . . ಲೈಸಾಬ್ರು" (ಸಸ್ಯಶ. ೦೩೭) ; ವಾಲುರ್ಸಿ, ಮಳೆಸಗಡೆ (ವೈದ್ಯಶಿ. ೭೮-೧೭೦೪). [ ? ]

**ಮಳೆಹನಿ** 'ಮಱೆವನಿ' ನೋ.

**ಮಳೆಹುಳು** (ನಾ). ಮಣ್ಣುಹುಳು ; ಎರೆಹುಳು : ಮಳೆಹುಳುಗಳಂತೆ ಎರಡೆರಡು ಮುಖಗಳುಳ್ಳ ರಾಜ ರಾಣಿಯರನ್ನು ಕಂಡು ನನಗೇನು ಪ್ರೀತಿ ಹುಟ್ಟಿದಿದ್ದರೂ . . . ಮೆಚ್ಚಿಕೆಯಾಯಿತು (ಗಾಕಶ. ೨೦).
[ ಮಳೆ (< ಮಱೆ³) + ಹುಳು (< ಪುೞು) ]

**ಮಳೆಬುತ್ತಯ್ಯ** (ನಾ). ಒಬ್ಬಾತನ ಹೆಸರು : ತೊಣ್ಣ ವಾಡಿಯಪಳ್ಳಿಯ ಮಳೆಬುತ್ತಯ್ಯನ ಮಗ ಅಯ್ಯಪಯ್ಯ ×ಣರ ಸತ್ತ ಹಾಲೆಯರೆಕಣ ಪೊಂಗೆ ಕೊಟ್ಟ ಮಣ್ಣು ಖ ೧ (ಎಕ. III (R). ಗುಂತ್ಲುಪೇ. ೩೯-೩; 975).
[? + ಅಯ್ಯ₁]

**ಮಳ್ಗಿಸು** 'ಮಱ್ಗಿಸು' ನೋ.

**ಮಳ್ಗು** 'ಮಱ್ಗು' ನೋ.

**ಮಳ್ತ** 'ಮಱ್ತ₁' ನೋ.

**ಮಳ್ವಗಿರಿ** (ನಾ). ಒಂದು ಬೆಟ್ಟದ ಹೆಸರು : ವಾಯುವ್ಯಾಂ ಮಳ್ವಗಿರಿ . . . ತತಃ ಪೂರ್ವತಃ ವಟವೃಕ್ಷಂ ಪ್ರಾಪ್ಯ (ಪ್ರೀಇಂ. ೦೯೩೫, ೪೦-೭೯ : 1951). [? + ಗಿರಿ₁]

**ಮಳ್ಳ** 'ಮರುಳ' ನೋ.

**ಮಳ್ಳತನ** 'ಮರುಳ್ತನ' ನೋ.

**ಮಳ್ಳವೂರ** (ನಾ). ಒಂದುಸ್ಥಳದ ಹೆಸರು : ಬೆಣ್ಣಿಯೂರ ದೇವಗಣನುಂ ಮಳ್ಳವೂರದ ಪೆರ್ಮಾಡಿಗಾವುಣ್ಡನುಂ (ಎಕ. VI. ಕಶ್ಯಮ. ೩-೦೫; 899?). [ ? ]

**ಮಳ್ಳಿ₁** 'ಮರುಳಿ' ನೋ.

**ಮಳ್ಳಿ₂** 'ಮಳಿ' ನೋ.

**ಮಳ್ಳಿಯ** (ನಾ). ಒಬ್ಬಾತನ ಹೆಸರು : ದೋಣಗಾವುಣ್ಡರುಂ ಎಳಗಾವುಣ್ಡರುಂ ಮಳ್ಳಿಯರುಂ ಉಗ್ರಾರಾಧಾ(?ವಾ)ಸವೆಱೆಯರುಂ ಹ × × × ಕರಣಸಹಿತವಾಗಿ (ಇಕ. XI, ೭೦-೦೭: 567). [ ? ]

**ಮಱ** 'ಮೊಱ' ನೋ.

**ಮಱಕೆಂದು** (ಕ್ರಿ). ಮೈಮರೆತು ಮಲಗು ; ಗಾಢವಾಗಿ ನಿದ್ರಿಸು : ಪುರೋಚನನುಮಾ ಮನೆಯೊಳೊಂದೋವರಿಯೊಳ್ ಮಱಕೆಂದಿದಂ (ಪಂಭಾ. ೩-೪ ವ); ಮಹಾಟವಿಯೊಳ್ ಮಱಕೆಂದಿ ನೀಮುಮಿಾ ಮರದಡಿಯೊಳ್ ಶಿವಾಶಿವರವಂಗಳಿನೆಬ್ಬಿಱುವಂತುಟಾದುದೇ (ಪಂಭಾ. ೩-೦೦); ಮಱಕೆಂದಿದರನೆತ್ತುವಂತೆ ನಾಲ್ವರುಮನೆತ್ತಿ ತಾಂ ಮುನ್ನಂ ತಂದರಣೆಯುಂ ಕೊಟ್ಟು ಕೃತಾಂತನಂತರ್ಧಾನಕ್ಕೆ ಸಂದು (ಪಂಭಾ. ೬-೯೮ ವ). 'ಮಱಬುಂದು', 'ಮಱಸುಂದು₁' ಪರಾ. [< ಮಱ³₁ + ಕೆಂದು₁]

**ಮಱಪಿಕ್ಕು, ಮಱಹಿಕ್ಕು** (ಕ್ರಿ). ೧. ಮರೆಮಾಚು ; ಮುಚ್ಚಿಡು ; ಅಡಗಿಸು : ದೈನ್ಯಮಂ ಗಳಪಲೊಡರ್ಚಿ ಗದ್ಗದಿಪ ಮಾತುಗಳಂ ಮಱಪಿಕ್ಕಿ . . . ಕೂಡುವ ಪಾಣ್ಬೆಯ ಜಾಣ್ಮೆ ಸಾಲದೇ (ರಾಶಶೇ. ೦೦-೩೫). ೨. ವಂಚಿಸು ; ಮೋಸಗೊಳಿಸು : ಮಱಪಿಕ್ಕಿ ನಿಮ್ಮರಸನಂ ಜವನೊಯ್ದುದನಿತ್ತ ಕೇಳಿರೇ (ವರ್ಧಪು. ೯-೭೦); ವಿಶ್ವಾಸಘಾತಕರೊಯ್ದರ್ ಮಱಪಿಕ್ಕಿ ನಮ್ಮರಸನಂ ನಮ್ಮಲ್ಲಿಗಿನ್ನೇವೆವೋ (ಪುಷ್ಪಪು. ೦೩-೯೯). ೩. ಪರವಶಗೊಳಿಸು ; ಮೈಮರೆಯುವಂತೆ ಮಾಡು : ತುಂಬಿಯುಂದದಿಂ ಚುಂಬಿಸಿ ಸೊಕ್ಕನಿಕ್ಕಿ ಮಱಪಿಕ್ಕಿ ಪದಂ ಬಿಡೆ . . . ಬಾಲೆಯುಭಯುಂಗಳೆದಂ ನವಸಂಪ್ರಯೋಗದೊಳ್ (೦೯ಲಾವ. ೦೩-೦೭) ; ಮಱಪಿಕ್ಕಿ ನೋಡುವ ಮರಿಯ ತುಱುಗೆಮೆಗಣ್ಬೆಳಗು ಬಳೆಯೆ ಚಾಮರದೆಲರಿಂ ನೆಱೆ ಮಿಳಿರ್ದು ಮಿಱುಪ ದುಗುಲದ ಸೆಱಗೆಂದೆಂದೀಡು ತೆಗೆಯಲಾತಂ ಬಗೆದಂ (ಚಂದ್ರಪು. ೯-೭೫). **ಮಱಹಿಕ್ಕು** : ೨. ಎನ್ನ ಮಱಪಿಕ್ಕಿ ರಾತ್ರಿಯೊಳು ಸುಟ್ಟರಾದಡೆ ತೆಱೆಯನು ಕೊಡದಿರ್ದಡೆನ್ನಾಣೆ (ಪತಳ. ೦೦-೩೮). ೪. ಅಡಗಿರು ; ಅದೃಶ್ಯವಾಗು : ಮಱಪಿಕ್ಕಿ ಪಿಡಿದು ಕಟ್ಟಿದ ಮಱುಕಮನೀನಿಂತು ತೋರ್ಪೆಯುಣ್ಮಲೆ ನೀನೀ ನೆಱೆದ ಚತುರ್ವಲಸಹಿತಂ ತಱಿಸಂದೆನ್ನುದಿರೊಳಾಂತು ತೋರ್ಪುದು ಛಲಮಂ (ಬಿಂಪಂ. ೦೦-೩೦). [ಮಱಪು₂ + ಇಕ್ಕು]

**ಮಱಪಿಡು, ಮಱಹಿಡು** (ಕ್ರಿ). ೧. ಮೋಸಮಾಡು ; ವಂಚಿಸು : ಮನೆಯವರ ಮಱಪಿ [ಪಾಠಾಂ. ಹಿ]ಟ್ಟು ಮುಸುಕಿಟ್ಟು ಪೊಱಮಟ್ಟು ಸುಳಿವ ಜನಕ ಶಂಕಿಸುತ (ಹಕಣ. ೯-೨೮). **ಮಱಹಿಡು** : ೨. ಮರೆಮಾಚು; ಅಡಗಿಸು; ಗುಟ್ಟಾಗಿಡು: ಬಿಸಜಾಕ್ಷಿಯಾ ಮಾತ ಮಱಹಿಟ್ಟು ಮನದೊಳಾರೈವುತಿರಲು (ಜ್ಞಾಶಾ. ೨-೨೮). [ಮಱಪು₂ + ಇಡು₁]

**ಮಱಪು₁** (ಕ್ರಿ). ಮರೆಯುವಂತೆ ಮಾಡು ; ಮರೆಸು : ಇನಿಯನ ಚಿಲ್ವನಿಕ್ಷಿಪ್ತ ಸೊಕಂ ನುಡಿಗೇಳ್ವಳಿಪಂ ನಿಮಿರ್ಚದು . . . ಅಪ್ಪಿನದೊಂದು ನೇರ್ಪು ಚುಂಬನಮನವಜ್ಞೆ ಮಾಡುವುದು ಚುಂಬನದಿಂಪು ರತಕ್ಕನಿತ್ತು ಸಮ್ಮನಿಸದು ತದ್ರತಂ ಮಱಪುದೇನುಮನೊಮೊರ್ದಲಾಗಳೇಗುಮೆಂ (ಚಂದ್ರಪು. ೮-೮೨). [ಮಱ³₁ + – ಪು₁]

**ಮಱಪ್ಪು₂**, ಮರಹು, ಮಱಹು (ನಾ). ೧. ಮರೆಯಾಗುವಿಕೆ; ಅದೃಶ್ಯವಾಗುವಿಕೆ ; ಅಡಗುವಿಕೆ : ಕ್ರಮದಿಂದ ಪಗಲರಸಿಗೆಸೆವ ಜವ್ವನದ ಸಿರಿಯುಮವು ಜಾಱಿದೊಡೆ ಮಱಪಾಗಿ ಕೆಂದಳಿರ್ಗ್ಯೆಯೊಳಮರ್ದಿರ್ದು ಜಗುಳ್ದ ಮುತ್ತಿನ ಮಣಿಯುದಬ್ಧಿಯೊಳು ಬಿಳ್ದುದೊಯೆನಲ್ . . . ವಿಮಲಸಾಗರದೊಳ್ ಮುಳುಂಗಿದನಹೊ ಸೂರ್ಯಂ (ನೇಮಿಚ. ೩-೦). ೨. ಮರೆಮಾಡುವಿಕೆ ; ಅಡಗಿಸಿಡುವಿಕೆ : 'ಮಱಪಿಕ್ಕು' ಪರಾ. ೩. ಮೋಸ ; ವಂಚನೆ : 'ಮಱಪಿಕ್ಕು' ಪರಾ. ೪. ತನ್ಮಯತೆ; ಪರವಶತೆ ; ಮೈಮರೆಯುವಿಕೆ : ಮುಸುಂಕನೋಪನೋಸರಿಸೆ ಮುಸುಂಕಿದಳ್ ಮಗುಟಿ ಮೆಯ್ಪುಳಕೆಯುಂ ಪುಳಕಾಂಕುರಂಗಳಿಂ ದರಹಸಿತಂಗಳಿಂ ವದನಪಂಕಜಮುಂ ಮಱಪೆಂಬ ಮುಚ್ಚುಳಿಂದರೆಮುಗುಳ್ವೆಚ್ಚಿಯುಂ ಸವಿಯುಮುಚ್ಚಿದ ಮುಚ್ಚಿಯಿನಾಕೆ ಚಿತ್ರಮುಂ (ಅಜಿತ. ೦೪-೦೨) ; ಸಾಂಧ್ಯ ಮಯೂಖಂ ಪೆರ್ಚೆ ಮರ್ಬುಂ ಸುಸಿಲು ಮಱಪು ಪಕ್ಷಿಸ್ವನಂ ಭೈರವೀರಾಗ ಮಗುರ್ವಂ ಬೀಱೆ (ಸೂಕ್ತಿಸು.೯-೦). **ಮರಹು :** ೫. ಮರವೆ ; ಮರೆವು ; ವಿಸ್ಮೃತಿ : ನೋಡುತಲಿದ್ದರು ಕಾಣದು ಆಲಿಸುತಿದ್ದರು ಕೇಳದು ಸರ್ವೇಂದ್ರಿಯವಿದಕಾಗಿರೆ ಪ್ರತ್ಯಕ್ಷವೆ ಮರಹು (ಗತಿಚ. ೨೪-೨೪). **ಮಱಹು:** ೪. ಸೈವೆಣಿಗಿನ ಮಱಹಿನ ಕುಱುಹಿನ ಕಱಿಗೊರಲಂ ನಿಜಸಮಾಧಿಯೊಳ್ ಸೇದಿರ್ದಂ (ಗಿರಿಜಾ. ೩-೩೬) ; ಸಂತತಂ ಲಿಂಗಪ್ರಸಾದದ ಸಂತಸದ ಮಱಹಿಂದಲಿಪ್ಪಪೊಲಂತು ಜನನಿಯ ಮೊಲೆಯನುಣ್ಣದೆ ಗುಪ್ತನಿರುತಿಹನು (ಬಸವಪು. ೩-೩೪). ೫. ಎನಗೆ ನಿಮ್ಮ ನೆನಹಾದಾಗಲೆ ಉದಯ ಎನಗೆ ನಿಮ್ಮ ಮಱಹಾದಾಗಲೆ ಅಸ್ತಮಾನ (ಬಸವ. ೪೯೯) ; ಕಾವ್ಯಮಂ ನಡೆಸುವಾತಂ ರಸಾವೇಶಮಱಹಾಲಸ್ಯವೆಡೆಗೊಳಲು ತಪ್ಪುಗಲ್ಲದೆ ಕಾವ್ಯಕರ್ತೃ ತಪ್ಪುವನೆ (ಪತಕಾ. ೦-೨೩). ೬. ಪ್ರಜ್ಞೆತಪ್ಪುವಿಕೆ ; ಮೂರ್ಛೆ : ಮಱಹ ಪಡೆಯರು ಘಾಯ ಖಂಡಿಗೆ ತೆಱಹುಗಾಣರು . . . ಹೊಗಳುವಡಱಿಯೆನಗ್ಗದ ಭೀಮ ದುರಿಯೋಧನರ ರಣರಸವ (ಕುಮಾ.ಗ. ೬-೨೬). ೭. ತಿಳಿವಳಿಕೆಯಿಲ್ಲದಿರುವುದು ; ಅಜ್ಞಾನ : ಮಱಹುಳ್ಳವಂಗೆ ನೂಱುಬುದ್ಧಿಯುಂ ಪೇಟಿಲ್ಲೊಡಂ ಕಿಡುವುದು (ಶಾಂತಿಕು. ೦೬೭-೩) ; ಶುಭಕರ ಸತ್ಕ್ರಿಯೆಗಳೆಂಬ ಬೀಜಮಂ ಬಿತ್ತಿ ಮಱಹೆಂಬ ಕಳೆದೆಗೆದು (ಶಬ್ದಾ.ಚಾ. ೦೪-೦೪) ; ಮಱಹುಳ್ಳ ಮನುಜರಿಗೆ ತೆಱನಾವುದಱಿವುದಕೆ (ಸರ್ವಜ್ಞ. ೬೬). ೮. ಅಲಕ್ಷ್ಯ ; ಉಪೇಕ್ಷೆ : '' ಪ್ರಮಾದಃ, ಅನವಧಾನಂ — ಈ ೨ ಮಱಹು '' (ಶಬ್ದಮಣಿ. ೦೨೪-೬೪).

[ಮಱ್³₁ + — ಪು₂]

**ಮಱಲ್** (ನಾ). ಸಾವು ; ಮರಣ : 'ಮಱಲಿಱಿ' ಪರಾ.

[ದೇ.॥ ತಮಿ. ಮಲ. ಮಱಲ್]

**ಮಱಲಿಱಿ** (ಕ್ರಿ). ಸಾಯುವಂತೆ ಹೊಡೆ,–ಚುಚ್ಚು : ಗೊಜ್ಜಿಗನೆಂಬ ಸಕಲಚಕ್ರವರ್ತಿ ಬೆಸಸೆ ದಂಡುವಂದ ಮಹಾಸಾಮಂತರಂ ಮಱಲಿಱಿದು ಗೆಲ್ದ ಸಾಮಂತಚೂಡಾಮಣಿಯ ಬೀರಮುಮಂ (ಶಂಕಶಾ.೯-೩೨ ಪ)

[ಮಱಲ್ + ಇಱಿ₁]

**ಮಱಲುಂದು** (ಕ್ರಿ). ಮೈಮರೆತು ಮಲಗು : ಪ್ರಿಯದರ್ಶನನೊಂದು ದಿವಸಂ ತನ್ನ ಭಾರ್ಯೆವೆರಸು ಕದಳೀವನದೊಳ್ ಮಱಲುಂದಿದಲ್ಲಿಗೆ ಕಾಳಿಂಗನಾಗಂ ಬಂದೊಡದಱ ಮೇಗೆ ಕಾಲಂ ನೀಡಿದೊಡೆ ಕರ್ಚಿತ್ತು (ವಡ್ಡಾ.ರಾ. ೩೬-೨೫); ದಿವ್ಯಮೂರ್ತಿ ಸಹಿತಾಂಬರಭೂಷಣ ದಿವ್ಯಮಾಲೆಗಳ್ ನೆಱೆದೊಪಪುಟ್ಟೆ ಮುನ್ನೆ ಮಱಲುಂದಿದನೆಚ್ಚಱುವಂತೆ ಪುಟ್ಟಿದಂ (ಆದಿಪು. ೨-೬೨) ; ಈ ಮಱಲುಂದಿದರನೆತ್ತಿನಿಬಿರುಮ . . ಪೂರ್ವೆಯಿ ಪೊಸೆದು ಮುಕ್ಕುಮೆಂ (ಶಂಕಶಾ. ೩-೦೬ ಪ) ; (ಪೆರೆಯುರ್ಚಿ) ದಾಂಟೆ ಕೋಳ್ದ (ಲ್ದ)ಪ್ಪಿರೆ ಪಗೆಗೊಳೆ ಸೊರ್ಕೆ ಶಂಕೆ ದೊರೆಕೊಳೆ ವಿಷಮುಬ್ಬರಿಸೆ(ಸಿ) ಮಱಲುಂದೆ ತಮ್ಮೊಳ್ ನೆರೆದೆಡೆಯೊಳ್ ಕಾ(ನಾ)ಡೆ ಪಾವು ಕೊಳ್ಗುಂ ನರನಂ (ಲೋಕೋಪಕ. ೦೦-೨). 'ಮಱಕೆಂದು', 'ಮಱಸುಂದು₁' ಪರಾ.

**ಮಱಲುಂದುವೋವರಿ** = ಮಲಗುವ ಮನೆ ; ಶಯ್ಯಾಗೃಹ : ವಿದ್ಯುಚ್ಚೋರಂ . . . ಅರಮನೆಯಂ ಪೊಕ್ಕರಸನ ಮಱಲುಂದುವೋ [ಪಾಠಾಂ. ಪವಡಿಪೋ]ವರಿಯಂ ಪೊಕ್ಕು (ವಡ್ಡಾ.ರಾ. ೦೨೩-೦೦).

[< ಮಱ್³₁ + ಉಂದು₁]

**ಮಱವ** (ನಾ). ಒಂದು ಬಗೆಯ ತೆರಿಗೆ (?) : ತಿಪ್ಪೆಸುಂಕ ಮನೆದೆಱೆ ಪಾರಿಬಾಯ ಹೊಲೆಗೊಱೆ ಮಱವ ಈಂತಿನಿತುಮಂ . . . ಧಾರಾಪೂರ್ವಕಂ ಮಾಡಿ ಕೊಟ್ಟರು (ಕ್ರಿಶಾ. XX. ೦೫೬-೯೩; 1176). [ ? ]

**ಮಱವಡು** (ಕ್ರಿ). ಮೈಮರೆ ; ಪರವಶವಾಗು : ಅತ್ಯಾಸಕ್ತಿಯಿಂ ಮಱವಟ್ಟರಂತೆಯುಂ ಚಿತ್ರಿಸಿದರಂತೆಯುಂ ಮೂರ್ಛೆವೋದರಂತೆಯುಂ . . . ನಿಂತುಕದೆ ನೋಡುತಿರ್ದಂ (ಕಾದಂಪೂ. ೬೪೬) ; ಸಭೆ . . . ತನತನಗೆ ಬೆಱಗಾಗಿ ಮಱವಟ್ಟು ಕೇಳುತಿರೆ (ತಿರುತ. ಕೀ. ೦೬-೦೪). 'ಮರವಡು' ಪರಾ.

[ಮಱವು + ಪಡು₁]

**ಮಱವಣೆ** (ನಾ). ಮರೆಯುವಿಕೆ ; ವಿಸ್ಮೃತಿ : ಗತಿಮತಿ ಚೈತನ್ಯ ಶಬ್ದವುಳ್ಳನ್ನಕ್ಕ ಕ್ರಿಯೆಂತಂತೆ ನಡೆವುದು ಮಱವಣೆ ಬೇಡ ಕಂಡಾ ಮನವೆ (ಶದಗೋ. ೨೪-೦೦೯); ಹಸಿವು ತೃಷೆಯು ಶೋಕ ಮೋಹ . . . ವಿಷಸಮಾನವಾದ ಬಹಳವ್ಯಸನ ಮಱವಣೆ ಮುಸುಕಿ ಕವಿವ ವ್ಯಾಘ್ರನಂತೆ ಅಡಗಿ ಮುಪ್ಪುಗೊಂಬ ರೋಗ (ಕನಕ. ೦೬೯-೦). [< ಮಱವು]

**ಮಱವಿ** (ನಾ). ೧. ಅಜ್ಞಾನ ; ತಿಳಿಗೇಡಿತನ : ನಿಮ್ಮ ಮನ ಮಱವಿಯನು ನೀಗಾಡಲೊಲ್ಲದೆ ಬಱಿದೆ ನಾನೆನ್ನಜ್ಞಭಾವದೊಳಱಿದೆನೆಂದರೆ ಸಾಧ್ಯವೇ (ಸದ್ಗುರು. ೩-೦೦). ೨. ಅಲಕ್ಷ್ಯ ; ಉಪೇಕ್ಷೆ : " ನಪ್ರಮಾದ್ಯೇತ– ಮಱವಿಯಂ ಮಾಡದಿರ್ಕೆ " (ಶಿಶುಬೋ. ೨೪-೭೨).

[ಮಱ್³₁ + — ವಿ₁./ತಮಿ. ಮಱವಿ]

**ಮಱವು**, ಮರವು, ಮರೆವು (ನಾ). ೧. ಎಚ್ಚರವಿಲ್ಲದಿರುವ ಸ್ಥಿತಿ ; ಜಾಗ್ರತವಾಗಿರದ ಸ್ಥಿತಿ : ಅಱಿವಿಗೂ ಮಱ[ವಿ]ಗೂ ಒಡಲಾಯಿತ್ತ ಲಿಂಗ (ಪೋರ್ವಪಾ. ೩-೭). ೨. ಮೂರ್ಛೆ ; ಬವಳಿ : ಮಱವು ಮಗುವಿಗೆ ಹೊಲ್ಲ ಕುರುವು ಕುಂಡೆಗೆ ಹೊಲ್ಲ (ಸರ್ವಜ್ಞ. ೭೨೪). **ಮರವು :** ೧. ಮರವು ತರವಿಲಿ ದುಷ್ಟಸ್ವಪ್ನವೇ ತೋರಿದುದೊ (ಪಂಚಾಕಾ. ೫-೦೦-೦೪). ೩. ನೆನಪನ್ನು ಕಳೆದುಕೊಂಡ ಸ್ಥಿತಿ ; ಜ್ಞಾಪಕವಿಲ್ಲದಿರುವುದು : ಅಕಸ್ಮಾತ್ತಾಗಿ ಸಿಕ್ಕಿಬಿದ್ದರೆ ಮರವಿನ ನೆಪದಲ್ಲಿ ಅವನು ತನ್ನ ಸಜ್ಜನಿಕೆಯನ್ನು ಕಾಪಾಡಿಕೊಳ್ಳಬಲ್ಲನು (ದೇಶಪ್ರ. ೬೨). **ಮರೆವು :** ೩. ನಮ್ಮ ಅನುಭವಕ್ಕೆ ಬಂದ . . . ಕೆಲವನ್ನು ಸ್ಮರಿಸಿಕೊಳ್ಳಲಾರೆವು. ಮನಸ್ಸಿನ ಈ ಸ್ಥಿತಿಯೇ ಮರೆವು (ಶಿಕ್ಷಣ. ೩೩೦).

**ಮಱವುಮಾರದೆ** = ವಿವೇಕಶೂನ್ಯತೆ ; ಅಜ್ಞಾನ : ಅಱಿವಿನೊಳಗೆ ಅಱುಹಿನ ತಿರುಳಾಗಿ ಮಱವುಮಾರದೆಯಿಲ್ಲದೆ ನಿಜಪದವು ಸಾಧ್ಯವಾದ ಬಳಿಕ ಅವುದು ವರ್ಮ ಅವುದು ಕರ್ಮ (ಅನುಭವ. ೨೫೨-೦೦೫೦).

[ಮಱ್³₁ + —ವು]

**ಮಱವುಡಿ** (ನಾ). ವಿಸ್ಮರಣೆಯನ್ನುಂಟು ಮಾಡುವ ಒಂದು ಬಗೆಯ ಔಷಧಿಚೂರ್ಣ (?) : ಮಱು[ವು]ಪುಡಿ ಮದ್ದು ಮೈಯುಡುಂದಂತೆ. . . ಮನವೆಣ್ಣಗಳು ಮಱಿವರು ಮನಗೆಲಸವನು (ಹೇಮಾಂಶು. ೯-೯೨) ; ಅನ್ಯಯದ ಮದ್ದು ಮಱುವ[ವು]ಡಿಯಿಂದ ಮಡಿಯಿಪರೊ (ಏಕೋತ್ತ. ೫-೨೫-೯೯).

[< ಮಱವು + ಪುಡಿ]

**ಮಱವೂರ್** ' ಮರವೂರ್ ' ನೋ.

**ಮಱವೆ**, ಮರವೆ₁ (ನಾ). ೧. ಮರವು ; ಜ್ಞಾಪಕವಿಲ್ಲದಿರುವುದು : ಮಱವೆಯಿಂ ಜಾಡ್ಯಭಾವದಿಂದೀ ನವ್ಯದಿವ್ಯಕೃತಿಯೊಳ್ ದೋಷಮಿರ್ದೊಡಂ . . . ತಿರ್ದುಗೆ (ಶಬ್ದಾ.ಚಾ. ೦-೯೩). ೨. ಎಚ್ಚರವಿಲ್ಲದಿರುವ ಸ್ಥಿತಿ ;

ನಿದ್ರಾವಸ್ಥೆ : "ರ್ಘೋಂಘಿಸಿತೆನ್ನಲ್ ಮಱವೆಯುಮಂ" (ಕಬಿಕಂ. ೦೬೦) ; ಅಱಿವು ಮಱವೆಗಳೆನಿಪ್ಪೆರಡಱ ಮಧ್ಯಾವಸ್ಥೆಯೊಳ್ ಮನಂ ಪಿರಿದಾಸುಂ ತಱಿಸಂದು ನೃಪಮನೋಜಂ ಬೆಱಗಿಂ ಕರುವಿಟ್ಟ ಪುರುಷನಂತಿರುತಿರ್ದಂ (ಕುಸುಮಜಾ. ೯-೦೦೯) ; ತಳಿತ ಮಱವೆಯು ಪಾಳೆಯುದ ಕಗ್ಗೊಲೆಗೆ ಕವಿವ ಗುರೂಪದೇಶಾವಳಿಯುಪೊಲು ಮೈದೋಱಿದವು ಹಿಮರುಚಿಯ ರಶ್ಮಿಗಳು (ಕುವ್ಯಾದ್ರೌ. ೦೬-೦೩). ೩. ವಿವೇಕಶೂನ್ಯತೆ ; ತಿಳಿವಳಿಕೆಯಿಲ್ಲದಿರುವುದು ; ಅಜ್ಞಾನ : ತೆಱನಱಿದು ಮಱವೆಯು ಕಳೆದು ಮಾತಿನಂತೆ ನೀತಿಯುಳ್ಳೊಡೆ ಅವರನಜಾತರೆಂಬೆ (ರೇಡಾಪ. ೨೨-೩೯) ; ಸುಜ್ಞಾನಪ್ರಭೆಯುಱಿದುಪಮಿಸಲಳವಡದ ಮಱವೆಯುಪ್ಪುದುದಾಗಳ್ (ಉಪ್ಪಟಿ. ೬-೩). ೪. ಭ್ರಾಂತಿ ; ಭ್ರಮೆ : ಕಂಡೆನೆಂಬುದು ಕಂಗೆ ಮಱವೆ ಕಾಣೆನೆಂಬುದು ಮನದ ಮಱವೆ ಕೂಡಿದೆನೆಂಬುದು ಅಱಿವಿನ ಮಱವೆ (ಅಪಕಂ. ೨೦೦-೯೪೫) ; ನೀವು ನಿಮ್ಮ ಕರುಣದಿಂದೆ ಎನ್ನ ಒಡಲ ಮಱವೆಯು ಒಡೆದು . . . ಸತ್ತ್ವ ರಜ ತಮದ ಪರದೆಯು ಹಱಿಯಲೊಡನೆ ನಿಮ್ಮ ನಿತ್ಯದ ನಿಲವ ಕಂಡೆನಯ್ಯ (ಅಬಂದೇ. ೪-೫). ೫. ಜಡತೆ ; ಆಲಸ್ಯ : ಮನದ ಮಱವೆಯ ರ್ಘೂರ್ಮ್ಮಿನಲಿ ಕಪಿ ತನುವ ಸಂತೈಸುವ ರಣಶ್ರಮದನಿತಱೊಳ್ ನೂಕಿದನು ತುರಗವ ತರಣಿವಂಶಜನ (ಕೂರಭಾ. ೬-೩೦-೩೦). ೬. ಪ್ರಜ್ಞಾಹೀನ ಸ್ಥಿತಿ ; ಮೂರ್ಛೆ : ಹಸಿಅರಿಸಿನದ ರಸದಲ್ಲಿ ಬಿಳಿಯ ಗಣಜಿಲೆಯ ತೇದು ಜೇನುತುಪ್ಪದಲ್ಲಿ ನಸ್ಯಂಗೈಯಲು ಮಱವೆ ಮಾಣ್ಗುಂ (ಶಿವ್ಯಶಿ. ೯೦) ; ಸನ್ನಿಪಾತವಾಗಿ ನೆಱಿಯಿಲ್ಲದೆ ಮಱವೆಯಾಗಿದ್ದವರಿಗೆ ಕಾಲ ಹಿಮ್ಮಡಿಯಲ್ಲಿಯೂ ಲಲಾಟದಲ್ಲಿಯೂ ರಕ್ಷೆಯ ಹಾಕಲು ಮಱವೆ ತಿಳಿವದು (ವೈದ್ಯಸಾ. ೧. ೬೩). ೭. (ಕಣ್ಣು ಕಾಣಿಸದಂತೆ ತೆರೆಯು ಬರುವ) ಒಂದು ಬಗೆಯ ಕಣ್ಣಿನ ರೋಗ : ದುವರ್ಣಾಂಸದೋಷವೊ ನೀಲಿಗಣ್ಣೋ ಮಱವೆಯೋ [ಪಾಠಾಂ. ಮಾಱವೆಯೊ] ಕಣ್ಮುಚಿಲವೋ ಅರಿಯೋ (ಬಸಪು. ೦೯-೬೩). ೮. [ಕಾಮಶಾ] ದಶಾವಸ್ಥೆಗಳಲ್ಲಿ ಒಂಬತ್ತನೆಯದು ; ಮೂರ್ಛೆ : ತಱಿಸಂದು ಮಱವೆಯಿಂದಂ ಕಿಱಿದಾನುಂ ಪೊಳ್ತುಮಲ್ಲಿ ದೇವಿಯರಿಂತಿರ್ಪ್ಪಱಿನೆಯ್ದಿದಿರೆಯುಂ (ಕುಸುಮಜಾ. ೦೩-೫೬) ; ನೆಱೆ ನೋಟ ಚಿಂತೆ ಸಂಕಲ್ಪ ಜಾಗರ ಕೃಶ ಅರತಿ ಲಜ್ಜಾ ಹೀನೋನ್ಮಾದ ಮಱವೆಯನಿತು ಒಂಬತ್ತವಸ್ಥೆಗಳೆಯ್ದಲು (ಶೀವಂಸಾಂ. ೦೨-೯೯). **ಮರವೆ$_1$** : ೧. ಈ ವಯಸ್ಸಿಗೇ ಈ ಮರವೆಯಾದರೆ ಎಂಭತ್ತು ವರ್ಷ ಆದ್ಮೇಲೆ ಹೇಗೆ ಇರ್ತೀಯೊ ? (ದೂಪಟ್ಟ. ೯) ; ನೋಡು ಕಂಡಕ್ಟರು ಕೊಡುವನು ಚಿಲ್ಲರೆ ತೆಗೆದುಕೊ ಮುಸುಕಿತೆ ಮರವೆ (ಇಂಚಾಕ. ೦೦೯-೯೩). ೨. ಮಾತಿನಲಿ ಮರವೆಯಲಿ . . . ಅತಿಶಯ ಮೂರ್ತಿಯನು ನೆನದು (ಜ್ಞಾಪಸಿಂ. ೦೬-೩೦). ೩. ಗುರುಕಟಾಕ್ಷೇಕ್ಷಣದಿ ಮುನ್ನಿನ ಮರವೆಯೆಲ್ಲವು ಸರಿಯಲು (ಗಗಪಾ. ೨-೨೩). ೪. ಉಗ್ರಮರವೆಯ ತೊಲಗಿಸಲು ನೃಪವಿಗ್ರಹವ ಸಲುಗೆದ್ದು ಸಚಿವರೊಳಗ್ರಸುಮತಿಯ ಕರಸೆ (ಬಜ್ಞಕೃ. ೩-೦೪).

**ಮರವೆಯತಿಲಕ** = ಮತ್ತೊಬ್ಬರ ಕಣ್ಣಿಗೆ ಬೀಳದಂತೆ, ಅದೃಶ್ಯವಾಗಿರುವಂತೆ ಮಾಡುವ ಅಂಜನದ ತಿಲಕ : ಮೂಲೋಕದವರುಗಳ ಮರವೆಯ ತಿಲಕವಿಟ್ಟು ಘಣಿಯೊಳು ಗಗನಪಥಮಡರ್ದು ನೆಗದು ಮನೋಗಮನದಿಂ ( ಸಪಪೋ. ೨೬-೦೪ ). **ಮರವೆಯೌಷಧಿ** = ಮೈಮರೆವನ್ನುಂಟುಮಾಡುವ ಮದ್ದು; ಅರಿವಳಿಕೆಯ ಔಷಧಿ : ಹಾವು ಬಹ ಪರಿಯಂತರ ಪುರುಷ ಮಾತಾಡದೇಳದ ಪರಿಯ ಮದ್ದುಗಳ ಮರವೆಯೌಷಧಿಗಳನು ನಿದ್ರಾಕರದಲಿಹ ಕಾಮುಗಳ ಬಲಿದಪ್ಪರಿಯ ಜಾರೆಯರೈದಿದರು ಸಂಕೇತದೆಡೆಗಳಿಗೆ (ಕೋಗಭಾ. ೪-೯). **ಮಱವೆಯೌಷಧ** = ಮರವೆಯೌಷಧಿ : "ಕಿಸುರ್ವೇರಿನೆ ಮಱವೆಯೌಷಧಂ" (ತತುಂ. ೦೦೬).

[<ಮಱ$^3_1$ + – ವೆ]

**ಮಱವೆಗೊಳಿಸು** (ಕ್ರಿ). ಎಚ್ಚರ ತಪ್ಪುವಂತೆ ಮಾಡು; ಮೂರ್ಛೆಗೊಳಿಸು: ಇರ್ವರಂ ಘಾತಿಸದೆ ಸಮ್ಮೋಹನಾಸ್ತ್ರದೊಳ್ ಮಱವೆಗೊಳಿಸಿ ತನಗೆ ತಂದೊಪ್ಪಿಸುವ ತೆಱದೊಳತಿ ಜಲಚರರನನುಜನೆಡೆಗಟ್ಟಿ (ಕೃಬಂಭಾ. ೨೦-೨).

[ಮಱವೆ + ಕೊಳ್$_1$ + – ಇಸು$_3$]

**ಮಱಿಸನ ?** (ನಾ). (?) : ಮಱಸನಮಂ ಬಿಟ್ಟೊಳಗಣ ಪೊಱಗಣ ಕೆಲಸಂಗಳೆಲ್ಲಮಂ ದೇವಿಯು ಕಣ್ಣಱಿದುಂ ಮನಮಱಿದುಂ ಬಿಡದಱಿದಿಂಗಳ್ ದೇವಕಾಂತೆಯರ್ ನಡೆಯಿಸಿದರ್ (ಶಂಪ್ರಕು. ೦೦-೧೪೬).[ ? ]

**ಮಱಿಸು$_1$** 'ಮಱ$^3$ಯಿಸು' ನೋ.

**ಮಱಿಸು$_2$**, ಮರಸು$_2$ (ನಾ). ೧. ವಂಚನೆ; ಮೋಸ : ನಿದ್ರೆಯನುಳಿದು ಬೆದಱಿ ಬೇಗದೊಳು ತನ್ನರ್ಧಶಯ್ಯೆಯೊಳೊಱಗಿರ್ದ ಮುಗ್ಧೆಯಂಜುವ ಳೆಂದು ಮಱಿಸಿನಿಂದವಳೆಲೊ ಪೊರ್ದದಿರಾರು ನೀನೆನಲು (ಅಂಜಕ. ೯-೬). **ಮರಸು$_2$** : ೨. ಪ್ರಾಣಿಗಳನ್ನು ಹಿಡಿಯಲು ಮರೆಯಲ್ಲಿ ಅಡಗಿಕೊಂಡು ಮಾಡುವ ಬೇಟೆ ; ಮರಸುಬೇಟೆ : ಅವತ್ತು ಮರಸಿಗೆ ಕೂತಿದ್ದೆ (ಮಲೆಮ. ೫೩). ೩. ಬೇಟೆಯಲ್ಲಿ ಪ್ರಾಣಿಗಳನ್ನು ಹಿಡಿಯಲು ಹೊಂಚುಹಾಕಿ ಕುಳಿತುಕೊಳ್ಳುವುದಕ್ಕಾಗಿ ಕಟ್ಟಿರುವ ಮರೆ,—ರಕ್ಷಣೆಯ ಸ್ಥಳ : 'ಮರಸುಕಟ್ಟು' ಪರಾ. [ಮಱ$^3_1$ + – ಸು$_3$]

**ಮಱಿಸುಂದು$_1$**, ಮಱಿಸೊಂದು (ಕ್ರಿ). ಮೈಮರೆತು ಮಲಗು : ಮುಗುಳೊಳ್ ಮಱಸುಂದಿದ ತುಂಬಿ ಪಾಱ$^3$ ಕೋಕನವಕುಲಂಗಳುಳ್ಳಲರ್ದುವೆಂಬಿನಮುಂದೊಗೆದಂ ದಿವಾಕರಂ (ಶಂಪಭಾ. ೩-೬೪); ಮಱುವಾತುಗುಡದೆ ರವಿಸುತ ಮಱಸುಂ[ಪಾಠಾಂ. ವಿಂ]ದಿರ್ದಪೆಯೊ ಮೋಣ್ಪಟಲ್ದಿರ್ದಪೆಯೊ (ಗದಾಯು. ೫-೦೫); ನೆಱ$^3$ಗೊಂಡು ತೂಸಿವ ಸರಲಿಂ ನೆಱಲ್ದು ರಥದೊಳಗೆ ಬಿಟ್ಟು ಚಕ್ರಧರಂ ಮೆಯ್ಮಱ$^3$ದು ಗುಹಾಂತರದೊಳ್ ಮಿಗೆ ಮಱಸುಂ[ಪಾಠಾಂ. ಸೊಂ]ದಿದ ಪುಲಿಯನಾಗಳೆನಿಸಂ ಪೋಲ್ತಂ (ಕಾವ್ಯಾಪ. ೪೪೮). **ಮಱಿಸೊಂದು** : ಮಲ್ಲಿಗೆ ಮಱಸೊಂದಿದಂದದೊಳೆ ಜೋಲ್ದ ನಿಜೇಶನನಾಲತಾಂಗಿ ತೊಟ್ಟಗೆ ಕೂಳೆ ನೋಡಿ ಕಟ್ಟನಿನಿಯಂ ಮಱಸೊಂದಿದನೋ ಬಱಲ್ದನೋ ಎಂದು. . . ಪಳಯಿಸುವ ಮಾದ್ರಿಯ ಸರಮಂ ಕುಂತಿ ಕೇಳ್ದು (ಶಂಶಭಾ. ೨-೦೯); ಪೊಱಮೊಱಲ ಮರದ ಕೆಱಗೆ ಮಱಸೊಂದಿದ ಭೀಮಾಸನಡಸಿ ಪಿಡಿದು . . . ಮಹಾಗ್ರಾಹವಮನುಱದಡಸಿ ಕಟ್ಟಿ ಕೊರಲೊಳ್ ಗಂಗಾದೇವಿಯ ಮಡುವಿನೊಳಟ್ಟಿದರ್ (ಶಂಶಭಾ. ೨-೩೦ ವ).

[< ಮಱ$^3_1$ + ಸುಂದು$_1$]

**ಮಱಿಸುಂದು$_2$** (ನಾ). (ವಂಚನೆಯ) ಕೂಟ,–ಸಂಭೋಗ : ಮಱಸುಂದು ಸೂಟಿಸುಂದೆನೆ ಪಿಱಿತಿನಿಯೆನೆ ಪೂಱೆಯೆನೆ ಪದಾಂತರದಿಂದಂ ನೆಱ$^3$ದು ನಿಲೆ ದುಷ್ಪ್ರತೀತಿಯನಱಿಪುವ ಪೆಱಪೆಱವುಮಿನ್ನವೇ ಗ್ರಾಮ್ಯಂಗಳ್ (ಕಾವ್ಯಾಪ. ೪೯೬). [<ಮಱ$^3_2$ + ಸುಂದು$_2$]

**ಮಱಿಸುಹ** (ನಾ). ಮರೆಮಾಡುವುದು; ಮುಚ್ಚಿಡುವುದು : "ಅಪಹ್ನವಃ, ಅಪಲಾಪಃ, ಅಪಜ್ಞಾನಂ, ಅಪವ್ಯಯಃ—ಈ ೪ ಮಱಸುಹ" (ಶಬಾಯು. ೦೨೦-೪೫).[ಮಱಿಸು$_1$ (<ಮಱ$^3$ಯಿಸು) + –ಹ$_2$ (< –ವ$_2$)]

**ಮಱಿಸೊಂದು** 'ಮಱಿಸುಂದು$_1$' ನೋ.

**ಮಱಿಹಿಕ್ಕು** 'ಮಱಿಪಿಕ್ಕು' ನೋ.

**ಮಱಿಹಿಡು** 'ಮಱಿಪಿಡು' ನೋ.

**ಮಱಿಹಿಸು** (ಕ್ರಿ). ಮರೆಮಾಚು; ಅಡಗಿಸು : ಭಾವವನು ಮಱಿಹಿಸಲು ಬಹುಸಂಭಾವನೆಯಲನ್ನವ ಕೊಡಲು ಬಳಿಕಾವ ಸುಖಿಗಳನಿತ್ತವು (ಶಿಭಾಗ. ೦೦-೦೬-೬೨). [ಮಱಿಹು (< ಮಱಿಪು$_2$) + –ಇಸು$_3$]

**ಮಱಿಹು** 'ಮಱಿಪು$_2$' ನೋ.

**ಮಱಹುಗೊಳ್** (ಕ್ರಿ). ಅಜ್ಞಾನದಿಂದ ಕೂಡಿರು ; ಭ್ರಾಂತಿಯನ್ನು ಹೊಂದಿರು : ತೆಱಹುಗಾಣದಱಹುಗುಂದಿ ಮಱಹುಗೊಂಡೆನೆನ್ನ ಗುರುವೆ (ಶಂಶಿರ. ಪ. ೫೦೦-೦೨). [ಮಱಹು (< ಮಱಿಪು$_2$) + ಕೊಳ್$_1$]

**ಮಱಿಪೊಂದು** (ಕ್ರಿ). ಮೂರ್ಛೆಹೊಂದು ; ಪ್ರಜ್ಞೆ ತಪ್ಪು : ಅಂದು ಕಾಮೋದ್ರೇಕದಿಂ ಮಱಿಪೊಂದಿ ತನ್ನುವನಜಾಯದಿಪ್ಪರವಿಂದಗರ್ಭನ ಮಸ್ತಕವನುದ್ದಂಡಚಾಪದಲಿ ಸಂಧಿಸಿದ ಸರಳಿಂ ಪಱಿಯಲೆಸ ಬಂದ ಶಬರೇಶ್ವರನೊ (ಬಸವು. ೪೪-೩). [ಮಱಿಪು (< ಮಱಿಪ್ಪು) + ಒಂದು₁]

**ಮಱಿ**, ಮರಿ (ನಾ). ೧. (ಪ್ರಾಣಿ, ಪಕ್ಷಿ ಮುಂತಾದುವುಗಳಲ್ಲಿ) ಎಳೆಯದು ; ಪಿಳ್ಳೆ ; ಶಾಬ : "ಶಿಶು ಶಾಬಂ ಪೋತಂ ಮಱಿ ಕಿಶೋರಕಂ" (ಪತ್ತು.ಕೋ. ೬೭-೨೫) ; ಸೋಮದತ್ತೆಯೆಂಬೊಳ್ ... ಪೆಣ್ಣರಿಯಾಗಿ ಪುಟ್ಟಿ ತನ್ನ ನಾಲ್ಕುಮಱಿಗಳ್ಗೆರಸಾಹಾರಮನಱಸಿ ತೊಟಲುತ್ತಂ ಬರ್ಪುದನ್ನೆಗಂ (ವಡ್ಡಾ.ರಾ. ೨೯-೫) ; ಸುರಭಿಗಳ ತೊರೆದ ಮೊಲೆಗಳನುಣ್ಬುಪಱ ಮಱಿಗಳಂ ಪೋಗೆ ನೂಂಕಿ ಕೂಂಕಿ ಮೊಲೆಗಳನುಣ್ಬ ಕಿಶೋರಕೇಸರಿಗಳುಮಮಂ... ನೋಡಿ (ಕಂಶಚಾ. ೦-೧೧೫ ಪ) ; ಕಾಗೆಯ ಮಱಿಯೆಂದಱಿಯದೆ ಕೋಗಿಲೆ ಕೈಗೊಂಡು ಕೂರ್ಮೆಯಿಂ ನಪಪಿಡೊಡಂ ಕಾಗಾಯೆಂದುದು (ಧರ್ಮಾಮೃ. ೨-೦೦೪). ೨. ಎಳೆಯ ಮಗು ; ಕೂಸು ; ಶಿಶು : ಮಕ್ಕಳ ಮಱಿಗಳ ಸುಖದುಃಖಕ್ಕಾದಂ ಮಱಿಗಲಾಗದಂತ ವರ್ಗಱದಿಂದಕ್ಕುಂ ಸೌಖ್ಯಂ ಪಾಪದಿನಕ್ಕುಂ ದುಃಖಂ (ಸಮಃಶ. ೩-೦೩೩) ; ಮಱಿಗದಿರಿ ಪಾಂಚಾಲರಾಯನ ಮಱಿಗಳರ ಭೀಮಂಗೆ ತಪ್ಪೇನುಱುವ ದೊರೆ ಸೊಪ್ಪಾಗದಂತಿರೆ ನೀವು / ಕಾದುವಿರೆ (ಕುವ್ಯಾಕ. ೦೦-೨೦). ೩. ಹಾವು ; ಸರ್ಪ : ಕೂಟಂ ಪತ್ತೆಸಾರ್ದು ಕೊಡನ ಮಱಿಯ ಪೆಡೆಯಂ ತುಡುಕುವೆಗ್ಗನಂತಿರೆ ಸತಿಯ ನಿಡುಜಡೆಯಂ ಪಿಡಿದೀಟ್ಟುದ್ಯುಕ್ತು ಮಿರ್ದಂ (ರಾಮಾಶ್ವ. ೬೪-೨೬). 'ಪೆರ್ಮಱಿ' ಪರಾ. ೪. (ಬಲಿ ಕೊಡುವ) ಟಗರು, ಆಡು, ಕುರಿ ಇತ್ಯಾದಿ : ಕುಱಿ ಬೇಡ ಮಱಿ ಬೇಡ ಬಱಿಯ ಪತ್ರಿಯ ತಂದು ಮಱಿಯದೆ ಪೂಜಿಸು ನಮ್ಮ ಕೂಡಲ ಸಂಗಮದೇವನ (ಬಸವ. ೩೩೦). ೫. ಚಿಕ್ಕದು ; ಸಣ್ಣದು : 'ಮಱಿ ಮುಗಿಲ್' ಪರಾ. **ಮರಿ** : ೧. ಹೆಣ್ಣುಸಿಂಹವು ಗಬ್ಬಾಗಿ ಐದು ತಿಂಗಳಿಗೆ ಈಯುವುದು. ಸರ್ತಿಗೆ ಮೂರು ನಾಲ್ಕು ಮರಿಗಳು ಆಗುವವು (ಪುಂಬಾಯಿ. ೪-೨೦೪) ; ಬೆಕ್ಕಿನ ಮರಿ ಚೆಂಗನೆ ನೆಗೆಯುತ್ತಿತ್ತು (ಚಾಆ. ೨). ೨. ಇದಾವುದೂ ನಿನಗೆ ಕೊಡಾಕಿಲ್ಲ ಮರೀ (ಪೆಂಗಬಿ. ೦೬೩). ೩. ಏಗಾಲಮಿಂತು ಮೆಟ್ಟಣಾಸಿ ನೀ ಮುದಿಯ ಮರಿಯಂತೆ ಕಾವೆಪಳನನಸಿನೀ ನಿಧಿಯ ? (ಗೀಬಿಂ. ೨೭-೦೦). ೪. ಒಮ್ಮೊಮ್ಮೆ ಗೌಡರು ತಂಗಳು ಹಬ್ಬದ ದಿನವೂ ಮರಿ ಹೊಡೆಸುವುದುಂಟು (ಹನ್ನೂರು. ೬೮). ೬. ಎಳೆಯ ವಯಸ್ಸು ; ಚಿಕ್ಕಂದು ; ಎಳಮೆ : ಇವನ ಚೆಲುವಿನ ಪುಂಜ ಹೋಯ್ತೆ ಮರಿಯಲ್ಲೆ ! (ಕುತೆ. ೪೩-೮). ೭. [ವೀಶೈ] ಮಠದ ಉತ್ತರಾಧಿಕಾರಿಯಾಗುವ ಶಿಷ್ಯ : ತಮ್ಮ ಕಡೆ ಕಂಟ್ಲೆಬಸವಲಿಂಗೈಯ ಸಹಾ ಎರಡು ಜನ ಮರಿಗಳ ಕಳುಹಿಸಿ ಇದ್ದರು (ರಾಜೇಂದ್ರ. ೨೦೪); ಮಠದ ಮರಿ ಹರಿಣಶಿಶುವಿಗೆ ಧಾನ್ಯ ತಿನಿಸುತ್ತಿರುವುದನ್ನು ನೋಡುತ್ತ ಕುಳಿತಿದ್ದರು (ದೀಶಚ. II. ೪೪).

**ಮರಿಹಬ್ಬ** = ಸಾಮಾನ್ಯವಾಗಿ ಹಳ್ಳಿಗಳಲ್ಲಿ ಗ್ರಾಮದೇವತೆಯ ಜಾತ್ರೆಮಾಡಿ ಕುರಿ, ಮೇಕೆ ಮುಂತಾದ ಪ್ರಾಣಿಗಳನ್ನು ಬಲಿಕೊಟ್ಟು ಮಾಡುವ ಹಬ್ಬ : ಗೌಡರುಗಳೆಲ್ಲಾ ಮರೀಹಬ್ಬಕ್ಕೆ ಬೇಕಾಗುವ ಮರಿಗಳನ್ನು ಅಂದರೆ ಟಗರು ಮತ್ತು ಹೋತಗಳನ್ನು ತರುತ್ತಾರೆ (ಹನ್ನೂರು. ೪೪).

**ಮರಿಹಾಕು** = ೧. (ಪ್ರಾಣಿಗಳು) ಮರಿಯನ್ನು ಪ್ರಸವಿಸು ; ಈಯು : ಬರಹದಲ್ಲಿದ್ದ ಕರಿ ಮರಿಹಾಕೀತೇ ? (ಗಾದೆ) ; ನಮ್ಮ ಮನೆಯಲ್ಲಿ ಬೆಕ್ಕು ಮರಿಹಾಕಿದೆ (ಶೂಡ). ೨. (ಆಲಂ) ಮರುಕಳಿಸು ; ಮತ್ತೆಬರು : ಅನಂತರ ತಿರುಗಿ ಹುಳಿತೇಗು ಮರಿಹಾಕುತ್ತದೆ (ಪಃಸೋಚಂ. ೦೦೪). [ದೇ.॥ ತಮಿ. ಮಲ. ಮಱಿ; ತುಳು. ತೊದ. ಮರಿ ; ತೆಲು. ಮಱಕ ; ಕೋತ. ಮಯ್ರು]

**ಮಱಿದಿಂಗಳ್** (ನಾ). ಎಳೆವೆರೆ ; ಬಾಲಚಂದ್ರ : ಮಱಿದಿಂಗಳನು ಮುಡಿದನೆಲ್ಲಿರ್ದಪನೊ . . . ಕಂಡಿರೇನಯ್ಯ (ಸಿದ್ಧರಾ. ೨-೬೨).

**ಮಱಿದಿಂಗಳ ಪಚ್ಚಂ** = ಎಳೆಯ ಚಂದ್ರನನ್ನು ಆಭರಣವಾಗಿ ಧರಿಸಿದವನು ; ಚಂದ್ರಶೇಖರ; ಶಿವ : ಕುಳಿರ್ವೆಟ್ಟುವಮಗಳುವೆರಸೆಳಸುವ ಮಱಿದಿಂಗಳ ಪಚ್ಚಂ ಪೆಮ್ಮೆಯ ಸಮ್ಮಂಗುಡುಗೆಮಗೆ (ಉದ್ಭಟೀ. ೬-೩). [ಮಱಿ + ತಿಂಗಳ್]

**ಮಱಿದುಂಬಿ**, ಮರಿದುಂಬಿ (ನಾ). ಎಳೆಯ ತುಂಬಿ ; ದುಂಬಿಮರಿ : ಬಿರಯಿಗೆ ಮೊರೆವಂತೆ ಮೊರೆವ ಮಱಿದುಂಬಿ . . . ಸೊಗಯಿಸುಗುಂ (ಅಂಕು. ೬-೦೦೦) ; ಮಱಿದುಂಬಿಯಾಗಿ ವೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್ (ಕಂಶಚಾ. ೪-೨೪) ; ಇಬ್ಬರತಿಗಳಗಳನೆ ನವವನಾಂತರದ ಕೊಳನೊಳಗೆ ಮಱಿದುಂಬಿಯುಂ ಸಣ್ಣನನೆಯುಂ ಬೆಳೆವವೋಲ್ ಬೆಳೆದರು (ಸಿದ್ಧರಾ. ೦-೬೨). **ಮರಿದುಂಬಿ** : ಉಳ್ಳಲರ ಜೇನ್ ಗುಡಿದು ಮರಿದುಂಬಿ ಕೂಗಿ (ಕುತು. ೪೪-೬). [ಮಱಿ + ತುಂಬಿ₁]

**ಮಱಿಪನ್ನಾಯ** (ನಾ). ಚಿಗುರುವೀಳೆಯದೆಲೆಯ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಮೆಳಸು ಹೇಱಂಗೆ ಬಳ್ಳ ೧ ಹಸುಬೆಗೆ ಮಾನ ೧ ಮಱಿಪನ್ನಾಯದಲ್ಲಿ ಎಲೆಯ × × × (ಎಕ. II, ೩೪೯-೬೭ ; 1159). [ಮಱಿ + ಪನ್ನಾಯ]

**ಮಱಿಮಗ**, ಮರಿಮಗ (ನಾ). ಮೊಮ್ಮಗನ ಅಥವಾ ಮೊಮ್ಮಗಳ ಮಗ : ಏನೆಲವೊ ನಿನಗಿನಿತು ಹೊಗಳುವಡೇನಹನೊ ನೀನಾ ನರೇಂದ್ರನ ಸೂನುವೋ ಮೊಮ್ಮಗನೊ ಮಱಿಮಗನೋ (ಕೊರಚಾ. ೬-೨-೩೪). **ಮರಿಮಗ** : ಸಿಂಹಪೋತನು ತನ್ನ ಮರಿಮಗನೊಡನೆ ಕಾದಿರುವುದು ಅಸಂಭವ (ಕಡಾಇ. ೦೨೨).

**ಮರಿಮಕ್ಕಳು** = ಮೊಮ್ಮಗನ ಅಥವಾ ಮೊಮ್ಮಗಳ ಮಕ್ಕಳು : ತನ್ನ ಮರಿಮಕ್ಕಳು ದಾರಿಪಾಲಾಗಬಾರದೆಂಬ ವಿಚಾರ ಮನೆತನದ ಅಸ್ತಿವಾರವನ್ನು ಬಲಪಡಿಸಿತು (ಪಾತಕ. ೩). [ಮಱಿ + ಮಗ]

**ಮಱಿಮೀನ್**, ಮರಿಮೀನು, ಮಱಿಮೀನು (ನಾ). ಎಳೆಯ ಮೀನು ; ಮೀನಿನ ಮರಿ : "ಕ್ಷುದ್ರಾಂಡಮೆನೆ ಪುಱಿಮೀನ ಪೊತ್ತಕ್ಕೆ ನಾಮಂ" (ಪಂಗಚಾ. ೦೨೦-೬) ; ಕಂಗಳು ಹೊಳೆಯೆ ಮಱಿಮೀನೆಂದು ಹಕ್ಕಿಳಿಸಿದರು ಹಿಡುಹಿನಲಿ . . . ತುಂಬಿಗಳೆಂದು ಕುರುಳಂಗಳೂಕಿ ಕೈಗಳ ತೆಱೆದರತಿ ಮುಗುದೆಯರು ಖಚರಿಯರು (ಕುವ್ಯಾಕ. ೦೦-೨೮) ; ಪೆಚ್ಚಿದಿಂಗುಡಲೂರ್ವಿ ಮಾಲೆ ಮಾಲೆಗಳೆಡೆಯೊಳುಚ್ಚಳಿಸಿ ಹೊಳೆಹೊಳೆವ ಮಱಿಮೀನ್ಗಳೆನೆ . . . ಎಳವೆಂಗಳ ಕಟಾಕ್ಷದ ಮರೀಚಿಗಳ್ ಸೊಗಯಿಸಿದುವು (ಕೃಚಿಚಾ. ೬-೦೦). **ಮರಿಮೀನು** : ಹೊಳೆಯಲ್ಲಿರುವ ಮರಿಮೀನುಗಳು ಬಿಸಿಲಿನಲ್ಲಿ ಹೊಳೆಯುತ್ತಿವೆ (ಶೂಡ). **ಮಱಿಮೀನು** : ಅಗಿದು ಹೊಳೆವಕ್ಕಿಗಳ ಮಱಿಮೀನುಗಳ ವಿಕಸಿತವದನಕಂಜಾಳಿಗಳ . . . ಕಾಂತಾಸರಸಿ ರಂಜಿಸಿತು (ಕೊರಚಾ. ೦-೦೫-೩) ; ಎಳೆವೆಣ್ಣುಗಳ ಸೋಗೆಗಣ್ಣ ಱಿಮೀನು ಸುಳಿದಾಡುವ ಜನಸಾಗರದೊಳಗೊಪ್ಪುತಿಹುವು (ಕಂಪಂ. ೬-೯). [ಮಱಿ + ಮೀನ್₂]

**ಮಱಿಮೀನು** 'ಮಱಿಮೀನ್' ನೋ.

**ಮಱಿಮುಗಿಲ್** (ನಾ). ಮೋಡದ ತುಣುಕು : ಸಣ್ಣಮೋಡ ; ಬಂದ ಊರ್ವಶಿ ಬಳ್ಳಿಮಿಂಚಿನ ಮುಂದಿಯಲಿ ಮುರಿದಿಳಿವ ಮಱಿಮುಗಿಲಂದದಲಿ (ಕುವ್ಯಾಕ. ೬-೦೩) ; ಮಂಡಳಿಸಿ ಮಱಿಮುಗಿಲಂತೆ ಪಾರ್ವ ಮದಮಧುಕರ ಪ್ರಕರದಿಂದಂ . . . ಸರ್ವಪರ್ವತಸಾರ್ವಭೌಮನಖರ್ವ ಸಂಪದಂ ಮಿಗೆ ಮೆಱೆವುತಿರ್ದುದು (ರಾಜಶೇ. ೧-೦೩೫ ಪ). [ಮಱಿ + ಮುಗಿಲ್]

**ಮಱಿಯಾಚಿಗೂಡಲೂರ್** (ನಾ). ಒಂದು ಸ್ಥಳದ ಹೆಸರು : ಎಳಜ್ಜೂಡಲೂರ್ಪ್ಪರ್ಜಿಯಾಚಿಗೂಡಲೂರ್ಪ್ಪರ್ಜುವಿ ಶ್ರೀಪುರಮಿತಿ ಚತುರ್ಷು ಗ್ರಾಮೇಷು (ಎಕ. X, ಗೌರಿಬಿ. ೪೭-೪೭ ; 762). [ ? + ಊರ್ ]

**ಮಱಿಯಾನೆ₁**, ಮರಿಯಾನೆ (ನಾ). ೧. ಆನೆಯ ಮರಿ : "ಕಳಭಃ. ಕರಿಶಾಬಃ — ಈ ೨ ಮಱಿಯಾನೆ" (ನಾಚಿರಾ. ೬) ; ಮಱಿಯಾನೆಗಳಂ ಪರಿಭವಮನದರ್ಕೆ ಕಂಡು (ಪಂಪಭಾ. ೬೭-೦೮) ; ಮೆಱೆವ ಗಜಹಯಶಾಲೆಯಲಿ . . . ಮಱಿಗುದುರೆ ಮಱಿಯಾನೆ ತೆಗೆದವು ಲಕ್ಕಸಂಖ್ಯೆಯಲಿ (ಕುಮಾ.ಗ. ೪-೦೭). ೨. ಮಕ್ಕಳನ್ನು ಮುದ್ದಿನಿಂದ ಕರೆಯುವಾಗ ಬಳಸುವ ಮಾತು : ಕಂದ ನೀನಚ್ಯುತಪರಾಯಣಂ . . . ಮೋಸದಿಂದ ೪ವೃದುಚಿತವೆ ಮದನ ತನ್ನ ಮಱಿಯಾನೆ ಹಾಯೆಂದೊಱಲ್ದನು (ಕೃಪಿಂಘಾ. ೩೦-೬೦). 'ಅರಗಿಳಿ' ಹೋ. **ಮರಿಯಾನೆ** : ೧. ಈ ಸಾರಿಯ ದಸರಾಮೆರವಣಿಗೆಯಲ್ಲಿ ನಾಲ್ಕು ಮರಿಯಾನೆಗಳೂ ಇದ್ದುವು (ರೂಢಿ).
[ ಮಱಿ + ಆನೆ₁ ]

**ಮಱಿಯಾನೆ₂** (ನಾ). ಒಂದು ಬಗೆಯ ಸಸ್ಯ : "ವ್ಯಾಘ್ರನಖೀ – ಮಱಿಯಾನೆ" (ಓಷಧಿ. ೦೫೨). [ ? ]

**ಮಱಿವಕ್ಕಿ**, ಮರಿಹಕ್ಕಿ, ಮಱಿಹಕ್ಕಿ (ನಾ). ಹಕ್ಕಿಯ ಮರಿ ; ಎಳೆಯ ಪಕ್ಷಿ : ಕಡುವಿಸಿಲ ಮಱಿವಕ್ಕಿಯಂತೆ ಗಂಟಲ್ ಬಿಡುಕಿ (ಶಬಪ. ೦೯-೯೩). **ಮರಿಹಕ್ಕಿ** : ಮರಿಹಕ್ಕಿ ಹಾರಲು ಪ್ರಯತ್ನಿಸುತ್ತಿದೆ (ರೂಢಿ). **ಮಱಿಹಕ್ಕಿ** : "ಕಿಶೋರಕಃ – ಮಱಿಹಕ್ಕಿ" (ಓಷಧಿ. ೩೩). [ಮಱಿ + ಪಕ್ಕಿ]

**ಮಱಿವಾಲು** (ನಾ). ಎಮ್ಮೆ, ಹಸು ಮುಂತಾದ ಪ್ರಾಣಿಗಳು ಕರು ಹಾಕಿದ ಸುಮಾರು ಮೂರುದಿವಸಗಳವರೆಗೆ ಕೊಡುವ ಹಾಲು ; ಗಿಣ್ಣುಹಾಲು : ಮದಗಜದ ಹೃದಯದಲ್ಲಿ ಮಱಿವಾಲಿಪ್ಪುದ ಕಂಡೆನಮ್ಮ ಹುಲ್ಲೆ ಅಱಿಯದೆ ಹುಲಿಯ ಬಾಯ ತುತ್ತಾಯಿತ್ತಲ್ಲಾ ಬಲ್ಲವರ ಕಡೆಯಿಂದ ಭಾಸ್ಕರನು ಉದಯಿಸಲು ಹುಲಿ ಬಿಟ್ಟು ಹುಲ್ಲೆ ಮಱಿವಾಲನುಂಡು ಮರಣವನು ಅಳಿಯಿತ್ತಲ್ಲಾ (ಶಿವೈವ. ೦೫೦-೪೯೪).
[ ಮಱಿ + ಪಾಲು₁ ( < ಪಾಲ್₁ ). / ತೆಲು. ಮುರ್ರುಪಾಲು ]

**ಮಱಿವಾವು** (ನಾ). ಹಾವಿನ ಮರಿ ; ಎಳೆನಾಗರ ; ಮಿಡಿನಾಗರ : ಖಿಡೆಯ ಸರಪಣಿ ತೋಳಬಂದಿಗೆ ಪೆಡೆವಣಿಯ ಮಱಿವಾವುಗಳನಳವಡಿಸಿದನು (ಕುಮಾ.ಕ. ೬-೦೨) ; ಪೊಳೆವ ಮಱಿವಾವಿನಿಂ ಕೆಂಜಡೆಗಳಂ ಬಿಗಿದು (ಕಪು. ೩೦-೯೬). [ ಮಱಿ + ಪಾವು₁ ]

**ಮಱಿವುಲ್ಲೆ**, ಮಱಿಹುಲ್ಲೆ (ನಾ). ಜಿಂಕೆಯ ಮರಿ : ತರಳಿಕೆಯೆಂಬ ನಮ್ಮ ಮಱಿವುಲ್ಲೆಯನೊಂದು ತಪೋವನಕ್ಕೆ ನೀಂ ನಿರವಿಸು (ಶಾಕುಂ. ೩೯೯) ; ಮಱಿವುಲ್ಲೆಗಳಾರ್ದೆಸಗುವ ಬಿಱುಗಾಳಿಗೆ ಬೆದಱುವಂತೆ ಕಾಂತೆಯರೆನ್ನಂ ನೆಱೆ ಕಂಡು . . . ತಳವೆಳಗಾದರ್ (ದಶಾ. ೯-೧೨೧). **ಮಱಿಹುಲ್ಲೆ** : ಅಂಗವಿಸಿ ಮಱಿಹುಲ್ಲೆ ಖುರದಲಿ ಸಿಂಗವನು ಹೊಯ್ವಂತೆ ನೃಪರುತ್ತುಂಗಸಹಸಿಯ ಮೇಲೆ ಕೈಮಾಡಿದರು ಖಡ್ಗದಲಿ (ಕುಮಾ.ಲೀ. ೯-೨೦).
[ ಮಱಿ + ಪುಲ್ಲೆ₁ ]

**ಮಱಿಸಸಿ** (ನಾ). = ಮಱಿದಿಂಗಳ್ : 'ಮಱಿಸಸಿದಲೆಯ' ಪರಾ. [ ಮಱಿ + ಸಸಿ₂ ]

**ಮಱಿಸಸಿದಲೆಯ** (ನಾ). ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಶಿವ : ಮಱಿಸಸಿದಲೆಯ ಕುಡುಗೆ ಮತಿಯಿಸುವುಸಿರನಸವಸದೊಳು (ಅದ್ಭುರಾ. ೬-೨). [ ಮಱಿಸಸಿ + ತಲೆ₁ + – ಅ₇ ]

**ಮಱಿಸೂಳೆ** (ನಾ). ಎಳೆಹರೆಯದ ವೇಶ್ಯೆ ; ಚಿಕ್ಕಪ್ರಾಯದ ಸೂಳೆ : ಮತ್ತೂರ್ವಳ್ ನೆರೆಮನೆಯ ಮಱಿಸೂಳೆಯ ಸೊಬಗಿಂಗೆಟಬಿಲ್ದು ತನ್ನಂತೆ ಪಡಪುದುಗಿ ಗಡಣಕ್ಕೆ ಬಂದ ಹಡಣಗಿತ್ತಿ ಸೂಳೆಗಿಂತೆಂದಳ್ (ಅಪಂಪು. ೬-೦೮ ವ). [ಮಱಿ + ಸೂಳೆ₁]

**ಮಱಿಹಕ್ಕಿ** 'ಮಱಿವಕ್ಕಿ' ನೋ.

**ಮಱಿಹುಲ್ಲೆ** 'ಮಱಿವುಲ್ಲೆ' ನೋ.

**ಮಱು₁**, ಮರು₁ (ಗು). ೧. ಎರಡನೆಯ ; ದ್ವಿತೀಯ : ಪೂರವಟ ಗೊಸಾಸಿಗರಾ ಮಱುಧರ್ಮ್ಮ ತುಸವನಿನ್ ಪಡೆದು (ಇಕ. VIII, ೨೬೩-೩ ; ೨೦೦). ೨. ಬೇರೆಯ : (೯). ೩. ಮುಂದಿನ ; ಭವಿಷ್ಯದ : ' ಮಱುಭವ ' ಪರಾ. ೪. ಪ್ರತಿಯಾದ ; ವಿರುದ್ಧವಾದ ; ಎದುರಾದ : 'ಮಱುಗಣೆ' ಪರಾ. **ಮರು₁** : ೧. ನಾನು ಬಂದ ಮರುದಿನವೇ ಅವರು ಊರಿಗೆ ಹೊರಟರು (ರೂಢಿ). 'ಮರುಜಲು' ಪರಾ. ೩. 'ಮರುಜನ್ಮ' ಪರಾ ೪. 'ಮರುಮಾತು' ಪರಾ. 'ಮಲ₁' ಹೋ.

ಮಾರನೆಯ, ಮಾರನೇ = (ಕಾಲಕ್ಕೆ ಸಂಬಂಧಿಸಿದಂತೆ) ಮುಂದಿನ ; ಆಮೇಲಿನ ; ಅನಂತರದ : ಮಾರನೆಯ ದಿವಸದಿಂದ ರಾಯರ ಕಾರ್ಯಕಲಾಪಗಳಿಗೆ ಪ್ರಾರಂಭವಾಯಿತು (ರಾಜಕೀ. ೯೦) ; ಮಾರನೆಯ ದಿನದ ಧಾರೆಯ ಊಟಕ್ಕೆ ಬಹಳ ತರವೂದು ಬೇಕು (ಪಮೂರು. ೨೨೬) ; ನಾನು ಹೋದ ಮಾರನೇ ದಿನವೇ ನನ್ನ ತಂಗಿಯೂ ಊರಿಗೆ ಬಂದಳು (ರೂಢಿ).
[ದೇ.॥ ತಮಿ. ಮಱು. ಮಱು ; ತುಳು. ಮಾರು ; ತೆಲು. ಮರಿ, ಮಱಿ ; ಕೋತ. ಮರ್ ; ತೊದ. ಮಱ್ ; ಕೋಲಾ. ನಾಯ್ಕಿ. ಪರ್ಜಿ. ಮರಿ]

**ಮಱು₂** (ಅ). ಪ್ರತಿಯಾಗಿ : ಈಗಳಿದೊ ಕೀರ್ತಿಪೆಕ್ ಜಯಲಕ್ಷ್ಮಿ ಬಂದಳ್, ಪಲತೀರ ಥೇಬಾಯ್ಗೆ ಮಱುನಲಿದು ಬಂದಳ್ (ಅಂತಿಗೊ. ೬-೦೩೬). [< ಮಱು₁]

**ಮಱುಂಕ** 'ಮಱುಕ' ನೋ.

**ಮಱುಕ**, ಮರುಕ, ಮರುಕು₂, ಮರುಗು₂, ಮಱುಂಕ(ನಾ). ೧. ತಾಪ; ಉರಿ : ಆ ತೆಟ್ಟ(ರುಗ)ಳುಬ್ಬರದಿಂದಂ ಮಿಡಿದಂದು ಲೋಳೆ ಮಱುಕಂ ಶೋಕಂ ಬೆಮರ್ ತೋಱುಗುಂ (ಲೋಕೋ.ಕ. ೦೦-೨೩). ೨. ಅಳಲು ; ಬೇಗುದಿ ; ಸಂತಾಪ : ಮಱುಕಮಾಮಯಮುಪ್ಪಮೃತ್ಯುವೆಂಬಿವಲ್ಲಿಗೆ ಪೊಱಗೆಂದೊಡಂ ಸುಖಿಮದೇವೊಗಟ್ಟುವುದೊ ಭೋಗಭೂಮಿಯಾ (ಅಂಪು. ೩-೩೦) ; ಮನದ ಮಿಡುಕಿನ ಮಱುಕ ಮುಂದಲೆಗೊಟ್ಟುದಱಿವಿನ ಸ್ಥೆಗು ಹಾಱಿತು (ಕುಮಾ.ಕ. ೦೯-೨೮). ೩. ಚಿಂತೆ ; ದುಗುಡ : ಎನಗೆ ಮನದ ಮಱುಕಂ ಪಿರಿದುಮಾಹಾರಕ್ಕಂತು ಚಿಂತೆಗೆಯ್ವಂ (ಶಂಕಕಂ. ೦೬೩-೦೯) ; ಅಱಿತು ನಿನ್ನನು ಹೊಗಳಲಱಿಯೆವು . . . ಬಱಿಯ ಬಾಯಿಯಲಿ ನಿನ್ನ ಹೊಗಳುವ ಭಟ್ಟರಾರೆಂದು ಮಱುಕವಿಲ್ಲೆಲೆ ನಿಮ್ಮ ಕೂಡೆಮಗಱಿತ ಮುನ್ನವೆ ಶೂನ್ಯ (ಸಂಕಶ. ೪-೨೦) ; ಮುನಿನಾಥ ನುಡಿದುತ್ತರಕೆ ಮಱುತ್ತರವ ಕಾಣದೆ ಮನದ ಮಱುಕದಲಿ ಗುರು ಮುಖಾಂಬುಜವನು ನಿರೀಕ್ಷಿಸಿ (ಶೂರಾ. ೦-೯-೪೦). ೪. ತಳಮಳ ; ಸಂಕಟ : ಮನದ ಕಾಂಕ್ಷೆಯಿಂ ಮುನ್ನಿನಂತುಂಡು ಮುನ್ನಿನ ಮಱುಕದಿಂದಿಮ್ಮಡಿ ಮಱುಕವಾಗೆ ಮಱುದಿವಸಂ ಭಕ್ಷ್ಯದ ದೆಸೆಗೆ ಪೆಕ್ಷಂಗೆಟ್ಟು . . . ಒಲ್ಲೆನೆಂಬುದುಂ (ರಪಾರ್ಪು. ೦-೦೬೨) ; ವಿಷಸಮ್ಮಿಶ್ರಿತಮೋದಕ ಪ್ರಕರಮಂ ತತ್ಪಾಪಿ ತಂದಿಕ್ಕೆ ತದ್ವ್ಯಪಮಾರ್ಗಿಪ್ರಭು ಮೆಲ್ಲು ಪೋಗಿ ಮಱುಕಂ ಕೆಯ್ಗಣ್ಮೆ ಪೊಣ್ಮಲ್ (ಪೆಂಬಿಪು. ೦೯-೦೨೨). ೫. ಅಕ್ಕರೆ; ಪ್ರೀತಿ: ಎನ್ನವರನ್ನಿಗರೆನುತುಂ ಮಱುಕಂ ಮಚ್ಚರಗೊಳ್ಳದ ಸತ್ಯಕ್ಕೆಱೆವೆಟ್ಟೆನಿಸುವ ಸಾಧುಸಮಿತಿಗತಿಸಮಿತಿಯೊಳೆಱಗುವೆನು (ಜಯ್ತಾ. ೦-೩) ; ವಾಯಸಪ್ರತತಿ . . . ಕೋಗಿಲೆ ಮಱಿಗಳಂ ಮೈಯೊಳ್ಪುದುಗಿಕೊಂಡು ಮಱುಕದಿಂದ್ಪೆದೆ ಪಾಲಿಸುತಿರ್ದುವು (ಕೃಪಿಂಘಾ. ೨೮-೪); ತನ್ನ ಪೆತ್ತವರಿಗೆ ಮಿಗಿಲು ತನ್ನನಿಯನ ಪೆತ್ತವರೆಂದವರನು ಮನ್ನಿಸುವುದು ಮಱುಕದೊಳು (ಹರಿಶ. ೪-೪). ೬. ದಯೆ; ಕರುಣೆ : ವಾಸರಪತಿ ಬಿಸುಗದಿರಿಂ ಪೇಸದೆ ತಪೆ ಪೀರ್ಗುವೆಂಬ ಮಱುಕದೊಳಂಭೋಜಾಸನನಂಬುಜವನಮಂ ಬಾಸಣಿಸಿದನೆನಿಪುವಿಡಿದ ತಾವರೆಯೆಲೆಗಳ್ (ಚಾಪ್ಯಾಕ. ೨೬೭); ತನಯಂ ನಿನಗಾಗಲೆಂದು ತಪಮಂ ಮಾಟಿಪ್ಪಾತನ ಮಱುಕಮೆ ಸಾಲದೆ (ಅರ್ದಶೀ.೦-೦೦೯); ಆಡಿದೊಡೆ ಹಾವಿಗೆ

ಹದ್ದಿನ ಕೂಡೆ ಮಱುಕವೆ (ಕುವ್ಯಾಕ. ೧೯-೩೦). ೭. ಅತಿಶಯವಾದ ಮೋಹ; ವ್ಯಾಮೋಹ : ಅಱಿವುಗೆಡಿಸುತ್ತುಮೆಲ್ಲಾ ತೆಱದಿಂ ದೆಸೆಗೆಡಿಸದಿರದು ವಿಷಯಸಮೂಹಕ್ಕೆಱಗಿ ಬಿಡದಂತೆ ಪತ್ತುವ ಮಱುಕಂ ದಿಱಿಮ್ಮೋಹದಂದದಿಂ ಮಾನಿಸರಂ (ಕಾದಂಪೂ. ೩೪೮); ಅರ್ಥದ ಮಱುಕಕ್ಕೆಣೆ ಮಱುಕಮೊಳವೆ ಬಗೆವೊಡೆ ಜಗದೊಳ್ (ರಪರಾಜವ್ಯಾ. ೦೩-೨೩೩); ಎನ್ನೊಡಲ ಮಱುಕಮಂ ಬಿಟ್ಟೆನು (ಕೈವಿಚಾ. ೦೦-೪). ೮. ಕಷ್ಟ ; ಬವಣೆ ; ತೊಂದರೆ (?): ಇಱುಯದೆ ಕೆಮ್ಮನುಂತೆ ಭುವನಂಗಳಸುಂಗೊಳೆ ತಕ್ಕುದೆಂದೊಡೆಮಱುಕಮನೆಂಬುದೇವಿರಿದೆನ್ನ ಭುಜಾಸಿಗೆ (ಕಾವ್ಯಸಾ. ೪೦೦ ಹೂದ್ರಕ). ಮರುಕ : ೨. ಬಾಯ್ಮುಡುಗೆ ಮರುಕದಿಂ ಮಾತನಾಡಿದಳು (ಕಾಲೂರ. ೦೭೪-೪೬೯). ೫. ಧ್ವನಿಯಲ್ಲಿ ನಡುಕ, ಅದಕ್ಕಿಂತ ಅಧಿಕವಾಗಿ ಮರುಕ ತುಂಬಿತ್ತು (ಕೃಷಿ. ೨). ೬. ಬೀದಿಯಲ್ಲಿ ಸಾಯಲು ಬಿದ್ದಿದ್ದ ಈ ಹುಡುಗನನ್ನು ಕಂಡು ಮರುಕವೆನಿಸಿತು (ಕೀಪೋಲ. ೭೦); ನನಗೆ ಅವಳ ಮೇಲೆ ಅತಿಶಯವಾದ ಮರುಕ ಉಂಟಾಗಿತ್ತು (ಬಾಡಳ. ೩೩೦). ಮರುಕ್ಕು₂: ೨. ತನ್ನ ಮರುಕಿಗೆ ಮರುಗಿ ಆಣೆಕಲ್ಲೊಲು ಕರಗಿ ಬಿಟ್ಟ ನಿಟ್ಟುಸಿರೆ ಚಂದನದ ತಂಪು (ಗಂ. ೫೪-೦೯). ೫. ಗಿರಿಜೆ ತಪದಾರಂಭಕಾಲಕೆ ಮರುಕಿ ನಿಂದೂರಿರ್ದ ತರುಗಳು ಭರದಿ ಪೆರ್ಮರಗಳಿಗೆ ಸರಿಯಾಗೀಗ ಫಲಗಳನು ಧರಿಸಿ ಮೆರೆಯುತ್ತಿರಲು (ಶಾಪಕ. ೨-೩೦); ತನ್ನಯ ತರಳನಿಗೆ . . . ರಾಜ್ಯವನು ಮರುಕಿನಿಂದರ್ಪಿಸಿದ ಮೂಲಕ ಸರಪತನಯನಿಗೆ . . . ಭೋಗಿಪುದೊಂದೆಯುಳಿದಿಹುದು (ರಘುವಂ. ೦೯-೩). ಮರುಗು₂ : ೪. ಮರುಗು ಮರುಕವು ಕೂಡಿ ಎರಡಲ್ಲ ಒಂದಹುದು ಎರಕ ಹೊಯ್ದಂತಹುದು ರಾಮರಾಮಾ (ಕೂರ್ಮೆಪಾ. ೬೨-೩). ಮಱುಂಕ : ೨. ನನೆಗಣೆಯೇಕೆ ಕಾಮ ಪೆಜಿಸಾರ್ ಮುಳಿಸೇಕೆ ಜಯಂತ . . . ಮನದ ಮಱುಂಕಮೇಕೆಲೆಲೆ ಭದ್ರಕ ಮೆಲ್ಲನೆ ಜಾಱು (ಕಲಿತ. III, ೩೩ ಬಿತ್ತಿಸಪುಕ್ಕ ಕಥೆ). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ.

[<ಮಱುಗು./ತಮಿ. ಮಱುಕ್ಕಮ್]

**ಮಱುಕಂದೋಱು** (ಕ್ರಿ). ಕನಿಕರಿಸು ; ದಯೆತೋರು : ಚಱಿದ ಮಱುಕಂದೋರ್ದು ತಳ್ವುದೇತರ್ಕೆ? (ಐವ್ಯಕೃ. ೨-೪೨).

[ ಮಱುಕ + ತೋಱು (< ತೋಱು) ]

**ಮಱುಕಂಬಡೆ, ಮಱುಕವಡೆ** (ಕ್ರಿ). ೧. ಪ್ರೀತಿಯಿಂದ ಕೂಡಿರು; ಅಕ್ಕರೆಯಿಂದಿರು: ಪೆಡೆಯಂ ಕೊಡೆಯಂತಿರೆ ಪಿಡಿದಡಿಯೊಳ್ ನೆಱೆ ನಿಂದ ಮಱಿಯನಾನನದೆಲರಿಂ ಬಿಡದಾಶ್ವಾಸಿಸಿ ಮಱುಕಂಬಡೆದೋವುತ್ತಿರ್ದು ದುರಗಿ ಪರ್ಬಿದ ಬಿಸಿಲೊಳ್ (ರಾಜಶೇ. ೩-೪೪). ೨. = ಮಱುಕಂದೋಱು: ಈ ಬುದ್ಧಸಮಯಮಂ ಪರಿಪಡಿಸಿ ಮನಗೊಂಡು ನಿನ್ನ ಬೆಂಬಳಿಯಲ್ಲಿ ಬಂದು ದೇಸಿಗನಾದನೀಗಲೆನ್ನಾ ಮನದಾಣ್ಮನೆಂದು ಮಱುಕಂಬಡೆಯದೇ ನನ್ನ ತನುಜನಂ ಕೊಂಡೆಯಲ್ಲಾ (ಸಮ್ಯಕೌ. ೯-೪೭). **ಮಱುಕವಡೆ** : ೨. ಹಡೆದ ಮಗನಂ ಪೆತ್ತ ತಂದೆತಾಯ್ಗಳು ಮಱುಕವಡೆಯದರ್ಥವ ಬಯಸಿ ಕಯ್ಯಾರೆ ತಲೆಯ ಹರಿಗಡಿದು (ಸಮ್ಯಕೌ. ೨-೬೩). [ಮಱುಕ + ಪಡೆ₁]

**ಮಱುಕಣಿಸು** 'ಮಱುಕಳಿಸಂ' ನೋ.

**ಮಱುಕವಡೆ** 'ಮಱುಕಂಬಡೆ' ನೋ.

**ಮಱುಕಳಿ, ಮರುಕಳಿ** (ನಾ). ಹಿಂತಿರುಗಿದುದು : ಮತ್ತೆ ಕಾಣಿಸಿಕೊಂಡುದು: "ಮಱುಕು[ಕ]ಳಿಯೊಂದು ಮರಳ್ವುದು" (ಶಬಸಾ. ೭೦-೬೨೩); "ಮಱುಕು[ಕ]ಳಿ ಮರಳ್ವುದಕ್ಕುಂ" (ಕಬಕಂ. ೨೪೦). **ಮರುಕಳಿ** : ನನ್ನ ಕಣ್ಮನಗಳಿವು ಸ್ವಲ್ಪವಾಟ್ಟಿಗೆ ಮುನ್ನವೇಗಕ್ಕಾಗಿ ಪೋಡದ ಮರುಕು[ಕ]ಳಿಯಲ್ಲಿ ಹಮ್ಮುಯ್ಯಿಸಬೇಕು (ವಂತ್ರಿಕ. ೭೦೯-೩).

[ ದೇ.‖ ತಮಿ. ಮಱುಕಲ್ ]

**ಮಱುಕಳಿಸು, ಮರುಕಳಿಸು, ಮರುಕೊಳಿಸು, ಮಱುಕಣಿಸು, ಮಱುಕೊಳಿಸು** (ಕ್ರಿ). ೧. (ದುಃಖ, ರೋಗ, ನೆನಪು ಮುಂತಾದವುಗಳು) ಪುನಃ ಕಾಣಿಸಿಕೊಳ್ಳು; ಮತ್ತೆಬರು : ನೀಂ ಬಱದೆ ಬಂದುದನಱ ದಾಗಳೆ ಮಱುಕಳಿಸಿ ಮನವಿಕ್ಕಿದಳಪ್ಪೊಡೆ ಬಱಿಕ್ಕೆಸಾಧ್ಯಮಕ್ಕುಂ (ಕಂತಕಂ. ೨೬೦-೦೮); ಮಱುಕಳಿಸಿ ಬಂದ ಜ್ವರವುಳ್ಳವರು ಬೇವಿನ ಸೊಪ್ಪಿನ ಕಡ್ಡಿ . . . ಪರ್ಪಾಟಕ ಇವಱ ಕಷಾಯವ ಪಾನವ ಮಾಡುವುದು (ವೈದ್ಯಸಾ. I, ೦೨೮). **ಮರುಕಳಿಸು** : ೧. ಭೀತಿಯಿಂದ ನಿರ್ವಿಣ್ಣವಾದ ಮೋರೆಯ ಬಣ್ಣ ಇನ್ನೂ ಮರುಕಳಿಸಿರಲಿಲ್ಲ (ಪುಟರುಮಾ. ೨೩೩); ಅವನ ಬೇನೆ ದಾರುಣವಾಗಿ ಮರುಕಳಿಸಿದ್ದನ್ನು ನೋಡಿ ಡಾಕ್ಟರರು ತೀರ ಚಿಂತಿತರಾದರು (ಇಶ್ವಕ. ೩೪೪); ಗುರುತಿನ 'ಆಭರಣ'ವನ್ನು ಅರಸನು ಕಂಡಾಗ ನೆನಪು ಮರುಕಳಿಸುವದು (ರಪರಾಸಾ. ೬೯). ೨. ಪುನರಾವೃತ್ತಿಮಾಡು : ಅವಳು ಕೂಡ ವಿದೇಶಗಳಲ್ಲಿ ಏನೇನು ಮಾತನಾಡಿದ್ದಾಳೆಂಬುದು ಆ ಪ್ರಚಾರ ಪತ್ರಗಳಲ್ಲೇ ಇದೆಯಲ್ಲ; ಅವಳ ಮಾತುಗಳನ್ನೇ ಅವರು ಮರುಕಳಿಸಿದಂತಿದೆ (೭೦ಬಿದ. ೦೨). **ಮರುಕೊಳಿಸು** : ೧. ಕಾಗದಗಳು ಸೇರಿ ಮೈಸೂರಿನಲ್ಲಿ ಹಿಂದಿನ ಕಥೆಯೆಲ್ಲ ಮರುಕೊಳಿಸಿತು (ಮುಹಾಗ. ೩೦೯); ಅವನ ವೇದನೆ ಮರುಕೊಳಿಸಿತು (ರಂಗರೋ. ೦೮). ೩. ಪುನಃ ಉಂಟುಮಾಡು ; ಮತ್ತೆ ಒದಗಿಸು,–ತರು : ಇಲ್ಲಿಗೈತಹ ಯಾತ್ರಿಕರ ಎದೆಯ ಮೂಷೆಯಲಿ ಹಾಳಾದ ಐಸಿರಿಯ ಕಿಚ್ಚ ಮರುಕೊಳಿಸು ! (ಕೋಟಗಿರಿ. ೪೦-೪). ೪. ಮತ್ತೊಮ್ಮೆ ಹುಟ್ಟು; ಪುನಃ ಮೂಡು : ಎಳೆವಗೆಯಲಿ ಇಳೆ ಜಗಿಯಲಿ ಮರುಕೊಳಿಸಲಿ ಹೂವು (ಅರಳು. ೩೬೪-೦೩); ಎಲ್ಲೆಲ್ಲಿ ಹುಲ್ಲನ್ನು ಕಿತ್ತಿರಲಿಲ್ಲವೊ ಅಲ್ಲೆಲ್ಲ ಅದು ಮರುಕೊಳಿಸಿ ನಳನಳಿಸುತ್ತಿತ್ತು (ಕೃಷಿರು. ೩). **ಮಱುಕಣಿಸು** : ೧ ಬಂಧುಜನನಿರೀಕ್ಷಣದಿಂ ಶೋಕಂ ಮಱುಕಣಿ[ಪಾಠಾಂ. ಕೊಳಿ]ಸೆ ಬಾಯಱಿದು ಪಳಯಿಸುವ ಕುಂತಿಯುಮಂ. . . ಸಂತೈಸಿ (ಕಂಕಥಾ. ೨-೨೯ ವ); ನಿಜಪ್ರಿಯತನುಜಾನುಜರ ಶೋಕದಿಂ ವಿಹ್ವಲೀಕೃತನಪ್ಪ ಭೂತಳೇಶ್ವರಂಗೆ ನಿಜಪ್ರಿಯಸಖನಪ್ಪ ಕರ್ಣನ ದರ್ಶನದಿಂ ದುಃಖಂ ಮಱುಕಣಿ[ಪಾಠಾಂ. ಕೊಳಿ]ಸುಗುಂ (ಗದಾಯು. ೩-೯ ವ); ಬಱಿ ದುರಿವ ಕಿಚ್ಚಿನೊಳು ತುಪ್ಪವನೆಱೆದ ತೆಱನಾಯ್ತುವರ್ಗೆ ದುಃಖಂ ಮಱುಕಣಿಸಿ ನೋಯಿಸಿತು ವಿನಯವರ್ಣವನವಾಳವಚನಂ (ಶಾಸಂಕ. ೭-೪೭). **ಮಱುಕೊಳಿಸು** : ೧. ಪಾಂಚಾಲಸುತೆಯ ವಿವಾಹವಾರ್ತೆಯ ಕೇಳಿದರಲ್ಲೆ ಕೌರವರು ಮಱುಗಿದರು ಮಱುಕೊಳಿಸಿ (ಕುವ್ಯಾಆ. ೦೭-೦); ಸಾವುವನು ಬೆಳಸದೆ ವೃಥಾ ಸುತ್ರಾಮತನದಲಿ ಬೆಱತೆನಿದಕೆ ವಿರಾಮವಾಗದೆ ಮಾಣ ದೆಂದಳಲಿದನು ಮಱುಕೊಳಿಸಿ (ಶಿಶಾಗ. ೬-೭-೯). ೫. ಪುನಃ ಪುನಃ ಪ್ರಯತ್ನಿಸು : ಅಳಲಿಸಿವನೇ ಧರ್ಮಪುತ್ರನ ಬಳಿಚಬಿಟ್ಟೆನು ನಾಯ ಕೊಲ್ಲದೆ ಕಳುಹಿದರೆ ಬೆಂಬಿಡನಲಾ ಮಱುಕೊಳಿಸಿ ಮಱುಕೊಳಿಸಿ (ಕುವ್ಯಾಕ. ೦೩-೩೦); ಅಱಿಸಿದರು ತಾವಿದ್ದ ತಾಣದ ತೆಱವುಗಳ . . . ಮಱುಕೊಳಿಸಿ ಮತ್ತೊಮ್ಮೆ ಮನೆಯೊಳಗಱಸಿ ಕಾಣದೆ ಕಂಬನಿಯ ಕಟ್ಟೊಱತೆಯಲಿ ಕರೆಕರೆ ಪುತ್ತೈತಂದರು ವನಾಂತದಲಿ (ಕೂರಂಬ. ೩-೦೦-೩೦). [ಮಱುಕಳಿ + – ಇಸು₃]

**ಮಱುಕುಳಿ** (ನಾ). ಮರುಗುವ ಸ್ವಭಾವದವನು : ಇಳದಲಿಯನೇಳದಂ ಸೂಕುಳಿಯೋಕುಳಿ ಕಳಱು ಪೆಳಱು ಮಱುಕುಳಿಯುಳಿಯುಂ . . . ಇಱಿ ಕುಳಿಯುವಾದಿಯಾಗಱೆ ಕುಳನಂ (ಕಪುರ. ೨೬); ಕುಳಿ ಪ್ರತ್ಯಯಕ್ಕೆ– ಪೋರ್ಕುಳಿ . . . ಮಱುಕುಳಿ (ಕಪುರ. ೨೦೩ ಪ್ರಯೋ). "ಪ್ರೀತಿ" (ಕಪುರ. ವ. ೨೦೩ ಅಂಬಿ). [<ಮಱುಗು + – ಕುಳಿ₃]

**ಮಱುಕೂಳೆ, ಮರುಕೂಳೆ** (ನಾ). ಪೈರನ್ನು ಕೊಯ್ದು ಬಳಿಕ ತಳದಲ್ಲಿ ಪುನಃ ಚಿಗುರುವ ಮೊಳಕೆ : ಒಗೆದ ಮಱುಕೂಳೆಯೊಳ್ ತೆನೆಗಳಂ ಕೊಯ್ದುನುಱೆ ಸುಗುಣನಿಳೆಹಾಳಬೊಮ್ಮಯ್ಯನುಂ (ಬಸವು. ೩೭-೨೬). **ಮರುಕೂಳೆ** : ಈ ಸಲ ಮರುಕೂಳೆ ಫಸಲು ಬಂದಿದೆ (ರೂಢಿ).

[ಮಱು₁ + ಕೂಳೆ₂]

**ಮಱುಕೊಳಿಸು** 'ಮಱುಕಳಿಸು' ನೋ.

**ಮಱುಗಣೆ** (ನಾ). ಬಾಣಕ್ಕೆ ಪ್ರತಿಯಾದ ಬಾಣ ; ಎದುರುಬಾಣ : ಅಸಮಸಾಹಸಿಯೆಚ್ಚಡೆಚ್ಚನು ಭೀಮ ಮಱುಗಣೆಯು (ಕುಮಾ.ದ್ರೋ. ೦೩–೨೪); ಆ ದಾನವಂ ವೇಗದಿನದಂ ಪಿಡಿದು ಮುಱಿದು ಮಱುಗಣೆಯುಂ ತಲೆದೂಗಿ ಸೆಳೆದಿಡುವುದುಂ (ಅದ್ಭುತ. ೫೦-೦೭). [ಮಱು$_1$ + ಕಣೆ$_1$]

**ಮಱುಗರೆ** (ನಾ). ಒಂದು ಸ್ಥಳದ ಹೆಸರು : ಸೂರ್ಯಗ್ರಹಣೇ ಮಱುಗರೆವಿಷಯೇ ಎಡೆದಿಣ್ಣೇ ಸಪ್ತತಿ ಪ್ರತಿಬದ್ಧಃ (ಮೈ.ಆ. ೦೯೯೨, ೭೩–೦೦೦ ; 819) ; ಮಱುಗರೆಯರ್ ಚಿತ್ತಪ್ಪಜಿಕ್ಕಿಱಿಯಂ ಕಟ್ಟಿಸಿ ನಾಲ್ಕಳವೆಯ ಭಾಗಂ ಬಿತ್ತುವಟ್ಟಂ ಕೆಱೆಗೆ ಕುಡುವುದು (ಎಕ. XI. ಹಿರಿಯೂ. ೩೩–೩; ಸು. ೫೪೦). 'ಮರುಕರ' ಹೋ. [ ? ]

**ಮಱುಗರೆನಾಡು** (ನಾ). = ಮಱುಗರೆ : ಸ್ವಸ್ತಿಶ್ರೀಪುರುಷಮಾಹರಾಜ ಪೃಥುವೀರಾಜ್ಯಂಗೆಯೆ ಸಿಯಗೆಲ್ಲರ್ ಮಱುಗರೆನಾಡು ಮೂನೂಱು ಮಾಳೆ (ಎಕ. XVI. ಕುಣಿಗಲ. ೯೭–೩; ಸು. 750). [ಮಱುಗರೆ + ನಾಡು]

**ಮಱುಗಳಿಗೆ**, ಮರುಗಳಿಗೆ (ನಾ). ಮುಂದಿನ ಗಳಿಗೆ; ಮರುಕ್ಷಣ: ನೀನ್ ಪೋದ ಮಱುಗಳಿಗೆ ಅಡಗಿದ್ದ ಶೂರರೆಲ್ಲರ್ ಬಂದು . . . ಉಯ್ಯರೇ ನಿನ್ನ ಮಗನೊಡನೆ! (ಅಶ್ವಶಾ. ೨೦–೦); ಜಳಧಿಗಳೊಂದೆನೆ ಸೇರಿಯುಮಱಿಯಸದೋಂದೊಡಲ ಬೇಗೆಯಿಾ ಘನಮಹಿಮಂ ಕೆಳೆಗೊಂಡು ವರ್ತಿಸಲ್ ಮಱುಗಳಿಗೆಯೊಳಱಿಗುಂ ಕುಳಿರ್ಮೆ ಸಾಧಾರಣಮೇ (ವಸ್ತುಪ್ರ. ೭–೫೦). **ಮರುಗಳಿಗೆ** : ಈ ಗಳಿಗೆಗೆ ಒಂದು, ಮರುಗಳಿಗೆಗೆ ಮತ್ತೊಂದು ಮಾತನಾಡುವುದೇ ಅವನ ಸ್ವಭಾವ (ರೂಢಿ).
[ಮಱು$_1$ + ಗಳಿಗೆ]

**ಮಱುಗಿಸು**, ಮರುಗಿಸು (ಕ್ರಿ). ೧. (ಹಾಲು, ನೀರು ಮುಂತಾದುವನ್ನು) ಚೆನ್ನಾಗಿ ಕುದಿಸು,– ಅಟ್ಟುವಂತೆ ಮರಳಿಸು : ತುಱುವೆಯ ಬೇರನಿಕ್ಕಿ ತಱುಪೆರ್ಮೆಯ ಪಾಲುಮರ್ಧಮಪ್ಪಿನಂ ಮಱುಗಿಸಿ (ಲೋಕೋಪ. ೬–೦೦); ಅಂಬುವಿನಿಂದಷ್ಟಗುಣಮದರ್ಕೆಂಬುದಱಿಂ ಮಱುಗಿಸಿ ಪದಾವಶೇಷದೊಳ್ ಎಱೆವುದು ಗೋಘೃತಮಂ (ಸಾಳ್ವಶಾ. ೨೭). ೨. ಸುಡು ; ದಹಿಸು : ಮಹಾವಿಷದ ಸಂಕಳೊಳಿಕ್ಕಿ ಕಾಯ್ದು ತನುವಂ ಮಱುಗಿಸುವುದುಂ (ಕಾಂತೀಶ. ೯–೦೦೦ ವ). ೩. ಬೇಯಿಂಸು : ನೀರೊಳ್ ಮಱುಗಿಸಿ ಕುಡು ಕಾಳ್ವೇಳೆಯ ಬೇರಂ ಸಮಾಕ್ಷಿಕಂ ಘೃತದಿಂ ಸಂಹಾರಿಸುಗುಂ ವಮನಂ ವಿಷದಾರುಣಮುಂ ತತ್‌ಕ್ಷಣಂ (ಖಗೇಂದ್ರ. ೨-೦೫). ೪. ಕ್ಲೇಶಕ್ಕೆ ಒಳಪಡಿಸು ; ಹಿಂಸೆಪಡಿಸು : ಪಾಯ್ದುಱಿಕೆಯ ಪಾರೆಯುಂಬುಗಳ ತಂದಲಗುರ್ವಿಸಿ ಸಿಂಧುರಾಜನಂ ಮಱುಗಿಸೆ . . . ಪೊಕ್ಕನಭಿಮನ್ಯು ವಿರೋಧಿಬಳಾಂಬುರಾಶಿಯಂ (ಶಂಕಶಾ. ೦೦–೯೩); ಮನವ ಗೆದ್ದೆಹೆನೆಂದು ತನುವ ಕರಗಿಸಿ ಕಾಯುವ ಮಱುಗಿಸಿ ನಿದ್ರೆಯ ಕೆಡಿಸಿ ವಿದ್ಯೆಯ ಕಲಿತೆಹೆನೆಂಬ ಬುದ್ಧಿಹೀನರಿರಾ ನೀವು ಕೇಳಿರೋ (ಲಿಂಗವ. ೪. ೯೭–೦೦). ೫. ಸಂಕಟಪಡಿಸು ; ಬವಣೆಗೊಳಿಸು ; ಗೋಳಾಡಿಸು : ಮಱುಗಿಸಿ ನಿನ್ನನೀ ಪದಕೆ ತಂದುದು ಮುನ್ನಿನ ಗೆಯ್ದ ದೋಷಂ (ಅದಿಪು. ೩–೯೦); ಅಣಂ ದೆಸೆಗಾಣದ ನೋಟಮಾತುಮಂ ಮಱುಗಿಸೆ ಬಂದುದಂದು ಕರುಣಂ ಬರೆ ವೈರಿನೃಪಾಂಗನಾಜನಂ (ಶಂಕಶಾ. ೦೪–೫); ಮನಮುಂ ಮಱುಗಿಸಿ ಚಿತ್ತಮಂ ಚಿವುಂಟಿ ಕರಣಂಗಳಂ ಖಂಡಿಸಿ . .. ಹೋದಂ (ಪಂಪರ. ೦೭–೨೯). ೬. ಹಾತೊರೆಯುವಂತೆ ಮಾಡು ; ಅಪೇಕ್ಷೆಪಡುವಂತೆ ಮಾಡು : ಸರ್ವಸಂಗಪರಿತ್ಯಾಗಿ ಎಂದೊಡೆ ಭೋಗಕ್ಕೆ ಮಱುಗಿಸುವೆ (ಶಪಾವ. ೦೨-೦೪); ಒಲಿದು ಬಂದವರಾವು ಸೊಬಗಿನೊಳೊಲಿಸಿ ಮಱುಗಿಪ ಮಿಂಡ ನೀನು (ಕುಮಾ.ಆ. ೬–೯೦). **ಮರುಗಿಸು** : ೧. ಪೊತ್ತರೆ ಹಾಲಂ ಮರುಗಿಸಿ ಉತ್ತರಣೆಯ ಬೆಣ್ಣೆಗರಗವೆರಡರ ಬೇರಂ ಬಿತ್ತರದೊಳಿಕ್ಕಿ ಹೆಪ್ಪಿಟ್ಟಳ್ತಿಯೊಳಂ ಕಡೆಯೆ ಬೆಣ್ಣೆ ಮೂವಡಿಯಕ್ಕುಂ (ಗೋವೈದ್ಯ. ೦೪೪).
[ಮಱುಗು + –ಇಸು$_3$]

**ಮಱುಗು**, ಮಱಕು, ಮರುಕು$_1$, ಮರುಗು$_1$ (ಕ್ರಿ). ೧. (ನೀರು, ಹಾಲು ಮುಂತಾದುವು) ಚೆನ್ನಾಗಿ ಕುದಿ,–ಮರಳು : ಮಱುಗುವ ಪಾಲ್ಗಳೆಯು ಪನಿಗಳಂ ಬೆರಸಿದವೋಲ್ (ಕವಿರಾ. ೦–೫೬); ಕಾಮಶರಂಗಳ ವರ್ಗಳೆರ್ದೆಯನುರ್ಚೆ ಪೋಗಿ ಪರವಸೆಯರಾಗಿ ಮಱುಗಿದಱುನೀರ ಮಿಾಂಗಳ್ವೊಲಾದರ್ (ವರ್ಧಮಾ. ೫೭-೦೩); ಗುರುಪುತ್ರನಿದಿರ್ಚೆ ಭೀತಿಯಿಂ ಮಱುಗಿ ತೆರಳ್ದು ತೂಳ್ದು ಸುಱಿಗೊಂಡುದು ಪಾಂಡವಸೈನ್ಯಸಾಗರಂ (ಶಂಕಶಾ. ೦೨–೩೦); ಮಱುಗಿದುದಾ ಕೊಳದ ಜಲಮೆಯ್ದೆ ಕಾಯ್ದಸರೊಳೆ ಕೊಬ್ಬಿದಿವಂತೆ ಕುದಿದುವನಿಮಿಷತತಿಗಳ್ (ಗದಾಯು. ೭–೨೦). ೨. (ಮೋಹ, ಉದ್ವೇಗ ಮುಂತಾದುವುಗಳಿಂದ) ತಪಿಸು; ತಾಪಗೊಳ್ಳು: ನೆನೆದಿರುಳುಂ ಪಗಲುಂ ನಿನ್ನನೆ ಪೀನಮೋಜಲ್ದು ಮಱುಗಿ ಕಾತರಿಸುತ್ತುಂ ಮನದೊಳ್ ಸೈರಿಸಲಾಱೆಂ (ಕವಿರಾ. ೨–೯೩); ವಿಯೋಗಾಕುಳತೀವ್ರಾವಸ್ಥೆಯಿಂದಂ ನೆಱೆ ಮಱುಗುವುದಂ ನೋಡಲೇವೈಸಿದಂತಾಗಳೆ . . . ಅಪರಾಂಭೋಧಿಯಂ ಪೊಕ್ಕನರ್ಕಂ (ಕುಸುಮಾ. ೪–೨೩); ಸಂಗಸುಖಮಂ ಪಿಂಗಲಾಱದೆ ಕಾಮನ ಬಾಣಕ್ಕೆ ಗುಱಿಯಾಗಿ ಮಱುಗಿ (ಗಿರಿಜಾ. ೨–೦೦೫ ವ). ೩. ತವಕಗೊಳ್ಳು ; ಹಾತೊರೆ ; ಕಾತರಪಡು : ಪಾಱಲ್ ಮತ್ತಂ ಮಱುಗುತ್ತಿರ್ದಪೆಯಿನಿಸಂ ಗಱಿಮೂಡಿದ ಬಱಿಕ ನೀನೆ ದಲ್ ಪೋದಪ್ಪೈ (ಕಾದಂಬ. ೭೯೭) ; ಇನ್ನಪ್ಪ ಕಜ್ಜಕ್ಕೆ ಮುನ್ನವೆ ಮಱುಗುವುದಿದಾವ ಕಾರಣಂ (ಶಂಕಶಂ. ೦೫೬–೦೨). ೪. ಕೊರಗು ; ಪರಿತಪಿಸು; ತಳಮಳಿಸು : "ಮಱುಗು—ಸಂತಾಪೇ" (ಶಮಂಧಾ); ಒಡಲುರಿಗುಂ ಮನಂ ಮಱುಗುಗುಂ ಕಿವಿ ಗಿಜ್ಜಿನೆವೋಕ್ಕುಂ(ಆದಿಪು.೦೨–೪೦); ಅಱಿನ ಪಗಂ ಪ್ರಾರ್ಥಿಸೆ ಬಾಂದೊಱೆಯ ಮಗಂ ಮಾಡೆ ಸಂಧಿಯಾವಪುದೆನುತುಂ ಮಱುಗದಿರ್ (ಗದಾಯು. ೦-೭೨); ಕುರುರಾಯರಾಜ್ಯಶ್ರೀಯು ಮುಂದಲೆ ಹೋಯಿತೋ ಹಾ ಎನುತ ಮಱುಗಿತು ಕೂಡೆ ಕುರುಸೇನೆ (ಕುಮಾ.ಕ. ೦೨–೨೮). ೫. ಹೆಣಗು; ತಿಣುಕು ; ಕಷ್ಟಪಡು : ಮಱುಗಿ ಕುದಿದು ಶಾಸ್ತ್ರದ ಬಲದಿಂದಳಿಪಿಂ ಪೇೞ್ದಡಮದು ಕೋಮಳಮಕ್ಕುಮೆ ಸಹಜವಿಲ್ಲದಾತನ ಕಬ್ಬಂ (ರಸರತ್ನಾ. ೦–೪೯). ೬. ಕನಿಕರಿಸು ; ಅನುಕಂಪವನ್ನು ತೋರಿಸು ; ಕರುಣೆ ತೋರು : ಕಂಡು ಮಱುಗದೆ ಸೂನೆಗಾಱನ ದಂಡಿಯಲಿ ಮಗನಂ ವಧಿಸಿ (ಬಸವಪು. ೨೯–೨೦); ಸುಧನ್ವಂಗೆ ಮಱುಗುತೆ ಸಚಿವನಿಂತೆಂದಂ (ಜೈಮಿಭಾ. ೦೦–೩೦); ನೆಱೆ ಗಾಯುವಡೆದಿಹರ್ಕಲರು ನೊಂದವರಿಗೆ ಮಱುಗಿ ಮುಂಗೆಟ್ಟಿಹರ್ಕಲರು (ಕಂಸವ. ೦೫–೭). ೭. ಪ್ರೀತಿಸು : ಮಱುಗಿದಂ–ಕೊರ್ತರ್ಂ (ಶಮಂದ. ಶಂ. ೨). **ಮರಕು**: ೪. 'ಇಷ್ಟೆಲ್ಲ ಮಾಡಿದೆ ... ; ಯಾರು ಹೆಣ್ಣು ಕೊಡುವವರು ಹೇಳಿ ಜಾತಿಗೆಟ್ಟವಳ ಮಕ್ಕಳಿಗೆ ?' ಎಂದು ಮರಕಿದಳು (ಮೂಕಜ್ಜಿ. ೨೩೭). **ಮರುಕು$_1$** : ೪. ಒಡತಿ, ಏನು ಮರುಕುತ್ತಿದ್ದೀರಿ ? ಈ ಗಳಿಗೆಯಲ್ಲಿ ಕಣ್ಣೀರು ಬಿಡಲಿಕ್ಕೆ ನಿಮಗೇನಾಯಿತು ? (ಮಾರವಾ. ೭೩). **ಮರುಗು$_1$** : ೫. ಮಾರುತಿಯ ಬೆರಳ ಲೀಲಾಮಾತ್ರದಿಂದೆ ಭೂತಳಕುರುಳಿ ಮರುಗುತಿರೆ (ವಂಕಾರಾ. ೫–೩–೦೭). ೬. ಆ ಬಡವನ ಕಷ್ಟವನ್ನು ಕೇಳಿ ಅವರು ಮರುಗಿದರು (ರೂಢಿ).
[ದೇ.॥ ತಮಿ. ಮಱುಕು; ತುಳು. ಮರ್ಕುನಿ; ತೆಲು. ಮಱುಗು, ಮರಗು, ಮರುಗು]

**ಮಱುಗುತ್ತ** (ನಾ). ವಾಸಿಯಾದ ಮೇಲೆ ಪುನಃ ಬಂದ ಕಾಯಿಲೆ ; ಮರುಕಳಿಸಿದ ರೋಗ : ' ಮಱುಗುತ್ತಂಬಡು ' ಪರಾ.
[ಮಱು$_1$ + ಕುತ್ತ]

**ಮಱುಗುತ್ತಂಬಡು** (ಕ್ರಿ). ವಾಸಿಯಾದ ಕಾಯಿಲೆಯು ಪುನಃ ಬರು ; ರೋಗವು ಮರುಕಳಿಸು : ಆ ಸಿಂಹಂ ಮಱುಗುತ್ತಂಬಟ್ಟು ಗೊಂಕಱ ಕಟಿಯಂ ಬಯಸಿ ಬಾಯೊಱೆತು ತನಗನುಚರನಪ್ಪುದೊಂದು ನರಿಗೆ ಪೇೞ್ವುದುಂ (ಶಂಕಶಂ. ೨೪೨-೦೪). [ಮಱುಗುತ್ತ + ಪಡು$_1$]

**ಮಱುಗುಹ** (ನಾ). (ಮಾಡಿದ ಪಾಪಕಾರ್ಯಕ್ಕೆ ಪಶ್ಚಾತ್ತಾಪ ಪಟ್ಟು) ದುಃಖಪಡುವಿಕೆ ; ಪರಿತಪಿಸುವಿಕೆ : ದೋಷವನಾರೋಪಿಸುವುದು ಮಾಡಿ ಮಾಡಿ ಮಱುಗುಹ (ಪಶ್ಚಾತ್ತಾಪ, ಅನುತಾಪ) (ಜಾತಿರಾ. ೬).

[ ಮಱುಗು + – ಹ₂ (< – ಪ₂) ]

**ಮಱುಚಲು, ಮಱಚಲು, ಮಱುಚಲು** (ನಾ). ೧. ಮೊದಲ ಮಗುವಿನ ನಂತರ ಹುಟ್ಟಿದ ಮಗು ; ಎರಡನೆಯ ಮಗು : ಮಱುಚಲಾತನನವನ ನೀವೆನು ನೆರಹಲಾಱೆನು ಕೂಳನೆಂದಳು ಕುಂತಿ ನಸುನಗುತ (ಸಂಭಕ. ೨೩-೩೯). **ಮಱಚಲು :** ೧. ನಾನು ಚೊಚ್ಚಲು, ನಮ್ಮ ನೀಲಕಂಠನೇ ಮಱಚಲು (ಮೂರುರಾ. ೦೦೮). **ಮಱುಚಲು :** (ಗು). ೨. ಎರಡನೆಯ; ದ್ವಿತೀಯ: ಬಿಸಿಗೆ ಬೆಚ್ಚಿದ ಎದೆಯು ಮಱುಚಲ ಬಸಿರಿಯು ಬಯಕೆಗೆ ತಗುಬಗೆಯಾಗುತಿರೆ ಕನಸಿಗು ಹೊಳೆಯದ ಬರಸಿಡಿಲೆರಗಿತು (ಸಖೀಗೀ. ೦೦-೯೦) ; ವಸುಮತಿ ಈಗ ಮಱುಚಲ ಬಸಿರನ್ನು ಹೊತ್ತು ಗಾಸಿಯಾದಳು (ಮಣಿಪು. ೩೦) ; ಈ ಮಗುವನ್ನು ಹೆತ್ತ ಎರಡನೇ ವರ್ಷದಲ್ಲಿ ಮಱುಚಲು ಹೆರಿಗೆಯಲ್ಲಿ ಆಕೆ ತೀರಿಕೊಂಡಿದ್ದಳು (ಮನೋಪಂ. ೩೯).

**ಮಱುಚಲು ಮಗ, ಮಱುಚಲ ಮಗ** = ಎರಡನೆಯ ಮಗ : ಹಿರಿಯನಲಿ ಜನಕಂಗೆ ಮೋಹವು ಕಿಱಿಯನಲಿ ಕಡುಮೋಹ ಜನನಿಗೆ ನಿರುತ ಮಱುಚಲು ಮಗನು ದೇಸಿಗನಾಗಿ ಚರಿಸುವನು (ಸಂಶಕ. ಶಂ. ೩೦೦-೩೯); ಇವುಗಳಲ್ಲಿ ಎರಡರಲ್ಲೊಂದು ಪಾಲು ಚೊಚ್ಚಲು ಮಗನು, ಮೂರರಲ್ಲೊಂದು ಪಾಲು ಮಱುಚಲ ಮಗನು . . . ತಕ್ಕೊಂಡು (ಮುಂಬಯಿ. ೩-೦೬); ನನ್ನ ಮಱುಚಲ ಮಗ ಇದೇ ವರುಷ ಮುಲ್ಕೀ ಆದ (ರಕ್ತರ್ವ. ೪).

[ಮಱು₁ + < ಸೂಲ್]

**ಮಱುಜವಣಿ** 'ಮಱುಜೀವಣಿ' ನೋ.

**ಮಱುಜೀವಣಿ, ಮಱುಜೀವಣಿ, ಮಱುಜೀವಣಿ, ಮಱುಜವಣಿ, ಮಱುಜಿವಣಿ, ಮಱುಜೀವಣಿ, ಮಱುಜೀವಣೆ** (ನಾ). ಸತ್ತವರನ್ನು ಪುನಃ ಬದುಕಿಸುವುದೆಂದು ನಂಬಲಾದ ಒಂದು ಬಗೆಯ ಔಷಧೀ ಸಸ್ಯ ; ಸಂಜೀವಿನಿ : ಹೋದ ಜೀವಕ್ಕೆ ತನ್ನ ಕರುಣವೆಂಬ ಮಱುಜೀ [ಪಾಠಾಂ.ಜ] ವಣಿಯ ಹಿಂಡಿ ಎತ್ತಿದನು (ಬಸವ. ಕ. ೪೬೭-೦೦೩೭) ; ಪಂಚಾಕ್ಷರಿ ಮಱುಜೀವಣಿಯು ಚಿತ್ತ ಶ್ರೋತ್ರದೊಳು ಧಾರೆಯನೆಱೆಯಲು ಆತ ನಿನ್ನಂತೆ ಕಾಣಾ (ದೇವಾಪ. ೯೦-೦೫) ; ಈ ಸುಷೇಣನು ಹಿಂದೆ ಪನ್ನಗಪಾಶದಲಿ ರಾಘವನ ರಣದಲ್ಲಿ ವಾಸವಾಂತಕ ಬಿಗಿದ ದಿನ ಮಱುಜೀ[ಪಾಠಾಂ. ಜೀ] ವಣಿಗಳೆಂಬ ಔಷಧವ ಹೇಳಿದನು (ತೊರರಾ. ೭-೩೭-೩೫). **ಮಱುಜೀವಣಿ :** ಹೊರಗಿಗೆ ಬರಿಮಳೆ ಸಂಜೀವಿನಿಯು ಒಳಗಾ ಕರುಣೆಯೆ ಮಱುಜೀವಣಿಯು (ಕರುಣಾ. ೯೪-೦೦) ; ಅಕ್ಕನಿಗೆ ಶ್ರೀಶೈಲದ ಕಲ್ಲು, ಮರ, ಗಿಡಗಳೆಲ್ಲ ಪರುಷ, ಕಲ್ಪತರು, ಮಱುಜೀವಣಿಗಳಾಗಿ ತೋರಿದವು (ಕರ್ನಾಕ. ೭೯) ; ಮಱುಜೀವಣಿಯ ಮರಗಳ ಸಾಲುಗಳು ಮರಣಬಾಧೆಯು ದೂರ (ಸಿದ್ಧಪು. ೬-೬೨). **ಮ ಱು ಜೀ ವ ಣಿ :** ವರ ಜಗನ್ಮೋಹನೆಮ[ ಯ ]ನಂಗಸ್ಮರಣ ಬೀಜಾಕ್ಷರಿ ವಸಂತನ ಹರಣ ಮಱುಜೀವಣಿ ಜಯಂತನ ವಿಜಯ ನಿಜಲಕ್ಷ್ಮಿ ವೆರೆ ನಿರೀಕ್ಷಿಸಿ ನಲಿದು ಕುಳಿತಳು (ಅಂಬಿಕಾ. ೧೦-೩೯). **ಮಱುಜವಣಿ :** ಮರಣವುಳ್ಳವರಿಗೆ ಮಱುಜವಣಿ ಸಿಕ್ಕುವುದೇ (ಅವತಂ. ೨೨೮-೦೦೩೨) ; ಇಂದ್ರಜಿತುವಿಂ ರಾಮನೊಳಗಾಗಿ ಮಡಿದೊಡಾ ಜಾಂಬುವಂ ಹನುಮರಗ್ಗಳದ ಮಱುಜವಣಿಯಂ ತಂದೆಬ್ಬಿಸಿದ ಬಳಿಕ ಮರಳಿ ಯುದ್ಧಂಗೆಯ್ದರು (ಶೀಕ್ಷಶು. ೩-೦೦-೫೦) ; ಮರಣವುಳ್ಳರ್ಗೆ ಮಱುಜವಣಿ ಕಾಣಿಸವವೊಲು . . . ಬೊಂತಲಾದೇವಿಯರು ನನ್ನ ಕಣ್ಗೆ ಕಾಣಿಸದೆ ಗುಪ್ತದಿಂದಿರ್ದು (ಪ್ರಭುಶು. ೮-೯೮) ; ಮಱುಜವಣಿ ಮಾಣಿಕವ ಪಾಸಱೆ . . . ಸಸಿಗಲ್ಲೋಡು ಮೆಱೆಗುಮಾ ಗಿರಿತಟದೊಳ್ (ಶಬಶಂ. ೩-೩೦). **ಮಱುಜಿವಣಿ :** ಸುರಭೂಜಾರಾಮದಿಂದಂ ಮಱುಜಿವಣಿಯ ಪುಂಜಂಗಳಿಂ . . . ರಾಜಸಿತ್ತಾ ನಿರುಪಮವರಶೈಲಂ (ಉದ್ಭಟ. ೦೫-೧೨೦). **ಮಱುಜೀವಣಿ :** ನಾನೇನು ಅಮೃತವ ಸೇವಿಸಿದೆನೆ ಆನು ಮಱುಜೀವಣಿಯ ಕೊಂಡೆನೆ (ಬಸವ. ೯೯೬) ; ಮಱುಜೀವಣಿಯನೞಿ ಸವಿದಮೃತಮಂ ಕುಡಿದಂತೆ . . . ಭಾಸುರ ವಾರಣಾಸಿಯಂ ಹೊಕ್ಕನುತ್ತಮನೃಪಂ (ಹರಿಶ. ೦೦-೩೩); ಸುರಭಿಗಳ ನೆರವಿಯಂ ಪರುಷದ ಸಱಿಯ ಮಱುಜೀವಣಿಯ ಮಡಲ . . . ತೋಱಿದಂ ವೃಶ್ಚಿಕಾರೂಢನು (ಸಿದ್ಧರಾ. ೩-೪); ಆರೂಢದಕ್ಷರದ ಮಱುಜೀವಣಿಯ ಹಿಂದೆ ನೀರು ಮಪ್ರುವೆಯಕ್ಕು (೦ಂಗರೀ. ೩೦೮-೭೦). **ಮಱುಜೀವಣೆ :** ೧. ರಣದೊಳಳಿದ ಸಮಸ್ತ ವಾನರಗಣವನಪರಬ್ರಹ್ಮ ಮಱುಜೀವಣೆಯ ತಂದೆಬ್ಬಿಸಿದನು (ತೊರರಾ. ೬-೩೬ ಸೂಚನೆ); ಮರಣವುಳ್ಳವರಿಗೆಯು ಮಱುಜೀವಣೆ ಸಿಕ್ಕದಂತೆ . . . ಶರಣರ ನಿಲುಗಡೆ ಆರಿಗೂ ಸಿಕ್ಕದಲಾ (ಶೈರಸೂ. I, ೨೩೭). 'ಜೀವಣಿ₂' ಪರಾ.

**ಮಱುಜೀವಣಿಯ ಹಣ್ಣು, ಮಱುಜಿವಣಿಯ ಹಣ್ಣು** = ಸತ್ತವರನ್ನು ಬದುಕಿಸುವುದೆಂದು ನಂಬಲಾದ ಒಂದು ಔಷಧೀಸಸ್ಯದ ಫಲ : ಮಱುಜೀ [ಪಾಠಾಂ. ಜ]ವಣಿಯ ಹಣ್ಣ ಮೆದ್ದು ಮರಣವಾಯಿತ್ತ ಕಂಡೆ (ಶಿವತಂ. ೦೦೦-೪೫೭); ಕರಿ (ಕರಿಯ) ದಾನವನ ಶಿರದಲ್ಲಿ ಮಱುಜಿವಣಿಯ ಹಣ್ಣಿಪ್ಪುದ ಕಂಡೆನಯ್ಯ (ಸಿದ್ಧೇಪ. ೦೯೪-೫೯೦). P ಈ ಉಲ್ಲೇಖ ಅನುಮಾನಾಸ್ಪದವಾಗಿದೆ. ಮೇಲೆ ಕೊಟ್ಟಿರುವ ಬಹುಪಾಲು ಪ್ರಯೋಗಗಳಲ್ಲಿ ಸಾಮಾನ್ಯರೇಫವೇ ಇದ್ದು ಕಾಲದೃಷ್ಟಿಯಿಂದ ಶಕಟರೇಫವನ್ನಾಗಿ ತಿದ್ದಿದೆ. ಈ ಶಬ್ದದ ಸ್ವರೂಪದಲ್ಲಿ ಜೀವನಿ, ಜೀವಿನಿ ಎಂಬ ಸಸ್ಯದ ಹೆಸರಿನ ಶಬ್ದಗಳು, ಮಣಿ (ಗರುಡಮಣಿ ಎಂಬಲ್ಲಿರುವಂತೆ) ಎಂಬ ಔಷಧದ್ರವ್ಯದ ಒಂದು ರತ್ನವೂ ಕವಿಗಳ ಮನಸ್ಸಿನಲ್ಲಿದ್ದು ಭ್ರಮೆಯಿಂದ ಈ ಶಬ್ದಗಳಲ್ಲಿ ಕೆಲವು ಸೃಷ್ಟಿಯಾಗಿರಬಹುದು. ಆದುದರಿಂದ ಅವುಗಳನ್ನು ನೆನಪಿನಲ್ಲಿಟ್ಟು ಈ ಕೆಳಗೆ ಕೊಟ್ಟಿರುವ ವ್ಯುತ್ಪತ್ತಿಯನ್ನು ಸೂಚಿಸಲಾಗಿದೆ.

[ ಮಱು₁ + < ಸಂ. ಜೀವನೀ ]

**ಮಱುಜೀವಣಿಗೆ, ಮಱುಜೀವಣಿಗೆ** (ನಾ). = ಮಱುಜೀವಣಿ : ಮಡಿವವಗೆ ಮಱುಜೀವಣಿಗೆ ದೊರೆಯಲೊಲ್ಲದೇ ಬಿಡುವನೇ (ಪ್ರೌಢರಾ. ೦೯-೮). **ಮಱುಜೀವಣಿಗೆ :** ಜೀವವಿಯೋಗ ತನುವಿಗೆ ಮುಟ್ಟ ಮಱುಜೀವಣಿಗೆ ಬಂದಂತೆ . . . ಗೋರಕ್ಷನಲ್ಲಿಗೆ ಬಂದ ಪ್ರಭುರಾಯ (ಪ್ರಭುಲೀ. ೦೯-೦೪); ಆ ಪುರದ ಗುಲ್ಮಗಳೆಲ್ಲ ಮಱುಜೀವಣಿಗೆ (ಗುರುಚಾ. ೦-೨೬); ಅಂಧಕಂಗೆ ಕಣ್ಣು ಬಂದಂತೆ . . . ಮರಣುಳ್ಳವಂಗೆ ಮಱುಜೀವಣಿಗೆ ದೊರೆಕೊಂಡಂತೆ . . . ನೀವೆನ್ನ ಕರಸ್ಥಲಕ್ಕೆ ಬಂದ ಫಲವು ಇಂತುಂಟಯ್ಯಾ (ಅಜಂದೇ. ೨೯-೭). 'ಜೀವಣಿಗೆ₂' ಪರಾ.

[ ಮಱುಜೀವಣಿ + – ಗೆ ]

**ಮಱುಜಿವಣಿ** 'ಮಱುಜೀವಣಿ' ನೋ.

**ಮಱುಜೀವಣಿ** 'ಮಱುಜೀವಣಿ' ನೋ.

**ಮಱುಜೀವಣಿಗೆ** 'ಮಱುಜೀವಣಿಗೆ' ನೋ.

**ಮಱುಜೀವಣೆ** 'ಮಱುಜೀವಣೆ' ನೋ.

**ಮಱುತ್ತರ** (ನಾ). ಎದುರುಮಾತು ; ಪ್ರತ್ಯುತ್ತರ ; ಎದುರು ಜವಾಬು: ಎಲವೊ ನೀನೆಮ್ಮೊಳ್ ಮಱುತ್ತರವನಾಡಿದೈ (ಶೀಕ್ಷಶು. ೪-೨೨-೦೦). 'ಮಾಱುತ್ತರ' ನೋ.

[ P ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ ]

**ಮಱುದಲೆ** (ನಾ). ಮತ್ತೊಂದು ರೂಪ; ಬೇರೊಂದು ರೂಪ : ಮೃಗಾಂಕನ ಮಱುದಲೆಯೊ ಮೇಣೆನಲು ರಥ ಹೊಳೆದಿಳಿದುದಂಬರದಿ (ಕುಮಾರ. ೭-೦೨). [ಮಱು₁ + ತಲೆ₁]

**ಮಱುದಿನ,** ಮರುದಿನ (ನಾ). ಮಾರನೆಯ ದಿವಸ; ಮುಂದಿನ ದಿವಸ: ಮಱುದಿನಮಾ ಪೊತ್ತಪ್ಪಿನವಾೞಿಕೆಯ ನೀರೂಟ ತಂಬುಲಂಗಳ ಮಾತಂ ತೊಱೆದು . . . ಓದುತ್ತಮಿರ್ಪುದು (ಧರ್ಮಾಮೃ. ೧-೦೩೩); ಮಱುದಿನವೃ ಆದಿನಂದಿಗೆ . . . ಕುಸುಮನವಮಾಲೆಗಳನಿತ್ತು (ಐಸಪ. ೨-೫೦); ನಿಗಮಪವಿತ್ರಜಲಪಾವನನು ಮಱುದಿನ ಯಜ್ಞದೀಕ್ಷಿತನಾದನು (ಕುಮ್ಮಾಸ. ೨-೨೭). **ಮರುದಿನ:** ಹಿಂದಿನ ರಾತ್ರಿ ಬಂದು ಇಳಿದು ಕೊಂಡಿದ್ದ ಅತಿಥಿಯನ್ನು ಮರುದಿನ ಬೆಳಗ್ಗೆ ಹೀಗೆ ಕುಶಲಪ್ರಶ್ನೆ ಕೇಳಿ ಮಾತಾಡಿಸುವುದು ಅನೂಚಾನವಾದ ಪದ್ಧತಿ (ಪಂಟಿರು. ೯೦); ಮರುದಿನಂ ಬೆಳಗಿನಲಿ ಚಿತ್ರಯಾಣತಿಯಂತೆ ಬೀಡುತೆಗೆದುಪು ಕಟಕಮೆಳ್ದು ನಡೆದುದು (ಶಶ್ಯಾಂಗ. ೫೭-೦೫೪೦). [ಮಱು₁ + ದಿನ]

**ಮಱುದಿವಸ,** ಮರುದಿವಸ (ನಾ). = ಮಱುದಿನ: ಮಱುದಿವಸ ಮಿರ್ವರುಂ ಪೊಳ್ಗೆ ಪೋದಲ್ಲಿ (ವಡ್ಡಾರಾ. ೭೭-೦೦); ಮಱುದಿವಸಂ ನೇಸಱ್ ಮೂಡೆ (ಆದಿಪು. ೦೨-೭೪ವ); ಮಕ್ಕಳಂ ಪಡೆಪೆನೆಂದು ಮರ್ದಂ ಕುಡಿದ ಮಱುದಿವಸಕ್ಕೆ ಗಂಡಂ ಸತ್ತಂ (ಧರ್ಮಾಮೃ. ೨-೯೭). **ಮರುದಿವಸ:** ಮರದಿವಸ ಎಂದಿಗಿಂತ ಮುಂಚೆ ಎದ್ದು . . . ಹೋದವನು ಹಿಂದಿರುಗಿದ್ದು ಸಂಜೆಯೇ (ನವತಿ. ೪೭). [ಮಱು₁ + ದಿವಸ]

**ಮಱುದೆವಸ** (ನಾ). = ಮಱುದಿನ: ಇರುಳ್ ಕಂಡ ಕನಸಂ ಮಱು ದೆವಸಂ ನೆನೆವಂತೆ (ಆದಿಪು. ೪-೫ ವ); ಮಱುದೆವಸಂ ಯಾಮಿನೀವಿರಾಮ ಮಪ್ಪುದುಂ ಪ್ರಯಾಣಭೇರಿಯುಂ ಪೊಯ್ಸಿದಾಗಳ್ (ಶಂಕಕಂ. ೦೨೭-೧೯); ಆ ಮಱುದೆವಸದಲಿ ಮಕ್ಕಳುಗಳೆಲ್ಲರ ಕರೆಸಿ . . . ನುಡಿದನು ಕುಮಾರರಿಗೆ (ಸಂಶಕ. ೦೮-೮೪). [ಮಱು₁ + ದೆವಸ]

**ಮಱುದೊತ್ತು** (ನಾ). ಎಲ್ಲರಿಗಿಂತ ಕೀಳಾದ ತೊತ್ತು; ದಾಸಾನು ದಾಸ: ದಾಸಿಯ ವರ್ಗದಲ್ಲಿಪ್ಪೆನು ಶಿವಶರಣರ ಮನೆಯಲ್ಲಿ . . . ಅವರ ತೊತ್ತಿನ ತೊತ್ತಿನ ಮಱುದೊತ್ತಿನ ಮಗನೆಂದು ಕೂಡಲಸಂಗಮದೇವ ಇತ್ತ ಬಾಯೆಂದೆತ್ತಿಕೊಂಡನು (ಬಸವ. ೪೭೨); ಪ್ರಭುದೇವರ ತೊತ್ತಿನ ತೊತ್ತಿನ ಮಱುದೊತ್ತಿನ ಮಗಳಾದ ಕಾರಣ ಜ್ಞಾನಪ್ರಸಾದವ ಕೊಟ್ಟನು (ಮಹಾದೇ. ಐ. ೭೮-೦೪೮). [ಮಱು₁ + ತೊತ್ತು (<ತೊಟ್ತು)]

**ಮಱುಭವ** (ನಾ). ಮುಂದಿನ ಜನ್ಮ; ಪುನರ್ಜನ್ಮ: ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ ನಲಿವುದು ಕಂಡರಾರ್ ಮಱುಭವಂ ಗಳನಿಲ್ಲಿ ವಿಯಚ್ಚರೇಶ್ವರಾ (ಆದಿಪು. ೨-೯); ಬೆಕ್ಕು ಪಾಲಸಲ್ಲದೆ ಪೋಲಿಣ ಬಡಿಯಂ ಕಾಣದೇಬಂತಿಲ್ಲಿಯ ಸುಖಮನೆ ಬಗೆದಲ್ಲದೆ ಮಱುಭವ ದೊಳಾದ ಮಹಾದುಃಖಮಂ ಬಗೆದಯಿಲ್ಲಂ (ಧರ್ಮಾಮೃ. ೬-೦೨೮).

[ಮಱು₁ + ಭವ]

**ಮಱುಮಾತು** ' ಮಱುವಾತು ' ನೋ.

**ಮಱುಮಾತುಗುಡು** ' ಮಱುವಾತುಗುಡು ' ನೋ.

**ಮಱುಮಾತುಗೊಡು** ' ಮಱುವಾತುಗುಡು ' ನೋ.

**ಮಱುಮೆಟ್ಟು** (ನಾ). ಮತ್ತೊಂದು ಹೆಜ್ಜೆ; ಮುಂದಿನ ಹೆಜ್ಜೆ: ಕಂಡವಂ ಮಱುಮೆಟ್ಟ ಮೆಟ್ಟಲೀಯದೆಯೆಸುವ ಕಂಡವಂ ಹುಟ್ಟಿ ಹೋದಲ್ಕೀಯದಂತೆಸುವ ಕಂಡ ಮೃಗಮೊಂದುಮಂ ತಪ್ಪವಾತನ ಮಾಂದೆ (ಕಬ್ಬರ. ದೀ. ೦೨೮-೦೦). [ಮಱು₁ + ಮೆಟ್ಟು₂]

**ಮಱುಮೆಯ್,** ಮರುಮೈ (ನಾ). = ಮಱುಭವ: ಈ ಭವದಿಂದಮಾದ ವಾಸನೆ ಮಱುಮೆಯ್ಗಮಕ್ಕುಂ (ಆದಿಪು. ೪-೫೨); ಮಱುಮೆಯ್ಯೊಳಾದೊಡಂ ಪತಿಯೆನಗಕ್ಕೆ ಲಕ್ಷ್ಮಣಾ (ಕುರಾಮಾ. ೬-೬); ಮಱುಮೆಯ್ಯೊಳೀ ಬನ್ನಮಂ ಕಾಣಲ್ಬಾರದಂತು ಕರುಣಿಸಯ್! (ರಾಮಾಶ್ವ. ೭೭-೩). **ಮರುಮೈ:** ಪ್ರೇಮವು ಹತವಾಗಿರೆ ವಿಕಲ ಮರುಮೈ ಮಾಡುವುದೇ ಸಫಲ? (ಅರಳು. ೦೯೭-೦೦). [ಮಱು₁ + ಮೆಯ್₂]

**ಮಱುಮೊನೆ** (ನಾ). ದೇಹಕ್ಕೆ ಒಂದು ಕಡೆಯಲ್ಲಿ ನಾಟಿ, ಮತ್ತೊಂದು ಕಡೆಯಿಂದ ಹೊರಗೆ ಕಾಣಿಸಿಕೊಳ್ಳುವ ಬಾಣ ಮುಂತಾದ ಆಯುಧಗಳ ತುದಿ: ಮದನನ ಸರಳ ಮಱುಮೊನೆಗಾಪನಂತಃಕರಣ ನೆಱೆ ಕಳವಳಿಸದು (ಕುಮ್ಮಾಅ. ೦೫-೧೭); ಮುಳುಗಿದಂಬಿನ ಮಱುಮೊನೆಯ ಮೈಗಳ ಮಹಾರಥರಾಜಿ (ಕುಮ್ಮಾದ್ರೋ. ೫-೨೭). [ಮಱು₁ + ಮೊನೆ₁]

**ಮಱುಮೊನೆಗಾಣ್** (ಕ್ರಿ). ದೇಹಕ್ಕೆ ಬಾಣ ಮುಂತಾದ **ಆಯುಧಗಳ** ತುದಿಯು ಒಂದು ಪಾರ್ಶ್ವದಲ್ಲಿ ನಾಟಿ, ಮತ್ತೊಂದು **ಪಾರ್ಶ್ವದಿಂದ** ಹೊರಗೆ ಕಾಣಿಸಿಕೊಳ್ಳು: ಅಂಬನೆ ತೆಗೆದು ಪೊಸಗಾಯದಿ **ಬಸವಳಿದು** ಮತ್ತಪನಂಗವನಿಱಿದಳು ಮಱುಮೊನೆಗಾಣುತಲ್ಲಿ (ಶಿವಗೀ. ೦೭೯-೮೦೯); ಮಱುಮೊನೆಗಂಡ ಬಾಣಂಗಳೆದೆಯಿಂದ ಸುರಿವ ಬಿಸಿನೆತ್ತರೇಱುಗಳ . . . ಹಂದಿಯನು ಕೌಶಿಕ ಕಂಪನು (ಹಕಾ. ೭-೭೦); ಮಱುಮೊನೆಗಂಡ **ಪುಷ್ಪ** ಶರದೊಂದು ಸುಘಾಯದ ನೋವಿನಿಂದಮಂ ಮೊಱೆಯನು (ನವ್ಯಾ. ೭-೯೦).

[ಮಱುಮೊನೆ + ಕಾಣ್]

**ಮಱುಮೊನೆಗೊಳ್** (ಕ್ರಿ). = ಮಱುಮೊನೆಗಾಣ್: ಭೂಪತಿ ಕೋಲು ಮಱುಮೊನೆಗೊಂಡವೋಲ್ ಮಱುಗಿದನು ಚಿತ್ತದಲಿ (ಕುಮ್ಮಾಅ. ೨೩-೩೦); ಕಾಮನ ಕೋಲು ಮಱುಮೊನೆಗೊಂಡುದೆಂಬೊಂದೊಳಗದ ಮಾತುಗಳ ಶಿವಶಿವ ಮನದ ಬಯಕೆಯನು ಪಾಲಿಸುವೆ (ಶಿಭಾಗ. ೩-೪-೭).

[ಮಱುಮೊನೆ + ಕೊಳ್₁]

**ಮಱುಮೊನೆದೋಱು** (ಕ್ರಿ). = ಮಱುಮೊನೆಗಾಣ್: ತನ್ನನೂಱಂಬ ನೊಂದುಬಾಣದಲಿ ಹಾಱಲಿಕ್ಕಿದನು ಪೇರುರದಲ್ಲಿ ಮಱುಮೊನೆದೋಱ ಲೆಚ್ಚಾಡುಪನಹುದೋ (ಪೋಹಕ. ೩೫-೩೪). [ಮಱುಮೊನೆ + ತೋಱು]

**ಮಱುವಂಕ** ' ಮಱುವಕ್ಕ ' ನೋ.

**ಮಱುವಕ್ಕ,** ಮಱುವಂಕ (ನಾ). ೧. ಎದುರುಪಕ್ಷ; ಪ್ರತಿಪಕ್ಷ; ಶತ್ರುಪಕ್ಷ: "ಮಱುವಕ್ಕಂ ಶತ್ರುಸೈನ್ಯಾಹ್ವಯದೊಳ್" (ಶಬ್ದಾಭಿ. ೪೦); ಮಱುವಕ್ಕದವರ ಮೆಯ್ಮೆಯ್ಯುಮಪ್ಪಾಗೆ ಎಚ್ಚೋಡಿಸಿ ಆ ಕಯ್ಯುಂ ಗೆಲ್ದು (ಎಕ. VIII, ಸೊರಬ. ೦೦-೬; ಸು. 800); ಗುರು ಗುರುಪುತ್ರ . . . ನದೀ ಸುತರೆಂಬ ಸಂದ ಬೀರರೆ ಮಱುವಕ್ಕಮಣ್ಣನೊಡನಿರ್ದರೆ ಕೂಸು ಗಳೆಂಬ ಶಂಕೆಯುಂ ಪಿರಿದೆನಗೀಗಳಾದಪುದು (ಶಂಶಭಾ. ೦೦-೦೨); ಬಱುಗಯ್ಯೊಳೊಂದೆ ಮೆಯ್ಯೊಳ್ ಮಱುವಕ್ಕಮನಿಕ್ಕಿ ಗೆಲ್ದು ಸಿಂಹೋದರನಂ ಸೆಱೆಗೊಂಡುಯ್ದಂ ಕೃಷ್ಣಂ (ಶಂರಾಮಾ. ೭-೭೯). ೨. ಶತ್ರು; ಹಗೆ; ಪ್ರತಿಸ್ಪರ್ಧಿ: ತಿಂಗಳ ಪಡಿಚಂದ್ರಂ ಕಮಲಂಗಳ ಮಱು [ವಕ್ಕಮಮರ್ದ] ತಿಳಿಗೊಳನಾ ಚೆಲ್ವಿಂಗಿದೆ ದಾಯಿಗಮೆನೆ ಲಲಿತಾಂಗಿಯ ನಗೆಮೊಗದ ಪೋಲ್ವೆಗೆಣೆ ಪೆಱವೊಳವೇ (ಗದಾಯು. ೮-೫೩); ಕೊಗ್ಗಿಯೊಳಿಡಿದ ಕತ್ತುರಿಯ ಪರಿಮಳಕ್ಕಳಿಸಿ ಕರ್ಣಪೂರದೊಳ್ ಬಳಸುವಳಿಗಳೊಳ್ ತಡಂಗಲಸಿ ಮಂಡಳಿಸುವ ಕಟಾಕ್ಷಕಿರಣಮಂಜರಿಗೆ ಮಱುವಕ್ಕಮಾಗೆ ನೀಲ ಮುತ್ತಿನೋಲೆಯುಂ ತುಡಿಸಿಯುಂ (ಪರ್ಶು. ೭-೯ ವ). **ಮಱುವಂಕ.** ಮಱುವಂಕಭೈರವ = ಶತ್ರುಪಕ್ಷಕ್ಕೆ ಭೈರವನಂತಿರುವವನು: ಒಂದು ಬಿರುದು: ಮಾಬ್ಬಲಮಲ್ಲ ಮಱುವಂಕಭೈರವ ಅಯ್ಯಣಪುತ್ರ (ಎಕ. VIII, ಸೊರಬ. ೪೦೩-೦೨; 986). ಮಱುವಕ್ಕದಲ್ಲಟಂ = ಶತ್ರುಸೈನ್ಯಕ್ಕೆ ಭಯವನುಂಟುಮಾಡುವವನು: ಚಾಲುಕ್ಯ ಅರಿಕೇಸರಿಯ ಒಂದು ಬಿರುದು: ಚಾಳುಕ್ಯವಂಶೋದ್ಭವಂ ಶ್ರೀಮದರಿಕೇಸರಿ . . . ಸಂಸಾರ ಸಾರೋದಯಂ ಮಱುವಕ್ಕದಲ್ಲಟಂ ನೋಡುತ್ತೆ ಗೆಲ್ವಂ (ಶಂಶಭಾ. ೧-೦೪೮ ವ). ಮಱುವಕ್ಕಮಾರಿ = ಶತ್ರುಗಳಿಗೆ ಮಾರಿಯಂತಿರುವವನು; ಒಂದು ಬಿರುದು: ಮಱುವಕ್ಕಮಾರಿಗಳುಂ ಪರಸ್ತ್ರೀಪರಧನವರ್ಜಿತರುಂ (ಎಇ. XIX, ೩೩-೦೩; 1135). ಮಱುವಕ್ಕರಾಮ = ಎದುರುಪಕ್ಷಕ್ಕೆ ಪರಶುರಾಮನಂತಿರುವವನು; ಒಂದು ಬಿರುದು: ಮಱುವಕ್ಕರಾಮ

ಕಾಯ್ದಿರ್ದರೆ ಭೀಮಂ ದುರದೆಡೆ ರಾಮಂ (ವ್ಯಕಾ. ೧೯೩೮, ೩೦-೧೪ ; 1056). [ಮಱು₁ + ಪಕ್ಕ]

**ಮಱುವಗಲ್.** ಮರುವಗಲ್(ನಾ). = ಮಱುದಿನ: ಆ ಪಗಲಂ ಕಳೆದಂದಿನ ಮಱುವಗಲಂ ನಡೆದೆತ್ತಿ ಬರುತ್ತುಮಿರ್ದಂ ಕಾಮಂ (ಲಪ್ರಕಾ. ೧೯೯); ಮಱುವಗಲುದಯದೊಳರಸಂ ತುಱುಗಿರೆ ಕಡುಹರಿಸಮಿರುಳ ಕನಸಂ ನೆನಸೆಂದಱಿಪಲ್ (ತಕಂ. ೩-೧೦೦). **ಮರುವಗಲ್ :** ಹುಲಿ ಮರುವಗಲ್ ಹೂವೀಡ ತೊಡವಿನಿಂ ಗಾಡಿಯಿಂ ನಡೆಯುತಿಪ್ಪುದಾಳನೊಡವೆರೆದು (ಕಾರೂರ. ೯೯-೧೬೩). [ಮಱು₁ + ಪಗಲ್]

**ಮಱುವರಸ** (ನಾ). ಪ್ರತಿಪಕ್ಷದ ಅರಸ ; ಶತ್ರುರಾಜ : ಚಲದಿಂ ಮಲೆವ ಮಱುವರಸರ ಪೊಸನೆತ್ತರೊಳ್ ಪೊರೆದ ನಿನ್ನ ಬಾಳಂತೆ ಒಳ್ಪುವಡೆದ ಕೆಂದಳಿರ್ಗಳಿಂ ಮಿಸುಗುವ ಅಸುಗೆಗಳೊಳಂ . . . ಬಿನದಕ್ಕೆ ಪಕ್ಕಾದ ಬನಮಂ ನೋಡಲ್ವೇಟ್ಟಪುದು (ಲಪ್ರಕಾ. ೮೯). [ಮಱು₁ + ಅರಸ₁]

**ಮಱುವಲಗೆ** (ನಾ). ೧. (ಪಗಡೆಯ ಹಾಸಿನಲ್ಲಿ) ಮತ್ತೊಂದು ಬಾರಿ ಆಡುವ ದ್ಯೂತ,–ಜೂಜು. ೨. (ಅಲಂ) (ಯುದ್ಧದಲ್ಲಿ ಮಾಡುವ) ಮತ್ತೊಂದು ಅದೃಷ್ಟ ಪ್ರಯತ್ನ : ಫಲುಗುಣನ ಕೂಡಾಡು ನಡೆ ಮಱುವಲಗೆಯುಸು ಭೀಮನಲಿ ಬೇಡಿನ್ನೆಂದನಾ ಶಲ್ಯ (ಕುವ್ಯಾಕ. ೦೩-೪೪). [ಮಱು₁ + ಪಲಗೆ]

**ಮಱುವಸಲ,** ಮರುವಸಲ (ನಾ). (ಜಿದ್ದುಳ್ಳ) ಶತ್ರು ; ಹಗೆ ; ವೈರಿ : "ಮಱುವಸಲಂ, ಬೇರಂ, ಪಗೆ– ಈ ೩ ಶತ್ರು" (ಕಶಸಾ. ೩೬-೨೩೮) ; "ಮಱುವಸಲನೆಂದು ಮೂರಡಿಯೆಂದು ಪಗೆಯಕ್ಕು" (ಲಪ್ರಕ್ಕೆ. ೫೯). **ಮರುವಸಲ :** "ಮರುವಸಲನೆನೆ ವೈರಿ" (ಕಕರ. ೮೬). [ದೇ.೫ ತೆಲು. ಮಾಱುಮಸಲು, ಮಾರ್ಮಸಲು = ಎದುರಿಸು, ದ್ವೇಷಿಸು]

**ಮಱುವಾತು,** ಮರುವಮಾತು, ಮಱುಮಾತು (ನಾ). ೧. ಜವಾಬು ; ಮಾರುತ್ತರ ; ಪ್ರತ್ಯುತ್ತರ : 'ಮಱುವಾತುಗುಡು' ಪರಾ. **ಮರುಮಾತು :** ೧ : ಆ ಗೆಳೆಯರೆನ್ನ ಕೇಳೆ, ಮರುಮಾತು ನಾನೇನು ಕೊಡಲಮ್ಮ ನಾಳೆ ?(ಕಎಷ್ಟು. ೯೩-೦೦); ಓಡ ಓಡೆಂದರಚಿ ಕರೆದೆ . . . ಇಲ್ಲ ಮರುಮಾತಿಲ್ಲ ಬರಿದೆ, ನನ್ನ ಕರೆ ಮೋಹಾಂ ವಿನಾ (ಗೀಖಂ. ೩೩-೩೨). ೨. ಪ್ರತಿಯಾಗಿ ಹೇಳುವ ಮಾತು ; ಎರಡನೆಯ ಮಾತು ; ಬೇರೆಯ ನುಡಿ : ಅವರಲ್ಲಿರುವುದನ್ನೆಲ್ಲ ಮರುಮಾತಿಲ್ಲದೆ ಒಪ್ಪಬೇಕೆಂದಿಲ್ಲ (ತಿಕ್ಷರ. ೨೩೩) ; ಬೇಕಾದಷ್ಟುದ್ದದ ಹೇಳಿಕೆಗಳನ್ನು ಹೊರಡಿಸಿ . . . ಮರುಮಾತಿಲ್ಲದೆ ಮಂಕುಜನತೆ ಒಪ್ಪಿಕೊಳ್ಳುತ್ತದೆ (ರೂಹಸಂ. ೨೫). **ಮಱುವಮಾತು :** ೧. ಎನ್ನ ಮಾತಿಂಗೆಲೆ ಕೌಂತೇಯ ಮಱುಮಾತನಿತ್ತು ಮದೀಯ ಸರೋವರದ ತೋಯಮಂ ಕುಡಿ ಕೊಂಡುಯ್ (ಹಂಜಭಾ. ೮-೩೯); ಈತನ ಮಾತಿಂಗೆ ತಕ್ಕ ಮಱುಮಾತಂ ನುಡಿದೊಡಂಬಡಿಸಿ ಕಟ್ಟಿಪ್ಪುವೆಂ (ಹಂಚಕಂ. ೩೦-೨೨); ಏನನಂಗನೆ ನುಡಿದಳೇನನಾಲಿಸಿದೆನಿದಕೇನು ಮಱುಮಾತು (ಷಕಳಾ. ೬-೩೮). ೨. ಮಱುಮಾತಿಂಗೆಡೆಯಿಲ್ಲದಂತಿರೆ ನುಡಿದ ಪಡೆ ಮೆಚ್ಚಿ ಗಂಡನ ಗಂಡಮಾತುಮಂ ನನ್ನಿಮಾತುಮಂ ಮುರಾಂತಕ ಮೆಚ್ಚಿ (ಹಂಜಭಾ. ೫-೬೫ ವ); ಒಂದೆ ನುಡಿ ಸಾಕು ಹುಸಿಯಿಲ್ಲ ವೃದ್ಧರೊಳದೇತೆಂದಡಱುವತ್ತು ತುಂಬಿದೊಡೆ ಮಱುಮಾತು ಬೇಡೆಂದು ನಾಣ್ನುಡಿಗಳುಂಟು (ಸಿದ್ಧರಾ. ೦-೪೫).

**ಮರುಮಾತಾಡು** = ಪ್ರತಿಯಾಗಿ ಹೇಳು,– ಮಾತನಾಡು : ಶಾಸ್ತ್ರಿಗಳು ತಲೆ ತಗ್ಗಿಸಿದರು, ಮರುಮಾತಾಡಲಿಲ್ಲ (ಶ್ರೀರಾಘು. ೮೦); ಆ ಮಾತಿನಿಂದ ಕಕ್ಕಾಬಿಕ್ಕಿಯಾಗಿಯೊ ಅಥವಾ ನಂಬಲಾರದೆಯೊ ರೈತರು ಮರುಮಾತಾಡಲಿಲ್ಲ (ಪುವಕು, ೨೬೯), [ಮಱು₁ + ಮಾತು₁]

**ಮಱುವಾತುಗುಡು,** ಮಱುವಮಾತುಗುಡು, ಮಱುಮಾತುಗೊಡು (ಕ್ರಿ). ೧. ಪ್ರತ್ಯುತ್ತರವನ್ನು ಕೊಡು ; ಜವಾಬುಹೇಳು : ಆ ಮಾತಿಂಗೆ ಮಱುವಾತುಗುಡಲಱಿಯದೆ ಪಂದೆಯಂ ಪಾವಡರ್ದಂತುಮ್ಮನೆ ಬೆಮರುತ್ತುಮಿರ್ದ ಕರ್ಣನಂ ದುರ್ಯೋಧನಂ ಕಂಡು (ಹಂಜಭಾ. ೨-೮೨ ವ) : ಅಱಿಯೆನಿದಂ ನಿನ್ನೆಂದಿನ ತೆಱನಂ ನೀನೆನಗೆಬೇಕೆ ಮುಳಿದಿರ್ದಪೊ ಮೇಣ್ಮಱುವಾತುಗುಡದೆ ರವಿಸುತ ಮಱವಿಂದಿರ್ದಪೆಯೊ (ಗದಾಯು. ೫-೦೫). **ಮಱುವಮಾತುಗುಡು:** ೧. ಕೆಳದಿಯರುಂ . . . ಮೂರ್ಛೆಯಿಂದೆ ಬೞಱಿಸಿ ಬೆಸಗೊಳೆ ಮಱುಮಾತುಗುಡದೆಯುಂ ಮನಂಗುಡದೆಯುಮಿರೆ (ಆದಿಪು. ೩-೨೩ ವ) ; ಕಂದ ನಿಜಾನುಜರೆಲ್ಲಿದರೆಂದೆನ್ನಂ ಜನನಿ ಬಂದು ಬೆಸಗೊಂಡೊಡದೇನೆಂದು ಮಱುಮಾತುಗುಡುವೆಂ (ಗದಾಯು. ೩-೬೬). **ಮಱುವಮಾತುಗೊಡು :** ೧. ಆ ಭಟ್ಟನೀ ದುಷ್ಟಂಗೆ ಮಱುಮಾತುಗೊಟ್ಟೊಡೇನಪ್ಪುದೆಂದುಸಿರದೆ ನಡೆವುದಂ (ಹಂಚಕಂ. ೦೯೬-೦೬). ೨. ಹೇಳಿದುದಕ್ಕೆ ಪ್ರತಿಯಾಗಿ ಹೇಳು ; ಮರುಮಾತಾಡು : ಅಂತೆಗೆಯ್ವೆಮೆಂದು ಮಱುಮಾತುಗೊಟ್ಟವರ್ಗಳುಂ ಪುಳ್ಳಿಯ ಪೊಱೆಯುಂ ಮನೆಗೆ ತಂದ ಬೞಿಕ್ಕೆ ಕಾಷ್ಠಕೂಟಂ ಪೆಂಡತಿಯನೆಂದು (ವಡ್ಡಾರಾ. ೬೬-೦೨); ಮಱುಮಾತುಗೊಡದೀತನಂ ಕಾಡಬೇಕು (ಸೌಂದಪು. ೦೫-೦೦).

[ಮಱುವಾತು + ಕುಡು₁ (< ಕೊಡು₁)]

**ಮಱುವಾನಿಸ** (ನಾ). ಎದುರುಪಕ್ಷಕ್ಕೆ ಸೇರಿದವನು ; ಹಗೆ ; ವೈರಿ : ಮಱುವಾನಿಸು ಮೆಯ್ಯೇಱಿಂ ಕಂಡಗಿದು ಜೋಲೆ ಕೊಂದನದೊರ್ವಂ (ಲಪ್ರಕಾ. ೨೮೬). [ಮಱು₁ + ಮಾನಿಸ₁ (< ಮಾನುಸ)]

**ಮಱುವಾರ್ತೆ** (ನಾ). ತಿರುಗಿ ಬಂದು ಹೇಳುವ ಸಮಾಚಾರ : ಈ ಮಾರುವಂಗಳಾರವೆಂದಾರಯಲೊರ್ವನಂ ಕಟ್ಟಿ ಮಱುವಾರ್ತೆಗೇಳಲೆಂದು . . . ಅತಿಕುತೂಹಲನಾಗಿ ನಿಂದು (ಕಾದಂಬ. ೩೩೭). [ಮಱು₁ + ವಾರ್ತೆ]

**ಮಱುವಾರ್ತೆಗೊಳ್** (ಕ್ರಿ). ಬೇರೆ ಬಗೆಯ ಬದುಕನ್ನು ಅಂಗೀಕರಿಸು : ತನ್ದೆಯ ತಾಯ್ವಿರಾ ಸನ್ಮಾನಮು(ಂ)ನುಳಿದು ಬಿಸುಟೋಂ ಮಱುವಾರ್ತ್ತೆಗೊಳ್[ನ್] (ಶಾಇವ. XI-i, ೦೦-೬ ; 865).

[ಮಱು₁ + ವಾರ್ತೆ + ಕೊಳ್₁]

**ಮಱುವಾಳು** 'ಮಱುವಾೞ್' ನೋ.

**ಮಱುವಾೞ್,** ಮರುಬಾಳು, ಮರುವಾಳು, ಮಱುವಾಳು (ನಾ). ೧. (ವಿಧವೆಯಾದವಳು ಮಾಡಿಕೊಳ್ಳುವ) ಎರಡನೆಯ ಮದುವೆ ; ಪುನರ್ವಿವಾಹ : ರಜನೀನಾಥನೊಳೊಂದಿ ನಿಂದ . . . ಭಾಸ್ಕರಾತ್ಮಜನಿಂದಂ ಮಱುವಾೞ ತಾಯ ಬಸಿಱೊಳ್ ಬಂದಂ ವಿನೀತಂ (ಜಾತಕ. ೦೫-೨); ಕುಲವೆಣ್ಗೇಂ ಮಱುವಾೞ್ತೆ (ಕಾವ್ಯಸಾ. ೯೩೯). ೨. (ವಿಧವೆಯಾಗಿದ್ದು) ಎರಡನೆಯ ಮದುವೆಯನ್ನು ಮಾಡಿಕೊಳ್ಳುವವಳು,–ಪುನರ್ವಿವಾಹವಾಗುವವಳು : ಅದಿದುವೆನ್ನದೆ ಸೂಳೆಮದುವೆಗಂ ಮಱುವಾೞ ಮದುವೆಗಂ ಕುಜನ ಕುಳಿಕನ ರಾಹುವಿನುದಯಮಭ್ಯುದಯಂ (ರೋಕೋಶ. ೨-೨೦). **ಮರುಬಾಳು :** ೧. "ಮರುಬಾಳು – ಎರಡನೆಯ ಲಗ್ನ" (ಶಾಪಕೋ. ೩೮). **ಮರುವಾಳು. ಮಱುವಾಳು :** ೩. ಪುನರ್ಜನ್ಮ : ಮಧ್ಯಸ್ಥಾನದ ಲೋಕಕೆ ಹೋಗಿ ಮಱುವಾಳನಱಿಯದ ಪರಿಯ ನೋಡಿರೇ (ಅಪಕಂ. ೨೮೯-೦೩೦೮).

**ಮರುವಾಳನಿಲ್** = ಮರುಮದುವೆಯಾಗು ; ಪುನರ್ವಿವಾಹವನ್ನು ಮಾಡಿಕೊಳ್ಳು : ಮುದಿಯ ಗೊಡ್ಡಿಯ ಮತಿಯ ಬಾಗಿಲಿಂದಟ್ಟ, ದ್ರಾಕ್ಷಿಯಣುಗಿಗೆ ಮೆಚ್ಚಿ ಮರುವಾಳ ನಿಂದೆ (ಗೀಖಂ. ೦೨೦-೩೦).

**ಮಱುವಾೞ್ಕಾಂತೆ** = ಪುನರ್ವಿವಾಹವಾದವಳು ; ಮರುಮದುವೆಯಾದವಳು : "ದಿಧಿಷೂ ಪುನರ್ಭೂವೆನಲು ಮಱುವಾೞ ಕಾಂತೆಯಕ್ಕುಂ" (ಚುಂಗರಾ. ೪೯-೩). [ಮಱು₁ + ಬಾೞ್₃]

**ಮಱುವಾೞ್ತಿ** (ನಾ). ೧. ಇನ್ನೊಂದು ಬಾಳು; ಬೇರೊಂದು ಬದುಕು. ೨. (ವಿಧವೆಯಾಗಿದ್ದು) ಮರುಮದುವೆ ಮಾಡಿಕೊಂಡವಳು ; ಪುನರ್ವಿವಾಹ ಮಾಡಿಕೊಂಡವಳು : ಮಱುವಾೞ್ತಿ ತಾನೆನಿಸುಗುಂ

ಘಮರ್ಮಾಂಶುಪುತ್ರಾಂಶದೊಳ್ (ಶಾಶ. ೨೨-೪); ಕನಿಷ್ಠಿಕೆ ಸಮಂತು ಮುಟ್ಟಿದಿರೆ ಪೃಥ್ವಿಯುಂ ರಂಡೆ ಮತ್ತನಾವಿಕೆಯುದುದ್ದಮಾಗೆ ಮಱುವಾಟಿ$_3$ (ಲೋಕೋಕ. ೧೦-೫೦). [ಮಱು$_1$ + ಬಾಟಿ$_3$]

**ಮಱುವಿಡಿ** (ನಾ). ಪ್ರತಿಬಂಧ ; ತಡೆ : ತೊಡರ ಬಗಿ ಮದನಂಗೆ ಮದವನು ತೊಡೆ ವಸಂತನ ಮಾರುತಗೆ ಮಱುವಿಡಿಯುನಿಕ್ಕು (ಕೊರಣ. ೩-೪-೧೯). [ಮಱು$_2$ + ಪಿಡಿ$_2$]

**ಮಱುವುಟ್ಟಿಗ** (ನಾ). ಬೇರೆ ಜನ್ಮವನ್ನು ಹೊಂದಿರುವವನು : ಮಱುವುಟ್ಟಿಗನಾದನನೇನಱಿವೋ ನೀನೆನ್ನಂ (ಕಾದಂಊ. ೬೦೭).

[ಮಱುವುಟ್ಟು + – ಇಗ]

**ಮಱುವುಟ್ಟು**, ಮರುವುಟ್ಟು, ಮರುಹುಟ್ಟು, ಮಱುಹುಟ್ಟು (ನಾ). ಮತ್ತೊಂದು ಹುಟ್ಟು ; ಪುನರ್ಜನ್ಮ : ಮಱುವುಟ್ಟಿನೊಳಂ ನಿನ್ನೊಡನೆ ಕೂಟವೆನಗಕ್ಕೆ(ಕಾದಂಊ. ೩೦೨) ; ಈಶ್ವರನಿಂ ಮುನ್ನವೆ ಮಣ್ಮಳಿಗೊಂಡ ಮದನಂಗಾ ಮಱುವುಟ್ಟಂ ಪಡೆಯಿಸಲೊದವಿದ ಜೀವನವಾಯುವಿದು (ಜಯುಕಾ. ೧-೫೦); ಶುಭಗುಣವಾಂತ ನೀ ಮಱುವುಟ್ಟೊಳು ಪ್ರಾಣವಿಭುವಾಗಿ ಬಂದೆ(ಪೋಹಕ. ೧೭-೫೮). **ಮರುವುಟ್ಟು**: ಮರುವುಟ್ಟುವಡೆದಂತೆ ಮೂಡಿದೀ ಕಾವ್ಯವಂ ವಿಶ್ವವಾಣಿಗೆ ಮುಡಿಯು ಮಣಿ ಮಾಡಿಹೆನ್ (ಶ್ರೀರಾಮಾ. iii,೦೬); ಪುಲಿಯು ಕೈಯಿಂ ಮಡಿಯೆ ಪೆರ್ಮೆ ಸಾವದು ಕಣಾ ! ಮರುವುಟ್ಟಿನಲ್ಲವಗೆ ದೊರಕುವುದು ದೊರೆತನಂ! (ಚಂದ್ರಕ. ೩೦-೧೭). **ಮರುಹುಟ್ಟು** : ಒಬ್ಬ ದಿವ್ಯಪುರುಷನ ಮರುಹುಟ್ಟು ಈ ಕುದುರೆಯು ರೂಪವನ್ನು ತಾಳಿರಬೇಕು (ನಾಗಣ. ೧೬) ; ಜ್ಞಾಪಿಸಿಕೊಟ್ಟದ್ದು ಮರೆತುಹೋಗಿದ್ದುದರ ಜೊತೆಗೆ ಒಂದಾಗಿ ಮರುಹುಟ್ಟನ್ನು ಪಡೆಯಿತು (ಶಾರದ. ೨೦೬). **ಮಱುಹುಟ್ಟು** : ಕೋರಂಟನಂದೊಡೆದ ಕೞಿಯಲ್ಲಿ ಹೂಳಿಸಿಕೊಳನೆಯುಗ್ನಿಯಿಂದಳಿವ ಮಱುಹುಟ್ಟ ಕಾಣದಿರ್ಪನಲಾ (ಶೀಕೃಷ. ೪-೧೦-೨೬). [ಮಱು$_1$ + ಪುಟ್ಟು$_2$]

**ಮಱುವೆಸರು** (ನಾ). ಬೇರೊಂದು ಹೆಸರು ; ಅದೇ ಅರ್ಥದ ಮತ್ತೊಂದು ಶಬ್ದ : ನೆಱೆ ಪತತ್ರಿಗಳಿವೆ ಪತತ್ರಿಯ ಮಱುವೆಸರು ನಿನಗಿವರ ಕೇಣಿಗೆ ತೞುಗೊಡು ನೀನು (ಕುವ್ಯಾಗ. ೨-೨೮).

[ಮಱು$_1$ + ಪೆಸರು$_1$ ( < ಪೆಸರ್) ]

**ಮಱುವೆಳಸು** (ನಾ). ಎರಡನೆಯ ಬೆಳೆ ; ಮತ್ತೊಂದು ಫಸಲು : ಆ ಫಲಂ ಕಳಿತುದುರೆ ತತ್ತರುವಿಗೆ ಮಱುವೆಳಸು ಮೊದಲಂತೆ ವರುಷ ವರುಷಕೆ ಒಪ್ಪ ತೞದೆ ಬ್ರಹ್ಮಾಂಡಂಗಳಳಿದುದಿಸುತಿರ್ಪವು (ತೊರ್ತು. ೪೬-೩೬). [ ಮಱು$_1$ + ಬೆಳಸು$_2$ ]

**ಮಱುಹುಟ್ಟು** 'ಮಱುವುಟ್ಟು' ನೋ.

**ಮಱಿ**$_1$. ಮರೆ$_1$ (ಕ್ರಿ). ೧. ನೆನಪಿನಿಂದ ದೂರಮಾಡು ; ಜ್ಞಾಪಕದಲ್ಲಿಟ್ಟುಕೊಳ್ಳದಿರು : " ಮಱಿ-ವಿಸ್ಮರಣೇ " (ಶಮಧಾ) ; ನೀಂ ಮಮ್ಮನೆಯುಪ್ಪಲ ನೋಡು ನಣ್ಪಂ ನಿಮಗಮೆಮಗಮಾಮ್ನಾಯದಿಂ ಬಂದುದಿಂತೀ ಜಿನಧರ್ಮಂ ಪ್ರಾಣೆಗಾರ್ಮಂ ಮಱಿಯುದಿರಿದಂ (ಆದಿಪು. ೨-೨೦) ; ಮಱಿಯುಂ ಕಾಲನಿದೇಕೆ ವ್ಯೆಮಱಿವಿರೆಂದೂರ್ಧ್ವಂಗುರಂ ಪೊಯ್ವುವೊಲ್ಪಱಿ ಪೊಯ್ದು (ಅಪಂಪು. ೯-೩೦); ಎಲೆಗೆ ಭಜಿಸಾ ಕೌರವಾನ್ವಯ ತಿಲಕನನು ನಿನ್ನವರ ಮಱಿ (ಕುವ್ಯಾಸ. ೦೫-೦೩). ೨. ಪರಿವೆಯಿಲ್ಲದಿರು ; ಬಾಹ್ಯಜ್ಞಾನವಿಲ್ಲದಿರು : ಅಪ್ರತಿರಥಂ . . . ದುಗ್ಧಾಬ್ಧಿಧವಳ ಶಯ್ಯಾತಳದೊಳ್ ಮಱಿದೊಱಗಿದ ಮಧುಮಥನನನೇತ್ರಲಣ್ಮದೆ ಕಾಲ ದೆಸೆಯೊಳುಸಿರದೆ ಕುಳ್ಳಿರೆ (ಶಂಕರ. ೯-೧೦ ಪ) ; ತರಳಿಕೆ ಮಱಿದು ನಿದ್ರೆಗೆಯ್ದಳ್ (ಕಾದಂಊ. ೫೫೯) ; ಶೋಕಾಕ್ರಾಂತದಿಂದಂ ತನ್ನ ತಾ ಮಱಿದಿಂತು ಧೊಪ್ಪನೆ ಕೆಡೆದು ನೆಲದಲ್ಲಿ ಪೊರಳುತ (ಬಸವ. ೪೫-೬) ; ಮಱಿದು ನಿದ್ರಾಲೋಲನಾಗಿ ಮಲಗಿಹ ಚಂದ್ರಹಾಸನಂ ಕಂಡು ಸೈವೆಱಗಾದಳು (ಕೈಮಿಭಾ. ೩೦-೦೯). ೩. ಎಚ್ಚರತಪ್ಪು ; ಅರಿವನ್ನು ಕಳೆದುಕೊಳ್ಳು : ಇತರವ್ರತೀಶವರನಂ ಮಱಿದುಂ ಪೆಸಗೊಳ್ವುದೇ ಜನಂ (ಸಮುಕ. ೪-೪೪); ಕೂಡಲಸಂಗನ ಶರಣರೊಡನೆ ಮಱಿದು ಸರಸವಾಡಿದರೆ ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಹಿದ್ದಂತೆ (ಬಸವ. ೬೬೦ ಅ); ಮಱಿದಪ್ಪೊಡಂ ತೊದಳ ನುಡಿದಱಿಯಂ (ಪುಷ್ಪಪು. ೧-೮೨ ಪ). ೪. ಪರವಶಗೊಳ್ಳು ; ತಲ್ಲೀನತೆಯನ್ನು ಹೊಂದು : 'ಮಱಿಗಣ್', 'ಮಱಿಯಿಸು' ಪರಾ. ೫. ಪ್ರಜ್ಞೆಯನ್ನು ಕಳೆದುಕೊಳ್ಳು ; ಮೂರ್ಛೆ ಹೊಂದು : ಮಱಿವುತೆಚ್ಚಱುತವನಿಪತಿ ಕರೆ ತರುಣನಾವೆಡೆ ರಾಯಗಜಕೇಸರಿಯದಾವೆಡೆ ಕಂದ ಬಾಯೆನುತಪ್ಪದನು ಬಯಲ (ಕುವ್ಯಾದ್ರೋ. ೭-೯). ೬. ಬಿಡು ; ತೊರೆ ; ತ್ಯಜಿಸು : ಇದೊಂದವಸ್ಥೆ ನಿಮಗೆನ್ನಯ ಕರ್ಮದಿನಾದುದೆಂದೊಡಿಂ ಮಱಿವುದು ಕಂದ ಪಾಂಡವರ ವೈರಮಂ (ಪಂಪಭಾ. ೧೧-೪೯) ; ಆ ಪವನಾತ್ಮಜನೊಳ್ಮಱಿ ಬದ್ಧವೈರಮಂ (ಗದಾಯು. ೩-೫೪). ೭. ಲಕ್ಷ್ಯ ಕೊಡದಿರು ; ಕಡೆಗಣಿಸು ; ತಿರಸ್ಕರಿಸು : ತಾನಿತರಕನ್ಯಕೆಯಂತೆ ನಾಣ್ಗೆಟ್ಟು . . . ನಿಜಾಚಾರಮಂ ಮಱಿದು ಶೀಲಮಂ ತೊಱಿದು (ಕಾದಂಪೂ. ೬೭೪) ; ನೃಪಾಚಾರಮೆಲ್ಲಮಂ ಮಱಿದೊಡನುಂಡೋಡಾಡಿ ಕೆಟ್ಟು ದೂರ್ತಿಂ ನಾಡೆಯುಮವರೆಡೆಗೆ ತಾನೆ ಮಿಕ್ಕಂ ಧರೆಯೊಳ್ (ಧರ್ಮಾಮ್ಮ. ೨-೧೦೭) ; ಪ್ರಸಾದಮಂ . . . ವರ ಮುನಿಜನಕ್ಕೆ ಮನುನಿವಹಕ್ಕೆ ನಲಿದಿತ್ತು ಶಿವಪುತ್ರನಂ ಸ್ಕಂದದೇವನಂ ಮಱಿವುತಂ (ಬಸರ. ೧-೪೩). ; ಪೆಕ್ಕಳಿಸಿ ರಾಜ್ಯಮಂ ಕೊಟ್ಟೊಡೆನ್ನಂ ಮಱಿದು ಸೊಕ್ಕಿ (ಕೈಮಿಭಾ. ೩೦-೨೭). ೮. ಮನ್ನಿಸು ; ಕ್ಷಮೆಯನ್ನು ತೋರು : ಮಱಿವುದೆನ್ನ ದುರ್ವಿಳಸನಮಂ (ಆದಿಪು. ೦೪-೦೩೧) ; ಅವಗುಣ ಕೋಟಿಯಂ ಮಱಿದು (ದಶಕು. ೧-೧೧); ಕರ್ಣನ ದುರುಳತನವನು ಮಱಿದು ಮೆಱಿವುದು ನಿಮ್ಮ ಸದ್ಗುಣವ (ಕುವ್ಯಾದ್ರೋ. ೧-೨೦). ೯. ಕಾಣದಾಗು : ಮಾಯವಾಗು ; ಇಲ್ಲವಾಗು : ಚಿಂತೆ ಮಱಿದುದು ತಂಗಿಮಕ್ಕಳ ಸಂತತಿಯು ಸಂತೋಷವಾರ್ತೆಗೆ (ಸಂಭಕ. ೦೫-೯೫) ; ಅಱಿವು ಮಱಿದಪ ಕೀರ್ತಿನಾರಿಯ ಸೆಱಗ ಹಿಡಿದರು (ಕುವ್ಯಾದ್ರೋ. ೬-೨೭). ೧೦. ಮುಚ್ಚು ; ಅಡಗಿಸು : ಕಾಯಗುಣವ ಕರ್ಮದಿಂದ ಕಳೆದು ಜೀವಗುಣವ ಅಱಿವಿನಿಂದ ಮಱಿದು ಭಾವ ನಿರ್ಭಾವವಾದಲ್ಲಿ ನಿಃಕಳಂಕಮಲ್ಲಿಕಾರ್ಜುನ ತಾನು ತಾನೆ (ಪೋಳಮಾ. ೨-೨). **ಮರೆ**$_1$ : ೧. ಮರೆಯಲೊ ನೀ ಮಾಡಿದ ಅನಿಮಿತ್ತೋಪಕಾರ (ಜಗದಾ. ೩೯); ಮುಂದಾವಗಂ ಮಣಿಪುರದ ದೊರೆಗಳಂ ಮರೆಯದಂದದಿ ಮಾಳ್ಪನೆಂದುರಿದು ನುಡಿಯೆ (ಜೈಮಿಂಗ. ೭೦-೦೪೦) ; ತರತರವಾಗಿ ಹೇಳಿದ್ದು ಮರೆತರೆ ಮರಕ್ಕಿಂತ ಕಡೆ (ಗಾದೆ). ೫. ಬೋಳಂ ತಾನೆ ಬಿದ್ದು ಮರೆದೊಡಲ ಮಲಗಿರಲ್ ಕಯ್ಪಿಡಿಯುತಾರಯ್ದು ಮರುಕದಿಂ ಬದುಕಿಸಿದೆ (ಕಾಲೂರ. ೦೭೪-೩೭೪). ೭. ನಿನಗೆ ಈ ಸ್ಥಳದಲ್ಲಿ ಮಹಾಪದವಿ ಬರುವುದು. ಅರಿತು ನಡೆದರೆ ಆರುಪಟ್ಟು, ಮರೆತು ನಡೆದರೆ ಮೂರು ಪಟ್ಟು (ಜಕ್ರಪಾ. ೭) ; ನಿಂದುದು ಸೃಷ್ಟಿ ದೃಷ್ಟಿಸುತ್ತಾ ಮಧುರ ಮನ್ಮಥಮುಹೂರ್ತಮಂ, ಕರ್ತವ್ಯಮಂ ಮರೆತು ತನ್ಮಯತೆಯಿಂದೆ (ಜಶ್ರಾಂಗ. ೪೦-೦೦೦೬). [ದೇ.॥ ತಮಿ. ಮಱಿ$_3$ ; ಮಲ. ಮಱಿ ; ತುಳು. ಮರೆ, ಮರ ; ಕೊಡ. ಮರೆ ]

**ಮಱಿ**$_2$, ಮರೆ$_2$, ಮೊರೆ$_5$, ಮೊಱಿ$_3$ (ನಾ). ೧. ಪರಿವೆಯಿಲ್ಲದಿರುವಿಕೆ; ಬಾಹ್ಯಜ್ಞಾನವನ್ನು ಕಳೆದುಕೊಂಡಿರುವಿಕೆ : 'ಮಱಿವಡು' ಪರಾ. ೨. ಕಾಣದಾಗುವಿಕೆ ; ಅದೃಶ್ಯ ; ಮಾಯ : 'ಮಱಿಗೊಳ್' ಪರಾ. ೩. ಗುಟ್ಟು ; ಗೌಪ್ಯ ; ರಹಸ್ಯ : ಈ ನುಡಿ ಬೆಂಗೊಂಡುದು ಸಜ್ಜನರನೊಂದು ಮಾತಿನ ಮಱಿಯಿಂ (ಪುಷ್ಪಪು. ೦-೫೮) ; ಚಿತ್ರಭೆಯ ಮಾಯೆಯ ಮಱಿಯ ಜವನಿಕೆಯೇಕೆ (ಕೊರಣ. ೨-೫-೦೬). 'ಮಱಿಕಾಱ' ಪರಾ. ೪. ಯಾರಿಗೂ ಕಾಣದಿರುವ ಎಡೆ ; ರಹಸ್ಯಸ್ಥಾನ : ಇರುಳ ಮಱಿಯೊಳು ವಿವೇಕವಿಲ್ಲದೆ ತನ್ನ ತಂಗಿಗಭಿಲಾಷೆಯಾದ

ರಕ್ಷಕ (ಧಾರದೆ)ನೆಂಬವಂಗೆ ಅಂಗಚ್ಛೇದಂಗೆಯ್ವುದುವಂ (ಶಾಪುಂಕ್ಷ. ೬೮) ; ಈ ಪಾಂಚಾಲಭೂಪತಿಯ ತನುಜನವರ ಪರೀಕ್ಷೆಗೋಸುಗ ಮುನಿಕಶ್ಯಪ ಗೂಡಿ ಕೇಳಿದನನಿತು ಮಾತೆಲ್ಲವನು ಮಱೆಯಲಿ ನಿಂದು ರಜನಿಯಲಿ (ಕುವ್ಯಾಆ. ೦೬-೨೦). ೫. ಹಿಂಭಾಗ ; ಹಿಂಬದಿ ; ಹಿನ್ನೆಲೆ : ತಳ ತಳಿಸಿ ತೊಳಗಿ ಬೆಳಗುವ ಪಳಿಕಿನ ಸಲಾಯೊಂದು ಮಱೆಯೊಳಿರ್ದ್ದರಲೆ ಮಹೋಜ್ಜ್ವಳತುಹಿನಕಿರಣಮಂಡಲದೊಳಗಣ ಹರಿಣಂಬೊಲೊಪ್ಪಿ ತೋಱುತ್ತು (ಆಕ್ಕಗಾ. ೦೦೫೦ ಕೂದ್ರಳ) ; ಈ ಮರಗಳ ಗಿಡುಗಳ ಪೊದಱು ಗಳ ಮಱೆಗಳೊಳೀ ಪೊಬಲಂ ಕಂಡೆಂ (ಪತ್ಶಾರಾ. ೯೯-೨೨) ; ನಿಲ್ವುತ್ತವು ರಸಂಗಳಲ್ಲಿ ಮಡಲ್ತನೆ ಭಂಗಿಯೊಳನಂಗಜಂಗಮಲತೆವೊಲ್ ನಿಲ್ವು ಜವನಿ ಕೆಯ ಮಱೆಯೊಳ್ ಪೊಲ್ತುಳವಳ್ ಮುಗಿಲ ಮಱೆಯ ವಿದ್ಯುಲ್ಲತೆಯಂ (ಅಜಿತ. ೯-೨೦) ; ಬೆಳ್ಳಿತ್ತಿನ ಮಱೆಯಲಿರ್ದ್ದ ಹುಲ್ಲೆಗಂಬ ತೊಡುವಂತೆ (ಬಸವ. ೬೪೬). ೬. ಒಳಗು ; ಒಳಭಾಗ : ಮಣ್ಣ ಮಱೆಯ ದೇಗುಲದೊಳಗೊಂದು ಮಾಣಿಕ್ಯವ ಕಂಡ ಬಳಿಕ ಇನ್ನು ಮುನ್ನಿನಂತಪ್ಪುದೇ ಗುಹೇಶ್ವರ (ಅಶಹಂ. ೨೦೬-೯೩೨) ; ನೆಲದ ಮಱೆಯ ನಿಧಾನದಂತೆ . . . ಭಾವದ ಮಱೆಯ ಬ್ರಹ್ಮವಾಗಿಪ್ಪ ಚೆನ್ನಮಲ್ಲಿಕಾರ್ಜುನನ ನಿಲವನಾರೂ ಅಱಿಯಬಾರದು (ಶುಹಾದೇ. ೮. ೯-೨) ; ಮೇದಿನಿಯ ಮಱೆಯೊಳಿಹ ನವನಿಧಿಗಳಂತೆ (ಶಂಭು. ೩-೦೩). ೭. ಹೊದಿಕೆ ; ಮುಸುಕು ; ಆಚ್ಛಾದನೆ : ಮುನಿದೊಡೆ ಭಸ್ಮವಾದಪುದು ಲೋಕವೆನಲ್ ನೊಸ ಲೊಳ್ ತೃತೀಯಲೋಚನಮೆಮಗುಂಟು ತೋಲ ಮಱೆಯಿಂದದು ತೋಱುಪುದಿಲ್ಲ (ಕಾವಂಶೂ. ೫೬೮) ; ಮಱೆಯ ನೂಲು ಸರಿಯೆ ನಾಚು ವುದು ನೋಡಾ ಗಂಡು ಹೆಣ್ಣೆಂಬ ಜಾತಿ (ಶುಹಾದೇ. ೫. ೫೨-೦೨೮) ; ಪೇಳು ಹೇಳೆನ್ನಾಣೆ ಮಾತಿನ ಜಾಳಿಗೆಯ ಮಱೆ ಬೇಡ (ಕುವ್ಯಾಕ. ೦-೦೦). ೮. ಮೈಜೋಡು ; ಕವಚ ; ತನುತ್ರಾಣ : ತಿದಿಯುಗಿದು ಕೊಟ್ಟೆನೊಡವುಟ್ಟಿದ ಕವಚಮನಮರಪತಿಗೆ ಮುನ್ನೆನ್ನನಗೊಪ್ಪದು ಮಱೆಯನಾಸೆ ವಡಲೆಂದದಟನಣಂ ತುಡನೆ ಕವಚಮಂ ರಾಧೇಯಂ (ಪಂಪಭಾ. ೦೨-೦೦೯) ; ಇಹಲೋಕದ ಪರಲೋಕದ ಮರಣದ ಕುತ್ತದ ಪೆಱರೆನಗಿಲ್ಲೆಂಬ ಮಯ್ಗೆ ಮಱೆಯಿಲ್ಲೆಂಬ ತೊಟ್ಟನತಸುವ ಸಪ್ತಭಯಂಗಳ್ಗೆ ನಡುಗದುದುಂ (ಧರ್ಮಾಮೃ. ೫-೦೨೫). ೯. ರಕ್ಷಣೆಯ ಸಾಧನ ; ಕಾಪು : 'ಧೂಳುಮಱೆ' ಪರಾ. ೧೦. ಮಾರುವೇಷ; ಪ್ರಚ್ಛನ್ನ ರೂಪ : ತಪನಸುತಂ ಬೇಱಾಂ ಬೇಱೆ ಪೊಲ್ಲದಂ ನುಡಿದನಾತಂ ಬಿಸುಟಂ ತಕ್ಕಿಪ ನುಡಿಯ ನುಡಿವನೇ ಮಱೆಯ ಪಾಂಡವಂ ಬಗೆದು ನೋಱೆಕೊಂಡಶ್ವತ್ಥಾಮಂ (ಗದಾಯು. ೨-೨೦). ೧೧. ಆಸರೆ ; ಆಶ್ರಯ : ಎಲವೊ ದೇವೇಶನನೇಂ ಸೆಱೆವಿಡಿದೆ ತೊಲಗು ದೇವನ ಮಱೆಯಂ ಬಱಿಕಱು ಯಲಕ್ಕುಮೆನಗಂ ನಿನಗಂ (ಪಂಪಭಾ. ೦೦-೦೨೦); ಬಡಬಾನಲಂಗೆ ಸಾಸಿರ್ಮಡಿ ಯೆನಿಸಿದ ರೌದ್ರಕೋಪಮಂ ತಳೆದೆನ್ನೊಳ್ ತೊಡರ್ದುಮಕಾರಣವೈರಮ ನೊಡರ್ಚಿಯುಂ ಕಡಲದಾರ ಮಱೆಯಂ ಪುಗುವಂ (ಪಂಪಶಂ. ೦೫೦-೨) ; ಬಱಿಯ ಕಾರ್ಪಣ್ಯದಲಿ ಮೇಘದ ಮಱೆಯು ಹೊಕ್ಕರೆ ರಾಹು ಬಿಡುವನೆ ಉರಿವ ರವಿಮಂಡಲವನು (ಕುವ್ಯಾದ್ರೋ. ೨-೯೯). ೧೨. ಅಡ್ಡಿ ; ತಡೆ : ತದ್ವಕ್ತ್ರೇಂದುಬಿಂಬಂ ಮಱೆಯನಿಸಿನುದೆಂಬೀವದಿಂದೇನುವಂ ಕಾಣದೆ . . . ಮೂರ್ಧನಾದಂತಿರಿರ್ದಂ (ಆದಿಂಲ. ೪೫೦); ನಿನ್ನವಯವಂಗಳ ಚೆಲ್ವಂ ಗಾಭರಣಂ ಮಱೆ ನಿನ್ನ ಸೌಕುಮಾರ್ಯಕ್ಕೆ ಹೂದೊಡಿಗೆ ಹೊಱೆ (ಪಂಬಿರ. ೦೯-೦೨) ; ಬಾಣನಂದನೆಯೆಂಬ ತಡಿಕೆಯ ಮಱೆಯ ಸುಜಾಣಮನ್ಮಥನು ರಾಳ್ಗಣೆಯ ಕೇಣವಿಲ್ಲದೆ ನೀಡಿ ಸುರರೆರ್ದೆಯೊಳಗಿರ್ದ ಪ್ರಾಣಹಂಸಗಳ ಬಂಧಿಸಿದ (ಮೋಹತ. ೨೫-೦೬). 'ಮಱೆಗಾಣ್' ಪರಾ. ೧೩. ಕಪಟ ; ಮೋಸ ; ವಂಚನೆ : ಪೆಱರೇಗೆಯ್ದೊಡಮೇಂ ತಾಂ ಕಱೆ ಮಱೆಯಣ ಮಿಲ್ಲದಂತು ನೆಗಟ್ವುದು ಮುನಿಪಂ (ಧರ್ಮಾಮೃ. ೫-೦೦೨) ; ಮಱೆಬೇಡಾ ತ್ಮಜಸತ್ಕಳತ್ರಸಖರೊಳ್ ನ್ಯಾಯಂಗಳೊಳ್ ಸತ್ಯದೊಳ್ (ಸೋಮೇಶ. ೯೨). 'ಮಱೆಗಾಳಗ' ಪರಾ. ೧೪. [ಆಲಂ] ಮಾಯೆ : ಮಱೆಯ ಮನೆಯ ಮಧ್ಯದಲ್ಲಿ ಮನೋವಿಕಾರದ ಮಾನಿನಿ ಹುಟ್ಟಿದಳು (ಕೋಲಶಾಂ. ೦೯-೨೨). ಮರೆ$_2$ : ೩. ತಿಳಿಯದಿದೇನು ಮರೆಯೆನಗೆ (ಗಗಶಾ. ೨-೨೩); ಮರೆಯ ಬಗೆಯಿಂ ತನ್ನ ಎಣಿಕೆಗದ ಬರೆಯುವಳ್ (ಕಾರೂಶ. ೬೦-೦೦೨). ೪. ಈ ಸಂಗತಿಯನ್ನು ಜನಾರ್ದನನು ತನ್ನ ಹೆಂಡತಿಯೊಡನೆ ಗುಟ್ಟಾಗಿ ಹೇಳುತ್ತಿರುವಾಗ ಮನೋರಮೆಯು ಮರೆಯಲ್ಲಿ ನಿಂತು ಕೇಳಿದಳು (ಶಂಕವು. ೦೮೨). ೫. ಸೊಪ್ಪಿನ ಮರೆಗೆ ಸಾರಂಗವಿದ್ದಂತೆ ತೋರುತ್ತದೆ (ಮುಂದಿಯು. ೪-೪೩) ; ಅಂದುಗೆಯ ಧ್ವನಿಸುತ್ತ ನೀ ಮರೆಗೆ ಸೇರು (ವಚನ. I, ೪೨೬). ೭. ಶ್ರೀಗುರುವರನು ಶಿಷ್ಯನ ಮನದ ಸಂಶಯ ಮರೆಯ ಪರಿಯುವೆನೆಂಬ ವಾತ್ಸಲ್ಯದಲಿ ಪೈದೋರೆ (ಗಗಶಾ. ೨-೮). ೧೧. ನಾಯಿಯು ತನ್ನ ಯಜಮಾನನ ಕಾಲುಗಳ ಮರೆಯನ್ನು ಹೊಗುತ್ತದೆ (ಕ್ಯೋಶರ್. ೨೪೬) ; ಎಲೆಗೆ ಕಾಯಿ ಮರೆ, ಕಾಯಿಗೆ ಎಲೆ ಮರೆ (ಗಾದೆ). ೧೨. "ಅಡ್ಡ— ಅಭಿಯೋಗೇ, ಮರೆಯೊಳ್ . . . ಅಡ್ಡಂ = ಮರೆ" (ಕಾಶಬ್ದ. ೨೩) ; ಮುಂದೆ ಇರುವ ಮರ ನನಗೆ ಮರೆ, ಏನೂ ಕಾಣುತ್ತಿಲ್ಲ (ರೂಢಿ). ಮೊರೆ$_5$ : ೧೧. 'ಮೊರೆಹೊಗು' ಪರಾ. ಮೊಱೆ$_3$ : ೧೧. 'ಮೊಱೆ ಯೊಗು' ಪರಾ. ೧೫. ಶರಣಾಗತಿಯನ್ನು ಸೂಚಿಸುವ ಒಂದು ಅನುಕರಣಶಬ್ದ : ಉಡುಪಶೇಖರ ಮೊಱೆಯೊ ಪಾರ್ವತಿಯೊಡೆಯ ಮೊಱೆಯೋ (ಶಾಸಂಶ. ೭-೫೮) ; ಒಬ್ಬಾನೊಬ್ಬ ಮೊಱೆಯೋ ಎಂದು ರಾಯಗೆ ಮೊಱಿಡಲು (ಶಂಕರಾ. ೦೦-೩೦).

**ಮಱೆಮುಸುಕು** = ಮುಚ್ಚುಮರೆ : ವಂಚನೆ ; ಕಪಟ : ಮರೆ ಮುಸುಕು ಕುಹಕಿ ಯಾತಕೆ ಜನ್ಮಿಸಿದನೋ (ದಶ್ಕೃ. ೯-೯೯) ; ಮರೆ ಮುಸುಕಿಲ್ಲದ ಮಾತು, ನಕ್ಕುನಗಿಸುವ ಹಾಸ್ಯ – ಇವು ಸರ್ವಜ್ಞನ ಕವಿತ್ವದ ಮುಖ್ಯ ತತ್ತ್ವಗಳು (ಸಾಹಿಶ. ೦೦೦). **ಮಱೆಗೆ ವರ್, ಮಱೆಗೆ ಬರು** = ಶರಣಾಗತಿಯನ್ನು ಪಡೆ ; ಆಶ್ರಯಿಸು : ಅದಟಂ ಕೊಂಡಾಡದೆ ಬೇಡಿದರ್ಗೀಯದೆ ಮಱೆಗೆ ವಂದರಂ ಕಾಯದೆ . . . ಅಧಮನದೇತರ್ಕೆ ಬಾಳ್ತೆ ಜೀವನ್ಮೃತಕಂ (ಅಜಿತ. ೦೨-೯೮); ಮಱೆಗೆ ವಂದರಂ ಕಾಯದೆ ಬಾಳ್ವರಮಗನ ಬಾಹುದಂಡಂ ನಿರರ್ಥಕಂ (ಶಂಶಾಪು. ೦೨-೭೯); ಎರೆದರ್ಗಿಲ್ಲೆನ್ನದೀವಗ್ಗಳಿಕೆ ಮಱೆಗೆ ಬಂದಾತನಂ ಕಾವ ಪೆಂಪು (ರಾಜಶೇ. ೬-೦೩೬). **ಮಱೆಮಾಡು, ಮರೆಮಾಡು** = ಕಣ್ಣಿಗೆ ಬೀಳದಂತೆ ಮಾಡು ; ಮುಚ್ಚಿಡು : ಮರಗೆರಸಿಯಾಡಲೆಂದು ಮುಂದೆ ತಮ್ಮ ಪೆಗೆ ಪರ್ವುವಂತೆ ಪನ್ನಿರ್ವರ್ತ್ತರ್ ಪರ್ವಿದಾಲದ ಮರದ ಮೊದಲ್ಗೆ ವಂದು ಭೀಮನಂ ಮಱೆಮಾಡಿ (ಪಂಪಭಾ. ೨-೩೦ ವ); ಹಣೆಯ ಕಣ್ಣಂ ನೊಸಲ ಭಸಿತದಿಂ ಮಱೆಮಾಡಿ (ಇಹರ. ದೇ. ೩೦-೨೦); ಮದುಮಗಳ್ ತನ್ನೆಲ್ಲ ಚೆಲ್ವಿಕೆಯ ಮರೆವಡಿಡೆ ಮದುಮಗಂ ಕಾಣಿಸಂ (ಕಾಲೂಱ. ೦೭೯-೪೦೯). **ಮಱೆಮೋಸ, ಮರೆಮೋಸ** = ಒಳ ಗೊಳಗೇ ಮಾಡುವ ಮೋಸ ; ನಂಬಿಕೆದ್ರೋಹ : ನೃಪವರ ಯುಧಿಷ್ಠಿರನಾಳ್ವ ದೇಶದೊಳ್ಳಳವು . . . ಅನ್ಯಾಯ ಮಱೆಮೋಸ . . . ಮೊಳೆದೋಱವು (ಕೈಶುಶಾ. ೨-೫); ವಂಚನೆ ಮರೆಮೋಸಗಳನು ಮರೆಯು (ಕುಶ. ೬-೨). **ಮಱೆಯ ಮಾತು, ಮರೆಯ ಮಾತು** = ಅಭಿಪ್ರಾಯ ವನ್ನು ಮುಚ್ಚಿಟ್ಟು ಆಡುವ ಮಾತು ; ಸುತ್ತುಬಳಸಿನ ನುಡಿ : ಮಱೆಯ ಮಾತುಗಳೇಕೆ ಪಾಂಡವರೆಱಕ ನಿಮ್ಮಲಿ ಹಿರಿದು ಪಾರ್ಥಗೆ ಮಱುಗುವಿರಿ ಹಿರಿದಾಗಿ (ಕುವ್ಯಾಉ. ೦-೩೬) ; ಮಱೆಯ ಮಾತೇಕೀ ಕುವರನ ಸವಿಕೂಟಕೆಱಗಿದ ಮನದ ದೀಪನವ ನೆಱೆಯಿಾತನ ಸುರತದೆ ತೃಪ್ತಿ ಪಡಿಸು (ಕಂಪಪಿ. ೯-೦೨೬); ಮರೆಯ ಮಾತಲ್ಲ (ಶೋಣಾಕು. ೬-೯೬). [<ಮಱೆ$_1$./ತಮಿ. ಮಱೈ; ಮಲ. ತೆಲು. ಮಱ; ತುಳು. ಕೊಡ. ಮರೆ]

**ಮಱೆಕಾಱ** (ನಾ). ಗುಟ್ಟನ್ನು ಬಿಟ್ಟುಕೊಡದಿರುವವನು ; ರಹಸ್ಯವನ್ನು ಕಾಪಾಡುವವನು : ಅಱಿಯೆಯಾ ನೀನಿದ ನಗೆಕಾಱ ಬಗೆಕಾಱ ಮಱೆಕಾಱ ಬಲುಟೌಳಿಕಾಱ ಅಱಿಯದಂದದೊಳೆನ್ನ ಕೇಳ್ವೆ (ಛಚ. ೬-೨೩). [ಮಱೆ$_2$ + — ಕಾಱ]

**ಮಱೆಗಡೆ** (ನಾ). ಯಾರ ಕಣ್ಣಿಗೂ ಬೀಳದಿರುವ ಜಾಗ; ರಹಸ್ಯಸ್ಥಾನ : ಮುಸುಕಿಟ್ಟೊಂದುಮರದ ಮಱೆಗಡೆ ನಿಂದು (ಶ್ರಶಂಚ. ೨-೧೪೦); ಪೆಡವೆಟ್ಟಿದನಾಂಧ್ರಂ ಮಗಧಂ ಮಱೆಗಡೆಗೆ ಜಗುಳ್ದಂ (ಜಯುಕಾ. ೭-೪). [ಮಱೆ$_2$ + ಕಡೆ$_3$]

**ಮಱೆಗಣ್** (ನಾ). ಪರವಶತೆಯನ್ನು ಸೂಚಿಸುವ ಕಣ್ಣು : ತುಱುಗಿತು ತುಂಬಿ ಕತ್ತಲೆ ಭಾಸ್ಕರಗಂಜಿ ಮುಱಿದೋಡಿ ಬನವ ಹೊಕ್ಕಂತೆ ಮುಱುಗಿದುವೆಳಜೊನ್ನವಕ್ಕಿ ಕಾಸಾರದೆ ಮಱೆ [ಱೆ] ಗಣ್ಣ ವಿಹಗ ಕೂಡಿಮುವು (ಶೋಹಕ. ೨೨-೩೩). [ಮಱೆ$_1$ + ಕಣ್]

**ಮಱೆಗನ್ನಡ**, ಮಱೆಕನ್ನಡ (ನಾ). ಕೆಲವರನ್ನು ಬಿಟ್ಟು ಬೇರೆಯವರಿಗೆ ಅರ್ಥವಾಗದಿರುವಂತೆ ರೂಪಿಸಿಕೊಂಡ ಸಾಂಕೇತಿಕವಾದ ಕನ್ನಡ ಭಾಷೆ : ನುಡಿದು ತಲೆದೂಗಿಸುವ ಮಱೆಗನ್ನಡಕೆ ಹಾಹಾಯೆನಿಸಿ ಮೆಚ್ಚನು ಪಡೆವ ವಾಗ್ಮಿಗಳೋದಿ ಹೊಗಳಿಸಿಕೊಂಬ ಗಮಕಿಗಳು . . . ಒಪ್ಪಿದರು (ಕುಮಾ.ರಾ. ೮-೩೬); ತಿಳಿಯುತಿಗೂಢಗನ್ನಡವನಾ ಮಱೆಗನ್ನಡ ಸಾರಗನ್ನಡಂಗಳು ಮೊದಲಾದ ಸಾಸಿರದ ಮೇಲೆರಳ್ನೂಱುಮಿವಾದಿಯಾದವಂ (ಕೆಚ. ೪-೪). **ಮಱೆಕನ್ನಡ** : ಮಱೆಕನ್ನಡವಾಗಿ ದೊರೆಗಳ ಸನ್ನಿಧಾನಕ್ಕೆ ಅಪ್ಪಾಜೈಯ್ಯನು ಬಿನ್ನವತ್ತಳೆಯನ್ನು ಬರೆದು ಕಳುಹಿದನು (ರಾಜೇಂದ್ರ.೨೬೦). [ಮಱೆ$_2$ + ಕನ್ನಡ$_1$]

**ಮಱೆಗಳೆ** (ಕ್ರಿ). ೧. ಆವರಣವನ್ನು ತೆಗೆದುಹಾಕು ; ಮುಸುಕನ್ನು ಸರಿಸು : ವೇದವ್ಯಾಸನಂತರ್ಜಾತಜಾಡ್ಯದ ಜವನಿಕೆಯ ಮಱೆಗಳೆದು (ಕಭಾಗ. ೧-೪-೧). ೨. ಮಾಯೆಯನ್ನು ಹೋಗಲಾಡಿಸು : ಎಚ್ಚಱಿಯದಾನಂದಾನುಭವದಲಿ ಮಱೆಗಳೆದ ಪರಿಪೂರ್ಣಮಯನಾಗಿರ್ದನವಧೂತ (ಕಭಾಗ. ೩-೬-೨೭). [ಮಱೆ$_2$ + ಕಳೆ$_1$]

**ಮಱೆಗಳ್ಳ** (ನಾ). ಅಡಗಿಕೊಂಡಿರುವ ಕಳ್ಳ : ತಳವಱರದಿಗೋಲಿಲಿಗೇಳ್ದ ಮಱೆಗಳ್ಳರಂತೆಯುಂ . . . ಬೆದಱಿ ಬೀದಿವರಿದು ಸರಿಯುತ್ತೆ (ಶಶಪು. ೪೦-೬). [ಮಱೆ$_1$ + ಕಳ್ಳ$_1$]

**ಮಱೆಗಾಣ್** (ಕ್ರಿ). ಅಡ್ಡಿಯನ್ನು ಪಡೆ ; ತಡೆಯನ್ನು ಹೊಂದು : ನೀನೆನ್ನ ಕೆರಳಿಸಲ್ ನಾಂಟಿದೆನ್ ನಿನ್ನೆರ್ದೆಗೆ, ಬಿಲ್ಗಾಜನಂತೆವೋಲ್ ಗುಱಿಕೆಡದ ಕಣೆಗಳನ್, ಕೂರಿಱಿತದಿಂದೆ ಮಱೆಗಾಣದಾ ಕಣೆಗಳನ್ (ಅಂಚಿಗೂ. ೪೬-೧೧೦೩). [ಮಱೆ$_2$ + ಕಾಣ್]

**ಮಱೆಗಾಳಗ** (ನಾ). ಮೋಸದ ಯುದ್ಧ : "ಕೂಟಯುದ್ಧಂ=ಮಱೆಗಾಳಗಮೆಂಬುದು. ಒಂದೆಸೆಗೆ ನಡೆವಂತೊಂದೆಸೆಗೆ ನಡೆದು ಕಿಡಿಸುವುದು ವಂಚನೆಯು ಕಾಳಗಮೆಂಬುದು ತಾತ್ಪರ್ಯ" (ಕೀವಾ. ೨೯-೪೦). [ ಮಱೆ$_2$ + ಕಾಳಗ ( < ಕಾಳೆಗ ) ]

**ಮಱೆಗುಳಿ** (ನಾ). ಕಣ್ಣಿಗೆ ಕಾಣದಂತಿರುವ ತಗ್ಗು, – ಹಳ್ಳ : ನಡವುತ ನಡವುತಿಳಿಯೆ ತಾಂ ಮುಣಾಗಿ ಪೋಪಾ ನೆಲದ ಮಱೆಗುಳಿಗಳಿಂ . . . ಎಸೆವ ದಾರಿಯೊಳು ಪಾಪಿಗಳು ನಡೆಯಬೇಕು (ಕೀಕೃಪು. ೪-೦೬-೦೩). [ ಮಱೆ$_2$ + ಕುಳಿ$_2$ ( < ಕುೞಿ$_2$ ) ]

**ಮಱೆಗೆಯ್** (ಕ್ರಿ). ೧. ಮಱೆಮಾಡು ; ಅಡ್ಡವಾಗಿರಿಸು : ಪರಭೃತಪಕ್ಷದಿಂ ರತಿಯ ಕಣ್ಮಲರಂ ಮಱೆಗೆಯ್ವನಂಗನೊಲ್ದೆರೆಯ (ಅಚಂಪು. ೭-೧೧) ; ಹಿಮಗಿರಿಸುತೆಯ ನಿದ್ರೆಯೆಚ್ಚಱದಂತೆ ಮೆಲ್ಲನಾರೈದೆದ್ದು . . . ಫಣಿಯ ಮಱೆಗೆಯ್ದು ಬಾಂದೊಱೆಯ ಸವತಿಯನಪ್ಪಿ (ಸೌಂದಪು. ೭-೧). ೨. ಮುಚ್ಚಿಡು ; ಅಡಗಿಸು : ತಪ್ಪಿಟಮಂ . . . ಉರ್ವಿಯೊಳ್ನಿಲ್ಲದಂದೊಡೆಯಿಕ್ಕುತೋಡುಗಳಂ ಶುಚಿಸ್ಥಲದಿಂಬಿನೊಳ್ ಮಱೆಗೆಯ್ದು (ಸೃಕಬ. ೩೬-೩೦). ೩. ಮಱಮಾಡಿಕೊಳ್ಳು ; ಮಱೆಸು : ನೆರೆದಲಿಗೆ ಮುಸಿದೊಡೆದು ತೆರೆಗೊಂಡೊಡಲನು ಕತ್ತಲೆಯ ಮಱೆಗೆಯ್ದು . . . ಹಣ್ಣಮುದುಕಿಸೂಳೆಯರೆಸೆದರು (ತಂಪು. ೧೧-೭೭). [ ಮಱೆ$_2$ + ಕೆಯ್$_1$]

**ಮಱೆಗೇಳ್** (ಕ್ರಿ). ಇತರರಿಗೆ ಕಾಣದಂತೆ ಅಡಗಿಕೊಂಡು ಬೇರೆಯವರ ಮಾತನ್ನು ಕೇಳು; ಕದ್ದು ಕೇಳು: ಬಜ್ಜೆಗುಂಟಣಿ ಸಜ್ಜವನೆಯ ಬಾಗಿಲಂಪತ್ತಿ ಮಱೆಗೇಳುತ್ತಿರ್ದು (ಚಂದ್ರಪು. ೬-೩೯ ವ). [ ಮಱೆ$_2$ + ಕೇಳ್ ]

**ಮಱೆಗೊಳ್**, ಮಱೆಗೊಳ್, ಮಱೆಗೊಳು (ಕ್ರಿ). ೧. ಕಾಣದಾಗು ; ಅದೃಶ್ಯವಾಗು : ಅಸಿಯುಳಿನಗಸವಸದೊಳೆ ಬೆಸೆದು ಪೋಗಿ ಮಱೆಗೊಳೆಪೂತ ಕಲ್ಪಲತೆಯುಂ ಲಲಿತಾಂಗಿಯೆ ಗೆತ್ತು (ಅಂಪು. ೪-೧೩). ೨. ಅಡಗಿರು ; ಮಱೆಯಾಗಿರು : ಸಂಭ್ರಮದಿಂ ಮಱೆಗೊಂಡು ನೋಡಿದಳ್ (ಕಾದಂಬ. ೧೩೩) ; ಪೊಡವಿಯೊಳು ಮಱೆಗೊಂಡ ಭಕ್ತಿಯನೊಡನೆ ತಲೆವಿಡಿದೆತ್ತುವಂದದಿ ತಲೆಯನೆತ್ತುವನು (ಬಸಪು. ೩-೩೬). ೩. ಬಚ್ಚಿಡು ; ಮುಚ್ಚಿಡು : ಅಲರಲರ್ಗಣ್ ಮುಗುಳ್ ನಗೆ . . . ಪದವಣ್ ಬೆಳವಾರ್ಯವ್ ಪೆಱತಲ್ಲಿದೆಂತೊ ಕೋಮಲಲತೆ ಪೇೞೆಪೆಣ್ನಿನಿಯಳಂ ಮಱೆಗೊಂಡುದೊ ಸೂಱೆಗೊಂಡುದೋ (ಶಂಶಾ. ೩-೦೨). ೪. ಆಸರೆಯನ್ನು ಪಡೆ ; ಶರಣಾಗು : ಬಂದ ಮಾವನೆ ಮಱೆಗೊಂಡು ಬಗ್ಗಿಸುವ ಕೋಗಿಲೆ (ಅಪು. ೧-೭೩) ; ಏನವರ ದಂಡಿಸದೆ ಬಿಡುವೆನೆ ಜವನ ಮಱೆಗೊಂಡಡಂ (ಬಸಪು. ೧೧-೬) ; ಪೊಡವಿಯೊಳಾನಿರೆ ಪರಿಮಳವನು ವಾಯು ಬಿಡದೆ ಕೊಂಡೊಯ್ವನೆಂದೊಡನೆ ಪಾತಾಳವ ಮಱೆಗೊಂಡು ಲಾವಂಚ ಮುಡಿವಾಳಬೇರ್ಗಳೊಪ್ಪಿದುವು (ಕಂಪಿ. ೩-೯೭). ೫. ತೆರೆಯನ್ನಾಗಿ ಮಾಡಿಕೊಳ್ಳು ; ಜವನಿಕೆಯಂತೆ ಬಳಸು : ಮಿಱುಗುವ ಬೆಳ್ಮುಗಿಲಂ ಮಱೆಗೊಂಡು ನಿಂದ ಬಿಜ್ಜೋದರಿವೋಲ್ (ಕವ್ಯಶಾ. ೩೩೪) ; ಮುರಾಂತಕ ಮುರಳಿ ಚಕ್ರವ ತುಡುಕದಿರನೆಂದಸ್ತಗಿರಿಯನು ಸೂರ್ಯ ಮಱೆಗೊಂಡ (ಕುಮಾ.ಭೀ. ೭-೯೬). ೬. ಹಿಂಭಾಗಕ್ಕೆ ಸರಿ, – ಜರುಗು; ಹಿಂದುಗಡೆಗೆ ಹೋಗು : ನಾರಿಯರ ಮಱೆಗೊಂಡು ಸಭೆಯಲಿ ಸಾರಥಿಯ ಕುಬ್ಜಾವತಾರನೋರೆಗಣ್ಣನೊಳೀಕ್ಷಿಸುತ (ವಿಚ. ೬-೯೩); ವಿಟರ್. . . ನುಡಿಸೆ ನುಡಿಯದೆ ಕೂಡೆ ಬೆಣ್ಣವೊಲ್ ಬೆಮರಿ ಸಾರ್ ಸಾರೆಂದು ಸಖಿಯ ಮಱೆಗೊಂಬ ಬಾಲೆಯರೆಸೆದರು (ತಂಪು. ೧೧-೧೯). ೭. ರಕ್ಷಣೆಯಾಗಿಡು ; ಅಡ್ಡವಾಗಿ ಹಿಡಿ : ನೇಜೆಯದಿಱಿತಕೆ ಹರಿಗೆಯ ಮಱೆಗೊಂಡು ಮಾಱದೇಱುವ ರಿಪುಭಟರ ಸೋಜಿಗಬಡೆಯೆ ನೋಳ್ಪರು (ಕಂಪಿ. ೦೪-೭೩). ೮. ವೇಷವನ್ನು ಮಱೆಸಿಕೊಳ್ಳು ; ಮಾರುವೇಷ ಹಾಕಿಕೊಳ್ಳು : ಮತ್ಸ್ಯ ಮಱೆಗೊಂಡೈದಿ ಪೊಕ್ಕನು ವೃತ್ರರಿಪು (ಕಭಾಗ. ೪-೦೩-೬). **ಮಱೆಗೊಳ್**: ೪. ಖಚರನು ಶತ್ರುವಿನ ಭಯದಿಂದ ಮಱೆಗೊಳೆ ಕ್ಷಾತ್ರಧರ್ಮದಿ ಕೈವಿಡಿದೆನು (ಕೋಗಮ. ೦೬-೪೯) ; ಅಂಬರಮಣಿಯು ಬೆಚ್ಚಿ ಘನವ ಮಱೆಗೊಂಡನು (ಮಕಾಂ. ೩-೦-೨೩) ; ಹುದಗಿ ಅಲ್ಲಲ್ಲಿ ಛಾಯಾ ವಿರೂಪಗಳ್ ಹದುಗಿದುವು. ದಿನಮಣಿಯು ಬೆದರಿಕೆಗೆ ಕಾನನವ ಮಱೆಗೊಂಡ ಕತ್ತಲೆಯ ಕುಲದಂತೆವೋಲ್ (ಶಶಾಂಗ. ೩-೭೭). **ಮಱೆಗೊಳು** : ೧. ತೋತೋರಿ ಮಱೆಗೊಳುವ ಭೂತಭಾವಂಗಳೀ ಅನಿಕೇತಕೇತನದಿ ಪಡೆಯುವವು ಸ್ಥಿರತೆ (ಮಲದೇ. ೩೭-೭). [ಮಱೆ$_2$ + ಕೊಳ್$_1$]

**ಮಱೆಗೋಟೆ** (ನಾ). ರಕ್ಷಣಾಸ್ಥಾನ : ಅಱಿಯೊಡಲೆಂಬ ಮಣ್ಣ ಮಱೆಗೋಟೆಯೊಳಿಂದ್ರಿಯದುಃಪರಿಗ್ರಹಂಗಳನೊಳಕೊಂಡು ಜೀವ ನಿಲಲಾರ್ತಪ ನಾಳೆಯ ಲಗ್ಗೆಗೆಯ್ದು ತೊತ್ತಳದುಳಿದಿಪ್ಪನುದ್ದಮರಿಯುಂ ಜವಂ (ಕವುಕ. ೦೩-೯೩). [ಮಱೆ$_2$ + ಕೋಟೆ$_1$ (<ಕೋಂಟೆ)]

**ಮಱೆಜಾಣ** (ನಾ). ಇತರರಿಗೆ ಕಾಣದಂತಿರುವ ಬುದ್ಧಿವಂತಿಕೆಯುಳ್ಳವನು : ನುಡಿಜಾಣ ನಡೆಜಾಣ ನೆಱೆಜಾಣ ಮಱೆಜಾಣ

ಕಡುಜಾಣ ಜಗಕೆ ಸುಜಾಣ ಎಡೆಬಿಡದೆನ್ನಂತರಂಗದೊಳಿರು ಜಾಣರೊಡೆಯ ಚಿದಂಬರಪುರುಷಾ (ಶರಶ. ೭-೬೬). [ಮಱೆ$_2$ + ಜಾಣ]

**ಮಱೆದೆಗೆ,** ಮರೆದೆಗೆ (ಕ್ರಿ). ಆವರಣವನ್ನು ತೆಗೆ ; ಮುಸುಕನ್ನು ಸರಿಸು : ವೀರನಾಹವಕೆ ಹೊಗುವರಾರುಗಿಗೊಂಡವೋಲ್ಮಱೆದೆ [ಶಾಣಂ. ತೆ]ಗೆದ ಕಾಲನ ಕುಂಡವೋ ನೆಱೆ ಬಿಗಿದ ನೃಪಕೋದಂಡವೋ (ಏಕಾಗ. ೪-೯-೦೬). **ಮರೆದೆಗೆ :** ತೊಡೆಯೊಳು ಕುಳಿತು ಮೊಲೆಯ ನೀಯೆಂದು ಕಂಚುಕಮಂ ಮರೆದೆಗದುಂಡು ತಾಯ ಮೊಗಮಂ ನೋಡಿ ಗಹಗಹಿಸುತೆ (ನವಮೋ. ೦೩-೩೬). [ಮಱೆ$_2$ + ತೆಗೆ$_1$]

**ಮಱೆನುಡಿ,** ಮರೆನುಡಿ (ನಾ). ೧. ಗುಟ್ಟಿನ ಮಾತು ; ರಹಸ್ಯವಾದ ನುಡಿ : ಮಱೆನುಡಿ ಯಾವಾಗ ಸೂಳ್ನುಡಿ ಯಾವಾಗ ಮೊಱೆಗೆಟ್ಟ ನುಡಿಗಳಾವಾಗ (ಶತಶ. ೦೦-೬೨). ೨. ಮರೆಯಲ್ಲಿ ನಿಂತು ಹೇಳುವ ಮಾತು ; ಅಶರೀರವಾಣಿ : ನಿನಗೆ ಸೀತೆಯೊಳ್ ಪುಟ್ಟಿದರಿವರನೊಪ್ಪುಗೊಳ್ಳೆಂದು ಮಱೆನುಡಿ ಪುಟ್ಟಲೊಡಂ ಸುರರ್ ಪೂಮಳೆಗಱೆದರ್ (ರಾಮಾಶ್ವ. ೦೬೨-೦೬). ೩. ನೇರವಾಗಿ ಅರ್ಥವಾಗದ ಮಾತು : ಕೇಳ್ದಿ ನಾನ್ ಪಕ್ಕಿಗಳ್ ಕೆರಳ್ದುಱುಬಿ ಪುರ್ಚಿಂದೆ ಚೀಱುವ ಬರ್ಬರದ ಮಱೆನುಡಿಯುನ್ (ಅಂತಿಗೂ. ೪೩-೯೨೩). **ಮರೆನುಡಿ :** ೨. ಸಂಹರಿಪ ಸಾಧನಮದಾವುದೆತ್ತಣದು ತಳ್ವುಗುವೆಂದು ಮುಳಿದಾರ್ದು ತುಡುಕುವೊಡೆ ಕೆಲಬಲನನೀಕ್ಷಿಸಿದನಾ ಚಣದೊಳೊಂದು ಮರೆನುಡಿಯೆನಗೆ ಕಿವಿಗೊಂಡುದು (ಸಂಶಶ. ೨೩-೬೩). ೪. ಮುಚ್ಚುಮರೆಯ ಮಾತು : ವಂಚನೆಯ ಮಾತು : ನಿಡುಸುಯ್ದನಾ ಮರೆನುಡಿಗಳೇಟಿಯಿಂರಿತವಂ ತಾಳಲಾರದೆ ತಾಳ್ದು (ಶ್ರೀರಾಮಪ. ೩೦೪-೨೪೩). ೫. ಸುಳ್ಳು ; ಹುಸಿ : ಮರೆನುಡಿಯಿದಲ್ಲ ಬೋಳಂ ತಾನೆ ಬಿದ್ದು ಮರೆದೊಡಲು ಮಲಗಿರಲ್ . . . ಬದುಕಿಸಿದೆ (ಕಾಲೂರ. ೦೬೪-೬೬೪). [ಮಱೆ$_2$ + ನುಡಿ$_2$]

**ಮಱೆಮಾಂಜು** ' ಮಱೆಮಾಜು ' ನೋ.

**ಮಱೆಮಾಜು,** ಮರೆಮಾಚು, ಮರೆಮಾಜು, ಮಱೆಮಾಂಜು (ಕ್ರಿ). ಅಡಗಿಸು ; ಬಚ್ಚಿಡು ; ಮುಚ್ಚಿಡು : ಇನಿಯನೇಕಾಂತದೊಳೆಸಗಿದುದನು ತನ್ನ ಮನದೊಳೆ ಮಱೆಮಾಜುವುದು (ಹಂಶ. ೩-೩೮). **ಮರೆಮಾಚು :** ಪ್ರಯತ್ನಪೂರ್ವಕವಾಗಿ ಜನಗಳಿಂದ ಇದುವರೆಗೂ ಈ ಕಥೆಯನ್ನು ನಾನು ಮರೆಮಾಚಿದ್ದೇನೆ. ಆದರೆ ಹಲವಾರು ಕಾರಣಗಳಿಂದ ಇನ್ನು ಮುಂದೆ ಮರೆಮಾಚಲಾರೆ (ಶಾಪಶ. ೯) ; ಅವಿದ್ಯೆ ಎಂಬುದು ಬ್ರಹ್ಮನನ್ನು ಮರೆಮಾಚುವ ಮುಸುಕಲ್ಲ (ಕತ್ಮಶಾ. ೩೨೮). **ಮರೆಮಾಜು :** ಆ ಅಂಶವನ್ನು ಮರೆಮಾಜುವುದು ಅಪರಾಧವಾಗುತ್ತದೆ (ರಾಷ್ಟ್ರಮು. ೨೩) ; ಅವನ ಮೋಹಜ್ವರವು ದಿನದಿನಕ್ಕೆ ಬೆಳೆದು . . . ಕಡೆಗೆ ಮರೆಮಾಜಲು ಕೂಡ ಕಷ್ಟವಾಗುವುದು (ಕಾವ್ಯಸ. ೬೬). **ಮಱೆಮಾಂಜು :** ಮಱೆಮಾಂಜಿದೊಡಂ ಮೆಯಿನಱಿತರುಪೇಂದ್ರಾವತಾರ[ನೆಂದು ಪೊಗಟ್ದರ್] (ಚಕಪ. ೪-೮೬). [ಮಱೆ$_2$ + ಮಾಜು$_1$]

**ಮಱೆಮಾತು** 'ಮಱೆವಾತು' ನೋ.

**ಮಱೆಮೆಯ್,** ಮರೆಮೈ (ನಾ). ಮರೆತು ಹೋದ ಹಿಂದಿನ ಜನ್ಮ ; ವಿಸ್ಮರಣೆಗೊಳಗಾದ ಜನ್ಮ: ಮಱೆಮೆಯ್ಯಂ ಪಲವಾದ ಪೋದ ಭವಮಂ ಜಾತಿಸ್ಮರರ್ಕಂಡೊಡಂ ಮಱೆದಿರ್ಪರ್ಗಡ (ಅನಂಪು. ೯-೨೦). **ಮರೆಮೈ:** ಪೆಣ್ಣ ಮರೆಮೈಯಿಂದ ಬಂದಿರ್ಪ ಸಾಲಮಲೆ ತಿಣ್ಣಂ (ಕಾಲೂರ. ೩೩-೩೩). [ಮಱೆ$_2$ + ಮೆಯ್$_2$]

**ಮಱೆಯಿಸು,** ಮರಸು$_1$, ಮರೆಸು, ಮಱಸು$_1$, ಮಱೆಸು (ಕ್ರಿ). ೧. ನೆನಪಿನಿಂದ ಹೋಗಲಾಡಿಸು ; ವಿಸ್ಮೃತಿಯುಂಟಾಗುವಂತೆ ಮಾಡು; ಮರೆಯುವಂತೆ ಮಾಡು : ನಾಣ್ಗೆಡೆಗುಡದಿರ್ಪುದೊಂದು ನುಡಿಗಳ್ ಮೊಱೆಯಂ ಮಱೆಯಿಪ್ಪುದೊಂದು ಕಳ್ಗುಡಿದವರಂದಮಿಂತು (ಸಂಶಶಾ. ೨-೯೯) ; ಅತಿಕಷ್ಟಮಪ್ಪವಸ್ಥಾತತಿಯಂ ಮಱೆಯಿಸಿ ಜಳಾಭಿಲಾಷೆಯನೀ ಜೀವಿತತೃಷ್ಣೆ ಮಾಡಿತು (ಕಾದಂಪೂ. ೦೯೩) ; ಆತನ ಕೆಯ್ಗಳ್ ಕುಱುಗಣ್ಣ ಕೂನ ಬೆನ್ ಕಾಲ್ ಮಱೆಯಿಸುವುದು ಟೊಂಕಮುಱಿದ ಕತ್ರಿಯ ಕಾಲಂ (ಮುಕೋಶ. ೨-೩೯). ೨. ಇತರರ ಕಣ್ಣಿಗೆ ಬೀಳದಂತೆ ಮಾಡು ; ಮುಚ್ಚಿಡು ; ಅಡಗಿಸು : ಜನದೇವನ ಬಯಕೆಯಂ ಮಱೆಯಿಸಿ ಪುಸಿ ನುಡಿದ ಧನದೇವನ ಜಿಂಹ್ವೋತ್ಪಾಟನಂಗೆಯ್ದುದುಮಂ (ಶಾಪುಂಶ. ೬೮) ; ಸೌಂದರ್ಯಸಂಪತ್ತಿಯಂ ಮಱೆಯಿಸಲಲ್ಲದೆ ಮೆಱೆಯಿಸಲ್ ನಿಮಿತ್ತಮಲ್ತು (ಶೃಸ್ತ. ೧೧-೬೨ ಪ). ೩. ಮೈಮರೆಯುವಂತೆ ಮಾಡು ; ಪರವಶಗೊಳಿಸು ; ಎಚ್ಚರ ತಪ್ಪಿಸು : ಅಖಿಲಭುವನಜನನಿಯನಾಗಳ್ ಮಱೆಯಿಸಿ ಮಾಯಾನಿದ್ರೆಯಿಂ ನುಱೆ ಮಾಯಾಶಿಶುವನಿರಿಸಿ (ಅರಪು. ೭-೪೩) ; ಮನದೊಳಲಂಪು ಪೊಣ್ಮೆ ನುಡಿದುಂ ನಡೆನೋಡಿಯುಮಾಟಪಾಟಮುಂ ಬಿನದಮುಮಾರುಮಂ ಮಱೆಯಿಸುತ್ತಿರೆ (ಸಂಶಶಾ. ೨-೯೪). ೪. ರೂಪಾಂತರಗೊಳಿಸು ; ಸ್ವರೂಪವನ್ನು ಬೇರೆಮಾಡು ; ವೇಷವನ್ನು ಬದಲಾಯಿಸು : ಕಳಶಜನನಿಂತು ಕೊಲಿಸಿದ ಖಳನೆ ಗಡಂ ಧರ್ಮನಂದನಂ ಕ್ರೂರದಿನಂಗಳ ಪೆಸರಂ ಮಱೆಯಿಸಿ ಮಂಗಳವಾರಂ ಕಡ್ಡವಾರಮೆಂಬಂತೆ ವಲಂ (ಗದಾಯು. ೩-೨೬). **ಮರಸು$_1$ :** ೧. ತಾಯಿಯ ಮಾತು ಮಗುವಿನ ದುಃಖವನ್ನು ಮರಸಿತು (ಶಾಶ). ೨. ಕಂಗಳಿಂ ಕರೆವುದೆನ್ನೆದೆಯುಕ್ಕುವಳಲು ! ಕಣ್ದೆರೆಯ, ನಿನ್ನ ಕಣ್ಣಿಂದುಮಿನಿದೆ ರಸಂ ಮರಸದೆನ್ನಲಿ ಎನ್ನು ! (ಗೀತಾಂ. ೩೦-೦೪) ; ತನ್ನ ತಪ್ಪನ್ನು ಮರಸುವುದಕ್ಕಾಗಿ ಒಂದು ಪೆಟ್ಟಿಗೆಯಲ್ಲಿ ಶಿಶುವನ್ನಿಟ್ಟು ಭದ್ರವಾಗಿ ಮುಚ್ಚಿ ನೀರಿನಲ್ಲಿ ಬಿಟ್ಟುಬಿಟ್ಟಳು (ವ್ಯಾಸಶಿ. ೪೨). **ಮರೆಸು :** ೧. ನವಗ್ರುಹದಾನದ ಸಂಭ್ರಮ . . . ಕುಪ್ಪೀಮಾತ್ರೆಯನ್ನೇ ಮರೆಸಿದ್ದವು (ಹಂಗಾಳ್ವ. ೦೬೬). ೫. ಕಣ್ಣುತಪ್ಪಿಸು : ಇದ್ದ ಕಾವಲ ಮರೆಸಿ ಮುದ್ದು ಕಣ್ಮರಿಯೊಳ್ಪ ಹದ್ದನಲ್ ದೊಡ್ಡನುಂ ಪದಪಿನಿಂ ನೋಳ್ಪಂ (ಕಾಲೂರ. ೬೩-೦೦೭). **ಮಱಸು$_1$ :** ೧. ಭರತನ ಕಣ್ಗಱಕಮನೆ ಪಡೆದು ಚೆಲ್ವಿಂ ಮಱ [ಶಾಣಂ. ಱೆ]ಸಿದುವುದ್ಯಾನಲತೆಗಳಂ ವನಲತೆಗಳ್ (ಅರಪು. ೦೦-೪೩); ನೆನಸುವೆ ಮಱಸುವೆ ನೀನೆನ್ನ ತಂದೆ ಎನ್ನ ಗುಣದೋಷ ನಿನ್ನದು (ಸಿದ್ಧಪ. ೪. ೦೨೬-೪೨೩); ಯುಧಿಷ್ಠಿರನರಸುತನ. . . ಭರತಾದಿ ಭೂಮಿಪರ ಮಱಸಿತು (ಕುವ್ಯಾಸ. ೨-೩). ೨. ಇರ್ದುದೊಂದು ವಸ್ತುಸ್ಥಿತಿಯಂ ಮಱಸಿ ಪೆಱತೊಂದು ಮಾಟ್ಕೆಯಿನಱಿಪುವುದುತ್ಪ್ರೇಕ್ಷೆಯೆಂಬುದು (ಕವಿರಾ. ೩-೦೦೪); ಅಂತು ಬೃಹಂದಳೆಯಾಗಿ ಗಾಂಡೀವಜ್ಯಾಘಾತದೊಳಿಂದ್ರನೀಲಂಗಳನಡಸಿದಂತಿರ್ದರಡುಂ ಮುಂಗೆಯ್ಗಳ ಕರ್ಪಂ ತೀವೆ ತೊಟ್ಟ ಬಳೆಗಳ್ ಮಱಸೆ (ಪಂಭಾ. ೬-೩೩ ವ); ಹುಣ್ಣಾಗಲೆಯ ಸೀರೆಯಲಿ ಮಱಸಿದ ಮುದಿಪಣ್ಯಾಂಗನೆಯರೊಪ್ಪಿದರು (ಕಂಪಶ. ೭-೦೯೨). ೫. ತರತರವಿಡಿದು ಢಾಳಿಸುತಿಹ ದೀರ್ಘಚಾಮರಗಳ ಸಾಲೊಳೆಸೆದನು ಹರಿವ ಬೆಳ್ಮುಗಿಲೊಳು ತೋಱೆ ಮಱಸುವ ಚಂದಿರನೋ ಭಾಸ್ಕರನೋಯೆಂಬಂತೆ (ಶರಶ. ೦-೩೬): ಪುರದ ಸಂವರಣೆಯ ನೋಡಲಮ್ಮದೆ . . . ಉರಗೇಂದ್ರ ಪಾತಾಳದೆ ಘುಱಸಿದ ವಿಂಕ್ಕ ಕಿಱುಮಾನಿಸರ ಪಾಡೇನು (ಕುವಪ. ೬-೨೩). ೬. ಮೋಸ ಮಾಡು; ವಂಚಿಸು : ನೆರೆ ಸೂರೆಯಱಿಯದಂತೆ ಪತಿಯಂ ಮಱಸಿ ಮನೆಯವರನೆಲ್ಲರಂ ಟೊಣೆದು . . . ಇರಬಲ್ಲರವರೆ ಜಾರೆಯರವರನೋವಬಹುದೆ (ಕೃಪಿಚಾ. ೩-೩೯). ೭. ಹೊದೆಸು ; ಆಚ್ಛಾದಿಸು : "ಮಱಸು— ಆಚ್ಛಾದನೇ" (ಶಮದ). ೮. ಹೊದೆದುಕೊಳ್ಳು ; ಧರಿಸು : ಮಱಸಿರ್ದಂ ಬರಮೆಯ್ದೆ ನಾಂದ ತನುವಂ ಪತ್ತಿರ್ದ ಕಣ್ಗೆಲ್ಲಿಯುಂ ತೆಱಪಂ ಮಾಡೆ. . . ಮೆಱೆದರ್ ಚಕ್ರಿಯ ಮುಂದೆ (ಆದಿಪು. ೦೦-೦೩೩). **ಮಱೆಸು :** ೧. ಆ ಸಕಲಸಾಮ್ರಾಜ್ಯಲಕ್ಷ್ಮೀವಿಳಾಸದರಮನೆಗಳನು ಮಱೆಸಿದುದೀ ಶರಭಶಾರ್ದೂಲಸೇವಿತ ಘೋರಕಾಂತಾರ (ಕುವ್ಯಾಆ. ೦-೩೬). ೨. ಅಱಿದಂ

ಕಂಡುಂ ನಂಟರ್ ಮಱೆಸುವರೆಂತಪ್ಪ ತಪ್ಪುಮಂ ಸಾಮಾನ್ಯರ್ ಮಱೆಸದಿರೆ ಬೆರ್ಚಿ ನಡೆವಯ್ (ಕೀವಸಂ. ೭೦-೦೭); ನಮ್ಮ ಯಥಾರ್ಥಮಂ ಮಱೆಸಿ ಮತ್ತಿನ ಸುತ್ತಿನ ಮಾತನಾಡುವೈ (ತ್ರಿಶ್ಟ. ೩-೪). [ಮಱೆ$_1$ + — ಇಸು$_3$]

**ಮಱೆ$^{3}$ಯಿಱಿ$^{3}$ಗಾಱ** (ನಾ). ೧. ಮರೆಯಲ್ಲಿ ನಿಂತು ಕಾದುವವನು; ಮೋಸದಿಂದ ಯುದ್ಧ ಮಾಡುವವನು : ಅದು ಪಾಂಡವರ ಕೃತ್ರಿಮ ತಂತ್ರ ಮಱೆಯಿಱಿಗಾಱರವರು (ಕುವ್ಯಾ. ೪-೭). ೨. (ಅಲಂ) ಕಣ್ಣಿಗೆ ಕಾಣಿಸಿಕೊಳ್ಳದೆ ತಾಪವನ್ನುಂಟುಮಾಡುವವನು; ಮರೆಯಲ್ಲೇ ಇದ್ದು ಹಿಂಸಿಸುವವನು : ರಾಯನ ಚಿತ್ತಚೋರನ ಮಱೆಯಿಱಿಗಾಱನಾಯಕನನು ಕಾಣ್ಬೆನಿನ್ನೆಂತೊ (ಸೌಂದಕೋ. ೨೩-೩೨).

[ಮಱೆ$^{3}_{2}$ + ಇಱಿಗಾಱ]

**ಮಱೆ$^{3}$ಯುಗು** 'ಮಱೆ$^{3}$ವೊಗು' ನೋ.

**ಮಱೆ$^{3}$ಯೇಱು** (ನಾ). = ಮಱೆ$^{3}$ಗಾಳಗ : ಕಳ್ಳರ ಭಯಂ ಮುನ್ನಿಲ್ಲ ಬೆರ್ಚಿಲ್ಲ ದಲ್ ಮಱೆಯೇಱಿಲ್ಲ ವಿಪತ್ತಿಯಿಲ್ಲ ರುಜೆಯಿಲ್ಲುತ್ಪಾತಮಿಲ್ಲಾವಗಂ . . . ಆ ಪೂರ್ವವಿದೇಹದೊಳ್ (ಶಾಂತಪು. ೪-೭).

[ಮಱೆ$^{3}_{2}$ + ಏಱು$_5$ (< ಏಱ್$_5$)]

**ಮಱೆ$^{3}$ಯೊಗು** 'ಮಱೆ$^{3}$ವೊಗು' ನೋ.

**ಮಱೆ$^{3}$ಯೊಡ್ಡು** (ಕ್ರಿ). ಮರೆಮಾಡು ; ಅಡ್ಡವಾಗಿ ಹಿಡಿ : ಮಿಂಚುಗುರ ಮಿಸುಪನುಣ್ಪೆಳಗನಸುಂ ಪಸರಿಸೆ ಪುರಲ್ದು ಕರಮೊಂದೆಸೆವುದು ಚಂದ್ರಾತಪಕ್ಕೆ ಮಱೆಯೊಡ್ಡಿನವೋಲ್ (ಕಾದಂಪೂ. ೯೦೩) ; ರವಿಮಂಡಲಕೆ ಮಱೆಯೊಡ್ಡಿದನು ಮುರರಿಪು ವರಸುದರ್ಶನವ (ಕುವ್ಯಾದ್ರೋ. ೦೪-೩೩).

[ಮಱೆ$^{3}_{2}$ + ಒಡ್ಡು$_1$]

**ಮಱೆ$^{3}$ರೂವು** (ನಾ). ಬದಲಾಯಿಸಿದ ರೂಪು ; ಮಾರುವೇಷ : ನಾಡಿಗರಿರವನಾರಯ್ವೆಡೆಂದು ರಾಯನಟ್ಟಿದ ಬೇಹಿನವರ್ ಮಱೆರೂವಿ ಬೀದಿಗಳೊಳ್ ಬರೆವರೆ (ರಾಮಾಶ್ವ. ೨೩-೪).

[ಮಱೆ$^{3}_{1}$ + ರೂವು (< ರೂಪು)]

**ಮಱೆ$^{3}$ವಟ್ಟೆ** (ನಾ). ಗುಪ್ತಮಾರ್ಗ ; ಕಳ್ಳದಾರಿ : ಕುಱುಂಬರೊಡವೆರಸಿ ಸಚಿವಂ ಸಹಿತ ಮಱೆವಟ್ಟೆಯೊಳ್ಬಂದು ಹರಭವನಮಂ ಕಂಡು ಪಟ್ಟದಾನೆಯನಿಳಿದು ರಂಗಮಂಟಪವ ಪೊಕ್ಕು (ಸೌಂದಪು. ೦೫-೮). [ಮಱೆ$^{3}_{2}$ + ಬಟ್ಟೆ$_1$]

**ಮಱೆ$^{3}$ವಡು** (ಕ್ರಿ). ಪರಿವೆಯಿಲ್ಲದೆ ನಿದ್ರಿಸು ; ಮೈಮರೆತು ಮಲಗು : ಎರೆಯನೆರೆಗೊಂಡು ಮಱೆವಟ್ಟಿರೆಯಿರೆ ಕಾಯ್ಸುರಿವ ಸೂರ್ಯಕಾಂತದಿ ನೆಟ್ಟಿತ್ತಿರದೋಡಿದುದಜಗರ (ಜಗಿಪಿ. ೦೭-೩೦); ಆತ್ಮವಲ್ಲಭೆಯುಮಾನುಂ ವಿಶ್ರಮಿಸಲೆಂದಲ್ಲಿಗೆ ವಿಮಾನಮನಿಳಿಪಿದೆವನ್ನೆಗಮುವಂದಿರೆನ್ನ ಬೆನ್ನನೆ ಬಂದು ಮಱೆ[ಕಾಶಾಂ. ಪ್ರಾಸ್ಟ್ಟಲ್ಲಿಯೆನ್ನ ಛಿದ್ರಿಸೆ (ಬಂಹಂ. ೩-೦೪ ವ).

[ಮಱೆ$^{3}_{2}$ + ಪಡು$_1$]

**ಮಱೆ$^{3}$ವಾತು**, ಮಱೆವಾತು (ನಾ). ಅಭಿಪ್ರಾಯವನ್ನು ಮುಚ್ಚಿಟ್ಟು ಆಡುವ ಮಾತು; ಸುತ್ತು ಬಳಸಿನ ನುಡಿ : ಒಡೆದು ಕಳೆ ಭವವ ಸದ್ಗುರುಚರಣಕೃಪೆಯಿಂದ ಏಕೆ ಮಱೆವಾತುಗಳು ಸಾಕಿನ್ನು ಸದ್ಗುರುವೆ ಸೂಕಬೇಡಿನ್ನನ್ನ ಸ್ವೀಕರಿಸು ಮದ್ಗುರುವೆ (ನಿಜ್ಞಾಬೋ. ೦೯-೦೧). **ಮಱೆ$^{3}$ಮಾತು** : ಮಱೆಮಾತೇಂ ಸಿಡಿಲಂತೆ ಕೂರಸಿ ಕಱುತ್ತುಗ್ರಾಜಿಯೊಳ್ ವ್ಯಗ್ರದಿಂದೆಱವಲ್ಲಿಂದೊಳಗಟ್ಟಿ ಬಂದೆಱಿವ ಭೂಭೃತ್ಕೋಟಿ ಕೋಟಿರದೊಳ್ ವಿಱುಗುತ್ತಿರ್ಪುದು . . . ಪದಪದ್ಮಚ್ಛಾಯೆ ಭೂಪಾಲನಾ (ರಾಜಿಣಾ. ೩-೦೭) ; ಸುರರು ಮುನಿದರೊ ಧರ್ಮದೇವತೆ ಪರಿಭವಿಸಿದಳೊ ಭಾಗ್ಯವಧು ಮೊಗದಿರುಹಿದಳೊ ಮಱೆವಾತದೇಕೆಂದರಸ ಬಿಸುಸುಯ್ದು (ಕುಶಿದ್ರಾ. ೦-೩-೦೬). [ಮಱೆ$^{3}_{2}$ + ಮಾತು$_1$]

**ಮಱೆ$^{3}$ವಾರ** (ನಾ). ಸಮುದ್ರದ ದಡದಲ್ಲಿ ನಿರ್ಮಿಸಿರುವ ಹಡಗುಗಳ ರಕ್ಷಣೆಯ ಸ್ಥಾನ ; ಬಂದರಿನಂಥ ಸ್ಥಳ : ಮಱೆವಾರದೊಳ್ ಭ್ರಹಿತ್ರ ಮನಿರಿಸಿ ವಣಿಕ್ಪತಿಗಳ್ ಪೊಟಲಂ ಪೊಕ್ಕು ತಮ್ಮ ತಂದ ಸಾರವಸ್ತುಗಳಂ ನಾರಾಯಣಂಗೊಪ್ಪಿಸಿದೊಡೆ (ಬಂಹಂ. ೦೦-೯೯ ವ); "ಮರೆಯಾದ ಸ್ಥಳ" (ಬಂಹಂ. ಕೋಶ). [ಮಱೆ$^{3}_{2}$ + ಪಾರ$_2$]

**ಮಱೆ$^{3}$ವಾಳ್** 'ಮಱೆ$^{3}$ವಾಟು$_2$' ನೋ.

**ಮಱೆ$^{3}$ವಾಳಿ** (ನಾ). ಶರಣಾಗತರಾದವರನ್ನು ರಕ್ಷಿಸುವ ಕರ್ತವ್ಯ : ಮಱೆವಾಳಿಯಂ ನೆಱಪುವೆನೆನ್ದು ತೆಂಕಣಸಮುಸ್ತನಾಯಿಕರುಂ ತಾವರೆಹಳ್ಳಿಯ ಸೋವಿಸೆಟ್ಟಿಯುಂ ತುಱುವಂ ಕೊಂಡು ಪೋಪಲ್ಲಿ (ಎಕ. VIII. ಸೊರಬ. ೪೭-೦೦; 1187). 'ಜೋಳವಾಳಿ' ಪರಾ.

[ಮಱೆ$^{3}_{2}$ + ಪಾಳಿ$_3$ (< ಪಾಟಿ$_2$)]

**ಮಱೆ$^{3}$ವಾಳ್ತನ** (ನಾ). ವ್ಯಭಿಚಾರ; ಹಾದರ : ನೆರೆದಡೆ [ಕೀಱು]ಗೇಲ್ದೆಲ್ಲರು ಪೊಱಗಿಕ್ಕೆ ಪುರಜನ ವೀಧಿಯೊಳ್ ನೆರೆಯೆ ಹರ್ರುಷದಿ ಕುಕಿಲ್ದು ಊಕಿಱಿ ದೊಡಸಾವೊಲು ನೆರೆಯದೆ ಮಱೆವಾಳ್ತನ) (ಅನಂತ. ೦೦-೦೩೩).

[ಮಱೆ$^{3}$ವಾಳ್ (< ಮಱೆ$^{3}$ವಾಟು$_2$) + — ತನ]

**ಮಱೆ$^{3}$ವಾಟು$_1$** (ಕ್ರಿ). ೧. ಮರೆಹೊಕ್ಕು ಬದುಕು ; ಶರಣಾಗು : ಎಮ್ಮೊಳ್ ಪಗೆಗೊಂಡು ನಿರ್ನಿಮಿತ್ತದಿನಲರಂಬಿಂಗೆ ತಲೆಯಂ ಮಾಱುಗುಡದೆ ಮಱೆವಾಟ್ಟುದೊಳ್ಳಿತು (ರಾಮಾಶ್ವ. ೩೭-೨೩). ೨. ವ್ಯಭಿಚಾರ ನಡೆಸು ; ಹಾದರ ಮಾಡು : ನಾಗಸೂರನೆಂಬೊನಾತಂಗೆಣ್ಬರ್ ಪೆಂಡಿರ್ ತನ್ನ ಪೆಂಡಿರೊಳ್ ಸಂತೋಸಂಬಡೆಯದೆ ಪೋದಾಳಿಯೊಳ್ ಮಱೆವಾಟು ತ್ರಿಕರ್ಮ (ವಡ್ಡಾರಾ. ೨೦-೦೬) ; ಆಕೆಯೊಡನಾ ಪುರದ ವಸುಭೂತಿಮೆಸರ ವಸುಧಾಮರಂ ಮಱೆವಾಟುತ್ತುಮಿರಲ್ (ಕಂರಾಪೂ. ೬-೩೦ ವ) ; ತನ್ನ ನಾದುನಿಯೊಳೀ ಖಳಂ ಮಱೆವಾಟ್ದನ್ಯಾಯವರ್ತಿಯೆಂದು ಡಂಗುರಂ ಬೊಯ್ಸುತ್ತಂ ನಾಡಿಂದಮೆತ್ತಿ ಕಳೆವುದುಂ (ಪಾರ್ಶ್ವಪು. ೪-೨೯ ವ).

[ಮಱೆ$^{3}_{2}$ + ಬಾಟು$_1$]

**ಮಱೆ$^{3}$ವಾಟು$_2$**, ಮಱೆವಾಳ್ (ನಾ). ವ್ಯಭಿಚಾರ : ಹಾದರ : ಮಱೆವಾಟಿನೊಲಿವ ಕುಲವಧುಗೆ ಬಯಸಿದೊಡಲಂಘ್ಯಪುರುಷವ್ರತಕ್ಕೆ ಬನ್ನಂ ಬರ್ಕುಮ (ಕೀವಸಂ. ೩೭-೩೩) ; ದುಷ್ಟಚೇಷ್ಟೆಯಂ ಮೆಱೆಯಿಪ ತಮ್ಮ ಭಂಗಿ ಮಱೆವಾಟ ಮನುಜಸುಖಕ್ಕೆ ಸಂತತಂ ಮಱುಗುವ ಚಿತ್ತದಿಂ ರಜನಿರಂಜನಮಾದುದು ಬಂಧಕೀಜನಂ (ಸೂಕ್ತಿಸು. ೬-೬೩). **ಮಱೆ$^{3}$ವಾಳ್** : 'ಮಱೆ$^{3}$ವಾಳ್ತನ' ಪರಾ.

[ಮಱೆ$^{3}_{2}$ + ಬಾಟು$_3$]

**ಮಱೆ$^{3}$ವಿಡಿ** (ಕ್ರಿ). ೧. ತೆರೆಯನ್ನು ಹಿಡಿ ; ಆವರಣವನ್ನು ಹಿಡಿ : ಮುಸುಕಿ ಹರಿಕಾಂತಿ ನೀಲೀವಸನಂ ಸ್ಪರ್ಶಾನುಮೇಯಮಾದುದು ರಾಮಂ ಗಸಿತಾಂಬರವಂ ಮಱೆವಿಡಿದ ಸುವರ್ಣದ ವಿದ್ದದಂತಿರುದ್ಧವನೆಸೆದಂ(ಜಗಿಪಿ. ೦೩-೪೬) ; ಮೊಗಕೆ ಮುತ್ತುಗದೆಲೆಯ ಮಱೆವಿಡಿದಗಲಿದುವ್ಮಪದಿಂದ ಜನಕನ ಮಗಳ ನಡೆಸುತ ತಂದರು (ಕೊರಂ. ೨-೪-೦೯). ೨. ಅಡ್ಡಿಯನ್ನುಂಟುಮಾಡು : ಅಪಕೀರ್ತಿ ಹೊಱುವುದು ಬಲ್ಲೆನೆನುತುರವಣಿಸಿದನು ಮುಂಗೈಯ ಮಱೆವಿಡಿದು (ಕುವ್ಯಾದ್ರೋ. ೦೩-೦೦). ೩. ಆಶ್ರಯಿಸು ; ಅವಲಂಬಿಸು : ಆವನ ಪಾದಪಂಕಜವ ಮಱೆವಿಡಿದು ಮರ್ತ್ಯಾವತಾರದಲುಱುವ ದೈವವದೆಂತು ಜನಿಸಿದ ತೆಱನನೆಲೆ ಮುನಿನಾಥ ಕೃಪೆ ಮಾಡುವುದು ತನಗೆ (ಕಿಭಾಗ. ೦೦-೦-೨). [ಮಱೆ$^{3}_{2}$ + ಪಿಡಿ$_1$]

**ಮಱೆ$^{3}$ವುಗು** 'ಮಱೆ$^{3}$ವೊಗು' ನೋ.

**ಮಱೆ$^{3}$ವುಯಿಲ್**, ಮರೆಹುಯಿಲು (ನಾ). = ಮಱೆ$^{3}$ಗಾಳಗ : ಆ ಮೈಸೂರ ಚಾಮರಾಜನೆಸಗುವ ಮಱೆವುಯಿಲುಪಟಳದಿಂ . . . ಬಂದೆಗೆದು ಪೋಪುದರ್ಕಂ ದಾರಿಯಿಲ್ಲದೆ (ಕಕಪಂ. ೩೬-೦೨). **ಮರೆಹುಯಿಲು** : ಮರೆಹುಯಿಲಿನ ಪ್ರಯತ್ನವು ಕೈಗೂಡಲಿಲ್ಲ (ಕಾರಪೀ. ೧೯೩). [ಮಱೆ$^{3}_{2}$ + ಪುಯಿಲ್ (< ಪೊಯಿಲ್)]

**ಮಱೆವೆಱು** (ಕ್ರಿ). ಆಸರೆಯನ್ನು ಹೊಂದು : ಆಶ್ರಯವನ್ನು ಪಡೆ ; ಅವಲಂಬಿಸು : ವಿಳೋಚನಮರೀಚಿಗಳಂ ಮಱೆವೆತ್ತು ಚಂದ್ರಿಕಾಚಯ ಮೆಳಸಿತ್ತು ವಾಸರಮುಮಂ (ಚಂದ್ರಪು. ೨-೦೫). [ಮಱೆ₂ + ಪೆಱು₁]

**ಮಱೆವೊಗಿಸು** (ಕ್ರಿ). ಆಸರೆ ದೊರಕುವಂತೆ ಮಾಡು ; ಆಶ್ರಯವನ್ನು ಹೊಗುವಂತೆ ಮಾಡು : ಕಂತುಪಿತನಾತನಂ ಮಱೆವೊಗಿಸಿಕೊಂಡು ಮುನಿಯೊಡನೆ ಯುದ್ಧಂಗೈದನು (ಚಿಬಪು. ೨೭-೫). [ಮಱೆವೊಗು + — ಇಸು₃]

**ಮಱೆವೊಗು**, ಮರೆಹೊಗು, ಮಱೆಯುಗು, ಮಱೆಯೊಗು, ಮಱೆವುಗು, ಮಱೆಹುಗು, ಮಱೆಹೊಗು, ಮೊರೆಹೊಗು, ಮೊಱೆಯೊಗು, ಮೊಱೆವುಗು, ಮೊಱೆಹೊಗು (ಕ್ರಿ). ಆಶ್ರಯಿಸು; ಆಸರೆಯನ್ನು ಪಡೆ ; ಶರಣಾಗು : ಮಱೆವೊಕ್ಕರ ಕೊಲಲಾಗದು (ಪ್ಯಾಆರ. ೧೯೨೮, ೩೪-೭ ; 900) ; ತನ್ನ ಮಱೆವೊಕ್ಕೊಡೆ ಕಾಯದೆ . . . ಮಾಣ್ದು ಬಾಳ್ವ ಪುಱುಮಾನಸನೆಂಬವನಜಾಂಡಮೆಂಬುದೊಂದತ್ತಿಯ ಪಣ್ಣೊಳಿರ್ಪ ಪುಱುವಲ್ಲದೆ ಮಾನಸನೇ (ಶಂಶಭಾ. ೫-೭೫); ಇಂದು ನಿಮ್ಮಂಘ್ರಿಗಳ ಮಱೆವೊಗಬಂದೆನೆನ್ನನು ಪಡಿಕರಿಸಬೇಕು (ಕುವ್ಯಾಆ. ೨-೩೮). **ಮರೆಹೊಗು:** ಮರೆಪೊಕ್ಕರೆ ಕಾಪ ಮಾರಾಂತರ ವೈರಿ (ಇಆ. V, ೪೦-೭; 1587). ಭಾಷೆಗೆ ತಪ್ಪುವ ನಾಯಕರ ಗಂಡ ಮರೆಹೊಕ್ಕರೆ ಕಾಯುವ . . . ಬಸವಪ್ಪನಾಯಕರವರು (ಪ್ಯಾಆರ. ೧೯೩೩, ೩೫-೦೫; 1785) ; ಸಂಸಾರದಲ್ಲಿ ಸೋತು ಕಂಗಾಲಾಗುವಾಗ, ಯಾರಿಗಾದರೂ ಕಣ್ಣೀರಿಟ್ಟು ಮರೆಹೊಗಬೇಕಲ್ಲ (ಶೂಕಶ. ೨೨೦). **ಮಱೆಯುಗು. ಮಱೆಯೊಗು:** ನಿಮ್ಮ ಚರಣಸರಸದ ಮಱೆಯೊಕ್ಕನಗೆ ಶಿವದೀಕ್ಷೆಯಿತ್ತು ರಕ್ಷಿಸು (ಶದ್ಮರಾ. ೦೨-೬) ; ನಾನಜ್ಞನಾಗೆ ಪಿನಾಕಿ ಮಾಡುವುದೇನು ಮಱೆಯೊಗುವೆನು ಮಹೇಶ್ವರನ (ಕುವ್ಯಾಆ. ೭-೪೨); ಸೀತಾದೇವಿಯರನೊಯ್ದಿತ್ತು ಮಱೆಯೊಗು ರಾಘವೇಶ್ವರನ (ಕೊರರಾ. ೬-೯-೪೮). **ಮಱೆವುಗು :** ಕೆಟ್ಟ ಜಪಮುಂ ತಪಮುಂ ನಿನಗೇಕೆ ಚೆಚ್ಚರಂ ಮಱೆವುಗೆ ಸಾಲ್ಗುಮಾಗ ಮರುಳಾಗದೆ ಪೋಗಿ ಜಿನೇಂದ್ರಧರ್ಮಮಂ (ಶಮಶ. ೦೫-೯೪) ; ಹರಿವಜ್ರಹತಿಗೆ ಸುರ್ಕಿದ ಗಿರಿ ಮಱೆವುಗೆ ಕಾದು ವಾರ್ಧಿ ಮರ್ಯಾದೆಯನೀ ಧರಣಿಗೆ ಮಾಡಿದುದೆಂತೆನೆ ಧುರದೊಳ್ ನೀರ್ವೊಕ್ಕವಂಗೆ ಮುನಿಯರ್ ಪಗೆವರ್ (ಸೂಕ್ತಿಸು. ೨-೦೭) ; ವಜ್ರಪಂಜರವಾಗಿ ಮಱೆವುಗಲು ಓವುದು . . . ನಿಮ್ಮಂ ನೆನೆವ ಮಾನವರ (ಬಸಪು. ೬೦-೯೦). **ಮಱೆಹುಗು :** ಪೊರೆಯನೇ ದಂಡಿಯನುಮೇಶನು ತನ್ನ ಮಱೆಹು [ಪಾಠಾಂ. ಮೊಱೆಯೊ]ಗಲು (ಬಸಪು. ೫೪-೭೦). **ಮಱೆಹೊಗು :** ಮ[ಪಾಠಾಂ. ಪೊ]ಱೆಹೊಕ್ಕಡಂ ಕಾರುಣ್ಯದಲಿ ನೋಡಿ ಕಾಯಲುಂ ಸಭಯಾತ್ಮರಾದೆಮಗೀ ಯುಗಕೆ ನೀವಲ್ಲದೇ ದೀರ್ಘಾಯುವಂ ಕೊಡುವವನದಾವಂ (ಬಸಪು. ೪೬-೪೦) ; ರವಿಯು ಮಱೆಹೊಗಲಿ . . . ನಾಳೆ ಪಡುವಣ ತರಣಿ ತೊಲಗದ ಮುನ್ನ ಕೊಲುವೆನು ವೈರಿ ಸೈಂಧವನ (ಕುವ್ಯಾದ್ರೋ. ೯-೩೫) ; ಎದೆಗೆಟ್ಟು ಮಱೆಹೊಕ್ಕರಿಗೆ ಮುದದೊಳಭಯದಾನವನಿತ್ತು ನಂಜೇಂದ್ರ ಪದುಳದೆ ಕೊಂಡನಾ ಪುರವ (ಕಂನಪ. ೦೯-೫೦). **ಮೊರೆಹೊಗು:** ಇಂದು ಮೊರೆಹೊಗಲು ಯಾರನ್ನೂ ಕಾಣೆ (ಬದುಕ. ೫೫); ಸೋತು ಸೊರಗಿದ ಜನತೆ . . . ಕಾಣದ ಶಕ್ತಿಯೊಂದಕ್ಕೆ ಮೊರೆಹೊಗುವ ಗತಿಗೆ ಇಳಿದರು (ಶಾರದ. ೪೫೮) **ಮೊಱೆಯೊಗು :** ನೀ ಕೈ ನೀಡಿ ನಿನ್ನವನೆಂದು ತೆಗೆ ಮೊಱೆಯೊಕ್ಕೆ ತಾನು (ಶಿಶಾಗ. ೭-೯-೨೪). **ಮೊಱೆವುಗು :** ಇಂದು ಮೊಱೆವುಗುಪೊಡಾರಂ ಕಾಣೆನಕಟ ಗೋವಿಂದ ನೀನಲ್ಲದೆ (ಕೃಎಭಾ. ೦೦-೩೫). **ಮೊಱೆಹೊಗು :** ದಂಡಧರನುಪಟಲದಿ ಮಿಗೆ ಮುಂಕೊಂಡು ಮೊಱೆಹೊಗುವವರ ಕಾಣೆನು (ಹಂಶಾ. ೭೨) ; ಬಲ್ಲಿದರ ಮೊಱೆಹೊಗಲು . . . ವಿಧಿ ಬಂದು ಕೊಲ್ಲದೆ ಬಿಡದು (ಸರ್ವಜ್ಞ. ೮೭೭).

**ಮಱೆವೊಕ್ಕರ ವಜ್ರಪಂಜರ**=ತನ್ನನ್ನು ಆಶ್ರಯಿಸಿದವರನ್ನು ವಜ್ರಪಂಜರದಂತೆ ಭದ್ರವಾಗಿ ಕಾಪಾಡುವವನು ; ಒಂದು ಬಿರುದು : ಮಱೆವೊಕ್ಕರ ವಜ್ರಪಂಜರಂ ಗೋತ್ರಪವಿತ್ರ ಸುಜನಪ್ರಸಂನ ಕಲಿಗಳಾದಿತ್ಯ (ಕಆ. IV, ೪೮-೩೦; 1247). **ಮಱೆವೊಕ್ಕರಾಶ್ರಯ**=ಶರಣು ಬಂದವರಿಗೆ ನೆಲೆಯಾಗಿರುವವನು ; ಒಂದು ಬಿರುದು : ಕಲಿಯುಗನೀಜನ್ ಮಱೆವೊಕ್ಕರಾಶ್ರಯಂ (ಪ್ಯಾಆರ. ೧೯೧೬, ೦೩-೧೦; 900). **ಮಱೆವೊಗೆ ಕಾವ, ಮಱೆಯುಗೆ ಕಾವ, ಮಱೆವುಗೆ ಕಾವ** = ತನ್ನನ್ನು ಆಶ್ರಯಿಸಿದವರನ್ನು ರಕ್ಷಿಸುವವನು ; ಒಂದು ಬಿರುದು : ಭುಜಬಳಭೀಮ ಮಱೆವೊಗೆ ಕಾವ ಶರಣಾಗತವಜ್ರಪಂಜರಂ (ಎಕ. XVI, ಶಕ್ಕಾ. ೫೮-೦೩ ; 1161) ; ಬಂಟರ ಭಾವನುಂ ಮಱೆಯುಗೆ ಕಾವನುಂ . . . ಶ್ರೀಮಂನುಮಹಾಮಂಡಳಿಕ ಬಂಮರಸದೇವ (ಎಕ. VI, ಕಂಕ. ೬೦-೩೬; 1154); ಮಱೆವುಗೆ ಕಾವಂ ಯುದ್ಧಧುರನ್ಧರಂ ಧೈರ್ಯಧರಾಧರಂ (ಸೌಇಇ. XI-i, ೯೨-೮ ; 1054). [ಮಱೆ₂ + ಪೊಗು]

**ಮಱೆಸನ್ನೆಗೆಯ್**, ಮಱೆಸನ್ನೆಗೈ (ಕ್ರಿ). ಗುಟ್ಟಾಗಿ ಸೂಚಿಸು ; ರಹಸ್ಯಸಂಕೇತವನ್ನು ನೀಡು.—ಕೊಡು : ವಸಂತದೂತಿ ಮಱೆದುಂಬಿಗಳಿಂ ಮಱೆಸನ್ನೆಗೆಯ್ವ (ಅಪಂಪು. ೭-೦೦). **ಮಱೆಸನ್ನೆಗೈ :** ಒಱಗುವಾಗೊಡೆಯ ನೆವಿಕ್ಕೆ ಕುಳಿತನು ಚಕ್ರೇಶ ನಱುಗೋಲ ನಿಲೆ ಬಿಸಿಲಲ್ಲಿ ಮಱೆಸನ್ನೆಗೈದು ಸತ್ತಿಗೆವಿಡಿಸಿದನೇನು ಮಱುಕವೊ ತಮ್ಮನ ಮೇಲೆ (ಭರತ. ೫೦-೦೨೯). [ಮಱೆ₂ + ಸನ್ನೆಗೆಯ್]

**ಮಱೆಸನ್ನೆಗೈ** 'ಮಱೆಸನ್ನೆಗೆಯ್' ನೋ.

**ಮಱೆಸು** 'ಮಱೆಯಿಸು' ನೋ.

**ಮಱೆಹಿಡಿಕೆ** (ನಾ). ಎಚ್ಚರವಿಲ್ಲದಿರುವುದು ; ಮೂರ್ಛೆ; ವಿಸ್ಮೃತಿ : ಇಂತಿವಱಿಂ ಮಱೆಹಿಡಿ[ಕೆ]ಯ ಭ್ರಾಂತಿನೊಳದಟೞಿದು ಕಾಲ್ಗಳುಂ ಕೆಟ್ಟೊಡವಂಗಂ ತಳುವಿಲ್ಲದೆ ತತ್ಕ್ರಿಯೆಯುಂ ತಾಂ ಮಾಡಲಿಟ್ಟಿಗುಮದು ಮುನ್ನಿನವೋಲ್ (ಜಮಧ. ೦೬-೦೩೫). [ಮಱೆ₂ + ಹಿಡಿಕೆ (< ಪಿಡಿಕೆ)]

**ಮಱೆಹುಗು** 'ಮಱೆವೊಗು' ನೋ.

**ಮಱೆಹೊಗು** 'ಮಱೆವೊಗು' ನೋ.

**ಮೞಮೞ**, ಮಳಮಳ₁ (ನಾ). ಮಬ್ಬು; ಅಸ್ಪಷ್ಟತೆ; ಮಸುಕು : 'ಮೞಮೞಿಸು' ಪರಾ. **ಮಳಮಳ₁ :** 'ಮಳಮಳಿಸು' ಪರಾ. 'ಮೞಲ್' ಹೋ.

[ದೇ.] ತಮಿ. ಮೞಮೞಪ್ಪು= ಮಾತು ಅಥವಾ ಕೃತಿಯಲ್ಲಿ ಕಂಡು ಬರುವ ಅಸ್ಥಿರತೆ,— ಅಸ್ಪಷ್ಟತೆ; ಮೞ=ಮಾನಸಿಕ ಗೊಂದಲ ]

**ಮೞಮೞಿಸು**, ಮಳಮಳಿಸು₁ (ಕ್ರಿ). ೧. (ಪರವಶತೆ, ಕಣ್ಣೀರು, ಮುಂತಾದುವುಗಳಿಂದ) ಕಣ್ಣು ಮಂಜಾಗು; ದೃಷ್ಟಿ ಮಸುಕಾಗು.— ಅಸ್ಪಷ್ಟವಾಗು : "ಮೞಮೞಿಸಿತ್ತು = ಕಣ್ಕಪಡಿದ ಭಾವಂ" (ಶಮದ. ಶಂ. ೦); ಅಂತು ಕುಡಿಯೆ ಕಕ್ಕರಗೆಯ್ದುದಿಂ ತುದಿನಾಲಗೆಯೊಳ್ ತೊದಳ್ವೆರಸು ನುಡಿವ ನುಡಿಗ[ಳುಂ]. . . ಮೞಮೞಿಪ ರೂಪು ಕಣ್ಗಳೊಳ್ ಬೆಳ್ಪನೞಿಯೆ ಸೋಂಕುವ ಕೆಂಪುಗಳುಂ (ಶಂಶಭಾ. ೪-೮೮ ವ); ಕಳ್ಳಸೊರ್ಕಿನೊಳಂ . . . ಉಂತೆ ಪೊಳೆವ ನಿಡಿಯಲರ್ಗಣ್ಗಳ್ಗೆ ಮೞಮೞಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕೆಯಿಂ ತಳೆಯೆ (ಶಂಶಭಾ. ೭-೮೦ ವ) ; ಬೆಳರ್ತ ದೋರೆವಾಯ್ ಮೞಮೞಿಸುತ್ತುಮಿರ್ಪ ನಗೆಗಣ್ ನಸುಜೋಲ್ವೊಡೆ (ಸೂಕ್ತಿಸು. ೯-೬೦). ೨. (ಆಯಾಸದಿಂದ) ಕಣ್ಣನ್ನು ಮುಚ್ಚಿಕೊಳ್ಳು : ಅಡಿಗಡಿಗಾಗುಳಿಸುವೊಡಂ ನುಡಿಗಳನಿನಿಸಲಸಿ ಕೇಳ್ವೊಡಂ ನಿಜತನುವಂ ಸಡಲಿಸಿ ಕಣ್ಣಂ ಮೞಮೞಿಪೊಡಮಱಿ ನಿದ್ರಾಂಗಿತಂ ಮನೋಜಲತಾಂಗಿ (ಜಂದತ. ೦೦-೩೬). **ಮಳಮಳಿಸು₁:** ೧. ದಿಟ್ಟಿಗಳ್ಮಳಮಳಿಸಲಿಂತೆಂದನು (ಶೋಣಾಸ. ೭-೯೮). [ ಮೞಮೞ + — ಇಸು₃ ]

**ಮೞಲ್**, ಮಳಲು₁ (ಕ್ರಿ). = ಮೞಿಮೞಿಸು ೧ : "ಮೞಳ್ವ[ಲ್ವ] ದೆಸೆ ದೃಷ್ಟಿಕ್ಷೋಭದಲ್ಲಾಯ್ತು" (ಶಬ್ದಾನು. ೮೯); "ಮೞಲ್ವುದು (ಕೞಲ್ವುದು), ಮೞಿಮೞಿಸಿತ್ತು = ಕಣ್ಕದಡಿದ ಭಾವಂ" (ಶಬ್ದ. ಶಂ. ೦).

**ಮಳಲು₁** : ಮಳಲುತಿಪ ಕಣ್ಗಳಿಂದೊರಲ್ವ ಮಗಳಂ ನೋಡಿ ಗಳಗಳನೆ ಬಾಯ್ಬಿರೆದು ತಾಯಿಯಳುತಿಪಳು (ಶಾಂತರ ೧೭೩-೪೮೩).

[ದೇ.॥ ಮಲ. ಮೞಲ್ = ಉನ್ಮತ್ತತೆ ]

**ಮೞವೆ₁** 'ಮಳವೆ' ನೋ.

**ಮೞವೆ₂** 'ಮಳವ₂' ನೋ.

**ಮೞವೆಳ್ಳೂರ್** (ನಾ). ಒಂದು ಸ್ಥಳದ ಹೆಸರು : ಪರಾವೀಜನ್ಮಪ್ಪುರಂ ವಿನ × ತ್ತಿ ನಿಮ್ಮಡಿ ಮೞವೆಳ್ಳೂರಾಳೆ (ಎಕ. IV (R). ಎಳಂದೂ. ೦೩೮-೩; 8ನೆಯ ಶತ). [ ? + ಊರ್ ]

**ಮೞಿಗೆ**, ಮಳಿಗೆ (ನಾ). ೧. ಅಂಗಡಿ : ವಿಗೆ ಬೆಲೆಯೋಱಿದ. . . ಬಟ್ಟೆಯ ಮೞಿಗೆಗಳಿಂ ಸೋಲಿಪುವು ಸೀರೆವರದರ ಪಸರಂ (ಕಬ್ಬಿಗ. ೩೮); ಠಕಾರಕ್ಕೆ ಟಕಾರಂ. . . ಮಠಿಕಾ-ಮೞಿಗೆ (ಶಬ್ದ. ೨೫೭ ಪ್ರಯೋ). ೨. ಸರಕುಗಳನ್ನು ಶೇಖರಿಸಿಡುವ ಸ್ಥಳ ; ಕೋಠಿ ; ಗುದಾಮು ; ಮೞಿಗೆಯ ಮಾಳಿಗೆಯ ಮನಂಗೊಳಿಸುವ ನಾನಾ ಪ್ರಕಾರದಂಗಡಿಯುಂ . . . ನೋಟ್ಪಡಂ ರಮಣೀಯಂ (ಸುಕುಮಾ. ೯-೬೪). **ಮಳಿಗೆ** : ೧. × × × ಸದಿಂ ಮಳಿಗೆಗಳಂ ತರದಿಂ (ಮೊಂಕಶಾ. ೦೯೩೩, ಹಾವೇರಿ. ೧೮೯-೯೯; 986); ಕೊಟ್ಟ ಗೞ್ದಿ ಮತ್ತರೆರಡು ದೇವರ ಪುರದೆರಡುಮಳಿಗೆ ವಜ್ಜದ ಕೇರಿಗೆ ಮೂಡಲು (ಪ್ಕಿಅಂ. ೦೯೨೯,೬೫-೯; 1024 ?); ಅಲ್ಲಿ ದೊಡ್ಡದೊಡ್ಡ ಮನೆಗಳೂ ಮಹಲುಗಳೂ ಮಳಿಗೆಗಳೂ ತುಂಬಿದ್ದುವು (ಶೃಗಂಬ. ೦೦). ೨. ಯೆಣ್ಣೆ ಅರಮನೇ ಮಳಿಗೆಯಿಂದ ಕೊಡಬೇಕು (ಎಕ. IX, ದೇವನ. ೦೬-೦೯; 1698); ಇಂಗ್ಲಿಷು, ಫ್ರೆಂಚು, ಡಚ್ಚು ವರ್ತಕರು ತಮ್ಮ ಮಳಿಗೆಗಳನ್ನು ಕಾಪಾಡಿಕೊಳ್ಳಲು ಸಿದ್ಧರಾದರು (ಛತ್ರಪ. ೦೦೯); ಹಡಗಿನ ನೌಕರರು ನೀರು ನುಗ್ಗಿದ ಮಳಿಗೆಯಿಂದ ಸಾಮಾನುಗಳನ್ನೆಲಾ ಹೊರಕ್ಕೆ ತೆಗೆದು ಹಾಕುತ್ತಾರೆ (ಕ್ರವಾಇ. II. ೦೯). ೩. (?) : ಶ್ರೀ ಸ್ವಾಮಿದೇವರ ಪಟ್ಟಣಾ ಕೊಟ್ಟ ತ್ರೋಣೆಯ ಮಳಿಗೆಯ ಭಗವತೀದೇವಿಯರ್ಗ್ಗೆ ಮುನ್ನ ಪರಮೇಶ್ವರ ದತ್ತಿಯಾಗಿ ಪಡದ ವ್ರಿತ್ತಿ (ಸೌಇಇ. XI-i, ೦೬೭-೦೭ ; 1099); ದೀಪಾವಳಿಯ ಪರ್ವ್ವದಲ್ಲಿಯೊಕ್ಕಲೊಳಿಂಣೆ ಮಾನವೊಂದು ಮಳಿಗೆಯೊಳಗೈನೂರ್ವ್ವಸ್ವಾಮಿಗಳ್ ಬಿಟ್ಟಾಯಂ (ಎಇ. XX, ೦೦೭-೫೨ ; 1167); ಈ ಮಳಿಗೆಯ ಕೋಲು ಕೊಳಗ ಸಕಲಸಾಂಮ್ಯವೆಲ್ಲವೂ [ಶ್ರೀ] × × ಚಲಿಂಗ ದೇವರದು (ಕಇ. I, ೩೦-೬೩; 1222).

[< ಸಂ. ಮಠಿಕಾ./ತಮಿ. ಮಳಿಕೈ; ತುಳು. ಮಳಿಗೆ; ತೆಲು. ಮಳಿಗ./ ಮರಾ. ಮಳಗೀ, ಮಳಘೀ]

**ಮೞೂರ್** (ನಾ). ಒಂದು ಊರಿನ ಹೆಸರು; P ಈಗಿನ ಚಾಮರಾಜ ನಗರ ತಾಲ್ಲೂಕಿನ ಮಳೂರು : ಮೞೂರ ಸಾಯಿರ ಒಟ್ಟಾಬ್ಬರುಂ ಮಲ್ಲಯ್ಯನುಂ ಮಾಡಿಸಿದ ದೇಗುಲಕ್ಕೆ ಕೊಟ್ಟ ಮಣ್ಣೂರಗಾಲಲ್ದಿರ್ಕ್ಕಣ್ಣಗಂ (ಎಕ. IV(R). ಚಾಮರಾ. ೨೯೦-೨; 982). [? + ಊರ್]

**ಮೞೆ³**, ಮಳೆ (ನಾ). ಮೋಡವು ಕರಗಿ ಆಕಾಶದಿಂದ ಸುರಿಯುವ ಹನಿಹನಿಯಾದ ನೀರು; ಸರಿ; ವೃಷ್ಟಿ: "ಧಾರಾಸಂಪಾತಃ, ಆಸಾರಃ— ಈ ೨ ಮೞೆ³" (ಹಲಾಯು. ೦೦-೫೮); ದೆಸೆಗಳ್ಗೆ ಕೆಪ್ಪನೆ ಮೊೞಗುವಿರೇಂ ಮೊೞಗಿದಂತೆ ಕೊಳ್ವವೆ ಮೞೆ³ಗಳ್ (ಕಾವ್ಯಸಾ. ೯೩೭ ಓಪ್ರ); ಪದಸಂ ಕಾಣಿಸಿಕೊಳ್ವವಲ್ಲಿ ಮೞೆ³ಗಳ್ (ಆದಿಪು. ೨-೩೦); ಮೞೆ³ಯಿಲ್ಲದೆ ಪೊಯ್ದಾರಿಂ ಬೆಳೆಗುಮೆ ಧರೆ (ರಮ್ಮಾಪ್ರ. ೦-೪೯) ; ಮೞೆ³ಯೋ ಸರ್ವಜನಾಶ್ರಯಂ (ಸೋಮೇಶ. ೦೪). **ಮಳೆ** : "ಮಳೆಯೆನಲ್ ವೃಷ್ಟಿ" (ಕಶರ. ೮೬); ಕಾಳ್ಕಿಚ್ಚಿನಿಂ ಬೇವಂಗೆ ತಂಪಿನ ಸೋನೆಯ ಮಳೆಯಾಗುತ್ತ ಮಾಣ್ಬರೆ (ಬಸರ. ೯-೩೦) : ನೀಲಗಿರಿಗಳ ನೆಮ್ಮಿ ಘನಮೇಘಾಳಿ ಸುರಿದವು ಮಳೆಯನೆನೆ ಶರಜಾಳ ಕವಿದುದು ಗಜದ ಜೋಧರ ರ್ಝಾಡಿಯೆಸುಗೆಯಲಿ (ಕುವ್ಯಾಕ. ೦೦-೧೬) ; ಮಳೆಗೆ ಹೆದರಿ ಹೊಳೇಲಿ ಹಾರಿದ ಹಾಗೆ (ಗಾದೆ).

ಮಳೆ ಕುಡಿವ ಹಕ್ಕಿ=ಕೇವಲ ಮಳೆಯ ನೀರನ್ನೇ ಕುಡಿದು ಬದುಕುವುದೆಂದು ನಂಬಲಾದ ಒಂದು ಬಗೆಯ ಪಕ್ಷಿ; ಚಾತಕ : ಮಳೆಕುಡಿವ ಹಕ್ಕಿವೊಲು ಕುಡಿಯುತಿರೆ ಕನ್ನಡದ ಕಲಿಗಳಾ ಸಿರಿಯ (ಹೊಂಗಳು. ೦೩-೧). ಮಳೆಯ ನಕ್ಷತ್ರ=ಮಳೆ ಬರಲು ಸಹಾಯಕವಾಗುವಂತೆ ಸೂರ್ಯನು ತನ್ನ ಸಂಚಾರದಲ್ಲಿ ಬಂದು ಸೇರುವ ನಕ್ಷತ್ರ ಪ್ರದೇಶ : ಮಹಾನಕ್ಷತ್ರವನ್ನೇ ಮಳೆಯ ನಕ್ಷತ್ರವೆಂದೂ ಹೇಳುತ್ತಾರೆ (ರೂಢಿ). ಮಳೆಯ ಹುಳ = ಮಳೆಗಾಲದ ಆರಂಭದಲ್ಲಿ ಕಂಡು ಬರುವ, ಇರುವೆಯ ಜಾತಿಗೆ ಸೇರಿದ, ರೆಕ್ಕೆಗಳುಳ್ಳ ಒಂದು ಬಗೆಯ ಹುಳು ; ಈಚಲುಹುಳು : ನೆಲದೊಳಗಿಂದಲೇಳುವ ಮಳೆಯ ಪುಳ ಕವಿವಂದದಲಿ (ದೇವೀಶ್ರ. ೫೯). ಮಳೆಯ ಬಿಲ್ಲು=ಮಳೆಯ ನೀರಿಗೆ ಸೂರ್ಯನ ಬಿಸಿಲು ಎದುರಾಗಿ ಬಿದ್ದಾಗ ಏಳುವ ಏಳು ಬಣ್ಣಗಳ ಬಿಲ್ಲಿನಂಥ ಆಕೃತಿ ; ಕಾಮನ ಬಿಲ್ಲು; ಇಂದ್ರಚಾಪ : ಬೆನ್ನಸು ಕೋದು, ಕೈಕಾಲ್ಗಳನು ತೇಲಿಸಿ, ಹೊಳೆದಳು—ಮಳೆಯ ಬಿಲ್ಲಿನ ಹಾಗೆ (ಕಂಪ.೩೮-೦೩). ಮೞೆ³ಕೊಳ್ = ಮಳೆಬೀಳು ; ಮಳೆಯಾಗು : ಪ್ರಜೆಗಳು ಮೆಚ್ಚಿದಂತೆ ಮೞೆ³ಕೊಳ್ವವು (ವಡ್ಡಾರಾ. ೮೬-೦೫).

[ದೇ.॥ ತಮಿ. ಮೞೈ ; ಮಲ. ಮೞ ; ತುಳು. ಕೊಡ. ಮಳೆ]

**ಮೞೆ³ಗಟ್ಟಿಲೆ** (ನಾ). ಆಕಾಶದಲ್ಲಿ ಮೋಡ ಮುಚ್ಚಿಕೊಂಡು ಸೂರ್ಯನು ಕಾಣದ ದಿವಸ ; ದುರ್ದಿನ : "ಮೞೆ³ಗಟ್ಟಿಲೆಯುಂ ದುರ್ದಿನಮೆಂಬುದು" (ಹಲಾಯು. ೦೦-೫೯). P 'ಮೇಘತಿಮಿರ' ಎಂಬ ಶಬ್ದಕ್ಕೆ ಹಲಾಯುಧದ ಟೀಕಾಕಾರನು 'ಮೞೆ³ಗಟ್ಟಿಲೆ' ಎಂದು ಕೊಟ್ಟಿರುವ ವಿವರಣೆ ವಿಚಾರಣೀಯವಾಗಿದೆ. [ಮೞೆ³ + ಕಟ್ಟಿಲೆ]

**ಮೞೆ³ಗಾಲ**, ಮಳೆಗಾಲ (ನಾ). ಮಳೆ ಬರುವ ಋತು ; ಕಾರ್ಗಾಲ : "ವರ್ಷಾಃ, ಪ್ರಾವೃಟ್, ತಪೋತ್ಯಯಃ—ಈ (ಮೂಱು) ೩ ಮೞೆ³ಗಾಲಂ" (ಹಲಾಯು. ೨೦-೦೦೭); ಕಾಲಮಲ್ಲದ ಕಾಲದೊಳ್ ಮೞೆ³ಗಾಲಮನೆಂತು ಪಡೆಯಲಕ್ಕುಂ (ವಡ್ಡಾರಾ. ೦೫೭-೦೭); ಅಂಬಿನ ಮೞೆ³ಗಾಲಮಾಯ್ತು ಕುರು ಭೂಮಿಗೆ ಭೀಮನದೇಂ ಪ್ರತಾಪಿಯೋ (ಶಂಕಶಾ. ೦೨-೬೭); ಮೞೆ³ಗಾಲಂ ಬರೆಯುಂ ಪೆರ್ವಟುವಿನೊಳಂ ಯಕ್ಷವಿಕ್ರಿಯಾಜನಿತಮದೇಂ ಪೊೞಲಾದುದೊ ರಘುರಾಮನ . . . ಪುಣ್ಯೋದಯದಿಂ (ಶಂರಾವಾ. ೭-೦೩೦). **ಮಳೆಗಾಲ** : ಬೆಳೆವುದು ಬೆಳ್ದಿಂದಡೆ ಬಳಿಕುಳಿದೆಡೆಯುಂ ಪೊಗಳವೇಡ ಮಳೆಗಾಲದೊಳಾಗಳು ಮುಳಿಯದು ಬೆಟ್ಟದ ಸರಿವಳೆಯದ × × × ದುಮಿಲ್ಲ ಪಸವಿನಾಡೊಳ್ (ಎಕ. VIII, ಸಾಗರ. ೦೦೯-೯೯ 1042); ಕಳಿದು ಮಳೆಗಾಲವನು ಬಲಿಮುಖಬಲಸಹಿತ ಬಂದಿನಜನಾ ದಶಗಳವಿರೋಧಿಯು ಕಂಡು ಕದನೋದ್ಯೋಗಮನಸಾದ (ತೊರರಾ. ೯-೭ ಸೂಚನೆ) ; ಭರಿತಕಬರೀಬರ್ಹಿ ಲೀಲೆಯಿಂ ಮಳೆಗಾಲದಿರವನೆಚ್ಚರಿಪರಸಿಯುಂ ಕಂಡು ರಾಮನ ಮನಶ್ಚಾತಕಂ ನಲಿದುದು (ಕೃಬಾಪ್ರ. ೦೮-೨೭). [ಮೞೆ³ + ಕಾಲ]

**ಮೞೆ³ನೀರ್**, ಮಳೆನೀರು (ನಾ). ಆಕಾಶದಿಂದ ಸುರಿಯುವ ಹನಿಹನಿಯಾದ ನೀರು ; ಮಳೆ : ನೆಲನಱಿದೂಡುವ ಪೊೞೆ³ನೀರಲಂಪಿನಿಂ ಪದಕೆ ಪೊಯ್ವ ಮೞೆ³ನೀರೊಲವಿಂ ಪಲಗೆಯ್ಗಳ್ ಪೊಲಗಳೆನಲ್ ಮಲೆನಾಡಂ ಪೋಲ್ವ ನಾಡುಗಳ್ ಪೆಱಪೊಳವೇ (ಶಬ್ದಸ. ೩೨೭ ವ್ಯಾಖ್ಯಾ). **ಮಳೆನೀರು** : ಮಳೆ ನೀರು ಬಿಟ್ಟು, ಮಂಜಿನ ನೀರಿಗೆ ಕೈಯೊಡ್ಡಿದ ಹಾಗೆ (ಗಾದೆ). [ಮೞೆ³ + ನೀರ್]

**ಮೞೆ³ವನಿ**, ಮಳೆವನಿ, ಮಳೆಹನಿ (ನಾ). ಮಳೆಯ ನೀರಿನ ತೊಟ್ಟು,— ಬಿಂದು : ನೀಲಾದ್ರಿಯ ಮೇಲತಿಭರದಿಂ ಪಡಲಿಟ್ಟು ಸಿಡಿವ ಮೞೆ³ವನಿಗಳ

ಪೋಲ್ (ಉದ್ಭಟ. ೯-೬೯); ಮೞೆವನಿಯುಂ ಧರಾತಳದೊಳೊಂದೆರಡೆಂದೆಣಿಸಲ್ಕೆ ಶಕ್ತಿಯುಂ ತಳೆದೊಡೆ ತಾಳಲಕ್ಕುಂ . . . ಜಿನೇಶಸದ್ಗುಣಾವಳಿಗಳನೆಯ್ದೆ ಪೇೞಲರಿದು (ಧರ್ಮಾ. ೧-೫೩). **ಮಳೆವನಿ :** ಕೞೆಕೞೆದ ತಮ್ಮ ಮಳೆವನಿಗಳಿಂ ಶಶಿಕಾಂತದೊೞೆತೆಪೂನಲುೞೆ ಪೆರ್ಗ್ಗಳಿಸೆ ನಾಚಿ ಬೆಳ್ಪಾದ ತೆಱದಿಂ ಮುಗಿಲ್ಗಳಿರ್ದ್ವ ಬೆಳ್ದಿಂಗಳೊಪ್ಪಿದುವು (ಕೈಪಿಡಿ. ೨೫-೩) : ಮಳೆವನಿಗಳ ಖುರಪುಟದಲಿ ಮುಗಿಲಂಚನು ಸೀಳಿ ಅಗೊ ಮಿಂಚಿನ ದಾಳಿ (ನಲಮು. ೭-೦೦). **ಮಳೆಹನಿ :** ಮಳೆಹನಿ ಬಿಟ್ಟರೂ ಮರದ ಹನಿ ಬಿಡಲಿಲ್ಲ (ಗಾದೆ).

[ಮೞೆ + ಪನಿ]

**ಮುೞ್ಗಿಸು, ಮಗ್ಗಿಸು, ಮರ್ಗಿಸು, ಮಳ್ಗಿಸು** (ಕ್ರಿ). ೧. ಕಳೆ; ನಿವಾರಿಸು ; ಹೋಗಲಾಡಿಸು : ನೀನೆನ್ನೀ ನಿಡುದೋಳ್ಗಳ ತೀನು ಮುೞ್ಗಿಸು ಮೆಯ್ಪೊಡಾನೊಲ್ಲದನೇ (ಶಂಕಪಾ. ೨-೮೦); ಪಣ್ಪಲದಿಂದಂ ನೆಗೆದ ನಿಜೋದರಕೃಶಾನುವಂ ಮುೞ್ಗಿಸಿದರ್ (ನೇಮಿಪು. ೨-೬೫); ದೋರ್ದಂಡಕಂಡೂಯನಮಂ ಚಂಡಾಸಿಸಂಘಟ್ಟದಿನೊಗೆವುರಿಯಿಂ ಮುೞ್ಗಿಪೆಂ (ರಸರ. ೩-೦೩೨). ೨. (ತಾಪ, ದುಃಖ ಮೊದಲಾದುವುಗಳನ್ನು) ಆರಿಸು ; ಶಾಂತಗೊಳಿಸು ; ಶಮನಗೊಳಿಸು : ಆರೊರ್ವರರಸಿಯುೞ್ಕೆಯುಂ ಮುೞ್ಗಿಸಿ ದುಃಖಮಂ ಮುೞೆಯಿಸುವೊರವರ್ಗೆಸಗೆಯುಂ ಮಾಡುವೆಂ (ಪಂಪಾರಾ. ೦೦೬-೧೨) ; ತನ್ನೊಳ್ ಮದನಪರಿತಾಪಮಂ ಕೋಪದೆ ಮುೞ್ಗಿಸೆ ಕೞಿದು ಸುಖದೆ ಮುೞಿದೊಱಗಿಪನೋ (ಕಾದಂಪೂ. ೯೦೭); ವಿಳದುಶ್ಯಾಸನವಕ್ಷಸ್ಥಳೋಚ್ಚಲಿತ್ಕೃಷ್ಣರಕ್ತಜಲದಿಂ ಕೋಪಾನಳನಂ ಮುೞ್ಗಿ[ಪಾಠಾಂ. ಸ್ಸಿ]ಸದಿನ್ನುಂ ಗಳಗಳಿತಸಕೋಪನಿರ್ಪ ತೆಱದಿಂದಿರ್ದ್ದೈ (ಗದಾಯು. ೦-೫೭); ಅೞ್ವರ್ಗಂಗತಾಪಮಂ ಮುೞ್ಗಿಸಲಾಱದೆದಿತಳವ. ಮಳಯಜಂ ಸೂಸುವಾಲಿನೀರ್ (ಧರ್ಮಪು. ೪-೯೭). ೩. ವಾಸಿಯಾಗುವಂತೆ ಮಾಡು ; ಗುಣಪಡಿಸು : ಲಾಂಗಲಿ ದೇವದುಂಬೆ ಸುರದಾಳಿಯೆಂಬಿವಂ ಕಟಿಯಿಂದಂ ಪೂಸಿದೊಡಂತದುವೆಗಂ ಪೆರ್ಚಿದ ಕಿರ್ಚುಪೊಲುರಿವ ಊತಿಯುಂ ಮುೞ್ಗಿಸುಗುಂ (ರೋಗಲೋಕ. ೯-೦೩೦). ೪. ಧ್ವಂಸ ಮಾಡು ; ನಾಶಗೊಳಿಸು : ಶ್ರೀಮದಾಹವಮಲ್ಲದೇವರ್ ಚೋರಾರಿಮಾರಿ ಡಾಮರೋಪಸರ್ಗ್ಗಂಗಳ ಮುೞ್ಗಿಸಿ (ಶಾಇ. IX-i, ೭೭-೨ ; 992) ; ಆಭೀಳಕಾಕಾಳಿಯಂ ತವೆ ಕೊಂದೀ ಧರೆ ಮೆಚ್ಚೆ ಮುೞ್ಗಿಸುವೆನುಗ್ರಾಟೋಪಮಂ (ಶಂಕಶಂ. ೨೫೪-೨೨); ಸ್ವಕೀಯನಿಷ್ಠುರಭುಜಾಸ್ಫಾಲನದಿನೀ ಗೋಪಾಲಬಾಲಕರಂ ಮುೞ್ಗಿಸುವೆಂ (ಜಗಂ. ೭-೯ ವ). ೫. ಕೊಲ್ಲು : ಸಾಯಿಸು ; ಸಂಹಾರಮಾಡು : ಅರಸುತನಂಗೆಯ್ವಳಿಪಿಂ ಧುರದೊಳ್ ಮಾೞಾಂತರೆಲ್ಲರುಂ ಮುೞ್ಗಿಪುದುಂ ದೊರೆಕೊಳ್ಗುಂ ಪಾತಕಂ (ಶಂರಾಪಚ. ೦೦-೦೭೩). ೬. ಕೆಡವು ; ಬೀಳಿಸು : ಮೞೆಸಿಂಗ್ರಮಂಗವಿಸಿಯುಂಡಲಿ ದಾನೆಯುನಸೞ್ಗಿಪಂತೆಪೋಲ್ ತನು ತನು ಸೋಂಕೆ ಮುೞ್ಗಿಸುಗುಮಿಮ್ಮಡಿ ಮೂವಡಿ ಬಳ್ಗಾಱರಂ . . . ಈ ಚಿಕದೇವಭೂವರಂ (ಚಿಕಪ. ೪-೦೭೯). **ಮಗ್ಗಿಸು :** ೧. ಜನಪಂ ಪೊಸ ಕದಳೀ ದ್ರಾಕ್ಷಾದಿಗಳಿಂದಾ ಕ್ಷುಧೆಯನು ಮಗ್ಗಿಸಿ (ಜ್ಞಾಪಸಂ. ೫-೪೭). ೨. ಮಗ್ಗಿಸಲಿನ್ನಾರಾರ್ಪರೀ ಶೋಕಮಂ (ಕಾದಂಪೂ. ೭೦೦) ; ಅಸುಹೃದುಮದಗ್ರಭೂಭುಜರ ತೇಜದ ದಳ್ಳುರಿಯುಂ ಸಮಂತದ ಮಗ್ಗಿಸೆ (ಎಕ. VII, ಶಿಕಾ. ೦೦೨-೯; 1162) ; ನನೆಯಿಂ ನೆಯ್ದಿಲಿನಾಲಿನೀರ್ದಳಿಪದಿಂ ಕಾಮಾಗ್ನಿಯುಂ ಮಗ್ಗಿಸಲ್ (ಲೀಲಾವ. ೨-೯); ಧರಣೀಗಣಿಕೆ ಯಶೌಘನ ವಿರಹದ ಪರಿತಾಪಮಂ ಯಶೋಧರನ ಯಶೋಹರಿಚಂದನಚರ್ಚೆಯಿಸುದ್ಧರದಾಸಾಸಾರಾರಸೇಕದಿಂ ಮಗ್ಗಿಸಿದಳ್ (ಯಶೋಚ. ೨-೦೯). ೪. ಧರ್ಮಮೆ ಸಲೆ [ತಲೆ]ಗಾಗುಂ ಧರ್ಮಮೆ ಸಂಸಾರದುಃಖಮಂ ಮಗ್ಗಿಸುಗುಂ (ಧರ್ಮಾಮೃ. ೫-೨೩) ; ನಿನ್ನ ಹೆಮ್ಮೆಯನ್ನು ಮಗ್ಗಿಸುವ ನಿಮಿತ್ತದಿಂದ ನಾನು ಕಠಿಣವಾದ ಮಾತನಾಡಿದೆ (ಪಶಭಾ. ೨೭೭). ೬. ಎಕ್ಕೆಯಿನಿರ್ಪ ಪುಲ್ಲೆಗಳನಿಲ್ಲಿಯೆ ಮಗ್ಗಿಸು (ಪಳಸಂ. ೭೪); ಅಸುರರು ತುಡುಕಲು. . . ದೇಂಡೆ ಕೈಕಾಲಿಂದೆ ಹೊಡೆದುರ್ವಿಯುಲಿ ಮಗ್ಗಿಸಿದ (ಮೋಹತ. ೦೨-೫೭) : ಈ ಬಾಣಾರನತ್ಯಲ್ಪಬಲನು . . . ಶೀಘ್ರದಿಂದವನಂ ಮಗ್ಗಿಸಿ ಎಮಗಂ ನಿಮ್ಮ ಬಂಧುಜನಕಂ ಹರ್ಷವನ್ನುಂಟುಮಾಡು (ಕಗಪ. ೭೯ ವಿಷ್ಣುಪುರಾಣ). ೭. ಸೋಲಿಸು : ಆ ವರುಣನು ಹಗ್ಗದಿಂದಸುರನಾಯಕರಂ ಮಗ್ಗಿಸಿ ದಶಶಿರನನು ಪಿಡಿತಹೆನೆಂದುಗ್ರದೆ ನಡೆತಂದನು (ತಂಜಕ. ೭-೦೬೮); ಕಗ್ಗನಿಯು ಕತ್ತಲೆಯೊಳೆಮ್ಮನು ಮಗ್ಗಿಸಿದ ಫಲಕಿದೆ ಕೊ ಸಾವಿನ ಸುಗ್ಗಿ ನಿನಗೆ (ತೊರಾ. ೭-೪೯-೧೫); ಬರ್ಪನ . . . ಮದನಾಗಮದೊಳು ಮಗ್ಗಿಸಿ ಹಣಗಳನುದಿರದೆಗೆದಳವನಿಂದ (ಶಂವಪ. ೨-೯೭). ೮. ಕಳೆದುಕೊಳ್ಳು ; ಹೋಗಲಾಡಿಸಿಕೊಳ್ಳು : ತಮ್ಮ ಸ್ವಾರ್ಥವನ್ನೂ ಅಹಂಕಾರವನ್ನೂ ಮಗ್ಗಿಸಿ ಅವನಿಗೆ ಸುಖ ತಂದರು (ಬಂಕಿಮ. ೨೯೫). **ಮರ್ಗಿಸು :** ೪. ಮಾರಿಡುವನೌರ್ವಜ್ವಾಳೆಯುಂ ಮರ್ಗ್ಗಿಪಂ ತವಿಪಂ (ಎಕ. VIII, ಸೊರಬ. ೦೪೦-೨೮ ; 1198); ಸ್ವರ್ಗನಿಳಯರ್ಗೆಸುತ ಮರ್ಗಿಸುವ ನರ್ಗನಿಂ ಸಾಗ್ರದೆಡೆ ನಿರ್ಗಮಿಸಿ (ಶಿವಮು. ೩೨-೮). **ಮಳ್ಗಿಸು :** ೧. ಮದಜಳದಿಂದೆ ಮಳ್ಗಿಪುದು ಧೂರಜಮಂ ಗಜರಾಜಿ (ರಾಜಶೇ. ೭-೦೭). ೨. ಮೂಱುಜಗಕ್ಕಂ ವಲಂ ತಾನೇ ಮಾತ್ರ ಖ್ಯಾತೆಯಾಗಿರ್ಪಳ ಮನದಳಲಂ ಮಳ್ಗಿಸಿದೊರ್ಳ್ಪವೆತ್ತಿರ್ದಾ ಮೈಮಾರಕ್ಷಿಸೆಮ್ಮಂ (ವೀರಕ. ೦). ೯. (ವ್ರತ, ಉಪವಾಸ ಮುಂತಾದುವುಗಳಿಂದ) ಸೊರಗಿಸು ; ನವೆಯುವಂತೆ ಮಾಡು ; ಬಡವಾಗಿಸು : ಕಾಯಮನಂತು ಮಳ್ಗಿಸಲೊಡರ್ಚುಗುಮಾ ಮುನಿಸಂಘಂ (ಕಮಾಮಾ. ೩-೧೦೦).

[ಮುೞ್ಗು + ‑ಇಸು₃]

**ಮುೞ್ಗು, ಮಗ್ಗು₁, ಮರ್ಗು, ಮಳ್ಗು** (ಕ್ರಿ). ೧. ಕುಂದು ; ತಗ್ಗು ; ಕಡಮೆಯಾಗು : ತ್ರಿದಶಸ್ತ್ರೀಜನದೊಳಮೃತದೊಳಮಣಂ ಮುೞ್ಗದುರಿವ ಮದನಾಗ್ನಿಯ ಕೊರ್ಬಿದರಾಗ್ನಿಯ ಪೆರ್ಚಿಕೆ ಮುೞ್ಗಿದಪುದೇ ಲಲನೆಯರೊಳಶನದೊಳ್ ಮಾನವರಾ (ಆದಿಪು. ೯-೫೭); ಉಲಿವ ವಿಮಾನಕಿಂಕಿಣಿಯ ಮೆಲ್ಲುಲಿಗಳ್ ಕಿವಿಗೆಯ್ದೆ ಮುೞ್ಗದಗ್ಗಲಿಸೆ ಗೇಯರಸವಚ್ಚೞದಂತಿರೆ (ಶಾಂತಿಪು. ೪-೭೮); ಗರಟಿಗೆಯ ಜಾವದುಕ್ಕಡದುಲಿ ಮುೞ್ಗಿ[ಪಾಠಾಂ. ಗ್ಗಿ]ದ ಪೊತ್ತು ಸೊೞ್ಗೆ ಕರುಮಾಡದ ಪಕ್ಕದೊಳಿರ್ದ ಪಟ್ಟದಾನೆಯ ಬದಗಂ ಬಿನದಕೆ ಪಾಡುತ್ತಿರೆ (ಯಶೋಚ. ೨-೨೭). ೨. ಕಾಣದಾಗು ; ಮರೆಯಾಗು : ನಿತಾಂತಂ ಬಿಡುವಾಲಿನೀರ್ವನಿಯ ತಂದಲ್ ಗಾತ್ರಮಂ ತಾಗಿ ತೊಟ್ಟನೆ ಮುೞ್ಗಿತ್ತು ಮಹೀಶ ಕಂತುವಿನ ದೇಹೋದ್ದಾಹ ಮಿನ್ನೆಂತುಟೋ (ಕುಸುಮಾ. ೦೦೦-೨೭). ೩. ಶಮನವಾಗು ; ಶಾಂತವಾಗು: ಸ್ಫುರದಾಶಾಜ್ವಳನಂ ದುರ್ಧರಸುತಪಸ್ತೀರ್ಥವಾರಿ ಪರಿಷೇಕದಿನೆಂತಿರೆ ಕಿಡುಗುಂ ಭೋಗಾಜ್ಯೋತ್ಕರಪಾತದಿನೆಂತುಮಂತದೇಂ ಮುೞ್ಗುಗುಮೇ (ಚಂದ್ರಪ್ರ. ೨-೪೩). ೪. ವಾಸಿಯಾಗು ; ಗುಣಹೊಂದು : ಶೂಲೆ ತೋೞೆತಂದಿರದೊಡಗೂಡಿ ಶುಂಠಿ ಲಶುನಂ ಗಜಪಿಪ್ಪಲಿ ಚವ್ಯ ಹಿಂಗು ಮುಂಗುರ . . . ಇಕ್ಕೆ ಮುೞ್ಗು[ಪಾಠಾಂ. ತಗ್ಗು]ಗುಂ (ರೋಗಲೋಕ. ೯-೨೦೪). ೫. ನಾಶಹೊಂದು ; ಧ್ವಂಸವಾಗು ; ನಿರ್ನಾಮಗೊಳ್ಳು : ಅರಿಭೂಪಾಳದವಾನಳಂ ಹರಿಗ ನಿನ್ನುಗ್ರಾಸಿಧಾರಾಂಬುಶೀಕರದಿಂ ಮುೞ್ಗಗೆ (ಶಂಕಪಾ. ೦೪-೩೭). ೬. ಸಾಯು ; ಮರಣಹೊಂದು : ಗತಿಸು : ಆ ರಣದಲ್ಲಿ ಮುೞ್ಗಿ[ಪಾಠಾಂ. ಗ್ಗಿ]ದೊಡೆ ಸಗ್ಗಮದಾಗದೆ ಪೇೞಿರ್ (ಕುಸುಮಾ. ೦೦-೨೨); ಜಿನದಾಸಾಹ್ವಯನೊಳ್ ವಿವಾದಿಸಿ ಕರಂ ಸೋಲ್ತಲ್ಲಿ ತದ್ಭಂಗಚಿತ್ತನವಂ ಮುೞ್ಗಿ ಲುಲಾಯಮಾಗಿ ಜನಿಸಿರ್ದ (ಶಾಂತೀಶ್ವ. ೫-೭೫). ೭. ಸುಟ್ಟುಹೋಗು; ದಹನವಾಗು: ಮನದೊಳ್ ಕೂರದ ಪಾಂಡುರಾಜಸುತರುಂ ಲಾಕ್ಷಾಗೃಹೋಗ್ರಾಗ್ನಿ[ಯಾ]ನನದೊಳ್ ಮುೞ್ಗಿದರ್ (ಶಂಕಪಾ. ೩-೩೨). ೮. ನಮಸ್ಕರಿಸು ; ಅಡ್ಡಬೀಳು. ೯. ಬೀಳು ; ಕೆಡೆ : “ಪೊಡಮಡಿಕೆಯೊಳ್ ಪತನದಲ್ಲಿ ಮುೞ್ಗಿನಿಸುಗುಂ” (ಶಂಕೀಷ. ೦೫). ೧೦. ಮಂಕಾಗು ; ಬಣ್ಣಗೆಡು ; ನಿಸ್ತೇಜವಾಗು: ಘುದಿದನಾದಿಮಿಥ್ಯಾತ್ವದೆ ಮುೞ್ಗಿದ ಮತಿಯದು ನಿನ್ನಿಂದಲ್ಲದೆ ಪಜ್ಜಳಿ

ಸುಗುಮೇ (ತಂತ್ರಪು. ೭-೮) ; ಆ ವೈರಿಗಳಂಬು ದಿವ್ಯಶಿನೆ ಪೊಕ್ಕಂ ತುದ್ಯತ್ಕೌಕ್ಷೇಯಕೋಜ್ಜ್ವಳಧಾರಾಜಳದಲ್ಲಿ ಮು[ಪಾಠಾಂ. ಮು]ಟ್ಟುವುದು ನಿಚ್ಚಂ ತದ್ಧರಾಧೀಶನಾ (ಪಾರ್ಶ್ವಪು. ೨-೬). **ಮುಗ್ಗು₁** : ೧. ಅಟ್ಟ ಪೆಡಿರುಲಿ ಮುಗ್ಗಮು ಬೆಚ್ಚನೆ ಸುಯ್ದು ನೋವುಗಳ್ ತೊಲಗಿದುದಿಲ್ಲ (ಬಿಂಹಂ. ೯-೩೩); ಕ್ಷೌರಕ್ಷೌರಕು ಇದರ ಪಾಳೆಯಪಟ್ಟಿನೆಲ್ಲೆಯು ಮುಗ್ಗಿತು (ಗಣೇಶ. ೬೩-೮). ೨. ನೀನದೆತ್ತ ಮುಗ್ಗಿ[ಪಾಠಾಂ. ಕ್ಕಿ]ದೆ ಮಧುಮಿತ್ರ (ಗಂಗ. ೬-೬೪) : ಎಲ್ಲಿ ಮುಗ್ಗಿದೆ ನೃಪಶಿರೋಮಣಿಯೆಲ್ಲಿ ಹೋದುದು ನಿನ್ನ ಸಿರಿ (ಚೀಮಂತ. ೩-೦೨). ೪. ಕುಸುಂಬೆಯುತ್ಪುಲ್ಲಶಿಖಿ ಪ್ರಶಸ್ತತರುಮೂಲಮನಿಂತು . . . ಪಟಕಂಗಳನಾಗಿಸಿ ಗುಂಜಿಯಂತಿ ರೊಂದಲ್ಲದೊಡೆರಬ್ಬಲಮನೀಕ್ಷಿಸಿ ಕೊಳ್ಳಲಿನಂಜು ಮುಗ್ಗುಗುಂ (ಐಮವ. ೦೨-೨೬). ೫. ಅರಿಭೂಪರ ತೇಜದ ದಳ್ಳುರಿ ಮುಗ್ಗುವುದೊಮ್ಮೆ ತನ್ನ ಪೆಸರ್ಗೊಳಲ್ (ಎಕ. VII. ಶಿಕಾಂ. ೦೦೦-೨೮ ; 1129); ಮಡಿಯೆ ಸಾರಥಿ ಮುಗ್ಗಿದವು ರಥ ನಡೆದು ಕಾದಿ ಮಹಾರಥರು ಮೆದೆಗೆಡೆದುದು (ಕುಮಾ.ಗ. ೦-೩೮); ತಳತಂತ್ರವೊಡನೊಡನೆ ಮುಗ್ಗಿದುದು ಮುಗ್ಗಿದುದು ಬಹಳಕೋಲಾಹಲದೊಳು (ಕೃಮಿಭಾ. ೨೭-೭) ; ಪದುಳಕೆ ಹೊಣೆ ಅವನಿರದಿರೆ ತಿರೆ ಪೋಪುದು ಮುಗ್ಗಿ (ಆಹಲ್ಯ. ೨೦-೦೬). ೬. ಪದದೊಳಗೆ ಮುಗ್ಗಿದಾ ಪ್ರಾಣಿಸಂತತಿ ಕೂಪೆ ಪದವಿಯಂ ಪಡೆದು ಸಗ್ಗಕ್ಕೆ ನಡೆಮುವು ಕೊಡೆ (೬೩ಪ. ಹ. ೨೦೯-೦೩); ಬಾಳ್ಗಿತ್ತು ಬಸಿಜಿರ ತೊಡೆ ನಡು ತೋಳ್ಗಂಟಲುರಂ ಕರಂಗಳುಂ ಪಜೀವಿನೆಗಂ ತೋಳ್ಗಡಿಯದಿಜಿಯ ಬಿಡೆ ಬಿಲ್ಲಾಳ್ಗಳ್ ಸರಿಗೆವಜಿ ಮುಗ್ಗಿದರ್ ಕಡುಪಿಂದಂ (ಪಾರ್ಶ್ವಪು. ೩-೦೯೬) ; ಕಡುಗಲಿಗಳುಜಿ ಮುಗ್ಗಿದರು ತಗ್ಗಿದುದು ಯಮಲೋಕ (ಕುಮಾ.ಳೀ. ೯-೩೮). ೭. ಮದನಾಗ್ನಿಜ್ವಾಲೆಯಿಂ ಮುಗ್ಗಿದುದೊ ಬಹುಳಬಾಷ್ಪಾಂಬು ಪೂರಂಗಳಿಂದಟ್ಟುದೊ . . . ಪೇಟೀಮೆಂಬಂದದೆ ಲಜ್ಜಾ ಮುಗ್ಗೇನುಂ ನುಡಿ ಪೊಜಮಡದಾಯ್ತು (ಕಾದಂಬ. ೨೯೧). ೮. ರಾಗದಿಂದಿದಿರ್ವಾಯು ಕೋಕನದನಾಭನೆ ಗೆತ್ತು ಪಾದಯುಗಕ್ಕೆ ಮುಗ್ಗಿದನಾ ಖಳಂ (ಧರ್ಮಾಮೃ. ೯-೨೦೯). ೯. ಇಕ್ಕೆಯಿಂ ದಿಂಕಿಕ್ಕಲಾಜಿವಲ್ಲಿಯ ಮುಗ್ಗುವ ಹುಲ್ಲೆವಿಂಡುಗಳಂ . . . ಅಗುರ್ಬುವೆತ್ತುವು (ಪಕಶಂ. ೩೬೬ ಪ); ಮುಗ್ಗಿದುದು ಕುದುರೆ ಸಾರಥಿ ಮಡಿದನಾ ರಥಂ ನೆಗ್ಗಿದುದು (ಕೃಮಿಭಾ. ೭-೯೬). ೧೦. ನಂದುವ ಚಿತಾಗ್ನಿ ... ಮುಗ್ಗುವ ಚಿತಾಗ್ನಿ ಕಬಳ್ವ ಚಿತಾಗ್ನಿಯಲ್ಲಿಗಲ್ಲಿಗೆ ಪುದಿದಿರ್ದುವಾ ಮಸಣ ದೊಳ್ (ಅರ್ಧನೇ. ೩-೨೩). ೧೧. ಹಿಮ್ಮೆಟ್ಟು ; ಹಿಂದೆಗೆ : ಅಗಿದು ಮುಗ್ಗಿತು ಚೂಣಿ ಬಲುಕಾಳೆಗವನೊಯ್ಯಾರಿಸುತ (ಕುಮಾ.ಳೀ. ೯-೦೦); ಒಗ್ಗೊಡೆದೋಡಿತು ಖಾನರ ಮೋಹರ ಮ [ಪಾಠಾಂ. ನು, ಮು]ಗ್ಗಿತು ಮಲೆತ ರಾವುತರ ಮೊಗ್ಗರ (ಕುಂರಾಸಾಂ. ೦೮-೦೫೦); ಇಂತಪ್ಪ ಟಕ್ಕು ಕಲಿಶವ ಕೃಷಿಗೆ ಮುಗ್ಗುವೆಯ ಶೋಣಿತವ ಯಿಕ್ಕಬೇಕೀ ಭೂಮಿಗಂ ಎನ್ನ ನಿನ್ನ ದೇಹದ ಪಿಣಲ ನೋಡು (ಶೃಶುಕ. ೭-೦೦೯). ೧೨. ಉತ್ಸಾಹ ವಿಲ್ಲದಾಗು : ಏಂ ನಿಮ್ಮಯ ಚಿತ್ತವೃತ್ತಿಯಿತರವ್ಯಾಪಾರದೊಳ್ ಮುಗ್ಗಿತೋ (ದಿವ್ಯಕ. ೯-೪). ೧೩. ಬಳಲು ; ದಣಿ : ಕಾಮದೊಳ್ಕಂದಿದೆಂ ತಾಮಸದೊಳೊಂದಿದೆಂ ಮೋಹದಿಂ ಮುಗ್ಗಿದೆಂ ದೇಹದಿಂ ತಗ್ಗಿದೆಂ (ಭಿಕ್ಷರ. ಹ. ೩೬೮-೦೨); ಸಾರಸಾಳಿ ಮುಗ್ಗಿದುದೆಸಪುಂ (ಕಮವಚಾ. ೩-೩೩); ಆ ಪುರುಷ ಬೈದಗ್ಗಳದ ಕೋಪದಿಂದಾತ್ಮವೇದನೆಯೊಳಂ ಮ[ಪಾಠಾಂ. ಮು] ಗ್ಗುತ್ತಲಿ (ವಂಕಿರಾ. ೨-೩೩-೯೭). ೧೪. ಮುಂದುಡೆಯಾಗಿರು ; ಮುಂದುರಿಕೊಳ್ಳು : ಶಾಯ ಗರ್ಭದೊಳಗೆ ತಗ್ಗಿ ಕುಗ್ಗಿ ಮುಗ್ಗುಲೊಳಗೆ ಮುಗ್ಗಿ ಹೇಯವೆನ್ನದುದರರಸಮುನುಂಡು (ಹಂಶಿರ. ಹ. ೩೦೦-೨೦). ೧೫. ವೀರಮಂಡಿಯುಲ್ಲಿ ಕುಳಿತುಕೊಳ್ಳು : ಕಾರಣಿಕವ್ಯಗಮುಮುನೆಲ್ಲ ಕಂಡು ನೀಡಡಿಯಟ್ಟು ಕುಸಿದು ಕುಬುಜಿಸಿ ಕುಗ್ಗಿ ದಂಡೆನೋಟಂ ಶರ ಸಂಧಾನದೊಳು ಮುಗ್ಗಿ ಕಿವಿಗೆ ಬಲಗಯ್ಯ ಕೆಳನಾರಿಯಂ ತರುತವಿುರೆ (ಕಡ್ಡರ. ದೀ. ೦೩೭-೨೪). P ಪ್ರಾಚೀನಕಾವ್ಯಗಳಲ್ಲಿ ಒಬ್ಬನೇ ಕವಿಯು 'ಮುಟ್ಟು' ಮತ್ತು 'ಮುಗ್ಗು' ಎಂಬ ಎರಡು ರೂಪಗಳನ್ನೂ ಉಪಯೋಗಿಸಿರುವುದನ್ನು ಮೇಲೆ ಕೊಟ್ಟಿರುವ ಪ್ರಯೋಗಗಳಲ್ಲಿ ಕಾಣಬಹುದು. ಒಬ್ಬನೇ ಕವಿ ಎರಡು ರೂಪಗಳನ್ನೂ ಉಪ ಯೋಗಿಸಿರುವನೇ ಎಂಬುದು ಪರಿಶೀಲನಾರ್ಹ. **ಮುರ್ಗು** : ೫. ತೀವಿದ ಭಂಡದಿನೊಪ್ಪುವ ನಾವೆ ಮರುದ್ವಾತದಿಂದ ಮುರ್ಗಿದುದಾಗಳ್ (ಬಿಂಹಂ. ೪-೦೩). ೧೦. ತೆರಳ್ದೋಡಿ ಪೋದಂ ಮರುಭೂಪಂ ಮೂಳಮಂ ಮುರ್ಗ್ಗಿದನತಿಭಯದಿಂ (ಶಾಇಇ. IX—i ೦೦೮-೦೯; 1057). ೧೩. ಪೊಯ್ಕೆ ಪೊರಳ್ಚಿ ತುತ್ತಿ . . . ಕೊಳ್ಗುದಿ ಮುಳ್ಗುದಿಗೊಂಡು ಮುರ್ಗ್ರ [ಪಾಠಾಂ. ಗ್ಗು]ವರ್ (ಅನಂತಪು. ೯-೪೦). **ಮುಳ್ಗು** : ೫. ಆರ್ಯೋ ಸಂಸಾರ ಸಂಗಕ್ಕಜೀಯದೆಜಿಗಿದೆಂ ಮುಳ್ಗಿದೆಂ (ರಕ್ಷಾಶ. ೨೩). ೮. ರಾಜಶೇಖರಂ . . . ಆ ಸತ್ಯೇಂದ್ರಚೋಳೇಂದ್ರಸತ್ಪದಪದ್ಮಕ್ಕೆ ಮುರಂದಮಂ ಪಡೆದು ಮೌಳಿದ್ಯೋತಿಯಿಂ ಮು[ಪಾಠಾಂ. ಮೊ]ಳ್ಗಿದಂ (ರಾಜಶೇ. ೪-೦೦೩).

**ಮುಟ್ಟಿ ಪೋಗು, ಮುಗ್ಗಿ ಹೋಗು, ಮುರ್ಗಿ ಪೋಗು** = ೧. ಸಾಯು ; ಅಳಿ ; ಗತಿಸು : ಜನಿತ ನಿದಾಘದುಗ್ರತರತಾಪದಳುರ್ಕೆಯೊಳೆಯ್ದೆ . . . ತವೆ ಮುಟ್ಟಿ ಪೋದ ಶಫರಾದಿ ಪಯಸ್ಚರ ಜಂತುಜಾಲ ಜೀವನದೊಡನಾಗಳಂತೆ ಗತಜೀವನವಾಯ್ತು ಸರೋವರೋತ್ಕರಂ (ಕುಸುಮಾ. ೬-೦೫೦); ಇದು . . . ಬ್ಯಾಳಕಕೇಸಿಮುಯ್ದು ವಿಜಯಪ್ರಾರಂಭ ದೊಳ್ಮುರ್ಗಿಪೋದದಟಕ್ಷ್ಮಾಪನಿಕಾಯಪುಚ್ಚಿಕಚಯಂ (ಎಕ. VII. ಶಿಕಾಂ. ೬೨-೨೪; 1168). ೨. ಅಡಗು : ಆರಿಹೋಗು : ದೇವ ಮನದ ವಿಕಾರ ವೆಂಬ ಚಂಡಮಾರುತ ಪೊಕ್ಕು ಸತ್ವ . . . ಸತ್ಕೃತ್ಯವೆಂಬ ದೀಪಗಳು ಮುಗ್ಗಿ ಹೋದವು (ಸ್ತೋತ್ರಿಕಾಂ. ೦೩).

[ದೇ.▮ ತಮಿ. ಮುಟಿಕು, ಮುಟಿಕ್ಕು, ಮುಜಿಙ್ಕು, ಮುಕ್ಕು; ಮಲ. ಮುಙ್ಙು ಕ; ತುಳು. ಮುರ್ಗ್; ತೆಲು. ಮುಗ್ಗು, ಮುಕ್ಕು, ಮ್ರಕ್ಕು, ಮ್ರುಗ್ಗು; ಮಲ್ತೊ. ಮುರ್ಗೆ]

**ಮುಟ್ಟಿವುರ, ಮುಟ್ಟಿವೂರ** (ನಾ). ಒಂದು ಸ್ಥಳದ ಹೆಸರು : ಮುಟ್ಟಿವುರಾ ಊರಟಿವಿನೊಳ್ ಇಜಿದು ಸತ್ತು ಸ್ವರ್ಗಾಲಯಕೇಜಿದೊರ್ (ಎಇ. VI, ೦೬೦-೩; 765). **ಮುಟ್ಟಿವೂತ** : ಮುಟ್ಟಿವೂರದಪೆಮ್ಮಾಡಿಗಾಮುಣ್ಡನುಂ (ಎಇ. VIII. ೫೬-೦೫; 1000). [? + ಪುರ₂]

**ಮುಟ್ಟಿವೂರ** 'ಮುಟ್ಟಿವುರ' ನೋ.

**ಮುಟ್ಟಿ₁, ಮುತ್ತಿ₁, ಮುಳ್ತಿ** (ನಾ). ಒಂದು ಬಗೆಯ ಮರ: ಅರ್ಜುನ ವೃಕ್ಷ : "ಮುಟ್ಟಿಯೆಂದರ್ಜುನಂ" (ಕಶಾ. ೫೦-೭೫) ; ಶ್ರೀ ಪುರುಷ ನಾಯಿಗಗೆ ಪಟ್ಟಂಗಟ್ಟಿ ಕೊಟ್ಟ ಕಟನಿಲಿ ಮುಟ್ಟಿಯೆನ್ನಂಕ ಬಿಟ್ಟಂ ಮೂವತ್ತುಗುಳ ಅಯ್ದುಳ ಪಾಟುಂ (ಎಕ. IX. ಹೊಸಕೋ. ೮೬-೯ ; ಸು. 720) ; ಬೇರ್ಕೊಟಿದ ಮುಟ್ಟಿಯಂ ನೀಂ ಕಿಟ್ಟಿ . . . ಮುದುಗಟ್ಟಿ ಯನಿಟ್ಟು ಕೆಡಪಿದ್ದೈ ಬಲ್ಲಿದನೈ (ಜಗದ. ೦೭-೯೩); ಮುಟ್ಟಿಯ ಮುಟ್ಟಿಗ ದರಳಿಯ ಸವುದೆಗಳನಳತೆಯೊಳ್ ಕೊಯ್ದಿರ್ಪನಾರಿಂ ತಲೆಪೊಜಿಗಟ್ಟ ತರ್ಪ ಮಟುಗಳಿಂದೆಯುಂ . . . ಪುಣ್ಯಾಶ್ರಮಂ ಮನೋಹರಮಾಯ್ತು (ರಾಮಾಶ್ವ. ೪೩-೦೫). **ಮುತ್ತಿ₁** : "ಅರ್ಜುನಃ, ಕಕುಭಃ — ಈ ೨ ಮುತ್ತಿ" (ಹಲಾಯು. ೩೨-೪೨); ಕರ್ಪೂರತರುವ್ರಾತಂಗಳೊಳ್ಮುತ್ತಿ . . . ಚೆಂಪೊಂ ಗಳೊಳ್ಕೆರೆದಿರ್ಪಂತಿರೆ ಕರ್ಬುನಂ ಸಕಲಭೂಮಾರೀಶರೊಳ್ಕೆಳಿಗಳ್ ಇರ್ಪಂ ತಿರ್ದು (ಧರ್ಮಾಮೃ. ೭-೨೨೦) ; ಮುತ್ತಿಯೋ ಹೇಳೆನ್ನ ದುಃಖಿಕೆ ಮುತ್ತೆ ಪರಿಹರ ವಾವುದೋ (ಬಸವ. ೪೩-೩೮) ; ಮುತ್ತಿಯ ಮುರನಲೂ ನಟ್ಟ ಮಾಮುನ ಮುದ್ರೆಯ ಕಲ್ಲು ೧ (ಎಕ. VIII, ತೀರ್ಥಹ. ೦೯೦-೯೨ ; 1407); ಮುತ್ತಿ ಮೊಳಗರನೆಲ್ಲಿ . . . ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೊರಾ. ೩-೦-೨೭). **ಮುಳ್ತಿ** : ಮುಳ್ತುಗ ಮುಳ್ತಿ ಕಜ್ಜುರ ಕಕ್ಕೆ . . . ಬೆಳೆದಿರಲಾ

ಬಿಂಜಂ ಭೀಕರತರವಮಾಯ್ತು (ಜಯನಾ. ೧೩-೨೪); ಮಚ್ಚಿ ವನಸಂಪಗೆ ಸಂಪಗೆ ಬಿಕ್ಕೆ ಕಕ್ಕೆ (ಶ್ರೀಪುರಾ. ೦-೪೭).

**[ದೇ.॥ ತಮಿ.** ಮಲ. ಮರುತು ; **ತುಳು.** ಮಚ್ಚಿ ; **ತೆಲು.** ಮಚ್ಚ ; **ಕೋಲಾ. ನಾಯ್ಕಿ.** ಮಚ್ಚಿ; **ಗೊಂಡಿ.** ಕು೯. ಮರ್ದೀ]

**ಮಚ್ಚಿ₂,** ಮಚ್ಚೆ₂ (ನಾ). ಹುಟ್ಟಿನಿಂದಲೇ ಮೈಮೇಲಿರುವ ಕಪ್ಪು, ಬಿಳಿ, ಕೆಂಪು ಮುಂತಾದ ಗುರುತು, – ಮಚ್ಚೆ : ಸರವುಲಿ ಕಾರೆಳ್ಮಚ್ಚಿ . . . ಬಲದೊಳ್ ಪುರುಷಂಗೆಡದೊಳ್ ಲಲನೆಗೆ ಸಮನಿಸಿದೊಡಿಪ್ಪ ಫಲಮಂ ಕುಡುಗುಂ (ಲೋಕೋಪ. ೧೦-೬೪). **ಮಚ್ಚೆ₂ :** ನಿನ್ನ ಮೊಲೆ ಗೆಲದೊಳ್ ಚಿನ್ನದಗಲದ ಪೊನ್ನ ಬಣ್ಣದ ಮಚ್ಚೆ ಮಚ್ಚೆನಿಸದೆ ಮೂಡಿದುದು (ಅರ್ಥಸೇ. ೨-೩ ಪ); ಬಿಮ್ಮಡಿ ಬಳಿಯ ಮಚ್ಚೆಯಿದ್ದರೆ ಸೌಭಾಗ್ಯವಂತನಾಗುವನು (ಸಾಗಂಧಿ. ೬೪೯-೦೪); ಹೆಗಲಿನ ಬಳಿಯಲ್ಲಿ ಗುಂಡಗಿರುವ ಕರಿಯ ಮಚ್ಚೆಯೊಂದಿತ್ತು (ಶ್ಯಗಂಪ. ೦೦೦). 'ಮಚ್ಚೆ₁' ಪರಾ.

**[ದೇ.॥ ಕೋತ.** ಮಾಶ್; **ತೊದ.** ಮಶ್ತ್]

**ಮಚ್ಚಿಕಾಲ್?** (ನಾ). ಒಂದು ಕಾಲುವೆಯ ಹೆಸರು ; ಮಚ್ಚಿ ಮರಗಳ ಬಳಿಯ ಕಾಲುವೆ (?) : ಅವರ್ಕ್ಕಿಯಾತುಕೂರೊಳ್ ಚಲ್ಲೇಶ್ವರದ ಮುನ್ದೆ ಕಲ್ಲನ್ನಡಿಸಿ ಪಿರಿಯ ಕೆಱೆಯ ಕೆಳಗೆ ಮಚ್ಚಿಕಾಲಙ್ಗ ಳೊಳಕ್ಕರ್ಣ್ಣಙ್ಗ ಮಣ್ಣ ಕೊಟ್ಟರ್ (ಎಕ. VII (R), ಮದ್ದೂರು. ೪೨-೦೨; 950). [ ಮಚ್ಚಿ₁ ? + ಕಾಲ್₂ ]

**ಮಟ್ಟೂರ್** 'ಮಟ್ಟೂರ್' ನೋ.

**ಮಟ್ಟಿ** (ನಾ). ಒಬ್ಬಾತನ ಹೆಸರು : ಮಟ್ಟಿಂ ತನ್ನ ಭಾಗಮುಂ ಕುಡೆ (ಎಇ. VII, ೨೦೩-೦೩; 874). 'ಮಟ್ಟಿಯ್ಯ' ಪರಾ. [ ? ]

**ಮಟ್ಟಿಯ್ಯ** (ನಾ). ಒಬ್ಬಾತನ ಹೆಸರು : × × × ಲ್ಲಹ ಜೋಚಿನ ಮೇಲೆಟ್ಟಿಯ್ಯನ ಮಕ್ಕಳ್ ಮಟ್ಟಿಯ್ಯನು ಬೆಸೆಗೆಯ್ದೊ (ಎಕ. IX, ಹೊಸಕೋ. ೭೩-೩; ಸು. 750). [ ಮಟ್ಟಿ + ಅಯ್ಯ₄₁ ]

**ಮಟ್ಟೂರ್,** ಮದ್ದೂರು, ಮದರ್ೂರ್, ಮಟ್ಟೂರ್ (ನಾ). ಒಂದು ಊರಿನ ಹೆಸರು ; ಕರ್ನಾಟಕದಲ್ಲಿ ಈ ಹೆಸರಿನ ಅನೇಕ ಊರುಗಳಿವೆ : ಶ್ರಾವಣಮಾಸದ ಸುದ್ದದಶಮಿಸೋಮವಾರದನ್ದು ಮಟ್ಟೂರ ಸಾಯಿರಒಬ್ಬುರ್ಬ್ಬರುಂ ಪೊಲ್ಲಯ್ಯನ ಮಾಡಿಸಿದ ದೇಗುಲಕ್ಕೆ ಕೊಟ್ಟ ಮಣ್ (ಎಕ. IV (R), ಎಸಂಡೂ. ೯೦-೨; 982). **ಮದ್ದೂರು :** ಮದ್ದೂರ ಸುಭಟರು ಮಾರ್ಗವ ಕಟ್ಟಿಕೊಂಡುದ್ಧತವಿಳರ ಮಾರ್ಬಲವ ಹೊದ್ದಿಯಿರಿದು (ಕೆಂಪಪ. ೦೩-೩೭). **ಮದರ್ೂರ್ :** ಕಸುಗೊಳ ಮೊಡೆಯ ಮಹಾಜನಕ್ಕೆ ಪೆರ್ವ್ವಟ್ಟಿಯೂರುಂ ಮಧ್ವರ್ರುಮುಂ ಬ್ರಹ್ಮದೇಯಂ ಪೊಯ್ದುದು (ಎಕ. III (R), ಹಗ್ಗಡ. ೯೦-೨೦; ಸು. 750). **ಮಟ್ಟೂರ್ :** ಪಾರ್ವಲ್ಲಿಣ್ಣರಾರಿದವರ್ಮಟ್ಟೂರರೊ ದಾಳ್ವಾಯಿಗ ಪೆರ್ವಾಣರ್ಪಾ × × × ದರ್ಕುವಿಲವಾಣಿಗಮ್ಮೊರಿದರೀ ಸಿಲರ್ಕೊಂಟೆಯ ತಿನವಕಟ್ಟಿ × × × (ಎಕ. III (R), ಹಗ್ಗಡ. ೦೦೨-೩; ಸು. ೯ನೆಯ ಶಕ). [ ? + ಊರ್ ]

**ಮಾ₁** (ನಾ). ಆನೆ : ಹಸ್ತಿ : 'ಮಾವಟಿಗ' ಪರಾ. [ದೇ.॥ ತಮಿ. ಮಾ]

**ಮಾ₂** (ನಾ). ಕೊಂಡಾಟದ ಅಥವಾ ಆಶ್ಚರ್ಯಸೂಚಕವಾದ ಒಂದು ಮಾತು : "ಅರರೇ . . . ಭಲರೇ ಲೇಸು ಜಾಗು ಮಾ ಧಣು ಧಿರುರೇ ಪುರೆಯೆನೆ ಕೊಂಡಾಟಂ" (ತಕಾಪಿ. ೩೩).

**ಮಾಮಾ₁** (ದ್ವಿರುಕ್ತಿ): ತನ್ನುವನಿತ್ತ ಮಹಾತ್ಮ ಜನವಂಗನಿತಜೀಗೊಳು ಪ್ರಭು ಮೆಚ್ಚಿ ಮಾಮಾಯೆನುತ . . . ಕೀರ್ತಿಸಲು (ಎಸಕೃ. ೯-೦೭); ಮಾಮಾ ರಾಮ ರಣಗಲಿ ಭೀಮ ಭಾಪು (ತೊರರಾ. ೬-೨೬-೦೩).

[< ಅಪಮಾ. / ತಮಿ. ಮಲ. ತೆಲು. ಮಾ]

**ಮಾ₃** 'ಮಾಂ' ನೋ.

**ಮಾ₄** (ಗು). ೧. ದೊಡ್ಡ ; ಹಿರಿಯ : 'ಮಾಗಡಲು' ಪರಾ. ೨. ಶ್ರೇಷ್ಠವಾದ ; ಮಹತ್ತಾದ : ಸುವನಿಸುವುದೆಲ್ಲ ಶಬ್ದಕ್ಕೆ ವಿಕಲ್ಪದೆ ದೀರ್ಘವಿಧಿ ಮಹಚ್ಛಬ್ದಕ್ಕದ್ದವಿಕಂ ಮಾದೇಶಂ ದೋಷವಿಲ್ಲ ಸಂಸ್ಕೃತಪದಂ ಪರಕ್ಕೊದವಲೊಡಂ (ಶಮದ. ೧೭೩). 'ಮಾತಾಯಿ' ಪರಾ.

**ಮಾಮಾ₂** (ದ್ವಿರುಕ್ತಿ) : ಮಾಮಾ ಕರ್ಮವ ಮಾಡಿದ ಮನುಜಗೆ ಕಾಣಿಸೆನುವಿಯೇನು ನೀ ಮಾಡಿಸಿದರೆ ಮಾಡಿದೆನಲ್ಲದೆ ನನಗಿಲ್ಲಿತ್ತೇನು ? (ಸಪಲ್ಲ. ೩೦-೦೦). [ < ಮಹಾ ]

**ಮಾ₅** (ನಾ). ೧. ತಾಯಿ ; ಜನನಿ. ೨. ಸಂಪತ್ತಿನ ಅಧಿದೇವತೆ ; ಲಕ್ಷ್ಮಿ : "ಲಕ್ಷ್ಮೀಃ, ಶ್ರೀಃ . . . ಮಾ, ಇಂದಿರಾ . . . ಈ ೯ ಲಕ್ಷ್ಮಿಯ ಪೆಸರು" (ಹಲಾಯು. ೬-೩೨). 'ಮಾಕುವರ' ಪರಾ. [ಸಂ.]

**ಮಾ₆** (ಅ). ಬೇಡವೆಂಬುದನ್ನು ಸೂಚಿಸುವ ಒಂದು ಅವ್ಯಯ : "ಮಾ — ಬೇಡೆಂಬವ್ಯಯಂ" (ಕಾಶಕ್ಕ. ೦೨೬) ; ಮುನಿಮಯ್ಯ ಜವಂಗಂ ಮಾಯೆನಲಮ್ಮುವರಿಲ್ಲ (ಅಜಪು. ೨-೫೭) ; ನಿರ್ದೋಷನವನೆಂಬ ಮೂಕ ಸಾಕ್ಷಿಯೊ ಏನಲು ನೆತ್ತರೊಡಮೂಡಿದೊಡಮವನೊಂದು ಮಾತನೆತ್ತಿಲ್ಲ ! ಮಾ ಎಂದಿಲ್ಲ ! (ಗೂರಕ್ತ್ರಾ. ೯-೨೫೦). [ಸಂ.]

**ಮಾಂ,** ಮಾ₃ (ಸಪೂರೂ). 'ಮಾವು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಮಾಂಗಾಯಿ', 'ಮಾಂದಳಿರ್' ಪರಾ. **ಮಾ₃ :** 'ಮಾಮರ' ಪರಾ.

**ಮಾಂಕರಣೆ** (ನಾ). ತಿರಸ್ಕಾರ ಮಾಡುವಿಕೆ ; ಉಪೇಕ್ಷೆ ; ಅವಜ್ಞೆ : ಅಂಕಂಗಾಱನ ಗಂಡುತನಂ ಕೂರಿತೆ ತುಮುಲಯುದ್ಧದೊಳ್ ಪಟುಭಟರಂ ನೂಂಕುವ ಸಮರಂಗಾಱನ ಮಾಂಕರಣೆಯೆ ಗಂಡುತನದ ತಿರುಳೆನೆವೇಟ್ಟುಂ (ಕಬ್ಬಾಪ. ೩೭೪ ವ್ಯಾಖ್ಯಾ). [< ಮಾ₆ + < ಕರಣ]

**ಮಾಂಕರಿಸು,** ಮಾಕರಿಸು (ಕ್ರಿ). ೧. ತಿರಸ್ಕರಿಸು ; ಅವಹೇಳನ ಮಾಡು ; ಕಡೆಗಣಿಸು : "ಮಾಂಕರಿಸು (ಮಾಕರಿಸು) — ಅವಜ್ಞಾಯಾಂ (ಅಲ್ಲಗಳೆ)" (ಕಮರಾ) ; ಸಿರಿಸದ ಬಾಸಿಗವಂ ಮಾಂಕರಿಸುವ ನಳಿತೋಳ ಪಿಂಡುಗಂಕಣದ ಸರಂ ಮೊರೆವಳಿಗಳ ಸರಮಂ ಚಪ್ಪರಿಸುವಿನಂ ಚೆನ್ನೆ ಪೊನ್ನೆಯರಲಂ ಕೊಯ್ದಳ್ (ಅದಿಪು. ೦೦-೦೦೨ ಅಡಕಲ್ಪ) ; ಸಿದ್ಧವಿದ್ಯಾಧರ ದಿವಿಜಕುಮಾರ್ಕಳಂ ಚೆಲ್ವಿನಿಂ ಮಾಂಕರಿಸುತ್ತುಂ ಬಂದನಾಸಾದಿತನಿರುಪಮ ಶೃಂಗಾರಸಾರಂ ಕುಮಾರಂ (ಶಂದ್ರಪ್ರಪು. ೬-೭೦) ; ಬಾಳೆಗಂಬಮಂ ಮಾರ್ಕರಿಸುತ್ತೆ ತೋರ್ಪ ತೊಡೆ ಮೆಲ್ಲಡಿ ರಂಜಿಕುಮಾ ಕುಮಾರನಾ (ರಾಜಶೇ. ೯-೯೭). **ಮಾಕರಿಸು :** ೧. ಸೊಕ್ಕಿ ಮಾಕರಿಸುತ್ತಿರ್ಪ್ಪ ಮದಾಂಧ ನಪ್ಪ ಖಳನಾಯುರ್ದ್ದಿರ್ಪವಮಂ ತನ ಚಾಪುರದಿಂ ತೊಟ್ಟಗೆ ನಂದೆ ಬೀಸಿ ಕಳೆವಳು (ಶಾಸಪ. ೩೩-೩೦ ; 1178) ; ಹೀಗೆ ಗಂಡ ಹೆಂಡಿರಿಬ್ಬರೂ ಒಬ್ಬರನ್ನು ಒಬ್ಬರು ಮಾಕರಿಸಿ ಮಾತನಾಡುತಾ ಇರುವಾಗ (ಮುಸುಗ. ೦೫೦) ; ಲೋಕವ ನಚ್ಚದ ಮುನಿಯಿವನೆಂದು ಮಾಕರಿಸದಿರಲೆ ದಾರಿಗ ನೊಂದು (ನಕ್ಕಿ. ೭೩-೦೦). ೨. ಅಲ್ಲವೆಂದು ಹೇಳು : ಆಕಾರ ನಿರಾಕಾರ ಸ್ವರೂಪತ ತಾನಾಗಿ ಮಾಕರಿಸುವನಲ್ಲ ಮನದಿಚ್ಛೆಗೆ (ಕೂಷ್ಣಸಂ. ೦೦೩-೩). ೩, ಉದ್ಧಟತನದಿಂದ ವರ್ತಿಸು ; ಗರ್ವಿಸು ; ಬೀಗು : ಕೂರಸಿಯಿಂದೆ ಕೊಂಕಿ ಝುಂಕಿಸುವ ಕುಮಾರಿ ಮಾಂಕರಿಪ ಪೂತನಿ ಹೂಂಕೃತಿಗೆಯ್ವ ಭೈರವಂ (ಶಾರ್ಕ್ಕಸ್ಯ. ೦೩-೦೦೩). [ಮಾಂಕರಣೆ + – ಇಸು₃]

**ಮಾಂಕೊಳ್** (ಕ್ರಿ). ೧. ಬೇಡವೆನ್ನು : ತಡೆ : ಸುರತಸಂಭ್ರಮದ ಲೀಲಾವಿನೋದದ ಬಗೆಯ ಹೇಳಲಂಜುವೆನಯ್ಯ ಹೇಳ್ವೆವೆ ನೀನು ಮಾಂಕೊಳದಿರಯ್ಯ (ಭಸವ. ೩೩-೬೨). ೨. ಎದುರಿಸು : ಅಂಕಿಸಿ ನೋಡದಿನ್ನೋರೆಮೋಜಿಯೊಳಿಪ್ಪೆ ಮಾಂಕೊಂಡು ಜಯಿಸೆಂದಳವಳು ಕೊಂಕುಮೋಜಿಯ ಪೆಣ್ಣೊಳಾನು ನುಡಿವನಲ್ಲ ಕುಂಕುಮವರ್ಣೆ ಕೇಳೆಂದ (ಭರತ. ೦೪-೦೦೭). [< ಮಾ₆ + ಕೊಳ್₁]

**ಮಾಂಗದಿರ್** (ನಾ). ಮಾವಿನ ಚಿಗುರು : ಮಾಂಗದಿರ್, ಮಾಂಗೊನರ್, ಮಾಂಜಿಳೆ, ಮಾಂಜೊಂಪಂ (ಶಬ್ದಾನು. ೩೯೯ ವ್ಯಾಖ್ಯಾ).

[ಮಾಂ (< ಮಾವು) + ಕದಿರ್$_1$]

**ಮಾಂಗಲಿಕ**, ಮಾಂಗಳಿಕ (ಗು). ೧. ಮಂಗಳವನ್ನು ಸೂಚಿಸುವ ; ಶುಭಕರವಾದ : ಮಾಂಗಲಿಕಕರ್ಮಾಭಿಯೋಗಕುಲಾಂಗನಾರತಿಯಾತ್ಮ ಚಿಂತೆ ಪರಾಂಗನಾಪ್ರೈಮುಖ್ಯವಿವು ಸದ್ಧರ್ಮಗತಿ (ಕುವ್ಯಾಕ. ೦೩-೦೩). **ಮಾಂಗಳಿಕ** : (ನಾ). ೨. ಮಂಗಳಕರವಾದ ಶ್ಲೋಕ,-ಗೀತೆ : ಪುಣ್ಯಪಾಠಕರ ಮಾಂಗಳಿಕಪಠನಪಟುರವಂಬೆರಸು . . . ವಧೂವರರ್ ನಡೆತಂದರ್ (ಅನಂಪು. ೬-೫೩ ವ) ; ಪಾಡುವ ಮಾಂಗಳಿಕದ ಆಡುವ ನರ್ತನದ . . . ಸೂಟ್ಟಿಡೆಪ ಕಹಳೆಗಳ ಕೋಳಾಹಳವೆಸೆಯೆ (ಅನಂಪು. ೯-೫೯ ವ). [ಸಂ.]

**ಮಾಂಗಲ್ಯ**, ಮಾಂಗಳ್ಯ (ಗು). ೧. ಮಂಗಳಕರವಾದ ; ಶ್ರೇಯಸ್ಕರವಾದ. (ನಾ). ೨. ಮಂಗಳಕರವಾದುದು; ಶುಭ; ಒಳಿತು: ಸಾಧು ಪದಂಗಳ್ ಸಮಗೀಗೆ ಸಾಧುಪದಮುಂ ಕೈವಲ್ಯಮಾಂಗಲ್ಯಮುಂ (ಶಂಬಾಪು. ೧-೩) : ರಾಮನನ್ನಲ್ಲು. ಕೇಳ್ ಕೈಕೆ, ನೀನಡವಿಗಟ್ಟುತಿಹೆ ನಿನ್ನ ಮಾಂಗಲ್ಯಮಂ (ತೊರವೆರಾ. ೭೧-೯೩೮). ೩. ಮಂಗಳಕರವಾದ ಕೆಲಸ ; ಶುಭಕಾರ್ಯ : ಅರಸಿಯರು ದೂರ್ವಾಕ್ಷತೆಯ ದಧಿವಿರಚಿತದ ಮಾಂಗಲ್ಯವನು ವಿಸ್ತರಿಸೆ ಬಹುವಿಧವಾದ್ಯದಲಿ ಹೊಙಿಪಂಟರರಮನೆಯ (ಕುವ್ಯಾಸ.೩-೦೩). ೪. ವಿವಾಹಸಮಯದಲ್ಲಿ ವರನು ವಧುವಿನ ಕೊರಳಿಗೆ ಕಟ್ಟುವ ಮಂಗಳಕರವಾದ ಚಿನ್ನದ ಬೊಟ್ಟು ; ತಾಳಿ : ಅವರು ಮಾಂಗಲ್ಯವನ್ನು ಮಾತ್ರ ಕಟ್ಟಿರಲಿಲ್ಲ (ಜೂರಸ. ೨೬೩) : ರಾಧಾಬಾಯಿ ಹಾರವನ್ನು ಹರಿದು ಅವನ ಮುಖದ ಮೇಲೆ ಎಸೆದಳು, ಕರಿಮಣಿ ಹರಿದು ಮಾಂಗಲ್ಯ ಕೆಳಗೆ ಬಿತ್ತು ! (ಪೇಮಾಕೂ. ೩೩). **ಮಾಂಗಳ್ಯ** : ೧. ದಿಗ್ಭಾಗಂ ಮಾಂಗಳ್ಯತೂರ್ಯಸ್ವನದೊಳೆ ಬಧಿರೀಭೂತಮಪ್ಪನ್ನೆಗಂ ಪೌತ್ರೀಗಳ್ ಬರ್ಕೆಂಬುದುಂ . . . ಜ್ಯೋತಿಃಪ್ರಭಾಕನ್ನಿಕೆ ಮಸಕದೆ ಕೊಲ್ವಾನೆ ಬರ್ಪಂತೆ ಬಂದಳ್ (ಶಾಂತಿಪು. ೫-೯೭). [ಸಂ.]

**ಮಾಂಗಲ್ಯಕ** (ನಾ). ಒಂದು ಬಗೆಯ ದ್ವಿದಳಧಾನ್ಯ : ಕಡಲೆ : "ಮಾಂಗಲ್ಯಕಃ, ಮಸೂರಃ— ಈ ೨ ಚಣಗ" (ಹಲಾಯು. ೯೫-೪೨೭). [ಸಂ.]

**ಮಾಂಗಲ್ಯಕೈಶಿಕಿ** (ನಾ). [ಸಂಗೀತ] ಒಂದು ರಾಗದ ಹೆಸರು : ಛಾಯಾಗೌಳ, ನಂತರ ಮಾಂಗಲ್ಯಕೈಶಿಕೀ, ಮೇಘರಂಜನೀ, ಗುಮ್ಮಕಾಂಭೋಜಿ (ತತುತ್ರ. ೦೨೯). [ಸಂ. ಮಾಂಗಲ್ಯಕೈಶಿಕೀ]

**ಮಾಂಗಲ್ಯಗೇಯ** (ನಾ). ಮಂಗಳಗೀತೆ : ಮಾಂಗಲ್ಯಗೇಯಧ್ವನಿಯಿಂ ದಾಶಾಂತರಂ ಘೂರ್ಣಿಸಿ ಸೊಗಯಿಸೆ. . . ಅಂಗಂಗಾಯ್ತು ರಾಜ್ಯಾಭಿಷೇಕಂ (ಪುಂಶಶಾ. ೧೪-೨೬). [ಸಂ.]

**ಮಾಂಗಲ್ಯಮಜ್ಜನ** (ನಾ). ಶುಭಕಾರ್ಯಕ್ಕಾಗಿ ವಿಧಿಪೂರ್ವಕವಾಗಿ ಮಾಡುವ ಸ್ನಾನ : ಮಂಗಳಸ್ನಾನ : ಅರಿವಿದಾರರು ಮಾಡಿದರು ಮಾಂಗಲ್ಯಮಜ್ಜನವ (ಕುವ್ಯಾವಿ. ೧೦-೪). [ಸಂ.]

**ಮಾಂಗಲ್ಯಸೂಕ್ತ** (ನಾ). ಮಂಗಳಕರವಾದ ಸ್ತೋತ್ರ ; ಶುಭಪ್ರದವಾದ ಮಂತ್ರ : ಒಡನೆ ಮಂಟಣಿಸಿದರು ವಿಪ್ರರು ತೊಡಗಿದರು ಮಾಂಗಲ್ಯಸೂಕ್ತವ ಅಡಕಿದರು ಪಡಿಚರರು ಕುಶಸಮಿಧೆಗಳ ಹೊರೆಗಳನು (ಜೈಶಿರಾ. ೦-೭೦) ; ಮಾಂಗಲ್ಯಸೂಕ್ತಗಳನ್ನು ಹೇಳುವ ಬ್ರಾಹ್ಮಣರಿಂದಲೂ ಮನೋಹರವಾಗಿದ್ದ ಅಯೋಧ್ಯಾಪಟ್ಟಣವನ್ನು ಕಂಡು ಮಂಥರೆಯು ಆಶ್ಚರ್ಯಪಟ್ಟು . . . ಕೇಳಿದಳು (ಕಗಾಬಿ. ೭೨ ಶಾಮರಾಜೋಕ್ತಿವಿಲಾಸ). [ಸಂ.]

**ಮಾಂಗಲ್ಯಸೂತ್ರ** (ನಾ). ತಾಳಿ ಮತ್ತು ಕರಿಮಣಿಗಳನ್ನು ಪೋಣಿಸಿದ ನೂಲು,- ಎಳೆ ; ಮಂಗಳಸೂತ್ರ : ಮುಹೂರ್ತದ ದಿವಸ ಬೆಳಗ್ಗೆ ಸುಂದರಿಯ ಕೊರಳಲ್ಲಿ ಮಾಂಗಲ್ಯಸೂತ್ರವು ಅಲಂಕೃತವಾಯಿತು (ಸುಂದರಿ. ೩). [ಸಂ.]

**ಮಾಂಗಳಿಕ** 'ಮಾಂಗಲಿಕ' ನೋ.

**ಮಾಂಗಳ್ಯ** 'ಮಾಂಗಲ್ಯ' ನೋ.

**ಮಾಂಗಾಯ್**. ಮಾಂಗಾಯಿ, ಮಾಗಾಯ್. ಮಾಗಾಯಿ (ನಾ). ೧. ಮಾವಿನಕಾಯಿ : ಶೃಂಗಾರನದಿಯನೆಳವೆಱೆ ಮಾಂಗಾಯನೆ ಮಱಿಸಿ ಪೇಟಿವೇಟ್ಟುದೆ ರಸಭಾವಂಗಳನಾಗಮುಮಂ (ಅಜಿಪು. ೧-೯೨) ; ಕಂಪುದೀವಿದ ಪೂಮಂ ಮಾಂಗಾಯುಂ . . . ಪಣ್ತ ದಾಳಿಂಬಗಳನೊಲವಿನಿಂ ತೋಂಟಿಗಂ ಕೊಟ್ಟನೊರ್ವಂ (ಕಬ್ಬಿಗ. ೬೬). ೨. ಮಾವಿನಕಾಯಿಯ ಆಕಾರದ ಚಿನ್ನದ ಆಭರಣ ಅಥವಾ ಅಲಂಕಾರಸಾಧನ : ಬಳಸಿದ ಚೆಂಬೊನ್ನ ಮಾಂಗಾಯ ಗೊಂಚಲ್ಗಳ ಪೊಂದಳಿರ ತೊಂಗಲ್ಗಳ ಸುತ್ತುಂಗೊಂಡ ಸುರಿಗೆಯ ಮುತ್ತಿನ ಬುಂಭುಕಂಗಳ ನಡುವೆ (ಅಜಿಪು.೯-೦೩ ವ): ಮಾಂಗಾಯ್ ಕದಪಂ ಚುಂಬಿಸೆ ಪೊಂಗವಡಿಕೆ ನೊಸಲೊಳಲೆಯೆ ಗೆಜ್ಜೆಗಳುಲಿಪಂ ಸಂಗಳಿಸೆ ಚಲನದೊಳ್ ಭವನಾಂಗಣದೊಳ್ ಕಂದನೆಂದು ದಟ್ಟಡಿಯಿಡುವಂ (ಚಂದ್ರಪು. ೩-೯೯) ; ಅಳರೆಲೆಗಳಲುಗೆ ಮಾಂಗಾಯ್ಗಳ್ ಚಳಿಯಿಸೆ ಕಿಂಕಿಣಿಗಳುಲಿಯೆ ಶಿಶು ನಡೆಗಲ್ತಂದು (ಪುಷ್ಪದ. ೦೨-೭೭). **ಮಾಂಗಾಯಿ** : ೧. ಮಂತ್ರಿಗಳ ಮಂತ್ರಕ್ಕೆ ಉದುರುವದೆ ಮಾಂಗಾಯಿ ? ಮಂತ್ರಶಕ್ತಿಯು ದೈವಪಂಚಾಯತ (ನೆರಮು. ೦೯-೦೩). ೨. ತಳೆದ ಸಹಜಚೈದ್ರಕರ್ಣಂಗಳಿಗೆ ಮಣಿ ಮಾಂಗಾಯನಿಟ್ಟಳು ಅಲರೆಲೆಯ ಶಿಖಿಯಲಿ ತೊಡರ್ಚಿ ವಿಮುಕ್ತದೋಷಂಗೆ (ಶಾಲ್ಯಶಾ. ೩೩-೭೫); ಪೊಳೆವ ಪೊಂಗವಡಿಗೆ ಮಾಂಗಾಯಿಯುಡಿಮಣಿ ಪುಲಿಸಿಂಗದುಗುರ್ಪೊನ್ನ ಬಂದಿ (ಶ್ಯಾನಕ. ೩-೦೬೫). **ಮಾಗಾಯ್** : ೧. ಉಪ್ಪು ಸಾಸವೆಯ ಮಾಗಾಯ ನೆಳ್ಳಂಬಟೆಯ . . . ಹುರಿಸಂಡಗೆಯು ಬಾಳಕವನು ತಪ್ಪದೆಲ್ಲಾ ಸಾಧನವನು ಸಂಪರಿಸಿ (ಸಿದ್ಧರಾ. ೬-೫೨). ೨. ಅಭವವಲ್ಲಭೆಯ ಕಿವಿಗೂಡಿದೆವತಿಸಫಲವಾದವೆನುತಂ ಕುಣಿವಂತಾಡುವ ಗಿರಿಜೆಯ ಮೊಗದೊಡನಾಡುವ ಹೊಸ್ನೋಲೆವಿಡಿದು ಹೊಸ ಮಾಗಾಯ್ಗಳ್ (ಗಿಂಶ. ೩-೯೨) : ರೆಕ್ಕೆಮಣಿ ಪುಲಿಯುಗುರ್ ಗೆಜ್ಜೆ ಮಾಗಾಯ್. . . ಪಣೆಯೊಳಿಕ್ಕಿದ ಸುಭಸಿತಮರಳೆಲೆಯೆನಿಪ ಪರಿಪರಿಯ ಬಾಲದೊಡಿಗೆಗಳ ನಾಂತು (ತೆಂಶು. ೫-೩೭). **ಮಾಗಾಯಿ** : ೧. ಒಂದು ಮಡಕೆಯೊಳರ್ಧ ಮಡಕೆ ನೀರಂ ಪೊಯ್ದು . . . ನೀರುಳ್ಳಿ ಮಾ[ಪಾಠಾಂ. ಮಾಂ]ಗಾಯಿ ಹಸಿಯುಲ್ಲಮುಂ ಬೆರಸಿಕೊಂಡು (ಸೂಶಾ. ೩-೩೪). ೨. ಅರಳೆಲೆ ಮಾಗಾಯಿ ಕೊರಳ ಮುತ್ತಿನ ಹಾರ (ಪುರಂದ. ೨-೭೭-೩) ; ಕಳೆವೆತ್ತ ಮುತ್ತಿನ ಕಡಕು ಮಾಗಾಯ ಪಜ್ಜಳಿಪ ಬಜ್ಜರದ ಬಾವುಲಿಯನಿಟ್ಟು (ಗೀತಗೋ. ೭-೨).

[ಮಾಂ (<ಮಾವು) + ಕಾಯ್$_4$]

**ಮಾಂಗಾಯಿ** ' ಮಾಂಗಾಯ್ ' ನೋ.

**ಮಾಂಗುಳೂರ್** (ನಾ). ಒಂದು ಊರಿನ ಹೆಸರು : ಮಾಜ್ಗುಳೂರ್ಮಾರ ದಿವಾರದ ಪಾಪ್ಪರ್ (ಇಆ. XIV, ೨೩೨-೫೩ ; ಸು. ೭ನೆಯ ಶತ).

[ℙ ಇದು 'ಮಂಗಳೂರು' ಎಂಬುದರ ಅಪಲಿಖಿತವಿರಬಹುದು]

**ಮಾಂಗೊನರ್** (ನಾ). ಮಾವಿನ ಚಿಗುರು,-ತಳಿರು : ಮಾಂಗೊನರಂ ನಸುಗರ್ಚಿ ಸೊರ್ಕಿನಿಂ ತನು ದಳವೇಱೆ . . . ಪುಗಲ್ ಪುಗಲೆಂದುದು ಕೋಕಿಲವ್ರಜಂ (ಜಗಾ. ೦೪-೩೬); ವನಪಾಲಂ ಕಾಣ್ಕೆಗೈದಂ ವಿಚಕಿಲದರಲಂ . . . ಮಾಂಗೊನರಂ ಮಾಧೂಫಳಶ್ರೇಣಿಯುಂ (ರಾಶಿ. ೦೦-೨).

[ಮಾಂ (<ಮಾವು) + ಕೊನರ್$_2$]

**ಮಾಂಜರಪಾಟ** ' ಮಾಂಜರಪಾಟು ' ನೋ.

**ಮಾಂಜರಪಾಟು**, ಮಾಂಜರಪಾಟ (ನಾ). ಒಂದು ಬಗೆಯ ಬಟ್ಟೆ : ಅವನ ಮೈಮೇಲೆ ಮಾಂಜರಪಾಟಿನ ಹೊದಿಕೆ (ಮುಂಗಾಪು. ೮೭). **ಮಾಂಜರಪಾಟ** : ನಾನು ಉಟ್ಟ ಈ ದೋತರ ನೋಡಿರಿ. ಇದು ಮಾಂಜರಪಾಟವಲ್ಲ (ನಮಶೀ. ೭೬೦). [← ಮರಾ. ಮಾಂಜರಪಾಟ್. ಮಾಜರ್‌ಪಾಟ್, ಮಾಂದರಪಾಟ್. ಮಾದರಪಾಟ್]

**ಮಾಂಜರಿ** (ನಾ). ಒಂದು ಬಗೆಯ ಮಣ್ಣು : ಹಾಳುಭೂಮಿ, ಮಾಂಜರಿ, ಕೇಸರಿ ಮೊದಲಾದ ಸ್ಥಳಗಳಲ್ಲಿ ಗಿಡಗಳನ್ನು ಹಚ್ಚಬೇಕಾದರೆ ಕೆಂಪುಮಣ್ಣನ್ನು ಹಾಕಿ ಗಿಡಗಳನ್ನು ಹಚ್ಚಬೇಕು (ಕೃಷಿಶ್ರ. ೯೯).
[?./ತುಳು. ಮಂಜೆರ್ = ಬರಡಾದ]

**ಮಾಂಜಿ** (ನಾ). [ಸಂಗೀತ] ಒಂದು ರಾಗದ ಹೆಸರು : ಚಿಂತಾಮಣಿ, ಕಲ್ಗಡ, ಮಾಂಜಿ, ಫರಜು ಮುಂತಾದ ಕಷ್ಟರಾಗಗಳಲ್ಲಿ ಕೃತಿರಚನೆ ಮಾಡಿ ಶಾಸ್ತ್ರಿಗಳು ಆ ರಾಗಗಳ ಸ್ವರೂಪವನ್ನು ಪರಿಚಯ ಮಾಡಿ ಮಾರ್ಗದರ್ಶಕರಾಗಿದ್ದಾರೆ (ಸಂಗೀಕಂ. ೨೯೯) ; ಹಂಬೀರು . . . ಮಾಂಜಿ, ಪೂರ್ವಿ ಎಂಬಿವುಗಳು ದೇಶೀಯರಾಗಗಳು (ಶಕುಶ್ರ. ೧೩೦). [ಸಂ. ಮಾಂಜೀ]

**ಮಾಂಜಿಷ್ಠ** (ನಾ). ಕೆಂಪು ; ಕೆಂಬಣ್ಣ : "ಅರುಣಃ, ಶೋಣಃ, ರಕ್ತಃ, ಮಾಂಜಿಷ್ಠಃ, ಪಾಟಲಃ, (ಅ)ತಾಮ್ರಃ, ಲೋಹಿತಃ—ಈ ೭ ಕೆಂಪು" (ಹಲಾಯು. ೦೨೦–೯೬); ಶ್ವೇತಪೀತಕಪೋತಹರಿತಕೃಷ್ಣಮಾಂಜಿಷ್ಠವೆಂಬ ಷಡು ವರ್ಣವೆಂದೆನ್ನ (ಅವತಂ. ೦೨೨–೩೩೯) ; ಶ್ವೇತಪೀತಂ ಕಪೋತಂ ಹರಿತಂ ವಿಮಲ ನೂತನದ ಮಾಂಜಿಷ್ಠ ಮೊದಲಾದ ವರ್ಣಗಳೊಳೋತು ಮಾಡಿದ ವಿಲಸದಕ್ಷತೆಯು ಶಂಕರಂಗರ್ಪಿಸಲು ಕೋಟಿಫಲವು (ಗುರುಚಾ. ೬–೯). [ಸಂ.]

**ಮಾಂಜಿಸು** 'ಮಾಜಿಸು' ನೋ.

**ಮಾಂಜು₁** 'ಮಾಜು₁' ನೋ.

**ಮಾಂಜು₂** 'ಮಾಜು₂' ನೋ.

**ಮಾಂಚೆಳೆ** (ನಾ). ಮಾವಿನ ಎಳೆಯ ಕೊಂಬೆ : ಮಾಂಚೆಳೆ, ಮಾಂಜೊಂಪಂ (ಶಬ್ದಾಮ. ೩೯೮ ವ್ಯಾಖ್ಯಾ). [ಮಾಂ (< ಮಾವು) + ಸೆಳೆ₄]

**ಮಾಂಜೇಮೂಟ** (ನಾ). ಒಬ್ಬಾತನ ಹೆಸರು : ಮಾಲಗಾಜಿ ಶ್ರೀಮಾಂಜೇಮೂಟ ಇನಿಥೂ ಇರ್ಪ್ಪತೆಯ್ಯು ಮುಮ್ಮೊದಲಾಗೆ [ಯ್ಯಾ] ಡಿ ವೀಸಾಭಾಗಂ ಪುಲ್ಲರು × × (ಕಇ. I. ೩–೦೯; 699). [ ? ]

**ಮಾಂಜೊಂಪ** (ನಾ). ಮಾವಿನ ಗೊಂಚಲು,_ಗುಚ್ಛ : ಮಾಂಚೆಳೆ, ಮಾಂಜೊಂಪಂ (ಶಬ್ದಾಮ. ೩೯೮ ವ್ಯಾಖ್ಯಾ).
[ಮಾಂ (< ಮಾವು) + ಜೊಂಪ₁]

**ಮಾಂಟಬೆಕ್ಕು** 'ಮಟಬೆಕ್ಕು' ನೋ.

**ಮಾಂಟೆ** 'ಮಾಡ₂' ನೋ.

**ಮಾಂಡಲಿಕ**, **ಮಾಂಡಳಿಕ** (ಗು). ೧. ಒಂದು ಪ್ರಾಂತಕ್ಕೆ ಸಂಬಂಧಿಸಿದ. ೨. ಒಂದು ಪ್ರಾಂತವನ್ನು ಆಳುವ. (ನಾ). ೩. ಒಂದು ಪ್ರಾಂತವನ್ನು ಆಳುವವನು ; ಮಂಡಲಿಕ : ವಿಜಯವರ್ಮರಾಜನ ತರುವಾಯದಲ್ಲಿ ಸೇಂದ್ರಕರು ಸುರತಪ್ರಾಂತದಲ್ಲಿ ಚಾಲುಕ್ಯರ ಮಾಂಡಲಿಕರಾಗಿದ್ದರು (ಕರ್ನಾಇ. ೫೦) ; ಚಂದ್ರನೇಂಬ ಒಬ್ಬ ಅರಸನು . . . ಧಾರಾಪುರದ ಪರಮಾರ ಭೋಜರಾಜನ (ಕ್ರಿ.ಶ. ೧೦೦೦–೧೦೫೫) ಮಾಂಡಲಿಕನಾಗಿದ್ದನು (ಶಾಚಿಸ. ೩೦). **ಮಾಂಡಳಿಕ** : ೩. ಸೊಳಂಬರು ಕಾಲಕ್ರಮೇಣ ರಾಷ್ಟ್ರಕೂಟರು, ಕಲ್ಯಾಣಿ ಚಾಳುಕ್ಯರು ಇವರ ಮಾಂಡಳಿಕರಾಗಿಯೂ ಸಹ ಆಳ್ವಿಕೆ ನಡೆಸಿದರು (ಸೋಳಂಬ. ೨೦). [ಸಂ.]

**ಮಾಂಡಲೀಕ**, ಮಾಂಡಳೀಕ (ನಾ). ಮಾಂಡಲಿಕ ೩ : ಕರೆಸಿ ದಾನವ ಮಾಂಡಲೀಕರ ಹರುಷದಿಂದುದುಗೊಜೆಯ್ಯನಿತ್ತನು (ಕೌಶಿಚಾ. ೪೦–೫). **ಮಾಂಡಳೀಕ** : ಕ್ರಿ. ಶ. ೧೦೦೦ ದ ಅನಂತರ ನೊಳಂಬರು ಸಂಪೂರ್ಣವಾಗಿ ತಮ್ಮ ಸ್ವತಂತ್ರ್ಯವನ್ನು ಕಳೆದುಕೊಂಡು ಕಲ್ಯಾಣಿಚಾಳುಕ್ಯರ ಮಾಂಡಳೀಕರಾಗಿ ಆಳುವುದನ್ನು ನಾವು ಕಾಣಬಹುದು (ನೊಳಂಬ. ೩೯).
[< ಸಂ. ಮಾಂಡಲಿಕ]

**ಮಾಂಡಳಿಕ** 'ಮಾಂಡಲಿಕ' ನೋ.

**ಮಾಂಡಳೀಕ** 'ಮಾಂಡಲೀಕ' ನೋ.

**ಮಾಂಡುಕೆ** (ನಾ). ಒಂದು ಬಗೆಯ ಗಿಡ ; ಮಂಜಿಷ್ಠೆ : "ಅದಿತ್ಯಭಕ್ತನುವುದು ಮಾಂಡುಕೆ" (ವಂಗಶಾ. ೩೯–೨೬). [< ಸಂ. ಮಂಡೂಕ]

**ಮಾಂತ₁** (ನಾ). ಮಕಾರದಲ್ಲಿ ಕೊನೆಗೊಳ್ಳುವ ಶಬ್ದ : ಮಾಂತಕ್ಕೆ—ಅಣ್ಮು (ಶಮದ). [ಸಂ.]

**ಮಾಂತ₂** (ನಾ). ೧. ಹಿರಿಯ ; ಪೂಜ್ಯ ; ಮಹಂತ : ರಾಜರು ರಕ್ಕಸ ಮಾಂತರು ಲಾಳಿ ಬಿಲ್ಲೋಜರು ಪೆಟಲಂಬಿನವರು ತೇಜೋಮಯ ಬಾಣ ಗಾಜಿರೇಚಾತು ಖಗರಾಜನೆಚಂಕೆಯಿಕ್ಕೆಲದಿ (ಪೋಚಕ. ೩೬–೯೨). ೨. ಮಠ, ದೇವಸ್ಥಾನ ಮುಂತಾದುವುಗಳ ಮುಖ್ಯಸ್ಥ; ಮಠಾಧಿಕಾರಿ : "ಮಾಂತ (ಮಾತ) — ಮಹಂತ = ಮಠಾಧಿಕಾರಿ, ದೊಡ್ಡಮನುಷ್ಯ" (ಶಬ್ದಕೋ. ೩೫). [< ಮಹಂತ]

**ಮಾಂತನ** (ನಾ). ದೊಡ್ಡಸ್ತಿಕೆ ; ಘನತೆ ; ಹಿರಿಮೆ : ಜನಿತಪ್ರಗಲ್ಭದೊಳ್ ಮಾಂತನದೊಳ್ . . . ಅನುಪಮಗುಣದೊಳ್ ಶ್ರೀಶಂ ಘನಂ (ಶಬಂ. ೩–೬೨) ; ಅವರಿರ್ವರ ಮಾಂತನದಳವನಳೆಯಲಜನಾಜಿಂ (ಅಜಿ. ೧–೩೫) ; ಮಾನ್ತನಕ್ಕಾಗರವೆನೆ ಸೆಗಳ್ದಂ (ಎಕ. XVI. ೫೫–೧೧ ; 1053).
[< ಮಾಂತ₂ + – ತನ]

**ಮಾಂತರು** (ನಾ). ಮಾವಿನ ಮರ : ಚೂತವೃಕ್ಷ : ಕಾಂತಾರದೊಳು ಲಕ್ಷ್ಮೀಕಾಂತನಾಡುತ ತನ್ನೇಕಾಂತಭಕ್ತರನೊಡಗೂಡಿ ಮಾಂತರುವಿನ ನೆಳಲೊಳು ಕೊಳಲೂದುತ (ಕೃಷ್ಣಗೀ. ೨–೯೦).
[ಮಾಂ (<ಮಾವು) + ತರು₂]

**ಮಾಂತ್ರಿಕ** (ನಾ). ಮಂತ್ರಗಾರ ; ಗಾರುಡಿಗ; ಯಕ್ಷಿಣಿಗಾರ : ಆತನೇ ಶೂರತ್ವವುಳ್ಳವನಾತನೇ ಮಾಂತ್ರಿಕನು ತಪಸಿಯುಮಾತನೇ ವಿದ್ವಾಂಸನಾತನೆ (ಬಸವು. ೩೯–೬೯); ಕೆಲವರು ಬೈರಾಗಿಗಳೂ ಮಾಂತ್ರಿಕರೂ ನಾವು ಚಿನ್ನ ಮಾಡಬಲ್ಲೆವೆಂದು ಹೇಳುತ್ತಾರೆ (ಮುಂಬಯಿ. ೯–೧೦೩). [ಸಂ.]

**ಮಾಂದಳಿ** (ನಾ). ಒಂದು ಊರಿನ ಹೆಸರು : ಶ್ರೀಚಾಸರಾಳ್ ಪೊನ್ನಾಕವಳಿಗೆ ಕಾಳಮ್ಮನ್ ಮಾನ್ದಳಿಯ ಬೀರಿಯದುಳ್ಳೆ ಬಲಮೆಮ್ಮರಸರ ಕಾಳೆಗದುಳ್ಳೆ ಎಱಿದು ಸತ್ತನ್ (ಎಕ. XVI. ಕುಮುಕೂ. ೦೦೦–೨; ಸು. 812). [ ? ]

**ಮಾಂದಳಿರ್**, **ಮಾಂದಳಿರು**, **ಮಾದಳಿರ್** (ನಾ). ಮಾವಿನ ಚಿಗುರು,_ಕುಡಿ : ಕಾಮದೇವನುಕ್ಕೆಮದಲ್ಲಿ ಮುನ್ನಮೆ ಕಟ್ಟಿದ ಮಾಂದಳಿರ ತೋರಣಂಗಳೊಳಮೆತ್ತಿದಶೋಕಪಲ್ಲವಪತಾಕೆಯೊಳಂ (ಕಾದಂಬ. ೬೮೦) ; ಮಾಂದಳಿರ್ಗಳ ತೋರಣಂ ವಿರಾಜಿಸುತಿನಸುಂ (ಕುಸುಮಾ. ೬–೭೯). **ಮಾಂದಳಿರು** : ಚಂದ್ರಿಕೆಯ ಮಾಂದಳಿರೆ . . . ಕಲುಷರಹಿತೆಯ ಖಳಕುಲಾಧಮ ಬಲುಕರಿಸಿ ಕೋಡೊಯ್ದನೆಂದುಸುರುವುದು ರಾಮಂಗೆ (ತೊರರಾ. ೩–೦೦–೬) ; ಪರಪುಟ್ಟಗಳಿರಾ . . . ಓರಿದು ಮಾಂದಳಿರ ಗುಟುಕನಿತ್ತು ಮನಕತಿಹರುಷವ ಮಾಡುವೆ ನಿಮಗೆ (ಕಂಠೀ. ೯–೨೦೦) ; ಮಾಂದಳಿರು ಆಗ ತಾನೆ ಅಲ್ಲಲ್ಲಿ ಎದ್ದು ಕಾಣುತಿತ್ತು (ಕಾಂತಲಾ. ೨೯೯). **ಮಾದಳಿರ್** : ಮಾದಳಿರ ಪಳಿವ ಚೆಂದುಟಿಯ ಸವಿಗೆ . . . ಎಸೆವ ಮೈಗಂಪಿಂಗೆ ಬಯಸಿ ಬಯಸಿ (ಕೃಮಿಚಾ. ೩–೦೦). [ಮಾಂ (< ಮಾವು) + ತಳಿರ್₂]

**ಮಾಂದಳಿರು** 'ಮಾಂದಳಿರ್' ನೋ.

**ಮಾಂದಾವು ?** (ನಾ). ಒಂದು ಊರಿನ ಹೆಸರು (?) : ಮಾನ್ದಾವುದ ಕಾಳೆಗದುಳ್ ಪಗೆ ಕಲಿಯಾರು ಮಗನ್ ಬೆಜ[ಯಿ]ತ್ತನ್ ಗಣ್ಡಪ್ರಕರನ್ . . . ಪಲರನಿಱಿದು ಸತ್ತೊಡೆ (ಎಕ. X. ಮುಳಬಾ. ೨೨೮–೬; ಸು. ೮೯೦ ?).
[ ? ]

**ಮಾಂದಿಸು** (ಕ್ರಿ). ೧. ತಡೆ ; ನಿಲ್ಲಿಸು ; ಅಡ್ಡಗಟ್ಟು : ಮಸಕಂ ಕಾಯ್ದು ಜವಂ ಜವಂಗಮಿದಿರೊಳ್ ನೋಡಲ್ಕಗುರ್ವಾಗೆ ಮಾಂದಿಸಿಮಾ ವಂದುದು ಕೊಂದುದೆಂದು ಭಯದಿಂ ವಿಪ್ರರ್ ತೆರಳ್ದೋಡೆ (ಶಂಶಿಶಾ. ೮–೩೭) ; ದಣಿವವರಂ ನಿರ್ದ್ದಯ್ಯವಕ್ಕೆಂದು ಯಾಚಿಪುದಂ ಮಾನ್ದಿಸಿ ನಿಂದು ನಾಲಗೆಯೊಳೆಂದುಂ ನಿದ್ರೆಯಕ್ಕೆಂದು ಯಾಚಿಪುದಂ ಮಾಡಿಸಿಯನ್ನಸಂ ಕಿಡಿಸಿದಳ್

ಬಲ್ಪಂತುಟೋ ಜ್ಯೇಷ್ಠೆಯ (ಶಾಸಕ. ೩೩-೪೦ ; 1178). ೨. ಕಳೆ : ನಿವಾರಿಸು : ಅವರ್ಗಳ ಭಯಮಂ ಮಾಂದಿಸುವೊಡೆ ಸುಜನಸಂಸ್ತವಂ ಕರಣೀಯಂ (ಪುಶ್ಪ.ಶ. ೦-೩೩); ಒಂದೊಂದೆಸೆಯೊಳ್ ಪೆಂಜಿದಿಹವೆಂದುಂ ವಿಂಶತಿಸಹಸ್ರಸೋಪಾನಂಗಳ್ ಇಂದೂಪಳರಚಿತಂಗಳ್ ಮಾಂದಿಸುವುದು ಜನದ ಮನದ ಸಂತಾಪತೆಯುಂ (ಪುಣ್ಯಾಸ್ರ. ೦೦-೨೪). ೩. ಆರಿಸು ; ನಂದಿಸು : ಕುಂದದಲಧವಲನೃಪದಶನೇಂದುಜ್ಯೋತ್ಸ್ನಾಮೃತಾಚ್ಛಜಲ ಪರಿಷೇಕಂ ಮಾಂದಿಸುವಂತಾದುದು ನೃಪನಂದನೆಯೆರ್ದೆಯೊಳಗೆ ಬಳೆದ ಶೋಕಾನಳನಂ (ಅಜಿ. ೩-೪೯). [ಮಾಂದು₁ + — ಇಸು₃]

**ಮಾಂದು₁** (ಕ್ರಿ). ೧. ನಿಲ್ಲಿಸು ; ಪ್ರತಿಬಂಧಿಸು : "ಮಾಂದು—ಪ್ರತಿಷೇಧೇ (ತಡೆ), (ಪ್ರಸಿದ್ಧೇ)" (ಕಮಾ). ೨. ಕುಗ್ಗು; ಕಡಮೆಯಾಗು : ಪೊಸಮಕರಂದದ ಮಾಂದದ ರಸಕ್ಕೆ ಮಂದಲರೊಳೆಜಿಗಿದರಗಿಳರಚನೆಯ ಕರ್ಪೆಸೆವಂತೆಸೆವಿನಮೇಂ ಸೊಗಯಿಸಿದುದೊ ವನಯುವತಿಪದನತಿಲಕಂ ತಿಲಕಂ (ಶಾಂತಿಪು. ೭-೦೩೩). ೩. ಹಿಂದೆಗೆ ; ಹಿಮ್ಮೆಟ್ಟು : ಮಾಂದದೆ ಕುಂದದೆ ಬಣ್ಣಂಬಂದಂ ತದ್ರಿಪುವೆನುತ್ತೆ ಬೀಭತ್ಸಲತಾಕಂದಮನೆ ತರ್ಪ ತೇಜದಿಂ ತಂದಿಟ್ಟಿಪನಿದಿರೊಳೊರ್ವನಾ ಪಂಪಲೆಯುಂ (ಚಂದ್ರ.ಶ. ೦೦-೦೦೭). [ದೇ.॥ ತಮಿ. ಮಾನ್ತು : ತುಳು. ಮಾದು]

**ಮಾಂದು₂** 'ಮಾಣ್' ನೋಡಿ.

**ಮಾಂದುರಿಗ** (ನಾ). ಕುದುರೆಯ ಲಾಯವನ್ನು ನೋಡಿಕೊಳ್ಳುವವನು; ಕಾಸ್ತಾರ : (*). [ < ಸಂ. ಮಾಂದುರಿಕ ]

**ಮಾಂದೋಪು** (ನಾ). ಮಾವಿನ ಮರಗಳ ಗುಂಪು,—ತೋಪು : ಮಾಂದೋಪಿನೊಳ್ ಸುರಿವ ಪೂಜೇನ ಸರಿಯೊಳ್ ನನೆದೊಯ್ಯನೆ ಪೀಡುವ ತೆಂಗಾಳಿಯು ಸೋಂಕಿನಂತೆಯುಂ (ಚಕವಂ. ೦೭೦-೩) ; ಈಮೆಳಮಾಂದೋಪಿನೊಳ್ ಬಸಂತಸಿರಿಯುಂ ನೋಡಾ (ಚಿತ್ರಗೋ. ೦೩-೦೭) ; ಮಾಂದೋಪಿನಲ್ಲಿ ಸೇರಿ ನೀವೆಲ್ಲರೂ ನಿಶ್ಯಬ್ದರಾಗಿರಬೇಕು (ಬಿಗತ. ೩೩-೦೭).

[ ಮಾಂ (< ಮಾವು) + ತೋಪು₁ ]

**ಮಾಂದ್ಯ** (ನಾ). ೧. ಚಟುವಟಿಕೆಯಿಲ್ಲದಿರುವುದು ; ಜಡತೆ ; ಆಲಸ್ಯ : ಏಂದಿಲ್ಲದಾವುದೊ ಮಾಂದ್ಯವು ಬಂದಿದೆ (ಇಂಶಾಶ. ೦೩೭-೨೩). ೨. ವೇಗವಿಲ್ಲದಿರುವಿಕೆ; ನಿಧಾನ ಗತಿ : "ಮೆಲ್ಲನೆನೆ ಮಾಂದ್ಯನಾಮಂ" (ಕಬಕಂ. ೨೭೮) ; ಸಾರಸದ್ಗುಣೋಪಚಯದೊಳಿಲ್ಲ ಮಾಂದ್ಯಮದು ಯಾನದೊಳಲ್ಲದೆ ತಲ್ಲತಾಂಗಿಯಾ (ಚಂದ್ರ.ಶ. ೦೦-೦೦೮) ; ಕುಟಿಲಚಂಚಲ ಕಠಿನಕೃಶಮಾಂದ್ಯಮೆಂಬಿವುತ್ಕಟಯೌವನಸ್ತ್ರೀವಿಲಾಸಿನಿಯರಳಕಾಳಿ ಚಟುಲ ಕಟಾಕ್ಷ ವಕ್ಷೋಜಾತ ಮಧ್ಯಗತಿಗಳ ವಿಲಾಸದೊಳಲ್ಲದೆ ಘಟಿಸದು (ಕೃಪಿಶಾ. ೨-೭). ೩. ಮಂದಾರ್ಗತನ ; ಗಡ್ಡತನ. ೪. ಬಲಹೀನತೆ ; ನಿಶ್ಶಕ್ತಿ; ದೌರ್ಬಲ್ಯ. ೫. ಆಸಕ್ತಿ ಇಲ್ಲದಿರುವಿಕೆ ; ನಿರುತ್ಸಾಹ. ೬. ಅನಾರೋಗ್ಯ ; ಜಾಡ್ಯ : "ರೋಗಃ . . . ಮಾಂದ್ಯಂ, ಅಪಾಟವಂ . . . ರುಜಾ—ಈ ೧೨ ವ್ಯಾಧಿ" (ಹಲಾಯು. ೯೮-೪೪೭) ; ಮದಮಾಂದ್ಯೋತ್ಪಾದನಾಪಹರಣಮಾರಣವಶೀಕರಣದ್ವೇಷಣಾದಿಗಳ್ಗೆ . . . ಪಿರಿದುಮಾಗಮಂಗಳೆ ಪ್ರಮಾಣಂಗಳ್ (ಕಾದಂಬ. ೬೪೭) ; ಶ್ಲೇಷ್ಮಕ್ಕೆ ಆಧಿಕ್ಯ ವಾತ ಪಿತ್ತಂಗಳಿಗೆ ಮಧ್ಯಮ ಮಾಂದ್ಯಗಳ ವ್ಯತ್ಯಾಸದಿಂದೆರಡು ಸನ್ನಿದೋಷ (ಸಕವೈ. ೦೩೦). [ಸಂ.]

**ಮಾಂಬನ** (ನಾ). = ಮಾಂದೋಪು : × × × ವಳ್ಳಿಯ ಕತ್ತಲೆ ಮಾಂಬನ ದಳದಳಿತ ಸಂಪೆಮಲ್ಲಿಗಳ ಪೂವೆಂಬಿನ ಬೆಳದಿಂಗಳೆಂದೆನೆ ಕಣ್ಬಯಲ ಚಲುವನೀವುದರಸಿಯ ಕೆಜಿಯೊಳು (ಮೈಲಶಿ. ೦೯೨೮. ೯-೩೦ ; 1183).

[ ಮಾಂ (< ಮಾವು) + ಬನ₁ ]

**ಮಾಂಬಳ** (ನಾ). ೧. ಮಾವಿನಹಣ್ಣು : ತನ್ನ ಮಾಗು ಪೋದುದುಂ ಕೋಗಿಲೆ ಬರ್ಪುದುಂ ಮಾಂಬಳಂ ಬೀಟ್ಟಂತಾಕಸ್ಮಿಕಮಾದುದು (ಅಶ್ರತಿ. ೩೮-೯) ; ಸೋರ್ವ ಜೇಂಜರಿ ಸವಿಮಾಂಬಳಂ ಪದೆದು ಕಾಸಿ ಪದಂಬಡೆದಿಟ್ಟ ಬಟ್ಟವಾಲ್ (ತಕಶಿ. ೪-೦೧೭). ೨. (ಕರಾ) ಮಾವಿನ ಚಟ್ಟು: ಸೀತಮ್ಮನವರು . . . ನಾಲ್ಕು ಕಟ್ಟು ಥಪ್ಪಳ ಮಾಂಬಳಗಳನ್ನು ತಂದಿಟ್ಟರು (ಜಾಳಗ. ೨೩). [ಮಾಂ (< ಮಾವು) + ಪಳ₂(<ಪಲ್₂)./ ತುಳು. ಮಾಂಬಲ, ಮಾಂಬಳ]

**ಮಾಂಬೂ** (ನಾ). ಮಾವಿನ ಹೂವು : ಮಾಂಗದಿರ್ ಮಾಂಗೊನರ್ . . . ಮಾಂಬೂಗಳ್ (ಶಬ್ದಾ.ಮ. ೩೪೮ ವ್ಯಾಖ್ಯಾ). [ ಮಾಂ (<ಮಾವು) + ಪೂ₂ ]

**ಮಾಂಬೊಣರ್** (ನಾ). ಮಾವಿನಹಣ್ಣುಗಳ ಜೋಡಿ : ಮಾಂಗದಿರ್ ಮಾಂಗೊನರ್ . . . ಮಾಂಬೂಗಳ್, ಮಾಂಬೊಣರ್ (ಶಬ್ದಾ.ಮ. ೩೪೮ ವ್ಯಾಖ್ಯಾ). [ ಮಾಂ (<ಮಾವು) + ಪೊಣರ್₂ ]

**ಮಾಂಸ** (ನಾ). (ಮನುಷ್ಯ ಅಥವಾ ಪ್ರಾಣಿಪಕ್ಷಿಗಳ ಶರೀರದ) ಬಾಡು ; ಅಡಗು ; ಖಂಡ : "ಪಲಲಂ, ಜಾಂಗಲಂ, ಮಾಂಸಂ . . . ತರಸಂ – ಈ ೮ ಮಾಂಸಂ" (ಹಲಾಯು. ೦೦೪-೯) : ಮಾಂಸಮಧುಮದ್ಯ ಸೇವನೆ . . . ಕುಲಟಾಸಂಸರ್ಗಮೆಂಬಿವಲ್ಲದೆ ಸಂಸಾರಭ್ರಮಣಕಾರಣಂ ಪೆಜವೊಳವೇ (ಅಜಿಪು. ೩-೬೦) ; ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು . . . ಶುಕ್ಲಧಾತು ಎಂದು ಏಳು ತರನಾಗಿವೆ (ಸಕವೈ. ೯೮); ಜನ್ನಮುಂ . . . ಮಾಂಸರುಧಿರೌಘದಿಂ ಕಿಡಿಸಿ ಕಾಡುವರ್ ತಾಟಕಿಯ ಮಕ್ಕಳ್ (ಶ್ರೀರಾಮ. ೨೮-೦೩). [ಸಂ.]

**ಮಾಂಸಕಲ್ಯಾಣ** (ನಾ). [ಬೌದ್ಧ] ಸ್ತ್ರೀಯ ಸೌಂದರ್ಯಕ್ಕೆ ಸಂಬಂಧಿಸಿದ ಐದು ಬಗೆಯ ಕಲ್ಯಾಣಗಳಲ್ಲಿ ಒಂದು : ಬಾಯಿಗೆ ತೆರೆಯಾದ ತುಟಿ ಬಿಂಬಫಲಕ್ಕೆ ಸದೃಶವಾಗಿ, ಚಿನ್ನ ಬಣ್ಣವಾಗಿ, ಸಮವಾಗಿ ಸ್ಪರ್ಶಕ್ಕೆ ಮೃದುವಾಗಿ ಇರುತ್ತದೆ. ಇದು ಮಾಂಸಕಲ್ಯಾಣ (ಹತ್ತುಮ. ೨೦). 'ಕೇಶಕಲ್ಯಾಣ', 'ಛವಿಕಲ್ಯಾಣ' ನೋಡಿ. [ಸಂ.]

**ಮಾಂಸಕವಳ** (ನಾ). ಬಾಡಿನ ಊಟ, – ಆಹಾರ : ಕುಬೇರಪ್ರಿಯಂ . . . ಪೂರ್ವಭವಮಂ ನೆನೆದು ಮಾಂಸಕವಳ(ಪಿಂಡ)ಮನೊಲ್ಲದಿರೆ (ಜಾವುಂಶ. ೭೦). [ಸಂ. ಮಾಂಸಕವಲ]

**ಮಾಂಸಗಣ್ಣು** (ನಾ). ದುರ್ಮಾಂಸ ಬೆಳೆದಿರುವ ಕಣ್ಣು : ನೀರುಗಣ್ಣು ಜಾರುಗಣ್ಣು ಪಲಗಣ್ಣು ಕಾಚಗಣ್ಣು ರಕ್ತಗಣ್ಣು ಮಾಂಸಗಣ್ಣು (ಶಾಳಿಹ. ೩೨೮). [ಮಾಂಸ + ಕಣ್ಣು (< ಕಣ್) ]

**ಮಾಂಸಗ್ರಂಥಿ** (ನಾ). ಮಾಂಸದ ಗಡ್ಡೆ ; ದುರ್ಮಾಂಸ : ಶ್ಲೇಷ್ಮದಿಂದ ಕಟಮಾಯ ಪ್ರದೇಶದಲ್ಲಿ ಮಾಂಸಗ್ರಂಥಿಗಳುಂಟಾಗಿಹವು (ವೈದ್ಯಶಾ. II, ೧೦೩). [ಸಂ.]

**ಮಾಂಸಚ್ಛದೆ** (ನಾ). ಒಂದು ಬಗೆಯ ಸಸ್ಯ : "ಮಾಂಸರೋಹೀ, ಮಾಂಸರೋಹಾ. ಮಾಂಸಚ್ಛದಾ – ಈ ಮೂಱುಂ ಮಾಂಸರೋಹಿಣಿ" (೬ಕಂ. ೦೨೪). [ಸಂ. ಮಾಂಸಚ್ಛದಾ]

**ಮಾಂಸಜ** (ನಾ). ೧. = ಮಾಂಸಗ್ರಂಥಿ. ೨. ಮೇದಸ್ಸು : "ಅಸ್ರಜಂ – ಮಾಂಸಜಂ" (೬ಕಧ. ೩). [ಸಂ.]

**ಮಾಂಸಜೀವಿ** (ನಾ). ೧. ಮಾಂಸಾಹಾರದಿಂದ ಜೀವಿಸುವವನು : ಮಾಂಸಾಹಾರಿ. ೨. ರಕ್ಕಸ ; ರಾಕ್ಷಸ : "ಯಮಂ ಸರುಜಂ ಕಿಂಕರ ಮಾಂಸಜೀವಿ ಕೃಪಣಂ ಕೀನಾಶಶಬ್ದಂ" (ನಾಕಾರ. ೯೩). [ಸಂ.ಮಾಂಸಜೀವಿನ್]

**ಮಾಂಸತಾನ** (ನಾ). ಗಂಟಲಿನಲ್ಲಿ ಉಂಟಾಗುವ ಮಾಂಸದ ಗಡ್ಡೆ : ಬಹಳ ತಾಪ ಉಂಟಾಗಿ ಕೊರಳಬಿಗಿದು ಹಿಡಿವದು. ಆ ಗ್ರಂಥಿ . . . ಮಾಂಸತಾನವೆನಿಸಿಕೊಂಬುದು (ವೈದ್ಯಶಾ. II. ೦೦೯). [ಸಂ.]

**ಮಾಂಸದ್ರಾವಿ** (ನಾ). ಒಂದು ಬಗೆಯ ಸಸ್ಯ: "ಮಾಂಸೀ, ಮಾಂಸರೋಹಿಣೀ — ಜಟಾಮಾಂಸಿ, ಮಾಂಸದ್ರಾವಿ" (೬ಕಧ. ೦೨೩).

[ಸಂ. ಮಾಂಸದ್ರಾವಿನ್]

**ಮಾಂಸನಿವೃತ್ತಿ** (ನಾ). ಮಾಂಸಾಹಾರಸೇವನೆಯನ್ನು ನಿಲ್ಲಿಸುವಿಕೆ : ಮಾಂಸನಿವೃತ್ತಿಯೇಕೆಂದೊಡೆ . . . ಪಾಪಬಂಧಕರಮಪ್ಪ ಮಾಂಸಮಂ ತಿಂಬಂಗೆ ದಯೆಯುಂ ಪುಟ್ಟದು ದರ್ಪಮಧಿಕಮಕ್ಕುಂ (ಧರ್ಮಾ. ೨೯೩). [ಸಂ.]

**ಮಾಂಸಪಿಂಡ** (ನಾ). ೧. ಮಾಂಸದ ಮುದ್ದೆ,- ಉಂಡೆ : ಮಾಂಸ ಪಿಂಡವೆನಲೊಲ್ಲದೆ ಮಂತ್ರಪಿಂಡವೆಂದನು ಬಸವಣ್ಣನು (ಬಸ್ವ. ೪. ೨೩-೫೭); ಲಿಂಗಧಾರಣವಿಲ್ಲದ ಮಾನವನ ಶರೀರವು ಮಾಂಸಪಿಂಡವೆನಿಸಿತು (ಶಾರದ. ೨೩೩). ೨. ದಷ್ಟಪುಷ್ಟವಾದ ದೇಹ : ಭೈರವಿಯ 'ಪೂಜೆಗೆ ಸಲುವಾಗಿ ನಿನ್ನ ಮಾಂಸಪಿಂಡವು ಅರ್ಪಿತವಾಗುವುದು (ಕಪಾಕುಂ. ೨೩). [ಸಂ.]

**ಮಾಂಸಭಕ್ಷಕ** (ನಾ). =ಮಾಂಸಜೀವಿ ೧ : ಮಾಂಸಭಕ್ಷಕರೂ ಸೆರೆಬಡಕರೂ ಸಿದ್ಧಗೊಳಿಸಿದ್ದೂ ಆದ ಇಂಥ ಯಾವ ಆಹಾರಪದಾರ್ಥವನ್ನೂ ಸೇವಿಸ ಬಾರದು (ಶ್ರಾವಣ. ೨೦೭). [ಸಂ.]

**ಮಾಂಸಭಕ್ಷಣ** (ನಾ). ಬಾಡನ್ನು ತಿನ್ನುವಿಕೆ : ಮಾಂಸಾಹಾರದ ಸೇವನೆ : ತೊಗಲಿನ ಚೀಲವನ್ನು ದನಗಳ ಚರ್ಮದಿಂದ ಮಾಡಿರುತ್ತಾರೆ . . . ಇಂಥ ಚೀಲದೊಳಗಿನ ಎಣ್ಣೆ ತುಪ್ಪಗಳನ್ನು ತಿನ್ನುವುದು ಮಾಂಸ ಭಕ್ಷಣ ಮಾಡಿದಂತೆಯೇ ಇರುತ್ತದೆ (ಶ್ರಾವಣ. ೨೦೯). [ಸಂ.]

**ಮಾಂಸಭೇದಿ** (ನಾ). ಒಂದು ಬಗೆಯ ಔಷಧೀಸಸ್ಯ : ಮಾಂಸಭೇದಿ ಅಜ ಮೂತ್ರದಲ್ಲಿ ಶುದ್ಧಿಮಾಡಿ . . . ಗುಳಿಗೆ ಮಾಡಿ ತ್ರಿಫಲೆಪುಡಿ ಅನುಪಾನದಲ್ಲಿ ಕೊಡುವುದು (ಚಿಕ್ಕಿ. ೨೩).
[ಸಂ. ಮಾಂಸಭೇದಿನ್=ಮಾಂಸವನ್ನು ಕತ್ತರಿಸುವ]

**ಮಾಂಸಭೋಜನ** (ನಾ). ಬಾಡಿನಿಂದ ತಯಾರಿಸಿದ ಆಹಾರ,—ಊಟ : ದಾನವರ ದಂಪತಿಸಹಸ್ರಮುಂ ಪ್ರತಿದಿನಂ ಮಾನವರ ಮಾಂಸಭೋಜನದಿಂದೆ ತಣಿಸಬೇಕು (ಕೃಬಿಶಾ. ೦೬-೩೦) ; ನಾಯಕನು ಬರುವ ವೇಳೆಗೆ . . . ಅಲ್ಪಾಹಾರವಾಗಿ ಮಾಂಸಭೋಜನವು ಬಂದಿತ್ತು (ಮಲ್ಲಿ. ೬೨). [ಸಂ.]

**ಮಾಂಸಮೇಹ** (ನಾ). ಮಾಂಸಗತವಾಗಿರುವ ಮೇಹರೋಗಗಳಲ್ಲಿ ಒಂದು ವಿಧ : ಅಡಿಕೆ ಹಗಿನು, ಮುತ್ತುಗ ಹಗಿನು, ಬೇಲದ ಹಗಿನು . . . ಚೂರ್ಣವ ಮಾಡಿ ಶ್ರೀಎಲೆ ಕಷಾಯದಲ್ಲಿ ಸಣ್ಣವಾಗಿ ಅರೆದು ಕಡಲೆಯ ಪ್ರಮಾಣ ಗುಳಿಗೆಯಂ ಮಾಡಿ ಒಂದು ಗುಳಿಗೆ ಜೇನುತುಪ್ಪದಲ್ಲಿ ಕಲಸಿ ಕೊಡಲು . . . ಮಾಂಸಮೇಹ, ಅಸಾಧ್ಯಮೇಹ ಮೊದಲಾದವು ಗುಣ (ಚಿಕ್ಕಿ. ೦೨೨). [ಸಂ.]

**ಮಾಂಸರೋಹಿ** (ನಾ). ಒಂದು ಬಗೆಯ ಸುಗಂಧಸಸ್ಯ : "ಮಾಂಸ ರೋಹೀ, ಮಾಂಸರೋಹಾ, ಮಾಂಸಚ್ಛದಾ— ಈ ಮೂಱುಂ ಮಾಂಸ ರೋಹಿಣಿ" (ಓಷಧಿ. ೦೨೪). [ಸಂ. ಮಾಂಸರೋಹೀ]

**ಮಾಂಸರೋಹಿಣಿ** (ನಾ). = ಮಾಂಸರೋಹಿ : "ಮಾಂಸರೋಹೀ, ಮಾಂಸರೋಹಾ, ಮಾಂಸಚ್ಛದಾ — ಈ ಮೂಱುಂ ಮಾಂಸರೋಹಿಣಿ" (ಓಷಧಿ. ೦೨೪). [ಸಂ. ಮಾಂಸರೋಹಿಣೀ]

**ಮಾಂಸರೋಹೆ** (ನಾ). =ಮಾಂಸರೋಹಿ : "ಮಾಂಸರೋಹೀ, ಮಾಂಸ ರೋಹಾ, ಮಾಂಸಚ್ಛದಾ_ಈ ಮೂಱುಂ ಮಾಂಸರೋಹಿಣಿ"(ಓಷಧಿ. ೦೨೪).
[ಸಂ. ಮಾಂಸರೋಹಾ]

**ಮಾಂಸಲ**, ಮಾಂಸಳ (ಗು). ೧. ಮಾಂಸದಿಂದ ಕೂಡಿದ ; ಪುಷ್ಟ ವಾದ. ೨. ಶಕ್ತಿಯುತವಾದ ; ದೃಢವಾದ : ಕಂಬಳಿಹುಳು — ಎದೆಯ ಕೆಳಗೆ ಮೂರು ಜೊತೆ ಕೀಲು ಕಾಲುಗಳಲ್ಲದೆ ಹೊಟ್ಟೆಯ ಕೆಳಗೆ ೨ – ೮ ಜೊತೆ ಹೊಟ್ಟೆಯ ಪ್ರಲಂಬ ಮಾಂಸಲ ಕೀಲುಗಳಿಲ್ಲದ ಬದಲು ಕಾಲುಗಳಿವೆ (ಕೀಟಬಿ. ೦೩) ; ರೋಣೆಯಿಂದ ಆಚ್ಛಾದಿತವಾದರೂ ಕೆಳಗಿನ ಚರ್ಮದ ಆರೋಗ್ಯವಂತ ಕಾಂತಿ ಅಡಗಿರದ ಮಾಂಸಲ ಕೈ —ತೋಳುಗಳು (ಮೂರುದಾ. ೨೯೩). (ನಾ). ೩. ಮಾಂಸಭರಿತವಾದುದು ; ಪುಷ್ಟ ವಾದುದು : ಮಾಂಸಲಂ ರಕ್ತಾದ್ರ್ರ್ರಮಾಗಿರ್ದುದಾ ಶವಂ ವಾಲಿ ಬಿಸು ಟಂದು ! (ಶ್ರೀರಾಮಾ. ೨೯೮-೩೭೩). ೪. ಬಲವುಳ್ಳವನು ; ಶಕ್ತಿವಂತ : "ಬಲವಾನ್, ಮಾಂಸಲಃ, ಅಂಸಲಃ _ ೩ ಬಲಿಷ್ಠ, ಶಕ್ತಿಯುಳ್ಳವನು" (ಸಿದ್ಧಾಂತಿ. ೦೬೦). **ಮಾಂಸಳ** : ೧. ಅಗ್ರವಿಶೀರ್ಣವಿಷಾಣನಾತ್ತ ಮಾಂಸಳತನು ಬಂದುದಂದು . . . ಪುಂಗವಂ (ಶಂಕ್ರಕೃ. ೨-೩೮). ೩. ಅತಿದೀರ್ಘಮಾಂಸಳಂ ಹೃತ್ತತರಂ ಧೃತವಿಜಯಲಕ್ಷ್ಮಿ ಮಾಡಿದುದೈರಾವತ ಪುಂಡರೀಕಕರಯುಗವಿತರ್ಕಮಂ ಭುಜಯುಗಂ ನಭಶ್ಚರಪತಿಯಾ (ಶಾಂತಿಪು. ೩-೪೪). [ಸಂ.]

**ಮಾಂಸವಿಕ್ರಯಿ** (ನಾ). ಬಾಡನ್ನು ಮಾರುವವನು : ಮಾಂಸದ ವ್ಯಾಪಾರಿ : "ವೈತಂಸಿಕಂ, ಸೌನಿಕಂ, ಕೌಟಿಕಕ, ಮಾಂಸವಿಕ್ರಯಿಯಾ – ಈ ೪ ಸೊನೆಗಾಱಂ" (ಹಲಾಯು. ೯೬-೪೪೦). [ಸಂ. ಮಾಂಸವಿಕ್ರಯಿನ್]

**ಮಾಂಸವಿದಾರಿ** (ನಾ). ಗಂಟಲಿನಲ್ಲಿ ಉಂಟಾಗುವ ಮಾಂಸದ ಗಡ್ಡೆ : ಕೊರಳೊಳಗೆ ಪಿತ್ತದಿಂದ ಉಂಟಾಗಿ ಅಡ್ಡಲಾಗಿ ದೇಹದಲ್ಲಿ ಸೆಖೆ, ಬಾಯಾರಿಕೆ, ಬಹಳ ವೇದನೆ, ಇವುಗಳ ಉಂಟುಮಾಡುವುದು. ಹೀಗಿದ್ದುದು ಮಾಂಸವಿದಾರಿ ಎನಿಸಿಕೊಂಬುದು (ವೈದ್ಯಶಾ. II, ೦೨೦).
[ಸಂ. ಮಾಂಸವಿದಾರಿನ್ ?]

**ಮಾಂಸಸಂಘಾತ** (ನಾ). ಗಂಟಲಿನ ಮೇಲುಭಾಗದಲ್ಲಿ ಮಾಂಸದ ಗಡ್ಡೆ ಗಳುಂಟಾಗುವ ಒಂದು ಬಗೆಯ ರೋಗ : ಶ್ಲೇಷ್ಮದಿಂದ ಕಟವಾಯ ಪ್ರದೇಶದಲ್ಲಿ ಮಾಂಸಗ್ರಂಥಿಗಳುಂಟಾಗಿಹವು. ಈ ರೀತಿಯಲ್ಲಿ ಇದ್ದುದು ಮಾಂಸಸಂಘಾತವೆಂಬ ತಾಲುರೋಗವೆಂದಱಿವುದು (ವೈದ್ಯಶಾ. II, ೦೦೩). [ಸಂ.]

**ಮಾಂಸಸೇವನ** (ನಾ). ಬಾಡನ್ನು ತಿನ್ನುವುದು ; ಮಾಂಸಾಹಾರ ಸೇವನೆ: ಬಲ್ಲಡಗಿಲ್ಲದೊಡುಣಿಸಣಮಿಲ್ಲೀ ಪ್ರಭುಗೆನುತುಮುವನ ತೊಡೆಯಡಗನೆ ತಳ್ವಿಲ್ಲದವಂಗಿಕ್ಕುವರೇಂ ಪೊಲ್ಲದುದೋ ಮಾಂಸಸೇವನಪ್ರತಿಪಾಪಂ (ಶಾಂತಿಪು. ೬-೯೬). [ಸಂ.]

**ಮಾಂಸಳ** 'ಮಾಂಸಲ' ನೋ.

**ಮಾಂಸಳಿತ** (ಗು). = ಮಾಂಸಲ ೧ : ಕುಳಶೈಲೋನ್ನತನುಗ್ರಶಾತ್ರವಶಿ ರೋಮಾಣಿಕ್ಯಮಾಳಾಂಶುಮಾಂಸಳಿತಶ್ರೀಪದಪೀಠರತ್ನಕಿರಣಂ ಚಕ್ರೇಶ್ವರಂ (ಆದಿಪು. ೦೨-೦೨೦). [ಸಂ. ಮಾಂಸಲಿತ]

**ಮಾಂಸಾದ** (ಗು). ೧. ಮಾಂಸವನ್ನು ತಿನ್ನುವ. (ನಾ). ೨. ಒಂದು ನರಕದ ಹೆಸರು : ಲಾಕ್ಷಾಪ್ರಲೇಪ ಮಾಂಸಾದ . . . ಕ್ರಿಮಿಕುಲಂ ಗಳೆಂಬವೇ ರಾಜನರಕಂಗಳು (ಜಿವೇಳ. ೧೩೦). [ಸಂ.]

**ಮಾಂಸಾಶನೆ** (ನಾ). ಮಾಂಸಾಹಾರವನ್ನು ತೆಗೆದುಕೊಳ್ಳುವವಳು ; ಅಡಗು ತಿನ್ನುವವಳು : ಸುರತಪ್ರಿಯೆ ಮಾಂಸಾಶನೆ ಸರೋಷೆ . . . ಮ್ಲೇಚ್ಛವಿಷಯದಾಕೆ ವಿನೂತೆ (ಸುರತಿ. ೪-೩). [ಸಂ. ಮಾಂಸಾಶನಾ]

**ಮಾಂಸಾಶಿ** (ನಾ). ೧. ಅಡಗು ತಿನ್ನುವವನು ; ಮಾಂಸಾಹಾರಿ. ೨. ದಾನವ ; ರಾಕ್ಷಸ : ದೇವಿ ! ಈ ನಿನ್ನ ಕಣ್ಣುರಿಯಿನೆ ಮಾಂಸಾಶಿ ಗಳೆಲ್ಲರಟಿದರ್ (ಅದ್ಭುತ. ೩೨-೦೬). [ಸಂ. ಮಾಂಸಾಶಿನ್]

**ಮಾಂಸಾಹಾರ** (ನಾ). ಬಾಡಿನಿಂದ ತಯಾರಿಸಿದ ಆಹಾರ,—ಪದಾರ್ಥ: ಜೊಪ್ಪಣ್ಣ ಕೇಶಿರಾಜ ಶಂಕಿಸಿದ್ದಂತೆ ಮಾಂಸಾಹಾರವನ್ನೇನೂ ನೀಡಲಿಲ್ಲ (ಚಚಕ. ೦೦೦). [ಸಂ.]

**ಮಾಂಸಾಹಾರಿ** (ನಾ). = ಮಾಂಸಾಶಿ ೧ : ಮದ್ಯಮಾಂಸಾಹಾರಿಗಳಂ ದೇವರೆಂಬುದು ಮೊದಲಾದುದಱಿಂ. . .ದರ್ಶನಮೋಹನೀಯಕರ್ಮದಾಸ್ರವ ಮಕ್ಕುಂ (ಧರ್ಮಾ. ೯೬) ; ಮಾಂಸಾಹಾರಿಗಳು ನಿತ್ಯವೂ ಒಂದು ಮೊಟ್ಟೆ ೩ ಔನ್ಸ್ ಮಾಂಸವನ್ನು ಆಹಾರದಲ್ಲಿ ತೆಗೆದುಕೊಳ್ಳತಕ್ಕದ್ದು(ಗೃಹಪಾ. ೯೬).
[ಸಂ. ಮಾಂಸಾಹಾರಿನ್]

**ಮಾಂಸಿ** (ನಾ). ಒಂದು ಬಗೆಯ ಔಷಧೀಸಸ್ಯ; ಜಟಾಮಾಂಸಿ: ಸಲೆ ಮಾಂಸಿ ನೆಲ್ಲಿ ನೀಲೋತ್ಪಲ ಕಂಜಂ ಕೋಷ್ಠಮೆಂಬಿವಂ ಕಟಿಯಿಂದಂ ತಲೆಯುಂ ಪೂಸಲೊಡಂ ಪಱಿದಲೆ ನಿಱಿದಲೆಯಕ್ಕುಂ (ರೋಕೋಶ. ೯–೫೨); ಮಾಂಸಿ = ಜಟಾಮಾಂಸಿಯುಂ . . . ಉಪಯೋಗಿಸಲು (ವೈದ್ಯಶಿ. ೦೬೬).
[ಸಂ. ಮಾಂಸೀ]

**ಮಾಂಸಿಕ** (ನಾ). = ಮಾಂಸವಿಕ್ರಯಿ: "ಮಾಂಸಿಕ – ಮಾಂಸವನ್ನು ಮಾರಿಕೊಂಡು ಹೊಟ್ಟೆ ತುಂಬಿಕೊಳ್ಳುವವ" (ಗಂಗಾಹು. ೨೫೩). [ಸಂ.]

**ಮಾಕಂದ** (ನಾ). ಮಾವಿನ ಮರ: "ಮಾಕಂದಮೆನೆ ರಸಾಲದ್ರುಮಂ" (ಕಕರ. ೬೯); ನೀನುಮಾಮುಮೊಡನಿರ್ದಿರವಂ ನೆನೆ ಬಾಳಚೂತಮೇ ಎಂದು ಮಾಕಂದಮಹೀರುಹಮನಪ್ಪುಕೆಯ್ದು (ಅಂಕೃ. ೦೦–೦೨೯ ವ); ಎಳವಳ್ಳಿಗಳೆಡೆಯೊಳ್ಕಂಗೊಳಿಸುವ ಮಾಕಂದದಂತೆ . . . ಎಸೆದಂ . . . ಚಿದಂಗಮುನೀಂದ್ರಂ (ಅದ್ಯಟಿ. ೫–೯೨); ಕುಲತಿಲಕ ಬಾ ಕಂದ ಭರತಾ ವಳವನದ ಮಾಕಂದ . . . ಬಾ (ಕುವ್ಯಾಸ. ೦೩–೯). [ಸಂ.]

**ಮಾಕರಪ್ಪಿ** (ನಾ). ಒಂದು ಊರಿನ ಹೆಸರು: ಕದಪ್ಪಗ್ರಾಮ ದಕ್ಷಿಣತಃ ಮಾಕರಪ್ಪಿನ್ನಾರ್ಮಗ್ರಾಮಃ (ಇಇ. VI, ೭೩–೦೭; ಸು. 613). [ ? ]

**ಮಾಕರಿಸು** 'ಮಾಂಕರಿಸು' ನೋ.

**ಮಾಕಾಳ** (ನಾ). ೧. ಶಿವನ ಹೆಸರುಗಳಲ್ಲಿ ಒಂದು: "ಮಾಕಾಳ–ಮಹಾಕಾಲ" (ಕದ್ಯಕೋ. ೩೪). ೨. ಶಿವನ ಪ್ರಮಥಗಣದಲ್ಲಿ ಒಬ್ಬ: ಗಱಿಪದಿರ್ ನೀನೆಂದು ಮುಕ್ಕಣ್ಣನೋಲಗದೊಳ್ ತೆನ್ನೊಡನಾಡಿಗೂಡಿ ಜಡಿದಂ ಮಾಕಾಳನೋರ್ರೂರ್ವರಂ (ಕಬ್ಬಿಗ. ೨೬೬); ಎಲೆ ನಂದಿ ಮಾಕಾಳ ರುದ್ರರಿರ ನಾನಾವ ಕಾಲದೊಳದ್ರಿಜೇಶನ ಪದಯುಗವನುದ್ಯದ್ಭಕ್ತಿಯೊಳರ್ಚಿಸಿ ಬದುಂಕುವ ಪುಣ್ಯವಾದಪುದೊ (ಬಸಪು. ೪೫–೯೭).
[ < ಸಂ. ಮಹಾಕಾಲ ]

**ಮಾಕಾಳಿ** (ನಾ). ಪಾರ್ವತಿಯ ಹೆಸರುಗಳಲ್ಲಿ ಒಂದು: "ಮಾಕಾಳಿ, ಮಾದೇವಿ, ಸಬ್ಬಾಣಿ, ಐಕಿಲ್ವೆಟ್ಟಣಾಗಿ, ಸಿಂಗದೇರಳ್ — ಈ ೫ ಪಾರ್ವತಿಯ ಪೆಸರ್" (ಕಕಾ. ೧–೨); ಕಾಳಧ್ವಜನಿಱಿಪೆಡೆಯೊಳ್ ಲೀಳೆಯಿನಂ ದಾಯ್ದು ಕೋದು ತೊಟ್ಟಿರ್ದ ಶಿರೋಮಾಳೆಯೆ ವಲ್ ಮಾರಿಯ ಮಾಕಾಳಿಯ ಚಂಡಿಕೆಯ ಕೊರಲ ಮಾಲೆಗಳೆಲ್ಲಂ (ಜಗು. ೯–೪೫); ಚೋಳನನಟ್ಟಿ ತಿಂಬ ಮಾಕಾಳಿ (ಎಕ. VI, ಕಳ್ಳಮ. ೦೦೪–೦೩: 1202); ಹೆಸರುಳ್ಳ ಮಾಕಾಳಿಯುಂಟು ಚಾಮುಂಡಿಯುಂಟೊಸೆದೇನ ಬೇಡಿದೊಡೀವ ಬೆಸನುಳ್ಳ ಕುಟಿಲದೇವತೆಗಳುಂಟು (ಕುರಾಶಾಂ. ೨೪–೩೪). [ < ಸಂ. ಮಹಾಕಾಲೀ ]

**ಮಾಕಿ** (ನಾ). ಒಬ್ಬಾತನ ಹೆಸರು: ತುಱುವ ಮೊಱಕಕ್ರೊಳೆ ಬೆಣ್ಣರ ಮಾಕಿ ಕಾದಿ ಇಕ್ಕಿಸಿ ಸತ್ತು ಸಗ್ಗಸ್ತನಾದಂ (ಎಕ. X (s), ಮುಳಬಾ. ೩೦೭–೩; ಸು. 950). [ ? ]

**ಮಾಕಿಮಯ್ಯ** (ನಾ). ಒಬ್ಬಾತನ ಹೆಸರು: × × × ಮಾಕಿಮಯ್ಯ ನಾಯಕಂ [ಬ]ರದಂ (ಸೌಇ. XI-i, ೨೨–೫೦: 897). [< ಮಾಕಿ + ಅಯ್ಯ$_1$]

**ಮಾಕುವರ** (ನಾ). ಲಕ್ಷ್ಮಿಯ ಪುತ್ರ; ಮನ್ಮಥ: ಶೋಕವನು ನಿಲಿಸಿ ಶಿವಶರಣಶವಮಂ ತರಿಸಿ ಮಾಕುವರ ಹರರೂಪಜಂಗಮನಾಕ್ಷಣದಿ ತಾ ಕರೆಸಿ ಉನ್ನತಾಸನದಿ ಕುಳ್ಳಿರಿಸಿ ಜಲ ತಂದು ಚರಣವನು ತೊಳೆದು (ಶ್ರೀಶರಾ. ೦೯–೦೩). [ ಮಾ$_6$ + ಕುವರ$_2$ ]

**ಮಾಕ್ಷಿಕ** (ಗು). ೧. ಜೇನುಹುಳುವಿನ: ವಾತಪಿತ್ತಶ್ಲೇಷ್ಮದೋಷ ದೂಷಿತಮುಂ ಅಪ್ಪ ಶರೀರಮುಂ ಮಾಕ್ಷಿಕಪತ್ರಸನ್ನಿಭಚರ್ಮಾವರಣಮಿಲ್ಲದೊಡೆ ನೋಡಲುಂ ತೀಡಲುಂ ಕಾಕೋಲೂಕಮಕ್ಷಿಕಾದಿಕೃತಪೀಡೆಯುಂ ಕಾಯಲುಂ ಬಾರದು (ಕಕ್ಕ್ಷಕ್ರ. ೩೨೯). (ನಾ). ೨. ಜೇನುತುಪ್ಪ; ಮಧು: "ಸಾರಘಂ, ಮಾಕ್ಷಿಕಂ, ಕ್ಷೌದ್ರಂ, ಮಧು, ಪುಷ್ಪರಸಃ — ಈ ೫ ಜೇನುತುಪ್ಪಂ" (ಶಅಯು. ೦೦೨–೪೭೬); ಮಾಗಧ ಲೋಧ್ರಂ ಮಾಕ್ಷಿಕ ನಾಗರಮುಸ್ತಾ ಪ್ರಿಯಂಗುವಂ ಕಣ್ಗೊಳ್ ಸಂಯೋಗಂಗೆಯ್ದುದು ಹೇಮಂತಾಗಮದೊಳ್ ಕುಡೆ ಮನೋಹರಂ ಪ್ರತಿಪಾನಂ (ಅಕ್ಕಾ. ೭–೬೫); ಆ ಕಪಿಪ್ರವರ ಮನದೊಲವಿಂದ ಮಧುಪಾನಹರ್ಷದಿಂದೀ ಪರಿಯ ನಲಿವುತೈತಂದು ಮನಬಂದಂತೆ ಮಾಕ್ಷಿಕವನುಣಲು (ವಂಕಾರಾ. ೫–೨೦–೫). ೩. ಜೇನುಹುಟ್ಟಿನಿಂದ ಸಿಗುವ ಮೇಣ; ಜೇನುಮೇಣ: "ಮಾಕ್ಷಿಕಂ, ಮಾಕ್ಷಿಕಾ – ಈ ಯೆರಡುಂ ಜೇನ ಮೇಣ" (೭ಕಧ. ೦೨೪). ೪. ಕಬ್ಬಿಣ ಮತ್ತು ಗಂಧಕದ ಸಂಯುಕ್ತಧಾತು; ಸೋನಾಮುಖಿ: ತ್ರಿಕಟುಕ, ತ್ರಿಫಲ, ಕೊನ್ನಾರಿಗೆಡ್ಡೆ, ವಾಯುವಿಳಂಗ, ಚವ್ಯ, ಚಿತ್ರಮೂಲ ಲವಂಗ ಚೆಕ್ಕೆ, ಏಲಕ್ಕಿ, ಮೋಡಿ, ಮಾಕ್ಷಿಕಭಸ್ಮ . . . ತೆಗೆದುಕೊಳ್ಳಲು ಕಾಸ, ಶ್ವಾಸ . . . ವಾತಗಳೂ ಸಹ ಮಾಣುವುವು (ಕಳವ್ಯ. ಶಂ. ೪೩೭). ೫. (ಆಲಂ) (ನೊಣದಂತೆ) ಹೆಚ್ಚು ಪ್ರಯೋಜನವನ್ನು ಪಡೆಯದ ವ್ಯಕ್ತಿ: ದ್ರಾಕ್ಷಿರಸವೇನಲ್ಲ ಜೀವನದ ತಿರುಳ್ಮಾರ್ಗಂ ಇಕ್ಷುದಂಡದವೊಲದು ಕಷ್ಟಭೋಜನವೆ ದಕ್ಷತೆಯಿನಿಡಿಯುವಂಗೊಂದೆರಡುಗುಟುಕುರಸ ಮಾಕ್ಷಿಕರ್ಗುಮಿಕ್ಕಲ್ಲ (ಮಂಕುತ. ೨೭೦). [ಸಂ.]

**ಮಾಖಂಡಭಟಾರ** (ನಾ). ಒಬ್ಬಾತನ ಹೆಸರು: ಶ್ರೀಮತ್ತದ್ವಯ್ಯ ಮಾಖಿಣ್ಣಭಟಾರರ್ಗ್ಗೆ ವಿದ್ಯಾದಾನಗೊಟ್ಟ ಮಣ್ಣು ಬಟ್ಟಮಾಳಯ್ಯಣ್ಣಾಗಂ (ಎಕ. V, ಅರಕ. ೨೪–೭; ಸು. 900). [ಮಾಖಂಡ ? + ಭಟಾರ]

**ಮಾಗ**, **ಮಾಗಿ**, **ಮಾಗೆ** (ನಾ). ಚಳಿಗಾಲ; ಶಿಶಿರಋತು; **ಮಾಘ** ಮಾಸ: "ಮಾಗ (ಗೆ, ಮಾಗಿ) — ಮಾಘ = ಒಂದು ಮಾಸ" (ಕದ್ಯಕೋ. ೩೪); ಒಗೆದಾಗಳ್ ಮಾಗದುರ್ಕಂ ಮೊದಲೊಳೆ ತವೆ ತೂಳ್ದಕ್ಕೆ . . . ಬಂಪತ್ತದೊಂದದ್ಭುತಮೊದವಿಪಮೋಘಂ ವಿಮೇಘಂ ನಿದಾಘಂ (ಕುಸುಮಾ. ೯–೦೦೫); ಮಾಗದಲಿ ಮಿಂದಿಹನು ಘೂಗ ತಾ ಹಿಡಿದಿಹನು ಯೋಗ ಧ್ಯಾನಗಳ ತೊಱೆದಿಹನು ಹಾರುವನು ಭೋಗಿಯಾಗಿಹನು (ಸರ್ವಜ್ಞ. ೯೦೭); ಮಾಘ, ಮಾಗ (ಕಶಾಸು. ೦೯೩ ಶ್ರದೋ). **ಮಾಗಿ**: "ಹೇಮಂತಮೆನೆ ಮಾಗಿಯಕ್ಕು" (ಮಂಗರಾ. ೨೩–೦೩); ಇಂದುಕಿರಣಂಗಳಿಂದಂ ಚಂದನರಸದಿಂದೆ ಮಾಗಿಯಾ ನೀರಿಂದು ನಂದದು ಪರಿತಾಪಾನಳಂ (ಕಶಿರಾ. ೩–೦೬೫); ಉದಯದ ಮಾಗಿಯ ಬಿಸಿಲು ಅಂಗಕ್ಕೆ ಹಿತವಾಯಿತ್ತು (ಬಸವ. ೨೦೯); ಅಂಚೆಗಳುಡುಗವು ಮಳೆಗಾಲದೊಳ್ಕೋಗಿಲೆಗಳಿಂಚರವನುಳಿದಿರವು ಮಾಗಿಯೊಳ್ (ಕ್ಷಿಮಾ. ೦೫–೦೯). **ಮಾಗೆ**: ಕಿಚ್ಚು ಸಾರ್ದಂಗೆ ಮಾಗೆಯೊಳ್ಕೆಯ್ಯಂತೆ ಬೇಸಗೆಯೊಳ್ಳಿಕೆಯ್ಯುಗ್ಗಮೆ (ಜೀವಸಂ. ೦೩–೨೫ ವ); ಸೋರದ ನಿವಾತವಪ್ಪಾಗಾರಂ ಮಱಿಗಾಲದಂತು(ದು) ಮಾಗೆಯ ದೆವಸಕ್ಕೋರಂತಿರಾತಪಚ್ಛಾಯಾಗಾರಂ ತಾಂ ಗ್ರೀಷ್ಮಕಾಲದೊಳ್ ಸುಸ್ಥಾನಂ (ಅಕ್ಕಾ. ೭–೬); ಮಾಗೆಯ ಬೆಳ್ಮುಗಿಲಾಗಸದಂತಿರೆ ಭಸಿತೋದ್ಧೂಳಿತಲಸಿತಲಲಾಟಂ ಕಣ್ಗೊಳಿಸೆ (ರಾಮಾಶ್ವ. ೪೦–೦೭). [< ಸಂ. ಮಾಘ]

**ಮಾಗಡಲು** (ನಾ). ದೊಡ್ಡಕಡಲು; ಮಹಾಸಮುದ್ರ: ಮರೆವಿನ ಮಾಗಡಲಿನಲ್ಲಿ ತೇಲುತಿಹುದು ವೇದವು ಆ ಅನಂತಭೇದವು (ಸೂರ್ಯಕಾ. ೪೦–೦೦). [ ಮಾ$_4$ + ಕಡಲು (< ಕಡಲ್$_2$) ]

**ಮಾಗಣಕಾಜಿ** (ನಾ). ಒಂದು ಹೋಬಳಿಯ ಅಧಿಕಾರಿ: ಶ್ರೀಮತು ಮಲ್ಲಿಕಾರ್ಜುನದೇವರಿಗೆ ವಿರುಪಂಣ್ಣವೊಡೆಯ × ದರ್ಮ್ಮವಾಗಿ ತಳಕಾಡ ಮಾಗಣಕಾಜಿ ಲಿಂಗತರು ಸೋಮನ ಹಳಿಯ ಮಾಳಿಗೆಯ ಮಾರನ ಮಗನು ಆಚಂದ್ರಾರ್ಕ್ಕಸ್ಥಾಯಿಯಾಗಿ ದೀಪಾರಾಧನೆಯ ನಡಸುವರು (ಎಕ. XIV, ತಿರುಮ. ೨೪೫–೩; ಸು. 1384). [P ಇದು 'ಮಾಗಣಕಾಜಿ' ಎಂಬುದರ ಅಪಲಿಖಿತವಿರಬಹುದು]

**ಮಾಗಣೆ$_1$**, ಮಾಗಣಿ (ನಾ). ೧. ತಾಲ್ಲೂಕಿನ ಒಂದು ಭಾಗ; ಹೋಬಳಿ: ಶ್ರೀವೀರಕೃಷ್ಣರಾಯರು ನಮಗೆ ಮಾಗಣಿಆಗಿ ಕೊಟ್ಟ ಆದವಾನಿಯ ದುರ್ಗಕ್ಕೆ ಸಲುವ ಕರಿಯ ಬೆಳುಗಲ್ಲ ಗ್ರಾಮದಲ್ಲು ಕೃಷ್ಣ

ಭೂಮಿ ಮ ೧೦ (ಶಾಇ. IX – ii, ೪೪೦-೦೨; 1514) ; ಕೆಳದಿಯಿಕ್ಕೇರಿ . . . ಲಾತವಡಿಯೆಂಬೀ ವಿಲಸನ್ಮಾಗಣೆಗಳೆಟುವಂ ನಿವಾಗೀವೆಂ (ಕಳಕ್ಕ. ೦-೯೬) ; ಮುಮ್ಮಡಿಯ ಬೆಟ್ಟದ ಚಾಮರಾಜಂ . . . ನಿಜಕುಟುಂಬಂ ಬೆರಸು ತೆರಕಣಾಂಬಿಯೆಂಬ ಮಾಗಣೆಯನೆಯ್ದಿ ಪಂದು (ಮರಾಶ. ೦-೮೨ ಪ).

**ಮಾಗಣೆ** : ೧. ಕಳಸಾಪುರದ ಮಾಗಣೆಗೆ ಸಲುವ ದೇವಶಾಪುರದ ಗ್ರಾಮದಲ್ಲೂ (ಶಾಇ. IV, ೨೯೭–೦೮ ; 1541) ; ಕೆಲವು ಮಾಗಣೆಗಳು ಯುದ್ಧದಲ್ಲಿ ಸಹಾಯಮಾಡಿದ ಕೊಡಗುರಾಜನಿಗೆ ಕೊಡಲ್ಪಟ್ಟವು (ದಕಶ. ೨೦) ; ನನ್ನ ಹೆಣ್ಣಿನ ಮೇಲೆ ದಿಟ್ಟನಡುವ ಧಿಮಾಕು ಈ ಮಾಗಣೆಯಲ್ಲಿ ಯಾವ ಗಂಡೆದೆಗೆ ಇದೆ ಎಂತೀನಿ (ಹೂಶಕ್ಕ. ೩೦). ೨. ಹರಹು ; ವಿಸ್ತಾರ : ಕಡಲ ಮಾಗಣೆಯಾಯ್ತು ವಾರಿಯ ಕಡಿತ ಪನ್ನ ಘಸಲಗುಗೊಂಡನು ನುಡಿಸಿದನು ವಿಕಹಿಣಿಯರಂಗದಲಂತರವ್ಯಥೆಯ (ಬಿಡಾಗ ೦೦-೨೯-೨೭).

**ಮಾಗಣೇಮಣೆಗಾರ** = ಹೋಬಳಿಯ ಅಧಿಕಾರಿ : ಇನ್ನೊಮ್ಮೆ ಅಲ್ಲಿಗೆ ಹೋಗಿ ಮಾಗಣೇಮಣೆಗಾರರ ಹಾಗೆ ಸ್ಥಳತನಿಖೆ ಮಾಡಿಕೊಂಡು ಬರಬೇಕು (ಮೂಳಕ್ಕ. ೦೭೬).

[ದೇ.। ತಮಿ. ಮಾಕಾಣ ; ಮಲ. ಮಾಕಣ ; ತುಳು. ಮಾಗಣೆ ; ತೆಲು. ಮಾಗಾಣಿ]

**ಮಾಗಣಿ₂** 'ಮಾಗಣೇ' ನೋ.

**ಮಾಗಣಿಕಾಬಿ** (ನಾ). ಹೋಬಳಿಯ ಅಧಿಕಾರಿ : ಮಾಗಣಿಕಾಬಿರ ಬಡಹನಿಗೆ ಕಾಣಚಿ × × × ಲ್ಲಿಯ ಮಹಾರಾಯರು ಕೇಳಿ . . . ಯಿಾ ಧರ್ಮ್ಮವ ಆಚಂದ್ರಾರ್ಕವಾಗಿ ನಡೆವ ಹಾಗೆ ಬಿಡಿಸಿ ಕೊಟ ಗ್ರಾಮಂಗಳ ಶಿಲಾಶಾಸನ (ಎಕ. III(R), ಶಂಕಪ. ೯೩-೦೨; 1529) ; ಕನಕರತ್ನಾಂಚಿತದುವ ಕರಣಗಳ ಸನ್ನಿನಿಯೋಗದವರ ಚಿತ್ತೈಸು ಧನದತ್ತ ಮಾಗಣಿಕಾಬಿ ನಿಯೋಗಸಜ್ಜನರ ಚಿತ್ತೈಸು (ಪೋಶತ. ೨೦-೩೭).

[ಮಾಗಣಿ₂ + –ಕಾಬಿ]

**ಮಾಗಣೀ**, ಮ್ಮಾಗಣಿ₂ (ನಾ). ೧. ಕೋರಿಕೆ ; ಬೇಡಿಕೆ : ಎರಡರ ಪೈಕೀ ಬೇಕಾದ್ದು ಒಂದ ಮಾಗಣೀಗೆ ಶ್ಯಾಮರಾಯ ಕಬೂಲ ಆದರ ಬಂದ ತೀಸರಿ (ಬೀಕಶ. II. ೬೦೬). ೨. ಲಗ್ನದ ನಿಶ್ಚಯಕ್ಕಾಗಿ ವಧುವನ್ನು ವರಪಕ್ಷದವರು ಕೇಳುವುದು. **ಮಾಗಣಿ₂** : ೧. ಹುಡುಗನು ಮುಂದೆ ಕೆಲನಿಮಿಷಗಳಲ್ಲಿಯೇ ತಂದೆಗೆ ದುಂಬಾಲುಬಿದ್ದು ೬–೮ ನಯೆಪೈಸಗಳ ಪೆಪ್ಪರಮೆಂಟ ಇಲ್ಲ ಚಾಕಲೇಟ್‌ಗಳ ಮಾಗಣಿ ಮುಂದರಿಸುವನು (ಹುತ್ತುಹು. ೩೭).

**ಮಾಗಣಿಹಾಕು** = ಮದುವೆಗಾಗಿ ಹೆಣ್ಣನ್ನು ಕೇಳು: ಅವನ ಮಾಲ್ಕೀ_ಜಹಾಗೀರೀಮಹಾದ ಬಸವಂತಿಗೆ ಮಾಗಣಿಹಾಕಿದ (ಬೀಕಶ. II. ೬೨೦).

[ ←ಹಿಂ. ಮಾಂಗನ್ ; ಮರಾ. ಮಾಗಣೀ, ಮಾಗಣೇ. / ಪ್ರಾ. ಮಗ್ಗಣ. / ಸಂ. ಮಾರ್ಗಣ]

**ಮಾಗಣೆ** ' ಮಾಗಣಿ₁ ' ನೋ.

**ಮಾಗತೆ** ' ಮಾಗದಿ ' ನೋ.

**ಮಾಗದಿ**, ಮಾಗತೆ, ಮಾಗದೆ (ನಾ). ಹೊಗಳುವವಳು ; ಸ್ತುತಿ ಮಾಡುವವಳು : ಕೇರಿಕೇರಿಯೊಳು ಮಾಗದಿಯರುಂ [ಕಾಕಂ. ತಿಯರು, ಧಿಯರುಂ, ಧರುಗಳ್] ಭಲರೆ ಭಲರೇ . . . ಪುರುಷರ ಭಾಗಧೇಯ ಎನುತ್ತ ಕೈವಾರಿಸುತ ಬರೆ ಮುಂದೆ (ಬಸವು. ೨೬-೬). **ಮಾಗತೆ** : ಶ್ರುತಿಗಳೇ ಕೈವಾರಿಸುವ ಮಾಗತೆಯರಖಿಳಾಗಮಪುರಾಣಪ್ರತತಿಯೇ ಪಾಠಕರು . . . ಆ ತ್ರಿಯಂಬಕನ (ಕೂರಕಾ. ೦-೨-೩). **ಮಾಗದೆ** : ಸುರವಾಗದೆಯರುರುಟಿ ಕೊಂಡಾಡುವರು (ಕೂರಕಾ. ೬-೩೦-೬೨).

[< ಸಂ. ಮಾಗಧೀ]

**ಮಾಗದೆ** ' ಮಾಗದಿ ' ನೋ.

**ಮಾಗಧ₁** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು : ಹಿಪ್ಪಲಿ : " ಮಾಗಧಂ ಕೃಷ್ಣಮೆನಲು ಹಿಪ್ಪಲಿಯೆನಿಕ್ಕುಂ " (ಪಂಗಣ. ೪೦-೩೬) ; ಸುರಕುಜದ ಬೀಜಂ ಮದ್ಯಂ ರಜನಿ ಮಾಗಧ . . . ಗುಂಜಾಫಳವಿಂವಂ ಪರಿಕ್ಲಿನ್ನಂ ಮಾಡಿಟ್ಟೊರಸಿ ಮೊದಲೊಳ್ ಪಾಲಸೆಟ್ ಗೊಯ್ದಿರುಳೆ ಪೂಗೊಂಚಲಿಂದೆಜಗುಗುಂ ಚಂಪಕಕುಜಂ (ಲೋಕೋಕ. ೬-೯೩).

[ಸಂ. ಮಾಗಧಾ]

**ಮಾಗಧ₂** (ಗು). ೧. ಮಗಧದೇಶಕ್ಕೆ ಸಂಬಂಧಿಸಿದ ಅಥವಾ ಮಗಧ ದೇಶದಲ್ಲಿ ಜೀವಿಸುವ. (ನಾ). ೨. ಮಗಧದೇಶದ ದೊರೆ : ನಿಜ ವಾಕ್ಸೌಂದರ್ಯದೆ ಪೋಲ್ತಂ ಪುರುನಂದನನಂ ಪೊಗಟ್ವ ಮಾಗಧಂ ಮಾಗಧನಂ (ಆಂಕ್ಕ. ೦೨-೦೦೩) ; ಕೌಸಲ ಚೈದ್ಯ ಮಾಗಧರು ಅರಸುಗಳು ನಾನಾದಿಗಂತದ ಧರಣಿಪರು ಸಚಿವರು ಪಸಾಯ್ತರು ನೆರೆದುದು (ಕುಪ್ಪಾಕ. ೮೪–೩೦). ೩. ಜರಾಸಂಧ : ಮಾಗಧನಾಯುಸ್ಸಮಮಂ ಬೇಗಂ ಬೆದಱಪ ಹಿಮಾಂಶುರುಚಿಗಳವೆನಲಂತಾಗಳೆ ದಶನೇಂದುದ್ಯುತಿಯಾಗಲೆ ಸಭೆಯೊಳಗೆ ಕೃಷ್ಣನವರ್ಗಿಂತೆಂದಂ (ನೇಖಂಕ್ಕ. ೦೦-೦೦೭) ; ಮಾಗಧನ ಮಂದಿರದ ರಾಜಾಂಗಣದೊಳವನೀಸುರರು ನೋಟಕರಾದರಲ್ಲಿ ಮುರಾರಿ ಫಲುಗುಣರು (ಕುಪ್ಪಾಕ. ೨-೯೯). ೪. (ಸಾಮಾನ್ಯವಾಗಿ ಸ್ಮೃತಿಪಾಠಕನ ವೃತ್ತಿಯನ್ನು ಅವಲಂಬಿಸುವ) ವೈಶ್ಯಪುರುಷನಿಗೆ ಕ್ಷತ್ರಿಯಸ್ತ್ರೀಯಲ್ಲಿ ಜನಿಸಿದವನು. ೫. ಹೊಗಳುಭಟ್ಟ ; ಸ್ತುತಿಪಾಠಕ : "ಪ್ರಬೋಧಕಾಃ, ಮಾಗಧಾಃ . . . ಮಂಗಳಪಾಠಕಾಃ–ಈ ೬ ಮಂಗಳಪಾಠಕರ್" (ಹಲಾಯು. ೭೦–೨೬೦); ದೆಸೆಗೆ ಪೊಣ್ಮುವ ನಿಜವಾಕ್ಸೌಂದರ್ಯದೆ ಪೋಲ್ತಂ ಪುರುನಂದನನಂ ಪೊಗಟ್ವ ಮಾಗಧಂ ಮಾಗಧನಂ (ಆಂಕ್ಕ. ೦೨-೦೦೩); ಕಂಸಂ . . . ವಂದಿಗಳ್ ನಿಂದ್ಯಮೆನೆ ಮಾಗಧರಾಗದೆನೆ . . . ಪಾಸಱೆಯೊಳ್ ಕೂಸನ ಪ್ಪಳಿಸಿ (ಜಗು. ೨-೩೩ ಪ); ಮಾರವೀರನ ಕಟ್ಟೋಲಗದ ವಂದಿಗಳ ಮಾಗಧರ ಗಾಯಕರ ಪಸುರ್ವಟ್ಟೆಯ ಗೂಡಾರದ ಬೀಡಾರಂ (ನಾಕೂಕ್ಕ. ೩೩-೦೦). [ಸಂ.]

**ಮಾಗಧಿ** (ನಾ). ೧. ಮಗಧದೇಶದ ರಾಜಕುಮಾರಿ : ಘುಡುಘುಡಿಸಿ ಮಾಗಧಿಯ ಮಗನಲಿ ಜಡಿದವಿಳಿಗಶ್ರುಗಳು (ಕೂರಕಾ. ೩-೯-೨೩). ೨. ವೈಶ್ಯಪುರುಷನಿಗೆ ಕ್ಷತ್ರಿಯಸ್ತ್ರೀಯಲ್ಲಿ ಜನಿಸಿದವಳು. ೩. ಹೊಗಳುವವಳು; ಸ್ತುತಿಸುವವಳು : ಮಹಾಶ್ವೇತೆಯ ಕಣ್ಣಱಿದು ವೇಣುರವಂಗಳುಮಂ . . . ಮಾಗಧಿಯರ ಜಯಶಬ್ದಂಗಳುಮಂ ಪ್ರತೀಹಾರಿಯರ್ ನಿವಾರಿಸುತ್ತಮಿರ್ದರ್ (ಕಾದಂಬ. ೯೭). ೪. ಒಂದು ಬಗೆಯ ಸಸ್ಯ ಮತ್ತು ಅದರ ಬೇರು; ಹಿಪ್ಪಲಿ: "ಕೃಷ್ಣಾ, ಉಪಕುಲ್ಯಾ, ವೈದೇಹೀ, ಮಾಗಧೀ, ಪಿಪ್ಪಲೀ ಕಣಾ–ಈ ೬ ಹಿಪ್ಪಲಿ" (ಹಲಾಯು. ೦೦೦-೪೬೦). ೫. ಪ್ರಾಕೃತಭಾಷಾ ವರ್ಗಕ್ಕೆ ಸೇರಿದ ಒಂದು ಭಾಷೆ : ಈ ದೃಶ್ಯಕಾವ್ಯದಲ್ಲಿ . . . ಬೇಡರ ಜಾತಿ ಸ್ತ್ರೀಯರು ಮುಂತಾದವರಿಗೆ ಮಾಗಧೀಭಾಷೆಯೂ . . . ವ್ಯವಹಾರಾರ್ಹವಾಗಿ ವಿಹಿತವಾಗಿರುವುದು (ಶಾಕದ. ೯೬೩). ೬. ಒಂದು ಬಗೆಯ ಕಾಡುಮಲ್ಲಿಗೆ ; ಆ ಇದನ್ನು ಸೇವಂತಿಗೆಯೆಂದೂ ಕೆಲವರು ಹೇಳುತ್ತಾರೆ : "ಮಾಗಧೀ, ಯೂಥಿಕಾ_ಈ ೨ ಸೇವಂತಿಗೆ" (ಹಲಾಯು. ೩೪-೩೩). ೭. [ಕಾವ್ಯಮಿೀ] ಕಾವ್ಯದ ರೀತಿಗಳಲ್ಲಿ ಒಂದು : ಕೆಲವರು 'ಲಾಟ', 'ಆವಂತಿ', 'ಮಾಗಧಿ' ಈ ಮೂರನ್ನೂ ಸೇರಿಸಿ ರೀತಿಗಳು ಆರೆಂದೂ ಹೇಳುತ್ತಾರೆ (ಕೈಶಿಶಿ. ೨೨೦). [ಸಂ. ಮಾಗಧೀ]

**ಮಾಗಧೀಲತೆ** (ನಾ). ಒಂದು ಬಗೆಯ ಕಾಡುಮಲ್ಲಿಗೆಯ ಬಳ್ಳಿ : ವರ್ಣಮೂಜಱ ಯೋಗವೆಂದೆನೆ ತೋಱುತ್ತಿರ್ದುದು ಮಾಗಧೀಲತೆ ಕುಸುಮಕೇಸರದಿಂದ ಜನಮನವ (ಲಾಂರಾ. ೦-೯೬). [ಸಂ. ಮಾಗಧೀಲತಾ]

**ಮಾಗರಯ್ಯ** (ನಾ). ಒಬ್ಬಾತನ ಹೆಸರು : ಮಾಗರಯ್ಯ ಪೆಣ್ಣೆ ಪೆಣ್ದಿರನುಡಯ್ಯಲುಮೆಟ್ಟಿನ ತಾಱುಗಳೊಳುಮೊಟ್ಟಿ ಸತ್ತನ್ (ಎಕ. X, ಮುಳಬಾ. ೦೬೦-೦ ; ಶ. 950). [ಮಾಗರ₀ + ಅಯ್ಯ₁]

**ಮಾಗಳಿ**, ಮಾಗುಳಿ (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು; P ಈ ಬೇರನ್ನು ಕೆಲವು ಔಷಧದ್ರವ್ಯಗಳಿಗೂ ಉಪ್ಪಿನ ಕಾಯಿ ಮಾಡಲೂ ಬಳಸುತ್ತಾರೆ: ದೇವದಾರು, ಮಾಗಳಿ, ಕಾಡುಮಾಗಳಿ . . . ಮುಡಿವಾಳ ಇವಿಷ್ಟನು ಪ್ರತ್ಯೇಕ ಎರಡುವರಹ ತೂಕ ಮಜ್ಜಿಗೆ ಯಲ್ಲರೆದು (ವೈದ್ಯಸಾ. I, ೦೨೬) ; ಅಗರಡಕೆ ಎಲೆ ಕಡ್ಡಲೆ ಕಬ್ಬಿಹ ರಾಪ್ಯ ಮಾಗಳಿಭೂಮಿ ಎಂಬುವರು (ಶರಂ. ೫೬೬). **ಮಾಗುಳಿ** : ಎಳಮಾವಿನ ಮಿಡಿ ಮಾಗುಳಿ ಮೆಣಸಿನ ಕರೆ ಬೆತ್ತಲಟ್ಟೆಯಿಾಳೆಯ ಗೊಲೆಯಿಂದಳವಟ್ಟಿರೆ ಲಾವಣಕಂಗಳನಿಕ್ಕಿದರಾಗಳುಬ್ಬಿಯಿಂದಂಗನೆಯರ್ (ಸುಕುಮಾ. ೦೦-೩೦) : ಬೆಳರ್ಗೆಂಪಂ ತಳೆದಲ್ಲ ಮಾಗುಳಿಗಳಂ ಕೂಷ್ಮಾಂಡ ವೃಂತಾಕಕೋಮಳನಾನಾ ಫಳಶಾಕಪಾಕದುಪದಂಶಾನೇಕಮಂ ತಂದು. . . ಬಡ್ಡಿಸಿದರ್ (ಶಾಂತೀಶ್ವ. ೦೩-೬೦) ; ಅದಕುತ್ತಮದ ಕಂಪ ಮಾಗುಳಿ [ಪಾಠಾಂ. ಳ್ಳಿ]ಯ ಬೇರಿನೊಳು ವೊಡೆವೆರಸಿಡುವುದು (ಸೂಶಾ. ೩-೨೬).

**ಮಾಗಳಿಬೇರು, ಮಾಗುಳಿಬೇರ್, ಮಾಗುಳಿವೇರ್** = ಮಾಗಳಿಸಸ್ಯದ ಬೇರು : ಮಾಗಳಿಬೇರು, ಕಾಡುಮಾಗಳಿಬೇರು . . . ಮುಡಿವಾಳ ಇವುಗಳನ್ನು ಪ್ರತ್ಯೇಕ ಎರಡು ವರಹ ತೂಕವನ್ನು ಚೂರ್ಣಿಸಿ ಮಜ್ಜಿಗೆ ಯಲ್ಲರೆದು (ಸಕವೈ. ೦೦೫); ನೈದಲೆವಿಸಳು ಸಹದೇವಿಯುಂ ಬಿಳಿಜಾಲ ಮಾಗಳಿಬೇರಂ ಇವೆಲ್ಲವಂ ಚೂರ್ಣವಂ ಮಾಡಿ ಎಣ್ಣೆಯೊಳಟ್ಟು ಆಯೆಣ್ಣೆ ಕಣ್ಣೊಳ್ ಪೂಸಲು ವಶೀಕರಣಂ (ಕಾಮಶಾ. ೨೬೩); ಮಾವಿನ ಕಾಯ್ಗಳೊಪ್ಪ ವೆಳಗಪ್ಪುರ ಮಾಗುಳಿಬೇರ್ ಸುಧಾರಸು ತೀವಿರೆ ಕಂಪು ಪೊಂಪುಳಿಸುವುಪ್ಪಿನ ಕಾಯ್ಗಳನೇಕಮಂ ಕಳಾಕೋವಿದೆಯರ್ ಕಲಂಬಿಡಿಯಲಿಕ್ಕಿದರ್(ವಳಶಾಂ. ೯೬೨); ಪಿಪ್ಪಲಿ ಚಲ್ಲಗಾಯ್ ಮೆಣಸು ಮಾಗುಳಿವೇರ್ವೊಳೆಯಲ್ಲವೇಲೆ . . . ಅರೆಮಾದುಫಲಂಗಳಾದಿಯಾದುಪ್ಪಿನ ಕಾಯ್ಗಳು ಮಗಮಗಿಪ್ಪವನಿಕ್ಕಿದನಬ್ಜ ಪತ್ರದೊಳ್ (ಲೀಲಾವ. ೫-೬೩). [ ದೇ.॥ ತಮಿ. ಮಾಕಾಳಿ, ಮಾವಲಿ ]

**ಮಾಗಳಿಗೆಣಸು** (ನಾ). ಮಾಗಳಿಸಸ್ಯದ ಬೇರು : ಮಾಗಳಿಗೆಣಸು. ನೆಲಮಾಗಳಿಬೇರು , . . ತಿಗಡೆ, ಪದ್ಮಕ, ಶ್ರೀಗಂಧ, ಇವಿಷ್ಟನೂ. . . ಪ್ರತ್ಯೇಕ ನಾಲ್ಕು ವರಹ ತೂಕವ ಸೇವಿಸಲು ಬಿಕ್ಕಳುನುಡಿ. ನೆನಹು ಇವೆಲ್ಲವೂ ಪರಿಹರವಹವು (ವೈದ್ಯಸಾ. II, ೫೩). [ ಮಾಗಳಿ + ಗೆಣಸು (< ಗೆಟಿಸು) ]

**ಮಾಗಟಿನಾಡು** (ನಾ). ಒಂದು ಊರಿನ ಹೆಸರು : ಶ್ರೀಮನ್ನೊಟಮ್ಬ ಕುಳಾನ್ತಕ ಪೆರ್ಮ್ಮಾನಡಿಗಳ್. . . ಮಾಗಟಿನಾಡ ರಾಜಪೊಳಲ ಬೀಡಿನೊಳ್ ಸುಖಸಂಕಥಾವಿನೋದದೊಳ್ ಪ್ರಿಥುವೀರಾಜ್ಯಂಗೆಯುತ್ತುಮಿರೆ (ಎಕ. VII (R), ನಾಗಮಂ. ೯೯-೬ ; 972). [ ಮಾಗಟಿ$_?$ + ನಾಡು ]

**ಮಾಗಾನ** (ನಾ). ದೊಡ್ಡ ಕಾಡಿ; ಮಹಾರಣ್ಯ : ಹೈಮೆಪಿತೀಸಪ್ಮೇಳದಿನಾ ಮಾಗಾನಂ ಮಹೇಶನಂತೆಸೆದಿರ್ಕುಂ (ವೀರಪ. ೪-೩೪).

[ ಮಾ$_4$ + ಕಾನ$_1$ (< ಕಾನ್) ]

**ಮಾಗಾಯ್** 'ಮಾಂಗಾಯ್' ನೋ.

**ಮಾಗಾಯಿ** 'ಮಾಂಗಾಯ್' ನೋ.

**ಮಾಗಿ** 'ಮಾಗ' ನೋ.

**ಮಾಗಿಣಿ** (ನಾ). ಒಂದು ಬಗೆಯ ಬಳ್ಳಿ; ಗೋಪವಲ್ಲಿ : "ಮಾಗಿಣಿ ಗೋಪವಲ್ಲಿ ಮಾಗಧಿಯೆನಿಕ್ಕು" (ಮಂಗರಾ. ೩೯-೨೯). [ ? ]

**ಮಾಗಿಸು** (ಕ್ರಿ). ೧. ಹಣ್ಣು ಪಕ್ವವಾಗುವಂತೆ ಮಾಡು : ಮಾವಿನ ಹಣ್ಣನ್ನು ಚೆನ್ನಾಗಿ ಮಾಗಿಸಬೇಕು (ರೂಢಿ). ೨. (ಅಲಂ) ಪಕ್ವಗೊಳಿಸು ; ಹದಗೊಳಿಸು : ಇತ್ತೀಚೆಗೆ ನಡೆದ ಘಟನೆಗಳು ಮನಸ್ಸನ್ನು ಚೆನ್ನಾಗಿ ಮಾಗಿಸಿದವು (ರೂಢಿ). [ ಮಾಗು + —ಇಸು$_3$ ]

**ಮಾಗು** (ಕ್ರಿ). ೧. ಕಾಯಿ ಮೊದಲಾದುವು ಪಕ್ವವಾಗು ; ಹಣ್ಣಾಗು ; ಕಳಿ : ಕಾಯಿ ಮಾಗಿದ ಮೇಲೆ ತಾನಾಗಿಯೇ ಉದುರುತ್ತದೆ (ಹಸುಹೂ. ೩೬೦); ಹಣ್ಣುಗಳು ಗಿಡದಲ್ಲೇ ಮಾಗಿದಾಗ ಅವುಗಳಲ್ಲಿ ಜೀವಾತುಗಳ ಅಂಶ ಹೆಚ್ಚು (ಆರುಸ್. ೬೬). ೨. ಗಾಯ. ಹುಣ್ಣು ಮುಂತಾದುವು ಒಣಗು : ಮಾಗಿದ ಗಾಯದ ಗುರುತನು ಕಂಡರೆ ನಗುವುದಿದೇತಕೆ ನೀನು ಗಾಯ ಗಳಿಲ್ಲದೆ ರಣವನು ಗೆಲುವರೆ ವಜ್ರಕಾಯನೆ ಹೇಗೆ ನೀಕು (ಇಂರಾಶ. ೮೨-೦೦೦). ೩. ಪ್ರಭಾವವು ಕಡಮೆಯಾಗು : ಶಕ್ತಿಯು ಕುಗ್ಗು : ಮುಸುಕಿದ ಕುಳಿರೊಳ್ ದೆಸೆಯಾಗಸಮಿಳೆ ಬೆಟ್ಟಡವಿಯೆಂಬಿವೆಂತಾನುಂ ಕಾಣಿಸಲಾರ್ತು ವಿಲ್ಲಮೆನೆ ಮಾಮುಸಗಿರ್ದುದು ಮಾಗೆ ಮಾಗೆಸಕೆವೆಸರಿಳೆಯೊಳ್ (ಕಬ್ಬಿಕಾ. ೬೩ ಕೃದೂ). ೪. (ಅಲಂ) ಪಕ್ವಗೊಳ್ಳು ; ಹದವಾಗು : ಸುಖದುಃಖದ ಏರಿಳಿತದ ಜೀವನದೀ ಚಂಚಲತೆಯ ಕಂಡು ಮನವು ಮಾಗಿದೆ (ಸ್ವರ್ಣ. ೩೪).

[ದೇ.॥ ತುಳು. ಮಾಗು; ತೆಲು. ಮಾಗು, ಮಗ್ಗು]

**ಮಾಗುಂಡ** (ನಾ). ೧. ದೊಡ್ಡಕೊಳ,— ತೀರ್ಥ : ಅಗತವ ಮಾಡಿ ಮಾಗುಂಡ[ಪಾಠಾಂ. ಗುಡ]ವ ಮಿಂದರೆ ತಾ ಕೊಡಬಲ್ಲನೆ ಕೂಡಲಸಂಗಮ ದೇವ (ಬಸವ. ೬೯೫). ೨. ಒಂದು ಊರಿನ ಹೆಸರು : ಕಿರಿಯಮುಗುಳಿ ಮುಟಿವಳ್ಳಿ ನಲ್ಲೂರು ಮಾಗುಂಡ ತೇಗುರು ಆರ ಮಣ್ಣಂ ಬಿಟ್ಟ ಮಂಗಳಂ (ಎಕ. VI, ತಳ್ಕವು. ೯೨-೨೨ ; 959). [ಮಾ$_4$ + ಗುಂಡ$_2$]

**ಮಾಗುಂಡಿ** (ನಾ). ಒಂದು ಊರಿನ ಹೆಸರು : ಭುವನಾಯ್ಯನ ಮಾಗುಣ್ಡಿಯೊಳ್ಕಾದಿದನ್ದು (ಎಕ. III (R), ಹೆಗ್ಗಡ. ೨೩-೮; ಸು. 930) ; ಉಪ್ಪವಳ್ಳಿಯ ಪೋಚಿಗಾಮುಣ್ಡ ವಳಿಯೆಟಿ ಮುದ್ದ ಮಾಗುಣ್ಡಿಯೆಟಿಗ (ಎಕ. V, ಬೇಲೂರು. ೩೦೮-೦೩; 971). [ ? ]

**ಮಾಗುಟ್ಟು** (ನಾ). ಪರಬ್ರಹ್ಮನ ವಿಚಾರವಾದ ರಹಸ್ಯ ; ಪರತತ್ತ್ವ : ಅರಿವರಿವುಗಳ ಹರಳಿನೊಡವೆಗಳ ಹೊಳಿಸುತ್ತ ಆಗಸದ ಬಾಗಿಲಡಿ ಮಾಗುಟ್ಟು ಮೆರೆಯೆ (ಮುರದೇ. ೨೬-೮). [ಮಾ$_4$ + ಗುಟ್ಟು$_1$]

**ಮಾಗುಳಿ** 'ಮಾಗಳಿ' ನೋ.

**ಮಾಗೆ** 'ಮಾಗ' ನೋ.

**ಮಾಘ** (ನಾ). ೧. ಚಾಂದ್ರಮಾನದ ಹನ್ನೊಂದನೆಯ ತಿಂಗಳು : ಆ ಮಾಸವೇ ಚೈತ್ರ . . . ಮಾಘ ಫಾಲ್ಗುಣಮೆಂದು ಹನ್ನೆರಡು ತೆಜನಾಗಿಹುದು (ವಿವೇಕ. ೨೬೩) : ಪಂಚಾಕ್ಷರಾದಿಯಲಿರುವಖಿಳಮಂತ್ರಗಳ ಜಪ . . . ಮಾಘದಲ್ಲಿ ತದಂಗ ಪ್ರಾಜ್ಞಾವೃದ್ಧಿ (ಗಗಶಾ. ೪-೬೪). ೨. ಸಂಸ್ಕೃತದಲ್ಲಿ 'ಶಿಶುಪಾಲವಧ' ಎಂಬ ಕಾವ್ಯವನ್ನು ರಚಿಸಿದ ಮಹಾಕವಿಯ ಹೆಸರು : 'ಸ್ತುತಿಗೆಯ್ವಂ . . . ಶತಪತ್ರಾಕ್ಷಕಥಾಮೃತ ಚ್ಯುತಬುಧಸ್ತೋಮಾಘನಂ ಮಾಘನಂ (ಜಗವ. ೦-೮) ; ಮಾಘ ಓದಿ ಮಗಾ ಕೆಟ್ಟ (ಗಾದೆ). [ಸಂ.]

**ಮಾಘಮಾಸ** (ನಾ). =ಮಾಘ ೧ : ದೊರೆಕೊಂಡ ಮಾಘಮಾಸಂ ಬರೆ ಕೃಷ್ಣಚತುರ್ದಶೀದಿನಂ ಸಮನಿಸೆ (ಆದಿಪು. ೦೬-೫೦) : ಮಾಘಮಾಸದ ನವಿಲಿನಂತೆ ಆದೆ ನೋಡಾ ಅವ್ವಾ (ಸಕವ. II, ೦೯೮-೫೨೬) ; ಆ ದುಃಖ ಸುಖವಾಯ್ತು ; ಮಾಘಮಾಸವು ಹೋಗಿ ಚೈತ್ರವಾಯ್ತು ! (ಶಾಂತಶ. ೬೪-೨೩). [ಸಂ.]

**ಮಾಘಸ್ನಾನ** (ನಾ). ಮಾಗಿಕಾಲದಲ್ಲಿ ಪವಿತ್ರತೀರ್ಥಗಳಲ್ಲಿ ಮುಳುಗು ಹಾಕಿ ಮಾಡುವ ಸ್ನಾನ : ಮಾಘಸ್ನಾನಕ್ಕೆ ಹೋಗಿ, ನಿತ್ಯಸ್ನಾನ ಪೂಜ್ಯ (ಗಾದೆ). [ಸಂ.]

**ಮಾಘ್ಯ** (ನಾ). ಒಂದು ಬಗೆಯ ಮಲ್ಲಿಗೆ ; ಕೋಲುಮಲ್ಲಿಗೆ : "ಮಾಘ್ಯಂ. ಕುಂದಂ — ೨ ಮೊಲ್ಲೇಗಿಡದ ಹೆಸರು. ಇದು ಮಲ್ಲಿಗೇ ಭೇದ, ಕೋಲುಮಲ್ಲಿಗೆ" (ಸಿದ್ಧಾಂತಿ. ೦೨೮). [ಸಂ.]

**ಮಾಚಪತ್ರೆ** 'ಮಾಚಿಪತ್ರೆ' ನೋ.

**ಮಾಚಯ್ಯ** (ನಾ). ಒಬ್ಬಾತನ ಹೆಸರು : ಪೆರ್ಗ್ಗಡೆ ಮಾಚಯ್ಯ ಮಜ್ಗಲದ ಗಾವುಣ್ಡ ಗಜಿಯ ಮೆಟ್ಟಿಬ್ಬಡೆ ಬಾಟಿಸಿದ ಸ್ಥಿತಿಕ್ರಮಮಾವುದ ನ್ನೊಡೆ (ಎಕ. IV (R), ಶಾವಣಾ. ೦೩೮-೬; 965). [ಮಾಚ$_6$ + ಅಯ್ಯ$_{41}$]

**ಮಾಚಿ** (ನಾ). ಸುವಾಸನೆಯ ಎಲೆಗಳಿಂದ ಕೂಡಿದ ಒಂದು ಬಗೆಯ ಔಷಧೀಸಸ್ಯ ; ಮಂಚಿಪತ್ರೆ : "ವಿಟಲೆ ಮಾಚಿಯೆನಿಕ್ಕು" (ಮಂಗರಾ. ೪೦-೩೦). 'ಮಾಚಿಪತ್ರೆ' ಪರಾ. [ಸಂ. ಮಾಚೀ]

**ಮಾಚಿಗ** (ನಾ). ಒಬ್ಬಾತನ ಹೆಸರು : ಎಚಿಯಂಗಪ್ಪನ ಮಗಂ ಮಾಚಿಗಂ (ಎಕ. III (R). ಹಗ್ಗದ. ೫೬-೦೦; ೧೦೦ ?). [ಮಾಚಿ₀ + — ಇಗ]

**ಮಾಚಿಪತ್ರೆ.** ಮಾಚಪತ್ರೆ (ನಾ). = ಮಾಚಿ : ಪಶ್ಚಿಮಘಟ್ಟಪ್ರದೇಶ ಮಾಚಿಪತ್ರೆಯು ತೌರು . . . ಸುಮಾರು ಅಗಲವಾದ ಎಲೆಗಳಲ್ಲಿ ಸುವಾಸನೆಯ ಎಣ್ಣೆಯನ್ನು ಸ್ರವಿಸುವ ಕಣಗಳಿರುತ್ತವೆ (ಶಾಸಗಿ. ೩೮). **ಮಾಚಪತ್ರೆ** : ಮಾಚಪತ್ರೆ, ಹೀರೆತೊಕ್ಕು ಇವುಗಳೆರಡನ್ನೂ ಉಂಡೆಮಾಡಿ, ಕೆಂಡದ ಮೇಲೆ ಇರಿಸಿ ರಸ ತೆಗೆದುಕೊಂಡು ಸಕ್ಕರೆವೆರೆಸಿ ಕೊಡಲು ಜ್ವರತಾಪ ಮತ್ತು ದಾಹ ಇವೆರಡೂ ನಿಲ್ಲುವುವು (ಸಕವ್ಯ. ೧೦೪). 'ಮಂಚಿಪತ್ರೆ' ಪರಾ. [<ಸಂ. ಮಾಚೀಪತ್ರ]

**ಮಾಚು** 'ಮಾಜು₁' ನೋ.

**ಮಾಜನ** (ನಾ). ಮಹಾಜನ : ಸ್ವಸ್ತಿಶ್ರೀ ಸಬೆಣ್ಣಾತ ಮಾಜನ ಮುವತ್ತಿರ್ಚ್ಛಾರ ಅಳ್ವೊಡುಗೆಯನ್ ಕೇಸರಿ ತೊಱುವಾಳ್ವನಾ ಮಗನ್ ಆಲನ ತೊಱು ಇಕ್ಕಿಸಿ ಬಿಟ್ಟಾನ್ (ಎಕ. X (S), ಮುಳಬಾ. ೦೫೬-೨ : ೪ನೆಯ ಶತ); ಮಹಾಜನ — ಮಾಜನ, ಮಹಾದಾನಿ — ಮಾದಾನಿ (ಕಮುಢ. ೨೯೦ ಕ್ರ ಟೋ); ಈ ಪುಣ್ಯಕಥೆಯ ಕೇಳಿದ ಮಾಜನ[ಪಾಠಾಂ. ಮನುಜ]ರಿಗೆಲ್ಲ ಪಾಪ ವಿಮೋಚನಾಗುವುದು (ಅಬ್ಯರೂ. ೦-೨೫). [<ಸಂ. ಮಹಾಜನ]

**ಮಾಜರು** 'ಮಹಜರು' ನೋ.

**ಮಾಜಾತ** (ನಾ). ಲಕ್ಷ್ಮಿಯ ಪುತ್ರ ; ಮನ್ಮಥ : ಜೆಱಗಾಗಿ ನಿಶಾ ತಪೋಗಾತ್ರಧರನನೆಸಲಱಿದ ಮಾಜಾತನನೀಕ್ಷಿಸಿ ಗಗನದೊಳಾತುರಿಸುವ ಹುಯಜರ್ಗೆ ನಾರದನೆಂದಂ (ಗಿರಿ. ೬-೩೮). [ಸಂ].

**ಮಾಜಾರಿ** (ನಾ). ಲಕ್ಷ್ಮೀಪುತ್ರನಾದ ಮನ್ಮಥನ ವೈರಿ : ಶಿವ : ರಾಜನ ಮೋಹದ ಪೂಜಾಗಜವನೋರ್ವ ಮಾಜಾರಿಜಕುತ ಬೇಡಿವಡೆ (ಭೈರವೇ. ೪-೧೭೦). [ಸಂ.]

**ಮಾಜಿ** 'ಮಾಜೀ' ನೋ.

**ಮಾಜಿಕಾಲ** (ನಾ). ಹಿಂದಿನ ಕಾಲ : ಪೂರ್ವಕಾಲ : ಬೀಜಗಳ ಕೊಡು ನಮಗೆ ಮೋಜಿಲ್ಲ ಬೊಮ್ಮಯ್ಯ ಮಾಜಿಕಾಲಲ್ಲ ಬರಗಾಲ (ಕವ್ಯಶಾ. ೨೨೭). [ಮಾಜಿ (<ಮಾಜೀ) + ಕಾಲ]

**ಮಾಜಿಸು.** ಮಾಂಜಿಸು (ಕ್ರಿ). ೧. ನಿವಾರಿಸು : ಇಲ್ಲದಂತೆ ಮಾಡು : ಸಾವಂ ಮಾ[ಪಾಠಾಂ. ಮಾಂ]ಜಿಸು ಜೀವರ ನೋವಂ ಪರಿಹರಿಸು (ವೃಷಪು. ೩೪-೦೦೭). ೨. ತೋರಗೊಡದಿರು : ಮರೆಮಾಡು : ಕ್ಷತ್ರಿಯ ಬೀಜವೃತಾಪನಾದಡೆ ಬಲಿವನವನವನಿಯನರಿದು ಆಗಮಾ ರೂಪ ಮಾಜಿಸ ಬಹುದುಱಾ ಸಂತಾಪವ್ಯಾಕೆ (ಜಕಣಾ. ೨೦-೦೪); ನೀತಿವಿನಯಂಗಳ ಮಾಜ್ಜಿಸಿ (ಅಜಿತ. ೨೦-೦೪). **ಮಾಂಜಿಸು** : ೨. ಅಂತು ನರರ್ಗೆ ಮೊದಲೊಳಂತು ಚಿಂತೆಯೊದವಿದೊಡಂ ಮಾಂಜಿಸಲ್ಕೆಂದು ಪೊಸಸುಡಿಯ ಬನ್ನಣಮಂ ಪುಸಿನಗೆಯ ಸನ್ನಣಮಂ ತೋರ್ಪಡಿಸುತಮುದಂ ಮಱೆಗೈವುದುಂಟು (ರಾಮಾಶ್ವ. ೦೦-೦೮). [ಮಾಜು₁ + — ಇಸು₃]

**ಮಾಜೀ,** ಮಾಜಿ (ಗು). ೧. ಹಳೆಯ; ಹಿಂದಿನ : ಮತ್ತೂ ಅವೇ ಮಾಜೀ ಹಾಡು ಹಾಡತಾರೆ. ಮತ್ತೆಲ್ಲಿಯಾದರೂ ದೂರದೇಶದಿಂದ ನಾಯಕಿಣಿಯರನ್ನು ತರಿಸಿದ್ದರೆ ನೆಟ್ಟಗಾಗುತ್ತಿತ್ತು (ವೇಜಶಾ. ೧೫೪). **ಮಾಜಿ** : ೨. ಅಧಿಕಾರ. ಪದವಿ ಮುಂತಾದುವುಗಳಿಂದ ನಿವೃತ್ತಿಹೊಂದಿದ ; ವಿಶ್ರಾಂತ : ಮಾಜಿ ಆಮಿಲ ಲಕ್ಷ್ಮೀನರಸೈಗೆ ಹೇಳಿದ್ದರಿಂದಾ (ಮೈ ಅ. ೦೯೨೯, ೯೪-೦೦, 1813); ಮಾಜಿ ಆಮಿಲರ ಕಾಲದಲ್ಲಿ ಶೆಟ್ಟಿ ವರ್ತಕರು ಮೊದಲಾದವರು ಸರ್ಕಾರಕ್ಕೆ ಜಾವತಿ ಮಾಡಿದ್ದು (ಮುಶಾಮಂ. II, ೩೭); ಮುಖಿಭಂಗಿತರಾದ ಕೆಲವು ಮಾಜಿ ಸಭಾಸದರು ತೊಂದರೆ ಕೊಟ್ಟರೆ ಹೇಗೆ ? (ಅಪಶಾ. ೨೩೦). [←ಅರ. ಮಾಝಿ; ಹಿಂ. ಮರಾ. ಮಾಜೀ]

**ಮಾಜು₁,** ಮಾಂಜು₁, ಮಾಚು (ಕ್ರಿ). ೧. ಕಾಣದಂತಾಗು : ಮರೆಯಾಗು ; ಅಡಗು : ಜೂಜಾಟಕೆ ಸೂಳೆಬಂಟಕೆ ರಣದ ಸಂಪಾಜ ಪೆರ್ಗಡಿಗಳ ಚರ್ಚೆ ರಾಜವೀಧಿಯೊಳಿಱಿದಾಡುವ ಸಂದಣಿ ಮಾಜದು ನಿತ್ಯಕೃತ್ಯದಲಿ (ಕೋಹಶ. ೨೦-೨೩); ವಳಿಗಳುಂ ಮಾಜಿದುವು ಒಪ್ಪದಿಂದಾಸ್ಯ ಶಶಿಕಳೆಯನಂಗೀಕರಿಸೆ . . ಮನಂ ಮಾಂದ್ಯತೆಯನಾಂತುದಾ ತನ್ವಿಯಳಿ ಗತುಳಗರ್ಭೋದಯದೊಳು (ವಂಕಾರಾ. ೦-೯-೫). ೨. ನೆನಪಿನಲ್ಲಿ ಉಳಿಯದಿರು ; ಮರೆತುಹೋಗು : ಈ ಜಗದೊಳಹೊರಗೆಲ್ಲಲ್ಲಿ ತುಂಬಿಹ ತೇಜವಾನೆಂದರಿದರಿವನು ಮಾಜ ವೈಪುರೆದಿರೆ ನಿಃಶ್ರೇಯವಹುದೆಂದು ರಾಜಯೋಗವ ತಿಳಿಸಿದರಿಂದೆ (ಕೃಕವ. ೪-೦-೪) ; ಮಾಜದೇ ಸ್ವೇಪನ್ನಿಸಲ್ಲಿ ರಸಗುಲ್ಲಾ ತಗೊಂಡಿದ್ದೆ (ಸಾಹೇಬ್. ೩೫). ೩. ವಾಸಿಯಾಗು ; ಮಾಯು : ಓರಿಯುರಸಿಯ ಮನಸ್ಸಿನ ಗಾಯ ಮಾಜುವಂತಹ ಮಾತು ಜಮ್ಮಲದೇವಿಯಾತ್ಮಣಿಂದ ಅಪರೂಪವಾಯಿತು (ಸವತಿ. ೨೦೭). ೪. ಅಡಗಿಸು ; ಮುಚ್ಚು ; ಮರೆಮಾಡು : ರವಿ ಮುಗಿಲ ಮಱೆಗೊಂಡೊಡಂ ಬೆಳಗು ಲೋಕಮಂ ಧವಳಿಸುವ ತೆಱದಿ ನಿಜಮಂ ಮಾಜಿ ಕೃತಕದೊಳಗವಿಪೊಡಂ ಹಳಹಳನೆ ಹೊಳೆಹೊಳೆದು ದೇವಕಳೆ ಮಸಕಿ ಮಂಗಳವಿತ್ತುದು (ಸಿದ್ಧರಾ. ೨-೨೪) ; ಬಿಸರುಹದಳಲೋಚನೆ ಕೇಳು ನಿನ್ನಯ ಪೆಸರಾವುದೆಲ್ಲಿಂದ ಬಂದೆ ಅಸಮಾಕ್ಷನಾಣೆ ಮಾಜದೆ ಪೇಳು (ವೋಹಶ. ೦೦-೦೩) ; ಏಳಂಜಬೇಡಿನ್ನು ಮಾಜದಿರ್ತನ್ನಾಣೆ ಹೇಳು (ಕೈವಿಶಾ. ೦೮-೪೫). ೫. ಅಳಿಸು ; ತೊಡೆದು ಹಾಕು : ಧರ್ಮಮಾರ್ಗವ ಪೊಳ್ದು ಸಾರಿ ನಿರ್ಲಜ್ಜೆಯುಂ ಸಾಧ್ವಿಯರ ಪಜ್ಜೆಯುಂ ಮಾಜಲನುಗೈದೆ ಬರಿದೆ (ವಂಕಾರಾ. ೨-೦೨-೩೦). ೬. ತಪ್ಪಿಸಿಕೊಳ್ಳು ; ನುಣುಚಿಕೊಳ್ಳು : ನೇಜೆಯುದಿಱಿತಕೆ ಚಿಗಿದು ಕುದುರೆಯಿಂದ ಮಾಜದೆ ಬೀಳ್ವ ರಾವುತರ ವಾಜಿಯ ಓಡಿದು ಮೂಗರಿದವರನು ಯಮರಾಜನಾಲಯಕಟ್ಟಿದರು (ಕಂಪವಿ. ೩-೭೯). ೭. ಹಿಂದೆಗೆ ; ಹಿಂಜರಿ : ತೇಜಿಗಳನು ಕುಣಿಸುವರು ಕಲಭವನು ಮಾಜದೆ ಬೀದಿವರಿಸುವ ರಾಜಕುಮಾರರ ಸೌಭಾಗ್ಯ ನೆಱೆ ವಿಭ್ರಾಜಿಸಿತ್ತಾ ಕೇರಿಯೊಳಗೆ (ಕಂಪಶಾ. ೭-೦೦). **ಮಾಂಜು₁** : ೧. ಸುಕೃತಂ ಸ್ವರ್ಗ ಸುಖಕ್ಕೆ ಕಾರಣಮೆನಲ್ಕತ್ಸೌಖ್ಯಮೇಂ ನಿತ್ಯಮೋ ವಿಕೃತಂಗೊಂಡಱಿವಂದ ಬಲ್ಲನಿಸದೋ ಸ್ವಪ್ನಂಬೊಲೇಂ ಮಾಂಜದೋ ಪ್ರಕೃತಿ ಪ್ರಾಪ್ತಿಗೆ ನೂಂಕದೊ ಓರಿವದೇಂ (ರತ್ನಾಕ. ೩೭) ; ತೋಡುಂಬೆಟ್ಟಿನ ಕಾಲ್ಪೊನಲ್ ಗೊಹೆಯೊಳೇ ಮಾಂಜಿರ್ಪ್ಪ ಮಾರಾಂತಿರಲ್ (ಪ್ರಸೂಮು. ೦-೯೯). ೪. "ಮಾಂಜು— ಅಪಲಾಪೇ(ಮರೆಮಾಚು)"(ಕಶಬ್ದಾ); ಅದನೆಲ್ಲಂ ಮಾಂಜದಿರ್ ಚಿತ್ರದೊಳ್ (ಶಿಪ್ಪುಕ. ೫-೫-೨೩೦) : ಮಂಜುಳೆ ನಿನ್ನ ಪೊಂಜೆಳೆಯೊಡಲ್ ಕಡುಬಾಡಿದೆ ಬಾಂಜೆ ಮಾಂಜದಿರ್ (ಸಕಶಿ. ೩-೩೦) : ಮುನಿಯ ಬೆಸುವುದೆನಗೆ ತಮ್ಮಾ ಘನಪದಾಂಬುಜವಿಲ್ಲಿಗೈತಂದನುವನಿನಿಸುಂ ಮರೆಯ ಮಾಂಜದೆ (ರಾಜಶೇಸಂ. ೦-೫-೬). ೫. ತರಳೆಯ ತ್ರಿವಳಿಯ ಪೋಲ್ಪೆಯ ತರಂಗಮಂ ಪಡೆವೆನೆಂದು ಸುರನದಿ ಪಲವುಂ ತೆರೆಗಳನೆ ಪಡೆದು ಪಡೆಯದೆ ಸರಿದೆರೆಯುಂ ಮಾಂಜಿ ಪೆಗುಳ್ದು ಪಡೆದಪುದಿನ್ನುಂ (ರಾಜಶೇ. ೭-೩೭) : ಈ ಶಾಸನವು ನಮ್ಮ ಭಯದಂತೆ ಅದೇ ಆಗಿದ್ದರೆ, ಇವನ್ನು ಮಾಂಜಿ ಲಯಮಾಡಿ ಇಲ್ಲವೆನಿಸಿ ಬಿಟ್ಟರೆ ಸಾಕು (ಶಾಂಕೃಶ. ೦೬-೪). ೬. ಪಂಜರದೊಳಗಿದ್ದು ನಿನಗಿಷ್ಟ ಯೆನದಿರು ಮಾಂಜಿ ನೀನಗಲ್ವಾಗ ನಿನ್ನ ಹೊಂಬಾಳೆಮೈಯಳ ದಂತಕಾಂತಿಯ ಹೊನ್ನ ಪಂಜರದೊಳು ಕೂಡಿಸುವೆನು (ಶಕಶ. ೯-೪೭). **ಮಾಚು** : ೪. ಎಲೆ ವಿಮಲಲೋಚನೆ ವಿತರ ಯೋಚನೆ ಏನೆಂಥ ಯಾಚನೆ ದೀನೆ ಮಾಚದೆ ಮನವನು ಪೇಳು ನಿನ್ನಿನಿಯನು ಬಹನೆಂದು ಬರಲಿಲ್ಲವೇನು (ಅಂಜಾಶ. ೦೩೦-೬೪). ೮. ಅಡಗಿಸಿಕೊಳ್ಳು ; ಕಾಣದಂತೆ ಮಾಡು : ಪಂಡಿಗೆ

ಬೆತ್ತ ಹಿಡಿಯುವುದಕ್ಕೆ ಮಂಡೆ ಮಾಚಿ ನಾಚುತಿದ್ದ ಹೆಂಡತಿಸಂತತಿ ಸಾವಿರ ವಾಗಲು ದಂಡಿಗೆ ಬೆತ್ತ ಹಿಡಿಸಿದಳಯ್ಯ (ಶಿರಂಡ. ೦-೯೩-೦) ; ಹಿಗ್ಗನ್ನು ಮಾಜುವುದು ಹೆಣ್ಣಿನ ಸ್ವಭಾವ (ಅರಪೂ. ೦೦೯).

[ದೇ.॥ ತಮಿ. ಮಾಯ್; ತುಳು. ಮಾಜಾವು, ಮಾಜು; ತೆಲು. ಮಾಯು =ಹಾಳಾಗು, ನಾಶವಾಗು ; ಕೋತ. ಮಾಂಜ್ ; ತೊದ. ಮೋಜ್, ಮೋರ್ಝ್]

**ಮಾಜು₃**, ಮಾಂಜು₂ (ನಾ). ಮರೆಮಾಚುವಿಕೆ ; ಮೋಸ ; ಠಕ್ಕು : "ವಂಚನೆಗೆ ಮಾಜೆಂದು ಪೆಸರಕ್ಕು" (ಕಬ್ಬಿಕೈ. ೩೭). **ಮಾಂಜು₂** : "ಮಾಂಜೆಂದು ವಂಚಿಸಿದುದು" (ಕಕಶಾ. ೭೭-೩೦೩). [ < ಮಾಜು₁ ]

**ಮಾಟ₁** (ನಾ). ೧. ಮಾಡಿದ ಕೆಲಸ ; ಕೈಗೊಂಡ ಕಾರ್ಯ : ಕೆರಕುಂ ತುಱುಂಬುಂ ತೊನ್ನುಂ ಶರೀರದೊಳ್ಪೋಜು ತಂತ್ರದಿಂ ಕಿಡಿಸದೆ ನಾಗರ ಮಾಟವೆಂದು ಕಿವಿಯೊಳು ಮುಱದಿಟ್ಟುಂ ಪಲರುಮಾರ್ಚಿಪರ್ಪುತ್ತುಗಳಂ (ಸಮುಶ. ೯-೭೭): ಒಡಿಪುದು ಕರ್ಪುವಿಲ್ ತುಡುವುವೈದಲರಂಬಿವನೇಕೆ ನಚ್ಚಿ ನೀಂ ತೊಡರ್ವೆ ರತಿಪ್ರಿಯೋಪಕರಣಂಗಳಿವೇವುವೊ ಕಾಳೆಗಕ್ಕೆ ನೀಂ ಪ್ಪುಡಸೋಳದಿರ್ಪೆ ರೂಪುಗಿಡುವಂದಿವು ಮಾಡಿದ ಮಾಟಮಾವುದು (ಜಗು. ೦೬-೩೭) : ಮಾತು ಕಿರಿದಾದೊಡಂ ಮಾಟವಪ್ಪುದು ಹಿರಿದು (ಹಪ್ಪರ. ೦೩-೮). ೨. ರಚನೆ; ನಿರ್ಮಾಣ : ಲಲಿತೋನ್ನತಮಣಿ ಮಯಕೂಟದಂದಮುದು ಪಲವುಂ ದೇಸೆಯ ಮಾಟದಂದಂ (ಅರಪು. ೯-೩೦ ೬೧೪). ೩. ಬಟ್ಟೆಯು ಎಳೆಗಳ ರಚನೆ ; ನೆಯ್ಗೆ : ಸೀರೆ, ಬಟ್ಟೆಗಳ ಬಣ್ಣ ಮತ್ತು ಮಾಟ ನಮಗೆ ಒಪ್ಪುತ್ತದೆಯೋ ಇಲ್ಲವೋ ಎಂದು ವಿಮರ್ಶೆ ಮಾಡಬೇಕು (ಗೃಹಶಾ. ೭೬). ೪. ಆಕಾರ ; ಸ್ವರೂಪ ; ಆಕೃತಿ : ಆ ಮೊಗದ ಮಾಟ, ಕಣ್ಣುಗಳ ಹೊಳಪು . . . ಇವೆಲ್ಲಾ ರೇವಕ್ಕನವು (ತಾಕುತ್ರ. ೦೦೨): ಅಸ್ತವ್ಯಸ್ತವಾದ ತಳುಸೀರೆಯಲ್ಲಿ ಅವಳ ಮೈಯ ಮಾಟ ಎದ್ದು ಕಾಣುತ್ತಿತ್ತು (ಕೂಕಸ. ೩). ೫. ಚೆಲುವು ; ಅಂದ : ಶೋಭೆ : ವರದಿಗ್ವನಿತೆಗೆ ಮಾಟದ ಕುರುಳಾ ತ್ರ್ಯಂಭುವನಕಾಂ[ತೆಗಂ] ವಲ್ ಕಂಠಾಭರಣಮೆನೆ ಪರೆದ ತನ್ನಧ್ವರಧೂಮದೆ ಕರಿದು ಮಾಡಿದು ನಿಜಯಶಮಂ (ಶಾಶಭಾ. ೦೪-೯೪) ; "ಮಾಟದ _ ಕೃತಕ" (ಕಂಶಂ. ೫೭೯). ೬. ಅಲಂಕಾರ: ಈ ದೇವರ್ಗೆ ನಿವೇದ್ಯಕ್ಕಂ ದೇಗುಲದ ಮಾಟಕ್ಕಂಮಾರಾನುಮುನುಕೂಳರಪ್ಪವರ್ ಮಂಜೇಶ್ವರದೇವರ ಪುನಃ ಪ್ರತಿಷ್ಠೆಗೆಯ್ದುನಿತು ಪಲಮನೆಯುಸ್ಟಿವರ್ (ಎಕ. VII (S). ೩೯೩೦. ೩೩೩-೯; 1008). ೭. ಒಯ್ಯಾರ : ಒನಪು ; ವಿಲಾಸ : ತವೆ ಸಾಪತ್ನಿ ಯಾರಾಟ ಸಾಲ ಮಧುಪಾನಂ ಬೇಟದಾ ಜಾರಿಣೀನಿವಹಂ ಮಾಡುವ ಮಾಟ . . . ಇಂತೆಲ್ಲ ಮುಂ ಸವಿಯಾಗಂತ್ಯದಿ ಕಪ್ಪವೈ (ಸೋಮೇಶ. ೨೪) ; ನಾಟ ನಲಿದುದು ಚಿತ್ರವೀ ನಟನಾಟಕನ ಸಿಕ್ಕಿಸುವ ಬಗೆಯಲಿ ಮಾಟ ಮಿಕರಿಸಿ ಕಾಣಲಾದುದು ಮತ್ತೆ ಮಾಯೆಯಲಿ (ಶ್ರೀಕುರಂ. ೭-೩೭). ೮. ಪ್ರಮಾಣಬದ್ಧವಾದುದು ; ಔಚಿತ್ಯಪೂರ್ಣವಾದುದು : ವ್ಯಾಯಾಮಕ್ಕೆ ತಕ್ಕಂತೆ ಮಾಟವಾದ ಎದೆ ಮತ್ತು ನಡು (ಶೀಕುಶಾ. ೩); ಅವರ ಪ್ರತಿಯೊಂದು ಅಂಗವು ಮಾಟವಾಗಿ ಸುಂದರವಾಗಿ ಸದೃಢವಾಗಿತ್ತು (ಶಂಶೀ. ೦೦). ೯. ರೀತಿ ; ಬಗೆ ; ವಿಧಾನ : "ವಿಧಿಃ, ವಿಧನಂ, ವಿದಥನೀಯಂ, ವಿಧಾನಂ, ಈ ೪ ಮಾಟಂ" (ಕಾಶಕ್ಕ. ೨೨೦); ಎನ್ನ ಮಾಟ ಕುರುಡ ಸಭೆಯಲ್ಲಿರ್ದ ನಗೆಯ ನಕ್ಕಂತಾಯಿತ್ತು (ಪೋಳಿವಾ. ೦೦-೩೩); ಪಲವು ಬಗೆಯಂ ಮಾಡಿ ಬೆಂದ ಕುಂಬಳಕಾಯ ಕೆಲವ ನಾಲ್ಕೆಂಟು ಮಾಟದ ಕೊಣಬ ಮಾಡುವುದು (ಸೂಪಶಾ. ೫-೩೯); ಎತ್ತ ಬಲ್ಲರ್ಸುಜನರೆಲೆ ಪಾರ್ಥ ಕಪಟಿಗಳ ಚಿತ್ತದೊಳ್ಪುದುಗಿರ್ದ ಮಾಟಮಂ (ಕೃಷಿಭಾ. ೨೯-೩೭). ೧೦. ನಡವಳಿಕೆ ; ಆಚರಣೆ ; ವರ್ತನೆ : ನುಡಿಯೊಂದು ಮಾಟವೊಂದೆನಿಸಿದ ಮಾನವಂಗೆನಗೆ ದೇವಿ ಹಸಾದಮನೇಕೆ ಮಾಡಿದಳ್ (ಶಾಪಂಶಾ. ೨೭೦); ಒಲವಿಲ್ಲದ ಪೂಜೆ ನೇಹವಿಲ್ಲದ ಮಾಟ ಆ ಪೂಜೆಯೂ ಆ ಮಾಟವೂ ಚಿತ್ರದ ರೂಪು ಕಾಣಿರಣ್ಣಾ (ಬಸವ. ೦೨೭): ಭೂತದಯೆಯಿಲ್ಲದನ ಮಾಟಂ . . . ಪ್ರವರ್ಧನೆವಹುದೆ ಲೋಕದೊಳು (ಬಸಪು. ೩೭-೩೯). ೧೧. ಕಣ್ಕಟ್ಟು; ಇಂದ್ರಜಾಲ : ತಲೆ ನೆಲದೊಳು ರುಳ್ದೊಡಂ ಮೆಯ್ಗಲಿಯೊರ್ವಂ ಒಡಿದು ತಲೆಯನಿಟ್ಟಟ್ಟೆಯೊಳಗ್ಗಲಿಸಿದ ಮುಳಿಸಿಂ ಮಾಟದ ತಲೆಯಿಟ್ಟಾಡುವನನಿನಿಸು ಪೋಲ್ತನುಗೆಯ್ದಂ (ಕಂಶಭಾ. ೦೦-೬೩) ; ಭವದೀಯ ಪ್ರಸಾದದಿನೆನಗೆ ಬಲ್ದಲಮುಪ್ಪ ಬವರ ವಿಲ್ಲದಾವನಾನುಮೊರ್ವಂ ಮಾಯಾವಿಯ ಮಾಟಮಕ್ಕುಮದು ಕಾರಣಂ ಬೇಗಂ ಬಿಜಯಂಗೆಯ್ವುದು (ಕಂಠಾಮಾ. ೯-೦೦೪ ವ). ೧೨. ಕೃತಕ ವಾದುದು : ಕೃತ್ರಿಮವಾದುದು : ಮಾಟದ ಮುಡಿಯಂತೆ ಕಟ್ಟಿದ ಪಲ್ಲಂತೆ ಪೀಲಿಯ ಕಣ್ಣಂತೆ . . . ಮರುಳ ಕೋಡಿನಂತೆ (ರಮಾಶಪ್ಪ. ೮-೯೪). ೧೩. ಮಂತ್ರತಂತ್ರಗಳಿಂದ ಇತರರಿಗೆ ಕೇಡನ್ನು ಬಯಸಿ ಮಾಡುವ ಹಿಂಸಾಕರ್ಮ : ಅಭಿಚಾರ : ದಾಯಾದಿಗಳು ಮಾಡಿಸಿರುವ ಮಾಟದ ದೆಶೆಯಿಂದ ಮೂವರು ಮಕ್ಕಳಿಗೂ ಒಂದೇ ಸಾರಿ ಖಾಯಿಲೆಯಾಗಿದೆ (ಕಂಶಕಂ. ೩೯) ; ಈ ಅಯೋಗ್ಯದೊರೆಗೆ ಮಾಟವನ್ನು ಮಾಡಿಸಿಯೋ ವಿಷವನ್ನಿಡಿಸಿಯೋ ಕೊಲ್ಲಿಸಿದರೆ ಮುಂದೆ ಇಮ್ಮಡಿರಾಜಒಡೆಯರಿಗೆ ಪಟ್ಟವಾಗುವುದು (ಜಶಕ. ೩೩).

**ಮಾಟಕಾಟಲ**, **ಮಾಟಕಾಟ್ಲೆ** = ಅಭಿಚಾರಕ್ರಿಯೆ : ನೀನು ಮಾಟ ಕಾಟಲಗಳನ್ನು ಬಲ್ಲೆಯಾ ? (ಅದಾಕ. ೪೭); ನಿಮ್ಮ ತಂದೆ . . . ಕಾಡಿನ ಯಕ್ಷಿಣಿಯ ಜೊತೆಯಲ್ಲಿ, ತನಗೆ ಜಯವಾಗಲೆಂದು, ಮಾಟಕಾಟ್ಲೆ ನಡೆಯಿಸಿದನಂತೆ (ಅದಾಕ. ೫೬). **ಮಾಟಪೋಟ** = ಇತರರ ಕೇಡನ್ನು ಬಯಸಿ ಅಭಿಚಾರಕ್ರಿಯೆಯನ್ನು ಮಾಡುವ ದುಷ್ಟ: ತಾಟಕನುಯಿವನಲ್ಲ ಜಗದೊಳು ಕೂಟಸಾಕ್ಷಿಯ ಪೇಳ್ವನಲ್ಲವು ಮಾಟಪೋಟನು ಅಲ್ಲ ಇವನಿಗೆ ಸಾಟಿ ಯಾರಿಲ್ಲ (ಹಮತ. ೦೦೪). **ಮಾಟ ಮಾಡಿಸು** = ಮಾಯಾಮಂತ್ರ ಗಳಿಂದ ಇತರರಿಗೆ ಕೆಟ್ಟದಾಗುವಂತೆ ಮಾಡು; ಅಭಿಚಾರ ಮಾಡಿಸು : ಅವನಿಗೆ ಆಗದವರು ಬೇಕಾದಷ್ಟು 'ಮಾಟ' ಮಾಡಿಸಿದರಂತೆ (ಹಪ್ಪೂರು. ೦೯೭); ಮೋಹನನ ಮೇಲೆ . . . ಮಾಟ ಮಾಡಿಸಿ ಆಗಲೇ ಕೆಲವು ತಿಂಗಳಾದವು (ಕಂಶಕಂ. ೦೭೬). **ಮಾಟಮಾಡು** = ೧. ಕಣ್ಕಟ್ಟುಮಾಡು ; ಇಂದ್ರ ಜಾಲವನ್ನು ಹೂಡು : ಆ ದಂಡೆಯು ಮಾಟ ಮಾಡಿದಂತೆ ಕ್ಷಣಕ್ಷಣಕ್ಕೆ ಬದಲಾಗುವ ಹಾಗೆ ಅವಳಿಗೆ ಕಾಣಿಸಿತು (ಕುಂಶದು. ೭-೦೫೩); ಮಂತ್ರಿ ಗಳೇನು ಮಾಟಮಾಡಿ ಆಹಾರ ಒದಗಿಸೋಕೆ ಸಾಧ್ಯವೇ ? (ಶಂದಕೋ. ೦೩). ೨. ಮಂತ್ರತಂತ್ರಗಳಿಂದ ಇತರರಿಗೆ ಕೇಡುಂಟುಮಾಡು: ಶೂನ್ಯ ಮಾಡು : ಕೇರಳದ ಮಾಂತ್ರಿಕರು ಮಾಟ ಮಾಡುವುದರಲ್ಲಿ ಹೆಸರುವಾಸಿ ಎಂಬ ಭಾವನೆ ಇದೆ (ಕಾ೩೩).

[< ಮಾಡು₁./ ಮಲ. ಮಾಟ್ಟ, ಮಾಟ್ಟು; ತುಳು. ಮಾಟ]

**ಮಾಟ₂** 'ಮಾಡ₁' ನೋ.

**ಮಾಟಕ** (ನಾ). ಕಣ್ಕಟ್ಟು ಮಾಡುವವನು; ಐಂದ್ರಜಾಲಿಕ : ನೋಟಕ, ಬೂಟಕ, ಮಾಟಕ ಏನೇನೋ ಮಾಡಿ ಸೂತ್ರವ ಹಿಡಿದು ರಂಗವ ತುಂಬಿದೆ ಹೇ ಧೀರಾ ! (ಸೂರ್ಯಪಾ. ೬-೭). [ಮಾಟ₁ + —ಕ₃]

**ಮಾಟಕೂಟ₁** (ನಾ). [ವೀಶೈ] ಸೇವಾಕಾರ್ಯದಿಂದ ಹೊಂದುವ ಸಂಯೋಗ: ಮಾಟಕೂಟವೆಂಬ ಕೀರ್ತಿಗೆ ಸಿಲುಕಿ ಜಂಗಮವೆ ಲಿಂಗವೆಂಬುವ ಮಜ್ಜದೆಯಲ್ಲಾ (ಅಪತಂ. ೨೨೪-೦೦೦೪): ಮಾಟಕೂಟ ಬಸವಣ್ಣಂಗಾಯಿತ್ತು ನೋಟಕೂಟ ಪ್ರಭುದೇವರಿಗಾಯಿತ್ತು, ಭಾವಕೂಟ ಅಜಗಣ್ಣಂಗಾಯಿತ್ತು (ಪಾಹಾರೇ. ೨. ೭೭-೦೯೩) ; ನಿನ್ನ ಮನದಲಿ ಮಾಟಕೂಟದ ಬುದ್ಧಿ ಮಮಕರಿಸೆ ನನ್ನ ಹಸು ಹಿಂದುಂಡಿತು (ಶ್ರೀಕುರಂ. ೨೩-೫೦). 'ನೋಟಕೂಟ' ಪರಾ. [ಮಾಟ₁ + ಕೂಟ₂]

**ಮಾಟಕೂಟ$_2$** (ನಾ). ಅಂದವಾದ ಗೋಪುರ, – ಶಿಖರ ಆ ಪಟ್ಟಣಂದಂ ಬಳಸಿಯುಂ ಕೋಂಟೆಯುಂ ಮಾಡಿ ಮಾಟಕೂಟಪ್ರಾಸಾದಸಹಿತಂ ಪೊಱಲಂ ಮಾಡಿ (ಪಞ್ಚ.ರಾ. ೦೬೬-೭); ಮೃದಿಲ ಮಾಳಿಗೆಗಳ ಮಾಟಕೂಟದ ಶಾಲೆಗಳೊಳ್ ಕೂಡೆ ನಿಂದು ನೋಡಲ್ ನೆರೆದ ಪುರಜನದ ಸಂಭ್ರಮಂಗಳಿಂ (ಅಪಂಪು. ೯-೩೯೭) ; ತೋರಣಧ್ವಜ ಮಾಟಕೂಟಗಳ ಚಾರುಹರ್ಮ್ಯದ ಶೋಭೆ (ಶಾಲ್ಯಶಾ. ೩೦-೨) ; ವಿಸ್ತರದರಾಜಭವನದ ಮಾಟಕೂಟದಯುತ ಸ್ತಂಭದಿಂದೆಸೆವ ಸಭೆಯು ನವರತ್ನದ ಗಭಸ್ತಿಗಳ ಕೋಟಿಾವಲಯದ ಮಣಿಪುರವಂ . . . ತೋಱೆ (ಕೃಷಿ.ಭಾ. ೨೪-೪೮).
[ಮಾಟ$_1$ + ಕೂಟ$_3$./ತಮಿ. ಮಾಟಕೂಟಮ್ = ಮಹಡಿಮನೆ]

**ಮಾಟಗಾತಿ** (ನಾ). ಮಂತ್ರತಂತ್ರಗಳನ್ನು ಬಲ್ಲವಳು ; ಮಾಯಾವಿ : ನನ್ನನ್ನು ಮಾಟಗಾತಿಯೆಂದು ಕರೆದಿರುವಿರಿ (ಜೀಂಪಲಿ. ೩೩) ; ನೀವು ಬಂದಾಗಲೇ ಗೊತ್ತಾಯಿತು. ಇದೆಲ್ಲಾ ಆ ಮಾಟಗಾತಿಯ ಮಾಯ ಅಂತ (ಬೆಳುವು. ೭೨). [ ಮಾಟ$_1$ + – ಕಾತಿ$_6$ ]

**ಮಾಟಗಾರ** (ನಾ). ೧. ಇಂದ್ರಜಾಲವಿದ್ಯೆಯನ್ನು ಬಲ್ಲವನು ; ಐಂದ್ರಜಾಲಿಕ : ಸಹನಿಯೂ ಅಂಕಸಂಖ್ಯೆಗಳ 'ಮಾಟಗಾರ' ನೆಂದು ಖ್ಯಾತಿವೆತ್ತ ಗಣಿತಶಾಸ್ತ್ರಜ್ಞ ಶ್ರೀನಿವಾಸರಾಮಾನುಜನ್ ಎಂಬಾತನೂ ಇಬ್ಬರೂ ಕೂಡಿ ಕಲಿಯುತ್ತಿದ್ದರು (ಸಕ್ಕಳ. ೧೩೦) ; ಬಿಳಿಯ ಮರಳು ಮಾಟಗಾರನ ಅಪ್ಪಣೆಯಂತೆ ಅಪ್ಸರೆಯರು ನೆಯ್ದ ಅಮೃತದ ಜಮಖಾನದಂತೆ ತೋರುವುದು (ಶಿವರಾ. ೧೦೪). ೨. ಮಾಟ ಮಾಡುವವನು : 'ಮಾಟಗಾರಿಕೆ' ಪರಾ. [ ಮಾಟ$_1$ + – ಗಾರ ( < – ಕಾಱ ) ]

**ಮಾಟಗಾರಿಕೆ** (ನಾ). ೧. ಇಂದ್ರಜಾಲ ; ಗಾರುಡಿ : (*). ೨. ಮಾಟ ಮಾಡುವುದು ; ಅಭಿಚಾರಕ್ರಿಯೆ : ನನ್ನ ಶಕ್ತಿಯ ವೈಭವ ತಡೆಯದೆ ನೀನು ಮಾಟಗಾರಿಕೆ ಮಾಡಿರುವೆ ! (ಅಕ್ಕಮೋ. ೩೩).
[ ಮಾಟಗಾರ + –| ಇಕೆ ]

**ಮಾಟಗಾರ್ತಿ** (ನಾ). = ಮಾಟಗಾತಿ : (*).
[ ಮಾಟಗಾರ + – ತಿ$_1$ ( < – ಇತ್ತಿ ) ]

**ಮಾಟಗೂಲಿ** (ನಾ). ಮಾಡಿದ ಕೆಲಸಕ್ಕೆ ಕೊಡುವ ಕೂಲಿ,–ಮಜೂರಿ : ಗೌಡರು . . . ನಾನೆ ಮಾಟಗೂಲಿ ಕೊಡುತ್ತೇನೆ ಎಂದು ಅಲ್ಲಿಂದ ಮನೆಯ ಹಾದಿ ತುಳಿದರು (ಗಂಬಾ. ೦೭). [ ಮಾಟ$_1$ + ಕೂಲಿ$_1$ ]

**ಮಾಟಮಾಯ** 'ಮಾಯ' ಪರಾ.

**ಮಾಟೆ** 'ಮಾಡ$_2$' ನೋ.

**ಮಾಠರ** (ನಾ). ೧. ವ್ಯಾಸನ ಹೆಸರುಗಳಲ್ಲಿ ಒಂದು. ೨. ಬ್ರಾಹ್ಮಣ ; ದ್ವಿಜ. ೩. ಸೂರ್ಯನ ಸೇವಕವರ್ಗದಲ್ಲಿ ಒಬ್ಬ : "ಮಾಠರಃ. . . ಪಾರಿಪಾರ್ಶ್ವಕಾಃ–ಪಾರ್ಶ್ವದೊಳಗಿರುವ ಅಂಗದೇವತೆಗಳ ಹೆಸರುಗಳು" (ಸಿದ್ಧಾಂತ. ೩೨). ೪. ಒಂದು ಗೋತ್ರದ ಹೆಸರು : ನಾನು . . . ಮಾಠರಸಗೋತ್ರದ ಕಲ್ಪಶಾಖೆಯ . . . ಬ್ರಾಹ್ಮಣನು (ಶಾಸನಾ. ೦೭).
[ಸಂ.]

**ಮಾಠಾಪತ್ಯ** (ನಾ). ಮಠದ ಉಸ್ತುವಾರಿ: (*). 'ಪಾರುಪತ್ಯ' ಹೋ.
[ < ಸಂ. ಮಾಠಪತ್ಯ ]

**ಮಾಡ$_1$**, ಮಹಡಿ, ಮಾಟ$_2$, ಮಾಡಿ$_1$. ಮಾಡು$_2$ (ನಾ). ೧. ಉಪ್ಪರಿಗೆ ಮನೆ : ಭವನ ; "ಹರ್ಮ್ಯ" (ಶಶಬ್ದ. ೬. II, ೭೭) ; ಚರಿಗೆವೊಕ್ಕಾಗಳೊರ್ವಳ್ ವಿಪ್ರಸ್ತ್ರೀ . . . ತನ್ನ ಮಾಡಕ್ಕೊಡಗೊಂಡು ಪೋಗಿ ಕಾಲಂ ಕರ್ಚಿಯರ್ಚಿಸಿ ಗುರುಭಕ್ತಿಗೆಯ್ದು ವಂದಿಸಿ (ವಡ್ಡಾರಾ. ೯೯-೨೪) ; ಪಿರಿಯ ಮರಂಗಳೆ ಮಾಡಮಾಗೆ ಪೊಳೆವೆಳದಳಿರ್ಗಳೆ ಸಜ್ಜೆಯಾಗೆ . . . ಪಣ್ಬಲ ಮೆತ್ತಿದ ಬೋನಮಾಗೆ ಸಿರಿಯ ಮಹಿಮೆಯುಂ ಮೆಱೆಯಲೇನಾರ್ತುದೊ ಬನದೊಳಿರ್ದರವಾ ಪಾಂಡವರಾ (ಕಂಕಭಾ. ೭-೨೮). ೨. ಮನೆ ; ನಿವಾಸ : ರತ್ನಗ್ರೀವನೆಂಬೊರ್ವಂ . . . ತನ್ನೊಂದೇಱುಂಜಸದೆಸಕದಿಂ ದೆಸೆವಳರ್ಗೆ ಪೊಸಮಾಡಮಂ ನೇರ್ಪಡಿಸುತುಂ (ರಾಜಾಶ್ವ. ೭೪-೨೪). 'ಮಾಡಗೆಲ' ಪರಾ. ೩. ಮನೆಯ ಮೇಲಿನ ಉಪ್ಪರಿಗೆ,—ಅಂತಸ್ತು : ಬೆಳೆವ ಕೌಂಗಿನ ಗೊನೆ ತಳ್ತಿಱಗಿರೆ ಮಾಡದೊಳಲ್ಲಿಯೆ ತಿಱಿದುಕೊಳಲ್ಕಂಬಿನೆಸಱಮೆಸೆವ ದುಪವನಂ (ಕಂಕಭಾ. ೩-೪೦) ; ಮುಗಿಲೇಱಿಯೆ ನೆಱೆ ನೋಡುತ್ತಿರ್ಪರು ಮುಗಿಲಂ ಮುಟ್ಟುವ ಮಾಡದೊಳಿರ್ಪರು (ತಿರುನಾ. ದೇ. ೨೨೩-೦೭) ; ನೆಲೆಮನೆಯ ಮಾಡದಲಿ ರತ್ನಾವಳಿಯ ಸುಣ್ಣಿಗಳಿನಲಿ ಹಂಸೆಯ ತೂಳಿಯ ಮೇಲ್ವಾಸಿನಲಿ ಪವಡಿಸುವೀಕೆ . . . ಈ ಕಲುನೆಲದೊಳೊಱಗಿದಳೆನುತ ಮಱುಗಿದನು ಧರಣೀಶ (ಕುವ್ಯಾಕ. ೯-೩೦). ೪. ಮನೆಯ ಇಳಿಜಾರಾದ ಛಾವಣಿಯ ತುದಿ,– ಸೂರಿನ ಕೊನೆ : 'ಮಾಡಸಂದಿ' ಪರಾ. ೫. (ಬಾಗಿಲಿನ) ಚೌಕಟ್ಟು : 'ಬಾಗಿಲುವಾಡ' ಪರಾ. ೬. ಗುಡಿಸಲು ; ಜೋಪಡಿ. ೭. ಹೆಣವನ್ನು ಕುಳಿತಿರುವ ಸ್ಥಿತಿಯಲ್ಲಿ ಹೊತ್ತೊಯ್ಯುವುದಕ್ಕೆ ಅನುಕೂಲವಾಗಿರುವಂತೆ ಮಾಡಿದ ಚಟ್ಟ ; ಸಿದಿಗೆ ; ವಿಮಾನ : ಊರ ಮಧ್ಯದ ಕಣ್ಣ ಕಾಡಿನೊಳಗೆ ಬಿದ್ದೈದಾವೆ ಐದು ಹೆಣನು . . . ಹೆಣನೂ ಬೇಯದು ಕಾಡೂ ನಂದದು ಮಾಡ ಉರಿಯಿತ್ತು (ಅವಶಂ. ೭-೨೭) ; ಹೊತ್ತು ಬಹ ಮಾಡದೊಳಗಿಹ ಪೆಣನತ್ತಲತಿದೂರದೊಳು ಕಾಣುತ ಚಿತ್ತದೊಳಗದು ಸ್ವತಕಶಬವೆಂದಱಿದು ಗಹಗಹಿಸಿ (ಬಸವ. ೨೨-೩೭). ೮. ದೇಗುಲ (?) : ಸೀಮೆ ಮೂಡಾಯ್ತೊಱೆವಿ ತೆಂಕಾಯ್ಬಟ್ಟರನ ಮಾಡಮೆ ಪೇರೋಣೆವಿ ಸನ್ನ (ಎಕ. IV. ಎಡತೊ. ೭೦-೭೩ ; ಸು. 890). ಮಹಡಿ: ೩. ಹೋಗಿ ನೋಡಲಾಗಿ. . . ಬಿದ್ದುಹೋದ ದೊಡ್ಡಮಹಡಿಯು ಕಂಡು ಬಂದಿತು (ದೇಪೀಶಾ. ೩೪) ; ಮಹಡಿಯ ಮೆಟ್ಟಿಲುಗಳನು ಶುಚಿಗೈವಂದು ಮೇಲಿನಿಂದುಡುಗುವವರು (೨೦ಕಾಶ. ೨೦೪-೮). **ಮಾಟ$_2$**: ೯. (?). ಟಕಾರಕ್ಕೆ ಡಕಾರಂ . . . ಮಾಟ–ಮಾಡ ; ಲಕುಟ–ಲಗುಡ (ಶಮತ. ೨೩೩ ಪ್ರಯೋ) ; ಮಾಟ, ಮಾಡ (ಶಬ್ದ.ಮ. ೦೪೩ ಪ್ರಯೋ). **ಮಾಡಿ$_1$** : ೩. ಮಾಡಿಮೇ[ಯೇ]ರಿ ಗವಾಕ್ಷದೆಡೆಗೈದಿದಳು ಮಹಿಲದಲಿ (ಕ ಶತ. ೨-೭) ; ಮಾಡಿಯ ಮೇಲೆ ಮಲಗಿರುವ ಮಲ್ಲಿಗೆಯ ಓಲೆ ಬಂದಾವೇ ಓದೇಳೋ (ಹುಬ್ಬಹ. ೩೭). **ಮಾಡು$_2$** : ೨. ಅವರು . . . ಮಾಡಿನ ಹೊರಗೆ ಹೋಗಿ ಕುಳಿತರು (ಮೂರುಬಾ. ೯). ೧೦. ಮನೆಯ ಮೇಲುಛಾವಣಿ ; ಸೂರು : ಮಾಡು ಸಿಕ್ಕವಲ್ಲಾ ಮಾಡಿನ ಗೂಡು ಸಿಕ್ಕದಲ್ಲಾ (ಕುರಂದ. ೦-೩೪ ಪಲ್ಲವಿ) ; ಮಾಡುಗಳ ಮೇಲೆ ಪಾರಿವಾಳಗಳು ಗುಬ್ಬೇರಿಸುತ್ತಲೂ ಇವೆ (ಹಬ್ಬರ. ೦-೩): ಮಾಡಿನ ಹೆಂಚುಗಳ ಮೇಲೆ ನೆಟ್ಟ ದೃಷ್ಟಿಯಿಟ್ಟು ಯೋಚಿಸತೊಡಗಿದೆ (ಸೀತಾರ. ೭೩). ೧೧. ಚಾಚಿದ ಭಾಗ ; ಪರಹು : ಸಾಕಷ್ಟು ಒಳಗಿನ ತನಕವೂ ಮೇಲಣ ಬಂಡೆಯ ಮಾಡು ಚಾಚಿದ್ದುದರಿಂದ ಆ ತಾವಿನಲ್ಲಿ ನೂರಾರು ಮಂದಿ ಕುಳಿತಿರುವಷ್ಟು ಜಾಗ ಕಾಣಿಸಿತು (ಮೂಕಜ್ಜಿ. ೩೭).
[ದೇ.॥ ತಮಿ. ಮಾಟ, ಮಾಟ ; ಮಲ. ಮಾಡ ; ತುಳು. ಮಾಡ್, ಮಾಡು ; ಕೊಡ. ಕೋಲಾ. ಮಾಡಿ ; ತೆಲು. ಮಾಡುಗು, ಮಾಡುವು./ ಮರಾ. ಮಾಡಾ./ ಸಂ. ಮಾಡ]

**ಮಾಡ$_2$**, ಮಾಂಟೆ, ಮಾಟೆ, ಮಾಡು$_3$ (ನಾ). ೧. (ವಸ್ತುಗಳನ್ನು ಇಡಲು ಅನುಕೂಲವಾಗುವಂತೆ) ಗೋಡೆಯಲ್ಲಿ ಮಾಡಿದ ಗೂಡು : ಬನವೆಂಬ ಮದನನೃಪನರಮನೆಯೊಳ್ ಪೊತ್ತಿಸಿದ ದೀಪಮಾಲೆಯು ಮಾಡಕ್ಕನುರೂಪಮಾಗಿ ಪಣೆಯಿಂ ಕೊನೆವರೆಗಂ ಪೂತುವರರೆ ಚಂಪಕನಿಕರಂ (ಶಂಪ್ರಶು. ೭-೩೪); ಮಹಾಯಾನದಲ್ಲಿ ಚಿತ್ರ ಮತ್ತು ಮೂರ್ತಿಗಳಿಗೆ ಅವಕಾಶ ದೊರೆತದ್ದರಿಂದ ಬದಿಯ ಅಂಕಣಗಳಲ್ಲಿ ಮಾಡಗಳನ್ನು ಕೊರೆಯುವ ಮತ್ತು ಹೆಚ್ಚು ಹರವಾದ ಒಳಗೋಡೆಗಳನ್ನು ನಿರ್ಮಿಸುವ ಅವಶ್ಯಕತೆ ಉಂಟಾಯಿತು (ಕಶಿಕೋ. I, ೦೯೮) ; ದೇವರ ಮಾಡದಲ್ಲಿ ಗಂಗಾಜಲವಿದೆ ನೋಡು (ಮುತ್ತೈದೆ. ೯೯). ೨. ರಂಧ್ರ ; ತೂತು : 'ಮಾಡಬಲೆ' ಪರಾ.

**ಮಾಂಟೆ:** ೩. ಗವಿ; ಗುಹೆ: ಮಾಂಟೆಯಲ್ಲಿದ್ದ ಹುಲಿಯೂ ಇದರ ಗರ್ಜನೆಗೆ ಮಾರುತ್ತರವಿತ್ತಿತು (ಕಂಶ. ೫೬) ; ಸುತ್ತಲೂ ಹತ್ತಾರು ಕಡೆಗಳಲ್ಲಿ ಹುಲಿಗಳ ಮಾಂಟೆಗಳು ಇದ್ದವು (ಕೃಷಾಂಕ. ೬೫). **ಮಾಟೆ :** ೩. ಬೆಟ್ಟದ ಮೈಯಲ್ಲಿ ಮಳೆ ಬಿದ್ದು, ಬಿದ್ದು, ನೆಲ ಮಾಟೆಯ ಹಾಗೆ ಕಾಣಿಸಿದರೆ ಅದೊಂದು ಆಶ್ಚರ್ಯದ ಸಂಗತಿಯಲ್ಲ (ಮೂಳೆಕ್ಕ. ೫೬). **ಮಾಡು$_3$ :** ೧. ಅಚ್ಚು ಕಾಣದ ಆ ಗ್ರಂಥವು ಗಚ್ಚುಹಾಕಿದಂತೆ ಗಣೇಶನ ಮಾಡಿನಲ್ಲಿಯೇ ಕುಳಿತಿತ್ತು (ಮುಂಗಾಕು. ೦೪); ಇದನ್ನು ಮನೆಗಳ ಮಾಡುಗಳಲ್ಲೂ ಸೇತುವೆಗಳಲ್ಲೂ ಉಪಯೋಗಿಸುವುದೇ ಹೆಚ್ಚು (ಕರ್ಕೋ. II, ೯೯).

[ದೇ.॥ ಮಲ. ಮಾಳ ; ತುಳು. ಮಾಟೆ ; ಕೊಡ. ಮಾಳಿ ; ಗೊಂಡಿ. ಮಾಂಡೊ ; ಕುರುಖ್. ಮಾಣ್ದಾ]

**ಮಾಡಗುಳ್ಳು** (ನಾ). (?) : ಪಿತ್ತಾಶಯವು ಆಕಾರದಲ್ಲಿ ಮಾಡಗುಳ್ಳಿನ ಹಾಗೆ, ಬಣ್ಣ ಕಪ್ಪು (ಮುಂಬಮು. ೬-೩೦೧). [ ? ]

**ಮಾಡಗೆಲ** (ನಾ). ಮನೆಯ ಪಕ್ಕ : ಬಲುವೃದ್ಧ ರಾತ್ರಿಯೊಳೆತ್ತ ಬೀಳು ತೇಳುತ ಪೋದಪೆ ಮಾಡಗೆಲದಲಿ ಮಲಗು (ಜೀವಂಕಾಂ. ೦೬-೪೪).

[ಮಾಡ$_1$ + ಕೆಲ$_1$]

**ಮಾಡಬಲೆ** (ನಾ). (ಕರಾ) ಸಣ್ಣ ಸಣ್ಣ ರಂಧ್ರಗಳುಳ್ಳ ಬಲೆ.

[ಮಾಡ$_2$ + ಬಲೆ$_1$]

**ಮಾಡವೃಕ್ಷ** (ನಾ). ಒಂದು ಬಗೆಯ ಮರ : ಬಗನಿ : "ಮಾಡ ದ್ರುಮಃ – ಮಾಡವೃಕ್ಷ" (೬ಶಂ. ೦೨೫). [ಸಂ.]

**ಮಾಡವೆಟ್ಟು** 'ಮಾಡುವೆಟ್ಟು' ನೋ.

**ಮಾಡಶಾಲೆ** (ನಾ). ಭವನದ ಪಜಾರ, – ಮೊಗಸಾಲೆ : ಆಶಾಕರೀಂದ್ರಂಗಳ್ಗೆಂದು ಸುಪ್ರತೀಕಪತಿ ಸಮೆಯಿಸಿದ ವಿಶಾಲಕ್ರೀಡಶಾಲೆಗಳೆನಿಸಿದ ಚಿಂಬೊನ್ನ ಕಲಶದ ಮಾಡಶಾಲೆಗಳುಮಂ ನೋಡಿ (ಶಾಂತಿಪು. ೩-೦೯ ವ).

[ಮಾಡ$_1$ + ಶಾಲೆ$_3$]

**ಮಾಡಸಂದಿ** (ನಾ). ಅಕ್ಕಪಕ್ಕದಲ್ಲಿರುವ ಎರಡುಮನೆಗಳ ಸೂರುಗಳ ಅಂಚುಗಳ ನಡುವಿರುವ ಕಿರಿಯ ಓಣಿ : ಹಿತ್ತಲುಕಡೆಯ ಹಿಂಬಾಗಿಲು ತೆಗೆದು, ಮಾಡಸಂದಿಯ ಕಡೆಗೆ ಕೈದೋರಿದಂತೆ ಮಾಡಿದಳು (ಮರಿಮು. ೬೩೬).

[ಮಾಡ$_1$ + ಸಂದಿ (< ಸಂದು$_1$)]

**ಮಾಡಾಟ** (ನಾ). ಕೆಲಸವನ್ನು ನಿರ್ವಹಿಸುವಿಕೆ : ದಣೀ ಹೇಳಾಟ, ಬಡಗೀ ಮಾಡಾಟ (ಗಾದೆ). [ಮಾಡು$_1$ + ಆಟ]

**ಮಾಡಿ$_1$** 'ಮಾಡ$_1$' ನೋ.

**ಮಾಡಿ$_2$** (ನಾ). ಬಂಡಿ ; ಗಾಡಿ ; ವಾಹನ : "ಮಾಡಿಬಿನಲ್ ಬಂಡಿಯೆಂದು ತಿಳಿಗೆ" (ಕಾರು. ೩೯). [←ತೆಲು. ಮಾಡಿ]

**ಮಾಡಿ$_3$** (ನಾ). ತೆಂಗಿನ ಮರದಿಂದ ಒಸರುವ ಒಂದು ಬಗೆಯ ಮಾದಕರಸ, – ಸಾರಾಯಿ : ಭಂಡಾರೀ, ಹಳೆಪೈಕರು ಮುಂತಾದವರು ತೆಂಗಿನಮರಕ್ಕೆ ಕಚ್ಚುಹಾಕಿ ಮಾಡೀರಸವನ್ನು ತೆಗಿಯುವರು (ಕಶಾಗ. ೩೯).

[←ಮರಾ. ಮಾಡೀ]

**ಮಾಡಿಕೆ** (ನಾ). ನಿರ್ವಹಿಸಿದುದು ; ಮಾಡಿದುದು ; ಕಾರ್ಯ : ಮಾತಿನಲ್ಲಿ ಮಾಡಿಕೆಯಲ್ಲಿ ಅವನ ಕೀರ್ತಿ ಗುಡಿಗಟ್ಟುತ್ತಿತ್ತು (ನಾಕೋಜ. ೦೨); ಮನಸ್ಸು ಮಾತು ಮಾಡಿಕೆ ಎಂಬವು ತ್ರಿಕರಣಗಳಷ್ಟೆ (ನಾಕೋಜ. ೨೩೬).

[ಮಾಡು$_1$ + – ಇಕೆ]

**ಮಾಡಿತು**, ಮಾಡಿತ್ತು (ನಾ). ಕಾರ್ಯಗತಗೊಳಿಸಿದುದು : ಯಿಂತೀ ಧರ್ಮ್ಮಮನಜುವಗ್ಗ್ಗವುಂಡುಗಳಜುವಣಮನಪರೆಯ ಮತ್ತರಿಂಗೆ ಹಣವೊಂದು × × × ರಳ ಮತ್ತರಿಂಗೆಯಡ್ಡವಂ ಮಾಡಿತಕ್ಕೆ ನೋಡಿಕೊಂಡು ಸ್ವಧರ್ಮ್ಮದಿಂ ಪ್ರತಿಪಾಳಿಪರು (ಕೊಲ್ಹಾ. ೦೩-೯೦; 1186) ; **ನೋಡಿತೆ** ಮಂಗಳಂ ನೆನಪೆ ಮಂಗಳವಿರ್ದೆಡೆ ಮಂಗಳಂ . . . ಮಾಡಿತೆ ಮಂಗಳಂ (ಕಂಚಾಕ. ೫೪). **ಮಾಡಿತ್ತು:** ಮಾಡಿತು, ಮಾಡಿತ್ತು (ಕಚ್ಛಾಸು. ೯೨ ಕ್ರಯೋ).

[<ಮಾಡು$_1$]

**ಮಾಡಿತ್ತು** 'ಮಾಡಿತು' ನೋ.

**ಮಾಡಿಮನೆ**, ಮಹಡಿಮನೆ (ನಾ). ಅಂತಸ್ತುಳ್ಳ ಮನೆ : **ಉಪ್ಪರಿಗೆ** ಮನೆ : ರಸ್ತೆಯ ಕೊನೆಯಲ್ಲಿ ಕಾಣುವ ಮಾಡಿಮನೆಯೇ ನಮ್ಮದು (ಕೂಶ). **ಮಹಡಿಮನೆ :** ಅವರೋ . . . ಮಹಡಿಮನೆಯಲ್ಲಿ ಅಟ್ಟಹಾಸದಿಂದ ನಲಿಯುತ್ತಿದ್ದಾರೆ (ಮುಂಗಾಮು. ೦೦೬). [ಮಾಡಿ$_1$ (<ಮಾಡ$_1$) + ಮನೆ]

**ಮಾಡಿಸು**, ಮಾಡ್ಸು(ಕ್ರಿ). ೧. ಏನನ್ನಾದರೂ ಕಾರ್ಯರೂಪಕ್ಕೆ ತರಿಸು; ತೊಡಗುವಂತೆ ಮಾಡು : ಬೀಡುಬಿಡುವಿಂಬು ಕದಳಿ ತೆಂಗಿನ ತಾಣಂ ಜಾಣಂ ನೀರ್ದಾಣವೆಂದೆಡೆಯಱಿದುಂ ಮಾಡಲ್ ಮಾಡಿಸಲ್ ಪಡೆ ಮೆಚ್ಚೆ ನೀಂ ಬಲ್ಲೆ ನೀಂ ಮೆಚ್ಚೆ ಹರಿಗ ಕೇಳಾನೆ ಬಲ್ಲೆಂ (ಪಂಕಭಾ. ೩-೪೯) ; ಮಾಡಿದೊಡಂ ಮೆಚ್ಚಿದೊಡಂ ಮಾಡಿಸಿದೊಡಮಮಿತಸೌಖ್ಯಮೆನೆ ಕಿವ್ಮನೆ ಕೆಟ್ಟೋಡದೆ ಜಿನಪೂಜೆಗಳಂ ಮಾಡದೊಡಂ ನೋಡಿ ಪಡೆಯಮುತ್ತಮ ಸುಖಮಂ (ಕಮಕ. ೧-೯೪). ೨. ಜರುಗಿಸು ; ನಡೆಯುವಂತೆ ಮಾಡು ; ನೆರವೇರಿಸು : ಅವರ್ಗೆಲ್ಲಂ ಸಂಸ್ಕಾರವಿಧಿಯಂ ನಾನೆ ಪಕ್ಕದೋಳಿರ್ದು ಮಾಡಿಸುವೆಂ (ಪಂಕಭಾ. ೦೪-೮ ವ) ; ಅಭಿಷೇಕವನು ಕೌರವರಾಯ ಮಾಡಿಸಿ ಪತಿಕರಿಸಿದನು ಕುಂಭಸಂಭವನ (ಕುವ್ಯಾ.ದ್ರೋ. ೦ ಸೂಕ೩) ; ಭೂಲೋಲ ಚಾಮರಸೇಂದ್ರ ವಿವಾಹವ ಲೀಲೆಯೊಳಗೆ ಮಾಡಿಸಿ (೪ಂಪಾ. ೩-೦೦). ೩. ಕಟ್ಟಿಸು ; ನಿರ್ಮಾಣಗೊಳಿಸು ; ನಿರ್ಮಿಸು : ಪೊಲೆಕೇಸಿಅರಸರ × × × ಮಾಡಿಸಿದ ದೇಗುಲ (ಎಕ. VII, ಶಿಕಾ. ೦೦-೩; ಸು. 640?) ; ಅರಸನುಮಾತನ ಮಾತನೊಡಂಬಟ್ಟು ಸ್ವಯಂಬರಸಾಲೆಯಂ ಮಾಡಿಸಿ ಅರಸುಗಳ್ಗೆಲ್ಲಂ ಬಟಿಯನಟ್ಟಿ ಬರಿಸೆ (ಪಚ್ಛಾಶಾ. ೪೦-೨೯) ; ಜಿನೇಂದ್ರರುಂದ್ರಮಂದಿರಮನದೊಂದನೀ ದೊರೆತು ಮಾಡಿಪೆಂ (ಆ೨ಪು.೪-೬೩) ; ಪ್ರಜಾಪಾಲಂ . . . ಜಲಕೇಳಿನಿಮಿತ್ತಂ ಕ್ರೀಡಾಸರೋವರಮಂ ಮಾಡಿಸಿ ನೀರಂ ತೀವಿ (ಶಂಕಕಂ. ೦೨೩-೧೬). ೪. ಒದಗಿಸು ; ಉಂಟುಮಾಡು : ಕೊಡೆ ದಡದಡಿಸೆ ನಡೆಗೆಟ್ಟು ಕಟಿಲುಲಿಗೆ ಬಟಿಸಲ್ಕೆ ಕಳಹಂಸಮಂಡಲಕ್ಕೆಯಶಮಂ ಮಾಡಿಸಿಯುಂ (ಕಾದಂಕಾ. ೩೬) ; ಬಿರುದರ್ಗರಿದೆನಿಸುವ ಬಾಧೆಯಂ ಮಾಡಿಸುವಂ (ಧರ್ಮಾಮೃ. ೨-೬೭): ಮಂಗರಸರ ಕಾವ್ಯಗಳ ಪರಿಚಯ ಮಾಡಿಸದೆ ಪ್ರೌಢವಿದ್ಯಾರ್ಥಿಗಳನ್ನು ಆಶ್ರಮದಿಂದ ಕಳುಹಿಸಿಕೊಡುತ್ತಿರಲಿಲ್ಲ (ಕಂಗಾಳ್ಮ. ೯೯). ೫. ಸಿದ್ಧಪಡಿಸು ; ಸಜ್ಜುಗೊಳಿಸು : ಕೊಂಡವ ತೋಡಿಸಬೇಡ ಶುಷ್ಕವ ಸುಟ್ಟು ಕೆಂಡವ ಮಾಡಿಸಬೇಡ ಖಂಡೇಂದುಶೇಖರ ಕಣ್ಗೆಚ್ಚಿನಿಂದೆನ್ನ ಗಂಡನನುರುಹಿದಂತುರುಹು ( ಶೋಕಶ. ೬-೩೭ ). ೬. (ಧಾನ್ಯವನ್ನು) ಶುದ್ಧಗೊಳಿಸುವಂತೆ ಮಾಡು ; ಹಸನುಗೊಳಿಸು : ಕೆಲಸದವಳ ಕೈಯಲ್ಲಿ ರಾಗಿಯನ್ನು ಮಾಡಿಸಬೇಕು (ಕೂಶ). **ಮಾಡ್ಸು :** ೨. ರಿಶ್ಯಶ್ರಿಂಗಮಹಾರಿಶಿಯಂ ತಂನಲ್ಲಿಗೆ ಬರಿಸಿ ಪುತ್ರಕಾಮೇಷ್ಟಿಯಂ ಮಾಡ್ಸಿ (ಕ೩. I. ೨೫-೩೩; 1186). **P** ಈ ಧಾತುವು ಅನೇಕ ನಾಮಪದಗಳ ಮುಂದೆ ಸೇರಿದಾಗ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ : ಊಟಮಾಡಿಸು, ಒಡವೆಮಾಡಿಸು ಇತ್ಯಾದಿ. [ಮಾಡು$_1$ + – ಇಸು$_3$]

**ಮಾಡು$_1$** (ಕ್ರಿ). ಮಾರ್ಪ, ಮಾಳ್ಪ, ಮಾಟ್ಪ (ಭೂತಕ್ಕ). ೧. ಏನನ್ನಾದರೂ ಎಸಗು ; ಕಾರ್ಯರೂಪಕ್ಕೆ ತರು : "ಮಾಡು–ಕರಣೇ, ಕಾಡ್ಯವಿಶೇಷೇ ಚ (ಗೂಟ–)" (ಕಮಾ) ; ಕೇಡಡಸಿದೊಡಂ ಬಗೆಯುಂ ಕೂಡದು ಕೂಡಿದುದುಮಟದು ವಿಪರೀತಮುಮಂ ಮಾಡುಗುಂ (ಕಖಾ. ೦-೬೪) ; ಶ್ರೀಮತು ಕಲಿದೇವಗ್ಗೆ . . . ಪುಟ್ಟಪನಾಕ್ಕುವ ಗಡುಗೆಯುಂ ಕುಡುವ ಜಪಂ ಮಾಪ್ಪವಮೂರ್ವರು (ಸೌಇಇ. IX-೧, ೨೫೫-೦೭; 1148) ; ಸುಕೃತದುಷ್ಕೃತಭೋಗವದು ಮಾಡದಾಗವ್ವದು

ತೇದ ನವುಗೇಕೆ (ಉಪ್ಯಾಕಲ್ಯೋ. ೦-೦೦) : ಮಾಡಿದ್ದುಣ್ಣೋ ಮಹರಾಯ (ಗಾದೆ). ೨. ನಡೆಸು ; ಜರುಗಿಸು ; ನೆರವೇರಿಸು : ಪ್ರಶಸ್ತದಿವಸವಾರ ನಕ್ಷತ್ರಮುಹೂರ್ತದೊಳ್ ಮುಂಜಿಬಂಧನಕ್ರಿಯೆಯುಂ ಮಾಡಿದ ಬಟಿಕ್ಕೆ (ಶಬ್ದಾ.ಶಾ. ೬೬-೨೦); ಮಾಟ್ಟಂ ಮನೋಹರಮಪ್ಪಂತು ವಿವಾಹಮಂಗಳಮಂ (ಹಂಪಶಾ. ೫-೨೪) ; ವೇದೋಕ್ತವಿಧಿಮಾರ್ಗದಲಿ ಮಾಡಿದರಮಲವಂಖಪುರುಷ ಪ್ರತಿಷ್ಠೆಕವ (ಕೊರಶಾ. ೦-೭-೯೨). ೩. (ದೇವಾಲಯ ಮುಂತಾದುವು ಗಳನ್ನು) ಕಟ್ಟಿಸು ; ನಿರ್ಮಿಸು : ಮೆಟುವಿಡುವಿನೊಳಿನ್ದ್ರವಿಮಾನ ಸಮಾನಮಪ್ಪ [ದೇಗು]ಲಮಂ ಮಾಡಿ (ಶಾಸ್ತ್ರ. XI-i, ೨೨-೪ ; 897) ; ಕೌಶಲಾದಿ ದೇಶಂಗಳುಮಂ ರಾಜಧಾನಿಗಳುಮಂ ಸಮಕಟ್ಟಿ ಪುರಂಗಳನಾದಿ ಬ್ರಹ್ಮನ ಬೆಸದೊಳು ಮಾಡಿ ಪುರಂದರವೆಸರಂ ಪಡೆದಿಂದ್ರಂ ಪೋದಂ (ನಾಪುಂಪು. ೪೭) ; ಮಾಡಿದ ತೋರವೆಟ್ಟುಗಳ್ ಪೊಸವನೆ . . . ಎಂಬೆಸಕ ಮಸಾಳ್ದು ಪೂಗಣೆಯನಿರ್ಪ ಪೊಬಲ್ಗೆ ಣೆಯಾದುದೀ ಬನಂ (ಕಬ್ಬಿಗಕಾ. ೦೦೦). ೪. ಸೃಷ್ಟಿಸು ; ರಚಿಸು : ಜಗತ್ಪ್ರಪಂಚವ ಮಾಡಿ ಆ ಜಗದಲ್ಲಿ ಜೀವ ರೂಪಿಂದ ಬಳಿಸಂದನೆಂದು ಹೇಳುವ ಶ್ರುತಿಯಂತಿರಲಿ (ಅವಶ. ೩-೦೦) ; ಒಮ್ಮೆ ಸಂಹರಿಸುವನು ಸೃಜಿಸುವನೊಮ್ಮೆ ಮಾಡುವನೊಮ್ಮೆ ಕೆಡಹುವ ಬೊಮ್ಮಮುಖ್ಯರಿಗಜೀಯಲಾಜಿದು ಕಪಟನಾಟಕವು (ಕೌಶಿರಾ. ೨೩-೦೭) ; ನಾ ಪದವಿಟ್ಟು ಕಡಿತದೊಳ್ ಬರೆದು ಮಾಡಿದ ಕೃತಿಯಲ್ಲ (ಮೋಹತ. ೦-೨೦). ೫. ಉಂಟಾಗಿಸು ; ಒದಗಿಸು : ಮನಕ್ಕಾಹ್ಲಾದಮಂ ಮಾಟ್ಟ ತತ್ಸತಿಯಿಂ ನೆಟ್ಟನೆ ಸಾರಮಾದುದು ಗಡಂ (ಅಂಪು. ೨-೬೭) ; ಸಮ್ಯಕ್ತ್ವದ ಮಾರ್ಗಮಂ ಕೇಳ್ದು ಮನೋಮುದದಿಂ ಕೈಕೊಳು ನಿನಗದು ತುದಿಯೊಳು ಮಾಡುಗುಮನಂತಮುಕ್ತಿಶ್ರೀಯಂ (ಸುಕುಮಾ. ೫-೩೬); ಪಂಚೇಂದ್ರಿಯಂಗಳ ವಿಷಯಮಪ್ಪ ಶಬ್ದ ಸ್ಪರ್ಶ ರೂಪ ರಸ ಗಂಧಂಗಳೊಳ್ಪಂ ಶ್ರೋತ್ರೇಂದ್ರಿಯ ಮೊಂದಱಲ್ಲಿಯೆ ಶಬ್ದಮುಖದಿನಭಿವ್ಯಕ್ತಿಯಂ ಮಾಟ್ಟ ವಿಮಲಸ್ವರೂಪಿಗೆ . . . ನಮಸ್ಕರಿಸುವೆಂ (ಶಪುರ. ೩೬೬೪. ೧ವೃತ್ತಿ). ೬. ಆಚರಿಸು ; ನಡೆಮಕೊಳ್ಳು ; ವರ್ತಿಸು : ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಂ ಕೇಳುತಂ ಕೆಲವಂ ಮಾಟ್ಟವರಿಂದ ಕಂಡು . . . ಸರ್ವಜ್ಞನಪ್ಪಂ ನರಂ (ಕೋರಮಶ. ೧) ; ವಚನಿಸಿ ಮಾಡದಿಹ ಬಾಹಿರರು ನಾವಲ್ಲ (ಉಪ್ಯಾಕಲ್ಯೋ. ೦-೪೦) ; ಮಾಡಿದವರ ಪಾಪ ಆಡಿದವರ ಬಾಯಲ್ಲಿ (ಗಾದೆ). ೭. ಸಾಧಿಸು ; ಸಿದ್ಧಿಯನ್ನು ಹೊಂದು : ಕೊಳಚೆನೀರೊಳಗಾಳುತೇಳುತ ಜಲಧಿ ಕಾಲ್ಗೊಳೆಯೆಂಬ ಛಂದರ ಮುಳಿದು ಮಾಡುವುದೇನು (ಉಪ್ಯಾಕಲ್ಯೋ. ೫-೪೪) ; ಮಾಡದ ಮಾಟವ ಮಾಡಿ ನೀ ಮುನ್ನೊಂದು ಕೋಡಗವನು ಬೀಳಲೆಚ್ಚ ಪಾಡನನ್ನೊಳು ತೋಱಿಸು (ಮೋಹತ. ೩೬-೩೦) ; ಒಳಗಿರ್ಪನ್ ಇಲ್ಲಮೆಂದಾರಯ್ದುದೇನ್ ಮಾಟ್ಟೆ ? (ಅಕ್ಕಕಾ. ೦-೫). ೮. (ಧಾನ್ಯವನ್ನು) ಶುದ್ಧಪಡಿಸು : ಹಸನುಮಾಡು : ಪಾಡುವರ್ ಕೆಲರು ಪೆರ್ಮೊಱಬೊಳಕ್ಕಿಯನಿಕ್ಕಿ ಮಾಡುವರ್ ಕೆಲರು (ಮೋಹತ. ೦೪-೭೦). ೯. ಸಲ್ಲಿಸು ; ಅರ್ಪಿಸು : ನಿರ್ಮಲಪಂಚಪದಾಚಾರ್ಯಪದಕ್ಕಾಂ ಪಂಚವಿಧವಿರಾಜಿತ ಮುಕ್ತಿಯೊಳಭಿವಂದನೆಯಂ ಮಾಟ್ಪೆಂ (ಜಯಸಾ. ೦-೩).

☞ ಈ ಧಾತುವು ಅನೇಕ ಶಬ್ದಗಳ ಮುಂದೆ ಸೇರಿದಾಗ ಸಂಯುಕ್ತ ಧಾತುಗಳ ರೂಪವನ್ನು ಪಡೆದು ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ : ಅಭ್ಯಾಸಮಾಡು, ನಿಮ್ಮಂತೆ ಮಾಡು, ಪ್ರಭುಮಾಡು, ಹಣಮಾಡು ಇತ್ಯಾದಿ.

[ದೇ.೩ ಮಲ. ಮಾಡು ; ತುಳು. ಮಾಡಾವು ; ಕೊಡ. ಮಾಡ್]

**ಮಾಡು₂** ' ಮಾಡ್₁ ' ನೋ.

**ಮಾಡು₃** ' ಮಾಡ್₂ ' ನೋ.

**ಮಾಡುಗೇಡಿ** (ನಾ). ಕೆಲಸವನ್ನು ನಿರ್ವಹಿಸದೆ ಇರುವವನು ; ಕೆಲಸಗೇಡಿ : ಮಾಡಬೇಕಾದದ್ದನ್ನು ಮಾಡದೇ ಬಿಡುವ ಮಾಡುಗೇಡಿಯಾಗಿದ್ದಾನೆ ಅರ್ಜುನ (ಚಾಕಶ. ೦೦೦). [ಮಾಡು₁ + ಕೇಡಿ₁]

**ಮಾಡುವೆಟ್ಟ**, ಮಾಡವೆಟ್ಟು, ಮಾಡುವೆಟ್ಟು (ನಾ). ಕ್ರೀಡೆಗಾಗಿ ರಚಿತವಾದ ಬೆಟ್ಟ ; ಕೃತಕಾದ್ರಿ : ರತಿದೇವಿ ನಲಿದಾಡುವ ಮಾಡುವೆಟ್ಟದುನ್ನತಜಘನದ ನೀಱಿನಾರ (ಕಂಕಪ. ೨೫-೬೩). **ಮಾಡವೆಟ್ಟು** : ನುಣ್ಣಿಳಲ ಮಾಡವೆಟ್ಟಿನ ಪೆಂಪಿನ ವಿಚಿತ್ರದ ರಚನೆಯಿಂದಿರ್ಪ ವಸಂತ ಮಂಟಪದ ನೋಂಪಂ ಕಂಡು (ಹರ್ಷ್ಯಾಕ. ೪-೦೯ ಪ). **ಮಾಡುವೆಟ್ಟು** : ಬೆಳ್ಳಿಳಗನುಗುಳ್ವೆಳೆಮುತ್ತಿನ ಮಾಡುವೆಟ್ಟುಗಳಿಂ ವಿರಾಜಿಪುದ್ಯಾನಮಂ . . . ಅವಲೋಕಿಸುತ್ತುಂ ಮೆಲ್ಲಮೆಲ್ಲನೆ ಬರೆವರೆ (ಉದ್ಭಟಿ. ೯-೩೦ ಪ) ; ನೋಡಿದಂಗನೆಯರ ಕಣ್ಮಱೆಯಾನೆಗಳಾಡುವ ಮಾಡುವೆಟ್ಟುಗಳ ಕೋಡುಗಳೋ ಭುಜಗಳೋ (ಸಂಣಾನಾಂ. ೨೨-೪೬). [ಮಾಡು₁ + ಬೆಟ್ಟ]

**ಮಾಡುವೆಟ್ಟು** ' ಮಾಡುವೆಟ್ಟ ' ನೋ.

**ಮಾಡುವೊಳ್ಚ** (ನಾ). ಕೃತಕವಾಗಿ ಹರಿಯುವಂತೆ ಮಾಡಿದ ನದಿ.– ಹೊಳೆ : ತುಂಬಿ ತುಳ್ಕಾಡುವ ಮಾಡುವೊಳ್ಚಗಳ ಕೋಡುವ ನೀರ್ಗಳ ನೀಂಟಿ ಮಿಂದು ಮುಟ್ಟಾಡಿ ಬಟಿಲ್ಕೆಯಂ ಕಳೆವರಾವಗಮಿಟ್ಟಳಮಲ್ಲಿ ಬಟ್ಟೆಗರ್ (ಶಬ್ದಾಸಾ. ೬೩ ಪ್ರಯೋ). [ಮಾಡು₁ + ಪೊಳ್ಚ₃]

**ಮಾಡುಹ** (ನಾ). ಮಾಡುವ ಕ್ರಿಯೆ : ಮಾಡುವಿಕೆ : ವಿವಾದಮಂ ಮಾಡುಹವುಂ ನುಡಿಯದಿರುಹವುಂ ವಿಸ್ಮಯವಿಲ್ಲದಿರುಹವುಂ ಇಂತಿಹವು ಸ್ನೇಹವಿಲ್ಲದ ಜನರ ಲಕ್ಷಣವೆಂದಱಿವುದು (ಕಂಕತಂ. ೩೦೩-೦೪); ಹೆಸರಿನಲ್ಲಿ ಮಾಂಸವ ಮಾಡುಹ (ಶೀಪಸೂ. ೬). [ಮಾಡು₁ + –ಹ₂ (<–ಪ₃)]

**ಮಾಡ್ಸು** ' ಮಾಡಿಸು ' ನೋ.

**ಮಾಣ್**, ಮಾಣು (ಕ್ರಿ). ಮಾಣ್ದ (ಭೂತಕೃ), ಮಾಣ್ಬ, ಮಾಬ (ಭವಿಕೃ). ಮಾಂದು, ಮಾದು₂ (ಭೂತನ್ಯೂ). ೧. ನಿಲ್ಲಿಸು; ಬಿಟ್ಟು ಬಿಡು : ತ್ಯಜಿಸು : ಮಾಣಿಸಿದೊಡೆ ಮಾಣದೆ ರಪಣಮಂ ತೋಱಿಯು ಮೊತ್ತೆಯನುಗ್ಗಡಿಸಿಯುಮಾಡುವನೆ (ಕಂಪಶಾ. ೭-೩ ಪ) ; ಲಿಂಗಾರ್ಚನೆಯ ವಸರಕ್ಕೆ ಜಂಗಮ ಮನೆಗೆ ಬಂದರೆ ಲಿಂಗಾರ್ಚನೆ ಮಾದು ಜಂಗಮಕ್ಕೆ ಇದಿರೆದ್ದು ವಂದಿಸಿ ಭಕ್ತಿಯ ಮಾಡಬಲ್ಲಾತನೆ ಭಕ್ತ (ಅಪಕಂ. ೨೨೪-೦೦೦೨); ಕಾಳ್ಕಿಚ್ಚಿನಿಂ ಬೇವಂಗೆ ತಂಪಿನ ನೋನೆಯ ಮಳೆಯಾಗುತ್ತೆ ಮಾಣ್ಬರೆ (ಬಸರ. ೪-೩೦). ೨. ನಿಲ್ಲು ; ನಿಂತುಹೋಗು ; ಸ್ಥಗಿತಗೊಳ್ಳು : ಈ ತಪದ ಧರ್ಮದ ಫಲವಿಲ್ಲಿಯೆ ಪ್ರತ್ಯಕ್ಷಮಾಯ್ತನ್ನುಂ ಮುಂದೆ ಏರಿದಾಗದೆ ಮಾಣದು (ವಡ್ಡಾರಾ. ೬೯-೨೩); ಮುನಿವೃಂದಾರಕವಂದ್ಯ ನಿಮ್ಮ ಚರಣಾಂಭೋಜಂಗಳಂ ಕಂಡು ಕಣ್ಬಾನಿಗಳ್ ಮಾಣ್ದಪುವಿಲ್ಲ ಕಾರಣಮಿದೇಂ (ಅಂಪು. ೫-೪೭); ರಥಮಾಣೆಯಿಟ್ಟಂತೆ ಮಾಣಿ ಕಂಡು (ಅವಪು. ೯-೦೭ ಪ) ; ಗೊಹೇಶ್ವರನ ಲೀಲೆ ಮಾಬನ್ನಕ್ಕರ ಉರಿಯೊಳಗಣ ಕರ್ಪೂರದಂತಿರಬೇಕು ಕಾಣಾ (ಅಪಕಂ. ೨೨೦-೦೦೦೩). ೩. ಸುಮ್ಮನಿರು ; ನಿಷ್ಕ್ರಿಯವಾಗು : ಸುಮ್ಮನೆ ಉಳಿ : ಮಾಣಲಿನ್ನೆನಸುಂ ಬಾರದು ನಿನ್ನೊಳಾತ್ಮಹಿತವಂ ನಿಶ್ಚೈಸು (ಅಂಪು. ೨-೪೬) ; ಮರನುಳ್ಳನ್ನಕ್ಕರ ಎಲೆ ಉಲಿವುದ ಮಾಬುದೆ ಶರೀರ ಉಳ್ಳನ್ನಕ್ಕರ ವಿಕಾರ ಮಾಬುದೆ (ಅಪಕಂ. ೦೦೭-೪೪೬) ; ಮಾಱುಣಾಂತವರ ನುಂಗದೆ ಮಾಣ್ದನಾದರೆ ದಿವಿಜಪತಿತನಯಂಗೆ ತಾ ಜನಿಸಿವವನಲ್ಲ (ಉಪ್ಯಾಕಲ್ಯೋ. ೯-೩೯) ; ಗಾವಿಲಂ ಕಱುಬಿಂ ಪೇಟಿನ್ದೊಂದು ನಿಮ್ಮರೋಕ್ತಿಯಂ ದೇವರ್ಗೆ ನಿವೇದಿಸುವುದನುಚಿತಮೆಂದು ಮಾಣ್ದವೈಸೆ (ಆಪಮಾಕ್ಕ. ೨೪-೦೩). ೪. ತಡಮಾಡು ; ಸಾವಕಾಶಮಾಡು : ತಂಗೆ[ಯ] ಮಾಣ್ದುದರ್ಕಮಂ ಮೊಟಗಿ ಸಿಡಿಲ್ದದೊಂದು ಸಿಡಿಲೇಟ್ಗೆಯನೆಯ್ದರೆ ವಂದು (ಕಂಪಶಾ. ೩-೦೩). ೫. ಇಲ್ಲವಾಗು ; ನಿವಾರಣೆಯಾಗು ; ಪರಿಹಾರವಾಗು : "ಮಾಣ್–ನಿವಾರಣೇ" (ಶಮಂ) ; ಮದನನ ಕಾಯ್ಪು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ (ಕಂಪಶಾ. ೫-೦೮) ; ಹಲವು ಗುಜುಗುಜು ಮಾಮ ಕಂಡೆವು ಬಳಕ ಕಾಣೆವು ಕೇಳದೆವು ಮೇಣ್ ಕೆಲರು ಕೇಳ್ದವು

ಇದ್ದವಿರವೆಂದೆಂಬ ನುಡಿ ಬೇಡ (ಬಸವ. ೩೮-೬೪) ; ಏತೆಜದಲಿ ಮಾಣ್ಬವುದು ನಿನ್ನಾಯಾಸ ನಾ ತಂದುಕೊಡುವೆ ನಿನ್ನವನ (ಕೋಹಕ. ೨೮-೨೨). ೬. (ರೋಗ ಮುಂತಾದುವು) ಗುಣವಾಗು ; ವಾಸಿಯಾಗು : ಕೇಳ ಜೀವಸಂಬೋಧನೆಯುಂ ಬೇಗಂ ಮಾಣ್ಗುಂ ದುಸ್ಸಹರೋಗಂ (ಸಬುಕ. ೦-೩೦) ; ಜೀರಿಗೆಯನ್ನೂ ಬೆಲ್ಲವನ್ನೂ ಬಿಸಿನೀರಿನಿಂದರೆದು ಕೊಡಲು ಶೀತಜ್ವರಂ ಮಾಣ್ಗುಂ (ಸಳವ. ೬೬). ೭. (ತೆರಿಗೆ ಮುಂತಾದುವುಗಳಲ್ಲಿ) ರಿಯಾಯಿತಿ ತೋರು : ವಿಕ್ರಮಪುರದ ಬ್ರಹ್ಮಪುರಿಯ ನಾ[ಲ್ವ]ತ್ತಿ ರ್ವರ್ಗ್ಗೆ ಸುಂಕಮಂ ಮಾಣ್ದು ಮಾಡಿದ ಮಾರ್ಗ್ಗವೆನ್ತೆನೆ (ಕಾಶಾ. XI-i ೯೬-೬ ; 1061). ೮. ತಪ್ಪಿಹೋಗು ; ಕಳೆದುಕೊಳ್ಳು : ಹೀನಬಲನನಧಿಕಬಲಂ ತೊತ್ತೞದುಟಿದನೆಂಬ ಲೋಕದ ಪೞಿ ಪೊರ್ದದೆ ಮಾಣೆಂ ಧರ್ಮಯುದ್ಧದೊಳಸಗಿಂ (ಆದಿಪು. ೦೪-೦೦೨) ; ನೀ ನಾನೆಂಬುದು ಮಾದು ತಾನೆಯಾಗಿ ಸಾಧ್ಯವಾಯಿತ್ತು (ಅವಹ. ೨೦೯-೯೩೮) ; ಪೊಂದುವ ಪೆಟ್ಟುವಾರ್ತೆಪರಿಣಾಮದೆ ವರ್ತಿಸುತಿರ್ಪ ದಂದುಗಂ ಮಾಂದುದು (ಶಂಪ್ರಶ. ೦೩-೯೦). ೯. ತಪ್ಪಿಸಿಕೊಳ್ಳು ; ಜಾರಿಕೊಳ್ಳು ; ನುಣುಚಿಕೊಳ್ಳು : ಭದ್ರಂಗೆ ಕುಡಲ್ವೇಡಿರ್ದ ಕೂಸನೆನಗೆ ಮದುವೆಯಾಗೆಂಬುದುಂ ಭದ್ರನುಂ ನಂದೆಂಗೆಂದು ಬೞೆದ ಕೂಸನಗೆ ಮೊಞೆಯಲ್ಲೆಂದಿರ್ವರುಮೋರೋರ್ವರ ಮೇಲೆ ನೆವಮಿಟ್ಟು ಮಾಣ್ಬುದುಂ (ವಡ್ಡಾರಾ. ೭-೩೨ ವ). ೧೦. (ಮಾತು, ಶಪಥ ಮುಂತಾದುವುಗಳನ್ನು) ಮೀರು ; ನಡೆಸದಿರು ; ಈಡೇರಿಸದಿರು : ವನಮುಂ ಕೇಳ್ದುವು ಭೂತಮುಯ್ವುಮಱಿಗುಂ ಕೊಟ್ಟಿರ್ದದಾನಂತಱಿಂದೆನಗಿಂ ಮಾಣ್ಬುದು ಸೂಟ[3] (ಪಂಪಭಾ. ೩-೬೪) ; ನುಡಿವುದಱೊಳ್ ತೊದಳ್ನುಡಿದರೆಂದೊಡವಿಾಯದೆ ಪೂಣ್ದು ಪೂಣ್ಕೆ ಮಾಣ್ದೊಡಮಿಱಿವಲ್ಲಿ ಮೆಯ್ದೆಗೆದರೆಂದೊಡಮುಮ್ಮನೆ ನಾಣ್ಬುವರ (ಗದಾಯು. ೦೦-೬). ೧೧. ಹೊಳಪು ಕಡಮೆಯಾಗು ; ಮಸುಕಾಗು ; ಮಂಕಾಗು : ಮಾಣ್ಗಟಿದರ ಮೆಯ್ವೆಳಗನೆ ಕಣ್ಗಳ್ ಕೋರೈಸೆ ತೊಳಗಿ ಬೆಳಗುತ್ತಂ ಮುಂದಣ್ಗಾಗಿ ನಡೆದು ನೃಪನರ ಜಾಣ್ಗೊಂಡ ನಿಜಪ್ರಗಲ್ಭವಚನದೆ ನುಡಿದಳ್ (ಕಾದಂಬ. ೬೬೦). ೧೨. ಮೆರೆ ; ವಿಜೃಂಭಿಸು : ಅಮಿತತೇಜನುಪವನದೊಂದೆಡೆಯೊಳ್ ಬೀಡುವಿಡುವುದುಂ ಶ್ರೀವಿಜಯುಂ ಬಂದನಿದಿರಂ ಹಿಮಾಂಶುಗೆ ಮಾಂದಿರ ದಿರವ್ಪ ತೆಱದಿನಂಬುಧಿಸಲಿಲಂ (ಶಾಂತಿಪು. ೩-೬೬) ; ವರಸೌಧಾಗ್ರ ಮನೋಜಕೇಳಿವಿಲಸತ್ಕಾಂತಾಂಗಸೌರಭ್ಯಮಾಂತುರುಹಸ್ತಿವ್ರಜದಾನಗಂಧ ರುಚಿಯುಂಡುತ್ಸಾಹದಿಂ ಮಾಂದು ಪುಷ್ಪರಸಂಗೊಂಡುರೆ ಸೋರ್ಕೆ ಝೇಂಕರಿಪ ರೋಲಂಬಾಳಿಯುಂ ರಾಜಿಕುಂ ತರಣೀಂದುಸ್ಫುಟವೀಧಿಯುಂ ಯುವಜನಾಪಾಂಗಪ್ರಭಾಭಾಸುರಂ (ಚಿಕ್ಕದೇ. ೦೦-೩೦). ಮಾಣು : ೧. ಮಾಳವ ಮಾತಂ ಮಾಣು ಗೌಳ ತೆಱಹುಗುಡು (ಬಸೆರ. ೬-೨೭) ; ಶಾನಾಗಿ ಗಾಳಿವೊಲ್ ಬಂದ ಸುಖವೆ ಸುಖ ನೀನೆ ಕೈಬೀಸಿಕೊಳೆ ನೋವು ಬೆವರುಗಳೆ ಫಲ ಮಾಣು ಮನದುಬ್ಬಸವ (ಮುಂಕುತಿ. ೯೨೦). ೨. ಅರಸನನುಜನೆ ಕುಡಿದ ನೆತ್ತರ ಬಱಿಸುವೆನು ಮೂಗಿನಲಿ ಮಾಣೆ ನುತ್ತರಿಯ ರಥದುರವಣೆಗೆ ಕರ್ಣನ ಸೂನುವಿದಿರಾದ (ಕುಮಾವ್ಯ. ೨೦-೩). ೩. ಚಕ್ರಚೀತ್ಕೃತಿ ಮದನಮಂತ್ರವೆನೆ ಮುಳಿದು ವನದೇವಿಯರು ಜಪವನೆಣಿಸದೆ ಮಾಣರೆನಿಸಿ ಚಿಾಟಳ ಮೆಱೆದುವು (ಹರಿಶ. ೩-೨೯); ಪುತ್ರಲಾಭಫಲವಿ ದೊರಕದೆ ಮಾಣದಿದು ತಾ ಸುಪ್ರಸಿದ್ಧವಲೆ (ಕೊರಟ. ೦-೩-೬) ; ಎಲೆ ತರುಣಿ ನೀನೆನ್ನನೀ ಪರಿಯೊಲಿದು ಪಿಡಿದಪೆನೆಂಬ ಮನದಾ ಛಲವಿದೇತಕೆ ಮಾಣು ನಾವಂಬರದ ಪಕ್ಷಿಗಳು (ವಳಕ. ೨-೩೩). ೪. ಮನಸಿಜನ ಬಾಣದಲಿ ಬಸವಳಿಯು ಬಿದ್ದುದು ಕ್ಷೋಣಿಯಲಿ ರೇತಸ್ಸು ಬಳಿಕದು ಕಾಣುತಲಿ ತನ್ನಾತ್ಮಪತ್ನಿಗದಯ್ದಬೇಕೆನುತ ಮಾಣದಾ ಪಾಂಚಾಲ ನೊಂದಱ ಗೋಣನಲಿ ತಾ ಕವಲದೆಲೆಯೊಳು ಕ್ಷೋಣಿಪತಿಯುವ ಕೊಟ್ಟು ಕಳುಹಿದೊಡೆ (ಸಂಕಶ. ೦೩-೯) ; ಮಾಣದೆ ಮಣಿದೀಪ್ತಿಯು ಪಿಡಿದಾಪಾವ ತಾಣದೊಳಱಸಿ ನಂದನನ ಕಾಣದೆ ಕಂಗೆಟ್ಟು ಹೊರಳ್ದಳು (ಮೋಹತ. ೪-೬೯). ೮. ನೆಱೆ ನಿರ್ಭಾವದಂಗವನಱಿಯದನ್ನಕ ಸಾವುದಾದರೆ ಮಾಣದ್ಕೆ (ಶ್ರಬುಂ. ೦೦-೦೩). ೧೩. ನಿರೋಧಿಸು ; ನಿಗ್ರಹಿಸು : ಪ್ರಾಣಾನಿಲಂಗಳಂ ಮಾಣಾತ್ಮನೆಂಬುದಂ ಪಾಣನಿಂದೂದ್ರುತಿಹ ವಾಸದುಸುರಂತೆ ಕಾಣ ಸುತ್ತೊಡಲೊಳಹವಾಗಿ (ಅಪುಶಾ. ೪-೩-೦೨). ೧೪. ತಪ್ಪು ; ಹೊರತಾಗು : ತೋಳನಾಗಿ ಪದಾಗಿ ಮಾಣದೆ ಕಾಗೆಯಾಗಿ ಮೇಣ್ ನವಿಲಾಗಿರಲ್ಕೆ (ಪದ್ಮಣ. ೦೦-೧೬೩). ೧೫. ಸಾಧ್ಯವಾಗು ; ಶಕ್ಯವಾಗು (?) : ಪಟ್ಟಣದೊಳಾರುಮಿಲ್ಲೆನಿಸಿ ತನ್ನೊಡನೆ ಪೊಱಮಟ್ಟುವಖಿಳಪ್ರಜೆಗಳವರ ನಡೆಸಲ್ ದಿನಂ ತಟ್ಟತಲ್ಲದೆ ಮಾಣದು (ಕೃಬಾಕಾ. ೪-೬೯).

[ದೇ.೫ ತಮಿ. ಮಾಣ್, ಮಾಣು, ಮಾಳ್ ; ತುಳು. ಮಾಣಾವು, ಮಾನಾವು; ತೆಲು. ಮಾನು, ಮಾನುಗು, ಮಾನುವು]

**ಮಾಣವ** (ನಾ). ೧. ಹುಡುಗ; ಬಾಲಕ. ೨. ವಿದ್ಯಾರ್ಥಿ. [ಸಂ.]

**ಮಾಣವಕ** (ನಾ). ೧. ಹುಡುಗ ; ಬಾಲಕ : "ವಟು ಮಾಣವಕಾರ್ಭಕ ಬಾಳಂ" (ಶಬ್ದಮಣಿ. ೩೪-೦೩); ಮಾಣವಕನತ್ರಣಂ ಕಾರ್ಯಮಂ ಬೆಸಗೊಂಡನೆಂಬಲ್ಲಿ ಮಾಣವಕನಂ ಕಾರ್ಯಮಂ ಬೆಸಗೊಂಡನೆಂದಾಯ್ತು (ಕಬುರ. ೦೩೩ ಶ್ರಮೋ) ; ಕಡುಹರಿಸವಡೆದು ಹೃದಯದೊಳನಿಸು ದಬ್ಬುದಲೆಯಿಲ್ಲದೆ ನುಡಿಯುತೊಳ್ನುಡಿಯ ನಸುನಗೆಯಿಡುವ ಮಾಣವಕನಂ ಕಂಡು (ಸಪ್ತಕ. ೨-೬೩). ೨. ಶಿಷ್ಯ ; ವಿದ್ಯಾರ್ಥಿ : ಉಪಾಧ್ಯಾಯಂ ಮಾಣವಕನಂ ವೇದಮಂ ಪಱಿಸಿದಂ (ಶಬ್ದಾನು. ೨೦೬ ಶ್ರಮೋ). ೩. ಹದಿನಾರು, ಇಪ್ಪತ್ತು ಅಥವಾ ನಲವತ್ತೆಂಟು ಎಳೆಗಳ ಮುತ್ತಿನ ಹಾರ : "ದೇವಚ್ಛಂದಂ ಯಷ್ಟಿ ಶತಾವಚ್ಛನ್ನಂ ತದರ್ಧವದು ಮಾಣವಕಂ" (ಶಬ್ದಮಣಿ. ೬೩-೩) ; ಮಾಣವಕಾರ್ಧಮಾಣವಕಂಗಳೆಂಬ ಪನ್ನೊಂದು ನಾನಾರತ್ನಸುವರ್ಣಪದಕವಿರಚನಾದಿ ಭೇದದಿಂ . . . ಪಂಚಪಂಚಾಶತ್ಪ ಮಾಣಂಗಳೊಳಾದಹಾರಂಗಳುಮಂ . . . ಪಡೆದು (ಆದಿಪು. ೯-೩೪ ವ) ; ಮಾಣವಕಮನೊಯ್ಯನೆ ಕಣ್ಮಾಣ್ಕಂ ಪೆಱನೂಂಕಿ ಗುರುಕುಚಾಗ್ರದೊಳಾದಂ ಮೇಣೊಂದಿಸಿ ಸೋರೆಯನದೊರ್ವೇಣಾಕ್ಷಿ ಪಳಂಚಿದಳ್ಪಿಸುವ ಕಿನ್ನರಿಯಂ (ಉದ್ಯಟ. ೦೦-೪೯). ೪. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಎಂಟನೆಯಂದಾದ ಅನುಷ್ಟುಪ್ ಎಂಬ ಛಂದಸ್ಸಿನ ಒಂದು ವೃತ್ತ : ಕಾಂತಶಶಿ ಪ್ರೇಮಲಗಂ ಮುಂತಿರಲಂತುಂ . . . ಮಾಣವಕಂ (ಛಂದೋಂಬು. ೨-೯೩). ೫. [ಜೈನ] ನವನಿಧಿಗಳಲ್ಲಿ ಒಂದು : ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಆದಿಪು. ೦೩-೩ ವ) ; ಕಾಳ ಮಹಾಕಾಳ ಪದ್ಮ ಪಾಂಡುಕ ನೈಸರ್ಪ ಮಾಣವಕ ಪಿಂಗಳ ಶಂಖ ಸರ್ವರತ್ನಂಗಳೆಂಬೊಂಬತ್ತುನಿಧಿಗಳುಮನನುಕ್ರಮದೊಳ್ತೋಱಿ (ಶಂಪ್ರಶ. ೬-೦೦೦ ವ). 'ನವನಿಧಿ' ಪರಾ. [ಸಂ.]

**ಮಾಣವ್ಯ** (ನಾ). ಹುಡುಗರ ಗುಂಪು ; ಬಾಲಕರ ಸಮೂಹ : "ಮಾಣವ್ಯಂ . . . ಹುಡುಗರ ಗುಂಪು" (ಚಿದ್ವಂಕಿ. ೩೬೯). [ಸಂ.]

**ಮಾಣಾಕ್ಯ** (ನಾ). ಶಿಷ್ಯ; ಗುಡ್ಡ : ಶ್ರೀ ವೆಟ್ಟೆಡೆಗುರವಡಿಗಳ್ಮಾಣಾಕ್ಯರ್ಪ್ಪಜ್ಜಣನ್ದಿಗುರವಡಿಗಳ್ನೋನ್ತು ಕಾಲು ಕೆಯ್ದಾರ್ (ಎಕ. II, ೩೨; ಸು. 700). [< ಸಂ. ಮಾಣವಕ]

**ಮಾಣಿ** (ನಾ). ೧. ಹುಡುಗ ; ಬಾಲಕ : "ವಟುः, ಮಾಣವಕः — ಈ ೨ ಮಾಣಿ" (ಹಲಾಯು. ೯೩-೩೪೯) ; ತನ್ನೋರಗೆಗಳಪ್ಪ ಪಲಂಬರ್ ಮಾಣಿಗ [ಳಾಂ. ಮಕ್ಕ]ಳ್ವೆರಸು ಪೊಱಪೊಱಲೊಳ್ ಬಟ್ಟಾಡುತ್ತಿರೆ (ವಡ್ಡಾರಾ. ೬೩-೨೨) ; ವಿದ್ಯಾಭ್ಯಾಸಂಗೆಯ್ದು ಬಂದಲ್ಲದೆ ನಿಮ್ಮ ಮೊಗಮಂ ನೋಡೆವೆಂದು ಪೊಱಮಟ್ಟು ಪೋಪ ಮಾಣಿಗಳನಿನಿಸಾನುಂ ಮಾಣಿವೊಂದು

ಕಾಪ್ಯಕಿಯಿಂತೆಂದಳ್ (ಶಾಕುಪಾ. ೨-೭೭ ವ) ; ಅವನು ಮಾಣಿ, ನೀನು ಹೆಣ್ಣಲ್ಲವೇ ? ದೊಡ್ಡದಾದರೆ ಅವನನ್ನಾರೂ ಕೇಳುವವರಿಲ್ಲ (ಸ್ವಪ್ನಪೊ. ೦೪). ೨. ವಟು ; ಬ್ರಹ್ಮಚಾರಿ : ಸಹದೇವ ಮಾಣಿ (ಎಕ. II, ೭೮; ಸು. 800) ; ವಿದ್ಯಾರ್ತ್ಥಿ ಮಾಣಿಯರ್ಗ್ಗೆಂ ಬಿಟ್ಟ ಗಟಿ‌ದ್ದ (ಎಕ. XI, ಚಿತ್ರದು. ೭೭-೦೬ ; 940) ; ಮೂಱಿಡಿ ನೆಲವನು ಕೊಟ್ಟನೆಸೆ ಮಾಣಿಯುಳಿಯೆಂದು ಧಾರೆಯನೆಱೆಯೆ (ಪೇಬಿಸಂ. ೦೦-೬೯). ೩. ಶಿಷ್ಯ ; ವಿದ್ಯಾರ್ಥಿ : ಓದಲಿಕ್ಕಿದೊಡೋದುವನು ಮಾಣಿಯರಿಂಗೆ ಬೋಧಾರ್ಹನ ಸುಶಿಕ್ಷೆಯಿಂ ಸಾಧನೆಗೈವ ಸದ್ಗುರುಡಿಯೊಳ್ ಭೇತಾಳನಾದಂತೆ ನೃಪಕುಮಾರರಿಂಗೆ (ಸೋಹಚ. ೦೭-೭೮) ; ಓದಿಸುವ ಮಾಣಿಗಳ ಕೂಡೆಯೋದುತ್ತ ಬಸವಯ್ಯನಿರೆ (ಗುರುಚಾ. ೬-೩). ೪. ಉಪಾಹಾರಗೃಹದಲ್ಲಿ ತಿಂಡಿ, ತೀರ್ಥಗಳನ್ನು ಒದಗಿಸುವ ಹುಡುಗ : ನಮ್ಮ ಆಶ್ರಯ ಹೋಟಲುಗಳಿಗೆ ದೊರಕುವುದಕ್ಕೆ . . . ಅಲ್ಲಿಯ ಮಾಣಿಯ ಯೋಗ್ಯತೆಯೂ ಒಂದು ಮುಖ್ಯ ಕಾರಣ (ಹಿರಿಮ. ೦೦) ; ಜನಾರ್ದನಯ್ಯ . . . ಕಾಮತರ ಹೋಟಲಿನಲ್ಲಿ ಮಾಣಿಯಾಗಿ ಸೇರಿಕೊಂಡ (ಚಂಡಾಂ. ೩೯). ೫. ಉಪನಯನ ; ಮುಂಜಿ : " ಮುಂಜಿಃ—ಮಾಣಿ " (ಶಾಕಳ. ೦೩) ; ವಿಪ್ರರ ವಿವಾಹಮುಪನಾಗಪ್ಪನಿತಱೊಳೆಲ್ಲಮೊಸಗೆ ದ್ರವ್ಯಮುಮಂ ತಪ್ಪ[ದೆ] ಮಾಣಿಯೊಳೆರಡಂ ಕೆಪ್ಪಿದರ್ (ಎಕ. II, ೪-೯ : 918) ; ಯಜ್ಞದಲೊನ್ದು ಗದ್ಯಾಣಂ × × × ಅಯ್ದು ಪಣಂ ಮದುವೆಯುಲೆರಡು ಪಣಂ ಮಾಣಿಯುಲೊನ್ದು ಪಣಂ ಬಾ[ದು]ಬೇಕಾರ ಪುಣ್ಣಮಿ ದೀಪಾಳಿಗೆ ಮೂಱುಪರ್ವ್ವದೊಳಂ ಪ್ರತ್ಯೇಕವೊನ್ದು ಗದ್ಯಾಣ ಇನ್ನಿನ್ತಿವು ಊರೊಡೆಯರ್ಗ್ಗೆ (ಎಇ. XX, ೬೮-೩೫ ; 1017). ೬. ಎಳೆಯ ಪ್ರಾಯದ ಹೆಣ್ಣು ; ಕನ್ಯೆ : ಅಲರುವಟ್ಟೆಯ ಬಳಿವಿಡಿದೈತಂದು ಕಮ್ಮಲರಿಡಿದಿರ್ದ ನಂದನದಿ ಕೆಲರು ಮಾಣಿಯರು ಪೂಗೊಯ್ಯದ ಗುರು ಕಂಡ ಜಲರುಹದಳನೇತ್ರೆ ಕೇಳು (ಸೋಹಚ. ೩-೩೦). 'ತರುವಲಿ' ನೋ. ೭. ಗಂಡಸಿನ ಜನನಾಂಗ : ಶಿಶ್ನ : " ಮೇಢ್ರಃ, ಮೇಹಃ, ಮೇಹನಂ, ಈ ೩ ಮಾಣಿ" (ಶಾಕಳ. ೬೪). 'ಮಾಣಿದ್ವಾರ' ನೋ. ೮. (?) : × × × ಪೊಡವಿಯೊಳಕ್ಕೆ ಪ್ರಜ್ವಲಿಸಿ ತೋರ್ಪ ಶಾಣದಿಂ ? ಪಜ್ವಲಿಸುವ ಪುತ್ರಿನಿಂ ಪಡುವ ಮಾಣಿಗಳೊಂದಿರೆ ಮೂಱುಕೆಯ್ಗಳಿಂ ಜಲಮುದಯಿಕ್ಕುಂ (ಅಟ್ನಪು. ೦೦-೨೮).

[ದೇ.॥ ತಮಿ., ಮಲ. ಮಾಣಿ ; ತುಳು. ಮಾಣಿ, ಮಾನಿ. / ಸಂ. ಮಾಣವಕ]

**ಮಾಣಿಕ** (ನಾ). ೧. ನವರತ್ನಗಳಲ್ಲಿ ಒಂದು ; ಕೆಂಪು ; ಮಾಣಿಕ್ಯ : " ಅರುಣಾಶ್ಮಮೆನೆ ಪದ್ಮರಾಗಮೆನೆ ಮಾಣಿಕಂ " (ಶಂಗಣಾ. ೩೦-೭) ; ಮಾಣಿಕದ ಮುತ್ತಿನ ಪಿಂಡುಗುಂಕಣಾಪಂ ತೊಟ್ಟ ಕೈಯಿಂದಂ ಪೊನ್ನ ಸುಟ್ಟುಗಮುಂ ತೀವಿ (ಪಶ್ವಾರಾ. ೯೯-೭) ; ಮುತ್ತಿನ ಮಾಣಿಕದ ಪಡಲಿಗೆಗಳೊಳ್ ಪಸರಿಸಿದ ವಿಚಿತ್ರವಸ್ತ್ರಾಭರಣಂಗಳುಂ . . . ಬೆರಸು ಮಹತ್ತರದೇವಿಯರ್ ಬಂದು (ಆದಿಪು. ೨-೬೭ ವ) ; ಮಿಱುಪ ಮಾಣಿಕನೀಲಮೌಕ್ತಿಕಗಳ ಕಾಂತಿ ಪೊಱೆಯಲು (ಕಂಪಾ. ೭-೭೭). ೨. ಮುಟ್ಟು ; ರಜಸ್ಸು : " ಮುಟ್ಟುವೆ, ಮಾಣಿಕಂ, ಪುಟ್ಟಲ್ —ಈ ೩ ಸೂತಕಂ " (ಕಕಸಾ. ೭೧-೬೦೪). 'ಮಾಣಿಕಂಗಾಣ್' ನೋ.

[<ಸಂ. ಮಾಣಿಕ್ಯ. / ತಮಿ. ಮಾಣಿಕ್ಕ ; ತುಳು. ಮಾಣಿಕ]

**ಮಾಣಿಕಂಗಾಣ್**, **ಮಾಣಿಕಗಾಣ್** (ಕ್ರಿ). ಮುಟ್ಟಾಗು ; ರಜಸ್ವಲೆಯಾಗು : ಮುಂದಾ ಸ್ತ್ರೀರತ್ನಮಾಸೊಲಮಿಂದಂ ಪಡೆದಪ್ಪೆನೆಂಬುದಂ ಸೂಚಿಸುವಂತೊಂದೆರಡುದಿನದೊಳತ್ತಾನಂದದೆ ಕಡುಜಾಣೆ ಮಾಣಿಕಂಗಂಡಿರ್ದಳ್ (ಗಂಳ. ೩-೨೦) ; ಮಾಣಿಕಂಗಂಡಳಂತಾ ನೃಪನ ರಾಣಿ ಗುರುಮಂತ್ರವಾಣಿ (ಶಾಕಸಂ. ೩-೩೬). **ಮಾಣಿಕಗಾಣ್** : ಅನುರಾಗರಸವೆ ಪೊಱಪೊಣ್ಮಿದುದೆನೆ ಮಾಣಿಕಗಂಡ ಬಡನಡುವಿನ ಭಾಮಿನಿ ತಳರ್ಗ್ಗೆಯೊಳ್ ಪಿಡಿವಪರಂಜಿಯ ಸೆಳೆ . . . ವಿರಾಜಿಸಿತು (ಜಯಾಕಾ. ೨-೯೭) ; ಮೂಲೋಕವನೆಯ್ದೆ ಪರಮಪ್ರಕಾಶದಿಂ ಬೆಳಗುವ ಪರಸುತರತ್ನವ ಪಡೆದ ಸೂಚನೆಗಾಂಬ ಪರಿಯಿಂದೆ ಮಾಣಿಕಗಂಡಳು (ತ್ರಿಪುತಿ. ೭-೩೭).

[ ಮಾಣಿಕ + ಕಾಣ್ ]

**ಮಾಣಿಕಗಾಣ್** 'ಮಾಣಿಕಂಗಾಣ್' ನೋ.

**ಮಾಣಿಕಗೆಂಟು** (ನಾ). ರಜಸ್ವಲೆಯಾದುದರಿಂದುಂಟಾದ ದೂರದಲ್ಲಿರಬೇಕಾದ ಸ್ಥಿತಿ ; ಮೈಲಿಗೆಯಾಗಿರುವುದು : ಆ ಪೆಣ್ಮಾಣಿಕಂ ಮಾಣ ಮಾಣಿಕಗೆಂಟಂ [ಪಾಠಾಂ. ಗೆಟ್ಟಂ]ದೊಡೆ ಮಾಣ್ದನಂದರಸಂ (ಅರ್ಜಪೇ. ೨-೦೨).

[ ಮಾಣಿಕ + ಗೆಂಟು ]

**ಮಾಣಿಕಚಟ್ಟ** (ನಾ). ರತ್ನಗಳ ಗುಣದೋಷಗಳನ್ನು ತಿಳಿಯುವ ನೈಪುಣ್ಯವುಳ್ಳವನು ; ರತ್ನಪರೀಕ್ಷಕ : "ಮಾಣಿಕಚಟ್ಟನೆಂಬ ರತ್ನಪರೀಕ್ಷಕಂ" (ಕಶಸಾ. ೯೦-೩೩೦) ; ಹಾರಾದ್ಯಾಭರಣಂಗಳನಾ ರೂಪಾಶ್ಚರ್ಯಮಾಗೆ ಮಾಣಿಕಚಟ್ಟಂ ನೇರಂಜಿಸಿ ಪಳವಿಡಿದ ಮಹಾರತ್ನದ ದೊರೆಗೆ ಪಂದುದಾ ಸ್ತ್ರೀರತ್ನಂ (ಆದಿಪು. ೪-೪೨) ; ನೆಗಟ್ದ ಸಗ್ಗದ ಮಾಣಿಕಚಟ್ಟರೊಳಮಮರಪಂಡಳಿಯೊಳಮಿಾ ಮಾಣಿಕ್ಯದ ಬೆಲೆಯಿಡಲಾರ್ ಜಾಣರ್(ಶಾಂತಿಪು. ೧೦-೩೭).

[ ಮಾಣಿಕ + ಚಟ್ಟ₃ ]

**ಮಾಣಿಕಬಂಡಾರ** 'ಮಾಣಿಕಭಂಡಾರ' ನೋ.

**ಮಾಣಿಕಭಂಡಾರ**, **ಮಾಣಿಕಬಂಡಾರ** (ನಾ). ಕೆಂಪುರತ್ನಗಳನ್ನು ಶೇಖರಿಸಿರುವ ಸ್ಥಳ : ತಂದಿಪು ಮಾಣಿಕಭಂಡಾರದ ಪುಡಿಕಗಳಂ (ಗುಣಾಂಬಾ. ೦೦-೯೦) ; ತರವೇಟ್ಮಾಣಿಕ್ಯಭಂಡಾರದ ಪುಟಕಗಳಂ. ಇಲ್ಲಿ ಮಾಣಿಕ್ಯಶಬ್ದ ಮಸುಟಿದು ಮಾಣಿಕಭಂಡಾರಮೆನೆ ಶುದ್ಧಂ (ಶಮದ. ೨೯೯ ಪ್ರಯೋ). **ಮಾಣಿಕಬಂಡಾರ** : "ಮಾಣಿಕಬಂಡಾರ = ಮಾಣಿಕ್ಯಭಾಂಡಾಗಾರ" (ಶಬ್ದಕೋ. ೩೫). [ ಮಾಣಿಕ + ಭಂಡಾರ ]

**ಮಾಣಿಕವಟ್ಟ** (ನಾ). ಕೆಂಪುರತ್ನಗಳನ್ನು ಅಳವಡಿಸಿದ ರೇಷ್ಮೆಬಟ್ಟೆಯ ಪಟ್ಟಿ : ಅಳ್ಳಿವಾಱ ಬಂದೆಱಗುವುವಲ್ಲಿ ಚಂಚುಗಳ ಲೋವೆಗಳೊಳ್ ಕಡೆಯಿಕ್ಕಿ ಸಾ[ದಾ]ರಮುಂ ಕಿಱುಮಿಡಿಗೆತ್ತು ಸಾರಿಕೆ ಟಕಾರಿಯ ಮಾಣಿಕವಟ್ಟ[ಪಾಠಾಂ. ಟ್ಟಿ]ಯುಂ ಪಿಕಂ ನಿಱಿದಳಿರ್ಗೆತ್ತು ಲಂಬಣದ ಮುತ್ತುಗಳಂ ಮೊಟ್ಟೆಗೆತ್ತು ಚಾತಕಂ (ಅನಂತಪು. ೭-೪೩) ; ಭಿತ್ತಿಯೊಳ್ ಪೊಱಮಟ್ಟ ಚಾವಡಿಮದನಕೈಯೆತ್ತಿದ ಪದೆಪುದಂಡೆಗಳು ಕೆತ್ತಿದ ನಿಖಿಳಮಾಣಿಕವಟ್ಟಮೇಲ್ಕಟ್ಟು ಮುತ್ತಿನ ಕುಚ್ಚು ರಂಜಿಸಿತು (ಸೋಹಚ. ೨೨-೭).

[ ಮಾಣಿಕ + ಪಟ್ಟ₃ ]

**ಮಾಣಿಕವತ್ತಿಗೆ** (ನಾ). ಕೆಂಪುರತ್ನವನ್ನು ಕೂರಿಸಿದುದು : ಅರಲಸರಲ ಸೊನ್ನಾರಂ ಪಲ ಪೂ ಪರಕಲಿಸಿದ ಪಾಸಂಬಗ್ಗಟದೊಳಗಿರಿಸಿ ಮಿಸುನಿಗರುಗಳನುಗುರಿಱಿತದ ಮಾಣಿಕವತ್ತಿಗೆಯ ಬೆರಸಿಯಲಂಪಿನ ಬೆಳುಗಾರಮನಿಟ್ಟುರುಪಿ ರತೋದ್ದೀಪನದಾರಿಯಿಂ ಕಡುಪಿರಿದುಂ ಬೆಚ್ಚಂದದಿನಮರ್ದಪ್ಪಿದರೊಲ್ಪೆಯೊಳಾ ಪ್ರಿಯರು (ಜಯಾಕಾ. ೬-೪೭).

[ ಮಾಣಿಕ + ಪತ್ತಿಗೆ₁ ( < ಪತ್ತುಗೆ ) ]

**ಮಾಣಿಕವರಿಗೆ** (ನಾ). ಕೆಂಪುಮಣಿಯನ್ನು ಹುದುಗಿಸಿದ ಗುರಾಣಿ,—ಢಾಲು : ಕುಱುಪಿನ ಮಾಣಿಕವರಿಗೆಯ ತೆಱಪುಗಳೊಳ್ ಪೊಳೆವ ಬಾಳ ಬೆಳ್ವೆಳಗಂದೇಂ ಮೆಱೆದುವೊ ಕಮ್ಮುಗಿಲೆಡೆಯೊಳ್ ಮಿಱುಗುವ ಮಿಂಚೆಂಬ ತೆಱದಿನೆರಡುಂ ಪಡೆಯೊಳ್ (ಕಬ್ಬಿಗ. ೨೩೪). [ ಮಾಣಿಕ + ಪರಿಗೆ ]

**ಮಾಣಿಕವೆಸ** (ನಾ). ಕೆಂಪುರತ್ನಗಳನ್ನು ಅಳವಡಿಸಿರುವಂಥದು ; ಮಾಣಿಕ್ಯಗಳನ್ನು ಹುದುಗಿಸಿರುವಂಥದು : ಮಾಣಿಕವೆಸದ ಹೊನ್ನಂದಣದೊಳು ಕಂತುರಾಣಿಯ ಮುಚ್ಚಿ ಬೈತಿಟ್ಟು ಓಣಿಯೊಳ್ ಮೆಱಸುತ ಕರಕೊಂಡು ಬಂದಾಗ ಕಾಣಿಸಿದರು ಶಂಬರಗೆ (ಸೋಹಚ. ೦೦-೦೦).

[ ಮಾಣಿಕ + ಪೆಸ₁ ]

**ಮಾಣಿಕಾಚಾರಿ** (ನಾ). ಒಬ್ಬಾತನ ಹೆಸರು: ಆ್ಕರಂಬೊಯ್ದು ಕೊವರಾಚಾರಿಯ ಮಗಂ ಮಾಣಿಕಾಚಾರಿಗೆ ಕಣ್ಣುಗಸಟ್ಟಿ ಕೊಡಂಗೆಗೊಟ್ಟರ್ (ಎಕ. IX. ಹೊಸಕೋ. ೦೦೦-೯; 997); ಐದುದೇಗುಲಂಗಳ ಬಡಗಿವೆಸದೊಳ್ ಹಡಿಸಲಿಸುವ ಮಂಡಳಿಕ ಮಾಣಿಕಾಚಾರಿ ಹೊಂನೋಜ × × × (ಎಕ. VIII, ಸಾಗರ. ೦೦೯-೭೪; 1042). [ಮಾಣಿಕ + ಆಚಾರಿ]

**ಮಾಣಿಕ್ಕಬ್ಬೆ** (ನಾ). ಒಬ್ಬಾಕೆಯ ಹೆಸರು : ಮಾಣಿಕ್ಕಬ್ಬೆಯಾ ದೇಗುಲಕ್ಕೆ ಕೊಟ್ಟೊದೂರ ಪೊಲ ಮೇರೆ (ಎಕ. X (8). ಶ್ರೀನಿ. ೦೦೬-೬೨; 850). [< ಮಾಣಿಕ + ಅಬ್ಬೆ$_1$]

**ಮಾಣಿಕ್ಯ** (ನಾ). ೧. ನವರತ್ನಗಳಲ್ಲಿ ಒಂದು ; ಪದ್ಮರಾಗ ; ಕೆಂಪು ಹರಳು : "ಶೋಣಾಶ್ಮ, ಪದ್ಮರಾಗಃ—ಈ ೨ ಮಾಣಿಕ್ಯಂ" (ಹಲಾಯು. ೨೯-೨೦) ; ಭೂಪತಿಪ್ರಕರನಾನಾವಳೀಮಾಣಿಕ್ಯಸಂಕುಳದೊಳ್ ಮಾರ್ಪೊಳೆವುತ್ತಮೊಯ್ಯನೆ ಬರುತ್ತಿರ್ದಳ್ ಪ್ರತೀಹಾರಿ (ಅದಂಪು. ೨೯); ಪೊನ್ನಿಂ ಪಳುಕಿಂ ಮಾಣಿಕ್ಯದಿಂ ತೀವಿದ ಕೃತಕನಗೇಂದ್ರಾಳಿ. . . ಸೊಗಯಿಸಲೆಸಗುಂ ತತ್ಪುರೋದ್ಯಾನವೊಂದುಂ (ಜಗ. ೨-೦೩); ಮಂಗನ ಕೈಗೆ ಮಾಣಿಕ್ಯ ಕೊಟ್ಟ ಹಾಗೆ! (ಗಾದೆ). ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹತ್ತನೆಯದಾದ ಪಂಕ್ತಿ ಎಂಬ ಛಂದಸ್ಸಿನ ಒಂದು ವೃತ್ತ : ಕ್ಷೋಣೀವಾಯುಶಂಭುಧಿನೇಶ ಯುಗ್ಮಂ ಮೇಣೊಂದಾಗಿರೆ ಬಂದು ನಿಂದೊಡೆತ್ತಂ. . . ಮಾಣಿಕ್ಯಂ ಪೆಸರೆಂಬುದಾಯ್ತು (ಛಂದೋಂಬು. ೨-೦೨೨). [ಸಂ.]

**ಮಾಣಿಕ್ಯಭಂಡಾರ** (ನಾ). = ಮಾಣಿಕಭಂಡಾರ : ಅಗಳ್ ಮಡಿಯ ಭಂಡಾರದ ಮಾಣಿಕ್ಯಭಂಡಾರದ ನಿಯೋಗಿಗಳ್ ತಂದು ಮುಂದಿಟ್ಟ ಪೊನ್ನ ಪಡಲಿಗೆಗಳೊಳೊಟ್ಟಿದ ದೇವಾಂಗವಸ್ತ್ರಂಗಳುಮಂ . . . ಇತ್ತು (ಹಂಪಾ. ೩-೬೭ ವ). [ಮಾಣಿಕ್ಯ + ಭಂಡಾರ]

**ಮಾಣಿಕ್ಯಭಂಡಾರಿ** (ನಾ). (ಅರಮನೆ, ದೇವಾಲಯ ಮುಂತಾದ ಕಡೆಗಳಲ್ಲಿರುವ) ಕೆಂಪುಹರಳು ಮೊದಲಾದ ಅಮೂಲ್ಯರತ್ನ ಭಂಡಾರವನ್ನು ನೋಡಿಕೊಳ್ಳುವ ಅಧಿಕಾರಿ : ಹಿರಿಯ ಮಾಣಿಕ್ಯಭಂಡಾರಿ ರಾಮದೇವನಾಯಕರ ಸನ್ನಿಧಿಯಲು ಶ್ರೀಮನ್ನಯಕೀರ್ತಿದೇವರು ಕೊಟ್ಟ ಶಾಸನಪತ್ಥಳಿಯ ಕ್ರಮವೆಂತೆಂದಡೆ (ಎಕ. II, ೩೩೩-೦೨; 1206 ?). [ಮಾಣಿಕ್ಯ + ಭಂಡಾರಿ]

**ಮಾಣಿಗೆ** 'ಮಾಳಿಗೆ$_1$' ನೋ.

**ಮಾಣಿದ್ವಾರ** (ನಾ). ಮೂತ್ರದ್ವಾರ : ಮೊದಲಾ ತಂದೆಯ ಮಾಣಿದ್ವಾರದಿಂದ ಪೊಱಮಟ್ಟು ತಾಯಿಯ ಯೋನಿಯ ಕಮಲಗರ್ಭಮಧ್ಯದೊಳ್ ಬೆಳೆದು ಸರ್ವಾಂಗಪೂರ್ಣನಾಗಿ. . . ಉದಯಿಸಿದನು (ಕೃಷಿತ್ರ. ೩೩೭). [ಮಾಣಿ + ದ್ವಾರ]

**ಮಾಣಿಬಂಧ** (ನಾ). ಒಂದು ಬಗೆಯ ಉಪ್ಪು; ಸೈಂಧವಲವಣ : "ಸೈಂಧವಂ, ಶೀತಶಿವಂ, ಮಾಣಿಬಂಧಂ. . . ಸೈಂಧವಲವಣದ ಹೆಸರುಗಳು" (ನಿಘಂಟು. ೨೮೩). [ಸಂ.]

**ಮಾಣಿಮಂಥ** (ನಾ). = ಮಾಣಿಬಂಧ : "ಲವಣೋತ್ತಮಂ ಮಾಣಿಮಂಥಂ ಸೈಂಧವಂ" (ಕುಂಗರ. ೩೧೬). [ಸಂ.]

**ಮಾಣಿಮಂಥರ** (ನಾ). = ಮಾಣಿಬಂಧ : "ಮಾಣಿಮಂಥರಂ ಸಿಂಧೂತ್ಥಂ" (ಚಾತ್ರಕೋ. ೩೯-೩೩). [< ಮಾಣಿಮಂಥ]

**ಮಾಣಿವೆಣ್** (ನಾ). ಮದುವೆಯಾಗದ ಹೆಣ್ಣು ; ಕನ್ಯೆ : ಮಾಣಿವೆಣ್ಗಳ ಶಿರೋಮಣಿಯ ಸ್ತೋತ್ರಕ್ಕೆ ಮೆಚ್ಚಿ ದಾನಿಗಳರಸ ಕುಸ್ತರಿಸಿ ಏನು ನಿಃಪಿಲ್ಲಿಗೆಯ್ಯಂದಿರ್ಪಿಯೆನಲು (ಕೋಹತ. ೨೩-೦೦). [ಮಾಣಿ + ಪೆಣ್]

**ಮಾಣಿಸು, ಮಾಣ್ಚು, ಮಾನಿಸು$_1$** (ಕ್ರಿ). ೧. ನಿಲ್ಲಿಸು ; ನಿಲ್ಲುವಂತೆ ಮಾಡು : ಕರಿಸಂಘಾತಮುಮಂ ಹಯವ್ರಜಮುಮಂ ಕಿಂಕಿಕ್ಕ ತೂರ್ಯಸ್ವನೋತ್ಕರಮಂ ಮಾಣಿಸಿ . . . ಪ್ರಶ್ರಯಾಕರವೇಷೋಚಿತರಘ್ಯರ್ಹಸ್ತರಿದಿರಂ ಬಂದರ್ (ಆದಿಪು. ೦೨-೬೯) ; ನೀನುಸಿರದಿರೆಂದು ವಲ್ಲಭೆಯಂ ಕಲ್ಲ ಸರದಿಂ ನುಡಿದು ಮಾಣಿಸುವುದುಂ (ಹಂಸಕಂ. ೦೬೦-೨) ; ಶಿವಲಿಂಗದೊಳಗೆ ಶ್ರೀಹಸ್ತವುದ್ಭವಿಸುತಿರೆ ಭವಿ ಮುಟ್ಟಬೇಡ ಬೇಡೆಂದು ಮಾಣಿಸುತಮಿರೆ (ಶಾಂತೀಶ. ಶೀ. ೨೭೦-೬) ; ಏಳುದಿನಪರಿಯಂತ ಮೊರಡಿಯ ಮೇಲುಗೊಡೆಯಷು ಹಿಡಿದು ಬಲುಮಳೆಗಾಲವನು ಮಾಣಿಸಿದ ಗಡ (ಕುಮಾ.ಸ. ೦೦-೦೬). ೨. ಅಡಗಿಸು ; ಕುಗ್ಗಿಸು ; ತಗ್ಗಿಸು : ಪವನಸುತಂಗೆ ಪಾಸಟಿಗಳೊರ್ವರುಮಿಲ್ಲದಜಿಂದಮಾಂತ ಕೌರವಬಲದರ್ಪನೊಂದಿನಿಸು ಮಾಣಿಸಿ ಪೋಪಮಿಳೀಶನಲ್ಲಿಗೆ (ಹಂಪಾ. ೦೨-೦೨೦). ೩. ಸುಮ್ಮನಿರಿಸು ; ನಿಷ್ಕ್ರಿಯಗೊಳಿಸು : ನೀನೆಮ್ಮ ಗುಡ್ಡನೆಪೆಱತೇನೆಂಬುದು ಪೆಱರ್ಗೆ ಭಕ್ತಿಮಾಡಲ್ವೇಡೆಂದೇನೊ ಬಿಡೆ ಜಡಿದು ಮಾಣಿಪ ಹೀನಗುಣಂಗೆಱಗಲಾಗದಱಿವುಳ್ಳ ನರಂ (ರಘಾಶಪು. ೩-೯೩). ೪. ಕಳೆ ; ನೀಗು ; ಹೋಗಲಾಡಿಸು ; ಇಲ್ಲವಾಗಿಸು : ಅಂತನೇಕಶೀತಲಕ್ರಿಯೆಗಳಿಂ ಶರೀರಸಂತಾಪಮನೆಂತುಂ ಮಾಣಿಸಲಾಱದೆ ಪುಣ್ಯಕ್ಷಯದೊಳ್ ತನ್ನ ವಿದ್ಯೆಗಳುಂ ಬೆಸಕೆಯ್ಯದಿರೆ (ಆದಿಪು. ೨-೦೯ ವ) ; ಎನ್ನ ಮನದ ದುರಾಶೆಯ ಮಾಣಿ[ಪಾಠಾಂ. ಬಿಡಿ]ಸಿ ನಿಮ್ಮತ್ತ ತೋಱಾ ಚೆನ್ನಮಲ್ಲಿಕಾರ್ಜುನ (ಮಹಾದೇ. ೩. ೦೩-೦೭) ; ನಂಬಿದ ಸುತಂ ಸಂಸಾರದೊಳ್ ನೋಯಲಿರ್ದಪರಾಧಂಗಳ ನೆದ್ದೊ ಮಾಣಿಸಿಯಜಸ್ರಂ ನಂಬಿಯಂ ತೊತ್ತುಗೊಂಡು ಪದಾಂಭೋಜಮನಲ್ಲಿ ತೋಱಿ ಶಿವಲಿಂಗಾಂತ[ಃ]ಸ್ಥನಾದಂ (ಹಂಪರ. ೬ ಹೊಸಹಾದು) ; ಸಾಲಱಿಮ ನಿಜಸೇನೆಯನು ಪಾಂಚಾಲಸುತ ಮೋಹರಿಸಿದನು ಕೆಂಧೂಳಿ ಮಾಣಿಸಿತನಿಮಿಷತ್ವವನಮರಸಂತತಿಯ (ಕುಮಾರವ್ಯಾ. ೯-೨೯). ೫. ಗುಣಪಡಿಸು : ವಾಸಿಮಾಡು : ಆಲದ ಬೇಟಲೊಳ್ ಸಿಕ್ಕಿದ ಗಾಲಿಯಂ ತೆಗೆದರುಸನಂ ರತ್ನಾಚಲಕ್ಕೆ ಕೊಂಡು ಬಂದು ಸಕಲೌಷಧಿಗಳಿಂ ಶಸ್ತ್ರವ್ರಣಮಂ ಮಾಣಿಸಲ್ (ದಕಉ. ೨-೬೦ ವ). ೬. ಸಂತೈಸು ; ಸಮಾಧಾನಗೊಳಿಸು : ಧರ್ಮಪುತ್ರಂ ಕೋಪಶಾಪದಿಂ ಮಸಗಿದ ಮದಗಜಮನೆ ಪಾಣಿಸುವಂತೆ ತಾನುಂ ಮೃದುವಚನಂಗಳಿಂ ಮುಳಿಸನಾಱಿಸುತಿರ್ದಂ (ಹಂಪಾ. ೭-೩೯ ವ); ಕಡುನೋವಿಂದಮಟುತ್ತುಮಿರ್ಪ ತಂಗೆಯಂ ಧರ್ಮಶ್ರವಣದಿಂದೆಂತಾನುಂ ಮಾಣಿಸಿ (ರಘಾಶಪು. ೩-೨೩೩) ; ಕಾಲತನಯನ ಸತ್ಯವನು ನೀವ್ ಪಾಲಿಸುವೊಡೀ ಛಾತುರಂಗದ ಮೇಳನವು ಬೇಡೆಂದು ಮಾಣಿಸಿ ಮರಳಿದನು ಮುನಿಪ (ಕುಮಾ.ಸ. ೬೦೩. ೦೩-೮೦). ೭. ಮೋಸಗೊಳಿಸು ; ವಂಚಿಸು : ಪೆಱರಿಂತಲ್ಲದೆ ಬಂದೆನಗೆಱಗಲ್ ಕಡುಭಕ್ತಿಯಿಂದಮೊಂದುಕೈಮದಿಂ ಬಱಿದೇಂ ಮಾಣಿಸಿ ನೀನೊಳಗಱಿಯದರಂ ಮಚನರಚನೆಯಿಂ ಸೋಲಿಸುವೈ (ರಘಾಶಪು. ೯-೦೨೯). **ಮಾಣ್ಚು** : ೮. ಹಸು ಅಥವಾ ಎಮ್ಮೆ (ಗರ್ಭಧಾರಣೆ ಮಾಡಿ) ಹಾಲು ಕೊಡುವುದನ್ನು ನಿಲ್ಲಿಸು: ಅಶ್ವತ್ಥಕ್ಕೆ ಕೊಂಡು ಕೊಟ್ಟ ಎಂಮೆ ಮಾಣ್ದೆಕೊಂಡಡೆ × × × ಎಂದೂ ಎಂದೂ [ಬಿತ್ತು] ಬಯನಾಗಿ ಒಂದು ಎಂಮೆಯನೂ ಮಠಕ್ಕೆ ನಡಸಿ ಬಹನು (ತಾಶಾಶ. IX-ii, ೪೦೬-೯೩ ; 1377). **ಮಾನಿಸು$_1$** : ೮. ಹಸು ಮಾನಿಸಿಕೊಂಡಿದ್ದರಿಂದ ಮನೆಯಲ್ಲಿ ಹಾಲು ಇಲ್ಲ (ಜಾನ). [ಮಾಣ್ + — ಇಸು$_3$]

**ಮಾಣಿಸುಹ** (ನಾ). ನಿಲ್ಲಿಸುವಿಕೆ : (+). [ಮಾಣಿಸು + — ಹ$_2$ (< — ವ$_2$)]

**ಮಾಣು** 'ಮಾಣ್' ನೋ.

**ಮಾಣ್ಕೆ** (ನಾ). ನಿಲ್ಲಿಸುವಿಕೆ ; ತಡೆಯುವಿಕೆ : ಕಾಣ್ಕೆ, ಪೂಣ್ಕೆ, ಮಾಣ್ಕೆ (ಶಬ್ದಮ. ೩೩೭ ಪ್ರಯೋ). [ಮಾಣ್ + — ಕೆ]

**ಮಾಣ್ಚು** (ಕ್ರಿ). ಕಳೆ ; ನೀಗು ; ಪರಿಹರಿಸು : ಕಾವೇರಿ ವೈಗೊಗೆದ ಮೂರ್ಛೆಯ ಮಾಣ್ಚಿತು ಆನಂದಾವೇಶದಿಂ ಮಗುಳೆ ಮೂಂದ್ಯವ ತಪ್ಪದೆ ನ್ಯೊಳ್ (ಅನಾಕ. ೯೭). [ಮಾಣ್ + — ಚು$_1$]

**ಮಾಣ್ದ** 'ಮಾಣ್' ಪರಾ.

**ಮಾಣ್ಬ** 'ಮಾಣ್' ಪರಾ.

**ಮಾಣ್ಸು** 'ಮಾಣಿಸು' ನೋ.

**ಮಾತಂಗ** (ನಾ). ೧. ಆನೆ; ಗಜ: "ಮಾತಂಗಃ ದ್ವಿರದಃ . . . ಸಿಂಧುರಃ – ಈ ೧೧ಳ ಆನೆಯ ಪೆಸರ್" (ಶಬ್ದಮ. ೩೬-೬೦); ಸಿಂಗದ ಮುಪ್ಪಂ ನೆಗಟ್ದ ಗಾಂಗೇಯರ ಮುಪ್ಪುಮಿಟಿಕಿವಡೆಗುಮೆ ವನಮಾತಂಗಂ ಗಳಿನಸುಹೃಚ್ಛತುರಂಗಬಲಂಗಳಿನದೆಂತುಮಂಗಾಧಿಪತೀ (ಪಂಪಭಾ. ೦೦-೦೯); ಮಾತಂಗದ ಬಲಂ, ಸಿಡಿಲ ಪೊಡರ್ಪು, ಕಡಲ ಗಂಣ್ಪು, ಪಡಿಗೊಳೆ ದಶರಥಕುಮಾರಂ ರಾಜ್ಯಮನಾಳುತಿರ್ದಂ (ರಾಮಾಶ್ವ. ೭-೦೯). ೨. ಮಾದಿಗ; ಶ್ವಪಚ: "ಅಂತಾವಸಾಯಿ ಚಂಡಾಳಂ ತಾಂ ಹೊಲೆಯಂ ಜನಂಗಮಂ ಮಾತಂಗಂ" (ಚತು.ಕೋ. ೬೬-೮೭); ಮಾತಂಗನಾಗಿರ್ದುಮೇಂ ನಿಷ್ಠುರಮಲ್ಲಾಕಾರಮಿಮಾತಂಗೆ (ಕಾದಂಪೂ. ೩೬); ಲಿಂಗಪೂಜಕರಾಗದವರಿಗೆ ಹಂಗೆ ಕೂಡಿರ್ದನಿತಟಿಂಗಳು ಮಾತಂಗಸಂಗತಮಿತ್ರದೋಷವು ಪ್ರಾಪ್ತಿಸು ವುದಾಗಿ (ಬಸಪು. ೩೦-೦೦). ೩. ಬೇಡ; ಕಿರಾತ; ಶಬರ. ೧, ೩: ಅರಣ್ಯಂ . . . ಮಾತಂಗಸಂಗಿಯಾಗಿಯುಂ ಸದ್ವಂಶವಿರಹಿತಮಲ್ತು (ಧರ್ಮಾಮೃ. ೩-೬೮ ವ). ೪. ಆನೆಯ ರೂಪದ ಒಬ್ಬ ರಾಕ್ಷಸ; ಗಜಾಸುರ: 'ಮಾತಂಗಹರ' ಪರಾ. ೫. ಒಂದು ಬಗೆಯ ಸಸ್ಯ: ಮಾತಂಗ ಕರಪತ್ರಿ ಮಾರತಿಲಕಂಗಳಿವರ ತಿರುಳಿಣ್ಣಿಯಜಮೂತ್ರಮುರಗದಂಷ್ಟ್ರಂ ಕೂಡಿದುರುತೈಲಮಿನಿತು ಸೋಂಕಲ್ಕೆ ವಶ್ಯಂ (ಚಪಪ. ೦೭-೯೬). ೬. [ಸಂಗೀತ] ಒಂದು ತಾಳದ ಹೆಸರು: ಧ್ರುವ ಮಟಯ ರೂಪಕ . . . ಮಾತಂಗ[ಶಾಣಂ ಮತ್ತಮಾತಂಗ] . . . ಜಯಾಳಮೆಂಬವು ಮೊದ ಲಾದ ಮೂಜಿಂದುತಾಳಂಗಳುಮೊಡೆ (ಬಸವ. ೦೯೨). [ಸಂ.]

**ಮಾತಂಗಕ** (ನಾ). = ಮಾತಂಗ ೨: ಮಾತಂಗಕಂ ಕೃತಾಂತ ವಿಕೇತನಮಂ ಪೊಕ್ಕಂ (ಚಕಮ. ೯-೯೯). [ಸಂ.]

**ಮಾತಂಗಕನ್ನಿಕೆ** (ನಾ). ಮಾದಿಗರ ಹುಡುಗಿ: ದಕ್ಷಿಣದೇಶದಿಂದ ಮಾತಂಗಕನ್ನಿಕೆಯೊಬ್ಬಳು . . . ಸಣ್ಣವನ ಕೈಯಲ್ಲಿ ಗಿಣಿಯ ಪಂಜರವನು ಹೊರಿಸಿಕೊಂಡು ಬಂದು (ಕಕಾ. ೦). [< ಸಂ. ಮಾತಂಗಕನ್ಯಕಾ]

**ಮಾತಂಗಕುಲ** (ನಾ). ೧. ಆನೆಗಳ ಗುಂಪು. ೨. ಚಂಡಾಲಜಾತಿ. ೧, ೨: ಅರಣ್ಯಕಮಲಿನಿಯಂತೆ ಮಾತಂಗಕುಲದೂಷಿತೆಯುಂ ಅಮೂರ್ತೆ ಯಂತೆ ಸ್ಪರ್ಶವರ್ಜಿತೆಯುಂ . . . ಎನಿಸಿದೇಜುಂಜವ್ವನೆಯ ರೂಪಾತಿ ಶಯಮನವೆಯಿಕ್ಕದೆ ನೋಡುತ್ತುಂ (ಕಾದಂಪೂ. ೯೯). [ಸಂ.]

**ಮಾತಂಗಚರಿತ** (ನಾ). ೧. ಆನೆಯ ಸ್ವಭಾವದಂತೆ ಗಾಂಭೀರ್ಯ ವನ್ನುಳ್ಳವನು. ೨. ಚಂಡಾಲನ ಸ್ವಭಾವವುಳ್ಳವನು. ೧, ೨: ಆ ನೃಪಂ ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗಸಂಗಿಯಲ್ಲು . . . ಮಾತಂಗಚರಿತನಾಗಿಯುಂ ಮಾತಂಗಚರಿತನಲ್ಲು (ಧರ್ಮಾಮೃ. ೯-೯೯ ವ). [ಸಂ.]

**ಮಾತಂಗದಾನ** (ನಾ). ೧. ಆನೆಯ ಮದಜಲ: ಮಾತಂಗದಾನ ಲೋಭಿಗಳಿರದೆ ಮಧುವನತಿಪ್ರೀತಿಯಿಂದುಂಬ ಚಂಡಾಳಿಗಳ್ ಶಿವೆಯ ಮುಖಜಾತಪರಿಮಳಕೆಜಗಬೇಡೆಂದು ಪೊಡೆವಂತೆ ಛತ್ರಚಾಮರಮೆಸೆದುವು (ಶಬ್ದ. ೬೭-೯೯). ೨. ಚಂಡಾಲನು ಮಾಡುವ ದಾನ. ೧, ೨: ಮಾತಂಗದಾನವಿಭವಂ ಮಾತೇನೆನಿವಿರಿದಾದೊಡಂ ಚೇತಸ್ಸಂಪ್ರೀತಿಯನತೀವ ಮಳಿನವಿಜಾತಿಗೆ ಮಧುಪಪ್ರಜಕ್ಕೆ ಮಾಟ್ಪುದೆ ಸಹಜಂ (ಪಾರ್ಶ್ವ. ೯-೦೨೨). [ಸಂ.]

**ಮಾತಂಗಪ್ರಸೂತ** (ನಾ). ೧. ಆನೆಯಲ್ಲಿ ಹುಟ್ಟಿದುದು; ಮದ ಜಲ. ೨. ಚಂಡಾಲಸಂತಾನ. ೧, ೨: ಇದು ಜಾತಿಭಂಗಮುಂ ತಳೆದುದು. ಮಾತಂಗಪ್ರಸೂತಮುಂನ್ನದಮಧುಪಾಸ್ಪದಮೇವುದೆಂದದಂ ಮುಟ್ಟದ ತೆಜದಿಂ ತೊಜೆದಸಂದು ಗಜವಾಹನಮಂ (ಪುಲಿಗೆ. ೦೦-೨೦). [ಸಂ.]

**ಮಾತಂಗಹರ** (ನಾ). ಗಜಾಸುರನನ್ನು ಸಂಹರಿಸಿದವನು; ಶಿವ: ಪಿಂಗಳಾಕ್ಷ ಮುಕುಂದಹರ ಮಾತಂಗಹರ ಮೃಗರಾಜಹರ ಧೂಮಾಂಗ . . . ಪಾಪಹರ ಮಹಾತೇಜ (ಬಸಪು. ೦೯-೦೭). [ಸಂ.]

**ಮಾತಂಗಿ** (ನಾ). ೧. ಚಂಡಾಲಕನ್ಯೆ; ಮಾದಿಗಿತ್ತಿ: ಕಮಲಭವಂ ಮೊದಲೊಳ್ ಮಾತಂಗಿಯೆಂದು ತಾಂ ಮಾಟ್ಟದೆ ಮಾಡಿದನಕ್ಕುಂ ಕಯ್ಯೊಳ್ ಮುಟ್ಟಿದೊಡಿಂತಗ್ಗಳಿಕ್ಕೆ ತೋರ್ಕುಮೇ ಲಾವಣ್ಯಂ (ಕಾದಂಪೂ. ೩೦); ಮಾತಂಗಿಯನತಿಶೋಕಾನ್ವಿತೆಯಂ . . . ಇದಿರೊಳೆ ಕಂಡಂ (ಸುಕುಮಾ. ೯-೩೬); ವ್ಯಾಸ ಬೋಯಿತಿಯ ಮಗ ಮಾರ್ಕಂಡೇಯ ಮಾತಂಗಿಯ ಮಗ (ಬಸವ. ೩೯೦). ೨. ಬೇಡಿತಿ; ಶಬರಿ: ಮಾತಂಗಿಯೊಲೆ ಪಸಲೆಯುಂ ಪಾರ್ದುದೆನೆ ನಿಡುಜಯಸಿ, ನಿಡುಸುಯ್ದು ರಿರ್ವರುಮೊಂದುಗೂಡಿ (ಶ್ರೀರಾಮಪಾ. ೨೬೮-೦೯). ೩. ಒಬ್ಬ ಕ್ಷುದ್ರದೇವತೆಯ ಹೆಸರು: ಬಿಲ್ಲಿಯಾ ಮಹಕೇಜಿ ಮಾತಂಗಿ ಬಕ್ಕಾಯಿ ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು (ಬಸವ. ೩೯-೨). ೪. ದುರ್ಗೆ; ಪಾರ್ವತಿ: ಶಾಕ್ತೇಯರು . . . 'ಮಾತಂಗಿ'ಯ ಭಕ್ತರಾಗಿದ್ದರು (ಸಂಕೋಶ. ೨೯೮). ೫. [ಜೈನ] ಪತ್ತು ಮಹಾವಿದ್ಯೆಗಳಲ್ಲಿ ಒಂದು: ಮಾತಂಗಿ ಗೌರಿ. . . ಭ್ರಾಮರಿ ಆಭೋಗಿನಿಯೆಂಬವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತ ವಿದ್ಯೆಗಳೊಳ್ ಸಂಪನ್ನನಾಗಿರ್ದು (ಶಾಪುಂಪು. ೦೯೬). [ಸಂ. ಮಾತಂಗೀ]

**ಮಾತಟ್ಟು** (ಕ್ರಿ). ಸುದ್ದಿಯನ್ನು ಹೇಳಿಕಳುಹಿಸು; ಸಮಾಚಾರವನ್ನು ಮುಟ್ಟಿಸು: ಪಲದಿವಸಂ ಸೂಟ್ಟಡೆಯದೆ ಕರೆವುದರ್ಕಾಸೆವಟ್ಟು ಮಾತಟ್ಟಿದ ಕಳೆಯನನೆಮ್ಮಬ್ಬೆಯನೊಡಂಬಡಿಸಲ್ಕೆನೆಂದು ಪೋಗಲ್ವೇಟ್ಟು (ಶಾಂತಿಪು. ೯-೭೭ ವ). [ಮಾತು$_1$ + ಅಟ್ಟು$_1$]

**ಮಾತಡಕು** (ಕ್ರಿ). ವಿಷಯವನ್ನು ಒಯ್ಯು; ಸಂದೇಶವನ್ನು ತಲಪಿಸು: ಒದವಿದ ಬೇಟವಪ್ಪೊಡೆನಗತ್ತಳಗಂ ಬಗೆವೇಟ್ವೊಡೆನ್ನ ಮೇಳವ ಕೆಳೆಯರ್ಕಳಿಲ್ಲ . . . ಓತುಮಾತಡಕಲೊಂದಿದ ದೂದವರಿಲ್ಲ ನೆಟ್ಟನೆ (ಶಂಪಕಾ. ೯-೬೯). [ಮಾತು$_1$ + ಅಡಕು$_1$ (< ಅಡುಕು)]

**ಮಾತಬರ** 'ಮಾತ್ಬರ್' ನೋ.

**ಮಾತಬರಿ** 'ಮಾತ್ಬರ್' ನೋ.

**ಮಾತರ** (ನಾ). ತಾಯಿ; ಜನನಿ: ನಿ ನಾಯ್ ಪರ್ದಂಬಿವಜ ಸ್ವರೂಪದಿಂ ಶಾಲ್ಮಲೀಮಹೀರುಹದೊಳ್ ಮಾತರಪಿತರರಂ ಬಿಸುಟ್ಟತಿ ಭರದಿಂದೊಳ್ಪಂ ಮೃಗಾಧಿಪಾಜಿತ್ರ್ಯಂಶಂ (ಜಾತಕ. ೦೯-೦೪); ಮಾತರರುಂ ಪಿತರರುಮಾ ಭ್ರಾತರರುಂ . . . ಎಲ್ಲರುಂ ಸಲೆ ಸ್ವೈರ್ಪರ್ ಜವನನಾರ್ರುಮೇಂ ಬಾರಿಪರೇ (ಕರ್ಣಾ.ಸು. ೦೨೨ ಕೃಯೋ). 'ಪಿತರ' ಪರಾ. [ಸಂ. ಮಾತೃ]

**ಮಾತರಿ** (ನಾ). = ಮಾತರ: ಪ್ಯಾಗಿಹುದೊ ಮಾತರಿಯ ಮನವು (ಬಿ.ಕೃ. ೯೯-೪೦); ಎಲವೊ ನಿಜಮಾತರಿಯ ಗಮನನೆ ಎಂದು ಖಡ್ಗವ ಸೆಳೆಯೆ ಬಿಜ್ಜಳನು (ಬಿ.ಕೃ. ೦೦೨-೩೨). [<ಸಂ. ಮಾತೃ]

**ಮಾತರಿಶ್ವ** (ನಾ). ೧. ಗಾಳಿ; ವಾಯು: "ಪವಮಾನಂ . . . ಮಾತರಿಶ್ವಂ . . . ವಾತ್ಯೆ ವಾತಮಂಡಳಿಯುಕ್ಕುಂ" (ಚತು.ಕೋ. ೬-೪೯); ಲತಿಕಾಲಾಸ್ಯೋಪದೇಶವ್ಯಸನಿ, ವನಲತಾಂದೋಳಿತಾಮೋದಪುಂಜರ್ಜಿತಚಂಚ ಚ್ಚಂಚರೀಕಂ . . . ತೀಡಿತ್ತೆಸಗಿ ಸುರಭಿಮೈಭಾತಿಕಂ ಮಾತರಿಶ್ವಂ (ಕಾದಂಪೂ. ೦೯೬). ೨. ಗಾಳಿಯ ಅಧಿದೇವತೆ; ಮಾರುತ; ಮಾತರಿಶ್ವಂಗ ದ್ವಿರಾಜಂಗೇತಬಿಲಿ ಪಲ್ಲಟವು ಕೀಲೆಂದಾತನನು ಮನ್ನಿಸಿದನುಚಿತದಲಂಜನಾ ಸೂನು (ತೊರವೆ. ೩-೦-೦೪). [ಸಂ. ಮಾತರಿಶ್ವನ್]

**ಮಾತರಿಶ್ವಮಿತ್ರ** (ನಾ). ವಾಯುವಿನ ಮಿತ್ರ ; ಅಗ್ನಿ : ಈಶ್ವರಾಜ್ಞೆಯನುಳಿಯಬಾರದೆಂಬುಕ್ತಿಯಂ ಶಾಶ್ವತಂ ಮಾಡಬೇಕಲ್ಲದುಳಿದರೆ ಮಾತರಿಶ್ವಮಿತ್ರಂಗಾಹುತಿಯನೀಯಬೇಕು (ಕಬ್ಬಿ. ೪೭-೧೫). [ಸಂ.]

**ಮಾತಾಟ** (ನಾ). ೧. ಮಾತಾಡುವಿಕೆ : ಅವರ ಮಾತಾಟವಂ ಕಿವಿಯಳತೆಯೊಳೆ ಕೇಳ್ದ (ಹಕ್ಕರ. ೨೨-೦೦೪). ೨. ಸರಸವಾದ ಮಾತುಕತೆ : ನೋಟದೆ ಬೇಟಮಂಕುರಿಸಿದಪ್ಪುದು ಮೇಳದೊಳಿಂಪುವೆತ್ತ ಮಾತಾಟದೆ ಮತ್ತೆ ಪಲ್ಲವಿಸಿದಪ್ಪುದು (ಚಂದ್ರಕಿ. ೬-೫೨). [ಮಾತು$_1$ + ಆಟ]

**ಮಾತಾಡಿಸು** (ಕ್ರಿ). ೧. ನುಡಿಸು : ಆತನಂ ಮೆಲ್ಲಮೆಲ್ಲನೆ ಮಾತಾಡಿಸಿ (ಆತಿಕ. ೦೦-೦೯ ವ) ; ಈತನನು ಮಧುರಾಳಾಪದಲಿ ಮಾತಾಡಿಸುವೆನು (ತೊರಾ. ೩-೪-೦೭) ; ಆ ಪ್ರಮಿಾಲೆ . . . ಮಣಿರಥದೊಳೊಪ್ಪುವ ಕಿರೀಟಿಯಂ ನಗುತೆ ಮಾತಾಡಿಸಿದಳು (ಕೃಬಾ. ೦೭-೯). ೨. ಮಾತನಾಡುವಂತೆ ಮಾಡು ; ಹೇಳಿಸು : ಹಲವು ಮಾತೇನೊಂದು ಪದ್ಯದೊಳೊಲಿಸಿ ಮಾತಾಡಿಸುವೆನೆಮ್ಮೊಡನೆಳವೆಜೆಯ ತಲೆಯುಭವನಂ ಸಂಕೀರ್ತನಂ ಮಾಡಿ (ಬಸಕಿ. ೪೨-೩೭). [ಮಾತಾಡು + — ಇಸು$_3$]

**ಮಾತಾಡು** (ಕ್ರಿ). ೧. ಅಭಿಪ್ರಾಯವನ್ನು ಅಥವಾ ವಿಷಯವನ್ನು ಮಾತಿನ ಮೂಲಕ ತಿಳಿಸು ; ನುಡಿ : ಚೆನ್ನಾಗಿ ತಿಳಿದುಕೊಂಡು ಮಾತಾಡಬೇಕು (ಮುಂಬಯಿ. ೪-೪೬); ಕಾಣಿಸಿದ್ದನ್ನು ಕುರಿತು ಮಾತಾಡುತ್ತೇನೆ (ಮೂಕಜ್ಜಿ. ೨೪). ೨. ಪ್ರತಿಯಾಗಿ ನುಡಿ; ಉತ್ತರಿಸು : ಎಮಗೆ ಮಾತಾಡಸಲ್ಲೆಂಬವ್ರೋಲ್ಮೋಜದೆ ನೀಂ ನಿನ್ನೊಂದು ವಾಕ್ಕೌಶಲಗುಣಮನಿದಂ ನಿನ್ನ ಸೌಜನ್ಯಜಾಲಂ ಪ್ರದಿರ್ದತ್ತು (ಕಾದಂಬ. ೦೨೩). ೩. (ಅಲಂ) ಅಭಿವ್ಯಕ್ತಿಗೊಳಿಸು ; ಪ್ರಕಟಪಡಿಸು : ದಿಟವೀರನೇ ಕೂರಲಗಿನಲಿ ಮಾತಾಡು ಬಜಿನುಡಿ ಭಂಡತನ (ಕುವ್ಯಾದ್ರೋ. ೦೪-೩) ; ನೋಟದಲಿ ಮಾತಾಡಿ ಪುರ್ಬಿನ ಬೇಟದಲಿ ಬೆಳ್ಮಾಡಿ . . . ಸರ್ವಸ್ವವನು ಸೆಜಿ ಕವರಿಗೋಟುಗೊಳಿಸುವ . . . ಬಹುವಿಧದ ಮಾಯೆಯ ಬೇಟಕಾತಿಯರೊಪ್ಪಿದರು (ತೊರಾ. ೧-೫-೩೦).

**ಮಾತಾಡುವ ಪಕ್ಕಿ, ಮಾತಾಡುವ ಹಕ್ಕಿ** = ನುಡಿಯುವ ಪಕ್ಷಿ ; ಗಿಣಿ : ಮಾತಾಡುವ ಪಕ್ಕಿಗಳ್ಗೆ ದನಿದೋಱುವ ಕೋಂಚೆಗೆ ಸಣ್ಣಗಾಯ್ಗಳಿಂ ಮೂಡುವ ಮಾಮರಕ್ಕಗಿವಳಾಕೆಯೊಳೀ ಮನ್ನಿಸೇಕೆ ಸಾಲದೇ (ಕಬ್ಬಿಕಾ. ೩೭); "ನಿಹತಃ-ಮಾತಾಡುವ ಹಕ್ಕಿ" (ಶಿಕಂ. ೬೭). [ಮಾತು$_1$ + ಆಡು$_1$]

**ಮಾತಾಮಹ** (ನಾ). ತಾಯಿಯ ತಂದೆ ; ಅಜ್ಜ ; ತಾತ : "ತಾಯ ತಂದೆ ಮಾತಾಮಹಂ" (ವಸ್ತುಕೋ. ೫೫-೨೦); ಪೊಗೞ್ದು ಪಲತೆಱದಿಂ ಪರಸಿದ ಮಾತಾಮಹಂಗೆ ಮಾರುತಿ ಕೈಗಳಂ ಮುಗಿದು (ಕಂರಾವ. ೦೦-೫೩ ವ); ಬಂದ ಮಾತಾಮಹನ ಮಾತೆಯ ಮಂದಹರುಷವನಱಿದು ಧಿಮ್ಮನೆ ನಿಂದು ಕೈಮುಗಿದೇನು ಬಂದಿರಿಯೆಂದು ಬೆಸಗೊಳಲು (ತೊರಾ. ೭-೦೨-೨). [ಸಂ.]

**ಮಾತಾಮಹಿ** (ನಾ). ೧. ತಾಯಿಯ ತಾಯಿ; ಅಜ್ಜಿ. ೨. ಹಿರಿಯಳು: ಮಾಂಟೆಸೋರಿ ಆಧುನಿಕಶಿಕ್ಷಣಪದ್ಧತಿಗಳಿಗೆ ಮಾತಾಮಹಿಯೆನಿಸಿರುವರು (ಶಿಕ್ಷದ. ೭೯೦). [ಸಂ. ಮಾತಾಮಹೀ]

**ಮಾತಾಮಾತ** (ನಾ). ಅಳಲು ; ಕಷ್ಟ ; ದುಃಖ : ಭಕ್ತರ ಸಲುವಾಗಿ ರಾಮನು ಮನುಷ್ಯದೇಹಧಾರಣ ಮಾಡಿ ಬಗೆಬಗೆಯ ಮಾತಾಮಾತಗಳನ್ನು ಸಹಿಸಿ ಸಾಧುಸಂತರನ್ನು ಸುಖಿಗಳಾಗಿ ಮಾಡಬೇಕಾಯಿತು (ತುಳಸೀ. ೭).
[← ಅರ. ಮಅತಮ್; ಪಾರ. ಹಿಂ. ಮಾತಮ್: ಮರಾ. ಮಾತಮ್, ಮಾತಮಿಾ]

**ಮಾತಾಯಿ** (ನಾ). ೧. ಮಹಾತಾಯಿ : ತುತ್ತೊಂದು ನಿಡಿರಮ್ಮಾ—ಮಾತಾಯಿಗಳಿರಾ (ಏಸೀಗೀ. ೦೪-೨). ೨. ದುರ್ಗೆ : (೩).
[ಮಾ$_4$ + ತಾಯಿ (< ತಾಯ್)]

**ಮಾತಾಳಿ** (ನಾ). ೧. ಅತಿಯಾಗಿ ಮಾತನಾಡುವ ವ್ಯಕ್ತಿ; ಗಳಹುವ ವ್ಯಕ್ತಿ : "ಮಾತಾಳಿಯೆನಲ್ ಗಳಪಂ" (ಕಾರ್ಕ. ೭); ಆದಿತ್ಯನ ಸಾರಥಿ ಬೆಱಗಾದಂ ಮಾತಾ[ಪಾಠಾಂ. ಜಾ]ಳಿ ಮಾತುಗೆಟ್ಟಂ ಧುರದೊಳ್ ಚೋದಿಸೆ ಹರಿಯುಂ ಶಲ್ಯನುಮಾದರದಿಂ ನರನ ದಿನಪತನಯನ ರಥಮಂ (ಕಂಪಾ. ೧೨-೦೭೨); "ಮಾತಾಳಿ — ಮಾತಿನ ಮಲ್ಲನು ಎಂದರೆ ಇಂದ್ರನ ಸಾರಥಿ ಮಾತಲಿ, ಮಾತುಗೆಟ್ಟಂ — ಮೂಕನಾದನು ; ಇಲ್ಲಿ ಮಾತಲಿಗೆ ಮಾತಾಳಿಯೆಂದು ಮಾಡಿರುವ ಪ್ರಯೋಗ ರಮ್ಯವಾಗಿದೆ" (ಕಂಕರು. ೪೪೪) : ನೀಱಂ ಜೂದಾಳಿ ಕರಂ ನೀಱಂ ಮಾತಾಳಿ ಕರೆಯೆ ಸಿಗ್ಗಾಳಿಯಿವಳ್ (ಕಾವ್ಯಾವ. ೩೫೩) ; ಸೋಲಿಸಿದ ಗೆಲವಿಂದ ಬಲು ಮಾತಾಳಿಯಿವನೆನ್ನದಿರು (ಕುವ್ಯಾವಿ. ೨-೩೭) ; ಅವಳು . . . ಎಲ್ಲ ಹೆಣ್ಣುಮಕ್ಕಳಂತೆ ಬಹು ಮಾತಾಳಿ (ಕಂಗಾಳ್ಮ. ೯೬). ೨. ಅತಿಶಯವಾದ ಶಬ್ದಪ್ರಯೋಗವುಳ್ಳುದು ; ಹೋಲಿಕೆಗಳು ಅತಿ ಪ್ರಸಿದ್ಧವಾಗಿಯೂ ಸಾಮಾನ್ಯವಾಗಿಯೂ ಇದ್ದಾಗ ಕಾವ್ಯವು ಮಾತಾಳಿಯಾಗಿಯೂ ಮಾರ್ದನಿಯಾಗಿಯೂ ಕಾಣುವುದು (ಕವಿ. ೦೭೬). [ಮಾತು$_1$ + — ಆಳಿ$_3$]

**ಮಾತಾಳಿತನ** (ನಾ). ಅತಿಯಾಗಿ ಮಾತನಾಡುವಿಕೆ ; ಗಳಹುವಿಕೆ ; ಹರಟೆ ಕೊಚ್ಚುವಿಕೆ : ಆಳುತನಕಾಭರಣವೇ ಮಾತಾಳಿತನ ಕೈದೋಱಿ ದಹಿತನ ಮೇಲಣೀಱಿನ ಬಾಯ ಸುಭಟರ ಹೊಗಳಬೇಡ (ಕುವ್ಯಾಕ. ೪-೩೦).
[ಮಾತಾಳಿ + — ತನ]

**ಮಾತಿ, ಮಾದಿ$_1$** (ನಾ). ಒಂದು ಬಗೆಯ ಮರ ಮತ್ತು ಔಷಧಕ್ಕೆ ಬಳಸುವ ಅದರ ಕಾಯಿ : ಪ್ರಮೇಹಕ್ಕೆ . . . ಕೆಸುವಿನ ಸೊಪ್ಪು, ಸರುವಲಸೊಪ್ಪು, ಹೆಬ್ಬಜೆಯ ಕಾಯಿ, ತಗರಿನ ಕೋಡಿನ ಹಾಗೆ ಇರುವ ಮಾತಿಯ ಕಾಯಿ . . . ಕೊಡುತ್ತಾ ಬರುವುದು (ಶಿವ್ಯಾವಿ. ೦೫೭). **ಮಾದಿ$_1$**: ಚಿಲಕಧೂಪ . . . ಮಾದಿ, ಚಿತ್ರ, ಧೂಪ (ವೈಶಿಗ. ೦೩-೨೩೭).
[? . / ತೆಲು. ಮಾಡಿ = ಕಾಡುಹುರುಳಿ]

**ಮಾತಿಗ** (ನಾ). ಚೆನ್ನಾಗಿ ಮಾತನಾಡಬಲ್ಲವನು ; ವಾಗ್ಮಿ : ಬಾಬರನು ತುಸು ದೊಡ್ಡಾಳೂ ನಗೆಮೋರೆಯವನೂ ಮಾತಿಗನೂ ಕಸುವುಳ್ಳವನೂ ಆಗಿದ್ದನು (ಮೋಬಾರ. ೩೩). [ಮಾತು$_1$ + — ಇಗ]

**ಮಾತಿಲಿ** (ನಾ). ನುಡಿಯದೆ ಸುಮ್ಮನಿರುವ ವ್ಯಕ್ತಿ ; ಮೌನಿ : ಹಮ್ಮೈಸಿ ಕುಳಿತಾ ಮಾತೆ ಕಂಬನಿಯ ಕರೆದು ಮಾತಿಲಿಯಾಗಿ ರೋದಿಸಿರೆ; ಬೆರಗುಹೊಡೆದಂತಿರ್ದನಾ ಬಭ್ರುವಾಹನು (ಕತ್ರಾಂಗ. ೭೫-೨೦೫೭) ; ಮನೆಯಲ್ಲಿ ಸಂಜೀವಿನಿಯು ಒಂದು ಮಾತಿಲಿ (ಸಂಜೀವಿ. ೭೬).
[ಮಾತು$_1$ + — ಇಲಿ$_3$]

**ಮಾತು$_1$** (ನಾ). ೧. ಮನಸ್ಸಿನ ಭಾವನೆಗಳನ್ನು ಬಾಯಿಯ ಮೂಲಕ ವ್ಯಕ್ತಗೊಳಿಸುವ ಮಾಧ್ಯಮ ; ನುಡಿ ; ಸೊಲ್ಲು : ತೀರ್ಥಂಕರ ಪರಮದೇವರ ಮಾತಂ ಕೇಳ್ದು ಬೇಗಂ ಗಂಗಾದೇವತೆ . . . ತಣ್ಣತಪ್ಪಗಾಳಿಯುಮಂ ಸುಗಂಧಜಲವರ್ಷಮುಮಂ ಮಾಡಿದೊಡೆ (ವಡ್ಡಾರಾ. ೦೦೪-೦೦); ನಿನ್ನ ಮಾತುಗಳ್ ಕೀಲಿಸಿದಂತೆಪೊಲ್ ಮನದೊಳಿರ್ದುವು (ಆದಿಪು. ೩-೨೩) ; ಮಾತೆಂಬುದು ಜ್ಯೋತಿರ್ಲಿಂಗ (ಅವತಂ. ೨೦೦-೯೫೦) ; ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು (ಗಾದೆ). ೨. (ಬರಹದ ಮೂಲಕ ವ್ಯಕ್ತಪಡಿಸುವ) ಉಕ್ತಿ ; ಹೇಳಿಕೆ : ನೆನೆನೆನೆದು ಪೆರರ ಮಾತುಗಳನೆ ನೆಗಬ್ದಿರೆ ಕೃತಿಯೊಳದು ವರಂ ನಗದ ಗುಹಾಧ್ವನಿಯವೊಲನರ್ಘವಚನಂ (ಕವಿರಾ. ೦-೦೪). ೩. ಒಂದು ಜನಾಂಗವು ಉಪಯೋಗಿಸುವ ಎಲ್ಲ ಶಬ್ದಗಳ ಸಮುಚ್ಚಯ ಮತ್ತು ಅವನ್ನು ಉಪಯೋಗಿಸುವ ಕ್ರಮ; ಭಾಷೆ : ನುಡಿಗಳೊಡಂಬಡಲ್ ಬಗೆದಪೊಲ್ ಬಗೆಯುಂ ಮಿಗಲೀಯದೊಂದೆ ನಾಟ್ಟುಡಿಯ ಬೆಡಂಗೆ ಕನ್ನಡದ ಮಾತಿನೊಳಾ ವಿಕಟಾಕ್ಷರಂಗಳೊಳ್ ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂಗುಡಿವಿಡು

ವಂತೆ ನೀಳ್ದು ನಿಲೆ ಪೇಟ್ದುದು ನೀತಿನಿರಂತರಕ್ರಮಂ (ಶಬರಾ. ೦-೧೯೯); ನವರಸಮುಣ್ಮೆ ಮಾತು ಪೊಸತಾಗಿರೆ ದೇಶಿಯೆ ದೇಸೆವೆತ್ತುದೆಂಬವೊಲಿರೆ . . . ಪೇಟಲೊಡರ್ಚಿದನೀ ಪ್ರಬಂಧಮಂ (ಛಂದೋಂಬು. ೦-೧೦). ೪. ಪ್ರಾಚೀನವಾದ ನುಡಿ; ಪಳಮಾತು: ಗೀತವ ಬಲ್ಲಾತ ಜಾಣನಲ್ಲ ಮಾತ ಬಲ್ಲಾತ ಜಾಣನಲ್ಲ ಜಾಣನು ಜಾಣನು ಆತ ಜಾಣನು ಲಿಂಗವ ನೆಜ³ ನಂಬಿದಾತ (ಬಸವ. ೦೫೩). ೫. ಸಂಗತಿ; ವಿಷಯ: ವೃತ್ತಾಂತ: ಕಿತ್ತಯ್ಯಂಗಳ್ ಸಂನ್ಯಸನಂಗೆಯ್ದರೆಂಬಾ ಮಾತನರಸನಾದಿಯಾಗಿ ಪೊಟಲ ಜನಂಗಳೆಲ್ಲಂ ಕೇಳ್ದು (ವಡ್ಡಾರಾ. ೬೩-೯); ಅಂತು ಸುಯೋಧನನ ಮಲ್ಲಸಂ [ಕೊಂದು] ವಲಲಂ ವಿರಾಟನ ಮನೆಯೊಳ್ ತನ್ನ ಮಾತೆ ಮಾತಾಗಿರ್ದಂ (ಪಂಪಭಾ. ೮-೫೮ ವ); ಈತನಾರೆ ಕಲ್ಪಾಂತರುದ್ರನ ಮಾತು ಜಗಕೇಕೆ (ಕುಮಾರವ್ಯಾ. ೬-೩೭). ೬. ಸಂಭಾಷಣೆ: ಪಾತ್ರದ ಮಾತನು ಗೀತದ ನುಡಿಯನು ಕಟ್ಟಿಕೊಟ್ಟರು ನಮ್ಮ ತಂದೆ (ಇಂಪಾಶ. ೧೧-೯೩). ೭. ಆಣೆ; ಪ್ರತಿಜ್ಞೆ; ಪ್ರಮಾಣ: ಆ ಬ್ರಾಹ್ಮಣನಿಗೆ ಹೇಳಿ ಅವನಿಂದ ಮಾತು ತೆಗೆದುಕೊಳ್ಳಬೇಕು (ವಚಪ್ರ. ೯೭); ಅವಳು ಪಶುಪತಿಯ ಹೆಂಡತಿಯೆಂಬ ಸಂಗತಿಯನ್ನು ಅವಳಿಗಾಗಲಿ ಪಶುಪತಿಗಾಗಲಿ ತಿಳಿಸಬಾರದೆಂದು ಮಾತುತೆಗೆದುಕೊಂಡನು (ಬಂಕಿವು. ೦೬೨). 'ಮಾತುಕೊಡು', 'ಮಾತುಗಳ್ಳ' ಪರಾ. ೮. (ಲಗ್ನದ) ನಿಶ್ಚಯ; ನಿಷ್ಕರ್ಷೆ: ಕೊನರೆಣಿಕೆ ಬೇಡವಳ್ಗೆ ಆಗಿಲ್ಲ ಮಾತು (ಕಾಊರ. ೫೯-೬೫). ೯. ಅಪವಾದ; ದೂರು; ನಿಂದೆ: ಮನೆಗೆ ಬಂದಳಿಯ ಮಗನಲ್ಲ ತವರಿಗೆ ಮಾತು ತಂದೋಳು ಮಗಳಲ್ಲ (ಹೆಣ್ಣಬಾ. ೬೫). ೧೦. ಜಗಳ; ವಾಗ್ವಾದ: ಮಾತಿನಲಿ ಸೋತವನೆ ಜಾಣ (ಸರ್ವಜ್ಞ. ೦೩೯೨); ಮಾತು ಬಂದಾಗ ಸೋತು ಹೋದವನೇ ಜಾಣ (ಗಾದೆ).

**ಮಾತುಮಾತು, ಮಾತೋಮಾತು** (ದ್ವಿರುಕ್ತಿ): ಮಾತುಮಾತೇ ಕಲಹ, ಕೂತುಕೂತೇ ಕಾಯಿಲೆ (ಕಾಬಿಸ್ಸಾ. ೮೭); ಅವನು ಮಾತುಮಾತಿಗೆ ಹಟ ಮಾಡುತ್ತಿದ್ದನು (ಮುರಿಬಾ. ೨-೫೦); ದಾರಿಗುಂಟ ನಡೆಯುತ್ತಿದ್ದಾಗ ಮಾತೋಮಾತು ನಡೆಯಿತು (ಹೊಸಕ್ಷಿ. ೫೯). **ಮಾತಜಾಣಂ** = ಮಾತನ್ನು ಬಲ್ಲವನು: ಕುಜಾತಂತು ಪೆಜರ ಬಗೆಯಂ ತೆಜಿದಿರೆ ಪೆಜರ್ಗಜಿಪಲಾರ್ಪವಂ ಮಾತಜಾಣಂ (ಶಬರಾ. ೦-೦೫); ಪ್ರವರರ ಪಂಡಿತರ ನೆಗಟ್ದ ಮಾತಜಾಣರ ಸಬ್ಬವದಪರೊಡನಂತೊಸೆದನ್ನವಾಸದೋಲಗದೊಳಿರ್ದನಾಗಳ್ ಹರಿಗಂ (ಪಂಪಭಾ. ೩-೮೦). **ಮಾತಾಗು** = ೧. ಮದುವೆ, ವ್ಯಾಪಾರ ಮುಂತಾದ ಕೊಡುಕೊಳ್ಳುವ ವ್ಯವಹಾರದ ನಿಷ್ಕರ್ಷೆಯಾಗು,— ನಿಶ್ಚಯವಾಗು: ಆತನು, ಬೆಳಗೆ ಎಲ್ಲಿಯೂ ಮಾತಾಗಿಲ್ಲವೆಂದೂ ಆ ಮನೆ ನಿಮಗೆ ಹೊಂದಬಹುದೆಂದೂ ತಿಳಿಸಿದನು (ಕಾಊರ. ೩ ಕಥಾಸಾರ). ೨. ಜಗಳವಾಗು: ಅವರಿಬ್ಬರಿಗೂ ಕೆಲಸಕ್ಕೆ ಬಾರದ ಯಾವುದೋ ವಿಷಯಕ್ಕೆ ಮಾತಾಗಿ ಪರಸ್ಪರ ಮನೆಗೆ ಹೋಗುವುದನ್ನೇ ನಿಲ್ಲಿಸಿಬಿಟ್ಟರು (ರೂಢಿ). **ಮಾತಿಗೆ ತಪ್ಪು** = ವಚನಭಂಗ ಮಾಡು: ನೀನು ಮಾತಿಗೆ ತಪ್ಪಿದಂತೆಯೇ ಆಯ್ತು (ಶಿಳುವು. ೦೯೫); ಮಾತಿಗೆ ತಪ್ಪಿದವ ಮಾದಿಗ (ಗಾದೆ). **ಮಾತಿಗೆ ನಿಲುಕು** = ನುಡಿಗಳಲ್ಲಿ ಹೇಳುವುದಕ್ಕೆ ಬರು,— ಸಾಧ್ಯವಾಗು: ಸುಬ್ಬಮ್ಮನವರ ಆ ಸೌಜನ್ಯವೆನುವುದು ಮಾತಿಗೆ ನಿಲುಕದಂತಹುದು (ಇಂಪಾಶ. ೩೭-೭೮). **ಮಾತಿಗೆ ಬಾರದ ವಸ್ತು** = ಉಪಯುಕ್ತವಾಗದುದು: ಅಪ್ರಯೋಜಕವಾದುದು: ಮಾತಿಗೆ ಬಾರದ ವಸ್ತು ಬಹಳಿದ್ದರೇನು ಹೋತಿನ ಕೊರಳೊಳಗೆ ಮೊಲೆ ಇದ್ದರೇನು (ಪುರಂದ. ೦-೦೩೯ ಕಲ್ಲಿ). **ಮಾತಿಗೆ ಮಾತು ಬೆಳೆ** = ಜಗಳವುಂಟಾಗು: ಅತ್ತೆ ಅಳಿಯಂದಿರಿಗೆ ಮಾತಿಗೆ ಮಾತು ಬೆಳೆದು ಎಲ್ಲಿ ರಂಪವಾಗುವುದೋ ಎಂದು ಎದೆ ಬಡಿದುಕೊಳ್ಳುತ್ತಿದೆ (ಶಿಳುವು. ೭೦). **ಮಾತಿನ ಮಲ್ಲ** = ಅತಿಯಾಗಿ ಮಾತಾಡುವವನು; ಹರಟೆಮಲ್ಲ: ಅವರನ್ನು ಮಾತಿಗೆ ಬಿಟ್ಟರೆಯಾನೀನು? ಮಾತಿನ ಮಲ್ಲ (ಕುಂಗಳ. ೯). **ಮಾತಿನ ಮಲ್ಲಿ** = ಅತಿಯಾಗಿ ಮಾತನ್ನಾಡುವವಳು: ಹರಟೆಮಲ್ಲಿ: ಆ ಮಾತಿನ ಮಲ್ಲಿಯ ಭಂಡಾರದಲ್ಲಿ ಅದೆಷ್ಟು ವಿಷಯ ತುಂಬಿತ್ತೋ? (ರೂಪಸ. ೨೯೨). **ಮಾತಿನ ಪಾಸಿ** = ಆಡಿದ ಮಾತನ್ನು ಉಳಿಸಿಕೊಳ್ಳುವ ಛಲ,— ಹಟ: ಆಸೆಯೋ ಜೀವದಲಿ ಕುರುಧರಣೀಶ ಬಿಡು ರಾಜ್ಯವನು ಮಾತಿನ ಪಾಸಿಯೋ ಕೊಡು ಕದನವನು (ಕುಮಾರವ್ಯಾ. ೦೫-೦೫). **ಮಾತುಕತೆ** = ಲೋಕಾಭಿರಾಮವಾದ ಸಂಭಾಷಣೆ; ಹರಟೆ: ಈಚೆ ಬಂದಾಗ ನನ್ನ ಹೆಂಡತಿಯ ಮಾತುಕತೆ ನಡೆಯುತ್ತಲೇ ಇತ್ತು (ಮೂಕಜ್ಜಿ. ೩೭). **ಮಾತುಮೀರು** = ಹೇಳುವ ಮಾತನ್ನು ಉಲ್ಲಂಘನೆ ಮಾಡು,— ಉಲ್ಲಂಘಿಸು: ತಾಯಿ ತಂದೆಗಳ ಮಾತು ಮೀರಿ ಆಕೆಯಾದರೂ ಹೊರಟಾಳೆ? (ಶಿಳುವು. ೭೦). **ಮಾತುಹಿಡಿ** = ಸಂಭಾಷಿಸು; ಮಾತನಾಡಲು ತೊಡಗು: ಭಟ್ಟ ದಕ್ಷಿಣೆಗಾದರೆ ಮಾತು ಹಿಡಿದಾನು, ಮಂತ್ರಕ್ಕಾದರೆ ಬೆನ್ನು ತೋರಿಸ್ಯಾನು (ಗಾದೆ). **ಮಾತೆಜಿಯಳ್** = ನುಡಿಯ ಅಧಿದೇವತೆ; ಸರಸ್ವತಿ: "ನುಡಿವೆಣ್, ಬಾಸೆವೆಣ್, ಸೊಲ್ವೆಣ್, ಮಾತೆಜಿಯಳ್, ಸಾರದೆ, ಸರಸತಿ – ಈ ೬ ಸರಸ್ವತಿಗೆ ಪೆಸರ್" (ಶಶಾ. ೯೮-೦೭).

[ ದೇಶ. ತಮಿ. ಮಾಟ್ಟು, ಮಾಱ್ಱಮ್; ಮಲ. ಮಾಱ್ಱು; ತುಳು. ಮಾತ್; ತೆಲು. ಗೊಂಡಿ. ಮಾಟ; ಕೋತ. ಮಾಂಟ್ ]

**ಮಾತು$_{2}$** (ನಾ). [ಸಂಗೀತ] ಹಾಡಿನ ಸಾಹಿತ್ಯದಲ್ಲಿ ಬಳಕೆಯಾಗುವ ಅಕ್ಷರ; **P** "ಹಾಡಿನಲ್ಲಿರುವ ಮಾತುಗಳಿಗೆ ಮಾತು ಎಂದೂ ನಾದಾಂಶ ಮತ್ತು ಲಯಾಂಶಗಳ ಸಮಷ್ಟಿಗೆ ಧಾತುವೆಂದೂ ಸಂಗೀತಶಾಸ್ತ್ರದಲ್ಲಿ ಪರಿಭಾಷೆ. ಮಾತು ಎಂಬ ಕನ್ನಡಶಬ್ದವು ಈ ಶಾಸ್ತ್ರದಲ್ಲಿ ಪಾರಿಭಾಷಿಕಸಂಜ್ಞೆಯನ್ನು ಪಡೆದಿದೆ" (ಕಸಂಶ್ರ. ೭೦ ಅಡಿಟಿ): ಆ ಖಂಡಗಳಲ್ಲಿ ಧಾತುವು ಒಂದೇ; ಆದರೆ ಮಾತುವು ಬೇರೆಯಾಗಿರುತ್ತದೆ. ಧಾತುವೆಂದರೆ ಸ್ವರವೆಂದು ಹೇಳಿದೆ. ಮಾತು ಎಂದರೆ ಅಕ್ಷರವೆನ್ನಲಾಗಿದೆ (ಕಸಂಶ್ರ. ೦೦೨). [ಸಂ.]

**ಮಾತು$_{3}$** (ನಾ). ೧. ಅದ್ಭುತವಾದ ಕೆಲಸ,—ಕಾರ್ಯ: (?). ೨. ವಿಷವನ್ನಾಗಲೀ ರೋಗವನ್ನಾಗಲೀ ನಿವಾರಿಸುವ ಮದ್ದು: ವಿಷಹಾರಿ.

[ ←ಅರ. ಹಿಂ. ಮರಾ. ಮಾತ್ ]

**ಮಾತುಂಗುಟ್ಟು, ಮಾತುಗುಟ್ಟು** (ಕ್ರಿ). ಪರಸ್ಪರ ಸಂಭಾಷಿಸು,— ಆಲಾಪಿಸು: ಪುದುಂಗೊಳಿಸಿದಂ, ಪುದುಗೊಳಿಸಿದಂ; ಮಾತುಂಗುಟ್ಟಿದಂ, ಮಾತುಗುಟ್ಟಿದಂ (ಶಮದ. ೦೩೭ ಪ್ರಯೋ). **ಮಾತುಗುಟ್ಟು**: ಬೂತುತನಂ ಪೆಜಗಾಗೆ ಮಾತುಗುಟ್ಟಿದಪಳೆ (ಲೀಲಾವ. ೨-೦೦೦); ಹುಸಿವನ ಮಾತುಗುಟ್ಟದಿರು ಲೋಬನ ಮಾತನಡಂಗಿಸಾಜಿಯೊಳ್ಕುಸಿವನ ಮಾತುಗೇಳದಿರು (ಕಇ. I. ೨೫-೯೭; 1186); ಇಂತರಸನರಸಿವೆರಸು ಸಂಸ್ತುತಿಯೊಂದು ಬಾಟಿಗೀಡಂ ಕುಜಿತು ಮಾತುಗುಟ್ಟುತಿರ್ದು ಬಿದುರ್ಣಿಸಂ ಪುದರ್ಣಿಸೆಂಬಂತಿರುಂಡು ಸೆಜ್ಜೆವನೆಗೆ ಪವಡಿಸಲ್ಕೆಂದು ಪೋದಂ (ರಾಜಶೇ. ೭೫-೦೨); ಸಂತೋಷೋತ್ಸಾಹಗಳಿಂದ ಮಾತುಗುಟ್ಟುತ್ತಿರುವ ಯುವರಾಜ ಶ್ರೀರಾಜಬಿಡೆಯನನ್ನೊಡಗೂಂಡು. ಬೆಟ್ಟದ ಅರಸುವಿನ ಪ್ರವೇಶ (ಬೆಟ್ಟಅ. ೦೮-೦೮). [ ಮಾತು$_{1}$ + ಕುಟ್ಟು$_{1}$ ]

**ಮಾತುಕೇಳು** 'ಮಾತುಗೇಳ್' ನೋ.

**ಮಾತುಕೊಡು, ಮಾತುಗುಡು** (ಕ್ರಿ). ಭಾಷೆಯನ್ನು ಕೊಡು: ವಾಗ್ದಾನ ಮಾಡು: ಆಚಾರ್ಯರಿಗೆ ನಾನೇ ತಮ್ಮ ಪರವಾಗಿ ಮಾತು ಕೊಟ್ಟು ಬಂದಿರುವೆನು (ರಾಜಶಿಂ. ೦೩೮); ಅಪೂರ್ವನ ಮದುವೆಯ ಸಂಬಂಧವಾಗಿ ನೀನು, ಯಾರಿಗೂ ಮಾತುಕೊಡಬೇಡ (ಭಾರತಿ. ೦). **ಮಾತುಗುಡು**: ಆದರ್ ಮಾತುಗುಡದಿರೆ ಕುಮಾರಿ ಪ್ರಿಯಂದತ್ತನೆಟ್ಟಿ

ಮೊದಲಾಗೆ ಬಂಧುಗಳೆಲ್ಲರುಮನೊಡಂಬಡಿಸಿ . . . ಜಿನದೀಕ್ಷೆಯಂ ಕೈಕೊಂಡು (ರಮಾಣ್ಯ. ೩-೨೬೨). [ಮಾತು$_1$ + ಕೊಡು$_1$]

**ಮಾತುಗ** (ನಾ). = ಮಾತಿಗ : ಮಾತುಗಂ, ಬೂತುಗಂ (ಶಬ್ದ. ೨೦೦ ಸೂತ್ರ); ಏವಂ ಮಾತುಗಂ, ಮಾತುಮಣಿಗಂ (ಶಬ್ದಾ.ಸು. ೪೦೫ ಸೂತ್ರ). [ಮಾತು$_1$ + – ಗ$_2$]

**ಮಾತುಗಂಟಿ$_1$** (ನಾ). ಅತಿಯಾಗಿ ಮಾತನಾಡುವವಳು ; ಹರಟೆಮಲ್ಲಿ : ಮಾತುಗಂಟಿಯಾದ ಆವಳನ್ನು ಮಾತನಾಡಿಸಲು ಎಲ್ಲರೂ ಹಿಂಜರಿಯುತ್ತಾರೆ (ಜಾಂ). [ಮಾತು$_1$ + – ಗಂಟು$_2$ + – ಇ$_2$]

**ಮಾತುಗಂಟಿ$_2$** (ನಾ). ೧. ಅತಿಯಾಗಿ ಮಾತನಾಡುವವನು ; ಹರಟೆ ಮಲ್ಲ: ಪಶು ಪಾಷಂಡಿ ಚಾರ್ವಾಕ ಮಾತುಗಂಟಿ ವಿಷ್ಣುನಾಡಿದರೂ ಶಿವಯೋಗಸಂಬಂಧಸಂಪನ್ನನೊಪ್ಪುವನೆ (ಸಕವ. II. ೫೦೦–೬೦). (ಗು). ೨. ಅತಿಯಾಗಿ ಮಾತನ್ನಾಡುವ : 'ಮಾತುಗಂಟಿತನ' ಪರಾ. [ಮಾತು$_1$ + – ಗಂಟು$_2$ + – ಇ$_3$]

**ಮಾತುಗಂಟಿತನ** (ನಾ). ಅತಿಯಾಗಿ ಮಾತನ್ನಾಡುವ ಸ್ವಭಾವ: ಯಾಚಕ ಮಾತುಗಂಟಿತನದಿಂದ ವಸ್ತುಭಾವದ ನಿಹಿತವನಱಿಯದೆ ವಾಗ್ವಾದಕ್ಕೆ ಗೆಲ್ಲ ಸೋಲಕ್ಕೆ ಹೋರುವಲ್ಲಿ ಇಹಪರ ಉಭಯದಲ್ಲಿಗೆ ದೂಱಿ (ಮೋಕ್ಷಶು. ೦೩೬–೩೩೨); ಮಾತುಗಂಟಿತನದಿಂದ ಎಷ್ಟು ಮಾತನಾಡಿದಡೇನು (ಸಕವ. I. ೩೮೬–೨೫). [ಮಾತುಗಂಟಿ$_2$ + – ತನ]

**ಮಾತುಗಳ್ಳ** (ನಾ). ಕೊಟ್ಟ ಭಾಷೆಗೆ ತಪ್ಪುವವನು; ಸುಳ್ಳ : ನಾನು . . . ಆಡಿ ತಪ್ಪುವ ಕ್ಷುದ್ರಬುದ್ಧಿಯ ಕಿರುಕುಳನಲ್ಲ–ಮಾತುಗಳ್ಳನಲ್ಲ (ಮಂಕ್ರಿಶ. ೪೦–೦೬). [ಮಾತು$_1$ + ಕಳ್ಳ$_1$]

**ಮಾತುಗಾತಿ** (ನಾ). ಬಹಳ ಮಾತನ್ನಾಡುವವಳು ; ಹರಟೆಮಲ್ಲಿ : ಓಹೋಹೋ. ಮಾತುಗಾತಿ, ಮಾಟಗಾತಿ· ಬಾ ಊಟಕ್ಕೆ ಬಡಿಸು(ಶಿಲುಮ. ೦೨೫). [ಮಾತು$_1$ + – ಕಾತಿ$_5$]

**ಮಾತುಗಾರ** 'ಮಾತುಗಾಱ' ನೋ.

**ಮಾತುಗಾರಿಕೆ** 'ಮಾತುಗಾಱಿಕೆ' ನೋ.

**ಮಾತುಗಾರ್ತಿ** (ನಾ). ಮಾತು ಬಲ್ಲವಳು ; ವಾಚಾಳಿ : (*). [ಮಾತುಗಾರ (< ಮಾತುಗಾಱ) + – ತಿ$_1$ (< – ಇತ್ತಿ)]

**ಮಾತುಗಾಱ**, ಮಾತುಗಾರ(ನಾ). ೧. ಅತಿಯಾಗಿ ಮಾತನ್ನಾಡುವವನು; ಹರಟೆಮಲ್ಲ : 'ಮಾತುಗಾಱತನ' ಪರಾ. ೨. ಚೆನ್ನಾಗಿ ಮಾತನ್ನಾಡುವವನು; ವಾಗ್ಮಿ : (*). **ಮಾತುಗಾರ** : ೧. ಆ ಮಾತುಗಾರನ ಹತ್ತಿರ ಕುಳಿತುಕೊಳ್ಳಲು ಯಾರೂ ಇಷ್ಟಪಡುವುದಿಲ್ಲ (ಜಾಂ). ೨. ಅವನು ಒಳ್ಳೆಯ ಮಾತುಗಾರ (ಜಾಂ). [ಮಾತು$_1$ + – ಕಾಱ]

**ಮಾತುಗಾಱತನ** (ನಾ). ಅತಿಯಾಗಿ ಮಾತನ್ನಾಡುವಿಕೆ ; ಗಳಹುವಿಕೆ ; ಮಾತುಗಾ[ಶಾಕಾಂ. ಕಾ]ಱತನದಲುಲಿವ ಪಲಮಾತವೇತಕೆ ನಾವು ಹೇಳಿದ ಮಾತನಾಲಿಸಿ ಮಾಡಬೇಹುದು ಮಕ್ಕಳಾದವರು (ಐಸಪು. ೩–೩೬). [ಮಾತುಗಾಱ + – ತನ]

**ಮಾತುಗಾಱಿಕೆ**, ಮಾತುಗಾರಿಕೆ (ನಾ). ೧. = ಮಾತುಗಾಱತನ : ಪೇತೆ ನೀನೇನು ದೊಡ್ಡಿತು ನಸ್ನ ಸರಲ ಮುಯ್ಯಾಂತುಕೊಂಬೊಡೆ ರುದ್ರ ಗರಿದು ಮಾತುಗಾಱಿಕೆ ಬೇಡ ಹಿಡಿಯೆಂದು ಭಾಳದೆ ತೂತೇಳಲೆಚ್ಚು ಬೊಬ್ಬಿಱಿದ (ಪೋಹತ. ೦೨–೩೯). ೨. ವಾದ ; ತರ್ಕ ; ಚರ್ಚೆ: ಮಾತುಗಾಱಿಕೆಯಿಂದಲವರಿವರ ಸೋಲಿಸಿದ ಗೌತಮನ ಬರಹೇಳೊ (ಬೀಕೈಪು. ೪–೦೨–೨೮). **ಮಾತುಗಾರಿಕೆ** : ೩. ಮಾತಾಡುವ ರೀತಿ: ಅವಳು ಮಾತುಗಾರಿಕೆಯಲ್ಲಿ ಬಹಳೇ ನಿರ್ಭಿಡೆ ಸ್ವಭಾವದವಳು (ಕಶಪಾ.೨೩೯); ಇವರ ಮಾಮಖಲಿಯ ಮಾತುಗಾರಿಕೆಯು . . . ರಸವರ್ಜ್ಯ ಸತ್ಯಲೋಕದ ಶುಭ್ರತೆಯನ್ನು ಸೇರುವವು (ಬಿಶ್ರಾಪಂ. ೯೯). [ಮಾತುಗಾಱ + – ಇಕೆ]

**ಮಾತುಗಿ** (ನಾ). = ಮಾತುಗಾರ್ತಿ: ಮಾತುಗಿ, ಮಾತುಗಿತಿ; ಬೂತುಗಿ, ಬೂತುಗಿತಿ (ಶಬ್ದಾ.ಸು. ೦೯೩ ಸೂತ್ರ). [ಮಾತುಗ + – ಇ$_2$]

**ಮಾತುಗಿತಿ** (ನಾ). = ಮಾತುಗಾರ್ತಿ : ಮಾತುಗಿ, ಮಾತುಗಿತಿ ; ಬೂತುಗಿ, ಬೂತುಗಿತಿ (ಶಬ್ದಾ.ಸು. ೦೯೩ ಸೂತ್ರ). [ಮಾತುಗ + – ಇತಿ$_1$ (< – ಇತ್ತಿ)]

**ಮಾತುಗುಟ್ಟು** 'ಮಾತುಂಗುಟ್ಟು' ನೋ.

**ಮಾತುಗುಡು** 'ಮಾತುಕೊಡು' ನೋ.

**ಮಾತುಗುಳಿ**, ಮಾತುಗೂಳಿ (ಗು). ಚೆನ್ನಾಗಿ ಮಾತನ್ನಾಡುವ,– ಸಂಭಾಷಿಸುವ : ಮಾತುಗುಳಿ ತರುಣ ನೆಕ್ಕಲದೋವನ ಪಕ್ಕದಲ್ಲಿ ಮೆಟ್ಟಲಿಳಿಯುತ್ತ . . . ನುಡಿದನು (ಕೃಶರು. ೨೪೪) ; ಅತ ಒಳ್ಳೆ ಮಾತುಗುಳಿ ಚತುರ (ಕ್ರೀಡಾಶ್ರ. ೨೩). **ಮಾತುಗೂಳಿ**: ಅವನ ಕರುಣೆ ಯಿರದ ಮಾತುಗೂಳಿ ಜಿಹ್ವೆಯಿದ್ದು ಇಲ್ಲದಂತೆ ಉಗ್ಗುತಿರುವನು (ತಂಕಪ. ೩೦–೧೪). [ಮಾತು$_1$ + – ಗುಳಿ$_2$ (< – ಕುಳಿ$_3$)]

**ಮಾತುಗೂಳಿ** 'ಮಾತುಗುಳಿ' ನೋ.

**ಮಾತುಗೆಡು** (ಕ್ರಿ). ನುಡಿಯದಂತಾಗು ; ಮೂಕವಾಗು : ಆದಿತ್ಯನ ಸಾರಥಿ ಬೆಱಗಾದಂ ಮಾತಾಳಿ ಮಾತುಗೆಟ್ಟಂ ಧುರದೊಳ್ ಚೋದಿಸೆ ಹರಿಯುಂ ಶಲ್ಯನುಮಾದರದಿಂ ನರನ ದಿನಪತನಯನ ರಥಮಂ (ಕಂಪಶಾ. ೦೨–೦೬೨). [ಮಾತು$_1$ + ಕೆಡು$_1$]

**ಮಾತುಗೇಳ್**, ಮಾತುಕೇಳು (ಕ್ರಿ). ನುಡಿಗೆ ಒಡಂಬಡು ; ಸಮ್ಮತಿಸು : ಪೊಂದರುತಿರೆ ಗಂಡಂ ಸಾಯೆಂದಡೆ ಜೀಯೆಂದು ಪೇಟ್ದೊಡಂ ಮಾಡುವರಿಂತೊಂದುದಿನ ಬೀಯವಿಲ್ಲದೊಡಂದಾಗಳ್ಮಾತುಗೇಳರಜಿನಂ ಮಱೆವರ್ (ಸಮುಕ. ೩–೦೦೦). **ಮಾತುಕೇಳು** : ಕೈಮೀಱಿ ಹೋದ ಮಾತಿಗೆ ಹುಡುಕಾಡಬಾರದು ಮಾತುಕೇಳದ ಮಕ್ಕಳ ಹೆಸರ ತೆಗೆಯ ಬಾರದು (ಭುಕಂವ. ೨–೩೬ ಪಲ್ಲವಿ). [ಮಾತು$_1$ + ಕೇಳ್]

**ಮಾತುದೆಗೆ** (ಕ್ರಿ). ಸಂಭಾಷಣೆಗೆ ತೊಡಗು : ಇಂದಿನಿರುಳೊಳು ಮಹೇಶ್ವರಪೂಜಾಮಹೋತ್ಸವಮಂ ನೋಡಲ್ವೇಟ್ಕುಮೆಂದು ಪೋಗಿಮಂದಪೆನೆ ನಗನುಜ್ಞೆಯಂ ಕುಡಿಮೆಂಬ ನೆವದೆ ಮಾತುದೆಗೆಯೆ (ಜಗಶಿ. ೦೩–೫ ವ). [ಮಾತು$_1$ + ತೆಗೆ$_1$]

**ಮಾತುದೋಱು** (ಕ್ರಿ). ೧. ಸಂಭಾಷಿಸು ; ಮಾತನಾಡು : ಹಾ ತರುಣಿ ನಳಿನಾಕ್ಷಿ ನಯಸಂಪ್ರೀತಿಪೂರ್ವಕದಿಂದ ಕನಸಲಿ ಮಾತುದೋಱದೆ ಬಂದು ನನ್ನಲಿ ಕರುಣದಿಂ ನೀನು (ಪಶಕ. ೭–೯). ೨. ಅಭಿವ್ಯಕ್ತಿಗೆ ತಕ್ಕ ಶಬ್ದಗಳು ತೋರು : ಮಾತುದೋಱದು ಹೆಚ್ಚಿದಾನಂದಾತಿರೇಕಕೆ ಚಿತ್ತ ನೆಱೆಯದು (ಕುಮಾವ್ಯಾ.ದ್ರೋ. ೦೫–೨). [ಮಾತು$_1$ + ತೋಱು]

**ಮಾತುಪರ** 'ಮಾತ್ಬರ್' ನೋ.

**ಮಾತುಬರಿ** 'ಮಾತ್ಬರ್' ನೋ.

**ಮಾತುಭಾರ** 'ಮಾತ್ಬರ್' ನೋ.

**ಮಾತುಭಾರಿ** 'ಮಾತ್ಬರ್' ನೋ.

**ಮಾತುಭಾರಿಕೆ** (ನಾ). ದೊಡ್ಡಸ್ತಿಕೆ ; ಪ್ರತಿಷ್ಠೆ : ಅವರ ಮಾತುಭಾರಿಕೆ, ಜರ್ಬುಗಳು ಅಂಥದಿರಬೇಕು (ಮೂಕಕ್ಕ. ೩೦). [ಮಾತುಭಾರ (<ಮಾತ್ಬರ್) + – ಇಕೆ]

**ಮಾತುರ** (ನಾ). ೧. ಅಳತೆ ; ಪ್ರಮಾಣ : ಮಾತ್ರ – ಮಾತುರ, ಮುಕ್ತಿ – ಮುಕುತಿ (ಶಬ್ದ. ೨೫೪ ಸೂತ್ರ) ; ಎರಡು ಎಂಟು ಪರಿಮಿತವಾದ ಮಾತುರತನಕ ರೇಚಕ ಆ ತರುವಾಯದಲಿ ಮೂವತ್ತೆರಡು ಮಾತುರತನಕ ಪರಪೂರಕ (ಚಿಜಾಸು. ೨–೨). ೨. ಅಷ್ಟು ; ಆ ಪರಿಮಾಣ : ಎನ್ನ ಮೇಲಪರಾಧ ಲೇಶಮಾತುರಯಿಲ್ಲ ಅನ್ಯಾಯದವನಲ್ಲ ನಾನು ದೇವ (ಪೋಕ್ಷದೀ. ೨೦–೪) ; ಭಂಗ ಬಂದಡಸಿತೀ ನಗರಕ್ಕೆ ಕೇಳು ಕಪಿ

ಪುಂಗವನೆ ನಿನ್ನಿಂದಮಾನಳಿದ ಮಾತುರದಿ ಮುಂಗಡೆಯುಲೀ ರಾಜಧಾನಿ ವಶ ಮಾಯ್ತು ನಿನಗೆ (ತೊರವೆರಾ. ೩-೦೯-೨೩). [<ಸಂ. ಮಾತ್ರಾ]

**ಮಾತುಲ, ಮಾತುಳ** (ನಾ). ೧. ತಾಯಿಯ ಸಹೋದರ ; ಸೋದರ **ಮಾವ** : "ಮಾತುಲಃ, ಮಾತುಭ್ರಾತಾ – ಸೋದರಮಾವನ ಹೆಸರು" (ಸಿದ್ಧಾಂತಿ. ೦೭೬); ಅರ್ಜುನನು ಆ ಸೈನ್ಯಗಳಲ್ಲಿ ಪಿತೃಗಳು, ಪಿತಾಮಹರು, ಆಚಾರ್ಯರು, ಮಾತುಲರು . . . ಆಪ್ತರು ಇವರನ್ನು ನೋಡಿದನು (ಭಾತತ್ತ್ವ. ೦೦೨); ಮಾತುಲಗೃಹದಿ, ಲಲಿತಸುಖದ ನಿದ್ರಾರತಿಯು . . . ವಕ್ಷದೊಳ್ ಪಟ್ಟಿರ್ದ ಭರತದೇವಂ ದುಃಖಿಸ್ವಪ್ನಭೀತಿಯಿಂ ಬೆಚ್ಚಿ ಬೆಬ್ಬಳಿ ಸೆದ್ದು ನೋಡಿದರ್ (ಶ್ರೀರಾಮಪ. ೦೦೩-೭೯). ೨. ದತ್ತೂರದ ಗಿಡ : "ಉನ್ಮತ್ತಃ . . . ಮಾತುಲಃ, ಮದನಃ – ೭ ಉಮ್ಮತ್ತೀಗಿಡದ ಹೆಸರುಗಳು" (ಸಿದ್ಧಾಂತಿ. ೦೩೦). **ಮಾತುಳ** : ೧. "ಮಾತುಳನೆನಲ್ಕೆ ಸೋದರಮಾವನಕ್ಕು" (ಮಂಗರಾ. ೯೨-೧೩) ; ಕುಶಳವೆ ಮಾತುಳಂಗೆ ಜಯುವರ್ಮನೃಪಂಗೆ (ಧರ್ಮಾಮೃ. ೭-೩೬) ; ನಿನಗೆ ಮಾತುಳರಾವು ಮಾಣಲಿ ಮುನಿಯೆಮಗೆ ಮೊಜಿಯಲ್ಲ ದುಶ್ಶಾಸನ ಜಯದ್ರಥರಲ್ಲಲಾ ಸಂಬಂಧಿಗಳು ನಿನಗೆ (ಕುಮಾವ್ಯಾ. ೩-೩೩). [ಸಂ.]

**ಮಾತುಲಂಗ, ಮಾತುಳಂಗ** (ನಾ). ಒಂದು ಬಗೆಯ ಮರ ಮತ್ತು ಹುಳಿಹಣ್ಣುಗಳ ಜಾತಿಗೆ ಸೇರಿದ, ದಪ್ಪತಿರುಳೂ ದೊಡ್ಡ ಗಾತ್ರವೂ ಇರುವ ಅದರ ಹಣ್ಣು ; ಮಾದಳ ; ಸಕ್ಕರೆನಿಂಬೆ : "ಲುಂಗ – ಮಾತುಲಂಗ" (೬ಶಂ. ೦೯೩). **ಮಾತುಳಂಗ** : "ಕೂರಳೊಳಾಭರಣದೊಳು . . . ಮಾತುಳಂಗದೊಳು ನಿರುತದಿಂ ರುಚಕಮಕ್ಕು" (ಮಂಗರಾ. ೦೩೨-೩೯); ಒಂದು ಫಲವದು ಮಾತುಳಂಗವದೊಂದು ಫಲವದು ತಿಂತ್ರಿಣೀಕವು (ಜಸಕೃ. ೦೯-೭೬). 'ಮಾತುಲುಂಗ' ಪರಾ. [ಸಂ.]

**ಮಾತುಲಂಗಕ** (ನಾ). = ಮಾತುಲಂಗ : ಗುಡ ಮಾತುಲಂಗಕವು ಪೊಡವಿಯೊಳಗೆಸಡಿಕ್ಕು ಒಡಗೂಡೆ ಬಿಸಿನಿರಸದೊಡನೆ ಒಡತನವಡಗಿ ಸಿರಿ ಬಕ್ಕು (ಸರ್ವಜ್ಞ. ೦೯೭೩). 'ಮಾತುಲುಂಗಕ' ಪರಾ. [ಸಂ.]

**ಮಾತುಲಕ** (ನಾ). = ಮಾತುಲ ೧ : "ಅಂಬಿಕೆಯ ಸೋದರಂ ಮಾತುಲಕಂ" (ಮತ್ತ್ಯಕೋ. ೩೩-೨೦). [ಸಂ.]

**ಮಾತುಲಪುತ್ರಕ** (ನಾ). ೧. ತಾಯಿಯ ಒಡಹುಟ್ಟಿದವನ ಮಗ ; ಸೋದರಮಾವನ ಮಗ. ೨. ದತ್ತೂರದ ಕಾಯಿ : ಮಾತುಲಪುತ್ರಕಃ . . . ಮದ್ದುಗಳಿಗೂ ಶಕುನಕ್ಕೂ ಉಪಯೋಗಿಸಲ್ಪಡುತ್ತೆ (ಸಿದ್ಧಾಂತಿ. ೦೩೦). [ಸಂ.]

**ಮಾತುಲಾನಿ, ಮಾತುಳಾನಿ** (ನಾ). ೧. ತಾಯಿಯ ಒಡಹುಟ್ಟಿದವನ ಹೆಂಡತಿ ; ಸೋದರತ್ತೆ : "ಮಾತುಲಾನೀ, ಮಾತುಲೀ–೨ ಸೋದರ ಮಾವನ ಹೆಂಡತಿಯ ಹೆಸರುಗಳು" (ಸಿದ್ಧಾಂತಿ. ೦೭೫). ೨. ಸೆಣಬಿನ ಗಿಡ. ೩. ಒಂದು ಬಗೆಯ ದ್ವಿದಳಧಾನ್ಯ. **ಮಾತುಳಾನಿ** : ೧. ಮಾತುಳಂಗಂ ಮಾತುಳಾನಿಗಂ ತುಟಿಲ್ಗೆಯ್ಯುದಂ (ಧರ್ಮಾಮೃ. ೬-೯೯ ಪ) ; ಮಾತುಳಾನಿಯ ಸುತಗೆ ವೈವಾಹಮಾಡಿತ್ತರವಳ ತಾಯ್ತಂದೆಗಳು ಪುರುಷನಾಥನು ಎಂಬಗೆ (ಶ್ರೀರಾ. ೦೨-೦೨). ೪. ತಂದೆಯ ತಂಗಿ : "ಪಿತನ ಸಹಜಾತ ನಿಜಮಾತುಳಾನಿಯೆನಿಕ್ಕು" (ಮಂಗರಾ. ೯೨-೦೩). [ಸಂ. ಮಾತುಲಾನೀ]

**ಮಾತುಲಾಹಿ** (ನಾ). ೧. ಒಂದು ಬಗೆಯ ಹಾವು : "ಕೇರೆ" (ಪಾಶಂಶಾ. ೪). ೨. ಹಾವಿನ ಜಾತಿಗೆ ಸೇರಿದ ಒಂದು ಬಗೆಯ ಹುಳು : "ಮಾಲುಧಾನಃ, ಮಾತುಲಾಹಿಃ–೨ ಊಸರವಳ್ಳಿಹಾವು, ವಿಷಗಿಡದ ಹುಳ, ಉಮ್ಮತ್ತದ ಹುಳ. ಇದು ಖಟ್ವಾಂಗದ ಆಕಾರವಾಗಿಯೂ ದೀರ್ಘದೇಹವಾಗಿಯೂ ಉದ್ದವಾದ ಬಾಲವುಳ್ಳದ್ದಾಗಿಯೂ ನಾಲ್ಕುಕಾಲುಗಳುಳ್ಳದ್ದಾಗಿಯೂ ಇರುವದು" (ಸಿದ್ಧಾಂತಿ. ೭೨). [ಸಂ.]

**ಮಾತುಲಿ** (ನಾ). = ಮಾತುಲಾನಿ ೧ : "ಮಾತುಲಾನೀ, ಮಾತುಲೀ–೨ ಸೋದರಮಾವನ ಹೆಂಡತಿಯ ಹೆಸರುಗಳು" (ಸಿದ್ಧಾಂತಿ. ೦೭೩). [ಸಂ. ಮಾತುಲೀ]

**ಮಾತುಲುಂಗ, ಮಾತುಳುಂಗ** (ನಾ). = ಮಾತುಲಿಂಗ : ಸಿತದೂರ್ವಾಂಕುರ ಮಾತುಲುಂಗ ಸಳಿನೀಭೃಂಗಾರಗೋರೋಚನಾಕ್ಷತದಧ್ಯಾದಿ ವಿಡಂಬಮಂಗಳದೊಳೇಂ (ಅದಿಪು. ೦೬-೦೦); ನವಫಲಂಗಳಿಂ ನೆಜೆದೊಪ್ಪುವ ಮಾತುಲುಂಗದ ಪೊದಜುಗಳುಮಂ . . . ಕ್ರೂರಮೃಗನಿವಹಮುಮಂ ಕಂಡು (ಶಂಶತಂ. ೦೦೭–೧೩): ಹುಡುಗನು ಮಾತುಲುಂಗವನ್ನು ಹಿಡಿದು ಶುಕದ ಕಡೆ ತೋರಿಸುತ್ತಿರುವವನು (ಹೊಯ್ಸವಾ. ೨೮). **ಮಾತುಳುಂಗ** : ದೂರ್ವಾಂಕುರ ಮಾತುಳುಂಗ ಶೃಂಗಾರದರ್ಪಣ ಪೂರ್ಣಕಳಶ ಕಳಮಾವೃತಕರ ಪಲ್ಲವೆಯರಪ್ಪ ಪುರಂಧ್ರಿಯರುಂ . . . ಇದಿರ್ವಂದು ಮೆಯ್ಯಿಕ್ಕಿ (ಶಂಶಪಾ. ೩-೨ ವ) ; ಪಸಿಯಡಕೆಗಳಂ ಮಾವಿನ ರಸವಣ್ಣ ಳನತುಳಮಾತುಳುಂ [ಪಾಠಾಂ. ಳಂ]ಗದ ಫಳಮಂ ವಸುಧೀಶಂಗೊಲಿದಿತ್ತಂ ವಸಂತಚರನಂತೆ ಋಷಿನಿವೇದಕನೊರ್ವಂ (ಪುಣ್ಯಾಸ್ರ. ೧-೪೦). [ಸಂ.]

**ಮಾತುಲುಂಗಕ** (ನಾ). = ಮಾತುಲಂಗ : "ಫಲಪೂರಕಃ, ಬೀಜಪೂರಕಃ, ರುಚಕಃ, ಮಾತುಲುಂಗಕಃ – ೪ ಮಾದೀಗಿಡ, ಮಾದಾಳದ ಗಿಡ" (ಸಿದ್ಧಾಂತಿ. ೦೩೦). [ಸಂ.]

**ಮಾತುವಣಿಗ** (ನಾ). ಮಾತುಗಂಟಿ ; ಹರಟೆಮಲ್ಲ : ಮಾತುಗಂ, ಮಾತುವಣಿಗಂ ; ಬೂತುಗಂ, ಬೂತುವಣಿಗಂ (ಶಬ್ದಾನು. ೪೧೩ ಪ್ರಯೋ). [ಮಾತು$_1$ + –ವಣಿಗ$_2$]

**ಮಾತುವಲ್ಲಹ** (ನಾ). ನುಡಿಯ ಅಧಿದೇವತೆಯಾದ ಸರಸ್ವತಿಯ ಒಡೆಯ ; ಬ್ರಹ್ಮ : ಆಗಮವಿಭಕ್ತಿಗಳ ಲೋಪಕ್ಕೆ – ಮಾತುವಲ್ಲಹಂ ; ನೂಜಿ ಪತ್ತು ; ತೆಂಕವಕ್ಕಂ (ಶಮದ. ೦೭೩ ಪ್ರಯೋ). [ಮಾತು$_1$ + ವಲ್ಲಹ$_1$]

**ಮಾತುವೆಣ್** (ನಾ). ನುಡಿಯ ಅಧಿದೇವತೆ: ಸರಸ್ವತಿ : 'ಮಾತುವೆಣ್ಣರಸ' ಪರಾ. [ಮಾತು$_1$ + ಪೆಣ್]

**ಮಾತುವೆಣ್ಣರಸ** (ನಾ). ಸರಸ್ವತಿಯ ಒಡೆಯ ; ಬ್ರಹ್ಮ : ಮಾತುವೆಣ್ಣರಸ ಮುನಿನಿಕರ ದಿಕ್ಪಾಲ ಗಿರಿಜಾತೆಯಾಣ್ಮನ ಸುಳುಹ ಸ್ವಪ್ನದೊಳ್ ಕಾಣ್ಬುದಿಪರೀತವೆಂದುಚ್ಚರಿಪ ವೇದಸಾಕ್ಷಿಗಳದಂತಿರಲಿ (ಶ್ರೀರಾ. ೬-೩೨). [ಮಾತುವೆಣ್ + ಅರಸ$_1$]

**ಮಾತುವೆಣ್ಣೆಜೆಯ** (ನಾ). = ಮಾತುವೆಣ್ಣರಸ : ಪಲಗಣ್ಣ ಕಾರೊಡಲ ಮಾತುವೆಣ್ಣೆಜೆಯರುಂ . . . ರಕ್ಷಿಸುಗೆ ಬಿಡದೆಮ್ಮನು (ರಾಶತ. ೦-೪). [ಮಾತುವೆಣ್ + ಎಜೆಯ]

**ಮಾತುಹಾರಿಸು** (ಕ್ರಿ). ಮಾತಿನ ಜಾಡನ್ನು ಬಿಟ್ಟುಹೋಗು ; ವಿಷಯವನ್ನು ಬದಲಿಸು, — ಮರೆಮಾಡು : ಕ್ಷೇಮ ವಿಚಾರಿಸಿದಾಗ ಬಾಯಿಗೆ ಬಂದಂತೆ ಏನೇನೊ ಮಾತುಹಾರಿಸಿದರು (ಕಾವೇರಿ. ೯೯) ; ರಾಮಣ್ಣನಿಗೆ ಬಾಯಾರಿಕೆ ಕೊಟ್ಟಿಯೇನು ? . . . ಎಂದು ಮಾತುಹಾರಿಸಿದ್ದರು (ಪಾತ್ರಲ. ೪). [ಮಾತು$_1$ + ಹಾರಿಸು ( < ಪಾಜಿಸು)]

**ಮಾತುಳ** 'ಮಾತುಲ' ನೋ.

**ಮಾತುಳಂಗ** 'ಮಾತುಲಂಗ' ನೋ.

**ಮಾತುಳಾನಿ** 'ಮಾತುಲಾನಿ' ನೋ.

**ಮಾತುಳುಂಗ** 'ಮಾತುಲುಂಗ' ನೋ.

**ಮಾತೃ** (ನಾ). ೧. ತಾಯಿ ; ಜನನಿ : "ಜನನಿ ಸವಿತ್ರಿ ಮಾತೃ ಸುಪುತಾಯ್" (ಮತ್ತ್ಯಕೋ. ೩೪-೦೭) ; ಮಾತೃಪಿತೃಬಂಧುಗೋತ್ರಜಭೀತಿಯೊಳಬ್ಜಾಕ್ಷಿ ಕಾಂತಿಮತಿ ಪೆತ್ತ ತನೂಜಾತನಂ . . . ಶ್ಮಶಾನದೊಳ್ ಬಿಸುಟ್ಟು ಬಾಯೆಂದೊಡೆ (ದಶಕು. ೯-೪೦). ೨. ಹಸು ; ಗೋವು. ೩. = ಮಾತೃಕೆ$_1$ ೨. ೪. ಲಕ್ಷ್ಮಿ. ೫. ದುರ್ಗೆ. ೬. ಆಕಾಶ. ; ಗಗನ.

೭. ಭೂಮಿ. ೮. ಪುಷ್ಯಮಾಸದ ಹುಣ್ಣಿಮೆ. ೯. 'ಅ' ಕಾರ ಮೊದಲಾದ ಅಕ್ಷರ. [ಸಂ.]

**ಮಾತೃಕ** (ನಾ). ಜೀವಕಣಗಳ ನಡುವೆ ಇರುವ ದ್ರವ್ಯ : ಈ ಕಣಧಾತುವಿನ ಜೀವಕಣಗಳಂತೆ ಪ್ರವಿಸುವ ಒಂದು ಬಗೆಯ ಮಾತೃಕದಲ್ಲಿ (Matrix) ಜೀವಕಣಗಳು ಹುದುಗಿರುತ್ತವೆ (ಪ್ರಾಣಿಶಾ. ೯೦.) [ಸಂ. ಮಾತೃಕಾ]

**ಮಾತೃಕಾಕ್ಷರ** (ನಾ). ೧. 'ಅ' ಕಾರದಿಂದ 'ಅಃ' ವರೆಗಿನ ಸ್ವರ ವರ್ಣ; ಮೂಲವರ್ಣ. ೨. (ಅಲಂ) ಮೊದಲನೆಯವನು : ಭೀತಿಗೊಂಡನು ದ್ರೋಣ ಸೋಲಿಕೆ ಕೇತುವಾದನು ಶಲ್ಯನಪಜಯ ಮಾತೃಕಾಕ್ಷರನಾದನಶ್ವತ್ಥಾಮನಿಂದಿನಲಿ (ಕುಮಾವ್ಯಾ.ಕರ್ಣ.೧. ೦೬-೦೩). [ಸಂ.]

**ಮಾತೃಕೆ$_1$** (ನಾ). ೧. ತಾಯಿ ; ಜನನಿ. ೨. ಸ್ಕಂದನನ್ನು ಲಾಲಿಸಿದ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ ಎಂಬ ಏಳುಜನ ಮುಖ್ಯದೇವತೆಯರು: "ಚಾಮುಂಡಿ ಕರ್ಣಮೋಟಿ ಮಹಾಮಾಯಾಮೂರ್ತಿ ಚರ್ಚಿಯುಂ ಭೈರವಿಯಾ ನಾಮಮಿವಕ್ಕುಂ ಬ್ರಹ್ಮಾಣೀಮುಖ್ಯರೆನಿಪ್ಪರೇಟ್ವರುಂ ಮಾತೃಕೆಯರ್" (ಯಶು.ಕೋ. ೯-೦೯) ; ಜಲಧಿ ಮಾತೃಕೆ ವಾರ ಕುಲಗಿರಿಗಳು ವಿಭಕ್ತಿ ದ್ವೀಪ ಸರ್ಪಾವಳಿ ಮುನೀಶ್ವರರುಗಳ ಧಾತುಗಣದ ವೇದಿಗಳ ತಿಳಿದು . . . ನಡೆವವರುಗಳು ನಿರ್ಮಳದಲೆಡಹದೆ ಬೆರೆಸಿಕೊಂಬರು ಮುಕ್ತಿರಾಜ್ಯವನು (ಕುಮಾವ್ಯಾ.ಉ. ೯-೩೯). ೩. ಅಜ್ಜಿ. ೪. ದಾದಿ. ೫. ನೆಲೆ : ಆಗರ ; ಮೂಲ : ಸಚ್ಚರಿತಕ್ಕೆ ಮಾತೃಕೆಯೆನಿಸಿ ಮಂಜೀವ ಕಾಂತಾಶಿರೋಮಣಿ ಮಹಾದೇವಿಯರ್ ಸಹಿತಮಂತಕಾರಿಯ ಪದಾಂಭೋಜಮಂ ಪರಮಾನುರಾಗದಿಂದರ್ಚಿಸುತ್ತೆ (ಶಬ್ದಮ. ೩-೯೦); ಪ್ರಳಯಮೋಘದ ಮಾತೃಕೆಯೊ ಕರಿಕುಲವೊ . . . ಜಗಂಗಳನಳಿವ ಜಲಧಿಯೊ ಸೇನೆಯೋ ನಾವರಿಯೆವು (ಕುಮಾವ್ಯಾ.ವಿ. ೬-೯) ; ಅಚ್ಚಗನ್ನಡದ ಕಬ್ಬದೆಯ ಪ್ರತಿಜ್ಞೆಯು ಅವನ ಸಂಕ್ಷೇಪವೃತ್ತಿಗೆ ಮಾತೃಕೆಯಾಗಿರಬೇಕು (ಕಾಹಿಕ. ೦೭೦). ೬. [ವ್ಯಾಕ] ವರ್ಣಮಾಲೆಯ ಮೂಲಾಕ್ಷರ ; ಅಕ್ಷರಮಾಲೆಯ ಹದಿನಾಲ್ಕು ಸ್ವರಸಮೂಹ. ೭. ಗ್ರಂಥದ ಮೂಲಪ್ರತಿ : ದಕ್ಷಿಣ ಭಾರತದಲ್ಲಿ ಅಂದು ಪ್ರಚಾರದಲ್ಲಿದ್ದ ಭಾರತದ ಮಾತೃಕೆಗಳು . . . ಅವನಿಗೆ ಆಕರವಾಗಿರಬೇಕು (ಕಾಪತ. ೯೧) ; ಈಗ ದೊರೆತಿರುವ ಓಲೆಗರಿಯ ಮಾತೃಕೆಯಲ್ಲಿ ಪಂಪ – ಕಂಶಿಯರ ಸಮನ್ವೆಗಳು ಇಪ್ಪತ್ತೊಮ್ರು ಇವೆ (ಕರ್ಣಾಕ. ೬೨). [ಸಂ. ಮಾತೃಕಾ]

**ಮಾತೃಕೆ$_2$** (ನಾ). [ಮುದ್ರಕ] ಮುದ್ರಣದ ಅಕ್ಷರಗಳನ್ನು ಎರಕ ಹೊಯ್ಯುವ ಅಚ್ಚು : ಅಚ್ಚುಮೊಳೆಗಳನ್ನು ತಯಾರಿಸಲು ಪ್ರತಿ ಅಕ್ಷರ ಅಥವಾ ಚಿಹ್ನೆಗೂ ಬೇರೆಬೇರೆಯ ಮಾತೃಕೆಯನ್ನು (Matrix) ತಯಾರಿಸಿ ಅದರಲ್ಲಿ ಕರಗಿಸಿದ ಮಿಶ್ರಲೋಹವನ್ನು ತುಂಬಿ ಮೊಳೆಯನ್ನು (ಎರಕ ಹುಯ್ದು) ತಯಾರಿಸುವರು (ಮುದ್ರಣ. ೦೦) ; ಮೊದಲ ಮೆಟ್ಟಿಲಿನಲ್ಲಿ ಯುರೇನಿಯಮ್ ಗ್ರಾಫೈಟ್ ಮಾತೃಕೆಗಳ (Matrix) ಪಟ್ಟಿಯನ್ನು ತಯಾರಿಸುತ್ತಾರೆ (ಶಿಲ್ಪಶಾ. ೨೭೨). [← ಇಂ. Matrix]

**ಮಾತೃಗಾಮಿ** (ನಾ). ತಾಯಿಯೊಡನೆ ಅನೈತಿಕಸಂಬಂಧವನ್ನು ಹೊಂದಿರುವವನು ; ತಾಯಿಗಂಡ : ಇನ್ನೇನು ಮಾಡಬೇಕೆಂದಿರುವೆ? ಬದಮಾಸ, ಮಾತೃಗಾಮಿ ? (ಆಶಾ. ೦೭). [ಸಂ. ಮಾತೃಗಾಮಿನ್]

**ಮಾತೃತ್ವ** (ನಾ). ತಾಯಿಯಾಗಿರುವಿಕೆ : ತಾಯಿತನ : ವೀರಪುತ್ರನ ಮಾತೃತ್ವ ಪರಮಪವಿತ್ರವಾದದ್ದು (ವೀರಯೋ. ೧೦೦). [ಸಂ.]

**ಮಾತೃದೀಕ್ಷೆ** (ನಾ). ತಾಯಿಯ ಮರಣದ ನಂತರ ಒಂದುವರುಷದವರೆಗೆ ಮುಂಡನ ಮಾಡಿಕೊಳ್ಳದೆ ಇರುವುದು. ಸಂಭೋಗಿಸದೆ ಇರುವುದು ಮುಂತಾದ ವ್ರತಗಳ ಪಾಲನೆ : (?). [ಸಂ. ಮಾತೃದೀಕ್ಷಾ]

**ಮಾತೃಭಾಷೆ** (ನಾ). ಶೈಶವದಲ್ಲಿ ತಾಯಿಯು ಮಗುವಿಗೆ ಕಲಿಸುವ ಭಾಷೆ ; ತಾಯಿನುಡಿ ; ಮನೆಮಾತು : ಮಾತೃಭಾಷೆಗೆ ಇಷ್ಟು ತಿರಸ್ಕಾರವಿರುವ ಸ್ಥಳದಲ್ಲಿ ಮಾನವಜೀವನದ ಶುಷ್ಕತೆ, ಶೂನ್ಯತೆ, ದೀನತೆಗಳನ್ನು ಯಾರೂ ಹೋಗಲಾಡಿಸರು (ಬಿಂಕು. XI ಮುನ್ನುಡಿ). [ಸಂ. ಮಾತೃಭಾಷಾ]

**ಮಾತೃಭೂಮಿ** (ನಾ). ಹುಟ್ಟಿದ ನೆಲ ; ತಾಯಿನಾಡು: ಇಂಗ್ಲಿಷರು ತಪ್ಪು ಮಾತೃಭೂಮಿಯಲ್ಲಿದ್ದುದನ್ನೇ ಇಲ್ಲಿಯೂ ತಂದು ನಿಲ್ಲಿಸಿದ್ದಾಗಿದೆ (ಶಿಕ್ಷರ. ೦೩೩) ; ವಿವೇಕಾನಂದರು ಕ್ರಿ.ಶ. ೧೮೯೬ ಡಿಸೆಂಬರ್ ೧೬ರಂದು ಮಾತೃಭೂಮಿಗೆ ಮರಳಿದರು (ಧರ್ಮಶಾ. ೩೦). [ಸಂ.]

**ಮಾತೃಮುಖ** (ನಾ). ತಿಳಿಗೇಡಿ ; ದಡ್ಡ ; ಮೂರ್ಖ : "ಅಜ್ಞ, ಮಾತೃಮುಖ – ಈ ೨ ಯೇನುಮಜ್ಞಯುದವಂ" (ಹಲಾಯು. ೬೨-೨೨೨). [ಸಂ.]

**ಮಾತೃಮೂಢ** (ನಾ). = ಮಾತೃಮುಖ : ನಿನಗೇನು ಬೇಕು ಅದು ಪನಗೆ ಬೇಕು, ಬೇಡಾದುದೆನಗೆ ಬೇಡ. ಈ ಜ್ಞಾನಪಿಂಡ ಬೆಳೆಯುತ್ತ ಬರಲಿ ಹುಟ್ಟಾನೆ ಮಾತೃಮೂಢ (ಹೃದಕ. ೬೩-೨೦). [ಸಂ.]

**ಮಾತೃವಾಹಿ** (ನಾ). ಮರಗಳಿಗೆ ಜೋತುಬೀಳುವ ಒಂದು ಬಗೆಯ ಹಕ್ಕಿ ; ತೊಗಲುಬಾವಲಿ : ಶಂಬೂಕ ಮಾತೃವಾಹಿ . . . ಪಾದೋದರ ಕ್ರಿಮ್ಯಾದಿ ದ್ವೀಂದ್ರಿಯಗಳ್ ಸ್ಪರ್ಶನರಸನೇಂದ್ರಿಯಜ್ಞಾನೋಪೇತಂಗಳಪ್ಪುವು (ಕತ್ತ.ಶ್ರ. ೯೮). [< ಸಂ. ಮಾತೃವಾಹಿನೀ]

**ಮಾತೃಷ್ವೆ** (ನಾ). ತಾಯಿಯ ಒಡಹುಟ್ಟಿದವಳು ; ಚಿಕ್ಕಮ್ಮ ಅಥವಾ ದೊಡ್ಡಮ್ಮ : "ಮಾತೆಯೊಡಹುಟ್ಟಿದಳು ಮಾತೃಷ್ವೆಯಕ್ಕು" (ಮಂಗರಾ. ೯೨-೦೩). [ಸಂ. ಮಾತೃಷ್ವಾ]

**ಮಾತೃಶಾಸಿತ** (ನಾ). = ಮಾತೃಮುಖ : "ವೈಧೇಯ, ಬಾಲಿಶ . . . ಮೂರ್ಖ, ಮಾತೃಶಾಸಿತ – ಈ ೧೧ ಅಜ್ಞಯುದವಂ" (ಹಲಾಯು. ೩೬-೦೮೦). [ಸಂ.]

**ಮಾತೃಷ್ವಸೃ** (ನಾ). = ಮಾತೃಷ್ವೆ. [ಸಂ.]

**ಮಾತೃಷ್ವಸೇಯ** (ನಾ). ತಾಯಿಯ ಸಹೋದರಿಯ ಮಗ : ಚಿಕ್ಕಮ್ಮ ಅಥವಾ ದೊಡ್ಡಮ್ಮನ ಮಗ. [ಸಂ.]

**ಮಾತೃಷ್ವಸೇಯಿ** (ನಾ). ತಾಯಿಯ ಸಹೋದರಿಯ ಮಗಳು : ಚಿಕ್ಕಮ್ಮ ಅಥವಾ ದೊಡ್ಡಮ್ಮನ ಮಗಳು. [ಸಂ. ಮಾತೃಷ್ವಸೇಯೀ]

**ಮಾತೃಷ್ವಸ್ರೀಯ** (ನಾ). = ಮಾತೃಷ್ವಸೇಯ. [ಸಂ.]

**ಮಾತೃಸ್ಥಾನ** (ನಾ). ೧. ತಾಯಿಯ ಸ್ಥಾನ : ಅತ್ತಿಗೆ ಮಾತೃಸ್ಥಾನದಲ್ಲಿ ವಿರಾಜಮಾನಳಾಗಿ ನನ್ನ ಹೊಟ್ಟೆಗೆ ಅನ್ನಪೂರ್ಣೆಯಂತೆ ಅನ್ನ ನೀಡುತ್ತಿರುವಾಗ (ವೈಶಿ. ೦೯೨). ೨. ಮೂಲಸ್ಥಳ ; ಉಗಮಸ್ಥಾನ : ಸಪ್ತಕೋಟಿಮಹಾಮಂತ್ರಂಗಳು ಉಪಮಂತ್ರಂಗಳು ಅನಂತಕೋಟಿಗಳನೂ ಗರ್ಭೀಕರಿಸಿಕೊಂಡಿಪ್ಪ ಇವಕೆ ಮಾತೃಸ್ಥಾನವಾಗಿ ಇವಕೆ ಉತ್ಪತ್ತಿಸ್ಥಿತಿಲಯ ಕಾರಣಂಗಳಿಗೆ ಕಾರಣವಾಗಿಪ್ಪ . . . ಶ್ರೀಮೂಲಮಂತ್ರವು (ಬಂಪ. ೪ ೦೦೦-೦೯೩). [ಸಂ.]

**ಮಾತೃಹತ್ಯೆ** (ನಾ). ತಾಯಿಯನ್ನು ಸಂಹರಿಸುವುದು. – ಕೊಲೆ ಮಾಡುವುದು. [ಸಂ. ಮಾತೃಹತ್ಯಾ]

**ಮಾತೆ** (ನಾ). ತಾಯಿ ; ಜನನಿ : ಮಾತೆ ಗೌರಿ ಪಿತನಲ್ತೆ ರುದ್ರನೀ ಖ್ಯಾತಮಾದ ಭುವನತ್ರಯಕ್ಕೆ (ಶೃಶಾ. ೩೯-೬೩) ; ತಾಯೆ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೆ ! (ಕನ್ನಡಾ. ೯೭. ೦). [ಸಂ. ಮಾತಾ]

**ಮಾತ್ಬರ್**, ಮಾತಬರ, ಮಾತಬರಿ, ಮಾತುಬರ, ಮಾತುಬರಿ, ಮಾತುಭಾರ, ಮಾತುಭಾರಿ (ಗು). ೧. ಪ್ರತಿಷ್ಠೆಯುಳ್ಳ ; ಗಣ್ಯತೆಯಿಂದ ಕೂಡಿದ : ಆರುಮಂದಿ ಮಾತ್ಬರ್ ಜನರನ್ನೂ ಸಹ ಜುನಾಬಿಸಿ ಇವರನ್ನು ಕಮಿಟಿವಾಲಾ ಪಕೀ ಅಥವಾ ಪಂಚಾಯಿತರು ಎಂದು ಮೊಕರರ್ಮಾಡಿದರು

(ಪುಟಾಪು. II. ೨೮). **ಮಾತಬರ :** ೧. ಉಭಯಕಡೆಯಲ್ಲು ಇರುವ ಮಾತಬರ ಮನುಷ್ಯರ ಸಾಕ್ಷಿಯಿಂದಲೂ ಪಡಂಬಡಿಕೆಯಿಂದಲೂ (ಶಾಕೇಂದ್ರ. ೩೬೪) ; ಆ ಬಳಿಕ ಬೆಂಗಳೂರುಪ್ಯಾಟೆ ಮಾತಬರ ವರ್ತಕರ ಕರಸಿ ಸಮ ಜಾಯಿಷೀಯಿಂದ ಪತ್ರಗಳ ಬರಕೊಟ್ಟು (ಹೈದರ. ೧೦೪). **ಮಾತಬರಿ :** (ನಾ). ೨. ಪ್ರತಿಷ್ಠಿತನಾದ ವ್ಯಕ್ತಿ ; ಗಣ್ಯ : ಯಿವರಲ್ಲಿ ಮಾತಬರಿಗಳೂ ಅವರಲ್ಲಿ ಮಾತಬರಿಗಳೂ . . . ಗ್ರಾಮಾಧಿಪತಿಗಳನ್ನು ಕೇಳಿದರು (ಎಕ. IX. ಕಾಪಟ. ೯೦-೧೧ ; 1700). **ಮಾತುಪರ :** ೨. ತನ್ನ ಪ್ರಾಂತದಲ್ಲಿ ಮಾತುಪರನಾಗಿದ್ದ ಕಾರಣಬಂದ ಇವನು ರಾಜರ ಕಣ್ಣಿಗೆ ಬೀಳುವ ಮನುಷ್ಯನಾಗಿದ್ದನು (ತಕಕ. ೫೦). **ಮಾತುಬರಿ :** ೧. ಹಜಾಮರಲಿ ಮಾತುಬರಿ ರಾಂಪುರಿ ವೆಂಕಟಾಚಲುವನು . . . ಕೇಳುವಲಿ (ಎಕ. IX. ಕಾಪಟ. ೯೦-೧೭ ; 1700). ೩. ಗೌರವ ; ಮಾನ್ಯತೆ : (೬). **ಮಾತುಭಾರ :** ೨. ಅಂಥ ಮಾತುಭಾರರು ದಿವಾಳಿ ತೆಗೆದು. ಊರು ಬಿಟ್ಟು ಹೋದ ಕತೆಯನ್ನು ಕೇಳಿದಾಗ ನಾಗಿಯು ಹೊಟ್ಟೆ ಎಷ್ಟು ತಂಪಾಯಿತೋ ! (ಮುಳಕ. ೫೦). **ಮಾತುಭಾರಿ :** ೨. ತನ್ನ ಕಾರ್ಯಗಳ ಸುಲಭಸಾಧನೆಗಾಗಿ ಮಾತುಭಾರಿಗಳ ಕಡೆ ಸೇರಿಕೊಂಡನು (ಬಕಾಸ. ೨೩) ; ನೀವು ಸ್ವತಃ ತುಂಬ ಘನಸ್ಥಿಕೆ ಹೊಂದಿದ ಮನೆತನದಲ್ಲಿ ಜನಿಸಿದ ದೊಡ್ಡ ಮಾತುಭಾರಿಗಳು (ಕುರುಕಾ. ೭೭).

[←ಅರ. ಮುಅತಬರ್. ಮೋತಬಿರ್; ಹಿಂ. ಮಾತಬರ್, ಮಾತಬರೀ; ಮರಾ. ಮಾತಬರ್, ಮಾತಬ್ಬರ್. ಮಾತಬರೀ. ಮಾತಬ್ಬರೀ]

**ಮಾತ್ರ₁** (ನಾ). ೧. ಯಾವುದಾದರೂ ವಸ್ತುವಿನ ಉದ್ದ, ಅಗಲ. ಎತ್ತರ, ಗಾತ್ರ, ದೂರ ಮುಂತಾದುವುಗಳಿಗೆ ಸಂಬಂಧಿಸಿದಂತೆ ಇರುವ ಪರಿಮಾಣ. ೨. ಅಷ್ಟು ; ಆ ಪರಿಮಾಣ : ಎನ್ನ ಕಠಿಣದ ಶಿರವುಮಂ ಮುಟ್ಟಿಸಿದ ಮಾತ್ರದಲಿ ನಿನ್ನ ಹಸ್ತಂ ನೊಂದಿತಯ್ಯೋ (ಬಸತು. ೬೮-೩೭) : ಕಷ್ಟೆ ಕೂಗಿದ ಮಾತ್ರಕ್ಕೆ ಕಿರೆತುಂಬೀತೇ ? (ಗಾದೆ). [ಸಂ.]

**ಮಾತ್ರ₂** (ಅ). ಬರಿಯ : ಕೇವಲ : ವಿದ್ಯೆ ಬುದ್ಧಿಗಳನ್ನು ದಡ್ಡರು ಮಾತ್ರ ಹಳಿಯುತ್ತಾರೆ (ಮುಂಬದು. ೬. ೦-೪) ; ಸಿಟ್ಟು ಬಂದಾಗ ಮಾತ್ರ ತನ್ನ ತಡವಿದವರನ್ನು ಚಿವರಿಕೊಳ್ಳಲಿಕ್ಕೆ ಉಗುರುಗಳನ್ನು ಹೊರಗೆ ತೆಗೆಯುತ್ತದೆ (ಮುಂಬದು. ೬. ೦-೨೭). [< ಮಾತ್ರ₁]

**ಮಾತ್ರಾಂಗುಲ** (ನಾ). [ಶಿಲ್ಪಶಾ]ದೇವತಾಪ್ರತಿಮೆಗಳನ್ನು ಕಡೆಯುವಾಗ ದೇಹದ ಪ್ರಮಾಣವನ್ನು ನಿರ್ಣಯಿಸುವ ಒಂದು ಅಳತೆ; ಬಲಗೈ ನಡುಬೆರಳಿನ ಮಧ್ಯದ ಗೆಣ್ಣಿನ ಭಾಗಕ್ಕೆ ಸಮವಾಗುವ ಒಂದು ಅಳತೆ : ಕರ್ತೃವಿನ ಮಧ್ಯಮಾಂಗುಲಿಯ ನಡುವಣ ಪರ್ವದ ದೀರ್ಘಮೇ ಮಾತ್ರಾಂಗುಲಮೆನಿಸುಗುಂ (ವಿವೇಕ. ೨೪೦); ಮಾನಾಂಗುಲ. ಮಾತ್ರಾಂಗುಲ. ದೇಹಲಬ್ಧಾಂಗುಲವೆಂಬ ಅಳತೆಗಳಿಂದ . . . ಮೂರ್ತಿಗಳನ್ನು ರಚಿಸುವ ವಿಧಾನಗಳನ್ನೂ. . . ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಶಾರದ. ೬೦). [ಸಂ.]

**ಮಾತ್ರಾಕಾಲ** (ನಾ). ಒಂದು ಹ್ರಸ್ವಾಕ್ಷರವನ್ನು ಹೇಳುವಷ್ಟು ಕಾಲಾವಧಿ : ಅತ್ಯಲ್ಪಕಾಲ : ನಿದ್ರೆಮಾಡುವ ಆರೋಗ್ಯಶಾಲಿಪುರುಷನು ಉಸಿರೆಳೆಯುವ ಕಾಲ ೧ ಮಾತ್ರಾಕಾಲ (ಶಾರದ. ೦೭೦ ಅಡಿಟಿ). [ಸಂ.]

**ಮಾತ್ರಾಗಣ** (ನಾ). [ಛಂದ] ಅಕ್ಷರಗಳನ್ನು ಉಚ್ಚಾರ ಮಾಡುವ ಕಾಲಮಾನದಿಂದ ಅಳೆಯುವ ಒಂದು ಘಟಕ : ಇಂತಾದೌಪಚ್ಛಂದಸಿಕಂ ಮೊದಲಾಗೆ ವೈತಾಳೀಯುಂ ಉದೀಚ್ಯವೃತ್ತಿಯುಂ ಪ್ರಾಚ್ಯವೃತ್ತಿಯುಮ ಪರಾಂತಿಕೆಯುಮೆಂದು ಮಾತ್ರಾಗಣಂಗಳಿಂ ವೈತಾಳಿಗಳ್ ಬೇಜಿವೇಜಿ ಪೆಸರ್ವಡೆಗುಂ (ಛಂದೋಂಬು. ೩-೨೨೦ ವ); ಗಣವೆಂದರೆ ಕೆಲವು ನಿಯಮಗಳಗನುಸಾರವಾಗಿ ವಿಂಗಡಿಸಿದ ಅಕ್ಷರಗಳ ಗುಂಪು. ಅದು ವರ್ಣಗಣ, ಮಾತ್ರಾಗಣವೆಂದು ಎರಡು ವಿಧವು (ಕೈಪಿಡಿ. ೭೯). 'ಅಂಶಗಣ' ಪರಾ. [ಸಂ.]

**ಮಾತ್ರಾನಿಯಮ** (ನಾ). [ಛಂದ] ಪದ್ಯದ ಪಾದಗಳಲ್ಲಿಯೂ ಗಣಗಳಲ್ಲಿಯೂ ಎಷ್ಟೆಷ್ಟು ಮಾತ್ರೆಗಳು ಇರಬೇಕೆಂಬ ನಿಯಮ : ಮೊದಲೊಳ್ಪನ್ನೆರಡೆರಡನೆಯದಜಿೋಳ್ ಪದಿನೆಂಟು ಮೂಜಿೋಳ್ ಪನ್ನೆರಡಂತ್ಯದ ಪಾದದಲ್ಲಿ ಪದಿನೆಯ್ದುದು ಮಾತ್ರಾನಿಯಮಮಾರ್ಯೆಯೊಳ್ (ಛಂದೋಂಬು. ೪-೨೩೦); ಮಾತ್ರಾವಿವಕ್ಷೆಯಿಲ್ಲದೆ ಅಂಶವಿವಕ್ಷೆ ಮಾತ್ರ ಉಳ್ಳ ವಿಷ್ಣುಗಣಗಳು ಮುಂಚೆ ಇದ್ದು ಆಮೇಲೆ ಮಾತ್ರಾನಿಯಮವೂ ಉಂಟಾಯಿತೋ ಎಂಬ ಊಹೆಯೂ ಏಳುತ್ತದೆ (ಕೈಪಿಡಿ. ೦೪೪). [ಸಂ.]

**ಮಾತ್ರಾಬಂಧ** (ನಾ). [ಛಂದ] ಮಾತ್ರಾಗಣನಿಯಮಕ್ಕೆ ಒಳಪಟ್ಟು ರಚಿತವಾದ ಬಂಧ,–ರಚನೆ : 'ಜಾತಿ'ಯ ಮಾತ್ರಾಬಂಧಗಳಲ್ಲಿ ಅಷ್ಟಮಾತ್ರಕ, ಸಪ್ತಮಾತ್ರಕ, ಷಣ್ಮಾತ್ರಕ ಮತ್ತು ಪಂಚಮಾತ್ರಕ ಗಣಗಳು ಆವರ್ತನೆ ಹೊಂದುತ್ತವೆ (ಛಂದೋವಿ. ೫೦). [ಸಂ.]

**ಮಾತ್ರಾರ್ಯೆ** (ನಾ). [ಛಂದ] ಮಾತ್ರಾನಿಯಮಬದ್ಧವಾದ ಆರ್ಯಾವೃತ್ತ : ಅವಜಿಂ ಪೊಜಿಗೆ ಪುಟ್ಟುವುವೆಂದೊಡೆ ದಂಡಕ ರಘಟೆ ಮಾತ್ರಾರ್ಯಾ ತ್ರಿಪದಿ ಷಟ್ಪದಿ ಅಷ್ಟಪದಿ ಗಣನಿಯಮ ಕಂದ ಶಂಖಾವೃತ್ತ ತಾಳವೃತ್ತಾದಿ ಜಾತಿಗಳುಂಟು [ಟಾಕಾ. ಮಾಳಾವೃತ್ತ ದಂಡಕಂಗಳ್ ಮಾತ್ರಾನಿಯಮ ಸ್ಕಂಧಕಾದಿ ಜಾತಿಗಳೆಂಬಿವಕ್ಕುಂ] (ಛಂದೋಂಬು. ೦-೪೩ ವ). 'ಆರ್ಯೆ' ಪರಾ. [ಸಂ. ಮಾತ್ರಾರ್ಯಾ]

**ಮಾತ್ರಾವೃತ್ತ** (ನಾ). [ಛಂದ] ಮಾತ್ರಾಗಣನಿಯಮಕ್ಕೆ ಒಳಪಟ್ಟು ರಚಿತವಾದ ಪದ್ಯ : ಮಾತ್ರಾಗಣನಿಯಮಕ್ಕೊಳಗಾದ ಪದ್ಯವು ಮಾತ್ರಾವೃತ್ತವು (ಕೈಪಿಡಿ. ೭೯); ಇಂಥ ವೃತ್ತಗಳು ಸಂಸ್ಕೃತದಲ್ಲಿ ವರ್ಣವೃತ್ತಗಳೆಂದು ಗಣ್ಯವಾಗಿವೆಯೇ ಹೊರತು ಮಾತ್ರಾವೃತ್ತಗಳೆಂದು ಗಣ್ಯವಾಗಿಲ್ಲ (ಛಂದೋವಿ. ೫೦). [ಸಂ.]

**ಮಾತ್ರಾಸಮಕ** (ನಾ). [ಛಂದ] ಮಾತ್ರಾವೃತ್ತದ ಒಂದು ಪ್ರಭೇದ; P ಮಾತ್ರಾಸಮಕದಲ್ಲಿ ನಾಲ್ಕುಪಾದಗಳಿದ್ದು ಪ್ರತಿಯೊಂದು ಪಾದದಲ್ಲೂ ಹದಿನಾರುಮಾತ್ರೆಗಳಿರುತ್ತವೆ. ಸಾಮಾನ್ಯವಾಗಿ ಒಂಬತ್ತನೆಯ ಅಕ್ಷರ ಲಘುವಾಗಿಯೂ ಕೊನೆಯ ಅಕ್ಷರ ಗುರುವಾಗಿಯೂ ಇರುತ್ತದೆ. ಇದರಲ್ಲಿ ಅನೇಕ ಭೇದಗಳುಂಟು. ಉಪಚಿತ್ರಾ, ವಿಶ್ಲೋಕ, ಚಿತ್ರಾ, ವಾನವಾಸಿಕಾ, ಪಾದಾಕುಲಕ ಮುಂತಾಗಿ ಬೇರೆಬೇರೆ ಲಕ್ಷಣಗಳುಳ್ಳ ವೃತ್ತಗಳಿವೆ : ಸಂಸ್ಕೃತ, ಪ್ರಾಕೃತ ಗ್ರಂಥಗಳಲ್ಲಿರುವ ಮಾತ್ರಾಸಮಕಗಳಂತೆ ರಗಳೆಗಳನ್ನು ನಾಗವರ್ಮನು ಸಂಸ್ಕೃತ ಛಂದಸ್ಸಿಗೇ ಸೇರಿಸಿರುವುದು ಸ್ಪಷ್ಟವಾಗುತ್ತದೆ (ಕೈಪಿಡಿ. ೦೩೭). [ಸಂ.]

**ಮಾತ್ರಿಕೆ** (ನಾ). [ಛಂದ] ಒಂದು ಮಾತ್ರೆಯಷ್ಟು ಉಚ್ಚಾರಣೆಯಂ ಬೆಲೆಯುಳ್ಳುದು : ಸ್ವರಮೊಂದುಂ ವ್ಯಂಜನಮೊಂದೆರಡಕ್ಕುಂ ವರ್ಣಭೇದ ಮಾದ್ಯಕ್ಷರದಿಂ ಬರೆ ಪದಿನಾಲ್ಕುಂ ಸ್ವರಮಿಂ ಪರಿಶೇಷಂ ವ್ಯಂಜನಗಳರೆ ಮಾತ್ರಿಕೆಗಳ್ (ಕಾವ್ಯಾವ. ೭). [ಸಂ. ಮಾತ್ರಿಕಾ]

**ಮಾತ್ರೆ** (ನಾ). ೧. ಉದ್ದ, ಅಗಲ, ಎತ್ತರ, ಗಾತ್ರ, ದೂರ, ಕಾಲ ಅಥವಾ ಸಂಖ್ಯೆ ಮುಂತಾದುವುಗಳಿಗೆ ಸಂಬಂಧಿಸಿದಂತೆ ಇರುವ ಅಳತೆ,–ಪರಿಮಾಣ. ೨. (ಸ್ವಲ್ಪ) ಭಾಗ ; ಅಂಶ. ೩. ಆಸ್ತಿ ; ಐಶ್ವರ್ಯ. ೪. (ಮನೆಯ) ಉಪಕರಣ ; ಸಾಮಗ್ರಿ : " ಪರಿಚ್ಛದದಲ್ಲಿಯುಂ ಮಾತ್ರಾ ಎಂಬುದುಂ " (ಪಠಾಯು. ೦೩೨-೦೦). ೫. ಹೊರೆ : (೬). ೬. ಗೆರೆ ; ಗೀಟು : ರೇಖೆ : " ಅಕ್ಷರವಿಶೇಷ ರೇಖೆ ಗೃಹ ಮುಟ್ಟುಗಳುಂ ಪೊರೆ ಮಾತ್ರೆಯುಕ್ಕು " (ನಾಪಾರ. ೦೫೮). ೭. ಔಷಧಿಯ ಗುಳಿಗೆ: ಕಾಲಕಾಲವರಿತು ಸಂಗ್ರಹಿಸಿದಂಥಾ ವಸ್ತುಗಳೊಡನೆ ಕೂಡಿದ್ದಾಗಿ, ಸ್ವಲ್ಪ ಮಾತ್ರೆಯುಳ್ಳದ್ದಾಗಿ . . . ಸೇವನಮಾತ್ರದಿಂದಲೆ ಸಕಲರೋಗಗಳನ್ನೂ ಪರಿಹರಿಸುವಂಥಾ ಪರಮೌಷಧವೆ ಔಷಧವೆನಿಸಿಕೊಂಬುದು (ಸಳವ. ೨೩); ತಾಯಿಯು ನೋಡಿ ಮಗನಿಗೆ ಮಂದಾಗ್ನಿಯಾಗಿದೆ ಎಂದು

ಬಳಿಕ್ಕಳ್ಳಿ ಜೀರ್ಣಕಾರಿ ಮಾತ್ರೆ ಲೇಹಗಳನ್ನು ಮಾಡಿಸಿ ಕೊಟ್ಟಳು (ದೇಶೀಕಾ. ೫೬); ಅನಂತಯ್ಯನ ಮಾತ್ರೆ ವೈಕುಂಠಯಾತ್ರೆ (ಗಾದೆ). ೮. ನಾಗರೀಲಿಪಿಯ ಏ, ಓ ಮುಂತಾದ ದೀರ್ಘಾಕ್ಷರಗಳ ಮೇಲುಭಾಗಕ್ಕೆ ಹಾಕುವ ಓರೆಯಾದ ಗೆರೆ. ೯. [ಛಂದ] ಒಂದು ಹ್ರಸ್ವಾಕ್ಷರವನ್ನು ಉಚ್ಚರಿಸುವ ಕಾಲಾವಧಿ : ಸಂಬಂಧಾಕ್ಷರದೊಳೆಲ್ಲ ಮಾತ್ರೆಗಳುಂ ತಪ್ಪಿಂಬಾಗೆ ಬೆರಸಿ ಶೋಭಾಡಂಬರಮಂ ಪಡೆಗುಮುಚಿತಕಾವ್ಯೋಕ್ತಿಗಳೊಳ್ (ಛಂದೋಂಬು. ೧-೮); ಸಮಾನಾಕ್ಷರಮೊಂದುಮನಣೆಯಿಂದುಚ್ಚರಿಸಿದೊಡಂ ಮಾತ್ರೆಯೆಂಬ ಪೆಸರಂ ಪಡೆಗುಂ (ಶಬ್ದಮ. ೩-೩೯); ಮಾತ್ರಾಗಣವನ್ನು ಮಾತ್ರೆಗಳಿಂದ ತಿಳಿಯಬೇಕು. ಒಂದು ಲಘುವಿಗೆ ಒಂದು ಮಾತ್ರೆಯೆಂದೂ ಒಂದು ಗುರುವಿಗೆ ಎರಡು ಮಾತ್ರೆಗಳೆಂದೂ ಸಂಕೇತವು (ಛಂಶಾ. ೬೦). ೧೦. [ಸಂಗೀತ] ಕಾಲದ ಅಳತೆ : ಏಳು ಸೂಳಾದಿ ತಾಳಗಳಲ್ಲಿ ಬರುವ ಚತುರಶ್ರಲಘುವೇ ಒಂದು ಮಾತ್ರೆಯಾಗುತ್ತದೆ (ಸಂಗೀಸಂ. ೫೩). [ಸಂ. ಮಾತ್ರಾ]

**ಮಾತ್ಸರಿಯ** (ನಾ). ಹೊಟ್ಟೆಕಿಚ್ಚು ; ಅಸೂಯೆ : ಗುರುವಿರೋಧ ಮಹೀಸುರರ ಮಾತ್ಸರಿಯ ಬಂಧುದ್ವೇಷ . . . ಶರಣಜನದಂಡಿತ್ವವೆಂಬಿವನರವರಿಸದಂಗೈವ ಭೂಪನ ಸಿರಿಗೆ ಮೂಡುಗು ಕೇಡು ನಿಮಿಷಕೆ (ಕುಮಾವ್ಯಾ. ೬೦೩. ೧-೬೩). [< ಸಂ. ಮಾತ್ಸರ್ಯ]

**ಮಾತ್ಸರ್ಯ** (ನಾ). ೧. ಕಾಮ. ಕ್ರೋಧ. ಲೋಭ, ಮೋಹ. ಮದ ಮತ್ತು ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳಲ್ಲಿ ಒಂದು ; ಅಸೂಯೆ : ಹೊಟ್ಟೆಕಿಚ್ಚು : ಅವನಿಯುಮರರ ಕಳಕಳವ ಪಾಂಡವರ ಸುಮ್ಮಾನವನು ನೃಪಕೌರವರ ಮಾತ್ಸರ್ಯೋಪಲಾಲಿತಪುರುಷ ವಿಭ್ರಮವ ಅವನಿಪಾಲರು ಕಂಡರು (ಕುಮಾವ್ಯಾ. ೯-೧೧). ೨. ಅತೃಪ್ತಿ ; ಅಸಂತೋಷ. ೩. [ಜೈನ] ಪ್ರದೋಷ, ನಿಹ್ನವ, ಮಾತ್ಸರ್ಯ, ಅಂತರಾಯ, ಆಸಾದನ ಮತ್ತು ಉಪಘಾತಗಳೆಂಬ ಆರು ಆಸ್ರವಗಳಲ್ಲಿ ಒಂದು ; ತನ್ನ ಶಿಷ್ಯನೇ ತನ್ನನ್ನು ಸರಿಗಟ್ಟುವನೆಂಬ ಅಸೂಯೆಯಿಂದ ಗುರುವು ಶಿಷ್ಯನಿಗೆ ಸರಿಯಾಗಿ ಕಲಿಸದಿರುವುದು : ಯತಿಗಳ ಚರಿಗೆಗೆಥಾಯೋಗ್ಯಕಾಲವನತಿಕ್ರಮಿಸುವುದೆ ಅಸ್ಮರಣೆ ಅತಿಶಯವೆನಲೊಬ್ಬ ಮಾಡೆ ಮತ್ಸರಿಸುವುದತಿಚಾರ ಮಾತ್ಸರ್ಯಾಖ್ಯ (ದ್ವಾದಶಾ. ೧೧-೬೮೪). [ಸಂ.]

**ಮಾತ್ಸ್ಯನ್ಯಾಯ** (ನಾ). [ತರ್ಕಶಾ] ದೊಡ್ಡ ಮೀನು ಚಿಕ್ಕಚಿಕ್ಕ ಮೀನುಗಳನ್ನು ನುಂಗುವುದು; P ಬಲಿಷ್ಠನಾದವನು ಅಶಕ್ತನನ್ನು ಹಿಡಿದು ಪೀಡಿಸುವುದು ಎಂಬುದು ಲೋಕರೂಢಿ : ಪರಚಕ್ರಕ್ಕೆಡೆಮಾಡಿ ಭೂವಲಯಮಂ . . . ತಪಕ್ಕೆ ಪೋಪುದನಯಂ ಭೂಪಾಲ ನಿನ್ನಂ ಪುರಂದರನೀ ರಾಜ್ಯಭರಕ್ಕೆ ಯೋಜಿಸಿ ತಪೋರಾಜ್ಯಕ್ಕೆ ಮೆಯ್ಯಾಂದನಂತಿರೆ ನೀನಾಚರಿಸಲ್ಲಪಂದು ಧರೆ ಮಾತ್ಸ್ಯನ್ಯಾಯಮೇನಾಗದೇ (ಶಂರಾವಿಜ. ೨-೩೨). 'ಮತ್ಸ್ಯನ್ಯಾಯ' ಪರಾ. [ಸಂ.]

**ಮಾದ$_1$** 'ಮಾದರ' ನೋ.

**ಮಾದ$_2$** (ನಾ). ಒಬ್ಬಾತನ ಹೆಸರು : ಕೇಶೆತ್ತ್ರಚ್ಚಸ್ಕಗನೆಳೆಯೊನ್ಮಾದತ್ತಚ್ಚನವನ್ ಪೆಸಜಿಜ್ಜನಿಧಾನಟುಯ್ಯಲ್ × × × (ಎಕ. X, ಮಾಲೂರು. ೯೬-೪; ಸು. 750); ಎಚಿನಾಗನುಂ ಕುಪ್ಪನುಂ ಮಾದನುಂ ಒಕ್ಕಲ್ಗನಂಗೆಬ್ಬಿ (ಎಇ. XXVI, ೬೨-೧೬; 906). [ ? ]

**ಮಾದಕ** (ಗು). ೧. ಅಮಲೇರಿಸುವ ; ಮತ್ತು ಬರಿಸುವ : ಅವಳ ಮಾದಕಸೌಂದರ್ಯದಿಂದ ನಗರವೆಲ್ಲವೂ ಮುಗ್ಧವಾಯಿತು (ಅಶ್ರಮ. ೬೬); ತೆಳುನಡುವಿನ ಮೇಲ್ಭಾಗದ ಮಾಟವಾದ ಎದೆಕಟ್ಟು ಮಾದಕ ನೋಟವಾಗಿತ್ತು (ಚಿಕುಣಾ. ೩೮). 'ಮಾದಕಪಾನೀಯ', 'ಮಾದಕವಸ್ತು' ಪರಾ. ೨. ಸಂತೋಷಕರವಾದ ; ಉಲ್ಲಾಸಗೊಳಿಸುವ. [ಸಂ.]

**ಮಾದಕತೆ** (ನಾ). ೧. ಅಮಲು; ಸೊಕ್ಕು : ಮುಚುಕುಂದಪುಷ್ಪದ ಗಂಧವು ವಸಂತದ ಆಕಾಶದಲ್ಲಿ ನಿಬಿಡಮಾದಕತೆಯನ್ನು ಪಸರಿಸಿಬಿಟ್ಟಿದೆ (ಇಶ್ವಕ. ೪೦೬). ೨. ಅಮಲಿನಿಂದ ಕೂಡಿದುದು; ಮತ್ತೇರಿಸುವ ಗುಣವುಳ್ಳುದು: ಅವಳ ಕಣ್ಣುಗಳು ಮಾದಕತೆಯ ಪ್ರೇಮಜ್ಯೋತಿಯಂತೆ ಮಿನುಗುತ್ತಿದ್ದವು (ಬಂಗಾಪ. ೦೯). [ಸಂ. ಮಾದಕತಾ]

**ಮಾದಕದ್ರವ್ಯ** (ನಾ). ಗಾಂಜಾ. ಅಫೀಮು ಮುಂತಾದ ಮತ್ತೇರಿಸುವ ಗುಣವುಳ್ಳ ವಸ್ತು : ಇನ್ನಾವುದಾದರೊಂದು ಮಾದಕದ್ರವ್ಯವನ್ನೊ ತಿನ್ನಬಹುದು (ಶಯಂತ. ೦೦೫). [ಸಂ.]

**ಮಾದಕಪಾನೀಯ** (ನಾ). ಮದ್ಯ ಮುಂತಾದ ಅಮಲೇರಿಸುವ ಪೇಯ. ಮಾದಕಪಾನೀಯದ ವಿಷಯ ನಿನಗೆ ಗೊತ್ತಿರುವಷ್ಟು ನನಗೆ ಗೊತ್ತಿಲ್ಲ (ಹಸುಹೂ. ೨೦೦) ; ಮಾದಕಪಾನೀಯಗಳ ಮತ್ತು ಆರೋಗ್ಯಕ್ಕೆ ಹಾನಿಕರಗಳಾದ ಪದಾರ್ಥಗಳ ಸೇವನೆಯನ್ನು ಪ್ರತಿಷೇಧಿಸಲು ರಾಜ್ಯವು ಪ್ರಯತ್ನಿಸತಕ್ಕದು (ಭಾಧಾಪ. ೨೯). [ಸಂ.]

**ಮಾದಕಪೇಯ** (ನಾ). = ಮಾದಕಪಾನೀಯ : ನನ್ನ ದುರಹಂಕಾರಿ ಮನಸ್ಸಿಗೆ ಅವಳಿಗುಂಟಾಗುವ ಅಸಂತೋಷವೇ ಮಾದಕಪೇಯಪಾನದಿಂದ ಉಂಟಾಗುವ ಉನ್ಮತ್ತಗ್ಲಾನಿಯಂತೆ ಆಗಿದ್ದಿತು (ಹೇಮಂತ. ೨೬೯) ; ನಿಮ್ಮನ್ನು ಎತ್ತಿಕೊಂಡು ಬಂದು ಮಾದಕಪೇಯವನ್ನು ಕುಡಿಸಿ ರಾತ್ರಿ ಎಂಟುಗಂಟೆಯ ಸುಮಾರಿಕ್ಕೆ ಇಲ್ಲಿ ಹಾಯ್ದುಹೋಗುತ್ತಿರುವಾಗ ನಮ್ಮ ಜನರು ನಿಮ್ಮನ್ನು ಬಿಡಿಸಿಕೊಂಡರು (ಪೇಂಚಪ. ೦೦೯). [ಸಂ.]

**ಮಾದಕವಸ್ತು** (ನಾ). = ಮಾದಕದ್ರವ್ಯ : ಹಲವಾರು ಹದಿಹರೆಯದ ಹುಡುಗ ಹುಡುಗಿಯರು ಮಾದಕವಸ್ತುಗಳ ಸೇವನೆಯಿಂದ ಹಾಳಾಗುತ್ತಿದ್ದಾರೆ (ಆಡು). [ಸಂ.]

**ಮಾದಕ್ಷಿಣಾಪಥ** (ನಾ). ಭರತಖಂಡದ ವಿಶಾಲವಾದ ದಕ್ಷಿಣಭಾಗ ; ವಿಂಧ್ಯಾದ್ರಿಯ ದಕ್ಷಿಣಕ್ಕಿರುವ ದೇಶಭಾಗ : ಅಳಪಗಣಪಶುಪತಿ ಮಾದಕ್ಷಿಣಾಪಥ ಬಹುಶತಹವನಾಹವದು[ಳ್]ಪಶುಪ್ರದಾನಶೌರ್ಯೋದ್ಯಮ ಭರಿತೋ[ನ್ನಾ]ನಪಶುಪತಿಯೆನ್ದು ಪೊಗಟ್[3] (ಮ್ಯಆಉ. ೧೯೩೬, ೦೬-೬ ; 450). [ಮಾ$_1$ + ದಕ್ಷಿಣಾಪಥ]

**ಮಾದಗ** 'ಮಾದಗ' ನೋ.

**ಮಾದಪ್ಪ** (ನಾ). ಒಬ್ಬಾತನ ಹೆಸರು : ಅಕ್ಕ ಕೈಲೂರ ಮಕನ್ದಿರ್ ಮಾದಪ್ಪನ್ನ (ಎಕ. III (R), ಗುಂಡ್ಲುಪೇ. ೬೬-೩; ಸು. 8ನೆಯ ಶತ) ; ಸ್ವಸ್ತಿಶ್ರೀ ಬೇಲೂರರಾಮಗಂ ಮಾದಪ್ಪನ್ ಪ್ರಭುಗೌಡ ಬೇಲೂರಾ ಎಮ್ಮೆಯ ತೊಕೊಳೊಳೆ ಗುದ್ದಿ ಆನ್ನಿಱಿದು ಸತ್ತನ್ (ಎಕ. X. ಕೋಲಾರ. ೨೨೬-೦; ಸು. 950). [ಮಾದ$_2$ + ಅಪ್ಪ$_1$]

**ಮಾದಮಂಗಲ** (ನಾ). ಒಂದು ಊರಿನ ಹೆಸರು : × × × ರೋಡೆ ದಿಮ್ಮಾದಮಂಗಲಮೊಡೆದಿರ್ಗೊಂಟೆ ಮಡಿದಿಡೆದಿವೆಳತೂರೊ × × × (ಎಕ. III(R), ಹೆಗ್ಗಡ. ೦೦೨-೯ : ಸು. ೯ನೆಯ ಶತ). [ಮಾದ$_2$ + ಮಂಗಲ]

**ಮಾದಮ್ಮ** (ನಾ). ಒಬ್ಬಾತನ ಹೆಸರು : ಕೊಡಲ್ ಸೆಟ್ಟಿಯರಾ ಮಾದಮ್ಮನ್ . . . ಸರ್ವ್ವವಂದು ಪುಲೆಯಮ್ಮನ್ ಯಿಥಾ ಒಕ್ಕಲ್ ಪಡೆ [ದು]ವು (ಎಇ. IX, ೨೩-೦೨; ಸು. 800). [ಮಾದ$_2$ + ಅಮ್ಮ$_1$]

**ಮಾದರ, ಮೊದ$_1$, ಮಾದಾರ, ಮಾದಿರ** (ನಾ). ಕೀಳುಜಾತಿಯವನು: ಮಾದಿಗ: ಇಸೆ ಪಶುಮಜಿ ಯೋನಿಮುಖಪ್ರಸವಕ್ಕಲಸಿವ ಪೊಲೇಜಿ ಬಾಯಿಂ ತಾನೊಂದಸುವೆರಸು ಬೀಟ್ಟುದುಂ ಕರುಣಿಸಿ ಮತ್ತಂ ಮಾದರಂಗೆ ಸಲಹೆಂದಿತ್ತಂ (ಯಶೋಚ. ೩-೫೬) ; ಸನ್ನುತಾಮಳಕೀರ್ತಿ ಮಾದರ ಚೆನ್ನಯಂ ಕಟ್ಟಂಬಿಕಳವಂ ತನ್ನ ನಿಜಜಿಹ್ವಾಗ್ರವೇ ಪಾಣಿಯಾಣವಾಗಿರಲು ಪನ್ನಗಾಭರಣಂ ನಿವೇಧವದೆನ್ನದಾರೋಗಿಸಿದನು (ಬಸವ. ೫೨-೦೬೦). **ಮಾದ$_1$** : ಚಮಗಾರನು ತೊಗಲಿನ ಚೂರಿನ ತೋರಣವನ್ನು ಕಟ್ಟಿಸಿದನು.

ಮಾದರು ಎಲುಬಿನ ತೋರಣವನ್ನು ಕಟ್ಟಿಸುವುದು (ಶಾಕಸಂ. ೬೮); ಅಕೆ ಹೆಚ್ಚಿನವುಸ್ಸಾರವನ್ನು ಹಾಕಿದ ಸೀರೆಯನ್ನು ಮಾದರಿಗೆ ಮುಟ್ಟಿಸಿದಳು (ಗಣಸಾ. ೮೩). **ಮಾದಾರ** : ಸೆಟ್ಟಿ ಎಂಬೆನೆ ಸಿರಿಯಾಳನ . . . ಮಾದಾರ ನೆಂಬೆನೆ ಚೆನ್ನಯ್ಯನ ಎನು ಹಾರುವನೆಂದರೆ ಕೂಡಲಸಂಗಯ್ಯ ನಗುವನಯ್ಯಾ (ಬಸವ. ೬೪೪). **ಮಾದಿರ** : ವಿಭಾಗಿಸಲ್ಪಡದ ಜಾತಿಗಳು . . . ಕ್ಷೇತ್ರವಾಸಿ, ಮಾದಿರ (ಹರಿಜನ. ೦೬೪). 'ಮಾದಿಗ' ಪರಾ.

**ಮಾದರಿ** (ನಾ). ೧. ರೀತಿ ; ಬಗೆ ; ಪ್ರಕಾರ : ನಾನು ಆ ಲೆಖ್ಖವನ್ನು ನನ್ನದೇ ಮಾದರಿಯಲ್ಲಿ ಸ್ವಲ್ಪ ಸುಲಭವಾಗಿ ಬರೆಯಲು ಹೊರಟೆ (ಜಾಕಸಾ. ೪೪) ; ಯಾರು ಜೀವವನ್ನು ಪ್ರತಿಬಿಂಬ ಎಂದು ಭಾವಿಸುವರೋ ಈಶ್ವರನನ್ನು ಆ ಪ್ರತಿಬಿಂಬದ ಒಂದು ಮಾದರಿ, ಪ್ರತಿಬಿಂಬವಲ್ಲ ಎಂದು ಭಾವಿಸುವರೋ ಅವರಿಗೆ ಮುಕ್ತಿ (ತತ್ವಶಾ. ೩೦೩). ೨. ನಮೂನೆ ; ರಚನೆ : ಅವರ ವೇಷವೂ . . . ಹಳೆಯ ಮಾದರಿಯ ಅಂಗಿ, ಅಂಥದೇ ಕೋಟು, ಒಂದು ಧೋತರ (ಕತ್ನಗೋ. ೩) ; ನಮ್ಮ ಜೀವನಸ್ಥಿತಿಗೆ ಹೊಂದಿಕೆಯಾಗುವಂತೆ ರಚಿಸಿದ ಅನೇಕ ಮಾದರಿಯ ಹೊಗೆ ಬಾರದ ಒಲೆಗಳವೆ (ಅತುಜ. ೦೩). ೩. ಆದರ್ಶ ; ಮೇಲ್ಪಂಕ್ತಿ : ತಿಲಕರ ಉದಾಹರಣೆಯಿಂದ ಧೈರ್ಯ, ಕಷ್ಟಸಹಿಷ್ಣುತೆ, ಹೋರಾಟಗಳು ಜನಕ್ಕೆ ಮಾದರಿಯಾದವು (ಶ್ರಾ.೬೬೫. ೬೩) ; ಪ್ರಪಂಚದಲ್ಲಿ ಹೆಣ್ಣಿನ ಸೌಂದರ್ಯದ ಮಾದರಿಯೆಂಬರ ಯಮುನೆಯೆಂದು ನನ್ನ ಭಾವನೆ (ಅಂಕಹೂ. ೩೩).
[ದೇ.॥ ತಮಿ. ಮಾತಿರಿ ; ತುಳು. ಮಾದರಿ, ಮಾದಿರಿ, ಮಾದ್ರಿ ; ತೆಲು. ಮಾದಿರಿ ; ಮಾದ್ರಿ./ಮರಾ. ಮಾದರೀ, ಮಾದ್ರೀ]

**ಮಾದರಿಕೆ**, ಮಾದಜಿಕೆ, ಮಾದಾರಿಕೆ, ಮಾದಾಜಿಕೆ (ನಾ). ಮಾದಿಗರು ಕೊಡುತ್ತಿದ್ದ ಸುಂಕ, -ತೆರಿಗೆ : ಮಾದರಿಕೆ (ಕ್ಶಾಎಂ. ೦೯೩೩, ೦೩೬ : ?).
Δ**ಮಾದಜಿಕೆ** : ಬೋಡಿಜಿಕೆ ಮಾದಜಿಕೆ ಮುಂತಾದ ಧನುಳ್ಳ ಸಫಲ ಸ್ವಾಮ್ಯವನು ಆಗುವಡಿ (ಎಕ. III (R). ಗುಂಡ್ಲು.ಕೆ. ೪೯-೩ ; 1507).
**ಮಾದಾರಿಕೆ** : ಕಂಮಾಜಿತೆಜಿಗೆ ಕುರಿಪೆರಿಗೆ ಮಾದಾರಿಕೆ ಉಪಿನ ಕಾವಲಿಸುಂಕ . . . ಬೆಟ್ಟದ ಕಾವಲು ಯಿಪ್ಪನು ಸರ್ವಮಾನ್ಯವಾಗಿ ಬಿಟ್ಟದು (ಎಕ. III (R). ಗುಂಡ್ಲು.ಕೆ. ೦೫೦-೬೯; 1521). Δ **ಮಾದಾಜಿಕೆ**: ಹದಿಕ ಜೋಡಿಗ್ರಾಸ ನೊಟಗೂಲಿ ಮಾದಾಜಿಕೆ ವಟ್ಟ ಕಟ್ಟಿಗೆ (ಎಕ. VII. ಶಿಕಾರಿ. ೦೯೬-೫೦ ; 1404) ; ಮಾದಾಜಿಕೆ ಅಧಿಕಾರಿಯು ಉಡುಗೊಜೆ ಸೇಸಭೋಯಿಕೆ ಬಾದಿನ ವರ್ತನೆ ಅಧಿಕಮಾಸ ಮುಂತಾಗಿ ಯೇನುಳ ಸರ್ವಸ್ವಾಮ್ಯವನೂ ನೀಉ ಆಗುಮಾಡಿಕೊಂಡು . . . ಭೋಗಿಸಿ ಬಹುದು (ತೌಇಇ. IX-ii. ೪೪೦-೫೬ ; 1419). [ಮಾದರ + -ಇಕೆ]

**ಮಾದರಿಪಾಠ** (ನಾ). ಉಪಾಧ್ಯಾಯವೃತ್ತಿಯನ್ನು ಅರಿಸಿಕೊಳ್ಳಬೇಕೆಂದು ತರಬೇತುಹೊಂದುವ ಶಿಕ್ಷಣವಿದ್ಯಾರ್ಥಿಗಳಿಗೆ ಪಾಠ ಕಲಿಸುವಾಗ ಹೇಗೆ ಪಾಠಮಾಡಬೇಕೆಂದು ದೃಷ್ಟಾಂತಕ್ಕಾಗಿ ಶಿಕ್ಷಕರು ಮಾಡಿ ತೋರಿಸುವ ಪಾಠ : ಪ್ರಾಥಮಿಕಶಾಲೆಯ ಮುಖ್ಯೋಪಾಧ್ಯಾಯರೊಬ್ಬರು ಗಣಿತದಲ್ಲಿ ಮೂರನೆಯ ತರಗತಿಗೆ ಮಾದರಿಪಾಠವನ್ನು ಮಾಡಿ ತೋರಿಸಿದರು (ಕಂನಕ. ೬೨).
[ಮಾದರಿ + ಪಾಠ₁]

**ಮಾದರ್ಚೋತ್** (ನಾ). ತನ್ನ ತಾಯಿಯೊಡನೆ ಅನೈತಿಕಸಂಬಂಧ ಇಟ್ಟುಕೊಂಡವನು ಎಂಬ ಅರ್ಥದಲ್ಲಿ ಬಳಸುವ ಒಂದು ಬಯ್ಗುಳು. 'ಬಾಂಚೋತ್' ಪರಾ. [ ←ಹಿಂ. (ಮಾದರ್ + ಚೊತ್) ]

**ಮಾದಲ**, /ಮಾದಲು, ಮಾದವಾಳ, ಮಾದಳ, ಮಾದಾಳ (ನಾ). ಹುಳಿಹಣ್ಣುಗಳ ಜಾತಿಗೆ ಸೇರಿದ (ಗಾತ್ರದಲ್ಲಿ ನಿಂಬೆಗಿಂತಲೂ ದೊಡ್ಡದಾಗಿದ್ದು ಕಡಮೆ ಹುಳಿ ಹಾಗೂ ದಪ್ಪವಾದ ತಿರುಳುಳ್ಳ) ಹಣ್ಣುಗಳನ್ನು ಬಿಡುವ ಮರ; ಮಾತುಲುಂಗ; ಸಕ್ಕರೆನಿಂಬೆ: "ಮಧುರಾಮ್ಲ ಫಲಃ—ಮಾದಲ" (ಚಿತಧಿ. ೦೨೨) : ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿನೀರನೆಱೆದವರಾರಯ್ಯ (ಚುಚಾರೇ. ಪ. ೨೦-೩) ; ತುಱುಗಿದ ಕಾಯ್ಗಳ ಭರದಿಂ ನೆಱೆ ತಗ್ಗಿ ವಿಲಂಬಿಸಿರ್ದ ಮಾದಲಂ (ಶಾರಕ. ೦-೦೦೬) ; ವಂತಿ ಮೊಳೆಗರನೆಲ್ಲಿ ಮಾದಲ ... ಕರ್ಣಕಾರದ ಮೊತ್ತವಿದೆ ನೋಡಬಲೆ (ಕುರಿಜಾ. ೩-೦-೨೬). **ಮಾದಲು**: ರಾಮಚಂದ್ರನು ಮಾದಲುಹಣ್ಣಿಗಾಗಿ ಬರುವನೆಂಬ ಸುದ್ದಿ ಬೇರೆ ಇತ್ತು (ಕಕಕು. ೩೮). **ಮಾದವಾಳ** : ಮಾದಳ, ಅರೆಮಾದಳ, ಮಾದವಾಳ, ಮಹಾಫಲ (ಪ್ರಶಿಗಿ. ೨೨-೯೦೬). **ಮಾದಳ** : "ಮಾತುಲುಂಗಃ —ಮಾದಳ" (ಚಿತಧಿ. ೦೨೪) ; ಮಾದಳ . . . ಸುಫಾರ್ಹ ಸಾರ್ವತ್ರಿಕಮಾದ ಫಲಂಗಳುಳ್ಳ ತರುನಿಕರಂಗಳುಂ (ಶಿವೇಕ. ೨೦೦); ಮಾದಳದ ಬೇರು, ಅಮರದ ಬಳ್ಳಿ . . . ಕಷಾಯ ಮಾಡಿ ತೆಗೆದುಕೊಳ್ಳಲು ಶ್ಲೇಷ್ಮಜ್ವರ ಪರಿಹಾರವಾಗುವುದು (ಸಕಶ್ಚ. ೯೯) ; ಬಡವನು ಆ ಮಾದಳದ ಹಣ್ಣನ್ನು ತೆಗೆದುಕೊಂಡು ಹೋದನು (ಕಸಂ. ೦೦). **ಮಾದಾಳ** : "ಫಲಪೂರಕಃ, ಬೀಜಪೂರಕಃ, ರುಚಕಃ, ಮಾತುಲುಂಗಕಃ —ಈ ೪ ಮಾದೀಗಿಡ, ಮಾದಾಳದ ಗಿಡ" (ಸಿದ್ಧಾಂತಿ. ೦೭೦).
[ದೇ.॥ ತಮಿ. ಮಾತಳೈ, ಮಾತುಳವ್, ಮಾತುಳೈ; ಮಲ. ಮಾದಳ; ತುಳು. ಮಾದಲ, ಮಾಪಲ ; ತೆಲು. ಮಾದಿಫಲವು ; ಗೊಂಡಿ. ಮಾತ್ರ]

**ಮಾದಲು** 'ಮಾದಲ' ನೋ.

**ಮಾದವ** (ನಾ). ಒಬ್ಬಾತನ ಹೆಸರು : ಬೆಳ್ವಮಾಣೆಯ ಶ್ರೀಮ ಗಾವುಂಡ್ನರುಂ ಕುಪ್ಪಾಲ್ಮಾದವರುಂ . . . ರಿಪುರಾವುಗಾವುಂಡ್ನನುಂ ಎನೆಬ್ಬರುಂ ನಲಸಾಕ್ಷಿಯಾಗೆ ಪಡೆದಾರ್ (ಎಕ. VI (R). ಶ್ರೀರಂಗ. ೬೬-೨೦ ; ಸು. ೩೦೦). [<ಮಾಧವ₂]

**ಮಾದವರೆ** (ನಾ). ಒಂದು ಬಗೆಯ ಅವರೆ : ಮಾದವರೆ ಹಾಕಿದರೆ ಅದನ್ನು ಕಾಯುವುದಕ್ಕೆ ಒಂದು ಆಳು ಬೇರೆ ಆಗಬೇಕು (ಸೇಸು. ೦೬೬).
[ ? + ಅವರೆ₁]

**ಮಾದವಾಳ** 'ಮಾದಲ' ನೋ.

**ಮಾದವೆ** (ನಾ). ಒಬ್ಬಾಕೆಯ ಹೆಸರು : ಶ್ರೀಪೃಥಿವೀವಲ್ಲಭಸಿಂಘಪೋತರಸರ ಮಗಳ್ವರ್ ಶ್ರೀಮಹಾದೇವಿಅರಸಿ ಪೆರ್ಮಾನಡಿಗಳ ಅರಸಿಯುರ ತಾಯಿ ನೊಟಮ್ಮ ಮಾದವೆ ಅಳಿ (ಎಕ. XI, ಹಳ್ಳಿ. ೩೩-೩ ; ಸು. 815).
[ಮಾದ₂ + ಅವ್ವೆ₀ (<ಅಬ್ಬೆ₁)]

**ಮಾದಳ** 'ಮಾದಲ' ನೋ.

**ಮಾದಳಿ** (ನಾ). ಒಂದು ಬಗೆಯ ನಸುಗೆಂಪುಬಣ್ಣದ ವಸ್ತ್ರ : ಹಳದಿ ಸಂಧ್ಯಾರಾಗ ಮಾದಳಿ ಬಿಳಿದು ಪೊಪ್ಪುಳ ಚಂದ್ರಗಾವಿಗಳೆಳೆಗೆ ಪೊಸತಹ ಮಂಚಿಟಿಕೆ ಗುಜ್ಜರಿ ದುಕೂಲಗಳ ಅಳವಡಿಸಿ (ಕೋಗಯ. ೩-೩೬).
[← ತೆಲು. ಮಾದಳ, ಮಾದವಳ, ಮಾವಾವಳ, ಮಾವಾವಳಿ]

**ಮಾದಳಿರ್** 'ಮಾಂದಳಿರ್' ನೋ.

Δ **ಮಾದಜಿಕೆ** 'ಮಾದರಿಕೆ' ನೋ.

**ಮಾದಾನಿ** (ನಾ). ಧಾರಾಳವಾಗಿ ನೀಡುವವನು : ಮಹಾದಾನಿ : ಮಾದಾನಿ ಬಮ್ಮಿಸೆಟ್ಟಿ ತಳ್ವಾರ ದೆಲಿಕವ್ವೆಗೊಲ್ದು ವಲ್ಲಭನಾದಂ (ಕೊಣ್ಣಾ. ಶಾ. ೯-೦೯: 1147) ; ಮಹಾದಾನಿ—ಮಾದಾನಿ (ಶಬ್ದದ. ೨೯೦ ವೃಹೂ.) ; ಶ್ರೀಪತ್ನಾರ್ಜುನಮಾವ ನಿನ್ನನೊಲವಿಂ ಮಾದಾನಿಯೆಂದೈದೆ (ಶಾತಕ. ೬೪). [<ಸಂ. ಮಹಾದಾನಿನ್]

**ಮಾದಾಮತ್ತರಸ** (ನಾ). ಒಬ್ಬಾತನ ಹೆಸರು : ಬಿಜಯಿತ್ತಯ್ಯಂ ಮಾದಾಮತ್ತರಸರು ಪೊಚಲಮ್ಮನಾ ಮೇಗೆಟ್ಟು ಮೂಡೆಕಲ್ಲಾ ಕಾಳಿಗಮುಳ್ ಗಾರವರಾಳ್ ಅಪಧೀರರಾ ಮಗನ್ ಜಾತಗುದ್ದಿಯಾರುಂ . . . ಸತ್ತಾರ್ (ಎಕ. X, ಶ್ರೀನಿವಾ. ೪೦-೦ ; ಸು. ೨೦೦). [ ? + ಅರಸ₁ ]

**ಮಾದಾರ** 'ಮಾದರ' ನೋ.

**ಮಾದಾರಿ** (ನಾ). ದೊಡ್ಡ ಬೀದಿ ; ರಾಜಮಾರ್ಗ : ಅಂದು ಮಾದಾರಿಯೊಳು ಬಪ್ಪರಂ ಸಿದ್ಧರಾಮಾ ಎಂದು ಕರೆದು ಕರೆದು (ಸಿದ್ಧರಾ. ೨-೯೩).
[ಮಾ₄ + ದಾರಿ]

**ಮಾದಾರಿಕೆ** 'ಮಾದರಿಕೆ' ನೋ.

**ಮಾದಾಳ** 'ಮಾದಲ' ನೋ.

Δ **ಮಾದಾಱಿಕೆ** 'ಮಾದರಿಕೆ' ನೋ.

**ಮಾದಿ₁** 'ಮಾತಿ' ನೋ.

**ಮಾದಿ₂** (ನಾ). ಒಬ್ಬಾತನ ಹೆಸರು : ಶ್ರೀಮಾದಿ ಅಬಲದಲಸ್ತಬದ ಚಿಪಾನ್ಮಾ ತುಱುಪರಗೋಳುಗಳಲ್ಲಾದಿ ಸತ್ತಂ (ಪ್ರಕಾ. ೦೯೩೨, ೫೯-೭ ; ೨೫ನೆಯ ೫೫). [ ? ]

**ಮಾದಿಗ** 'ಮಾದೇಗ' ನೋ.

**ಮಾದಿಗಾಮುಂಡ**, ಮಾದಿಯಗಾಮುಂಡ (ನಾ). ಒಬ್ಬಾತನ ಹೆಸರು : ಕೋಟಗಾಮುಂಡನುಂ [ಮಾದಿ]ಗಾಮುಂಡನ ಸಹಿತ ದಿರ್ಬಲ್ಲು ಮಾದರ [ನುಂ] (ಕೌಇಇ. XI-i, ೭-೨೨ ; 837). **ಮಾದಿಯಗಾಮುಂಡ** : ಸ್ವಸ್ತಿಶ್ರೀಮಾದಿಯಗಾಮುಂಡ್ಡರೀ ಪುಯೂರು . . . ಆಳೆ (ಎಕ. IX. ಬೆಂಗಳೂ. ೩೯-೦ ; ಕ್ರು. 1000). [ಮಾದಿ₂ + ಗಾಮುಂಡ]

**ಮಾದಿಗಾವರಿಕೆ** (ನಾ). ಒಂದು ಬಗೆಯ ತಂಗಡಿಗಿಡ : ರಕ್ತಾತಿಸಾರದಲ್ಲಿ ಕೈಯಿಂದ ಕೊಡಹಿದ ಹಸುವಿನ ಮಜ್ಜಿಗೆಯಲ್ಲಿ . . . ಮಾದಿಗಾವರಿಕೆಯ ತೊಕ್ಕನಾದರೂ . . . ದಾಳಿಂಬದ ಹೂವನಾದರೂ ಅರೆದು ಕುಡಿಯಿಸಲು ಹಿತವಹುದು (ವೈದ್ಯಸಾ. I, ೨೨೦) ; ಮಾದಿಗಾವರಿಕೆಬೇರಿನ ತೊಕ್ಕು ಏಲಕ್ಕಿ, ಜೀರಿಗೆ ಹೊನ್ನ ತೂಕವಂ ಹಸುವಿನ ಹಾಲಲ್ಲರೆದು . . . ತೆಗೆದುಕೊಳ್ಳೆ ಹೆನ್ನೆತ್ತರು ಮಾಣ್ಗುಂ (ಸಕಲ. ೦೯೬). [ ? + ಆವರಿಕೆ]

**ಮಾದಿಗಾವರೆ** (ನಾ). = ಮಾದಿಗಾವರಿಕೆ : "ಚರ್ಮಕಸಾ—ಮಾದಿಗಾವರೆ, ಹೊಮ್ಮಿಟಿಲ" (ನಿಘಂ. ೩೩). [? + ಅವರೆ]

**ಮಾದಿಗಿತ್ತಿ** 'ಮಾದೇಂಗಿತಿ' ನೋ.

**ಮಾದಿಯಗಾಮುಂಡ** 'ಮಾದಿಗಾಮುಂಡ' ನೋ.

**ಮಾದಿರ** 'ಮಾದರ' ನೋ.

**ಮಾದಿವರ್ಮ** (ನಾ). ಒಬ್ಬಾತನ ಹೆಸರು : ಗಂಗಾನ್ವಯಾಮೂಳಸ್ತಂಭಂ ಗಂಗರ ವಂಶಾಧಿಪತಿ ಮಾದಿವರ್ಮ್ಮರ್ಮಪಟ್ಟಕ್ಕರ್ಹನಪ್ಪ ಸಯ್ಯಾಂತ ಎಱೆಯಂಗಪ್ಪನ ಮಗಂ ಮಾಚಿಗಂ . . . ನೊಳಂಬಾಧಿರಾಜರಾಜರೊಳ್ಳಾದಿ ಸತ್ತಂ (ಎಕ. III (R), ಹೆಗ್ಗಡ. ೨೬-೬ ; 900 ?).
[ ಮಾದಿ₂ + ವರ್ಮ₁ ]

**ಮಾದೀಗ** 'ಮಾದೇಗ' ನೋ.

**ಮಾದು₁** 'ಮಾಯ್' ಪರಾ.

**ಮಾದು₂** 'ಮಾಣ್' ಪರಾ.

**ಮಾದು₃** (ನಾ). (ಕರಾ) ಜಲಾಶಯಗಳಲ್ಲಿ ಹೆಚ್ಚಿನ ನೀರು ಹರಿದು ಹೋಗಲು ಮಾಡಿರುವ ದಾರಿ ; ಕೋಡಿ.
[ ← ತುಳು. ಮಾದ್ = ಸುತ್ತಲೂ ತಿರುಗುವಿಕೆ, ಸಣ್ಣ ಸೇತುವೆ ]

**ಮಾದುಫಳ** (ನಾ). ಒಂದು ಬಗೆಯ ಹಣ್ಣು ; ಮಾದಳ : ತೆಗಟ ಮೊದಲಲ್ಲಿ ಮತ್ತಾಲ್ಯಂಟು ಗವಾಮಿಷಮಾಗುರು ಪಿಂಡಿಯೊಂಬಿನಿತುವನಿಕ್ಕುಗೆ ಜಂಬುಕಮಾಂಸಮನಿಕ್ಕುಗೆ ಮೊದಲೊಳ್ ಮಾದುಪಳದ ಕಾಯ್ ತುಱುಗಿರ್ಕುಂ (ಲೋಕೋಪ. ೬-೩೯) ; ಎನಿತೊಳವಪಾಯಕೋಟಿಗಳನಿತರ್ಕಾ ಗೇಹಮಲ್ತೆ ದೇಹಮಿದಂ ನೆಟ್ಟನೆ ಪೊತ್ತು ಸುಖಿಮಾಸೆಜಸುವ ಮನುಜಂ ಮೊರಡಿಯೊಳೆ ಮಾದುಫಳಮಜಸದಿರಂ (ಧರ್ಮಾಮೃ. ೦-೫೦). [<ಮಾದಲ + ಪಳ₂ (<ಪಲ್ಲ). / ತೆಲು. ಮಾದಿಫಲಮು]

**ಮಾದುಫಲ**, ಮಾದೂಫಲ (ನಾ). = ಮಾದುಫಳ : ಸುವರ್ಣಪೂರ್ಣಕಳಶಮುಂ ಕನ್ನಡಿಯುಂ ಪೂಗಫಲಕ್ಕಿಯುಂ ಮಾದುಫಲಮುಂ ಮೊದಲಾಗೊಡೆಯುನೇಕಾರ್ಚನೆಯಿಂದಿದಿರಂ ಬಂದು ನಿಜೇಶ (ಪಶ್ಚಾರಾ. ೬೮-೬) : ಭಾವಿಸಲೇನುಂಟೆ ಮೊರಡಿಯೊಳ್ಮಾದುಫಲಂ (ಸಹಕಾ. ೦-೦೨೩) ; ಪುಷ್ಪಕಪಾಲಮಂ ನಿಲಲೀಯದೆ ಪೂಣ್ಣಪವಿತ್ರವನಿಟ್ಟು ಖಟ್ವಾಂಗಮಂ ಬಿಡಿಸಿ ಮಾದುಫಲಮನಿಂಬುಗೊಳಿಸಿ . . . ಶಾಶ್ವತಪ್ರತಾಪನಾಥಿಯನಿಪ ತಂಕರಂಗೆ ನಂದೀಶಾದಿಗಣನಾಯಕರ್ ಸಿಂಗರಮಂ ಮಾಡಿ (ಗಿರಿಜಾ. ೦೦-೬೦ ವ).
**ಮಾದೂಫಲ** : ದಧಿ ಮಧು ಸುಧ ಮಾದೂಫಲಂ ದೂರ್ವೆ . . . ಘುಸೃಣಂ ಮಾಣಿಕ್ಯದೀಪಂ ಮಿಸುಗೆ ಬಗೆಗೆ ಚೆಲ್ವಾದುದುದ್ವಾಹಗೇಹಂ (ಕೃಷ. ೩-೯). p ಇದು ಧಂದುಸ್ಟಿಗಾಗಿ ಮಾಡಿಕೊಂಡಿರುವ ರೂಪ ವಿರಬಹುದು. [ < ಮಾದಲ + ಫಲ₁ ]

**ಮಾದುರ₁** (ನಾ). ದೊಡ್ಡ ಯುದ್ಧ,—ಕಾಳಗ ; ಮಹಾಸಮರ : ಮುಳಿಸೆಂಬುದೆನಗೆ ಕೌರವರೊಳೆ ಪಿರಿ[ದಾ]ಬಲಿ[ದ] ಬಯಕೆಯುಂ ಮಾದುರದೊಳ್ ಕಳಿವಂತನ್ನೆಗಮಿದುವನೊಳ್ ಕಳಿವಂ ನಿನ್ನೊಂದು ಮುಳಿಸನಬ್ಬುದಳಾಕ್ಷೀ (ಪಂಪಭಾ. ೬-೭೨). [ ಮಾ₄ + ದುರ ]

**ಮಾದುರ₂** (ನಾ). = ಮಾದಲ (?) : ಕಲಸಗೊಳ ಮೊಸರಿಂಗೆ ನಿತ್ಯ ವೀಸದ ಲೆಕ್ಕ ಗ ೨ . . . ಮಾದುರಕಾಳಿಗೆ ವರುಷಕ್ಕೆ ಗ ೧ ಪ ೨ (ಎಕ. XV, ಬೇಲೂರು. ೨೫೨-೦೦ ; 1298). [ < ಮಾದಲ ? ]

**ಮಾದುವರ** (ನಾ). ಒಬ್ಬಾತನ ಹೆಸರು : ಪಾಬಯ್ಯಂಗೆ ತಾಮಾದರ್ ತನಯರ್ ಪೇಟಲ್ ಮಾದುವರಂ ದೋಯಿಲಪ್ಪನೆಂಬರ್ ಪೆಸಲಂ (ಎಕ. II, ೦೪೯-೫ ; ಕ್ರು. 950). [ ? ]

**ಮಾದೂಫಲ** 'ಮಾದುಫಲ' ನೋ.

**ಮಾದೆ** (ನಾ). ಮಸಣ ; ಶ್ಮಶಾನ : "ಮಾದೆ ಮಸಣಂ" (ಕರ್ಣಾಟ. ೬೪).
[ ? ]

**ಮಾದೇಂಗ** 'ಮಾದೇಗ' ನೋ.

**ಮಾದೇಂಗಿ.** 'ಮಾದೇಗಿ' ನೋ.

**ಮಾದೇಂಗಿತಿ**, ಮಾದಿಗಿತ್ತಿ (ನಾ). ಮಾದಿಗರ ಹೆಂಗಸು ; ಮಾತಂಗಿ : ವಿದ್ಯೆ ಜಾತಿ ಮಾದೆಂ[ಪಾಠಾಂ. ದಂ]ಗಿತಿಯಾಗಿ ಪೊನ್ನ ತಳಿಗೆಯೊಳ್ ಮಾಣಿಕಂಗಳಂ ಪೊಯ್ದು ಪಿಡಿದು ಬಂದ ರುಗ್ಮಿಣಿನಂ ಕಂಡು ಮುಂದಿಟ್ಟು ಪೊಡೆವಟ್ಟು (ಚಂಪು. ೯-೬೩ ವ). **ಮಾದಿಗಿತ್ತಿ** : ಮಾದಿಗಿತ್ತಿಯನಿಲ್ಲಿ ಜಯಿಸದಿದ್ದೊಡೆ ಮುಂದೆ ಮೇದಿನಿ ನಮಗಹುದಿಲ್ಲ (ಸಂಕಾ. ೪೨-೦೬) ; ಮಾದಿಗಿತ್ತಿ ಮಂಗಳವಾರ ಮಾಡಿದ ಹಾಗೆ (ಗಾದೆ).
[ಮಾದೇಂಗ (< ಮಾದೇಗ) + —ಇತಿ₁ (<— ಇತ್ತಿ)]

**ಮಾದೇಗ**, ಮಾದಗ, ಮಾದಿಗ, ಮಾದೀಗ, ಮಾದೇಂಗ (ನಾ). ೧. ಹರಿಜನರ ಒಂದು ಒಳಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು ; ಚಮ್ಮಾರ ; ಶ್ವಪಚ : ಪೆಣ್ಣಾಯಾಗಿ ಮಾದೆಗರ [ಪಾಠಾಂ. ಮಾದರ, ಮಾದಿಗರ, ಮಾದೇಂಗರ] ಮನೆಯೊಳ್ ಪುಟ್ಟಿ ಸತ್ತು . . . ನೀಳನೆಂಬ ಮಾದೆಗಂಗಂ ಕೇಶಿಯೆಂಬ ಮಾದೆಗಿಗಂ ಮಗಳ್ . . . ಪೊಲತಿಯಾಗಿ ಪುಟ್ಟಿ (ಪಶ್ಚಾರಾ. ೬-೯) ; ಮನೋಜ್ಞರಲ್ಲದರ ಮನೆಯೊಳ್ ಕೂಸುಗುಡುವುದಱಿಂ ಮಾದೆಗರ ಮನೆಯೊಳ್ ಕುಡುವುದು ಲೇಸು (ಪುಷ್ಪದಂ. ೮-೨೩ ವ). **ಮಾದಗ** : ೧. ಹುನುವಲ್ಲಳ್ಳಿಯ ಮಾದಗರ ಕಮ್ಮಯನಂ ಮಗಂನ್ ಅರಿವಮ್ಮ ಗಾವುಣ್ಣಾಗೆಯ್ಯ (ಎಕ. VIII, ಸೊರಬ. ೩೬೨-೯ ; 964). **ಮಾದಿಗ** : ೧. "ಶ್ವಪಚಃ, ಪುಲ್ಕಸಃ, ಮಾತಂಗಃ, ಪ್ಲವಕಃ — ಈ ೪ ಮಾದಿಗಂ" (ಶಬ್ದಮ. ೧೬-೪೪೪) ; ಮಾದಾರನಂ ಕರೆಯಲಟ್ಟುವುದುಮೆಯ್ಯಪ್ಪವನಂ ಮಾದಿ[ಪಾಠಾಂ. ತ]ಗಂ ಕಂಡು ತನ್ನ ಪೆಂಡತಿಗಿಂತೆಂದಂ (ಪುಣ್ಯಾಸ್ರ. ೭-೪೦ ವ) ; ಆದಿದೈವವನು ಹಾ ಭೇದಿಸಲಿ ಕಚ್ಚಿಯಂದಲೆ ಹಾದಿಯ ಕಲ್ಲಿಗೆಮಾಡಿ ನಮಿಸುವ ಮಾದಿಗರ ನೋಡು

(ಸರ್ವಜ್ಞ. ೦೯೬) ; ಜೀತಗಾರರಾದ ಹೊಲೆಯರ ಕರಿಯನೂ ಮಾದಿಗರ ಕಾಳನೂ ಬಂದರು (ಶಂಗಾಳ್ಯ. ೬). ೨. (ಅಲಂ) ನೀಚಬುದ್ಧಿಯುಳ್ಳವನು ; ಹೀನಗುಣದಿಂದ ಕೂಡಿದ್ದವನು : ಲಂಚಂ ಬೇಪ್ಪ್ ಪೊಳಲಿನ ತಾಯ್ಗಂ ತಂಗೆಗವಳಿಪಿದವಂ ಲೆಕ್ಕವಿಡುವವಂ ಮಾದಿಗಂ (ಕಾಇಶಾ. IX–i, ೦೦೬–೨೬ ; 1050) ; ಚೆನ್ನಮಲ್ಲಿಕಾರ್ಜುನಯ್ಯನ ಭಕ್ತನಾಗಿರ್ದು ಜೀವಹಿಂಸೆಯ ಮಾಡುವ ಮಾದಿಗರನೇನೆಂಬೆನಯ್ಯ (ಮಹಾದೇ. ೨. ೯೬–೦೦೯) : ಮಾತಿಗೆ ತಪ್ಪಿದವ ಮಾದಿಗ (ಗಾದೆ). **ಮಾದೀಗ** : ೧. ಭಂಗದೆ ನಾನಾ ಮಾದೀಗಂಗೆ ಮಹಾನಿಷ್ಠುರಂಗೆ ಪಲವಂ ಪೊನ್ನಂ ಭಂಗಿಯೊಳ್ ಕೊಟ್ಟು . . . ಬೇಗಂ ಶಿರಮಂ ಕೊಲ್ಲೆಂದಟ್ಟಿದೊಡೆ (ಧರ್ಮಾಮೃ. ೦೦–೦೫೩). ◆ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಮಾದೆಂಗ** : ೧. ಚಂಪಾಪುರದೊಳು ಮಾದೆಂಗಕುಲದೊಳು ಜಾತ್ಯಂಧಕಿಯಾಗಿ ಪುಟ್ಟಿ (ಸುಕುಮಾ. ೬–೦ ವ) : ಆ ಪುರದೆ ನಿರಯನೆಂಬೊರ್ವ ಮಾದೆಂಗನಿರ್ಪಂ (ಜೀಬುಕು. ೦೯–೦೨೬). 'ಮಾದರ' ಪರಾ.

[ದೇ. ॥ ತುಳು. ಮಾದಿಗೆ ; ತೆಲು. ಮಾದಿಗ : ನಾಯ್ಕ. ಮಾದಿಗ್ /ಸಂ. ಮಾತಂಗ]

**ಮಾದೆಗಿ,** ಮಾದೆಂಗಿ (ನಾ). = ಮಾದೆಂಗಿತಿ : ನೀಳನೆಂಬ ಮಾದೆಗಂಗಂ ಕೇಶಿಯೆಂಬ ಮಾದೆಗಿ [ಪಾಠಾಂ. ಮಾತಂಗಿ]ಗಂ ಮಗಳ್ . . . ಪುಟ್ಟುಂಗುರುಡಿ ಪೊಲತಿಯಾಗಿ ಪುಟ್ಟಿ (ವಡ್ಡಾರಾ. ೯–೬). **ಮಾದೆಂಗಿ** : ನೀಳನೆಂಬ ಮಾದೆಗಂಗಂ ಕೌಶಂಬಿಯೆಂಬ ಮಾದೆಂಗಿಗಂ ಮಗಳಾಗಿ . . . ಸುಖಂಗಾಣದೆ ಪಾಪಾ ಭೂತಚೇತಸ್ಕೆಯಾಗಿರ್ಪಳಂ ನೀಮಿಾಗಳ್ ಕಂಡಿರ್ (ಸುಕುಮಾ. ೫-೨೦ ವ). [ಮಾದೆಗ + – ಇ₂./ಸಂ. ಮಾತಂಗೀ]

**ಮಾದೆಯ,** ಮಾದೆಯ್ಯ (ನಾ). ಒಬ್ಬಾತನ ಹೆಸರು : ನಾಗಚಂದ್ರದೇವರ ಪುತ್ರ ಮಾದೆಯ ಸೇನಬೋವ ×× ಸ ×× ಪುನಪ್ರತಿಷ್ಠೆಯಂ ಮಾಡಿದನು (ಎಕ. VIII, ನಗರ. ೯೫–೦೬ ; ಸು. 950). **ಮಾದೆಯ್ಯ** : ಆತನ ತಮ್ಮ ರಾಯಸ್ಥ ಅಳಿಯ ಮಾದೆಯ್ಯನುಮಿಾ ಕಲ್ಲ ನೆಟ್ಟರ್ (ಎಕ. VIII, ಸೊರಬ. ೨೩೯–೦೨ ; 999). [< ಮಾದ₂ + < ಅಯ್ಯ₆₁]

**ಮಾದೆಯೂರ್** (ನಾ). ಒಂದು ಊರಿನ ಹೆಸರು : ಮಾದೆಯೂರ ಸಾನ್ತಿವರ್ಮ್ಮಂ ಬರಿಯೂರನಿಱಿಯೆ (ಎಕ. VIII. ಸೊರಬ. ೩೩೦–೫ ; 979). [ಮಾದ್ಮೆ + ಊರ್]

**ಮಾದೆಯ್ಯ** 'ಮಾದೆಯ' ನೋ.

**ಮಾದೇವ** (ನಾ). ಶಿವ ; ಈಶ್ವರ ; ಮಹಾದೇವ : "ಎಣ್ಮಯ್ಯಂ . . . ಕಂದುಗೊರಲಂ. ಮಾದೇವಂ . . . ಅಯ್ಮೊಗಂ – ಈ ೩೩. ಈಶ್ವರಂಗೆ ಪೆಸರ್" (ಕಕಾ. ೦-೦) ; ಅವಳಪ್ಪೊಡಮುಕ್ಕ ಪೋ ತಲೆಯಿಂದೆ ಪೋದೊಡ ವಿಂದೆ ಮಾದೇವನಾರ್ತೆಡೆಗೋದಡಂ . . . ನೆರೆದಲ್ಲದಿನ್ನಿರೆನೀಕರೊಳ್ (ಕಂಶಭಾ ೯–೬೩) ; ಮಾಗೆ _ ಮಹಾಕಾಳಿ _ ಮಾಕಾಳಿ . . . ಮಹಾದೇವ _ ಮಾದೇವ (ಶಮದ. ೨೯೦ ಪ್ರಯೋ) ; ಆ ದೇವ ಈ ದೇವ ಮಾದೇವನೆನ ಬೇಡ ಆ ದೇವರ ದೇವ ಭುವನದ ಪ್ರಾಣಿಗಳಿಗಾದವನೆ ದೇವ (ಸರ್ವಜ್ಞ. ೦೯೦). [ಮಾ₄ + ದೇವ./ಸಂ. ಮಹಾದೇವ]

**ಮಾದೇವಿ** (ನಾ). ೧. ದುರ್ಗೆ ; ಪಾರ್ವತಿ : "ಮಾಕಾಳಿ, ಮಾದೇವಿ, ಸಬ್ಬಾಣಿ, ಐಕಿಲ್ವೆಟ್ಟಿಣಂಗಿ, ಸಿಂಗದೇರಳ್ — ಈ ೫ ಪಾರ್ವತಿಯ ಪೆಸರ್" (ಕಕಾ. ೦–೩) ; ಶ್ರೀವನಿತೆಯೆನಿಸ್ಸಿದಕ್ಕಾದೇವಿಗೆ ವಾಗ್ದೇವಿಗಖಿಳ ಜನನುತ ಸೀತಾದೇವಿಗೆ ಮಾದೇವಿಗೆ ಭೂದೇವಿಗೆ ಸಮನೆಂಬ ನೃಪಸುತಾ ಸಮುದಯಮಂ (ಇಆ. XVIII, ೨೬೩-೬ : 1021) ; ಗಡಣದೆ ಮಾದೇವಿಯ ಬಗೆಯೊಡೆಯನ ನೊಸಲೊಳ್ . . . ತೋಳೆಡೆಯೊಳ್ ಬಿಡೆ ನಟ್ಟುವು ಕಾವನಂಬುಗಳ್ ತಾವ್ವೆದುಂ (ಕವ್ಯಕಾ. ೩೦೬). ೨. (ರಾಜನ) ಪಟ್ಟದ ರಾಣಿ ; ಪಟ್ಟಮಹಿಷಿ ; ಮಹಾರಾಣಿ : ಎನ್ನ ಮಾದೇವಿ ತಪ್ಪದೀ ಲಲನೆ ತತ್ಸ್ವಯಂಪ್ರಭೆಯೆ ನೋಟಕ್ಕೊಡೀ ಚಿತ್ರಮಿಂತಿದಾಕೆಯದೆ ಬಳ್ಕೆ ಪೇಟಿಟ್ ಪೆಜರ್ಗಮಿಂತುಟೊಂದಕ್ಕುಮೋ (ಆದಿಪು. ೯–೬) ; ದುರ್ಯೋಧನನ ಮಾದೇವಿಯರಪ್ಪ ಭಾನುಮತಿಯುಂ ಚಂದ್ರಮತಿಯುಂ ಮೊದಲಾದ ಅತಿರಥ ಮಹಾರಥಾರ್ಧರಥ ಪ್ರಮುಖಸಾಮಂತಮಾಂಡಲಿಕಾಂತಃಪುರ ಕಾಂತೆಯರೊಂದಾಗಿ ತಂತಮ್ಮ ಜೀವಿತೇಶ್ವರರಂ ಸಂಗ್ರಾಮರಂಗದೊಳಱ ಸುತ್ತಂ ಬಂದು ಕಾಣದೆ (ಗದಾಯು. ೧೦-೦೨ ವ).

[ಮಾ₄ + ದೇವಿ./ ಸಂ. ಮಹಾದೇವೀ]

**ಮಾದ್ರ** (ಗು). ಮದ್ರದೇಶಕ್ಕೆ ಸಂಬಂಧಿಸಿದ ; ಮದ್ರದೇಶದ : ಧರ್ಮಸುತ ಮುಂಕೊಂಡು ರಣದಲಿ ಕಾದಿ ಗೆಲಿದನೆ ಮಾದ್ರಭೂಪತಿಯ (ಕುವ್ಯಾಶ. ೨ ಸೂಚನೆ). [ಸಂ.]

**ಮಾದ್ರಿ** (ನಾ). ಕ್ರೈಸ್ತ ಧಾರ್ಮಿಕ ಸ್ತ್ರೀಸಂಸ್ಥೆಗಳಲ್ಲಿದ್ದುಕೊಂಡು ಸಂನ್ಯಾಸದೀಕ್ಷೆ ಸ್ವೀಕರಿಸಿದವಳು : ಈಗ ಒಂದು ತಿಂಗಳಿನಿಂದ ಹಿಲ್ಡಾ ದಿನಾಲು ನನ್ನ ಹತ್ತಿರ ಬಂದು ತಾನು ಮಾದ್ರಿ (Mother) ಆಗುವ ನಿರ್ಧಾರಕ್ಕೆ ಬಂದಿದ್ದೇನೆ ಎಂದು ಹೇಳುತ್ತಿದ್ದಾಳೆ (ಶೀಮೋತ. ೨೬) ; ಆಕೆ ಕ್ರಿಸ್ತ ಮಾದ್ರಿಯ ಹಾಗೆ ವೇಷ ಧರಿಸಿ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದಳು (ಶಾಮು. ೨೩೮). 'ಪಾದ್ರಿ' ಪರಾ. [← ಇಂ. Mother./ ಸಂ. ಮಾತೃ]

**ಮಾಧವ₁** (ಗು). ೧. ಜೇನಿನಿಂದ ಮಾಡಿದ ; ಸಿಹಿಯಾದ. (ನಾ). ೨. ಹೆಂಡ : ಮದ್ಯ. ೩. ವಸಂತಋತು : ಮನಃಪ್ರಿಯತಮನ ಬರೆದ ಸಾಭಿಜ್ಞಾನಪಟಮನೀವುದುಮಾಕೆಯುಮದಂ ನಿಮಿರ್ಚಿ ನೋಡಿ . . . ಮಾಧವಸಮಯದೊಳಲರ್ದ ಚೂತಲತೆಯನೆ ಪೋಲ್ತಳ್ (ಆದಿಪು. ೪–೨೩). ೪. ವಸಂತಋತುವಿನ ಒಡೆಯ ; ಮಧುಮಾಸದ ರಾಜ ; ವಸಂತರಾಜ : ನೆಗಱ್ದಾ ನೃಪೋತ್ತಮನ ಮಂತ್ರಿಶಿಖಾಮಣಿ ವಂದಿಬೃಂದನಂದನವನಮಾಧವಂ ವಿರಕರಪ್ರತಿಮೋರ್ಜಿತತೇಜಂ ಕುವರ ಲಕ್ಷ್ಮನನಿಂದಿತವೀರವಂಶಜಂ (ಕಾಶಶಾಂ. ೦೨೨೬; ಎಕ. V, ಬೇಲೂರು. ೦೦೨; ಸು. 1220) ; ಮಾಧವನೋಲಗದ ಸಾಲೆಯೆಂಬಂತಿರೆ ಕರಂ ಸಿಂಗರಂಬೆತ್ತ ತೋಂಟದೊತ್ತಿನೊಳ್ . . . ಮದನನ್ನೆಯ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡವಾಗಿ ರಂಜಿಕುಂ (ರಾಜಶೇಕ. ೫೯–೦೨). ೫. ವೈಶಾಖ ಮಾಸ : "ಮಧುಗಳೊಳು ಕೃಷ್ಣನೊಳು ಧರಣಿಪತಿಯೊಳು ಮದ್ಯದೊಳೆ ವಸಂತದೊಳು ವೈಶಾಖದೊಳು ಮಾಧವಾಖ್ಯಂ" (ಮಂಗರಾ. ೦೯೯–೯೫). [ಸಂ.]

**ಮಾಧವ₂** (ನಾ). ೧. ಲಕ್ಷ್ಮಿಯ ಒಡೆಯ ; ವಿಷ್ಣು : ಸಾಧುಗೆ ಸಾಧು ಮಾಧೂ(ಧು)ರ್ಯ್ಯನ್ಗೆ ಮಾಧೂ(ಧು)ರ್ಯ್ಯಂ ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್ ಮಾಧವನೀತನ್ನೆಱೆಪಲ್ಲ (ಇಆ. X, ೬೦–೫ ; ಸು. 700). ೨. ಕೃಷ್ಣ : ವಿವಿಧಬ್ರಹ್ಮಾಂಡಂ ಮಾಧವ ನಿನ್ನವಕಾಶಂ (ಜಗಂ. ೩-೦೦೬) ; ಯಾದವರು ಹಿಂದೆಮ್ಮೊಡನೆ ಹಗೆಯಾದವರು ಬಳಿಕವರೊಳಗೆ ತುಱುಗಾದವನ ಕಱುಗಾದವನ ಮಾಧವನ ಮಾತೇನು (ಕುವ್ಯಾಶ. ೨–೬೬). ೩. ಇಂದ್ರ. ೪. ಕುಬೇರ. ೫. ಪರಶುರಾಮ. ೬. ರಾಜ ; ಅರಸು : "ಮಧುಗಳೊಳು ಕೃಷ್ಣನೊಳು ಧರಣಿಪತಿಯೊಳು ಮದ್ಯದೊಳು ವಸಂತದೊಳು ವೈಶಾಖದೊಳು ಮಾಧವಾಖ್ಯಂ" (ಮಂಗರಾ. ೦೯೯–೯೫). [ ಸಂ. (ಮಾ + ಧವ) ]

**ಮಾಧವಕ** (ನಾ). (ಹಿಪ್ಪೆ ಹೂವಿನ) ಹೆಂಡ : ಮದ್ಯ : "ಮಧು, ಆಸವಃ . . . ಮಾಧವಕಃ, ಹಾಲಾ, ಕಲ್ಯಂ . . . ಮಧು – ಈ ೨೪ ಕಳ್ಳು" (ಹಲಾಯು. ೫೫–೦೬೪) ; ಪರಿದೆನಿಸಿ ಮಾಧವಕ ಮಾಧ್ವೀಪಂ ರಚಿತಮೈರೇಯಮೇಧಕಸುರೆಗಳನು . . . ಬೆರಸಿ ಕುಡಿವುತ ನಗುತ ಕಲೆವುತಲಿರದೆ ಕುಣಿವುತಲಿದ್ದರಂದಾ ಸಕಲ ಯಾದವರು (ತಿಮ್ಮಕುಕೆ. ೦–೪೦). [ಸಂ.]

**ಮಾಧವತ್ತಿ** (ನಾ). ಒಬ್ಬಾತನ ಹೆಸರು : ಮಾಧವತ್ತಿಯರಸರ್ಗ್ಗೆ [ವಿಜ್ಞಾಪನಂಗೆ]ಯ್ದು ದೋಣಗಾವುಂಣ್ಡ ಎಳಗಾವುಂಣ್ಡರುಂ ಮಾಳ್ಪೆಯರುಂ . . . ಎಂಟು ಮತ್ತಲ್ ಗೞ್ದೆ ರಾಜಮಾನಂ ಜಿನೇಂದ್ರ ಭವನಕ್ಕಿತ್ತೂರ್ (೨೮. XI. ೬೦-೦೬ ; 567). ☞ ಇದು 'ಮಾಧವಸತ್ತಿ' ಯೆಂಬುದರ ಅಪಲಿಖಿತವಿರಬಹುದು.

[ ಮಾಧವ$_2$ + < ಸತ್ತಿ$_1$ ]

**ಮಾಧವಮನೋಹರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಮಾಧವಮನೋಹರಿಯು (೧೩) ಸಂಪೂರ್ಣ, ಸ – ಗ್ರಹದಿಂದ ಕೂಡಿದೆ, ಆರೋಹದಲ್ಲಿ ಧ – ವು ವಕ್ರವಾಗಿದೆ, ಅವರೋಹದಲ್ಲಿ ಪ – ಇಲ್ಲ (ತತುಶ್ರ. ೦೩೮). [ಸಂ. ಮಾಧವಮನೋಹರೀ]

**ಮಾಧವಯ್ಯ** (ನಾ). ಒಬ್ಬಾತನ ಹೆಸರು : ಮಾಧವಯ್ಯಂ ಬರೆದಂ ನಾಗಂ ಬೆಸಗೆಯ್ದಂ (ಎಕ. VIII. ಸೊರಬ. ೩೩೦-೦೨; 979).

[ ಮಾಧವ$_2$ + ಅಯ್ಯ$_1$ ]

**ಮಾಧವಿ** (ನಾ). ೧. ಕಲ್ಲುಸಕ್ಕರೆ. ೨. ಜೇನಿನಿಂದ ಮಾಡಿದ ಒಂದು ಬಗೆಯ ಪಾನೀಯ. ೩. ಒಂದು ಬಗೆಯ ಬಳ್ಳಿ ಮತ್ತು ಅದರ ಬಿಳಿಯ ಬಣ್ಣದ, ಸುವಾಸನೆಯಿಂದ ಕೂಡಿದ ಹೂವು : "ಅತಿಮುಕ್ತಕಃ, ವಾಸಂತೀ, ಮಾಧವೀ – ಈ ೩ ಅದಿಮುರ್ತ್ತೆ" (ಹಲಾಯು. ೩೩-೩೩); ಇದಿರೊಳ್ ಸನೆದೋಱೆ ವಸಂತದೂತಿಯೆನೆ ತಾನೆ ನೆಗೞ್ದ ಮಾಧವಿಯೆನೆ ಸಂಪದಿಮುರ್ತ್ತೆಯು ಪೂಗೊಂಚಲ ಪುದುವಿನೊಳೆಱಗಿದ ಮದಾಳಿಗಳ್ ಮೞೆದಪ್ಪುವೇ (ಆದಿಪು. ೦೦-೦೦೮); ಪೞಿಯೆ ಮದಮಂ ಮಾಗಿ ಕೞಿಯೆ ಸೊಗಸಂ ಮಾವು ನೆೞಿಯೆ ಕಳೆ ಪೆರ್ಚೆ ಸಸಿ ಮೆೞಿಯೆ ಮಾಧವಿ ಪೂತು ತೊೞಿಯೆ ಲಜ್ಜೆಯನವನಿ . . . ಕಣ್ದೆಱೆದುದು ವಸಂತಮಾಸಂ (ಶಬ್ದರಾ. ೬-೩): ಅದಿರ್ಗಂತಿಯುಂ ತಾಟಿ ಮಾಲತಿಯುಂ ಮುಟ್ಟಿ ಮಾಧವಿಯುಂ ಕಿಟ್ಟಿ ಬಿಸಗಾಳಿ ತಣ್ಣನೆ ತೀಡುಗುಂ (ರಾಮಾಶ್ವ. ೩೯-೦). ೪. ಭೂಮಿ : "ಭೂಮಿಃ — ಮಾಧವಿ" (ಓಕಧಿ. ೦೦೦). ೫. ತಲೆಹಿಡುಕಿ : ಕುಂಟಣಿ. [ ಸಂ. ಮಾಧವೀ ]

**ಮಾಧುಕರ** (ಗು). ದುಂಬಿಯನ್ನು ಹೋಲುವ : 'ಮಾಧುಕರವೃತ್ತಿ' ಪರಾ. [ಸಂ.]

**ಮಾಧುಕರವೃತ್ತಿ** (ನಾ). ದುಂಬಿಯು ಹೂವಿನಿಂದ ಹೂವಿಗೆ ಅಲೆದಾಡಿ ಮಧುವನ್ನು ಸಂಗ್ರಹಿಸುವಂತೆ, ಮನೆಯಿಂದ ಮನೆಗೆ ಸುತ್ತಾಡಿ ಆಹಾರವನ್ನು ಸಂಗ್ರಹಿಸುವಿಕೆ; ಭಿಕ್ಷಾವೃತ್ತಿ: ಪ್ರಕಟಿತಾತ್ಮಧ್ಯಾನದಲಿ ಮಾಧುಕರವೃತ್ತಿಯಲಿರ್ದು ಕೈವಲ್ಯಕೆ ನಡೆವ ಬಗೆಯುಳ್ಳಡದು ಯತಿಧರ್ಮವಹುದು (ವಿಮ್ಮಣಾ. ೬ ೧೦). [ಸಂ.]

**ಮಾಧುಕರಿ** (ನಾ). ೧. = ಮಾಧುಕರವೃತ್ತಿ. ೨. ಮಾಧುಕರವೃತ್ತಿಯಿಂದ ಪಡೆದ ಆಹಾರ; ಭಿಕ್ಷೆ : ನಾರಾಯಣನು ನೆರೆಹೊರೆಯ ಕೆಲವು ಮನೆಯಿಂದ ಮಾಧುಕರಿಯನ್ನು ತಂದು ಶ್ರೀರಾಮನಿಗೆ ನೈವೇದ್ಯ ಮಾಡಿ ಒಪ್ಪತ್ತು ಊಟ ಮಾಡುತ್ತಿದ್ದನು (ಭಕ್ತೋಡಿ. ೬೦).

[ ಸಂ. ಮಾಧುಕರೀ ]

**ಮಾಧುರ** (ನಾ). ೧. ಸಿಹಿಯಾದುದು ; ಮಧುರವಾಗಿರುವುದು. ೨. ಒಂದು ಬಗೆಯ ಮಾದಕಪಾನೀಯ : ದ್ರಾಕ್ಷಾರಸ : ವರಸುಧಾರೋಗಣೆಗೆ ಮಾಧುರದ [ಪಾಠಾಂ. ಮಧುರದಾ, ಪಾಯಸದ] ಹಂಗೇಕೆ (ಸಿದ್ಧರಾ. ೦-೯); ಪಾವನಜ್ಯೋತಿರ್ಮಯಾಂಗಿಗೆ ದೀವಿಗೆಯ ಹಂಗುಂಟೆ ಪರಶಿವಭಾವನಾಮೃತದನುಭವಿಗೆ ಮಾಧುರದ ಹಂಗುಂಟೆ (ಬಸವು. ೦೦-೦೩). ೩. ಮಲ್ಲಿಗೆಯ ಹೂವು. [ಸಂ.]

**ಮಾಧುರಿ** (ನಾ). ೧. ಸವಿ ; ರುಚಿ : ದರ್ಮರುವೇಂ ಮಕರಂದ ಮಾಧುರಿಯನಱಿದಪ್ಪುದೇ ! (ಶೀತಿವುಂ. ೦-೩೬೬). ೨. ಇಂಪು ; ಹಿತ ; ಆಹ್ಲಾದ : ಎದೆಯ ಮಾಧುರಿಯನರುಹೆಮಗೆ (೧೯೩೦. ೭-೬೯). ೩. ಮಾದಕಪಾನೀಯ; ಮದ್ಯ. [ ಸಂ. ಮಾಧುರೀ ]

**ಮಾಧುರ್ಯ$_1$** (ನಾ). ಯುದ್ಧದಲ್ಲಿ ಮಹಾಪರಾಕ್ರಮಿಯಾದ ವ್ಯಕ್ತಿ : ಸಾಧುಗೆ ಸಾಧು ಮಾಧೂ(ಧು)ರ್ಯ್ಯಂಗೆ ಮಾಧೂ(ಧು)ರ್ಯ್ಯಂ ಬಾಧಿಪ್ಪ ಕಲಿಗೆ ಕಲಿ ಯುಗವಿಪರೀತನ್ ಮಾಧವನೀತನ್ಪೆಱನಲ್ಲ (೩೮. X. ೩೦-೩ ; ಸು. 700). [ < ಸಂ. ಮಹಾಧುರ್ಯ ]

**ಮಾಧುರ್ಯ$_2$** (ನಾ). ೧. ಸಿಹಿ ; ಸವಿ : ನವಯೌವನಮಾದಂತುನ್ನತ ಪಂಚವಿಂಶತಿಪ್ರಾಯಮಾಗಿ. . . ಸವಿಯಲಿರ್ದಮೃತಫಳದಂತೆ ಮಾಧುರ್ಯ ಭರಿತನಾಗಿ (ಕಂಬರ. ೦೦-೭). ೨. ಇಂಪು; ಹಿತ : ಭುವನಸ್ವರ ಮೇಲನದಿ ನಿಯಮಸಂಯಮಪೂರ್ಣಮಾಧುರ್ಯವುಕ್ಕುತಿದೆ (ಶಿಶ್ರಾಂಗ. ೦-೦೩) ; ಅಶ್ವವಿದ್ಯೆಯೇ ಈಗ ಅವನ ಮನಸ್ಸನ್ನು ಹಿಡಿದಿತ್ತು, ಸಹವಾಸಮಾಧುರ್ಯದ ಮೂಲಕ (ಸಮಶೀ. ೯೨೦). ೩. ಕೋಮಲತೆ ; ಮೃದುತ್ವ : ಮಾತಿನಲ್ಲಿ ಮಾಧುರ್ಯವಿತ್ತು. ತೀವ್ರತೆಯಿರಲಿಲ್ಲ (ಮಹಾಂ. ೦೩೨). ೪. ಅಂತಃಕರಣ; ಅನುಕಂಪ. ೫. [ಕಾವ್ಯಮೀ] ಕಾವ್ಯದ ಹತ್ತುಗುಣಗಳಲ್ಲಿ ಒಂದು; ಕೇಳಿದ ಕೂಡಲೆ ಮನಸ್ಸನ್ನು ಆಹ್ಲಾದಗೊಳಿಸುವ ಶಬ್ದದ ಒಂದು ಗುಣ; ದೀರ್ಘ ಸಮಾಸಗಳಿಲ್ಲದೆ ಪ್ರತ್ಯೇಕಪದಗಳಿಂದ ಕೂಡಿರುವುದು : ಅಸಮಸ್ತ ಪದನ್ಯಾಸಂ ಪ್ರಸಾದಮಾಧುರ್ಯಗುಣಸಮಗ್ರಮುದಾರಂ ರಸಭಾವ ಭಾವಿತೋಕ್ತಿಪ್ರಸರಂ ವೈದರ್ಭರೀತಿಯೆನೆ ಪೆಸರ್ವಡೆಗುಂ (ಕಾವ್ಯಾ.ಸ. ೭೬೨) ; ಸಮಾಸ ವ್ಯಾಸದೇಶೀಸರಣಿಶಬ್ದಾರ್ಥೋಪಮಾಚಾತುರ್ಯಮಾಧುರ್ಯ. . . ನಿಯಮಾಕ್ಷರಸಲಕ್ಷಣಭಾವಮಾಗಿರೆ ರಚಿಸುವೆಂ ಕೃತಿಯ (ಬಸವ. ೦-೦೯) ; ಶ್ಲೇಷ. ಪ್ರಸಾದ. ಸಮತೆ. ಮಾಧುರ್ಯ. . . ಸಮಾಧಿ ಈ ಹತ್ತು ಗುಣಗಳೇ ವೈದರ್ಭಕಾವ್ಯದ ಪ್ರಾಣ (ಶಾರದಾ. ೨೯). [ಸಂ.]

**ಮಾಧ್ವುರ್ಯೆ** (ನಾ). ೧. ಸಿಹಿಯಾದುದು : ಮಧುರವಾದುದು. ೨. ಒಂದು ಬಗೆಯ ಮರ ; ಸಿಹಿಹಾಲೆ ; ಜೇವಣಿಗೆ : "ಜೀವಣಿಕೆ(ಗೆ) ಮಾಧುರ್ಯೆಯಕ್ಕು" (ಮಂಗರಾ. ೯೨-೩೬). [ ಸಂ. ಮಾಧುರ್ಯ ]

**ಮಾಧೂಕರ** (ನಾ). = ಮಾಧುಕರಿ ೨ : ಮಾಧೂಕರ ಅಸಂಕ್ಲಪ್ತ ಪ್ರಾಕ್ಪ್ರಣೀತ ಅಯಾಚಿತ ತಾತ್ಕಾಲಿಕಮೆಂಬ ಪಂಚವಿಧಭಿಕ್ಷಂಗಳನಾದೊಡಂ . . . ಭೋಜನಂಗೈದು (ಶಿವೇಕ. ೦೨೮). [ < ಸಂ. ಮಾಧುಕರ]

**ಮಾಧೂಕರವೃತ್ತಿ** (ನಾ). = ಮಾಧುಕರವೃತ್ತಿ : ಒರ್ವಳೆ ಮಾಧೂಕರ ವೃತ್ತಿಯಿಂದೆ ಪೊರೆವುತ್ತಾ ದೇಹಮಂ ಸಂತತಂ (ದಿವ್ಯಸ. ೭-೩೨).

[ < ಸಂ. ಮಾಧುಕರವೃತ್ತಿ ]

**ಮಾಧೂಕರಿ** (ನಾ). = ಮಾಧುಕರಿ ೨ : ತುಂಬಿ ಪುಷ್ಪರಸವನ್ನು ತೆಗೆದುಕೊಳ್ಳುತ್ತಿರ್ದು ಹೆಂಗೆ ಹೂವನ್ನು ಬಾಧಿಸದಿಹುದು ಹಾಂಗೆ ಮನೆಯೊಡೆಯನ ದೆಸೆಯಿಂದಮಾಧುಕರವೃತ್ತಿಯಿಂದ ಸಿದ್ಧಿಸಿದುದಾದ ಮಾಧೂಕರಿಯೆಂಬ ಭಿಕ್ಷೆಯನ್ನು ತೆಗೆದುಕೊಂಬುದು (ಕೃಪಾಟೀ. ೩೭). [ < ಸಂ. ಮಾಧುಕರೀ ]

**ಮಾಧ್ಯಂದಿನ** (ನಾ). ೧. ದಿನದ ಮಧ್ಯದ ಸಮಯ ; ಮಧ್ಯಾಹ್ನ; ನಡುಹಗಲು. ೨. ನಡುಭಾಗ ; ಮಧ್ಯದ ಭಾಗ. ೩. ಶುಕ್ಲ ಯಜುರ್ವೇದದ ಒಂದು ಶಾಖೆ . [ಸಂ.]

**ಮಾಧ್ಯಮ** (ಗು). ೧. ಮಧ್ಯಭಾಗಕ್ಕೆ ಸಂಬಂಧಿಸಿದ; ನಡುಭಾಗದ. (ನಾ). ೨. ಮತ್ತೊಬ್ಬರಿಗೆ ತಿಳಿಸಲು ಮಧ್ಯವರ್ತಿಯಾಗಿ ಬಳಕೆಯಾಗುವ ಭಾಷೆ ಮೊದಲಾದ ಸಾಧನ : ಅವರಿಗೆ ಕನ್ನಡಭಾಷೆಯೊಂದೇ ಏಕೈಕ ಮಾಧ್ಯಮ (ಕೂಸ್ಸಕು. ೦೩೬); ಮಾಧ್ಯಮ ಏನಿದ್ದರೂ ಭಾವಪ್ರವಹಣಕ್ಕಾಗಿ ಹೊರಗಿನಿಂದ ತಂದು ಜೋಡಿಸಿಕೊಂಡ ಒಂದು ಉಪಕರಣ ಎಂದು ಅರ್ಥ ಮಾಡುವುದುಂಟು (ಸೌಂದ್ಯಸ. ೭೨). ☞ ಇಲ್ಲಿ ಕೊಟ್ಟಿರುವ ಎರಡನೆಯ ಅರ್ಥ ಮತ್ತು ಪ್ರಯೋಗಗಳು

ಇಂಗ್ಲಿಷಿನ 'Medium' ಎಂಬ ಪದಕ್ಕೆ ಸಂಬಂಧಿಸಿದವುಗಳು. ಈ ಅರ್ಥ ಸಂಸ್ಕೃತದಲ್ಲಿ ಇಲ್ಲವಾದರೂ, ಸಂಸ್ಕೃತದ 'ಮಾಧ್ಯಮ' ಎಂಬುದರ ಮೂಲಾರ್ಥದಿಂದಲೇ ಅರ್ಥವಿಸ್ತಾರವನ್ನು ಹೇಳುವ ಸಾಧ್ಯತೆಯಿದ್ದು, ಇಂಗ್ಲಿಷಿನ 'Medium' ಎಂಬುದರ ಸಂವಾದಿಯಾಗಿ, ಸಂಸ್ಕೃತದ 'ಮಾಧ್ಯಮ' ಎಂಬ ಶಬ್ದವೇ ಬಳಕೆಯಾಗಿದೆ. [ಸಂ.]

**ಮಾಧ್ಯಮಿಕ** (ಗು). ೧. ಮಧ್ಯದಲ್ಲಿರುವ ; ಮಧ್ಯಭಾಗದ. (ನಾ). ೨. [ಬೌದ್ಧ] ಬೌದ್ಧಮತದ ಒಂದು ಶಾಖೆ ; ಗೋಚರಿಸುವ ವಸ್ತುಗಳೆಲ್ಲ ಸತ್ಯಾವಭಾಸಿಗಳು ಎಂದು ಪ್ರತಿಪಾದಿಸುವ ವಾದ; ಶೂನ್ಯವಾದ : ಧರ್ಮಪ್ರಭಾವಮುಮಂ ತತ್ಫಲಸ್ವಭಾವಮುಮಂ ತಿಳುಪುವವಸರದೊಳುಟಿಃದ ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕಮತವಿತಥಾಭಿಧಾಯಿಗಳ್ ಜೀವಾಭಾವಮನೆ ಪಿಡಿಯುಚ್ಚುವಿಡಿದು (ಆದಿಪು. ೨-೬ ವ); ಈ ಮೂಲತತ್ತ್ವಾನ್ವೇಷಣರೂಪದಲ್ಲಿ ಚಾರ್ವಾಕ .... ಯೋಗಾಚಾರ, ಮಾಧ್ಯಮಿಕ. ಜೈನದರ್ಶನಗಳೆಂಬ ಆರು ನಾಸ್ತಿಕದರ್ಶನಗಳೂ . . . ಆವಿರ್ಭವಿಸಿರುತ್ತವೆ (ಶಾರದ. ೨೨೯); ಲೋಕಾಯತಿಕ (ನಾಸ್ತಿಕ) ಯೋಗಾಚಾರ (ವಿಜ್ಞಾನವಾದ) ಮಾಧ್ಯಮಿಕ ( ಶೂನ್ಯವಾದ )ಗಳೆಂಬ ಮತಗಳನ್ನು ಬೋಧಿಸುವ ಮಹಾಮತಿ – ಸಂಭಿನ್ನಮತಿ–ಶತಮತಿಗಳೆಂಬ ಮಂತ್ರಿಗಳು ಸ್ವಯಂಬುದ್ಧನ ಹೇಳಿಕೆಗಳನ್ನೆಲ್ಲ ಖಂಡಿಸಲು ಸೊಂಟಗಟ್ಟಿದರು (ಪಾರ್ಶ್ವ. ೩೬೦). ೩. ಮಾಧ್ಯಮಿಕಮತವನ್ನವಲಂಬಿಸಿದವನು ; ಶೂನ್ಯವಾದಿ : 'ಅಭಿಧರ್ಮವಿಭಾಷಾ' ಸಂಪ್ರದಾಯಕ್ಕೆ ಸೇರಿದವರು. ಯೋಗಾಚಾರರೂ ಮಾಧ್ಯಮಿಕರೂ ಆಗಿರುವರು (ಹಿಂದಶಾ. ೨೪): ಸ್ವಚ್ಛವಾದ ಸಂವಿತ್ತೆಂಬ ಜ್ಞಾನವೇ ಮಾಧ್ಯಮಿಕರಿಗೆ ಸಮ್ಮತ (ಶಾರದ. ೨೦೪). [ಸಂ.]

**ಮಾಧ್ಯಮಿಕಶಾಲೆ** (ನಾ). ಪ್ರಾಥಮಿಕ ವಿದ್ಯಾಭ್ಯಾಸ ಮತ್ತು ಪ್ರೌಢ ವಿದ್ಯಾಭ್ಯಾಸಗಳ ನಡುವಿನ, ವಿದ್ಯಾಭ್ಯಾಸವನ್ನು ಮಾಡುವ ಪಾಠಶಾಲೆ : ಉಪನಯನವಾದ ಐದು ವರ್ಷಗಳಲ್ಲಿ ಚೀನಿ ಮಾಧ್ಯಮಿಕ ಶಾಲೆಯನ್ನು ಪೂರೈಸಿದ್ದ (ವಂಶವೃ. ೩೦೨). P ಇದು ಇಂಗ್ಲಿಷಿನ 'Middle School' ಎಂಬುದರ ಅನುವಾದ.

ಸಂ. ಮಾಧ್ಯಮಿಕಶಾಲಾ]

**ಮಾಧ್ಯಸ್ಥ** (ಗು). ೧. ಮಧ್ಯೆ ಇರುವ ; ನಡುವೆ ಇರುವ. ೨. ಯಾವ ಪಕ್ಷಕ್ಕೂ ಸೇರದ. [ಸಂ.]

**ಮಾಧ್ಯಸ್ಥವೃತ್ತಿ** (ನಾ). [ಜೈನ] ವಿನಯರಹಿತರೂ ತಮ್ಮ ಧರ್ಮದಿಂದ ವಿಮುಖರೂ ಹಟಮಾರಿಗಳೂ ಆದ ಜನರ ಬಗ್ಗೆ ವ್ರತಸ್ಥರಾದಂಥವರು ಇರಿಸಿಕೊಳ್ಳುವ ರಾಗದ್ವೇಷರಹಿತವಾದ ಭಾವನೆ : ಸತ್ವಗುಣಾಧಿಕಕ್ಲಿಶ್ಯಮಾನಾವಿನಯರೊಳ್ ಮೈತ್ರೀಪ್ರಮೋದ ಕಾರುಣ್ಯಮಾಧ್ಯಸ್ಥವೃತ್ತಿಯುಮಂ ಭಾವಿಸುತ್ತುಂ (ಸುಕುಮಾ. ೪-೨೨ ವ). [ಸಂ.]

**ಮಾಧ್ಯಸ್ಥಿಕೆ** (ನಾ). ಎರಡು ಪಕ್ಷಗಳ ಅಥವಾ ವ್ಯಕ್ತಿಗಳ ನಡುವೆ ಸಂಧಾನ ನಡೆಸುವುದು ; ಮಧ್ಯಸ್ಥಿಕೆ : ಇಂಥ ಸಂದರ್ಭಗಳಲ್ಲಿ ಹುಡುಗಿಯರಿಗೂ ಉಪಾಧ್ಯಾಯ–ಗಂಡಸರಿಗೂ ಮಾಧ್ಯಸ್ಥಿಕೆಗೆ (Liaison) ಯಾರಾದರೂ ಇದ್ದರೆ ಅನುಕೂಲವಾಗುತ್ತದೆ (ಹಸುಹೊ. ೩೨೬).

[ಮಾಧ್ಯಸ್ಥ + — ಇಕೆ]

**ಮಾಧ್ಯಾಹ್ನಿಕ** (ಗು). ೧. ಮಧ್ಯಾಹ್ನ ಕಾಲದಲ್ಲಿ ಆಚರಿಸಬೇಕಾದ : ಸ್ನಾನ ಮಾಧ್ಯಾಹ್ನಿಕಜಪ ವೈಶ್ವದೇವ ದೇವತಾರ್ಚನೆ ಭೋಜನಾದಿಗಳಾದ ಮೇಲೆ (ಶಕಶಾ. ೪). (ನಾ). ೨. ಮಧ್ಯಾಹ್ನದಲ್ಲಿ ಮಾಡುವ ಸಂಧ್ಯಾವಂದನೆಯೇ ಮುಂತಾದ ನಿತ್ಯಕರ್ಮ : ಈ ನದಿಯೊಳಗೆ ಮಾಧ್ಯಾಹ್ನಿಕವನಾಚರಿಸಿ ಬಂದಪೆನು (ಶಿಭಾಗ. ೧೧-೩೫-೪): ಮಾಧ್ಯಾಹ್ನಿಕಾದಿ ನಿತ್ಯಸಂಧ್ಯಾಕರ್ಮಂಗಳನ್ನು . . . ಮಾಡಿದವನಾಗಿ . . . ಭೋಜನ ಮಾಡಬೇಕೆಂದು ಬಲ್ಲವರ ಮತವು (ಶಕಶ್ವ. ೯೯). [ಸಂ.]

**ಮಾಧ್ವ** (ಗು). ೧. ಮಧ್ವಮತಕ್ಕೆ ಸೇರಿದ : ಈ ಪ್ರಾಂತದ ಮಾಧ್ವ ಬ್ರಾಹ್ಮಣರು ಫೊಳ್ಳೇ ವರ್ಚಸ್ಸುಳ್ಳವರಾಗಿದ್ದಾರೆ (ಕಶಾಗ. ೬೩); ಮಾಧ್ವಯತಿಗಳು ಸ್ಮಾರ್ತಪಂಡಿತನಾದ ತನ್ನನ್ನು ಸನ್ಮಾನಿಸುವರೇ ಎಂಬ ಸಂಶಯವಿವನಿಗಿದ್ದಂತೆ ತೋರುತ್ತದೆ (ಕಛು. ೪೩). (ನಾ). ೨. ಮಧ್ವಾಚಾರ್ಯರ ಮತದ ಅನುಯಾಯಿ ; ವೈಷ್ಣವಸಂಪ್ರದಾಯದವನು: ಮಾಧ್ವರು ಚೆಲುವರೂ, ಕಸುವುಳ್ಳವರೂ, ಫೊಳ್ಳೇ ಮೈಕಟ್ಟುಳ್ಳವರೂ ಇರುತ್ತಾರೆ (ಕಶಾಗ. ೬೩). ೩. ಮಧ್ವಾಚಾರ್ಯರ ತತ್ತ್ವ,–ಸಿದ್ಧಾಂತ. [ಸಂ.]

**ಮಾಧ್ವಮತ** (ನಾ). ಮಧ್ವಾಚಾರ್ಯರು ಸ್ಥಾಪಿಸಿದ ಮತ ; ದ್ವೈತಮತ : ಈ ಮತಕ್ಕೆ ಮಾಧ್ವಮತ, ದ್ವೈತಮತ, ವೈಷ್ಣವಮತ ಎಂದೂ ಹೆಸರು . . . ಮಧ್ವಾಚಾರ್ಯರು ಅಥವಾ ಆನಂದತೀರ್ಥರು ತಮ್ಮ ವಿಶಿಷ್ಟಶಕ್ತಿಯಿಂದ ಮಾಧ್ವಮತವನ್ನು ಬಳಕೆಗೆ ತಂದುದಲ್ಲದೆ ದೇಶ ಸಂಚಾರ ಮಾಡಿ ಅದನ್ನು ನಾನಾ ಕಡೆಗೆ ಹರಡಿದರು (ಶಾರದ. ೨೬೬). [ಸಂ.]

**ಮಾಧ್ವಿ** (ನಾ). ೧. ಅಮಲು ಬರಿಸುವ ಪಾನೀಯ ; ಮದ್ಯ. ೨. = ಮಾಧವಿ ೩. [ಸಂ. ಮಾಧ್ವೀ]

**ಮಾಧ್ವೀಕ** (ಗು). ೧. ಅಮಲು ಉಂಟಾಗುವ ; ಮತ್ತುಬರುವ : ಮುಗ್ಧನಾಗದೆ ಭುಜಿಸು ಭುಜಿಸಲಿಹುದನು ಜಗದಿ ಮಾಧ್ವೀಕ ಭಯವಿರದು ಜಾಗರೂಕನಿಗೆ (ಮಂಕುತಿ. ೬೩೯). (ನಾ). ೨. ಹಿಪ್ಪೆಹೂವುಗಳನ್ನು ಭಟ್ಟಿಯಿಳಿಸಿ ತಯಾರಿಸುವ ಒಂದು ಬಗೆಯ ಮಾದಕಪಾನೀಯ. ೩. ದ್ರಾಕ್ಷಹಣ್ಣು. ೪. ದ್ರಾಕ್ಷಾರಸ : ''ಮಾಧ್ವೀಕಂ — ದ್ರಾಕ್ಷೇಹಣ್ಣಿನ ಹೆಂಡದ ಹೆಸರು'' (ಸಿದ್ಧಾಂತಿ. ೩೦೮). [ಸಂ.]

**ಮಾನ** (ನಾ). ೧. ಮರ್ಯಾದೆ : ಗೌರವ : ಮಾನಿಸರೊಳ್ಪಂ ಬಾಟುಮದೇನೊಪ್ಪಮದೇನಸಾರವಿಸ್ತಾರಮದೇಂ ಮಾನಮದೇಂ ವಿಪುಳಮದೇಂ ದೀನಮದೇಂ ಸ್ತೋಕಸುಖಮದೇನಧ್ರುವಮೋ (ಶಾಂತಿಪು. ೯-೧೧೨) ; ಮಾನಂ ಸದ್ಧೈರ್ಯ ದೀಕ್ಷಾಗುರು ಸುರಗಿರಿಗಂ ಕಲ್ಪವೃಕ್ಷಕ್ಕೆ ಹಸ್ತಂ ದಾನೋಪಾಧ್ಯಾಯಂ . . . ಎಂಬನ್ನಮಾದಂ ಜಗಮನೆಜಗಿಸಲ್ ಸುಪ್ರತಿಷ್ಠಂ ಗರಿಷ್ಠಂ (ಅರ್ಜುನ. ೪-೩೫). ೨. ಆತ್ಮಗೌರವ ; ಅಭಿಮಾನ : ಪರಿಭವಕೆ ಗುರಿಯಾಯ್ತು ನಿನ್ನ ಮಾನಂ ? (ಶ್ರೀರಾಮಾ. ೬೮-೩೮೪). ೩. ಜಂಭ ; ಗರ್ವ ; ಅಹಂಕಾರ : "ದರ್ಪಃ, ಮದಃ, ಅವಲೇಪಃ, ಮಾನಃ, ಗರ್ವಃ, ಅಹಂಕಾರಃ—ಈ ೬ ಗರ್ವಂ'' (ಹಲಾಯು. ೧೧೯-೩೬); ಮಾನಮನೆಂತುಂ ಮಿಥ್ಯಾಜ್ಞಾನಿಗಳೆರ್ದೆಯೊಳಗೆ ನೆಲಸಲೀಯದೆ ನಾಲ್ಕುಂ ಮಾನಸ್ತಂಭಂಗಳ್ ರತ್ನಾನದ್ಧಂಗಳ್ ನಿರಂತರಂ ಸೊಗಯಿಸುಗುಂ (ಆದಿಪು. ೧೧-೨೪); ಸರ್ವಥಾ ಮಾನ ಮತ್ಸರ ಕೇಡು ಮರ್ತ್ಯಂಗೆ (ಅಪ್ಪಯ್ಯ. ೨-೩೮). ೪. ಅಭಿಪ್ರಾಯ; ತಿಳಿವಳಿಕೆ; ಭಾವನೆ. ೫. ಅಳೆಯುವುದು: ಅಳೆಯುವಿಕೆ. ೬. ಒಂದು ಅಳತೆಯ ಪ್ರಮಾಣ; ನಾಲ್ಕು ಸೊಲಿಗೆ; ಅರ್ಧಸೇರು : "ನಾಲ್ಕು ಸೊಲ್ಲಗೆಗೆ ಮಾನಂ'' (ಮಂಗರಾ. ೧೧೪-೧೧); ×× ತುಪ್ಪ ಮಾನವೊನ್ದು (ಶಾಶ. XI-i, ೪೦-೦೪; 965); ಐದು ಮಾನವ ಕುಟ್ಟಿ ಒಂದು ಮಾನವ ಮಾಡು ಕಂಡಾ ಮದವಳಿಗೆ (ಬಸವ. ೯೬೬); ಉಪ್ಪು ಹೇಱಂಗೆ ಮಾನ ೨ ಅಕ್ಕಿ ಎತ್ತ ಹೇಱಂಗೆ ಮಾನ ೨ (ಎಕ. VII, ಶಿಮೊ. ೯೯-೫೦; 1203). ೭. ಜಮೀನಿನ ಒಂದು ಅಳತೆ; ಕ್ಷೇತ್ರವಿಸ್ತೀರ್ಣ; ಕ್ಷೇತ್ರವಿಸ್ತಾರ : ಬಡಗಣ ತೋಂಟದ ಕಮ್ಮಂ ಕಡೆಯೊಳು ಮೂವತ್ತುವೆರಸಿದಬಸೂಜಿಲ್ಲಿಂ ಪಡುವಣ ಬಡಗಣ ಕೋಣೊಳ್ಗಡಿಂಬದಿರ್ಮತ್ತರಿಬ್ಬ ಗಟ್ಟಿದಿಯ ಮಾನಂ (ಶಾಶ. IX-ii, ೧೩೯-೫೦; 1090). ೮. ಕಾಲದ ಒಂದು ಅಳತೆ,—ಪರಿಮಿತಿ : ನೀವಿವನಹವ ಮುರಿಯಲು ನಿಮ್ಮ

ಮಾನಕೆ ನಿಮಿಷ ತಾನಿಲ್ಲ (ಕೋಣಗು. ೯-೬೭) ; ವರುಷ ಗಿನ್ನು ದಿನ ಓನ್ನು ದಿನವ ಮಾಡಲು . . . ಮಾನವ ಮಾಡಲು ೪೨೭೦ರಿಂದ ಗುಣಿಸಲು (ಶಾಸ್ತ್ರ. ೨೭-೨). ೯. ಅಳತೆ ಮಾಡಲು ಉಪಯೋಗಿಸುವ ಒಂದು ಸಾಧನ; ಅಳೆಯಲು ಬಳಸುವ ಪಾತ್ರೆ : ಮಾನದ ತೋರಿಹ ಅವಿಂಗೆ ಕೊಳಗದ ತೋರಿಹ ಕೆಚ್ಚಲು (ಅಜಿಂ. ೦೨-೯೬); ಆನೆಯ ಮಾನದೊಳಿಕ್ಕಿದ ಡಡಗುವುದೆ ದರ್ಪಣದೊಳಡಗುವುದಲ್ಲದೆ (ಕನ್ನಡ. ೯. ೩೯೬-೯೯೦); ಮಾನದಲ್ಲಿ ಆನೆ ಹಿಡಿದೀತೇ ? (ಗಾದೆ). ೧೦. ಗಣನೆ ; ಎಣಿಕೆ : ಈ ಮಾನದಿಂದ ಅವನಿಗಿರುವಂಥ ಶಿಳಿವು, ಚುರುಕು . . . ಅಜನ್ಮಸಿದ್ಧವಾದ ಹಕ್ಕನ್ನು ಕೊಟ್ಟಂತಿದೆ (೨೦೪೮. ೨೭). ೧೧. ಸತ್ಕಾರ; ಆದರ : (೪). ೧೨. ಜನನೇಂದ್ರಿಯ; ಗುಹ್ಯ : ಹಸಿವನ್ನು ಹೋಗಲಾಡಿಸುವುದಕ್ಕೆ ಸ್ವಲ್ಪ ಅನ್ನ, ಮಾನವನ್ನು ಮುಚ್ಚಿಕೊಳ್ಳುವುದಕ್ಕೆ ಸ್ವಲ್ಪ ಬಟ್ಟೆ ಏನಾ ಮತ್ತೇನು ಬೇಕಾಗಿದೆ ? (ಶೀಶಿಶಂ. XII. ೨೦). ೧೩. ಶೀಲ ; ಚಾರಿತ್ರ್ಯ : ನಿನ್ನ ಮಾನವ ಕೊಂಬ ದಕ್ಕಡಿಗರಾರು ನೀ ನರಳಲ್ಲ ಮೂಲೋಕದಾದಿಶಕ್ತಿ ಸ್ವರೂಪಿ (ಶಶಶೋ. ೯-೩೬). 'ಮಾನಂಗಳೆ' ಪರಾ. ೧೪. ಮನೆ; ಕಟ್ಟಡ. ೧೫. [ಕಾವ್ಯಮೀ] ವಿಪ್ರಲಂಭಶೃಂಗಾರದಲ್ಲಿ ಒಂದು ಬಗೆ; ಸ್ತ್ರೀಯ ಪ್ರಣಯಕೋಪ : ಅಱಿಯದೆ ಗೆಯ್ದೆನಬ್ಬ ಮುಖ ಘೀನಿದನೋರ್ವಗೆ ಸೈರಿಸೆಂದು ಕಾಲ್ಗೆಱಗಿರೆಯುಂ ಪ್ರಿಯಂ ಸುಡು ಸುಡೇಂ ಗಡ ಸೈರಿಪುದೆಂದು ಕೋಪದಿಂ ಪೞಿಪಡೆ ಪೋಗೆ ನೂಂಕಿ ಕಳೆದಂದಿನ ದುಷ್ಕೃತವೆನ್ನನಾವಗಂ ಮಱುಗಿಸಿ ಮುಚ್ಚಿ ಸುಟ್ಟಪುವು ನೋಡಿರೆ ಶೀತ ಮರೀಚಿಮಾಲೆಗಳ್ (ಇದು ಮಾನಾಖ್ಯಂ) (ಕಾವ್ಯಾ.ಶ. ೬೦೬); ಲತೆಯಾದಳ್ ವಿದ್ದೆಯಿಂದಾ ಖಚರ ಭರಣವೊಳ್ ಬಿರ್ಪ ಚಿತ್ರೈಸುಗಂ ವಾಕ್ಷಿತರಂ ಬಂದೆನ್ನನೆಂದುಂ ಬಿರಯುಸಲಣಮಿನ್ನಾಱೆನಾನೆಂದುಮುಶ್ವಾಡುತು ಮಿರ್ಕುಂ ಮಾನಮಿಾ ಚೇತನೆ ತನುವಿನೊಳಿರ್ಪನ್ನಮೆಂದುಂ ಸ್ವರಾಮರ್ಷಿತೆ ಯಿಂದಾ ಮುಗ್ಧೆಯಿಂದೇನವಧರಿಪವರ್ಗಂ ಕೋಪಮಾಪತ್ತನೀಗುಂ (೬ಆಶಾಶ. ೦೯-೯೬). ೧೬. = ಮಾನಕಷಾಯ : ಅಪ್ರಮತ್ತಗುಣಸ್ಥಾನಂಗಳೊಳಧಃಪ್ರವೃತ್ತ ಪೂರ್ವಾನಿವೃತ್ತಿಕರಣಪರಿಣಾಮಂಗಳಿಂದಮನಂತಾನುಬಂಧಿ ಕ್ರೋಧಮಾನಮಾಯಾಲೋಭಂಗಳಂ ವಿಸಂಯೋಜಿಸಿ (ಅರ್ಧ. ೦೦-೦೯ ಪ). ೧೭. = ಮಾನಸಂಜ್ವಲನ : ಕಿಱಿಕಿಱಿದು ಬೇಗದಿಂ ಕ್ರಮಕ್ರಮದಿಂದಂ ಕ್ರೋಧಮಾನಮಾಯಾಲೋಭಸಂಜ್ವಲನಂಗಳಂ ಮೂಱುತೆಱದ ಕೃಷ್ಟಿಗಳಂ ಬೇಱೆ ಬೇಱೆ ಕಿಡಿಸಿ (ಅರ್ಧ. ೦೦-೦೬ಪ). ೧೮. [ಶಿಲ್ಪಶಾ] ದೇವತಾವಿಗ್ರಹಗಳನ್ನು ಕಡೆಯಲು ಉಪಯೋಗಿಸುವ ಒಂದು ಅಳತೆ: ಪ್ರತಿಮೆಯ ದೈರ್ಘ್ಯದ ಅಳತೆಗೆ " ಮಾನ " ವೆಂದೂ . . . ಗಾಂಭೀರ್ಯದ ಅಳತೆಗೆ " ಲಂಬಮಾನ " ವೆಂದೂ ವ್ಯವಹಾರ (ಶಾಶಿಪ. ೩೦೬). ' ಮಾನಕ್ರಿಯೆ ', ' ಮಾನಾಂಗುಲ ' ಪರಾ.

**ಮಾನ ಉಳಿಸು** = ಮರ್ಯಾದೆಯನ್ನು ಉಳಿಸು ; ಅವಮಾನವನ್ನು ತಪ್ಪಿಸು : ಇದೊಂದು ಸಾರಿ ಹ್ಯಾಗಾದರೂ ಮಾಡಿ ನನ್ನ ಮಾನ ಉಳಿಸು (ಮುಂಜಾಉ. ೯-೯೩); ನಾನೇ ಪಂಚಾಯ್ತಿ ಮಾಡಿ ಅವನ ಮಾನ ಉಳಿಸಿದೆ ಹೋಡಿ (ದೀಪಶಂ. ೭೩). **ಮಾನಕಾಯು** = ಮಾನ ಉಳಿಸು : ಎಂಥೆಂಥಹ ಸಮಾಜಗಳಲ್ಲಿ ಅವರು ಇತರರ ಮಾನ ಕಾದಿದ್ದಾರೆ ಗೊತ್ತೇ ? (ಕೊಂ). **ಮಾನ ಕೊಡು** = ಗೌರವಿಸು ; ಮರ್ಯಾದೆ ಮಾಡು : ಅಧಿಕಾರಿಗಳು ಆತನಿಗೆ ಮಾನ ಕೊಡುತ್ತಿದ್ದರು (ಶಿಖಾಕ್ಯಾ. ೦೬). **ಮಾನ ತೆಗೆ** = ಗೌರವವನ್ನು ಕಳೆ ; ಅವಮಾನಗೊಳಿಸು : ಮನೆತನದ ಮಾನ ತೆಗೆಯಬೇಡ (ಶಿಟ್ಟಿಹೊ. ೩೨). **ಮಾನ ಮರ್ಯಾದೆ** = ಗೌರವಪೂರ್ವಕವಾದ ಸತ್ಕಾರ : ತಮ್ಮ ಪಂಚಯದ ಗೃಹಸ್ಥರು ಯಾರಾದರೂ ಮನೆಗೆ ಬಂದರೆ ಅವರ ಯೋಗ್ಯತಾನುಸಾರವಾಗಿ ಮಾನಮರ್ಯಾದೆ ಮಾಡಿ . . . ಕ್ಷೇಮಸಮಾಚಾರ ಕೇಳಿ ಬಳಿಕ ಬಂದ ಕೆಲಸದ ಪ್ರಸಕ್ತಿ ತೆಗೆಯಬೇಕು (ಮುಂಜಾಉ. ೯-೩೪); ಇಷ್ಟು ಕಷ್ಟಬಟ್ಟು ಅವರನ್ನು ಬೆಳೆಸಿದ ಅತ್ತೆ ಈಗ ಅವರ ಮಾನ ಮರ್ಯಾದೆಗೆ ಕುಂದಾಗುವಂತೆ ಏಕೆ ನಡೆಯುತ್ತಾಳೆ (ಗಂಡಾಉ. ೨೫೨). **ಮಾನಾಪಮಾನ** = ಗೌರವ ಮತ್ತು ಅವಮಾನ : ಮಾನಾಪಮಾನವನು ಜ್ಞಾನ ತನಗಾದುದನು ಮಾನಿನಿಯು ಒಲಿದ ರತಿಸುಖದ ಪರುಲ್ಲಿ ಮಾನಿಸುವ ನೆಗ್ಗ (ಸರ್ವಜ್ಞ. ೦೫೯೬). **ಮಾನಾಪಹಾನಿ** = ಗೌರವಕ್ಕೆ ಉಂಟಾದ ಹಾನಿ ; ಅಪಮಾನ : ಅವಮರ್ಯಾದೆ : ಭೀಮ ಬಲವದರಾತಿಕೇಸರಿಭೀಮ ಕುರುಕುಲಕುಸುಮಮಾರ್ಗಣಭೀಮ ಮಱಿದೈ ಮಾನಿನಿಯ ಮಾನಾಪಹಾನಿಗಳ (ಕುಮ್ಯಾಶಾ.೬-೨೩). [ಸಂ.]

**ಮಾನಂಗಳೆ**, ಮಾನಕಳೆ (ಕ್ರಿ). ೧. (ಸ್ತ್ರೀಯ) ಶೀಲಗೆಡಿಸು : ಶೀಲಗುಂದುವಂತೆ ಮಾಡು : ಕಡೆಗೆ ಯಾ ರಕ್ಕಸನ ಕೈಗೆ ವಶಮಾಡಿ ಮಾನಂಗಳೆವ ಯತ್ನಗೈದ (ಶಶಶೋ. ೯-೩೭). **ಮಾನಕಳೆ** : ೨. ಅಗೌರವದಿಂದ ಕಾಣು; ಅವಮಾನ ಮಾಡು ; ಅವಮಾನಿಸು : ಯಾವುದನ್ನೂ ಸರಿಯಾಗಿ ವಿಚಾರಿಸದೆ ಗ್ರಾಮದವರ ಎದುರಿಗೆ ಹೀಗೆ ಮಾನ ಕಳೆಯುವುದಾದರೆ ಸಂತೋಷ (ಕೆಳಮು. ೯೬). ೩. ಅವಮಾನವಾಗು; ಅಗೌರವವುಂಟಾಗು; ಒಬ್ಬರಿಂದ ಇಡೀ ಗುಂಪಿಗೆ ಮಾನಕಳೆಯುವಂಥ ಪರಿಸ್ಥಿತಿಯುಂಟಾಯಿತು (ಕೊಂ). [ಮಾನ + ಕಳೆ$_1$]

**ಮಾನಂಗಿ** (ನಾ). ಸಣ್ಣ ಬಾವಿ : " ಚುರಿ ಚುಂಡಿ ಮಾನಂಗಿ " (ಮುಂಗಡಾ. ೦೨೫-೦೯). [ ? ]

**ಮಾನಂಗೆಡಿಸು** (ಕ್ರಿ). ಗೌರವವನ್ನು ಹಾಳು ಮಾಡು ; ಹಿರಿಮೆಯನ್ನು ಕೆಡಿಸು : ಹೋರಿ ಮಾನಂಗೆ [ಶಾಶಂ. ನವ ಕೆ]ಡಿಸಿಕೊಳದಿರು ಭೂರಮಣ ಇವರಲ್ಲಿ (ಐಕಫ. ೨೦-೩೬). [ಮಾನ + ಕೆಡಿಸು$_1$]

**ಮಾನಂಗೆಡು** (ಕ್ರಿ). ಗೌರವವನ್ನು ಕಳೆದುಕೊಳ್ಳು ; ಅವಮಾನ ಹೊಂದು : ಮಾನಂಗೆಡಬೆಮ್ಮಿಂದಂ ನೀನತಿಶಯಬುದ್ಧಿಶಾಲಿಯಾದೊಡೆ ತೊಲಗು (ವೃಷಪ. ೩೬-೬೯). [ಮಾನ + ಕೆಡು$_1$]

**ಮಾನಂದನ** (ನಾ). ಲಕ್ಷ್ಮಿಯ ಪುತ್ರ ; ಮನ್ಮಥ. [ಸಂ.]

**ಮಾನಕ$_1$** (ನಾ). ೧. ಅಳತೆಯ ಒಂದು ಪ್ರಮಾಣ : " ಪ್ರಮಾಣ, ಮಟ್ಟ ; ಮಾನದಂಡ, (ಪ್ರ:ರಿ) ಮಾನಕ " (Standard· ಪ್ರ.ಶಾ. ೬೭). ೨. ಅಳತೆಯ ಒಂದು ಸಾಧನ ; ಅಳತೆಯ ಪಾತ್ರೆ. [ಸಂ.]

**ಮಾನಕ$_2$** (ನಾ). ಒಂದು ಬಗೆಯ ಸಸ್ಯ : "ಮಾನಕ, ಕರೆಮಣಸಂಗಿ. ಬಲರಕ್ಕಸಿ, ಬಾಳರಾಕ್ಷ" (ಸಸ್ಯಶಾ. ೯). [ ? ]

**ಮಾನಕರಿ** (ನಾ). ಗೌರವಾನ್ವಿತ ವ್ಯಕ್ತಿ : ಈ ಸಮಾರಂಭವನ್ನು ನೋಡುವುದಕ್ಕೆ ಮುತ್ಸದ್ದಿಗಳೂ, ಮಾನಕರಂಗಳೂ . . . ನೆರೆದಿದ್ದರು (ಮುಂಜಾಳ. ೪೦). [ ← ಮರಾ. ಮಾನಕರೀ ]

**ಮಾನಕಷಾಯ** (ನಾ). [ಜೈನ] ಕ್ರೋಧ, ಮಾನ, ಮಾಯಾ ಮತ್ತು ಲೋಭಗಳೆಂಬ ನಾಲ್ಕುವಿಧವಾದ ಕಷಾಯಗಳಲ್ಲಿ ಒಂದು ; "ತೀವ್ರಮನೋವಿಕಾರರೂಪಕಷಾಯಗಳ ಯೋಗದಿಂದ ಜನಿಸುವಂತಹುದು" (ಕ್ಷಕಕೋ. ೨೦೩) : ಎಮ್ಮೊಳಪ್ಪ ಮಾನಕಷಾಯಂ ಕಾರಣಮಾಗಿ ಸತ್ತು ಬೆಳ್ಗತ್ತೆಯುಂ ಪೇಪಂದಿಯುಂ ನಾಯುಂ ಪೊಲೆಯರ ಕೂಸುಮಾಗಿ . . . ಈಗಳ್ ನಾಗಶ್ರೀಯಾದಳ್ (ವಡ್ಡಾಶಾ. ೨೪-೯) ; ಮಾನಕಷಾಯಮವರ್ಗಿನ್ನುಂ ಪತ್ತುವಿಟ್ಟುದಲ್ಲದಱಿಂ ಕೇವಲಜ್ಞಾನೋತ್ಪತ್ತಿಯಾಗದಿರ್ದುದು (ಅರ್ಧ. ೦೯-೦೯೩ ಪ) ; ಮಾನಕಷಾಯಕ್ಕೆ ತಕ್ಕ ನೆಡೆಗೊಟ್ಟಪನೇ (ಕಂಡಾಪಶು. ೬-೨೦). [ಸಂ.]

**ಮಾನಕಳೆ** ' ಮಾನಂಗಳೆ ' ನೋ.

**ಮಾನಕಾತಿ** (ನಾ). ಗೌರವವುಳ್ಳವಳು ; ಮರ್ಯಾದಸ್ಥೆ : ನೀವೇನಿಂತು ಟಿರವುಗಾಣುವರೆ ಮಾನಕಾತಿಯರಿರ ಕೊಳ್ಳಿರೆಂದೆನೆ ನಗುತಾ ನಾರಿಯರು. ಕೊಂಡರೆಲ್ಲ (ಶಕ. ೩೩-೬೯). [ಮಾನ + — ಕಾತಿ$_1$]

**ಮಾನಕ್ರಿಯೆ** (ನಾ). [ಶಿಲ್ಪಶಾ] ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ ಅಳತೆ, ಪ್ರಮಾಣಗಳಿಗೆ ಅನುಸಾರವಾಗಿ ಮಾಡಿದ ಕೆಲಸ : ಮೊತ್ತದಿನಿಂದ್ರ ಮತ್ತಮತಂದ್ರಂ ಗುರುಮತದಿಂದಂ ಕರ ಸೊಗಸಿಂದಂ ಜ್ಞಾನಾತ್ಮತೆಯಿಂ ಮಾನಕ್ರಿಯೆಯಿಂ ಸೊಗಯಿಸೆ ಲಿಂಗಂ ನಿಗಮತುರಂಗಂ (ಹಾಲಾಸ್ಯ. ೦-೨-೮೧ ೬೧೪). [ಸಂ. ಮಾನಕ್ರಿಯಾ]

**ಮಾನಗಂಬ** (ನಾ). [ಜೈನ] ತುದಿಯಲ್ಲಿ ಚಿಕ್ಕಮಂಟಪವನ್ನೊಳಗೊಂಡ, ಬಸದಿಯ ಮುಂದಿನ ಕಂಬ : ಮೀಳಿರ್ವ ಪತಾಕೆಗಳು ಮಕರತೋರಣಮಂಡಳಿ ಮಾನಗಂಬಮುಗ್ಗಳಿಸಿರೆ (ಎಕ. VIII, ಸೊರಬ. ೨೬೨-೦೯; 1077). 'ಮಾನಸ್ತಂಭ' ಪರ್ಯಾ. [ಮಾನ + ಕಂಬ$_1$ (<ಕಂಭ)]

**ಮಾನಗಟ್ಟು** (ನಾ). ತನ್ನ ಅಧಿಕಾರವನ್ನು ಸೂಚಿಸುವ ಹಸ್ತಾಕ್ಷರ; ಅಧಿಕೃತವಾದ ಸಹಿ,–ಒಪ್ಪ : ಕಪ್ಪುರಹದ ಸಾಕ್ಷ್ಯಗಳನ್ನೂ ಅವರವರ ರಾಜಮುದ್ರೆಯ ಮಾನಗಟ್ಟಿನೊಡನೆ ಹಾಯ್ಕಿಸಿ ನಮಗೆ ತೋರುವವನಾಗು (ಅರುಗಂ. ೩೬-೩). [ಮಾನ + ಕಟ್ಟು$_2$]

**ಮಾನಗರ್ವ** (ನಾ). ದುರಭಿಮಾನ ; ಜಂಭ ; ಸೊಕ್ಕು : ಪಾಪದ ಫಲದಿಂದಿನಿಮಿರದು ದುಃಖಮಂ ನೆಟ್ಟನೆಯ್ದಿದೈ ಮಾನಗರ್ವಮೇನಾಗಿಸದೋ (ಸುಕುಮಾ. ೩-೨೮); ವಿನಯಪ್ರಾಗ್ಭಾರದಿಂ ಮಾನಗರ್ವಮನೊಟ್ಟಿಯುಂ . . . ಮಿಥ್ಯಾತ್ವಮಂ ನೆಟ್ಟನುತ್ತಮಸಮ್ಯಕ್ತ್ವಶಿತಾಸಿಯಿಂದಮಿಱಿ (ಅಜಿತಸಂ. ೦೩೯-೬); ಭಾನುರಶ್ಮಿಗಳಂಧಕಾರದ ಮಾನಗರ್ವದ ಮುಱಿವವೊಲು ಗುರುಸೂನುವಿನ ಶರ ಸವರಿದವು ಕರಿಘಟೆಯ ಬಲುಮೆಳೆಯ (ಕುಮಾ.ಭ. ೩-೦೩). ☞ ಇದು ಒಂದೇ ಅರ್ಥದ ಎರಡು ಶಬ್ದಗಳು ಸೇರಿ ಆಗಿರುವ ರೂಪ. [ಸಂ.]

**ಮಾನಗರ್ವಿತೆ** (ನಾ). ಗೌರವವುಳ್ಳವಳು; ಸ್ವಾಭಿಮಾನಿ : ದೇವಿ ಬರುವಳು; ಆಕೆ ಬಹಳ ಮಾನಗರ್ವಿತೆ (ಶಾಕುಂತ. ೯೨-೦೩). [ಮಾನ + ಗರ್ವಿತೆ]

**ಮಾನಗೆ**, ಮಾನಿಗೆ (ನಾ). ೧. ಅಳೆಯುವ ಸಾಧನ; ಅಳತೆಯ ಪಾತ್ರೆ; ಮಾನಕ : ಅಂಗನೆಯ ನಾಭಿಕೂಪದ ಶೃಂಗಾರಜಲಕ್ಕೆ ಬಾಸೆ ನೀರ್ವರಿ ವೃತ್ತೋತ್ತುಂಗಕುಚಂ ಮಾನಗೆ ಮದನಂ ಗಡ ಯೌವನವನಕ್ಕೆ ತೋಂಟಿಗನಾದಂ (ಲೀಲಾ. ೨-೩೦). **ಮಾನಿಗೆ** : ೨. ಒಂದು ಅಳತೆಯ ಪ್ರಮಾಣ: ಅವನ ಹತ್ತಿರ ಇದ್ದುದು ಒಂದೇ ಒಂದು ಮಾನಿಗೆ ಅಕ್ಕಿ ! (ಹಳ್ಳಿ.ಕೋ. ೯೯); ಆಗ ಅಕ್ಕಿಗೆ ಮಾನಿಗೆ ಮೂರುರೂಪಾಯಿಯಿತ್ತು ದರ (ಹಗಲು. ೦೦೬). [ < ಸಂ. ಮಾನಕ ]

**ಮಾನಗೇಡಿ** (ನಾ). ಮರ್ಯಾದೆಯನ್ನು ಕಳೆದುಕೊಂಡವನು ; ನಾಚಿಕೆಗೇಡಿ : ಮಾನಹಾನಿಯೆ ಮರಣವೆಂದು ಮಾನವರೆಲ್ಲ ಮಾನಿಸುತ್ತಿರಲು . . . ಬದುಕಿರುವೆನೇತಕೋ ? ಛೀ ಮಾನಗೇಡಿ ಜೀವಾ ! (ಕೃಷ್ಣಾ.ಸು. ೯-೬); ಹದ್ದುಮೀರಿ ಅಡಿಯಿಟ್ಟುದಕ್ಕೆ ಮಾನಗೇಡಿಗಳಾಗಿ ಹೊರಬೀಳುವರು (ಚಾಚಿತ್ರ. ೨೩); ಮಾನಗೇಡಿಗೆ ಬುದ್ಧಿಗೇಡಿ ಗೆಳೆಯ (ಗಾದೆ). [ಮಾನ + ಕೇಡಿ$_1$]

**ಮಾನಗೇಡು** (ನಾ). ಅವಮಾನ ; ಅವಮರ್ಯಾದೆ ; ಅಗೌರವ : ನುಡಿಯದಿರಿ ನೀವಿನ್ನು . . . ನುಡಿಸಿದರೆ ಶಿವನಾದರಾಗಲಿ ಮಾನಗೇಡಹುದು (ಕೌಶಿಕ. ೨೩-೨೦) ; ಈ ಯೂವತ್ತು - ಮಾನಗೇಡನ್ನು ವೈನಿಸದವರು ಸುಮ್ಮನೆ ತಾಳಿಕೊಳ್ಳಬೇಕಾಯಿತು (ಮುಂಜಾನು. ೩-೦೩೩). [ಮಾನ + ಕೇಡು]

**ಮಾನಚಿತ್ರ** (ನಾ). ಭೂಪಟ ; ನಕ್ಷೆ : ಇದೋ ಎದುರಿಗಿನ ಈ ಮಾನಚಿತ್ರವನ್ನು ನೋಡಬಾರದೆ; ಇಟಾಲಿಯ ಹತ್ತಿರ ಸಮುದ್ರವಿದೆಯಲ್ಲ. ಅದೇ (ಸುಂದರಿ. ೬೨೬). [← ಹಿಂ. ಮಾನಚಿತ್ರ]

**ಮಾನಚ್ಯುತಿ** (ನಾ). ಗೌರವವನ್ನು ಕಳೆದುಕೊಳ್ಳುವುದು ; ಅವಮರ್ಯಾದೆ : ಅತಿದಾರಿದ್ರ್ಯಂ ಮಾನಚ್ಯುತಿ ದುಃಖಂ ಪೆರ್ಚಲ್ (ದಶಕು. ೮-೧೯೨). [ಸಂ.]

**ಮಾನಜ** (ನಾ). ಗರ್ವದಿಂದುಂಟಾದುದು : ಅಸ್ನೇಹ ಜೀವಜ ಮಾನಜ ಭೀತಿಗಳಂ ನಿರ್ಧರಿಸಲೆ ಬಾಲಕ (ಯೋಗಾಂಗ. ೩-೩೦). [ಸಂ.]

**ಮಾನತೆ** (ನಾ). ದುಮ್ಮಾನ ; ದುಃಖ : ಮನಮ್ಮ ಬಿಡದೆ ಚಿಂತಿಸಿ ಮಾನತೆವೆತ್ತಿರ್ಪ ನಿನ್ನ ಮನದುಮ್ಮಳಮಂ ಮೀನಾಕ್ಷಿ ಪೇಟೆನುತ್ತ . . . ಬೆಸಗೊಂಡಳ್ (ಶ್ರೀಕೃಷ್ಣ. ೩-೩೦). [ಸಂ. ಮಾನತಾ]

**ಮಾನದಂಡ** (ನಾ). ಅಳತೆಗೋಲು : ಶೀನೂಗೆ ಥಾಮ್ಸನ್ನರನ್ನು ಯಾವ ಮಾನದಂಡದಿಂದ ಅಳೆಯಬೇಕೆಂಬುದು ಕೂಡಲೆ ಗೊತ್ತಾಯಿತು (ಸಮುಚ. ೬೦೬); ಇದೇ ಸುಖದುಃಖಗಳನ್ನು ಅರಿಯುವ ಮಾನದಂಡ (ಶಾರದ. ೩೯). [ಸಂ.]

**ಮಾನದಿ** (ನಾ). ದೊಡ್ಡನದಿ : ಬಾಲೆಗೆ ಗುಣಕಾಂತಿ ಮಯೋಲ್ಲೀಲೆಗೆ ವಿನಯಪ್ರಧಾನಗುಣಗಣಗೆಣೆ ಭೂಪಾಲಂ ನಿನಗವಜೀವನಾನುಕೂಲಂ ಬದಿಬಿಸುಗೆ ಸಿಂಧುವೊಲ್ [ ಳ್ ] ಮಾನದಿಯೊಳ್ [ ಲ್ ] (ಶಾಂತಿಪು. ೩-೦೩೩). [ಮಾ$_4$ + ನದಿ. / ಸಂ. ಮಹಾನದೀ]

**ಮಾನದೆ** (ನಾ). ಚಂದ್ರನ ಹದಿನಾರು ಕಲೆಗಳಲ್ಲಿ ಒಂದು : ಅಮೃತಾ ಮಾನದಾ ಪೂಷಾ ತುಷ್ಟಿ ಪುಷ್ಟಿ ರತಿ ಧೃತಿ ಶಶಿನಿ ಚಂದ್ರಿಕಾ ಕಾಂತಿ ಜ್ಯೋತ್ಸ್ನಾ ಶ್ರೀ ಅಂಗದಾ ಪೂರ್ಣಾ ಪೂರ್ಣಾಮೃತಾ ಕಾಮದಾಯಿನಿಯೆಂಬ ಷೋಡಶಕಲಾಭರಿತನಾಗಿ (ವಿವೇಕ. ೨೦೯). [ಸಂ. ಮಾನದಾ]

**ಮಾನಧನ** (ನಾ). ಗೌರವವನ್ನೇ ಸಂಪತ್ತೆಂದು ಗಣಿಸುವವನು ; ಆತ್ಮಗೌರವವನ್ನು ಹೊಂದಿರುವವನು ; ಸ್ವಾಭಿಮಾನಿ : ಮಾನಧನನೆನಿಸಿ ನಿನ್ನಭಿಮಾನಕ್ಷತಿ ಮಾಡಿದರ್ಯಾ ಸುಯೋಧನ ನೀಂ ಮತ್ತೀ ನೀರೊಳಗೆ ಪಡಿರ್ಕುಂ ಮಾನಿರ್ಕುಂ ಕಪ್ಪೆಯಿರ್ಕುಮಿರ್ಪರೆ ಗಂಡರ್ (ಗದಾಯು. ೬-೩); ಮಾನಧನರಿಗೆ ವಧೆಯೆನಿಪುದಭಿಮಾನಭಂಜನವು (ಕುಮಾ.ಭ. ೨೨-೯೦). [ಸಂ.]

**ಮಾನಧರ** (ನಾ). ಮರ್ಯಾದಸ್ಥ ; ಮಾನವಂತ : ಬಂದ ಬರವಂ ನಿಮ್ಮಂ ಬಿಡಿಸಲುಮೊಡಂಬಡಿಸಲುಮೆಂದೆ ಬಂದೆನೆನ್ನಂ ಬಿಡುವುದೇದು ದಾಕ್ಷ್ಯಾಳಾಪಪ್ರಯೋಗಂಗಳಿಂತಜ್ಞತೆಯುನಾ ಮಾನಧರರ ಮುಂದಿಡೆಯುಂ (ಶಾಂತಿಪು. ೯-೬೨ ವ). [ಸಂ.]

**ಮಾನನಷ್ಟ** (ನಾ). ಆತ್ಮಗೌರವಕ್ಕೆ ಉಂಟಾಗುವ ಧಕ್ಕೆ, – ಹಾನಿ.

ಮಾನನಷ್ಟಮೊಕದ್ದಮೆ = ಆತ್ಮಗೌರವಕ್ಕೆ ಉಂಟಾಗುವ ಹಾನಿಗಾಗಿ ಹೂಡುವ ದಾವೆ : ಆ ದಿನ ಮಾನನಷ್ಟಮೊಕದ್ದಮೆಯೊಂದು ವಿಚಾರಣೆಯಾಗಬೇಕಾಗಿತ್ತು (ಶ್ರೀಪರು. ೬೩೯). [ಸಂ.]

**ಮಾನನಿಧಾನೆ** (ನಾ). ಗೌರವವನ್ನೇ ಸಂಪತ್ತಾಗಿ ಉಳ್ಳವಳು ; ಆತ್ಮಗೌರವವನ್ನು ಹೊಂದಿರುವವಳು ; ಸ್ವಾಭಿಮಾನಿ : ಮಾನನಿಧಾನೆ ನಿಳಿಂಪವಿಮಾನಕಮನಹೀನಮತಿಯ ಹೀನಾಲಯಮಂ ಜೈನಮತರತ್ನದೀಪಿಕೆ ನಾನಾವಿಧರತ್ನರಾಶಿಯಂ ಪೇಶಲಮಂ . . . ಕಂಡಳ್ (ವರ್ಧಮಾ. ೦೩-೬೨). [ಸಂ. ಮಾನನಿಧಾನಾ]

**ಮಾನನಿಧಿ** (ನಾ). ಗೌರವವನ್ನೇ ಸಂಪತ್ತಾಗಿ ಉಳ್ಳವನು : ಆತ್ಮಗೌರವವನ್ನು ಹೊಂದಿರುವವನು ; ಸ್ವಾಭಿಮಾನಿ : ಮಾನನಿಧಿಯೆಂದು ಮನ್ನಿಪೆ ನೀನೆನ್ನಂ (ಜಗನ್ನಾ. ೧೨-೯೬) ; ನೀನೀ ಪ್ರಸಾದಮಂ ಶರಣತತಿಗೀಯೆನುತೆ ಮಾನನಿಧಿ ವೃಷಭಮುಖಗಂದೀಯೆ (ಬಸವ. ೦-೩೯) ; ತಾನೆ ತನ್ನನೆ ಹೊಗಳಿಕೊಂಬರೆ ಮಾನನಿಧಿಯಾದವರು (ಕುಮಾ.ದ್ರೋ. ೦೬-೩೩). [ಸಂ.]

**ಮಾನನೀಯ** (ಗು). ೧. ಗೌರವಕ್ಕೆ ಅರ್ಹವಾದ ; ಮನ್ನಣೆಗೆ ಪಾತ್ರವಾದ : ದಾನಶೂರನಪವಾದಭೀರು ವಿಜ್ಞಾನಮೂರ್ತಿ ಭುವನೈಕವತ್ಸಲಂ ಮಾನನೀಯಗುಣನೆಂಬ ಪೆಂಪಿನಂದ್ವಾನಿಯಂ ತಳೆದ ದುರ್ಗನನ್ನರಾರ್

(ಸಂಕಸಂ. ೩೦೦-೩). (ನಾ). ೨. ಗೌರವಕ್ಕೆ ಅರ್ಹವಾದುದು ; ಮನ್ನಣೆಗೆ ಪಾತ್ರವಾದುದು : ಈ ಬಗೆಯ ಮತಭೇದವು ರಾಜತಂತ್ರವನ್ನು ಅರಿತವರಿಗೆ ಮಾನನೀಯವಾದುದು (ಬಿಕಾಕ. ೫೭). ೩. ಗೌರವ ; ಮನ್ನಣೆ : "ಮಾನಂ . . . ಮಾನನಂ, ಮಾನನೀಯಂ, ಈ ೭ ಮನ್ನಣೆ" (ಣಾಶಸ್ಕ. ೦೩೦). ೪. ಗೌರವಾರ್ಹ ವ್ಯಕ್ತಿ ; ಮನ್ನಣೆಗೆ ತಕ್ಕ ವ್ಯಕ್ತಿ : ದಾನಧರ್ಮಪರೋಪಕಾರವಿಧಾನದೀಕ್ಷಾಕರ್ಮನಿಷ್ಠರು ಮಾನನೀಯರಲೇ (ಕುಮ್ಯಾಊ. ೪-೨೯). [ಸಂ.]

**ಮಾನಪತ್ರ** (ನಾ). ಅಭಿನಂದನೆಯ ಪತ್ರ ; ಬಿನ್ನವತ್ತಳೆ : ನೀನಿಷ್ಟು ಮಾಡಿದರೆ, ನಿನ್ನ ಮೇಲೊಂದು ಪದ್ಯವ ಬರೆದು, ಕನ್ನಡಿಕಟ್ಟು ಹಾಕಿ ತುಂಬುಸಭೆಯೊಳು ಮಾನಪತ್ರ ಸಲಿಸುವೆವು (ವಂಕು. ೨೬-೦೯). [ಸಂ.]

**ಮಾನಭಂಗ** (ನಾ). ೧. ಅವಮಾನ ; ತೇಜೋವಧೆ ; ಮಾನಹಾನಿ : ಭರತಂಗೆಱಗುವರೆಂಬಿದೆ ಪರಿಭವಮೆಮಗಿಂತು ಮಾನಭಂಗಂ ಬರೆ ಬರ್ಪರ ಸೇವೆಯೆಂದು ಪೂಣ್ದಾರ್ ಪರಮತಪೋಭರಮುನನಿಬರುಂ ಪುರಾತನಯರ್ (ಆದಿಪು. ೦೪-೩೯); ಮಿಸಲುಗಳೆದ ಬಿರುದಿನ ಮಾನಭಂಗದ ಕಳವಳದ ಕನಸುಗಳಲಿದ್ದುದು ರಾಯನಾಸ್ಥಾನ (ಕುವ್ಯಾಕ. ೧-೨೦) ; ಮಾನಭಂಗವ ಮಾಡಿ ಮತ್ತೆ ಉಪಚಾರಗಳನೇನ ಮಾಡಿವರಲ್ಲಿ ಇರಬಾರದಯ್ಯ (ಪುರಂದ. ೪-೯೨ ಪಲ್ಲ). ೨. ಸ್ತ್ರೀಯ ಶೀಲಹರಣ ; ಶೀಲಭಂಗ ; ಅತ್ಯಾಚಾರ : ತುರುಕರವನು ಮಾನಭಂಗ ಮಾಡಲು ಯತ್ನಿಸಿದ್ದರೂ ಇವಳನ್ನೇ (ಮುಸಂಗ. ೩೦) ; ದ್ರೌಪದಿಯ ಮಾನಭಂಗದ ಸಮಯದಲ್ಲಿ ಗಾಂಧಾರಿಯು ನಡುಗಿ ಹೋದಳು (ಶಾರದ. ೪೬೫). [ಸಂ.]

**ಮಾನಭಂಗಿತ** (ನಾ). ಅವಮಾನವನ್ನು ಹೊಂದಿದವನು ; ತೇಜೋಭಂಗಿತನಾದವನು : ಜೈನರವರಿವರೆನ್ನದೆಲ್ಲರು ಮಾನಭಂಗಿತರಾಗಿ ಮಡಿದರು (ಬಸಪು. ೫೨-೦೯). [ಸಂ.]

**ಮಾನಭಾವಿತನ** (ನಾ). ಮನಸ್ಸಿನಲ್ಲಿ ಕಪಟವಿದ್ದರೂ ಹೊರಗೆ ಸಂಭಾವಿತನಾಗಿ ಸವಿಮಾತನ್ನಾಡುವ ಸ್ವಭಾವ : ಕಿಟ್ಟು ಅವಮಾನದ ಒಳಗೇ ಮಾನಭಾವಿತನವನ್ನು ತೋರಲು ಯತ್ನಿಸಿದನು (ಗಂಪರಾದು. ೫೨).
[ಮಾನಭಾವಿ (p ← ಮರಾ. ಮಾನಭಾವ, ಮಾನಭಾವೀಣ) + — ತನ]

**ಮಾನಮಠಯ** (ನಾ). [ಸಂಗೀತ]ಒಂದು ತಾಳದ ಹೆಸರು : ಆದಿಮಠಯ ಜಂಪಕಮಠಯ ಸರಮಠಯ ತೆಗೆದ ಮಾನಮಠಯ . . . ಸಪ್ತಮುದ್ರಿಕ ಜಯಾಳವೆಂಬಿವೇ ಮೊದಲಾದ ನೂಱೊಂದು ತಾಳಂಗಳು (ವಿವೇಕ. ೦೯೨).
[< ಸಂ. ಮಾನಮಠ್ಯ ?]

**ಮಾನಮರ್ದನ** (ನಾ). ೧. ತೇಜೋವಧೆ; ಅವಮಾನ ; ಮಾನಭಂಗ : ರಣಬಿನ್ನಾಣ ಮಸುಳಿದ ಮಾನಮರ್ದನದೊಱೆಯದ ಸವ್ಯಥೆಯ ಭಟ ಸಂತೈಸಿದನು ತನುವ (ಕುವ್ಯಾಗ. ೭-೪೮). ೨. ತೇಜೋಭಂಗವನ್ನು ಮಾಡುವವನು ; ಅವಮಾನ ಮಾಡುವವನು : ವಸ್ತ್ರಕಕವಿಮಸ್ತಕನ್ಯಸ್ತಂ ಅಧಟಕವಿಮಾನಮರ್ದನಂ ಗರ್ವಿತಕವಿಗಿರಿವಜ್ರದಂಡಂ (ಹಶಾ. ೨೩೦ ೫೦). [ಸಂ.]

**ಮಾನವ** (ಗು). ೧. ಮನುವಿಗೆ ಸಂಬಂಧಿಸಿದ ; ಮನುವಿನಿಂದ ಉಂಟಾದ. (ನಾ). ೨. ಮನುಷ್ಯ ; ಮರ್ತ್ಯ : "ಮನುಷ್ಯಃ . . . ಮಾನವಃ, ನರಃ, ಪುಮಾನ್, ಪಂಚಜನಃ, ನಾ, ಪುರುಷ, ಪೂರುಷಃ, ವಿಟ್- ಈ ೧೨ ಮಾನಸರ್" (ಹಲಾಯು. ೫೫-೦೬೬) ; ಮಾನವರ್ಗಂಗಸ್ವರವಾ ಮಾನಂ [ರುಚಿ] ಪ್ರಕೃತಿಭಾವಗತಿ . . . ಕ್ಷೇತ್ರದಶಾನುಗತಂ ದ್ವಾದಶಾಂಗಲಕ್ಷಣಗುಣಮಂ (ಲೋಕೋಪ. ೦೦-೨); ನಿನಗಾರ್ ದೊರೆ ಮಾನವರೀ ಧರಿತ್ರಿಯೊಳ್ (ಕೃಸ್ವ. ೦-೮೦). [ಸಂ.]

**ಮಾನವಂತ** (ನಾ). ಗೌರವಯುಕ್ತ ವ್ಯಕ್ತಿ ; ಮರ್ಯಾದಸ್ಥ : ತುಂಬ ಮಾನವಂತ, ಸಜ್ಜನನಾದ ಕೈತಾನ ಈ ಮದುವೆಯನ್ನು ಮನಸ್ಸಿಗೆ ಹಚ್ಚಿಕೊಂಡದ್ದು ಅಚ್ಚರಿಯಲ್ಲ (ಆಚೋಲೀ. ೦೦) ; ಎದುರುಪಕ್ಷದವರು ಸಕಲ ಸಿದ್ಧತೆಗಳನ್ನೂ ಮಾಡಿಕೊಳ್ಳುತ್ತಿರುವಾಗ ಮಾನವಂತ, ಶೀಲವಂತ ಶಾಂತಪ್ಪನಾಯಕರು ಸುಮ್ಮನೆ ಕುಳಿತುಕೊಳ್ಳುವುದಕ್ಕಾದೀತೆ ! (ಜೀಲು. ೧೦೫). [ಸಂ. ಮಾನವತ್]

**ಮಾನವಂತೆ** (ನಾ). ಗೌರವವುಳ್ಳ ಹೆಂಗಸು ; ಮರ್ಯಾದಸ್ಥೆ : ಮಾನವಂತೆಯರಾದ ಮಾನಿನಿಯರ ಮಾನವನ್ನು ಮಾರಿಸುವುದು ಇದೂ ಒಂದು ಆರ್ಟ್ ಅಲ್ಲವಷ್ಟೆ ? (ವ್ಯಾಪಾರ. ೮೩). [ಮಾನವಂತ + — ಎ]

**ಮಾನವಜನ್ಮ** (ನಾ). ಮನುಷ್ಯನ ಹುಟ್ಟು.—ಜೀವಿತ : ಮಾನವಜನ್ಮದೊಳ್ ಜನಿಸಿ ನಿತ್ಯಮನಿಂದ್ಯಪರೋಪಕಾರಮಂ ದಾನಮನರ್ಥಪಾಲನಮನಱಿ ಮಿಗಲ್ ಮಿಗೆ ಮಾಡದಿರ್ಪವಂ ಮಾನವನಲ್ಲವಂ ತೊವಲ ಬೊಂಬೆ (ದಶಕು. ೩-೩೦); ಮಾನವಜನ್ಮ ದೊಡ್ಡದು ಇದ ಹಾನಿ ಮಾಡಲುಬೇಡಿ ಹುಚ್ಚಪ್ಪಗಳಿರಾ (ಪುರಂದ. ೦-೦೪ ಪಲ್ಲ). [ಸಂ. ಮಾನವಜನ್ಮನ್]

**ಮಾನವತಾವಾದಿ** (ನಾ). ಮನುಷ್ಯತ್ವದಲ್ಲಿ ನಂಬಿಕೆಯುಳ್ಳವನು ; ಮಾನವಹಿತದಲ್ಲಿ ಆಸಕ್ತಿಯುಳ್ಳವನು : ಮಾನವತಾವಾದಿ ಕೂಡ ಒಂದು ದಶೆಯಲ್ಲಿ ವಿಶ್ವದ ಇಂದ್ರಿಯಾತೀತ (ಅಲೌಕಿಕ, ಅಪರೋಕ್ಷ) ದರ್ಶನವನ್ನು ಬದಿಗೆ ತಳ್ಳಿ ದೂರ ಸರಿಯುವವನು (ಪವ್ಯಕಾ. ೦೨೬). [ಸಂ. ಮಾನವತಾವಾದಿನ್]

**ಮಾನವತಿ** (ನಾ). ೧. ಗೌರವಯುಕ್ತಳಾದ ಹೆಂಗಸು ; ಸಂಭಾವಿತೆ ; ಮರ್ಯಾದಸ್ಥೆ : ರಾಜಕೀರಂ ನುಡಿಯ ಕಲಿತುದು ಮಾನವತಿಯೊಳು ನುಡಿಗಳಂ ಕೇಳಿ (ಬಸಪು. ೦೦-೪೦). ೨. ಸೊಕ್ಕಿನಿಂದ ಕೂಡಿದವಳು ; ಗರ್ವಿಷ್ಠೆ : (೬). [ಸಂ. ಮಾನವತೀ]

**ಮಾನವತೆ** (ನಾ). ಮನುಷ್ಯನಿಗೆ ಸಹಜವಾಗಿ ಇರಬೇಕಾದ ಧರ್ಮ ; ಮನುಷ್ಯತ್ವ : ಮಾನವೀಯತೆ : ಬ್ರಾಹ್ಮಣರೇನು ಶ್ರಮಣರೇನು, ಮಾನವತೆ ಎಲ್ಲಿಯೂ ವಿರಳ (ಬಾಬಾಬ. ೮೬) ; 'ಮಮ ಶತ್ರು ಹಿತಾರ್ಥಿಯ' ಎನ್ನುವದಕ್ಕಿಂತಲೂ ಹೆಚ್ಚಿನ ಮಾನವತೆಯುಂಟೆ ? (ಹೊಸಸ್ಕ. ೪೦). [ಸಂ. ಮಾನವತಾ]

**ಮಾನವಧರ್ಮ** (ನಾ). ಮನುಷ್ಯತ್ವ : ಮನುಷ್ಯಧರ್ಮ ; ಮಾನವೀಯತೆ : ನಿಜಕ್ಕೂ ಸತ್ಯ, ಪ್ರೇಮ . . . ದಯೆ, ಮಮತೆ ಇವೇ ಮಾನವಧರ್ಮದ ಮೂಲತತ್ತ್ವಗಳು (ಧರ್ಮಶಾ. ೩); ಮಾನವಧರ್ಮದ ಬಗ್ಗೆ ಅವಳದೇ ಒಂದು ಕಲ್ಪನೆಯಿತ್ತು (ಕೃಪಕು. ೦೯೯). [ಸಂ.]

**ಮಾನವಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು : ಸನತ್ಕುಮಾರಪುರಾಣ ನಾರಸಿಂಹಪುರಾಣ ನಂದಿಪುರಾಣ ಶಿವಧರ್ಮಪುರಾಣ ದೂರ್ವಾಸಪುರಾಣ ನಾರದೀಯಪುರಾಣ ಮಾನವಪುರಾಣ . . . ಭಾರ್ಗವಪುರಾಣಮೆಂಬವೇ ಆಯಾಯ ನಾಮಧೇಯಮುಳ್ಳವರಿಂ. ನಿರೂಪಿತಂಗಳಾದ ಹದಿನೆಂಟು ಉಪಪುರಾಣಂಗಳು (ವಿವೇಕ. ೯). [ಸಂ.]

**ಮಾನವಮಿ** 'ಮಾನಾಮಿ' ನೋ.

**ಮಾನವಲೋಕ** (ನಾ). ಮನುಷ್ಯ ವಾಸಿಸುವ ಜಗತ್ತು : ಭೂಲೋಕ : ಮಾನವಲೋಕದೊಳ್ ಪುರಮಿದರ್ಕೆಣೆ ಯಾವುದೆನಿಪ್ಪ ಕೀರ್ತಿಯಂ ತಾನೊಳಕೊಂಡು . . . ಚೆಲ್ವಿನುದ್ಯಾನಿಯನಾಂತು ಕಣ್ಗೆ ಕರಮೊಪ್ಪುಗು ಮೂರ್ಜಿತರಾಜಧಾನಿಯುಜ್ಜೇನಿ (ಸುಕುಮಾ. ೯-೪೫); ಮಾನವಲೋಕದವರೆಲ್ಲರೂ ಮರದ ಲಿಂಗವ ಪೂಜಿಸುವರಯ್ಯಾ (ಸಕವ. II· ೫೪೪-೦೩೯೩) : ಶಾಪಗ್ರಸ್ತಳಾಗಿ ಮಾನವಲೋಕಕ್ಕೆ ನಾನು ಬರಲಿಲ್ಲವಾಗಿ ನನ್ನ ಪ್ರಭಾವಗಳನ್ನು ನಾನೂ ಬಿಟ್ಟುಬಂದಿಲ್ಲ (ಕುಪಾಪ. ೧೩೩). [ಸಂ.]

**ಮಾನವಶಾಸ್ತ್ರ** (ನಾ). "ಮನುಷ್ಯನಿಗೆ ಸಂಬಂಧಪಟ್ಟ ವಿಷಯಗಳನ್ನು ಕುರಿತ ಶಾಸ್ತ್ರ ; ಶಾರೀರಿಕ ಮತ್ತು ಮಾನಸಿಕವಿಚಾರಗಳನ್ನು ಕುರಿತ ಮನುಷ್ಯಶಾಸ್ತ್ರ ; ಮನುಷ್ಯನನ್ನು ಪ್ರಾಣಿದೃಷ್ಟಿಯಿಂದ ವಿಚಾರ ಮಾಡುವ ಶಾಸ್ತ್ರ; ಮಾನವಶಾಸ್ತ್ರ" (Anthropology· ೩೦೪೩). [ಸಂ.]

**ಮಾನವಶಾಸ್ತ್ರಜ್ಞ** (ನಾ). ಮಾನವಶಾಸ್ತ್ರವನ್ನು ಅಭ್ಯಾಸಮಾಡಿದವನು ; ಮಾನವಶಾಸ್ತ್ರವನ್ನು ಬಲ್ಲವನು : ಮಾನವಶಾಸ್ತ್ರಜ್ಞರು (Anthropologists) ಎರಡು ಶಬ್ದಗಳಿಗೂ ಒಂದೇ ಅರ್ಥವನ್ನಾಗಲಿ, ವಿರೋಧವಾದ ಅರ್ಥವನ್ನಾಗಲಿ ಕಲ್ಪಿಸದೆ ಸಂಸ್ಕೃತಿಯೆಂಬ ವಿಶಾಲವಾದ ವರ್ಗದಲ್ಲಿ ನಾಗರಿಕತೆಯನ್ನು ಒಂದು ವಿಭಾಗವಾಗಿ ಪರಿಗಣಿಸುತ್ತಾರೆ (ಶಿಲ್ಪಶಾ. ೦೭). [ಸಂ.]

**ಮಾನವಾತೀತ** (ಗು). ೧. ಮನುಷ್ಯನಿಗೆ ಮೀರಿದ, — ಅತೀತವಾದ. (ನಾ). ೨. ಮನುಷ್ಯನಿಗೆ ಮೀರಿದುದು, — ಅತೀತವಾದುದು : ಏನಾದೊಡೇನು . . . ಮಾನವೇನಭ್ಯುದಯವೇನು ? ಮಾನವಾತೀತವೊಂದೆಲ್ಲವನು ನುಂಗುವುದು ಜಾನಿಸದನಾವಗಂ (ಮಂಕುತಿ. ೩೩೩). [ಸಂ.]

**ಮಾನವಾಹಿತ** (ನಾ). ೧. ಮರ್ಯಾದೆಯನ್ನು ಹೊಂದಿದವನು ; ಮರ್ಯಾದಸ್ಥ. ೨. ಮನುಷ್ಯರಿಗೆ ಹಿತನಲ್ಲದವನು. ೧, ೨ : ಆ ನೃಪಂ ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗಸಂಗಿಯಲ್ತು . . . ಮಾನವಾಹಿತನಾಗಿಯುಂ ಮಾನವಾಹಿತನಲ್ತು (ಧರ್ಮಾ. ೯-೩೯ ವ).

[ ಸಂ. (ಮಾನ + ಆಹಿತ ; ಮಾನವ + ಅಹಿತ) ]

**ಮಾನವಿ** (ನಾ). ಮಾನವಸ್ತ್ರೀ : ಅಸುರ ಮಾನವಿಯರಿಗೆ ಮೇಳವೆ ಪತಿಯೆ ಬಿಡು ಸತಿಯ (ಕೌಶಿಕಾ. ೩೬-೦೦). [ಸಂ. ಮಾನವೀ]

**ಮಾನವಿಕ** (ಗು). ೧. ಮಾನವನ ಬಾಳಿಗೆ ಸಂಬಂಧಿಸಿದ. (ನಾ). ೨. ಮಾನವನ ಬಾಳಿಗೆ ಸಂಬಂಧಿಸಿದ ಸಮಾಜಶಾಸ್ತ್ರ, ಅರ್ಥಶಾಸ್ತ್ರ ಮುಂತಾದ ವ್ಯಾಸಂಗವಿಷಯ : ಈಚೆಗೆ ವಿಶ್ವವಿದ್ಯಾನಿಲಯಗಳಲ್ಲಿ ಮಾನವಿಕಗಳ ಅಧ್ಯಯನಕ್ಕೆ ಹೆಚ್ಚು ಪ್ರಾಧಾನ್ಯತೆ ಸಿಕ್ಕಿದೆ (ಋಣ). [ಸಂ.]

**ಮಾನವೀಯ** (ಗು). ೧. ಮನುಷ್ಯನಿಗೆ ಸಂಬಂಧಿಸಿದ. ೨. ಮನುಷ್ಯತ್ವದಿಂದ ಕೂಡಿದ ; ಅಂತಃಕರಣಪೂರ್ವಕವಾದ : ಬೋಧನಕ್ರಮದಲ್ಲಿ ಮಾನವೀಯಬಾಂಧವ್ಯ (ಶಿಕ್ಷಣ. ೨೯೯). [ಸಂ.]

**ಮಾನವೀಯತೆ** (ನಾ). = ಮಾನವತೆ : ಇದೆಲ್ಲ ನಿಯಮವಿರುದ್ಧ. ಆದರೂ ಮಾನವೀಯತೆಯಿದೆಯಲ್ಲ (ಧರು, ೩೦೯) ; ಯಾರು ಭಗವಂತನನ್ನು ಎಲ್ಲರಲ್ಲಿಯೂ, ಎಲ್ಲೆಲ್ಲಿಯೂ ಕಾಣಬಲ್ಲರೋ ಅವರೇ ನಿಜವಾದ ಮಾನವೀಯತೆಯಿಂದ ಕೂಡಿದವರು (ರಮಣಗೀ. ೩೨).

[ಸಂ. ಮಾನವೀಯತಾ]

**ಮಾನವ್ಯ** (ನಾ). ೧. ಮನುಷ್ಯವರ್ಗ ; ಮಾನವಸಮೂಹ : "ಮಾನವ್ಯಂ ಮಾನವತತಿ" (ಅಭಿಧಾನ. ೦೦೩-೩೦). ೨. ಮನುಷ್ಯನಿಗೆ ಇರಬೇಕಾದ ಅಂತಃಕರಣ ; ಮನುಷ್ಯಧರ್ಮ ; ಮಾನವತೆ : ಮಾನವ್ಯವನ್ನು ಮಡಿಮಾಡುತ್ತಿರುವ ಮಡಿವಾಳ ಮಾಚಿದೇವ (ಮೋಕ್ಷರು. ೨೯ ಪ್ರಸ್ತಾವನೆ) ; ಇದರಲ್ಲಿ ವಿಚಾರಿಯನ್ನು ಜಿಜ್ಞಾಸೆಗೆ ಗುರಿಮಾಡುವ ಸಮಸ್ಯೆಯೆಂದರೆ ಪಿತೃವಾತ್ಸಲ್ಯದಿಂದ ಮಾನವ್ಯವನ್ನು ಪೋಷಿಸಬೇಕಾದ ವಿಶ್ವಪ್ರಭುವಿಗೆ ಈ ಕಠೋರವರ್ತನೆ ಉಚಿತವೇ ಎನ್ನುವುದು (ಅಧ್ಯಕ್ಷ. XXXI, ೩೩೦೯).

[< ಮಾನವ]

**ಮಾನವ್ಯಗೋತ್ರ** (ನಾ). ರಾಜಮನೆತನಗಳು ಒಪ್ಪಿ ಅಂಗೀಕರಿಸಿದ್ದ ಮೂಲದಲ್ಲಿ ಬ್ರಾಹ್ಮಣಗೋತ್ರಕ್ಕೆ ಸಂಬಂಧ ಹೊಂದದೆ ಇದ್ದ ಒಂದು ಗೋತ್ರದ ಹೆಸರು. [ಮಾನವ್ಯ + ಗೋತ್ರ₂]

**ಮಾನಶಾಲಿ** (ನಾ). = ಮಾನವಂತ : ತಾನು ಮಾನಶಾಲಿಯಾದುದರಿಂದ ಆಧಿಪತ್ಯವನ್ನಾದರು ತ್ಯಜಿಸಾನು (ಕಗದ್ಯ. ೩). [ಸಂ. ಮಾನಶಾಲಿನ್]

**ಮಾನಸ₁** 'ಮಾನುಸ' ನೋ.

**ಮಾನಸ₂** (ಗು). ೧. ಅಂತರಂಗದ ; ಮನಸ್ಸಿಗೆ ಸಂಬಂಧಿಸಿದ. (ನಾ). ೨. ಅಂತರಂಗ ; ಮನಸ್ಸು ; ಚಿತ್ತ : "ಚೇತಃ, ಚಿತ್ತಂ, ಮನಃ . . . ಮಾನಸಂ — ಈ ೬ ಮನಂ" (ಹಲಾಯು. ೯೯-೩೮೦) ; ಮಾನಸದೊಳ್ ಹಂಸಯುವ್ರಾಲ್ ಮಾನಸವಾಗ್ವನಿತೆ ತನ್ನ ಮಾನಸದೋಳಮಂ ಮಾನಸನೆಂದಗಲದೆ ನಿಲೆ ಮಾನಸನಾದಂ ಸರಸ್ವತೀಕಳಹಂಸಂ (ಕಂಕಣ. ೨-೩೬); ಮಾನಸದೊಳಿದು ಬೇಕೆಂದಪೇಕ್ಷಿಸನು (ಜಗನ್ನಾ. ೯೭-೩೨); ಅಂತರಂಗದೊಳೇನಿಹುದು ಪೇಳೆನ್ನ ಮಾನಸಮೆ (ಶಿವಗೀ. ೩-೦೦). ೩. ಮನಸ್ಸಿಗೆ ಸಂಬಂಧಿಸಿದುದು ; ಅಂತರಂಗಕ್ಕೆ ಸೇರಿದುದು : ಮಾನಸಮೆನಿಸಿದ ಶುಕ್ಲಧ್ಯಾನಂ ಪ್ರತ್ಯಕ್ಷಮಾಗಿ ತಾನಲ್ಲಿ ಸುಖಾಸೀನತೆ ವಡೆವವೋಲಿರ್ದಂ ಮೌನಸುಧಾಸೂತಿ ಮಣಿಶಿಲಾಪಟ್ಟಕದೊಳ್ (ಅಜಿತಪು. ೩-೯೭) ; ತುಟಿಯನ್ನು ಮತ್ತು ನಾಲಿಗೆಯನ್ನು ಅಲ್ಲಾಡಿಸದೆ ವಾಕ್ಯಾರ್ಥವನ್ನು ಅಂತರಂಗದಲ್ಲಿ-ಭಾವಿಸುವುದೇ ಮಾನಸವೆನಿಸುವುದು (ಅಷ್ಟಾಂ. ೦೨೬). ೪. ಹಿಮಾಲಯಪರ್ವತದ ಒಂದು ಸರೋವರ : ಮಾನಸದಿಂ ಸಿತಾಂಬುಜಶತಂ ತಳರ್ವಂತೆವೊಲೆಯ್ದೆ . . . ಬಂದೆಜಗಿತ್ತು ಕೊಳಂಗಳೊಳ್ ತಟೀಫೇನವಿತಾನವಾತ್ಮರುಚಿಯೊಳ್ ತಡಮಾಗೆ ಮರಾಳಮಂಡಳಂ (ಜಗ. ೯-೬೪) ; ಮಾನಸದ ಹೊಂದಾವರೆಯ ಸೆಳೆದು ಭಂಗಿಸುತದನು ಪೊರವಟ್ಟ ಪರಿಮಳವನೆಲ್ಲ ಪೊತ್ತು ದಾನರಾಜಿಯನಂತೆ ಸಂತತವು ಮೆರೆಯುತಿಹ ಬಾಹುದಂಡಗಳವನ ಗಜಪತಿಗಳು (ರ್ವಾಕೋ. ೦೯). ೫. [ತತ್ತ್ವಶಾ] ಚಾಕ್ಷುಷ, ಶ್ರಾವಣ, ಜಿಹ್ವಾ, ಘ್ರಾಣ, ಸ್ಪರ್ಶನ ಮತ್ತು ಮಾನಸಗಳೆಂಬ ಆರುವಿಧವಾದ ಪ್ರತ್ಯಕ್ಷಜ್ಞಾನಗಳಲ್ಲಿ ಒಂದು ; ಮನಸ್ಸಿನ ವಿಚಾರದಿಂದ ಉಂಟಾಗುವ ತಿಳಿವು : "ಪ್ರತ್ಯಕ್ಷಜ್ಞಾನ — ೬ ವಿಧ : ಘ್ರಾಣಜ, ರಾಸನ, ಚಾಕ್ಷುಷ, ಸ್ಪಾರ್ಶನ, ಶ್ರೌತ್ರ, ಮಾನಸ (ನ್ಯಾಯ೩ವ) ೧೮೬" (ತ್ರೀಶಕ್ತ. ೨೬೬). 'ಮಾನಸಜ್ಞಾನ', 'ಮಾನಸಪ್ರತ್ಯಕ್ಷ' ಪರಾ. ೬. [ಜೈನ](ಶಾರೀರ, ಮಾನಸ, ಕ್ಷೇತ್ರಜ, ಪರಸ್ಪರೋದೀರಿತ, ದನುಜೋದೀರಿತಗಳೆಂಬ) ಐದು ವಿಧವಾದ ದುಃಖಗಳಲ್ಲಿ ಒಂದು ; "ಮನಸ್ಸಿಗೆ ಹತ್ತುವಂತಹ ಮಾತುಗಳಿಂದ ಮತ್ತು ವಿಚಾರಗಳಿಂದ ಉಂಟಾಗುವ ದುಃಖ" (ಕೈಪಿಡಿ. ೨೦೩) : ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತಂಗಳೆಂಬ ಯ್ದುಂತೆಱದ ದುಃಖಂಗಳೊಳರ್ದು ನಿಮಿಷಮಾತ್ರಮುಪ್ಪೊಡಮುಸಿರ್ವೊತ್ತಂ ಪಡೆಯದೆ (ಆದಿಪು. ೩-೬೯ ವ) ; ಶಾರೀರಂ ಮಾನಸಂ ಕ್ಷೇತ್ರಜಂ ಪರಸ್ಪರೋದೀರಿತಂ ಸಂಕ್ಲಿಷ್ಟಾಸುರೋದೀರಿತಗಳೆಂಬ ಪಂಚಪ್ರಕಾರದುಃಖಂಗಳನನೇಕ ಪ್ರಕಾರದಿನನುಭವಿಸುತ್ತಂ (ಸುಕುಮಾ. ೦೦-೯೭ ವ). [ಸಂ.]

**ಮಾನಸಂಜ್ವಲನ** (ನಾ). [ಜೈನ] ಚಾರಿತ್ರ್ಯದ ಪೂರ್ಣತೆಗೆ ತಡೆಯನ್ನುಂಟುಮಾಡುವ ಕ್ರೋಧ, ಮಾನ, ಮಾಯಾ, ಲೋಭಗಳೆಂಬ ನಾಲ್ಕು ವಿಧವಾದ ಕಷಾಯಗಳಲ್ಲಿ ಒಂದು : ಕ್ರೋಧಸಂಜ್ವಲನಂ ಮಾನಸಂಜ್ವಲನಂ ಮಾಯಾಸಂಜ್ವಲನಂ ಲೋಭಸಂಜ್ವಲನಂ (ಗೊಮ್ಮಟಸಾ. ೩-೯). [ಸಂ.]

**ಮಾನಸಗಬ್ಬ** (ನಾ). ಮನುಷ್ಯನಿಂದ ರಚಿತವಾದ ಕಾವ್ಯ : ಕಕಾರ ತೃತೀಯೆಗೆ ... ಮಾನುಷಕಾವ್ಯ — ಮಾನಸಗಬ್ಬ (ಶಮದ. ೨೯೩ ಪ್ರಯೋ).

[ಮಾನಸ₁ (< ಮಾನುಸ) + ಕಬ್ಬ₁]

**ಮಾನಸಗಮನ** (ನಾ). ಮನಸ್ಸಿನ ವೇಗ ; ಮನೋವೇಗ : ವರಗೃಹಾಕ್ಷಿಯಲಿ ಪೊರವಟ್ಟು ಮಾರುತಮಾರ್ಗಮಡರ್ದು ಮಾನಸಗಮನದಿ ಬರುತ (ಶಬರಶೋ. ೦೦-೩೬). [ಸಂ.]

**ಮಾನಸಗೋಲ** (ನಾ). ಮಲ್ಲಯುದ್ಧದ ಒಂದು ವರಸೆ : ವಿಕ್ಕಿದು ವಜ್ರಪಾತಮುಮನೆಂಬಿನಮುಬ್ಬಿಸಮಾದ ತೋರಹಸ್ತಕ್ಕೆ ತಗುಳ್ದು ಪತ್ತಿಸುವ ಮಾನಸಗೋಲ[ಶಾಕಂ. ೪]ಮೆನಿಪ್ಪ ಡೊಕ್ಕರಕ್ಕೆಕ್ಕಿದ ವಜ್ರಲೇಪಮೆನೆ . . . ಬೆರ್ಚದನವಂ ಕುವರಂಗೆನಸುಂ ನಿಯುದ್ಧದೊಳ್ (ಚಂದ್ರಪ್ರ. ೩-೬೦). [ ? ]

**ಮಾನಸಜ** (ನಾ). [ತತ್ತ್ವಶಾ] ಇಂದ್ರಿಯಜ, ಸಮನಂತರಪ್ರತ್ಯಯಜ, ಮಾನಸಜ, ಭಾವನಾಬಲಜಗಳೆಂಬ ನಾಲ್ಕು ಪ್ರಕಾರದ ಪ್ರತ್ಯಕ್ಷ

ಗಳಲ್ಲಿ ಒಂದು ; ಮನಸ್ಸಿನ ಯೋಚನೆಯಿಂದುಂಟಾಗುವ ಜ್ಞಾನ : ಪ್ರತ್ಯಕ್ಷವು ನಾಲ್ಕುಪ್ರಕಾರ–ಇಂದ್ರಿಯಜ, ಸಮನಂತರಪ್ರತ್ಯಯಜ, ಮಾನಸಜ, ಭಾವನಾಬಲಜ ಎಂದು . . . ಮನಸ್ಸಿನ ಯೋಚನೆಯಿಂದ ಬರುವ ಜ್ಞಾನವು ಮಾನಸಜವು (ಹಿಂದಶಾ. ೨೮). 'ಪ್ರತ್ಯಕ್ಷ' ಪರಾ. [ಸಂ.]

**ಮಾನಸಜ್ಞಾನ** (ನಾ). = ಮಾನಸ$_2$ ೫ : ಬ್ರಾಹ್ಮಣತ್ವಾದಿ ವಿಜ್ಞಾನವು ಅನಾದಿಕಾಲದ ವ್ಯವಹಾರಮೂಲಕವಾಗಿ ಬರುವ ಮಾನಸಜ್ಞಾನವೇ ವಿನಾ ಇಂದ್ರಿಯಗಳಿಂದ ಬರುವ ಪ್ರತ್ಯಕ್ಷವಲ್ಲ (ಹಿಂದಶಾ. ೦೫೩). [ಸಂ.]

**ಮಾನಸದಟ್ಟಿಸು** (ಕ್ರಿ). ಮನಸ್ಸಿಗೆ ತಾಕುವಂತೆ ಮಾಡು; ಮನದಟ್ಟು ಮಾಡು : ತಾನನುಭವಿಸಬಹುದು ನುಡಿದನ್ಯರ್ಗೆ ಮಾನಸದಟ್ಟಿಸಲರಿದು (ಶರತ. ೬೦-೦೮). [ಮಾನಸ$_2$ + ತಟ್ಟಿಸು]

**ಮಾನಸದೇರ**, ಮಾನಿಸದೇರ (ನಾ). ಮನುಷ್ಯನನ್ನು ವಾಹನವಾಗಿ ಉಳ್ಳವನು : ಕುಬೇರ : "ಮಾನಸದೇರನುಂ ಪಿಚ್ಚವೃಣಿಗನೆಂದೊಡೆ ನಿರುತಿವೆಸರಕ್ಕು" (ಕಬ್ಬಿಕ. ೦೪). ಮಾನಿಸದೇರ : "ಮಾನಿಸದೇರನೆಂದು ನೈಋತ್ಯಂ" (ಕಶಶಾ. ೪೯-೩೬).

[ಮಾನಸ$_1$ (< ಮಾನುಸ) + ತೇರ್$_2$ + — ಅ$_7$ ]

**ಮಾನಸಪುತ್ರ** (ನಾ). ಮನಸ್ಸಿನ ಸಂಕಲ್ಪದಿಂದ ಹುಟ್ಟಿದ ಮಗ : ಸನಕಃ, ಸನಾತನಃ, ಈ ೨ ಬ್ರಹ್ಮನ ಮಾನಸಪುತ್ರರ್ (ಕಾಶಕ್ಕ. ೩೮); ದೇವರ್ಷಿ ಯಾದ ನಾರದ, ಪರಮಾತ್ಮನ ಮಾನಸಪುತ್ರ (ಹೇವಾಃಕೂ. ೭). [ಸಂ.]

**ಮಾನಸಪೂಜೆ** (ನಾ). ದೇವತಾವಿಗ್ರಹ, ಪೂಜಾಪರಿಕರ ಮುಂತಾದ ಬಹಿರಂಗದ ಉಪಕರಣಗಳ ಸಹಾಯವೇ ಬೇಕಾಗದೆ ಅಂತ ರಂಗದಲ್ಲಿಯೇ ಮಾಡುವ ಪೂಜೆ : ಮನಸ್ಸಿನಿಂದ ಮಾಡುವ ಪೂಜೆ : ಮಾನಸಪೂಜೆಯನ್ನು ನೀ ಮಾಡೆ ದಾನವಾಂತಕ ರಂಗನು ಮೆಚ್ಚಿ ತಾನೆ ಬಂದ ಗೋಪಾಲಕೃಷ್ಣ (ಪುರಂದ. ಸಾ. ೦-೩-೯); ತಮ್ಮ ಕುಲ ದೇವತೆಯಾದ ಮಹಾಲಕ್ಷ್ಮಿಯನ್ನು ಪ್ರತೀಕವಾಗಿಸಿ ಆದಿಶಕ್ತಿಯ ಮಾನಸ ಪೂಜೆಯನ್ನು ಪ್ರಾರಂಭಿಸಿದರು (ಸಮಚೀ. ೫೦೫). [ಸಂ. ಮಾನಸಪೂಜಾ]

**ಮಾನಸಪ್ರತ್ಯಕ್ಷ** (ನಾ). = ಮಾನಸ$_2$ ೫ : ಮನಸ್ಸಿನೊಳ್ ಭಾವಿಸೆ, ತನಗೀಗಳ್ ಸುಖಮಾಗಿರ್ಕುಂ ಈಗಳ್ ದುಃಖಮಾಗಿರ್ಕುಂ ಎಂಬಿವು ಮೊದಲಾಗಿ ಪುಟ್ಟುವ ತಿಳಿವು ಮಾನಸಪ್ರತ್ಯಕ್ಷಮೆನಿಪುದು (ಚಕಾ. ೩ ವ) : ಆತ್ಮನೂ ಅವನ ಸುಖದುಃಖಾದಿಗಳೂ ಜ್ಞಾನರೂಪವಾಗಿ ಸ್ವಯಂಪ್ರಕಾಶ ವಾಗಿರುವುದರಿಂದ ಮಾನಸಪ್ರತ್ಯಕ್ಷವೆಂಬುದಿಲ್ಲ (ಹಿಂದಶಾ. ೨೪೦). [ಸಂ.]

**ಮಾನಸವಾಳ್**, ಮಾನಿಸವಾಳ್ (ನಾ). ಮನುಷ್ಯನ ಬದುಕು.— ಜೀವನ : ಮಾನಸವಾಳೆಂಬುದು ಪನಿ ಪುಲ್ಲ ಮುಗಿಲ ಸಂಜೆಯೊಳೋ ರಂತಪ್ಪುದಜಿಂದಾರ್ ಬಾರಿಸಿದೊಡಂ ನಿಲ್ವನಲ್ಲೆಂದು ಸ್ವಯಂಪ್ರಭೆಯಿಂ ಬೋಳ್ . . . ಮನೆಯಿಂದಂ ಪೊಱಮಟ್ಟು (ವಡ್ಡಾರಾ. ೪೭-೩); ಇನ್ನೀತನಿಲ್ಲದೆ ಪೇೞ್ ಮಾನಸವಾೞ ಮೋಹಮೆನಗಿನ್ನೇವಾರ್ತೆ (ಆದಿಪು. ೩-೫೨) : ಘನರುಚಿಯೆಂದೊಡಂ . . . ಜಲಧರೋಪಲವರ್ತುಲ ಮೆಂದೊಡಂ ಜಡಾತ್ಮನುಮಜೆಂದಿಕ್ಕಿ ಮಾನಸರ ಮಾನಸವಾೞ್ಗಭಿಧಾನ ಮನ್ನರೇ (ಅಜಿತ. ೯-೨೦). ಮಾನಿಸವಾಳ್: ತಾನಜಿದು ತೋ[ಱ]ದು ನೆಟ್ಟನೆ ಮಾ[ನಿ]ಸವಾಳಾವುದೆಂದು ಸ[ಂ]ನ್ಯಾಸನದೊ[ಳ್] (ಎಇ. X, ೦೫೨-೪೯; 905); ಮಾನಿಸವಾೞ ಮೋಹಕ್ಕೆ ಸಂಸಾರದೊಳಾದ ಭೋಗಕ್ಕಳಿಪಿ ಪಿರಿದಪ್ಪ ಸುಖಮಂ ಮಾಱ್ಪ ತಪಮಂ ಕಿಡಿಸಿ ನರಕದೊಳಾದ ಮಹಾದುಃಖಕ್ಕೊಳಗಾಗಬೇಡ (ಧರ್ಮಾಮೃ. ೭-೦೫೦).

[ಮಾನಸ$_1$ (<ಮಾನುಸ) + ಬಾೞ್$_3$]

**ಮಾನಸವೇಗ** (ನಾ). ೧. ಮನಸ್ಸಿನ ವೇಗ ; ಮನೋವೇಗ. ೨. ಮನಸ್ಸಿನ ವೇಗಕ್ಕೆ ಸಮವಾಗಿ ಚಲಿಸುವ ವ್ಯಕ್ತಿ : ಉಸುರೆ ದಿವಿಜೇಶ್ವರಂ ಪರಿವೆಸದಮರರ್ ದಾದಿಕಾಱಪೆಸದಮರರದೇಂ ಬೆಸಗಲಿಗಳ್ ಬರ್ಪರೊ ಮಾನಸವೇಗರ್ ಪವನವೇಗರಿರುಳುಂ ಪಗಲುಂ (ಆತಪು. ೫-೬೩).

[ಸಂ.]

**ಮಾನಸಪೊತ್ತಗೆ** (ನಾ). ಮನುಷ್ಯನಿಂದ ರಚಿತವಾದ ಪುಸ್ತಕ : ಮಾನುಷಪುಸ್ತಕ – ಮಾನಸಪೊತ್ತಗೆ (ಶಬ್ದ. ೨೯೨ ಪ್ರಯೋ).

[ಮಾನಸ$_1$ (< ಮಾನುಸ) + ಪೊತ್ತಗೆ]

**ಮಾನಸಶಾಸ್ತ್ರ** (ನಾ). ಚಿತ್ತ ಅಥವಾ ಅಂತರಂಗದ ವ್ಯಾಪಾರಗಳಿಗೆ ಸಂಬಂಧಿಸಿದ ಶಾಸ್ತ್ರ ; ಮನಶ್ಶಾಸ್ತ್ರ : ವೇದಾಂತ . . . ಮಾನಸ ಶಾಸ್ತ್ರ, – ಇವೇ ಮುಂತಾದ ಶಾಸ್ತ್ರಗಳ ಮಾರ್ಗವಾಗಿಯೂ ಕಾವ್ಯವನ್ನು ಪರಿಶೀಲಿಸುವವರು ಉಂಟು (ಪಶ್ಚಕಾ. ೬೫). [ಸಂ.]

**ಮಾನಸಶಾಸ್ತ್ರಜ್ಞ** (ನಾ). ಮನಶ್ಶಾಸ್ತ್ರವನ್ನು ಅಭ್ಯಾಸ ಮಾಡಿದವನು ; ಮನೋವಿಜ್ಞಾನಿ : ಮಾನಸಶಾಸ್ತ್ರಜ್ಞರ ಅಭಿಪ್ರಾಯದಲ್ಲಿ ಮೇಲೆ ಹೇಳಿದ ಮಾತುಗಳೆಲ್ಲ ಸರಿಯಾಗಿವೆ (ಪಶ್ಚಕಾ. ೯೩). [ಸಂ.]

**ಮಾನಸಸಿದ್ಧಿ** (ನಾ). ಮಾನಸಿಕವ್ಯಾಪಾರಗಳ ಮೇಲೆ ಹತೋಟಿಯನ್ನು ತರಲು ಶಕ್ಯವಾಗುವಂತಹ ಸಿದ್ಧಿ : ಯಥಾಕಾಮೋಪಲಬ್ಧಿ ಯಥಾ ಕಾಮವಿನಿರ್ಗಮನ ಸರ್ವತಿರಸ್ಕರಣ ಸಕಲಗುಹ್ಯಾರ್ಥದರ್ಶನ ಕರ್ಮಾನು ಗುಣನಿರ್ಮಾಣವಶಿತ್ವ ಪ್ರಿಯದರ್ಶನ ಸಂಸಾರದರ್ಶನವೆಂಬವೆಂಟು ಮಾನಸ ಸಿದ್ಧಿಗಳು (ವಿವೇಕ. ೨೨೫). [ಸಂ.]

**ಮಾನಸಸೃಷ್ಟಿ** (ನಾ). ಮನಸ್ಸಿನಿಂದ ಮಾಡಿದ ಸೃಷ್ಟಿ ; ಮನಸ್ಸಿನ ಸಂಕಲ್ಪದಿಂದ ಉಂಟಾದುದು : ವತ್ಸ ನಾರದನೆ ಇದೆಲ್ಲಿಂದ ಬಂತು ? . . . ಇದೇನು ಮಾನಸಸೃಷ್ಟಿಯೋ ? (ದಾಶಃಂತ. ೫೦-೬). [ಸಂ.]

**ಮಾನಸಸ್ನಾನ** (ನಾ). ದಿವ್ಯ, ವಾರುಣ, ವಾಯುವ್ಯ, ಮಾನಸ ಮತ್ತು ಆಗ್ನೇಯಗಳೆಂಬ ಐದು ವಿಧವಾದ ಸ್ನಾನಗಳಲ್ಲಿ ಒಂದು ; ಮನಸ್ಸಿನ ಶುದ್ಧತೆ, ಪರಿಶುದ್ಧಿ : ದಿವ್ಯಸ್ನಾನ ವಾರುಣಸ್ನಾನ ವಾಯುವ್ಯಸ್ನಾನ ಮಾನಸಸ್ನಾನ ಆಗ್ನೇಯಸ್ನಾನವೆಂಬ ಪಂಚವಿಧಸ್ನಾನಂ ಗಳೊಳಗೆ ಆಗ್ನೇಯವೆಂಬ ಭಸ್ಮಸ್ನಾನವೇ . . . ಗುಣಾಧಿಕಮಪ್ಪುದು (ವಿವೇಕ. ೦೨೬). [ಸಂ.]

**ಮಾನಸಾತ್ಮಜ** (ನಾ). = ಮಾನಸಪುತ್ರ : ಮಾನಸಾತ್ಮಜರ ನೇಮಿಸಿದನ್ನೈ ಕೇಳ್ವುದಾ ಸನಕನಾ ಸನಂದನನಾ ಸನತ್ಕುಮಾರಂ ಪ್ರೇಮದ ಸನತ್ಸುಜಾತಂ ಸನಾತನರೆಂಬ ನಾಮದ್ಯೈವರನು (ಶೀಕೃಕ. ೨-೦-೦೪). [ಸಂ.]

**ಮಾನಸಾಹಾರ** (ನಾ). [ಜೈನ] ನೋಕರ್ಮಾಹಾರ, ಕರ್ಮಾಹಾರ, ಲೇಪ್ಯಾಹಾರ, ಓಜಾಹಾರ, ಕಬಳಾಹಾರ ಮತ್ತು ಮಾನಸಾಹಾರ ವೆಂಬ ಆರುಬಗೆಯ ಆಹಾರಗಳಲ್ಲೊಂದು;(ದೇವತೆಗಳು)ಮಾನಸಿಕ ವಾಗಿ ಪಡೆಯುವ ಆಹಾರ : ದೇವರ್ಕಳ್ಗೆ ಮಾನಸಾಹಾರಮಕ್ಕುಂ (ಶ್ರಾಚಕಾ. ೬೨-೭) ; ನೋಕರ್ಮಾಹಾರಮುಂ ಕರ್ಮಾಹಾರಮುಂ ಕಬಳಾ ಹಾರಮುಂ ಲೆಪ್ಯಾಹಾರಮುಂ ಓಜಾಹಾರಮುಂ ಮಾನಸಾಹಾರಮು ಮೆಂದಕ್ಕುಂ . . . ದೇವನಿಕಾಯದೊಳ್ಮಾ[ಶಾಶಾಂ. ಳ್ಮಾ]ನಸಾಹಾರ ಮಕ್ಕುಂ (ಜಗಾರ. ೫೦೩). [ಸಂ.]

**ಮಾನಸಿ** (ನಾ). ಮನುಷ್ಯಸ್ತ್ರೀ : ಮಾನವ ಹೆಂಗಸು: ಮಾನಸಿಯರ್ಗೀ ಪರಿ ಚೆಲ್ವಿನತುಂಟೆ ಸಗ್ಗದಾಕೆಯೊ ದಿಟಂ (ಕಬ್ಬಿಕಾ. ೦೦೪) ; ಶ್ರವಣಕುಲವಂ ನಿಬ್ಬರದಿ ತಾಗುವ ಹೊಯಿಲುಗಳು ಮಾದವಾ ವೈಜವೆ ವಿನಿರ್ಮಳಭಕ್ತಿ ಮಾನಸಿ[ಶಾಶಾಂ. ಸೆ]ಯಾದ ಕಾರಣವು (ಬಸಪು. ೫೨-೨೦).

[ಮಾನಸ$_1$ (< ಮನುಸ) + – ಇ$_1$]

**ಮಾನಸಿಕ** (ಗು). ೧. ಮನಸ್ಸಿಗೆ ಸಂಬಂಧಿಸಿದ ; ಮನಸ್ಸಿನಲ್ಲಿ ಉಂಟಾದ : ಭ್ರಾಂತಿಯ ಹಾವು ಎಂಬುದು ಅಖಂಡವಾದ ಒಂದು ಮಾನಸಿಕ ಗ್ರಹಿಕೆ (ತತ್ವಶಾ. ೩೦೪) : ಮನೆಗೆ ಬೇಕಾದ ಸಾಮಾನುಗಳನ್ನು ಕೊಂಡುಕೊಂಡು ಅನುಭವಿಸಿ ಪಡೆಯುವ ತೃಪ್ತಿ, ಸಂತೋಷ, ಸುಖಕ್ಕೆ

ಮಾನಸಿಕ ಆದಾಯ (psychic– income) ಎಂದು ಕರೆಯಲಾಗುತ್ತದೆ (ಗೃಹಶಾ. ೦೬೪). (ನಾ). ೨. [ತತ್ತ್ವಶಾ] ಕರ್ಮಯೋಗದ ಮೂರು ಪ್ರಕಾರಗಳಲ್ಲಿ ಒಂದು; ಮನಸ್ಸಿನಿಂದ ಮಾಡುವ ಕರ್ಮ; ಮಾನಸಿಕ ಕ್ರಿಯೆ: ಇವುಗಳು ಶಾರೀರ, ವಾಚಿಕ, ಮಾನಸಿಕವೆಂದು ಮೂರು ಪ್ರಕಾರ (ಹಿಂದಶಾ. ೯೯). [ಸಂ.]

**ಮಾನಸಿಕದೂರ** (ನಾ). [ಕಾವ್ಯಮೀ] ಸೌಂದರ್ಯಾನುಭವದಲ್ಲಿ ಕಲಾವಸ್ತು, ಕಲಾವಿದ, ಪ್ರೇಕ್ಷಕಾದಿಗಳಿಗೆ ಇರಬೇಕಾದ ಒಂದು ವಿಶಿಷ್ಟವಾದ ಸಂಬಂಧಾಂತರ: ಯಾವ ಒಂದು ನೆಲೆಯಲ್ಲಿ ಕಲಾಕೃತಿಯಿಂದಾಗಲಿ, ಲೋಕವಸ್ತುವಿನಿಂದಾಗಲಿ ನಾವು ಸೌಂದರ್ಯಾನುಭವವನ್ನು ಪಡೆಯಲು ಸಾಧ್ಯವೋ ಅಂತಹ ಒಂದು ನಿಲುವಿನಲ್ಲಿ ನಮ್ಮನ್ನು ಹಾಗೂ ವಸ್ತುವನ್ನು ನಿಲ್ಲಿಸಿಕೊಳ್ಳುವ ಈ ಕೌಶಲವೇ ಮಾನಸಿಕದೂರ (ಸೌಂವತ. ೬೮). [ಸಂ.]

**ಮಾನಸಿಕರೋಗ** (ನಾ). ಮನಸ್ಸಿಗೆ ಸಂಬಂಧಿಸಿದ ಕಾಯಿಲೆ; ಮನೋರೋಗ: ಮಾನಸಿಕರೋಗಗಳಿಂದ ಬಳಲುತ್ತಿರುವವರನ್ನು ಉಪಚರಿಸಿ ಸರಿಗೊಳಿಸುವ ಶಾಸ್ತ್ರಕ್ಕೆ ಮಾನಸೋಪಚಾರಶಾಸ್ತ್ರ (Psycho-therapy) ವೆಂದು ಹೆಸರು (ಮನೋರೋ. ೩೭). [ಸಂ.]

**ಮಾನಸಿಕವೇದನೆ** (ನಾ). ಮನಸ್ಸಿಗೆ ಉಂಟಾಗುವ ದುಃಖ,-ವ್ಯಸನ: ಮಾನಸಿಕವೇದನೆಯು ಅವರ ದೇಹದ ಮೇಲೂ ತನ್ನ ಪ್ರಭಾವವನ್ನು ಬೀರಿ ಅವರ ಶಕ್ತಿಯನ್ನು ಕುಗ್ಗಿಸಿತು (ಕೂಹ). [ಸಂ. ಮಾನಸಿಕವೇದನಾ]

**ಮಾನಸಿಕೆ, ಮಾನಸಿಕ್ಕೆ** (ನಾ). ೧. ಮಾನವೀಯತೆ; ಒಳ್ಳೆಯತನ: ಮಾನಸಿಕೆಯುಳ್ಳಂ ಪೆಱರ ದೋಷಮಂ ಕೇಳನೆಂಬುದು ತಾತ್ಪರ್ಯಂ (ಶಬ್ದಮ. ೨೩-೨೪); ಮಾನಿತಮಪ್ಪ ಮಾನಸಿಕೆ ಮೆಯ್ಯೊಳೆ ಕೂಡಿರೆ ಧಾತ್ರನೆಂದೆಸಲ್ ತಾನೆಸೆದಿರ್ದ ಮಾನಿನಿಯರಂ . . . ಹೀನರೆನಿಪ್ಪವಂದಿರೊಳೆ ಕೂಡಿ ವಿವೇಕವಿಹೀನನಾಗಿ ಚೀ: ಮಾನವಿದೂರನಕ್ಕಟಜನೆಂದಭಿಧಾನಮನಾಂತನಾಗದೇ (ಕೀಬುಕೃ. ೩-೦೬೫). ೨. ಆತ್ಮಗೌರವ; ಸ್ವಾಭಿಮಾನ: ಮಾನಸಿಕೆಯು ದೊರೆಗಿಡೆ ನೀಂ ಮಾನಸನೆನೆ ನೀರೊಳೆಲವೊ ನೀನುಂ ಮೀನೆಂಬೀ ನೆವದಿರ್ದುಯಿದೇಂ (ಕಃಶಾ. ೦೩-೭೯); ದೊರೆವೆತ್ತ ತಮ್ಮ ಮಾನಸಿಕೆಯ ಕೇಡನುನ್ನತಿಯ ಬನ್ನಮಂ . . . ವ್ಯಸನಿಗಳಾರು ಮೆತ್ತಲಜೀವರ್ ವಿಷಯಾಸವಮತ್ತಚೇತಸರ್ (ಶಂಖಪು. ೦೪-೦೨೯); ಕಡುಗಲಿತನಮುಂ ಚಾಗದ ಪೊಡರ್ಪುಮೊಳ್ಳಿಡಿಯೊಳಾದ ಮಾನಸಿಕೆಯುಂ . . . ಪೆರ್ಮೆವಡೆದುಮವನಿಂದಿಳೆಯೊಳ್ (ಕಾವ್ಯಾಪ. ೩೯೪). ೩. ಆತ್ಮೀಯ ಭಾವನೆ; ಅಂತಃಕರಣ; ಪ್ರೀತಿ: ಮಾನಸೆಯುಣಮುಲ್ಲಳೀಕೆ ಮರವಾನಸೆಯಾಗಿಯುಮಾದುದೊಂದು ಮಾನಸಿಕೆ (ಆದಿಪು. ೦೨-೩೮). **ಮಾನಸಿಕ್ಕೆ**: ೨. ಒದವಿದ ಮಾನಸಿಕ್ಕೆ ತಲೆದೋಱದ ಮುನ್ನಮೆ ಮುಂಬ ಮೂರ್ತಿಗೊಂಡುದು ಸಿರಿ ಕೆಚ್ಚುಗೊಂಡುದು ಮನಂ . . . ರಾಸಿಗೊಂಡುದು ನೆಗರ್ತೆಯ ತೇಜವನನ್ತಪಾಳನ (ಸೌಇಇ. IX – i, ೨೦೩-೪೭, 1126); ಅಱಿತದ ಮಾತು ನಾಲಗೆಯ ಬಡ್ಡಿಗೆ ಬಾರದ ದೀನಮಾನಸರ್ಮಱಿವುಗೆ ಕಾವ ಮಾತು ಮನದೊಳ್ ಪೊಱಪೊಣ್ಮದ ಮಾನಸಿಕ್ಕೆಯುಂ ನೆಱಿಪುವ ಮಾತು ನೀತಿನಿಲಯಕ್ಕೊಳಸಲ್ಲದಮಾತ್ಯವೃತ್ತಿಯುಂ ಜಱಿವುದು ತಂತ್ರಪಾಳಕಶಿಖಾಮಣಿ ಪೆರ್ಮ್ಮನ ಕೀರ್ತಿಡಿಂಡಿಮಂ (ಎಕ. V, ಬೇಲೂರು. ೮೩-೯೫; 1177). ೪. ಹಿರಿಮೆ; ಘನತೆ: ನೆಗಟ್ಟೆವೆತ್ತ ಪತಿಭಕ್ತಿಯ ಮೈಮೆಯ ಮಾನಸಿಕ್ಕೆಯುಗ್ಗಲದ ಪೊಗಟ್ಟೆ ತನ್ನದೆನೆ ಪೆಂಪು ಮನೋಹರಿಗಲ್ದದಕ್ಕುಮೋ (ಆದಿಪು. ೦-೭೨). [ಮಾನಸ$_2$ + – ಇಕೆ]

**ಮಾನಸಿಕೆಗಿಡು** (ಕ್ರಿ). ಆತ್ಮೀಯತೆಯನ್ನು ಕಳೆದುಕೊಳ್ಳು: ಸ[ಂ]ನ್ಯಾಸನದೊ[ಳ್] ಮಾನಸಿಕೆಗಿಡದೆ ಕೊಕ್ಕೊನನೂನಸುಖಾಸ್ಪದಮನಟ್ಟಿಯೊಳ್ ಶ್ರೀವಿಜಯಂ (ಎಇ. X, ೦೫೨-೫೦; 915). [ಮಾನಸಿಕೆ + ಕಿಡು (< ಕೆಡು$_1$)]

**ಮಾನಸಿಕ್ಕೆ** 'ಮಾನಸಿಕೆ' ನೋ.

**ಮಾನಸಿಗ** (ನಾ). ೧. ಮನುಷ್ಯ; ಮಾನವ: 'ಪೊಲ್ಮಾನಸಿಗ' ಪರಾ. ೨. ಒಂದು ವಂಶದ ಹೆಸರು: ಇನ್ದ್ರಾಪಾಯ್ಯಂ (ಇನ್ದ್ರಪಯ್ಯಂ) ನಾಡಾನಾಳುತ್ತಿರೆ ಪುರಿಗೆಱೆ ನಾಡ ಸರಟವುರದಾಯ್ವದಿವ್ಬರುಮಿಬ್ಬು ನಾಡಯಿಸೆ ಮಾನಸಿಗರ ಚಿದಾ(ದ)ಣ್ಣ[ಂ] ಗೋಸಾಸಮಿಬಿಱ್ದು[ಂ] (ಎಇ. XXI. ೨೦೮-೫; 883). [ಮಾನಸ$_1$ (< ಮಾನುಸ) + – ಇಗ]

**ಮಾನಸೂತ್ರ** (ನಾ). ಅಳತೆಯ ದಾರ: ಕಮಳಜನಳೆಯಲ್ಮಾಡಿರ್ದ ಮಾನಸೂತ್ರಂಬೊಲೊಪ್ಪುಗುಂ ಕಟಿಸೂತ್ರಂ (ಅಜಿತ. ೨-೨೯). [ಸಂ.]

**ಮಾನಸೆ, ಮಾನಿಸೆ** (ನಾ). = ಮಾನಸಿ: ಮಾನಸೆಯುಣಮುಲ್ಲಳೀಕೆ ಮರವಾನಸೆಯಾಗಿಯುಮಾದುದೊಂದು ಮಾನಸಿಕೆ (ಆದಿಪು. ೦೨-೩೮); ಚರಿಗೆವೋಗುತ್ತುಂ ನಾನಾಸೂನದುಃಖಪೀಡಿತಮಾನಸೆಯಾಗುತ್ತುಮಿರ್ದ ಪೊಲವಾನಸೆಯುಂ ಕರುಣಾಂ ಕೈಮಿಗೆ ಕಂಡು (ಸುಕುಮಾ. ೫-೨). 'ಪೊಲಮಾನಸೆ' ಪರಾ. **ಮಾನಿಸೆ**: ಆನಪ್ಪೊಡೆ ದೇವತೆಯೆಂ ನೀನಱಿಯದೆ ಕೊರ್ವಿ ಚಪಳತನದಿಂದೆನ್ನಂ ಮಾನಿಸೆಯೆ ಗೆತ್ತು ನುಡಿದ್ಯೆ (ದಶಾವತಾ. ೩-೦೦೨); ಮೆಯ್ನ್ನುಸುಮಿಸುಕಿದೊಡೆ ದಿಟದ ಮಾನಿಸೆಯೆಂದೇ ಬಗೆದಂಗಭವಂ ಇಸದೆನ್ನಂ ಬಿಡನೆನುತವೆ ಮರವಾನಸೆಯುಂದಮನನುಕರಿಸಿದಳೊ (ಶಬ್ದಮ. ೪-೨೨). [ಮಾನಸ$_1$ (< ಮಾನುಸ) + – ಎ$_2$]

**ಮಾನಸೌಕಸ** (ನಾ). ಮಾನಸಸರೋವರದಲ್ಲಿ ವಾಸಿಸುವುದೆಂದು ನಂಬಲಾದ ಪಕ್ಷಿ; ಹಂಸ: "ಹಂಸಃ, ಶ್ವೇತಚ್ಛದಃ, ಚಕ್ರಾಂಗಃ, ಮಾನಸೌಕಾಃ (ಕಸಃ) — ಈ ೪ ಹಂಸಂ" (ಹಲಾಯು. ೪೨-೯೮); "ಮಾನಸೌಕಸಂ ಶುಭ್ರಚ್ಛದಂ ಮರಾಳಂ ಹಂಸೆ" (ಶಂಗರಾ. ೫೦-೭). [ಸಂ. ಮಾನಸೌಕಸ್]

**ಮಾನಸ್ತ** (ನಾ). ಆತ್ಮಗೌರವವುಳ್ಳವನು: ಸ್ವಾಭಿಮಾನಿ: ಮಾನಸ್ತರ ಮಾನವನ್ನು ಕಾಪಾಡುವ ಭಾರ (ಕಲಶ. ೨೨೦). [ಮಾನ + – ಸ್ತ]

**ಮಾನಸ್ತಂಭ** (ನಾ). [ಜೈನ] ಬಸದಿಯ ಮುಂದೆ ನಿಲ್ಲಿಸಿರುವ ಕಂಬ; ☞ "ಮಾನವನ್ನು ಸ್ತಂಭನ ಮಾಡುವಂತಹ ಕಂಬ. ಸಮವಸರಣ ಮಾರ್ಗಗಳಲ್ಲಿ ನಟ್ಟನಡುವೆ ಗೋಳಾಕಾರದಲ್ಲಿರುವ ಕಂಬ. ಇದು ಕ್ರಮವಾಗಿ ಚಿಕ್ಕಚಿಕ್ಕದಾಗುತ್ತ ಹೋಗುವ ಮೂರು ಗೋಳಾಕಾರದ ಪೀಠಗಳ ಮೇಲೆ ಸ್ಥಾಪಿತವಾಗಿರುತ್ತದೆ. ಇದರ ಎತ್ತರ ತೀರ್ಥಂಕರರ ಶರೀರಾಕೃತಿಯ ಹನ್ನೆರಡು ಪಟ್ಟು ಇರುತ್ತದೆ. ಇದು ಮೂರು ಖಂಡಗಳಲ್ಲಿ ವಿಭಾಗಿತವಾಗಿರುತ್ತದೆ. ಘಂಟೆ, ಚಾಮರ, ಧ್ವಜಗಳಿಂದ ಅಲಂಕೃತವಾಗಿ ಮೂರುಲೋಕಕ್ಕೂ ಮಾನ್ಯವಾಗಿರುತ್ತದೆ. ಇದರ ದರ್ಶನದಿಂದ ನೋಡಿದವನ ಅಹಂಕಾರ ದೂರವಾಗಿ ಧಾರ್ಮಿಕಶ್ರದ್ಧೆ ಮೂಡುತ್ತದೆ" (ಜೈಪಕೋ. ೨೦೫): ಮಾನಮನೆಂತುಂ ಮಿಥ್ಯಾಜ್ಞಾನಿಗಳೆರ್ದೆಯೊಳಗೆ ನೆಲಸಲೀಯದೆ ನಾಲ್ಕುಂ ಮಾನಸ್ತಂಭಂಗಳ್ ರತ್ನಾನದ್ಧಂಗಳ್ ನಿರಂತರಂ ಸೊಗಯಿಸುಗುಂ (ಆದಿಪು. ೦೦-೨೪); ಮಿಥ್ಯಾಜ್ಞಾನಿಯ ಮಾನಮಂ ಸ್ತಂಭಿಸುವ ಮಾನಸ್ತಂಭಂಗಳಿಂ (ಶಾಪುಂಪು. ೯೪); ಮಾನಸ್ತಂಭದ ತುದಿಯಲ್ಲಿ ಒಂದು ಸಣ್ಣ ಮಂಟಪವೂ ಅದರಲ್ಲಿ ಒಂದು ಜೈನವಿಗ್ರಹವೂ ಇರುತ್ತವೆ (ಪ್ರವಾಸು. ೫೬). [ಸಂ.]

**ಮಾನಸ್ತೆ** (ನಾ). ಆತ್ಮಗೌರವವುಳ್ಳವಳು: ಸ್ವಾಭಿಮಾನಿ: ಈಕೆ ಬಹು ಮಾನಸ್ತೆ (ಶಾಗಹ. ೨೫-೫೦). [ಮಾನಸ್ತ + – ಎ$_2$]

**ಮಾನಸ್ತೋಕ** (ನಾ). ('ಮಾನಸ್ತೋಕೇತನಯೇ' ಎಂದು ಪ್ರಾರಂಭವಾಗುವ) ಒಂದು ಮಂತ್ರದ ಹೆಸರು: ಚಾರುತರ ಶ್ರೀಮದ್ವಿಭೂತಿ ಘುಟಿಕೆಯನೊಲಿದು ಭೂರಮಣ ತನ್ನ ವರ ಕರದೆ ಸುಕುರಂಗಮುದ್ರೆ ರುಚಿರದಿಂ ಪಿಡಿದು ವಿಮಳಮಾನಸ್ತೋಕಮಂತ್ರದಿಂದೆತ್ತಿ (ಪಪಮೋ. ೦೯-೦೦). [ಸಂ.]

**ಮಾನಸ್ಥಾನ** (ನಾ). ಗುಹ್ಯಾಂಗ : ಮಾನನಾಯಕರು ತಮ್ಮ ಮಾನಸ್ಥಾನದ ಏರ್ಪಾಡುಗಳನ್ನೆಲ್ಲ ಪೂರೈಸಿಕೊಂಡಾದ ಮೇಲೆ . . . ಬೆಟ್ಟಳ್ಳಿಯ ಕಮಾನುಗಾಡಿ . . . ತೀರ್ಥಹಳ್ಳಿಯ ಕಡೆಗೆ ಹೊರಟಿತು (ಮಲೆಮ. ೩೪೬). [ಸಂ.]

**ಮಾನಹಾನಿ** (ನಾ). ಅಪಮಾನ : ಅವಮಾನ : ವೇಸಿಯ ಸಂಗ ದ್ರವ್ಯದ ಕೇಡು ದಾಸಿಯ ಸಂಗ ಮಾನಹಾನಿಗೆ ಮೊದಲು (ಸಕಲ-ಕೈ.I. ೨೩-೬೩); ಎನಗೆ ನಿಮ್ಮಯ ದೂಸಱಿಂದಾಯ್ತಿನಿತು ಸಭೆಯಲ್ಲಿ ಮಾನಹಾನಿಗಳು (ಕುಮಾ.ಭಾ. ೧೧-೬). [ಸಂ.]

**ಮಾನಹೀನ** (ನಾ). ಗೌರವವಿಲ್ಲದವನಂ ; ನಾಚಿಕೆಗೆಟ್ಟವನು : ಮಾನಹೀನಗಭಿಮಾನವೇಕೆ (ಪುರಂದ. ೨-೬೨ ಪಲ್ಲವಿ) ; ಸಿರಿವಂತರ ಮನೆಗೆ ಹೋಗಿ ಒಂದು ಸೇರು ಅಕ್ಕಿಯನ್ನು ಯಾಚಿಸುವುದು ಮಾನಹೀನನ ಕಾರ್ಯವೆಂದು ಅವನಿಗೆ ಗೋಚರಿಸಿತು (ಕಾವೇರಿ. ೨೯) ; ಮಾನಹೀನನಿಗೆ ಬೇರೆ ಮಾನಹಾನಿ ಆಗುವುದುಂಟೇ ? (ನಾಣ್ಣು). [ಸಂ.]

**ಮಾನಾಂಗುಲ** (ನಾ). [ಶಿಲ್ಪಶಾ] ದೇವತಾಪ್ರತಿಮೆಗಳನ್ನು ಕಡೆಯುವಾಗ ದೇಹದ ಪ್ರಮಾಣವನ್ನು ನಿರ್ಣಯಿಸುವ ಒಂದು ಅಳತೆ : ಮಾನಾಂಗುಲ, ಮಾತ್ರಾಂಗುಲ, ದೇಹಲಬ್ಧಾಂಗುಲವೆಂಬ ಅಳತೆಗಳಿಂದ ಪಂಚತಾಲ, ನವತಾಲಾದಿ ವಿವೇಚನೆಯಿಂದ ಮೂರ್ತಿಗಳನ್ನು ರಚಿಸುವ ವಿಧಾನಗಳನ್ನೂ . . . ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಬಾಲಿದ. ೬೦). [ಸಂ.]

**ಮಾನಾಗ** (ನಾ). ದೊಡ್ಡ ನಾಗರಹಾವು : ಭೂನಾಗಕಮಿಮ ಮಾನಾಗಗಳ ಸಂಗತಿಯೆ ? (ಹಚ್ಚರ. ೯-೩೩). [ಮಾ$_4$ + ನಾಗ./ಸಂ. ಮಹಾನಾಗ]

**ಮಾನಾನ್ವಿತ** (ನಾ). ಗೌರವದಿಂದ ಕೂಡಿರುವವನು : ಘನಾನ್ವಿತಂ ಮೇಷಜಂ (ಶಾಕಿ. ೦೫೦). [ಸಂ.]

**ಮಾನಾಮಿ**, ಮಹನವಮಿ, ಮಹಾನಾವಿ, ಮಾನವಮಿ, ಮಾನೋಮಿ (ನಾ). ೧. ಆಶ್ವಯುಜ ಶುದ್ಧ ನವಮಿ ಮತ್ತು ಅಂದು ಆಚರಿಸುವ ಹಬ್ಬ ; ಕನ್ನಡಕ್ಕೆ-ಮಾಸಾವಂತಂ, ಮಾಲಕುಮಿ, ಮಾನಾಮಿ (ಕಮಳ. ೦೬೩ ಕ್ರ ಪೋ). ೨. (ಅಲಂ) ಶಿಕ್ಷೆ ; ದಂಡನೆ : ಓಪಳೆ ಕೂರ್ಮೆಗೆಟ್ಟನಗೆ ನೀನೇ ನಾನುಮೊಂದೇವಮಂ ಮನದೊಳ್ ಮಾಡಿದೊಡಂದೆ ದೀವಳಿಗೆಯಂ ಮಾನಾಮಿಯುಂ ಮಾಡೆನೇ (ಶಂಕಣ. ೪-೯೩). **ಮಹನವಮಿ** : ೩. ಅಂತ್ಯ ; ನಾಶ : ಅರಮನೆಯೊಳಗೆ ಪಸರಿಸಿತತುಳಶೋಕದ ಜಲಧಿ ಭೂಪಾಲಕನ ಸ್ಥೈರಣೆ ಗಾಯ್ತು ಮಹನವಮಿ (ಕುಮಾ.ದ್ರೋ. ೩-೬). **P** ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು. **ಮಹಾನಾವಿ** : ೪. ದೊಡ್ಡ ಹಬ್ಬ : ರೇವಣ ಮೂಡಣ ಬಟ್ಟೆಯೊಳ್ ಮೇಳನಾಗಸೆಟ್ಟಿಯ ಕೊಂದಪಗೆ ಸಂಣನಾತಾನೆಂಬ ಬೇಡನನಿಱಿದುದೆ ಮಹಾನಾವಿಯಾಗೆ (ಕ್ಷ. IV. ೩೩-೦೭ ; 1000 ?). **ಮಾನವಮಿ** : ೧. ಮಾನವಮಿಯ ಹಬ್ಬದ ದಿನದಿ ಬಾಲಕರೆಮ್ಮಯ ಪೂಬನದಿ ಆಡಲು ಬಂದು ನುಡಿವರು (ಗೀತಾಂ. ೦೯-೩೩) ; ಇವರು ಕೂಲಿಮಠದಲ್ಲಿ ಇರುವವರಿಗೆ ಮಾನವಮಿ ಹಬ್ಬ ಬಹಳ ಚೆನ್ನಾಗಿ ನಡೆಯುತ್ತಿತ್ತಂತೆ (ಪನ್ನರು. ೦೦೩). **ಮಾನೋಮಿ** : ೧. ಮಾನೋಮಿಯುಮುಕ್ಕಿವರೊಳಿಂದೀ ನಿಮ್ಮಡಿಯೋಲಗಕ್ಕೆ ಬಂದರಸರಪ್ರೋಲ್ ಮಿಮಾನಾಂಕನುಮೆಯ್ದಿರೆ ತಸ್ಸೇನೆಯೆನಲ್ ಮೆಱೆದುದಮಮ ಪಲವೆಲೆವೆಣ್ಣಾಳ್ (ಶಬ್ದ. ೩-೦೬೯).

**ಮಾನೋಮಿಯ ದಿಬ್ಬ** = ಹಂಪೆಯಲ್ಲಿ ಆಯುಧಪೂಜೆಯನ್ನು ಮಾಡುತ್ತಿದ್ದ ಒಂದು ಸ್ಥಳ : ಕ್ಷಾತ್ರವೃತ್ತಿಯ ವೀರದೃಶ್ಯಗಳು ನಡೆಯುತ್ತಿದ್ದ (ಮಹಾನವಮಿ) ಮಾನೋಮಿಯ ದಿಬ್ಬ ಈಗಲೂ ಮೂಕಮಾತುಗಳಿಂದ ಆ ಗತವೈಭವವನ್ನು ಬಿತ್ತರಿಸುವ 'ಪಳವಾನಿಸ' ದಂತಿವೆ (ಕಾಹಪ್ಪಿ. ೦೬೭). [<ಸಂ. ಮಹಾನವಮಿ]

**ಮಾನಾಯ** (ನಾ). ಧಾನ್ಯ ಅಳೆಯುವವನಿಗೆ ಕೊಡುವ ಧಾನ್ಯರೂಪದ ಕೂಲಿ ; ಪಡಿ : ಊರಲ್ಲಿ ಚಾವಡಿಯ ಕಾವಲ್ಗಾರರು, ನೀರುಗಂಟಿ, ದೀವಟಿಗೆಯವ, ಸ್ವಾಮಿಯದವರು . . . ಕಳ್ಳಬಂಟರು. ಅವರು, ಇವರು — ಎಲ್ಲಾಗ್ಗೂವೆ, ಸೇನಾಯಮುದ್ರೆ, ಕಡತದ ಕಾಣಿಕೆ, ಮಾನಾಯ, ಹೊರೆಹೊರೆ ತೆನೆಹುಲ್ಲು, ಕಣದಲ್ಲಿ ಕೊಳಗಕೊಳಗ ದವಸ . . . ಸಲ್ಲಿಸಿಕೊಳ್ಳುತ್ತಾರೆ (ಚಕ್ರತೀ. ೦೫೩-೨೩). [ಸಂ.]

**ಮಾನಿ$_1$** (ನಾ). ಒಂದು ಅಳತೆ : ಷೋಡಶಿಕೆ ಕುಡುಬ ಪ್ರಸ್ಥ ಆಢಕ ದ್ರೋಣ ಮಾನಿ ಖಾರಿಗಳಿವು ಚತುರ್ಗುಣತಂಗಳು ಇವು ಮೊದಲಾದುವು ಮಾನಪ್ರಮಾಣಮಕ್ಕುಂ (ಕರ್ಣಾಕ. ೯೯). [<ಸಂ. ಮಾನ]

**ಮಾನಿ$_2$** (ನಾ). ದಾನವಾಗಿ ನೀಡಿದ ಭೂಮಿ ; ಉಂಬಳಿ : ಹಿರಿಯಕೆಱೆಯ ಕೆಳಗೆ ಗರ್ದೆ ಸಲಗೆ ೩ ಮಾನಿಯಾಲು ಗರ್ದೆ ಸಲಗೆ ೩ (ಎಕ. XII. ತುಮಕೂ. ೩೩-೯೩ ; 1151); ಹಿರಿಯೂರೊಡೆಯರ ಮೊದಲ ಹಸುಗೆ ಕೊಡ್ಡೆಯಾಲದಲ್ಲಿ ಮಾನಿಯೊಳಗೆ ಕೇಗ್ಗೊಡು ಮತ್ತರೊಂಭತ್ತು (ಕ್ಷೇತ್ರ. IX-i, ೩೩೩-೯೩ ; 1215) ; ಯಿ ಉಭಯಗ್ರಾಮಗಳ ಮಧ್ಯದಲ್ಲಿ ಯಿರುವ ಅಗಚಿಗದ್ದೆ ಮಾನಿಯಲ್ಲಿ ಮತಾ ಕಟ್ಟಿಸಿ (ಎಕ. V. ಹಾಸನ. ೦೭-೦೩ ; 1774). 'ಮನ್ನೆಯ' ಪರಾ. [<ಸಂ. ಮಾನ್ಯ]

**ಮಾನಿ$_3$** (ನಾ). ಗೌರವಯುಕ್ತನಾದವನು ; ಮಾನವಂತ ; ಮರ್ಯಾದಸ್ಥ : ಅಲ್ಲಿಂ ಮುನ್ನ ಮಾನಿಗಳರಸಂ ನೆಬಿಯಣ್ಣಾನಿಂಬಱಿವ ಮಂತ್ರಿಯಪ್ಪ ತುಂಬುರನಂ ಕರೆದು (ಪಂಪರ. ೦೨-೩) ; ಅವರನು ಕರೆದನು ತತ್ವಜ್ಞಾನಿ ಸ್ಥಿರಣಿ ಸಮತಾಭಾವದ ಮಾನಿ (ಚರಸೋ. ೦೦-೨). [ಸಂ. ಮಾನಿನ್]

**ಮಾನಿ$_4$** 'ಮಾನುವೆ' ನೋ.

**ಮಾನಿಕಪ್ಪ** (ನಾ). ಮಾನ್ಯವಾಗಿ ಕೊಟ್ಟ ಕಾಣಿಕೆ : [ಜೊಂ]ಮಂಣ ಒಡೆಯರ ನಿರೂಪದಿಂ ದೇವರಾಯಒಡೆಯರ ಅನವೇರಿಯದ ಉಭಯ ಮಾರ್ಗ್ಗದ ಸುಂಕದ ಮಾನಿಕಪ್ಪ ಮೂಗವಾಡಿಯ ಪುರದ × × ದ ನಾಯನಾರದೇವರಿಗೆ ಸ್ಥಳ × ಕಪ್ಪವ × × × ಜೊಂಮಣಒಡೆಯರು ವಿಜಯನಗರಕ್ಕೆ ಬಿಜಯಮಾಡುವಾಗ ದಣಾಯಕ ಕೊಟ್ಟ ಪಾಗ ಚಿಕೂರು ಆ ದೇವರಿಗೆ ಯೆರಡು (ಕ್ಷೇತ್ರ. IX – ii. ೪೨೮-೦೨ ; 1405). [ಮಾನಿ$_2$ + ಕಪ್ಪ$_1$]

**ಮಾನಿಕೆ** (ನಾ). ಹಿರಿಮೆ ; ಘನತೆ : ನೀವೆಲ್ಲ ಮಾತೃಕೆಯರ ಯೋನಿಯೊಳ್ ಪೊಱಮಟ್ಟು ಬರುತೆ ಸೂನಿತವಸನದಿಂದೇಕೆ ಬಂದಪವಹ ಮಾನಿಕೆಗಳ ನೋಡಿದಱಿ (ಪೋಚಕ. ೩೯-೩). [ ಮಾನ + _ ಇಕೆ ]

**ಮಾನಿಗೆ** ' ಮಾನಗೆ ' ನೋ.

**ಮಾನಿತ** (ಗು). ೧. ಗೌರವಕ್ಕೆ ಪಾತ್ರವಾಗಿರುವ ; ಪೂಜ್ಯವಾಗಿರುವ : ಮಾನಿತತತ್ವಾರ್ಥಶ್ರದ್ಧಾನದಿನಾ ಸೂರ್ಯಮಿತ್ರಮುನಿಪತಿಗವಧಿಜ್ಞಾನಂ ತೊಟ್ಟನೆ ಪುಟ್ಟಿದುದು (ಸುಕುಮಾ. ೩-೯೭) ; ಮಾನಿತಗುಣತತ್ವಪರಿಜ್ಞಾನಮೆ ತಾಂ ಬೋಧಿತತ್ವಮೆಂಬುದು (ಶಬಸಂ. ೦೬೩-೦) ; ಮಾನಿತೋತ್ತಮಭಕ್ತಿನಿಷ್ಠಾನೂನಮಾನಸನಂ ಭವತ್ಕೃತಿಮಾನವಪ್ಪ ಸುಪುತ್ರನಂ ಕೊಟ್ಟನ್ನನುದ್ಧರಿಸು (ಅಕಪು. ೨-೦). (ನಾ). ೨. ಗೌರವಕ್ಕೆ ಪಾತ್ರವಾದುದು, – ಅರ್ಹವಾದುದು : ನಾನಾರ್ಥಮೇಕರೂಪಾಧೀನವಚೋರಚಿತಮಪ್ಪೊಡಕ್ಕುಂ ಶ್ಲೇಷಂ ಮಾನಿತಮಳಂಕ್ರಿಯಾನುವಿಧಾನಂ ಮತ್ತಿಂತು ತದುಪಲಕ್ಷ್ಯವಿಕಲ್ಪಂ (ಕಾವ್ಯಾ. ೩-೦೦೬) ; ಮಾನಿತಮಪ್ಪ ಮಾನಸುಕೆ ಮೆಯ್ಯೊಳೆ ಕೂಡಿರೆ ಧಾತ್ರನೆಂದೆನಲ್ ತಾನೆಸೆದಿರ್ದ ಮಾನಿನಿಯರಂ . . . ಹೀನರೆನಿಪ್ಪವಂದಿರೊಳೆ ಕೂಡಿ ವಿವೇಕವಿಹೀನನಾಗಿ ಚೀ ಮಾನವಿದೂರ ನಕ್ಕಟಜನೆಂದಭಿಧಾನಮನಾಂತನಾಗದೇ (ಶೇಖುಪು. ೩-೦೬೩) ; ಗುರುಕೃತಂ, ಮಾನಿತಂ, ಪೂಜಿತಂ ತಾನಲ್ಲ (ಶೃಂಗಾರ. ೬೩-೩೦೨). ೩. ಗೌರವಾನ್ವಿತ ವ್ಯಕ್ತಿ ; ಮರ್ಯಾದಸ್ಥ. [ಸಂ.]

**ಮಾನಿನಿ** (ನಾ). ೧. ಆತ್ಮಗೌರವವುಳ್ಳವಳು : ಸ್ವಾಭಿಮಾನಿಯಾದ ಹೆಂಗಸು. ೨. ಹೆಂಗಸು ; ಸ್ತ್ರೀ : ಮಲ್ಲಿಗೆಯುಂ ನಗೆಯುಂ ಕರಪಲ್ಲವದಿಂದರುಣಸರಸಿರುಹಮುಂ . . . ತೋರ್ಪರ್ ಸಲ್ಲಲಿತಾಂಗದ ಲತಾಂಗಿಯರ್ ಮಾನಿನಿಯರ್ (ಜಗಚ. ೨-೨೮) ; ಭರತಭೂಮಿ . . . ಯಾರನ್ನು ಉಚ್ಛ್ವಾಸದ ಮೇಲೆ ಕುಳ್ಳಿರಿಸಬೇಕೋ ಆ ಮಾನಿನಿಯರು ಅನೇಕರಿದ್ದಾರೆ (ರಘುಗಾ. ೭೮). ೩. ಹೆಂಡತಿ : ಮಡದಿ ; ಪತ್ನಿ : ಮಾನಿನಿ ನಾಲ್ಕುಂ ನಿಯಮವಿಧಾನದ,ಬಳಿಸಂದು ನಿಟ್ಟೆಯಿಂ ಚರಿಯಿಸಿ ಸಂತಾನಾರ್ಥಮೆನೆ ಚತುರ್ವಿಧದಾನವ್ಯಸನದೊಳೆ ದಿವಸಮಂ ನಡೆಯಿಸುವಳ್ (ಪುಣ್ಯಪು. ೪-೪೬) : ಕುಳ್ಳಿರ್ದನು ಮಹೀಪತಿ ಮಾನಿನಿಯ ಮಲಗಿ (ಕುಮಾವ್ಯಾ. ೦೬-೧೦) ; ನಾನೆ ಮದಿ ನಿನ್ನಯ ವರರೂಪದನೂನಲಸಚ್ಚಿತ್ರಂ ಬರೆದೆನ್ನಯ ಮಾನಿನಿಯಿಂದಾಕೆಯ ಬಳಿಗಟ್ಟಿದೆನತಿಸಂತೋಷದೊಳು (ಜಯುಕಾ. ೩-೭೪). ೪. ಪ್ರಿಯನ ಅವಿನಯವರ್ತನೆಯಿಂದ ಕುಪಿತಳಾಗಿ ಅವನಿಂದ ದೂರವಿರಲು ಬಯಸುವವಳು ; ಪ್ರಣಯಕೋಪವುಳ್ಳ ಹೆಂಗಸು.
[ ಸಂ. ಮಾನಿನೀ ]

**ಮಾನಿಭದ್ರಗೌಡ** (ನಾ). ಒಬ್ಬಾತನ ಹೆಸರು : ತಂನ ಅನುಜ ಮಾನಿಭದ್ರಗೌಡರ ಮಕ್ಕಳು (ಎಕ. VII. ಶಿಮೊ. ೦೦೪-೦೪ ; 950).
[ ಮಾನಿಭದ್ರ$_0$ + ಗೌಡ$_1$ ( < ಗಾಮುಂಡ ) ]

**ಮಾನಿಷ್ಠ** (ನಾ). ಮರ್ಯಾದಸ್ಥ ; ಮಾನವಂತ : ಮಾನಕೆ ಮಾನಿಷ್ಠ ರಂಜಿ ಹಿಂಜರಿದರೆ . . . ತನಗೆಯೆ ಅಂಜಿ ಹಿಂಜರಿದರು ಭಾಪುರೆ ಎಂದುಬ್ಬಿ ಮೆರೆವನು ಮೋಡಿ (೩ಂಜಾಶ. ೯೪-೩೪) : ಅದು ಮಾನಿಷ್ಠರ ಮನೆಯೊಳಗೆ ಬರಲು ತಕ್ಕ ಮರ್ಯಾದೆಯನ್ನು ಕಲಿತಿಲ್ಲ (ತಿಂಡಿ. II. ೦೯೦). [ಸಂ.]

**ಮಾನಿಷ್ಠೆ** (ನಾ). ಆತ್ಮಗೌರವವುಳ್ಳವಳು ; ಸ್ವಾಭಿಮಾನಿ : ಮಾನಿಷ್ಠೆಯಾದ ಶಕುಂತಲೆಗೆ ಇದರಿಂದ ತುಂಬ ಅವಮಾನವಾಯಿತು (ಶಕಕಾ. ೩೯೬) : ಸರೋಜ ಬಹಳ ಮಾನಿಷ್ಠೆ (ಮಜಾಗ. ೬೩). [ಮಾನಿಷ್ಠ + _ಎ$_2$]

**ಮಾನಿಸ$_1$** ' ಮಾನುಸ ' ನೋ.

**ಮಾನಿಸ$_2$** (ನಾ). ಮನಸ್ಸು ; ಚಿತ್ತ : 'ಮಾನಿಸಗಳ್ಳಿ' ಪರಾ.
[<ಮಾನಸ$_2$]

**ಮಾನಿಸಗಳ್ಳಿ** (ನಾ). ಮನಸ್ಸಿನಲ್ಲಿ ವಂಚನೆಯುಳ್ಳವಳು : ನಳನಳಿಸುವ ತೋಳುಗಳಿಂದ ಪತಿಯನಾಲಿಂಗಿಸಿ ಮನದ ನೇಹದಲ್ಲಿ ಜಾರಪುರುಷನನ್ನು ಬಿಗಿಯಪ್ಪಿದ 'ಮಾನಿಸಗಳ್ಳಿ'ಯ ಜಾರೆಯ ಆಟ ! (ವೀರವಾ. ೧೦೩ ಕೃಸ್ವಾ.ಪಠ). [ಮಾನಿಸ$_2$ + ಕಳ್ಳಿ$_1$]

**ಮಾನಿಸಗಳ್ಳೆ** (ನಾ). = ಮಾನಿಸಗಳ್ಳಿ : ಕಂಗಳೊಳೊಬ್ಬನ ಕರೆವಳು ಮನದಲೊಬ್ಬನ ನೆರೆವಳು ಕೂಡಲಸಂಗಮದೇವ ಕೇಳಯ್ಯಾ ಮಾನಿಸಗಳ್ಳೆಯ ನಂಬದಿರಯ್ಯಾ (ಬಸವ. ೦೦೦). [ಮಾನಿಸ$_2$ + ಕಳ್ಳೆ$_1$]

**ಮಾನಿಸದೇರ** 'ಮಾನಸದೇರ' ನೋ.

**ಮಾನಿಸವಾಟಿ** 'ಮಾನಸವಾಟಿ' ನೋ.

**ಮಾನಿಸು$_1$** 'ಮಾಣಿಸು' ನೋ.

**ಮಾನಿಸು$_2$** (ಕ್ರಿ). ೧. ಗೌರವಿಸು ; ಆದರಿಸು : ಸತ್ಕರಿಸು : ಭೂಸುರರ ಮಾನಿ[ಪಾಠಾಂ. ಮನ್ನಿ]ಸು ದೇಶಮಂ ನೋಡಿ ಪಾಲಿಸು (ಹರಿಶಾ. ೮-೨೮) ; ನಡೆಯ ಮನೆಗೆಂದವರ ಕೈಗಳ ಪಿಡಿದು ತಂದನು ತನ್ನ ಭವನಕೆ ತಡದಿರದೆ ಮಧುಪರ್ಕವಿಷ್ಟರದಿಂದ ಮಾನಿಸಿದ (ಸಂಶಶ. ೩-೭೩). ೨. ಒಪ್ಪು ; ಅಂಗೀಕರಿಸು : ಸಾಮಾಜಿಕಪ್ರಪಂಚದಲ್ಲಿ ಅವರು ಬೋಧಿಸಿದ ಸುಧಾರಣೆಗಳು ಎಲ್ಲರೂ ಮಾನಿಸತಕ್ಕುವೇ ಆಗಿವೆ (ಶಾರದ. ೩೨೦). ೩. ಹೊಂದಿಕೊಳ್ಳು ; ಒಗ್ಗು : ವಿಶೇಷವಾಗಿ ಹೆಂಗಸರಿಗೆ ಘಟ್ಟದ ಕೆಳಗಿನ ಹವೆಯು ಬಹು ಚನ್ನಾಗಿ ಮಾನಿಸುತ್ತದೆ (ಕಶಾಗ. ೨೨) : ಬೆಳಗಾವಿಯ ಹವೆಯು ಯೂರೋಪಿಯನ್‌ಜನರಿಗೆ ಪೊಳತಾಗಿ ಮಾನಿಸುವದರಿಂದ . . . ಇಲ್ಲಿ ಮನೆ ಮಾಡಿದ್ದಾರೆ (ಕಶಾಗ. ೪೯೨). ೪. ಅಳತೆ ಮಾಡು : ಅಳೆ : (೬). ೫. (ಮತ್ತೊಬ್ಬರೊಡನೆ) ಯೋಚಿಸು : ಸಮಾಲೋಚಿಸು : ಮಾನಾಪಮಾನವನು ಜ್ಞಾನ ತನಗಾದುದನು ಮೌನಿನಿಯು ಒಲಿದ ರತಿ ಸುಖವ ಪರರಲ್ಲಿ ಮಾನಿಸುವನೆಗ್ಗ (ಸರ್ವಜ್ಞ. ೦೩೪೮). ೬. ಗಣನೆಗೆ ತರು ; ಲಕ್ಷಿಸು : ಲೆಕ್ಕಿಸು : ಮಾನಿನಿಯರುಪಭೋಗಕಾಲವ ಮಾನಿಸರು ಘನಕಾಮುಕರು (ಕುಮ್ಮಾರ. ಹಿಂ೨. ೩-೩೪). [ಮಾನ + —ಇಸು$_3$]

**ಮಾನಿಸೆ** 'ಮಾನಸೆ' ನೋ.

**ಮಾನೀಶ** 'ಮಾನಸ' ನೋ.

**ಮಾನು** (ನಾ). ಒಂದು ಬಗೆಯ ಭೂಮಿ (?) : ಕೆರೆ ದಾರಿ ಮಾನು ಮರಡುವರು ಬೇನುವುಳ್ಳದ್ದನ್ನು ಸ್ವಾಮ್ಯವನ್ನು ಗಂಡಿಗೆ ಮೂಲಿ ಹೆಣ್ಣಿಗೆ ಕಂನ್ಯಾದಾನವಾಗಿ ಸುಖದಿಂ ಭೋಗಿಸುವಂತಾಗಿ (ಮೈಆಂ. ೦೯೩೪. ೨೫-೨೦ ; 1394) ; ತಂಮ ದಾನಮೂಲಕೆ ಸಲುವ ಭೂಮಿಮಾನುಗಾಜನು ಆ ವಿಷ್ಣುಭಟ್ಟರಿಗೆ . . . ನಿಧಿ ನಿಕ್ಷೇಪ ಜಲಪಾಷಾಣ ಅಕ್ಷೀಣಿ ಆಗಾಮಿ ಸಿದ್ಧಸಾಧ್ಯಅಷ್ಟಭೋಗತೇಜಸ್ವಾಮ್ಯಸಹಿತವಾಗಿ . . . ಸಲಿಸಿ (ಎಕ. VI. ಶೃಂಗೇರಿ. ೨೫-೦೦; 1408). [< ಮಾನ್ಯ ?]

**ಮಾನುವೆ, ಮಾನಿ$_4$** (ನಾ). ಒಂದು ಬಗೆಯ ಹುಲ್ಲು : "ಮಾನುವೆ [ಪಾಠಾಂ. ಮಾನವ. ಘಾಣವೆ. ಮಾಣುವೆ] ಸಿತೆಯೆನಿಕ್ಕು (ಮಂಗರಾ. ೩೩-೮). **ಮಾನಿ$_4$** : ಎತ್ತುಗಳು ಕಾವಲಿನಲ್ಲಿ ತಲೆ ಎಟ್ಟಿ ಮಾನಿಹುಲ್ಲು ಮೇಯುತ್ತಿರುವಾಗ ಅವುಗಳನ್ನೇ ಪ್ರೇಕ್ಷಕರೆಂದು ಭಾವಿಸಿ ಕುಣಿಯುತ್ತಿದ್ದ (ಶಸೂರು. ೩೦೪). [ ? ]

**ಮಾನುಷ** (ಗು). ೧. ಮನುಷ್ಯನಿಗೆ ಸಂಬಂಧಿಸಿದ. (ನಾ). ೨. ಮನುಷ್ಯ ; ಮಾನವ : "ಮನುಷ್ಯಃ. ಮಾನುಷಃ. ಮರ್ತ್ಯಃ . . . ಪೂರುಷಃ. ವಿಟ್—ಈ ೧೨ ಮಾನಸರ್" (ಹಲಾಯು. ೩೩-೦೬೬); ಧರೆಗೆ ಮಾಯಾಗೂಢಮಾನುಷನಾಗಿ ಮೆರೆದನು ಗೋಕುಲದಲಿ (ಶಿಥಾಗ. ೩-೨-೦೪). ೩. ಮನುಷ್ಯನಿಂದ ಮಾಡಲು ಸಾಧ್ಯವಾದುದು.—ಶಕ್ಯವಾದುದು; ಮನುಷ್ಯಪ್ರಯತ್ನ : ಮಾನುಷವನ್ನು ವಿಚಾರಿದುದಕ್ಕೆ ವ್ಯಥೆ ಪಡಬಾರದು (ಅಗ್ರಹ. ೪೯). [ಸಂ.]

**ಮಾನುಷತ್ವ** (ನಾ). ಮನುಷ್ಯನಂತೆ ಇರುವಿಕೆ ; ಮನುಷ್ಯನಾಗಿರುವಿಕೆ : ಇನಿತೇಕೆ ಮಾನುಷತ್ವಮನೆನಸುಂ ನಟಿಯಿಸುವೆ ಕೃಷ್ಣ ಪೊಣಮುಡುಮುಡುವಿಂ (ಜಗಚ. ೩-೯೮). [ಸಂ.]

**ಮಾನುಷಸಿದ್ಧಿ** (ನಾ). ಮನುಷ್ಯಪ್ರಯತ್ನದಿಂದ ಸಾಧಿಸಿದುದು : ದೇವಸಿದ್ಧಿ ಮಾನುಷಸಿದ್ಧಿಯೆಂಬೆರಡುಂ ಸಿದ್ಧಿಯುಮಂ . . . ಪಾತ್ರಸಂಕ್ರಮಣದೊಳ್ ನೆಱೆಯೆ ತೋಱೆ (ಅತಪು. ೩-೩೦ ವ). [ಸಂ.]

**ಮಾನುಷಿ** (ನಾ). ಮಾನವಸ್ತ್ರೀ : ನೀನು ಯಾರು ಸುಂದರಿ . . . ಯಕ್ಷಿಯೋ ಮಾನುಷಿಯೋ ? (ಶಕಕಾ. ೧). [ಸಂ. ಮಾನುಷೀ]

**ಮಾನುಷೋತ್ತರಗಿರಿ** (ನಾ). [ಜೈನ] ಮಧ್ಯಮಲೋಕದ ಒಂದು ಪರ್ವತ; P "ಈ ಪರ್ವತವು ಪುಷ್ಕರದ್ವೀಪದ ನಟ್ಟನಡುವೆ ಗೋಲಾಕಾರವಾಗಿರುತ್ತದೆ. ಈ ಪರ್ವತವನ್ನು ದಾಟಿ ವಿದ್ಯಾಧರರು ಮತ್ತು ಋದ್ಧಿಪ್ರಾಪ್ತಮುನಿಗಳು ಹೋಗಲಾರರು. ಆದುದರಿಂದ ಇದಕ್ಕೆ ಮಾನುಷೋತ್ತರವೆಂಬ ಹೆಸರು" (ಆದಿಪು. ಜೈನಪಾರಿಭಾಷಿಕ ಶಬ್ದಕೋಶ) : ಮಂದೇ ಪಂಚಸುಮಂದರಾದ್ರಿಷು ವನಾಂತಭ್ರಾಜಿನಃ . . . ಸೀಮನಿ ಮಾನುಷೋತ್ತರಗಿರೌ ಚತ್ವಾರಿಚತ್ವಾರಿಚ (ಆದಿಪು. ೦೬-೬೬). [ಸಂ.]

**ಮಾನುಷ್ಯ** (ನಾ). ೧. ಮನುಷ್ಯಧರ್ಮ; ಮಾನವಸ್ವಭಾವ. ೨. ಮನುಷ್ಯ : ತಂಗಿ ಕೇಳವನೆನ್ನ ಮಗನೊಂದಂಗದಿಂ ಮಾನುಷ್ಯಭವವೀತಂಗೆ ನಿನ್ನೊಳು ಜನಿಸಲಾಯಿತು ಲೋಕಹಿತಕಾಗಿ (ಬಸಪು. ೩-೨೮). [ಸಂ.]

**ಮಾನುಸ**, ಮಾನಸ$_1$, ಮಾನಿಸ$_1$, ಮಾನೀಶ (ನಾ). ೧. ಮನುಷ್ಯ; ಮಾನವ. **ಮಾನಸ$_1$** : ೧. ಮುಂದಣ ಮಾನಸರಂ ಪಡಿಯುಜಿರ್ ತೊಲಗಿಸುತ್ತುಂ ಬರೆ (ಪಶ್ಚಾರಾ. ೬೦–೦೩) : ಬಾಗದ ಭೋಗದಕ್ಕರದ ಗೇಯದ ಗೊಟ್ಟಿಯುಲಿಂಪಿನಿಂಪುಗಳ್ಗ ಗರಮಾದ ಮಾನಸರೆ ಮಾನಸರ್ (ಶಂಕರಾ. ೪–೨೯) ; ಎಗ್ಗ ಮಾನಸರ ಕುಲಗುರುವೆಯಾಗಳೆ ನಿಂದ ನಿಲವಿನಿಂ ಭೂಷಿತವಾಗು (ಶಬ್ದ. ೨೦–೨೬). **ಮಾನಿಸ$_1$** : ೧. ಆವರ ಮಗಂ ತಿಪ್ಪಯ್ಯನೆಂಬಾ ಪದಿನೇಟ್ಮಾನಿಸುಂಬೆರಸಿ ಕಾಳೆಗದೊಳ್ಸತ್ತಲ್ಲಿ (ಎಕ. V, ೮೩೪. ೩೦–೬; 920) ; ಮುರವಿರೋಧಿಯು ಬಲುಹ ಹೇಳಾ ಪಾರ್ಥನೆಂಬವನಾವ ಮಾನಿಸನು (ಕುಮಾ.ಭ. ೩–೬); ಜೇನಶಾಲೆಗಳಲ್ಲಲ್ಲಿ ಏನೆಂಬೆ ನೂತನವಡೆದಿಹುವುಜ್ ನೋಳ್ಪ ಮಾನಿಸರುಗಳ ಕಣ್ಮನಕೆ (ಶಂಕರ. ೨–೭೪). ೨. ಆಳು; **ಸೇವಕ** : ಶ್ರೀಮ(ಂ)ನ್ಮಹಾಪ್ರಧಾನಂ ಮುದ್ದೆಯದಂಣಾಯಕ್ಕರ ಮಾನಿಸನು ಆಗಿ ಕುಡುಹೂರ ಕೋಟೇಶ್ವರದೇವರಲ್ಲಿ ಆಚಂದ್ರಾರ್ಕವಾಗಿ ನಡೆಸುವ ಧರ್ಮ್ಮದ ಕಟ್ಟಳೆ (ಶಾಇ. IX–ii, ೪೦೭–೨೪; 1377); ಮಾನಿಸರ ಕಳುಹಿದರೆ ಸಾಲದೆ (ಕುಮಾ.ಸ. ೪–೬). **ಮಾನೀಶ** : ೧. ನೀನೀಶನೀಯದೆ ಮಾನೀಶನೀವನೆ (ದೇಕಾವ. ೪೦–೭೭); ಈಶತ್ವವಿಲ್ಲವಲೆ ಈಶ್ವರನು ಎನಿಸಿಹನೆ ಈಶನಾನೀಶನೆನಬೇಡ ಜಗದಿ ಮಾನೀಶನೇ ಈಶ (ಸರ್ವಜ್ಞ. ೦೨೨೩). ☞ ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ.

**ಮಾನುಸಗಂಡ** = ಒಂದು ಬಿರುದು : ಬಲ್ಲಡೆಸು(ಶೂ)ದ್ರಕನ್ . . . ಕಟ್ಟಾಣ್ಮಾನುಸಗಣ್ಡ ಮುನ್ನವಬಣ್ಣನಂ ಬೀಟಿವೋಂ ಪೆಡೆಯಂ ಬೆ[ಳ]ಪ ಬಿರುದಪ್ಪವರ ಬಿರುದನೊಡ್ಡುಟಿವೊನ್ (ಎಇ. XXIV, ೧೯೩–೯; ಸು. 885). [< ಪ್ರಾ. ಮಾಣುಸ. / ಸಂ. ಮಾನುಷ]

**ಮಾನೆ** (ನಾ). ಮೇಲ್ಪಂಕ್ತಿ ; ನಕಲು ; ಮಾದರಿ : ಇವಲ್ಲದೆ 'ಮಾನೆ'ಗಳನ್ನು ಬರೆಯುವುದಕ್ಕೆ ಒಣಗಿದ ಎಕ್ಕದೆಲೆಗಳನ್ನು ಉಪಯೋಗಿಸುವರು (ಗುಜಾ. ೪). 'ಮಾನೆಪುಸ್ತಕ' ಪರಾ. [ ? ]

**ಮಾನೆತಿದ್ದು** (ಕ್ರಿ). ಮೇಲ್ಪಂಕ್ತಿಯನ್ನು ಅನುಸರಿಸಿ ಬರೆ,—ತಿದ್ದು : (೬). [ಮಾನೆ + ತಿದ್ದು$_1$ (< ತಿರ್ದು$_2$) ]

**ಮಾನೆಪುಸ್ತಕ** (ನಾ). "(ಬರಹ ಕಲಿತುಕೊಳ್ಳುವವರು) ಮೇಲ್ಪಂಕ್ತಿ ನೋಡಿಕೊಂಡು ಬರೆಯುವ ಪುಸ್ತಕ : ಮೇಲ್ಪಂಕ್ತಿಪುಸ್ತಕ ; ಮಾನೆ ಪುಸ್ತಕ" (copy book. ಇಂಕ). [ಮಾನೆ + ಪುಸ್ತಕ]

**ಮಾನೋನ್ನತ** (ಗು). ೧. ಹಿರಿದಾದ ಗೌರವದಿಂದ ಕೂಡಿದ : ಮಹಾಮಾತ್ಯಪದಸ್ಥೇ ವಿರಾಜಮಾನಮಾನೋನ್ನತಪ್ರಭುಮಂತ್ರೋತ್ಸಾಹ ಶಕ್ತಿತ್ರಯಸಂಪನ್ನರಪ್ಪ ಶ್ರೀಮತ್ ಪೆರ್ಗ್ಗಡೆ ವಾಮಣಯ್ಯಂಗಳ ಬೆಸದೆ (ಶಾಇ. XX, ೩೪–೯; 1053). (ನಾ). ೨. ಹಿರಿದಾದ ಗೌರವದಿಂದ ಕೂಡಿದವನು ; ಶ್ರೇಷ್ಠವ್ಯಕ್ತಿ: ನಿನ್ನ ಮಡಗೂಟಿನಿಲಂ ಮಾನೋನ್ನತ ನೀನೀಯೆ ಬಂದುದೆನಗೆ (ಅದಿಪು. ೦೪–೦೪೪); ಮಾನೋನ್ನತ ನಿರವದ್ಯ ಕುಲೀನ ಮಹಾಪುರುಷ ಪರಧನಂಗಳ ದತ್ತಾದಾನಂಗಳ್ ನಿನಗಾಗವು (ಶಾಂತಿಪು. ೩–೭೭). [ಸಂ.]

**ಮಾನೋನ್ನತಿ** (ನಾ). ಹಿರಿದಾದ ಗೌರವ : ಮಾನೋನ್ನತಿ ವರ್ಧಮಾನ ಮುಮುಕ್ಷುಜ್ಞಾನೋದಯಂ ವರ್ಧಮಾನಂ . . . ಎನಲ್ ತಾಂ ಧೊರೆ ವರ್ಧಮಾನಮುನಿಪೊಳ್ ಶ್ರೀವರ್ಧಮಾನಾಹ್ವಯಂ. (ಸುಕುಮಾ. ೦–೨೩). [ಸಂ.].

**ಮಾನೋಮಿ** ' ಮಾನಾಮಿ ' ನೋ.

**ಮಾನ್ಗರಿ ?** (ನಾ). ಮಾವಿನ ಎಲೆಯಾಕಾರದ ಧ್ವಜ (?) : ಮಾನ್ಗರಿ ಭಾರಿ ನಗಾರಿ ಮೇಕುಮಂಗುಲಿಪ ಸುರಾಂತ ಸತ್ತಿಗೆ ನಿಶಾನೆಯು . . . ಶಂಖ ಸುಚಕ್ರವು ರಾಜರಾಜನಿಂದಲಿ ಪಡೆದಾತ ಘಂಟೆಯ ನರೇಶ್ವರ (ಬೀಳಶಂ. ೦–೦೫೬). [☞ ಇದು 'ಮಾಂಗರಿ' ಎಂಬುದರ ಅಪಲಿಖಿತವಿರಬಹುದು]

**ಮಾನ್ಯ** (ಗು). ೧. ಗೌರವಕ್ಕೆ ತಕ್ಕ; ಮನ್ನಣೆಗೆ ಯೋಗ್ಯವಾದ : ನಾನಾಮಾನ್ಯಜನಾಂತರಂಗನಿಹಿತಾನಂದೋದಯಂ . . . ಪಾಲಿಸಿದಂ ಮಹೀವಲಯಮಂ ಸಂಸಾರಸಾರೋದಯಂ (ಆದಿಪು. ೬–೭೭). ೨. ಹೊಂದ ತಕ್ಕ : ಒಪ್ಪತಕ್ಕ. (ನಾ). ೩. ಮನ್ನಣೆ ; ಗೌರವ : ಮನೆಯ ಜಾಮಾತೃವಿಗೆ . . . ಅನುದಿನವು ಗಳಹುವ ಪಾಟಿಗುಂಟೇ ಮಾನ್ಯ (ಕೌರಾ. ೦೩–೩೦). ೪. ಗೌರವಯುಕ್ತವಾದುದು ; ಮನ್ನಣೆಗೆ ಪಾತ್ರವಾದುದು : ತನಗೆ ತಂದೆ ಬೋಧಿಸಿದ ಪರಸ್ವಾತ್ಮಧರ್ಮವೇ ಮಾನ್ಯವೆಂದದನು ಧರಿಸಿ ತಲೆಯಲ್ಲಿ (ಕುಪು. ೦೩–೩); ರಾಜಾಜ್ಞೆಯು ಸರ್ವಥಾ ಮಾನ್ಯವೇ ಆದರೂ ಮಾಡಬಾರದ ಆಜ್ಞೆಯನ್ನು ಮಾಡಿದರೆ ಅದಕ್ಕೆ ಕಟ್ಟುಬೀಳುವುದೆಂತು ? (ಮುಹಾಇ. ೨೪). ೫. ಗೌರವಯುಕ್ತನಾದವನು ; ಪೂಜ್ಯನಾದವನು : "ಮಾನ್ಯಂ ಪ್ರಕೃಷ್ಟಂ" (ಶಬ್ದಕೋ. ೦೦೦–೦೪); ಸವಿಗೆಟ್ಟನ್ನವದೂಟವೇ ಕುಜನರೊಳ್ ಕೂಡಿರ್ಪವಂ ಮಾನ್ಯನೇ (ಸೋಮೇಶ. ೨೨); ನೀವು ಮಾನ್ಯರು ನಿಮ್ಮ ದಾಸಿ ಮಹಾವಿಗಡೆ (ಬಸಪು. ೫೩–೩೬) ; ಮಾನ್ಯರೆ ಮಾನ್ಯರ ಹಿರಿಮೆಯನರಿವರು ಅರಿಯರು ನೀಚರಾದವರು (ತಿಂತ್ರಿಣ. ೨೨೩–೨). ೬. ಇನಾಮು ; ಬಹುಮಾನ ; ಉಡುಗೊರೆ : ಇತರರು ಐದುರೂಪಾಯಿ ಸಂಬಳ ಕೊಡುವ ಕಡೆ, ನಾನು ಎಂಟುರೂಪಾಯಿ ಕೊಡುತ್ತೇನೆ . . . ಹಬ್ಬ ಹುಣ್ಣಿಮೆ ಅಂದರೆ ಅದಕ್ಕಾಗಿ ಬೇರೆ ತಸ್ತೀಕು ಕೊಡುತ್ತೇವೆ. ಅವರಿಗೆ ಮಾನ್ಯಗಳು ಇವೆ (ಮುಳ್ಳ. ೦೪೪). ೭. ದಾನವಾಗಿ ನೀಡಿದ ಭೂಮಿ ; ಉಂಬಳಿ : ಅಯ್ಯಣಬ್ಬೆ ತಮ್ಮ ಮಾನ್ಯದೊಳಗೆ ಮಟ(ತ)ಕ್ಕೆ ಕೊಟ್ಟ ಕಯ್ಮತ್ತ ೫೦ (ಎಇ. XVII, ೬–೨೭ ; 1004) ; ತನ್ನ ಮಾನ್ಯದೊಳಗೆ ಕೊಟ್ಟ ಹರಳ ಕೆಯ ಕಂಭ ೧೦೦ (ಎಇ. XIX, ೨೭–೭೫ ; 1245) ; ಪ್ರಭುಗಳು . . . ತಾವೂ ದೇವರ ಅಖಂಡದೀಪಕ್ಕೆ ಶಾಶ್ವತ ಮಾನ್ಯಗಳನ್ನು ಕೊಂಡುಕೊಟ್ಟು, ದೇವ ದೇವಿಯರಿಗೆ ಮಸ್ತ್ರಾಲಂಕಾರ ಭೂಷಣಗಳನ್ನು ಅರ್ಪಿಸಿದ ಮೇಲೆ (ಶಾಂಕರಾ. ೦೨). ೮. (ತೆರಿಗೆಯನ್ನು) ರದ್ದುಗೊಳಿಸುವಿಕೆ ; (ತೆರಿಗೆಯ) ವಿನಾಯಿತಿ, — ರಿಯಾಯಿತಿ : ದಣ್ಣಾಯಕರು ಸಾಮ್ಯ ತರಬಾಳಿಕೆ ಅನುವು ಮಾನ್ಯವಾಗಿ ವೊಕ್ಕಲಿದ್ದರು (ಎಕ. XII, ತಿಪ. ೭೭–೦೭; 1379). ೯. ಒಪ್ಪಿಗೆಯಾದುದು ; ಸಮ್ಮತಿ ಪಡೆದುದಂ : ಆದರೆ ಈ ಹೇಳಿಕೆ ಮಾನ್ಯವಾಗಲಿಲ್ಲ (ಧ್ರುಶಿ. ೦೫೭). ೧೦. ಸಾಮಂತರಾಜ ; ಮಾಂಡಲಿಕ. ೧೧. (ಪತ್ರ ಬರೆಯುವಾಗ) ಗೌರವಸೂಚಕವಾಗಿ ಸಂಬೋಧಿಸುವ ಶಬ್ದರೂಪ.

**ಮಾನ್ಯದಂಗಡಿ** = ದಾನವಾಗಿ ಪಡೆದ ಅಂಗಡಿ : ದೇವರಂಗಡಿ ಮಾನ್ಯದಂಗಡಿಯೆಂನದುಡಿಸುರಿಯಂ ಕೊಂಡು ಹಸರಂಗೆಯ್ದು ಮಾಱುವಂಗಡಿಗಳೊಳಿಲ್ಲ . . . ಪ್ರತ್ಯೇಕ ಬರಿಸಕ್ಕೆ ಹಾಗವೊಂದು (ಕಇ. II, ೨೦–೨೪; 1147). [ಸಂ.]

**ಮಾನ್ಯಂಗುಡು** (ಕ್ರಿ). (ಭೂಮಿಯನ್ನು) ದಾನವಾಗಿ ನೀಡು ; ಉಂಬಳಿ ಕೊಡು : ಪನ್ನಿಮ್ಮರ್ಕತ್ತಿಕ್ಕೆಯ್ಯಂ ಮಾನ್ಯಂಗುಡುಗೆಯ್ದು ಪೇಟಿ ಧೋರನ ಬೆಸದೊಳ್ ನನ್ನಿವೆಡೆಂಗಂ ತನ್ನಳಿಸ್ತಿಯೆ ಕೊಟ್ಟು ಕೆಱೆಗೆ ಯಶಮಂ ಪಡೆದಂ (ಕಇ. II, ೪–೩; 918). [ ಮಾನ್ಯ + ಕುಡು$_1$ (< ಕೊಡು$_1$) ]

**ಮಾನ್ಯಕರಣ** (ನಾ). ಮನ್ನಣೆ ಪಡೆದ ಅಧಿಕಾರಿ; ಪಟೇಲ : ಪಟೇಲನಿಗೆ ಪಟೇಲ, ಗೌಡ, ನಾಡುಗೌಡ, ಎಜಮಾನ, ರೆಡ್ಡಿ, ಪೆದ್ದಕಾಪು, ಮಾನ್ಯಕರಣಂ, ಮಣಿಗಾರ. . . ವಗೈರೆ ಹೆಸರುಗಳುಂಟು (ಗ್ರಾಮಾಆ. ೦). [ಸಂ.]

**ಮಾನ್ಯಕಾಣಿ** (ನಾ). ಉಂಬಳಿಯನ್ನು ಪಡೆದವನು ; ಭೂಮಿಯನ್ನು ದಾನವಾಗಿ ಪಡೆದವನು : ಸೆಟ್ಟಿಯರ್ಪನ್ನಿಸಿಗರ್ಗಾವುಣ್ಡಗಳ್ಮೊದಲಾಗಿ ಮಾನ್ಯಕಾಣಿಮರ್ಗ್ಗಾಜುಶರಾಹೆಗೆ ಪರಿಯರ ಗದ್ಯಾಣವನ್ನಿಱುವರ್ (ಶಾಇ. IX–i, ೭೭–೨೯; 992) ; ಕೋಗಳಿಯ ಬದ್ದೆಗನ ವೃತ್ತಿಯ ಮಾನ್ಯಕಾಣಿರುಂ ತೊಲಗಿಸುವ ಧರ್ಮ್ಮಮಂ ಮಱಿದು ದೆಯ್ವಕೆ ಕಾಳು ಕಱೆಯಿಕ್ಕಿದವ

ಪೊರ್ಲೆಯುರ್ (ಸೌಇಇ. IX – i, ೦೦೭–೪೭; 1055).
[ಮಾನ್ಯ + – ಕಾಣಿ]

**ಮಾನ್ಯಖೇಟ**, ಮನ್ನೆಖೇಟ, ಮನ್ನೆಖೇಡ (ನಾ). ಒಂದು ಊರಿನ ಹೆಸರು ; P ಈಗಿನ ಗುಲ್ಬರ್ಗಜಿಲ್ಲೆಯ 'ಮಳ್‌ಖೇಡ್' ಎಂಬ ಹಳ್ಳಿ. ಇದು ರಾಷ್ಟ್ರಕೂಟ ಅರಸರ ರಾಜಧಾನಿಯಾಗಿದ್ದಿತು : ಮಾನ್ಯಖೇಟಪುರವರವುಂ ಗೋನೂರುಮುಚ್ಚಂಗಿಯುಂ ಬನವಾಸಿದೇಶವುಂ . . . ಕಾದಿ ಗೆಲ್ದು (ಎಕ. II, ೫೯–೯೯; 974). **ಮನ್ನೆಖೇಟ :** ಮನ್ನೆಖೇಟದಿ ತೆಂಕ ನಿನ್ನ ದೇಗುಲ (ಎಕ. VIII, ಪಗರ. ೬೨–೩; 800). **ಮನ್ನೆಖೇಡ :** ಶ್ರೀಪ್ರಿಥ್ವೀವಲ್ಲಭಮಹಾರಾಜಾಧಿರಾಜ. . . ಚಲದಂಕಕಾಱಂ ಮನ್ನೆಖೇಡದೊಳ್ ಪ್ರಿಥ್ವೀರಾಜ್ಯಂಗೆಯುತ್ತಮಿರೆ (ಎಕ. XI, ಚಿತ್ರದು. ೫೦–೩; 968). [P ಇದು 'ಮಳ್‌ಖೇಡ್' ಎಂಬುದರ ಸಂಸ್ಕೃತೀಕರಣ ರೂಪ]

**ಮಾನ್ಯಗಾಣಿಕೆ** (ನಾ). ಉಂಬಳಿ ಪಡೆದವರು ಕೊಡುವ ಕಾಣಿಕೆ : ಹತ್ತುವರಹದ ಹೊಲ ಮಾನ್ಯದ ಹೊಲವನ್ನು ಪಾಲಿಸಿಯಿದ್ಧೇವೆ . . ಜೋಡಿ ಮಾನ್ಯಗಾಣಿಕೆ ಸಹ ವೊಳಗಾಗಿ ಪಾಲಿಸಿದ್ದೇವೆ (ಎಕ. XI, ಹೊಳಲ್ಕೆ. ೫೪–೨೨; 1755). [ಮಾನ್ಯ + ಕಾಣಿಕೆ (< ಕಾಣ್ಕೆ)]

**ಮಾನ್ಯತನ** (ನಾ). ಗೌರವ ; ಹಿರಿಮೆ ; ಘನತೆ : ಮಾತಿನಲ್ಲಿ ಮಾನ್ಯತನ ಮನದಲ್ಲಿ ಆಶೆ ಎಂಬ ತೊಱೆಯು ಹಾಯಬಾರದೆ ಹರಿವುತ್ತಿದೆ (ಜೋಳಶು. ೩೯–೦೫೭). [ಮಾನ್ಯ + – ತನ]

**ಮಾನ್ಯತೆ** (ನಾ). = ಮಾನ್ಯತನ : ಆ ಮುನೀಶ್ವರನಿದಿರುಗೊಂಡೀ ರಾಮಚಂದ್ರನ ಸಕಲಸುಗುಣಸ್ತೋಮಸಾಂದ್ರನನಧಿಕಮಾನ್ಯತೆಯಿಂದ ಸತ್ಕರಿಸಿ (ತೊರರಾ. ೩–೦–೦೭); ಯಾವುದಾದರೊಂದು ಉಪಭಾಷೆ ಅನೇಕ ಕಾರಣಗಳಿಂದಾಗಿ ಮಾನ್ಯತೆಯನ್ನೂ ಜನಪ್ರಿಯತೆಯನ್ನೂ ಪಡೆದು . . . ಆದರ್ಶಭಾಷೆಯಾಗಿ ಹಬ್ಬಬಹುದು (ದ್ರಾಭಾ. ೩೮೦). [ಸಂ. ಮಾನ್ಯತಾ]

**ಮಾನ್ಯದರೆ** 'ಮಾನ್ಯದೆಱೆ' ನೋ.

**ಮಾನ್ಯದೆಱೆ**, ಮಾನ್ಯದರೆ (ನಾ). ದತ್ತಿಯಾಗಿ ನೀಡಿದ ಭೂಮಿಯ ಮೇಲೆ ಹಾಕುತ್ತಿದ್ದ ತೆರಿಗೆ : ಸಯಂಭುದೇವರ ಎಂಭತ್ತು ಮತ್ತರು ಕೆಯ್ಯ ಮಾನ್ಯದೆಱೆಯುಂ ಧಾರಾಪೂರ್ವಕಂ ಮಾಡಿ ಸರ್ವ್ವನಮಸ್ಯಮಾಗಿ ದೇವರ್ಗ್ಗೆ ಬಿಟ್ಟರು (ಸೌಇಇ. XX, ೭೦–೫೨; 1109). **ಮಾನ್ಯದರೆ :** ಶ್ರೀನರಸಿಂಘ ದೇವರ್ಗ್ಗೆ ಬಿದಿಪ್ಪಳ್ಳಿಯೂರೊಡೆಯರ ಮಾನ್ಯದರೆಯ ಕೆಯ್ಯ ಮೂಡಣ ಪತುಗೆಯಲಿಪ್ಪತು ಮತದರೆಯ ಕೆಯ್ಯ ತೆಱೆಯುಂ ತೆತ್ತು ಮಿಕ್ಕುದು ... ಮಣಲ ಕೆಯಿ ಮತ್ತ ೬ (ಸೌಇಇ. IX–i, ೧೨೦–೦೨ ; 1058).
[ಮಾನ್ಯ + ತೆಱೆ$_3$]

**ಮಾನ್ಯದ್ವಿಷತೆ** (ನಾ). ಗೌರವಸ್ಥರಾದವರಲ್ಲಿ ಉಂಟಾಗುವ ದ್ವೇಷ : ಮಾನ್ಯದ್ವಿಷತೆ ಪತಿತಸಮೇತವಾತ್ಮಸ್ತುತಿಯೆನಿಪ್ಪವನು ಬಿಸುಟು ತದ್ವಿಪರೀತದಲಿ ವರ್ತಿಸುವನವನೇ ರಾಜನು (ಕುಮಾಉ. ೩–೭೦).
[ಸಂ. ಮಾನ್ಯದ್ವಿಷತಾ]

**ಮಾನ್ಯವಂತ** (ನಾ). ಗೌರವಸ್ಥ ; ಮಾನ್ಯನಾದವನು : ನೀ ಮಾನ್ಯವಂತರವೋಲು ಬೋಸರಿವೆ (ಳಾಶಿರಾ. ೦೯–೯೯). [ಸಂ. ಮಾನ್ಯವತ್]

**ಮಾನ್ಯವೊಲ** (ನಾ). ದತ್ತಿಯಾಗಿ ಬಂದ ಜಮೀನು ; ಮಾನ್ಯದ ಭೂಮಿ : ಬಡಗವೊಲದ ಮನ್ನೆಯಸಾಮ್ಯದ ಮಾನ್ಯವೊಲದೊಳಗೆ . . . ಬಿರಿಯ ಕೋಲೊಳ್ ಧಾರಾಪೂರ್ವ್ವಕಂ ಮಾಡಿ ಬಿಟ್ಟ ನೆಲಂ ಮತ್ತರು ೧೫೦ಕ್ಕೆ ನಿಬದ್ಧದರುವಣಂ ಗದ್ಯಾಣ ೧ (ಸೌಇಇ. XX, ೨೦–೬೦; 1019).
[ಮಾನ್ಯ + ಪೊಲ]

**ಮಾನ್ಯೆ** (ನಾ). ಗೌರವವುಳ್ಳವಳು ; ಮರ್ಯಾದಸ್ಥೆ. [ಸಂ. ಮಾನ್ಯಾ]

**ಮಾಪ$_1$** (ನಾ). ಲಕ್ಷ್ಮಿಯ ಪತಿ ; ವಿಷ್ಣು ; ಮಾಧವ : ಮಾಪ ವಿಧಿ ಶಕ್ರಮುಖ್ಯರುಗಳ ವರಮನೋರಥಸಿದ್ಧಿಯಿತ್ತು ರಕ್ಷಿಸುವ ಶಂಕರ ಎನಗೆ ಚಂಪಕದ ಪೂವ ಪೂಜೆಗೆ ಕೊಟ್ಟು ಪೊರೆವುದಾಗದೆ (ಶ್ರೀಶರಾ. ೦೦–೫೦) ; ಮಾಪನಂ ನೋಡಿ ನತಿಗೆಯ್ಯದಿಲ್ಲಿಹರಿಪೆನಲಾ ಪದ್ಮನಾಭ ಬೇದುದು (ರಾಶಶ. ೦೯–೬೮). [ಸಂ.]

**ಮಾಪ$_2$** 'ಮಾಪ್ಯ$_2$' ನೋ.

**ಮಾಪಕ** (ಗು). ೧. ಅಳತೆಮಾಡುವ ; ಅಳೆಯುವ. (ನಾ). ೨. ಅಳೆಯುವ ಸಾಧನ ; ಮಾನದಂಡ : ಇತರ ಎಲ್ಲ ಕಲಾಕೃತಿಗಳನ್ನು ಪರಾಮರ್ಶಿಸಲು ರಜಪೂತಕಲೆಯನ್ನೂ ನಾನು ಮಾಪಕವಾಗಿಟ್ಟು ಕೊಂಡಿದ್ದೇನೆ (ಶಾರದ. ೫೨೨). [ಸಂ.]

**ಮಾಪಡಿ** (ನಾ). ದೊಡ್ಡ ಅಳತೆಯ ಪರಿಮಾಣ ; ದೊಡ್ಡ ಪಡಿ : ವಿಸು ಕೆಲಸವನಱಿಯದಂತೆ ಹೇಳ್ದಡೆ ಮಾಡಿ ಬೇಸಱಕೆಯುಳಲುದೋಱದ ಭಕ್ತಿಭಾವವುಂ ಲೇಸೆಂದು ಮೆಚ್ಚಿ ರಾತ್ರಿಯಲಿ ಮಾ[ಶಾಶಾಂ. ಮಹ]ಪಡಿಯ ಪರಿಯಾಣ ಪಾತ್ರೆಯನಿತ್ತನು (ಸಿದ್ಧರಾ. ೯–೨೯). [ಮಾ$_4$ + ಪಡಿ$_1$]

**ಮಾಪತ** (ನಾ). ದೊಡ್ಡಬೀದಿ ; ರಾಜಮಾರ್ಗ ; ಹೆದ್ದಾರಿ : ಮಹಾಪಥ — ಮಾಪತ (ಕಬುದ.೨೯೦ ಪ್ರಯೋ). [< ಸಂ. ಮಹಾಪಥ]

**ಮಾಪತಿ** (ನಾ). = ಮಾಪ$_1$ : ವಿತರಣಗುಣದೊಳಪ್ರತಿಮನಾಗಿರುತ ಮಾಪತಿ ಬೇಡೆ ಕವಚವನಿತ್ತು ನುತಕೀರ್ತಿವಡೆದನೀ ಕ್ಷಿತಿಯೊಳಗತಿತ್ಯಾಗಿ ಹತ ಕರ್ಣನೆಂಬುದೆ ತಥ್ಯ (ಕೃಚಪೂ. I, ೯೯) ; ಮಾಪತಿ ಕಳಂಬ ಕರಾಳ ಕರ್ಕಶ ಕಾಲವೈರಿ ಪುರಾರ್ದನಾಜಿತಸುರಾಧ್ವರ ಧೀರ ಶಂಕರ ಚಂದ್ರಶೇಖರ ಪಾಲಯಾ (ಹಮ್ಮಿರ. ೬–೯೭). [ಸಂ.]

**ಮಾಪನ** (ನಾ). ಅಳತೆಮಾಡುವಿಕೆ ; ಅಳೆಯುವಿಕೆ : ಹಾಲಿನೊಳು ಬೆಣ್ಣೆ ಕಡಲೊಳಗೆ ನೀರ್ಗಲ್ಲವೊಲು ತೇಲುವುದವೋಯುಸತ್ತ್ವದಲಿ ವೇದು ಜಗಮೂಲದಶೆಯೊಳಗೋದು, ಮಾಪನದ ಬಗೆಗೆರಡು ಗಾಳಿಯುಸಿರುಗಳಂತೆ (ಶುಂಕುಳ. ೦೦೦); ಅವರು ಸಂಗೀತಶಾಸ್ತ್ರಕ್ಕೆ ಸಲ್ಲಿಸಿದ ಸೇವೆಯ ವಿಮರ್ಶೆಯು ಮಾಪನವನ್ನು ಇಲ್ಲಿ ಕಾಣಬಹುದು (ಸಂಗೀತ. VI, ೮೬೪೪). [ಸಂ.]

**ಮಾಪಳ$_1$** 'ಮಾಪಿಳ್ಳೆ' ನೋ.

**ಮಾಪಳ$_2$** (ನಾ). ದೊಡ್ಡಹಣ್ಣು ; ಭಾರಿಹಣ್ಣು : "ಮಾಪಳ (ಲ) — ಮಹಾಫಲ" (ಕರ್ಕೋ. ೩೫). [ಮಾ$_4$ + ಪಳ$_2$ (<ಪಲ$_2$)]

**ಮಾಪಳ$_3$** 'ಮಾಪಾಳ' ನೋ.

**ಮಾಪಾರಿ** (ನಾ). ಒಂದು ದೇಶ ಮತ್ತು ಆ ದೇಶದ ಕುದುರೆ : ಮಾಪಾರಿ ಹುರುಮಂಜಿ ಯಾಸುಸಾಂಬ್ರಾಣಿ ಕಲಹತಿ ಚೇರಮಾನಿಯೆಂಬೀ ಸಱೊಳು ಪುಟ್ಟಲಾ ದೇಶವೆಸರಿಂದಲಾ ಕುದುರೆಗಭಿಧಾನಮುಕ್ಕುಂ (ಮಂಗರಾ. ೪೩–೨೦). [ ? ]

**ಮಾಪಾಳ**, ಮಾಪಳ$_3$ (ನಾ). ಔಷಧಕ್ಕೆ ಬಳಸುವ ಒಂದು ಬಗೆಯ ಕಾಯಿ ; P ಸಾಮಾನ್ಯವಾಗಿ ಎಳೆಯ ಮಕ್ಕಳ ನಾಲಿಗೆಯ ಮೇಲೆ ಮಡು ಬಂದಿದ್ದರೆ, ಮಿಯಿಸುವಾಗ ಈ ಕಾಯನ್ನು ತೇದು ನಾಲಿಗೆಗೆ ಹಚ್ಚಿ ಮಡು ತೆಗೆದು ಬಾಯನ್ನು ತೊಳೆಯುತ್ತಾರೆ : ದಾಳಿಂಬೆ ಹೊಗಟೆ, ಮಾವಿನ ಬೀಜ, ಸೈಂಧವಲವಣ, ಮಾದಳ ಹಣ್ಣು (ಮಾಪಾಳದ ಕಾಯಿ) . . . ಇವನ್ನು ಸಮಭಾಗ ಹಾಕಿ ಚೂರ್ಣ ಮಾಡಿ ಮಜ್ಜಿಗೆಯೊಡನೆ ಸೇವಿಸಲು ಆಮಾತಿಸಾರ, ರಕ್ತಾತಿಸಾರ ಮತ್ತು ಅಜೀರ್ಣಶೂಲೆ ಇವೆಲ್ಲಾ ಗುಣವಾಗುವುವು (ಸಳಕ್ಕ.೯೭೩ ೫೦). **ಮಾಪಳ$_3$ :** ಸೂರ್ತಿಮಣದ ಮೇಲೆ ಕಿಮ್ಮತ್ತು ಆಗತಕ್ಕ ಜಿನಸುಗಳು, ೧ ಅಕ್ಕಲಕಾರ . . . ೧೯ ಮಾಪಳಕಾಯಿ (ಶುಂಶಿಪಾ. ೨೨).
[ ?./ತುಳು. ಮಾಪಲ = ದೊಡ್ಡ ಮಾದಳಹಣ್ಣು]

**ಮಾಪಿ** (ನಾ). ೧. (ದ್ರವ್ಯ, ಧಾನ್ಯ ಮುಂತಾದುವನ್ನು) ಅಳತೆ ಮಾಡುವ ಒಂದು ಸಾಧನ. ೨. ಅಳತೆ : ೨ ಮಣದವು ೩೨ ಚೀಲ

ಗಳಾಗುತ್ತವೆ. ಅಂದ ಮೇಲೆ ವಜನಿ (ತೂಕದ್ದು) ಮತ್ತು ಮಾಪಿ (ಅಳತೆ) ಇವೆರಡೂ ಒಂದು ೧ ಟನ್ನಿನ ಭರತಿ ಇರಬೇಕು (ಮುಂಬಪ್ರಾ. ೧೯೦).

[ಸಂ. ಮಾಪಿನ್]

**ಮಾಪಿಜಿನಿಸು**, ಮಾಫಿಜಿನಸು (ನಾ). (ತೂಕಕ್ಕೆ ಸಂಬಂಧಿಸದ) ಘನ ಅಳತೆ ಅಥವಾ ಘನಪರಿಮಾಣದ ಪದಾರ್ಥ ; ಕಾಳು, ಧಾನ್ಯ ಮುಂತಾದುವು : (೬). **ಮಾಫಿಜಿನಸು :** ಅಕ್ಕಿ ಮುಂತಾದ ಮಾಫಿಜಿನಸು ತುಪ್ಪ ಮುಂತಾದ ವಜನೀಜಿನಸು . . . ಖರೀದಿ ಮಾಡಿ (ವ್ಯಅಂ. ೧೯೩೬. ೨೫-೭ ; 1826). [ಮಾಪಿ + ಜಿನಿಸು (<ಜಿನಸು)]

**ಮಾಪಿಸು** (ಕ್ರಿ). ೧. ಅಳತೆಮಾಡು ; ಅಳೆ. ೨. ಬೆಲೆಕಟ್ಟು ; ಮೌಲ್ಯ ನಿರ್ಧರಿಸು : ವಿಧಿಯಿಂ ಗುರುವಿಂ ಸೋಮಂ ಮಾಪಿಪಂ ಕಾಲದಲ್ಲವಂ ತಪೋತೇಜಂಗಳಿಂ ಶತ್ರುಸೈನ್ಯಂಗಳನು ಮಳ್ಗಿಪಂ (ಸೌಶಂದ. ೨-೩೭). [ಮಾಪನ + –ಇಸು$_3$]

**ಮಾಪಿಳ್ಳ** 'ಮಾಪಿಳ್ಳೆ' ನೋ.

**ಮಾಪಿಳ್ಳೆ**, ಮಾಪಳ$_1$, ಮಾಪಿಳ್ಳ, ಮಾಪ್ಲಾ (ನಾ). ಭಾರತದ ಪಶ್ಚಿಮ ಸಮುದ್ರತೀರದಲ್ಲಿ ವಾಸಿಸುವ, ಬಹುಶಃ ಅರಬ್ಬೀ ಪುರುಷ ಮತ್ತು ಭಾರತೀಯ ಸ್ತ್ರೀ ಸಂಬಂಧದಿಂದ ಜನಿಸಿದ ಮುಸಲ್ಮಾನರ ಒಂದು ಜನಾಂಗ : ವಿಸ್ತಾರವಾಗಿ ಮಡಗಿ ಮಾರುವ ಮಾರುವಾಡಿಯರು ಮಾಪಿಳ್ಳೆಯರು (ಸೌಗಂಧಿ. ೦೩೫-೭) : ಕೆಲವು ಮಾಪಿಳ್ಳೆಯರನ್ನು ಆ ದಳವಾಯಿ ಬಳಿಗೆ ಕಳುಹಿಸಿ ಚಿರಕಲ್ಲ ರಾಜರು ನಿಮಗೆ ಕರಾರು ಮೀರಿ ಹಣ ಕೊಡುವುದು ಇಲ್ಲ . . . ಎಂತ ತಿಳಿಸಿದ್ದರಿಂದ (ರಾಜೇಂದ್ರ. ೦೦) ; ಮಲಬಾರ್ ಡಿಸ್ಟ್ರಿಕ್ಟು ದಕ್ಷಿಣಕೆನರಾ ಡಿಸ್ಟ್ರಿಕ್ಟಿಗೆ ದಕ್ಷಿಣದಲ್ಲಿದೆ. ಮಾಪಿಳ್ಳೆಗಳು ಎಂಬ ಮಹಮ್ಮದೀಯರು ವಿಶೇಷವಾಗಿದ್ದಾರೆ (ಭೂಗೋಳ. ೬೭). **ಮಾಪಳ$_1$ :** ಕೊಲ್ಲಂತ ಮಾಪಳಮಾರ್ಗಂತಾದ ಕೇರಳಮಂಡಲದ ಮನ್ನೆಯರ್ಕಳನೆರ್ದೆಗೆಡಿಸಿ ಮರಳ್ದಂ (ಕೇನ್ಯ. ೭-೦೦). **ಮಾಪಿಳ್ಳ :** ಮಾಪಿಳ್ಳರು ಶ್ರಮಕ್ಕೆ ಮೆಚ್ಚಿದವರಾದಾಗ್ಯೂ ಉದ್ಧಟ ಸ್ವಭಾವದವರು (ಕಣಾಗ. ೨೯೯) ; ಬಜಿಲ . . . ಮಣಿ ಸೌರ್ಕಾರ-ಮಾಪಿಳ್ಳ (ತುಳುನಾ. ೦೭೨). **ಮಾಪ್ಲಾ :** ಕ್ರಿ. ಶ. ಏಳನೆಯ ಶತಮಾನದ ಹೊತ್ತಿಗೆ ಮುಸ್ಲಿಮರು ಹೆಚ್ಚುಸಂಖ್ಯೆಯಲ್ಲಿ ಮಲಬಾರಿನಲ್ಲಿ ನೆಲಸಿದ್ದರಿಂದ ಮಾಪ್ಲಾಗಳಲ್ಲೂ ಲಬ್ಬೆಗಳಲ್ಲೂ ಐತಿಹ್ಯವಿದೆ (ಭಾರತ. ೬೨೫).

[ದೇ.? ತಮಿ. ಮಾಪ್ಪಿಳ್ಳೈ : ಮಲ. ಮಾಪಿಳ್ಳ : ತುಳು. ಮಾಪ್ಪಿಳೆ. ಮಾಪಿಳ್ಳೆ. ಮಾಪ್ಳೆ. ಮಾಪ್ಳೆ]

**ಮಾಪು$_1$** (ನಾ). ಅಳಿವು ; ನಾಶ : 'ಮಾಪುಗೈ', 'ಮಾಪುಗೊಳ್ಳು' ಪರಾ.

[← ತೆಲು. ಮಾಪು = ಇಲ್ಲದಂತೆ ಮಾಡು ; ನಾಶಗೊಳಿಸು]

**ಮಾಪು$_2$**, ಮಾಪ$_2$ (ನಾ). (ದ್ರವ, ಧಾನ್ಯ ಮುಂತಾದುವನ್ನು) ಅಳತೆ ಮಾಡುವ ಸಾಧನ : ಕೃಷ್ಣೆಯ ಉತ್ತರದಲ್ಲಿ ೮೦ ರೂಪಾಯಿ ತೂಕ ಶುದ್ಧನೀರು ಹಿಡಿಯುವಷ್ಟು ಮಾಪಿಗೆ ಪೊಂದು ಶೇರೆಂದೆನ್ನುವರು (ಕಣಾಗ. ೨೯೯) ; ಅವನು ಮಾಪನ್ನಿಡುವುದನ್ನೂ ತುಂಬುವುದನ್ನೂ ಲಕ್ಷಿಸಿ ನೋಡಿ, ನಾಲ್ಕುಜನ ಕೂಡಿದವರಲ್ಲಿ ಅವನನ್ನು ಕೊಂಡಾಡಿಬಿಟ್ಟಿರುವರು (ಶೇಕ. ೨). **ಮಾಪ$_2$ :** ಇಲ್ಲಿಯ ವಜನ ಮಾಪಗಳ ನಿಯಮಗಳು ಎರಡನೇ ಸ್ಥಳಗಳಂತೆ ಇರದೆ (ಮುಂಬಪ್ರಾ. ೬ ಪ್ರಸ್ತಾವ). 'ಮಾಪಿ' ಪರಾ.

[← ಮರಾ. ಮಾಪ್. / ಸಂ. ಮಾಪಕ]

**ಮಾಪುಗೈ** (ಕ್ರಿ). ಇಲ್ಲದಂತೆ ಮಾಡು ; ನಾಶಗೊಳಿಸು : ಶರವ ಚಾಪವನ್ನು ನೆಗಪಿ ಶರವ ಕೋಪದಿಂದ ಬಿಡಲು ರಾಮ ಮಾಪುಗೈದು ತಿರುಗಿ ನೋಡಿದ (ವಾಲಿ. ೧೨). [ಮಾಪು$_1$ + ಗೈ (<ಕೆಯ್$_1$)]

**ಮಾಪುಗೊಳ್ಳು** (ಕ್ರಿ). ಇಲ್ಲವಾಗಿಸು ; ನಾಶಗೊಳಿಸು : ಆ ಪಾಪಿ ವಿಳವೈರೋಚನಿಶಂಬರಾದ್ಯರು ಮಾಪುಗೊಂಡೆನ್ನ ಪಟ್ಟಣವಾಳುತಿಹರು (ಸಮುಷು. ೯). [ಮಾಪು$_1$ + ಕೊಳ್ಳು$_1$ (<ಕೊಳ್$_1$)]

**ಮಾಪುಗೋಲು** (ನಾ). ಅಳತೆಮಾಡುವ ಸಾಧನ ; ಅಳತೆಗೋಲು : ಮಾನದಂಡ : ಇದು ಅಮೆರಿಕದ ಹೆಗ್ಗಳಿಕೆ. ಅವರ ಸಂಸ್ಕೃತಿಯ ಮಾಪುಗೋಲು (ಪಾಡಿಗೇ. ೬೩). [ಮಾಪು$_2$ + ಕೋಲು$_1$ (<ಕೋಲ್$_1$)]

**ಮಾಪುತ್ರ** (ನಾ). ಲಕ್ಷ್ಮಿಯ ಪುತ್ರ ; ಮನ್ಮಥ : ಮಾಪುತ್ರಶರಮಿತ್ರ ಸುದಯವಾಗಲ್ಕೆದ್ದು ತಾ ಪುಷ್ಪ ತರ ಪೋಗೆ (ಪ್ರಶರಾ. ೦೦–೯೯). [ಸಂ.]

**ಮಾಪುರುಷ** (ನಾ). ದೊಡ್ಡಮನುಷ್ಯ ; ದೊಡ್ಡ ವ್ಯಕ್ತಿ : ಮಹಾಪುರುಷ —ಮಾಪುರುಷ (ಕಮರ. ೨೯೦ ಪ್ರಯೋ). [ಮಾ$_4$ + ಪುರುಷ]

**ಮಾಪ್ಲಾ** 'ಮಾಪಿಳ್ಳೆ' ನೋ.

**ಮಾಫ್** 'ಮಾಫು' ನೋ.

**ಮಾಫ** 'ಮಾಫು' ನೋ.

**ಮಾಫಿ** 'ಮಾಫು' ನೋ.

**ಮಾಫಿಜಿನಸು** 'ಮಾಪಿಜಿನಿಸು' ನೋ.

**ಮಾಫಿರಹದಾರಿ** (ನಾ). ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸರಕನ್ನು ಸಾಗಿಸಲೆಂದು ಮುಂಚೆಯೇ ಪಾವತಿ ಮಾಡಲಾದ ಹಣಕ್ಕೆ ಪ್ರತಿಯಾಗಿ ನೀಡುವ ಒಪ್ಪಿಗೆ ಪತ್ರ : (ಲೆಸ್ಗ. II, ೭೩೩).

[ಮಾಫಿ (< ಮಾಫು) + ರಹದಾರಿ]

**ಮಾಫೀ** 'ಮಾಫು' ನೋ.

**ಮಾಫು**, ಮಾಫ್, ಮಾಫ, ಮಾಫಿ, ಮಾಫೀ (ನಾ). ೧. ತಪ್ಪನ್ನು ಮನ್ನಿಸುವುದು ; ಕ್ಷಮೆ : ಮಹಾರಾಜಶ್ರೀ ಕರಾಚೂರಿನಂಜರಾಜೈಯ್ಯ ಅರಸಿನವರು ಅಣ್ಣನವರಿಗೆ ಹೇಳಿ ಮಾಫು ಮಾಡಿಸ್ತರು (ಹೈದರ. ೨೭). ೨. ರಿಯಾಯಿತಿ ; ಸೋಡಿ : ಆ ದಂಡಿನಲ್ಲಿರುವಂಥ ಸಾಮಾನು ಸರಂಜಾಮು ಏನು ಇದ್ದಾಗ್ಯೂ ಲಡಾಯಿ ಮಾಡುವ ಮಂದಿಗೆ ಮಾಫು ಕೊಡಿಸಬೇಕು (ರಾಜೇಂದ್ರ. ೬೦). ೩. (ತೆರಿಗೆ, ಶುಲ್ಕ ಮುಂತಾದುವುಗಳ) ರದ್ದು ; ಮಜಾ : ಪಾಳುಭೂಮಿಯಲ್ಲಿ . . . ಸಾಗುವಳಿಮಾಡತಕ್ಕ ರೈತರು ವಾರಕ್ಕೆ ದರಖಾಸ್ತುಮಾಡಿದರೆ ಮೊದಲ ವರ್ಷ ಏನು ಹುಟ್ಟುವಳಿ ಆಗುತ್ತಾ ಇದೆಯೋ ಯಾವತ್ತೂ ರೈತರಿಗೆ ಮಾಫುಮಾಡಬೇಕು (ಮಹಾತಂ. II. ೬೦). **ಮಾಫ್ :** ೧. ಮಾಫ್ ಮಾಡಬೇಕು ತಪ್ಪಿದ್ದರೆ ! (ನಮ್ಮ. ೩೩); ಇದೊಂದು ಸಾರಿ ಮಾಫ್ ಮಾಡಿಬಿಡಿರಿ (ಶಾಕೋರಿ. ೧೦೦). ೩. ನಿಮ್ಮ ಜುಲ್ಮಾನೆಯನ್ನು ಮಾಫ್‌ಮಾಡುತ್ತೇನೆ (ಕಮಳ. ೦೭೬). **ಮಾಫ :** ೧. ಸಾಬರು 'ಮಾಫ' ಮಾಡಿದರು. ಬೇಡಿ ಸಡಿಲಾದವು (ಸೆಜರ. ೩೯). ೨. ಸರಕಾರೀತೆರಿಗೆಯನ್ನು ಅಂಶತಃ ಅಥವಾ ಪೂರ್ಣವಾಗಿ ಮಾಫ ಮಾಡಿರುತ್ತದೆ (ಬಿಜಾಪೂ. ೩೯). **ಮಾಫಿ :** ೧. ಕಾಲೇಜಿನಲ್ಲಿ ಅವರು ಏನು ಮಾಡಿದರೂ ಮಾಫಿ (ಸ್ವಸ್ವಹೊ. ೮೬೭). ೩. ಯಾವ ಸ್ಥಳಕ್ಕೆ ಈ ಪತ್ರಿಕೆಯನ್ನು ಕಳುಹಿಸಿದಾಗ್ಯೂ ಟಪಾಲು ಹಾಸಲು ಮಾಫಿ ಮಾಡಿ ಇದ್ದಾರೆ (ಶಾಶ್ವಿ. ೪೯೦). **ಮಾಫೀ :** ೨. ಯಾವುದಾದರೂ ಕರವನ್ನು ಹಾಕುವುದು, ಮಜಾ ಮಾಡುವುದು, ಮಾಫೀ ಬಿಡುವುದು (ಶಾಶಾಸ. ೩೫). ೩. ನನ್ನ ಫೀ ಏನು ? ಇಂದಿನ ತನಕಾ ಅಂತೂ ಮಾಫೀನ ! (ದೀಶಹ. II. ೦೦).

[← ಅರ. ಮುಆಫ್, ಮುಆಫೀ ; ಹಿಂ. ಮರಾ. ಮಾಫ್. ಮಾಫೀ]

**ಮಾಬ** 'ಮೊಹಬ್' ಪರಾ.

**ಮಾಬಲ** (ನಾ). ೧. ದೊಡ್ಡಸೈನ್ಯ,–ದಳ : ಬಮ್ಮರಸಂ ಮಾಬಲವಂ ಕಾದಿ ಸ್ವರ್ಗಸ್ತ [ನಾ]ದಂ (ಸೌಇಇ. IX- i, ೬೦೨-೦೬ ; 1057). ೨. ಒಬ್ಬಾತನ ಹೆಸರು : 'ಮಾಬಲಯ್ಯ' ಪರಾ. [ಮಾ$_4$ + ಬಲ$_3$]

**ಮಾಬಲಯ್ಯ** (ನಾ). ಒಬ್ಬಾತನ ಹೆಸರು : ರಾಜ್ಯಕ್ಕೀತಂ ತಿತ್ತಿಗನೆನಿಪುದು ಮಂತ್ರಿಮಹೋತ್ತಮನಂ ಮಾಬಲಯ್ಯನೆಂದೊಗಟದೆರಾರ್ (ಎಕ. VII (R). ನಾಗಮಂ. ೯೯-೦೫ ; 972). [ಮಾಬಲ + ಅಯ್ಯ$_1$]

**ಮಾಭೈರವ** (ನಾ). ಶಿವನ ಒಂದು ರೂಪ : ಮಹಾಭೈರವ : ಚಂಡಿಕೆಯಾಗಿ ಪೀರ್ವ ಮಾಭೈರವನಾಗಿ ನುಂಗುವ ಮಹಾಸ್ಮಶಾನದೆಡೆಯ್ ಮೃಡಾರಿ ಕಾದಿದಂ (ಜಗಪು. ೦೩-೨೦). [ಮಾ₁ + ಭೈರವ]

**ಮಾವು, ಮಾವ** (ನಾ). ೧. ಸೋದರಿಕೆಯ ಸಂಬಂಧದಲ್ಲಿ ಮಾವ ನಾಗಿರುವವನು ; **ಸೋದರಮಾವ** : ಶ್ರೀಮತ್ಪೆರ್ಮಾನಡಿಗಳಾ ತಮ್ಮಂ ಬೂತರಸ ತಮ್ಮ ಕುದಿರೂರೊಳ್ಕವಿ × × × ಬಪರವೊಳ್ಕೆಚ್ಚು ಜುಬಿ ಸತ್ತೊ ಅವರ ಮಾವು ತಿಪ್ಪುವೆದೆಯ ಮಾದವಾಡಿಯ ಬಾಳ್ಗಚ್ಚು ಕೊಟ್ಟೊ (ಮೈಆ೦. ೧೯೩೦, ೯೯-೪ ; 886) : ನೀಮೆನಗಿನಿತಂ ಕೆಮ್ಮನೆ ಮಾವು ಮನಂ ನೊಂದು ಬೆಸಸದಿರ್ (ಶಂಶಭಾ. ೦೨-೯೯) ; ಬಲಕ್ಷಾವಮಂ ಮಾವಂ ನಿಮಗೆ ಮೊಜಿವೇಟ್ಟಿಟ್ಟಿದ[ನಿದಂ] (ಕೃಷ್ಣಕೃ. ೭-೮೦). **ಮಾವ** : ೧. ನೀಮುಂ ಪೋಗಿ ನಿಮ್ಮ ಮಾವನ ಪಕ್ಕದೊಳೋದಿಮೆಂದೋಲೆಯಂ ಬರೆಯಿಸಿ ಕೊಟ್ಟೊಡೆ (ವಡ್ಡಾರಾ. ೩-೬) ; ಎನ್ನ ಕನ್ನಿಕೆಯಾ ಕಾಲದೊಳ್ ನಾನೆನ್ನ ಮಾವಂ ಕುಂತಿಭೋಜನ ಮನೆಯೊಳ್ ಬಳೆವಂದು ದುರ್ವಾಸಮುಹಾ ಮುನಿ . . . ಪರವಿತ್ತುರ್ (ಶಂಶಭಾ. ೦-೦೦೬ ವ) ; ಮಾವನಲ್ಲಿಗೆ ಬಂದಡಾ ಮಾದ್ರಾವನೀಪತಿ ಶಲ್ಯ ಮಿಗೆ ಸಂಭಾವಿಸಿದನೊಲಿದಿತ್ತನೀತಂಗಖಿಳವಸ್ತುಗಳ (ಕುವ್ಯಾಸ. ೬-೬). ೨. ಗಂಡನ ಅಥವಾ ಹೆಂಡತಿಯ ತಂದೆ : “ಶ್ವಶುರ ಶ್ವಶ್ರೂನಾಮವದೆಸೆಗುಂ ಕೂಸಿತ್ತ ಮಾವನೊಳಮತ್ತೆಯೊಳಂ” (ಪಮ್ರಕೋ. ೩೬-೨೪) ; ಈತಂ ನಿಮ್ಮ ಮಾವನೆಂದಾಗಳ್ ಕುಮಾರನುಮಿದಿರೆಟ್ಟು ತದ್ಯೋಗ್ಯಮಪ್ಪ ವಿನಯಮಂ ಗೆಯ್ದಿದೋರ್ಣನಂ ವಿದ್ಯಾಧರೇಂದ್ರಂ ಕುಮಾರನಂ ನೋಡಿ ... ಸಂತುಷ್ಟಚಿತ್ತನಾಗಿ (ವಡ್ಡಾರಾ. ೩೬-೦೦) ; ನೀಂ ಲಲಿತಾಂಗಚರನೆಯುಪ್ಪ ದಿಜಾಂಬ ಸ್ವಕೀಯಪ್ರಾಣೇಶ್ವರಿ ತತ್ಸ್ವಯಂ ಪ್ರಭಾದೇವಿ ನಿಮ್ಮ ಮಾವಂ ವಜ್ರದಂತಚಕ್ರವರ್ತಿಗಂ ನಿಮ್ಮತ್ತೆ ಲಕ್ಷ್ಮೀ ಮತಿಮಹಾದೇವಿಗಂ ಶ್ರೀಮತಿಯೆಂಬ ಮಗಳಾಗಿ ಪುಟ್ಟಿದಳ್ (ಆದಿಪು. ೪-೦೬ ವ); ರಾಮನಾವೆಡೆ ಜೀಯ ಕಲಿ ರಾಘವೇಯನಾವೆಡೆ ಸೂಜುಮಕ್ಕಳು ಬೀಯವಾದರೆ ಮಾವ ಎಂದರು ಸೊಸೆಯರಡಗೆಡೆದು (ಕುವ್ಯಾಕ. ೧-೩). ೩. ಗೌರವಾರ್ಥವಾಗಿ ಹಿರಿಯರನ್ನು ಸಂಬೋಧಿಸುವಾಗ ಬಳಸುವ **ಮಾತು** : ಎಮ್ಮಯ್ಯಂ ಮಾವನೆಮ್ಮ ಮುತ್ತಯ್ಯಂ ಮತ್ತೆಮ್ಮ ಗುರು ವೆಂದು ಮಣಿಯುವನಮ್ಮೊ ಜಿಯುವನಾಗೆ ಜಾರೆಯರ್ವಂಚಿಸುವರ್ (ಸಮುಶ. ೩-೩೦).

**ಮಾವನಂಕಕಾಜಿ** = ಮಾವನ ವಶವರ್ತಿಯಾಗಿ ಯುದ್ಧಮಾಡುವ ವೀರ ; ಒಂದು ಬಿರುದು : ಮಾವನಂಕಕಾಜಿ ಶ್ರೀವಾದಿ ಮಹಾಪ್ರಳಯ ಕಾಲಭೈರವಪಣ್ಡಿತದೇವರ ಪಾದಾರಾಧಕಂ ಪರಬಳಸಾಧಕಂ ನಾಮಾದಿ ಸಮಸ್ತಪ್ರಸಸ್ತಿಸಹಿತಂ (ಸೌಇಇ. XI-i, ೯೭-೨೦ ; 1062) : ವೈರಿಮಣ್ಡಳಿಕ ವಿಗ್ರಗಬೇಂಟೆಕಾಜಂ ಚೋಳಕಟಕಸರ್ವಸ್ವಸೂಜಿಕಾಜಂ ಮಾವನಂಕಕಾಜಂ (ಎಕ. VI, ಕೊಪ್ಪ. ೪೩-೧೭ ; 1090). **ಮಾವನಗಂಧವಾರಣ** = ಒಂದು ಬಿರುದು : ಅಭಿಮಾನಗಳ್ಕನಿತರಗಣ್ಯಂ ಮಾವನಗನ್ಧವಾರಣಂ (ಮೈಆ೦. ೧೯೩೩, ೪೦-೩೦; 951); ಶ್ರೀಮದಾಹ[ವ]ಮಲ್ಲದೇವ ಪಾದಪಂಕಜ ಭ್ರಮರಂ ಮಾವನ ಗನ್ಧವಾರಣಂ (ಸೌಇಇ. XI-i, ೩೭-೦೪ ; 1020).

**ಮಾವನಮನೆ** = ೧. ಸೋದರಮಾವನ ಮನೆ : ಪದೆಪುಗೆಡ[ಲ] ಬ್ಬೆಯೊಡವುಟ್ಟಿದ ಮಾವನಮನೆಯೊಳುಂಡುಟ್ಟುಂ ನೀಮೊದೆದೊಡ ಗೆಯ್ಬಯೊ ನಾಯುಣ್ಣದ ದೋಣಿಯೊಳೂಡಿದೊಂಗೆ ಪಮಯಿದನೆ ಕರಂ (ಸುಕುಮಾ. ೨-೬೯). ೨. ಗಂಡನ ಅಥವಾ ಹೆಂಡತಿಯ ತಂದೆಯ ಮನೆ : ಸೊಸೆ “ ನಮ್ಮ ಮಾವನ ಮನೆ ಥಾಲುಕ್ಕಿದಂಗೆ ಉಕ್ಕಲಿ ” ಎನ್ನುತ್ತಾಳ (ನಮ್ಮೂರು. ೦೦೩); ಈ ಅಳಿಯದೇವರುಗಳು ಮಾವನ ಮನೆ ಬಿಡದೆ ಭದ್ರ ವಾಗಿ ಹೆಂಡಂದಿರ ಜೊತೆ ಇದ್ದುಬಿಟ್ಟರು (ಮಾಪುಶಿ. ೨೦೦). ೩. (ಆಲಂ) ಊಟಉಪಹಾರಗಳ ಮಂದಿರ ; ಹೋಟೆಲು : ಊಟ ತಿಂಡಿಗಳಿಗೆ ಹೇಗೂ ಮಾವನ ಮನೆ ಇದ್ದೇ ಇದೆ. ಮಲಗುವುದಕ್ಕೊಂದು ರೂಮು ಮಾಡಿ ಕೊಂಡರೆ ಸಾಕು (ಉಾ). ೪. ಸೆರೆಮನೆ : ಕಾರಾಗೃಹ : ಅವನು ಕಳ್ಳತನ ಮಾಡಿ ಮಾವನ ಮನೆ ಸೇರಿದ (ಉಾ). ‘ಅತ್ತೆಮನೆ’ ಪರಾ. **ಮಾವನಸಿಂಗ** = ಮಾವನ ವಶವರ್ತಿಯಾಗಿ ಸಿಂಹದಂತೆ ಪರಾಕ್ರಮದಿಂದ ಹೋರಾಡುವವನು ; ಒಂದು ಬಿರುದು : ಪರಾಂಗನಾಪುತ್ರ ಸಗಳಗುಣಗಣೋತ್ತುಂಗ ಮಾವನ ಸಿಂಗ ಜಿತವೈರಿ . . . ಶ್ರೀಮತ್ ಕಲಿಯಮ್ಮರಸಂ (ಕಕುಂ. ೬-೨೧; 1039).

[ದೇ.॥ ತಮಿ. ಮಾಮನ್, ಮಾಮಾ, ಮಾಮಾಣ್; ಮಲ. ಮಾಮನ್; **ಕೋತ.** ಮಮನ್; **ತೊದ.** ಮುಮುನ್; **ಕೊಡ.** ಮಾವೆನ್; **ತುಳು.** ಮಾಮೆ. ಮಾವೆ; **ತೆಲು. ನಾಯ್ಕಿ. ಪರ್ಜಿ. ಕುಇ.** ಮಾಮ; **ಕುವಿ.** ಮಮ, ಮಾಮ ; **ಕುರುಖ್.** ಮಮುಸ್ ; **ಮಲ್ತೊ.** ಮಮ; **ಬ್ರಾಹುಈ.** ಮಾಮಾ./ಹಿಂ. ಮರಾ. ಮಾಮಾ./ಪ್ರಾ. ಮಾಮ, ಮಾಮಗ, ಮಾಮಾ./ ಸಂ. ಮಾಮ]

**ಮಾಮಂಡಿ** (ನಾ). ಒಂದು ನದಿಯ ಹೆಸರು : ಮಾದದೀಮೀನದೀ ಮಾಮಣ್ಡಿ[ನ]ದೀ (ಇಆ. XIV, ೨೩೨-೩೩ ; ೪ನೆಯ ಶತ). [ ? ]

**ಮಾಮಂದಿರ** (ನಾ). ದೊಡ್ಡದೇವಾಲಯ : ಮಲ್ಲಿಕಾರ್ಜುನ ಮಾ [ಶಾಶಾಂ. ಮಹ]ಮಂದಿರಕ್ಕಾಗ್ನೇಯದಲ್ಲಿ ಜಲಜನಿತಸಲಿಲಮಂ ನೋಡಿ ಕಟಿಯಗಲವಿಲ್ಲಿತನಕೆಂದು ಸೀಮಾರೇಖೆಯುಂ ಕಟ್ಟಿ (ಸಿದ್ಧರಾ. ೪-೦೬). [ಮಾ₄ + ಮಂದಿರ]

**ಮಾಮಕ** (ನಾ). ೧. ನನ್ನದು ; ನನಗೆ ಸೇರಿದುದು : ಮಾಮಕವಿದೆಂದಾವುದಕೊ ತಾನೆ ಬಲಿಪೋಗಿ ಶಾಮನವನೊಂದುವುದು (ಮಂಕುತಿ. ೯೨೬). ೨. ನಮಸ್ಕರಿಸುವ ಒಂದು ರೀತಿ : ಸಾಮಾನ್ಯ ನಮಸ್ಕಾರಕೆ ಭಾವಿನಿಯರ ವುದರ ತ್ರಿವಳಿಗಡ್ಡರೆ ಕೈಯಾ ಮೈಗೆ ಮುಖದ ಮೇಲಿಡೆ ಮಾಮಕ ವೆಂದಕ್ಕು (ಶಬ್ದಾನು. ೩೩). [ಸಂ.]

**ಮಾಮಕಾಚಿ** (ನಾ). ಒಂದು ಸ್ಥಳದ ಹೆಸರು (?) : ಅತಾಜಿಗ ಭಟಾರರ್ ಮೆಚ್ಚಿ ಕೊಟ್ಟ ಕೊಡಜಿಗ ಪದಿಕ್ಕೊಳ ಕಳನಿ ಮಾಮಕಾಚಿಯ ಕೆಳಗೆ ಪದಿಕ್ಕೊಳ ಪಾಟಿ (ಎಕ. X, ಮುಳಬಾ. ೯೩-೪ ; ಸು. 970). [ ? ]

**ಮಾಮನಿ** (ನಾ). ಮದುವೆಯಾದ ಬಳಿಕ ಬೀಗರನ್ನು ಕಳುಹಿಸಿ ಕೊಡುವಾಗ ನೀಡುವ ಔತಣ : ಅದುದಲ್ಲಿಂ ಮೇಲೆ ಮಾಮನೆ[ನಿ] ಮೇದಿನೀಪತಿ ಜನಕರಾಯಂಗಾ ದಿವಾಕರಕುಲಲಲಾಮಂಗಖಿಳವಿಭವದಲಿ (ತೊರರಾ. ೦-೦೬-೩೩) ; ಮಾರನೆ ದಿನ ‘ಮಾಮನಿ’ ಇತ್ಯಾದಿ ಕಾರ್ಯಗಳನ್ನು ತೀರಿಸಿಕೊಂಡು ಗಾಳಿಪುರಕ್ಕೆ ಬಂಡಿಕಟ್ಟಿದರು (ಬೆಂದು. ೪೦) ; ಮರುದಿನ ಗಂಡಿನವರ ಮಾಮನಿಯ ಊಟಕ್ಕೆ ಅಕ್ಕನ ಜೊತೆಗೆ ನಾನೂ ಹೋಗಿದ್ದೆ (ವೃಶಿ. ೨೩).

**ಮಾಮನೀಪ್ರಸ್ತ** = ಬೀಗರ ಊಟ : ಮಾಮನೀಪ್ರಸ್ತ ಒಂದುಳೀತ ದಲ್ಲಾ (ತಿತಗು. ೩೪) ; ಒಂಭತ್ತನೇ ದಿವಸ ವರಪಕ್ಷದವರ ಮಾಮನೀಪ್ರಸ್ತ ನಡೆಯಿತು (ಮುಂಜಿಕ. ೧೯೦). [←ಹಿಂ. ಮೆಹಮಾನೀ = ಆತಿಥ್ಯ]

**ಮಾಮನೆ** ‘ಮಹಾಮನೆ’ ನೋ.

**ಮಾಮರ** (ನಾ). ಮಾವಿನ ಮರ : ದಂಡಕರಿಸಿಯರ್ . . . ಮಾ[ಶಾಶಾಂ. ಮಾವಿನ]ಮರದ ಕಟಿಗೆ ಸ್ವಾಧ್ಯಾಯಂಗೆಯ್ಯುತ್ತಿರ್ದರ್ (ವಡ್ಡಾರಾ. ೦೭೨-೨೩); ಸೊಗಯಿಸಿ ಬಂದ ಮಾಮರನೆ ತಳ್ತಲೆವಳ್ಳಿಯ ಪೂತ ಜಾತಿಸಂಪಗೆಯ . . . ನೋಟಿಸ್ಪಡಾವ ಬೆಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿ ದೇಶದೊಳ್ (ಶಂಪಭಾ. ೪-೨೬); ಎತ್ತಣ ಮಾಮರ ಎತ್ತಣ ಕೋಗಿಲೆ ಎತ್ತಣಿಂದೆತ್ತ ಸಂಬಂಧವಯ್ಯ (ಅವಚಂ. ೦೩-೩೯). [ಮಾ₃ (<ಮಾವು) + ಮರ₁]

**ಮಾಮಲತಿ, ಮಾಮಲೇತಿ, ಮಾಮಿಲತ್ತು** (ನಾ). ೧. ತಹಸೀಲ್ದಾರನ ಕೆಲಸ : ತಹಸೀಲುದಾರಿಕೆ : ಮಾಮಲತಿ ಮುನಸಫಿ ಮಾಡುವ

ಮನುಷ್ಯನ ಸಂಬಳವನ್ನು ಒಬ್ಬ ಕಿರಾಣಿ ಅಂಗಡಿಕಾರನು ಗಳಿಸುತ್ತಿರುವನು (ಭ್ರಾ. ೬೯). **ಮಾಮಲೇತಿ :** ೧. ನಮ್ಮ ಶೇಷಣ್ಣ ಆಗ ಬಿ.ಎ. ಆಗಿದ್ರ ಆಗ ಬೇಕಾದಂಥಾ ಪ್ರೊಬೆಶನರ ಮಾಮಲೇತಿ ಮಾಡುತಿದ್ದಾ ಇಷ್ಟೊತ್ತಿಗೆ (ವೃಹಿ. ೦೬) ; ನಿಮ್ಮ ಮಕ್ಕಳ ಬುದ್ಧಿ ನೋಡಿದರ ಅವರು ಮಾಮಲೇತಿ ಮಾಡಬಹುದು (ಕುಣಿಸು. ೬೭). **ಮಾಮಿಲತ್ತು :** ೨. ವ್ಯವಹಾರದ ಮಾತು ; ಕಾರುಭಾರು : ಸರಹದ್ದು ಏನಾದರೂ ಹೆಚ್ಚು ಕಡಿಮೆ ಆದರೆ, ನಮ್ಮ ಜಿಹ್ವೆಯಿಂದಾ ನಾವು ಹೇಳದೆ ಇದ್ದಾಗ್ಯೂ ಉಭಯಕಡೆ ಜನರು ಹೇಳ್ಯಾರಷ್ಟೆ. ತಾವು ಮಾಮಿಲತ್ತು ತಿಳಿಯುವಂಥಾದ್ದು ರಾಸ್ತಿ ತೂಕ ಮಾಡುವಂಥಾದ್ದೂ ತಮ್ಮ ಹಸ್ತದ ಆಟವಿದೆ (ಐಕೇಂದ್ರ. ೨೬೨).

[← ಅರ. ಮುಆಮಲತ್, ಮುಆಮಿಲತ್ ; ಮರಾ. ಮಾಮಲತ್, ಮಾಮಲೀಯತ್ ; ಹಿಂ. ಮಾಮಲತ್, ಮಾಮಲತೀ]

**ಮಾಮಲೆ**, ಮಾಮ್ಲೆ (ನಾ). ೧. ಉದ್ಯೋಗ ; ಕೆಲಸ ; ದಂಧೆ : ಇಬ್ಬರು ಮಕ್ಕಳೂ ತಮಗಿಂತಲೂ ಹೆಚ್ಚಾಗಿ ಓದಿ ತಮ್ಮ ಮಾಮಲೆಗಿಂತ ಹೆಚ್ಚಿನ ಹುದ್ದೆಗೆ ಬರಬೇಕೆಂದು ಭೀಮರಾಯರಿಗೆ ಬಹಳ ಆಸೆ (ಕುಣಾಯ. ೯೯). ೨. ವ್ಯಾವಹಾರಿಕ ಅಥವಾ ವಿವಾದಾಸ್ಪದವಾದ ವಿಷಯ : ಝಾನ್ಸಿ ರಾಜ್ಯದ ಮಾಮಲೆಯನ್ನು ನಿರ್ಣಯಿಸಲು ಒಂದು ಸಮಿತಿಯು ಏರ್ಪಟ್ಟಿತು (ಝಾಆ. ೭). ೩. ತಾಲ್ಲೂಕಿನ ಕಂದಾಯವನ್ನು ನಿಗದಿಮಾಡಿ ವಸೂಲುಮಾಡುವ ಕೆಲಸ,– ಉದ್ಯೋಗ ; ತಹಸೀಲುದಾರಿಕೆ : 'ಮಾಮಲೇದಾರ' ಪರಾ. **ಮಾಮ್ಲೆ :** ೩. ಮಾಮ್ಲೆ ಮಾಡೋರು ನಿನ್ನ ಅಷ್ಟು ಅಕ್ಕರೆಯಿಂದ ಮಾತಾಡಿಸಿ ಬುದ್ಧಿಹೇಳಿ ಕಳ್ಸಿದ ಮೇಲೆ . . . ಎಚ್ಚರಿಕೆಯಿಂದಿರೋದು ಒಳ್ಳೇದು (ತೆಂಗಾಳ. ೦೬೦).

[← ಅರ. ಮುಆಮಿಲಾ ; ಹಿಂ. ಮರಾ. ಮಾಮಲಾ]

**ಮಾಮಲೆದಾರ** 'ಮಾಮಲೇದಾರ' ನೋ.

**ಮಾಮಲೇತಿ** 'ಮಾಮಲತಿ' ನೋ.

**ಮಾಮಲೇದಾರ**, ಮಾಮಲೆದಾರ, ಮಾಮ್ಲೆದಾರ (ನಾ). ತಾಲ್ಲೂಕಿನ ಕಂದಾಯವನ್ನು ನಿಗದಿಮಾಡಿ ವಸೂಲುಮಾಡುವ ಅಧಿಕಾರಿ; ತಹಸೀಲುದಾರ : ಹುನಗುಂದದಿಂದ ಮಾಮಲೇದಾರರು ವಕೀಲರು ಆ ಸಮಾರಂಭಕ್ಕೆ ಬಂದಿದ್ದರು (ಹುಣವು. ೦) ; ಮಾಮಲೇದಾರರ ಉಪದೇಶದಂತೆ ಮನೆಯಲ್ಲಿ ತನ್ನ ಕಾಯಿದೆಯನ್ನು ಹಾಗೂ ಇತರ ಕೇಸುಗಳನ್ನು ಅಭ್ಯಸಿಸತೊಡಗಿದನು (ಗಂಹಸಾಯ. ೭೬). **ಮಾಮಲೆದಾರ :** ಅತಿಕುಪೆ ತಾಲ್ಕು ಮಾಮಲೆದಾರ ಸುಬ್ಬರಾಯನ ಸೇವೆ (ಎಶ. VI (೫). ಕಾಂಡಪ. ೨೦೩-೫; ೧೫೮೭) ; ಗಂಡನಿಗೊಂದು ಎಂಜಲು ತೊಳೆಯುವ ಕೆಲಸವಿದ್ದುಕೊಂಡೇ ಇಷ್ಟು ಆಡುತ್ತಾಳೆ. ಇನ್ನು ಅವನೇನಾದರೂ ಮಾಮಲೆದಾರನಾಗಿದ್ದರೆ ಇನ್ನೆಷ್ಟು ಮಾಡುತ್ತಿದ್ದಳೊ ? (ಶತಂಗ. ೦೨). **ಮಾಮ್ಲೆದಾರ :** ನಾ ಈವತ್ತು ಕಚೇರಿಗೆ ಬರೂದುಲ್ಲ ಅಂತ ಮಾಮ್ಲೆದಾರ ಸಾಹೇಬರಿಗೆ ಹೇಳಿ ಬಾರೋ (ಧವಂಶ. ೨೩).[ ← ಮರಾ. ಮಾಮಲೇದಾರ್]

**ಮಾಮಸಕ** (ನಾ). ೧. ಅತಿಯಾದ ಸಿಟ್ಟು,–ರೋಷ : ಧಗಲು ಭುಗಿಲೆನುತೆ ಮಾಮಸಕದಿಂ ಮಸಗಿ ತೊನೆದು ಬಸುಱಿಂ ಹೊಸೆದು ಹೊಯ್ದು ನೆಲನಂ ತಿರುಗಿ (ತಿರುಕ. ರೇ. ೦೬-೩); ಮಾಮಸಕದಿನೆಟ್ಟಿಂದು ರಕ್ಕಸಂ ಬಿಲ್ಲಿಡೆಯುಂ ಪೊಸ ನೆತ್ತರ ಪೂರಂಗಳ್ ಮಸಗುವಿನಂ ಕುಸುರಿವಱಿದು ಕೆಡಪಿದನಾಗಳ್ (ಉತ್ಕಟಿ. ೯-೭೦); ಮಾಮಸಕಂ ನಿಷ್ಠುರವಚನಮೆಂಬಿವಂ ಪರಿಹರಿಸುವದು (ಪೀತಿವಂ. II. ೦೫). ೨. (ಅಧಿಕವಾದ) ವಿಜೃಂಭಣೆ,– ಸಂಭ್ರಮ,– ಸಡಗರ : "ಸಂಭ್ರಮವೇ ಮಾಮಸಕಂ" (ಶಕುಪಿ. ೪೦); ಎಡವರಿಯುವಡಿಯಿಡುವ ಮಾಮಸಕಕಂಜಿ ಮಣಿಕುಟ್ಟಿಮತಳದ ಪೂವಲಿಯುಂ ಬಿಟ್ಟು ಪಾಱುವ ಮಧುವಿಹಂಗಗಳ ಹುಂಕಾರದೊಳಂ (ಕಾವ್ಯಛ. ೬೭); ರಥದ ಕೂಡೆ ಮಾಮಸಕದಿಂ ಕುಣಿವ ಕುದುರೆಗಳ ಬಳಗದಿ ಭೂಮಿ ಬೆಸಲಾದುದೆಂಬಂತೆ ಪರಿಜನದ ತಿಂತಿಣಿಯೊಳ್ ದಿಗ್ಗೊಂಡರವನಿಪನನು (ಹಕಾ. ೦೯-೨೯); ಪೊಸ ಮಾಗಿ ಮದವಾಜಿ ಮಾಪಂಕುರಂದೋಜಿ . . . ವಿರಹಿಗಳ ಬಾಯಾಜಿ ಮಾಮಸಕದಿಂ ಬಂದನು ವಸಂತನು (ಸಿದ್ಧರಾ. ೪-೬೭).

**ಮಾಮಸಕಂಮಸಗು, ಮಾಮಸಮಸಗು** = ಅತಿಯಾದ ಕೋಪದಿಂದ ಕೆರಳು : ಮುರಾಂತಕನಂತಕನಂತೆ ಮಾಮಸಕಂ ಮಸಗಿ ದುರ್ಯೋಧನನನಿಂತೆಂದಂ (ಸಂಕಾ. ೯-೯೮ ವ); ಕುರುಕುಲಕೃತಾಂತಕನಂತಕನಂತೆ ಮಾಮಸಕಂ ಮಸಗಿ ಪ್ರಳಯಕಲ್ಪಸಂಕಲ್ಪಂಗೆಯ್ದು (ಗದಾಯು. ೬-೦೯ ವ); ಮನಮಂ ಮುನಿಸಿಂ ಮುಸುಂಕಿ ಮಾಮಸ ಮಸಗಿ . . . ಕಳವಳಿಸಿ ಪೋಪ ಕೆಳದಿಯ ಬಱಸಂದು (ಲೀಲಾವ. ೦೯-೩೩ ವ); ದೆಸೆದೆಸೆಗೆ ಹರಿಹುದು ಮಾಮಸ ಮಸಗಿ ಬಾದಣಗೊರೆದು ಕೆಡಹುವ ವಿಷಮವೀರರು ಘಾಡಿಸಿತು ಡೊಂಕಣಿಯ ತುದಿಗಳಲಿ (ಕುಮಾವ್ಯಾ. ೯-೪೫). [ಮಾ₄ + ಮಸಕ₁]

**ಮಾಮಸಕಂಗೊಳ್** (ಕ್ರಿ). ಅತಿಯಾದ ಕೋಪವನ್ನು ತಾಳು ; ಹೆಚ್ಚಾದ ರೋಷದಿಂದ ಕೆರಳು : ದೆಸೆಯಂ ಬಿಡಾಗಿಂಶುಜಾಲಂ ಬೆಳಗೆ . . . ದಿಗ್ವೇತಂಡಮಂ ಡಿಂಡಿಮರುತಿ ಚಕಿತಂ ಮಾಡೆ ದೃಪ್ಯದ್ಬಳಂ ಮಾಮಸಕಂಗೊಂಡೆತ್ತಿ ಬಂದಂ ಬಗೆಯದೆ ಪೃಥಿವೀಪಾಲನುಗ್ರಾಜಿರೋಲಂ (ಸಂಪ್ರಪು. ೦೦-೫೯). [ಮಾಮಸಕ + ಕೊಳ್₁]

**ಮಾಮಸಗು** (ಕ್ರಿ). ೧ = ಮಾಮಸಕಂಗೊಳ್ : ಮುಸಲ ಮುಸುಂಡಿ . . . ಮುದ್ಗರಗಳ ವಿಸರದಿಂ ಹೊಯ್ದಱದಾಡಿವರೆಂದು ಮಾಮಸಗಿ ಮಹಾರಾವುತರು (ಕುಣಾಸಾಂ. ೦೩-೯೯). ೨. ವಿಜೃಂಭಿಸು ; ಸಂಭ್ರಮಿಸು: ಉತ್ಸಾಹದಿಂದ ಕೂಡು : ಮುಸುಱಿದ ಕುಳಿರೊಳ್ ದೆಸೆಯಾಗಸಮಿಳೆ ಬೆಟ್ಟಿಡಮಿಯೆಂಬಿವೆಂತಾನುಂ ಕಾಣಿಸಲಾರ್ತುವಿಲ್ಲಮೆನೆ ಮಾಮಸಗಿರ್ದುದು ಮಾಗೆ ಮಾಗೆಸಕಿಮೆಸರಿಳೆಯೊಳ್ (ಕಬ್ಬಸು. ೬೫ ಶ್ರಯೋ). ೩. ಹೆಚ್ಚಾದ ಕಾಂತಿಯನ್ನು ಹೊಂದು ; ಪ್ರಕಾಶಿಸು: ಕಱದೊಂದದ ಚಂದುಮಟ್ಟು ಮಾಮಸಗಿತೊ ಗಂಡುಮೇಳಗರ ಕೈ ಬೆಮರೊಂದದ ಸೂಳೆಮೇಳಮೇಂ (ಶಳವ. ೬-೦೫೫). [ಮಾ₄ + ಮಸಗು]

**ಮಾಮಳೆ** (ನಾ). ಜೋರಾಗಿ ಬೀಳುವ ಮಳೆ; ಭಾರಿಮಳೆ: ಮಾಮಳೆ ಸಮುದ್ರದೊಳ್ ಕಱದಂದವ್ವೆಸೆ ನಿಮ್ಮಾ ಮನಃಪ್ರೀತಿ ಕೈಗೂಡು ವಂತೊರೆವೆನಾ ಶ್ರೀಮಹಾನಂದಿಯ ಮಹಾತ್ಮೆಯ ಕಥಾಕುತೂಹಲವನಾಲಿಪುದು (ನಂದಿವಾ. ೨-೩೩). [ಮಾ₄ + ಮಳೆ (< ಮಟ₃)]

**ಮಾಮಾ₁** 'ಮಾ₃' ಪರಾ.

**ಮಾಮಾ₂** 'ಮಾ₄' ಪರಾ.

**ಮಾಮಾಯೆ** (ನಾ). ಒಂದು ವಸ್ತುವು ಮತ್ತೊಂದರಂತೆ ತೋರುವುದು : ಅವಿದ್ಯೆ; ಮಹಾಮಾಯೆ : ನೀಸೊಲವಿನ ಸಾಮ್ರಾಟ, ಮಾಮಾಯೆಯ ಕಣ್ಕಟ್ಟು (ಶಂತವ. ೨೫-೨೦). [ಮಾ₄ + ಮಾಯೆ]

**ಮಾಮಾರಿ** (ನಾ). ದುರ್ಗೆಯ ಒಂದು ಅವತಾರ : ಮಹಾಮಾರಿ : ಆ ರೂಪಿನಿಂ ಮೃತ್ಯುರೂಪಿನಿಂ ಕಾಲನಾ ರೂಪಿನಿಂ ಕೃತಾಂತಾಖ್ಯನಲ್ಲಿ ಮಾರಿಯಲ್ಲತ್ಯುಗ್ರಮಾರಿಯಂತಲ್ಲಿ ಮಾಮಾರಿಯಾ ಚಿತ್ರಗುಪ್ತಾಧಿಕರಣಂ (ಸಾಪಂಶ. ೫-೦೦). [ಮಾ₄ + ಮಾರಿ₂]

**ಮಾಮಿ** (ನಾ). ಸೋದರಮಾವನ ಪತ್ನಿ; ಅತ್ತೆ : ಈವರಿಗೆ ಮಾಮಾ ಮತ್ತು ಮಾಮಿ ತನ್ನನ್ನು ಮಗನೆಂದೇ ನೋಡಿರಬಹುದೆಂಬ ವಿಚಾರದಿಂದ ಅವನು ಪುಳಕಿತನಾದನು (ಗಂಹಸಾಯ. ೦೨೩). [ದೇ.॥ ತಮಿ. ತುಳು. ಹರ್ಜಿ. ಮಾಮಿ. / ಮರಾ. ಮಾಮಿ, ಮಾಮೀ ; ಹಿಂ. ಮಾಮೀ. ಪ್ರಾ. ಮಾಮಿಯಾ, ಮಾಮೀ. / ಸಂ. ಮಾಮೀ]

**ಮಾಮಿಡಿ** (ನಾ). ೧. ಮಾವಿನ ಹೀಚು : ಮಾವಿನ ಕಸುಗಾಯಿ : ನಡೆಗಲಿಸುತ್ತುಮಂಚೆಗಳನೋದಿಸುತಂ ಗಿಳಿಯಂ ಪಿಕಕ್ಕೆ ಮಾಮಿಡಿಗಳ

ನಿಕ್ಕುತುಂ . . . ನಿರಂತರಂ ತೊಲಗದಿರ್ಪುದು ಪೌರಪಿಲಾಸಿನೀಜನಂ (ಮಲ್ಲಿಕ. ೨-೩೯); ಅಳಿಗಲರ್ಗೊಂಚಲ ಗಿಳಿಗೆ ಮಾಮಿಡಿಗಳ . . . ಈಖವಿತಾ ಬನದೊಳಗಿಹತಂಬುಜಾಕ್ಷಿಯರು (ಕಂಠಾಸಾಂ. ೪-೬೩). ೨. (ಉಪ್ಪಿನ ಕಾಯಿಗೆ ಬಳಸುವ) ಚಿಕ್ಕಗಾತ್ರದ ಒಂದುಬಗೆಯ ಮಾವಿನ ಕಾಯಿ : ಮಾಗುಳಿವೇರ್ಪೊಳೆಯಲ್ಲವೇಲಿ ಕಮ್ಮಿಪ್ಪ ಸುಭದ್ರೆ ಮಾಮಿಡಿ . . . ಅರೆಮಾದುಫಲಂಗಳಾದಿಯಾದುಪ್ಪಿನಕಾಯ್ಗಳಂ ಮಗ ಮಗಿಪ್ಪ ವನಿಕ್ಕಿದನಪ್ಪುಪತ್ರದೊಳ್ (ಲೀಲಾವ. ೫-೬೩).

[ಮಾ₃ (<ಮಾವು) + ಮಿಡಿ₂]

**ಮಾಮಿಲತ್ತು** 'ಮಾಮಲತಿ' ನೋ.

**ಮಾಮುಗುಳ್** (ನಾ). ಮಾವಿನ ಮೊಗ್ಗು : ಮಾಮರಂ. ಮಾಮಿಡಿ. ಮಾಮುಗುಳ್ (ಶಬ್ದಾನು.೩೩೬ ಶ್ಲೋ). [ಮಾ₃ (<ಮಾವು)+ಮುಗುಳ್₂]

**ಮಾಮೂಲ್** 'ಮಾಮೂಲು' ನೋ.

**ಮಾಮೂಲಿ** 'ಮಾಮೂಲು' ನೋ.

**ಮಾಮೂಲು**, ಮಾಮೂಲ್, ಮಾಮೂಲಿ (ನಾ). ೧. ರೂಢಿ : ಅಭ್ಯಾಸ : ರಾತ್ರಿ ಕೆಲಸವೆಲ್ಲಾ ಮುಗಿದ ಮೇಲೆ ಅಣ್ಣಾತಂಗಿಯರಲ್ಲಿ ಮಾಮೂಲಿನಂತೆ ಮಾತಿಗಾರಂಭವಾಯಿತು (ವಾಣಿ. ೦೫); ಪೈಪೋಟಿಯ ಕಾಲದಲ್ಲಿ ಹಾಲಿಗೆ ನೀರನ್ನು ಸೇರಿಸುವುದು, ಗೋಧಿಯ ಹಿಟ್ಟಿಗೆ ಬೆರಕೆ ಮಾಡುವುದು—ಇವು ಮಾಮೂಲಾಗಿ ಬಿಟ್ಟವು (ಶಿವ್ರಾ. ೦೬೦). ೨. ಸಂಪ್ರದಾಯ ; ಪರಿಪಾಠ : ಈಗ ತತ್ವರಕ್ಷೆಯ ಬೆಳಕಿಲ್ಲದೆ ಮಾಮೂಲುಗಳ ಕುರುಡುಕತ್ತಲಲ್ಲಿ ಮುಳುಗಿವೆ (ಶಿಕ್ಷರ. ೭೫೦); ಸಂತೋಷದಿಂದ ನಗುವುದೂ ಮಾಮೂಲು ಮೀರಲಾರದೆ ವಿನ(ಹಾ) ನಿಜವಾದ ಸನ್ನಿವೇಶದಿಂದ ಇರಲಿಲ್ಲ (ಹುಟ್ಟಿಹ. ೬). ೩. ರೀತಿ ; ರಿವಾಜು : ಕ್ರಮ : ಈ ವಾಯಿದೆ ಕಳೆದ ನಂತರ ಮಾಮೂಲಾಗಿ ಕೊಡಬೇಕಾದ ಗೇಣಿಯನ್ನು ಕೊಡಬೇಕಾಗುತ್ತದೆ (ಶ್ರವಾ. II, ೯೬೬). ೪. ದಿನನಿತ್ಯದ್ದು : ನಿಯತವಾದುದು : ಶ್ರೀ ಮಹಾಬಳೇಶ್ವರದೇವರ ಸಂನಿಧಿಯ ಬ್ರಾಹ್ಮಣರಿಂಗೆ ಮಾಮೂಲಿನಂತೆ ಶ್ರೀವೀರಕಾವದೇವರಸರು ಆಚಂದ್ರಾರ್ಕವಾಗಿ ಮಾಲೂರ ಗ್ರಾಮಾನುಮಾತ್ರ ದಿಂದಾ ರಾಜರು ಕೊಟ್ಟರು (ಎಕ. XXVII, ೦೬೨-೬೫: 1256); ಮಾಮೂಲಾಗಿ ಈ ಮನೆಗೆ ಇವಳದೇ ಹಾಲು ಸಪ್ಲೈ (ದೂರಸಂ. ೦೦). ೫. ಲಂಚ : ಹೊಸದಾಗಿ ನೌಕರಿ ಹಿಡಿಯಲುಬರುವವರೆಲ್ಲಾ ಹೆಡ್‌ಕ್ಲಾರ್ಕರಿಗೆ ಇಪ್ಪತ್ತೈದು ರೂಪಾಯಿ 'ಮಾಮೂಲು' ಕೊಡಬೇಕಾಗುತ್ತದ (ನಾಪೋಲೀ. ೪೦); ತಾವು ಬಂದಾ ಲಾಗಾಯಿತು ಅವರಿಗೆ ಆಳುಕಾಳುಗಳ ಸಂಬಳದಲ್ಲಿ ಬರುತಾಯಿದ್ದ ಒಂದು ಭಾಗ ಮಾಮೂಲು ಬಂದಾಗಿ ಹೋಗಿತ್ತು (ಸಾಹೇಬ್. ೨೯೨); ಬರೆದ ಪತ್ರ ರಿಜಿಸ್ಟರಾಗಬೇಕಾದರೆ 'ಆಫೀಸಿಗೆ' ಮಾಮೂಲು ಸಲ್ಲಿಸಬೇಕು (ಗಂನಾಳ. ೯೦). **ಮಾಮೂಲ್ :** ೪. ರಾತ್ರಿಯೂಟದ ನಂತರ ಒಂದು ಸುತ್ತು ನಡೆದಾಡಿ ಬರುವುದು ಅವರ ಮಾಮೂಲ್ ಪರಿಪಾಠ (ರೂಂ). **ಮಾಮೂಲಿ :** ೧. ಇವರ ಮಾಮೂಲಿಯ ಮಾತುಗಾರಿಕೆಯು, ಕತೆಗಾರನ ಸರಸತೆಯನ್ನು ನಗೆಯಾಡುವಂತೆ. ತಾತ್ವಿಕನ ನೀರಸ-ವಿರಸಗಳ ಮಾರ್ಗವಾಗಿ ರಸಪರ್ಯ ಸತ್ಯಲೋಕದ ಶುಭ್ರತೆಯನ್ನು ಸೇರುವುದು (ವಿಜಾಮಂ. ೯೯).

[ ← ಅರ. ಮಅಮೂಲ್ ; ಹಿಂ. ಮಾಮೂಲ್, ಮಾಮೂಲೀ : ಮರಾ. ಮಾಮೂಲ್, ಮಾಮೂಲೀ]

**ಮಾಮ್ಲೆ** 'ಮಾಮಲೆ' ನೋ.

**ಮಾಮ್ಲೆದಾರ** 'ಮಾಮಲೇದಾರ' ನೋ.

**ಮಾಯ್**, ಮಾಯು₁ (ಕ್ರಿ). ಮಾಯ್ದ (ಭೂತಕೃ), ಮಾದು₁, ಮಾಯ್ದು (ಭೂತನ್ಯೂ). ೧. ಕ್ಷಯಿಸು ; ಕ್ಷೀಣಿಸು : ತಪ್ತಶೇಷಮಾಗಿ ಮಾಯ್ದಿನ್ನ ಶರೀರಮಂ ಪ್ರಿಯತಮಶರೀರಸಂಯೋಗಾಹ್ಲಾದದಿ ನಾಜಿಸಿದಪ್ಪೆಂ (ಕಾದಂಸ. ೫೯೬); ಸಾಪದೆ ಕನಲ್ದ ಕಿಚ್ಚಿನೊಡನಾಡಿದ ತಂಬೆಲರಾತಪಂಗಳಂ ಕುಡಿದ ಸರೋರುಹಂ ಸಾಡದೆ . . . ಹಿಮವೊಂದು ಬಾಟ್ಟಿ ತಣ್ಗಿಡುವಿನ ಪೂವೆ ಸುಟ್ಟಪುದು ಮಾಯ್ದು ವಿಯೋಗಿಗಳೆಂತು ಬರ್ದಪರ್ (ಅರ್ಧನೇ. ೪-೬೨). ೨. ಕಾಣೆಯಾಗು : ಮರೆಯಾಗು : ಮುಗುಳಂ ಮಾದ [ಪಾಠಾಂ.ಮ್ದು]ಲರಾಯ್ತು ಮೆಯ್ಮರಿಸಿನಂ ಕಂಪೋಡಿತೀ ಬೆಂದ ದೀಪಿಕೆಯುಂ ಕರ್ಗುಂದಿವಟ್ಟುದೆನ್ನಿನಿಯನಿನ್ನುಂ ಬಾರನೇಕೆಂದು . . . ಸುಯ್ದು ಉಬಕಾಂಬುಕಣಾನೀಕವನಿಕ್ಕಿದಳ್ (ಲೀಲಾವ. ೨-೫೪). ೩. ಕಾಂತಿಗುಂದು : ಬಣ್ಣಗೆಡು : ಮಂಕಾಗು : (೯). ೪. ಕಳೆದು ಹೋಗು ; ಇಲ್ಲವಾಗು : ಎನಗರಸುತನ ಮಾಯ್ದು [ಪಾಠಾಂ. ಮಾದು] ಹೋಗಿ ವಿಶ್ವಾಮಿತ್ರಮುನಿಗಾದುದು (ಹರಿಶ. ೮-೭೩). ೫. (ಗಾಯ. ಹುಣ್ಣು. ಮುಂತಾದುವು) ಗುಣವಾಗು ; ವಾಸಿಯಾಗು : ಕೆಲವು ದಿವಸಕ್ಕೆ ಪುಣ್ಣೆಲ್ಲಂ ಮಾಯ್ದು ಲೇಸಪ್ಪುದುಂ (ಧರ್ಮಾಮೃ. ೦೨-೫೫); ಅದೇನು ದೊಡ್ಡ ಗಾಯವಲ್ಲ. ತನ್ನ ತಾನೇ ಮಾಯ್ದು ಹೋಗುತ್ತದೆ (ಮಣ್ಣಿಹ. ೦೬೨). ೬. ಸಾಯು ; ಮರಣಹೊಂದು : ನೆಟ್ಟನಿನ್ನೇಳಾಬಾಯ್ಯ ಕ್ಯಾಮಾನಿನ್ನರಾದರದಜೋನ್ನಾಕ್ಷರ್ಯಮೇರುಂಜಗಾ ಒನ್ದು ತಿಂಗಳ್ವಾಸಮಂ ಭಾವಿಸಿ ಸಮಾಧಿಮರಣದಿನ್ದ ಮಾಯ್ದು ನೋಸ್ತು ಸಗತಿಗೆ ಸನ್ದರ್ (ಎಕ. XIV. ಎಡತೊ. ೬೪-೦೫ ; 910). ೭. ಕೆಡು : ಹಾಳಾಗು ; ನಾಶವಾಗು : ಬಹುವರ್ಣ್ನಾವಾಜಿರಾಜಿಗಳುಮನೆಯ್ದೆ ನೋಡಿ ಮನವಿಕ್ಕಿ ಗಟ್ಟಿಲ್ನೆನೆ ಸತ್ತು ಮಾಯ್ದು ಲೋಭಿಗಳ ಪಪಣ್ಗೊಳಲ್ (ಎಕ. VII. ಶಿಕಾ. ೦೫೦-೩೪; 1047). ೮. ದುಷ್ಟತನವನ್ನು ಹೊಂದಿರು : ತೆಜಪನೆ ಪಾರ್ದಿರ್ಪಂ ಮಾಯ್ದುಜಗುಲಿ ಜವಂ (ಅಂಪು. ೪-೭೬); ಜನಪದವನಿತೊಳವನಿತಜಿಳೆನಿತರೊಳವನಿತುಮಂ ಪಲರ್ದೆಯುಮುದು ತಿಟ್ಟನೆ ತಿರಿದು ಮಾಯ್ದ ಡೊಂಬನ ಮನೆಯೊಳ್ ಪಾಲುಮುಲನೆ ಮಾಜುಗಿ ನಮೆಯುತ್ತಿರ್ಕುಂ (ಸುಕುಮಾ. ೫-೦೩); ಮಾಯ್ದು ವಿಧಾತ್ರನೆನ್ನಣುಗಿನಗ್ರತನೂಜನೆನಂತಗಲ್ಚಿ ಕೊಂಡುಯ್ದುಂ (ಚಂದ್ರಪ್ರ. ೫-೦೦). **ಮಾಯು₁ :** ೩. ಕಂಪಿನಲಿ ಸಾಮಾನ್ಯಮಾದಡೆ . . . ಇಂಪನೊಡರ್ಲಿಂಗೀಯದಿರ್ದಡೆ ಕೆಂಪು ಮಾದಡೆ ಗಂಧಕಾಂತಿಯ ಸೊಪ್ಪ ಬಚಿತಡೆ ಬಳಿಕಲಾ ಎನಗೀಶನೊಡನಂಕ (ಬಸಪು. ೨೭-೫). ೪. ಒಳಗೊಂದು ಅನಿಮಿಷಲಿಂಗವ ಕಂಡು ಎನ್ನ ಮನೋಪುಷ್ಪದಲ್ಲಿ ಪೂಜೆಯ ಮಾಡಿದಡೆ ನಾಚಿಕೆ ಮಾದು ನಿಸ್ಸಂದೇಹಿಯಾದೆನು (ಅಪಕಂ. ೯೪-೪೦೭). ೫. ಕಂಚಿನ ಹರಿವಾಣದಲ್ಲಿ ಹಾಕಿ ತಾಮ್ರದ ಚೋಬಿನಿಂದ ಮರ್ದಿಸಿ ಅದೇಲಿ ಸುಣ್ಣ ಪವಡಗೆ ಹಾಕಿ ಹೊ[ಹೊ]ಗೆ ಹತ್ತಿಸುವುದು. ಕಾಲುಮಂಡಲದೊಳಗೆ ಯಂತಾದ್ದು ಮಾಯುವುದು (ಕೌತುಕಂ. ೩೪-೭); ವಿಜಯಿ ದುರ್ಯೋಧನ ದಂಡು ಹಿಂದೆಗೆಯಿತು ಕಲೆಯುಳಿಯಿತು ಗಾಯ ಮಾದು (ಇಂಪಾಶ. ೭೨-೯೬); ಗಾಯ ಬೇಗ ಮಾಯುವುದಿಲ್ಲ (ನವಜೀ. ೦೬೫). ೯. ಪರಿಹಾರವಾಗು : ನಿವಾರಣೆಯಾಗು : ವಿಂಧ್ಯವಡವಿಯೊಳನಂತಕೋಟಿವ್ಯಂಗಂಗಳಿರ್ದಪವಲ್ಲವಂ ಕೊಂದಾ ನೆತ್ತರಿಂ ಮೇಡಕಾಳಿಯಿಂ ಮಾಡಿಯಲ್ಲಿ ನೀಡುಮೊಲಾಡಿ ದೇಪವ ದಾಹಂ ಮಾದು ಸುಖಮಕ್ಕು (ಪುಣ್ಯಾಸ್ರ. ೯-೩೬ ವ); ಶಿಶುವಿನ ವೇದನೆ ಮಾಯಿತ್ತು ನೋಡಾ (ಸಿದ್ಧೇವ. ೫೦-೦೯೩). ೧೦. ಮುಗಿ: ತೀರು : ಮುಂದಣ ಕಾಳೆಗದ ಕರ್ಣಾಮೃತದ ಮಳೆಗಾಲ ಮಾದು ವಿಲೋಚನದ ಮಳೆಗಾಲವಾಯ್ತು (ಕುಮಾ.ಳ. ೨೭-೦). ೧೧. ಪಕ್ವವಾಗು: ಕಳಿ : ಮಾಗಿಹ ಬಾಳೆ ಕಾಬಾಳೆ ಮೋದ ಸಕ್ಕರೆ ಮಾವು ನೇಜಿಲವಣ್ಗಳ ಬಾನವರಿತ್ತರಾಳ್ಪನಿಗೆ (ಪೋತಹ. ೮೯ ೫೫). [ದೇ.॥ ತಮಿ. ಪರ್ಜಿ. ಗೊಂಡಿ. ಮಾಯ್ ; ಮಲ. ತುಳು. ತೆಲು. ಮಾಯು]

**ಮಾಯ** (ನಾ). ೧. ಗಾರುಡಿ ; ಇಂದ್ರಜಾಲ ; ಕಣ್ಕಟ್ಟು : ಮಾಯಮನೆಬೀಸಿ ಪೆಜರಸಾಧಾರದೆ ತಕ್ಕಿಕ್ಕಿ ದೇವಕಾರ್ಯದೊಳನಿಸುಂ ನೋಯದೆ

ಸುಬಿಯಿಪ ಸವಣರುಪ್ಪಾಯುಮನಿಂ ನಿನ್ನೊಳ್ಕಣ್ಣ ಭಾವಿಸಿ ನೋಡಾ (ಧರ್ಮಾಮೃ. ೦-೦೦೨); ಮೃದುತಳಕಜಾತಿಯಿಂ ವಿಳಿರ್ವ ಪೂಗುಡಿ ಕಂದಳಿರ್ದೊಂಗಲಂತೆ ತೋಜಿದೊಡದನೊಲ್ಲದೆ . . . ಮಾಮರನಲ್ಲಿದೊಂದು ಮಾಯದ ಮರ ನೆಂದು ಸಾರ್ದಳತಿಮುಗ್ಧೆ ಕುಜಾಂತರಮಂ ವನಾಂತದೊಳ್ (ಚಂದ್ರಪ್ರ. ೬-೦೦೬). ೨. ಮಿಥ್ಯೆ : ಭ್ರಾಂತಿ ; ತೋರಿಕೆ : ಭ್ರಮೆ : ಬಂದಹೆ ನೆಂದಜಿಯಲಿಕ್ಕಿಲ್ಲಾಗಿ ಸಂದೇಹ ಬಿಡದು ಮುಂದುಗಾಣದು ಲೋಕ ಬೆಂದ ಮಾಯಕ್ಕಂಜಿ ನಿಮ್ಮ ಮಜಿಹೊಕ್ಕೆ (ಬಸವ. ೯೨); ಇದು ಪಶುಪತಿಯು ಮಾಡಿದ ಮಾಯದ ವಿಧಿಯೆಂದು ತಿಳಿಯದೆ ಹುಸಿಗಟ್ಟು ಹೋಯಿತ್ತು ನೋಡಾ ಮೂಜುಜಗವೆಲ್ಲ (ಅಲ್ಲಮ. ೬-೩). ೩. ಮೋಸ ; ವಂಚನೆ : ಕಪಟ : ಮಾಯದ ಟಕ್ಕಿನ . . . ಕಪಟೋಪಾಯದ ಕಲೆಗಳ್ ನೆಲೆ ಸ್ತ್ರೀಯರ್ಕೆವಲಂ ಸರ್ವಜನವಂಚಕಿಯರ್ (ಧರ್ಮಾಮೃ. ೬-೦೫೬) : ಮಾಯದಬಲೆಯರು ಕಾಣುತ್ತ ಮರ್ಖ ಭಾವಭಟರಾಯ . . . ಎಂದು ಕೀರ್ತಿಸಿ ಗಾಣನಾಯಕಿಯರಾದು ದಂಡಿಗೆವಿಡಿದು ಪೊಡಮಟ್ಟು ಪಾಡ ಲುದ್ಯೋಗಿಸಿದರು (ಪಂಪಾ. ೬-೩) ; ಮಾಯುವನನುಗೊಳಿಸದೆ ಮೈಮಜ ಸದೆ ಕಾಯುವುನೋವಚನಗಳ ಆಯಸದಿಂದಳವಳಿಯದೆ ಪತಿಯನುಪಾಯ ದಿಂದುಪಚರಿಸುವುದು (ಷಡ. ೪-೯). ೪. ಪ್ರೀತಿ ; ವ್ಯಾಮೋಹ : ಬಾಯೊಳಗೆ ಬ್ರಹ್ಮಾಂಡಕೋಟಿಯ ದಾಯವನು ತೋರಿಸಿಯೆ ತಾಯಿಗೆ ಮಾಯದಲಿ ಮಗುವಾಗಿ (ಗಗಾ. ೩-೨೪). ೫. ಗಾರುಡಿಗಾರ : ಐಂದ್ರಜಾಲಿಕ : ಇನ್ನೇನಹುದೆಂಬೆ ಇನ್ನೇನುವನಲ್ಲೆಂಬೆ ಎಲ್ಲಾ ಮಾಯನು ನೀನಾಗಿ ಹಿರಿದಹ ಗಿರಿಯ ಹತ್ತಿ ಬಿದಿರ ತಜಿದವನಂತೆ ಒಂದ ಬಿಟ್ಟೊಂದು ಹಿಡಿವಡೆ ಅಲ್ಲಿಯೇ ಚೆಂದ (ಮೋಳಿಗೆ. ೨-೯). ೬. ಲಕ್ಷ್ಮಿ. ೭. ದುರ್ಗೆ.

**ಮಟಮಾಯ, ಮಟಾಮಾಯ, ಮಾಟಮಾಯ** (ದ್ವಿರುಕ್ತಿ) : ೧. ಇದಕ್ಕಿದ್ದಂತೆ ಪೂರ್ತಿಯಾಗಿ ಅದೃಶ್ಯವಾಗುವಿಕೆ. – ಕಾಣದಂತಾಗುವುದು : ಗಾಳಿಯೋ ಮಟಮಾಯ ಮಾತಾಡ ಮಳೆರಾಯ (ಆಲಪು. ೪೯೯-೩) ; ಮಳೆಯಿರದಿರೆ ಎಲ್ಲವು ಮಟಮಾಯ (ಪುಣ್ಯಕೋ. ೬೦-೦೪) : ಆ ಗಂಡ ಗಾಬರಿ ಆಗಿ ಪರಾರಿ, ಮಟಾಮಾಯ (ಪದಪ. ೧. ೩೩೮). ೨. ಅಸ್ಪಷ್ಟವಾದುದು : ಆ ಅಟ್ಟಂಬಟ್ಟಂ ಅರಣ್ಯದ ನಟ್ಟನಡುವೆ ಬೆಟ್ಟಗೋಟೆಯೊಂದನ್ನು ಕಟ್ಟಿದ್ದು . . . ಅದರ ಸುತ್ತಿನದೆಲ್ಲ ಮಾಟಮಾಯ ನಾಡು (ಚಿಕ್ಕಮಂ. ೬೪). P ಇವು 'ಕಟ್ಟಕಡೆ', 'ಬಟ್ಟಬಯಲ್' ಎಂಬುವುಗಳ ರೂಪಸಾಮ್ಯದಿಂದ ಮಾಡಿಕೊಂಡಿರುವ ರೂಪಗಳು. **ಮಟಮಾಯಗೆಯ್** = ಇದ್ದಕ್ಕಿದ್ದಂತೆ ಅದೃಶ್ಯಗೊಳಿಸು ; ಮಂಗಮಾಯಮಾಡು : ಮುದ್ದುಮುಖಾನ್ವಿತ ಶಿಶು ನಿನ್ನ ಮಗ್ಗುಲೊಳಿದ್ದುದ ಮಟಮಾಯಗೆಯ್ದು ಕದ್ದು ಕೊಂಡುಯ್ದು ಶಂಬರ ಶರಧಿಯೊಳಿಡೆ ಬಿದ್ದುದು ಮೀನ ಬಾಯೊಳಗೆ (ಕೋಹತ. ೦೩-೪೦). **ಮಟಮಾಯವಾಗು** = ಇದ್ದಕ್ಕಿದ್ದಂತೆ ಅದೃಶ್ಯವಾಗು, – ಕಾಣೆಯಾಗು : ಕಟಕಟ ಹುಟ್ಟಿದಾಕ್ಷಣ ಶಿಶು ನೋಡಲ್ಕೆ ಮಟಮಾಯವಾದುದಾಶ್ಚರ್ಯ (ಕೋಹತ. ೩-೦); ಶ್ರೀಪಾದನೂ ಏಷ್ಟೂ ತಿಳಿಯದಂತೆ ಮಟಮಾಯವಾಗಿದ್ದನು (ಕವಕ. ೩೦); ನನ್ನ ಕೈ ಹಕ್ಕಿ ಮಟಮಾಯವಾಗಿ ನಿನ್ನ ತೊಡೆಯಲ್ಲಿತ್ತು ನೀನೆ ತಾಯಾಗಿ (ಗಂಗಾತ. ೩೦-೯). **ಮಾಯಮಾಗು, ಮಾಯವಾಗು** = ೧. ಇಲ್ಲವಾಗು ; ನಾಶವಾಗು : ದನುಜನ ಮಾಯೆಯೊಂದಿನಿಸು ಬೇಗದಿನೊರ್ಮೆಯೆ ಮಾಯಮಾಗೆ ಚೇತನವಡೆದು . . . ತಜ್ಜನವುನಿತುಂ ಮನಂಬುಸುತು ವಿಂದ್ರ್ಯವು ನಿಟ್ಟಿಸಲಾಜದೇನುಮಂ (ಚಂದ್ರಪ್ರ. ೫-೬). ೨. ಸಾಯು : ಮರಣಹೊಂದು : ಸಿಡಿಲಂತೊರ್ಮೆಯೆ ಪೊಯ್ಯೆ ಪೊಯ್ದು ಭರದಿಂ ದೊಂದಾನೆ ತೋಳ್ ನೆತ್ತರಿಲ್ಮಡಗೊಂದೊಂದಜಿಯೊಳೊಂದುಮೊಂದದೆ ಗದಾನಿರ್ಘಾತದಿಂ ಮಾಯಮಾದೊಡೆ (ಚಂಪಾ. ೦೦-೦೦೫). ೩. ಕಾಣೆಯಾಗು ; ಅದೃಶ್ಯವಾಗು : ಮರೆಯಾಗು : ನಿರುತ್ತರವೆದೆವೆನಸುತ್ತ ಮಾಯುವಸರದೊಳಾತನು ಮಾಯವಾಗಲು (ಬಸವ. ೩೩-೦೮): ಸರ್ವೇಂದ್ರಿಯಕೆ ಮೋಹದ ಶಿಶುವದೊಂದೆ ಮುದ್ದಿನ ವಿಷಯವಾಯ್ತು, ಮಾಯವಾದತ್ತಳಿದುದನಿತುಮುಂ ಪ್ರಜ್ಞೆಯಿಂ ಜಗುಳ್ದು ಬಯಪೊಂದಿ (ಶ್ರೀರಾಮಾ. ೦೬-೪೪೫). **ಮಾಯ ಮಾಡು** = ನೀಗು : ಇಲ್ಲವಾಗಿಸು : ಈಗ ಬಂದಿರುವ ಹೊಸ ಮಾತ್ರೆ ತಲೆನೋವನ್ನು ಒಂದೇ ನಿಮಿಷಕ್ಕೆ ಮಾಯ ಮಾಡಿಬಿಡುತ್ತದೆ (ಆಡು). [ಸಂ. ಮಾಯಾ]

**ಮಾಯಂಬೋಗು** (ಕ್ರಿ). ಕಾಣೆಯಾಗು : ಇಲ್ಲವಾಗು : ಪಾಲ್ಗಡಲಿಂ ಮಾಯಂಬೋದುದು ಬೆಣ್ಣೆಯಲ್ಲಿ ಯೆಲೆ ಕೃಷ್ಣಾ (ವಸ್ತುಪು. ೪-೨೦).
[ಮಾಯ + ಪೋಗು$_1$ (< ಪೋ$_1$)]

**ಮಾಯಕ** (ಗು). ೧. ಮೋಸದ : ಕಪಟದ : ವಂಚನೆಯ. (ನಾ). ೨. ಕೃತ್ರಿಮವಾದುದು : ಕೃತಕವಾದುದು : ಛಾಯೆಯಿಲ್ಲದ ಮಾಣಿಕಕ್ಕೆ ಮಾದಳರಸದಿ ಪ್ರಿಯದಿಂದಲತಿಗೆಯು ರಸದಿ ಭಾವನೆಗೆಯ್ಯಲಾಯ್ತದಿ ಗಜನಿಂಬೆಹುಳಿಯ ಲೇಳುಂ ವೇಳೆ ಭಾವನೆಗೈಯ್ಯಲದನೂ ಮಾಯಕದೆ ರತ್ನವಾಗಿರೆ ತೋರ್ಪುದಲ್ಲದದೆ ಛಾಯೆ ವರ್ಧಿಪುದದಕೆ (ರತ್ನಶಾ. ೩೩-೦): ಹವಳದ ದ್ವೀಪವೆಂದರೆ ಅಸಂಖ್ಯಾತ ಹವಳದ ಹುಳುಗಳ ಒಂದು ಕೋಟೆಯೇ ಸರಿ. ಈ ಮಾಯಕದ ದ್ವೀಪಗಳು ಕೋಟ್ಯಾವಧಿ ಪ್ರಾಣಿಶರೀರಗಳಿಂದ ಆದುವು (ಪ್ರಾಣಿಶ. II. ೯೬೬). ೩. ಕಣ್ಕಟ್ಟು : ಇಂದ್ರಜಾಲ : ಸಿನೆಮಾ ಉಡುಗೆಯ – ರಾಮಲಕ್ಷ್ಮಣರು, ಆ ಉಡುಗೆಯಲ್ಲಿ ಇಂಥ ಮಾಯಕವನ್ನೆಂದಿಗೂ ಕಲ್ಪಿಸಲಾರರು (ಯುಕ್ತಿಮ. ೦೦೯): ಅಯ್ಯೋ, ಯಾವ ಮಾಯಕದಾಗೆ ಬಂದು ಬಿಟ್ರಿ ಈಟು ಹತ್ರ ? (ಪುರಿಮ. ೫೬). ೪. (ದೇವರ) ಲೀಲೆ : ಆಟ : ಎಲ್ಲಾ ಅವನ ಮಾಯಕ. ದೇವರ ಮಾಯಕ (ಪುರಮ. ೨೨). [< ಸಂ. ಮಾಯಿಕ]

**ಮಾಯಕಾತಿ** 'ಮಾಯಗಾತಿ' ನೋ.

**ಮಾಯಕಾರ** 'ಮಾಯಕಾಜ' ನೋ.

**ಮಾಯಕಾರ್ತಿ** (ನಾ). ಮೋಸಗಾತಿ ; ಕಪಟಿ : ರಾಘವಂ ಮಾಡಿದುಪಹತಿಯಿಂ ದಶಾನನಂಗೆ ದಾಯಮಂ ಪೇಳ್ದವನ ವಂಶವುಂ ನವಜಿಸಿದ ಮಾಯಕಾರ್ತಿ[ಶಾಕಾಂ.ತಿ]ಯುಮೊಲೆನ್ನುಲಿಯುಕೆ ಬಂದೆನಗಪ್ಪಯಮಂ ತಾರದಿಲ್ಲಿಂದೆ ಪೋಗೆಂದವಳನುನ್ಮುಖಿಂ ಕೋಪಿಸಿದನು (ಕೃಷ್ಣಾಭ್ಯು. ೯-೨೨).
[ಮಾಯಕಾಜ + –ತಿ$_1$ (< – ಇತ್ತಿ)]

**ಮಾಯಕಾಜ, ಮಾಯಕಾರ** (ನಾ). ೧. ಗಾರುಡಿಗ ; ಯಕ್ಷಿಣೀ ವಿದ್ಯೆಯನ್ನು ಬಲ್ಲವನು : ಜೀಯ ವಿಗಡ ಬ್ರಹ್ಮಶರವಿಂದ್ರಾಯುಧದ ಮುಂಗುಡಿಯುಲಿಜಿಧುದು ಮಾಯಕಾಜರ ಮೋಹರವನುಬ್ಬಟೆ ಚತುರ್ಬಲವ ಹೋಯಿತು (ಕುಮಾರ. ೦೨-೫೨). ೨. ಮೋಸಗಾರ ; ಕಪಟಿ : ರಾಯ ತಕ್ಕಿನ ನಿಧಿಯ ತೌಳಿಯ ಮಾಯಕಾಜನ ತಂದು ಮನ್ನಿಸಿ ರಾಯರಭಿಮಾನವ ವಿಭಾಡಿಸಿಕೊಂಡೆ ನೀನು (ಕುಮಾಸ. ೮-೩೦); ಎಲೆ ಮಾಯಕಾಜ ನಿನ್ನಂ ಮಹಾನುಭಿಗಳೊಡಗೊಂಡು ಬರವೇಳ್ದರ್ (ಕಬ್ಬ. ೨೦-೨೫). **ಮಾಯಕಾರ** : ೨. ನಾರಿಯರು ತಿರಿಗೀಕ್ಷಿಸುತ್ತೆ ಸರಸಿಯಂ ತಲ್ಲಣಂಗೊಳುತ್ತೀರಿ ಮಾಯಕಾರನು ಕೃಷ್ಣಯೆಲ್ಲಿ ಪೋದನು ಯೆನುತ್ತೆ (ಪವನೋ. ೦೦-೫೪). [ಮಾಯ + –ಕಾಜ]

**ಮಾಯಗಾತಿ, ಮಾಯಕಾತಿ** (ನಾ). ಮೋಸಗಾತಿ; ಕಪಟಿ : ಮಾಯಗಾತಿ ಹಸಾದವೆನುತ ಹಿಡಿಂಬಿ ಗಮಿಸಿದಳು (ಕುಮಾಆ. ೯-೦೦); ಆ ಮಾಯಗಾತಿಯರು ಅವಳನ್ನು ಕೋಪದೃಷ್ಟಿಯಿಂದ ನೋಡಿ. . . ಪರಿಹಾಸ ಮಾಡಿದರು (ಕಂಕ. ೨೬). **ಮಾಯಕಾತಿ** : ಮಾಯಕಾತಿಯ ಹರಿಬಕಡವಿಯಲಿ ಬಂದು ಕಾದಿಯೆ ನಿಮ್ಮ ಕೈಯಲಿ ಹೊಂದಿದಾ ಖರತನುಜನೀತನು (ಕೌಶಿಕಾ. ೩೫-೦೨); ಮಾಯಕಾತಿಯ ಸಂಗ ಅಭಿಮಾನಭಂಗ (ಪುರಂದ. ದಾ. ೩-೦೦೯-೪).
[ಮಾಯ + – ಕಾತಿ$_5$]

**ಮಾಯಗಾವುಂಡ** (ನಾ). ಒಬ್ಬಾತನ ಹೆಸರು : ಎಲವರದ ಕಥವ ಬೂರ ಮಾಯಗಾವುಣ್ಡರ ಮಗ . . . ಊರಟ್ವಿನೊಳ್ ಕಾದಿ ಸತ್ತಮ್ (ಎಕ. X, ತುಂಗಶಾ. ೨೩೬-೭; ಸು. 1000).

[ಮಾಯ + ಗಾವುಂಡ (< ಗ್ರಾಮುಂಡ)]

**ಮಾಯಾಕೋವಿದ** (ನಾ). ಗಾರುಡಿವಿದ್ಯೆಯಲ್ಲಿ ಪರಿಣತನಾದವನು: ಇಂದ್ರಜಾಲವಿದ್ಯೆಯಲ್ಲಿ ಪಾಂಡಿತ್ಯವನ್ನು ಪಡೆದವನು : ರಾವುತರು ಶಿಲ್ಪಿಗರು ಮಾಯಾಕೋವಿದರು. . . ಮೃಗಜೀವಿಗಳು ಶಾಕುನಿಕರೆಸೆದರು ರಾಜಸಭೆಯೊಳಗೆ (ಕುಮ್ಯಾಭಾ. ೨. ೭೭). [ಸಂ.]

**ಮಾಯಾಚಾರ** (ನಾ). ಡಂಭಾಚಾರ: ಕಪಟ : ಮಾಯಾಚಾರ ಪರಿಣತರ್ ಮುಪ್ಪಪಾತ್ರದಾನಿಗಳುಂ ತಿರ್ಯಗ್ಗ್ಯಾತಿಕ್ಷ್ಮಮುಂ ಪೂರ್ದಿದ ಮಿಥುನಂಗಳಾಗಿ ಪುಟ್ಟಿ ಪರಸ್ಪರ ವೈರಂಗಳಿಲ್ಲದೆ . . . ರೆಮಿಯಿಸುವುವು (ಆದಿಪು. ೩-೯೦ ೭). [ಸಂ.]

**ಮಾಯಾಜಡ** (ನಾ). ಅಜ್ಞಾನದಿಂದ ಉಂಟಾಗುವ ಮೂರ್ಖತೆಯುಳ್ಳವನು : ಬಾಯೆತ್ತದಂತೆ ನುಡಿವುತೆ ಕಾಯಜರಿಪುಭಕ್ತನೆಲ್ಲರಂ ಗೆಲೆ ಸೋಲ್ತಾ ಮಾಯಾಜಡರೆಲ್ಲರ್ಗೆಲಊಯಂಗಾಣದೆ ಬಳಲ್ಕೆಯಿಂದಿಂತೆಂದರ್ (ಪ್ರಭು. ೩೭-೭೩). [ಸಂ.]

**ಮಾಯಾಜಾಲ** (ನಾ). ೧. ಗಾರುಡಿ : ಇಂದ್ರಜಾಲ : ಇವರು ತಮ್ಮ ನಾಟ್ಯಗಳಲ್ಲಿ ರೇಖಿಸುವ ರಂಗ ನಮೂನೆಗಳು. . . ಅವರ ವಿವಿಧವಿಚಿತ್ರವಾದ ವಾದ್ಯಗಳು ಇವೆಲ್ಲ ಒಂದು ವಿಶಿಷ್ಟ ಮಾಯಾಜಾಲವನ್ನು ಬೀಸುತ್ತವೆ (ಶಾರದ. ೩೭೪). ೨. ಮೋಸದ ಬಲೆ : ಮೋಸಗಾರಿಕೆ : ತಾನು ಮನಸ್ಸಿನಲ್ಲಿ ದ್ವೇಷಿಸುತ್ತಿರುವ ಶತ್ರುವು ತನ್ನ ಮಾಯಾಜಾಲದಲ್ಲಿಯೇ ಸಿಕ್ಕಿ ಜೀವನವನ್ನು ಕಳೆದುಕೊಂಡಿರುವುದನ್ನು ನೋಡಿಯೂ ತೃಪ್ತಿಹೊಂದದೆ. . . ತನ್ನ ಹಗೆಯನ್ನು ಸಂಪೂರ್ಣವಾಗಿ ನಾಶಗೊಳಿಸಬೇಕೆಂದು ನಿಶ್ಚಯಿಸಿಕೊಂಡನು (ಕ೭ಕ. ೪೦). [ಸಂ.]

**ಮಾಯಾಜೀವಿ** (ನಾ). ಗಾರುಡಿವಿದ್ಯೆಯಿಂದ ಬದುಕುವವನು : ಇಂದ್ರಜಾಲವಿದ್ಯೆಯಿಂದ ಜೀವಿಸುವವನು. [ಸಂ. ಮಾಯಾಜೀವಿನ್]

**ಮಾಯಾತೀತ** (ನಾ). ಅವಿದ್ಯೆಯನ್ನು ಮೀರಿದವನು ; ದೇವರು : ಪರಮಾತ್ಮ : ಸತ್ಯಜ್ಞಾನಮಯ ನಿರ್ಧೂತ ಮಾಯಾತೀತನೀ ಹರಿ (ಕುಮ್ಯಾಕ. ೯-೧೮); ಈಯುಬಿಳಜಗವನೊಳ್ ಹೊದ್ದಿ ಹೊದ್ದದೆ ಭವಾಬ್ಧಿಯುತದೆ ಜೂಟಳವ ತಿರುಗಿಸುತ್ತಿಹನು ಮಾಯಾತೀತನಪ್ಪ ಶಿವನು (ವೀಕ್ಕ ಪು. ೧-೫-೩೩); ಮಾಯೆಯು ನಾನು. ಮಾಯಾತೀತನು ನಾನು (ಶಾಂತಜ.೦೭-೦೩). [ಸಂ.]

**ಮಾಯಾತ್ಮ** (ನಾ). ಅಜ್ಞಾನಕ್ಕೆ ಒಳಗಾಗಿರುವ ವ್ಯಕ್ತಿ : ಮಾಯಾತ್ಮನು ಮಾಯವೆಂಬ ಭವಜಾಲದಲ್ಲಿ ಬಂದು ಘೋರಸಂಸಾರವ ಕಂಡು ನಾಚದೇಕೆನ್ನ ಮನ (ಪೋಕವಚ. ೯೭-೦೯೩). [ಸಂ. ಮಾಯಾತ್ಮನ್]

**ಮಾಯಾದಂಡ** (ನಾ). ಇಂದ್ರಜಾಲದಲ್ಲಿ ಬಳಸುವ ಕೋಲು : ಮಂತ್ರದಂಡ: ಈ ಒಂದು ಸಣ್ಣ ಬಾಲಕನುಹರಲಾಲನ ಹೃದಯದ ಉದ್ಬೋಧನಕ್ಕೆ ಸ್ವರ್ಣಮಯ ಮಾಯಾದಂಡವಾಗಿ ಪರಿಣಮಿಸಿದನು (ಇಪ್ಪಕ. ೩೦೩). [ಸಂ.]

**ಮಾಯಾದೀಪ** (ನಾ). ಕತ್ತಲೆಕೋಣೆಯಲ್ಲಿಯ ಬಿಳಿಯ ಪರದೆಯ ಮೇಲೆ, ಗಾಜುಹಲಗೆಯ ಮೇಲಿನ ಚಿತ್ರದ ಪ್ರತಿಬಿಂಬವು ದೊಡ್ಡದಾಗಿ ಬೀಳುವಂತೆ ಮಾಡುವ ಒಂದು ಬಗೆಯ ದೀಪಯಂತ್ರ. – ವೈಜ್ಞಾನಿಕ ಉಪಕರಣ: ಇಂಗ್ಲಿಷ್ ಶಬ್ದಗಳ ಸ್ವೀಕರಣದ ನಾಲ್ಕನೆಯ ರೀತಿಯೆಂದರೆ, ಆ ಶಬ್ದಗಳನ್ನು ತದ್ವತ್ತಾಗಿ ಕನ್ನಡದಲ್ಲಿ ಭಾಷಾಂತರಿಸುವುದು. ಈ ರೀತಿಯಾಗಿ . . . **walking stick** ನಡೆಗೋಲು : **Magic-lantern** ಮಾಯಾದೀಪ: ಇತ್ಯಾದಿ (ಲಾಶಾಶಾ. ೧೭೭). 'ಮಾಯಾಲಾಂದ್ರ' ಪರಾ. [ಸಂ.]

**ಮಾಯಾದೇವಿ** (ನಾ). ೧. ದುರ್ಗೆ : ಆದಿಶಕ್ತಿ : ಮಾಯೆ ; ಎಲೆ ಮಾಯಾದೇವಿ ಲೋಕತ್ರಯಜನನಿ ಮದಾಜ್ಞಾಸಮುತ್ಪನ್ನೆ . . . ಪೂಜಿಕ್ಕೆ ಮಾಂಸಾದಿ ನಾನಾಬಲಿಯಿಂ ದೇವರ್ ನರರ್ ತ್ವಚ್ಚರಣಕಮಲಮಂ (ಜಗಾ. ೨-೩೮). ೨. ಗೌತಮಬುದ್ಧನ ತಾಯಿ: ಸರ್ವಾರ್ಥಸಿಂಹಃ . . .ಅರ್ಕಬಂಧುಃ ಮಾಯಾದೇವೀಸುತಃ – ಓ ಶಾಕ್ಯರಿಗೆ ಯಾರು ಪೂಜ್ಯನೋ ಅಂತಾ ಬುದ್ಧದೇವರ ಹೆಸರು (ಸಿದ್ಧಾಂತ. ೦೭). [ಸಂ. ಮಾಯಾದೇವೀ]

**ಮಾಯಾನಿದ್ರೆ** (ನಾ). ಮಂತ್ರಶಕ್ತಿಯಿಂದ ಉಂಟಾಗಿಸುವ ನಿದ್ದೆ ; ಮಾಯಾಶಕ್ತಿಯಿಂದ ಬರಿಸುವ ನಿದ್ರೆ : ಅಖಿಳಭುವನಜನನಿಯನಾಗಳ್ ಮೞೆಯಿಸಿ ಮಾಯಾನಿದ್ರೆಯಿನುೞೆ ಮಾಯಾಶಿಶುವನಿರಿಸಿ ಮುಂದೆಂಬಿಕೆಯಾ (ಆದಿಪು. ೭-೯೩); ಮಾಯಾನಿದ್ರೆಯಸಿಂದ್ರನ ಜಾಯೆ ಜಿನಾಂಬಿಕೆಗೆ ಪಡೆದು ತಡೆಯದೆ ಭುವನಜ್ಯಾಯನನೆತ್ತಿ ಬಟ್ಟಿಕ್ಕಂ ಮಾಯಾಶಿಶುವೊಂದನಿರಿಸಿ ಮುಂದೆಂಬಿಕೆಯಾ (ಶಾಂತಿಪು. ೮-೦೦೪). [ಸಂ. ಮಾಯಾನಿದ್ರಾ]

**ಮಾಯಾಪಾಶ** (ನಾ). ೧. ಮೋಹದ ಬಂಧನ. – ಪಾಶ : ಮಾಯಾಪಾಶ ಹಿಂಗಿ ಮನದ ಗಂಟು ಬಿಡದನ್ನಕ್ಕ ಕೂಡಲಸಂಗಮದೇವನೆಂತೊಲಿವನಯ್ಯಾ (ಬಸವ. ೨೦೨) : ದೇವ ನೀ ಮಾಯಾವಿ ಮಾಯಾಪಾಶಬದ್ಧರು ನಾವು ಬಲ್ಲೆವೆ ನಿಮ್ಮನು (ಕುಮ್ಯಾಗ. ೮-೩೨) : ಆಶಾಪಾಶ ಎಂಬೊ ಪರಮಾಬ್ಧಿಯೊಳಗೆ ಮುಳುಗಿ ಮಾಯಾಪಾಶಕ್ಕೊಳಗಾಗದೆ ಮಾನ್ಯನಾಗೊ ನೀ ಧನ್ಯನಾಗೋ (ಪುರಂದ. ೩-೩-೧). ೨. [ವೀಶೈ] ಪಂಚಪಾಶಗಳಲ್ಲಿ ಒಂದು : ಪಾಶಪದಾರ್ಥವು . . . ಮಲಪಾಶ್ ಮಾಯಾಪಾಶ ಕರ್ಮಪಾಶ ಬಿಂದುಪಾಶ ತಿರೋಧಾನಪಾಶವೆಂದು ಪಂಚಪ್ರಕಾರವಾಗಿರ್ಪುದು (ವಿಶೇಷ. ೦೭೩) : ಮಾಯಾಪಾಶ(ದುಃಖ)ನಿವೃತ್ತಿಯೇ ಪರಮಪುರುಷಾರ್ಥ (ಶಾರದ. ೨೦೭). [ಸಂ.]

**ಮಾಯಾಫಲ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹಣ್ಣು : "ಛಿತ್ರಲಾಫಲಂ – ಮಾಯಾಫಲ(ಮಾಪಾಳ ?)" (೭ಕಾ. ೩೯) : "ಮಾಯಿಕಾ-ಮಾಯಾಫಲ" (೭ಕಾ. ೦೨೩). [ಸಂ.]

**ಮಾಯಾಬಜಾರ** 'ಮಾಯಾಬಾಜಾರ' ನೋ.

**ಮಾಯಾಬಾಜಾರ, ಮಾಯಾಬಜಾರ** (ನಾ). ಇಂದ್ರಜಾಲದಿಂದ ಸೃಷ್ಟಿಸಿದ ಪೇಟೆ : ಭಟ್ಟರು ಈ ಮಾಯಾಬಾಜಾರವನ್ನು ನೋಡಿ ಆನಂದಪುಳಕಿತರಾದರು (ಹಬ್ಬ. ೭೦). **ಮಾಯಾಬಜಾರ :** ಒಬ್ಬ ರಾಕ್ಷಸ ಬರುವ ; ಯಾವುದ್ದಾದರೂ ಒಂದು ಹೆಣ್ಣನ್ನು ಓಡಿಸಿಕೊಂಡು ಹೋಗುವ ; ಆಮ್ಯಾಲೆ ಯುದ್ಧ. ಶಾಪ. ಮಾಯಾಬಜಾರ (ಪತ್ರ. I, ೩೦೬): ಈ ಪ್ರಪಂಚವೆಂದರೆ ಮಾಯಾಬಜಾರವು (ಶರ್ಮ ಹು.೦೨).

[ (ಸಂ. ಮಾಯಾ) + ಬಾಜಾರ ]

**ಮಾಯಾಭ್ರಾಂತಿ** (ನಾ). ತೋರಿಕೆಯಿಂದ ಉಂಟಾದ ಭ್ರಾಂತಿ : ಮಿಥ್ಯೆಯಿಂದ ಕೂಡಿದ ಭ್ರಮೆ : ಮಾಯಾಭ್ರಾಂತಿ ಕವಿದ ಗೀತಜ್ಞರ ಹಿರಿಯರೆನ್ನೆ (ಬಸವ. ೭೦೩) ; ದೇವ ಮೞೆವೊಕ್ಕೆನು ಭವತ್ಪದಪಾವನಾಂಭೋಜವನು ಭವತಾಪಾವಳಿಯುಲುೞೆ ಬೆಂದು ಮಾಯಾಭ್ರಾಂತಿಯೊಳಿಸಿಲುಕಿ (ಜೈಭಾಗ. ೩-೦೨-೨). [ಸಂ.]

**ಮಾಯಾಮರತಾಪು.** ಮಾಯ್ಮುರುತಾಪು (ನಾ). (ರಾಜ, ಮಠಾಧಿಪತಿ ಮೊದಲಾದವರು ಇಟ್ಟುಕೊಳ್ಳುವ) ಗೌರವಸೂಚಕವಾದ ಲಾಂಛನಗಳಲ್ಲಿ ಒಂದು : ಮೀನಿನ ಆಕಾರದ ಚಿಹ್ನೆಯಿಂದ ಕೂಡಿದ ಧ್ವಜ. – ಬಾವುಟ : (ಸಾಧಾರಣ ಬಿರುದುಗಳು) . . . ಬಂದೂಕುಗಳು ೨೫, ತುಕ್ಯಾರುಗಳು, ಕತ್ತಿ ವಗೈರೆ ೫೦, ಮಾಯಾಮರತಾಪು, ಪಂಚನಿಶಾನಿ (ಗುರುದ. ೩೦). **ಮಾಯ್ಮುರುತಾಪು :** ಭಾರಿ ನಗಾರಿ ಮೇಕು ಮಂಗುಲಿಪ ಸುರಾಂತ ಸುತ್ತಿಗೆ ನಿಶಾನೆಯು ಮಾಯ್ಮುರುತಾಪು (ವೀಕವ. ೮-೦೩೭)

[ ←ಪಾರ. ಮಾಹೀಮುರಾತಿಬ್ ; ಮರಾ. ಮಾಹೀಮುರಾತಬ್ : ಮಾಹೀಮೋರ್ತಬ್ ]

**ಮಾಯಾಮರ್ದನ** (ನಾ). ಅಜ್ಞಾನವನ್ನು ನಾಶಪಡಿಸುವವನು : ಮಾಯಾಮರ್ದನ ಗುರುವೆ ಕಾಯೊ ಪಾಮರರ ಕೃಪಾಳುದೇವನೆ (ಸಿದ್ಧಪು. ೨೨-೪). [ಸಂ.]

**ಮಾಯಾಮಲ** (ನಾ). ೧. [ವೀಶೈ] ಜೀವನಿಗೆ ಅಂಟಿಕೊಳ್ಳುವ ಆಣವ, ಮಾಯಾ ಮತ್ತು ಕಾರ್ಮಿಕಗಳೆಂಬ ಮಲತ್ರಯಗಳಲ್ಲಿ ಒಂದು ; (ಪರಮಾತ್ಮನನ್ನು ಮರೆತು) ದೇಹಸಂಬಂಧಿಗಳನ್ನು ಮೋಹಿಸುವಿಕೆ ; ವ್ಯಾಮೋಹ : ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದುಳಿದು ನಿರ್ಮಲವಾದ ಶಿಷ್ಯನು ಕಾಯಜೀವದ ಭ್ರಾಂತಿಸೂತಕವ ಪರಿಹರಿಸಿ ಕಳೆದು ನಿಶ್ಶಂಕನಾದ ಗುರುವು (ಶಿವಶಂ. ೨೮೩-೧೨೩೩) ; ಆ ಶಿಷ್ಯನ . . . ತನುತ್ರಯಂಗಳಲ್ಲಿ ಮುಸುಕಿದ ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ತನುತ್ರಯಂಗಳ ಕಳೆದು (ಅಕಂಷಿ. ೨೮೦-೧೪) ; ಕಳೆದು ಆಣವಮಲ ತೊಳೆದು ಮಾಯಾಮಲ ಉಳಿಯದಂತೆ ಕಾರ್ಮಿಕಮಲ ಮಾಡಿದ ಕಳಾತೀತ ಚೆನ್ನಬಸವಣ್ಣನ (ಸಿದ್ಧಪು. ೩೪-೭೨). ೨. ಜೀವನಿಗೆ ಅಂಟಿಕೊಳ್ಳುವ ರೋಧಮಲ, ಬಿಂದುಮಲ, ಕರ್ಮಮಲ, ಮಾಯಾಮಲ ಮತ್ತು ಆಣವಮಲವೆಂಬ ಪಂಚಮಲಗಳಲ್ಲಿ ಒಂದು : ಜನ್ಮಾಂತರಗಳಿಗೆ ಕಾರಣವಾದುದು : ಅಷ್ಟಭೋಗಂಗಳ ಶಕ್ತಿ ಕೆಟ್ಟಲ್ಲಿ ರೋಧಮಲ ನಷ್ಟ . . . ಕಾಯಭಾವವಳಿದಲ್ಲಿ ಮಾಯಾಮಲ ನಷ್ಟ ಮದಮಸ್ತಿಪಿನ ಕಳೆ ತನ್ನಲ್ಲಿ ಬೆಳಗಿದಲ್ಲಿ ಆಣವಮಲ ನಷ್ಟ ಇಂತೀ ಪಂಚಮಲಂಗಳು ನಷ್ಟವಾದಲ್ಲಿ ಸೌರಾಷ್ಟ್ರಸೋಮೇಶ್ವರಲಿಂಗ ಸಮ್ಯಕ್‌ದೃಷ್ಟ (ಆದಯ. ವ. ೧೦೬-೧೯೩). ಮಲ, ರೋಧಶಕ್ತಿ, ಕರ್ಮ. ಮಾಯಾ, ಬಿಂದು ಅಥವಾ ಮಹಾಮಾಯೆ ಎಂಬಿವೇ ಪಾಶದ ವಿಭಾಗಗಳು . . . ಮಾಯಾಮಲವು ಭೇದಜ್ಞಾನವನ್ನುಂಟುಮಾಡಿ ಸ್ವಸ್ವರೂಪವನ್ನು ಮರೆಮಾಡಿ ಜನ್ಮಾಂತರಗಳಿಗೆ ಕಾರಣವಾಗುತ್ತದೆ (ಶಾಶವ. ೨೦೦). 'ಮಾಯಿಯಾಮ' ನೋಡಿ. [ಸಂ.]

**ಮಾಯಾಮಸ್ತಕ** (ನಾ). (ರಾಜ, ಮಠಾಧಿಪತಿ ಮೊದಲಾದವರ ಬಳಿ ಇರುವ) ಗೌರವಸೂಚಕವಾದ ಲಾಂಛನಗಳಲ್ಲಿ ಒಂದು : ಒಂದು ಬಗೆಯ ಮುಖವಾಡ : ಸಾಧಾರಣ ಬಿರುದುಗಳು . . . ಕನಕಚಾಮರ ೨ ಪಾಲುಗಳು ೨ ನೃಸಿಂಹಮುಖ ಉಡಾಸ್‌ಪಾವಡ ಮಾಯಾಮಸ್ತಕ ಛಾತಾರ ಜಯಘಂಟೆ (ಗುರುವ. ೧೧). [ಸಂ.]

**ಮಾಯಾಮಾರ್ಗ** (ನಾ). ಅಜ್ಞಾನದಿಂದ ಕೂಡಿದ ದಾರಿ: ಮಿಥ್ಯಾಮಾರ್ಗ : ಜಿನೇಂದ್ರಭಕ್ತಸೆಟ್ಟಿ . . . ತನ್ನ ದೇಹಾರದೊಳಿರ್ದ ಬ್ರಹ್ಮಚಾರಿಗೆ ವಂದು ತಾನವರ್ಗತಿಭಕ್ತನಪ್ಪ ದಜೆಂದವನೊಳಾದ ಮಾಯಾಮಾರ್ಗಮನಜಿಯದೆ ಜಿನಮಾರ್ಗದೊಳ್ ವೃಷಭನೆಂದು ಕಯ್ಯಂ ಮುಗಿದು (ಧರ್ಮಾಮೃ. ೬-೬೪). [ಸಂ.]

**ಮಾಯಾಮಾಲವಗೌಲ, ಮಾಯಾಮಾಳವಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು : ರೂಪಾವತಿ. ಹಾಗೆಯೇ ಗೇಯಹೆಜ್ಜೆಜ್ಜಿ ರಾಗ. ವಾಟೀ, ವಸಂತಭೈರವೀ ಮಾಯಾಮಾಲವಗೌಲ (ಕ) (ತತುತ್ರ. ೧೨೮). **ಮಾಯಾಮಾಳವಗೌಳ** : ಔತ್ತರೇಯಸಂಗೀತ ಪದ್ಧತಿಯಲ್ಲಿರುವ 'ಭೈರವಿ' ರಾಗವನ್ನು ಬಹುವಾಗಿ ಹೋಲುತ್ತದೆ, ನಮ್ಮ ಮಾಯಾಮಾಳವಗೌಳ (ಪೇಮುಕೂ. ೧೦೪) ; ಮಾಯಾಮಾಳವಗೌಳ . . . ಭಕ್ತಿಕರುಣಾರಸಪ್ರಧಾನರಾಗ (ಸಂಗೀತಂ. ೧೩೯). [ಸಂ.]

**ಮಾಯಾಮಾಳವಗೌಳ** 'ಮಾಯಾಮಾಲವಗೌಲ' ನೋ.

**ಮಾಯಾಮುಖ** (ನಾ). ಮಾಯೆಗೆ ಒಳಗಾದವನು : ಅಜ್ಞಾನದ ದವಡೆಗೆ ಸಿಕ್ಕಿದವನು : ಕಾಮಕ್ರೋಧಲೋಭಮೋಹಮದಮತ್ಸರದಿಚ್ಛೆಗೆ ಪರಿದು ಹಂದಿಯೊಡನಾಡಿದ ಕಂದಿನಂತಾದರು ಇನ್ನು ಬಲ್ಲರೆ ಗುಹೇಶ್ವರ ಮಾಯಾಮುಖರು ನಿಮ್ಮುವನು (ಅವಶಂ. ೭೪-೩೨೯). [ಸಂ.]

**ಮಾಯಾಮೃಗ** (ನಾ). ಮೋಸದ ಜಿಂಕೆ : ಕಂಧಳಂದತದ ನೆಳಲಿನಲಿ ಕೈಕೊಂಡ ಮಾಯಾಮೃಗದ ಮೂರ್ತಿಯು (ತೊರರಾ. ೩-೮-೨೪). [ಸಂ.]

**ಮಾಯಾಯುದ್ಧ** (ನಾ). ಇಂದ್ರಜಾಲ ಮುಂತಾದ ವಿದ್ಯೆಗಳ ಸಹಾಯದಿಂದ ಮಾಡುವ ಯುದ್ಧ : ಮಾಯಾಯುದ್ಧದೊಳಂ ದಿವ್ಯಾಯುಧಯುದ್ಧದೊಳಮಧಿಕಬಲರುಭಯಬಲಂ ಜೀಯೆಂಬಿನೆಗಂ ಕಾದಿದರಾಯತಿ ನಿಲೆ ಕುಂಭಕರ್ಣನುಂ ಮಾರುತಿಯುಂ (ಕಂಪವಾ. ೧೩-೧೪೩) ; ಘಟೋತ್ಕಚನು ಹೊರಟು ಅಲಾಯುಧ ಮುಂತಾದವರನ್ನು ಕೊಂದು ಕರ್ಣನನ್ನು ಎದುರಿಸಿ ಮಾಯಾಯುದ್ಧ ಮಾಡುತ್ತ ಅದೃಶ್ಯನಾದನು (ವಕಥಾ. ೨೮೯). [ಸಂ.]

**ಮಾಯಾರಿ** (ನಾ). ಅಜ್ಞಾನವನ್ನು ನಾಶಪಡಿಸುವವನು : ಶ್ರೀಯುಮಾವರನಿಂದುಧರನಭಯಂಕರನುಗ್ರಮಾಯಾರಿ ಭಕ್ತಭವಹಾರಿ . . . ಪಂಪಾವಿರೂಪಾಕ್ಷನೆಮಗೀಗೆ ಭಕ್ತಿಜ್ಞಾನಸಂಪದವನು (ಹಶಾ. ೧-೮) ; ಈರ್ವರು ಬಳಿಕ್ಕಾ ಓಂಕಾರದಿಂದ ಪೊನ್ನಾಂಬಲಕೆ ಬರೆ ಮುನ್ನ ಮಾಯಾರಿಯಾಜ್ಞೆಯಿಂ ನಡೆತಂದು (ವೀಶ್ಮಪು. ೪-೯-೪); ಮಾರಾರಿ ಮಾಯಾರಿಯೆಂಬರ್ಗಳ ಚಂಚತ್ಕಾಹಳೀಸಂಕುಳಮೊಸೆದನವಂ ಮಾದಿರಾಜಾಭಿಧೇಯಂ (ವೃಷಭ. ೩೨-೯). [ಸಂ.]

**ಮಾಯಾರ್ಭಕ** (ನಾ). [ಜೈನ] ಮಾಯೆಯಿಂದ ಸೃಷ್ಟಿಸಿದ ಮಗು: ಕೃತಕವಾದ ಶಿಶು : P ತೀರ್ಥಂಕರನಾಗುವ ಶಿಶು ಹುಟ್ಟಿದಾಗ ಜನ್ಮಾಭಿಷೇಕಕಲ್ಯಾಣವನ್ನು ನೆರವೇರಿಸುವುದಕ್ಕಾಗಿ ಸೌಧರ್ಮೇಂದ್ರನ ಅಪ್ಪಣೆಯಂತೆ ಇಂದ್ರಾಣಿಯು ತೀರ್ಥಂಕರನ ತಾಯಿಗೆ ಮಾಯಾನಿದ್ರೆಯನ್ನು ಬರಿಸಿ, ಅವಳ ಪಕ್ಕದಲ್ಲಿ ಮಾಯಾಶಿಶುವನ್ನಿಟ್ಟು ನಿಜವಾದ ಮಗುವನ್ನು ತಂದು ಇಂದ್ರನ ಕೈಗೆ ಕೊಡುತ್ತಾಳೆ : ಐರಾದೇವಿಯ ಮುಂದೆ ಮಾಯಾರ್ಭಕನನಿರಿಸಿ, ಜಿನಾರ್ಭಕನನೆತ್ತಿಕೊಂಡು ಬರೆ (ಶಾಂತಿಪು. ೧೧-೯೭). [ಸಂ.]

**ಮಾಯಾಲಾಂದ್ರ** (ನಾ). = ಮಾಯಾದೀಪ : ಸಿನೆಮಾ, ಮಾಯಾಲಾಂದ್ರ ಮೊದಲಾದುವುಗಳೆಲ್ಲ ಬೆಳಕಿನ ಲೀಲೆಗಳು (ಶಾಂಕೃ. II. ೯೩೯).

[(ಸಂ. ಮಾಯಾ) + ಲಾಂದ್ರ (< ಲಾಂದರ)]

**ಮಾಯಾವಾದ** (ನಾ). [ವೇದಾಂತ] ಮಿಥ್ಯಾವಾದ ; P ಪ್ರಪಂಚವು ಮಾಯೆ, ಅದು ನಿಜವೆಂದು ಕಾಣುವುದು ಭ್ರಮೆ – ಎಂಬುದಾಗಿ ಶಂಕರಾಚಾರ್ಯರು ಬೋಧಿಸಿ ಅವರ ಅನುಯಾಯಿಗಳು ಅನುಸರಿಸಿದ ವಾದ ; ಇದು ಬೌದ್ಧರ ವಾದವೂ ಆಗಿದೆ : ಅಧ್ಯಾತ್ಮಮತಭೇದ ಭಾಸ್ಕರೀಯ ಮಾಯಾವಾದ ಶಬ್ದಬ್ರಹ್ಮವಾದ ಕ್ರೀಡಾಬ್ರಹ್ಮವಾದವೆಂದು ನಾಲ್ಕುತೆಜನಾಗಿ ಪ್ರಚುರಗೊಂಡಿರ್ಕುಂ (ವಿವೇಕ. ೧೩) ; ಶ್ರೀಶಂಕರಾಚಾರ್ಯರು ಬೋಧಿಸಿದ ಮಾಯಾವಾದವು ಅದೇ ಅರ್ಥವನ್ನು ಸೂಚಿಸುವುದಲ್ಲವೆ? (ಶಾಂಕೃ. III, ೧೩೬೬). [ಸಂ.]

**ಮಾಯಾವಾದಿ** (ನಾ). [ವೇದಾಂತ] ಮಿಥ್ಯಾವಾದವನ್ನು ಬೋಧಿಸುವವನು ; ಅದ್ವೈತತತ್ತ್ವವನ್ನು ಬೋಧಿಸುವವನು : ಅದ್ವೈತಿ : ಮಾಯಾವಾದಿಗಳ ಗೆದ್ದಿತು ಕೂಸು ದ್ವೈತಮತವನುದ್ಧರಿಸಿತು ಕೂಸು ಮಧ್ವರಾಯರೆಂಬ ಹೆಸರಿನ ಕೂಸು (ಪುರಂದ. ೧-೧೯೩-೩) : 'ಮಾಯಾ'ವಾದಿಯಾದ ಈ ದಿವ್ಯಪುರುಷ ಜಗತ್ತಿನ ಮಾಯೆಯನ್ನು ನಾಶಮಾಡಿ ಪಾರ್ಥಿವ ಜೀವನದ ಸಾರ್ಥಕ್ಯವೇನೆಂಬುದನ್ನುಪದೇಶಿಸಿದರು (ಜುಶ್ಯಾರ. ೧೦೬ ಶಿ೩೪).

**ಮಾಯಾವಾದಿಕೋಳಾಹಳ** = ಅದ್ವೈತತತ್ತ್ವಕ್ಕೆ ವಿಶಿಷ್ಟವಾದ ಅರ್ಥವನ್ನು ನೀಡಿ, ಆ ತತ್ತ್ವವನ್ನು ವಿರೋಧಿಸಿದ ವ್ಯಕ್ತಿ : ಶ್ರೀರಾಮಾನುಜಾಚಾರ್ಯರ ಒಂದು ಬಿರುದು : ಮಾಯಾವಾದಿಕೋಳಾಹಳ . . . ಶ್ರೀರಾಮಾನುಜಾಚಾರ್ಯರ ಪ್ರಥಮಶಿಷ್ಯರು (ಎಕ. VI (R), ಶಾಂತವ. ೧೩೩-೩ ; 1519). [ಸಂ. ಮಾಯಾವಾದಿನ್]

**ಮಾಯಾವಿ** (ನಾ). ೧. ಮಂತ್ರ, ಮಾಟ ಮೊದಲಾದ ಮಾಯಾವಿದ್ಯೆಗಳನ್ನು ಬಲ್ಲ ವ್ಯಕ್ತಿ ; ಮಂತ್ರಗಾರ : "ದಾಂಡಾಜನಿಕಃ, ಕುಹಕಃ . . . ಮಾಯಾವೀ, ಮಾಯಿಕಃ, ಮಾಯಿ — ಈ ೧೧ ಮಾಯಾವಿ" (ಪಲಾಯು. ೫೯-೦೯೯) ; ಮಾಯಾವಿಗಳ ವಿದ್ಯೆಗಳ ಪರಿಹರಿಸುವುದು ಮಾಯೆಯಿಂ (ಕುವ್ಯಾಗ. ೩-೬) ; ಮಗನೆ ಕೇಳ್ ರಾಕ್ಷಸರು ಮಾಯಾವಿಗಳು (ಕೊರರಾ. ೩-೬-೦೦೩). ೨. ಮೋಸಗಾರ : ಕಪಟಿ ; ಕುತಂತ್ರಿ : ಅಂತು ಮಾಯಾಕೃತಕದಿಂದ ವಿಮುಕ್ತನಾಗಿ ಪೊಣ್ಮೆಯೊಡೆ ಕಿವಿಯುಂ ಮತ್ತಿನ್ನದೆ ಮಾಯಾವಿ ಮುಚ್ಚಿಕೊಳ್ವಂ (ಧರ್ಮಾಮೃ. ೬-೫೯) ; ಅದು ಕಾರಣದಿಂ ಕೃಷ್ಣನೊಳ್ ಕುಟಿಲೋಪಾಯಮೆ ಶರಣೀಯಂ ಆ ಮಾಯಾವಿಯಂ ಧನುರ್ಮಹೋತ್ಸವಾಮಂತ್ರಣವ್ಯಪದೇಶದಿಂ ವಿನಾಶಮನೆಯ್ದಿಸುವೆಂ (ಜಗಪು. ೩-೧೦ ವ) ; ಭದ್ರಪ್ಪನಾಯಕಂ ಪಡೆವೆರಸತಿತ್ವರೆಯಿಂ ದಾಳಿವರಿದಾ ಮಾಯಾವಿಗಳ ನಾಡೊಳಗಣ . . . ಸೀಮೆಗಳಂ ಕೊಂಡವರ ರಾಜ್ಯರಾಷ್ಟ್ರಮಂ ಪುಡಿಗೈಸಿ (ಕೆಳನೃ. ೬-೩ ವ). [ಸಂ. ಮಾಯಾವಿನ್]

**ಮಾಯಾವಿಗ** (ನಾ). = ಮಾಯಾವಿ ೧ : ಜಗವನೇಡಿಸಿ ಕಾಡುವಾ ಮಾಯೆಗೆ ಸವೀನವೆನಿಪ್ಪ ಮಾಯಾವಿಗನು ತಾನೇಬಂತಿರಲ್ಲವೆ ಬಯಲ ಬಗೆಗೊಳಿಸಿ (ಶೃಶುಲೀ. ೩-೩೯೬). [ಮಾಯಾವಿ + — ಗ]

**ಮಾಯಾವಿತನ** (ನಾ). ಮೋಸಗಾರಿಕೆ ; ಸಂಚು ; ಕುಟಿಲತೆ : ಮಕ್ಕಳೊಡನೆ ಮಾಯಾವಿತನವಿದಮ್ಮ ತಕ್ಕುದೆ ಶುತನರ್ಥಾಂಗಿ ಉಕ್ಕೆವವನು ಬಿಟ್ಟು ಚೆಂಡು ತರಿಸಿಕೊಟ್ಟು ದಿಕ್ಕನೆ ಕಳುಹೇಕೆ ತಡವು (ಕುರಾಸಾಂ. ೩೨-೩೦). [ಮಾಯಾವಿ + — ತನ]

**ಮಾಯಾವಿದ** (ನಾ). = ಮಾಯಾವಿ ೧ : ರಾವಣನ ಪರಿ ನೆಲೆಸಿತಿಪನಲಿ ಸಾವಿಗಂಜುವನಲ್ಲ ವಿಳಮಾಯಾವಿದನು ನಮ್ಮುಕುತಿ ಕೊಳ್ಳದು (ಕುವ್ಯಾಲಾ. ಹಿಂಷ. ೬-೬೬). [ಸಂ. ಮಾಯಾವಿದ್]

**ಮಾಯಾಶಕ್ತಿ** (ನಾ). ಅಜ್ಞಾನದಿಂದ ಉಂಟಾದ ಶಕ್ತಿ ; ಮಿಥ್ಯಾಶಕ್ತಿ : ಶಕ್ತಿಯೆಂಬುದು ಮಾಯೆ ಮಾಯಾಶಕ್ತಿಯದು ತನುವಿನಲಿ ನೀ ನಿಜಮುಕ್ತಿ ದಾಯಕನಿರಲು ಸುಖಿದುಃಖಾದಿಗಳಿಗಾರು ಯುಕ್ತಿಯೊಳಗಿವನಜಿತು ಮನದ ವಿರಕ್ತಿಯಲಿ ಭಜಿಸುವಗೆ ಮುಕ್ತಿಗೆ ಭಕ್ತಿಯೇ ಕಾರಣವು (ಹಂಸಾ. ೭೪) ; ಘನತಮಸ್ಸತ್ತ್ವಪ್ರಧಾನಗಳೆನಿಸಿ ಧೂಮಜ್ವಾಲೆಗಳವೊಲ್ ಜನಿಸಿ ಮಾಯಾಶಕ್ತಿ ಚಿಚ್ಛಕ್ತಿಗಳೆನಿಸಿಹವು (ಅಮೃಕ. ೩-೯೦). [ಸಂ.]

**ಮಾಯಾಶಲ್ಯ** (ನಾ). [ಜೈನ] ವ್ರತಗಳನ್ನು ಆಚರಿಸುವವನಿಗೆ ಉಂಟಾಗುವ ಮೂರು ಬಗೆಯ ಅಡ್ಡಿಗಳಲ್ಲಿ ಒಂದು : ಪೊಲ್ಲಮೆಯಂ ಮಾಡುವ ಮಿಥ್ಯಾಶಲ್ಯಂ ಮಾಯಾಶಲ್ಯಂ ನಿಧಾನಶಲ್ಯಮೆಂಬ ಮೂಜಂ ಶಲ್ಯಗಳಿಂ ಪಿಂಗಿದಂ (ಧರ್ಮಾಮೃ. ೫-೦೩೦). [ಸಂ.]

**ಮಾಯಾಶಿಶು** (ನಾ). = ಮಾಯಾರ್ಭಕ : ಮಾಯಾಶಿಶುವುಮನೊರ್ವೆಯ ಮಾಯಾನಿದ್ರೆಯುಮನಿತ್ತಳೆಬಿಕೆಗೆ ಜಗಜ್ಜಾಯನಸುಯ್ಯನಿಜಾಭಿಪ್ರಾಯದೆ ರಚಿ ಶುಚಿಗಳಾರೊ ಕಾರ್ಯೋತ್ಕಂಶರ್ (ತಂತ್ರಕು. ೦೨-೫೫). [ಸಂ.]

**ಮಾಯಾಸಂಜ್ವಲನ** (ನಾ). [ಜೈನ] ಚಾರಿತ್ರಮೋಹನೀಯಕರ್ಮದ ಅಣುವ್ರತಿಯಾದ ಗೃಹಸ್ಥನಿಗೆ ಪ್ರತ್ಯಾಖ್ಯಾನಾವರಣದಲ್ಲಿ ಉಂಟಾಗುವ ಕ್ರೋಧ, ಮಾನ, ಮಾಯೆ ಮತ್ತು ಲೋಭ ಎಂಬ ನಾಲ್ಕು ಬಗೆಯ ಕರ್ಮಪ್ರಕೃತಿಗಳಲ್ಲಿ ಒಂದು : ಕ್ರೋಧಸಂಜ್ವಲನಂ ಮಾನಸಂಜ್ವಲನಂ ಮಾಯಾಸಂಜ್ವಲನಂ ಲೋಭಸಂಜ್ವಲನಂ × × × ಅನಂತಾನುಬಂಧಿಲೋಭಮಾಯಾಕ್ರೋಧಮಾನಂ (ಗೊಮ್ಮಸಾ. ೩-೯). [ಸಂ.]

**ಮಾಯಾಳು** (ಗು). ೧. ಮಮತೆಯುಳ್ಳ : ತನ್ನನ್ನು ಅಗಲದೇ ಇರುವ ಮಾಯಾಳು ತಂದೆಯು ಒಮ್ಮೊಂದೊಮ್ಮೆ ಗತಿಸಿದ್ದರಿಂದ ಕೃಷ್ಣೆಗಾದ ದುಃಖವನ್ನು ಹೇಳಲಳವಲ್ಲ (ಐತ್ಕಗ್ರ. ೯). (ನಾ). ೨. ವಾತ್ಸಲ್ಯವುಳ್ಳವನು ; ಮಮತೆಯುಳ್ಳವನು : ಇಂಥಾ ಮಾಯಾಳುವಾದ ತಂದೆಯು ತೀರಿದನೆಂಬ ಹಂಬಲವಿಲ್ಲದೆ (ಮುಂಬಯಿ. ೩-೩೦೬).

[ ← ಮರಾ. ಮಾಯಾಲು, ಮಾಯಾಳೂ = ಮಮತೆಯುಳ್ಳ./P ಇದು ಸಂಸ್ಕೃತದ 'ಕೃಪಾಲು', 'ದಯಾಲು' ಮುಂತಾದ ಶಬ್ದಗಳ ಸಾದೃಶ್ಯದಿಂದ ರೂಪುಗೊಂಡಿರಬಹುದು]

**ಮಾಯಿ** (ನಾ). ೧. ಗಾರುಡಿಗ ; ಐಂದ್ರಜಾಲಿಕ ; ಮಂತ್ರಗಾರ : "ದಾಂಡಾಜನಿಕಃ, ಕುಹಕಃ . . . ಮಾಯಾವೀ, ಮಾಯಿಕಃ, ಮಾಯಿ — ಈ ೧೧ ಮಾಯಾವಿ" (ಪಲಾಯು. ೫೯-೦೯೯) ; ಆ ತತ್‌ಕ್ಷಣ ಮಾಯಿಗಳ್ಮಯನೋತು ಕಟುವಾಗಲ್ಕೆ ಕಟಿದರು ನೂತನಂತರ್ಧಾನಧಾರಣೆಯೆಂಬ ವಿದ್ಯೆಗಳ (ಸಭಾಗ. ೯-೦೨-೩೦). ೨. ಮೋಸಗಾರ ; ಕಪಟಿ ; ಕುತಂತ್ರಿ : ಕರವ ಮುಗಿದನು ಮುಖ್ಯಪ್ರಾಣ . . . ಜೀವೇಶರೈಕ್ಯವು ಜಗತು ಮಿಥ್ಯವೆಂದು ಈ ವಿಧ ಪೇಳುವ ಮಾಯಿಗಳಳಿಯೆಂದು (ಪುರಂದ. ೦-೦೯೯-೦) ; ಆ ಮಾಯಿ ಮರಾಟರ ಗಂಡಂ ಮಾಯಾತೀತಂಗೆ ಮಣಿದು ಬಿನ್ನತಿಗೆಯ್ದಂ (ಶಕಪು. ೫೯-೯೬). ೩. ಬ್ರಹ್ಮ. ೪. ಶಿವ. ೫. ಅಗ್ನಿ. ೬. ಕಾಮ. ೭. ಒಂದು ಬಗೆಯ ಸಸ್ಯ : "ಬುಸಃ — ಮಾಯಿ" (ಓಷಧಿ. ೦೦೯). [ ಸಂ. ಮಾಯಿನ್ ]

**ಮಾಯಿಕ** (ಗು). ೧. ಮೋಸದ ; ಕಪಟದ. ೨. ತೋರಿಕೆಯ ; ಭ್ರಾಂತಿಯ : ಈ ಮಾಯಿಕಸಂಬಂಧವಾದ ದೇಹವ ತಾನೆಂದೆಂಬ ಮೂಢಾತ್ಮರನೇನೆಂಬೆನಯ್ಯ (ಸಿದ್ಧೇವ. ೯೬-೦೬೯). (ನಾ). ೩. ಮೋಸದಿಂದ ಕೂಡಿದುದು ; ಕಪಟದಿಂದ ಕೂಡಿದುದು : ಮಾಯಿಕಕ್ಕೆ ದೇವತ್ವವುಂಟೇ ಮರುಳುಮಾನವಾ ಮಹಾದೇವನೇ ದೇವನಲ್ಲದೆ (ಸಿದ್ಧೇವ. ೯೦-೦೦೬) ; ಮನದಿಂದ ಮಾಯಿಕಂ ಮನದಿಂದ ಮಂಗಲಂ ಮನದಿಂದ ಸಕಲಸಂಶಯಾದಿಗಳೆಲ್ಲ ಮನದಿಂದ ಸರಕಕಿಳಿವರು (ಗುರುಬೋ. ೨-೦೬೨) ; ಮಾಯಿಕವಿದು, ಮಾಧವನಿಸಲ್ಲದೆ ಪೆಚಿರಿನಾಗದು (ಅಮೃಕ. ೦೨೯). ೪. ತೋರಿಕೆ ; ಭ್ರಾಂತಿ ; ಭ್ರಮೆ : ದೇವ ಹುಟ್ಟುವಾಗ ಮಾಯಿಕವ ಕೌಳಕವ ಧರಿಸಿ ಬಂದನೆಂಬರು ಅದು ಬಣ್ಣದ ಬಚ್ಚಣೆಯ ಮಾತು (ಪೋಳವಾ. ೯-೦೨) ; ನಾನಾವಿಧವಾಗಿ ತೋಚಿದ ಮಾಯಿಕವಳಿಯಿತ್ತು ಮಾಯಿಕವಳಿಯಿತ್ತಾಗಿ ನಿರ್ಮಾಯನಾದನು ಕಾಣಾ (ಸಿದ್ಧೇವ. ೦೮೮-೫೬೩). ೫. ಭ್ರಾಂತಿಯಿಂದ ಕೂಡಿದುದು ; ಭ್ರಮೆಯಿಂದ ಕೂಡಿದುದು : ಪುಣ್ಯಪಾಪಫಲಾನುಭವಕ್ಕಾಗಿ ಈಶ್ವರನಿಗೆ ಶರೀರವಿಲ್ಲದಿದ್ದರೂ ಉಪಾಸಕರ ಅನುಗ್ರಹಕ್ಕಾಗಿ ಮಾಯಿಕವಾದ ಶರೀರವನ್ನು ಅವನು ಸ್ವೀಕರಿಸುವನು (ಭಾರದ. ೨೪೭). ೬. ಮಾಯೆಯನ್ನುಂಟುಮಾಡುವವನು : ಅದ್ವೈತ ವೇದಾಂತದಲ್ಲಿ . . . ಜಗದ್ವ್ಯಾಪಾರಕ್ಕಾಗಿ ಕಲ್ಪಿತನಾದ ಸಗುಣಮೂರ್ತಿ ಎನಿಸಿದ ಈಶ್ವರನು ಮಾಯಿಕನೂ ಅವನಿಂದ ನಿರ್ಮಿತನಾದ ಪ್ರಪಂಚ . . . ಸ್ವಪ್ನಸದೃಶವೂ ಆಗಿವೆ (ಕಕ್ತಿ. ೩೨). ೭. ಮಾಯೆಗೆ ಒಳಗಾದವನು ; ಮಾಯಾಶಕ್ತಿಗೆ ಒಳಪಟ್ಟವನು : ಮುಳುಗುವಾತ ಮುಳುಗುವವನನೆತ್ತಬಲ್ಲನೆ ತಾ ಮಾಯೆಯೊಳಗಾಗಿ ಮಾಯಿಕರ ತನ್ನ ಪಾದಾಂಬುವಿಂ ಪರಿಹರಿಪೆನೆಂಬವ ತಗೆದುಕೊಂಬವ ಇವರಿರ್ವರೂ ಮುಳುಗಿ ಯಮಪಾಶಕ್ಕೊಳಗಾದರು ನೋಡಾ (ಸಿದ್ಧವ. ೬೧-೨೪೦). ೮. ಗಾರುಡಿಗ; ಐಂದ್ರಜಾಲಿಕ ; ಮಾಯಾವಿ : "ದಾಂಡಾಜನಿಕಃ, ಕುಹಕಃ . . . ಮಾಯಾವೀ, ಮಾಯಿಕಃ, ಮಾಯಿ — ಈ ೧೧ ಮಾಯಾವಿ" (ಪಲಾಯು. ೫೯-೦೯೯). ೯. ಮೋಸಗಾರ ; ಕಪಟಿ. ೧೦. = ಮಾಯಾಮಲ ೧: ತಾ ಮಾಡಿದೆನೆಂದಡೆ ತನ್ನ ಕೆಳಗಣವೆ ಆಣವ ಮಾಯಿಕ ಕಾರ್ಮಿಕಮಲಂಗಳು (ಪೋಳವಾ. ೩೩-೦೩೬). [ ಸಂ. ]

**ಮಾಯಿಕಮಲ** (ನಾ). = ಮಾಯಾಮಲ ೧ : ಧರ್ಮವ ನುಡಿವಲ್ಲಿ ಕ್ರಿಯಾಧರ್ಮ ನಿರ್ಮಲವ ನುಡಿವಲ್ಲಿ ಮಾಯಿಕಮಲಂ ನಾಸ್ತಿ ಕಾಯ

ಉಳ್ಳನ್ನಕ್ಕ ಪೂಜೆ ಜೀವವುಳ್ಳನಕ್ಕ ಸೇವಹು (ಬಸವ. ೪. ೬೭೪-೧೯೩೯).
[ಸಂ.]

**ಮಾಯಿವರ್ಮ** (ನಾ). ಒಬ್ಬಾತನ ಹೆಸರು : ಬೆಳ್ವೊಲಂ ಮೂನೂಱುಮಂ ಮಹಾಸಿರಿವಸ್ತನಾಳೆ ಮುಳ್ಗುನ್ದ (ದ) ಪನ್ನೆರಡುಮಂ ಮಾಯಿವರ್ಮ್ಮನಾಳೆ ಸಿರಿವುರಕೆ ಬಗೆಗ ಪೆಗ್ಗಾಗ್ಗವುಣ್ಡ ಮಾಗುತ್ತಿರೆ (ಎಇ. XXVI. ೬೨-೧೧ ; ೯೦೯).
[ಮಾಯಿ + < ವರ್ಮ$_3$]

**ಮಾಯಿಸು** (ಕ್ರಿ). ಗಾಯ, ಹುಣ್ಣು ಮೊದಲಾದುವುಗಳನ್ನು ವಾಸಿ ಮಾಡು, — ಗುಣಪಡಿಸು : ಮಾಯೆಯೊಮ್ಮೊಮ್ಮೆ ತೋರುವಳು ಬಿಗಿಲಕ್ಕರೆಯ ಮಾಯಿಪಳು ಗಾಯಗಳನ್ನು (ಮಂಕುತಿ. ೧೯೭).
[ಮಾಯು$_1$ ( < ಮಾಯ್) + — ಇಸು$_3$]

**ಮಾಯಿಾಯ** (ನಾ). = ಮಾಯಾಮಲ ೧ : ಯಾವ ಪುರವು . . . ಆಣವ, ಮಾಯಿಾಯ, ಕಾರ್ಮಿಕವೆಂಬ ಮೂರುಮಲಗಳನ್ನು ನಾಶ ಮಾಡುವ ತೀರ್ಥವೆಂದು ಪ್ರಸಿದ್ಧವಾದ ಮಲಾಪಹಾರೀನದಿಯ ತೀರದ ಕ್ಷೇತ್ರವಾಗಿರುವುದೋ . . . ಆ ಐಪುರಿಯನ್ನು ವಂದಿಸುವೆನು (ಶಿವಾನಂ. ೩-೬ ಅರ್ಥ) ; ಆಣವ ಮಾಯಿಾಯಮಲಗಳಿಂದಲೂ ಅಂತಃಕರಣ ಇಂದ್ರಿಯ ದೇಹಗಳಿಂದ ಕೂಡಿದ ಜೀವಾತ್ಮನು ಸುಖದುಃಖಗಳನ್ನನುಭವಿಸುತ್ತಾನೆ (ಭಾರತ. ೨೦೪). [ ಸಂ. ]

**ಮಾಯು$_1$** 'ಮಾಯ್' ನೋ.

**ಮಾಯು$_2$** (ನಾ). ೧. ಮಾಟ : ಅಭಿಚಾರ. ೨. ಪಿತ್ತ : "ಮಾಯುಃ. ಪಿತ್ತಂ- ಈ ೨ ಪಿತ್ತಂ" (ಶಬ್ದಮ. ೯೯-೪೩೦). ೩. ಸೂರ್ಯ. [ಸಂ.]

**ಮಾಯುಚ್ಚವ** (ನಾ). ದೊಡ್ಡ ಉತ್ಸವ ; ಮಹಾಸಮಾರಂಭ : ಲೇಸ ಮಾಡಿದೆ ನಿನ್ನ ದೆಸೆಯಿಂದ ಕಿಚ್ಚು ಸಂದಿದ ತ್ರಿಜಗವೊಲು ಮಾಯುಚ್ಚವಕೆ ಬಿಗಿಲಾಯ್ತು ಪೂತುಜೀ ನಿಚ್ಚಟವ ಸಾಹಸಿಕ ನೀನು (ಜೈಮಿ. ೬೧೩. ೪-೯೨). [ಮಾ$_4$ + ಉಚ್ಚವ]

**ಮಾಯೂರ** (ಗು). ೧. ನವಿಲಿಗೆ ಸಂಬಂಧಿಸಿದ. ೨. ನವಿಲುಗರಿಯಿಂದ ಮಾಡಿದ. (ನಾ). ೩. ನವಿಲುಗಳ ಗುಂಪು. ಸಮೂಹ. [ಸಂ.]

**ಮಾಯೂರಧ್ವಜ** (ನಾ). ನವಿಲಿನ ಗುರುತಿರುವ ಬಾವುಟ; ಮಯೂರದ ಚಿಹ್ನೆಯಿರುವ ಧ್ವಜ; P ಇದು ಚಾಳುಕ್ಯರಾಜರಿಗೆ ಸಲ್ಲುತ್ತಿದ್ದ ಒಂದು ಬಿರುದು : ಎನೆ ಸಂದಿಜ್ಜ ಚಳುಕ್ಯರುನ್ನತಿಯದಾಗ್ಗ್ರಂ ಬಣ್ಣಿಸ ಲ್ಬಾರದೆಂಬಿನೆಗಂ ತಾರಕವೈರಿಯೊಳ್ಪಡೆದ ಮಾಯೂರಧ್ವಜಂ ಪದ್ಮಲೋಚ ನನಿಂ ಪೆತ್ತ ವರಾಹಮುದ್ರೆ. . . ಛತ್ರಮಿಪ್ಪೊಪ್ಪೆ ಭೂತಳಮನಾಳ್ದರ್ಬ್ಬಾಹು ವಿಕ್ರಾಂತದಿಂ (ಕಇಆ. ೨-೨-೨೪; 1058). [ಸಂ.]

**ಮಾಯೂರಿ** (ಗು). ೧. ನವಿಲಿಗೆ ಸಂಬಂಧಿಸಿದ. (ನಾ). ೨. ನವಿಲಿನ ಚಿತ್ರವುಳ್ಳ ಒಂದು ಬಗೆಯ ಆಯುಧ : ಬಿಲ್ಲು ತೀರು ಮಾಯೂರಿ ಪೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿ ಸಾಧನವಿಶೇಷಂಗಳಿಂದಲುಂ (ವಿವೇಕ. ೨೬೩). [ಸಂ. ಮಾಯೂರೀ]

**ಮಾಯೆ** (ನಾ). ೧. ಗಾರುಡಿ ; ಇಂದ್ರಜಾಲ : ಮಾಯೆಯೊಳೆ ಗೆಲ್ದ ದಾನವನಾಯಕನಂ ನಗುವ ಮದನಸುತನುಪಹಾಸಚ್ಛಾಯೆ ಬೆಡಂಗಾಯ್ತು ಯಂಶ್ರೀಯ ಮನೋಹರಸಿತಪ್ರಸಾಧನರುಚಿವೋಲ್ (ಜಗನ್ನಾ. ೧೬-೧೩೨). ೩. ಮೋಸ ; ವಂಚನೆ ; ಕಪಟ : "ಮಾಯೆಯ[ಪಾಠಾಂ. ಯುವ್ಯ]ನೆ ವಂಚ್ಚಕಕ್ಕ" (ಮಂಗರಾ. ೧೦೨-೩); ಸರ್ವಸ್ವವನು ನೆಱೆ ಕವರಿ ಗೋಟಿ ಗೊಳಿಸುವ ಬಲ್ಮೆಗಳ ಬಲ್ಲಾಟಿಕ ಬಹುವಿಧದ ಮಾಯೆಯ ಬೇಟಕಾತಿಯ ರೊಪ್ಪಿದರು ನರನಾಥನಿದಿರಿನಲಿ (ಕುಮಾರ. ೦-೩-೩೦). ೩. ಮಿಥ್ಯೆ : ಭ್ರಮೆ : ಭ್ರಾಂತಿ : ಯುವತಿಯಾಲಿ ನೋಟಬೇಟದಿ ಕೂಟವನು ಪಡೆದು ಕಾಯುವವಳಿಗಧೀನವಾಗಿರೆ ಗಾಯವಡೆದಂಗಜನ ಬಾಣಕೆ ಬಾಯ ಕಿಸಿ ದಾಯಾಸಗೊಂಬುದೆ ಮಾಯೆ (ಅಮೃತ. ೨-೭೮): ಮಾಯೆಯನು ನೀಗಿ ! ನನ್ನಂತೆ ಲಾಂಗೂಲಯಜ್ಞದಿಂ ನವತೇಜಪ್ಪುಣ್ಯಗಳ ಗಳಿಸಿ ಜೀವನ್ಮುಕ್ತರಾಗಿ (ಕುಂತೀ. ೪೩-೧೧). 'ಮಾಯೆವಿಡಿ' ನೋ. ೪. ಅಜ್ಞಾನ; ತಮೋಗುಣ : ಕೂಡಲಸಂಗನ ಕೂಡಿಹೆನೆಂದೊಡೆ ತಾನೆನ್ನ ಮುಂದುಗೆಡಿಸಿತ್ತು ಮಾಯೆ (ಬಸವ. ೦೪). ೫. ದಿಗ್ಭ್ರಮೆ : ನಮ್ಮದಿಜೊಂದು ಕುಟುಂಬ ಮರು ದಿನ ಮುರಿಯುವದಿತ್ತು. ಪ್ರತಿಯೊಬ್ಬರಿಗೂ ಮಾಯೆ ಆವರಿಸಿತ್ತು. (ಸ್ವಪ್ನ. ೩೦೭). ೬. ಮರುಕ ; ಅನುಕಂಪ. ೭. ಅತಿಯಾದ ಪ್ರೀತಿ : ವ್ಯಾಮೋಹ : ಧನದ ಮೇಲಿನ ಅವರ ಮಾಯೆ ವಿಪರೀತ ಹೆಚ್ಚು (ಇಕ್ಷುಕ. ೩೦೭). ೮. ಮನುಷ್ಯನಿಗೆ ಅಜ್ಞಾನವನ್ನುಂಟುಮಾಡಿ ವ್ಯಾಮೋಹವನ್ನು ಬರಿಸುವ ಶಕ್ತಿ : ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ. . . ಈ ಮಾಯೆ ಕಳೆವೊಡೆಯೆನ್ನಳವಲ್ಲ (ಬಸವ. ೦೩). ೯. ಪಾರ್ವತಿ ; ದುರ್ಗೆ. ೧೦. ಲಕ್ಷ್ಮಿ. ೧೧. ಪಾರ್ವತಿಯ ತಾಮಸಕಳೆಯ ಒಂದು ರೂಪ : ಅಂಬಿಕೆ ತನ್ನ ತಾಮಸಕಳೆಯ ಮೂರುತಿಯಾದ ಮಾಯೆಯನಿಳೆಯೊಳುದಯಿಸಿ ಯಲ್ಲಮನ ಸೀನಜಿದು ಬಾಯೆನಲು (ಪ್ರಭುಲಿ. ೨-೪೧). ೧೨. ಬ್ರಹ್ಮನಿಂದ ಭಿನ್ನವಾಗಿರುವಂತೆ ಮತ್ತು ಸತ್ಯವಾಗಿರುವಂತೆ ತೋರುವುದು : ಪ್ರಪಂಚದ ಪೂರ್ವಸ್ಥಿತಿ ; ಪ್ರಕೃತಿ : ಪ್ರಕೃತಿಯೆಂದರೆ ಮೂಲಾಜ್ಞಾನ, ಮಾಯೆ, ಅವಿದ್ಯೆ ಮೊದಲಾದ ಶಬ್ದಗಳಿಂದ ಹೇಳಲ್ಪಡುವ ಪ್ರಪಂಚದ ಪೂರ್ವಸ್ಥಿತಿ (ಹಿಂದರ್ಶ. ೦೯೪). ೧೩. ಬುದ್ಧಿ ; ಪ್ರಜ್ಞೆ. ೧೪. ದರ್ಪ ; ಸೊಕ್ಕು. ೧೫. ಮೂರ್ಖತನ. ೧೬. [ಶೈವ] ಐದು ಬಗೆಯ ಪಾಶಗಳಲ್ಲಿ ಒಂದು ; ಮನುಷ್ಯನಿಗೆ ಅನಾದಿಯಾಗಿರುವ ಅಶುದ್ಧಿ : ಮಲ, ಕರ್ಮ, ಮಾಯೆ, ಮಹಾಮಾಯೆ, ತಿರೋಧಶಕ್ತಿಯೆಂದು ಪಾಶ ಐದುವಿಧ (ಹಿಂದೂಧ. ೨೯೬). ೧೭. [ದ್ವೈತ] ಹೃದಯಕಮಲದಲ್ಲಿರುವ ಹನ್ನೆರಡುದಳಗಳ ಹನ್ನೆರಡುರೂಪಗಳಲ್ಲಿ ಒಂದು :ಹೃದಯಕಮಲದಲ್ಲಿರುವ ೧೨ ದಳಗಳಲ್ಲಿ ೧೨ ರೂಪಗಳು. ಅವು ಶಕ್ತಿ. ಪ್ರತಿಷ್ಠಾ, ಸಂವಿತ್, ಸ್ಫೂರ್ತಿ, ಪ್ರವೃತ್ತಿ, ಪರಾ, ವಿದ್ಯಾ, ಮತಿ, ನಿಯತಿ, ಮಾಯಾ, ಕಾಲ, ಪುರುಷ ಹೀಗೆ ೧೨ ರೂಪಗಳು (ಹಆರ. ೪-೨೬ ತಾತ್ಪರ್ಯ). ೧೮. [ಜೈನ] ಇಪ್ಪತ್ತೈದು ವಿಧವಾದ ಕ್ರಿಯೆಗಳಲ್ಲಿ ಒಂದು : ಪಂಚವಿಂಶತಿಕ್ರಿಯೆಗಳು. ೧. ಸಮ್ಯಕ್ತ್ವಕ್ರಿಯೆ (ದೇವಗುರುಶಾಸ್ತ್ರಾದಿ ಪೂಜೆ . . . ೨೩. ಮಾಯೆ (ಜ್ಞಾನ ದರ್ಶನಾದಿಗಳಲ್ಲಿ ಕಪಟೋಪಾಯ). ೨೪. ಮಿಥ್ಯಾದರ್ಶನ (ಪರರ ಮಿಥ್ಯಾತ್ವ ಕ್ರಿಯೆಗೆ ಉತ್ತೇಜನ). ೨೫. ಅಪ್ರತ್ಯಾಖ್ಯಾನ (ಸಂಯಮದಲ್ಲಿ ಉದ್ಯುಕ್ತನಾಗದಿರುವುದು) (ಜೈನಶ. ೬೪).' ಪಂಚವಿಂಶತಿಕ್ರಿಯೆ ' ನೋ.

ಮಾಟಮಾಯೆ=ಮೋಸಗಾತಿ ; ವಂಚಕಿ : ದಿಟ್ಟೆಯರು ಕುಟಿಲೆಯರು . . . ಬೆಟ್ಟೆಯರು ಮಾಟಮಾಯೆ [ಪಾಠಾಂ. ಯ]ಗಳು ಬಲು ಮುದ್ದುಕಾತಿಯರು (ಬಸವ. ೪೧-೫೭). [ಸಂ. ಮಾಯಾ]

**ಮಾಯೆವಿಡಿ** (ಕ್ರಿ). ಭ್ರಾಂತಿಗೆ ಒಳಗಾಗು : ಮಾಯೆವಿಡಿದು ಜೀವಿಸುವ ಜೀವಕನಲ್ಲ ಅದೇನು ಕಾರಣವೆಂದಡೆ ಆತ ಘನಲಿಂಗವಿಡಿದು ಜೀವಿಸುವ ಜೀವಕನಾಗಿ (ಶಸ್ತವ. ೪. ೩೬೨-೧೨೩೨). [ಮಾಯೆ + ಪಿಡಿ$_1$]

**ಮಾಯ್ದು** ' ಮಾಯ್ ' ನೋ.

**ಮಾಯ್ದು** ' ಮಾಯ್ ' ನೋ.

**ಮಾಯ್ಮರುತಾಪು** ' ಮಾಯಾಮರತಾಪು ' ನೋ.

**ಮಾರ್** (ಸಪೂರೂ). 'ಮಾಱು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : ' ಮಾರ್ತಲೆ ', ' ಮಾರ್ದನಿ', ' ಮಾರ್ಪಡು ' ನೋ. [<ಮಾಱು$_2$]

**ಮಾರ** (ನಾ). ೧. ಕೊಲ್ಲುವಿಕೆ ; ವಧೆ. ೨. ಸಾವು : ಮರಣ. ೩. ವಿಘ್ನ ; ತಡೆ ; ಅಡ್ಡಿ. ೪. ಮನ್ಮಥ ; ಕಾಮ : " ಪ್ರದ್ಯುಮ್ನಃ . . .

ಪ್ರದನಃ, ಮಾರಃ, ಸ್ಮರಃ . . . ಮನೋಭವಃ—ಈ ೨೮ ಕಾಮ(ದೇವ)ನ ಪೆಸರ್ '' (ಶಂಣಯು. ೬-೩೩); ಮಾರಂ ಬರಯ್ಗೊಪರ್ಚಿದ ಮಾರಣ ಹೋಮಾಗ್ನಿಧೂಮಪಟಲಂಗಳವೋಲ್ ಕಾರ ಮುಗಿಲ್ ನೆಗೆದುವು ರತಿ ನೀರೆಱಿದೋವಿದ ತಮಾಲಷಂಡಂಗಳವೋಲ್ (ಶಂರಾಪಾ. ೬-೦೬೦); ವಿಷಯಾಭಿಲಾಷೆಯಲ್ಲಿ ವಿರಾಗವು ನೆಲೆಯಾಗಿ ಅಷ್ಟಾವರಣದ ಆಚಾರವೆ ಅಂಗವಾದಡೆ ಮರುಳುಗೊಳಿಪ ಮಾರನ ಮಾಟವು ದೂರಾಗುವುದಯ್ಯಾ (ತನ್ನತ. ೪. ೪೬೩-೦೦೪೩); ಪದೆದು ಮಾರನ ದಾಳಿ ಬಂದುದು ಕಾವರಿಲ್ಲ ಕಟಾ (ಹರಿಶ್ಚ. ೨-೭೮). ೫. [ಬೌದ್ಧ] ಪಾಪಪುರುಷ; ದುಷ್ಟ : ಪರಿನಿರ್ವೃತಿಸೆ ಮಾರ, ಬದುಕಿಂದ ತೊಲಗೇ ಬ್ರಹ್ಮಚರ್ಯದ ಧರ್ಮ ಬುದ್ಧಿಸವ ಮುನ್ನ (ವೃಕಾಪ. ೬೩-೦೭).

ಮಾರನಯ್ಯ = ಮನ್ಮಥನ ತಂದೆ; ವಿಷ್ಣು : ಆರು ವರ್ಣಿಸ ಬಹುದು ಮಾರನಯ್ಯನ ಭಕ್ತಿ ಸೂರೆಗೊಂಡವರ ಕಥೆ ಧಾರುಣಿಗೆ ಹೊಸದು (ಜಗನ್ನಾ. ೦೩೩). [ಸಂ.]

**ಮಾರಂಕ** 'ಮಾಱಂಕ' ನೋ.

**ಮಾರಂದೆಯ** (ನಾ). ಒಬ್ಬಾತನ ಹೆಸರು : ಸಮಣರು ಮರುದೂರ ಮಾರನ್ದೆಯರ್ ಮೆದಿಜ್ಞ(?)ದರ್ ಕಿತ್ತೂರ ಮಯ್ಸರು . . . ಸಾಕ್ಷಿ (ಎಕ. XIV, ೨೩೨-೫೬; ಸು. ೯ನೆಯ ಶತ). [ ? ]

**ಮಾರಂಬು** ' ಮಾಱಂಬು ' ನೋ.

**ಮಾರಕ** (ಗು). ೧. ನಾಶಕಾರಕವಾದ ; ಹಾನಿಕಾರಕವಾದ. (ನಾ). ೨. ನಾಶವನ್ನುಂಟು ಮಾಡುವಂಥದು ; ಹಾನಿಕಾರಕವಾದುದು : ಈ ವಸ್ತುಗಳೆಲ್ಲವೂ ಮೋಹಕವಾಗಿರುವಷ್ಟು ಮಾರಕವಾಗಿರುತ್ತವೆ (ಶೇಷಪುಂಶ. ೪೦೯); ಸಾಹಿತ್ಯವನ್ನು ಪಾಂಡಿತ್ಯಸಿದ್ಧಾಂತದ ಹಾಗೂ ನಿರ್ಜೀವ ಅನುಕರಣೆಯ ಕಿರುದಾರಿಗೆ ತಳ್ಳಿ ಎಷ್ಟರ ಮಟ್ಟಿಗೆ ಮಾರಕವಾಗಿದೆ ಯೆಂಬುದನ್ನೂ ಪರಿಗಣಿಸಬೇಕು (ಸಾಹಿಕೃ. ೪೨). ೩. ಕೊಲ್ಲುವವನು; ನಾಶಮಾಡುವವನು : ಶಾರಕನು ಮಾರಕನಾದಾಗ ರತಿಯಲ್ಲದೆ ಇನ್ನಾರು ಅವನನ್ನು ಸಂಹರಿಸಬಲ್ಲರು ? (ಅಶ್ವಮೇ. ೩೯). ೪. ಪ್ರಾಣಹಾನಿ ಯನ್ನುಂಟು ಮಾಡುವಂಥ ಕಾಲರಾ, ಪ್ಲೇಗು, ಸಿಡುಬು ಮುಂತಾದ ಭಯಂಕರರೋಗ. ೫. ಗಿಡುಗ; ಡೇಗೆ. ೬. ಪ್ರಳಯ ಕಾಲದಲ್ಲಿ ಆಗುವ ಸರ್ವಪ್ರಾಣಿಗಳ ನಾಶ. ೭. [ಜ್ಯೋತಿ] ಜಾತಕದಲ್ಲಿ ಎರಡು ಮತ್ತು ಏಳನೆಯ ಸ್ಥಾನಗಳ ಅಧಿಪತಿ ; ☞ ಎರಡು ಮತ್ತು ಏಳನೆಯ ಸ್ಥಾನಗಳು ಹಾನಿಕಾರಕವಾದುವೆಂಬ ನಂಬಿಕೆ ಇದೆ. [ಸಂ.]

**ಮಾರಕತ** (ಗು). ೧. ಮರಕತಮಣಿಗೆ ಸಂಬಂಧಿಸಿದ. (ನಾ). ೨. ನವ ರತ್ನಗಳಲ್ಲಿ ಒಂದು; ಪಚ್ಚೆ : ಚಿಕುರಂ ಪ್ರಜ್ವಲಿಪಿಂದ್ರನೀಲನಿಕರಂ ಬಾಯ್ವಿದ್ರುಮಂ ಛಾಯೆ ಮಾರಕತಚ್ಛಾಯೆ ನಖಾಳಿ ವಜ್ರಮುಮಳಂ ದಂತೋತ್ಕರಂ ವ್ಯಕ್ತಮೌಕ್ತಿಕಂ (ಅರ್ಜನಿ. ೨-೦೩). [ಸಂ.]

**ಮಾರಕಾಣಿಕೆ** (ನಾ). ಒಂದು ಬಗೆಯ ತೆರಿಗೆ : ಅಡಿಕೆಸುಂಕ ಮಗ್ಗವು ಮಾರಕಾಣಿಕೆ × × × ಟು ಹೊಜವಾಜು ಪೊಟ್ಟುಸುಂಕ . . . ದೇವರಿಗೆ ವಸಂತೋತ್ಸವ ತಿರುನಾಳ ಬಿಜಯಂಗೆಯ್ವದಕ್ಕೆ ಆಚಂದ್ರಾರ್ಕಸ್ಥಾಯಿ ಯಾಗಿ ಬಿಟ್ಟೆವು (ಎಕ. VI (R), ಶ್ರೀರಂಗ. ೩-೦೯; 1431). [ಮಾರ$_1$ + ಕಾಣಿಕೆ (< ಕಾಣ್ಕೆ)]

**ಮಾರಕೇಳಿ** (ನಾ). ಕಾಮಕೇಳಿ; ರತಿಕ್ರೀಡೆ : ನೀನವಳ ಮನೆಗೆ ಬಂದು ಮಾರಕೇಳಿಯ ಬಿಟ್ಟು ಪೋದ ಕಾರಣವನು ಪೇಳು (ಶೇಚಂಸಾಂ. ೩-೩೨). [ಸಂ. ಮಾರಕೇಲಿ]

**ಮಾರಕ್ಕ ಅರಸ** (ನಾ). ಒಬ್ಬಾತನ ಹೆಸರು : ಮಾರಕ್ಕಅರಸರ್ಬನವಾ [ವಾ]ಸಿ ಪನ್ನಿಚ್ಛಾಸಿರಮಾನಾಳೆ (ಎಕ. VI, ೦೬೩-೦; ಸು. 780); ಸ್ವಸ್ತಿಶ್ರೀ ದೋರಪ್ಪರಸರ್ ಪೃಥಿವೀರಾಜ್ಯಂಗೆಯೆ ಮಾರಕ್ಕಅರಸರ್ ಬನವಾಸಿ ನಾಡಾಳೆ (ಕೌತಿಇ. XX, ೦೦-೦; ?). [ಮಾರಕ್ಕ$_{\eta}$ + ಅರಸ$_1$]

**ಮಾರಗ,** ಮಾರುಗ (ನಾ). ಒಬ್ಬಾತನ ಹೆಸರು : ಅಯ್ಯಂಗನುಂ ಮಾಳನುಂ ಮಾರಗನುಂ ನಾಗ × × × ಮುದ್ದನು ಒಡನೆ ಸಿದ್ಧಿಸಿದರ್ (ಎಕ. VII, ಶಿವಮೊ. ೨೪-೬ ; 970 ?). **ಮಾರುಗ** : ಸುಗ್ಗಗಾವುಣ್ಡನ ಮಗ ಬಸವನ × × × ಮಂದಜ್ಜಿಗರ ಮಾರುಗಂ ತಲೆಗಡಿದ (ಎಕ. V, ಅರಸೀ. ೦೬೩-೩; 908). [ < ಮಾರ ]

**ಮಾರಗವುಂಡ** ' ಮಾರಗಾಮುಂಡ ' ನೋ.

**ಮಾರಗಾಮುಂಡ,** ಮಾರಗವುಂಡ, ಮಾರಗಾವುಂಡ (ನಾ). ಒಬ್ಬಾತನ ಹೆಸರು : × × × ಕೆಱು ಪೃಥನಿಗಗಾಮುಣ್ಡ ಮಾರಗಾಮುಣ್ಡ × × × ವ್ಪುಯ್ಯ ಬರೆದ ಬದಿಯ್ಯಮ್ಮಾ × × × (ಎಕ. III (R), ಸಂಜನ. ೩೦೪-೩; ಸು. ೯ನೆಯ ಶತ). **ಮಾರಗವುಂಡ** : ಮಾರಗವುಣ್ಡ ಸನ್ನಿ ಗವುಣ್ಡಗಂ ಏಬ್ಬದಿ ಬೊಗ್ಗಪಳ್ಳಿ ಮರಿಗಕುಮ್ಮುಣ್ಣಗಂ ಏಳಮಕ್ಕಳ್ಗೆ ಮೆಚ್ಚಿ ಪೊಗೆವೆಗ್ಗಯ ತೆಱೆಯ ಬಿಟ್ಟ ಇ × × × (ಎಕ. III (R), ಸಂಜನ. ೩೦೩-೭ ; ಸು. ೯ನೆಯ ಶತ). **ಮಾರಗಾವುಂಡ** : ಗೆಲ್ಲೂರ ಮಾರಗಾವುಣ್ಡ × × × ಕೆಱೆಯ ಗಾವುಣ್ಡ ಪಸಿದು ದೇಗುಲವ ಮಾಡಿಸಿದೊಳ್ (ಎಕ. VII, ಶಿವಮೊ. ೨೨-೩; 963). [ ಮಾರ + ಗಾಮುಂಡ ]

**ಮಾರಗಾವುಂಡ** ' ಮಾರಗಾಮುಂಡ ' ನೋ.

**ಮಾರಗೊಟ್ಟಿಱಿ** (ನಾ). ಒಬ್ಬಾತನ ಹೆಸರು : ಮಾರಗೊಟ್ಟಿಱರೊಂದು ತೋಟ್ಟಂ ಪೊಯ್ದಾರ್ (ಪ್ಕಅಂ. ೦೯೨೩, ೦೦೬-೨೫; ೮ನೆಯ ಶತ). [ ಮಾರ + < ಗೊಟ್ಟಿಱಿಯ ]

**ಮಾರಜನಕ** (ನಾ). ಮನ್ಮಥನ ತಂದೆ ; ವಿಷ್ಣು : ಮಾರಜನಕನ ಮೋಹ ನಾಂಗನ ಸೇರಿ ಸುಖಿಸಲು ಹಾರೈಸಿ ಬಂದೆವು (ಭರಂದ. ೨-೦೦೨ ಕನುಕ್ಲಿಂ). ಮಾರಜನಕಂ ವಿಪುಳಸಾರಸಭವಂ ದಿವಿಜವಾರವರನುಂ . . . ಸಮುದ ವಾರಣಮುಖಂ ನವಮಯೂರಪತಿವಾಹಂ ಸೇರಿ ನೆರೆದೊಪ್ಪಿರೆ (ರಾಜಶೇ. ೦೯-೯೯). [ಸಂ.]

**ಮಾರಜನಕಿ** (ನಾ.) ಮನ್ಮಥನ ತಾಯಿ ; ಲಕ್ಷ್ಮಿ : ಕ್ಷೀರವಾರಿಧಿಕನ್ನಿಕೆ ಮಾರಜನಕಿ ಈರೇಳು ಲೋಕನಾಯಿಕೆ ವಾರವಾರಕೆ ನಿನ್ನಾರಾಧಿಪುದಕೆ ಚಾರುಮನಸು ಕೊಡು (ಏರಾಕೃ. ೩೩ ಕ್ಲಿಂ). [< ಸಂ. ಮಾರಜನಿಕಾ]

**ಮಾರಟಬೋಯ** (ನಾ). ಒಬ್ಬಾತನ ಹೆಸರು : ಮಾರಟಬೋಯಸ್ಯ ಕೌಣ್ಡಿಲ್ಯಗೋತ್ರ ವೆಣ್ಣಿಶರ್ಮ್ಮಣ (ಇಐ. VII, ೦೪೯-೪೦ ; 668). [ ☞ ಇದು ' ಮಾರಟ್ಟಬೋಯ ' ಎಂದಿರಬಹುದು ]

**ಮಾರಡಿ$_1$** (ನಾ). ಒಬ್ಬಾತನ ಹೆಸರು : ಅನೆಸಾಸಲಾ ಬೀರಡಿಗಳುಂ ಮಾರಡಿಗಳುಂ ಕೊತ್ತನೂರಾ ಕುನ್ದಪ್ಪಣಿಗಳುಂ . . . ಇ ಪೊಲನ ನಡಯಿಸಿದೋರ್ (ಎಕ. XVI, ಗುಬ್ಬಿ. ೬೩-೩೩; 733). [ ಮಾರ + ಅಡಿ$_1$]

**ಮಾರಡಿ$_2$** (ನಾ). ಸತ್ಕಾರ ; ಉಪಚಾರ : ಭೋಜನಕೆ ಮಿಗಿ ಲೀಲಿತಿಪಾವೆ ಮಾರಡಿಯಾಯ್ತು ನಮಗಿನ್ನೇನು ಸಾಲದೆಲೇ (ಜನಮ. ೨೨-೩೦); ಆ ಸಾಧನೆಗೆ ಆದಿಮಂಗಳವಾಗಿ ಅಣ್ಣಾಜಿಯುವರ ದಳವಾಯ್ತನಕ್ಕೆ ಬಡುಗೆ ವೀಳೆಯದ ಮಾರಡಿಯೇಳುವುದು (ಬಿಟ್ಟಿ. ೦೬೪-೬). [ ? ]

**ಮಾರಣ** (ನಾ). ೧. ಕೊಲೆ ; ವಧೆ ; ಸಂಹಾರ : "ಮಾರಣಂ, ನಿಶರಣಂ, ನಿಬರ್ಹಣಂ . . . ಪ್ರಮಯಾ, ಹಿಂಸಾ, ಸಂಜ್ಞಪನಂ — ಈ ೨೧ ಕೊಲೆ" (ಹಲಾಯು. ೬೮-೩೩); ಅಪಹರಣ ಮಾರಣ ವಶೀಕರಣ ದ್ವೇಷಣಾದಿಗಳ್ಗೆ ಪೆಱವುಮಿಪ ದೊರೆಯುವರ್ಕೆ ಬಿರಿದುಮಾಗಮಂಗಳೆ ಪ್ರಮಾಣಂಗಳ್ (ಕಾದಂಸಂ. ೬೪೬) ; ಆರು ಬಣ್ಣಿಸಬಹುದು ದೈತ್ಯನ ಮಾರಣದ ಹೋಮ ವನು (ಕೌತಿರಾ. ೩೮-೨೮). ೨. ಅಳಿವು ; ನಾಶ : ದುರ್ಮತಿಯುಪ್ಪ ರಾವಣಂಗೀ ರಣಕೇಳಿ ಮಾರಣಮನೀಯದೆ ಕೆಮ್ಮನೆ ಸೈತೆ ಪೋಕುಮೇ

(ಶಂಕಾಪು. ೧೦-೦೭೬) ; ನೇರಿದುವು ಸ್ನಿಗ್ಧಮುಮುಂತೋರಸ್ಯಮುಮುಪ್ಪ ನಾಲ್ಕುರೇಖೆಯು ತುರಗಂ ಮಾರಣಮಂ ವಿಣ್ಮೂತ್ರವಿಶಾರದನಿರ್ಪತ್ತು ವರ್ಪದೊಳ್ ಗತಮಕ್ಕುಂ (ಅಶ್ವಶಾ.೩-೨೬). ೩. ವೈರಿನಾಶಕ್ಕಾಗಿ ನಡೆಸುವ ಮಾಟ, ಮಂತ್ರ ಮುಂತಾದುವು : ಅವರು ಕುಶಲರಾಗಿ ಮಂತ್ರ, ಮಾಟ, ಮಾರಣಗಳನ್ನು ಮಾಡಿದರೆ ಇನ್ನೂ ಪಾಡುಪಡಬೇಕಾದೀತಲ್ಲ ಎನಿಸತೊಡಗಿತ್ತು (ಪಂಬಣ. ೩೨೭). ೪. ಒಂದು ಬಗೆಯ ವಿಷ. [ಸಂ.]

**ಮಾರಣಮಂತ್ರ** (ನಾ). ವೈರಿನಾಶಕ್ಕಾಗಿ ಪ್ರಯೋಗಿಸುವ ಮಂತ್ರ : ಮಾರಣಮಂತ್ರನಾಮದೆನಿಸಿತ್ತು ವಿರೋಧಿಗೆ ಶಾಂತಿಕಕ್ರಿಯಾಕಾರಣಮಂತ್ರ ನಾಮದೆನಿಸಿತ್ತು ಧರಿತ್ರಿಗೆ . . . ಅಚ್ಚರಿ ನಿನ್ನ ಚಾಪಟಂಕಾರನಿನಾದಮೊಂದೆ ಪಲವುಂ ತೆಜಂ ತಳೆದಂದಮಾವುದೋ (ಶಂಕಾಪು. ೪-೭೭) ; ಜಪಿಸಬಾರದು ಜಪಿಸಬಾರದು ಮಾರಣಮಂತ್ರಗಳ (ಸಿದ್ಧಪ. ೪. ೦೪೦-೪೬೩). [ಸಂ.]

**ಮಾರಣಹೋಮ** (ನಾ). ೧. ಶತ್ರುನಾಶಕ್ಕಾಗಿ ಮಾಡುವ ಹೋಮ : ಮಾರಂ ಬಿರಯಿಗೊಡರ್ಚಿದ ಮಾರಣಹೋಮಾಗ್ನಿ ಧೂಮಪಟಲಂಗಳವೋಲ್ ಕಾರ ಮುಗಿಲ್ ನೆಗೆದುವು ರತಿ ನೀರಿಜೆದೋವಿದ ತಮಾಲಪಂಡಂಗಳವೋಲ್ (ಶಂಕಾಪು. ೭-೦೭೦) ; ಕಾಮುಕಾದಿಯ ಜನಕೆ ಮಾರಣಹೋಮವನು ತನ್ನಾಭಿಕುಂಡದಿ ಕಾಮುಕಿದ್ದನು ಮಾಡಲೊಗೆದಾ ಧೂಮರೇಖೆಯೊಲು ರೋಮ ರಾಜಿಸುತಿರ್ಕು (ನಾಗಕ. ೨೬-೦೭). ೨. ನಾಶ : ಅಳಿವು : ದಾಸ ಕೂಟದವರಿಂದ ಧರ್ಮದ ಮಾರಣಹೋಮವಾಯಿತೆಂದು ಗಳಹುತ್ತಿದ್ದರು (ಕಥಾ. ೪೭೭). [ಸಂ.]

**ಮಾರಣ್ಣ** (ನಾ). ಒಬ್ಬಾತನ ಹೆಸರು : ಕಾದ × × ದೊಳೆ ಸತ್ತಣ್ಣಮ್ಮಣ್ಣಂ ಕಂಬಣ್ಣನ ತಮ್ಮ ಮಾರಣ್ಣಂಗೆ ಪೆರ್ಮಾಡಿಗಾವು (ಎಕ. III (R), ಗುಂಡ್ಲುಪೇ. ೧೦೮-೪ ; 10ನೆಯ ಶಕ). [ಮಾರ + ಅಣ್ಣ$_1$]

**ಮಾರಥ** (ನಾ). ೧. ದೊಡ್ಡ ರಥ. ೨. ರಥದಲ್ಲಿದ್ದುಕೊಂಡೇ ತನ್ನನ್ನೂ ತನ್ನ ಸಾರಥಿಯನ್ನೂ ಕುದುರೆಗಳನ್ನೂ ರಕ್ಷಿಸಿಕೊಂಡು ಏಕಾಂಗಿಯಾಗಿ ಹತ್ತುಸಾವಿರಯೋಧರೊಡನೆ ಯುದ್ಧ ಮಾಡುವವನು ; ಮಹಾರಥ: ಉತ್ತರಕೋಸಲದ ಬಲುಚಂದವಾದ ಪ್ರದೇಶವನು ಮಾರಥನು ದಶರಥನು ತಂದು . . . ಹೊಂದಿದನು ದೇವೇಂದ್ರನಂದದೆ ವಿಮಲಕೀರ್ತಿಯನು (ಚಳುವಂ. ೬೯-೦). [< ಸಂ. ಮಹಾರಥ]

**ಮಾರನೆಯ** 'ಮರು$_1$' ಪರಾ.

**ಮಾರನೇ** 'ಮರು$_1$' ಪರಾ.

**ಮಾರಪುಲಿ** (ನಾ). ಒಬ್ಬಾತನ ಹೆಸರು : ಕೊಮರಪೆಯ ಚಿಂಪಯ್ಯನುಂ ಲೋಕಯ್ಯನುಂ ಕೊಟ್ಟಾರದ ಮಾರಪುಲಿಯುಂ (ಎಕ. XII, ತಿಪ. ೨೮-೩೨; 943). 'ಮಾದಪುಲಿ' ನೋ. [ಮಾರ + ಪುಲಿ]

**ಮಾರಫತಿ** 'ಮಾರಿಫತ್ತು' ನೋ.

**ಮಾರಬ್ಬೆ**, ಮಾರಿಬೆ, ಮಾರಿಬ್ಬೆ (ನಾ). ೧. ಒಂದು ಕ್ಷುದ್ರದೇವತೆಯ ಹೆಸರು : ಮಾರಮ್ಮ : ಮಾರಬ್ಬೆ ಮಸಣಿ ಮಾಸಣಿ ಬೀರಂ ಮೈಲಾರ ನೆಂಬವರ ನೋಂಪಿಗಳೊಳ್ ಪೋಗುವರಂ ಪೊಲೆಯರ್ಮಣೆಯೋರಂತಿರೆ ಮುಟ್ಟಲಕ್ಕುಮೆಂಬರಪಾರ್ವರ್ (ನವಶ. ೪-೯೩). ೨. ಒಬ್ಬಾಕೆಯ ಹೆಸರು : ವಿಶ್ವಾಮಿತ್ರಗೋತ್ರದ ತೊಡಕ ಕೇಸಮಯ್ಯ ತನ್ನ ಪತ್ನಿ ಮಾರಬ್ಬೆ ಧರ್ಮಕ್ಕನುಕೂಲವಾಗುತ್ತಿರಲು (ಎಕ. VII, ಶಿಕಾ೦, ೨೬೭-೦೦; 1012). **ಮಾರಿಬೆ** : ೧. ಆರಾ ತೋಣ್ಣದಿಂ ಮೂಡಣ ತೋಣ್ಬಕಣ್ಣಮುಂ ಮಾರಿಬೆಚೆತಿಯುಂ ಬಡಗಣ ಮಣ್ಣು ಮೊಳೆವೆಡೆ ಏಳ್ಕಣ್ಣುಗುಂ (ಎಕ. IV (R), ಎಳಂದೂ. ೦೭೪-೬; 10ನೆಯ ಶಕ). **ಮಾರಿಬ್ಬೆ**: ೨. ಮಾರಮ್ಮಯ್ಯನ ಪೆಣ್ಣಮ್ಮಾರಿಬ್ಬೆ . . . ಸಂನ್ಯಾಸನಂಗೆಯ್ದು ಮುಡಿಪಿದರ್ (ಎಕ. III (R), ಪಂಜನ. ೨೦೦-೦; 10ನೆಯ ಶಕ). [< ಮಾರಿ$_2$ + ಅಬ್ಬೆ$_1$]

**ಮಾರಮಣ** (ನಾ). ಲಕ್ಷ್ಮೀಪತಿ; ವಿಷ್ಣು : ಮಧುಸೂದನ ಮಾರಮಣ ಮನೋಹರ ವಿಧಿ ಶಿವವಂದ್ಯ . . . ಕುಶಲವಿಡೆನ್ನ (ಕಶಾಂ. ೬೨-೭). [ಸಂ.]

**ಮಾರಮಥನ** (ನಾ). ೧. ಮನ್ಮಥನನ್ನು ನಾಶಮಾಡಿದವನು: ಶಿವ : ಎಲೆ ಖಳ ಮಾರಮಥನನ ನೆರೆಯ ಹೊಕ್ಕರು ಬಿಡುವೆನೇ ನಿನ್ನ (ಕೌಶಿಂ. ೩೬-೭೦); ಆ ರಾಕ್ಷಸಂ ಪರಿಂಬಡದು ಲೋಕಗಳ ಸಂಹಾರಮಂ ಮಾಡುತಿರೆ ಸರ್ವಜನವೆಯ್ದಿಂದು ಮಾರಮಥನಂಗೆ ಮೊಱೆಯಿಡೆ (ಪಿಕ್ಕತಿ. ೩-೩-೬). ೨. [ಜೈನ] ಅರ್ಹಂತ ; ಜಿನ : ತ್ರಿಕರಣಶುದ್ಧಿಯೊಳಾ ರಾಜಕುಮಾರಂ ಮಾರಮಥನನಂ ಸ್ತುತಿಯಿಸಿ (ಅದಕ. ೪-೨). [ಸಂ.]

**ಮಾರಮಯ್ಯ** 'ಮಾರಮ್ಮಯ್ಯ' ನೋ.

**ಮಾರಮಾರಣ** (ನಾ). ಮನ್ಮಥನನ್ನು ಸಂಹರಿಸಿದವನು ; ಶಿವ : ವೀರಭಕ್ತಿಗೆ ಬೀಱುವಲ್ಲಾ ಮಾರಮಾರಣ ನೀವು ಬಸವಕುಮಾರನಂ ಕೇತಯ್ಯ ನೊಡನೀಗಳೆ ಕಳುಹು ಕಳುಹು ಧಾರಿಣಿಗೆ (ಬಸಕ. ೩೬-೧೯೭). [ಸಂ.]

**ಮಾರಮ್ಮ$_1$**, ಮಾರ್ಯಮ್ಮ (ನಾ). ಒಬ್ಬಾತನ ಹೆಸರು : ಶೋ(ಸೋ) ಮವಂಶೋದ್ಭವ ಶ್ರೀಮಾರಮ್ಮಾಳ್ವರಸರ್ (ಎಇ. IX, ೨೨-೪; ಸು. 800). **ಮಾರ್ಯಮ್ಮ** : ಮದಿರೆಗೊಣ್ಣ ಕೊಪ್ಪರಗೇಶ್ರಿಮಮ್ಮಂಗೆ ಪರಿಷ ವಿಪ್ಪರ್ಪತ್ತೊಮ್ಮತ್ತಜಿಳ್ಳಯ್ದುಕೂರ ರಾವಿನಾಡ ಮಾರ್ಯಮ್ಮ ಮಮ್ಮ ಗಣಿಪರಾಮ ತುಱುವನಿಕ್ಕಿಸಿ ಅಟ್ಟಿ ಸತ್ತನ್ (ಎಕ. X, ಕುಳಕಾ. ೨೦೩-೨; 934). [ಮಾರ + ಅಮ್ಮ$_1$]

**ಮಾರಮ್ಮ$_2$** (ನಾ). ೧. ಕಾಲರಾ, ಪ್ಲೇಗು ಮುಂತಾದ ಭಯಂಕರ ಸಾಂಕ್ರಾಮಿಕವಾದ ರೋಗ ; ಪಿಡುಗು : (ಲ). ೨. (ಕಾಲರಾ, ಪ್ಲೇಗು ಇತ್ಯಾದಿ ಸಾಂಕ್ರಾಮಿಕರೋಗಗಳ ಅಧಿದೇವತೆಯೆಂದು ನಂಬಿರುವ ಒಂದು ಕ್ಷುದ್ರದೇವತೆಯ ಹೆಸರು : ಬಸವನ ಮಗ ಸೇರೂಗಾರ ಸಂಜುಂಡನು ಹತ್ತುಮಂದಿ ಸೇವಾರ್ಥವಾಗಿ ಬಾ ಬಂಗಿಮಾರಂಮನ ಗುಡಿ ಮುಂದಣ ಪಕ ಅಂಕಣ ೧ ಮುಂದಣ ಪಾಠಾಳಂಕಣ ೩ ಸಹ ಬಾ ಮಾರಂಮನವರಿಗೆ ಉತ್ಸಹವಿಗ್ರಹ . . . ಅರ್ಪಿತ (ಎಕ. III (R), ಪಂಜನ. ೩೪೦-೦೫; 1766). [ಮಾರಿ$_2$ + ಅಮ್ಮ$_2$]

**ಮಾರಮ್ಮಯ್ಯ**, ಮಾರಮಯ್ಯ (ನಾ). ಒಬ್ಬಾತನ ಹೆಸರು : ಮಾರಮ್ಮಯ್ಯನ ಪೆಣ್ಣಮ್ಮಾರಿಬ್ಬೆ ಅಪ್ಪೋಪವಾಸರುಸಿಯುರ ಬುಕ್ರಯ್ಯನ ಅತ್ತಯ್ಯನ ಅಬ್ಬೆಗಳ್ ಸನ್ಯಾಸನಂಗೆಯ್ದು ಮುಡಿಪಿದರ್ (ಎಕ. III (R), ಪಂಜನ. ೨೦೦-೩; 10ನೆಯ ಶಕ). **ಮಾರಮಯ್ಯ** : ಕುಪ್ಪಿಸೆಯಂ ಕಟ್ಟೆಜಿನ್ನಿದ್ದರಸುಂ ಮಾರಮಯ್ಯನು ಕಿಟಿಲಸುಂಗೊಡೊಳ್ ರಾಜಮಾರಮ ಅಯ್ಯತ್ತಲ್ಕೆಯ್ಯಂ ಕೊಟ್ಟರ್ (ಎಕ. VIII, ಸೊರಬ. ೬೨-೭ ; 876). [ಮಾರಮ್ಮ$_1$ + ಅಯ್ಯ$_1$]

**ಮಾರಯ್ಯ**, ಮಾರೆಯ, ಮಾರೆಯ್ಯ (ನಾ). ಒಬ್ಬಾತನ ಹೆಸರು : ಶ್ರೀ ಕಾವದೊಜ ಮಾರಯ್ಯನ ಮಗ ಶ್ರೀ ತೇರರಲಿಯ ತುಱುಗೊಳಲ್ ಕಾದಿ ಸತ್ತಂ (ಎಕ. III (R), ಗುಂಡ್ಲುಪೇ. ೨೦೩-೨; 9ನೆಯ ಶಕ). **ಮಾರೆಯ** : ರಾಚಮಲ್ಲಗಾಮುಣ್ಣನು ಸಿಬಿನುಂ ಗಂಗಗಾಮುಣ್ಣನುಂ ಮಾರೆಯನುಂ ಬೆಳ್ಳಜೆಯೊಡೆಯರುಂ . . . ಸಾಕ್ಷಿಯಾಗಿ ಕೊಟ್ಟಿತ್ತು (ಎಕ. XVI, ಗುಬ್ಬಿ. ೬೦-೯೭; 812). **ಮಾರೆಯ್ಯ** : ನಾಗಯಬ್ಬೆಯ ಮಗ ಮಾರೆಯ್ಯ ಕೊಟ್ಟೂರ ತುಱುಗಳೊಳೆ ಅಣ್ಣ ಸತ್ತ (ಎಕ. XI, ಕಳ್ಳಕೆ. ೪-೪; 974). [ಮಾರ + ಅಯ್ಯ$_1$]

**ಮಾರವ** (ಗು). ೧. ಮರುಭೂಮಿಗೆ ಸಂಬಂಧಪಟ್ಟ. (ನಾ). ೨. ಮರುಭೂಮಿ ; ಮರಳುಗಾಡು : ಮಾರವಕೂಪಜಲಂಗಳ್ಗಾಕ್ಷುವಿಯುಂಬುವಿನಂತೆ ತೃಷೆಯನೇಂ ಕಳೆದಪುವೆ (ಪ್ರಕಶ. ೩-೭೦). [ಸಂ.]

**ಮಾರವಳಿ** 'ಮಾರುಳಿ' ನೋ.

**ಮಾರವಾಡಿ**, ಮಾರುವಾಡಿ, ಮಾರ್ವಾಡಿ (ನಾ). ರಾಜಾಸ್ಥಾನದ ಮಾರವಾಡಪ್ರದೇಶದ ವ್ಯಕ್ತಿ ; ೨ ಒಡವೆ, ವಸ್ತುಗಳನ್ನು ಅಡವು

ಇಟ್ಟುಕೊಂಡು ಸಾಲಕೊಡುವ ವ್ಯವಹಾರವೇ ಇವರ ಮುಖ್ಯ ಕಸುಬು : ಮಾರವಾಡಿಗಳು ತಾಳ್ಮೆಯಿಂದ ಶ್ರಮ ಮಾಡುವವರೂ, ಬಹಳ ಕೃಪಣರೂ, ಧೈರ್ಯಶಾಲಿಗಳೂ ಇರುತ್ತಾರೆ (ಕರಾಗೆ. ೦೦೩); ಮಾರವಾಡಿಗೆ ವ್ಯಾಪಾರ ಮಾಡುತ್ತಿದ್ದರೆ ಇನ್ನೇನೂ ಬೇಕಾಗುವುದಿಲ್ಲ (ದಾಪಶಾ. ೦೪೬). **ಮಾರುವಾಡಿ :** ವಿಸ್ತಾರವಾಗಿ ಮಡಗಿ ಮಾರುವ ಮಾರುವಾಡಿಯರು (ಶೌಗಂ೦. ೦೩೩-೩). **ಮಾರ್ವಾಡಿ:** ಈ ಬೀದಿಯು ಕೊನೆಯಲ್ಲಿ ಮಾರ್ವಾಡಿಯ ಅಂಗಡಿ ಇದೆ (ಶಂ೦). 'ಮವಾರಪ' ಪರಾ.

[← ಹಿಂ. ಮರಾ. ಮಾರವಾಡೀ. / ತೆಲು. ಮಾರುವಾಡಿ]

**ಮಾರವಾಳಿ** ' ಮಾರುಳಿ ' ನೋ.

**ಮಾರವಿ** (ನಾ). [ಸಂಗೀತ] ಒಂದು ರಾಗದ ಹೆಸರು : ರಾಗ ಮಾರವಿ ಏಕತಾಳ (ಶಿಟೀಕೃ. ೯೩). [ಸಂ. ಮಾರವೀ]

**ಮಾರಸಂಹರ** (ನಾ). ಮನ್ಮಥನನ್ನು ಕೊಂದವನು ; ಶಿವ : ಮಾರ ಸಂಹರನ ನೆನೆದಿಹರೆ ಮೃತ್ಯು ತಾ ದೂರಕ್ಕೆ ದೂರ (ಸರ್ವಜ್ಞ. ೨೯೩). [ಸಂ.]

**ಮಾರಸಾಲ** (ನಾ). ಮನ್ಮಥವೃಕ್ಷ ; ಮಾವು : ಕವಿಕೃತನುತಿಶೋಲಂ ಪ್ರಿಯಗ್ರೀಷ್ಮಕಾಲಂ ಧರಣೀವಿಕ್ಷಿಪ್ತಮೂಲಂ ಪಡೆದುದು ಸೊಗಸಂ ಮಾರಸಾಲಂ ರಸಾಲಂ (ಜಾಧಕ. ೦-೦೦೩). [ಸಂ.]

**ಮಾರಸಿಂಗ** (ನಾ). ಒಬ್ಬಾತನ ಹೆಸರು : ಸಿರಿಯೂರರಾ ಮಗನು ಮಾರಸಿಙ್ಗ ಇನ್ನತೂರ ತುಙ್ಗೋಳ ಸತನ್ (ಎಕ. IX. ಬೇಗಳಾ. ೩೯-೩; ಸು. 1000).

[ಮಾರ + ಸಿಂಗ$_1$]

**ಮಾರಸಿಂಗಗಾಮುಂಡ** (ನಾ). ಒಬ್ಬಾತನ ಹೆಸರು : ಬಿಮುಗಪ್ಪೆಯ ಮಾರಸಿಙ್ಗಗಾಮುಣ್ಡರುಂ ಎಚಿಗಙ್ಗಗಾಮುಣ್ಡರುಂ. . . ಸರಸಾಕ್ಷಿಯಾಗೆ ಪಡೆದಾವರ್ (ಎಕ. VI (R), ಶ್ರೀರಂಗ. ೬೬-೧೪; ಸು. 800).

[ಮಾರಸಿಂಗ + ಗಾಮುಂಡ]

**ಮಾರಸಿಂಗಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮಾರಸಿಂಗಯ್ಯ (ಎಕ. II, ೪೭೨; ಸು. 1000). [ಮಾರಸಿಂಗ + ಅಯ್ಯ$_1$]

**ಮಾರಸಿಂಹ** (ನಾ). ಒಬ್ಬಾತನ ಹೆಸರು : × × ಸ್ತಂ ಪ್ರತಿ ಮಾರಸಿಂಹ ನೃಪತಿರ್ವಿಕ್ರಾನ್ತಕ × × ಶೌಯೌತ್ರ × × ಸ್ಥಿತಿ (ಎಕ. II (R), ೬೯-೭೩; 40ನಯ ೮೩). [ಸಂ.]

**ಮಾರಸ್ಸಟ್ಟ** (ನಾ). ಒಬ್ಬಾತನ ಹೆಸರು : ಶ್ರೀಮಾರಸ್ಸಟ್ಟಮಹಾರಾಜನ್ ಪ್ರಿಥುವೀರಾಜ್ಯಜ್ಗೆಯೆ (ಎಕ. VI, ೨೩೬-೦; ೮೦೦). [< ಮಾರ + ಸಟ್ಟ ?]

**ಮಾರಹರ** (ನಾ). = ಮಾರಸಂಹರ : ಮಾರಹರಭಕ್ತರ್ಗಳೆಯೊಳಪ ಕಾರಮಂ ಮಾಡುವವದಿರನವಿಚಾರದಿಂ ಕೊಲುವುದು (ಬಿಸವು. ೨೨-೩) : ಮಾರಹರನೆ ಬಲ್ಲ ಎನ್ನ ಸಾಮರ್ಥ್ಯಕ್ಕೆ ದಾರಿದ್ರ್ಯವು ಬರಬಹುದೆ (ಸಿಜಸಾಂ. ೦-೩೩).

**ಮಾರಹರಪ್ರಿಯ** = ಶಿವನಿಗೆ ಪ್ರಿಯನಾದವನು ; ಕುಬೇರ : ಮೃಗವುಂ ಪವನಂ ವಿಮಾನಮುಂ ಮಾರಹರಪ್ರಿಯುಂ ವೃಷಭನಂ ಹರನೇಜೆ ಸಭಕ್ಕೆ ಸಲ್ವುದುಂ (ಶಗರಾ. ೦-೩೬). [ಸಂ.]

**ಮಾರಾಟ$_1$** ' ಮಾಱಾಟ ' ನೋ.

**ಮಾರಾಟ$_2$** ' ಮರಾಟ ' ನೋ.

**ಮಾರಾಟತೆರಿಗೆ** (ನಾ). ಮಾರಾಟವಾದ ಸಾಮಾನುಗಳ ಮೇಲೆ ವಿಧಿಸುವ ತೆರಿಗೆ ; "ಮಾರಾಟ ತೆರಿಗೆ, ಮಾರಾಟಕರ" (Sales tax ಕಶ್ರ. ೬೨) : ಸಿದ್ಧಪಡಿಸಿದ ಉಡುಪುಗಳ ಮೇಲೆ ವಿಧಿಸಿರುವ ಮಾರಾಟತೆರಿಗೆ ಹೆಚ್ಚು ಎನ್ನಿಸುತ್ತದೆ (ಕೂಶ).

[ಮಾರಾಟ$_1$ (< ಮಾಱಾಟ) + ತೆರಿಗೆ (< ತೆಱಿಗೆ)]

**ಮಾರಾಟ್ಟ** (ನಾ). (?) : ದೇವೇನ್ದ್ರರು ವೆಲೆಕೊಣ್ಡು ವಾಣಿಗತೋಟ್ಟಂ ನ್ನಾರ್ಕ್ಕರುಂ ಮಾರಾಟ್ಟ ತೆನ್ನನಾರ್ಕ್ಕರುಂ ಅವರ ಕೂಂಬು ಪೊಯ್ಯಾರ್ಪ್ಪ ನ್ವಿರ್ವ್ವರಾ ಎಟ್ಟರಾ ಪೊಯ್ಪ್ಪ ನಮ್ಮರ್ಗ (ಎಕ. IV (R). ಶಾಮರಾ. ೦೪೭-೮; ಸು. 750). [ ? ]

**ಮಾರಾಡು** ' ಮಾಱಾಡು ' ನೋ.

**ಮಾರಾಣಿ** (ನಾ). ಮಹಾರಾಣಿ : ಪುರಮಾವುದರೊಳ್ಸಖಿ ಕೇಳ್ ಗಿರಿಶನ ಮಾರಾಣಿ ಕನಲ್ದು ಮಹಿಷಾಸುರನಂ ತರಿದಿಹಳಾ ಪುರಮಿದನಿಂ ನರಪತಿ ಸಂಪ್ರೀತಿಯಿಂದೆ ಸಲಹುತ್ತಿರ್ಪಂ (ನರಶ. ೦೦೬-೭೦೩) ; ಮಾರಾಣಿ ಬೆಸಸಿಹಳು, ತನಗಿನಿತು ಬೇಕೆಂದು (ತಂಪ್ರಸ. ೩೦-೨೦). [ಮಾ$_4$ + ರಾಣಿ]

**ಮಾರಾನ್** ' ಮಾಱಾನ್ ' ನೋ.

**ಮಾರಾಪು** (ನಾ). ಬೆನ್ನಿನ ಮೇಲೆ ಹೊರೆ ಇಟ್ಟು, ಎದೆಯ ಮೇಲೆ ಗಂಟು ಬರುವಂತೆ ಬಂಧಿಸುವ ಪಟ್ಟಿ : ಅವನ ಕೈಯ ಕೋಲು, ಬೆನ್ನ ಮೇಲಿನ ಮಾರಾಪು, ಅವನ ಮೈಕೈಗಳಲ್ಲಿದ್ದ ದೂಳು ಅವನು ಬಹುದೂರದ ದಾರಿ ನಡೆದವನೆಂದು ಸಾರುತ್ತಿದ್ದವು (ಕುಶಕ. ೦). [← ತಮಿ. ಮಾರಾಪ್ಪು]

**ಮಾರಾಮಾರಿ** (ನಾ). ಪರಸ್ಪರ ನಡೆಯುವ ತೀವ್ರ ಹೊಡೆದಾಟ ಅಥವಾ ಜಗಳ : ಅಂಗಡಿಯವನಿಗೂ ಆ ಬಿದ್ದ ಬಕರನಿಗೂ ಮಾರಾಮಾರಿ ಯಾಯಿತು (ಕೃವ್ಯಕಿ. ೬೪); ನಾಯಕನಿಗೂ ಖಳನಾಯಕನಿಗೂ ಮಾರಾಮಾರಿ (ಜಾಡಿಗೆ. ೩೬).

[←ಹಿಂ. ಮಾರಾಮಾರ್ ; ಮರಾ. ಮಾರಾಮಾರ್. ಮಾರಾಮಾರೀ]

**ಮಾರಾಯ** ' ಮಹಾರಾಯ ' ನೋ.

**ಮಾರಾಯಿತಿ** ' ಮಹಾರಾಯಿತಿ ' ನೋ.

**ಮಾರಾಯ್ತಿ** ' ಮಹಾರಾಯಿತಿ ' ನೋ.

**ಮಾರಾರಿ** (ನಾ). ೧. ಮನ್ಮಥನ ಶತ್ರು ; ಶಿವ : ಮಾರಾರಿ ನೀಂ ಬರೆ ವಿಚಾರವುಂಟೇ ತಂದೆ (ಸಂಜಕ. ೭-೦೩೯) ; ಹಾರವಂ ವಿಕ್ರಯಿಸಿ ಎನ್ನ ಕುಮಾರಿಯಾ ಶಿವರಾತ್ರಿಯಲಿ ಮಾರಾರಿಭಕ್ತರಿಗೀಯಲೀ ಆರಾಧನೆಗಳನು (ಬಸಕ. ೪೨-೦೦) ; ಮಾರಾರಿಯ ಮಂಗಳಸಭೆಯ ಕಂಗಳು ನುಂಗಿತ್ತು ನೋಡಾ (ಅಜಂಬೀ. ೨೦೩-೯೩). ೨. [ಜೈನ] ಜಿನ : ಮಾರಾರಿಗಭಿಷವಂ ಜಂಭಾರಿಯಿನಾದತ್ತು ಘೃತಸಮುದ್ರದ ಘೃತದಿಂ ಕ್ಷೀರಸಮುದ್ರದ ವಿಮಲ ಕ್ಷೀರದಿಂ (ಆಪಕ. ೯-೭೩). [ಸಂ.]

**ಮಾರಾರ್ದನ** (ನಾ). = ಮಾರಾರಿ ೧ : ತಾರಾಪೀಡನ ಗುಣವತಿ ಮಾರಾರ್ದನ ವಿಶ್ವನಾಥನಿಂದಂ ಪಡೆನಳ್ ಸಾರಸುತ ಚಂದ್ರಪೀಡನನಾರಯೆ ಮಹದೇವಿ ಪಡೆವ ವರಕವು ದೊರೆಯೇ (ಹಪ್ಪಾಕ. ೨-೦೯). [ಸಂ.]

**ಮಾರಾವುತ** (ನಾ). ಶ್ರೇಷ್ಠನಾದ ಕುದುರೆಯ ಸವಾರ : ಮಲ್ಲರು ಮಾರಾವುತ ರಮ್ಯಾಳಸಿಕರು ಬಲ್ಲಿದ ಗಜವಾಹಕರು ಬಿಲ್ಲಿನಸ್ಥಾಣದವರು ಮುಂತಾದವರೆಲ್ಲರೊಪ್ಪಿದರೊಡ್ಡೋಲಗದಿ (ಸೋಹಶ. ೨೦-೩೩).

[ಮಾ$_4$ + ರಾವುತ]

**ಮಾರಾಶರ್ವ** (ನಾ). ಒಬ್ಬಾತನ ಹೆಸರು : ಮಾರಾಶರ್ವ್ವಮಹಿಪತೀ ದ್ರುಗ್ರಾತವುಗಾದಪ್ರಾಪ್ತಪೂರ್ವಂ (ಎಕ. III (R), ನಂಜನ. ೨೩೬-೩೮; 808).

[ p ಇದು ' ಮಾರಶರ್ವ ' ಎಂಬುದರ ಅಪಲಿಖಿತವಿರಬಹುದು ]

**ಮಾರಾಳ್** ' ಮಾಱಾಳ್ ' ನೋ.

**ಮಾರಾಳ** (ನಾ). ೧. ಶ್ರೇಷ್ಠನಾದ ಸನ್ಯಾಸಿ ; ಪರಮಹಂಸ : ಮಾರಾಳನಂತೆ ತೋರುತ್ತ ಜಗವ ಸಂಚರಿಸಿ . . . ಮಾರಾಳಜನಕನಂಶ್ರಿ ಮನದೊಳು ಧೇನಿಸುತ್ತ ಪೂರಭಕ್ತಿಯಲಿಂದು ಸುಖವುಂಡ ಮನಗಂಡ ಸರಹರಿಯ ತೋಂಡ (ಶಶಮ. ೬-೦). ೨. ಹಂಸವಾಹನನಾದ ಬ್ರಹ್ಮ : ' ಮಾರಾಳಜನಕ ' ಪರಾ. [< ಸಂ. ಮರಾಲ]

**ಮಾರಾಳಜನಕ** (ನಾ). ಬ್ರಹ್ಮನ ತಂದೆ ; ವಿಷ್ಣು : ಮಾರಾಳನಂತೆ

ಘೇನಿಸುತ್ತ ಪೂರಘಕ್ಕ್ಯೆಪಿಂದೀದು ಸುವಿಖ್ಯಂತ ಮಾನಗಂಡ ನರಹರಿಯು ತೋಱಿದ (ಬಿಜಯು. ೬-೧). [ಮಾರಾಳ + ಜನಕೆ]

**ಮಾರಾಳಿ** 'ಮಾಜಿಯಾಳಿ' ನೋ.

—**ಮಾರಿ₁** (ಪ್ರ). ಯಾವುದಾದರೂ ವಿಷಯಕ್ಕೆ ಸಂಬಂಧಿಸಿದಂತೆ, ತೀವ್ರವಾದ ಸ್ವಭಾವವುಳ್ಳವನು ಎಂಬರ್ಥದಲ್ಲಿ ಸೇರುವ ಒಂದು ತದ್ಧಿತಪ್ರತ್ಯಯ : 'ಶಡಮಾರಿ', 'ಹಟಮಾರಿ' ಪರಾ.

**ಮಾರಿ₂** (ಗು). ೧. ಹಿರಿದಾದ ; ದೊಡ್ಡದಾದ : 'ಮಾರಿಬಲೆ' ಪರಾ. ೨. ಕೆಟ್ಟ : ನೀಚ : 'ಮಾರಿಕಣ್ಣು' ಪರಾ. ೩. ಭಯಂಕರವಾದ : 'ಮಾರಿಮುಖ' ಪರಾ. (ನಾ). ೪. ಕೊಲ್ಲುವಿಕೆ : ನಾಶಮಾಡುವಿಕೆ. ೫. ಸಾವು ; ಅಳಿವು : ಒಂದು ದಿನಮಾ ಸಿಂಗಕ್ಕೆ ಮಾರಿ ಬರ್ಪಂತೆ ದೀರ್ಘಕರ್ಣನೆಂಬ ಮೊಲಕ್ಕೆ ಬಾರಿ ಬರ್ಪುದುಂ (ಪಂತಂ. ೬೬-೬೩); ಎನಗೆ ಬಂದುದು ಮಾರಿ ನಾಳಿನ ದಿನದವುದಯಕೆ (ಸಂಛಕ. ೨೨-೩೪). ೬. ಕೇಡು : ಹಾನಿ ; ಆಪತ್ತು : ಮೆಲ್ಲನೆ ಮೃಗಮೊಂದು ಸಾರ್ದು ನೆಱಿಸಂ ನಡೆನೋಡಿ ನರೇಂದ್ರನೆಚ್ಚು ಭೋಂಕನೆ ಮೃಗಚಾರಿಯುಂ ತನಗೆ ಮಾಣದೆ ತಂದನದೊಂದು ಮಾರಿಯುಂ (ಪಂಪಭಾ. ೦-೦೦೦); ಆದಿಪುರಾಣ ಅಸುರರಿಗೆ ಮಾರಿ ವೇದಪುರಾಣ ಹೋತಿಂಗೆ ಮಾರಿ (ಬಸವ. ೩೬೨); ಹೋದ ಮಾರಿಯು ಕರೆದು ಮನೆಯೊಳಗಾದರಿಸಿದವರುಂಟೆ (ಕುಮಾ.ರ. ೨೦-೩೨); ಬೀದಿಯಲ್ಲಿ ಹೋಗೋ ಮಾರೀನ ಮನೆಗೆ ಕರೆದಂತೆ (ಗಾದೆ). ೭. ಸಾವು ತರುವಂಥ ಪ್ಲೇಗು, ಕಾಲರಾ, ಸಿಡುಬು ಮುಂತಾದ ಭಯಂಕರವಾದ ಸಾಂಕ್ರಾಮಿಕರೋಗ : ಕಳ್ಳರಾಯುಲ ಮಱಿಯೋಱು ಮಾರಿ ಪಸವಿಟ್ಟು ಬಱಿಂ ಪೆಱವೂ ಭಯಂಗಳಾಕುಲಿತಗಳಿಲ್ಲ (ಆದಿಪು. ೦-೩೨); ಬಱಿಂ ಪಸವು ಮಾರಿ ಬಂದೀಗ್ರಹಣಂ ಮಂಚಲ್ ಕಳವಾಱಿಡಿ ಭಯಸಂಚಯಮೆಂಬಿಪಱ ಪೆಸರುಮಿಲ್ಲಾ ನಾಡೊಳ್ (ಕುಸ್ಮ.ಕ. ೨-೩). ೮. ಮಾರಕರೋಗಗಳನ್ನುಂಟು ಮಾಡುವುದೆಂದು ನಂಬಲಾದ ಒಂದು ಕ್ಷುದ್ರದೇವತೆ : ಮಾರಿಯು [ಪಾಠಾಂ. ಬಳಮಿಯು] ಮನೆಯುಂ ಪರಕೆಯು ಕುಱಿಯುಂ ಪುಗಿಸುವಂತೆ ವಟವಿಟಪಕೋಟರಕುಟೀರಾಂತರಮಂ ಪುಗಿಸಿ (ಪಂಚತಂ. ೧೭೩-೦೦) ; ಮಾರಿ ಮಲಯಾನಿಲಂ ಸವನೀರಜವನವೆಂಬ ಕೆಂಪದೊಳ್ ದಂಡನಮು ಸ್ಮಾರಂಬಿಂದವನಿತ್ರವಧಾರಿಪುದೆಂಬಂತೆಯುಲಿದುವರಗಿಳಿ ಬ ಸ ದೊ ಳ್ (ಯಶೋಧ. ೦-೩೮); ಮಂಗಿಗೆ ಮಾರಿಯು ಚಂಡಿಯುಗ್ರದ ಶಕ್ತಿಗಳು ಸದ್ಗುಣಸತ್ಯ ಮುಸುಕಿಪರ ಮುಟ್ಟವಿದು ಸದ್ಗುರುವಿನಾಜ್ಞೆ (ಸರ್ವಜ್ಞ. ೯೦). ೯. ಮೃತ್ಯುದೇವತೆ : ಇಂತಪ್ಪ ಪಂಚಮಹಾಪಾತಕನ ಮನೆಯೊಳ್ ಮಾರಿ ಬರ್ಕೆ (ವಡ್ಡಾರಾ. ೭೭-೦೯) : ಇದು ಮನೆಯುಂದಮಲ್ತು . . . ಬಗೆವಲ್ಲಿ ನೋಡುವೊಡವಿಟ್ಟಗೆ ಕಲ್ಮರಸೆಂಬುದಿಲ್ಲ ಕೂರವನಿದನೊಡ್ಡಿದಂ ಮಗಗೆ ಸಂತಸಮಾಗಿರೆ ಮಾರಿ ಸುಯ್ಯುಗ್ಗವೇ (ಪಂಪಭಾ. ೩-೪); ಭೀಮನ ತೋರಗರ್ವದ ದಂಡಯನು ಕೈಯಾರೆ ಮಾರಿಗೆ ಮುಡಿಸುವೆನು (ಕುಮಾ.ಭ. ೩-೧೮). ೧೦. ಪ್ರಳಯಕಾಲದಲ್ಲಾಗುವ ಸಕಲಜೀವರಾಶಿಗಳ ಅಳಿವು.—ನಾಶ. ೧೧. (ಅಲಂ) ಕೇಡು : ತೊಂದರೆ ; ಧಾಡಿ : ಕೆಲಸ ಮಾಡಲು ಮಾರಿ ಇವನಿಗೆ ! ಬಲುಹು ಪೈಯಲಿ ತುಂಬಿದೆ ! (ಕಂಪು. ೦೯-೦೯).

**ಮಾರಿಯ ದೇವ** = ಶಿವ; ಈಶ್ವರ : ಮಾರಿಯ ದೇವನು ಮಸಣದ ದೇವನು ತಿರುಕ ಗೊರವನೆಂದು ಅಲ್ಲಕ್ಷಿ ಒಂದೊಂದನಾಡುತಿಪ್ಪರಯ್ಯ (ಅಪಕಾ. ೦೨೦-೩೪೩). **ಮಾರಿಯ ಮೂರಿ** = ಮಾರಿದೇವತೆಯ ತೆರೆದ ಬಾಯಿ.—ಉಗ್ರಸ್ವರೂಪ (?) : ನಾಡರಸಂ ತಗುಳ್ದು ಕಡೆಗಾಲದ ಮಾರಿಯ ಮೂರಿಯಂತೆ ಕಣ್ಣಾಡದೆ ಬಾಲವೃದ್ಧವನಿತಾವಧೆಗೆಯ್ದು . . . ನಾಡನವಂ ಕಡಿದಿಕ್ಕಿ ಮೆಟ್ಟಿದಂ (ಕಂಠಾಪಡಾ. ೪-೩೮) ; ಮಾರಿಯ ಮೂರಿ ಶಕ್ಯನನ ರೌದ್ರತೆ ನಂಜಿನ ಪುಂಜ . . . ಸಾಹಣಿಮಲ್ಲನ ಬಾಹುವಿಕ್ರಮಂ (ಎಕ. XV, ೩೩-೦೭ ; 1180).

**ಮಾರಿಯ ಹುಣ್ಣು** = ಸಿಡುಬು; ದೇವಿ : ಅಮ್ಮ : ಅಂಬುಳುವಾದಡೆ ಪಣ್ಮುಖನೆಂಬರು ನೀವಳಿಗೆಯಾಗೆ ಸಳಿಮಾರಿಯ ಹುಣ್ಣೆಂಬರು ತುಱಿಯಾದಡೆ ಘಣಿಪೆಂಪೆರ್ ಮತಿಹೀನಜನರ ದೇಸಂ ಮಾಡರ್ (ಸಭುಶ. ೯-೨೬). [ಸಂ. ಮಾರಿ. ಮಾರೀ. /p ಈ ಶಬ್ದವು ದ್ರಾವಿಡಮೂಲದ್ದಿರಬೇಕೆಂದು ಭಾಷಾಶಾಸ್ತ್ರಜ್ಞರ ಅಭಿಪ್ರಾಯವೊಂದಿದೆ]

**ಮಾರಿಕಣ್ಣು** (ನಾ). ೧. ಮಾರಿಯ ಕ್ರೂರದೃಷ್ಟಿ : ಮಾರಿಕಣ್ಣು ಹೋತನ ಮೇಲೆ (ಗಾದೆ). ೨. ಕೆಟ್ಟದೃಷ್ಟಿ ; ಕ್ರೂರದೃಷ್ಟಿ: ಹೆಗಡೆಯ ಮಾರಿಕಣ್ಣು ನನ್ನ ಮೇಲೆ ಬಿದ್ದಿದೆ (ದೇಶಹಂ. ೦೩೨). [ಮಾರಿ₂ + ಕಣ್ಣು (<ಕಣ್)]

**ಮಾರಿಕಬ್ಬೆ** (ನಾ). ಒಂದು ಕ್ಷುದ್ರದೇವತೆ ; ಮಾರಮ್ಮ : ಪಿಟ್ಟಾಪುರದ ಮಾರಿಕಬ್ಬೆ ಶಾಕಿನಿಯುಂ ಪೊಣಮರ್ಗಲೆಯ ಮಂಗಳಾದೇವಿಯುಂ ಮೈಲಾಪುರದ ಕಾಮಾಕ್ಷಿಯುಮೆಂಬಿವಮೊದಲಾದ ಮಹಾವ್ಯಂತರಂಗಳ್ ಮೋನದಿಂ ಮುಟ್ಟುಪಡಂ ಬೆರಸಿರ್ಪೊಡಂ . . . ಉಣ್ಬರ್ (ಧರ್ಮಾಮೃ. ೯-೦೦೦) ; ಮಾರಿಕಬ್ಬೆ ಮಸಣಕಬ್ಬೆ . . . ಮೊದಲಾದ ವ್ಯಂತರಂಗಳುಂ (ಜ್ಞಾಪಣ. ೦೦೪-೨೨). 'ಮಾರಿಕವ್ವೆ' ಪರಾ. [ಮಾರಿಕೆ₂ + ಅಬ್ಬೆ₁]

**ಮಾರಿಕವ್ವೆ** (ನಾ). = ಮಾರಿಕಬ್ಬೆ : ಮಾರಿಕವ್ವೆಯ ನೋಂತು ಕೊರಳಲ್ಲಿ ಕಟ್ಟಿಕೊಂಬರು ಸಾಲಬಟ್ಟರೆ ಮಾಱಿಕೊಂಬರಯ್ಯಾ (ಬಸವ. ೩೩೯); ವೀರಭದ್ರನ ಕೆಣಕಿ ಹೊಗುವರೆ ಮಾರಿಕವ್ವೆಯ ಮಱಿಯನು (ಕೌಶಿಕಾ. ೩೭-೭೦).
[ಮಾರಿಕೆ₂ + ಅವ್ವೆ]

**ಮಾರಿಕಾಜಾಡ್ಯ** (ನಾ). ಪ್ಲೇಗು, ಸಿಡುಬು ಮುಂತಾದ ಭಯಂಕರವಾದ ಸಾಂಕ್ರಾಮಿಕರೋಗ : ಈ ಯುದ್ಧ ನಡೆದ ಕಾಲದಲ್ಲಿ ಹಿಂದೆ ಎಂದೆಂದಿಗೂ ಅರಿಯದ ಕಾಲರಾ (Cholera) ಎಂಬ ಮಾರಿಕಾಜಾಡ್ಯವು ಸಂಪ್ರಾಪ್ತವಾಗಿ, ಮೈಸೂರಿಗೆ ವ್ಯಾಪಿಸಿ ಜನರಿಗೆ ಕಷ್ಟನಷ್ಟಗಳು ಸಂಭವಿಸಿದುವು (ಮುಹಾಮಂ. II, ೩೦). [ಸಂ.]

**ಮಾರಿಕಾರೋಗ** (ನಾ). = ಮಾರಿಕಾಜಾಡ್ಯ : ದೇವಮ್ಮಾಜಿ . . . ಒಂದೆರಡು ವರುಷದಲ್ಲಿ ಮಾರಿಕಾರೋಗದಿಂದ ತೀರಿಕೊಂಡಳು (ಪಳಾ. ೭೩).
[ಸಂ.]

**ಮಾರಿಕೆ₁** (ನಾ). ೧. ಮಾರುವುದು ; ಮಾರಾಟ : 'ಮಾರಿಕೆಹುಂಡಿ' ಪರಾ. ೨. ಮಾರಾಟದ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಇವು ಪೂರ್ವಕಾಲದ ತೆರಿಗೆಗಳು : ಮನೆತೆರಿಗೆ, ಹುಲ್ಲ ಹಣ . . . ಮಾರಿಕೆ ; ಉಪ್ಪಿನ ಮಾಳ ; ಉಪ್ಪೆಕಾಣಿಕೆ (ಪಬ್ಬ.ಸು. ೨೯೩).
[ಮಾರು₁ (<ಮಾಱು₁) + — ಇಕೆ]

**ಮಾರಿಕೆ₂** (ನಾ). = ಮಾರಿಕಬ್ಬೆ : 'ಮಾರಿಕಬ್ಬೆ', 'ಮಾರಿಕವ್ವೆ', ಪರಾ. [ಸಂ. ಮಾರಿಕಾ]

**ಮಾರಿಕೆಹುಂಡಿ** (ನಾ). "ತನ್ನ ಆಸ್ತಿಯನ್ನು ಮತ್ತೊಬ್ಬನಿಗೆ ಮಾರಿ ವರ್ಗಾಯಿಸಿದ ಪತ್ರ : ಮಾರಾಟ ಮಾಡಿದ ಬಗ್ಗೆ ಬರೆದು ಕೊಟ್ಟ ಹುಂಡಿ" (Bill of Sale. ಪಾರಿಭಾ. ೯). [ಮಾರಿಕೆ₁ + ಹುಂಡಿ₁]

**ಮಾರಿಕೇಸಿ** (ನಾ). ಒಬ್ಬಾತನ ಹೆಸರು : ಕಂಪೂರಕುಲನ್ ಮಾರಿಕೇಸಿ ಲಿಖಿತಂ (ಎಕ. IV, ಎಡತೊ. ೬೦-೬೦; ಸು. 890). [ ? ]

**ಮಾರಿಕ್ಕು** (ಕ್ರಿ). ಎದುರಿಸಿ ಹೊಡೆ ; ಪ್ರತಿಭಟಿಸಿ ತಾಗು : ಕಾಯ್ಪಿನಿಂ ಸಿಡಿಲಂ ಮಾರ್ಪೊಯ್ದಪೆವಂ ಕಳದ್ವರಗನಂ ಮಾರಿಕ್ಕುವಂ ಸಿಂಗವಂ ಕಡಿವಂ ಭಾವಿಸೆ ಪೃಥ್ವಿಸೆಟ್ಟಿ ಹರಿಪಂ ಪೆಣ್ಣಾಂಬಿಕಾನಂದನಂ (ಎಕ. IV, ೧-೭೭; 1204). [ಮಾರು₁ (<ಮಾಱು₁) + ಇಕ್ಕು]

**ಮಾರಿಗ** (ನಾ). ಮಾರಿದೇವತೆಯನ್ನು ಪೂಜಿಸುವವನು : ಮಾರಿಯಂ ಪೂಜಿಸುವಂ ಮಾರಿಗಂ (ಶಬ್ದಾ.ಸು. ೪೦೩ ಪ್ರಯೋ). [ಮಾರಿ₂ + — ಗ₂]

**ಮಾರಿಗಾಲ** (ನಾ). ಯುಗಾಂತರದಲ್ಲಿ ನೀರುಕ್ಕಿ ಜಗತ್ತನ್ನು ಮುಳುಗಿಸುವ ಕಾಲ ; ಜಲಪ್ರಳಯದ ಸಮಯ : ಮಾರಿಗಾಲದ ಮತ್ಸ್ಯ

ವೆಸ್ನಸ್ಸು ಮಾಜುಗೊಳುತಿದೆ ಕರುಣವನು ನೆಜಿಕೆ ತೋಟಿಕೆ ಶಾಸಿದಕೇನ ಹೇಳು ವೆನು (ಕಿಶಾಗ. ೮-೫೩-೯೯).

[ಮಾರಿ₂ + ಕಾಲ/ತಮಿ. ಮಾರಿಕ್ಕಾಲವ್ = ಮಳೆಗಾಲ]

**ಮಾರಿಗುಡಿ** (ನಾ). ಮಾರಿದೇವತೆಯ ವಿಗ್ರಹವನ್ನು ಪ್ರತಿಷ್ಠಾಪಿಸಿರುವ ದೇವಾಲಯ : ಮಾರೀಗುಡಿಗೆ ಬಡಗಲು ಕೊಂಗನ ಹೊಣೆಯಾಲದ ಮರದ ಬಗಲಿಗೆ ಮೂಡಲು ಮೂಡ ಮುಖವಾಗಿ ನೆಟ್ಟ ಕಲ್ಲು ೧ (ಎಕ. V (೩). ತಿರುಮ. ೧೬-೬೩೦: 1749); ಆಸಾಡಿಯ ಜಡಿಮಳೆಯಲ್ಲಿ ಒಂದುರಾತ್ರಿ ಊರಿನ ಮಾರಿಗುಡಿಯಿಂದ ಮಾರಿಯನ್ನು ಓಡಿಸುವ ಒಂದು ಕ್ರಮವಿದೆ (ದೇಶಪಂ. ೩೨). [ಮಾರಿ₃ + ಗುಡಿ₂]

**ಮಾರಿಗುತ್ತ** (ನಾ) = ಮಾರಿಕಾಜಾಡ್ಯ : ಎಮ್ಮ ಪುರಕ್ಕೆ ಮಾರಿಗುತ್ತಂ ಮೊದಲಾಗೆ ಪೆಱವುಮಾಗುತುಕಪೀಡೆಗಳಪ್ಪುದುಮಾನವರ್ಕೇನುಂಗೆಯ್ಯ ಲಱಿಯದುಮ್ಮನೆಸುತ್ತಿರ್ಪುದುಂ (ಕಂದಾಶೂ. ೧೯-೯೯ ಪ); ಕವತ್ತೆಯ ಮೇಲೆ ಕೊಲೆಯುಂಬಂತೆ ಬಡತನದ ಮೇಲೆ ಮಾರಿಗುತ್ತಮಾಗೆ (ಧರ್ಮಾಮ. ೯-೦೬೦). [ಮಾರಿ₃ + ಕುತ್ತ]

**ಮಾರಿಗೆ** (ನಾ). ಮಾರಿದೇವತೆ : ಪರಪೀಗುವ ಮೈಲಾರಂ ಕೇತಂ ಕಾಟಂ ಮಾರಿಗೆ ಮಸಣಿಗೆಯೆನಿಪ್ಪ ಕೊಟಿದೆಯ್ವಂಗಳ್ (ಸಮಶ. ೯-೦೫೬).

[ಸಂ. ಮಾರಿಕಾ]

**ಮಾರಿಡು**₁ (ಕ್ರಿ). ಪ್ರತಿಭಟಿಸಿ ನಿಲ್ಲು : ಎದುರಿಸು : ಫಣಿಕಂಐಮ × × × ಪನೊಪ್ಪೆ ಮಾರಿಡುವಂ ಐಕ್ಕಲಿಪಂ ಐವನಂ ನಿಚ್ಚಟಗಲಿ . . . ವೀರವಿಕ್ರಮಭೂಪಂ (ಎಕ. XX, ೦೦೬-೭; 1187).

[ಮಾರು₁ (< ಮಾಱು₁) + ಇಡು₁]

**ಮಾರಿಡು**₂ (ಕ್ರಿ). ಮಾರಿನಿಂದ ಅಳತೆಮಾಡು ; ಮಾರುಹಾಕು : ರವಿ ಮಾರಿಟ್ಟಳೆದಂ ವಿಯತ್ತಳಮನಾಶಾಸೀಮೆಯಂ ದಾಂಟುವನ್ನೆವರಂ (ಕಂದಾಪವ. ೦-೪೯); ಭೀಕರಕಾನನದಲೋದಾಲವಿರ್ದುದು . . . ಅವನಿಯ ಮಾನವನು ಮಾರಿಡುವವೊಲು ಪಸರಿಸಿತು ಶಾಖೆಗಳ (ಸಾಕ್ಕ್ಯಶಾ. ೪೩-೩೩).

[ಮಾರು₃ + ಇಡು₁]

**ಮಾರಿಡೋಲು** (ನಾ). ದೊಡ್ಡ ಡೋಲು ; ಭಾರಿ ಡೋಲು : ಅವನ ಪರಿವಾರದವರು ಮಾರಿಡೋಲು. ಡುಡಿ-ಎಲ್ಲಾ ಬಾರಿಸಿ ಭಾರೀ ಕುಣಿದಾಡು ವುದುಂಟು (ಜಂಪಾಪ. ೦೩). [ಮಾರಿ₂ + ಡೋಲು]

**ಮಾರಿತ** (ಗು). ಕೊಲ್ಲಲ್ಪಟ್ಟ : ಸಂಹಾರಗೊಂಡ : ಜಯಜಯ ಕುಮಾರ ಮಾರಿತ ದಿವಿಜರಿಪುಜಾಲ ಜಯಜಯ ವಿಳಾಸಕೃತವಿದಿತ್ಯಕ ಪವಲೀಲ (ರಾಜಶೇ. ೦೯-೨೬೯ ರಗಳೆ). [ಸಂ.]

**ಮಾರಿತನ** (ನಾ). ದುಷ್ಟತನ ; ಕೆಟ್ಟತನ : ಥೂ ನಾರಿಯರ ಮಾರಿತನಕೆ ಮೋರೆಯ ಗುಣಕೆ, ಥೂ ನರರ ಬೆದಿಗುದಿಗೆ ಷಂಡಗಂಡಸುತನಕೆ (ಕೃಶಾ.ಕು. ೨-೨). [ಮಾರಿ₂ + — ತನ]

**ಮಾರಿದಾಸ** (ನಾ) ( ? ) : ಶ್ರೀ ಕಡ್ಡಾಣಿ ಪೃಥುವೀರಾಜ್ಯಂಗೆಯೆ ಸಿಯಕಲ್ಲ ಕೆಸುವುಣ್ಣ ನಾಡಾಳೆ ಮೂಟಿ ಅರಸರಾಳ್ ಮಾರಿದಾಸ ಕರಿಯತಮ್ಮನ್ ನಾಗಶರಾಸರಾ ಮನೆದುಗವು ಬಾಗೆಬೂರುಳ್ ಬಲ್ಲಹನ್ ಎಜಿಸುಳ್ ಎಜಿದು ವಿಟ್ಟನ್ (ಎಕ. XVI. ತುಮಕೂ. ೯೩-೩ ; ಸು. 780). [ ? ]

**ಮಾರಿಪತ**, ಮಾರಿಫತ್ತು ನೋ.

**ಮಾರಿಪತ್ತು** ಮಾರಿಫತ್ತು ನೋ.

**ಮಾರಿಫತ** ಮಾರಿಫತ್ತು ನೋ.

**ಮಾರಿಫತಿ** ಮಾರಿಫತ್ತು ನೋ.

**ಮಾರಿಫತು** ಮಾರಿಫತ್ತು ನೋ.

**ಮಾರಿಫತ್ತು**, ಮಾರಫತಿ. ಮಾರಿಪತ. ಮಾರಿಪತ್ತು. ಮಾರಿಫತ. ಮಾರಿಫತಿ. ಮಾರಿಫತು. ಮಾರೀಪತು. ಮಾರೀಫತ್ತು. ಮಾರೀಫತ. ಮಾರೀಫತ್ತು. ಮಾರ್ಫತ. ಮಾರ್ಫತು (ಅ). ಮೂಲಕವಾಗಿ ; ಮುಖಾಂತರ : ಯಾ ವೆಂಕಟಗಿರ್ರೆಯ್ಯನ ಮಾರಿಫತ್ತು ವಿಚಾರಸಾಬರಿಗೆ ವಳಬಿದ್ದು . . . ದುಡಿದುಕೊಟು (ಕೈದು. ೩೮); ಶ್ರೀತ್ರಿರಪತ್ತಿಗಿರಿ ಮೇಲೆ ಬ್ರಹ್ಮೋತ್ಸವದಲ್ಲಿ ಸದರಿ ಮಠದ ಮಾರಿಫತ್ತು ಆಗತಕ ಬ್ರಾಹ್ಮಣಸಂತರ್ಪಣೆ ಜನ ೧೦೦೦ ಸಾವಿರಕ್ಕೆ . . . ಸರಕಾರದ ಸತ್ರದಿಂದಾ ಅಪ್ಪಣೆ ಪ್ರಕಾರ ಕೊಡುತ್ತಿದ್ದ ಪದಾರ್ಥದ ಕ್ರಯ (ಕಿಸ್ಸಾಆ. ೦೯೭೯, ೨೬-೦೩: 1830). **ಮಾರಫತಿ** : ಇಲ್ಲಿ ಇರುವ ಶಾಪೆಗಳ ಮಾರ ಫತಿಯಿಂದ ಮಾಲ ತರಿಸಿಕೊಟ್ಟರೆ. ಎರಡು ಆಡತಿಗಳು ಬೀಳುವವು (ಮುಂಐಪ್ರಾ. ೬೬). **ಮಾರಿಪತ** : ನಮ್ಮ ಕಡಿಗೆ ಬರುವವರು ನಮ್ಮ ಮಾರಿಪತ ಮಾಲ ಖರೀದಿ ಮಾಡಿದರೆ, ಅವರ ಕಡಿಯಿಂದ ಬಿಲಕುಲ ಅಡತಿ ತಕ್ಕೊಳ್ಳದೆ ಬರೇ ಕೂಲಿಯ ಖರ್ಚಿನ ಮೇಲೇ ಜೀನಸುಗಳು ಕಳುಹಿಸುವ ತಜವೀಜಿಯನ್ನು ಮಾಡುವೆವು (ಮುಂಐಪ್ರಾ. ೫೩). **ಮಾರಿಪತ್ತು** : ಸರಕಾರ ಕುಂಪನಿ ಕಡೆಯಿಂದ ತಲಚೇರಿಕೋಟೆ ಮಿಸ್ಟರ್ ರಾಬರ್ಟ್ ಟೈಲರ್ ಸಾಹೇಬರ ಮಾರಿಪತ್ತಿನಿಂದ ತಹನಾಮೆಯನ್ನು ಬರೆಸಿ ತಲಚೇರಿ ಸರಕಾರದ ದಫ್ತರದಲ್ಲು ಮಡಗಿ ಇವೆ (ರಾಕೇಂದ್ರ. ೧೦೦). **ಮಾರಿಫತ** : ದಲಾಲಜನರ ಮಾರಿಫತ ಖರೀದಿಮಾಡಿ . . . ರವಾನೆ ಮಾಡುವ ತಜವೀಜಿಯನ್ನು ನಡಿಸುವರು (ಮುಂಐಪ್ರಾ. ೫೩). **ಮಾರಿಫತಿ** : ದೊಡ್ಡ ದೊಡ್ಡ ವ್ಯಾಪಾರಿಜನರು ಬಹಳ ಮಾಡಿ ಇಲ್ಲಿಂದ ಅಡತೆಯವರ ಮಾರಿಫತಿಯಿಂದಲೇ ತರಿಸುತ್ತಾರೆ (ಮುಂಐಪ್ರಾ. ೫೩). **ಮಾರಿಫತು** : ಯಾರ ಪರಿಚಯವಿರಲಿಕ್ಕಿಲ್ಲವೋ ಅಂಥವರು ಅಲ್ಲಿಯ ನಮ್ಮ ದುಕಾನಿನ ಮಾರಿಫತು ದುಕಾನಿನ ಹೆಸರಿನಿಂದ ಜೀನಸು ಕಳುಹಿಸಿ ರಶೀದಿಯನ್ನು ಇಲ್ಲಿಯ ದುಕಾನಿಗೆ ಕಳುಹಿಸಿದರೆ . . . ರಕಮು ಕೊಡೋಣದರಲ್ಲಿ ಬಂದೀತು (ಮುಂಐಪ್ರಾ. ೨೦). **ಮಾರೀಪತು** : ಕಾಮಗಾರಿ ನೀನ ಮಾರೀಪತು ಮಾಡಿದ ವಡರ ಯಾರನ ಬೋವಿಗೆ ಕಡಗಸ ೧ ಸರಪಣೆ ಸ ೧ (ಎಕ. XI, ಹಿಂದುಪು. ೩೬-೦೨; 1533 ?). **ಮಾರೀಪತ್ತು** : ಬಾಕಿ ಐವಜಿಗೆ ಆಗಿಂದಾಗ್ಗೆ ಅಮಿಲನ ರುಜು ತನ್ನ ಮೊಹರಿನಿಂದ ಶಿರಸ್ತೇದಾರರ ದಾಖಲೆಯಿಂದ ಸಹ ಶೇಕದಾರ ಮಾರೀಪತ್ತು ಹೋಬಳಿ ಶೇಕದಾರರಿಗೆ ರಶೀದಿ ಕೊಡಬೇಕು (ಮಹಾಪಂ. II. ೬೬). **ಮಾರೀಫತ** : ಆ ಅಂಗಡಿಗಳ ಮಾರೀಫತ ಬದಕಿನ ರಶೀದಿ ಕಳುಹಿಸಿ ಅತ್ತಕಡೆಯ ಅಂಗಡಿಗಳೊಳಗಿಂದ ಪರಭಾರೇ ರಕಮು ತೆಗೆದುಕೊಳ್ಳುವ ಬಗ್ಗೆ (ಮುಂಐಪ್ರಾ. ೨೦ ಕೃಷ್ಣಾ.ಪಟ). **ಮಾರೀಫತ್ತು** : ನಿನ್ನ ಮಾರೀಫತ್ತು ಹೇಳಿ ಕಳಿಸೋಕೆ ಕಾರಣವೇನಪ್ಪ ? (ಕಂಠ. ೩೨೦). **ಮಾರ್ಫತ** : ನಮ್ಮ ಮುಂಬಾಯಿ ಅಂಗಡಿಯ ಮಾರ್ಫತ ಉಪ್ಪು ಬೇಡಿಸಿದರೆ ಅಡತ ಬಿದ್ದೀತು (ಮುಂಐಪ್ರಾ. ೩೭); ಅಂವಾ ಶಕೂಪ್ನ ಅಪ್ಪ ನೋಡಿ ಇಟ್ಟರಲಿ . . . ದಾದರಸ್ಯಾನ ಮಾರ್ಫತ ಅವರ ಧೋರಣಾ ತಿಳಕೋಳಿಕ್ಕೆ ಅನುಕೂಲಸೂ ಆಗತದ (ಅಂಚಪ. II, ೦೦೮). **ಮಾರ್ಫತು** : ಅಂವ ಯಾರೋ ಇದ್ದಾನಂತಲ್ಲ — ಅವಳ ಪಾಲಕ — ಚೈತನ್ಯ ಅಂತ, ಅವನ ಮಾರ್ಫತು ಅವಳ್ನ ಭೆಟ್ಟಿಯಾಗ್ತೀವಿ (ಜಾತು. ೨೨).

[ ← ಅರ. ಹಿಂ. ಮರಾ. ಮಾರಫತ್. ಮಾರ್ಫತ್]

**ಮಾರಿಬಲೆ** (ನಾ). (ಸಮುದ್ರದಲ್ಲಿ ಮೀನುಗಳನ್ನು ಹಿಡಿಯಲು ಹಾಕುವ) ದೊಡ್ಡ ಬಲೆ ; ಹೆಬ್ಬಲೆ : ನಮ್ಮ ಮೊಗೇರ ಮಕ್ಕಳನ್ನು ಮಾರಿಬಲೆ ದಿವಸ ಮಾತನಾಡಿಸಬಾರದು ಅಷ್ಟೆ (ತಪ. ೬೯) : ಹಾಯಿ ದೋಣಿಯಲ್ಲಿ ಮಾರಿಬಲೆ ಬಿದ್ದಿತ್ತು (ಮೂಕಜ್ಜಿ. ೩೭). [ ಮಾರಿ₂ + ಬಲೆ₁ ]

**ಮಾರಿಬೆ** ಮಾರಬ್ಬೆ ನೋ.

**ಮಾರಿಬೇನೆ** (ನಾ) = ಮಾರಿಕಾಜಾಡ್ಯ : ಮಾರಿಬೇನೆ ಬಂದು ಅತ್ತೆ-ಮಾವ ಕಣ್ಣು ಮುಚ್ಚಿದರು (ಅಪ. ೧೬೨) [ ಮಾರಿ₂ + ಬೇನೆ ]

**ಮಾರಿಚ್ಚೆ** 'ಮಾರಬ್ಬೆ' ನೋ.

**ಮಾರಿಮಳೆ** (ನಾ). ಭಾರಿ ಮಳೆ: ಅತಿವೃಷ್ಟಿ : ಒಂದು ಮಾರಿಮಳೆ ಗಾಲದಲ್ಲಿ ತುಂಗಾನದಿಯು ಪ್ರವಾಹವು ಮೇರೆದಪ್ಪಿ ತೀರ್ಥಹಳ್ಳಿಯ ಕೆಲವು ಮನೆಮಾರಗಳನ್ನು ಕೊಚ್ಚಿಬಿಟ್ಟಿತು (ಸಂವ್ಯಾಕ. ೬೩); ಮಾರಿಮಳೆ ಮುಸಲ ಧಾರೆಯಂತೆ ಓರೆಕೋರೆಯಾಗಿ ಸುರಿಯುತ್ತಿತ್ತು. (ಕೃಪರು. ೯೭೭).
[ಮಾರಿ$_2$ + ಮಳೆ ( < ಮೞೆ$^3$) ]

**ಮಾರಿಮುಖ** (ನಾ). ಭಯಂಕರವಾದ ಮುಖ; ಉಗ್ರಮುಖ : ಮಾರಿಮುಖದವ ಕಠಿನಮನ ನಿಸ್ಸಾರಹೃದಯನು ಭೀಮನಮನೊಳು ಮೋರಿದವರೇನಹರು ಕೇಳ್ಕೆ ನಿನ್ನವರ ವಿಧಿಯ (ಕುಮಾವ್ಯಾ. ದ್ರೋ. ೧೩-೯೭).
[ ಸಂ. ]

**ಮಾರಿಮೊಗ** (ನಾ). = ಮಾರಿಮುಖ : ಘೋರಿಭೀಕರವರಾಹನ ತಲೆ ಸಿಲುಕಿಟ್ಟ ಪೂರ್ವಪ ವಿಷದ ಜೀರ್ಕೊಳವೆ ಮಾರಿಮೊಗದ ಡೆಂಕಣಿ ಮುಸೆವಲಗುಗಳೊತ್ತೀಜಾದುವತಿಭಯಂಕರವ (ಕಂವಿ. ೧೧-೦೩೨).
[ ಮಾರಿ$_2$ + ಮೊಗ ]

**ಮಾರಿರೋಗ** (ನಾ). = ಮಾರಿಕಾಜಾಡ್ಯ : ಪ್ಲೇಗು, ಕಾಲರಾ ರೋಗಗಳು ಮಾರಕವಾದುದರಿಂದ ಮಾರಿರೋಗವೆಂದೇ ಕರೆಯುತ್ತಾರೆ (ರೂಢಿ). [ ಸಂ. ]

**ಮಾರಿವುಪದ್ರ** (ನಾ). = ಮಾರಿಕಾಜಾಡ್ಯ : ಸರ್ವಜಿತುಸಂವತ್ಸರದಲ್ಲಿ ಮಾರಿವುಪದ್ರವುಂಟಾಗಿ ಬಹುಜನಗಳು ಹತರಾಗುತ್ತಾಯಿರುವ ಕಾಲದಲ್ಲು (ಎಕ. V (R). ಮೈಸೂರು. ೩-೯; 1843). [ಮಾರಿ$_2$ + ಉಪದ್ರ]

**ಮಾರಿಷ** (ನಾ). (ವಿಶೇಷವಾಗಿ ನಾಟಕದಲ್ಲಿ ಪಾತ್ರಗಳು ಪರಸ್ಪರ ಗೌರವದಿಂದ ಸಂಬೋಧಿಸುವಾಗ ಬಳಸುವಂತೆ) ಪೂಜ್ಯ : ಮಾನನೀಯ : "ಹಿರಿಯನಂ ಮಾರಿಷನೆಂಬುದು" (ಶಬ್ದಮ. ೦೭-೯೯) ; "ನರ್ತನದ ಹಿರಿಯನಾ ಮಾರಿಷನೆನಿಕ್ಕು" (ಮಂಗರಾ. ೨೩-೧೦). [ಸಂ.]

**ಮಾರಿಸು** (ಕ್ರಿ). ೧. ಮಾರುವಂತೆ ಮಾಡು ; ವಿಕ್ರಯಿಸುವಂತೆ ಮಾಡು : ××× ವಂಶದವರಗಳಿಂದ ಮಾರಿಸಿಕೊಂಡು ಹೋಲವ ಕೊಡದವನು ನಮ್ಮ ವಂಶದಲಿ ಹುಟ್ಟಿತಕವನಲಾ (ಮೈಅಂ. ೦೯೨೯. ೯೯-೩ : 1553). ೨. ಬದಲಾವಣೆ ಮಾಡು ; ಮಾರ್ಪಡಿಸು : ದೇಶಾಂತರ ದವರಾದ ಪಾತ್ರಗಳ ನಾಮಧೇಯ ವೇಷಭೂಷಾದಿಗಳನ್ನು ಅಸ್ಮದ್ದೇಶೀಯರ ರುಚಿಗೆ ತಕ್ಕಂತೆ ಮಾರಿಸಿದರೂ . . . ಈ ಗ್ರಂಥವನ್ನು ಕನ್ನಡಿಸಿರುವುದು ಅಲ್ಪಗೌರವದ ಕಾರ್ಯವಲ್ಲ (ರಾಜಾಪು. ೭ ಪೀಠಿ).
[ಮಾರು$_1$ (<ಮಾಱು$_1$) + — ಇಸು$_3$]

**ಮಾರೀ** (ಕ್ರಿ). ಪ್ರತಿಯಾಗಿ ಕೊಡು,—ನೀಡು : ಹೆಸರಿಸಿ ದೇವ ದಕ್ಷಿಣೆಯಂ, ತಮ್ಮಲಿ ಕಲಿತ ವಿದ್ಯೆಗೀ ಜೀವವನೆ ಮಾರಿತ್ತೆ (ಪಬ್ಬಿರ. ೩೯-೧೦೭).
[ಮಾರು$_2$ (<ಮಾಱು$_2$) + ಈ$_2$]

**ಮಾರೀಚ** (ಗು). ೧. ಮರೀಚಋಷಿಗೆ ಸಂಬಂಧಿಸಿದ. (ನಾ). ೨. ಮರೀಚಋಷಿಯ ಮಗ: ಕಶ್ಯಪ. ೩. ಒಬ್ಬ ರಾಕ್ಷಸನ ಹೆಸರು : ಮಾರೀಚಂ ಮೊದಲಾಗೆ ಮಹಾರಥರೊಡನೇಱೆ ಸಿಂಹರಥಮಂ ರಥಿಗಳ್ . . . ಲಂಕೆಯಂ ಪೊಱಮಟ್ಟರ್ (ಕಂರಾಪು. ೦೩-೦೩). ೪. ಮೆಣಸಿನ ತೋಟ. ೫. ಯಾಗವನ್ನು ಮಾಡಿಸುವ ಪುರೋಹಿತ. ೬. ಪಟ್ಟದ ಆನೆ. ೭. ಒಂದು ಬಗೆಯ ಸಸ್ಯ : ಕಕ್ಕೋಲ. [ಸಂ.]

**ಮಾರೀಚತೆ** (ನಾ). ಮಾರೀಚರಾಕ್ಷಸನ ಗುಣ : ವಂಚನೆ : ನರನೀಚತೆ ಮಾರೀಚತೆ ದೇಶದ್ರೋಹದ ನೆಮವಿ (ಅಗ್ನಿಹಂ. ೮೨). [ಮಾರೀಚ + — ತೆ$_3$]

**ಮಾರೀಚಿ** (ನಾ). ೧. ಮೆಣಸಿನ ತೋಟ. ೨. ಮೆಣಸಿನಿಂದ ತಯಾರಿಸಿದ ಒಂದು ಬಗೆಯ ಮದ್ಯ (?) : ಮಧು ಸೀತುಂ ಕಟು ಸೀದು ಪೋ ಪುಳಿತ ಕಳ್ಳುಂ ಕರಂ ಕಯ್ಪು ಬರ್ಪುದು ಮಾರೀಚಿ ತೊಡರ್ಪುಳಿಂದೆ ಸರದಿಂ ಕಂಪಿಲ್ಲ . . . ಎಂದು ಕುಡಿದರ್ ಕಾಮಾಂಗಮಂ ಕಾಂತೆಯರ್ (ಸಂಕಥಾ. ೪-೮೮). [ಸಂ. ಮಾರೀಚೀ]

**ಮಾರೀಪತ** 'ಮಾರಿಫತ್ತು' ನೋ.

**ಮಾರೀಪತ್ತು** 'ಮಾರಿಫತ್ತು' ನೋ.

**ಮಾರೀಫತ** 'ಮಾರಿಫತ್ತು' ನೋ.

**ಮಾರೀಫತ್ತು** 'ಮಾರಿಫತ್ತು' ನೋ.

**ಮಾರು$_1$** 'ಮಾಱು$_1$' ನೋ.

**ಮಾರು$_2$** 'ಮಾಱು$_2$' ನೋ.

**ಮಾರು$_3$** (ನಾ). ಅಡ್ಡವಾಗಿ ನೀಡಿದ ಎರಡು ಕೈಗಳ ಮಧ್ಯದ ಬೆರಳುಗಳ ನಡುವಿರುವ ಅಳತೆ : ನಾಲ್ಕುಮೊಳಗಳಷ್ಟು ಉದ್ದ : ಶ್ರೀಪ್ರಣಮೇಶ್ವರದೇವರ ಗಡಿಂಬದ ಗಳೆಯ ಪ್ರಮಾಣು ಮಾರು ಹನ್ನೆರಡು (ಎಕ. VII. ಶಿಕಾ. ೦೭೭-೦೭ : 1029 ?) : ಹತ್ತುಮಾರು ಘಳೆಯಲಳೆದ ಭೂಮಿ (ಎಕ. VI. ತರೀಕೆ. ೭೦-೯೯; 1154) : ಪೊಳಲೊಳಿದ್ದ ಪರಾಗ ಸಾವಿರಮಾರಿನಷ್ಟಳತೆಯೊಳರಮನೆಯುತ್ತ ಸುಳಿಯದೆ ದನಿದೋಱಿ ದಿದ್ದರೊಡೆಯನ ಮಂಗಲದಾನ ಸಮಯವನಱಿದು (ಚರಹ. ೩-೨೯).

**ಮಾರುಂಚಿತೋಳುಘಳೆ** = ಒಂದು ಬಗೆಯ ಅಳತೆಯ ಕೋಲು : ಹದಿನಯ್ದುಮಾರುಂಚಿತೋಳುಘಳೆಯಲುಳಕನ್ನುಂ ಗೌಡುಗೆಱೆಯ ಪಡುವ ಗೋಡಿಯ ತುಂಬಿನ ಹಳ್ಳಿಯ ಹೊಲ (ಎಕ. XI, ದಾವಣ. ೩-೯೩ : 1121).
[ದೇ.॥ ತಮಿ. ಮಲ. ಕೊಡ. ಮಾರ್ : ತುಳು. ಮಾರ್, ಮಾರು]

**ಮಾರು$_4$** (ನಾ). ಒಂದು ಬಗೆಯ ಮರ (?) : ಎಲವಂ ಪಾದರಿ ಹಾಲೆ . . . ನೆಲ್ಲಿ ಕಡವೀಚಲ್ ಮಾರು ತುಂಬುರ್ಗಳಲ್ಲಲಸಂ ಬಾಱೆ (ಸಂಕ್ರಸು. ೩-೨೩). [ ? ]

**ಮಾರುಕಟ್ಟೆ** 'ಮಾರ್ಕಟ್ಟೆ' ನೋ.

**ಮಾರುಕಾಣ್** (ಕ್ರಿ). ಇದ್ದುದಕ್ಕಿಂತ ಬೇರೆ ಬಗೆಯ ಸುಖವನ್ನು ಅನುಭವಿಸು : ಮಾರುಕಂಡವಳು ಮಕ್ಕಳ ಸಾಕಿಯಾಳೇ ? (ಗಾದೆ).
[ ಮಾರು$_2$ ( < ಮಾಱು$_2$ ) + ಕಾಣು ( < ಕಾಣ್ ) ]

**ಮಾರುಗ** 'ಮಾರಗ' ನೋ.

**ಮಾರುಗಾಲು** (ನಾ). ಒಂದು ಮಾರಿನಷ್ಟು ದೂರಕ್ಕೆ ಹಾಕುವ ಹೆಜ್ಜೆ : ದಾಪುಗಾಲು : ನೀನು ಮಾರುಗಾಲು ಹಾಕುತ್ತಾ ನಡೆದರೆ ನಾನು ನಿನ್ನ ಜೊತೆ ಬರಲಾರೆ (ರೂಢಿ). [ ಮಾರು$_3$ + ಕಾಲು$_1$ ( < ಕಾಲ್$_1$ ). ]

**ಮಾರುಗೈ** (ನಾ). ಮಾರಿನಷ್ಟು ನೀಳವಾಗಿ ಚಾಚಿದ ಕೈ : ರಂಗನು ಎರಡೇ ಮಾರುಗೈಹೊಡೆತಗಳಿಂದ ಸಾಬಿಯ ಸಮೀಪಕ್ಕೆ ಬಂದು ನೀರು ಉಗ್ಗಹತ್ತಿದನು (ದಾಸಹು. ೩) ; ಅವನೆಷ್ಟು ದಿವ್ಯತೇಜಸ್ಸಿನ ವ್ಯಕ್ತಿ ! ಅಂಗಾಂಗಗಳು ಎಷ್ಟು ತುಂಬಿವೆ ! ಮಾರುಗೈಯಿಂದ ಅವನೆಡೆಗೆ ಸಾಗಿ ಬಂದಂತೆನಿಸಿತು (ಕೂಬಿತಾ. ೯೭).

**ಮಾರುಗೈಹಾಕು** = ಮಾರಿನಷ್ಟು ನೀಳವಾಗಿ ಕೈಚಾಚು : ಗಂಗೆ . . . ಆ ಮುತ್ತೈದೆಯನ್ನು ಅಂಗಲಾಚಿ ಬೇಡಿಕೊಳ್ಳುತ್ತಿದ್ದಾಳೆ. ಮಾರುಗೈಹಾಕಿ ಅಡ್ಡಗಟ್ಟಿಬಿಟ್ಟಿದ್ದಾಳೆ (ಸುಪಸಂ. ೩೯).
[ ಮಾರು$_3$ + ಕೈ$_2$ ( < ಕೆಯ್$_2$ ) ]

**ಮಾರುಗೊಡು** 'ಮಾಱುಗೊಡು' ನೋ.

**ಮಾರುಗೊಳ್** 'ಮಾರ್ಕೊಳ್' ನೋ.

**ಮಾರುಡ, ಮಾರುಡು$_2$** (ನಾ). ಒಂದು ಬಗೆಯ ಮರ ಮತ್ತು (ಉಪ್ಪಿನಕಾಯಿಗೆ ಬಳಸುವ) ಅದರ ಕಾಯಿ ; ಬಿಲ್ವಪತ್ರೆ ; ಬೆಲ್ಲ ಪತ್ರೆ : ಎರನುಂ ಮುತ್ತಮುಂಮೊಡವೆಳೆದಿರೆ ಪಡುವಲದಲ್ಲದೆಂದು ಮಾರುಡ ಮೌದುಂಬರಮುಂ ಪೆಣೆದಿರೆ ಬಡಗಲ್ ದೊರೆಕೊಳ್ಗುಂ (ಪುರುಷ) ಪ್ರಮಾಣದೊಳ್ ಬಹುಳಜಳಂ (ಲೋಕೋಪಕ. ೩-೦೯). **ಮಾರುಡು$_2$** : ಕಾಡಿ

ಬದಿರಕುಡಿಯ ಮಾವಿನ ಮಿಡಿಯ ಮಾರುಡಿನ [ಪಾಠಾಂ. ತಿನ,ದಿನ]ಮೆಣಸು ಗಡಲೆಯ ಪುಡಿಯೊಳಡಸಿದಲ್ಲವಲ್ಲಣಿಗೆಯ ಚಕ್ಕಣಂಗಳಂ ಸವಿಸವಿದು (ಶಂಶಕಾ. ೪-೬೬ ವ). [ದೇ.॥ ತೆಲು. ಮಾರೆಡು, ಮಾರೇಡು]

**ಮಾರುಡು₁** (ಕ್ರಿ). ಇನ್ನೊಂದು ಬಟ್ಟೆಯನ್ನು ಧರಿಸು ; ಬೇರೆಯ ವಸ್ತ್ರವನ್ನು ಉಡು : ಮಿಂದಳಿಲ್ಲಾಕೆ . . . ಮಾರುಟ್ಟಳಿಲ್ಲಾಕೆ (ಶ್ರೀರಾಪಟ್ಟಾ. ೩೨೫-೧೮೨). [ಮಾರು₂ (< ಮಾಱು₂) + ಉಡು₁]

**ಮಾರುಡು₂** ' ಮಾರುಡ ' ನೋ.

**ಮಾರುತ** (ಗು). ೧. ವಾಯುವಿಗೆ ಸಂಬಂಧಿಸಿದ ; ಗಾಳಿಯ. (ನಾ). ೨. ಗಾಳಿ ; ವಾಯು : "ಪವನಃ, ಶ್ವಸನಃ, ವಾಯುಃ, ಮರುತ್, ಅನಿಲಃ, ಮಾರುತಃ . . . ಮಹಾಬಲಃ — ಈ ೨೦ ಗಾಳಿಯ ಪೆಸರ್" (ಕಲಾಯು. ೧೪-೬೫) ; ಮಾರುತಘಾತಸಂಚಳಿತಕೇತುಸಮೂಹಮುದಗ್ರಚಕ್ರ ಚೀತ್ಕಾರಂ . . . ಅಂಬರಾಂತರಮನಳ್ಳಿಱಿದವ್ವಳಿಪನ್ನೆಗಂ ಶರಾಸಾರದಗುರ್ವು ಪರ್ವೆ ನಿಲೆ ತಾಗಿದುವುಗ್ರರಥಂ ರಥಾಳಿಯೊಳ್ (ಶಂಶಕಾ. ೧೧-೯೬) ; ಮಾರುತದಿನಕರಕರಸಂಚಾರಕ್ಕಗಮ್ಯಮೆಂಬಿನಂ ವಿದ್ಯಾಪ್ರಾಕಾರಮನೀಗಳೊಡರ್ಚಿದನಾ ರಾಕ್ಷಸಪತಿಯ ಪುರಮಂ (ಶಂರಾಪು. ೧೧-೨೫) ; ಆ ಮಾರುತನ ಗುದ್ದಿ ಅಂಗ ನೋಯಿಪುದುಂಟೆ (ಕುರಂದ. ೩-೦೦೯-೩). ೩. ಗಾಳಿಯ **ಅಧಿದೇವತೆ** ; ವಾಯುದೇವತೆ : ತಾತ ಮಾರುತ ಕೇಳ್ ಮಾರುತ **ಮಾರ್ಗ ಕೇಳ್** ಪಗೆವರಂ ಕೊಂದೆನ್ನ ಕೋಪಾಗ್ನಿಗಾಹುತಿ ಮಾಡಿ್ಪಂ (ಗದಾಯು. ೬-೨೩) ; ಕೊಟ್ಟ ನಂಬುಗೆಯಂ ನೆನೆದು ಕಾಮಾರಿ ಕರುಣದಿಂ **ಮಾರುತನಂ** ನೆನೆಯೆ (ಶಂಬಿರ. ೧೪-೬೯) ; ಹಿರಿಯರೆನಗಿಬ್ಬರು ಯುಧಿಷ್ಠಿರ **ಧರಣಿಪತಿ** ನೀನೊಬ್ಬನಯ್ಯಂದಿರುಗಳಿಬ್ಬರು ಮಾರುತನು ನೀನೊಬ್ಬನು . . . ಎಂದುಪಚರಿಸಿದನು ಪವಮಾನನಂದನನಂಜನಾಸುತನ (ಕುವ್ಯಾಕ. ೧೦-೨೯). ೪. ಒಂದು ಬಗೆಯ ರೋಗ ; ಸಂಧಿವಾತ ; ವಾತ **ರೋಗ** : ವನಿತಾಸೇವನೆ ರೂಕ್ಷವಾಕ್ಯ ಪಸಿವಾಗುಟಿರ್ ಚಿಂತೆ ವಿಣ್ಮೂತ್ರ ವೇಗನಿರೋಧಂ ಶ್ರಮಮತ್ಯಜೀರ್ಣಮಿಮಱಿಂ ಕಾರ್ಗಾಲದೊಳ್ ಮಾರುತಂ ಜನಿಯಿಕ್ಕುಂ (ಲೋಕೋಪ. ೯-೪). ೫. ಉಸಿರು ; ಶ್ವಾಸ. ೬. ಶರೀರದ ಮೂರುಬಗೆಯ ಮುಖ್ಯವಾದ ವಾಯುಗಳಲ್ಲಿ ಒಂದು. ೭. ವಿಷ್ಣು. ೮. ರುದ್ರ; ಶಿವ. ೯. ಆನೆಯ ಸೊಂಡಿಲು. ೧೦. [ಛಂದ] ಒಂದು ಅಕ್ಷರಗಣದ ಹೆಸರು ; ಸಗಣ : ಗುರುಮೂಱಾಗಿರೆ ಧಾತ್ರಿ ಮುಂತೆರಡು ಬಿಣ್ಪಂ ತೋಯಮಾದ್ಯಂತದೊಳ್ ಬರೆ ವಕ್ರಂ ಶಿಖಿಯೊಂದು ಕೊಂಕು ಕಡೆಯಿಂದಾ ಮಾರುತಂ (ಛಂದೋಂಬು. ೧-೩೮). [ಸಂ.]

**ಮಾರುತಪಥ** (ನಾ). ವಾಯುಮಾರ್ಗ ; ಆಕಾಶ: ಅಗಳೆ ಬರಿಸೆ ವಿದ್ಯೆಯಿಂ ನಾರದನಂ ಮಾರುತಪಥದಿಂದಾಗಳ್ ಭೋರೆನೆ ಬರೆ ಕಂಡು (ನೇಮಿಪು. ೬-೧೮೭). [ಸಂ.]

**ಮಾರುತಬಂಧು** (ನಾ). ವಾಯುವಿನ ಆಪ್ತ ; ಅಗ್ನಿ : ಮೇಷಮುಂ ಮಾರುತಬಂಧು ಸ್ವೈರಿಭಮನಂಬುಜಮಿತ್ರಸುತಂ . . ವೃಷಭನಂ ಹರನೇಱೆ ನಭಕ್ಕೆ ಸಲ್ವುದುಂ (ಜಗವಿ. ೧-೩೬) ; ಮಾರುತಬಂಧು ಮೇಷಮಂ . . . ಗಿರಿಶಂ ವೃಷೇಂದ್ರನಂ ಮಮತೆಯೊಳೇಱೆ ಪಾಲ್ಗಡಲ ಸಾರಿದರ್ (ದಕಾಪ. ೨-೩). [ಸಂ.]

**ಮಾರುತಭುಗು** (ನಾ). ಗಾಳಿಯನ್ನು ಆಹಾರವಾಗುಳ್ಳುದು ; ಹಾವು: ಅತಿಜಡಭಾವಿಯಾಗಿ ಕಡಲಲ್ತು ನಿಜಶ್ರುತಿಶೂನ್ಯನಾಗಿ ಮಾರುತಭುಗುವಲ್ತು . . . ಎನೆ ವೃದ್ಧನಿದೇಂ ವಿರುದ್ಧನೋ (ಕುಕ್ಕೆಕ. ೦೩-೩೫). [<ಸಂ. ಮಾರುತಭುಜ್]

**ಮಾರುತಮಂಡಲ**, ಮಾರುತಮಂಡಳ (ನಾ). ವಾಯುಮಂಡಲ ; **ಆಕಾಶ** : ಮಾರುತವೇಳೆಯೊಳ್ ದಹನಮಂಡಲವೊಂದಿದ ವಹ್ನಿವೇಳೆಯೊಳ್ ಮಾರುತಮಂಡಲಂ ನೆಗಟೆ ಮಾರಿ ಬಱಂ ಪಸಮೆಂಬಿವಕ್ಕುಂ (ಲೋಕೋಪ. ೪-೮೮). **ಮಾರುತಮಂಡಳ** : ಮಾರುತಮಂಡಳಮುನಿತ್ತುಂ ತಾರಾಪಥದಂತೆ ಮಂದಚಾರಂಬಡೆದೇಂ ರಾರಾಜಿಸಿತ್ತೊ ವನಲಕ್ಷ್ಮೀ ರಮಣಿಯ ವದನಸುರಭಿನಿಶ್ವಾಸದವೊಲ್ (ಮಲ್ಲಿಕು. ೧೪-೧೦೦). [ಸಂ.]

**ಮಾರುತಮಂಡಳ** ' ಮಾರುತಮಂಡಲ ' ನೋ.

**ಮಾರುತಮಾರ್ಗ** (ನಾ). = ಮಾರುತಪಥ : ತಾತ ಮಾರುತ ಕೇಳ್ ಮಾರುತಮಾರ್ಗ ಕೇಳ್ ಪಗೆವರಂ ಕೊಂದೆನ್ನ ಕೋಪಾಗ್ನಿಗಾಹುತಿ ಮಾಡಿ್ಪಂ (ಗದಾಯು. ೬-೨೩) ; ಚಾಪಮುಕ್ತನಿರ್ಗತಮಾರ್ಗಣೋತ್ಕರಂ ಮಾರುತ ಮಾರ್ಗಮಂ ಪುದಿಯೆ (ಜಗಪಿ. ೧೨-೧೫). [ಸಂ.]

**ಮಾರುತಸುತ** (ನಾ). ೧. ವಾಯುವಿನ ಮಗ. ೨. ಹನುಮಂತ ; ಮಾರುತಿ : ಜವದಿಂ ಸೌಪರ್ಣನಂ ಮಾರುತಸುತನಂ . . . ಕೀಟ್ಯಾಟ್ಟ ಸಲ್ಲಕ್ಷಣಗುಣನಿಧಿಗಳ್ ಪಲ್ಲಣಂಗಟ್ಟಿ ಬಂದಿರ್ದುವು ಹೇಷಾಘೋಷವಿದ್ರಾವಿತ ರಿಪುಮಹಿಭೃಚ್ಚಾತುರಂಗಂ ತುರಂಗಂ (ಕುಕ್ಕೆಕು. ೫-೧೦). ೩. ಭೀಮ : ಹೈಡಿಂಬಿ ತೋರಗದೆಯಿಂದವರ ತೇರ್ಗಳಂ . . ಅಪ್ಪಳಿಸಿ ವಾರುವಂ ವೆರಸಿ ಕಡುವೇಗದಿಂದೈತಂದು ಮಾರುತಸುತನ ಮುಂದೆ ನಿಲುತಿರ್ದಂ (ಕೃಮಿಕಾ. ೪-೨೫). [ಸಂ.]

**ಮಾರುತಾಪ್ತ** (ನಾ). = ಮಾರುತಬಂಧು : ಮಾರುತಾಪ್ತನು ದೈವವೆಂದು ವಿಚಾರಿಪಡೆ ಭಂಗಂಬಡುವುದೇ ಧಾರುಣಿಯೊಳಗೆ ಸರ್ವಭಕ್ಷಕನಾಗಿ ಚರಿಸುವನೇ (ಬಸಪು. ೫೪-೧೦) ; ತಲೆಯ ಕೂವಲ ಕಕ್ಕಡವ ಮಾಡಿ ಮಾರುತಾಪ್ತನ ಮುಟ್ಟಿಸುತ ಪ್ರಜ್ವಲಿಪ ಕಲಿಯಾರಿಗೀಶ್ವರನೊಲಿದನು (ಗುರುಪಾ. ೬-೪೬). [ಸಂ.]

**ಮಾರುತಾಶನಿ** (ನಾ). = ಮಾರುತಭುಗು : ಧಾರುಣೀರುಹತತಿಯೊಳಾ ಕಲ್ಪವೃಕ್ಷವಾ ಮಾರುತಾಶನಿಗಳೊಳು ಶೇಷನು . . . ಎಂತಧಿಕವಂತಾ ರಯ್ಯಲೆಲ್ಲ ಶೈವದೊಳು ಮಿಗಿಲೆನಿಸುವೀ ವೀರಶೈವವದು (ಶೀಕ್ಕೆತ. ೭-೩-೨). [< ಸಂ. ಮಾರುತಾಶನ]

**ಮಾರುತಿ** (ನಾ). ೧. ವಾಯುವಿನ ಮಗ : ಅನುಪಮಕೀರ್ತಿ ಮೂಱನೆಯ ಮಾರುತಿ ನಾಲ್ಕನೆಯುಗ್ರವಹ್ನಿಯಯ್ದನೆಯ ಸಮುದ್ರಂ . . . ಪತ್ತನೆಯ ನಿಧಾನಮೂರ್ತಿಯೆನೆ ಪೋಲ್ವವರಾರೆಱೆಯಂಗದೇವನಂ (ಎಕ. II (R), ೫೬೮-೧೬; 1094). ೨. ಹನುಮಂತ; ಆಂಜನೇಯ: ಮಾರುತಿ ಬುದ್ಧಿಪೇಟಿಸ್ಗೊಡಮದಂ ಬಗೆಗೊಳ್ಳನೆ (ಶಂರಾಪು. ೧೦-೧೬೬); ಸರಸಿಯೆತ್ತಲು ಗಂಧವೆತ್ತಲು ಬರವಿದೆತ್ತಣಿದೆತ್ತ ಘಟಿಸಿದುದರರೆ ಮಾರುತಿ ತಂದೆ ನೀನೆಂದೆನುತ ಬಣ್ಣಿಸಿದ (ಕುವ್ಯಾಕ. ೧೦-೨೬); ಗುರುರಾಯರ ನಂಬಿರೊ ಮಾರುತಿಯೆಂಬ ಗುರುರಾಯರ ನಂಬಿರೊ (ಪುರಂದ. ೧-೨೦೬ ಪಲ್ಲವಿ). ೩. ಭೀಮ : ಮಾರುತಿ ನಿಜವೇಣೀಸಂಹಾರಂ ಮಾಡಿದೊಡೆ ಮಾಱ್ಪುದೆನಗಂ ನಿನಗಂ ಪೂರಣೆಗೆ ಜಠರಪಿಠರಕಪೂರಣೆಗೇಂ ಮಾಡದೆಂತು ಕರೆವೆಂ ನಿನ್ನಂ (ಗದಾಯು. ೨-೧೦); ಮತ್ತೆ ಮಾರುತಿ ಹರಿಸಿದನು ನಿಜರಥ ವನತಿರಥರೊಡ್ಡು ಲಟಕಟಿಸೆ (ಕುವ್ಯಾದ್ರೋ. ೨-೬೬); ಮಾರುತಿಗೆ ಪಟ್ಟವಂ ಕಟ್ಟುವೆವು ನಾವು (ಕೃಮಿಕಾ. ೨-೨೨). ೪. ಆಂಜನೇಯನ ಅವತಾರವೆನಿಸಿದ ಮಧ್ವಾಚಾರ್ಯ : ' ಮಾರುತಿಮತ ' ಪರಾ. [ಸಂ.]

**ಮಾರುತಿಮತ** (ನಾ). ಮಧ್ವಾಚಾರ್ಯರಿಂದ ಸ್ಥಾಪಿತವಾದ ಮತ ; ದ್ವೈತಮತ : ತಾರತಮ್ಯ ಪಂಚಭೇದ ಸತ್ಯವೆಂಬ ಮಾರುತಿಮತ ಪೊಂದಿದವರನು ಸಲಹು (ಪುರಂದ. ೧-೦೯೯-೩). [ಸಂ.]

**ಮಾರುತೇಷ್ಟ** (ನಾ). ೧. = ಮಾರುತಬಂಧು. ೨. [ಛಂದ] ಒಂದು ಅಕ್ಷರಗಣದ ಹೆಸರು ; ರಗಣ : ಮಾರುತೇಷ್ಟ ದಿವಿಜಾಗ್ನಿಯುಂ ಲಗಂ ಸಾರೆಯಾಗೆ ರಸದಲ್ಲಿ ವಿಶ್ರಮಂ ದೂರಮಲ್ಲದಿರೆ ಕೇಳ್ರಥೋದ್ಧತೋದಾರನಾಮಮೆಸೆಗುಂ ರಥೋದ್ಧತೇ (ಛಂದೋಂಬು. ೩-೦೦೬). [ಸಂ.]

**ಮಾರುತ್ತರ** ' ಮಾಱುತ್ತರ ' ನೋ.

**ಮಾರುತ್ತರಕೊಡು** 'ಮಾಱುತ್ತರಂಗೊಡು' ನೋ.

**ಮಾರುತ್ತರಿಸು** (ಕ್ರಿ). ಪ್ರತ್ಯುತ್ತರವನ್ನು ಕೊಡು ; ಜವಾಬು ನೀಡು : ಹುಡುಗಿ "ಬಾ ಸೋನ್ಯಾ" ಎಂದು ಮಾರುತ್ತರಿಸಿದಳು (ಕ್ಷ್ಮ.ಶ. ೯೯). [ಮಾರುತ್ತರ (< ಮಾಱುತ್ತರ) + — ಇಸು₁]

**ಮಾರುದನಿ** 'ಮಾರ್ದನಿ' ನೋ.

**ಮಾರುದನಿಗೊಡು** 'ಮಾರ್ದನಿಗೊಡು' ನೋ.

**ಮಾರುದನಿತೋರು** 'ಮಾರ್ದನಿದೋಱು' ನೋ.

**ಮಾರುದ್ರ** (ನಾ). ಮಹಾರುದ್ರ ; ಶಿವ : ದಂಡಿಸಿ ದೈತ್ಯರನು ರುಂಡವ ಧರಿಸಿ ಹರ ತಾಂಡವನೃತ್ಯ ಮಾಡುವಾಗ ಮಾರುದ್ರ ಕಂಡಂತೆ ಕಾಂಬುವನು ಶಿವಸಿದ್ಧ (ಸಿದ್ಧ.ಕೃ. ೦೩-೬೦). [ಮ್ಹಾ + ರುದ್ರ]

**ಮಾರುನುಡಿ₁** 'ಮಾರ್ನುಡಿ₁' ನೋ.

**ಮಾರುನುಡಿ₂** 'ಮಾರ್ನುಡಿ₂' ನೋ.

**ಮಾರುಮಾತು** 'ಮಾಱುಮಾತು' ನೋ.

**ಮಾರುಲಿ** (ನಾ). ಪ್ರತಿಯಾದ ಶಬ್ದ ; ಪ್ರತಿಧ್ವನಿ : ಹೆಲನರಿನ್ ಮೊದಲೆ ದ್ದುದೊಂದಾರ್ಪು—ಬಲ್ಲುಲಿಯು, ನಲ್ಲುಲಿಯು ಪಾಡು, ದೀವಿಕರೆಯುರೆಗಳಿನ್ ಮೊಳಗೆ ಮಾರುಲಿಗಳ್ (ಹಾರಿಸಿ. ೦೩-೩೫೯).

[ಮಾರ್ (< ಮಾಱು₂) + ಉಲಿ₂]

**ಮಾರುವ** (ನಾ). [ಸಂಗೀತ] ಒಂದು ರಾಗದ ಹೆಸರು : ಮಾರುವವು (೨೨) ಸ–ಗ್ರಹಯುತವಾದುದು, ಆರೋಹದಲ್ಲಿ ರಿ–ಇಲ್ಲ, ಗಾನತತ್ತ್ವವನ್ನು ತಿಳಿದವರು (ಇದನ್ನು) ಸಾಯಂಕಾಲದಲ್ಲಿಯೂ ಹಾಡುತ್ತಾರೆ (ಕಸುಶ್ಚ. ೦೩೩). [ಸಂ.]

**ಮಾರುವಾಡಿ** 'ಮಾರವಾಡಿ' ನೋ.

**ಮಾರುವೆ** (ನಾ). ಮಾರಾಟ; ವಿನಿಮಯ : ಇಲ್ಲಿಗೆ ಹಣವನ್ನು ತರುವವರು ಹೆಚ್ಚುಮಂದಿಯಾಗುವುದರಿಂದ ಈ ಹಣದ ಬೆಲೆ ಹೆಚ್ಚಾಗಿ ದೇಶದ ಮಾರುವೆ ಏರುವುದು (ಹಣಶ್ಚ. ೦೩೬). [ಮಾರು₁ (< ಮಾಱು₁)+—ವೆ]

**ಮಾರುವೆಹುಂಡಿ** (ನಾ). ಅಂತರ್ರಾಷ್ಟ್ರೀಯವ್ಯಾಪಾರದಲ್ಲಿ ಒಂದು ದೇಶವು ತರಿಸಿಕೊಂಡ ಸಾಮಾನಿಗೆ ಕೊಡಬೇಕಾದ ಹಣಕ್ಕಾಗಿ ಕಳುಹಿಸುವ ಅಪ್ಪಣೆಪತ್ರ : ಚೆಕ್ಕಿಗೂ ಮಾರುವೆಹುಂಡಿಗೂ ಒಂದೆರಡು ವ್ಯತ್ಯಾಸಗಳಿವೆ (ಹಣಶ್ಚ. ೬೯). [ಮಾರುವೆ + ಹುಂಡಿ₁./ಇದು 'Bill of Exchange' ಎಂಬ ಇಂಗ್ಲೀಷ್ ಪದದ ಕನ್ನಡಭಾಷಾಂತರ]

**ಮಾರುವೇಷ** (ನಾ). ಬೇರೆ ವೇಷ ; ಛದ್ಮವೇಷ : ಯುಧಿಷ್ಠಿರಮಹಾರಾಜನು ಮತ್ತೊಬ್ಬ ಅರಸನ ಬಳಿ ಮಾರುವೇಷವನ್ನು ಧರಿಸಿ ಸೇವಕತನದಲ್ಲಿ ಸೇರುವಂತೆ ಆಯಿತೇ ! (ವ್ಯಾಸಕ. ೨೦೬); ಮಾರುವೇಷದಿಂದ ಶಿವನು ತನ್ನ ಹೆಂಡತಿಯ ಶೀಲವನ್ನು ಪರೀಕ್ಷಿಸಿದ ಘಟನೆಯನ್ನು ಈ ಕಥೆ ನಿರೂಪಿಸುತ್ತದೆ (ಕಜಾ. ೩೯ ಕ್ರಸಾಪಕ). [ಮಾರು₂ (<ಮಾಱು₂) + ವೇಷ]

**ಮಾರುವೋಗು** 'ಮಾಱುವೋಗು' ನೋ.

**ಮಾರುಹೇಳು** (ಕ್ರಿ). ಜವಾಬು ಕೊಡು ; ಉತ್ತರವನ್ನು ನೀಡು : ಇಬ್ಬರಲ್ಲಿಯು ಒಬ್ಬನು ಮಾರುಹೇಳಿದ (ರಾಜಯೋ. ೦೩೦).

[ಮಾರು₂ (< ಮಾಱು₂) + ಹೇಳು (<ಪೇೞ್)]

**ಮಾರುಹೋಗು** 'ಮಾಱುವೋಗು' ನೋ.

**ಮಾರುಳಿ, ಮಾರವಳಿ, ಮಾರವಾಳಿ** (ನಾ). ಒಂದು ಬಗೆಯ ಹುಲ್ಲು : "ವಕ್ರಿ ಮಾರುಳಿ ಕಂಬು ಕಸವೆ ಸಂದಂ ಕರಡಿಯುಕ್ಕುಂ" (ಸುಂಗರಾ. ೩೩-೬). **ಮಾರವಳಿ** : "ಮಾಲಾತೃಣಕಂ, ಭೂಸ್ತೃಣಂ – ೨ ಮಾರವೇಹುಲ್ಲಿನ ಹೆಸರು" (ಸಿದ್ಧಾಂತಿ. ೦೩೦). **ಮಾರವಾಳಿ** : 'ದೊಡ್ಡಮಾರವಾಳಿ' ಪರಾ. [←ತೆಲು. ಮಾರುವೆಲ್ಲಿ]

**ಮಾರೆತ್ತಿ** (ನಾ). ಒಬ್ಬಾತನ ಹೆಸರು : ಮಾರೆತ್ತಿಗಳ ಮಗನ್ ಧೂಲ ಅವನ್ ವಿಜಿತಿತ್ರಿಗರಾ ಕಾಳೆಗದುಳ್ ಕಾದನಗರುಳ್ ಎಱೆದು ಸಗ್ಗೆ ಪುಕ್ಕಿದುನ್ (ಎಕ. X (೩). ೫೦ಜನು. ೦೩೬-೯; ೩೩೯೪ ೩೩). [ ? ]

**ಮಾರೆಯ** 'ಮಾರಯ್ಯ' ನೋ.

**ಮಾರೆಯ್ಯ** 'ಮಾರಯ್ಯ' ನೋ.

**ಮಾರೇಶ** (ನಾ). ಮನ್ಮಥನ ಒಡೆಯ ; ಶಿವ : ಕವಿದು ಕತ್ತಲೆ ಬನದೊಳ್ ಧೀರನು ಹೆದರದೆ ಮನದಲಿ ಮಾರೇಶನ ಧ್ಯಾನದೊಳಗೆಯಿರುತಿರೆ ಭೂಪಂ (ಹಪಚ. ೩೬). [ಸಂ.]

**ಮಾರೊಡ್ಡು** 'ಮಾಱೊಡ್ಡು₂' ನೋ.

**ಮಾರೋಲೆ** 'ಮಾಱೋಲೆ' ನೋ.

**ಮಾರ್ಕಂಡಿ** (ನಾ). ಮೃಗಗಳು ಒಂದು ಕಾಡಿನಿಂದ ಮತ್ತೊಂದು ಕಾಡಿಗೆ ಹೋಗುವ ಅಥವಾ ಬರುವ ಸ್ಥಳ; ಎದುರುಕಂಡಿ: ಮೃಗಮುಂ ಗಾಳಿಯುನಿರ್ಕಯುಂ ಪಕ್ಕಿಯುಂ ಗಣಿದವುಂ ಕಂಡಿಯುಂ ಮಾರ್ಕಂಡಿಯುಂ . . . ಬಗೆದಾಗಳರಸರೊಳೆಲ್ಲ ಕೇಳ್ ನೀಂ ಬಲ್ಲೆ ಬೇಂಟೆಕಾಱರೊಳೆಲ್ಲವಾನೆ ಬಲ್ಲೆಂ (ಕಂಶಶಾ. ೩-೯೩). [ಮಾರ್ (< ಮಾಱು₂) + ಕಂಡಿ₁]

**ಮಾರ್ಕಟ್ಟಳೆ** (ನಾ). ಪ್ರತಿಯಾದ ಆಜ್ಞೆ,—ಅಪ್ಪಣೆ : ಱಕಾರಾದೇಶಮಾದ ರೇಫೆಗೆ ಪರಮಾದ ಕಕಾರಕ್ಕೆ— ಮಾರ್ಕೊರಲ ಭೈರವಂ, ಮಾರ್ಕಟ್ಟಳೆ (ಕಪುದ. ಸು. ೬೬ ವೃತ್ತಿ). [ಮಾರ್ (< ಮಾಱು₂) + ಕಟ್ಟಳೆ₁]

**ಮಾರ್ಕಟ್ಟೆ, ಮಾರುಕಟ್ಟೆ** (ನಾ). ಸರಕುಗಳನ್ನು ಮಾರುವ ಸ್ಥಳ ; ವ್ಯಾಪಾರಮಾಡುವ ಸ್ಥಳ : ತುರುಗಳಂ ಕೊಳ್ವ ಮಾರ್ಕಟ್ಟೆಗಳ ಪೊಂದಿ ಮುಲುಕಿಂ ಪೊಳಲ್ ಪರ್ವರಿಕೆ ಬೀಗುರ್ಗಂ (ಕಾಂಜಕ. ೦೦೩-೨೦೬). **ಮಾರುಕಟ್ಟೆ** : ಮಾರುಕಟ್ಟೆಯಲ್ಲಿ ಕೂಲಿಮಾಡುವುದೂ ಅಷ್ಟೊಂದು ಸುಲಭಕೆಲಸವಾಗಿರಲಿಲ್ಲ (ಪಾಪೋಲೀ. ೨೩) ; ಪ್ರೀತಿಯ ವ್ಯವಹಾರದ ಮಾರುಕಟ್ಟೆಯಲ್ಲಿ ಸವಕಲುನಾಣ್ಯಕ್ಕಷ್ಟೆ ಬೆಲೆ (ಪಾಶ್ಚಾತ್ಯ. ೨೬೯). 'ಮಾರ್ಕೆಟ್ಟು' ಪರಾ. [<ಮಾರು₁ (< ಮಾಱು₁) + ಕಟ್ಟೆ₁/. ಇದು ಇಂಗ್ಲಿಷಿನ 'Market' ಶಬ್ದದ ರೂಪಸಾಮ್ಯದಿಂದಲೂ ಆಗಿರಬಹುದು]

**ಮಾರ್ಕಣಿ** 'ಮಾರ್ಗಣಿ₁' ನೋ.

**ಮಾರ್ಕರೆ** (ನಾ). ಪ್ರತಿಯಾದ ಕೂಗು ; ಮರುದನಿ : ಎಳಗರುವು ! ಕರಕರೆದು ಹಾಲುಂಬೆನೆನ್ನುವುದು ತಿಳಿಯದೇಂ ಬಿಡಿಸುತಿದೆ ಮಾರ್ಕರೆಗೆ ಕಿವಿಯುಂ (ಕಾಂಜಕ. ೬೩-೦೫೯). [ಮಾರ್ (< ಮಾಱು₂) + ಕರೆ₂]

**ಮಾರ್ಕವ** (ನಾ). ಒಂದು ಬಗೆಯ ಗಿಡ ; ಕಾಡಿಗೆಗರಗು : "ಭೃಂಗಂ ಮಾರ್ಕವ" (ವಸ್ತುಕೋ. ೩೬-೨೭). [ಸಂ.]

**ಮಾರ್ಕವಿ** (ಕ್ರಿ). ಪ್ರತಿಯಾಗಿ ಮುತ್ತು,—ಆವರಿಸು: ಕವಿವ ಶರಾಳಿಯಂ ನಿಜಶರಾಳಿಗಳಟ್ಟಿ ತಿರಳ್ಚಿ ತೂಳ್ದಿ ಮಾರ್ಕವಿದು ಪಳಂಚಿ ಪಾಯ್ದೊರಸೆ (ಕಂಶಶಾ. ೦೨-೦೯೮). [ಮಾರ್ (< ಮಾಱು₂) + ಕವಿ₁]

**ಮಾರ್ಕಾಡು** (ನಾ). (ಮೃಗಗಳಿಗೆ ಆಶ್ರಯವಾಗಿರುವ) ಎದುರುಕಾಡು: ಆಡಲಾಡಿಸಲ್ ಪಾಟಿಯುಂ ನಿಱಿಸಲುಂ ಪರಿಗೊಳಲ್ ತೊವಲಿಕ್ಕಲೊಳಗಂ ಬರಲ್ ಕಾಡ ಬೇಲಿಯುಂ ಮಾರ್ಕಾಡನಱಿಯಲುಂ . . . ಪಡೆ ಮೆಚ್ಚೆ ನೀಂ ಬಲ್ಲೆ ನೀಂ ಮೆಚ್ಚೆ ಹರಿಗ ಕೇಳಾನೆ ಬಲ್ಲೆಂ (ಕಂಶಶಾ. ೩-೯೦).

[ಮಾರ್ (< ಮಾಱು₂) + ಕಾಡು₂]

**ಮಾರ್ಕಿಡಿ** 'ಮಾರ್ಗಿಡಿ' ನೋ.

**ಮಾರ್ಕಿಡಿವಿಡು** (ಕ್ರಿ). ಎದುರುಕಿಡಿಯನ್ನು ಸೂಸು ; ಪ್ರತಿಯಾಗಿ ಕೆಂಡವನ್ನು ಉಗುಳು : ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳೆ ಬಾಳ್ ಪಳಂಚಿ ಮಾರ್ಕಿಡಿ[ಪಾಠಾಂ. ಕಡಿ, ಕಿಡ]ವಿಡೆ ನೋಡಲಂಜಿ ದೇವತೆಗಳ್ ಪೆಱಗಿಂಗೆ (ಕಂಶಶಾ. ೦೦-೯೨).

[ಮಾರ್ಕಿಡಿ (< ಮಾರ್ಗಿಡಿ) + ಬಿಡು₁]

**ಮಾರ್ಕೆಟ್** ' ಮಾರ್ಕೆಟ್ಟು ' ನೋ.

**ಮಾರ್ಕೆಟ್ಟು, ಮಾರ್ಕೆಟ್** (ನಾ). ಹಣ್ಣು, ಹೂವು, ತರಕಾರಿ, ದಿನಸಿ, ಜಾನುವಾರು ಮೊದಲಾದುವನ್ನು ಕೊಳ್ಳುವುದಕ್ಕೂ ಮಾರುವುದಕ್ಕೂ ಸೇರುವ ಜನಸಂದಣಿಯ ಜಾಗ ; ಪೇಟೆ : ಅಂದು ಮಾರ್ಕೆಟ್ಟಿನಲ್ಲಿ ನೋಡಲಿಲ್ಲ (ಕಂದುಬ. ೬೮); ಮಾರ್ಕೆಟ್ಟಿಗೆ ಹೋಗಿ ಏನೇನು ಬೇಕೋ ಎಲ್ಲಾ ತೆಗೆದುಕೊಂಡು ಬಾ (ರೂಪಟ್ಟ. ೯೩). **ಮಾರ್ಕೆಟ್** : ಮಾರ್ಕೆಟ್‍ಚೌಕದ ಬಳಿಯ ಗಲಾಟೆಗಳನ್ನು ದಾಟಿಕೊಂಡು ದೊಡ್ಡ ಪೇಟೆಯ ಇಕ್ಕಟ್ಟಿನ ರಸ್ತೆಯಲ್ಲಿ ಜನಸಂದಣಿಯಲ್ಲಿ ನುಸುಳಿಕೊಂಡು ಹೋಗುತ್ತಿದ್ದಾನೆ (ರಂಗಳ. ೨). ' ಮಾರ್ಕೆಟ್ಟೆ ' ಪರಾ. [← ಇಂ. Market]

**ಮಾರ್ಕೆಳರ್** (ಕ್ರಿ). ಪ್ರತಿಯಾಗಿ ವ್ಯಾಪಿಸು, ಹಬ್ಬು : ಚಪಳರ್ ಪೂರ್ಣೇನ್ದುಗಾ ತಾರೆಗಳ್ ಭ್ರಾಮಂ ಚೋದಿಸೆ ಮಾರ್ಕೆಳರ್ವ, ಮಿನುಗೆಂತಂತಾಗೆ ತೇಜಸ್ವಿಯಂ ತಾಮೇರಿಪ್ಪವೊಲ್ಲಾಳ್ದ ದೇವನೊಸಗೆಗುದ್ಯದ್ಯಶಶ್ರೀಯುಮಂ (ಧರುಗಂ. ೦೦-೩). [ಮಾರ್ (< ಮಾಱು$_2$) + ಕೆಳರ್]

**ಮಾರ್ಕೊರಲ್** (ನಾ). ಮರುದನಿ : ಮಾರ್-ಕೊರಲ್, ಮಾರ್ಕೊರಲ್ : ಮಾರ್_ತಲೆ, ಮಾರ್ತಲೆ (ಶಾಶಭೂ. ೨೯ ಪ್ರಯೋ). ' ಮಾರ್ಕೊರಲ್ವಡೆ ' ಪರಾ. [ಮಾರ್ (< ಮಾಱು$_2$) + ಕೊರಲ್]

**ಮಾರ್ಕೊರಲ್ವಡೆ** (ಕ್ರಿ). ಪ್ರತಿಯಾಗಿ ಧ್ವನಿಯನ್ನು ಹೊರಡಿಸು; ಮರುದನಿಯೆತ್ತು : ದೆಸೆಯಾನೆ ಮಾರ್ಕೊರಲ್ವಡೆಯುದೆ ತಟ್ಟಿ ಮುಟ್ಟಿದುವು (ಶಂಖಾಪು. ೬-೮೩). [ಮಾರ್ಕೊರಲ್ + ಪಡೆ$_1$]

**ಮಾರ್ಕೊಳ್, ಮಾರುಗೊಳ್, ಮಾರ್ಕೊಳ್ಳು, ಮಾಱುಂಗೊಳ್, ಮಾಱುಕೊಳ್, ಮಾಱುಗೊಳ್** (ಕ್ರಿ). ೧. ಎದುರಾಗು ; ಸಮ್ಮುಖಕ್ಕೆ ಬರು: "ಮಾರ್ಕೊಳ್ (ಮಾಱು+ಕೊಳ್) ಸಮ್ಮುಖೀ(ಇದಿರಾಗು)" (ಶಮಣಿ). ೨. ಪ್ರತಿಘಟಿಸು; ವಿರೋಧಿಸು : "ತಳ್ಪೊಯ್, ತಡಂಬರೆ, ಪೊರ್ಕುಳಿ, ತೊಡರ್ದುದು, ಮಾರ್ಕೊಂಡುದು ... ಎಂಗು, ತಡಂಬೊಯ್ -ಈ ೨೫ ಪ್ರತಿಪತಕ್ಕೆ ಪೆಸರ್" (ಳಶಾ. ೫೯-೨೯೬) ; ಬನ್ದು ತಾಗಲಾಕ್ಷಣದೊಳೆ ಮಾರ್ಕೊಣ್ಡು ಪೊಣರ್ದು ತಳ್ತಱಿದು ಮಾಡಿದನೀ ಗೋಗ್ಗಿ (ಎಕ. XI, ತಳ್ಕ. ೬-೮; ಸು. ೪೨೫); ಪವನಸುತಂ ಗದೆಗೊಳೆ ಗಾಂಡಿವಿ ಬಿಲ್ಗೊಳೆ ಕೆಯ್ದುಗೊಳ್ವ ಮಾರ್ಕೊಳ್ವದಟರ್ ಭುವನದೊಳಿಲ್ಲ (ಗದಾಯು. ೩-೦೬): ಗಂಡುಗೆಡಿಸಿದರಿಲ್ಲ ದಾನವದಿಂದುಮರು ಹಲರೆಪ್ಪೊಡನೆ ಮಾರ್ಕೊಂಡವರು ಮಾಮಾಪ್ರತಿಜ್ಞೆಯ ತೊಡಕು ಬೇಡ (ಕುವ್ಯಾಖೀ. ೬-೨೭); ಬಲ್ಲಾಳ್ಗಳ್ ಕಟ್ಟಿದೊಡೆ ಮೊನೆಯೊಳ್ ಮಾರ್ಕೊಳ್ವುದುಂ, ಸೋಲ್ತು ಕಪ್ಪಮನಿತ್ತೊಡೆ ಕೈಕೊಳ್ವುದುಂ, ಕಾವಲರ್ಗೆ ನೆಱೆಗುಂ (ರಾಜಶೇಕ್. ೦೩-೦೬). ೩. ಆಕ್ಷೇಪಣೆಮಾಡು ; ಆಕ್ಷೇಪಿಸು : ಎನ್ನ ಕೊಟ್ಟುದರ್ಕೆ ಮಾರ್ಕೊಳ್ಳದೆ ಕೊಳ್ವೆಂದೊಡಂತೆ ಗೆಯ್ವೆನೆಂದು ನಿಶ್ಚಯಿಸೆ (ಶಂಶಾ. ೬-೩ ಪ) ; ಆ ನುಡಿಯ ಮಾರ್ಕೊಂಡು [ಪಾಠಾಂ. ನೊಳಕೊಂಡು] ಶಿವಶಿವದೇನನಾಡಿದೆ ತಾಯ . . . ತಾವು ಹೊಲ್ವ ನಿಧಾನ ತಮಗಹುದೇನು ವಿಸ್ಮಯವೆಂಬ ವೃಷಭೇಂದ್ರ (ಪ್ರಭುಲಿ. ೮-೨೩). ೪. ತಡೆ ; ನಿಲ್ಲಿಸು ; ತಡೆಗಟ್ಟು : ನಿಮ್ಮನೆ ಪೋಡಿ ಮದ್ದುಗರುವಿಯೋಗ ಮನಾಜಿಪೆವಿಾಗಳೀ ತಪಕ್ಕಮ್ಮ ಮನಂವರಲ್ ನಿಮಗೆ ಸಲ್ಲದೊಡಂ ಒಡಮೊಂದು ಕಾಲ್ಗಳಂ ತಮ್ಮಯ ನೆತ್ತಿಯೊಳ್ ನಿಱಿಸಿ ಮಾರ್ಕೊಳೆ ಮಾಣದೆ ಪೋದ ಮಕ್ಕಳಂದೇಮ್ಮನದೊಳ್ ಪಳಂಚಿದರೊ ಚಕ್ರಿತನೂಜೆಯ ವಪ್ರಜಂಘನಾ (ಆದಿಪು. ೪-೬೮); ಅಕ್ಕ ಮಾರ್ಕೊಳಲೆ ಬೇಡ ಗಮನೋದ್ಯಮಮಂ (ಕಾದಂಬ. ೪೪೮); ದುರ್ಯೋಧನಂ . . . ಅನಿತಱೊಳಂ ಮಾಣ್ದು ಸೈರಿಸಲಱಿದೆ ಸಮರೋದ್ಯೋಗಂಗೆಯ್ಯೆ ಸಂಜಯನಂಜದೆ ಮಾರ್ಕೊಂಡು . . . ನುಡಿದ ಸಂಜಯನ ನುಡಿಗೆ ದುರ್ಯೋಧನಂ ನಿರ್ವೈಸಿ (ಗದಾಯು. ೩-೧೧ ಪ). ೫. ಎದುರುಮಾತನ್ನಾಡು ; ಪ್ರತಿಯಾಗಿ ನುಡಿ : ಇದು ನಿನ್ನ ಕೊಟ್ಟ ತಲೆ ನಿನಗಿದನಿತ್ತಪೆನೆಂದು ನುಡಿವುದು ಲಾಗದು ಮಾರ್ಕೊಳ್ಳದಿರೆಂದು ಗಳಿಯ ಬಲ್ಲಿದ ಕುದುರೆಯನಮ್ಮೊಱಸಿತ್ತ ನಂಗದಪರ್ಣಂ (ಶಂಶಾ. ೩-೩೩); ಕಾವ್ಯನಾಟಕಪ್ರೌಢಾಂಗಳನೋದಿಸುವ ಪೆಂದೊಡಾ ಮಾಹಾಸತಿ ನಿಜಪತಿಯಂ ಮಾರ್ಕೊಂಡಿಂತೆಂದಳ್ (ಶಂತಶಂ. ೦೬೪-೨೦); ಆನೊಂದಂ ಪೇಡಿದಪೆಂ ನೀನದನೆನೆಗೆಯ್ವುದಣ್ಣ ಮಾರ್ಕೊಳ್ಳದೆ (ಧರ್ಮಾಮೃ. ೨-೧೬೮). ೬. ಮಿಾರು : ಅತಿಶಯಿಸು ; ನವಯುವ್ವನರಾಗಂ ಚಿತ್ತವನೆಂದುಂ ಪುಗಲೆ ಪದೆಯದಿರ್ದುದೊ ಪೊಱಗೆಂಬವೊಲೆಸೆದು ಪಕ್ವಬಿಂಬಚ್ಛವಿಯಂ ಮಾರ್ಕೊಳ್ವುದಧರಮಣಿ ಮುನಿವರನಾ (ಶಾಂತಿಪು. ೭೩೩): ಮಡದಿಯ ಮುಡಿ ಮಾರ್ಕೊಂಡುದು ಕಾರ್ಮುಗಿಲಡಿಯೊಳ್ ತಾಂಡವಮಂ ಮೆಱೆವ ನೋಗೆನವಿಲ ಬೆಡಂಗಂ (ಶರ್ತು. ೩-೩೩). **ಮಾರುಗೊಳ್** : ೭. ಬೆಲೆಕೊಟ್ಟು ಕೊಂಡುಕೊಳ್ಳು ; ಖರೀದಿಸು: ಗೋಪತಿನಾಯಕನಂನ ದಾನನಿಮಿತ್ತದಿ . . . ಒಂದು ಮನೆಯುಮಂ ಸರ್ವ್ವನಮಸ್ಯವಾಗಿ ಮಾರುಗೊಂಡಂ (ವ್ಯಕಾ. ೦೯೪೦, ೩೮-೪೩; 1103). **ಮಾರ್ಕೊಳ್ಳು** : ೨. ಮಂಗಳೇಶನೂ ಮಾರ್ಕೊಂಡು ಬಂಧು ಪುಲಕೇಶಿಯನ್ನು ತಾಗಿದನು (ಕಚೇರ. ೭); ರಾಜಾದಿತ್ಯನು ಕುಳಿತ ಆನೆಯು ಆತನನ್ನು ಮಾರ್ಕೊಂಡಿತು ; ಬೂತುಗನಿಗೆ ಹಬ್ಬವಾದಂತಾಯಿತು (ಕಚೇರ. ೩೦). **ಮಾಱುಂಗೊಳ್** : ೭. ಮನುಜೇಶ್ವರನೊರ್ವಂ . . . ಎನ್ನಯ ಮನಮಂ ತನ್ನ ವಿಲಾಸದ ಬೆಲೆಗುತ್ತರಮೆ ಮಾಱುಂಗೊಂಡಂ (ಶಯುಕಾ. ೪-೨೩). ೮. ಅಧೀನಮಾಡಿಕೊಳ್ಳು ; ವಶಪಡಿಸಿಕೊಳ್ಳು : ನೀಱೆಯ ಕೊರಳತಿಶಯಿತು ಮಾಱುಂಗೊಂಡುದು ನೃಪಾಳತಿಳಕನ ಮನಮಂ (ಶಾರತು. ೨-೪೩); ಅಲರ್ವಿಲ್ಲನ ಮಡದಿಯ ಮಾಱುಂಗೊಂಡ ಮನೋಹರರೂಪದ ನೀಱೆಯ ನವಲಾವಣ್ಯದ ಸಿರಿಯ ನದೇಂ ಬಣ್ಣಿಪೆನು (ಶಯುಕಾ. ೩-೬೩). P ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ. **ಮಾಱುಕೊಳ್**: ೪. ತುಱುವ ಮಾಱುಕೊಳೆ (ಬ್ಯಕಾ. ೦೯೨೩, ೩೩-೨; ೧). **ಮಾಱುಗೊಳ್** : ೭. ನಾಗಯ್ಯಂ ತನ್ನ ಮಾಡಿಸಿದ ದೇಗುಲಕ್ಕನ್ನು ನಾಗವುಲಿಗಾವುಣ್ಡನ ಕೆಯ್ಯೊಳಂ ಪನ್ನಿರ್ಪತ್ತರ್ಕೆಯ್ಯಂ ಮಾಱುಗೊಣ್ಡು ಬಿಟ್ಟನ್ (ಶಾಕಾ. XI-i. ೩೪-೦೨; ೪೨೫): ಯಜ್ಞನಿಮಿತ್ತಂ ಒಂದಾಡಂ ಬೇಱೂರಿಂ ಮಾಱುಗೊಂಡು ಪೆಗಲೊಳಿಕ್ಕಿ ಪೋಪನಂ . . . ಕಂಡು (ಶಂತಶಂ. ೦೪೬-೧೦): ಹರಿಶ್ಚಂದ್ರಭೂವರನ ತನಯನಂ ಮಡದಿಯಂ ಮಾಱುಗೊಂಬಧಿಕರಿಲ್ಲ (ಹತಾ. ೦೦-೩). ೮. ಎನ್ನ ಮನವ ಮಾಱುಗೊಂಡನವ್ವ (ಮಹಾದೇ. ೩. ೪೧-೮೮); ಪುಷ್ಪಲಾವಿಯರೆತ್ತಿದ ಪಾಟಲದಾಮಮಂ ಮಾಱುಗೊಳ್ವ ನೀಜರ ಕೆಣೆ ಮಕ್ಷಿಕಾಕಾಸುಮಮೆನಿಸಿಯುಂ . . . ಪಜ್ಜಳಿಪ ಸಾಂದ್ರಚಂದ್ರಾತಪಾಡಂಬರಮಂ ಕಂಡು (ಕುಸುಮಾ. ೪-೩೩ ಪ) ; ಮಾಱಿಗಾಱದ ಮತ್ಸ್ಯವೆನ್ನನು ಮಾಱುಗೊಳುತಿದೆ (ಶಿಶುಗ. ೮-೨೩-೦೯). ೯. ವಿನಿಮಯ ಮಾಡು : ಅದಲುಬದಲು ಮಾಡು : ತಮ್ಮ ಕೆಂಪಂ ಕಣ್ಗಳ್ಗೆ ಕೊಟ್ಟು ಕಣ್ಗಳ ಬೆಳ್ಪಂ ತಮಗೆ ಮಾಱುಗೊಂಡಂತೆ (ಶಂಶಾ. ೪-೮೮ ಪ). ೧೦. ಅರ್ಜಿಸಿಕೊಳ್ಳು ; ಒಪ್ಪಿಸಿಕೊಳ್ಳು ; ಸ್ವೀಕರಿಸು : ಮಾಡಿದ ಕರ್ಮವ ನೋಡಯ್ಯ ಎನ್ನ ಮನದಣಿವನ್ನಕ್ಕ ಬೇಡೆನ್ನನು ಮಾರ್ಕೊಳ್ಳೆನ್ನನು ಮೇಲೆ ರೂಢಿಗೀಶ್ವರನ ಕೂಡುವೆನು ನೀರಡಿಸಿದಂತೆ (ದೇವಾಶ. ೭-೦೨) ; ಮಾಱುಗೊಳ್ಳು ತನ್ನನೀಗಲು ತೋಱಿಸದೆ ಹೀನಿದ್ದೆಯಾದೊಡೆ ಭಕ್ತ ತಾನಲ್ಲ (ಸಂಶಕ. ೮-೭೭). ೧೧. ಜಗಳವಾಡು; ಕಾದಾಡು : ಪರಿಕಿಪಡೆ ಕೋಪಪ್ರಸಾದವಿಪೆರಡು ಉಂಟಲ್ಲಾ ಶಿವನೊಳಂ ಧರೆಯೊಳೊಮ್ಮನ ಧಾನ್ಯಕಾದಡೆ ಮಾಱುಗೊಂಬುವರು (ಬಸವ. ೨೨-೬೪).

**ಮಾರ್ಕೊಳ್ವರ ಗಂಡ, ಮಾರ್ಕೊಳುವರ ಗಂಡ** = ಪ್ರತಿಭಟಿಸುವವರನ್ನು ಪರಾಕ್ರಮದಿಂದ ಎದುರಿಸುವವನು; ಕದಂಬವಂಶದ ತೈಲಪದೇವನ ಒಂದು ಬಿರುದು : ಮಾರ್ಕೊಳ್ವರ ಗಣ್ಡಂ ಪ್ರತಾಪ

ಮಾರ್ತ್ತಣ್ಡಂ ನಾಮಾವಳೀವಿರಾಜಿತರಪ್ಪ . . . ತೈಲಪದೇವರ್ (ಇಆ. X. ೨೬೨-೨೯; 1108): ಕಾದಂಬರಾಜರಾಭರಣಂ ಮಾರ್ಕ್ಕೊಳ್ವರ ಗಂಡ ಮಂಡಳಿಕರ ಗಂಡ . . . ನಾಮಾವಳಿ ವಿರಾಜಿತಮಪ್ಪ ಶ್ರೀಮಂನ್ಮಹಾಮಂಡಳೇಸ್ವರಂ ತೈಲಪದೇವರಸರು ಬನವಾಸೆಪಂನಿಚ್ಛಾಸಿರಮುಮಾನಾಳುತ್ತಮಿರೆ (ಕಂ. IV. ೪೮-೦೭; 1247) : ಪ್ರತಾಪಮಾರ್ತ್ತಂಡ ಮಾರ್ಕೊಳುವರ ಗಂಡ ನಾಮಾದಿ ಸಮಸ್ತಪ್ರಸಸ್ತಿಸಹಿತಂ ಶ್ರೀಮನುಮಹಾಮಂಡಳೇಶ್ವರ ತೈಲಹದೇವರಸರು . . . ರಾಜ್ಯಂಗೆಯುತ್ತಮಿರೆ (ಸೌಇಇ. XX. ೭೭-೦೨ ; 1118). **ಮಾರ್ಕೊಳ್ವರ ಭೀಮ** = ಪ್ರತಿಭಟಿಸುವವರಿಗೆ ಭೀಮನಂತೆ ಭಯಂಕರನಾದವನು; ಒಂದು ಬಿರುದು : ವೈರಿಸಂಹಾರಿ ಮಾರ್ಕೊಳ್ವರ ಭೀಮಂ ಭೀಮಶೌರ್ಯ್ಯಂ ವಿರಟಪಟಹಕೋಟಾಘರಟ್ಟಂ (ಎಕ. VIII. ಸಾಗರ. ೨೦೬(b)-೭; 1042). [ಮಾರ್ (< ಮಾಱು₂) + ಕೊಳ್₁]

**ಮಾರ್ಕೊಳ್ಳು** 'ಮಾರ್ಕೊಳ್' ನೋ.

**ಮಾರ್ಕೋಲ್, ಮಾರ್ಕೋಲು, ಮಾಱುಗೋಲು** (ನಾ). (ವೈರಿಯ ಬಾಣಕ್ಕೆ) ಪ್ರತಿಯಾಗಿ ಬಿಡುವ ಬಾಣ.— ಸರಳು : ಮಾಱು + ಕೋಲ್. ಮಾರ್ಕೋಲ್ (ಶಬ್ದಸ. ೯೦ ಪ್ರಯೋ). **ಮಾರ್ಕೋಲು :** ಆ ಗ್ರಾಮದ ತುಱುವಂ ತೊಱೆಪರ ಕಾಳೆಯ ಆ ಪುಯ್ಯಲಿಂಗೆಱಗಿ ಮೇಲಾಳಂನಿಱಿದು ಕುದುರೆಯಂ ಪಿಡಿದು ತಂಮ ಕೂಸನ ಕಯ್ಯ ಮಾರ್ಕೋಲು ಮಗುಳೆ ಅಳಿವರಿದು . . . ತುಱುವಂ ಮಗುಱ್ಚಿ ತೆಲ್ಲಿಗ ಬಮ್ಮಂಣ ಸುರಲೋಕಪಾಪ್ತನಾದ (ಎಕ. VII. ಶಿಕಪು. ೩೭-೮ : 1140): ಕುರುಭೂಪಾಲ ಸಮ್ಮುಖನಾಗು ಹಿಡಿ ಮಾರ್ಕೋಲನು (ಕುವ್ಯಾಭ. ೭-೩೪). **ಮಾಱುಗೋಲು :** . ಶರಣರೊಡನೆ ಶ್ರುವದ ಮಾಡಿ ಮಾಱುಗೋಲ ಬಿಡುವೆನಯ್ಯಾ (ಬಸವ. ೭೦೨). 'ಮಾರ್ಸರಲ್' ಪರಾ.

**ಮಾರ್ಕೋಲ ಬಱಸಿಡಿಲು** = ಪ್ರತಿಯಾಗಿ ಬರುವ ಬಾಣಕ್ಕೆ ಬರಸಿಡಿಲಿನಂತಿರುವವನು : ಒಂದು ಬಿರುದು : ವೈರಿಮನೋಭಂಗ ನಯ್ಯಸ ಸಿಂಘಂ ಮಾರ್ಕ್ಕೋಲ ಬಱಸಿಡಿಲು ನಾಮಾದಿಸಮಸ್ತಪ್ರಶಸ್ತಿ ಸಹಿತಂ ಶ್ರೀಮನ್ಮಹಾಸಾಮಂನ್ತಂ ಸಿಂಗರಸಂ . . . ಬಿಟ್ಟ ತೋಂಟ (ಸೌಇಇ. IX–i. ೦೬೭-೨೭; 1111). **ಮಾರ್ಕೋಲ ಭೈರವ** = ಎದುರಾಗಿ ಬರುವ ಬಾಣಕ್ಕೆ ಭೈರವನಂತೆ ನಾಶಕಾರಕನಾದವನು : ಒಂದು ಬಿರುದು : ವಿಜಯಲಕ್ಷ್ಮೀಕಾಂತ ಶೌರ್ಯ್ಯಕಂಠೀರವಂ ಮಾರ್ಕೋಲ ಭೈರವಂ ಚೋಳಬಳಜಲಧಿವಡಬಾನಳಂ . . . ಶ್ರೀಮದ್ದೇಮರಸರ್ (ಸೌಇಇ. IX–i. ೦೦೬-೪೭ ; 1057); ಬಂಟರ ಬಾವ ಸತ್ಯರಾಧೇಯ ಮಾರ್ಕೋಲ ಭೈರವ ಸಿತಗರ ಗಂಡ . . . ನಾಮಾದಿ ಸಮಸ್ತಪ್ರಶಸ್ತಿ ಸಹಿತ ಶ್ರೀಮನ್ಮಹಾಸಾಮನ್ತನ್ ಆದಿತ್ಯ ಗಂಜೇಯಾತ್ (ಎಕ. VI. ಕಡೂರು. ೩೩-೩೦; 1136). [ಮಾರ್ (< ಮಾಱು₂) + ಕೋಲ್₁]

**ಮಾರ್ಕೋಲು** 'ಮಾರ್ಕೋಲ್' ನೋ.

**ಮಾರ್ಗ** (ನಾ). ೧. ದಾರಿ ; ಹಾದಿ : "ಅಧ್ವಾ, ಪಂಥಾಃ, ಪದ್ಧತಿಃ . . . ಮಾರ್ಗಃ, ಪದ್ಯಾ, ನಿಗಮಃ– ಈ ೧೨ ಬಟ್ಟೆ" (ಹಲಾಯು. ೪೩-೦೦೩); ಹೊಳಲಮಯವಾ ಮಾರ್ಗ ಮಂದಾನಿಲನ ಮಯ ದಿಗುವರ್ಗ ಸಿರಿಯೊಬ್ಬಳಿಯ ಮಯವಾ ವಿಷಯವೀಥಿ ಕುಬೇರಸಹಭವನ (ತೊರಾ. ೭-೭-೦೯); ಮಾರ್ಗದೊಳ್ ಸುರಸೆಯಂ, ಕಡಲಿನಿಂದೆದ್ದು ಬಾಯ್ದೆರೆದಡ್ಡ ನಿಂದಳಂ, ಮುರಿದು . . . ಐತರುತಲಿರ್ದ ಹನುಮನಂ . . . ತಿಳಿದಳಾ ಸಿಂಹಿಕೆ (ಶ್ರೀರಾವಿ. ೪೦೦-೨೦೦). ೨. ಕಾಡಿನಲ್ಲಿ ಪ್ರಾಣಿಗಳು ಓಡಾಡುವ ಜಾಡು ; ಸರುವು. ೩. ರೀತಿ : ಕ್ರಮ : ವಿಕ್ರಮಪುರದ ಬ್ರಹ್ಮಪುರಿಯ ನಾ[ಲ್ವ]ತ್ತಿರ್ವ್ವರ್ಗ್ಗೆ ಸುಂಕಮಂ ಮಾಣ್ದು ಮಾಡಿದ ಮಾರ್ಗ್ಗಮೆನ್ತೆನೆ ಅಡಕೆ ತೋಂಟಕ್ಕೆ ಪಣವೊಂ[ದು] ಅಡಕೆ ನೂಱು (ಸೌಇಇ. XI–i, ೯೭-೭: 1061); ವೇದಶಾಸ್ತ್ರಮಾರ್ಗವೆಲ್ಲವು ಹೊಗಳಿ ಕಾಣದೆಂಬುದ ಗೊಹೇಶ್ವರ ಸಾಕ್ಷಿಯಾಗಿ ಮೂಱುಲೋಕ ಬಲ್ಲುದು ಕಾಣಾ ಸಿದ್ಧರಾಮಯ್ಯ (ಅಪವಂ. ೨೧೭-೯೭೭); ನರಹರಿಯನಾ ವೀರಗಣನಂಬರಕೆ ಹಾಯ್ಕುವ ತೆಱದೆ ಹಾಯ್ಕುತ . . . ಹರನಿಭದೈತ್ಯನಂ ಸಂಹರಿಸಿ ಸೀಳುವ ಮಾರ್ಗದಿಂದೊಡೆ ಸೀಳ್ದನುರ್ಬಿನಲಿ (ಬಸಪು. ೨೧-೪೩). ೪. ಸಂಪ್ರದಾಯ : ಪದ್ಧತಿ. ೫. ಅರಸುವಿಕೆ ; ಹುಡುಕುವಿಕೆ ; ಶೋಧನೆ ; "ಅಱಸುವಲ್ಲಿಯುಂ ಮಾರ್ಗಮೆಂಬುದು" (ಹಲಾಯು. ೦೩೪-೨೦). ೬. ಚಾಂದ್ರಮಾನ ವರ್ಷದ ಒಂಬತ್ತನೆಯ ತಿಂಗಳು ; ಮಾರ್ಗಶಿರ : "ಮಾರ್ಗಶೀರ್ಷಃ, ಸಹಃ, ಮಾರ್ಗಃ, ಆಗ್ರಹಾಯಣಿಕಃ – ೪ ಮಾರ್ಗಶೀರ್ಷಮಾಸದ ಹೆಸರುಗಳು" (ಸಿದ್ಯಾಂತಿ. ೩೯). ೭. ನೃತ್ಯ , ಸಂಗೀತ ಮೊದಲಾದುವುಗಳಲ್ಲಿಯ ಪ್ರೌಢವಾದ ಸಾಂಪ್ರದಾಯಿಕ ರೀತಿ,–ಧಾಟಿ : ಸರಸಂ ಸಂಗತಮಾರ್ಗ ದೇಸಿಯನೆ ರಾಗಪ್ರೌಢಿಯಂ ಬೀಱಿ ಬಿತ್ತರದಿಂ ಪಾಡಿದರೋಜೆಯಿಂ ಶ್ರುತಿಸುಖಶ್ರೀದಾಯಕರ್ ಗಾಯುರ್ (ಛಂಕ್ರಿ. ೦೨-೨೪). ೮. ಉಪಾಯ; ಅನುಕೂಲ ; ಧಾನ್ಯಾದಿ ಜೀನಸು ಚೀಲಗಳಲ್ಲಿಯೇ ತುಂಬಿ ಬರುವುದರಿಂದ, ಅದರ ತೂಕದ ಅಂದಾಜು ನಮಗೆ ತಿಳಿದು ಬರುವಂತೆ ಖರೇದಿ ಜೀನಸಿನ ವಿಷಯದಲ್ಲಿ ತಿಳಿಯುವದಕ್ಕೆ ಮಾರ್ಗವಿಲ್ಲ (ಮುಂಬವ್ಯಾ. ೭). ೯. (ಗಾಯದಿಂದಾದ) ಕಲೆ; ಗುರುತು. ೧೦. ಮಾರ್ಗಶೀರ್ಷ ನಕ್ಷತ್ರ. ೧೧. ವಿಷ್ಣು: ನಾರಾಯಣ. ೧೨. ಕಸ್ತೂರಿ. ೧೩. [ಕಾವ್ಯಮೀ] ಸಾಹಿತ್ಯದ ಪರಿಭಾಷೆಯ ಮೇರೆಗೆ ಸಂಸ್ಕೃತ ಭಾಷೆಯ ಶಬ್ದಗಳನ್ನು ಬಳಸಿ ರಚಿಸುವ ಪ್ರಾಚೀನ ಲಕ್ಷಣಬದ್ಧವಾದ ಕಾವ್ಯ ರಚನಾಕ್ರಮ ; P ಬೇರೆ ಬೇರೆ ದೇಶಭಾಗಗಳಲ್ಲಿ ರಚಿತವಾಗಿರುವ ಕಾವ್ಯಗಳ ವಿಶಿಷ್ಟಲಕ್ಷಣಗಳನ್ನು ಆಧರಿಸಿ ವೈದರ್ಭಿ. ಗೌಡಿ. ಪಾಂಚಾಲಿ ಎಂಬುದಾಗಿ ಶೈಲಿಗಳನ್ನು ವಿಂಗಡಿಸಲಾಗಿದೆ: ಕ್ಷಿತಿಪತಿಯಂ ಬರಿಸಿ . . . ಕುಶಲವಾರ್ತಾಂತರಮಂ ಮಿತವಚನಂ ಬೆಸಗೊಂಡತಿವಿತೀರ್ಣಮುದನಾದನಾತನೆಂಬುದು ಮಾರ್ಗಂ (ಕಂರಾ. ೨-೩); ಆದಿಪುರಾಣವಸ್ತುಕೃತಿಯಂ ಪೇೞ್ದಂ ಬೆಡಂಗಪ್ಪ ಮಾರ್ಗದೊಳಂ ದೇಸಿಯೊಳಂ ಪೊದಱ್ಸೆವಿನಂ ಸಂಸಾರಸಾರೋದಯಂ (ಆದಿಪು. ೦೭-೭೬). 'ದೇಸಿ' ಪರಾ. ೧೪. [ನಾಟ್ಯ] ಭಾವಾಶ್ರಯವಾದ ನೃತ್ಯ: ಈ ನಾಟ್ಯದೊಳತಿಶಯದಿಂ ಭೂನುತವಹ ಮಾರ್ಗ ದೇಸಿಯೆಂಬಭಿಧಾನಂ ತಾನೆಂತಾದುದೆನಲ್ಕೆ . . . ವಿಧಿ ಸುರಪ ಮುಖ್ಯರಾದ ವಿಬುಧರಿದಸುಸಿರಿದುದಱಿಂದೆ ಮಾರ್ಗಮೆನಿಕ್ಕುಂ (ಲಾಸ್ಯರು. ೧-೨೦): ಭಾವಾಶ್ರಯವಾದ 'ನೃತ್ಯ'ಕ್ಕೆ ಮಾರ್ಗವೆಂದೂ ತಾಲಲಯಾಶ್ರಯವಾದ 'ನೃತ್ತ'ಕ್ಕೆ ದೇಶಿ (ದೇಸಿ) ಯೆಂದೂ ಹೆಸರಿರುವಂತೆ ದಶರೂಪಕದಿಂದ ತಿಳಿಯಬರುತ್ತದೆ (ಕೈಬಿ. ೨೨೩). ೧೫. [ದ್ವೈತ] ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ ಮತ್ತು ಭೋಗ ಎಂಬ ನಾಲ್ಕು ಬಗೆಯ ಮುಕ್ತಿಭೇದಗಳಲ್ಲಿ ಒಂದು: ಸಾಯುಜ್ಯಪ್ರಾಪ್ತಿ : ಇದರಿಂದ ಬರುವ ಮೋಕ್ಷ, ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂದು ನಾಲ್ಕುಪರ್ವಗಳುಳ್ಳದ್ದು (ಹಿಂದಸಾ. ೨೯೨). ೧೬. [ಬೌದ್ಧ] ದುಃಖ, ಆಯತನ, ಸಮುದಯ ಮತ್ತು ಮಾರ್ಗ ಎಂಬ ನಾಲ್ಕು ಬಗೆಯ ಧರ್ಮಸಾಧನೆಯ ತತ್ತ್ವಗಳಲ್ಲಿ ಒಂದು: ಸರ್ವವಸ್ತುಗಳು ಕ್ಷಣಿಕ ಎಂದು ತಿಳಿಸುವ ತತ್ತ್ವ: ಆರ್ಯಸತ್ಯವಸ್ತುಗಳು — ದುಃಖ, ಸಮುದಯ, ಮಾರ್ಗ, ನಿರೋಧ ಎಂಬುದಾಗಿ ನಾಲ್ಕುವಿಧ (ಹಿಂದಸಾ. ೨೯) : ಸರ್ವವಸ್ತುಗಳೂ ಕ್ಷಣಿಕ ಎಂಬ ಸ್ಥಿರವಾದ ಭಾವನೆಯೇ ಮಾರ್ಗ (ಭಾರದ. ೨೦೯) [ಸಂ.]

**ಮಾರ್ಗಂಟಿ** (ನಾ). ಮಾರಾಟಕ್ಕೆ ಇರುವ ಆಕಳು : ಕಿಱು + ಕೋಲ್ = ಕಿಱುಗೋಲ್; ಪಿವಂ ತುಱುಗಾಡು, ಕುಱುಗಂಟು . . . ತೋಕರ್ಣಂ. ಮಾರ್ಗಂಟಿ (ಶಬ್ದಮ. ೯೭ ಪ್ರಯೋ).

[ಮಾರ್ (< ಮಾಱು₂) + ಗಂಟ₁]

**ಮಾರ್ಗಂದಪ್ಪು** (ಕ್ರಿ). ೧. ದಾರಿತಪ್ಪು ; ಹಾದಿತಪ್ಪು : ಒಂದು ನೊಗ ನಿಕ್ಕುವನಿತುಂ ಮುಂದೀಕ್ಷಿಸಿ ಮೆಲ್ಲನಡಿಯಿಡುತುಂ ಮುನಿಮಾರ್ಗಂದಪ್ಪದಡವಿಯೊಳ್ ಮಾರ್ಗಂದಪ್ಪಿ ಬರುತ್ತುಮಿರ್ದೊಡೆ (ವರ್ಧಪು. ೧೧-೩೦). ೨. ಸನ್ಮಾರ್ಗದಿಂದ ದೂರವಾಗು : ಧರ್ಮವನ್ನು ಕೈಬಿಡು : ಮಾರ್ಗಂದಪ್ಪಿದ ಕುರುಡರನಜದ ಬಟ್ಟೆಗುಯ್ವರೆ ಪಿರಿಯರ್ (ಶಾಂತಿಪು. ೪-೧೧೧); ಮಾರ್ಗಂದಪ್ಪಿದರನಾರುಮೇಂ ಮೆಚ್ಚುವರೇ (ಕೃಂಗಾಅ. ೧-೩).
[ಮಾರ್ಗ + ತಪ್ಪು₁]

**ಮಾರ್ಗಕಾರ** (ನಾ). ಹೊಸಪ್ರಕಾರದ ಬರವಣಿಗೆಯ ದಾರಿಯೊಂದನ್ನು ರಚಿಸಿ ಮುಂದಿನ ಪೀಳಿಗೆಯವರಿಗೆ ಆ ರೀತಿಯ ರಚನೆಗೆ ದಾರಿಮಾಡಿಕೊಡುವ ವ್ಯಕ್ತಿ: ಶ್ರೀಯುವರು ಮಾರ್ಗದರ್ಶಿಗಳು, ಮಾರ್ಗಕಾರರು (ವಿಚಾಮಂ. ೧೧೭). [ಸಂ.]

**ಮಾರ್ಗಕ್ರೀ** (ನಾ). [ವೀಶೈ] ಧಾರ್ಮಿಕವಾಗಿ ಷಟ್‌ಸ್ಥಲಮಾರ್ಗವನ್ನು ಹಿಡಿದು ಬಾಳುವ ಕ್ರಮ : ಮಾರ್ಗಕ್ರೀಯು ಸಂಪಾದಿಸನಾಗಿ ದ್ವೈತಿಯಲ್ಲ ಜ್ಞಾನಾದೇವ ತು ಕೈವಲ್ಯಂ ಎಂಬುದ ಸಂಪಾದಿಸನಾಗಿ ಅದ್ವೈತಿಯಲ್ಲ (ತನ್ನಸ. ೪. ೧೧೯-೨೪೭); ಮಾರ್ಗಕ್ರೀಯಲ್ಲಿ ಸಂಬಂಧವಾದ ಭಕ್ತ ಮಾಹೇಶ್ವರ ಪ್ರಸಾದಿಗಳೆಂಬುದೀಗ ಈ ಧರೆಯವರು ಹೋಗಿ ಎಂಬ ಶಬ್ದಕ್ಕರ್ಥ (ಪೋಳಸಾ. ೨೭೮-೬೧೯ ಟೀಕೆ). [ಮಾರ್ಗ + ಕ್ರೀ (< ಕ್ರಿ)]

**ಮಾರ್ಗಗ** (ನಾ). ದಾರಿಹೋಕ ; ಪಥಿಕ : ಸಾರಸೌರಭಂ ಸೊಗಯಿಪ ಸುಯ್ಯೆಲರ್ಕರಕವಾರಿಯೊಳಾಗಿಸೆ . . . ಮೃದುಸುಗಂಧಮನಿಐಯನಿಭಾಸ್ಯೆ ಸೂಸೆ ಮಾರ್ಗಗನೆರ್ದೆ ತಣ್ಪನಾನೆ ತನು ರೋಮಾಂಚಿಸಿ ಕಂಪಿಸೆ ನೀರನೀಂಟಿದಂ (ರಾಜಶೇ. ೨-೨೩). [ಮಾರ್ಗ + —ಗ₂./ಸಂ. ಮಾರ್ಗಿಕ]

**ಮಾರ್ಗಜಙು** (ಕ್ರಿ). ಪ್ರತಿಯಾಗಿ ಬೆದರಿಸು : ಸಹಪಾಂಸುಖೇಳರೆನಿಸಿದ ಬಹುನೃಪದಾರಕರ ನಡುವೆ ದಾಸೇರಕರೀ ಪ್ರಹಿತಮಣಿಕನಕಮಂಡನ ಸಹಿತಂ ಮಾರ್ಗಜಙಿ ನೂಂಕಿ ಪೊಕ್ಕುಪವನಮಂ (ಪುಷ್ಪಪು. ೪-೩೨).
[ಮಾರ್ (< ಮಾಱು₂) + ಗಜಙು₁]

**ಮಾರ್ಗಡೆ** (ನಾ). ಪ್ರತಿನಾಯಕ (?) : ನೊಕ್ಕನಂ ಪೆರ್ಗ್ಗಡೆಯೆಂಬುದೇ ಧುರಕೆ ಮಾರ್ಗ್ಗಡೆಯುಂ ಪತಿಗೇಕಸಾಧನಂ (ಎಕ. VII, ಶಿವಮೊ. ೧೧-೪೨: 1085); ಪೆಡೆವಣಿಯ ಫಣೆಗಳಂತಿರೆ ಸೊಡರಂ ಪೊತ್ತಿರಡುಕೋಡು ಕಲಿದೇಂ ಮುಂದಂ ನಡೆದುದು ಧವಳವೃಷಂ ಮಾರ್ಗಡೆಯಂತಿರೆ ನಾಲ್ಕುಕಾಲ ಫಣಿಭೀಷಣಮಂ (?) (ಅರ್ಜುನ. ೭-೪೩). 'ಪೆರ್ಗಡೆ₁' ಪರಾ.
[ಮಾರ್ . . . ಮಾಱು₂) + ಕಡೆ₃]

**ಮಾರ್ಗಣ** (ನಾ) ೧. ಹುಡುಕುವಿಕೆ: ಶೋಧನೆ: ಅನ್ವೇಷಣೆ : "ಅನ್ವೀಕ್ಷಣಂ, ವಿಚಯನಂ. ಮಾರ್ಗಣಂ. ಮೃಗಣಾ. ಮೃಗಃ—ಇ ಹುಡುಕಿ ನೋಡುವಿಕೆ" (ಶಬ್ದಾಂಶ. ೭೭೭). ೨. ಯಾಚನೆ; ಬೇಡುವುದು. ೩. ಭಿಕ್ಷೆ ಬೇಡುವವನು; ಯಾಚಿಸುವವನು : "ಯಾಚಕವರ್ಗಕ್ಕಂ ನಾರಾಚಕ್ಕಂ ಮಾರ್ಗಣಾಂಕಮುದು" (ಪಂಪಾಶೋ. ೦೨೭-೩೯); ಅರಸನೀ ಪರಿ ಯಜ್ಞಶಾಲಾಕರಣ ಮೊದಲಾದುಚಿತಕೃತ್ಯವ ವಿರಚಿಸುತ್ತಲಿರೆ. . . ಪರಮಸಂಪ್ರೀತಿಯನು ತಾಳ್ದರು ನೆರೆದ ಭೂಪರು ಸಂಯಮಿಗಳುರುತರದ ವಿಪ್ರರು ಸಕಲದಿಗ್ದೇಶಗಳ ಮಾರ್ಗಣರು (ಜೈಮಿ. ೭-೭೭). ೪. ಬಾಣ ; ಶರ : "ಕಂಕಪತ್ರಃ. ಶರಃ. ಮಾರ್ಗಣಃ. ಬಾಣಃ. . . ಶಿಲೀಮುಖಃ. ರೋಪಃ—ಈ ೧೬ ಅಂಬು" (ಕರ್ಣಾಟ. ೭೭-೩೦೨); ಉಗ್ರಮಾರ್ಗಣಮಾ ವೀರನಿನಾದ ಸಿಂಹನಿನದಂ ತಮ್ಮಂ ಪಳಂಚಲ್ಕೆ ತತ್ಪ್ರಣವೃಂದಂ ಮಣಿದೋಡೆ ಮಾಣದೆ ಚಿಲಾತಾವರ್ತರಳ್ಕುತ್ತೆ. . . ಎಱಗಿದರ್ ಚಕ್ರೇಶಪಾದಾಬ್ಜದೊಳ್ (ಆದಿಪು. ೧೩-೭೭); ದೈತೇಯನುಮೆಚ್ಚಂ ವಾರುಣಮಾಯುವ್ಯಕುಬೇರರುದ್ರಮಾರ್ಗಣದಿಂದಂ (ಜಗಂ. ೦೨-೪೦); ಒರ್ಮೊವರೊಳೆ ದೇವರನಾಡಿದ ಪರುಷತರ ವಾಕ್ಯಮಾರ್ಗಣಂ ಕರ್ಣಕೋಟರಮಂ ನಾಂಟೆ (ರಾಜಶೇ. ೩೩-೭).

೧. ೪ : ಜನ್ಯಪ್ರತಿಪಾಳನಮಂ ಧರ್ಮಪ್ರೀತಿಯಿಸ್ಸೆದೆ ಮಾಡಿದಂ ಸುಚರಿತ್ರೆಯಿಂದಾ ಪ್ರಭುಮಾರ್ಗಣಕುಶಲಾಭಿಪ್ರಾಯನೆನಿಪ್ಪವಂಗೆ ತಾನುಚಿತಮೆ ದಲ್ (ಚಂದ್ರಪ್ರ. ೨-೬೩). ೫. ಸರಿಯಾದ ರೀತಿಯನ್ನು ಪಾಲಿಸುವವನು : ಕಂಸಂ ತದೀಯ ಬಾಲಹಿಂಸಾಪರನಾಗಿ ಸೂತಿಕಾಸದನಮಂ ಪೊಕ್ಕು. . . ಪಾರ್ಥಿವರಕೀರ್ತಿಯೆನೆ ಮಾರ್ಗಣರಮಾರ್ಗಮೆನೆ ಬಂಧುಗಳಬಂಧುರಮೆನೆ . . . ಸಮುದ್ರಕ್ಷೋಭದಂತೆ ಘೂರ್ಣಿಸುವ ಜನಕ್ಷೋಭಮಂ ಕೈಕೊಳ್ವದೆ . . . ಕೂಸನಪ್ಪಳಿಸಿ (ಜಗಂ. ೨-೩೩ ವ). ೬. ಶತ್ರು : ವೈರಿ. ೭. ನರಕದಲ್ಲಿರುವವನು; ನಾರಕಜೀವಿ. ೮. ಬಿದಿರು : "ಅಸೆಯಿಂ ವೇಟ್ಟಿನೊಳು ನಾರಾಚದೊಳು ಕೀಚಕದೊಳಂ ಮಾರ್ಗಣಮೆನಿಕ್ಕುಂ" (ಮಂಗರಾ. ೦೩೦-೩೪): "ಅರಾತಿ ಯಾಚಕಾಜನ ಶರ ಕೀಚಕಾವನಿಜ ನಾರಕರೆಂಬಿವು ಮಾರ್ಗಣಾಹ್ವಯಂ" (ನಾನಾರ. ೭೦). ೯. [ಜೈನ] ಜೀವಿಗಳು ಹಾದುಹೋಗಬೇಕಾದ ಅಥವಾ ಹುಡುಕಿಕೊಂಡು ಕಂಡುಕೊಳ್ಳಬೇಕಾದ ಮಾರ್ಗ ಹಾಗೂ ಈ ಹಂತದಲ್ಲಿನ ಜೀವದ ಅವಸ್ಥಾ ವಿಶೇಷ: ಮಾರ್ಗಚತುಷ್ಟಯಮುಭಯಮಾರ್ಗದೊಳಳವಟ್ಟು ಮಕರಕೇತನಸುಮನೋಮಾರ್ಗಣಮೆನೆ ಸೋಲಿಸೆ ಸಫೆ ಮಾರ್ಗಣಮೆನೆ ಪೊಗಟ್ಟುದೊಂದೆ ಕೊರಲಿಂದಾಗಳ್ (ಪುಣ್ಯಪು. ೮-೩೨). [ಸಂ. ಮಾರ್ಗಣ, ಮಾರ್ಗಣಾ]

**ಮಾರ್ಗಣಕ** (ನಾ). ಬೇಡುವವನು : ಯಾಚಕ : "ಅರ್ಥೀ. ಮಾರ್ಗಣಕಃ, ಯಾಚಕಃ, ವನೀಪಕಃ — ಈ ೪ ಬೇಡುವವಂ" (ಕರ್ಣಾಟ. ೩೯-೨೧೪).
[ಸಂ.]

**ಮಾರ್ಗಣಾನುರಕ್ತ** (ನಾ). ೧. ಧನುರ್ವಿದ್ಯೆಯಲ್ಲಿ ಆಸಕ್ತಿಯುಳ್ಳವನು : ಆ ನೃಪಂ ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗಸಂಗಿಯಲ್ಲು . . . ಮಾರ್ಗಣಾನುರಕ್ತನಾಗಿಯುಂ ಮಾರ್ಗಣಾನುರಕ್ತನಲ್ಲು (ಪುಷ್ಪಪು. ೯-೩೯ ವ). ೨. ಬೇಡುವವನು : ಯಾಚಕ : ಮೇಲಿನ 'ಪುಷ್ಪಪು.' ಪ್ರಯೋಗವನ್ನು ನೋಡಿ. [ಸಂ.]

**ಮಾರ್ಗಣಾಸ್ಥಾನ** (ನಾ). [ಜೈನ] ಸಂಸಾರಿಜೀವಗಳು ಜ್ಞಾನದ ಮೂಲಕವಾಗಿ ಕಂಡುಕೊಳ್ಳುವ ನೆಲೆ : ದ್ವಾವಿಂಶತಿಪರೀಷಹಂಗಳುಮಂ ಗುಣಸ್ಥಾನಜೀವಸ್ಥಾನಮಾರ್ಗಣಾಸ್ಥಾನಂಗಳುಮಂ . . . ಮಧುರಕಟುಕವಿಪಾಕಮುಮಪ್ಪ ಕರ್ಮ(ಭೇದ)ಫಲಮುಮಂ ಕೇಳ್ದು ತ್ರಿಜ್ಞಾನಧರಂ ಕ್ಷಾಯಿಕಸಮ್ಯಕ್ತ್ವಾದಿ ಗುಣಂಗಳೊಳು ಸಮನ್ವಿತನಾಗಿ ಪೋದಂ (ಶಾಪುಂಪು. ೯೩) ; ಗತಿ ಇಂದ್ರಿಯ ಕಾಯಯೋಗ ವೇದ ಕಷಾಯ ಜ್ಞಾನ ಸಂಯಮ ದರ್ಶನ ಲೇಶ್ಯಾಭವ್ಯ ಸಮ್ಯಕ್ತ್ವ ಸಂಜ್ಞಾಹಾರಕಂಗಳೆಂಬ ಚತುರ್ದಶಮಾರ್ಗಣಾಸ್ಥಾನಂಗಳಂ ಅಱಿಯ ಪಡುವಲ್ಲಿ (ತತ್ತ್ವಸ್ತ್ರ. ೦೩).
[ಸಂ.]

**ಮಾರ್ಗಣೆ₁**, ಮಾರ್ಕಣೆ (ನಾ). ಪ್ರತಿಯಾಗಿ ಬಿಡುವ ಬಾಣ : ಎದುರು ಬಾಣ : ಪೇರೊಡಲ ಗೋರರೂಪಿನ ದಾನವಂ . . . ಬಲ್ಗಣೆಗಳಂ ಪೊಡೆಯುಂ ಮಾರ್ಗಣೆಗಳಂ ಕಡಿದುಂ . . . ಮುಟ್ಟಿಯಿಪ ಪ್ರತಿಭಟರಂ ತಡೆದು (ರಾಜಶೇ. ೧೧೨-೩). **ಮಾರ್ಕಣೆ**: ಮಾರ್ಗಣೆ. ಮಾರ್ಕೊರಲ್. ಮಾರ್ದನಿ. ಮಾರ್ಪಡೆ (ಶಾಶಾರು. ೦೨೦ ಪ್ರಯೋ) ; ಮಾರ್ಗಣೆಗಳಂ ಪಣೆಯೊಳಣೆವುತುಂ ಪೊಣೆವುತುಂ ಕೂರ್ಗೋಲ್ಗಂಬುದುದಿಗಳಿಂದೆ ಇರ್ಕಲದ ದಾನವರನಿಱಿವುತುಂ ಮುಱಿವುತುಂ . . . ವೃಷಭಂ ಪ್ರಹಾರಿಸಿದನು (ಚಂಪು. ೪೪-೧೮). [ಮಾರ್ (< ಮಾಱು₂) + ಕಣೆ₁]

**ಮಾರ್ಗಣೆ₂** (ನಾ). ೧. ಹುಡುಕುವಿಕೆ ; ಶೋಧನೆ : ಮಾರ್ಗಣೆಯ ಮುಖ್ಯ : ಲಭ್ಯದ ಮಾತದಂತಿರಲಿ ಸ್ವರ್ಗವನು ಭುವಿಗಿಳಿಸಬಲ್ಲವನದಾರು? (ಮಂಕುತಿ. ೯೭೯). ೨. ಬೇಡುವಿಕೆ ; ಯಾಚಿಸುವಿಕೆ. ೩. ಬಾಣ ; ಅಂಬು : ಎತ್ತಲ್ ರಿಪುಪುರಮಿರ್ದಪುದೆತ್ತಲ್ ಖಳನಿಸುವನೆತ್ತ ಮಾರ್ಗಣೆ ಕವಿವತ್ತೆತ್ತ ನಿವಾರಿಪೆನೆಂಬೀ ಚಿತ್ತಂ ಪರಿಗಾದುದೇಂ ಪ್ರತಾಪಿಯೊ ಸಾಲ್ವಂ

(ಶಗ. ೧೬-೯೭) : ಕನಕಾಂಬರ ಮಾರ್ಗಣೆಯೊಳೆರಸಿ ಪೊದಸಿದನು (ಶಬ್ದಾ. ೧೧-೫೯): ಅಂತವನುಸುರುತಿರಲು, ಕಂದರನ ಮನಕಂತು ಮಾರ್ಗಣೆಯು ದಾಳಿಯಲಿ ಮುಂತ್ರುಗೆಡುತಲಿರೆ (ಶರಶ. ೫-೨೨) ೪. = ಮಾರ್ಗಣ ೬: ಉಪಶಮ ಸಮ್ಯಕ್ತ್ವಮಲ್ಲಿಂ ತೊಟ್ಟುಪಶಾಂತ ಕಷಾಯಂಬರಂ ವಿಶೇಷದಿಂ ಮಾರ್ಗಣೆಗಳೊಳಜೀದು ಕೊಳುಗೆ (ತಸೂವ್ಯ. ೯); ಯಾವ ಯಾವ ಧರ್ಮವಿಶೇಷದಿಂದ ಜೀವದ ಅನ್ವೇಷಣವನ್ನು ಮಾಡಲಾಗುವುದೋ, ಆ ಧರ್ಮವಿಶೇಷಗಳಿಗೆ ಮಾರ್ಗಣಾಗಳೆಂದು ಹೇಳುವರು. ಇಂಥ ಮಾರ್ಗಣಾಗಳೂ ಹದಿನಾಲ್ಕು ಇರುತ್ತವೆ (ಜೈನಶ. ೩೦೩). 'ಚತುರ್ದಶಮಾರ್ಗಣೆ' ನೋಡಿ. [ಸಂ. ಮಾರ್ಗಣ ]

**ಮಾರ್ಗದರ್ಶಕ** (ನಾ). ೧. ದಾರಿಯನ್ನು ತೋರಿಸುವಂಥದು. ೨. ಸರಿಯಾದ ಮಾರ್ಗದಲ್ಲಿ ನಡೆಯುವಂತೆ ಪ್ರೇರಿಸುವಂಥದು; ಮೇಲ್ಪಂಕ್ತಿಯಾಗಿರುವಂಥದು : ಅವರ 'ಇಂಗ್ಲಿಷ್ ಗೀತಗಳು' ಭಾಷಾಂತರಗಳಾದರೂ ಹೊಸ ಕನ್ನಡಭಾವಗೀತಗಳಿಗೆ ಮಾರ್ಗದರ್ಶಕ ಆಗಿವೆ (ಎಣಾಜಮ. ೦೦೭): ಶ್ರೀ ಕೃಷ್ಣಶಾಸ್ತ್ರಿಗಳು ತಮ್ಮ ಈ ಕೃತಿಯ ಮೂಲಕ ಮಾರ್ಗದರ್ಶಕವಾದ ವಿಮರ್ಶಕೃತಿಯೊಂದನ್ನು ನೀಡಿದ್ದಾರೆ (ಜಂಕಮ. x, ಮುನ್ನುಡಿ). ೩. ದಾರಿಯನ್ನು ತೋರಿಸುವವನು : ಕಾಕರಾಜನೆ ಮಾರ್ಗದರ್ಶಕನಾದರೆ ಹೋಗುವೆ ಮಸಣದ ಮನೆಗೆ (ಶಂಕಾಶ. ೨೦೦-೮೯): ೪. ಕಾರ್ಯಸಾಧನೆಗೆ ಉಪಾಯವನ್ನು ಸೂಚಿಸುವವನು; ಸರಿಯಾದ ದಾರಿಯಲ್ಲಿ ನಡೆಯಲು ಸಲಹೆಯನ್ನು ನೀಡುವವನು : ಮಂಟೂರ ಮಹಾದೇವಯ್ಯನವರು . . . ಅವನ ವ್ಯಕ್ತಿವಿಕಾಸಕ್ಕೆ ಮಾರ್ಗದರ್ಶಕರಾಗಬೇಕೆಂದು ಆಗಾಗ ಹೇಳುತ್ತಿದ್ದರು (ರಂಗರೂ. ೯೪). [ಸಂ.]

**ಮಾರ್ಗದರ್ಶನ** (ನಾ). ದಾರಿಯನ್ನು ತೋರಿಸುವುದು: ಕಾರ್ಯಸಾಧನೆಗೆ ಉಪಾಯವನ್ನು ಸೂಚಿಸುವಿಕೆ : ವಸಂತನಿಂದ ಅವಳು ಪಾಠಕ್ಕೆ ಮಾರ್ಗದರ್ಶನವನ್ನು ಪಡೆದುಕೊಳ್ಳುತ್ತಿದ್ದಳು (ದೂರಶ. ೨೭): ಯಾರಿಂದಲೂ ಅವಳಿಗೆ ಯೋಗ್ಯ ಮಾರ್ಗದರ್ಶನ ಸಿಗಲಿಲ್ಲ (ರಂಗರೂ. ೩೫). [ ಸಂ. ]

**ಮಾರ್ಗದರ್ಶಿ** (ನಾ). ೧. = ಮಾರ್ಗದರ್ಶಕ ೧. ೨. = ಮಾರ್ಗದರ್ಶಕ ೨ : 'ಕವಿರಾಜಮಾರ್ಗ'ವು . . . ಪ್ರೌಢವಾದ ಗದ್ಯಪದ್ಯಕಾವ್ಯಕ್ಕೆ ಮಾರ್ಗದರ್ಶಿಯಾಗಿರುವಂತೆ ದೇಸಿಮಾರ್ಗಗಳ ಪೂರ್ವಪರಂಪರೆಗೆ ಸಾಕ್ಷಿಯೂ ಆಗಿರುತ್ತದೆ (ಕಶಾಶ. ೨೫); ಹೊಸ ಉಪಾಧ್ಯಾಯರಿಗೆ ಟಿಪ್ಪಣಿ ಮಾರ್ಗದರ್ಶಿಯಾಗಿರುತ್ತದೆ (ಶಿಕ್ಷಶ. ೨೩೦). ೩. = ಮಾರ್ಗದರ್ಶಕ ೩. ೪. = ಮಾರ್ಗದರ್ಶಕ ೪ : ಅವಳ ಅಭ್ಯಾಸಕ್ಕೆ ಯೋಗ್ಯ ಮಾರ್ಗದರ್ಶಿಯ ಅಗತ್ಯವಿದೆ (ಅದೇ). ೫. ಪ್ರೇಕ್ಷಣೀಯಸ್ಥಳಗಳಲ್ಲಿ ನೋಡಬೇಕಾದುವುಗಳನ್ನು ತೋರಿಸಿ ಅವುಗಳ ಬಗೆಗೆ ವಿವರಣೆಯನ್ನು ನೀಡುವವನು : ಮಾರ್ಗದರ್ಶಿಯ ಕೂಡಿ ನೋಡುತ್ತ ಹೋದೆ: ನೋಡಿದಂತೆಲ್ಲ ನಾ ಬೆಪ್ಪು ಬೆರಗಾದೆ (ಕೋಣಗಿ. ೨-೨೨): ಎಲ್ಲಾ ಬಿಟ್ಟು ಮಾರ್ಗದರ್ಶಿಯಾಕಾದೆ ಅಂತ ನೀವು ಕೇಳಬಹುದು (ಶಂಗಣ. ೭).

[ಸಂ. ಮಾರ್ಗದರ್ಶಿನ್]

**ಮಾರ್ಗಪ್ರಭಾವನೆ** (ನಾ). [ಜೈನ] ತೀರ್ಥಂಕರತ್ವವನ್ನು ಸಾಧಿಸಿಕೊಡುವ ಷೋಡಶಭಾವನೆಗಳಲ್ಲಿ ಒಂದು : ದರ್ಶನವಿಶುದ್ಧಿ, ವಿನಯಸಂಪನ್ನತೆ, ಶೀಲವ್ರತೇಶ್ವನತಿಚಾರ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗ, ಶಕ್ತಿತಸ್ತ್ಯಾಗ, ಶಕ್ತಿತಸ್ತಪ, ಸಾಧುಸಮಾಧಿ, ವೈಯಾವೃತ್ತ್ಯಕರಣ, ಅರ್ಹದ್ಭಕ್ತಿ, ಆಚಾರ್ಯಭಕ್ತಿ, ಬಹುಶ್ರುತಭಕ್ತಿ, ಪ್ರವಚನಭಕ್ತಿ, ಆವಶ್ಯಕಾಪರಿಹಾಣಿ, ಮಾರ್ಗಪ್ರಭಾವನೆ ಮತ್ತು ಪ್ರವಚನವತ್ಸಲತ್ವ ಎಂಬ ತೀರ್ಥಂಕರತ್ವನಾಮಕರ್ಮದ ಹದಿನಾರು ಭಾವನೆಗಳಲ್ಲಿ ಒಂದು: "ಜ್ಞಾನ, ದಾನ, ಜಿನಪೂಜಾ ವಿಧಾನ, ತಪೋನುಷ್ಠಾನ ಮುಂತಾದುವುಗಳಿಂದ ಜಿನಧರ್ಮವನ್ನು ಪ್ರಕಾಶನಗೊಳಿಸುವುದು" (ಅರಿಪು. ೯೦ ಕ್ಕೆ ಪರಾಂಭಾಗ ಶಬ್ದಕೋಶ) : ಪರಪಕ್ಷದೂಷಣಪುರಸ್ಸರಮನೇಕೋಪಪತ್ತಿಗಳಿಂ ಸ್ವಪಕ್ಷಸ್ಥಾಪನೆಗೆಯ್ದು ಸನ್ಮಾರ್ಗಪ್ರಕಾಶನದಿಂ ಮಾರ್ಗಪ್ರಭಾವನೆಯಂ ಮಾಡಿ ಸಭಾಸದರಿಂ ಲಬ್ಧಪ್ರಶಂಸನಾಗಿ (ಆದಿಪು.೨-೨೨ ವ);ಸದ್ಧರ್ಮಪ್ರಸಿದ್ಧ ಪ್ರಭಾವಕಮಪ್ಪ ಮಾರ್ಗಪ್ರಭಾವನೆಯುಂ ಸದ್ಧರ್ಮಸ್ನೇಹಲಕ್ಷಣೋಪೇತಮುಮಪ್ಪ ದರ್ಶನವತ್ಸಳತ್ವಮುಮೆಂಬೀ ಷೋಡಶಭಾವನೆಗಳಂ . . . ಭಾವಿಸುತ್ತುಮಿರ್ದು (ಶಂತ್ರಪು. ೦೦-೨೨ ವ).

[ ಸಂ. ಮಾರ್ಗಪ್ರಭಾವನಾ ]

**ಮಾರ್ಗರಾಗ** (ನಾ). [ಸಂಗೀತ] ದೇಶೀರಾಗಗಳಿಗಿಂತ ಭಿನ್ನವಾಗಿದ್ದು, ಗಂಧರ್ವಲೋಕದಲ್ಲಿಯೇ ಪ್ರಯೋಗಗೊಳ್ಳುತ್ತಿದ್ದುವೆನ್ನಲಾದ ಆರು ಬಗೆಯ ರಾಗಗಳ ಸಮೂಹ ಮತ್ತು ಅವುಗಳಲ್ಲಿ ಪ್ರತಿಯೊಂದು ರಾಗ : ಗ್ರಾಮರಾಗದಿಂದ ಪ್ರಾರಂಭವಾಗಿ ಅಂತರಭಾಷೆಯಲ್ಲಿ ಮುಗಿಯುವ ಆರುಬಗೆಯ ರಾಗಗಳು ಮಾರ್ಗರಾಗಗಳೆನಿಸಿಕೊಳ್ಳುತ್ತವೆ (ಶಾಸ್ತ್ರ. ೫೫). [ಸಂ.]

**ಮಾರ್ಗರುಚಿ** (ನಾ). [ಜೈನ] ಸಮ್ಯಕ್‌ದರ್ಶನವುಳ್ಳ ಹತ್ತುಬಗೆಯ ದರ್ಶನಾರ್ಯರಲ್ಲಿ ಒಂದು ವರ್ಗಕ್ಕೆ ಸೇರಿದ ವ್ಯಕ್ತಿ ; ಕೇಳಿದ ಮಾತ್ರದಿಂದಲೇ ಮೋಕ್ಷಮಾರ್ಗದಲ್ಲಿ ಆಸಕ್ತಿಯುಂಟಾಗಿ ರತ್ನತ್ರಯ ಮಾರ್ಗದಲ್ಲಿ ನಡೆಯುವವನು : ಆಜ್ಞಾರುಚಿ, ಮಾರ್ಗರುಚಿ, ಉಪದೇಶರುಚಿ, ಸೂತ್ರರುಚಿ, ಬೀಜರುಚಿ, ಸಂಕ್ಷೇಪರುಚಿ, ವಿಸ್ತಾರರುಚಿ, ಅರ್ಥರುಚಿ, ಅವಗಾಢರುಚಿ ಮತ್ತು ಪರಮಾವಗಾಢರುಚಿ ಎಂದು ಹತ್ತು ಬಗೆಯಾದ ದರ್ಶನಾರ್ಯರುಂಟು : ನಿಸ್ಸಂಗಮೋಕ್ಷಮಾರ್ಗಶ್ರವಣಮಾತ್ರಜನಿತರುಚಿಗಳ್ ಮಾರ್ಗರುಚಿಗಳೆಂಬರ್ (ತತ್ತ್ವಸೂ. ೧೭೩). [ಸಂ.]

**ಮಾರ್ಗವಿದ್** (ನಾ). ಶಬ್ದಪ್ರಯೋಗದ ರೀತಿಯನ್ನು ತಿಳಿದವನು : ಶಾಬ್ದಿಕ : ಲಾಕ್ಷಣಿಕ : ವರ್ಗದ್ವಿತೀಯವರ್ಣಂ ವರ್ಗಚತುರ್ಥಾಕ್ಷರಂ ಮಹಾಪ್ರಾಣಮವಂ ಮಾರ್ಗವಿದರ್ ಸಂಸ್ಕೃತದೊಳಂ ಭೋರ್ಗರೆವನುಕೃತಿಯೊಳಂ ಪ್ರಯೋಗಿಸುತಿರ್ಪರ್ (ಶಬ್ದ. ೦೪). [ಸಂ. ಮಾರ್ಗವಿದ್]

**ಮಾರ್ಗಶಿರ** (ನಾ). ಹನ್ನೆರಡು ಚಾಂದ್ರಮಾನಮಾಸಗಳಲ್ಲಿ ಒಂಬತ್ತನೆಯದು : ಮಾರ್ಗಶೀರ್ಷ : ತನ್ಮಹಾದೇವಿಯು ಪರಿಪೂರ್ಣಪ್ರಸವಸಮಯಂ ಮಾರ್ಗಶಿರಬಹುಳದಶಮಿಯಾಗೆ (ಧರ್ಮಾಮೃ. ೦೦-೦ ೩) : ಆ ಮಾಸವೇ ಚೈತ್ರ . . . ಮಾರ್ಗಶಿರ ಪುಷ್ಯ ಮಾಘ ಫಾಲ್ಗುಣವೆಂದು ಹನ್ನೆರಡು ತೆಱನಾಗಿಹುದು (ಐವೇಶ. ೩೨೦).

[ಸಂ. ಮಾರ್ಗಶಿರ, ಮಾರ್ಗಶಿರಸ್]

**ಮಾರ್ಗಶೀರ್ಷ** (ನಾ). = ಮಾರ್ಗಶಿರ : "ಮಾರ್ಗಶೀರ್ಷ, ಸಹಃ, ಮಾರ್ಗಃ, ಆಗ್ರಹಾಯಣಿಕಃ, —ಈ ಮಾರ್ಗಶೀರ್ಷಮಾಸದ ಹೆಸರುಗಳು" (ಸಿದ್ಧಾಂತ. ೩೯) ; ಹಾಡು ಇನ್ನೂ ನೆನಪಿದೆ, ಮಾರ್ಗಶೀರ್ಷಮಾಸದ ಚಳಿಗಾಲ ಅದು (ವೃ. ೭). [ಸಂ.]

**ಮಾರ್ಗಶೈವ** (ನಾ). ಶೈವದ ಪ್ರಭೇದಗಳಲ್ಲಿ ಒಂದು : ಶುದ್ಧಶೈವವ ಹೊದ್ದದೆ ಪೂರ್ವಶೈವವನಾಚರಿಸದೆ ಮಾರ್ಗಶೈವವ ಮನ್ನಣೆಯ ಮಾಡದೆ ವೀರಶೈವವನಾಧರಿಸದೆ ಆದಿಶೈವವನನುಕರಿಸದೆ ಭೇದಿಸಬಾರದ ಲಿಂಗ ಕರದಲ್ಲಿದ್ದು . . . ಏನುವೆನ್ನದ ಲಿಂಗೈಕ್ಯಂಗೆ ಸ್ವಾನುಭಾವದಿಂದ ನಮೋ ನಮೋ ಎಂಬೆ (ಷೋಸವ. ೦೨೭-೪೯೦) ; ಶುದ್ಧಮಿಶ್ರಸಂಕೀರ್ಣಪೂರ್ವಮಾರ್ಗಶೈವಂಗಳಲ್ಲಿ ಕರ್ಮಭಕ್ತಿಯಲ್ಲದೆ ನಿರ್ಮಳಸದ್ಭಕ್ತಿ ಎಲ್ಲಿಯದೋ (ಅರಶ. ಶು. ೪೫-೭೭). 'ಪೂರ್ವಶೈವ' ನೋಡಿ. [ಸಂ.]

**ಮಾರ್ಗಶ್ರಮ** (ನಾ). ಪ್ರಯಾಣದಿಂದ ಉಂಟಾಗುವ ದಣಿವು; — ಆಯಾಸ : ತಮಃಕ್ತಿಸುಧಾಸಾರವಾರಿಧಾರೆಯಿಂದಂ ಕೊಸರ್ತ ರಾಜಪುತ್ರರ

ಮಾರ್ಗಶ್ರಮಾತಪಾಕ್ರಾಂತಮಪ್ಪ ಮನಮೆಂಬ ಲತೆಯನನೇಕಕುಶಲಾಲಾಪ ಪ್ರಶ್ನೆಯಿಂದಂ ಕುಸುಮಿತಮುಮಂ ಸ್ವಹಸ್ತತಾಂಬೂಲದಾನದಿಂದಂ ಫಲಿತಮುಮಂ ಮಾಡಿ (ಆದಿಪು. ೦೩-೩೨ ವ); ಗತಣಮೆಣದೆಜಿಹುಗಳೊಳಗೆ ಕಾಲಿಡುತ ಸೋದಿಸಿ ಮುಂದೆ ಹೆಜ್ಜೆಯನಿಡುತ ಪೈಸರಪೋಗಿ ಮಾರ್ಗಶ್ರಮಕೆ ಬೆಮರುವನ (ಕುಮಾ.ಗ. ೩-೦೩). [ಸಂ.]

**ಮಾರ್ಗಸುಂಕ** (ನಾ). ಹಾದಿಯ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಇದರಲ್ಲಿ ಗದ್ದೆ, ಬೆಸ್ಸಲು, ಕಾಡಾರಂಬ, ಮಾರ್ಗಸುಂಕ, ಸ್ಥಳ ಸುಂಕ . . . ಉಪ್ಪಿನ ಮೋಳೆ, ಆಚಾರಗಾಣಿಕೆ ಇವೇ ಮೊದಲಾದವುಗಳು ಸೇರಿದ್ದವು (ಕರ್ನಾ. ೩ ಆಡಳಿತ್ಯಾಕ). [ಮಾರ್ಗ + ಸುಂಕ$_1$]

**ಮಾರ್ಗಹಿಂದೋಲ** (ನಾ). [ಸಂಗೀತ] ಒಂದು ರಾಗದ ಹೆಸರು : ಮಾರ್ಗಹಿಂದೋಲರಾಗವು (೫) ಆರೋಹದಲ್ಲಿ ರಿ_ಯನ್ನು ಬಿಟ್ಟಿದೆ (ಸಸುಕ್ರ. ೦೩೭). [ಸಂ.]

**ಮಾರ್ಗಿಡಿ, ಮಾರ್ಕಿಡಿ** (ನಾ). ಪ್ರತಿಯಾಗಿ ಸೂಸುವ ಕಿಡಿ : ನಾರಿಯಿಂದುಗಿದು ಬಿಡಲಾಕ್ಷಣಂ ಉಯುವ ಮದನಾರಿಯುರಿಗಣ್ಣಂತೆ ಬರ್ಪುದಂ ಪೇಳ್ವ ಸರಣಾರಿನ್ನುಮದಟ ಮಾರ್ಗಿಡಿಗಳಿಂ ಸಕಲಲೋಕಾಳಿ ಸಂವರ್ತ ಮಾಯ್ತು (ಶಂಕಪು. ೦೩-೩೦). **ಮಾರ್ಕಿಡಿ** : 'ಮಾರ್ಕಿಡಿವಿಡು' ಪರಾ. [ಮಾರ್ (< ಮಾಱು$_2$) + ಕಿಡಿ]

**ಮಾರ್ಜ** (ನಾ). ೧. ಸ್ವಚ್ಛಮಾಡುವುದು ; ಶುದ್ಧಮಾಡುವುದು. ೨. ಬಟ್ಟೆಗಳನ್ನು ಸ್ವಚ್ಛಮಾಡುವವನು ; ಅಗಸ. ೩. ವಿಷ್ಣು. [ಸಂ.]

**ಮಾರ್ಜಡಿ** (ಕ್ರಿ). ಪ್ರತಿಯಾಗಿ ಹೊಡೆ. — ಬಡಿ : ಬಾರಿಪ ನಿಮ್ಮ ತರ್ಜನದಿನೀ ಜನದೊಂದುಲಿ ಮಾಣ್ಗೆ ಮಾಣವಾವಾರೆಮಗಿಲ್ಲ ಮಾರಕರೆ ಸುತ್ತುಮೆ ಮಾರ್ಜಡಿವಂದದಿಂ ಪ್ರತೀಹಾರಿಯರಂ ಪೊಡೆಬ್ದ (ಕುಸ್ಸು. ೬-೩೩). [ಮಾರ್ (< ಮಾಱು$_2$) + ಜಡಿ$_2$]

**ಮಾರ್ಜನ** (ನಾ). ೧. ತೊಳೆಯುವಿಕೆ : 'ಮುಖಮಾರ್ಜನ' ಪರಾ. ೨. (ಮಂತ್ರಿಸಿದ ನೀರಿನಿಂದ ಮಾಡುವ) ಪ್ರೋಕ್ಷಣೆ : ಕೈಯಲ್ಲಿ ಅಭಿಮಂತ್ರಿತವಾದ ಉದಕವುಳ್ಳ ಕಲಶವನ್ನೂ ದರ್ಭಕೂರ್ಚಗಳನ್ನೂ ತೆಗೆದು ಕೊಂಡು ಶಾಂತಿಮಂತ್ರವನ್ನು ಪಠಿಸುತ್ತಾ ದೇವರಾಜನಿಗೆ ಆ ಕಲಶೋದಕದಿಂದ ಮಾರ್ಜನವನ್ನು ಮಾಡಿದನು (ಪಠಣ. II. ೦೯೦೦). ೩. ಚೊಕ್ಕಟಗೊಳಿಸುವುದು ; ಶುದ್ಧಗೊಳಿಸುವುದು. ೪. ಅಳಿಸುವುದು : ಒರೆಸುವುದು. ೫. ಉಜ್ಜುವುದು : ತೀಡುವುದು. ೬. ಒಂದು ಬಗೆಯ ಮರ : ರಕ್ತಲೋಧ್ರ : "ಗಾಲವಃ, ಶಾಬರಃ, ಲೋಧ್ರಃ, ತಿರೀಟಃ, ತಿಲ್ವಃ, ಮಾರ್ಜನಃ — ೬ ಲೋಧ್ರಗಿಡದ ಹೆಸರು" (ಸಿದ್ಧಾಂತಿ. ೦೦೯). [ಸಂ.]

**ಮಾರ್ಜನಿ** (ನಾ). ೧. ಸ್ವಚ್ಛಮಾಡುವುದು : ಶುದ್ಧಮಾಡುವುದು. ೨. ಸ್ವಚ್ಛಮಾಡುವಂಥದು ; ಕಸಬರಿಗೆ ; ಪೊರಕೆ : 'ಸಂಮಾರ್ಜನಿ' ಪರಾ. ೩. ಬಟ್ಟೆಗಳನ್ನು ಸ್ವಚ್ಛಗೊಳಿಸುವವಳು ; ಅಗಸಗಿತ್ತಿ. [ಸಂ. ಮಾರ್ಜನೀ]

**ಮಾರ್ಜನೆ** (ನಾ). ೧. = ಮಾರ್ಜನ ೧ : "ಮಾರ್ಷ್ಟಿಃ, ಮಾರ್ಜನಾ, ಮೃಜಾ — ೩ ಶ್ರೀಗಂಧ ಕುಂಕುಮಕೇಸರಿ ಮುಂತಾದ ದ್ರವ್ಯಗಳನ್ನು ಮೈಗೆ ಹಾಕಿ ಉಜ್ಜಿ, ತೊಳಕೊಂಡು ಕೊಳೇ ಹೋಗಲಾಡಿಸುವುದಕ್ಕೆ ಹೆಸರುಗಳು" (ಸಿದ್ಧಾಂತಿ. ೨೦೩). 'ಮುಖಮಾರ್ಜನೆ' ಪರಾ. ೨. ಮೃದಂಗದಿಂದ ಹೊರಡುವ ಧ್ವನಿ : ನಸ್ನ ಮೃದಂಗದ ಮಾರ್ಜನೆಯೆನೆ ಘೋಂ ತುಂಬುರು ವಿಧಿಯೊಡನೆನುವನು ಹರ ಓಂ (ಗಣೇಶ. ೦೭-೯೯೦). [ಸಂ. ಮಾರ್ಜನಾ]

**ಮಾರ್ಜರ** (ನಾ). ಬೆಕ್ಕು ; ಮಾರ್ಜಾಲ : ಸೂಕರ ಶುನಕ ಮಾರ್ಜರರಿಸಭ ಕಾಕ ಘೂಕಾದಿ ಗರ್ಗರರವವ ನೀಕರಿಸುವ ದೀನದನಿಯಿಂದ ಮೊಜಿಳ್ಖಿಡಲೋಕರಿಸುಗು ದೆಸೆರವವ (ಪರ್ಣ. ೬-೯೭). [ < ಸಂ. ಮಾರ್ಜಾರ ]

**ಮಾರ್ಜಾರ** (ನಾ). ೧. = ಮಾರ್ಜರ : "ಓತುಃ, ಬಿಡಾಳಃ, ಮಾರ್ಜಾರಃ, ವೃಷದಂಶಃ — ಈ ೪ ಬೆಕ್ಕು" (ಶಬ್ದಮ. ೯೦-೩೩) ; ಕದಳೀವನದೊಳಿರ್ದೊಟ್ಟೊಟ್ಟಿಗಂ ಮಾರ್ಜಾರನಾಗಿ ಪುಟ್ಟಿರ್ದು ಕಪೋತಂಗಳಂ ಕಾಣಲೊಡಂ ಓಡಿದು ಕೊಲ್ವುದುಂ (ಶಾಪುಂಪು. ೬೯) ; ಶರಭಂಗಳ್ ಕೇಸರಿಕೇಸರಂಗಳಂ ಕ್ರೂರಘೋರಮಾರ್ಜಾರಂಗಳ್ ತರುಣಾಖುಶಾಬಶತ ಕಂಧರಮಂ ನಖಮುಖದಿ ನುಚ್ಚಿಸಿ ತುಚ್ಚಿಸಿದುವೊಲವಿಂ (ಕುಸ್ಸು. ೦೯-೦೯). ೨. ಪುನುಗುಬೆಕ್ಕು. 'ಮಾರ್ಜಾಲ' ಪರಾ. [ಸಂ.]

**ಮಾರ್ಜಾರಿ** (ನಾ). ೧. ಹೆಣ್ಣು ಬೆಕ್ಕು ; ಮಾರ್ಜಾಲಿ. ೨. ಪುನುಗಿನ ಬೆಕ್ಕು. ೩. ಒಂದು ಬಗೆಯ ಸುಗಂಧದ್ರವ್ಯ ; ಪುನುಗು : "ಚೇಳಿಕೆಯೆನಲ್ ಪುಣುಗು ಮಾರ್ಜಾರಿ[ಶಾಕಾಂ. ಲಿ]ಯೆನೆ ಜವಾದಿಯೆನಿಕ್ಕು" (ಶುಂಗರಾ. ೯೯-೨೨). [ಸಂ. ಮಾರ್ಜಾರೀ]

**ಮಾರ್ಜಾಲ** (ನಾ). ೧. = ಮಾರ್ಜರ : "ಮಾರ್ಜಾಲಂ ಬಿಡಾಲ ಮಾಖುದ್ವಿಷಂ ವೃಷದಂಶಮೋತುವೆನೆ ಬೆಕ್ಕೆನಿಕ್ಕುಂ" (ಶುಂಗರಾ. ೯೯-೦೦) ; ವನಮೂಷಕ ಮಾರ್ಜಾಲಂ ವನಾಶ್ವಮಹಿಷಂ ಸೂಕರಮನಿತುಂ ಮುನಿಸಂ ಪರಿಹರಿಸಿರ್ದುವು ಮುನಿನಾಥಾಂತಿಕದೊಳುದಿತಶಾಂತರಸಂಗಳ್ (ಆದಿಪು. ೭-೭) ; ಶುನಿ ಶೂಕರ ಮಾರ್ಜಾಲ ಹೆಗ್ಗಣ ಉರಗ ಮೊದಲಾದ ಮಲ ಮಾಂಸಭಕ್ಷಕಪ್ರಾಣಿಗಳು ಮೋಸದಿಂದ ಪಾದ ಪಾಣಿ ಗುದ ಗುಹ್ಯ ದೇಹವ ಕಚ್ಚಿದಡೆ ಸ್ಥೂಲವೆನಿಸುವುದಯ್ಯಾ (ಶನ್ನಪ. ೪. ೩೨-೦೦೯) ; ಮಾರ್ಜಾಲ ಕಾಟವನ್ನು ತಡೆಯಲಾಱೆವು ಕೃಷ್ಣ (ಶುರಂದ. ೩-೦೨೯ ಅಮುಕ್ಷಗ್ಗಿ). ೨. ಪುನುಗುಬೆಕ್ಕು. 'ಮಾರ್ಜಾರ' ಪರಾ.

**ಮಾರ್ಜಾಲಸಂನ್ಯಾಸ** = (ಆಲಂ) ಕಪಟಸಂನ್ಯಾಸ : ಮಾರ್ಜಾಲ ಸಂನ್ಯಾಸ ಮಾಡಬೇಡ, ನಿನ್ನ ಸೋಗು ನನಗೆ ಅರ್ಥವಾಗುತ್ತದೆ (ರೂಢಿ). [ಸಂ.]

**ಮಾರ್ಜಾಲಕಿಶೋರನ್ಯಾಯ** (ನಾ). 'ಬೆಕ್ಕಿನ ಮರಿಯು ತನ್ನ ಸರ್ವಸ್ವವನ್ನೂ ತಾಯಿ ಬೆಕ್ಕಿಗೆ ಒಪ್ಪಿಸಿದರೆ, ಅದು ತನ್ನ ಮರಿಗೆ ನೋವಾಗದಂತೆ ಎಚ್ಚರಿಕೆಯಿಂದ ಬಾಯಲ್ಲಿ ಕಚ್ಚಿಕೊಂಡು ಹೋಗುತ್ತದೆ' ಎಂಬ ಭಾವನೆಯುಳ್ಳ ದೃಷ್ಟಾಂತ : ಜೀವಾತ್ಮನ ಸ್ವಪ್ರಯತ್ನವಿಲ್ಲದೆಯೇ ಪರಮಾತ್ಮನು ಅನುಗ್ರಹಿಸುತ್ತಾನೆ ಎಂಬುದಕ್ಕೆ ಇದು ದೃಷ್ಟಾಂತ : ದೃಷ್ಟಾಂತಗಳ ಮೂಲಕ ಜೀವಾತ್ಮ ಪರಮಾತ್ಮರ ಸಂಬಂಧವನ್ನು ವಿವರಿಸುವಾಗ ಮರ್ಕಟ – ಕಿಶೋರನ್ಯಾಯ, ಮಾರ್ಜಾಲ–ಕಿಶೋರನ್ಯಾಯ ಎಂದು ಹೇಳುವುದುಂಟು (ಶಾಕದ. ೨೭೯). 'ಮರ್ಕಟಕಿಶೋರನ್ಯಾಯ' ಪರಾ. [ಸಂ.]

**ಮಾರ್ಜಾಲಿ** (ನಾ). = ಮಾರ್ಜಾರಿ ೩ : "ಮಾರ್ಜಾಲಿ[ಶಾಕಾಂ. ೦]ಯೆನೆ ಜವಾದಿಯೆನಿಕ್ಕು" (ಶುಂಗರಾ. ೯೯-೨೨). [ಸಂ. ಮಾರ್ಜಾಲೀ]

**ಮಾರ್ಜಿಕೆ** (ನಾ). ಕಡೆವ ಮೊಸರು : ಮಜ್ಜಿಗೆ : "ರಸಾಲಾ, ಮಾರ್ಜಿಕಾ — ೨ ಮೊಸರು ಕೈಗಡದು ಮಾಡಿದ ಮಜ್ಜಿಗೆ" (ಸಿದ್ಧಾಂತಿ. ೨೬೭). [ಸಂ. ಮಾರ್ಜಿಕಾ]

**ಮಾರ್ಜಿತ** (ಗು). ೧. ಶುದ್ಧಗೊಳಿಸಿದ ; ಸ್ವಚ್ಛಗೊಳಿಸಿದ. ೨. ಗುಡಿಸಿದ ; ಉಡುಗಿದ. [ಸಂ.]

**ಮಾಣಾಳ** (ಗು). ೧. ತಾವರೆಯ ದಂಟಿಗೆ ಸಂಬಂಧಿಸಿದ. (ನಾ). ೨. ತಾವರೆಯ ದಂಟು : ಇದು ಮತ್ಸ್ಯಾಣೇಶನನ್ನೊಳೀ ನೆರೆದ ಪುಳಿನ ವಿಾಯಿರ್ದುದಾ ಕಾಂತೆ ಮೆಲ್ದೊಲ್ಲದ ಮಾಣಾಳಾರ್ಧಮಿಾ ತೋರ್ಪುದು (ಶಂಕ್ರಪು. ೬-೦೦). ೩. ತಾವರೆ ; ಕಮಲ : ಮದಚಂಚನ್ನವಿದ್ಯೋತ

ಸುಪ್ರಕ್ರಿಯದು ಮಾರ್ಜಾಲಜಾಲಂ ಬಳಸಿದ ಜಳದೇವೀಸಮೂಹಂ ಬೊಲಂಪೋಪಯೋಧಾರಾಳಿ ತಳ್ವೊಯ್ವುನಪೊಸೆದಿರುಳೊಳ್ ಜಾರನಾರೀ ಕದಂಬಂ (ಜಗ. ೯-೨೯). [ಸಂ. ಮಾರ್ಜಾಲ]

**ಮಾರ್ತಂಡ₁** (ನಾ). ಎದುರು ಪಕ್ಷ; ಪ್ರತಿಪಕ್ಷ : ಮಾರ್ತ್ರಣ್ಮ[ಂ] ರಣಮುಖದೊಳ್ ಮಾರ್ತ್ರಣ್ಮವಂಬಿಟಿದು ಗೆಲ್ದ ಭುಜವಿಕ್ರಮಮಾ ಮಾರ್ತ್ರಣ್ಮಂ ದನುಜಪ್ರಜಮಾರ್ತ್ರಣ್ಮಮಂಬಿಟಿದು ಗೆಲ್ದ ತೆಜಸಂ ಪೋಲ್ಪಂ (ಶಾಶಾ. XI-i. ೭೬-೭೫ ; ಸಂ. 1045). [ಮಾರ್ (<ಮಾಱು₂) + ತಂಡ]

**ಮಾರ್ತಂಡ₂** (ನಾ). ೧. ನೇಸರು : ಸೂರ್ಯ : "ಆದಿತ್ಯಃ . . . ಹರಿಃ, ಮಾರ್ತಂಡಃ, ತಪನಃ . . . ತ್ರಯೀತನುಃ — ಈ ೪೭ ಆದಿತ್ಯನ ಪೆಸರ್" (ಅಭಿಧಾ. ೭-೩೫) ; ಕಿವಿಯಂ ಮಾರ್ತಂಡನಪ್ಪಾತ್ಮವಂಡಳಿ ಶಂಕಾಕಾಳಿತಂ ಪೆಡಂಮಂಗುಟಿ . . . ಘೂರ್ಣಿಸಿತ್ತು ವಿಜಯಪ್ರಸ್ಥಾನ ಭೇರೀರವಂ (ಕಂಠಪಾ. ೦೨-೦೬); ಅಂದು ಮಾರ್ತಂಡನಪರಾಬ್ಧಿಗಿಳಿಯಲ್ಕಂತೆ ನಪೆತಂದು ದೇವಾಲಯದ ಮುಂದೆ ಸಲಿಸಲಿದು . . . ಮಯ್ಯಿಕ್ಕುತಂ (ಸಂಪರಿ. ೦೭-೧೯೮) ; ಮಾರ್ತಂಡಂ ಪಶ್ಚಿಮಾಭಿಮುಖನಾಗೆ ಸೀತಾಲಕ್ಷ್ಮಣರುತ್ತರಾಭಿಮುಖರಾಗಿ ಪೋಜಪಟ್ಟರ್ (ರಾಮಾಕ. ೩೨-೪). ೨. ಎಕ್ಕದ ಗಿಡ : ಅರ್ಕವೃಕ್ಷ. ೩. ಹಂದಿ : ಸೂಕರ. [ಸಂ.]

**ಮಾರ್ತಂಡನಂದನ** (ನಾ). ೧. ಸೂರ್ಯನ ಮಗ. ೨. ಶನಿ : ಅನಘಾದಿತ್ರಯದಲ್ಲಿ ನಿಂದ ಕುಜನುಂ ಚೋರಂ ಪ್ರಚಂಡಂ . . . ಮಾರ್ತಂಡನಂದನನಿಂದಂ ಬಹುಪೋಷಕಂ ಬಹುಗುಣಾರಂಭಾಢ್ಯನಕ್ಕುಂ ನರಂ (ಜಾತಕ. ೦೪-೭). ೩. ಯಮ. ೪. ಸುಗ್ರೀವ. ೫. ಕರ್ಣ. [ಸಂ.]

**ಮಾರ್ತಂಡಸುತ** (ನಾ). ೧. ಸೂರ್ಯನ ಮಗ. ೨. ಶನಿ : ದಿನನಾಥಾಲಯಲಗ್ನದೊಳ್ ಕುಜ ಬುಧ ತ್ರಿಂಶಾಂಶಮಾದಂದು ಕೋಣನದ ಪ್ರದ್ಯುಮ್ನನಲ್ಲಿ ಕೂಡೆ ಪುರುಷಾಚಾರಾಢ್ಯ . . . ಮಾರ್ತಂಡಸುತಾಂಶದೊಳ್ ಪಸಿವೊಳರ್ದಂತಾಕೆ ಕೆಟ್ಟೋದುಗುಂ (ಜಾತಕ. ೨೨-೭). ೩. ಯಮ. ೪. ಸುಗ್ರೀವ. ೫. ಕರ್ಣ. [ಸಂ.]

**ಮಾರ್ತರ್** (ಕ್ರಿ). ಎದುರಾಗಿ ಬರು : ಮಾರ್ತರ್ಪ[ಪಾಠಾಂ. ತರ್ಪ] ತೆರೆಗಳಿಂ ತರಲಾರ್ತದು ತನ್ನದಿಗೆ ಸುರನದೀವಿಭ್ರಮಮಂ (ಕಪಾದ. ೭೭ ಕೃದೋ). [ಮಾರ್ (<ಮಾಱು₂) + ತರ್]

**ಮಾರ್ತಲೆ** (ನಾ). ೧. ಮತ್ತೊಂದು ತಲೆ : ಬೇರೊಂದು ಶಿರಸ್ಸು : ಮಾರ್ಕೊರಲ್, ಮಾರ್ತಲೆ ಮಾರ್ಪಡೆ (ಶಬ್ದಮಣಿ. ೨೯ ಉದಾ) ; ನೆರೆದು ಬುಟಿಯ ಕಟ್ಟಿದಿರ ತಟ್ಟನ ರಾವುತರೊಳ್ . . . ಕೂರಸಿಯಿಂ ತಲೆ ಪಾಱಿ ಬೀಳ್ವನಂ ಸರಿವೆಸನಾಗಿ ಪೊಯ್ಯೆ ತಲೆ ಮಾರ್ತಲೆಯೊಳ್ ನಿಮಿರ್ದಟ್ಟಿಯಿಟ್ಟಿಯೊಳ್ ಹರಿ ಹರಿಯೊಳ್ ಪಳಂಚಿ ಪೊಸತಾದುದು ಸಂಗರರಂಗಭೂಮಿಯೊಳ್ (೧೦೯. ೭ ೭೦). ೨. ಪ್ರತಿಸ್ಪರ್ಧಿ : ಎದುರಾಳಿ : ಕರ್ತಾರಂಗೆಱಗುವುದತಿಪರ್ತಿತ್ವಂ ಪೊಲ್ಲದೆಂದು ಪುರುಷೂಸಂಗೆ ಮುಂ ಮಾರ್ತಲೆಯಾದ ಚಳಾತಾಪರ್ತರನಂದೊಱೆ ಕಲ್ಪಿಪಂತವಯ್ಯು ನಗಂ (ಶಾಂತಿಪು. ೧೦-೫೨) ; ಕಟ್ಟಿಲೆ ಬರಿದಾದೊಡಮೇಂ ಮಾರ್ತಲೆಯೆ ದಿನಾಧಿಪಂಗೆ (ಕಂಠಪಾ. ೧೦-೨೭೫). ೩. ಪ್ರತಿಪಕ್ಷ : ಎದುರುಬಲ : ಅಂತು ಕೈಕೊಂಡು ಪೊತ್ತೆತ್ತಿ ಪೊಯ್ದು ಕೂರ್ವಾಳ ಬೆಳಗಿನ ಕೊರ್ಬುಸಲೆಸಕದೊಳ್ಳು ಸುಱಿ ಮುತ್ತಿದ ಮಾರ್ತಲೆಯೊಂಬು ಕಟ್ಟಲೆ ಕೂಡೆ ಕಟ್ಟಲೆ ಕಟುಂದಲೆಯಾಗೆ (ಅಸಂಧಿ. ೦೦-೯೪ ವ). [ಮಾರ್ (<ಮಾಱು₂) + ತಲೆ₁]

**ಮಾರ್ತಳೆ** (ಕ್ರಿ). ಪ್ರತಿಫಲಿಸು : ಪ್ರತಿಬಿಂಬಿಸು : ಜಲಜಮಿತ್ರನ ಬಿಂಬಮನು ಮಾರ್ತಳೆದ ಸರಸಿಯೊ . . . ವಿನಲುಮೇನಾ ಲಲನೆ ಮೆಱೆದಳು ದಿವ್ಯಗರ್ಭದ ಬಹಳತೇಜದಲಿ (ಭಾಗ. ೯-೫-೭).

[ಮಾರ್ (<ಮಾಱು₂) + ತಳೆ₁]

**ಮಾರ್ತಟು** (ಕ್ರಿ). ಎದುರಿಗೆ ದಟ್ಟವಾಗಿ ಕಾಣಿಸಿಕೊಳ್ಳು : ಬಿರುದಂ ಮೇಳಯದೊಳ್ ತೊಡರ್ಚಿ ಬಿರುದಂಕಂ ಮೆಚ್ಚುತಂ ಸಾಱಿ ಮುಟ್ಟಿರದಂಕಂ ಕಳದಲ್ಲಿ ನೋಡು ಬಯಲೊಳ್ ಬೇಡೆಂದು ಕೈಮಾಣೆಯಟ್ಟಿರಸಂಕಂ ಮಱೆಗುಟ್ಟಿ ಮಾಸಮಳದಂಕಂ ಬಾಸೆಯಂ ಸಾಱಿ ಬಿತ್ತರದಿಂದಿರ್ದುದು ಮೊತ್ತದಿಂದೆ ಭೃಗುವಿದ್ಯಾಮೂರ್ತಿ ಮಾರ್ತಟ್ಟಿವೋಲ್ (ಅಜಿಂತ. ೨-೨೯).

[ಮಾರ್ (<ಮಾಱು₂) + ತಟ್₁]

**ಮಾರ್ತಾಂಡ** (ನಾ). ನೇಸರು ; ಸೂರ್ಯ : ರಿಪುಕುಮುದಮಾರ್ತಾಂಡ . . . ಪರಿಶ್ಚಂದ್ರರಾಯನೇಱಿದನು ಮಣಿಮಯರಥವನು (ಹರಿಶ್ಚ. ೫-೦೨); ಕಂಡರೇ ಹಸ್ತಿನಪುರವ ಮಾರ್ತಾಂಡನಿಲ್ಲದ ದಿನದ ತೆಱದೊಳಗಂಡಲೆಯುತಿದೆ (ತಿಮ್ಮಕ್ಕ. ೨-೦೪) ; ನಿಬಿಡನೀರವಕಾನನಾಂತರಂ ನಡುಹಗಲ ಮಾರ್ತಾಂಡನುರವಣೆಯನಡಗಿಸುತೆ ತಂಪುಬನಗತ್ತಲೆಯು ಭೀಷ್ಮಸಮ್ಮೋಹನದಿ ಮೆರೆದತ್ತು ಚಿತ್ರಗತವಾದಂತೆವೋಲ್ ನಿಶ್ಚಲಂ (ಚಿತ್ರಾಂಗ. ೩-೫೭). [ಸಂ.]

**ಮಾರ್ತಾಂಡತನಯ** (ನಾ). ೧. ಸೂರ್ಯನ ಮಗ. ೨. ಶನಿ. ೩. ಯಮ. ೪. ಸುಗ್ರೀವ. ೫. ಕರ್ಣ : ಗಂಡುಗಲಿ ಕೋದಂಡರುದ್ರನ ಕಂಡು ವಿರಥನ ಮಾಡಿದನು ಮಾರ್ತಾಂಡತನಯನ ಗೆಲಿದು ರಣದಲಿ ನೊಂದನಾ ಭೀಮ (ಕುಮಾರವ್ಯಾ. ೧೩ ಸೂ.೨೫). [ಸಂ.]

**ಮಾರ್ತಾಂಡಪಥ** (ನಾ). ಸೂರ್ಯನು ಸಂಚರಿಸುವ ಮಾರ್ಗ ; ಆಕಾಶ : ಕಂಡರಿವರಿಬ್ಬರ ರಣಾಂಗಮಂಡಿಸಿದ ಮಾರ್ಗಾಂತರವ ಮಾರ್ತಾಂಡಪಥದಲಿ ಮೋಹಮಳಿಯೆ ಸುರಾಸುರವ್ರಾತ ಕಂಡು ಕಳುಹಿದರುಭಯಗುರುಗಳು ಗುಂಡಿಗೆಯ ಸುಧೆಯೌಷಧಿಗಳನು (ತೊರವೆ. ೬-೪೪-೨೦). [ಸಂ.]

**ಮಾರ್ತಾಂಡೋದಯ** (ನಾ). ಹೊತ್ತು ಹುಟ್ಟುವುದು : ಸೂರ್ಯೋದಯ : ಅಂತು ಮಾರ್ತಾಂಡೋದಯಮಪ್ಪುದುಂ ಭವ್ಯವರಪುಂಡರೀಕಮಾರ್ತಂಡಂ . . . ಚೈತ್ಯಾಲಯಕ್ಕೆ ಬಂದಿರ್ದರ್ (ಸುಕುಮಾ. ೦೨ ೦೭ ವ). [ಸಂ.]

**ಮಾರ್ತಾಂಡೋಪಲ** (ನಾ). ಸೂರ್ಯಕಾಂತಶಿಲೆ ; ನೇಸರ್ಗಲ್ಲು : "ನೇಸರ್ಗಲ್ಮಾರ್ತಾಂಡೋಪಲಾಖ್ಯಂ" (ಕರ್ಣಾ. ೯೫). [ಸಂ.]

**ಮಾರ್ತಾಗು** (ಕ್ರಿ). ಎದುರಿಸು : ಪ್ರತಿಭಟಿಸು : ಬಾಳ್ಗಳುಡಿಗಳ್ ಜೇಱಿಟ್ಟು ಮಾರ್ತಾಗಿ ಶೋಣಿತಧಾರಾಳಿಗಳುರ್ಚಿ ಪರ್ಚಿ ಸಿಡಿಯಲ್ ತೇಂತಲ್ ವಿಮಾನಂಗಳಕ್ಕೆ ತಗುಳ್ವಾಗಳೆ ಮತ್ತ ಮತ್ತ ತಳರ್ದರ್ ದೇವರ್ ನಭೋಭಾಗದೊಳ್ (ಕಂಠಪಾ. ೦೨-೭) ; ಒಂದೊಂದಂ ಮಾರ್ತಾಗಿದು ಪೊಂದೊಂದಂ ಮೊನೆಯ ಕಿಚ್ಚಿನಿಂದುರುಪಿದುಪೊಂದೊಂದಂ ಕಡಿದಿಕ್ಕಿದು ಪೊಂದೊಂದಂ ಪಿಕ್ಕಂದೆ ಸೀಳ್ಳು ಮಂಬಂಬರದೊಳ್ (ಜಗ. ೦೭-೯೪) ; ಉರವಣಿಸಲುರವಣಿಸಿದರು ಮಾರ್ತಾಗೆ ತಾಗಿದರು . . . ಸಮರಭೂಮಿಯಾಗ್ರದಲಿ (ಕುಮಾರವ್ಯಾ. ೯-೯೭).

[ಮಾರ್ (<ಮಾಱು₂) + ತಾಗು₁ (<ತಾಂಕು₁)]

**ಮಾರ್ತಿರುವು** (ನಾ). ಮತ್ತೊಂದು ಬಿಲ್ಲಿನ ಹಗ್ಗ.— ಮೌರ್ವಿ : ಪಾಸದ ನೇಣ್ಗಳಿಂ ಪೊಸೆದ ಜಾಲಮನೊಪ್ಪಿರೆ . . . ಬಿಲ್ಗೆಸುವ ಬಾಣಮಂ ತಿರುಪಿ ತಿರ್ದುವ ಮಾರ್ತಿರುವಂ ತೊಡರ್ಚಿ ನೋಟಪ್ಪಾ ಸಹಜಕ್ರಿಯಾವನವನೇಚರರಿಂ ಬಗೆಗೊಂಡುದಾ ವನಂ (ಜಗ. ೦೭-೦೭) ; ಗುರುವೆಚ್ಚು ಕಡಿವನು ಗಾಂಡಿವದ ತಿರುವ ನವತಳಿಸಿ ಮಾರ್ತಿರುವಿನಲಿ ಸಂಕವಿಸಿಕೊಂಡರ್ಜುನನು ದ್ರೋಣನ ನವನಿಶಿತಬಾಣೌಘದಲಿ ಹೂಳಿದನು ನಿಮಿಷದಲಿ (ಕುಮಾರವ್ಯಾ. ೯-೯೭). [ಮಾರ್ (<ಮಾಱು₂) + ತಿರುವು₂]

**ಮಾರ್ತೊಳಗು** (ಕ್ರಿ). ಪ್ರತಿಯಾಗಿ ಹೊಳೆ,— ಪ್ರಕಾಶಿಸು : ಪಳುಕಿನ ಭಿತ್ತಿಗಳೊಳ್ ಮಾರ್ತೊಳಗುವ ನಿಜತನುಗಳಿಂದೆ ತನ್ನಂದದ ಕೋಮಳೆಯು ಮೆರೆಸೀಶನ ಮದನಳಿನಮನಾರಾಧಿಪಂತೆ ಸತಿ ಸೊಗಯಿಸಿದಳ್ (ಅದಂಪು. ೭೭೯) ; ಪಳುಕಿನ ಕಟ್ಟಿಮದೊಳ್ ಮಾರ್ತೊಳಗುವ ಹರಿನೀಲಮಣಿಯ ಸೂಸಕದ ನೆಟಿಲ್ಗಳನಸಿತಾಹಿಗಳೆಂದೊಸೆದೇಱುವ ನೀಹದ ನವಿಲ್ಗಳೊಪ್ಪುಗು

ಮಮಚೆಳ್ (ಶಗಪು. ೯-೦೨೮) ; ಎಳನೀರ ಮಡಿಗಳೊಳ್ ಮಾರ್ತೊಳಗುವ ಪಾಮರಿಯರಾನನಂಗಳುಮಲರ್ಗಣ್ಣುಳುಮೊಸೆವೆವಲರ್ದ ಕಮಳಂಗಳ ಮಿಾನ್ಗಳ ಬಳಗಮೆಂಬ ಬಗೆ ಮಿಗುವಿನೆಗಂ (ಕೃಷ್ಣಕೃ. ೨-೦೭).

[ಮಾರ್ (< ಮಾಱು$_{2}$) + ತೊಳಗು$_{1}$]

**ಮಾರ್ದಂಗಿಕ** (ನಾ). ಮೃದಂಗವನ್ನು ನುಡಿಸುವವನು ; ಮದ್ದಳೆಯನ್ನು ಬಾರಿಸುವವನು : "ಆ ಮಾರ್ದಂಗಿಕಂ ಮದ್ದಳೆಕಂ" (ಕವಿಕಂ. ೨೬೩) ; ವೈಣಿಕ ಪಾಣಿವಿಕ ವಾಂಶಿಕ ಮಾರ್ದಂಗಿಕ ಗಾಯಕ ನರ್ತಕಾದಿ ಕಾತಪಪ್ರತತಿಯುಮಂ . . . ಬರಿಸಿ ಕುಳ್ಳಿರಿಸಿ (ಶಂಕರಕೃ. ೬-೮೫೮) ; ಒಡಲೆಂಬೀ ಜವನಂ . . . ಮಹಾತ್ಮಸಹಪಾ ತನ್ನೊಂದು ಸಾಮರ್ಥ್ಯದಿಂ . . . ನುಡಿಯಿಪಂ ಮಾರ್ದಂಗಿಕಂಬೊಲ್ (ಕಣ್ಣಕ. ೩-೯). [ಸಂ.]

**ಮಾರ್ದನಿ**, ಮಾರುದನಿ, ಮಾಱುದನಿ (ನಾ). ಮರುದನಿ ; ಪ್ರತಿಧ್ವನಿ: ಅಂಬರಚರಮಿಥುನರತಾಡಂಬರದೊಡನೊಗೆದ ನಗದ ಮಾರ್ದನಿ ಕವಿಗಂ ತುಂಬಿ ಮನೋಜಾಗಮಗುರುವೆಂಬುದನೊಡನೆಂಬ ಶಿಷ್ಯನಂ ಪೋಲ್ತಿರ್ಕುಂ (ಶಾಂತಿಪು. ೨-೧೦೨); ಕರೆಕರೆದು ಗಹ್ವರದ ಮಾರ್ದನಿಗಳಂ ಕೇಳ್ವ . . . ಕಣ್ಣಿಱಿದು ನೋಡಿ ಕಾಣದೆ ಮಱುಗುತ (ಸಿದ್ಧರಾ. ೨-೬೫) ; ಕೊಪ್ಪಿನಲಿ ಸಿಂಜಿನಿಯ ಸಿಕ್ಕಿರನಪ್ಳಿಱಿದು ಮಾರ್ದನಿ ದಿಗಂತರವೊದಱಲೊದಱಿಸಿದನು ಮಹಾಧನುವ (ಕುಮ್ಮಾ. ೦೪-೩). **ಮಾರುದನಿ** : ಕಡೆನುಡಿಯ ನುಡಿಯುತಿದೆ ಮಾರುದನಿ ಮೊಳಗುತಿದೆ, ಆಲಿಸಾಲಿಸದನು ! (ಶಿಕೆಗಿ. ೩೯-೦). 'ಮಾರುದನಿಗೊಡು' ಪರಾ. **ಮಾಱುದನಿ** : ಚೀಱು ವಂಗನೆದುಬ್ಬರದೊಳೊದವೆ ಸಿಡಿಲಳುವ ಮಾಱುದನಿಯವಳ ಕಣ್ಣೊಳು ಕಱೆಯೆ ಮಳೆ ಶೋಕ ವರ್ಷಋತುವೆನಲೆಸೆದುದು (ಜಾಪಶಂ. ೯-೨೭).

☛ 'ಮಾರುದನಿ', 'ಮಾಱುದನಿ' ಎಂಬ ಶಬ್ದಗಳು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪಗಳು, [ಮಾರ್ (< ಮಾಱು$_{2}$) + ದನಿ$_{1}$]

**ಮಾರ್ದನಿಗುಡು** 'ಮಾರ್ದನಿಗೊಡು' ನೋ.

**ಮಾರ್ದನಿಗೊಡು**, ಮಾರುದನಿಗೊಡು. ಮಾರ್ದನಿಗುಡು (ಕ್ರಿ). ೧. ಪ್ರತಿಧ್ವನಿತವಾಗು ; ಪ್ರತಿಧ್ವನಿಸು : ಅವರ ಶಂಖಧ್ವನಿಯೂ ಸಿಂಹನಾದವೂ ಭೇರೀನಿನಾದವೂ ಭೂವ್ಯೋಮಗಳನ್ನು ತುಂಬಿ ಮಾರ್ದನಿಗೊಡಲಾರಂಭಿಸಿದುವು (ಜನಭಾ. ೨೬೩). ೨. ಪ್ರತಿಧ್ವನಿಯುಂಟಾಗುವಂತೆ ಮಾಡು : ಪೇಡವಡೆ ಕೂಡೆ ಪೊಕ್ಕೊಕ್ಕಲಿಕ್ಕಿ ಮಹಾವಿಂಧ್ಯಂ ಮಾರ್ದನಿಗೊಡಲಾರ್ದು ಬೊಬ್ಬಿಱಿದಬ್ಬರಿಸಿ . . . ಪುಳಿಂದರೆಲ್ಲರುಮಂ ಮರ್ಬಿನೊಳಡಂಗಿಸೆ (ಪಂಪಭಾ. ೦೫-೩೪). **ಮಾರುದನಿಗೊಡು** : ೩. (ಆಲಂ) ಪ್ರತಿಕ್ರಿಯೆಯನ್ನು ತೋರು ; ಸ್ಪಂದಿಸು : ದೇವಾಂಬೆಯ ಪವಿತ್ರಪ್ರೇಮಕ್ಕೆ ಅಪ್ಪಾಜಿಯ ಹೃದಯವು ಮಾರುದನಿಗೊಟ್ಟಿದ್ದಿತು (ಚಿಕದೇ. ೨೦). **ಮಾರ್ದನಿಗುಡು** : ೨. ಮೃದಂಗಧ್ವಾನ [ಧೀರಮಾಗೆ] ಭಟ್ಟಗಳ್ ಮಾರ್ದನಿಗುಡೆ ಗಜಜ್ ಗರ್ಜಿಪ ಕಂಠೀರವ ರವಂಗಳೊಳಂ . . . ವಿಂಧ್ಯಾಟವಿಯೆಲ್ಲಂ ಪ್ರಚಲಿತಮಾದಂತಾಗೆ (ಆದಿಪು. ೦೬೦). [ಮಾರ್ದನಿ + ಕೊಡು$_{1}$]

**ಮಾರ್ದನಿಗೊಳ್** (ಕ್ರಿ). = ಮಾರ್ದನಿಗೊಡು ೨ : ಹಾಹಾರವಮೆತ್ತಂ ಮಾರ್ಬಲನೊಳ್ ಮಾರ್ದನಿಗೊಂಡುದು (ರಾಮಾಕ. ೦೨೯-೯).

[ಮಾರ್ದನಿ + ಕೊಳ್$_{1}$]

**ಮಾರ್ದನಿದೋಱು**. ಮಾರುದನಿತೋರು (ಕ್ರಿ). = ಮಾರ್ದನಿಗೊಡು ೧ : ಇಳೆಯು ತಳೆದಿರ್ದನೆ ಛೀಳಡೆ ಗಗನ ಮಾರ್ದನಿದೋಱೆ . . . ಸುದರ್ಶನಪ್ರತಿಮಾನವನು ವಹಿಸೆ ಱಿಗಿದನು (ಕೊರಟಾ. ೬-೩೨-೩೭). **ಮಾರುದನಿತೋರು** : ರಾಷ್ಟ್ರತರ ಕೇಕಗಳು ಕಾಡಿನಲಿ ತುಂಬುತ್ತ ಮಾರುದನಿತೋರುತ್ತ ಖಗಕುಲವ ಹಾರಿಸಲು (ಕವಿಕೋ. ೭೬-೦೨).

[ಮಾರ್ದನಿ + ತೋಱು]

**ಮಾರ್ದನಿಯಿಡು**, ಮಾರ್ದನಿವಿಡು (ಕ್ರಿ). ೧. = ಮಾರ್ದನಿಗೊಡು ೧ : ಸಂತಸದೆ ಬಾಹಾಸ್ಫಾಲನಂಗೆಯ್ಯೆ ದಿಗ್ವಲಯಂ ಮಾರ್ದನಿಯಿಟ್ಟು ಪೋರ್ಪ ಗಜಱಿದಂ ಚಾಳುಕ್ಯಕಂಠೀರವಂ (ಗದಾಯು. ೬-೯೩). ೨. = ಮಾರ್ದನಿಗೊಡು ೨ : ಅನುಪಮಪ್ರಾಸಾದಕೂಟಕುಹರಂಗಳೊಳ್ ಮಾರ್ದನಿಯಿಡುವ ಪಡಿಯಱರ ಕಳಕಳಂಗಳೊಳ್ . . . ಮನುಜೇಂದ್ರಂ ಪೊಱಮಟ್ಟು (ಆದಿಪು. ೬೭): ಒಗೆವಬಳಾಂಘ್ರಿನೂಪುರರದ ರ್ಝಂಕೃತಿ ಮಾರ್ದನಿಯಿಟ್ಟು ನಾಡೆಯುಂ ಪುಗೆ ಕುಜಕೋಟರಂಗಳಂ (ಕಾಮನಕ. ೩-೯೮). **ಮಾರ್ದನಿವಿಡು** : ೧. ಮಾರ್ದವದೆ ಸಖಿಯರೊಡನೆ ಜನಾರ್ದನನಾಡುತ್ತುಮಿರ್ದ ಪದದೊಳ್ ದೆಸೆಗಳ್ ಮಾರ್ದನಿವಿಡಲದ್ಭುತ ವೃಷನರ್ದನವುಣ್ಮುದುದದೊಂದು ವಜ್ರಾಶನಿವೊಲ್ (ಜಗಂ. ೩-೩೪). ೨. ಪಲವುಂ ತೆಱದ ಪಱೆಗಳೆಸೆವುದ್ದಾಮರಭಸದಿಂದು ಮಾರ್ದನಿವಿಟ್ಟು ಮುದುಗಣ್ಣನಮನುಂಟುಮಾಡಿದಂತೆ ಶಾಂತೀಶ್ವರಂಗೆ (ಶಾಂತಿಪು. ೦೦-೩೦ ವ).

[ಮಾರ್ದನಿ + ಇಡು$_{1}$]

**ಮಾರ್ದನಿವಿಡು** 'ಮಾರ್ದನಿಯಿಡು' ನೋ.

**ಮಾರ್ದನಿಸು** (ಕ್ರಿ). = ಮಾರ್ದನಿಗೊಡು ೧ : ಅವರ ಸಪ್ಪಳ ಮಾರ್ದನಿಸುತ್ತಿತ್ತು ಸುಂದರಿಯು ಕಿವಿಯಲ್ಲಿ (ಕಳ್ಳಜಾ. ೦೦೬) ; ಮಲೆಮಾನಮಾವುದು ತಾನೆ ಪೊಳಲಿಟ್ಟು ಮಾರ್ದನಿಸದಾ ನಿಸ್ಸಹಾಯಿಲುಗಳ (ಕುಸಜಾ. ೦೦೨).

[ಮಾರ್ದನಿ + – ಇಸು$_{3}$]

**ಮಾರ್ದವ** (ನಾ). ೧. ಮೃದುವಾದುದು ; ಕೋಮಲವಾದುದು : ವಿವಿಧಭಕ್ಷ್ಯಂಗಳನಮಳಮಾರ್ದವರಸರಸಾನ್ನಂಗಳಂ ತದ್ವ್ಯತಿಯುತ್ಸವದಿಂದ ಮಾಡುತ್ತಿರ್ಪ ಸಮಯದಲಿ (ಬಸವಪು. ೨೪-೩೩). ೨. ಕೋಮಲತೆ: ಸುಕುಮಾರತೆ : ಮಾರ್ದವ ಸುವಾಸನೆಗಳೊಂದೊಂದನೊಡಗೊಂಡು ಆರ್ದ್ರತಾಮಾಧುರ್ಯರಸಪುಷ್ಟಿಯನು ಪಡೆಯೆ ಆ ಹಣ್ಣು ಬೆಲೆಹಣ್ಣು (ಕೋಗಿಲೆ. ೬೭-೦೭). ೩. ಮೃದುಸ್ವಭಾವ : ಮಾರ್ದವದೆ ಸಖಿಯರೊಡನೆ ಜನಾರ್ದನನಾಡುತ್ತುಮಿರ್ದ ಪದದೊಳ್ ದೆಸೆಗಳ್ ಮಾರ್ದನಿವಿಡಲದ್ಭುತವೃಷನರ್ದನವುಣ್ಮುದುದದೊಂದು ವಜ್ರಾಶನಿವೊಲ್ (ಜಗಂ. ೩-೩೪): ಮಾರ್ದವಮಂ ದ್ವಿಜರೊಳ್ . . . ಮನ್ನಣೆಯುಂ ಪೊರ್ದಿಗೆಯುವರೊಳ್ ಪುದುಗಿಸಿ ಪೇರ್ದಳೆಯಿಸಿಪನಿಂಪುಗೋಳಿಸಿ ರಾಜನಿಲಿಂಪಂ (ಶಕಂ ೩-೦೩೦). ೪. [ಜೈನ] ದಶಧರ್ಮಗಳಲ್ಲಿ ಒಂದು ; "ಜ್ಞಾನ. ಆದರಸತ್ಕಾರ. ಕುಲ, ಜಾತಿ, ಬಲ, ಐಶ್ವರ್ಯ. ತಪ ಮತ್ತು ಶರೀರಸೌಂದರ್ಯ ಇವುಗಳ ಅಭಿಮಾನವಿಲ್ಲದೆ ಇರುವುದು" (ಅದಿಪು. ಕೈಪಿಡಿ): ಉತ್ತಮಕ್ಷಮಾಮಾರ್ದವಾರ್ಜವ . . . ಬ್ರಹ್ಮಚರ್ಯಪರ್ಯಾಯಪರ್ಯಾಪ್ತ ದಶಧರ್ಮಂಗಳಂ ಕೈಕೊಂಡು (ಆದಿಪು. ೬-೩೦ ವ); ಕ್ಷಮೆ ಪೊಯ್ ಮಾರ್ದವ ಮೋಜೆ ಸಾಜಮಳವಟ್ಟಿರ್ದಾರ್ಜವಂ . . . ನಯಂ ಬ್ರಹ್ಮಚರ್ಯ[ಮೆ] ಮಾನೋನ್ನತಿ ವರ್ಧಮಾನಮುನಿಗಕ್ಕುಂ ಪೆಱರ್ಗಕ್ಕುಮೇ (ಸುಕುಮಾ. ೦-೨೩) : ಕುಲ ರೂಪು ಜಾತಿ ಸುಬುದ್ಧಿ ತಪಸ್ಸು ಶಾಸ್ತ್ರ ಸಲೆ ಶೀಲ ಪ್ರಭೃತಿ ಗರ್ವದೊಳು ನೆಲಸದೆ ಗರ್ವಮಾತ್ರವ ಮಾಡದಿಪ್ಪುದು ಚೆಲುವೆ[ನೆ ಮಾ]ರ್ದವ ಧರ್ಮ (ಧ್ಯಾರಜಾ. ೦೦-೭೬೯). [ಸಂ.]

**ಮಾರ್ದವತೆ** (ನಾ). ಮೃದುತ್ವ; ಸುಕುಮಾರತೆ : ನರವ್ಯೂಹದ ಮಾರ್ದವತೆ ವಯಸ್ಸಾದಂತೆ ಕಡಮೆಯಾಗುತ್ತದೆ (ಶಿಕ್ಷಣ. ೨೦೩): ಅಣಕಿಸುವ ಧ್ವನಿಯು ಹಾಡಿನ ತುಂಬೆಲ್ಲ ತುಂಬಿದ್ದರೂ ಅದು ವೀರಶೈವಸಂಸ್ಕಾರವನ್ನು ಹೊಂದಿ ಬಂದಿರುವುದರಿಂದ ಮಾರ್ದವತೆಯು ತುಂಬಿ ತುಳುಕಾಡುವುದು (ಶಬ್ದಶಾ. ೩೬). [ಸಂ. ಮಾರ್ದವತಾ]

**ಮಾರ್ದಳಿಕ** (ನಾ). ಮೃದಂಗ ಬಾರಿಸುವವನು ; ಮದ್ದಳೆ ನುಡಿಸುವವನು : ಯೌವನಮಧುಮದಮುದಿತ ಮಾರ್ದಳಿಕ[ಪಾಠಾಂ. ರ್ದಂಗಿಕ] ವಾಂಶಿಕಪ್ರಹಸ್ತಮಾನವಾದ್ಯ ಮೃದಂಗವಂಶನಿನದಲಯಚ್ಛಂದಸುಂದರ

ನಟುತ್ತುಂದಿದರೀಸಂದೋಹಮುಂಪುಭೂತಪೂರ್ವಾರವಾನ್ನೀಯುಮುಂಪವಾಗೆ (ಅಂಕಿ. ೬-೩೬ ಚ). 'ಮಾರ್ದಂಗಿಕ' ಪರಾ. [ಸಂ. ಮಾರ್ದಲಿಕ]

**ಮಾರ್ದಿಟ್ಟಿ** (ನಾ). ಪ್ರತಿಯಾಗಿ ನೋಡುವ ನೋಟ, – ದೃಷ್ಟಿ : ಮಾರ್ದಿಟ್ಟಿಯಿನ್ನಾಇಷು ನಿಟ್ಟಿಸುತ್ತಿದ್ದು ಕಣ್ಣಾಮುಳ್ದು . . . ಮೊಗ ಕತ್ತು ಗಳನ್ನೊರಸಿಕೊಂಡು ಧಿಗ್ಗನೆ ಪೆದ್ದುದ್ದು (ಕುಂತ್ರಕ. ೬೪–೨೫). [ಮಾರ್ (< ಮಾಱು$_2$) + ದಿಟ್ಟಿ]

**ಮಾರ್ದೊಡೆ** (ಕ್ರಿ). ಮತ್ತೆ ಉಜ್ಜು, – ತಿಕ್ಕು : ಪುಷ್ಪಂತೀಸೆಗೆಜಿಗೆ ನೊಳಂ ಕೀರ್ನಾಸ್ಯಂಗಾಗ್ರದಿಂ ಮಾರ್ದೊಡೆಯುತ್ತಂ . . . ಬಂದುದು ಮದವಿದ ಳಕ್ಕಿಂಗಳಾಕ್ಷಂ ಮಹೋಕ್ಷಂ (೭೬೦ಚ. ೩-೯೭). [ಮಾರ್ (< ಮಾಱು$_2$) + ತೊಡೆ$_1$]

**ಮಾರ್ನಡೆ** (ಕ್ರಿ). ಎದುರಾಗಿ ನಡೆ : ಸಯದ ಬಿಜ್ಜಲದ ವರ್ಣನೆಯ ಸತಿಯರೊಳು ಮಾರ್ನಡೆದಳರಸಿ ಸೌಭಾಗ್ಯಾರ್ಣವದ ತೆರೆಗಳಂತೆ (ಬಸವ. ೯-೨೦) ; ಯುದ್ಧಸನ್ನದ್ಧರಾಗಿ ಗಜಾಶ್ವೋಗರುವರೂಥವೀರಭಟಸೈನ್ಯಂ ಗೂಡಿ ಕುಂತಭಿಂಡಿಚಕ್ರಗದಾದ್ಯಾಯುಧಮಾತು ಮಾರ್ನಡೆದು ಬೀಡಂ ಬಿಟ್ಟು ರಾಟೋಪದಿಂ (ಪ್ರಶಾ. ೩೯-೩). [ಮಾರ್ (< ಮಾಱು$_2$) + ನಡೆ$_1$]

**ಮಾರ್ನುಡಿ**$_1$, ಮಾರುನುಡಿ$_1$ (ಕ್ರಿ). ೧. ಪ್ರತಿಯಾಗಿ ಮಾತನ್ನಾಡು ; ಮಾರುತ್ತರ ಕೊಡು : ಮಿಡುಕದೆ ಭೀಷ್ಮ ನೋಡುತಿರು ಕುಂಭಜ ಸುರ್ಕರು ಕರ್ಣ ಮಿಕ್ಕು ಮಾರ್ನುಡಿಯದೆ ಮೂಗುವಟ್ಟಿರು (ಪಂಪಭಾ. ೬-೩೩) ; ಇವರ್ಕೆ ನೀನೇನುಮಂ ನುಡಿಯದಿರೆಂದು ಲಕ್ಷ್ಮಣನಂ ಮಾರ್ನುಡಿ ಯದಂತು ಮಾಡಿ (ಪಂಪರಾ. ೦೬-೭ ವ) : ಕರೆಯಲು ಮಾತಕನೇ ಮಾರ್ನುಡಿಯೆ ನೀಂ (ಬಸವ. ೦೯-೦೦). ೨. ವಿರುದ್ಧವಾದುದನ್ನು ಹೇಳು ; ಎದುರುತ್ತರ ಕೊಡು : ಪತಿವಚನಕೆ ಮಾರ್ನುಡಿಷಮುಂಟಾ ದೊಡಾ ಸತಿಗೆ ನಿಷ್ಕೃತಿಯಿಲ್ಲೆಂಬ ಶ್ರುತಿಯಿಂದ ನಿಮಗೆ ನಾನುಸಿರಲಂಜುವೆನು (ಜೈಮಿ. ೬-೯). **ಮಾರುನುಡಿ**$_1$ : ೧. ನಿಂತಿವ್ವ ಹಾಗೆಯೇ ಹೈಮವತಿ ಮಾರುನುಡಿದಳು (ಏಕ. ೩೩). [ಮಾರ್ (< ಮಾಱು$_2$) + ನುಡಿ$_1$]

**ಮಾರ್ನುಡಿ**$_2$, ಮಾರುನುಡಿ$_2$, ಮಾಱುನುಡಿ (ನಾ). ೧. ಪ್ರತ್ಯುತ್ತರ : ಜವಾಬು : ಧಾರುಣಿಯಣ್ಣನಿದಕೆ ಮಾರ್ನುಡಿ ಯಾವುದೆಂದು ಚಿಂತಿಸುತ ಮಾಗುಳಂತೆಂದನು (ಕೌಂಶ. ೯-೬೬) ; ನಿನತಾವ ಕೇಳ್ಕೆಗಂ ಮಾರ್ನುಡಿಯ ನೀಯೆ ನಾನ್ (ವಿದ್ಯಾಭ್ರ. ೩೦-೦೦೦೯). **ಮಾರುನುಡಿ**$_2$ : ೧. ನಿನ್ನನೊಂದು ಕೇಳಲೆಂದು ಮನವು ತವಕಗೊಳ್ಳುದು ಇತ್ತ ನೋಡಿ ನಾಚದನಗೆ ಮಾರು ನುಡಿಯ ಕೊಡುವುದು (ಕಾಶೋ. ೨೭-೦೬). **ಮಾಱುನುಡಿ** : ೨. ಪ್ರತಿ ಯಾದ ಮಾತು ; ಬೇರೆಯಾದ ಅಭಿಪ್ರಾಯ : ಮಾಱುನುಡಿಯಿರದಿರ ಲೆಱೆವು ಮನ ಮಿಱುವುದಲಾಯೆಂದು ಮಣಿಗಣದೋಳಿಕೆಯ ಮುದ್ರಿಕೆ ಯನಿತ್ತನು ರವಿಗೆ ರಾಘವನ (ಕೆ.ಪರಾ. ೫-೩-೯೨). [ಮಾರ್ (< ಮಾಱು$_2$) + ನುಡಿ$_2$]

**ಮಾರ್ಪ** 'ಮಾಡು$_1$' ಪರಾ.

**ಮಾರ್ಪಜ್ಜೆ**, ಮಾರ್ಪೆಜ್ಜೆ (ನಾ). ವಿರುದ್ಧವಾಗ ನಡೆ, – ಚಲನೆ : ಮಾರ್ಪಜ್ಜೆಗೆಡು' ಪರಾ. **ಮಾರ್ಪೆಜ್ಜೆ** : 'ಮಾರ್ಪೆಜ್ಜೆಗೆಡು' ಪರಾ. [ಮಾರ್ (< ಮಾಱು$_2$) + ಪಜ್ಜೆ]

**ಮಾರ್ಪಜ್ಜೆಗೆಡು**, ಮಾರ್ಪೆಜ್ಜೆಗೆಡು (ಕ್ರಿ). ವಿರುದ್ಧವಾದ ಚಲನೆಗೆ ಅಡ್ಡಿಯುಂಟಾಗು : ನಿನ್ನ ಶೇಮಾರ್ಪ[ಪಾಠಾಂ. ರ್ಪೆ]ಜ್ಜೆಗೆಟ್ಟುದು ಸರೋಜಾಕ್ಷಿ ನಿನ್ನಾಟ ಕಟ್ಟಿತರಸುಚಿನಡೆಪ್ಪುಳೆ (ಕೈಬಿಶಾ. ೩-೩೦). **ಮಾರ್ಪೆಜ್ಜೆಗೆಡು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಮಾರ್ಪಜ್ಜೆ + ಕೆಡು$_1$]

**ಮಾರ್ಪಡಿ** (ನಾ). ಸಮಾನ ; ಎಣೆ ; ಸಾಟಿ : "ಸರಿ, ದೊರೆ, ಪಡಿ, ಗೆಡೆ, ಪಾಟಿ, ಪಾಸಟಿ, ಎಣೆ, ತೋಣೆ, ಮಾರ್ಪಡೆ[ಡಿ] . . . ಜೋಟಿ, ಸಂಗಡಂ–ಈ ೧೮ ಸಮಾನಕ್ಕೆ ಪೆಸರ್" (ಕಶಾ. ೩೯-೨೯೦) ; ಕಾಮುಕಪೂರ್ವಾ ನಡುವೆಂದು ಬಣ್ಣಿಸುವ ಜೇಳ್ವಂಬಗೆಗಳಿಂತಿರ್ಕೆ ಮಾರ್ಪಡಿ ಮಾಲೋಕ ದೊಳಿಲ್ಲ (ಜಂಪಕ. ೯-೩). [ಮಾರ್ (< ಮಾಱು$_2$) + ಪಡಿ$_2$]

**ಮಾರ್ಪಡಿಸು** (ಕ್ರಿ). ವ್ಯತ್ಯಾಸಪಡಿಸು ; ಬದಲಾಯಿಸು : ಪೇಳ ಪರ್ವತಂಗೊಲಿಯದಂತವನ ಮೊಗಮಂ ಮಂಕಿಡಮೊಗದಂತೆ ಮಾರ್ಪಡಿಸ ಲಪ್ಪುದು (ಅದ್ಭುತ. ೯-೩೬); ಮಾನವನ ಅಂತರಂಗ ಎಲ್ಲಿಯೂ ಒಂದೇ. ದೇಶ ಕಾಲ ಭಾಷೆಗಳು ಇದನ್ನು ಮಾರ್ಪಡಿಸಲಾರವು (ಜನಾ. ೯೦). [ಮಾರ್ಪಡು + – ಇಸು]

**ಮಾರ್ಪಡು** (ಕ್ರಿ). ಬದಲಾವಣೆಹೊಂದು ; ವ್ಯತ್ಯಾಸಗೊಳ್ಳು : ಅವತ ರಿಸಿಹನು ಬೊಮ್ಮ ವಿಶ್ವದೇಹದೊಳೆನ್ನೆ ಅವನ ವೇಷಗಳೇಕೆ ಮಾರ್ಪಡುತಲಿ ಹವೆ ? (ಮುಂಕಳ. ೩೬); ತ್ರಿಪುರಸಂಹಾರವಾದ ಬಳಿಕ ಆಯಾಸಗೊಂಡ ಶಿವನ ಹಣೆಯಿಂದ ಬೆವರುಹನಿಯೊಂದು ಬಿದ್ದು ಮರವಾಗಿ ಮಾರ್ಪಟ್ಟು ಕದಂಬ (ತಸಂಕೊ. ೯೬). [ಮಾರ್ (< ಮಾಱು$_2$) + ಪಡು$_1$./ತಮಿ. ಮಾಱುಪಡು]

**ಮಾರ್ಪಡೆ** (ನಾ). ಎದುರುಪಡೆ ; ಶತ್ರುಸೈನ್ಯ : ಅಂತಿದಿರಾಂತ ಮಾರ್ಪಡೆ ಯಲ್ಲಮಂ ಜವನ ಪಡೆಗೆ ಪಡಿಗಚ್ಚಿಕ್ಕುವಂತಿಕ್ಕಿ (ಪಂಪಭಾ. ೦೦-೯೯ ವ) : ಮೇಲೊಡ್ಡಿದುದ್ದೆದೆ ಬಂದ ಮಾರ್ಪಡೆಯನಿತುಂ (ಕವ್ಯಾಜಾ. ೨೫೫); ಮಾರ್ಪಡೆ ಗಳ ಕೂರ್ಬುಡುಗೆ, ಘೋರ ಬಯಸಿ ಕಡೆದರೇ ! (ಜಾಂಟೆ. ೩-೩೩).

**ಮಾರ್ಪಡೆಗಿಡಿಗ** = ಶತ್ರು ಸೈನ್ಯಕ್ಕೆ ಗಿಡುಗನಂತಿರುವವನು ; ಒಂದು ಬಿರುದು : ಶ್ರೀಮನುಮಹಾಪಮಂಡ[ಲೇ]ಶ್ವರ ಕೇಸವದೇವ್ವಡೆಯರ [ಪದದ] ಕಳಂವ ಲೊಕ್ಕಿಯ ಬೀಟು ಬಿರುದು ಮಾರ್ಪ್ಪಡೆಗಿಡಿಗ ಮಲೆವರ ಗಂಡ ಕಾ [ರೆ] ಶ್ರಿ ಮಾಡುವ ನಾಯಕಂ (ಕ್ಯಾ. I. ೯೪-೬ ; 1422 ?). **ಮಾರ್ಪಡೆಗೊಂಟ** = ಶತ್ರುಸೈನ್ಯಕ್ಕೆ ಗಡುಸಾದವನು ; ಒಂದು ಬಿರುದು : ಶ್ರೀಗಾಸ್ರಯವೆನೆ ತೇಜಸ್ಸಾಗರವೆನೆ ನೆಗಟ್ದ ಗಂಗ ವಜ್ರನ ಲೆಂಕಬ್ಬೋಗಾಬ್ಬುನುಂಬರವರೊಳ್ಳೊಗೆಯ ಮಾರ್ಪ್ಪಡೆಗೊಜಂಟ ಸಣ್ಣನ ಬಂಟ (ಎಕ. II (R). ೦೭೦-೩; 10ನೆಯ ಶತ). **ಮಾರ್ಪಡೆಭೀಮ** = ಶತ್ರುಸೈನ್ಯದವರಿಗೆ ಭೀಮನಂತಿರುವವನು; ಒಂದು ಬಿರುದು : ತೇಜ ಮಹಾರ್ತ್ಯಣ್ಣಂ ಮಾರ್ಪ್ಪಡೆಭೀಮಂ ಮಲ್ಲಿಕಾಮೋದಂ ಕೀರ್ತ್ತಿವಿದ್ಯಾಧರಂ (ಕೌಜ. XX. ೨೦–೯ : 1019). [ಮಾರ್ (< ಮಾಱು$_2$) + ಪಡೆ$_2$]

**ಮಾರ್ಪಣ** (ನಾ). (ಧರ್ಮವಿರುದ್ಧವಾದ ಕೆಲಸಕ್ಕೆ) ಪ್ರತಿಯಾಗಿ ಪಡೆಯುವ ಹಣ : ಅಣುವ್ರತಂ ಕೊಸರಿಲ್ಲದಾಳ್ದನೆಡೆಯೊಳ್ ಲಂಚಕ್ಕೊಡಂಬಟ್ಟು ಮಾರ್ಪಣಮಂ ಕೊಂಡತಿವಿಶ್ವಮಂ ಕಿಡಿಸಿ . . . ಭಕ್ಷಿಪಾ ಗಣಕಂ ಹೆಗ್ಗಣಕಂ ಸಮಂ (ಸೂಕ್ತಿಸು. ೩೩). [ಮಾರ್ (< ಮಾಱು$_2$) + ಪಣ$_3$]

**ಮಾರ್ಪಾಟ** 'ಮಾರ್ಪಾಡು' ನೋ.

**ಮಾರ್ಪಾಟು** 'ಮಾರ್ಪಾಡು' ನೋ.

**ಮಾರ್ಪಾಟುಗೊಳು** 'ಮಾರ್ಪಾಟುಗೊಳ್ಳು' ನೋ.

**ಮಾರ್ಪಾಟುಗೊಳ್ಳು**, ಮಾರ್ಪಾಟುಗೊಳು (ಕ್ರಿ). ವ್ಯತ್ಯಾಸವನ್ನು ಹೊಂದು ; ಬದಲಾವಣೆಯಾಗು : ಶಕ್ತಿಪೂಜೆಯ ರೀತಿಯಲ್ಲಿರುವ ಅವರ ನಂಬಿಕೆ, ಅವರ ಆಚಾರ ಮಾರ್ಪಾಟುಗೊಂಡುದು ನಿಮಗೆ ಕಾಣಿಸು ತ್ತದೆಯೇ ? (ಅಕಾ. ೦೯೨). **ಮಾರ್ಪಾಟುಗೊಳು** : ಮಾವಿನ ಬೇವಿನ ಬೇರುಗಳೊಂದಾಗಿ ನೆಲದೊಳು ಹೆಣೆದುಕೊಂಡಾಗ ಮಾವಿನ ಸಿಹಿ ಹೋಗಿ ಬೇವಿನ ಕಹಿಯಾಗಿ ಮಾರ್ಪಾಟುಗೊಳುವುದು ಬೇಗ (ಜಂಪಾಪ. ೦೦೩-೯). [ಮಾರ್ಪಾಟು (< ಮಾರ್ಪಾಡು) + ಕೊಳ್ಳು$_1$ (< ಕೊಳ್$_1$)]

**ಮಾರ್ಪಾಡಿ** (ನಾ). ಶತ್ರುಸೈನ್ಯ ; ವೈರಿದಳ : ಈತನೆ ಗಂಡನೆಂದನಿಬಿದಂ ಮಾರ್ಪಾಡಿಯಿಂ ಬಿಜಿದಿ ಪಾಱಿದ ಕೆಂಡಕ್ಕೆಣೆಯಾಗಿ ನಿಂದು ಪೃಥಿವೀ

ಪಾಲಾವನೀಪಾಲಕಂ (ತಂತ್ರಪು. ೧೧-೯೬) : ನರನಿರ್ದಂ ಮಾರ್ಪಾಡಿ ಯೊಳರಿದೆನಗಾವುದಟಿ ಗರ್ವಮಾವುದಜಳಪೇವಿರಿಯೆನ್ನಿವನೊಲ್ಲೆನ್ನೆನ್ನದೆ ಮರುಳೇ ನೀನಿಂತು ವೀರವಟ್ಟಮನಾಂಪೋ (ಪಂಚ. ೧೨-೩೩).

[ಮಾರ್ (< ಮಾಱು$_2$) + ಪಾಡಿ]

**ಮಾರ್ಪಾಡಿತನ** (ನಾ). ವಿರೋಧ : ಪ್ರತಿಕೂಲತೆ : "ಪ್ರಾತಿಕೂಲ್ಯಂ– ಮಾರ್ಪಾಡಿತನಮುಂ" (ಶಬ್ದಮ. ೨೮–೨೪).

[ಮಾರ್ಪಾಡಿ$_0$ (p← ತಮಿ. ಮಾಱುಪಾಟು) + –ತನ]

**ಮಾರ್ಪಾಡು,** ಮಾರ್ಪಾಟ್ಟು, ಮಾರ್ಪಾಟು (ನಾ). ಬದಲಾವಣೆ : ವ್ಯತ್ಯಾಸ : ಈ ಮಾರ್ಪಾಡನ್ನು ಅರ್ಥಮಾಡಿಕೊಳ್ಳುವುದು ಸ್ವಾಮಿಗೆ ಸಾಧ್ಯವಾಗದೆ ಹೋಯಿತು (ಸ್ವಾಮಿನ್ನೀ. ೯೦); ಒಬ್ಬರಿಂದ ಇನ್ನೊಬ್ಬರು ಪ್ರತಿಮಾಡುವಾಗ ನಡೆಸಿದ ಮಾರ್ಪಾಡಿನ ಫಲ (ಚಿತ್ರದ. ೫೩೩). **ಮಾರ್ಪಾಟ :** ಎಮ್ಮಾ ಮಾನಸರ ಮನೋವಿಕಾರಮುಮನಿಂಗಿತಮುಮಂ ನುಡಿಯಿಂ ನಡೆಯಿಂ ಗೆಯ್ಮೆಯಿಂ ಮೊಗದ ಮಾರ್ಪಾಟದಿಂ ಅಱಿಯಲಕ್ಕು ಮೆಂದು ಬಲ್ಲರ ಬಗೆ (ರಾಮಾಶ್ವ. ೧೧-೧೪). **ಮಾರ್ಪಾಟು :** ಜೀವಂತವಸ್ತು . . . ಪರಿಸ್ಥಿತಿಗೆ ತಕ್ಕಂತೆ ಮಾರ್ಪಾಟು ಹೊಂದುವುದು ಅವುಗಳ ವಿಶಿಷ್ಟ ಲಕ್ಷಣ (ಜೀವ. ೩೦); ತಮಿಳು – ಕನ್ನಡ ಭಾಷೆಗಳೊಡನೆ ಹೋಲಿಸಿದಾಗ ತೆಲುಗುಭಾಷೆಯ ಕೆಲವು ಪದಗಳಲ್ಲಿನ ಮಾರ್ಪಾಟು. ಅದರಲ್ಲಿಯೂ ಆ ಧ್ವನಿವ್ಯತ್ಯಾಸ ಸ್ವಾರಸ್ಯವಾದುದು (ದ್ರಾ. ೬೭. ೧೩೩).

[ಮಾರ್ (< ಮಾಱು$_2$) + ಪಾಡು$_3$]

**ಮಾರ್ಪಿಡಿ** (ಕ್ರಿ). ೧. (ವೈರಿಗಳ ರಾಜ್ಯಾದಿಗಳನ್ನು) ಪ್ರತಿಯಾಗಿ ಹಿಡಿದುಕೊಳ್ಳು–ಸ್ವಾಧೀನಪಡಿಸಿಕೊಳ್ಳು : ನುಡಿದುದ ನನ್ನಿ ಮಾಡಿದುದೆ ಶಾಸನಮಿತ್ತುದೆ ರಾಮರೇಸು ಮಾರ್ಪಿಡಿದುದೆ ವಜ್ರಲೇಪಂ (ಎಕ. VII. ಶಿಕಾ. ೧೧–೨೪; 1085 ?); ಅಲ್ಲಿ ನುಡಿದುದ ನಂಸಿ ನೋಡಿದುದೆ ಸಾಧ್ಯ ಪೊಡರ್ಪುತ್ತ ಕಾರ್ಯಸಿದ್ಧಿ ಮಾರ್ಪಿಡಿದುದೆ ಸೊಂಮು (ಕಇ. I. ೨೫–೪೮ : 1085). ೨. ವಿರೋಧವನ್ನು ಹೊಂದು : ವಿರೋಧಿಸು : ಮಾರ್ಪಿಡಿಯೆ ಮಾಣಣೀ ಘಟಿನೇರ್ಪಸವಿಗನೀತನನಿರ್ಗೆ ಬಿರಲಾರ್ಪವರಾರ್ ಮಾರ್ಪಡೆ ಯೊಳೆನ್ನ ಘನದೋರ್ದರ್ಪಮನಾಪರಿಸಿ ನೆಗಟ್ಟ ಕಲಿ ರಣವಜ್ರಂ (ಕಾವ್ಯಾವ. ೩೦೦). [ಮಾರ್ (< ಮಾಱು$_2$) + ಪಿಡಿ$_1$]

**ಮಾರ್ಪು** (ನಾ). ಬದಲಾವಣೆ ; ವ್ಯತ್ಯಾಸ ; ಮಾರ್ಪಾಟು : ಅಲ್ಲಲ್ಲಿಯ ಸಂದರ್ಭ ಸನ್ನಿವೇಶಗಳಿಗನುವಾಗಿ ಆಕಾರಗಳೊಳಗೆ ಇಷ್ಟಪ್ಟು ಮಾರ್ಪುಗಳೇವೆ (ಶಾಕೀಸು. ೨೦): ಬೆಟ್ಟಗುಡ್ಡಗಳನ್ನೆಲ್ಲ ಕಡಿದು ನೆಲವನ್ನು ಬಯಲುಮಾಡಿದುದರಿಂದ ಪ್ರಕೃತಿಯಲ್ಲಿ ಅನೇಕ ಮಾರ್ಪುಗಳು ತಲೆ ದೋರಿದುವು (ಕಾಂಡಮ. ೯೦).

[ ಮಾರ್ (< ಮಾಱು$_2$) – – ಪು$_2$/ತೆಲು. ಮಾರ್ಪು ]

**ಮಾರ್ಪುಗೊಳ್ಳು** (ಕ್ರಿ). ಬದಲಾಗು : ವ್ಯತ್ಯಾಸ ಹೊಂದು : ದಂ.ವಿ ಸುಖಿಗಳಿಂದ ಮಾರ್ಪುಗೊಳ್ಳದ ಶಾಶ್ವತಸೌಂದರ್ಯದ ಗುರಿಯತ್ತ ಸಾಗುವ ಈ ಲೌಕಿಕಾಲೌಕಿಕಮಿಶ್ರಸೌಂದರ್ಯವನ್ನೇ ನಾವೀಕ್ಷಿಸಬೇಕಾದುದು (ಕಾಮೋಚ. ೩೮೦); ಬಾಳುವೆ ಮಾರ್ಪುಗೊಳ್ಳಲು ಹೊಸದೊಂದು ಕಣಿವೆ ಯನ್ನು ಹಿಡಿದು ಮುಂದೆ ಸಾಗಿತು (ರೂಪಾಪು. ೬೮).

[ ಮಾರ್ಪು + ಕೊಳ್ಳು$_1$ (<ಕೊಳ್$_1$) ]

**ಮಾರ್ಪೆಜ್ಜೆ** 'ಮಾರ್ಪಜ್ಜೆ' ನೋ.

**ಮಾರ್ಪೆಜ್ಜೆಗೆಡು** 'ಮಾರ್ಪಜ್ಜೆಗೆಡು' ನೋ.

**ಮಾರ್ಪೊಡೆ** (ಕ್ರಿ). ಪ್ರತಿಯಾಗಿ ಹೊಡೆ ; ಎದುರಿಸಿ ಹೊಡೆ : ಮುನ್ನಮೆ ತಮಗ್ರಧ್ವಾನದಿಂದಂಗರಕ್ಷಸಮೂಹಂ ದೆಸೆಗೆಟ್ಟು ಯಾನಗಜ ವಾಜಿಶ್ರೇಣಿ ಬೆಂಗೊಟ್ಟು ಪೋಯ್ಸುಸುದ್ಯುನ್ನಿರರೊಳೆಲ್ಲಿ ಮಾರ್ಪೊಡೆವರಾ ಪ್ರಸ್ತಾವದೊಳ್ ಕೃಷ್ಣನಂ (ಜಗನ. ೩–೩೩) ; ಕಾಯ್ಪಿನಿಂ ಪಿಡಿಲಿಂ ಮಾಪೊ ನಡೆಪಂ ಕೆಳದ್ರ್ಪರಗನಂ ಮಾರಿಕ್ಕುವಂ ಸಿಂಗವಂ ಕರಿವಂ ಭಾವಿಸೆ ಪ್ರಿಥ್ವಿಸೆಟ್ಟಿ ಹರಿಪಂ ವೆಂಕ್ಕಾಂಬಿಕಾಸಂದನಂ (ಕಇ. IV. ೦–೩೩ : 1204).

[ಮಾರ್ (< ಮಾಱು$_2$) + ಪೊಡೆ$_1$]

**ಮಾರ್ಪೋಣರ್** (ಕ್ರಿ). ಎದುರಾಗಿ ಹೋರಾಡು, – ಯುದ್ಧಮಾಡು : ಎನಿತು ಮಂದೇಘದೊಡ್ಡನಿತು ತೇರ್ . . . ಅನಿತೆ ಮಂದೇಘದೊಡ್ಡನಿತೆ ತೇರನಿತಾಳನಿತಶ್ವಮಸ್ಮದಿಂ ಜನಿಯಿಸಿ ಪೋರ್ದು ಮಾರ್ಪೋಣರ್ದು ತಳ್ತಿಱಿದೆಯ್ದೆ ಪಳಂಚಿ ಕಾದುತಿರ್ಪನೆಗಂ (ಜಗನ. ೦೮–೩೦).

[ಮಾರ್ (< ಮಾಱು$_2$) + ಪೊಣರ್$_1$]

**ಮಾರ್ಪೊಯ್** (ಕ್ರಿ). = ಮಾರ್ಪೊಡೆ : ತನ್ನೊಮ್ಮಿರ್ಗಳ್ ಬಂದು ಪಂದಿದಱಿಂ ಪೋದ ತಪೋಪಳಂ (?) ಗಗನವಂ ಮಾರ್ಪೊಯ್ಯೆ ಕಣ್ಗೊಪ್ಪಿ ತೋರ್ಪುದಿದುತ್ಪ್ರೇಂಬಿದಸಂಭ್ರಂಬಿಧವಳಂ ಗಂಭೀರನೀರಾಕರಂ (ಶಂಪಲಾ. ೯–೨೪) ; ಅ ವಿಗಸೆಜಿಗಿ ಗದಾದಂಡದಿಂ ಪೊಯ್ಯೆ ಭೀಮಂ ಸಜಮಂ ಮಾರ್ಪೊಯ್ಯೆ ತದ್ವೈತ್ಯನ ಗದೆಯುಡಿಯಲ್ (ನೇಮಿಪು. ೯–೩೦) ; ವಿಲಸತ್ಕಂತುಕಮಂ ಪುಟಂನೆಗೆವಪೋಲ್ ಮಾರ್ಪೊಯ್ಯು . . . ಕೋಪ್ಪುಳೆ ಪುಷ್ಪಾಸ್ತ್ರವನೀಟ್ಟ ಮೊಱಡಿಗೆಳಂ ಪುಷ್ಪಾಸ್ತ್ರಮಂ ಪೊಯ್ದುಳೇ (ದಕಪು. ೦೨–೪೪). [ಮಾರ್ (< ಮಾಱು$_2$) + ಪೊಯ್$_1$]

**ಮಾರ್ಪೊಸೆ** (ಕ್ರಿ). ಪ್ರತಿಯಾಗಿ ಉಜ್ಜು, – ತಿಕ್ಕು : ಪರ್ಪರಿಕೆ ಗಿಱಿವೆ ಕಲಿ ವಿಪವಿಪರ್ಪರಸದಿರಾಂತೊಪ್ಪಾಂತು ಪಲಲಂ ತಳಮಂ ಮಾರ್ಪೊ ಸೆದು ತಳ್ತು ಕ[ಣ್ಣಿರಿ]ತರ್ಪಿನೆಗವುಮಂ[ತಿ] ಸಿಂಹನಾದದಿನಾರ್ದಂ (ಶಂಪಲಾ ೮–೩೯).

[ಮಾರ್ (< ಮಾಱು$_2$) + ಪೊಸೆ$_1$]

**ಮಾರ್ಪೊಳಪು,** ಮಾರ್ಪೊಳೆಪು (ನಾ). ಪ್ರತಿಬಿಂಬ ; ಪಡಿನೆಳಲು : "ಮಾರ್ಪೊಳಪು ಪಡಿನೆಟಿಲ್ ಪ್ರತಿಬಿಂಬಮಕ್ಕು" (ಕಬ್ಬಿ. ೬೦) ; ಮಣಿ ಮುಕುರಭೂಮಿಯೊಳ್ ನಡೆವ ಪೌರವಧೂಪ್ರತಿಬಿಂಬದಂಥದಿಂ . . . ಜಪದ ಮಾರ್ಪೊಳಪಿಂ ರಮಣೀಯಮಾ ನೆಲಂ (ಜಾರಪು. ೦–೧೪೦) ; ಮದ ಗಜದ ಕರದ ಮಾರ್ಪೊಳಪಂ ನಿಜಸ್ವಚ್ಛತೆಯಿಂ ರಸಾತಳದಿಂ ಬಿಗ್ಗೆ ಕಾಣೆ ಪಂತೆ ಕಮನೀಯಮಾಗಿಯುಂ . . . ಆ ಪೆರ್ಪೊಳೆ . . . ರಂಜಿಸಿರ್ಪುದು (ರಾಜಶೇ. ೩–೨೪ ವ). **ಮಾರ್ಪೊಳೆಪು :** "ಮಾರ್ಪೊಳೆಪೆಂದು ಪಡಿನೆಟಿ ಲೆಂದುಂ ಪ್ರತಿಬಿಂಬಂ" (ಕಶಸಾ. ೬೦–೩೬೦) : ಉನ್ನದಪ್ಪಂಗನಾದದಿಂದ ವಿರಳಪುಪ್ಪಭೂಜಮೆಸೆವಂತಿರೆ ಚಂದ್ರಿಕೆ ಭೂಷಣಾಂಶುವಿಂ ಕವಿದಲಗ್ಗಣ್ಣ ಮಾರ್ಪೊಳೆಪಿಂ ವ್ಯದಿಃಗೇಯಂದಿನೊಪ್ಪಲ್ (ಜಗನ. ೦೬–೦೦೨) ; ಬಳಸಿದ ತಾರಗೆಗಳ ಮಾರ್ಪೊಳೆಪೊಂದಿದ ಪೊನ್ನ ಬೆಟ್ಟು ಕೈಯಿಂ ಕಾಲಂ ತಳೆದಿರ್ದು ದೆಂಬಿನಂ ಕಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ (ಕಬ್ಬಿಗಕಾ. ೦೩೩) ; ಲಲಿತಮೆನಿಪ್ಪ ನೀರಿಂ ಬೆಳೆದು ಸಪ್ಪುದ್ಯಂಗಳಿಂದೆದೆಂಬಾ ಪಸ್ಪಾಪಳಗಳ್ ಮಾರ್ಪೊಳೆಪಿಂ ತನ್ನಳದೇವತೆಯುಗ್ಗಿ ಫಳಮಂನೀವಪೊಲಿಸೆಗಂ (ಜಾರಪು. ೦–೯೪). [ಮಾರ್ (<ಮಾಱು$_2$) + ಪೊಳಪು]

**ಮಾರ್ಪೊಳೆ** (ಕ್ರಿ). ಪ್ರತಿಬಿಂಬಿಸು : ಪ್ರತಿಫಲಿಸು : ಪೊಳೆವರುಣಾಂಶು ವಿಂದೆಸೆವ ತನ್ನಯ ಮುಂಪಳಮಬ್ಬಿಯಲ್ಲಿ ಮಾರ್ಪೊಳೆವಿನೆಗಂ ಸರೋಜಸಖ ನೊಯ್ಯನೆ ಪೊರ್ದಿದನಸ್ತಶೈಲಮಂ (ಕಾದಂಪೂ. ೨೬೩); ಚಂದ್ರಕಾಂತಶಿಲಾ ತಳದೊಳ್ ಮಾರ್ಪೊಳೆವ ನಿಜಬಿಂಬಮಂ ಕಂಡು (ಗಿಲೆ. ೦–೦೨೮ ವ); ಕೈಪಿಡಿಯಂ ಲೀಲೆಯಿಂ ದಿಟ್ಟಿಸಿ ಮಾರ್ಪೊಳೆವ ಮುದ್ದುಮೊಗಮಂ ಪಡಿಗೂಸುಗೆತ್ತು ತನಗೆ ತಂದೀವುದೆಂದು ಚಲದಿಂ ಮಱುಗುವ . . . ಕುಮಾರನೆನಗಪ್ಪನೆಂದಿಂಗೋ ಸಖೀ ! (ರಾಮಾಶ್ವ. ೮೯–೦).

[ಮಾರ್ (< ಮಾಱು$_2$) + ಪೊಳೆ$_1$]

**ಮಾರ್ಪೊಳೆಪು** 'ಮಾರ್ಪೊಳಪು' ನೋ.

**ಮಾರ್ಘತ** 'ಮಾರಿಘತ್ತು' ನೋ.

**ಮಾರ್ಘತು** 'ಮಾರಿಘತ್ತು' ನೋ.

ಕೆಯ್ವಾಸಿದಾಗಳ್ (ಶಂಕಪು. ೦೩-೩೩ ವ) ; ಒರ್ವನೆ ಧನ್ವಿಯೆನಲ್ ಸಕಲೋರ್ವರೆಯುಂ ಕಾದು ತನ್ನ ಬಾಣದ ಮೊನೆಯೊಳ್ ಮಾರ್ವಲವುಂ ತವಿಸಿದಂ (ಶಂಭಾಶ. ೨-೬೨). **ಮಾರ್ಬಲ$_1$** ೨ ಬಿಡಿಸುವರೊಂದೆ ಮಾರ್ಬಲವೆಡೆ ಮಡಗದೆ ಪೊಗಟ್ಟಾಗಿ ತಳ್ತಿಱಿದು ಯಶಂಬಡೆದಂ ಗೊಗ್ಗಿ (ಎಕ. XI. ಹಳ್ಳಿ. ೩-೪; ಸು. ೯೭೬); ನರರಿಂ ನರರಂ ಹರಿಯಿಂ ಹರಿಯಂ ವರೂಥವಂ ತದ್ವರೂಥದಿಂದಿಟ್ಟು ಸುಪೃತ್ಕರಿಯಿಂ ಪಡಲಿಟ್ಟಂತಿರೆ ಪುರುತ್ರಸ್ತಂ ಮೋದಿ ತವಿಸಿದಂ ಮಾರ್ಬಲಮಂ (ಗದಾಯು. ೩-೮); ರಥಮಾಜಿಗಳ ರುಧಿರದ ಕಡಲೊಳಡ್ಡಿದನುಡ್ಡಿದನು ಮಾರ್ಬಲದ ಗರ್ವಿತರ (ಕುಮ್ಯಾ. ೨-೯೩). **ಮಾರ್ವಳ. ಮಾಱುಬಲ :** ಸರಳ ತೂಗುತ ಮಾಱುಬಲವನು ತಱುಬಿನಿಂದನು (ಕುಮ್ಯಾಶೀ. ೩-೦೦). ℙ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ.

**ಮಾರ್ಬಲಮಲ್ಲ** = ಶತ್ರುಸೈನ್ಯಕ್ಕೆ ಮಲ್ಲನಂತಿರುವವನು: ಒಂದು ಬಿರುದು : ಈದುವರಾದಿತ್ಯ ಮಾರ್ಬ್ಬಲಮಲ್ಲ ಮಜಾಪಂಕಪ್ಪೈರವ ಅಮ್ಮಣಪುತ್ರ ನಾಗರಪಿನ್ನ ಎಟ್ಟತ್ತು ಆಳುತ್ತಿಟ್ಟು (ಎಕ. VIII, ಸೊರಬ. ೪೦೩-೦೦: ೯೮೬). **ಮಾರ್ಬಲರಾಮ** = ರಾಮನಂತೆ ಶತ್ರುಪಡೆಯಿಂದ ಗೆಲ್ಲಲಶಕ್ಯನಾದವನು : ಒಂದು ಬಿರುದು : ಚಾಮೊನ್ನಚೂಡಮಣಿ ಚೆಮಕೊಳ್ಗಣ್ಣ ಸಮರೈಕಪಾತ್ರ ಮಾರ್ಬ್ಬಲರಾದು ಶ್ರೀಮಾತ್ ಅರಕೆಲ್ಲ ಕೊಟ್ಟಕೆಲ್ಲಗಪ್ಪಣ್ಣಯ್ಗ (ಪ್ರಕಂ. ೦೪೩೨, ೩೭-೪; ಸು. ೯೮೦). **ಮಾರ್ವಳಭೀಮ** = ಶತ್ರುಪಡೆಗೆ ಭೀಮನಂತೆ ಭಯಂಕರನಾಗಿರುವವನು : ಒಂದು ಬಿರುದು : ಮಾರ್ವ್ವಳಭೀಮಂ (ಕೊಂಕಣ. ೦೪೩೪, ೨೦ಕಾಪುರ. ೩-೦೩ ; ೯೮೩). [ಮಾರ್ (< ಮಾಱು$_2$) + ಬಲ$_3$]

**ಮಾರ್ವಲ$_2$. ಮಾರ್ಬಲ$_2$** (ನಾ). ದೊಡ್ಡ ಪಡೆ : ಮಹಾಸೈನ್ಯ : ನಿಲ್ ವೈಕುಂಠನುದಗ್ರಕೋಪನದಟಿಂ ಮಾರ್ಕೊಂಡು ಮಾಱಾಂತ ಮಾರ್ವಲಮಂ ಬೆಂಕೊಳೆ (ಕೇಬಾಕೃ. ೩-೦೩೦) ; ಬಲಕ್ಕೆ — ಆಳ್ವಲ (ಆಳ್ಬಲ) . . . ಭೂಬಲ. ಮಾರ್ವಲ (ಶಬ್ದ. ೨೪೬ ಕ್ರ ಯೋ). **ಮಾರ್ಬಲ$_2$:** ಖೋಳಕಾಷ್ಮಕನ ಮಾರ್ಬಲವು ಆಲಿ ಬೊಬ್ಬಿಱಿದರಮನೆಯ ದ್ವಾರವ ಸೇರಿ ಮೇಲೆ ಹತ್ತಿದರು ಪೌಳಿಯನು (ಕಃಶಂಕಾ. ೩-೪೪) ; ಕೋಳಾಲ ಬಳಲಾಪುರ ಬೆಂಗಳೂರ ಭೂಪಾಲರು ಮಾರ್ಬಲಸಹಿತ ಮೇಳದೆ ತಿರುಮಲೇಶ್ವರನ ಕೂಟಕೆ ಬಂದಾಳಾಪವನೇನನೆಂಬೆ (ಕಂಪಾ. ೩-೩೦) : ಅಕಳಂಕಮನ್ಮಥ ಮಹಾರಾಯ ತವಕದಿಂದಪೆಮಾರ್ಬಲವನೊಡಗೊಂಡು ನಡೆತಂದ (ಚಕಮೋ. ೩-೩). [< ಮಹಾ+ ಬಲ$_3$]

**ಮಾರ್ವಲೆ** 'ಮಾರ್ಬಲೆ' ನೋ.

**ಮಾರ್ವಳ** 'ಮಾರ್ವಲ$_1$' ನೋ.

**ಮಾರ್ವಾಡಿ** 'ಮಾರವಾಡಿ' ನೋ.

**ಮಾರ್ಷ** (ನಾ). ಸಭ್ಯನಾದ ವ್ಯಕ್ತಿ : ಗೌರವಸ್ಥ. [ಸಂ.]

**ಮಾರ್ಷ್ಟಿ** (ನಾ). ೧. ಸ್ವಚ್ಛಮಾಡುವುದು : ಶುದ್ಧಮಾಡುವುದು. ೨. ಸುಗಂಧದ್ರವ್ಯಗಳ ಅನುಲೇಪನ : "ಸಮಾಲಂಭನಂ, ಚರ್ಚಾ. ಮಾರ್ಷ್ಟಿಃ — ಈ ೩ ಚರ್ಚೆ" (ಹಲಾಯು. ೪೯-೩೮೩). [ಸಂ.]

**ಮಾರ್ಸರಲ್** (ನಾ). (ಶತ್ರುವಿನ ಬಾಣಕ್ಕೆ) ಪ್ರತಿಯಾಗಿ ಬಿಡುವ ಬಾಣ : ಪಂಚಶರಂಗೆ ಮಾರ್ಸರಲದಾಗಿ ವಿಜೃಂಭಿಸುವಮ್ಮ ನೀಳ್ದ ಕಣ್ಣಂಚಿನ ಕಾಂತಿಗೊಂದಿಸಿತು ಸಾಮ್ಯವ ನೋಡಿಯೆನುತ್ತೆ ತೋರ್ಪ ಪೋಲ್ಕೆಂಚಿನ ಬಳ್ಳಿಯುಂ ನೆಗಟ . . . ಸರೋರುಹಲೋಚನೆಯಾವ ಪೊಚ್ಚಪಳ್ (ಅನ್ನಪೂ. ೦-೩೩). 'ಮಾರ್ಕೊರ್ಲ್' ಪರಾ.

[ಮಾರ್ (< ಮಾಱು$_2$) + ಸರಲ್]

**ಮಾಲ, ಮಾಳ$_4$** (ನಾ). ೧. ಬಯಲು ; ಕ್ಷೇತ್ರ. ೨. ವಿಸ್ತಾರವಾದ ಪ್ರದೇಶ ; ದಿಬ್ಬ. ೩. ಹಳ್ಳಿಯ ಬಳಿಯಿರುವ ಕಾಡು. ೪. ಕಪಟ : ಮೋಸ : "ಮಾಳ — ಮಾಲ = ಕಪಟ. ವಂಚನೆ" (ಶಬ್ದಕೋ. ೩೪).

**ಮಾಳ$_4$ :** ೪. 'ಮಾಳಿಗ', 'ಮಾಳಿಡು' ಪರಾ. [ಸಂ.]

**ಮಾಲಕ$_1$** (ನಾ). ಹಳ್ಳಿಯ ಬಳಿಯಿರುವ ಕಾಡು.— ಅರಣ್ಯ. ೨. ಒಂದು ಬಗೆಯ ಮರ : ಬೇವು. ೩. ಹಾರ ; ಮಾಲೆ : ತುಲಸಿಮಾಲಕ ಬಿಲ್ವ . . . ಸುರಹೊನ್ನೆ ಶ್ಯಾವಂತಿಗೆಗಳ ರಾಮ ಕಲಶಕರ್ಚಿಸಿದ (ಅಧ್ಯಾರಾ. ೩-೭೩). ೪. ನೆಲದಾವರೆ. [ಸಂ.]

**ಮಾಲಕ$_2$** 'ಮಾಲಿಕ$_2$' ನೋ.

**ಮಾಲಕಾಂಗೋಣಿ** (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಎಣ್ಣೆಯ ಅಂಶವುಳ್ಳ ಅದರ ಬೀಜ : ಮಾಲಕಾಂಗೋಣಿ-ಸಣ್ಣಗಿಡ. ಔಷಧಕ್ಕೆ ಬರುತ್ತದೆ. ಕಟ್ಟಿಗೆ ತಕ್ಕಮಟ್ಟಿಗೆ ಗಟ್ಟಿ (ಕಹಾಗಿ. ೪೩).

[← ಹಿಂ. ಮಾಲಕಂಗನೀ. ಮಾಲಕಂಗುನೀ, ಮಾಲಕಗುನೀ ; ಮರಾ. ಮಾಲಕಾಂಗೋಣೀ, ಮಾಲಕಾಂಗುಣೀ]

**ಮಾಲಕಾರ** (ನಾ). ಹೂವುಗಳನ್ನು ಕಟ್ಟಿ ಮಾರುವವನು : ಹೂವಾಡಿಗ : ಲಂಜೆಗೇಸರಂ ದೇವರ್ಕೆ ಪೂಸಿಱುವ ಮಾಲ(ಲಾ)ಕಾರರ್ಗ್ಗೆ ಅರ್ಧವಿಸದಿ ಇತ್ತೊದಾನಟಿಪೊನ್ ಪಣ್ಚಮಹಾಪಾತಕನಕ್ಕುಂ(ಕ್ಕುಂ) (ಎಕ. X. ೩೦-೩ ; ೫೭೮). 'ಮಾಲಗಾಱ' ಪರಾ. [ℙ ಇದು ಸಂಸ್ಕೃತದ 'ಮಾಲಾಕಾರ' ಎಂಬುದರ ಅಪಲಿಖಿತ]

**ಮಾಲಕಿ** 'ಮಾಲ್ಕಿ' ನೋ.

**ಮಾಲಕುಮಿ** 'ಮಹಾಲಕ್ಕುಮಿ' ನೋ.

**ಮಾಲಗಣ್ಣು** 'ಮಾಲುಗಣ್ಣು' ನೋ.

**ಮಾಲಗಾರ** 'ಮಾಲಗಾಱ' ನೋ.

**ಮಾಲಗಾರ್ತಿ** (ನಾ). ಹೂವುಗಳನ್ನು ಕಟ್ಟಿ ಮಾರುವವಳು : ಮಾಲೆಗಾತಿ : ಪೂಗಳನೊಪ್ಪೆ ಕಟ್ಟಿ ಪೊಸಮಾಲೆಯನೆತ್ತುವ ಮಾಲಗಾರ್ತಿಯರ್ (ದಶಕು. ೦-೪೦). [ಮಾಲಗಾಱ+ —ತಿ$_1$ (< —ಇತ್ತಿ)]

**ಮಾಲಗಾಱ. ಮಾಲಗಾರ. ಮಾಲಿಗಾಱ** (ನಾ). ಹೂವನ್ನು ಮಾರುವವನು ; ಹೂವಾಡಿಗ : ಉಱಿಲ್ದಾಗೆ ಸಾಲೆ ಒಳರೇ ವ[ರ್ಣ್ಣ]ಸಿಗೆಯಿ ಯೆಂದು ಮಾಲಗಾಱ ಶ್ರೀಮಾಂಚೇ ಮೂಟ ಇನಿಥೂ ಇಪ್ಪರ್ತ್ತಯ್ದು (ಕಇ. I, ೨-೦೪ ; ೮೦೦) ; ದೀವಿಗೆಗೆ [ಧಾರೆ?]ಯೆಣ್ಣೆಮಂ ಮಾಲುಗಾಱರಲ್ಲಿ ಒಕ್ಕಲ (ದೊಂಕಣ. ೦೪೪೦, ತರಸನಾಡು. ೩೬-೪ ; ೯೦೦). **ಮಾಲಗಾರ :** ಮಾಲಗಾರರು . . . ಲಿಂಗವಂತಧರ್ಮವನ್ನೇ ಪಾಲಿಸುತ್ತಾರೆ . . . ತೋಟಗಳಲ್ಲಿ ಹೂ, ಪಲೆ, ಫಲಗಳು ಮುಂತಾದವುಗಳನ್ನು ಬೆಳೆದು ಮಾರಾಟ ಮಾಡುತ್ತಾರೆ (ಕಹಾಗಿ. ೦೦೨). **ಮಾಲಿಗಾಱ :** ಸಾಲಿಗರಯ್ವದಿಂಬರುಂ ತೆಲ್ಲಿಗನೂರ್ಱಿಪ್ಪದಿಂಬರುಂ ಮಾಲಿಗಾಱ[ಱ್]ಯಿಪದಣ್ಬರು[ಂಪಂಚಮಠಸ್ಥಾ]ನಮುಮಿದರ್ದ್ದ (ಕಇ. XI-i, ೪೩-೨೭ ; 1062). 'ಮಾಲಕಾರ' ಪರಾ. [<ಮಾಲೆಗಾಱ./ಸಂ. ಮಾಲಾಕಾರ]

**ಮಾಲಗುಜಾರ** (ನಾ). ೧. ಸರ್ಕಾರಕ್ಕೆ ಕಂದಾಯವನ್ನು ಸಲ್ಲಿಸುವವನು. ೨. ರೈತರಿಂದ ಕಂದಾಯವನ್ನು ವಸೂಲು ಮಾಡಿ ಸರ್ಕಾರಕ್ಕೆ ಸಲ್ಲಿಸುವ ಅಧಿಕಾರವನ್ನು ಹೊಂದಿದ್ದ ಮಧ್ಯಪ್ರದೇಶದ ಒಂದು ಜಮೀನ್ದಾರೀವರ್ಗ ಮತ್ತು ಆ ವರ್ಗಕ್ಕೆ ಸೇರಿದವನು : ನಮ್ಮ ವರ್ಹಾಡ—ನಾಗಪುರಗಳ ಕಡೆಗೆ 'ಮಾಲಗುಜಾರ'ರೆಂದು ಇರುತ್ತಾರೆ (ಜ್ಞಾಮಾ. ೦೦).

[←ಪಾರ. ಮಾಲ್ಗುಜಾರ್ ; ಮಾಲ್ಗುರ್ಝಾರ್ ; ಹಿಂ. ಮಾಲಗುಜಾರ್ ; ಮರಾ. ಮಾಲಗುಜಾರ್, ಮಾಲಗುರ್ಝಾರ್]

**ಮಾಲಗುಜಾರಿ, ಮಾಲ್ಗುಜಾರಿ** (ನಾ). ೧. ಕಂದಾಯ. ೨. ಕಂದಾಯವನ್ನು ವಸೂಲು ಮಾಡುವ ಅಧಿಕಾರಿ : ಮೂರುಜಿಲ್ಲೆಗಳ ತಾಲೂಕದಾರರ ಅಭಿಪ್ರಾಯಗಳೊಡನೆ ಇಮ್ರಾದ್‌ಜಂಗ ಸುಭೇದಾರನು ತನ್ನ ಅಭಿ

ಪ್ರಾಯವನ್ನು ಸರಕಾರಕ್ಕೆ ತಿಳಿಸಲು, ಸುಭೇದಾರನ ಅಭಿಪ್ರಾಯಕ್ಕೆ ಮಾಲಗುಜಾರಿಯವರು ಒಪ್ಪಿಗೆಯಿತ್ತರು (ಕರ್ಣಾಸಂ. ೨೦೬). **ಮಾಲ್ಗುಜಾರಿ :** ಇಮಾದ್‌ಜಂಗಬಹದೂರ ಸುಭೇದಾರನು ತನ್ನ ಅಭಿಪ್ರಾಯವನ್ನು ಮೇಲಧಿಕಾರಿಗಳಾದ ಮಾಲ್ಗುಜಾರಿಯವರಿಗೆ ತಿಳಿಸಿದನು (ಕರ್ಣಾಸಂ. ೨೦೬). [←ಪಾರ. ಮಾಲ್ಗುಜಾರೀ, ಮಾಲ್ಗುಝಾರೀ ; ಹಿಂ. ಮಾಲಗುಜಾರೀ ; ಮರಾ. ಮಾಲಗುಜಾರೀ, ಮಾಲಗುಝಾರೀ]

**ಮಾಲತಿ**, ಮಾಳತಿ (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು ; ಜಾಜಿ : "ಮಾಲತಿಯೆಸಲ್ ಜಾಜಿಯಕ್ಕು" (ಶಬ್ದಮ. ೩೭-೨೦) ; ದಂಡೆಗಟ್ಟಿದ ಮಾಲತಿಯ ಮುಗುಳ ವನಮಾಲೆಗಳುಮಂ ಬೇಜ³ವೇಜ³ ನೋಡಿ (ಜಗ. ೬-೦೬೮) ; ಕಲ್ಲೆಡಹೆ ಸೊಂದಳೆಂದು ಮಂಜುಗಿಯುಂ ನಿಲೆ ನಿಂದುಂ ಪೋಗೆ ಪೋಗಿಯುಂ, ನಗೆ ನಕ್ಕುಂ ಉಪಚರಿಸಿದೆ ನೀನೀಗಳ್ ಎಂತು ಕಲ್ಮನನಾಗಿ ಮಾಲತಿಯುಂ ಮೆಕ್ಕೆಯಿಂ ಸಿಂಗರಿಸಿದಯ್ ! (ರಾಮಾಶ್ವ. ೩೬-೨೩). **ಮಾಳತಿ :** "ಮಾಳತೀ ಜಾತಿಃ — ಈ ೨ ಜಾದಿ" (ಹಲಾಯು. ೩೪-೩೨) ; ಮಾಳತಿಯೊಳ್ ಬಂಡುಂಡ ಮದಾಳಿಯನಳಿಮಾಲೆ ಎಜಿಗಿ ಬಂಡುಣ್ಬಪೊಲೀ ನೀಳಾಳಕಿಯೊಳ್ ಬೆರೆಸಿದ ಪೇಳನ ಪಿಟರೆಯ್ದಿ ಸೋಂಕೆ ಸುವಿಯ್ಯಾಗಿರ್ಪರ್ (ಗಂಕ. ೪-೦೩೨). [ಸಂ. ಮಾಲತೀ]

**ಮಾಲದಿ** 'ಮಾಲದೀ' ನೋ.

**ಮಾಲದೀ**, ಮಾಲದಿ, ಮಾಲೀದಿ (ನಾ). (ಉಕ) ತುಪ್ಪದಲ್ಲಿ ಕರಿದ ಪೂರಿಯನ್ನು ಪುಡಿಮಾಡಿ, ಪಾಕದಲ್ಲಿ ಹಾಕಿ ಕಟ್ಟುವ ಒಂದು ಬಗೆಯ ಉಂಡೆ : ನನಗ ಮಾಲದೀ ಅಂದರ ಭಾಳ ಪ್ರೀತಿ (ಒಟಾ. ೬೩). **ಮಾಲದಿ :** ಮಾಲದಿಯ ಸವಿ ಮರೆತು, ಅವಳ ಅಧರದ ರಸದ ರುಚಿಯನ್ನು ಸವಿದರು (ಅಕನಾ. ೬೬). **ಮಾಲೀದಿ :** ನೀ ಏನೋ ಇಂದ ಮಾಲೀದಿ ಮಾಡೀ ಅಂತ ನಿನ್ನ ಗಂಡ ಹೇಳಿದ (ಅಕನಾ. ೬೩). [←ಪಾರ. ಮಾಲೀದಹ್; ಹಿಂ. ಮಾಲೀದಾ, ಮಲೀದಾ ; ಮರಾ. ಮಾಲದೀ]

**ಮಾಲಪುವಾ** (ನಾ). (ಹೋಳಿಗೆಯಂತಿರುವ) ಒಂದು ಬಗೆಯ ಸಿಹಿ ತಿಂಡಿ : 'ಮಾಲಪುವಾ', ಬದಾಮು ಮುಂತಾದುವುಗಳನ್ನು ತಿನ್ನುವುದರಿಂದ, ಹೋದ ವೀರ್ಯವು ತಿರುಗಿ ಬರುವದೆಂದು ಎಷ್ಟೋ ಮೂರ್ಖರ ತಿಳುವಳಿಕೆಯಿದೆ (ಬ್ರಹ್ಮಚ. ೧೩೮). [←ಹಿಂ. ಮಾಲಪೂಅ, ಮಾಲಪೂವಾ: ಮರಾ. ಮಾಲಪುವಾ, ಮಾಲಪುಹಾ, ಮಾಲಪುಆ, ಮಾಲಪೋಹಾ]

**ಮಾಲಮತ್ತೆ**, ಮಾಲುಮತ್ತೆ (ನಾ). ಆಸ್ತಿ ; ಸ್ವತ್ತು : ವಿಶ್ವಾಸನ ಮುತ್ತಜ್ಜ ಲಚ್ಚಪ್ಪ . . . ನಮ್ಮೂರಿನ ಪೇಶ್ವೆ ಜಮೀನಿನ, ಮಾಲಮತ್ತೆಯ ಸರ್ವ ವ್ಯವಹಾರದ ಪಟ್ಟಾಟದ ಅಧಿಕಾರಸೂತ್ರ ವಹಿಸಿ ಇಲ್ಲಿಗೆ ಬಂದವರು (ದೀಕಶ. 1, ೦೦). **ಮಾಲುಮತ್ತೆ :** ಎಲ್ಲರ ಹೃದಯದಿಂದಲೂ ಉಪ್ಪುಕಿಸಲೆಳಸುವ ನಾಳಿನ ದೈವೀಜೀವನಕ್ಕೆ ಅನೇಕ ನಾಗರಿಕತೆಗಳ ಹಾಗು ಭಿನ್ನಸಂಸ್ಕೃತಿಗಳ ಉಜ್ವಲವಾದ ಪೇಟೆಯು ಮಾಲುಮತ್ತೆಯನ್ನು ಪೂರೈಸುವ ಸಿದ್ಧತೆಯಲ್ಲಿರುವುದು ಇದಕ್ಕಿಂತ ಹೆಚ್ಚಿಗೇನೂ ಇಲ್ಲವೆಂಬಂತೆ ತೋರುವುದು (ಶ್ರೀಅಂಥ. ೨೦). [←ಅರ. ಮಾಲ್‌ಮತಾಅ ; ಹಿಂ. ಮಾಲಮತಾ, ಮಾಲಮುತಾ ; ಮರಾ. ಮಾಲ್‌ಮತ್ತಾ]

**ಮಾಲಲ್ಲೆ** (ನಾ). (?) : ಮಾರಿಬೆಜ³ತಿಯಿಂ ಬಡಗಣ ಮಣ್ಣು ಮೊಳೆವೆಡೆ ಪಟ್ಟಿಣ್ಣಗಂ ಮಾಲಲ್ಲೆಯ ಮಣ್ಣು ಮೊಳೆವೆಡೆ ಮೂಗಣ್ಣಗಮೂಮಿಾ ದೇಗುಲದ ಬಟಿಪಿಮದು ಸಲ್ಬುದು (ಎಕ. IV (೧). ಎಳಂದೂ. ೦೭೪-೫ ; ಸು. 10 ನೆಯ ಶತ). [ ? ]

**ಮಾಲವಕೈಶಿಕ** (ನಾ). [ಸಂಗೀತ] ಒಂದು ರಾಗದ ಹೆಸರು : ಯಾವುದರಲ್ಲಿ (ಮೊದಲ ಪಾದದ) ಎರಡು ಖಂಡಗಳು (ರಚಿಸಲ್ಪಟ್ಟಿವೆಯೋ) ಅದು ನಂದಾವತೀ ಎನ್ನಿಸಿಕೊಳ್ಳುತ್ತದೆ. ಇವರಲ್ಲಿ ತಾಳವು ಪ್ರತಿತಾಳವೆಂಬುದು ; ರಾಗವು ಮಾಲವಕೈಶಿಕ (ಸಸಂಕ್ರ. ೦೨೩). [ಸಂ.]

**ಮಾಲವಗೌಲ**, ಮಾಳವಗೌಳ (ನಾ). [ಸಂಗೀತ] ಒಂದು ರಾಗದ ಹೆಸರು : ಮಾಲವಗೌಲವೆಂಬುದು (೫v) ಪೂರ್ಣ : ಸ–ಗ್ರಹ ; ಯಾವಾಗಲೂ ಹಾಡಲ್ಪಡುತ್ತದೆ (ಸಸಂಕ್ರ. ೦೩೪). **ಮಾಳವಗೌಳ :** ಕರ್ಣಾಟಗೌಳ . . . ಮಾಳವಗೌಳ . . . ದ್ರಾವಿಡಗೌಳವೆಂಬೇಳುಂ ಉಪಾಂಗಗೌಳರಾಗಂಗಳು (ಬ್ರಹ್ಮೇಶ. ೨೩೪). [ಸಂ.]

**ಮಾಲವಪಂಚಮ** (ನಾ). [ಸಂಗೀತ] ಒಂದು ರಾಗದ ಹೆಸರು : ಮಾಲವಪಂಚಮವು (೨೪) (ಸಂ)ಪೂರ್ಣ, ಆರೋಹದಲ್ಲಿ ಧ– ವನ್ನು ಬಿಟ್ಟಿದೆ; ಷಡ್ಜಗ್ರಹವನ್ನು ಕೂಡಿಕೊಂಡಿದೆ. ಎಲ್ಲ ಕಾಲಗಳಲ್ಲಿಯೂ ಹಾಡಲ್ಪಡುತ್ತದೆ (ಸಸಂಕ್ರ. ೦೩೫). [ಸಂ.]

**ಮಾಲವಶ್ರೀ**, ಮಾಳವಶ್ರೀ (ನಾ). [ಸಂಗೀತ] ಒಂದು ರಾಗದ ಹೆಸರು : ಮಾಲವಶ್ರೀ ರಾಗವು (೨೩) ಷಾಡವವಾಗಿದೆ : ರಾಗಾಂಗ ; ರಿಷಭವನ್ನು ಬಿಟ್ಟಿದೆ (ಸಸಂಕ್ರ. ೬೦). **ಮಾಳವಶ್ರೀ :** ಮಧು ಮಾಧವೀ . . . ಮಾಳವಶ್ರೀ . . . ಕರ್ಣಾಟ ಬಂಗಾಳವೆಂದಿಪ್ಪತ್ತು ರಾಗಂಗಳೇ ರಾಗಾಂಗದಿಂದುದಿಸಿದವು (ಬ್ರಹ್ಮೇಶ. ೨೩೩). [ಸಂ.]

**ಮಾಲವ್ಯ** (ನಾ). ಪ್ರಮಾಣಕ್ಕೆ ಅನುಸಾರವಾಗಿ ವಿಂಗಡಿಸಿರುವ ಐದು ಪ್ರಕಾರದ ಮನುಷ್ಯಜಾತಿಗಳಲ್ಲಿ ಒಂದು : ವರಾಹಮಿಹಿರನು ಮನುಷ್ಯರನ್ನು ಶರೀರದ ಅಳತೆ ಆಕಾರದ ಮೇಲೆ, ಐದು ಜಾತಿಗಳನ್ನಾಗಿ ವಿಂಗಡಿಸುತ್ತಾನೆ. ಹಂಸ, ಶಶ, ರುಚಕ, ಭದ್ರ, ಮಾಲವ್ಯ—ಎಂಬುವೇ ಈ ಐದು ಜಾತಿಗಳು (ಭಾರದ. ೫೦೭). [ಸಂ.]

**ಮಾಲಾಕಂದ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಗಡ್ಡೆ : "ಆವಲಿಕಂದಃ — ಮಾಲಾಕಂದ" (೬೫೦. ೦೨). [ಸಂ.]

**ಮಾಲಾಕಾರ**, ಮಾಳಾಕಾರ (ನಾ). ಮಾಲೆಗಾರ ; ಹೂವಾಡಿಗ : "ಮಾಲಾಕಾರಃ, ಮಾಲಿಕಃ — ೨ ಹುವ್ವಾಡಿಗನ ಹೆಸರು" (ಸಿದ್ಧಾಂತಿ. ೩೦೯) ; ಇಂತೆಸೆವ ಮಾಲಾಕಾರವಧೂಜನಂಗಳಿಂ ಚೆಲ್ವುವೆತ್ತು ಪಲ್ಲವೋಲ್ಲಸಿತಮಪ್ಪ ಗಾಣಿಕ್ಯಸದನಪಂಕ್ತಿಗಳೊಳ್ . . . ಗುರುನಿತಂಬೆಯರ್ ಸೊಗಯಿಸುವರ್ (ಜಗ. ೨-೨೯ ವ) ; ಚತುರತೆವಿಯಾದವಂ ಸತ್ಕೃತಿವೇಟ್ಟುದು ತನಗಮಿತರ ಜನಕಂ ಸುಮನಃಸ್ಥಿತಿವಾಸನೆಬಡದಿರೆ ಸನ್ನುತಮಾಲೆಯನೆತ್ತುವಂತೆ ಮಾಲಾಕಾರಂ (ಧರ್ಮಾ. ೦-೯೫). **ಮಾಳಾಕಾರ :** "ಮಾಳಾಕಾರಃ, ಮಾಲಿಕಃ, ಪುರಿಹಾರಿಕಃ — ಈ ೩ ಮಾಲೆಗಾಱಂ" (ಹಲಾಯು. ೯೬-೯೩೫) ; ಸೌರಭಚಯಂ ಸುಯ್ಯೆಂಬಿನಿಂದಾವಗಂ ದಳವೇಱುತ್ತಿರೆ ಪೂತ ಜಂಗಮಲತಾಸಂದೋಹಮೆಂಬಂತೆ ಕಣ್ಗೊಳಿಸುತ್ತಿರ್ಪುದು ಮಾಲೆವೂದಳೆದ ಮಾಳಾಕಾರನಾರೀಜನಂ (ಶಂಪ್ರಪು. ೦-೦೩೨). [ಸಂ.]

**ಮಾಲಾದೀಪಕ** (ನಾ). [ಕಾವ್ಯಮೀ]ಒಂದು ಬಗೆಯ ಅರ್ಥಾಲಂಕಾರ : ದೀಪಕ ಮತ್ತು ಏಕಾವಳಿ ಅಲಂಕಾರಗಳ ಲಕ್ಷಣಗಳು ಒಟ್ಟಿಗೆ ಸೇರಿ ಆದ ಅಲಂಕಾರ : ದೀಪಕಲಕ್ಷಣಂ ಏಕಾವಳೀಲಕ್ಷಣಮುಮೊಂದು ವೆರೆದಿರೆ ಮಾಲಾದೀಪಕಮೆನಿಪುದು (ಅಕ್ರತಿ. ೯೬-೦೭) ; ದೀಪಕೈಕಾವಳಿಯು ಕೂಡಿಸಿ ಪೇಳೆ ಮಾಲಾದೀಪಕಾಲಂಕಾರವು (ಕುವಲ. ೯೬-೦). [ಸಂ.]

**ಮಾಲಾಪ್ರಸವ** (ನಾ). [ಜ್ಯೋತಿ] ಮಾಲಾಯೋಗದಲ್ಲಿ ಹುಟ್ಟಿದವನು : ಸುಖಸಮೇತನೆನಿಕುಂ ಮಾಲಾಪ್ರಸವನರಂ (ಜಾತಿ. ೦೩-೦೯). [ಸಂ.]

**ಮಾಲಾಯೋಗ** (ನಾ). [ಜ್ಯೋತಿ] ಮೂರು ಕೇಂದ್ರಸ್ಥಾನಗಳಲ್ಲಿ ಮೂರು ಶುಭಗ್ರಹಗಳು ಇರುವ ಒಂದು ಯೋಗ : ಕ್ರೂರತ್ರಯ ವಿರೆ ಕೇಂದ್ರಾಗಾರತ್ರಿತಯದೊಳೆ ಸರ್ಪಯೋಗಂ ಕೇಂದ್ರಾಗಾರ ತ್ರಿತಯಂಗಳೊಳಕ್ರೂರತ್ರಯಮೊಂದಿರ್ದುದು ಮಾಲಾಯೋಗಂ (ಜಾತಿ. ೦೩-೯). [ಸಂ.]

**ಮಾಲಾರೂಪಕ** (ನಾ). [ಕಾವ್ಯವಿ] ಒಂದು ಬಗೆಯ ರೂಪಕ : ವರ್ಣಿಸುವ ಒಂದು ವಿಷಯವನ್ನು ಅನೇಕ ಪ್ರಕಾರವಾಗಿ ನಿರೂಪಣ ಮಾಡುವುದು : ಮಾಲಾರೂಪಕಕ್ಕೆ : ಸಂಸಾರಕ್ಕೇಕಸಾರಂ ಬಡಿಯ ಕುಲಧನಂ . . . ಜಾಣ ಮೆಯ್ವ್ ನಾಣ ಜೀವಂ ಮಾಂಸಾಶೀನಿರ್ನೆರೆಂತ ಪ್ಪೆಳೆಯಳನಿಱಿಯಲ್ಕೆಂತು ನೀನೆತ್ತಿಕೊಂಡಪ್ಯ್ (ಕಾವ್ಯಾವ. ೬೯೩) ; ವರ್ಣ್ಯವೊಂದನ್ನು ಅನೇಕಪ್ರಕಾರವಾಗಿ ನಿರೂಪಣಮಾಡಿದ್ದಲ್ಲಿ ಮಾಲಾರೂಪಕವೆನ್ನಿಸಿಕೊಳ್ಳುವುದು (ಕೈಪಿ. ೨೬೪). [ಸಂ.]

**ಮಾಲಾರ್ಪಣ** (ನಾ). (ಗೌರವಾರ್ಥವಾಗಿ) ಹಾರವನ್ನು ಅರ್ಪಿಸುವಿಕೆ : ಸಮಾರಂಭದ ಕಡೆಯಲ್ಲಿ ಕಾರ್ಯದರ್ಶಿಗಳು ಅತಿಥಿಗಳಿಗೆ ಮಾಲಾರ್ಪಣ ಮಾಡಿದರು (ರೂಢಿ). [ಸಂ.]

**ಮಾಲಾರ್ಪಣೆ** (ನಾ). = **ಮಾಲಾರ್ಪಣ** : ಕೆಲವು ಸಮಾರಂಭಗಳಲ್ಲಿ ಅತಿಥಿಗಳಿಗೆ ಮಾಲಾರ್ಪಣೆ ಮಾಡುವುದರ ಬದಲು ನೆನಪಿಗಾಗಿ ಕೆಲವು ಪುಸ್ತಕಗಳನ್ನು ನೀಡುವ ವಾಡಿಕೆಯಿದೆ (ರೂಢಿ). [ಸಂ. ಮಾಲಾರ್ಪಣ]

**ಮಾಲಾವೃತ್ತ**, ಮಾಳಾವೃತ್ತ (ನಾ). [ಛಂದ] ಒಂದು ವೃತ್ತದ ಹೆಸರು; P ಇಪ್ಪತ್ತಾರು ಅಕ್ಷರಗಳ 'ಉತ್ಕೃತಿ' ಎಂಬ ಛಂದೋರೂಪದಿಂದ ಮುಂದಕ್ಕೆ ಹೆಚ್ಚು ಅಕ್ಷರಗಳುಳ್ಳ ಕೆಲವು ವೃತ್ತಗಳನ್ನು ಒಟ್ಟುಗೂಡಿಸಿ ಅವುಗಳನ್ನು 'ಮಾಲಾವೃತ್ತ'ಗಳೆಂದು ಒಟ್ಟಾಗಿ ಹೆಸರಿಸಿರುವುದು ಪ್ರಾಚೀನ ಛಂದೋಗ್ರಂಥಗಳಲ್ಲಿ ಕಂಡುಬರುತ್ತದೆ. ಇವುಗಳಲ್ಲಿ ಒಂದನ್ನು ಮಾಲಾವೃತ್ತವೆಂದು ಬೇರೆಯಾಗಿ ಗುರುತಿಸಿರುವುದೂ ಕಂಡುಬರುತ್ತದೆ. ಇದು ದಂಡಕವೆಂಬ ರಚನೆಯನ್ನು ಸ್ವಲ್ಪಮಟ್ಟಿಗೆ ಹೋಲುತ್ತದೆ ಎನ್ನಬಹುದು : ಮುದವದಿಭಗಮನೆ . . . ಮಾಲಾವೃತ್ತದ ಪಾಂಗನೆಯ್ದೆ ಕೇಳ್ (ಛಂದೋಂಬು. ೩-೨೦೩). **ಮಾಳಾವೃತ್ತ** : ಅಪಜಿಂ ಪೊಱಗೆ ಮಾಳಾವೃತ್ತ ದಂಡಕಂಗಳ್ ಮಾತ್ರಾನಿಯಮಸ್ಕಂಧಕಾದಿಜಾತಿಗಳೆಂಬಿವಕ್ಕುಂ (ಛಂದೋಂಬು. ೧-೪೬ ಡ).
[ಸಂ.]

**ಮಾಲಿ**, **ಮಾಳಿ₁** (ನಾ). ೧. ಮಾಲೆಯನ್ನು ಧರಿಸಿದವನು : ಹಾರವನ್ನು ಧರಿಸಿದವನು. ೨. ಹೂವಾಡಿಗ : ಮಾಲೆಗಾರ : "ಮಾಳಾಕಾರಂ (ಮಾಲಿ)" (ಪಸ್ತಕೋ. ೬೪-೬೪) ; ಬಿರಿವ ಮುನ್ನವೆ ಉದುರಿಹೋದ ಮೊಗ್ಗುಗಳೆನಿತೊ ಬಿರಿದು ಮಾಲಿಯ ಕೈಗೆ ತುತ್ತಾದುವೆನಿತೋ! (ಕರುಣಾ ೦೩-೬) ; ಮಾಲಿ ಹೂವು ಸರಪರಾಜು ಮಾಡುತ್ತಾನೆ (ಕಿಬಂಧ. II. ೧೯೬). ೩. ತೋಟದ ವ್ಯವಸಾಯವನ್ನು ಮಾಡಿ, ಮೇಲ್ವಿಚಾರಣೆ ನೋಡಿಕೊಳ್ಳುವವನು ; ತೋಟಗಾರ : ತೊಳಗುತಿಪ ತೋಟದಲಿ ತರತರ ಗುಲಾಬಿಹೂ . . . ನೋಡಿಕೊಳ್ಳಲು ಮಾಲಿ! (ಕುಣಿತ. ೬-೭) : ನೀನು ನಿನ್ನಯ ಮಾಲಿಯೊಂದಿಗೆ ಮರಳಿ ಬಾ ಈ ತೋಟಕೆ (ಚಂದ್ರವೀ. ೩೦-೩). ೪. ದೇವರ ಪೂಜೆಗೆ ಹೂವನ್ನು ಒದಗಿಸುವ ದೇವಸ್ಥಾನದ ಒಂದು ಪರಿಚಾರಕವರ್ಗ ಮತ್ತು ಆ ವರ್ಗಕ್ಕೆ ಸೇರಿದ ವ್ಯಕ್ತಿ : ದೇವಸ್ಥಾನದ ಸೇವಕರು (Temple servants) ಅಂಬಲವಾಸಿ, ಬರಿಯ, ದೇವಡಿಗ, ದೇವಾಳಿ, ಮಾಲಿ . . . ಸ್ಥಾನಿಕ, ಪಾರಿಯನ್ (ತುಳುನಾ. ೨೬೨). **ಮಾಳಿ₁** : ೩. 'ನಾನು' ಒಕ್ಕಲುತನ ಮಾಡುತ್ತೇನೆ . . . ಗೋವಳ, ತಳವಾರ, ಮಾಳಿ, ಸಿಪಾಯಿಯಾಗಿ ಕೆಲಸಮಾಡುತ್ತೇನೆ (ವಚಸಂ. XXVI. ೬೪೧ ಪ್ರವೇಶ) ; ನನ್ನನ್ನು ಎಚ್ಚರಿಸಿದವನು ತೋಟದ ಮಾಳಿ (ಹೇಮಂತ. ೦೬೩). [ಸಂ. ಮಾಲಿನ್]

**ಮಾಲಿಕ₁** (ನಾ). ೧. ಹೂವಿನಲ್ಲಿ ವ್ಯವಹರಿಸುವವನು : ಹೂವಾಡಿಗ : ಮಾಲೆಗಾರ : "ಮಾಳಾಕಾರಃ, ಮಾಲಿಕಃ, ಪಾರಿಹಾರಿಕಃ — ಈ ೩ ಮಾಲೆಗಾರನು" (ಪಲಾಮು. ೯೬-೯೩೩) ; ಬರವಿತ್ತು ಮಾಲಿಕಂಗಾ ನಳಿನೇಕ್ಷಣಂ ತಳರ್ದನುತ್ಸವದಿಂ (ಜಗಪ. ೬-೦೭). 'ಕುಸುಮಮಾಲಿಕ' ನೋ. ೨. ತೋಟಗಾರ. [ಸಂ.]

**ಮಾಲಿಕ₂**, ಮಾಲಕ₂, ಮಾಲೀಕ (ನಾ). ಯಜಮಾನ : ಒಡೆಯ : ಈ ಗಿರಿಣಿಯ ಮಾಲೀಕರು ಹೇಡಿಗಳು, ಅತ್ಯಾಚಾರಿಗಳು (ಬಾರಿ. ೬೬) : ಚಂದ್ರಣ್ಣ ಆ ಊರಿನ ಜಮೀನುದಾರ. ಐವತ್ತು ಎಕರೆ ತೋಟದ ಮಾಲಿಕ (ಮಣ್ಣಿ. ೨೨). **ಮಾಲಕ₂** : ಮಾಲಕ ಮನೆಯಲ್ಲಿಲ್ಲ ಅಂತಾ ಮೊದಲೇ ಏಕೆ ಹೇಳಲಿಲ್ಲ? (ತಂಮುಬ. ೯೩) ; ಇದು ನವಾಬನ ಸಂಪತ್ತಿಯು, ಅವನೇ ಇದರ ಮಾಲಕನು (ಮುಂದಾಕ. ೬೬). **ಮಾಲೀಕ** : ರೈಲ್ವೆರಸ್ತೆಗಳಲ್ಲಿ ರೈತರು ದನಗಳನ್ನು ಬಿಟ್ಟರೆ ಹಾಗೆ ಬಿಟ್ಟಂಥಾ ದನಗಳ ಮಾಲೀಕರನ್ನು ಪತ್ತೆಮಾಡಿಕೊಡುವುದು ಗ್ರಾಮಾಧಿಪತಿಯ ಕರ್ತವ್ಯವಾಗಿರುವುದು (ಗ್ರಾಮಾಕ. ೦೩೮) : ನಾನ ನೆರೆಯ ಜಮೀನಿನ ಮಾಲೀಕ (ಶುಭಾ. ೨೮೨).
[ ←ಅರ. ಪಾರ. ಹಿಂ. ಮಾಲಿಕ್ : ಮರಾ. ಮಾಲಕ್ ]

**ಮಾಲಿಕೆ** (ನಾ). ೧. ಹೂವುಗಳನ್ನು ಸೇರಿಸಿ ಕಟ್ಟಿದ ಮಾಲೆ ; ಹಾರ : ಅಖಿಳಶಿವಭಕ್ತಪುಂಗವರ ನಿರ್ಮಾಲ್ಯಕುಸುಮಚಯಂಗಳಂ ಮಾಲಿಕೆಗಳಂ ರಚಿಸಂಗದಲ್ಲಿ ನೆಱೆ ಸುತ್ತಿ ಮತ್ತೆಯುಂ ದೇವಂಗುರುಮೂರ್ತಿ . . : ವಂದಿಸುತ (ಬಸವ. ೪೬-೬೨) ; ಶಿವಪೂಜೆಗಳವಟ್ಟ ಕುಸುಮಂ ಬೇಱೆಯುಂ ತವೆ ಬಹುವಿಚಿತ್ರತರಮಾಲಿಕೆಗಳಂ ನವೆದು (ರಾಜಶೇ. ೦೦-೩೬ ರಗಳೆ). ೨. ಕೊರಳಿನಲ್ಲಿ ಧರಿಸುವ ಆಭರಣ : ಸರ. ೩. ಸಾಲು ; ಪಂಕ್ತಿ. ನಮ್ಮ ದೇಶವು ಉನ್ನತಸ್ಥಿತಿಗೆ ಬರುವುದು ; ಜಗತ್ತಿನ ಪ್ರಮುಖ ರಾಷ್ಟ್ರಗಳ ಮಾಲಿಕೆಯಲ್ಲಿ ಸೇರುವುದು (ಹುಕ್ಕೇರ್. ೦೪). ೪. ಒಂದು ಬಗೆಯ ಜಾತಿ. ೫. ಸಣ್ಣ ಒಳದಿರುವ ಅರಮನೆ ; ಸೌಧ. ೬. ಐವತ್ತು ನಾಲ್ಕು ಬಗೆಯ ಮಂತ್ರಸಾಧನಗಳಲ್ಲಿ ಒಂದು : ಷಡಾಮ್ನಾಯ ಮೂಲ ಗುರುಪರಂಪರೆ . . . ಪಂಜರ ಮಾಲಿಕೆ ಮೂಲಿಕೆ ತಂತ್ರಬಲಿ ಆತ್ಮೈಕ್ಯಗಳೆಂಬ ಪಂಚಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (೬ವೀರ. ೬೦). [ ಸಂ. ಮಾಲಿಕಾ]

**ಮಾಲಿಖಾನೆ** (ನಾ). ಅಧಿಕಾರವನ್ನು ಕಳೆದುಕೊಂಡ ರಾಜ, ಜಮೀನುದಾರ ಮುಂತಾದವರಿಗೆ ಕೊಡುವ ಮಾಸಾಶನ ಅಥವಾ ವರ್ಷಾಶನ: ಬಂಗರಾಜನಿಗೆ ಬ್ರಿಟಿಷರು ಮಾಲಿಖಾನೆಯನ್ನು ಕೊಟ್ಟು ಇರಿಸಿದ್ದರು (ವಳಿತ. ೨೪) ; ತಿಂಗಳು ತಿಂಗಳು 'ಮಾಲಿಖಾನೆ' ಯನ್ನು ಕಳುಹಿಸುವುದರಿಂದ ನಾನು ಚಿರಂಜೀವಿಯಾಗಿರಬೇಕು (ಘೂಮುಕ. ೨).
[←ಪಾರ. ಮಾಲಿಕಾನಹ್ : ಹಿಂ. ಮಾಲಿಕಾನಾ./ತುಳು. ಮಾಲಿಕಾನ್]

**ಮಾಲಿಗ** (ನಾ). ಮಾಲೆಯನ್ನು ಕಟ್ಟುವವನು. — ತಯಾರಿಸುವವನು : ಮಾಲೆಯಂ ಮಾಡುವಂ. ಮಾಲೆಗಾಱಂ . . . ನ ವಿನೋದಾರ್ಥಂ ಮಾಲಾಕುರ್ವನ್ ತತ್ರ ತು ಮಾಲಿಗ ಇತಿ ಪೂರ್ವೇಣ ಇಗ ಪ್ರತ್ಯಯ ಏವೇತಿ (ಶಬ್ದಾನು. ೪೦೦ ವ್ಯಾಖ್ಯಾ). [ಮಾಲೆ + — ಇಗ]

**ಮಾಲಿಗಾಱ** 'ಮಾಲಗಾಱ' ನೋ.

**ಮಾಲಿಗೆವುಂಟಿಗೆ** ? (ನಾ). (?) : ಕಂತುಮಹೋತ್ಸವಂ ರತಿಯ ನೋಂಪಿ ವಸಂತ ನೃಪಾಲಪೂಜೆಯೊಡ್ಡಂತಿಯಪೂರ್ವದಾನತಿಥಿ ಮಾಲಿಗೆವುಂಟಿಗೆ (?) ಜನ್ಮತಾರೆಯೆಂದಿಂತತಿಕೀರ್ತಿಯಿಂ ಪ್ರತಿದಿನಂ ತನಗಾಂಮಿಗೆ ಮಾಡಿದಳ್ಗೆ ದುಃಖಿ ತಲೆದೋರ್ಪವೋಲ್ ಮುನಿದು ಬಂದವಳ್ಗೆ ದೀಕ್ಷೆಗೊಸಗಂ (ದಕಳ. ೬-೦೭). P ಇಲ್ಲಿ ಎರಡು ಪದಗಳಿರಬಹುದೆ? [ ? ]

**ಮಾಲಿನಿ** (ನಾ). ೧. ಹೂವನ್ನು ಮಾಲೆಯಂತೆ ಕಟ್ಟಿ ಮಾರುವವಳು : ಹೂವಾಡಗಿತ್ತಿ. ೨. ಹಾರವನ್ನು ಧರಿಸಿರುವವಳು. ೩. ದುರ್ಗೆಯ ಒಂದು ರೂಪ. ೪. (ದುರ್ಗೆಯ ಪರಿಚಾರಕವರ್ಗಕ್ಕೆ ಸೇರಿದ) ಹೆಣ್ಣುಪಿಶಾಚಿ : ಈಗಳೆ ಕೊಂದು ಪೋಚಿಸಿ ಶಾಳಿಸಿ ಗಮ್ಮನೆ ನಿಮ್ಮನಿಮ್ಮ ಮಾಲಿನಿಯರ್ಗೆ ಬಲಿಗುಡುವೆಂ (ರಾಜಶೇ. ೦೦೨-೦೦): ಆಚುವ

ಶಿವಗಣಂಗಳ ಪರ್ಬುವ ಮಂಕಡರಾರ್ವ ಮಾಲಿನಿಯರ ಜ್ಯಾಟ್ಟಿ ಬಳ್ಳುಗಳ . . . ಕೋಲಾಹಲಂ ಬಿಜಯಸಾಗಲೊಡಂ (ರಾಪಟಾಶ್ಚ. ೦೩೨–೨೨). ೫. [ಛಂದ] ಹದಿನೈದನೆಯ ಅತಿಶಕ್ವರಿಛಂದಸ್ಸಿನ ಒಂದು ವೃತ್ತದ ಹೆಸರು: ಅಮರಗಣಯುಗಂಗಳ್ಮಂತೆ ಭೂತ್ರೋಯಯುಗ್ಮಂ ಕ್ರಮದೆ ನಿಲೆ ಬೆಡಂಗಂ ತಾಳ್ದು ಬಂದಾ ವಿರಾಮಂ ವಿಮಲಮಣಿಪುದೆಂಟೆಂಬಲ್ಲಿ ನಿಲ್ತಂದೊಡಕ್ಕುಂ ಸಮದಗಜಗತೀ ಕೇಳ್ ಮಾಲಿನೀನಾಮವೃತ್ತಂ (ಛಂದೋಂಬು. ೨–೧೫೩): ನನಮಯಯಗಣಂಗಳ್ ಮಾಲಿನೀವೃತ್ತಮಕ್ಕುಂ (ಕ್ಶಿ. ೬೩).

[ ಸಂ. ಮಾಲಿನೀ ]

**ಮಾಲಿನ್ಯ** (ನಾ). ೧. ಕಲ್ಮಶ : ಕೊಳೆ : ಮಾಲಿನ್ಯಂ ವಿಮಲದೊಳಾಗಲಾಗ ದೆಂಬಂತಾ ಲೀಲಾವಿಮಲಸರೋವರಂ ತರಂಗವ್ಯಾಕೋಲಂ ತಳೆದುದು ಕಜ್ಜಳಾಳಿಯಂ ತದ್ವಾಲಾಲೋಚನಕುಮುದಂಗಳಿಂದಮಾಗಳ್ (ಲೀಲಾವ. ೦೯–೩); ಅರ್ಜುನನ ಬುದ್ಧಿ ತಿಳಿಯಾಗುತ್ತದೆ. ಮನದ ಮಾಲಿನ್ಯ ಮಾಯ ವಾಗುತ್ತದೆ (ಧರ್ಮಸಾ. ೦೦೩). ೨. ಮಬ್ಬು ; ಮಸುಕು : ಕ್ಷತ್ರ ಮತ್ತು ಧರ್ಮಗಳು ಪರಸ್ಪರ ಪೋಷಕಗಳಾಗಿರುವುದರಿಂದ ಕ್ಷಾತ್ರಶಕ್ತಿ ಕುಂಠಿತ ವಾದಾಗೆಲ್ಲ ಧರ್ಮದ ಪ್ರಕಾಶಕ್ಕೆ ಮಾಲಿನ್ಯ ಸಹಜ (ಪುಣ್ಯಾರ. ೦೦೯ ಟೀಕೆ).

[ಸಂ.]

**ಮಾಲಿಶ್.** ಮಾಲೀಷ್, ಮಾಲೀಸ್, ಮಾಲೀಸು (ನಾ). ೧. (ಮೆರುಗು ಬರುವಂತೆ) ಉಜ್ಜುವುದು ; ತಿಕ್ಕುವುದು. ೨. (ಆಲಂ) ಪುಸಲಾವಣೆ: ಬೆಣ್ಣೆಹಚ್ಚುವಿಕೆ : ದೇವರಿಗೆ ಮಂಗಳಾರತಿ ಅರ್ಪಿಸಿ. ನಾಳೆಯಿಂದ ಮತ್ತೆ ನಮ್ಮ ಮಾಲಿಶ್ ಸುರುವಾಯಿತೆಂದು ಆಗಾವು ಸೂಚನೆ ಕೊಟ್ಟಿಟ್ಟೆವು (ದೀಪಹ. II. ೨೩೯). **ಮಾಲೀಷ್** : ೧. ಕರಾರಿಂದ ಕೆರೆಕೆರೆದು ಮಾಲೀಷ್ ರ್ರಂಗೇಲಿ ಹಾಕುವುದಕ್ಕಾರಂಭಿಸಿದ್ದ (ದಣಂ. ೩೭). **ಮಾಲೀಸ್**: ೧. ಕೆಂಪು ತೈಲದಿಂದ ಕಿಬ್ಬೊಹೊಟ್ಟೆಯ ಮೇಲ್ಗಡೆಯಿಂದ ಕೆಳಕ್ಕೆ ಮಾಲೀಸ್ ಮಾಡ ಬೇಕು (ದಶಕಿ. ೩೨); ಅವರಿಬ್ಬರೂ ಒಬ್ಬರು ಸಾಬರ ಹತ್ತಿರ ಕೆಲಸಕ್ಕಿದ್ದರು; ಕುದುರೆಚಾಕರಿ . . . ಮಾಲೀಸ್ ಮಾಡಬೇಕು (ತಂಗೂಂ. ೭೫). **ಮಾಲೀಸು:** ೧. ಹೇಗಿದೆ ನೋಡಿ -- ಮಾಲೀಸಿನ ಪ್ರತಾಪ ? (ಗಂಗಾವ. ೯೫); ಆದಕ್ಕೆ ಮಾಲೀಸು ಅಪ್ಪಾಜಿಯೇ ಮಾಡುತ್ತಿದ್ದರು (ಕೆಂಗಾಳ್ಯ. ೨೫): ಹೊಟ್ಟೆ ತುಂಬಾ ಹುರುಳಿಯಿಲ್ಲ. ಕುದುರೆಗೆ ಮಾಲೀಸು ಮುರುತಾಸು (ಗಾದೆ).

**ಮಾಲಿಶ್‌ಮಾಡು**, **ಮಾಲೀಸ್‌ಮಾಡು**, **ಮಾಲೀಸುಮಾಡು** = ೧. (ಎಣ್ಣೆ ಮೊದಲಾದುವುಗಳನ್ನು ಸವರಿ) ಉಜ್ಜು ; ತಿಕ್ಕು : ಮಾಲಿಶ್ ಮಾಡಿದ ಕುದುರೆಯ ಮೈ ಹೊಳೆಯುತ್ತಿದೆ (ರೂಢಿ); ಸೊಂಟದಲ್ಲಿ ನೆಳೆತ ವಾದರೆ ಮೂತ್ರಕೋಶದ ಮೇಲೆ ಹಸುರುತೈಲವನ್ನೂ ಸೊಂಟದ ಮೇಲೆ ನೀಲಿತೈಲವನ್ನೂ ಮಾಲೀಸ್ ಮಾಡಬೇಕು (ದಶಕಿ. ೩೨) ; ಧನಿಯರ ಮತ್ತು ತಮ್ಮ ಮನೆಯ ಎತ್ತು, ಕೋಣಗಳನ್ನು ನೀರಲ್ಲಿ ನಿಲ್ಲಿಸಿಕೊಂಡು ಮಾಲೀಸು ಮಾಡುವುದೂ ಉಂಟು (ಸ್ವಸ್ವಜೂ. ೦೩). ೨. (ಆಲಂ) ಗಿಲೀಟಿನ ಮಾತ ನ್ನಾಡಿ ಮೆಚ್ಚಿಸು : ಪೂಸಿಮಾಡು : ಕೆಲಸ ಆಗೋವರೆಗೂ ಚೆನ್ನಾಗಿ ಮಾಲೀಶ್ ಮಾಡಿ. ಆಮೇಲೆ ತಿರುಗಿಯೂ ನೋಡದೇ ಇರೋದು ಕೆಲವರ ಸ್ವಭಾವ (ರೂಢಿ). **ಮಾಲೀಸಿನ ಮಾತು** = (ಆಲಂ) ಬೇರೆಯವರು ನಂಬು ವಂತೆ ಆಡುವ ಮಾತು; ಬಣ್ಣಹಚ್ಚಿ ಆಡುವ ಮಾತು : ಗರುಡಾ ಚಾರ್ಯ ಬಹಳ ಮೃದುವಾಗಿ ನಗುತ್ತ ದಾಸಾಚಾರ್ಯನ ಮಾತಿಗೆ ತಾನು ಒಪ್ಪಿದೆ ಎನ್ನುವಂತೆ ನಟಿಸುತ್ತ ಹೇಳಿದ. ಇದರಿಂದ ಮಾಲೀಸಿನ ಮಾತು ಗೊತ್ತಿಲ್ಲದ ಲಕ್ಷ್ಮಣಾಚಾರ್ಯನಿಗೂ ಸಂತೋಷವಾಯಿತು (ಸಂಸ್ಕಾರ. ೩೮).

[←ಪಾರ. ಹಿಂ. ಮಾಲಿಶ್ : ಮರಾ. ಮಾಲಿಶ್, ಮಾಲಿಸ್, ಮಾಲೀಶ್. ಮಾಲೀಸ್]

**ಮಾಲಿಸು** (ಕ್ರಿ). ೧. ಕಡೆಗಣ್ಣಿನಿಂದ ನೋಡು; ಓರೆಗಣ್ಣಿನಿಂದ ನೋಡು: "ಮಾಲಿಸು ಕಟಾಕ್ಷೇ (ಕಡೆಗಣ್ಣಿನಿಂದ ನೋಡು). ದೀರ್ಘಾಲೋಕೇ ಚ (ಬಹಳ ಹೊತ್ತು ನೋಡು)" (ಶಮದ) : ಮೆಲ್ಲುಡಿಯಿನಾರ್ಮೈವ ಜೀವಿತೇಶನ ನುಡಿಗೆ ಪಡಿನುಡಿಗುಡೆಯುಂ, ನುಡಿಯದಿರೆಯುಮಾಜಿದೆ ಕಾಂತೆ ಕೆಲನ ಕೆಳದಿಯಂ ಮಾಲಿಪಂದು (ರಾಪಟಾಶ್ಚ. ೨೦–೦೯). ೨. ನೆಟ್ಟ ದೃಷ್ಟಿಯಿಂದ ನೋಡು; ಒಂದೇ ಸಮನೆ ನೋಡು: ಆಲಿಸುತಿಪೆ ಮಾಲಿಸುತಿಪೆ ಹರಿಣದ ಜತೆ ಹರಿಣೆ (ಗಂಗಾತ. ೦೦೭–೬) ; ಕೊನೆಮುಳ್ಗಳಂತಾಗೆ ಹಿಂದುಮುಂದುಗಳೆಲ್ಲ ಕೊನೆದು ಬಾಡಿದ ನಿರತೆಯಂ ಮಾಲಿಸುವಳು (ಕಾಂಜರ. ೦೦೯–೨೩೫). ೩. (ಒಂದು ಪಕ್ಕಕ್ಕೆ) ಬಾಗಿಸು; ಓರೆಯಾಗಿಸು; ವಾಲಿಸು: ಅರಿವರಿಯದೆಯೆ ಕಾವ್ಯ ಮಾರ್ಗದಲ್ಲಿ ನರಂ ತರುಗಳಂ ಮಾಲಿಸುತೆ—ಪೋಷ ಜಾತ್ರೆಗರಂ ಪರಿಕಿಸುತೆ ತನ್ನನರಸುವ ಕವ್ವರೆ ತೆರಂ ಬರಿಯಿಸುತಿರವರೊಡನೆ ತನ್ನನೆಯ್ದದಿರಂ (ಸಂಸಠ. ೨೦–೫೯) ; ಬಯಕೆಗಳ್ . . . ನಾಲಗೆಯೊಳೆದ್ದಂತೆ ಬೋಳ ಬಾಯ್ತೆರೆದಂ ತೋಲ್ದಟ್ಟಿ ಕೇಡುಗಳ ಬಳಿವಿಡಿಯಲೆಳಸುತಿಹ ಮಾಲಿಸುವ ಕಪಲ್ಗಳಿಮಾತುಗಳನುಗಿದಂ (ಕಾಂಜರ. ೦೨೭–೨೭೯). ೪. (ಆಲಂ) ಏರು ಪೇರು ಮಾಡು ; ಬದಲು ಮಾಡು: ವ್ಯತ್ಯಾಸಗೊಳಿಸು : ಸತ್ಕಥೆಯ ಮಾಲಿಸದೆ[ಪಾಠಾಂ. ಅಲಸದೆ]ಮಗರುಹು ಗರುಡೋರಗರ ವೈರಂಗಳು ಬಂದ ಕಾರಣಗಳ ತಿಳಿವಂತೆ ವಿಸ್ತರಿಸಬೇಕೆಮಗೆ (ತುರಂಗ. ೩–೧೦).

[ಮಾಲು$_1$ + — ಇಸು$_3$]

**ಮಾಲೀಕ** 'ಮಾಲಿಕ$_2$' ನೋ.

**ಮಾಲೀದಿ** 'ಮಾಲದೀ' ನೋ.

**ಮಾಲೀಷ್** 'ಮಾಲಿಶ್' ನೋ.

**ಮಾಲೀಸ್** 'ಮಾಲಿಶ್' ನೋ.

**ಮಾಲೀಸು** 'ಮಾಲಿಶ್' ನೋ.

**ಮಾಲು$_1$** (ಕ್ರಿ). ೧. ಓರೆಯಾಗು : ಬಾಗು ; ಓಲು : ಮೇಲಯ್ಯನೊಡನೈ ತಂದಾಂ ಪೊಕ್ಕು ನಿಜಾಲಯವನು ಮೇಲ್ಬನನಿಯ ಕಾಲಿಗೆಜಗಿ ಸುಖ ವಿರ್ಪನ್ನ ಮೆಲ್ಲನೆ ಮಾ[ಪಾಠಾಂ. ವಾ]ಲಿತು ಪಡುನೇಸಜುಬಟ್ಟು (ಸೊಬಸೋ. ೦೫–೫೬); ಲಾಲಿಪ ಪದ್ಮಕೈರವನಾಳ ಸತುಗುಂದಿ ಮಾಲಿದುವೆಸಳ್ಗಳು ಬಾಡಿ (ಮೋಹತ. ೯–೪೩) : ನನ್ನ ಮಾಲಿದಂಗುಲಿಯಿನ್ನು ನೇರವಾಯ್ತಿಲ್ಲೆಂದ ಮೋಲೆಲ್ಲರೆದ್ದರಾ ಕ್ಷಣವೆ (ಶರಶ. ೪೯–೦೨೦). ೨. ತೂಗಾಡು; ತೊನೆದಾಡು; ಒಲೆ : ಇಂತು ಮದಿರಾಪಾನವಂ ಮಾಡಿ . . . ಮಾಲುತ್ತುಂ ಜೋಲುತುಂ ತೇಲುತುಂ ಘಲೆಯುತುಂ ಮನಂಗೊಳಿಪ ತದ್ವನಿತಾಜನ ಮಧ್ಯದಲ್ಲಿ . . . ಇರ್ದಂ (ಉದ್ಭಟ. ೫–೯೦ ಪ) ; ಚೆಂದವ ನೋಡಿರೆ . . . ಉಡಿಯ ಘಂಟೆ ಘಳಿಲೆನುತ ನುಡಿದು ಮೆಲ್ಲನೆ ಪಿಡಿದುಕೊಂಡು ನಡೆಗೆ ಮಾಲುತ ನಡಗರದಲಿ ಬೆಡಗುಮಾಡಿ ಆಡುವ ರಂಗನ (ಪುರಂದ. ೩–೦೦೫–೨); ಕಿಟ್ಟಣ್ಣ ಪಾತ್ರಿಯಾಗಿ ನಡುಗುತ್ತ ಹಿಂದೆ ಮುಂದೆ ಮಾಲಿ ನಡೆಯುತ್ತ, ಬುಸುಗುಟ್ಟಿ ಅಬ್ಬರಿಸಿದ (ಸ್ವಸ್ವಜೂ. ೭೦). 'ಓಲು$_1$'. 'ವಾಲು$_1$' ಪರಾ.

[ದೇ. II ತುಳು. ಮಾಲ್ಪುಪು, ಮಾಲು]

**ಮಾಲು$_2$** (ನಾ). ೧. ಓರೆ : ವಕ್ರತೆ : 'ಮಾಲುಗಣ್ಣು' ಪರಾ. ೨. ಬಾಗು ; ತಿರುವು : ಮುಕಾದೇವಿಕಾಸ್ಥಾನದ ಸಮೀಪದಲಿ ಮುಡಲು ಹರಿವ ಹೊಳೆಯಿಂದಂ ಪಡುವಲು ತೆಂಕಲು ಹಲಸಿನ ಮಾನಿ ಕೂಲಂಬಿ ಕೂಡಲು ಅಜ್ಜಿಯ ಮಾಲಿಂದಂ ಬಡಗಲು (ಸೌಇಇ. IX–ii, ೪೭೦–೩೦; 1478).

[< ಮಾಲು$_1$]

**ಮಾಲು$_3$** (ನಾ). ಸರಕು: ಸಾಮಗ್ರಿ: ಪದಾರ್ಥ : ನಾನೀಗ ಅವರ ಪಾಲಿಗೆ ದೂರದೊಂದು ಲೋಕದ ಮಾಲು (ಪಡೆದಾ. I. ೩೮೬) ; ಸುಂಕದ ಕಟ್ಟೆಯ ಅಧಿಕಾರಿಗಳೇ ಈ ವ್ಯಾಪಾರದ ಮಾಲುಗಳನ್ನು ತಮ್ಮ ವಶಕ್ಕೆ ತೆಗದುಕೊಂಡು ಹಗಲು ರಾತ್ರಿ ಕಾವಲಿಡುತ್ತಾರೆ (ಕೃಪಾಇ. II, ೦೯೯).

[←ಅರ. ಹಿಂ. ಮರಾ. ಮಾಲ್]

**ಮಾಲು$_4$** 'ಮಹಾಲು' ನೋ.

**ಮಾಲುಂ**, ಮಾಲುಮ್ (ನಾ). ತಿಳಿದಿರುವುದು ; ಗೊತ್ತಿರುವುದು. **ಮಾಲುಮ್**: ನನಗೆ ಮಾಲುಮ್ ಇದ್ದರ ನಿಮ್ಮನ್ನೇಕೆ ಕೇಳಲು ಬರುತ್ತಿದ್ದೆ ತಾಯಿ (ರಂಗರೋ. ೧೩).

**ಮಾಲುಂಮಾಡು**=ನಿಶ್ಚಯಮಾಡು; ನಿರ್ಧಾರಪಡಿಸು : ಕಬಿಯಾ ಮುಲುಕಿನ ಕಿನಾರೆಗೆ ಬಂದರೆ, ದೋಸ್ತಿಮಾರ್ಗದಿಂದ ನಮ್ಮ ಕಡೆ ಒಬ್ಬ ಶ್ಯಾಣ ಗೃಹಸ್ಥನಿಗೆ ಕಳುಹಿಸಿ, ಎರಡು ಸರಹದ್ದನ್ನು ಮಾಲುಂ ಮಾಡಿಯೋವು (ರಾಕ್ಷೇಂದ್ರ. ೯೩).

[←ಅರ. ಮಅಲೂಮ್, ಮಾಲೂಮ್; ಹಿಂ. ಮಾಲೂಮ್; ಮರಾ. ಮಾಲುಮ್, ಮಾಲೂಮ್]

**ಮಾಲುಕ** (ನಾ). ಒಂದು ಬಗೆಯ ಸುವಾಸನೆಯ ಗಿಡ; ಕಾಮಕಸ್ತೂರಿ: "ಮಾಲುಕಮೆನಲ್ಕೆ ಕಸ್ತುರಿಕಾಮವೆನಿಸಿಕ್ಕು" (ಶಬ್ದಮ. ೩೯-೨೯). [ಸಂ.]

**ಮಾಲುಗಣ್ಣು**, ಮಾಲಗಣ್ಣು (ನಾ). ವಕ್ರದೃಷ್ಟಿಯುಳ್ಳ ಕಣ್ಣು ; ಓರೆಗಣ್ಣು : ಪಂಚೇಂದ್ರಿಯಗಳಲ್ಲಿ ಬಹುಪ್ರಾಮುಖ್ಯವಾದ ಅವಳ ಕಣ್ಣು 'ಮಾಲುಗಣ್ಣಾಗಿತ್ತು' (ಬಾಗಿಪ. ೬೦). **ಮಾಲಗಣ್ಣು** : ಕಾಲಕಾವು ನಾರಿಯರು ಓಲೆಗಳಿವುದ ಕಂಡೆ ಮಾಲಗಣ್ಣೊಳು ತೊಳಲುವುದ ಕಂಡೆ (ಶಿವಾನ. ೮೩೩-೬೬೯) ; ಇವನು ಕಪ್ಪಗಿದ್ದಾನೆ, ಗಿಣಿಮೂಗು, ಮಾಲಗಣ್ಣು (ಅರಿಪು. ೦೦೯). [ಮಾಲು$_2$ + ಕಣ್ಣು (< ಕಣ್)]

**ಮಾಲುಗಾಡಿ** (ನಾ). ಸಾಮಾನು, ಸರಂಜಾಮುಗಳನ್ನು ಹೊತ್ತು ಸಾಗಿಸುವ ಗಾಡಿ; ಗೂಡ್ಸ್‌ಗಾಡಿ : ತಿಂಮನು ಕೋರಿದಂತೆ ನೂರಾರಲ್ಲ–ಸಹಸ್ರಾರು ಪತ್ರಗಳು ಮಾಲುಗಾಡಿಗಳಲ್ಲಿ ಬಂದಿಳಿದವು ಧಾರವಾಡದಲ್ಲಿ (ಹುಚ್ಚುಹು. ೦೮). [ಮಾಲು$_4$ + ಗಾಡಿ$_3$. / ಹಿಂ. ಮಾಲ್‌ಗಾಡೀ]

**ಮಾಲುಧಾನ** (ನಾ). ೧. ಒಂದು ಬಗೆಯ ಹಾವು; ಕೇರೆ : "ಮಾಲುಧಾನ = ಕೇರೆ" (ನಾತಿರಾ. ೬) ; "ಮಾಲುಧಾನಃ – ಹೆರೆಗಳೆದ ಹಾವು" (೬ಶಂ. ೦೨೪). ೨. ಹಾವಿನ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ ; ಊಸರವಳ್ಳಿ : "ಮಾಲುಧಾನಃ, ಮಾತುಲಾಹಿಃ — ೨ ವೂಸರವಳ್ಳಿ ಹಾವು, ವಿಷಗಿಡದ ಹುಳ, ಉಮ್ಮತ್ತದ ಹುಳ. ಇದು ಖಟ್ವಾಂಗದ ಆಕಾರವಾಗಿಯೂ ದೀರ್ಘದೇಹವಾಗಿಯೂ ಉದ್ದವಾದ ಬಾಲವುಳ್ಳದ್ದಾಗಿಯೂ ನಾಲ್ಕು ಕಾಲುಗಳುಳ್ಳದ್ದಾಗಿಯೂ ಇರುವುದು" (ಸಿದ್ಧಾಂತಿ. ೬೨). [ಸಂ.]

**ಮಾಲುಮ್** 'ಮಾಲುಂ' ನೋ.

**ಮಾಲುಮತ್ತೆ** 'ಮಾಲಮತ್ತೆ' ನೋ.

**ಮಾಲೂರ** (ನಾ). ೧. ಒಂದು ಬಗೆಯ ಮರ; ಬಿಲ್ವಪತ್ರೆ: "ಮಾಲೂರಃ, ಶ್ರೀಫಲಃ, ಬಿಲ್ವ — ಈ ೩ ಬೆಲ್ಲವತ್ತದ ಪೆಸರ್" (ಹಲಾಯು. ೩೨-೪೦) ; ಅದು ಜಂಬೂ ಜಂಭ ರಂಭಾಕುಳಕ . . . ಕಾಶ್ಮರ್ಯ ಮಾಲೂರ ಲೋಧ್ರೋ [ಪಾಠಾಂ. ಲ್ಲೂರ ಲೊದ್ರಂ]ಗುದಿ ಕಾಕ್ಷಪ್ಲಕ್ಷಪಥ್ಯಾಮಳಕತಿಳಕಭೂರ್ಜಾದಿ ಭೂಜಾವಕೀರ್ಣಂ (ಅರಣಿಃ. ೩-೩೩). ೨. ಒಂದು ಬಗೆಯ ಮರ; ಬೇಲದ ಮರ : "ಮಾಲೂರಃ—ವಿಲಾವಾಲುಕ, ಬೇಳಕೆ, ಬೆಲ್ಲವತ್ತ" (೬ಶಂ. ೦೨೪). [ಸಂ.]

**ಮಾಲೂರಪತ್ರೆ** (ನಾ). ಬಿಲ್ವಪತ್ರೆ : ಪಾಲಾಶಕಲಧೌತಪುಷ್ಪಂಗಳುಂ ತುಳಸಿ ಮಾಲೂರಪತ್ರೆ ಯಿಾ ನಾಲ್ಕು ಲಿಂಗಕ್ಕೆ ಪ್ರಕ್ಷಾಲಿಸಿ ಪುನಃಪುನಃ ಧರಿಸಬೇಕಾದುದಂ ನಿರ್ಮಾಲ್ಯವಲ್ಲ (ಗುರುಶಾ. ೬-೦೭).

[ಸಂ. ಮಾಲೂರಪತ್ರ]

**ಮಾಲೆ**, ಮಾಳ್ಕೆ (ನಾ). ೧. ಹೂವಿನ ಸರ,– ಹಾರ : "ಸ್ರಗ್, ಮಾಲಾ, ಮಾಲ್ಯಂ– ಈ ೩ ಹೂವಿನ ಮಾಲೆ" (ಹಲಾಯು. ೯೦-೩೬೪) ; ಅಲರ್ಗಣೆಯನಂಗಜಂಗೀಯಲೇದು ರತಿ ಬರ್ಪ ಮಾಟಕ್ಕಿಯಿಂ ಮಾಲೆಯನಾಲಲಿತಾಂಗಿ ಓಡಿವು ಕಣ್ಣಿಂ ಕಲಕ್ಕಮಾ ದಾಶರಥಿಯ ಬಗೆಗಂ ಬಂದಳ್ (ಶಂಖಪು. ೫-೯೪) ; ಆ ಗಂಧರ್ವದತ್ತೆ ಚಿತ್ರಜಾತಶರಪರುಷಪತಿಗಳ್ಕಿ ಬಿಂಕದಿಂ ಛೋಂಕನೆಟ್ಟು ಮಾಲೆಯನಿಕ್ಕೆ (ಜೀವಂಧ. ೫-೨೯) ; ಮಾಲೆಗೆ ಸುಯ್ಗೆ ಸೂಟ್ಟುರುತಿರಲ್ಕಿಮಾಳಕೆ ಮಾಲೆಗಾರ್ತಿಯಮಾರ್ಲೆಯನೆತ್ತಿ ನಿಂದಿರೆ ಮುಖೇಂದುವನೀಕ್ಷಿಸುತುಂ ಪೊಮಟ್ಟು ತನ್ಮಾಲೆಗೆ ಕಯ್ಯುಸುಯ್ಯೆ (೭೩೦ತೀಶ. ೦೦-೩೦). ೨. ಕಂಠಹಾರ ; ಸರ : 'ಅಕ್ಷಮಾಲೆ', 'ಜಪಮಾಲೆ' ಪರಾ. ೩. ಸಾಲು; ಶ್ರೇಣಿ; ಪಂಕ್ತಿ : ಮಲಯಾನಿಳನೆಸಕದಿನುದಿರ್ವಲರ್ಗಳ ಮಕರಂದಮಾಲೆಗಳ್ ಪರೆದೆತ್ತಂ ನೆಲದೊಳ್ ಬಿಟ್ಟುಂ ಪಡೆದುವು ವಿಲೋಚನಾಂಬುಗಳನಗ್ಗಳಂ ವಿರಹಿಗಳಾ (ಶಬರಾ. ೩-೦೩೬); ವಕುಳಮಾಲೆಯೊಳಾಲಿಸಿದಬ್ಜನೀದಳಾವಳಿಗಳ ಮಾಲೆಗುಂಡಿಗೆಗಳಿಂ ಸಮೆದಾಡುವ ಜೂಟಳಂಗಳಂ ಅಂತವಂ ನೋಡುತ್ತಂ ಪೋಗೆ (ಕಾದಂಸ. ೨೦೩); ದ್ವೈತಾದ್ವೈತವನೋದಿ ಏನು ಮಾಡಿದಿರಯ್ಯಾ . . . ಸ್ಥಾವರ ಜಂಗಮವೊಂದೆ ಎಂದು ನಂಬದನ್ನಕ್ಕ ಕೂಡಲ ಸಂಗಮದೇವಾ ಬರಿಯ ಮಾತಿನ ಮಾಲೆಯಲೇನಹುದು (ಬಸವ. ೯೮೦). ೪. ಗುಂಪು; ಸಮೂಹ. ೫. ತುಳುಜನಾಂಗದವರ ಒಂದು ಒಳಪಂಗಡ : ತುಳುನಾಡಿನ ದೇವಾಲಯಗಳಲ್ಲಿ ಮಾಲೆಯರೆಂಬ ಒಂದು ಜಾತಿಪ್ರಭೇದಕ್ಕೆ ಕಾರಣವಾದ ವಿಚಿತ್ರವಾದೊಂದು ವಾಡಿಕೆಯಿದೆ (ಹುಕ್ಕಬು. ೦೯೦). **ಮಾಳ್ಕೆ**: ೩. ಮಲೆಯಲರ್ಗಳ್ಕಿ ಬಳ್ಕಿ ಮಜಿದುಂಬಿಯ ಮಾಳಿಗೆ ಕಾಯ್ದು ಬಯ್ದು. . . ಜೋಲ್ವರುತ್ಕಳಿಕೆಯಿನಾಮ್ರವಲ್ಲರಿಯೊಳೋಪವರಾ ಪುರನಂದನಂಗಳೊಳ್ (ಅನಂತಪು.೦-೯೩);ದೀಪ್ತಿಗಿದಿರಾದ ಪತಂಗದ ಮಾಳಿಯಾದುದುಂ(ಪುಷ್ಪದಂ.೩-೦೯).

**ಮಾಲೆಹಾಕು** = ೧. ಮದುವೆಯ ಸಂದರ್ಭದಲ್ಲಿ ವಧೂವರರು ಪರಸ್ಪರ ಹೂವಿನ ಹಾರವನ್ನು ತೊಡಿಸು; ವರಿಸು : ಹಿರಿಯಳಾದ ಅಂಬೆಯು. . . ಅವನಿಗೇ ಮಾಲೆಹಾಕಬೇಕೆಂದಿದ್ದಳು (ವಕಥಾ. ೩). ೨. ಗೌರವಸೂಚಕವಾಗಿ ಹೂಮಾಲೆಯನ್ನು ಹಾಕು,– ತೊಡಿಸು : ಸಮಾರಂಭಗಳಲ್ಲಿ ವಂದನಾರ್ಪಣೆ ಮಾಡುವಾಗ ಆಹ್ವಾನಿತರಿಗೆ ಮಾಲೆ ಹಾಕುವುದು ವಾಡಿಕೆ (ರೂಢಿ).[1] [ಸಂ. ಮಾಲಾ]

**ಮಾಲೆಕಾರ** 'ಮಾಲೆಗಾಜ' ನೋ.

**ಮಾಲೆಗಟ್ಟು** (ಕ್ರಿ). ೧. (ಹೂವು, ಮಣಿ ಮುಂತಾದುವುಗಳಿಂದ) ಹಾರವನ್ನು ಕಟ್ಟು,–ರಚಿಸು : ಮಾಲೆಗಟ್ಟುತೆ ನೋಟಕರ ಕಣ್‌ಮಾಲೆಗಟ್ಟುವರೊರ್ಮೆ . . . ಅಲ್ಲಿಯ ಮಾಲೆಗಾರ್ತಿಯರು (ಶಾಕ್ಯಚಾ. ೨-೦೨) ; ಇತ್ತರದಲಿ ಮಾಲೆಗಟ್ಟ ಮಾಜುವ ಹೆಂಗಳರ್ತಿಯರುನೇನ ಬಣ್ಣಿಸುವೆ (ಕಂಸವ. ೬-೬೨) ; ಕಟ್ಟುವೆನು ಕತೆಯೊಂದ ಬನದ ಗವಿಯಿಂದಾಯ್ದು, ಮರವೆಯಿಂದ ದನೆತ್ತಿ ಕೊಯ್ದು, ಎದೆಯನಪ್ಪಲಂ ಮಣಿಯ ಮಾಲೆಗಟ್ಟುವ ತೆರದಿ ಅಳಿವಿರದ ನೆನಹಿನಲಿ ಕೋದು (ಪಕ್ಕ. ೩೯-೦೯). ೨. ಸಾಲುಗಟ್ಟಿ ನಿಲ್ಲು; ಸಾಲುಗಿರು : ಅಂತು ದೇವರ್ ದೇವಸೋಪಾನಗವಾದ ತಂತವ್ಯಾದರದಿಂ ಮಾಲೆಗಟ್ಟಿ ದುಗ್ಧವಾರಿಪೂರಿತ ಕನಕಕಳಶಂಗಳಂ ತಂದು ಗೊಂದಣಿಸಿ ಸಂದಣಿಸಿ ನೀಡಿದಾಗಳ್ (ಅದಿಪು. ೬-೬೩ ವ). [ಮಾಲೆ + ಕಟ್ಟು$_1$]

**ಮಾಲೆಗಾತಿ** (ನಾ). ಹೂವನ್ನು ಕಟ್ಟಿ ಮಾರುವವಳು ; ಹೂವಾಡಿಗಿತ್ತಿ : ಮಾಣಸಿದನ್ನೆ ದಿಟ ಮಾಲೆಗಾತಿಯ[ಪಾಠಾಂ. ಘಟ್ಟಿವಾಳ್ತಿಯ] ಮೈಯ ಮೂಹೊಜಡ (ಕುವ್ಯಾಸ. ೦೦-೦೭); ಪುಷ್ಪಮಾಲೆಯನೊರ್ವ ಚತುರವಿಟನಿಗೆ ಕೊಟ್ಟಳು ಮಾಲೆಗಾತಿ ತಾನತಿಶಯರೂಪಿನ ಬೆಡಗೆ (ವರ್ಧಕ. ೦-೦೦೬); ಪರಿಮಳವೆರೆದಿಂಪಿನ ದಿವ್ಯಪುಷ್ಪವ ಪರಿಕೊಂಡತಿ ಹರುಷದಲಿ ಸರಗಟ್ಟಿ ಬೆಲೆಗೆ ಮಾಜುವ ಮಾಲೆಗಾತಿಯರಿರವ ನಾನೇನ ಬಣ್ಣಿಪೆನು (ಕಂಸವ.೨-೬೩). [ಮಾಲೆ + — ಕಾತಿ$_5$]

**ಮಾಲೆಗಾರ** 'ಮಾಲೆಗಾಜ' ನೋ.

**ಮಾಲೆಗಾರ್ತಿ** (ನಾ).= ಮಾಲೆಗಾತಿ : ಅಂ ಮುನ್ನಿನ ಭವದೊಳ್ ಪ್ರಿಯಸೇನೆಯೆಂಬ ಮಾಲೆಗಾರ್ತಿಯೆಂ (ವದ್ದಾರಾ. ೯೭-೦೦೬); ಚಲ್ಲವಾಡ ಪೂವೆತ್ತುವ

ಮಾಲೆಗಾರ್ತಿಯರನಂದರಿಕೇಸರಿ ನಿಂದು ನೋಡಿದಂ (ಶಂಕಶಾ. ೪-೯೦); ವರಮಲ್ಲಿಗೆ ಮೊಲ್ಲೆಗಳೊಳ್ ಬೆರಸಿದ ಮಧುಕರಕದಂಬದಿಂದಂ ನೀಲೋತ್ಕರ ಮುಂ ಮಾಕ್ತಿಕಮುಂ ಪೋಲ್ತಿರೆ ಮೆಱೆಂಬಲ್ ಮಾಲೆಗಾರ್ತಿ ಮಣಿಗಾರ್ತಿಯ ಪೋಲ್ (ಗಿರಿ. ೨-೯೮). [ಮಾಲೆಗಾಱ + — ತಿ$_1$ ( < — ಇತ್ತಿ) ]

**ಮಾಲೆಗಾಱ, ಮಾಲೆಕಾರ, ಮಾಲೆಗಾರ** (ನಾ). ೧. ಹೂವಿನ ಹಾರ ವನ್ನು ಕಟ್ಟಿ ಮಾರುವವನು; ಹೂವಾಡಿಗ: "ಮಾಲಾಕಾರಃ, ಮಾಲಿಕಃ, ಪಾರಿಹಾರಿಕಃ– ಈ ೩ ಮಾಲೆಗಾಱಂ" (ಕಶಾರು. ೯೬-೪೩೩); ಪೂಗೊಯ್ಯ ವಸಂತಕನೆಂಬ ಮಾಲೆಗಾಱನರಸನ ಸಾವಂ ಕಂಡು (ವಡ್ಡಾ.ರಾ. ೦೮೦–೨೫); ಮಗಮಗಿಪ ಜಾದಿಪೊಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ಬಗೆಯಱಿದು ನೀಡುಗುಂ ಮಾಲೆಗಾಱನಂ ಪೋಲ್ಪುದಗ್ರಮಾಲ್ಯಮಹೀಜಂ (ಅಂಪು. ೫-೩೬); ಕಟ್ಟಿಯುಮೋನೊ ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಲ್ಲದೆ ಬಾಡಿ ಪೋಗದೇ (ಅಸಂಪು. ೦-೪೩). ೨. ತೋಟವನ್ನು ಬೆಳೆಸುವವನು ; ಮಾಲಿ : ಕಂಡವರ್ ಕಾಮಿಸೆ ಮಾಲೆಗಾಱರೊಸೆ ದೋವಿದ ಪೂವಿನ ತೋಂಟಮೊಪ್ಪುಗುಂ (ಗಿರಿ. ೨-೬೦); ರಾಜಗೃಹಪುರ ಮನೆಯ್ದೆವಂದು ಪೂಱಗಣುದ್ಯಾನದೊಳ್ ವಿಶ್ರಮಿಸಿರ್ದನನ್ನೆಗಮಲ್ಲಿಯ ಮಹತ್ತರನಪ್ಪ ಮಾಲೆಗಾಱಂ ಬಂದು ನೋಟ್ಪಾಗಳ್ (ಶ್ರೀಪಸಂ. ೨೦೪-೩). **ಮಾಲೆಕಾರ** : ೧. ಪೂಗಳಿಂದ ತಮ್ಮ ವಯವಸೌಂದರ್ಯವಂ ವಿಟರಿಗೆ ತೋರಿಸುವಂತೆ ಮಾರುವ ಮಾಲೆಕಾರರ ಬಾಲೆಯರಿಂ (ಕೌಗಂಧಿ. ೫-೧). **ಮಾಲೆಗಾರ** : ೧. ಹೂಗಳಿಂದ ಹಾರ ಮಾಡಿ ದೇವಾಲಯಕ್ಕೆ ಒದಗಿಸು ವವನು ಮಾಲೆಗಾರನಾದ (ತಮಿಳು–ಮಾಲೈಕ್ಕಾರ) (ಕಾಶಗ. ೬೨).

[ಮಾಲೆ + —ಕಾಱ]

**ಮಾಲೆಗಾಱಗೇರಿ** (ನಾ). ಹೂವಾಡಿಗರು ವಾಸಿಸುವ ಓಣಿ,– ಕೇರಿ : ಆ ಪೂವಿನ ಪೊಟ್ಟಿನೊಳ್ ದೇವಕೀನಂದನಂ ಮಾಲೆಗಾಱಗೇರಿಯೊಳ್ ವಿಹಾರಿಸುತ್ತುಂ ಬರ್ಪಲ್ಲಿ (ಜಗಪು. ೬-೦೦೫). [ಮಾಲೆಗಾಱ + ಕೇರಿ]

**ಮಾಲೆಗಿಡಿ** (ನಾ). ಒಂದರ ಹಿಂದೆ ಮತ್ತೊಂದರಂತೆ ಬರುವ ಕಿಡಿ ; ನಿರಂತರವಾಗಿರುವ ಕಿಡಿ : ಸಾಯ್ಲುಗಳ ಕಾರ್ಬೊಗೆಯ ಮುಸಕದ ಮಾಲೆಗಿಡಿಗಳ ದಾಡೆಗಳ ರಣಧೂಳಿಯುಪ್ಪರದಸಮಭಟರೊದಗಿದರು ಸಮರದಲಿ (ಕೊರಾ. ೬-೦೪-೨೦). [ಮಾಲೆ + ಕಿಡಿ]

**ಮಾಲೆಗೇರಿ** (ನಾ). = ಮಾಲೆಗಾಱಗೇರಿ : ಮದನಮದಮತ್ತೇಭಮನು . . . ಚದುರರಸನಿಗಿತ್ತನೆಂಬೊಲು ಪುದಿದ ಮಾಲೆಯು ಗಂಧಕುಂಕುಮ ಚದುರಿಯೋಕುಳಿಯಾಡುತೈದಿತು ಮಾಲೆಗೇರಿಯಲಿ (ಶಾಗಿಷ. ೬-೦೬).

[ಮಾಲೆ + ಕೇರಿ]

**ಮಾಲೆಗೊಳ್** (ಕ್ರಿ). ಒಂದರ ಹಿಂದೆ ಮತ್ತೊಂದು ಬರು ; ಸಾಲಾಗು : ಮಾಲೆಗೊಳುತ್ತುಮೊತ್ತರಿಸಿ ಪಾಯ್ವ ಸರಲ್ಗಳನುಣ್ಮೆ ವಿಸ್ಫುಲಿಂಗಾಲಿ ಬರಲ್ ಸರಲ್ಗಟಿ ಸಿಡಿಲ್ಗಟಿಯುಂ ಗೆಲೆವಂದುದೆಂಬಿನಂ ಶೈಲಧರಂ ಕಱುತ್ತು ಕಱೆಯುತ್ತಿರೆ ಮಾರ್ಗಣವೃಷ್ಟಿಯಂ (ಜಗಪು. ೦೩-೭೭).

[ಮಾಲೆ + ಕೊಳ್$_1$]

**ಮಾಲೆಜೊಡರ್** (ನಾ). ಸಾಲಾಗಿರುವ ದೀಪ ; ಸಾಲುದೀಪ : ಮಾಲೆಜೊಡರ್ ನವಚಂಪಕಮಾಲೆಯುಪೊಲ್ ಮೊಲೆಯ ಮೇಲೆ ಮಾರ್ಪೊಳೆಯೆ ಕರಂ ಲೀಲಾವತಿ ಪತಿಯಿಪ್ಪಾಲೋಲತೆಯಿಂದೊಸೆದು ದೇವಿಯುಂ ಪೂಜಿಸಿದಳ್ (ಲೀಲಾವ. ೧೦-೬). [ಮಾಲೆ + ಸೊಡರ್]

**ಮಾಲೆದುಂಬಿ** (ನಾ). ದುಂಬಿಗಳ ಸಾಲು,– ಸರಣಿ : ಅವಳ ಕುರುಳ್ಗೆ ಮಾಲೆ ದುಂಬಿಗಳೆಣೆಯೆ (ಕವುಪ. ೦೦೩ ಶ್ರಯೋ). [ಮಾಲೆ+ದುಂಬಿ (< ತುಂಬಿ$_1$)]

**ಮಾಲೆದೊಡಂಬೆ** (ನಾ). ಹೂವಿನ ಗುಚ್ಛ ; ಹೂದಂಡೆ: ಮಾಲೆ ಗಾರ್ತಿಯರ ಮೊಲ್ಲೆಗಳೊಳ್ ಸಾಲೊಡು ನೇಲ್ವ ಮಾಲೆದೊಡಂಬೆಯಂ ತೂಗಿ (ರಾಪಾಶ್ವ. ೨-೨೪). [ಮಾಲೆ + ತೊಡಂಬೆ$_2$]

**ಮಾಲೆದೊಡರ್** (ನಾ). ಹೂವಿನ ಆಭರಣ ; ಪುಷ್ಪಾಲಂಕಾರ : ಪಗಲ ಕೆಯ್ದಾವಿಗೆಯ ಕಾಲ ಹಾಸೆಯ ಮೊತ್ತದ ಬಾವುಲಿಯ ಮಾಲೆದೊಡರ ಮಾಸಾಳ್ಗಳ ಮಂತ್ರಣದೊಳಂ (ಗಿರಿ. ೨-೦೦೩ವ). [ಮಾಲೆ + ತೊಡರ್$_2$]

**ಮಾಲೆಪೂವು** 'ಮಾಲೆವೂ' ನೋ.

**ಮಾಲೆವಡಿಗ** (ನಾ). ಹೂವಾಡಿಗ ; ಮಾಲೆಗಾರ : ಮಾಲೆಯಿಂ ಜೀವಿಸುವಂ, ಮಾಲೆವಡಿಗಂ (ಶಬ್ದಾಸು. ೪೧೬ ಶ್ರಯೋ).

[ಮಾಲೆ + — ಪಡಿಗ]

**ಮಾಲೆವಡಿಗಿತಿ** (ನಾ). ೧. ಹೂವಾಡಿಗನ ಹೆಂಡತಿ. ೨. ಹೂವಾಡಿಗಿತ್ತಿ: ಪಾವಡಿಗಿತಿ, ಪೂವಡಿಗಿತಿ, ಮಾಲೆವಡಿಗಿತಿ (ಶಬ್ದಾಸು. ೦೬೨ ಶ್ರಯೋ).

[ಮಾಲೆವಡಿಗ + — ಇತಿ$_1$ (< — ಇತ್ತಿ)]

**ಮಾಲೆವೂ** , **ಮಾಲೆಪೂವು** (ನಾ). ೧ ಹೂವಿನ ಹಾರ; ಪುಷ್ಪಸರ: ಕತ್ತುರಿಬೊಟ್ಟನಿಟ್ಟು ಬಿಡುಮುತ್ತಿನ ಸೇಸೆಯನಿಕ್ಕಿ ಮಾಲೆವೂವೆತ್ತಿ . . . ವಿದೇಹಿ ಸಾರಥಿನಸಾರದ ರನ್ನದ ಬಾಯಿನಂಗಳಿಂ ಚಿತ್ತವಿಕಾಸಮಂ ಪಡೆದಳಂದಪರಾಜಿತೆಗಂ ಸುಮಿತ್ರೆಗಂ (ಶಂರಾಪಶ. ೫-೦೨೬); ಸೌರಭಚಯಮಂ ಸುಯ್ಯೊಂಪಿನಿಂದಾವಗಂ ದಳವೇಱುತ್ತಿರೆ ಪೂತ ಜಂಗಮಲತಾಸಂದೋಹ ಮೆಂಬಂತೆ ಕಣ್ಗೊಳಿಸುತ್ತಿರ್ಪುದು ಮಾಲೆವೂದಳೆದ ಮಾಳಾಕಾರನಾರೀಜನಂ (ಚಂದ್ರಪ್ರ. ೦-೦೩೨) ; ಪುಲ್ಲವಡಿಗಿತಿಯರೆತ್ತಿ ಪಿಡಿದ ಮಾಲೆವೂವಿನ ನಱುಗಂಪಿಂಗೆ ಕವ್ವರೆಗೊಂಡು ಮುತ್ತಿ ಮುಸುಱಿ ಮೊರೆವ ಮಱಿದುಂಬಿ ಗಳಿಂಚರದೊಳಂ (ಕಬ್ಬಿಗ. ೪೪). **ಮಾಲೆಪೂವು** : ೨. ಹಾರವನ್ನು ಕಟ್ಟುವುದಕ್ಕಾಗಿ ಬೆಳೆಸುವ ಹೂವು : ನನ್ದಾದೀವಿಗೆಗೆ ಸೊಡರೆಣ್ಣೆಗೆ ಘಾಣ ೧ ಮಾಲೆಪೂವಿಗೆ ತೋಟ ೧ (ಶಾಇಪ. XX, ೨೬-೦೪; 1040).

[ಮಾಲೆ + ಪೂ$_2$]

**ಮಾಲೆವೂಗಾಱ** (ನಾ). = ಮಾಲೆಗಾಱ : ಮಡಿವಾಳ ಮಾಲೆವೂಗಾಱ ಕುಂಬಾಱ . . . ಚೂಳಾಯತರ ಕೇರಿಗಳೆಡೆವಿಡದೊಪ್ಪಿದವಲ್ಲಲ್ಲಿ (ಶ್ರೀಪಾಂ. ೦–೭೭). [ಮಾಲೆವೂ + — ಕಾಱ]

**ಮಾಲೆವೂಡು** (ಕ್ರಿ). ಮದುವೆಯಲ್ಲಿ ಮಾಲೆಯನ್ನು ಹಾಕು ; ವರಿಸು : ಅಂತೆಯ್ದೆ ಸೋಲ್ತುಮಧಿಕಲಜ್ಜಾಭಾವದಿಂ ಮಾಲೆವೂಡಲಱಿಯದೆ ಕುಮಾರಗ್ರೀವಾಲೋಕನೆಯಾಗಿರೆ (ಶಾಂತಿಪು. ೫-೦೫೬ ವ).

[ಮಾಲೆ + ಪೂಡು]

**ಮಾಲೆಸೂಡು** (ಕ್ರಿ). = ಮಾಲೆವೂಡು : ಸ್ವಯಂಬರದೊಳ್ ಸುಮತಿ ಯೆಲ್ಲರಂ ನೋಡಿಯಾರುಮಂ ಮೆಚ್ಚದೆ ಸಿರಿದಿಣ್ಣಂಗೆ ಮಾಲೆಸೂಡಿದೊಡೆ (ವಡ್ಡಾ.ರಾ. ೦೦೬-೨೦); ಚೆಲ್ವಿಡಿದಿರ್ದ ರೂಪು ದೃಷ್ಟಿಗೆ ಪರೆ ಪಾಂಡುರಾಜನನೆ ಕುಂತಿ ಮನಂಬುಗೆ ಮಾಲೆಸೂಡಿದಳ್ (ಶಂಕಶಾ. ೦-೦೦೬); ನೀಳ್ದ ಬಾಹುಲತೆ ತೋಳ ಮೊದಲ್ ಮದನಸಾಸಾರಗಮುಂ ಸಾಲಿಡೆ ಸಾರ್ದು ಸೀತೆ ರಘುವಂಶ ನಮೇರುಗೆ ಮಾಲೆಸೂಡಿದಳ್ (ಶಂರಾಪಶ. ೫-೯೩). [ಮಾಲೆ + ಸೂಡು$_1$]

**ಮಾಲೋಪಮಾನ** (ನಾ). [ಕಾವ್ಯಮೀ] ಅನೇಕ ಉಪಮಾನಗಳು ಸಾಲುಸಾಲಾಗಿ ಹೆಣೆದು ಬರುವ ಒಂದು ಶಬ್ದಾಲಂಕಾರ : ಜನಿತ ಪ್ರಗಲ್ಭದೊಳ್ [ಮಾನ]ದೊಳ್ ಮಾಹಾತ್ಮ್ಯದೊಳ್ ನಿಜೋದಾರತೆಯೊಳ್ ಅನುಪಮಗುಣದೊಳ್ ಶ್ರೀಶಂ ಘನಮೆನೆ ಮಾಲೋಪಮಾನಭೇದಮಿದಕ್ಕುಂ (ಕವಿರಾ. ೬-೮೦). [ಸಂ.]

**ಮಾಲೋಪಮೆ** (ನಾ). = ಮಾಲೋಪಮಾನ : ಉಪಮಾಲಂಕಾರವೂ ಒಮ್ಮೊಮ್ಮೆ ದೀಪಕಾಲಂಕಾರದ ಛಾಯೆಯನ್ನೊಳಗೊಳ್ಳಬಹುದು. ಇದಕ್ಕೆ 'ಮಾಲೋಪಮೆ'ಯೇ ಉದಾಹರಣೆ (ಛನ್ದಾಲೋ. ೨೦೪).

[ಸಂ. ಮಾಲೋಪಮಾ]

**ಮಾಲ್ಕಿ, ಮಾಲಕಿ, ಮಾಲ್ಕೀ** (ನಾ). ಒಡೆತನ ; ಸ್ವಾಮ್ಯ : ಮಾಮಲೇ ದಾರರಿಗೆ ಈ ತೋಟವು ತಮ್ಮಿಬ್ಬರ ಮಾಲ್ಕಿಗೆ ಸೇರಿದ್ದು, ಇಬ್ಬರೂ ಅದನ್ನು

ಸಾಗುವಳೀ ಮಾಡುತ್ತಿರುವುದಾಗಿ . . . ಸಾದರಪಡಿಸಿದ್ದ (ಮುಕಪ. ೮).
**ಮಾಲಕಿ :** ಹೊಲಗಳು ಯಥಾಪ್ರಕಾರ ಲಾವಣಿಯಾಗಿದ್ದವು. ಅವುಗಳ ಮಾಲಕಿ ನರಹರಿಯ ಹೆಸರಿನಲ್ಲಿ ನಡೆಯಬೇಕು (ಸಮಾಜ. ೧೧೮). **ಮಾಲ್ಕೀ :** ಅನಂತಶಯನಗುಡಿಯ ಎದುರಿನ ಮನೆಯ ಹಿತ್ತಲದಲ್ಲಿ ನಮ್ಮ ಮಾಲ್ಕೀಯ . . . ಒಂದು ಮನೆಯಿದೆ (ಶಕ್ತರ್ಕ. ೧೮೦); ಇಷ್ಟ ದಿನಾ ಈ ಆಸ್ತಿನಾ ಉಣಕೋತ ಬಂದೀನು, ಇನ್ನ ಮ್ಯಾಗ ಅದರ ಮಾಲ್ಕೀ ನಿಂದ ಆತು (ಗ್ರಾಮಾಡು. ೧೦).

[←ಪಾರ. ಮಾಲಿಕ್; ಹಿಂ. ಮಾಲಿಕೀ; ಮರಾ. ಮಾಲಕೀ]

**ಮಾಲ್ಕೀ** 'ಮಾಲ್ಕಿ' ನೋ.

**ಮಾಲ್ಕೀಹಕ್ಕು** (ನಾ). ಒಡೆತನದ ಹಕ್ಕು; ಸ್ವಾಮ್ಯದ ಅಧಿಕಾರ: ಗೌರೀಶ . . . ಕಾಮಿನಿಯತ್ತ ಮಾಲ್ಕೀಹಕ್ಕಿನಿಂದ ಕಣ್ಣು ಸಣ್ಣಗೆ ಮಾಡಿ ಮುಗುಳುನಗೆ ಬೀರಿದ (ಮುಕ್ತಿ. ೧೭೦). [ಮಾಲ್ಕೀ (< ಮಾಲ್ಕಿ) + ಹಕ್ಕು]

**ಮಾಲ್ಗುಜಾರಿ** 'ಮಾಲಗುಜಾರಿ' ನೋ.

**ಮಾಲ್ಮೆ** (ನಾ). ಸಲುಗೆಯಿಂದ ಉಂಟಾದುದು: ಅಧಿಕಪರಿಚಯದಿಂದಾದುದು: ನೀನು ಮಹಾರಾಣಿಯಾಗುವುದಕ್ಕೆ ನಾನು ಅಡ್ಡಬರಬಾರದು. ಅಕ್ಕನಿಗೆ ಕಲ್ಯಾಣವಾದರೆ ನನಗೂ ಸಂತೋಷವಲ್ಲವೆ ? ಹತ್ತಾರು ವರ್ಷ ಒಟ್ಟಾಗಿದ್ದುದರ ಮಾಲ್ಮೆ ಈ ಕಣ್ಣೀರು (ಶಾಂತಲಾ. ೬೯).

[ದೇ.॥ ತಮಿ. ಮಾಲಿಮಿ = ಚಿಕ್ಕಂದಿನ ಸ್ನೇಹ; ತೆಲು. ಮಾಲಿಮಿ = ಸಲುಗೆ, ವಾತ್ಸಲ್ಯ]

**ಮಾಲ್ಯ** (ನಾ). ೧. ಹೂವಿನ ಹಾರ, ‑ಸರ: "ಸ್ರುಗ್. ಮಾಲಾ, ಮಾಲ್ಯಂ — ಈ ೩ ಹೂವಿನ ಮಾಲೆ" (ಹಲಾಯು. ೬೦‑೩೯೮); ವಸನಾಭರಣ ಮಾಲ್ಯವನು ಲೇಪನಾದಿಗಳನೆಸೆವ ವಾಹನವು ಮೊದಲಾದವೆಲ್ಲವ ಕೊಡಲು (ಶ್ರೀಕಣ. ೦೯‑೫೩); ಅರಸನತಿಪ್ರಮೋದದಿನಪರಿಮಿತಧನಕನಕವಸನಮಾಲ್ಯ ಮಣಿಭೂಷಣಂಗಳಿಂ ಮಾಹೇಶ್ವರಾರಾಧನಂಗೆಯ್ದು (ರಾಜಶೇ. ೪‑೩೪೭). ೨. [ಜೈನ] ಭೋಗಭೂಮಿಯ ಹತ್ತು ವಿಧವಾದ ಕಲ್ಪವೃಕ್ಷಗಳಲ್ಲಿ ಒಂದು; ಹೂಮಾಲೆಗಳನ್ನು ಒದಗಿಸುವ ಕಲ್ಪವೃಕ್ಷ: ಮಾಲ್ಯಾತೋದ್ಯಜ್ಯೋತಿರ್ವಾಲ್ಯಾಭರಣಪ್ರದೀಪವನನಾಶನ ಸತ್ಕಲ್ಯಗೃಹ ಪಾತ್ರ ರಾತ್ರಿಗುಣಾಳ್ಯರ್ಜಿತ ದಶವಿಕಲ್ಪಕಲ್ಪಕುಜಂಗಳ್ (ಶಾಕ್ಕರೆಪು. ೦೬‑೩೪).

[ಸಂ.]

**ಮಾಲ್ಯಪುಷ್ಪ** (ನಾ). ಒಂದು ಬಗೆಯ ಸೆಣಬು: "ಮಾಲ್ಯಪುಷ್ಪ – ಕಿಚಿಯ ಸಣಬು" (ಓಕಂ. ೦೩೪). [ಸಂ.]

**ಮಾಲ್ಯಮಹೀಜ** (ನಾ). = ಮಾಲ್ಯ ೨: ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಿಂ. ಬಗೆಯಣಿದೋಲಗಿಪುದು ಮಾಲೆಗಾಣಿಸಂ ಪೋಲ್ತುಮಗ್ರಮಾಲ್ಯಮಹೀಜಂ (ಆಂತು. ೩‑೩೬). 'ಮಾಲ್ಯಾಂಗ' ಪರಾ. [ಸಂ.]

**ಮಾಲ್ಯವಂತ** (ನಾ). ೧. ಮಾಲೆಯಿಂದ ಅಲಂಕರಿಸಲ್ಪಟ್ಟವನು; ಹಾರವನ್ನು ಧರಿಸಿದವನು. ೨. ಒಂದು ಪರ್ವತದ ಹೆಸರು: ತಾನೆಡೆಗೆಡೆಗೆ ಗಂಗಾಜಲೋದ್ಧತಿಗೆ ತವೆ ಸವೆವುತಿಹ ಮಾಲ್ಯವಂತದ ಹವಣೆನಿತು (ರಸಪು. ೦೪‑೨೬); ಸಿತಾಂತ . . . ಮಾಲ್ಯವಂತ . . . ವೈಕಂತಕವೆಂಬೈದು ನಗಂಗಳೇ ಮೂಡಣಮಂದರಗಿರಿಯ ಟಂಕಣ ಗಂಧಮಾದನಶ್ಶೈಲದ ಮಧ್ಯಭಾಗದಲ್ಲಿರುವುವು (ಶಿವಲೀ. ೨೦೪). ೩. ಒಬ್ಬ ರಾಕ್ಷಸನ ಹೆಸರು.

[ಸಂ. ಮಾಲ್ಯವತ್]

**ಮಾಲ್ಯಾಂಗ** (ನಾ). = ಮಾಲ್ಯ ೨: ಅದಿರ್ಮುತ್ತಿಯ ಮಕುಲದ ನಾಗದ ಪೊಂಗೇದಗೆಯ ಹೇಮತಾಮರಸದ ಕುಂದದ ಬಣ್ಣಮಾಸಿಗಂಗಳನುದಾತ್ತ ಮಾಲ್ಯಾಂಗಮಹೀರುಹಂ ಕುಡುತಿರ್ಕುಂ (ಶಾಂತಿಪು. ೬‑೦೦೨); ಮಾಲ್ಯಾಂಗವೆಂಬುದು ಜಾತಿ ಕೇತಕಿ ಮರುವಕ ಪ್ರಭೃತಿ ಸರ್ವರ್ತುಕಧಾಮ ವಿಶೇಷಂಗಳನೀವುದು (ಶಾಪುಂಪು. ೯). 'ದೀಪಾಂಗ' ಪರಾ. [ಸಂ.]

**ಮಾವ** 'ಮಾಮ' ನೋ.

**ಮಾವಂತ,** ಮಾವತ, ಮಾವುತ, ಮಾವ್ತ, ಮಾಹುತ (ನಾ). ಆನೆಯನ್ನು ನಡೆಸುವವನು; ಮಾವಟಿಗ: "ಹಸ್ತಿಪಕಃ, ಹಸ್ತ್ಯಾರೋಹಃ, ನಿಷಾದೀ — ಈ ೩ ಮಾವಂತಂ" (ಹಲಾಯು. ೩೬‑೬೨); ಕರಿಕರಮುಂ ಮಾವಂತನ ಕರಮುಂ ತೆತ್ತಾಂಡ್ಯಶಿರಮುಮೊಡನುರುಳೆ (ಶಂಕಭಾ. ೧೨‑೯೬); ಮುರರಿಪು ರಾವುರ್ ಸುಬೇದರ್ ಕರಿಶಿಕ್ಷಕರಶ್ವಶಿಕ್ಷಕರ ಜೋದರ ಮಲ್ಲರ ಮಾವಂತರ ಮಂದುರಿಗರ ನೆಗಲ್ದಾವಾಸವಾರಿಗಳ ಕೇರಿಗಳೊಳ್ (ಜಗ. ೬‑೨೬); ಕರಿಗಳನು ಕೌರವನ ಮಾವಂತರಿಗೆ ಕೈಗೊಳಿಸಿದರು (ಕುಮ್ವಾ.ಕ. ೧೬‑೬೨). **ಮಾವತ :** "ನಿಷಾದಿ ಹಸ್ತ್ಯಾರೋಹಸೆನಲು ಮಾವತನಕ್ಕು" (ಶಂಗ್ರಹ. ೯೭‑೫); ಉಬ್ಬಿ ನಡೆದು ಬರುತಿಹ ಕರಿಘಟೆಗಳನಬ್ಬರಿಸಿಯೆ ಮಾವತರು ಕೊಬ್ಬಿದ ತನುವ ತಿವಿದು ಮೇಘವತ್ತಣಗೆಬ್ಬಿಸಿದರು ಸಬಳಿಗರು (ಅಂಜತ. ೬‑೦೨೯). 'ಮಾವತಗೇರಿ' ಪರಾ. **ಮಾವುತ :** "ಜೋದಂ ಮಾವುತನು" (ಕವಿಕಂ. ೦೫೨): ತತ್ತುರಗಾಳಿಯುಂ ಖಂಡತುಂಡಮದಾಗೆ ಪೊಯ್ಯುತಿರೌದ್ರದಿಂ ಬರೆ ಮಾವುತರ್ (ಉದ್ಭಟ. ೪‑೭೮); ರಾವುತರು ಸೆಲ್ಲಿಸಿದರಗ್ಗದ ಮಾವುತರನಾನೆಗಳ ತಡುಕಿ ಹಯಾವಳಿಯ ಬೀಸಿದರು ರಥಿಕರು ಹಾಯ್ಸಿದರು ರಥವ (ಕುಮ್ವಾ.ಕ. ೨‑೦೫); ಗಿರಿಶಿಖರದ ಪೂ ತುಂಬಿದ ಶಕ್ಕಿಯ ಮರದಂತೆಯುತಿಚೆಲುವಿಂದ ಪರಿಪರಿಯಾಭರಣವ ಶೃಂಗಾರದೆ ಮೆಟಿದರು ಮಾವುತರಾಗ (ಕಂಜಪ. ೨೩‑೦೦೪). **ಮಾವ್ತ :** ಮೊಟಿವ ಬೊಬ್ಬೆಗೆ . . . ಮಾವ್ತರಂ ಕೆಡೆಪಿಯಾನೆಗಳ್ ತಿರುಗುತಿರ್ದುವು (ಕಂಪು. ೨೪‑೨೪); ಹೊಕ್ಕು ಮಾವ್ತರ ಮುರಿದು ಗಜಗಳ ಡೊಕ್ಕೆಯೊಳು ಚಾಚಿದರು (ಅಕಂಚಾ. ೬‑೬‑೫೭); ಮೊರೆಮೊರೆದು ಹೂಂಕರಿಸೆ ಮಾವ್ತರು ಕರದಿ ತಟ್ಟುತ ಮಸ್ತಕಾಗ್ರವ ಹೊರಜೆ ಘಂಟಾವಳಿಯ ಸೈತಿರಿಸುತ್ತ ತರುಬುವರು (ಕೋಗಿಡು. ೨೦‑೦೩). **ಮಾಹುತ :** ಮದಕರಿಯುಂ ಮಾಹುತನ ಕುದುರೆ ತಾರಾಹುತನ ಹದುಳವನಲ್ದು ನಡೆವಂತೆ ಸೂಳೆ ತನಗೊದಗುವರನಱಿಗು (ಸರ್ವಜ್ಞ. ೦೯‑೦೫); ಅವನ ಚಿತ್ತವು ಮದ್ದಾನೆಯನ್ನು ಪಳಗಿಸುವ ಮಾಹುತನ ಕಜ್ಜವನ್ನು ಎಸಗುತ್ತಿರಲಿಲ್ಲ (ರೂಮಹು. ೦೬). 'ಮಾವಂತಿಗ', 'ಮಾವಟಿಗ' ಪರಾ. [< ಪ್ರಾ. ಮಹಾಮತ್ತ./ಸಂ. ಮಹಾಮಾತ್ರ./ ತಮಿ. ಮಾವುತ್ತನ್; ತುಳು. ಮಾವತೆ, ಮಾವುತೆ; ತೆಲು. ಮಾವುತುಡು./ ಹಿಂ. ಮಹಾವತ್; ಮರಾ. ಮಾಹೂತ್, ಮಾಹೂವ್, ಮಹಾತ್, ಮಹಾದ್]

**ಮಾವಂತಿಗ,** ಮಾವತಿಗ, ಮಾವುತಿಗ (ನಾ). = ಮಾವಂತ: ನಿಷಾದಿ– ಮಾವಂತಿಗಂ (ಕಮುದ. ೨೫೩ ಅಡಿ): ಗಂಧಸಿಂಧುರಂ . . . ಯದೃಚ್ಛೆಯಿಂದತ್ತಲಿತ್ತಲ್ ಪರಿದೋಡಿ ಮಾವಂತಿಗನಂ ಕಾಡುತ್ತುಮಿರ್ದುದಂ ಮೆಲ್ಲಮೆಲ್ಲನೆ ಸಾಮೋಪಾಯಪ್ರಯೋಗದಿಂದಲಾನಸ್ತಂಭದಂತಿಕೆಕೆ ತಂದು ನಿಲಿಸುವುದುಂ (ಪಾರಪು. ೬‑೨೭ ವ). **ಮಾವತಿಗ :** ಗಗನಪವನದ ಮೇಲೆ ಉದಯಮುಖವನುಪಾವ ಸಮದಗಜವ ನಿಲಿಸುವ ಮಾವತಿಗ ಬಂದ (ಅವಕಂ. ೦೮೦‑೬೦೦); ಮಾವತಿಗನ ಕಾಲಂ ಪಿಡಿದೋವದೆ ಸೆಳೆದವನನಿಕ್ಕಿಯಂಕುಸಮುಂ ಕೊಂಡಾ ವಾರಣಮಸ್ತಕದಿನಿಳಾವಲ್ಲಭನಿರ್ದನತುಳ ಸತ್ತ್ವಸಮಗ್ರಂ (ರಶಕು. ೬‑೦೦೨); ರಾವುತರ ಮಾವತಿಗರ ತೇರಾಳ್ಗಳ ಚಪ್ಪರಣೆಯೊಳ್ ಕಿಳ್ತುರ್ವ ಹಯದ ಗೀಟಿಡುವಾನೆಯ ಕಿಱಿಗಿಱಿವ ಪೊಂದೇರೋರಣಮಿಂಬಿಡಿರೆ. . . ಪಡೆ ನಡೆಯುತುಮಿರ್ದುದು (ರಾಮಾಶ್ವ. ೩೦‑೫). **ಮಾವುತಿಗ :** ಪುನ್ನಾಗಂ ಪತ್ತಿ ರಂಜಿಸಿದರ್ಚದುರಮಾವುತಿ [ಪಾಠಾಂ. ವಟಿ]ಗರಂತೆ . . . ಬನದೊಳ್ಪೆಣ್ಗಳು (ಕೈಪಿಂಪು. ೬‑೨೨). 'ಮಾವಂತ', 'ಮಾವಟಿಗ' ಪರಾ.

[P 'ಮಾವಂತ' ಮತ್ತು 'ಮಾವಟಿಗ' ಈ ಎರಡು ಸಮಾನಾರ್ಥವುಳ್ಳ

ಶಬ್ದಗಳ ಪ್ರಯೋಗದಲ್ಲಿ ಗೊಂದಲವುಂಟಾಗಿ ಈ ಶಬ್ದವು ರೂಪುಗೊಂಡಿರಬಹುದು]

**ಮಾವಟ** 'ಮಾವಟಿಗ' ನೋ.

**ಮಾವಟಿಗ,** ಮಾವಟಿ (ನಾ). = ಮಾವಂತ : "ಆಧೋರಣಃ, ಹಸ್ತಿಪಕಃ, ಹಸ್ತ್ಯಾರೋಹಃ, ಪಕ್ಷಾದಿನ್—ಈ ೪ ಮಾವಟಿಗ" (ನಾಚರಾ. ೦೩೯); ಅಟಿಗ ಪ್ರತ್ಯಯಕ್ಕೆ—ಕೊಲ್ಲಟಿಗಂ. ದೀವಟಿಗಂ, ಮಾವಟಿಗಂ (ಶಮದ. ೨೦೯ ಪ್ರಯೋ); ಭರಿಕರ ಭರೀರದೊಳು. . . ಶಿರ ಶಿರದೊಳು ತಾಗೆ ವೈರಿಕರಿಗಳು ಪೊಣರ್ದವು ಮಾವಟಿಗರು ಮೇಲೆ ಕರವಾಳುಗಳೊಳು ಪೊಯ್ವಾಡೆ (ಪರ್ವತ. ೬-೦೦೬); ಪೊಣರ್ಚಿಸಿದಪನಾನೆಯಂ ಮಾವಟಿಗನಿನರಸಂ (ಶಬ್ದಾ. ಸು. ೩೫೦ ಪ್ರಯೋ). **ಮಾವಟಿ :** ಹೊಳೆವ ಸೂನಗಿ ನೂಂಕುತಿಹ ಮಾವಟಿಯಿಂದ ತಳರ್ದವು ಸೊಕ್ಕಿದಾನೆಗಳು (ಪರ್ವತ. ೬-೦೦೩); ರಾಯಘಡ. ಸಿಂಹಘಡಗಳ ನಡುವಣ ಹಸುರುಹರಹಿನ ಮೇಲೆ ತಾವು ಮಾವಟಿಗಳು (ಐಳಚ. ೩೮).

[ಮಾ₁ + – ಅಟಿಗ./ತೆಲು. ಮಾವಟಿ. ಮಾವಟೀಡು]

**ಮಾವಡು** (ನಾ). (ಸಾಮಾನ್ಯವಾಗಿ ಉಪ್ಪಿನಕಾಯಿಗೆ ಬಳಸುವ) ಮಾವಿನ ಮಿಡಿ.–ಹೀಚು : ಕೂಲಿಯೋಗರದಕ್ಕಿ ಕೊಯಿಕೀರೆಯಂ ಕೊಂಡು ಮೇಲುಗಂಪಿಡುವ ಮಾವಡುವನೊಲವಿಂ ಕೊಂಡು. . . ಬರೆ (ಅಂಠ. ದೇ. ೦೬೩-೨೦) ; ಸವಿದರೆ ಈ ಮಾವಡುವನ್ನು ಸವಿಯಬೇಕು (ಹಸುಹೂ. ೦೯). [ದೇ.II ತಮಿ. ಮಾವಡು, ಮಾವಟಿ]

**ಮಾವಡೆ** (ನಾ). ದಾನವಾಗಿ ಕೊಟ್ಟ ಭೂಮಿಯಲ್ಲಿ ದೊರಕುವ ಬೇಟೆಯ ಪ್ರಾಣಿಗಳು ಮತ್ತು ಅವುಗಳಿಗೆ ಸಂಬಂಧಿಸಿದ ಒಂದು ಬಗೆಯ ತೆರಿಗೆ : ಚತುಃಸ್ಸೀಮಾಮಧ್ಯದೊಳಗೆ ಸಲುವ ಗದ್ದೆ ಬೆದಲು ತೋಟ ತುಡಿಕೆ ಮಾವಡೆ ಮರುವಡೆ ನಿದಿ ನಿಕ್ಷೇಪ . . . ಸ್ವಾಂಮ್ಯಾಂಗಳುಂನ್ನು ಶ್ರಿಂಗ್ಗೇರಿ ಶ್ರೀಮಠಕ್ಕೆ . . . ಶ್ರೀವಿಜಯವೆಂಕಟಪತಿರಾಯರೈಯ್ಯನವರು ಬರಸಿ ಕೊಟ ಭೂದಾನಶಾಸನ (ಶೃಅಂ. ೦೯೩೩, ೩೨-೩೨; 1318) ; ಈ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ . . . ಮಾವಡೆ ಮರವಡೆ ಕಳುವಡೆ ನಾರಡೆ ಬಳುಕುನೀರು ಊರ ಸಂತೆ ಮೊದಲಾದ ಹಲ ಉಪಾಧಿಗಳು ಸಹ . . . ಸರ್ವಮಾನ್ಯವಾಗಿ ಆಚಂದ್ರಾರ್ಕ್ಕಸ್ಥಾಯಿಯಾಗಿ ಅನುಭವಿಸಿಕೊಂಡು (ಸೌಇ. IX–ii, ೪೬೬-೬; ಕು. 1472) ; ಯಿಾ ಚತುಸ್ಸೀಮೇವಳಗಿನ ತೋಟ ತುಡಿಗೆ ಗದೆ ಬೆದಲು ಮಾವಡೆ ಮರವಡೆ ನಿಧಿ ನಿಕ್ಷೇಪ . . . ಎಂಬ ಅಷ್ಟಭೋಗತೇಜಸ್ಸ್ವಾಂಮ್ಯಗಳನ್ನು ನೀವೇ ಅನುಭವಿಸಿಕೊಣ್ಡು ಬರಲುಳ್ಳವರೆಂದು . . . ಬರೆಸಿಕೊಟ್ಟ ಭೂದಾನ ಶಾಸನ (ಎಕ. X, ಮುಳಬಾ. ೦-೩೬ ; 1577 ?). 'ಮರವಡೆ' ಪರಾ.

[ ← ತಮಿ. ಮಾವಟ್ಯೆ, ಮಾವಿಟ್ಯೆ ]

**ಮಾವಣ್,** ಮಾವಣ್ಣು (ನಾ). ಮಾವಿನ ಹಣ್ಣು : ಮಾವಣ್ಗಳಂ ಪೀರ್ವ ಕೀರವಿಟ್ಟಿಯ ಪಣ್ಗೆ ಚಿತ್ತಂ ಹಾರಿದವುದೇ (ಬಸವು. ೦೦-೦೦) ; ಮಾವಣ್ಣರನೇಜಿಲ ಪಣ್ಗಳ ವೃಂದದಂಗಡಿಗಳೊಪ್ಪಿದುವು (ಶರತ. ೪೭-೨೦). **ಮಾವಣ್ಣು :** ತನಿಮಾವಣ್ಣಿನ ಮಧುರತೆ ಕಾಯೊಳು ಜನಿಪುದೆ (ಜೀವಂಧಂ. ೦೯-೬೬) ; ಪತಿಯಿತ್ತ ಮಾವಣ್ಣ ಯತಿಯೋರ್ವಗಿತ್ತಳುದ್ಧತಚಿತ್ತೆ ಕಾರಿಕಾಲಮ್ಮೆ (ಭೃರವೇ. ೪-೦೩೦) ; ಮಾವಣ್ಣನರಗಿಳಿ ಸವಿಪವೊಲಧರವಂ ಸವಿದು (ತಂಪು. ೦೦-೩೯). [ಮಾ₃ (< ಮಾವು) + ಪಣ್₃]

**ಮಾವಣಿಗೆ** (ನಾ). (?) : 'ನುಸುಳ್ಳಾವಣಿಗೆ' ಪರಾ. [ ? ]

**ಮಾವಣ್ಣು** 'ಮಾವಣ್' ನೋ.

**ಮಾವತ** 'ಮಾವಂತ' ನೋ.

**ಮಾವತಗೇರಿ** (ನಾ). ಮಾವಟಿಗರು ವಾಸಿಸುವ ಬೀದಿ : ಮಾವತಗೇರಿ ರಾವುತಗೇರಿಯ ಸುತ್ತ . . . ಪಂಚಕಾರುಕರಾವಾಸಗಳರುತಿಹವು (ಅಂಚತ. ೩-೯೯). [ಮಾವತ (< ಮಾವಂತ) + ಕೇರಿ]

**ಮಾವತನ** (ನಾ). ಮಾವನಾಗಿರುವಿಕೆ : ಮಾವತನವಿದು ಬಜಿದೆ ಹೋಗದೆನುತ್ತ ಬಂದನು ಧರ್ಮಸುತ ನಗುತ (ಶುವ್ಯಾ. ೦೨-೩) ; ಮೆಜಿಯಿ ಮದವನು ಮಾವತನವದು ಹೊಜಗಿರಲಿ ಸಹದೇವ ನಕುಲರ ನಜಿಯಬಹುದೆನ್ನೆನುತ ಹೊಕ್ಕನು ಶಲ್ಯ ಪರಬಲವ (ಕುವ್ಯಾ. ೬. ೨-೪೬).

[ಮಾವ (< ಮಾಮ) + – ತನ]

**ಮಾವತಿಗ** ' ಮಾವಂತಿಗ ' ನೋ.

**ಮಾವಮ್ಮ ?** (ನಾ). ಒಂದು ನದಿಯ ಹೆಸರು : ಮಹಾರಣ್ಯಮಜ್ಗಲಿಯ ಬದರಿನಮ್ ಪೂಳಿವಳ್ಳಮ್ಮಾವಮ್ಮನಿತಿ ಕ್ಷುದ್ರನದೀತ್ರಯ ಪರಿಪೂರ್ಯ್ಯ ವಾಪಿಮಹಾಸಮುದ್ರಪರಿಹಾಸಿಮಹಾತಟಾಕಮ್ (ಎಕ. III (R), ಶಂಡಿತ. ೯೦೨-೬೬ ; 904). [ ? ]

**ಮಾವರ** (ನಾ). ಲಕ್ಷ್ಮಿಯ ಪತಿ ; ವಿಷ್ಣು : ಮಾವರಂ ಕೊಬ್ಬಿದ ಹಿರಣ್ಯಾಕ್ಷನಂ ಕೊಲಲು (ಪೀಕೃತು. ೩-೦೦-೦೩) ; ಆವ ಗುಣವನು ನೋಡಿ ಒಲಿದಿತ್ತೆಯೊ ಕಾಣೆ ಮಾವರಾ, ನಿನ್ನನೆಂತು ನಾ ಗೆಲಿದೆನರುಹಾ (ವಿಶಿಲಗೀ. ೦೮-೨). [ಸಂ.]

**ಮಾವಲಿ,** ಮಾಹುರ್ಲಿ₂, ಮಾಹುಲಿ (ನಾ). ೧. ಒಂದು ದೇವತೆಯ ಹೆಸರು : ಚೌದರಿಗಳು . . . ಭವಾನಿ, ಮಾವಲಿ . . . ಪಾವನಾಯಿ ಇಷ್ಟು ದೇವತೆಗಳಿಗೆ ನಡಕೊಳ್ಳುತ್ತಾರೆ (ಕಜಾಗ. ೦೫೦). **ಮಾಹುರ್ಲಿ₂ :** ೧. ತಾವರೆಗಂಗಾಳೆ ಬೆನ್ನಲಿರೂ ಕೋವಿದಗುಣಗೆ ಅಭಯ ಕೊಡುವೆ ಮಾಹುರೀ ಯಲ್ಲಮ್ಮಾ ಬನ್ನಿಲೆನ್ನಾ ವಚನಕೆ (ಶ್ರೀಲ್ಯಶಾ. ೬೦). **ಮಾಹುಲಿ :** ೨. ಧರ್ಮಿಷ್ಟಳಾದ ಹೆಂಗಸು : ಅವಳು ಗರತಿಯ ಮಗಳು. ಮಾಹುಲಿಯಾಗಿದ್ದಾಳೆ (ಲೂ). [← ಮರಾ. ಮಾವಲೀ, ಮಾಹುಲೀ. ಮಾಲೂಲೀ]

**ಮಾವಶಿ,** ಮಾವಶೀ, ಮಾವಸಿ, ಮೌಸಿ (ನಾ). ತಾಯಿಯ ಒಡಹುಟ್ಟಿದವಳು ; ಚಿಕ್ಕಮ್ಮ ಅಥವಾ ದೊಡ್ಡಮ್ಮ : ಬೇರೆಯವರ ಮಾವಶಿಯರು ತಮ್ಮ ಅಕ್ಕನ ಮಗಳಿಗೆ ವಸ್ತ್ರ—ಒಡವೆ ಮಾಡಿಸಿಕೊಡುತ್ತಾರೆ (ಸ್ತ್ರೀಶ. ೬೬). **ಮಾವಶೀ :** ಮಾವಶೀ ಇದನ್ನೆಲ್ಲ ಮಾಡಿದ್ದಾಳೆ (ಸ್ತ್ರೀಶ. ೬೨). **ಮಾವಸಿ :** ನಿನ್ನ ಆಜಿಗೆ 'ಮಾವಸಿ' ಅನಬೇಕಪಾ (ಐಳತ. ೩೮). **ಮೌಸಿ :** ನಮ್ಮ ಮೌಸಿ ನಾಳೆ ಅಮೇರಿಕದಿಂದ ಬರುತ್ತಿದ್ದಾಳೆ (ಲೂ).

[← ಹಿಂ. ಮಾಉಸೀ, ಮಾಸೀ, ಮೌಸೀ ; ಮರಾ. ಮಾವಶೀ. ಮಾವಸೀ. ಪ್ರಾ. ಮಾಉಚ್ಛಾ. ಮಾಉಸಿಆ, ಮಾಉಸೀ. ಮಾಉಸ್ಸಿಆ, ಮಾಸಿಆ. ಸಂ. ಮಾತೃಷ್ವಸೃ, ಮಾತೃಸ್ವಸೃ]

**ಮಾವಶೀ** ' ಮಾವಶಿ ' ನೋ.

**ಮಾವಸಿ** ' ಮಾವಶಿ ' ನೋ.

**ಮಾವಳಿ** (ನಾ). ಮಹಾರಾಷ್ಟ್ರದ ಸಹ್ಯಾದ್ರಿಪರ್ವತಪ್ರದೇಶಕ್ಕೆ ಸೇರಿದ ಒಂದು ಕ್ಷತ್ರಿಯಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ : ಗಂಭೀರೋದ್ಧತಪರಿಘಾವರಣಭೀಷಣಶತಘ್ನೀಶತಸಂಕುಲಮತ್ತ ಮಾವಳಿಸೇನಾವಳೀವರ್ಮಿತ ಧರ್ಮಪುರೀಪ್ರಸಭಾಕ್ರಮಣ ಶ್ರವಣ ನಿರ್ಜನೀಕೃತ ಕೇಗೇರಿ . . . ಕುನ್ನತ್ತೂರ್ ಮುಖ್ಯದುರ್ಗವರ್ಗನಿರಾಯಾಸಾಕ್ರಮಣನಿರ್ವ್ಯತನಿಜಸೈನಿಕಸಮೂಹನಂ (ಚಿಕದೇ. ೩೮-೨೩).

[← ಮರಾ. ಮಾವಳೀ]

**ಮಾವಳಿಗ** (ನಾ). = ಮಾವಳಿ : ನರಪತಿ ಕೇಳ್ನಿನ್ನೊಳ್ಪಡಿಬರಿಜದ ಮಾವಳಿಗಪಡೆಯನುಡುಗಿವ ಸೆವದಂ ಪರಿಹರಿಸಿ ಪಾಪಮನಿತಂ ಸುರುಮ್ಮದೋಳಿರಿಸಿ ಸೂಗಮನಮುಗೊಳಿಸಿದಪ್ಪೆ (ಅಕ್ಷ್ಮತಿ. ೬೪-೮೦).

[ಮಾವಳಿ + – ಗ₃]

**ಮಾವಳ್ಳಿ** (ನಾ). ಮಾವಿನ ಚಿಗುರು.–ಕುಡಿ : ಇದಿರ್ಗಾಳಿಗೊಲೆವ ಮಾವಳ್ಳಿಯ ದಾಂಗುಡಿಯ ನುಣ್ಪೊಗರೆ ಬಳ್ಳಿಮಿಂಚಾಗೆ . . . ಬನಂ

ಮಾನಂಗೊಂಡುದು (ಊಚಾಶಿ. ೩೪-೦೨). [ಮಾ₃ (< ಮಾವು) + ಬಳ್ಳಿ]

**ಮಾವಾಣಿಗ** (ನಾ). (?) : ಮಾವಾಣಿಗರುಂ ಇರ್ಗ್ಗರೆಯ ಪಾದಪ್ಪಡಿಗಳುಂ ಅನೆಸಾಸಲಾ ಬೀರಡಿಗಳುಂ ಮಾರಡಿಗಳುಂ . . . ಇ ಪೊಲನಂ ನಡೆಯಿಸಿ ದೋರ್ (ಎಕ. XVI, ಗುನ್ಮ. ೭೩-೫೩ ; 733). [ ? ]

**ಮಾವಾನಿಕೆ ?** (ನಾ). (?) : ಕನಕವರ್ಣಪ್ರವೃಗಳ ದಿವಿಜರ ವನಿತೆಯರ ನವರಾವತಿಯ ತಾನಿನಿತುವನು ವಿಂಗಡಿಸಿ ನಿಮ್ಮಡಿಗೀವೇನೀ ಕ್ಷಣದಿ ವನಿತೆ ಮಾವಾನಿಕೆಯುಳ್ಳವೆ ನೆನೆಯಬೇಡಿನಿತುಗ್ರಕರ್ಮವನೆನಲು ಸುರಪನ ಕೊಲ್ಲಲೆ ಸುಗಿದರಿದ್ದು ತವಂತವಾಗೆ (ಕಂಎಜ. ೩೪-೯೦). [ ? ]

**ಮಾವಿ₁** (ನಾ). ಭ್ರೂಣದ ಮೇಲಿನ ಪೊರೆ ; ಮಾಸು ; ಜರಾಯು : 'ಮಾವಿಚೀಲ' ಪರಾ.

[ದೇ.॥ ತಮಿ. ಮಾ ; ಮಲ. ಮಾ, ಮಾವು ; ತೆಲು. ಮಾವಿ]

**ಮಾವಿ₂** (ನಾ). ೧. ಹಳದಿಮಿಶ್ರಿತವಾದ ಹಸಂರುಬಣ್ಣ : (?). ೨. ಪಾರಿವಾಳದ ಬಣ್ಣ ; ಬೂದುಬಣ್ಣ : ಮಾಲದಲ್ಲಿ ಪಾರಿವಾಳದ (ಮಾವಿ) ಬಣ್ಣನಂಥಾ ಕಾಳುಗಳು ಕೂಡಿರಬಾರದು (ಮುಂಐಶ್ಯಾ. ೫೩): ಪಾರವಳದ (ಮಾವಿ) ಬಣ್ಣ, ದಾಲಚಿನಿಯ ಎಣ್ಣೆ, ಗುಲಾಬನೀರು (ಮುಂಐಶ್ಯಾ. ೨೦೦). [ ?]

**ಮಾವಿಚೀಲ** (ನಾ). = ಮಾವಿ₁ : "ಗರ್ಭಾಶಯಃ . ಜರಾಯುಃ — ೨ ಬಸುರೊಳಗೆ ಸುತ್ತಿಕೊಂಡಿರುವ ಮಾವಿಚೀಲದ ಹೆಸರು" (ಸಿದ್ಧಾಂಶಿ. ೫೬೬). 'ಮಾಸಂಚೀಲ' ಪರಾ. [ಮಾವಿ₁ + ಚೀಲ]

ಮಾವಿನಶುಂಠಿ (ನಾ). (ಉಪ್ಪಿನಕಾಯಿಗೆ ಹಾಕಲು ಬಳಸುವ) ಒಂದು ಬಗೆಯ ಸುವಾಸನೆಯ ಬೇರು : ಮಾವಿನಶುಂಠಿ. ಕರ್ಪೂರಅರಿಸಿನ (ಶುಶಿ. ೨೬-೯೯೬). [< ಮಾವು + ಶುಂಠಿ]

**ಮಾವಿನೂರ್** (ನಾ). ಒಂದು ಊರಿನ ಹೆಸರು : ಚನ್ದ್ರತೇಜಭಟ್ಟಾರರ್ಗ್ಗೆ ಮಾವಿನೂರೊಳ್ ಬಗೆಗ[ನು] ಕೊಟ್ಟವರ್ ಸಾವಿರ(ವ್) ಬಳ್ಳಿಯ ತೋಣ್ಟದ ಸಾಮ್ಯವು (ಎಕ. XXVI, ೬೨-೦೪; 906).

[< ಮಾವು + ಊರ್]

ಮಾವು (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಚೂತ : "ಸಹಕಾರಮಾವುಂ ಚೂತಮೆನೆ ಮಾವೆನಿಕ್ಕುಂ" (ಕಬಿಗಕಾ. ೩೪-೦೦); ತುಱುಗಿದ ಪೂಗೊಂಚಲ ಕಾಲ್ದೊಱೆದ ಮಾವುಗಳ ಬೆಳೆದ ಕಾಯ್ಗಿನ ಗೊನೆ ತಳ್ತೆಱಗಿರೆ ಮಾಡದೊಳಲ್ಲಿಯ ತಿಱಿದುಕೊಳಲ್ಕಿಂಬಿನಿಸಕ ಮೆಸೆದುದುಪವನಂ (ಶಂಶಕಾ. ೩-೯೦); ದಕ್ಷಿಣದೇಶದೊಳೊಂದುದ್ಯಾನದವಿಯುರ್ವುದು ಅದಱೊಳೊಂದು ಮಾವಿರ್ಪುದು (ಶಂತಕ್ಕ. ೨೨೩-೨೦); ಈ ಮರಾಗ್ರಹ ನಿನ್ನ ಚಿತ್ರದೊಳಾದುದೇ ತಪ್ಪೇನು ಕೋಗಿಲೆಯಾದರಿಸಿದಡೆ ಬೇವು ಮಾವಹುದಾದಡದಾಗೇನು (ಶುಭ್ಯಕ. ೬-೯) ; ಮಾವು . . . ಹಿಂದೂಸ್ಥಾನದಲ್ಲಿ ವಿಶೇಷವಾಗಿ ಬೆಳೆಯುತ್ತದೆ (ಸಕ್ಕಾ. ೦೬೨).

**ಮಾವಿನಕಾಯಿ ಸರ** = ಚಿನ್ನ ಅಥವಾ ಬೆಳ್ಳಿಯಲ್ಲಿ ಮಾಡಿಸಿದ ಮಾವಿನಕಾಯಿಗಳಿರುವ ಕಂಠಾಭರಣ : ಕಂಠಭೂಷಣಗಳು – ತಾಳಿ, ಚಂದ್ರಹಾರ . . . ಜೋಳದ ಸರ, ಮಾವಿನಕಾಯಿ ಸರ, ಮಲ್ಲಿಗೆ ಮೊಗ್ಗಿನ ಮಾಲೆ, ಪದಕ ಇತ್ಯಾದಿ (ಕಶಕೋ. I, ೬೨೦). **ಮಾವಿನ ಬಟ್ಟಿ** = ಮಾವಿನ ಮರಗಳ ಮೇಲೆ ವಿಧಿಸುತ್ತಿದ್ದ ಸುಂಕ. – ತೆರಿಗೆ : ನಲ್ಲೆತ್ತು ನಲ್ಲೆಮ್ಮೆ ಮಾವಿನ ಬಟ್ಟಿ ಸುಂಕ ಕಾರುಕ . . . ಬಾವಲಿ ಬಿರಾಡ ಮುಂದೆ ಹುಟ್ಟುವ ಪೂರ್ವಾದಾಯ ಸಹವಾಗಿ ಸರ್ವಬಾಧ ಪರಿಹಾರಕ್ಕೆ ಗದ್ಯಾಣ ಗ ೧೧ ವರಹ (ಮೈಆ. ೦೯೩೯, ೨೬-೨೦; 1430).

[ದೇ.॥ ತಮಿ. ಮಾ ; ಮಲ. ಮಾ, ಮಾವು ; ಕೊಡ. ಮಾಂಗೆ ; ತೆಲು. ಮಾವಿ ; ಕಾಯ್ಕ. ಕೋಲಾ. ಮಾವ್ಚಿ]

ಮಾವುಕುದುರೆ (ನಾ). ಗಂಡುಕುದುರೆ : ಸಕುಲನು ಧರ್ಮರಾಜನುಂ ನೋಡಿ ನಾನು ದಾವಾಗ್ರಂಥಿಯೆಂಬ ಹೆಸರನ್ನು ವಹಿಸಿ . . . ಗೋಳಗೇಕುದುರೆಗಳ ಜದವನ್ನು ತಿಳಿದು ಮಾವುಕುದುರೆಗಳನ್ನು ಹತ್ತಿಸುವ ಚಾತುರ್ಯವನ್ನೂ (ಕೃಪಾ. ೩).

[ಮಾವು₂ (ಪ್ರ–ತೆಲು. ಮಾವು = ಗಂಡುಕುದುರೆ) + ಕುದುರೆ]

**ಮಾವುತ** 'ಮಾವಂತ' ನೋ.

**ಮಾವುತಿಗ** 'ಮಾವಂತಿಗ' ನೋ.

**ಮಾವುರಿ** 'ವರೌರಿ₁' ನೋ.

**ಮಾವುಲಿಗ** (ನಾ). ೧. ಬೇಡ : "ಮೃಗಯುಃ, ಲುಬ್ಧಕಃ, ವ್ಯಾಧಃ, ವಾಗುರಿಕಃ–ಈ ೪ ಮಾವುಲಿಗಂ" (ಹಲಾಯು. ೧೬-೯೯೨). ೨. ಕಟುಕ : ಚಂಡಾಲ : ಸಾಜಿ ಕೊಲ್ವ ಮಾವುಲಿ[ಶಾಂ. ೦]ಗಂಗೆ ದೋಷಮಿಲ್ಲಂ (ಲೀಲಾವ. ೯-೦೩೬ ಶ). 'ಪೆರ್ಮಾವುಲಿಗ' ಪರಾ. [? + — ಇಗ]

**ಮಾವ್ತ** 'ಮಾವಂತ' ನೋ.

**ಮಾಷ** (ನಾ). ೧. ಒಂದು ಬಗೆಯ ದ್ವಿದಳಧಾನ್ಯ ; ಉದ್ದು : "ಉರ್ದು ಮಾಷಂ" (ಪಶ್ಚಕೋ. ೯೯-೫೬); ಅಂತು ಕೊಂಡ ಪದವಟ್ಟಗಳೊಳ್ ಕಳಮಷಷ್ಟಿಕಾವ್ರೀಹಿ . . . ಕುಲತ್ಥಮುದ್ಗಮಾಷಹರಿಜಮಾಷಾಢಕೀನಿಷ್ಪಾವಚಣಕ . . . ಜೀರಕಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ (ಆದಿಪು. ೬-೬೨ ವ) ; ಇಂದ್ರಿಯವರ್ಧನಹೇತುಭೂತಮಾಷವಿದಳಪಾಯಸಪ್ರಮುಖಪೇಷ್ಯರಸಸೇವಾನಿವೃತ್ತಿಯುಂ (ತತ್ವಸೂ. ೬೮೦). ೨. ಚಿನ್ನದ ಒಂದು ನಿರ್ದಿಷ್ಟಪ್ರಮಾಣದ ತೂಕ ; ಎಂಟುಗುಂಜಿ ತೂಕ : ೮ ಗುಂಜಿ ತೂಕ = ೧ ಮಾಷ ೧.೨ ಗ್ರಾಂ, ೪ ಮಾಷ = ೧ ಶಾಣ ೪.೮ ಗ್ರಾಂ (ಸಕ್ಕ. xiii, ಪ್ರಸ್ತಾವನೆ). [ಸಂ.]

**ಮಾಷಕ** (ನಾ). ೧. = ಮಾಷ ೧ : "ಮಾಷಕಃ–ಉದ್ದು" (ಓಶಿ. ೦೨೪). ೨. = ಮಾಷ ೨ : "ಕಾರ್ಷಾಪಣಃ, ಕಾರ್ಷಿಕಃ — ೨ ಎರಡು ಗುಲಗಂಜೀ ತೂಕದ ಬೆಳ್ಳಿ, ೧ ಮಾಷಕ — ೧೬ ಮಾಷಕಗಳಾದರೆ—೧ ಕರ್ಷವಾಗುತ್ತೆ" (ಸಿದ್ಧಾಂಶಿ.೩೦೦). [ಸಂ.]

**ಮಾಷಪತ್ರಿ** (ನಾ). ಒಂದು ಬಗೆಯ ಸಸ್ಯ : "ಪಾಂಡುಃ – ಕಹಿಪಡಲ, ಮಾಷಪತ್ರಿ" (ಓಶಿ. ೯೪). [ < ಸಂ. ಮಾಷಪತ್ರಿಕಾ ]

**ಮಾಷಪರ್ಣಿ** (ನಾ). ಒಂದು ಬಗೆಯ ಉದ್ದು ; ಕಾಡುದ್ದು : "ಹಯಪುಚ್ಛೀ, ಕಾಂಭೋಜೀ, ಮಾಷಪರ್ಣೀ, ಮಹಾಸಹಾ — ಈ ೪ ಕಾಡುದ್ದು" (ನಾಕಾ. ೦೦೦). [ ಸಂ. ಮಾಷಪರ್ಣೀ ]

**ಮಾಷಮುಖ** (ನಾ). ಉದ್ದಿನ ಕಾಳಿನಂತೆ ಮೂತಿಯುಳ್ಳದು; ನೊಣ : ಭಾಷಾವಿದರ್ ಕವಿತ್ವವಿಶೇಷಪ್ಪರ್ ನಿಕಷರಪ್ಪೊಡಪ್ಪುದು ಸಭೆಯೊಳ್ ಮಾಷಮುಖದಂತೆ ದೋಷಗವೇಷಣಪರರಪ್ಪರೆಂದೊಡದು ತಗಬಲ್ಲೇ (ಆದಿಪು. ೦-೨೦); ಭೇಷಜದಂತಿರೆ ಸುಜನಂ ದೋಷಮುನಪಹರಿಸಿ ಗುಣಮುನದಱೊಳೆ ತೋರ್ಕುಂ ಮಾಷಮುಖದಂತೆ ಕೆಲಬರ್ ದೋಷಗ್ರಾಹಿಗಳಡುರ್ತು ಕಸವನೆ ಪಿಡಿವರ್ (ಶಬ್ದಮ. ೦-೦೬); ಸತ್ತ್ವಂ ಪಿತುಸಂ ಪೆಱರ್ಗುಪಕೃತಿಂ ಮಾಡದಿರನೆಂದು ಮಱುಗಿದಪುದು ಮಚ್ಚಿತ್ತಂ ಮೃತಮಾಷಮುಖಂ ಮತ್ತೆನಿಸದೆ ಬವನಮೆಯ್ದು ಪಪೊಲಂಪಿಡಮ (ಅಗಂಕ. ೦-೩೩). [ಸಂ.]

**ಮಾಷಾಪೂಪ** (ನಾ). ಒಂದು ಬಗೆಯ ಕರಿದ ತಿಂಡಿ; ಉದ್ದಿನ ವಡೆ. [ಸಂ.]

**ಮಾಷೀಣ** (ನಾ). ಉದ್ದನ್ನು ಬಿತ್ತಿರುವ ಪ್ರದೇಶ; ಉದ್ದು ಬೆಳೆಯುವ ಹೊಲ : "ಮಾಷ್ಯಂ, ಮಾಷೀಣಂ - ಈ ಎರಡು ಉದ್ದಿನ ಕೆಯ್" (ಹಲಾಯು. ೨೬-೯); ಆ ನಾಡೂರೂರ್ದಪ್ಪುದದೇನೆಸವುದೊ! ಕೌದ್ರವೀಣ ಶ್ಯಾಮಾನದ ತೈಲೀನದ ಮಾಷೀಣದ ಮೌದ್ಗೀನದ ಬಹುಸಾರಸಸ್ಯಸಕಳ ಫಳಂಗಳ್ (ಧರ್ಮಾಮೃ. ೨-೬೨). [ಸಂ.]

**ಮಾಷ್ಯ** (ನಾ). = ಮಾಷೀಣ : "ಮಾಷ್ಯಂ, ಮಾಷೀಣಂ — ಈ ಎರಡು ಉದ್ದಿನ ಕೆಯ್‌" (ಶಬ್ದಮ. ೨೭-೬) ; ಲೀಲೆಯಿನವಜಿ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಮಮೌದ್ಗಂ ಮಾಷ್ಯಂ ಶಾಲೇಯಂ ವ್ರೈಹೇಯಂ ತೈಲೀನಂ ಕೌದ್ರವೀಣಮೌಮ್ಯಂ ಯುವ್ಯಂ (ಚಂದ್ರಪ್ರ. ೦-೯೦). [ಸಂ.]

**ಮಾಸ**[1] (ನಾ). ಉದ್ದು; ಮಾಷ : ಮಾಸಗೋಧೂಮಪ್ರಮುಖ ಶಾಲ್ಯಾಶನವ ಸದ್ಯೋಘೃತಾಮೃತ ಬಾಸಣಿಪ ದಧಿಶರ್ಕರಾನ್ವಿತ ಬಹು ಪದಾರ್ಥಗಳ . . . ಶಂಕರಗರ್ಪಿತವ ಮಾಡಿದ ಮಹಾಮಹಿಮ (ಶಂಕರಾ. ೩-೩೩). [< ಸಂ. ಮಾಷ]

**ಮಾಸ**[2] (ನಾ). ೧. ಮೂವತ್ತುದಿವಸಗಳ ಅವಧಿ ; ತಿಂಗಳು : "ಮೂವತ್ತುದಿವಸಮಂ ಮಾಸಮೆಂಬುದು" (ಶಬ್ದಮ. ೯೯-೧೦೩) ; ಹೋರಾಧಿಪನಿರ್ದಸ್ತಾಗಾರದೊಳಭಿಭೂತಮಾಗೆ ಮೇಣಲ್ಲದೊಡಾ ಹೋರೇಶ ನಿರ್ದು ನಿಧನಾಗಾರದೊಳಭಿಭೂತಮಾಗೆ ಮಾಸದೆ ಮರಣಂ (ಜಾತಕ. ೬-೦೦); ಮಾಸಂ ಪಕ್ಷದ್ವಿತಯಂ ಮಾಸದ್ವಯಮೊಂದೆ ಋತು (ಶಂರಾಪು. ೦-೩೨) ; ದಿವಸಂ ಮೂವತ್ತೊದವಿರಲವು ಮಾಸಂ (ವೃಪಚಾ. ೬-೩೭). ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ.

**ಮಾಸಗಟ್ಲೆ** =೧. ಒಂದು ಪದ್ಧತಿಯನ್ನು ತಿಂಗಳಿಗೊಂದು ಬಾರಿ ಅನುಸರಿಸುವುದು : (*). ೨. ತಿಂಗಳುಗಟ್ಟಲೆ; ಹಲವು ತಿಂಗಳುಗಳ ವರೆಗೆ : ಅವರು ವ್ಯವಹಾರದ ಕಾರಣದಿಂದ ಮಾಸಗಟ್ಲೆ ಪರದೇಶಗಳಲ್ಲಿ ಪ್ರವಾಸ ಮಾಡುತ್ತಿರುತ್ತಾರೆ (ಊಹ). [ಸಂ.]

**ಮಾಸಂಕ** 'ಮಾಸಾಂಕ' ನೋ.

**ಮಾಸಂಕೆ** (ನಾ). ಅತಿಯಾದ ಹೆದರಿಕೆ,—ಭಯ : 'ಮಾಸಂಕೆಗೊಡು' ಪರಾ. [ಮಾ[4] + ಸಂಕೆ[1]]

**ಮಾಸಂಕೆಗೊಡು** (ಕ್ರಿ). ಅತಿಯಾದ ಹೆದರಿಕೆಯನ್ನು ಉಂಟು ಮಾಡು : ದಾರಿದ್ರ್ಯಂ ಕವಿದಂದು ಕಾಯ್ದು ಪಗೆಗಳ್ ಮಾಸಂಕೆಗೊಟ್ಟಂದು ದುರ್ವಾರವ್ಯಾಧಿಗಳೊತ್ತಿದಂದು ಮನದೊಳ್ ನಿರ್ವೇಗಮಪ್ಪಂ (ಕಣ್ಣ.ಕ. ೨೩). [ಮಾಸಂಕೆ + ಕೊಡು[1]]

**ಮಾಸಟೆ** (ನಾ). ಅತಿಯಾದ ಸುಳ್ಳು,—ಹುಸಿ : 'ಮಾಸಟೆವೆಣ್' ಪರಾ. [ಮಾ[4] + ಸಟೆ[1]]

**ಮಾಸಟೆವೆಣ್** (ನಾ). ಹುಸಿ ನುಡಿಯುವವಳು : ಸುಳ್ಳುಗಾತಿ : ತಮ್ಮಬ್ಬೆ ಸತ್ತೊಡಮಾ ಮಾಸಟೆ[ಶಾಕಾಂ. ನಂಜನ]ವೆಣ್ಣ ಕಣ್ಗೆ ಪುಸಿ ಕಣ್ಣೀರಲ್ಲದೇಂ ಬರ್ಕುಮೇ (ಕಾವ್ಯಸಾ. ೦೦೦೦ ; ರೀಶಾಪ. ೨-೦೦೨ ನೋ). [ಮಾಸಟೆ + ಪೆಣ್]

**ಮಾಸತಿ, ಮಾಸ್ತಿ** (ನಾ). ೧. ಮಹಾಪತಿವ್ರತೆ,–ಸಾಧ್ವಿ : "ಮಾಸತಿ (ಮಾಸ್ತಿ) — ಮಹಾಸತೀ" (ತತ್ಸಕೋ. ೪೩) ; ಪೊಗಟಲ್ಕೆ[ಜಾಯಿನಾ] ಮಾಸತಿಯ ರೂಪಂ (ಗದಾಯು. ೯-೩೭) ; ಮುಂಡುಪಿಡೆ ಬಂದೆನು ಅರ್ತಿಯ್ಯು ಕೂಡಿ ನಿನಗೀ ಕೃತಿಯಂ ಮಾಸತಿನುತಿಯಂ (ಅತಕ್ಕೆ. iii) ; ಪತಿಯು ಜೀವಂತನಿರುವಾಗಲೇ ಸೌಭಾಗ್ಯದಿಂದ ಅಮರಧಾಮವನ್ನು ಸೇರಬೇಕೆಂದು ಆ ಮಾಸತಿಯ ಹೆಬ್ಬಯಕೆಯಿತ್ತು (ಕುಶಸಂ. ೦೩೩). ೨. (ಹಿಂದಿನ ಕಾಲದಲ್ಲಿ ಯುದ್ಧ ಮುಂತಾದ ಸಂದರ್ಭಗಳಲ್ಲಿ) ಸತ್ತ ಗಂಡನೊಡನೆ ಚಿತೆಯನ್ನೇರುತ್ತಿದ್ದ ಪತಿವ್ರತೆಯಾದ ಹೆಂಗಸು,—ಮಹಾಸತಿ : ಮಲೆಯೂರ ವೀರಪದೇವರು ಊರ ತುಱುವಂ ಸೂರೆಕೊಳ್ಳಾಗ ಪಲರನಿದಿರ್ಚ್ಚಿ ಕೊಂದು ಸುರಲೋಕಕೆ ಸಂದೊಡೆ ಆತನ ಸತಿ ಮಾಸತಿಯಾದಳು (ಎಪಿ.ಕಾ. ೦೯೨೯, ೯೨-೩ ; 1179 ?) ; ಆಸೆಯಂನುಳಿದಸುವಿನ ಮೇಲೆ ತಮ್ಮ ಜೀವೇಶರೊಡನೆ ಹರಣವನು ಮಾಸದಗ್ನಿಗೆ ಮನವೊಲಿದೀಡಾಡುವ ಮಾಸತಿಯರು ಕಣ್ಗೆಸೆವರು (ಶಂಕರಸಾಂ. ೨೭-೦೨೯). **ಮಾಸ್ತಿ** : ೧. ಶರಣೆಂದೆಱಗೆ ಮಾಸ್ತಿ ಮುತ್ತೈಯ್ದೆಯಾಗೇಳೆನಲ್ಕವಳ ಗಂಡನ ಪ್ರಾಣಮೈದದೇ (ಚಂಪ್ರ. ೩೭-೮೨). ೨. ಧೀರೆಯಾದ ಮಾಸ್ತಿಗೆ ವೀರತ್ವವಲ್ಲದೆ ಧಾರಿಣಿಯು ಜನರೆಲ್ಲರೂ ಓಡಿ ಮಾಸ್ತಿ ಎಂದೆ ಬಳಿಕ ವೀರತ್ವವೆಲ್ಲಿಯದೋ (ಸರ್ವಪ. ೮೩-೯೭೯) ; ಮಾಸ್ತಿಯನ್ನು ಕುರಿತು ದಂತಕತೆ, ಸ್ಥಳಪುರಾಣ, ಮಹಾತ್ಮೆ—ಹೀಗೆ ಅರೇಬಿಯನ್ ನ್ಯಾಟ್ಸನ್ನು ಅರವತ್ತು ಪಾಲಿಗೆ ಮಿಗಿಸುವ ಸಾಹಿತ್ಯ ಉಂಟಾಗಿದೆ (ಸರಕ. ೬). ೩. = ಮಾಸತಿಕಲ್ಲು : ಆತನ ಹೆಂಡತಿ ಚಳಕಿಯ ನಾಗೌಂಡಿಗೆ × × × ತಾಗಾಯಿಂಚ್ಚಿ ಹೋದಳು ಆ ಚಂನಪ್ಪನ ಬೀರಗಲು ಮಾಸ್ತಿಯ ಪ್ರತಿಷ್ಟೆ ಮಾಡಿಸಿದ ಮಂಗಳ × × × (ಸೌಇಇ. XX, ೩೩೬-೭ ; ಸು. 13ನೆಯ ಶತ) ; ಗಂಡಸಾದರೆ–ತನ್ನ ಸತಿ ವಿಧೇಯಳಾಗಲೆಂದು, ಹೆಂಗಸಾದರೆ–ತಮ್ಮ ಪತಿ ಒಲಿಯಲೆಂದೂ ಬೇಡಿ, ಮಾಸ್ತಿಗೆ ಕುಂಕುಮವಿರಿಸಿ . . . ಹೋಗುತ್ತಾರೆ (ಸರಕ. ೬). [ಮಾ[4] + ಸತಿ[1]./ಸಂ. ಮಹಾಸತೀ]

**ಮಾಸತಿಕಲ್ಲು, ಮಾಸ್ತಿಕಲ್, ಮಾಸ್ತಿಕಲ್ಲು, ಮಾಸ್ತಿಗಲ್ಲು** (ನಾ). ಗಂಡನು ಸತ್ತಾಗ ಅವನ ಜೊತೆಯಲ್ಲಿಯೇ ಚಿತೆಯನ್ನೇರಿ ಮಹಾಸತಿ ಎಂಬ ಹೆಸರನ್ನು ಪಡೆದ ಪತಿವ್ರತೆಯ ಸ್ಮಾರಕವಾಗಿ ನಿಲ್ಲಿಸುವ ಕಲ್ಲು ; ☞ ಸಾಮಾನ್ಯವಾಗಿ ಮಾಸ್ತಿಕಲ್ಲುಗಳ ಮೇಲೆ ಎತ್ತಿದ ತೋಳಿನ ಸ್ತ್ರೀಯ ಚಿತ್ರವಿರುತ್ತದೆ. ಸ್ತ್ರೀಯ ತಲೆಯ ಹಿಂದೆ ಬೆಂಕಿಯ ಜ್ವಾಲೆಗಳನ್ನು ಕೊರೆದಿರುವುದುಂಟು. ಕೆಲವು ಕಡೆ ಮಹಾಸತಿಯ ಕೈಯಲ್ಲಿ ಒಂದು ಹಣ್ಣಿನ ಚಿತ್ರವಿರುತ್ತದೆ : ಈ ಗುಂಪಾದರೂ ಸಣ್ಣ ಗುಂಪಲ್ಲವೆಂಬುದನ್ನು ನಾಡಿನ ಮೂಲೆಮೂಲೆಗಳಲ್ಲಿ ಮಾಸತಿಕಲ್ಲುಗಳು ಕೂಗಿ ಹೇಳುತ್ತಿವೆಯಾದರೂ ಸಹಗಮನ ಮಾಡಿದ ಸತಿಯರ ಸಾಲಿನಲ್ಲಿ ಮಹಾಭಾರತದ ಮಾದ್ರಿಯ ಹೆಸರು ಲೋಕೋತ್ತರವಾದುದು (ಅಮಲಾ. ೯) ; ಹರಿವ ಹಳ್ಳದ ದಂಡೆಗಿರುವ ಮಾಸತಿಕಲ್ಲು . . . ಎಣ್ಣೆಯುಣ್ಣುತ ಪೂಜೆಗೊಳ್ಳುವುದ ಕಂಡಿದ್ದೆ (ಅಪಜೀ. ೭-೦೩೭). **ಮಾಸ್ತಿಕಲ್** : ದೇವಾಲಯದ ಹೊರಗಡೆ ಪೂರ್ವದಲ್ಲಿ ವಸಂತಮಂಟಪ, ಮಾಸ್ತಿಕಲ್, ೧೮ ಅಡಿ ಎತ್ತರದ ಚೆನ್ನಾಗಿ ಅಲಂಕರಿಸಿರುವ ದ್ವಾರ ಇವೆ (ಹೊಯ್ಸವಾ. ೮೨). **ಮಾಸ್ತಿಕಲ್ಲು** : ಭಟಂಣನ ಮಗ ಹರಿಗೆ ಸಿದ್ದಣನೂ ತಮ್ಮ ತಂಗಿ ತಿಂಮಮಗೆ ಮಾಸ್ತಿಕಲ್ಲ ಕಡಿಸಿ ನಿಲಿಸಿದೂ (ಎಪಿ.ಕಾ. ೦೯೩೦, ೭೬-೨ ; ಸು. 1434) ; ಮಾಸ್ತಿಕಲ್ಲು ಎಂದರೆ ಮಹಾಸತಿಕಲ್ಲು. ಒಬ್ಬ ಪತಿವ್ರತೆಯಾದ ಹೆಂಗಸು ತನ್ನ ಗಂಡನು ಸತ್ತು ಹೋದರೆ . . . ಸಹಗಮನ ಮಾಡಿದ ಸಂಗತಿಯನ್ನು ಸೂಚಿಸುವಂತೆ ಆ ಸ್ಥಳದಲ್ಲಿ ನೆಟ್ಟ ಕಲ್ಲಿಗೆ ಮಾಸ್ತಿಕಲ್ಲು ಎಂದು ಹೆಸರು (ಮೈವಾಸ್ತು. ೩೭). **ಮಾಸ್ತಿಗಲ್ಲು** : ಇದನ್ನು 'ಪ್ರಶಸ್ತಿಶಾಸನ' ವೆಂದು ಕರೆಯಬಹುದಾದರೆ ಅನೇಕ ನಿಸಿದಿಕಲ್ಲುಗಳನ್ನೂ, ವೀರಗಲ್ಲು ಮಾಸ್ತಿಗಲ್ಲುಗಳನ್ನೂ ಅದೇ ಹೆಸರಿನಿಂದ ಕರೆಯಬೇಕಾಗುತ್ತದೆ (ಕಶಾಪ. ೨೯). [ಮಾಸತಿ + ಕಲ್ಲು (< ಕಲ್[3])]

**ಮಾಸಪತ್ರಿಕೆ** (ನಾ). ತಿಂಗಳಿಗೊಮ್ಮೆ ಪ್ರಕಟವಾಗುವ ಪತ್ರಿಕೆ : ನನ್ನ ಕೈಗೆ ಲಂಡನ್ನಿನ "ಸ್ಟ್ರಾಂಡ್" (strand) ಎಂಬ ಇಂಗ್ಲಿಷ್‌ಸಾಹಿತ್ಯ ಮಾಸಪತ್ರಿಕೆಯ . . . ಒಂದು ಸಂಚಿಕೆ ಸಿಕ್ಕಿತು (ಪೀಠಜೋ. IX, ಬಸ್ಸ). [ಸಂ. ಮಾಸಪತ್ರಿಕಾ]

**ಮಾಸಪ್ರಸೂತೆ** (ನಾ). ಹೆರಿಗೆಯಾಗಿ ಒಂದು ತಿಂಗಳು ಕಳೆದಿರುವವಳು ; ತಿಂಗಳ ಬಾಣಂತಿ : ಮಾಸಪ್ರಸೂತೆ ಷಣ್ಮಾಸದ ಗರ್ಭಿಣಿ ತಾಂ ಕ್ಷುಧಾಸತಿ ಮಯಿಗಳಿಂಗೆಚ್ಚಿತ್ತಿವಳ್ ಮಾಸರ ನೃತ್ಯವಿಳಾಸಿನಿಗಂ ಕಾಮಸುಖಂ ಕೂಟಮುಂ ತತ್ಕಾಲಮೆ (ಮದತಿ. ೦೦-೦೦). [ಸಂ. ಮಾಸಪ್ರಸೂತಾ]

**ಮಾಸರ** (ನಾ). ೧. ಅಂದ ; ಚೆಲುವು ; ಸೌಂದರ್ಯ : ಕತ್ತುರಿಪೀಲಿಯ ನಾಂತ ಚೊಲ್ಲೆಯಂ ಮಿಸುಗುವ ದೋರೆವಲ್ ಕರಮೆ ಮಾಸರವಾದುದು ದೇಸೆಕಾರ್ತಿಯೊಳ್ (ಚಂದ್ರಪ್ರ. ೬-೩೦) ; ಮೆಯ್ವಾಸದ ಮಾಸರಮುಂ ಪಿಡಿವ ಪಾಂಗಂ ಚಿತ್ರವಚನಚಮತ್ಕಾರಮುಂ . . . ಭದ್ರಚೆಂಡಂ ಕಂದರ್ಪದೇವಂಗೆ ತೋಱುತ್ತುಮಿರೆ (ಕಾಸುಮಪು. ೭-೬೩ ವ); ನಿಜಾರುಣಾಂಶು ಪಾಸಿದ ದುಗುಲಕ್ಕೆ

ಬಾಸರದ ಮಾಸರಮಂ ಕಂಡೆ (ಅಪಂಪು. ೯-೯೯). ೨. ಅಂದವಾದುದು ; ಸುಂದರವಾದುದು : ಮಾಸರಮೆನೆ ಪಾರದದಿಂ ಪೂಸಿದವೊಲ್ ಪೊನ್ನ ಮುಕುರಮಂ ಹಿಮರಿಪ್ರಂ ನೇಸಱ ಬಿಂಬಂ ತಿಂಗಳ ಕೂಸಿನವೊಲ್ ಕೋಡು ತಿರ್ದಿದಂದಿನ ದಿಸದೊಳ್ (ಲೀಲಾವ. ೯-೬). [ ದೇ.॥ ತೆಲು. ಮಾಸರ ]

**ಮಾಸರಂ** (ಅ). ಚೆನ್ನಾಗಿ ; ಸುಂದರವಾಗಿ : ಇದರ್ಕಂ ಮಾಸರಮುಡಲೆಂದ ಧಿಕವಿಳಾಸದಿನಂಡಲಿಕ್ಕೆ ನೆಱೆಯೆ ಬಿಯವಂ ಮೆಱೆದಂ (ಶಂಕಾ. ೩-೯೯) ; ಹಸ್ತಿಮಸ್ತಕೋಲ್ಲಾಸಮಸಂಗರಾಗರಸಪೂರಸುನಿರ್ಝರಸೇತುಬಂಧನಂ ಮಾಸರ ಮೊಪ್ಪೆ ತೋಱುವುದು ಸಿಂಹಕಟೀತಟಮಾ ನೃಸಿಂಹನಾ (ಶರಶಾ. ೩-೦೩) ; ಮಾಸರಮೊಕ್ಕ ಕಸ್ತೂರಿಯು ಪಂಕಮನಲ್ಲದೆ ಪಂಕಮಂ . . . ನಿಶಾವಾಸದೊಳೆಂತುಟೆಂದಱಿಯಂ (ಸುಕುಮಾ. ೦೦-೦೦೭) ; ಮಾಸರಮಾಡುವ ಬೆಳೆ ಸಿರಿಯೋಸರಿಸದೆ ತಣಿಯೆ ಕಣೆಯಲೆಂದಳವಡಲಬ್ಜಾಸನನಡಸಿದ ಪಚ್ಚೆಯು ಪಾಸಱೆಯೆನೆ ಪಸಲೆಗವಿದ ಕಳಮಕ್ಷೇತ್ರಂ (ಧರ್ಮಾ. ೩-೩೯).
[ < ಮಾಸರ ]

**ಮಾಸರಕಟ್ಟಿ** (ನಾ). ಒಬ್ಬಾಕೆಯ ಹೆಸರು (?) : ಅವಱ್ಗೆ ಮಾಸರ ಕಟ್ಟಿಯರು ಅತ್ತಾಣೆಯುಂ ಒಸೆದು ಅಯ್ಗುಳ ಕೆಯ್ಯುಂ ಒಕ್ಕಲುಳೊಕ್ಕುಳ ಮುಮಾಗೆ ಕೊಟ್ಟಾರ್ (ಎಕ. X, ಕುಗರಾ. ೯೨-೬ ; ಸು. 780 ?).
[ ಮಾಸರ + ಕಟ್ಟಿ₁ ]

**ಮಾಸರಿಕೆ**, ಮಾಸರಿಕ್ಕೆ (ನಾ). ಚೆಲುವು ; ಮನೋಹರತೆ : ತೇಜಕ್ಕೋಪಾದ ಕಾಂತಿಗಂ ಬೆಡಂಗಿಂಗೆ ಪಾಂಗಾದ ದೇಸಿಗಂ ಮಾಸರಿಕೆಗೆಕ್ಕಲಾವಣವಾದ ಸೌಷ್ಠವಕ್ಕಂ . . . ಬೆಸ್ಕಸಂಬಿಟ್ಟು (ಶಾಂತಿಪು. ೩-೩೩ ವ). **ಮಾಸರಿಕ್ಕೆ** : ಬರಗಲೆಯುಂ ಕೊಪ್ಪುಂ ನೂಪುರಮುಂ ಲಂಬಳಮುಮಲ್ಲಿ ಮಲ್ಲಿಗೆಯ ಮುಗುಳ್ ಬಿರಿಮುಗುಳೆಂಬಿವು ತನಗಾಗಿರೆ ದೇಸೆಯು ಮಾಸರಿಕ್ಕೆಯುಂ ಪೊಸ ಬಿಸಿದಳ್ (ಶಾಂತಿಪು. ೬-೨೨). [ಮಾಸರ + — ಇಕೆ]

**ಮಾಸರಿಕ್ಕೆ** 'ಮಾಸರಿಕೆ' ನೋ.

**ಮಾಸರೋಹಿಣಿ** (ನಾ). ಒಂದು ಬಗೆಯ ಔಷಧೀಸಸ್ಯ : "ಮುನಿ– ಗೋರಕ್ಷದುಗ್ಧಿ. ಕಂಬಳ. . . ಅಗಸೆ. ಹಾಲವಕ್ಕಿ. ಕ್ಷುದ್ರದವನ. ಮಾಸ ರೋಹಿಣಿ" (೭ಶಂ. ೦೨೩). [ < ಸಂ. ಮಾಂಸರೋಹಿಣೀ ]

**ಮಾಸಲಾಣಿ** (ನಾ). (ಉಕ) ಮದುವೆ ಮುಂತಾದ ಶುಭಕಾರ್ಯಗಳಾದ ಒಂದು ತಿಂಗಳಿಗೆ ನಡೆಸುವ ಒಂದು ಸಮಾರಂಭ ; ತಿಂಗಳ ಕಂಬೋಲಿ : ಮದುವೆಯಾಗಿ ಒಂದು ತಿಂಗಳಾಯಿತು ; ಮಾಸಲಾಣಿಯ ಹಬ್ಬ ಜರುಗಿತು (ಕಶಕ. ೨೬) ; ಮಾಸಲಾಣಿಯ ದಿವಸ ಹಲವಾರು ಹೊರಗಿನ ಜನ ಊಟಕ್ಕೆ ಬಂದಿದ್ದರು (ಕಶಕ. ೨೭). 'ಕಂಭವಲಿ' ಪರಾ.
[←ಮರಾ. ಮಾಸನಹಾಣ, ಮಾಸಹ್ನಾಣ./ಸಂ. ಮಾಸಸ್ನಾನ]

**ಮಾಸಲು** (ನಾ). ೧. ಕಾಂತಿಯಿಲ್ಲದಿರುವುದು ; ಮಂಕಾದುದು : ರಿಪುವಧೂವದನಂ ಮಿಗೆ ಮಾಸಲಾದುದು (ಕಶಂ. ೯-೦೩) ; ಮನಸ್ಸಿನ ಆ ಏಕಾಂತವಲ್ಲಾದರೂ, ವೈಯಕ್ತಿಕವಾದ ಕಾಪತ್ರಯದ ಅಂಚೆ — ತಂತಿಗಳು, ಅವನ ಸ್ವೇಚ್ಛಾವಿಹಾರವನ್ನು ತಡೆದುಹಿಡಿಯುತ್ತಿವೆ ; ಪ್ರತಿಭೆಯ ಹೊಳಪನ್ನು ಮಾಸಲುಗೊಳಿಸುತ್ತಿವೆ (ಗಾಕೋಶ. ೩೩೦). ೨. ಮಲಿನವಾದುದು; ಕೊಳೆಯಾದುದು: ಮಾಸಲಂ ತೊಳೆಯೆ ಪಡಿಯಾದ ದುಪ್ಪಟದಂತೆ . . . ಸಚ್ಚರಿತಮಂ ತಳೆದು ಮಯನೊಪ್ಪಿರ್ದನು (ಸಪ್ಯಗಾ. ೦೦-೨೦). ೩. (ಆಲಂ) ಅಸ್ಪಷ್ಟವಾದುದು ; ಸ್ಫುಟ ವಲ್ಲದುದು : ಚಿಕ್ಕಂದಿನಲ್ಲಿ ಅವನನ್ನು ನೋಡಿದ ನೆನಪು ನನ್ನ ಮನಸ್ಸಿನಲ್ಲಿ ಮಾಸಲಾಗಿ ಉಳಿದಿದೆ (ಕೂಶ).

**ಮಾಸಲು ಮಾಸಲು** (ದ್ವಿರುಕ್ತಿ) : ನನ್ನ ನೆನಪಿನಲ್ಲಿರೋದು ಅದೂ ಮಾಸಲು ಮಾಸಲಾಗಿರೋದು–ಹತ್ತು ವರ್ಷಗಳ ಹಿಂದಿನ ಅವನ ಮುಖ (ಶೀರಯೋ. ೮೩). [ಮಾಸು₁ + — ಅಲು (< — ಅಲ್₂)]

**ಮಾಸಲುಕೆಂಪು** 'ಮಾಸಲುಗೆಂಪು' ನೋ.

**ಮಾಸಲುಗೆಂಪು**, ಮಾಸಲುಕೆಂಪು (ನಾ). ತಿಳಿಗೆಂಪು ; ನಸುಗೆಂಪು : ಇದು ಮಾಸಲುಗೆಂಪು ಬಣ್ಣವನ್ನು ಹೊಂದಿದ್ದು, ಕಬ್ಬಿಣಮಿಶ್ರಿತಲವಣ ಗಳಿಂದಾಗಿದೆ (ಕಶಕೋ. I, ೬೯೯). **ಮಾಸಲುಕೆಂಪು** : ಜೈವಿನಿಮಹರ್ಷಿ: ತೇಜಸ್ವಿ . . . ಬಣ್ಣ ಮಾಸಲು_ಕೆಂಪು (ಶಶಿಶಾ. I, ೩೩೯).
[ಮಾಸಲು + ಕೆಂಪು₁]

**ಮಾಸಲೆ** (ನಾ). ರೀತಿ ; ಮಾದರಿ ; ನಮೂನೆ : ಮೂಲು ಅದೇ ಜಾತಿ ಯದು, ಅದೇ ಮಾಸಲೇದು, ಅಥವಾ ದರದ್ದು ಅಂತ ದಾಖಲೆಯನ್ನು ಕೊಟ್ಟು ಬರಿಯದೆ; ಪ್ರತಿ ಒಂದು ಪತ್ರದಲ್ಲಿ ವಿಸ್ತಾರವಾಗಿ ವರ್ಣಿಸಬೇಕೆಂಬ ಬಗ್ಗೆ ಸೂಚನೆ (ಹುಂಬಿಶಾ. ೨೭ ಕೃಶ್ರಾಶಕ); ಕಂಡವರ ಸಂಗಡ ಕಾದಾಡೋ ಈ ಪುಂಡಹುಡಿಗಿ ಮಾಸಲೆ ಎಲ್ಲೂ ಇರಲಿಕ್ಕಿಲ್ಲ (ಬಾಂಡಾಡು. ೨೩).
[← ಅರ. ಮಸಲ್ ; ಮರಾ. ಮಾಷಲಾ]

**ಮಾಸವಳ**, ಮಾಸವಾಳ, ಮಾಸಾಳ್, ಮಾಸಾಳಿ, ಮಾಸಾಳು (ನಾ). ೧. ದೊಡ್ಡ ಈಟಿ.–ಭರ್ಜಿ : ಮಚ್ಚರದಂಕಂ ಕಳದಲ್ಲಿ ನೋಡು ಬಯ ಲೊಳ್ಪೇಡೆಂದು ಕೈಯಾಣೆಯಿಟ್ಟರಸಂಕಂ ಪಱಿಗಟ್ಟಿ ಮಾಸವಳದಂಕಂ ದಾಸೆಯಂ ಸಾಱಿ ಬಿತ್ತರದಿಂದಿರ್ದುದು ಮೊತ್ತದಿಂದೆ ಭೃಗುವಿದ್ಯಾಮೂರ್ತಿ ಮಾರ್ತಣ್ಡವೊಲ್ (ಅಪಂಪು. ೨-೨೯); ಬಿರಿದಾಳಿ[ಯಂ] ಮನಂಗೊಳೆ ನಡೆತಂದು ಮಾಸವಳದಂಕಮುದಾಸುರಮಾಗಿ ಭಾಷೆಯಂ ಗಟಹುತು ವಿರ್ದುದು ನರಪನೋಲಗದಲ್ಲಿ ವಿಭೂಷಣಾಂಚಿತಂ (ಶಾರಪು. ೦೬–೦೯). ೨. ಸಾಹಸಿ ; ವೀರ ; ಶೂರ : ವಿಳಾಸದಿಂದವಿರ್ದಾ ಶಿವಕ್ರಿಯನೆಗಟ್ಟ ಕಾವನ ಮಾಸವಳಂಬೊಲೊಪ್ಪಿದರ್ (ರಹೂಸ್ಕು. ೯-೦೯೯) ; ನವಯುವ್ವನ ಲಕ್ಷ್ಮಿಯನಿಂತವಯವದೊಳ್ತಾಳ್ದು ರತ್ನಶೇಖರನಾಗಳ್ ನವಿರೇಱಿದ ತನುಮಂಕದ ಬವರಮನೊಳಕೊಳ್ಳ ಮಾಸವಳನಂ ಪೋಲ್ತಂ (ಕೃಷ್ಣಾಸ್ತ್ರ. ೦-೬೭). **ಮಾಸವಾಳ** : ೨. ಮಾಸವಾಳರುಂ ಲೆಂಕವಾಳರುಂ . . . ಪಂಚಮ ಜಾತಿಯುಂ ಕಥಂಚಿದ್ವಾನಂಗೊಡಲು ಯೋಗ್ಯರಕ್ಕುಂ (ಶಾಕ. ೩೨೦). **ಮಾಸಾಳ್** : ೨. ಮಾಸಾಳ್ಗಳಂತೆ ಬೀಡೆನುತ್ತುಂ ಹರಿಕಾಱರಂತೆ ಕಾಪೆಪುತ್ತುಂ (ರಹೂಸ್ಕು. ೨-೬೦). ೩. ಸೈನಿಕ ; ಯೋಧ : ಮಹಿತೆಯರು . . . ನಿಂದರು ಮನಸಿಜನ ಮಾಸಾಳ್ಗಳಂದದಿ (ಶಾಗಶ. ೯-೩೩); ಬಿರುನುಡಿಗೇಳಿ ಸುರವಾಯಕರು ಸಿಡಿಲಿನ ಪಾಳಯದ ಮಾಸಾಳ್ಗಳಂದದೊಳೆಳಿಕೊಗ್ಗಿನಲಿ (ಅಂಬಶಾ. ೨೬–೩). **ಮಾಸಾಳಿ** : ೨. ಉಱೆ ಪಿಡಿಸುವುರಕೋಳಿಯುಂ ಕಡುಸು ಮಾಸಾಳಿಯುಂ ಕುಡಿಸು ನೆತ್ತರನೊಡಲ್ಗೆ (ಶಿಶು. ೯೭–೨೨). **ಮಾಸಾಳು** : ೨. ಚತುರಬಲವಿಖ್ಯಾತ ಮಾಸಾಳುಗಳು . . . ಪೃಥುವಿ ಗಪ್ರತಿಯೆನಿಪ ಬಿರುದಿನುನ್ನತಭಟರು ಚತುರಬಲವಿರಲು (೦೩ಶಿ. ೩೦-೩೭). ೩. ಚಿತ್ರಜನ ಮಾಸಾಳಿಗೊ ಮನ್ಮಥನ ಕಿತ್ರಲಗೊ . . . ಮಾಸುತನ ದಳ ವೆನಲಿತ್ತಱದ ಗಣಿಕಾನಿಕರ ಮೆಱೆವುದು ವಿಳಾಸದಲಿ (ಶಿಕೋಶ. ೦೭–೩೩); ಹೊಳೆವುತಿದ್ದರು ಮನಸಿಜನ ಮಾಸಾಳುಗಳಂತೆ ದಿಟ್ಟೆಯರು (ಚಶಕ.೦೨-೯೦).

**ಮಾಸವಳಮದನಮಹೇಶ** = ಮಹಾಪರಾಕ್ರಮಿಯಾದ ಮದನನನ್ನು ನಿಗ್ರಹಿಸಿದವನು ; ಒಂದು ಬಿರುದು: ಬಿರುದಿಂಗೆ–ಗಜದುಳಿ, ಗಜಪಾಱು, ನರಲೋಕದಲ್ಲಣಂ, ಮಾಸವಳಮದನಮಹೇಶಂ, ಅಂಕತ್ರಿನೇತ್ರಂ (ಕಬುತ. ೦೭೯ ಶ್ರಯೋ). [ಮಾ₄ + ಸವಳ (< ಸಬಳ₂)]

**ಮಾಸವಾರಿ** (ನಾ). ಶ್ರೇಷ್ಠನಾದ ಅಶ್ವಾರೋಹಿ : ಶಕ್ತಿಧರರ್ ಶಕ್ತಿಯಂ ಬಿಟ್ಟು ಶಕ್ತಿಯಂ ಮಱೆಗೊಳೆಯುಂ ಮಾಸವಾರಿಗಳಾಸವಾರಿ ಗಳಾಗೆಯುಮೀತು ತನ್ನ ತಂತ್ರಂ ಭಯಾಕ್ರಾಂತಸ್ವಾಂತಮಾದುದಂ ಕಂಡು (ಶಾಸ್ತ್ರಗಾ. ೩-೦೩೨ ವ). ☞ ಕವಿಯು 'ಆಸವಾರಿ' ಶಬ್ದದಂತೆ ಯಮಕದ ಚಮತ್ಕಾರಕ್ಕಾಗಿ ಈ ಶಬ್ದವನ್ನು ಸೃಷ್ಟಿಮಾಡಿರಬಹುದು.
[ಮಾ₄ + ಸವಾರಿ]

**ಮಾಸವಾಳ** 'ಮಾಸವಳ' ನೋ.

**ಮಾಸವೆಗ್ಗಡೆ** (ನಾ). ತಿಂಗಳಿಗೊಮ್ಮೆ ಪರ್ಯಾಯವಾಗಿ ಬರುವ ಅಧಿಕಾರವನ್ನು ಹೊಂದಿದ ಹೆಗ್ಗಡೆ : ಶ್ರೀಯೋಗನಾಥ ದೇವರ ಅಮೃತಪಡಿ ಮೊದಲಾದ ಎಲ್ಲಾ ಶ್ರೀಕಾರ್ಯ್ಯಂಗಳು . . . ಅಶೇಷ ಮಹಾಜನಂಗಳು ಅಂದಂದು ನಡವ ಮಾಸವೆಗ್ಗಡೆ ಸೇನಬೋವರಿಂದವೂ ಆರೈದು ಉದಾಸೀನ ಮಾಡದೆ ಆಚಂದ್ರಾರ್ಕಸ್ಥಾಯಿಯಾಗಿ ನಡೆಸುವರು (ಎಕ. XII, ತಿಪ್ಟೂ. ೨-೭೦ ; 1261). [ಮಾಸ್ಮ + ಪೆಗ್ಗಡೆ (<ಪೆರ್ಗಡೆ₁)]

**ಮಾಸವೆಗ್ಗಡೆತನ** (ನಾ). ತಿಂಗಳಿಗೊಮ್ಮೆ ಪರ್ಯಾಯವಾಗಿ ಬರುವ ಹೆಗ್ಗಡೆಯ ಅಧಿಕಾರ : ಅಟ್ಟದದೇಕಂಣನವರೂ ಇಶ್ವರಪೆದಿಗಳ ಮಾದಂಣಗಳ ಮಾಸವೆಗ್ಗಡೆತನದಲಿ ಸಪ್ಪೆಯಕೇತಯ್ಯಂಗಳ ಮಕ್ಕಳು ಪುಲಿಗೆಱೆದೇವರು ಸೋಮಯ್ಯಂಗಳಿಗೆ ಕೊಟ್ಟ ಸಿಲಾಸಾಸನದ ಕ್ರಮ ವೆಂತೆಂದಡೆ (ಎಕ. VI (R), ಶೃಶೃಂ. ೮-೬ ; ಸು. 1306). [ಮಾಸವೆಗ್ಗಡೆ + —ತನ]

**ಮಾಸಾಂಕ.** ಮಾಸಂಕ (ನಾ). ೧. ಅತಿಯಾದ ಶೌರ್ಯ : ಮೂಜು ಲೋಕದ ಗಂಡನೆಂಬ ಮಾಜಿದ ಮಾಸಾಂಕದ ಘಟನಿವನೀಗ (ಶಂಕರಸಾಂ. ೬-೬೩). **ಮಾಸಂಕ** : ೨. ಅತಿಯಾದ ರೋಷ.— ಸಿಟ್ಟು : ಆ ಸರ್ಪನತ್ಯುಗ್ರತೆಯನೆ ನೆಗ್ಗೊತ್ತಿದಾ ಸಾಸಿಗನ ಕಾಣುತವೆ ಅಸುರದಿಂ ಕೆಲಬಲದೋರ್ವಹಿತತಿ ಮಾಸಂಕದಿಂ ಮುತ್ತಿದವು (ಶ್ರೀಕಾರ. ೧೦-೬೫) ; ಮಾಸಂಕದೀದ ಬಂಧುಶ್ರೀ ಮನದೊಳಿನಿತು ಹೇಸದೇ ಮಾಡಿರ್ದ ವಂಶ ಘಾತಕದ ಫಲಮಿಾ ಸಮಯವೊಂದಱೊಳೆ ಕಾಣಿಸಿದುದತ್ಯುಗ್ರಪುಣ್ಯ ಪಾಪದ ಫಲಗಳು (ನಮ್ಮಿಕಾ. ೩-೩೮). ೩. ಸರಿಸಮಾನ ; ಸರಿಸಾಟಿ : ವರಭೋಗದಿಂದ ಶಚಿಯಲ್ಲಿ ಮಾಸಂಕ . . . ರೋಹಿಣೀದೇವಿಯಲ್ಲಿ ಸುರುಚಿರ ಕಾಂತಿಯಿಂದಿಕ್ಕುತಕ್ಕೆಯಾಗಿರ್ಪಳಾ . . . ಸೋಮ ಸುವ್ರತದ ಸೀಮೆ (ನಮ್ಮಿಕಾ. ೬-೧೦). [<ಸಂ. ಮಹಾಸಾಹಸಾಂಕ. / ತೆಲು. ಮಾಸಟಿ]

**ಮಾಸಾದಿ** (ನಾ). ಶ್ರೇಷ್ಠನಾದ ಕುದುರೆಯ ಸವಾರ ; ಉತ್ತಮನಾದ ರಾವುತ : ಎಂತಪ್ಪ ದುಷ್ಟಾಶ್ವಂಗಳುಮನೇಱಲುಂ ತಿರ್ದಲುಂ ಬಲ್ಲನೆಂದು ಪೇಟ್ಟೂಳಾಗಿ ತಂತ್ರಪಾಳವೆಸರೊಳ್ ಮಾಸಾದಿಯಾಗಿರ್ದಂ (ಶಂಕಶಾ. ೬-೩೯ ವ). [<ಸಂ. ಮಹಾಸಾದಿನ್]

**ಮಾಸಾಮಿಗ ?** (ನಾ). (?) : ದೇವಾಸುರರಾ ಶಿವಮಾರನಂ ಅಗ್ರಹಾರಮೆಳಮ್ಬುಣುಸೆ ಪ್ರಹ್ಮಾದೇಯ ಮಾಸಾಮಿಗ ಪ್ರೀ(?ವ್ರಿ)ತಿ ಅಱದು ಕೊಳೆ ಕೊಡಲಾರದೆ ಎನೆಬರು ಎಱಮ ಸತ್ತೊರ್ (ಪ್ರಕಂ. ೦೯೪೪. ೬-೨ ; 808). [? ]

**ಮಾಸಾರ್ಧ** (ನಾ). ಒಂದು ತಿಂಗಳಿನ ಅರ್ಧಭಾಗ ; ಹದಿನೈದು ದಿನ ; ಪಕ್ಷ : "ಮಾಸಾರ್ಧದಲ್ಲಿ . . . ಪಕ್ಷವೆನಿಕ್ಕು" (ಪಂಚತಾ. ೦೪೬-೩೩) ; ಈ ದಿನಂ ಮೊದಲಾಗಿ ಮಾಸಾರ್ಧದೊಳೊಂದು ಮಹಾಲಗ್ನಪೊಳ್ದತ್ತೆಂದು ಪೇಳ್ದು (ಶಂಚಿರ. ೯-೬೨). [ಸಂ.]

**ಮಾಸಾವಂತ** 'ಮಹಾಸಾವಂತ' ನೋ.

**ಮಾಸಾಶನ** (ನಾ). ೧. ಜೀವನನಿರ್ವಹಣೆಗಾಗಿ ತಿಂಗಳಿಗೊಮ್ಮೆ ಕೊಡುವ ಹಣ,— ಮಾಸದ ಸಮಯಕ್ಕೆ ಸರಿಯಾಗಿ ಕೊಡುವ ವೇತನ : ರಾಜನು ತನ್ನ ಸೇವೆಗೆ ನೂರುಮಂದಿ ವೀರಭಟರನ್ನಿಟ್ಟುಕೊಂಡು ಅವರ ಮಾಸಾಶನವನ್ನು ಒಂದೊಂದು ತಿಂಗಳಲ್ಲಿ ಒಬ್ಬೊಬ್ಬ ಮಗಳು ಕೊಡುವಂತೆ ನಿಷ್ಕರ್ಷಿಸಿದನು (ಕಥಕ. ೨೫) ; ಅನ್ನ ವಸ್ತ್ರಕ್ಕಾಗಿ ಸಾವಷನ್ಯ ವಾಗಿ ಸ್ವಲ್ಪ ಮಾಸಾಶನದ ನಿಗದಿಯಾಗಿದೆ (ಪಿಬಂಧ. I, ೯೮೦). ೨. ನಿವೃತ್ತಿವೇತನ ; ಪಿಂಚಣಿ : ಉದ್ಯೋಗದಿಂದ ನಿವೃತ್ತರಾಗಿ ಸ್ವದೇಶಕ್ಕೆ ಹಿಂತಿರಳುವ ಬಳಿಕವೂ ಅವರ ಮಾಸಾಶನ(Pension)ಕ್ಕಾಗಿ ಇಲ್ಲಿಂದ ಹಣ ಸಲ್ಲಬೇಕಾಗುತ್ತದೆ (ಬಾಂಕ್ರ. III. ೦೩೩೬). [ಸಂ.]

**ಮಾಸಾಳ್** 'ಮಾಸವಳ' ನೋ.

**ಮಾಸಾಳಿ** 'ಮಾಸವಳ' ನೋ.

**ಮಾಸಾಳು** 'ಮಾಸವಳ' ನೋ.

**ಮಾಸಿ** (ನಾ). ಎಂಟು ಗುಂಜಿಗಳ ಒಂದು ತೂಕ : ೮ ಗುಂಜಿಗಳ ತೂಕಕ್ಕೆ ಮಾಸಿ (ಉದ್ದಿನಕಾಳ ತೂಕ) ಎಂಬ ಹೆಸರು (ಗ್ರಹಪ್ನ. ೬). [ < ಸಂ. ಮಾಷ ]

**ಮಾಸಿಕ** (ಗು). ೧. ತಿಂಗಳಿಗೆ ಸಂಬಂಧಿಸಿದ. (ನಾ). ೨. ವ್ಯಕ್ತಿಯು ಸತ್ತ ಮೊದಲನೆಯ ವರ್ಷದಲ್ಲಿ (ಸಾಮಾನ್ಯವಾಗಿ) ತಿಂಗಳಿಗೊಮ್ಮೆ ಮಾಡುವ ಶ್ರಾದ್ಧ ; ▶ ವೈದಿಕಪರಂಪರೆಯಲ್ಲಿ ಹಿರಿಯ ಮಗನು ಮೃತನ ಉತ್ತರಕ್ರಿಯೆಯನ್ನು ಮೊದಲ ಹನ್ನೆರಡು ದಿನಗಳ ಕಾಲ ಆಚರಿಸಿದ ಬಳಿಕ, ಮೃತತಿಥಿಯಿಂದ ಒಂದು ಸಂವತ್ಸರದ ಕಾಲಾ ವಧಿಯಲ್ಲಿ ಶ್ರಾದ್ಧಕಲ್ಪದ ಪ್ರಕಾರ ಹದಿನಾರು ಶ್ರಾದ್ಧಗಳನ್ನು ಮಾಡಬೇಕು. ಇವು ಸಾಮಾನ್ಯವಾಗಿ ತಿಂಗಳಿಗೊಂದಾಗುವುದರಿಂದ 'ಮಾಸಿಕ'ಗಳೆನ್ನುತ್ತಾರೆ: "ಅನ್ವಾಹಾರ್ಯಂ, ಮಾಸಿಕಂ – ೨ ತಿಂಗಳು ತಿಂಗಳಿಗೂ ಮಾಡತಕ್ಕ ಪಿಂಡಪಿತೃಯಜ್ಞಕ್ಕೆ ಹೆಸರು" (ಸಿದ್ಧಾಂತಿ. ೨೨೩) ; ಕ[ಟ್ಟೆ]ವೋದ ವಲ್ಲಿಕನ ಮಾಸಿಕದೊಳೊಗೆದಾಜಿಗೆಯ್ದುವಂದೊಟ್ಟಜೆ ದೋರ್ಪ ಚೀರಮನ ಬಾಯೊಜ಼ೆಯೊಳ್ ಕಿರಿ × × × (ಎಕ. VI, ಕಡೂರು. ೩೫-೨೫ ; 1136); ಸಾವಿತ್ರಿ ಪ್ರತಿತಿಂಗಳೂ ತಪ್ಪದೆ ಮಾಸಿಕ ಮಾಡಿಸುತ್ತಿದ್ದಳು (ಶಾಯಿಕ. ೨೦೦). ೩. ತಿಂಗಳಿಗೊಮ್ಮೆ ಪ್ರಕಟ ವಾಗುವ ಪತ್ರಿಕೆ ; ಮಾಸಪತ್ರಿಕೆ : ನಮ್ಮಲ್ಲಿ ದೈನಿಕಗಳ ಜೊತೆಗೆ ಸಾಪ್ತಾಹಿಕ, ಪಾಕ್ಷಿಕ ಹಾಗೂ ಮಾಸಿಕಗಳೂ ಸಾಕಷ್ಟು ಬರುತ್ತಿವೆ(ಕೂ೨). [ಸಂ.]

**ಮಾಸಿಗ** (ನಾ). ಒಂದು ಮನೆತನದ ಹೆಸರು : ಪುರಿಗೆಱೆನಾಡ ಸರಟವುರದಾಯ್ಯದಿಂ[ಬ]ರುಮಿಜ್ಜು ನಾಡಯಿಸೆ ಮಾಸಿಗರ ಚಿದಾನ್ನ ಗೋಸಾಸ(೦)ಮಿಟ್ಟೋಂ (ಕ್ಳಇ. XI-i, ೨೦-೩ ; 883). [ ? ]

**ಮಾಸಿಯವಾಡಿ** (ನಾ). ಒಂದು ಊರಿನ ಹೆಸರು : [ಕೋಗ]ಳಿಯಾ ಯ್ದೂಱುಮಂ ಮಾಸಿಯವಾಡಿ [ನೂಱ] ನಾಲ್ವತ್ತುಮನಾಳುತ್ತುಮಿದ್ದು (ಕ್ಳಇ. XI-i, ೨೨-೬ ; 897). [ ? + ವಾಡಿ₂]

**ಮಾಸಿರಿವಂತ** (ನಾ). ದೊಡ್ಡ ಶ್ರೀಮಂತ ; ಭಾರಿ ಐಶ್ವರ್ಯವಂತ : ಎಮ್ಮ ತಂದೆ ಮಾಸಿರಿವಂತನಾಗಿಯುಂ ಪೊನ್ನೆಂಬ ಪೆಸರ ಚಿನ್ನಮನಿರಿಸದೆ ದಾನಧರ್ಮಗೆಯ್ದು (ಶಂಕಶಂ. ೦೯೬-೨೦). [ಮ್ಮಾ + ಸಿರಿವಂತ]

**ಮಾಸಿಸು** (ಕ್ರಿ). ೧. ಕಾಂತಿಗುಂದಿಸು ; ಮಸುಕಾಗಿಸು : ದೋಸ ಮೇನಾನುಂ ಸ್ವಲ್ಪಮಾದೊಡಂ ಮಾಸಿಸಿರ್ಕುಮಣಂ ಕೃತಿವಧುವಂ (ಕಶಾ. ೦-೦೦೨) ; ಸೂಸಿದ ಪುಷ್ಪಾಂಜಲಿಯನೆ ಬಾಸಣಿಸಿದ ಮದವದಳಿ ಕುಳಂಗಳ ಚೆಲ್ವಂ ಮಾಸಿಸಿದುವು ವಾಸವನ . . . ಕಣ್ಗಳ್ (ಅಂತ್ಯ. ೭-೦೦೬). ೨. ಹೀಯಾಳಿಸು : ಮಾಸಿದ ರೂಪು ನೋಟಿಪ್ಪೊಡರೆಮಾಸಿದ ಚಿತ್ರದ ಪೆಣ್ಣ ರೂಪುಮಂ ಮಾಸಿಸೆ ನಾಡೆ ಮಾಸದಿಕೆಯಂ ಪಡೆದಪ್ಪುದು (ಶಂಕಶಾ. ೬-೬೨). ೩. ಅಪವಿತ್ರಗೊಳಿಸು ; ಕೆಡಿಸು : ಕುಲಮಂ ಮಾಸಿಸಿ ಮಿಾಹಮಂ ತೊಱೆದು ಕಂಡರ್ಪಾಸೆ ಮೇಯ್ಕೊಳ್ ಮಹಾಮಲಮಂ ತಾಳ್ದಿದ ಕಷ್ಟರಂ . . . ಕಂಡು (ರಹಸ್ಯಕ್ಮ. ೦-೦೮೬). [ಮಾಸು₁ + — ಇಸು₃]

**ಮಾಸು₁** (ಕ್ರಿ). ೧. ಮಲಿನವಾಗು ; ಕೊಳೆಯಾಗು : "ಮಾಸು— ಮಲೀಮಸೇ, ಜರಾಯುಶಾಚ (ಗರ್ಭಕೋಶದ ಸತ್ತೆ)" (ಶಬರಾ) ; ಮಂಡೆ ಮಾಸಿದರೆ ಮಜ್ಜನವ ಮಾಡಿದಲ್ಲದೆ ಹಿಂಗದು ವ್ಯಾಪಾರ (ಸೋಕಪಾ. ೯೯-೨೦೩) ; ಹಡೆದ ತಾಯಿಲ್ಲ ಶಾಯಿಯಲ್ಲೊಡೆ ತಲೆ ಹೀಗೆ ಜಡೆಗಟ್ಟಿ ಕೊಂಡು ಮಾಸಿಪುದೇ (ವೋಕತ. ೨೦-೨೫) ; ಮಾಸಿದ ಸೀರೆ ಮಾಸಿಯ

ತಿಲಕದ . . . ಮುದಿವೇಶಿಯರೆದೆಯೊಡುತಿಪರು (ಶಂಪರಿ. ೬-೦೯೦). ೨. ಕೊಳೆಮಾಡು ; ಮಲಿನಗೊಳಿಸು : ಈ ಪುಸ್ತಕವು ಎಂಥಾ ಚಂದವದೆ ! ಇದನ್ನು ಮಾಸಬೇಡ (ಹುಂಬಿಹು. ೨-೭). ೩. ಕಾಂತಿಗುಂದು ; ಮಂಕಾಗು : ನಸುಮಾಸಿ ಪಾಡಟಿದ ರೂಪಿನೊಳುಣ್ಮುವ ಗಾಡಿ ನಾಡೆ ಕಣ್ಗೆಡಜಿ (ಶಂಶಭಾ. ೦೩-೯೯) ; ಮಾಸಿದ ಮುಕುರಂ ಬೊಲಂತೆ ಗಳಿತಪ್ರಭಮಾಯ್ತು ಮೃಗಾಂಕಮಂಡಲಂ (ಶಾಂತೀಶ್ವ. ೧೦-೮೮); ಆ ಸಮಯದೊಳಾದಿತ್ಯನು ತನಗೆಣೆ ಏಸು ನೋಡಿದೊಡಿಲ್ಲವೆಂಬ ವಿಳಾಸಲಳಿದುದೀ ಹನುಮನಿಂದೆನೆ ಮೊಗ ಮಾಸಿ ಬಿದ್ದನು ಜಲಧಿಯೊಳು (ತೊರಕ. ೦೨-೨೮). ೪. ಕುಗ್ಗು ; ಕಡಮೆಯಾಗು : ಇಂದಲ್ಲ ನಾಳೆ ಬರಲೇಬೇಕು ತನಗಾಗಿ ಕಾಗದ ಎಂಬ ಆಸೆ ಮಾಸಿರಲಿಲ್ಲ (ಶಾಶ್ವ. ೦೬೬) ; ಭವಿಷ್ಯತ್ತಿನ ವಿಚಾರ ಮಾಡಿ ಆಸೆಗೋಪುರ ಕಟ್ಟಿದರೆ ಬಲವಾದ ಗಾಯದ ನೋವು ಮಾಸುವುದೇ? (ಶುಕುಕಾ. ೦೬೯). ೫. (ಅಲಂ) ಅಪವಿತ್ರಗೊಳ್ಳು ; ಕಳಂಕ ಹೊಂದು: ಅಯ್ಯನಿತ್ತುದುಮುನಾಂ ನಿನಗಿತ್ತನಿದೇವುದಣ್ಣ ನೀನೊಲಿದ ಲತಾಂಗಿಗಂ ಧರೆಗಮಾಟಿಸಿದುದು ನೆಗಟ್ತೆ ಮಾಸದೇ (ಆದಿಪು. ೦೯-೦೩೦) ; ವಾಕ್ಪತಿ ಪಟಿಗುಂ ಮನ್ನೋಜರಿವು ಪೇಸುಗುಮುಗ್ಗದ ಕೀರ್ತಿ ಮಾಸುಗುಂ (ಶಂಶಶಂ. ೦೩೩-೬). ೬. ಅಪವಿತ್ರಗೊಳಿಸು ; ಕಳಂಕ ತರು : ಕೊಳದೊಳಗೆ ಪೊಕ್ಕು ಮೆಯ್ಗರೆದೈ ಚೀ ಖಳ್ನನೆನೆ ಬಾರ್ತೆಗಟ್ಟುದಮೂಲ್ಕ ಯಶೋರತ್ನಮೆಂಬುದಂ ಮಾಸುವೆನೇ (ಗದಾಯು. ೬-೨೪).

ಮಾಸದಿಕೆ = ಮಲಿನವಾಗದಿರುವಿಕೆ : ಮಾಸಿದ ರೂಪು ನೋಟಿಕ್ಕೊಡರೆ ಮಾಸಿದ ಚಿತ್ರದ ಪೆಣ್ಣ ರೂಪುಮಂ ಮಾಸಿಸೆ ನಾಡೆ ಮಾಸದಿಕೆಯಂ ಪಡೆದವ್ಬುದು (ಶಂಶಭಾ. ೮-೬೩); P "ಇಲ್ಲಿ 'ಮಾಸದಿಕೆ' ಎಂಬ ಪಾಠ 'ಮಾಸ [ರಿ]ಕೆ' ಯಾಗಿರಬಹುದು." (ಶಂಶಬೀ. ೨೯೭).

**ಮಾಸು₂** (ನಾ). ೧. ಕೊಳೆ; ಹೊಲಸು: "ಮಲಿನಂ ಮಾಸು" (ಕಾಕಕ್ಕ. ೪೩). ೨. ಕೊಳೆಯಾದ ಬಟ್ಟೆ ; ಮಲಿನವಾದ ವಸ್ತ್ರ : ಸಕ್ಕಳಾ ತಾಯಿ ಮುದುಕಿ ಎಳೆಯುವಳಾಗಿ, ಮಾಸು ವಿಕಂಚಿಳೆಯಾಗಿ, ಸವೆದ ಮೈ ತುಂಬಿ (ಹೊಂಗಳು. ೨೦-೬). ೩. ಭ್ರೂಣವನ್ನು ಆವರಿಸಿರುವ ಪೊರೆ ; ಕಸ ; ಜರಾಯು : "ಗರ್ಭಾಶಯಃ, ಜರಾಯುಃ, ಕಲಲಃ, ಉಲ್ಬಂ, ಈ ೪ ಗರ್ಭವು ಮುಸುಕಿಕೊಂಡಿದ್ದ ಮಾಸಿನ ಪೆಸರು" (ನಾತರಾ. ೦೦೮) ; ಅಗಸೆ ಪೆಸಟಿವರೆ . . . ಬಳ್ಳಿಸೊರೆಯೆಂಬಿವನಿಕ್ಕುಗೆ ಪಾಲೊಳ್ ಮೇಣ್ ಮದ್ಯದೊಳೆ ಗೋಕುಲಂ ಮಾಸನಿಕ್ಕುಗುಂ ತತ್ಕ್ಷಣದಿಂ (ಲೋಕೋಪ. ೯-೦೯೦) ; ಕೂಸು ಬಲಿಯುವುದಕ್ಕೆ ಮೊದಲೆ ಮಾಸ ಹಟಿದು ಕೂಸ ಕೊಂದು (ಸಕವ. II,೪೦೭-೦೦೯೩) ; ಶಿಶುವು ಜನಿಸಿದ ನಂತರ ಮಾಸು ಸಂಪೂರ್ಣವಾಗಿ ಬಿದ್ದುಹೋಗಬೇಕು (ಬಶಿಕ. ೩೯). ೪. (ಅಲಂ) ದೋಷ ; ಪಾಪ : ಮನದಲ್ಲಿ ಮಾಸಿರಲು ಮಹಿಮರೆನಿ ನೀಮರ್ಖಳುಗಿ ಮರೆನುಡಿವ ಮಾನಿಸರು ಹಲವರಿಹರು (ಶಬಳ. ೦೩೩-೨೭೬).

[<ಮಾಸು₁ / ತಮಿ. ಮಲ. ಮಾಚು, ಮಾಚ್ಚು; ತುಳು. ಮಾಸು ; ಕೊಡ. ಮಾಚಿ ; ತೆಲು. ಕುಇ. ಮಾಸಿ ; ಗೊಂಡಿ. ಕೋತ. ಮಾಚ್]

**ಮಾಸು₃** (ನಾ). ಬಾಡು ; ಅಡಗು ; ಮಾಂಸ : ನೆತ್ತರ್ ಮಾಸೆಲ್ಲು ತೊವಲ್ ಪತ್ತಿದೊಡಂಬಿದು (ಶಿಶಂದ. ೯-೯) ; ಮೈಯಾಗ ಮಾಸಿಲ್ಲದಿದ್ದರೇನಾತ, ಕೈಯಾಗ ಕಾಸಿಲ್ಲೇನ? (ಜಪದಾ. I, ೨೯೩); ಇನ್ನೂ ತಲೀ ಮ್ಯಾಲಿನ ಮಾಸ ಆರಿಲ್ಲ ನಿನಗ (ಮುಕ್ತ್ಯರ. ೩).

[←ಮರಾ. ಮಾಸ್. / ಸಂ. ಮಾಂಸ]

**ಮಾಸುಚೀಲ** (ನಾ). ಗರ್ಭದಲ್ಲಿ ಮಗು ಬೆಳೆಯುವ ಚೀಲ ; ಭ್ರೂಣದ ಹೊರಪೊರೆ : "ಗರ್ಭಾಶಯಃ, ಜರಾಯುಃ—೨ ಬಸುರೊಳಗೆ ಸುತ್ತಿಕೊಂಡಿರುವ ಮಾವಿಚೀಲದ ಹೆಸರು . . . ಮಾಸುಚೀಲಕ್ಕೆ ಹೆಸರುಗಳೆಂತಬೂ ಕೆಲಕೆಲವರು ಪೇಳುವರು" (ಸಿದ್ಧಾಂತಿ. ೦೭೮). [ಮಾಸು₂ + ಚೀಲ]

**ಮಾಸುತ** (ನಾ). ಲಕ್ಷ್ಮಿಯ ಮಗ ; ಮನ್ಮಥ : ಚಿತ್ರಜನ ಮಾಸಾಳೊ . . . ಕಂದರ್ಪ ರಚಿಸಿದ ಸೂತ್ರವೋ ಮಾಸುತನ ದಳವೆನಲಿತ್ತೆಜದಿ ಗಣಿಕಾನಿಕರ ಮೆಟಿದುದು ವಿಳಾಸದಲಿ (ಜೀವಂತ. ೦೭-೬೩). [ಸಂ.]

**ಮಾಸೆವಾನಿ** (ನಾ). ಒಂದು ಊರಿನ ಹೆಸರು : ಸೀಮಾನ್ತರಮ್ ಪಡೆಯಮಿಪ್ಪ್ರಂತುಗಣ್ನುಗಂ ಮಾಸೆವಾನಿ ಸೀಮೆ ಮೂಡಾಯೊಟಿವಿ (ಎಕ. V (R), ಕೃಕ್ಷಪ. ೦೦೩-೭೩; 890) [ ? ]

**ಮಾಸೇನ** (ನಾ). ಒಬ್ಬಾತನ ಹೆಸರು : ಶ್ರೀ ಮಾಸೇನರ್ಪ್ಪರಮಪ್ರಭಾವ ರಿಷಿಯರ್ಕ್ಕಟ್ವಪ್ಪಿನಾ ಪೆಟ್ಟದುಳ್ಕೀ ಸಂಗಂಗಳ ಪೇಟ್ದ ಸಿದ್ಧಸಮಯನ್ನಪ್ಪಾದೆ ನೋನ್ತು (ಎಕ. II, ೨೭-೦; 700). [ಮಾ₄ + ಸೇನ₂]

**ಮಾಸೇಸ** (ನಾ). ಮಹಾಶೇಷ; ಆದಿಶೇಷ : ಮೇಹೊರ್ಮೆ ಕೀಟಿಳೆಗೆ ಪಾಟಿಯಿಡುತೆ ಪಾಯ್ದು ಮಾಸೇಸನ ಬಂಡಾರಮನಪಹರಿಸಿ (ಅನ್ನುಕ. ೨೯). [< ಸಂ. ಮಹಾಶೇಷ ]

**ಮಾಸೋಪವಾಸ**(ಗು).೧. ಒಂದು ತಿಂಗಳವರೆಗೆ ಉಪವಾಸವ್ರತವನ್ನು ಆಚರಿಸುವ : ಮಾಸೋಪವಾಸರವಿಚಂದ್ರಸಿದ್ಧಾನ್ತಿಗಳು . . . ಮಾಘನಂದಿ ಸಿದ್ಧಾಂತಿಚಕ್ರವರ್ತ್ತಿಗಳ ಶ್ರೀಪಾದಪದ್ಮಂಗಳಿಗೆ ಧಾರಾಪೂರ್ವಕಂ ಮಾಡಿ ಕೊಟ್ಟರು (ಎಕ. III (R), ನಾಗಮಂ. ೬೦-೨೯; ಸು. 12ನೆಯ ಶತ). (ನಾ). ೨. ಒಂದು ತಿಂಗಳವರೆಗೆ ಮಾಡುವ ಉಪವಾಸವ್ರತ : ಮಾಸೋಪವಾಸದೊಳಿರ್ದು ಪಾರಣೆಯೊಳ್ ಚರಿಗೆಗೆ ವಂದ ಧೃತಿಕರಣ ಮುನೀಂದ್ರರಂ ನಿಜಿಸಿ (ಶಾಂತಿಪು. ೯-೩೩೪). [ಸಂ.]

**ಮಾಸ್ಟರು**, ಮಾಸ್ತರ, ಮಾಸ್ತರು, ಮೇಷ್ಟರು, ಮೇಷ್ಟ್ರು (ನಾ). ಉಪಾಧ್ಯಾಯ; ಅಧ್ಯಾಪಕ : ಮಾಸ್ಟರುಗಳಿಗೆ ಮನೆ ಕಟ್ಟಿಕೊಡಲೂ ತರುದೂದು ಮಾಡಿದ್ದರು (ಹುಟ್ಟಿಹ. ೭). **ಮಾಸ್ತರ** : ಅಂದು ಮಾಸ್ತರರು ರಾತ್ರಿ ಘಂಟೆ ಹತ್ತಾದರೂ ಮನೆಗೆ ಬಂದಿರಲಿಲ್ಲ (ಕಾವೇಂ. ೩); ಹೊನ್ನಪ್ಪಮಾಸ್ತರರು . . . ಸಿದ್ಧರಾಗುತ್ತಲಿದ್ದರು (ಶ್ರಜಸ. ೩). **ಮಾಸ್ತರು** : ಅವರೊಬ್ಬ ಪ್ರಾಥಮಿಕಶಾಲೆಯ ಮಾಸ್ತರು (ಕೂರಿ). **ಮೇಷ್ಟರು** : ಶಾಲೆಯ ಮೇಷ್ಟರು ತುಂಟ ವಿದ್ಯಾರ್ಥಿಯನೆಂದರು. . . ಹೋಗು ಹೆಡ್ಮಾಸ್ಟರ ಬಳಿಗೆ (ಇಂಶಾಪ. ೦೨೦-೯೨); ಅದನ್ನು ಓದುವ ಕೆಲಸ ಆ ಊರಿನ ಮೇಷ್ಟರಿಗೆ ಸೇರಿದ್ದು (ಹೋಪಕ. ೭೭). **ಮೇಷ್ಟ್ರು** : ಆ ಮೇಷ್ಟ್ರೇ ಸುಣ್ಣವನ್ನು ತನ್ನ ವೆಚ್ಚದಿಂದ ಹೊಡೆಸಬೇಕು (ಮಹಾಗ. ೦೯೨); ಮೇಷ್ಟ್ರುಗಳು ಕಾಟ ಕೊಡಲು ಈಗಾಗಲೇ ಷುರು ಮಾಡಿರುತ್ತಾರೆ (ರೂಪಶಂ. ೩೩). [ ← ಇಂ. Master ]

**ಮಾಸ್ತರ** 'ಮಾಸ್ಟರು' ನೋ.

**ಮಾಸ್ತರಣೆ** 'ಮಾಸ್ತರಿಣೆ' ನೋ.

**ಮಾಸ್ತರತಿ** (ನಾ). = ಮಾಸ್ತರಿಣೆ : ಸಣ್ಣಸಣ್ಣ ಹುಡುಗೆಯರು ಮಾಸ್ತರತಿಯ ಆಶ್ರಯದಲ್ಲಿ ಬಿದ್ದುಕೊಂಡಿದ್ದರು (ಸ್ವಶಿಪ. ೪೬೦); ಗಂಡನ್ನ ಬಿಟ್ಟು ಓಡಿ ಬಂದು ಇಲ್ಲಿ ಗರತಿಯಾಗಿ ಮಾಸ್ತರತಿ ಆಗ್ಯಾಳೇನು ? (ಕೋಪಹೀ. ೨). [ ಮಾಸ್ತರ (< ಮಾಸ್ಟರು) + — ತಿ₁ (< —ಇತ್ತಿ) ]

**ಮಾಸ್ತರಿಕೆ** (ನಾ). ಮೇಷ್ಟರ ಕೆಲಸ; ಉಪಾಧ್ಯಾಯ ವೃತ್ತಿ: ಹೆಂಡತಿಗೆ ಮಾಸ್ತರಿಕೆ ನೌಕರಿ ಬೇರೆ ಹಚ್ಚಿದ್ದಾಯಿತು (ಎಡಹ. ೦೪೪).

[ ಮಾಸ್ತರ (< ಮಾಸ್ಟರು) + — ಇಕೆ ]

**ಮಾಸ್ತರಿಣೆ**, ಮಾಸ್ತರಣೆ (ನಾ). ಉಪಾಧ್ಯಾಯಿನಿ; ಅಧ್ಯಾಪಕಿ : ನಿನ್ನ ಜೊತೆಗೆ ನಾನಿರುವೆ ಎಂದು ಮಾಸ್ತರಿಣೆ ಹಿಂದುಳಿದರು (ಅಶ್ವ. ೮೩) ; ದತ್ತೂನ ಮಕ್ಕಳ ಮೊದಲ ಮಾಸ್ತರಿಣೆಯೂ ನಾನೇ ಆದೆ (ಸ್ವಶಿಪ. ೨೦೯). **ಮಾಸ್ತರಣೆ** : ಅವರ ಮಾಸ್ತರಣೆ ಅವಳು (ಕುಹರುದಾ. ೦೯೩).

[< ಮಾಸ್ಟರು]

**ಮಾಸ್ತರು** 'ಮಾಸ್ಟರು' ನೋ.

**ಮಾಸ್ತಿ** 'ಮಾಸತಿ' ನೋ.

**ಮಾಸ್ತಿಕಲ್** 'ಮಾಸತಿಕಲ್ಲು' ನೋ.

**ಮಾಸ್ತಿಕಲ್ಲು** 'ಮಾಸತಿಕಲ್ಲು' ನೋ.

**ಮಾಸ್ತಿಗಲ್ಲು** 'ಮಾಸತಿಕಲ್ಲು' ನೋ.

**ಮಾಸ್ತಿಗುಡಿ** (ನಾ). ಮಾಸ್ತಿಕಲ್ಲು ಇರುವ ದೇವಸ್ಥಾನ ; ಮಹಾಸತಿಯ ಹೆಸರಿನಲ್ಲಿ ಕಟ್ಟಿದ ಗುಡಿ : ಹುಬ್ಬಳ್ಳಿಯಿಂದ ಕಾರವಾರಕ್ಕೆ ಹೋಗುವ ಮಾರ್ಗಮಧ್ಯದಲ್ಲಿ ಸುಪ್ರಸಿದ್ಧವಾದ ಮಾಸ್ತಿಗುಡಿಯಿದೆ (ಕಜಾಅ. ೩೦೯).
[ಮಾಸ್ತಿ (< ಮಾಸತಿ) + ಗುಡಿ$_3$]

**ಮಾಸ್ತಿಬೀಳು** (ನಾ). ಸ್ತ್ರೀಯು ಸತ್ತ ಗಂಡನೊಡನೆ ಚಿತೆಯೇರುತ್ತಿದ್ದ ಜಾಗ,– ಮಹಾಸತಿಯಾಗುತ್ತಿದ್ದ ಸ್ಥಳ : ಬಹುಕಾಲದ ಹಿಂದೆ ಆ ಸ್ಥಳದಲ್ಲಿ ಮಹಿಳೆಯರು ಸತಿಯನ್ನು ಆಚರಿಸುತ್ತಿದ್ದರಂತೆ. ಅದಕ್ಕಾಗಿ ಆ ಸ್ಥಳವನ್ನು ಮಹಾಸತಿಬೀಳು ಅಥವಾ ಮಾಸ್ತಿಬೀಳು ಎಂದು ಕರೆಯುತ್ತಿದ್ದರು (ಹಂಪಶಂ. ೦೫೩). [ಮಾಸ್ತಿ (< ಮಾಸತಿ) + ಬೀಳು$_3$ (< ಬೀಡು$_2$)]

**ಮಾಸ್ವಾರ** (ನಾ). ಒಳ್ಳೆಯ ಸವಾರ ; ಶ್ರೇಷ್ಠನಾದ ಅಶ್ವಾರೋಹಿ : ಗರವಟಿಗರ ಕೊಲ್ಲಾಯ್ತರ ನುಡಿಗಾಜರ ಮಾಸ್ವಾರರ ಸಂದಣಿ ಸಲೆ ಸೊಗಯಿಸಿತಾಗ (ಜಮುಕಾ. ೦೨-೦೯). [ಮಾ$_4$ + ಸ್ವಾರ (< ಸವಾರ)]

**ಮಾಹಜ್ಜನ** (ನಾ). ಊರಿನ ಪಂಚರು ; ಮಹಾಜನ : ಆಲನ ತೋಟು ಇಕ್ಕಿಸಿ ಬಿಟ್ಟಾನ್ ಮಾಹಜ್ಜನಮೊಸೆದು ಕೊಟ್ಟ ಕಬನಿ ಅಯ್ಗೊಳ (ಎಕ. X (s), ಮುಳಬಾ. ೦೫೩-೭; ೩ನೆಯ ೩೩). [< ಮಹಾಜನ]

**ಮಾಹತ್ತರ** (ನಾ). ಮುಖಂಡ ; ಮುಖ್ಯಾಧಿಕಾರಿ : ಬಂದ ಮಾಹತ್ತರಂ ಗುತ್ತರಂಗೊಟ್ಟು ದಾನಸನ್ಮಾನಂಗಳಿಂ ಸಂತೋಷಂಬಡಿಸಿ (ವರ್ಧಮಾ. ೩-೬೮ ವ). [< ಸಂ. ಮಹತ್ತರ]

**ಮಾಹತ್ತು** 'ಮಹಂತು' ನೋ.

**ಮಾಹಳ** 'ಮಹಳ' ನೋ.

**ಮಾಹಾತ್ಮ್ಯ** (ನಾ). ೧. ಹಿರಿಮೆ ; ಮಹಿಮೆ : ಜನಿತಪ್ರಗಲ್ಭದೊಳ್ ಮಾಂತನದೊಳ್ ಮಾಹಾತ್ಮ್ಯದೊಳ್ . . . ಶ್ರೀಶಂ ಘನಂ (ಕವಿರಾ. ೩-೮೦); ಶ್ರೀಮತ್ಕಾರ್ಯೆಯುಂ ಸಮ್ಯಕ್ತ್ವಮಾಹಾತ್ಮ್ಯದಿಂ ಸ್ತ್ರೀರೂಪಮಂ ಪತ್ತುವಿಟ್ಟು . . . ದಿವಿಜನಾದಂ (ಆದಿಪು. ೩-೭೦ ವ); ನಿನ್ನ ಮಾಹಾತ್ಮ್ಯವು ವಿಸ್ತಾರವಾದ ದ್ಯುಲೋಕಕ್ಕಿಂತಲೂ ಅಧಿಕವಾಗಿ ಬೆಳೆದಿದೆ (ಋಗ್ವೇದ. ೩). ೨. ಹಿರಿಮೆಯುಳ್ಳವನು ; ಮಹಿಮಾಶಾಲಿ : ನೀನೆಂದ ಮಾತ ಬಾಹಿರ ಮಾಡಬಾರದು ಕರೆಸೆಂದನು ಮಾಹಾತ್ಮ್ಯನಲ್ಪಕೋಪಿಗನು (ಭರತ. ೩೩-೦೭).
[ಸಂ.]

**ಮಾಹಿ** (ನಾ). ಕೋಣ ಅಥವಾ ಎಮ್ಮೆ : ದನುಜನಿಕಾಯ ತಂತಮಗಂದು ಖಳಪಂಗುಬ್ಬುವಾತಿಂ ನಿಂದು ಮಾಹಿಗೆ ಮುಗ್ಗನಿಟ್ಟಂತಾ ಮಹಾನಲಗೆ ಇಂಧನಮದಿತ್ತಂತೆ ರುದ್ರಗೆ ಕಂದೆರವುಗೊಟ್ಟಂತೆ ಕೋಪಪುರಂದ್ರಿಯನು ಕಾಣಿಕೆಯನಿತ್ತರು ಬೆದರೆ ಸುರಕಟಕ (ಅಂಬಿಕಾ. ೯೦-೩).
[? ಇದು 'ಮಾಹಿಷ (ಷಿ)' ಎಂಬುದರ ಸಂಕ್ಷಿಪ್ತರೂಪವಿರಬಹುದೆ ?]

**ಮಾಹಿತಿ** (ನಾ). ೧. ಅರಿವು ; ತಿಳಿವಳಿಕೆ ; ಕೆಲಸದ ಮಾಹಿತಿಯನ್ನು ಕೆಲವೇ ಮಾತುಗಳಲ್ಲಿ ಮಾಡಿಕೊಟ್ಟಿದ್ದರು (ವಾತ್ಸಲ್ಯ. ೦೯೩) ; ಮಾಹಿತಿ ಸಾಲದೆ ಕೆಲಸವು ಮುಗಿಯದೆ ಬಹು ಪೇಚಿಗೀಡಾದ (ಇಂಜಾಕ. ೩೩-೩೦). ೨. ವಿವರಣೆ : ಕಾಗದದಲ್ಲಿ ಅಳಿಯನನ್ನು ಕುರಿತು ಇದ್ದ ಮಾಹಿತಿಯನ್ನು ಹೆಂಡತಿಗೆ ಕೃಷ್ಣಪ್ಪನವರು ತಿಳಿಸಲಿಲ್ಲ (ಬಳಕಂ೧. ೯೨); ಹೆಚ್ಚಿನ ಮಾಹಿತಿ ಅವನಿಂದ ದೊರೆಯಲಿಲ್ಲ (ಕಂಬಹು. ೦೨೯).

**ಮಾಹಿತಿ ಕೊಡು**=ವಿವರಣೆ ನೀಡು ; ಸಮಾಚಾರ ತಿಳಿಸು : ಆ ಹುಡುಗಿ . . . ನಮ್ಮ ಮೇಲೇ ತಿರುಗಿ ಬಿದ್ದಳು ಹೊರತು ಏನೂ ಮಾಹಿತಿ ಕೊಡಲಿಲ್ಲ (ಮೂರುದಾ. ೨೭೦).

[←ಅರ. ಮಾಹೀಯತ್ ; ಹಿಂ. ಮಾಹಿಯತ್ ; ಮರಾ. ಮಾಹಿತೀ]

**ಮಾಹಿಷ** (ಗು). ಎಮ್ಮೆಯ : "ಮಾಹಿಷಶೃಂಗವದು ಗವಲಮಕ್ಕುಂ" (ಮಂಗರಾ. ೦೩೭-೪೦). [ಸಂ.]

**ಮಾಹಿಷವಿಷಯ** (ನಾ). ಒಂದು ನಾಡಿನ ಹೆಸರು : ಶ್ರೀಮತಿ ಮಾಹಿಷ ವಿಷಯೇ ಕಾಂಚನಮುಂದುವೋಲ್ ಇತಿ ಪ್ರಸಿದ್ಧೇ ಗ್ರಾಮೇ (ಎಇ. IV, ೭೦-೨೦; 945). [ಸಂ.]

**ಮಾಹಿಷಿ** (ನಾ). ಎಮ್ಮೆ : ಮಾಹಿಷೀಸಂತತಿ ವಿಪಿನಭವಂ ಕಣ್ಣಗುರ್ವಾಯ್ತು ಕಾರೊಳ್ (ಚಂದ್ರಪ್ರ. ೪-೯೮). [ಸಂ. ಮಾಹಿಷೀ]

**ಮಾಹಿಷಿಕ** (ನಾ). ೧. ಎಮ್ಮೆ ಕಾಯುವವನು. ೨. ಹೆಂಡತಿಯ ವ್ಯಭಿಚಾರದಿಂದ ಹಣ ಗಳಿಸುವವನು : ಕುಲಮಹಿಷಿ ದುರ್ಮಾರ್ಗ ಮುಖದೊಳು ಗಳಿಸಿದರ್ಥವನುಂಡು ಕಾಲವ ಕಳೆವ ನಿರ್ಭಾಗ್ಯರು ಕಣಾ ಮಾಹಿಷಿಕರೆಂಬವರು (ಕುವ್ಯಾಅ. ೪-೯೯); ವ್ಯಭಿಚಾರಿಯಾದ ಸ್ತ್ರೀಯನು ಅಂಗೀಕರಿಸಿಕೊಂಡು ಇದ್ದವನು ಮಾಹಿಷಿಕನು (ಕಾಶೀಖ. ೨೦೩-೩). ೩. ದುಶ್ಶೀಲೆಯಾದ ಹೆಂಗಸಿನ ಉಪಪತಿ. [ಸಂ.]

**ಮಾಹಿಷ್ಯ** (ನಾ). ಕ್ಷತ್ರಿಯನಿಗೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದವನು : "ಮಾಹಿಷ್ಯಃ . . . ವೈಶ್ಯಸ್ತ್ರೀಗೂ . . . ಕ್ಷತ್ರಿಯನಿಗೂ ಹುಟ್ಟಿದವನ ಪೆಸರು" (ಸಿದ್ಧಾಂತಿ. ೩೦೮). [ಸಂ.]

**ಮಾಹುತ** 'ಮಾವಂತ' ನೋ.

**ಮಾಹುರಿ$_1$** (ನಾ). [ಸಂಗೀತ] ಒಂದು ರಾಗದ ಹೆಸರು : ಬಲಹಂಸರಾಗ, ನಂತರ ಮಾಹುರೀ, ದೇವಕ್ರಿಯಾ . . . ನಂತರ ಭಾಷಾಂಗ (ರಾಗಸಮೂಹ) ವನ್ನು ಹೇಳಲಾಗುವುದು (ಕಕುಶ್ರ. ೦೩೦). [ಸಂ. ಮಾಹುರೀ]

**ಮಾಹುರಿ$_2$** 'ಮಾವಲಿ' ನೋ.

**ಮಾಹುಲಿ** 'ಮಾವಲಿ' ನೋ.

**ಮಾಹೆ** (ನಾ). ತಿಂಗಳು; ಮಾಸ : ತಾರೀಖು ೫ ಮಾಹೆ ಮೆ ಸಂನ ೧೮೧೩ ಯಿಸವಿ (ಮೈಅಂ. ೦೯೨೯, ೯೪-೯೩ ; 1813); ಮಾಹೆಮಾಹೆಗೂ ಬಹಳ ಕ್ರಮವಾಗಿ ಸೇವಾಜನರುಗಳಿಗೆ ತಲಬಿನ ಬಟವಾಡೆಯಾಗುತ್ತಿತ್ತು (ಮುಹಾಪಂ. II, ೦೩). [←ಪಾರ. ಮರಾ. ಮಾಹ್, ಮಾಹೆ; ಹಿಂ. ಮಾಹ್]

**ಮಾಹೆಯಾನಾ** (ಅ). ಪ್ರತಿ ತಿಂಗಳೂ ; ಮಾಸಮಾಸವೂ : ಈ ಪೈಕಿ ಮೂರರಲ್ಲಿ ಎರಡು ಭಾಗ ನಗದಿಯಾಗಿ ಮಾಹೆಯಾನಾ ಬಟವಾಡೆಯಾಗುತ್ತ ಉಳಿದ ಒಂದು ಭಾಗವು . . . ಸಂದಾಯವಾಗುತ್ತಿತ್ತು (ಮುಹಾಪಂ. II, ೩೩).
[←ಪಾರ. ಮಾಹಿಯಾನ್ ; ಹಿಂ. ಮಾಹಿಯಾನಾ ; ಮರಾ. ಮಾಹಾನ್]

**ಮಾಹೆವಾರಿ** (ಗು). ಪ್ರತಿ ತಿಂಗಳ ; ಮಾಸಿಕ : ಮಾಹೆವಾರಿ ಜಮಾಖರ್ಚು ಲೆಕ್ಕದ ತಯಾರಿ ಮತ್ತು ಕಿಸ್ತು ವಸೂಲಿ (ಮುಹಾಪಂ. II, ೩೮) ; ಕೊಟ್ಟಂತಾ ತಿಂಗಳಿನ ಸಂಬಳವು ಹಿಂದಿನ ತಿಂಗಳ . . . ಮಾಹೆವಾರಿ ಪಟ್ಟಿ ತಾಲ್ಲೂಕಿಗೆ ಕಳುಹಿಸಿಕೊಟ್ಟು ಹೊರತು ಮಂಜೂರ್ಮಾಡುವದಿಲ್ಲವು (ಗ್ರಾಮಕೆ. ೬).
[←ಪಾರ. ಮಾಹ್‌ವಾರ್ ; ಹಿಂ. ಮಾಹ್‌ವಾರೀ ; ಮರಾ. ಮಾಹೆವಾರೀ, ಮಾಹವಾರ್, ಮಾಹವಾರೀ]

**ಮಾಹೇಂದ್ರ** (ಗು). ೧. ಇಂದ್ರನಿಗೆ ಸಂಬಂಧಿಸಿದ. ೨. ಪೂರ್ವದಿಕ್ಕಿಗೆ ಸೇರಿದ. (ನಾ). ೩. ಇಂದ್ರಕೀಲಪರ್ವತ ; ಮಹೇಂದ್ರಗಿರಿ. [ಸಂ.]

**ಮಾಹೇಂದ್ರಕಲ್ಪ** (ನಾ). [ಜೈನ] ಹದಿನಾರುಕಲ್ಪಗಳಲ್ಲಿ ನಾಲ್ಕನೆಯದು : ಸನ್ಯಸನವಿಧಾನದಿಂ ಪರಿತ್ಯಕ್ತಜೀವಿತನಾಗಿ ಮಾಹೇಂದ್ರಕಲ್ಪದೊಳಣಿಮಾದ್ಯಷ್ಟಗುಣೈಶ್ವರ್ಯೋಪೇತನುಂ . . . ಆಗಿ (ಆದಿಪು. ೨-೦೯ ವ); ತವೆ ಸುಟ್ಟುಂ ಸಮೆಯಿಪುದಣಮಲ್ತು ಸನತ್ಕುಮಾರಮಾಹೇಂದ್ರಕಲ್ಪಜನಿತಾಮರರಂ (ಮಲ್ಲಿಪು. ೧೩-೦೦೦). [ಸಂ.]

**ಮಾಹೇಂದ್ರಿ** (ನಾ). ೧. ಪೂರ್ವದಿಕ್ಕು. ೨. ಹಸು; ಆಕಳು. ೩. ಇಂದ್ರನ ಪತ್ನಿ ; ಶಚೀದೇವಿ. ೪. ಸಪ್ತಮಾತೃಕೆಯರಲ್ಲಿ ಒಬ್ಬಳು : "ಬ್ರಾಹ್ಮೀ

. . . ಮಾಹೇಂದ್ರೀ, ಚಾಮುಂಡಾ_ಈ ೭ ಸಪ್ತಮಾತೃಕೆಯರ ಪೆಸರ್'' (ಹಲಾಯು. ೪-೦೭). ೫. [ಸಂಗೀತ] ಸಪ್ತಸ್ವರಗಳ ಅಧಿದೇವತೆಗಳಲ್ಲಿ ಒಬ್ಬಳು : ಬ್ರಾಹ್ಮಿ . . . ಮಾಹೇಂದ್ರಿ ಚಾಮುಂಡಿಯವರೆಂಬವರೇ ಕ್ರಮದಿಂದಾ ಷಡ್ಜಾದಿ ಸ್ವರಾಧಿದೇವತೆಗಳು (ಏವೇಳ. ೦೮೭).
[ಸಂ. ಮಾಹೇಂದ್ರೀ]

**ಮಾಹೇಯ** (ನಾ). ೧. ಭೂಮಿಯ ಪುತ್ರ. ೨. ನರಕಾಸುರ. ೩. [ಜ್ಯೋತಿ] ಕುಜಗ್ರಹ : ದಿವಿಜೇಜ್ಯನುಮುಡುಪತಿಯುಂ ರವಿಯುಂ ಸತ್ವಗ್ರಹಂ . . . ಭಾನವನುಂ ಮಾಹೇಯನುಂ [ಪಾಠಾಂ. ಧರಣಿಜನು] ಶನಿ ತಮೋಗ್ರಹಮೆನಿಪರ್ (ಜಾತತಿ. ೪-೦). [ಸಂ.]

**ಮಾಹೇಯಿ** (ನಾ). ಆಕಳು ; ಹಸು : ''ಹೋಮಧೇನು ಮಾಹೇಯಿ ಯೆಂಬುದು'' (ಹಲಾಯು. ೪೩-೦೦೩). [ಸಂ. ಮಾಹೇಯೀ]

**ಮಾಹೇಶ** (ಗು). ಪರಮೇಶ್ವರನಿಗೆ ಸಂಬಂಧಿಸಿದ : 'ಮಾಹೇಶಮಂತ್ರ' ಪರಾ. [ಸಂ.]

**ಮಾಹೇಶಮಂತ್ರ** (ನಾ). ಪರಮೇಶ್ವರನು ಅಭಿಮಾನಿ ದೇವತೆ ಯಾಗಿರುವ ಮಂತ್ರ : ತನ್ನ ಚಿತ್ತದೊಳ್ಮಾಹೇಶಮಂತ್ರಮಂ ಸ್ಮರಿಸುತ್ತೆ (ಕೈಬಿಕಾ. ೨೦-೦೪). [ಸಂ.]

**ಮಾಹೇಶ್ವರ** (ನಾ). ೧. [ವೀಶೈ] ಷಟ್ಸ್ಥಲಗಳಲ್ಲಿ ಎರಡನೆಯ ಹಂತ ದಲ್ಲಿರುವ ಭಕ್ತ : ಮಾಹೇಶ್ವರನೆಂತೆಂಬೆನಯ್ಯಾ `ಪರಸ್ತ್ರೀ ಪರರರ್ಥದಾಸೆ ಬಿಡದನ್ನಕ್ಕ (ಬಸವ. ೩೦೦); ಶಿವಯೋಗದ ವಚನಾಮೃತವನು ಸದ್ಭಕ್ತಿ ಯುಳ್ಳ ಮಾಹೇಶ್ವರನು ತನ್ನ ಶ್ರೋತ್ರಮುಖದಲ್ಲಿ ಕೇಳಿ . . . ಸಂತೋಷ ವನೆಯ್ದುಬಲ್ಲಡೆ ಆ ಸುಖವು ಪರಿಣಾಮವನೊಡಗೂಡುವುದು (ಅನಸಂ. ೨೦೩-೪೨೩). ೨. ಶಿವಭಕ್ತಿಪಂಥದ ಒಂದು ಪ್ರಭೇದ : ಪಾಶುಪತ, ಕಾಳಾಮುಖ, ಲಕುಲೀಶ, ಮಾಹೇಶ್ವರ, ಶೈವಸಿದ್ಧಾಂತ, ವೀರಶೈವ ಇವೇ ಮೊದಲಾದವು ಶಿವಭಕ್ತಿಪಂಥದ ಮುಖ್ಯಪ್ರಭೇದಗಳು (ಭಾಕಚ. ೩೦೬).[ಸಂ.]

**ಮಾಹೇಶ್ವರಜ್ವರ** (ನಾ). ೧. ಶಿವನ ಹಣೆಗಣ್ಣಿನಿಂದುಂಟಾಗಬಹುದಾದ ತೀಕ್ಷ್ಣವಾದ ತಾಪ : ಹರಂ ಮಾಹೇಶ್ವರಜ್ವರವನಟ್ಟಿದಂ ಹರಣದೊಳು ಹರಿವರಿಯ ತಾಪಮಂ ಕಟ್ಟಿದಂ (ಸಂಬರಿ. ೦೭-೦೦೩). ೨. ಒಂದು ಬಗೆಯ ಜ್ವರ : ವಿಷ್ಣುಕ್ರಾಂತಿಸಮೂಲ, ಕೊತ್ತುಂಬರಿ . . . ಸಕ್ಕರೆ ಪ್ರತಿಪಾಕವಿಕ್ಕಿ ಕೊಡಲು ಮಾಹೇಶ್ವರಜ್ವರವು ಬಿಡುವುದು (ಸಕಷ್ಟ. ೦೦೩). 'ಮಹೇಶ್ವರಜ್ವರ' ಪರಾ. [ಸಂ.]

**ಮಾಹೇಶ್ವರಸ್ಥಲ** (ನಾ). [ವೀಶೈ] ಷಟ್ಸ್ಥಲಗಳಲ್ಲಿ ಒಂದು : ಅಜಾದಿನ ಜಿದೆಂಬನ್ನಕ್ಕ ಮಾಹೇಶ್ವರಸ್ಥಲ (ಶದಗೋ. ೨-೦೦೬). [ಸಂ.]

**ಮಾಹೇಶ್ವರಿ** (ನಾ). ೧. ಪಾರ್ವತಿ. ೨. ಸಪ್ತಮಾತೃಕೆಯರಲ್ಲಿ ಒಬ್ಬಳು: "ಬ್ರಾಹ್ಮೀ, ಮಾಹೇಶ್ವರಿ . . . ಚಾಮುಂಡಾ – ಈ ೭ ಸಪ್ತಮಾತೃಕೆಯರ ಪೆಸರ್" (ಹಲಾಯು. ೪-೦೭). ೩. [ಸಂಗೀತ] ಸಪ್ತಸ್ವರಗಳ ಅಧಿ ದೇವತೆಗಳಲ್ಲಿ ಒಬ್ಬಳು: ಬ್ರಾಹ್ಮೀ ಮಾಹೇಶ್ವರಿ . . . ಚಾಮುಂಡಿಯುವ ರೆಂಬವರೇ ಕ್ರಮದಿಂದಾ ಷಡ್ಜಾದಿ ಸ್ವರಾಧಿದೇವತೆಗಳು (ಏವೇಳ. ೦೮೭).
[ಸಂ. ಮಾಹೇಶ್ವರೀ]

**ಮಾಹೈಷ** (ನಾ). ಕೋಣ : ಮೇಷವನು ಮಾರುತನ ಸಖ ಮಾಹೈಷವನು ರವಿಪುತ್ರ ನೈಋತಿಯಾ ಸಮಂಜಸನರನ ಚಂಡಿಯು ಬಲಿಗೆ ಬೇಕೆಂದು ಪೋಷಿಸುವರೆನಲು (ತತ್ವಸಿ. ೭-೪೪). ☞ ಇದು ಛಂದಸ್ಸಿಗಾಗಿ ಮಾಡಿ ಕೊಂಡಿರುವ ರೂಪ. [< ಸಂ. ಮಾಹಿಷ]

**ಮಾಳ₁**, ಮೋಳ₁ (ನಾ). ೧. ಗಂಡುಬೆಕ್ಕು ; ಬಾವುಗ : "ಮಾಳಂ ಮೋಳಂ ಪುಮ್ಮಾರ್ಜಾಳಮುಂ" (ಶಶಸಂ. ೪೩-೨೨೭). **ಮೋಳ₁** : ೧. "ಮೋಳಃ = ಗಂಡುಬೆಕ್ಕು" (ಕಾಶಬ್ದ. ೨೬೨) ; ಒಂದು ಮಡಕೆ ನೊರೆ ವಾಲಿಂಗೆ ಪೊಂಬತ್ತು ಮೋಳಂ ಗಡ (ಶಂತಶ. ೯೦-೩೭). ೨. (ಅಲಂ) ಕೊಬ್ಬಿರುವವನು ; ಗಡವ : ಕೊಬ್ಬಿದ್ದಾನೆ ಹ್ಯಾಗೆ, ನೋಡು ಮೋಳ (ಮೂಕಶಿಂದಾ. ೨೩೪).

**ಮಾಳ₂**, ಮಾಳಿ₁, ಮೆಳ್ಳೆ, ಮೋಳೆ₂ (ನಾ). ೧. (ಎತ್ತರವಾದ) ಬಯಲುಪ್ರದೇಶ, — ಮೈದಾನ : "ಮಾಳವೆನೆ ಬಯಲ್" (ಶಂಶೀಶ. ೨೩); ಅದಮಾನುಮುಟೀಮಾನಸನಾಗದೆ ಮಾಳದೊಳ್ ಪೋದ ದಾನಿನುಡುವ ಸೀರೆಗಮೆನ್ನನದಿರ್ಪ ಬಾರದೆ ಪೋದೆಡೆಯೊಳೆ ತಡೆದಾನವ ನೇದಪಂ (ಶಬಶಾ. ೦-೦೨೬) ; ಮರುಸ್ಥಳದ ಮಾಳದೊಳ್ ನಡುಪಗಲ್ಪರ್ಂ ಗ್ರೀಷ್ಮದೊಳ್ ಸುರುಳ್ವಿನೆಗಮುಟ್ಟಿ ಬೇವವರ್ಗೆ ಜೋಂಪವಿಮ್ಮಾವು ನಿರ್ಝರಾಂಬು ಕೊಳ್ವವೋಲ್ (ಅಂಶ್ರೀ. ೦೩-೬೩) ; ಗೌಡನು ಕೆರೆಯ ಅಚೆ ತೋಟನಲ್ಲಿ, ಅದರಾಚೆಯ ಮಾಳದಲ್ಲಿ ಸ್ವಲ್ಪ ಹೊತ್ತು ತಿರುಗಿ ಸುತ್ತ ನೋಡಿ ಊರ ಕಡೆಗೆ ಮರಳಿ ತಿರುಗಿದನು (ಸಹ್ಯಳ. I, ೬-೦೨೨). 'ಗೋಮಾಳ₁' ಪರಾ. ೨. (ಸಮುದ್ರದ ತಡಿಯಲ್ಲಿ) ಉಪ್ಪು ತಯಾರಿಸುವ ಸ್ಥಳ,– ಕಣ : ಬೇಸಗೆಯಲ್ಲಿ ಸಮುದ್ರದ ದಂಡೆಗೆ ಒಡ್ಡುಗಳನ್ನು ಹಾಕಿ ಚೌಕ ಮಾಳಗಳನ್ನು ಮಾಡಿ, ಅವುಗಳಲ್ಲಿ ಸಮುದ್ರ ಉಕ್ಕೇರಿದಾಗ ನೀರು ಕಟ್ಟುತ್ತಾರೆ (ಮುಂಬಗು. ೪-೦೯೬). ೩. ಒಬ್ಬಾತನ ಹೆಸರು : ಅಯ್ಬುಗನುಂ ಮಾಳನುಂ ಮಾರಗನುಂ ನಾಗ × × × ಮುದ್ದನು ಒಡನೆ ಸಿದ್ಧಿಸಿದರ್ (ಎಕ. VII, ಶಿವನೆ. ೨೪-೬; ಸು. 970 ?). 'ಮಾಳಕ್ಕ', 'ಮಾಳಬ್ಬೆ' ಪರಾ. **ಮಾಳಿ₁** : ೨. ಹುದುಲಿಲ್ಲದ ಉಪ್ಪಿನ ಮಾಳಿಗಳ ಹತ್ತಿರ ಮಹಾರಾಜರನ್ನು ಇಳಿಸುವ ವ್ಯವಸ್ಥೆಯನ್ನು ಮಾಡಲಾಗಿತ್ತು (ಗ್ರಾಮಜಾಯು. ೩೭೭). **ಮೆಳ್ಳೆ** : ೨. ಈಗ ಯಾವತ್ತು ಉಪ್ಪಿನ ಮೆಳೆಗಳು ಹಾಳು ಬಿದ್ದವೆ (ಕಭಾಗ. ೨೯) ; ಇಲ್ಲಿ ೧೨೮ ಆಗರಗಳಲ್ಲಿ ಕೂಡಿ ೧೯೪೦೦ ಮೆಳೆಗಳಲ್ಲಿ ಉಪ್ಪು ಮಾಡುತ್ತಾರೆ (ಕಭಾಗ. ೩೮೨). **ಮೋಳೆ₂** : ೧. [ಬೇ]ವಿನ ಮೋಳೆಯು ಚೌಡಗೊಂಡನ ಗದೆ ಖ ‖ C (ತೌಇಇ. IV, ೨೩೪-೭೩ ; 1513); ಊರ ಸಮೀಪದ ಹಾಳು ಮೋಳೆಗಳಲ್ಲಿ ಉಸುಕು ಭೂಮಿಗಳಲ್ಲಿ ಸಜ್ಜೆಯು ವಿಶೇಷವಾಗಿ ಬೆಳೆಯುವದು (ಕೃಶಿಶ್ರ. ೬೩). ೨. ಆ ಭೂಮಿಯ ಚತು ಸೀಮೆ ಮೂಡಲು ಹೆಬ್ಬುಣುಸೆಯ ಹಳ್ಳ ವುಪ್ಪಿನ ಮೋಳೆ ತೆಂಕಲು (ತೌಇಇ. IX-i, ೩೪೩-೩೩ ; 1226) ; ಅಲ್ಲಿಂದ ಬಡಗಲು ತಣ್ಣಸಹಳ್ಳಿಯ ಒಳಗೆರೆಯ ಉಪ್ಪಿನ ಮೋಳೆ (ಎಕ. XIV, ಮುಂಡ್ಯ. ೦೦೩-೯೯ ; 1516) ; ಸ್ವಂತ ಮೋಳೆಯಲ್ಲಿ ಬೇಕಾದಷ್ಟು ಉಪ್ಪು ಬರುವುದು (ಅದೂಟಿ. ೦೩). ೪. (ಉಪ್ಪುಮಣ್ಣಿನ) ರಾಶಿ, — ಒಟ್ಟಿಲು : (೬).

**ಮಾಳಂಮಾಡು, ಮಾಳ ಮಾಡು** = (ಅಲಂ) ಹಾಳುಮಾಡು : ಮಾಳವನ ಕೋಂಟೆಯ ಕೊಂಡು ಕೂಡೆ ಮಾಳಂ ಮಾಡುತ (ಸೀರಹು. ೪-೦೦) ; ಕ್ರೂರವಿಧಿಯು ಬಾಳಂಗೆಡಿಸಿ . . . ಮನೆಯ ಮುರಿದು ಮಾಳ ಮಾಡಿತು (ಅರ್ಜುನ. ೦೦೦). **ಮಾಳ ಕಟ್ಟು** =(ಯಾವು ದಾದರೊಂದರ ಸ್ಮಾರಕವಾಗಿ) ಬಯಲುಜಾಗದಲ್ಲಿ ಕಟ್ಟೆಯನ್ನು ಕಟ್ಟು : ಗುಂಡು ಇಟ್ಟ ಜಾಗದಲ್ಲಿ ಮಾಳ ಕಟ್ಟಿದಂಥಾದ್ದು. ಬೀರಗೌಡ ಸತ್ತ ಜಾಗಾ ಸಹಾ ತೋರಿಸಿ (ರಾಕೇಂದ್ರ. ೦೯೭). **ಮಾಳವಾಗು** = (ಅಲಂ) ಹಾಳಾಗು ; ಕೆಡು : ಮನೆ ಮಾಳವಾಯಿತ್ತು ಹೊಲ ಬೆಳೆಗೆಟ್ಟಿತ್ತು ಭಕ್ತ ಭವಿಯಾದ (ಸಳವ. II, ೬೪೩-೦೬೪೯).
[ದೇ.‖ ಕೊವ. ಮಾಳ / ಮರಾ. ಮಾಳ]

**ಮಾಳ₃** 'ಮಹಳ' ನೋ.

**ಮಾಳ₄** 'ಮಾಲ' ನೋ.

**ಮಾಳಂಗೊಳ್** (ಕ್ರಿ). ಬಯಲಿಗೆ ಬೀಳು ; ದಿಕ್ಕಾಪಾಲಾಗು : ಆ ಪಾರ್ವಂ . . . ಭಯಂಗೊಂಡಾಡಂ ಶ್ವಾನನೆಂದೀಡಾಡಿ ಮಾಳಂ ಗೊಂಡೋಡಿದಂ (ಶಂತಶಂ. ೦೯೬-೨). [ಮಾಳ₂ + ಕೊಳ್₁]

**ಮಾಳಕ್ಕ** (ನಾ). ಒಬ್ಬಾಕೆಯ ಹೆಸರು : ತುರಾವ್ಮನ ಪೆಣ್ಣತಿ ಮಾಳಕ್ಕ ಅಕ್ಕಣಬ್ಬೆಬೋಯಿತಿ ಕೋಟಿಯಮ್ಮನಕ್ಕಂ (ಪ್ಮಿಅಂ. ೦೬೩೯, ೭೯-೩ ; 964). [ಮಾಳ್ $_2$ + ಅಕ್ಕ $_1$]

**ಮಾಳಜಿಗೆ** (ನಾ). ಒಂದು ಬಗೆಯ ಆಯುಧ : ತೊಳಗುವ ಬಾಳಿ ತಟತ್ತಟಿಪ ಕಕ್ಕಡೆ. . . ಅಗುರ್ವಿಸುವಾವುಶಿ ಪೂಸಿದಂತಿರಿಟ್ಟಳಮವರ್ದಿರ್ದ ಮಾಳಜಿಗೆ ಪಕ್ಕರೆಯಿಕ್ಕಿದ ಜಾಯಿಲಂ ಭಯಂಗೊಳಿಸೆ (ಪಂಪಭಾ. ೦೨-೭೭). [ ? ]

**ಮಾಳತಿ** 'ಮಾಲತಿ' ನೋ.

**ಮಾಳಪಕ್ಷ** 'ಮಹಳಪಕ್ಷ' ನೋ.

**ಮಾಳಬೆ** 'ಮಾಳಬ್ಬೆ' ನೋ.

**ಮಾಳಬೆಕ್ಕು**, ಮೋಳಬೆಕ್ಕು (ನಾ). ಗಂಡುಬೆಕ್ಕು ; ಬಾವುಗ : ಆ ಆವರಣದಲ್ಲಿ ಗೂಬೆ, ಕಾಡುಪಾರಿವಾಳ, ಬಾವಲಿ, ಮಾಳಬೆಕ್ಕು — ಇವು ನಮ್ಮ ಬಂಧುವರ್ಗವಾಗಿದ್ದುವು (ಹುಮಾಬಾ. ೦೬). **ಮೋಳಬೆಕ್ಕು :** ಬಾವಲಿಗಳು ಹೊರಬಿದ್ದ ಒಂದೆರಡು ಕ್ಷಣಗಳಲ್ಲಿ ಅಲ್ಲಿನ ಮೋಳಬೆಕ್ಕುಗಳು ಹೊರಬೀಳುತ್ತವೆ (ಸರಕ. ೭೭) ; ಬೆಳಗೂ ಕಡೆದ ಬೆಣ್ಣೆ ಮೋಳಬೆಕ್ಕಿನ ಪಾಲಾಯಿತು (ಗಾದೆ). [ ಮಾಳ್ $_1$ + ಬೆಕ್ಕು (<ಬೆರ್ಕು) ]

**ಮಾಳಬ್ಬೆ**, ಮಾಳಬೆ (ನಾ). ೧. ಒಬ್ಬಾಕೆಯ ಹೆಸರು : ಶ್ರೀಮದ್ದೇವಣನ್ದಿಭಟ್ಟಾರಕರ ಗುಡ್ಡಿ ಮಾಳಬ್ಬೆ ಕಡಸತವಾದಿಯ ತೀರ್ತ್ಥದ . . . ಬಸದಿಗೆ ಕೊಟ್ಟಳ್ (ಎಕ. II (R), ೩೨೦-೨ ; ?). **ಮಾಳಬೆ :** ೨. ಒಂದು ಕ್ಷುದ್ರದೇವತೆಯ ಹೆಸರು : ಕಾಳಿ ಕೊಳ್ಗೆಜಿಯಪಂ ಮುಜಿದಿಕ್ಕುಗೆ . . . ಮಾಳಬೆ [ಶಾಶಂ. ಟಿ]ಗಿಂದು ಮೊಗಮಾರವೆತ್ತುಮೆಂ (೮೮ಚಾಪ. ೨-೦೦೭) ; ಟಕ್ಕಿಪನಂ ತುಟಾ ಪೋಗುಡೋರ್ಪನಂ ಮಾಳಬೆ [ಶಾಶಂ. ಟಿ]ಗಿಕ್ಕು (೮೮ಚಾಪ. ೨-೦೦೭). [ಮಾಳ್ $_2$ + ಅಬ್ಬೆ $_1$]

**ಮಾಳಯ** ' ಮಹಳ ' ನೋ.

**ಮಾಳವ** (ನಾ). ೧. ಒಂದು ದೇಶ ಮತ್ತು ಆ ದೇಶದ ಜನರ ಭಾಷೆ : ಯತ್ಪ್ರಾದಾನತಿವಾತ್ರಾಮೇಕಶರಣಾನಾಲೋಕ್ಯಲಕ್ಷ್ಮೀರ್ಧಿಯಾ ದೂರಾನ್ಮಾಳವನಾಯಕೋನಯಪರೋ ಯತ್ರಾಣ ಬದ್ಧಾಞ್ಜಲಿಃ (ಎಕ. III (R), ಪಂಜಿಪ. ೨೭೬-೪೩; 808); ಕರ್ಣಾಟಾಂಧ್ರ ದ್ರವಿಡ ಮರಾಟ ಲಾಟ ಮಾಳವ . . . ತೌಳವಾದಿ ದೇಶಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವವಿಷಯಭಾಷಾಜಾತಿಗಳಕ್ಕುಂ (ಶಂದೋಂಬು. ೦-೪೭ ವ) ; ಅಂಗ ವಂಗ ಕಳಿಂಗ ಕೊಂಗ ಮಾಳವ . . . ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗಟ್ತುಮಿರೆಯಿರೆ (ಜಗಪಿ. ೨-೩೯ವ). ೨. [ಸಂಗೀತ] ಒಂದು ರಾಗದ ಹೆಸರು : ಮಾಳವ ಗೌಳ ಬಂಗಾಳ ಗೂರ್ಜರಿ ಕರ್ನಾಟ ಕಾಂಭೋಜಿ ಕೇತಾರಂಗಳ್ ದೇಶಿಯವಾಗಿವೆ (ಹಮ್ಮಾರ. ೨-೯೦ ವ) ; ಮಾಳವಮಾ ಶ್ರೀರಾಗಂ ಸಾಳಗಮುರು ನಾಟಿ ಶಂಕರಾಭರಣಂ (ವ್ಯಕಪ. ೦೦-೦೦). ೩. [ಕಾಮಶಾ] ಮದನ, ಚಿತ್ರಕ, ದಮನ ಮತ್ತು ಮಾಳವ ಎಂಬ ಪುರುಷರ ನಾಲ್ಕು ಬಗೆಗಳಲ್ಲಿ ಒಂದು : ಅಸುರಕ್ತ ಭಾವದಿಂ ಪದ್ಮಿನಿ ಮೊದಲಾಗಿರ್ಪ ನಾಲ್ಕುಜಾತಿ ಸ್ತ್ರೀಯರ್ಗಿನಿಯರ್ ವರ್ತಿಪರಿಂತು ಮದನ ಚಿತ್ರಕ ದಮ[ನ ಮಾಳ]ವಾಖ್ಯರೆಸಿಪ್ಪರ್ (ಪುಷ್ಪಪ. ೨-೦೧). [ಸಂ. ಮಾಲವ]

**ಮಾಳವಕೌಶಿಕೆ** (ನಾ). [ಸಂಗೀತ] ಒಂದು ರಾಗದ ಹೆಸರು : ಷಡ್ಜಗ್ರಾಮ . . . ಮಾಳವಕೌಶಿಕೆಯೆಂಬಾಜು ಶುದ್ಧಜಾತಿಯಿಂದಾದ ರಾಗಂಗಳು (ಖವೇಳ. ೦೬೭). [ಸಂ. ಮಾಲವಕೌಶಿಕ]

**ಮಾಳವಗೌಳ** ' ಮಾಲವಗೌಲ ' ನೋ.

**ಮಾಳವಶ್ರೀ** ' ಮಾಲವಶ್ರೀ ' ನೋ.

**ಮಾಳವಿ** (ಗು). ೧. ಮಾಳವದೇಶಕ್ಕೆ ಸಂಬಂಧಿಸಿದ. (ನಾ). ೨. ಮಾಳವದೇಶದ ರಾಜಪುತ್ರಿ. ೩. ರಾಮಾಯಣದ ಭರತನ ಪತ್ನಿಯ ಹೆಸರು : ಬಳಸಿದರು ಬಳಿಕವನಿಜೆಯನೂರ್ಮಿಳೆ ಮಹಾಮಾಂಗಲ್ಯಕನ್ಯಾಕುಲಶಿರೋಮಣಿ ಮಾಳವಿ [ಶಾಶಂ. ಮಾಂಡವಿ, ಮಾಳವ] ಶ್ರುತಕೀರ್ತಿಯೆಂಬವರು (ತೊರರಾ. ೦-೦೩-೨); ಅಸತ್ತವಿರ್ಗೆಜಗಿ ಪರಕೆಗೊಂಡೆನಿಲ್ಲ ! ಮಾಳವಿಯುರಂ ಬೆಸಗೊಂಡೆನಿಲ್ಲ ! (ರಾಮಾಶ್ವ. ೨೭-೨೭). ೪. [ಸಂಗೀತ] ಒಂದು ರಾಗದ ಹೆಸರು : ಪಡಾರ ಶಕ್ಕರಾಗ ಮಾಳವಿ . . . ಹಿಂದೋಳವೆಂಬೆಂಟು ಅಪ್ಪಸಾಧಾರಣದಿಂದಾದ ರಾಗಂಗಳು (ಖವೇಳ. ೨೩೩); ದೇಶಿ ಗುಜ್ಜರಿ ಮಾಳವಿಯಾಹೇರಿ . . . ಒಲ್ದು ಪಾಡಿದ (ತ್ರಿಪುಚ. ೭-೬೦). [ಸಂ. ಮಾಲವೀ]

**ಮಾಳವಿಕ** (ನಾ). ಒಂದು ಬಗೆಯ ಸಸ್ಯ ; ತಿಗಡೆ : " ಮಾಳವಿಕಮೆನೆ ತಿಗಡೆ " (ಪಂಗರಾ. ೯೨-೩೯). [ಸಂ. ಮಾಲವಿಕಾ]

**ಮಾಳವಿಗ** (ನಾ). ಮಾಳವದೇಶಕ್ಕೆ ಸೇರಿದವನು : ವಿಜಯಂ . . . ಮಾಳವಿಗರಂ ಕೆಟಗಿವಿಗೆಯ್ಯಲೀಯದಾಟಂದು ನಿಜನಾಮಾಂಕಿತಸಾಯಕಂಗಳಿಂದೆಚ್ಚು ನಚ್ಚಂ ಕಿಡಿಸಿ (ಪಂಪಭಾ. ೭-೨೯ ವ). [ಮಾಳವ + — ಇಗ]

**ಮಾಳಾಕಾರ** ' ಮಾಲಾಕಾರ ' ನೋ.

**ಮಾಳಾವೃತ್ತ** ' ಮಾಲಾವೃತ್ತ ' ನೋ.

**ಮಾಳಿ $_1$** ' ಮಾಲಿ ' ನೋ.

**ಮಾಳಿ $_2$** (ನಾ). ಸಂಭೋಗಕ್ಕೆ ಅಸಮರ್ಥಳಾದವಳು : (?). [ ? ]

**ಮಾಳಿಂಗಿ** (ನಾ). ಒಂದು ಸ್ಥಳದ ಹೆಸರು : ತೊಣವಳ್ಳಿಯ ಗುಡ್ಡರ ಪುಬ್ಬಾಮಿಗಂಗೆ ಮಾಳಿಂಗಿ ಗ್ರಾಮಿಗಿತ್ತಿಯಾಂಗೆ ಪುಟ್ಟಿದ ಶ್ರೀಮಾರಂ (ಎಕ. VII, ಶಿಕಾಂ. ೨೮೬-೩ ; ಹು. 830). [ ? ]

**ಮಾಳಿಗ** (ನಾ). ಮೋಸಗಾರ ; ಕಪಟಿ : ಅನ್ಯತಕ್ಕೆ— ಅಟಮಟಿಗಂ. ಮಾಳಿಗಂ. ಪುಸಿಗಂ (ಕಪುದ. ೦೯೭ ಕೃಪೋ). [ಮಾಳ್ $_4$ (=ಮಾಲ) + — ಇಗ]

**ಮಾಳಿಗೆ $_1$**, ಮಾಣಿಗೆ (ನಾ). ೧. ಮೇಲಿನ ಅಂತಸ್ತು ; ಮಹಡಿ ; ಉಪ್ಪರಿಗೆ : ಕಂಬ ಮಣಿದು ಮಾಳಿಗೆ ಉಳಿದು ಬೆಂಬಳಿವಿಡಿದೈವರು ಮಂದಿ ತುಂಬಿತ ಕೈಮುಟಿದರು ನೋಡಿರೇ (ಅವತಂ. ೨೪೭-೦೩೦೦); ಮೇಲಣ ನೆಲೆಯ ಮಾಳಿಗೆಗೆ ಚಿತ್ತೈಸು (ಭರತ. ೯-೦೩೭); ಮಾಳಿಗೆಯಿಂದ ಸೇವಕನೊಬ್ಬನು ಇಳಿದು . . . ಹೇಳಿದನು (ಹೋಂರರು. ೦೯). ೨. ಉಪ್ಪರಿಗೆಯಿರುವ ಮನೆ; ಸೌಧ : ಮಾಳಿಗೆಯ ಮಾಳಿಗೆಯ ಮನಂಗೊಳಿಸುವ ನಾನಾಪ್ರಕಾರದಂಗಡಿಯುಂ . . . ವಿಳಾಸದಿಂದೆಂತು ನೋಟ್ಪಡಂ ರಮಣೀಯಂ (ಸುಕುಮಾ. ೯-೬೯); ಗುಡಿಸಿಲ್ ಚಿಲ್ವಾಗಿಯುಂ ಮಾಳಿಗೆಯಲ್ಲದು (ಧರ್ಮಾಮೃ. ೦೦-೮೩ ವ). ೩. ಮನೆಯ ಮೇಲಿನ ಮಣ್ಣಿನ ಹೊದಿಕೆ,—ಮಣ್ಣಿನ ಮೇಲ್ಛಾವಣಿ : ಎಡೆಯ ಮಾಳಿಗೆಯ ಜಂತೆಯನುಚ್ಚಿ ಪಟುಮಾಡಿದರ್ಬೆಂಕಿಯಂ (ಇಳಿ. ದೀ. ೩೩-೭); ಲತೆಯ ಎಳಗುಡಿ ಮಾಳಿಗೆಗೆ ತೊಳೆಯೆ (ಉಪ್ಪಾಕೀ. ೩-೦೪); ಬೆಳ್ಳಿಯ ಬಟ್ಟಲಿನೊಳಾ ಮುತ್ತುಗಳಂ ಇರಿಸಿ ಮಾಳಿಗೆ ಮೇಲೆ ಮಡಗಲೂ ಆಗಲೆ ಮಳೆಬಂದರೆ ಆ ಮುತ್ತಂ ನಾಗರತ್ನವೆಂದು ತಿಳಿಯುವುದು (ಶಾಗಂಥ. ೩೭೭-೦೩). **ಮಾಣಿಗೆ :** ೧. ಅಲ್ಲಿಗೆ ಪೂರ್ವೈಸಿತ್ತು. ಅಂದು ಹೂವಳ್ಳಿಯ ಆ ಮಾಣಿಗೆ ಒಳಗೆ ನಡೆದಿದ್ದ ಆ ಮುಗ್ಧಘಟನೆ (ಕುಲಮ. ೮೨); ಅವಳನ್ನು ಮಾಣಿಗೆಗೆ, ಆಗ ತಾನೆ ಮಿಹದಿಂದ ಹಿಂತಿರುಗಿದ್ದ ಚಿನ್ನಮ್ಮನ ಬಳಿಗೆ ಕರೆದೊಯ್ದರು (ಕುಲಮ. ೬೪೨). [< ಸಂ. ಮಾಲಿಕಾ./ತಮಿ. ಮಾಳಿಕೈ]

**ಮಾಳಿಗೆ $_2$** (ನಾ). ಒಂದು ಕ್ಷುದ್ರದೇವತೆಯ ಹೆಸರು: ಎಲ್ಲಾಯಿ ಯಕನಾತಿ ಬಸದ ಶಂಕರಿ ಮಲ್ಲಗ ಜಟ್ಟಿಂಗ ಮಾಳಿಗೆ ಮಸಿದೇವಿ (ವಿಕಾಸು. ೩೬-೨). [?]

**ಮಾಳಿಗೆಮನೆ** (ನಾ). ೧. ಮಹಡಿಮನೆ ; ಉಪ್ಪರಿಗೆಮನೆ : ಹೂವಿನ ಹಡಂಗಿಲೆಯ ಚಲ್ಲಿಯ ಕೇರಿಯಲ್ಲಿವರ ಮಾಳಿಗೆಮನೆ (ಶಾಇಇ. IX-i, ೨೩೯-೭೭; 1178); ಮಾಳಿಗೆಮನೆಯು ಇರಲಿ ಜಾಳಿಗೆ ಹೊನ್ನಿರಲಿ ಆಳುಮಂದಿ

ಶಾನೆ ಇರಲಿ (ಪುಕಂವ. ೨-೪೯-೪); ಧರೆಯಲ್ಲಿ ಸೊಗಸಾದ ಮಾಳಿಗೆಮನೆಗಳಿರಲಿ ಕೆರೆ ತೊರೆಗಳಿಂದೆಸೆವ ಪಟ್ಟಣಗಳಿರಲಿ (ಕುಪು. ೦೯-೧). ೨. ಹೆಂಚಿಗೆ ಬದಲಾಗಿ ನೆಲದಂತೆಯೇ ಸಮನಾಗಿರುವ ಮಣ್ಣಿನ ಮೇಲ್ಛಾವಣಿಯಿರುವ ಮನೆ: ಮಾಳಿಗೆಮನೆಗಳಲ್ಲಿ ವಾಸ ಮಾಡುವುದರಿಂದ. . . ಶರೀರಕ್ಕೆ ಸುಖಾಲಘುತರವಾಗಿರುವುದು (ಕಳಪ್ರ. ೩೭) ; ಬೈಲುಸೀಮೆಯಲ್ಲಿ ಮಳೆ ಕಡಿಮೆ ಬೀಳುವುದರಿಂದ ಮಾಳಿಗೇಮನೆಗಳನ್ನು ಕಟ್ಟುವ ನಡಾವಳಿ ವಿಶೇಷವುಂಟು (ಮುಂಬಯಿ. ೯-೦೦೬). [ಮಾಳಿಗೆ$_1$ + ಮನೆ]

**ಮಾಳಿಡು** (ಕ್ರಿ). ಮೋಸ ಮಾಡು; ವಂಚಿಸು: ಊಳಿಡು, ದೂಳಿಡು. ಮಾಳಿಡು (ಶಬ್ದಾ.ಸು. ೬೬೬ ಪ್ರಯೋ). [ಮಾಳ್$_4$ (= ಮಾಲ) + ಇಡು$_1$]

**ಮಾಳಿಯಬ್ಬೆ** (ನಾ). ಒಬ್ಬಾಕೆಯ ಹೆಸರು: ಅಜವರ್ಮ್ಮರಸನುಂ ಮಾಳಿಯಬ್ಬರಸಿಯುಂ. . . ಕಾಲಂ ಕರ್ಚಿ ಧಾರಾಪೂರ್ವ್ವಕಂ ಮಾಡಿ ಬಿಟ್ಟ ವೃತ್ತಿ (ಎಕ. XI. ಮೊಳಕಾ. ೪೦-೩; 987). [ಮಾಳಿ$_?$ + ಅಬ್ಬೆ$_1$]

**ಮಾಳಿರಾಸಿಗ** (ನಾ). ಒಬ್ಬಾತನ ಹೆಸರು: ಮಾಳಿರಾಸಿಗನುಮೊ × ಜೀಯರ ವೆಚ್ಚ ೧ ಗುಂಯ್ಯಲಂ ೩ ಮತ್ತ ಕಿಯ್ಯುಮಂ ಬಿಟ್ಟರ್ (ಎಕ. XI. ಮೊಳಕಾ. ೨೭-೭; 962). [ ? ]

**ಮಾಳಿ$_1$** 'ಮಾಳ್$_2$' ನೋ.

**ಮಾಳಿ$_2$** 'ಮಾಲೆ' ನೋ.

**ಮಾಳಿಸೋಗ** (ನಾ). "ಪರರ ವಸ್ತ್ರವನ್ನು ಹಾಕಿಕೊಂಡು ಬಡಿವಾರ ಮಾಡುವ ಆಗಸ" (ವಿಸ್ತೋಸು. ಟಿಪ್ಪಣಿ): ಲೌಕಿಕವೆಲ್ಲಾ ಬ್ರಹ್ಮಸ್ವರೂಪವೆಂದು ವೈಕಾರಿಕಮಾರ್ಗ ಕಾಣದವ ಅವನೆ ಮಾಳಿಸೋಗನೋ (ವಿಸ್ತೋಸು. ೯೩-೧). [ಮಾಳಿ$_?$ + ಸೋಗು$_2$ + —ಅ$_7$]

**ಮಾಳ್ಕಿ** ' ಮಾಟ್ಕಿ ' ನೋ.

**ಮಾಳ್ದಿ** (ನಾ). ಒಂದು ಸ್ಥಳದ ಹೆಸರು: ಕಮ್ಮಾರ್ ಕೊಟ್ಟಲೆಯ ಮುದುವುಣುಸೆ ಮಾಳ್ದಿಯುಳ್ ಕೂಡಿತ್ತು ಸೀಮೆ (ಎಕ. XVI, ಗುಬ್ಬಿ. ೭೩-೩೯; 733). [ ? ]

**ಮಾಳ್ಪ** 'ಮಾಡು$_1$' ಪರಾ.

**ಮಾಳ್ಮುಕಿ** (ನಾ). ಗಂಡನನ್ನು ಅಗಲದವಳು; ಗಂಡನ ಜೊತೆಯಲ್ಲೇ ಇರುವವಳು: "ಮಾಳ್ಮುಕಿ — ಗಂಡನ ಪತ್ನಿ ಬಿಡದಾಕೆ" (ಕವಿದ. ಕಂ. ೨). 'ಮಗಳ್ಮಾ' ಪರಾ. [ ? ]

**ಮಾಳ್ವೊಪೊಟ್ಟೆ** (ನಾ). ಒಬ್ಬಾಕೆಯ ಹೆಸರು: ವೀರವೂರ ಮಾಳ್ವೊಪೊಟ್ಟಿಯರಾ ಕುಡಿಮುದ್ದನ್ ಮೇರೆಯುಳ್ಳಿಱದು ವಿಟ್ಟನ್ (ಎಕ. V. ತನ್ನರಾ. ೨೦೬-೯; ಸು. 770). [? + < ಪೊಡ್ಡಿ]

**ಮಾಱಂಕ**, ಮಾರಂಕ (ನಾ). ೧. ಮತ್ತೊಂದು ಯುದ್ಧ; ಬೇರೊಂದು ಕಾಳಗ: ನಿಮ್ಮ ತೆಱದಿಂ . . . ಕಾದಲೆಂದು ಕಳದೊಳ್ ಮಾಱಂಕಮಂ ಬೇಡಿ ಬಂದುಲಿವರಾ (ವರ್ಧಪು. ೭-೩೯). ೨. ಎದುರುಕಾಳಗ: ಪ್ರತಿಭಟನೆ: ಗವುಂಡಗಾಱದೆ ಬಾರಿಕಂಗೆ ಕಳ್ಳಂಗಾಱದೆ ಬಟ್ಟೆವೋಪಂಗೆ ಮಾಱಂಕಕ್ಕಾಱದೆ ಸಂಕದ ಗೊರವಂಗೆ . . . ಮುನಿವರ್ (ರಭಸಾಭ್ಯು. ೭-೦೧೯). ೩. ಎದುರಿಸುವ ಮಹಾಪರಾಕ್ರಮಿ; ಪ್ರತಿಭಟ; ಶೂರನಾದ ಎದುರಾಳು: ಅಂಕ ಕಳನೇಱಿ ಕೈವಱದಿರ್ದೊಡೆ ಮಾಱಂಕ ಬಂದಿಱುವುದ ಮಾಣ್ಬನೆ (ಶಕವ. ೦೭೬); ಮಧು ತೆತ್ತಿಗಂ ವಿರಹಿ ಮಾಱಂಕಂ ನೃಪಂ ಚಿತ್ತಸಂಭವನಾಗಲ್ಕಡುಕೆಯ್ದು ಕಾಯ್ದು ಕಳನಂ ಬಂದೇಱುವಂತೆ (ಸೂಕ್ತಿಸು. ೯-೨೦೯). ೪. ಪ್ರತಿಸ್ಪರ್ಧೆ; ಹುರುಡು: ದೇವವಿಟರ್ಗೆ ಮಾಱಂಕದ ಕದಂ . . . ಅಳಿತುನವರ್ಗೆ ತೆಗೆವ ಕದವಲ್ಲೆಂದು ಪಲಕಿಲವು ಕಟಕಿಗಳನಾಡೆ (ಜಂಜರಿ. ೦೩-೬೩); ಮದನನ ಮಾಱಂಕದ ಭಂವದ ಗಂಡನಂ . . . ಇವಳೋವದೆ ಕೊಂಬಳ್ (ಯಶೋಚ. ೩-೭೩); ಉದಯಿಸುವ ಸಹಸ್ರಕರಮಂಡಲಕ್ಕೆ ಮಾಱಂಕಮಾವ ತೇಜಃಪ್ರತಾಪಂ ಮಾಱಂಕಗಮನೆಯ್ದೆ ಕಣ್ಣಾಲ್ಕೆ ಬಿಳ್ಕುಱಿಸುವಿನೆಗಂ (ಅಸಂಕು. ೦೩-೯೦ ವ). ೫. ಪ್ರತಿಸ್ಪರ್ಧಿ; ಹುರುಡಿಗ: ಜೋಜೋ ಯತಿಗಳ ಮನದ ಮಾಱಂಕವೆ ಜೋಜೋಯೆಂದು ತೂಗಿದರು (ಅಂತಕ. ೯-೫೩). ೬. ಸವಾಲಾಗಿರುವವಳು: ಧೀರರಿಗೆ ಮಾಱಂಕವನು ಪರಪಾರಿಕಾಂಕ್ಷಿಯ ಚಿತ್ತಚೌರ್ಯವಿಹಾರಿಯನು ದ್ರೌಪದಿಯನಭಿವರ್ಣಿಸುವಡಾರು (ಕುಪ್ಪಾ. ಆ. ೦೩-೨೨). **ಮಾರಂಕ**: ೨. ಸೈನ್ಯದ ಆಯಕಟ್ಟಿನ ಸಮಯ ಸಂಪ್ರದಾಯಗಳನ್ನೆಲ್ಲ ತನಗೆ ಪಿತ್ತವೇರಿದಂತೆ ತಿರುಗಿಸಿ ಮಾರಂಕ ಮಾಡಿ (ಮುಂಜ್ರಶ. ೭೭-೨೩). [ಮಾಱು$_2$ + ಅಂಕ$_3$]

**ಮಾಱಂಡಲ**, ಮಾಱಂಡಳ (ನಾ). ಸಮಾನ; ಸಾಟಿ; ಎಣೆ: ನೆಲಸಿದ್ದಮ್ಮೊಂಟಿ ಬಿಣ್ಪಂ ಬಡಗಣ ದೆಸೆಯುಂ ಕೊಣ್ಬು ನೆಲ್ದಪ್ಪುದೋರಂಡಲ ಮುಳ್ಳುಂ ವಿಶ್ವಮೆಂದುಮ್ಮಳಿಸಿ ಬೆಸಸೆ ವಿಶ್ವಾಮರಶ್ರೇಣಿ ಮಾಱಂಡಲವಾದಂ ತೆಂಕಮುಯಿಮುಟ್ಟಿರಡು ದೆಸೆಯೊಳಂ ತೂಕಕಂಬದಿಂ. . . ಕುಂಭಜನ್ಮಂ (ಜಾಂಬೇಶ. ೨೪-೪೦; 12ನೆಯ ಶಕ); ಅಂಬುರಾಶಿಗೆ ಮಾಱಂಡಲವಾದ ಗುಣ್ಪು (ಎಕ. XI, ದಾವಣ. ೨೩-೭೭; 1224). **ಮಾಱಂಡಳ**: ಎನ್ನು ದಾನಿಯ ಸುರೋರ್ವ್ವಿಜಕ್ಕೆ ಮಾಱಂಡಳಂ ಸುರರಾಜಂಗೆಣೆಯೆಂದು ಕೀರ್ತ್ತಿಪ್ಪುದು (ಎಕ. II, ೦೪೨-೦೭; 1139); ಅರ್ಣವನ್ತಮರಕುಜಕೆ ಮಾಱಂಡಳಂ ನೋಳ್ಪಡನ್ತಾ . . . ಭೂಪಾಲರೋಳ್ (ಎಕ. XII, ಕುಣಿಗಲ. ೯-೩; 1151); ಶರದಾಕಾಶಮಂಡಳದ ಶಶಿಮಂಡಳಕ್ಕೆ ಮಾಱಂಡಳಮಾಗಿ (ವರ್ಧಪು. ೭-೪ ವ). ' ಓರಂಡಲ ' ಪರಾ. [ಮಾಱು$_2$ + ಅಂಡಲ$_?$]

**ಮಾಱಂಡಳ** 'ಮಾಱಂಡಲ' ನೋ.

**ಮಾಱಂಬು**, ಮಾರಂಬು (ನಾ). ೧. (ಗುರಿ ಇಟ್ಟು) ಹೊಡೆದ ಬಾಣ: ಭೋಂಕನೆ ಕಂಡು ಮಾಱಂಬಿಗೆ ಪಕ್ಕಾದ ಬೆಳ್ಮಿಗದಂತೆ (ಶಂಖಪು. ೦೦-೫೦ ವ). **ಮಾರಂಬು**: ೨. ಪ್ರತಿಯಾಗಿ ಬಿಟ್ಟ ಬಾಣ: ಈತ ಮತ್ತದಕ್ಕೆ ಮಾರಂಬು ತೂರುವನು (ಜಾಪುಕ. ೩೦). [ ಮಾಱು$_1$ + ಅಂಬು$_2$]

**ಮಾಱಣೆ** (ನಾ). ಪ್ರತಿಸೈನ್ಯ; ವೈರಿದಳ: ನನೆವಿಲ್ಲ ಬಲ್ಲಹಂ ಮಾಱಣೆಯುಂ ನೆಟ್ಟನೆ ತೋಳ್ವಲದಿಂದೆಬ್ಬಿಟ್ಟದಂ (ಕಬ್ಬಿಗಾ. ೨೬೩). [ಮಾಱು$_2$ + ಅಣಿ$_3$]

**ಮಾಱಪ್ಪು** (ಕ್ರಿ). (ಅಲಂ) (ಹಿಂದಕ್ಕೆ ಬಂದು) ಪ್ರತಿಯಾಗಿ ಅಪ್ಪಳಿಸು, — ಹೊಡೆ: ಗಳೆ ಮಾಱಪ್ಪುತರಸನನಲು ಹೊಯ್ದನು ಭಾಳದಲಿ ಭೀಮು (ಕುಪ್ಪಾ.ಗ. ೭-೨೦). [ಮಾಱು$_2$ + ಅಪ್ಪು$_1$]

**ಮಾಱಾಟ**, ಮಾರಾಟ$_1$ (ನಾ). ಹಣ ಪಡೆದು ವಸ್ತುವನ್ನು ಕೊಡುವುದು; ವಿಕ್ರಯ: "ಪರಿವೃತ್ತಿ ವಿನಿಮಯಂ ಮಾಱಾಟಮೆಂದೆನಿಕ್ಕುಂ" (ಮಂಗರಾ: ೦೦೨-೨); ಮನೆ ಮಾಱಾಟಂ ರಸಾದ್ಮಾಪಧಂ ಭ್ರಾಂತಿಯ ತೋರ್ಪ್ಪವೈ (ಸೋಬೀಶ. ೨೩); ಘೋಟಕರಥ ಹಸ್ತಿ ಪದಚರಾದಿಗಳ ಮಾಱಾಟದಂಗಡಿಗಳೊಪ್ಪಿದುವು (ಬೋಕಪ. ೩-೩೦). **ಮಾರಾಟ$_1$**: ಕಪ್ಪುರ . . . ಅದರ ಹಲಗೆಗಳನ್ನು ಮಾಡಿ ಮಾರಾಟಕ್ಕೆ ಕಳುಹುವರು (ಮುಂಬಯಿ. ೯-೭೦); ರಣ ಮರಣದ ಸಂತೆ ಮಾರಾಟಕೆ ಏರಾಟಕೆ ಹೊರಚೆಲ್ಲಿದೆ ಇಲ್ಲಿ (ಸೂರ್ಯಶಾ. ೪-೩).

[ಮಾಱು$_1$ + ಆಟ. / ತಮಿ. ಮಾಱಾಟ್ಟಮ್ ; ತುಳು. ಮಾರಾಟ]

**ಮಾಱಾಡು**, ಮಾರಾಡು (ಕ್ರಿ). ೧. ಹಣಕ್ಕೆ ಬದಲಾಗಿ ವಸ್ತುವನ್ನು ಕೊಡು; ವಿಕ್ರಯಿಸು: ಮಾರು: ಪೆತ್ತ ಕೊಡುಗೂಸು ಪಣಕೆ ಮಾಱಾಡಿ (ರಾಜಶೇ. ೭೯-೩). ೨. ಒಂದು ವಸ್ತುವನ್ನು ಕೊಟ್ಟು ಇನ್ನೊಂದು ವಸ್ತುವನ್ನು ಪಡೆ; ಬದಲಾಯಿಸಿಕೊಳ್ಳು; ವಿನಿಮಯ ಮಾಡಿಕೊಳ್ಳು: ಪುವುಂಗೊಳಿಸಿದ ಕೆಂಪಂ ನೀರ್ವೊರ್ೞ್ಕುಳಿಯೊಳ್ ಮಾಱಾಡಿಕೊಂಡ ತೆಱದಿಂ ತೋರ್ಕುಂ (ಕಾವ್ಯಾವ. ೬೦೩); ಲಲನಾಸಂತತಿ ಪಲ್ಲವಾಧರದ ಕೆಂಪಂ ಕಣ್ಮಲರ್ಗಿತ್ತು ಕಣ್ಮಲರ್ವೆಳ್ಪಂ ನಿಜಪಲ್ಲವಾಧರಕೆ

ಕೊಟ್ಟಂದಿಂಗ ಮಾಱಾಡಿ [ಶಾಕಾಂ. ಜಿತೊತಿಡ್ಡಿ]ತೀ ಸಲಿಲಕ್ರೀಡೆಯೊಳ್ (ಶಗವಿ. ೧೪-೧೧೨). **ಮಾರಾಡು :** ೧. ಈ ಕೋಟೆಯು ಹದದ ಬೇಹಸ್ನು . . . ನಂಜರಾಜನ ಗೂಢಚಾರರಿಗೆ ಅರುವತ್ತೆಂಟು ವರಹಗಳಿಗೆ ಮಾರಾಡಿ (ಕಟ್ಟಿಆ. ೩೦-೧೯). ೩. ಎದುರಾಡು ; ಪ್ರತಿಯಾಗಿ ಮಾತನ್ನಾಡು : ಮಾಡದಿರ್ ವ್ಯಸನ ಮಡದೀಯೆನಲು ಮಾರಾಡಿದಳು ಬಲುದುಗುಡದಿ (ಕುವಹಾಂ. ೩೨). [ಮಾಱು$_1$ + ಆಡು$_1$]

**ಮಾಱಾಣೆ** (ನಾ). ಆಣೆಗೆ ಪ್ರತಿಯಾಗಿ ಮಾಡುವ ಆಣೆ : ನಿರ್ಣಯ ಮಾಡದೆ ಮಾಱಾಣೆಯಿಡೆ . . . ಆಣೆಗೆ ನಿಲ್ಲುದಲ್ಲದೆ ಮಾಱಾಣೆಯನಿಡಲಾಗದು (ಶಿತಿವಾ. ೧೬-೨೬). [ಮಾಱು$_2$ + ಆಣೆ$_3$]

**ಮಾಱಾನ್**, **ಮಾರಾನ್** (ಕ್ರಿ). ಎದುರಿಸು ; ಪ್ರತಿಭಟಿಸು : ಕವನದೊಳಿದಿರಂ ಮಿಾಱಿ ಮಾಱಾಂತು ನಿಂದಾಂತರಿಭೂಪರ್ ಭಸ್ಮಮಾದರ್ (ಕಾವ್ಯಸಾ. ೨೦೩ ಕೂದ್ರಳ); ಎನಗಿಂ ಮಾಱಾಂಪರಾರ್ ತೋಱಿರೇ (ಶಂಶಭಾ. ೦೩-೮೪) ; ತಾಂ ಗಡೆನಗಂ ಮಾಱಾಂಪ ಗಂಡಂ ಗಡ (ಶುರಾವಾ. ೪-೬೨); ಬಳ್ಕದಳ್ಕದೆ ಮಾಱಾಂತಿದಿರ್ಚಿ ಸಾವ ನಿನ್ನೀ ನೊಸಲಕ್ಕರದೋದಿಂಗೇನೆಂಬೆನೊ ! (ರಾವಹಾಕ್ಕ. ೯೦-೦೩). **ಮಾರಾನ್ :** ಮಾರಾಂತಹಿತರ ಭೀಮಂ ಪಲರಂ ತವೆ ಕೊಂದು (ವ್ಯಆಂ. ೦೯೨೯, ೬೩-೬ ; 1216) ; ಮರೆ ಹೊಕ್ಕರೆ ಕಾವ ಮಾರಾಂತರೆ ವೈರಿ (೩ಆ. V, ೪೦-೦ನೆಯ ೪೦೦; 1587); ಮಾರಾಂತ ಸುಭಟರ ಮುಂಡಮಂ ತೋರಿಸ್ತುತೆ . . . ನಡದನು ಮುಂದ ಕುರವಣಿಸಿ (ಆಂದಿಕಾ. ೨೨-೧೧).

[ಮಾಱು$_1$ + ಆನ್$_1$]

**ಮಾಱಾನೆ** (ನಾ). ಪ್ರತಿಯಾಗಿ ಬಂದ ಆನೆ : ಜಾಱಿದೆ ತನ್ನಾನೆಯಿನಾ ಮಾಱಾನೆಯು ಕುಂಬತಳಕೆ ಪಾಯ್ದು (ಕಬ್ಬಿಆ. ೨೯೩) ; ಮುಗಿಲಂ ಮಾಱಾನೆ ಗೆತ್ತಂ (ಕವಿಾದ. ೨೩೮ ಕ್ರಯೋ). [ಮಾಱು$_2$ + ಆನೆ$_1$]

**ಮಾಱಾಳ್**, ಮಾರಾಳ್ (ನಾ). ಪ್ರತಿಭಟಿಸಿ ನಿಂತವನು ; ಎದುರಾಳಿ; ಶತ್ರು : ಮಾಱಾಳೊಳಂಕವಂ ಕಾದಿ ಗಳಿಸಿದ ಧನದಿ ಜಂಗಮಕ್ಕೆ . . . ಬೇಡಿದುದನಿತ್ತು (ಆಶಿತಂ. ೩೩-೯). **ಮಾರಾಳ್ :** ಮಾರಾಳ್ಗಳಂ ತೀಕ್ಷ್ಣತರ ಬಾಣಂಗಳಿಂದೆ ಸಂಹರಿಸುತಿರಲು (ಕೀಶರಾ. ೧೧-೨೦).

[ಮಾಱು$_1$ + ಆಳ್$_3$]

**ಮಾಱಾಳಿ**, ಮಾರಾಳಿ (ನಾ). ೧. ಮಾರಾಟ ಮಾಡುವವನು ; ವ್ಯಾಪಾರಿ : ಮಾಱಾಳಿಯುಮೋದಾಳಿಯುಮೇಱಾಳಿಯುಮಪ್ಪನಾಗಿ (ಕಾವ್ಯವ. ೩೩೩) ; ಆಳಿ ಪ್ರತ್ಯಯಕ್ಕೆ—ಜೂದಾಳಿ, ಮಾಱಾಳಿ, ಏಱಾಳಿ (ಶಮದ. ೨೦೩ ಕ್ರಯೋ); ಮಾಱಾಳಿಯ ಸಂತೆ ತಿಂತಿಣಿಸಿತು (ಶಕಪಿ. ೩-೪೬). **ಮಾರಾಳಿ :** ೨. ಎದುರಾಗುವವನು ; ಎದುರಾಳಿ : ಮಹೀಶೂರರತ್ನಸಿಂಹಾಸನದ ಸಮರಾಂಗಣಧರ್ಮಕ್ಕೆ ಇಂತಹ ವೀರವಿಶ್ವಾಸವನ್ನೊಪ್ಪಿಸಿ, ತವಕದ ಪ್ರತ್ಯಾಶೆಯಿಂದ ಕುದಿಯುತ್ತಿರುವ ಕಯ್ದುಗೊಳ್ಳದ ಮಾರಾಳಿ (ಕಟ್ಟಿಆ. ೬೩-೧೬). [ಮಾಱು$_1$ + — ಆಳ್$_3$]

**ಮಾಱಿಗೆ** (ನಾ). ೧. ಮಾರಾಟದ ವಸ್ತು ; ವ್ಯಾಪಾರದ ಸರಕು : ಮೊಱಿಗೆ, ಪೊಲಿಗೆ (ಶಬ್ದಮ. ೩೬೩ ಕ್ರಯೋ). ೨. ಬೆಲೆ ಬಾಳುವ ವಸ್ತು : ಅತಿಕೃಪಣ ಶಠಗ ಪರವಿಭವಕ್ಕಸೂಯನುಂ ವ್ರತ ಹಿರಿಯರಂ ಹಳಿವ ಮಾಱಿಗೆಯನಲ್ಲೆಂಬ ಸುತನಾದಿಮಿತ್ರಕರ್ಕಳತ್ರಮಂ ಬಿಟ್ಟು ತನ್ನುದರಮಂ ಪೋಷಿಸುವನು (ಆಶಿತಂ. ೩೯-೧೬). [<ಮಾಱು$_2$]

**ಮಾಱಿಟ್ಟ?** (?). (?) : ಗತಿಚೇಷ್ಟಾವಿರಹಂ ಶುಭಾಂಗದೆ ಘನಮ್ಮಾಱಿಟ್ಟ ಮಾನ್ವಿಟ್ಟುವಲ್ ಯತಿಯುಂ ಪೇಟ್ಟಿ ವಿಧಾನದಿನ್ದು ತೋಱಿದೇ ಕಟ್ಟಪ್ಪಿನಾ ಶೈಲದುಳ್ (ಎಕ. II, ೬೬-೧; ಸು. 700). [ ? ]

**ಮಾಱಿತು** (ನಾ). ಮಾರಿದುದು ; ವಿಕ್ರಯಿಸಿ ಕೊಟ್ಟುದು : ಮಾಱಿತಕ್ಕೆ ಹೋಂಗೆ ವೀಸಮಂ ಕೊಟ್ಟರು (ಎಇ. V, ೦೯-೬೬ ; 1161) ; ಒಲೆಯ ಹೊಱಿ ಮಾಱಿತಕ್ಕೆ ಒಂದು ಕಟ್ಟೊಲೆ (ಮುಂಬರಾ. X. ೨೨೬-೧ ; 1205). [< ಮಾಱು$_2$]

**ಮಾಱಿಲಿ** (ನಾ). ಒಂದು ವಂಶದ ಹೆಸರು (?) : ಮಣ್ಣನ್ ಮಗ ನೀಲಗಣ್ಣನ್ ಮಾಱಿಲಿತಟ್ಟಾರರ (ವ್ಯಎಂ. ೦೯೩೨, ೧೯೩; ೨ನೆಯ ೩೩). [ ? ]

**ಮಾಱು**$_1$, ಮಾರು$_1$ (ಕ್ರಿ). ೧. ಯಾವುದಾದರೊಂದು ವಸ್ತುವನ್ನು ಕೊಟ್ಟು ಹಣವನ್ನು ಪಡೆದುಕೊಳ್ಳು; ವಿಕ್ರಯಿಸು : "ಮಾಱು—ವಿಕ್ರಯೇ" (ಶಮಧಾ); ನೆಲ್ಲಂ ಪುರಿದು ಮಾಱಿದೆ ಕಾಣವಂತಿರಿಸಂಗಡಿಯೊಳ್ (ಕಬಿರಾ. ೨-೦೩೬) ; ಇದು ಮನೆಯಾಣ್ಮನಂ ಮಾಱುವಂದಮಲ್ಲದೆ ಪೂಮಾಱುವಂದಮಲ್ತು (ಶಂಶಭಾ. ೪-೯೦) ; ಪೂರ್ವದ ಭರಣಿಗರ ಸನ್ತತಿಯಲ್ಲದೆ ಪೆಱರ್ಗೆ ಕೆಯ್ಮನೆಯುಂ ಮಾಱಲಾಗದು (ಸೌಇಇ. XI-i, ೬೪-೩೪; 1028) ; ಉರಿಯ ಪೇಟೆಗಳಲಿ ಪತಂಗದ ಸರಕು ಮಾಱದೆ ಮರಳುವುದೆ (ಕುವ್ಯಕ. ೧೧-೨೮); ಕಲ್ಲುಸಕ್ಕರೆ ಕೊಳ್ಳಿರೋ . . . ಸಂತೆಯೊಳಗೆ ಇಟ್ಟು ಮಾಱುವದಲ್ಲ (ಪುರಂದ. ೧-೧೨೬-೩). ೨. ಒಂದು ವಸ್ತುವನ್ನು ಕೊಟ್ಟು ಮತ್ತೊಂದು ವಸ್ತುವನ್ನು ಪಡೆ; ಅದಲುಬದಲು ಮಾಡಿಕೊಳ್ಳು; ವಿನಿಮಯ ಮಾಡಿಕೊಳ್ಳು : ಗತಜೀವಿತನಂತವಿವೇಕದಿಂ ತಪೋವಲ್ಲಿಯೊಳಪ್ಪನಲ್ಪಫಲಮೆಲ್ಲಮನಲ್ಪಫಲಕ್ಕೆ ಮಾಱಿ ಬಂದು (ಆದಿಪು. ೨-೪೨) ; ನೂಱುಪಶುಗೆಡಹಿಗೆ ಸುರೇಂದ್ರನು ಮಾಱುವನು ಗಡ್ಡಿಗೆಯ (ಕುವ್ಯಆ. ೬-೮೪). ೩. ಮಾರ್ಪಡಿಸು; ಬದಲಾಯಿಸು: ಪಗಲನಿರುಳ್ಗೆ ಮಾಱಿ ನಯನಾಂಚಲಚಂದ್ರಿಕೆ . . . ಬಂದಳ್ (ಕಂದ್ರಕು. ೧೧-೦೨). ೪. ಒಪ್ಪಿಸು ; ಅರ್ಪಿಸು; ವಶಪಡಿಸು : ಹರಂಗೆ ಶಶಿಭೂಷಣಂಗೀಶ್ವರಂಗೆಯ್ದೆ ನಾಲಗೆಯಂ ಮಾಱಿದೆನೊಲ್ದು (ಶಂಶಾಕ.೯೦); ಮನವಂ ಶಿವನಂಘ್ರಿಗೆ ಮಾಱಿ (ಉದ್ಭಟ. ೦೨-೯೦) ; ಮನವನೀತಗೆ ಮಾಱಲಿತ್ತೆ ಇಂದ್ರಿಯವೈದನನುರಾಗ ಮಿಗೆ ಸೂಱೆಯಿತ್ತೆ (ಭರಕ. ೯-೯೪). ೫. ಆದರಕ್ಕೆ ಒಳಗಾಗು; ಗೌರವ ಸಿಗು : ಇಲ್ಲಿ ನಮ್ಮ ಶಾಸ್ತ್ರ ಮಾಱುವುದಿಲ್ಲ ಸುಮ್ಮನಿದ್ದರೆ ದಾರು ಕೇಳುವರಿಲ್ಲ (ಪುರಂದ. ೨-೩೬ ಕಲ್ಯಾ). ೬. ಬದಲಾಗು; ಮಾರ್ಪಾಟು ಹೊಂದು. ೭. ಎದುರಾಗು; ಪ್ರತಿಭಟಿಸು; ವಿರೋಧಿಸು : ಕಾಳಗದಲ್ಲಿ ಪೌಜನಿಕ್ಕಿದಡೆ ಮಾಱಿದಡೆ ಅರಸೆಂಬರಲ್ಲದೆ ಬಂಟರೆಂಬುದಿಲ್ಲ (ವೋಕಪಾ. ೨-೩). ೮. ಹೊಡೆ; ಬಡಿ : "ಮೋದೆಂದುಂ, ಮಾಱೆಂದುಂ, ಎಱಗಿದನೆಂದುಂ, ಎಱಗೆಂದುಂ ಪೊಯ್ದುದು" (ಕಕಸಾ. ೬೨-೬೩೩). 'ಮಾಱೆಂಬು' ಪರಾ. **ಮಾರು₁ :** ೧. ಅದ ಮಾರಿದರ ಶಿರಿಪುರುಷನ ಮಗ ದೇವಾತಿ (ಎಕ. VIII, ಸೊರಬ. ೮೩-೬ ; 876) ; ಆ ಮೊಸರನ್ನು . . . ಅರಕ್ಕೆ ಮೂರಾಗಿ ಮಾರುತ್ತಿದ್ದಳು (ಶಿತಿಶಂ. IX, ೨೯). ೯. ವಿಕ್ರಯವಾಗು : ಅವು . . . ಬಹಳ ತುಟ್ಟಿ, ಏಳೆಂಟು ರೂಪಾಯಿಗೆ ಒಂದು ಸೇರು ಮಾರುತ್ತದೆ (ಮುಂಬಯಿ. ೪-೪೦).

**ಮಾಱಿಕೊಳ್**, **ಮಾರಿಕೊಳ್ಳು** = ವಿಕ್ರಯಿಸು; ಬೆಲೆಗೆ ಕೊಡು : ಸಾಲಬಟ್ಟರೆ ಮಾಱಿಕೊಂಬರಯ್ಯಾ (ಬಸವ. ೩೩೯); ಅವನು ತನ್ನ ವರ್ಗದೊಳಗೆ ಓದುವ ಪುಸ್ತಕಗಳನ್ನು ಗಡಿಯಾಲವನ್ನೂ ಮಾರಿಕೊಂಡನು (ಮುಂಬಯಿ. ೪-೦೯೨). [ದೇ.೫ ತಮಿ. ಮಾಱು, ಮಾಱ್ಱು; ಮಲ. ತೆಲು. ಮಾಱು ; ತುಳು. ಮಾರು ; ಕೊಡ. ಕೋತ. ಮಾರ್; ತೊದ. ಮೋಱ್ ]

**ಮಾಱು**$_2$, ಮಾರು$_2$ (ನಾ). ೧. ಮಾರುವಿಕೆ; ಮಾರಾಟ; ವಿಕ್ರಯ: ತಾಂ ಪರಮೇಶ್ವರನಪ್ಪುದಱಿಂ ಮಾಱಿನ ಲೆಕ್ಕಮಂ ಬಗೆಯದೆ (ಬಂಹಂ. ೦೪-೨೯೩); ಈ ಧರ್ಮಕೆ ಮಾಱುವ ಮಾಱು ಸಲ್ಲದು ಮುತ್ತುವ ಬತ್ತ ಸಲ್ಲದು (ಸೌಇಇ. IX-ii, ೪೬೪-೩೨; 1472). ೨. ವಿಕ್ರಯಕ್ಕೆ ಇಟ್ಟ ವಸ್ತು : ಮಾರಾಟದ ವಸ್ತು : ಮಲ್ಲಿಸೆಟ್ಟಿ ಮಾಱಂ ಕೊಂಡು ಅರಸರ

ಸಂನ್ನಿಧಿಯುಲು. . . ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಎಕ. VII. ಶಿವಪು. ೬೪-೯೬; 1112?); ಸಲುವುದೆ ಠೞಿಕದ ಮಾಱುಳಿಯೊಳು (ಜೀವಂಧ. ೨-೩೨). ೩. ಪ್ರತಿ ; ಎದುರು : 'ಮಾಱುತ್ತರ' ಪರಾ. ೪. ಇನ್ನೊಂದು ; ಮತ್ತೊಂದು : 'ಮಾಱುಂಕ' ಪರಾ. ೫. ವಿರುದ್ಧ. ೬. ಗುರಿ; ಲಕ್ಷ್ಯ : 'ಮಾಱುಸು' ಪರಾ. ೭. ಪರವಶ ; ಅಧೀನ : 'ಮಾಱುವೋಗು' ಪರಾ. ೮. ಮೋಹ ; ಮರುಳು : 'ಮಾಱುವೋಗು' ಪರಾ. ೯. ಜಗಳ : 'ಮಾಱುಗೊಳ್' ಪರಾ. **ಮಾಱು$_2$** : ೪. 'ಮಾರುವೇಷ' ಪರಾ.

**ಮಾಱಾಗು** = ವಶಕ್ಕೆ ಸಿಕ್ಕು ; ಮಾರುಹೋಗು ; ಮರುಳಾಗು : ಈಶಂ ಭೀತಿಯಿಂದಂ ಬೆದಱಿದನೆನೆ ಮಾಱಾದರಾ ಭೂಮಿಪಾಳರು (ಎಕ. VII. ಶಿಕಾ. ೦೬೦-೦೦; 1065); ಸುಕುಮಾರಂ . . . ನುಡಿಯುಲಾ ಸವಿಗೇಳ್ದ ಕಿವಿಗೆ ಮಾಱಾಗುತ್ತೆ (ಶಿಹರ. ಠೇ. ೩೩-೦೪).

[<ಮಾಱು$_1$. / ತಮಿ. ಮಾಱು, ಮಾಱ್ಱು ; ಮಲ. ಮಾಱು, ಮಾಱ್ಱು ; ತೆಲು. ಮಾಱ್ಱುಮಾ, ತುಳು]

**ಮಾಱುಂಗುಡು** 'ಮಾಱುಗೊಡು' ನೋ.

**ಮಾಱುಂಗೊಳ್** 'ಮಾರ್ಕೊಳ್' ನೋ.

**ಮಾಱುಕೊಳ್** 'ಮಾರ್ಕೊಳ್' ನೋ.

**ಮಾಱುಗವುಚು** (ಕ್ರಿ). ಬೋರಲು ಹಾಕು ; ದಬ್ಬು ಹಾಕು : ಹೂರಣವ ಮಾಡಿಮಾವುಂಡೆಯೆರಡಱ ನಡುವೆ ಪೂರಯಿಸಿ ಹಱಿಯದಂತೆ ಗೇಣಗಲಂ ಮಾಡಿ ಮಾಱುಗವುಚಿದ ಹಂಚನೊಳಗಿಟ್ಟು ತುಪ್ಪಮಂ ತೊಡೆದು ಹೂರಿಗೆ ಯುಡುವುದು (ಸೂಶಾ. ೦-೨೬).

[ಮಾಱು$_2$ + ಕವುಚು$_2$ (<ಕವಿಚು$_2$)]

**ಮಾಱುಗುಡು** 'ಮಾಱುಗೊಡು' ನೋ.

**ಮಾಱುಗೊಡು**, ಮಾರುಗೊಡು, ಮಾಱುಂಗುಡು, ಮಾಱುಗುಡು (ಕ್ರಿ). ೧. ಒಂದು ವಸ್ತುವಿಗೆ ಬದಲಾಗಿ ಮತ್ತೊಂದನ್ನು ಕೊಡು; ವಿನಿಮಯ ಮಾಡಿಕೊಳ್ಳು : ಸಕಳಜಗತೀಶ್ವರತ್ವಮನಕಾಮಿಕಂ ಮಾಱ್ಪಿ ತಪಮನಲ್ಪಸುಖತ್ವ್ಯತ್ವಕನಳಿಪಿಂ ಕುಡುವುದು ಮಾಣಿಕಮಂ ತೌಡಿಂಗೆ ಮಾಱುಗೊಡುವಂತಕ್ಕುಂ [ಪಾಠಾಂ. ಮಾಱುವಂತಾಗಿಕ್ಕುಂ] (ಸಮುಶ. ೪-೨೩). ೨. ಅರ್ಪಿಸು ; ವಶವಾಗಿಸು ; ಅಧೀನಪಡಿಸು : ಹಗೆಗೆ ಮಾಱುಗೊಟ್ಟು ನಿನ್ನವರನೊಪ್ಪಿಸುವರೆ (ಬಸವ. ೪೪); ಕನ್ನೆವೇಟಕ್ಕೆ ಜನ್ಮಂ ಮಾಱುಗೊಟ್ಟ ಪಾಱುಗೆಯ್ದದ ಜವ್ವನಿಗಿನಿಯನಿತ್ತ ನಖರದಕ್ಷತಂಗಳನೆ ತೊಡವು ಮಾಡಿ (ಚಂದ್ರಪ್ರ. ೬-೩೫ ವ); ನಿಮಗೆನ್ನಂ ಮಾಱುಗೊಟ್ಟೆಂ ಪುರಹರ (ರಕ್ಷಾಶ. ೭೮) ; ಒಕ್ಕಲಂ ಮಾಱುಗೊಂಡಂಗೆ ನಂಬಿಯನಳಿಪಿ ತೊಳ್ತುಗೊಂಡವಂಗೆ ಅರಿದಾವುದು (ಕವ್ಯಾಾ. ೦೩-೮). **ಮಾರುಗೊಡು** : ೧. ಕೆಡುವ ಒಡಲನ್ನೂ ಒಡವೆಯನ್ನೂ ಕೆಡದ ಒಡವೆಗೆ ಎಂದೆಂದೂ ಮಾರುಗೊಡಬೇಕು (ಶಾಮುಂ. ೪೦). ೨. ತನ್ನ ಮನಸನ್ನು . . . ತನ್ನ ಸ್ತ್ರೀಗೆ ಎಷ್ಟೇ ಮಾರುಗೊಟ್ಟಿದ್ದರೂ, ತಾಯ ಪ್ರೇಮದ ಪರಿಣಾಮವು . . . ತೋರಿಸದೆ ಹೋಗುವುದಿಲ್ಲ (ಜೀಗಟ್ಟು. ೦೬). ೩. ಮಾರುತ್ತರವನ್ನು ಕೊಡು ; ಬದಲು ಹೇಳು : ನಾನು ಮಾರುಗೊಡಲು ಅವಕಾಶ ಕೊಡಲಿಲ್ಲ (ಕಾಂಯಾ. ೦೩). **ಮಾಱುಂಗುಡು** : ೧. ಬಿರಿಮುಗುಳ್ವಾಸಿಗಮಂ ಮಾಱುಂಗುಡುವೆಳವೆಣ್ಗಳ ಮೂವಣ್ಣದ ಕಣ್ಗಳ ಕಾಂತಿಯೊಳು ಮಂಗಲಕೀರ್ತಿಯುತಂ ನಡೆದಂ (ಜಯುಶಾ. ೦೪-೨೦). P ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ. **ಮಾಱುಗುಡು**: ೧. ಒಪ್ಪುವ ಮಾಣಿಕಮಂ ತೌಡಿಂಗವಯವದಿಂ ಮಾಱುಗುಡುವ ಮರುಳಂ ಪೋಲ್ಗುಂ (ಶಾಂತಿಪು. ೦೦-೪೦) ; ಕೆಡುವೊಡಲೊಡವೆಯನೆಂದುಂ ಕೆಡದೊಡವೆಗೆ ಮಾಱುಗುಡು ವುದಱುವಬೆಡಂಗಾ (ಗದಾಯು. ೨-೪). ೨. ಪಾವನಂಗೆ ಮಾಱುಗುಡುವರೇ (ಬಸವ. ೪೪) ; ಊರೊಳ್ ಮಾರಿಯೆಂದು ಮನೆವೋರಿಯುಂ ಮಾಱುಗುಡುವರೇ (ರಾಜಶೇಖ. ೩೫-೨೯). ೪. ಮಾರಾಟ ಮಾಡು ; ವಿಕ್ರಯಿಸು : ಹೊನ್ನುಳ್ಳ ಧನಿಕರಾರಾದೊಡಂ ಕೊಂಬವರ್ ಬನ್ನಿಯೆನ್ನಂ ಮಾಱುಗುಡುವೆಂ (ಹಕಶಾ. ೧೦-೨೦). [ಮಾಱು$_2$ + ಕೊಡು$_1$]

**ಮಾಱುಗೊಳ್** 'ಮಾರ್ಕೊಳ್' ನೋ.

**ಮಾಱುಗೋಲು** 'ಮಾರ್ಕೋಲ್' ನೋ.

**ಮಾಱುಡೆ** (ನಾ). ಬೇರೆಯ ಸೀರೆ.—ಉಡುಗೆ : ಮಾಱುಡೆಯಿಲ್ಲ ಮಜ್ಜನ ಮಿನಿಸಿಲ್ಲ ಕರ್ಪೂರವೀಳೆಯಗೊಳಲಿಲ್ಲ (ವೀಬಸಂ. ೩೪-೩೮). 'ಮಾಱುಡೆ ಗಾಣ್' ಪರಾ. [ಮಾಱು$_2$ + ಉಡೆ$_2$]

**ಮಾಱುಡೆಗಾಣ್** (ಕ್ರಿ). ಬೇರೆಯ ವಸ್ತ್ರವು ಸಿಗು ; ಮತ್ತೊಂದು ಉಡುಗೆಯು ದೊರಕು : ಪಚ್ಚೆಯ ಪಸುರ್ವಣೆಯಂ ಕುಡಲಿಲ್ಲದಂತು ಬಾಯ್ತೊಂಬುಲಮೆಂಬುದಂ ಪಡೆಯದಂತುಟೆ ಮಾಱುಡೆಗಾಣದಂತಿರಟ್ಟಂ ಬಱಿಗೊಂಡು ತೇದಪುದು ಬೇಟಮಿಂದೆನ್ನಯ ಪಾಪಮಲ್ಲದೇ (ಲೀಲಾವ. ೦-೧೦೬). [ಮಾಱುಡೆ + ಕಾಣ್]

**ಮಾಱುತ್ತರ**, ಮಾರುತ್ತರ (ನಾ). ೧. ಎದುರು ಮಾತು ; ಪ್ರತ್ಯುತ್ತರ ; ಮರುಮಾತು : ತೊತ್ತಿಂಗೆ ಲಕ್ಷಣವೇಕಯ್ಯಾ . . . ಮಾಱುತ್ತರವೇಕೆ (ಬಸವ. ೪೬೭) ; ತನ್ನಯ ನುಡಿಗೆ ಮಾಱುತ್ತರವ ಕೊಡು (ಕುವ್ಯಾ. ಶಿಂತ. ೨೭-೨೦) ; ವಿಷಯಾತುರರು ನೆಱೆ ಬೂತುಗೆಡೆದರೆ ಗರುವರಾದವರಾತು ಮಾಱುತ್ತರವ ಕೊಡುವರೆ (ತೊರಭಾ. ೩-೪-೨೨). **ಮಾರುತ್ತರ** : ೧. ಇತ್ತ ನೋಡಿದರೆ ಗಂಡನ ಮಾತಿಗೆ ಮಾರುತ್ತರವನ್ನು ಕೊಡಲಾಗದು (ಕನ್ಯಾಾ. ೧೦೨) ; ವಿಮಲಾ ಎಂದು ಕರೆದರೆ ಮೌನವೇ ಮಾರುತ್ತರವಾಯಿತು (ಕುಂಕುಮ. ೪೪). ೨. ಪ್ರತಿಯಾಗಿ ಬರೆಯುವ ಕಾಗದ ; ಜವಾಬು : ನೀವು ಅವರಿಗೊಂದು ಮಾರುತ್ತರವನ್ನು ಬರೆಯಲೇಬೇಕು (೭೦ಬಿದ. ೫೯). [ಮಾಱು$_2$ + ಉತ್ತರ]

**ಮಾಱುತ್ತರಂಗುಡು** 'ಮಾಱುತ್ತರಗೊಡು' ನೋ.

**ಮಾಱುತ್ತರಂಗೊಡು**, ಮಾರುತ್ತರಕೊಡು, ಮಾಱುತ್ತರಂಗುಡು, ಮಾಱುತ್ತರಗೊಡು (ಕ್ರಿ). ಎದುರುಮಾತಾಡು ; ಪ್ರತ್ಯುತ್ತರ ಕೊಡು : ಎನ್ನ ಸೌಭಾಗ್ಯಕ್ಕೆ ಹಾನಿಯೆಲ್ಲಿಹುದೆಂದು ಮಾಱುತ್ತರಂಗೊಟ್ಟು ಕೆಲಬಲವ ನೋಡುತಿರಲು (ಕಬಸ. ೪-೨೦) ; ರಘುಕುಲಲಲಾಮಂ ಕೇಳ್ದೊಡಾ ಕುಶಂ ನಸುನಗುತೆ ಮಾಱುತ್ತರಂಗೊಟ್ಟನು (ಜೈಮಿಭಾ. ೨೦-೨೪). **ಮಾರುತ್ತರಕೊಡು** : ರೇಣು . . . ಅಜ್ಞಗ್ಯೆವ ಧ್ವನಿಯಲ್ಲಿ ಮಾರುತ್ತರ ಕೊಟ್ಟಳು (ಹೇಮಂತ. ೨೪೪). **ಮಾಱುತ್ತರಂಗುಡು** : ಆ ಮುನಿನಾಥನಂದು ಮಾಱುತ್ತರಂಗುಡಲೆಂದು ತಱಿಸಂದನು (ಹಕಶಾ. ೫-೭೦). **ಮಾಱುತ್ತರಗೊಡು** : ಅವಳಿಗೆ ಮಾಱುತ್ತರಗೊಟ್ಟು ನಗುತ ನೂಱಲಿಗಣ್ಣ ರುಕ್ಮಿಣಿಗೊಡರ್ಚಿದ ಹೊಗರೇಱುವ ಗರ್ಭೋತ್ಸವವ (ಪೋತ್ರಾಕ. ೪-೬೬). [ಮಾಱುತ್ತರ + ಕೊಡು$_1$]

**ಮಾಱುತ್ತರಗೊಡು** 'ಮಾಱುತ್ತರಂಗೊಡು' ನೋ.

**ಮಾಱುದನಿ** 'ಮಾರ್ದನಿ' ನೋ.

**ಮಾಱುದಾಂಟು** (ನಾ). ಮರು ನೆಗೆತ ; ಪ್ರತಿಯಾಗಿ ನೆಗೆಯುವ ನೆಗೆತ : ಮಾಱುದಾಂಟು ಬಿಡುಗಣ್ ಬಿಡುವಾಯ್ (ಕಮುದ. ೦೬೦). [ಮಾಱು$_2$ + ದಾಂಟು$_2$]

**ಮಾಱುದ್ದು** (ಕ್ರಿ). ಒಂದಕ್ಕೊಂದು ತಿಕ್ಕು : ನೆಲನಂ ಮಾಱುದ್ದಿ ಕಯ್ಯಿಂ ಧರಾತಳದೊಳ್ ಸೂಸಿದ ತನ್ನ ಶೀವ್ರಗದೆಯಂ ಕಂಡೆತ್ತಿಕೊಂಡು (ಗದಾಯು. ೬-೩೬) ; ಕೋಪಾಟೋಪದಿಂ ಕರತಳವ ಮಾಱುದ್ದಿ ಕೋದಂಡಮಂ ಸೆಳೆದು (ಹಕಶಾ. ೬-೨೮) ; ನೆಲಕ್ಕೆ ಮಾಱುದ್ದಿದನು ಕರವನು (ಕುವ್ಯಾಗ. ೭-೧೦). [ಮಾಱು$_2$ + ಉದ್ದು$_1$ (< ಉರ್ದು$_1$)]

**ಮಾಱುನುಡಿ** 'ಮಾರ್ನುಡಿ₂' ನೋ.

**ಮಾಱುಬರು** (ಕ್ರಿ). ಎದುರಾಗು : ಎದುರಿಸಿ ನಿಲ್ಲು : ಮೂಱುಲೋಕದ ಗಂಡ ಫಲುಗುಣ ಬಂದು ಕೊಲುತಿರಲು ಮಾಱುಬರುವರದಾರು (ಸಂಶಕ. ೨೦.೩೭). [ಮಾಱು₂ + ಬರು₁ (< ವರ್)]

**ಮಾಱುಬಲ** 'ಮಾರ್ವಲ' ನೋ.

**ಮಾಱುಮಲೆ** 'ಮಾರ್ಮಲೆ' ನೋ.

**ಮಾಱುಮಾತು,** ಮಾರುಮಾತು (ನಾ). ಪ್ರತ್ಯುತ್ತರ ; ಮಾರ್ನುಡಿ : ಮಾಱುಮಾತಿಗೆ ಪಡಿಪನೆನಿಸುತ ವಿಮಲೆ ಬಳಿಕಿಂತೆಂದಳಲ್ಲಮನ (ಪ್ರಭುಲೀ. ೯-೭೧) : ಮಾಱುಮಾತೇನ್ನೆ ಮಹೀಸುರರೇಱಿಸಿವರೇಱುವುದು (ಕುವ್ಯಾ.ಆ. ೦೩-೬೨) ; ಮಾಱುಮಾತಿಲ್ಲೇಕೆ ಹೇಳ್ವೆ ತಮ್ಮ ತನಗೆ (ಕೊರಂ. ೩-೦೦-೦೦). **ಮಾರುಮಾತು :** ವಿಚಾರಶೂನ್ಯತೆಯಿಂ ಮಾರುಮಾತಿನ್ನೇಕೆ (ಗಗಣಾ. ೩-೨೯). [ಮಾಱು₂ + ಮಾತು₁]

**ಮಾಱುರಿ** (ಕ್ರಿ). ಎದುರಿಸಿ ಜ್ವಾಲೆಯಾಗು : ಎನ್ನೀ ತೇಜಸ್ಸುರಿತಕ್ಕೆ ಸೆಣಸಿನೊಳ್ ಮಾಱುರಿಗುಂ ಸ್ಥೈರಿಸದು ತೇಜದಾ ಭುಜಬಲಿಯಾ (ಅಂಪು. ೦೪-೯೨). [ಮಾಱು₁ + ಉರಿ₁]

**ಮಾಱುಲಿ** (ಕ್ರಿ). ಪ್ರತಿಧ್ವನಿಸು : ಮಾರ್ದನಿ ಕೊಡು : ಹಂಸ ಚಕ್ರವಾಕ ಬಳಾಕವಿಪಕ್ಷಿಗಣಂಗಳ್ . . . ನಾನಾಪ್ರಕಾರದಿಂದಂ ಮೂಱುಲಿದ ದನಿಗಳಿಂದಮತಿರಮಣೀಯಮಪ್ಪ ಕೊಳನಂ ಕಂಡು (ಶಬ್ದಾರಾ. ೩೯-೨೨). [ಮಾಱು₂ + ಉಲಿ₁]

**ಮಾಱುವಡೆ** (ಕ್ರಿ). ಅಂಗಡಿಯ ಸರಕಿನ ಮಾರಾಟವಾಗು : ಮಾಱುವಡೆಯದ ಪರದನಂತೆ ಕಂದಿ . . . ಇಂತೆಂದಂ (ಧರ್ಮಾಮೃ. ೦-೦೬೬). [ಮಾಱು₂ + ಪಡೆ₁]

**ಮಾಱುವೋಗು,** ಮಾರುವೋಗು, ಮಾರುಹೋಗು (ಕ್ರಿ). ೧. ವಸ್ತುವು ಮಾರಾಟವಾಗು, - ವಿಕ್ರಯಂಗೊಳ್ಳು : ಕೆಡುವ ಭಂಡದಂತೆ ಮಾಱಿ ವೋಗದು (ಧರ್ಮಾಮೃ. ೯-೦೭೩) ; ಮಾಱುವೋಗನೊತ್ತೆವೋಗ ನಮ್ಮ ಕೂಡಲಸಂಗಮದೇವ (ಬಸವ. ೩೩೯). ೨. ವಶವಾಗು ; ಅಧೀನವಾಗು : ಮತಿಸಮ್ಯಗ್ದರ್ಶನಜ್ಞಾನಚಾರಿತ್ರಂಗಳ್ಗೆ ದಯಾಪಾಲೋಕನೆಗೆ ಕಣ್ಗಳ್ ಮಾಱುವೋದಂತೆ (ಅರ್ಧನೇ. ೦-೬) ; ಸೂಱೆವೋಯಿತು ಚಿತ್ತ ಕಂಗಳು ಮಾಱುವೋದವು (ಕುವ್ಯಾ.ಶಿ. ೨-೦೦) : ನಂಬಿದಳಂ ಮಱೆದು ಸವತಿಯೊಂದು ಪಿಸುಣ್ಗೆ ಎಱೆಯಂ ಮಾಱುವೋದಂ (ರಾಜಶೇ. ೨೨-೯). ೩. ಮೋಹಗೊಳ್ಳು ; ಮರುಳಾಗು : ಮದೀಯ ಚಿತ್ತಮಾ ಸುದತಿಗೆ ಮಾಱುವೋಯ್ತು (ರಹಸ. ೦೦-೭೦). ೪. ಸೆಳೆಯಲ್ಪಡು ; ಆಕರ್ಷಣೆಗೊಳಗಾಗು : ಚಿತ್ರಕ್ಕೆ ಪಂಚಂತಂಟೀ ಮಾಱ್ಪುಗು ದಲ್ ಕಾದಂಬರೀ ದೇವಿಯ ಗುಣಪಣದಿಂ ಮಾಱುವೋದೆನ್ನನೀಗಳ್ (ಕಾದಂಬ. ೦೨೩) ; ನಿನ್ನ ಶೀಲಕಾಂ ಮಾಱುವೋದೆಂ ಕಾದಲೊಲ್ಲೆಂ (ಕೃಶಿಬಾ. ೯-೩೦). - ೫. ಕೈತಪ್ಪಿ ಹೋಗು ; ನೀಗಿಕೊಳ್ಳು : ನಿನ್ನಯ ಬೈತಲೆಯ ಮಣಿ ಮಾಱುವೋದುವ ಮತ್ತೆ ಬಿಡಿಸಿನಲೆ (ಕುವ್ಯಾಸ. ೦೪-೩೯). **ಮಾರುವೋಗು :** ೨. ಅವರವು ತರ್ಕ ಹಾಗೂ ಬುದ್ಧಿಶಕ್ತಿಗೆ ಮಾರುವೋದ ಬಾಳು (ರಾಶವ. ೮೦). ೩. ಎದೆ ಮಾರುವೋಗದೊಡೆ ಕಣ್ ಸೊಬಗನುಂಡಪರೇಂ (ಪಂಚಕ. ೯೩೬) ; ಕವಿಯ ಸೂಕ್ತಿಯೊಳು ಮನ ಮಾರುವೋಗದ ಮನುಜನು ಯೋಗಿಯೊ ಪಶುವೊ ಆಗಿರ್ಪನು (ಇಂತಾಶ. ೧೩೨-೯೬) : ಸುಬ್ಬನ ಮಗಳು ನೆರೆಮನೆಯ ಹೃದ ಚಿಕ್ಕನಿಗೆ ಮಾರುವೋಗುತ್ತಾಳೆಂಬಳು (ರೂಶಿಸಂ. ೯). **ಮಾರುಹೋಗು :** ೨. ಸೋಮು ಥಳುಕಿನ ಜೀವನಕ್ಕೆ ಮಾರುಹೋಗಿದ್ದ (ಅಕಾಟಿ. ೩೩). ೩. ಮನಸ್ಸು ಅವಳ ಹೊಳಪಿನ ಕಣ್ಣುಗಳಿಗೆ ಮಾರುಹೋಗಿತ್ತು (ಮರಳ. ೭೦) ; ನಾನು ಅವಳ ರೂಪವನ್ನು ನೋಡಿ ಒಲಿದುದಲ್ಲ. ಅವಳ ಗುಣಸಂಪತ್ತಿಗೆ ಮಾರು ಹೋದೆ (ಪಾತುಕ್ತ. ೯೬). [ಮಾಱು₂ + ಪೋಗು₁ (<ಪೋ₁)]

**ಮಾಱಿಸು** (ಕ್ರಿ). ಗುರಿಯಿಟ್ಟು ಬಾಣ ಬಿಡು : ಮನ್ಮಥನಾಗಳೀಜಸದೆ ಮಾಱಿಚ್ಚಂ ಪುರಸ್ತ್ರೀಯರಂ (ಪಂಚಾವಾ. ೩-೯೦). [ಮಾಱು₂ + ಎಸು₁]

**ಮಾಱೊಡ್ಡು₁,** ಮಾರೊಡ್ಡು (ಕ್ರಿ). ಪ್ರತಿಸ್ಪರ್ಧಿಯಾಗಿ ನಿಲ್ಲು : ಎದುರಿಸು : ಬೇಱೆಬೇಱೆ ಮಾಱೊಡ್ಡಿ ಮಾಱಿ ನಿಂದ ಗೀರ್ವಾಣ ಮುಖ್ಯರಂ ತೋಱುತಿರ್ಪ ಸಮಯದೊಳ್ (ಗಂಗ. ೬-೩೩ ವ); ಮಾಱೊಡ್ಡಿದಮರಾದ್ರಿಯಂತೆ ರಾಶಿಗಳಾಗಿ ಪೇಱಿ ತಂದೊಡವೆಯಂ ವಿವಿಧರತ್ನಂಗಳಂ ತೋಱಿಸಿ (ಕೃಶಿಬಾ. ೩೩-೭೦); ಗಾಳಿಗೆ ಮಾಱೊಡ್ಡಿ ಪೋಪ ಪತಾಕೆಯ ಕೌಸುಂಭಾಂಬರದಂತಿರೆ (ರಾಜಶೇ. ೪೯-೦೨). **ಮಾರೊಡ್ಡು :** ಮರದ ನಗೆಗೆಡೆಮಾಡೆ ಮಾರೊಡ್ಡಿ ಮುನಿವಂ (ಕಾಂತಿಶ. ೩೦-೭೬); ಕೆಳಕ್ಕೆ ಬೀಳದೆ ಅದರ ಸೆಳೆತಕ್ಕೆ ತನ್ನ ಗರ್ಭಪ್ರಾಪ್ತವಾದ ವಿಕರ್ಷಣಶಕ್ತಿಯನ್ನು ಮಾರೊಡ್ಡಿ ಮೇಲೆ ತೇಲುತ್ತಾ (ಕಾವ್ಯಕೌ. ೩). [ಮಾಱು₂ + ಒಡ್ಡು₁₁]

**ಮಾಱೊಡ್ಡು₂** (ನಾ). ಪ್ರತಿಬಲ ; ಶತ್ರುಸೈನ್ಯ : ತಂತಮ್ಮ ಪಿಡಿದ ಬಾಳ್ವೆಳಗಿಂ ಮಾಱೊಡ್ಡಂ ಕಂಡು (ಆದಿಪು. ೨೬೬); ಒಡ್ಡಿತೀ ಬಲ ರಿಪು ಭಟರು ಮಾಱೊಡ್ಡ ಮೆಱೆದರು (ಕುವ್ಯಾ.ಕ. ೦೦-೬). [ಮಾಱು₂ + ಒಡ್ಡು₂]

**ಮಾಱೊತ್ತು** (ಕ್ರಿ). ಪ್ರತಿಯಾಗಿ ತಳ್ಳು, - ನೂಕು : ನೆರೆದೆಟ್ಟುಂ ದಿಗ್ಗಜಂಗಳ್ . . . ದಂತಾಗ್ರದೊಳುರಮನವಷ್ಟಂಭದಿಂದೊತ್ತೆ . . . ಮಾಱೊತ್ತಿ ದೈತ್ಯೇಶನಾ ಭೂಧರಧುರ್ಯೇಭಂಗಳಂ ತೊಟ್ಟನೆ ಕೆಡಪುವ ನಾಶ್ಚರ್ಯಮಾ ದೈತ್ಯ ವೀರ್ಯಂ (ಜಗ. ೦೩-೯). [ಮಾಱು₂ + ಒತ್ತು₁]

**ಮಾಱೊರಸು** (ಕ್ರಿ). (ಒಂದಕ್ಕೆ ಒಂದು ತಾಗಿ) ಉಜ್ಜು, — ತಿಕ್ಕು : ಭೂಭುಜರೆಲ್ಲರೆಟ್ಟರಾನಂದದೆ ರತ್ನಹಾರವಂಕುಟಾಂಗದ ಕಂಕಣ ಕುಂಡಲಂಗಳೊಂದೋದನವುಂಕೆ ಮಾಱೊರಸಿ ಬೀಱಿ ಝಣಜ್ಝಣಿತಪ್ರಣಾದವುಂ (ಜಗ. ೬-೦೦೯); ತುಱುತುಱುತಿಂಬ ಕಂದರಮನೊತ್ತರಗೊಂಡು ಮಹಾ ಮಹೀಜದೊಳ್ ತಱತಱನಾಗಿ ಮಾಱೊರಸುತುಂ ಮಲೆಯುತ್ತೊಲೆಯುತ್ತೆ . . . ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೦೦೦೨). [ಮಾಱು₂ + ಒರಸು₁]

**ಮಾಱೊಲೆ** (ಕ್ರಿ). ಒಂದು ಕಡೆಯಿಂದ ಮತ್ತೊಂದು ಕಡೆಗೆ ಬಾಗು, — ಒಲೆದಾಡು : ನಳಿನಪತ್ರೋದಕದವೊಲು ಮಾಱೊಲೆದುದಖಿಳ ಭವಾಂಡವು (ಕುವ್ಯಾ.ಶ. ೬-೩೦). [ಮಾಱು₂+ಒಲೆ₁]

**ಮಾಱೋಲೆ, ಮಾರೋಲೆ** (ನಾ). ಪ್ರತಿಯಾಗಿ ಬರೆಯುವ ಕಾಗದ ; ಜವಾಬು : ಅಟ್ಟಿದ ವಿಭುಗೆ ಸಂತಸಂ ಮಾಡಿ ಬರೆದ ಮಾಱೋಲೆಯನೆಯ್ದಿಸಿದೊಡೆ (ಶಾಂತಿಪು. ೩-೭೩). **ಮಾರೋಲೆ :** ಅಣ್ಣನಿಂದ ಮಾರೋಲೆ . . . ನಿರೀಕ್ಷಿಸಿದ್ದ (ರಂಗವ. ೦೨೩) ; ಸಾಸಿರ ಕೆಲಸಗಳಿದ್ದರೂ ಒಂದಿನಿತು ಅವುಗಳನ್ನು ಬದಿಗಿರಿಸಿ ಮಾರೋಲೆ ಬರೆಯುವಿರೆಂದು (ತಂತುಬಿ. ೩೨). [ಮಾಱು₂ + ಓಲೆ]

**ಮಾಟ** (ನಾ). ಮಾಳವ ದೇಶ : ಏಟುಂ ಮಾಟಮುಮಂ ಪಾಱಿಟೆಱೆ ತಗುಳ್ದಿಱಿದು ನರಗನುರಿಪಿದೊಡೆ ಕರಿಂಕೇಱಿಸಿದಾತನ ತೇಜದ ಬೀಱಲನು ಕರಿಪುಮಾಮುವೋಗಿದುರಿವುರಿಗಳ್ (ಪಂಪಭಾ. ೦-೩೩). [P 'ಸಪ್ತಮಾಳವ' ಎಂಬುದು ಪ್ರಸಿದ್ಧವಾದ ಸಂಸ್ಕೃತ ಶಬ್ದಪುಂಜ. ಇದು ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ. ಇದನ್ನು ಕನ್ನಡದಲ್ಲಿ 'ಮಾಳವದ ಏಳು ಭಾಗಗಳು' ಎಂದು ಅರ್ಥ ಬರುವಂತೆ ಹೊಸ ನುಡಿಗಟ್ಟನ್ನಾಗಿ ಬಳಸಲಾಗಿದೆ. ಇವರಲ್ಲಿ 'ಟ'ವು ಉಪಯೋಗಾರ್ಹವೇ ಎಂಬುದು ವಿಚಾರಣೀಯ. 'ಏಟುಂ ಮಾಳವಮುಮಂ' ಎಂಬುದು ಸರಿಯಾದ ಪಾಠವಿರಬಹುದು]

**ಮಾಟ್ಕೆ, ಮಾಳ್ಕೆ** (ನಾ). ೧. ಬಗೆ ; ರೀತಿ ಪ್ರಕಾರ : ಪರರ ದೋಷಂಗಳುಮಂ ಪೆಱವುಮನೀ ಮಾಟ್ಕೆಯೊಳಂ ತೋಱಿವುದು (ಆದಿಪು. ೧-೬೭) ; ದಂಡರತ್ನಹತಿಯಿಂ ಗಿರಿ ನೊಂದು ಸರಳ್ವ ಮಾಟ್ಕೆಯಂತಾ ಯ್ತಾಗಳ್ (ಅಜಿಪು. ೦೩-೩೭) ; ದಾನವೇಶ್ವರಕುಲಮಂ ಮುರಾರಿ ಭುಜ ವಿಕ್ರಮದಿ ತವೆ ಕೊಂದ ಮಾಟ್ಕೆಯಿಂ (ಶಂತಕ. ೨೩೪-೦೬) ; ಈ ಮಾಟ್ಕೆಯಿಂ ಕಡುದೂರಂ ನಡೆದು ಘೋರಾರಣ್ಯಮನೊಂದಂ ಪೊಕ್ಕರ್ (ರಾಮಾಶ್ವ. ೩೩-೦೬). **ಮಾಳ್ಕೆ** : ೧. ತಾರಕೈಳಮನುಮಾಪತಿ ರಾತ್ರಿಯ ನಿಂದಳಂಕರಿಸುವ ಮಾಳ್ಕೆಯಿಂದೆ (ಶಾಶಾ. IX-i, ೨೬೭-೪೨ ; 1160) ; ತಂದು ಬೆಟ್ಟದ ಮಾಳ್ಕೆಯಿಂ ಮಾಣಮೊಟ್ಟುತಿರೆ (ಪಂಬರ. ೫-೦೯); ಸಂಸೇವ್ಯ ಭುಕ್ತಿಯು ಕೈಕೊಂಡು ದಣಿದರು ಹಂಸ ಹಾಲುಂಡ ಮಾಳ್ಕೆಯೊಳು (ಭರತ. ೩-೯೯) ; ಕೊಳಂ ಜುಮ್ಮೆಂದು ಪುಳಕಿಸುವ ಮಾಳ್ಕೆ ಕಂಪಿಸಿದತ್ತು ತಂಬೆಲರ ಚುಂಬನಕ್ರೀಡೆಯಿಂದೆ (ಚತ್ರಾಂಗ. ೩೪-೯೦೬). ೨. ನಡೆವಳಿ ; ಆಚರಣೆ : ಆ ನೃಪಾಲಕಂ ತುರಗಮೇಧಾಧ್ವರದ ಮಾಳ್ಕೆಗೆಳಸಿ (ಕೈಮಿಭಾ. ೫-೨೪) : ನಿನ್ನ ಜಾಣತನ ಬರಿಯ ಮಾತಿನದಾಗಲಿ ಮಾಳ್ಕೆಯ ದಲ್ಲ (ಶಾರದ. ೦೦೩). ೩. ಕೆಲಸ ; ಕಾರ್ಯ : ತೊಳೆಯುವುದು, ಅರೆಯುವುದು, ತಿಂಡಿಗಳನ್ನು ಬೇಯಿಸುವುದು, ಇತ್ಯಾದಿ ಮಾಳ್ಕೆಗಳನ್ನು ಮಂಜಮ್ಮನ ಕೈಗಳೇ ಎಸಗುತಲಿವೆ (ಕೊಂದಿನ. ೦೯) ; ಇತರ ಎಲ್ಲ ತರದ ನಿಂದ್ಯ ಮಾಳ್ಕೆಗಳನ್ನೂ ಅವರು ಎಸಗಿದ್ದರು (ಧೂಮಮ. ೦೬).

[<ಮಾಡು$_1$ + —ಕೆ]

**ಮಾಟ್ಗಟ್ಟೆ** (ನಾ). ರಚಿಸಿದ ಕಟ್ಟೆ ; ಕಟ್ಟಿದ ದಿಂಡು : ಮಾಟ್ಗಟ್ಟೆಗಳ ರ್ತಡಿಯೊಳ್ ಸೀಳ್ಗಾಯ್ಗಳ್ ಬೀಗಿ ಬೆಳೆದು ಕಂಬಿತ್ತುಗಳಿಂ ಪೊಱೆಗ್ಗ ವರ್ದಿರೆ (ಕಬ್ಬಾ ಮ. ೦೯೩ ವ್ಯಾಖ್ಯಾ). [<ಮಾಡು$_1$ + ಕಟ್ಟೆ$_1$]

**ಮಾಟ್ಪೆ** 'ಮಾಡು$_1$' ಪರಾ.

**ಮಿಂಚಿಕ್ಕು** (ಕ್ರಿ). ೧. ಹೊಳಪನ್ನುಂಟುಮಾಡು : ಪ್ರಕಾಶಗೊಳಿಸು : ಗುಡಿಸಿ ಮಿಂಚಿಕ್ಕಲು ಬೀದಿಯುದ್ದವು ಘೋಷಪಡಿಗಳ ಜುಮ್ಮುದಟ್ಟಿಸುತ (ಭರತ. ೨೦-೦೯). ೨. ಪ್ರಕಟಿಸು ; ಹೊಳೆ : ಬೆಳ್ನುಗುರ್ಗಳಲತಗೆ ಯೂಡಿ ಮಿಂಚಿಕ್ಕಿ ಬಿಲ್ಲಿಯುಂಗುರವು ಕಣ್ಗೆಸೆಯೆ ಸಲ್ಲಲಿತಾಂಗಿಯ ಕೆಂಬಜ್ಜೆ ಮೆಱೆದುವು ಚೆಲ್ಲುವಂತ್ರನುರಾಗರಸವ (ಭರತ. ४೦-೬೨).

[ ಮಿಂಚು$_2$ + ಇಕ್ಕು ]

**ಮಿಂಚಿಡು** (ಕ್ರಿ). = ಮಿಂಚಿಕ್ಕು ೨ : ಪುಸಿದ್ದದಿ ಮೆರೆಯುದಿಹುದೆ ಮಿಂಚಿಟ್ಟ ಮಾಣಿಕ್ಯವಂತೆ (ಪಪವೋ. ೩೪ ४೭). [ ಮಿಂಚು$_2$ + ಇಡು$_1$ ]

**ಮಿಂಚಿಸು** (ಕ್ರಿ). ೧. ಹೊಳಪು ಬರುವಂತೆ ಮಾಡು ; ಪ್ರಕಾಶಿಸುವಂತೆ ಮಾಡು : (ಕ). ೨. ಹೊರಗೆಡಹು ; ಹೊರಸೂಸು : ತದೇಕ ಚಿತ್ತ ನಾಗಿ ನನ್ನ ವಾಚನವನ್ನು ಕೇಳುತ್ತ ಕುಳಿತ ವಿಶ್ವಾಸ ತಟ್ಟನೇ ತನ್ನ ಮಾತು ಮಿಂಚಿಸಿದ (ದೀಕಪ. II, ४). [ ಮಿಂಚು$_2$ + —ಇಸು$_3$ ]

**ಮಿಂಚು$_1$** (ಕ್ರಿ). ೧. ಹೊಳೆ ; ಪ್ರಕಾಶಿಸು ; ಥಳಥಳಿಸು : ಮಿಂಚು ವೊಳ್ಪೊಡೆ ಮಡಂ ಸುರಿವಾ ಬೆಮರರ್ಬಿ . . . ಮನ್ಮಥಾನಳಶಿಖಿ ಬೇಗೆ ಯಾಗೆ ಮದನಾಟವಿಯಂತೆವೊಲೊಪ್ಪಿ ತೋಱಿದಳ್ (ಕಾವ್ಯಸಾ ೬೦೨ ಕೂದ್ರ್ಯ) ; ನಿರುಪಮದೇಹದೀಪ್ತಿಗಳೊಳೆಕ್ಕೆಯನೆಯ್ದೆ ಪಳಂಚಿ ಮಿಂಚುವಾ ಭರಣದ ಮಿಂಚು . . . ಚೆಲ್ವೆಸೆಯೆ ಕಣ್ಗೆಸೆದತ್ತು (ಆದಿಪು. ೨-೫) ; ಕಾಯ ಕರ್ರನೆ ಕಂದಿದರೇನಯ್ಯ ಕಾಯ ಮಿರ್ರನೆ ಮಿಂಚಿದರೇನಯ್ಯ (ಮಹಾದೇ. ಬ. ४೯-೦೦೬). ೨. ಆಕಾಶದಲ್ಲಿ ಮೋಡಗಳ ಘರ್ಷಣೆಯಿಂದ ಬೆಳಕು ಕಾಣಿಸಿಕೊಳ್ಳು, — ವಿದ್ಯುತ್ತು ಉಂಟಾಗು : ತಳಕ್ಕನೆ ಮಿಂಚಲೊ ಡನಾ ನಳಿನಲೋಚನೆ ಕಾಣುತುಂ (ಬಸಪು. ४೨-೩೦) ; ವಿದ್ದುವು ಮುಗಿಲ್ಗ ಳೆಣ್ದೆಸೆಗಳೊಳ್ತರದೊಳಿಪ್ಪುವು ಗಿರಿಗಳಂತೆ ಮಿಂಚಿಮುವು ದಿಗ್ಗಜಗಳುದ್ದಂಡ ದಿಂದೆ ಪರ್ಜನ್ಯನಂ ಸೆಣಸಿ ನೋಡುವಚೆಲ್ಪಾಪಾಂಗದಂತೆ (ಕೈಮಿಭಾ. ೧೭-೨).

೩. ಆಪ್ಯಾಯಮಾನವಾಗಿರು ; ಆಕರ್ಷಕವಾಗಿ ಕಾಣು : ಕರುಳ ಕತ್ತರಿ ಸಂಚರ ಮಾರಿ ತುತ್ತು ಮಿಂಚಿದೊಡನುಂಡು ಮತ್ತೆ ತೊಡೆ ಮಿಂಚಿ ದೊಡಾ ಖಳನಿಂತು ಮಾಡಿದಂ (ಅಪಂಪು. ೧೦-४४). ४. ಸ್ಫುರಿಸು : ತೋಱು : ವಿಶ್ವಾಸ . . . ವಿರಾಗದ ಭಸ್ಮಭಸಿತದೇಹಿಯಾಗಿ ಪರಮರ ಅಂಡಲೆಯುವ ಕಲ್ಪನೆ ಮಿಂಚಿತು (ದೀಕಪ. II, ೦೫೯). ೫. ಮೂಡು ; ತೋರು ; ಕಾಣಿಸಿಕೊಳ್ಳು : ಮುಂಚಿಕೆ ಮಿಂಚಿದುದಾ ಶ್ಮಶಾನದೊಳ್ (ಕಾವ್ಯಾವ. ೫೭) ; ಚಿಂದಳಿರ್ಮಿಂಚಿದ ಬನಂ ಬನಗಳಂ ಬಳಸದೂರೂರ್ಗಳಿಲ್ಲ ದೆಡೆಯಿಲ್ಲಿಳೆಯೊಳು (ಕೈಮಿಭಾ. ३-३) : ಮಿಂಚುವುವು ಚಿತ್ರರಸಭಿತ್ತಿಯಲಿ ಹಸ್ತಿಪುರಿ ಮೇಣಿಂದ್ರಪ್ರಸ್ಥಾದಿ ನಗರಗಳ್ (ಚತ್ರಾಂಗ. ४२-೦೦೫೦). ೬. ಅಭಿವ್ಯಕ್ತಗೊಳಿಸು ; ಸೂಸು : ಅಲ್ಲೇನು ಹಂದರದ ಮಣ್ಣೆ ತರು ವಲಿಯಾಗಿ ನಕ್ಕಗಳ ಮಿಂಚುತಿದೆ (ಕಾಲೂರ. ३೮-४४). ೭. (ವಿದ್ಯುತ್ತಿನಷ್ಟು) ವೇಗವಾಗಿ ಚಲಿಸು ; ಧಾವಿಸು : ತೇಜಿಗಳನೇರ್ದು . . . ಮಿಂಚಿದರಯೋಧ್ಯಾಭಿಮುಖವಾಗಿ ಭರತನುಂ ಶತ್ರುಘ್ನನುಂ (ಶ್ರೀರಾಮಾ. ೦೦೫-೦೩३). ೮. ಮೇಲಾಗು ; ಉತ್ಕೃಷ್ಟವಾಗು ; ಅತಿಶಯಿಸು : ಅವರುಗಳೆಲ್ಲರಿಗಿಂತಲೂ ಭೀಮಸೇನನು ದೇಹಬಲದಲ್ಲಿ ಮಿಂಚಿದ್ದನು (ವ್ಯಾಸವಿ. ४೫). ೯. ದಾಟು ; ಮೀರು : ಸಸ್ಥವಿರು. ವೃದ್ಧತ್ವಂ —೨, ೫೦ ವರುಷಗಳಿಗೆ ಮಿಂಚಿದ ವಯಸ್ಸು (ಸಿದ್ಧಾಂತಿ. ೦೭೯). ೧೦. ಹೆಚ್ಚಾಗು ; ಅಧಿಕವಾಗು : ನಿಮ್ಮಂತಹ ದೊಡ್ಡವರ ನಡತೆಯೆಂಬುದು ಪ್ರೀತಿಯಾಗಿದ್ದರೂ ಬೇಡಿಕೊಂಡುದನು ಮೀರಲರಿಯದ ದಾಕ್ಷಿಣ್ಯ ಮಿಂಚಿ ಇರುವುದು (ವಚನಾ. ೬೮-೫). ೧೧. (ಕಾಲದ ಅವಧಿ, ಕೆಲಸ ಇತ್ಯಾದಿ) ಕೊನೆಗಾಣು : ಮುಗಿ : ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲ ವೇನು ? (ಗಾದೆ). [ದೇ.॥ ತಮಿ. ಮಲ. ಮಿನ್ನು : ತುಳು. ಮಿಂಚು, ಮಿಂಜು, ಮೆಂಚು; ತೆಲು. ಮಿಂಚು: ಕೋತ. ಮಿಂಚ್ : ತೊದ. ಮಿಚ್]

**ಮಿಂಚು$_2$** (ನಾ). ೧. ಹೊಳಪು ; ಕಾಂತಿ ; ಪ್ರಕಾಶ : "ತೊಳಗು, ಬೆಳಗು . . . ಮಿಂಚು, ಡಾಳಂ, ಪೊಗರ್, ತೊಳಪಂ, ಮಸೆ — ಈ ೧೪ ಕಾಂತಿ" (ಶಬಸಾ. ೫೫-೨೦೨): ನಿರುಪಮದೇಹದೀಪ್ತಿಗಳೊಳೆಕ್ಕೆಯನೆಯ್ದೆ ಪಳಂಚಿ ಮಿಂಚುವಾಭರಣದ ಮಿಂಚು . . . ಚೆಲ್ವೆಸೆಯೆ (ಆದಿಪು. ೨-೫); ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ ಸುಲಿಪಲ್ಲ ಮಿಂಚಿನಿಂ . . . ಕಣ್ಗೊಳಿಸಿದಳಾಕೆ ಪಾಲ್ಗಡಲ ಪರ್ದೆರೆಯೊಳ್ ಸಿರಿ ನಿಂದಳೆಂಬಿನಂ (ಕವ್ಯಕಾ. ೭೯) : ಕಂಗಳಿನ ಮಿಂಚಿನ ಹಳುಕಿನೆಡೆ ನಡೆಗೆಟ್ಟು ನಿಂದರು ಚಿತ್ರವಿಷ್ಣಲರು (ಕುವ್ಯಾವಿ. ೧-೨೫). ೨. ಆಕಾಶದಲ್ಲಿ ಮೋಡಗಳ ಘರ್ಷಣೆಯಿಂದ ಉಂಟಾಗುವ ಬೆಳಕು ; ವಿದ್ಯುತ್ತು : "ಶಂಪಾ, ಚಪಲಾ . . . ಐರಾವತೀ — ಈ ೧೧ ಮಿಂಚು" (ಹಲಾಯು. ೦೦-೬೦): ಪೊಳೆವ ಮಿಂಚುಗಳುಂ ಕರಮುಚ್ಚಮಪ್ಪ ಬೆಟ್ಟುಗಳ ತಟಂಗಳಂ ಸುರಿವ ನಿರ್ಝರಮುಂ ಪೊಸಕಾರೊಳಂತು ಬೆಳ್ಗೆ ಪಥಿಕಾಂಗನಾಜನಮನಂಜಿಸು ವಂತಿರೆ ತೋಱೆ ಸುತ್ತಲುಂ (ಆದಿಪು. ೦-೧೨४) : ಸಿಡಿಲಿಂ ಮಿಂಚಿಂ ಮೊಱಗಿಂ ಪಡೆಗುಳ್ಕಂ ಪಡೆವಹೀಂದ್ರರೆರ್ದೆಗಿಡುವಿನೆಗಂ ಸಿಡಿಲಂ ಮಿಂಚಂ ಮೊಱಗುಮನೊಡನೆ ತೆರಳ್ಚಿದುವು ಜಯನ ಶರನಿಕರಂಗಳ್ (ಅಜಿಪು. ೦३-೬೨); ಎಱಗಿದನು ಸಿಡಿಲಾಗಿ ಕಂಗಳೊಳಿಱುಕಿದನು ಮಿಂಚಾಗಿ (ಕುವ್ಯಾದ್ರೋ. ೦೭-೦೦). ೩. ವಿದ್ಯುತ್ತಿನಿಂದುಂಟಾಗುವ ಶಕ್ತಿ ; ವಿದ್ಯುಚ್ಛಕ್ತಿ : 'ಮಿಂಚುದೀವಿಗೆ' ಪರಾ. ४. ಮೆರುಗು : ಬತ್ತಿರ್ದ ವಕ್ತ್ರಾಂಬುರುಹಂ ಮಿಂಚಾಗಲಿರ್ಪಂ ತೊಡೆದು . . . ಐದಿದಳ್ ವೃದ್ಧೆ (ರಜಕು. ೮-೦४೭) : ಒಂದಿನಿಸು ತಪ್ಪಿಲ್ಲದೆಸೆವ ಸಂಭಾರಗಳನೊಂದಿಸಿಯೆ ಕಾಸಿದ ಕೊಣಬಿನಲ್ಲಿ ಮಿಂಚೊಂದುವಂದದಿಂ ಬೆಣ್ಣೆಯುಂ ಹಾಕಿ ವೊಗ್ಗರಿಸಿ ಕೆಂಡ[ದಿಂ] ಧೂಪವ ನಿಡುವುದು (ಸೂಪಶಾ. ೬-೮) ; ಕಣ್ಣಿವೆ ಬಿಳುಪೇಱೆ ಕಪ್ಪ ಹತ್ತಿಸಿ ಮುಖಿ ಕೆಣ್ಣೆಯ ಮಿಂಚುಗಳಕ್ಕಿ . . . ಮುದಿಪಣ್ಣಾಂಗನೆಯರೊಪ್ಪಿದರು

(ಕಂಸ. ೬-೧೯೨) ; ಪಶುಗಳ ಹೊಸ ಮೈ, ಮಿಂಚು ತುಂಬ ಪತ್ತುವುದು (ಕಸ್ಥಶಾ. ೧೪೦). ೫. ವಿದ್ಯುತ್ತಿನಷ್ಟು ಅತ್ಯಲ್ಪ ಕಾಲ ; ಕ್ಷಣ : ಒಂದು ಮಿಂಚಿನಾಗ ಹತ್ತ ಇಚಾರ ಗಿರಕೀ ಹೊಡೀತಾವ (ನಾಬಂ. ೩೨). ೬. ಕ್ಷಣಿಕವಾದುದು ; ಅತ್ಯಲ್ಪಕಾಲವಿರುವಂಥದು : ಒಂದು ಕಂಚಾಯಿತು ಒಂದು ಮಿಂಚಾಯಿತು ಮುಂದೆ ಕೂತಿಯಾ ಮುದಿಗೂಬೆ (ಗಾದೆ). ೭. ಆಧಿಕ್ಯ ; ಹೆಚ್ಚಳ : ಇದಕಿನ್ನು ಮಿಂಚಾಗಿ ದೋನು ಕಷ್ಟವು ಬರಲು ಮದನಜನಕನ ಧ್ಯಾನ ಮರೆಯದಿರು ನೀನು (ಯುವಕ. ೬). ೮. ಶ್ರೇಷ್ಠತೆ ; ಹಿರಿಮೆ : 'ಮಿಂಚುಕವಿ' ಪರಾ. ೯. (ಮುತ್ತೈದೆಯರು) ಕಾಲಿನ ಎರಡನೆಯ ಬೆರಳಿನಲ್ಲಿ ಧರಿಸುವ ಉಂಗುರ : ಪಾದಾಂಗುಳಿಗಳಿಗೆ ಬಿಸಜಾಕ್ಷಿಯೊರ್ವಳು ನಗುತ ಸಂತೋಷದೆ ಮಿಸುನಿಯ ಮಿಂಚನಿಕ್ಕಿದಳು (ಕಂಸಬಿ. ೨೯-೭೧) ; ಸುಮಂಗಲಿಯರು . . . ಮಿಂಚು, ಪಿಲ್ಲಿ . . . ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲೆಮಂ. ೩೯) ; ಮಿಂಚು ಕಡಗ ತಾಲಿ ಇಲ್ಲದೆ ಮದುವೆಯೆ ? (ಗಾದೆ).

**ಮಿಂಚಿನ ಹುಳು** = ಬೆಳಕನ್ನು ಬೀರುವ ಒಂದು ಬಗೆಯ ಕೀಟ ; ಮಿಣುಕುಹುಳು : ಅಡವಿಯ ಮುಳ್ಳಲಿ ಮಿಂಚಿನ ಹುಳುಗಳು ಪಂಜನು ಹಿಡಿಯುವ್ವವು (ಬಂಗೀತ. ೯೯-೧೩) ; ಒಂದೊಂದು ಸ್ಥಳದಲ್ಲಿ ಮಿಂಚಿನ ಹುಳುಗಳ ಮಾಲೆಗಳಿಂದ ತುಂಬಿದ ವೃಕ್ಷಗಳು ಸ್ಪಷ್ಟವಾಗಿ ದೃಷ್ಟಿ ಗೋಚರ ವಾಗುತ್ತಿದ್ದಿತು (ಕಶಾಕಂ.೨೮). [ < ಮಿಂಚು$_1$. /ತಮಿ. ಮಲ. ಮಿಣ್ಣು; ತುಳು. ಮಿಂಚಿ, ಮೆಂಚಿ ; ತೆಲು. ಮಿಂಚು ]

**ಮಿಂಚುಂಬುಳು** 'ಮಿಂಚುಂಬುಳು' ನೋ.

**ಮಿಂಚುಂಬುಳು**, ಮಿಂಛುಂಬುಳು, ಮಿಂಚುಬುಳು, ಮಿಂಚುಬುಳು, ಮಿಂಚುಹುಳ, ಮಿಂಚುಹುಳು (ನಾ). ಬೆಳಕನ್ನು ಬೀರುವ ಒಂದು ಬಗೆಯ ಹಾರುವ ಕೀಟ ; ಮಿಣುಕುಹುಳು ; ಖದ್ಯೋತ : ಶಶಭೃತ್ಕಾಂತಿಗೆ ಮಿಂಚುಂಬುಳು ಸಮನೆಂತಕ್ಕುಮೊ ದೊರೆಗಮೊರೆಗಮೆಣಿಗಂ ತೊಣಗಂ (ಶಾಂತಿ. ೦೨-೬೭) ; ಮಿಂಚುಂಬುಳುವಂ ಕಂಡುಮಿದು ಕೆಂಡಮೆಂದು ಬಗೆದದಱ ಮೇಲೆ ಪುಲ್ಲಂ ಪುಳ್ಳಿಯುಮನಿಕ್ಕಿ ಮೊಕ್ಕಳ ಮೂದುವುದುಂ (ಕಂತಕಂ. ೨೯೩-೩) ; ಘಟಿಲನೆ ಪಿಡಿದಂ ಮಿಂಚುಂಬುಳುವಂ ಪಿಡಿವಂತೆ ವಜ್ರಮಂ ದನುಜಹರಂ (ಜಗಬಿ. ೦೩-೦೦೭). **ಮಿಂಚುಂಬುಳು** : ಮಿಣುಕಿದೆ ಕಿಡಿಯುಬ್ಬುನಿ ನೋಡ ! ಕಾದಿರುಳಿನ ಮಿಂಚುಂಬುಳುವಂತೆ (ಅಶೀ. ೩೩-೭). **ಮಿಂಚುಬುಳು** : ಇನನಿರಲು ಮಿಂಚುಬುಳುವನು ಅಜಿಸುವನ ತೆಱದಿ (ವಾಗೀಶ. ವೇ. ೨೬೦-೦೭) ; ಮಿಂಚುಬುಳುವಿನ ಕಿರಣವೆತ್ತಲು ಹೊಳಹಿದೆತ್ತಲು ಕೋಟಿಸೂರಿಯರ (ಕುವ್ಯಾಶೀ. ೩-೭೦). **ಮಿಂಚುಬುಳು** : "ಮಿಂಚುಬುಳುವದಾ ಖದ್ಯೋತ ಮುಕ್ತ್ಯ" (ಮಂಗರಾ. ೩೨-೦೦) ; ಸರಿಯೇ ಸೂರ್ಯಂಗೆ ಕೋಟಿ ಮಿಂಚುಬುಳುಗಳ್ (ಸೋಮೇಶ. ೧೦). **ಮಿಂಚುಹುಳ** : ಜಂಕಿಸಿತಿಂತುಡು ಸಂಕುಳ ಹೊಂಚುವ ಮಿಂಚುಹುಳಂಗಳ ಬೇಸಗೆ ಕೊನೆವರಿಯೆ (ಗಶಬಂ. ೯೩-೭). **ಮಿಂಚುಹುಳು** : ಮುಂಗಾರಿನಿರುಳಲ್ಲಿ ಮಿಂಚುಹುಳು ತಂದು ಸಿಂಗರಿಸಿದಂದೆ ಕೊಡುವುದಮೃತಸೇಚನವಾ (ಕಎಕೆ. ೨೩-೯) ; ತೆಳುವು ಬೆಳಕನು ಕೆದರಿ ಮಿನುಕುವ ಮಿಂಚುಹುಳುವೆಂದೆಣಿಸಲೋ ! (ಇಂಗೀತ. ೦೩-೩). [ ಮಿಂಚು$_2$ + ಪುೞು ]

**ಮಿಂಚುಕವಿ** (ನಾ). ಶ್ರೇಷ್ಠನಾದ ಕವಿ ; ಉತ್ತಮ ಕವಿ : ಮಿಂಚು ಕವಿಗಳ ಪಲವು ರಸಗಬ್ಬವನು ಗಮಕದಲಿ ಉಂಚದಲಿ ಮೆಱೆದೋದಿ (ನಾಳ್ವಾ. ೩೨-೨೯). [ ಮಿಂಚು$_2$ + ಕವಿ$_5$ ]

**ಮಿಂಚುಗಣ್**, ಮಿಂಚುಗಣ್ಣು (ನಾ). ಹೊಳಪಿನಿಂದ ಕೂಡಿರುವ ಕಣ್ಣು : ಮಿಂಚುಗಣ್ಣಾಗಿದು ಮಾತಾಡುಗಿ ತೊಳಲಿದಾಗ ಮಂಚದ ಮೇಲೊಱಗಿದರು (ಭರತ. ೦೦-೦೦೦). **ಮಿಂಚುಗಣ್ಣು** : ಅಚ್ಚ ಕಾಡಿಗೆಗಣ್ಣ ಮಿಗೆ ಮಿಂಚುಗಣ್ಣ . . . ನಿಜಿತಕುಚೆಘಾರೆಯರ್ ಬರುತಿರ್ದರುತ್ಸವದೊಳು (ಜೆಶಪು. ೩೭-೯೯) ; ಕನ್ನೈದಿಲುಗಳೆಸಳುಗಣ್ಣ ಕಾಂತಿಯಿಂದುಸ್ತವಹ ಮಿಂಚುಗಣ್ಣ . . . ಹೆಣ್ಣುಗಳ್ಯದಿತೊಗ್ಗಿನಲಿ (ಕಂಸಬಿ. ೯-೮೨) ; ಬಾತು ಕೊಂಡಿದ್ದ ಕಣ್ಣುರೆಪ್ಪೆಗಳ ಕೆಳಗೆ ಕಪ್ಪನೆಯ ಮಿಂಚುಗಣ್ಣುಗಳು ಮಿರುಗು ತ್ತಿದ್ದವು (ಕೃವರು. ೦೯೨). [ಮಿಂಚು$_2$ + ಕಣ್ ]

**ಮಿಂಚುಗಣ್ಣು** 'ಮಿಂಚುಗಣ್' ನೋ.

**ಮಿಂಚುಗಾಜಿಕೆ** (ನಾ). ಹೊರಗಿನ ಪ್ರದರ್ಶನ ; ಬಾಹ್ಯಾಡಂಬರ : ಕಂಚಿನೊಳಗೆ ಶಿಲೆಯೊಳಗೆ ದೇವನ ನೋಡೆ ಮಿಂಚುಗಾಜಿಕೆಯ ಭಕ್ತಿಯದು (ಭರತ. ೧೭-೦೦೭). [ಮಿಂಚು$_2$ + — ಕಾಜಿ + — ಇಕೆ]

**ಮಿಂಚುಗಿಡಿ** (ನಾ). ವಿದ್ಯುತ್ತಿನ ಕಿಡಿ.—ಕಣ : ತಡೆದಿದ್ದ ಸಮ್ಮೋಲವು ಹರಿದು ಥಟ್ಟನೆ ಕೂಡಿ ಮಿಂಚುಗಿಡಿಯನು ಸುರಿಸಿದಂತಾಯಿತು (ಒಲವು. ೨೯-೬). [ಮಿಂಚು$_2$ + ಕಿಡಿ]

**ಮಿಂಚುಗುರ್** (ನಾ). ಹೊಳಪುಳ್ಳ ಉಗುರು : ಒಸರ್ದಪುದಿವಲ್ತೆ ಚಂದನ ರಸಮೆನೆ ಮಿಂಚುಗುರ ಮಿಸುಪ ಸುಣ್ಣೆಳಗೆನಸುಂ ಪಸರಿಸೆ ಮರಲ್ದ ಕರಮೊಂದಸೆದುದು ಚಂದ್ರಾತಪಕ್ಕೆ ಮಱೆಯೊಡ್ಡಿದವೊಲ್ (ಕಾದಂಪೂ. ೯೦೭). [ಮಿಂಚು$_2$ + ಉಗುರ್$_1$]

**ಮಿಂಚುಗೂಡು** (ಕ್ರಿ). ಹೊಳಪಿನಿಂದ ಕೂಡು ; ಕಾಂತಿಯುತವಾಗು : ಅವಳ . . . ಕಣ್ಣು ತೀಕ್ಷ್ಣ ಶಸ್ತ್ರದಂತೆ ಮಿಂಚುಗೂಡಿದ್ದವು (ಜಯಂತ. ೯೦೩). [ಮಿಂಚು$_2$ + ಕೂಡು$_1$]

**ಮಿಂಚುದಲೆ** (ನಾ). (ಲೋಚಿನಿಂದ ಕೂದಲಿಲ್ಲದೆ ಬೋಳಾಗಿದ್ದು) ಹೊಳೆಯುತ್ತಿರುವ ತಲೆ : ಮಿಂಚುದಲೆ ಬಿದ್ದ ಪುರ್ಬಿನ . . . ಡೊಂಬುಗಳು . . . ನೆರೆವುದು (ಸೋಮಕುತ. ೯-೯೦) ; ಮಿಂಚುದಲೆಗಳ ಖಂಡಿವಲ್ಗಳ . . . ಜೈನರ ಹಿಂಡು ನೆರೆದು (ಬಸವ. ೩೦-೩೯). [ಮಿಂಚು$_1$ + ತಲೆ$_1$]

**ಮಿಂಚುದೀವಿಗೆ** (ನಾ). ವಿದ್ಯುದ್ದೀಪ : ಹೊತ್ತು ಅದೊಡೆ ನಲ್ಲಿ ನೀರೂ ಹೋಗಿಬಿಡುವುದು ಗಕ್ಕನೆ ಮುರ್ಮ ಕಣ್ಣಲು ಮಿಂಚುದೀವಿಗೆ ಆರಿಬಿಡುವದು ಪಕ್ಕನೆ (ಹಾಡುಪಾ. ೩೦-೦೦). [ಮಿಂಚು$_2$ + ದೀವಿಗೆ]

**ಮಿಂಚುನೋಟ** (ನಾ). ಹೊಳಪುಗಣ್ಣಿನ ದೃಷ್ಟಿ : ಜೀವನದಲ್ಲಿ ಹಲವು ಸಾರಿ ವಾರೆನೋಟ, ಕುಡಿನೋಟ, ಮಿಂಚುನೋಟಗಳ ಅನುಭವವಿಲ್ಲದಿರುವ ವರು ಅತಿವಿರಳ (ನಿಮ್ಮರ. ೭). [ಮಿಂಚು$_2$ + ನೋಟ]

**ಮಿಂಚುಬಳ್ಳಿ** (ನಾ). ಒಂದು ಬಗೆಯ ಬಳ್ಳಿ ; ಜ್ಯೋತಿಷ್ಮತಿ : "ಪಾರಾವತಾಂಘ್ರಿ, ಕಟಭೀ: ಪಣ್ಯಾ, ಜ್ಯೋತಿಷ್ಮತೀ. ಲತಾ — ಜಿ ಙಂಗೊಂಗೇಗಿಡ . . . ಜ್ಯೋತಿಷ್ಮತೀ" (ಸಿದ್ಧಾಂತಿ. ೦೯೭) ; ಮುಪ್ಪುರ ಗಳನ್ನು ಉರಿಸಲು ಹೊರಟ ಶಿವನೂ ಮಿಂಚುಬಳ್ಳಿಯ ಹೂಗಳನ್ನು ಧರಿಸಿದ್ದನಂತೆ ! (ಶಾಸಗ. ೬೩). [ಮಿಂಚು$_2$ + ಬಳ್ಳಿ]

**ಮಿಂಚುಬುಳು** 'ಮಿಂಚುಂಬುಳು' ನೋ.

**ಮಿಂಚುಬುಳು** 'ಮಿಂಚುಂಬುಳು' ನೋ.

**ಮಿಂಚುರಿ** (ನಾ). ವಿದ್ಯುತ್ತಿನ ಉರಿ. — ಬೆಂಕಿ : ಪ್ರಮಿತ್ಯೂಸನ್ನು ಬೆಸೆದು ಬಂಧಿಸಿದ್ದ ರೊಕ್ಷಶಿಖರಾಗ್ರವೇ ಪೊಳಗುದನಿಗೆ ಮಿಂಚುರಿಯ ಪೊಯ್ಲಿಗೆ ಹೋಳಾಯಿತು (ಐತೃಕ್ರ. XXIII, ೬೭೨೪). [ಮಿಂಚು$_2$ + ಉರಿ$_2$]

**ಮಿಂಚುವಡಿಗ** (ನಾ). ಥಳಥಳಿಸುವ ಪೀಕದಾನಿ : ಪೊಣ್ಮಂಚಿಯ ಮೇಲ್ಗಟ್ಟು ಗಿಂಡಿ ಮಿಂಚುವಡಿಗ ವೀಣೆ ಸಂಗಲಿಸಿಮವು ಲಾವಂಚದ ಬೀಸಣಿಗೆಗಳು (ಭರತ. ೦೩-೨೭). [ಮಿಂಚು$_2$ + ಪಡಿಗ]

**ಮಿಂಚುವಡೆ** (ಕ್ರಿ). ಹೊಳಪನ್ನು ಹೊಂದು : ತನಿವಣ್ಣ ಗೊಂಚಲಿಂ ಮಿಂಚುವಡೆದ ಮೇಲ್ಮರಸನರ್ದ ಕೋಡಗಂಗಳ ಬಳ್ಳಿವಾಲಮನೆಳನಾಗ

ರೆಂದು ಸೆಳೆವು ಕಡಿದೀಡಾಡಲವ್ವಳಿಸುವ ಮುದಿಮುಂಗುಲಿಗಳುಮಂ . . . ನೋಡುತ್ತುಂ ನಿಚ್ಚವಮಣದಿಂ ಬರವರೆ (ಕಬ್ಬಿಗ. ೨೩೪).
[ಮಿಂಚು₂ + ಪಡೆ₁]

**ಮಿಂಚುವೆಳಗು** (ನಾ). ೧. ವಿದ್ಯುತ್ತಿನ ಕಾಂತಿ, — ಪ್ರಕಾಶ : ಮಿಂಚುವೆಳಗಂಚಿರವಾಯ್ತು ಶಿಖಿಂಡಿ ತಾಂಡವಕ್ಕಲಸಿದುದು . . . ಶರತ್ಪ್ರಥಮಪ್ರವೇಶದೊಳ್ (ಜಗಂ. ೪-೩೭). ೨. ಕ್ಷಣಿಕವಾದ ಬೆಳಕು : ಚಂಚಲವಾದ ಪ್ರಕಾಶ : ಮಿಂಚುವೆಳಗಿನ ಬಳಕೆಯಲಿ ಮಾಸ ಮುಂಚಿ ವೈಗೊಂಡಳಲುವಾತುಮುವಂಚಕರು ನೀವ್ ಪಶುಗಳೆಂದರೆ ಪೇದವೇಕೆ (ಕುವ್ಯಾಕ. ೩-೨೭). [ಮಿಂಚು₂ + ಬೆಳಗು₂]

**ಮಿಂಚುವೋಗು** (ಕ್ರಿ). ವಿದ್ಯುತ್ತಿನಪ್ಪು ಕ್ಷಣಿಕವಾಗಿ ಹೊಳೆ, — ಪ್ರಕಾಶಿಸು : ಇದೇಂ ಭ್ರಮೆಯೊ ಮಾನವರ್ಗಮುಮ . . . ಪೊಪಟ್ಟ ಸಿರಿಯೆಂಬುದಿಂತೊಗೆದ ಮಿಂಚುವೋದಂಚಿಯೊಳ್ ಸದ್ವೃಕ್ಷಮೆನ ಲೊಲ್ಲರೀ ಭವದೊಳೆಂದೊಡಂ ಕಂಡೊಡಂ (ಅನಂಪು. ೯-೦೯).
[ಮಿಂಚು₂ + ಪೋಗು₁ (< ಪೋ₁)]

**ಮಿಂಚುಹುಳ** 'ಮಿಂಚುಂಬುಳು' ನೋ.

**ಮಿಂಚುಹುಳು** 'ಮಿಂಚುಂಬುಳು' ನೋ.

**ಮಿಂಚುಳ್ಳಿ** 'ಮಿನ್ಚುಳ್ಳಿ' ನೋ.

**ಮಿಂಚೆಳೆ** (ನಾ). ಹೊಳೆಯುವ ರೇಷ್ಮೆಎಳೆಗಳಿಂದ ಕೂಡಿದ ಸೀರೆ : ಮುದುಕಿ ಎಳೆಯುವಳಾಗಿ ಮಾಸು ಮಿಂಚೆಳೆಯಾಗಿ ಸವೆದ ವೈ ತುಂಬಿ . . . ನಸುನಕ್ಕಳಾ ತಾಯಿ (ಹೊಂಗಳು. ೨೦-೮).
[ಮಿಂಚು₁ + ಎಳೆ₂ (< ಎೞೆ)]

**ಮಿಂಚೋಲೆ** (ನಾ). ಪ್ರಕಾಶಮಾನವಾದ ಕಿವಿಯ ಆಭರಣ ; ಹೊಳೆಯುವ ಓಲೆ : ಮಿಱುಗುವ ಮಿಂಚೋಲೆ ಸುಲಿಪಲ್ಲು . . . ಎಸೆಯಲು ಮೆಱೆವರು (ಶಬರಶಂ. ೨೩-೬೯). [ಮಿಂಚು₂ + ಓಲೆ]

**ಮಿಂಜೊಡರ್** (ನಾ). ಕಾಂತಿಯಿಂದ ಕೂಡಿರುವ ದೀಪ : ಮಿನುಗಿದುವು ಮಿಂಜೊಡರ್ ಮನೆಮನೆಗೆ, ಮಿಂಚಿನಲರಿನ ಗೊಂಚಲೋಲ್ (ಶ್ರೀರಾಮಾ. ೪೨೭-೭೩). [ಮಿನ್ (< ಮಿಂಚು₂) + ಸೊಡರ್]

**ಮಿಂಟಗೆ** 'ಮೆಂಟಿಕೆ' ನೋ.

**ಮಿಂಟೆ₁** 'ಮಿಟ್ಟೆ' ನೋ.

**ಮಿಂಟೆ₂** (ನಾ). ಒಂದು ಬಗೆಯ ಸಸ್ಯ : ಸಮಸ್ತಜ್ವರಗಳಿಗೆ :— ಹಿಪ್ಪಲಿ . . . ಮಿಂಟೆ ಕಕ್ಕೆ, ಚಿಟ್ಟೆಲವುಡಲ, ಹಿಕ್ಕಾಡಲ್ಲಿಕೆ ಇವುಗಳ ಬೇರುಗಳು ಪ್ರತ್ಯೇಕ ೫ ತೂಕದ ಲೆಬ್ಬಿವಲ್ಲಿ ಕೊಂಬುದು (ವೈಶಿ. ೦೯೩). [ ? ]

**ಮಿಂಟೆಯೆಂಬು** 'ಮಿಟ್ಟೆಯೆಂಬು' ನೋ.

**ಮಿಂಡ** (ನಾ). ೧. ವೀರ ; ಶೂರ ; ಪರಾಕ್ರಮಿ : ಕೋಟಿಕನಾಮ ಧೇಯನಿಲೆ ಮುಂದಿರೆ ಭೋಂಕನೆ ಕಂಡು ಮಿಂಡರುತ್ಪಾಟಿಪೆನೆಂದು ಪೂಣ್ದಿಳಿಶಕ್ತಿಯನೆತ್ತುತುಮಳ್ಕೆ ಪೊಯ್ಯೆ ನಿಪಾಟವರಾಗಿ ಪಿಂಗೆ (ವರ್ಧಪು. ೩-೪೩) ; ಆಟವಿಕದಳ ಹೊಯ್ಯು ಮಿಂಡರ ಮಾಟನೆತ್ತಿದರವರು ಕಾಪಿನ ಕೋಟಲೆಗೆ ನಾವೊಲ್ಲೆವೆಂದರು ಚಿತ್ರಸೇನಂಗೆ (ಕುವ್ಯಾಭಾ. ೦೬-೩೬) ; ಮಿಂಡ ದುಂಡಿಗಳರ್ಥಿಕಾಱರು . . . ಮಿಂಡಮುದ ಕಲಿಕೆಗಳ ತರಳರ ತಂಡ ಕೂಡಿತು (ಕೊರಲಾ. ೩-೩-೦೪). ೨. ಮಿಗಿಲಾದವನು ; ಶ್ರೇಷ್ಠನಾದವನು : ಕಲಿಬಲನ ಗಂಡ ಕರ್ಪುದ ಮಿಂಡ ದುರ್ಮೋಹಜಾಲಾಂಧಕಾರಮಾರ್ತಾಂಡ (ಶಿವತ. ೬-೦) ; ಹೊಸ ಬಿರುದರ ಗಣ್ಡ್ರೋ ರಾಯರಾಹುತ್ತ ಮಿಣ್ಡ್ರ (ಎಕ. XII, ತುಮಕೂ. ೦-೬೩ ; 1571). ೩. ಹೆದರಿಕೆಯನ್ನುಂಟುಮಾಡುವವನು ; ಭಯಂಕರನಾದವನು : ಮೂರು ರಾಯರ ಗಂಡ ಚಾಡಿ ಕೇಳ್ವರ ಮಿಂಡ (ಶಿವತತ್ತ್ವ. ೦೪೪). ೪. ಉಪಪತಿ ; ಜಾರ : "ಜಾರಃ ಉಪಪತಿಃ—ಈ ೨ ಮಿಂಡನ ಪೆಸರ್" (ನಾಚಿರಾ. ೦೦೬) ; ನಿನ್ನ ಬೇಟದ ಮಿಂಡನಾವನವನಂ ಪೇಟಿಂದು ಬೆಸಗೊಳೆ (ಶಂಕಶಂ. ೭೩-೦೩) : ಒಳಗಣ ಗಂಡನವ್ವಾ ಹೊರಗಣ ಮಿಂಡನವ್ವಾ ಎರಡನೂ ನಡೆಸಲು [ಬಾರದವ್ವಾ] (ವಚಶಾಲೇ. ೫-೪೬-೦೦೪) ; ಪರಾಂಗನೆಗೆ ಮನವೆಳಸಲೆಳಸುವರವರ ಹೆಂಡಿರಿಗೆಲೆಯ ಮಿಂಡರು (ಕೊರಲಾ. ೩-೬-೭). ೫. ಸ್ವಸಾಮರ್ಥ್ಯದಿಂದ ವಶಪಡಿಸಲು ಆಗದ ವಸ್ತು, ವ್ಯಕ್ತಿ, ಪ್ರಾಣಿ ಮುಂತಾದುವು : ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡ (ಗಾದೆ) : ಕತ್ತೆ ಚಿತ್ರಗಾರನ ಮಿಂಡ (ಗಾದೆ). (ಗು). ೬. ಏರುವ ; ಉಕ್ಕುವ : 'ಮಿಂಡಪ್ರಾಯ' ಪರಾ. ೭. ಹರೆಯದ ; ಪ್ರಾಯದ : 'ಮಿಂಡಗೊರವ' ಪರಾ.

ಮಿಂಡಮಕ್ಕಳು = ಶೂರರೂ ಸಮರ್ಥರೂ ಆದ ಸ್ವಚ್ಛಂದ ತರುಣರು : ಅಂತಾ ತುಱುಪಟ್ಟಿಯ ಕಿಱುಮಕ್ಕಳುಂ ಬಲ್ಮಕ್ಕಳುಂ ಮಿಂಡ ಮಕ್ಕಳುಮನೊಂದೆ ಕೋಲೊಳ್ ತಂದು ಪುಯ್ಯಲಿಡಿಸುವ ಕೃಷ್ಣನಂ . . . ಕರೆಯುತ್ತುಂ (ಅರ್ಜನೀ. ೬-೯೩ ವ).

[ದೇ. II ತಮಿ. ಮಿಣ್ಟ ; ತುಳು. ಮಿಂಡೆ ; ತೆಲು. ಮಿಂಡಡು. ಮಿಂಡಡು : ಕೊಡ. ಮುಂಡೇ ; ಕೋತ. ಮಿಂಡ್, ಮುಂಡ್]

**ಮಿಂಡಕ್ಕರು** (ನಾ). ಪ್ರಾಯದ ಮೋಹ : ಸೊಕ್ಕುನೀರೆಯರೆಳೆವ ಮೇಲುದಂ ಸೆಳೆಯುದಡಿಯಿಕ್ಕುವರ ಪಿಂದೆ ಪರ್ಯಂಕಮಂ ಪೊತ್ತು ಮಿಂಡಕ್ಕರಿಂ ಪಾರಿದರ್ಬಂದು (ಜಕಮು. ೩-೦೪).
[ಮಿಂಡು + ಅಕ್ಕರು (< ಅಟ್ಕಱ್₂)]

**ಮಿಂಡಗಾತಿ** (ನಾ). ಜಾರೆ; ಮಿಂಡಿ : ಈರ್ವರೂ ಮಿಂಡಗಾತಿಯ ಮೇಲೆ ಸಿಟ್ಟಾಗಿ, ಕೈ ಎತ್ತಿ — ಹಾಗೆಯೇ ಹಾಡುವರು (ರಂಪ್ರಿಮ. ೭).
[ಮಿಂಡ + — ಕಾತಿ]

**ಮಿಂಡಗಾರ** 'ಮಿಂಡಗಾಱ' ನೋ.

**ಮಿಂಡಗಾಱ**, ಮಿಂಡಗಾರ (ನಾ). ೧. ಜಾರ : ವಿಟ : ಬ್ಬು ಸೂಳೆಯ ಬಾಗಿಲಲ್ಲಿ ಎಂಬತ್ತುನಾಲ್ಕುಲಕ್ಷ ಮಿಂಡಗಾಱರು (ಕಲ್ಯಾಕಾಂ. ೯೦). **ಮಿಂಡಗಾರ** : ೧. ಸೂಳೆ ಸುಲಿದುಕೊಂಡು ತಿಂದಳು, ಮಿಂಡಗಾರ ಕಿರಿದುಕೊಂಡು ತಿಂದ (ಗಾದೆ). ೨. ಸ್ವಾಧೀನಪಡಿಸಿಕೊಳ್ಳುವವನು ; ವಶಪಡಿಸಿಕೊಳ್ಳುವವನು : ನೀವು ಘಳಿಸಿದ ದ್ರವ್ಯಕ್ಕೆ ಈಗ ಮಿಂಡಗಾರರು ಬರುತ್ತಾರೆ (ಮುದ್ರಾಮಂ. ೦೩೦). [ಮಿಂಡ + — ಕಾಱ]

**ಮಿಂಡಗಾಱಿಕೆ** (ನಾ). ವ್ಯಭಿಚಾರ ; ಹಾದರ : ಮಿಂಡಗಾಱಿಕೆಯಲ್ಲಿ ಗಳಿಸಿದ ಸೌಖ್ಯವನುಂಡಲ್ಲದೆ ತೀರದು (ಮೋಹತ. ೩೩-೩೬).
[ಮಿಂಡಗಾಱ + — ಇಕೆ]

**ಮಿಂಡಗುದ್ದಲಿ** (ನಾ). ಒಂದು ವಂಶದ ಹೆಸರು : ತೊಗರ ಮಾಚಿ ಸೆಟ್ಟಿಯುಂ ಮಿಂಡಗುದ್ದಲಿ ನಾಮಿಸೆಟ್ಟಿಯುಂ ಸಮಸ್ತಮುಂಮ್ಮುರಿದಂಡ ಗಳುಮಿಂತು ಪಟ್ಟಣಮಶೇಷದ ಸನ್ನಿದಾನದಲು . . . ದೇವರ್ಗೆ ಕೊಟ್ಟ ಕಯಿ ಕಂಮ್ಮಮಯ್ಯತ್ತು (ಎಕ. VII, ಶಿಕಾಂ. ೦೦೭-೩೯ : 1098) ; ಹುಲಿ ಗೆಱೆಯ ನಗರ ಮುಮ್ಮುರಿದಂಡ ಮಿಂಡಗುದ್ದಲಿ ಸಮಯ ಮಂತ್ರಿ ಸಾಮಂತ ಪಟ್ಟಸ್ವಾಮಿಗಳು . . . ಆದಿಯಾದ ಹಲರು ಹದಿನೆಂಟು ಸಮಯವದೆಯ್ದೆ (ಸೋಮನ. ೩-೪೩). [ ? ]

**ಮಿಂಡಗೊರವ** (ನಾ). ಹರೆಯದ ಜಂಗಮ ; ಪ್ರಾಯದ ಜಂಗಮ : ಎಲೇ ಮಿಂಡಗೊರವ ಹೋಪರೆ ಕಂಡು (ಇಹರ. ರೇ. ೩೬-೬).
[ಮಿಂಡ + ಗೊರವ]

**ಮಿಂಡಜಂಗಮ** (ನಾ). = ಮಿಂಡಗೊರವ : ಮಿಂಡಜಂಗಮಮಿಸರವಾ ಭರಣಾಂಬರಾಗರು . . . ತಾಂಬೂಲಾದಿಗಳನೊವಮಿಕೊಳುತ್ತಾನಂದದಿಂ (ಬಸವಪು. ೦೦-೩೦); ಸಾಱಿ ಲಕ್ಕದ ಮೇಲೆ ತೊಂಬತ್ತಾಱುಸಾವಿರ ಮಿಂಡ ಜಂಗಮ ಮಿಱಿ ಬಾಲರು ವೃದ್ಧರೆಯ್ತಹಾದೆಣಿಕೆಗರಿದೆನಿಸಿ (ಪ್ರಭುಲೀ. ೨೦-೩೦).
[ಮಿಂಡ + ಜಂಗಮ₁]

**ಮಿಂಡತನ** (ನಾ). = ಮಿಂಡಗಾಜಿಕೆ : ಚಂಡಿಗೊಂಡೋರಂತೆ ಹೋಗದೆ ಭಂಡಿಸುವುದಿದು ಭಕ್ತಿನೀತಿಯೆ ಮಿಂಡತನಕಿದು ನೀತಿಯೇ (ಬಸವು. ೪೦-೩೪). [ಮಿಂಡ + — ತನ]

**ಮಿಂಡತಿ** (ನಾ). ಉಪಪತ್ನಿ : ಜಾರೆ : ಹೆಂಡತಿಯು ವುಟ್ಟು ತಿರುಗೋದು ಹರಕು ಹರಕುಚಿಂದಿ ಮಿಂಡತಿಯು ವುಟ್ಟು ಮೆರೆವುದು ಮಿಸಲಿಯ ಮೇಲ್ಬಂದಿ (ಜಾನಪದ. ೪೬-೯)

[ಮಿಂಡ — ತಿ$_1$ (< ಇತ್ತಿ)./ ತುಳು. ಮಿಂಡತ]

**ಮಿಂಡಪೋದಿ** (ನಾ). ಒಂದು ವಂಶದ ಹೆಸರು : ಸ್ವಸ್ತಿಶ್ರೀಚೋಟ ಮಹಾರಾಜಙ್ಗೆ ಚಾತೆಯಪರಿಜನ × × ಕಣ್ಣ ಕೊಟ್ಟು ಜಾವಾಡಿಯ ತಳಾಜು ಮಿಣ್ಣಪೋದಿಯ ಪಿಳ್ಳಿಯು ತಲೆದ್ × × ಗಾರವುಂ × × (ಎಕ. X, ಗೌರಿಬಿ. ೩೩-೯ ; ೭೦. ೨೦೦). [ ? ]

**ಮಿಂಡಪ್ರಾಯ** (ನಾ). ತುಂಬುಹರೆಯ : ನವತಾರುಣ್ಯ : ಬೇಯ ದೆಯ್ಬುಸದಿಂತು ಮಿಂಡಪ್ರಾಯದಾತಂಗೆಂದು ಭಕ್ತಸಹಾಯಿ ಮುದ್ದಾಡಿ ಪಡಿಯನಿತ್ತನು ಮೊನೆಯಧರನೆನಗೆ (ಬಸವು. ೨೫-೦೦).

[ಮಿಂಡ + ಪ್ರಾಯ]

**ಮಿಂಡಭಕ್ತ** (ನಾ). = ಮಿಂಡಗೊರವ : ಈಯನೇ ಇವ್ಮಡಿಸಿ ಧನವನಜೇಯಮತಿಯೊಳು ಮಿಂಡಭಕ್ತಂಗೀಯವನಿಯಜೀಯಲ್ ಮೊನೆಯ ಧರನೆಂಬ ಗಣನಾಥ (ಬಸವು. ೧೦-೩೭) [ಮಿಂಡ + ಭಕ್ತ$_1$]

**ಮಿಂಡವಂದಿ** (ನಾ). ಪ್ರಾಯಂದ ಹಂದಿ : ಕೊಬ್ಬಿದ ಹಂದಿ : ಮಿಂಡವಂದಿಯ ಲಾವಣಿಗೆಯ ಬಿಲಾಯಲಾಲನೆಯ . . . ಖಡ್ಗದ ಹಿಂಡುಗಳ ತೋಜಿಸುವೆನೇಳು (ಶಬ್ದಾಲಿ. ೧೩-೧೬) [ಮಿಂಡ + ಪಂದಿ]

**ಮಿಂಡಹರೆಯ** (ನಾ). = ಮಿಂಡಪ್ರಾಯ : ದಾಸಿಮಯ್ಯನ ತೆಜದಿ ತವನಿಧಿಗಾಸೆಮಾಡೆನು ಬೇಡೆನು ಗುಂಡಯನವೊಲು ಮಿಂಡಹರೆಯವನು (ಬಸವ. ೯-೩೩) [ ಮಿಂಡ + ಹರೆಯ (< ಪರಯ) ]

**ಮಿಂಡಾಟಿಕೆ** (ನಾ). ವ್ಯಭಿಚಾರ , ಹಾದರ : ತರುಣಿ ಮಿಂಡಾಟಿಕೆಯೊಳಾರ್ಜಿಸಿದುರುಮಹಾವಿತ್ತದಲಿ ಜೀವಿಪ ಪುರುಷನಾಲೋಕನವ ಮಾಡಿದ ವರ್ಗೆ ಘನನರಕ (ಅಂಬಿಗ. ೪೭-೭೦). [ಮಿಂಡು ಆಟಿಕೆ]

**ಮಿಂಡಾಡು** (ಕ್ರಿ). ಹಾದರ ಮಾಡು : ವ್ಯಭಿಚಾರ ಮಾಡು : ಮಿಂಡಾಡಿ ಮಾಡಿ [ಪಾಠಾಂ. ಮಿಂಡಾಟವಾಗಿ] ಮೆಚ್ಚಿದ ರಂಡೆಯರೊಳ್ಮರೆದು ವಿಕೃತಿವೇಷದೆ ಜಗವುಂ ಕಂಡಜ್ಞಾನಿಯೆನೆಂಬನ ಮುಂಡಿಂಗೊಳಗಾಗದಿಪ್ಪವಂ ಸತ್ಪುರುಷಂ (ಸವುಕ. ೧೪-೭೯). [ಮಿಂಡು + ಆಡು$_1$]

**ಮಿಂಡಿ$_1$** (ನಾ). ೧. ತುಂಬುಯೌವನವನ್ನು ಹೊಂದಿರುವವಳು : ನವಯುವತಿ : ಶೃಂಗಾರಸುಂಗೋಗಿಯೆಂದುಟೀದ ಮಿಂಡಿಯರಾವಗ ಮೊಲ್ಬು ನೋಡಲಾ ಚಾರುವಚೋವಿಲಾಸನಿಧಿ ರಂಜಿಸುವಂ (ಉದ್ಭಟ. ೦೨-೩೬) ; ದಂಡಿಯೊಳೀಗಳ್ಬಂ ಪ್ರಾಣಕಾಂತನಪ್ಪಿಕೊಂಡಿರಿ ತೊಲಗ ಬೇಡನುತೆ ಮಿಂಡಿಯರಿಗೆ ಬುದ್ಧಿಗಲಿಸುವಂತಲೆವಳ್ಳಿ ಮುಂಡಿಗೆಗಳನಡರಿ ದಾವು (ಮೋಹತ. ೨೪. ೫೩) ; ಮಿಂಡಿಯರ್ ಬಂಡುಣಿಪದೆಯನ ದಂಡಾಳ್ಗಳಿನಿ ಪಿಂಪೆಟ್ಟಿಲ್ಲಿಗಲ್ಲಿಗೆ ಸಂಚರಿಸಿ ಪೊಲ್ಲಡಿಯೊದೆಯಿಂ ಚೆನ್ನಸುಗೆಯುಂ ತಳರ್ಚಿಯುಂ (ರಾಜಶೇ. ೧೩೨-೨೬). ೨. ಉಪಪತ್ನಿ : ಬೆಲೆ ಮಿರ ತುಚ್ಚವುಂಟವಸರು ಮನೆವೊಕ್ಕೊಡೆ ಪೊಕ್ಕನಿಚ್ಚೆಯುಗ್ಗಲಿಸಿವ ಮಾತೆ ಪಕ್ಕದಲೆಯೊಳ್ ವಿನುತಂ ರತಿಯಿಲ್ಲ ಮಿಂಡಿಯೊಳ್ (ಸೂಕ್ತಿಸು. ೮-೩೯೯) ; ತಕ್ಕಯೊಡೆಯದ ಮಿಂಡಿಯುಪರತಿಯ ಸುಖವ ತನು ಜಕ್ಕುಲಿಸಿ ಪೊಗಳ್ವ ವಿಟನಂತೆ (ಕೃಶವ. ೧-೬-೮). (ಗು). ೩. ಮಿರುವ ; ಉಕ್ಕುವ : 'ಮಿಂಡಿವರೆಯ' ಪರಾ.

[ಮಿಂಡ + —ಇ$_2$./ ತುಳು. ಮಿಂಡಿ]

**ಮಿಂಡಿ$_2$** 'ಮಿರಡಿ' ನೋ.

**ಮಿಂಡಿ$_3$** (ನಾ.) (?) : ಕೆಂಡಗಳ ತನಿಗಿಡಿಯನಗಲದಿ ಡೆಂಡಣಿಸುತೆ ಕಣ್ಗಳಲಿ ಪೊಗರಿನ ಮಿಂಡಿ ಮಿಣ್ಟೆಯ ಸರಳ ಶರಧಿಯೊಳದ್ದಿದನು ಹರಿಯಾ (ಅಂಬಿಗ. ೦೭-೨೭). [ ? ]

**ಮಿಂಡಿಗೆ** (ನಾ). ಗೊರಸಿನ ಹಿಂಭಾಗ : ಮಿಂಡಿಗೆಗಳಂ ಮಿಗೆ ಚುಂಬಿಪ ವಾಲವೊಪ್ಪೆ ನಿಂದೆಸೆವೆಳಸಣ್ಣರೋಮತತಿ ಕೊರ್ಬಿದ ಮೆಯ್ಯ್ ಮಿಗೆ ಹೇಜುವೆತ್ತನಡ್ವಸಹಿತಮಾ ವನಸ್ಥಳಮನೆಯ್ದಿದನೊರ್ವ ಮಹಾವಣಿಗ್ವರಂ (ವರಾಂ. ೪-೭೭) : “ಗೊರಸು ?” (ಶ್ರಶಿಣ). [←ತೆಲು. ಮಿಡುಗು]

**ಮಿಂಡಿತನ** (ನಾ). ಹೆಣ್ಣಿನ ಯೌವನ,– ತಾರುಣ್ಯ : ಮಂಡೆದುಜಾಬ ಮಿಂಡಿತನದಿ ನಿಬ್ಬಣಕ್ಕೆ ನಾ ಹೋದಡೆ ಮಂಡೆ ಬೋಳಾಗದನಕವಪ್ಪುದೆನಗೆ ನಿಬ್ಬಣ (ಶವಗೀ. ೧೩೬-೭೯೯). [ಮಿಂಡಿ$_1$ + — ತನ]

**ಮಿಂಡಿದೊತ್ತು** (ನಾ). ಯೌವನಸ್ಥಳಾದ ದಾಸಿ : ಹಡವ ಹಣ ಹಾಗ ಪೊಲ್ಲಂ ಜಡೆಯಿಡಕುರವುಡಗಿ ಮಿಂಡಿದೊತ್ತಿರಿಗೀವೀ ತುಡುಗುಣಿ ಗೊರವರ ಮೆಚ್ಚಂ ಪೊಡವಿಗೆ ಸಿವಶಕ್ತ ತಾನೆ ನೈಷ್ಠಿಕಮುನಿಪಂ (ಎಕ. XII, ತಿಪ್ಪ. ೨೯-೨೬ ; 1149). [ಮಿಂಡಿ$_1$ + ತೊತ್ತು (< ತೊಟ್ಟು) ]

**ಮಿಂಡಿವರೆಯ** (ನಾ). ತುಂಬುಪ್ರಾಯ : ನವಯೌವನ : ಕಿರುವರೆಯದಿಂ ಸಂತತಮಿಮ್ಮಿಂಡಿವರೆಯಂದ ಸೋಕುವರೆಯ ನಡುವರೆಯದವರು (ಸವಪೋ. ೨೪. ೦೯). [ಮಿಂಡಿ$_1$ + ಪರೆಯ$_2$ (<ಪರಯ) ]

**ಮಿಂಡಿವೆಂಡತಿ** (ನಾ). ನವಯುವತಿಯಾದ ಹೆಂಡತಿ : ಪತಿಯಿಲ್ಲದವಳೆನು ತೆನ್ನಯ ಮಿಂಡಿವೆಂಡತಿಯು ಕೋಳ್ಗೊಂಡಿಹ ಕುನ್ನಿ ಧೃತಿಗಿಡಹೇಡ ಧೈರ್ಯವನಾಂತು ಬಾರೆಂದು ರತಿರಾಜ ಮೂದಲಿಸಿದನು (ಮೋಹತ. ೦೨-೯೨).

[ಮಿಂಡಿ$_1$ + ಪೆಂಡತಿ (< ಪೆಂಡಿತಿ) ]

**ಮಿಂಡಿವೆಣ್** (ನಾ). ತುಂಬುಪ್ರಾಯದ ಹೆಣ್ಣು; ನವಯುವತಿ : ಗಂಡುಮಿಣ್ಟೊಗರ್ಗಣ್ಣದಿರ್ನಿಜವಸ್ತ್ರಮಾಗೆ ಸುರೋರ್ವಿಯೊಳ್ಮಿಂಡಿವೆಣ್ಗಳ ತೋಳ ತೆಕ್ಕೆಯೊಳಾವಗಂ ಬಿಡದೊಪ್ಪುಗುಂ ಚಂಡವಿಕ್ರಮಧಾಮನುದ್ಭಟ ಭೂಮಿಪಾಲಕನುಲ್ಲಸನ್ಮಂಡಲಾಗ್ರಕಿದಿರ್ಚಿ ದುನ್ನತಶತ್ರುಧಾತ್ರಿಪಸಂಚಯಂ (ಉದ್ಭಟ. ೦-೮೯) ; ಉಚಿತವಚನದ ಮಿಂಡಿವೆಣ್ಗಳು ನವರತ್ನಖಚಿತ ಭೂಷಣಹಸ್ತದಲಿ ರುಚಿವೆತ್ತು ಬಡಿಸಲ್ಕೆ ಶ್ರೀಕೃಷ್ಣರಾಯನು ರುಚಿಗೆಯ್ದು ಮೊಗವನೀಕ್ಷಿಸಿದ (ಮೋಹತ. ೦೪-೦೪). [ಮಿಂಡಿ$_1$ + ಪೆಣ್]

**ಮಿಂಡು** (ನಾ). ೧. ಶೌರ್ಯ : ಕಲಿತನ : 'ಮಿಂಡೇಟಿಗ್' ಪರಾ. ೨. ವ್ಯಭಿಚಾರ ; ಹಾದರ : 'ಮಿಂಡಾಟಿಕೆ' ಪರಾ. ೩. ನವಯೌವನ : ತುಂಬುಪ್ರಾಯ : 'ಮಿಂಡಕ್ಕರು' ಪರಾ. ೪. ಇಂದ್ರಿಯಲಾಲಸೆ : ವಿಷಯಲಂಪಟತೆ : (ಕ). ೫. ಪುಂಡ ; ತಂಟೆಕೋರ : ತಕ್ಕನ ಕರ್ಕಡೆಗೊಂಡು ಮಿಂಡು ಮಾರ್ಪ್ಪೆದಿರಾಂತು ನಿಂದೆಡಸಿ ಸುತ್ತುವ ಬಾರಿಗೆ ಮೆಯ್ಯನೊಡ್ಡಿ ಕೋಟಲೆಗೊಳಗಾಗಿ ಪಂದಿ ನವೆವಂದಮದಾರ್ಗಮಸೇವ್ಯವರ್ಣನಂ (ಸುಕುಮಾ. ೫-೦೬) ; ಮಸಗಿದನಿತುಂ ಮಿಂಡುಂ ತಾನುಂ ಭಯಂಕರಮಾಗೆ ಬಂದಸಗವೊಟೆಯುಂ ಪೊಕ್ಕು . . . ವಸ್ತ್ರವ್ರಾತಂಗಳಂ ನೆಜೆಕೊಂಡು ಸಂಕಿಸದೆ ತುಡುವಂ (ರಸಾರ್ಣವ. ೨-೩೭). ೬. ಅಹಂಕಾರ ; ದರ್ಪ : ಕಂಡಾ ವಿಮರ್ದಕಂ ಮಿಗೆ ಮಿಂಡಿನೊಳಿರ್ದರ್ಥಪತಿಯ ಪಕ್ಷದೊಳವನುದ್ದಂಡತೆಯಿಂ ಧನಮಿತ್ರನನಂಡಲೆಯುತ್ತಿರದೆ ಬೈದನೆಲ್ಲರ್ ಕೇಳಲ್ (ವರಾಂ. ೬. ೧೫೭).

ಮಿಂಡುಗುದ್ದು = ೧. ಪ್ರಣಯದ ಮೋಹದಿಂದ ಬಿದ್ದ ಪೆಟ್ಟು ; ಪ್ರಿಯವಾದ ಹೊಡೆತ. ೨. (ಆಲಂ) ದೂರಾಲೋಚನೆಯಿಲ್ಲದೆ ಪ್ರಿಯನಿಂದ ಪಡೆದ ನಷ್ಟ. [ದೇ.॥ ತಮಿ. ಮಿಣ್ಡು]

**ಮಿಂಡುವಡೆ** (ನಾ). ಪುಂಡರ ಸಮೂಹ : ತಂಟೆಕೋರರ ಗುಂಪು : ದೇವ ಭವತ್ಪುತ್ರಂ ಕರಮೋವದೆ ಸಂಕಿಸದೆ ಮಿಂಡುವಡೆವೆರಸದಟಿಂದೋವೋ ಪೆಂದೆಳಜೆ ಜನಂ ದಾವಾನಲನಂತೆ ಸುಡುವನಿರುಳುಂ ಪಗಲುಂ (ರಸಾರ್ಣವ. ೨-೭೪). [ಮಿಂಡು + ಪಡೆ$_2$]

**ಮಿಂಡೆ** (ನಾ). ತುಂಬುಪ್ರಾಯದ ಸ್ತ್ರೀ : ತರುಣಿ : ಅಂಡೆಗಳ ಮಿಂಡೆಯರ್ ಕೊಂಡು ಕೊಸಱಿ . . . ನೀರ್ಗಳಂ ಚೆಲ್ಲುತಾಡಿದರ್ ಸರಸಿಯೊಳ್ ಸರಸ ಮಿಗಲು (ಪಂಪಾಶ. ೬-೨೮) : ಕುಂಡಲಿಯನಱಿದಾತ ಮಿಂಡೆಯರಿಗೊಲಿಯುವನೆ (ಸರ್ವಜ್ಞ. ೩೦೬); ಮಿಂಡೇರ ಬಳಗವು ಬೆನ್ಹತ್ತಿ ಬಂದು ನಿನ್ನ ರಂಡೇರೈವರು ಕೂಡಿ ನಗುತಲಿ ನಿಂತು (ಕಂಸಿಶ. ೨೦-೨). [ಮಿಂಡು ... ಎ₂]

**ಮಿಂಡೆವೆಣ್ಣು** (ನಾ). = ಮಿಂಡಿವೆಣ್ : ಮಿಂಡೆವೆಣ್ಣುಗಳೆಲ್ಲ ಮದವೆದ್ದು ತವೊಳು ಕಂಡ ಕಡೆಗೆ ಚೆಲ್ಲವರಿದು . . . ಉದ್ದಂಡತನವಲಾಡುತಿಹರು (ತಂತ್ರಹಾ. ೩-೧೮). [ಮಿಂಡೆ + ಪೆಣ್ಣು (<ಪೆಣ್) ]

**ಮಿಂಡೇಳ್** ' ಮಿಂಡೇಟು ' ನೋ.

**ಮಿಂಡೇಟು**, ಮಿಂಡೇಳ್ (ಕ್ರಿ). ೧. ಪೌರುಷದಿಂದ ಉಬ್ಬು : ಉರ್ಕಿನ ಕೇಣಿಯು ಚೋಣಿ ಸೊರ್ಕುಂಜೆರ್ಕಾಗಲೊಡಂ ಕಂಡು ಮಿಂಡೆಟ್ಟಿ ಪಡಿವಳರೆಲ್ಲರುಂರವಣಿಸಿ ಮುಂಬರಿದೊಡ್ಡಿ ನಿಂದರಾಗೆ ಕಾದಿ ಮೋದಿ ತಾಂ ತಮಗೆ ಜವಹುರದ ಪಡಿವಳರಾದರ್ (ರಾಮಾಕ್ಯ. ೦೧೩-೨೬). **ಮಿಂಡೇಳ್** : ೧. ಎದ್ದುದೀ ಕಟಕದಲಿ ಬಲು ಮಿಂಡೆದ್ದ ಸುಭಟರು ಸಮರಭೂಮಿಯ ಹೊದ್ದಿದರು ರ್ಘುಳಿಬಿಸುವಡಾಯ್ದದ ಹೊಗರ ಹೊಳಹುಗಳ (ಕುಮಾರವ್ಯಾ. ೯-೦೩) : ಕಿತ್ತರಾ ಮಂದರಮಹಾದ್ರಿಯುವತ್ಯಧಿಕಬಲವೀರ್ಯಶೌರ್ಯೋದ್ವೃತ್ತರ್ದೇವಾಸುರರು ಬೊಬ್ಬಿಱಿದಾರ್ದು ಮಿಂಡೆದ್ದು (ಶಿಹಾಗ. ೬-೬-೨೯). ೨. ಮದಿಸು ; ಸೊಕ್ಕು : ಪೊಚ್ಚಪೊಂದಾವರೆಗಳ ಧೂಳಿಗಳ ತನಿಗಂಪನುಂಡು ಮಿಂಡೆದ್ದ ಭೃಂಗಾಳಿಗಳ ಬಳಗಂ ಪರಿಯಲ್ (ಕೈಪಿಂಶಾ. ೩-೮) : ಗಂಡಾರಣ್ಯದಿ ದೊಡ್ಡ ಮಂಡೂಕ ತನಗಿದಿರಂಡಲೆಯಿಲ್ಲೆನುತ್ತಾ ಕೊಂಡಾಡುವಂತಿರೆ ಮಿಂಡೆದ್ದು ಕೆಡುವಂತೆ ಕಂಡು ಕಾಣದೆ ಹೋಹರು (ಕುಮುಂದಾ. ೭). ೩. ತುಂಬುಪ್ರಾಯವನ್ನು ಹೊಂದು ; ನವಯೌವನಕ್ಕೆ ಬರು : ಮಿಂಡೆದ್ದ ಹೆಣ್ಣಳುಪವನಕೆ ನಡೆತಂದು . . . ಕಂಡಕಂಡವನಿಜಾತಂಗಳಂ ಚಿಗುರಿಸಿವರೊಡನೆ ಪೂದೋಱಿಸಿದರು (ಕೈಪಿಂಶಾ. ೩೦-೩) : ಮಿಂಡೆದ್ದ ಪೊಲಗಾವ ಪಾಮರಿಯರುಂ ಮುಸದೊಲವಿನಿಂ ಪಾಡೆ (ಪಂಶಾರಾ ೧-೦೬-೩೮).

[ಮಿಂಡು – ಏಟು₁]

**ಮಿಂತು** ' ಮಿಟು ' ನೋ.

**ಮಿಂದು₁** ' ಮೀ₁ ' ಪರಾ.

**ಮಿಂದು₂**. ಮೀದಿ (ನಾ). (ದೇವತೆಗಳ ಹೆಸರಿನಲ್ಲಿಡುವ) ಮುಡಿಪು : ಮೀಸಲು : ಗವಱಿಗಳಯ್ಯೂರ್ವರುಮಳಿನವಸೋಮೇಶಂಗೆ ಮಿಂದಿನಲು ಪಣಮೊಂದಂ ಧ್ರುವಮಾಗೆ ಪಸುಂಬೆಗೆ ಹಾಗವನೆಱಕದೆ ಕರ್ತೃಯಲ್ಲಿ ಪೇಳೆಯಸಿತ್ತರ್ (ಕಶಾಇ. IX-i, ೦೬೩-೬೦: 1099). P ಇದು ' ಮೀದು ' ಎಂಬುದರ ಅಪಲಿಖಿತವಿರಬಹುದೆ ?. **ಮೀದಿ** : ಹೋದ ಇರುಳು ಕಾರಣಂಗೆ ಇಟ್ಟ ಮೀದಿಯನ್ನು ನಾಯಿ ತಿನ್ನುತ್ತ ಇದೆ (ಹಂಶಿಪಾ. ೦೩೧).

[ದೇ.॥ ಮಲ. ಮೀತ್ತು ; ಕೊಡ. ಮೀದಿ ; ತೆಲು. ಮೀದು]

**ಮಿಕ** ' ಮಿಗ ' ನೋ.

**ಮಿಕಿಮಿಕಿ** (ನಾ). ಆಶ್ಚರ್ಯದಿಂದ ಎವೆಮಿಟುಕಿಸದೆ ನೋಡುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ : ವರ್ತಕನ ಮೋರೆಯನ್ನು ಮಿಕಿಮಿಕಿ ನೋಡುತ್ತ (ಮುಂಬಯು. ೩-೭೪) : ಅವೆಲ್ಲ ಹಸಿದು ತಿರುಗುವ ಅನಾಥಮಕ್ಕಳ ಹಾಗೆ ಭೂಪತಿಯ ಮುಖವನ್ನೇ ಮಿಕಿಮಿಕಿ ನೋಡುತ್ತವೆ (೯೭.೯. ೨೭೦).

**ಮಿಕ್ಕ** ' ಮಿಗು ' ಪರಾ.

**ಮಿಕ್ಕಡ** (ನಾ). ಹೆಚ್ಚಳ : ಅಧಿಕ : ಎಳೆಸೊರ್ಕು ಜಕ್ಕುಲಿಪಂತೆ ಮಿಕ್ಕಡದಿಂದ ರಾಗಾಂಕುರಂ ನೆಗೆವನ್ನವಾಗಿರೆ ಮೆಯ್ಬ್ಬಮರ್ ನಲಿದುಣ್ಕೆ ತಳ್ಳಂಕಗುಟ್ಟಿ ಮುಬುಂಗಿ ಪೊಣ್ಕೆ ನಿತಂಬದಿಂ ಮದನದ್ರುವಂ (?) (ಹೊಕ್ಕಿಸು. ೦೩-೦೦). [ದೇ.॥ ತೆಲು. ಮಿಕ್ಕಟ. ಮಿಕ್ಕುಟ]

**ಮಿಕ್ಕು₁** (ಕ್ರಿ). ೧. ಮೀರು : ಅತಿಕ್ರಮಿಸು : ಮಿಂಚುಬೆಳಗುಚ್ಚಳಿಸಿದಂತೆ ದಟ್ಟಯಿಸ್ಸಿ ಬರೆ ಸಂಚಳಿಪ ಮಾನಕೆ ಮಿಕ್ಕಲ್ತೆಱಪನೀಯದಿರೆ(ಇಶ. ಪೀ. ೩೨-೪): ಕನ್ನಡ ಲಯದ ಯಾವುದೇ ಗಣ ಎರಡು ಅಂಶಗಳ ವ್ಯಾಪ್ತಿಗಿಂತ ಕಡಿಮೆಯಾಗದು ; ನಾಲ್ಕು ಅಂಶಗಳನ್ನು ಮಿಕ್ಕದು (ಛಂದೋ.೨. ೬೯). ೨. **ಉಳಿ** : ಬಾಕಿಯಿರು : ಆಗಳಂಗನೆ ತೂಪಿಱಿದ ತನುಭಾಗವುಳಿಯಲು ಶಿವನ ಮಿಕ್ಕಿದ ಭಾಗದೊಳು ಹುಗುಳೇಳೆ (ಬಸಪು. ೦೩-೨೨) ; ಶಿವನೇ ವಿಪತ್ತು ಹೊಂದುವಂತವನಾದನು. ಮಿಕ್ಕಿದ ಜನರುಗಳಂ ಪೇಳುವುದೇಕೆ (ಪಂಕಸ. ೧೦೮). [ < ಮಿಗು]

**ಮಿಕ್ಕು₂** ' ಮಿಗು ' ಪರಾ.

**ಮಿಕ್ಕು₃** (ನಾ) ೧. ಉಳಿದುದು ; ಇತರ : ಜೀವರತ್ನಕಣಿಯೋ ಮಿಕ್ಕಾದ ಪಾಷಾಣಗಳ್ (ಕೊಸೀಕ. ೦೦); ಅಮುಮೆಂದುಸಿರ್ವ ಸಮುಚ್ಚಯಮುಮುವಿಧಿ ನಿರುತಂ ದ್ವಿತೀಯೆಯೊಳಪ್ಪೊಕ್ಕರ್ಕುಂ ಸಮನಿಸವೆಂದುಂ ಷಷ್ಠಿಯೊಳುಮುಮವು ಮಿಕ್ಕಿನ ವಿಭಕ್ತಿಗಳ ಮೇಲಿರ್ಕುಂ (ಶಮದ. ೦೨೨). ೨. ಮಿಗಿಲು : ಅತಿಶಯ : ಸಾಯದುಳಿದವರಿಲ್ಲ ಮಿಕ್ಕಿನ ನಾಯಕರೊಳಕಟ (ಕುಮಾರವ್ಯಾ. ೩-೩೯). ೩. ಹೆಚ್ಚಳ : ಆಧಿಕ್ಯ: (?). [ < ಮಿಗು. / ತಮಿ. ಮಿಕ್ಕು, ಮಿಕ್ಕ = ಅಧಿಕವಾದ]

**ಮಿಗ**, ಮಿಕ (ನಾ). ೧. ಕಾಡಿನಲ್ಲಿ ವಾಸಿಸುವ ಮೃಗ : ವನ್ಯಪ್ರಾಣಿ : ಲಲಿತಘಟೆಗೊಂದು ಮಿಗಮುಪ್ಪಡಂ ಬೇಂಟೆ ಸಮನಿಸದೆ ಪೊಱಲ್ಗೆವೋದೊರ್ (ವಡ್ಡಾರಾ. ೯೩-೨೩): ಮುಂದಣ ಮಿಗಮುಂ ಕಟ್ಟಿಪದೆ ಸಂದಿಸಿ ಬಱಗೊಳ್ವ ಮಿಗಮುಮುಂ ಕಟ್ಟಿಪದೆ ತಾನೊಂದಳವಿದಪ್ಪದೆಚ್ಚು ಬಲಿಂದಮನಿಂ -ಬಿಲ್ಲ ಬಲ್ಮೆಯುಂ ಪೊಗೞಿಸಿದಂ (ಶಂಕಶಾ. ೩-೪೮) : ಮಿಗವಲ್ಲ ಮಾನಸರೂಪಲ್ಲ ಕೇಸರಿಮೊಗ ತ್ರೆಱಿವಾಯ ಪಲ್ಗಿರಿದು ನಖದಿಂದಲಹಿತನ ಗಂಡಿಕೊಂಡಱುಹಿದ ಪ್ರಕಟಿತ ಬಲುಹ ತೋಱಿನಗೆ (ಮೋಹತ. ೪೦-೨೨) ; ಕಾಡೊಳಿರ್ದುಂ ಮಿಗಂಗಳ್ ಬಾನೊಳಿರ್ದುಂ ಖಗಂಗಳ್ ಮಱಿಗಳನಾರಯ್ಯುತುಂ ನೊಗಂಬಟ್ಟುವು (ರಾಮಾಶ್ವ. ೦೬-೨೩). ' ಮಿಗವೇಂಟೆ ' ಪರಾ. ೨. ಜಿಂಕೆ : ಚಿಗರೆ : " ಮಿಗವೆಂದರಲಿ " (೯೭೫ಾ. ೩೦-೯೯): " ಮಿಗವೆಂದಕ್ಕುಮದೆರಲೆಗೆ " (೪ವಿಕೆಂ. ೬೦). ೩. ಕಸ್ತೂರಿಮೃಗ : ' ಮಿಗಸೊಕ್ಕು ' ಪರಾ. **ಮಿಕ** : ೪. ಹಂದಿ ; ಸೂಕರ : " ಮೃಗಃ = ಮಿಕಂ " (ಕಾಶ್ಯ. ೨೮೬); ಅನತಿದೂರದಲ್ಲಿಯೇ ಮಿಕ ತನ್ನ ಮರಿಗಳ ದಂಡಿನೊಡನೆ ಘೂತ್ಕಾಡನ ಮಾಡುತ್ತ ಓಡಿಹೋಯಿತು (ಸಿ೨೦ು. ೬೯). ೫. ಬೇಟೆಯ ಪ್ರಾಣಿ : ಹುಲಿಯು ತನ್ನ ನಖಪಂಜರದ ಒಂದೇ ಹೊಡೆತದಿಂದ ದೊಡ್ಡ ದೊಡ್ಡ ಮಿಕಗಳ ಹೊಟ್ಟೆಯನ್ನು ಹರಿಯುತ್ತದೆ (ಮುಂಬಯು. ೪-೩೦). ೬. (ಆಲಂ) ಸುಲಭವಾಗಿ ಮೋಸಕ್ಕೆ ಗುರಿಯಾಗುವ ವ್ಯಕ್ತಿ : ಬಲಿಪಶು : ನಿಮ್ಮಿಬ್ಬರ ಹಣ ನೆಲಕ್ಕ ಬಿದ್ದಾಗ ಇಬ್ಬರಿಗೂ ಬುದ್ಧಿಬರುವುದು. ಮಿಕವಾಗಿದ್ದಾನೆ (೪೭೫ಾ. ೦೩೩).

ಮಿಗದರಸ = [ಜೈನ] ನೂರು ಇಂದ್ರರಲ್ಲಿ ಒಬ್ಬ; ಸಿಂಹ ಎಂಬ ಹೆಸರಿನ ಇಂದ್ರ : ಜೋಯಿಸರಾಣ್ಮಂ ಮಿಗದರಸಂ ಮೊದಲಾಗಿ ಸಲೆ ಸೊಗಯಿಸುವ ಶತೇಂದ್ರರ್ . . . ಗಂಧಕುಟಿಯೊಳೆಡಗಿಱಿದಿಹುದು (ಜಯುಕಾ. ೦೬-೩೯). **ಮಿಗದಾಣ್ಮ** = ಪ್ರಾಣಿಗಳ ಒಡೆಯ : ಮೃಗರಾಜ : ಸಿಂಹ : " ಮಿಗದಾಣ್ಮಂ ಮೃಗದೇವನಲ್ಲಿ " (ಕಹಾಕಶಿ. ೯೬).

[< ಪ್ರಾ. ಮಿಗ. / ಸಂ. ಮೃಗ]

**ಮಿಗಗಯ್ಯ** ' ಮಿಗಗೆಯ್ಯ ' ನೋ.

**ಮಿಗಗೆಯ್ಯ**, ಮಿಗಗಯ್ಯ, ಮಿಗಗೈಯ (ನಾ). ಜಿಂಕೆಯನ್ನು ಕೈಯಲ್ಲಿ ಧರಿಸಿದವನು ; ಶಿವ : " ಗೊರವನೈಕಿಲ್ವೆಟ್ಟಳಿಯನ್ನೆಮೊಗಂ . . .

ಮಿಗಗೆ[ಹಾಕಾಂ. ಗ]ಯ್ಯನುಂ . . . ಕಿಡಿಗಣ್ಣನು " (ಕಬ್ಬಿಗ. ೯): " ಏಳಿದೇರ . . . ಮಿಗಗೆ[ಹಾಕಾಂ. ಗ]ಯ್ಯನಿಂಗಳಗಣ್ಣ ಸಾಂತ ಪಂದಲೆವಜ್ಜ ಗಂದರ ಗಿವಿಯನೀಸರಂ ದೇಸಿಗಂ " (ಕಬ್ಬಿಪಿಂ. ೩). **ಮಿಗಗಯ್ಯ** : " ಎಣ್ಮಯ್ಯಂ . . . ಮಿಗಗಯ್ಯಂ . . . ಅಯ್ಮೊಗಂ—ಈ ೩೩ ಈಶ್ವರಂಗೆ ಪೆಸರ್ " (ಶಕಹಾ. ೯೭–೧). **ಮಿಗಗೈಯ** : " ಮಿಗಗೈಯುಂ ಕಣ್ಣುಡಿಗಂ . . . ಮಾದೇವ ಸಬ್ಬ ಗಂದರಗಿವಿಯಂ " (ಶಪಶಂ. ೦೭).

[ಮಿಗ + ಕೆಯ್$_2$ + – ಅ$_7$]

**ಮಿಗಗೈಯ** 'ಮಿಗಗೆಯ್ಯ' ನೋ.

**ಮಿಗತೆ** 'ಮಿಗುತೆ' ನೋ.

**ಮಿಗದಾಣ** (ನಾ). ಪ್ರಾಣಿಗಳು ಇರುವ ಪ್ರದೇಶ ; ಪಕ್ಕೆ : " ನೊಸಲ್ಲು ಮಿಗದಾಣ ಪಣೆ " (ಕಬ್ಬಿಪಂ. ೯೭). [ಮಿಗ + ತಾಣ]

**ಮಿಗದೇರ** (ನಾ). ಜಿಂಕೆಯನ್ನು ವಾಹನವನ್ನಾಗಿ ಉಳ್ಳವನು : ವಾಯು : " ಕಂಪುವಳಂ ಎರಲ್, ಮಿಗದೇರಂ, ಎಲರ್, ಗಾಳಿ—ಈ ೫ ವಾಯುವ ಪೆಸರ್ " (ಶಕಹಾ. ೯೯–೩೯); ಮಿಗದೇರನ ಮಿಗಮಲ್ಲಿಯ ಮಿಗವಗೆಯ ರವಕ್ಕೆ ಪೆಳರ್ದು ನೋಳ್ಪಂದದಮಾದೇಂ ಸೊಗಯಿಸಿದುದೊ ಸವಿನೋಟದ ಬಗೆಯುಂ ಖಚರಾಬಲಾಳಿಗುಪದೇಶಿಪವೊಲ್ (ಶಬಶಂ. ೦–೩೯).

[ಮಿಗ + ತೇರ್$_2$ + —ಅ$_7$]

**ಮಿಗದೊವಲ್** (ನಾ). ಜಿಂಕೆಯ ಚರ್ಮ ; ಕೃಷ್ಣಾಜಿನ : ಒಗೆದುದೊ ತಿಂಗಳಿಂಗೊಳದೊಳೇನಸಿತೋತ್ಪಲಮಿಂದು ನಾರದಂ ಮಿಗದೊವಲುಟ್ಟನೋ ಶಶಿ (ಶಳಪ. ೩–೨೯). [ ಮಿಗ + ತೊವಲ್$_3$ ( <ತೋಲ್$_1$ ) ]

**ಮಿಗಪತಿ** (ನಾ). ಪ್ರಾಣಿಗಳ ಒಡೆಯ ; ಮೃಗರಾಜ : ಸಿಂಹ : ತಿಳಿ ಮಿಗಪತಿ ಯಾವನೊರ್ವ ಸವ್ಯಕ್ತ್ವವ ತಳೆದನವನೆ ಧನ್ಯನಲ್ತೆ (ವರ್ಧಶ. ೯–೦೦೯). [ಮಿಗ + ಪತಿ$_2$]

**ಮಿಗಬೇರ** (ನಾ). (ಜಿಂಕೆಗೆ ಶತ್ರುವಾದ ಹುಲಿಯ ರೂಪ ಧರಿಸಿದ) ಒಬ್ಬ ರಾಕ್ಷಸನ ಹೆಸರು : ವ್ಯಾಘ್ರಾಸುರ : ತಳಿಲಳವಾಂತು ನಿಂದ ಮಿಗಬೇರನನಿಕ್ಕಿ . . . ಬೆಳ್ಪಸಂದವಳಿದಿರ್ದ ಬಾನ್ನವಿರನೊಳ್ವರಿಜಂ ತಳೆದೊಪ್ಪಿ ತೋಱಿದಂ (ಶಬಶಂ. ೩–೯). [ಮಿಗ + ಬೇರ್$_1$]

**ಮಿಗಲಚ್ಛಣ** (ನಾ). ಜಿಂಕೆಯ ಚಿಹ್ನೆಯನ್ನು ಹೊಂದಿದವನು : ಚಂದ್ರ : "ಜೊನ್ನೊಡಲಂ . . . ಮಿಗಲಚ್ಛಣಂ . . . ತಿಂಗಳ್—ಈ ೨೦ ಚಂದ್ರನ ಪೆಸರ್" (ಶಕಹಾ. ೯೯–೨೩). [ಮಿಗ + ಲಚ್ಛಣ$_2$]

**ಮಿಗವಕ್ಕೆ** (ನಾ).=ಮಿಗದಾಣ: "ಹಣೆಯೆಂದು ಮಿಗವಕ್ಕೆ" (ಕಬ್ಬಿಗ. ೩೦): ಅವರು ಹೆಜ್ಜೆಗಳ ಗುರುತನ್ನು ಹಿಡಿದು ಮಿಗವಕ್ಕೆಗಳನ್ನು ತಿಳಿದು ಕೊಳ್ಳುವರು (ಮತಿಶ. ೨೦). [ಮಿಗ + ಪಕ್ಕೆ$_1$ (< ಪಚ್ಚಿ$_1$)]

**ಮಿಗವಕ್ಕೆಗ** (ನಾ). ಜಿಂಕೆಯು ತನ್ನಲ್ಲಿ ನೆಲಸಿರುವಂಥವನು ; ಜಿಂಕೆಗೆ ಆಶ್ರಯಸ್ಥಾನವಾಗಿರುವವನು : ಚಂದ್ರ : "ಸವಿಗದಲಣುಗಂ . . . ಮಿಗಪಕ್ಕೆಗಂ . . . ಶಶಿಯ ನಾಮಂ" (ಕಬ್ಬಿಗ. ೯೩); ಕಡುಕೊರ್ಬಿ ಪರ್ಬಿದ ಮರ್ಬಿನ ಮಿಗವಕ್ಕೆಗನೊಳಾದ ಪಗೆತನಮಂ ಬಗೆಗೊಂಡು ತಜ್ಜನಕ ವನನಿಧಿಯಂ ಕನಲ್ದು ಸುತ್ತಮೊತ್ತರಿಸಿ (ರಾಶಚಿ. ೦–೧೦೨ ವ).

[ಮಿಗ + ಪಕ್ಕೆ$_1$ (<ಪಚ್ಚಿ$_1$) + — ಗ$_3$]

**ಮಿಗವಗೆ** (ನಾ). ಜಿಂಕೆಯ ಶತ್ರು : ಹುಲಿ : ಮಿಗದೇರನ ಮಿಗಮಲ್ಲಿಯ ಮಿಗವಗೆಯ ರವಕ್ಕೆ ಪೆಳರ್ದು ನೋಳ್ಪಂದದಮಾದೇಂ ಸೊಗಯಿಸಿದುದೊ ಸವಿನೋಟದ ಬಗೆಯುಂ ಖಚರಾಬಲಾಳಿಗುಪದೇಶಿಪವೊಲ್ (ಶಬಶಂ. ೦–೩೯).

[ಮಿಗ + ಪಗೆ$_2$]

**ಮಿಗವಟ್ಟೆ** (ನಾ). ಮೃಗಗಳು ಓಡಾಡುವ ಜಾಡು—ಮಾರ್ಗ : "ಸರುವೆಂದು ಮಿಗವಟ್ಟೆ [ಹಾಕಾಂ.ಕ್ಕೆ]" (ಕಕಹಾ. ೩೦–೬೯); "ಸರುವೆಂದೆನಲ್ಕೆ ಮಿಗವಟ್ಟೆಯುಂ ತಾಂ" (ಕಪಶಂ. ೩೯). [ಮಿಗ + ಬಟ್ಟೆ$_1$]

**ಮಿಗವಜಿ** (ನಾ). ಜಿಂಕೆಯ ಮರಿ : ಮರಿಹುಲ್ಲೆ : " ಕೋಣಸು ಮಿಗ ವಜಿಯುಕ್ಕು" (ಕಬ್ಬಿಗ. ೩೨). [ಮಿಗ + ವಾಜಿ]

**ಮಿಗವೇಂಟೆ** (ನಾ). ಕಾಡುಪ್ರಾಣಿಗಳ ಶಿಕಾರಿ : ವನ್ಯಮೃಗಗಳ ಬೇಟೆ : ಶಸ್ತ್ರವಿದ್ಯೆಯೊಳಂ ಮಿಗವೇಂಟೆಯೊಳಂ ನಿರತಿಶಯಪ್ರತಿಭಾಶಾಲಿಯನಾಗಿಸಿದಂ (ಮರಾಶಚ. ೩–೩೯ ವ). [ಮಿಗ + ಬೇಂಟೆ]

**ಮಿಗಸೊಕ್ಕು** (ನಾ). ಮೃಗಮದ; ಕಸ್ತೂರಿ : ಆಱಡಿವಸುಳೆಗಳು ಅನುವಂ ಪಡೆದುವು . . . ಸನಿವಿಲ್ಲನ ಪಸುರ್ಗಾವಿನ ಮಿಗಸೊಕ್ಕಿನ ಪೊಸಮಿಂಟೆ ಯೆನೆ (ಶಬಶಾ. ೮–೩೯). [ಮಿಗ + ಸೊಕ್ಕು$_3$ (<ಸೊರ್ಕು$_2$)]

**ಮಿಗಿತೆ** 'ಮಿಗುತೆ' ನೋ.

**ಮಿಗಿಲ್**, ಮಿಗಿಲು (ನಾ). ೧. ಹೆಚ್ಚಾದುದು ; ಅಧಿಕವಾದುದು : ಹೆಚ್ಚಳ : ಆ ಮುನಿಮುಖ್ಯನ ಸತಿ ಲೋಪಾಮುದ್ರೆ ತನೂಜನಿಂದೆ ಮಿಗಿ ಲೆನಿಸಿದತಿಪ್ರೇಮದೆ ಸವಿದ ವಿಟಪಿಸ್ತೋಮದಿನಾಶ್ರಮಪದಂ ಮನಂಗೊಳಿ ಸಿರ್ಕುಂ (ಕಾದಂಪೂ. ೦೦೯) ; ಮಡದಿಯೆನ್ನಗಲೊಳಗೆ ಸಕಲದೇವಾನ್ನವ ಒಡೆಯರಿಂದಲೂ ಮಿಗಿಲಾಗಿಕ್ಕಲು ತೆಗೆದಿರಿಸಿದೆನು (ಐಶಪ. ೯೩೯) ; ಮುಸುಕು ವುದು ಮುಗಿಲೊಮ್ಮೆ ಸೂರ್ಯನ ಮಸಕ ಮಿಗಿಲಹುದೊಮ್ಮೆ (ಕುವ್ಯಾಕ. ೦೦–೩೭). ೨. ಶ್ರೇಷ್ಠವಾದುದು ; ಉತ್ತಮವಾದುದು ; ಮೇಲಾ ದುದು : ಚಲದೊಳ್ ದುರ್ಯೋಧನಂ . . . ಧರ್ಮದೊಳ್ ನಿರ್ಮಲಚಿತ್ತಂ ಧರ್ಮಪುತ್ರಂ ಮಿಗಿಲವರ್ಗಳಿನೀ ಭಾರತಂ ಲೋಕಪೂಜ್ಯಂ (ಪಂಪಭಾ. ೦೯–೬೯); ಈ ಲೋಕಕ್ಕಾ ಮಾನಿನಿಯ ಕುಲಂ ಮಿಗಿಲ್ (ಪಂಪರಾ. ೯–೮೨). ೩. ಶ್ರೇಷ್ಠತೆ ಯಿಂದ ಕೂಡಿದ ವ್ಯಕ್ತಿ ; ಉತ್ತಮ ವ್ಯಕ್ತಿ : ಆ ದೇವಿಗಂ ರೂಪವಿಳಾಸ ಶ್ರೀಯೊಳೀ ದೇವಿಯ ಮಿಗಿಲ್ (ಆದಿಪು.–೩–೨೨); ಧುರದೊಳಮಂ ಮಿಗಿಲೆನಗೆನೆ ನಿನಗೆ ಪಗಲೊಳೇಂ ಕಟ್ಟಿಲೆಯೇ (ಪಂಪಭಾ. ೦೨–೦೯೩); ಅತನುಶ್ರೀಕಾಂತೆಗೀ ಕಾಂತೆಯೆ ಮಿಗಿಲ್ (ಮಲ್ಲಿಪು. ೩–೯೭); ರತಿ ರಂಭೆ ತಿಲೋತ್ತಮೆ ಭಾರತಿ ಯೆಂಬಿವರ ದೊರೆಗೆ ಮಿಗಿಲೆನಿಸಿದ ಮತ್ತಸತಿಯರ್ಪಲರಿರ್ದಪರ್ (ಧರ್ಮಾಮೃ. ೩–೦೦೯); ತನಗೆಂತುಂ ಮಿಗಿಲೀ ಮಹೀಶಮದನಂ ತಾಂ ಮೋಹನಾಕಾರದಿಂ (ಕುಸುಮಪು. ೦೦–೭೦). ೪. ಅತಿಕ್ರಮ ; ಉಲ್ಲಂಘನೆ : "ಅತ್ಯಾಧಾನ ಮೆನಲತಿಕ್ರಮಮೆನಲು ಮಿಗಿಲೆನಿಕ್ಕುಂ " (ಪಂಗಣಿ. ೦೩೩–೨೯). **ಮಿಗಿಲು** : ೧. ವೈದಿಕರಪ್ಪ ವೇದವಿತ್ತುಗಳೊಂದುಕೋಟಿಗೆ ಅನ್ನವನಿಕ್ಕಿದ ಫಲಕ್ಕೆ ಕೋಟಿಮಿಗಿಲು ಶಿವಶರಣಂಗೆ ಒಂದು ಭಿಕ್ಷವನಿಕ್ಕಿದ ಫಲ ಕೋಟಿಕನ್ಯಾ ದಾನದ ಫಲಕ್ಕೆ ಮಿಗಿಲು ಒಬ್ಬ ಭಸ್ಮಾಂಗಿಯ ಒಂದು ವೇಳೆಯ ತೃಪ್ತಿ (ಆದವ. ೦೨–೨೨) ; ಭುವನರಕ್ಷಕ ಮತ್ಸ್ಯದೇವರ ಹವಣನಾರೆಣಿಸುವರು . . . ವೇದವಾಕ್ಯಕೆ ಹತ್ತು ಮೊಳ ಮಿಗಿಲು (ಪಂಶಕ. ೯–೨೭) ; ಬಳಿಕ ನಿಂದುದು ರಾಜ್ಯಲಕ್ಷ್ಮಿಯ ವಿಲಸದಭಿನವತೇಜ ದಿಗುಮಂಡಲಪರೀತ ಪುರಂದರನ ವೈಭವಕೆ ಮಿಗಿಲೆನಿಸಿ (ಕೊರರಾ. ೦–೩–೦೬) : ಜಗದೊಳಗೆ ಜ್ಞಾನವೇ ಮಿಗಿಲು (ಸರ್ವಜ್ಞ. ೩೦೭). ೩. ಜಾಣನೊಳು ವಾಣಿಗಿಮ್ಮಿಗಿಲು . . . ಎನಿಸಿ ಮೆಱೆವಳು ಹರಿಶ್ಚಂದ್ರನೃಪವರಸಿ (ಹಪಶಾ. ೦–೯೯); ದೇವಾಸುರ ನರೋರಗನಿಕರದಲಿ ನಾರಾಯಣನೆ ಮಿಗಿಲು ಆರು ಸಂಶಯವೇಕೆ (ಕುವ್ಯಾಸ. ೬–೩): ನಳಭೂಪನೇ ನರಲೋಕದೊಳಗುತ್ತಮನಲಾ ತತ್ಪತ್ನಿ ಪಾರ್ವತಿಗೆ ನಾಕುಮಡಿ ಮಿಗಿಲು (ಕೊರರಾ. ೩–೨–೦೮). ೫. ಮುಂದಾದುದು ; ಮುಂದಿರುವುದು : ಸರಳಿನಿಂ ದೃಷ್ಟಿಯಿಂ ಮನದಿಂ ರಥಾಶ್ವ ಮಿಗಿಲು (ಹಪಶಾ. ೩–೩೭).

ಮಿಗಿಮಿಗಿಲು (ದ್ವಿರುಕ್ತಿ) : ಸುಖದ ಮಿಗಿಮಿಗಿಲಿನಿಂದಾಕೆ ಬೆಂದು ಮನನೊಂದು . . . ಪ್ರೇಮಧರ್ಮದಾಸ್ಯವನಾಂತು ತಂಗಿರುವಳು (ಗೂರಿಲೊ ಶಾ. ೩–೭೦). [< ಮಿಗು. / ತಮಿ. ಮಿಕಲ್; ತುಳು. ಮಿಗಿಲ್; ತೆಲು. ಮಿಗುಲು, ಮಿಕ್ಕಿಲಿ; ಪಾಯ್ಕು. ಮಿಗಿಲ್=ಉಳಿ]

**ಮಿಗಿಲು** 'ಮಿಗಿಲ್' ನೋ.

**ಮಿಗಿಲೆ** (ನಾ). ಸಮವಲ್ಲದ ಸಂಖ್ಯೆ; ಬೆಸ : ಪ್ರಸಾದದ ಬಿಡುಪುಷ್ಪಗಳನ್ನೆಣಿಸಿದರು; ಲೆಕ್ಕ "ಮಿಗಿಲೆ" ಯಾಗಿ ಬಂದಿತು (ಸಂಜಪಾ. ೬೪) : ಐತಾಳರು . . . ಪ್ರಸಾದವನ್ನು ತೆಗೆದರು. 'ಮಿಗಿಲೆ' ಎಂದು ಹಿಗ್ಗಿನಿಂದ ಕಿರುಚಿ ನುಡಿದರು (ಪುರವು. ೩೦೯). [< ಮಿಗಿಲ್]

**ಮಿಗಿಲ್ಗಣ್** (ನಾ). ೧. (ಶಿವನ) ಹೆಚ್ಚಾದ ಕಣ್ಣು; ಮೂರನೆಯ ಕಣ್ಣು. ೨. (ಆಲಂ) ಗೆಲ್ಲಲು ಸಮರ್ಥವಾದ ದೃಷ್ಟಿಯುಳ್ಳವನು; ಕಣ್ಣಿನಲ್ಲಿ ಕಣ್ಣಿಟ್ಟು ನೋಡುವವನು : ಸಮರಕ್ಕಾಯುಧವೀವ ಕಯ್ವಿತ್ರರಣಕ್ಕಾಲೋಚನಕ್ಕಾಪ್ತಮಂತ್ರಿ ಮಿಗಿಲ್ಗಣ್ ಪರದುರ್ಗವರ್ಗವಿಜಯಕ್ಕಸ್ಥಾನರಂಗಕ್ಕೆ ರತ್ನಮಯಾಕಲ್ಪಮೆನಿಪ್ಪಿನಂ ನೆಗಳ್ದ ಬಲ್ಲಾಳಂಗಮಾ ನಾರಸಿಂಹ ಮಹೀಶಂಗವಮಾತ್ಯನಾದನಧಿಕಂ ಪೋಲಾಳ್ವ ದಂಡಾಧಿಪಂ (ಎಕ. XI. ದಾವಣ. ೨೫-೩೩: 1224). [ಮಿಗಿಲ್ + ಕಣ್]

**ಮಿಗಿಸು** (ಕ್ರಿ). ೧. ಹೆಚ್ಚಿಸು; ಅತಿಶಯಿಸು : ಮಿಗಿಸಿದನು ರವಿರಾಜವಂಶಾದಿಗಳ ರಾಯರ ರಾಜಧರ್ಮದ ಸೊಗಸನಮಲಚರಿತ್ರದಲಿ ಪಾಲನೆಯುಲೂರ್ವರೆಯು (ಕೂರಗಾ. ೦-೩-೩); ಸಾಹಸಂ ಮಿಗಿಸಿದಪೂರ್ವಯ್ದಾಡಿ ತನಿವೀರರಸದಿಂದೆ ಸೊಗಸಿದರ್. . . ಚತುರಚತುರಂಗದವರು (ಕೈಬಿಡಾ. ೯-೪೦). ೨. ಉಳಿತಾಯ ಮಾಡು; ಮಿಗುವಂತೆ ಮಾಡು : ಎತ್ತುಗಳನ್ನು ಮಾರಿ ಬಂದಿದ್ದರಲ್ಲಿ ಹಣ ಮಿಗಿಸಾದ ಮೇಲೆ ಚಿಕ್ಕ ಎತ್ತುಗಳನ್ನು ಕೊಳ್ಳುವಾ (ಬಂದಜ. ೪) ; ಸಂಬಳದ ಹಣ ಸ್ವಲ್ಪ ಮಿಗಿಸಿಟ್ಟುಕೊಳ್ಳಬೇಕು (ಕೂಬಲೀ. ೨೬೩). ೩. (ಬಳಿಯಲ್ಲಿಯೇ) ಇಟ್ಟುಕೊಳ್ಳು; ಉಳಿಸಿಕೊಳ್ಳು : ಕಷ್ಟದಿಂದಾವು ಮಣೆಯುಂ ಕುಡದೆ ಮಾಣ್ದೊಡೇಂ ನಷ್ಟಮಾದಪುದೆ ಪಾರ್ಥನ ಜೀವಂ. . . ನೀನರಿಪ್ಪನಾಗದಿರಿನ್ನು ಮಿಗಿಸಿಕೊಳ್ವೆವು ಲೇಸನು (ಕೈಬಿಡಾ. ೨೯-೨೩). ೪. ಮೀರು; ಮೀರಿಸು : ಮುಂದೆ ಶೋಭಾನಮಂ ಪಾಡುತಡಿಯಿಟ್ಟುದಾನಂದದಿಂದೈದೆಯರ್ ತೂರ್ಯತ್ರಯಮುಮುದಿತಿನಂದನನ ನಾಟ್ಯಶಾಲೆಯು ಮಿಗಿಸಿತೆನೆಂಬೆನಿದಿರ್ಗೊಳ್ವ ಸಂಭ್ರಮವನು (ತದಿಪು. ೬-೩೩). ೫. ಹೋಗದಂತೆ ತಡೆ : ಹಿಂದುಳಿಸು : ಅಡಂಗಲುಮಡಂಗಿಸಲುಮೊಡ್ಡಲುಮೊಡ್ಡಿಸಲುಂ ಪುಗಿಸಲುಂ ಮಿಗಿಸಲುಂ . . . ಏಱಿದುದನೇಱಿಸಲುಂ ಜಾಣನಾಗಿ (ಸಂಕಥಾ. ೩-೯೩ ವ); ಅಳ್ದಳೆಯೆ ಮಿಗಿಸುವಳಲ್ಲ ದೇಹವ ಪರಿಸ್ಮರಣವ ನಗಿಸ ಹೇಳೆಂದು ಪೇಳ್ದವಳು (ವೋಚಕ. ೩೯-೯). [ಮಿಗು + —ಇಸು₃ ]

**ಮಿಗು** (ಕ್ರಿ). ಮಿಕ್ಕು₂ (ಭೂತನ್ಯೂ). ಮಿಕ್ಕ (ಭೂತಕೃ). ೧. ಹೆಚ್ಚಾಗು : ಅಧಿಕವಾಗು : ಮನಸ್ಸು ಮಿಕ್ಕು ಪರವಸದಿಂದು ಕಣ್ಣೀರ್ಗಳ್ ಬಂದು ನೀಡುಂ ಬೇಗಮಿರ್ದು ನೋಡಿ (ವಡ್ಡಾರಾ. ೯-೨೬); ಮುಕ್ಕುಳಿಸಿಯುಂಗುಟ್ಟ ಮಧುಪಂ ಮಿಕ್ಕಸೆವಾಪೋದಮಿದಜಿ ತಣ್ಣಂಪಿನೊಳೊಳಪೊಕ್ಕವು (ಆದಿಪು. ೦೦-೦೨೦); ಮಿಕ್ಕ ಸತ್ಕ್ರಿಯೆಗಳನವರನ್ನೆಸಕ್ಕೆ ಸಂತೋಷಂಬಡಿಸಿ (ಬಸಪು. ೩೨-೦೦); ಸುದೇಷ್ಣೆ ಮನದಲಿ ಹರುಷ ಮಿಗೆ ಹೊಂಗಿದಳು (ಕುಮಾವಿ. ೦-೨೮). ೨. ಶ್ರೇಷ್ಠವಾಗು ; ಉತ್ತಮವಾಗು ; ಮೇಲಾಗು : ನಮಿಲೂರಾ ಸಿರಿಸಂಘದಾಜ್ಜಿಗಣದಾ ರಾಜ್ಞೀಮತೀಗನ್ತಿಯಾರ್ ಅಮಲಂ ನಲ್ಮೆದ ಶೀಲದಿಂ ಗುಣದಿನಾ ಮಿಕ್ಕೋತ್ತಮಮ್ಮಿರ್ಕಳೆದೊರ್. . . ಸ್ವರ್ಗಾಲಯಮಂ ಪಱಿದಾರ್ (ಎಕ. II (R), ೦೦೨-೨; 7ನೆಯ ಶತ); ಉತ್ತಮಂ ಆಟ್ಟಂ ಮಿಕ್ಕ ದರ್ಶನಜ್ಞಾನಚಾರಿತ್ರಾರಾಧನೆಯುಂ (ವಡ್ಡಾರಾ. ೭೩-೮); ಮಹೇಶ್ವರನಂ ಮೆಚ್ಚಿಸಿ ಮಿಕ್ಕ ಪಾಶುಪತಮಂ ಪೆತ್ತಾತನೇ ಸಾಹಸಂ ಒರಿದಂ ಚೆಲ್ವನುಮಪ್ಪನೆಂದು ಮನದೊಳ್ ಸೋಲ್ಮುಬ್ಬಿಱಿಂ ನೋಡಿದರ್ (ಸಂಕಥಾ. ೬-೨೭); ರತ್ನಚಯಂಗಳಿಂ ಮಿಗುವ ಮುತ್ತುಗಳಿಂ ನೆಱೆ ಕೀಲಿಸಿರ್ದ ದಲ್ ನೂತ್ನಮೆನಿಪ್ಪಲಂಕರಣಮಂ ಸಲೆ ತೊಟ್ಟು (ಶಾರಪು. ೪-೦೭). ೩. ಮೀರು ; ಅತಿಕ್ರಮಿಸು ; ಉಲ್ಲಂಘಿಸು: "ಮಿಗು – ಅತಿಕ್ರಮಣೇ, ಅವಶಿಷ್ಟೇ ಚ" (ಶಮದ) ; ದೇಶಿಯನೆ ನಿಱಿಸಿ ಬಿಂಡಮಾ ಸಮನತಿಶಯಮಿದೆಂದು ಯತಿಯುಂ ಮಿಕ್ಕರ್ (ಸಸಿಂ. ೧-೬೫): ಅರಸುಮಕ್ಕಳ್ ತಮ್ಮ ಮರ್ಯಾದೆಯುಂ ಮಿಕ್ಕು ದ್ರವ್ಯಂ ಮೊದಲಾಗೊಡೆಯ ಪಱೊಳ್ ಲೋಭಿಪ್ಪರಪ್ಪರ್ (ವಡ್ಡಾರಾ. ೮೭-೭): ಜಳನಿಧಿ ಮೇರೆಯಂ ಮಿಗದೆ ನಿಂದುದು (ನಮಿಸ. ೭-೪೪): ಆತ್ಮಮಾನಸಗಭೀರತೆಯಂ ಮಿಗುವಂಬುರಾಶಿ (ಶಕ್ರಪು. ೯-೦೦೦). ೪. ಹಾಯು : ದಾಟು : ಕ್ರಮಿಸು : ಬಿಲ್ಲುದುಡುಕಿ ಕುಂತೀಭೋಜ ಹೊಕ್ಕನು ಮಿಕ್ಕನವರುಗಳ (ಕುಮಾದ್ರೋ. ೦೭-೪೦): ಶಶಿ ರವಿಗಳಂ ಮಿಕ್ಕು ತಾರಕೆಗಳನ್ನೋರಂತೆ ಪಿಂದುಳುಪಿ. . . ಮಾರುತಿಯುಂ ಪೋಗುತಿರೆ (ವಂಕಾರಾ. ೩-೦-೩೪). ೫. ತಿರಸ್ಕರಿಸು; ಕಡೆಗಣಿಸು : ನನೆಯಂಬಂ ಮಿಗೆ ಕಣ್ಮಲರ್ ಮಕರಮಂ ಕ್ರೋಡಧ್ವಜಂ ಪೋಲೆ ಕರ್ಬಿನ ಬಿಲ್ಲಂ ಗೆಲೆ ಪುರ್ಬು (ಗದಾಯು. ೦-೬); ಮಿಕ್ಕು ಮೀಱಿ ಹೋಹನ ಬೆಂಬತ್ತಿ ಕೈವಿಡಿವೆನು (ಮಜಾವ. ೨. ೪೦-೮೭). ೬. ಸೋಲಿಸು; ಪರಾಭವಗೊಳಿಸು : ಎನ್ನಂ ಬಿಲ್ಬಲ್ಮೆಯೊಳ್ ಮಿಗ [ಪಾಠಾಂ. ೧]ಲೆಯ್ದೆ ಬೀರ್ವರಿದ ಪಗೆಯುಂ ಬನ್ನಂಬಟ್ಟೆನ್ನ ಮುನ್ನಿನ ಬನ್ನಮುಂ ಒರಿದದೆ ನಿಮಂಗೊಂಡಾನಿಂದಿಲ್ಲಿ ನೀಗದೆ ಮಾಣ್ಬನೇ (ಸಂಕಥಾ. ೦೨-೦೯); ಎಂತಪ್ಪ ವಿದ್ವಾಂಸರುಂ ವಾದದಿಂ ಮಿಗುತೆ ಸಪಣರಂ ಕೂಡಿಕೊಂಡತಿಸಂಭ್ರಮದೊಳಿರಲು (ವಾಗೀರ. ರೀ. ೨೩೯-೪): ಚಿಕ್ಕನ ಚಿಕ್ಕಮಾಗಂ ವಿಭವಕ್ಕೆ ಕುಬೇರಂಗೆ ಸೆಣಸುವಂ ರಾಯರುಮಂ ಮಿಕ್ಕಂ (ಎಇ. XXI, ೦೩-೨೩: 1260). ೭. ಉತ್ಸಾಹಗೊಳ್ಳು: ಮೋಹರವ ಮಿಕ್ಕುಱುಬಿದರು ಸಬಳಿಗರು ಮುಂಚಿತು ರಣಕೆ ವಿಡಿಗಳು (ಕುಮಾದ್ರೋ. ೦-೪೭); ಮಿಕ್ಕು ನೂಕುವ ಕುದುರೆಕಾಱರು ತಕ್ಕೆಗೆಡೆದರು (ಕುಮಾದ್ರೋ. ೩-೩). ೮. ಉಕ್ಕು; ಹೊರಹೊಮ್ಮು : ನಿಜಸ್ವಾಮಿವಿರಹವಿಧುರೆ ಪೊಣ್ಮುವ ಕಣ್ಣನೀರ್ಗಳಂ ನಿದಾಘಸಮಯಸರಸಿಯಂತಱು ಮಿಗಲೀಯದೊಳಗಡಂಗಿಸಿ ಸಭೆಯೊಳಿಂತೆಂದಳ್ (ಶಾಂತಿಪು. ೭-೩೭ ವ). ೯. ಮುಂದಾಗು; ಮುನ್ನಡೆ : ಕಡುಮನದ ರಥತುರಗ ಮಿಕ್ಕವು ಸರಳ ಸೂಠಿಯಲಿ (ಕುಮಾದ್ರೋ. ೦೦-೨೪). ೧೦. ಕಂಗೊಳಿಸು ; ಶೋಭಿಸು: ಗಿರಿಜೆಯುಂ ಚಂದ್ರಧರನುಂ ಕಂಡು ನಸುನಗುತೆ ಹರುಷರಾಗುತ್ತಱಿದು ಕಾರುಣ್ಯದಿಂ ಮಿಗುತೆ (ಸಂಬಸ. ೦-೫೦). ೧೧. ತೊರೆ : ತ್ಯಜಿಸು: ಬಿಡು : ಇನ್ನಿವಱೊಳ್ ಇರದೆ ಪತ್ತೆಣ್ಬು ವಳಯಂ ಬಾರಿಸದನ್ನಂ ಭೋಗ ಮಿಕ್ಕವನಲ್ಲನಿನ್ದ್ರರಾಜಂ (ಎಕ. II (R), ೦೬೩-೦೦೭ : 982) ; ಗಂಟಲಿನ ಗಾಣದ ಮೀನು ಮಿಗುವುದೇ ಮರಣಮಯಭಯವ (ಕೊರಠಾ. ೬-೦೯-೬೬). ೧೨. ಉಳಿ ; ಬಾಕಿಯಿರು : ಅವಶಿಷ್ಟವಾಗು : "ಮಿಗು—ಅತಿಕ್ರಮಣೇ. ಅವಶಿಷ್ಟೇ ಚ" (ಶಮದ). ೧೩. (?) : ಪೊಟ್ಟವಟ್ಟಳಿಗ ಸಮನಾಗೆ ಗಿರಿಗೆಯ ಕೋಲ್ಮುಟ್ಟಿ ಮಿಗಲುಂ ನೆಲಲುದುಣಮಿಾಯುವಿನ್ನೊತ್ತದಳವಿಯೊಳ್ ಬರೆ (ಎಕ. II (R). ೦೬೩-೯೦; 982).

[ದೇ.॥ ತಮಿ. ಮಲ. ಮಿಕು; ತುಳು. ಮಿಗು, ಮಿಕ್ಕು; ಕೊಡ. ಮಿಂಜ್; ತೆಲು. ಮಿಗುಲು, ಮಿವುಲು; ಕೋತ. ತೊದ. ಮಿಕ್ ]

**ಮಿಗುತಾಯ** (ನಾ). ವ್ಯಯ ಮಾಡಿ ಉಳಿದುದು; ಶೇಷ : ಈ ತಿಂಗಳಿನ ಸಂಬಳದ ಮಿಗುತಾಯ ಹೆಚ್ಚಾಗಿಲ್ಲ (ರೂಢಿ).

[< ಮಿಗುತೆ + — ಆಯ₄ ]

**ಮಿಗುತೆ, ಮಿಗತೆ. ಮಿಗಿತೆ** (ನಾ). ೧. ಶ್ರೇಷ್ಠವಾದುದು : ಉತ್ತಮವಾದುದು : ಬಗೆಗೆಡಲಿಂತೆನಲಲ್ಲದೆಯೊಂದು ಮಿಗುತೆಯುನಱಿ ಚಿನ್ಮಾತ್ರ ಮಿದೆಂದು (ಶರಗೀ. ೬-೮): ಅಗಣಿತಾಜಾಂಡಗಳ ತನ್ನೊಡಲೊಳಿಟ್ಟ ಮಿಗುತೆಯುಹ ಬೊಮ್ಮದೊಳಪೊಕ್ಕು ಮತಿ ಹಿಂದಕ್ಕೆ ಮಗುಳದಿರಲಂತದರ ಹೆಸರೇನು ಪೇಳಿ (ಕೈಕವ. ೩-೬೦-೨). ೨. ಉಳಿದುದು ; ಉಳಿಕೆ : ಶೇಷ : ಪುಗುತೆ. ಪುಗುತೆಗಳ್; ಮಿಗುತೆ. ಮಿಗುತೆಗಳ್ (ಶಬ್ದಾನು. ೩೬೦ ಪ್ರಯೋ). **ಮಿಗತೆ** : ೩. ಲಾಭ ; ನಫೆ : ದೊಡ್ಡವೀರರಾಜನ ದಿನದಲ್ಲಿ ಕೂಡ ವರ್ತಕಪೇಟೆಯ ಶೆಟ್ಟಿಯಜಮಾನರು ಹೀಗೆ ಹಣ ಒಪಗಿಸಿದ್ದುಂಟು ;

ಅವನ್ನು ಮಿಗತೆಯೊಡನೆ ಹಿಂದಕ್ಕೆ ಪಡೆದದ್ದುಂಟು (ಶಾಸನ. ೬೩).
**ಮಿಗಿತೆ :** ೨. ಕಾಲಾಂತರದಲ್ಲೂ ಗೃಹದ ಜೀರ್ಣೋದ್ಧಾರಕ್ಕೆ ಪ್ರತಿ ವರ್ಷಉ ಮಿಗಿತೆಯಾಗಿ ಕೊಟ್ಟಿದ್ದದು ಪೊಂದು ಹೊನು (ಎಕ. VIII. ತೀರ್ಥಹ. ೩೩-೬೦; ಸಂ. 1430). [ಮಿಗು + —ತೆ₂./ ತಮಿ. ಮಿಕುತಿ, ಮಿಕುತವರ್; ಮಲ. ಮಿಕುತಿ; ತುಳು. ಮಿಗ್ತೆ. ಮಿಗಿತ; ತೆಲು. ಮಿಗತ]

**ಮಿಗುವರಿ** (ಕ್ರಿ). ೧. ಹತೋಟಿ ಮೀರಿ ಹರಿ, – ಪ್ರವಹಿಸು ; ಉಕ್ಕು: ಕೊರಗು ಮಿಗುವರಿವ ಕಂಬನಿಯು ಕುಡಿದ ಬಾಯ್ದೆರೆದಂ (ಕಾಂಚೀಪ. ೧೮-೩೯). ೨. ಹೆಚ್ಚಾಗು ; ಅಧಿಕವಾಗು : ಮಿಗುವರಿಯುವಳ್ತಿಯುಂ ನಗುತ ಬರೆ ಬಧ್ವಿನಂ (ಕಾಂಚೀಪ. ೬೨-೧೦೩); ಎನಿತೆನಿತು ಮುಪ್ಪು ಮುಂಬರಿದು ಬಗಿವಪ್ಪುತಿಹುದನಿತನಿತು ಭೋಗಿಸುವ ಬಯಕೆ ಮಿಗುವರಿ ಯುತಿರಲು (ಕವಿರಾ. ೨೬-೩೩). ೩. ಉಲ್ಲಂಘಿಸು ; ಅತಿಕ್ರಮಿಸು : ಈ ಮಾಗಣೆ ಎರಡು ನಮ್ಮ ಕೊಡಗಿನ ಸಂಸ್ಥಾನಕ್ಕೆ ಸೇರಿದ್ದು ಇದೆ . . . ಇವರ ತಳ್ಳಿಗೆ ಬರಬೇಡ. ಮಿಗುವರಿದು ಬಂದರೆ, ತಾಳತಕ್ಕದ್ದಲ್ಲಾ (ರಾಜೇಂದ್ರ. ೮೮). [ಮಿಗು + ಪರಿ₂]

**ಮಿಗೆ₁** (ನಾ). ೧. ಹೆಚ್ಚಳ : ಆಧಿಕ್ಯ : (೬). ೨. ಅತಿಶಯತೆ : ಮಿಗಿಲು : 'ಮಿಗೆವರ್', 'ಮಿಗೆವರಿ' ಪರಾ.
[ದೇ.॥ ತಮಿ. ಮಿಕ್ಕೈ; ತುಳು. ಮಿಗಿ]

**ಮಿಗೆ₂** (ಅ). ೧. ಹೆಚ್ಚಾಗಿ : ಅಧಿಕವಾಗಿ : ಮಿಗೆ ದುಷ್ಕರಕಾವ್ಯಂಗಳೊಳ ಗರ್ಹಿತಪ್ರಾಯಮುಕ್ಕುಮಾ ಶ್ರುತಿಕಷ್ಟಂ (ಕವಿರಾ. ೧-೬೮); ಅಲಂಪು ಮಿಗೆ ಭೋಗಿಸಿದಂ ಸುರಲೋಕಸೌಖ್ಯಮಂ (ಅಂತ್ಯ. ೨-೬೦); ಕೃಷ್ಣೆಗೆ ಮಿಗೆ ದೊರೆಕೊಳಸದೆ ಕೋಪಮುಂ ಮುನಸ್ತಾಪಮುಮಂ (ಗದಾಯು. ೦-೩೯). ೨. ಒಳ್ಳೆಯ ರೀತಿಯಲ್ಲಿ ; ಚೆನ್ನಾಗಿ : ಮಗಳೆ ನೀನಾತನ ಕೈವಿಡಿದಂದಿನ ಬಗೆಯ ಸುಖಿಂಗಳನಾಂತು ಮಿಗೆ ಜೀವಿಸುತಿರ್ದುದುಗೊಜಿಗಳನಾತ್ಮ ನಗರಾಜಸುತೆ ಕಳುಹಿದಳು (ಚೋಚತ. ೬-೯೮). ೩. ಪೂರ್ತಿಯಾಗಿ : ಸಂಪೂರ್ಣವಾಗಿ : ತಮ್ಮ ತಮ್ಮ ನಿಖಿಳವ್ಯಾಪಾರವ[ಸುಚಿದ]ರಸನ ನೋಡುವ ತವಕದೆ ಮಿಗೆ ನಗರಲೋಕವೆಯ್ದಿತ್ತಾಗಳ್ (ಕಾದಂಬ. ೪೬೩); ಮಿಗೆ ಇಂದುಮುಖಿಯಿಟ್ಟಾಣೆ ತೀವಿತ್ತು (ತಿರುಕ. ೮೮. ೬-೦೦). 'ಒಗುಮಿಗೆ₂' ಪರಾ.

ಮಿಗೆಮಿಗೆ (ದ್ವಿರುಕ್ತಿ) : ಪಲವು ಸೂಳ್ ಕನಕವದು ಕಾಸಿದಡೆ ಮಿಗೆಮಿಗೆ ಬಣ್ಣ ಪೆಗ್ಗಳವಾಗಿ ತೋರ್ಪುದಲಾ (ಬಸವ. ೨೨-೬೩).

**ಮಿಗೆಯರಳ ನೋಂಪಿ** = ಆಷಾಢಮಾಸದ ನಂದೀಶ್ವರಾಷ್ಟಮಿಯಿಂದ ಕಾರ್ತಿಕನಂದೀಶ್ವರಾಷ್ಟಮಿಯವರೆಗೆ . ಒಂದು ಹೂವಿನಿಂದ ಆರಂಭಿಸಿ ಪ್ರತಿದಿನವೂ ಒಂದೊಂದು ಹೂವನ್ನು ಹೆಚ್ಚಿಸಿಕೊಂಡು ಜಿನನಿಗೆ ಅರ್ಚನೆ ಮಾಡುವ ಒಂದು ವ್ರತ : ನೀನೀ ಮಿಗೆಯರಳ ನೋಂಪಿಯಂ ಜಿನಭಕ್ತಿಪೂರ್ವಕಂ ಕೈಕೊಂಡು (ಪುಂಬಿಶ್ವ. III. ೬೫೯).
[<ಮಿಗೆ₁]

**ಮಿಗೆವರ್** (ಕ್ರಿ) ಅತಿಶಯವಾಗು : ಶ್ರೇಷ್ಠವಾಗು : ಮಿಗೆವಂದಲ್ಲರ ಬಿಲ್ಲ ಬಿನ್ನಣದ ಬಿಣ್ಪಂ ರಾಮನೇಸಂಬಿಸಂ ಮಿಗೆ ತನ್ನೇಸುಪಮಾನಮಾದುದೆನೆ ರಾಮಂ ಕಲ್ತ ಬಿಲ್ಬಲ್ಮೆಯಂ ಪೊಗಟಲ್ವೇಟ್ಟಿಸಿದ (ಕುಮಾರವ್ಯಾ. ೩-೦೬೦); ಮಿಗೆವಂದ ಪೆರ್ಮೆಗಂ ಸ್ಥಿರತೆಗಮಾಶ್ರಯಮಾದ ಗಗನಲಕ್ಷ್ಮಿಯ ಮಧ್ಯಾಧಿಗತವಳಿತ್ರಯಮೆನೆ ಸಲೆ ಸೊಗಯಿಪುದು ಜಗತ್ತ್ರಯಂ ಮುರುತ್ತಿಯ ವಿಧೃತಂ (ಚಂದ್ರಪ್ರ. ೦-೬೯). [ಮಿಗೆ₁ + ಬರ್ (<ವರ್)]

**ಮಿಗೆವರಿ** (ಕ್ರಿ). ಅತಿಶಯಿಸು : ಮೇಲಾಗು : ಕೊಡಸೊಳಗಣ ಜ್ಯೋತಿಯ ಅಡಗಿಸಲರಿಯದೆ ಮಿಗೆವರಿದಂತಾದೆಯೋ ಅಜಗಣ್ಣಾ (ಶೂನ್ಯಸಂ. ೨೩-೮); ನೀವು ಹೊಕ್ಕಲ್ಲಿ ಹೊಕ್ಕು ಮಿಕ್ಕು ಮೀಜಿ ಮಿಗೆವರಿದ ಲಿಂಗಾಂಗಿಗಳ ಪಾದ ದೊಳು ಹಿಂಗದಂತೆ ಇರಿಸೆನ್ನ (ಸಕವ. III. ೨೨೩-೩೬೩). [ಮಿಗೆ₁ + ಪರಿ₂]

**ಮಿಜಾಜು**, ಮಿಜಾಸಿ, ಮಿಜಾಸು (ನಾ). ೧. ಡಂಭ ; ತೋರಿಕೆ : ಪೌಲು : (೬). ಮಿಜಾಸಿ : ೨. ದಿಮಾಕು : ಜರ್ಬು : ಯಾಕವಾ. ಜಲು ಹೆಚ್ಚಾಗೇತಿ ನಿನ್ನ ಮಿಜಾಸಿ ? (ಮೂರಾಬ. ೨೦೦). **ಮಿಜಾಸು : ೨.** ಏನೋ ಯಾರಿಗ್ ತೋರಸ್ತೀ ನಿನ್ನ ಸಭ್ಯಗೃಹಸ್ಥನ ಮಿಜಾಸು(ಬಾಂಡಾಯ.೬೯).
[← ಪಾರ. ಮಜಾಜ್; ಅರ. ಹಿಂ. ಮಿಜಾಜ್; ಮರಾ. ಮಿಜಾಜ್. ಮಿಜಾಸ್]

ಮಿಜಾಸಿ 'ಮಿಜಾಜು' ನೋ.

ಮಿಜಾಸು 'ಮಿಜಾಜು' ನೋ.

**ಮಿಜಿಮಿಜಿ** (ನಾ). ಹಿಂದೆ ಮುಂದೆ ನೋಡುವುದು : ಸಂದೇಹ ಪಡುವುದು : ತೊಂಚಾಪಂಚೆ : ಬಲಿ ಮಿಜಿಮಿಜಿ ಜಾತಿ – ಈ ಚಳುವಳಿಯೋರಮುಂದಿ ಮನಸು ಬಲೀ ಚಂಚಲಾ (ಪುಟ್ಟಾ.ಬಿ. ೮೩); ನಿನ್ನದು ಇದೇ ಸ್ವಭಾವ, ಹೀಗೇಕೆ ಸುಮ್ಮನೆ ಮಿಜಿಮಿಜಿ ಮಾಡುವಿ ? (ರಕ್ತಶ. ೯೦೩). [← ತುಳು. ಮಿಜಿಮಿಜಿ = ಜಗುಟಾದ]

**ಮಿಟ್** (ನಾ). ಒಂದು ಅನುಕರಣ ಶಬ್ದ.

ಮಿಟ್ಟಂ ಮಿಡುಕು = ಸ್ವಲ್ಪವಾದರೂ ಅಲುಗಾಡು, – ಚಲಿಸು : ಮಿಟ್ಟಂಮಿಡುಕದಿರೆ ಗರುಡದ್ಗುತ್ಯಮುಚ್ಚಾಂಚುಕಲ್ಪಂ ನದೆವಾರಿತ್ಯಾತ್ಮ ವೇಗಾಪಹಸಿತ ಸುಮರುದ್ರಹಂಸಂ ರಾಜಹಂಸಂ (ಜನ್ನ. ೨-೦). **ಮಿಟ್ಟ ಮಿಸುಗು, ಮಿಟ್ಟ ಮಿಸುಕು, ಮಿಟ್ಟು ಮಿಸುಕು, ಮಿಟ್ಟು ಮಿಸುಗು =** ಮಿಟ್ಟಂಮಿಡುಕು : ಜಮಾದಾರ ಮಿಟ್ಟ ಮಿಸುಗಲಿಲ್ಲ (ಗಂಗಾಸಾ. ೬೩); ದಾರಿಯಲ್ಲಿ ಧೋ ಧೋ ಮಳೆಯಾದರೂ ಅವನು ಮಿಟ್ಟ ಮಿಸುಕಲಿಲ್ಲ, ಏನ್ನಾಗಲಿಲ್ಲ (ಸ್ವ.ತಿತ. ೨೨೬); ಆಕೆ ಏನು ಮಾಡಿದರೂ ಮಿಟ್ಟು ಮಿಸುಕುತ್ತಿದ್ದಿಲ್ಲ (ಇಕ್ಕಳ. ೨೦೬); ಶ್ರೀಕಂಠಶಾಸ್ತ್ರಿಗಳು . . . ಅರ್ಧತಾಸಿನ ವರೆಗೆ ಮಿಟ್ಟು ಮಿಸುಗಲಿಲ್ಲ (ಗಂಗಾಸಾ. ೦೯೨). **ಮಿಟ್ಟೆಂದು ಮಿಡುಕು =** ಮಿಟ್ಟಂಮಿಡುಕು : ಅಂತು ಮುಳಿದ ಪವನಜನ ಕೋಪಾಟೋಪಮಂ ಕಂಡು ಕೌರವಬಲದ ನಾಯಕರೊಳೊರ್ವರಪ್ಪೊಡಂ ಮಿಟ್ಟೆಂದು ಮಿಡುಕಲಣ್ಣದಿರೆ (ಪಂಪಭಾ. ೦೨-೦೫೦ ವ).

**ಮಿಟಕಲಾಡಿ** (ನಾ). ಒಯ್ಯಾರಿ : ಸೋಗಲಾಡಿ : ಅಬ್ಬಬ್ಬ! ಮಿಟಕಲಾಡಿ. ಇವಳಿಗೆ ಇಪ್ಪತ್ನಾಲ್ಕು ಗಂಟೆ ಕಾಲವೂ ಕನ್ನಡಿಯ ಮುಂದೆಯೇ ಕೆಲಸ (ಹೂಹಣ್ಣು. ೩೬). [ದೇ.॥ ತೆಲು. ಮಿಟುಕುಲಾಂಡಿ]

ಮಿಟಕಿಸು 'ಮಿಡುಕಿಸು' ನೋ.

ಮಿಟಕು 'ಮಿಡುಕು₁' ನೋ.

**ಮಿಟಗರಿಸು** (ಕ್ರಿ). ರೆಪ್ಪೆಯನ್ನು ಬಡಿ; ರೆಪ್ಪೆ ಹೊಡೆ : ಅವನು ಕೆಲಸ ವಿಲ್ಲದೆ ಸುಮ್ಮನೆ ಮಿಟಗರಿಸುತ್ತಾ ಕೂತಿದ್ದಾನೆ (ರೂಢಿ).
[< ಮಿಟಗು₁ + — ಇಸು₃. / ತೆಲು. ಮಿಡುಕರಿಂಚು, ಮಿಣುಕರಿಂಚು]

**ಮಿಟಮಿಟ** (ನಾ). (ಒಂದೇ ಸಮನೆ ನೋಡುವುದನ್ನು ಸೂಚಿಸುವ) ಒಂದು ಅನುಕರಣ ಶಬ್ದ.

ಮಿಟಮಿಟಸಗ್ಗ = ಏನೆಯಿಕ್ಕದೆ ಪರಸ್ಪರ ಸುಮ್ಮನೆ ನೋಡು ತ್ತಿರುವ ದೇವತೆಗಳಿಂದ ಕೂಡಿದ ಸ್ವರ್ಗ; ಯಾವ ಆಕರ್ಷಣೆ ಅಥವಾ ಸುಖವೂ ಇಲ್ಲದ ಸ್ವರ್ಗ : ದಿಟದಿಂದೊಲ್ದವರಂ ಲಂಪಟತೆಯಿನ ಮಾರ್ಪಟ್ಟಿ ನೆರೆವ ನೆರೆವನಿತು ಸುಖಂ ಘಟಿಯಿಸದು ತಮ್ಮೊಳೆನಿಸುವ ಮಿಟಮಿಟಸಗ್ಗಂಗಳೊಳೆಯೇ ಸೌಧರ್ಮಂ (ಚಂದ್ರಪ್ರ. ೪-೬೩).

**ಮಿಟಲಿ**, ಮಿಟಿಲ, ಮಿಟಿಲಿ, ಮಿಟಿಲೆ, ಮಿಟ್ಟಣಿ, ಮಿಟ್ಟಲಿ, ಮಿಟ್ಟಾಲಿ, ಮಿಟ್ಲಿ, ಮಿಟ್ಲೆ, ಮಿತಿಲಿ, ಪೆಟ್ಟಲಿ (ನಾ). ೧. ಒಂದು ಬಗೆಯ ಮರ: P ಇದರ ಎಲೆಯನ್ನು ಉಪ್ಪುಕಾಗದದಂತೆ ಬಳಸಲಾಗು ತ್ತದೆ: "ದರ್ದುರಿಯೆಂಬಲು ಮಿಟಲಿಯ[ಪಾಠಾಂ. ಮಿಟಲಮ]ಕ್ಕು" (ವೈಂಗಣ್ಣ. ೬೩-೦೯); ಮಿಟಲಿ :—ಈ ಬೇರಂ ನಿಂಬೆಹುಳಿಯಲ್ಲಿ ತೇದು ಪೂಸಲು

ತೊಡೆವಾಳ್ ಪೂಣ್ಬ್ಗಂ (ಎಪ್ಸಿ. ೬). ಮಿಟಿಲ : ೧. "ಬಿರಪಣೆ — ಮಿಟಿಲ" (ಓಶಂ. ೪೩). ಮಿಟಿಲಿ : ೧. ಕಿರುಗೆರೆಯು ಯಡಲಗೆರೆಯು ಮಿಟಿಲಿಮೇಡಿನಲ್ಲಿ ನಟ್ಟ ಕಲ್ಲು (ಎಕ. XIV, ಮಂಡ್ಯ. ೦೦೩-೦೦೦; ಸು. 1516). ಮಿಟಿಲೆ : ೨. ಒಂದು ಬಗೆಯ ಔಷಧೀಸಸ್ಯ : ಮಾಚಿ : ಕಗ್ಗೊಜಲೆ ಬುಗುಡಿ ಮಿಟಿಲೆ [ಪಾಠಾಂ. ಟುಣೆ]ಯ ಸುಗ್ಗಿಯ ಪತ್ರಂಗಳೊಡನೆ ಮಾರಿಚದ ಚೂರ್ಣಂ ಅಗ್ಗಳಮೊಂದಿರೆ ನಸ್ಯದೊಳಿಗ್ಗಲ್ಲದೆ ವಿಷಹರಂ ವಲಂ ಪ್ರತ್ಯೇಕಂ (ಖವುದ. ೬-೮೨). ಮಿಟುಣೆ : ೨. ವರ ಮಿಟ್ಟುಣೆ ಸುಗಂಧಿಗಳೆಂಬೆರಡಱ ಬೇರ್ಗಳನೆ ಚೂರ್ಣಿಸದಱೊಳ್ ತುಪ್ಪಂ ಬೆರಸಿರದೆ ಕುಡಿಸಲದು ಬಿಲ್ಲುರಿಗನ ವಿಷಮಂ ಕ್ಷಣಾರ್ಧದೊಳ್ ಪರಿಹರಿಕುಂ (ಖವುದ. ೦೦-೬೩). ಮಿಟ್ಟಲಿ : ೨. "ಕರ್ಕಶ — ತೊಟ್ಟಿ, ಮಿಟ್ಟಲಿ. . . ಕಪಿಪಡವಲ" (ಓಶಂ. ೨೨). ಮಿಟ್ಬಲಿ : ೧. ಘೂತಾಳೆ ಬೂರುಡೆ ಮಿಟ್ಬಲಿಯು ದಿಂಡ ಪಾತಂಗ ಮುಗುಳಿಯ ಮರನು (ಶಿಜಶಾಂ. ೦-೩೩). ಮಿಟ್ಲೆ : ೨. (ಪ್ಯಶಿಗ. ೬೨-೦೪೬೮). ೩. ಒಂದು ಬಗೆಯ ಬಾಳೆ : ಕರ್ನಾಟಕದ 'ಮಿಟ್ಲೆ' ಹಾಗೂ ರಸಬಾಳೆಗಳು—ಸಾಕಷ್ಟು ಹೆಸರುವಾಸಿಯಾಗಿವೆ (ಸುತ್ತುಮು. ೮೦). ಮಿಟ್ಲೆ : ೨. "ಮಿಟಲ, ಮಿಟ್ಲೆ. . . ಪುಂಜ್ಯ" (ಸಸ್ಯಶಿ. ೦೨೯). ಮಿತಿಲಿ : ೧. ಆ ಊರಿನವರು 'ಮಿತಿಲಿಸೌದೆ'ಯನ್ನು ಒಲೆಗೆ ಒಟ್ಟುವುದಿಲ್ಲವಂತೆ (ಪಪ್ಪೂರು. ೦೪೬). ಮೆಟ್ಟಲಿ : ೧. ಮೆಟ್ಟಲೀಮರದ ಬಳಿಯ ಬಡಗ ಮುಖ ನೆ ೧ (ಎಕ. V (R). ತಿರುಮು. ೦೬-೩೬೮; 1749).

**ಮಿಟಾಯಿ** 'ಮಿಠಾಯಿ' ನೋ.

**ಮಿಟಿಕಿಸು** 'ಮಿಡುಕಿಸು' ನೋ.

**ಮಿಟಿಮಿಟಿ** (ನಾ). (ಒಂದೇ ಸಮನೆ ನೋಡುವುದನ್ನು ಸೂಚಿಸುವ) ಒಂದು ಅನುಕರಣಶಬ್ದ.

**ಮಿಟಿಮಿಟಿ ನೋಡು** = ಎವೆ ಮಿಟುಕಿಸದೆ ನೋಡು : ಮಿಕಿಮಿಕಿ ನೋಡು: ನನ್ನ ಮಾತನ್ನು ಕೇಳಿ ಆಶ್ಚರ್ಯದಿಂದ ಆಕೆ ನನ್ನ ಕಡೆ ಮಿಟಿಮಿಟಿ ನೋಡತೊಡಗಿದಳು (ಶರಶಾ. ೦೪೬). **ಮಿಟಿಮಿಟಿಸಗ್ಗ** = ಎವೆಯಿಕ್ಕದೆ ಪರಸ್ಪರ ಸುಮ್ಮನೆ ನೋಡುತ್ತಿರುವ ದೇವತೆಗಳಿಂದ ಕೂಡಿದ ಸ್ವರ್ಗ; ಯಾವ ಆಕರ್ಷಣೆ ಅಥವಾ ಸುಖವೂ ಇಲ್ಲದ ಸ್ವರ್ಗ : ಮಾಱುಡೆಯಿಲ್ಲ ಮಜ್ಜನಮಿನಿಸಿಲ್ಲ ಕರ್ಪೂರವೀಳೆಯಗೊಳಲಿಲ್ಲ ಆರೋಗಣೆಯಿಲ್ಲದಾ ಮಿಟಿಮಿಟಿ ಸಗ್ಗದಾ ತನ್ನಿಯರಿಗೆಳಸುವರೆ (ವೇಶಿಸಂ. ೩೪-೩೮). **ಮಿಟಿಮಿಟಿಸ್ವರ್ಗ** = ಮಿಟಿಮಿಟಿಸಗ್ಗ : "ಮಿಟಿಮಿಟಿಸ್ವರ್ಗ — ಬೆರಗು. ಸುಖವಿಲ್ಲದ ಸ್ವರ್ಗ. ಕೆಲಸವಿಲ್ಲದ ಸ್ವರ್ಗ" (ಜಾನಕೋ. ೩೦); ಅವು ಪತ್ತೆಯಾಗಿ ಕೈಗೆ ಮರಳುವ ತನಕ ಲಂಡನ್ನಿನ ಹೋಟೆಲುಕೋಣೆಯ ಮಿಟಿಮಿಟಿಸ್ವರ್ಗದಲ್ಲಿ ಕುಳಿತಿರುವುದಾದರೂ ಸಾಧ್ಯವೆ ? (ಪಂಟಿರು. ೦೦೪).

**ಮಿಟಿಲ** 'ಮಿಟಲಿ' ನೋ.

**ಮಿಟಿಲಿ** 'ಮಿಟಲಿ' ನೋ.

**ಮಿಟಿಲೆ** 'ಮಿಟಲಿ' ನೋ.

**ಮಿಟುಕಿಸು** 'ಮಿಡುಕಿಸು' ನೋ.

**ಮಿಟುಕು₁** 'ಮಿಡುಕು₁' ನೋ.

**ಮಿಟುಕು₂** 'ಮಿಡುಕು₂' ನೋ.

**ಮಿಟುಣೆ** 'ಮಿಟಲಿ' ನೋ.

**ಮಿಟ್ಟನೆ** (ಅ). ಅತಿಯಾಗಿ, ಅಧಿಕವಾಗಿ ಎಂಬರ್ಥದ ಒಂದು ಅನುಕರಣಾವ್ಯಯ : ಪ್ರೋಷಿತಪ್ರಿಯೆಯಂತೆ ಮಹಿಯೊ ಮಿಟ್ಟನೆ ಮೌನ ! (ಹಪ್ಪರ. ೨೨-೦೩೧).

**ಮಿಟ್ಟನೆ ಮಿಡುಕು** = ೧. ಬಹಳವಾಗಿ ದುಃಖಪಡು, — ಸಂಕಟಪಡು : "ಮಿಟ್ಟನೆ ಮಿಡುಕಿತೆನಲಟಲು" (ಕಬ್ಬಮಂ. ೬೦); ಸೌಂದರನ ಕಾಣದೆ ಬಳಲ್ದಳಲ್ದೆಬ್ಬಿ ಮಿಟ್ಟನೆ ಮಿಡುಕಲೊಡನೆ ಬಂದು (ಸೌಂದರ. ೧೪-೦೩) : ತನ್ನರೆಯೊಡಲಂ ಕಡುಬಿಂ ಸುಡೆ ಬಿಬಿ ಮಿಟ್ಟನೆ ಮಿಡುಕುತ್ತೆ ಬಾಯ್ಬಿಡುತೆ ನೃಪತಿ ಸಿಡಿಮಿಡಿಗೊಂಡಂ (ವೃಕಾ. ೩೪-೯೨). ೨. ಸ್ವಲ್ಪವಾದರೂ ಅಲುಗಾಡು; ಮಿಸುಕಾಡು : ಚಿತ್ರದ ರೂಪಿನಂತೆ ಮಿಟ್ಟನೆ ಮಿಡುಕದೆ ನಿಂದು (ಧರ್ಮಾಮೃ. ೦೦-೩೦); ದಿಟ್ಟ ವಿಷಮುಷ್ಟ ಫಣಿಪತಿ ಮಿಟ್ಟನೆ ಮಿಡುಕದೆ ಬಿಲ್ಬು ಪಟ್ಟದು ಭಯದಿಂ (ಬಂಹಂ. ೬-೩೬) ; ಜಟ್ಟಿಗಳಂಕದಾಳುಗಳಿದ್ದರಲ್ಲಲ್ಲಿ ಮಿಟ್ಟನೆ ಮಿಡುಕದೆ ನಿಂದು (ಭರತ. ೦-೬೪). **ಮಿಟ್ಟನೆ ಮಿಸುಕು** = ಮಿಟ್ಟನೆ ಮಿಡುಕು ೨ : ಕಟುಪಟುಪ್ರಬಲಸಾಹಸಿಕರಪ್ಪ ವೀರಭಟರೆಲ್ಲಂ ನಟ್ಟಂತೆ ಮಿಟ್ಟನೆ ಮಿಸುಕದಿರೆ ನೆಟ್ಟನೆ ಕಂಡು (ಶಾಂತೀಶ್ವ. ೮-೦೦೩ ವ). [ಮಿಟ್ + — ಅನೆ₁]

**ಮಿಟ್ಟಲಿ** 'ಮಿಟಲಿ' ನೋ.

**ಮಿಟ್ಟಿ** 'ಮಿಟ್ಟೆ' ನೋ.

**ಮಿಟ್ಟಿಗೆ** (ನಾ). ಒಂದು ಬಗೆಯ ಭಕ್ಷ್ಯ : ಮಿಟ್ಟಿಗೆ ಮಾಡಿ ಬಡಿಸಿದ್ದರು. ಬಲು ರುಚಿಯಾಗಿತ್ತು (ಮನೋಸಂ. ೬೬). [ ? ]

**ಮಿಟ್ಟಿಯಂಬು** 'ಮಿಟ್ಟೆಯಂಬು' ನೋ.

**ಮಿಟ್ಟಿಸೆ** (ನಾ). ಒಂದು ಊರಿನ ಹೆಸರು : ಮಿಟ್ಟಿಸೆ ಆ ಮಹಾಜನಕ್ಕೆ ಸಾಲೆ ಎಲಿಸೆ ಆ ಸಾಸಿರ್ವರ್ಗಂ ಸಾಲೆ ಮುಟ್ಟಿಗುಪ್ಪೆ ಸಾಸಿರ್ವರ್ಗಂ ಸಾಲೆ ಆಚನ್ದ್ರತಾರಕಂ (ಎಕ. VII, ಶಿಕಾ. ೪೩ (೨)-೦೦: ಸು. ೩೯೦?). [?]

**ಮಿಟ್ಟು₁** (ಕ್ರಿ). ಚಿಮ್ಮು : ಮಿಡಿ : ಆನೆಯೇರಿ ಕವಡೆಯ ಮಿಟ್ಟಿದ (ತುರಂಗ. ೩೨-೨೩). 'ಮಿಡಿ₁' ಪರಾ.

[ದೇ.॥ ತಮಿ. ಮಿಣ್ಟು=ತಳ್ಳು; ತೆಲು. ಮಿಟ್ಟು]

**ಮಿಟ್ಟು₂** (ನಾ). [ಸಂಗೀತ] ಮೃದಂಗದ ಬಲಮುಖದಲ್ಲಿರುವ ಚರ್ಮದ ಮೇಲೆ ತೋರುಬೆರಳಿನಿಂದ ಹೊಡೆಯುವ ಪೆಟ್ಟು : ನಾರಾಯಣಸ್ವಾಮಿಅಪ್ಪಾ ಅವರು . . . ಹೊಸದಾಗಿ ಮೃದಂಗವನ್ನೊಂದನ್ನು ಮಾಡಿ ತಂದಾಗ, ಅದನ್ನು ಕೊಂಚಕಾಲ ನುಡಿಸಿ ಅದರ ಮಿಟ್ಟು, ಚಾಪು ಮತ್ತು ಟೊಪ್ಪು, ನಾದಗಳನ್ನು ಸರಿಯಾಗಿದೆಯೋ ಎಂದು ಪರೀಕ್ಷಿಸುತ್ತಿದ್ದರು (ಸಂಗೀತ. ೦೦೧). [<ಮಿಡಿ₁]

**ಮಿಟ್ಟುಲಿ** 'ಮಿಟಲಿ' ನೋ.

**ಮಿಟ್ಟೆ, ಮಿಂಟೆ₁, ಮಿಟ್ಟಿ, ಮಿಣ್ಣೆ, ಮಿಂಟೆ** (ನಾ). ೧. ಎತ್ತರವಾದ ಭೂಮಿ ; ದಿಣ್ಣೆ ; ದಿಬ್ಬ: ತೆವರು : "ದಿಗೆ ಮಿಣ್ಣೆ ಮಿಟ್ಟೆಯದು" (ಶಬ್ದಕಂ. ೨೪೯); ಜಲವೆಲ್ಲ ಹರಿಮಯ ಶಿಲೆಯೆಲ್ಲ ಶಿವಮಯ ಮೇಳಲು ಮಿಟ್ಟೆಗಳೆಲ್ಲ ಮಣಿಯ ಮಯವು(ಕುಶಂದ.೪-೪೦-೨):ಪೋಣೆಯ ಪ್ರದೇಶ ಹೊರತಾಗಿಯೆಲ್ಲ ಕಡೆಯಲ್ಲಿ ತೆರೆಯಂಥ ತಗ್ಗು ಮಿಟ್ಟೆಗಳನ್ನು ಕಾಣಬಹುದು (ಕಥಾಗ. ೪೩೪); ರಥ ಬರುವ ರಭಸಕ್ಕೆ ಗುಂಡುಕಲ್ಲು ತಗ್ಗು ಮಿಟ್ಟೆ ಗಿಡ ಸಾಪಾಗಿ ಕುಂಬಾರನ ಚಕ್ರದಂತೆ ತಿರುಗಲು ಭೂಮಿ (ಕರ್ನಾಕ. ೨೪೪). ೨. ಮಣ್ಣಿನ ಮುದ್ದೆ: ಹೆಂಟೆ : ಕಾಮದೇವನಿಮ್ಮಾವಿನ ನನೆಯ[ನ]ಂಬುಗಳುಮನವಱ ಬಲ್ಮಿಡಿಯನೆ ಮಿಟ್ಟೆ[ಯುಮಂ] ಮಾಡಿ ತನ್ನನೇಸಾಡಿ ಕಾಡೆ (ಶಂಕರ. ೩-೦೨ ವ); ತೊಟ್ಟನೆ ಕಲ್ಲಾಗಿ ತಾಗಿದ ಮಿಟ್ಟೆಯಪೋಲ್ಮಗುಳ್ದಂ (ಸಮುಕ. ೪-೮೨); ನಮ್ಮ ಕೂಡಲ ಸಂಗನ ಶರಣರ ಕಂಡುದಾಸೀನವ ಮಾಡಿದರೆ ಕಲ್ಲ ತಾಗಿದ ಮಿಟ್ಟೆ[ಪಾಠಾಂ. ಮಿಂಟೆ] ಯಂತಪ್ಪರಯ್ಯ (ಬಸವ. ೦೪೪): ಬಿಟ್ಟ ಕಣ್ಗಳ್ ಕಲ್ಲ ತಾಗಿ ಮರಳುತ್ತಿರ್ಪ ಮಿಟ್ಟೆಯಂತಾದವು (ನೇಚಕ. ೪೪-೦೩). ೩. ಉರುಳೆ ; ಗುಂಡು : ಅಲರ್ವಿಲ್ಲನ ಮಸಿರ್ವರಲ ಮಿಟ್ಟೆ [ಪಾಠಾಂ. ಮಿಂಟೆ]ಗಳ ಜಂಗುಳಿಯಂತೆ ಮೆಱೆವ ಬಿಣ್ಗೊನೆಯ ತಳಿರ್ವಡಕೆಯ ಮರದ ಸಾಲ್ಗಳು ಕಣ್ಗೊಳಿಸಿಹವೇನ ಬಣ್ಣಿಪೆನು (ಶಬರಶಂ. ೩-೪೮). ೪. ಬಾಣದಂತೆ ಪ್ರಯೋಗಿಸುವ ಒಂದು ಸಾಧನ ಮತ್ತು ಅದರಲ್ಲಿಟ್ಟು ಹೊಡೆಯುವ ಗುಂಡುಕಲ್ಲು ; ಕವಣೆ : [ಕೂರಂಬಿನ ಕವಲಂಬಿನ] ಪಾಱುಂಬಳಿಯ ಕಕ್ಕಡೆಯ [ಮಿಟ್ಟೆಯ] ಮೊಟ್ಟೆ ಸರಲ ಬಲ್ಸರಿಯಿಂ

ಸುರಿಯೆ (ಧರ್ಮಾಮೃ. ೧೩-೧೨೪): ಬೇಪಿನ ಕಟ್ಟೆ . . . ನಾನಾವಿಧ ಪಾಪದುಷ್ಟಮೃಗವಂ ಕೆಡೆಯೆಚ್ಚುವ ಮಿಟ್ಟೆ . . . ಎನೆ ರಂಜಿಪುದಲ್ತೆ (ಪ್ರಕಸು. ೧೪-೯): ಪೊಡವಿಪತಿ ಚಿಕ್ಕಂದು ಮಿಟ್ಟೆಯ ಹೊಡೆಯೆ ನಡುಗ ಡಲಲ್ಲಿ ಬಿದ್ದನು (ಕೌಶಿರಾ. ೬-೧೧); ಬಿಡುವಲೆ ಸೊರ್ಕು ಮದರ್ ಪದವಿಲ್ಮಿಡಿವಿಲ್ಲೆಲೆಯಂಬು ಮಿಟ್ಟೆ [ಪಾಠಾಂ. ಟ್ಟೆ] . . . ವನಿಪ್ಪಿವಂ ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದಿದರ್ (ರಾಜಶೇ. ೫-೫೨). ೫. ಮೊಗ್ಗು; ಮುಗುಳು: ಹೂವಿನ ಮಿಟ್ಟೆಯನ್ನು ಹೂವಾಗಿಸಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಮಂದಾರಳನ್ನು ಬೇಗ ತಾಯಿಯಾಗುವಂತೆ ಮಾಡಿಸಲು ಸಾಧ್ಯವಿಲ್ಲ (ಬಾಳ್ವೆ. ೧೩). ೬. ನೆಲ; ಭೂಮಿ (?) : ಅರಸಿ ಕುಮಾರನಂ ಪಡೆದ ಭಂಗಿಯನೇವೆಸರ್ಗೊಳ್ವೆನೆಲ್ಲಮೆಲ್ಲರ ತೆಱನಲ್ತು ಮಿಟ್ಟೆಯೆಸಳೆ ತಾಂ ಪಡೆದಂತೆ ಸುಖಪ್ರಸೂತಿಯೊಪ್ಪಿರೆ ಪಡೆದಳ್ (ಸೂಕ್ತಿಸು. ೭-೫೮).

**ಮಿಂಟೆ$_1$** : ೨. ವಿಮಾನಂ . . . ಕಲ್ಲಂ ತಾಗಿದ ಮಿಂಟೆ [ಪಾಠಾಂ. ಟ್ಟೆ] ಯಂತೆ ಬೆಟ್ಟಮಂ ಪಳಂಚಿದ ಭೃತ್ಯದಂತೆ ಪೆಜಸಾರ್ದು ನಿಂದು (ಧರ್ಮಶ. ೦-೮೫ ವ); ಈ ಕಪಟಮಂ ಮಾಡಿ ಬಳಿಕೆನ್ನ ಮಗಳ ನಾನೇ ಕೊಂದೆನೀ ತೆಱಂ ಕಲ್ಲನೆಚ್ಚಾ ಮಿಂ[ಪಾಠಾಂ. ಮಿಾಂ]ಟೆಯಾ ಕರ್ತೃವಂ ತಾಗಿದಂತಾಯಿತು (ಸಮ್ಯಕ್ತ್ವ. ೬-೯೯); ಮಲ್ಲರ ಮಲ್ಲನ ಮೈಯೊಳವನ ಮುಷ್ಟಿ ಕಲ್ಲ ತಾಗಿದ ಮಿಂಟೆಯಾಯ್ತು (ನೇಮಿಸಂ. ೧೬-೧೧೮). ೩. ಸೊನ್ನೆಯ ಮಿಂಟೆ ಮಿಸುನಿಗರಡಗೆಯಂತೆ ಚನ್ನೆಯ ಕುಚಗಳೊಪ್ಪಿದವು (ಶ್ರೀಪಾಲ. ೩-೫೭) ; ಆ ಮುನಿಪತಿಯ ಪರಡುಗಳೆಸೆದವಾ ಸೋಮಧರಾರಿಯ ನೆಸುವ ಹೇಮದ ಮಿಂಟೆಗಳಂತಾ ನೃಪತಿಗೆ (ರಾಮವಿ. ೯-೧೫೫); ಚಿನ್ನದ ಚಿಕ್ಕ ಮಿಂಟೆಯ ಪೋಲ್ವ ಮೊಲೆಗಳ ಸನ್ನುತ ಪೊರವಾರುಗಳ ಚೆನ್ನೆಯರರಸಿ ಪದ್ಮಶ್ರೀನಂದೆಯ ಜೆನ್ನನೊದೆದು ಪುಟ್ಟಿದಳು (ನಾಗಕು. ೧೯-೭೨). ೪. "ಶರಮುಂಡಿ ಮಿಂಟೆ [ಪಾಠಾಂ. ನೇಮಿ] ಯಕ್ಕುಂ" (ಮಂಗರಾ. ೮೭-೩೫); ಸುರಿದನು ಸರಳ ಸಾರಪವನಲಗರ್ಭದ ಬಾಯ ಧಾರೆಗಳನಿಲಗರ್ಭದ ಗಱಿಗಳಶನಿಯ ಗರ್ಭಮಿಂಟೆಗಳ್ (ಕುಮಾವ್ಯಾ. ೬-೩೫); ಜೋಳಿಗಳ ಮಿಂಟೆ [ಪಾಠಾಂ. ಮಿಟ್ಟೆ- ಮಿಾಟೆ]ಗಳ ದೇಹದ ಸಾಳುವನ ಗಳೆಯಂಟುಗಳ ಶಬರಾಳಿ ಬಂದುವು ಪರ್ಣಶಾಲೆಗೆ ಸೂರ್ಯವಂಶಜನ (ತೊರರಾ. ೩-೩-೩); ತಾವರೆಗಾವೊಳಾಗಿಪ ಬಿಲ್ಲ . . . ಭೃಂಗಾವಳಿಯೆಂಬ ಮಿಂಟೆವಿಡಿದಂಟಿಸಿ ಗೆಂಟನೊಳಟ್ಟು ಪಾಱಿಪರ್ ತೀವಿದ ಕೀರಮಂಡಳಿಯನಲ್ಲಿಯ ಪಾಮರಿಯರ್ನಿರಂತರಂ (ರಾಜಶೇ. ೨-೧೭).

**ಮಿಟ್ಟೆ** : ೧. ತಗ್ಗು ಮಿಟ್ಟೆಗಳನ್ನರಿಯದೆ ಬೀಳುತ್ತೇಳುತ್ತ. ತಲೆಗೆದರಿ ಬಾಯಿ ಬಿಡುತ್ತ ಮೈಮೇಲೆಚ್ಚರಿಲ್ಲದೆ ಅಂಬಿಕಾಭವನವನ್ನು ಸಮೀಪಿಸಿದ (ಬಿಡುಗಿ. ೧೮೦). ೨. "ಮಿಟ್ಟೆಯೆ ಮಿಣ್ಣೆಯುಮಕ್ಕುಂ" (ಕವಿಕಂ. ೨೩೦); ಬಾಣಗಳ ನಾರಸಿಂಹನ ಮೇಲೆ ಬಿಡಲು ಕಲ್ಲ ತಾಗಿದ ಮಿಟ್ಟೆಯಂತೆ ಹಾಱಿ ಹೋಗಲು (ಭೃಂಗಸೂ. I, ೧೧೧). ೩. ಉನ್ನತಫಲಗಳೊಂದಾಗುದಿಸಿದವೊಯೆನುತಿವನು ಜಟ್ಟಿಯ ವಿಧದಿ ಇನಮಂಡಲಕೆ ಮಿಟ್ಟೆಯ ಮಿಡಿದೊಲೈದಿದನು (ಉತ್ತರ. ೩೦-೨೮). ೪. ಕಾಮನ ಕಯ್ಯ ಮಿಟ್ಟೆ [ಪಾಠಾಂ. ಟ್ಟೆ] ಗಳೊ ಕತ್ತುರಿಗಳೊ ಕಾಮಿತಪೂಗದೊಡ್ಡುಗಳೊ (ವರ್ಧಶ. ೧-೧೧೯): ಸಿಂಗಾಡಿವಿಲ್ಲಿನ ಗುಜಿಯ ಮಿಟ್ಟೆಯನೆಸುತ ಬಂದನು ತರಹರದಿ ಶ್ರೀಹರಿಯೆ ನಿನ್ನನು ನೋಳ್ಪ ತವಕದಲಿ (ಕೃಷ್ಣಾ ಕಾ. ೨೮-೭). ೫. ಹಳ್ಳಿಗರಿಗೆ ಪ್ರಣಯ ಬರುವುದು ಚಿಗಿತ ಮಾಮರಕ್ಕೆ ಮಿಟ್ಟೆ ಕೂತಂತೆ (ಕನ್ನಡಾ. ೧೧೫).

**ಮಿಣ್ಣೆ** : ೧. "ಮಿಂಗೆ ಮಿಣ್ಣ ಮಿಟ್ಟೆಯಂದು" (ಕವಿಕಂ. ೨೯೯). ೨. "ಮಿಟ್ಟೆಯೆ ಮಿಣ್ಣೆಯುಮಕ್ಕುಂ" (ಕವಿಕಂ. ೨೩೦) ; ಪವನಸುತ ಕಂಡಾಗ್ರಹಿಸಿ ಮೇಲೆ ಗವಿಸಿದನು ಕುಧರವನು ಖಳನವಯವವ ಸೋಂಕಿಸಲೊಡದುದಚಲಕೆ ಮಿಡಿದ ಮಿಣ್ಣೆಯೊಲು (ಅವಂರಾ. ೭-೬-೭೫). ೩. ಹೊಳಪಿರುವ ದುಂಡಗಾದ ಸಣ್ಣ ಮಿಣ್ಣೆಯನ್ನು ನೀನು ನೋಡಿದರೆ ಅದು ನಿನಗೆ ಏನಾದರೊಂದು ಸಂಗತಿಯನ್ನು ಹೇಳುವುದಿಲ್ಲವೆ? (ಮತಂಬ. ೩).

**ಮಿಾಂಟೆ** : ೨. ಕಲ್ಲಂ ತಾಗಿದ ಮಿಾಂಟೆಯಂತೆ ಮುಟ್ಟುಗೆಟ್ಟು (ಧರ್ಮಾಮೃ. ೧೧-೧೩೭): ಸೂಂಕಿ ಮಗುಚಲ್ ಕಲ್ಲನಿರದೆಚ್ಚ ಮಿಾಂಟೆ ಮಗುಚಿದ ತೆಱಂಬಡೆದುದಾಗಸಹಲ್ಲಿ ತಿಱ್ಱಿನುತಪೆ (ಸಮ್ಯಕ್ತ್ವ. ೧೧-೩೯). ೩. ಕಳವೆಯ ಕದಿರ ಮಿಾಸಲ ಕಂಪನುಣಲೆಂದಳಿಶಿಶುಗಳು ಕೊನೆಯೇಱಿ ಪೋದವು ಪೂಗಣೆಯನ ಪಸುರ್ಗಾವಿನ ತೊಳಪ ನೀಲದ ಮಿಾಂಟೆ[ಪಾಠಾಂ. ಮಿಂಟೆ, ಮಿಾಂಟ]ಯಂತೆ (ಶ್ರೀಪಾಲ. ೦-೫೦); ಮಕರಾಂಕಮಂಡಿತ ಪೊಂಗಣೆಗಳ್ಗ ಮೌಕ್ತಿಕ ಮಿಾಂಟೆಯ ಸಾರ್ಚಿದಂತೆ ನಖಚಕ್ರದಸಕದಿಂ ಬೆರಲ್ಗಳೊಪ್ಪಿರ್ದು ಮಾಯಕನಂಘ್ರಿಯುಗಳಪಲ್ಲವದಿ (ಮೋಹತ. ೨೩-೧೪). ೪. ಎಮ್ಮಯ್ಯಂ ಪೇಟ್ದಂತೆ ನೆಗಟ್ವನೆಂದು ಕಿಱಿಯ ಬಿಲ್ಲುಂ ಮಿಾಂಟೆಯುಮಂ ಕೊಂಡು ಪೋಗಿ ಪಚ್ಚವಡದ ಕುಟೀಯಂ ಸೋಟ್ಟನ್ನೆಗಂ ಕರಿಯ ಪಿರಿಯ ತಲೆಯ ನಿಡಿಯ ಪುಟು ನೆಗೆದು ತೋಱಿದೊಡೆ ಮಿಾಂಟೆ[ಪಾಠಾಂ. ಮಿಟ್ಟೆ]ಯುಂ ತೊಟ್ಟು ತೆಗೆದಿಸುವಾಗಳ್ (ಜೀವಸಂ. ೧೩೯-೩೦ ವ) ; ಬಳಿಕೊಂಬತ್ತುಸಾವಿರ ಕೋಲು ಮಿಾಂಟೆಯ ಕವಲುಗಣೆ ಹನ್ನೆರಡುಸಾವಿರವು . . . ಅಱು ಬಂಡಿಯ ಲೆಕ್ಕವಿದೆ (ಕುಮಾವ್ಯಾ. ೧೮-೨೨) ; ಗೋಪುರಪ್ರಾಕಾರಮಂಟಪ ವಿಮಾನಂಗಳೊಳ್ ನೆಲಸಿರ್ಪ ಕಿಱುವಕ್ಕಿಗಳನೂದಿ ಮಿಾಂಟೆಗಳಿಂದಿಟ್ಟು ಕೆಡಪಿ . . . ತಂತಮ್ಮ ಸತಿಸುತಪಿತರೊಡವೆರಸುಣ್ಬರ್ (ಜಗನ್ನಾ. ೭-೧೧).

**ಮಿಟ್ಟೆಗೊಂಡ ಚಿಟ್ಟೆ, ಮಿಟ್ಟೆಕೊಂಡ ಚಿಟ್ಟೆ** = ಮಣ್ಣಿನ ಹೆಂಟೆಯ ಹೊಡೆತಕ್ಕೆ ಸಿಕ್ಕಿದ ಮಿಡಿತೆ : ಮುನ್ನುಱ ದಿವ್ಯಾಸ್ತ್ರಚಯಂಗಳ್ ಕೂಳೆ ಗಾಂಧರ್ವಬಲಂಗಳ್ ಕೆಡೆದುವು ಮಿಟ್ಟೆಗೊಂಡ ಚಿಟ್ಟೆಯ ತೆಱದಿಂ (ತಂಪುರಾ. ೭-೩೮) ; ಬೆನ್ನನಟ್ಟಿ ನಟ್ಟ ಜಟ್ಟಿಗೆಯಿಂ ಮಿಟ್ಟೆಗೊಂಡ ಚಿಟ್ಟೆ [ಪಾಠಾಂ. ಬಿಟ್ಟೆ]ಯಂತೆಯುಂ ಬಡಿಗೊಂಡ ಮೊಲದಂತೆಯುಂ ತಲೆಕೆಟಗಾಗಿ ಬಿಟ್ಟರ್ (ಶಾಂತಿಪು. ೪-೩೦ ವ) ; ತದ್ಬಲಂ ನಿರ್ಭರಕೋಪಂ ಬದಿದೂಡೆಯಲ್ ಧರೆಯೊಳವಂ ಮಿಟ್ಟೆ ಕೊಂಡ ಚಿಟ್ಟೆವೊಲಿರ್ದಂ (ನೇಮಿಪು. ೧೧-೧೨೫).

**ಮಿಟ್ಟೆಯ ಭಂಡ, ಮಿಟ್ಟೆಯ ಭಂಡ** = ಬೂಟಾಟಿಕೆಗಾಗಿ ಮೃತ್ತಿಕೆಯನ್ನಾಗಲಿ ವಿಭೂತಿಯನ್ನಾಗಲಿ ಧರಿಸಿರುವ ಲಜ್ಜೆಗೇಡಿ : ಸಕಲೇಂದ್ರಿಯದೊಳಗಿರ್ದು ವಸ್ತುವನಱಿದೆನೆಂಬ ಮಿಟ್ಟೆಯ ಭಂಡರನೊಪ್ಪ ಏಣಾಂಕಧರ ಸೋಮೇಶ್ವರಲಿಂಗವು (ಸಕವ. I. ೭೦-೨೭೫) ; ತನ್ನ ಇಷ್ಟಲಿಂಗದಲ್ಲಿ ದಾಸೋಹವ ಮಾಡಲಱಿಯದೆ ಹಲವು ಬಯಕೆಯ ಬಯಸುವ ಮಿಟ್ಟೆ [ಪಾಠಾಂ. ಟ್ಟೆ]ಯ ಭಂಡರನೆನ್ನತ್ತ ತೋಱದಿರಯ್ಯಾ ಕೂಡಲಚೆನ್ನಸಂಗಮದೇವಾ (ಚನ್ನವ. ಕ. ೦೯೭-೪೩೯) ; ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವ ಮಿಟ್ಟೆಯ ಭಂಡರ ಕಂಡು ನಾಚಿತ್ತೆನ್ನ ಮನವು (ಸಪೂವ. ೭-೨೮).

[ದೇ.॥ ತಮಿ. ಮೆಟ್ಟು ; ಮಲ. ಮಿಟ್ಟಾಲ್ ; ತುಳು. ಮಿಟ್ಟೆ, ಮುಟ್ಟೆ; ತೆಲು. ಮಿಟ್ಟ. ಮೆಟ್ಟ]

**ಮಿಟ್ಟೆಗಲ್ಲು** (ನಾ). ಎತ್ತರವಾದ ಕಲ್ಲು ; ಉನ್ನತವಾದ ಶಿಲೆ : ಕುಂಭೀನಸಿಯು ಹಿಮಾಚಲದ ನೆರೆಯಲ್ಲಿಗುವ ದೊಡ್ಡದಾದ ಮಿಟ್ಟೆಗಲ್ಲ ಮೇಲೆ ಕುಳಿತಿದ್ದಳು (ಶ್ರೀರಾಕ. ೧೧೭). [ಮಿಟ್ಟೆ + ಕಲ್ಲು (<ಕಲ್$_3$)]

**ಮಿಟ್ಟೆದುಡು** (ಕ್ರಿ). ಕವಣೆಯನ್ನು ಪ್ರಯೋಗಿಸು : ಅವನೆಲ್ಲರನೆಸೆವ ಅವ ನಮ್ಮ ಕಂಡಡೆ ಬೆಟ್ಟನ್ನ ಮಿಟ್ಟೆದುಡ ಸಕಳೇಶ್ವರದೇವನಱಿಯದ ನಿರ್ಭಾಗ್ಯರನೆಸೆವಾ (ಸಕವ. II. ೫೯೭-೧೭೭೦).

[ಮಿಟ್ಟೆ + ತುಡು$_1$ (< ತೊಡು$_1$)]

**ಮಿಟ್ಟೆನೆಲ** (ನಾ). ಎತ್ತರವಾದ ಭೂಮಿ ; ತೆವರು : (ಃ).

[ ಮಿಟ್ಟೆ + ನೆಲ ]

**ಮಿಟ್ಟೆಯಂಬು, ಮಿಂಟೆಯಂಬು, ಮಿಟ್ಟೆಯಂಬು** (ನಾ). ಗುಂಡನೆಯ ಕಲ್ಲಿಟ್ಟು ಬಾಣದಂತೆ ಪ್ರಯೋಗಿಸುವ ಒಂದು ಬಗೆಯ ಸಾಧನ : ಬಾಲರೆಸುಗೆಯ ಮಿಟ್ಟೆ[ಪಾಠಾಂ. ಮಿಂಟೆ]ಯಂಬಿಗೆ ಸೋಲು

ಫುವೆ ೧೧೨ (ಚುಣ್ಣಾಬೊ್ರ. ೩-೨೭) ; ಬಿಟ್ಟಿಸುವಿಲಿಭೋಗವನೆಂಬ ಪ್ರತಿಕನ ತೊಟ್ಟನೆಸುವೆನೆಂದು ಮದನ ಮಿಟ್ಟಿಯಂಬುಗಳ ಮಾಡಿಸಿದಂತೆ ಬನವೊಳು ಬಟ್ಟಮಲ್ಲಿಗೆಗಳೊಪ್ಪಿಹವು (ಅಂಕಕ. ೨-೯೦). ಮಿಂಟೆಯಂಬು: ಥರಥರದ ಸಬಳಗಳ ಮಿಂಟೆಯಂಬನು ತವ್ಮ ದೇಹದಲಿ ಧರಿಸಿ (ಹೂರವ. ೦೦-೩೯). ಮಿಟ್ಟೆಯಂಬು : ಮುಳ್ಳಂಬುಗಳು ಸಾವಿರದೇಳ್ನೂಱು ಒಂಬತ್ತುಸಾವಿರ ಮಿಟ್ಟೆ [ಪಾಠಾಂ. ಮಿಂಟೆ]ಯಂಬುಗಳು (ಭೈರಸೂ. ೧. ೬೩).

[ಮಿಟ್ಟೆ + ಅಂಬು₂]

**ಮಿಟ್ಟೆವರಹ** (ನಾ). ನಾಲ್ಕುರೂಪಾಯಿಗಳಷ್ಟು ಬೆಲೆಬಾಳುವ ಒಂದು ಬಗೆಯ ಚಿನ್ನದ ನಾಣ್ಯ : (೬). [← ತೆಲು. ಮಿಟ್ಟವರಹಾ]

**ಮಿಟ್ಟಾದಾರ** (ನಾ.) ಒಂದು ಜಿಲ್ಲೆಯ ಉಪವಿಭಾಗದ ಅಧಿಕಾರಿ : ' ಮಿಟ್ಟಾದಾರಿ ' ಪರಾ.

[ ←ಹಿಂ. ಮಿಟ್ಟಾದಾರ್. / ತಮಿ. ಮಿಟ್ಟಾತಾರ್]

**ಮಿಟ್ಟಾದಾರಿ** (ನಾ). ಮಿಟ್ಟಾದಾರನ ಆಡಳಿತಕ್ಕೆ ಒಳಪಟ್ಟ ಪ್ರದೇಶ : ಮದರಾಸಿಗೆ ದಕ್ಷಿಣಪ್ರಾಂತದಲ್ಲಿ ಶಿವಗಂಗೆ, ರಾಮನಾಡು, ಪುದಿಕೋಟೆ, ವೆಂಕಟಗಿರಿ ಇನ್ನೂ ಕೆಲವು ಮಿಟ್ಟಾದಾರಿಗಳು ಇವುಗಳೆಲ್ಲಾ ಉಳಿದೇ ಇವೆ (ಪಾಳೆಗಾ. ೦೮). [←ಹಿಂ. ಮಿಟ್ಟಾದಾರೀ. /ತಮಿ. ಮಿಟ್ಟಾತಾರಿ]

**ಮಿಟ್ಟಾವು** (ನಾ). ಒಬ್ಬನ ಅಧಿಕಾರಕ್ಕೆ ಒಳಪಟ್ಟ ಆಡಳಿತದ ಪ್ರದೇಶ : ಮೈಸೂರ ರಾಜ್ಯವನ್ನು ೪೪ ಲಕ್ಷ ವರಹಾಕ್ಕೆ ಮಿಟ್ಟಾವಾಗಿ ಕೊಡಿಸ ಬೇಕೆಂದು ವಾಸಪ್ಪಾಜಿಯು ಇನ್ನೊಂದು ಸಲಹೆಯನ್ನು ಕಳುಹಿಸಿದ್ದನಂತೆ (ಕುಣಿತ. ೯೦). [ ← ಹಿಂ. ಮಿಟ್ಟಾ. /ತಮಿ. ಮಿಟ್ಟಾ ]

**ಮಿಟ್ಲ** 'ಮಿಟಲಿ' ನೋ.

**ಮಿಟ್ಲಿ** 'ಮಿಟಲಿ ' ನೋ.

**ಮಿಠಾಯಿ, ಮಿಟಾಯಿ** (ನಾ). ಒಂದು ಬಗೆಯ ಸಿಹಿತಿಂಡಿ : ಎರಡು ರುಪಾಯಿ ವೆಚ್ಚ ಮಾಡಿ ಮಿಠಾಯಿ ತಿಂದರೆ (ಮುಂಬಯಿ. ೩-೦೭೮) ; ಅವಲಕ್ಕಿ, ಮಿಠಾಯಿ ಸಾಕಷ್ಟು ಉಳಿದಿವೆ (ಭಾರತಿ. ೩). ಮಿಟಾಯಿ :'ಸಕ್ಕರೆ ಮಿಟಾಯಿ' ಪರಾ. [← ಹಿಂ. ಮರಾ. ಮಿಠಾಈ]

**ಮಿಠಾಯಿಗಾರ** (ನಾ). ಸಿಹಿತಿಂಡಿಯನ್ನು ತಯಾರಿಸುವವನು ಹಾಗೂ ಮಾರುವವನು : ಮಿಠಾಯಿಗಾರ ಲಾಡು, ಜಿಲೇಬಿ, ಬತ್ತಾಸು ಮುಂತಾದುವನ್ನು ಸಿದ್ಧಪಡಿಸಿಕೊಂಡಿರುತ್ತಾನೆ (ಜೀವಾಕ್ಕ. ೨೨೯).

[ಮಿಠಾಯಿ + – ಗಾರ (<–ಕಾಱ)]

**ಮಿಠಾರಿ** (ನಾ). ಬೆಡಗು ; ಸೊಗಸುಗಾತಿ : ನೀಟುದೋರುತ ಮಿಠಾರಿಯ ರೊಲಿಸುತ . . . ನರ್ತನದಾಟ ನೋಡಿದರು ಕೋವಿದರು (ಕ್ಂವಕಾ. ೩-೦೦೦) ; ಚಿತ್ರಿಣೀಜಾತಿ ಮಿಠಾರಿಯನ್ನು ಉತ್ತಮಳೆಂದು ಪೇಳುವರು (ಕ್ಂಗಂಧಿ. ೪೯೯-೦೦). [← ತೆಲು. ಮಿಟಾರಿ]

**ಮಿಠಾಲಕಡಿ** (ನಾ). ಒಂದು ಬಗೆಯ ಮೂಲಿಕೆ ; ಯಷ್ಟಿಮಧುಕ ; ಅತಿಮಧುರ : "ಮಧುಕಂ. ಕ್ಲೀತಕ್ನಯಷ್ಟಿಮಧುಕಂ, ಮಧುಯಷ್ಟಿಕಾ — ೪ ಅತಿಮಧುರದ ಹೆಸರುಗಳು. ಯಷ್ಟಿಮಧುಕಃ . ಮಿಠಾಲಕಡಿ" (ಸಿದ್ಧಾಂತಿ. ೦೪೩). [← ಹಿಂ. ಮಿಠೀಲಕಡೀ]

**ಮಿಡ, ಮುರುಡ₂** (ನಾ). ಶಿವ ; ಈಶ್ವರ : ''ಎಳದೇರ ಗೊರವನೈಪೋಗ . . . ಮಿಡ ಶಿಸುಳಿ . . . ತಸರಂ ದೇಸಿಗಂ" (ಕನ್ನವಂ. ೩) ; ಒಡೆಯಂ ಕಣ್ಣಾಡಿಯಂ ಮಿಡಂ ತಿಸುಳಿ . . . ಮಱುಕಂಬೊತ್ತೋಪುಗೆಮ್ಮಂ ಕರಂ (ಪಾಂಡುಸ್ತ. ೦-೦೭-೩೩). 'ಮಿಡಷ್ಟಿ ' ಪರಾ. ಮುರುಡ₂ : 'ಮುರುಡ ಸುತ', 'ಮುರುಡೇಶ್ವರ' ಪರಾ. [< ಸಂ. ಮೃಡ]

**ಮಿಡಚಿ** 'ಮಿಡತೆ' ನೋ.

**ಮಿಡಚೆ** 'ಮಿಡತೆ' ನೋ.

**ಮಿಡಚ್ಚಿ** (ನಾ).ಒಂದು ಬಗೆಯ ಮರ ಮತ್ತು ಅದರ ಕಾಯಿ; ರುದ್ರಾಕ್ಷಿ: ತಣಸುರುವ ಮಿಪೋಕ್ಷಕ್ಕಂ ಸಲೆ ಗುಱುತದು ಗಜ ಬೂದಿಯುಂ ಮಿಡಚ್ಚಿಯ ಮಣಿಯುಂ (ಪಾರಾಸ್ತ. ೨-೦೨-೯). [ಮಿಡ + ಅಚ್ಚಿ₂]

**ಮಿಡತೆ**. ಮಿಡಚಿ, ಮಿಡಚೆ, ಮಿಡಿಚು, ಮಿಡಿಚೆ, ಮಿಡಿತೆ, ಮಿಡುಚೆ (ನಾ). ೧. ಒಂದು ಬಗೆಯ ಹಾರುವ ಹುಳು ; ಶಿವನ ಕುದುರೆ ; ಶಲಭ : " ಮಿಡತೆ — ಪಟಚಿ(ತಿ) " (ಶಬ್ದಕೋ. ೩೫) ; ಮಿಡತೆಹುಳುಗಳ ಗುಂಪಿನಂತೆ, ತನ್ನ ರಥವನ್ನು ಕುರಿತು ಬರುವ ಶಸ್ತ್ರಗಳನ್ನು ಅರ್ಜುನನು . . . ತಡೆದನು (ವ್ಯಾಸಕ. ೩೩೩). **ಮಿಡಚಿ :** ೧. ಜಿಟ್ಟೆ ಅಥವಾ ಮಿಡಚಿ (ಕೀಟಿಬಿ. ೯೩). **ಮಿಡಚೆ :** ೧. " ಮಿಡಚಿ (ಮಿಡತೆ) = ಸೂರ್ಯನ ಕುದುರೆಹುಳ " (ಜಾನಪಕೋ. ೩೦). **ಮಿಡಿಚು :** ೨. ಒಂದು ಬಗೆಯ ಸಣ್ಣ ಮೀನು ; ಸೀಗಡಿ : ಸಲೆ ನೀರ್ವಿರ್ನ್ನಾಡಿಚಿಲ್ಲದುತ್ತಮಮಹಾ ತೀರ್ಥಂ ಶಿವಜ್ಞಾನಸಂಯೋಗಲಸದ್ವ್ಯಕ್ತಿಪರಾಯಣಂ (೬೩೪. ೨೬). **ಮಿಡಿಚೆ :** ೧. "ಪತಂಗಃ, ಶಲಭಃ —೨ ಪತಂಗದ ಹುಳುವಿನ ಹೆಸರುಗಳು. ಮಿಡಿಚೆಗೂ ಹೆಸರಾಗುವದು" (ಸಿದ್ಧಾಂತಿ. ೦೬೨) ; ಮಿಡಿಚೆ(ತೆ) ಯಿಲಿ(ಯೆಲೆ)ಯಿಂಚೆ ಮೃಗದಿಂ . . . ಕಿಡುವುದು ಫಲವುಂ ಪರಿಪುಂ (ಅಭಿಪು. ೦೨-೦೩೯) ; ಒರಲೆ ಹುತ್ತಕ್ಕೆಯುರಗಿಣಿ ಹರುವೆಯು ತೋಟಕ್ಕೆ ಮಿಡಿಚೆ ಕೋಗಿಲೆ ಹಳ್ಳಿಗೆ ತುರುವೆ ನವನಾಗಸಂಪಗೆ ಕುರುಬಂ ಸಲೆ ಜಾಣ ಖೂಳರಾಸ್ಥಾನಕ್ಕಂ (ಶೀತಿಸಾ. ೩೭೨). ೨. ಕಪುವುಳಿಗಳ್ನನೊಂದು ತಿಳಿವಟ್ಟ ಲನಿಟ್ಟೆಱಿಯಲ್ಕೆ ಮಱುಱುಸೂಟಿ್ ಮಿಡಿಮಿಡಿದರ್ಥಮುಂ ಕುಡಿದು ಚಿಪ್ಪಿಱಿದಿಕ್ಕಿದ ಸಣ್ಣಮೀಗಳಂ ಮಿಡಿಚೆಗಳಂ ಕುಱಿಂಕಿ (ದಶಕು. ೬-೨೦೯). **ಮಿಡಿತೆ :** ೧. ಮಿಡಿತೆ ಹೆಗ್ಗಣ ಮೊದಲಾದ ದುಷ್ಟಜಂತುಗಳ ಬಾಧೆಗಳು ತಪ್ಪಿ ಪೈರುಗಳು ಬೆಳೆಯುವವು (ಕೃಷಾಕ. ೯೫) ; ಬಂತು ಉತ್ತರದಿಂದ ಹತ್ತಿರ ಹಳದಿ ಮಿಡಿತೆಯ ಹಾವಳಿ (ಕಂಡಯು. ೪೭-೦೦). ೩. ದೀಪಕ್ಕೆ ಮುತ್ತುವ ಒಂದು ಬಗೆಯ ಹುಳು ; ಪತಂಗ : ಕ್ರೋಧನಂಗೊಳಲಾಕೆ ಕೆಂಡದೆಡೆ ಮಿಡಿತೆಯಂತಟಕಟಿಸುತ (ಕವಮು. ೦೦-೦೭). **ಮಿಡುಚೆ :** ೩. ಬೇಗೆಯೊಳಗಣ ಮಿಡುಚೆ[ಪಾಠಾಂ. ಡಿಚೆ, ಡುಚು]ಗಳ ತೆಱದಿ ವ್ಯಕ್ತ ಉರಿದೇ ಹೋಹಿರಲ್ಲದೆ ಶಕ್ತಿಯುಂಟೇ ನಿಲಲು (ಐಕಪು. ೫೩-೨೯).

[ದೇ.॥ ತಮಿ. ವಿಟ್ಟಿಲ್, ಮಲ. ವಿಟ್ಟಿಲ್, ವೆಟ್ಟಿಲ್ ; ತುಳು. ಮೊಂಟೆ ; ತೆಲು. ಮಿಡತ, ಮಿಡುತ ; ಕೋಲಾ. ವಿಟ್ಟೆ ; ಪರ್ಜಿ. ಮಿಟಕ]

**ಮಿಡಮಿಡ** (ನಾ). (ಅಧಿಕ್ಯ, ಅತಿಶಯತೆ ಮುಂತಾದುವನ್ನು ಸೂಚಿಸುವ) ಒಂದು ಅನುಕರಣಶಬ್ದ : 'ಮಿಡಮಿಡನೆ ' ಪರಾ.

**ಮಿಡಮಿಡ ಮಿಡುಂಕು, ಮಿಡಮಿಡ ಮಿಡುಕು** = ಬಹಳ ಸಂಕಟ ಪಡು, – ಪೇಚಾಡು : ಓರೊರ್ವೆ ವಿರಹಾನಳನನ್ನಿಧಿವಿದಾಹದಿಂ ಕೆಂಪಡರೆ ಕಾಯ್ದು ವೆನಿಪ ಕೆಂದಾವರೆಯ ಪಾಸಿನೊಳ್ ಕೆಡೆದು ಮಿಡಮಿಡ ಮಿಡುಂಕುವದವಟಲ ಪೆರ್ಚಿನಿಂ ಕಿಚ್ಚಿನೊಳ್ ಬಿಟ್ಟ ಕಿಡಿಯಂ ನೆನೆಯಿಸುವಳ್ (ವರ್ಧಮಾ. ೯-೩೬ ಪ) ; ಮಿಡಮಿಡ ಮಿಡುಕುವಿನಂ ಬಡಿಯೊಳೊಡೆಯ ಪೊಡೆ ಪೆಡತಲೆಯಂ (ವರ್ಧಮಾ. ೦೩೭-೭).

**ಮಿಡಮಿಡನೆ** (ಅ). ಒಂದು ಅನುಕರಣಾವ್ಯಯ.

**ಮಿಡಮಿಡನೆ ಮಿಡುಕು** = ಬಹಳ ವ್ಯಥೆಪಡು.–ಸಂಕಟಗೊಳ್ಳು : ಪೂಜಿಪಮುವ ಭೂಪಾಲನಂ ಕುಡು . . . ಮಿಡ[ಪಾಠಾಂ. ಮಿಡು] ಮಿಡನೆ ಮಿಡುಕಿತ್ತು ಪೌರಜನವು (ಹಪಕಾ. ೯-೩) ; ಮಿಡಮಿಡನೆ ಮಿಡುಕುತಾವೆ . . . ಕಡುದುರುಳನಿವನೆಂದೆನುತ ತಲೆವೊಡೆಯ ಹೊವ್ವಳು (ಐಕಪು. ೨೯-೩೩). [ಮಿಡಮಿಡ + –ಅನೆ₁]

**ಮಿಡಿ₁** (ಕ್ರಿ). ೧. ಒಂದು ಬೆರಳಿನ ಹಿಡಿತದಿಂದ ಮತ್ತೊಂದು ಬೆರಳನ್ನು ವೇಗವಾಗಿ ಬಿಡುಗಡೆ ಮಾಡಿ ತಾಕಿಸು : " ಮಿಡಿ — ಅಂಗುಲಿಪ್ರಹರಣೇ (ಬೆರಳಿನಿಂದ ಚಿಮ್ಮು), ಶಲಾಟುಫಲೇ ಚ ಕಸುಕಾಯಿ "

(ಶಮಂಥಾ) ; ಮಿಡಿದೊಡೆ ತನಿಗ[ರ್ಪು]ರಸಂ ಬಿತುವುವು (ಶಂಶಥಾ. ೧-೫೬) ; ಮಿಡಿಯಲೊಡಂ ಸುರಿವುದು ರಸವೆಡೆಯುಡುಗದೆನಿಪ್ಪ ನುಡಿಗೆ(ಕಡುಗೆಸಿಸಿದ) ಪೋಲ್ . . . ಇಕ್ಷುವಾಟಿಗಳೆಸೆಗುಂ (ಕುಸುಮಾ. ೧-೧೧೧) ; ಗಲ್ಲವನೊಡನೆ ಮಿಡಿಯೆ ಕಳಕಳನೆ ಅಳುತ್ತಿರಲು (ಬಸಪು. ೧೫-೧೩). ೨. ಸಂತೋಷ, ಆಶ್ಚರ್ಯ, ಆಹ್ವಾನ ಮುಂತಾದುವನ್ನು ಸೂಚಿಸಲು ಎರಡು ಬೆರಳುಗಳನ್ನು ಸೇರಿಸಿ ಶಬ್ದ ಮಾಡು ; ಚಿಟಿಕೆ ಹಾಕು : ದಿವ್ಯಜ್ಞಾನದೊಳ್ ಮಹೇಶ್ವರನುದಾರಮಹೇಶ್ವರನಪ್ಪುದನಱಿದು ಬೆರಲಿಂ ಮಿಡಿದು ಮುಗುಳ್ನಗೆ ನಕ್ಕು . . . ಮುನೀಂದ್ರವೃಂದಮಂ ಪೊಗಳ್ದೇಟ್ಟು (ಶಂಶಥಾ. ೬-೧೩ ವ) ; ಅರಸಂ ತಲೆಯಂ ತೂಗಿ ಬೆರಲಿಂ ಮಿಡಿದು ಲಲಿತಾಂಗನಂ ಬರಿಸಿ . . . ಇಂತೆಂದಂ (ರಪುರಾಣವು. ೨-೯೩) : ತಲೆಯಂ ತೂಗಿ ಬೆರಲ್ಗಳಿಂ ಮಿಡಿದು ಸದ್ವಿದ್ಯರ್ ಸಭಾಮಧ್ಯದೊಳ್ ಪಲಬರ್ ಸತ್ಕವಿಗಿತ್ತ ತಕ್ಕಿನ ಪೆಸರ್ ಸಲ್ವಂತೆ ನೀಚಂಗೆ . . . ಸಲ್ವುದೇ (ರಪುರಾಣಾ. ೧-೪೯). ೩. ತಂತಿವಾದ್ಯವನ್ನು ಬೆರಳಿನಿಂದ ಮೀಟಿ ಬಾಜಿಸು, — ನುಡಿಸು : ದನಿಯಿಂಪು ಬೀಣೆಯಂ ಮಿಡಿದವೊಲಾಗೆ ಗಾನದೊಳೊಡಂಬಡೆ ಮೇನಕೆ ಮುಂದೆ ಪಾಡಿದಳ್ (ಶಂಶಥಾ. ೭-೯೯) ; ವಿಪಂಚಿವೀಣೆಯಂ ಕೊಂಡು . . . ಮಿಡಿದು ನೋಡಿ ಮನಂಗೊಂಡು ಮೃದುಮಧುರಧ್ವನಿಗಳೊಳೆಸೆಯೆ ಬಾಜಿಸಿದೊಡೆ (ಬಂಶಾಂ. ೨-೩೦ ವ) ; ನಿನ್ನ ಜೀವದ ತಂತಿ ಮಿಡದೇನ (ಗಂ. ೧೧೧-೬). ೪. ತರ್ಜನಿಯ ಒಡಿತದಿಂದ ಹೆಬ್ಬೆರಳನ್ನು ಬಿಟ್ಟು, ಯಾವುದಾದರೂ ವಸ್ತುವನ್ನು ಮೇಲಕ್ಕೆ ಚಿಮ್ಮಿಸು, — ಎಗರಿಸು : ಕರಿಯನೇಱಿ ಮೇಲಕ್ಕೆ ಮಿಡಿದಡೆ ಕವಡೆ ಬಿಡೆ ಹಬ್ಬಿ ಹಾಱಿದನಿತುವ್ವಕ್ಕೆ ಸುರಿದ ಹೊಸಹೊನ್ನ ರಾಶಿಯನೀಯಬೇಹುದು (ಹಕಶಾ. ೧೧-೨೫) ; ಒಡಿವರ್ಣಡಬವಹ್ನಿಯಂ ಮಿಡಿವರಾದಿತ್ಯೇಂದು ಬಿಂಬಂಗಳಂ . . . ಮೃಡನ ಭಕ್ತರ್ ಬಲ್ಲಿದರ್ (ರಾಜಶೇ. ೬-೧೧೮). ೫. ಕಣ್ಣೀರನ್ನು (ಬೆರಳಿನಿಂದ) ಒರಸು ; ತೊಡೆ : ಗುಡುಗುಡನೆ ಸುರಿವ ಕಣ್ಬನಿಗಳಂ ಮಿಡಿವುತ್ತುಂ ಮತ್ತಮಿಂತೆಂದಳ್ (ಕಾದಂಪೂ. ೯೩೨) ; ಸುರಿದಶ್ರುಗಳಂ ಕಡುವೆರಲಿಂ ತಾನೆನಸುಂ ಮಿಡಿಯುತ್ತುಂ ಭೂಪ ಕುಸುಮಾವರನಿಂತೆಂದಂ (ಕುಸುಮಾ. ೧೧-೫೨) ; ಕಂಬನಿಯನುಗುರಲಿ ಮಿಡಿದು ನೋಡನು ಪಾರ್ಥ ಹೃದಯದಲಿ (ಕುಮ್ಯಾಭಾ. ೭-೨೬) ; ನಯನದಿ ನುರುಳುವಂಬಕವಾರಿಬಿಂದುವ ಬೆರಳ ಕೊನೆಯಲಿ ಮಿಡಿದು ಮಿಡುಕಿದರಧಿಕ ಶೋಕದಲಿ (ತೊರರಾ. ೨-೨-೧೦). ೬. ಬಿಲ್ಲಿನ ಹೆದೆಯನ್ನು ಜಗ್ಗು, — ಮೀಟು, — ಎಳೆ : ಒಡೆಗುಮಜಾಂಡಮೆನ್ನಿನಿಸು ಜೇವೊಡೆದಾಗಳೆ ಬೊಮ್ಮನುಂ ಮನಂಗಿಡುಗುಮದೇವುದೆಂದು ಮಿಡಿದೊಯ್ಯನೆ ಜೇವೊಡೆದಾಗ[ಳಂ]ಬನಂ[ಬೊ]ಡನೊಡನೀ[illegible] ([illegible]. ೨-೬೬) ; ಆ ಬಿಲು ದಿರುವ ಮಿಡಿದ್ಯೆದಿದರಾ ನಾಸಾವಿರಮಹಾರಥರು (ಕುಮ್ಯಾದ್ರೋ. ೧-೬೬) ; ಭೋಂಕೆನೆ ಮಿಡಿವ ರಾಳಿಯ ಬಿಲ್ಲ ಪೆಟಲ್ಗಳ ಸಂಕುಲವಿಂದುರ್ದಲ್ಲಲ್ಲಿ (ಮೋಹತ. ೨೧-೯). ೭. ಕುಟುಕು ; ಊರು : ಆ ತೇಟ್ಗ(ರುಗ)ಳುಬ್ಬರದಿಂದಂ ಮಿಡಿದಂದು ಲೋಳೆ ಮಱುಕಂ ಶೋಕಂ . . . ಸಾವು ತದುಗ್ರಜಾತಿವಿಷದಿಂ ಮರ್ತ್ಯರ್ಕಳೊಳ್ ತೋಱುಗುಂ (ಲೋಕೋಪ. ೧೧-೨೫) ; ಕೆಂದೇಟಿಱ ಮಿಡಿದೊಡೆ ತವುಡಂ ತಂದಿಕ್ಕಿದ ಧೂಪದಿಂದೆ ತದ್ವಿಷಮುಱುಗುಂ (ಶಮುದ. ೧೧-೪೦). ೮. ಪುಟನೆಗೆ ; ಪುಟಿ ; ಹಾರು : ಎಡೆವಿಡೆಯ ನಾಡನೆಡೆಯೆಡೆಯೂರಂ ಮಿಡಿದನಿತು ಬೇಗದಿಂ ಕಟಿದೊಡರಿಸಿದುದು ನೃಪತಿಗಾ ಹಯಂ ವಿಸ್ಮಯಮಂ (ಶಂರಾಮಾ. ೪-೧೨೨) ; ಮುಂಗಾಲ್ಗಳಂ ನೆಗಟಿ ನಿಲ್ವ . . . ಮಿಡಿವ . . . ಬವರಿವರಿವ ಚಮ್ಮಟಿಗೆಗೆ ಚಳಿಯದ ಕಡಿಯಾಣಮಂ ಕೈಕೊಳದ ಬಗೆಯಂ ಬಗೆದಂತೆ ಕಂಡು (ರಾಜಶೇ. ೬-೧೧ ವ). ೯. ಮೇಲಕ್ಕೆತ್ತು ; ನಿಗುರಿಸು : ಪುಚ್ಛವ ಮಿಡಿದು ಕಾಲ್ಗೆರದು . . . ನೋಡುತಲಿರ್ದುದಾ ಮಾಯಾಮರುಪಪತಿ (ಅಸಂರಾ. ೧-೪-೧೯). ೧೦. ಚಲಿಸು : ಸುಳಿ : ಬೀಸು : ನುಡಿವ ಗಿಳಿಗಳ ಸೊಂಪು ನಡೆವಂಚೆಗಳ ಗುಂಪು ಮಿಡಿವ ಮಾರುತನ ತಂಪು (ವೆಂಕಾರಾ. ೨-೧೬-೧೧). ೧೧. ಅಲುಗಾಡಿಸು ; ಚಲಿಸುವಂತೆ ಮಾಡು: ಮೇರು ಗಿರಿಯನು ಮಿಡಿದು ಮೀಂಟುವ . . . ವೀರವೃತ್ತಿಯ ಕಡುಹಿನುಗ್ರಸಮಗ್ರರಿರ್ದರು ಮೃಡನ ಮುಂದೆಸೆಯಲ್ಲಿ (ಕೃಶುಂೀ. ೨-೨೪): ಯಂತ್ರಿ ಮಿಡಿವರೆ ಕಾದಿ ಬೀಳ್ವವು ಯಂತ್ರಮಯ ಹಾವೆಗಳು (ಕುಮ್ಯಾಶೀ. ೭-೩೦); ಬಡಿಗ ಬೊಂಬೆಯ ಮಾಡಿ ಬೆಡಗಿನ ಕೀಲಿಕ್ಕಿ ಮಿಡಿಯೆ ಸೂತ್ರವನು ನರ್ತಿಸುವ ಬೊಂಬೆಯೊಳು ಬಡಿಗ ತಾನಿಪನೆ (ಸರ್ವಜ್ಞ. ೩೩೪). ೧೨. (ಜೋರಾಗಿ) ಅಲುಗಾಡು ; ಒಲೆದಾಡು : ಮಿಸುಪ ಕುಂಡಲ ಓರೆ ಅರಳೆಲೆಯೆಸೆಯೆ ಚಂಡಿಕೆ ಮಿಡಿಯೆ (ಬಸಪು. ೨೪-೪೪). ೧೩. ಸ್ಪಂದಿಸು ; ತುಡಿ : ಸ್ವಲ್ಪ ಹೊತ್ತು ಪ್ರಾಣವಾಯು ಮಿಡಿಯುತ್ತಿದ್ದಿತು (ಶ್ರೀರಾಯ. ೧೨೫); ಶಾಂತಲೆಯ ಹೃದಯ ಮಿಡಿಯಿತು (ಶಾಂತಲಾ. ೧೩೦). ೧೪. ತವಕಿಸು : ಆತುರಪಡು : ಕಡಿವ ದನಿಗಳು ಮಿಡಿವ ದನಿಗಳು ಕೂಡಿ ಬಯ್ವ ದನಿ ಅಡಗಲಿಸಿ ಹೊಯ್ದಾಡಿ ಬಿದ್ದುದು ಪಡೆಯಲೆರಡಱಲಿ (ಕಾಶಿರಾ. ೨೬-೨೩); ಬಂತು ಪಂಚಮಿ ಬೋಲಬಗರಿಗೆ, ಹೆಣ್ಣು ತವರಿಗೆ ಮಿಡಿದವು (ಜಿಂವಾ. ೧೨-೪). ೧೫. ಸ್ಪಂದಿಸುವಂತೆ ಮಾಡು ; ತುಡಿಯುವಂತೆ ಮಾಡು : ಜಡವೆಂಬುದೇನು . . . ಮಿಡಿಯೆ ಪರಸತ್ವವಿದ್ಯುದ್ದೀಪ್ತಿಯದನಾಗ ನಡೆವುದದು ಜೀವಿವೊಲು (ಮಂಕುತ. ೧೧೧); ಇವರಲ್ಲಿಯ ಕೆಲವಾದರೂ ಒಳ್ಳೆಯ ಭಾವನೆಗಳು ಸಹೃದಯರ ಹೃದಯವನ್ನು ಮಿಡಿದರೆ ನನ್ನ ಶ್ರಮವು ಸಾರ್ಥಕವೆಂದು ಭಾವಿಸುತ್ತೇನೆ (ಚಂದ್ರಮಾ. ೫೦೪). ೧೬. ಹೊಮ್ಮಿಸು ; ಉಕ್ಕಿಸು : ವಲ್ಲಭನ ಅಡಿದಾವರೆಗಳ ಕಾಣದೆ ನಯನದಿಂ ಮಿಡಿವಳು ಬಾಷ್ಪಂಬುವನು (ಮೋಹತ. ೨೮-೬); ಮಗನ ಮಾತಿಗೆ ಮೆಚ್ಚಿ ಹಿಗ್ಗುತೆ ದೃಗುಜಲವ ಮಿಡಿದು (ಅಕ್ರೂಚ. ೮-೧೧): ಕಣ್ಣೀರು ಮಿಡಿಯುತ್ತ ಭಯದಿಂದ ನಡುಗುತ್ತ ತುಳಸಾಬಾಯಿ ಹೇಳಿದಳು (ಮುಹಾಗ. ೨೩೯). ೧೭. ಹೊಡೆ ; ಬಡಿ : ಮಿಡಿಬಿಲ್ಲ ಶಾಂತದೇವರೆ ತನ್ನ ಲಿಂಗಮಂ ತೊಡಚಿ ಸಂಧಾನದಿಂ ನೋಳ್ಪವರನೆಲ್ಲರಂ ಮಿಡಿಯೆ ಪೋಗಲ್ಕೆ (ಚಂಪು. ೬೩-೨೬); ಪೊರವಾರ್ಗಳಂ ಮಿಡಿವ ಪೂಮುಡಿಯ ಬಿಡಿಯಲೆನೆ ಸೆರಗು ದಡದಡಿಸುತಿರೆ (ಕಾಂತೂರ. ೧೨೪-೨೬೦).

[ದೇ.॥ ಮಲ. ಮಿಟಿ ; **ತೆಲು.** ಮಿಡಿಯು, ಮಿಟ್ಟು ; **ಕೋಲಾ.** ಮಿಟ್ ; **ಪರ್ಜಿ. ನಾಯ್ಕಿ.** ಮಿಟ್ಟ್]

**ಮಿಡಿ₂** (ನಾ). ೧. ಪೂರ್ಣವಾಗಿ ಬಲಿಯದ ಕಾಯಿ ; ಕಸುಗಾಯಿ ; ಪೀಚು : ಪುಷ್ಪಸಂಕುಳದೊಳ್ ನೀನೆ ವಿಳಾಸಿಯೈ ಮಿಡಿಗಳೊಳ್ ನೀಂ ಚೆಲ್ವನೈ (ಆದಿಪು. ೧೧-೯೬); ಕಯ್ಪುಸೊರೆಯ ಕುಡಿಯೇಂ ಮಿಡಿಯೇಂ (ಗದಾಯು. ೩-೬೦); ಎಳೆಗಱು ಎತ್ತಾಗದೇ ಲೋಕದೊಳ್ ಮಿಡಿ ಪಣ್ಣಾಗದೇ ದೈವದೊಲ್ಮೆಯಿರಲ್ (ಸೋಮೇಶ. ೩೫). ೨. (ಉಪ್ಪಿನಕಾಯಿಗೆ ಬಳಸುವ) ಚಿಕ್ಕಗಾತ್ರದ ಮಾವಿನಕಾಯಿ : ಮಿಡಿ ಹೆಪಗೆಗಳಲ್ಲೇ ಇದ್ದರೆ, ಮುಗ್ಗಲು ಆದೀತು (ಮರಶು. ೬೨); ಕುಟುಂ ಎಂದು ಮಿಡಿಯೊಂದನ್ನು ದವಡೆಯಲ್ಲಿಟ್ಟು ಕಡಿದು ಎರಡು ಲೋಟ ನೀರು ಕುಡಿದು ಕೈ ತೊಳೆಯುವುದಕ್ಕೆ ಕಟ್ಟೆಗೆ ಹೋದ (ದೇವಹಂ. ೧೬೯). ೩. ಚಿಕ್ಕದು ; ಕಿರಿದು : 'ಮಿಡಿದಬ್ಬೆ', 'ಮಿಡಿಹಣ್ಣು' ಪರಾ. ೪. (ಹಾವು ಮುಂತಾದ ಪ್ರಾಣಿಗಳ) ಮರಿ : ನಾಗರ ಮಿಡಿಯಾಗಿ ಆಡೋಣ (ಕಪ್ಪಣಾ. ೧೪೫); ನಾಗರ ಮಿಡಿ ಬಿಸಿಲಲ್ಲಿ ಹೊಳೆಯುತ್ತಿತ್ತು (ರೂಢಿ). 'ಮಿಡಿನಾಗ' ಪರಾ.

[ದೇ.॥ ಮಲ. ಮಿಟಿ : **ತುಳು.** ಮಿಡಿ, ಮುಡಿ; **ಕೊಡ.** ಮುಡಿ; **ತೆಲು.** ಮಿಡಿ = ಬೇಟೆಯ ಸಾಧನ]

**ಮಿಡಿ₃** 'ಮಡ₁' ನೋ.

**ಮಿಡಿಗಾಯ್.** ಮಿಡಿಗಾಯಿ (ನಾ). ಪೂರ್ಣವಾಗಿ ಬಲಿಯದ ಕಾಯಿ : ಕಸುಗಾಯಿ ; ಹೀಚು : ಇಂದ್ರಜಾತಂಗಾಕೆ ತೋರಿದಳ್, ಪೂವಾಗಿ ಪೋಗಿ ಮಿಡಿಗಾಯ್ಗಳಂ ಪಡೆದೊಡಂ ವಾಸಂತವಂತ್ಯದ ರಸಾಲದೋಲ್ (ತತ್ತ್ವಂಗ. ೫೦-೦೩೬೮). **ಮಿಡಿಗಾಯಿ :** " ತಿರುಳುಂದೋರ್ವ ಮಿಡಿಗಾಯಿ ಕೋಮಳಂ ಶಲಾಟುಗಳ್ " (ಶಬ್ದಮಣಿ. ೩೩-೭) ; ಮಿಡಿಗಾಯಿ ಹವಬಲಿದ ಕಾಯ್ ದೋರೆವಣ್ಣಂಬಿವಂ ಬಿಡಿದೊಜಗುವ ಪೊಸಮಾವು . . . ಕಿತ್ತೀಳೆಯಿಂದೆ ಕೇಳೀವನಂ ಕಂಗೆಸೆದುದು (ಹರಿಶ್ಚ. ೩-೩೪); ಹಣ್ಣಾದ ಮಿಡಿಗಾಯಿಯೋಲೆ ನೀ ಸಂನ್ಯಾಸಿಯಾಗಿರುವೆ ; ಮಿಡಿಗಾಯಿ ಬೆಳೆಬೆಳೆದು ಹಣ್ಣಾದ ತೆರನಲ್ಲ (ಕೋಣಿಗಿ. ೬೭-೦೩). [ಮಿಡಿ$_2$ + ಕಾಯ್$_4$]

**ಮಿಡಿಗಾಯಿ** 'ಮಿಡಿಗಾಯ್' ನೋ.

**ಮಿಡಿಚು** 'ಮಿಡತೆ' ನೋ.

**ಮಿಡಿಚೆ** 'ಮಿಡತೆ' ನೋ.

**ಮಿಡಿತ** (ನಾ). ೧. ಹೊಯ್ದಾಟ ; ಬಡಿತ : ನನ್ನ ನೋಡುವ ನೋಟ ನನ್ನದೇ ಕಣ್ಣಾಟ ಎಲ್ಲೆದೆಯ ಮಿಡಿತ ನನ್ನೆದೆಯ ತಾವು (ಅರಳು. ೦೮೦-೬). ೨. ಮಿಡಿದುಕೊಳ್ಳುವಿಕೆ ; ತುಡಿತ ; ಸ್ಪಂದನ : ದುರ್ವಾಸರ ಶಾಪ ಕ್ಕಿಂತಲೂ ದುಷ್ಯಂತನ ಪ್ರೇಮ ಪ್ರಬಲತರವಾಯಿತು ; ಮರವೆ ಮುಸು ಕಿದರೂ ಅದರ ಮಿಡಿತ ತಪ್ಪಲಿಲ್ಲ ! (ಕಾಶ್ಯಸ. ೩೩); ಈ ಹಬ್ಬದ ಆಚರಣೆ ಯಲ್ಲಿ ನಮ್ಮ ಹಳ್ಳಿಗರ ಬಾಳಿನ ಮಿಡಿತವಿದೆ (ಜೋಕುಮ. ೦೭). [ಮಿಡಿ$_1$ + — ತ$_2$]

**ಮಿಡಿತೆ** 'ಮಿಡತೆ' ನೋ.

**ಮಿಡಿದಬ್ಬೆ** (ನಾ). ಚಿಕ್ಕದಾಗಿರುವ ಬಿದಿರಿನ ಸೀಳು : ಹಡಪಿನಾಸೆ ಯೊಳೊರ್ವ ಬಡಸೂಳೆ ತನ್ನಯ ತಡಿಕೆಯಂತೆಸೆವ ಗಲ್ಲವನು ಮಿಡಿದಬ್ಬೆ ಯಿಂದ ಮಿಡಿಸಿ ಬಾತು ಸಮನಾಗಲೊಡನೊತ್ತೆವಿಡಿಯೆ ನಿಂದಿಹಳು (ಅಂಬತ. ೩-೦೩೦). [ಮಿಡಿ$_2$ + ದಬ್ಬೆ$_1$]

**ಮಿಡಿನಾಗ** (ನಾ). ನಾಗರಹಾವಿನ ಮರಿ : ಎಳೆಂಪು ನಾಗ : ಜೇಳಿನ ಗೂಳೆಯುಂ ಖಳರ ಮಂತಣಂ ಮಿಡಿನಾಗಕುಳವಿಡಿದ ಪೇಳಿಗೆಯು ಸಂತೋಷ ವೆನಿಸುವುದು (ಹರಿಶ್ಚ. ೦೩-೨). [ಮಿಡಿ$_2$ + ನಾಗ./ತೆಲು. ಮಿಡಿನಾಗು, ಮಿಣ್ನಾಗು = ಚಿಮ್ಮಿಕೊಂಡು ಹರಿಯುವ ಒಂದು ಬಗೆಯ ಹಾವು]

**ಮಿಡಿನಾಗರ** (ನಾ). = ಮಿಡಿನಾಗ : ಒಂದು ಚಿಕ್ಕ ಮಿಡಿನಾಗರ ವಸ್ತ್ರ ದಿಂದ ಹೊರಬಿದ್ದು ಹರಿದು ಬಾತು (ಸುಭಸಂ. ೩೬) : ಮಿಡಿನಾಗರ ಹೆಡೆ ಬಿಡಿಸೆ ಅವರಡಿ ಕೂಗಿತು ಕಪ್ಪೆ (ಕ್ರೌಂಚಪ್ರ. ೩೩-೬). [ ಮಿಡಿ$_2$ + ನಾಗರ$_1$ ( < ನಾಗರು ) ]

**ಮಿಡಿಬಿಲ್** 'ಮಿಡಿವಿಲ್' ನೋ.

**ಮಿಡಿಬಿಲ್ಲು** 'ಮಿಡಿವಿಲ್' ನೋ.

**ಮಿಡಿಮಾವು** (ನಾ). (ಉಪ್ಪಿನಕಾಯಿಗೆ ಬಳಸುವ) ಚಿಕ್ಕಗಾತ್ರದ ಮಾವಿನ ಕಾಯಿ: ಮಿಡಿಮಾವಿನ ಉಪ್ಪಿನಕಾಯಿ ಬಹಳ ರುಚಿಯಾಗಿರುತ್ತದೆ (ರೂಢಿ). [ ಮಿಡಿ$_2$ + ಮಾವು ]

**ಮಿಡಿಮಿಂಚು** (ನಾ). ಚಿಕ್ಕದಾದ ಮಿಂಚು ; ಎಳೆಮಿಂಚು : ಮಿಡಿ ಮಿಂಚಂ ತೊಟ್ಟು ಭೂಷಾವಳಿಯ ತೆಜದೆ ಭೂಸ್ಥಾನಮಂ ಸಾರ್ದು ಮತ್ತಂ ಬಿಡುಗಣ್ಣರ್ ಮೇಲೆ ಪೋಗುತ್ತಿರಲ್ (ಜಗನ್ನಾಥ. ೨-೪-೨೩). [ ಮಿಡಿ$_2$ + ಮಿಂಚು$_2$ ]

**ಮಿಡಿಮೊಲೆ** (ನಾ). ಮಾವಿನ ಮಿಡಿಯಂತೆ ಕಿರಿದಾಗಿರುವ ಮೊಲೆ ; ಕಿರುಮೊಲೆ : ಮಿಡಿಮೊಲೆಯ ಬಿಡಿನಡೆಯ ಬಿಡುಜಡೆಯ ನೀಜಿ (ರಾಜಶೇಖ. ೬೭-೨೩). [ ಮಿಡಿ$_2$ + ಮೊಲೆ$_1$ ]

**ಮಿಡಿಯಿಸು.** ಮಿಡಿಸು (ಕ್ರಿ). ೧. ಸ್ಪಂದಿಸುವಂತೆ ಮಾಡು ; ತುಡಿಯುವಂತೆ ಮಾಡು : ಅವರ ಜೀವದ ಮಿಡಿತಕ್ಕೆ ತನ್ನ ಜೀವವನ್ನು ಮಿಡಿಯಿಸುವ ಹಿರಿಯ ಜೀವ — ಅದು 'ಮಹಾತ್ಮ' (ರಾಜರಾ. ೨೪). **ಮಿಡಿಸು :** ೧. ಕಣ್ಣ ಬಾಂಬಿಲ್ಗಳಲಿ ನೇಹವನು ಹೂಡುವಿರಿ ಕುದಿವ ಹೃದಯವ ಮಿಡಿಸಿ ಮೌನ ನುಡಿಸಿ (ದ್ರಾಕ್ಷಿತಾ. ೦೭-೬). ೨. ಹೊಡೆ ; ತಟ್ಟು : ಹಡಪಿನಾಸೆಯೊಳೊರ್ವ ಬಡಸೂಳೆ ತನ್ನಯ ತಡಿಕೆಯಂತೆಸೆವ ಗಲ್ಲವನು ಮಿಡಿದಬ್ಬೆಯಿಂದ ಮಿಡಿಸಿ ಬಾತು ಸಮನಾಗಲೊಡನೊತ್ತೆ ವಿಡಿಯೆ ನಿಂದಿಹಳು (ಅಂಬತ. ೩-೦೩೦). [ ಮಿಡಿ$_1$ + — ಇಸು$_3$ ]

**ಮಿಡಿವಟ್ಟು** (ನಾ). ಬಿಲ್ಲಿನಲ್ಲಿಟ್ಟು ಚಿಮ್ಮಿಸುವ ಕಲ್ಲು ; ಕವಣೆಗಲ್ಲು : ಮುಡಿ ಬಿಟ್ಟು ಕಾರ ಸೋಗೆಯ ಬೆಡಂಗನಭಿನಯಿಸೆ ಮುಡಿಯ ಸೂವಡಂ ಗಲರಂಬಿತೆ ಮಧುಪಮಾಳೆ ಮಾವಿನ ಮಿಡಿಯಂ ಮಿಡಿವಟ್ಟನತನುಗಾಯ್ದ ಪೊಲಾಯ್ದುದಳ್ (ಪುಷ್ಪದ.೬-೬೬). [ ಮಿಡಿ$_1$ + ಬಟ್ಟು ]

**ಮಿಡಿವಲೆ** (ನಾ). ಬೇಟೆಯ ಪ್ರಾಣಿಗಳು ಬಲೆಯನ್ನು ಸಮೀಪಿಸಿ ದೊಡನೆ ಪ್ರಾಣಿಯ ಮೇಲೆ ಬಾಣವು ಚಿಮ್ಮುವಂತೆ ಅಳವಡಿಸಿರುವ ಒಂದು ಬಗೆಯ ಬಲೆ: ಸಿಡಿವಲೆಯ ಮಿಡಿವಲೆಯ . . . ಮೇಲು ಕೊಂಬಿನ ಬೇಟೆಗಾಜರು ಬಳಸಿದರು ಶಿವನ (ಕುಮಾರ. ೩-೩೩). [ ಮಿಡಿ$_1$ + ಬಲೆ$_1$ ]

**ಮಿಡಿವಿಲ್,** ಮಿಡಿಬಿಲ್, **ಮಿಡಿಬಿಲ್ಲು,** ಮಿಡಿವಿಲ್ಲು (ನಾ). ಬೊಂಬಿನ ಸೀಳಿನ ಒಂದು ತುದಿಯಲ್ಲಿ ಸಣ್ಣಹರಳನ್ನಿಟ್ಟು, ಆ ತುದಿಯನ್ನು ಹಿಂದಕ್ಕೆ ಬಗ್ಗಿಸುವುದರ ಮೂಲಕ ಹರಳನ್ನು ಚಿಮ್ಮಿಸುವ ಒಂದು ಬಗೆಯ ಸಣ್ಣ ಬಿಲ್ಲು : ಶಾಳಿವನದೊಳ್ ಕೀರಾಳಿಯಂ ಸೋವಲೊಳ್ಪಡಿ ಯಿಂದಂ ಮಿಡಿವಿಲ್ಲೊಳೆಚ್ಚೊಡೆ (ಅನಂತ. ೦-೮೦) ; ಪಾಱುವ ತಱಗೆಲೆಯ ತುಱುಗಲಂ ಕಿಱುವಕ್ಕಿವಿಂದೆಂದು ಕೊಱಂಡುಗಳಂ ಮಾಱ್ಕೆವಿಡಿದು ಮಿಡಿವಿಲ್ಲೊಳಿಸಲೆಸಗಿ ಮಱುಗುವ ತುಱುಗಾವ ಕಿಱುಕುಳದ ಕಳೆಯರುಮಂ ನೋಡುತ್ತುಂ (ಕಬ್ಬಿಗ. ೨೩೪) ; ಬಿಡುವಲೆ ಸೊರ್ಕುಮರ್ದು ಪದವಿಲ್ಲಿ [ಪಾಠಾಂ. ಲ್ಪ]ಡಿವಿಲ್ . . . ಗಿಡಗಮೆನಿಪ್ಪವಂ ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದುವರ್ (ರಾಜಶೇ. ೩-೩೨). **ಮಿಡಿಬಿಲ್ :** ನೆಲ್ಲ ಮಡಿಗೆ ಬರ್ಪ ಗಿಳಿ ಗಿಡಿಗನ ತಳುಗಿಲ್ಲದೆ ಮಿಡಿಬಿಲ್ಗಳಿಂದ [ಪಾಠಾಂ. ಪಿಂಡಿವಿಲ್ಲಿಂದ] . . . ಸೋವುತಲಲ್ಲಿ ಗೊಲ್ಲವೆಣ್ಗಳ ತಂಡವಿಹುದು (ರಾಮಾಯ. ೨-೩೬) ; ಕೈಗಲ್ಲು ರುಳ್ ಮಿಡಿ[ಪಾಠಾಂ. ಣಿ]ಬಿಲ್ ಪೆರ್ಬಲೆ . . . ಪಿಡ್ದಂ ಗಾಳಮಿಂಬಾಗೆ ಕೊಂಡೊಡನಾ ಲುಬ್ಧಕಸಂಚಯಂ ನಡೆದುದು (ಮೂಡಶಂ. ೪-೩೦). **ಮಿಡಿಬಿಲ್ಲು :** ಕಂಚಿನ ಕವಣೆ ಮಿಡಿಬಿಲ್ಲು ತಕ್ಕೊಂಡು ಲಂಕೆ ಹಾರಿಸಾನೆ ಗಿಳಿಹಿಂಡ (ಜಾನಪ. ೯೦). **ಮಿಡಿವಿಲ್ಲು :** ಮಿಡಿವಿಲ್ಲಿನೊಳಗೆ ಲಿಂಗವನೆಚ್ಚ ಆ ಲಿಂಗದೊಡನೆ ನಿರವಯಲಾದರು (ಶಿವಶ. ೩೨-೨೩) ; ಮಿಡಿವಿಲ್ಲಿನೊಳು ಗಿಳಿಯೆಸುವೊಂದು . . . ಬೆಡಗಿನಿಂ ಪಥಿಕರ ನಡೆಗೆಡಿಸುವರಲ್ಲಿ ಕಡುಚೆಲ್ವ ಕಳಮಗೋಪಿಯರು (ನಾಗಕು. ೨-೨೪). [ ಮಿಡಿ$_1$ + ಬಿಲ್$_2$ ./ ತೆಲು. ಮಿಡಿವಿಲ್ಲು ]

**ಮಿಡಿವಿಲ್ಲು** 'ಮಿಡಿವಿಲ್' ನೋ.

**ಮಿಡಿವೆಣ್** (ನಾ). ಚಿಕ್ಕಪ್ರಾಯದ ಹೆಣ್ಣು ; ಎಳೆಯ ಹುಡುಗಿ. ಮಿಡಿವೆಂಗಳು(ಬಹುವ): ಬೆಳೆವೆಣ್ಣು ಬೆಸವೆಣ್ಣು . . . ಮಿಡಿವೆಂಗಳು ಭೂಪಾಲನೇಕಶನ ನೋಡಿದರು (ಗೊಮ್ಮಟ. ೦-೭೬). [ ಮಿಡಿ$_2$ + ಪೆಣ್ ]

**ಮಿಡಿಸು** 'ಮಿಡಿಯಿಸು' ನೋ.

**ಮಿಡಿಹಕ್ಕಿ** (ನಾ). ಚಿಕ್ಕದಾಗಿರುವ ಪಕ್ಷಿ : ಪುಟ್ಟಹಕ್ಕಿ : ಮುಡಿಯುದಿರೆ ಮಿಡಿಹಕ್ಕಿಗಾದರೂ ಒಂದು ಕಾಳಿಲ್ಲ ! (ಕೋಣಿಗಿ. ೨-೪೩). [ ಮಿಡಿ$_2$ + ಹಕ್ಕಿ ( < ಪಕ್ಕಿ ) ]

**ಮಿಡಿಹಣ್ಣು** (ನಾ). ಚಿಕ್ಕದಾದ ಹಣ್ಣು ; ಸಣ್ಣಗಾತ್ರದ ಹಣ್ಣು : ಪಿಡಿಹಣ್ಣು ಕುಂಬಳಕೆ ಮಿಡಿಹಣ್ಣು ಆಲಕ್ಕೆ (ಸರ್ವಜ್ಞ. ೦೯೨). [ ಮಿಡಿ$_2$ + ಹಣ್ಣು$_3$ ( < ಪಣ್$_3$ ) ]

**ಮಿಡುಂಕು** 'ಮಿಡುಕು₁' ನೋ.

**ಮಿಡುಕ** (ನಾ). ೧. ಮಿಡಿತ ; ಸ್ಪಂದನ : ಮಿಡುಕಕೆ ಮೆಚ್ಚು ತಪ್ಪದನು ವಪ್ಪುದು ಮೇಲಿದು ಭಾವು (ಕಕಾ. ೬-೨೩೭) ; ಮೈಯು ನೀನು, ನೀ ಮಿಡುಕ, ನನ್ನ ಒಳುಬಗೆಯ ತಿಳಿಲು ನೀನು (ಹೃದಕ. ೬೩-೦). ೨. ಅಳಲು ; ದುಃಖ ; ವೇದನೆ : ತಮ್ಮದಿರ ಎದೆ ತಬ್ಬಿ ನೋಡಲೆ, ಮಿಡುಕ ನಡುಕಕ್ಕೆಳೆದಿದೆ (ಜಾತುಜಾ. ೪೪-೪). [ ಮಿಡುಕು₁ + —ಅ₇ ]

**ಮಿಡುಕಾಟ** (ನಾ). ೧. ಅಲುಗಾಟ ; ಚಲನೆ : ಕೈಕಾಲುಗಳ ಮಿಡುಕಾಟ ನಿಂತಿತು, ಮುಟ್ಟಿದರೆ ಮೈ ತಣ್ಣಗಾಗತೊಡಗಿತ್ತು (ಕಾಂಚಿಕ. ೦೭ ಕಥಾಸಾರ). ೨. ತಳಮಳ : ಕಸಿವಿಸಿ : ನನ್ನ ಕಂಡುದನ್ನು ಉಳಿದವರಿಗೂ ಹೇಳಿ ಸಕಾಲದಲ್ಲಿ ಎಚ್ಚರಿಸದೆ ಹೋದೆನಲ್ಲ. ಎಂಬ ಮಿಡುಕಾಟಕ್ಕೆ ಕಾರಣ ವಾಗಬಾರದು (ದುಕ್ಕಕೃ. ೦೩). [ ಮಿಡುಕು₁ + ಆಟ ]

**ಮಿಡುಕಾಡು** (ಕ್ರಿ). ೧. ನಡುಗು ; ಕಂಪಿಸು : ಅಲೆಮುಚ್ಚಿದಕ್ಷಿ ಮಿಡುಕಾಡುವ ತಾಳುಗೆ . . . ಒಪ್ಪೆ ನವಾಂಬುದಬಿಂದುವೃಂದಮಂ ಗಳಗಳನೀಂಟುತಿರ್ಪುದು ಮನಂ ತಣಿವಂತಿರೆ ಚಾತಕೋತ್ಕರಂ (ಕುಸುಮಾ. ೬-೩೦). ೨. ತಳಮಳಿಸು ; ಕಸಿವಿಸಿಗೊಳ್ಳು : ಜಗತ್ತಿನಲ್ಲಿ ಆದರ್ಶ ಸಜ್ಜನರು ಯಾರಿದ್ದಾರೆ ! ಎಂದ ಮೇಲೆ ನಾನೇಕೆ ಇಷ್ಟು ಮಿಡುಕಾಡಬೇಕು (ಮುಂಗಾಪು. ೦೨). [ ಮಿಡುಕು₁ + ಆಡು₁ ]

**ಮಿಡುಕಿಸು**, ಮಿಟಕಿಸು, ಮಿಟಿಕಿಸು, ಮಿಟುಕಿಸು (ಕ್ರಿ). ೧. (ಕಣ್ಣುರೆಪ್ಪೆಯನ್ನು ಹೊಡೆದು) ಅಲುಗಾಡಿಸು ; ಅಲ್ಲಾಡಿಸು : ಬಟ್ಟ ಮಂಡೆವೆರಸಿ ಬಾಯ ಮಿಡುಕಿಸುತ ಕಣ್ಣ ಮುಚ್ಚಿ ಬೆರಳನೆಣಿಸು[ವಿ] ರಯ್ಯಾ (ಬಸವ. ೩೬೯). ೨. ತಳಮಳಗೊಳ್ಳುವಂತೆ ಮಾಡು : ಕಸಿವಿಸಿಗೊಳಿಸು : ಎಡೆಯಾಗದ ಮೃಗಮನವುಂಕಿಸಲುಮೊಲ್ಬ[ಮೊಲ್ಲ]ದ ನಲ್ಲರಂತೆ ಮಿಡುಕಿಸಲುಂ . . . ನಿಮ್ಮಡಿಯ ಕೆಲದೊಳಾನೆ ಬಲ್ಲೆಂ (ಶಂಕಭಾ. ೩-೯೩ ವ). **ಮಿಟಕಿಸು :** ೧. ಕಣ್ಣನ್ನು ಮಿಟಕಿಸದೆ ಮುಂದ್ದಾದ ಆ ಮಗುವನ್ನೇ ಎಲ್ಲರೂ ನೋಡುತ್ತಿದ್ದರು (ರೂಪ). **ಮಿಟಿಕಿಸು :** ೧. ಏರೋಪ್ಲನು . . . ಕಣ್ಣನ್ನು ಮಿಟಿಕಿಸುತ್ತಾ ಪುಸ್ಸಿಸುವವನಂತೆ ಒಲೆನಿನ್‌ನ ಕಡೆ ನೋಡಿದನು (ಪುಲಿಜಾ. ೬೭). **ಮಿಟುಕಿಸು :** ೧. ಅಕ್ಷಿಯ ಮಿಟುಕಿಸಿ ವಿಶ್ವದೊಳು ಅಕ್ಷರಕುಲವನು ಪಡೆದವಳು ! (ಸಪಲ್ಲ. ೬೪-೦೩) ; ಅವನು ನನ್ನನ್ನು ನೋಡಿ ಕಣ್ಣು ಮಿಟುಕಿಸಿ "ಏನಪ್ಪಾ, ದೇವರಾಜ" ಎಂದ (ತಂಗಾಳಿ. ೩೦). [ ಮಿಡುಕು₁ + — ಇಸು₃. / ತೆಲು. ಮಿಡಿಕಿಂಚು ]

**ಮಿಡುಕು₁**, ಮಿಟಕು, ಮಿಟುಕು, ಮಿಡುಂಕು, ಮಿಡುಗು₁ (ಕ್ರಿ). ೧. ಅಲುಗು ; ಅಲ್ಲಾಡು : ಪಶ್ಚಿಮಪದ್ಮಾಸನದಲ್ಲಿ ಕುಳಿತು ನೆಟ್ಟಿಲುವ ಮುಜಾದು ತುಟ ಮಿಡುಕದೆ ಲಿಪ್ಸಿಯಾಡಿಸಲ್ಲ (ಬಸವ. ೬೧೯) ; ಮಿಡುಕು ವುದು ಬಾಯ್ ಚಿತ್ರವವಳಲಿ ತೊಡಕಿಪುದು (ಕುಮಾ್ಯ.ಠ. ೦೯-೩೭) ; ಆಳುತ್ತೇಳುತ ಬೆರಳು ಚಾಳಿ ಮಿಡುಕುವ ಬಾಯಿ ಮೇಳಿದೊಳು ತೊಡಕ ಬಿಡವವನ ಜಪವಮವೆ ಪಾಳುಮನೆಯಂತೆ (ಸರ್ವಜ್ಞ. ೦೭೩). ೨. (ಕಣ್ಣು ರೆಪ್ಪೆಯನ್ನು ಹೊಡೆದು) ಅಲುಗಾಡಿಸು ; ಅಲ್ಲಾಡಿಸು : ಕಣ್ಣ ಮಿಡುಕ್ಕೆ ಪಿಂಗಾಕ್ಷ ನೀನೇಕೆ ಮಿಳ್ಮಿಳ ನೋಡುತ್ತುಳನಿರ್ದ (ಶಂಕಭಾ. ೦೨-೦೩೦) ; ಉಪ್ಪರದಲ್ಲಿ ಕೈಯನು ಕೊಡದಿರಾ ಮಿಡುಕದಿರು ಮಂಡಿಯನು (ಕುಮಾ್ಯ.ಠೀ. ೪-೨೯) ; ಮೊಗಮುಂ ತೂಗುತ್ತೆ ವಾಲಾಗ್ರಮುಂ ಮಿಡುಕು ತ್ತುಬ್ಬರಿಸುತ್ತೆ . . . ಬಂದೆತ್ತದೋದೆಕ್ಕಲಂ (ರಾಜಶೇ. ೩-೯೯). ೩. ಕದಲು; ಮಿಸುಕು : ಬಾಹುಬಲಿಕುಮಾರನ ಭರತೇಶ್ವರನ ಪಕ್ಷದ ರಾಜಲೋಕ ಮನೆರಡುಂ ದೆಸೆಯೊಳಂ ಮಧ್ಯಸ್ಥರಾಗಿ ಮಿಡುಕದೆ ನೋಡುತ್ತಿರ್ಪಂತು ನಿಯಮಿಸಿದಾಗಳ್ (ಆದಿಪು. ೧೪-೧೦೯ ವ); ಒಡನೇಜು ಸವತಿ ನೂರಿಲ್ಕೊ ಚರಿಸ ತೊಜುರೆಯೊಳಗೆ ಪಬುಗಲತ್ತಿತ್ತಲಣಂ ಮಿಡುಕದೆ ತಿರಿಯುತ್ತಿರೆ ಕಣ್ಣಾಡಿಗೆಜಗಿವಳತ್ತಿಯುಬ್ಬೆಸತಿ (ಕೌಇಇ. XI-i. ೩೨-೨೩ ; 1007) ; ಗುಡ್ಡ ರೆತ್ತುಗಳ ಕೊರಳಂ ಪೂಡಿ ಭರದೊಳಿದಿರಾಗಿ ಕೋಡೊಯ್ಯಲೆಂದುಲಿದು ಚಪ್ಪರಿಸಿ ಹೊತ್ತೆತ್ತಿ ನೂಂಕಿದೊಡೆ ಮಿಡು[ಕಾಣಂ. ನೂಂ]ಕದೆ ರಥಳ ಗಿರಿಯಂತೆ ನೆಲಕಿರ್ದುದು (ಸಿದ್ಧರಾ. ೬-೨೭). ೪. ಕಂಪಿಸು ; ನಡುಗು ; ಅದುರು : ಮೃಡನುದಾಸೀನದಿಂ ಹಸ್ತಮಂ ನೋಡುತಿರೆ ಮಿಡುಕು ತಿರ್ದುದು ವಿಷಂ ಪರನ ಕರತಳದೊಳಗೆ (ಸಂಶರ. ೦-೨೩); ತೋಳ್ ತೊಡೆ ಮಿಡುಕೆ ಸುಯ್ ಸೂಸೆ ನಿದ್ರೆ ಕವಿದು ವಿತತಸುಖದಿಂದಿರುತಿರಲ್ಕೆ (ಹಕಚಾ. ೬-೩೨) ; ಮಿಡುಕುವ ಗಂಟಲಿರ್ದೆಸೆಗೆ ಜೋಲ್ದು ಮರಳ್ದೆಡೆಯಂಕೆ . . . ಬಿಸುಸುಯ್ದು ಸುಯ್ಲಿನಿಂ ಕಡುಬಡವಾದ ತಮ್ಮ ತನು ರಂಜಿಸೆ ಕೋಕಕುಳಂ . . . ನಿಂದುದದೊಂದು ತಾಣದೊಳ್ (ಜಕಸು. ೬-೯೯). ೫. ನಡುಗು ವಂತೆ ಮಾಡು ; ನಡುಗಿಸು ; ಕಂಪನಗೊಳಿಸು : ಒಡಲಂ ಮಿಡುಂಕು ವಿನಂ ಕಡಿವ ಕಟ್ಟಿರುಂಪೆಗಳುಂ (ಆದಿಪು. ೩-೦೭). ೬. ತುಡಿ ; ಮಿಡಿ : ಹೊಡೆದುಕೊಳ್ಳು : ನಡೆವಂತೆ ನುಡಿವ ಪುತ್ರಿಕೆ ಮಿಡುಕುವ ರಸಚಿತ್ರದೆಸೆವ ಪೆಣ್ಣಿಂಟೊಳ್ಪಂ ಪಡೆದಳ್ ಕಣ್ಗಂ ಮನಕಂ ಪಡೆದಳ್ ಪೊಸವೇಟದೆಸಕಮಂ ನೃಪಸುತನೊಳ್ (ಕಂದ್ರಪು. ೩-೦೦೭) ; ಜರೆಯೆಂಬ ರಕ್ಕಸಿ . . . ಕಂಡಳು ಮಿಡುಕುವೀ ಸೀಳೆರಡವನು ಹೊಜಿಹೊಳಲ ಬಾಹೆಯಲಿ (ಕುಮಾ್ಯ.ಸ. ೨-೯೯) ; ಮಿಳಿರ್ಪ ಕವಿಗಳ ಮಿಡುಕುವಳ್ಳೆಯು . . . ಹೊಸಜವ್ವನದ ಹೊಮ್ಮರೆ ಹೊಳಕಿತಿದಿರಿನಲಿ (ತೂರಣಾ. ೩-೬-೦೩) ; ಮಿಡುಕುವ ಮನಕ್ಕಿಂತ ನುಡಿಯುವ ತುಟಿಗೀತ ನೀಡುವ ಕೈವೇಲು ಸತತ (ಇಂತಾಕ. ೦೩೩-೬೦). ೭. ಬೆಚ್ಚು ; ಮೆಟ್ಟಿಬೀಳು : ಕಮಲೆಗೆ ಆ ವಿಷಯ ತಟ್ಟನೆ ನೆನಪಾಯಿತು. ಮಿಡುಕಿ ಬಿದ್ದು. ನೆಟ್ಟಗೆ ಕೂತಳು (೬೦ದಿನ. ೦೩೩). ೮. ಸುಳಿ ; ಚಲಿಸು ; ಸಂಚರಿಸು : ಮುಂ ಮಹಿಯೆಲ್ಲಮುಂ ಶಿಶಿರರಾಜನೆ ಬಿಚ್ಚತವಾಳ್ದನೀ ಗಳಾತಂ ಮಿಡುಕಲ್ಕೆ [ಸಲ್ಲಿರದೆ] ಪೋಪುದು (ಶಂಕಭಾ. ೩-೩೦); ಮೊಳೆಯೊಳ್ಮಿ ಡುಕುತ್ತಿದೆ ಮಿಂಚು ಕಚ್ಚಲೊತ್ತಿದುದು ಪಯೋಧರಾವಳಿ ತಳರ್ಪಡೆ ಯಿಟ್ಟುದು ಪಶ್ಚಿಮಾನಿಳಂ (ಅನಂಪು. ೯-೩); ದುಶ್ಚರಿತವಿವನಲಿ ಮಿಡುಕ ಲಮ್ಮವು (ತೂರಣಾ. ೬-೨೦-೬೦). ೯. ಚಂಚಲವಾಗು ; ಅಸ್ಥಿರಗೊಳ್ಳು: ಕೃತಕವೋ ದಿಟವೋ ದುರಂತರ ಶ್ರುತಿಗಳಜೀಯುವು ನಮ್ಮ ಮಿಡುಕುವ ಮತಿಯ ಪಾಡೇ (ಕುಮಾ್ಯ.ಕ. ೭-೩೯) ; ದಾನವನಧಿಕರೋಷದಲಿ ಮಿಡುಕಿ ಪರಿವಾರಕ್ಕೆ ನೇಮಿಸುವ ಕುಡುತಹಮ್ಮಿಂದೊಗ್ಗಿ ತನ್ನಯ ಮಡದಿಯರ ನೆಮ್ಮಿರ್ದನಸಿಹಿತಥ್ವನಿಯುಣೀಲಿಸುತೆ (ಅಕ್ರೂಕ. ೭-೬೭). ೧೦. (ಧಾಳಿ ಮಾಡಲು) ಮುನ್ನುಗ್ಗು; ಧಾವಿಸು: ಕದನಕ್ಕಾರ್ವಿನಿಡುಕುವರೇದಾಹವ ಕರ್ಮಠನಭಿಮನ್ಯುವಿರ್ದನಾ ಧುರಧರೆಯೊಳ್ (ಪೀಪುಪು. ೦೨-೪೮) ; ಬಲವರ್ಗದಿಂ ಮಿಡುಕಲಣ್ಮದೆ ನೋಡಿದ ಸಾಹಿಗಂ ನುಡಿಯದಿರ್ದುಮೆ ಬೀರಮನಾರೊಳಂ (ಕಾಮ್ಯಾವ. ೩೦೦) ; ಮಿಡುಕಿಪಡೆ ಮರುಳಟಿರಿ ಲೇಸಲ್ಲೆಮ್ಮೊಳತಿಮಥನ (ಕುಮಾ್ಯದ್ರೋ. ೪-೬೦). ೧೧. ಆತುರಪಡು ; ತವಕಿಸು : ನೆರೆಪೊರೆಯ ಸಿರಿವಂತರ ಮನೆಗೆ ಪರಿಯಿಡಲ್ಕಡಹಡಿಸಿ ಮಿಡುಕುತಿರ್ಪ ಮಿಂಡರ ತಂಡಂಗಳುಮಂ . . . ಈಕ್ಷಿಸುತ್ತುಂ (ಪರ್ವಪು. ೯-೩೩ ವ). ೧೨. ಹಾರು ; ನೆಗೆ : ಹೊಂಗಿ ಮಿಡುಕುವ ಮಿನ ಗುದಿಗಳಂ . . . ಪೂತಿಬೆಕ್ಕಂ ಪರಿಶ್ಚಂದ್ರರಾಯುಂಗೆ ಕಾಣಿಕೆಯನಿತ್ತು (ಹಕಚಾ. ೩-೩) ; ಆರ ಕೈಕೊಂಬುದೀ ಬಿಸಿಲು ವೈಕುಂಠದಿ ನಾರಾಯಣ ನಿಲಲಂಜಿ ನೀರೊಳು ಮಿಡುಕಿ ಮಿನಾದ (ಪೋಷಕ. ೦೯-೯೮). ೧೩. ಸರಿ ; ತೆರಳು ; ನಡೆ: ಹಿಂದಕೆ ಮಿಡುಕುವವನ್ನೇ ಕರ್ಣನೀತನ ಕಡುಹ ನೋಡು (ಕುಮಾ್ಯದ್ರೋ. ೦೩-೩೨). ೧೪. ಎಚ್ಚೆತ್ತುಕೊಳ್ಳು ; ಚೇತರಿಸಿಕೊಳ್ಳು : "ಮಿಡುಕು, ಮಿಡುಂಕು — ಚೈತನ್ಯೇ (ಚೇತರಿಸು)" (ಶಮದ) ; ಕೆಡೆದಿರ್ದರೆಲ್ಲರಂ ನೋಡಿ ರಣರಂಗದೊಳಿಡುಕಿ ಮಾತಾಡುವಿವರಂ ಕಂಡು ಲೀಲೆಯಿಂ ಓಡಿದು ಲಪನೆಳತಂದು ಕೌತುಕವ ಕಪಿಗಳಿಂದಣ್ಣಂಗೆ ತೋಜಿಸಲ್ಕೆ (ಕೈಮಿಜಾ. ೩೦-೯೦). ೧೫. ಕೊರಗು ; ಪರಿತಪಿಸು : ಈ ಪರಿಯ ಬಿಡಿಬೀಸಿ

ಬಿಟ್ಟನೆಂತು ಸೈರಿಪೆನೆಂದು ಮಿಡುಕಿದಳಾತ್ಮವಲ್ಲಭಗೆ (ಪೋಪಚ. ೯-೧೦) : ನಾನು ಇನ್ನೂ ತಾಯಿಯಾಗಲಿಲ್ಲವಲ್ಲಾ ಎಂದು ಒಳದನಿ ಮಿಡುಕುತ್ತಿತ್ತು (ಕೇಪೋಚ. ೯೨). ೧೬. ಚಡಪಡಿಸು : ಒದ್ದಾಡು : ಮಿಡುಕುವಿನಂ ಪ್ರಾಣಗಳಂ ಮಡಿಪಿದೊಡಂ ದೋಷವಿಲ್ಲ ದೇವಾರ್ಚನೆಯುಳ್ಳೆಡೆ ಸಾಲ್ಗುಂ (ಸಮಚ. ೦೯-೩೮) : ಅಧ್ವಗರ್ ಮಿಡುಕಿ ಕಿಚ್ಚಿನ ಕೀಡೆವೊಲಾದರ್ (ಧಶಕು. ೯-೨೨) ; ಏನ ಮಾಡುವೆನೆನುತ ಮನದೊಳಗೆ ಮಿಡುಕುವನು (ತೊರರಾ. ೫-೨-೬೮). ೧೭. ಪಶ್ಚಾತ್ತಾಪಪಡು : ಕೆಲವು ತಿಂಗಳುಗಳಾದ ಮೇಲೆ ನಾವು ಮಾಡಿದ ತಪ್ಪಿಗೆ ಮಿಡುಕಬೇಕಾಯಿತು (ಸುವಸಂ. ೦). ಮಿಟಕು : ೧. "ಮಿಟಕು – ಮಿಣಕು (ಮಿಣಿಮಿಣೆ ಮಿಟಕತೇತಿ)" (ಜಾವಕೋ. ೩೦). ಮಿಟುಕು₁ : ೨. ಚುಕ್ಕಿ ಕಣ್ಣು ಮಿಟುಕುತಿತ್ತು (ಇಂಗೀತ. ೮-೧). 'ಕಣ್ಮಿಟುಕು₁' ಪರಾ. ೧೪. ತರಣಿಕುಲ ಬಳಿದಾಯ್ತು ಮಿಟುಕಲು ನೆರೆಯದೆನುತವೆ ಬಾಯ ಹೊಯಿಹೊಯಿದೊಳಲಿ ಹುಡಿಯಲಿ ಹೊರಳಿ ಸಾಯಲು ಬಗೆದನಾ ಭರತ (ತೊರಾ. ೯-೨೦). ಮಿಡುಂಕು : ೧. ಮುರಿದ ಮೂಸೆ ಮಿಡುಂಕುವ ಬಾಯ್ ಕಡಂಗಿ ಕಣ್ಗೆಟ್ಟಳವಾಗಿ ಕೆಂಪುಗುವ ಕಣ್ಗಡಿಯಂ ಕಟಿಯಲ್ಕೆ (ಪುಣ್ಯಾಸ್ರ. ೬-೦೫). ೨. ಎತ್ತಲುಂ ಮಿಡುಂಕಲ್ಪಡೆಯದೆ ಸಿಡಿಮಿಡಿಗೊಂಡು ಸಿಡಿದು ಸಿಡಿಲೇಟಿಗ್ಗೆಯೆರ್ದ ಪಲ್ಗಡಿದು ಮಹಾಮಸಕಂ ಮಸಗಿ ಮುನ್ನಾರ್ಗವೊಳಸೋರದಗ್ಗಲಿಸಿದ ಮದದಿಂ ಮೇಗುಂ ಮೆಯ್ಯುರಿಯದೆ ತಮ್ಮೊಳ್ ಪರಿಚ್ಛೇದಿಸಿ (ಪುಶ್ಪಪು. ೩-೧೨೭ ವ). ೬. ಬಟ್ಟಧರದ ಮಿಡುಂಕುವ ಕಂಬುಕಂಧರದ . . . ಉಡಿವ ನಡುವಿನ ಶಶಿಮುಖಿಯರೊಗ್ಗಿನಲಿ ಬಳಿವಿಡಿದೈದಿತಚ್ಯುತನ (ಅಕ್ರೂ ಚ. ೯-೦೮). ೧೪. "ಮಿಡುಕು, ಮಿಡುಂಕು – ಚೈತನ್ಯೇ (ಚೇತರಿಸು)" (ಶಮಧಾ). ಮಿಡುಗು₁ : ೧೫. "ಮಿಡುಗು – ಸುಖಿನ್ನೇ (ದುಃಖದಿಂದ ಚಿಂತಿಸು)" (ಶಮಧಾ).

ಮಿಡುಮಿಡುಕು (ದ್ವಿರುಕ್ತಿ) : ಮಿಡುಮಿಡುಕೆ ಬಡಿತಂಗಾಸುವರುಂ ನೋಡೆನೋಡೆ ಕಣ್ಗಳಂ ಮಿಾಂಟುವರುಂ (ಅದಿಪು. ೫-೬೫ ವ) ; ಉಡುಗಡಣದೊಡೆಯನೊಡಲೊಡಕು ನಡನಡುಗಿ ಬಡಕರಿಸಿ ಮಿಡುಮಿಡುಕಲಡಿಗಡಿಗೆ (ಪಶಕಾ. ೦-೨) ; ಕೊಟಕೆ ಕಾತರಿಸಿ ಮಿಡುಮಿಡುಕಲೊಸರ್ವ ನಾಣೆಡೆ (ಶಿಬಿಪು. ೦೯-೩೨). ಮಿಡುಮಿಡುಮಿಡುಕು, ಮಿಡುಮಿಡುಮಿಡುಂಕು = ಬಹಳವಾಗಿ ಚಡಪಡಿಸು, .. ಒದ್ದಾಡು : ತನ್ನ ಬಾಲಂಬೆರಸುರಿಯೊಳ್ ಬಿಬ್ಬ ಮಿಡುಮಿಡುಮಿಡುಕುತಿರ್ದ ಜನನಿಯುಂ ಕಂಡು ಪಾವುಗಳುಳ್ಳ ಪಗೆಯುಂ ಮಟಿಯಮೆಂಬುದುಂ ನನ್ನಿಮಾಡಿ (ಶಂಕಪು. ೫-೯೯ ವ) ; ಬಿಸಿಲೊಳ್ ತಾನೆ ಹುಡುಹುಡನೆ ಮುಗ್ಗಿ ಮಿಡುಮಿಡುಮಿಡುಕಿ (ರಮಾಕಾವ್ಯ. ೦೦-೦೩೨) : ದೂವೆಯೊಳ್ ಬಿಟ್ಟ ಪಾವಿನಂದದಿಂ ಮಿಡುಮಿಡುಮಿಡುಂಕಿ (ವರ್ಧಪು. ೯-೬೦ ವ). [< ಮಿಡಿ₁. / ಮಲ. ಮುಟುಕು ; ತೆಲು. ಮಿಡುಕು]

**ಮಿಡುಕು₂, ಮಿಟುಕು₂, ಮಿಡುಗು₂** (ನಾ). ೧. (ಕಣ್ಣುರೆಪ್ಪೆಯ) ಅಲುಗಾಟ; ಚಲನೆ : ಎವೆ ಮಿಡುಕಂ ಸಂಗಳಿಸಿವಮರಿ ಗಗನಸ್ಥಳಿಯೊಳ್ ನಡೆ ಮಾಣ್ದು ಖಚರಿಯೆಂಬೀ ನುಡಿಗೆಡೆಗೊಟ್ಟಳ್ ಲತಾಂಗಿ ನವತರುಣಿಮದೊಳ್ (ಶಂಪ್ರಪು. ೫-೦೦೦); ಲಲನೆ ಮೂಗಿನೊಳುಸುರನು . . . ಕೈಯ ಮೊದಲೊಳು ಮಿಡುಕನು ... ಕಾಣದೆ ನೊಂದಳು (ಹತಕಾ. ೦೨-೨೬). ೨. ನಡುಕ ; ಕಂಪನ : ಬಿಸಿಲ್ಕೆಕಿಲ್ . . . ಪಾಯ್ದು ಪುಲಿಯೆಂಬೀ ಬಾಧೆಯೊಳ್ ಮೆಯ್ಯನೊಡ್ಡಿಸೆ ಮೆಯ್ಯೊಳ್ ಮಿಡುಕುಳ್ಳ ತಾಣಮಣಮಿಲ್ಲೆಂಬಂತು ನಿಷ್ಪಂದನಾಗಿ ಸಮುನ್ನೀತಗುಣಂ ಗುಣಂಗೊಳಿಸಿದಂ ಯೋಗೀಂದ್ರವೃಂದಾರಕಂ (ಅದಿಪು. ೬-೩೯) ; ದೊವಮಿಗವಳಿಂತೆಂದಳಾ ಗರಗರಿಕೆ ಕೊರಲೊಳೀಕ್ಷಣದೊಳ್ವಾರ್ದಿಂದು ಮಿಡುಕಿರ್ದಯೊಳೊದವೆ ಪೊಳಂದನ ಕಣೆಗಟ್ಟಿ ನಿಂದ ವನಹರಿಣಿಯುವೊಲ್ (ಜುಕೋತ. ೨-೪೦) : ಕೊರಳ ಮಿಡುಕಿನ ಮಸೆಯ ಮುಖದಲಿ ಸುರಿವ ನೆತ್ತರ ಪತಿಯ ಸುತ್ತಲು ತಿರುಗಿ ಚೀಱುವ ವಿಹಗಸತಿಯನು ಕಂಡನಾ ಮುನಿಪ (ತೊರರಾ. ೦-೨-೦೯). ೩. ಮಿಡಿತ : ಸ್ಫುರಿತ : ಸ್ಪಂದನ : ಮಿಡುಕುಱೆ ಪೊಯ್ದು ತನ್ನೆರ್ದೆಯನೊತ್ತಿ ಕರಾಗ್ರದೊಳಾರೊಳಪ್ಪೊಡಂ ನುಡಿಯದೆ ಚಿಂತಿಸುತ್ತುಮೆಮೆಯಿಕ್ಕುವುದಂ ಮಱೆದೊಂದು ಜಾವಮುಂ ಮಿಡುಕದೆ ಸಾಲಭಂಜಿಕೆವೊಲಿರ್ದ ಲತಾಂಗಿಯ ರೂಪು ಕಣ್ಗಳೊಳ್ ತೊಡರ್ದಿರೆ (ಸೂಕ್ತಿಸು. ೦೫-೨೩) ; ಶತತ್ರ್ಯಂದಮನು ಸುರವೈರಿಯೆಡೆಗೈತಂದು ನೋಡಿದನಸುರನೆದೆಯಲಿ ಮಿಡುಕನಾರೈದು (ತೊರರಾ. ೬-೨೯-೩೬). ೪. ಪ್ರಾಣ ; ಜೀವ : " ಅಸುವಟಿಲು ಮಿಡುಕು " (ಶಬ್ದಮಂ. ೬೦). ೫. ಚೈತನ್ಯ ; ಜೀವಂತಿಕೆ : (*). ೬. ಅಂತಃಕರಣ ; ಕನಿಕರ ; ಅನುಕಂಪ : ಎಲ್ಲರೊಳು ಕಲಿಭೀಮನೇ ಮಿಡುಕುಳ್ಳ ಗಂಡನು (ಕುವ್ಯಾವಿ. ೩-೩೯). ೭. ಪರಾಕ್ರಮ : ಶೌರ್ಯ : ಕಲಿತನ : " ಮಿಡುಕೆಂದೆನಲು ಪರಾಕ್ರಮ " (ಕಶುಪಿ. ೦೫೯): ಮಿಡುಕನುಳ್ಳರೆ ನಿನ್ನ ಮುಡಿಯನಾ ಹಿಡಿದು ನಾನೊಯ್ದಾಗ ರಾಘವ ತೊಡಚಿದನೆ (ತೊರಾ. ೦೦-೬೯); ಮೇದಿನಿಯೊಳಾರಾದೊಡಂ ಮಿಡುಕುಳ್ಳೊಡುನ್ನತಪರಾಕ್ರಮಿ ತಡೆಯಲಿ ವಾಜಿಯನು (ಜೈಮಿಭಾ. ೨-೨೮); ನನ್ನ ಭಾವನ ಮಿಡುಕನ್ನು ನಾನು ಅರಿಯದವಳೆ ? (ಹುಲಿಹಾ. ೦೩೨). ೮. ಕಸುವು : ಶಕ್ತಿ : ಮೊಱಪಿನ ಮಿಡುಕುಗಳ ನಾಯ್ ನೂಕಿದವು ಹಾಸದ ವಿಳಾಸದಲಿ (ಕುವ್ಯಾಆ. ೦೩-೨೦). ೯. ಯಾವುದಾದರೊಂದು ಪ್ರಾಣಿಯು ಕಾಲನ್ನು ಊರಿದಾಗ ಮಣ್ಣಿನ ಮೇಲೆ ಕಂಡು ಬರುವ ಗುರುತು: ತಿವಳಿಯೊಳ್ ಮಿಡುಕಾಱಿದ ಮಣ್ಣಂ ದಿಕ್ಕಿದ ಲಂಡದ ಬೆಂಕೆಯಿಂ ಕವಿವ ಕಿಟ್ಟವದೊಳ್ಪೊನಲೊಳ್. ಸುಯ್ಯಾಱಿದ ಪೆರ್ನೊರೆಯಿಂ . . . ಒಕ್ಕ ಪಲ್ಲವನಿಕಾಯದಿನಂದಱಿದಂ ಕಾಡಾನೆಗಳಾಗಡೆ ಪೋದುದಂ (ಕಾವ್ಯಾವ. ೬೨೬). ಮಿಟುಕು₂ : ೧. ' ಕಣ್ಮಿಟುಕು₂ ' ಪರಾ. ಮಿಡುಗು₂ : ೨. ಯುವರಾಜ:–(ಮಿಡುಗಿಂದಿದ್ದು.) ಆ ರುದ್ರವ್ವೆ ಹೇಳಿಬಿಡುತ್ತಾಳೆ (ಪಟ್ಟಆ. ೦೦೦-೬). ೬. ತನ್ನ ಕೂಡುವಳಗದ ನಿಚ್ಚವಂದುಗದೊಂದು ಮಿಡುಗಿಂ ನಂಜುಂಡ ಬಾಸ್ಕವಿರಂ. ಗಜಮುಖಿನ ಬಲಿವೊಡೆಯ ಪಾವಂ, ಅಱುಪೊಗನ ತೇರ ಸೋಗೆಯಂ . . . ಇನ್ನಾನುಂ ಪಗೆಯಂ ಮಱೆತು ಸಂತಂ ಪುದುವಾಟ್ವುದೆಂದು ಬುದ್ಧಿವೇಟಿಲ್ (ರಾಮಾಕ್ಕ. ೯೨-೦೦).

[< ಮಿಡುಕು₁/ ತಮಿ. ಮಿಟ್ಟುಕ್ಕು : ಮಲ. ಮಿಟುಕ್ಕಮ್, ಮಿಟುಕ್ಕು]

**ಮಿಡುಕುಗಚ್ಚೆ** (ನಾ). (ಹಸು, ಎಮ್ಮೆ ಇತ್ಯಾದಿ ಪ್ರಾಣಿಗಳ) ಅದುರುತ್ತಿರುವ ಮರ್ಮಾಂಗ,–ಯೋನಿ : ಪೊಸನಸೆಯ ಸೊವಡನಾಘ್ರಾಣಿಸಿ ಮಣಿಕದ ಮಿಡುಕುಗಚ್ಚೆಯೊಳ್ ಮೊಗಪೆತ್ತುತ್ತೆಸೆದುದು ವೃಷಮುಮರರ ನೇಡಿಸುವವೊಲೇನುಂಟೆ ನಿಮಗಮಿಾ ಸುಖಮೆನುತುಂ (ರೀಲಾವ. ೫-೯೩).

[ಮಿಡುಕು₁ + ಕಚ್ಚೆ]

**ಮಿಡುಕುಗುಂದು** (ಕ್ರಿ). ಚಲನೆ ಕಡಿಮೆಯಾಗು : ಅಲುಗಾಟವು ಕುಗ್ಗು : ಅರೆವುಗುಳ್ದಕ್ಷಿಗಳ್ ಮಿಡುಕುಗುಂದವ ಚೆಂದುಟಿ . . . ಒಪ್ಪೆ ಪೊಸ ವೇಷದ ತಾಪಸನೊಟ್ಟಿ ತೋಱಿದಂ (ರಬಿಶಂ. ೨-೭೯).

[ಮಿಡುಕು₂ + ಕುಂದು₁]

**ಮಿಡುಕುಗೆಡು** (ಕ್ರಿ). ಪರಾಕ್ರಮವನ್ನು ಕಳೆದುಕೊಳ್ಳು : ಶೌರ್ಯವಿಲ್ಲದಾಗು : ಮಿಡುಕುಗೆಟ್ಟನು ಬಿದ್ದ ದಧಿಮುಖನೊಡನೆ ಹಳಚಿದನವನ ನಂಗದ (ತೊರಾ. ೨೦-೯೧). [ಮಿಡುಕು₂ + ಕೆಡು₁]

**ಮಿಡುಕುದಾಣ** (ನಾ). (ದೇಹದಲ್ಲಿ ನಾಡಿಯು) ಸ್ಪಂದಿಸುವ ಸ್ಥಳ : ಕಡೆಗಂಗಳೊಳು ಜಲ ತೋಱಿದೊಡದನಾಗೊಡನೆ ಕಾಣುತಲಾಳಿಯರು ಮಿಡುಕುದಾಣವ ಮುಟ್ಟಿಯಱಿದುಸುರನು ನೋಡಿ ಕಡುಚಪಳೆಯರು ಮೂಗಿನೊಳು (ಇಂಜಶ. ೭-೦೦೯). [ಮಿಡುಕು₁ + ತಾಣ]

**ಮಿಡುಕುಜು** ' ಮಿಡುಗುಜು ' ನೋ.

**ಮಿಡುಗು$_1$** 'ಮಿಡುಕು$_1$' ನೋ.

**ಮಿಡುಗು$_2$** 'ಮಿಡುಕು$_2$' ನೋ.

**ಮಿಡುಗುಜು, ಮಿಡುಕುಜು** (ನಾ). ೧. ಬೆಂಕಿ : ಕಿಚ್ಚು : ಅಲ್ಲಿಯೆ ಮುನಿಗಳ ಮಾಸೆಗೆ ಮಿಡುಗುಜುಸಟ್ಟರು . . . ಆ ವೀರನ ಕಿಂಕರರು (ಜೀಮೂತ. ೨-೯೭); ಕಡಿದೊಟ್ಟಿದ ಪುಳ್ಳೆಗಳಂ ಮಿಡುಗುಜು ಸುಡುವಂತೆ ಸುಡುಗು (ಶಶಪು. ೨೩-೩೨). ೨. (ಅಲಂ) ತಾಪ : ಬೇಗೆ : ಧಗೆ : ತಾಪತ್ರಯದ ಮಿಡುಗುಜುಸಲೋರಂತೊದವಿಸುತ ಜಗದೆಜುಯನೆನಿಸುವ ನಿನ್ನನಜುಯದು ಮೂಢಜನ (ಏಕಾಗ. ೧೦-೩೨-೨೯). **ಮಿಡುಕುಜು** : ೧. ಒರಿದು ಬೆಳೆದಿಹ ವನದಿ ಮಿಡುಕುಜು ಪರಿಹರಿದು ಸುಡುವಂತೆ (ಪ್ರಭುಲಿ. ೯-೨೬). ೩. ಬೆಂಕಿಯ ಕಿಡಿ : ಅಗ್ನಿಕಣ : ಹಲವುಕಾಲ ಧಾವತಿಗೊಂಡು ಒಟ್ಟಿದ ಹಿದಿರೆಯು ಒಂದು ಮಿಡುಕುಜಲ್ಲಿ ಬೇವಂತೆ ಸಲೆ ನೆಲೆ ಸನ್ನಿಹಿತನಾಗಿರ್ಪ ಶರಣನ ಭಕ್ತಿ ಒಂದನಾಯಾತದಿಂದೆ ಕೆಡುವುದು (ಬಸವ. ೨೦೩). [ದೇ.॥ ತೆಲು. ಮಿಡುಗುಜು, ಮಿಡುಂಗುಜು, ಮಿಣುಂಗುಜು, ಮಿಣುಗುಜು, ಮಿಣ್ಣುಜು]

**ಮಿಡುಚೆ** 'ಮಿಡತೆ' ನೋ.

**ಮಿಡುಮಿಡನೆ** (ಅ). ಒಂದು ಅನುಕರಣಾವ್ಯಯ : ದೀರ್ಘಶೋಕವುಂ ಬಿಡೆ ಸುಡೆ ಕಿಚ್ಚಿನ ಕಿಡಿಯಂದದೆ ನೆಲದೊಳಗಿನಿಸುಂ ಮಿಡುಮಿಡನೆ ಮಿಡುಕುವೆನ್ನಂ ಕಂಡಂ (ಕಾವಂಪು. ೯೨೨); ಸರ್ವಾಂಗವುಂ ಕಡಿಯೆ ಮಿಡುಮಿಡನೆ ಮಿಡುಕುತ್ತ (ಬಿಂದೋರ. ೫. ೫೦೦-೦೫) ; ಮಿಡುಮಿಡನೆ ಮಿಡುಕುತ್ತ ಕೋಪದಿ ಘುಡುಘುಡಿಸಿ ಮೆಜುಮಿಂಡನೆಂದನು (ಬಸಪು. ೨೭-೦೫).

[ಮಿಡು:ಮಿಡು + —ಅನೆ$_1$]

**ಮಿಡುಮಿಡು** (ನಾ). ಕೋಪ, ದುಃಖ, ನೋವು ಮುಂತಾದುವುಗಳನ್ನು ಸೂಚಿಸುವಾಗ ಬಳಸುವ ಒಂದು ಅನುಕರಣಶಬ್ದ : 'ಮಿಡುಮಿಡನೆ' ಪರಾ.

**ಮಿಡ್ಡೆ** 'ಮಡ್ಡಿ$_1$' ನೋ.

**ಮಿಣಕ್‌ಮಿಣಕ್** (ನಾ). (ದೀಪ, ಒಲೆ ಮುಂತಾದುವು ಮಂಕಾಗಿ ಉರಿಯುವುದನ್ನು ಸೂಚಿಸುವ) ಒಂದು ಅನುಕರಣಶಬ್ದ : ಮಂಕಾಗಿ ಉರಿಯುವ ಹಣತೆ ಮಿಣಕ್ ಮಿಣಕ್ ಎನ್ನುತ್ತದೆ (ಕೃಕ್ಷ. ೦೦೫).

**ಮಿಣಕುಹುಳ** 'ಮಿಣುಕುಹುಳು' ನೋ.

**ಮಿಣಕೆ** 'ಮಿನಿಕೆ' ನೋ.

**ಮಿಣಮಿಣ** (ನಾ). (ದೀಪ, ಒಲೆ ಮುಂತಾದುವು ಮಂಕಾಗಿ ಉರಿಯುವುದನ್ನು ಸೂಚಿಸುವ) ಒಂದು ಅನುಕರಣಶಬ್ದ : ದೀಪ ಮಿಣಮಿಣ ಉರಿಯುತ್ತಿದೆ (ರೂಢಿ).

**ಮಿಣಿ** 'ಮಿಳಿ' ನೋ.

**ಮಿಣಿಕೆ** 'ಮಿನಿಕೆ' ನೋ.

**ಮಿಣಿಬಲೆ** 'ಮಿಣಿವಲೆ' ನೋ.

**ಮಿಣಿಮಿಟಿ** (ನಾ). ಒಂದು ಅನುಕರಣಶಬ್ದ : ಚಾವಡಿಯ ದೀಪ ಮಿಣಿಮಿಟಿ ಉರಿಯುತ್ತಲೇ ಇತ್ತು (ಮರಳು. ೯೭); ಬೇಲಿಯನ್ನು ಕಂಡು ಕಣ್ಣು ಮಿಣಿಮಿಟಿ ಮಾಡುತ್ತ ನಿಂತೆ (ಚಿಟ್ಟಕೀ. ೦೩೫).

**ಮಿಣಿಮಿಣಿ** (ನಾ). ಒಂದು ಅನುಕರಣಶಬ್ದ : ಬಂದನೇನೆ . . . ಧಣಧಣಧಣರೆಂಬ ಪಾವದ ತೊಡವಿನ ಮಿಣಿಮಿಣಿ ಕುಣಿದಾಡುತ ಶ್ರೀಕೃಷ್ಣ (ಪುರಂದ. ೨-೬೨-೨).

**ಮಿಣಿಮಿಣಿಸು** (ಕ್ರಿ). ಕ್ಷಣ ಬಿಟ್ಟು ಕ್ಷಣ ಹೊಳೆ, – ಪ್ರಕಾಶಿಸು : ಆ ವಧುಗಳು . . . ಮಿಂಚಿನ ಲತೆಯಂತೆ ಮಿಣಿಮಿಣಿಸುತ ಕಂಚುಮಿಂಚಾಗಿ ಹೊಳೆವರತ್ತಿತ್ತ (ಶರತ. ೦೩-೦೦೯). [ಮಿಣಿಮಿಣಿ + —ಇಸು$_1$]

**ಮಿಣಿಯಾಟ** (ನಾ). ಹಗ್ಗದ ಸಹಾಯದಿಂದ ನಡೆಸುವ ಆಟ, — ಚಮತ್ಕಾರ : ಗಳೆಯಾಟ ಮಿಣಿಯಾಟ ಅದೃಶ್ಯಕರಣ ಅಗ್ನಿಸ್ತಂಭ ಆಕರ್ಷಣ ಚೌಷಷ್ಟಿಕಲಾವಿದ್ಯೆಯು ಸಾಧಿಸಿದ ಡೊಂಬನೇನು ಕಿಜುಯನೇ (ಉಂಶಿ. ೯. ೨೦೭-೨೬೭). [ಮಿಣಿ (< ಮಿಳಿ) + ಆಟ]

**ಮಿಣಿವಲೆ, ಮಿಣಿಬಲೆ** (ನಾ). ಚರ್ಮದ ನೂಲಿನಿಂದ ತಯಾರಿಸಿದ ಬಲೆ : ಇತ್ತಲ್ ಮರೆಯ ಬಿಯದಪಡೆ ಮಿಣಿವಲೆಯನೊಡ್ಡಿ ಸರೆವಿಡಿಯುತಾ ಸಿಂಹಿಣಿಯನುಯ್ವುದರಸನ ಬೇಂಟೆವೀಡಿರ್ಪ ಕಂದರಕೆ (ಶ್ರೀರಾಪಾ. ೬೨೫-೨೦೦). **ಮಿಣಿಬಲೆ** : ಆ ಗುಡಿ ಬದೀಲೆ ಅಲ್ಲೇನು ಮಿಣಿಬಲೆಗೆ ಒಂದು ಒಂಟಿಗ ಬಿದ್ದು, ನೀನು ಭರ್ಜೀಲಿ ತಿವಿದು, ಒಂದುರುಳು ಉರುಳಿ, ಹಂದಿ ಹತ್ರಾನೆ ಬಿದ್ದದ್ದು ! (ಮಲೆಮ. ೦೦೯).

[ಮಿಣಿ (< ಮಿಳಿ) + ಬಲೆ$_1$]

**ಮಿಣುಕಿಸು** 'ಮಿನುಗಿಸು' ನೋ.

**ಮಿಣುಕು$_1$** 'ಮಿನುಕು$_1$' ನೋ.

**ಮಿಣುಕು$_2$** 'ಮಿನುಕು$_3$' ನೋ.

**ಮಿಣುಕುದೀಪ** (ನಾ). ಮಂದವಾದ ಪ್ರಕಾಶವನ್ನು ಬೀರುವ ದೀಪ ; ಸಣ್ಣ ಬೆಳಕನ್ನು ಚೆಲ್ಲುವ ದೀಪ : ಮಿಣುಕುದೀಪದ ಮುಂದೆ ಹೆಂಗಸರಿಬ್ಬರೂ ಬಲು ಹೊತ್ತು ಕುಳಿತಿದ್ದರು (ಮರಳು. ೯೨೦); ಕತ್ತಲೆ ಇಲ್ಲವೆ ಕತ್ತಲೆಯಲ್ಲಿಯ ಮಿಣುಕುದೀಪ ಪ್ರಾಣಾನುಭವವಾದರೆ ಮೋಹಕವಾದ ಬೆಳುದಿಂಗಳು ಕಾವ್ಯಾನುಭವ (ಸಾಸವಾ. ೯೩).

[ಮಿಣುಕು$_2$ (< ಮಿನುಕು$_3$) + ದೀಪ$_2$]

**ಮಿಣುಕುಬೆಳಕು** (ನಾ). ಮಂದವಾದ ಪ್ರಕಾಶ : ಕಚೇರಿಯ ದೀಪದ ಮಿಣುಕುಬೆಳಕಿನಲ್ಲಿ ಆ ಹೆಂಗಸರಿಗೆ ಊಟದ ಸಿದ್ಧತೆ ಮಾಡಿದನು (ಅನ್ನ. ೦೬೨). [ಮಿಣುಕು$_2$ (< ಮಿನುಕು$_3$) + ಬೆಳಕು$_2$ (< ಬೆಳಗು$_2$)]

**ಮಿಣುಕುಹುಳು, ಮಿಣಕುಹುಳ** (ನಾ). ಮಿಂಚಿನಂತೆ ಕ್ಷಣ ಬಿಟ್ಟು ಕ್ಷಣ ಬೆಳಕು ಬೀರುವ ಒಂದು ಬಗೆಯ ಹುಳು ; ಮಿಂಚುಹುಳು : ಮಿಣುಕುಹುಳು ಒಂದೇ ಆದರೆ ಹೆಚ್ಚು ಬೆಳಕು ಕೊಡಲಾರದು (ಮುರುಕು. ೫೦). **ಮಿಣಕುಹುಳ** : "ಖದ್ಯೋತಃ, ಜ್ಯೋತಿರಿಂಗಣಃ— ೨ ಕತ್ತಲೆಯಲ್ಲಿ ದೀಪದ ಹಾಗೆ ಹೊಳೆಯುವ ರೆಕ್ಕೆಗಳುಳ್ಳ ಮಿಣಕುಹುಳ" (ಸಿದ್ಧಾಂತ. ೦೬೨); ಮಿಣಕುಹುಳ ತಿಣಕಿದರೆ ಜೇನು ಬಂದೀತೆ ? (ಗಾದೆ).

[ಮಿಣುಕು$_2$ (< ಮಿನುಕು$_3$) + ಹುಳು (< ಪುೞು)]

**ಮಿಣುಗುಟ್ಟು** 'ಮಿನುಗುಟ್ಟು' ನೋ.

**ಮಿಣ್ಣಗೆ** (ಅ). ಅಲುಗಾಡದೆ ; ನಿಶ್ಚಲವಾಗಿ : ಎರಡು ಮೂರ್ತಿಗಳ ನಡುವೆ ಮಿಣ್ಣಗೆ ಉರಿಯುವ ಕಾಲುದೀಪ (ಸರಸ. ೭೭).

ಮಿಣ್ಣಗಿರು = ಸುಮ್ಮನೆ ಇರು : ಮಿಸುಕದಂತಿರು : ಕಣ್ಣಿತ್ತಿ ನೋಡರಾ ಕಡೆಯ ಕೌರವರಲ್ಲಿ ಮಿಣ್ಣಗಿರುವುದೊಂದು ವರುಷ (ಹುಚಿಶ. ೨); ನಾಳೆ ಹೆಂಡತಿಯನ್ನು ಕಟ್ಟಿಕೊಂಡು ಬೇರೆ ಹೋದಾಗ ಎಲ್ಲವೂ ತಿಳಿಯುತ್ತದೆ—ಮಿಣ್ಣಗಿದ್ದವರ ಬಣ್ಣ ! (ಬಿನ್ನಉ. ೦೦೯).

[ಮಿಣ್$_0$ + —ಅಗೆ$_3$./ತೆಲು. ಮಿನ್ನಕ]

**ಮಿಣ್ಣನೆ$_1$** (ಗು). ಚಿಕ್ಕದಾದ ; ಸಣ್ಣದಾದ : ಗೆಳೆಯರ ಕಯ್ಯಲ್ಲಿಯ ಮಿಣ್ಣನೆ ನೆಲ್ಲಿಯನಸಿಯಲಿ ಕೆಯ್ಯುಗಲದೆ ಕೊಯ್ದು ! (ಪಶ್ಚಿರ. ೦-೦೫).

[ಮಿಣ್$_0$ + —ಅನೆ$_2$ (< —ಅನೆಯ$_1$)]

**ಮಿಣ್ಣನೆ$_2$** (ಅ). ೧. ಸದ್ದಿಲ್ಲದೆ ; ಮೌನವಾಗಿ : ನೂಜ್ವರನು ಕೊಂದನು ಮರನ ಹಾಯಿಕಿ ಮರಳಿ ಮಿಣ್ಣನೆ ಬಂದು ಹೊಕ್ಕನು ಬಾಣಸದ ಮನೆಯ (ಕುವ್ಯಾವಿ. ೩-೦೦೨) ; ಇಂದಿನಿತಿಂತೇಂ ಚೆಲ್ವಿನೊಂದು ಬಿತ್ತರದ ಭಂಗಿಯ ಪೊಸ ಬಣ್ಣನೆ ಮಿಣ್ಣನೆ ನಿನ್ನ ನಚ್ಚುಮೆಚ್ಚಿನ ಕಾಮನೊಂದು ಜಾನದೊಳೆ ಬೆರೆತುದು ? (ಬಾವಾಶ್ಕ. ೦೩೯-೯). ೨. ಏನೂ ತಿಳಿಯದ

ಹಾಗೆ ; ನಿರ್ವಿಕಾರವಾಗಿ : ಎಲ್ಲವನ್ನೂ ಶಾಂತರಾಗಿ ಮಿಣ್ಣನೆ ಹೇಳು ತ್ತಿದ್ದೀರಲ್ಲ ! (ಕುಹಾಗ. ೨೬೪).

ಮಿಣ್ಣನಿರ್ = ಏನೂ ತಿಳಿಯದಂತಿರು ; ಮುಗ್ಧವಾಗಿರು : ಬೇಡವೇಡಂದೊಡಂ ಚಲದಿಂ ಓಡಿದು ಕಟ್ಟಿ ಮಿಣ್ಣನಿರ್ಪಂ (ರಾಮಾಶ್ವ. ೦೩೩-೦೯); ನೀನಱಿಯದರಂತೆ ಮಿಣ್ಣನಿರ್ದುಮೆನ್ನಿಂದೆನ್ನಂ ಕಟ್ಟಿಸಿದ ದಿಟ್ಟಂ (ರಾಮಾಶ್ವ. ೧೬೩-೦). [ ಮಿಣ್$_0$ + —ಅನೆ$_1$ ]

**ಮಿಣ್ಣಿಸು** 'ಮಿಳ್ಳಿಸು' ನೋ.

**ಮಿಣ್ಣೆ** 'ಮಿಟ್ಟೆ' ನೋ.

**ಮಿತ$_1$** (ಗು). ಸತ್ತುಹೋದ ; ಗತಿಸಿದ : "ಮಿತ — ಮೃತ = ಸತ್ತು ಹೋದ, ವಿಫಲ" (ಶಬ್ದಕೋ. ೩೩) ; ಉತ್ಸೃಕೃತ್ವಂ . . . ಮೃತ — ಮಿತ (ಶಮದ. ೨೬೯ ಪ್ರಯೋ). [ < ಸಂ. ಮೃತ ]

**ಮಿತ$_2$** (ಗು): ೧. ಅಳೆದ ; ಅಳತೆಮಾಡಿದ. ೨. ಮಿತಿಗೆ ಒಳಪಟ್ಟ ; ಸೀಮಿತವಾದ : ಮಿತನಖಕೇಶಶೋಭಿತತನುತ್ವಂ . . . ಪರಿಪೀತದೇಹ ಬಿಂಬಿತವೆರಸಿಂತು ಪತ್ತತಿಶಯಂಗಳವೇಂ ಜಿನನೊಳ್ ಪೊದಟ್ಟುವೋ (ಅಂಕ. ೧೦-೯೩). ೩. ಚಿಕ್ಕದಾದ; ಸಂಗ್ರಹವಾದ; ಸಂಕ್ಷಿಪ್ತವಾದ: 'ಮಿತನುಡಿ' ಪರಾ. ೪. ಕಡಮೆಯಾದ; ವಿರಳವಾದ. ೫. ಪರೀಕ್ಷಿಸಿದ ; ಪರಿಶೀಲಿಸಿದ. (ನಾ). ೬. ಅಳತೆ ಮಾಡುವುದು. ೭. ಮಿತಿಗೆ ಒಳಪಟ್ಟುದು ; ಸೀಮಿತವಾದುದು : ಮಿತವಾದ್ದು ಬಾಳುವುದು. ಹಿತವಾದ್ದು ಫಲಿಸುವುದು (ಗಾದೆ). [ಸಂ.]

**ಮಿತಂಪಚ** (ಗು). ೧. ಜಿಪುಣತನದಿಂದ ಕೂಡಿದ; ಕೃಪಣತನದ. (ನಾ). ೨. ಜಿಪುಣ ; ಲೋಭಿ : "ಕದರ್ಯಃ . . . ಕಿಂಪಚನಃ. ಮಿತಂಪಚಃ — ಈ ೫ ಲೋಭಿ" (ಹಲಾಯು. ೫೭-೧೯೨). ೩. ಪರಿಣತನಲ್ಲದವನು ; ಪಕ್ವತೆಯಿಲ್ಲದವನು : ಚತುರಕವಿಯೊಳ್ಪನತಿವಿಶ್ರುತ ವೈಯಾಕರಣರೊಳ್ಪು ತಿಳಿವಂತಿರೆ ಮೂರ್ಖತೆಯಿಂದಮುರ್ವಿ ಕೊರ್ವಿದ ಮಿತಂಪಚರ್ ತಿಳಿವಳ[ಡ]ರಿದು ಪೊಸಬಗೆಯಿಂದಂ (ಹಸ್ತಿಮ. ೧-೦೬). ೪. ಪರಿಮಿತವಾದ ಪ್ರಮಾಣದಲ್ಲಿ ಆಹಾರವನ್ನು ತಯಾರಿಸುವುದು; ಕಡಮೆಪ್ರಮಾಣದ ಅಡುಗೆಯನ್ನು ಮಾಡುವುದು. [ಸಂ.]

**ಮಿತಕುಕ್ಷಿ** (ನಾ). ಹೊಟ್ಟೆಗೆ ಪರಿಮಿತವಾದ ಆಹಾರವನ್ನು ತೆಗೆದುಕೊಳ್ಳುವವನು : ಮಿತಕುಕ್ಷಿ ಮಿತಭುಕ್ತ ; ಮಾತ್ರಾರ್ ಜಿತೇಂದ್ರಿಯನು ? ಅತಿಚರ್ಚೆ ಸಲದಲ್ಲಿ (ಮಂಕುಶ. ೩೬೧). [ಸಂ.]

**ಮಿತನುಡಿ** (ನಾ). ಅಗತ್ಯಕ್ಕೆ ತಕ್ಕಷ್ಟು ಆಡುವ ಮಾತು; ಸಂಕ್ಷಿಪ್ತವಾದ ಮಾತು : `ಮಿತನುಡಿಯ ಬಾಲೆಯರು ರತಿಗೆ ಮಿಗೆ ಚೆಲ್ವೆಯರು (ಪಪಮೋ. ೨-೫೩). [ ಮಿತ$_2$ + ನುಡಿ$_2$ ]

**ಮಿತಪರಿಗ್ರಹ** (ನಾ). [ಜೈನ] ಶ್ರಾವಕನ ವ್ರತಗಳಲ್ಲಿ ಒಂದು; ಆವಶ್ಯಕತೆಗೆ ಬೇಕಾದಷ್ಟು ಮಾತ್ರ ಧನ, ಧಾನ್ಯ ಇತ್ಯಾದಿಗಳನ್ನಿಟ್ಟುಕೊಂಡು ಉಳಿದುವನ್ನು ತ್ಯಾಗಮಾಡುವ ಒಂದು ಬಗೆಯ ವ್ರತ : ದಿನವ್ರತ ದಿಗ್ವ್ರತ ಮಿತಪರಿಗ್ರಹವ ಮತ್ತನಶನವ್ರತವ ಕೈಕೊಂಡು ವನಜಮುಖಿಯರು ಕೈಕೊಂಡರು ವ್ರತಗಳ ಜಿನಮುನಿಗಳ ಸಮಕ್ಷದೊಳು (ಭರತ. ೦೬-೬೧). [ಸಂ.]

**ಮಿತಭಾಷಿ** (ನಾ). ಅಗತ್ಯಕ್ಕಿಂತ ಹೆಚ್ಚು ಮಾತನ್ನಾಡದವನು; ಕಡಮೆ ಮಾತನ್ನಾಡುವವನು : ಸ್ವಭಾವತಃ ಅವರು ಮಿತಭಾಷಿಗಳೆಂದು ಎಲ್ಲರ ನಂಬಿಕೆಯಾಗಿದ್ದಿತು (ಸಮಜೀ. ೯೬); ಸಭೆಯೊಳು ಮೇಲೆದ್ದು ಕುಣಿವನು ಬಹುಭಾಷಿ ಓಂಮಳಿವನು ಮಿತಭಾಷಿ (ಇಂತಾಶ. ೨೦೫-೬೩).
[ ಸಂ. ಮಿತಭಾಷಿನ್ ]

**ಮಿತಭಾಷೆ** (ನಾ). = ಮಿತನುಡಿ : ಹೋದಿರುಳು ತಾಂ ಬಾರದಿರೆ ಉಬ್ಬೆಗಂಬಡುತಿರ್ದಳಿಗೆ ನೆನವನೊರೆಯುತ್ತೆ ಮಿತಭಾಷೆಯುಲಿ . . . ಪೊಕ್ಕಳಾ ರಾಜ್ಞಿ . . . ಪಟಹಮರ್ಯ್ಯಮಂ (ಕತ್ತ್ರಂಗ. ೧೮-೪೮೩).
[ ಸಂ. ಮಿತಭಾಷಾ ]

**ಮಿತಭುಕ್ತ** (ನಾ). = ಮಿತಕುಕ್ಷಿ : ಮಿತಕುಕ್ಷಿ ಮಿತಭುಕ್ತ; ಮಾತ್ರಾರ್ ಜಿತೇಂದ್ರಿಯನು ? ಅತಿಚರ್ಚೆ ಸಲದಲ್ಲಿ (ಮಂಕುಶ. ೩೬೦). [ಸಂ.]

**ಮಿತವಚನ** (ನಾ). ೧. = ಮಿತನುಡಿ : [illegible]ವಚನಯುತಂ ಕೀರ್ತಿ ಕಾಂತಾಸಮೇತಂ . . . ಬುಧಜನಕುಮುದಾನಂದಚಂದ್ರಂ ಸಭೇಂದ್ರಂ (ರಾಸ್ಕರಂ. ೦-೩೩). ೨. = ಮಿತಭಾಷಿ : ಕ್ಷಿತಿಪತಿಯುಂ ಬರಿಸಿ ಜಗನ್ನುತನಂ ಸಂತೈಸಿ ಕುಶಲವಾರ್ತಾಂತರಮಂ ಮಿತವಚನಂ ಬೆಸಗೊಂಡತಿವಿತೀರ್ಣ ಮುದನಾದನಾತನೆಂಬುದು ಮಾರ್ಗಂ (ಕವಿರಾ. ೨-೮). [ಸಂ.]

**ಮಿತವಾಕ್ಯ** (ನಾ). ೧. = ಮಿತನುಡಿ. ೨. = ಮಿತಭಾಷಿ : ಮಿತವಾಕ್ಯಂ ಸದ್ಗುಣೈಕ್ಯಂ . . . ನೆಗಟ್ದಿತಿಬಳಭೂಪಾಲಮಂತ್ರಿಪ್ರಧಾನಂ (ಸುಕುಮಾ. ೨-೫೧). [ಸಂ.]

**ಮಿತವ್ಯಯ** (ನಾ). ಹಣ, ಪದಾರ್ಥ ಮುಂತಾದುವುಗಳನ್ನು ಹಿಡಿತದಿಂದ ಖರ್ಚು ಮಾಡುವಿಕೆ.–ಮಿತಿಯಲ್ಲಿ ಬಳಸುವಿಕೆ : ಬಂಡವಾಳಕ್ಕೆ ಮುಖ್ಯಕಾರಣವೆನ್ನಿಸುವ ಮಿತವ್ಯಯವನ್ನು ನಮ್ಮ ಅರ್ಥಶಾಸ್ತ್ರವು ಒಂದು ಪ್ರಮುಖಧರ್ಮವಾಗಿ ಉಪದೇಶಿಸಿದೆ (ಭಾರಧ. ೩೫೬); ಅಕ್ಕ್ಯಜಿಯು ತನ್ನ ಬಳಿಯಲ್ಲಿ ಸಂಗ್ರಹಿಸಿಟ್ಟುಕೊಂಡ ನೂರುರೂಪಾಯಿಗಳನ್ನು, ಮಿತವ್ಯಯದಿಂದ ನನ್ನ ಕೆಲಸಕ್ಕಾಗಿ ವೆಚ್ಚಮಾಡುವಂತೆ ತಿಳಿಸಿ ಕಳಿಸಿದ್ದಳು (ಹೇಮಂತ. ೦೬೯). [ಸಂ.]

**ಮಿತಸಂಖ್ಯೆ** (ನಾ). ಕಡಮೆ ಅಂಕೆ; ಅಲ್ಪಸಂಖ್ಯೆ : ಮನಸ್ಸಿನ ವಿಚಾರಗಳನ್ನು, ಭಾವನೆಗಳನ್ನು ತೋಡಿಕೊಳ್ಳುವ ಜನವರ್ಗಕ್ಕೆ, ಅವರು ಕೇವಲ ಮಿತಸಂಖ್ಯೆಯವರು, ಸಂಬಂಧಿಸಿದ ಈ ಬರಹವು ಸದ್ಯಕ್ಕೆ ಮಾತು, ಲೇಖನ, ಗೀತ, ನೃತ್ಯಗಳನ್ನು ಆಶ್ರಯಿಸಿದ ವ್ಯಕ್ತಿಗಳಿಗೆ ಅನ್ವಯಿಸುತ್ತದೆ (೭೦ಬದ. iii, ಮೊದಲ ಮಾತು). [ ಸಂ. ಮಿತಸಂಖ್ಯಾ ]

**ಮಿತಸಂತಾನ** (ನಾ). ಒಂದು ವ್ಯವಸ್ಥೆಗೆ ಒಳಪಟ್ಟ ಸಂತತಿ; ಕಡಮೆ ಮಕ್ಕಳನ್ನು ಪಡೆಯುವಿಕೆ : ಮಿತಸಂತಾನದ ಕಡೆಗೆ ಗಮನವು ತಿರುಗಿದೆ (ಶಿಲ್ಪಶಾ. ೦೬೬). [ ಸಂ. ]

**ಮಿತಾಹಾರ** (ನಾ). ಪರಿಮಿತವಾಗಿ ಮಾಡುವ ಊಟ; ಹಾಳತವಾದ ಆಹಾರಸೇವನೆ : ಅಲ್ಪವಲ್ಲದೆ ಯಥೇಷ್ಟವಲ್ಲದೆ ಯೋಗ್ಯಾನುಗುಣ್ಯವಾಗಿ ಭೋಜನಂಗೈವುದೇ ಮಿತಾಹಾರವೆನಿಸುವುದು (ವಿವೇಕ. ೦೪೮). [ಸಂ.]

**ಮಿತಿ** (ನಾ). ೧. ಅಳತೆ : ಪ್ರಮಾಣ : ಮೀಱಿತು ಭುಜಶಕ್ತಿ ಮಿತಿಯಿಲ್ಲ ತನುಕಾಂತಿದೋಱಿತು ಕಂತುನಂದನಗೆ (ಮೋಹತ. ೩೪-೦೯). ೨. ತೂಕ ; ಭಾರ. ೩. ಮೇರೆ : ಎಲ್ಲೆ : ಮಿತಿ ಮೇರೆಯಿಲ್ಲದ ನೃಪರು ನೆರೆದುದು ಜನಕನಗರಿಯಲಿ (ಕೊರರಾ. ೦-೦೨-೨೮); ಸುಳ್ಳಿಗಾದರೂ ಒಂದು ಮಿತಿಯಿರಬೇಕು (ದೇಶನ್ಯ. ೪೨). ೪. ಕಟ್ಟು ; ಕಟ್ಟಳೆ ; ನಿಯಮ : ಈ ರೋಗಂಗಳಿಗೆ ಈ ಔಷಧವೆಂಬ ಮಿತಿಯನ್ನುಂಟುಮಾಡಿ ಮಿಕ್ಕನವರು ಈ ಕಟ್ಟಳೆಯಂ ತಿಳಿದು ನಡೆಸುವುದು (ಸಕಲ್ಪ. ೭) ; ಊಟದಲ್ಲಿ ಬಹಳ ಮಿತಿಯಿರಬೇಕು (ಮುಂಬಯಿ. ೪-೨೫). ೫. ಅವಧಿಯ ಮೊದಲು ಅಥವಾ ಕೊನೆ : ಮಾರಾಟದ ರಕ್ಕಮು ಜಮಾ ಆದ ಮಿತಿಇಂದ ಮೂರುದಿವಸಗಳು ಕಡಿಮೆ ಮಾಡಿ ಬಡ್ಡಿಯು ಲೆಖ್ಖಕ್ಕೆ ಹಿಡಿಯೋಣದರಲ್ಲಿ ಬಂದೀತು (ಮುಂಬಪ್ರಾ. ೨೬) ; ಅಂಗಡಿಯ ಬಾಕಿಯು ಬರುವದಿದ್ದರೆ, ಬಾಕಿ ಇದ್ದ ಮಿತಿ ಹಿಡಿದು ಬಡ್ಡಿ ಆಕಾರಿಸಲ್ಪಡುವದು (ಮುಂಬಪ್ರಾ. ೨೦೮). ೬. ಖಚಿತವಾದ ಹೇಳಿಕೆ. ೭. ಸಾಕ್ಷಿ. ೮. ದೃಢತೆ. [ಸಂ].

**ಮಿತಿಗೆಯ್** (ಕ್ರಿ). ಮಿತಿಗೆ ಒಳಪಡಿಸು ; ಮೇರೆ ಮೀರದಂತೆ ಮಾಡು : ರತಿದೇವಿ ಬಸಿಱಾಂತು ಪಡೆದ ದುಃಕ್ಕವ ಸುತವತಿಯಾಗಿ

ನೋಳ್ಪ ಸಂತಸವ ಮಿತಿಗೆಯ್ದೆಪೆನೆಂದು ತೊಟ್ಟಿಲ ತೂಗಿದಳತಿಶಯದಿಂದೆ ಕುವರನ (ಪೋಹತ. ೦೭-೫೯). [ಮಿತಿ + ಕಯ್$^{1}$]

**ಮಿತಿಮೀರು** (ಕ್ರಿ). ೧. ಎಲ್ಲೆಯನ್ನು ದಾಟು ; ಮೇರೆಮೀರು : ಸಣ್ಣ ಮೀನುಗಳನ್ನು ದೊಡ್ಡ ಮೀನುಗಳು ನುಂಗುತ್ತವೆ . . . ಇಲ್ಲದಿದ್ದರೆ ಅವು ಮಿತಿಮೀರಿ ಬೆಳೆಯುತ್ತಿದ್ದವು (ಮುಂಬರು. ೪-೦೦೫); ಮ್ಲೇಚ್ಛ ಹುಡುಗಿಯ ಮೇಲೆ ಅವನಿಗಿದ್ದ ಸಿಟ್ಟು ಮಿತಿಮೀರಿತು (ಅಶಾರ. ೬೯). ೨. ವ್ಯವಹಾರದ ಸೀಮೆಯನ್ನು ಉಲ್ಲಂಘಿಸು ; ನಡವಳಿಕೆಯನ್ನು ಮೀರು : ಈ ಬಗೆಯಲ್ಲಿ ನಾಚಿಕೆಗೆಟ್ಟು ಮಿತಿಮೀರಿಯಿರುವುದು ನನ್ನಂತಹ ಕುಲವೆಣ್ಣಿಗೆ ತರವಲ್ಲ (ಶಕಾ. ೦೬). [ ಮಿತಿ + ಮೀರು (< ಮೀಱು) ]

**ಮಿತಿಲಿ** 'ಮಿಟಲಿ' ನೋ.

**ಮಿತು** 'ಮಿದು' ನೋ.

**ಮಿತುವಾಸಿಕೆ** (ನಾ). ಮೃದುವಾದ ಹಾಸುಗೆ.--ಶಯ್ಯೆ : ಮಿತುವಾಸಿಕೆಯ ಮೇಲೆ ತನುತಾಪದೊಡನೆ ಹೊರಳುತಂ (ವಿವಮಾ. ೯-೨೨).
[ ಮಿತು ( < ಮಿದು ) + ಪಾಸಿಕೆ ]

**ಮಿತ್ತು** 'ಮಿಟ್ಟು' ನೋ.

**ಮಿತ್ತುಗರೆ** 'ಮಿಟ್ಟುಗರೆ' ನೋ.

**ಮಿತ್ರ** (ನಾ). ೧. ನೇಸರು ; ಸೂರ್ಯ : "ಆದಿತ್ಯಃ . . . ಮಿತ್ರಃ. ಚಿತ್ರಭಾನುಃ . . . ತ್ರಯಿತನುಃ —ಈ ೪೭ ಆದಿತ್ಯನ ಪೆಸರ್" (ಹಲಾಯು. ೭-೩೭) ; ಮಿತ್ರಂ ಪ್ರತಾಪಸಹಿತಚರಿತ್ರಂ ಪರಮರ್ಣ ಬರುತುಮಿರೆ ಘನಪಥನಕ್ಷತ್ರಪ್ರಸೂನಮಂ ದ್ಯುತಪತ್ರಂಗಳಿನರುಣ ನುಡುಗಿದಂ (ಲೀಲಾವ. ೦೯-೦೩೩). ೨. (ಸಾಮಾನ್ಯವಾಗಿ ವರುಣನ ಜೊತೆ ವರ್ಣಿತವಾಗಿರುವ) ದ್ವಾದಶಾದಿತ್ಯರಲ್ಲಿ ಒಬ್ಬ : ಧಾತ ಆರ್ಯಮಾ ಮಿತ್ರ ವರುಣ ಇಂದ್ರ ವಿವಸ್ವಾನ್ ಪರ್ಜನ್ಯ ಪೂಷ ಅಂಶುಮಾನ್ ಗಭಸ್ತಿಮಾನ್ ತ್ವಷ್ಟೃ ವಿಷ್ಣುಗಳೆಂಬವರೇ ಕ್ರಮದಿಂ ದ್ವಾದಶಾದಿತ್ಯರು (ಶಿವೇಕ. ೨೦೬) ; ಗಣಪ ಮಿತ್ರರು ಸಪ್ತಋಷಿಗಳು ವಹ್ನಿ ನಾರದ ವರುಣನು ಇನಜಗೆ ಸಮ ಚಂದ್ರ ಸೂರ್ಯರು ಮನುಸುತೆಯು ಹೆಚ್ಚು ಪ್ರವಹನು (ಭರಂದ. ೧೩. ೦-೫-೩). ೩. ಗೆಳೆಯ ; ಸ್ನೇಹಿತ : "ಮಿತ್ರಂ, ಸಖಾ . . . ಸ್ನಿಗ್ಧಃ—ಈ ೫ ಕೆಳೆಯಂ" (ಹಲಾಯು. ೭೦-೨೬೯) ; ಮಿತ್ರ ವ್ಯಸನತ್ರಾಣಪವಿತ್ರೀಕೃತಗಾತ್ರನಪ್ಪ ನಿನ್ನಂ ಕಂಡಾ ಮಿತ್ರವಿಹೀನೆನೀಗಳ್ ಮಿತ್ರತ್ವಕ್ಕಾಸೆಪಟ್ಟು ಬಂದೆಂ ನಿನ್ನೊಳ್ (ಶಂಕಶಂ. ೩. ೨೦೭-೯೩೩) ; ಚಿತ್ರವಾಹನಪುತ್ರಿಯಂ ಶಕ್ರತನಯನುಂ . . . ಭೋಗಿಸಿದರನುದಿನಂ ಗೃಹಬಂಧುಮಿತ್ರರಂ ಮರೆದು, ಕರ್ತವ್ಯಮಂ ತೊರೆದು (ಜೈಭಾಗ. ೪೦-೧೦೩೯). ೪. [ರಾಜನೀ] ರಾಜನ ಸಪ್ತಾಂಗಗಳಲ್ಲಿ ಒಂದು ; ಇವರಲ್ಲಿ ಸಹಜಮಿತ್ರ—ತಾಯಿಯ ಅಥವಾ ತಂದೆಯ ಮೂಲಕ ನಂಟುತನವುಳ್ಳವನು; ಪ್ರಾಕೃತಮಿತ್ರ—ನೆರೆಯ ಶತ್ರುರಾಜ್ಯದ ಆಚೆಯಿರುವ ರಾಜ್ಯದ ಅರಸು ಮತ್ತು ಕೃತ್ರಿಮಮಿತ್ರ—ಕಾರ್ಯದ ಮೂಲಕ ಮೈತ್ರಿಯನ್ನು ಗಳಿಸಿದವನು ಎಂಬುದಾಗಿ ಮೂರು ಪ್ರಕಾರದ ಸ್ನೇಹಿತರಿರುತ್ತಾರೆ : "ಮಿತ್ರಂ . . . ಶತ್ರುರ್ದೇಶಕ್ಕಂತರಲೂ ಆಚೀಚೆಯದ ಅರಸನ ಪೆಸರ್" (ರಾಜ್ಯಂಶಿ. ೨೩೭).
[ಸಂ.]

**ಮಿತ್ರಕಾರ್ಯ** (ನಾ). ೧. ಸ್ನೇಹಿತನ ಕರ್ತವ್ಯ. ೨. [ರಾಜನೀ] ಸ್ನೇಹಿತನನ್ನಾಗಿ ಮಾಡಿಕೊಳ್ಳುವುದು : ಅನ್ಯರೆಲ್ಲರುಮನತಿಸ್ನೇಹದಿಂ ತನ್ನವರಂ ಮಾಡಿಕೊಳ್ವುದು ಮಿತ್ರಕಾರ್ಯಮೆಂಬುದು (ಶಂಕಶಂ. ೩. ೦೯-೧೦). ೩. ಕನ್ನಡದ ಪ್ರಸಿದ್ಧಗ್ರಂಥವಾದ 'ಪಂಚತಂತ್ರ'ದಲ್ಲಿ ಬರುವ ಐದನೆಯ ಪ್ರಕರಣ. [ಸಂ.]

**ಮಿತ್ರಕುಲ** (ನಾ). ೧. ಸೂರ್ಯವಂಶ ; ಇನಕುಲ : ಪತ್ತುಮಿಡುಮುಗುಡಮುಂ, ಮಿತ್ರಕುಲ ಮಿತ್ರಪರ್ಯ (ಶ್ರೀಪಾಪು. ೫೩೭-೨೩೭). ೨. ಗೆಳೆಯರ ಗುಂಪು ; ಸ್ನೇಹಿತರ ಸಮೂಹ : ಮಂತ್ರಿಯುಂ ಮೆಚ್ಚಿವ ತುಂಬುರನೆಂಬನಂ ಕೊಟ್ಟು ಮಖಂತೆ ತನ್ನೊಡನಿರ್ದ ಮಿತ್ರಕುಲಮಂ ಕೊಟ್ಟು (ಸಂಚರ. ೩-೫೯). [ಸಂ.]

**ಮಿತ್ರಗುಣ** (ನಾ). ಸ್ನೇಹಿತನಲ್ಲಿರಬೇಕಾದ ಗುಣ.—ಸ್ವಭಾವ : ಸ್ವಚ್ಛತನಂ ತ್ಯಾಗಂ ಶೌರ್ಯಂ ಸಮಾನವಹ ಸುಖದುಃಖಂ ಸ್ನೇಹಂ ದಾಕ್ಷಿಣ್ಯಂ ಸತ್ಯಂ ಶೌಚಮೆಂಬಿವು ಮಿತ್ರಗುಣಂಗಳ್ (ಶಂಕಶಂ. ೨೦೭-೦೯). [ಸಂ.]

**ಮಿತ್ರಘ್ನ** (ಗು). ಮಿತ್ರದ್ರೋಹಿಯಾದ. [ಸಂ.]

**ಮಿತ್ರಜ** (ನಾ). ೧. ಸೂರ್ಯನ ಮಗ. ೨. ಯಮ : ಮೃತ್ಯುಂಜಯನ ವಾಕ್ಯ ತಪ್ಪದೆಂದಾನುಳಿದೆ ಮಿತ್ರಜನ ದಹಿಸಿದಾಗಲೆ ಮೃಳುಹಲಿಲ್ಲವೆ (ಶಶಿವಿಜ. ೯-೩೭). [ಸಂ.]

**ಮಿತ್ರತ್ವ** (ನಾ). ಗೆಳೆತನ ; ಮೈತ್ರಿ ; ಸ್ನೇಹ : ನಿನ್ನಂ ಕಂಡು . . . ಮಿತ್ರತ್ವಕ್ಕಾಸೆಪಟ್ಟು ಬಂದೆಂ ನಿನ್ನೊಳ್ (ಶಂಕಶಂ. ೩. ೨೦೭-೯೩೩) ; ಪೂಣ್ದಿವಾ ರವಿತನೂಜನುಂ ನಾನುಮಗ್ನಿಯೆ ಸಾಕ್ಷಿಯಾಗೆ ಮಿತ್ರತ್ವಮಂ (ಶ್ರೀರಾಮಪು. ೩೦೨-೩೭). [ಸಂ.]

**ಮಿತ್ರದ್ರೋಹ** (ನಾ). ಸ್ನೇಹಿತನಿಗೆ ಬಗೆಯುವ ಕೇಡು : ಗೆಳೆಯನಿಗೆ ಮಾಡುವ ವಂಚನೆ : ಅದನಾಂ ಕೇಳ್ದುಸಿರದಿರ್ದನಪ್ಪೊಡೆ ವಿಶ್ವಾಸಘಾತುಕತ್ವಮುಂ ಮಿತ್ರದ್ರೋಹ [ಪಾಠಾಂ. ಮಿತ್ರದ್ರೋಹತ್ವ. ಮಿತ್ರೋದಾಸೀನ]ಮುಮಪ್ಪುದೆಂದಱಿಪಲ್ಬಂದೆಂ (ಶಂಕಶಂ. ೦೦೦-೯) ; ಅರಶಿನವರಿಂದಾ ನಮಗೆ ಪ್ರಾಣೋಪಕಾರವಾದ್ದಕ್ಕೆ ಅವರಿಗೆ ನಾಉ ಸ್ವಾಮಿದ್ರೋಹ ಮಿತ್ರದ್ರೋಹ ಮಾಡಬಾರದು (ಕೃವಿಶ. ೨೯) ; ಅವ್ಯುತಮತಿಯದು ಪತಿದ್ರೋಹವಾದರೆ, ಚಂಡಶಾಸನನವು ಮಿತ್ರದ್ರೋಹ (ಗಾಕೃಸ. ೭೭). [ಸಂ.]

**ಮಿತ್ರದ್ರೋಹಿ** (ನಾ). ಸ್ನೇಹಿತನಿಗೆ ಕೇಡನ್ನು ಬಗೆಯುವವನು : ಗೆಳೆಯನಿಗೆ ವಂಚನೆಯನ್ನು ಮಾಡುವವನು : ಮಿತ್ರದ್ರೋಹಿಯಾದವನಿಗೆ ಕಾಣುವವರೆಲ್ಲ ಶತ್ರುಗಳೇ (ಗಾದೆ). [ಸಂ. ಮಿತ್ರದ್ರೋಹಿನ್]

**ಮಿತ್ರದ್ವಿಷ** (ನಾ). ೧. ಸೂರ್ಯನ ಹಗೆ : ರಾಹು. ೨. ಸ್ನೇಹಿತನನ್ನು ದ್ವೇಷಿಸುವವನು ; ಗೆಳೆಯನಲ್ಲಿ ಶತ್ರುತ್ವವನ್ನು ಹೊಂದಿದವನು. ೧, ೨ : ದ್ವಿರಸನಂ ಮಿತ್ರದ್ವಿಷಂ ವಕ್ರಗಾಮಿ . . . ಅಶ್ವಾಮಿಷದತ್ತಚಿತ್ತನೆನೆ ಪಾಪಂ ಪೋಲ್ತು ಲೋಕಕ್ಕೆ ಪರ್ತಿಪ ದುರ್ಮೋದನನುಗ್ರನಂ ಕಪಸಿಯೆಂಬಮರ್ಷರ್ (ಸವಾಶ. ೦೯-೦೪). [ಸಂ.]

**ಮಿತ್ರದ್ವೇಷ** (ನಾ). ಸೂರ್ಯನೊಡನೆ ಇರುವ ಹಗೆತನ.—ವೈರ : ದೋಷದೊಡೆತನವೊಂದು ಮಿತ್ರದ್ವೇಷವೊಂದು . . . ಅಬಲೆಯರಾಸ್ಯದಲಿ ಸಂಕ್ಲೇಶಿಯಾಗಿಹುದೊಂದೆನುತೆ ಶಶಿ ಹೇಸಿ ಮೆಲ್ಲನೆ ಜಾಱಿದನು ಪಡುವಣ ಸಮುದ್ರದಲಿ (ಅಕ್ರೂಕ. ೩-೫೦). [ಸಂ.]

**ಮಿತ್ರಪಂಚಕ** (ನಾ). [ವೈದ್ಯಶಾ] ಔಷಧಕ್ಕಾಗಿ ಬಳಸುವ ಬೆಲ್ಲ, ತುಪ್ಪ, ಗುಂಜಿ, ಜೇನುತುಪ್ಪ ಮತ್ತು ಬಿಳುಗಾರ ಎಂಬ, ಪರಸ್ಪರ ಸಹಾಯಕಗಳಾದ ಐದು ಬಗೆಯ ಪದಾರ್ಥಗಳು : ಆ ಭಸ್ಮವನ್ನು ಮಿತ್ರಪಂಚಕದಿಂದ ಕರಗಿಸುವುದು. ಮಿತ್ರಪಂಚಕವೆಂದರೆ ಬೆಲ್ಲ. ತುಪ್ಪ,/ಗುಂಜಿ, ಜೇನುತುಪ್ಪ, ಬಿಳುಗಾರ (ಶಿವ್ಯ. ೫೬). [ಸಂ.]

**ಮಿತ್ರಪುತ್ರ** (ನಾ). ೧. ಸೂರ್ಯನ ಮಗ. ೨. ಶನಿ : ಕ್ಷಿತಿಜನೊಳೊಂದಿದ ಗುರುವಿಂ [ನೇತಾರಂ] ಮಿತ್ರಪುತ್ರನಿಂ ದುಃಖಿ . . . ಎನಿಕಂ ಮನುಜಂ (ಜಾತಕ. ೦೫-೩). ೩. ಯಮ.

ಮಿತ್ರಪುತ್ರಸಂಹರ = ಸೂರ್ಯನ ಮಗನಾದ ಯಮನನ್ನು ನಾಶಮಾಡಿದವನು ; ಶಿವ : ತುಂಗಮಹಿಮಾಕರ ಭೀಕರ ಮಿತ್ರಪುತ್ರಸಂಹರ . . . ಜಂಬ್ರಶೇಖರ (ರಾಜಶೇ. ೦೩-೫೩). [ಸಂ.]

**ಮಿತ್ರಬಲ** (ನಾ). ಸ್ನೇಹಿತರಾಜರ ಬಲ : ಅಖಿಲ ಶಾರ್ದೂಲಂಗಳೇ ಮಿತ್ರಬಲಮಾಗಿಯುಂ ನಿಸರ್ಗದುರ್ಗಗಿರಿಗುಹಾಗಹ್ವರಂಗಳೇ ದುರ್ಗಂಗಳಾಗಿಯುಂ . . . ಮೃಗಾಧಿರಾಜಪದವಿಯೊಳಾಧಿಪತ್ಯಮನಾತ್ಮಸ್ವೀಕೃತಂ ಮಾಡಿ (ಶಂಕಶಂ. ೮. ೨೨-೦೦). [ಸಂ.]

**ಮಿತ್ರಭಾವ** (ನಾ). ಗೆಳೆತನ ; ಮೈತ್ರಿ : ಅವರಲ್ಲಿ ಪರಿಚಯಾಭ್ಯಾಸವೆಂಬುದಿಲ್ಲ ಮಿತ್ರಭಾವವುಮಿಲ್ಲ (ಶಂಶಶಂ. ೦೦೦-೬). [ಸಂ.]

**ಮಿತ್ರಭೇದ** (ನಾ). ೧. ಸ್ನೇಹಿತರಲ್ಲಿ ಉಂಟಾಗುವ ಒಡಕು, — ವ್ಯತ್ಯಾಸ. ೨. ಕನ್ನಡದ ಪ್ರಸಿದ್ಧಗ್ರಂಥವಾದ 'ಪಂಚತಂತ್ರ'ದ ಮೊದಲನೆಯ ಭಾಗ. [ಸಂ.]

**ಮಿತ್ರಮಂಡಲ**, ಮಿತ್ರಮಂಡಳ (ನಾ). ೧. ಸೂರ್ಯಬಿಂಬ. ೨. ಸ್ನೇಹಿತರ ಗುಂಪು. ೧, ೨ : ಹಿಮಕರಮಂಡಲಮಿದು ಶತ್ರುಮಂಡಲಾಭಂ ನೃಪೇಂದ್ರ ಮಸುಳ್ದುದು ಬೇಗಂ ನಿಮಿರಲ್ ಬಗೆದಪುದೀ ಮಿತ್ರಮಂಡಲಂ ಮಿತ್ರಮಂಡಲಾಭಂ ನಿನ್ನಾ (ಅಪು. ೦೨-೫೨). **ಮಿತ್ರಮಂಡಳ** : **೧, ೨** : ರಿಪುರಾಜಮಂಡಳಂ ಕುಂದಿ ಪದ್ಮತೇಜದಿನದೊರ್ಮೆಯುಂ ಪೆರ್ಚದು ಭಾವಿಪೊಡೆಯ್ದೆ ಮಿತ್ರಮಂಡಳಮುಪಚಯಮಂ ತಾಳ್ದುದಂತದುಚಿತಂ ಚಿತ್ರಂ (ಕುಸ್ಕೃ. ೪-೯). [ಸಂ.]

**ಮಿತ್ರಮಂಡಳ** 'ಮಿತ್ರಮಂಡಲ' ನೋ.

**ಮಿತ್ರಲಕ್ಷಣ** (ನಾ). ಸ್ನೇಹಿತನಲ್ಲಿರಬೇಕಾದ ಗುಣ, — ಲಕ್ಷಣ : ಶೀಲಂ ಮಹಾಸ್ನೇಹಂ ಇವು ಮೊದಲಾದ ಮಿತ್ರಲಕ್ಷಣಂಗಳಾವನಲ್ಲಿಯುಂಟು ಆ ಮಿತ್ರನಲ್ಲಿ ತಾನಿಹುದು (ಶಂಶಶಂ. ೨೯೫-೨೨). [ಸಂ.]

**ಮಿತ್ರಲಾಭ** (ನಾ). ೧. ಸ್ನೇಹಿತರನ್ನು ಗಳಿಸಿಕೊಳ್ಳುವಿಕೆ ; ಗೆಳೆಯರನ್ನು ದೊರಕಿಸಿಕೊಳ್ಳುವಿಕೆ. ೨. ಸಂಸ್ಕೃತದ ಪ್ರಸಿದ್ಧಗ್ರಂಥವಾದ 'ಹಿತೋಪದೇಶ'ದ ಮೊದಲನೆಯ ಭಾಗ. [ಸಂ.]

**ಮಿತ್ರವಿಯೋಗ** (ನಾ). ೧. ಸೂರ್ಯನ ಅಗಲಿಕೆ, — ವಿರಹ : ಮಂಥರನಂ ವ್ಯಾಧನುಯ್ವನೆಂದು ಮಿತ್ರವಿಯೋಗದಿಂ ಕಿಜಾವಂ ಬೇಗಂ ದುಃಖಿತರಾಗಿರ್ದೇಗೆಯ್ವೆಮೆನೆ (ಶಂಕಶಂ. ೨೨೬-೯) : ಮಿತ್ರವಿಯೋಗದೊಳೇ ಶತಪತ್ರಂ ಕಡುಗಂದಿ ಕುಂದುಗೊಂಡಿರ್ಪುದು (ಮಲ್ಲಿಪು. ೬-೯). ೨. ಸ್ನೇಹಿತನ ಅಗಲಿಕೆ, — ವಿರಹ : ಮಿತ್ರವಿಯೋಗದೊಳೇ ಶತಪತ್ರಂ ಕಡುಗಂದಿ ಕುಂದುಗೊಂಡಿರ್ಪುದದೇಂ ಚಿತ್ರಮೊ ದೇಹಿಗೆ ಮಾಳ್ಕುಂ ಮಿತ್ರವಿಯೋಗಂ ವಿಶೇಷಮಪ್ಪದಪಟಲಂ (ಮಲ್ಲಿಪು. ೬-೯). [ಸಂ.]

**ಮಿತ್ರವಿರಹ** (ನಾ). = ಮಿತ್ರವಿಯೋಗ ೧ : ದಿವಸದೆವಸಾನದೊಳ್ ಕಮಳವನಂ ಪೀರೊಡಿ ನಾಡೆ ಬಾಡಿದುದೇಂ ಚಿತ್ರಮೊ ಮಿತ್ರವಿರಹದೊಳ್ ಕೊರಗುವುದೆತವೆ ರಜೋಧಿಕಂ ಜಡಾಶಯನಿಳಯಂ (ಕುಸ್ಕೃ. ೦೩-೨೦). [ಸಂ.]

**ಮಿತ್ರಸಮ್ಮಿತ** (ನಾ). [ಕಾವ್ಯಮೀ] ಪ್ರಭುಸಮ್ಮಿತ, ಮಿತ್ರಸಮ್ಮಿತ ಮತ್ತು ಕಾಂತಾಸಮ್ಮಿತವೆಂಬ ಮೂರು ಬಗೆಯ ಅಲಂಕಾರಪ್ರಕಾರಗಳಲ್ಲಿ ಒಂದು ; ▶"ನಮ್ಮ ಕರ್ತವ್ಯಾಕರ್ತವ್ಯಗಳಿಗೆ ಸಾಧಕಬಾಧಕಗಳು ಕಂಡುಬರುವಂಥ ಕಥೆಗಳನ್ನು ರಸಪ್ರಾಧಾನ್ಯವಿಲ್ಲದೆ ಹೇಳಿ ನೀತಿಯನ್ನು ಸೂಚಿಸುವ ಪುರಾಣಾದಿಗಳು 'ಮಿತ್ರಸಮ್ಮಿತ'" (ಕೃಬಿಪ. ೦೬೩ ಅಡಿ) : ಪ್ರಭುಸಮ್ಮಿತ ಮಿತ್ರಸಮ್ಮಿತ ಕಾಂತಾಸಮ್ಮಿತ ಎಂಬ ಮೂರು ಹೋಲಿಕೆಗಳು ಈ ಮೂರರ ದಾರಿಯನ್ನು ಸೂಚಿಸುತ್ತದೆ (ಕಾರಲಾ. ೨೪೪). [ಸಂ.]

**ಮಿತ್ರೆ** (ನಾ). ಗೆಳತಿ ; ಸ್ನೇಹಿತೆ : "ಸಾರಜ್ಞೆ ಮಿತ್ರೆ ಸಖಿಯಾಳಿ ಸಹಜೀವಿತ್ರ ವಯಸ್ಯೆಯೆನೆ ಕೆಳದಿಯಕ್ಕುಂ" (ಶುಂಗರಾ. ೯೦-೫) ; ಮಿತ್ರೆ ನೋಡೆ ! ನೋಡೆ ! ನೀಡುಂ ನೋಡದ ಪಕ್ಕಿಯುಮೆನ್ನಂ ಬಂಜೆಯೆನುತ್ತೇಡಿಪಂತಿರೆನ್ನಿದಿರೊಳ್ ಬಿಳ್ಕಿಯುಂ ಮುದ್ದುಗೆಯ್ಗುಂ (ಲಾವಾಶ್ಯ. ೦೬-೯) : ಮಿತ್ರೆಯರು ವಡಗೂಡಿಯೂ ಸುಚರಿತ್ರೆ . . . ಒಪ್ಪಿರೆ ತೂಗುಮಂಚದೊಳು (ಪಾಗಪ. ೨೫-೦೦). [ಮಿತ್ರ + — ಎ]

**ಮಿಥ** (ಅ). ೧. ಪರಸ್ಪರವಾಗಿ ; ಒಂದಕ್ಕೊಂದು ಪೂರಕವಾಗಿ. ೨. ರಹಸ್ಯವಾಗಿ ; ಗುಟ್ಟಾಗಿ. ೩. ಪರ್ಯಾಯವಾಗಿ ; ಬದಲಾಗಿ. [ಸಂ. ಮಿಥಸ್]

**ಮಿಥಸ್ಸ್ಪರ್ಧೆ** (ನಾ). ಪರಸ್ಪರ ಮಾಡುವ ಹುರುಡು, — ಪೈಪೋಟಿ : ಬಿಸಿಲುಂ ಬೆಳ್ದಿಂಗಳುಂ ಕಟ್ಟಲೆಯುಮಿವು ಮಿಥಸ್ಸ್ಪರ್ಧೆಯಂ ಮಾಣ್ದು ಪೊಣ್ದೊಂದು ಸವಿತ್ವಂ ಪೆರ್ಚೆ ನಿಚ್ಚಂ ನೆಲೆಸಿದುವು (ಶಂಶ್ರಕು. ೦೦-೯೦). [ಸಂ. ಮಿಥಸ್ಸ್ಪರ್ಧಾ]

**ಮಿಥುನ** (ನಾ). ೧. ಜೋಡಿ ; ಯುಗ್ಮ ; ಯುಗಳ : ಶ್ರೀಮನ್ಮಹಾನೇತ್ರವೆನಿಸುವ ಚಕೋರತತಿ ರಾಮಣೀಯಕಮಿಥುನಕೋಕಗಳು ನಲಿಯೆ (ಶಾವಶಂ. ೮-೯). ೨. ಹೆಣ್ಣು ಮತ್ತು ಗಂಡಿನ ಜೋಡಿ ; ದಂಪತಿ : "ಸ್ತ್ರೀಪುರುಷರಿರ್ವರುಮಂ ಮಿಥುನವೆಂಬುದು" (ಹಲಾಯು. ೦೦೬-೦೫) ; ರಾಜಹಂಸಪಾರಾವತಮಿಥುನಂಗಳುತ್ತುಂಗಪ್ರಾಸಾದಶಿಖರಮಣಿಗವಾಕ್ಷಾಂತರಾಳವಿವಿಧಗೃಹಾಂತರಗತಂಗಳಾದುವು (ಶಂಕಲಾ. ೯-೯೯ವ) ; ಅಂತಲ್ಲಿ ಜಿನಚಂದ್ರ(ನೆನಿಪ) ಶ್ರೀಷೇಣನುಂ ಸಿಂಹನಂದೆಯುಂ ಮಿಥುನರಾದರ್ (ಶಾಂತಿಪು. ೬-೦೨೯ ವ) ; ಮನೋಜಸುಖಕ್ಕಳವಳಿಸಿದುವಾಗಳ್ ರಥಾಂಗಮಿಥುನಶತಂಗಳ್ (ಮಲ್ಲಿಪು. ೬-೦೦೩). ೩. ಅವಳಿ ಜವಳಿ ; ಯಮಳ. ೪. ಕೂಟ ; ಸಂಭೋಗ ; ಮೈಥುನ. ೫. [ಜ್ಯೋತಿ] ಜ್ಯೋತಿಶ್ಚಕ್ರದ ಹನ್ನೆರಡುರಾಶಿಗಳಲ್ಲಿ ಮೂರನೆಯದು : ಧನು ಝಷಂ ಸುಂದರಿ ಮಿಥುನಂ ದ್ವಿಸ್ವಭಾವರಾಶಿಗಳೆನಿಕುಂ (ಜಾತ. ೦-೨೩) ; ಮೇಷ ವೃಷಭ ಮಿಥುನ . . . ಮೀನವೆಂಬ ಹನ್ನೆರಡುರಾಶಿಗಳುಂ . . . ತಮ್ಮ ಅಧಿಕಾರಮಂ ಮಾಡುತ್ತಿರ್ಪವು (ಶಿವೇಶ. ೨೨೦). [ಸಂ.]

**ಮಿಥುನತ್ವ** (ನಾ). ದಂಪತಿಗಳಾಗಿರುವಿಕೆ : ಪುಟ್ಟಿದ ಜೀವರಾಶಿ ಮಿಥುನತ್ವದೊಳಲ್ಲದೆ ಪುಟ್ಟದು (ಶಾಂತಿಪು. ೬-೦೦೬). [ಸಂ.]

**ಮಿಥುನರ್ಕ್ಷ** (ನಾ). = ಮಿಥುನ ೫ : ದಿನನಾಥಂ ಮಿಥುನರ್ಕ್ಷದೊಳ್ ನೆಲಸೆ ವಿಧ್ಯಾಪಾರಗಂ ಜ್ಞಾನಿ ಧನ್ಯನೆನಿಕ್ಕುಂ . . . ನರಂ (ಜಾತ. ೦೬-೦೫). [ಸಂ.]

**ಮಿಥುನೀಕರಿಸು** (ಕ್ರಿ). (ಸಂಭೋಗದಲ್ಲಿ) ಸೇರಿರು : ಸುರನರೋರಗರೆಲ್ಲ ಮಿಥುನೀಕರಿಸಿಕೊಂಡಿಹರ್ಎಸೆ ಗುಹ್ಯದ ಲಂಪಟದ ಬದುಕು (ಅಪ್ಪುಶ. ೨-೬೩) ; ಕುಸುಮಲತಾವಾಪಿಗಳುಂ ಅಲ್ಲಿಯಲ್ಲಿಯ ಕ್ರೀಡಾಪರ್ವತದ ಗುಹಾಂತರದೊಳ್ ಮಿಥುನೀಕರಿಸಿ (ಶ್ರೀಗಂಧಿ. ೨೯೦-೦೦). [ಸಂ. ಮಿಥುನೀಕರಣ + — ಇಸು]

**ಮಿಥೋಯುಕ್ತ** (ನಾ). [ನಾಟ್ಯ] ಎಂಟು ಬಗೆಯ ಹಿಮ್ಮಡಿಗಳ ಚಲನೆಗಳಲ್ಲಿ ಒಂದು ; ಪರಸ್ಪರ ಕೂಡಿಕೊಂಡಂತಿರುವ ಹಿಮ್ಮಡಿಗಳ ಚಲನೆ : ಉತ್ಕ್ಷಿಪ್ತ, ಪತಿತ, ಉತ್ಕ್ಷಿಪ್ತಪತಿತ, ಅಂತರ್ಗತ, ಬಹಿರ್ಗತ, ಮಿಥೋಯುಕ್ತ, ವಿಯುಕ್ತ, ಅಂಗುಲಿಸಂಗತ — ಈ ಎಂಟು ಪಾರ್ಷ್ಣಿಯ ಭೇದಂಗಳ್ (ಅಭ್ಯರಂ. ೩-೦೦೦ ವ). [ಸಂ.]

**ಮಿಥ್ಯ** (ನಾ). ೧. ಸುಳ್ಳು; ಹುಸಿ; ಸಟೆ : ಕ್ರೋಧಾರ್ಥರೌದ್ರಮಿಥ್ಯಂಗಳಂ ಪರಿಹರಿಸಿ ಬ್ರಾಹ್ಮಣೋತ್ತಮಮುನೀಶ್ವರರೆನಿಸಿ ನೀವೆ . . . ಮೂಜಗವ ನಿಟ್ಟೊರಸಿ ದೇವರ ಪಿಂಡಿ ಪಿಳಿಯಲು (ಹಕಾ. ೯-೦೬). 'ಮಿಥ್ಯಾವಂತ' ಪರಾ. ೨. ಮಾಯೆ ; ಭ್ರಮೆ : ಮಿಥ್ಯವನೇ ಹಿಡಿದು ಮಿಥ್ಯವನೇ ಪೂಜಿಸಿ ಮರ್ತ್ಯಲೋಕದ ಭಕ್ತರೆಲ್ಲ ವ್ಯರ್ಥವಾದರಲ್ಲ (ಬಸಶಂ. ೨೬೬-೦೨೬೨). [ಸಂ. ಮಿಥ್ಯಾ]

**ಮಿಥ್ಯಾವಂತ** (ನಾ). ಸುಳ್ಳುಗಾರ; ಅಸತ್ಯವಾದಿ : ಜಗವಲ್ಲಿ ಹೊತ್ತು ಹೋರುವ ಮಿಥ್ಯಾವಂತರಿಗೆ ತತ್ವದ ಸುದ್ದಿಯ ಹೇಳಿದರೆ ನಿತ್ಯರುದ್ರನಾದಡೂ ತಪ್ಪನನಾರನೆಂದೆ (ಮೋಳಿಪಾ. ೨೩-೯೯). [ಮಿಥ್ಯಾ ವಂತ]

**ಮಿಥ್ಯಾವಾದಿ** (ನಾ). = ಮಿಥ್ಯಾವಂತ : ಒಡೆಯನತಿಕೋಪಿ ಹೆಂಡತಿ ಮಹಾಮೂರ್ಖೆ . . . ನೆರೆಮನೆಯವರು ಮಿಥ್ಯಾವಾದಿಗಳು (ಹತಕಾ. ೧೨-೩). [< ಸಂ. ಮಿಥ್ಯಾವಾದಿನ್]

**ಮಿಥ್ಯಾಚತುಷ್ಟಯ** (ನಾ). ಇದು ಸುಳ್ಳು, ಇದರ ಪರಿಚಯ ನನಗಿಲ್ಲ, ಆಗ ಅಲ್ಲಿ ನಾನಿರಲಿಲ್ಲ ಮತ್ತು ಆ ಕಾಲಕ್ಕೆ ನಾನು ಹುಟ್ಟಿರಲಿಲ್ಲ ಎಂಬ ನಾಲ್ಕು ಬಗೆಯ ಸುಳ್ಳುಗಳು : ತದ್ವಾರಾವಸಾನದೊಳ್ ನಿಂದು ಮಿಥ್ಯಾಚ[ತು]ಷ್ಟಯಾಲಂಕಾರವಾಗಿರ್ದ ಚತುಃಪಥಸಭಾಮಂಟಪದೊಳಿರ್ದ ವಿಟಕೋಟಿಯುಂ ಕಂಡು (ಶಾಂತಿಪು. ೯-೯೦ ವ). [ಸಂ.]

**ಮಿಥ್ಯಾಚರಣ** (ನಾ). ಬೂಟಾಟಿಕೆ ; ಕಪಟಾಚರಣೆ ; ಸೋಗು : ಮಿಥ್ಯಾಜ್ಞಾನತೆಯಿನಸನ್ಮಿಥ್ಯಾಚರಣಕ್ಕೆ ಸಂದು ಸಲೆ ಸತ್ಪಥಮಂ ತಥ್ಯಮನೊಲ್ಲದೆ ರೋಗಿಗಪಥ್ಯಕ್ರಿಯೆಯಾದ ತೆಱದೆ ಕಿಡುವರ್ ಪಲರುಂ (ಚಂದ್ರಪು. ೧೧-೧೨೩). [ಸಂ.]

**ಮಿಥ್ಯಾಚರ್ಯೆ** (ನಾ). ೧. = ಮಿಥ್ಯಾಚರಣ. ೨. ಸುಳ್ಳು; ಅಸತ್ಯ : "ಈರ್ಷ್ಯಾ, ಕುಹನಾ, ಡಂಭಃ, ಮಿಥ್ಯಾಚರ್ಯಾ . . . ಶಠಕಲ್ಪನಾ — ಈ ೧೧ ಮಾಯೆ" (ಹಲಾಯು. ೧೨೨-೩೭). [ಸಂ. ಮಿಥ್ಯಾಚರ್ಯಾ]

**ಮಿಥ್ಯಾಚಾರ** (ನಾ). = ಮಿಥ್ಯಾಚರಣ : ನಾರೀಸಹಜವಾದ ಅಸೂಯೆ ಮತ್ತು ಪತಿಯ ವಿಶ್ವಾಸಘಾತದ ಹಾಗು ಮಿಥ್ಯಾಚಾರದ ಆಶಂಕೆ . . . ಚೆನ್ನಾಗಿ ಮೂಡಿಬಂದಿದೆ (ಇಶ್ರ್ವ. XIX. ಮುಮ್ನು೩). [ಸಂ.]

**ಮಿಥ್ಯಾಚಾರಿ** (ನಾ). ಬೂಟಾಟಿಕೆ ಮಾಡುವವನು ; ಕಪಟವಾದ ಆಚರಣೆಗಳಲ್ಲಿ ತೊಡಗುವವನು : ಸನಾತನಧರ್ಮವನ್ನು ಒಪ್ಪದವರೂ ವಿರೋಧಿಸುವವರೂ ಸನಾತನಿಗಳೇ ಆದರೂ ಅಂಥಾವರಿಗೂ ನಿರ್ಬಂಧವಿಲ್ಲ. ಅಂಥಾವರು ನಟನೆ ಮಾಡಿ ಮಿಥ್ಯಾಚಾರಿಗಳಾಗಬೇಕಾದುದಿಲ್ಲ (ಆರ್ಯಧ. ೩೦). [ಸಂ. ಮಿಥ್ಯಾಚಾರಿನ್]

**ಮಿಥ್ಯಾಜ್ಞಾನ** (ನಾ). [ತತ್ತ್ವಶಾ] ತಪ್ಪು ತಿಳಿವಳಿಕೆ; ಅಜ್ಞಾನ: ಶತಮತಿ ಮಿಥ್ಯಾಜ್ಞಾನಾಪೃತಮತಿ ಸಂದಂ ದ್ವಿತೀಯನರಕಕ್ಕೀ ಸಂಸೃತಿಯೊಳ್ ಧರ್ಮಾಧರ್ಮಸ್ಥಿತಿಯೆ ವಲಂ ಸ್ವರ್ಗನರಕಸುಖದುಃಖಕರಂ (ಆದಿಪು. ೩-೭೭); ಈತನಚ್ಯುತನಲ್ಲೆನಿಸಿ ವಿಪರೀತ ಮಿಥ್ಯಾಜ್ಞಾನ ತೋಱಿದಡೀತನಲಿ ತಪ್ಪೇನು (ಕುವ್ಯಾಸ. ೯-೧೧) ; ಒಂದು ವಸ್ತುವನ್ನು ಮತ್ತೊಂದೆಂದು ತಪ್ಪಾಗಿ ತಿಳಿಯುವುದೇ ಅಧ್ಯಾಸವು. ಅಧ್ಯಾಸ — ಭ್ರಾಂತಿ, ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ — ಇವೆಲ್ಲಾ ಪರ್ಯಾಯಶಬ್ದಗಳು (ಬ್ರಹ್ಮಸೂ. ೧೧). [ಸಂ.]

**ಮಿಥ್ಯಾಜ್ಞಾನಿ** (ನಾ). ೧. [ತತ್ತ್ವಶಾ] ಸರಿಯಾದ ತಿಳಿವಳಿಕೆಯಿಲ್ಲದವನು : ಅಜ್ಞಾನಿ : ಮಂತ್ರಿನ ಮಿಥ್ಯಾಜ್ಞಾನಿವೋಲ್ ನೀಂ ತರಳತೆ ವೆರಸಿಂತೇಕೆ ವಿಭ್ರಾಂತನಪ್ಪೈ (ಆದಿಪು. ೩-೭) ; ಗರ್ವಿತರು ಮಿಥ್ಯಾಜ್ಞಾನಿಗಳು ಕಲಿಯುಗದ ಮನುಜರು (ಕುವ್ಯಾಆ. ೧೧-೩೪). ೨. ತಾನು ಜ್ಞಾನಿಯೆಂಬ ತಪ್ಪುತಿಳಿವಳಿಕೆಯನ್ನು ಹೊಂದಿರುವವನು : ಮಾನವನೆಂತುಂ ಮಿಥ್ಯಾಜ್ಞಾನಿಗಳಿರ್ದೆಯೊಳಗೆ ನೆಲಸಲೀಯದೆ ನಾಲ್ಕುಂ ಮಾನಸ್ತಂಭಂಗಳ್ ರತ್ನಾನದ್ಧಂಗಳ್ ನಿರಂತರಂ ಸೊಗಯಿಸುಗುಂ (ಆದಿಪು. ೧೧-೨೪) ; ಪ್ರಹಸಿತನೆಂಬೊಂ ಮಗನಾತನ ಕೆಳೆಯುಂ ವಿಕಸಿತನೆಂಬಿರ್ವರುಂ ಮಿಥ್ಯಾಜ್ಞಾನಿಗಳು ಶೂನ್ಯವಾದಿಗಳು (ತಾಪುಂಪು. ೨೦). [ಸಂ. ಮಿಥ್ಯಾಜ್ಞಾನಿನ್]

**ಮಿಥ್ಯಾತಪಸ್ವಿ** (ನಾ). [ಜೈನ] ತೋರಿಕೆಗಾಗಿ ತಪಸ್ಸನ್ನಾಚರಿಸುವವನು: ಮಹಾವೀರನು . . . ಕೇವಲ ದೇಹದಮನ ಮಾಡುವುದು ಮಿಥ್ಯಾತಪಸ್ಸೆಂದು ಒತ್ತಿಹೇಳಿದನು. ಹಾಗೆ ತಪಸ್ಸುಮಾಡುವವರನ್ನು ಮಿಥ್ಯಾತಪಸ್ವಿಗಳೆಂದು ಹೇಳಿದನು (ಜೈಸಲ. ೩೩೦). [ಸಂ. ಮಿಥ್ಯಾತಪಸ್ವಿನ್]

**ಮಿಥ್ಯಾತಪಸ್ಸು** (ನಾ). ತೋರಿಕೆಗಾಗಿ ಮಾಡುವ ತಪಸ್ಸು : ಮಹಾವೀರನು . . . ಕೇವಲ ದೇಹದಮನ ಮಾಡುವುದು ಮಿಥ್ಯಾತಪಸ್ಸೆಂದು ಒತ್ತಿ ಹೇಳಿದನು. (ಜೈಸಲ. ೩೩೦). [ಸಂ. ಮಿಥ್ಯಾತಪಸ್]

**ಮಿಥ್ಯಾತ್ವ** (ನಾ). ೧. ಸುಳ್ಳು: ಹುಸಿ. ೨. ಅಜ್ಞಾನ; ಭ್ರಾಂತಿ; ಮಾಯೆ : ಸುಕವಿ ಸುಕರಕವಿ ಮಿಥ್ಯಾತ್ವಪ್ರಹರಕವಿ ಸುಭಗಕವಿ ನುತಮಹಾಕವೀಂದ್ರಂ ಸರಸ್ವತೀಮುಖಮುಕುರಂ (ಸುಕುಮಾ. ೧-೩೨). ೩. [ಜೈನ] ತತ್ತ್ವಾರ್ಥದಲ್ಲಿ ಶ್ರದ್ಧೆಯಿಲ್ಲದಿರುವಿಕೆ; "ದರ್ಶನಮೋಹನೀಯದಲ್ಲಿ ಮಿಥ್ಯಾತ್ವ, ಸಮ್ಯಗ್ಮಿಥ್ಯಾತ್ವ ಮತ್ತು ಸಮ್ಯಕ್‌ಪ್ರಕೃತಿ ಎಂದು ಮೂರು ವಿಧಗಳು. ನಿಜವಾದ ತತ್ತ್ವಜ್ಞಾನವನ್ನು ನಂಬದಿರುವುದು ಮಿಥ್ಯಾತ್ವವು" (ಜೈಸಲ. ೩೭೭) : ಎಂತಂತೆ ಕೇಳ್ದಮಂತಂತೆ ಮಿಥ್ಯಾತ್ವಮಿನಿಸಿನಿಸು ಪಿಂಗೆ (ವಡ್ಡಾರಾ. ೭-೧೭) ; ತಮಮಂ ದ್ಯುಮಣಿ ಮಯೂಖೋದ್ಗಮಮಾವಳಿವೊಲಳಿಗೆ ಜಗದ ಮಿಥ್ಯಾತ್ವತಮಸ್ತಮಮಂ ನಕಲಂಕದೇವ ಪ್ರಮಾಣರತ್ನಪ್ರದೀಪರಶ್ಮಿಕಲಾಪಂ (ಆದಿಪು. ೧-೧೭). [ಸಂ.]

**ಮಿಥ್ಯಾದರ್ಶನ** (ನಾ). = ಮಿಥ್ಯಾತ್ವ ೩ : ಮಿಥ್ಯಾದರ್ಶನಾವಿರತಿಪ್ರಮಾದ ಕಷಾಯಯೋಗೋಪಾರ್ಜಿತಜ್ಞಾನಾವರಣೀಯಾದಿ ಕರ್ಮಂಗಳ್ ಸಂಸಾರ ಕಾರಣಂಗಳ್ (ಆದಿಪು. ೧೧-೭೩ ವ). [ಸಂ.]

**ಮಿಥ್ಯಾದೃಷ್ಟಿ** (ನಾ). ೧. ಇರುವುದನ್ನು ಇಲ್ಲವೆನ್ನುವ ವಾದ : ಪಾಷಂಡವಾದ; ನಾಸ್ತಿಕತೆ : "ಮಿಥ್ಯಾದೃಷ್ಟಿಃ, ನಾಸ್ತಿಕತಾ — ೨ ಪರಲೋಕವಿಲ್ಲವೆಂಬ ಅಪ್ರಮಾಣಿಕಬುದ್ಧಿಯ ಹೆಸರುಗಳು. ಅಂದರೆ ವ್ಯಾವಹಾರಿಕವೇ ಇಲ್ಲವೆನಿಪ ಬೌದ್ಧಭ್ರಾಂತಿ" (ಸಿದ್ಧಾಂತಿ. ೯೩) ; ಸಂಯಮಿಯ ವರ್ತನೆ ಲೋಕವಿಲಕ್ಷಣವಾದುದು. ಅವನು ತತ್ತ್ವದೃಷ್ಟಿಯಲ್ಲಿ ಸದಾ ಜಾಗರೂಕನಾಗಿಯೂ, ಮಿಥ್ಯಾದೃಷ್ಟಿಯಲ್ಲಿ ವಿಮುಖನಾಗಿಯೂ ಇರುವನೆಂಬುದನ್ನು ವಾಕ್ಯ ಧ್ವನಿಸುತ್ತದೆ (ಧ್ವನ್ಯಾಲೋ. ೧೨೦). ೨. [ಬೌದ್ಧ] "ಇಹವನ್ನೂ ಪರವನ್ನೂ ಕುರಿತು ತಪ್ಪುಭಾವನೆಗಳುಳ್ಳವನು" (ಪತ್ತುಪು. ೧೩ ಟಿಪ್ಪಣಿ) : ಹೆಂಗುಸಾಗಿ ಇದ್ದು, ಮಿಥ್ಯಾದೃಷ್ಟಿ ಯುಪರ ಮನೆಯಲ್ಲಿ ವಾಸಮಾಡಿಯೂ, ಧರ್ಮಕ್ಕಾಗಿ ಹೀಗೆ ಪರಿತ್ಯಾಗ ಮಾಡಿದವರು ಬೇರೆ ಇನ್ನೊಬ್ಬರಿಲ್ಲ (ಪತ್ತುಪು. ೩೪). ೩. [ಜೈನ] ಮಿಥ್ಯಾದರ್ಶನಸಹಿತನಾದ ಜೀವಿ ; ಸಮ್ಯಕ್ತ್ವಜ್ಞಾನವಿಲ್ಲದವನು; ಅಭವ್ಯ : ಮಿಥ್ಯಾದೃಷ್ಟಿಗಳಪ್ಪವರ್ ಶ್ರಾವಕವ್ರತಂಗಳಂ ಕೈಕೊಂಡರ್ (ವಡ್ಡಾರಾ. ೯೩-೯); ಮಿಥ್ಯಾದೃಷ್ಟಿಯಪ್ಪಂ ತನ್ನನೆಂತುಂ ಸಮಱಿ ನೆಗೞ್ವೊಡ ಮಾತನಪಾತ್ರಮೆ (ಆದಿಪು. ೧೧-೯ ವ) ; ಜನಾಪವಾದಭಯದಿಂದೆನ್ನಂ ಬಿಸುಟ್ಟಂತೆ ಮಿಥ್ಯಾದೃಷ್ಟಿಗಳ ನುಡಿಯಿಂ ಕೇಳ್ದರ್ಹತ್ಪರಮೇಶ್ವರ ಶ್ರೀಧರ್ಮಮಂ ಬಿಸುಡದಿರ್ಪುದು (ಪಂಪರಾಮಾ. ೧೩-೭೩ ವ). [ಸಂ.]

**ಮಿಥ್ಯಾಧರ್ಮ** (ನಾ). ನೈಜವಲ್ಲದ ಧರ್ಮ; ಕಪಟದಿಂದ ಕೂಡಿದ ಧರ್ಮ : ಮಕ್ಕಳಿಲ್ಲದವನೂ ಮೂಢನೂ ಆದ ನೀನು ಮಿಥ್ಯಾಧರ್ಮವನ್ನು ಬೋಧಿಸಿ, ಮುದಿಹಂಸದಂತೆ ಜ್ಞಾತಿಗಳಿಂದ ಕೊಲೆಗೆ ಗುರಿಯಾಗುತ್ತೀಯೆ (ವಚಭಾ. ೯೩). [ಸಂ.]

**ಮಿಥ್ಯಾಧ್ಯವಸಿತಿ** (ನಾ). [ಕಾವ್ಯಮೀ] ಒಂದು ಬಗೆಯ ಅಲಂಕಾರ; ⁋ "ಒಂದು ಅರ್ಥವು ಸುಳ್ಳೆಂದು ಸಾಧಿಸಲು ಅಪ್ರಕೃತವಾದ ಮತ್ತೊಂದು ಸುಳ್ಳನ್ನು ಕಲ್ಪಿಸಿ ಹೇಳುವುದಾದರೆ ಮಿಥ್ಯಾಧ್ಯವಸಿತಿ" (ಕುವಲ. ೨೨೯ ಟಿಪ್ಪಣಿ): ಪುಸಿಯಾದರ್ಥ ಸಿದ್ಧ್ಯರ್ಥವಾಗಿ ಪುಸಿಯಿಂದರ್ಥಾಂತರ ಕಲ್ಪನೆ ಮಾಡಿ ಪೇಳಲ್ ಮಿಥ್ಯಾಧ್ಯವಸಿತಿಯೆನಿಸುವುದು (ಕುವಲ. ೧೨೨). [ಸಂ.]

**ಮಿಥ್ಯಾಪವಾದ** (ನಾ). ಇನ್ನೊಬ್ಬರ ಮೇಲೆ ಹೊರಿಸುವ ಅಸತ್ಯವಾದ ಆರೋಪ ; ಸುಳ್ಳುಅಪಾದನೆ : ಮಿಥ್ಯಾಪವಾದದಲ್ಲಿ ಮಾನನಷ್ಟ, ಮಾನನಷ್ಟದಲ್ಲಿ ಮಿಥ್ಯಾಪವಾದ ಇವು ಹೇಗೆ ಪರಸ್ಪರಾಂತರ್ಗತವಾಗುತ್ತವೆ? (ಕೃನರು. ೩೭೧); ಮೂರ್ತಿವಂತದೈನ್ಯವೇ ಅವಳಾಗಿ ನಿಂತಿರುವುದನ್ನು ಕಂಡಾಗ ಎಂಥ ಮಿಥ್ಯಾಪವಾದ ಎಂದಿತು ಮನಸ್ಸು (ಹೊಸಕ್ಷಿ. ೨೨). [ಸಂ.]

**ಮಿಥ್ಯಾಪವಾದಿ** (ನಾ). ಇನ್ನೊಬ್ಬರ ಮೇಲೆ ಅಸತ್ಯವಾದ ಆರೋಪವನ್ನು ಮಾಡುವವನು : ಸ್ವಾಮಿಕಾರ್ಯವಿಘಾತಕಂಗತಿಕಾಮುಕಗೆ ಮಿಥ್ಯಾಪವಾದಿಗೆ. . . ಪರಲೋಕವಿಲ್ಲ (**ಶಬ್ದಾ.ಕ. ೯–೨೬**). [ಸಂ. ಮಿಥ್ಯಾಪವಾದಿನ್]

**ಮಿಥ್ಯಾಪ್ರತ್ಯಯ** (ನಾ). = ಮಿಥ್ಯಾಜ್ಞಾನ : ಒಂದು ವಸ್ತುವನ್ನು ಮತ್ತೊಂದೆಂದು ತಪ್ಪಾಗಿ ತಿಳಿಯುವುದೇ ಅಧ್ಯಾಸವು. ಅಧ್ಯಾಸ, ಭ್ರಾಂತಿ, ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ – ಇವೆಲ್ಲಾ ಪರ್ಯಾಯಶಬ್ದಗಳು (**ಬ್ರಹ್ಮಸೂ. ೧೦**). [ಸಂ.]

**ಮಿಥ್ಯಾಭಾವನೆ** (ನಾ). = ಮಿಥ್ಯಾದೃಷ್ಟಿ ೩ : ಸಾಗರದತ್ತನೆಂಬ ಪರದಂಗೆ . . . ಗುಣವತಿಯೆಂಬ ಮಗಳಾಗಿ ಮಿಥ್ಯಾಭಾವನೆಯಿಂ ಕಾಲಂಗೆಯ್ದುನಿತಾನುಂ ಕಾಲಂ ತಿರ್ಯಗ್ಗತಿಯೊಳ್ ತಿರಿತಂದು (**ವಡ್ಡಾರಾ. ೧೬–೪೯ ಪ**). [ಸಂ. ಮಿಥ್ಯಾಭಾವನಾ]

**ಮಿಥ್ಯಾಭಿಯೋಗ** (ನಾ). = ಮಿಥ್ಯಾಪವಾದ : "ಮಿಥ್ಯಾಭಿಯೋಗಃ-ಅಭ್ಯಾಖ್ಯಾನಂ–೨ ಇಲ್ಲದ್ದನ್ನು ಕಲ್ಪಿಸಿ ಆಕ್ಷೇಪಿಸುವುದಕ್ಕೆ ಪೆಸರುಗಳು" (**ಸಿದ್ಧಾಂತಿ. ೩೨**): ಮಳಯಕೇತುವೆಂಬ ರಾಜತನೂಜನತಿತೇಜಿಷ್ಣನಾಗಿ ತನ್ನ ಮಂತ್ರಿ ಮುದ್ರಾರಾಕ್ಷಸಂಗೆ ತಥ್ಯಾಭಿಯೋಗಮಾದೊಡಂ ಮಿಥ್ಯಾಭಿಯೋಗವೆಂದು ನಿಶ್ಚೈಸಿ (**ಶಂಕಶಂ. ೨೧೮–೦೬**). [ಸಂ.]

**ಮಿಥ್ಯಾವಾದ** (ನಾ). ಸುಳ್ಳುಮಾತು; ಹುಸಿನುಡಿ. [ಸಂ.]

**ಮಿಥ್ಯಾವಾದಿ** (ನಾ). ೧. [ಅದ್ವೈತ] ಶಂಕರಾಚಾರ್ಯರ ಅನುಯಾಯಿ; ಅದ್ವೈತಿ; ◼ ಅದ್ವೈತಮತದಲ್ಲಿ ಬ್ರಹ್ಮವೇ ಸತ್ಯ, ಜಗತ್ತು ಮಿಥ್ಯೆ ಎಂದು ಹೇಳುವುದರಿಂದ ಆ ಪಂಥಕ್ಕೆ ಸೇರಿದವನಿಗೆ ಮಿಥ್ಯಾವಾದಿಯೆಂದು ಹೆಸರು. ೨. [ಬೌದ್ಧ] ಬೌದ್ಧರಲ್ಲಿ ಒಂದು ಪಂಗಡದವನು ; ವಿಜ್ಞಾನವಾದವನ್ನು ಆಶ್ರಯಿಸಿದವನು : ಈ ಸ್ವಸಂವಿತ್ತರಂಪರೆ ಪೋಕುಂ ಪ್ರಳಯಕ್ಕೆ ತತ್ಕ್ಷಣಿಕ ಮಿಥ್ಯಾವಾದಿವಾದೀಂದ್ರರಿಂ (**ಶಾಂತಿಪು. ೬–೦೯೩**). [ಸಂ. ಮಿಥ್ಯಾವಾದಿನ್]

**ಮಿಥ್ಯಾವಿನಯ** (ನಾ). ಕಪಟದಿಂದ ಕೂಡಿರುವ ನಮ್ರತೆ; ಸೋಗಿನ ಸೌಜನ್ಯ : ಕೆಮ್ಮನೆ ನಿಮ್ಮನಚ್ಚಿಗಂಬಡಿಸಿದೆನೆಂದು ಚಾಟುವಚನಂಗಳಂ ಮೆಚಿದು ಮಿಥ್ಯಾ ವಿನಯವಿನೋದೋಪಗೂಹಿತಸ್ವಾಂತಚಿಂತಿತಚಿತ್ತನಾಗಿರ್ದಂ (**ಜಗ. ೩–೨೨ ವ**). [ಸಂ.]

**ಮಿಥ್ಯಾಶಲ್ಯ** (ನಾ). [ಜೈನ] ವ್ರತಿಕನಿಗೆ ಬಾಧಿಸುವ ಮಾಯೆ, ಮಿಥ್ಯೆ ಮತ್ತು ನಿದಾನ ಎಂಬ ಮೂರು ಬಗೆಯ ಶಲ್ಯಗಳಲ್ಲಿ ಒಂದು ; ಮಿಥ್ಯಾದೃಷ್ಟಿಯನ್ನು ಹೊಂದಿರುವುದು : ಪೊಲ್ಲಮೆಯಂ ಮಾಡುವ ಮಿಥ್ಯಾಶಲ್ಯಂ ಮಾಯಾಶಲ್ಯಂ ನಿದಾನಶಲ್ಯಮೆಂಬ ಮೂಱುಂ ಶಲ್ಯಂಗಳಂ ಪಿಂಗಿದಂ (**ಧರ್ಮಾಮೃ. ೩–೦೩೦**) ; ಮಿಥ್ಯಾದೃಷ್ಟಿಗಳೊಳಂ ರಾಗಿಸಿದುದು ಮಿಥ್ಯಾಶಲ್ಯಮಕ್ಕುಂ (**ಶ್ರಾವಕಾ. ೦೨೩–೨**). [ಸಂ.]

**ಮಿಥ್ಯೆ** (ನಾ). ೧. ಅಸತ್ಯ ; ಸಟೆ ; ಸುಳ್ಳು : "ಅಳೀಕಂ, ವಿತಥಂ, ಮಿಥ್ಯಾ, ವೃಷಾ, ಅನೃತಂ – ಈ ೫ ಅಸತ್ಯದ ಪೆಸರ್" (**ಹಲಾಯು. ೨೩–೦೯೩**); ಪದಪದ್ಮಾನತನಾದ ಕಾದಲನ ಸೋಂಕಿಂದಾದ ರೋಮೋದ್ಗಮಂ ವಿದಿತಂ ಮಾಡೆ ಮನಃಪ್ರಸಾದಮಿದನೇನೆಂದೀರ್ಷೆಯಿಂ ಮಿಥ್ಯೆಯಿಂ ಪದುಳಂ ಮಾಡುವೆ ಮುಗ್ಧೆ (**ಮಲ್ಲಿಕಾ.೭–೬೬**). ೨. [ತತ್ತ್ವಶಾ] ಅಜ್ಞಾನ : ಮಾಯೆ : ಭ್ರಮೆ : ಮಿಥ್ಯೆಯನಳಿದುಳಿದ ಸತ್ಯಪ್ರಸಾದಿ . . . ಕೂಡಲಸಂಗಮದೇವರಲ್ಲಿ ತಾನೇ ಪ್ರಸಾದಿ (**ಬಸವ. ೯೮೨**) ; ಮಿಥ್ಯೆಯೆಂದೊಡೆ ಗಗನಕುಸುಮದೊಲಿತ್ತ ಭಾವಿಪುದು (**ಗಗಶಾ. ೨೦–೭೯**): ಈ ಜಗತ್ತು ಸತ್ಯವಾದುದು (ಮಿಥ್ಯೆಯಲ್ಲ, ಸುಳ್ಳಲ್ಲ) (**ಶಾರದ. ೨೭೩**). ೩. ಸತ್ತು ಮತ್ತು ಅಸತ್ತುಗಳೆಂಬ ಎರಡು ಮಾರ್ಗಕ್ಕೂ ಸೇರದುದು ; ಸದಸದ್ವಿಲಕ್ಷಣವಾದುದು : ಮಿಥ್ಯೆ, ಸುಳ್ಳು ಎಂಬ ಪದಕ್ಕೆ ಈಗ ಜನರು ಯಾವ ಅರ್ಥವನ್ನು ತಿಳಿಯುವರೋ ಶಾಸ್ತ್ರದಲ್ಲಿ ಆ ಅರ್ಥವಲ್ಲ. ಅದು ಎಂತಹುದೆಂದರೆ ಸದಸದ್ವಿಲಕ್ಷಣವು. ಸತ್ತೆಂದರೆ ಪರಬ್ರಹ್ಮನು. ಅಸತ್ತೆಂದರೆ ಶಶಶೃಂಗ ಮೊದಲಾದ ತುಚ್ಛಪದಾರ್ಥಗಳು. ಇಂತಹ ಎರಡು ವಿಧವಾದ ಮಾರ್ಗದಲ್ಲೂ ಸೇರಿದುದಲ್ಲವೆಂದು ನಿರ್ಣಯವೇ ಮಿಥ್ಯಾಪದದ ಅರ್ಥ (**ಹಿಂದಶಾ. ೨೨೪**). ೪. = ಮಿಥ್ಯಾಶಲ್ಯ : ಶಲ್ಯಗಳು ಮೂರು– ಮಾಯಾ, ಮಿಥ್ಯಾ ಮತ್ತು ನಿದಾನ . . . ಮಿಥ್ಯೆ ಎಂಬುದು ದೃಷ್ಟಿವಿಕಾರವು. ಇದು ತತ್ತ್ವಶ್ರದ್ಧೆಯ ಅಭಾವವೂ ಆಗಿದೆ (**ಶ್ರಾವಕಾ. ೩೬೩–೭೬**). [ಸಂ. ಮಿಥ್ಯಾ]

**ಮಿದಿ**$_1$ (ಕ್ರಿ). ೧. ಬತ್ತ ಮುಂತಾದ ಧಾನ್ಯವನ್ನು ಒನಕೆಯಿಂದ ಕುಟ್ಟು,– ತಳಿಸು,– ತೊಳಸು : "ಮಿದಿ – ಮುಸಲಕ್ರಿಯಾಯಾಂ (ಕುಟ್ಟು), ಘಾತ, ಮರ್ದನಯೋಃ (ಅರೆಯು, ಜಜ್ಜು)" (**ಶಮದ**): ಕೊಟ್ಟನಿತು ಬತ್ತವ ಮಿದಿದು . . . ಕಾಲವನು ಸವೆಯಿಸುತಿರ್ದನು (**ಹಕಾ. ೦೨–೪**): ಲೆಕ್ಕಿಪರಾರು ಕಲ್ಲಜಿಗಳ ಮೇಲೆ ಧುಮ್ಮಿಕ್ಕಿ ನೃತ್ಯವನಾಡುವಂತೆ ಸೊಕ್ಕಿದ ಗಜದಂತಮುಸಲದಿ ಪರ್ಬಿದಿರಕ್ಕಿಯ ಮಿದಿವ ಹೆಣ್ಣುಗಳ (**ನೋಹಕ. ೦೯–೬೪**). ೨. (ಹಿಟ್ಟಿನಂತೆ) ನಾದು; ಮಿಸ್ತು : ಕುಮರರು ಬಿಲ್ಲ ಜಲ್ಲಣಿಯ ಕೇಣಿಯನಲ್ಲಿ ಕೆಲರ್ ನಿಶಾಟರುಣ್ಮಿದ ಬಿಸುನೆತ್ತರೊಳ್ ಮಿದಿದು ನುಣ್ಣನೆ ನುಂಗಿದರ್ (**ಶಂಕಶಾ. ೦೨–೬**) ; ಶಾರದಾಭ್ರಸಂಕುಳಮಸುಱಿ ಮಿದಿದು[**ಶಾಕಂ.** ಮಿದ್ದು] ಮುದ್ದೆಯನಾಗಿಸಿದನಜನೆನಲ್ ಬೆಳ್ಪೆಚ್ಚಿಸೆದುದು (**ಶಂಪಮಾ. ೨–೩೯**). ೩. ಹಿಸುಕು : ಅಮುಕು : ಮಲ್ಲನ ನಡಸಿ ತಿವಿದು ಕಡುಪಿಂ ಕೆಡೆ ಪಿ ಕೊಪ್ಪರದೊಳ್ ಕುಮ್ಮಿ ಮುಂಡಿಯೊಳ್ ಮಿದಿದು ಕುದಿದು ಸದೆದು ಸಣ್ಣಿಸುವ ಚೊಕ್ಕಯದಾಸೆಗೆ ಪೊಕ್ಕ ಮಲ್ಲನನಿಕ್ಕಿ ಮೆಟ್ಟಿ (**ಗಂಕ. ೨–೦೦೩ ವ**); ಸೆಲೆಗಳ ಸಂದನೆತ್ತಿ ಮಿದಿದಾರ್ದಿಱಿದುಣ್ಮುವ ನೆತ್ತರಿಂದೆ ಕೊಪ್ಪರಿಗೆಯೊಳಿರ್ದ ಬತ್ತಿಗಳ ರಾಶಿಗಳಂ ನೆನೆಯಿಕ್ಕಿ (**ತ್ರಿಷು. ೯೭–೦೨**). ೪. ಅರೆ ; ನುಣ್ಣಗಾಗಿಸು : ಮರ್ದಿಸು : "ಸಮ್ಮರ್ದಃ, ಪರಿಮಳಃ–ಈ ೨ ಮಿದಿವುದು" (**ಹಲಾಯು. ೦೨೭–೮೪**) ; ಮಿದಿದಿಂಬಾಗಿರೆ ಖರ್ಜೂರದ ಪಣ್ಣಂ ನಾರಿಕೇಳಮಂ ಶರ್ಕರೆಯಂ ಪುದಿದಡುಗೆ ಕಣಿಕದೊಳ್ (**ಲೋಕೋಕ. ೬–೬**). ೫. ಉಜ್ಜು ; ತಿಕ್ಕು : (ಕ). ೬. ತುಳಿ ; ಮೆಟ್ಟು : 'ಮಿದಿತ' ಪರಾ. ೭. ಕೊಲ್ಲು ; ಸಂಹರಿಸು : ಬಿರಿಯ ಮಿಟ್ಟು[ವ]ಂ ಮಿದಿದೊಡಲ್ಲದಣಂ ಮುಳಿಸಾಱದೆಂದು ಪಲ್ಮೊರೆದಪನಲ್ಲಿ ಮನ್ಮಥಂ (**ಶಂಕಶಾ. ೨–೦೩**). ೮. ಅಂಕೆಯಲ್ಲಿರಿಸು ; ದಮನ ಮಾಡು ; ನಿಗ್ರಹಿಸು : ಈ ಸಂಸಾರಿಗಳ ಸುಖಪಾತ್ರವಿಲ್ಲೆಂದು ಮಿದಿದು ಮನವನು . . . ಷಡುವರ್ಗವನು ಗೆಲಿದೆನು (**ಶಿಬಾಗ. ೭–೦೩–೨೩**). ೯. ಕೂಡಿಸು ; ಹೊಂದಿಸು : ಪಂಪನು ಅರಿಕೇಸರಿಯ ಸೈನ್ಯಾಧಿಪತಿಯಾಗಿ . . . ಉನ್ನತಿಯ ಮೆಟ್ಟಲುಗಳ ತುತ್ತತುದಿಯನ್ನೇರಿದ್ದನೆಂಬುದರಿಂದಲೇ ಆ ಅರಸರೆದೆಯ ಹದವನ್ನು ಮಿದಿದು ನೋಡಿಕೊಳ್ಳಬಹುದು (**ನಾಡೋಜ. ೯೪**) ; ಪಟ್ಟದಿಯನ್ನೂ ಕನ್ನಡನುಡಿಯನ್ನೂ ಅವನು ಮಿದಿದು ಹದಗೊಳಿಸಿದ್ದಾನೆ (**ಕಸಾಚ. ೦೬೨**). [ದೇ.II ತಮಿ. ಮಿತಿ; ಮಲ. ಮೆತಿ; ತುಳು. ಮೆದ್, ಮೆದಿ, ಮೆದು; ತೆಲು. ಮೆದುಗು, ಮೆದುಚು, ಮೆದುಪು]

**ಮಿದಿ**$_2$ (ನಾ). ೧. ಒನಕೆಯಿಂದ ಕುಟ್ಟುವುದು. ೨. ಸಂಹಾರ ; ನಾಶ : "ಮುಸಲಘಾತದೊಳು ಸಂಹಾರದೊಳು ಮಿದಿ" (**ಶಬ್ದಮಂ. ೯೯**). [<ಮಿದಿ$_1$./ತಮಿ. ಮಿತಿ]

**ಮಿದಿಕೂಲಿ** 'ಮಿದಿಗೂಲಿ' ನೋ.

**ಮಿದಿಗೂಲಿ, ಮಿದಿಕೂಲಿ** (ನಾ). ಬತ್ತವನ್ನು ಕುಟ್ಟಿದುದಕ್ಕಾಗಿ ಕೊಡುವ ಮಜೂರಿ : "ಮಿದಿಗೂಲಿ – ಭತ್ತ ಕುಟ್ಟಿದ ಕೂಲಿ" (**ಶಾವಕೋ. ೩೦**). **ಮಿದಿಕೂಲಿ :** ಈ ದೇವರುಗಳ ಅಮೃತಪಡಿ ದಿನವೊಂದಕ್ಕೆ ನಿತ್ಯಪಡಿ ಅಕ್ಕಿ . . . ಮಿದಿಕೂಲಿ ಸಹಿತ ಸಲಗೆ ಹದಿನಾಲ್ಕು ಕೊಳಗ ಹನ್ನೊಂದು ಬಳ್ಳ

ಮೂಜಿಬಿ ಲೆಕ್ಕದೆ (ಎಳ. V (R), ತಿರುಮ. ೯೯-೯೦; 1269).
[ಮಿದಿ$_1$ + ಕೂಲಿ$_1$]

**ಮಿದಿತ** (ನಾ). ಮೆಟ್ಟುವಿಕೆ ; ತುಳಿತ : ಕಲಹ, ಕಪಟ, ಕುದಿತ, ಮಿದಿತ . . . ಇವಕೆ ಇಗೋ ಹೇಸಿದೆ (ಭಾರಂಗ. ೩೮-೦೩). [ಮಿದಿ$_1$ + — ತ$_2$]

**ಮಿದಿಪ, ಮಿದಿಹ** (ನಾ). ೧. ಕುಟ್ಟುವಿಕೆ : ಮಿದಿಪಂ, ಮಿದಿಪಂಗಳ್; ತಳಿಪಂ, ತಳಿಪಂಗಳ್ (ಶಬ್ದ.ಮ. ೩೬೬ ಪ್ರಯೋ). **ಮಿದಿಹ :** ೨. ಚೆನ್ನಾಗಿ ಕಲಸುವಿಕೆ ; ನಾದುವಿಕೆ : ಕುಂಬಾರನ ಮಣ್ಣಿನಂತೆ ಮಿದಿಹಕ್ಕೆ ಮಂದು ಧಾನ್ಯದಂತೆ ಹಗೇವಕ್ಕೆ ಮಂದು (ಬಸವೇಶ್ವ. ೩-೭೭). [ಮಿದಿ$_1$ + — ಪ$_2$]

**ಮಿದಿಲ್** (ಕ್ರಿ). (?) : ಆ ಮದಕಳಕ್ರೂರಶೂರಶೌರಭೇಯಂಗಳ್ . . . ಭೂತಳಮಂ ಕೊಳಗಿಂ ಪರಡುತ್ತುಮುನುಮಾಯುಗೆ ಮಿದಿಲ್ದು ಕೆಯ್ಯಿಕ್ಕುವ ಸೊಕ್ಕಾನೆಗಳಂತೆ ತಲೆಯಿಕ್ಕಿ ತೊಲಗದ ಮನದ ಕನಲಿಕೆಯಿಂ ಕಾದಿ (ಅರ್ಜನೀ. ೪-೦೨೩ ವ). [ ? ]

**ಮಿದಿಸು** (ಕ್ರಿ). ಧಾನ್ಯವನ್ನು ಒನಕೆಯಿಂದ ಕುಟ್ಟಿಸು : ಎದ್ದು ಮುನ್ನಿನ ದಿವಸದಲಿ ಬಿತ್ತಿದ್ದ ಬೀಜವನಾಯ್ದುದಕದಿಂದದ್ದಿ ತೊಳೆತಂದಾಗ ಹುರಿ ಯಿಸಿ ಮಿದಿಸಿ ಬೋನವನು ಇದ್ದ ಪೆರಿಯಲಿ ಮಾಡಿ ಗಡಣಿಸಿ (ಬಸವ. ೨೮-೪೯). [ಮಿದಿ$_1$ + — ಇಸು$_2$]

**ಮಿದಿಹ** ‘ ಮಿದಿಪ ’ ನೋ.

**ಮಿದು, ಮಿತು, ಮೆತು, ಮೆದು** (ಗು). ೧. ಮೃದುವಾದ; ಮೆತ್ತಗಿರುವ: “ಮಿದು (ಮೆದು, ಮೆಲ್), ಮೃದು=ಮೆತ್ತನೆ” (ಕರ್ಣಕೋ. ೩೫). ೨. ನಿಧಾನ ಸ್ವಭಾವವುಳ್ಳ. ೩. ಹಿತವಾದ; ಕೋಮಲವಾದ. (ನಾ). ೪. ಮೃದುವಾದುದು ; ಮೆತ್ತಗಿರುವುದು : ಹೊಳೆವ ಮಿದುವಹ ಹಂಸತೂಲದ ಮಲಗುತಿಹ ಸತಿಗೀ ವಿಧಿಯೆ (ಪಳಿತ. ೫-೨); ಮಿದು ನಸು ಗೆಂಪು ದಟ್ಟಮಿದು ಶೋಭಿಪ ಪಾದತಳಂಗಳಾ ಸುದತಿಗೆ ತೋರ್ದೊಡಾಕೆ ಸೊಬಗಂ ಪತಿಗೊಂದಿಪಳ್ (ಹಾಡಾನ್ಯ. ೦-೦೩-೩೦); ಹತ್ತಿಯು ಉಣ್ಣೆಯು ಹಾಗೆ ಮಿದುವಿರುತ್ತದೆ (ಮುಂಜಾವು. ೪-೨೬). ೫. ಹಿತ ; ಕೋಮಲ : ಮಿದುವಾಗಿ ಹದಗೊಂಡು ಹರಿವುದೀ ಹಾಡು (ನೆಲಮು. ೩-೨). **ಮಿತು :** ೪. ‘ಮಿತುವಾಸಿಕೆ’ ಪರಾ. **ಮೆತು :** ೨. ‘ಮೆತುಮನುಷ್ಯ’ ಪರಾ. **ಮೆದು :** ೨. ಏನೋ ಮುಗಿದಿದೆ ಏನೋ ಬರಲಿದೆ, ರಾಗವಲ್ಲಿ ಮೆದು ಹುಸಿಗಾಲ (ಅರಳು. ೨೬೩-೨). ೫. ಆಕೆ “ ಮಗುವಿನ ಮೇಲೆ ಇಷ್ಟೊಂದು ಸಿಟ್ಟೇಕೆ? ” ಎಂದು ಮೆದುವಾಗಿ ಪತಿಯನ್ನು ಪ್ರಶ್ನಿಸಿದಳು (ಹಾಹುತ. ೨೭).
[<ಸಂ. ಮೃದು./ತಮಿ. ಮೆತು; ತುಳು. ಮೆದು; ತೆಲು. ಮೆತಕ, ಮೆತುಕ, ಮೆತ್ತ; ನಾಯ್ಕ. ಮೆತ್ತ]

**ಮಿದುಗ, ಮೆದುಗ** (ನಾ). ಮೃದುಸ್ವಭಾವವನ್ನು ಹೊಂದಿರುವವನು ; ನಿಧಾನಸ್ಥ :“ನರಃ . . . ನರ್ತಾ, ಈ ೪ ಮಿದುಗಂ” (ಶಾಶಕ. ೦೪೨). **ಮೆದುಗ:** ನಿನ್ನಂತಹ ಹುಡುಗಿಯು ಸ್ವಾತಂತ್ರ್ಯವನ್ನು ಅಂತಹ ಮೆದುಗನು ಹೇಗೆ ಸುಲಭವಾಗಿ ವಶಪಡಿಸಿಕೊಂಡನೆಂಬುದೇ ಆಶ್ಚರ್ಯದ ಸಂಗತಿ (ಅಕಾರ. ೨೨೦). [ಮಿದು + — ಗ$_2$]

**ಮಿದುಡಿಸು** (ಕ್ರಿ). ಚೆನ್ನಾಗಿ ಕಲಸು, — ಮಿಶ್ರಮಾಡು : ತುಪ್ಪದೊಳಗೆ ಮಿದುಡಿಸಿದ ಹುರಿಯಿಟ್ಟು ಹುರಿದ ಹಾಲಿನ ಮದ್ದಿಸುದುರೆ ಹಪ್ಪಳದ ಹುಡಿ ಬಡಗಸುಂಡಗೆ ಮುಗುಳ್ವಪದ ಸೊಜ್ಜಿಗೆ ಹುರಿದ ತೆಂಗಾಯ ಕುಸುರಿಯಂ ಪುದಿದಿಕ್ಕಿ (ಸೂಪಶಾ. ೫-೨೭). [ಮಿದುಡು$_1$ + — ಇಸು$_3$]

**ಮಿದುಡು$_1$** (ಕ್ರಿ). ಚೆನ್ನಾಗಿ ಕಲಸು ; ನಾದು ; ಮಿದ್ದು : ಹದನಾಗಿ ಕಾಯ್ದ ಹಾಲಿನ ಗಟ್ಟಿ ಕೆನೆದೆಗೆವುತದನೊಂದು . . . ತಳಿಗೆಯೊಳಗೆ ಹರಹಿ ಕೊಂಡದರ್ಧಮಂ ಮಿದುಡಿ ಕಜ್ಜಾಯ ಮಾಡುವುದು (ಸೂಪಶಾ. ೦-೩೯); ಅದು ಬೇಯದುದುದಾರಿದೊಡೆ ಮತ್ತೊಮ್ಮೆ ಚೆನ್ನಾಗಿ ಮಿದುಡಿ ಗೋಳಕಗಳಂ ಮಾಡಿ ತುಪ್ಪದೊಳು ಸುಡಲದು ತಾನೆ ನಕ್ಷತ್ರಫೇನ (ಸೂಪಶಾ. ೦-೬೪). ‘ಮಿದ್ದು’ ಪರಾ. [<ಮಿದಿ$_1$]

**ಮಿದುಡು$_2$** ‘ ಮಿದುಳ್ ’ ನೋ.

**ಮಿದುದನಿ** (ನಾ). ಮೃದುವಾದ ಧ್ವನಿ : ಕೋಮಲಸ್ವರ : “ಸ್ವಲ್ಪ ಹೊರಗೆ ಬರತೀರಾ?” ಎಂದು ಮಿದುದನಿಯಿಂದ ಅಂದಳು (ಗಂಗಾಸಾ. ೮).
[ಮಿದು + ದನಿ$_1$]

**ಮಿದುನಗೆ** (ನಾ). ಮೃದುವಾದ ನಗೆ ; ಮಂದಹಾಸ : ಚೆಲುವೆಯ ಮೊಗದೊಳು ಮಿದುನಗೆ ಮೊಳೆವಂದು ದೆಸೆದೆಸೆ ಬೆಳಗಿತೋರಂತೆ (ಇಂದಾಶ. ೦೩೮-೩೦). [ಮಿದು + ನಗೆ]

**ಮಿದುನುಡಿ** (ನಾ). ಇಂಪಾದ ಮಾತು ; ಮೃದುವಚನ : ಮಲ್ಲಿ ಮಿದು ನುಡಿಯಿಂದೆಂದಳು (ನವಣೀ. ೨೩); ಅವರು ಜೀವಂತರಾಗಿರುವರೆಂಬುದನ್ನು ಕೇಳಿಯೇ ನನಗೆ ಪರಮಾನಂದವಾಗಿ ಹೋಗಿರುವುದು ಎಂದು ಮಿದುನುಡಿ ಗಳನ್ನಾಡಿದಳು (ಚಿನ್ನಸೀ. ೦೬೪). [ಮಿದು + ನುಡಿ$_2$]

**ಮಿದುಪು** (ನಾ). ಮೃದುವಾಗಿರುವುದು : ವದನಸುಕಲಾಪೂರ್ಣಪೀಯೂಷ ಕರಣನಿಂದುದಿತಾಮೃತಂ ತೆಕ್ಕನುಜಿ ತೀವುತುಭಯಪಾರ್ಶ್ವದೊಳಿಳಿಯೆ ತತ್ಪಸಾದವ ಸವಿಯಲೇದು ಶ್ರೀಭೂದೇವಿಯರ್ಕಳೊಲ್ದು ಮಿದುಪಾದ ಪಚ್ಚೆರ [ ಪೊಚ್ಚೆರೆ ] ಗಳಾಂತಂತೆ ಕಣ್ಗೆ ಚೆಲ್ವೊದವಿಸಿದುವು . . . ಕರ್ಣ ದ್ವಯಂ (ಸಂದಿವಶಾ. ೮-೪೩). [ಮಿದು + — ಪು$_2$]

**ಮಿದುಬೆಲ್ಲ** (ನಾ). ಮೃದುವಾಗಿರುವ ಬೆಲ್ಲ : ಜಗವೆಲ್ಲವು ಮಿದುಬೆಲ್ಲವು ಅಗೊ ಮಲ್ಲಿಗೆಮೊಗ್ಗೆ (ನೆಲಮು. ೭-೦೪). [ ಮಿದು + ಬೆಲ್ಲ ]

**ಮಿದುಲು** ‘ ಮಿದುಳ್ ’ ನೋ.

**ಮಿದುಳ್, ಮಿದುಡು$_2$, ಮಿದುಲು, ಮಿದುಳು, ಮೆದಡು, ಮೆದುಳು** (ನಾ). ೧. ಮನುಷ್ಯನ ಮತ್ತು ಇತರ ಕಶೇರುಕಪ್ರಾಣಿಗಳ ತಲೆ ಬುರುಡೆಯೊಳಗೆ ಸುತ್ತುಸುತ್ತಾಗಿ ಬಳಸಿಕೊಂಡು ಮುದ್ದೆಯಂತಿ ರುವ, ಬುದ್ಧಿಶಕ್ತಿಗೆ ಆಧಾರವಾಗಿರುವ ಒಂದು ಅವಯವ ; ಮಸ್ತಿಷ್ಕ:“ಮಸ್ತಿಷ್ಕಮೆಂಬುದು ತಲೆಯ ಮಿದುಳ್” (ಹಲಾಯು. ೦೦೪-೦೩); ಮಿದುಳುಣ್ಮೆ ಪುಷ್ಪಕೃತಶೇಖರದಂತಿರೆ ಕೊಂಡುಪೋದರಚ್ಚರಸಿಯರಿಣ್ಣ ಸತ್ತ ಭಟರಂ ಕೊನೆವಿಶಾಸೆಯು ಚೆನ್ನ ಗಂಡರಂ (ಗದಾಯು. ೪-೨೨) : ಬೀಸಿ ಕರಮೆತ್ತಿ ಪೊಯ್ದಡೆ ಸೂಸಿ ಮಿದುಳ್ ಪೊಟ್ಟನೊಡೆಯೆ ತಲೆ (ಶಿಂಹಂ. ೬-೩೬) ; ಮಿದುಳ್ಗಣಪಸೆ ಕರುಳ್ಗಳಿಂ ಕಟ್ಟುಗ್ರವಾದ ರಣರಂಗ ದೊಳ್ನಾಲಿ ಕಿಮುನಿ ರಾಮನಂ ಕಂಡನು (ಕೈಬಾಶಾ. ೨೦-೪೬). ೨. ಮೇದಸ್ಸು ; ಕೊಬ್ಬು ; ನೆಣ : ಮಿದುಳ್(ಡು, ಮಿದುಳ್ಳು) — ಮೇದಸಃ = ಮೆದುಳು, ಕೊಬ್ಬು ” (ಕರ್ಣಕೋ. ೩೫) ‘ಕೊಬ್ಬಿಮಿದುಳ್’ ಪರಾ. **ಮಿದುಡು$_2$** : ೧. ಸಿಂಗನೆಜಿಗಿ ಮಿದುಡುಂಡು ಕಿಲಕಿಲಕ್ಕೆ ಮುತ್ತಾನೆಯ ಆಣಿಮುತ್ತುಗಳಂ . . . ತಿಜಿದೊಟ್ಟಿ (ರಾಮಾಶ್ವ. ೭೩-೦೩) ; ತಲೆಯೊಳಗಿನ ಮಿದುಡು ಶುದ್ಧವಾಗಿದ್ದರೆ, ಯಾವತ್ತು ಮನೋವ್ಯಾಪಾರಗಳು ಪ್ರತಿಬಂಧವಿಲ್ಲದೆ ಸಾಗುವುವು (ಮುಂಜಾವು. ೪-೨೪). **ಮಿದುಲು :** ೧. ಮಿದುಲಡಗು ತೊರಳೆ ನೆಣ ವಸೆ ನೆತ್ತರ್ಗೊಂಡ ಕಾಳಿಜಗಳಿಂ ಜವನುಂಡೊಗಡಿಸಿದಿಳೆಯ ಪೋಲ್ತುದಾರಣದ ಕಳಂ (ಕಿಶವ್ಯ. ೨-೪೬). **ಮಿದುಳು : ೧.** ರಣದೊಳಹಿತರ ಶಿರದ ಮಿದುಳೌತಣವು ಶಸ್ತ್ರಕೆ (ಕುಬ್ಬಾಶ. ೦೪-೪೦) ; ಖಾನಖಾನರ ಕಡಿದು ತಲೆಯ ಮಿದುಳುಗಳ ಬಿತಗಾಗ ರಣಭೂತಗಳಿಗೆ ದಂಡೆಗಳನು ಮುಡಿಸಿದರು (ಕಂಪವಿ. ೦೬-೦೩) ; ಕೊಂಚ ಭೀತಿಯು ಎಳೆಯೂ ನನ್ನ ಮಿದುಳಿನಾಳದಲ್ಲಿ ಸುಳಿದಂತಾಯಿತು (ಮಗಪಶಾಂ. ೩೬). **ಮೆದಡು:** ೧. ಮೆದಡು ತಲೆಯಲ್ಲಿರುತ್ತದೆ (ಅಶಂಕ. ೦೨). ೨. ‘‘ಮೇದಸ್ — ಹೃದಯದಲ್ಲಿಯೂ ಎಲುಬುಗಳಲ್ಲಿಯೂ ಇರುವ ನೆಣ, ಇದನ್ನು ಮೆದಡುಯೆನ್ನುವರು’’ (ಸಿದ್ಧಾಂತ. ೦೬೭). ೩. ಕಂಠ ; ಕುತ್ತಿಗೆ ; ಕತ್ತು : ತುತುಗ ನಾಯ್ ಕೊರಳಲ್ಲಿಪೊಡೆದ ಗಡಿಗೆಯ ಕಂಠ

ಬಿಡದಿರುವೊಲಾ ದ್ವಿಜನ ಮೊದಲಲ್ಲಿ ಕುಜಾಹಿರಲು ಕಡೆಗೆ ತೆಗೆಯಲ್ ಬಾರದೊಡೆ (ಗುರುಚಾ. ೦೫-೩೩). **ಮೆದುಳು :** ೧. "ಮಸ್ತಿಷ್ಕಂ. ಗೋರ್ದಂ — ೨ ಎಲುವುಗಳ ಗೂಡಿನಲ್ಲಿರುವ ಮೆದುಳ ಹೆಸರುಗಳು" (ಸಿದ್ಧಾಂತಿ. ೦೬೬) ; ಅವರ ಮೆದುಳನ್ನು ಏಪು ಮಾಡಬಹುದೆಂದು ನನ್ನ ಅಭಿಪ್ರಾಯ (ಐಹುಕ. ೬೩) ; ನಿಮ್ಮ ಮೆದುಳಿಗೆ ಬಹಳ ಗಂಭೀರ ಸ್ವರೂಪವಾದ ತೊಂದರೆಯಾಗಿದೆ (ಅಕನಾ. ೧).

[ ದೇ.॥ ತಮಿ. ಮಿತಟು, ಮಿತಟ್ಟ್ ; ತೆಲು. ಮೆದಡು ; ಕೋಲಾ. ನಾಯ್ಕಿ. ಮಿತಿಕ್ ; ಕೋತ. ಮೆವ್ಡ್ಲ್ ; ಗೊಂಡಿ. ಮದ್ದುರ್, ಮೆದುರ್ ; ಕುರುಖ್. ಮೆದ್ಧೋ ; ಮಲ್ತೊ. ಮೆದೊ ]

**ಮಿದುಳು** ' ಮಿದುಳ್ ' ನೋ.

**ಮಿದುಳ್ಗೆಸಟಿ್** (ನಾ). ಕೆಸರಿನಂತೆ ಅಜಿಗಿಜಿಯಾದ ಮೆದುಳು : ಕುಲಿಶವಿಘಾತದೊಂಬ ವೃಢಮುಷ್ಟಿವಿಘಾತದಿನುಣ್ಮೆ ಪಾಯ್ದನಂ ತಲೆಯ ಮಿದುಳ್ಗೆಸಟಿ. . . ಮುಸಲಾಯುಧನಿಕ್ಕಿದನಾ ಪ್ರಲಂಬನಂ (ಜಗಂ. ೯-೫೭).

[ಮಿದುಳ್ + ಕೆಸಟು]

**ಮಿದ್ದಿಗೆ** ' ಮುದ್ದಿಗೆ$_1$ ' ನೋ.

**ಮಿದ್ದು** (ಕ್ರಿ). ೧. ಚೆನ್ನಾಗಿ ಕಲಸು ; ನಾದು ; ಮಿದಿ : ಆರಲು ತುಳಿಯುತ ಮಿದ್ದಿ ಹದಗೊಳಿಪ ಕುಂಬಾರ (ಶಾವತೀ. ೭-೦೨೦). ೨. ತಿಕ್ಕು ; ಮರ್ದಿಸು : ಮಸ್ತಕದ ಸರಮಂಡಲವನ್ನೆಲ್ಲ . . . ಮಿದ್ದಿ, ನಾದಿ, ಗಿರಾಕಿ ಗೋಣು ಚೆಲ್ಲವುದೆಂದು ಖಾತ್ರಿಯಾದಾಗ ಕೈತೊಳೆದುಕೊಳ್ಳುತ್ತಾನೆ (ಲೇಕಪ್ಪ. ೬೨). ೩. ಹದಮಾಡು ; ಹದಗೊಳಿಸು : ಹಗೆಯ ತಿದ್ದಿ ಜನಮನವ ಮಿದ್ದಿ ನವಸೃಷ್ಟಿಗೈದ ಬಾಪು (ಅಮಕಂ. ೫೭-೬). 'ಮಿದುಡು$_1$' ಪರಾ. [ <ಮಿದಿ$_1$ ]

**ಮಿದ್ದೆ** (ನಾ). ಮಹಡಿ ; ಮಾಳಿಗೆ : ಪ್ರಭುಶೆಟ್ಟಿಯ ಮಿದ್ದೆಯೊಳು ದ್ರೋಣಕುಸುಮದ ಮಳೆಯಂ ಕಜಿಸಿದಂ (ಗುರುಚಾ. ೦೩-೬೧).

[ ದೇ.॥ ತಮಿ. ಮೆತ್ತೈ ; ಮಲ. ಮೆತ್ತ ; ತುಳು. ಮೆತ್ತಿಗೆ ; ತೆಲು. ಮಿದ್ದೆ, ಮಿದ್ದಿಯ ; ಕೋತ. ಮೆದ್ ; ತೊದ. ಮಿದ್ಯ್]

**ಮಿನ್** (ಸಪೂರೂ). 'ಮಿಂಚು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಮಿಂಜೊಡರ್' ಪರಾ. [ < ಮಿಂಚು$_2$ ]

**ಮಿನಾರ್** 'ಮಿನಾರು' ನೋ.

**ಮಿನಾರ** 'ಮಿನಾರು' ನೋ.

**ಮಿನಾರು,** ಮನಾರ್, ಮಿನಾರ್, ಮಿನಾರ, ಮಿನಾರ್ (ನಾ). ೧. ಪ್ರಾರ್ಥನೆಗೆ ಜನರನ್ನು ಎಚ್ಚರಿಸಲು ಮುಸ್ಲಿಂ ಘೋಷಕನು ನಿಲ್ಲುವುದಕ್ಕಾಗಿ ಮಸೀದಿಗೆ ಸೇರಿದಂತೆ ಕಟ್ಟಿರುವ ಎತ್ತರವಾದ ಸ್ತಂಭಗೋಪುರ ; ಬುರುಜು ; ಗುಮ್ಮಟ : ಅವುಗಳಲ್ಲಿ ಯಾವ ವಿಧವಾದ ಪ್ರತಿಮಾಚಿತ್ರಗಳಾಗಲಿ ವಿಗ್ರಹಗಳಾಗಲಿ ಇಲ್ಲದೆ . . . ಮಿನಾರುಗಳೂ (ಗುಮ್ಮಟಗಳೂ) ಲಿಪಿರೇಖಾಚಿತ್ರಗಳೂ ಕಂಡುಬರುವುದು (ಇಸ್ಲಾಂಸಂ. ೦೬೭) ; ಸ್ತಂಭಗಳಂತೆ ಕಟ್ಟಿದ ಮಿನಾರುಗಳು ಮಹಮದೀಯ ಕಟ್ಟಡಗಳ ವಿಶಿಷ್ಟಮಾದರಿಗಳಾಗಿರುತ್ತವೆ (ಶಾರದ. ೪೦೦). ೨. ಸಮುದ್ರದಲ್ಲಿ ಹಡಗುಗಳಿಗೆ ದೀಪದ ಮೂಲಕ ದಾರಿ ತೋರಿಸುವುದಕ್ಕಾಗಿ ತೀರದಲ್ಲಿ ಕಟ್ಟಿರುವ ಗೋಪುರಾಕಾರದ ಕಟ್ಟಡ : "(ಕಡಲ) ದೀಪದ ಮನೆ ; (ಎತ್ತರವಾದ) ಸ್ತಂಭಗೋಪುರ : ಮಿನಾರು" (Minar.. ಇಂಕಿ). **ಮನಾರ್ :** ೧. ಮಿನಾರ್ ಅಥವಾ ಮನಾರ್ ಎಂದರೆ ಜ್ಯೋತಿರ್ಮಂದಿರ ಅಥವಾ ಅಗ್ನಿಮಂದಿರ ಎಂದರ್ಥ (ಇಸ್ಲಾಂಸಂ. ೦೩೭). **ಮಿನಾರ್ :** ೧. ಮಿನಾರ್ : ಕಟ್ಟಡದ ಎರಡುಕಡೆಗಳಲ್ಲಿಯೂ ದುಂಡಗೋ ಅಥವಾ ಅಷ್ಟಕೋಣಾಕಾರವಾಗಿಯೋ ಎತ್ತರವಾಗಿ ಹೋಗಿರುವ ಬುರುಜು (ವೈವಾಸ್ತು. ೦೫೭). **ಮಿನಾರ :** ೧. ರಣರಂಗದಲ್ಲಿ ಮಡಿದ ಸಿಪಾಯರ ರುಂಡಗಳನ್ನೆಲ್ಲ ಕೊಯ್ದು ತಂದು ಒಂದು ಮಿನಾರವನ್ನು ಕಟ್ಟಿದರಂತೆ ! (ಹಿಂದುಸ್ತಾ. ೦೬೦). **ಮಿನಾರ್ :** ೧. ದಿಲ್ಲಿಯಲ್ಲಿ ಕುತುಬ್‌ಮಿನಾರ್ ಹತ್ತಿರ ಇರುವ ಮಸೀದಿಯನ್ನು ಮುಸ್ಲೀಮರು ಜೈನದೇವಾಲಯಗಳನ್ನು ಕೆಡವಿ ಅವುಗಳ ಕಂಬಗಳನ್ನು ಉಪಯೋಗಿಸಿ ಕಟ್ಟಿದ್ದೆಂದು ಹೇಳುತ್ತಾರೆ (ವೈವಾಸ್ತು. ೦೬೪) ;

[ ← ಅರ. ಮನಾರ್, ಮನಾರಹ್ ; ಪಾರ. ಮನಾರ್, ಮನಾರ, ಮನಾರತ್ ; ಹಿಂ. ಮನಾರ್, ಮನಾರಾ, ಮಿನಾರಾ, ಮಿನಾರ್, ಮಿನಾರಾ]

**ಮಿನಾಹಿ** (ನಾ). ೧. ಬರಬೇಕಾದ ಹಣವನ್ನು ಯಾವುದಾದರೂ ಲೆಕ್ಕಕ್ಕೆ ಹಿಡಿದುಕೊಳ್ಳುವಿಕೆ, — ಮುರಿದುಕೊಳ್ಳುವಿಕೆ ; ಉತ್ತಾರ : ವೆಂಕಪ್ಪಯ್ಯನ ಕೈಯಲ್ಲಿ ೬೦ಸಾವಿರವರಹವನ್ನು ದಂಡ ತೆಗೆದುಕೊಂಡು ಇವನಿಗೆ ಇದ್ದ ದರಮಾಹೆ ಸಾವಿರರೂಪಾಯಿಯನ್ನು ಮಿನಾಹಿ ಮಾಡಿಸಿ . . . ಆ ಅಧಿಕಾರವನ್ನು ಮೊಖೂಫ್ ಮಾಡಿಸಿದರು (ಮಹಾವಂ. I ೨೩೪). ೨. ಕೆಲಸದಲ್ಲಿ ಉಂಟಾದ ಕಡಿತ : ನಿರುದ್ಯೋಗ : ಅಂತ್ಯಕಾಲದಲ್ಲಿ ಸನ್ಯಾಸವನ್ನು ತಕ್ಕೊಂಡುಬಿಟ್ಟರೆ ಯಮಸದನಕ್ಕೆ ಯಾರೊಬ್ಬನೂ ಹೋಗಲಾರನು. ಹಾಗಾದರೆ ಯಮನ ಉದ್ಯೋಗ ಮಿನಾಹಿಯಲ್ಲಿ ಬರುವುದಲ್ಲದೆ ಲೋಕದಲ್ಲಿ ಪಾಪಿಗೊಬ್ಬಗಾದರೂ ಪಾಪಭಯ ಲೇಶವಾದರೂ ಇರದು (ವಾಗ್ಭೂ. ೨೯). [← ಅರ. ಮಿನ್‌ಹಾ ; ಹಿಂ. ಮಿನ್‌ಹಾಈ./ ತುಳು. ಮಿನಾಯಿ, ಮಿನಾಹಿ]

**ಮಿನಿಕೆ,** ಮಿಣಕೆ, ಮಿಣಿಕೆ, ಮಿನಿಕೆ (ನಾ). (ಸೌತೆಯ ಜಾತಿಗೆ ಸೇರಿದ) ಒಂದು ಬಗೆಯ ಬಳ್ಳಿ ಮತ್ತು ಅದರ ಹಣ್ಣು : "ಕರ್ಕಟಿಕೆಯೆನೆ ಮಿನಿಕೆ" (ಮಂಗರಾ. ೪೦-೩೭) ; ಎಕ್ಕ ಮಿನಿಕೆ ಮೊದಲಾಗಿ ಅವು ಪಕ್ವಕ್ಕೆ ಬಂದಡೆ ವಿಷ ಬಿಡುವುದೆ (ಸವಾಪ. ೩-೦೭). **ಮಿಣಕೆ :** "ಕಾಳಿಂಗದ . . . ಮಿನಕೆ, ಮಿಣಕೆಹಣ್ಣು . . . ಷಡ್ಭುಜಸೌತೆ" (ಸಸ್ಯವಿ. ೯೨). **ಮಿಣಿಕೆ :** ಕೆಕ್ಕರಿಕೆ ಮಿಣಿಕೆ ಚಕ್ಕೊತ್ತ . . . ಮುಂತಾದ ಮಧುರಫಲಂಗಳ್ (ಸೌಗಂಧಿ. ೫೭-೪). **ಮಿನಿಕೆ :** "ವೃತ್ತಫಲಾ — ಬದನೆ. ಮಿನಿಕೆ, ಸೆಲ್ಲಿಯಕಾಯ್" (ಓಷಧಿ. ೦೫೭). 'ಮೆಕ್ಕೆ$_3$' ಪರಾ. [ ? ]

**ಮಿನಿಕೆಬಳ್ಳಿ** (ನಾ). = ಮಿನಿಕೆ : 'ಕಾಡುಮಿನಿಕೆಬಳ್ಳಿ' ಪರಾ.

[ಮಿನಿಕೆ + ಬಳ್ಳಿ]

**ಮಿನಿಟು,** ಮಿನೀಟು (ನಾ). ೧. ಒಂದು ಗಂಟೆಯ ಅರುವತ್ತನೆಯ ಭಾಗ ; ಒಂದು ನಿಮಿಷ : ಇಬ್ಬರೂ ಇನ್ನೈದು ಮಿನಿಟಿನಲ್ಲಿ ಪತಿಪತ್ನಿಯರಾಗುವರು (ಅನ್ನ. ೨೪೭) ; ರಾತ್ರಿ ಎಂಟು ಬಡಿದು ಮಿನಿಟಿನ ಮುಳ್ಳು ಇನ್ನೊಂದು ಸುತ್ತು ಬರುವಷ್ಟರಲ್ಲಾಯಿತು (ಸಕಿಕ. ೨೧). **ಮಿನೀಟು :** ೨. ಅತ್ಯಲ್ಪಕಾಲ : ನಾ ಒಂದು ಮಿನೀಟಿನ್ಯಾಗ ಸ್ವಚ್ಛ ಮಾಡ್ತೀನಿ (ಕ್ಷತಿಶ. ೫೭) ; ಒಂದು ಮಿನೀಟು! ಚಹ ತಗೊಂಡು ಹೋಗಬಹುದಲ್ಲ ? (ಬಂಗ. ೩೦೩).

[← ಇಂ. Minute]

**ಮಿನಿಮಿನಿ** (ನಾ). ೧. ಕಾಂತಿ ; ಪ್ರಕಾಶ : 'ಮಿನಿಮಿನಿಸು' ಪರಾ. ೨. ಮಂದವಾದ ಪ್ರಕಾಶ ; ನಸುಹೊಳಪು : 'ಮಿನಿಮಿನಿಸು' ಪರಾ. ೩. (ಅಲಂ) ಅಸ್ಪಷ್ಟವಾದುದು ; ಅವ್ಯಕ್ತವಾದುದು : ಏನಗೇಣಿಗರೆಂದು ಕೆಮ್ಮನೆ ಮಾನಮಂ ಮುಸಿಮಾಡಿಕೊಳಲೊಡಂ ಮುನ್ನಳ್ಳ ಮಿನಿಮಿನಿಯೆನಿಪ್ಪ ಗುಣಮಾ ಮುನಿಯಿಂ ಪೆಜಿಪಿಂಗಿ ಪೋಪುದೊಂದಚ್ಚರಿಯೇ (ಉದಾಹ. ೫೯-೨೩೪). [ದೇ.॥ ತಮಿ. ಮಿನುಮಿನು = ಹೊಳೆ ; ತುಳು. ಮಿಣಿಮಿಣಿ, ಮಿಣಿಮಿಣಿ = ಹೊಳೆಯುವ]

**ಮಿನಿಮಿನಿಗಣ್** (ನಾ). ಹೆಚ್ಚು ಹೊಳಪಿಲ್ಲದ ಕಣ್ಣು ; ಮಂಕಾಗಿರುವ ಕಣ್ಣು : ಮಿನಿಮಿನಿಗಣ್ ತಜಂಟದಲೆ ಜೋಲ್ದಿಹ ಮೈ . . . ಸೆರೆಗೊಂಡ ಕಾಲ್ಗಳಿಂ ಮನಕೆ ವಿರಕ್ತಿಯಂ ಪಡೆದ ಮುಪ್ಪಿನ ಪಾರ್ವನದೊರ್ಬನೊಪ್ಪಿದಂ (ಕುಶಾನ್ವೃ. ೩-೬೦).

[ಮಿನಿಮಿನಿ + ಕಣ್]

**ಮಿನಿಮಿನಿಸು** (ಕ್ರಿ). ೧. ಹೊಳೆ ; ಪ್ರಕಾಶಿಸು ; ಕಾಂತಿಯನ್ನು ಬೀರು : ತೊಳತೊಳಗಿ ಬೆಳಗಿ ಮಿನಿಮಿನಿ[**ಪಾಠಾಂ.** ಮಿನುಮಿನಿ]ಸುತ್ತುಂ ಪಲವುಂ ದೀವಿಗೆಗಳ್ ಕಳ್ತಲೆ ಪೊತ್ತಂತೊಪ್ಪುತಿರ್ದುವಾ ಮನೆಮನೆಯೊಳ್ (ಗಿರ. ೪-೮೦). ೨. ಮಂದವಾಗಿ ಪ್ರಕಾಶಿಸು ; ನಸುಬೆಳಕು ಚೆಲ್ಲು : ಎನಿತು ವನಿತೆಯರಿರ್ದಡಂ ತಾರಗೆಗಳಂತೆ ಮಿನಿಮಿನಿಸುತಿರ್ಪರಾ ಚಂದ್ರವದನೆಯ ಮುಂತೆ (ಇಶಠ. ೨೬. ೨೯-೨). [ಮಿನಿಮಿನಿ + –ಇಸು$_3$]

**ಮಿನೀಟು** 'ಮಿನಿಟು' ನೋ.

**Δಮಿನುಂಗು** 'ಮಿನುಕು$_1$' ನೋ.

**ಮಿನುಕು$_1$, ಮಿಣುಕು$_1$, ಮಿನುಂಗು, ಮಿನುಗು$_1$** (ಕ್ರಿ). ಮಿನುಪ (ವರ್ತಕೃ). ೧. ಹೊಳೆ ; ಬೆಳಗು ; ಪ್ರಕಾಶಿಸು : "ಮಿನುಕು – ಅಂತರ್ಗತಸ್ವನೇ (ಪಿಸುಗುಟ್ಟು), ಕಾಂತೌ ಚ (ಪ್ರಕಾಶಿಸು)" (ಶಮದ).೨. ಕ್ಷಣ ಬಿಟ್ಟು ಕ್ಷಣ ಹೊಳೆ : ಎಸೆದುವು ಮಣಿಗಳ್ ಬೆಳ್ದಿಂಗಳ ಪೊರೆ ಪೊರೆಯೊಳ್ ಪಳ್ದಳಿಸದೆ ಮಿನುಕುತಿರ್ಪ ತಾರಾಳಿಯವೊಲ್ (ಅಸಂಪು. ೫-೭೩); ತೆಳುವುಬೆಳಕನು ಕ್ಷದರಿ ಮಿನುಕುವ ಮಿಂಚುಹುಳುವೆಂದೆಣಿಸಲೋ ! (ಇಂಗೀತ. ೦೩-೫). ೩. ಗೋಚರಿಸು; ತೋರು ; ಸ್ಫುರಿಸು : ಘೂತಳಾಧೀಶ್ವರನ ಮನದೊಳಗೀತ ಕಾರಣಪುರುಷನಹ ಸಂಕೇತ ಮಿನುಕಲು ಕೊಟ್ಟನಂದು ಮಹಾಪ್ರಧಾನಿಕೆಯು (ಕೃಶಪಿ. ೯-೨೨). **ಮಿಣುಕು$_1$:** ೨. ಚಿಕ್ಕ ಮಿಣುಕಲಿ ಬೆಳ್ಳಿ ತಿಣುಕಲಿ ಒಂದೆ ಎಂಬೆಯಾ ಎರಡನೂ ? (ಅರಳು. ೦೨೯-೦೦). ೪. ಮಂಕಾಗಿ ಬೆಳಕು ಬೀರು ; ಮಂದವಾಗಿ ಪ್ರಕಾಶಿಸು: ನೂರಾರು ದೀಪಗಳು, ಮಿಣುಕುತಿಹ ಸೊಡರುಗಳು . . . ತೆಕ್ಕನೆಯೆ ಹುಟ್ಟಿ ಬರೆ (ಶಕ್ತಿಕಾ. ೦೫-೭೩) ; ನಮ್ಮ ಸೊಡರನುರಿಸುವಿರೇಂ ಮಿಣುಕ ಲಿಂತು ಬರಿದೆ (ಗಿರಿಬಾ. ೯೩-೨). **Δಮಿನುಂಗು :** ೫. ಶೋಭಿಸು ; ಒಪ್ಪು : ನಸುನಗೆ ಮಿನುಂಗೆ ಮೊಗದೊಳ್ ಪಸರಿಸೆ ನಿಜದಂತಕಾಂತಿ ನೃಪವರಸಭೆಯೊಳ್ (ವಶಕು. ೨-೯೦). **P** ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಮಿನುಗು$_1$ :** ೧. ಮರಕತಕಾಂತಿಯಂ ತಳೆದು ಸುಣ್ಣಜಗಳ್ಮಿನುಗಲ್ಕೆ ವಿದ್ರುಮಾಂಕುರದವೊಲೊಪ್ಪೆ ಚಂಚುಪುಟ ಮೊಯ್ಯನೆ ಬಂದುದು . . . ಶುಕಂ (ಕಾದಂಬ. ೬೦); ಘನವಿಕ್ರಮ ಶಿಖಿಯುತನೂತನವಿಚಲದ್ಘಮಲೇಖೆಯೊಳ್ಪೆಂಬಿನೆಗಂ ಜನನುತನುದ್ಭಟ ದೇವನ ಮಿನುಪ ಕರಾಬ್ಜಸ್ಥಿತಾಸಿಲತೆ ಸೊಗಯಿಸುಗುಂ (ಉದ್ಭಟ. ೦-೮೬). ೨. ಕೌಲ್ಬರನು . . . ಅಲ್ಲಿಯ ವಿಜ್ಞಾನಜಗತ್ತಿನಲ್ಲಿ ನಕ್ಷತ್ರದಂತೆ ಮಿನುಗುತ್ತಿದ್ದನು (ಸಸ್ಯಕ. ೪೧) ; ಮಿನುಗಲೆ ಮಿನುಗಲೆ ಎಲೆ ನಕ್ಷತ್ರ (ರಾಮಾನ. ೦೦೩). ೩. ಇವೆಲ್ಲವುಗಳು . . ಹೊಸಅರ್ಥದಿಂದ ತುಂಬಿಕೊಂಡು ಮಿನುಗತ್ತೊಡಗಿದವು (ಗಂಪಾಡು. ೦೨೩). ೫. ಮಿನುಪೀಕೃತಿಗಾವುದು ಪೊಪಲ್ (ಉದ್ಭಟ. ೦-೩೬); ಸಲೆ ಮಿನುಪ ಕೊರಲ ಕರ್ಪಂತಗೆವಮದ್ರ್ಗಜಿತವ್ವೊಲ್ಮಾಡಿ ತುಟಿಯೊಳಾಂತು (ಶವ್ಯರಾ. ೫-೫೧): ಬಾಲಹಿಮಕರಕಿರಣನೊಡನೆ ಸಮೇಳವಹ ನಗೆ ಮಿನುಗೆ (ಕುವ್ಯಾಅ. ೫-೨೪).

**ಮಿನುಮಿನುಗು, ಮಿಣುಮಿಣುಕು** (ದ್ವಿರುಕ್ತಿ) : ಕತ್ತಲೆಯ ನಡುವೆ ಮಿನುಮಿನುಪ [**ಪಾಠಾಂ.** ಮಿಸಮಿಸಪ] ಜ್ಯೋತಿಯ ತೆಱದಿ (ಬಕಾಂಶ. ಪ. ೨೮೦-೭); ಮಿಸುಮಿಸುಪ ಪೊಂಬರಿವಾಣಗಳೊಳೆಯ್ದೆ ನೀಡಿದರ್ ಪರಿಪರಿಯ ಪರಿಕರವನು (ತರಿತು. ೫-೫೯); ಇರುಳು ಕತ್ತಲೆಯಲ್ಲಿ ಮಿಣುಮಿಣುಕಿ ಮೆರೆವಲೆದ ಮಿಂಚುಹುಳು . . . ಕಣ್ಮುಟುಕುತಿದೆ (ಶಕ್ತಿಕಾ. ೮೬-೧).

[ದೇ.॥ ತಮಿ. ಮಿನುಜ್ಕು, ಮಿನುಕ್ಕು; ಮಲ. ಮಿನುಕ್ಕು; ಮಿನ್ನುಕ, ಮಿನ್ನಿಕ್ಕ; ತುಳು. ಮಿನುಕು, ಮಿಣುಕು, ಮಿಣ್ಕು, ಮೆಣಕು, ಮೆಣ್ಕು ; ತೆಲು. ಮಿನುಕು, ಮಿನ್ಕು, ಮಿಣುಕು]

**ಮಿನುಕು$_2$, ಮಿನುಗು$_2$, ಮೊನಗು** (ಕ್ರಿ). ೧. ತನ್ನಷ್ಟಕ್ಕೆ ತಾನು ತಗ್ಗಿದ ಧ್ವನಿಯಲ್ಲಿ ಮಾತನಾಡು ; ಗೊಣಗುಟ್ಟು : "ಮಿನುಕು – ಅಂತರ್ಗತಸ್ವನೇ (ಪಿಸುಗುಟ್ಟು), ಕಾಂತೌ ಚ (ಪ್ರಕಾಶಿಸು)" (ಶಮದ); ತದಾಮ್ರವನದೊಳೊರ್ವಂ ಮೈಯೊಳೆಲ್ಲಂ ಕಸಜನೊಟ್ಟಿಕೊಂಡು ಬತ್ತಲೆ ಮರುಳಂತೆ ತನ್ನೊಳ್ ಮಿನುಕುತ್ತುಂ ಮೋನದೊಳಿರ್ಪಂ (ವಡ್ಡಾರಾ. ೬-೨೬); ಪೆಣ್ ಕೊಯ್ಯಲ್ಲಿರ್ಪಂದು ಮಂತ್ರಮಂ ಮಿನುಕುವನ್ ಅವನ್ ಮರುಳ್ವೈದ್ಯನ್ (ಅಕ್ಕಕಾ. ೨೯-೪೬೦). **ಮಿನುಗು$_2$ :** ೨. ತಗ್ಗಿದ ಸ್ವರದಲ್ಲಿ ಮಂತ್ರವನ್ನು ಹೇಳು,– ಜಪಿಸು : ಮಿನುಗಾದುಟಿಗಳ ವಿಕಲಮಂತ್ರದ ಬಿನುಗುಗಳ ಕೈಯಾಹುತಿಗೆ ಕರೆವನಿಮಿಷರ ಪಲ್ಲಟದ ವಿಚಲಿತ ಸೂಕ್ತಿಮಯನಿನದ ತನಿಭಯದ ತರಳಾಕ್ಷಿಗಳ . . . ಗಡ್ಡದ ಮುನಿಗಳದ್ದರು ಬಲಿದ ಬೆಡಗಿನಲಿ (ಕುವ್ಯಾಸ. ೦೦-೫೯). **ಮೊನಗು :** ೧. ಲೋ. ಬಸವ, ಅಪ್ಪು ನೀರು ತಾರೋ . . . ಎಂದು ಮೊನಗಿ ಮುಗಿಸಿದನು (ಜಳರಾ. ೦೬೬).

[ದೇ.॥ ತಮಿ. ಮುಣಜ್ಕು; ಮಲ. ಮಿಣುಮಿಣುಕ್ಕ, ಮಿಣ್ಕುಕ; ತುಳು. ಮುಣ್ಕು; ತೆಲು. ಮಿನುಕು, ಮಿನ್ಕು, ಮುನುಕು, ಮುನ್ಕು]

**ಮಿನುಕು$_3$, ಮಿಣುಕು$_2$, ಮಿನುಗು$_3$** (ನಾ). ೧. ಹೊಳಪು ; ಕಾಂತಿ ; ಪ್ರಕಾಶ : ನೆನೆಯಿಸುತಿರ್ದುದು ತುಂತುರ್ವನಿ ಮುಸುಕಿದ ದುಗ್ಧವಾರ್ಧಿಯುಂ ತಾನೆನಸುಂ ತನಿವೆಳ್ದಿಂಗಳ್ ಮುಸುಜೀವ ಮಿನುಕಿಂದೊಪ್ಪುವ ನಭೋಂಗಣಂ ಧೃತಭಗಣಂ (ಕುಸುಮಾ. ೦೦-೧೫). ೨. ತಾಳಿ ; ಮಾಂಗಲ್ಯ : ಕಟಿಸೂತ್ರಂ ಬ್ರಹ್ಮಸೂತ್ರಂ ಸರಿಗೆ ಮಿನುಕು ಕೊಪ್ಪುಂಗುರಂ ಕರ್ಣಪೂರಂ . . . ಕೇಯೂರಮೆಂಬನ್ನವಂ ಪ್ರಸ್ಫುಟರತ್ನೋಪಾಶ್ರಯಂ ರಂಜಿಸುವಿನವಮಲರಿಂ ಕಾಂತೆಯರ್ ಮಾಡಿ ಕೊಟ್ಟರ್ (ಸೂಕ್ತಿಸು. ೦೦-೪೯). **ಮಿಣುಕು$_2$ :** ೩. ಮಂಕು; ಮಸುಕು : 'ಮಿಣುಕುದೀಪ', 'ಮಿಣುಕು ಬೆಳಕು' ಪರಾ. **ಮಿನುಗು$_3$ :** ೧. "ತೊಳಗು, ಬೆಳಗು, ಮಿನುಗು . . . ಮಸೆ – ಈ ೧೪ ಕಾಂತಿ " (ಶಕಸಾ. ೫೫-೨೦೨); ಕಣ್ಣ ಮಿನುಗಿಂ ತೊಳಗು ಪುಂಗುಟದ ಗಾಡಿಯಿಂ . . . ಬಿಡುಗಣ್ಣರೆಚಿಯಂ ವಿಶ್ವನಾಥಂ ಪ್ರಸನ್ನನಾದಂ (ಕರ್ಮರಾ. ೭-೩೫). ೨. 'ಅಯ್ದೆಮಿನುಗು' ಪರಾ. ೪. ಕ್ಷಣ ಬಿಟ್ಟು ಕ್ಷಣ ಹೊಳೆಯುವ ಹೊಳಪು : ಹಿಳುಕು ಕವಿದವು ಭಟನ ಕೈ ಮೈಗಳಲಿ ಮಿನುಗಿದವಿರುಳು ಮರನಲಿ ಹೊಳೆದು ಮುತ್ತಿದ ಮಿಂಚು ಬುಳುವಿನ ಮಿನುಗಿನಂದದಲಿ (ಕುವ್ಯಾದ್ರೋ. ೫-೫೬) ; ನಳಿನಬಾಂಧವನ ಮುಂದೆಸೆಯೊಳು ಮಿಗೆ ಮಿಂಚುಬುಳುವಿನ ಮಿನುಗು ರಂಜಿಪುದೇ (ಪೋಹತ. ೦೫-೦೦) : ಒಂದು ನಕ್ಷತ್ರವೂ ಮಿನುಗು ತೋರದು (ಸುಗಂಗಂ. ೫೯-೩).

**ಮಿಣುಕುಮಿಣುಕು** (ದ್ವಿರುಕ್ತಿ) : ಗೋಡೆಯ ಮೇಲೆ ಕಪ್ಪುಗಟ್ಟಿಕೊಂಡು ಮಿಣುಕುಮಿಣುಕಾಗಿ ಉರಿಯುತ್ತಿದ್ದ ದೀಪದಿಂದ ಸಾಕಷ್ಟು ಬೆಳಕಿರುತ್ತಿತ್ತು (ಮಾರ್ಗದ. ೧೯).

[< ಮಿನುಕು$_1$. / ತಮಿ. ಮಲ. ಮಿನುಕ್ಕಮ್; ತುಳು. ಮಿಣುಕು, ಮೆಣ್ಕು, ಮೊಣುಕು ; ತೆಲು. ಮಿನುಕು, ಮಿನ್ಕು, ಮಿಣುಕು]

**ಮಿನುಕುಗಲೆ** (ನಾ). ಕಣ್ಣಿಗೆ ಗೋಚರಿಸುವ ಗಾಯದ ಗುರುತು,– ಕಲೆ : ಮಿನುಕುಗಲೆ ಭೂಷಣಂ ಸುಭಟನಿಕಾಯದ ಕಾಯತತಿಗೆ (ಕಾಂತೇಶ. ೬-೫೯). [ಮಿನುಕು$_1$ + ಕಲೆ$_2$]

**ಮಿನುಗಿಸು, ಮಿಣುಕಿಸು** (ಕ್ರಿ). ೧. ಕಾಂತಿಯನ್ನು ಸೂಸು ; ಬೆಳಕನ್ನು ಚಿಮ್ಮಿಸು : ಅಳನು ಮಿಡುಕನು ಮಿನುಗಿಸನು ಕಣ್ಗಳನು (ಕೃಕುಂ. ೯-೦೨). ೨. ಹೊಳೆಯುವಂತೆ ಮಾಡು ; ಥಳಥಳಿಸುವಂತೆ ಮಾಡು : ಸೂರ್ಯನ ಕಿರಣ ನೀರಿನ ಮೇಲೆ ಬಿದ್ದು ತೆರೆಗಳನ್ನು ಮಿನುಗಿಸುತ್ತಿದೆ (ರೂಶ). **ಮಿಣುಕಿಸು :** ೩. ಉದ್ದೀಪಿಸು ; ದೀಪ್ತಗೊಳಿಸು : ಆ ತೇಜಗಳ ತುಣುಕು ಎದೆಯ ಮಿಣುಕಿಸಲಿಲ್ಲ ಮುಗಿಲ ಮಲ್ಲಿಗೆಯಂತೆ ಅಲ್ಲೆ ಬೆಳಗಿ (ವಿಶಾತಿ. ೦-೦೭). [ಮಿನುಗು$_1$ (< ಮಿನುಕು$_1$) + –ಇಸು$_1$]

**ಮಿನುಗು$_1$** 'ಮಿನುಕು$_1$' ನೋ.

**ಮಿನುಗು$_2$** 'ಮಿನುಕು$_2$' ನೋ.

**ಮಿನುಗು$_3$** 'ಮಿನುಕು$_3$' ನೋ.

**ಮಿನುಗುಂಗುಡಿ** (ನಾ). ಮಂದವಾದ ಪ್ರಕಾಶವನ್ನು ಬೀರುತ್ತಿರುವ ದೀಪದ ಕುಡಿ, — ತುದಿ : ದೀವಿಗೆಯೆಡೆಯಲ್ಲಿ ನಿಂತು, ಅಭ್ಯಾಸಬಲದ ಯನ್ತ್ರಕರ್ಮದಿಂದ ಮಿನುಗುಂಗುಡಿಯನ್ನು ಮಿಂಟಿ ಉಜ್ಜ್ವಳ ಮಾಡಿ (ವಿಬ್ಬೆ. ೧೦೩-೦೬). [ಮಿನುಗು$_1$ (< ಮಿನುಕು$_1$) + ಕುಡಿ$_2$]

**ಮಿನುಗುಟ್ಟು, ಮಿಣುಗುಟ್ಟು** (ಕ್ರಿ). ೧. ಕ್ಷಣ ಬಿಟ್ಟು ಕ್ಷಣ ಹೊಳೆ : ನಕ್ಷತ್ರಗಳು ಮಿನುಗುಟ್ಟುತ್ತವೆ. (ಅಶಕ. ೦೩). **ಮಿಣುಗುಟ್ಟು** : ೨. ಹೊಳೆ ; ಬೆಳಗು ; ಪ್ರಕಾಶಿಸು : ಚಕ್ರೇಶ್ವರಿಗೆ ಪುನಃ ಆಶಾದೀಪವು ಮಿಣುಗುಟ್ಟಲಾರಂಭಿಸಿತು (ಶ್ರೀಣಾಮ. ೨೮೬). [<ಮಿನುಗು$_1$ + ಕುಟ್ಟು$_1$]

**ಮಿನುಗುತಾರೆ** (ನಾ). ಥಳಥಳಿಸುವ ನಕ್ಷತ್ರ : ತವರುಬೆಳಗುವ ಮಾರ್ಗದರ್ಶನ ಮಿನುಗುತಾರೆಯು ತೆರದೊಲು ಒಲಿದ ಗಂಡನ ಸಾಹಚರ್ಯವು ಪೂರ್ಣಚಂದ್ರನ ಬೆಳಕೊಲು (ತಂದ್ರಮಾ. ೪೦-೬).

[ಮಿನುಗು$_1$ (< ಮಿನುಕು$_1$) + ತಾರೆ$_2$]

**ಮಿನುಗುವಡೆ** (ಕ್ರಿ). ಕಾಂತಿಯನ್ನು ಹೊಂದು ; ಪ್ರಕಾಶವನ್ನು ಪಡೆ : ನಾಗಂಗಳಂ ಕೊನೆಗೊಂಬುಗಳೊಳ್ ತಾಳ್ದು ಮಿನು[ಪಾಠಾಂ. ಮಿನು]ಗುವಡೆದ ಪಡೆವಣಿದುಬುಗಲಿಂ ತಳ್ತು ಮಾಣಿಕ್ಯದ ಮರಂಗಳಂತಿರಂದಂಬೆತ್ತ ಚಂದನಧರಾರುಹಂಗಳಂ (ಶಬಶಂ. ೩-೩೩ ವ).

[ಮಿನುಗು$_3$ (<ಮಿನುಕು$_3$) + ಪಡೆ$_1$]

**ಮಿನುಷ** 'ಮಿನುಕು$_1$' ಪರಾ.

**ಮಿನುಪು** (ನಾ). ಒಂದು ಬಗೆಯ ಧಾನ್ಯ ; ಉದ್ದು : ಪೆಸರುಪ್ಪು ಕಡಲೆ ಗೋಧುವೆ ಮಿನುಪೆಳ್ಳಿಂಬಿವರಿ ಪೇಜು ಮೂವತ್ತಕೊರ್ಕ್ಷನ್ದೆಸೆವ ದವಸಕ್ಕವಾಪ್ರ್ಪನ್ಡೊಸದಿಪ್ಪತ್ತಕ್ಕೆ ಕೊಟ್ಟರೊನ್ದಮ್ಮದದಿ (ಸೌಇಇ. IX-i, ೦೬೩-೬೪ ; 1099). [ದೇ.||. ತೆಲು. ಮಿನುಮು, ಮಿನ್ನು]

**ಮಿನುಮಿನನೆ** (ಅ). ಪ್ರಕಾಶಮಾನವಾಗಿ, ಥಳಥಳನೆ ಎಂಬ ಅರ್ಥವನ್ನು ಸೂಚಿಸುವ ಒಂದು ಅನುಕರಣಾವ್ಯಯ : ಮಿನು[ಪಾಠಾಂ. ನ] ಮಿನನೆ ತೋಱೆ ತಾರಗೆ ಘನತರತಿಮಿರಾವಕಾಶಮಾಕಾಶಮದೇಂ ನೆನೆಯಿಸಿದುದೊ ಕಡಲೊಳ್ ಸೀರ್ಪನಿ ತನುವಂ ಪುದಿಯೆ ತೋರ್ಪ ಕೃಷ್ಣನ ತನುವಂ (ಶಂಠಾಮಾ. ೬-೬) ; ಮಿನುಮಿನನೆ ಮಿನುಗುತಿರ್ದುವು ನನೆದೀವಿದ ಪಾಟಲೀದ್ರುಮಂಗಳ ಕೊನೆಗಳ್ (ರಮುಶ್ಯ. ೦-೮೬). [ಮಿನುಮಿನು + — ಅನೆ$_1$]

**ಮಿನುಮಿನು** (ನಾ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣಶಬ್ದ : 'ಮಿನುಮಿನನೆ' ಪರಾ.

**ಮಿನ್ನಲ್** (ನಾ). ಮಿಂಚು : ಅರ್ಣವಶಯನನ ಕರ್ಣಯುಗದಿ ನವರತ್ನಕುಂಡಲಗಳೊಪ್ಪಿರಲು ಕನ್ನಡಿಗದಪಿನೊಳಗೆ ಬಿಂಬಿಸುತಲಿ ಗನ್ನಮಿನ್ನಲೆನೆ ಶೋಭಿಸಿತು (ಕೃಷ್ಣಗೋ. ೪-೩೩). [ಮಿನ್ನು$_1$ + — ಅಲ್$_2$ / ತಮಿ. ಮಲ. ಮಿನ್ನಲ್ ; ಪರ್ಜಿ. ಮಿನ್ನಲ್ = ಸಿಡಿ]

**ಮಿನ್ನು$_1$** (ಕ್ರಿ). ಹೊಳೆ ; ಪ್ರಕಾಶಿಸು : ಎನ್ನ ಮುಖವೇ ದ್ವಾರವೆನ್ನ ದಂತವೆ ಅದಕೆ ಮಿನ್ನುತಿಹ ಮೌಕ್ತಿಕದ ಸೂಸಕಗಳು (ಸುಗಾರ. ೯-೨).

[ದೇ||. ತಮಿ. ಮಲ. ಮಿನ್ನು ; ತುಳು. ಮೆಣ್ ; ಕೊಡ. ಮಿನ್]

**ಮಿನ್ನು$_2$** (ನಾ). ೧. ಹೊಳಪು ; ಪ್ರಕಾಶ : 'ಮಿನ್ನುವಡೆ' ಪರಾ. ೨. ಮಿಂಚು : ಮಿನ್ನುಗಳೆಸೆದವು ವಿದ್ಯುನ್ಮಾಲೆಯಂತೆ ರನ್ನವಳಲ ಸಿರಿಯು ನಾಂತು (ಬಿಜ್ಜಣಾ. ೦೦-೬೯); ರನ್ನತೊಡವಂ ತೊಟ್ಟು ಮಿನ್ನೆನಿಪಸೀಮಂತದಲಿ ಸಿಂದುರವನ್ನಿಟ್ಟು . . . ಕನ್ನಿಕೆಯರೆಸೆದರು (ವೆಂಕಾಠಾ. ೦-೪-೩೭). ೩. ಹೊಳಪನ್ನುಂಟುಮಾಡುವ ಪದಾರ್ಥ : ಮಿನ್ನಿಂ ಸಾರಣೆಗೆಯ್ದಿಹ ಸನ್ನುತಭೂಮಿಯೊಳೆ ಕಳವೆಯಕ್ಕಿಯ ಪಿಟ್ಟಿಂ ಬಿನ್ನಣದೆಳೆ ಪದಿನೇಳಾಗುನ್ನತಷೋಡಶಸುಪಂಕ್ತಿಗಳ್ ಶೋಭಿಸುಗುಂ (ಹಾಠಾಸ್ಯ. ೪-೦೬-೩೦).

[< ಮಿನ್ನು$_1$ / ತಮಿ. ಮಿನ್, ಮಿನ್ನು: ಮಲ. ಮಿನ್ನಿ, ಮಿನ್ನು]

**ಮಿನ್ನುವಡೆ** (ಕ್ರಿ). ಹೊಳಪನ್ನು ಪಡೆ : ಕಾಂತಿಯುಕ್ತವಾಗಿರು : ಪೊನ್ನ ಜನ್ನಿವಾರ ನೊಸಲ ಬಾಸರನಾಮ ಮಿನ್ನುವಡೆದ ಸುಲಿಪಲ್ಲು (ರಾಮಾಶ. ೦೨-೦೩) ; ಮಿನ್ನುವಡೆದಾ ನಿಡುಗೇಶವಹಾ ಧೂಳಿಂ ನಾಂದಿದವೆಂದೆತ್ತಿ ಕೊಡಹಿ (ಪಾರೇಕು. ೨೬-೨೮). [ಮಿನ್ನು$_2$ + ಪಡೆ$_1$]

**ಮಿಯಾವ್** (ನಾ). ಬೆಕ್ಕಿನ ಕೂಗನ್ನು ಸೂಚಿಸುವ ಒಂದು ಅನುಕರಣಶಬ್ದ : ಮಿಯಾವ್ ಎಂದು ಅಟ್ಟದಿಂದ ಬೆಕ್ಕು ಕೆಳಗೆ ಹಾರಿತು (ಪ್ರಕ್ಕಿ. ೪೩).

**ಮಿರಡಿ, ಮಿಂಡಿ$_2$** (ನಾ). ಒಂದು ಬಗೆಯ ಸಸ್ಯ : "ನಾಯಿಬೇಲಿ . . . ಮಿರಡಿ, ಮಿಂಡಿ, ಮಿರ್ಡೆ" (ಸಸ್ಯಕೋ. ೬೦) ; ಮಿರಡಿ, ಮಿಂಡಿ (ವೃಸಿಗ. ೩೬-೭೪೦). **ಮಿಂಡಿ$_2$** : ಮೇಲಿನ ಪ್ರಯೋಗಗಳನ್ನು ನೋಡಿ.

[ ? ]

**ಮಿರಾಬು** (ನಾ). ದೇವಸ್ಥಾನದಲ್ಲಿ ದೇವರ ಉತ್ಸವಕಾಲದಲ್ಲಿ ಬಳಸುವ (ಕುದುರೆಯಾಕಾರದ) ಒಂದು ಬಗೆಯ ಅಲಂಕಾರಸಾಧನ : ಹಬ್ಬಹರಿದಿನಗಳಲ್ಲಿ ದೇವರನ್ನು ಹೊರುವ ಭಾರ ಇವನಿಗಿರಲಿಲ್ಲವಾದರೂ ನಂದೀಧ್ವಜ, ಚೌರಿ, ಚಾಮರ, ಮಿರಾಬು, ಅಬ್ದಾಗಿರಿಗಳನ್ನು ಉಗ್ರಾಣದಿಂದ ಹೊರಕ್ಕೆ ತಂದು ಧೂಳು ಕೊಡಹಬೇಕು (ಶಿಳುಮ. ೩).

[ ?./ ಮರಾ. ಮುರಾಪಾ ]

**ಮಿರಾಸದಾರ** 'ಮಿರಾಸಿದಾರ' ನೋ.

**ಮಿರಾಸಿ, ಮಿರಾಸು, ಮಿರಾಸೆ, ಮೀರಾಸೆ** (ನಾ). ೧. (ಹಳ್ಳಿಯಲ್ಲಿ) ರೈತರು ಸಾಗುವಳಿಮಾಡುವುದಕ್ಕಾಗಿ ಭೂಮಿಯ ಮಾಲೀಕನಿಗೆ ಕೊಡಬೇಕಾಗುವ ಧಾನ್ಯ, ಹಣ ಮೊದಲಾದುವು ಮತ್ತು ಆ ಮಾಲೀಕನು ಅದನ್ನು ಪಡೆಯಲು ವಂಶಪಾರಂಪರ್ಯವಾಗಿ ಹೊಂದಿರುವ ಹಕ್ಕು : ಸ್ಥಳದ ಹಂಸೆರಡು ಮಂದಿ ಆಯಗಾರರ ನಿದಾನಿಸಿ ಯಥಾಪ್ರಕಾರ ನಿಂಮ ಸ್ಥಳ ಮಿರಾಸಿ ನಿಮ್ಮಗೆ ಕೊಟ್ಟು ತಾಮ್ರದ ಶಾಸನದ ಲಿಪಿ ಬರೆಸಿ ಕೊಟ್ಟು ಯಿದ್ದೇವೆ (ಎಕ. XII, ಶಿರಾ. ೦೦೨-೩೨ ; 1720) : ಬ್ರಾಮಕವಾಗಿ ಬರಿಸಿ ಗೌಡಿಕೆ ಮಿರಾಸಿ ತಂಸದೆಂದು (ಇಂ. ೦೯೪೭, ರಾಷಿಪತ್ರಂ. ೨೯೬-೦೯; ೪). ೨. ಗ್ರಾಮಸೇವಕರಿಗೆ ಊರಿನ ಮುಖ್ಯಸ್ಥರು ಮತ್ತು ರೈತರು ಹಣ ಅಥವಾ ಧಾನ್ಯದ ರೂಪದಲ್ಲಿ ಕೊಡುವ ವಾರ್ಷಿಕ ಅಥವಾ ಮಾಸಿಕವಾದ ವಿಶೇಷಸಂಭಾವನೆ, — ಭತ್ಯ : ನಿಬಂಧನೆಗಳ ಮೇರೆಗೆ ಸಲ್ಲಿಸಬೇಕಾದ ಮಿರಾಸಿಯನ್ನು ಸಲ್ಲಿಸಲಿಲ್ಲವೆಂತ ನೀರಗಂಟಿಯಿಂದ, ತೋಟಿಯಿಂದ ಅಥವಾ ತಳವಾರಿಯಿಂದ ಫಿರ್ಯಾದು ಬಂದರೆ (ಗ್ರಾಮಾಳ. ೯೩). ೩. (ಪ್ರಾಂತ್ಯದ ಪದ್ಧತಿಯ ಪ್ರಕಾರದ) ಗೇಣಿಯನ್ನು ಸಲ್ಲಿಸುತ್ತಿರುವ ತನಕ, ಗೇಣಿದಾರನಿಗೆ ಮತ್ತು ಅವನ ಉತ್ತರಾಧಿಕಾರಿಗೆ ಸಾಗುವಳಿಮಾಡಲು ಇರುವ ವಂಶಪಾರಂಪರ್ಯವಾದ ಹಕ್ಕು, — ಸ್ವಾಮ್ಯ : (ವ್ಯಗಕೋ. IV, ೭೭೯). **ಮಿರಾಸು** : ೨. ಅವನಿಗೆ ನಾಲ್ಕಾಣೆ ಮಿರಾಸು ಕೊಡುವರು (ಹುಬ್ಬಹ. ೯); ಆ ಊರಿನ ದೇವರ ಒಕ್ಕಲಿಗೆ ಸೇರಿದ ಪಕ್ಕದ ಊರುಗಳ ಒಕ್ಕಲುಗಳಿಂದಲೂ ಈಗ 'ಮಿರಾಸು' ( = ಮಾಮೂಲು) ಪಡೆಯುವ ಹಕ್ಕು ಅರ್ಚಕನಿಗಿದೆ (ಶೋಕವೇ. ೧೨). **ಮಿರಾಸೆ** : ೨. ಸುಗ್ಗಿಯ ವೇಳೆಗೆ ಅವನು ಮತ್ತೆ ಹಿಂದಕ್ಕೆ ಬಂದು ತನ್ನ ಮಿರಾಸೆಯಾದ ರಾಗಿ ಭತ್ತವನ್ನು ವಸೂಲು ಮಾಡಿಕೊಂಡು ಹೋಗುತ್ತಾನೆ (ಹಳ್ಳಿಚಾ. ೩೯) ; ಅವರಿಗೆ ಪ್ರತಿ ಮನೆಯಲ್ಲೂ ವರ್ಷಕ್ಕೆ ಒಂದು ಗೊತ್ತಾದ ಪ್ರಮಾಣದಲ್ಲಿ ಮಿರಾಸೆ ಕೊಡುತ್ತಿದ್ದರು (ಕಳಹು. ೯೩). **ಮೀರಾಸೆ** : ೨. ಅವನ ಮಕ್ಕಳು . . . ತಳಾರಿಕೆ ಹಾಗೂ ನೀರಗಂಟಿತನವನ್ನು ನೋಡಿಕೊಂಡು, ಧಾನ್ಯದ ಮೀರಾಸೆಯನ್ನು ತೆಗೆದುಕೊಂಡು ನೆಮ್ಮದಿಯಿಂದ ಬದುಕುತ್ತಿದ್ದರು (ಊರುಳ. ೭೮).

[ ← ಅರ. ಮೀರಾಸ್ ; ಹಿಂ. ಮಿರಾಸ್, ಮೀರಾಸ್ = ಪಿತ್ರಾರ್ಜಿತ ಆಸ್ತಿ ; ಮರಾ. ಮಿರಾಸ್ = ವಂಶಪಾರಂಪರ್ಯವಾದ ಸಂಪತ್ತು]

**ಮಿರಾಸಿದಾರ**, ಮಿರಾಸದಾರ (ನಾ). ಸಾಗುವಳಿದಾರರಿಂದ ಮಿರಾಸಿಯನ್ನು ಪಡೆಯುವ ಹಕ್ಕನ್ನು ಹೊಂದಿದವನು : (೬). **ಮಿರಾಸದಾರ :** ಒಂದು ಪ್ರಾಂತದ ಆಡಳಿತಗಳೆಲ್ಲವೂ ದೇಶಾಧಿಕಾರಿಯಾದ ದೇಶಮುಖ . . . ಮಿರಾಸದಾರ, ಜಮೀನ್‌ದಾರ ಎಂಬೀ ಅಧಿಕಾರಿಗಳ ಅಧೀನವಾಗಿದ್ದುವು (ಭಕ್ತ೩. ೦೩೬).
[ ← ಪಾರ. ಮಿರಾಸೀದಾರ್ : ಮರಾ. ಮಿರಾಸ್ದಾರ್ ]

**ಮಿರಾಸು** 'ಮಿರಾಸಿ' ನೋ.

**ಮಿರಾಸೆ** 'ಮಿರಾಸಿ' ನೋ.

**ಮಿರಿ** (ನಾ). ಕಾಳುಮೆಣಸು ; ಕರಿಮೆಣಸು : ಪಿಪ್ಪಲಿ ಮಿರಿ(ಳ)ನಾಗರಂ ಬಿಳದೆನಿಪ್ಪ ಪುನರ್ನವಿಯುಂಬಿವೆಲ್ಲವುಂ ಜಲದೊಳ್ ಕೂಡಿಕೊಂಡರೆದುದಂ ಕುಡಿಸಲ್ . . . ಪೆರ್ಗಣಂಗಳ ವಿಷಂಗಳುಮಂ ಕಳೆಗುಂ (ಚಮತ. ೦೨-೯).
[ದೇ.॥ ತಮಿ. ಮಿರಿಯಮ್ : ತೆಲು. ಮಿರಿಯಮು, ಮಿರೆಮು./ ಪ್ರಾ. ಮಿರಿಅ./ಮರಾ. ಮಿರೀ ; ಗುಜ. ಮರೀ./ಸಂ. ಮರಿಚ]

**ಮಿರಿದೆ** (ನಾ). ಒಂದು ಸ್ಥಳದ ಹೆಸರು ; P ಇದು ಈಗಿನ ಮೈಸೂರು ಜಿಲ್ಲೆಯ ಕೃಷ್ಣರಾಜನಗರದ ಮಿರ್ಲೆ ಗ್ರಾಮ : ಮಿರಿದೆಯ ಉಮ್ಮಾದಗಾಮುಣ್ದರುಂ . . . ತೆನನ್ದಾಕರುಂ ಕೊಳನೆಲ್ಲೂರ ಸಾಲತ್ತರುಂ ವಾರದರುಂ ಎನೆವ್ವರುಂ ನರಸಾಕ್ಷಿ (ಎಕ. V (R), ಕೃಕ್ಕ. ೦೦೩-೬೯ ; ಕ. 890). [P ಇದು 'ಮಿರಿಲೆ' ಎಂಬುದರ ಅಪಲಿಖಿತ]

**ಮಿರಿಮಿರಿ** 'ಮಿಱಿಮಿಱಿ' ನೋ.

**ಮಿರಿಳೆ**, ಮುರಳಿ$_2$ (ನಾ). ಹೊಲ, ಗದ್ದೆ ಹಾಗೂ ನದೀತೀರದಲ್ಲಿ ಬೆಳೆಯುವ ಒಂದು ಬಗೆಯ ಹುಲ್ಲು ಮತ್ತು ತಿನ್ನಬಹುದಾದ ಅದರ ಬೀಜ : ಕೀಳುಮರ ಕಾವಾಗಿ ಕೊಡಲಿಗೆ ಎಳಿಗೆಯ ತನ್ನಬಳಕುಲ ಜಾಲಕಂ ಕಡುವ್ಯಾತ್ಮವಾದಂತಸುರಸಂತತಿಗೆ ಮೂಳನೈರುತಿ ಮೃತ್ಯುವಾದನು ಹೇಳಲಿನ್ನೇನರಸ ದಿಕ್ಕಟಪಾಲಕರೊಡವೆರೆದು ಮಿರಿಳೆಯ ಬೀಜದಂದವಲಿ (ಕಂಐಕ. ೩೬-೨೭). **ಮುರಳಿ$_2$ :** ಎಳ್ಳಂತು ಬಿಸಿಲಿಗೆ ಒಣಗುತ್ತದೆ, ನೀನು ಯಾಕೆ ಒಣಗುತ್ತೀ ಮುರಳೀಬೀಜವೇ ? (ಗಾದೆ) ; ಎಳ್ಳೊಣಗಿದರೆ ಎಣ್ಣೆ ಬರುತ್ತದೆ, ನೀನು ಯಾಕೆ ಒಣಗುತ್ತೀ ಮುರಳೀ ಬೀಜವೇ ? (ಗಾದೆ). [ ← ಮರಾ. ಮುರಲೀ ]

**ಮಿರುಗಿಸು** 'ಮಿಱುಗಿಸು' ನೋ.

**ಮಿರುಗು$_1$** 'ಮಿಱುಗು$_1$' ನೋ.

**ಮಿರುಗು$_2$** 'ಮಿಱುಗು$_2$' ನೋ.

**ಮಿರುಗುಕೊಡು** (ಕ್ರಿ). ಹೊಳಪನ್ನು ಕೊಡು ; ಮೆರುಗು ನೀಡು : ಚಂದ್ರಿಕೆಯಲ್ಲಿ ಆ ಬಣ್ಣಕ್ಕೆ ಮಿರುಗುಕೊಟ್ಟಂತಾಗಿತ್ತು (ಚಾಆಲ. ೦೦೩).
[ಮಿರುಗು$_2$ (< ಮಿಱುಗು$_2$) + ಕೊಡು$_1$]

**ಮಿರುಗುಟ್ಟು** (ಕ್ರಿ). ಹೊಳೆ ; ಪ್ರಕಾಶಿಸು : ಅಲ್ಲಿ ಮಿರುಗುಟ್ಟುತ್ತ ಬಿದ್ದಿದ್ದ ಒಂದು ದುಂಡುಕಲ್ಲನ್ನು ಲಕ್ಷ್ಮಿಯ ಕೈಯಲ್ಲಿಟ್ಟು (ಸಂತ. ೦೩೨).
[ < ಮಿರುಗು$_2$ + ಕುಟ್ಟು$_1$ ]

**ಮಿರುಗುಹುಳ** (ನಾ). ಮಿಂಚಿನಂತೆ ಹೊಳೆಯುವ ಒಂದು ಬಗೆಯ ಹುಳು ; ಮಿಂಚುಹುಳು ; ಮಿಣುಕುಹುಳು : ತರಣಿಯುಂಬರ ಬೆಳಗುವಂದದಿ ಮಿರುಗುಹುಳ ಬೆಳಗುವವೆ (ಶಂಮಹಾ. ೦೬೯-೦೨).
[ ಮಿರುಗು$_1$ (< ಮಿಱುಗು$_1$) + ಹುಳ (< ಪುೞು) ]

**ಮಿರುತಾರಗೆ** (ನಾ). ಹೊಳೆಯುವ ನಕ್ಷತ್ರ : ಗೋಪುರದ ತುದಿಯಲ್ಲಿ ಬಾನನೆತ್ತುತ ನಿಂತು ಇರುಳನೊಳು ಮಿರುತಾರಗೆಯ ಮಾಲೆಗೊಳುತ (ಮುಕದೀ. ೦೨-೭). [< ಮಿರುಗು$_1$ + ತಾರಗೆ]

**ಮಿರುವರಿಕೆ** (ನಾ). "ಮಿರ್ರನೆ ಓಡುಪಿಕೆ" (ಗೀಶಂ. ೦೩೨ ಟಿಪ್ಪಣಿ) : ನಲಿನಿಯ ನನೆಮುನಿಸಿನ, ಕೋಗಿಲೆಯ ಕೊರಳ ಕನಸಿನ, ಮುಗಿಲಿನ ಮಿರುವರಿಕೆಯು ಸಲ್ಲುತಿದೆ ನೋಡ ಹರಕೆಯು ! (ಗೀಶಂ. ೩೯-೦೯).
[ಮಿರು$_1$ + ಪರಿಕೆ$_1$]

**ಮಿರ್ಜಾಯಿ** (ನಾ). ಉದ್ದವಾದ ತೋಳುಗಳುಳ್ಳ ಒಂದು ಬಗೆಯ ಅಂಗಿ ; ಕುಡತಾ : ಶ್ರೀಅರವಿಂದರು . . . ಭಾರತದೇಶದ ಗಿರಣಿಯ ಉರುಟುಬಟ್ಟೆಯ ಸಾಧಾರಣ 'ಮಿರ್ಜಾಯಿ'ಯನ್ನು (ಕುಡತಾ) ಧರಿಸುತ್ತಿದ್ದರು (ಮಹಾಯೋ. ೭೬).
[ ← ಪಾರ. ಮಿರಜಾ, ಮಿರಜಾಈ ; ಹಿಂ. ಮಿರಜಈ, ಮಿರಜಾತ ; ಮರಾ. ಮಿರಜಾಈ ]

**ಮಿರ್ತು** 'ಮಿಟ್ಟು' ನೋ.

**ಮಿರ್ಲೆ** (ನಾ). ಒಂದು ಬಗೆಯ ನೀರುಹಕ್ಕಿ : (೬). [ ? ]

**ಮಿಲನ**, ಮಿಳನ (ನಾ). ೧. ಸೇರುವುದು ; ಸೇರಿಕೆ ; ಸಂಯೋಗ. ೨. ಒಬ್ಬರನ್ನೊಬ್ಬರು ಸಂಧಿಸುವಿಕೆ ; ಸಮಾಗಮ : ಮೊದಲ ಮೋಹದ ಬಲೆಯ ನೆಯ್ದೊಡೆಯ ತಿಳಿಗೊಳಂ, ಮೊದಲ ಮಿಲನದ ಮತ್ತೆ ವಿರಹದ ಶಿವಾಲಯಂ ! (ಚಿತ್ರಾಂಗ. ೬೨-೦೬೬೭) ; ಮಿಲನದ ತರುವಾಯ ದಂಪತಿಗಳಲ್ಲಿ ವಿಯೋಗವುಂಟಾದರೆ, ಅವರಲ್ಲುಂಟಾಗುವ ವಿರಹದಲ್ಲಿ ವೇದನೆಯ ಶ್ರುತಿಯಿರುವುದು (ಸಾಹಿಸ. ೯೩). **ಮಿಳನ :** ೧. ಇಬ್ಬರ ಹೃದಯಗಳ ಮಿಳನವಾಗುವುದು (ರ್ದಕ್ಷಾಲೋ. XX. ೬೬೩೪) ; ವೈದಿಕ ಯಾಗ ಮತ್ತು ಕಾಡಿನಲ್ಲಿನ ಭಗವದಾರಾಧನೆ — ಇವೆರಡೂ ಅಂಶಗಳ ಮಿಳನವು ಉಪನಿಷತ್ತುಗಳಲ್ಲಿ ನಮಗೆ ಗೋಚರವಾಗುತ್ತದೆ (ಚಕ್ಕಶ್ರಾ. ೨೦).
[ಸಂ.]

**ಮಿಲಾಖತು** 'ಮುಲಾಖತ್ತು' ನೋ.

**ಮಿಲಾಖತ್ತು** 'ಮುಲಾಖತ್ತು' ನೋ.

**ಮಿಲಾಯಿಸು**(ಕ್ರಿ). ೧. ಸೇರಿಸು ; ಕೂಡಿಸು : ಎಲ್ಲರನ್ನೂ ಒಟ್ಟಿಗೆ ಮಿಲಾಯಿಸಿ ಅವರೆಲ್ಲರ ತಲೆಗೆ ಒಂದೇ ಹೆಸರಿನ ಚೀಟಿಯನ್ನಂಟಿಸುವುದು ತರವಲ್ಲ (ಸಾಹಿತ್ಯ. VI, ಕೃಷ್ಣಾಚಸ). ೨. ಬೆರಸು ; ಮಿಶ್ರಮಾಡು : ಕೊಳವಳಕೆ ಬೀಜ ಒಂದು ಸೇರು ಮೆಂತ್ಯ ಒಂದು ಸೇರು ಉದ್ದಿನ ಹುಟ್ಟು ಒಂದು ಸೇರು ಇವನ್ನು ಮಿಲಾಯಿಸಿ ನೆರಳಲ್ಲಿ ಒಣಗಿಸಿ . . .ಅರವತ್ತು ದಿನ ತಗೆದುಕೊಂಡರೆ ವೀರ್ಯವೃದ್ಧಿಯಹುದು (ಕಾಮುಕ. ೨೬೮). ೩. ಭೇಟಿ ಮಾಡಿಸು; ಪರಿಚಯ ಮಾಡಿಸು : (೬). ೪. ತಿರುಗಿ ಬೀಳು; ದಬಾಯಿಸು : ಪುರೋಹಿತಶಾಸ್ತ್ರಿಗಳಿಗೇ ಮಿಲಾಯಿಸುತ್ತಿರುವ ಮುತ್ತೈದೆಯರನ್ನು ಚಿತ್ರಿಸುವುದಕ್ಕಂತೂ ಆ ಆದಿಶೇಷನೇ ಬರಬೇಕು (ಸವಸಂ. ೯೮); ಅಮಿಾರ ಸಾಬಿಯ ಕೈಯಲ್ಲಿದ್ದ ದೊಣ್ಣೆಗೆ ಭೀಷಣವಾಗಿ ಮಿಲಾಯಿಸಿ ಕಣಕಿದ ಸಿಂಹದಂತೆ ನಿಂತಿದ್ದಾನೆ. ಕುಳ್ಳ ವೆಂಕಟಣ್ಣ ! (ಮುಗಮಶಾ. ೦೪). ೫. ಹೊಡೆ: ಬಡಿ : ಇಬ್ಬರು ಪ್ರತಿಸ್ಪರ್ಧಿಗಳಿಗೆ ಕೈಕೈ ಮಿಲಾಯಿಸುವ ಹೊತ್ತು ಬಂತು (ಐದ್ಧಾರ. ೯೬) ; ಅವರು . . . ಕೈಕೈ ಮಿಲಾಯಿಸುವ ಕಾರಬಾರ ನಡೆಸಿರುತ್ತಾರೆ (ಪ್ರಿಬಂಧ. II, ೨೭೦).
[ಮಿಲ್ಲಾ$_0$ (P ← ಹಿಂ. ಮಿಲನಾ ; ಮರಾ. ಮಿಳಣೇ. ಮಿಳವಣೇ) + — ಇಸು$_3$./ತುಳು. ಮಿಲಾಯಿಸು, ಮಿಲಾವು, ಮಿಲಾಸು]

**ಮಿಲಾವ್**, ಮಿಲಾವೆ (ನಾ). ಸೇರಿಸುವುದು; ಕೂಡಿಸುವುದು : ಆ ಭೂಮಿಯನ್ನು ಸಂಬರಿನೊಳಕ್ಕೆ ಮಿಲಾವ್ ಮಾಡಿಕೊಳ್ಳಲೂ ಬಹುದು (ಭೂಅಂಶ. ೩೭). **ಮಿಲಾವೆ :** ಕೋಟೆವಳಗಣ ಮುಂದಿಯೆಲ್ಲಾ ಹೊರಕೆಗಿದು ಪರಸ್ಥಳದ ಮುಂದಿ ಕೋಟೆವಳಗೆ ಕಾಯಾಮಾದ ಸ್ಥಳದ ಮುಂದಿ ಜ್ಯತಗೆ ನಿಲಿಸಿ ಪರಸ್ಥಳದ ಮುಂದಿ ಮಿಲಾವೆ ಮಾಡಿ ಪೇಟೆಕಾವಲಲ್ಲಿಯಿಟ್ಟು (ಕೃದರ. ೯೭). [← ಹಿಂ. ಮಿಲಾವ್; ಮರಾ. ಮಿಳಾವಾ]

**ಮಿಲಾವಣೆ** (ನಾ). ೧. ಸೇರುವುದು; ಕೂಡುವುದು : (೬). ೨. ಹೊಡೆದಾಟ ; ಬಡಿದಾಟ : ಇನ್ನೇನು ರಣಕಹಳೆ ಊದುವುದೊಂದು ಉಳಿದಿತ್ತು

ಕೈಕೈ ಮಿಲಾವಣೆಯಾಗುವುದಕ್ಕೆ (ಸುವಸಂ. ೫೦). [ಮಿಲಾವ್ + —ಅಣೆ₄. / ಹಿಂ. ಮಿಲವಾನಾ, ಮಿಲಾನ; ಮರಾ. ಮಿಳವಣೀ]

**ಮಿಲಾವೆ** 'ಮಿಲಾವ್' ನೋ.

**ಮಿಲಿಟರಿ,** ಮಿಲಿಟೆರಿ (ಗು). ೧. ಸೈನ್ಯಕ್ಕೆ ಸಂಬಂಧಿಸಿದ; ಸೇನೆಯ : ದಂಡಿನ, ಮಿಲಿಟರಿ (Military· ಶಶ್ರಿ. ೫೫). (ನಾ). ೨. ಸೈನ್ಯ; ದಂಡು : ದೇವಾಲಯವು ಮಿಲಿಟರಿಯವರ ವಶದಲ್ಲಿದೆ (ಪ್ಯಾಪಾಸ್ಸು. ೦೨೯). **ಮಿಲಿಟೆರಿ :** ೧. ಮೈಸೂರು ಮಿಲಿಟೆರಿ ಫೌಜಿಗೆ ಸೇರಿರುವಂಥವರ ಸಂಬಳ ಮತ್ತು ಅಲೋವೆನ್ಸ್‌ಗಳು (ಗ್ರಾಪಾಕ. ೩೫). ೨. ಆ ದಾರಿಯತ್ತ ಬ್ರಿಟಿಶರ ಮೂರುಮಿಲಿಯ ಮಿಲಿಟೆರಿಯೆಲ್ಲ ಕಣ್ಣಲ್ಲಿ ಕಣ್ಣಟ್ಟು ಸಹಾಯವನ್ನು ನಿರೀಕ್ಷಿಸುತ್ತಿದ್ದಿತು (ಶ್ರಜಿಸ. ೬೦). [← ಇಂ. Military]

**ಮಿಲಿಟೆರಿ** 'ಮಿಲಿಟರಿ' ನೋ.

**ಮಿಲಿತ,** ಮಿಳಿತ (ಗು). ೧. ಸೇರಿದ; ಕೂಡಿದ : ಹೃದಯ ಹೃದಯ ಮಿಲಿತೈಕ್ಯದಂಥದಿದೆ ಒಂದೆ ಹೃದಯಲೋಕ (ಅರಳು. ೦೬೫-೩). ೨. ಜೊತೆಗೂಡಿದ ; ಹೊಂದಿಕೆಯಾದ. ೩. ಬೆರಸಿದ ; ಮಿಶ್ರಣ ಮಾಡಿದ : ಅವನ ತಲೆಯ ಮೇಲೆ ಮೋಚಿಯೊಳೊಡಲೊಳಂತುದ್ದೊಳಸುತ ಜಲಮಿಲಿ [ಪಾಠಾಂ. ಳ] ತಭಸಿತವನು (ಬಸವು. ೩೮-೦೪). ೪. ಭೆಟ್ಟಿಯಾದ; ಕಂಡ. **ಮಿಳಿತ :** ೧. ಮಿಳಿತ ಬುಧಾಳಿ ಭದ್ರಸುಪ್ರಪೂರ್ತಮದಾಯ್ತೆನಲ್ (ತ್ರಿಶುಪ. ೦೮-೫೮) ; ರತ್ನಾವಳಿಯ ಮಕುಟದ ಮಿಳಿತ ರಶ್ಮಿಗಳ ಅಷ್ಟದಿಗಧೀಶ್ವರರು ಭಾವಿಸಲು . . . ಅಷ್ಟಮೂರ್ತಿಪ್ರಿಯನು ಮೈದೋಱಿದನು ಮುನಿಪರಗೆ (ತಿಬಾಗ·೬-೯-೨೮). (ನಾ). ೫. ಸೇರುವಿಕೆ; ಸಂಯೋಗ: ತಿಳಿಯಲಿದು ಸಪಭಾಜನಸ್ಥಲಂ ಭಕ್ತ್ಯಾದಿ ಮಿಳಿತಮೈಕ್ಯಾಂತ ಷಟುಸ್ಥಲಗಳಿವು (ಮಹಾಪ. ೦೦-೯೮). [ಸಂ.]

**ಮಿಲುಕಾಟ** (ನಾ). ಒದ್ದಾಟ; ಚಡಪಡಿಕೆ : ಬಂಡೆಯ ಮೇಲಿನ ಜೀವಿಯ ಮಿಲುಕಾಟ ಮಿತಿ ಮೀರಿತು (ಎಮುಳ. ೬೧).

[ಮಿಲುಕು (< ಮಿಲುಗು) + ಆಟ]

**ಮಿಲುಕಾಡು** 'ಮಿಲುಗಾಡು' ನೋ.

**ಮಿಲುಕು** 'ಮಿಲುಗು' ನೋ.

**ಮಿಲುಗಾಡು,** ಮಿಲುಕಾಡು (ಕ್ರಿ). ೧. ಅಲುಗಾಡು ; ಅಲ್ಲಾಡು : ನಾಯಕ ಅವರ ಮುಖವನ್ನೇ ನೋಡಿ ಮೈಸವರುತ್ತಾನೆ. ಮಗು ಮಿಲುಗಾಡುತ್ತದೆ (ಪತರಾ. I, ೩೮೬); ಬಂಗಾರಿಗೆ ಮೈ ನಡುಕ ಬಂತು. ಮಗು ಮಿಲುಗಾಡಿತು (ಬಳಹ. ೬). **ಮಿಲುಕಾಡು :** ೨. ಒದ್ದಾಡು ; ಚಡಪಡಿಸು : ಮಳೆಯ ಪಂಜರಕ್ಕೆ ಸಿಲುಕಿ ಮಿಲುಕಾಡುವ ಜೀವಕ್ಕೆ ಕೇಳಿತೊ ಇಲ್ಲವೊ ! (ಎಮು. ೫೩). [ಮಿಲುಗು + ಆಡು₁]

**ಮಿಲುಗು,** ಮಿಲುಕು (ಕ್ರಿ). ೧. (ನೀರು ಹೆಚ್ಚಾಗಿ ಅನ್ನವು ಗಂಜಿಯೊಡನೆ) ಸೇರು; ಬೇರೆ : ಪೊತ್ತುವುದು . . . ಮಿಲುಗಿ [ಪಾಠಾಂ. ಗಿಲಿ, ಲಿಗಿ, ರಿಗಿ]ಹುದು ಪೊಡೆದಿಹುದು ನಸುಗಂಜಿ ಸುತ್ತಿಹುದು ಪೊಣಗಿಹುದು ದೋಷವಶಸಕ್ಕೆಂಟುತೆಜಿಸಪ್ಪುದು (ಸೂಶಾ. ೩-೦). ೨. ಕೂಡಿಸು; ಬೆರಸು : ತೊಳೆದ ಗೋಧುವೆಗೆ ಜೀರಿಗೆಯೆರಡ ಪೊರೆಯೊತ್ತಿ ಕಳಿಯರ್ಧ ನೀರರ್ಧವಾದೆಸಜಿಸೆತ್ತಿಯದಱೊಳಗಿಕ್ಕಿ ಮಿಲುಗಿ ನೀರಿಂಗುವಂದದಿನಟ್ಟು ಕೊಂಡಿಳುಹಿ (ಸೂಶಾ. ೩-೪೦). ೩. ಅಲುಗು; ಅಲ್ಲಾಡು : 'ಮಿಲುಗಾಡು' ಪರಾ. **ಮಿಲುಕು :** ೪. ಒದ್ದಾಡು; ಚಡಪಡಿಸು; ಮಿಡುಕು: 'ಮಿಲುಕಾಟ', 'ಮಿಲುಕಾಡು' ಪರಾ.

[ದೇಶ. ತೆಲು. ಮೆಲಗು, ಮೆಲಯು, ಮೆಲಿಯು]

**ಮಿಶಿನ್ನು** 'ಮಿಷನ್ನು' ನೋ.

**ಮಿಶ್ರ** (ಗು). ೧. ಸೇರಿಸಿದ; ಬೆರಸಿದ. ೨. ಕೂಡಿಕೊಂಡ; ಬೆರೆತ : ಆ ಗಂಧಸ್ನಪನೋದಕಂ ಮೇರುಮಹೀಧರಜಾಂಬೂನದನಿತಂಬಂಬಿದಿಱಿದು ಕಾಳಾಗುರುಮಿಶ್ರಪಯಸ್ರೋತಸ್ಸಮುದಿತಂ ಸೌಮನಸವನೆಯ್ದೆ (ಶಾಂತಿಪು. ೦೦-೫೨ ವ); ಯತ್ವಮಿಶ್ರ ಧತ್ವಕ್ಕೆ ದತ್ವಂ (ಶಮದ. ೨೬೬). ೩. ನಾನಾ ಬಗೆಯ: ವಿವಿಧ ರೀತಿಯ : ಅವನ ಹೃದಯ ಮಿಶ್ರಭಾವಗಳ ತುಮುಲರಂಗವಾಗಿತ್ತು (ಪುನರು. ೦೬೫). (ನಾ). ೪. ಸೇರಿಕೆ; ಮಿಶ್ರಣ : ಗುರುಲಘುಮಿಶ್ರಂ ಮೂಱಕ್ಕರದಿಂ ಗಣಮಿಡು ಲತಾಂಗಿ (ಛಂದೋಂಬು. ೦-೩೬). ೫. ಗೌರವಾನ್ವಿತವ್ಯಕ್ತಿಗಳನ್ನು ಕುರಿತು ಹೇಳುವಾಗ ಬಳಸುವ ಒಂದು ಪದ. ೬. ಒಂದು ಬಗೆಯ ಮೂಲಂಗಿ. ೭. [ಸಂಗೀತ] ಏಳುಲಘುಗಳ ಕಾಲದ ಮಿತಿಯುಳ್ಳ ಒಂದು ಬಗೆಯ ತಾಳ : ಜಾತಿ . . . ಇದು ಐದು ವಿಧವಾಗಿದೆ. ಅವು ಕ್ರಮವಾಗಿ (೧) ತ್ರಿಶ್ರ (೨) ಚತುರಶ್ರ (೩) ಖಂಡ (೪) ಮಿಶ್ರ (೫) ಸಂಕೀರ್ಣ. ಈ ಐದು ಜಾತಿಗಳೂ ಲಘುವಿಗೆ ಮಾತ್ರ ಸಲ್ಲುತ್ತವೆ . . . ತ್ರಿಶ್ರ ಚತುರಶ್ರಗಳ ಕೂಡಿಕೆಯಿಂದ ಮಿಶ್ರವೂ . . . ಹುಟ್ಟಿವೆ (ಸಂಗೀಪಂ. ೫೬) ; ವರ್ಣತಾಳವು ತ್ರ್ಯಸ್ರ, ಮಿಶ್ರ, ಚತುರಶ್ರವೆಂದು ಮೂರು ರೀತಿ (ಚತುಶ್ರ. ೯೬). ೮. ನಾಲ್ಕು ಬಗೆಯ ಧ್ವನಿಭೇದಗಳಲ್ಲಿ ಒಂದು : ದಿವಿಜನಾಯಕಗಾಯಕಂ . . . ಖಾವುಳ ಬೊಂಬುಳ ನಾರಾಟ ಮಿಶ್ರವೆಂಬ ನಾಲ್ಕುಂ ಧ್ವನಿಯ ಭೇದಮನಱಿದು . . . ಪಾಡುತ್ತಿರೆಯುಂ (ಶಾಂತೀಶ್ವ.೦೬-೬೬ ವ); ತಾಳಲಯ ಬೊಂಬಾಳ ಮಿಶ್ರದ ಮೇಳವದು ತಾ ರಾಗ (ಕುಮ್ಯಾಸ. ೭೦೩. ೦-೯೬); ಆ ರಾಗಂಗಳಂ ಪಾಡುವಲ್ಲಿ . . . ಖಾವುಳ ಬಬ್ಬೋಳ ನಾರಾಟ ಮಿಶ್ರವೆಂಬ ಚತುರ್ವಿಧ ಸುಸ್ವರಗಳಿಂದುರುಳಿಸಿ ಕರ್ಣರಸಾಯನವಾಗಿ ಪಾಡಿ (ವಿವೇಕ. ೨೩೬). ೯. ಸ್ವರ, ಪಾಟ, ಬಂಧ, ಪದ, ತೇನ, ಬಿರುದ, ಚಿತ್ರ ಮತ್ತು ಮಿಶ್ರಗಳೆಂಬ ಎಂಟು ಬಗೆಯ ಕರಣಗಳಲ್ಲಿ ಒಂದು : ರಾಸವು ತಾಳ, ದ್ರುತವೆಂಬ ಲಯ-ಇವುಗಳಿಂದ ಕೂಡಿರುವುದು ಕರಣದ ಸಾಮಾನ್ಯಲಕ್ಷಣವೆಂದು ತಿಳಿಯಬೇಕು. ಅದು ಎಂಟು ವಿಧವೆಂದು ಸಮ್ಮತಿಸಿದೆ. ಸ್ವರ, ಪಾಟ, ಬಂಧ, ಪದ, ತೇನ, ಬಿರುದ, ಚಿತ್ರ, ಮಿಶ್ರ (ಚತುಶ್ರ. ೮೫). ೧೦. [ಕಾವ್ಯಮೀ] ರೂಪಕಗಳಲ್ಲಿನ ಮೂರು ಬಗೆಯ ಕಥಾಂಶಗಳಲ್ಲಿ ಒಂದು: ಪ್ರಸಿದ್ಧವಾದ ಕಥಾವಸ್ತುವಿನಲ್ಲಿ ಬದಲಾವಣೆಯನ್ನು ಮಾಡಿರುವಂಥದು : 'ಮಿಶ್ರ' ಎಂದರೆ ಪ್ರಸಿದ್ಧವಾದ ಕಥೆಯಲ್ಲಿ ಬದಲಾವಣೆಗಳನ್ನು ಮಾಡಿದ್ದು (ಕೈಪಿಡಿ. ೨೦೬). ೧೧. [ಗಣಿತ] ಕೂಡುವುದು : ಯುತಂ, ಯುಕ್ತಂ, ಮಿಶ್ರಂ, ಸಮ್ಮಿಶ್ರಂ . . . ಬತಂ ಇಂತಿನಿತುಂ ಕೂಡೂವಕ್ಕೆ ಹೆಸರು (ವ್ಯವಹಾ. ೦೦-೦೨ ವ). ೧೨. [ಜೈನ] ಆತ್ಮನ ಐದು ಭಾವಗಳಲ್ಲಿ ಒಂದು; ಕರ್ಮದ ಕ್ಷಯೋಪಶಮದ ಭಾವ : ಆತ್ಮನಲ್ಲಿ ಪಾರಿಣಾಮಿಕ, ಔದಯಿಕ, ಮಿಶ್ರ, ಕ್ಷಾಯಿಕ, ಔಪಶಮಿಕಗಳೆಂದು ಐದು ಭಾವಗಳುಂಟು (ಜೈಪಶ. ೨೮೬); ಬಾಕಿ ನಾಲ್ಕು ಪರಿಣಾಮಗಳು ಔಪಶಮಿಕ, ಕ್ಷಾಯಿಕ, ಮಿಶ್ರ, ಔದಯಿಕಗಳು . . . ಬಾವಿಯ ನೀರಿನ ಕಶ್ಮಲದಂತೆ ಎರಡು ವಿಧವಾಗಿಯೂ ಇರುವುದು ಮಿಶ್ರ (ಹಿಂದಶಾ. ೮೫). [ಸಂ.]

**ಮಿಶ್ರಕಾಪಿ** (ನಾ). [ಸಂಗೀತ] ಒಂದು ರಾಗದ ಹೆಸರು : ಈ ಭಾಷಾಂಗ ಕಾಪಿರಾಗಕ್ಕೆ ಹಿಂದೂಸ್ಥಾನಿಕಾಪಿ, ದೇಶ್ಯಕಾಪಿ ಮತ್ತು ಮಿಶ್ರಕಾಪಿ ಎಂಬ ಹೆಸರುಗಳೂ ಪ್ರಚಾರದಲ್ಲಿವೆ (ಸಂಗೀತ. ೫೦).

[ಸಂ. ಮಿಶ್ರಕಾಪೀ]

**ಮಿಶ್ರಕಾವ್ಯ** (ನಾ). [ಕಾವ್ಯಮೀ] ಚಂಪೂಕಾವ್ಯ, ನಾಟಕ ಮುಂತಾದುವುಗಳಂತೆ ಗದ್ಯ ಮತ್ತು ಪದ್ಯಗಳೆರಡೂ ಸೇರಿಕೊಂಡಿರುವ ಸಾಹಿತ್ಯರಚನೆ : ಗದ್ಯ ಪದ್ಯಗಳೆರಡೂ ಇರತಕ್ಕ 'ಮಿಶ್ರ' ಕಾವ್ಯವು 'ಚಂಪು' ಎನ್ನಿಸುತ್ತದೆ. ನಾಟಕಾದಿ ದೃಶ್ಯಪ್ರಬಂಧಗಳಲ್ಲಿಯೂ ಗದ್ಯಪದ್ಯಗಳೆರಡೂ ಬರುವುದರಿಂದ ಇವುಗಳನ್ನೂ ಮಿಶ್ರಕಾವ್ಯಗಳಲ್ಲಿಯೇ ಸೇರಿಸಬಹುದು (ಕೈಪಿಡಿ. ೦೮೦). [ಸಂ.]

**ಮಿಶ್ರಣ** (ನಾ). ೧. ಸೇರಿಸುವುದು; ಕೂಡಿಸುವುದು : ಈ ಮಿಶ್ರಣದ ರೀತಿ ಎಂಥದೆಂದರೆ ಇತರ ಪಾಠಗಳ ಬೆರಕೆಯಿಂದ ಗ್ರಂಥದ ಅಂತಶ್ಶುದ್ಧಿಗೆ ಒದಗುವ ಲಾಭ ಅಥವಾ ನಷ್ಟವನ್ನು ನಿರ್ಧರಿಸುವುದು ಸಾಧ್ಯವಿಲ್ಲ (ಭಾರತ. ೩೩). ೨. ಸೇರಿಸುವಿಕೆ; ಬೆರಕೆ. ೩. ಬೆರಸಿರುವುದು; ಬೆರಕೆ ಮಾಡಿದುದು : ಉಸುಕು ಸಾಕಷ್ಟು ಬಿಸಿಯಾದಾಗ ಕೇಕಿನ ಮಿಶ್ರಣವಿರುವ ಭಾಂಡೆಯನ್ನು ಉಸುಕಿನ ಮೇಲಿರಿಸುವುದು (ಅಡುಗೆ. ೪೭). ೪. ದ್ರವ ರೂಪದ ಔಷಧದ ಬೆರಕೆ : ನಾಲ್ಕು ಹೊತ್ತಿಗಾಗುವ ಮಿಶ್ರಣ ಒಂದನ್ನು ಡಾಕ್ಟರು ಮೇಜಿನ ಮೇಲಿಟ್ಟು (ಕಾವೇರಿ. ೨೦೩). [ಸಂ.]

**ಮಿಶ್ರತಳಿ** (ನಾ). ಭಿನ್ನವಂಶದ ಪ್ರಾಣಿಗಳ ಅಥವಾ ಸಸ್ಯಗಳ ಸಂಯೋಗದಿಂದ ಉತ್ಪನ್ನವಾಗುವ ಪ್ರಾಣಿ ಅಥವಾ ಸಸ್ಯ: "(ಪ್ರಾಣಿ, ಸಸ್ಯ) ಮಿಶ್ರತಳಿಯನ್ನು ಹುಟ್ಟಿಸು : ಮಿಶ್ರತಳಿಯಾಗು" (Hybridize. ಇಂಕನ್). [ಮಿಶ್ರ + ತಳಿ]

**ಮಿಶ್ರಪ್ರಕೃತಿ** (ನಾ). ನಾಲ್ಕು ಬಗೆಯ ದೇಹಸ್ಥಿತಿಗಳಲ್ಲಿ ಒಂದು; ವಾತ ಮತ್ತು ಪಿತ್ತ ಲಕ್ಷಣಗಳು ಅಥವಾ ವಾತ, ಪಿತ್ತ ಮತ್ತು ಶ್ಲೇಷ್ಮ ಲಕ್ಷಣಗಳು ಕೂಡಿಕೊಂಡಿರುವ ದೇಹಸ್ಥಿತಿ : ವಾತಪ್ರಕೃತಿ. ಪಿತ್ತ ಪ್ರಕೃತಿ, ಶ್ಲೇಷ್ಮಪ್ರಕೃತಿ, ಮಿಶ್ರಪ್ರಕೃತಿ ಎಂದು ಪ್ರಕೃತಿಯು ನಾಲ್ಕು ತೆರನಾಗಿರುವುದು . . . ವಾತಪಿತ್ತಶ್ಲೇಷ್ಮಲಕ್ಷಣವಾದರೂ ಇವುಗಳಿಂದ ಕೂಡಿಕೊಂಡಿರುವಾತನೇ ಮಿಶ್ರಪ್ರಕೃತಿಯುಳ್ಳವನೆಂದರಿವುದು (ಸಸ್ಯ. ೦೭). [ಸಂ.]

**ಮಿಶ್ರಪ್ರತಿ** (ನಾ). [ಗ್ರಂಥಸಂ] ಭಿನ್ನವಾದ ಹಸ್ತಪ್ರತಿಗಳ ಶಾಖೆಗಳ ಪಾಠಗಳು ಒಂದರೊಡನೊಂದು ಸೇರಿ ಉಂಟಾದ ಹಸ್ತಪ್ರತಿ : ಭಿನ್ನ ಶಾಖೆಗಳು ಹೀಗೆ ಒಂದರೊಡನೊಂದು ಸೇರುವುದಕ್ಕೆ ಪಾಠಮಿಶ್ರಣ (Crossing or intermixing) ಎಂದೂ ಮತ್ತು ಹಾಗೆ ಸೃಷ್ಟಿಯಾದ ಹಸ್ತಪ್ರತಿಗಳಿಗೆ ಮಿಶ್ರಪ್ರತಿಗಳೆಂದೂ (Misch-Codices) ಹೆಸರು (ಭಾರತ. ೩೪). [ಸಂ.]

**ಮಿಶ್ರಲಯ** (ನಾ). [ಛಂದ] ಒಟ್ಟು ಲಯಕ್ಕೆ ಹೊಂದಿಕೆಯಾಗುವಂತೆ ಬೆರಕೆಮಾಡಿದ ವಿವಿಧ ಲಯ : ಮಿಶ್ರಲಯ: ಒಟ್ಟು ಲಯಕ್ಕೆ ಹೊಂದಿಕೆಯಾಗುವಂತೆ ಬೇರೆಬೇರೆ ಲಯಗಳ ಗಣಗಳನ್ನು ಮಿಶ್ರಗೊಳಿಸಿ ಬಳಸುವ ವೈಶಿಷ್ಟ್ಯವು ಹೊಸ ಕವಿತೆಗಳಲ್ಲಿ ವಿರಳವಾಗಿಯಾದರೂ ಕಾಣುತ್ತದೆ (ಛಂದೋವಿ. ೩೦೪). [ಸಂ.]

**ಮಿಶ್ರಲೋಹ** (ನಾ). ಬೇರೆ ಬೇರೆ ಲೋಹಗಳನ್ನು ಬೆರಸಿ ತಯಾರು ಮಾಡಿದ ಲೋಹ ; ಬೆರಕೆಲೋಹ : "ಬೆರಕೆಯ ಲೋಹ; ಮಿಶ್ರಲೋಹ; ಚಿನ್ನ ಅಥವಾ ಬೆಳ್ಳಿಯೊಡನೆ ಕೀಳ್ತರದ ಲೋಹವನ್ನು ಬೆರಸಿ ಮಾಡಿದ ಮಿಶ್ರಲೋಹ ; ಆ ಮಿಶ್ರಣದಲ್ಲಿಯ ಕೀಳುಲೋಹ" (Alloy. ಇಂಕನ); ಅಚ್ಚುಮೊಳೆಗಳ ತಯಾರಿಕೆಯಲ್ಲಿ ಕೆಲಸದ ಪರಿಮಿತಿಗೆ ತಕ್ಕಂತೆ ಮಿಶ್ರಲೋಹದೊಳಗಿನ ಲೋಹಗಳ ಶೇಕಡ ಪ್ರಮಾಣವನ್ನು ಬದಲಾಯಿಸ ಬೇಕು (ಮುದ್ರಣ. ೦೪). [ಸಂ.]

**ಮಿಶ್ರವರ್ಣ** (ನಾ). ಬೆರಕೆಯ ಬಣ್ಣ ; ಮಿಶ್ರಣ ಹೊಂದಿದ ವರ್ಣ. [ಸಂ.]

**ಮಿಶ್ರವಿವಾಹ** (ನಾ). ಬೇರೆ ಬೇರೆ ಜಾತಿಗೆ ಸೇರಿದ ಗಂಡುಹೆಣ್ಣುಗಳ ಮದುವೆ; ಅಂತರ್ಜಾತೀಯ ವಿವಾಹ : ಗಾಡಿಯಲ್ಲಿ ಮಿಶ್ರವಿವಾಹದ ಸಮಸ್ಯೆಯನ್ನು ಚರ್ಚಿಸುವ ಸುಸಂಸ್ಕೃತ ಮಹಿಳೆ (ಸಮಾಜ. ೦೭ ಪೀಠಿಕೆ). [ಸಂ.]

**ಮಿಶ್ರವಿಷ್ಕಂಭ** (ನಾ). [ಕಾವ್ಯಮೀ] ನಾಟಕ ಅಥವಾ ದೃಶ್ಯಕಾವ್ಯಗಳಲ್ಲಿ ನಡೆದುಹೋದ ಅಥವಾ ಮುಂದೆ ನಡೆಯುವ ಕಥಾಂಶವನ್ನು ಮಧ್ಯಮ ಮತ್ತು ನೀಚಪಾತ್ರಗಳ ಸಂಭಾಷಣೆಯ ಮೂಲಕ ಸೂಚಿಸುವುದು : ವಿಷ್ಕಂಭ–ನಡೆದು ಹೋದ ಮತ್ತು ಮುಂದೆ ನಡೆಯುವ ಕಥಾಂಶಗಳನ್ನು ಮಧ್ಯಮಪಾತ್ರಗಳ ಮೂಲಕ ಸಂಕ್ಷೇಪವಾಗಿ ಸೂಚಿಸುವುದು. ಇದೇ 'ಶುದ್ಧವಿಷ್ಕಂಭ'. ಮಧ್ಯಮಪಾತ್ರಗಳೂ, ನೀಚಪಾತ್ರಗಳೂ ಸೇರಿ ಸೂಚಿಸಿದರೆ ಅದಕ್ಕೆ 'ಸಂಕೀರ್ಣವಿಷ್ಕಂಭ' ಅಥವಾ 'ಮಿಶ್ರವಿಷ್ಕಂಭ' ವೆಂದು ಹೆಸರು (ಕೃಬಿ. ೨೦೭); ಮಧ್ಯಮ ನೀಚಪಾತ್ರಗಳೆರಡೂ ಸೇರಿ ಆದರೆ 'ಮಿಶ್ರವಿಷ್ಕಂಭ'ವಾಗುತ್ತದೆ (ಸಂನಾಟ. ೦೩). [ಸಂ.]

**ಮಿಶ್ರಾಲಂಕಾರ** (ನಾ). [ಕಾವ್ಯಮೀ] ಅನೇಕ ಅಲಂಕಾರಗಳ ಮಿಶ್ರಣ; ಇದರಲ್ಲಿ ಸಂಸೃಷ್ಟಿ ಮತ್ತು ಸಂಕರ ಎಂದು ಎರಡು ವಿಧಗಳಿವೆ; "ಸಂಸೃಷ್ಟಿಯಲ್ಲಿರುವ ಅಲಂಕಾರಗಳು ಒಂದರಲ್ಲಿ ಮತ್ತೊಂದು ಕಲೆಯದೆ ತಿಲತಂಡುಲಗಳಂತೆ ಇರುತ್ತವೆ. ಆದರೆ 'ಸಂಕರ'ವೆನ್ನುವುದು ಹಾಲು ನೀರುಗಳಂತೆ ಸೇರಿಹೋಗಿ ಒಂದಕ್ಕೆ ಮತ್ತೊಂದು ಉಪಜೀವಕವಾಗಿರುತ್ತದೆ" (ಕೃಬಿ. ೨೮೯) : ಅನೇಕ ಅಲಂಕಾರಗಳು ಒಂದೆಡೆಯಲ್ಲಿರುವಾಗ 'ಸಂಸೃಷ್ಟಿ'ಯೆಂದೂ 'ಸಂಕರ'ವೆಂದೂ ಮಿಶ್ರಾಲಂಕಾರಗಳಾಗುವುವು (ಕೃಬಿ. ೨೮೯). [ಸಂ.]

**ಮಿಶ್ರಿ**, ಮಿಸಿರಿ, ಮಿಸ್ರಿ (ನಾ). ೧. (ಈಜಿಪ್ಟ್ ದೇಶದಲ್ಲಿ ದೊರೆಯುವ) ಒಂದು ಬಗೆಯ ಸಕ್ಕರೆ; ಕಲ್ಲುಸಕ್ಕರೆ. ೨. ಒಂದು ಬಗೆಯ ಬೇರು : (?). **ಮಿಸಿರಿ** : ೨. 'ಸಾಲಾಮಿಸಿರಿ' ಹೋ. **ಮಿಸ್ರಿ** : ೨. 'ಸಾಲಾಮಿಸ್ರಿ' ಹೋ.

[←ಅರ. ಮಿಸ್ರೀ; ಹಿಂ. ಮಿಶ್ರೀ. ಮಿಸರೀ. ಮಿಸ್ರೀ; ಮರಾ. ಮಿಶ್ರೀ]

**ಮಿಶ್ರಿತ** (ಗು). ೧. ಸೇರಿದ; ಕೂಡಿದ. ೨. ಸೇರಿಸಿದ; ಕೂಡಿಸಿದ. ೩. ಗೌರವಕ್ಕೆ ತಕ್ಕ; ಗೌರವಾರ್ಹವಾದ. (ನಾ). ೪. [ಸಂಗೀತ] ಹದಿನೈದು ವಿಧವಾದ ಗಮಕಗಳಲ್ಲಿ ಒಂದು ; ಎರಡು ಅಥವಾ ಅನೇಕ ವಿಧ ಗಮಕಗಳನ್ನು ಸೇರಿಸಿ ಹಾಡುವ ಕ್ರಮ : ಮಿಶ್ರಿತ– ಎರಡು ಮೂರು ವಿಧ ಗಮಕಗಳನ್ನು ಸೇರಿಸಿ ಹಾಡುವುದು (ಸಂಗೀತಂ. ೨೭); ತಿರುಪ. ಹಾಗೆಯೇ ಸ್ಫುರಿತ. ಕಂಪಿತ, ಲೀನವೆಂಬುದು ಆಂದೋಲಿತ, ವಲಿ, ಸಂತರ ತ್ರಿಭಿನ್ನ, ಕುರುಲ, ಆಹತ, ಉಲ್ಲಾಸಿತ, ಪ್ಲಾವಿತ, ಹುಂಫಿತ ಹಾಗೆಯೇ ಮುದ್ರಿತ, ನಾಮಿತ, ಮಿಶ್ರಿತ–ಹೀಗೆ ಹದಿನೈದು ಭೇದಗಳನ್ನು (ಗಮಕದಲ್ಲಿ) ವಿಧಿಸಿದೆ (ಚತುರ್ಶ್ರ. ೩೦). ೫. ನಾಲ್ಕು ಬಗೆಯ ಧ್ವನಿ ಭೇದಗಳಲ್ಲಿ ಒಂದು : ಕಾವುಳ ಬೊಂಬಾಳ ನಾರಾಟ ಮಿಶ್ರಿತವೆಂಬ ಚತುರ್ವಿಧಸ್ವರಂಗಳಂ ಪರುಠವಿಸಿ (ಏಕೀ. ೦೯೯); ಮೂಜು ಮೂಜು ಸ್ತ್ರೀರಾಗಂಗಳಿಂದಭ್ಯಾಸಂಗೆಯ್ದು ಮತ್ತಮಾ ರಾಗಂಗಳಲ್ಲಿ . . . ಕಾವುಳ ಬೊಂಬಾಳ ನಾರಾಟ ಮಿಶ್ರಿತವೆಂಬ ಚತುರ್ವಿಧ ಸುಸ್ವರಂಗಳಂ ಪರುಠವಿಸಿ (ಕೃರಪು. ೩-೩ ವ). ೬. [ಜೈನ] ಒಂದು ನರಕದ ಹೆಸರು : ಧೂಮ ಪ್ರಭೆಯೊಳ್ ತಮಕಾ . . . ಮಿಶ್ರಿತಾಭಿಧಾನೇಂದ್ರಕಪಂಚಕ ತತ್ಸಂಬಂಧಿ ಶ್ರೇಢೀಬದ್ಧಪ್ರಕೀರ್ಣಕವಿಕಲ್ಪದಿಂ ತ್ರಿಲಕ್ಷಬಿಲಂಗಳಪ್ಪುವು (ತತ್ತ್ವಸೂ. ೦೨೦). [ಸಂ.]

**ಮಿಷ** (ನಾ). ೧. ದ್ವೇಷ ; ಹಗೆತನ ; ವೈರ. ೨. ಮೋಸ; ಕಪಟ : "ಕೈತವಂ, ಕಪಟಂ . . . ಮಿಷಂ, ನಿಭಂ, ನಿರ್ದಿಷ್ಟಂ, ವ್ಯಪದೇಶಂ– ಈ ೧೧ ನವಂ" (ಹಲಾಯುಧ. ೦೦೭–೨೫). ೩. ನೆಪ ; ನೆವ ; ವ್ಯಾಜ : ಗೋಪಕದಂಬಕಮಿಂದು . . . ಕಾಮುರ್ಕಪೂಜೆಗೆ ಬರ್ಪುದೆಂದು ತನ್ಮಿಷದೊಳ್ ಚೆಚ್ಚರಂ ರಥಮನೇಱಿಸಿ ತರ್ಪುದು ರಾಮಕೃಷ್ಣರಂ (ಜಗ. ೩-೬೪); ಮೊರೆವಳಿನಿಯ ರವಮಿಷದಿಂದರವಿಂದಿನಿ ಪಾಡೆ ಮುಚ್ಚಿ ಮುತ್ತಿನ ಸರಮಂ ಸರಸಿ ತೆರೆಗೈಯೊಳೀವಂತಿರೆ ಜಲಕಣಮಾಲೆ ಮೇಲದೇಂ ರಂಜಿಸಿತೋ (ರಾಜಶೇ. ೨-೬೭); ಸುಖದ ಮಿಷವು ದುಃಖ ವಿಷವು ಓಗ್ಗಿ ಪ್ರಾಣಪೂರಣಾ ! (ಮೂಕಿರ್ಕಣ. ೨೮-೭). [ಸಂ.]

**ಮಿಷನ್** 'ಮಿಷನ್ನು' ನೋ.

**ಮಿಷನ್ನು**, ಮಿಶಿನ್ನು, ಮಿಷನ್, ಮೆಷಿನ್ನು (ನಾ). (ವಾಹನಗಳನ್ನು ಓಡಿಸುವುದು, ಧಾನ್ಯವನ್ನು ಹಿಟ್ಟು ಮಾಡುವುದು, ಮುದ್ರಣ

ಕಾರ್ಯವನ್ನು ಮಾಡುವುದು. ಬಟ್ಟೆಯನ್ನು ಹೊಲಿಯು ವುದೇ ಮುಂತಾದ ಅನೇಕ ವಿಧವಾದ ಕೆಲಸಗಳಿಗೆ ಬಳಸುವ) ಯಾಂತ್ರಿಕಶಕ್ತಿಯನ್ನು ನಿಯೋಜಿಸಲಾಗಿರುವ ಸಲಕರಣೆ; ಯಂತ್ರ: ನನಗೊಂದು ಬಟ್ಟೆ ಹೊಲಿಯುವ ಮಿಷನ್ನು ಬೇಕು (ರೂ೩). ಮಿಶಿನ್ನು: ಗಿರಾಕಿಯ ಮೇಲೆ ಭಾರ ಹಾಕಿ ಮಿಶಿನ್ನು ಓಡಿಸುವುದು . . . ಈ ಮೊದಲಾದ ಪ್ರಯೋಗಗಳು ಸಾಮಾನ್ಯವಾಗಿರುತ್ತವೆ (ದೀಕನ್ನ. ೯೦). **ಮಿಷನ್:** ಮಿಷನ್ ಅಕ್ಕಿಯ ಅನ್ನಕ್ಕಿಂತ ಕೊಟ್ಟಣದ ಅಕ್ಕಿಯ ಅನ್ನದಲ್ಲಿ ಸಾರ ಹೆಚ್ಚು (ಪುಥ್ಯಪು. ೦೬೩). **ಮೆಷಿನ್ನು** : ಆ ಮೆಷಿನ್ನಿನ ಅಡಾಖುಡಿ, ಅದರ ಭರಾಟೆ . . . ಎಲ್ಲಾನ್ನೂ ನೋಡಿ. ಎಳೇ ಮಕ್ಕಳ ಹಾಗೆ ಕೈ ಚಪ್ಪಾಳೆ ಹೊಡೆದು ಕುಣಿದುಬಿಟ್ಟೆ (ಹಂಗೂರ. ೩೬). [ ←ಇಂ. Machine ]

**ಮಿಷ್ಟ** (ಗು). ೧. ಸಿಹಿಯಾದ : ಪಂಡಿತಮಹಾಶಯರ ಮನೆಯಿಂದ ಮಾವಿನ ಹಣ್ಣು ಮತ್ತು ಮಿಷ್ಟ ಖಾದ್ಯ ಬಂದಿದೆ (ಇಕ್ಷ್ಯ. ೪೬೬). ೨. ರುಚಿಯಾದ ; ಸವಿಯಾದ ; ರಸವತ್ತಾದ : 'ಮಿಷ್ಟಾನ್ನ' ಪರಾ. ೩. ತೋಯಿಸಿದ ; ಒದ್ದೆಮಾಡಿದ. (ನಾ). ೪. ಸಿಹಿವಾದುದು; ಸವಿಯಾದುದು : ಗಂಡಸರು ಕುರ್ಚಿಯ ಉದ್ಧಾರಕಾರ್ಯದಲ್ಲಿ ಪ್ರವೃತ್ತರಾಗಿ ಶಿಷ್ಟವೂ ಮಿಷ್ಟವೂ ಆದ ಧನ್ಯವಾದಗಳನ್ನು ಸಂಪಾದಿಸುತ್ತಾರೆ (ಶಿವಿಂಥ. II. ೦೬೬). ೫. ಸಿಹಿತಿಂಡಿ ; ಭಕ್ಷ್ಯ. [ಸಂ.]

**ಮಿಷ್ಟಭೋಜನ** (ನಾ). ಸವಿಯಾದ ಊಟ; ರುಚಿಕರವಾದ ಭೋಜನ : ತಾನು ಈ ದ್ವೀಪಕ್ಕೆ ಬಂದುದೂ . . . ಮಿಷ್ಟಭೋಜನವನ್ನು ಮಾಡಿದುದೂ ಕಲ್ಪವಲ್ಲೀಚೂರ್ಣವನ್ನು ಸೇವಿಸಿದುದೂ ಒಂದೊಂದಾಗಿ ನೆನಪಿಗೆ ಬಂದಿತು (ರಾಜಾಪು. ೨೨೩). [ಸಂ.]

**ಮಿಷ್ಟಾನ್ನ** (ನಾ). ಸವಿಯಾದ ಊಟ ; ರಸಕವಳ : ಮೃಷ್ಟಾನ್ನ: ಶಿಷ್ಟೋತ್ಕರಮಂ ಮಿಷ್ಟಾನ್ನದಿಂ[ದ]ಂತಣಿಪಿ ನಿಜ[ಕು]ಳಕ್ಕಂ ವಿಶಿಷ್ಟೋತ್ಸಮಮ್ ತಾಳ್ದಿರೆ (ಎಇ. XIII. ೩೩೦-೦೬; ೪21); ಪ್ರಯಾಣಿಕರು ದುಡ್ಡಿಲ್ಲದೆ ಮಿಷ್ಟಾನ್ನವನ್ನು ತಿನ್ನುತ್ತಿದ್ದಾಗ, ಜ್ಯೋತಿ–ಅಣ್ಣಾನ ಕೆಲಸಗಾರರು ತಪಸ್ವಿಗಳ ಹಾಗೆ ಉಪವಾಸ ಮಾಡುವಂಥ ಲಕ್ಷಣವೇನೂ ಕಾಣಲಿಲ್ಲ (ಶಿವಿಂಥ. II. ೯೬). [ಸಂ.]

**ಮಿಸರು** 'ಮಿಸ್ರ' ನೋ.

**ಮಿಸಲಯ** (ನಾ). ರೇಷ್ಮೆ ಬಟ್ಟೆ ; ಪಟ್ಟೆವಸ್ತ್ರ : ಹೆಂಡತಿಯು ಪುಟ್ಟು ತಿರುಗೋದು ಹರಕು ಪರಕು ಚಿಂದಿ ಮಿಂಡತಿಯು ಪುಟ್ಟು ಮೆರೆವದು ಮಿಸಲಯ ಮೇಲ್ಸಂದಿ (ಶದಾವ. ೪೮-೦೦). [←ಅರ. ಮಷ್ರೂಅ]

**ಮಿಸಲು** (ನಾ). ೧. (ಸಭೆ ಮುಂತಾದ ಸಮಾರಂಭಗಳಲ್ಲಿ ಯಾರಿಗಾದರೂ ನಿರ್ಣಯವಾದ ಉಚಿತವಾದ) ಸ್ಥಾನ : (೬). ೨. (ಸೈನ್ಯ, ಪೇದೆಗಳು, ಕುದುರೆಗಳು ಮುಂತಾದುವುಗಳ) ಅಧಿಕೃತವಾದ ತನಿಖೆ : (೬). [←ಅರ. ಮಿಸಾಲ್; ಹಿಂ. ಮಿಸಿಲ್; ಮರಾ. ಮಿಸಲ್]

**ಮಿಸಿ** (ನಾ). ೧. ತರಕಾರಿಯಾಗಿ ಬಳಸುವ ಒಂದು ಬಗೆಯ ಸೊಪ್ಪು; ಸಬ್ಬಸಿಗೆ : ''ಮಿಸಿ ಶತಪುಷ್ಪಿಕೆ'' (ವಸ್ತುಕೋ. ೩೬-೨೬); ''ಶಾಲೇಯಃ, ಶೀತಶಿವಾ, ಛತ್ರಾ, ಮಧುರಿಕಾ, ಮಿಸಿಃ, ಮಿಶ್ರೇಯಾ–೬ ಸಬ್ಬಸಿಕೆ ಹೆಸರುಗಳು'' (ಸಿದ್ಧ್ಯಂತಿ. ೧೩೬). ೨. ಒಂದು ಬಗೆಯ ಔಷಧೀಸಸ್ಯ; ಜಟಾಮಾಂಸಿ. [ಸಂ.]

**ಮಿಸಿಕಿ, ಮಿಸಿಕೆ** (ನಾ). ೧. ಕುದುರೆಯ ಮುಖಕ್ಕೆ ತೊಡಿಸುವ ಒಂದು ಬಗೆಯ ಅಲಂಕಾರ ಸಾಧನ (?) : ಮಿಸುನಿಯ ಟಂಕೆ ಸೇರಿವ ಮೊಗಮುಟ್ಟಿನ ಮಿಸಿ[ಶಾಕಾಂ. ಸು]ಕಿಯನಾ ವಾಹಕರು ಒಸೆದು ಸೇರಿಸಿದರಿಳಿಯದೇಜಿದಂತೆ ಕಣ್ಗೆಸೆಯಲಾ ಜಾತಿತುರಗಕೆ (ಶಂರಾಶಾಂ. ೯-೮೬); ಅರೆಗಡಿದ ಪಕ್ಕರೆಯ ಖಂಡಿಸಿದ ತಡಿಯ ಮುಜಿದ ಮಿಸಿ [ಶಾಕಾಂ. ಸು] ಕಿಯ ಹೇರಾಳದಿಂ ಬಿಡದೆಸೆದುದು ರಣಭೂಮಿ (ಶಂರಾಶಾಂ. ೨೦-೪೪). ೨. ಮಿಸಿಕೆ : ಕುದುರೆಯ ಒಂದು ಅವಯವ (?): ಕ(ಳ)ಳಿಯಿಕ್ಕೆಲದೊಳ್ ತಾನಳವಡಿಸುಗು ಮಿಸಿ(ಹಿ)ಕೆ[ಶಾಕಾಂ. ಮಿಷಿರೆ]ಯೆಂಬ ಪೆಸರವಕಕ್ಕು (ಅಶ್ವಶಾ. ೯-೩೬). [ ? ]

**ಮಿಸಿಕೆ** 'ಮಿಸಿಕಿ' ನೋ.

**ಮಿಸಿರಿ** 'ಮಿಶ್ರಿ' ನೋ.

**ಮಿಸಿರಿಕೆ** (ನಾ). ಒಂದು ಬಗೆಯ ಕ್ರಿಮಿ : ಸ್ಪರ್ಶರಸಗಂಧರೂಪುಗಳೆಂಬೀ ನಾಲ್ಕುಮನಱಿವ ತುಂಬಿ ಪತಂಗ ಕೀಟ ನೊಣ . . . ತೊನಸಿ ತ್ಯೋಳಿ ತೋಲೆ ಕೊಲಿಗ ಮಿಸಿರಿಕೆ ಪಕ್ಷಿ ಮಿಡುತೆ ತೆರಳಿ ಕೊಟ್ಟಾರಿಗಂಯೆಡೆವುಱು ಯೆಂದಿತ್ಯೇವಮಾದಿಗಳೊಳಂ (ಚಸಾರ. ೪೯). [ ? ]

**ಮಿಸಿಸು** 'ಮಿಸಾಯಿಸು' ನೋ.

**ಮಿಸುಂಕು** 'ಮಿಸುಕು₁' ನೋ.

**ಮಿಸುಕಾಟ** (ನಾ). ಅಲುಗಾಟ ; ಚಲನೆ : ಯಾವುದೋ ಹಿಂಬೆಳಕ ಮಿಸುಕಾಟವೇ ಹಿಗ್ಗಿ ಇಲ್ಲದುಂಟಾಗಿ ಕತ್ತಲೆಯು ಬೆಳಕಿಗೆ ಬಾಗಿ (ಮುಕ್ತಕಂ. ೩೨-೦೧). [ಮಿಸುಕು₁ + ಆಟ]

**ಮಿಸುಕಾಡು** (ಕ್ರಿ). ಅಲುಗಾಡು ; ಹೊರಳು : ಅವನು ಮಿಸುಕಾಡದೇ ನಿಧಾನವಾಗಿ ಉಸಿರಾಡುತ್ತಾ ಮಲಗಿರುವದನ್ನು ನೋಡಿ . . . ಗಾಳಿ ಹಾಕುವದನ್ನು ನಿಲ್ಲಿಸಿದಳು (ಹೂಹಣ್ಣು. ೩) ; ಭಾಸ್ಕರ ಕುರ್ಚಿಯಲ್ಲಿ ಅತ್ತಿತ್ತ ಅಸ್ವಸ್ಥನಂತೆ ಮಿಸುಕಾಡುತ್ತಿದ್ದ (ಕಮಜಿ. ೨೨೨). [ಮಿಸುಕು₁ + ಆಡು₁]

**ಮಿಸುಕು₁, ಮಿಸುಂಕು, ಮಿಸುಗು₁** (ಕ್ರಿ). ೧. ಕದಲು; ಅಲುಗು; ಅಲ್ಲಾಡು : ಆ ಬಲೆಯೊಳುತ್ಪನ್ನಮಾತಿ ತೊಡರ್ದು ತನ್ನ ಪೆಸರಂ ನೆನೆದುಸಿರನೊಳಕೆಗೆದಸು ಪೋದಂತೆ ಮಿಸುಕದಿರ್ಪುದುಂ (ಶಂಶಕಂ. ೦೩೯-೬) ; ಸಲೆ ಪಶುಗಳೆಲ್ಲಂ . . . ನಿಮಿಷಮಾತ್ರದಲಿ ಮಿಸುಕದುಸುರಿಡದುಸಿಕ ನಿದ್ದಂತಸುಗಳೆದವು (೬ಸಪ್ಪ. ೩೦-೩೯). ೨. ಕಂಪಿಸು ; ನಡುಗು ; ಅದುರು : "ಮಿಸುಕು–ಸ್ಪಂದನೇ (ಅದುರು)'' (ಶಪುಧಾ). ೩. ಓಡಾಡು ; ಅಡ್ಡಾಡು; ಸಂಚರಿಸು: ತರುಣಿಯರ ತಂಡದೊಳ್ ಮಿಸುಕಬಾರದು ದೇವ (ಸಂಬರ. ೦೩-೦೦೪); ಎಲ್ಲಿಗೆ ಮಿಸುಕದಿರು ಮನೆಯಿಂದಗಲದಿರು (ಬಸಪ್ಪ. ೦೪-೨). ೪. ಚಲಿಸು ; ನಡೆ : ದೆಸೆಯಿಂದಾಗಸದಿಂದಜಾಂಡತಟದಿಂದತ್ತಲ್ಲಿ ಪೊಕ್ಕಿರ್ದುಮಿಂ ಮಿಸುಕಲ್ ತೀರ್ಗುಮೆ ವೈರಿಗೆ (ಶಂಶಶಾ. ೦೦-೦೦೮); ಅಂತು ಮಾರುತಿಯ ರಥಮಂ ಮಿಸುಕಲೀಯದಿಸುವುದುಂ (ಶಂರಾಪಾ. ೦೩-೦೨೩ ವ); ಈ ವಸುಧಾಮಧ್ಯದೊಳೆತ್ತಲ್ ಮಿಸುಕುವನಿನ್ನೆತ್ತಲುಱುವನಹಿತಕ್ಷಿತಿಪಂ (ಕಾವ್ಯಾವ. ೦೪೯); ಸಮೀರನ ಮಿಸುಕಲೀಯದೆ ಮುಂದೆ ಮಿಕ್ಕವು ವಿಗಡ ವಾಜಿಗಳು (ಕುವ್ಯಾವಿ. ೩-೪೬). ೫. ಕದಲಿಸು ; ಅಲುಗಾಡಿಸು : ಎಸಕವುಳ್ಳರು ನೀವು ನಿಮಗನಿಮಿಷರು ಸರಿಯೇ ಫಣವ ಹಿಡಿವುದು ಮಿಸುಕಲಾಗದು ನೀವು ಬಾಲವನು (ಸಂಭಶ. ೩-೦೦೬) ; ಸುರರು ಸ್ತುತಿಸಿ ಕರೆಯೆ ತುಟಿಯ ಮಿಸುಕದವ ಒಱದೆ ಏತಕೆ ಬಾಯ ತೆಱೆದೆ ಹೇಳೊಮ್ಮೆ (ಪುರಂದ. ೦-೯೯-೦). ೬. ತಿರುಚು ; ತಿರುಗಿಸು : ಗೌಡರು ಎತ್ತುಗಳಿಗೆ ಛಟೀರ್ ಎಂದು ಬಾರುಕೋಲಿನಿಂದ ಬಿಗಿದು ಬಾಲ ಮಿಸುಕಿದಾಗ ಗಂಗಣ್ಣನಿಗೆ ಅರ್ಧಜೀವ ಬಂತು (ಕಪ್ಪುರು. ೧೩೪). ೭. ಹಿಂಸಿಸು ; ಒದ್ದಾಡಿಸು ; ಚಡಪಡಿಸುವಂತೆ ಮಾಡು : ಕಾಮಜ್ವರಂ ಸಂಕ್ರಮಿಸಿ ಮಿಸುಕಲೊಡನೆ ನೊಂದು ತನು ತನುವಾಯ್ತು (ಸೌಂದಪ್ಪ. ೦೩-೩೩). ೮. (ಪ್ರತಿಭಟಿಸುವುದಕ್ಕಾಗಿ) ಉಸಿರೆತ್ತು ; ಬಾಯಿಬಿಡು : ಮಿಸುಕದೆ ನಿಮ್ಮ ನಿಮ್ಮ ನಿಜರಾಜಿತರಾಜ್ಯವಿಲಾಸದಲ್ಲಿ ಸಂತಸದೊಳಿರ್ಪುದು (ಕುಸವೂ. ೬-೦೨೨); ಬಸುಱ ಬಗಿವೆನು ಕೀಚಕನ ನಸುಮಿಸುಕಿದೊಡೆ ವೈರಾಟವಂಶದ ಹೆಸರ ತೊಡೆವೆನು (ಕುವ್ಯಾವಿ. ೩-೩೮); ಯುದ್ಧದ ಆಶೆಯನ್ನುಳ್ಳ ರಾಜರೆಲ್ಲ ನಕುಲನೊಂದಿಗೆ ಪ್ರತಿಭಟಿಸಿ ಸೋತರು. ಅವರನ್ನು ಕಂಡು ಉಳಿದ ರಾಜರು ಮಿಸುಕದೆ ಬಂದು ಕಾಣಿಕೆಯನ್ನು ತೆತ್ತರು

(ಧರ್ಮಾಮೃ. ೪೦). ೯. ಚಲಾವಣೆಯಲ್ಲಿರು : ಸಮಿಯಿರ್ದಪಣಮವಾಸೆಯ ಬಸದಿಂ ಕಾಣಲ್ಕೆ ಬಾರದಂತಿರೆ ಜಿನರುಂ ವಸುಧೆಯೊಳಿರ್ದಪರಿರ್ದುಂ ಮಿಸುಕುವ ಕಲಿಕಾಲದೆಸಕದಿಂ ತಲೆದೋರದರ್ (ಧರ್ಮಾಮೃ. ೩-೦೯೪). ೧೦. ಬರು ; ಪ್ರವೇಶಿಸು : ನೊಸಲಿನಲಿ ಕಣ್ಣುಳ್ಳ ದೇವನಾವೊಸೆದು ಲಂಕಾದ್ವೀಪಸೀಮೆಗೆ ಮಿಸುಕಲಮ್ಮನು (ಕುಮಾವ್ಯಾ. ೩-೩೬). ೧೧. ಕಾಣಿಸಿಕೊಳ್ಳು ; ತಲೆದೋರು : ಕಿಸುರುಗಾವಳಿ ಬಂದಿಗಳಹತನ ಮವಿವೇಕಮುಸಿರಲೇನಾ ಚೆನ್ನಬಸವನಿಹ ರಾಜ್ಯದೊಳ್ ಮಿಸುಕವು (ಚೆಂಪು. ೬-೪೦); ಪುಸಿ ನುಸುಳನ್ಯಾಯ ಠೌಳಿ ವಂಚನೆಗಳು ವಸುಧೇಶನಾಳ್ವ ರಾಜ್ಯದಲಿ ಮಿಸುಕಲಮ್ಮವು (ಕಂಪು. ೬-೬೩) ; ಮಿಸುನಿಯೊರೆಯಿಂ ಮಿಸುಕುವಸಿಧಾರೆಯಂತೆಸೆವ ನುಡಿಗಳಂ ಕೇಳುವ ಪಿಲಾತಗಾತನ ಮಡದಿ . . . ಸಂದೇಶಮಂ ದೂತಮುಖದಿಂ ಕಳುಹೆ (ಗೂರ್ಕ್ರಿ. ೬-೧೬೬). ೧೨. (ಅಲಂ) ಸುಲಭವಾಗಿ ಅರ್ಥವಾಗು,-ಅರ್ಥವು ಗೋಚರಿಸು: ಪೊಸಗನ್ನಡದಿಂ ವ್ಯಾವರ್ಣಿಸುವೆಂ ಸತ್ಕೃತಿಯನೆಂದು ಕನ್ನಡವಾಂ ಚಿಂತಿಸಿ ಕೂಡಲಾಱಿದಕ್ಕಟ ಮಿಸುಕದ ಸಕ್ಕದಮಾನಿಕ್ಕುವವನುಂ ಕವಿಯೇ (ಧರ್ಮಾಮೃ. ೦-೪೦). ◁ ಮಿಸುಂಕು : ೧. ಆ ಸರಳಾಂಗುಲಿಯಿಂ ಮುರಾಂತಕಂ ಭರದೊಳೆ ತನ್ನ ದಕ್ಷಿಣಕರಾಗ್ರದಿನೊತ್ತೆ ಮಿಸುಂಕದಿರ್ಪುದುಂ (ಪುಣ್ಯಾಶ್ರ. ೦೪-೪೪). ▶ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. ಮಿಸುಗು₁ : ೧. ಅಂಚಿರದುವನೆ ಮಿಸುಗದ ಮಿಂಚಂಬರಚರ ಮಲ್ಲದ ಚಕೋರವಮಲರ್ಗಣ್ ಸತಿಯಾ (ಕಂಪ್ರ. ೦೦-೯೬); ತಿರುಕುಱುಪ್ಪೆ ತೊಂಡನೆಂಬ . . . ಅಸಗನೊಂದನೆಸಗನೆತ್ತ ಮಿಸುಗದಭವವಶದೋಳಿಪ್ಪನು (ತಿರುಕೊಂ. ದೀ. ೨೩೨-೭). ೩. ಕೊಂಬಿನೊಳ್ ವಸಿಯಿಸಿ ಮಿಸುಗುತಿರ್ದ ರಾಜಹಂಸನಂ ಆಂದೆಯೆಂದೇ ಬಗೆದು . . . ಎಚ್ಚಂ (ಪುಕಥಾ. ೦೨೯-೨). ೧೧. ಆನುಂ ತಪೋವನದೊಳ್ ಪಲಕಾಲಂ ತಪಂಗೆಯ್ಯೆ ಕೇವಲಜ್ಞಾನಂ ಪುಟ್ಟುವಲ್ಲಿ ಜನ್ಮಾಂತರದುಷ್ಕರ್ಮವಾಸನೆ ಮಿಸುಗೆ [ಪಾಠಾಂ. ಮಿಗೆ] (ಕಂಕಾಂ. ೬೦-೦೩); ಬಿಸಿಲುಗುದುರೆಯ್ಯೋ ಬೇಸಗೆ ರಾಜನಂದೆಸಗಿ ದುವ್ವಾಳಿಸಲಾಗ ಮಿಸುಗುವ ಖುರಧೂಳಿಯೆಂಬೊಲು ಸುಂಗಾಲ ಪಸರಿಸಿತಾ ಕಾಲದೊಳಗೆ (ಕಂಪು. ೯-೦೨).

[ದೇ.॥ ತುಳು. ಮಿಸ್ಕು ; ತೆಲು. ಮಿಸುಕು, ಮಿಸುಗು ; ತೊದ. ಮಿಸ್ಕ್]

**ಮಿಸುಕು₂** (ನಾ). ೧. ಅಲುಗಾಟ ; ಅಲ್ಲಾಟ : " ಮಿಸುಕಿನೊಳಗಶ್ಮಂ ತಕದೊಳೊಲೆ " (ಕಲ್ಪ. ೦೦೯) ; ಮೊದಲ ನಿರ್ವಾಹ್ಯಮೆಂಬುದ ವಸ್ತು . . . ಅದಱೊಳೆ ಸ್ಪಂದ ತೋಱುದುದದೇ ಮಿಸುಕು (ಪುಶೋ. ೨-೦೦). ೨. ಕಂಪನ ; ನಡುಕ ; ಆಕೆಯನ್ನು ಹಿಡಿದು ನಿಲಿಸಿಕೊಂಡು ಮಿಸುಕಿನಿಂದ ಬೋಧಿಸುತ್ತಿರುವಳು (ಶಬ್ಬ. ೦೨೨-೪). [<ಮಿಸುಕು₁]

**ಮಿಸುಗಿಸು** (ಕ್ರಿ). ಕದಲಿಸು ; ಅಲುಗಾಡಿಸು : ಮೇಲುಂದಿನ ವಸನವುಂ ಬಟ್ಟವೊಲೆ ಮಿಸುಗಲು . . . ನವಕುಸುಮಕೋಮಲೆಯರುಗಳೊಸೆದಾಕೆಯೊಡನೆ ಭರವಸದಿ ನಡೆತರುತಿರ್ದರು (ಸೌಂದರ. ೦೩-೪೯).

[ ಮಿಸುಗು₁ ( < ಮಿಸುಕು₁ ) + — ಇಸು₃ ]

**ಮಿಸುಗು₁** ' ಮಿಸುಕು₁' ನೋ.

**ಮಿಸುಗು₂** (ಕ್ರಿ). ೧. ಹೊಳೆ; ಪ್ರಕಾಶಿಸು: "ಮಿಸುಗು__ಕಾಂತೌ" (ಶಮದ); ಕುಸುಮದೆಸಟ ಮಿಸುಗುವಪೊಸದಳಂಬದ ಪೋಗೆ ಕಿಱಿದು ಬೇಗಂ ಮಿಶ್ರಮಿಸಿ (ಅಜಿ. ೦೦-೭೦೪) ; ಮಿಸುಗುವ ರತ್ನತೋರಣಗಣಂಗಳನೂನವಿಮಾನದೊಳ್ ಗುಳ್ದಿಸೆದವು (ಸುಕುಮಾ. ೯-೨೦) ; ಮಿಸುಗುವ ಅರಂ ತೊಳಪ್ಪ ಕನ್ನವುರಂ ಚೆಲ್ವೆಸೆದಿರೆ (ಶಮದ. ೬೩ ವೃತ್ತಿ). ೨. ಕಂಗೊಳಿಸು ; ಮನೋಹರವಾಗಿರು ; ಶೋಭಿಸು : ಮಿಸುಪ ರಸಾತರಂಗಳಿನೊಡಂಬಡನಾಗದೆ ತನ್ನೊಳಿಂತು ಪೋಲಿಸುವೊಡೆ ಪೋಲಿಸಲ್ಕೆ ದೊರೆ ವೀಣೆಯನಾ ಸುರತಪ್ರವೀಣೆಯುಂ (ಅಜಿಪು. ೨-೬೬); ಸಹಜವಿಭೂಷಣದಂತಿರೆ ಮಹನೀಯಶುಕ್ಲಾಣ್ಣಾಲಕ್ಷಣಂ ಮಿಸುಗೆ ಶುಭವಹನೆನಿಸಿದನಂ ಕಂಡಂ . . . ಆ ಮಹಿಪಂ (ಶಾಂತಿಪು. ೯೦೬); ದೇವ ದಯಾರಸಂ ಮಿಸುಪ ನಿನ್ನಯ ಮಾನಸದೊಳ್ ವಿರಕ್ತರಾಜೀವಮ ದಿಂದು ಕುಂದದ ವಿಕಾಸವಿಳಾಸಮನಾಂತು ಭವ್ಯಭೃಂಗಾವಳಿಯಾಗಮಕ್ಕೆ ಮಿಗೆ ಕಾರಣಮಾದುದು (ಧರ್ಮಾಪು. ೦೪-೯೯). ೩. ಶ್ರೇಷ್ಠವಾಗಿರು ; ಮೇಲಾಗಿರು : ಬಸಮಲ್ಲದ ರಾಜಿಯಂ ಸ್ವೈರಿಸಲಾಱದೆ ಧರ್ಮಮಣ್ಣಾ ಕೊಲ್ಲೆನೆ ದಯೆಯಿಂ ವಸುಮತಿಯೊಳಿಱುವರದುಪುಂ ಮಿಸುಗುವ ಸದ್ಧರ್ಮ ಮೇಂದು ನಂಬುವುದೆ ಬುಧಂ (ಧರ್ಮಾಮೃ. ೦-೧೬೬); ಇಂತೆಸೆದೀ ಪಾತಿವ್ರತ್ಯದ ಮಿಸುಗುವ ಜಸಮಣ್ಣಾ ತಲೆಗೆ ತಪ್ಪೆನು ಪುಲ್ಲಂ (ಅಕಂಕ. ೦೦-೯೪).

**ಮಿಸುನಿ** (ನಾ). ೧. ಚಿನ್ನ ; ಬಂಗಾರ: " ಸೊನ್ನೆ, ಕಸವರಂ, ಬೇಱೊನ್, ಮಿಸುನಿ—ಈ ೪ ಸುವರ್ಣಂ " (ಕಕಾ. ೩೦-೬೦); ಮಿಸುನಿಯಿಂದುಂಟಾದ ಕಟಕ ಮಕುಟಾದಿ ತೊಡವುಗಳು ಮಿಸುನಿಯಲ್ಲದೆ ಮತ್ತೊಂದು ರೂಪಾಗಬಲ್ಲುದೆ ಹೇಳಾ (ಕವ್ಯಪ. ೪. ೯೭-೨೦೩) ; ಆಸ್ಥಾನದಲಿ ಮಿಸುನಿಯ ಹೊಂಗಳೊಡನೊಡನುಕ್ಕಿ ಹೊಱಮಡಲು (ಐಕ. ೨೩-೩೩); ರಥದ ಹೊಱಲೇಪದಲಿ ಹುದುಗಿದ ಮಿಸುನಿಯಂತಿರೆ (ಕುಮಾವ್ಯಾ. ೦೩-೯). ೨. ಮೆರುಗು ; ಗಿಲೀಟು ; ಹೊಳಪು : ದೆಸೆಗಳನು ತೆರೆದು ಕವಿಯಾರಿ ಕೇಳುವನು ಮಿಸುನಿಯಾಗಸದಿ ಕೆಳೆನುಡಿಯ ನುಡಿಯುವನು (ಗೀಕಿಂ. ೨-೬); ಬಸವಂತಿ, ವಿಸ್ಮಯುಕ್ಕಿ ನಗೆಯ ಮಿಸುನಿಯನ್ನು ಲೇಪಿಸಿ . . . ಕೇಳಿದಳು (ದೀಕಹ. II,೦೬೪). ' ಮಿಸುನಿಸು ' ಪಠಾ. ೩. ಪರಿಶುದ್ಧವಾದುದು ; ಅಪ್ಪಟ : ಮಿಸುನಿಯ ಚಿನ್ನಕ್ಕೆ ಒರೆಗಲ್ಲ ಹಂಗೇಕೆ (ಅಪಕಂ. ೩೩-೪೨೩); ಮಿಸುನಿಯ ಪೊನ್ನ ಪಲ್ಲಣದೊಳುಲ್ಲಸಿತಂಬಡೆಯಲ್ಕೆ ಕೂಡೆ ತೆತ್ತಿಸಿದ ಸಮಸ್ತರತ್ನರುಚಿಗಳ್ ಪುದಿದುಣ್ಮೆ (ಕುಸಮಾ. ೪-೩೬).

**ಮಿಸುನಿಗಾಲ ಮಂಚ** = ಚಿನ್ನದ ಕಾಲುಗಳುಳ್ಳ ಮಂಚ : ಅಂಚೆನವಿರ ಪಾಸನುಳ್ಳ ಮಿಂಚುವಚ್ಚ ಮಿಸುನಿಗಾಲ ಮಂಚ . . . ಅಲ್ಲಿಗಲ್ಲಿಗೊಪ್ಪ ತೋರ್ಪವು (ಶಬರ. ೬-೦೩). **ಮಿಸುನಿಯ ಕೆಲಸ**=ಬಂಗಾರದಲ್ಲಿ ಆಭರಣ ಇತ್ಯಾದಿಗಳನ್ನು ಮಾಡುವ ಕೆಲಸ; ಚಿನ್ನದ ಕುಸುರಿಗೆಲಸ: ಮಿಸುನಿಯ ಕೆಲಸದೊಳಗೆ ರನ್ನಂ . . . ಶಿವತತ್ತ್ವದೊಳು ಕೂರ್ತು ನೆಲಸಿದಾ ಪ್ರಣವ ದಂತರಸಂಗೆ ಪತಿವೋಹಿಯೆನಿಪ ಮಂತ್ರೀಶನೆಸೆದಂ (ಪಾಶಕಂ. ೨-೦೪). **ಮಿಸುನಿಯ ದಟ್ಟಿ** = ಚಿನ್ನದ ಎಳೆಗಳುಳ್ಳ ಬಟ್ಟೆ ; ಪೀತಾಂಬರ : ಮಿಱುಗುವ ಮಿಸುನಿಯ ದಟ್ಟಿ ಕಟಿಯೊಳೊಪ್ಪೆ ಮೆಱೆವ ರತ್ನದ ದಾಕಿನಿಂದ ಒಱೆಯನುಗಿದ ಖಡ್ಗವಿಡಿದು ಕಂಬದೆ ಬಂದ ನರಸಿಂಹನಂತೆ ರಂಜಿಸಿದ (ಕೃಪಪ. ೦೩-೦೩). **ಮಿಸುನಿಯ ಬೆಟ್ಟು** = ಚಿನ್ನದಿಂದಾದುದೆಂದು ನಂಬಲಾದ ಪರ್ವತ ; ಮೇರು : ಉಱೆ ಮುಟ್ಟದುದಾ ನಿರ್ಜರ ಲೋಕಮನಾ ಮಿಸುನಿಯ ಬೆಟ್ಟು (ಜಯಾ. ೦-೩೩). **ಮಿಸುನಿವಸುಱವನು**= ಚಿನ್ನದ ಗರ್ಭದಿಂದ ಹೊರಬಂದವನು ; ಹಿರಣ್ಯಗರ್ಭ ; ಬ್ರಹ್ಮ : ಮಿಸುನಿವಸುಱವನ ತಲೆಯ ತಳೆದು . . . ಕರುಣಿಸುವ ಮೆಱೆಸಿದಲೆಯ ಕುಡುಗೆ ಮತಿಯಿಸುವುಸಿರನಸವಸದೊಳು (ಅದ್ವದೇ. ೬-೨).

[ದೇ.॥ ತೆಲು. ಮಿಸಿಮಿ, ಮಿಸಿ, ಮಿಸ, ಮಿಸಮಿಸ./ಹ್ರಾ. ಮಿಸ್ಮಿಸ. ಮಿಸಿಮಿಸ]

**ಮಿಸುನಿಕೆಲಸ** 'ಮಿಸುನಿಗೆಲಸ' ನೋ.

**ಮಿಸುನಿಗಚ್ಚು** (ನಾ). ಚಿನ್ನದ ಬಣ್ಣದ ಲೇಪ ; ಹೊಂಬಣ್ಣದ ಮೆರುಗು: ಭೂರಮೆ . . . ನಳನಳಿಸುವ ಕೆಯ್ಯೊಲಮೆಂಬ ಮಿಸುನಿಗಚ್ಚಿನ ಪೊಂಗುಪ್ಪಸಮಂ ತೊಟ್ಟು ಕಣ್ಗೆಡ್ಡ ಮಾದಳ್ (ರಾಕಾಶ. ೯೩-೦೩).

[ಮಿಸುನಿ + ಗಚ್ಚು₂]

**ಮಿಸುನಿಗಪ್ಪಟ** (ನಾ). ಜರತಾರಿ ಬಟ್ಟೆ ; ಪೀತಾಂಬರ : ಮಿಸುನಿಗಪ್ಪಟ ಬಿಗಿದ ಉತ್ತರಿ ವಸುಮತಿಗೆ ಸಲೆ ರುದ್ರನೆಂಬೊಲು (ಪುಹಿ. ೦೨).

[ಮಿಸುನಿ + ಕಪ್ಪಟ₁ (< ಕಪ್ಪಡ)]

**ಮಿಸುನಿಗರು** (ನಾ). ಬಂಗಾರವನ್ನು ಕರಗಿಸಿ ಎರಕ ಹೊಯ್ದು ರಚಿಸಿದ ಗೊಂಬೆ ; ಚಿನ್ನದ ಎರಕದ ಪುತ್ಥಳಿ : ಅರಲ ಸರಲ ಸೊನ್ನಾರಂ ಪಲ ಪೂ ಪರಕಲಿಸಿದ ಪಾಸಂಬಗ್ಗಿ ಟದೊಳಗಿರಿಸಿ ಮಿಸುನಿಗರುಗಳನುಗುರಿಜೀತದ ಮಾಣಿಕವತ್ತಿಗೆಯು ಬೆರಸಿ (ಜಯಶಾ. ೮-೯೭) ; ಮಿಸುನಿಗ ಪೆವ ಕಂಡರಿಸಿ ಯಂಗಜಶಿಲ್ಪಿ ಮಿಸುನಿಬಣ್ಣವನಿಡಲೆಂದು ಪೊಸೆದಗ್ನಿಯಂ ಕಾಸಿ ಬಿಸಿಯೇಱುವವೊಲು ಬಲುಬಿಸಿಲಳಲುರಿದುದು ಭೂಪರನಾ (ಶ್ರೀಶಾಂ.೯-೩೫). [ಮಿಸುನಿ + ಕರ್ರು$_2$]

**ಮಿಸುನಿಗಾಸು** (ನಾ). ಚಿನ್ನದ ನಾಣ್ಯ; ಬಂಗಾರದ ಕಾಸು : ಭದ್ರ ಗಾಯಕಂಗಂ ಮೆಚ್ಚಿ ಮಿಸುನಿಗಾಸೊಂದಿಯ್ಯೆ (ಕೆರವು. ೬-೯೩). [ಮಿಸುನಿ + ಕಾಸು$_2$]

**ಮಿಸುನಿಗುಂಡಿಗೆ** (ನಾ). ಚಿನ್ನದ ಪಾತ್ರೆ : ಮುಗುಂದೆಯ ನೆಲೆವೊಲೆಯೆಂಬ ಮಿಸುನಿಗುಂಡಿಗೆಗಳನುರದೊಳಗಿಟ್ಟು . . . ಸುರತಾಂಭೋನಿಧಿಯೊಳ ಗೊಗುಮಿಗೆ ತೇಂಕಾಡಿದನರಸಂ (ಜಯಶಾ. ೮-೩೯). [ಮಿಸುನಿ + ಗುಂಡಿಗೆ$_1$]

**ಮಿಸುನಿಗೆಲಸ,** ಮಿಸುನಿಕೆಲಸ (ನಾ). ಬಂಗಾರದಲ್ಲಿ ಆಭರಣ, ವಿಗ್ರಹ ಇತ್ಯಾದಿಗಳನ್ನು ಮಾಡುವ ಕೆಲಸ ; ಚಿನ್ನದ ಕೆಲಸ : ಮಿಸುನಿಗೆಲಸದ ಪುತ್ಥಳಿಗೆ ಮತ್ತ್ರಸುವು ಘಟಿಸಿತೊ (ವಾಗಕ. ೨೭-೬೯). **ಮಿಸುನಿಕೆಲಸ :** ಮಿಸುನಿಕೆಲಸ, ಕೆತ್ತನೆ, ಬಱಿ ಎಂಬಿವು ಅವರ ಬಿಡುವನ್ನೂ ಹೊಲಬನ್ನೂ ಸಾರುತ್ತವೆ (ಬಾಶಾಶಾ. ೨೫೭). [ಮಿಸುನಿ + ಕೆಲಸ]

**ಮಿಸುನಿದಾವರೆ** (ನಾ). ಹೊಂಬಣ್ಣದ ಕಮಲ ; ಹೊಂದಾವರೆ : ಎನ್ನ ಮೊಗಕೆ ಸರಿಯೆನ್ನ ಬಹುದೇಯೆಂದು ಚಿನ್ನ ಮಿಸುನಿದಾವರೆಯ ತನ್ನ ಕೈಸೆಜೆವಿಡಿದಂತೆ ಪಿಡಿದಳೊಂದು ಪೊನ್ನೊಳೆಸೆವ ಡವಕೆಯನು (ಶ್ರೀಶಾಂ. ೨-೦೭). [ಮಿಸುನಿ + ತಾವರೆ]

**ಮಿಸುನಿಪಟ್ಟೆ** 'ಮಿಸುನಿವಟ್ಟೆ' ನೋ.

**ಮಿಸುನಿಬರಹ** (ನಾ). ಬಂಗಾರದ ಚಿತ್ರಣ : ಮಿಸುನಿಬರಹದ ಹಾವರಣ ಬಿಸಿವ ಗಲ್ಲದ ಮದಧಾರೆಯಿಂದಾನೆಗಳ್ಮಸಗಿ ಬಂದುವು ರಾಯನೆಡೆಗೆ (ಶರತ. ೨೦-೬೩). [ಮಿಸುನಿ + ಬರಹ (< ಬರೆಪ)]

**ಮಿಸುನಿಮೊಗ** (ನಾ). ಪ್ರಕಾಶಮಾನವಾದ ಮುಖವುಳ್ಳವನು ; ಅಗ್ನಿ : "ಮರಗೂಟಂ . . . ಮಿಸುನಿಮೊಗಂ, ಹಗ್ಗಿ, ಕಿಚ್ಚು, ಇಂಗಳಂ ಎಲರ್ಗೆಳೆಯಂ . . . ಈ ೧೩ ಅಗ್ನಿ" (ಕಶಾ. ೯೯-೩೩) ; "ಮಿಸುನಿಮೊಗ ಸಗ್ಗಿಗರಡಬಳನೆನ್ನಲಗ್ನಿಯುಭಿಧಾನಂಗಳ್" (ಕಬಿಕಂ. ೩೫). [ಮಿಸುನಿ + ಮೊಗ]

**ಮಿಸುನಿವಟ್ಟಲ್** (ನಾ). ಬಂಗಾರದ ಬಟ್ಟಲು : ಎಸೆವ ಪೊಂಬರಿವಾಣ ಮಿಸುನಿವಟ್ಟಲ್ಗಳೊಳ್ . . . ಪಾಲ್ಮೊಸರ್ಗಳಿವು ಬಗೆಗೊಳಿಸಿ ಪೊಸತನಿಸಿ ರಲ್ಪವಿದನಚ್ಯುತಂ (ಕೈಏಶಾ: ೬-೯೯). [ಮಿಸುನಿ + ಬಟ್ಟಲ್]

**ಮಿಸುನಿವಟ್ಟೆ,** ಮಿಸುನಿಪಟ್ಟೆ (ನಾ). ಪೀತಾಂಬರ ; ಜರತಾರಿ ವಸ್ತ್ರ : ಬಿಸಿನಿ ಬಿಸಿಲನುಟ್ಟಲೆಂಬಂತೆ ಬಿಗಿದುಟ್ಟ ಮಿಸುನಿವಟ್ಟೆ ಮಿಸುಗುತ್ತಿರೆ (ರಾಜಶೇ. ೫-೦೯ ಪ). **ಮಿಸುನಿಪಟ್ಟೆ :** ಆವ ದಿಕ್ಕಿನಲ್ಲಿ ನೋಡಲ್ಕು ಥಳಿಥಳಿಸುವ ತೀವಿದ ಮಿಸುನಿಪಟ್ಟೆಗಳು (ಕಂಸವಿ. ೮-೯). [ಮಿಸುನಿ + ಪಟ್ಟೆ$_3$]

**ಮಿಸುನಿವತ್ತಿಗೆ** (ನಾ). ಚಿನ್ನದ ಕುಂದಣದ ಕೆಲಸ : ಓಲೆ ಮನ್ಮಥನ ಮನೋರಥಚಕ್ಕಿದ ಗಾಲಿಯಂತಾಗಲಂತದಱ ಮೇಲಿಟ್ಟ ಮಿಸುನಿವತ್ತಿಗೆ ಯೆಂದೆನೆ ಕಿವಿಯೋಲೆಯೊಪ್ಪಿದುವಾ ಸತಿಗೆ (ಶ್ರೀಶಾಂ. ೩-೬೨). [ಮಿಸುನಿ + ಪತ್ತಿಗೆ$_1$ (< ಪತ್ತುಗೆ)]

**ಮಿಸುನಿವಟೆ** (ನಾ). ಚಿನ್ನದ ಮಳೆ ; ಸುವರ್ಣವೃಷ್ಟಿ ; ಆ ಕುಶಲವತಿ ಕಟ್ಟಾಸಯಿಂ ತೊಟ್ಟನೆ ಮೆಟ್ಟನಿಟೀಯುತ್ತಾ ಮಿಸುನಿವಟೆ ಮಸಗಿದ ತೆಜಾವೃದೆನೆ (ಶಕಶಿ. ೬-೨೫೭ ಪ). [ಮಿಸುನಿ + ಮಟೆ]

**ಮಿಸುನಿವಾವುಗೆ** (ನಾ). ಚಿನ್ನದ ಪಾದುಕೆ : ಬೆಳ್ಳಿಡಿಯ ಬೆಳ್ಳಿಡಿಗೆ ಮಿಸುನಿವಾವುಗೆಯನೊಪ್ಪಿಸಿ (ರಾಶೂಶ್ಕ. ೦೬೦-೦೯). [ಮಿಸುನಿ + ಪಾವುಗೆ]

**ಮಿಸುನಿವೆಟ್ಟು** (ನಾ). ಚಿನ್ನದಿಂದಾದುದೆಂದು ನಂಬಲಾದ ಪರ್ವತ : ಮೇರು : ಮಿಸುನಿವೆಟ್ಟವೆ ನೀರ್ಮೊಗೆಯುಲೆಂದೊಸೆದು ನೀಡಿತೊ ಕಡಲಿಗೆರಡರ್ಪಿಸುವ ತೋಳ್ಗಳೆನಿಸೆ ಸಾಲಿಟ್ಟುದೊ ದಿವಿಜವೃಂದ (ಶಾಶ್ಕಶಾ. ೩೩-೩೮). [ಮಿಸುನಿ + ಬೆಟ್ಟ$_1$]

**ಮಿಸುನಿಸು** (ಕ್ರಿ). ೧. ಹೊಳೆ ; ಥಳಥಳಿಸು ; ಪ್ರಕಾಶಿಸು : ಮಿಸುಣ [ನಿ]ಪ ಪೊಂಗೆಜ್ಜೆ ಪರಿಪೂರ್ಣಚರಣ (ಕೀರ್ತನ. ೨೮-೯). ೨. ಕಂಗೊಳಿಸು; ಶೋಭಿಸು : ಮಿಸುಣ[ನಿ]ಪ ದೇವಹೂತಿ ಅಂಬುಧರ ಪೃಥ್ವಿತ ಕುಶಲ ಸುಕೃತ ಬೃಹತಿ ವೀತಾವ್ಕರು ವಸುಧೆಯೊಳಗೆ ಏಸು ಪುಣ್ಯ ಮಾಡಿದರೊ (ಕೀರ್ತನ. ೦೦-೦). [ಮಿಸುನಿ + —ಇಸು$_3$]

**ಮಿಸುಪು** (ನಾ). ೧. ಕಾಂತಿ ; ಪ್ರಕಾಶ ; ಹೊಳಪು : ಕೆಂಬಿಸಿಲ ಮಿಸುಪಿನಿಸು ಪಡುವಣ ದೆಸೆಗವಲಂಬಿಸಲೊಡರ್ಚಿದತ್ತಿನಬಿಂಬಂ (ಕಾದಂಬ. ೨೬೭) ; ಪಸರಿಸುವ ತನ್ನ ನಯನಪ್ರಸರಂ ಜನಪದನವೇಂದುಮಂಡಲಮಂ ಭ್ರಾಜಿಸೆ ಬಳಸಿದ ನಕ್ಷತ್ರದ ಮಿಸುಪಂ ತಾಳ್ದಿದವು (ಸುಕಾಸೇ. ೯-೯). ೨. ಮನೋಹರತೆ ; ರಮ್ಯತೆ : ಅಮರ್ದಿನ ಪೊಸಸೋನೆಯ ಸುರಿದು ದೆಂಬಿನಂ ಪೇಟೆರ್ೋರ್ವಳ್ ಮಿಸುಪೆಸೆಯೆ ಪಾಡಿದಳ್ (ಸುಕುಮಾ. ೦೦-೨೩). [< ಮಿಸುಗು$_2$ + —ಪು$_2$]

**ಮಿಸುಪುದೋಱು** (ಕ್ರಿ). ಕಾಂತಿಯನ್ನು ಸೂಸು ; ಪ್ರಕಾಶವನ್ನು ಬೀರು : ಮಿಸುನಿಯ ಚಾವಡಿ ಎಸೆವ ರನ್ನದ ಲೋವೆ ಮಿಸುಪುದೋಱುವ ವಜ್ರಗಂಭ (ತಂಕಾಂ. ೦-೧೦). [ಮಿಸುಪು + ತೋಱು]

**ಮಿಸುಪೇಱು** (ಕ್ರಿ). ಹೊಳಪೇರು ; ಮಿಂಚು : ಆಸಮತರ ಕ್ಷುಧಾಗ್ನಿ ನೆಱೆ ನಂದೆ ಬಸಿಱ್ ಮಿಸುಪೇಱೆ ಪೊಂಗೆ . . . ದಂಪತಿಚಕೋರಚಯಂ ಸಲಿಲದಲ್ಲಿಗಲ್ಲಿಗಿಂತೆಸೆದುದು (ಕುಸುಮಾ. ೯-೩೩). [ಮಿಸುಪು + ಏಱು$_1$ (< ಏಱ್$_1$)]

**ಮಿಸುಮಿಲ್ಲಿ** (ನಾ). ಚೂರು; ತುಂಡು : ಉದಕದೊಳು ನನೆಹಿ ಮರ್ದಿಸಿದ ಸೊಜ್ಜಿಗೆಯ . . . ಹದನಱಿದು ಅಟ್ಟಿಳುಹಿ ಮಿಸುಮಿಲ್ಲಿಯಂ [ಶಾಕಾಂ. ಯಿಂ] ಕುಯಿದು ಚದುರಿಂದ ಘಟ್ಟವಾಲೊಳು ಹಾಕಿ ಪರಿಮಳಿಸೆ ತಾನೆ ಬೆಣ್ಣೆಯ ಪಾಯಸ (ಸೂಶಶಾ. ೩-೦೦); ಪುಸಿಯೇಕೆ ನಿಮ್ಮವರೆ ಯ್ಯಂದು ಬೇಗದಿ ಮುಸುಡುದೋಱವಡಿದ ನಾನು ಮಿಸುಮಿಲ್ಲಿ [ಶಾಕಾಂ. ಸಿಮಿಲಿ] ಮಾಡಿ ಕಂಡಿರಿಸಿಕ್ಕಿ ಪೋಗುವೆನು (ಶಂಶಾಕಾಂ. ೯-೦೦೬). [ ? ]

**ಮಿಸುಸೂತ್ರ** (ನಾ). (?) : ನಿವಿಷಾರ್ಥದಿಂ ತನ್ನೀಪ್ಸಿತಕಾರ್ಯಮಂ ಮಿಸುಸೂತ್ರಮಂ ಮಾಡಿಕೊಟ್ಟುದಱಿಂ ತ್ರಿಲೋಕದೊಳಂ ತ್ರಿಕಾಲದೊಳಂ ಸಮ್ಯಕ್ತ್ವದಿಂ ಬಿಟ್ಟ ಹಿತಮಪ್ಪ ವಸ್ತು ಪೆಱತಿಲ್ಲಂ (ರತ್ನಕ. ೦-೨೩ ಪ). [ ? ]

**ಮಿಸ್ರು,** ಮಿಸರು (ನಾ). ಈಜಿಪ್ಟ್‌ದೇಶ ಮತ್ತು ಅಲ್ಲಿಯ ಜನಾಂಗ : ಮಿಸ್ರುದೊಂಬತ್ತನೆಯ ಮಾರಿ ತಲೆದೋರಿತೇ ? (ಗೂರ್ಜೊ.ಶಾ. ೦೩-೩೨೨). **ಮಿಸರು :** ಈ ಸೀಮೆಯಿಂದ ಇಂಗ್ರೇಜ ಫೌಜು ಮಿಸರಿನ ಸೀಮೆಗೆ ಹೋಗಿ ಮುಸಲ್ಮಾನರ ಫೌಜಿಗೆ ಕುಮಕು ಮಾಡಿ, ಮಿಸರಿನ ಸೀಮೆಯನ್ನು ಫರಾಸೀಸರ ಕೈಯಿಂದ ಬಿಡಿಸಿದ ಕಾರಣ (ರಾಜೇಂದ್ರ. ೨೨೯). [ ← ಅರ. ಹಿಂ. ಮಿಸ್ರ; ಮರಾ. ಮಿಸರ ]

**ಮಿಸ್ರಾನಿ** (ನಾ). ಅಡುಗೆ ಮಾಡುವವಳು; ಅಡುಗೆಯವಳು : ಏನು ಚಂಪಾ! ರೊಟ್ಟಿಯನ್ನು ತಯಾರು ಮಾಡಿಕೊಡುವಿಯಾ ? ಮಿಸ್ ರಾನಿಯಾಗುವೆಯಾ ? (ಗಂಸಮು. ೦೩೬). [ ← ಹಿಂ. ಮಿಸರಾನೀ, ಮಿಸಿರಾಇನ್ ]

**ಮಿಸ್ರಿ** 'ಮಿಶ್ರಿ' ನೋ.

**ಮಿಹರಬ್** 'ಮಿಹಿರಾಬು' ನೋ.

**ಮಿಹಿಕಾಕರ** (ನಾ). ಹಿಮಕಿರಣಗಳನ್ನು ಹೊಂದಿದವನು ; ಚಂದ್ರ : ಇಹಪರಭೋಗವನೀವುದು ಮಿಹಿಕಾಕರವಾರಪೂಜೆಯದವಸೆಯೊಳ್ ಬರೆ (ಶಾಲಸ್ತ. ೧-೧೭-೮). [ಸಂ.]

**ಮಿಹಿಕೆ** (ನಾ). ೧. ಮಂಜು ; ಹಿಮ ; ಇಬ್ಬನಿ : "ಪ್ರಾಳೇಯಂ . . . ಮಿಹಿಕಾ. ನೀಹಾರಃ — ಈ ೮ ಮಂಜು" (ಹಲಾಯು. ೦೦೭-೨೮). ೨. ಕರ್ಪೂರ. [ ಸಂ. ಮಿಹಿಕಾ ]

**ಮಿಹಿರ** (ನಾ). ೧. ನೇಸರು ; ಸೂರ್ಯ : "ಆದಿತ್ಯಃ . . . ಮಿಹಿರಃ, ವಿರೋಚನಃ . . . ತ್ರಯೀತನುಃ _ ಈ ೪೭ ಆದಿತ್ಯನ ಪೆಸರು" (ಹಲಾಯು. ೭-೩೭); ಮಿಹಿರ ಪ್ರದ್ಯೋತಿಸಂಧ್ಯಾಭವನ ಸಮಯದೊಳ್ ಪದ್ಮಿನೀಷಂಡದೊಳ್ ಪೊದಟ್ದ ಹಬಿರ್ವದರ್ಂಗುರಂ(?) ನೀರೊಳಗಣ ಮುಗುಳೊಳ್ ಸಿಲ್ಕಿ . . . ಇರ್ದತ್ತು (ಸುಕುಮಾ. ೩-೦೫). ೨. ಚಂದ್ರ. ೩. ಮೋಡ ; ಮುಗಿಲು. ೪. ಗಾಳಿ. ೫. ಮುದುಕ; ವೃದ್ಧ. ೬. ಎಕ್ಕದ ಗಿಡ. [ಸಂ.]

**ಮಿಹಿರನಂದನ** (ನಾ). ೧. ಸೂರ್ಯನ ಮಗ. ೨. ಕರ್ಣ : ಅಹಿತನಿಟ್ಟೆಳಕಳುಕಿ ಕೆಲದಲಿ ಮಿಹಿರನಂದನನೆಚ್ಚಡಂಬಿನ ಲಹರಿ ಮಸಗಿತು (ಕುಮಾರವ್ಯಾ. ೦೭-೯೭). [ಸಂ.]

**ಮಿಹಿರಬಿಂಬ** (ನಾ). ಸೂರ್ಯಬಿಂಬ ; ಸೂರ್ಯಮಂಡಲ : ಮಿಹಿರ ಬಿಂಬವ ಕಾಣದೀ ನೃಪಮಹಿಳೆಗಿದು ವಿಧಿಯೋ (ಕುಮಾರವ್ಯಾ. ೦೪-೭೨). [ಸಂ.]

**ಮಿಹಿರಾಧ್ವ** (ನಾ). ಸೂರ್ಯನು ಚಲಿಸುವ ಮಾರ್ಗ; ಆಕಾಶ : ಬಹುಧೂಮಲೇಖೆ ನಿಮಿರ್ದುವು ಮಿಹಿರಾಧ್ವದೊಳಾಂಜನೇಯನೊಡರಿಸೆ ಲಂಕಾದಹನಮಂ (ಪಂಪಾಪು. ೦೧-೦೪೫). [ ಸಂ. ಮಿಹಿರಾಧ್ವನ್ ]

**ಮಿಹಿರಾಬು, ಮಿಹರಬ್** (ನಾ). (ಮಸೀದಿ ಮುಂತಾದ ಕಟ್ಟಡದ) ಬಾಗಿಲಿನ ಮೇಲುಭಾಗದ ಕಮಾನಿನಾಕಾರದ ರಚನೆ : ಇದರೊಳಗಿನ ಮಿಹಿರಾಬಿಗೆ ಚಿನ್ನದ ಮುಲಾಮು ಮಾಡಿದ್ದಾರೆ (ಮುಂಬಯಿ. ೭-೦೦೫). **ಮಿಹರಬ್** : ಮಿಹರಬ್ ಹಜಾರದ ಪಶ್ಚಿಮಗೋಡೆಯಲ್ಲಿನ ಗೂಡು (ಪ್ರವಾಸ. ೦೫೭). [←ಅರ. ಹಿಂ. ಮಿಹರಾಬ್, ಮೇಹರಾಬ್; ಮರಾ. ಮೇಹರಾಬ್, ಮೇಹರಬ್, ಮೇಹರಾವ್ ]

**ಮಿಹಿಲಾಳು** (ನಾ). "ಕಿರಿಯ, ಕ್ಷುಲ್ಲಕ (?)" (ಬಿಸಪ. ೪೧೮); "ಪಟುಭಟ" (ಬಿಸಪ. ೪. ೪೧೮) : ಆ[ಶಾಕಾಂ. ಆನು] ಮಿಹಿಲಾಳು ಭೋಜದೇವುಲಾಳು (ಬಿಸಪ. ೩೨೭). 'ದೇವುಲಾಳು' ಪರಾ. [ ? ]

**ಮಿಳ್** (ಕ್ರಿ). ೧. ಅಲುಗಾಡು ; ಚಲಿಸು : 'ಮಿಳ್ಳಿಸು' ಪರಾ. ೨. ಹಬ್ಬು; ವ್ಯಾಪಿಸು : 'ಮಿಳ್ಳಿಜು' ಪರಾ. P 'ಮಿಳ್ಳಿಸು', 'ಮಿಳ್ಳಿಜು' ಎಂಬ ಎರಡೂ ಶಬ್ದಗಳು ವ್ಯಾಪಕವಾಗಿ ಕವಿಗಳಿಂದ ಪ್ರಯೋಗಗೊಂಡಿವೆ. ಇವುಗಳಲ್ಲಿ 'ಇಸು' ಮತ್ತು 'ಇಜು' ಎಂಬುವು ಸೇರಿರುವುದರಿಂದ, ಮೂಲರೂಪವಾಗಿ 'ಮಿಳ್' ಶಬ್ದವು ಇದ್ದಿರಬೇಕೆಂದು ಊಹಿಸಲಾಗಿದೆ. ಇದಕ್ಕೆ ಕಾವ್ಯಪ್ರಯೋಗಗಳು ದೊರಕಿಲ್ಲ.

**ಮಿಳಕತ್** 'ಮಿಳಖತ್ತು' ನೋ.

**ಮಿಳಖತ್ತು, ಮಿಳಕತ್** (ನಾ). ಆದಾಯ ; ಉತ್ಪನ್ನ : ಕಾಕಾನ ಶ್ರೀಮಂತಿಕೆ ಅವರ ಖುದ್ದ ಮಿಳಖತ್ತಿನ ಆಸ್ತಿಯಲ್ಲಿದೆ (ದೀಪಹ. I, ೦೭). **ಮಿಳಕತ್** : ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ ಮತ್ತು ಅನ್ಯದೇಶೀಯವೆಂದು ಗುರುತಿಸಲಾಗದ ಶಬ್ದಗಳೆಂದರೆ _ ಕಚೇರಿ . . . ಬಾಬತ ; ಮಿಳಕತ್ ; ಸರಕಾರ (ಶಾಕುಶಾ. ೦೭೩).

[ ←ಅರ. ಮಿಲ್ಕತ್ ; ಮರಾ. ಮಿಳಖತ್, ಮಿಳಕತ್, ಮಿಳಗತ್ ]

**ಮಿಳನ** 'ಮಿಲನ' ನೋ.

**ಮಿಳಮಿಳ** 'ಮಿಳ್ಮಿಳ' ನೋ.

**ಮಿಳಮಿಳನೆ** 'ಮಿಳ್ಮಿಳನೆ' ನೋ.

**ಮಿಳಿ, ಮಿಣಿ** (ನಾ). ೧. ಚರ್ಮದ ಪಟ್ಟಿಗಳನ್ನು ಹೆಣೆದು ಮಾಡಿದ ಹಗ್ಗ; ತೊಗಲಿನ ಹಗ್ಗ : ನೂಜಿಾಡಿನ ಬಾಲಮಂ ಮುರಿದೊಡೇಂ ಮಿಳಿ[ಶಾಕಾಂ. ಣಿ]ಯಕ್ಕುಮೆ ಕಣ್ಣಿಯಕ್ಕುಮೆ (ಸಮುಕ. ೮-೨೪೬); ಪೆಗಲೊಳ್ ತಗುಳ್ಚಿ ಮಿಳಿಗಳಂ . . . ಪುಗುತರೆ (ನೇಮಿಚ. ೮-೪೭); ಮಿಳಿ ಪೆಗಲೊಳ್ ಕೆಯ್ಯೊಳ್ ಸಂಬಳಿಗೋಲ್ (ಮುಹಾಪೇ. ೮-೨೩). ೨. ಹಗ್ಗ; ಪಾಶ : ಲಲಿತಲತಾಮೃದುಶಾಖಾವಲಿ ಮಿಳಿಯಾಗೊವರ್ ರೊರ್ವರಂ ತೂಗಿ . . . ಉಯ್ಯಲಾಡೆ (ಶಾಂತಿಪು. ೪-೯೭); ಸೌರಭೇಯಂಗಳ್ . . . ನಡುಕೋಡುಪರಂ ನಟ್ಟ ಕೋಡುಗಳಂ ಮಿಳಿಯಂ ಕಟ್ಟಿ ಗೋಪಾಲಕರ್ ಕೀಟಿ ಸತ್ತು (ಅರ್ಜನೇ. ೪-೦೨೩ ವ); ಮರಿಚ ಮೌಕ್ತಿಕ ಲೋಹ ಹೇಮಾಭರಣ ಚರ್ಮ ದುಕೂಲ ಮಿಳಿ ಹಾದರಿಯ ಹೂವಿನ ದಂಡಗೇಕನಿವಾಸವೇಕೆ (ಕುಮಾರವ್ಯಾ. ೪-೪೪). ೩. ಆನೆ ಮುಂತಾದ ಪ್ರಾಣಿಗಳ ನಡುಕಟ್ಟಿಗೆ ಬಿಗಿಯುವ ತೊಗಲಿನ ಪಟ್ಟಿ; ಚೂಷೆ : ಮರುಚ್ಚಾಪಮೆಂಬ ವಿಚಿತ್ರಾಂಬರದೊಂದು ಚಿನ್ನ ಮಿಳಿಯುಂ ಮಿಂಚೆಂಬ ಕೊಂಬುಂ ಕರಾಳವೆಸಲ್ ಗರ್ಜಿಸಿದತ್ತಗಲ್ದಿನಿಯರಂ ಕಾರೆಂಬ ಮಾರದ್ವಿಪಂ (ಜಗನ. ೪-೨೨); ಮಿಳಿ ಬತೆ ಗುಳಪೋ ಪತ್ರಂ ಫಳರಸಮ ಮದಾಂಬು (ಗಿಂಜ. ೭-೪೪); ಮದದಾನೆಯೊಂದು ಭೂಪನ ಗೃಹದೊಳ್ ಪಱಿದುದು ಹೊರಜೆಯು ಮಿಳಿಯುಂ (ಧರ್ಮಶ. ೩-೧೩). ೪. ಲೋಹದ ಸರಪಣಿ : ಮಿಳಿಯೊಳ್ ಮಾತಂಗಮುಂ ಕಟ್ಟಿದೊಡೆ ನಿಲುಗುವಂತಲ್ಲದೆ . . . ಪಂಜಿಯೊಳ್ ಕಟ್ಟಿದಂದುಮ್ಮಳದಿಂ ಮತ್ತದ್ವಿಪಂ ನಿಂದಪುದೆ ಮರುಳೆ (ಧರ್ಮಾಮೃ. ೦೧-೪೫); ಹೊನ್ನಮಿಳಿ ಸಹಿತ ತೆತ್ತಿಸಿದವಿಕ್ಕಿಲದಲಂದಜುಪತ್ತುಸಾವಿರ ಪಂಚ ಘಂಟೆಯ ಮತ್ತಗಜ ಶೃಂಗರಿಸಿತು (ಸಂಭಕ. ೨೦-೯೨). ೫. ಲಗಾಮು : ಮಿಳಿ[ಶಾಕಾಂ. ಣಿ]ಗಳಾದವು ಕುಹು ಸುತಾರಾವಳಿಗಳಮಳಪ್ರಣವವಾದುದು ಮೊಳೆಯ ಬಲುಚಮ್ಮಟಿಗೆ ಹಗ್ಗಕೆ ವರ ಷಡಂಗಮವು (ಕುಮಾರವ್ಯಾ. ೭-೭). ೬. ತೊಗಲಿನ ಹಗ್ಗದ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಮಗ್ಗದೆಱೆ ತುಪ್ಪ ದಳ ಮಿಳಿ ಗುಳು ನೂಲು ಮುಖ್ಯವಾದುವೆಲ್ಲಾ ಅಪೂರ್ಬಾಯಗೂಡಿ ಕಟ್ಟಿಕೊಟ್ಟು ಗುತ್ತಗೆಯ ಸಿಧಾಯ ಗದ್ಯಾಣ ನೂಱು ೧೦೦ (ಎಕ. XV, ಬೇಲೂರು. ೨೫೨-೭ ; 1298). ೭. (ಕರಾ) ಕೆಸುವಿನ ದಂಟು. **ಮಿಣಿ**$_1$: ೧. "ಮಿಣಿ ಚರ್ಮಪಾಶಂ" (ಮಂಗರಾ. ೬೪-೨೩); ಹೆಗಲ ಮಿಣಿ ಕೆಯ್ಯ ಸಂಬಳಿಗೋಲಿನೀಶ್ವರಂ. . . ಓರಿಯ ವೇಷಂಗೊಂಡು ಮನೆಯ ಮುಂದಂ ಸುಳಿಯೆ (ಸಂಕಾರ. ಹ. ೨೭೩-೦೪) ; ಬಿಡದೆ ಬೆಟ್ಟದರಲಿಗಳಗಳ ನುಗ್ಗಡದ ಮುರಿಯಾಣಗಳ ಮಿಣಿಯಲಿ ಜಡಿದರಿಱಿದರು ಬಳಿಯ ಸಬಳದಲಲ್ಲಿಗುಕ್ಕಿನಲಿ (ಕೊರರಾ. ೭-೨೭-೨೮). ೨. ಮಿಣಿಯಿಲ್ಲದುಯ್ಯಲಾಡುತಿಹನು . . . ರಾಜೇಂದ್ರ (ಭರತ. ೦೮-೭೭) ; ಹತ್ತುಸಾವಿರ ಸನ್ನೆಗಳಿಂದ ಬಿಂಬವನೆತ್ತಿಸಿ ಬಂಡಿಗೈದಿಸಿದ ಕತ್ತದ ಮಿಣಿಗಳ ಜೋಡಿಸಿ ಜನರ ತಾನಿತ್ತೆಱವಲಿ ನಿಲ್ಲಿಸಿದನು (ಗೋಮಟೇ. ೩-೪೦) ; ಜನರು ಹೆಗಲ ಮೇಲೆ ಕುಡ ಮಿಣಿಗಳನ್ನು ಹೊತ್ತುಕೊಂಡು . . . ಹೊಲಗೆಲಸಕ್ಕೆ ಹೋಗಹತ್ತಿದ್ದಾರೆ (ಮುಂಜಾಕ. ೭). ೩. ಉಱಿದ ಮಿಣಿ ಮೊಗರಂಬ ಗದ್ದುಗೆ ಬಡಿಗೆಗಳ ಸೂತ್ರಿಕೆಯ ಕಬ್ಬಿಯ ಕಡಿಯಣದ ಕುಸುರಿಗಳೆಸೆದುದು ಕೂಡೆ ರಣಭೂಮಿ (ಕುಮಾರವ್ಯಾ. ೦೫-೭೦) ; ಕೊರಳ ಜೊತ್ತೆಗೆ ಸುರುಚಿರ ಚೆನ್ನ ಮಿಣಿ ಮತ್ತಾರದೊಳು ಪೊನ್ನಘಂಟೆಗಳು (ಅಂಜಕ. ೭-೯೮). ೪. ನೆಲವನ್ನು ಬಿಟ್ಟು ಅಂತರಿಕ್ಷದಲ್ಲೇ ತಿರುಗುವ ರೈಲುಹಾದಿಗಳೂ ಇವೆ. ಅಂತರಿಕ್ಷದಲ್ಲಿ ತೂಗುವ ಉಕ್ಕಿನ ಮಿಣಿಗಳೇ ಇವಕ್ಕೆ ಆಧಾರ (ಬಾಲಪ್ರ. I, ೨೭೯) ; ಬಂಡಿಗಳು ಉಕ್ಕಿನ ಮಿಣಿಗಳ ಸಹಾಯದಿಂದ ಕೆಳಗೂ ಮೇಲಕ್ಕೂ ಹೋಗಿಬರುತ್ತವೆ (ಅಪೂಶ. ೨೭೮) ; ಆ ನಾಯಿ . . ಬಿಡಾರದಲ್ಲಿ ಕಟ್ಟಿ ಹಾಕಿ ಹೋದರೆ, ಕೂಗಾಡಿ ಒದ್ದಾಡಿ ಮಿಣಿ ಕಿತ್ತುಕೊಂಡು ಬರುತ್ತಿತ್ತು

(ಷಟೆಪ. ೬). ೮. ತಂತಿಯ ಎಳೆಗಳಿಂದ ಮಾಡಿದ ಹುರಿ, – ಹಗ್ಗ. ವಿದ್ಯುತ್ತಿನ ಮಿಣಿ(cable)ಗಳಲ್ಲಿ ಒಳಕ್ಕೆ ನೀರು ಜಿನುಗದಂತೆಯೂ . . . ಇದರ ಹೊದಿಕೆಯನ್ನು ಹಾಕುತ್ತಾರೆ (ಶಾಲಕೃ. III. ೦೨೩೦). ೯. ಒಂದರೊಡನೊಂದು ಸೇರಿಕೊಂಡಿರುವುದು ; ಹೆಣಿಗೆ : ಕಾವ್ಯ ಒಗಟಲ್ಲ, ಒಡಪಲ್ಲ, ರಸದ ಕಣಿ, ಭಾವದ ಮಿಣಿ (ಕಂದ್ರಷಾ. ತುಂಸ್ಸು೩). [ದೇ.॥ ತೆಲು. ಮಿಳಿ, ಮಿಳಿಗ ; ಕೋತ. ಮಿಳ್ಕ್]

**ಮಿಳಿಂದ** (ನಾ). ತುಂಬಿ ; ಭ್ರಮರ : ಪುಳಿಂದಂ ಮಿಳೀಂದನಂತೆ (ಪ)ವನಾನೀತಕುಸುಮಗಂಧಮನಾರಯ್ದು ಎಡೆಮಾಡಿ ಬಂದು (ಪುಷ್ಪಕೃ. ೩-೦೦೯೩) ; ವಾರಿಜಾಕ್ಷಿಯರು . . . ದೇವಾಯತನಕ್ಕೆದುತಿರೆ ತನುಗಂಪ ಚಾರುತರಮಂ ಕಂಡು ಭರದಿಂ ಮಿಳಿಂದಗಳು ತೊಳಪ ಮಂಜುಳರೂಪವ ತೋರೆ (ಪಂಚಾರಾ. ೦-೯-೪೯). [ಸಂ. ಮಿಲಿಂದ]

**ಮಿಳಿತ** 'ಮಿಲಿತ' ನೋ.

**ಮಿಳಿಮಿಳಿ** (ನಾ). ಒಂದು ಅನುಕರಣ ಶಬ್ದ : 'ಮಿಳಿಮಿಳಿಗಣ್' 'ಮಿಳಿಮಿಳಿನೇತ್ರ' ಪರಾ.

**ಮಿಳಿಮಿಳಿಗಣ್** (ನಾ). ರೆಪ್ಪೆಗಳನ್ನು ಒಂದೇ ಸಮನೆ ಬಡಿಯುವ ಕಣ್ಣು ; ಪಿಳಕಿಸುವ ಕಣ್ಣು : ಗಿಡಿಗಿಡಿಜಂತ್ರಂ ಮಿಳಿಮಿಳಿಗಣ್ಣಳಿನಲ್ ನೋಂತಳಂತು ನೋಣದೆ ಸುಖಕ್ಕೆ ಬಯಸಿದೊಡುಂಟೇ (ಸುಕುಮಾ. ೯-೬). [ಮಿಳಿಮಿಳಿ + ಕಣ್]

**ಮಿಳಿಮಿಳಿತ** (ನಾ). ಷಂಡ ; ನಪುಂಸಕ : ಯಾರು — ಈ ರಾವಣನಾಥನೆ? — ಬರೀ ಮಿಳಿಮಿಳಿತ (ತುಂರುದಾ. ೨೪೩). [←ಮರಾ. ಮಿಳಮಿಳೀತ=ನಿಸ್ಸಾರ]

**ಮಿಳಿಮಿಳಿನೇತ್ರ** (ನಾ). = ಮಿಳಿಮಿಳಿಗಣ್ : ಜಯಮತಿಕಂತಿಯರ್ ಕಂತಿಯರಾಗೆ ತಪಂಬಟ್ಟು ಗಿಡಿಗಿಡಿಜಂತ್ರ[೦] ಮಿಳಿಮಿಳಿ[ಶಾಶಾಂ. ಳಮಿಳಿ] ನೇತ್ರವಾಗಿ ಘೋರವೀರತಪಶ್ಚರಣದೊಳ್ ನೆಗಟುತ್ತಿರ್ದರ್ (ವಡ್ಡಾರಾ. ೦೩೪-೩). [ಮಿಳಿಮಿಳಿ + ನೇತ್ರ]

**ಮಿಳಿಯಿಕ್ಕು** (ಕ್ರಿ). ಹಗ್ಗದಿಂದ ಕಟ್ಟು, – ಬಂಧಿಸು : ಒರ್ವ ಪೋರಿಗಳಾಗಿ ರಾಜಮಂದಿರದ ಸೀಯಬಾರದೊಳ್ ಪೊಣರ್ದು ಮಿಳಿಯಿಕ್ಕಿ ತೆಗೆಯೆಯುಂ ಕರಮೊಳಸೋರದೆ . . . ಪೋರ್ದು ಕೋದು (ಶಾಂತಿಪು. ೯-೪೬). [ಮಿಳಿ + ಇಕ್ಕು]

**ಮಿಳಿರ್**, ಮಿಳಿರು (ಕ್ರಿ). ೧. ಅತ್ತಿತ್ತ ಅಲುಗಾಡು : ಮುತ್ತಿನ ಬೆಳ್ಗೊಡೆಗಳ ಬಳಗದೊಳಗೆ ಚಾಮರತತಿ ಕೆಲದೊಳ್ ಮಿಳಿರ್ದು ತೊಳಗೆ (ಶಾದಂಪು. ೪೬೩ ರಗಳೆ). ೨. ತೂಗು ; ತೊನೆ ; ಹೊಯ್ದಾಡು : ಮಾಮರನಳ್ಳಿಗೊಂಬಿನೊಳ್ ಮಿಳಿರ್ವೆಳವಳ್ಳಿ ಬಾಲಮಲ್ಗೊಂಚಲೆ ಕೇಸರಮೇಂಬಿನಂ ಮನ್ನೆಗೊಳೆ (ಆದಿಪು. ೬-೨೩) ; ಎಳಮಾವಿನಳ್ಳಿಗೊಂಬಂ ತಳ್ಪೊದ್ವೆಳಸಿದ ವಸಂತದೂತಿಯು ಮಿಳಿರ್ವುಯ್ಯಲನಾಡುವಬಲೆ ಪಾಡಿದ ಳೊರ್ವಳ್ (ಕಾವ್ಯಾವ. ೨೪೩) ; ಮಿಳಿರ್ವ ಕುಹಳಾನೀಕಮುಮರ್ದ ಪೂಗಂಗಳಂ (ಉದ್ಭಟ. ೩-೬೯). ೩. ಬಾಗು ; ಬಗ್ಗು : ಚೆನ್ನ ಪಕ್ಗೊನೆಯ ಭರದಿಂ ಸನ್ನತಮಾಗಿರ್ದು ಬಾಳೆಸಸಿಯೊಳ್ ಮಿಳಿರ್ಗುಂ ತನ್ನ ಶಿಶುವಿಂಗೆ ಮೊಲೆಯಂ ಮನ್ನಿಸಿ ಬಾಗಿರ್ದು ಕೊಡುವ ಬಾಲೆಯ ತೆಜದಿಂ (ಜಾರತ. ೦-೧೦೬). ೪. ಹೊರಳಾಡು ; ಉರುಳು : "ಮಿಳಿರ್ — ಸಮೃದ್ಧಾ (ವೃದ್ಧಿಯಾಗು), ಲುಠನೇ (ಹೊರಳಾಡು)" (ಶಮಠಾ). ೫. ನೆಗೆ ; ಜಿಗಿ ; ಹಾರು : "ಮಿಳಿರ್ದುದೆನಲ್ಕೆ ನೆಗೆದುದು" (ಕಶಕಂ. ೦೯೯). ೬. ನಿಮಿರು ; ನಿಗುರು : ಮಿಳಿರ್ವನ್ನಂ ಕುಡಿವಾಲ ಮುಮ್ಪಳಿಸುವನ್ನಂ ದಿಟ್ಟಿ . . . ತಿಳಿನೀರೊಡಿ ಮುರಾರಿ ವತ್ಸಕುಲಮಂ ಕಾದಂ (ಜಗಪು. ೩-೭೦) ; ವೋದದಿಂ ಮಿಳಿರ್ವನ್ನಂ ಕುಡಿವಾಲಮುಮ್ಪ ಳಿಸುವನ್ನಂ ದಿಟ್ಟಿಗಳ್ ಸುರ್ಕಿ ಕೆಕ್ಕಳಿಪನ್ನಂ ಕಿವಿ ಪುಲ್ಗಳಂ ತಿಜಿವು ತಂದೂಡುತ್ತೆ . . . ಸಂಚರಿಸಿದರ್ ಗೋಪಾಲಲೀಲಾಸ್ಪದರ್ (ಪಿಶ್ನುಪು. ೩-೨-೦೩೬). ೭. ಚಾಚು ; ನೀಡು : ಮಿಳಿರ್ವ ನಾಲಗೆಯುರ್ಬಿದ ಪುರ್ವು . . . ಭೀತಿಯಂ ಪುಟ್ಟಿಸೆ ಬಂದು ಕಟ್ಟಿದಿರೊಳಿರ್ದನದೊರ್ವನಡುತ್ತ ಜಟ್ಟಿಗಂ (ಚಂದ್ರಪು. ೩-೭೦) ; ಬಳ್ಳಿಗಳ ಕುಡಿ ನಭಕ್ಕೆ ಮಿಳಿರ್ವೊಡಂ ಕುಟಗಳೊಳಗೊಟಿತು ನೀರ್ ಬರ್ಪೊಡಂ . . . ಇವ ನೋಡಿ ಪೇಟಿಟ್ ಮಟಿಯಧಿಕ ತಾನೆಂಬುದಂ (ಜಟ್ಟಿಪು. ೨-೦ ರಗಳೆ). ೮. ವ್ಯಾಪಿಸು ; ಹಬ್ಬು ; ಪಸರಿಸು : ಮಿಳಿರ್ವ ದಳ್ಳುರಿಯಲ್ಲದ ವಹ್ನಿ ಕಾಳನಲ್ಲದ ಜವನಬ್ಧಿಮಧ್ಯಗತನಲ್ಲದ ಬಾಡವಂ (ಕಶ. V, ೩೨-೦೬ ; 1087) ; ಕಡೆಗಣ್ಣ ಕುಡಿಮಿಂಚು ಸಂಚಳಿಸಿ ಮಿಳಿರೆಯುಂ (ಪುಷ್ಪಪು. ೩-೩೪ ಪ). ೯. ಅಭಿವೃದ್ಧಿ ಹೊಂದು ; ಏಳಿಗೆಯಾಗು : "ಮಿಳಿರ್ - ಸಮೃದ್ಧಾ (ವೃದ್ಧಿಯಾಗು), ಲುಠನೇ (ಹೊರಳಾಡು)" (ಶಮಠಾ) ; "ಮಿಳಿತುದೆನೆ ವೃದ್ಧಿಯಾದುದಕೆ ನಾಮಂ" (ಕಣ್ಣತುಂ. ೨೪). ೧೦. ಉತ್ಸಾಹಗೊಳ್ಳು : ನೀಟಯರ ನಿಡಿಯ ಕಡೆಗಣ್ಣೀಟಿಂದೆರ್ದೆ ಬಿರಿಯೆ ಬಟಕಮುಲರಂಬುಗಳಿಂ ಮಿಾಟಿ ಮಿಳಿರ್ದಿಸದೆ ಮುಸಕದೆ ತೋಱದೆ ಮಾಣ್ದಪನೆ ತನ್ನ ಸೊಬಗನನಂಗಂ (ಅಂಚಾಪ. ೪-೯೬). ೧೧. ಹೆಚ್ಚಾಗು ; ಅಧಿಕವಾಗು : ಬೆಮರ್ ಮಿಗೆ ಮೂಡೆ ಸುಯ್ಯೆಲರ್ ಮಿಳಿರೆ . . . ಗಟ್ಟಿಗಳನ್ನೆದು ಮುಗುಳ್ಚಿದ ರಿಂದುವಕ್ತ್ರೆಯರ್(ಗಣೆ. ೨-೯೦) ; ಒಗೆದಳುರ್ದು ಮಿಳಿರ್ದ ಬಲದೊಳ್ ಪೊಗೆಯದೆ ಕಿಡಿಸೂಸದಸುಗೆಯೆಳದಳಿರ್ಗಳನಾಯ್ದುಗೆವೊಯ್ದಂತಿರೆ ನಾಲಗೆ ಸೊಗಯಿಸುವುರಿಮಾಲೆಯಂ ತಲೋದರಿ ಕಂಡಳ್ (ಅಪಂಪು. ೯-೦೨೫). ೧೨. ಹೊಳೆ ; ಮಿಂಚು ; ಪ್ರಕಾಶಿಸು : "ಮಿಳಿರೆ[ನೆ] ಪೊಳೆದುದು" (ಕಶ್ಣಕಂ. ೦) ; ಮಿಳಿರ್ವ ಕುಡಿಮಿಂಚು ಸುರಧನು ತಳಿರ್ದೋರಣ . . . ಬದ್ಧವಣಂ ಜಳದರವಮಾಗೆ ಜಯಮಂಗಳಸೂಚಕಮಾದುದತನುಗಾ ಘನಸಮಯಂ (ಚಂದ್ರಪು. ೯-೪೩) ; ಮಿಳಿರ್ವ ಕೆಂಬರಲೋಲೆಯಂ ಕಿವಿಗೆ ಸಾರ್ಚಿ (ಕದ್ವರಾ. ೩-೪೭). ೧೩. ಹೊರಸೂಸು ; ಹೊರಚೆಲ್ಲು : ಪೊಳೆವಲರ್ಗಂಗಳಂ ಮಿಳಿರ್ದ ಬೆಳ್ಪು ರಸಾತ್ಮಕಮಾಗಿ ಗಂಡಮಂಡಳತಳ ದಿಂದಮಂದಿಟಿಯುತಿರ್ದುದು (ಕಾದಂಪು. ೬೯೯). ೧೪. ಶೋಭಿಸು ; ಕಂಗೊಳಿಸು ; ರಂಜಿಸು : ದೇವಸೌಂದರಿಯರ ದಿವ್ಯಮಪ್ಪ ಪೊಸಗಂಪ ನಲಂಪನಮುಂಕಿಕೊಂಡಮಳ್ದರ ಮಿಳಿರ್ವೊಳ್ಗುರುಳ್ಗಳನೆ ಲೀಲೆಯಿನಾಡಿಸಿ . . . ಬೀಸಿದುದು ತಂಬೆಲರ್ (ಅದಿಪು. ೨-೬೩) ; ನಳನಳಿಸುವ ಕೆಂದಳಿರ ಕಾವಣಂ ಗಳುಮಂ ಮಿಳಿರ್ವ ಮಲ್ಲಿಕಾಮಂಟಪಂಗಳುಮಂ. . . ಲಲಿತಲತಾನಿಳಯವ ನೊಳಗುಮಾಡಿ ಪಲವುಂ ನೆಲೆಯ ಚೌಪಳಿಗೆಗಳನಿಕ್ಕಿಸಿ (ಅರ್ಜನೇ. ೩-೧೦೪) ; ಮಿಳಿರ್ವ ಮಿಡಿಯಂ ಗಿಳಿಯ ನುಡಿಯ ಪರಿವ ಕಾಲ ಕರ್ಪುಗೋಲ ಚೆಲ್ವ ನಾಂತು (ಕಮ್ಮಕಾ. ೩೪೪ ರಗಳೆ). **ಮಿಳಿರು** : ೧೫. ನಗರದಲ್ಲೆಲ್ಲ ತಳಿರು ತೋರಣಗಳು ಮಿಳಿರಿದುವು (ಶಾಗಕಾ. ೩೪).

**ಮಿಳಿಮಿಳಿರ್** (ದ್ವಿರುಕ್ತಿ) : ಮರುದಾಂದೋಳಿತ ಜಂಬೂತರುಶಾಖಾ ಹಸ್ತಕಿಸಲಯಂ ಮಿಳಿಮಿಳಿರುತ್ತಿರೆ ಸನ್ನೆಗೆಯ್ದು ತೋರ್ಪಂತಿ[ರಲೆಸೆದುವು ಪವನ]ಜಂಗೆ ದುರ್ಯೋಧನನಂ (ಗದಾಯುತಿ. ೬-೯೬). **ಮಿಳಿರ್ದಾಡು** = ೧. ಅತ್ತಿತ್ತ ಅಲುಗಾಡು : ಕೇತನದ ಹರಿಗೆಗಳ್ ವಾತವ್ರಾತಂಗಳಂ ಮಿಳಿರ್ದಾಡೆ (ಶಾಂತಿಪು. ೩-೦೦೯) ; ಗುಡಿಯ ದಾಂಗುಡಿಗಳ್ ಮಿಳಿರ್ದಾಡು ವಂತೆ ಕಣ್ಗೆ ಸೆದವು ತತ್ಪುರೋತ್ತಮನ ಪುಣ್ಯಮನೊಯ್ಯನೆ ಸೂಚಿಪಂತೆವೋಲ್ (ಸುಕುಮಾ. ೬-೨೦). ೨. ಹೊಯ್ದಾಡು ; ತೂಗು : ಮಿಳಿರ್ದಾಡುವ ನುಣ್ಬಳಿರೆಲ್ಲೆಯುಲ್ಲಿ . . . ಪಣ್ಗೊನೆಗಳವೆಲ್ಲಿಯುಲ್ಲಿಯೆನೆ ಸೋಲಿಸುಗುಂ ಬಿಡದಾವನಂ ಬನಂ (ಕಮ್ಮಕಾ. ೩೨). ೩. ಹಾರಾಡು ; ಜಿಗಿದಾಡು : ಎಳಗಿಳಿವಿಂಡಿನಂತೆ ಮಿಳಿರ್ದಾಡುವ ತುಂಬಿಯ ಬಂಬಲಂತೆ . . . ಸೋಲಿ ಸದೆ ಕಾವನ ಕಬ್ಬುಮದಾರನಾದೊಡಂ (ಕಮ್ಮಕಾ. ೦೯).

[ದೇ.॥ ತಮಿ. ಮಿಳಿರ್ ; ಮಲ. ಮೆಟುಕ್ಕು ; ತುಳು. ಮೆಳಿ]

**ಮಿಳಿರು** 'ಮಿಳಿರ್' ನೋ.

**ಮಿಳಿರ್ಚು** (ಕ್ರಿ). ನಿಮಿರಿಸು ; ನಿಗುರಿಸು : ಕ್ಷೋಣೀಂದ್ರಕೇಳೀ ತುರಂಗಮಾ ಕುದುರೆಯುಂ ಕಣಾತುಂ ಧ್ವನಿಗೈದು ಪರಿತಂದು ಮೊಗಮನಾ ಘ್ರಾಣಿಸಿ ಮಿಳಿರ್ಚಿ ಕಿವಿಗಳನೊಡನೆ ಪೆಱದೆಗೆದು (ಶ್ರೀಶಾ. ೨೫-೮).
[ಮಿಳಿರ್ + -ಚು₁]

**ಮಿಳಿವೊಱ್** (ನಾ). ತೊಗಲಿನ ಹಗ್ಗದ ಕಂತೆ : ಮಿಳಿವೊಱ್‌ಯು ತೊಗಲ ಚೀರವುಮಂ ತೆಗೆದು ಈಡೆಗಿರಿಸಿ (ಶಾಕೋಕೃ. ೭-೨೦). [ಮಿಳಿ + ಪೊಱ್]

**ಮಿಳಿಸುತ್ತು** (ನಾ). ತೊಗಲಿನ ಹಗ್ಗದ ಸುರುಳಿ : ಅಂತು ತಳರ್ದು ಸಡೆಗೊಂಡು ಮೊದಲೊಳ್ ಮಿಳಿಸುತ್ತಿಂಗಗ್ಗಳವಾಗಿ ಕಡು ಗೊಬ್ಬಿಂ ಬಳೆದ ಪೆರ್ಮರಂಗಳ ತಿಂತಿಣಿಯೊಳಂ . . . ಬಪ್ಪಂಗಳ್ (ಕಾದಂಬ. ೨೩೬). [ಮಿಳಿ + ಸುತ್ತು₂]

**ಮಿಳುಮಿಳ** (ನಾ). ಒಂದು ಅನುಕರಣ ಶಬ್ದ : 'ಮಿಳುಮಿಳನೆ' ಪರಾ.

**ಮಿಳುಮಿಳನೆ** (ಅ). ಎವೆ ಮಿಟುಕಿಸದೆ, ಕಣ್ಣು ಮಿಳುಕಿಸದೆ ಎಂಬರ್ಥದ ಒಂದು ಅನುಕರಣಾವ್ಯಯ : ಅಳಿಗಣ್ಣರಂತೆ ಮಿಳುಮಿಳನೆ ನೋಡುತ್ತುಂ (ಕೊಕಹಂ. ೧೫೬-೧೮). [ಮಿಳುಮಿಳ + -ಅನೆ₁]

**ಮಿಳ್ತು** 'ಮಿಟ್ತು' ನೋ.

**ಮಿಳ್ಳಿಳ, ಮಿಳಮಿಳ** (ಅ). ಕಣ್ಣನ್ನು ಮಿಟುಕಿಸದೆ, ರೆಪ್ಪೆ ಬಡಿಯದೆ ಎಂಬರ್ಥದ ಒಂದು ಅನುಕರಣಾವ್ಯಯ : ತಕ್ಕರೂಕವರ್ದುಕೊಂಡಾದರ್ಥವುಂ ಪೂಣ್ದು ಮಿಳ್ಳಿಳ ನೋಡುತ್ತುಂ (ಅಂಕಿ. ೨-೧೫) ; ನೆಗಟ್ತಿಯ ಬೀರರೆಲ್ಲಂ ಬಡವರ ಬಿತರರಂತೆ ಮಿಳ್ಳಿಳ ನೋಡುತ್ತಿರೆ (ಕಂಕಶಾ. ೭-೩೩೫). ಮಿಳಮಿಳ: ಬಳಮೆರಡುಂ ತನ್ನನೆ ಮಿಳಮಿಳ ನೋಡೆ (ಕಂಕಶಾ. ೦೦-೬೦) ; ನಿನ್ನಯ ತಪ್ಪನ ನೆತ್ತರಂ ಭೂಮಿಗೊಳೆ ಪವಮಾನಸೂನು ತವೆ ಪೀರ್ದಡೆಯೊಳ್ ಕಲಿಕರ್ಣನೇಕೆ ಪೇಟ್ ಮಿಳಮಿಳ ನೋಡುತಿರ್ದಂ (ಕಂಕಶಾ. ೧೩-೨೫).

**ಮಿಳ್ಳಿಳನೆ, ಮಿಳಮಿಳನೆ** (ಅ). = ಮಿಳ್ಳಿಳ : ಸಭೆಯೊಳ್ . . . ಮಿಳ್ಳಿಳನೆ ನೋಡುತ್ತಿರ್ದ ಬಲ್ಲಾಳ್ಗಳಿಲ್ಲಿ ಭರಂಗೆಯ್ದಪರ್ (ಗದಾಯು. ೩-೩೬) ; ಮನುವಂಶಮಹಾನಿಧಿ ಸೂಱ್ವೋಗೆ ದುರ್ವಳಮನರಾಗಿ ಮಿಳ್ಳಿಳನೆ ನೋಡುತುಮಿರ್ಪುದೆ ಲೋಗರಂದದಿಂ (ಶರಕೃ. ೯-೬೭) ; ತುಪ್ಪುಳ್ದಱಿದ ಕೋಳಿಗಳಂತೆ ಮಿಳ್ಳಿಳನೆ ನೋಡುತ್ತುಂ (ಶ್ರೀಕಾ. ೩೫-೫೫ ವ). ಮಿಳಮಿಳನೆ : ಮಿಳಮಿಳನೆ ಕಣ್ಣು ಬಿಟ್ಟುಕೊಂಡೇ ಯೋಚಿಸುತ್ತಿದ್ದ (ಕಾ. ೦೦೮).
[ಮಿಳ್ಳಿಳ + -ಅನೆ₁]

**ಮಿಳ್ಳಿಸು** (ಕ್ರಿ). ಕಣ್ಣನ್ನು ಮಿಳುಕಿಸು ; ಎವೆ ಮಿಟುಕಿಸು : ಮೆಲ್ಲನೀಕ್ಷಿಸಲುಂ ಮಿಳ್ಳಿಸಿ ಕಣ್ದೆಱೆವ ತೆಱದೆ ಸಂಪಗೆಯ ಮಲ್ಲಿಗೆಯ ಮುಗುಳ್ಗಳುಳ್ಳಲರೆವುಂ (ಶರಕೃ. ೭-೨೩ವ). [ಮಿಳ್ಳಿಳ + -ಇಸು₃].

**ಮಿಳ್ಳ್ಯಾಸ** (ಅ). ಬಹಳವಾಗಿ : ಹೆಚ್ಚಾಗಿ (?) : ಸುಡು ಸುಡು ಸಿರಿಯ ನಿನ್ನ ಹಸ್ತದೊಳೆ ದೀಕ್ಷೆಪಡೆವ ಸೈಬರಿನ್ನಯ್ಯ ನಮಗೆ ಸಿಡಿದು ಹೋದೆಯಲಾಹಾಕಾಯೆಂದು ಮಿಳ್ಳ್ಯಾಸ ಮಿಡುಕುತಿರ್ದರು ಮಾವರತ್ತ (ಶರಕ. ೭೮-೬೮). [ ? ]

**ಮಿಳ್ಳು** 'ಮಿಳ್ಳು' ನೋ.

**ಮಿಳ್ಳಿಸು, ಮಿಣ್ಣಿಸು** (ಕ್ರಿ). ೧. ಅತ್ತಿತ್ತ ಅಲುಗಾಡು ; ಹೊಯ್ದಾಡು : ಪತಾಕೆಗಳ್ ಮಗುಟ್ದು ಮಿಳ್ಳಿಸಿ ದಳ್ಳಿಱಿದಾಡೆ (ಶಾಂತಿಕೃ. ೨-೬೨) ; ಕರೆಗಳ್ ಮಿಳ್ಳಿಸೆ ಚಾಮರಂಗಳೆಲರಿಂದಂ ಮೆಲ್ಪಿನಿಂ ನರ್ತಿಸುತ್ತಿರೆ ನೀಳ್ದಿರ್ದ ಸೆಱಂಗು . . . ಬೆಳ್ದಂಗಳಂತಿರೆ ತೋಱಿತ್ತೆಸವುತ್ತರೀಯುವಸನಂ ರಾಜೇಂದ್ರ ಚಂದ್ರಾಂಕನಾ (ಕಾದಂಕೃ. ೨೮) ; ಪಸರಿಸೆ ಪೂವಲಿಗಳ್ . . . ಮಿಳ್ಳಿಸೆ ಗುಡಿಗಳ್ (ಕಂಶಾಕಾ. ೩-೦೩೪) ; ಮಿಳಿರೆ ಸೆಱಂಗು ಮಿಳ್ಳಿಸೆ ಕುರುಳ್ ತೊನೆಯುತ್ತಿರೆ ತಾರಹಾರಂ . . . ಪಾಡುತುಮುಯ್ಯಲಾಡಿದಳ್ (ಕುಸುಪೂ. ೧೧-೬೪೦). ೨. ಅಲುಗಾಡಿಸು ; ಅಳ್ಳಾಡಿಸು : ದಿಟ್ಟಿಸಿ ಕಿವಿಯ ಮಿಳ್ಳಿಸುತಾರಿ ಪುಟನೆಗೆವ (ಶಾಂತಿಕಾ. ೯-೪೭) ; ಪಲ್ಲುಗಳ ಕಿರಿಕಿರಿದು ಕಿವಿಗಳ ಮಿಳ್ಳಿಪನು . . . ವಟುಗಳ ಕಂಡು ಮುಳಲನು ಚೆಲ್ಲುವನು ಕಣ್ಣಾಗೆ (ಜಾಕ್ಸೆ. ೩೨-೨೫) ; ಕಿವಿಯ ಮಿಳ್ಳಿಸುತ . . . ಬಾಲಂಗಳನ್ನೆತ್ತಿ ಹೊಸಬುರ ಸೊಗಡಿನಿಂದಲವ್ವಳಿಸುತ್ತ ಪಥದೊಳಗೆ ಗೋಕುಲದ ಹಿಂಡುಗಳ್ ಬರುತಿರ್ದವು (ಕುರಂಗ. ೩೭-೩೨). ೩. ನಗೆ ; ಹಾರು ; ಚಿಮ್ಮು : "ಮಿಳ್ಳಿಸಿತೆಂದು ನೆಗೆದುದು" (ಕಕಶಾ. ೬೬-೪೭೬). ೪. ನಿಮಿರು ; ನೆಟ್ಟಗೆ ನಿಲ್ಲು ; ನಿಗುರು : ನೆಗೆದ ಬೆನ್ ನಟ್ಟ ರೋಮಾಳಿ ಮಿ[ಶಾಶಾ. ಮ]ಳ್ಳಿಸುವ ಬಾಲಂ ರೌದ್ರಕೋಪವುಂ ಬೀಱ್ (ಹಕಶಾ. ೭-೨೭) ; ಬಾಲ ಮಿಳ್ಳಿಸಿರೆ ಚಳಿಸದಿರೆ ದಿಟ್ಟಿಯೊಳು ಚಿತ್ರವು . . . ನಭದಿಂದವನಿಳಿತಂದುದು ದಿವಿಜಗಜವು (ಶಾಳ್ವಕಾ. ೩೩-೨೦). ೫. ಆವರಿಸು ; ಹಬ್ಬು : ಅಂತು ಕುರುಬಲದ ಕರಿಘಟೆಗಳಂ ನುಂಗುವಂತೆ ದೆಸೆದೆಸೆಗೆ ಮಿಳಿರ್ದು ಮಿಳ್ಳಿಸಿದ ಸಿಂಗದ ಪಟಬಿಗೆಯುಂ . . . ಕಿಸುವೊನ್ನ ರಥಮುಂ ಭಯಂಕರಾಕಾರಮಾಗೆ (ಕಂಕಶಾ. ೦೦-೯೭ವ) ; ತೊಟ್ಟ ಗದ್ದಿಗೆಯ ಗರುಡವಕ್ಕದ ಕವಚದ ನವರತ್ನ ಕಿರಣಂಗಳ ಕಿತ್ತ ಕರವಾಳ ಬಾಯ್ದಾರೆಯೊಳ್ ಬಳ್ಳಿಗೊಂಡು ಮಿಳ್ಳಿಸಿ ಪೊಳೆಯೆಯುಂ (ಅಕಂಕೃ. ೦೦-೮೫ ವ). ೬. ಹೊರಸೂಸು : ಹೊರಹೊಮ್ಮು : ದಳ್ಳುರಿಗಳ್ ಕಣ್ಕೊನೆಯೊಳ್ ಮಿಳ್ಳಿಸೆ ಬಿಲ್ತೂಡವೃತಸುರನಂದದಿರಾದಂ (ಉದ್ಭಟ. ೪-೭೩). ೭. ಸಾಗು ; ಮುಂದುವರಿ : ಅಂತು ಮುಳಿದು ಮಿಳ್ಳಿಸಿ ದೆಸೆಯನವ್ವಳಿಸಲೊಡರಿಸುವರಸನಂ ಸೂತಂ ನೋಡಿ (ಪರ್ವಪಾ. ೯-೭ ವ) ; ನುಡಿಸಿದರ್ ಬಳಿಕವಳ ಮಿಳ್ಳಿಸುವ ಬಾಳ್ದಲೆಯ ಪೊಳ್ತಬಳಿವಿಡಿದೆ (ಕಾಮಶ. ೦೬೯-೩೭೮). ೮. ಹೊಳೆ; ಪ್ರಕಾಶಿಸು: ತಿರುವಂ ಮುಪ್ಪುರಿಗೊಂಡು ಮಿಳ್ಳಿಸುವ ಮಿಂಚಂ ಮಾಡಿ ನೀಡುಂ ಭಯಂಕರಮಾಗೇಱಿಸಿಕೊಂಡು ಧನುವಂ . . . ನಿದಾಘವುಂ ಬೆದಱ್ ಬೆಂಕೊಂಡತ್ತು ಮೇಘಾಗಮಂ (ಕರಂಉ. ೫೩೦); ಮಿಂಚು ಮಿಳ್ಳಿಸೆ ಸುರಚಾಪಂ ಪೆಗೆಯ ಬೆಗಡುಗೊಂಡವರಂ ಸಂವರಿಸಿ ಘನಾಘನಸಮಯಸ್ವರೂಪಮಂ ತಿಳಿಪಿ (ಕಂಕಶಾ. ೦-೪೦) ; ವಿಯತ್ತಳದೊಳ್ ಮಿಳ್ಳಿಸೆ ಚಿತ್ರಲೇಖೆ ನವವಿದ್ಯುಲ್ಲೇಖೆವೊಲ್ಪಾಱಿದಳ್ (ಜಗ. ೦೭-೧೨೪). ೯. ಕಂಗೊಳಿಸು ; ಶೋಭಿಸು : ಮಿಳ್ಳಿಸಿ ದಳ್ಳಿಱಿದಾಡುವ ಜಿನೇಂದ್ರಶಿಶುವಂ ತಳದಿಂ . . . ರಾಗದಿನೆತ್ತಿಕೊಂಡಿಂದ್ರನ ದೇವಿ ಬಂದಳ್ (ಶಾಂತಿಕೃ. ೦೦-೬೨); ಮಿಳಿರ್ದು ಮಿಳ್ಳಿಸೆ ವಾನರಕೇತನಂ . . . ಮಾರುತಿಯೇಱಿದ ತೇರದೇಂ ತಳರ್ದುದೊ ಧರೆ ಕಂಪಿಸುವನ್ನೆಗಂ (ಕುಂಶಾಕಾ. ೦೩-೧೦೪); ಮಾಣಿಕಂಗಳ ಬೆಳಗಿನೊಡನೆ ಬಾಳಕನ ಮೆಯ್ಮೆಳಗು ದಳವೇಱ್ ಮಿಳ್ಳಿಸಿಮೊಡಳ್ಳಿಱಿದಾಡುತ್ತುಂ ಕನಕ ಸರಸೀರುಹದೊಳೆ ಸಿರಿ ಮನಸಿಜನಂ ಪೆತ್ತು ಬಿಟ್ಟು ಪೋದಂತಿರೆ (ಅರ್ಕಶೀ. ೪-೯೫ ವ). **ಮಿಣ್ಣಿಸು** : ೧. ಮಿಣ್ಣಿಸಿ ಕುಚ ಗುರುಜಘನದಿಂ ನಡು ಬಳೆ[ಳ್ಕೆ]ಬಣ್ಣದುಟಿಗಳಲುಗುತಿರೆ ಹುಣ್ಣಿಗಳ್ಮಂದಕೊಲೆದು ಗಂಧವರೆದರು (ಗೊಮ್ಮಟ. ೨-೭೯). [ಮಿಳ್ + -ಇಸು₃]

**ಮಿಳ್ಳಿಱ್** (ಕ್ರಿ). ೧. ಅತ್ತಿತ್ತ ಚಲಿಸು,-ಅಲುಗಾಡು : ಕುಡಿವಾಲಂ ನೆತ್ತಿಯೊಳ್ ಮಿಳ್ಳಿಱಿಯೆ ಪೊಳೆಯೆ ಕೂರ್ದಾಡೆ . . . ಪಾಯ್ತಂದು ಮದ್ಯತ್ಪ್ರದನಖವಿದಳತ್ಕುಂಜರೇಂದ್ರಂ ಮೃಗೇಂದ್ರಂ (ಕಬಕಂ. ೩-೬೨); ನಂದಿಕೇತನಂ ಬಾಂದಳದಲ್ಲಿ ಮಿಳ್ಳಿಱಿಯೆ . . . ನಡೆದಂ ಗಣಾಧಿಪಂ (ಶ್ರೀಕಾ. ೨೦-೩೫). ೨. ಅಲುಗಾಡಿಸು : ಮಿಳ್ಳಿಱಿಗು ಕಿವಿಗಳಲಿ ಕೇಳುತ ಹುಲ್ಲುಗಳ ನೆಱ್ ಕಚ್ಚಿ ಬಾಯಲಿ ಬಲ್ಲ ಪುರುಷರ ಪೋಲು ಮೇಲ್ಮೊಗವಾಗಿ ಗೋವುಗಳು . . . ಲಕ್ಷ್ಮೀವಲ್ಲಭನ ನೋಡುತ್ತಲಿರ್ದುವು ಚಿತ್ರದಂದದಲಿ (ಜಿಶಾಗ. ೧೦-೩೦-೫). ೩. ಹಬ್ಬು ; ವ್ಯಾಪಿಸು : ಮಿಳ್ಳಿಱಿದು ಬಳ್ಳವರಿವ ದಳ್ಳುರಿಯುಳುರ್ಕೆಯಿಂ ಗೋಪುರಂ ಸೀಳ್ದುಸೆ ವಿಡೆ (ಶ್ರೀಕಾ. ೦೩-೩೭ ವ). ೪. ಹೆಚ್ಚಾಗು ; ಅಧಿಕವಾಗು : ಅಪ್ರತಿಮಲ್ಲನೊಱಗಿದನರುಣಜಲದಲಿ ಮಿಳ್ಳಿಱಿವ ಮೇಲುಸುರುಗಳ ಗದುಗದಿಪ ಕಂಠದಲಿ (ಜಿಶಾಗ. ೦೦-೫೭-೪೦). [ಮಿಳ್ + ಇಱ್₂]

**ಮಿಳ್ಳಿ**, ಮಿಳ್ಳಿ (ನಾ). ೧. ತುಪ್ಪ ಮುಂತಾದುವನ್ನು ಬಡಿಸಲು ಬಳಸುವ ಮರದ ಅಥವಾ ಲೋಹದ ಸಣ್ಣ ಸೌಟು : ಒಳಗೆ ಅಡುಗೆಮನೆಯ ಮಿಳ್ಳೆ ಸೌಟುಗಳ ವರೆಗೆ ಎಲ್ಲವನ್ನೂ ತಾನೆ ನಿಂತು ಸಜ್ಜುಗೊಳಿಸಿದನು (ಸವಿ. ೬೩); ವಿದ್ಯಾರ್ಥಿಗೆ ಒಂದು ಮಿಳ್ಳೆಯಷ್ಟು ತಿಳಿವಳಿಕೆಯನ್ನು ಕೊಡಬೇಕಾದರೆ ಬೋಧಕನಲ್ಲಿ ಒಂದು ಕೊಡದಷ್ಟು ಆ ಹಾಲು ತುಂಬಿರಬೇಕು (ಶಾಪಿಶ. ೬೦). ೨. (ನೀರು ಕುಡಿಯಲು ಉಪಯೋಗಿಸುವ) ಲೋಹದ ಸಣ್ಣ ಪಾತ್ರೆ : ಥಾಲಿ : ಮಿಳ್ಳೆ ಕುಡಿಕೆ . . . ಅಡಿಗೆ ಸಾಮಾನು ಬೀಸಣಿಗೆಗಳನೆಲ್ಲಮಂ ಪೊಡವಿಪತಿ ಬಂಡಿಕುದುರೆಗಳೆತ್ತುಗಳ ಮೇಲೆ ಬಿಡವೇರಿ ಕಳುಹಿದಂ (ಸಿದ್ಧಣ್ಣ. ೦೩–೪೪); ವೆಂಕಟಲಕ್ಷ್ಮಮ್ಮ ದೀಪದಲ್ಲಿ ಸೀಮೆಎಣ್ಣೆ ಮುಗಿದಿದ್ದು ಕಂಡು ಒಳಗೆ ಹೋಗಿ ಡಬ್ಬದಲ್ಲಿದ್ದ ಎಣ್ಣೆಯನ್ನು ಮಿಳ್ಳೆಯಲ್ಲಿ ತಂದು ಭರ್ತಿ ಮಾಡಿದರು (ಶಾಳ್ವೆ. ೨೦). ೩. ಎಳೆಯ ತೆಂಗಿನಕಾಯಿ ; ಕುರುಂಬೆ : ತೆಂಗಿನ ಮಿಳ್ಳೆ ಮಾವು, ದಾಳಿಂಬೆ (ಶಂಡಮ. ೩೯–೨) ; ತೆಂಗಿನ ಮರದ ತುಂಬ ಮಿಳ್ಳೆಗಳು (ಅಪಾಕ್. ೨೩೧). ೪. ತೆಳ್ಳನೆಯದು ; ಸಪೂರವಾದುದು : 'ಮಿಳ್ಳಿಗಾಲ್' ಪರಾ. ಮಿಳ್ಳು: ೨. "ಕುಳ್ಳಿ, ಮಿಳ್ಳಿ, ಗಿಂಡಿ" (ಕಂನುಹು.೬೨); "ಮಿಳ್ಳಿ (ಮಿಳ್ಳೆ) = ಸಣ್ಣಕುಡಿಕೆ" (ಶಾನಕೋ. ೩೦).

[ದೇ.॥ ತುಳು. ಮಿಳ್ಳಿ ; ತೆಲು. ಮಿಲ್ಲಿ, ಮಿಲ್ಲಿ, ಮಿಳ್ಳಿ]

**ಮಿಳ್ಳಿಗಾಲ್** (ನಾ). ತೆಳ್ಳಗಿರುವ ಕಾಲು : ಪುರುಳಿಲ್ಲದ ಮಿಳ್ಳಿಗಾಲ್ಪೆಡಂಗಿಲ್ಲದ ಮೈ . . . ಕೂಡಿದ ಪುರ್ಬುಂ ತೊಟ್ಟ ಕಾಸಿಯುಂ ಬೆರಸು [ಹಂಸೆಯೊಳಗೆ ತೊಡಿಸು ಬಂದಿರ್ಪಂತೆ ಬರ್ಪುದುಂ] (ಧರ್ಮಾಮೃ. ೬–೨೨೪).

[ಮಿಳ್ಳಿ + ಕಾಲ್$_1$]

**ಮಿಳ್ಳಿಗೊಳ್** (ಕ್ರಿ). ನೆಗೆ ; ಜಿಗಿ (?) : ಮಿಳ್ಳಿಗೊಂಡುಬ್ಬರಿಸುತ್ತುಂ ತನ್ನ ಕಣ್ಗಳ್ಕರೆಯೆ ನಿಕಟದೊಳ್ ಕೇಳ್ದು ಗಾಳ್ಮೇಳಿಸುತ್ತುಂ ಪರಿತಂದ ತ್ರಾರ್ಷ್ಟದಿಂದಂ ಬಿಳಿವಿಡೆ ಮೊಲೆವಾಲುಂದು ಧೇನುಪ್ರತಾನಂ (ರಾಜಾವ. ೫–೮೬).

[ಮಿಳ್ಳಿ + ಕೊಳ್$_1$]

**ಮಿಱಿಪಿಗ** (ನಾ). ಥಳುಕುಮಾಡುವವನು ; ವಿಲಾಸಿ : ಈ ತೆಱದೆ ಮೆಱೆವ ಮಿಱಿಪಿಗರ [ಪಾಠಾಂ. ಮಿಱುಪೊಗರ] ಮುಱುಕುಮಾ ದೊರೆಯ ಭರದ ಜವ್ವನಿಗೆಯನೆವ್ಮ ಕೆಯ್ಯಾರಲಿತ್ತಪ್ಪುದೆ ಪಿರಿದುವೆಂದು ಮಱುಗಿ ಮನದೊಳ್ ಮುನಿದು ಕೆಲಸದ ಕಪಾಸೀಜರನಡರೆ ನೋಟ್ಟಿ ಬಡಮುನದ ಮಂಡಳಿಕಮಂಡಳಿಯೊಳಂ (ಧರ್ಮಪು. ೯–೪೩ ವ).

[< ಮಿಱುಪು + — ಇಗ]

**ಮಿಱಿಮಿಱಿ**, ಮಿರಿಮಿರಿ (ಅ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಮಿಱಿಮಿಱಿ [ಪಾಠಾಂ. ಮಿಱುಮಿಱು] ಮಿಱುಗುವುದಾ ಕ್ಷೀರಧಾರೆ ಜನಮಸ್ತಕದೊಳ್ (ವಃಹಾನೇ. ೯–೨೨೪). **ಮಿರಿಮಿರಿ** : ಬಿಸಿಲಿನಲ್ಲಿ ಹಾವು ಮಿರಿಮಿರಿ ಮಿಂಚುತ್ತಿತ್ತು (ರೂಢಿ).

**ಮಿಱುಗಿಸು**, ಮಿರುಗಿಸು (ಕ್ರಿ). ೧. ಹೊಳೆಯುವಂತೆ ಮಾಡು; ಮೆರುಗು ಕೊಡು : ಪಣ್ಮರಗಳೆ ಪೂಮರಗಳೆ ತಣ್ಮಲೆಗಳೆಲೆವೆರ್ ಮಿಱುಗಿಪರಳ್ಗಳಿರ ಪೊವಟ್ಟಣ್ಮುವ ಕಂ[ಪೆ] ಕರಂ ಕೈಗಣ್ಮುವ ದಂಪತಿಯುಳಂಪೆ ಸಂದನದ ದೊಳ್ (ಶಿಂಹಂ. ೦–೨೨). **ಮಿರುಗಿಸು** : ೨. ಸೊಗಸುಗೊಳಿಸು : ಅನುವಾದಕರ ರಸಿಕತೆಯೂ ನಿರಂತರಾಭ್ಯಾಸವೂ ತಿದ್ದಿ ತೀಡಿ ಮಿರುಗಿಸುವ ಉತ್ಸಾಹಶೀಲತೆಯೂ ಅಷ್ಟೇ ಕಾರಣ (ಮೀರಜೋ. VI, ಈ ಸಾಟಿಕವನ್ನು ಕುಂತು).

[ಮಿಱುಗು$_1$ + — ಇಸು$_1$]

**ಮಿಱುಗು$_1$**, ಮಿರುಗು$_1$ (ಕ್ರಿ). ೧. ಹೊಳೆ ; ಪ್ರಕಾಶಿಸು ; ಥಳಥಳಿಸು : "ಮಿಱುಗು–ಚಕಚಕಾಯಮಾನೇ (ಪ್ರಕಾಶಿಸು)" (ಶಮಧಾ); ಮಿಱುಗುವ ರತ್ನಭಿತ್ತಿಗಳ ದೀಪ್ತಿಗಳಂ ನಿಜದೇಹದೀಪ್ತಿಗಳ್ ಮಱಸೆ (ಅಪು. ೨–೬೨); ಧಾಳದೊಳ್ ಮಿಱುಗುವ ನೇತ್ರಮಾಂಟೆ (ಶಂಪಾಶ. ೯೯). ೨. ರಂಜಿಸು ; ಕಂಗೊಳಿಸು ; ಶೋಭಿಸು : ತೋಳ್ಗುವ ಚಿನ್ನಪೂಗಳಲಕಾವಳಿಯೊಳ್ ಮಿಱುಗಲ್ (ಕಾದಂಪೂ. ೬೩೪) ; ಗುಣಭದ್ರದೇವರ ಮಿಱುಪಂಘ್ರಿಗಳೆತ್ತುವೆನಗೆ ಕವಿತೆಯನಣಕಂ (ಅರ್ಧನೇ. ೦–೦೬) : ಮುಂಡಿಗೆ ಮುದುಡಿ ನೆಲಕೊಱಗಿದವು ಮಿಱುಗುವ ನಾಗವಲ್ಲಿಗಳು (ಕುವ್ಯಾಆ. ೦೯–೬೭). **ಮಿರುಗು$_1$**: ೧. ಮೋಣಾಷೆಯ ಛಾಳದಲಿ ಬೆಳ್ಳಿಯೊಂದೆಯ ಮಿರುಗುವಂದದಲಿ (ಶತ್ಸಾಂಗ. ೦೯–೫೦೨); ತಾರೆ ಮಿರುಗುವುದೇಕೆ ? (ಗೀತಂ. ೨೦–೦೪). ೨. ಮಿರುಪ ಪನ್ನೆರಡೂರ್ಧ್ವಪುಂಡ್ರದ ನಿತ್ಯಸಾತ್ವಿಕರಾ ಪರಮಭಾಗವತಾಗ್ರಗಣ್ಯರು . . . ಒದಗಿಸುತಿಹರಾನಂದ ಬಾಷ್ಪಗಳ (ಅನಂಶಾ. ೦–೩–೪೪); ದಂತಪಂಕ್ತಿಯ ಕಾಂತಿಯೊಡನೆ ಕಿರುನಗೆ ಮಿರುಗೆ (ಶತ್ಸಾಂಗ. ೦೩–೩೪೦). 'ಮೆರುಗು$_1$' ಪರಾ.

ಮಿಱುಮಿಱುಗು, ಮಿರುಮಿರುಗು (ದ್ವಿರುಕ್ತಿ) : ಚಿನ್ನಪೂಗಳೆಡೆಯೆಡೆಯೊಳ್ ನಿಮಿರ್ದು ಮಿಱುಮಿಱುಗುವ ತಲೆದುಡುಗೆಯುಂ . . . ತೋರಮುತ್ತಿಗೆಯ ಮುಡಿಯುಮೊಸೆಯೆ ಕೈಗೆಯ್ದಾಗಳ್ (ಆದಿಪು. ೪–೪೧ ವ); ಮಿಱುಮಿಱುಪ ದಿವ್ಯಾಭರಣಕಿರಣದ ತುಱುಗಿನಲಿ . . . ಅವರೈವರೊಪ್ಪಿದರಿಂದ್ರತೇಜದಲಿ (ಸಂಭಶ. ೩೩–೫೬) ; ಕೋಲ್ಮಿಂಚಿನಂದದಿಂ ಮಿರುಮಿರುಗಿ ನಿಮಿರ್ದ ಜಂಕಣೆಯ ಸಾಲ್ಗಳಂ ಪೊತ್ತು ನೆತ್ತಿಯೊಳೆಸೆವ ಕೊತ್ತಳಗಳಿಂದೆ . . . ರಂಜಿಸಿತು ರಾಜಧಾನಿ (ಶತ್ಸಾಂಗ. ೫೬–೦೫೩).

**ಮಿಱುಗು$_2$**, ಮಿರುಗು$_2$ (ನಾ). ೧. ಕಾಂತಿ ; ಹೊಳಪು ; ಮೆರುಗು : "ತೊಳಗು, ಬೆಳಗು, ಮಿಸುಗು, ಮಿಱುಗು . . . ವುಸೆ – ಈ ೧೪ ಕಾಂತಿ" (ಕಶಶಾ. ೩೩–೨೦೨); ಮಚ್ಚರಿಪ ವಿಟಕೋಟಿಯಂ ತಟವಚ್ಚಿಸೊಡುವ ನೋಟದಂಬಿನ ಹೆಚ್ಚನೀಕ್ಷಿಸೆ . . . ಅಚ್ಚರಿಯ ಕಡುಮಿಂಚುಗಳೊ ಮಿಱುಗುಗಳ ವಂಗಡವೊ (ಐಶಪು. ೪೦–೪). ೨. ಸೊಬಗು ; ಮನೋಹರತೆ : ಗಮಕಂ ಪ್ರಯೋಗಮಾಭೋಗವಾಳಂಕಾರಂ ಪೊಗರ್ ಸಮಂ ಮಿಱುಗು ಪೊಸಟ್ಟುಮರೆ ಕೊಳೆ ಪಾಡುವವರಿ ವಲಮರ್ದಂ ಮುಕ್ಕುಳಿಸಿಯುಗುಟ್ಟಿ ತೆಜನಂ ಪೋಲ್ತಲ್ (ಆದಿಪು. ೬–೦೩); ರಸಮೊರ್ಪ ಸರ್ವನ್ನೆಗಂ ಮಿಱುಗು ಕಿತ್ತು ಪೊಗರ್ . . . ಪ್ರಯೋಗಮೊಸೆಸೆದುವೊ ಪೇಱಿಮೆಂಬಿನೆಗಮಿಂಗೊರಲೊಳ್ಕೊಳೆ ಪಾಡಿಯಾಡಿ ರಂಜಿಸಿತೊ ಭಾಜನಂಗಳ ಮನಂಗಳನಾ ದಿವಿಜಾಂಗನಾಜನಂ (ಆಶಪು. ೫–೯೦). **ಮಿರುಗು$_2$** : ೧. "ಭಾ–ದೀಪ್ತೌ, ಮಿರುಗಿನೊಳ್" (ಕಾಶಳ್. ೧೬೩) ; "ಮಿರುಗೆನಲ್ ಮಿಱುಗೆನಲ್ ಬಿಡದೆ ಕಾಂತಿಗೆ ಪೆಸರ್" (ಕಶರ. ೯೯). 'ಮೆರುಗು$_2$' ಪರಾ.

[< ಮಿಱುಗು$_1$]

**ಮಿಱುಪು** (ನಾ). ಹೊಳಪು ; ಕಾಂತಿ : ಸರಸೀತೀರಂಗಳೊಳ್ ಬೆಳ್ಗೆಱೆಗಳ ತಡಿಯೊಳ್ ಸಿಂಧುಕೂಲಂಗಳೊಳ್ ಶೀಕರಮುಂ ನೀಹಾರಮುಂ ಮುತ್ತಿನ ಮಿಱುಪನಣಂ ಮೆತ್ತಿದಂತೊಪ್ಪೆ ಮೆಯ್ಯೊಳ್ ಪರಮಾತ್ಮಧ್ಯಾನವ್ಯಾಪ್ಯಕೇತರಚಳಿತರ್ ಜೈನಯೋಗೀಶ್ವರರ್ . . . ನಿಂದರ್ (ರಾಜಾವ. ೯–೬೭) ; ತುಱುಬುಗಳ ತೋಳುಗಳ ಜಘನಸ್ಥಳದ ಚೆಲುವಿಕೆಯ ಮಿಱುಪಿನಲಿ . . . ಮಹಿಳಾಜನ ವಿರಾಜಿಸಿತು (ಕೊರಂ. ೦–೫–೩೪).

[< ಮಿಱುಗು$_1$ + — ಪು$_2$]

**ಮಿಱುಮಿಱನೆ** (ಅ). ಕಾಂತಿಯುಕ್ತವಾಗಿ ; ಪ್ರಕಾಶದಿಂದ ಕೂಡಿ ; ಥಳಥಳನೆ : ಹೆಗಲು . . . ಮಿಱುಮಿಱನಾದ ಮೈಹೊಳಪಿಂದ ತೇಜಿಕಟ್ಟಿ ನಿಱಿಗಟ್ಟಿ ನಿಱಿವೇಳ್ದ ಹೊಂಗಾಸೆಯಿಂದ ಕುಱುಕುಱಿ ಮೆಟ್ಟಿ ರಂಗದೊಳು ತಂಪಿನ ಬಯಲ್ದೊಡಱಿ ಪೊಳೆವಂತೆ ಹೊಳೆವರು (ಚಶ. ೦೩–೧೦೦೦).

[ಮಿಱುಮಿಱು + — ಅನೆ$_1$]

**ಮಿಱುಮಿಱು** (ಅ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಪೆಱವುಱಿದ ಮುಱಿಱು ಮಿಱುಮಿಱುಮಿಱುಮಿಱುಪ ಶಿಶಾಸ್ತ್ರಂಗಳಂ ದ್ವಿಜಪ್ಪನ ನೊಸಲಂ ನೆಱಿಗೊಳ್ಳನಮೆಚ್ಚೊಡೆ (ಶಂಶಶಾ. ೦೨–೬೪) ;

ಬಲವ ಕೆಲದೊಳ್ ಮಿಜುಮಿಜುಮಿಜುಗಿ ತನ್ನ ಪಡೆದೊಂಗಂ ತನ್ನ ಪೆಸರಿಂದಮ ದೊಡ್ಡಿವೆಸರಾಗಿ ನೆಗಟ್ದ ಚಕ್ರಮಂ ನೋಡೆ (ಶಾಂತಿಪು. ೯-೯೬ ವ).

**ಮಿಜ್ಜನೆ** (ಅ). ಹೊಳಪಿನಿಂದ ಕೂಡಿ; ಥಳಥಳಿಸುವಂತೆ: ಕಾಯ ಕರ್ರನೆ ಕಂದಿದರೇನಯ್ಯಾ ಕಾಯ ಮಿಜ್ಜನೆ ಮಿಂಚಿದರೇನಯ್ಯ (ಬಸವಾದೀ. ೫. ೯೯-೦೦೬).

ಮಿಜ್ಜಮಿಜ್ಜನೆ (ದ್ವಿರುಕ್ತಿ): ಮಿಜ್ಜಮಿಜ್ಜನೆ ಮಿಂಚಿ ಮುಂತೊನೆ ಬಿಜ್ಜಬಿಜ್ಜನೆ ಬಿಡುತೆ ಕಣ್ಣಳ . . . ಡಜ್ಜಡಜ್ಜನೆ ತೇಗುತಿರ್ದವು ಡಾಕಿನಿವ್ರಾತ (ಪುರೇಪು. ೩-೬೪). [ಮಿಜು$_0$ + — ಅನೆ$_1$]

**ಮಿಟ್ಟು, ಮಿಂತು, ಮಿತ್ತು, ಮಿರ್ತು, ಮಿಳ್ತು, ಮ್ರಿತ್ತು** (ನಾ). ೧. ಸಾವು; ಮರಣ: "ಮೃತ್ಯುವಿನೊಳ್ ಮಿಟ್ಟಿಂದೆನೆ" (ಕರ್ಣಾಟ. ೬೮); ವರ್ಮಮಂ ಮಂತ್ರಮುಮಂ . . ಮಿತ್ರರ್ಕಳುಂ ಮಿಟ್ಟು [ಪಾಠಾಂ. ಮಿತ್ತು, ಮೃತ್ಯು] ಮೇಲೆರ್ದಾಗಳ್ ಶರಣಪ್ಪುದೇಕೆ ಪಡಿದರ್ ಪನ್ನಿರ್ವರುಂ ಚಕ್ರಿಗಳ್ (ವಡ್ಡಾರಾ. ೦೯೩-೦೭): ನೇಸಱ್ ಮೂಡಿದುದು ಕಟ್ಟಲೆಗೆ ಮಿಟ್ಟು ಮೂಡುವ ತೆಜದಿಂ (ಕವಿರ. ಪ. ೦೯೯ ಪ್ರಯೋ). ೨. ಸಾವಿನ ಅಧಿದೇವತೆ; ಮೃತ್ಯುದೇವತೆ: ಕುರುಬಲಕ್ಕೆ ಮಿಟ್ಟು ಪರ್ಬಿರೆವಂತೆ ಮೊರೆದು ಪರಿವ ತನ್ನ ಕಿಸುವೊನ್ನ ರಥವುಂ ಭಯಂಕರಾಕಾರವಾಗೆ (ಪಂಪಭಾ. ೦೦-೯೭ ವ). **ಮಿಂತು**: ೨. ಮಹಾಗಜಂ ಸುರಗಜಕೆ ಮಿಂತೆನಿಸಿ ತೋರ್ಪ ಗಜಕಂಧರದಿ ವಜ್ರದಂತಂತಕನವೋಲ್ ಕೋಪಮಂ ಧರಿಸಿ ಬಲವೆರೆಸಿ ಬರೆ (ಕುರಂಗ. ೫೦-೨೬). **P** ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ. **ಮಿತ್ತು**: ೧. ಅವನ × × × ಉಳ್ಳಿತ್ತು ಪುತ್ತಿಮರ್ಕಳ್ ಪುಟ್ಟದೆ ಕಡುಗೆ (ಎಮ್ಮೆಉ. ೦೯೩೩, ೫೯-೬; ಸು. 8 ಪೆಹುಕಕ); ಮಿತ್ತು ಮುಳಿವಂಗಾಳ್ದಂಗೆ ಸಂಪತ್ಕರಂ . . . ಒಳ್ಪಿನಾಗರಮೆಂಬೀ ಗುಣದಿಂ ಗುಣಂಗೊಳಿಸಿಪಂ ಭೂಲೋಕಮಂ ನಾಕಮಂ (ಎಕ. VI, ಕಡೂರು. ೫೦-೩೩; 1169). ೨. ಜವನಿಂ ಮಾರಿಯಿಂ ಮಿತ್ತುವಿಂ ಭೈರವನಿಂ ಕಾಪಾರಿಯಿಂ ಜೈದ್ಯನೆ ಗಡ ಜಗಮಂ ತಿಂದು ತೇಗಲ್ ಸಮರ್ಥಂ (ಜಗು. ೦೩-೯೩); ಮತ್ತೆ ಹೊಸ ಚಾಪದಲಿ ಭೀಷ್ಮನು ಮಿತ್ತು ಖತಿಗೊಂಡಂತೆ ಶರದಲಿ ಕತ್ತನಾಕಾಶವನು (ಕುವ್ಯಾಭೀ. ೯-೯೭); ಬಲುಮಿತ್ತನಿಸುವರು ಲೋಕದವರಿಗೆ ಮಾರಿ ಮಸಣಿಯರು (ಕಂಕಡಾ. ೯-೩೦). ೩. ಆಪತ್ತು; ಕೇಡು: ಕೋಣನೆರಡುಂ ಪೋರೆ ಗಿಡುವಿಂಗೆ ಮಿತ್ತು (ಪಕಾ. ೨-೦೨). **ಮಿರ್ತು**: ೧. ಮಿರ್ತುವಡಗಿದೆ ನಿನ್ನ ನಗೆದಿಂಗಳಾಟವನು ನಟಿಸುವೀ ಮೊಗವಲ್ಲಿ (ಚಂದ್ರಕ. ೯೦-೨೦). ೨. ಅರಿಶಿರವ ಚೆಂಡಾಡು! ಮಿರ್ತೊಡನೆ ಮುಂಡಾಡು! (ಕರಾರ. ೭೮). **ಮಿಳ್ತು**: ೧. ಮಿಳ್ತುವಿನಪವಗಡಿಸುವ ಭೈರವನಂ ಬಲ್ಪೇರೆತಯಂ ಬೆದಪಿಸುವ . ಭಟನಿವಹಂ ನಡೆತಂದುದು (ಜಯುಕಾ. ೭-೦೯); ದಾರಿದ್ರ್ಯಮೆಂಬುದೆ ಮನುಜರ್ಗೆ ಮಿಳ್ತುವಿಗೆ ಸಮಾನಮಾಗಿರ್ಪುದು (ಧಾರಕಾಂ. ೯-೩೨). ೨. ಜಗದ ಕೊಲೆಗುಜ್ಜುಗಿಸಿ ಬಂದ ಮಿಳ್ತುವೊ (ಕೆಬ್ಬು. ೩೯-೩೩); ಕುಲಕ್ಷಯಕೆ ಕೂಣಿಯೊಡ್ಡಿದೆ ಮಿಳ್ತು (ಶ್ರೀರಾಮಪಾ. ೩೨೬-೨೯೭). ೩. ಅವರ ವಿಭವಕೆ ಮಿಳ್ತು ಮೂಡಿತ್ತೋಯೆನೆ ಪೊಳ್ತು ಮೂಡಿ ಮೆಱೆಯೆ (ಶಬ್ದರಾ. ೭-೫). **ಮ್ರಿತ್ತು**: ೨. ಬಮ್ಮಗಂ ಮುಳಿವಡೆ ಮ್ರಿತ್ತು ಮಿಱಿವಡೆ ಮಾರಿ (ಸೌಇಇ. XX, ೫೯-೨೭; 1123). [<ಸಂ. ಮೃತ್ಯು]

**ಮಿಟ್ಟುಗರೆ, ಮಿತ್ತುಗರೆ** (ಕ್ರಿ). ಸಾವನ್ನು ಆಹ್ವಾನಿಸು; ಮರಣವನ್ನು ಆಮಂತ್ರಿಸು: ಸುಸಪ್ತಕರ್ ತಮಗೆ ಮಿಟ್ಟುಗರೆವಂತೆ ವಿಕ್ರಮಾರ್ಜುನನಂ ಕರೆದಯ್ದುರ್ (ಪಂಪಭಾ. ೦೦-೬೫ ವ); ಆ ಪರಮಶಿ ತನ್ನೊಲ್ಲಪನಂ ಕರೆದಳ್ ಬೆಟ್ಟೀಱ್ ಮಿಟ್ಟುಗರೆವಂತೀಗಳ್ (ಶಾಂತಿಪು. ೯-೬೨). **ಮಿತ್ತುಗರೆ**: ಪರಿವ ಭಂಡಿಯುಂ ಕಾಲಿಂ ಕೋವರು ಮುಣಲಂ ಸುರವಿ ಪೊಸವರು ಬೆಟ್ಟೆಱ್ ಮಿತ್ತುಗರೆವರು (ಸೌಇಇ. IX-i. ೨೯೬-೦೮; 1190). [ಮಿಟ್ಟು + ಕರೆ$_1$]

**ಮಿಟ್ಟುಗೊಡ್ಡ** (ನಾ). ಸಾವಿನ ಹೆದರಿಕೆಯನ್ನುಂಟುಮಾಡುವ ಮಾತು ಮತ್ತು ಅಂತಹ ಮಾತಿನಿಂದ ಆಗುವ ಹಿಂಸೆ. — ಉಪಟಳ: ಪಾಣ್ಬರಂಕುಸನಾ ಪಾಣ್ಬೆಯರ ಗೆಯ್ಯ ಗೆಯ್ಯಂಗಳುಮಂ ತೋರ್ಪ ಸನ್ನೆಗಳುಮಂ ಆಡುವ ಮಿಟ್ಟುಗೊಡ್ಡಂಗಳುಮಂ ಕಂಡು ಚೋದ್ಯಂಬಟ್ಟು (ಪಂಪಭಾ. ೪-೯೩ ವ): "ಮೃತ್ಯುವಿನಂಥ ಚೇಷ್ಟೆಯ ಮಾತು" (ಪಂಪರ. ೦೬೪); ನೋಡೆ ಮಾಜಾಂತೆನಗಮುರಿಯನಾರ್ಗಿರ್ದನೀ ಮಿಟ್ಟುಗೊಡ್ಡಂ ಸರ್ವರ್ಗಂ ಸಲ್ಲದೆಂದೆಂದೊವಜನೊದಱ್ (ಕಾವ್ಯಾವ. ೨೬೦). [ಮಿಟ್ಟು + ಗೊಡ್ಡ$_1$]

**ಮೀ$_1$**. ಮೀಯು (ಕ್ರಿ). ಮಿಂದು$_1$ (ಭೂತಕೃ). ೧. ಸ್ನಾನಮಾಡು; ಜಳಕಮಾಡು: "ಆಪ್ಲವನಂ, ಸ್ನಾನಂ, ಸವನಂ — ಈ ೩ ಮೀವುದು" (ಹಲಾಯು. ೬೬-೨೫೪); ಈತಂಗೆ . . . ಮೀಯಲ್ ಬೇಡಿದೊಡಮೆಱೆಯುದಿರೆಂದು ಕಲ್ಪಿಸಿದೊಡೆ (ವಡ್ಡಾರಾ. ೭೭-೬); ಪಂಚರತ್ನಗರ್ಭವಿವಿಧೌಷಧಿಸಂದರ್ಭಶಾತಕುಂಭಕುಂಭಸಂಭೃತಮಂಗಲಜಲಂಗಳಿಂದಂ ಮಿಸಿಸೆ ಮಿಂದು (ಆದಿಪು. ೯-೩೩ ವ); ತೊಱೆಯ ಮೀವಣ್ಣಗಳರಾ ತೊಱೆಯ ಮೀವ ಸ್ವಾಮಿಗಳಿರಾ ತೊಱೆಯಿಂ ಭೋ (ಬಸವ. ೬೪೪). ೨. ಸ್ನಾನಮಾಡಿಸು; ಜಳಕಮಾಡಿಸು: "ಮೀ—ಸ್ನಪನೇ" (ಶಮಂದಾ). ೩. ನೆನೆ; ತೋಯು: ಪಣ್ಗೊಲೆಯಂ ಗಿಳಿವಿಣ್ಡು ಚುಂಚುವಿನ್ಪಿಱಿದವೆ ಸೋರೆ ಸೋಣೆಯೊಳೆ ದಾಂಗುಡಿ ಮಿನ್ದೆಸದಿರ್ಪುವು . . . ಲತೆವಳ್ಳಿಯುಮಲ್ಲಿಯ ನಾಗವಳ್ಳಿಯುಂ (ಎಕ. XIII, ೩೬೦-೨೯; 929). **ಮೀಯು**: ೧. ತಾನೋವಿ ಮೀಯುತ್ತಿರಲು ನಿನ್ನಯ ತೀವ್ರತರೆಗಳಲಿ ಓವನುತ ಹೊಯ್ವಲಿಕೆ ನಿನಗೆಯು ಸಾವು ನುಡಿದವು (ಸಂಕಶ. ೦೨-೨೯); **ಪುಷ್ಕರಣಿ** ಯೆರಡುಂಟಲ್ಲಿ ಮಿಂದನು ಸರಸಿಯೋದಱಿಳು (ಕೊರರಾ. ೯-೨-೦೭); ಮಾವ ಮಿಂದಾಗಿಲ್ಲವಲ್ಲ; ಬಿಸಿನೀರು ಕಾಯಿಸಿದ್ದೇನೆ. ಮೀಯಿರಿ (ಮುಗಿಯು. ೦೫೩). ೩. ತೊಳೆವ ಮಳೆಯೆನಿತರಿಂ ಚೆಲ್ವಡೆದುದೀ ಸುಗ್ಗಿಕುಳಿರ ತಂಬನಿಯೆನಿತರಿಂ ಮೀದಿರುವುದು (ಕಾರೀರ. ೦೦೬-೨೯೬); ಹೊಸಮಳೆಯಲ್ಲಿ ಮಿಂದು ನಿಂತ ಇವಳ ಎದೆಯಲ್ಲಿ ಸ್ವರ್ಗವೇ ಪ್ರತಿಫಲಿಸುತ್ತದೆಯಂತೆ! (ಶಾವಗೀ. ೮). ೪. ಋತುಸ್ನಾನಮಾಡು: ಆದು ವರಪ್ರಹ್ಲಾದದೇವನ ಮಂದಹಾಸವ ಗರ್ಭವಾಗಿರೆ ಮಿಂದು ಮಾಸತ್ರಯಗಳಾಗಿರಲಾ ಕಯಾತಿಯಲಿ (ಸಂಕಶ. ೮-೦೦); ಹಗಲಿರುಳೂ ನಿನಗೆ ಒಂದೇ ಯೋಚನೆ. ಮೊನ್ನೆಯಲ್ಲವೇ ನಾನು ಮಿಂದದ್ದು (ಕೇಪೋಡ. ೦೩). ೫. (ಅಲಂ) ಮುಳುಗು; ಅಡಗಿಹೋಗು: ಕಣ್ಣೀರಿನೊಳಗೆ ಮಿದಳು ವೈಮಱಿದಳು ಮೂರ್ಛಿತವಡದಂದು ಬಿದ್ದಳು ಭೂಪನರಸಿ (ಶೀವಂಶಾಂ. ೫-೦೮); ಇಂದಿರೇಶನೆ ನಿಮ್ಮಡಿಯ ಪದದ್ವಂದ್ವವನು ನಾನೊಂದಿ ಸುಧೆಯಲಿ ಮಿಂದು ವಿಷಯುವ ಬಯಸುವವ ನಾನಲ್ಲ (ಸಿಭಾಗ. ೦೦-೦೨-೨೭).

[ದೇ.II ತುಳು. ಮಿ; ತೊದ. ಮೀಯ್; ಪರ್ಜಿ. ಮಿ; ಗದಬ. ಮಿ. ಮಿಯ್; ಗೊಂಡಿ. ಮಿಯಾನಾ, ಮಿನಾ; ಕುಇ. ಮೀವ; ಕುವಿ. ಮಾಅಲಿ]

**ಮೀ$_2$** (ನಾ). ಒಂದು ಅನುಕರಣಶಬ್ದ: ಮಿಂಚುಳ್ಳಿಯೊಂದು ಮೀ ಮೀ ಮೀ ಎಂದು ಕರೆಯುತ್ತಿದ್ದುದೂ ಕೇಳಿಸಿತು (ಮರಳಿಮ. ೦೯೩).

**ಮೀಂ$_1$** 'ಮೀನ್$_1$' ನೋ.

**ಮೀಂ$_2$** 'ಮೀನ್$_2$' ನೋ.

**ಮೀಂಗುಡಿ** (ನಾ). ಮೀನಿನ ಗುರುತುಳ್ಳ ಬಾವುಟ; ಮೀನಧ್ವಜ: ಪೂಗಣೆ ಕರ್ಬುವಿಲ್ ಮಿಳಿರ್ವ ಮೀಂಗುಡಿ . . . ಸುಗ್ಗಿಯೆನಿಪ್ಪವೆಲ್ಲ ಮೊಂದಾಗಿಯೆ ದರ್ಪಕಂಗೆ ಸಮನಿಪ್ಪ ಜಗಜ್ಜಯದರ್ಪಮಂ ಸಮಂತಾಗಿಸಲೊಂದೆ ಸಾಲ್ಗುಮೆನಿಸಿತ್ತು ಕುಮಾರಕೃತಪ್ರಸಾಧನಂ (ಚಂದ್ರಪ್ರ. ೬-೬೩). [ಮೀಂ$_2$ (<ಮೀನ್$_2$) + ಗುಡಿ$_2$]

**ಮೀಂಗುಲಿ** (ನಾ). ೧. ಮೀನನ್ನು ಕೊಲ್ಲುವವನು ; ಬೆಸ್ತ : ಕುಲಿ ಎಂಬುದರ್ಕೆ—ಮೀಂಗುಲಿ. ಆಜಗುಲಿ (ಕವಿರ. ೦೯೭ ಪ್ರಯೋ) ; ಮೀನಂ ಕೊಲ್ವಂ ಮೀಂಗುಲಿ (ಶಬ್ದಾಮ. ೫೯೭ ಪ್ರಯೋ) ; ಪಿಂಗದೆ ಸೇನಜಿತನಣಾಗಿ ಪೆರಸಂ ಮೀಂಗುಲಿಯ ಕುಮುದ್ವತಿ ಕೈವಿಡಿವಳ್ (ಶಾಂತಿ. ೯-೯೯). ೨. ಮೀನನ್ನು ಕೊಲ್ಲುವ ಕೊಕ್ಕರೆ, ಕಡಲ ಹದ್ದು ಮುಂತಾದ ನೀರು ಹಕ್ಕಿ : ಮುಳಿದು ನೋಟ್ಟನಂತೆ ಕೆಂಗಣ್ಣ ಜಲಗಾಜನಂತೆ ಮೀಂಗುಲಿ . . . ಎಂದಿಂತುಮನೇಕಪಕ್ಷಿಜಾತಿಗಳಿಂ (ಬಂಹು. ೨-೩೯ ವ) ; ಗೆರುಡಂ ಕರ್ಬಕ್ಕಿ . . . ಮೀಂಗು [ಪಾಠಾಂ. ೧]ಲಿ ಮರಕಟಿಗಂ . . . ತದ್ವನಾಂತಸ್ಥ ಮಿಕರ್ಗಂ (ಕಾಕಂ. ೩-೩೩). [ಮೀಂ$_2$ (<ಮೀನ್$_2$) + — ಕುಲಿ$_1$]

**ಮೀಂಗುಲಿಗ** (ನಾ). ೧. = ಮೀಂಗುಲಿ ೧ : "ಧೀವರ ಜಾಲಿಕ ದಾಶನಾಮ ಮೀಂಗುಲಿಗಂ" (ಚನ್ನಕೋ. ೬೬-೯೪) ; ಮೀಂಗುಲಿಗನೊಂದಾಮೆಯಂ ಬಾಟವಾಟ ನಾಲ್ಕು ಕಾಲಂ ಕಟ್ಟಿ ಬಳ್ಳಿಯ ಕೊರಲೊಳ್ ತಗುಳ್ಚಿಯೆಟಲೆ ಪಿಡಿದುಕೊಂಡು ಪೋಟಲ್ಲಿದಿರಂ ಬರ್ಪೊನನರಸಂ ಕಂಡು (ಪಂಪರಾ. ೨೨೦-೦೯) ; ಮೀಂಗುಲಿಗನೆನಾಗಿಯುಮಣಮಾಂ ಗುಣಮನೆ ಬಿಸುಟೆನಿಲ್ಲ ನಿಮಗಂ ಮಗನಾದಂಗೆನಗೆ ಬಸುಡಲಕ್ಕುಮೆ (ಶಂಕರಾ. ೯-೬೫) ; ಮೀಂಗು [ಪಾಠಾಂ. ಬು]ಲಿಗರ್ ಬಲೆಯುಂ ತೆಗೆದು ನೋಡಿ (ಶಂಕಕಂ. ೦೩೯-೭) ೨. = ಮೀಂಗುಲಿ ೨: ಬೇಟೆ ಮಾಡಿಸುವಲ್ಲಿ ಒಂದು ಮೀಂಗುಲಿಗನೆಂಬ ಪಕ್ಷಿಯು ಗಗನದೊಳಾಡುತ್ತ (ಪಂಚತಂ. ೯೨). [ಮೀಂಗುಲಿ + —ಗ$_2$]

**ಮೀಂಗುಲಿಗವಕ್ಕಿ** (ನಾ). = ಮೀಂಗುಲಿ ೨: ಮೀಂಗುಲಿಗವಕ್ಕಿ ಕೊಳನೊಳ್ ಮೀಂಗೆಜಿಗುವ ತೆಱದಿನೆಱಗಿ (ಗದಾಯು. ೬-೯೫).
[ಮೀಂಗುಲಿಗ + ಪಕ್ಕಿ]

**ಮೀಂಗುಲಿಗೆ** (ನಾ). ಮೀನು ಹಿಡಿಯುವ ಜಾತಿಯವಳು ; ಬೆಸ್ತರ ಹೆಂಗಸು : ವ್ಯಾಸನ ತಂದೆ ಮೀಂಗುಲಿಗೆಯೊಳ್ . . . ನೆರೆವಂ (ಕಮಕ. ೦೦-೦೭೪). [ಮೀಂಗುಲಿಗ + — ಎ$_2$]

**ಮೀಂಗುಲಿವಕ್ಕಿ** (ನಾ). = ಮೀಂಗುಲಿ ೨ : ಅಂಗ್ಯಗಳ ಲಕ್ಷಣವ ಸುರೇಖೆಯ ಮೀಂಗಿರದೆಜಿಗುತೆಜಿಗುತೇಳುವ ಪೊಸಮೀಂಗುಲಿವಕ್ಕಿಗಳೋ . . . ಎಂಬಂದದಿನಂಗನೆಯೊರ್ವಳ್ ಕೈವಿಡಿದಾಡುವ ಶಿಶುಕಲ್ಲೊಪ್ಪಿದುದು (ಜಯನೃ. ೦೪-೩೯). [ಮೀಂಗುಲಿ + ಪಕ್ಕಿ]

**ಮೀಂಗುಱುಹು** (ನಾ). ಮೀನಿನ ಚಿಹ್ನೆ, -ಗುರುತು : ಮೀಂಗುಱುಹಿನ ಜೀಯ ಚಿತ್ರ್ಯಸು (ಪೋಹಕ. ೦೬-೯).
[ಮೀಂ$_2$ (<ಮೀನ್$_2$) + ಕುಱುಹು (<ಕುಱಿಪು)]

**ಮೀಂಚುಳ್ಳಿ** 'ಮೀನ್ಚುಳ್ಳಿ' ನೋ.

**ಮೀಂಟು$_1$**, ಮೀಟು$_1$ (ಕ್ರಿ). ೧. ಮೂಲೋತ್ಪಾಟನ ಮಾಡು ; ಕೀಳು; ಹೊರಗೆ ತೆಗೆ : "ಮೀಂಟು – ಉತ್ಪಾಟನೇ, ಉತ್ಕರ್ಷವೃತ್ತೇ ಚ (ಮೀಟುವ ಆಯುಧ)" (ಕವಿರಾ) ; ನೋಡೆ ನೋಡೆ ಕಣ್ಗಳಂ ಮೀಂಟುವರುಂ ನುಡಿಯೆ ನುಡಿಯೆ ನಾಲಗೆಯುಂ ಪಿಡಿದು ಪೆಡತಲೆ ಬಿಂದುಚರ್ವರುಂ (ಆದಿಪು. ೫-೮೫ ವ) ; ರವಿತಶಿಯುಂ ಮೀಂಟು ವನೊ ಗಗನತಳದಿಂ (ಗದಾಯು. ೬-೦೯) ; ಬೋಳೆಯುಂಬು ತೆಗೆದು . . . ಭೋಂಕನಲು ಮೀಂಟಿ ಒಡೆದಿರ್ದ ಕಣ್ಗೊಳಗೊತ್ತಿ (ಕಬ್ಬಿಗ. ದೇ. ೦೪೯-೦೨). ೨. (ಸನ್ನೆಕೋಲು, ಉಂಗುಟ, ಬಾಣ ಮುಂತಾದುವುಗಳಿಂದ) ಮೇಲಕ್ಕೆತ್ತು ; ಎಬ್ಬು ; ನೆಗಹು : ಉಂಗುಟದಿಂದೆ ಮೀಂಟುವಂ ನಗಮನಿವಂ (ಎಕ. VII, ಶಿಕಾ. ೪-೯೫ ; 1122) ; ಉಪೇಂದ್ರನುರ್ಬಿದ ಮಳಿಸಿಂದೆ ಮಂದಸಿನ ಮುಚ್ಚುಳಸುಂಗುಟದಿಂದೆ ಮೀಂಟಿ ಪೋಗೊದೆದು (ಜಗ. ೬-೩೦) ; ಗುದ್ದಲಿಯನೆತ್ತಿ ಮೀಂಟುತ್ತೆ ಪೊಡೆಯ ಮುಂದೆ ಹೊಸ ಹೊನ್ನ ಹಿರಿಯ ಕೊಪ್ಪರಿಗೆಯುಂ ಕಂಡು (ಸಿದ್ಧರಾ. ೩-೯೨). ೩. ಹೊರಗೆ ಬರು ; ಹೊರಸೂಸು : ಅಲ್ಲಿಯಾತ್ಮದ ಬಹುಕೆವಳ್ಳಿ ದಾಂಗುಡಿ ದಾಂಟಿ ಕಾಲ ದೇಶಾಂಡವನೊಡೆದು ಮೀಂಟಿ, ಬ್ರಹ್ಮವಂ ತಬ್ಬುವುದನಂತತೆಯ ನೀಂಟಿ! (ಶ್ರೀರಾಮಾಯ. ೬೫-೭೬೭). ೪. ಮೇಲಕ್ಕೇಳುವಂತೆ ಮಾಡು ; ಎಬ್ಬಿಸು : ಹಲಬಾರಿ ಕೇಳಿದೆನು . . . ನಿನ್ನ ದನಿಯು ಬಳಿಲಿ ನಿದ್ರಿಸುತಿರುವ ನೆನವುಗಳ ಮೀಂಟುತ್ತೆ ಕಳವಳದ ಕನಸುಗಳ ಹರಿಸುತಿಹುದ (ಪಕ್ಷಿಗೀ. ೨೨-೦೨). ೫. ನೆಗೆ ; ಹಾರು ; ಚಿಮ್ಮು : ಉಪ್ಪರಿಸುತ್ತುಱ ಮೀಂಟಿ ದಾಂಟಿ ಕಂಟಳಿಸಿ ಪೊದಳ್ದು ಪಾಯ್ದು ಪರಿಯುಟ್ಟುದು ವಾಯುರಥಮಂ ಹಯದ್ವಯಂ (ರಾಜಶೇ. ೦೩-೯೦). ೬. ಹೆಚ್ಚಾಗು ; ಅಧಿಕವಾಗು ; ಅತಿಶಯವಾಗು : ಮೀಂಟುವಗ್ಗದ ಶೋಕದಿಂದಿರದೆ ಪೊಱಮಟ್ಟು . . . ಅಂಬಿಕಾಭವನಮಂ ಸಾರ್ದಂ (ಕೃಪಾಭ್ಯು. ೩೦-೫೯) ; ಮೊತ್ತಮೊದಲ ಗೆಡೆಯ ಗೆಣೆಯ ಪೊಸಕೂಟದ ಕೂರ್ಪರ ಮೀಂಟಿದ ಸಂತಸದರ್ಶನ ಪೆರ್ಚುಗೆಯೊಂದು ಲೀಲೆಯ ಮಾಟ್ಕೆಯಿನಡಿಗಡಿಗೆ ತಂತವಗೆ ಬೆರೆವೊಡನಾಟದ ತೆರೆಗೈಯ ತಟ್ಕೆಯಿಂ (ರಾಜಾಶ್ವ. ೬೦-೦೦). **ಮೀಟು$_1$** : ೧. ವ್ಯಂರಾಯರ ವಂಶಬೀಜವನು ಬಿತ್ತುವರೆ ನೇತ್ರಾವಳಿಯ ಮೀಟಿತ್ತಿ ಕಾರಾಗಾರದೊಳಗೆ ಕಳತ್ರಸಹಿತನಶನದಂಧಿಕವ್ರತವ ಮಾಡೆಂದ (ಕುಮಾವ್ಯಾ. ೯-೨೭) ; ದಾಟುವೆನು ಕಡಲೇಳನವನಿಯ ಮೀಟಿ ಸಪ್ತರಸಾತಳದ ತುದಿಗೋಟೆಗಿಳೆವೆನು (ಕೊರಟಾ. ೪-೦೨-೩೦) ; ಕಣ್ಣಪ್ಪನು . . . ಅಂಬಿನಿಂದ ತನ್ನ ಒಂದು ಕಣ್ಣುಗುಡ್ಡೆಯನ್ನು ಮೀಟಿ ತೆಗೆದು ನೀರು ಹರಿಯುತ್ತಿದ್ದ ದೇವರ ಕಣ್ಣಿಗೆ ಹತ್ತಿಸಿದನು (ಶಿಕಾಶಾಂ. XV. ೨೪). ೨. ಹರಗಿರಿಯ ಮೀಟಿತ್ತಿದುಬ್ಬಟೆ [ಪಾಠಾಂ. ನೊಡೆಯುತ್ತಿದುಬ್ಬಟೆ]ಯುರಸಲಾ ದಶವದನನು (ಕುಮಾವ್ಯಾ. ೯-೩೦). ೭. ಮುಂದಕ್ಕೆ ಚಾಚು ; ಮುಂದೂಡು : ರಾಣಿಯ ಅವ್ವೆಯಾದ ವೀರವ್ವೆ ದೀಪ ಮೀಟಿ ಹೋಗುತ್ತಾಳೆ (ಸಂಸಕ. ೦೨೫) ; ಪ್ರತಿಯೊಂದು ಸಲ ಮೀಟುವಾಗಲೂ ಹುಡುಗಿಯರು ಬಂದು ನಡಿಹಾಡನ್ನು ಹೇಳುತ್ತಾ ಭರ್ ಎಂದು ಪಣಿಯನ್ನು ತೂರುತ್ತಿದ್ದರು (ಶ್ರೀಶರ್ವ. ೦೦೯). ೮. ಅಲುಗಿಸು ; ಮಿಟುಕಿಸು : ನೋಡಿ ನೋಡಿ ಎನ್ನ ಮುಖವ ನೋಡಿ ಕಣ್ಣು ಮೀಟುವರವ್ವ (ಪುರಂದ. ೨-೦೯ ಅನುಕಲ್ಪ) ; ಧೈರ್ಯೋತ್ಸಾಹವನ್ನು ತಾಳಿ, ತನ್ನ ಕಣ್ಣನ್ನು ಮೀಟುತ್ತಿರುವಷ್ಟರಲ್ಲಿಯೇ (ಕಗದ್ಯ. ೦೦೩). ೯. ಉಕ್ಕು ; ಹೊಮ್ಮು : ಧರೆದೂಟಲಂಬುಧಿ ಮೀಟಲಹಿಪತಿ ಕೂರ್ಮರಗ್ಗಳಿಕೆ ಪಾಟಿಗೆಡೆ ತೋಱಿಸಿದರೀ ಪರಿಪಾಟಿಯಲಿ . . . ಗಣನೆಯಿಲ್ಲದ ರಾವುಸೈನಿಕವ (ಕೊರಟಾ. ೪-೭-೨೫). ೧೦. ಮೀರು ; ಅತಿಕ್ರಮಿಸು : ರೂಪರೂಪಗಳನು ದಾಟಿ ನಾಮಕೋಟಿಗಳನು ಮೀಟಿ, ಎದೆಯ ಬರಿಯ ಭಾವದಿಂಟಿ (ಅರಳಿ. ೬೦-೪). ೧೧. ಯಾವುದಾದರೂ ತಂತೀವಾದ್ಯವನ್ನು ಬೆರಳಿನಿಂದ ಮಿಡಿ, – ನುಡಿಸು : ಕೋಣನಿದಿರಿಗೆ ಕಿನ್ನರಿಯ ಮೀಟಿದಂತೆ (ಪುರಂದ. ೦-೨೦೫-೫) ; ಈಗ ಒಂದು ತಂಬೂರಿಯ ತಂತಿಯನ್ನು ಮೀಟಿದರೆ ಅದರ ಮೇಲೆ ಅಲೆಗಳು ಓಡುವುದು ಕಾಣುವುದರ ಬದಲು ತಂತಿಯು ಕೆಳಕ್ಕೂ ಮೇಲಕ್ಕೂ ಬಾಗುತ್ತಾ ಸ್ಪಂದಿಸುತ್ತಿರುವುದು ಮಾತ್ರ ಕಾಣುವುದು (ಭೌತಶಾ. ೦೩೭) ; ನಿನ್ನ ಕೃತಿಯು ಸ್ಮೃತಿ ಶಾಂತಿಶ್ರುತಿಯ ತಂತಿಯನು ಮೀಟುತಿಹುದು (ಅರಳಿ. ೩೯೨-೯).

ಮೀಂಟಿಡು, ಮೀಟಿಡು = ಮೆಟ್ಟು ; ತುಳಿ : ಹಿಡಿದು ಜಡಿದೆಳನವಿಲನುಂ ಮೀಂಟಿಡು (ಶಂಬರಾ. ೦೯-೩) ; ಅನದ್ರಿಕೂಟ ಸಮದಿಭರಥಪದಾತಿಯಿಂ ದೊಡವೆರೆದು ಮೀಟಿಡಲ್ಪಪ್ಪ ದಾನವರ ರಾಘವನೋರ್ವನಂ ಕಳುಪೆ ಮುನಿವರ್ಯನೆ (ಶಂಕರಾ. ೦-೦೦-೪). **ಮೀಟಾಡಿಸು** = ಮೇಲಕ್ಕೆತ್ತಿ ಅಲುಗಾಡಿಸು : ಮೀಟಾಡಿಸಿತು ಭೂಮಿಯಂ ಮೇರು ಶೈಲಮಂ ದೂಟಾಡಿಸಿತು . . . ಹನುಮನಬ್ಬರಣೆ (ಕೃಪಾಭ್ಯು. ೦೩-೪೩).

[ದೇ.೫ ತಮಿ. ಮಿಣ್ಡು, ಮೀಟ್ಟು ; ಮಲ. ಮಿಡನ್ನು, ಮೀಟ್ಟು ; ತುಳು. ಮೀಂಟು, ಮೀಟು ; ತೆಲು. ಮೀಟು ]

**ಮೀಂಟು$_2$, ಮೀಟು$_2$** (ನಾ). ೧. ಎಬ್ಬಿ ಹೊರಗೆ ತೆಗೆಯುವುದು; ಕೀಳುವುದು : "ಉತ್ಕರ್ಷದ್ರವ್ಯದೊಳ್ ನೆಱೆ ಕೀಟ್ಬುದಱಿೞಳಕ್ಕು ಮೀಂಟೆಂಬ ಶಬ್ದ" (ಶಬ್ದಮ. ೯೦). ೨. ಆಧಿಕ್ಯ ; ಹೆಚ್ಚಳ ; ಅತಿಶಯ : "ಉಬ್ಬರಂ . . . ಮೀಂಟು, ಒಟ್ಟಜೆ, ಪೆರ್ಚುಗೆ — ಈ ೧೯ ಅತಿಶಯಂ" (ಕಶಾ. ೫೭-೨೩೪) ; ಮೇಂಟೆ, ಮೀಂಟು (ಕಮರ. ೩೭ ಕೃಯೋ). ೩. ಶ್ರೇಷ್ಠವಾದುದು ; ಉತ್ತಮವಾದುದು : ಕೋಟಿಯಂ ಪೇಳ್ದೀಳುಕೋಟಿ ಮಂತ್ರಂಗಳ್ಗೆ ಮೀಂಟೆನಿಸಿ ಮೆಱೆವ ಮಾಂಗಲ್ಯ- ಚಂದ್ರಜೂಟಮಂತ್ರಕ್ಕಿಲ್ಲ ಸಾಟಿ (ಮರೇಪು. ೯-೨೬). ೪. ಒಂದು ಬಗೆಯ ಆಭರಣ : ಚಂದದಿಂದಲಿ ಮೀಂಟು ಕಿರುಬಲ್ಲಿ ಎಲ್ಲವು ಮಂದಗಮನೆಗೆ ಒಪ್ಪಿದವು (ಚಂದ್ರಶಾ. ೯-೦೭). **ಮೀಟು$_2$** : ೨. "ಮೀಟೆನಲ್ಕಧಿಕದೊಳ್ ಪೞಂಚುಗಂ" (ಕಹಾಶ. ೦೯) ; ಊಟದೊಳಗೆ ಮಾತುದೊಳಗೆ ಮಲ್ಲರ ಹೋರಾಟದೊಳಗೆ ನಾನವನ ಮೀಟಿನ ಕೊಬ್ಬು ಮುಱಿವೆ [ಪಾಠಾಂ. ಆಟವ ನಡಗಿಸಿ ತೋಱುವೆ] (ಕುಣಸಾಂ. ೩೭-೨೬). ೩. ಮೀಟೆನಿಸುವಿರವಂತಿಗೆಯು ಲತಾಂತದೊಳುರುಕ್ಕು (ಉಧೃಟ. ೦೦-೦೨೦); ಪಟ್ಟಣದ ಕಾವಲ ಭಟರು ಮೀಟೆನಿಪ್ಪಾ ಪುರಕೆ ಬಂದ ಬಸವೇಶ್ವರನ ಚರಣಾಂಬುಜಕ್ಕೆ ಶರಣು (ಬಸಂ. ೩೦-೦೭) : ಮೀಟೆನಿವ ನವರತ್ನಭೂಷಣದಾಟದಬಲೆ ಲತಾಂಗಿ ಮೆಱೆವಳು ಪಟ್ಟೆವಸನದಲಿ (ಶಕಾಶ. ೦೦-೦-೨೯). ೫. ಮಿಗಿಲು ; ಮೇಲು : ವನಿತೆಯರನಾ ದೇಶದಲಿ ಮೀಟೆನಿಪರನು ಮೃಗಪಕ್ಷಿ ಕೃಷ್ಣಾಜಿನವನಂತವನಿತ್ತು ಸತ್ಕರಿಸಿದರು ಫಲುಗುಣನ (ಕುವ್ಯಾಸ. ೩-೭೦) : ಸಕಲಭೂವಲಯಕೆ ಮೀಟೆನಿಸುವಾತನೀ ಪೊಳಲಾಣ್ಮನೊರ್ವನೆ ಸಘಾಟಿಕೆಯೊಳು (ಕೃಷಿಶಾ. ೦೭-೯). ೬. ತಂತೀವಾದ್ಯವನ್ನು ಬೆರಳಿನಿಂದ ಮಿಡಿಯುವಿಕೆ, ನುಡಿಸುವಿಕೆ : ಸಾಣ ವರಕು ಮೀಟುಗಳಿಂ ಹದಗೊಳಿಸಿ (ಶಿವೇಕ. ೨೩೭) ; ತಂಬೂರಿಯ ನಾದವನ್ನು ನಿಲ್ಲಿಸದೆ ಮೀಟಿನಿಂದ ಮುಂದುವರಿಸುತ್ತಿದ್ದುದು ಸಭೆಯಲ್ಲಿನ ನಾದದ ವಾತಾವರಣವನ್ನು ಹಾಗೆಯೇ ಉಳಿಸುತ್ತಿತ್ತು (ಸಂಗೀತ. ೦೦). ೭. ಅಂದ; ಸೊಗಸು ; ಸೊಬಗು : 'ಮೀಟುವಡೆ', 'ಮೀಟುವೆಣ್ಣು' ಪರಾ.

**ಮೀಂಟಾಗು, ಮೀಟಾಗು** = ೧. ಉತ್ತಮವಾಗು ; ಶ್ರೇಷ್ಠವಾಗು : ಎಂಟುಪುರುಷರು ಮೂಱೆಂಟುಸ್ತ್ರೀಯರು ಸಹ ಮೀಂಟಾದರಾಗ . . . ಪಾಡಿದರುಪ್ಪವಡಕೆ (ಕೃಕಪೆ. ೨-೦೯೩) ; ತದೀಯ ಜನಂಗಳುತ್ತುಮದು ಸುದತಿಯರನಾ ಮಂಡಲಕೆ ಮೀಟಾದ ವಸ್ತುಗಳ (ಕುವ್ಯಾಸ. ೩-೩೨) : ಮೀಟಾದ ರಮ್ಯರತ್ನಗಳಡಸಿದ ಕೂರ್ಮಪೀಠದೆ ಕುಳಿತು ನಿಟ್ಟಿಸಲು (ವೋಹಕ. ೨೦-೪). ೨. ಮಿಗಿಲಾಗು ; ಮೇಲಾಗು : ಕೋಟಿ ರವಿಶಶಿಗಳಿಗೆ ಮೀಟಾದ ಪ್ರಭೆ ಬಂದು ನಾಟಿತ್ತು ಎನ್ನ ಮನದೊಳಗೆ (ಯೋಗಾಂಬ. ೨೦೯-೦೬); ಕೂಟದರಸರ ಮಣಿಕಿರೀಟಸಾಮಗ್ರಿಯ ಕೋಟಾನು ಕೋಟಿಗಳ ಮಾಟದಾ ಪ್ರಭೆಗಳಿಂ ಮೀಟಪ್ಪ ಭೇದದಾ ನೋಟದಬಲೆಯರ ಹೃತ್ಕೋಟರದ ಸಂತೋಷದ ಆಟದಿಂ (ಶಾಶಂ. ೬-೭). ೩. ಚೆನ್ನಾಗು ; ಅಂದವಾಗು : ಹಾಟಕಾಸ್ಯುತನಿಗನುಸಯದಿಂದ ಬೋಧಿಸುತ ಮೀಟಾದ ಹೊಮ್ಮರಿಯ ಮಾಡಿ ಕಳುಪುತ (ಪಂಕಾರಾ. ೭-೭೭-೦೯). **ಮೀಟಾಗಿ** = ಚೆನ್ನಾಗಿ ; ಸೊಗಸಾಗಿ : ಹೂಟಕದ ಮಣಿಶಿರವಸನಲ್ಲಾಡ ಮೀಸೆಯಂ ಮೀಟಾಗಿ ತಿದ್ದಿ . . . ಉತ್ತರಂ ನುಡಿದನು (ಕುರಂಗ. ೩೭-೨೬). [< ಮೀಂಟು$_1$]

**ಮೀಂಟುಂಜವ್ವನ**, ಮೀಟುಜವ್ವನ, ಮೀಟುಂಜವ್ವನ, ಮೀಟುಜವ್ವನ (ನಾ). ಉಕ್ಕುವ ಪ್ರಾಯ ; ತುಂಬುತಾರುಣ್ಯ : 'ಮೀಂಟುಂಜವ್ವನಿಗ' ಪರಾ. **ಮೀಂಟುಜವ್ವನ** : ನಿಜಕಾಂತನಾಟವುಂ ಕೂಟವುಂ ಮೀಂ[ಪಾಠಾಂ. ಮಿಂ]ಟುಜವ್ವನದ ಬೇಟಗಾರ್ತಿ ಕೂರ್ತು ಬಗೆದು ಬಯಸಿ ಬಗೆಯೊಳ್ಪುವಿಸುತಿರ್ದಳ್ (ರಾಶೆ. ೭-೯೨ ಪ) ; ಕೋವಳಿಗೆ ಮೀಂಟುಜವ್ವನಂ, ತಾವರೆಗೆ ಏಱುಂಜವ್ವನವೊದವಿತ್ತು (ರಾಮಾಶ್ವ. ೦೦೯-೨೦). **ಮೀಟುಂಜವ್ವನ** : ಮೀಟುಂಜವ್ವನದ ಶಬರಿಯರ್ ನಡೆತಂದರ್ (ಉಧೃಟ. ೨-೭೨). **ಮೀಟುಜವ್ವನ**: ಮೀಟುಜವ್ವನದ ಸೊಬಗಿಯಂ ನೆಱೆ ಕಂಡು ದಾಟದವರಾರ್ (ಸರ್ವಜ್ಞ. ೦೩೩೬). [ಮೀಂಟು$_1$ + ಜವ್ವನ]

**ಮೀಂಟುಂಜವ್ವನಿಗ** (ನಾ). ಉಕ್ಕುವ ಪ್ರಾಯದ ತರುಣ ; ತುಂಬು ಹರೆಯದ ಯುವಕ : ಬಲ್ವಿಡಿದಂ ಮೀಂಟುಂಜವ್ವನಿಗನಾ ನುಡಿಗಳಂ ಮನದೊಳ್ (ಉಧೃ. ೦೦-೯೯). [ಮೀಂಟುಂಜವ್ವನ + –ಇಗ]

**ಮೀಂಟುಗೈ** (ಕ್ರಿ). ಉತ್ತಮವಾಗಿ ನೆರವೇರಿಸು : ತರುಬಿದ ಭಿಲ್ಲರುಸದೆದು ರಾಯರ ಕಜ್ಜವನ್ನೆದೆ ಮೀಂಟುಗೈದುರುತರಮಪ್ಪ ಬಾಹುಬಲಮಂ ಮೆರೆದಂ ಧುರಧೀರ ಚೌಡಪಂ (ಕಕಕ್ಕ. ೦-೬೩).

[ಮೀಂಟು$_1$ + ಗೈ (< ಕಯ್$_1$)]

**ಮೀಂಟುಜವ್ವನ** 'ಮೀಂಟುಂಜವ್ವನ' ನೋ.

**ಮೀಂಟುವರಿ**, ಮೀಟುವರಿ (ಕ್ರಿ). ೧. ಹೆಚ್ಚಾಗಿ ಪ್ರವಹಿಸು ; ಉಕ್ಕಿಹರಿ : ಸೇವಂತಿಗೆಯ ತೋಂಟದೊಳ್ ಮೀಂಟುವರಿವ ಪರಿಮಳದ ಪನ್ನೀರ ಪಳ್ಳಮಂ ದಾಂಟಲಾಱದ ಬಾಲಮರಾಳಂಗಳಂ (೧೦೪. ೨-೭೦ ಪ). **ಮೀಟುವರಿ** : ೨. ಮೇಲಕ್ಕೆ ಏರು ; ಮೇಲೇರು : ಮೀಟುವರಿದು ಚಂದ್ರ ಸೂರ್ಯರನಿರದೆ ನಿರ್ದಾಟಿಪ ನಾಲ್ಕತ್ತೆಂಟುಕೋಟಿ ಪತಾಕೆಗಳಾ ಸೇನೆಯೊಳು ಸಘಾಟಿಯಿಂದೆತ್ತಿ ನಡೆದುದು (ಶ್ರೀಶಾಂ. ೦೩-೦೬೯). [ಮೀಂಟು$_1$ + ಪರಿ$_2$]

**ಮೀಂಟೆ** 'ಮಿಂಟೆ' ನೋ.

**ಮೀಂಬಟ್ಟೆ** 'ಮೀನ್ವಟ್ಟೆ' ನೋ.

**ಮೀಂಬಳಯಿಗೆ** 'ಮೀಂಬಟಿಯಿಗೆ' ನೋ.

**ಮೀಂಬಳವಿಗೆ** 'ಮೀಂಬಟಿಯಿಗೆ' ನೋ.

**ಮೀಂಬಳವಿಗೆಯ** 'ಮೀಂಬಟಿಯಿಗೆಯ' ನೋ.

**ಮೀಂಬಟಿಯಿಗೆ**, ಮೀಂಬಳಯಿಗೆ, ಮೀಂಬಳವಿಗೆ, ಮೀಂಬಟವಿಗೆ (ನಾ). ಮೀನಿನ ಗುರುತುಳ್ಳ ಬಾವುಟ ; ಮೀನಿನ ಚಿಹ್ನೆಯ ಧ್ವಜ: 'ಮೀಂಬಟಿಯಿಗೆಯ' ಪರಾ. **ಮೀಂಬಳಯಿಗೆ** : ಮೀಂಬಳಯಿ[ಪಾಠಾಂ. ವಿ]ಗೆಯಂ ಚೆಂಬೊನ್ನ ಕುಂಭಮಂ ಸಂಭ್ರಮದಿನರ್ಚಿಸಿದ ಮಿಚಕಿಲ ಮುಕುಳಮಾಲೆಯಂತೆ ಕುಚತಟದೊಳ್ ಕಂಠಮಾಲೆ ಲೀಲೆವಡೆಯೆ (ರಾಶೇ. ೫-೧೯ ಪ) ; ಅರಗಿಳಿಗಳೆಂಬ ವಾರುವಂಗಳಂ ಪೂಡಿರ್ದ ಮೆರವ ಮೀಂಬಳಯಿಗೆಯ ತಂಗಾಳಿಯೆಂಬ ಖೇಚರರಥವನೇರಿ] . . . ದಾಳಿಟ್ಟನು (ಶಿಃಶಾ. ೭-೨೭). **ಮೀಂಬಳವಿಗೆ** : 'ಮೀಂಬಳವಿಗೆಯ' ಪರಾ. **ಮೀಂಬಟವಿಗೆ** : 'ಮೀಂಬಟವಿಗೆಯ' ಪರಾ.

[ಮೀಂ$_2$ (< ಮೀನ್$_2$) + ಪಟಯಿಗೆ]

**ಮೀಂಬಟಿಯಿಗೆಯ**, ಮೀಂಬಳವಿಗೆಯ, ಮೀಂಬಟವಿಗೆಯ (ನಾ). ಮೀನಿನ ಗುರುತಿನ ಧ್ವಜವನ್ನು ಹೊಂದಿದವನು; ಮೀನಿನ ಚಿಹ್ನೆಯ ಬಾವುಟವನ್ನುಳ್ಳವನು ; ಮನ್ಮಥ : "ಅಂಗೋಲ್ವಿಲ್ಲಂ . . . ಮೀಂಬಟಯಿಗೆಯಂ . . . ಗಿಳಿದೇರಂ – ಇವು ೧೩ ಕಾಮದೇವಂಗೆ ಪೆಸರ್" (ಕಶಾ. ೯೭-೦೩) : ಅಂದು ಮೀಂಬಟಯಿಗೆಯಂ ಚೋಗದ ಚೋಹದ ಸ್ವಾಂತನನಿದಿರ್ಚುವ ಪದದೊಳ್ . . . ಕೂಡಿಟ್ಟ ಕೋಲ ಮಡಿಗೆಯ ಸೂಜಾಱುವಗೆಯ ಪೂಗಳಿಂಬಾಗೆ (ರಾಮಾಶ್ವ. ೦೦೨-೨೩). **ಮೀಂಬಳವಿಗೆಯ**: "ಉಪೇಂದ್ರಾತ್ಮಜಂಗೆ . . . ಮೀಂಬಳವಿಗೆಯ . . . ಪೆಸರದು" (ಕಜ. ೯೦); **ಮೀಂಬಟವಿಗೆಯ** : "ಪೆಱೆಗೊಡೆಯಂ . . . ಮೀಂಬಟವಿಗೆಯಂ . . . ಅಲರ್ವಿಲ್ಲನೆಂದು ಕಾಮಂ" (ಕಶಾ. ೨೬).

[ಮೀಂಬಟಯಿಗೆ + – ಅ$_7$]

**ಮೀಂಬಟವಿಗೆ** 'ಮೀಂಬಟಿಯಿಗೆ' ನೋ.

**ಮೀಂಬಟವಿಗೆಯ** 'ಮೀಂಬಟಿಯಿಗೆಯ' ನೋ.

**ಮೀಂಬುಲಿಗ** 'ಮೀನ್ಬುಲಿಗ' ನೋ.

**ಮೀಂಬುಲಿತಿ** (ನಾ). ಮೀನು ಹಿಡಿಯುವವಳು ; ಬೆಸ್ತರವಳು : ಮತ್ಸ್ಯನೆಂಬ ಮೀಂಬುಲಿಗಂಗಂ ಮಂಡೂಕಿನಿಯೆಂಬ ಮೀಂಬುಲಿತಿಗಂ ಪೂತಿಗಂಧಿ ತುಂಬುಗೆಯೆಂಬ ಮಗಳಾಗಿ ಜನಿಯಿಸಿ (ಜಗನ್ನಾ. ೦೬-೯ ವ).
[☞ ಇದು 'ಮೀಂಗುಲಿತಿ' ಎಂದಿರಬಹುದೆ?]

**ಮೀಂಬುಳು** 'ಮೀಂಬುಟು' ನೋ.

**ಮೀಂಬುಟು**, ಮೀಂಬುಳು, ಮೀನಂಬುಟು, ಮೀನುಂಬುಟು (ನಾ). ತನ್ನ ದೇಹದಿಂದ ಬೆಳಕನ್ನು ಹೊಮ್ಮಿಸುವ ಒಂದು ಬಗೆಯ ಹುಳು ; ಮಿಂಚುಹುಳು : ಎವ್ಮನ್ನರಪ್ಪ ಸರಕೀಟಕಂಗಳ ತೇಜ ಮಾದಿತ್ಯನ ತೇಜದ ಪೊರೆಯು ಮೀಂಬುಟುವಿನ ತೇಜದಂತಕ್ಕುಂ (ಅರ್ಥಶೀ. ೬-೨೨ ವ) ; ಅಂಬುಜಸಖನಿರ್ದಂತಿರೆ ಮೀಂಬುಟು ಖದ್ಯೋತಮೆನಿಪ ಪೋಲ್ ಮಂತ್ರಿಮೆಸರ್ ನೀಂ ಬಹುನಯವಿದನಿರೆ ಬೇಳಂಬಮಿದಮ್ಮಂದಿಗರ್ಗೆ ವಸುಧಾಧಿಪತೀ (ಪಾರ್ಶ್ವಪು. ೨-೩೬) ; ಮೀಂಬುಟುವಂ ನಡು ಬತ್ತಿದ ಕೆಱೆಯುಂ . . . ಕನಸಿನೊಳ್ ನಿಶಾಂತಂ ಕಂಡಂ (ಪುಣ್ಯಾಸ್ರ. ೯-೦೨). **ಮೀಂಬುಳು** : ಸುಱೆಮುಲ್ಲಾಗದೆ ಮುಂನೆ ಸೂರ್ಯ್ಯನುದಯಂ ಗೆಯ್ವನ್ನಮನ್ನಿನ್ನ ಮೀಂಬುಳ್ಗಳ್ (ಎಕ. VI, ಕಂಲಿ. ೯೩-೬೩ ; ೧೧೯೬); ಸೇರಿಸಿ ಮುತ್ತಿ ಮಾಣಿಕದೊಟ್ಟು ಕರಿಯುಳು ಸಾರಿ ಕಂಡಳು ರವಿಗಳೂಕ ತಾರಗೆ ಮೀಂಬುಳು ಸಹವಾಗಿ ಮಱೆಹೊಕ್ಕ ಕಾರಿರುಳಂಗನೆ ಯಂತೆ (ಶಂಕ. ೩-೯೬) ; ಆ ನೃಪನ ಸುಪ್ರತಾಪನವೀನಾರ್ಕಪ್ರಭೆಯ ಮುಂದೆ ಮೀಂಬುಳುವಿನವೋಲ್ಬಾನುವೆಸದಿರ್ಕುಮಲ್ಲದೆ ಒಡೇಸದು ಖದ್ಯೋತ ಮೆಂಬ ಪೆಸರಾಂತವುದೇ (ವೃತ್ತ. ೨೯-೯೩). **ಮೀನಂಬುಟು**: ಮೀನಂಬುಟು ವುಮಂ ನೀರಿಲ್ಲದ ಕೆಱೆಯ ನಡುವುಮಂ ಪೊಗೆ ಪೆರ್ಚಿ ನೆಗೆದ ಕಾಟ್ಕಿಚ್ಚುಮಂ . . . ಕಂಡೆನೆಂದಂಜಿ (ಕಮ್ಯಾ. ೬೩-೨೬); ಮುಂಬಿಟ್ಟು ಪರೆದ ಕಟ್ಟಲೆಯುಂ ಬೆದಱೆ ತರಳ್ದು ಬೆಳಪ ಬೆಳಗಿಂದೆಸೆದಿರ್ಪಂಬುಜಸಖ ನಂತಿರೆ ಮೀನಂಬುಟು ಬೆಳಗಿದಪುದಖಿಳಗಗನಾಂತರಮಂ (ಕಾವ್ಯಾವ. ೬೬೨) ; ಮೀನಂಬುಟು[ಪಾಠಾಂ. ಳ್]ಬಾನಂಗುಳಗೆ (ಕಮುದ. ೭೬೨ ಶ್ರಯೋ);"ಬಕಪಕ್ಷಿ" (ಕಮುದ. ಶ. ೦೬೩ ಅಡಿ). **ಮೀನುಂಬುಟು** : ತಾನಟ್ಟಿವಟ್ಟು ಬೇಡುವ ದಾನಗಜಂಬೆರಸು ಬಂದು ಕಂಡಪೆವಾಪೆಂದಾ ನಡೆದು ಬರುತ್ತಿರ್ದರೆ ಮೀನುಂಬುಟು ಬರ್ಪ ತೆಱದೆ ದಿನಪತಿಗಿದಿರಂ (ಅಜಿತಪು. ೦೩-೭೬).
[ಮೀಂ$_1$ (< ಮೀನ್$_1$) + ಪುಟು]

**ಮೀಂಬೊಣರ್** (ನಾ). ಮೀನಿನ ಜೋಡಿ, _ ಜೊತೆ : ಆಂ ಬರ್ಪನ್ನೆಗ ಮಿರದೆನ್ನಂ ಬರವೇಟ್ಟಿಟ್ಟದೆನ್ನ ಕಣ್ಬೊಣರೆಂಬೀ ಮೀಂಬೊಣರಂ ಲಾವಣ್ಯ ರಸಾಂಬುಧಿಯೊಳ್ದೇವಿ ಮಾಡಿ ಹುಟ್ಟಾಡಿಸುವ್ಯೆ (ಮಲ್ಲಿಪು. ೯-೬೯) ; ಮೀಂದೊಣರ್ ತೋರಮುತ್ತುಗಳಂ ಕಾಱುವ ಮಾಟ್ಕೆಯಿಂ ತರಳ ನೇತ್ರದ್ವಂದ್ವದಿಂ ಬಾಷ್ಪಬಿಂದುಗಳಂ ಸೂಸಿ ಲತಾಂಗಿ ಭಂಗಿವಡೆದಿರ್ದಳ್ (ಶಿಗಿ. ೦೦-೦೦) ; ಇನಿಯನ ಕಡುಗಾಡಿ ಮನೋಜನ ಬೆನ್ನಟ್ಟಿದೊಡೆ ಬಿಸುಟ ಪೞಯಿಗೆಯೆನೆ ಕೋಳ್ಹೊನಲೊಳಗೆ ಪೊಳವ ಮೀಂಬೊಣರನಲಂಪಿಂ ಮೀನಲೋಲಲೋಚನೆ ಕಂಡಳ್ (ಅಜಿತಪು. ೯-೦೦೬).
[ಮೀಂ$_2$ (<ಮೀನ್$_2$) + ಪೊಣರ್$_2$]

**ಮೀಂಬೊಲಸು** (ನಾ). ಮೀನಿನ ಮಾಂಸ : ಮೀಂಬೊಲಸು ನಾರ್ಪ ಮೆಯ್ಗಂ . . . ಬಿಡದೆ ಕಾಗೆಯುಂ ಪರ್ದುಂ ಬಳಸುವವು (ಸುಕುಮಾ. ೯-೩೯) ; ಆ ಕುಮಾರಿಯ ಮೆಯ್ಯೊಳೊಗೆದ ಮೀಂಬೊಲಸಿನ ವಾಸನೆಗೆ ಸಮಸ್ತ ಪರಿಜನ ಪುರಜನಂಗಳ್ ಪೇಸುವುದಂ ಕಂಡು (ಜಗನ್ನಾಥ ೩-೦೦೩ವ).
[ಮೀಂ$_2$ (<ಮೀನ್$_2$) + ಪೊಲಸು$_2$]

**ಮೀಂಬೊಳಪು** (ನಾ). ಮೀನಿನ ಕಾಂತಿ : ಅಕ್ಷಿಕಾಂತಿ ಮೀಂಬೊಳಪೆಸೆ ಮೇರೆದಪ್ಪಿದ ರತಾಮೃತವಾರ್ಧಿಯನೀಸಿ ಮಾಡುತುಂ ಮುಳುಗುತುಮಿ ರ್ಪರ್ (ಶಾಂತೀಶ. ೬-೦೨೦). [ಮೀಂ$_2$ (<ಮೀನ್$_2$) + ಪೊಳಪು]

**ಮೀಟರ್** 'ಮೀಟರು$_1$' ನೋ.

**ಮೀಟರು$_1$**, ಮೀಟರ್ (ನಾ). (ವಿದ್ಯುಚ್ಛಕ್ತಿ, ಅನಿಲ, ನೀರು ಮುಂತಾದುವುಗಳ ಬಳಕೆಯ ಪ್ರಮಾಣವನ್ನು) ಅಳೆಯುವ ಸಾಧನ,- ಮಾಪಕ : ಮೋಟಾರು ಹೋಟಲ್ಲಿನ ಬಳಿ ನಿಂತುಕೊಂಡಾಗ ಮೀಟರು ನಾಲ್ಕೂವರೆರೂಪಾಯಿಗಳಾಗಿವೆಯೆಂಬುದನ್ನು ತೋರಿಸಿತ್ತು (ಎಡಹ. ೯೦). **ಮೀಟರ್** : ಮೀಟರ್ ಎಲ್ಲಿದೇರೀ Power disconnect ಮಾಡ್ಬೇಕು (ರಜತಸಂ. ೦೩). [ ← ಇಂ. Meter ]

**ಮೀಟರು$_2$** (ನಾ). ಒಂದು ಉದ್ದದ ಅಳತೆ ; ಒಂದು ಮೀಟರು ಬಟ್ಟೆ ಕೊಡು (ರೂಢಿ). [← ಇಂ. Metre]

**ಮೀಟಿಸು** (ಕ್ರಿ). ೧. ಮಿಟುಕಿಸು : ಕಣ್ಗಳ್ ಮೀಟಿಸುತ್ತಿರಲಿಂದು ಶಿವ ಪ್ರತ್ಯಕ್ಷವಾಗುತ ನಿಂದು ಕಂಗಳ ಒಡಿದು ಗಹಗಹಿಸುತ್ತ ಮುಂದಿರ್ದ (ರೇವಣ. ೯-೩೨). ೨. ಸಿಕ್ಕಿಸು ; ಜೋಡಿಸು (?) : ಪಾಟಲಿಪೂಗಳ ಮೀಟಿಸಿ ಶಿಖೆಯೊಳು ಚಾಟಕತನದಲಿ ಕಾಟಕರತಿ ಭರದಿ (ಹರುಷ. ೮೯).
[ಮೀಟು$_1$ (<ಮೀಂಟು$_1$) + – ಇಸು$_2$]

**ಮೀಟು$_1$** 'ಮೀಂಟು$_1$' ನೋ.

**ಮೀಟು$_2$** 'ಮೀಂಟು$_2$' ನೋ.

**ಮೀಟುಂಜವ್ವನ** 'ಮೀಂಟುಂಜವ್ವನ' ನೋ.

**ಮೀಟುಂಜವ್ವನೆ**, ಮೀಟುಜವ್ವನೆ (ನಾ). ತುಂಬು ಹರೆಯದ ತರುಣಿ ; ಉಕ್ಕುವ ಪ್ರಾಯದವಳು : ಮಿಗವರಿಗಣ್ಣ ಮೀಟುಂಜವ್ವನೆಯರು ಬಗೆಗೊಳುವಂತೆಯ್ದಿದರು (ಶೀಲಸಂ. ೨೩-೨೯೨). **ಮೀಟುಜವ್ವನೆ**: ಉಷಾ ದೇವಿ ಸಂತಸಗೊಂಡು ಮೀಟುಜವ್ವನೆಯರಿಗಂದು ಸೂಚಿಸಲು ಮನ ಗೊಂಬ ವಸ್ತ್ರಭೂಷಣಮಾಲ್ಯಾನುಲೇಪನವ ತಂದರು ಕುಮಾರಿಗೆ (ಕೋಟಿಶ. ೨೩-೦೦) ; ಮಿಱುಪ ಕದಪನಾಂತ ಮೀಟುಜವ್ವನೆಯಳ . . . ಎಂದು ದಿಟ್ಟಿಪೆನೊ (ಕಕಾಂ. ೨೨-೬).
[ ಮೀಟುಂಜವ್ವನ ( < ಮೀಂಟುಂಜವ್ವನ ) + _ಎ$_2$]

**ಮೀಟುಕಾವ್ಯ** (ನಾ). ಉತ್ತಮವಾದ ಕಾವ್ಯ; ಶ್ರೇಷ್ಠವಾದ ಕಾವ್ಯ : ನಾಟಕಾಲಂಕಾರಶಬ್ದವು ಪಾಟಿಸುವ ಚೆಂದಾದಿ ಲಕ್ಷಣ ಮೀಟುಕಾವ್ಯವ ಕೇಳಿ ಪೇಳುವ ಪುಣ್ಯಕಾರಣದ ಧಾಟಿ ಘಟಸದೆ (ಪಾಗಸ. ೦-೯೬).
[ಮೀಟು$_2$ (<ಮೀಂಟು$_2$) + ಕಾವ್ಯ]

**ಮೀಟುಗವಣೆ** (ನಾ). ಚಿಮ್ಮುವ ಕವಣೆಕಲ್ಲು : ಹುಸಿಯೆಂಬ ಮೀಟುಗವ ಣೆಯ ಜಂತ್ರಿಸಿ ಹೊನ್ನು ಹೆಣ್ಣು ಮಣ್ಣೆಂಬ ಅಡಿಗಲ್ಲನೊಡ್ಡಿ ಕೆಡಹಿದನಲಾ ನಿಃಕರುಣಿ ಮುಕ್ಕಣ್ಣ ವ್ಯಾಧನು (ಅಪಸಂ. ೦೩೯-೭೨೬).
[<ಮೀಟು$_1$ (<ಮೀಂಟು$_1$) + ಕವಣೆ$_1$]

**ಮೀಟುಜವ್ವನ** 'ಮೀಂಟುಂಜವ್ವನ' ನೋ.

**ಮೀಟುಜವ್ವನೆ** 'ಮೀಟುಂಜವ್ವನೆ' ನೋ.

**ಮೀಟುಮನ್ನಣೆ** (ನಾ). ಅತಿಶಯವಾದ ಗೌರವ,_ ಮರ್ಯಾದೆ: ಮೀಟುಮನ್ನಣೆಯನಿವರ್ಗೆ ಪಾಲಿಸಿ ತೀರ್ಥಕೂಟಕೆಯ್ದುವವೇಳೆಂದ (ಶರಶ. ೩೬-೦೨). [ಮೀಟು$_2$ (<ಮೀಂಟು$_2$) + ಮನ್ನಣೆ]

**ಮೀಟುವಡೆ** (ಕ್ರಿ). ಅಂದವನ್ನು ಹೊಂದು ; ಸೊಬಗನ್ನು ಪಡೆ ; ರಂಜಿಸು : ಮೀಟುವಡೆದಸೆವ ಸುರಹೊನ್ನೆಯ ಕದಂಬದಿಂ ಪೊಚ್ಚಪೊಸ ಗಂಪಮಿರ್ದ ಚಂದನಕುಜಂಗಳಿಂ (ಅನ್ಯಕ. ೩-೯೩).
[ಮೀಟು$_2$ (<ಮೀಂಟು$_2$) + ಪಡೆ$_1$]

**ಮೀಟುವರಸೆ** (ನಾ). [ಸಂಗೀತ] ತಂತೀವಾದ್ಯವನ್ನು ಮಿಡಿಯುವ ರೀತಿ,— ಕ್ರಮ : ವೀಣೆಯಲ್ಲಿ ತಾನ ನುಡಿಸಲು, ಒಳಮೀಟು . . .

ಕತ್ತರಿಮೀಟು ಮುಂತಾಗಿ ಸಾಂಪ್ರದಾಯಿಕ ಮೀಟುವರಸೆಗಳಿವೆ (ಸಂಗೀತಂ. ೯೯). [ಮೀಟು$_1$ (<ಮೀಂಟು$_1$)+ ವರಸೆ (<ವರಿಸೆ)]

**ಮೀಟುವರಿ** 'ಮೀಂಟುವರಿ' ನೋ.

**ಮೀಟುವೆಣ್ಣು** (ನಾ). ಸುಂದರಳಾದ ಸ್ತ್ರೀ ; ಸೊಗಸುಗಾತಿ : ಅಂತವಿಲ್ಲದೆ ರುಕ್ಮಿಣಿ ಸತ್ಯಭಾಮೆಯುಮೆಂತಪ್ಪ ಮೀಟುವೆಣ್ಣುಗಳ ಕಾಂತಳತಮವೆಂದು ನಿಡುಜಡೆವಿಡಿದು ಶ್ರೀಕಾಂತ ನೀರೊಳಗೆ ನೂಂಕಿದನು (ಜೋಹಕ. ೧೪-೩೬). [ಮೀಟು$_2$ (< ಮೀಂಟು$_2$) + ಪೆಣ್ಣು (<ಪೆಣ್)]

**ಮೀಟುಸಿಂಗರ** (ನಾ). ಉತ್ತಮವಾದ ಶೃಂಗಾರ ; ಉತ್ಕೃಷ್ಟವಾದ ಅಲಂಕಾರ : ಮಾಲ್ಯಾಂಬರವಿಭೂಷಣದ ಮೀಟುಸಿಂಗರದಿಂಪುವಡೆದು ಮಿಗೆ ಬಯಸಿ ಬಡಸಿದ ಸುವಸ್ತುಗಳನಿತ್ತು ಪಾಟಿಸುವ . . . ಯಜ್ಞವಾಟದಕೌತುಕದ ಮಾಳ್ಕೆಯಂ ಕಂಡು ನಲಿದಾಡಿತು ಜನಂ ಮುದದೊಳು (ಕೃಮಿಶಾ. ೩೪-೧೧). [ಮೀಟು$_2$ (<ಮೀಂಟು$_2$)+ಸಿಂಗರ (<ಸಿಂಗಾರ)]

**ಮೀಟುಹುಳ** (ನಾ). ತನ್ನ ದೇಹವನ್ನು ಮೀಟಿಕೊಂಡು ಚಲಿಸುವ ಹುಳು : ಕೋರಿಯ ಹುಳ ಹಾಗು ಮೀಟುಹುಳಗಳು ಪ್ರೌಢಾವಸ್ಥೆಯಲ್ಲಿ ಪತಂಗಗಳಾಗಿ ಹಾರಾಡುವವೆಂದರೆ ಯಾರಿಗೆ ತಾನೆ ಆಶ್ಚರ್ಯವಾಗಲಿಕ್ಕಿಲ್ಲ! (ಕೀಟ. ೬). [ಮೀಟು$_1$ (<ಮೀಂಟು$_1$) + ಹುಳ(<ಪುಳು)]

**ಮೀಢ** (ನಾ). ೧. ಮೂತ್ರ : "ಮೀಢಂ, ಮೂತ್ರಿತಂ–೨ ಬಿಡಲ್ಪಟ್ಟ ಮೂತ್ರದ ಪೆಸರುಗಳು, ಗಂಜಳ ಮುಂತಾದ್ದು" (ಸಿದ್ಧಾಂ. ೩೪೯). ೨. ಟಗರು. [ಸಂ.]

**ಮೀಣ** 'ಮೀಯಣ' ನೋ.

**ಮೀದಿ** 'ಮಿಂದು$_2$' ನೋ.

**ಮೀದುಂಡವಳ್ಳಿ** (ನಾ). ಒಂದು ಹಳ್ಳಿಯ ಹೆಸರು : ಕಿಱಿಗಾಲೂರ್ಪೊಸವಳ್ಳಿ ಮೀದುಂಣವಳ್ಳಿ ಕಾಚಾಪ್ಪಳ್ಳಿ ಕಾತುಳ್ಳಮಳಿಯುಂ (ಮ್ಯಾಕರ. ೦೯೩೦, ೩-೦೮ ; ೩೦೦). [ ? + ಪಳ್ಳಿ$_1$ ]

**ಮೀನ್$_1$, ಮೀಂ$_1$, ಮೀನು$_1$** (ನಾ). ೧. ನಕ್ಷತ್ರ; ತಾರೆ: "ಮೀನ್, ತಾರಗೆ, ಅಱುಲ್— ಈ ೩ ನಕ್ಷತ್ರಕ್ಕೆ ಪೆಸರು" (ಕಶಾ. ೪೯-೪೩) ; ಬಾರಾ ಓ ಬಾನ್ ಮೀನ್ಗಳ ಮೇಟ್ಟೀ . . . ಬಾರಾ, ನಲ್ಲಿರುಳ್ಳುಲಿಗಳೊಡೆಯಾ ! (ಅಂಚಿಗೂ. ೩೦-೦೬೬). ೨. ಹೊಳೆಯುವಿಕೆ; ಪ್ರಕಾಶ : (?). ಮೀಂ$_1$: ೧. ಮೀಂಗಳ ಮುತ್ತನಿಸುವ ಬೆಳ್ದಿಂಗಳ ಪಾಲ್ಗಡಲನಿಟ್ಟಿಸೆ ಮಂಡಲಕ್ಷೋತ್ಸಂಗಶಯನೀಯದೊಳೆ ಕೃಷ್ಣಾಂಗದ್ಯುತಿಯಂತಿರೆಸೆದುದಿಂದುಕಳಂಕಂ (ಜಗನ. ೦೬-೦೦೬); ಜಿನಮತಮಿಲ್ಲದ ಪದದೊಳ್ ಜನಿಯಿಪ ಕುಮತದೊಳೆ ಯುಕ್ತಿ ಪಲಮೇನಾನುಂ ಮನಕೆಸೆವಂತೆಸೆದುವು ಫಲವಿನನಿಲ್ಲದ ಪದದೊಳೊಗೆದ ತಮದೊಳ್ ಮೀಂಗಳ್ (ಕುಶ್ಯಕ. ೦೩-೨೩). ೨. 'ಮೀಂಬುಟು' ಪರಾ. ಮೀನು$_1$ : ೧. "ನಕ್ಷತ್ರ — ಮೀನು" (ಅಶಾಶ. ೦-೩) ; "ಮೀನೆನಲ್ಕೆ ನಕ್ಷತ್ರಮಕ್ಕುಂ" (೪ಕರ. ೯೦).

ಮೀಂಗಳಱಿಯ, ಮೀಂಗಳೆರೆಯ= ನಕ್ಷತ್ರಗಳ ಒಡೆಯ ; ಚಂದ್ರ : "ಜೊನ್ನೊಡಲಂ . . . ಮೀಂಗಳಱಿಯಂ, ನೆಯ್ದಿಲ್ಗೆಳೆಯಂ . . . ತಿಂಗಳ್ ಈ ೨೦ ಚಂದ್ರನ ಪೆಸರ್" (೪ಶಾ. ೪೮-೩೬) ; "ಚಳಿಗದಿರಂ . . . ಮಿಗಲಚ್ಛಣನೆಂದಿಂದುವಿಗಭಿಧಾನಂಗಳ್ ಸಂದೆಯಮಿಂತಿಲ್ಲ ಮೀಂಗಳಱಿಯನುಮೆಂದುಂ" (೪ಶಬ್ದ. ೪೪) ; "ಚಂದ್ರಂಗೆ ಪೆಸರಕ್ಕು ಮೀಂಗಳೆರೆಯನೆನಲ್ಕೆ" (೪ಕರ. ೯೦). ಮೀನ್ಗಳರಸ =ಮೀಂಗಳಱಿಯ: ಅರಿಪದಾಶ್ರಯನಮೃತ ರಂಜಿತು . . . ಮೀನ್ಗಳರಸಂ ನಿರಂತರಮೆಯ್ದೆ ಕುವಲಯಹಿತು (ತಿಪು. ೯-೨೪).

[ದೇ.॥ ತಮಿ. ಮಲ. ಕೋತ. ತೊದ. ಮೀನ್; ಗೊಂಡಿ. ಮೀನ್ಸ್]

**ಮೀನ್$_2$, ಮೀಂ$_2$, ಮೀನು$_2$** (ನಾ). ಒಂದು ಬಗೆಯ ಜಲಚರಜಂತು; ಮತ್ಸ್ಯ : "ವೈಸಾರಿಣಃ, ವಿಸಾರಃ . . . ಪಾಠೀನಃ— ಈ ೧೩ ಮೀನ್" (ಹಶಾಯು. ೦೦೬-೩೦) ; ಮೀನ್ಗಳಂತೆ ಗಾಳದೊಳ್ ತೊಡರ್ದಿರ್ದ ಪಾವರಿಗರಿಂ (ಕಾವ್ಯಸಾ. ೩೨೯ ಕಂದ್ರ೪); ಅಂತ್ಯಸ್ವರಲೋಪಕ್ಕೆ — ಕೀಲ — ಕೀಲ್ . . . ಮೀನ — ಮೀನ್ (ಶಶಬ್ದ. ೨೭೯ ಪ್ರಯೋ). ಮೀಂ$_2$ : ಪೇಚರ ಕನ್ನೆಯರ್ಕಳ ಕಣ್ಗಳೆಂಬ ಮೀಂಗಳ್ ಕುಮಾರನ ರೂಪೆಂಬ ಗಾಳದಿಂ ತೆಗೆಯಪಟ್ಟು (ಶಬ್ದಾಗ. ೩೬-೦೦) ; ವಿಲೋಳಕೇತುತತಿಯಂ ಮೀಂಗೆತ್ತು ಮಾದ್ಯದ್ಗಜಾಳಿಗಳಂ ನಾವೆಯೆಗೆತ್ತು . . . ನೋಡಿದುದು ಬಂದೆತ್ತಂ ಪುರಸ್ತ್ರೀಜನಂ (ಅಜಿತ. ೭-೦೦೬). 'ಮೀಂಬಟಿಯಿಗೆ', 'ಮೀಂಬೊಣರ್' ಪರಾ. ಮೀನು$_2$ : "ಮತ್ಸ್ಯ ಭಗಣಗಳು ಮೀನು" (ಶಬ್ದ.ಮಂ. ೦೦೦); ಸೇನೆ ಕಲಕಿತು ಬತ್ತಿದುದಧಿಯ ಮೀನಿನಂತಿರೆ ಮಱುಗಿದರು ಭಟರು (ಕುಮಾರವ್ಯಾ. ೨-೨) ; ಕರ ತಾವರೆ ಕರುಳ್ವಳ್ಳಿ ತೋಳ್ದೆರೆ ಪಯೋಧರ ಮೀನು . . . ಕಡಿದಲೆ ಕಮಠ ಸಂಗರವಿದ್ದುದಂಬುಧಿಯಂತೆ (ಜೋಹಕ. ೩೩-೨೬) ; ಮೀನುಗಳು ಜಲಚರಗಳು (ಋಜುಂದಾ. ೪-೦೦೪).

**ಮೀನಕಂಡ, ಮೀನಖಂಡ, ಮೀನಗಂಡ** = ಕಣಕಾಲಿನ ಹಿಂಭಾಗದಲ್ಲಿರುವ ಮೀನಿನಾಕಾರದ ಮಾಂಸಖಂಡ : (?) ; ಮೀನಖಂಡ : ಕಣಕಾಲಿನ ಹಿಂಭಾಗ. ಕಾಲ್ಕೀಲದ ಮೀನಖಂಡಭಾಗ" (Kit. ೩೦೪೨) ; ನಮ್ಮ ಕಾಲಿಗೊಂದು ಮುಳ್ಳು ನಾಟಿತೆಂದು ತಿಳಿಯುವ, ಕೂಡಲೇ ಮೆದುಳಿಗೆ ಸುದ್ದಿ ಮುಟ್ಟುವುದು, ಅಲ್ಲಿಂದ ಕಾಲಿನ ಮೀನಖಂಡದ ಸ್ನಾಯುವಿಗೆ ಮುದುರಲು ಅನುಜ್ಞೆಯಾಗಿ ಕಾಲು ಮಡಚುವುದು ಇಲ್ಲವೆ, ಹಿಂದೆ ಸೆಳೆಯಲ್ಪಡುವುದು (ಶಾಂಶ್ರ. I, ೩೪೬) ; ಅದನ್ನು ಬಿಚ್ಚಿ ತೊಳೆಯುವಾಗ ಮೀನಗಂಡದ ಕೆಳಗೆ ಮೊಸಳೆಯ ಬಾಲದ ಹೊಡೆತದಿಂದ ಕೊಚ್ಚಿದಂತೆಯಾದುದು ನನ್ನ ಕಣ್ಣಿಗೆ ಬಿತ್ತು (ಜೀವಾ. ೦೬೩); ಮೀನಗಂಡಗಳೊಳಗಿಂದ ಕಬ್ಬಿಣದ ಮೊಳೆ ಹೊಡೆದಷ್ಟು ನೋಯತೊಡಗಿತು (ಗಂಪಾಯ. ೬೦). ಮೀನ ಗಾಳ = ಮೀನು ಹಿಡಿಯಲು ಬಳಸುವ ಗಾಳ; ಮೀನು ಹಿಡಿಯುವ ಕೊಕ್ಕೆ : "ಬಡಿಶವೆಂಬುದು ಮೀನ ಗಾಳಂ" (ಹಶಾಯು. ೦೨೬-೭೯). ಮೀನಾಗು = ಮೀನಿನ ರೂಪವನ್ನು ತಾಳು; ಮತ್ಸ್ಯಾಕೃತಿಯನ್ನು ಹೊಂದು : ಮೀನಾದನೆ ಸುಡುಮಾದಂ ಮಾನವಕೇಸರಿಯುಮಾಗಿ ಪಂದಿಯುಮಾದಂ (ಕಚುಕ. ೮-೦೩೬) ; ಆರ ಕೈಕೊಂಬುದೀ ಬಿಸಿಲು ವೈಕುಂಠದಿ ನಾರಾಯಣ ನಿಲಲಂಜಿ ನೀರೊಳು ಮಿಡುಕಿ ಮೀನಾದ ಮಿಕ್ಕಿನ ದೇಹಧಾರಕರಿಗೆ ಶಕ್ಯವಹುದೆ (ಜೋಹಕ. ೦೯-೪೮). [ದೇ.॥ ತಮಿ. ಮಲ. ತುಳು. ಕೋತ. ತೊದ. ಗದಬ. ಗೊಂಡಿ. ಮೀನ್; ಕೊಡ. ಪರ್ಜಿ. ಮೀನಿ ; ತೆಲು. ಕುಇ. ಕುವಿ. ಮೀನು ; ಮಾಲ್ತೊ. ಮೀನು./ಸಂ. ಮೀನ]

**ಮೀನ** (ನಾ). ೧. ಮೀನು ; ಮತ್ಸ್ಯ : "ವೈಸಾರಿಣಃ . . . ಮೀನಃ, ಶಕುಲೀ, ಶಲ್ಕೀ, ಸಹಸ್ರದಂಷ್ಟ್ರಃ, ಪಾಠೀನಃ — ಈ ೧೩ ಮೀನ್" (ಹಶಾಯು. ೦೦೪-೩೩) ; ಮೀನಾಬ್ಜ ಶಂಖ ಚಕ್ರ ವಿತಾನಾಂಕಿತ ದಕ್ಷಿಣಾಂಘ್ರಿ ತಲಪಲ್ಲವಮುತ್ತಾನಂ ರತ್ನಾಕರದಪ್ಪೊಲೇನಪ್ಪುದರ್ದೊ ಸಾರ್ವಭೌಮಗಗನೇಚರನಾ (ಜಾಂತಿಪು. ೩-೪೪) ; ಡಾ. ಕಾಲ್ಡ್‌ವೆಲ್‌ರ ಪ್ರಕಾರ ಈ ಕೆಳಗಿನ ಶಬ್ದಗಳು ದ್ರಾವಿಡಭಾಷಾವರ್ಗದಿಂದ ಆರ್ಯವರ್ಗಕ್ಕೆ ಹೋದುವು — ಕುಟಿ . . . ಮೀನ (ಭಾಶಾಚ. ೩೩). ೨. ಜೋಡಿ ; ಜೊತೆ ; ಯುಗ್ಮ : "ಯಮಳಂ ಯುಗಳಂ ಯುಗ್ಮಂ ಯಮ ಮಿಥುನ ಜಿತಮುಂ ಯೀ ೬ ಮೀನಕೆ ಹೆಸರು" (ಶಾಸ್ತ್ರ. ೩೩-೨). ೩. [ಜ್ಯೋತಿ]ಹನ್ನೆರಡು ರಾಶಿಗಳಲ್ಲಿ ಕೊನೆಯದು: ಮೇಷ ವೃಷಭ. . . ಮೀನವೆಂಬ ಹನ್ನೆರಡು ರಾಶಿಗಳುಂ (ಶಿಪೀಠ. ೨೦೦) ; ಒಂದೊಂದು ರಾಶಿಯ ಒಂದೊಂದು ಚಿಹ್ನೆಗೂ ಒಂದೊಂದು ಪ್ರಾಣಿಯ ಹೆಸರು ಕೊಟ್ಟರು. ಮೇಷ (ಕುರಿ) . . . ಮೀನ (ಮೀನು) (ಅಗಾತ. ೮೩). 'ದ್ವಾದಶರಾಶಿ' ಪರಾ. ೨ ಈ ಶಬ್ದವು

ದ್ರಾವಿಡಭಾಷಾವರ್ಗದಿಂದ ಸಂಸ್ಕೃತಕ್ಕೆ ಹೋಗಿರಬಹುದೆಂದು ಕೆಲವರು ವಿದ್ವಾಂಸರ ಅಭಿಪ್ರಾಯವಿದೆ.

**ಮೀನಮೇಷ, ಮೀನಾಮೇಷ** = ೧. [ಜ್ಯೋತಿ] ದ್ವಾದಶರಾಶಿಗಳಲ್ಲಿ ಕೊನೆಯ ಮತ್ತು ಮೊದಲಿನ ಎರಡು ರಾಶಿಗಳ ಹೆಸರು. ೨. (ಆಲಂ) ಅನುಮಾನ ; ಸಂದಿಗ್ಧ ; ತೊಂಚಮಂಚ : ತಾನೆ ಕೊಡುವೆನು ಎನಲು ಸರಿಯಹುದೊ ತಪ್ಪಹುದೊ ಎಂದು ಇವನಿಗೆ ಮೀನಮೇಷ (ಸುಲೇಶ. ೧೨-೪) ; ನೀನೊ ಬಲು ಮೀನಾಮೇಷದ ಮನಸ್ಕನೋ (ಶಿಶುಗು. ೩೦). **ಮೀನಮೇಷ ಎಣಿಸು, ಮೀನಮೇಷವೆಣಿಸು, ಮೀನಾಮೇಷ ಎಣಿಸು** = (ಆಲಂ) ಒಂದು ನಿರ್ಧಾರಕ್ಕೆ ಬರಲಾರದೆ ನಿಧಾನ ಮಾಡು ; ತೊಂಚಮಂಚಮಾಡು : ಸುಮ್ಮನೆ ಮೀನಮೇಷ ಎಣಿಸದೆ ಹೋಗಿಬಿಟ್ಟು ಬಾ (ರಾಗಿಣಿ. ೨೬೬); ದಡದಲ್ಲಿ ಕೂತು ಮೀನಮೇಷವೆಣಿಸುವವನಿಗೆ ರತ್ನಗರ್ಭದ ಮಹತ್ವ ತಿಳಿಯಲು ಹೇಗೆ ಸಾಧ್ಯ ? (ಜೀವಾಕ್ಯ. ೮) ; ಸುಮ್ಮನೆ ಮೀನಾಮೇಷ ಎಣಿಸಿ ಪ್ರಯೋಜನವಿಲ್ಲ ಸಾರ್ (ಗೃಹಂ. ೨೬೦). **ಮೀನಮೇಷ ಮಾಡು** = ಮೀನಮೇಷ ಎಣಿಸು : ಬಾದಶಹರು ಈ ಸಮಯದಲ್ಲಿ ಹೀಗೆ ಮೀನಮೇಷ ಮಾಡುತ್ತಿರುವುದು ಸರಿಯಲ್ಲ (ಶಿಂಗ. ೯೬): ಹೀಗೆ ಸುಮ್ಮನೆ ಮೀನಮೇಷ ಮಾಡುತ್ತಿರುವುದು ಎಲ್ಲಿ ನಮ್ಮ ಜನದ ಸರ್ವಸ್ವನಾಶಕ್ಕೇ ಕಾರಣವಾಗುವುದೊ ಎಂಬ ಹೆದರಿಕೆಯುಂಟಾಯಿತು (ಹುಕ್ಕಿ. ೦೩). [ಸಂ.]

**ಮೀನಂಗಿ** (ನಾ). ಒಂದು ಬಗೆಯ ಸಸ್ಯ : ಮೀನಂಗಿ, ಗುಡ್ಡಪನ್ನೇರಲು (ಕೃಶಿಗ. ೬೩-೧೯೯೮). [ ? ]

**ಮೀನಂಗೆಱ** (ನಾ). ಒಂದು ಸ್ಥಳದ ಹೆಸರು : ಮೀನಙ್ಗೆಱೆಯ ಕಲ್ನಟ್ಟು ಮಣ್ಣಳ (ಕೃಇಂ. ೧೧೬೨.೬೬-೦; ಸು. 950).

[ ಮೀನ್₁ + ಕೆಱೆ[3] ]

**ಮೀನಂಬುಟು** 'ಮೀಂಬುಟು' ನೋ.

**ಮೀನಕಾಗೆ** (ನಾ). ಒಂದು ಬಗೆಯ ಸಸ್ಯ : "ಶಾಕತುಂಡಃ – ಮೀನಕಾಗೆ, ಕಾಗೆದೊಂಡೆ" (ಓಸಂ. ೪೦). [ ? ]

**ಮೀನಕೇತನ** (ನಾ). ೧. ಮೀನಿನ ಗುರುತುಳ್ಳ ಬಾವುಟ ; ಮನ್ಮಥನ ಧ್ವಜ : ಯಾತ್ರೆಯೊಳಂಗಜನಿಕ್ಷುಚಾಪಮಂ ಪೂಜಿಸಿ ಮೀನಕೇತನಮನರ್ಚಿಸಿ ವಾಜಿಕುನಾಜಿಗಂದು ನೀರಾಜಿಸಲೆಂದು ಪೊತ್ತಿಸಿದ ದೀಪಮೆನಿಪ್ಪುವು ತಳ್ತಕೋಕಿಗಳ್ (ಕಾಂತಿಪು. ೬-೧೬೨). ೨. ಮೀನಿನ ಗುರುತಿನ ಬಾವುಟವನ್ನು ಹೊಂದಿದವನು; ಮನ್ಮಥ : "ಮದನಃ, ಮನ್ಮಥಃ, ಮಾರಃ, ಪ್ರದ್ಯುಮ್ನಃ, ಮೀನಕೇತನಃ . . . ೨೧ ಮನ್ಮಥನ ಹೆಸರುಗಳು" (ಸಿದ್ಧಾಂತಿ. ೦೬); ಮೀನಕೇತನನೆನಿಸುವ ದಳಪತಿಯಧೀನದೊಳೋಲೈಸುತಿಹರು (ತ್ರಿಪುರಾಂ. ೬-೬೨). [ಸಂ.]

**ಮೀನಕೇತು** (ನಾ). = ಮೀನಕೇತನ ೨ : ವಿಳಾಸಪತೀಮಾನಿತಮೀನಕೇತು ಭರತಶ್ರೀವಚ್ಛಮೂವಲ್ಲಭಂ (ಎಕ. VI, ಶಕ್ಕೃಹು. ೦೬೦-೬೦; 1137): ಮೀನಕೇತುವೆತ್ತಿಸಿದ ಸಮುಲ್ಲಸರ್ಝಷಪತಾಕೆಯೆನಿಪ್ಪವೊಲಾಂತಳಾಕೆಯಾಪಸದನದೊಳ್ ಜಗತ್ತ್ರಿತಯಚಿತ್ತವಿಮೋಹನಶಕ್ತಿಯೇಟ್ಗೆಯಂ (ಚಂದ್ರಪ್ರ. ೬-೬೬). [ಸಂ.]

**ಮೀನಕೊಂಕೆ** (ನಾ). ಮೀನು ಹಿಡಿಯಲು ಬಳಸುವ ಕೊಕ್ಕೆ-ಗಾಳ : "ಗಳಃ, ಗಾಳಂ = ಮೀನ ಕೊಂಕೆ" (ಅಭಿಕ್. ೯೬). [ಮೀನ + ಕೊಂಕಿ₁]

**ಮೀನಕ್ಷೇತ್ರ** (ನಾ). ನೀರಿನಲ್ಲಿ ದೊರೆಯುವ ಮೀನು ಮೊದಲಾದುವನ್ನು ಸಂಗ್ರಹಿಸುವ ಸಂಸ್ಥೆ ; ಮೀನುಗಾರಿಕೆಯ ಸಂಸ್ಥೆ : ಒಂದು ಸ್ವಾಯತ್ತಶಾಸಿ ಜಿಲ್ಲೆಯ ಜಿಲ್ಲಾಪರಿಷತ್ತು . . . ಹಾಯ್ಗದಗಳನ್ನೂ, ಮೀನಕ್ಷೇತ್ರಗಳನ್ನೂ ರಸ್ತೆಗಳನ್ನೂ ಜಲಪಥಗಳನ್ನೂ ಸ್ಥಾಪನೆ ಮಾಡಬಹುದು (ಅರಾಶ. ೨೬೬). [ಸಂ.]

**ಮೀನಜ** (ನಾ). ೧. ಮೀನಿನಲ್ಲಿ ಹುಟ್ಟಿದವನು : ಅಯ್ಯಾ ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ ಮೀನಜ ರೋಮಜ ಮಹಾಮುನಿಗಳ ಲಯವ ಮಾಡಿದುದ ನಾ ಬಲ್ಲೆನಾಗಿ (ಬಸವ. ೬೯೦); ಆದಿಬ್ರಹ್ಮನ ಪ್ರಳಯ ಅಳಿದುಳಿದಲ್ಲಿ ಮೀನಜರಿಗೊಂದು ಸಿಂಪಿನ ಪ್ರಳಯ ಮೀನಜರಿಗೆ ಮೀನಪ್ರಳಯವಾದಲ್ಲಿ ಅಸಹಸ್ರನೆಂಬ ಗಣೇಶ್ವರಂಗೆ ಒಂದು ಪ್ರಳಯ (ಅಶಸಂ. ೧೧೨-೩೦೬); ರೋಮಜರು ಮೀನಜರು ಕಾಲಕಲ್ಪಿತರು ಮಹಾಲಿಂಗಗಜೇಶ್ವರಯ್ಯನೊಬ್ಬನೇ ಶಾಶ್ವತ (ತವೀಶ. ೬೩-೯೦೬). ೨. ಸಮುದ್ರದ ನೊರೆ : "ಮೀನಜಂ–ಕಡಲ ನಾಲಗೆ" (ಓಸಂ. ೦೨೩).

[ಸಂ.]

**ಮೀನಟೆಕ್ಕೆ** (ನಾ). = ಮೀನಕೇತನ ೧ : ನಿನ್ನ ಬರುದಿಂ ಮೆರೆವ ಮೀನಟೆಕ್ಕೆಯದಲ್ಲಿ (ಶಬಶೋ. ೬-೦೬). [ ಮೀನ + ಟೆಕ್ಕೆ₁ (< ಟೆಕ್ಕೆಯ) ]

**ಮೀನಧ್ವಜ** (ನಾ). ೧. = ಮೀನಕೇತನ ೧ : ಗಿಳಿದೇಜಗಳಲ್ಲಿ. . . ತಳಿರ ಖಂಡೆಯ ಮೀನಧ್ವಜವೆಲ್ಲಿ ತೋಱೆಂದು ಕಲೆಗುಂದಿ ಹಲುಬಿದಳಳುತ (ಶೋಹಶ. ೬-೬). ೨. = ಮೀನಕೇತನ ೨ : 'ಮೀನಧ್ವಜರಾಗ' ಪರಾ. [ಸಂ.]

**ಮೀನಧ್ವಜರಾಗ** (ನಾ). ಕಾಮಾಸಕ್ತಿ ; ಮದನರಾಗ : ಮಾನೋನ್ನತ ಮೊಲ್ಪನೆ ಪದ್ಮಿನಿಯೋಳ್ ಮೀನಧ್ವಜರಾಗದೆ ಶಂಕಿನಿಯೋಳ್ . . . ನಾನಾರತಮಂದಱ ಚಿತ್ತಿನಿಯೋಳ್ (ಮುದ್ರಿ. ೨-೩). [ಸಂ.]

**ಮೀನನೇತ್ರ** (ನಾ). ಮೀನಿನಂತೆ ಕಣ್ಣುಳ್ಳವಳು ; ಮೀನಾಕ್ಷಿ : ಪೌಲಸ್ತ್ಯನಂ ಮೀಱುವರೆ ಸಮರದೊಳ್ ಮಾನವರ್ ಮೀನನೇತ್ರೇ (ಕಂಠಾಪಿ. ೯-೦೬೬); ಮೀನನೇತ್ರೆ ಚಾರುಗಾತ್ರೆ ಮೀನಕೇತು ಚೈತ್ರನಾಮಾನಿತಾರ್ಥಭಾಗಯೋಗೆ (ಹಾಲಾಸ್ಯ. ೯-೦೨-೨೯).

[ ಮೀನ + ನೇತ್ರ + – ಎ₂ ]

**ಮೀನಪತಾಕ** (ನಾ). = ಮೀನಕೇತನ ೨ : ಏಕಾಂಗವೀರನೆಂಬುದನೆಲೆ ಮೀನಪತಾಕ ನೀನೇನು ಕೇಳ್ದಱಿಯ (ತ್ರಿಪುರಾಂ. ೨೦-೨೬೨); ಮೀನಪತಾಕನೈದು ಶರದಿಂ ಪುರುಡಿಂದಿಸೆ ನೊಂದು ಬೆಂದು ಕಾಮಾನಿಲನಿಂ ಲತಾಭವನದೊಳ್ ಪೊರಳ್ವರ್ (ರಾಜಶೇ. ೯-೦೦೯). [ಸಂ. ಮೀನಪತಾಕಾ ]

**ಮೀನಪಿಲ್ಲಿ** (ನಾ). ಮೀನಿನ ಆಕಾರದ, ಕಾಲುಂಗುರದಂತಹ ಒಂದು ಆಭರಣ : ಬೆರಳ ಮುದ್ರಿಕೆ ಮೀನಪಿಲ್ಲಿ. . . ಭುಜಕೀರ್ತಿ ಮೊದಲಾದ ನಾನಾ ಸುಮಡಮೆಗಳನು ತರುಣಿಯರ್ ಸಂತೋಷದಿಂ ತೊಡಿಸಿ (ಸಿದ್ಧಶಿ. ೧೧-೦೬).

[ ಮೀನ + ಪಿಲ್ಲಿ₁ ]

**ಮೀನಬಾವುಲಿ** (ನಾ). ಮೀನಿನ ಆಕಾರದ ಕಿವಿಯ ಒಂದು ಆಭರಣ : ಪುಲ್ಲಲೋಚನೆ ಚಳತಂಬು ಮೀನಬಾವುಲಿಯು ಹೊನ್ನೊವು ಗಾತ್ರ ಮುತ್ತಿನ ಬುಗಡಿ ಗರುವ ಕರ್ಣದಲ್ಲಿಟ್ಟು (ತ್ರಿಲ್ಪಬಾ. ೧೧).

[ ಮೀನ + ಬಾವುಲ್ಸಿ/ತುಳು. ಮೀನ್‌ಬಾವಲಿ ]

**ಮೀನಮೇಷ** 'ಮೀನ' ಪರಾ.

**ಮೀನಯೋಗ** (ನಾ). [ಜ್ಯೋತಿ] ಜಾತಕನ ಜಾತಕದಲ್ಲಿ, ಆರು ರಾಶಿಗಳಲ್ಲಿ ಮಾತ್ರ ಗ್ರಹಗಳಿರುವ ಒಂದು ಯೋಗ (?) : ೬ ರಾಶಿಗಳಲ್ಲಿ ಗ್ರಹರಿರಲು ಮೀನಯೋಗು (ಅಯುಬೀ. ೨೪-೩). [ಸಂ.]

**ಮೀನಲೋಚನೆ** (ನಾ). = ಮೀನನೇತ್ರ : ಮೀನಲೋಚನೆ ಮೃಗೇಕ್ಷಣದೆ ಸೆಗರನೃಪನನಭಿವೀಕ್ಷಿಸಿದಳ್ (ಅಶ್ವ. ೯-೬೬); ಮೀನಲೋಚನೆ ಮಱುಗಿದಳಱುನೀರ ಮೀನ ತೆಱದಿಂದಾಗಳ್ (ಸುಕುಮಾ. ೧೧-೦೩); ಮೀನಲೋಚನೆ ಮೀನಕೇತನಪಾಲೆ ಜೋ ಜೋ (ಹಾಲಾಸ್ಯ. ೦-೩-೨೬).

[ ಮೀನ + ಲೋಚನ + – ಎ₂ ]

**ಮೀನಾಂಕ** (ನಾ). = ಮೀನಕೇತನ ೨ : ಮೀನಾಂಕಮತ್ತೇಭಾವರಮೊ . . . ಪೇಟೆಂಬಿನಂ ಪುಷ್ಪಮಂಜರಿಯಿಂ ತನ್ನ ನಿಶಾಣಾಸ್ಫಾರಕ

ಮನತ್ಯಾಶ್ಚರ್ಯದಿಂ ನೋಡಿದೆಂ (ಗಾರಂಘ. ೬೪೦) ; ಮೀನಾಂಕನು ಬಲು ಮಾನದಿ ತನ್ನ ಪ್ರಸೂನಾಸ್ತ್ರಗಳನು ತೊಡರ್ಚಿ ಮಾನನಿಧಿಯು ಪರಿವಾರ ವನಿಸಲು (ತ್ರಿಕೃಹಾಂ. ೨೦-೨೪೦) ; ನಾನಾರತ್ನಶೋಭಿತದ ಚಾವಡಿಯಲ್ಲಿ ಮೀನಾಂಕನಿರ್ದನೋಲಗದಿ (ಕೋಹಕ. ೩-೩೨).

**ಮೀನಾಂಕನ ಕೇಳಿ** = ಮದನಕೇಳಿ ; ಮನ್ಮಥಕ್ರೀಡೆ : ಮೀನಾಂಕನ ಕೇಳಿಗೆ ಬಗೆ ಬಗೆದುದೊ (ಅಧ್ಯಕೀ. ೩-೦೬). [ಸಂ.]

**ಮೀನಾಕರ** (ನಾ). ಮೀನಿಗೆ ಆಶ್ರಯುವಾದುದು ; ಸಮುದ್ರ : ಹೊಟ್ಟೆಯೊಳ್ಪಗೆಗಿಂಬುಗೊಟ್ಟಪರ್ ಸಮತೆಯಿಂ ಮೀನಾಕರಂ ಮೆಱೆದುದು (ಅಕಿರೇಘ. ೩-೦೦). [ಸಂ.]

**ಮೀನಾಕ್ಷಿ** (ನಾ). ೧. = ಮೀನ್ನನೇತ್ರ : ಇನ್ನು ಮೀನಾಕ್ಷಿದೇವಸ್ಥಾನದ ಸುತ್ತಿನ ಮೀನಾಕ್ಷಿಯರ ಬಗ್ಗೆಯಂತೂ ಹೇಳುವುದೇ ಬೇಡ (ಹೊಸಕ್ಷಿ. ೦೬೪). ೨. (ತಮಿಳುನಾಡಿನ ಮಧುರೈ ಎಂಬ ಊರಿನ ಅಧಿದೇವತೆಯಾದ) ಪಾರ್ವತಿಯ ಒಂದು ಹೆಸರು : ಮೀನಾಕ್ಷಿಯನಾರಾಧಿಸಿ ಮಾನಿತಸುಂದರನನೊಲ್ದು ಬಲವರುತಂ ಸನ್ಮಾನಿ ಶಿವಲಿಂಗಪೂಜೆಯನಾನಂದದೆ ಮಾಡುತಿರ್ದಂ (ಚಾಣಕ್ಯ. ೨-೨-೨೨). 'ಕಾವಾಕ್ಷಿ' ಪರಾ. ೩. ಒಂದು ಬಗೆಯ ಸೊಪ್ಪು ; ಹೊನ್ನಗನ್ನೆ : "ಮೀನಾಕ್ಷೀ_ಹೊನ್ನಗನ್ನೆ" (೬ಕಧಿ. ೦೨೩).

[ಸಂ. ಮೀನಾಕ್ಷೀ]

**ಮೀನಾಣ್ಮ** (ನಾ). ನಕ್ಷತ್ರಗಳ ಒಡೆಯ; ಚಂದ್ರ: "ಮೀನಾಣ್ಮನಯ್ದಲೆಯಂ ಸೋಮಕಲಾವತಂಸನೊಳ್" (ಕಹಾರಿ. ೯೯).

[ಮೀನ್$_1$ + ಅಣ್ಮ (< ಆಳ್)]

**ಮೀನಾಮೇಷ** 'ಮೀನ' ಪರಾ.

**ಮೀನಾರ್** 'ಮಿನಾರು' ನೋ.

**ಮೀನಾಲಯ** (ನಾ). ೧. = ಮೀನಾಕರ. ೨. [ಜ್ಯೋತಿ] ಮೀನರಾಶಿ: ವಿತ ನಿಧಾನಭೋಗಿಯೆನಿಕುಂ ಮೀನಾಲಯಪ್ರೋದ್ಭವಂ (ಜಾತಕ. ೦೬-೦೨).

[ಸಂ.]

**ಮೀನಾಲೋಕ** (ನಾ). ಮೀನಿನಂತಿರುವ ಕಣ್ಣು : ತಾನುಪಶೋಭಿತ ಚಲದಳಕಾನನೆ ಪೃಥುತರಲಸತ್ಪಯೋಧರೆ ವಿಚಲನ್ಮೀನಾಲೋಕವಿರಾಜಿತೆಯೆನದಿ ವನರಾಶಿವನಿತೆಯೆನಿಸುವುದುಚಿತಂ (ಚಂದ್ರಪು. ೦೦-೫೩). [ಸಂ.]

**ಮೀನಿಕೆ** 'ಮಿನಿಕೆ' ನೋ.

**ಮೀನು$_1$** 'ಮೀನ್$_1$' ನೋ.

**ಮೀನು$_2$** 'ಮೀನ್$_2$' ನೋ.

**ಮೀನುಂಬುಟು** 'ಮೀಂಬುಟು' ನೋ.

**ಮೀನುಖಂಡ** (ನಾ). ಕಣಕಾಲಿನ ಹಿಂಭಾಗದಲ್ಲಿರುವ ಮೀನಿನಾಕಾರದ ಮಾಂಸಖಂಡ : ದೇವಿಯನ್ನು ತೋಳಿನ ಹೊರಭಾಗದಲ್ಲಿಯಾಗಲಿ . . . ಇಲ್ಲವೇ ಮೀನುಖಂಡದ ಮೇಲಾಗಲಿ ಹಾಕಬಹುದು (ಕಂಡೋ. ೬೦).

[ಮೀನು$_2$ (< ಮೀನ್$_2$) + ಖಂಡ]

**ಮೀನುಗಾರ** (ನಾ). ಮೀನು ಹಿಡಿಯುವವನು ; ಬೆಸ್ತ : ಮೀನುಗಾರರನ್ನು ಬೆಸ್ತ ಎಂದೂ ಕರೆಯುವರು (ಕಕಘ. ೨-೯೯).

[ಮೀನು$_2$ (< ಮೀನ್$_2$) + -ಗಾರ (< -ಕಾಱ)]

**ಮೀನುಗಾರಿಕೆ** (ನಾ). ನೀರಿನಲ್ಲಿ ದೊರೆಯುವ ಮೀನು ಮೊದಲಾದುವನ್ನು ಸಂಗ್ರಹಿಸುವ ಉದ್ಯಮ : "ಮತ್ಸ್ಯೋದ್ಯಮ ; ಮೀನುಗಾರಿಕೆ" (Fishery. ಶಸ್ತ್ರಿ. ೩೯). [ಮೀನುಗಾರ + -ಇಕೆ]

**ಮೀನೆಣ್ಣೆ** (ನಾ). ಕೆಲವು ಜಾತಿಯ ಮೀನಿನ ಪಿತ್ತಕೋಶದಿಂದ ತೆಗೆದು ಪೋಷಕದ್ರವ್ಯವಾಗಿ ಉಪಯೋಗಿಸುವ ಎಣ್ಣೆ : ವಿಟಮಿನ್ 'ಎ' ಮತ್ತು ವಿಟಮಿನ್ 'ಡಿ' ಅಭಾವ ಬಂದಂತೆ . . . ಒಂದು ವರ್ಷ ತುಂಬುವವರೆಗೆ ಒಂದು ಚಮಚ ಈ ಮೀನೆಣ್ಣೆಯನ್ನು ಕೊಡಬೇಕು (ಗೃಹಾ. ೦೦೪) ; ಕಾಡ್ ಜಾತಿಯ ಮೀನಿನ ಯಕೃತ್ತಿನಿಂದ ತೆಗೆದು ಔಷಧವಾಗಿ ಉಪಯೋಗಿಸುವ ಎಣ್ಣೆ: ಕಾಡ್ ಮೀನೆಣ್ಣೆ (Cod-liveroil. ಇಂಕಿ).

[ಮೀನ್$_2$ + ಎಣ್ಣೆ]

**ಮೀನ್ಗಣ್** (ನಾ). ಮೀನಿನ ಆಕಾರದಲ್ಲಿರುವ ಕಣ್ಣು : ಸುಂದರವಾದ ಕಣ್ಣು : ನಟ್ಟಸಳ್ಗಣ್ಣ ಮೀನ್ಗಣ್ಣ . . . ಬಲ್ಪೊಗಸೆಗಣ್ಣಬಲೆಯರ್ ನಿಚ್ಚಳದ ನೀಱೆಯರ್ ನಿಬಿಡಕುಚಭಾರೆಯರ್ ಬರುತಿರ್ದರು (ಕಂಘ. ೩೬-೪೪). [ಮೀನ್$_2$ + ಕಣ್]

**ಮೀನ್ಚುಳ್ಳಿ, ಮಿಂಚುಳ್ಳಿ, ಮೀಂಚುಳ್ಳಿ** (ನಾ). ಮೀನನ್ನು ಹಿಡಿದು ತಿನ್ನುವ ಒಂದು ಬಗೆಯ ನೀರುಹಕ್ಕಿ : ಜಾಲಗಾರ ಹಕ್ಕಿ; ಮೀನ್ಚುಳ್ಳಿ (Kingfish ಇಂಕಿ) ; ಮೀನ್ಚುಳ್ಳಿಯೂ ಕಲ್ಲಿನ ಮೇಲೆ ಕುಳಿತೇ ಮೀನು ನುಂಗುವುದು (ಜಾಲಗ. ೯೪). **ಮಿಂಚುಳ್ಳಿ** : ಮಿಂಚುಳ್ಳಿ ನೀರಿಳಿಯೆ, ಸೂರ್ಗಳಲಿ ಸಿಸಿನಿದ್ದ ಪಾರಿವಂ ಗುಬ್ಬಳಿಸೆ (ಕೃಹಾಬ. ೬೪-೨೬೦) ; ಮಿಂಚುಳ್ಳಿಯೊಂದು ಮೀ ಮೀ ಮೀ ಎಂದು ಕರೆಯುತ್ತಿದ್ದುದೂ ಕೇಳಿಸಿತು (ಮರಳು. ೦೮೩). **ಮೀಂಚುಳ್ಳಿ** : ಮೀಂಚುಳ್ಳಿ ಮತ್ತು ಹಲವು ಜೇನುಹುಳ ತಿನ್ನುವ ಹಕ್ಕಿಗಳು ಮೃದುವಾದ ನದಿ ಅಥವಾ ಕೆರೆದಂಡೆಗಳಲ್ಲಿ ನೀಳಸುರಂಗ ಕೊರೆದು ಒಳಗೆ ಗೂಡುಕಟ್ಟುತ್ತವೆ (ಹಕ್ಕಿ. ೯೬) ; ಮೀಂಚುಳ್ಳಿ ಮೀನಿಗೆರಗಿದ್ದರಿಂದ, ನೀರು ಅಲುಗಿ ಅಲೆಗಳೆದ್ದು . . . ಪ್ರತಿಬಿಂಬ ಕಲಸಿಹೋಯಿತು (ಹೇಮುಕೂ. ೦೯). [ಮೀನ್$_2$ + ಚುಳ್ಳಿ$_?$]

**ಮೀನ್ದಪು** (?). (?) : ಇಕ್ಕೆಣ್ಣುಗ ನೀರ್ಮಣ್ಣು ಮೀನ್ದಪುವುಮನ್ ದುಗ್ಗಬಿಟ್ಟು (ಮ್ಯಾಂ. ೦೯೦೬, ೦೩-೪; ೪೦೦). [ ? ]

**ಮೀನ್ಪುಲಿಗ, ಮೀಂಬುಲಿಗ** (ನಾ). ೧. ಮೀನನ್ನು ಹಿಡಿದು ತಿನ್ನುವ ಕೊಕ್ಕರೆ ಮೊದಲಾದ ನೀರುಹಕ್ಕಿ : ಚಂಬೋತ ಮೀನ್ಪು [ಪಾಠಾಂ. ಮೀಂಬು]ಲಿಗ ಮರಕುಟಿಗ . . . ಮೊದಲಾದಪುಳ್ಖಗಕುಲ ಬದ್ದುದುರಿಯೊಳಗೆ (ಕುಮಾ. ೨೦-೩೩) ; ಮೀನ್ಪುಲಿಗನ್ ಕಿದಿಡಳುಕುವುದೆ ಮಕರೇಶ (ಕೊರಾ. ೩-೬-೪೦). **ಮೀಂಬುಲಿಗ** : ೧. "ಉತ್ಕ್ರೋಶಃ, ಕುರರಃ, ಈ ೨ ಮೀಂಬುಲಿಗ" (ಶಾಅಶಾ. ೧೦೪) ; ನಿನ್ನ ಪತಾಕೆಯಂ ಹಿಡಿಗೆ ಮೀಂಬುಲಿಗಂ . . . ಎಂದು ಚಂಚನ್ಮೀನಾಕ್ಷಿ ಭೀಮಸುತೆ ಮನ್ಮಥನಂ ಮುಳಿಸಿಂದೆ ನಿಂದಿಪಳ್ (ವಳಕಂ. ೨೦೪) : ಮೀಂಬುಲಿಗ ಬೆಳ್ಳಕ್ಕಿ ಬೇಟೆಯಾಡಲು ಅಡವಿ (ಉಯ್ಯಾಲೆ. ೪೯-೩). ೨. ಮೀನು ಹಿಡಿಯುವವನು ; ಬೆಸ್ತ ; ಮೀನುಗಾರ : ಮೃಗಸೇನನೆಂಬ ಮೀಂಬುಲಿಗನಿರ್ಪಂ (ಧರ್ಮಾಮೃ. ೦೦-೨೩೩ ವ) ; ಮತ್ಸ್ಯನೆಂಬ ಮೀಂಬುಲಿಗಂಗಂ ಮಂಡೂಕಿನಿಯೆಂಬ ಮೀಂಬುಲಿತಿಗಂ ಪೂತಿಗಂಧಿ ತುಂಬುಗೆಯೆಂಬ ಮಗಳಾಗಿ ಜನಿಯಿಸಿ (ಮುಹಾಪೀ. ೦೬-೮ ವ); ಇಳೆಯೊಳಾ ಕೌಸಂಬಿಯೊಳು ಮೀಂ [ಪಾಠಾಂ. ಮಿಂ] ಬುಲಿಗ ಕಪಿಲರಜಾದರೆಯು ಮೀಂ [ಪಾಠಾಂ. ಮಿಂ] ಗುಲಿತಿ ಮಗ ತಾನವಗಂಬಿಗ ಕಂಸನೆಂಬನೆನೆ (ಶಾಳ್ಳಾ. ೦೯-೨೨).

**ಮೀಂಬುಲಿಗನ ಹಕ್ಕಿ, ಮೀಂಬುಲಿಗನ ಹಕ್ಕಿ** = ಮೀನನ್ನು ಹಿಡಿದು ತಿನ್ನುವ ಕೊಕ್ಕರೆ ಮುಂತಾದ ನೀರುಹಕ್ಕಿ : ಅಂಬರಕೊಡನೆ ಹಾಯುವರು ಅಂಬರದಿ ಬೀಳುತೆಡೆಯೊಳೆ ಮಗುಳ್ವರು ಮೀಂಬುಲಿಗನ ಪಕ್ಕಿಯಂತೆ (ಕರಿಸ. ೬೩-೩೬) ; ಮೀಂಬುಲಿಗನ ಹಕ್ಕಿಯಂತೆ ನೀರ ತಡಿಯಲ್ಲಿದ್ದು ಮೂಗ ಹಿಡಿದು ಧ್ಯಾನವ ಮಾಡು[ವಿ]ರಯ್ಯಾ (ಬಸವ. ೩೬೯). [ ಇದು 'ಮೀಂಗುಲಿಗ' ಎಂದಿರಬಹುದೆ ?]

**ಮೀನ್ವಟ್ಟೆ, ಮೀಂಬಟ್ಟೆ** (ನಾ). ನಕ್ಷತ್ರದ ಪಥ ; ಆಕಾಶ : "ಬಾನ್ ಮೀನ್ವಟ್ಟೆಯೆಂದಾಗಸಂ" (ಕಹಾರಿ. ೮) ; ನಿನ್ನ ಮನಂ ಬಂದವೊಲ್ ಮೀನ್ವಟ್ಟೆಯೊಳ್ ಹಾಡಿ ಅಲೆದಾಡು ! (ಬಣ್ಣ. ೯೬). **ಮೀಂಬಟ್ಟೆ** : "ಆಗಸಂ, ಮೀಂಬಟ್ಟೆ . . . ಬಾನ್—ಈ ೬ ಆಕಾಶಂ" (ಕಕಾ. ೪೯-೪೦) ; "ಮೀಂಬಟ್ಟೆಯೆನೆ ಗಾಳಿವಟ್ಟೆ" (ಅಭ್ಯಕೈ. ೦೦).

ಮೀನ್ನಟ್ಟಿದಲೆಯ=ಆಕಾಶವೇ ತಲೆಯಾಗುಳ್ಳವನು ; ವ್ಯೋಮಕೇಶ ; ಶಿವ : ಮೀನ್ನಟ್ಟಿದಲೆಯ ಮುನಿತತಿನುತ . . . ಸಲಹು ನಲವಿಂ ಶ್ರೀಶಾಂತೇಶಂ (ಉದ್ಭಟ. ೦-೨೯). [ಮೀನ್$_1$ + ಬಟ್ಟ$_{II}$]

**ಮೀಮಾಂಸ** (ನಾ). ಆಳವಾದ ವಿಚಾರ ; ಜಿಜ್ಞಾಸೆ ; ಪರಿಶೀಲನೆ : "ಮೀಮಾಂಸಮೆಂದು ವಿಚಾರದ ಪೆಸರ್" (ಶಬ್ದಾಯು. ೩-೧೦); ಇವುಗಳ ಇತ್ಯರ್ಥವು ಮೀಮಾಂಸಕ್ಕೆ ಸಂಬಂಧಪಟ್ಟುದು (ಆರ್ಯಾಶ. ೩೨).

**ಮೀಮಾಂಸಮಾಡು**=ಆಳವಾಗಿ ಪರಿಶೀಲಿಸು ; ವಿಚಾರಮಾಡು: ಮೀಮಾಂಸಮಾಡುವುದು ಅವರವರ ಬುದ್ಧಿಕುಶಲತೆಗೆ ಬಿಟ್ಟಿಲ್ಲ (ಆರ್ಯಾಶ. ೩೨); ವಿಶಾಲವಾಗಿ ಮಾನ್ಯನ ಮೆದುಳಿದ್ದರೂ . . . ಮನಸ್ಸಿನ ವಿಚಾರಗಳನ್ನು ಅಥವಾ ಅದರ ಭಿನ್ನಭಿನ್ನವ್ಯಾಪಾರಗಳನ್ನು ಮೀಮಾಂಸಮಾಡಲು ಅಸಮರ್ಥವಾಗಿರುತ್ತದೆ (ಜೀಶಾತ್ಯ. ೬೨). [ಸಂ. ಮೀಮಾಂಸಾ]

**ಮೀಮಾಂಸಕ** (ನಾ). ೧. ಆಳವಾಗಿ ವಿಚಾರಮಾಡುವವನು ; ಪರಿಶೀಲಿಸುವವನು. ೨. [ವೇದಾಂತ] ಮೀಮಾಂಸಾಶಾಸ್ತ್ರದ ಅನುಯಾಯಿ ; ಜೈಮಿನೀಯ : "ಮೀಮಾಂಸಕಃ, ಜೈಮಿನಿಃ—ಈ ೨ ಮೀಮಾಂಸಕನ ಪೆಸರು" (ಶಾಶಾ. ೦೨೬); ಈಶ್ವರಸದ್ಭಾವೇ ಕಿಂ ಪ್ರಮಾಣಂ ಎಂಬ ಮೀಮಾಂಸಕನ ಮೂಗಿನ ಕೊನೆಯನು . . . ಸುರಗಿಯಲಿರಿದು (ಶಸಪ. ೭೯೬); ಜಡಾತ್ಮನೆನಿಪಂ ನೈಯಾಯಿಕಂ ವೃತ್ತವಿಧ್ವಿಡಮಾತ್ಮಂ . . . ಮೀಮಾಂಸಕಂ (ಚಂದ್ರಪು. ೦-೨೩). [ಸಂ.]

**ಮೀಮಾಂಸಾದರ್ಶನ** (ನಾ).=ಮೀಮಾಂಸೆ ೩ : ಈ ಯೋಗಸಿದ್ಧಾಂತದಲ್ಲಿ ಶಬ್ದಪ್ರಾಮಾಣ್ಯಕ್ಕೆ ಅಂದರೆ ವೇದಗಳಿಗೆ ಅಷ್ಟು ಮಹತ್ವದ ಸ್ಥಾನವಿಲ್ಲ. ಇದನ್ನು ಗಮನಿಸಿ ಮೀಮಾಂಸಾದರ್ಶನ ತಲೆಯೆತ್ತಿತು (ಭಾರದ. ೦೨೬) ; ಪಾಶುಪತರ . . . ಉಗ್ರವಿರೋಧಕ್ಕೆ ಗುರಿಯಾದದ್ದು ಮೀಮಾಂಸಾದರ್ಶನ (ಕಣಾಶ. ೦೯೯). [ಸಂ.]

**ಮೀಮಾಂಸಾಶಾಸ್ತ್ರ** (ನಾ). =ಮೀಮಾಂಸೆ ೩ : ಧರ್ಮವೆಂದರೆ ಮನುಷ್ಯನು ಇಹಪರದೃಷ್ಟಿಯಿಂದ ಸುಖಕ್ಕಾಗಿ ಮಾಡಬೇಕಾದ ಕೆಲಸಗಳು, ಅವು ವೇದವೆಂಬ ಗ್ರಂಥದಲ್ಲಿ ಹೇಳಲ್ಪಟ್ಟಿದೆಯೆಂದು ವಿಚಾರಪೂರ್ವಕವಾಗಿ ನಿರ್ಣಯಿಸುವ ಶಾಸ್ತ್ರವೇ ಮೀಮಾಂಸಾಶಾಸ್ತ್ರ . . . ಮೀಮಾಂಸಾಶಾಸ್ತ್ರವೆಂದರೆ ವೇದಾರ್ಥವಿಚಾರಶಾಸ್ತ್ರವೆಂದರ್ಥ (ಹಿಂದಶಾ. ೦೯೯); ಜೈಮಿನೀಯಮೀಮಾಂಸಾಶಾಸ್ತ್ರಕ್ಕೆ ಪ್ರಮುಖಪ್ರಚಾರಕನು ಕುಮಾರಿಲಭಟ್ಟ (ಭಾರದ. ೦೨೯). [ಸಂ.]

**ಮೀಮಾಂಸೆ** (ನಾ). ೧. ಆಳವಾಗಿ ವಿಚಾರ ಮಾಡುವುದು ; ಜಿಜ್ಞಾಸೆ; ಪರಿಶೀಲನೆ : ಮೀಮಾಂಸಾ ಎಂದರೆ ಪ್ರಮಾಣಪುರಸ್ಸರವಾಗಿ ವಿಚಾರ ಮಾಡುವುದೆಂದು ಅರ್ಥ (ಭಾರದ. ೦೨೯); ಪ್ರೇಮದ ಮೀಮಾಂಸೆಗೆ ಅಲ್ಲಿ ಸ್ಥಾನವಿದ್ದಿಲ್ಲವೆಂದು ಇತಿಗತಿಯಾಗಿತ್ತು (ಜೀಮುಂಕ. ೨೩೩) ; ೨. ಕಾವ್ಯದ ಸ್ವರೂಪ ಲಕ್ಷಣಾದಿಗಳನ್ನು ತಿಳಿಸುವ ಶಾಸ್ತ್ರ ; ಕಾವ್ಯಮೀಮಾಂಸೆ : ಕನ್ನಡತನವೂ ಸೇರಿ ಭಾರತೀಯತ್ವವಾಗಿರುವಂತೆ, ಭಾರತೀಯಕಾವ್ಯಮೀಮಾಂಸೆಯೇ ಕನ್ನಡದ ಕಾವ್ಯಮೀಮಾಂಸೆಯಾಗಿದೆ : ಪಾಶ್ಚಾತ್ಯಕಾವ್ಯಮೀಮಾಂಸೆಯ ಸಮಾವೇಶದಿಂದ ಈ ಮೀಮಾಂಸೆ ದಿನೇದಿನೇ ಶ್ರೀಮಂತವಾಗುತ್ತಿದೆ (ಸಾಚಿತ್ರ. xiii, ಕೃಸ್ವಾಶಾ). ೩. [ವೇದಾಂತ] ಷಡ್ದರ್ಶನಗಳಲ್ಲಿ ಒಂದು ; ಆಳವಾಗಿ ವಿಚಾರ ಮಾಡುವಶಾಸ್ತ್ರ : ಸಾಂಗವೇದ ಪದಕ್ರಮದ ಸರ್ವಾಂಗವಿಷಯದಲಖಿಳಪೌರಾಣಂಗಳಲಿ ಮೀಮಾಂಸೆಯೊಳ್ ಸ್ಮೃತಿತರ್ಕಶಾಸ್ತ್ರದಲಿ ಭಂಗಿಸುವೆವೀ ದ್ರೌಪದಿಯನು (ಕುವ್ಯಾಭ. ೦೩-೩) : ಚತುರ್ದಶವಿದ್ಯೆಯೊಳಗೆಯು ಸಾತಿಶಯ ಮೀಮಾಂಸೆ ವಿಂಶತಿರೀತಿಯಾಗಿಹುದು (ಗಗತಾ. ೩-೦೦) ; ವೇದಾರ್ಥವಿಚಾರ ಶಾಸ್ತ್ರಕ್ಕೆ ಮೀಮಾಂಸೆ ಎಂದು ಹೆಸರು (ಹಿಂದಶಾ.೦೯೩). [ಸಂ. ಮೀಮಾಂಸಾ]

**ಮೀಮಾಂಸ್ಯ** (ನಾ). ಜಿಜ್ಞಾಸೆಗೆ ಒಳಪಡುವುದು; ವಿಚಾರಣಾಯೋಗ್ಯವಾದುದು: ಶ್ರುತಿಸ್ಮೃತಿಗಳು ಮೀಮಾಂಸ್ಯಗಳಲ್ಲ (ಆರ್ಯಾಶ. ೩೨). [ಸಂ.]

**ಮೀಯಣ**, **ಮೀಣ**, **ಮೀಯ್ಯಣ** (ನಾ). ಸ್ನಾನ ; ಮಜ್ಜನ : ನಿತ್ಯಸುಖಭೋಜನವು ಮೀಯಣವೆತ್ತಿ ತಾನುಪಭೋಗದಲಿ ಪುರುಷೋತ್ತಮನು ಇರುತಿರ್ದ ನಿತ್ಯೋತ್ಸಹದವೋಲಗದಿ (ಜೈಪಭಾ. ೩೯-೦೦). **ಮೀಣ** : ಅಳಿಯ ರೈದಿಯು ರುಕ್ಮಿಣಿ ಬಾಳಾಳಕವನು ಕೇಳಿ ಶಹುದು ಮೀಣಕೆನುತ್ತಂ ಪೇಳಲು ಬಂದರು (ಕಂದಕೊ.-೨೦೬); ಬಳಿಗೆ ತರುಣಿಯರ ಕೈಯಲ್ಲಿ ಮೀಣವ ಮಾಡಿಸುತ (ಅಶಾಶಿ. ೦೬-೬೨); ಘೃತಾಚಿಯು ತಟ್ಟನೆ ಮುಂದೆ ಬಂದು ಮೇನಕೆಗೆ ಮೀಣವನ್ನು ಮಾಡಿಸಿದಳು (ಪುಹಾಶಿ. ೦೬೬). **ಮೀಯ್ಯಣ** : ನೃಪ ತೊರೆದನು ವೂಟ ಮೀಯ್ಯಣವ (ಜೈಪಭಾ. ೬-೪೦); ಬಂಧುರದ ಭೋಜನವು ಮೀಯ್ಯಣದಿಂದಲುಪಚರಿಸುವರು ಮಮತೆಗಳಿಂದ ದಿನಚರಿ ವಿಪ್ರಜನ ಪಾಂಡವರ (ಜೈಪಭಾ. ೦೬-೩).

**ಮೀಣದ ಮನೆ**=ಬಚ್ಚಲುಮನೆ ; ಸ್ನಾನಗೃಹ : ಗರುಡಿಗೆ ಬಂದು ಹವಣಾಗಿ ಸಾಧಕವಂ ಮಾಡಿ ಆಮೇಲೆ ಮೀಣದ ಮನೆಗೆ ಬಂದು . . . ಸ್ನಾನವಂ ಮಾಡಿ (ಶಕಶಾ. ೨). [ಮೀ$_1$ + — ಅಣ]

**ಮೀಯಿಸು**, **ಮಿಸಿಸು**, **ಮೀಸು** (ಕ್ರಿ). ೧. ಸ್ನಾನ ಮಾಡಿಸು; ಮಜ್ಜನ ಮಾಡಿಸು : ಬಾಳಕನಂ ಗಂಧೋದಕದೊಳ್ ಮೀಯಿಸಿ [ಪಾಠಾಂ. ಮಿಸಿಸಿ, ನಿಜಿಸಿ] ಸಿದ್ಧಶೇಷಾಕ್ಷತಂಗಳನಿಕ್ಕಿ (ಶಾಪುಂತ್ರಿ. ೨೦೯) ; ಮಿಸಿಸಿದಂ, ಮೀಯಿಸಿದಂ (ಶಬ್ದಾಮ. ೩೯೩ ಕೃಯೋ); ಒಂದು ದಿನ ಗೌರಿ ಮಗುವನ್ನು ಮೀಯಿಸಿ ಚಂಡಿಯೊರಸುವಾಗ ಚಟ್ಟನೆ ಚೀರಿತು ಮಗು (ಮುಂಗಾಪು. ೨೩). ೨. ಅಭಿಷೇಕಮಾಡು ; ಮಂಗಳಸ್ನಾನ ಮಾಡಿಸು : ಮರುದಿವಸಂ ಪ್ರಶಸ್ತಮೌಹೂರ್ತಿಕನಿರೂಪಿತಶುಭಲಗ್ನೋದಯದಿಂ ದಪ್ಪೋ ತ್ರ ರ ಶ ತ ಪೂರ್ಣಕುಂಭಂಗಳಂ ಚತುರ್ವೇದಪಾರಗರಪ್ಪ ಧರಾಮರರೆತ್ತಿಕೊಂಡು ಮಂತ್ರಪೂತ[ಜಲಂ]ಗಳಿಂ ಮೀಯಿಸಿ (ಕಂಕಶಾ. ೦೯—೦೬ ಪ); ರಸದಾಳಿಗಬ್ಬಿನ ರಸದೊಳಾ ನೃಪತಿ ಮೀಯಿಸುವಂದ ಮೆಚ್ಚಿದುದಾ ಜನನಾ (ಧಕಶ. ೦೬-೬೬). ೩. ತೋಯಿಸು ; ನೆನೆಸು ; ಆರ್ದ್ರವಾಗಿಸು : ಅಂತು ಸಂತೋಷ ಬಾಷ್ಪವಿಸರದಿಂ ಮೀಯಿಸುವಂತೆಯುಂ ದಿಟ್ಟಿವೆಳಗಿನಿಂ ನಿವಳಿಸುವಂತೆಯುಂ . . . ಅಕ್ಷೂಣಲಕ್ಷಣಲಕ್ಷಿತಂಗಳಪ್ಪ ಪುತ್ರಸಂಗಪ್ರತ್ಯಂಗಗಳಂ ನೀಡುಂ ಭಾವಿಸಿ ನೋಡಿ (ಚಂದ್ರಪು. ೩-೦೦೨ಪ). **ಮಿಸಿಸು** : ೧. ಅರ್ಘ ಬಟ್ಟೆಯುಟ್ಟ ಪರಿಸಿ ಮಜ್ಜನದೊಳ್ ಮಿಸಿಸಿ [ಪಾಠಾಂ. ನಂ ಮಾಡಿಸಿ] ಉಡಿಸಿ ತುಡಿಸಿ . . . ಬೀಡಿಂಗೆ ಪೋಗಲ್ವೇಟ್ಟು (ವಡ್ಡಾರಾ. ೨-೦೯); ಪಂಚರತ್ನಗರ್ಭ ವಿವಿಧೌಷಧಿ ಸಂದರ್ಭಶಾತಕುಂಭ ಕುಂಭಸಂಭೃತಮಂಗಲ ಜಲಂಗಳಿಂದಂ ಮಿಸಿಸೆ (ಆದಿಪು. ೯-೩೫೪) ; ಜಿನಗಂಧೋದಕದಿಂ ಬಾಳ್ಕನಾಗಳ್ ಸಿಸಿ ಬಾಳವಂದಿರ್ಗಳನೊಯ್ಯನೆ ತುಡಿಸಿದಾಗಳ್ (ಸುಕುಮಾ. ೦೦-೩೯); ಸಮಸ್ತಸುರಕೋಟಿ ಹೇಮಘಟಕೋಟಿಯಂ ತೀವಿ ತಂದಮೇಯ ಭುಜಕೋಟಿಯಿಂ ಮಿಸಿಸೆ (ಅದಿಪು.೦೬-೩೩) ; ಪುಣ್ಯಜಲಂಗಳಂ ತರಿಸಿ ಮಿಸಿಸುತ್ತಾಗಳ್ ತಾಂ ತನ್ನ ಕೆಯ್ಯೊಳೆ ಕಟ್ಟಿದಂ ಕುರುಪರಿವೃಢಂ ಕರ್ಣಂಗಾ ವೀರಪಟ್ಟದ ಪಟ್ಟಮಂ (ಪಂಪಭಾ. ೦೨-೩೨) ; ಕನತ್ಕನಕ ಪೀಠದೊಳ್ ವಿಧಿಸಹಿತಂ ಮಿಸಿಸಿ ಬಟ್ಕರ್ಚಿಸಿ ಪೂಜಿಸಿ ಮಣಿಮಯಜೈನಬಿಂಬಮಂ ಜನಚಂದ್ರಂ (ಶಾಂತಿಪು. ೬-೩೦). ೩. ಮಿಸಿಸಿದಪಂ ಕರುಣಾಮೃತವಿಸರದಿನವನಿಪನಂ (ಚಂದ್ರಪು. ೩-೬೦) ; ನಿಜನಯನಧವಳ ಪ್ರಭಾಪೀಯೂಷಪೂರದೆ ಮಿಸಿಸುವಂತೆ ಬಿಡದೆ ನೋಡುತ್ತುಂ (ಸುಕುಮಾ. ೬-೨೦ ಪ) ; ಅಂಗರುಚಿಭೂಷಣಾಂಶುಮನಂಗಪ್ರಭೆ ಮಿಸಿಸೆ ಮತ್ತೆ ಮಜ್ಜನವಿಧಿ ತನ್ನಂಗಿಗೆ ಪುನರುಕ್ತಂ (ಧನ್ಯಪು. ೯-೬೦). ೪. ಸುರಿ ; ಧಾರೆಯಾಗು : ಮಿಸಿಸೆ ಸುಖದಶ್ರು ಪುಳಕಂ ಪಸರಿಸೆ ಬಿಲ್ಲೋಂದು ಜಾವಮಪ್ಪಿನಂ ಪಸುಳೆಡೆ ಸಮುದ್ರವಿಜಯನಪ್ಪಿರೆ ವಸುದೇವನುಮಪ್ಪಿಕೊಂಡು ತೋಳಿಂದನಳವಂ (ನೇಮಿಪು. ೬-೯೬). **ಮೀಸು** : ೧. ಮಂಗ

ಸೊಸೆಗೆಣ್ಣುಯಂ ಪೂಸಿ ಪೊಂಬಚ್ಚಲೊಳ್ ನಿಲಿಸಿ ಮೀಸಿದ ಬಳಿಕ ಸಿಂಗರಗೆಯ್ದು ರನ್ನದ ಬಾಸಿಗವನು ಕಟ್ಟಿದರು (ಮೋಹತ. ೧೪-೬೪). [ಮೀ$_1$ + -ಇಸು$_3$]

**ಮೀಯು** 'ಮೀ$_1$' ನೋ.

**ಮೀಯ್ಯಣ** 'ಮೀಯಣ' ನೋ.

**ಮೀರ್** (ನಾ). ಸೇನಾಪತಿ : ದಳವಾಯಿ : ಹೈದರನು ತನ್ನ ಮಂತ್ರಿಗಳಾದ ಪೂರ್ಣಯ್ಯ, ಕೃಷ್ಣರಾವ್, ಬರಕಿ ಶ್ರೀನಿವಾಸರಾವ್ ಮೊದಲಾದ ಮೀರ್ ಮೀರಾಗಳನ್ನು ಆಲೋಚಿಸಿ ಕೇಳಲಾಗಿ (ಶತ್ರುಶಾ. ೯೦).

[ ← ಪಾರ. ಹಿಂ. ಮರಾ. ಮೀರ್]

**ಮೀರಾಕೋರ** (ನಾ). ಕುದುರೆಲಾಯದ ಮೇಲ್ವಿಚಾರಕ : ಅಲ್ಲಿದ್ದ ಕಾವಲ ಮಂದಿ ಮೀರಾಕೋರರು ಸಹವಾಗಿ ಅರಸು ಒಬ್ಬನೆ ಬರುವುದ ಕಂಡು ಭಯದಿಂದ ದೂರದಲ್ಲಿಯೆ ನಿಂತರು (ವಶಶಾ. ೭೬).

[← ಹಿಂ. ಮೀರ್‌ಆಖುರ್]

**ಮೀರಾಸೆ** 'ಮಿರಾಸಿ' ನೋ.

**ಮೀರಿ** (ನಾ). ಕರಿಮೆಣಸು ; ಕಾಳುಮೆಣಸು : ಪನ್ನಿರ್ಕಳೆ ಮೀರಿಯು ಮೊಕ್ಕಳ ತುಪ್ಪಮುನ್ನಿದ್ದುವೊನ್ (ಎಕ. III, ಮಂಡ್ಯ. ೦೪-೦೩ ; 907).

[ P ಇದು 'ಮಿರಿ' ಎಂಬುದರ ಅಪಲಿಖಿತ]

**ಮೀರಿಜವಳಿ** (ನಾ). ಒಂದು ಸ್ಥಳದ ಹೆಸರು : ಮೀರಿಜವಳಿ ಪೊರಣೆ ಮೊಗೆಕಿಟ್ಟುಕಿಱ ಗುಡಗ ತಾಣಮ್ ನೊಕ್ಕಿಗೋಡು (ಪ್ಯಾಲಿ. ೦೯೦೬, ೦೦-೦೦ ; 700). [ಮೀರಿ$_?$ + ಜವಳಿ$_5$]

**ಮೀರಿಸು** 'ಮೀಱಿಸು' ನೋ.

**ಮೀರು** 'ಮೀಱು' ನೋ.

**ಮೀಲಕ** (ನಾ). ಭಾರವಾದ ವಸ್ತುಗಳನ್ನು ಎತ್ತುವ ಸಾಧನ : ಸನ್ನೆಗೋಲು : ಆರ್ಕಿಮಿಡೀಸ್ ಭೂತಗನ್ನಡಿಗಳನ್ನು ಬಳಸಿ ಶತ್ರುಗಳ ಹಡಗುಗಳನ್ನು ಸುಟ್ಟು ಮತ್ತು ಮೀಲಕಗಳನ್ನುಳ್ಳ (ಸನ್ನೆ) ಯಂತ್ರಗಳ ಸಹಾಯದಿಂದ ಅವರನ್ನು ಹಿಮ್ಮೆಟ್ಟಿಸಿದ (ಕರಿಕೋ. I, ೯೭೩). [ ? ]

**ಮೀಲನ** (ನಾ). ೧. ಕಣ್ಣನ್ನು ಮುಚ್ಚುವುದು. ೨. ಹೂವಿನ ದಳಗಳು ಮುಚ್ಚಿಕೊಳ್ಳುವಿಕೆ,–ಮುಕುಳಿತವಾಗುವುದು. ೩. ಮುಚ್ಚುವುದು ; ಮುಚ್ಚುವಿಕೆ : ಪಕ್ಷದ್ವಯಂ ಜೋಲೆ ಕಣ್ ಮೀಲನದೊಳ್ ಸಮ್ಮೀಳನಂ ಬೆತ್ತಿರೆ . . . ಗಟಿಪಿದತ್ತುಮ್ರುದೊಳ್ ತಾಮ್ರತುಂಡಂ (ಚಂದ್ರಪ್ರ. ೭-೯೭). ೪. [ಕಾವ್ಯಮೀ] ಮರೆಮಾಚಿದ ಉಪಮಾನ. [ಸಂ.]

**ಮೀಲಿತ**, ಮೀಳಿತ (ಗು). ೧. ಮುಚ್ಚಲ್ಪಟ್ಟ : ಮುಚ್ಚಿಕೊಂಡಿರುವ. ೨. ಅರ್ಧತೆರೆದ ; ಅರೆಬಿರಿದ. ೩. ಕಣ್ಮರೆಯಾದ ; ಅದೃಶ್ಯವಾದ. ೪. ಒಟ್ಟಿಗೆ ಸೇರಿದ ; ಒಟ್ಟುಗೂಡಿದ. (ನಾ). ೫. [ಕಾವ್ಯಮೀ] ಎರಡು ವಸ್ತುಗಳಲ್ಲಿ ಪರಸ್ಪರಸಾದೃಶ್ಯದ ದೆಸೆಯಿಂದ ವ್ಯತ್ಯಾಸವೇ ತೋರದಂತೆ ವರ್ಣಿಸುವ ಒಂದು ಅಲಂಕಾರ : ಒಂದು ವಸ್ತು ತನಗೆ ಸದೃಶಮಾದ ಪೆಱತೊಂದು ವಸ್ತುವಿನೊಳ್ಪುದಾಗಿ ತಾಂ ಬೇಱೆನಿಸಿ ತೋಱದಿರೆಯುದು ಮೀಲಿತಂ (ಅಕ್ರಿ. ೦೨೫-೦೫). **ಮೀಳಿತ :** ೫. ಸಮವಸ್ತುಸಮವೆನಿಸೆ ಭೇದವು ತೋರವಡೆ ಕ್ರಮದಿಂದ ಪೇಳ್ವ ಮೀಳಿತವ ಕಮಲನೇತ್ರೆಯ ಕೆಂಪುವರ್ಣದ ಚರಣದಲಿ ತಾಂ ಸಮರಸಲಕ್ತಕ ತೋರದು (ಕುವಲ. ೦೯೪).

[ ಸಂ. ]

**ಮೀಲಿತಾಲಂಕಾರ**, ಮೀಳಿತಾಲಂಕಾರ (ನಾ). = ಮೀಲಿತ ೫ : ಕೈಯ ಕಾಂತಿಯಿಂ ಪೊಂಬಳೆಗಳ್ಕಾಣಿಸದಿರ್ದುವೆಂಭುದಱಿಂದಿದು ಮೀಲಿತಾಲಂಕಾರಂ (ಅಕ್ರಿ. ೦೨೦-೨೦) ; ಒಂದು ಪದಾರ್ಥವು ತನಗೆ ಸದೃಶವಾದ ಪದಾರ್ಥದಲ್ಲಿ ಐಕ್ಯವನ್ನು ಪಡೆದು (ಆ ಸದೃಶಪದಾರ್ಥಕ್ಕಿಂತ ಬೇರೆಯಾಗಿ) ಕಾಣದೆ ಹೋದಲ್ಲಿ ಮೀಲಿತಾಲಂಕಾರವಾಗುವುದು (ಕೈದಿ. ೨೯೭). **ಮೀಳಿತಾಲಂಕಾರ** : ಸಾದೃಶ್ಯವುಳ್ಳ ವಸ್ತು ತನ್ನ ಸಾಮ್ಯವಸ್ತುವಿನಲಿ ಬೆರದು ಭೇದವಾಗಿ ತೋರದಿರ್ದಡೆ ಮೀಳಿತಾಲಂಕಾರವೆನಿಪುದು (ಕುವಲ. ೦೯೪). [ ಸಂ. ]

**ಮೀಸಲ್**, ಮೀಸಲ, ಮೀಸಲು (ನಾ). ೧. ಒಂದು ನಿರ್ದಿಷ್ಟವಾದ ಉದ್ದೇಶಕ್ಕಾಗಿ, ದೇವರು, ಅತಿಥಿ ಮೊದಲಾದವರಿಗೆ ಪ್ರತ್ಯೇಕವಾಗಿ ತೆಗೆದಿರಿಸಿದ ಆಹಾರ, ನೀರು, ಹಾಲು, ಹಣ, ಹಸು ಇತ್ಯಾದಿ ಯಾವುದಾದರೂ ವಸ್ತು,– ಬಳಸದೆ ಕಾದಿರಿಸಿದ ವಸ್ತು ; ಮುಡಿಪು ; ಹರಕೆ : "ಮೀಸಲೆನೆ ಬಳಸದಿರ್ಪುದು" (ಕಾರಶ. ೦೩) : ಒಕ್ಕಲೊಳೊನ್ದು ಪೊಱೆಯುಂ ಕಯ್ಯುಂ ಪದಿಕ್ಕೊಳಂ ಭತ್ತಮುಂ ಮೀಸಲುಂಬಳಿವತ್ತಮುಂ ಸಲ್ವದು (ಎಕ. III (R), ನಂಜನ. ೨೯೪-೦೦ ; 977) ; ಎಳ್ವತ್ತಱ ಮೀಸಲುಂ ಸಲ್ವುದು ಸಾಸಿರ್ವರ ಕಾಪು (ಎಕ. VI. ಚಿಕ್ಕಮ. ೯೫-೦೦ ; ಸು. 1025 ?) ; ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿ ಏಂತಹುದೊ . . . ಮನಹೀನನ ಮೀಸಲ ಕಾಯ್ದಿರಿಸಿದಂತೆ (ಬಸವ. ೯೩). (ಗು). ೨. ಅಪವಿತ್ರವಾಗದಿರುವ; ಶುದ್ಧವಾದ : ಏನವ್ವ ಅದಿರ್ಗಂತಿ ತುಂಬಿ ತುಳುಕದ ಮುನ್ನ ಆನಂದನಿಧಿ ಶಿವಂಗಳ್ಕಱಿಂದಂ ನಿನ್ನ ಸುಖದ ಮೀಸಲ ಸುಗಂಧವ ನೀಡು [ಪಾಠಾಂ. ಸದ್ಗಂಧ ಮೀಸಲನೀಯು]ನೀಯೆನುತ (ಪ್ರಭುರ. ಹ. ೫೨೪-೨೭) ; ಶಿವನ ತೋಳ ತೊಡವಾನತರ ಮೀಸಲ ಮನೋರಥವು ಸಿರಿ ಸರಸ್ವತಿವೆರಸಿ ಗಿರಿಜೆ ಬಿಜಯಂಗೈದಳು (ಸಿದ್ಧರಾ. ೦-೫೭). **ಮೀಸಲ** : ೧. ಮತ್ತೆ ಬಲ್ಲುದೆ ಬೆಕ್ಕು ಹರಿಯ ಮೀಸಲವ (ಭರತ. ೦-೦೨೫-೧) ; ಮಡಿಯನುಟ್ಟು ಮೀಸಲದಡಿಗೆ ಮಾಡಬೇಕ್ರೀ (ಶಂಕ. ೨೩-೦). **ಮೀಸಲು :** ೧. ಭಾಷೆ ತಪ್ಪಿದ ಬಳಿಕ ಪ್ರಾಣವಾಸೆಯನು ಹಾರಿದರೆ ಮೀಸಲನ್ನು ಸೊಣಗ ಮುಟ್ಟಿದಂತೆ (ಬಸವ. ೬೬೯) ; ಹಬ್ಬ ಹಬ್ಬಕೆ ಮೀಸಲಂ ತೆಗೆದಿರಿಸಿದಂತದೆ ಬೀಯಕಿಮಗಿಲ್ಲ (ಬಸಪು. ೪೨-೯) ; ಆ ಸಿತಾಶ್ವನ ಬಿಲ್ಲನೊದೆದಾಕಾಶ ಕವ್ವಳಿಸುವ ಶರೌಘಕೆ ಮೀಸಲಱಿಯಾ ಕರ್ಣ ನಿನ್ನೊಡಲೆಂದನಾ ಶಲ್ಯ (ಕುಮಾವ್ಯಾ. ೯-೨೪). ೨. ಶಂಭು ವರಮಂ ಕೊಟ್ಟನಿಲ್ಲಿ ನಿನ್ನ ಮೀಸಲ ತಪಕ್ಕೆಡರ್ಬಾರದಿರಲೆಂದು (ಕೈಬಿಡ. ೦೫-೦೫) ; ಸೆಟ್ಟಿ . . . ಒಲವಿಂ ಮೀಸಲ ಮನದಿಂ ನಿಜಕರವಾಸದ ತನ್ನಿಷ್ಟಲಿಂಗಮಂ ಪೂಜಿಸಿದಂ (ಹಾಲಾಸ್ಯ. ೦-೪-೩೨). ೩. ಅಪ್ಪಟವಾದ ; ಅಚ್ಚ : ಕಳವೆಯ ಕದಿರ ಮೀಸಲ ಕಂಪನುಣಲೆಂದಳಿಶಿಶುಗಳು ಕೊನೆಯೇಱಿ ಪೊಱದವು ಪೂಗಣೆಯನ ಪಸುರ್ಗಾವಿನ ತೊಳಪ ನೀಲದ ಮಿಂಟೆಯಂತೆ (ಶ್ರೀಪಾಂ. ೧-೫೦). ೪. ಮುಡಿಪಾಗಿಟ್ಟ ; ಬಳಸದೆ ತೆಗೆದಿಟ್ಟ ; ಉಪಯೋಗಿಸದೆ ಬೇರೆಯಾಗಿಟ್ಟ ; ಪ್ರತ್ಯೇಕವಾದ : ಕೂಡಲಸಂಗಮದೇವಸುಚಿತ್ತದಲಿ ಮಾಸಮೀಸಲ ಬೋನವನಾರೋಗಿಸಯ್ಯಾ (ಬಸವಸಂ. ೩೩೭-೨೭) ; ಕಳೆದ ಮೀಸಲ ಶಕ್ತಿ ಪಾರ್ಥನ ತಲೆಗೆ ಬೈಚಿಟ್ಟಹುದನೀಗಳು ಸೆಳೆದೆನಾದರೆ ಮುಂದೆ ಫಲುಗುಣನೆನ್ನ ಲೆಕ್ಕಿಸನು (ಕುಮಾವ್ಯಾದ್ರೋ. ೦೭-೨೮). (ನಾ). ೫. ಪ್ರತ್ಯೇಕತೆ; ವೈಶಿಷ್ಟ್ಯ : ಮಾಯೆಗೀಯೆಗೆ ತೋಱಿಸುವನೇ ತನ್ನ ನಿಜವನು ಮೀಱಿ ಮೀಸಲನಲ್ಲಮಪ್ರಭುಗುರುಗುಹೇಶ್ವರನು (ಪ್ರಭುಲಿ. ೭-೯೭) : ಏಱು ಸೂಱೆಗೆ ಹಾರಿ ಮೀಸಲಿನೇಱು ನಮ್ಮದು ತಮ್ಮದೆನುತುಬ್ಬೇಱಿ ಭೀಮನ ಮಂತ್ರಿದರು ಮೈತ್ರಿದರು ಸರಳಿನಲಿ (ಕುಮಾವ್ಯಾ. ೦೫-೨೦). ೬. ಪ್ರತ್ಯೇಕವಾಗಿ ಇರಿಸಿದುದು ; ಮುಡಿಪಾಗಿ ಇಟ್ಟುದು : ಪಾಲೇಂ ಕಾಯದೋ . . . ಕಣ್ಣೆಂಜಲಾದತ್ತೊ, ಬಲ್ಬಿಸಿಯಾಗಿರ್ದುದೊ ಮೀಸಲೋಸರಿಸಿತೋ (ವ್ಯಕಾ. ೯-೭೪).

ಮೀಸಲ ಕಟ್ಟು = (ದೇವರಿಗೆ ಹರಸಿಕೊಂಡ ಕಾಣಿಕೆಯ ಪದಾರ್ಥವನ್ನು) ಪ್ರತ್ಯೇಕವಾಗಿಡು ; ಮುಡಿಪು ಕಟ್ಟು : ಆ ದೇವರಿಗೆ ಹರಸಿಕೊಂಡು ಮೀಸಲ ಕಟ್ಟಿದ್ದರಿಂದ ಕೋಟೆಯು ನಿಂತಿತಂತೆ (ಶತ್ರುಶಾ. ೭).

**ಮೀಸಲಡಿಗೆ, ಮೀಸಲು ಅಡಿಗೆ** = (ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ)

ಪ್ರತ್ಯೇಕವಾಗಿ ಸಿದ್ಧಪಡಿಸಿದ ಆಹಾರ ; ಎಡೆ ; ನೈವೇದ್ಯ : ಪರಿಪರಿ ದೇವಾನ್ನ ಮಾಸಲಡಿಗೆಗಳ ಧರೆಯೊಳು ಮೊದಲಿತ್ತವರಿಗೆ (ದೇವಾಂಪು.೩-೧೪೨); ಪ್ರತಿಯೊಂದು ಮನೆಯ ಮಾಸಲು ಅಡಿಗೆ ಮಾಡುವುದಕ್ಕೆ ಹೆಣ್ಣುಮಕ್ಕಳು ನಸುಕಿನಲ್ಲಿಯೇ ಏಳುವರು (ಳಕಪು. ೬-೧೭). **ಮಾಸಲಾಗಿಡು** = (ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ಯಾವುದಾದರೂ ವಸ್ತುವನ್ನು) ಪ್ರತ್ಯೇಕವಾಗಿ ತೆಗೆದಿರಿಸು : ಮುಡಿಪಾಗಿಡು : ವಾಸ್ತವಿಕಸಾಧನೆಯ ಶಕ್ತಿಯನ್ನು ಮಾನವರ ಕಲ್ಯಾಣಕ್ಕೆ ಮಾತ್ರ ಮಾಸಲಾಗಿಡುವ ಆದೇಶವನ್ನು ನೀಡಬೇಕು (ಶಿಕ್ಷರ. ೨೨೨). **ಮಾಸಲಾಗಿರು** = (ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ) ಯಾವುದಾದರೂ ವಸ್ತುವು ಪ್ರತ್ಯೇಕವಾಗಿ ಇರು ; ಮುಡಿಪಾಗಿರು : ಸೂಸಲೀಯದೆ ಮನವನೀಶವಾಸದೊಳಿರಿಸಿ ಬೀಸರಾಗದೆ ಚಿತ್ತ ಮಾಸಲಾಗಿರಬೇಕು [ಶಾಂತ. ಚಿತ್ತಮಂ ಮಾಸಲಾಗಿರಿಸಿ] (ದೀಕ್ಷಾಬೋ. ೦೬-೧೦) ; ಮೂವತ್ತು ಜಾತ್ಯಶ್ವಗಳು ರಾಮನಿಗೇ ಮಾಸಲಾಗಿದ್ದುವು (ಕಂಭರಾಮಾ. ೩೬) ; ಆ ಸಮೃದ್ಧವಾದ ನೀರು ಅವರಿಗೆ ಮಾಸಲಾಗಿರಬೇಕು (ಹಿಕ್ರಿವಿ. ೨೩). **ಮಾಸಲಾಗು** = **ಮಾಸಲಾಗಿರು** : ಪ್ರಾಣವನು ಬೀಸರವೋಗದೆ ಮಾಸಲುಂಗರ್ಪಿಸಬಲ್ಲರೆ ಕೂಡಿಕೊಂಡಿರ್ಪ ನಮ್ಮ ಕೂಡಲಸಂಗಮದೇವ (ಬಸವ. ೮೩೬) ; ಈಶನ ಮಾಸಲಪ್ಪ ಭಕ್ತ ನಿನಗೆಣೆಯಿಲ್ಲ (ಬಸವ. ೬-೩೩).

[ದೇ.॥ ಮಲ. ಮಾತ್ತಲ್ = ಬೆಕ್ಕಿಗೆ ನೀಡಲಾಗುವ ಮೊದಲು ಬಿಟ್ಟ ಹಣ್ಣು ಮತ್ತು ಮೊದಲನೆಯ ಹಿಡಿಯ ಅಕ್ಕಿ ; ತೆಲು. ಮಾಸರ=ಶ್ರೇಷ್ಠ]

**ಮಾಸಲ** 'ಮಾಸಲ್' ನೋ.

**ಮಾಸಲಳಿ** (ಕ್ರಿ). ೧. (ನಿರ್ದಿಷ್ಟವಾದ ಉದ್ದೇಶ ಅಥವಾ ಗುರಿ, ಮುಡಿಪು, ಸ್ಥಿತಿ, ಆಕೃತಿ ಮೊದಲಾದುವು) ಭಂಗವಾಗು ; ನ್ಯೂನವಾಗು : ಗಾಸಿಯಾಮದು ರಾಗ ಲೋಭದ ಮಾಸಲಳಿದುದು ನಿಮ್ಮ ದೆಸೆಯಿಂದ (ಕುಮ್ಮಾಲಾ. ೯-೩೬) ; ಮಾಸಲಳಿಯಿತು ಬಯಕೆ ಮನದಭಿಲಾಷೆ ಜಾಜಿತು (ಪ್ರಭುಲೀ. ೧೧-೨೬) ; ಭಾಸುರಾರ್ಕಸಹಸ್ರಕೋಟಿಗೆ ಮಾಸಲಳಿಯದ ಬಹಳತೇಜದ ವಾಸುದೇವನ ದಿವ್ಯಮೂರ್ತಿಯ ಕಂಡೆ ನಾನು (ಭಾಗ. ೩-೨-೫೨). ೨. ಪವಿತ್ರತೆಯು ಭಂಗವಾಗು; ಅಪವಿತ್ರವಾಗು : ಗಾಸಿಯಾದುದು ದ್ಯುತಿಮಲ್ಲರದೇಸು ಘನ ಮಾವನನು ಮರ್ದಿಸಿ ಮಾಸಲಳಿಯದ ದ್ವಿಜಕನ್ನೆಯರೊಡನೆ ಜೋಡಿಸಿದ (ಕುಮ್ಮಾಸ. ೯-೩೬) ; ಮಾಸಲಳಿಯದ ಕನ್ನೆತನದಲಿ ಶಿವನಸಪ್ಪುವೊಡೆ ಲೇಸು ನಿಜಕುಲಕೋಟಿಗೆ (ಪ್ರಭುಲೀ. ೧೧-೨೯); ಈಸುದಿನ ನಮ್ಮಗ್ನಿಹೋತ್ರಕೆ ಮಾಸಲಳಿಯದೆ ನಡೆದುದೀಗ ವಿನಾಶಕರವಾಯ್ತು (ತೊರಣ. ೦-೯-೨೬). ೩. ಸ್ವಚ್ಛತೆ ಅಳಿ ; ಪರಿಶುದ್ಧತೆ ಇಲ್ಲವಾಗು : ಮಾಸಲಳಿಯದಂತೆ ಮಿದಿವರೆವುದುರ್ವ ಬೀಸುವವರನು ಬೆಸಸುವುದು (ಕದಂಬ. ೬-೦೬). ೪. ನಾಶವಾಗು ; ಹತವಾಗು : ಈಸು ದೈತ್ಯರು ನಿನ್ನ ಕೈಯಲಿ ಘಾಸಿಯಾದವರು ಮಂಗಳನೊಬ್ಬನು ಮಾಸಲಳಿಯನು ಗಡ (ಕುಮ್ಮಾಸ. ೨-೨೩). [ಮಾಸಲ್ + ಅಳಿ$_1$ (< ಅಱಿ$_1$)]

**ಮಾಸಲಾತಿ** (ನಾ). ಪರಿಶಿಷ್ಟ ಜಾತಿ, ವರ್ಗಗಳಿಗೆ ಕೆಲವು ವಿನಾಯಿತಿ, ಪ್ರವೇಶಾಧಿಕಾರ ಇತ್ಯಾದಿ ಸೌಲಭ್ಯಗಳನ್ನು ತೆಗೆದಿರಿಸುವಿಕೆ.– ಕಾಯ್ದಿರಿಸುವಿಕೆ. [< ಮಾಸಲ್]

**ಮಾಸಲಿಡು** (ಕ್ರಿ). (ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ಯಾವುದಾದರೂ ವಸ್ತು ಇತ್ಯಾದಿಗಳನ್ನು ಉಪಯೋಗಿಸದೆ) ಪ್ರತ್ಯೇಕವಾಗಿಸು : ಮುಡಿಪಾಗಿಡು : ಮನುಕುಲದ ಕಲ್ಯಾಣ, ಬಾಳಿಗಿದುವೆ ಧ್ಯಾನ/ ಮಾಸಲಿಡುವೆನು ಅದಕೆ ನನ್ನ ತನು ಮನ ಪ್ರಾಣ (ಸ್ವದರ್ಶ. ೩); ದೇವಾಲಯಕ್ಕೆ ಸೇರಿದ ಭೂಮಿಯನ್ನೇ ಇದಕ್ಕಾಗಿ ಮಾಸಲಿಡುವುದು (ಶಾಸನ. ೩೩) ; ಇಡಿಯ ಜೀವನವನ್ನೇ ಈ ಕಲೆಗಾಗಿ ಮಾಸಲಿಟ್ಟ ಮಹಾನುಭಾವರಿವ್ವಾರೆ (ರಂಗರೂ. ೧೦೬). [ಮಾಸಲ್ + ಇಡು$_1$]

**ಮಾಸಲು** 'ಮಾಸಲ್' ನೋ.

**ಮಾಸಲುಕಂಪು** 'ಮಾಸಲ್ಕಂಪು' ನೋ.

**ಮಾಸಲುಕಟ್ಟು** (ಕ್ರಿ). ದೇವರಿಗೆ ಹರಸಿಕೊಂಡ ಕಾಣಿಕೆಯ ಪದಾರ್ಥವನ್ನು ಪ್ರತ್ಯೇಕವಾಗಿ ತೆಗೆದಿಡು ; ಮುಡಿಪು ಕಟ್ಟು : ಕರಿಯಮ್ಮನಿಗೆ ಮಾಸಲು ಕಟ್ಟಿದರು (ಳಳಹು. ೯). [ಮಾಸಲು (< ಮಾಸಲ್) + ಕಟ್ಟು$_{II}$]

**ಮಾಸಲುಗವಿತೆ** (ನಾ). (ಶಿವನ ಸ್ತುತಿಗಾಗಿ ಮಾತ್ರ) ಮುಡಿಪಿಟ್ಟ ಕವಿತೆ,– ಕಾವ್ಯ : ಇದು ಮಾಸಲುಗವಿತೆ ಇದು ಘಾತಕರುಗಳಿಗೆ ಅಸಾಧ್ಯ (ಸಕಪ. II, ೩೮೯-೦೦೨೪) ; ಭವಿಗಳನು ತುತಿಸಿದೆನಾದೊಡೆ ಸಲೆ ಶಿವಮೂಪಕ ನಾನೆಂಬತಿಬಿರುದಿನ ಶಿವಕವಿ ಹಂಪೆಯ ರಾಘವ ಪಂಡಿತನೆನಲೀ ಮಾಸಲುಗವಿತೆಯ ಚಿತ್ತೈಸುವುದೆರಡಱಿಯದ ನಿಚ್ಚಟರು (ಖರೇಶ. ೦-೯).

[ಮಾಸಲು (<ಮಾಸಲ್) + ಕವಿತೆ]

**ಮಾಸಲುಗಳೆ** 'ಮಾಸಲ್ಗಳೆ' ನೋ.

**ಮಾಸಲುಗೆಡು** (ಕ್ರಿ). ಮಾಸಲಳಿ ; ಅಪವಿತ್ರವಾಗು : ದೇವಾರ್ಚನೆಯ ಕಾಲಂಗಳಲಿ ಮಾಸಲುಗೆಟ್ಟ ಸಾಧನಗಳಲಿ ಪೂಜೆಯ ಮಾಡೆ ನಿಷ್ಫಲವು (ಪ್ರಭುಲೀ. ೬-೧೦). [ಮಾಸಲು (< ಮಾಸಲ್) + ಕೆಡು$_1$]

**ಮಾಸಲುಜವ್ವನೆ** (ನಾ). (ಯೌವನವನ್ನು ಮುಡಿಪಾಗಿಟ್ಟ) ತರುಣಿ : ಮಾಸಲುಜವ್ವನೆಯರ ರಾಜಮೋಹಿವಿಲಾಸದಿಂದೊಡಗೂಡುವಾಗ ಆ ಸುವಿವಡಕದೋಳಹುದೆ (ಭರತ. ೩೦-೦೦೯). [ಮಾಸಲು (<ಮಾಸಲ್)+ಜವ್ವನೆ]

**ಮಾಸಲುನೀರು** (ನಾ). ದೇವರ ಹೆಸರಿನಲ್ಲಿ ಪ್ರತ್ಯೇಕವಾಗಿ ತೆಗೆದಿರಿಸಿದ ಪವಿತ್ರಜಲ : ಈ ನೀರು ಎಂದಿಗಿಂತ ಶುದ್ಧವಾಗಿದ್ದು ದೇವರ ಕಾರ್ಯಕ್ಕಾಗಿ ದೇವರ ಹೆಸರಿನಲ್ಲಿ ತೆಗೆದಿರಿಸಿದ್ದು. ಆದ್ದರಿಂದಲೇ ಇದಕ್ಕೆ ಮಾಸಲುನೀರು ಎನ್ನುವುದು (ಜೋಡಿದೇ. ೩೨).

[ಮಾಸಲು (< ಮಾಸಲ್) + ನೀರು$_1$ (< ನೀರ್)]

**ಮಾಸಲುಮುರಿ** (ಕ್ರಿ). ಉಪಯೋಗಿಗೊಳ್ಳು ; ಉಪಭೋಗಿಗೊಳ್ಳು : ಎಳೆನಗೆಯಂ ಇಳೆ ಚಿಗಿಯಲಿ ಮರುಕೊಳಿಸಲಿ ಹೂವು . . . ತುಂಬಲಿ ತುಳುಕದೆ ಸೂಸಲಿ, ಮಾಸಲುಮುರಿಯದೆಯೆ (ಸೂರ್ಯಶಾ. ೬-೦೩) ; ತಾವು ಗರ್ಭಿರೋಗದಿಂದ ನಾಲ್ಕಾರು ಸಲ ಆಸ್ಪತ್ರೆಯನ್ನು ಕಂಡಿದ್ದರೂ ಕೂಡ ಮಾಸಲುಮುರಿಯದ ಹೆಣ್ಣನ್ನೇ ಮದುವೆಯಾಗಲು ಬಯಸುತ್ತಾರೆ (ಎಡಹ. ೯೯). [ಮಾಸಲು (< ಮಾಸಲ್) + ಮುರಿ$_1$ (< ಮುಱಿ$_1$)]

**ಮಾಸಲುಸ್ಥಾನ** (ನಾ). ೧. (ಸಭಾಮಂದಿರ ಮೊದಲಾದ ಕಡೆಗಳಲ್ಲಿ) ಕಾದಿರಿಸಿದ ಆಸನ,– ಪೀಠ : ಕಾಯ್ದಿಟ್ಟ ಪೀಠಗಳು ; ಮಾಸಲು ಸ್ಥಾನಗಳು (Reserve Seats. ಶಕ್ತಿಪಿ. ೭೦). ೨. ಚುನಾವಣೆಗಳಲ್ಲಿ ಕೆಲವು ವರ್ಗಗಳಿಗಾಗಿ ಕಾಯ್ದಿಟ್ಟಿರುವ ಅವಕಾಶ.

[ಮಾಸಲು (< ಮಾಸಲ್) + ಸ್ಥಾನ]

**ಮಾಸಲೋಗರ** (ನಾ). (ದೇವರ ನೈವೇದ್ಯಕ್ಕಾಗಿ) ಪ್ರತ್ಯೇಕವಾಗಿ ಸಿದ್ಧಪಡಿಸಿದ ಆಹಾರ : ಒಂದು ಕಯ್ಯೊಳು ಮಾಸಲೋಗರಮುಮಂ ಪಿಡಿದು ಒಂದು ಕಯ್ಯೊಳು ಬಿಲ್ಲನಂಬನಳವಡೆ ಪಿಡಿದು (ಕನ್ನರ. ದೇ. ೦೩೬-೦೩).

[ಮಾಸಲ್ + ಓಗರ]

**ಮಾಸಲ್ಕಂಪು**, ಮಾಸಲುಕಂಪು (ನಾ). ಯಾರೂ ಮೂಸಿ ನೋಡದ ಕಂಪು ; ಅನಾಘ್ರಾತವಾದ ಕಂಪು : ಅತಿಮುದದಿಂ ಸೂಸಿದರ್ ದೇವಲೋಕದ ಮಾಸಲ್ಕಂಪೊಗೆವ ಪಾರಿಜಾತದ ಪೂವಂ (ಕನ್ನಾಸ್ತ್ರ. ೬-೩೯). **ಮಾಸಲುಕಂಪು** : ನಳನಳಿಸುವ ಪೂವಿನ ಮಾಸಲುಕಂಪನಳಿಗಳೆಂಜಲಿಸುಗುಮೆಂದು ತಳೆದಲೊರ್ವಳು ಚಂಪಕಗಂಧಿ ಕುಸುಮಾಕಳಿತ ಪಟಲಿಕೆಯನೊಸೆದು (ಕುರುಕ್ಷಾ. ೬-೫೧). [ಮಾಸಲ್ + ಕಂಪು]

**ಮಾಸಲ್ಗಳೆ**, ಮಾಸಲುಗಳೆ (ಕ್ರಿ). ೧. ಮಾಸಲು ಒಪ್ಪಿಸು ; ನೇಮವನ್ನು ಸಡಿಲಿಸು : ಶಿವಪೂಜೆಗೆ ನವಯೌವನಮಾದಂತುನ್ನತ್ತ ಪಂಚ

ವಿಂಶತಿಪ್ರಾಯಮಾಗಿ ಮೀಸಲ್ಗಳೆಯಲಿರ್ದ ಮನೋರಥದಂತೆ . . . ಪರಿಮಿತದೊಳಿರಲ್ (ಶಬರ. ೧೧-೫). ೨. ಗಳಿಗೆಮುರಿ : ಮೆಲ್ಲುಡಿಗೆಗಳಿಂ ಮೀಸಲ್ಗಳೆದುಡಿಗೆಗಳಿಂದಂ ಸನಾಂದ್ಯಮಂ ಮನ್ನಿಸಿದಂ (ಅಜಿತ. ೯-೬೦). **ಮೀಸಲುಗಳೆ :** ೩. ವಿಶಿಷ್ಟತೆಯಿಲ್ಲವಾಗು ; ವಿಶೇಷವಿಲ್ಲವಾಗು : ಹಳಸಿದಗ್ಗಳಿಕೆಗಳ ಮೀಸಲುಗಳೆದ ಬಿರುದಿನ ಮಾನಭಂಗದ ಕಳವಳದ ಕನಸುಗಳಲಿದ್ದುದು ರಾಯನಾಸ್ಥಾನ (ಕುಮಾ.ರಾ. ೧-೨೦).

[ಮೀಸಲ್ + ಕಳೆ$_1$]

**ಮೀಸಲ್ದೆಗೆ** (ಕ್ರಿ). ಮುಡಿಪಿಗಾಗಿ ಬೇರೆಯಾಗಿ ತೆಗೆದಿಡು, – ಪ್ರತ್ಯೇಕವಾಗಿ ತೆಗೆದಿರಿಸು : ಬಗೆಗಾಣಿರ್ಗೆಂದು ಮೀಸಲ್ದೆಗೆದನುವಿನೆರಟ್ಬಿಂಡಿ ಬೇಟಿರ್ಪುದು (ಶಕಬ. ೬-೬೦). [ಮೀಸಲ್ + ತೆಗೆ$_1$]

**ಮೀಸಲ್ಪಡೆ** (ನಾ). (ಆಪತ್ತಿನ ಸಮಯಲ್ಲಿ ಮಾತ್ರ ಬಳಸಲಾಗುವ, ಕ್ರಮವಾದ ಸೈನ್ಯದಿಂದ ಬೇರೆಯಾದ) ಕಾಯ್ದಿರಿಸಿದ ಸೈನ್ಯ : ತ್ರಿಶಿರಂಗೆ ಬೆಸಸು ಪೆರ್ಬಾಗಿಲ್ಗಳಂ ಬಲಿಸಿ ನಿಲ್ವಂತೆ ನುರಿತ. ಮೀಸಲ್ಪಡೆಗಳಂ (ತ್ರೀರಾಮ. ೬೫೬-೯೦೯). [ಮೀಸಲ್ + ಪಡೆ$_2$]

**ಮೀಸಲ್ವಾಯ್** (ನಾ). ಮೀಸಲಾದ ಬಾಯಿ ; ಚುಂಬಿಸದ ಬಾಯಿ : ಕವಿದು ಮಧುಪಾಳಿ ಕುಡಿವಾಸವಪಾತ್ರಂ ತಾನುವೇಕೆ ಗಡೆನಗೆನುತಾ ರೂಪವತಿಯ ಮೀಸಲ್ವಾಯ್ ನಗುವವೊಲೆಸೆವುದು ರಾಗದೊದವಿನಿಂ ಬಂಧುಗೆಯಂ (ಪರ್ವತ. ೯-೨೫). [ಮೀಸಲ್ + ಬಾಯ್]

**ಮೀಸಲ್ವಾಯ್ದುಟಿ** (ನಾ). ಮೀಸಲಾದ ತುಟಿ ; ಅಚುಂಬಿತವಾದ ತುಟಿ : ಮೀಸಲ್ವಾಯ್ದುಟಿನಗೆ ಪೊಣಸೂಸದ ಕಣ್ ಬಳಸಲೆಳಸದೊಳ್ದೊಡೆ ಲಜ್ಜಾ ಭಾಸಮನೋಸರಿಸದ ಬಗೆ ಮಾಸರಮಾಯ್ತುವರೊಳಡರ್ದ ಕೊಡಗೂಸುತನಂ (ಚಂದ್ರ.ಪು. ೬-೯೯). [ಮೀಸಲ್ + ಬಾಯ್ದುಟಿ$_2$]

**ಮೀಸಲ್ವಾಸಿಗ** (ನಾ). ಮುಡಿಪಾಗಿ ಇರಿಸಿದ ಹೂವಿನ ದಂಡೆ : ಮಾಲೆಗಾರ್ತಿಯರ ಘಟ್ಟಿವಳ್ತಿಯರಂಗಪರಿಮಳದೊಳ್ ದಳಂಬಡೆದು ಮಡುಗಟ್ಟಿ ಪರಿವ ಮೀಸಲ್ವಾಸಿಗದೋಗರದಣ್ಪಿನ ಸೌರಭಸಂಗಮದೋಳೀಸುವಂತೆ ವಿಳಾಸದಿಂ ಮಸುಳ್ದು ಬರ್ಪಾರ್ಗಳ್ (ಅಜಿತ. ೬-೦ ವ).

[ಮೀಸಲ್ + ಬಾಸಿಗ]

**ಮೀಸಲ್ವೋಗಿಸು** (ಕ್ರಿ). ಮುಡಿಪನ್ನು ನಾಶಗೊಳಿಸು ; ಮೀಸಲು ಮುರಿ : ಏಗುವೆನೇಗುವೆಂ ಕುಲಮಂ ಕಲಂಕಿದಂ ಮಂಗುಳಂ ಮೀಸಲ್ವೋಗಿಸಿದಂ ಶೀವಿದಮೃತಮಂ ತುಳುಂಕಿದಂ (ಶಬರ. ೦೨-೬೦).

[ಮೀಸಲ್ + ಪೋಗಿಸು]

**ಮೀಸು** 'ಮೀಯಿಸು' ನೋ.

**ಮೀಸೆ** (ನಾ). ೧. ಗಂಡಸಿನ ಮೇಲ್ದುಟಿಯ ಮೇಲೆ ಬೆಳೆಯುವ ಕೂದಲು ; ಶ್ಮಶ್ರು : "ಶ್ಮಶ್ರುವೆಂಬುದು ಮೀಸೆ" (ಹಲಾಯು. ೯೬-೩೬೦); ಕರ್ಪುರಂ ಕೈಕೊಂಡು ಕತ್ತುರಿಯಲ್ ಬರೆದಂತಪ್ಪ ವಿಕ್ರಾಂತತುಂಗನ ಮೀಸೆಗಳಾತನ ತೀವ್ರಪ್ರತಾಪಾನಳಧೂಮರೇಖೆಯಂತಾದುವು (ಶಂಕರ. ೨-೩೯ ವ) ; ಕಸ್ತೂರಿಕಾಪಂಕದಿಂ ಬರೆದಂತಿರ್ದುವು ಮೀಸೆ (ಪುಷ್ಪ.ಪು. ೯-೬೬). ೨. ಹುಲಿ, ಬೆಕ್ಕು ಮೊದಲಾದ ಪ್ರಾಣಿಗಳ ಮುಖದ ಮೇಲಿರುವ ಬಿರುಸಾದ ಕೂದಲು: ಪುಲಿಯ ಮೀಸೆಯನಂಜದುಯ್ಯಲನಾಡಲಪ್ಪುದು (ಧರ್ಮಾಮೃ. ೦-೦೬೯) ; ಪುಲಿಗಳ ಮೀಸೆಯನುಯ್ಯಲಾಡಲೆ ನಂಜನೆಂಜಲಿಸಲುಮಟ್ಟಿಯೆ ಕಾಳಕೂಟಮುಂ (ಕಾವ್ಯಾ.ಪ. ೮೨); ಹುಲಿಯ ಮೀಸೆಯ ಹಿಡಿದುಕೊಂಡು ಒಲಿದುಯ್ಯಲೆಯಾಡುವಂತೆ (ಬಸವ. ೬೬೦ ಅ) ; ಹುಸಿದಾರ್ಭಟಿಸುವ ಹುಲಿಯ ಮೀಸೆಯ ಮಜ್ಜಿಶತಕ ಬಂದಲುಗಿಸುವಂತೆ (ಕೌಶಿಕ. ೦೬-೨೯).

**ಮೀಸೆತಿಕ್ಕು** = ಮೀಸೆಯನ್ನು ತೀಡು, – ಮಾಲೀಸು ಮಾಡು : ಅಂಬಲಿ ಕುಡಿಯುವವನಿಗೆ ಮೀಸೆ ತಿಕ್ಕುವವರು ಇಬ್ಬರು (ಗಾದೆ). **ಮೀಸೆ ಬರು** = (ಆಲಂ) ಪ್ರಾಯಕ್ಕೆ ಬರು : ಮೀಸೆ ಬೀಪ ಜವ್ವನದಂತೆ ಪೊತ್ತಿಸಿದ ಸೊಡರಂತೆ ದರ್ಶನದೆಂಟಂಗದೊಳಂ ಮುನ್ನಂ ಸಂಪೂರ್ಣನಾಗಿ ನೆರೆದು (ಧರ್ಮಾಮೃ. ೦೦-೫). **ಮೀಸೆಬೋಳಿಸು** = ಮೀಸೆಯನ್ನು ತೆಗೆ : ದಿಬ್ಬಣಕ್ಕೆ ಬಂದ ಅವರ ಆನೆಗಳಿಗೆ ಹೊಟ್ಟೆಯುಬ್ಬುವಂತೆ ತಿನ್ನಿಸದಿದ್ದರೆ ನನ್ನ ಹೆಸರ ಬದಲು ಮಾಡಿರಿ, ನನ್ನ ಮೀಸೆ ಬೋಳಿಸಿರಿ (ಜನಪ್ರಿಯಾ. ೦೬). **ಮೀಸೆಮಣ್ಣಾಗು** = (ಆಲಂ) ಅಪಮಾನವಾಗು ; ಅಪಮಾನ ಹೊಂದು : ಜಟ್ಟಿ ಜಾರಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲ (ಗಾದೆ). **ಮೀಸೆಯ ಮುರಿ** = ಮೀಸೆಯ ತುದಿಯನ್ನು ತಿರುಚು : ಮುಳಿದು ಮೀಸೆಯ ಮುರಿದು ಹುಬ್ಬನು ಬಲಿದು . . . ಭಾರ್ಗವದತ್ತ ಬಾಣಕೆ ನೀಡಿದನು ಕರವ (ಕುಮಾ.ದ್ರೋ. ೦೩-೫೦). **ಮೀಸೆಯ ಮೇಲೆ ಕೈಯಿಳೆ** = (ಪೌರುಷದ ಸೂಚಕವಾಗಿ ಅಥವಾ ಸ್ಪರ್ಧೆಗಾಗಿ) ಮೀಸೆಯ ಮೇಲೆ ಕೈಯಿರಿಸು : ಗೌಡನ ಪಕ್ಷದ ಗರಡಿಯಾಳುಗಳು ಓಣಿಯಲ್ಲಿ ನಿಂತು ಮೀಸೆಯ ಮೇಲೆ ಕೈಯಿಳೆಯ ತೊಡಗಿದರು (ಜನ್ಮ.ಹ. ೦೯೩). **ಮೀಸೆಯರ ಗಂಡ. ಮೀಸರಗಂಡ** = ಪರಾಕ್ರಮದ ಕುರುಹಾಗಿ ಮೀಸೆ ಬೆಳೆಸಿರುವವನಿಗೂ ಮೀರಿದ ಪರಾಕ್ರಮಿ ; ಶೂರರ ಶೂರ ; ಒಂದು ಬಿರುದು : ಮೀಸೆಯರ ಗಂಡ ಚಿಕ್ಕಬಯಿರಯನಾಯಕನ ಮಗ ಹೊನ್ನಮಾರಯನಾಯಕನೂ . . . ಶಿಲಾಶಾಸನವ ಮಾಡಿಕೊಟ್ಟರು (ಎಕ. IX, ಬೆಂಗಳೂ. ೨೦-೦೦ ; 1342) ; ಮೀಸರ ಗಂಡನೆಂದೆಂಬ ಬಿರುದಿನಿನ್ನಾಸೆಯಾಕವಳಿಗಾನಳ್ಕಿ ಪೈಸರಿಸಿದೊಡರಿನೃಪರೆಮ್ಮನು ಪರಿಹಾಸಕವನು ಮಾಡದಿಹರೆ (ಕುಶಲಾ. ೬೨-೦೬).

[ದೇ.॥ ತಮಿ. ಮೀಚೈ, ವೀಚೈ ; ಮಲ. ಮೀಶ ; ತುಳು. ಮೀಸೆ ; ತೆಲು. ಮೀಸ ; ಗೊಂಡಿ. ಮೀಸಾಂಗೆ ; ಕುರುಖ್. ಮಿಸೀ. ಮಿಚೀ]

**ಮೀಸೆಗಡಿ** (ಕ್ರಿ). (ಕೋಪದಿಂದ) ಮೀಸೆಯನ್ನು ಕಚ್ಚಿಕೊಳ್ಳು : ಕೇಳುತಿರ್ದನು ಕರ್ಣನಿವನಾಭೀಳವಚನವನಧಿಕರೋಷಜ್ವಾಲೆ ರ್‍ಝಳಿಸೆ ಮೀಸೆಗಡಿದನು ತೂಗಿದನು ಶಿರವ (ಕುಮಾ.ಕ. ೯-೦೨) ; ವಾಸವಾರಿಯ ಕಣ್ಣುಗಳು ಹೊಗೆಸೂಸೆ ಬಾಯುಲಿ ನೊರೆಗಳುಕ್ಕಲು ಮೀಸೆಗಡಿವುತ್ತಿರಲು ಹಲುಗಿರಿದೇಡಿಸಿದ ಹನುಮ (ತೊರವೆ. ೨೨-೦೦). [ಮೀಸೆ + ಕಡಿ$_1$]

**ಮೀಸೆಗೀಳ್** (ಕ್ರಿ). ಮೀಸೆಯನ್ನು ಕಿತ್ತು ತೆಗೆ : ಬಾಯನೊಡೆಬಡಿ ಮೀಸೆಗೀಳ್ ಕುರುಳ್ಗೊಯ್ . . . ಎನುತೆ ಜಡಿದಮರಕುಲಮಂ ಹೋಯೆನುತೆ ಬಪ್ಪಸುರರಂ ಕಂಡು (ಶಾಂತಿ. ೯೯-೯೯).

[ ಮೀಸೆ + ಕೀಳ್$_1$ (< ಕೀಟ್$_1$) ]

**ಮೀಸೆದಿದ್ದು** (ಕ್ರಿ). ಮೀಸೆಯನ್ನು ತಿಕ್ಕು, – ತೀಡು : ಮೀಸೆದಿದ್ದುವ ಕೈಗಳಲ್ಲಿಂದೋಸರಿಸವರಸುಗಳ ಬೆಳ್ಳೆಲೆಯಾಸಿಕೊಂಬಾ ಕೈಗಳಲ್ಲಿಯೆ ನಿಂದವು (ಶಾಲ್ಯ.ಶಾ. ೬೬-೫೨). [ ಮೀಸೆ + ತಿದ್ದು$_1$ (< ತಿರ್ದು$_1$) ]

**ಮೀಸೆದೆಟ್** (ನಾ). (ಪೌರುಷದ ಕುರುಹಾಗಿ) ಮೀಸೆಯನ್ನು ಹೊತ್ತಿರುವುದಕ್ಕಾಗಿ ವಿಧಿಸಿದ ತೆರಿಗೆ : ಪಾಡೂಳಗೆ ಮೀಸೆದೆಟಿಯಂ ಬೇಡಿಸುವಂ (ಧರ್ಮಪ. ೬-೫೯). [ಮೀಸೆ + ತೆಟ್$_3$]

**ಮೀಸೆವೊಱು** (ಕ್ರಿ). (ಪರಾಕ್ರಮದ ಗುರುತಾಗಿ) ಮೀಸೆಯನ್ನು ಹೊಂದು : ಸಭಾವಳಯದೊಳೆನ್ನನೇಳಿಸಿದ ನಿನ್ನನನಾಕುಳಮೆನ್ನ ಚಟ್ಟರಿಂ ತಳವೆಳಗಾಗೆ ಕಟ್ಟಿಸದೆ ಮಾಣ್ಬೊಡೆ ಕೆಮ್ಮ[ನೆ] ಮೀಸೆವೊತ್ತನೇ (ಶಂಕರ. ೨-೫೦) ; ಪೊಲೆವೆತ್ತ ತ್ರೈಲಜನನಿಯ ಕೆಲದೊಳ್ ರಂಜಿಪರೆ ಮೀಸೆವೊತ್ತಣ್ಣಂಗಳ್ (ಅಜಿತ. ೦-೬೫). [ಮೀಸೆ + ಪೊಱು]

**ಮೀಹ** (ನಾ). ೧. ಸ್ನಾನ ; ಜಳಕ: ಮೀಹಮಂ ತೊಟಿದು ಕಂಡರ್ಪೇಸೆ ಮೆಯ್ಯೊಳ್ ಮಹಾಮಲಮಂ ತಾಳ್ದದ ಕಷ್ಟರಂ ಸವಣರಂ ಕಂಗೆಟ್ಟರಂ ಕಂಡು (ಧರ್ಮಾಮೃ. ೦-೦೦೬); ತೊಡೆಯನೇಱಿದಳಂಬಿಕಾಮಾತೆ ವ್ಯಾಜದಿಂ ಜಡಮನಿತ ಶಿರಮನೆಡರಲ್ ಮೀಹ ತಡೆಯೆ ತಲೆ ಜಡೆಗಟ್ಟಲು

(ಶಾಶಸಂ. ೮-೨); ಎಣ್ಣೆಯಿಲ್ಲದ ಮಿಾಹ ಸುಣ್ಣವಿಲ್ಲದ ವೀಳೆ . . . ಮುಳಲೊಳಗೆ ಎಣ್ಣೆ ಹೊಯಿದಂತೆ (ಸರ್ವಜ್ಞ. ೭೬೨೦). ೨. ರಜಸ್ವಲೆಯು ನಾಲ್ಕನೆಯ ದಿನದಲ್ಲಿ ಮಾಡುವ ಸ್ನಾನ ; ಋತುಸ್ನಾನ: 'ಮಿಾಹಂದಪ್ಪು' ಪರಾ.

**ಮಿಾಹದ ಮನೆ** = ಸ್ನಾನಗೃಹ; ಬಚ್ಚಲುಮನೆ: ಅವನಿಸುರನಿರು ಳೊಂದು ಪಶುವಿನ ಹಿಂದೆ ಹೋಗುತ ಮುಂದೆ ದೂಳಯ್ಯಗಳ ಮಿಾಹದ ಮನೆಯ ಕೆಲದಲ್ಲಿ ಮಂದಯಿಪ ಜಲಪಂಕ ಊರುಗಳೊಂದಿ ನೆನೆಯಲು (ಬಸಪು. ೫೬-೫೨). [ಮಿಾ₁ + –ಹ₂ (<–ಪ₂)]

**ಮಿಾಹಂದಪ್ಪು** (ಕ್ರಿ). ಋತುಸ್ನಾನದ ಅವಸ್ಥೆಯನ್ನು ಮಿಾರು: ಮುಟ್ಟು ನಿಲ್ಲು : ನಾಲ್ವತ್ತೆರಡಾ ಪ್ರೌಢಾಸ್ಪದವಾಕೆಗೆ ಮಿಾಹಂದಪ್ಪ ದಂಗನೆಗಂ ಮೇಲೆ ಲೌಲ್ಯಗಬ್ದಂ ವಸಿತೆ (ಸುದಶ. ೬-೨). [ಮಿಾಹ + ತಪ್ಪು₁]

**ಮಿಾಹಣ** (ನಾ). = ಮಿಾಹ ೧ : ವರಮಿಾಹಣದ ಗೃಹವ ನೋಡುತ್ತ ಬಿಜ್ಜಳ ಧರಣಿಪನ ರಾಣಿವಾಸವ ನೂಱಯುಪ್ಪತ್ತು ಬೇಱೆಬೇಱೀಕ್ಷಿಸುತ್ತ ಮುಂದೆ ಬರೆ (ಶ್ರೀಶರಾ. ೨೦-೯); ವೈದ್ಯಶಾಸ್ತ್ರವನ್ನು ಚೆನ್ನಾಗಿ ತಿಳಿದಂಥಾ ವೈದ್ಯನು ಎಣ್ಣೆಯ ಪ್ರಮಾಣವಂತು ಮಿಾಹಣವ ಮಾಡಿಸುವುದು (ಸಶಪ್ಯ. ೩೦). 'ಮಿಾಯಣ' ಪರಾ. [ಮಿಾಹ + –ಅಣ]

**ಮಿಾಳಿತ** 'ಮಿಾಲಿತ' ನೋ.

**ಮಿಾಳಿತಾಲಂಕಾರ** 'ಮಿಾಲಿತಾಲಂಕಾರ' ನೋ.

**ಮಿಾಱಿತ** (ನಾ). ಉಲ್ಲಂಘಿಸುವಿಕೆ ; ಅತಿಕ್ರಮಿಸುವಿಕೆ: ಬಗೆವಡೀ ಕನಸು ಗುರುವಾಜ್ಞೆಯಂ ಮಿಾಱಿತಕ್ಕೊಗೆವ ಕೇಡಿಂಗೆ ಸೂಚನೆ (ಪಕಳಾ. ೬-೫೬). [< ಮಿಾಱು + – ತ₂]

**ಮಿಾಱಿಸು**, ಮಿಾರಿಸು (ಕ್ರಿ). ೧. ಉಲ್ಲಂಘಿಸು ; ಅತಿಕ್ರಮಿಸು: ಲಲನಾಸಂಭೋಗರೋಗಂ . . . ಸಲೆ ಲಜ್ಜಾಭಾವವಂ ಮಿಾಱಿಸುತುವಿುದೆ (ರತ್ನಶ. ೨೬). **ಮಿಾರಿಸು** : ೨. ಹಿಂದೆ ಹಾಕು; ಸೋಲಿಸು : ಎಲೈ ಅಗ್ನಿಯೆ . . . ನೀನು ಸಾಮರ್ಥ್ಯದಲ್ಲಿ ಉಳಿದ ದೇವತೆಗಳೆಲ್ಲರನ್ನೂ ಮಿಾರಿಸಿದ್ದೀಯೆ (ಋಗ್ವೇ. ೨೬); ದೇಹದಾರ್ಢ್ಯದಲ್ಲಿಯೂ ನನ್ನನ್ನು ಮಿಾರಿಸಿದ್ದನು (ತಂಗಾಳಿ. ೯೦). [ಮಿಾಱು + — ಇಸು₃]

**ಮಿಾಱು**, ಮಿಾರು (ಕ್ರಿ). ೧. (ಮಾತು, ಅಪ್ಪಣೆ, ಆಣೆ, ವಿಧಿ ಇತ್ಯಾದಿಗಳನ್ನು) ಅತಿಕ್ರಮಿಸು; ಉಲ್ಲಂಘಿಸು: "ಮಿಾಱು–ಅತಿಕ್ರಮಣೇ" (ಶಮಃದ) : ಆಱುಂ ವೃತ್ತಿಗಳನಿವಂ ಮಿಾಱಿದರಲ್ಲರ್ ದ್ವಿಜನ್ಮರ್ (ಆದಿಪು. ೦೫-೦೪); ದೆಯ್ವಮನಾರಯ್ಯ ಮಿಾಱಿ ಬ್ರಾಟಲ್ ನೆಱೆವರ್ (ಶಂಶಧಾ. ೪-೩); ನುಡಿಯದೆ ಪೋಗಲೀಯೆನೆಲೆ ಪೋದೊಡೆ ಧೂರ್ಜಟಿಯಾಣೆ ಮಿಾಱಿ [ಪಾಠಾಂ. ಮಿಕ್ಕು] ಪೋದೊಡೆ ಕಲಿಭೀಮನಾಣೆ (ಗದಾಯು. ೪-೪೫); ಓಂ ನಮ ಶಿವಾಯ ಎಂಬ ಮಂತ್ರವ ಮಿಾಱಲಮ್ಮದೆ ನಿಂದುದು ವೇದ (ಬಸವ. ೮೦). ೨. (ಸ್ಥಳ, ಸೀಮೆ ಇತ್ಯಾದಿಗಳನ್ನು) ದಾಟು; ಹಾದು ಹೋಗು : ನಿರವದ್ಯನೆಂಬ ಮಂತ್ರಿ ಮಾರ್ಕಂಡು ನೀನೀ ಸ್ವಯಂಬರ ಮಂಟಪಮಾರ್ಗಮಂ ಮಿಾಱಲಾಗದೆನೆಯುಂ (ಶಾಪುಂಪು. ೫೬). ೩. ಪ್ರತಿಭಟಿಸು ; ವಿರೋಧಿಸು: "ತಳ್ಪೊಯ್, ತಡಂಬರೆ . . . ಮಿಾಱು, ತೊಡರ್, ಉರ್ಕ್ಕೆರ್, ಮಿಗು, ತಡಂಬೊಯ್–ಈ ೨೫ ಪ್ರತಿಹತಕ್ಕೆ ಪೆಸರ್" (ಶಶಸಾ. ೫೯-೨೯೬); ಪರಮಂಡಳವ್ಯಸನಮನಾರಯ್ದು ಮಾಪ್ಪೊಡಿತ್ತಂತೆತ್ತಂ ಬಾಟ್ಟ ಮಂಡಲಮಲ್ಲದೆ ಕೀಱೆಯುಂ ಮಿಾಱಿಯುಂ ನೆಗಟ್ದ ಮಂಡಲಮಿಲ್ಲ (ಶಂಶಧಾ. ೬-೬೭೮); ಆಱು ಪ್ರಜೆಯತ್ತಿಗೆಯರ ಮಿಾಱಲಾರೆನು ತಾಯೆ (ಕುಹಾದೇ. ಬಿ. ೦೪೩-೩೨೮). ೪. ಮುನ್ನುಗ್ಗು; ಧಾವಿಸು; ಮುಂದೆ ಹಾಯು: ಕದನದೊಳಿದಿರಂ ಮಿಾಱೆ ಮಾಱಾಂತು ನಿಂದಾಂತರಿ ಭೂಪರ್ ಭಸ್ಮಮಾದರ್ (ಕಾವ್ಯಸಾ. ೨೦೫ ಕೂದ್ರ೪); ಮಿಾಱುವ ಹಯವ ಮುಱಿಮುನುತ . . . ರಾವ್ತರ ಶಿರವನೆಚ್ಚನು ಕೊಂದನೀಪರಿ ಹತ್ತು ಸಾವಿರವ (ಕುವ್ಯಾಭ. ೩-೪). ೫. ಉದ್ಧಟತನವನ್ನು ತೋರು : ದರ್ಪದಿಂದ ಕೂಡಿರು; ಅಹಂಕಾರಪಡು : ಮಿಾಱುವಸುರಾಳಿ ದೈವವ ತೂಱುವವನೆಂದು ಮಿಾಱಿದವರಿಗೆ ತನ್ನ ಸೋಱೆಗೊಡುವವನೆಂದು ಅನುದಿನಾಗಮವು ಹೀಗೆನುತಿರಲು ಕೇಳಿದೆಂ (ರಂಗ್ನಾಹೋ. ೫-೩೦); ಮಿಾಱಿದ ದೈತ್ಯನುಪಟಳವ ಈಗ ಮಾಣಿಸು (ಕುವ್ಯಾದ್ರೋ. ೦೯-೬೬); ಮಿಾಱಿದ ಜಕ್ಕಮನ್ನೆಯನ ಮೇರೆಯಿಲ್ಲದ ಜಲವಾರಿಧಿಯನು ಮೋದಿದಾರುಭಟೆಯನೇವೇಳ್ವೆ (ಕಂಸಬಿ. ೩-೩೪). ೬. ಜಯಿಸು ; ಗೆಲ್ಲು : ಪುತ್ರವಿಮೋಹ ಮನಾರೊ ಮಿಾಱುವರ್ (ಸುಕುಮಾ. ೦೦-೩೨); ಕಾಲನನು ಮಿಾಱುವರಾರು (ಕುವ್ಯಾದ್ರೋ. ೭-೩೩). ೭. ನುಣುಚಿಕೊಳ್ಳು; ತಪ್ಪಿಸಿಕೊಳ್ಳು: ಹಿಡಿವೆನೆಂದೊಡೆ ಹಿಡಿಗೆ ಬಾರನವ್ವ . . . ತಡೆವೆನೆಂದೊಡೆ ಮಿಾಱಿ ಹೋದನವ್ವ (ಕುಹಾದೇ. ಬಿ. ೯೩-೯೬); ಸರಳಂ ಮಿಾಱುತೆ ಹರಿಣಂ ಸರಳಿಸಿತೈದಾಱನೇಳನೆಂಟೊಂಬತ್ತಂ (ಗಿರಿಕ. ೦-೯೦); ಮೂಱು ಗೋದಾನಕ್ಕೆ ದಕ್ಷಿಣೆ ಮೂಱುಹುದು ಕೇಳೆಂದು ರುಷಿಮತ ಮಿಾಱದೇವುದು (ಸಂಶಪ. ಶಂ. ೦-೨೪). ೮. ಉಪೇಕ್ಷಿಸು ; ನಿರ್ಲಕ್ಷಿಸು : ಅದಱಿಂದ ಧರ್ಮಪದ್ಧತಿಯ ನೀಕ್ಷಿಸಲಿವಳನಿಂದು ಮಿಾಱುವುದು ಮತವಲ್ಲೆಂದ (ಕೃಖಭಾ. ೦೦-೨೦). ೯. ಉಲ್ಲಂಘನೆಯಾಗು : ಅಂತು ಕಾರಣವಾತ ಮಾಡಿದನಂತರಿಸದಾ ಸಂಜೆ ಕರ್ಮವನಂತದಕೆ ಫಲವಾಯ್ತು ಸಂಧ್ಯಾಕಾಲ ಮಿಾಱದಿರೆ (ಸಂಶಪ. ೯-೫೬). ೧೦. ಹೆಚ್ಚಾಗು; ಅಧಿಕವಾಗು : ದ್ವಯವಿಡಿದುದಕ್ಕೆ ಎರಡಿಲ್ಲದೆ ಮಿಾಱಲಿಲ್ಲವಾಗಿ ಜಗವನಱಿವುದಕ್ಕೆ ದಿವಾರಾತ್ರಿಯಲ್ಲದೆ ಮಿಾಱಿ ತೋಱಲಿಲ್ಲವಾಗಿ ಸಂಸಾರವ ಹಱಿವುದಕ್ಕೆ ನಿಃಕಳಂಕ ಮಲ್ಲಿಕಾರ್ಜುನನಲ್ಲದಿಲ್ಲವಾಗಿ (ಮೋಳಿಮು. ೦-೦); ಮಿಾಱಿದ ಖೇದಮುಂ ಮುದಮುಮೊರ್ಮೆಯೆ ಕೋಕಚಕೋರಕೋಟಿಗಿಂತೇಱಿದುದು (ಶಮಸುಶಾ. ೧೦-೦೦). ೧೧. ಶ್ರೇಷ್ಠವಾಗು ; ಮಿಗಿಲಾಗು ; ಮೇಲಾಗು : ಮಾರ್ಗಕ್ರಿಯಾಲಿಂಗವಿಡಿದು ಮಿಾಱಿದ ಕ್ರಿಯಾಲಿಂಗಸಿದ್ಧಿ ಮಿಾಱಿದ ಕ್ರಿಯಾಲಿಂಗವಿಡಿದು ಕ್ರಿಯಾನಿಷ್ಪತ್ತಿಲಿಂಗಸಿದ್ಧಿ (ಬಸವ. ೮೬೬); ಸಲೆ ಸಮುನ್ನತ ಸನ್ನುತಿಗಳ್ಗೆ ಮಿಾಱಿದುದ್ವಾಕ್ಯಕಳಿಕಾಳಿ . . . ಒಪ್ಪೆ ಶಿವೆಯಂ ನಲಿದರ್ಚಿಸು ತೊಪ್ಪಿದಂ ನೃಪಂ (ಉದ್ಭಟ. ೪-೩): ಮೂರ್ತಿವ್ರಾತಮಂ ಮಿಾಱಿದ ಮಹಾಶಿವಮೂರ್ತಿಯಂ ಮತ್ತೆ ಖ್ಯಾತಲಿಂಗಸುಮೂರ್ತಿಯಾಗಿರಲೋತು ನಿಯಮಿಸಿ (ಬಸಪು. ೩೯-೦೪). ೧೨. (ಹರ್ಷೋದ್ರೇಕವನ್ನು) ತಡೆ; (ಸಂತೋಷಾತಿಶಯವನ್ನು) ನಿಗ್ರಹಿಸಿಕೊಳ್ಳು: ಅಂತು ಕಂಡು ಮಿಾಱಲಾಱದಿಂತೆಂದು (ಆದಿಪು. ೦೨-೩೦೮). ೧೩. ಹಿಡಿತಕ್ಕೆ ಸಿಕ್ಕದಿರು ; ಅಲಭ್ಯವಾಗು : ನಾಂ ತಳೆವೆನಾರ್ಪಿಂದೆ ವಿಜಯಮಂ ಮಿಾರ್ದೊಡೆ ಭವಾಂತರವನೈದಿಸದ ಮುಕ್ತಿಯಂ ಪಡೆದಪೆಂ (ಕೃಖಭಾ. ೦೦-೦೨) ; ಬೇಱೂರ ಸ್ನೇಹಕ್ಕೆ ಹಾಱಿ ಹೋಗುವನೆಗ್ಗ ಮಿಾಱಿದ ಶೂಲದ ಹೆಣಕೆ ನರಿ ನೆಗೆದು ಬಾಯಾಱಿ ಸತ್ತಂತೆ (ಸರ್ವಜ್ಞ. ೦೬೮೮). **ಮಿಾರು**: ೧. ಅವರ ಮಾತು ಮಿಾರಿದ ದೋಷಕ್ಕೆ ನಾವು ಪಾತ್ರರಾಗುವೆವು (ಕುಮಾರಿಯು. ೪-೪೮); ತಾರತಮ್ಯವರಿಯದವ ದೊರೆಯಲ್ಲ, ಮಾತು ಮಿಾರಿದವ ಸೇವಕನಲ್ಲ (ಗಾದೆ). ೨. ದಿಟ್ಟಿಯನೆ ಮಿಕ್ಕು ಮಿಾರುವ ಜವದಿ ಮುಟ್ಟಿ ಮುಟ್ಟದೆ ನೆಲಂ ಮೆಟ್ಟಿ ಮುಂಚುವ ಹರಿಣಶಿಶುವ ಸೌಂದರ್ಯಕ್ಕೆ ಬಗೆಸೋತು . . . ತಕ್ಕನೆಯೆ ಬೆಂಬತ್ತಿದಳ್ ಕನ್ಯೆ (ಶಕ್ರಾಂಗ. ೩-೬೬); ಮೇರೆಯ ಮಿಾರದೆ ಚಲಿಸುವ ಧಾರಿಣಿಯಂ ಪೊತ್ತು ಪೊರೆವ ಕಾರಣದಿಂದಂ ಗೌರವ ಮಹಿಮಾಸ್ಥೈರ್ಯಧಾರರ್ ಶೇಷಂ ಹಿಮಾಚಲಂ ನೀನುಂ ದಲ್ (ರ್ಯಶಾಲೋ. ೨೪೪). ೧೦. ವಟ್ಟೆಳತ್ತು ಲಿಪಿಯ ಚರ್ಚೆಯಲ್ಲಿ ನಿಜಾಂಶಕ್ಕೂ ಮಿಾರಿದ ಗಾಳಿ ಸವಾರಿಯ ಚಕಮಕಿಯಿದೆ (ದ್ರಾಶಿ. ೫೬).

[ದೇ. ೫ ತಮಿ. ಮಿಾಱು, ವೀಱು ; ಮಲ. ವೀಱು ; ತುಳು. ಮಿಾರು ; ತೆಲು. ಮಿಾರು, ಮಿಾಱು ; ಗೊಂಡಿ. ವೀರಾನಾ; ಕುಇ. ಮಿಾಜ್]

**ಮಿಾಱುಂಜೌವನ** (ನಾ). ತುಂಬುಪ್ರಾಯ ; ಪೂರ್ಣಯೌವನ : ವನಿತಾಮಣಿಯುಂತೊಪ್ಪುವ ರೂಪಿಗೆ ಮಿನುಗುವ ಮಿಾಱುಂಜೌವನವೇಱಿ ವಿರಾಜಿಸುತಿರೆ ಕಂಡು (ಜಯಸಾ. ೩-೬೪). [ಮಿಾಱು + ಜೌವ್ವನ (< ಜವ್ವನ)]

**ಮಿಾಱುಹ** (ನಾ). ಮಿತಿಯನ್ನು ಮಿಾರುವಿಕೆ; ಉಲ್ಲಂಘನೆ : "ಅತ್ಯಾಧಾನಂ, ಅತಿಕ್ರಮಃ – ಈ ೨ ಮಿಾಱುಹ" (ಕರ್ಣಾಸು. ೦೨೪–೬೯). 'ಕೆಯ್ಮಿಾಱುಹ' ಪರಾ. [ ಮಿಾಱು + – ಹ$_2$ (< – ಪ$_2$) ]

**ಮುಂ$_1$** ' ಮುನ್$_1$ ' ನೋ.

**ಮುಂ$_2$** ' ಮುನ್$_2$ ' ನೋ.

**ಮುಂಕಟ್ಟು** ' ಮುಂಗಟ್ಟು$_1$ ' ನೋ.

**ಮುಂಕಣಿ** (ನಾ). ೧. ಮುಂಭಾಗ ; ಮುಂಗಡೆ ; ಎದುರುಭಾಗ : ಮುಂಕಣಿಯಲಿಟ್ಟಿಹಿದರು ಭಾರಂಕದಾಳುಗಳೆಂಟುಸಾವಿರ ಬಿಂಕದತಿರಥ ರೆಂಟುಕೋಟಿತುರಂಗ ಪಾಯದಳ (ಉತ್ತ್ಮ. ೩–೦೪). ೨. ರಥ, ಬಂಡಿ ಮುಂತಾದುವುಗಳ ಮುಂಭಾಗ. – ಮೂಕಿ : ಕೆಲಂಬರು ಬಂಡಿಯ ಮುಂಕಣಿಯಂ [ಪಾಠಂ. ಮುಂದಂ] ಪಿಡಿದು ಪುರದ ತಿರುವೀಥಿಯೊಳು ನಡೆತಪ್ಪಾಗಳು (ಸಂಶಕೆ. ೨–೦೯); ಒಂದು ನಿಮಿಷಕೆ ಮತ್ತೆ ಪಡಿಬಲ ಬಂದುದಗಣಿತ ಯಕ್ಷ ರಾಕ್ಷಸವೃಂದ ಮುಕ್ಕುಱಿಕಿದುದು ಕರ್ಣನ ರಥದ ಮುಂಕಣಿಯ (ಉತ್ತ್ಮ. ೦೯–೨೩).

[ಮುಂ$_1$ (< ಮುನ್$_1$) + ಕಣಿ$_3$./ತುಳು. ಮುನ್ಕಲಿ, ಮುನುಕಲಿ]

**ಮುಂಕಣಿಸು** (ಕ್ರಿ). ಮುಂದುವರಿ ; ಮುಂದೆ ಸಾಗು ; ಮುನ್ನುಗ್ಗು : ಮೊಗ್ಗರಂಬೊಯ್ದುಗ್ಗಲಿಸಿ ನಡೆದು ಬಗ್ಗಿಸಿ ಬಯ್ದೊಗ್ಗುಗೆಡದೆ ಮುಂಕಣಿಸಿ ಭೋಂಕನೆ ನೂಂಕಿ (೧೦೪. ೩–೩೩ ಪ); ಮುಂಕಣಿಸುತ್ತೆ ಚಪ್ಪರಿಸುತಂಗುಟದಿಂದೊದೆದಾರ್ದು ಸಾರ್ದು ಕೊರಂಕುಸವಿಟ್ಟು . . . ನೂಂಕೆ (೧೦೪. ೩–೬೨). [ಮುಂಕಣಿ + – ಇಸು$_3$]

**ಮುಂಕುಡಿ** ' ಮುಂಗುಡಿ$_1$ ' ನೋ.

**ಮುಂಕೊಂಕುಗತ್ತಿ** (ನಾ). ಮುಂದಕ್ಕೆ ಬಾಗಿರುವ ಒಂದು ಬಗೆಯ ಕತ್ತಿ : ದೈತ್ಯರು ಕಕ್ಕಡೆಯ ಮುಂಕೊಂಕುಗತ್ತಿಯು ಸಬಳ ಮುದ್ಗರವ ಕೊಂಡು ಬಂದಾ ದೈತ್ಯಗಣವನು ದಿಂಡುಗೆಡಹಿಯು ತುಳಿಯೆ (ಸಂಶಕ. ೬–೩೭) ; ಅರುತ್ಯತಂದ್ಯದೆ ದೇವಸನೋರಣಸಿಯುಸಿಟಾಪಮಾರ್ಗಣ ಕೂರಲಗು ಮುಂಕೊಂಕುಗತ್ತಿಯು ಭಟರು ಮೇಳವಿಸೆ (ಸಂಶಕ. ೯–೦೦೭).

[ಮುಂ$_2$ (< ಮುನ್$_2$) + ಕೊಂಕು$_2$ + ಕತ್ತಿ]

**ಮುಂಕೊಡು** (ಕ್ರಿ). ಮುಂದಾಗಿ ಕೊಡು ; ಮೊದಲೇ ಒಪ್ಪಿಸು : ನೆಲನಂ ಸರ್ವಸ್ವಮಂ ಕೊಟ್ಟುಡಿಗೆಱಿಗದನಾ ಪಾಣ್ಡ್ಯನುಳ್ಳಿಕ್ಕೆ ಬೇಗಂ ತಲೆಯಂ ಮುಂಕೊಟ್ಟೆವಿನ್ನೇದುದು ಬೆಸನಮಿಾಗೆಂದಟ್ಟಿದ [ವರ್] ರಣಂಗಳ್ (ಶಾಶಾ. XX. ೪೯–೨೫; 1076 ?); ಲಂಕಾಧೀಶನ ಜಯವಧು ಪಂಕಜನಾಭಂಗೆ ಸೋಲ್ತು ರಣಮುಖದೆಡೆಯೊಳ್ ಮುಂಕೊಟ್ಟಟ್ಟಿದ ರನ್ನದ ಕಂಕಣ ಮೆಂಬಂತೆ ಕಯ್ಗೆ ಬಂದುದು ಚಕ್ರಂ (ಕಶಾ.ಪಿ. ೪೪೫ ಪ್ರಯೋ).

[ಮುಂ$_2$ (< ಮುನ್$_2$) + ಕೊಡು$_1$]

**ಮುಂಕೊಳ್** ' ಮುಂಗೊಳ್ ' ನೋ.

**ಮುಂಕೊಳಿಸು** ' ಮುಂಗೊಳಿಸು ' ನೋ.

**ಮುಂಕೊಳು** ' ಮುಂಗೊಳ್ ' ನೋ.

**ಮುಂಕೋರೆ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ; ಖಡ್ಗವನ್ನು ಮುಂದಕ್ಕೆ ಬಾಗಿಸುವುದು : ತಳಸಂಚು ಮೇಲ್ಸಂಚು ಹಿಂಕೋರೆ ಮುಂಕೋರೆ ಬಲಸನ್ನೆ ಯಡದ ಸನ್ನೆಯೊಳು ಅಲಗ ನೀಡಿದರಲಗಿನೊಳಾಂತು ನೆಗೆದು ಮೈಹೊಳೆದು ತಪ್ಪಿಸಿದನೆಲ್ಲವನು (ಕಕಕ. ೩೩–೨೭).

[ಮುಂ$_1$ (< ಮುನ್$_1$) + ಕೋರೆ$_1$]

**ಮುಂಗಂದಾಯ** (ನಾ). ಮೊದಲ ಕಂತಿನಲ್ಲಿ ಕೊಡುವ ಕಂದಾಯ. – ತೆರಿಗೆ : (*). [ಮುಂ$_1$ (< ಮುನ್$_1$) + ಕಂದಾಯ]

**ಮುಂಗಜ್ಜ** (ನಾ). (ಯಾವುದಾದರೂ ಕಾರ್ಯಕ್ಕೆ ನಡೆಸುವ) ಪೂರ್ವ ಸಿದ್ಧತೆ : ಹೊಂಗೋಪುರಶಿಖರಕೆ ಪೋಪ ನಡೆ ನಿನ್ನ ಮುಂಗಜ್ಜವ ನೆಗಳ್ದವೆನು (ಪೋಕಶ. ೨೯–೨೮). [ಮುಂ$_1$ (< ಮುನ್$_1$) + ಕಜ್ಜ$_1$]

**ಮುಂಗಟ್ಟು$_1$**, ಮುಂಕಟ್ಟು (ಕ್ರಿ). ೧. ಮುಂಭಾಗದಲ್ಲಿ ಸೇರು. – ಜೊತೆಗೂಡು : ತಂಗಡಲೆಯ ಮೆಯ್ಸು ನೀರನೂಡಿಸುತೆ ವಿಹಂಗ ಸಂತೋಷದಿ ತಮ್ಮ ಮುಂಗಟ್ಟಿದ ಮುದ್ದುಮಱಿಗಳ್ಗೆ ಗುಟುಕೀಯು ಕಂಗೊಳಿಸಿತು ರುಕ್ಮಿಣಿಗೆ (ಪೋಕಶ. ೪–೦೯). ೨. ಮುಂಭಾಗಕ್ಕೆ ಬರು : ದಕ್ಷಿಣಕೆ ದೂಱಿತು ಬಲದ ಭಾಗದೆ ಪಲ್ಲಿ ಮುಂಗಟ್ಟಿ ಪಾಱಿತು ವಾಸುಗಿವಕ್ಕ (ಪೋಕಶ. ೬–೨೫). **ಮುಂಕಟ್ಟು** : ೩. ಮುಂಭಾಗದಲ್ಲಿ ಅಡ್ಡಗಟ್ಟು; ಮುಂದೆ ಹೋಗದಂತೆ ತಡೆದು ನಿಲ್ಲಿಸು : ಜಗವ ತನ್ನಯ ಮಾಯಾರೂಪಿನಿಂ ಪೊರೆವುತಿಹ ವಿಗಡತನದಿಂದವರ ಮುಂಕಟ್ಟಿ ನಿಲ್ಲಿಸುತೆ (ಶಶಮೋ. ೦೦–೬೪); ಪವನದಿಂ ಪೊಕ್ಕು ಕವಿದರು ಶತ್ರುಬಲವ ಮತ್ತವರು ಮುಂಕಟ್ಟಿ ತರುಬುತ್ತಯಿರದಿರಿಯೆ ಮಗುಳವರು ಪುರವಣಿಸಿ ಕವಿದು (ಶಶಮೋ. ೩೨–೬). [ಮುಂ$_2$ (< ಮುನ್$_2$) + ಕಟ್ಟು$_1$]

**ಮುಂಗಟ್ಟು$_2$** (ನಾ). ೧. ಗೋಡೆಯ ಹೊರಭಾಗದ ಬುಡದಲ್ಲಿರುವ ಇಳಿಜಾರಾದ ಅಂಚು: (*). ೨. ಕೆರೆಯ ದಂಡೆಯ ಒಳಭಾಗ : (*). ೩. ಅಂಗಡಿ, ಮನೆ ಮುಂತಾದವುಗಳ ಮುಂಭಾಗದಲ್ಲಿ ಕಟ್ಟಿರುವ ಕಟ್ಟಡ : ಸಂತೆಯ ಎಡಬೀದಿಯಲ್ಲಿ ಉದ್ದಕ್ಕೂ ಅಂಗಡಿ ಮುಂಗಟ್ಟುಗಳು . . . ಮುಂಗಟ್ಟುಗಳೆಲ್ಲ ಹೂವು ಮತ್ತು ತಾಂಬೂಲವನ್ನು ಮಾರುವ ಅಂಗಡಿಗಳು (ಕೂಲೀಪಾ. ೩೨); ಅಂಗಡಿ ಮನೆ ಮುಂಗಟ್ಟುಗಳಲ್ಲಿ ಇಮ್ಮಡಿಯ್ಯ ಕಟಕಿ ಬಾಗಿಲುಗಳನ್ನು ತೆರೆದು. ಶುದ್ಧಿಗೊಳಿಸಲಾಗಿತ್ತು (ತುವರು. ೦೮೨) ; ಅಂಗಡಿ ಮುಂಗಟ್ಟುಗಳಂತೂ ತಳಿರುತೋರಣಗಳಿಂದ ಅಲಂಕೃತವಾಗಿದ್ದುವು (ಹೇಮುಕೂ. ೭).

[ಮುಂ$_1$ (< ಮುನ್$_1$) + ಕಟ್ಟು$_2$]

**ಮುಂಗಡ** (ನಾ). ಯಾವುದಾದರೂ ಕೆಲಸಕ್ಕೆಂದು ಮೊದಲೇ ಕಡವಾಗಿ ಕೊಡುವ ಅಥವಾ ಪಡೆಯುವ ಧಾನ್ಯ ಅಥವಾ ಹಣ; ಸಂಚಕಾರ ; ಅಗಾವು : ಕೊಳ್ಳಿ ಮುಂಗಡವಿದನು ಕೊಲೆಗೈದು ಕುರುವು ತಂದೆನಗೆ ತೋರ್ದಾ ಮೇಲೆ ಬಹುಮಾನವಿದೆ ನಿಮಗೆ ಇದಕಿಂ ಮಿಗಿಲ್ (ಕಂಪ್ರಸ. ೦೩–೦೨) ; ಗಟ್ಟದಿಂದ ಮುಂಗಡಹಣ ಪಡೆದು ಜತೆಗೆ ಇಪ್ಪತ್ತೋ ಮೂವತ್ತೋ ರೂಪಾಯಿಗಳಂತೆ ಮುಂಗಡ ಹಾಕಬೇಕು (ಕಕ್ತರೂ. ೨೮); ಅಂಗಡಿ ಇದ್ದರೆ ಸಾಲದು, ಮುಂಗಡ ಬೇಕು (ಗಾದೆ).

[ಮುಂ$_1$ (< ಮುನ್$_1$) + ಕಡ$_1$./ತುಳು. ಮುಂಗಡ, ಮುಂಗಣ]

**ಮುಂಗಡಪತ್ರ** (ನಾ). ವಾರ್ಷಿಕ ಆಯವ್ಯಯದ ಅಂದಾಜುಪಟ್ಟಿ : "ಆಯವ್ಯಯ ಪತ್ರ, ಮುಂಗಡಪತ್ರ, ಬಜೆಟ್" (Budget. ಕಶ್ರಿ. ೦೦); ಗ್ರಂಥಗಳನ್ನು ಕೊಳ್ಳುವ ಮುನ್ನ ಗ್ರಂಥಾಲಯದ ಮುಂಗಡಪತ್ರದಲ್ಲಿ (Budget) ಮಂಜೂರಾದ ಹಣವನ್ನು ನೋಡಬೇಕು (ಗ್ರಂಶಾ. ೦೦).

[ಮುಂಗಡ + ಪತ್ರ]

**ಮುಂಗಡಪ್ರತಿ** (ನಾ). ಪ್ರಕಟಣೆ ಇತ್ಯಾದಿಗಳಿಗೆ ಮುಂಚಿತವಾಗಿಯೇ ಕಳುಹಿಸುವ ಪ್ರತಿ : "ಮುಂಪ್ರತಿ, ಮುಂಗಡಪ್ರತಿ" (Advance copy. ಕಶ್ರಿ. ೪). [ಮುಂಗಡ + ಪ್ರತಿ]

**ಮುಂಗಡಹಣ** (ನಾ). ಮುಂಚಿತ ಸಾಲವಾಗಿ ಕೊಡುವ ಹಣ : ಆ ಹಣ್ಣುಗಳೆಲ್ಲ ನಮ್ಮ ಪಾಲಿಗೆ ಬರುವಂತಿಲ್ಲ ಅಣ್ಣ, ಅವುಗಳನ್ನು ಬಾಗವಾನರಿಗೆ ಮುಂಗಡಹಣ ತೆಗೆದುಕೊಂಡು ಮಾರಿಬಿಟ್ಟಿದ್ದೇನೆ (ಪಟ್ಟಿ. ೦೨೯); ಗಟ್ಟದಿಂದ ಮುಂಗಡಹಣ ಪಡೆದು ಜತೆಗೆ ಇಪ್ಪತ್ತೋ ಮೂವತ್ತೋ ರೂಪಾಯಿಗಳಂತೆ ಮುಂಗಡ ಹಾಕಬೇಕು (ಕಕ್ತರೂ. ೨೮). [ಮುಂಗಡ + ಹಣ]

**ಮುಂಗಡಿಸು** (ಕ್ರಿ). ಅಸಹನೆಯನ್ನು ತೋರಿಸು : ಎಲೆ ರಾಯ ನೀನುಬ್ಬಿನೊಳ್ ಕೌರವೇಶ್ವರನಿಗೆ ಮುಂಗಡಿ[ಪಾಠಾಂ. ಡ]ಸಿ ನುಡಿದು ಕೆಡಿಸಿದೆ (ತುರಂಗ. ೬೩-೨೩). [ಮುಂಗಡ$_?$ + — ಇಸು$_3$]

**ಮುಂಗಡೆ** (ನಾ). ಮುಂದುಗಡೆ; ಮುಂಭಾಗ; ಎದುರು : ಬಿರಯಿ ನೀಂ ಪೋಪೋಗು ಪೋಗೆಂದು ಮುಂಗಡೆ [ಪಾಠಾಂ. ಗುಡಿ]ಯೊಳ್ ಸಾಲ್ವ ಡೌಡೆಯೆಂಬ ತೇಜದಿಂದಂ ಬಗ್ಗಿ ಸುತ್ತಿ ದುರ್ಗವ ಗ್ಗಡದಿಂ ಕೋಗಿಲೆ (ಶಬ್ದಕಾ. ೩೩); ಆ ದೇಗುಲದೊಳಿಪ್ಪ ಭವನಂ ಕಂಡು ಪೊಡವಡುತ್ತಂ ಬಟ್ಟಲಂ ಮುಂಗಡೆಯೊಳಿಟ್ಟಾರೋಗಿಸೈ ಯೆನ್ನೊಡೆಯನೇ ಗುರು ಕಲ್ಲಿನಾಥಾ ಎಂದು ಬಿನ್ನೈಸಿ (ಬಸವ. ೦೯-೬); ಬೆಡಗಿನಭಿನವರಸದ ಭಾವದ ಕಡುಪುಕಾತಿಯರ್ಕೈದಿದರು ಮುಂಗಡೆ [ಪಾಠಾಂ. ಗುಡಿ]ಯಲವನಿಜೆಯ (ತೊರವೆ. ೦-೦೯-೨೨).

**ಮುಂಗಡಿಕೂಸು** = ಕೊನೆಯ ಮಗುವಿನ ಹಿಂದಿನ ಮಗು : ನಮ್ಮ ಮನ್ಯಾಗ ಹುಡುಗರಿಗೆ ಕೆಲಸ ಹಚ್ಚೂದುಲ್ಲ ಎತಿಗೊಳ್ಳಲಿಕ್ಕ ಅಂದ್ರ ಮುಂಗಡಿಕೂಸಿಲ್ಲ (ನಮಜೀ. ೩೯); ನನ್ನ ಮುಂಗಡೀಕೂಸು ಎಚ್ಚರಾತು ನೋಡು (ರೀಹಹ. II. ೬೩೯). **ಮುಂಗಡೆಯಮಗು, ಮುಂಗಡಿಮಗು** = ಮುಂಗಡಿಕೂಸು : ಆಕೆಯ ಮುಂಗಡೆಯ ಮಗುವಿಗೆ ಇನ್ನೂ ಎರಡೇ ವರ್ಷವಾಗಿದೆ (ಶೂಶ); ರಂಗೂಗೆ—ಅದೇ ನನ್ನ ಎರಡು ವರ್ಷದ ಮುಂಗಡಿ ಮಗು—ಎಪ್ಪತ್ತು ದಿನದ ನಾಯಿಕೆಮ್ಮು ಬಂದಿತು (ಪಾಂಗೇ. ೯೬).

[ಮುಂ$_1$ (< ಮುನ್$_1$) + ಕಡೆ$_3$]

**ಮುಂಗಣ್ಣು** (ನಾ). ೧. (ವ್ಯಾಯಾಮ, ಈಜು ಇತ್ಯಾದಿಗಳಲ್ಲಿ) ತಲೆ ಕೆಳಗಾಗಿ, ಕಾಲುಮೇಲಾಗಿ ಗಾಳಿಯಲ್ಲಿ ನೆಗೆದು ಮುಮ್ಮುಖವಾಗಿ ಕಾಲಮೇಲೆ ನಿಲ್ಲುವ ಒಂದು ವರಸೆ : ದೊಂಬರ ಸೂಳೆಯೊಬ್ಬಳು. . . ಒಂದು ಗಣೇಮರದ ಸಮೀಪಕ್ಕೆ ಹೋಗಿ ಮೇಲಕ್ಕೆ ಹತ್ತಿ ಅಲ್ಲಿ ಲಾಗ, ಅಂತರಪರಟಿ, ಹಿಂಗಣ್ಣು, ಮುಂಗಣ್ಣು, ಎರಡು ಕೈಯನ್ನು ಬಿಟ್ಟ ದೊಣ್ಣೆವರಸೆ. . . ಇದೇ ಮೊದಲಾದ ಸಾಹಸಗಳನ್ನೆಲ್ಲಾ ಮಾಡುತಿರಲಾಗಿ (ಅದೂಟ. ೦೬೬); ಅಲ್ಲಿ ಹಿಂಗಣ್ಣು ಮುಂಗಣ್ಣು ಹಾಕುವುದರಲ್ಲಿ ನಿಸ್ಸೀಮನಾದವನಿಗೆ ಯಾವ ತುಂಬುಹೊಳೆಯಲ್ಲೂ ಭಯವಿಲ್ಲ. . . ಆದರೆ ಹಿಂದೆ ಅಲ್ಲಿ ಹಿಂಗಣ್ಣು ಮುಂಗಣ್ಣುಗಳನ್ನು ಹಾಕಿದ ನರಸಿಂಹಾಚಾರ್ಯರ ತಲೆ ಅಲ್ಲಿ ಒಡೆದುದನ್ನು ಕಂಡಿರುವ ಹಿರಿಯರು ಮಾತ್ರ ದೊಡ್ಡನ ಕಲ್ಲಿಗೆ ಹೋಗುವುದಕ್ಕೂ ಅಲ್ಲಿ ಹಿಂಗಣ್ಣು ಮುಂಗಣ್ಣು ಹಾಕುವುದಕ್ಕೂ ಹೆದರುತ್ತಾರೆ (ಗರುಡಾ. ೦೬೨).

**ಮುಂಗಣ್ಣುಹೊಡೆ** = (ಆಲಂ) ಪ್ರಗತಿಪರವಾಗು : ಸಾಹಿತ್ಯ ವಿಚಾರದ ತೀರ್ಪು ಆಗಾಗ್ಗೆ ಮುಂಗಣ್ಣು ಹೊಡೆಯುತ್ತದೆ. ಪುನಃ ಹಿಂಗಣ್ಣು ಹೊಡೆಯುತ್ತದೆ (ಖಿಂರ. II. ೯).

[ಮುಂ$_1$ (< ಮುನ್$_1$) + ಕಣ್ಣು (< ಕಣ್)]

**ಮುಂಗತೆ** (ನಾ). ಮುಂದಿನ ಕತೆ; ಮುಂದಿನ ಕಥಾಭಾಗ : ಮುಂಗತೆ [ಪಾಠಾಂ. ಥೆ]ಯನುಸಿರೆಂದು ಬೆಸಗೊಂಡನವನೀಶನು (ಜೈಮಿಭಾ. ೨೩-೦); ಪಾಂಡವಧರಣಿಪಾತ್ಮಜತನಯ ಕೇಳ್ ಮುಂಗತೆಯ ಕೌತುಕವ (ಕೋಗಯ. ೨೦-೦). [ಮುಂ$_1$ (< ಮುನ್$_1$) + ಕತೆ]

**ಮುಂಗತ್ತರಿ** (ನಾ). ಖಡ್ಗಯುದ್ಧ, ದ್ವಂದ್ವಯುದ್ಧ ಮೊದಲಾದುವುಗಳಲ್ಲಿ ಒಂದು ವರಸೆ : ನಿಲ್ಲುವ ಕಡೆಯಲ್ಲೇ ನಿಂತು ಪಾರ್ಶ್ವಗಳಿಂದ ಎರಡು ಪಾದಗಳ ಮುಂದಣಗತಿಯುಂಟಾಗುವ ಹಾಗೆ ಆವುದಾನೊಂದು ಕರ್ತರಿಗತಿಯು ಮಾಡಲು ತಕ್ಕಂಥಾದು ಅದು ಮುಂಗತ್ತರಿ ತೊಲಗುವದು (ಖಡ್ಗಟೀ. ೩-೯). 'ಮುಂಗರ್ತರಿ' ಹೋ.

[ಮುಂ$_1$ (< ಮುನ್$_1$) + ಕತ್ತರಿ$_2$]

**ಮುಂಗತ್ತಲೆ** 'ಮುಂಗಳ್ತಲೆ' ನೋ.

**ಮುಂಗಥೆ** (ನಾ). = ಮುಂಗತೆ : ಮನಮಿಕ್ಕು ಮೈಮರೆದು ಪರವಶಕ್ಷೀರಶರನಿಧಿಯ ಪೊಕ್ಕು ಮುಳುಮುಳುಗಿಯಾನಂದಿಪಂದದಿ ಪೇಳ್ವೆ ಮುಂಗಥೆಯ ಸಂಗತಿಯನು (ಪಪಮೋ. ೩-೯). [ಮುಂ$_1$ (< ಮುನ್$_1$) + ಕಥೆ]

**ಮುಂಗದನ** (ನಾ). ಪ್ರಾರಂಭದ ಯುದ್ಧ; ಮೊದಲ ಕದನ : ಪಾಂಡವರಜ್ಞಾತವಿದ್ದ, ವಲಲಂ ಕೀಚಕನ ಗೆದ್ದ, ಕುರುಕುಲ ಮುಂಗದನ ಮೆದ್ದ ನಾಡು ನೋಡಿದಲ್ಲವೇ ? (ಗಿಳಿಬಿ. ೮೦-೦೯).

[ಮುಂ$_1$ (< ಮುನ್$_1$) + ಕದನ]

**ಮುಂಗನಸು** (ನಾ). (ಗರ್ಭಿಣಿಯು ಪ್ರಸವಪೂರ್ವದಲ್ಲಿ) ಕಾಣುವ ಸ್ವಪ್ನ : ತನುಭವಲಾಭದೌಹದನಿಮಿತ್ತದ ಸಂಗತಿ ತಕ್ಕ ನೋಂಪಿ ಮುಂಗನಸು ಬಯಕ್ಕೆ ಗೇಟುಗೆ. . . ಜನನುತಜಾತಕರ್ಮವಿನಿತುಂ ಸುತಶೋಭನವಣನಸ್ಥಳಂ (ಸೂಕ್ತಿಸು. ೭-೦). [ಮುಂ$_1$ (< ಮುನ್$_1$)+ ಕನಸು]

**ಮುಂಗಪ್ಪು** (ನಾ). ಸೂರ್ಯ ಮುಳುಗಿದಾಕ್ಷಣ ಆವರಿಸುವ ಕತ್ತಲೆ ; ಮುಸ್ಸಂಜೆಯ ಕಪ್ಪು : ಏನಾಗಲೆಯೆ ಮೋಡ ಕವಿದು ಮುಂಗಪ್ಪು ಹಬ್ಬಿಬಿಟ್ಟಿದೆ (ಚಂದ್ರಶ. ೦೦೦-೪).

[ಮುಂ$_1$ (< ಮುನ್$_1$) + ಕಪ್ಪು$_4$ (< ಕರ್ಪು$_1$)]

**ಮುಂಗಯ್** 'ಮುಂಗೆಯ್' ನೋ.

**ಮುಂಗಯ್ಯಮುರಿ** 'ಮುಂಗೈಮುರಾರಿ' ನೋ.

**ಮುಂಗರಿ** 'ಮುಂಗುರಿ' ನೋ.

**ಮುಂಗರುಳು** (ನಾ). "ಜಠರದ ಕೊನೆಯಿಂದ ಹೊರಡುವ ಸಣ್ಣ ಕರುಳಿನ ಆದಿಭಾಗ ; ಮುಂಗರುಳು ಪ್ರಥಮಾಂತ್ರ" (Duodenum. ಇಂಕ): ಮುಂಗರುಳು (Fore Intestine) ಮತ್ತು ಹಿಂಗರುಳು (Hind Intestine) ಹೊರಗಿನಿಂದ ಒಳಬಾಗಿ ಬೆಳೆಯುವುದರಿಂದ ಚರ್ಮದ ಪೊರೆಯಿದ್ದು (Cuticular Lining) ಕೀಟ ಪೊರೆ ಬಿಟ್ಟಾಗ ಆ ಪೊರೆಯೂ ಬಿಡುತ್ತದೆ (ಕೀಟಜೀ. ೨೬).

[ಮುಂ$_1$ (< ಮುನ್$_1$) + ಕರುಳು (< ಕರುಳ್)]

**ಮುಂಗರೆ** (ನಾ). "ಸಮುದ್ರದ ಏರುಮಟ್ಟಕ್ಕೂ ಇಳಿಮಟ್ಟಕ್ಕೂ, ಅಥವಾ . . . ಕಟ್ಟಡಗಳ ನೆಲಮಟ್ಟಕ್ಕೂ ಮಧ್ಯೇ ಇರುವ, ಕರೆಯ ಪ್ರದೇಶ; ಮುಂಗರೆ" (Foreshore. ಇಂಕ): ಮುಂಗರೆಗೆ ಅಡ್ಡವಾಗಿ ಹೋಗುವ ಇಳುಕಲು ದಾರಿ (Hard. ಇಂಕ).

[ಮುಂ$_1$ (< ಮುನ್$_1$) + ಕರೆ$_4$]

**ಮುಂಗರ್ತರಿ** (ನಾ). ಒಂದು ಬಗೆಯ ಕತ್ತಿವರಸೆ : ನಿಂತುಕೊಂಡು ಪಾದದಲ್ಲಿ ಪಾದಪ್ರಕ್ಷೇಪವು ಮುಂಗರ್ತರಿಯೆಂಬುದು (ಖಡ್ಗಟೀ. ೯-೩೯). 'ಮುಂಗತ್ತರಿ' ಹೋ. [ಮುಂ$_1$ (< ಮುನ್$_1$) + ಕರ್ತರಿ]

**ಮುಂಗಲಿ** 'ಮುಂಗುರಿ' ನೋ.

**ಮುಂಗಲಿತನ** (ನಾ). ಯುದ್ಧದಲ್ಲಿ ಬೇರೆಯವರಿಗಿಂತ ಮೊದಲು ಮುನ್ನುಗ್ಗಿ ತೋರುವ ಪರಾಕ್ರಮ : ಅಜಿಯಬಹುದ್ದೈ ಭಾವಮೈದುನ ಮೆಜಿ ಭುಜಾಟೋಪವನುಹಿಂದಣ ಕೊಜತೆಯನು ಕಳೆ ಮಗನೆ ಬೊಪ್ಪಕುಲಕ್ರಮಾಗತವ ಮಜಿಯದಿರು ಮುಂಗಲಿತನಕೆ ತಾನಿಜಿವೆ ನಾ ಮುನ್ನೆಂದು ತಮ್ಮೊಳು ಜಜಿದರೊಡವುಟ್ಟಿದರು ಬಾಂಧವಮಿತ್ರ ಭೂಮಿಪರು (ಕುವ್ಯಾಗ. ೦-೨೬). [ ಮುಂ$_1$ ( < ಮುನ್$_1$) + ಕಲಿತನ ]

**ಮುಂಗವಚ** (ನಾ). "ಉಡುಪು ಕೊಳೆಯಾಗದಂತೆ ಮುಂದಕ್ಕೆ ಕಟ್ಟಿಕೊಳ್ಳುವ ಉಡಿಗೆ: ಮುಂಗವಚ; ದೂಳುಪಾವಡಿ" (Apron. ಇಂಕ): ಅವಳು ಹಿಂದಿನಂತೆ ಇಂದೂ ಶ್ವೇತಶುಭ್ರವಾದ ಮುಂಗವಚನನ್ನು ತೊಟ್ಟಿದ್ದಳು (ಕುಸರು. ೬೩); ಕೆಲಸದ ಹೊತ್ತಿನಲ್ಲಿ ಕೆಲಸಗಾರರಿಗೆಲ್ಲ ಉಸಿರಾಟಕ (ರೆಸ್ಪಿರೇಟರ್), ಕನ್ನಡಕ, ಕೈಗವುಸು, ಮುಂಗವಚ ಇತ್ಯಾದಿಗಳನ್ನು ಒದಗಿಸಬಹುದು (ಕವಿಕೋ. I, ೩೬೯).

[ಮುಂ$_1$ ( < ಮುನ್$_1$ ) + ಕವಚ]

**ಮುಂಗಸಿ** ' ಮುಂಗುಸಿ ' ನೋ.

**ಮುಂಗಳುಪು** (ಕ್ರಿ). (ತಾನು ಬರುವುದರ ಕುರುಹಾಗಿ ಉಡುಗೊರೆಯನ್ನು) ಮೊದಲೇ ಕಳುಹಿಸು ; ಮುಂಚೆಯೇ ಕಳುಹಿಸು : ತನ್ನ ಬಾಳುವೆಗೆ ನಚ್ಚಿನವಳೀ ರಾತ್ರಿವಧುವೆಂದು ಹಿಮಕರಂ ಮೆಚ್ಚಿ ಮುಂಗಳುಪಿದೆಳಮಾಣಿಕದ ಮಣಿಗಳೆನೆ ಸಂಜೆದಾರೆಗಳೆಸೆದುವು (ಕೈಬಿಚಾ. ೮-೪೭).

[ಮುಂ$_2$ ( < ಮುನ್$_2$ ) + ಕಳುಪು (< ಕಟಿಪು$_1$ )]

**ಮುಂಗತ್ತಲೆ**, ಮುಂಗತ್ತಲೆ (ನಾ). ಸೂರ್ಯನು ಮುಳುಗಿದಾಕ್ಷಣ ಬರುವ ಸಂಧ್ಯಾಸಮಯದ ಕತ್ತಲೆ ; ಮುಸ್ಸಂಜೆಯ ಕತ್ತಲೆ : ಮುಂಗಿಯ ಪಗಲ್ ಮುಸುಕಲ್ ಮುಂಗತ್ತಲೆ. . . ನೆಟಿ ಮುಂಗಿದುವು ಮುನ್ನೀರಣುಗಿಯ ಸೆಜ್ಜೆವನೆಗಳಾ ರಾತ್ರಿಯೊಳು (ಜದುಕಾ. ೦೩-೬೩). **ಮುಂಗತ್ತಲೆ :** ನದಿಯೆಡೆಗೆ ಬರಲೊಂದು ವೃಷಭನುದಕಾರ್ಥದಿಂ ತಾನು ಮುಂಗತ್ತಲೆಯೊಳದನಜಾಯದೇ ತುಡುತುಂಬನಾ ಕರ್ಣಪೂರದಿಂ ಮರೆಯೆಂದು ಬಿಡಲಾಗಿ (ಏಕೃತ್ತು. ೯-೭-೩೭); ದಟ್ಟವಾಗಲು ಪ್ರಾರಂಭಿಸಿದ ಮುಂಗತ್ತಲೆಯಲ್ಲಿ ಅಜ್ಜಿಯ ನಿಶ್ಚಲಮುಖ ನೋಡಿ ಹೆದರಿ (ಕಂಪ್ರಸ. ೨೦-೦೨). [ ಮುಂ$_1$ ( < ಮುನ್$_1$) + ಕತ್ತಲೆ ( < ಕಟ್ತಲೆ) ]

**ಮುಂಗಾ** (ಕ್ರಿ). ಮೊದಲು ಕಾಪಾಡು : ನಮ್ಮ ಜೋಕೆಯುಂ ಬಗೆಯು ದೊಡೆ, ನಿನ್ನ ಜೋಕೆಯನೆ ಮುಂಗಾದು ಕೊಳು ಜೀಯಾ! (ಗೂಲ್ಲೂಕಾ. ೭-೦೭). [ಮುಂ$_2$ ( < ಮುನ್)$_2$ + ಕಾ$_1$ ]

**ಮುಂಗಾಣ್**, ಮುಂಗಾಣು (ಕ್ರಿ). ೧. ಮುಂಭಾಗವನ್ನು ಕಾಣು ; ಮುಂದನ್ನು ನೋಡು : ಕತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ ಪೊತ್ತುವೆಳಗಂ ಬೇಟಿ ತೋರ್ಪರಾರ್ . . . ಭೂಪ (ಕೈಬಿಚಾ. ೨-೦೭). ೨. ದಿಕ್ಕುತೋಚು ; ದಾರಿಕಾಣು ; ಮುಂದಾಗುವುದನ್ನು ತಿಳಿ : ಮದಮುಂ ಗರ್ವಮುಂ ಕೂಡಿಕೊಂಡಿರ್ದೆನಿತುಂ ಮುಂಗಾಣದತ್ಯುದ್ಧತತರ ಮುಖವಾಗಿರ್ಪುದೋರಂತೆ ವಿದ್ವಜ್ಜನಮಂ ಕೈಕೊಳ್ಳದೆನ್ನೀ ಮನದೊಳಗಣ ಹಂಕಾರವಿಂತಿಂತಿದಂ ದೇವನೆ ನೀಂ ತಗ್ಗೊತ್ತಿ . . . ರಕ್ಷಿಪ್ಪುದೆನ್ನಂ (ರಕ್ಷಾಶ. ೦೭); ಸಲಿಲಮಂ ನೀನೆಜಿಪುತಿರು ಪ್ರಜ್ವಳಿಸುವವು ದೀವಿಗೆಗಳೆಂತಗ್ಗಳಿಸಿ ಮುಂಗಾಣದಿಹ ಜೈನರ ಪಶುಗಳೀ ದಿನವೆ ಇಳೆಯೊಳಗೆ ಮಡಿದಹವು (ದಕೃ. ೩೦-೩೭). **ಮುಂಗಾಣು :** ೨. ಮದದಿಂದೆ ಮುಂಗಾಣದಜನಿದಿರೊಳುಂ ಪಂಚವದನದಶಭುಜ ಪಂಚದಶಲೋಚನಂಗಳಿಂ ಪೊದೆದ ಪುಲಿದೊವಲ ಕೆಂಜೆಡೆಯ ಮಂಜುಳಕಾಯನಾಕ್ಷಣಂ ಮೂಡಿರ್ದನು (ಕಬಕ್ರು. ೦೬-೯) ; ನೆಲದಾಸೆಯುಂ ಮೋಹವಡೆದು ಮುಂಗಾಣದೆ ಕೊಲಬಾರದವರೆಲ್ಲರನು ಕೊಲಿಸಿದವು (ಕರ್ಣವ್ಯ. ೬-೦೦). ೩. (ಸನ್ನಿವೇಶ ವಿಶ್ಲೇಷಣೆಯಿಂದ) ಮೊದಲೇ ಗ್ರಹಿಸು,— ಅರಿತುಕೊಳ್ಳು : ಬಿಜ್ಜಳನು . . . ಅವನನ್ನು ಕೊಲ್ಲಿಸುವ ಹಂಚಿಕೆಯನ್ನು ಯೋಚಿಸುತ್ತಿರಬೇಕು ಅದನ್ನು ಮುಂಗಂಡೇ ಏನೋ ಬಸವೇಶ್ವರನು ಇನ್ನು ಕಲ ಕಲದಿನ ಕತ್ತಿಶಿವದ್ರೋಹವು ಉದಯಿಸಲಿಕ್ಕಿದೆ . . . ಎಂದಿರಬೇಕು (ಮೂರುಜ. ೯೨); ಗುರಿಗೆಂದೆ ಮುಂಗಂಡು ಹುಡುಗನೊದೆದಾ ಚೆಂಡು ಹರಿದಾಡಲಾಡುಂ ಬೊಲದೊಳದಕೆ ಗುರಿಯಿಲ್ಲವೆಂಬೆಯೇನು ? (ಕಾಂಕಪ. ೪೬-೦೩).

[ಮುಂ$_1$ ( < ಮುನ್$_1$ ) + ಕಾಣ್ ]

**ಮುಂಗಾಣಿಕೆ** ' ಮುಂಗಾಣ್ಕೆ ' ನೋ.

**ಮುಂಗಾಣಿಕೆಗೊಡು** (ಕ್ರಿ). ಮೊದಲ ಕಾಣಿಕೆಯನ್ನು ಕೊಡು : ಪುಷ್ಪೇಷುಗಂ ಪುಷ್ಪಬಾಣದ ಮುಂಗಾಣಿಕೆಗೊಟ್ಟೆನಾನೆ ಪೆಜಿತೆನ್ನಂ ತಾದುದೇ ಮೈದೆಗಾಸ್ಪದವೆಂಬಂತೆಪೊಲಾಯ್ತು ಮಾಧವಿ ಮದಾಳಿಧ್ವಾನ ಸಂತಾನದಿಂ (ಜಗಂ. ೦೯-೬೩).

[ಮುಂಗಾಣಿಕೆ ( < ಮುಂಗಾಣ್ಕೆ) + ಕೊಡು$_1$ ]

**ಮುಂಗಾಣಿಸು** (ಕ್ರಿ). ಮುಂದೆ ಇರುವುದು ಕಣ್ಣಿಗೆ ಬೀಳು : ಬವರಕೆ ನಿಲಲು ತಿಮಿರವು ನೂಕಿ ಮುಂಗಾಣಿಸದು ಮುನ್ನವರು ವಾಕಿನೀಪತಿ ವಿಷ್ಣು ವಿಶ್ವೇಶ್ವರರುಗಳು ಕೇಳ್ಗೆದ (ಜಾಕೃಕ. ೨೪-೭).

[ ಮುಂ$_1$ ( < ಮುನ್$_1$ ) + ಕಾಣಿಸು ]

**ಮುಂಗಾಣು** ' ಮುಂಗಾಣ್' ನೋ.

**ಮುಂಗಾಣ್ಕೆ**, ಮುಂಗಾಣಿಕೆ (ನಾ). ೧. ಮುಂದಾಗುವುದನ್ನು ತಿಳಿಯುವಿಕೆ ; ಮುಂದಾಲೋಚನೆ : ಮುಕುಂದಯ್ಯನ ಮುಂಗಾಣ್ಕೆ ಒದಗಿಸಿದ್ದ ಬೆಚ್ಚನೆಯ ಕಂಬಳಿಯ ಮೇಲೆ ಬೆಚ್ಚಗೆ ಹೊದೆದುಕೊಂಡು ಮಲಗಿದ ಮೇಲೆಯೆ . . . ಚಿನ್ನಮ್ಮನ ಹೃದಯ ಅಳುಕತೊಡಗಿದ್ದು (ಮಲೆಮ. ೬೯೭). ೨. ಮೊದಲು ಅರ್ಪಿಸುವ ಕಾಣಿಕೆ ; ಮುಂಚಿತವಾದ ಕಾಣಿಕೆ : ಪುಷ್ಪೇಷುಗಂ ಪುಷ್ಪಬಾಣದ ಮುಂಗಾಣ್ಕೆ [ಪಾಠಾಂ. ಣಿಕೆ] ಗೊಟ್ಟೆ ನಾನೆ ಪೆಜಿತೆನ್ನಂತಾದುದೇ ಮೈದೆಗಾಸ್ಪದವೆಂಬಂತೆ ಪೊಲಾಯ್ತು ಮಾಧವಿ (ಜಗಂ. ೦೯-೬೩); ತಂಗಿ ಊರ್ಮಿಳೆಯ ಕಣ್ಣೀರುಗಳ ಮುನ್ ಬರ್ಪ ಸೊಗಕಂಕಿ ಮುಂಗಾಣ್ಕೆಗಳನರ್ಪಿಸಿಹವೈ ಪ್ರಾಣೇಶ್ವರನ ಚರಣತಲಕೆ ! (ಶ್ರೀರಾಮಾ. ೨೦೩-೨೩೯). **ಮುಂಗಾಣಿಕೆ :** ೧. " (ಮುಂದೆ ಬರುವುದನ್ನು) ಮೊದಲೇ (ತಿಳಿದು) ಹೇಳುವುದು ; ಮುನ್ ಸೂಚಿಸುವುದು . . . ಮುಂಗಾಣಿಕೆ ; ಮುನ್ನರಿವು " (Prognosis. ೨೦೫೦); ತಲೆದೋಜಿದನು ದಿನಪ ನಗೆಯುಡಗಿ ನಾಚಿದವು ಕುಮುದಾಳಿಗಳು ಮುಂಗಾಣಿಕೆಯ ಹರುಷದೊಳಗಿದು ವಿರಹವ ಬೀಳುಕೊಟ್ಟುವು ಜಕ್ಕವಕ್ಕಿಗಳು (ಕುಪ್ರಾಭೀ. ೦-೨೯). ೨. ಮುಂಗಾಣಿಕೆಯ ಹೊನ್ನಂ ಕೊಟ್ಟರು (ಎಕ. XI. ದಾವಣ. ೯-೪೦: 1143); ಬವರವೆನ್ನದು ಬಳಿಕ ಮುಂಗಾಣಿಕೆಯು ನಿನ್ನದಲ್ಲೆ ಜನವ ತೋಜು ತೋಜಿನಿಲು (ಐಭಾಗ. ೦೦-೩೯-೨೪). ೩. ಮೊದಲ ನೋಟ ; ಪ್ರಥಮ ನೋಟ : ಕಾಣಿನಾಕೆಯು ಮುಂಗಾಣಿಕೆಯಲೇ ಸೂಜಿಹೋದುದು ಮನದ ಸರ್ವಸ್ವ (ಕುವ್ಯಾಪಿ. ೨-೩೯).

[ಮುಂ$_1$ ( < ಮುನ್$_1$ ) + ಕಾಣ್ಕೆ]

**ಮುಂಗಾದಾಡು** (ಕ್ರಿ). ಮುಂಭಾಗದಲ್ಲಿ ನಿಂತು ಕಾದಾಡು : ಮುಂದೆ ಹೋರಾಡು : ಚೂಣಿಯ ಭಟಂ ಗಾಯದಳಲ ಲೆಕ್ಕಿಸದೆ ಮುಂಗಾದಾಡಿ ಮಡಿದು ಜಯವಡುವಂತೆ (ಗೂಲ್ಲೂಕಾ. ೦೨-೬೦೦).

[ಮುಂ$_2$ ( < ಮುನ್$_2$ ) + ಕಾದಾಡು ]

**ಮುಂಗಾರ್**, ಮುಂಗಾರಿ, ಮುಂಗಾರು (ನಾ). ೧. ಮೊದಲ ಮಳೆಗಾಲ ; ವರ್ಷಾರಂಭ : ವಿರಹಿ ಸಮಾಜದ ಬಾಷ್ಪಬಿಂದುಗಳ್ವೆರಸುದಿರ್ದುವು ಘನತೋಯಬಿಂದುಗಳ್ ಮುಂಗಾರೊಳ್ (ಕುಸುಮಾ. ೬-೦೭); ವಿಸಮನುಗುಳುತ ಗುಡುಗುಬ್ಬಿಸಿದಲಿ ರಸನವೆಸಲು ಮಿಂಚ ನೀಡಿ ಅಸಿತೋರಗ ತೆಕ್ಕೆಗೊಂಡಿರ್ದುದೆನೆ ಮೇಘದೆಸಕವೊಪ್ಪಿದುದು ಮುಂಗಾರ (ಪ್ರಗಸ. ೯-೬೩) ; ಮೊಳಗಿನಬ್ಬರವಳಿದ ಗಗನಸ್ಥಳವೊ ಮೇಣ್ಮುಂಗಾರ ಮೇಘದ ಸುಳಿವು ನಿಂದಂಬುಧಿಯೊ . . . ದಶಕಂಠನ ಸಭಾಮಂಡಲವೊ ಹೇಳುವುದೇನು ಮೋನದೊಳಿರ್ದುದಾಸ್ಥಾನ (ತೊರಂ. ೬-೪೦-೨). **ಮುಂಗಾರಿ :** ೧. ಮುಂಗಾರಿ ಮಿಂಚಿನಂದದಿ ದೇಶದೊಳಗೆ ನಿಸ್ಸಂಗನಾಗಿ ತಿರುಗಿ ಕಾಲ ಕಳೆಯಬೇಕು (ಐಶಾಸು. ೦೩-೩) ; ಬೈಲುಶೀಮೆಯಲ್ಲಿ ಹಿಂಗಾರಿಗಿಂತ ಮುಂಗಾರಿಯ ಮಳೆಯು ಹೆಚ್ಚು ಅನಿಯಮಿತವಾದದ್ದು (ಕಗ್ರಾಗ. ೨೦) ; ಮುಂಗಾರಿಯ ಮಳೆಯಾದ್ದರಿಂದ ಕೋಲುಮಿಂಚಿನ ಹೊಯ್ಲುವೂ ಗುಡುಗು ಸಿಡಿಲುಗಳ ಅಬ್ಬರವೂ ಭಯವನ್ನುಂಟುಮಾಡುತ್ತಲಿವೆ (ಕಗದ್ಯ. II. ೯೯). ೨. ವರ್ಷದ ಮೊದಲು ಬೀಳುವ ಮಳೆ, — ಆರಂಭದ ಮಳೆ ; ಮೊದಲ ಮಳೆ : ವೇಳುಗ್ರಾಮದ ನಾಗರಿಕರು ಕಾದ ಹಂಚಿನಂತೆ ಮುಂಗಾರಿಯ ಬರವನ್ನು ನಿರೀಕ್ಷಿಸುತ್ತಿದ್ದರು (ರಕ್ತರ್ರ. ೦೩೦). ೩. ವರ್ಷದ ಮೊದಲ ಮಳೆಗಾಲದಲ್ಲಿ ಬಿತ್ತುವ ಧಾನ್ಯ : ಮುಂಗಾರಿ. ಹಿಂಗಾರಿ, ಯೆರಡೂ ಬೆಳೆಯುವಂಥ ಭೂಮಿಯಲ್ಲಿ ಪೊಂದುವರ್ಷ

ಮುಂಗಾರಿಯು ಬಿತ್ತಿದರೆ ಮುಂದಿನ ವರ್ಷ ಹಿಂಗಾರಿಯು ಬಿತ್ತುವರು (ಕಜಾಗ· ೨೬೬) ; ಮುಂಗಾರಿಯಾಗಲಿ ಬಿಳಿಜೋಳವನ್ನಾಗಲಿ ಜೋಳವನ್ನು ಬಿತ್ತುವ ವರ್ಷ ಗೊಬ್ಬರವನ್ನು ಹಾಕಿ . . . ಬಿತ್ತಬೇಕು (ಕೃಷಿಶ್ರ. ೬೮) ; ಮೃಗನಕ್ಷತ್ರದ ವ್ಯಾಳೆಯಲ್ಲಿ ಬಿತ್ತುವ ಮುಂಗಾರಿ ಅಂದೆನಿಸಲ್ಪಡುವ ಜ್ವಾಳವು ಇಲ್ಲೆ ಸಾಧಾರಣವಾಗಿ ಖಪಸುತ್ತದೆ (ಮುಂಬವ್ಯಾ· ೩೩)· **ಮುಂಗಾರು :** ೧. ಮುಂಗಾರ ಮುಗಿಲೊಡ್ಡಿನಂತೆ ಮದಂಗಳಿಗಂಗೈಸುವ ತುಂಬಿವಿಂಡ ಹಿಂಗದೆ ಕರ್ಣತಾಳದಲಿ ಸೋವುತ ಮಾತಂಗ ನೀರ್ಗೈದುವುವಲ್ಲಿ (ಕಂಪವಿ· ೨–೫೬) ; ಒಡನೊಡನೆ ರೆಘಾಮ್ಮಿಡುತ ತನುಲತೆ ನಡುಗಿ ಹೊಂಪುಳಿಯಾಗಿ ನೋಟದ ಕುಡಿಗದಿರು ಮುಂಗಾರು ಮಿಂಚುಗಳಂತೆ ಚಂಚಲಿಸೆ (ಅಪಂಚಾ· ೦–೨೩–೩೫)· ೨. ಕೇಳಿದ್ಯೆ ನೃಪಸೂನು ನಿಮ್ಮ ನೃಪಾಲರಾ ಪ್ರಸ್ರಪಣಶೈಲದ ಮೇಲಿರಲು ಮೈದೋಟದುದು ಮುಂಗಾರು ಧಾರುಣಿಗೆ (ತೊರರಾ· ೪–೬–೦) ; ವಸಂತಋತು ಆಗ ತಾನೆ ಆರಂಭವಾಗಿತ್ತು. ಆ ಪ್ರಾಂತದಲ್ಲೆಲ್ಲ ಮುಂಗಾರು ಚೆನ್ನಾಗಿ ಆಗಿದ್ದಿತು (ಶಾಂತಲಾ· ೨೯೪).

[ ಮುಂ$_1$ ( < ಮುನ್$_1$ ) + ಕಾರ್$_2$· / ತೆಲು. ಮುಂಗಾರಿ, ಮುಂಗರಿ ]

**ಮುಂಗಾರಿ** ' ಮುಂಗಾರ್ ' ನೋ.

**ಮುಂಗಾರಿಮಳೆ** ' ಮುಂಗಾರುಮಳೆ ' ನೋ.

**ಮುಂಗಾರಿಯು** (ನಾ)· ಮುಂದಿನ ಕೆಲಸ, – ಕರ್ತವ್ಯ : ಪೂಗೋಲನ ಬಿಗಿಯುಪ್ಪಿ ಮುಂಗಾರಿಯುದಾಗಮಾಂತರವ ಪೇಳಿದಳು (ಸೋಹತ· ೦೦-೬೪).

[ ಮುಂ$_1$ ( < ಮುನ್$_1$ ) + ಕಾರಿಯ ]

**ಮುಂಗಾರಿರುಳು** (ನಾ). ಮುಂಗಾರುಮಳೆಯ ಕಾಲದ ರಾತ್ರಿ ; ದಟ್ಟವಾದ ಮೋಡಗಳಿಂದ ಕೂಡಿದ ಕಗ್ಗತ್ತಲೆಯ ರಾತ್ರಿ : ಮುಂಗಾರಿರುಳ ತನಿಯೆರಕ ನೀಲಾಚಲದ ಖಂಡರಣೆ ಘೋರರಾಹುವ್ಯೂಹವೆನೆ ಸುರವೈರಿಗಳ ಮೈಗಾಂತಿ ಲಹರಿಯ ಪೂರದಲಿ ಜಗ ಮುಳುಗೆ ಬಂದುದು ಲಕ್ಷ ಸಂಖ್ಯೆಯಲಿ (ಕುವ್ಯಾಕ. ೯–೩೪).

[ ಮುಂಗಾರ್ + ಇರುಳು ( < ಇರುಳ್ ) ]

**ಮುಂಗಾರು** ' ಮುಂಗಾರ್ ' ನೋ.

**ಮುಂಗಾರುಗಾಳಿ** (ನಾ)· ವರ್ಷದ ಮೊದಲ ಮಳೆಯ ಕಾಲದಲ್ಲಿ ಬೀಸುವ ಗಾಳಿ; - ಮಾನ್‌ಸೂನ್ : ಮಳೆಗಾಳಿ, ಮುಂಗಾರು ಗಾಳಿ (ಭೂವಿವ. ೬೨). [ ಮುಂಗಾರು ( < ಮುಂಗಾರ್ ) + ಗಾಳಿ$_1$]

**ಮುಂಗಾರುಮಳೆ, ಮುಂಗಾರಿಮಳೆ** (ನಾ). ವರ್ಷದ ಮೊದಲು ಬೀಳುವ ಮಳೆ.– ಆರಂಭದ ಮಳೆ,– ಮೊದಲ ಮಳೆ : ಮುಂಗಾರು ಮಳೆಗೆ ಸಿಕ್ಕ ಮಗು ಅಳುವಂತೆ ಅಳುತ್ತಿದ್ದಳು (ಎಳಿಕ. ೪೫). **ಮುಂಗಾರಿ ಮಳೆ :** ಆಶ್ವಿನ ಶುದ್ಧ ಹುಣ್ಣಿಮೆಯೋ ಶೀಗೆಹುಣ್ಣಿಮೆ, ಆಗ ಮುಂಗಾರಿ ಮಳೆಗಳು ಮುಗಿದು ಹಿಂಗಾರಿಮಳೆಗಳು ಪ್ರಾರಂಭವಾಗುವುವು (ಕನ್ನಜಾ. ೦೬೫). [ ಮುಂಗಾರು ( < ಮುಂಗಾರ್ ) + ಮಳೆ (<ಮಬೆ$^3$) ]

**ಮುಂಗಾರ್ಗಾಲ** (ನಾ)· ಮುಂಗಾರು ಮಳೆಯ ಕಾಲ ; ವರ್ಷದ ಮೊದಲ ಮಳೆಗಾಲ : ಧುಮುಕುವ ಶೋಣಿತ ಗಿರಿಝರಿಯಲ್ಲಿ ನರರುಂಡಗಳು ನರಮುಂಡಗಳು ಮುಂಗಾರ್ಗಾಲದ ಬಲ್ಸರಿಯಲ್ಲಿ ಆಲಿಯ ಕಲ್ಲುಗಳುರುಳುರುಳ್ವಂತೆ ಧುಮುಕುತಲಿರುವುವು ! (ಶಾಂಕಜ. ೬೯–೦೮)·

[ ಮುಂಗಾರ್ + ಕಾಲ ]

**ಮುಂಗಾಲ್, ಮುಂಗಾಲು** (ನಾ). ೧. ಚತುಷ್ಪಾದಪ್ರಾಣಿಯ ಮುಂಭಾಗದ ಅಥವಾ ಮುಂದಿನ ಕಾಲು : ಮುಂಗಾಲ್ಗಳಿಂದಂ ಮುಗಿಲಂ ಮುಟ್ಟಿಪ್ಪದೆಂಬಂತಶಿಜವಮಿದಿರೊಳ್ ಬಂದು ದಿಂದ್ರಾಯುಧಾಶ್ವಂ (ಶಾದಂಪೂ· ೪೫೬); ಬೀಗಿ ಬೆನ್ನಿಂ ಬರಿವನ್ನಂ ಕೊರ್ವಿ ಮುಂಗಾಲ್ಗಳ ಗಡಿಯೆನೆ ಕಡುಗೆಚ್ಚಲ್ ಪೊದಟ್ಬಿಂದು . . . ಮಾಹಿಷೀಸಂತತಿ ವಿಪಿನಭವಂ ಕಣ್ಗಗುರ್ವಾಯ್ತು ಕಾರೊಳ್ (ಚಂದ್ರಪ್ರಭ· ೪–೪೮) ; ಸಿಮಿರ್ದಗಂ ನೀಳ್ದ ಮುಂಗಾಲುಡುಗಿ ನಡೆವ ಪಿಂಗಾಲ್ ಚಲದ್ವಾಲದಂಡಂ (ಗಂಕ. ೦–೯೫)· ೨. ಕಾಲಿನ ಮುಂಭಾಗ ; ಹೆಜ್ಜೆಯ ಮೇಲ್ಭಾಗ : ಅಂಗಯ್, ಅಂಗಾಲ್ . . . ಮುಂಗಯ್, ಮುಂಗಾಲ್ (ಕಮಠ· ೦೬೬ ಶ್ರಯೋ) ; ಕಯ್ಯ ಮುಂದು, ಮುಂಗಯ್ ; ಕಾಲ ಮುಂದು ಮುಂಗಾಲ್ (ಕಪ್ರಾಸು· ೩೦೬ ಶ್ರಯೋ)· **ಮುಂಗಾಲು:** ೧. ಮುಗಿದ ಮುಂಗಾಲುಗಳ ಮುಂದಕೆ ಹೊಗುವ ಹಿಂಗಾಲುಗಳ . . , ನಿಗುರೊಡಲ ಮುಂಬರಿವ ಚಿಮ್ಮುವ ಚಿಗಿವ ಚಲನೆಯ ಚಂಗುವಾಜಿನ ಮೃಗಮೃಗೀನಿಕುರುಂಬದೊಳಗಡ ಹಾಯ್ದುದಗಲದಲಿ (ತೊರರಾ. ೩–೮–೪೫); ಎರಡು ಜನ್ನಗುದುರೆಗಳೂ ಒಂದಕ್ಕೊಂದು ಇದಿರಾದುವು . . . ಮುಂಗಾಲುಗಳಿಂದ ಒಂದನ್ನೊಂದು ಅಪ್ಪರಿದುವು (ಬದುಕ. ೧೦೬). ೨. ಎತ್ತಿದ ಕೈಗಳ ಪೊಡೆವ ತಲೆಯ ನೆಗಪುತ್ತಿರೆ ಪೊಡೆವ ಮುಂಗಾಲ ಒತ್ತಿ ನೂಂಕಿದೊಡೆ ಪೊಡೆವ ವೀರವಿನ್ನಾಣರೆತ್ತ ನೋಡಿದರತ್ತಲಿಹರು (ವರ್ಧನ· ೬-೯೨).

[ ಮುಂ$_1$ ( < ಮುನ್$_1$ ) + ಕಾಲ್$_1$· / ತೆಲು. ಮುಂಗಾಲು ]

**ಮುಂಗಾಲು** 'ಮುಂಗಾಲ್' ನೋ.

**ಮುಂಗಾಲುಪುಟಿಕೆ** 'ಮುಂಗಾಲ್ಪುಟಿಗೆ' ನೋ.

**ಮುಂಗಾಲುಪುಟಿಗೆ** 'ಮುಂಗಾಲ್ಪುಟಿಗೆ' ನೋ.

**ಮುಂಗಾಲ್ಪುಟಿಗೆ, ಮುಂಗಾಲುಪುಟಿಕೆ, ಮುಂಗಾಲುಪುಟಿಗೆ** (ನಾ). (ಆಲಂ) ಹಾರಿಕೆಯ ಮಾತು ; ಜಾರಿಕೆಯ ಮಾತು ; ಉಡಾಫೆಯ ಮಾತು : ಇಲ್ಲದ್ದನ್ನು ಹೇಳುವುದೆಂದರೆ ಆಶೀರ್ವದಿಸುವುದು ಎಂದರೆ ಮುಂಗಾಲ್‌ಪುಟಿಗೆಯನ್ನು ಇಡುವುದು (ಮುಂಗಾಪು· ೩ ಮುನ್ನುಡಿ) ; ವಿದ್ಯಾರ್ಥಿಯಾಗಿದ್ದಾಗಲೇ 'ಇಲೆಕ್ಶನ್'ನಾಟಕದ ಮುಂಗಾಲ್‌ಪುಟಿಗೆಯನ್ನಿಟ್ಟ ಶ್ರೀ ಎನ್ಕೆಯವರ ಸಾಹಿತ್ಯವಾಹಿನಿ ಈಚೆಗೆ ಬಗೆಬಗೆಯಾಗಿ ಹರಿದುಬಂದಿದೆ (ಸಾಸವಾ. ೦೬೬)· **ಮುಂಗಾಲುಪುಟಿಕೆ :** ದೊಡ್ಡದೊಡ್ಡ ಗೃಹಸ್ಥರು ಕಾಣಲಿಕ್ಕೆ ಬಂದಾಗ ಅವನು ಮುಂಗಾಲುಪುಟಿಕೆಯ ಮಾತಿನಿಂದ ಅವರ ಇಂಗಿತವನ್ನು ತಿಳಿದುಕೊಳ್ಳಲಿಕ್ಕೆ ಯತ್ನಿಸುತ್ತಿದ್ದನು (ಕಂಸಂ· ೫೨). **ಮುಂಗಾಲುಪುಟಿಗೆ :** ಖಿನ್ನತೆಯ ಕ್ಷುಬ್ಧತೆಯ ತೋರಗೊಡದಲೆ . . . ಮುಂಗಾಲುಪುಟಿಗೆಯಲಿ ಮುನ್ನುಗ್ಗುತ್ತಿರಬೇಕು (ಅರಳು· ೩೪೮–೦೨) ; ಮುಂಗಾಲುಪುಟಿಗೆಯ ಮರುಸವಾಲಿನಿಂದ ಅವನು ಉತ್ತರ ಕೊಟ್ಟನು (ಅನ್ನ.೦೦೫) ; ಪಂತರು ಮುಂಗಾಲುಪುಟಿಗೆ ಹೊಡೆದರು (ದಿಃಶಹ· I, ೮೯).

[ ಮುಂಗಾಲ್ + ಪುಟಿಗೆ ]

**ಮುಂಗಾವಲು** (ನಾ). ಮುಂಭಾಗದಲ್ಲಿರುವ ಕಾವಲು, – ರಕ್ಷಣೆ : ಮುಂಗೈಯ ಮೇಲೆ ಅಂಗಜನ ಅರಗಿಳಿಯಿರಿಸಿ ಮುಂಗಾವಲೆಂದು ಸುಗ್ಗಿಯ ಕೋಕಿಲವ ಸರಿಸಿ (ಗಂ· ೩೦–೨).

[ ಮುಂ$_1$ ( < ಮುನ್$_1$ ) + ಕಾವಲು ( < ಕಾವಲ್$_1$ ) ]

**ಮುಂಗಾವಳ** (ನಾ). = ಮುಂಗತ್ತಲೆ : ಅಲ್ಲಿರುವ ಕನ್ನೆವೆಣ್ಣುಗಳ. . . ಮುಡಿಗಳ ಕತ್ತಲೆಗಳಿಂದ ಕೃಷ್ಣಪಕ್ಷದ ಮುಂಗಾವಳ ತೋಱಿದಂತೆ . . , ಇರುವುದು (ವಕಣ· ೪೯). 'ಮುಂಗಾಳು' ಪಠಾ.

[ ಮುಂ$_1$ ( < ಮುನ್$_1$ ) + ಕಾವಳ$_1$ ]

**ಮುಂಗಾಳು** (ನಾ). = ಮುಂಗತ್ತಲೆ : ಅರೆವೀದಿಯಲ್ಲಿಯೋ ಮುಂಗಾಳು ಮುಸುಕಿತ್ತೈ ! (ನಾವರೀ· ೦೨–೦೫); ಮುಂಜಾವದಿಂದ ಮುಂಗಾಳು ಕವಿಯುವವರೆಗೆ ಓರಿಗೆಯ ಹಸುಳರೊಡನಾಡಿ, ಬಿಸಿಲಿನ ಬೇಗೆ ಬೆಳುದಿಂಗಳಿನ ಕಳೆಯುತಿದ್ದೆ (ಉದ್ಯಾಕ. ೭೦೨).

[ಮುಂ$_1$ (< ಮುನ್$_1$) + ಕಾಳು$_3$ (< ಕಾಬು$_3$)]

**ಮುಂಗಾಳೆಗ** (ನಾ)· ಮುಂಚೂಣಿಯ ಯುದ್ಧ : ದಿನಕರನುದಯದಲಿ ಮುಂಗಾಳೆಗದ ಗಾಢಾಭಿಲಾಷರು ಬಂದು ಕಣನೊಳಗೆ . . . ಬಲಿದರು

ತಪ್ಪ ಮೋಹರವ (ಕುಮಾ.ಭಾ. ೬-೧); ಕೋಲ ಮಳೆಯನು ಕಡಿದನಾ ಮುಂಗಾಳೆ [ಶಾಕಾಂ. ಳ]ಗದ ತವಕಿಗರಿಗೆ (ಶಿಭಾಗ. ೯-೭-೧೭).

[ಮುಂ$_1$ (< ಮುನ್$_1$) + ಕಾಳೆಗ]

**ಮುಂಗಿ** 'ಮುಂಗುರಿ' ನೋ.

**ಮುಂಗಿಡು** 'ಮುಂಗೆಡು' ನೋ.

**ಮುಂಗಿಮೋವುಗಿಡ** (ನಾ). ಒಂದು ಬಗೆಯ ಸಸ್ಯ : ಸರ್ಪಾಕ್ಷಿ : "ನಾಕುಲೀ, ಸುರಸಾ, . . . ಸುವಹಾ ಈ ಸರ್ಪಾಕ್ಷಿಗಿಡದ ಹೆಸರುಗಳು . . . ಹಾವುಕಣ್ಣಿನ ಗಿಡ, ನಂಜಾರೇಗಿಡ. ಮುಂಗೀಮೋವುಗಿಡ" (ಸಿದ್ಧಾಂತಿ. ೦೩೬).

[ಮುಂಗಿ (< ಮುಂಗುರಿ) + ಮೋವು + ಗಿಡ (< ಗಿಡು)]

**ಮುಂಗಿಲಿ** 'ಮುಂಗುರಿ' ನೋ.

**ಮುಂಗಿಲು** 'ಮುಂಗುರಿ' ನೋ.

**ಮುಂಗು$_1$** (ನಾ). ೧. "ಮುಂಭಾಗ" (ಶಶಸಾಂ ಕೋಶ) : ಬೆಡಗಿಯ ರಂಗ ರಂಗಾಯೆಂದು ಮುಂಗನಾವರಿಪಳ ಸಂಗವದೆಂತು ಸಾರುವುದೊ (ಶಶಸಾಂ. ೨೨-೭). ೨. ಮೊಳಕೆ ; ಅಂಕುರ ; ಚಿಗುರು : ಈ ಬೀಜ ಒಂದೂ ಈ ದರಿದ್ರಮಳೆ ಏಕಸಾನು ಹೊಡೆದು ಮುಂಗು ಬಂದ ಸಸಿಗಳೂ ಕೊಳೆತುಹೋದವು (ಮರಮು. ೩೦).

[< ಮುನ್$_1$./ತುಳು. ಮುಂಗು, ಮುಂಗೆ]

**ಮುಂಗು$_2$** (ನಾ). ಒಂದು ಬಗೆಯ ಸಸ್ಯ : 'ಆನೆಮುಂಗು', 'ನೆಲ ಮುಂಗುಹುಲ್ಲು' ಪರಾ. [ ? ]

**ಮುಂಗುಚ** (ನಾ). ಎದ್ದು ಕಾಣುವ ಕುಚ : ತರಳಲೋಚನೆ ಮುಂಗುಚಂಗಳೊಳಾದ ಚೆಲ್ವುಗಳಂ ಮುಖಾಂಬುರುಹದೊಂದು ವಿಲಾಸಮಂ . . . ಸರೋರುಹಾನನೆ ತೋಜು ನೀಂ (ಧರ್ಮಾಮೃ. ೩-೦೨೮).

[ಮುಂ$_1$ (< ಮುನ್$_1$) + ಕುಚ]

**ಮುಂಗುಡಿ$_1$**, ಮುಂಕುಡಿ (ನಾ). ೧. ಮುಂದಿನ ತುದಿ, – ಕೊನೆ : (೬). ೨. ಮುಂದಿನ ಭಾಗ ; ಮುಂಭಾಗ ; ಅಗ್ರಭಾಗ : "ಮೂಗೆನೆ ಮುಂಗುಡಿಯುಕ್ಕುಂ" (ಶಶಬ. ೨೦೩); ಅಂತು ದಕ್ಷಿಣದಿಕ್ಪಾಲ ಪುರಸ್ಸರರವನಿಪತಿಗಳೊಳಾಳ್ತನಮಂ ಪೂಣ್ದು ಸಾರಸರ್ವಸ್ವನಿವೇದ ನಂಗೆಯ್ದು ಮುಂಗುಡಿಯು ಬಂದ ಚಕ್ರವರ್ತಿ ವೈಜಯಂತೀ ದ್ವಾರಾಭಿಮುಖನಾಗಿ ಬೀಡಂಬಿಟ್ಟೋಲಗಂಗೊಟ್ಟಿರೆ (ಶಾಂತಿಪು. ೧೧-೬ ವ); ನಡೆತಂದಳ್ ಶಿವಪೂಜೆಗೆಂದಗಜೆ ಪುಷ್ಪವ್ರಾತಮಂ ಕೊಂಡು . . . ಸುಯ್ಗಂಪಿನೊಳ್ ಸಾರ್ದು ಮುಂಗುಡಿಯೊಳಂ ತೀಡುವ ದಕ್ಷಿಣಾನಿಲನನೊಪ್ಪಂಬೆತ್ತ ವಿಸ್ತಾರದೊಳ್ (ಗಿರಿಜಾ. ೯-೩೦) ; ಹಾಯ್ದು ರಥವನು ಭೀಮಸೇನನ ರಥದ ಮುಂಗುಡಿಗೆ (ಕುಮಾ.ಕ. ೨೦-೨೩). ೩. ಬಳ್ಳಿಯ ಮುಂಭಾಗದ ಕುಡಿ, – ತಳಿರು ; ಚಿಗುರು : ಒಸಗೆಯ ಮುಂಗುಡಿ ಚೆಲ್ವಿನ ಮಸಣಂ . . . ಸಿರಿಯ ಮೆಯ್ಸಿರಿ ಮಸುರ್ವಂದರ್ ನೃಪನ ಕಣ್ಗದೇಂ ರಂಜಿಸಿತೋ (ವರ್ಧಪು. ೭-೪); ಬರಬರಲ್ಮುಂಗುಡಿಯ ಕಂಪು ಕರದಿಂ ತೀಡೆ ಹರಹರ ವಿರೂಪಾಕ್ಷ ನಿಮಗೆನುತ್ತಂ ಕೂಡೆ (ಪುಷ್ಪರ. ಹ. ೩೨೩-೧೧); ಮುಧ್ವತನದ ಮೋಹದ ಮುಂಗುಡಿಯೆ ಎದ್ದಪ್ಪೆನ್ನನು ಎಳಲತೆಗುಡಿಯೆ (ಹಡಗಾ. ೫೦ ೨೧೭). ೪. ಮುಂಭಾಗದ ಸೈನ್ಯ ; ಅಗ್ರಭಾಗದ ಸೈನ್ಯ : ಮುಂಚೂಣಿ: "ಮುಂಗುಡಿಯೆನೆ ಮುಂದುಚೂಣಿಯೆನೆ ಮುಂಬಲಮುಂ" (ಶಶಬ. ೦೭೬) ; ಶ್ರೀವೀರಬಲ್ಲಾಳದೇವರು ಮುಂಗುಡಿಯಂ ಬೆಸಸಲು (ಮೈಶಿ. ೦೯೪೦, ೦೪-೭ ; 1189) : ನಿಚ್ಚಟದ ಕಲಿಗಳ್ ಕಾದುತಿರ್ದ ರಿರ್ಬಲದ ಮುಂಗುಡಿಯುವರ್ (ಶಬಪು. ೪೮-೨೭). ೫. (ಆಲಂ) ಮುನ್ಸೂಚನೆ : ಗೌರಿಗೆ . . . ಬಹು ಬೇಗ ಅದೊಂದು ಕೆಲಸವಷ್ಟೇ ಅಲ್ಲ. ಸೋಮಕ್ಕನ ದಬ್ಬಾಳಿಕೆಯ ಮುಂಗುಡಿಯೆಂಬುದರ ಅರಿವಾಗ ತೊಡಗಿತು (ಸಡದಾ. II, ೯೮೩). **ಮುಂಕುಡಿ** : ೪. ಮುಂಕುಡಿಯ ನಾಯಕರಿವರು ಪತಿಮುಂಕಕಾಱರು ಇವರ ಬಳಿಯಲಿ ಬಿಂಕದೆರಡಕ್ಷೋಣಿ ಬಲವದೆ (ಕುಮಾ.ಭಾ. ೨-೧೧).

ಮುಂಗುಡಿಕೂಸು = ಕೊನೆಯ ಮಗುವಿನ ಹಿಂದಿನ ಮಗು : ಆ ಕುರಿಮರಿ ಗೌರಿಗೆ ಮುಂಗುಡಿ ಕೂಸಾಯಿತು (ಸಡದಾ. II. ೮೮೩).

[ಮುಂ$_1$ (< ಮುನ್$_1$) + ಕುಡಿ$_2$]

**ಮುಂಗುಡಿ$_2$** (ನಾ). ಮುಂಭಾಗದಲ್ಲಿರುವ ಧ್ವಜ ; ಅಗ್ರಭಾಗದಲ್ಲಿರುವ ಪತಾಕೆ, – ಬಾವುಟ : ಅದು ಭುವನಕ್ಕೆ ಮಂಗಳದ ಮುಂಗುಡಿ . . . ಬಹುಲಕ್ಷ್ಮಿಯ ಲಾಸ್ಯಮಂದಿರಂ (ಪುಷ್ಪಪು. ೦೩-೦೦೪) ; ಅಲರ್ದ ಪೊಂದಾವರೆಯ ಪಂತಿಯೊ . . . ಕಾಂತಾಜನವೊ ಕಮಲಾಸನೆಯ ಮುಂಗುಡಿಯೊ ಬಂದಳೂರ್ವಶಿ (ಕುಮಾ.ರಾ. ೯-೧೨). [ಮುಂ$_1$ (< ಮುನ್$_1$) + ಗುಡಿ$_2$]

**ಮುಂಗುಡಿ$_3$** (ನಾ). ೧. ಮುಂಭಾಗದಲ್ಲಿರುವ ಗುಡಿಸಲು : ಸಾಣೆ ವಿಡಿವ ಕಮ್ಮಾಱರ ಮುಂಗುಡಿಯಿಂ ಪುರಂ ಕಣ್ಗಂಬಾದುದು (ರಾಮಾಶ್ವ. ೦೦೩-೨೭). ೨. (ಅಂಗಡಿಯ) ಮುಂಭಾಗದಲ್ಲಿರುವ ಕಟ್ಟಡ; ಮುಂಗಟ್ಟು : ಎರಡು ತೆಱದೊಳಗೊಪ್ಪುವಂಗಡಿಯ ಮುಂಗು[ಶಾಕಾಂ.ಗ]ಡಿಯ ಸುರಿದ ಧಾನ್ಯದ ರಾಸಿಯೊತ್ತುಗಳ ಜೊತ್ತುಗಳ . . . ಪಾಳೆಯಂ ಕಣ್ಗೆಸೆದುದು (ಚಿಬಸ. ೪೨-೦೩); ನವರತ್ನಗಳ ದೀಪ್ತಿ ಮುಸುಗಿನ ಸಾಲು ಮಳಿಗೆಮುಂಗಡಿ ಮುಂಗುಡೀ. . . ಹರದ ಸೆಟ್ಟಿಯರ ಸೌಭಾಗ್ಯಸಂಪತ್ತನಾರು ಪೇಳ್ವರು (ನವಮೋ. ೨-೩೦). [ಮುಂ$_1$ (< ಮುನ್$_1$) + ಗುಡಿ$_3$]

**ಮುಂಗುಡಿದಾಯ** (ನಾ). ಪ್ರಾರಂಭದಲ್ಲಿ ಯುದ್ಧಮಾಡುವ ಅವಕಾಶ : ಜೀಯ ಖಾತಿಯಿಂದೇಕೆ . . . ತಾ ತಾ ವೀಳಯವನೆನುತ ಹಾಯಿದರು ತಮತಮಗೆ ಮುಂಗುಡಿದಾಯದಲಿ ಧಟ್ಟಿಸುವ ನಿಸ್ಸಾಳಾಯತದ ಬಹುವಿಧದ ವಾದ್ಯದ ಬಳಿಯ ಲಗ್ಗೆಯಲಿ (ಕುಮಾ.ಅ. ೦೨-೩೦). 'ಮುಂಗುಳದಾಯ' ಪರಾ. [ಮುಂಗುಡಿ$_1$ + – ದಾಯ$_1$]

**ಮುಂಗುಡಿಬಿಡು** 'ಮುಂಗುಡಿವಿಡು' ನೋ.

**ಮುಂಗುಡಿವರಿ** (ಕ್ರಿ). ೧. ಮುಂಭಾಗಕ್ಕೆ ಬರು ; ಮುಂದೆ ಬರು : ಮುಂಗುಡಿವರಿದು ಕಡುಕೈದ ಶಬರರೊಳಗೊಬ್ಬರುಳಿಯದ ತೆಱದಿ ಕೊಂದಿಕ್ಕಿ (ಹಡಕಾ. ೭-೨೦); ರಥರಾಜಿ ಮುಂಗುಡಿವರಿದುದವನೀಪತಿಯ ಚೂಣಿಯ ನೃಪರ ಜೋಕೆಯಲಿ (ಕುಮಾ.ದ್ರೋ. ೦-೪೭). ೨. ಕುಡಿಯಿಡು ; ಕೊನರು ; ವರ್ಧಿಸು : ಕಮಳಿನಿಯಿನಿಯನಸ್ತಮಿಸಿದಳಲುರಿಯಲೊದವಿ ಮುಂಗುಡಿವರಿದು ಗಗನಮಂ ತಳ್ಕಿಡಿದು ಬೆಂದ ಕಾರ್ಬೊಗೆಯೋಯೆನೆ . . . ರಾತ್ರಿ ಕಣ್ಗೆಸೆದುದು (ಸೋಮಚ. ೨-೮); ಬೇಕು ಬೇಡೆಂದೆಂಬುದೊಂದವಿವೇಕವುಳ್ಳನ್ನಬರ ನಾನಾ ಶೋಕಮೋಹಾದಿಗಳು ಮುಂಗುಡಿವರಿದು ಮುಸುಱುವುವು (ಶ್ರೀಶುರು. ೨೪-೦೩).

[ಮುಂಗುಡಿ$_1$ + ವರಿ$_2$]

**ಮುಂಗುಡಿವಿಡು**, ಮುಂಗುಡಿಬಿಡು (ಕ್ರಿ). ಮುಂದಕ್ಕೆ ಕುಡಿ ಬಿಡು : ಚಿಗುರು ; ಕೊನರು : ಕಡುನೀಱು ಪೂಗೊಯ್ಯಲೇಱುವ ಭರಕೆ ಮುಂಗುಡಿವಿಡುವೆಳಲತೆ ಮರನ ಬಿಡಲು ತನ್ನೋಪನ ಸತಿಯಪ್ಪಲು ಕಾಣುತೊಡನಗಲ್ವಬಲೆಯಂತಾಯ್ತು (ಶ್ರೀಚಾರಿ. ೩-೩೩). **ಮುಂಗುಡಿಬಿಡು** : ಮುಂಗಾರಿಯ ಗುಡುಗಿಗೆ ಸಂಚಿಗೆ ಮುಂಗುಡಿಬಿಟ್ಟು ಪಾರಿಜಾತ ಮೊಗವೆತ್ತಿದೆ ಹಸುರಂಗಿಯ ತೊಟ್ಟು (ಮುಕ್ತಕಂ. ೪೪-೧೦).

[ಮುಂಗುಡಿ$_1$ + ಬಿಡು$_1$]

**ಮುಂಗುರಿ**, ಮುಂಗರಿ, ಮುಂಗಲಿ, ಮುಂಗಿ, ಮುಂಗಿಲಿ, ಮುಂಗಿಲು, ಮುಂಗುಲಿ, ಮೂಗುರಿ, ಮೊಂಗುರಿ (ನಾ). ೧. (ಹಾವನ್ನು ಕೊಲ್ಲುವ) ಒಂದು ಬಗೆಯ ಪ್ರಾಣಿ ; ನಕುಲ : "ಮುಂಗುರಿ ನುಲ್ಲಿಯುಂ ಬಭ್ರುವೆಂಬುದು" (ಹಲಾಯು. ೦೩೭-೩೦); ಪಾಪಂಗಳ

ಗೆಯ್ದುವರಾನೆಯುಂ ಸಿಂಹಮುಂ ಪುಲಿಯುಂ . . . ಕಪ್ಪೆಯುಂ ಮುಂಗು ರಿಯುಂ ಮೊದಲಾಗೊಡೆಯ ಸ್ಥಲಚರಂಗಳುಂ . . . ಆಗಿ (ಶಬ್ದಾ. ೯೭-೬) ; ತದ್ವಂಭ್ರಪದ್ಮಂಗಳನ್ನೆದೆ ಮಚ್ಚು ನೆಲಸಿರ್ದಪುವೀ ಪುಲಿ ಪಂದಿ ಕೋಡಗಂ ಮುಂಗುರಿಯೆಂಬ ನಾಲ್ಕಱ ಭವಾವಳಿಯುಂ ಬೆಸಸಿಂ ಮುನೀಶ್ವರಾ (ಆದಿಪು. ೩-೦೯) ; ಅಂತು ಸಾರ್ತರ್ಪ ಭುಜಂಗನನಾ ಮುಂಗುರಿ ಕಂಡು ನಿಸರ್ಗವೈರಮಂ ನೆನೆದರದೆ ಸರ್ಪನಂ ಶತಖಂಡಂ ಮಾಡಿ ಕೊಂದು ತಿನುತ್ತಿರ್ಪುದುಂ (ಕಂತಶಂ. ೦೬೯-೩). ೨. ಒಂದು ಬಗೆಯ ಸಸ್ಯ : ಜಳದಂ ಮುಂಗುರಿಯುಂ ತರು ಜಳ ಚಮರಮುಂ ಸಕ ದೋಷಮುಂ ಪರಿವಕ್ಕುಂ (?) (ಕರ್ಣಾ. II, ೩). ಮುಂಗರಿ : ೨. "ದ್ರುಪದೀ–ಬಂದಣಿಕೆ, ಮುಂಗರಿ" (ಓಶಾ. ೭೮). ಮುಂಗಲಿ : ೧. ಮರೆ ಮುಂಗ [ಪಾಠಾಂ· ಮೂಗಿ] ಲಿ ಕಕ್ಕರವಕ್ಕಿ . . . ಬೂರಗೆಯೆಂಬಿವನ್ನೆದೆ ಕಾಸಿನೊಳ್ಗಣದೆ ಪೊತ್ತು ಬೇಡಪಡೆ ಬಂದುದು ಕಾನನದೊಳ್ ನಿರಂತರಂ (ಸೂಕ್ತಿಸು. ೩-೦೬೮) ; ತೆಂಗು ಬಟ್ಟಲು ನುಂಗಿ ಮುಂಗಲಿಯನಿಲಿ ನುಂಗಿ ಗಂಗೆವಾಳುಕರ ಹರ ನುಂಗಿ ಜಗವು ಬೆಳದಿಂಗಳಂತಿಕ್ಕು (ಸರ್ವಜ್ಞ. ೨೦೭೦); ಅಲ್ಲಿ ಒಬ್ಬ ಹಾವಾಡಿಗನು ಆಟ ಹೂಡಿದ್ದನು . . . ಒಂದು ಬದಿಗೆ ಮುಂಗಲಿಯನ್ನು ಗೂಟಕ್ಕೆ ಕಟ್ಟಿದ್ದನು (ಕಥೆ. ೩-೩೬). ಮುಂಗಿ : ೧. 'ಮುಂಗಿಮೋವು ಗಿಡ' ಪರಾ. ಮುಂಗಿಲಿ : ೧. ನರಿ ನಾಯ್ಪಂದಿ ಸಾರಂಗ ಕಡವೆ ಮುಂಗಿಲಿ [ಪಾಠಾಂ. ಗುರಿ] ಬೆಕ್ಕು . . . ತೋಳಗಳರಲೊಪ್ಪಿರಾ ಬಲ್ಗಾಡು (ಶ್ರೀಪಾಂ. ೭-೦೭) ; ಶರಭ ಶಾರ್ದೂಲ . . . ಮುಂಗಿಲಿಗಳ ಮೊತ್ತವಾವರಿಸಿ ಕೊಂಡಿಹುವು ಹೆಮ್ಮಲೆಯ (ಕಂಹಿ. ೦೬-೯೦). ಮುಂಗಿಲು : ೧. ವೈರವ ಬಿಟ್ಟು ಹುಲಿ ಹುಲ್ಲೆ ಒಂದಾಗಿ ಕರಿ ಸಿಂಹಗಳು ಚಂದದಿ ಮುಂಗಿಲ ಫಣಿ ನವಿಲುಗಳೀಗ (ಹಂಪಾಂ· ೦-೭೬). ಮುಂಗುಲಿ : ೧. ಮುಂಗುಲಿಯ ಮೇಲೆ ಹೆಡೆಯಿಟ್ಟು ಕೇಳ್ದಹಿಗಳುಂ ಸಂಗಣಿಸುವಹಿಯು ಹೆಡೆಗೆಡೆಗುಡುವ ಶಿಖಿಗಳುಂ (ಅನಾಕ. ದೀ. ೦೬೩-೩); ಮೇಲ್ಮರನಸಡರ್ವ ಕೋಡಗಂಗಳ ಬಳ್ಳಿವಾಲವನೆಳನಾಗರೆಂದು ಸೆಳೆದು ಕೆಡಪಿ ಕಡಿದೀಡಾಡಲಪ್ಪಳಿಸುವ ಮುಂದಿಮುಂಗುಲಿ [ಪಾಠಾಂ. ರಿ] ಗಳುಮಂ (ಕಬ್ಬಿಗ· ೨೩೯); ಪುಲ್ಲೆಗಳ್ಬೆಬ್ಬುಲಿಗಳೊಳ್ಸರಸವಾಡುವುವು ಪಾವು ಮುಂಗುಲಿಗಳೊಡಗೂಡುವುವು (ಕೈವಲ್ಯ. ೦೩-೦೯). ಮೂಗುರಿ : ೧. ಮೊಲ ಮರೆ ಮೂಗುರಿ ಕೂರ್ಗಂಗಿ ಯಾಳಲು ಬೆಕ್ಕರತೆ . . . ಎರಡುತಲೆಯ ಪಕ್ಕಿಯಿನೊಪ್ಪಿದುದಾ ದಾರುಣ ಮಪ್ಪಡವಿ (ಹರಿಶ್ಚ. ೦೩-೨೯); ಪಲ್ಲಿ ಮೂಗುರಿ ಮೂಷಕ ಮೊದಲಾದ ತಿರಿಕ ನಾರಕಗತಿಯೊಳು ಪುಟ್ಟಿ (ಶಾಂತಿಪು. ೭-೩೭). ಮೊಂಗುರಿ : ೧. ನಕರಿಯೆಂಬಾ ಪೆಸರ ತಾಳಿರ್ದ ಗಿಡವನಂಟುತ್ತ ಮೊಂಗುರಿ ಮಹಾವ್ಯಾಳ ವಿಷಮಂ ಕಳಿಪುದೇ (ಪಿಂಕ್ಷೆತ್ರ. ೯-೬-೬೮). 'ಮುಂಗುಸಿ' ನೋ.

[ದೇ.II ತಮಿ. ಮೂಙ್ಗಾ : ತುಳು. ಮುಂಗಿಲಿ, ಮುಂಗಿಲೆ, ಮುಂಗುಲಿ ; ತೆಲು. ಮುಂಗಿ]

**ಮುಂಗುರುಡು** (ನಾ)· (ಆಲಂ) ಮುಂದುಗಾಣದಿರುವಿಕೆ ; ದಿಕ್ಕು ತೋಚದಿರುವಿಕೆ : ದಿಗ್ಭ್ರಮೆ : ಚಿಂತಿಸುವ ಚಿತ್ತದಲು ಗುರಿಯಿರದ ಬಾಣದೊಲು ಎತ್ತಲೋ ಎತ್ತಲು ಮುಂಗುರುಡ ಮನದೊಲು (ಮಾತೃಕಾ. ೯೦-೦೩). [ಮುಂ$_1$ (< ಮುನ್$_1$) + ಕುರುಡು]

**ಮುಂಗುರುತು** (ನಾ)· ಮುಂಗುರುಹು ; ಮುನ್ಸೂಚನೆ : ಹೀಗೆ ಬಹುವಿಧವಾದ ಸುಗುಣಗಳಿಂದ ಕೂಡಿದ ಈ ಕತೆಯ ಗೊಂಚಲು ಮುಂದೆ ಬರಲಿರುವ ಅನೇಕ ಫಲಸಂಚಯದ ಮುಂಗುರುತೆಂದು ನಾನು ಆಶಿಸುತ್ತೇನೆ (ಕೆಮೋದ. ೭ ಮುನ್ನುಡಿ); 'ಹೂಬಿಸಿಲು' ಬರಲಿರುವ ವಸಂತೋತ್ಸವದ ಮುಂಗುರುತು (ಹಾಟಿಸಂ. ೦೯೯) ; ಧಾರವಾಡದ ಕರೆಯು ಅತ್ತ ಕರೆಯುತ್ತಿದೆ—ಎಂಬ ಮುಂಗುರುತು ಈಗಾಗಲೆ ಮೂಡಿದೆ (ಸೂರ್ಯಕಾ. ೨ ಮುನ್ನುಡಿ). [ಮುಂ$_1$ (< ಮುನ್$_1$) + ಗುರುತು (< ಗುಱುತು)]

**ಮುಂಗುರುಹು** 'ಮುಂಗುಱುಪು' ನೋ.

**ಮುಂಗುರುಳ್**, ಮುಂಗುರುಳು (ನಾ). ಮುಂದಲೆಯ ಕೂದಲು : ಮುಂಗೂದಲು ; ಅಳಕ : ಮೆಲ್ಲಡಿ ಕಂಜ ಮುಡಿ ಸೋಗೆ ತುಂಬಿಗಡಣ ಮುಂಗುರುಳ್ಗಳಿಬನವ ಪುಳ್ಳಿಯ ಕಿಚ್ಚು ಸುಡಲು ಸ್ಮರಿಪನೆ ನಿನ್ನಾಣೆ (ಶರ್ಗತ. ೬-೨೮). **ಮುಂಗುರುಳು** : ಮುಂಗುರುಳೊಳು ಬಿಗಿವಡೆದಿಹ ಮಣಿಯ ಕುಚ್ಚುಗಳ ನಿಡುದೋಳ ಬಳೆ ತಾತಿ ಕಡಗ ಕಂಕಣಮಾಂತ ಕಡುಚೆಲುವೆಯರೆಸೆದಿಹರು (ಕಂಹಿ. ೭-೦೦೯) ; ಸರಸಿಜೋಪಮವದನದಲಿ ಮುಂಗುರುಳ ತುಂಬಿಗಳೊಲೆಯೆ (ಅಹಂಪ. ೦-೧೭-೨೭).

[ಮುಂ$_1$ (< ಮುನ್$_1$) + ಕುರುಳ್$_1$]

**ಮುಂಗುರುಳು** 'ಮುಂಗುರುಳ್' ನೋ·

**ಮುಂಗುರುಳ್ಚು** (ಕ್ರಿ)· ಆಯುಧವನ್ನು ಮುಂದಕ್ಕೆ ರ್ಝುಳಪಿಸು : ಕಯ್ಯ ಕರವಾಳವನ್ನು ಮುಂಗುರುಳ್ಚಿ ಜನ್ನಣದಿಂದ ಆತನ ಆಯುಧವನ್ನು ಹಾರಿಸಿಬಿಟ್ಟು . . . ಕೊರಲ್ನಿಡಿದಾಂಕಿ ನಿಲಿಸಿಕೊಳ್ವನು (ಬಂಕ್ರಶ· ೦೦೩-೩).

[ಮುನ್$_2$ (< ಮುಂ$_2$) + ಕುರುಳ್ಚು ]

**ಮುಂಗುಲಿ** 'ಮುಂಗುರಿ' ನೋ.

**ಮುಂಗುಸಿ**, ಮುಂಗಸಿ (ನಾ)· ಹಾವನ್ನು ಕೊಲ್ಲುವ ಒಂದು ಬಗೆಯ ಪ್ರಾಣಿ ; ನಕುಲ ; ಇತ್ತ ನೋಡ್ಮುಂಗುಸಿಯ ಮೊಗದ ಚಂದಗಳ (ಪಾಂಚಾ. ೯); ಒಂದು ಮುಂಗುಸಿ . . . ಒಂದು ಹೆಗ್ಗಣ ; ಇವು ಅಲ್ಲಿದ್ದುವು (ಕಸಂ. ೭). **ಮುಂಗಸಿ** : ಮುಂಗುಸಿಯಂತೆಯು ಮಂಟೆಗಳಂತೆಯು ನಡಗೆ ಉಳ್ಳ ಕುದುರೆಗಳು ಪಡೆಯನಿಗೆ ಸಂಪದಭಿವೃದ್ಧಿಯಂ ಕೊಡುವವು (ಅಗಂಧ· ೩೦೩-೬); ಅಲ್ಲಿ ಒಂದು ಬಿಲದಿಂದ ಒಂದು ಮುಂಗಸಿ ಹೊರಟು ಬಂತು (ಕಕಥಾ· ೩೭೩). 'ಮುಂಗುರಿ' ನೋ.

[ದೇ.II ತೆಲು. ಮುಂಗಿಸ, ಕೋಲಾ, ಗೊಂಡಿ. ಮುಂಗುಸ್./ ಪ್ರಾ. ಮಂಕುಸ, ಮಂಗುಸ ; ಮುಗ್ಗುಸ./ ಕೊಂಕಣಿ. ಮುಂಗುಸ/. ಮರಾ. ಮಂಗೂಸ್, ಮುಂಗಸ್, ಮುಂಗೂಸ್./ಇಂ. Mongoose]

**ಮುಂಗುಸಿಗಿಡ** (ನಾ). ಒಂದು ಬಗೆಯ ಸಸ್ಯ ; ಮುಂಗಿಮೋವು ಗಿಡ : "ಗರುಡಪಾತಾಳ· ಪಾತಾಳಗರುಡ· ಸರ್ಪಾರಿ, ಮುಂಗುಸೀಗಿಡ" (ಶಬ್ದಶಿ. ೯೮); ಮುಂಗುಸಿಗಿಡ, ಪಾತಾಳ ಗರುಡ, ಸರ್ಪಾರಿ (ವೃಶಿಗ. ೩೮-೦೦೩೯).

[ಮುಂಗುಸಿ + ಗಿಡ (< ಗಿಡು)]

**ಮುಂಗುಳದಾಯ** (ನಾ)· ( ? ) : ತಳಾಱ ಕೇತಮಲ್ಲನಾಯಕಪ್ರಮುಖವಾಗಿ ಮಾಯಿಲೆಯ ಬವರಕ್ಕೆ ಹಲರಂ ಹೇಳಲು ಯೆಲರಿಂದ ಮುಂಗುಳದಾಯವಾಗಿ ನಡೆದು ಯಿದಿರಾಂತರು ಹಲರಂ ಕೊಂದು ಸ್ವಾಮಿಕಾರ್ಯ್ಯವಂ ನೆಱಹಿ ಸುರಲೋಕಪ್ರಾಪ್ತನಾದಂ (ಎಕ· VII, ಶಿಕಾ. ೦೯೯_೦೦; 1181); ಚಕ್ರವರ್ತ್ತಿಗಳ ಹೇಳಿಕೆಯಿಂ ಮುಂಗುಳದಾಯದಿಂ ನಾಲ್ಕುದಿಶಾವರಕ್ಕಂ ನಡದು ಹೇಳ್ದ ಕೆಲಸವಂ ಸಾಧ್ಯಂಮಾಡಿ (ಎಕ. XII, ೯೭-೨೯ ; 1187). 'ಮುಂಗುಡಿದಾಯ' ಪರಾ. [ ? ]

**ಮುಂಗುಱುಪು**, ಮುಂಗುರುಹು, ಮುಂಗುಱುಹು (ನಾ). = ಮುಂಗುರುತು : ರಂಗ ನಿನ್ನಯ [ರಕ್ತಿವೆತ್ತ ಕೌಮೋದಕಿಮಂ]ಗಳಜನನ ಸಂಸ್ಥಿತಿಗೆ ಮುಂಗುಱುಪಾಗಿ ಪೊರೆವುದು ಗಾ[ಡಿಯದೆನ್ನ] ಕಂಗಳ ಬಱನ ಕಳುಚುಗೆ (ಕಕಾಂ. ೨-೯)· **ಮುಂಗುರುಹು** : ಧೂಮಕೇತು ಕವಲ್ತು ಬಾನೊಳಗೆ ಬೆಳರುತಿದೆ ! ಕೇಡ ಮುಂಗುರುಹು ! (ಹಶ್ವಿರ· ೨೦-೦೦೦); ಜೀವನದ ಆರಂಭದಲ್ಲಿಯೇ ಆವನು ತನ್ನ ಸ್ವಚ್ಛಂದವೃತ್ತಿಯ . . . ಮುಂಗುರುಹುಗಳನ್ನು ತೋರಿಸದೇ ಹೋಗಲಿಲ್ಲ (ಬಾವಾದ. ೦೯). **ಮುಂಗುಱುಹು** : ರಂಗ ನಿನ್ನಾಜಾನುಬಾಹು ಬೆರಳು ನಖಮಂ ಗಂಡಮರು ಮಱುಹುಟ್ಟ ಮುಂಗುಱುಹಱಿಯುರು (ಕಕಾಂ· ೩-೦೩).

[ಮುಂ$_1$ (< ಮುನ್$_1$) + ಕುಱುಪು (< ಗುಱುಪು)]

**ಮುಂಗುಜುಹು** 'ಮುಂಗುಜುಪು' ನೋ.

**ಮುಂಗೂದಲ್**, ಮುಂಗೂದಲು (ನಾ). =ಮುಂಗುರುಳ್: ಕೋಪದಿಂ ಬಂದಡಸಿ ಪಿಡಿದು ಮುಂಗೂದಲಂ ಪೊಯ್ದು (ಶಾಂಶ. ೩-೩೩). **ಮುಂಗೂದಲು** : ಮಠದಲ್ಲಿ ಆದ ಮುಂಜಿಯ ದಿನ ತೆಗೆದುಹಾಕಿದ ಮುಂಗೂದಲು ಬೆಳೆಯಲು ಮೂರುತಿಂಗಳು ಬೇಕಾಗಿ (ಹೊಸಕ್ಷಿ. ೦೨೫).
[ಮುಂ$_1$ (< ಮುನ್$_1$) + ಕೂದಲ್ (< ಕೂಂದಲ್)]

**ಮುಂಗೂದಲು** 'ಮುಂಗೂದಲ್' ನೋ.

**ಮುಂಗೂಲಿ** (ನಾ). ಮುಂದೆ ಮಾಡುವ ಕೆಲಸ : ನಾನೇನೋ ಮುಂಗೂಲಿಯ ಕೆಲಸ ಮಾಡಿದ್ದೇನೆ. ಆದರೆ ಈ ದಾರಿಯಲ್ಲಿ ಯಾವ ಸೇನಾಪತಿಯೂ ಸೇನೆ ತೆಗೆದುಕೊಂಡು ಬರುವ ಸಮಾಚಾರವನ್ನು ಕೇಳಿಲ್ಲ (ಐಂಕಿಮ. ೯೩೩). [ಮುಂ$_1$ (< ಮುನ್$_1$) + ಕೂಲಿ$_1$]

**ಮುಂಗೂಳೆಯ** (ನಾ). ಮುಂಭಾಗದಲ್ಲಿರುವ ಗುಂಪು ; ಮುಂದಿರುವ ಸಮೂಹ : ಆರ್ತರೌದ್ರಧ್ಯಾನಮೆಂಬ ಮುಂಗೂಳೆಯದ ನಾಯಕರ್ವೆರಸು ದುರ್ಜನರ ಕೂಟಮೆಂಬ ಪಿಂಗೂಳೆಯದ ವೀರರ್ವೆರಸು (ರಹೂಸು. ೦೦-೯೭). [ಮುಂ$_1$ (< ಮುನ್$_1$) + ಗೂಳೆಯ]

**ಮುಂಗೆಡಿಸು** (ಕ್ರಿ). ಮುಂದುಗಾಣದಂತೆ ಮಾಡು: ದಿಕ್ಕು ತೋಚದಂತೆ ಮಾಡು : ಮುಂಗೆಡಿಸುವುದು ಲಜ್ಜೆ ನಾಚಿಕೆಯುಂಗುಸಂಗವದೇಕೆ ಹೊಲ್ಲ ತೊಲಂಗು ನೀನೆಂದಾವ ಪರಿಯಲಿ ಹೇಳಿದಡೆ ಮಾಣೆ (ಐಸಕ್ಷ. ೯೦-೯೯) ; ಮನುಜನಾಥರ ಮುಂಗೆಡಿಸಿದ ಕಾರ್ಮುಕವನು ಸಲ್ಲೀಲೆಯಿಂ ಜಯಿಸಿ ವನಿತೆಯ ಮುಂದಲೆವಿಡಿದೆಳೆತಹೆವು (ಜೀವಂಕಾ. ೦೭-೩೦): ಪಶುಪತಿ ಮುಳಿದೆಚ್ಚ ಶರ ತ್ರಿಪುರವನಾಗ ಮುಸುಕಿ ಮುಂಗೆಡಿಸುವಂದದಲಿ ಮಸುಧೇಶನ ಪಡೆ ನಡೆವುದು (ಕಂಪಿ. ೦೪-೩೦). [ಮುಂಗೆಡು + – ಇಸು$_3$]

**ಮುಂಗೆಡು**, ಮುಂಗಿಡು (ಕ್ರಿ). (ಮುಂದಿನ) ದಿಕ್ಕು ತೋಚದಿರು : ದಿಗ್ಭ್ರಮೆಗೊಳ್ಳು : ವೈರಿ ಮುಂಗೆಟ್ಟರೆ ಚಂಡವರ್ಮ ನರಪಂ ನಡೆಗೊಂಡನತೀವಕೋಪದಿಂ (ದಶಕು. ೭-೩೭) ; ಹುಟ್ಟಿದುದು ಮೊದಲಿದುವೆ ಕಡೆ ಮುಂಗೆಟ್ಟು ದುರ್ವೃತ್ತಿಯಲಿ ಪುಣ್ಯದ ಬಟ್ಟೆಯೆಂತ ಹದೆಂದರಿಯ ನೀ ಕನಸಿನೊಳಗಾಗಿ (ಐಸಕ್ಷ. ೯೦-೯) : ಬಿಡು ಬಿಡೆಲೆ ಸಹದೇವ ಯೆನ್ನಯ ನುಡಿಗೆ ಮಾಜುತ್ತರವ ಕೊಡು ಮುಂಗೆಡದೆ ಮುಂದಣ ನಿನ್ನವನ ಕಂಡಿಂತು ಮರುಳಹರೆ (ಕುವ್ಯಾಕ. ೨೩-೨೦). **ಮುಂಗಿಡು** : ಧಾರಿಣೀತಿಲಕನಸೊಲ್ದು ಚಿತ್ರಪಟದೊಳಪನನಿಲ್ಲಿಗೆ ತಂದು ತೋಱದಿಂತ ಟಲಿಪೆಯೇಕೆಯೆನ್ನನೆನುತಂಗನೆ ಮುಂಗಿಡುತಿರ್ದಳಾಕ್ಷಣಂ (ದಶಕು. ೦೦-೭೩).
[ಮುಂ$_1$ (< ಮುನ್$_1$) + ಕೆಡು$_1$]

**ಮುಂಗೆಡೆ** (ಕ್ರಿ). ಮುಖ ಮುಂದಾಗುವಂತೆ ಬೀಳು ; ಮುಖವಡಿಯಾಗಿ ಬೀಳು : ಹೊಡೆಗೆಡೆದವಾನೆಗಳು ಥಟ್ಟಿಗೆ ಕೆಡೆದವಗ್ಗದ ತುರಗದಳ ವ್ಯಗಡೆಸದಲಿ ಮುಂಗೆಡೆದು [ಪಾಠಾಂ. ಮುಂಕೊಂಡು]ಹೊರಳಿತು ಕೂಡೆ ಪಾಯದಳ (ಕುವ್ಯಾಕಉ. ೯-೧೨). [ಮುಂ$_2$ (< ಮುನ್$_2$) + ಕೆಡೆ$_1$]

**ಮುಂಗೆದಱು** (ಕ್ರಿ). (ಮೈಯನ್ನು) ಮುಂದಕ್ಕೆ ಚಾಚು; ನಮಸ್ಕರಿಸು (?) : ಅಲ್ಲಿ ಬಾಗಿಲ್ಗೆ ಬರಲಿಲ್ಲ ಮೈಮುಗಿದೆದ್ದು ಮೆಲ್ಲನೈತಂದು ಮುಂಗೆದಱಿ ನೆಱೆ ಕಣ್ದೆಱೆದು (ಬಸರ. ೯-೦೭೪).
[ಮುಂ$_2$ (< ಮುನ್$_2$) + ಕೆದಱು$_1$ (< ಕೆದಱ್$_1$)]

**ಮುಂಗೆಯ್**, ಮುಂಗಯ್, ಮುಂಗೈ (ನಾ). ೧. ಕೈಯ ಮುಂಭಾಗ; ಮಣಿಕಟ್ಟು : "ಪ್ರಕೋಷ್ಠಮೆಂಬುದು ಮುಂಗೆಯ್ಗೆ" (ಅಭಿಧಾ. ೯೯-೩೭೯): ಮಹೇಂದ್ರದತ್ತನೆಂಬರಸನಾತನ ಮುಂಗೆ [ಪಾಠಾಂ. ಗೈ]ಯ್ ಧಾತ್ರಿವಾಹನನ ಯೋಧನಿಂ ಚಕ್ರಪಾಣಿಯುಂ ಖಂಡಿಸೆ ಪಟ್ಟುದಾಗಿ (ವಡ್ಡಾರಾ. ೦೯೯-೯) ; ಅಂತು ಬೃಹಂದಳೆಯಾಗಿ ಗಾಂಡೀವಜ್ಯಾಘಾತ ದೋರ್ದಂಡನೀಲಂಗಳನಡಸಿದಂತಿರ್ದರಡುಂ ಮುಂಗೆಯ್ಗಳ ಕರ್ಪಂ ಕೀವೆ ತೊಟ್ಟ ಬಳೆಗಳ್ ಮಾಜಿಸೆ (ಪಂಪಭಾ. ೯-೩೩ ವ) ; ಕನಕವಳಯಮಂ ಮುಂಗೆಯ್ಯೊಳ್ [ಪಾಠಾಂ. ಗೈಯೊಳ್] ಸಂಗಳಿಸಿಯುಂ (ಪಂಪ್ರಕ. ೬-೬೩ ). ೨. ಕೈಯ ಮೇಲುಭಾಗ ; ಹಸ್ತದ ಮೇಲುಭಾಗ : (+). ೩. (ಮನೆ ಅಥವಾ ಹಳ್ಳಿಯ) ಮುಂಭಾಗ ; ಎದುರುಭಾಗ : (+). **ಮುಂಗಯ್** : ೧. ಕಯ್ ಮುಂಗಯ್ ಪೊಗಂ. . . ಕಾಲಡಿಯೆಂದಿಂತಿ ವನುಚ್ಚರ್ ಪೂದುವಿಸೆ ತತ್ಪ್ರಜನ್ಯಕಂದಾಂಕುರಂ (ಶಾಂತಿಪು. ೯-೦೭) ; ಮುಂಗಯ್ಯಂ ಪಿಡಿದೊತ್ತಿ ಕೈಯ ಕರವಾಳ್ ಬೀಟ್ಟಿರ್ಪನಂ ವೀರಂಗೆ ದೋರ್ಭಂಗಂ ಮಾಡಿದನೇನಲಂಘ್ಯಬಲಸೋ ರಾಮಾನುಜಂ ಲಕ್ಷ್ಮಣಂ (ಪಂರಾಮ. ೯-೨೧) ; ಕನ್ನಡ ಸಮಾಸಕ್ಕೆ . . . ಮರ ಗಿಡು ಬಳ್ಳಿ ಪುಲ್ಲೊ ದಱ್ ಪಕ್ಕಿ ಮಿಗಂಗಳ್ ಮುಂಗಯ್ (ಕಮರ. ೭೨ ಪ್ರಯೋ). **ಮುಂಗೈ** : ೧. "ಪ್ರಕೋಷ್ಠಮೆನೆ ಮುಂಗೈಗೆ ನಾಮಮಕ್ಕುಂ" (ಮಂಗರಾ. ೯೩-೯); ಕಂಕಣದಂತೆ ಮುಂಗೈಯಂ ಪತ್ತಿ ಕೊಱೆವರ್ (ರಹೂಸು. ೩-೭೩) ; ಟೊಂಕಮನುಱುಗಿಸಿ ನಿಂದೇಡಿಸುತಂ ಮೊಳಕೈ ಮುಂಗೈಗಳನಾಡಿಸುತಂ (ಶೃಂಗಾರ. ಹ. ೯೭೨-೨೯). ೨. ಅಂಗಯ್ಯಲಾಡುವ ಗಿಳಿ ಮುಂಗೈಯ[ಪಾಠಾಂ. ಗಯ್ಯ]ಮೇಲಣ ಗಿಳಿ (ಕುಕಂದ. ೦-೦೦೨-೭) ; ಕಾವನ ಮುಂಗೈಯ ಗಿಳಿಯಂತೆ ನುಡಿದುಱೆ ಕಾವನ ಬಿಲ್ಲೊಗ್ಗೀಲ ಪಿಡಿದು ಕಾವನ ರಥವಾಜಿ ಭುಂಜಿಸದಂತೆ ಕೈಗಾವ ಪಾಮರಿಯರೊಪ್ಪಿದರು (ಮೋಹಕ. ೨-೯೭) ; ಕಡಿದು ಮುಂಗೈಯ ಕೋಪಾಟೋಪದಲಿ ಖಳ ಜಡಿದು ಖಂಡೆಯವ ಚಿಮ್ಮಿದನು (ಕಂಪಿ. ೦೩-೭೩). [ಮುಂ$_1$ (< ಮುನ್$_1$) + ಕೆಯ್$_3$]

**ಮುಂಗೆಯ್ಸರಲ್** (ನಾ). ಮುಂಗೈಯಲ್ಲಿ ಹಿಡಿಯುವ ಬಾಣ (?) ; "ಮುಂಗೈಯಲ್ಲಿ ತೊಟ್ಟುಕೊಳ್ಳುವ ಕಂಕಣ" (+); ಬೆರಲ್ . . . ನರಲುಂ ಮುಂಗೆಯ್ಸರಲುಂ[ಪಾಠಾಂ. ಮುಂಗೈಸರಲುಂ] ಲಾಂತಂ (ಕಮರ. ೨೯) . [ಮುಂಗೆಯ್ + ಸರಲ್]

**ಮುಂಗೆಲಸ** (ನಾ). ಮುಂದೆ ಮಾಡಬೇಕಾದ ಕೆಲಸ : ಮುಂದಿನ ಕಾರ್ಯ : ಹರನಿಂದೆ ಹತನಾದ ಕಂತು ರುಕ್ಮಿಣಿಯ ಸುತನಾಗಿ ಹುಟ್ಟಿ ಮುಂಗೆಲಸಕ್ಕೆ ಬಯಲಾದ ಕತೆಯ ಬಿತ್ತರಿಪೆ (ಮೋಹಕ. ೩-೨).
[ಮುಂ$_1$ (< ಮುನ್$_1$) + ಕೆಲಸ]

**ಮುಂಗೇಣಿಕಾಱ** (ನಾ). ಪ್ರಧಾನನಾದ ಗುತ್ತಿಗೆದಾರ : ಗೇಣ ಕೊಯ್ಲಿನ ಕಾವಣಕೆ ಮುಂಗೇಣಿಕಾಱನು ಮೊಳಗಿದನು ಫಡ ಕೇಣ ವಿನ್ನೇಕೆನುತ ಕೈದೋಱಿತು ಭಟಸ್ತೋಮ (ಕುವ್ಯಾಕ. ೨೯-೪೨).
[ಮುಂ$_1$ (< ಮುನ್$_1$) + ಕೇಣಿಕಾಱ$_1$ (< ಕೇಣಿಗಾಱ)]

**ಮುಂಗೈ** 'ಮುಂಗೆಯ್' ನೋ.

**ಮುಂಗೈಕಂಕಣ** 'ಮುಂಗೈಗಂಕಣ' ನೋ.

**ಮುಂಗೈಕಸುವು** (ನಾ). ಮುಂಗೈಯ ಬಲ, –ಶಕ್ತಿ, – ಸಾಮರ್ಥ್ಯ: ರೂಪಚಂದನೆಷ್ಟೋ ಮುಂಗೈಕಸುವಿನ ಮನುಷ್ಯನಿದ್ದರೂ ನೀತಿಯ ಪ್ರಸಂಗ ಬಂದಾಗ ಆ ರಾಮಸಿಂಹನು ಆತನ ಗುರುವಾಗುತ್ತಿದ್ದ (ಜಾವಾ. ೭೭) ; ತುಪ್ಪ ಹಾಲು ಮೊಸರು . . . ಇವನ್ನೆಲ್ಲ ಕನಸಿನಲ್ಲಿಯೂ ಕಾಣುತ್ತಿರಲಿಕ್ಕಿಲ್ಲ, ಆದರಿಲ್ಲಿ ಒಂದು ನಾಲಗೆ, ಒಂದು ಮುಂಗೈಕಸುವಿನಿಂದ ಆ ಪದಾರ್ಥಗಳ ಸುರಿಮಳೆಯೇ ಆಗುತ್ತದೆ (ಶ್ರೀಪಾಶ್ರಿ. ೩೯).
[ಮುಂಗೈ (< ಮುಂಗೆಯ್) + ಕಸುವು (< ಕಸು$_3$)]

**ಮುಂಗೈಗಂಕಣ**, ಮುಂಗೈಕಂಕಣ (ನಾ). ಕೈಯ ಮುಂಭಾಗದಲ್ಲಿ ಧರಿಸುವ ಕಂಕಣ : ಮುಂಗೈಗಂಕಣಕೆ ಕುಲದೀಪ ಕನ್ನಡಿಯೇಕೆ ತರಿಸು ಪ್ರತಾಪವಾಜಿಯನೆಂದು ಬಿನ್ನೈಸಿದನು ನಸುನಗುತ (ಜಳಹ. ೭-೯). **ಮುಂಗೈಕಂಕಣ** : ಮುಂಗೈಕಂಕಣಕೇಂ ಕನ್ನಡಿಯ ಸಾಕ್ಷಿಯಾದುದೆ ಧರೆಯೊಳ್ (ಕೃಕಪ. ೩೩-೨೦).
[ ಮುಂಗೈ ( < ಮುಂಗೆಯ್ ) + ಕಂಕಣ ]

**ಮುಂಗೈಗೊಳ್** (ಕ್ರಿ). ತೋಳಿನ ಮುಂಭಾಗದಲ್ಲಿ ಹೊಂದಿಸಿ ಕೊಳ್ಳು,–ಹಿಡಿದುಕೊಳ್ಳು : ತಿರುಹಿ ಗಾಳಿಯು ತೆಗೆದು ಮುಂಗೈಗೊಂಡು ನಡೆನಡೆದು ಅರಿಬಲವನಿಡೆ ಮುಗ್ಗಿ ಕೆಡೆದುದು ತುರಗವಜ್ರಜಿಯಾದುದಿಭತತಿ (ಕುವ್ಯಾರ್ದ್ರೊ. ೬–೩೩). [ ಮುಂಗೈ (<ಮುಂಗೆಯ್) + ಕೊಳ್$_1$ ]

**ಮುಂಗೈಗೊಳಿಸು** (ಕ್ರಿ). =ಮುಂಗೈಗೊಳ್ : ಕಳಲಿ ರಣದಲಿ ಕೆಡೆದ ರಕ್ಕಸವಲಗೆಯಿರಲವ ಕೊಂಡು ಮುಂಗೈಗೊಳಿಸಿ ಯಜ್ಞದ ವೀರಭದ್ರನ ರಣಕೆ ಗುರುವಾದ (ಕೂರಂಗ. ೩–೬–೯೦). [ ಮುಂಗೈಗೊಳ್ + –ಇಸು$_3$ ]

**ಮುಂಗೈನಿಗಳ** (ನಾ). ಮುಂಗೈಗೆ ಧರಿಸುವ ಸರಪಳಿಯಂಥ ಒಂದು ಬಗೆಯ ಆಭರಣ : ಮುಂಗೈನಿಗಳವನು ತಿರುಹುತ್ತ ನಸುನಗುತೆದ್ದ ನಭಿಮನ್ಯು (ಕುವ್ಯಾರ್ದ್ರೊ. ೯–೩೯).
[ ಮುಂಗೈ (<ಮುಂಗೆಯ್) + ನಿಗಳ (=ನಿಗಲ) ]

**ಮುಂಗೈಮುರಾರಿ**, ಮುಂಗಯ್ಯಮುರಿ, ಮುಂಗೈಯಮುರಿ (ನಾ). ಮುಂಗೈಯಲ್ಲಿ ಧರಿಸುವ ಒಂದು ಬಗೆಯ ಕಂಕಣ : ಹಗಲುದೀವಟಿಯ ಪಡೆಯುಂ ಬಗೆಗತಿಶಯಮಾದ ಸಿಂಹಲಕ್ಷ್ಮಪತಾಕಂ ಮೃಗಧರ ಪಂಕಿ [ಯುಂ] ಪಡೆಯುಂ ಬಗೆಯದೆ ಮುಂಗೈಮುರಾರಿಯಿಂಬುದನಿತ್ತಂ (ಶೀಳವಂ. ೦–೦೦೮) ; ಕಣ್ಗೆ ಕಾಮನ ರಕ್ಷೆ, ಬೆನ್ಗೆ ಭೀಮನ ರಕ್ಷೆ, ಮುಂಗೈ ಮುರಾರಿ ರಕ್ಷೆ (ಕನ್ನಜಾ. ೦೦೩); ಗಂಡುಕಚ್ಚೆ ಹಾಕಿ ಪೀತಾಂಬರವುಟ್ಟು . . . ಕರ್ಣಕುಂಡಲ, ರತ್ನಹಾರ, ಮುಂಗೈಮುರಾರಿಗಳಿಂದ ಲಲಿತ ಸಾಲಂಕೃತಳಾದಳು (ರಾಗಿಜ. ೦೩೩). **ಮುಂಗಯ್ಯಮುರಿ** : ಮುಂಗಯ್ಯ ಮುರಿ ಹಸ್ತಸರ ಸರಪಣಿ . . . ಮುಂಗಯ್ಯ ಮುತ್ತಿನ ಸರಗಳಿಂ ಸಿಂಗರಿಸಿದಳಾ ಸೀಜೆ (ಕುರಾಸಾಂ. ೨೯–೯೬). **ಮುಂಗೈಯಮುರಿ** : ಮುಂಗೈಯ ಮುರಿ ಮುರಡಿಯ ಸರವಳಿ ಹೊನ್ನುಂಗುರ ತೋಳ ಬಾಪುರಿಯ ಶೃಂಗಾರದ ನಾಯಕಪಾಲ ಬಹಳೆಬೆಡಂಗಿನೊಳ್ಳೆತಂದುದಾಗ (ಕಂಸವಿ. ೨೩–೬೪).
[ ←ತೆಲು. ಮುಂಗಯಿಮುರಾರಿ, ಮುಂಗೈಮುರಾರಿ, ಮುಂಗಾ ಮುರಾರಿ, ಮುಂಗಾಮುರುವು ]

**ಮುಂಗೈಯಮುರಿ** 'ಮುಂಗೈಮುರಾರಿ' ನೋ.

**ಮುಂಗೈವಲ** (ನಾ). ಮುಂಗೈಯ ಬಲ,–ಶಕ್ತಿ : ದೋರ್ವಲವುಂ ಪೊಪಟ್ಟ ಮುಂಗೈವಲವುಂ ಪಿರಿದಾದುದೆನ್ನನಿನ್ನಾರ್ ಕೊಲ್ವರ್ (ಶಂಹರಿ. ೬–೯೭). [ ಮುಂಗೈ (<ಮುಂಗೆಯ್) + ಬಲ$_3$ ]

**ಮುಂಗೈಹೊಡೆ** (ನಾ). ಬಿಲ್ಲುಗಾರರು ಬಿಲ್ಲಿನ ಹಗ್ಗವು ಕೈಗೆ ತಗಲ ದಂತೆ ಮುಂಗೈಗೆ ಕಟ್ಟಿಕೊಳ್ಳುವ ರಕ್ಷಾಕವಚ ; ಗೋಧೆ : ಬಲಿದ ಮುಂಗೈಹೊಡೆ[ಬಾಹಂ.ದೆ]ಯ ಬಿರುದಿನೊಳುಲಿವ ಘಂಟೆಯ ಬೆನ್ನಲೆವ ಬತ್ತಳಿಕೆಗಳಲೈದಿತ್ತು ಬಿಲ್ಲಾಳುಭಯಸೇನೆಯುಲಿ (ಕುವ್ಯಾಶೀ. ೯–೦೦). 'ಕೆಯ್ಯೊಡೆ' ಪರಾ. [ಮುಂಗೈ (<ಮುಂಗೆಯ್) + ಹೊಡೆ$_3$ (<ಪೊಡೆ$_3$)]

**ಮುಂಗೊರಲ್** (ನಾ). ಕುತ್ತಿಗೆಯ ಮುಂಭಾಗ ; ಕೊರಳ ಮುಂದಿನ ಭಾಗ : ಉರದೊಳ್ ಘಣೆ . . . ಮುಂಗೊರಲೊಳ್ ಕಜ ಮಜ ಯಿಲ್ಲದೆ ದೊರೆಕೊಳೆ ಮೃಡನಡಿಗೆ ಪರಿಗನೆಜಗಿದನಾಗಳ್ (ಶಂಶರಾ. ೬–೨೪).
[ ಮುಂ$_1$ (<ಮುನ್$_1$) + ಕೊರಲ್ ]

**ಮುಂಗೊಳ್**, ಮುಂಕೊಳ್, ಮುಂಕೊಳು (ಕ್ರಿ). ೧. ಎದುರಿಗೆ ಬರು ; ಮುಂದೆ ಬರು,–ನಿಲ್ಲು : (೬). ೨. ಮುಂದೆ ಹೋಗು ; ಮುಂದೆ ಸಾಗು ; ಮುಂದೆ ಚಲಿಸು : ಭಯಾಬ್ಧಿಯಲ್ಲಿ ಮುಂಗೊಂ[ಶಾಣಂ. ಕೊಂ]ಡು ಮುಳುಂಗಿ ತೇಲ್ದುವವನೀಕ್ಷಣಯುಗ್ಮಪಯುಶ್ಚರ ದ್ವಯಂ (ಶಂಶಂ. ೯–೦೦೦). ೩. ಮುಂದೆ ನುಗ್ಗು ; ಧಾವಿಸು : ಆ ಮಹಾಚಲಪತಿಯ ರಮಣೀಯಜಂಗಮಾವತಾರಮೂರ್ತಿಗಳೆ ಮುಂಗೊಳ್ವಾಯದಿಂ ಪರಿದು ಕೆಡೆದುಮೆಂಬಂತೆ ದೆಸೆದೆಸೆಗೆ ಪರಿದು ಕೋಡನೂಜ ಕೆಡೆವನೇಕದ್ವಿಪಸಂಕುಳಂಗಳುಮಂ (ಜಗಿವಿ. ೬–೩೩ ವ).

**ಮುಂಕೊಳ್** : ೧. ಪಂಕಜಮುಖಿಯರಿತ್ತಡಿಯ ಸೋಪಾನದೆ ಮುಂಕೊಂಡು ಮೆಜೆಪಿದರತಿಯಲಿ (ಕಂಸವಿ. ೩–೩೨). ೩. ಮುಲುಗು ತೇಳುತ ಕೆಚ್ಚಲುಂಗಳಗ್ಗಳಿಸಿ ತೊರೆಯಲು ಮೊಪದಿಂದಾಕಳುಗಳಂಬೆ ಯೆನುತ್ತ ಮುಂಕೊಂಡಜಚುತಿರಲಾಗಿ (ಬಸವು. ೬೦–೩೩) ; ಧರ್ಮಸುತ ಮುಂಕೊಂಡು ರಣದಲಿ ಕಾದಿ ಗೆಲಿದನು ಮಾದ್ರಭೂಪತಿಯ (ಕುವ್ಯಾಶ. ೨ ಸೂಚನೆ) ; ಮುರಿಮುರಿದುರ್ವಿಯಾ ತಳದಲ್ಲಿ ಮುಂಕೊಂಡು ಪರಿದಳು ತುಂಗಬೆಳ್ಳಂಗೆ (ಪೋಜಕ. ೬–೩೩). ೪. ಮುಂಭಾಗದಲ್ಲಿ ಹೊಂದು ; ಮುಂದಿಟ್ಟುಕೊಳ್ಳು : ಧೇನುಗಳಂ ಮುಂಕೊಂಡು ಬರ್ಪ ಶಿಷ್ಯ ಸಮೂಹಂಗಳುಮಂ (ಶಂಕಶಂ. ೦೦೬–೨) ; ತಲೆವಣೆಗಳ ತಾಳ್ದು ನಿಲೆ ಚವಿ ನಿಖಿಳಭೂಪಲೆಯು ಸಗ್ಗಿಗರ ಮುಂಕೊಂಡು ಕಲೆಗಧಿನಾಥ ಚಂದ್ರನ ನೋಡ ಪೋಪಂತೆ ನೆಲೆನೆಲೆಗಡರ್ದಳಾ ಕುವರಿ (ಪೋಜಕ. ೨೬–೬೦). ೫. ಪ್ರಾರಂಭಿಸು ; ತೊಡಗು ; ಮೊದಲುಮಾಡು : ಗಿರಿದುರ್ಗ್ಗಸಿಂಘಂ ಮೊನೆಯ ಮುಂಕೊಳ್ವರ ಪೆಣ್ಡಿರ ಗಣ್ಡಂ ಪೆರ್ಗ್ಗಡೆ ಹೀರದಾಸನ ಸನ್ನಾಹ ಸುಭನಾಮದಿ ಪಮಸ್ತಪ್ರಶಸ್ತಿಸಹಿತಂ(ಶಾಶಾಇ. XI–i, ೬೦ ೦೯ ; 1024) ; ನಾಕನಿಳಯರು ತಂದ ಜಯವೇ ಸಾಕು ಸೋಲುವರಲ್ಲ ನೀವಿದಕೇಕೆ ನೆಜ ಮುಂಕೊಂಡಿರೇದನು ನೆಗುತ ಕಲಿಪಾರ್ಥ (ಶಂಭಶ. ೩೬–೪೩) ; ಮುಂಕೊಂಡ ಮಹಾವ್ರತಮಂ ಪಜಪಡಿಸದ ತೀವ್ರಪರಿಗ್ರಹಕೊಂದಿನಿಸುಂ ಚಿತ್ತಮನು ಎಱಗಿಸದ . . . ಸಾಧುಸಮಿತಿಗತಿಸಮ್ಮತೆಯೊಳೆಜಗುವೆನು (ಶಯಲಾ. ೦–೩). ೬. ಮಾರ್ಗವನ್ನು ಹಿಡಿ ; ದಾರಿಯನ್ನು ಹಿಡಿ : ವಿಭವಂ ಕೈಮಿಗೆ ಚಾತುರಂಗಸಹಿತಂ ಪ್ರಸ್ಥಾನಮಂ ಮಾಡಿ . . . ವಿದರ್ಭದೇಶಪಥಮಂ ಕೊಂಡನುತ್ಸಾಹದಿಂ (ವಶಶಂ. ೨೩೯). ೭. ಸ್ವೀಕರಿಸು ; ಪಡೆ : ಸುಗ್ಗಿಯ ಪುಗಿಲೊಳ್ ಮುಂಕೊಂಡುಗ್ಗಿಯನುಜ್ಜ ವಿಸಿದಂತೆ ಮೋನಮುನುಟಿದೇಂ ಬಗ್ಗಿಸಿದುವೊ ಕೋಗಿಲೆಗಳ್ ಮೊಗ್ಗಪ್ಪ ವಿಯೋಗಿಯುಂ ಪುಗಲ್ ಪುಗಲೆನುತಂ (ಕಾವ್ಯಾವ. ೬೯೨). ೮. ಎದುರಿಸು ; ಪ್ರತಿಭಟಿಸು : ವೈರಿವ್ರಾತವನು ಮುಂಕೊಂಡು ಹೊಯ್ದನು ಹೊಳೆವ ಖಡುಗದಲಿ (ಕುವ್ಯಾರ್ದ್ರೊ. ೬–೩೬) ; ಕೋದಂಡದ ಜೀವೆಯ ನೀಖಿ ಪುಂಡರೀಕಾಕ್ಷ ರಾಮನ ಪಿಂತುಮಾಡಿ ಮುಂಕೊಂಡನು ಖೇಚರ ಚಕ್ರಿಯನು (ವರ್ಧಕ. ೬–೬). ೯. ಅತಿಕ್ರಮಿಸು ; ಮೀರು : ಬಾಲರವಿಕೋಟಿಪ್ರಭೆಯನೊಳಕೊಂಡು ಮುಂಕೊಂಡು ಬಾಲನ ಘನತೇಜಮೂರ್ತಿಯ ಮೇಲೆ ಪರ್ಬಲು (ಬಸವು. ೩–೬೦). ೧೦. ಆತುರ ಪಡು; ತವಕಿಸು; ಉತ್ಸಾಹಿಸು: ಸೊಗಸಿವಡೆ ರತಿಗೆಯ್ದು ಸೊಕ್ಕಿದಡಗಲ ದೊಳಪೊಕ್ಕಿಂ ಪುಗಲು ಕಣು ಮುಗಿವಡಂ ಕೈಕೊಂಡು ಮುಂಕೊಂಡಡೆ ನಲಿವು ಮಿಕ್ಕು ವಿಂಗೆ ನುಡಿಗಳಿಂದೊಲಿಸಿ (ಬಸವು. ೯೨–೦೩) ; ತುರಗ ಖುರಗಳಲಿ ದಿಂಡುದಿರುಹುತ್ತಿರಲದಕ್ಕಾ ಗಂಡುಗಲಿ ಶಾಬರನೃಪನು ಮುಂಕೊಂಡು ಹೊಗಲುತ್ತಿರಲು ತುರಗದ ಪೂರ್ವಪಾಯವನು (ಕಂಶಶ. ೩–೦೯) ; ತೆಂಕ ನಾವೆಯ್ದುದಿದ್ದ ಪೆವೆಮುಗಿದಿರಾಗಿ ತೆಂಕಣಿಂ ಬಪ್ಪರಾರೆಂದು ಮುಂಕೊಂಡು ಪಡೆಯೆಲ್ಲ ನೋಡುತಿವ್ದುದು ಗಗನಾಂಕಕೆ ದೃಷ್ಟಿಯನಿಟ್ಟು (ಶರತ. ೯೬–೦೭). **ಮುಂಕೊಳು** : ೧. ತೊಲಗಿರ್ದ್ದ ಕಾಲಾಳು ಮೇಲಾಳ ಳವಿಗೊಡಲಿ ಮಹಾರಥರು ಮುಂಕೊಳಲಿ (ಕುವ್ಯಾರ್ದ್ರೊ. ೩–೯). ೧೦. ವಿಗಡೆಯರ್ನೆರೆದು ಕಾಳೆಗಕೆ ಮುಂಕೊಳುತಿರ್ದರು (ಕೈಶಿಂಪಾ. ೦೬–೩). ೧೧. ಆಕ್ರಮಿಸು ; ಮುತ್ತು ; ಕವಿ : ಅಲಿಸ್ಕಂದನವ ಮುಂಕೊಳಲು ದಶಕಂಠ ಧನುವಿನೊಳಂಕಿಸುತ ಸೀತಾಸ್ತ್ರವನು ಭಾರಾಂಕನೆಸಗುವೆನಸುರ ಸೇನೆಯೆನುತ್ತಲೈತಂದ (ಶುಕ್ತಶ. ೨೩–೬) ; ಪಿರಿದಾದ ಚತುರಂಗದ ಪದ ಹತಿಯಲಿ ಮುರಿದೇಳ್ವ ಕೆಂದೂಳ್ಗಳಾಗ ತರಣಿಮಂಡಲವ ಮುಂಬಲಿದು ಮುಂಕೊಳುತಂದು ಕಿರಣದೀಳಿಗೆಯ ತಗ್ಗಿಸಿತು (ಕಂಸವಿ. ೦೬–೨೬).
[ಮುಂ$_2$ (<ಮುನ್$_2$) + ಕೊಳ್$_1$]

**ಮುಂಗೊಳಿಸು**, ಮುಂಕೊಳಿಸು (ಕ್ರಿ). ೧. ಎದುರುಮಾಡು ; ಮುಂದು ಮಾಡು : ಎದ್ದು ನಿಟ್ಟಿಸುವಿನಿಮಿಷನ ನೋಟಕೆ ತನ್ನ ಮುದ್ದುಮೊಗವ ಮುಂಗೊಳಿಸಿ ನಿದ್ದೆಯೊಳೆಸಗಿದ ನಿಖಿಲೋಪಚಾರವ ತಿದ್ದುವುದಿನಿವಾತಿನೊಳು (ಶಬರ. ೬-೭). ೨. ಮುಂಭಾಗಕ್ಕೆ ಬರು ; ಎದುರಿಗೆ ಬರು ; ಮುಂದೆ ಬರು : ತಲೆವರಿಗೆಯಲಿ ಖಡ್ಗಗರು ಮುಂಗೊ[ಪಾಠಾಂ. ಕೊ]ಳಿಸಿ ನಿಂದರು (ಕೊರಲ. ೬-೦೩-೦೦). ೩. ಮುಂದಂಪರಿ ; ಮುಂದೆ ಸಾಗು,- ನಡೆ : ಮುಂಗೊ[ಪಾಠಾಂ. ಕೊ]ಳಿಸುವುದು ಸದ್ಧರ್ಮದಲಿ ಕಳವಳಿಸದಿರು ಷಡುವರ್ಗದಲ್ಲಿ (ಕುಮಾ.ಆ. ೯-೨೦). ೪. ಉಂಟಾಗು ; ಒದಗು : ಬಳಲಿದನು ಬಲುಹಾಗಿ ಸಾಹಿಸ್ನೆ ತಟವು ತನಗೆಂಬ ಬಗೆ ಮುಂಗೊ[ಪಾಠಾಂ. ಕೊ]ಳಿಸಿದುದು (ಕೊರಲ. ೩-೬-೭೯). **ಮುಂಕೊಳಿಸು** : ೧. ಜಲಜನಾಭನು ದೇವದುಂದುಭಿ ಮೊಳಗೆ ನಸುನಗೆಯುತಸ್ತ್ರಮಂ ಮುಂಕೊಳಿಸಿ ಸರಳ್ಗಳ ಸುರಿವನಸುರನ ಮೇಲೆ ಕಡುಬಿಂದ (ಅನೇಕು. ೪೦-೬೨). ೨. ಸೆಳೆದಡೊತ್ತಿ ದಡೆ ಮಿಸುಗಿದಿಹ ಕದಕ ಮುಳಿದು ಮುಂಕೊಳಿಸಿ [ಪಾಠಾಂ. ಮುಂಕಣಿಸಿ, ಮುಂಕಳಿಸಿ, ಪೊಂಕರಿಸಿ] ಸೊಂಡಿಲಿಂ ಸುತ್ತಿ . . . ಥೀಳಿಟ್ಟೊರಲಿ ಕೆಡೆದ ವಾನೆಗಳು ಕಂಡವರಳುಕಲಿ (ಸೋಕುಕ. ೪-೩೬) ; ಆಳವನಜಿಯಡೆ ಕೆಣಕಿತಹ ಮುಂಕೊಳಿಸಿ ಕದನವ ಕೋಡ ಕೈಯವರಳಿವಿಗೊಟ್ಟರೆ ನೋಡಿ ಸಿಡಿಮಿಡಿ ಗೊಂಡು ಕೆಲಸಿಡವ . . . ನಿರುಪಮವೀರರೊದಗಿತು ತಿಗುಳರಾವುತರು (ಕುಮಾ.ಆ. ೪-೭೩). ೫. ಮುಂಭಾಗದಲ್ಲಿರು ; ಎದುರಿನಲ್ಲಿರು : ದಳದ ಕೊನೆಯೊಳಗಿಹುದದಕೆ ಮುಂಕೊಳಿಸಿಲೀಶಾನ್ಯದ ದೆಸೆಯು ದಳದೊಳಗಿರು ವುದೈ ಛಂದಶ್ಯಲಪೆ ಮುಟಿಸಿಪ ಕೇಳೆಂದ (ಅನೇಕು. ೩೦-೭). ೬. ಮುಂದು ವರಿಯುವಂತೆ ಮಾಡು ; ಮುಂದುವರಿಸು ; ನಡೆಸು : ಸುರರ ಪಾಯೂಟಿಸುತ ರಿಪುಭೂವರರ ಮುಂಕೊಳಿಸುತ್ತ . . . ಮೋಕ್ಷದ ಸಿರಿಯ ಕೈಗೂಡಿಸುತ ನಡೆದುದು ತುರಗ ದೆಸೆದೆಸೆಗೆ (ತಿಮ್ಮ.ರ. ೩-೨೮) ; ಭಾರಿ ಗದೆ ಯನು ಪಿಡಿದು ಝಡಿದು ಮುರಾರಿಯನುಮತದಿಂದ ಮುಂಕೊಳಿಸಿದರು ಕಾಳಗವ (ಕೃಷ್ಣ.ಆ. ೦೬-೩೭).೭. ಮುನ್ನುಗ್ಗು : ಮೇಲೆಬೀಳು : ಬಲುಕಣ ಗಳಿವಡಿರನು ಕರಿ ಮುಂಕೊಳಿಸಿ ಕೆಡಹಿತು (ಕುಮಾ.ದ್ರೋ. ೩-೨೪). ೮. ಆವರಿಸು ; ವ್ಯಾಪಿಸು : ಐರಾವತವನಿಂದ್ರನ ಮುಸುಕಿದನು ಶರತತಿಗಳಲಿ ಮಾಯಾದಿ ವ್ಯಗ ವರಿಗಳನು ಮುಂಕೊಳಿಸಿ (ಉತ್ತ.ಳ. ೨೬-೭೭). ೯. ಉತ್ಸಾಹಿಸು ; ತವಕಿಸು : ರಥ ಕಾಲಾಳು ಮುಂಕೊಳಿಸಿ ಅರಸನನುಜರು ಸಹಿತ ಕೃಷ್ಣನ ಬೆರಳ ಸನ್ನೆಯೊಳೈದೆ ಬಿಡೆ ಮೋಹರಿಸಿ ನಿಂದುದು ಮುರಿದ ಮಕರವ್ಯೂಹರಚನೆಯಲಿ (ಕುಮಾ.ದ್ರೋ. ೯-೨೨). ೧೦. ಲೀನವಾಗು ; ನಿರತವಾಗು ; ತನ್ಮಯಗೊಳ್ಳು : ಭುವನಾವಳಿಯ ತೋರಿಕೆಗೆ ತಾನೆ ನೆಲೆಯೆಂದೆನಿಪ ನಿಜಪದವ ಬಲಿದು ತನ್ನಲಿ ತಾನೆ ತಾನಾಗಲಿಘುಸುಖಿ ಸಂವಿತ್ಸ್ವರೂಪದಲಳಿದ ಮನದಲಿ ಮುಂಕೊಳಿಸುತಿರ್ದನು ಸಮಾಧಿಯಲಿ (ಬಸಾಗ. ೦೦-೭೭-೩೯). [ಮುಂಗೊಳ್ + — ಇಸು₃]

**ಮುಂಗೋಣೆ** (ನಾ). ಕಟ್ಟಡದ ಮುಂಭಾಗದಲ್ಲಿರುವ ಕೊಠಡಿ : ಚಿಕ್ಕಮ್ಮ ಸೋಫಿಯಾವಿವಾನೊವ್ನಾ ಪಾತ್ರ ಮುಂಗೋಣೆಯಲ್ಲಿ ಅವನ ನ್ನೆದುರುಗೊಂಡಳು (ಕೃಪರು. ೬೪) ; ಮುಖ್ಯಕೋಣೆಯನ್ನು ಪ್ರವೇಶಿಸು ವುದಕ್ಕೆ ಮುನ್ನ ಇರುವ ಚಿಕ್ಕಕೋಣೆಯೇ ಅಂತರಾಳ, ಇದನ್ನು 'ಮುಂಗೋಣೆ' (ಆಂಟಿರೂಮ್) ಎನ್ನಬಹುದು (ಶಿಕೋ. I. ೦೦೯).

[ಮುಂ₁ (<ಮುನ್₁) + ಕೋಣೆ₂ (<ಕೋಣ್)]

**ಮುಂಗೋಪ** (ನಾ). ಬಹಳ ಬೇಗನೆ ಬರುವ ಸಿಟ್ಟು : ಶೀಘ್ರಕೋಪ : ದೇವ ಮುಂಗೋಪವೊಳಗೆಮ್ಮ ನುಡಿಯುಚಿತವಲ್ಲ (ಪಾಪಾಂ. ೦-೮೨) ; ಕೇಳುತಾಕ್ಷಣದಿ ಮುಂಗೋಪ[ಪಾಠಾಂ. ಮುಕ್ಕೋಪ]ಸಂಭವಮಾಯ್ತು (ವಿಂಪಾರ. ೩-೩-೦೩) : ನಮ್ಮ ತಾಯಿಗೆ ತುಂಬಾ ಮುಂಗೋಪವಾಂತ ಅದಕ್ಕೇ ಅಗ್ನೀ ಅರಿಕೆಮಾಡ್ಕೊಂಡೆ (ವ್ಯಕ್ರಿ. ೦೦). [ಮುಂ₂ (<ಮುನ್₂) + ಕೋಪ]

**ಮುಂಗೋಪಿ** (ನಾ). ಬಹಳ ಬೇಗನೆ ಕೋಪಗೊಳ್ಳುವ ಸ್ವಭಾವ ದವನು ; ಕೂಡಲೆ ಸಿಟ್ಟಿಗೇಳುವವನು : ಹಿಂದೆ ನೀನು ಮುಂಗೋಪಿ ಯಾಗಿ ಒರಟೊರಟಾಗಿ ವರ್ತಿಸಿದೆ (ಮಹಾಗ. ೨೬೩) ; ಬಹಳ ಮುಂಗೋಪಿ ಗಳು, ದುಡುಕುಸ್ವಭಾವದವರು (ಬ್ರೆಕ್. ೩೩೩). [ಮುಂಗೋಪ + — ಇ₃]

**ಮುಂಗೋಲ್**, ಮುಂಗೋಲು (ನಾ). ೧. ತಕ್ಕಡಿಯ ತೋಲೆಯು ಹೆಚ್ಚು ತೂಕದಿಂದ ಒಂದು ಕಡೆಗೆ ಬಾಗಿರುವುದು : (ಶ). **ಮುಂಗೋಲು** : ೨. ತಕ್ಕಡಿಯಲ್ಲಿ ಬಟ್ಟಿನ ತೂಕಕ್ಕಿಂತ ಹೆಚ್ಚಾಗಿ ತೂಗುವ ತೂಕ : ಅವನು ಬೆಣ್ಣೆಯನ್ನು ಮುಂಗೋಲಾಗಿ ತೂಗಿ ಕೊಟ್ಟನು (ಕಿಪ). [ಮುಂ₁ (<ಮುನ್₁) + ಕೋಲ್₁]

**ಮುಂಗೋಲು** 'ಮುಂಗೋಲ್' ನೋ.

**ಮುಂಗೋಳ್** (ನಾ). ಸೈನ್ಯದ ಮುಂಭಾಗ, — ಮುಂದುಗಡೆ : ಮುಂಚೂಣಿ : ವಿರಾಟಂ ಶ್ವೇತಸುತ್ತರಂ ಶಂಖನೆಂಬ ಮೂವರ್ ಮಕ್ಕಳುಂ . . . ಪನ್ನೊರ್ವರ್ ತಮ್ಮಂದಿರುಂಬೆರಸು ನೆಲನದಿರೆ ಮುಂಗೋ ಳೊಳ್ ನಡೆಯೆ (ಪಂಪಭಾ. ೯-೯೩ ವ) ; ಜನಕ ಕನಕರಿರ್ವರ್ ವಿಜಯಗಜವು ನೇಜ಼್ ಮುಂಗೋಳೊ[ಪಾಠಾಂ. ಲೊ]ಳ್ ನಡೆಯ (ಪಂಪಭಾ. ೯-೩೩ ವ) ; ಅರಾತಿಗಜಮಸ್ತಕಕ್ಕೆ ಲಂಘಿಸುವ ಮುಸಕದಿಂ ಸಿಂಗದ ಜಂಗುಳಿಯಂತೆ ಮುಂಗೋಳೊಳ್ ಕಡಂಗುವಣಿಯ ನಾಯಕರ್ಗೆ . . . ಕೈವೀಸುವುದುಂ (ವರ್ಧಕ. ೬-೯೩ ವ).

[ಮುಂ₁ (<ಮುನ್₁) + ಕೋಳ್. / ತೆಲು. ಮುಂಗೋಲು = ಮೊದಲನೆಯ]

**ಮುಂಗೋಳಿ** (ನಾ). ಮುಂಜಾವದಲ್ಲಿ ಕೂಗುವ ಕೋಳಿ : ನಸುಕಿನಲ್ಲಿ ಕೂಗುವ ಕೋಳಿ : ಶಿವ ಶಿವೆಯರಿನಿತೆಸಗಿದೀ ವಿವರವನ್ನೆಲಕೆ ಸಾರ್ವಂತೆ ಮುಂಗೋಳಿಗಳ್ ಕೂಗೆ (ಚಿಕ್ಕ. ೩-೩೦) ; ದಾವೀದಕುಲದಾದಿತ್ಯನ ನವ ಪ್ರಬೋಧನವ ಮುಂಗೋಳಿ (ಗೋಕ್ರಿಸ್ತಾ. ೫೦-೩೭೦) ; ಮುಂಗೋಳಿ ಕೂಗ್ಯಾವು ಮೂಡು ಕೆಂಪೇರ್ಯಾವೆ (ಜಾಣ. ೬).

[ಮುಂ₁ (<ಮುನ್₁) + ಕೋಳಿ₁ (<ಕೋಟ್₁)]

**ಮುಂಚ** (ನಾ). ನಾಯಕ ; ಮುಖಂಡ : ಬಿಲ್ಗಾರರಲಿ ಮುಂಚನೆನಿಸಿ ಸೊಗದಿಂ ಬಾರ ! (ಹರಿ.ರ. ೬-೮೪). [ಮುಂಚು₂ + — ಅ₇]

**ಮುಂಚಾಚು** (ಕ್ರಿ). ೧. ಮುಂಭಾಗಕ್ಕೆ ಚಾಚು ; ಮುಂದುಗಡೆಗೆ ನೀಡು : ಹೆಗಲ ಮೇಲಿಂದ ಹರಿದಾಸನನ್ನು ಮೆಲ್ಲಗೆ ಇಳಿಸಿ, ಕಿರಣಲೀಪಿಯ ತೊಡೆಯ ಕಡೆಗೆ ಅವನನ್ನು ಮುಂಚಾಚಿದನು (ಇತ್ತ.ಳ. ೪೨೬) ; ಮುಂಚಾಚಿದ ಅವನ ಕೈಯನ್ನು ಕಾಣದವಳಂತೆ ನಟಿಸಿ, ಕೈ ಕುಲುಕದೆಯೆ . . . ಬಿರುಬಿರನೆ ನಡೆದಳು (ಕೃಪರು. ೩೨೨). ೨. ಮುಂಭಾಗಕ್ಕೆ ಚಾಚಿಕೊಳ್ಳು ; ಮುಂದುಗಡೆಗೆ ನೀಡಿಕೊಳ್ಳು : ಮುಂಚಾಚಿದ ಹೆಗಲೆಲುಬಿನ . . . ಚುರುಕುಮುಖದಿಯನೊಬ್ಬ ಮತ್ತೊಂದು ಕುದುರೆಯನ್ನು ನಡೆಸಿಕೊಂಡು ಬರುತ್ತಿದ್ದನು (ಕೃಪರು. ೨೭೭). [ಮುಂ₂ (<ಮುನ್₂) + ಚಾಚು₁]

**ಮುಂಚಿತ**, ಮುಂಚಿತ್ತು (ಅ). ಮೊದಲೇ ; ಮುಂಚೆಯೇ : ಪೂರ್ವ ಭಾವಿಯಾಗಿ: ಎಲವೊ ನೀನಾ ಸತಿಯ ಕಂಡಾ ಕಲಹ ಮುಂಚಿತ[ಪಾಠಾಂ. ತು] ಕಂಡನಲ್ಲದೆ ಗಲಭೆಕಾಬಿರು ಘಾಸಿಮಾಡಿದರಣಕಸಣಕದಲಿ (ಕೊರಲ. ೩-೭-೨೮); ಕನ್ನಡಸಾಹಿತ್ಯಚರಿತ್ರೆಯಲ್ಲಿ ಹತ್ತನೆಯ ಶತಮಾನವು ಬಹಳ ಮಹತ್ವ ಪೂರ್ಣವಾದುದು. ಇದಕ್ಕೆ ಮುಂಚಿತವಾಗಿಯೂ ಕನ್ನಡಸಾಹಿತ್ಯ ಇದ್ದಿತು (ಸಾಹಿತ. ೦); ಕೃತಿಯ ಮುಂಚಿತವಾಗಿ ಕೊಟ್ಟಿರುವ ಕಥಾಸಾರದಲ್ಲಿ ವಸ್ತು ಪಾತ್ರ ಸನ್ನಿವೇಶಗಳ ಪರಿಚಯವನ್ನೇ ಚೆಲುವಾಗಿ ಮಾಡಿಕೊಟ್ಟಿರುತ್ತಾರೆ (ರಾಂಜಿರ. ಕುಂಕುಮ). **ಮುಂಚಿತ್ತು** : ಗುಲ್ಮವ್ಯಾಧಿಸ್ಥನಿಗೆ ಮುಂಚಿತ್ತಾಗಿ ಸ್ನೇಹವಿಧಿಯನು ಮಾಡಿ, ನಾಡಿಗಳು ಸಡಿಲವಾದ ಬಳಿಕ ವಾಯುವು ಮುಂದವಮಾದು (ವೈಕೃತಾ. I. ೨೪೪). P ಇದು ಸಂಸ್ಕೃತದ 'ವಂದಿತ,

ಕಥಿತ, ವಿದಿತ, ಪೂಜಿತ' ಇತ್ಯಾದಿ ಶಬ್ದಗಳ ಸಾದೃಶ್ಯದಿಂದ ರೂಪುಗೊಂಡಿರುವ ಶಬ್ದ. [< ಮುಂಚು$_1$]

**ಮುಂಚಿತ್ತು** 'ಮುಂಚಿತು' ನೋ.

**ಮುಂಚಿಸು** (ಕ್ರಿ). ಮುಂದುವರಿಯುವಂತೆ ಮಾಡು; ನಡೆಸು : ಪಂಚವಕ್ತ್ರಗಳನು ಹಂಚಿಸಿ ಮರ್ತ್ಯರ ಸಂಚಲತ್ವವ ನೆಱೆ ಸುಟ್ಟು ಕಂಚನಾದ್ರಿಗೆ ಬೇಗ ಮುಂಚಿಪ ಜಂಗಮಲಾಂಛನಕ್ಕೆ ನಮಸ್ಕಾರ (ಕೋಡಶ. ೦-೬); ನಮ್ಮ ಕಡೆಯಿಂದಲೇ ಶರಾರತ್ತು ನಡಸಿದರು ಎಂತ ಕಂಡೀತು ಎಂಬುದಾಗಿ, ನಾವು ಈ ಮೇರೆ ತಿಳಿದು, ಈಗ ಅವರು ಮುಂಚಿದಾಗ್ಯೂ, ಅವರ ಮೇಲೆ ಮುಂಚಿಸಬಾರದು (ರಾಜೇಂದ್ರ. ೯೩). [ಮುಂಚು$_1$ + — ಇಸು$_3$]

**ಮುಂಚು$_1$** (ಕ್ರಿ). ೧. ಮುಂದೆ ಹೋಗು; ಮುಂದುವರಿ; ಮುಂದಕ್ಕೆ ಚಲಿಸು : "ಮುಂಚು ಅಗ್ರಗಮನೇ (ಮುಂವರಿ)" (ಶಮುಧಾ); ಶುಚಿಸ್ವಾಭಾವಂಗಳಪ್ಪುದಱಿನಾದ್ರ್ರತೆಯುನಪ್ಪುಕೆಯುದ್ಧತ್ಕಂಠಶಯುನಪರಿಕಲ್ಪನಕ್ಕಾವಾವೆ ಮುಂಚುವೆವೆಂಬಂತೆ ಕುಮುದಿನಿಗಳೊಂದೊಂದು ಗಱಿಗಳುಳ್ಳಲರೆ (ಕಾದಂಬ. ೩೭೩); ಸಾಟಿ ಹಿಂಚಿತು ಮುಂಚಿದವನು ತಲೆಕಳನೊಳಗೆ ನೋಟಕ್ಕೆ ಕಣ್ಮಾಯದಂತೆ ಬಿದ್ದುದು ಕೆಳಗೆ (ಚಿತಾರ. ದೇ. ೦೦೬-೭); ಮುಂಚಿದ ಪಿಂಚದಂಚಿಗಳೊಳಿಂಚರದಂಚರಮಾಗದಂಚಿ ಪೆರ್ಚಿಂಚರಮಾಯಿ (ಸೂಕ್ತಿಸು. ೦೪-೨೦). ೨. ಮುಂಚಿತವಾಗಿ ಹೋಗು; ಮೊದಲು ಹೋಗು; ಮುಂದಾಗು : ರಥದಿಂದಂ ಮುಂಚಿ ಮನೋರಥಂ ಮನೋರಥದಿನತ್ತಲದು ಮುಂಚಿ ಬೃಹದ್ರಥಮಿಂತು ಭರತರಾಜನರಥವ ಮನೋರಥದ ಬೇಗಮೊದವಿದುದಾಗಳ್ (ಆದಿಪು. ೦೨-೮೦); ಬಾಲತ್ವದಿಂದೆಲ್ಲಿಯುಂ ವಿನಯೋಲ್ಲಂಘನಮಾದುದಿಲ್ಲ ಮರಣಕ್ಕೆನ್ನಿಂದೆ ನೀಂ ಮುಂಚಿಮಯ್ (ಗದಾಯು. ೩-೭); ಮುರಹರ ರಥವ ಮರಳಿಚು ಮರಳಿಚೈ ರಥ ಮುಂಚುವುದೊ ಮನ ಮುಂಚುವುದೊ ಎಂದ (ಕುಮಾ.ಭ. ೦೪-೦೨). ೩. ಮೊದಲಿನದಾಗು; ಪೂರ್ವಭಾವಿಯಾಗು : ನನೆಮೊನೆಯಾಗಿ ಬಂದುವೆಳಮಾವೆಳಮಾವಿನ ಮುಂಚಿ ಬಂದ ಪೂವಿನ ಪೊಸಗೊಂಚಲೊಪ್ಪಿದುವು (ಶಾಂತಿಪು. ೭-೦೨೩): ಬಿರಯಿಗಳ ಸುಯ್ಗಳೊಡನೆಯೆ ಪಿರಿಯವು ದೆವಸಂಗಳಾದುವವರವರ ಪರಿಸ್ಫುರಿತಂಗಳೊಡನೆ ಕುಂದಿದು ವಿರುಳ್ಗಳುಂ ಮುಂಚಿ[ಪಾಠಾಂ. ಚಿ] ಬಂದ ಜಳದಾಗಮದೊಳ್ (ಕಾವ್ಯಾವ. ೩೦೩); ಹೋಗೆಂಬ ನುಡಿ ಪಿಂಚೆ ಮುಂಚಿ ಜೀವಂ ನೆಗೆದು ತಾಗಿ ನಡುನೆತ್ತಿಯುಂ ಬಗಿದು ಬಾದಣದೆಗೆದು ವೇಗಡರ್ದು ಗಗನಕ್ಕೆ ದಂಡಾಯಮಾನದುರಿಯಾಗಿ ನೆಗೆಯಲ್ಕೆ (ಸಿದ್ಧರಾ. ೪-೩೯). ೪. ಮುನ್ನುಗ್ಗು; ಧಾವಿಸು : ಮಿಂಚಿನವೊಲ್ಪೊಳೆಯುತ್ತುಂ ಮುಂಚುವ ಸಿಡಿಲಂತೆಱಂಗಿ ವಹ್ನಿಜ್ವಾಲಾಸಂಚಯದವೋಲುಚ್ಚಳಿಸುಱೆ ತಾಂ ಚಕ್ರಧರೆ ಪೊಣರ್ವರಂದು ಪಟುತರಶೂರರ್ (ಉದ್ಭಟ. ೪-೦೦೩); ಕಣ್ಣ ಕೆಂಪಿನ ವಿಷಮರಗ್ಗದ ಕರ್ಣತನುಜರು ಮಸಗಿ ಮುಂಚುವ ಮೋಹರವನಡಹಾಯ್ದು ತಱಿಬಿದರು (ಕುಮಾ.ಭ. ೦೦-೩೨): ಬಾಹುಗಳನ್ನು ಮುನ್ನೀಡಿ, ಪ್ರೇಮಾಲಿಂಗನಕ್ಕೆ ಮುಂಚುವನು (ಚಿಟ್ಟಿ೬. ೧೮-೨೪). ೫. ಮುಂಚಿ ಒದಗು: ಮುಂದಾಗಿ ಉಂಟಾಗು, — ಸಂಭವಿಸು : ಅಂತು ಮುಂಚಿದ ಕಾರ ಕಾಮರ್ಗಿಲಂತೆ ಶರವರ್ಷಮಯಮಾಗೆ ದೆಸೆಯೆಲ್ಲಮುಂ ಪರ್ಬಿಪರ್ವ ದಮಿತಾರಿಯೆಚ್ಚುರಮುಂ ಕಂಡು (ಶಾಂತಿಪು. ೪-೪೩ ವ); ಭೃಗುವೇಬುದಿನಕ್ಕಸ್ತಮಿಸುಗುಮೆನೆ ಮುಟಿ ಕೊಂಡುದಿಲ್ಲ ಮೇಗಣ ಮುಟಿಗಳ್ ಭೃಗುವೇಬು ದಿವಸದೊಳ್ ಮೂಡುಗುಮೆನೆ ಮುಟಿ ಮುಂಚಿಕೊಂಡೊಡೊಳ್ಳಿತು (ಅಭಿಮ. ೦೭-೦೪೪). ೬. ಮಿಗಿಲಾಗು; ಮೇಲುಗೈಯಾಗು : ಇಂಚೆಯು ಪಸವಿನ ಬಱದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕಿಬ್ಬಿಡಿವೊಲಾದುವಾ ನಾಡೂರ್ಗಳ್ (ಶಂಶಕಾ. ೯-೩೦): ಪಂಚನಳರೆಲ್ಲರಿಂದಂ ಮುಂಚುವೆವೆಂದು ಸ್ವಯಂವರಾಲಯದ ಲಸತ್ಕಾಂಚನಸಿಂಹಾಸನದೊಳ್ ಸಂಚಲಿಸದೆ ನೆಲಸಿದರ್ ವಿಚಿತ್ರಾಕೃತಿಯಿಂ (ಪಳಸು. ೩೦೦); ದನುಜ ಮುಂಚಿದ ಮನುಜ ಹಿಂಚಿದ ಮನುಜ ಮುಂಚಿದ ದನುಜ ಹಿಂಚಿದ ನೆನಲು ದೈವದಲಸುರ ಹಿಂಚಿದ ಮನುಜ ಮುಂಚಿದನು (ಕೌಶಿರಾ. ೩೬-೭೦). ೭. ವೇಗವಾಗು : ತೀವ್ರಗೊಳ್ಳು : ಸೀತೆಗೆ ವೈಮಾನಸರ ಮುತ್ತೈದೆಯರನೇವೊಟಿಂಗೆ ಕಾಣ್ಬೆನೋ ಎಂಬೋದು ತವಕದಿಂ ನಡೆ ಮುಂಚಿದುದು (ರಾಮಾಶ್ವ. ೩೩-೦). ೮. ಮೀರು; ಅತಿಕ್ರಮಿಸು; ದಾಟು : ಮುಂಚದೆ ಅಯ್ಯಾ ಪರಬ್ರಹ್ಮವ ಮುಂಚಿದೆ ಅಯ್ಯಾ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯಪದವಿಯ ಮುಂಚಿದೆ ಅಯ್ಯಾ (ಸರ್ವವ. ೮೬-೪೮೯); ಸಂಚಳಿಸುತಿರೆ ಮಿಕ್ಕು ಮೀಱಿ ತಪ್ಪೆಲ್ಲರಂ ಮುಂಚಿ ಬಸವನ ಭಕ್ತಿ ಬಂದಿವಿಡಿಯಲ್ಕರಂ (ಬಸರ. ೯-೩೦); ಮುಂಚುವುದು ಕೈ ಮನವ ಕೈಮೆಯ ಸಂಚವನು ಮನ ಮುಂಚುವುದು (ಕುಮಾ.ಭ. ೨೩-೦೦). ೯. ಆವರಿಸು; ವ್ಯಾಪಿಸು : ಮನವುಂ ತವಕಂ ಮುಂಚಿರೆ ತನು ರೋಮಾಂಚನಮನೊಂದೆ ಕಾಂಚಿವೆರಸು ಮೆಲ್ಲನೆ ನೀವಿ ಜಗುಟೆ ತತ್ಕಾಮಿನಿಯಾಲಿಂಗಿಸಿದಳುದ್ಭಟೋರ್ವಿಧವನಂ (ಉದ್ಭಟ. ೮-೦೦೭): ಸರಸಿಜಾಯತದಂದವನು ಮೋಹರಿಸಿ ಮುಂಚುವ ಪರಿಮಳವ ನಂದರಸಿ ಬೀಜುತ ಬಂದು ಹೊಕ್ಕಳು ರಾಜಮಂದಿರವ (ಕುಮಾ.ವಿ. ೦-೨೯). ೧೦. ಹೊರಹೊಮ್ಮು; ಹೊರಸೂಸು; ಉಕ್ಕು : ಗುರುಪುಂಗವನೆ ನಿನ್ನೊಳುರವಣಿಸಿ ಮುಂಚುತಿಹ ಕರುಣಾಂಬುವೆನ್ನ ಮನದ ಮಲಿನಂ ದೊಳೆಯೆ ಪರಿಶುದ್ಧನಾದೆನಿದು ಸತ್ಯಂ (ಅಮಗಾ. ೬-೪೪); ಇನ್ನಿದಕೆ ಮೆರುಗಿಡುವ ಕಲೆ ಒಂದು ಉಂಟೇ ? ಸೊಗಸು ಇನ್ನಿನಿಸಾದರೂ ಮುಂಚಬಹುದೇ ? (ಚಲುವು. ೩-೪); ಮಿಂಚಿನಲ್ ಕುಡುಗೋಲ ಸೆಳೆದಳೊಡನೆಯೆ ಬೆಳ್ಳಿ ಮುಂಚಿದುದು ಕನ್ನೆತ್ತರೊತ್ತರದಿ ಸಿಡಿದು (ಕಾಲೂರ. ೦೩೦-೨೭೭). ೧೧. ಮಗಿ : ಮುಕ್ತಾಯವಾಗು : ಮಾತು ಮುಂಚದ ಮುನ್ನಲೆದ್ದು ವಿನೀತತೆಯೊಳಾ ಮುನಿಗೆ ವಂದಿಸಿ ಭೂತಪತಿಯ ಶರಾಸನದ ಕಡೆನೋಡಿ . . . ನಡೆದನು (ಅನಂರಾ. ೦-೨೩-೩೦).

[ಮುಂ$_2$ (< ಮುನ್$_2$) + — ಚು$_1$./ತೆಲು. ಮುಂಚು]

**ಮುಂಚು$_2$** (ನಾ). ೧. ಮೊದಲು; ಮುಂದು : ಎನ್ನ ಸುಖ ದುಃಖಕ್ಕೆ ಮುಯ್ಯಾಂತು ನೀ ಮುಂಚು ನಾ ಹಿಂಚಾಗಿ ಇದ್ದ ಮತ್ತೆ ಎನಗೆ ಬಂದ ಉಬ್ಬಸವಾವುದು (ಸಕಪ. II, ೭೩೩-೦೮೦೩); ಅಂಗ ನೆನಹೇ ಹಿಂಚಾಗಿ ಲಿಂಗ ನೆನಹೇ ಮುಂಚಾಗಿಪ್ಪುದಯ್ಯ ಅಂಗವಿಷಯಂಗಳೇ ಹಿಂಚಾಗಿ ಲಿಂಗ ವಿಷಯಂಗಳೇ ಮುಂಚಾಗಿ ಇಪ್ಪವಯ್ಯ (ಸಿದ್ಧೇವ. ೮೩-೨೪೭). ೨. ಹಿಂದಿನದು; ಮುಂಚಿನದು; ಮೊದಲಿನದು : ತಕ್ಕ ಮಾನದೆ ಹಂಚಿ ಪೋದರು ರೊಕ್ಕಪಕ್ಕಗಳಂತೆ ಸೊರಗದೆ ಮಿಕ್ಕ ಮುಂಚಿನಗಿಂತ ಮಿಗ್ಗಳವಾಗಿ ಬೆಳೆದಿಹುದು (ರಘುವಂ. ೨-೨೪); ಈ ದೇಶಕ್ಕೆ ಈಗ ಮುಂಚಿಗಿಂತ ಹೆಚ್ಚು ತಾಪ್ರು ಬರುತ್ತದೆ (ಮುಂಜಯ. ೪-೦೭೪).

[ಮುಂ$_2$ (< ಮುನ್$_2$) + — ಚು$_2$]

**ಮುಂಚುಂಗು** (ನಾ). ಮುಂಭಾಗದಲ್ಲಿರುವ ಕುಚ್ಚು : ಚೆಲುವಿನ ಓರೆ ದುಱುಬು ಮುಂಚುಂಗಿನಿಂ ನಲವೆತ್ತು ಸಿಂಗಾರವಾದ (ಜ್ಞಾನತ. ೦೬-೦೦೪).

[ಮುಂ$_1$ (< ಮುನ್$_1$) + ಚುಂಗು$_1$]

**ಮುಂಚುಟು** (ಅ). ಮೊದಲೇ; ಮುಂಚೆಯೇ; ಪೂರ್ವಭಾವಿಯಾಗಿ: ನಿನಗೆ ಆರೋಗಣೆಯ ಮಾಡಿಸೂವಕ್ಕೆ ಮುಂಚುಟಾಗಿ ಶ್ರೀಗುರುವಿನ ಪ್ರಸಾದವ ಕೊಂಬೆ (ಶರಗೋ. ೨೦೭-೯); ನೀನು ಬಲ್ಲಡೆ ಮುಂಚುಟಾಗಿ [ಪಾಠಾಂ. ಚಿತಾಗಿ] ಮಹಾನರೇಂದ್ರನ ಮಾನ್ಯ ಮಾರ್ಗದ ಮಾನಿನಿಯ ಕೊಂಡೊಯ್ದು ಕೊಡು ರಕ್ಷಿಸುವನಿದು ಸಿದ್ಧ (ಕವಿರಾ. ೭-೬-೩೬). P ಇದು 'ಅಂತುಟು', 'ಎಂತುಟು' ಎಂಬ ಶಬ್ದಗಳ ಸಾದೃಶ್ಯದಿಂದ ರೂಪುಗೊಂಡಿರುವ ಶಬ್ದ. [< ಮುಂಚು$_1$]

**ಮುಂಚೊಣೆ** 'ಮುಂಚೊಳೆ' ನೋ.

**ಮುಂಚೂಳಿ,** ಮುಂಚೂಣಿ (ನಾ). ೧. ಸೇನೆಯ ಮುಂಭಾಗ: ದಂಡಿನ ಅಗ್ರಭಾಗ : ಕರೆಕರೆದಾಗ ಮನ್ನೆಯ ಮಂಡಲಿಕರ ದುರಗಲಿ ನಾಯಕರುಗಳ ನೆಜ಼ ಮುಂಚೂಳಿಯ ಜಗಳಕೆ ನೇಮಿಸಿ ಪರಿವಾರದೊಡನೆ ಬೀಳ್ಕೊಟ್ಟ (ಕಂಪರಿ. ೦೩-೦೬); ಮುಂಚೂಳಿಯ ಕಾಳಗದಲ್ಲಿ, ಮಾರ್ಬಲವನ್ನು ಹೊಕ್ಕು ಅದನ್ನು ಕುಟ್ಟಿ ಕೋಲಾಹಲವನ್ನೆಬ್ಬಿಸಿದನು (ಕವೀರ. ೦೦೯). **ಮುಂಚೂಣಿ :** ೧. ಬೀರವ ನುಡಿದ ಮೂವರ ವಾಕ್ಯವ ಕೇಳಿ ಮಾರ ಮನ್ನಣೆಗೈದನವರ ಓರಂತೆ ಮುಂಚೂಣಿಯಲಿಂಬಿಟ್ಟು ವಿಸ್ತಾರದಿ ತೆರಳ್ದ ಮುಂದೆಸೆಗೆ (ಪೋಹಕ. ೬-೨೯); ಕರ್ಣನು ಆ ಏಟುಗಳನ್ನು ತಾಳಲಾರದೆ ಸೈನ್ಯದ ಮುಂಚೂಣಿಯಿಂದ ಹಿಂದಕ್ಕೆ ಹೋಗಿಬಿಟ್ಟನು (ಪಕಥಾ. ೨೦೯). ೨. ಯುದ್ಧದಲ್ಲಿ ಎಲ್ಲಕ್ಕೂ ಮುಂದೆ ಇರುವ ಸೈನ್ಯದ ತುಕ್ಕಡಿ; ಅಗ್ರಗಾಮಿ ದಳ : ನಿಲದತಿವೇಗದಿಂ ನೃಪ ಬಂದು ತನ್ನ ಮುಂದಲೆವ ಬೇಡಂ ಪಡೆಗಂಡು ತಳುವದೆ ಮುಂಚೂಣಿಯಟ್ಟಲುಭಯದೊಳು ಕಲಹ ಗಂಟಿಕ್ಕಿತು (ಜೀವಂಶಾಂ. ೮-೩೨) ; ಕಳುಹಿ ಅನುಚರರೊಡನೆ ತಾ ಬಹು ಬಲಸಮೇತದಿ ಪಾಚ್ಛೆಂದ್ದೆಡಗಳಿಗೆ ಬರುವರ ಕಂಡು ಮುಂಚೂಣಿಯನು ಕಳುಹಿದರು (ಮುಲ್ಲಾಶಾ. ೩-೨೦). ೩. ಮುಂಭಾಗ ; ಮುಂದುಗಡೆ : ಬೊಬ್ಬಿರಿಯೆ ವೀರಧ್ವನಿಯಿಂದ ತರುಗಿರಿ ಹಬ್ಬಿ ಮುಂಚೂಣಿ ಉರಿ ಹೊಗರೆದ್ದು ಸುತ್ತೆ (ಶಿದಾಕ. ೬೩-೩); ಪೈದಿಗಳ ಮೆರೆವಣಿಗೆ ಎಷ್ಟು ದೀರ್ಘವಾಗಿತ್ತೆಂದರೆ, ಮುಂಚೂಣಿಯ ಜನ ಕಣ್ಮರೆಯಾಗುವವರೆಗೆ . . . ಬಂಡಿಗಳು ಹೊರಟಿರಲಿಲ್ಲ (ಬೃಪರು. ೯೩೭); ದೇಸಿಯನ್ನು ಹಿಂದೊತ್ತಿ ಮಾರ್ಗವನ್ನು ಮುಂಚೂಣಿಯಲ್ಲಿ ತಂದಿವೆ (ಕಪಶಿ. ೬೨).

[ ಮುಂ$_1$ ( < ಮುನ್$_1$ ) + ಚೂಳಿ$_1$ ]

**ಮುಂಚೆ** (ಅ). ೧. ಮುಂಭಾಗದಲ್ಲಿ ; ಮೊದಲಿನಲ್ಲಿ; ಮುಂದೆ : ಅಹಂಪೂರ್ವಿಕೆ ನಾ ಮುಂಚೆ ಇಹೆ. ತಾ ಮುಂಚೆ ಇಹನೆಂದು ಒಬ್ಬರಿಗೊಬ್ಬರು ಅತಿಕ್ರಮಿಸಿ ಮುಂಚುವುದು (ಸಾಶರಾ. ೯). ೨. ಮುಂಚಿತವಾಗಿ : ಪೂರ್ವಭಾವಿಯಾಗಿ : ತಜೀಸಂದುವೃತವೈರಿಭೂಪಬಲದೊಡ್ಡಳ್ಳಡ ಲೆಕ್ಕಕ್ಕೆ ತಳ್ತಜೀದೆನ್ನಾಳ್ದನಿನಾನೆ ಮುಂಚೆ ನಿಜೀಪೆಂಕೆಯ್ಕೊಂಡು ಕಟ್ಟಾಯಮುಂ (ಪಂಪಭಾ. ೯-೭೦); ಮಾಸಸಕೆ ಮುಂಚೆಜೀವ ಹುಸ್ತಮುಂ ವ್ಯಸ್ತಮುಂ ನಾನಾಸ್ತ್ರಸಂತತಿಯ ಘಾತಿಯುಂ ಪಾತಿಯುಂ ದೇವಾಸುರರೊಳಿಸೆದುದು (ಚಿಲಕ್ಕು. ೯೩-೩೮). ೩. ಹಿಂದೆ ; ಪೂರ್ವದಲ್ಲಿ : ಮುಂಚೆ ಕಿನ್ನರಶರಣನಸುವಂ ಹಿಂಚೆ ಬಸವರಸನ ಹರಣಮಂ ಪಂಚಮುಖನಲಿ ಪಡೆದು ಮೆಜೀದನು ಮಾಚಿದೇವಯ್ಯ (ಬಸಪು. ೩೭ ಸೂಚನೆ); ಕೈ ತುಂಬಾ ಹಣ ಅವರಲ್ಲಿ ಮುಂಚೆ ಇತ್ತಂತೆ (ರಾಯುಕ. ೦). [ < ಮುಂಚು$_1$ ]

**ಮುಂಚೆಕಡೆ** (ನಾ). ಮುಂದುಗಡೆ, ಮುಂಭಾಗ: ಇಷ್ಟೆಲ್ಲವೂ ಆ ಮನೆಯ 'ಮುಂಚೆಕಡೆ'ಯ ಚಿತ್ರ (ಕಾಸೂರು. ೩೭). [ ಮುಂಚೆ + ಕಡೆ$_3$ ]

**ಮುಂಜ$_1$** (ನಾ). ಒಂದು ಬಗೆಯ ಚಿಕ್ಕ ನೇಗಿಲ ಕುಳ. ರೆಂಟೆಯ ಕುಳ : ಕಬ್ಬಿಣದ ಸಾಮಾನುಗಳಲ್ಲಿ ಮುಂಜ, ಬಳಿ . . . ಕುಡಗೋಲು ಮುಂತಾದ ಯಾವತ್ತು ಸಾಮಾನುಗಳು ಹವನಾಗಿಯೂ ಮೊನೆಯಾಗಿಯೂ . . . ಇರಬೇಕು (ಕೃಚಿತ್ರ. ೨೦); ಕಾದ ಕಬ್ಬಿಣ ಬಡಿದು ಮುಂಜವ ಮಾಡಿ (ಲೋಕಗೀ. ೦೨೯); ಪುರುಷರ ಕೈಯಲ್ಲಿ ಮುಂಜ, ಹಾರಿ. ಗುದ್ದಲಿ. ಸಲಿಕೆ ಶೋಭಿಸುತ್ತಿದ್ದುವು (ಕೆರಹಾ. ೩೦).

**ಮುಂಜ$_2$** (ನಾ). ೧. ಒಂದು ಬಗೆಯ ಜೊಂಡು ; ನೊದೆಹುಲ್ಲು: ನೊಸೆಹುಲ್ಲು : "ಶರಃ ಮುಂಜಃ — ಇವೆರಡುಂ ಮೊದೆ" (ಹಲಾಯು. ೩೨-೩೮) : ಮುಂಜ – ನೊದೆ (ಶಬ್ದಾಮ. ೧೬೦ ವೃಮೊ). ೨. ನೊದೆ ಹುಲ್ಲಿನಿಂದ ತಯಾರಿಸಿದ (ಬ್ರಹ್ಮಚಾರಿಗಳ) ಉಡಿದಾರ : ಕಟಿಸೂತ್ರ. ೩. (ಹಸುರು ಬಣ್ಣದ) ಒಂದು ಬಗೆಯ ಕುದುರೆ : "ನೆಜ಼ ಹಸುರಿರಲು ಮುಂಜನದು. . . ಸಿಲ್ಕಾದ ಕುದುರೆ ಸೂಕಳನೆನಿಕ್ಕುಂ" (ಮಂಗರಾ. ೮೨-೦೩). [ಸಂ.]

**ಮುಂಜಕೇಶಿ** (ನಾ). ವಿಷ್ಣುವಿನ ಒಂದು ಹೆಸರು : ಆ ಕೇಶಿಯುಂ ಮುಂಜಕೇಶಿ ಮಾರ್ಕೊಂಡು ಕರಮಂ ತೂಂತಿ ತದಾಸ್ಪದೊಳ್ ಬಳೆಯಿಸಲ್ (ಜಗರಿ. ೩-೯೩ ವ). [ ಸಂ. ಮುಂಜಕೇಶಿನ್ ]

**ಮುಂಜಕ್ಷಯ** (ನಾ). ಒಂದು ಬಗೆಯ ಪಕ್ಷಿ ; ಗೀಜಗ : "ಮುಂ[ಪಾಠಾಂ. ಮ, ಮಂ]ಜಕ್ಷಯುಂ ಗೀಜಗಮೆನಿಕ್ಕು" (ಮಂಗರಾ. ೩೨-೯). [ಸಂ.]

**ಮುಂಜಗಲಿ,** ಮುಂಜಗುಲಿ (ನಾ). ಮನೆಯ ಮುಂಭಾಗದಲ್ಲಿರುವ ಜಗಲಿ. – ಮುಂದುಗಡೆಯಲ್ಲಿರುವ ಕಟ್ಟೆ : ರಂಜಿಸುವ ಪೊಂಗೊಳಲ ನಡುಮನೆ ಮುಂಜಗಲಿಯೊಳಗಿರಿಸೆನುತ್ತವೆ ಮುಂಜೆಜಗ ಪಿಡಿದೆಳೆದು ಹೊರಳಿವ ಚಿತ್ರಲೀಲೆಯಲಿ (ಕೃಶಾಶಾ. ೩-೯೩). **ಮುಂಜಗುಲಿ :** ಶಾಸ್ತ್ರವನು ನಕ್ಷತ್ರ ನೆಲೆಗಟ್ಟವನೆಯ ಮುಂಜಗುಲಿಯೊಳಗೋದುತ (ತ್ರಿಶುಮೋ. ೯-೩೯). [ ಮುಂ$_1$ ( < ಮುನ್$_1$ ) + ಜಗಲಿ ]

**ಮುಂಜಗುಲಿ** 'ಮುಂಜಗಲಿ' ನೋ.

**ಮುಂಜರಿ** (ಕ್ರಿ). ಮುಂದೆ ಸರಿ; ಮುಂದಕ್ಕೆ ಹೋಗು; ಮುಂದುವರಿ: ರಜನಿ ಮುಂಜರಿದಂತೆ ಹಿಂಜರಿದುದೊಯ್ಯನಾ ಪುರದ ರಾತ್ರಿಂಚರತ್ವಂ (ತ್ರೀರಾಮಾ. ೯೩೮-೯೭). [ಮುಂ$_2$ (<ಮುನ್$_2$) + ಜರಿ$_1$ (<ಸರಿ$_1$)]

**ಮುಂಜವಿ** 'ಮುಂಜಿ' ನೋ.

**ಮುಂಜಾಗ್ರತೆ** (ನಾ). ಮೊದಲೇ ವಹಿಸುವ ಎಚ್ಚರ ; ಮುನ್ನೆಚ್ಚರಿಕೆ : ಅಯ್ಯೋ, ಹಾಗಿದ್ದರೆ ಮುಂಜಾಗ್ರತೆ ವಹಿಸಬೇಕು (ಕಾವೇರಿ. ೦೦೩); ಸುದ್ದಿ ಹರಡಿದ ಎರಡುದಿನ ಮುಂಚಿತವಾಗಿ ಶಾಲೆಗೆ ಬರುವಾಗ ಮನೆಯಲ್ಲೇ ನಿದ್ದೆ ಪೂರೈಸಿ ಮುಂಜಾಗ್ರತೆ ವಹಿಸಿದರು (ಕಾವೇರಿ. ೦೦೭).

[ಮುಂ$_1$ ( < ಮುನ್$_1$ ) + ಜಾಗ್ರತೆ ]

**ಮುಂಜಾನೆ** (ನಾ). ೧. ಬೆಳಗಿನ ಜಾವ; ದಿನದ ಮೊದಲಿನ ಯಾಮ : ಮುಂಜಾನೆಯ ಮಳೆ ಅಲ್ಲ. ಮಧ್ಯಾಹ್ನದ ನೆಂಟನಲ್ಲ (ಗಾದೆ); ಅಂಜನಕ್ಕೆ ಅಂಜಬೇಡ. ಮುಂಜಾನೆಗೆ ಅಪಬೇಡ (ಗಾದೆ). ೨. ಬೆಳಗ್ಗೆ; ಪ್ರಾತಃಕಾಲ : ಅವರೆಲ್ಲ ಮಡದಿ ಮಕ್ಕಳೊಡನೆ ಮುಂಜಾನೆಯೇ ಲಿಂಗಯ್ಯನ ಮನೆಗೆ ಆಗಮಿಸಿದ್ದರು (ಹಾಹುತ್ತ. ೮೮); ಆಗ ಮುಂಜಾನೆ ಎದ್ದು ನೀರನ್ನು ತರಲು ಪಕ್ಕದ ಬಾವಿಯ ಕಡೆಗೆ ಓರ್ವ ನಾರೀಮಣಿ ಹೋಗುತ್ತಿದ್ದಳು (ಮುಡಿಕ. ೩೯); ಮುಂಜಾನೆ ೧೦ ಗಂಟೆಗೆ ಊಟಾ ಮಾಡಿ ಹೋಗೇನಿ (ಕುಂಕುಮ. ೩೩). [ <ಮುಂಜಾವ ]

**ಮುಂಜಾವ,** ಮುಂಜಾವು (ನಾ). ೧. ಬೆಳಗಿನ ಜಾವ; ದಿನದ ಮೊದಲಿನ ಯಾಮ : ಮುಂ[ ಪಾಠಾಂ. ಮುಂದು ]ಜಾವದಲೆದ್ದು ಲಿಂಗದಂಘ್ರಿಯ ಮುಟ್ಟಿ ಸುಪ್ರಭಾತದಲ್ಲಿ ಶಿವಶರಣರ ಮುಖವ ನೋಡುವುದು (ಬಸವ. ೪. ೯೩೨-೦೦೩೯); ಶರಣೆಗೆ ಪುತ್ರಸಂತಾನ ಸಿದ್ಧಿಸಲಾಗಿ ದೊರೆದುದು ಸ್ವಪ್ನ ಮುಂಜಾವ ಕೆಂಜೆಡೆಗಳು ಸುಲಿಪಲ್ಲಿನ ಪದನವು ರಂಜಿಪ ಕರ್ಣಕಂಡಲದಿ ಮುಂಜಾವದೊಳು ಬಂದು ನಿಂದು ಬ್ರಾಹ್ಮಣನಿಗೆ ಅಂಜಬೇಡೆಂದನೀಶ್ವರನು (ಅಬ್ಬಲೂ. ೨-೩೨). ೨. ಬೆಳಗ್ಗೆ : ಪ್ರಾತಃಕಾಲ : ಸೂಳು ಮಿಗಲಳ್ಳಜೀದವುರುನಿಸ್ಸಾಳತತಿ ಮುಂಜಾವದಲಿ ಹೆಗ್ಗಾಳೆ ಮೊಜ಼ದವು (ಕುಬ್ಬಾಭೀ. ೬-೦) ; ಮುಂಜಾವ ಧಾರೆಯಾಯ್ತೆರಡು ಜಾವದೊಳರ್ತಿ ರಂಜಿಸಿ ನಿದ್ರೆ ಹಿಂಗಿದುದು ಹಿಂಜಾವದೊಳು ಮತ್ತೆ ಹೊಸಬರಾಗಿದ್ದರು ( ಭರತ. ೯೦-೦೬೯) ; ಮುಂಜಾವದಡಿಗೆ ಸಂಜೆಗಾಗಲೇ ತಂಗೂಳು (ಪಿಂಪು. ೩೨-೦೯). **ಮುಂಜಾವು :** ೧. ರಾಯನು ಮುಂಜಾವಿನಲ್ಲಿಯೆ ಎದ್ದುಬಿಡುತ್ತಿದ್ದನು (ಕೃದೇವ. ೦೦). ೨. ಮುಂಜಾವಿನ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಅವನು ಸ್ನಾನ ಮಾಡುತ್ತಿದ್ದನು (ರಂಗರೂ. ೦೯) ; ಸಂಜೆ — ಮುಂಜಾವಿನ ಅಡುಗೆಯ ನಿಮಿತ್ತದಿಂದ ಹೆಂಗಸು ಮನೆಯಲ್ಲಿರಬೇಕಾಗಿ, ಮೇಲ್ಕಾಣಿಸಿದ ಬಗೆಯ ಆನಂದೋತ್ಸವ

ಗಳಿಗೆ ಅವರು ಏರವಾಗಬೇಕಾಗುತ್ತದೆ (ಯಾತ್ರಿ. ೧೯೬) ; ಮುಂಜಾವಿನಲ್ಲಿ ಶ್ರೀಮಂತ ಅದೇ ಸಂಜೆಗೆ ದರಿದ್ರ ಅನ್ನೋ ಹಾಗೆ ಅವನ ಸ್ಥಿತಿ (ಗಾಳಿಗು. ೨೯).

[ಮುಂ$_1$ (<ಮುನ್$_1$) + ಜಾವ$_1$]

**ಮುಂಜಾವು** ' ಮುಂಜಾವ ' ನೋ.

**ಮುಂಜಿ**, ಮುಂಜವಿ, ಮುಂಜಿವಿ, ಮುಂಜಿವೆ, ಮುಂಜೆ (ನಾ). ೧. ಒಂದು ಬಗೆಯ ಹುಲ್ಲು ; ನೊಸೆಹುಲ್ಲು: 'ಮುಂಜಿಹುಲ್ಲು' ಪರಾ. 'ಮುಂಜ$_2$' ಹೋ. ೨. (ನೊದೆ ಹುಲ್ಲಿನಿಂದ ತಯಾರಿಸಿದ) ಉಡಿದಾರ ; ಕಟಿಸೂತ್ರ : ಸರಿಗೆಯೊಳ್ ಸಮೆದಕ್ಷಮಾಲಿಕೆ ಪೊನ್ನಮುಂಜಿ . . . ಪಿಂಗಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಮೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ (ಶಂಪಾ. ೬-೮) ; ಮುಂಜಿ ಕಚ್ಚುಟಂ ಗುಂಡಿಗೆ ಭೋಳಮುಂಡೆ ಮಣಿದಂಡ ಮಿವೀಕ್ಷಣಸೌಖ್ಯಹೇತುವೇ (ಶಂಶಾವಿ. ೪-೯೦) ; ಕೌಪ್ಯಕೃಷ್ಣಾಜಿನವು ವರಯಜ್ಞೋಪವೀತದ ದಂಡ ಮುಂಜಿಯನಾ ಪವಿತ್ರೋತ್ತಮನು ಕೊಡೆ ವಿಡಿದಲ್ಲಿಗೈತಂದ (ಸಂಶಿ. ೧೧-೧೩). ೩. ಬ್ರಾಹ್ಮಣ ಬಾಲಕನು ಶಾಸ್ತ್ರೋಕ್ತವಾಗಿ ಯಜ್ಞೋಪವೀತವನ್ನು ಧರಿಸುವ ಕ್ರಿಯೆ ಮತ್ತು ಅದರ ಅಂಗವಾಗಿ ನಡೆಯುವ ಸಮಾರಂಭ : ಉಪನಯನ; ಬ್ರಹ್ಮೋಪದೇಶ : " ಮುಂಜಿಯುಪನಯನಮಕ್ಕುಂ " (ಮಂಗರಾ. ೭೩-೬) ; ವಿರಸವೆನಗಿದು ಮುಂಜಿಯೆಂಬುದನೊರೆಯದಿರು (ಬಸಪು. ೩-೪೭); ವಿಪ್ರನ ಸುತನ ಮುಂಜಿಗೆ ಶೀವಿದ್ಯೆಸನುಯಿತ್ತು ಮಾಡಿಸೆ (ಸಂಶಿ. ಶಂ. ೩೪೪-೨೯) ; ಎಲ್ಲಿ ನೋಡಿದಡೆ ಕುವರರ ಮುಂಜಿ ಸಂಭ್ರಮವುಲ್ಲಾಸದಿಂ ರಾಜಿಸುವ ಮುನಿಗಳಾಶ್ರಮವ ಕಂಡು ಪ್ರಭು ಚೋದ್ಯವಾಂತಂ (ಪ್ರಭುಪು. ೮-೧೬೩). **ಮುಂಜವಿ**: **ಮುಂಜಿವಿ** : ೩. ಈ ಮೂವರಿಗೂ ಮುಂಜಿವಿ ಮಾಡಬೇಕೆಂಬ ವಿಚಾರ ಮನೆಯಲ್ಲಿ ಸುರುವಾಯಿತು (ಸ್ವ. ತಿನ. ೨೨೩) ; ಅರಳಿಮರದ ಮುಂಜಿವಿಯನ್ನು ಮಾಡುತ್ತಾನೆ (ಶಾರಸಂ. ೨೦೩). **ಮುಂಜಿವೆ**: ೩. ಮದುವೆ—ಮುಂಜಿವೆ ಇತ್ಯಾದಿ ಎಲ್ಲ-ಖರ್ಚವನ್ನು ಅವರೇ ಶಿರಸಾವಹಿಸಿದರು (ಸ್ವ. ತಿಶ. ೨೦) ; ಒಂಭತ್ತು ವರ್ಷ ನಡೆಯುವಾಗ ಜಗನ್ನಾಥಮಿಶ್ರನು ಮಗನ ಮುಂಜಿವೆ ಮಾಡಿದನು (ಗೌರಾಂಗ. ೨೦). **ಮುಂಜೆ** : ೨. ಪೊನ್ನ ಮುಂಜೆ . . . ತನ್ನ ಪಾಂಡುರಾಕಾರದೊಳೊಪ್ಪೆ ನಾರದನದೇನಿಟಿತಂದನೊ ನೀರದಾಧ್ವದಿಂ (ಜಗಪಿ. ೧೧-೬). ೩. ತನಯರಿಗೆ ಮುಂಜೆಯಾಗಲ್ಕೆ ವೇದವುಲ್ಗಳಂ ಮುನಿಗಳಿಗೆ ಸೀಳ್ದೀವ ಭಲ್ಲೂಕಸಂಕುಳಂ(ಪ್ರಭುಪು. ೮-೧೮೩); ಇವನ ಮುಂಜಯಲ್ಲಿ ಯಜ್ಞೋಪವೀತವನ್ನು ಹಾಕತೊಡಗಲು, ಬಸವನು . . . ಶಿವನ ಹೊರ್ತು ಬೇರೆ ಗುರುವನ್ನು ನಾನು ನಂಬುವದಿಲ್ಲೆಂತಲೂ ಹೇಳಿದ್ದರಿಂದ ತಂದೆಯು ಅವನನ್ನು ಮನೆಯ ಹೊರಗೆಅಟ್ಟಿದನು (ಶಶಾಗ. ೪೦).

**ಮುಂಜೀಮಣಿ**, **ಮುಂಜವಿಮಣಿ** = ಉಪನಯನವಾದ ಮಾಣಿ ; ವಟು ; ಬ್ರಹ್ಮಚಾರಿ : ಮುಂಜೀಮಣಿಯಾದ ನಿಮಾಯಿಯನ್ನು ಕಂಡು ಜನರೆಲ್ಲರೂ 'ಬಾಲಗೋಪಾಲನೇ ಈತ' ಎಂದು ಕಣ್ತುಂಬ ನೋಡಿ ಆನಂದಪಡುವರು (ಗೌರಾಂಗ. ೨೦) ; ಅವರೆಲ್ಲ ಮುಂಜವಿಮಣಿಗಳಾಗಿದ್ದರೂ ಯಾರ ತಲೆಯ ಮೇಲೂ ಚಂಡಿಕೆ ಇದ್ದಿಲ್ಲ (ಕಪರು. ೩೭).

[<ಸಂ. ಮೌಂಜೀ. / ತುಳು. ತೆಲು. ಮುಂಜಿ]

**ಮುಂಜಿಕೇಶ** (ನಾ). = ಮುಂಜಕೇಶಿ : " ವಿಷ್ಣುಃ. ಕೃಷ್ಣಃ. ಕೇಶವಃ, ಮುಂಜಿಕೇಶಃ . . . ವನಮಾಲೀ, ಗದಾಧರಃ —ಈ ೪೫ ನಾರಾಯಣನ ಪೆಸರ್ " (ಶಬ್ದಮ. ೩-೨೨) : " ಹರಿ ಶೌರಿ ವಿಷ್ಣು ನಾರಾಯಣಂ . . . ಮುಕುಂದಂ ಮುಂಜಿಕೇಶ[ಶಾಕಾಂ. ಶಿ] . . . ಗೋವಿಂದನಕ್ಕುಂ " (ಮಂಗರಾ. ೬-೧೭) ; ನವಸ್ಮಶ್ರುಕಳಾಪಸಂಪ[ದ ಮದಾಳಿ] ಶ್ರೇಣಿತಂ ಮುಂಜಕೇಶನ ವಕ್ತ್ರಾಂಬುಜಮೆಂಬಿನಂ ಸೊಗಯಿಕುಂ ವಾಗ್ದೇವತಾಧಿಷ್ಠಿತಂ (ಶರಿಶಾ. ೩-೧೭). [ಪ್ರ ಇದು 'ಮುಂಜಕೇಶಿ' ಎಂಬುದರ ಅಪಲಿಖಿತ]

**ಮುಂಜಿಗಟ್ಟಿಸು** (ಕ್ರಿ). ಉಪನಯನವನ್ನು ಮಾಡು ; ಮುಂಜಿಯನ್ನು ಮಾಡು : ಮುಂಜಿಗಟ್ಟಿಸಿದನಾ ಕುವರಂಗೆ ಸೌಂದರೇಂದ್ರ (ಸೌಂದಪು. ೧೭-೭೩). [ಮುಂಜಿಗಟ್ಟು + -ಇಸು$_3$]

**ಮುಂಜಿಗಟ್ಟು** (ಕ್ರಿ). ನೊದೆಹುಲ್ಲಿನಿಂದ ಮಾಡಿದ ಉಡಿದಾರವನ್ನು ಕಟ್ಟು ; ಉಪನಯನವನ್ನು ಮಾಡು : ಮುಂಜಿಗಟ್ಟುವ ಪ್ರಾಯ ಮಾದೊಡೆ ಪ್ರಶಸ್ತದಿವಸವಾರನಕ್ಷತ್ರಮುಹೂರ್ತದೊಳ್ ಮುಂಜಿಬಂಧನ ಕ್ರಿಯೆಯಂ ಮಾಡಿದ ಬಟಿಕ್ಕೆ (ವಡ್ಡಾರಾ. ೭೩-೨೦) : ಶಿವದೀಕ್ಷೆಯಿಲ್ಲದವನ ಪೊಲೆನ್ನಂ ಮುಂಜಿಗಟ್ಟುವ ಮನವಿದೆಂತಾಯ್ತಾಗ ನಿನಗವಿವೇಕಿಯಂದದಲಿ (ಬಸಪು. ೩-೪೪). [ಮುಂಜಿ + ಕಟ್ಟು$_1$]

**ಮುಂಜಿಬಂಧನಕ್ರಿಯೆ** (ನಾ). ನೊದೆಹುಲ್ಲಿನಿಂದ ಮಾಡಿದ ಕಟಿಸೂತ್ರವನ್ನು ಕಟ್ಟುವಿಕೆ ಮತ್ತು ಅದಕ್ಕೆ ಸಂಬಂಧಿಸಿದ ಸಮಾರಂಭ; ಉಪನಯನ : ಮುಂಜಿಗಟ್ಟುವ ಪ್ರಾಯಮಾದೊಡೆ ಪ್ರಶಸ್ತದಿವಸವಾರ ನಕ್ಷತ್ರಮುಹೂರ್ತದೊಳ್ ಮುಂಜಿಬಂಧನಕ್ರಿಯೆಯುಂ [ಪಾಠಾಂ. ಮುಂಜಿಗಬದ್ಧನಕ್ರಿಯೆಗಳಂ] ಮಾಡಿದ ಬಟಿಕ್ಕೆ (ವಡ್ಡಾರಾ. ೭೩-೨೦).

[< ಸಂ. ಮೌಂಜಿಬಂಧನಕ್ರಿಯಾ]

**ಮುಂಜಿವಿ** ' ಮುಂಜಿ ' ನೋ.

**ಮುಂಜಿವೆ** ' ಮುಂಜಿ ' ನೋ.

**ಮುಂಜಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ನೊದೆಹುಲ್ಲು ; ನೊಸೆಹುಲ್ಲು : ಮುಂಜಿಹುಲ್ಲು, ಹೊಡಕೆಹುಲ್ಲು (ವೈಶಿಗ. ೭೭-೧೩೭೭) : ಬ್ರಹ್ಮವಿಚಾರವನ್ನು ಮಾಡುವವನು ಮುಂಜಿಹುಲ್ಲಿನ ನಡುವೆ ಇರುವ ಕಡ್ಡಿಯನ್ನು ವಿಂಗಡಿಸಿ ತೆಗೆಯುವ ಹಾಗೆ ದೇಹೇಂದ್ರಿಯಗಳ ದೆಸೆಯಿಂದ ಆತ್ಮಸ್ವರೂಪವನ್ನು ವಿಂಗಡಿಸುವನು (ಕೃವಾಉ. ೬೦).

[ಮುಂಜಿ + ಹುಲ್ಲು (<ಪುಲ್)]

**ಮುಂಜುಟ್ಟು** (ನಾ). ಮುಂದಲೆಯ ಕೂದಲು ; ಮುಂಭಾಗದ ಶಿಖೆ,- ಮುಡಿ : ವಾರಿಶಿಖಿ ತುರುಬು ಮುಂಜುಟ್ಟು ನಡುವಣ ಶಿಖಿಯು ಚಾರುಮಕುಟಂ (ಗುರುಶಾ. ೩-೪೯); ಮೃತ್ಯು ಮುಂಜುಟ್ಟನು ಹಿಡಿದಿಹುದೆಂಬಂತೆ ಮಾಳ್ಪುದು ಸತ್ಕಾರ್ಯಗಳನು (ಇಂತಾಪ. ೦೩೮-೭೯).

[ಮುಂ$_1$ (<ಮುನ್$_1$) + ಜುಟ್ಟು]

**ಮುಂಜೂರ್**, ಮುಂಜೂರು (ನಾ). ೧. ಮುಂಭಾಗದ ಛಾವಣಿ : ಮುನ್-ಸೂರ್, ಮುಂಜೂರ್ (ಶಾಕಾಶಿ. ೩೩ ಪ್ರಯೋ) : ಮುಂಜೂರ್ ; ಮುಂಜೆರಂಗು ; ತಣ್ಜೊಡರ್ (ಶಮದ. ೬೮ ಪ್ರಯೋ). ೨. ಛಾವಣಿಯ ಮುಂಭಾಗ : ಸಂಬಳಿಗೋಲ ಮುಂಜೂರೊಳಗೆ ಸಮಂತಿಟ್ಟು (ಅರಾಕ. ೦-೭-೦೩). **ಮುಂಜೂರು** : ೨. ಮುಂಜೂರ ಹಿಡಿದುಕೊಂಡು ಹಿಂದೆ ಮನೆಯ ಸುಟ್ಟು ನಿರಂಜನ ಪರಮಸಿದ್ಧ ಗುಹೇಶ್ವರಲ್ಲಯ್ಯನು (ಅವಶಂ. ೨೯೯-೦೩೦೪) ; ಗನ್ನದಿಂ ಬಜೀಗೋಪಮಂ ತಾಳ್ದು ರಭಂಕಿಸುತೆ ಮುಂಜೂರ ಹುಲ್ಲನುರ್ಚುತ್ತೆ ಶಿವಧಾಯೆನುತೆ (ತಿರುರ. ದೇ. ೦೩-೦೩).

[ಮುಂ$_1$ (<ಮುನ್$_1$) + ಸೂರ್]

**ಮುಂಜೂರಿ** (ನಾ). (ರಾಜನ) ವಸ್ತ್ರಾಲಂಕಾರದ ಮುಂಭಾಗದಲ್ಲಿ ಕಟ್ಟಿರುವ ಚೂರಿ : ಅವುಗಳಲ್ಲಿ ರಾಜರು ಧರಿಸುವ ಕಿರೀಟ, ಭುಜಕೀರ್ತಿ . . . ಕರ್ಣಕುಂಡಲ. ಮುಂಜೂರಿ ಮುಂತಾದವುಗಳನ್ನೂ ಬಣ್ಣಿಸಿರುವರು (ಹುಬ್ಬಹ. ೮೩). [ಮುಂ$_1$ (<ಮುನ್$_1$) + ಚೂರಿ]

**ಮುಂಜೂರು** ' ಮುಂಜೂರ್ ' ನೋ.

**ಮುಂಜೆ** ' ಮುಂಜಿ ' ನೋ.

**ಮುಂಜೆರಗು** ' ಮುಂಜೆರಂಗು ' ನೋ.

**ಮುಂಜೆರಂಗು**, ಮುಂಜೆರಗು, ಮುಂಜೆಱಗು (ನಾ). (ಸೀರೆಯ ಅಥವಾ ವಸ್ತ್ರದ) ಸೆರಗಿನ ತುದಿ,- ಮುಂಭಾಗ,- ಅಂಚು : ಮುಂಜೂರ್;

ಮುಂಜೆಱಂಗು ; ತಡೊಡರ್ (ಕಪುದ. ೬೯ ಪ್ರಯೋ) ; ಮುಂಜೂರ್, ಪೊಂಜುರಿಗೆ, ಮುಂಜೆಱಂಗು (ಕಬ್ಬಿ ಪು. ೯೩ ಪ್ರಯೋ). **ಮುಂಜೆರಗು :** ಕಡುಮೂರ್ಛೆಯಾಂತಿರುವ ಕಾಂತನಂ ಮುಂಜೆರಗಿನಿಂದ ಬೀಸುತಲೊರ್ವೆ ಸೈಪಿಡುವುದಂ ಕಂಡನು (ಪಂಕಾರಾ. ೩-೬-೪೭) ; ನೋಡಲಮ್ಮದೆ ಕಂಗಳಿಗೆ ಮರೆಮಾಡಿದರು ಮುಂಜೆರಗ ಸೆರಗನು (ಕೊಲ್ಲಿ ಕ. ೩೯). **ಮುಂಜೆಱಗು :** ತಳರ್ನಡೆ ಮುದ್ದುಮೊಗಂ ಪೊರಳ್ದ ಮುಂಜೆಱಗು ಕಿವುಚ್ಚಿ ಪೀವರ್ ಮೊಲೆ ದಟ್ಟಡಿಯೊಳ್ಪರಿದೋಡುವಂಗಣಾಂ ನೆಱ ತನಗೊಪ್ಪುವರ್ಭಕನನೊರ್ವನನಾಂ ಪಡೆವಂದಮಾವುದೋ (ಸುಕುಮಾ. ೯-೪೪) ; ಮದುಮಕ್ಕಳ ರಂಜಿಪ ಮುಂಜೆಱಗೆರಡಂ ಭೂದಿವಿಜಂ ಗಂಟಿಕ್ಕಿಸಿದ ಸಮನಂತರದಲ್ಲಿ (ಅದ್ಯಭಿ. ೯-೬೪ ವ). [ಮುಂ$_1$ (< ಮುನ್$_1$) + ಸೆಱಂಗು]

**ಮುಂಜೆಱಗು** ' ಮುಂಜೆಱಂಗು ' ನೋ.

**ಮುಂಜೋಗಿಲ್** (ನಾ). ಉಟ್ಟ ವಸ್ತ್ರದ ಮುಂಭಾಗದಲ್ಲಿ ಚೀಲದಂತೆ ಮಾಡಿದ ಭಾಗ, — ಉಡಿ ; ಮಡಿಲು : ಮಾಂಸೋತ್ಕರಮಂ ಪೊತ್ತೆಯ್ದೆ ತಮ್ಮುಳ್ಳುಡೆಯ ತೊವಲ ಮುಂಜೋಗಿಸೊ[ಲೊ]ಳ್ ತೀವಿಕೊಂಡು. . . ನಡೆದರಾ ಕಾಡೊಳಂ ಬೇಡರಾ [ಗಳ್] (ಕುಸುಮಾ. ೧೪-೩೨). [ಮುಂ$_1$ (< ಮುನ್$_1$) + ಸೋಗಿಲ್ (< ಸೋಂಕಿಲ್)]

**ಮುಂಜೋಲಿ**, ಮುಂಜೋಲೆ (ನಾ). ೧. ಮುಂದಕ್ಕೆ ವಾಲುವಿಕೆ : ಮುಂಭಾಗಕ್ಕೆ ಓರೆಯಾಗುವಿಕೆ ; ಬಾಗುವಿಕೆ : ರಥವು ಓಡುವಾಗ ಮುಂಜೋಲಿ ಇರುತ್ತದೆ (ಮುಂಬಯಿ. ೪-೬೨) ; ಗೋವಿಂದರಾಯರಿಗೆ ಯಾರೋ ಹಿಂದಿನಿಂದ ತಮ್ಮ ಕತ್ತು ಹಿಡಿದು ದಬ್ಬಿದ ಭಾವನೆಯಾಗಿ ಮುಂಜೋಲಿಯನ್ನು ತಡೆದು ನಿಲ್ಲುವಂತೆ ಗಕ್ಕನೇ ನಿಂತರು(ಮುಗಿಲು. ೧೦೩). **ಮುಂಜೋಲೆ :** ೨. ಚಾಂಚಲ್ಯ ; ಅಸ್ಥಿರತೆ : ಈ ಮುಂಜೋಲೆ ಹಿಂಜೋಲೆಯ ದೆಸೆಯಿಂದ ನಾನು ಬರೆವುದಾದರೂ ಆಟಗೊಪ್ಪೆ ಸೋಣಕ್ಕೊಮ್ಮೆ (ಕಂಥಾಸಾ. ೦೨).

**ಮುಂಜೋಲಿಯನ್ನು ಹೊಡೆ** = ವಾಲು ; ಬಾಗು : ಈಗ ರಾಯರ ಮಾತಿನ ಒಲವು ವನಮಾಲಿಯ ಕಡೆಗೆ ಹೆಚ್ಚು ಮುಂಜೋಲಿಯನ್ನು ಹೊಡೆಯಿತು (ರಥಸ. ೩೯). **ಮುಂಜೋಲಿಯಾಗು** = ಮುಂದಾಗು ; ಮುಂದುವರಿ ; ಪ್ರಗತಿಯನ್ನು ಸಾಧಿಸು : ಆ ಮಗುವೇ ಬುದ್ಧಿ-ಭಾವನೆಗಳಲ್ಲಿ ಸ್ವಲ್ಪ ಮುಂಜೋಲಿಯಾಗಿತ್ತೊ ಅಥವಾ ಗೌರಿಯ ವಾತ್ಸಲ್ಯದ ಪಾಶಶಾಲೆ ಆ ಬುದ್ಧಿ ಭಾವನೆಗಳನ್ನು ಸ್ವಲ್ಪ ಮುಂದಾಗಿ ಕುದುರಿಸಿತ್ತೊ ಯಾರು ಬಲ್ಲರು (ಕಥಾ. II. ೬೯೭). [ಮುಂ$_1$ (< ಮುನ್$_1$) + ಜೋಲಿ$_3$]

**ಮುಂಜೋಲೆ** ' ಮುಂಜೋಲಿ ' ನೋ.

**ಮುಂಡ$_1$** ' ಮುಂಡು$_1$ ' ನೋ.

**ಮುಂಡ$_2$** (ಗು). ೧. ತಲೆಯನ್ನು ಮುಂಡನ ಮಾಡಿದ. ೨. ಎಲೆಗಳನ್ನು ಕತ್ತರಿಸಿದ ; ಸವರಿದ. ೩. ಕೊಂಬಿಲ್ಲದ ; ಶೃಂಗವಿಲ್ಲದ. ೪. ಮೊಂಡಾದ ; ಹರಿತವಿಲ್ಲದ ; ಮೊನಚಿಲ್ಲದ. ೫. ಕ್ಷುದ್ರವಾದ ; ಅಲ್ಪವಾದ. (ನಾ). ೬. ತಲೆಯಲ್ಲಿ ಕೂದಲಿಲ್ಲದವನು ; ಬೋಳು ತಲೆಯವನು : "ಮುಂಡಃ, ಮುಂಡಿತಃ— ೨ ತಲೇ ಮೇಲೆ ಕೂದಲು ಬೆಳೆಯದ ಬೋಳುತಲೆಯವನು" (ಸಿದ್ಧಾಂತಿ. ೧೮೩); "ಬೋಟಿಂ=ಮಿಟ್ಟು; ಮುಂಡಂ ; ಒಂದೌಷಧಂ" (ಕಮುದ. ಶಾ. ೦). ೭. ಮುಂಡನ ಮಾಡಿದ ತಲೆಯವನು ; ಕ್ಷೌರ ಮಾಡಿದ ತಲೆಯವನು. ೮. ಕೊಂಬೆ, ರೆಂಬೆಗಳನ್ನು ಕತ್ತರಿಸಿದ ಮರದ ಕಾಂಡ : ಬೇರು ಮುಂಡಗಳು ಸಾಮಾನ್ಯವಾದ ಗಾಳಿಯ ಹೊಡೆತಕ್ಕೆ ಕದಲುವುದಿಲ್ಲ (ಜೀವಶಾ. ೦೭೭). ೯. ಮೊನಚಿಲ್ಲದ ಆಯುಧ ; ಮೊಂಡಾದ ಆಯುಧ : ಮೊನೆಯಿಲ್ಲದ ಮುಂಡವ ಹಿಡಿದು ಇಱಿದಲ್ಲಿ ಘಾಯಕ್ಕೆ ಕುಱುಹುಂಟೆ(ಸಕಸ.೪. II. ೭-೦೩). ೧೦. ಹಣೆ ; ನೆತ್ತಿ. ೧೧. ಕ್ಷೌರಿಕ ; ನಾಯಿಂದ. ೧೨. ತಲೆ : ರುಂಡ : "ಮುಂಡಃ . . . ಮೂರ್ಧಾ, ಕಂ — ಈ ೮ ಮಂಡೆ" (ಹಲಾಯು. ೬೩-೩೭೪) : ಪಿಂಡವಿಲ್ಲದ ಶ್ರಾದ್ಧ ಮುಂಡವಿಲ್ಲದ ದೇಹ ಹೆಂಡರಿಲ್ಲದನ ಮನೆವಾರ್ತೆ ಅವಗಂ ಬಂಡು ಕಾಣಯ್ಯ (ಸರ್ವಜ್ಞ. ೦೬೯೩). ೧೩. ತಲೆಯಿಲ್ಲದ ದೇಹ : ಅಟ್ಟೆ : "ಕಬಂಧಃ, ರುಂಡಃ – ಈ ೨ ಮುಂಡಂ" (ಹಲಾಯು. ೦೦೪-೯) : ಪಂಚಾಶತ್ಕೋಟಿ ಭೂಮಂಡಲವನೊಂದು ತಲೆಯಿಲ್ಲದ ಮುಂಡ ನುಂಗಿತ್ತ ಕಂಡೆನು (ಅವಸಂ. ೯-೨೯) ; ಕೆಡೆದ ಮುಂಡದ ಬಿಟ್ಟ ತಲೆಯ ಚೆಲ್ಲಿದ ಕರುಳ . . . ವಿಶ್ವಾಮಿತ್ರನು ಅಡವಿಯೊಳಗೆಯ್ದೆ (ಹಕಾ. ೦೨-೩೪). ೧೪. ನ್ಯೂನಗೊಂಡ ಅವಯವವುಳ್ಳವನು ; ಅಂಗಹೀನನಾದವನು : ಭಂಡನೀತನು ಕಪಟವೇಷದ ತೊಂಡು ಕಾಱನು ಮೋಟಕೈಗಳ ಮುಂಡನು (ಐಸಭ. ೩೯-೨೩). ೧೫. ಔಷಧಿಗೆ ಬಳಸುವ ಒಂದು ಬಗೆಯ ಸುವಾಸನಾಸಸ್ಯ : "ಅಶುತಕಃ — ಮುಂಡರಾಜಾನ್ನ" (೬ಕಂ. ೩) ; "ಮುಂಡಃ — ಬೋಟ" (೬ಕಧಿ. ೦೨೬). ೧೬. ಒಂದು ಬಗೆಯ ಸಸ್ಯ : ಇಲಿಕಿವಿ ಗಿಡ : "ಮುಂಡಂ — ಇಲಿವಾಲ" (೬ಕಂ. ೦೨೬). ೧೭. ರಾಹು. ೧೮. ಒಂದು ಬಗೆಯ ಲೋಹ : ಕಬ್ಬಿಣ : "ಮುಂಡಂ—ಮುಂಡಲೋಹ" (೬ಕಧಿ. ೦೨೬). ೧೯. (ಭೂಮಿಯನ್ನು ಅಳೆಯುವ) ಒಂದಾಳು ಎತ್ತರದಷ್ಟು ಅಳತೆ ; ಪುರುಷಪ್ರಮಾಣ : ಪುಲಿಗಿಲ ಕಿಲದೊಳ್ ಪನ್ನಗನಿಲಯಂ ಸುಮುಖದೊಡದಱ ತೆಂಕಣದೆಸೆಯೊಳ್ ಜಲಮಕ್ಕುಂ ಮುನ್ನಂ ಕಾಣಲಕ್ಕುಮೊಮ್ಮುಂಡದನಿತಱೊಳ್ ಕಚ್ಛಪನಂ (ಲೋಕೋಪ. ೩-೨೨). ೨೦. ಒಂದು ನಾಡಿನ ಹೆಸರು: ' ಮುಂಡರಾಷ್ಟ್ರ ' ಪರಾ. ೨೧. ಒಬ್ಬ ರಾಕ್ಷಸನ ಹೆಸರು. ೨೨. (ಅಕ್ಕಸಾಲೆ, ಕಮ್ಮಾರ ಮುಂತಾದವರು) ಲೋಹದ ವಸ್ತುಗಳನ್ನು ಇಟ್ಟು ಬಡಿಯಲು ಉಪಯೋಗಿಸುವ ಕಬ್ಬಿಣದ ಗಟ್ಟಿ ; ಅಡೆಗಲ್ಲು : "ಅಕ್ಕಡೆ ಮುಂಡಮುಕ್ಕು" (ಮುಂಗಾ. ೦೮೩-೯). ೨೩. [ಗಣಿತ] "ಶಂಕು, ಗೋಪುರಾಕೃತಿ, ಮೊ. ಸಮರೂಪದ ಘನಾಕೃತಿಯ ಮೇಲ್ಭಾಗವನ್ನು ಆಧಾರಕ್ಷೇತ್ರಕ್ಕೆ ಸಮಾನಾಂತರವಾಗಿ ಕತ್ತರಿಸಿ ಹಾಕಿ ಉಳಿದ ಭಾಗ. ಇಂತಹ ಕತ್ತರಿಕೆಯ ಎರಡು ಸಮಕ್ಷೇತ್ರಗಳ ಮಧ್ಯಭಾಗ" (Frustum. ೨೦೪೬) : ಸೂಜೀಮುಖಾಕೃತಿ ಅಥವಾ ಬಿರಮಿಡ್ಡಿನ (Pyramid) ಮುಂಡ (Frustum)ದ . . . ಘನಕ್ಕೆ ಈ ಸೂತ್ರವನ್ನು ಭಾಸ್ಕರನು ಕೊಟ್ಟಿದ್ದಾನೆ (ಗಣಿತ. ೨೬೭).

**ಮುಂಡ ಮೋಚಿಕೊಳ್ಳು** = (ಆಲಂ) ಹಾಳಾಗು ; ನಾಶವಾಗು ; ಅಪ್ಪ ಮಾಡಿದ ೨೦,೦೦೦ ರೂ. ಸಾಲಕ್ಕೆ ಅವನೇ ಮುಂಡ ಮೋಚಿಕೊಳ್ಳಲಿ (ಶ್ರೀಕ್ಷ. ೨೭) ; ನಮ್ಮೆಲ್ಲರನ್ನೂ ಬಿಟ್ಟು ಸೀನಪ್ಪ ಮೈಸೂರಿಗೆ ಹೋಗಿ ಮುಂಡ ಮೋಚಿಕೊಳ್ಳುವುದು ನಾನು ನೋಡದೆ ಇರುತ್ತೇನೆಯೇ (ಅಂಶಪಾ. ೪). **ಮುಂಡಮೋಚು** = ೧. ಬ್ರಾಹ್ಮಣಸ್ತ್ರೀಯು ಗಂಡನನ್ನು ಕಳೆದುಕೊಂಡುದರ ಸಂಕೇತವಾಗಿ ತಲೆಯನ್ನು ಬೋಳಿಸಿಕೊಂಡು ಸೆರಗಿನಿಂದ ಮುಸುಕನ್ನು ಹಾಕಿಕೊಳ್ಳು : (೪). ೨. = ಮುಂಡ ಮೋಚಿಕೊಳ್ಳು : ಈ ಪ್ರಕಾರದೊಳಾಸಱದೆ ತಾಂ ಮುಂಡ [ಹಾಕಿಂ. ದ] ಮೋಚವ ಹಾಂಗೆ ಅಱಚುವರೆ (ಐಸಭ. ೩೬-೦೩); ಮುಂಡಮೋಚಿದ ನಾನು ಇನ್ನಾರು ಗತಿಯೆನಗೆ ಪುಂಡರೀಕಾಕ್ಷ ನೀ ಪಾಲಿಸೈ ತಂದೆ (ತ್ರಿಕಂದ. ೦-೨೬-೨). [ಸಂ.]

**ಮುಂಡಂಗಿ** ' ಮುಂಡಿಗೆ$_1$ ' ನೋ.

**ಮುಂಡಕ** (ನಾ). ೧. ಕೊಂಬೆಗಳನ್ನು ಕತ್ತರಿಸಿಹಾಕಿದ ಮರದ ಕಾಂಡ ; ಬೊಡ್ಡೆ. ೨. ನಾಯಿಂದ ; ಕ್ಷೌರಿಕ ; ಹಜಾಮ. ೩. ತಲೆ: ಶಿರಸ್ಸು. ೪. ತಲೆಗೂದಲನ್ನು ಬೋಳಿಸಿಕೊಂಡವನು ; ಮುಂಡನಮಾಡಿಕೊಂಡವನು : ಮುಂಡಕರು, ಶ್ರಮಣಕರು, ಇಭ್ಯರು . . . ಇವರೊಡನೆ ಮಾತುಕತೆಯಾಡುವಾಗ ಪೂಜ್ಯಗೌರವಮನೊಡನೆ ಹೇಗೋ ಹಾಗೆ

(ಶಿಧ್ಯಕ. ೯೦). ೫. ಅಥರ್ವವೇದದ ಒಂದು ಉಪನಿಷತ್ತು : ಶ್ರೀರುದ್ರ ಬೃಹದಾರಣ್ಯಕ . . . ಮುದ್ಗಲ ಮುಂಡಕವೆಂಬಿವು ಮೊದಲಾದವೇ ಉಪನಿಷತ್ತುಗಳು (ಶಿವೇಶ. ೩). 'ಮುಂಡಕೋಪನಿಷತ್ತು' ಪರಾ. [ ಸಂ. ]

**ಮುಂಡಕಲ್** (ನಾ) ಒಂದು ಊರಿನ ಹೆಸರು : ಕಾರ್ತ್ತಿಕಪೌರ್ಣಮಾಸ್ಯಾಂ ಪೈತಾಮಹೀ ಹಿರಣ್ಯಗರ್ಭಮಹೋತ್ಸವಸಮಯೇ ಮುಣ್ಡಕಲ್ಲು ಗ್ರಾಮಸ್ಯ ಪಲ್ಲಿಜಿಗ್ರಾಮಸ್ಯಚ . . . ರಾಜಮಾನೇನದತ್ತಾ (ಇಆ. XI, ೬೭-೦೬; 7ನೆಯ ಶಕ). 'ಮಾಂಡಿಕಲ್' ಪರಾ. [ಮುಂಡ $_{?}$ + ಕಲ್ $_{3}$]

**ಮುಂಡಕಾಜಿ** (ನಾ). ಮೋಟುಕೈಗಳುಳ್ಳವನು : ಮೋಟಕೈಗಳ ದಂಡಗೊಡುತಂ . . . ಮುಂಡಕಾ[ಪಾಠಾಂ. ಮುಂಡುಗಾ]ಜಿನು ದಸರಿದೇವನ ಬಳಿವಿಡಿದು ಸಾರ್ದು (ಶಿಸಳು. ೩೯-೦೮). [ಮುಂಡ $_{2}$ + — ಕಾಜಿ]

**ಮುಂಡಕೋಪನಿಷತ್ತು** (ನಾ). ಅಥರ್ವವೇದದಲ್ಲಿ ಪ್ರಸಿದ್ಧವಾದ ಒಂದು ಉಪನಿಷತ್ತು ; P ಈ ಉಪನಿಷತ್ತಿನ ಪವಿತ್ರತತ್ತ್ವಗಳನ್ನು ಯಾರು ಗ್ರಹಿಸುವರೋ ಅವರ ದೋಷಗಳೆಲ್ಲವೂ ಛೇದಿಸಲ್ಪಟ್ಟು ಬಿಡುಗಡೆ ಹೊಂದುವರೆಂಬ ನಂಬಿಕೆಯಿದೆ : ಮುಂಡಕೋಪನಿಷತ್ತು ಅಥರ್ವವೇದದ ಶೌನಕಶಾಖೆಗೆ ಸೇರಿದೆ (ಭಾರದ. ೩೮).

[ < ಸಂ. ಮುಂಡಕೋಪನಿಷದ್ ]

**ಮುಂಡಗಂಭ** (ನಾ). ಮರದ ಕಾಂಡದಿಂದ ತಯಾರಿಸಿದ ಕಂಬ : ಮಕರತೋರಣದ ಬಹಿರ್ಭಾಗದುಭಯಪಾರ್ಶ್ವದೊಳಮೋಳಿವಡೆಯೆ ಸುರಕರೀಂದ್ರಮನೆ ಕಟ್ಟಲ್ ನಟ್ಟ ಪಾರಿಜಾತದ ಮುಂಡಗಂಭಂಗಳಂ ಪೋಲ್ತೊಪ್ಪಿ ಸಾಹಣಾಘಮೊಳ್ ನಿಚ್ಚವೋಲಗಿಸುವ ಪಂಚಕಲ್ಯಾಣಂಗಳುಮಂ ಕಟ್ಟುವಾನೆಗಂಭಂಗಳುಮಂ . . . ನೋಡಿ (ಶಾಂತಿಪು. ೩-೦೯ ವ).

[ ಮುಂಡ $_{2}$ + ಕಂಭ ]

**ಮುಂಡಗಳ್ಳಿ**, ಮಂಡಗಳ್ಳಿ, ಮುಂಡುಗಳ್ಳಿ, ಮೊಂಡಗಳ್ಳಿ, ಮೊಂಡುಗಳ್ಳಿ (ನಾ). ಎಲೆಗಳಿಲ್ಲದ, ದಟ್ಟವಾದ ಮುಳ್ಳುಗಳುಳ್ಳ ಒಂದು ಬಗೆಯ ಕಳ್ಳಿಗಿಡ : "ಮಹಾವೃಕ್ಷಃ, ಸ್ನುಹಿಃ — ಈ ೨ ಮುಂಡಗಳ್ಳಿ" (ಪಠಾಯು. ೩೩-೯೯). **ಮಂಡಗಳ್ಳಿ** : ಯವಕ್ಷಾರ, ಚಿತ್ರಮೂಲಂಗಳಂ ಮಂಡಗಳ್ಳಿಹಾಲಿಂದರೆದು ಎಣ್ಣೆಯಲ್ಲಿ ಕಾಯಿಸಿ ಮೊಳೆಗೆ ಲೇಪವಂ ಮಾಡೆ ಕರಗಿ ಹೋಗುವುದು (ಸಕಪ್ಪ. ೨೯೩) ; ದೊಡ್ಡಬರದಲ್ಲಿ ಮೂರುವರ್ಷ ಮಳೆಯಿಲ್ಲ . . . ಉಳುವುದಕ್ಕೆ ಎತ್ತಿಲ್ಲದೆ ಮಂಡಗಳ್ಳಿ ಎಳೆದು ಬಿತ್ತನೆ ಮಾಡಿದರಂತೆ (ಜಸ್ಮಾರು. ೧೯೨). **ಮುಂಡುಗಳ್ಳಿ** : "ಮುಂಡುಗಳ್ಳಿ ಸ್ನುಹಿಯೆನಿಕ್ಕು" (ಮಂಗರಾ. ೪೦-೩೯) ; ಎಕ್ಕೆಯ ಹಾಲು, ಮುಂಡುಗಳ್ಳಿಯ ಕೊನರು, ಕಹಿಸೋರೆಯ ಎಲೆ, ಹೊಂಗೆಯ ನಾರು ಇಷ್ಟನು ಆಡಿನ ಮೂತ್ರದಿಂದ ಅರೆದು ಲೇಪವಂ ಮಾಡಿಸಲು ಮೂಲವ್ಯಾಧಿಯು ಮೊಳೆ ಕರಗಿಹೋಗುವುದು (ವೈದ್ಯಸಾ. I. ೧೯೩). **ಮೊಂಡಗಳ್ಳಿ** : ಮೊಂಡಗಳ್ಳಿಮೊಗರು, ಕಹಿಸೋರೆಯೆಲೆ, ಹೊಂಗೆನಾರು, ಕಳ್ಳಿಹಾಲು ಸಹ ಆಡಿನ ಮೂತ್ರದಿಂದರೆದು ಲೇಪವಂ ಮಾಡೆ ಮೊಳೆ ಕರಗಿಹೋಗುವುದು (ಸಕಪ್ಪ. ೨೯೩). **ಮೊಂಡುಗಳ್ಳಿ** : ಬೇವಿನ ಕೊರಡು ಗರಿಕೆ ಮೊಂಡುಗಳ್ಳಿ (ತಾಗಂ೨. ೩೯-೩). [ < ಮುಂಡ $_{0}$ ( P ← ತಮಿ. ಮುಣ್ಡಕಮ್ = ಮುಳ್ಳು, ಮುಳ್ಳಿನ ಪೊದೆ ) + ಕಳ್ಳಿ $_{2}$ ]

**ಮುಂಡಜೀವಿತ** (ನಾ). (ಒಡೆಯನಿಗಾಗಿ) ತನ್ನ ತಲೆಯನ್ನು ಮುಡಿಪಾಗಿಟ್ಟಿರುವ ಬದುಕು (?) : ಬಿಟ್ಟಿದೇವ ಹೊಯ್ಸಳಸಾಹಣಿ ಬಾಸಯನ ಕರೆದೊರೆಯೆ . . . ಮೇಲಾಳಿಪ್ಪರ ಕೊಂದು ಕಾಲಾಳಿಪ್ಪರನಿಱಿದು ಜೋಳವಾಳಿಯ ನೆಱೆದ ಬಾಸಿ . . . ತಂನ ಜೀವಿತಮಂ ಮು?ಣ್ಡಜೀವಿತವಾಗಿ ನಿಲಿಸಿದ (ವೈಆಂ. ೦೯೩೯-೦೩-೯ ; 1117). [ ಸಂ. ]

**ಮುಂಡನ** (ನಾ). ೧. ತಲೆಯನ್ನು ಬೋಳಿಸುವಿಕೆ ; ಕ್ಷೌರ ; ವಪನ : "ಕ್ಷೌರಂ ವಪನಂ ಮುಂಡನಮುದಱಿಗೆ ಭದ್ರಾಕರಣಂ" (ವಸ್ತುಕೋ. ೦೦೯-೨೦); ಮುಂಡನ ಜಟ ಕೇಶದುರುಭಕ್ತಿಸಂಜ್ಞಾನವಿರಕ್ತರ್ಕ್ಕೆ ತಂದು ಕಂಡರು ಭೈರವಾಂಕನುನ್ನತಿಯು (ಭೈರವೇ. ೯-೨೦). ೨. ಶೀರ್ಘಯಾತ್ರೆ, ಸಂನ್ಯಾಸಸ್ವೀಕಾರ ಮುಂತಾದ ಪವಿತ್ರಸಂದರ್ಭಗಳಲ್ಲಿ ತಲೆಗೂದಲನ್ನು ತೆಗೆಸುವ ಒಂದು ವಿಧಿ : ಚಕ್ರಧರನ ಮುಂಡನವಾಯಿತು. ಸಂನ್ಯಾಸವನ್ನು ಸ್ವೀಕರಿಸಿದನು (ಶರ್ವಾಗಸಂ. ೬೭). ೩. ಗಂಡನನ್ನು ಕಳೆದುಕೊಂಡ ಸಂಪ್ರದಾಯಸ್ಥಬ್ರಾಹ್ಮಣಸ್ತ್ರೀಯ ತಲೆಯನ್ನು ಬೋಳಿಸುವಿಕೆ, — ಮಡಿಮಾಡುವಿಕೆ : ಮಗಳ ಮುಂಡನಕಾರ್ಯವು ಅವರಿಗೆ ಅವಳ ವೈಧವ್ಯಕ್ಕಿಂತಲೂ ಕ್ರೂರವಾಗಿ ಕಂಡುಬಂದಿತ್ತು (ಶೇಷುಂತ. ೦೯೦).

**ಮುಂಡನ ಮಾಡಿಸು** = ೧. ಸಂನ್ಯಾಸ ಸ್ವೀಕಾರ, ಉಪನಯನ ಮುಂತಾದ ವಿಧಿಗಳಿಗಾಗಿ ತಲೆಗೂದಲನ್ನು ತೆಗೆಸು : ತಲೆಯನ್ನು ಮುಂಡನ ಮಾಡಿಸಿ . . . ಮೂರುಜನ ವಟುಗಳನ್ನೂ ಮೂರನೆಯ ಅಂತಸ್ತಿನ ಕೊಠಡಿಯಲ್ಲಿ ಮೂರು ದಿನಗಳವರೆಗೆ ಕೂಡಿಹಾಕಿದರು (ಹಿಂದ. II, ೩೬) ; ಆ ಮಹಾಯೋಗಿಯು ತಲೆಯನ್ನು ಮುಂಡನ ಮಾಡಿಸಿಕೊಂಡು . . . ವಿಭೂತಿಯನ್ನು ಧರಿಸಿ ಬರೀ ಮೈಯಲ್ಲಿದ್ದನು (ಸೀತಸಂ. VI, ೨೧). ೨. ವೈಧವ್ಯಸೂಚಕವಾಗಿ ಹೆಂಗಸು ತಲೆಯನ್ನು ಬೋಳಿಸಿಕೊಳ್ಳು ; ಮಡಿಯಾಗು : ಇವರಲ್ಲಿ ವಿಧವೆಯರು ಇತರ ಬ್ರಾಹ್ಮಣವಿಧವೆಯರಂತೆ ಮುಂಡನ ಮಾಡಿಸುವುದಿಲ್ಲ (ಕಭಾಗ. ೮೨). [ಸಂ.]

**ಮುಂಡಪಾಷಾಣ** (ನಾ). ಕಬ್ಬಿಣ ; ಉಕ್ಕು : "ಮುಂಡಾಯಸಂ — ಮುಂಡಪಾಷಾಣ" (ಓಷಂ. ೦೨೬). [ ಸಂ. ]

**ಮುಂಡಮೋಱಿ**[3] (ನಾ). (?) : ಆನಂದಿನಾ ಭವದಲ್ಲಿ ಹಸಿದಾನವಂ ಮಾಡಲೊಲ್ಲದೇ ಇವಳೆನ್ನ ಬದುಕ ಕಿಡಳೆಂದೆಂಬ ಮುಂಡಮೋಱಿಯವಿವೇಕತನವಲ್ಲವೇ (ಸವ್ಯಕಾ. ೩-೨೦). [ ? + ಮೋಱಿ $_{2}$]

**ಮುಂಡಮೋಪಿ** (ನಾ). ಗಂಡನನ್ನು ಕಳೆದುಕೊಂಡು ತಲೆಗೂದಲನ್ನು ತೆಗೆಸಿರುವವಳು; ಮಡಿಹೆಂಗಸು : ವಿಧವೆಯರನ್ನು ಕುರಿತು ಹೇಳುವಾಗ ಕೆಲವರು ಅಗೌರವದಿಂದ ಮುಂಡಮೋಪಿ ಎಂದು ಹೇಳುವುದುಂಟು (ರೂಢಿ).

[ದೇ.॥ ತಮಿ. ಮುಣ್ಡೈಮೋಪ್ಪಿ ; ತೆಲು. ಮುಂಡಮೋಪಿ]

**ಮುಂಡರಾಷ್ಟ್ರ** (ನಾ). ಒಂದು ನಾಡಿನ ಹೆಸರು : ಧರ್ಮ್ಮಯುವ ಮಹಾರಾಜ (ಜಸ್ಯ) ಶ್ರೀವಿಷ್ಣುಗೋಪವರ್ಮ್ಮಣೋ ವಚನೇನ ಮುಣ್ಡರಾಷ್ಟ್ರೇ ಉರುವುಪಲ್ಲಿಯೇ ಗ್ರಾಮೇ ಯುಕಾಃ(ಕಾ) ವಕ್ತವ್ಯಾಃ (ಇಆ. V, ೩೧-೦೬ ; 5ನೆಯ ಶಕ). [ಸಂ.]

**ಮುಂಡಲೋಹ** (ನಾ). ಕಬ್ಬಿಣ ; ಉಕ್ಕು : "ಕೃಷ್ಣಲೋಹಂ — ಕಬ್ಬುನ, ಅಯಸ್ಕಾಂತ, ಮುಂಡಲೋಹ" (ಓಷಂ. ೩೮). [ ಸಂ. ]

**ಮುಂಡಾ** (ನಾ). ದ್ರಾವಿಡವರ್ಗಕ್ಕೆ ಸೇರಿದ ಭಾರತದ ಮೂಲನಿವಾಸಿಗಳಲ್ಲಿಯ ಒಂದು ಜನಾಂಗ ಮತ್ತು ಅವರ ಭಾಷೆ : ಆರ್ಯರು ಇಲ್ಲಿಗೆ ಬರುವ ಮುನ್ನ ಇದ್ದ ಜನಾಂಗ ಮುಂಡಾಭಾಷೆಯನ್ನು ಆಡುತ್ತಿದ್ದಿರಬಹುದು (ದ್ರಾಇವಿ. ೨೮).

**ಮುಂಡಾಟ** (ನಾ). ಮುದ್ದಾಡುವಿಕೆ ; ಪ್ರೀತಿಸುವಿಕೆ ; ಲಲ್ಲೆಗರೆಯುವಿಕೆ : ಮುತ್ತಿನ ಬೊಟ್ಟಿನ ನೊಸಲೊಳು ನವರಸ ಮುಂಡಾಟದ ಕಲೆಯೋ ಅದಱೊತ್ತಿನ ನಾಮಾಂಕಿತವೋ (ಶಿವಗೀ. ೦೬೯-೮೦೯) ; ನೋಟವೆಲ್ಲಂ ಶಂಭುವನೆ ನೋಡುವಿರವು ಮುಂಡಾಟವೆಲ್ಲಾ ಶಂಕರನ ಭಜನೆ (ಶಾಂದಶು. ೯-೦೬). 'ಮುದ್ದಾಟ' ಪರಾ. [ < ಮುಂಡಾಡು ]

**ಮುಂಡಾಡು** (ಕ್ರಿ). ೧. ಮುದ್ದಾಡು ; ಪ್ರೀತಿಸು ; ಲಾಲಿಸು ; ಮುದ್ದುಗರೆ : ಕುಂತಿಯೊಡನೆ ಮದ್ರರಾಜನ ಮಗಳ್ ಶಲ್ಯನೊಡವುಟ್ಟಿದ ಮಾದ್ರಿಯುಮನೊಂದೆ ಪಸೆಯೊಳರಿಸಿ ಗಾಂಗೇಯಂ ವಿಧಾತ್ರಂ ಮುಂಡಾಡುವಂತೆ ತಾಂ ಮದುವೆಯುಂ ಮಾಡಿ (ಪಂಪಭಾ. ೦-೦೦೬ ವ); ಕೊಂಡಾಡುಗೆ

ಕಲ್ಕೊಡೆದುಗೆ ಮುಂಡಾಡುಗೆ ಮುದ್ದಿಸುಗೆ ಮರಲ್ದಪ್ಪುಗೆ ಕೈಕೊಂಡೀ ಕಾವ್ಯಮನಗಜೆಯು ಗಂಡನಲಂಪಿಂದೆ ಹಂಪೆಯು ವಿರೂಪಾಕ್ಷಂ (ಗಿಂಕ. ೦-೦೦); ಕುಲವಂಂ ವರ್ಧಿಪ ಕಂದನಂ ಪಡೆದು . . . ಮುಂಡಾಡಿಯುಂ ಮುದ್ದಿಸಿಯುಂ . . . ಮನದ ಬೇಸಜಂ ಕಳೆವೊಂದು ಸೈಪೆನ್ನೊಳೆಂದಿಂಗಾದಪುದೋ (ರಾಮಾಶ್ವ. ೦೮-೦೯). ೨. ಚುಂಬಿಸು ; ಮುತ್ತಿಡು : ಮದನಂ ತನ್ನಧಿದೈವದಾಕೃತಿಯನೊಲ್ದಾರಾಧಿಸಲ್ಕೆಂದು ಚಿತ್ರದ ರೂಪಂ ಬರೆದಂಜೆ ಮತ್ತೆ ರತಿ ತತ್ಸೌಂದರ್ಯಮಂ ಕಂಡು ಮೋಪಡಗುರ್ಬಿಂದಸುವೊಯ್ದುಳಾದೊಡದಜೀವಾಂ ರೂಪುಗೆಟ್ಟಪ್ಪೆನೆಂದಿದನುರ್ವೀತಳದೊಳ್ ಪ್ರತಿಷ್ಠಿಸಿದನೆಂದಾ ಕಾಂತೆ ಮುಂಡಾಡಿದಳ್ (ಪಕಳ. ೦೦-೩೯); ಕಾಮಿನಿಯ ಕಡುನೊಂದೆಲಾ ಮುಖಿತಾಮರಸವನು ತೋಜು ತೋಜೆನುತಾ ಮುನೀಶ್ವರನಪ್ಪಿ ಮುಂಡಾಡಿದನು ನಿಜಸತಿಯ (ಕುವ್ಯಾ.ಅ. ೯-೦೩); ನೀಜನ ಮೊಗದೊಳು ಮೊಗವಿಟ್ಟು ಮುಂಡಾಡಿ ಮಿಾಜಿದ ಚಿಂದುಟಿರಸವ ಹೀರಿ ಒಪ್ಪೆಯ ಮಾಡಿದಲ್ಲದೆನ್ನಯ ಜಿಹ್ವೆ ಮೇರೆಗೆ ನಿಲದೆಲೆ ಕೆಳದಿ (ಕಂಸಪ. ೯-೦೦೯). ೩. (ಪ್ರೀತಿಯಿಂದ) ನೇವರಿಸು ; ಮುಟ್ಟು ; ಸೋಕು : ತುಂಗಸ್ತನಂ ಮಂಜರಿಯೊಳ್ ಮುಂಡಾಡ ಕಣ್ಗೊಪ್ಪಿರಸೆ ಕುಸುಮದೊಳ್ . . . ಪೂಗೊಯ್ದುಳೊರ್ವಳ್ (ರೀಜಾಕ. ೦೩-೬೦); ಮುಗಿಲಂ ಮುಂಡಾಡುವಂತಿರ್ದ್ದಮಾದ ಪಲತೆಜದ ಕುಜುಂಪಿನ ವಿಳಿರ್ವ ಪಟಾಗೆಗಳ ಗಾಳಿ ಗಾಳಿವಟ್ಟೆಯೊಳ್ ನಡೆವ ಪಗಲೊತೆಯನ ಕುದುರೆಯ ಸೇದೆಯುಂ ಪಿಂಗಿಸೆಯುಂ (ಕಬ್ಬಿಗ. ೨೩೬); ಪ್ರಳಯದಲಿ ಸಾಗರದ ತೆರೆ ಮುಂಡಾಡಿದವು ಸಾಗರದ ತೆರೆಯಲಿ ಸಕಲ ಜಲಧಿಗಳೇಕರೂಪದಲಿ ಧರೆಯ ಮುಳುಗಿಸಿ ಮೇಲೆವೇಲುಬ್ಬರಿಸಿ . . . ನೀರೇಜಾತಗ್ಗದ ಸತ್ಯಲೋಕದಲಿ (ಕುವ್ಯಾ.ಅ. ೦೯-೦೯). 'ಮುದ್ದಾಡು' ಪರಾ.

[< ಮುದ್ದು + ಆಡು₁]

**ಮುಂಡಾಸ** 'ಮುಂಡಾಸು' ನೋ.

**ಮುಂಡಾಸನ** (ನಾ). ೧. ತಲೆಕೆಳಗಾಗಿರುವಿಕೆ ; ತಲೆ ಕೆಳಗಾಗಿರುವ ಸ್ಥಿತಿ : ಇಳುಪಿದನು ಬಲುಗುಳವ ಖಂಡಿಸಿ ಕಳಚಿದನು ಮೊಗರಂಬವನು . . . ಛತ್ರ ಚಮರಾವಳಿಯ ಸೀಳಿದು ಬಿಸುಟನಾ ಗಜತಿಲಕ ಮುಂಡಾಸನದಲಿರ್ದುದು (ಕುವ್ಯಾ.ದ್ರೋ. ೩-೩೨). ೨. [ನಾಟ್ಯ] ಒಂದು ಬಗೆಯ ಭಂಗಿ : ಮತ್ತಂ ದಿಂಡು ಮುಂಡಾಸನಂ ದಪ್ಪಸರಣ . . . ಲಂಕಾದಹನಮೆಂಬ ಪಲವುಂ ತೆಜದ ಕರಣಂಗಳಿಂ ವಿಚಿತ್ರಮಪ್ಪ ಚಿತ್ರವಿದ್ಯೆಯುಂ ಲಾಸ್ಯ ತಾಂಡವಮೆಂಬೆರಡುಂತೆಜದ ನೃತ್ಯಭೇದದಿಂದಾಡಿ (ರರ್ಮಕ. ೨-೩೬ ವ). ೩. [ಯೋಗ] ಕುಳಿತುಕೊಳ್ಳುವ ಒಂದು ನಿರ್ದಿಷ್ಟಭಂಗಿ. [ಸಂ.]

**ಮುಂಡಾಸು**, ಮುಂಡಾಸ (ನಾ). ತಲೆಯುಡುಗೆ ; ರುಮಾಲು ; ಪೇಟ: ಹರಿಕರುಣವೆ ಅಂಗಿ ಗುರುಕರುಣ ಮುಂಡಾಸು ಹರಿದಾಸರ ದಯವೇ ಬೊವಲ್ಲಿ (ಪುರಂದ. ೨-೦೩-೦); ಪಟ್ಟೆಯ ಹಚ್ಚಡ ಧೋತ್ರ ಮುಂಡಾಸನು ಕೊಟ್ಟು (ಗೋಪುರ. ೦೭-೦೬); ತಲೆಗೆ ಚೌಕುಳಿಬಟ್ಟೆಯ ಮುಂಡಾಸು ಸುತ್ತಿದ್ದವ ಗ್ರಾಮದ ಹಿರಿಯ ಗೌಡನಿರಬೇಕು (ಸಂಸ್ಕೃ.ಕ. ೯೭). **ಮುಂಡಾಸ:** ಶಿವ . . . ಮಾಸಿದಂಗದಿ ಮಲಿನದಂಗಿ ಮುಂಡಾಸದಿಂದಾ ಸುಮಂದಿರದ ಪೊಜಬಾಗಿಲೊಳು ನಿಂದು (ಶ್ರೀಕರಾ. ೬-೩೨); ಹರಿಗೆಗಳನು ಖಂಡಿಸಿ ಬೆನ್ನೊಳಗಿಹ ತರಕಸಗಳ ಹುಡಿಮಾಡಿ ಸಿರದ ಮುಂಡಾಸವ ಸೀಳ್ಳಿಕ್ಕಿ ದಗಲೆಯ ಪರಿಪಾಟ ಮಾಡಿದರಾಗ (ಕಂಪಪ. ೦೩-೯೬); ಸೀರೆ, ಜರತಾರಿ, ಕಿವಿಯೋಲೆ ಕಾಲ್ಬೆರಳಿನ ತನಕವೂ ಚಿನ್ನಾಭರಣ, ಮುಂಡಾಸ, ಬಾಸಿಗ, ಅಕ್ಷತೆ ಇವೆಲ್ಲವೂ ಮಂಟಪದಲ್ಲಿ ಹಬ್ಬುವ ಹೊಗೆಯಿಂದಾಗಿ ಒಂದು ಹುಣಿಸೆಯ ಕೊರಡಿಗೂ ಚಂದವನ್ನು ಪ್ರೇರಿಸುತ್ತಿರಬೇಕು (ಕುಕೃ. ೦೦೦). [←ಹಿಂ. ಮುಂಡಾಸಾ; ಮರಾ. ಮುಂಡಾಸೇ, ಮುಂಡಾಸೇ./ತುಳು. ಮುಂಡಾಸ್]

**ಮುಂಡಿ₁** (ನಾ). ೧. ಬೋಳಿಸಿದುದು : ಬೋಳಾದುದು. ೨. ರೆಂಬೆಗಳನ್ನು ಸವರಿದ ಮರ; ಬೋಳುಮರ. ೩. ಕೊಂಬಿಲ್ಲದುದು ; ಶೃಂಗವಿಲ್ಲದುದು : ಈ ಸುರಕಾಂತೆಯಂ ಮಹಾವೇಗದೆ ಕೊಂಡುಪೋಗಿ ಬಳಿಕಂ ಪರಮುಂಡಿ [ಶಾಶಾಂ. ಮುಂಡೆ]ಯ ಗೋವು ಕೊಂದು ಸಂಸ್ಕಾಗಿಸಿ ಬಿಟ್ಟು ಕೋಮಟಿಗನಂ ಸಲೆ ತರ್ಪುದು ತಳ್ವದಾದೊಡಂ (ಶಾಣಸ್ಯ. ೨-೯-೬೦). ೪. ಕ್ಷೌರಿಕ ; ನಾಯಿಂದ ; ಹಜಾಮ : "ಕ್ಷುರಿ ಮುಂಡಿ ನಾಪಿತಂ" (ಪಸ್ತುಕೋ. ೬೬-೯೯). ೫. ಒಂದು ಬಗೆಯ ಸಸ್ಯ; ಬೋಳ: "ಬೋಟತರ ಮುಂಡಿ" (ಮಂಟ. ಪ. ಖ. ೦); ತಾನಿದೊ ಮುಂಡಿಯು ಮೇಲಕದ್ದಿಹುದು ಮಾನಿತ ಮೂಲಂಗಿ ಮಾಸದಂತಿಹುದು (ಕಣಂತು. ೨೯). ೬. ತಲೆಯನ್ನು ಬೋಳಿಸಿಕೊಂಡವನು ; ಸಂನ್ಯಾಸಿ ; ಯತಿ : ಯಶೋಧರಕುಮಾರಂ ಋಷಿಪುತ್ರನಪ್ಪ ವಜ್ರೋದಾಕನ ಪ್ರಭುದುಸರ್ ಮೇಳದಿಂ ಮುಂಡಿಯ ವಂಶಜನೆಯೆಂದು ಕುಮಾರನೊಡನೆ ನಗುವುದಜಿಂದದುವೆ ಪ್ರಸಿದ್ಧವಾಗಿ ಮುಂಡಿಯ ವಂಶಮಾದುದು ಧರ್ಮಪ. ೦೦-೦೬೯). ೭. ತುದಿಗಳಲ್ಲಿ ಲೋಹದ ಅಣಸುಗಳಿಲ್ಲದ ಒನಕೆ : (೯). [ಸಂ. ಮುಂಡಿನ್]

**ಮುಂಡಿ₂** 'ಮುಂಡಿಗೆ₁' ನೋ.

**ಮುಂಡಿ₃** (ನಾ). ೧. ಜಮೀನಿನ ಒಂದು ಭಾಗ : ಮಡಿ (?): ಹೊಲದ ಇನ್ನೊಂದು ಮುಂಡಿಯಲ್ಲಿದ್ದ ಬೇಸಾಯ ಇವನ ಕಣ್ಣಿಗೆ ಬಿತ್ತು . . . ತಿರುಗಿ ಇವನಿರುವ ಮುಂಡಿಗೆ ಬರುವವರೆಗೂ ಇವನು ಏನು ಮಾಡಬೇಕು? (ಸುಸಸಂ. ೯೬). ೨. (?): ತನ್ನ ಕೀರ್ತ್ತಿಯಂ ನಿಜಿಸಿದಳ್ ಭಾರಂಗಿಯುಮಗ್ಗಿ ಮುಂಡ್ಡ ಜೀರ್ಣ್ಣರ ಜೋಳಂ ತನ್ನೂರ ನನ್ನಗೆಜೆಯ × × × ಗೆಗೊಟ್ಟಂ (ಎಕ. VII (8), ಶಿಕಾಂ. ೩೬೮-೨೨; ೧೦೭೭). [?]

**ಮುಂಡಿಗೆ₁** (ನಾ). ಕಟ್ಟು ; ಕಂತೆ ; ಪಿಂಡಿ : ಕಟ್ಟುವರ್ಣಿಜಿಕೆಯ ನೀವಿಯೊಳಗೆ ಕೈಗಟ್ಟುವರ್ಕಂಕಣಗಳನು ಕಟ್ಟುವರ್ಧಮ್ಮಿಲ್ಲವೆಲೆಯ ಮುಂಡಿಗೆಯನು ಕಟ್ಟು ಕುಪ್ಪಿಂಬಡದಲ್ಲಿ (ಕೋಶಶ. ೨-೨೩).

**ಮುಂಡಿಗೆ₂** (ನಾ). ೧. ರೆಂಬೆಗಳಿಲ್ಲದ ಮರದ ಬುಡ ; ಕಾಂಡ : ಬಲದ ಪದಘಟ್ಟಣೆಗೆ ಹೆಮ್ಮರನುಲಿದು ಬಿದ್ದವು . . . ಮುಂಡಿಗೆ ಮುಮ್ಮಡಿ ನೆಲಕೊಜಿಗಿದವು ಮಿಜುಗುವ ನಾಗವಲ್ಲಿಗಳು (ಕುವ್ಯಾ.ಅ. ೦೮-೩೬); ಎಲೆವಳ್ಳಿ ಮುಂಡಿಗೆಗಳಸಡರಿದುವು (ಕೋಶಶ. ೨೯-೩೩). ೨. ಮರದ ದೊಡ್ಡ ತುಂಡು,– ದಿಮ್ಮಿ ; ತೊಲೆ : "ಮುಂಡಿಗೆ—ಮುಂಡಕ—ಕಂಬ, ತೊಲೆ" (ಕನ್ನಕೋ. ೩೬); ಹಾರೆ ಮುಂಡಿಗೆಗಳುಡಿದು ಮದಗಜಂ ಕಡಿದವಲ್ಲದೆ ಕದಂದೆಗೆಯದು (ಕೋಮುಕ. ೯-೬೩); ಆನೆ . . . ದೊಡ್ಡದೊಡ್ಡ ಮುಂಡಿಗೆಗಳನ್ನು ಒಮ್ಮೆಲೆ ಎತ್ತಿ ಇಡುತ್ತದೆ! (ಕಕಪ. ೯-೬೩). ೩. ಮರದ ಕಂಬ,—ಸ್ತಂಭ : ನಂಜನ ಭೂಮಿಯ ಮೇಲೆ . . . ಮಂಜುಳದ ಮೂಲಂಗದ ಮುಂಡಿಗೆಯ ನಟ್ಟು . . . ಏಜಿಸಿದ ಗಳು ಚಿತ್ರಶುದ್ಧಮೆಂಬ ಮಾಗುತಿ ಕೋಲಿನಲ್ಲಿ ನಿಂದಿತ್ತು (ಸಪವ. I. ೦೩೬-೩೨೦); ಹೆಬ್ಬಾಗಿಲ ಒಂದೊಂದು ಮುಂಡಿಗೆಯೋ ಐತಾಳರ ಜಬರದಸ್ತನ್ನು ಸಾರುವಂತಿತ್ತು (ದೀಪಹಂ. ೩೩); ಅವರ ಮನೆಯ ಜಗಲಿಯ ದೊಡ್ಡ ದೊಡ್ಡ ಮುಂಡಿಗೆಗಳೇ ಚಿತ್ರಕರ್ಮದಲ್ಲಿ ಆ ಕಲ್ಲುಕಂಭಗಳಿಗಿಂತಲೂ ಮೇಲುಮಟ್ಟದ್ದಾಗಿದ್ದುವು (ಮರಿಪ. ೩೦೬). ೪. (ಕುದುರೆಗಳನ್ನು ಕಟ್ಟುವ) ಮರದ ಗೂಟ : "ಗೂಂಟಂ ಶಂಕುವಾರಯ್ಕೆ ಮುಂಡಿಗೆ ಸ್ಥಾಣುವೆಂದನಿಸಿಕ್ಕು" (ಕುಂಗರಾ. ೩೯-೦೩); ಖುರಮಣಿಕೆಯೊಳ್ ಕಾಲನಿಕ್ಕಿ ಮುಂದುಳದ ಮುಂಡಿಗೆಯಂ ಮಲಂಗಿ ಕೌತುಕಂಬೆರಸು ಕೇಯೂರಕನನೀತೆಂಪಂ (ಕಾದಂಅ. ೦೯೬); ಕೃಶಾನು ಸುತ್ತಿ ಸುಡೆ ಮಂದುರಮಂ . . . ಮುಂಡಿಗೆಯಂ ಮುಂಜಿದಾಗಳೇಂ ಬಿಸಿಲ್ಗುದುರೆಗಳೆಂದದಿಂ ಕುದುರೆಗಳ್ ಪಲವುಂ ದೆಸೆಬಿದ್ದು ಮಾಡುವೋ (ಕಂಠಮಪ. ೦೦-೦೩೯); ಬಳ್ಗೆಚ್ಚಿನ ಮುಂಡಿಗೆಯಂ ಮ್ರುಜಿದು ವಿಸಟಂಬರಿವ ಸೂಕಳಾಶ್ವಂಗಳನಂಕಣಿಯಂ ಬಗೆಯದೆ ಮುಂಕೊಂಡು ಶಂಕಿಸದೇಜಿ (ರಾಜಶೇ. ೬-೦೦ ವ). [< ಸಂ. ಮುಂಡಕ]

**ಮುಂಡಿಗೆ₃**, ಮುಂಡ್ಗೆ, ಮುಂಡು₃, ಮುಡಿಗೆ (ನಾ). ೧. ಸವಾಲು; ಸಮಸ್ಯೆ: ಉತ್ತರಗುಡುವವರಿಗೆ ಇಕ್ಕುವೆ ಮುಂಡಿಗೆಯ ಎತ್ತುವರುಳ್ಳರೆ ತೋಚಿರ್ಕೈ (ದೇದಾಶ. ೩-೫); ಜಗಕ್ಕೆ ಇಕ್ಕಿದೆ ಮುಂಡಿಗೆಯನೆತ್ತಿಕೊಳ್ಳಿ, ಕೂಡಲ ಸಂಗಮ್ಯನೊಬ್ಬನೇ ದೈವವೆಂದು (ಬಸವ. ೭೯೬); ಇಕ್ಕಿದೆನು ಮುಂಡಿಗೆಯ ದಿಕ್ಕು ದಿಕ್ಕಿನೊಳಗೆ ಅಖಂಡೇಶ್ವರನೆಂಬ ಮುಕ್ಕಣ್ಣ ಪರಶಿವನೇ ಘನಘನವೆಂದು (ಅಖಂಡೇ. ೦೨೯-೬೯). ೨. "ವಿಶೇಷಾತ್ಮಾನುಭವವನ್ನು ವಿಶಿಷ್ಟವಾದ ಒಗಟಿದ ರೀತಿಯಲ್ಲಿ ಹೇಳುವದು" (ಸಾಹಿ. iii. ೬೫೩): ಶರೀಫರ ಕಾವ್ಯಗಳಿಗೆಯಲ್ಲಿ ಇಂತಹ ಬಿಡಿಸಲಾರದ ಮುಂಡಿಗೆಗಳು ಸಿಗುವವು (ಶರೀಶ. ೬೫); ಕನಕನ ಮುಂಡಿಗೆಯೆಂಬ ಹೆಸರಿನ ಹಾಡುಗಳು ಬೆಡಗಿನ ವಚನಗಳಂತೆ ಸಂಕೇತ ಬಲ್ಲವರಿಗೆ ಗಮ್ಯ, ಉಳಿದವರಿಗೆ ಗೂಢವಾಗಿ ಬಿಡುತ್ತವೆ (ಕಸಾಶ. ೨೯೨). ೩. ತಲೆಯ ಮೇಲೆ ಧರಿಸುವ ವಸ್ತ್ರ; ಶಿರೋವಸ್ತ್ರ: ಮುಂಡಿಗೆ ಮತ್ತು ಮುಂಡಿಗೆಗಳು ಮೊದಲು ಶಿರೋವಸ್ತ್ರವನ್ನು ಸೂಚಿಸುತ್ತಿದ್ದು ಕ್ರಮೇಣ 'ಸವಾಲು' ಎಂಬ ಅರ್ಥವನ್ನು ಪಡೆದುವು (ಸಂಕೋಶ. ೦೦೪). **ಮುಂಡಿ₂**: ೨. ಕೆಲವು ಸಿದ್ಧಾಂತಗಳನ್ನು 'ಮುಂಡಿ'ಗಳಂತೆ ಅರ್ಥವರಿಯದೆ ಜೀವನದಲ್ಲಿ ಸ್ವೀಕರಿಸಿ ಅದರಂತೆ ನಡೆಯುವವರೂ . . . ಮೂರ್ಖರೆಂದು ಆಗ ನಾವು ಸಪ್ರಮಾಣವಾಗಿ ಸಿದ್ಧಪಡಿಸಿದೆವು (ಜನಪ. vii, ಕೃಶಾವಿ). ೪. (?) : ಮುಂಡಿಗೆ ಮುಂಡಿ ಕಟ್ಟಿಕೊಂಡ ರುಂಡರಿಗೇಕೆ ಗುರುಪರಭಕ್ತಿ (ದೇದಾವ. ೩೬-೭೦). **ಮುಂಡು₃**: ೪. ಮಿಂಡಾಟವಾಗಿ ಮೆಚ್ಚಿದ ರಂಡಯರೊಳ್ಕೆರೆದು ವಿಕೃತಿವೇಷದೆ ಜಗಮಂ ಕಂಡ ಜ್ಞಾನಿಯೆನೆಂಬನ ಮುಂಡಿಂಗೊಳಗಾಗದಿಪ್ಪವಂ ಸತ್ಪುರುಷಂ (ಶಬುಶ. ೦೪-೬೬). **ಮುಡಿಗೆ**: ೧. ಇಕ್ಕಿದಂ ಶ್ರುತಿನಿಚಯ ಮುಡಿಗೆಯ ನಿಕ್ಕಿದಂ ಶಾಸ್ತ್ರಾದಿ ಮುಡಿಗೆಯನಿಕ್ಕಿದಂ ಶೈವಾಗಮಾದಿಯ ವಾಕ್ಯಮುಡಿಗೆಯಿಂದಂ ಚಿಕ್ಕನೆತ್ತುವೊ ನಿನ್ನ ದೈವಂ (ಶಾಪಂತ. ೯-೦೨೨); ಮುಡಿಗೆಯಂ ಹಾಯ್ಕಿದೇಂ ಬಂದಂಜದೆನ್ನೊಳಗೆ ನುಡಿಯಲಪೂರ್ವರುಂಟೆ (ಪೀಕೃಕ. ೪-೦೦-೯); ಮುಂಗುರಿರಾಯನೊಡ್ಡಿದ ಮುಡಿಗೆ ಬಾದುರಖಾನನ ಕೊರಳಿಗುರುಳಾಗುತ್ತದೆ (ಸಂಪಾಂಡ. ೫೭). ೨. ಮುಡಿಗೆಯಿದು ಮುಕ್ತಿಕಾರಣ ಭಕ್ತಿಯೆಂಬುದಕೆ ಮುಡಿಗೆಯಿದು ಶಿವಭಕ್ತರೇ ಶ್ರೇಷ್ಠರೆಂಬುದಕೆ (ಶಾಶಿಶ. ೦೪-೧೦೮). ೩. ಮುಂಡಿಗೆ ಮತ್ತು ಮುಡಿಗೆಗಳೆರಡೂ ಸಮಾನಾರ್ಥಕಗಳು. ಎರಡಕ್ಕೂ ಟೊಪ್ಪಿಗೆ ಅಥವಾ ತಲೆಯ ಮೇಲಿನ ಉಡುಪು ಎಂಬುದು ಮೂಲಾರ್ಥ (ಸಂಕೋಶ. ೦೦೩); ಈ ಮುಡಿಗೆಯ ಅಷ್ಟಕ ಮುಗಿಯುತ್ತಲೆ ಕೆಳಗೆ ಬಿದ್ದಿದ್ದ ಮುಡಿಗೆ ಹರಿಹರನ ಶಿರಸ್ಸನ್ನು ಅಲಂಕರಿಸಿತಂತೆ (ಶರಶ. ೫೪೭).

**ಮುಂಡಿಗೆಯಿಕ್ಕು**, ಮುಡಿಗಿಕ್ಕು, ಮುಡಿಗೆಯಿಕ್ಕು = ಸವಾಲು ಹಾಕು; ಸಮಸ್ಯೆಯನ್ನು ಒಡ್ಡು: ಭೂಪಾಲಮಸ್ತಕದ ಮಕುಟವನು ಉತ್ತಮ ತೆಗೆದಿಟ್ಟ ಭಾವ ಇತ್ತುದು ಕಣ್ಗೆ ತನ್ನವೊಲಾರಿಲ್ಲೆಂದೆತ್ತಿ ಮುಂಡಿಗೆಯಿಕ್ಕಿದಂತೆ (ಅಪಂತ. ೪-೩೫); ಅಂತು ವಿಜಯನಶ್ವಗ್ರೀವನ ಮಗನಪ್ಪ ವಿಪುಳಕಂಠನು ತನ್ನವಾರ್ಯವೀರ್ಯಕ್ಕೆ ಮುಡಿಗಿಕ್ಕುವಂತಿಕ್ಕ (ಶಾಂತಿಪು. ೫-೫೫ ವ); ತಡವೇಂ ಪೂಣ್ಕೆಗೆ ದಿವ್ಯಂಬಿಡಿವೆಂ ರುಕ್ಮಿಣಿಯೊಳಲ್ಲದಿಂ ಹರಿ ಮಜಿಪಂ ಗಡ ಸತ್ಯಭಾಮೆಗೆಜಗಂ ಮುಡಿಗಿಕ್ಕಿದನಾರ್ಪರೆತ್ತಿಕೊಳ್ಳಂ ಸಭೆಯೊಳ್ (ಜಗಿಪು. ೦೨-೭೪); ಮುಂದೆ ಶಿಸುಳಿಯಂ ಗೆಲ್ವುದರ್ಕೆ ಮುಡಿಗಿಕ್ಕುವಂತೆ ನಿಡುಗೈಗಳಂ ಮುಡಿಗಿಕ್ಕಿ ನಡೆದು (ಶಬ್ದಸಾ. ೨೩೨); ಕಾವನೊಡ್ಡೋಲಗದೊಳ್ ಮುಡಿಗೆಯನಿಕ್ಕಿಯುಂ ಕೈಯನೆತ್ತಿ ಪೊಗಳ್ದಂ ತಣಿಯನೆ ಮಧುಸೃಪಂ ಮಲ್ಲಿಗೆಯಂ (ಅದಿಪು. ೦೦-೦೦೫); ಸುದತಿಗೆ ಪೆಜತೊರ್ವಳ್ ಹೇಮದಾಮಕಮನೀಯಚಂಚಚ್ಚಾಮರಮಂ ಮುದದಿಂದ ಮಿಕ್ಕಿದಳ್ ಪರ್ಚಿಸಿಮೊಸಗೆಗಮಯವದೆ ಮುಡಿಗೆಯಿಕ್ಕುವ ತೆಜದಿಂ (ಸುಕುಶಾ. ೦೦-೦೬). **ಮುಂಡಿಗೆ ಹಾಕು** = ಮುಂಡಿಗೆಯಿಕ್ಕು: ಪರದೈವವೇನೆನೆ ಭೂಪನ ಜೀವನ ಪರಮಗುರುವಾವರೆ ಎನ್ನ ನುಡಿಗಳು ನಿಲ್ಲಲೆಂದು ಶರಣನಿಗೋಸುಗ ಮುಂಡಿಗೆ ಹಾಕಿದರು (ಬೋಸ್ವದೀ. ೩-೨).

[?]

**ಮುಂಡಿಗೆ₄**, ಮುಂಡಂಗಿ, ಮುಂಡುಗ (ನಾ). ಕೇದಗೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ: ಮುಂಡಿಗೆ ಒಲಿಯ ಚಾಪೆ, ತಲೆದಿಂಬು, ಜಮಖಾನೆ ಜಗುಲಿಗೆ ತಂದಿಟ್ಟರು (ಶಾಸಿ. ೦೭). **ಮುಂಡಂಗಿ**: ಹಯನಿಕರದ ಕಜ್ಜಗೆ . . . ಮುಂಡಂಗಿಯ ಮಸಿಯೊಡನಿರದೆಳ್ಗೆಣ್ಣೆಯನೆಚಿ ತುಜಿಯಿನಿಸುವಿಲ್ಲದಂತಿರೆ ಪೋಕಂ (ಲೋಕೋಶ. ೯-೨೯೦). **ಮುಂಡುಗ**: ಗಡಿ ಬೇಲಿಯ ಮುಂಡುಗದ ಓಡಲಿನಲ್ಲಿ ಕಣ್ಮರೆಯಾಗಿದ್ದ ಕಾಲುದಾರಿಯ ಸಮೇತ ನುಣ್ಪನ ಬೂದುಬಣ್ಣದ ರೇಖೆ . . . ಪ್ರಧಾನವಾಗಿತ್ತು (ಮಲೆಪ. ೪೩): ಮುಂಡುಗ, ಬೆತ್ತ ಜಂಜರಗಿ, ಮುಕ್ಕಡಕ ಮುಂತಾದ ಗಿಡುಬಳ್ಳಿ ಪೊದೆಗಳಿದ್ದವು (ಹುಜಹಂ. ೨). [<ಸಂ. ಮುಂಡಿಕಾ./ತಮಿ. ಮಣ್ಟಕಮ್; ತುಳು. ಮುಂಡಗೆ, ಮುಂಡಿಗೆ, ಮುಂಡೆಯಿ; ಕೊಡ. ಮುಂಡೆ]

**ಮುಂಡಿತ** (ಗು). ೧. ಕ್ಷೌರಮಾಡಿದ; ಬೋಳಿಸಿದ: ನಿನ್ನೊಡನೆ ಹುತವಹನ ಹೊಗುವೆವು ಮನ್ನಣೆಯ ಮಾತಲ್ಲ ನಿನ್ನಿಂ ಮುನ್ನ ಮುಂಡಿತ ಶಿರವಲೆಸುವೆವು ತೀರ್ಥಯಾತ್ರೆಯಲಿ (ಕುವ್ಯಾಭಾ. ೨೦-೫೦). ೨. ಕತ್ತರಿಸಿ ಹಾಕಿದ. ೩. ಕೂದಲು ಬೆಳೆಯದ; ಬೋಳಾದ. ೪. ರೆಂಬೆಗಳನ್ನು ಕಡಿದ.-ಸವರಿದ. (ನಾ). ೫. ತಲೆಯನ್ನು ಬೋಳಿಸಿಕೊಂಡವನು: ಮುಂಡನ ಮಾಡಿಸಿಕೊಂಡವನು: ಮುನಿಯಾಗಿ ಮುಂಡಿತನಾಗಿರ್ದಾದೊಡಂ ಸಂಜೆಸಂಜೆಯೊಳೋರೊಂದು ಮನೆಗಳಲ್ಲಿ ಭಿಕ್ಷೆಯಂ ತಿರಿದುಂಡಾದೊಡಮೀ ದೇಹಮಂ ತೊಲಗಿಸಿ ಬಿಡುವೆನು (ಶಾರಶಾಂ. ೪೦). ೬. ತಲೆಯ ಮೇಲೆ ಕೂದಲು ಬೆಳೆಯದವನು; ಬೊಕ್ಕತಲೆಯವನು: "ಮುಂಡಃ, ಮುಂಡಿತಃ – ೨ ತಲೇ ಮೇಲೆ ಕೂದಲು ಬೆಳೆಯದ ಬೋಳು ತಲೆಯವನು" (ಸಿದ್ಧಾಂತಿ. ೦೬೨). [ಸಂ.]

**ಮುಂಡಿಸು**, ಮುಂಡಿಸು₁ (ಕ್ರಿ). ೧. ಕತ್ತರಿಸಿಹೋಗು; ತುಂಡಾಗು: ತೊಡೆಗಳು ಮುಱಿದು ಬಿಡದೆ ಕೈಕಾಲು ಮುಂಡಿಸಿ ರಿಪುಬಲ ನೆಱೆ ಮಡಿದುದು ರಣಭೂಮಿಯೊಳಗೆ (ಕಂಶಿ. ೩-೬೪). **ಮುಂಡಿಸು₁**: ೨. ಮೊಂಡತನಮಾಡು; ಹಟಹಿಡಿ: ಕೆಲಕೆ ಚಿಮ್ಮುವ ಮುಂಡಿಸಿ ನೆಗೆವ ಮುಂಡಿಸಿ ನಿಲ್ವ . . . ಸುಕಳಾಶ್ವಮಂ ಬೇಗದಿಂ ಬೆಂಗೆವಾಯ್ದು (ಗಂಪ. ೨-೧೦೫ ವ). ೩. (ಅಲಂ) ವಿರೋಧಿಸು; ಪ್ರತಿಭಟಿಸು: ಮಹಾಸಾಗರಕೆ ಮೀನಿ ಮುಂಡಿಸಿದವೊಲು . . . ಪರಬಲಾಂತಕ ಭೀಮ ನಿಂದನು ತಱುಬಿ ಪರಬಲವ (ಕುವ್ಯಾಕ. ೦೫-೯); ಬಲವೆರಡಾತ್ರಾದಸುರಾವಳಿ ಸುರಾವಳಿ ಪೂರ್ವಯುಗದಲಿ ಮಲೆತು ಮುಂಡಿಸಿದಂತೆ ತೋಟಿಯ ಘೋಳ ತೀಟೆಯಲಿ (ಕೊರಣಾ. ೯-೦೯-೩೨). [ಮುಂಡು₂ + – ಇಸು₃]

**ಮುಂಡೀಚಲು** (ನಾ). ಒಂದು ಬಗೆಯ ಈಚಲುಮರ: "ಗರ್ಗರಃ– ಕೋಲುಮೀನು, ಕಬ್ಬೋರಿ, ಕಿಱುಯೇಲಕ್ಕಿ. ಮುಂಡೀಚಲು" (ಶಿಪಧಿ. ೪೫). [ಮುಂಡು₂ + ಈಚಲು₁ (< ಈಂಚಲ್)]

**ಮುಂಡು₁**, ಮುಂಡ₁ (ನಾ). ೧. ಸೊಂಟಕ್ಕೆ ಸುತ್ತಿಕೊಳ್ಳುವ ವಸ್ತ್ರವಿಶೇಷ; ದಟ್ಟಿ: ಪೊಳೆವ ಬಚ್ಚಣೆಯ ಹರಿಗೆ ಬಿಚ್ಚುಗತ್ತಿಯ ಹೊಳೆವ ಕಟಿಯ ಮುಂಡುಗಳ ಬಲಗಳ ಮಧ್ಯದೆ ಸರ್ಪಸುಭ್ರಮದೊಳು ಮಳೆಯಾಳ ವರನೀರ ಬಂದ (ಕಂಶಿ. ೨೦-೬೫); ಒಂದೊಂದು ಪ್ರಾಂತದಲ್ಲಿ ಒಂದೊಂದು ಸಂಪ್ರದಾಯವಿದೆಯೆಂದೇ ಹೇಳಬೇಕು . . . ಮಂಗಳೂರಿನ ಮುಂಡು, ಕೊಲ್ಲಾಪುರದ ಪಾವುಡ ಇತ್ಯಾದಿ (ಮುಂಗಾಪು. ೨೩). ೨. ತಲೆಯುಡುಗೆಯಂತೆ ಬಳಸುವ ಚಿಕ್ಕವಸ್ತ್ರ: (+). **ಮುಂಡ₁**: ೧. ನಾಯರರ . . . ಗಂಡಸರೂ ಹೆಂಗಸರೂ ಒಂದೆ ಪ್ರಕಾರವಾಗಿ ಮುಂಡವೆಂಬ ವಸ್ತ್ರವನ್ನು ನಡುವಿಗೆ ಸುತ್ತಿಕೊಳ್ಳುತ್ತಾರೆ (ಕಪಾಗ. ೦೦೫).

ಮುಂಡುಪಂಚೆ = ದಟ್ಟಿವಸ್ತ್ರ : ಮುಂಡುಪಂಚೆ ಸುತ್ತಿದ ಅವನ ರೂಪು ಆಕರ್ಷಕವಾಗಿತ್ತು (ಶಾರಪ್ಪ. ೯೩).

[ದೇ.॥ ತಮಿ. ಮಲ. ಮುಣ್ಡು ; ತುಳು. ಮುಂಡು ; ಕೊಡ. ಮುಂಡ್, ಮುಂಡಿ :. ಕೋತ. ಮುಂಡ್./ಮರಾ. ಮುಂಡೆ]

**ಮುಂಡು₂**, ಮೊಂಟು₂, ಮೊಂಡ, ಮೊಂಡು, ಮೊಣ್ಣ, ಮೊಣ್ಣು (ನಾ). ೧. ರೆಂಬೆಗಳನ್ನು ಕತ್ತರಿಸಿದ ಮರದ ಕಾಂಡ ; ಬೋಳುಮರ: ಹೆಗ್ಗಡೆಯವರು . . . ಕಡಿಸಿದ್ದ ಒಂದು ದೊಡ್ಡ ತೇಗದ ಮರದ ಮುಂಡು ನಿಂತಿದ್ದನ್ನು ನೋಡಿ ಅವರ ಸಂಬಂಧದ ಒಂದು ಕಥೆಯನ್ನೆ ಹೇಳಿದರು (ಮಲೆಮ. ೩೪೦). ೨. ರುಂಡವಿಲ್ಲದ ದೇಹ ; ಮುಂಡ : ತಲೆವೊಂದೆಸೆಯಾಗಿ ಮುಂಡೊಂದೆಸೆಯಾಗಿ ನೀ ಬಿಳ್ದಿರ್ದ ಕಂದನ ಪೋಲ್ವೆಯ ಪುತ್ಥಳಿಯನು ತೋರಿಲು (ಕೃಶಂಜ. ೨-೧೧೩); ೩. ತಲೆ ; ರುಂಡ : ಸಿಡಿಲ ಬಳಗಂಗಳಂ ಬಳಿಸಿಡಿಲ ಚಯಂ ಪೊಯ್ವ ತೆಱದೆ ವಾಹಕ ರಂದಿರ್ಪಡೆಯವರ್ಗಳೊಡನೆ ಪೊಯ್ವರ್ ಕಡಿಖಂಡಂ ದಿಂಡು ಮುಂಡು ಮುರುಳೆ ಪೆಣಂಗಳ್ (ಶೇಖಶೃ. ೧೧-೨೬೧). 'ಮುಂಡುಮುಟುಕ' ಪರಾ. ೪. ತುಂಡು; ಚೂರು : ಅವರಿಗೆ ಜೋಬಿನಲ್ಲಿದ್ದ ಸಿಗರೇಟು ಮುಂಡು ಏಕೋ ಕೈಹಾಕಿದಾಗ ಸಿಕ್ಕಿಬಿಟ್ಟಿತು (ಗಂಶಾ. ೪೧) ; ಹಡಗಿಗೆ ದಾರ ಬಿಗಿಯುತ್ತಿದ್ದ ಸೀನನ ಬಾಯಲ್ಲಿ ಬೀಡಿಯ ಮುಂಡಿತ್ತು (ದೇವಕಂ. ೦೯೦); 'ಮುಂಡುವೋಗು' ಪರಾ. ೫. ಒಂದಾಳು ಎತ್ತರದಷ್ಟು ಆಳತೆ ; ಪುರುಷಪ್ರಮಾಣ : ನಾವು ಯಾನ ಮಾಡಿ ಬಂದ ಭೂಮಧ್ಯ ಸಮುದ್ರದ ಆಳ ಸಾಧಾರಣ ೧.೨೦೦ ರಿಂದ ೧,೪೦೦ ಮುಂಡುಗಳಷ್ಟಾಗ ಬಹುದು (ಕೃವಾಸಿ. ೦೩). ೬. ಮರದ ಕಂಬ. ಸ್ತಂಭ. (ಗು). ೭. ಹಠಮಾರಿಯಾದ ; ಹಿಡಿದ ಪಟ್ಟುಬಿಡದ : 'ಮುಂಡುಕಾಱ' ಪರಾ. ಮೊಂಟು₂ : ೮. ಗಿಡ್ಡಾದುದು ; ಮೋಟಾದುದು : ಮೊಂಟಾಗಿ ಕೈಗಳೆರಡುಂ ಗೆಂಟಾಗಿರೆ ತನಗೆ ಸಿರಿಯುಂ ಕೂಟುಂ ಕಾಲುಂ ಕುಂಟಾಗಿ ನಮೆಯುತಿರ್ಪರ್ ಟೆಂಟಣಿಸಿ ಮಹಾತಪಂಗಳಂ ಕಿಡಿಸಿದವರ್ (ಧರ್ಮಾಮೃ. ೬-೧೫೦). ೯. ಹರಿತವಿಲ್ಲದ : ಮೊಂಡಾದ : ತರ ತರಹದ ಮೊಂಟು ಆಯುಧಪಾಣಿಗಳಾದ ಹಳ್ಳಿಯ ತರುಣರು . . . ತಮ್ಮ ತಮ್ಮ ಕೈಗಳನ್ನು ಬರಿದುಮಾಡಿಕೊಂಡರು (ಕಣಾವ. ೩೨). ಮೊಂಡ: ೭. ಆ ಮೊಂಡ ಹುಡುಗಿ ಯಾರ ಮಾತನ್ನೂ ಕೇಳುವುದಿಲ್ಲ (ರವಿ). ೯. ಮೊಂಡ ಕೊಡಲಿ ರಟ್ಟೆಗೆ ಮೂಲ (ಗಾದೆ). 'ಮೊಂಡಗತ್ತಿ' ಪರಾ. ೧೦. ಯಾವು ದಕ್ಕೂ ಜಗ್ಗದ, – ಸಗ್ಗದ : ಬಡ್ಡಿಯು ತಪ್ಪದೆ ಪ್ರತಿವರ್ಷ ಬರುತ್ತಿದ್ದಿತು. ಅದರಲ್ಲಿಯೂ ಒಬ್ಬೊಬ್ಬ ಮೊಂಡ ಸಾಲಗಾರರಿದ್ದರೆಂದು ಮರೆಯಲಾಗದು (ಜಯಂತ. ೪೨೬). ೧೧. ಹರಿತವಿಲ್ಲದುದು ; ಮೊನಚಿಲ್ಲದುದು : ಬಡ್ಡು : ಈ ಕತ್ತಿಯ ಬಾಯಿ ತುಂಬ ಮೊಂಡ (ರೂಢಿ). ೧೨. ಮೋಟಾದ ಅಂಗಗಳುಳ್ಳವನು ; ಅಂಗವಿಕಲ : ಮೂಕನು ಮೊಂಡ ಲಂಡ ಕಿವುಡಂ ಚಂಡಾಲ ತಾನಾದೊಡಂ . . . ಒಲಿವರ್ ಪೊನ್ನಿತ್ತೊಡಂ ಸೂಳೆಯರ್ (ಸೋಮೇಶ. ೬೦); ಬಾಲವನಕಾಲದಲಿ ವಿಂಡಿಸಿದೆ . . . ಹಂದಿ ಕೋಳಿಗಳು ಬಳಿಸಂದು ಕಿಲಕಿಲನೆ ನಗರೇ ಮೊಂಡನೆಂದು (ಕುಭಾ. ೪೨-೨). ೧೩. ಹಠಮಾರಿತನ ; ಶಠಸ್ವಭಾವ : 'ಮೊಂಡತನ', 'ಮೊಂಡಾಟ' ಪರಾ. ೧೪. (ಆಲಂ) ಪರಿಣಾಮ ವನ್ನು ಕಳೆದುಕೊಂಡುದು ; ಸತ್ವಹೀನ ; ಸಪ್ಪೆ : ಅವರ ತಲೆ ಬೋಳಿಸಿ, ಕೈಗೆ ಕೋಳಗಳನ್ನೂ ಮೈಗೆ ಜೈಲುಬಟ್ಟೆಗಳನ್ನೂ ತೊಡಿಸ ಲಾಯಿತು . . . ಒಟ್ಟಿನಲ್ಲಿ ಅವರ ಬಾಳು ಹರಿತವಾಗುವುದರ ಬದಲು ಮೊಂಡವಾಯಿತು (ಕೃಪರು. ೩೩೦). ಮೊಂಡು : ೧೩. 'ಮೊಂಡು ಗರೆ', 'ಮೊಂಡುತನ' ಪರಾ. ೧೪. ಗಿಡ್ಡಾದ; ಮೋಟಾದ : ಒಂದು ಕಣ್ಣೊಂದು ಕಾಲುಳ್ಳಂಟು ಹಱಗಿವ ಮೊಂಡು [ಶಾಕಾಂ. ಮೊಣ್ಣ]ಬಾಲ (ಸಮ್ಯಕ್. ೨-೭೬); ಮೊಂಡು ಕಸಬರಿಗೆಯನ್ನು ತೆಗೆದಿಟ್ಟಿದ್ದೇನೆ (ದೇವಾಲ. ೦೬೦). ಮೊಣ್ಣ : ೧೨. ಮೂವಣ್ಣದಣ್ಣಗಳನು ಮೊ[ಶಾಕಾ. ಪೆ]ಣ್ಣ ಮಾಡಿಯೆ ಹಿಡಿತಪನು (ತ್ರಿಪುರಾಂ. ೨೨-೧೩). ಮೊಣ್ಣು : ೮. ತಾಗಿದ ಕೈಯ್ಯ ಮೊಣ್ಣಾಗುವಂತೆ ಮಾಡುವುದುಚಿತ್ರಮೇ (ಸಮ್ಯಕ್. ೦೦-೩೩).

ಮೊಂಡುಬೀಳು = ಹಟಮಾಡು ; ಪಟ್ಟುಹಿಡಿ : ಹೀಗಾಗುತ್ತೆ ಅಂತ ನನಗೆ ಗೊತ್ತು. ಹೋಗೊಲ್ಲ ಅಂತ ಮೊಂಡು ಬಿದ್ದೆ (ಶಿವರಾ. ೩೯).

[ದೇ.॥ ತಮಿ. ಮುಣ್ಡು. ಮೊಣ್ಡು. ಮೊಣ್ಣೈ ; ತುಳು. ಮುಂಟು. ಮೋಂಟು; ಗೊಂಡಿ. ಮೊಟ್. ಸಂ. ಮುಂಡ]

**ಮುಂಡು₃** 'ಮುಂಡಿಗೆ₃' ನೋ.

**ಮುಂಡುಕಾಱ** (ನಾ). ಹಿಡಿದ ಪಟ್ಟು ಬಿಡದಿರುವವನು ; ಧಾರ್ಷ್ಟ್ಯವುಳ್ಳ ವನು : ಆಟಗಾಱಂ, ಮುಂಡುಕಾಱಂ, ಅರಮನೆಕಾಱಂ (ಶಬ್ದಾನು. ೧೬೭ ಸೂತ್ರ); ನುಡಿಕಾಱಂ, ಆಟಕಾಱಂ, ಮೋಸಕಾಱಂ, ಮುಂಡುಕಾಱಂ . . . ಮುಂಡು ಇತಿ ಧಾರ್ಷ್ಟ್ಯಂ (ಕನ್ನಡಸು. ೪೨೩ ಸೂತ್ರ).

[ಮುಂಡು₂ + – ಕಾಱ]

**ಮುಂಡುಗ** 'ಮುಂಡಿಗೆ₄' ನೋ.

**ಮುಂಡುಗಳ್ಳಿ** 'ಮುಂಡಗಳ್ಳಿ' ನೋ.

**ಮುಂಡುಮಾಳಿಗೆ** (ನಾ). ಮನೆಯ ಮೇಲ್ಭಾವಣಿಗೆ ಹೊಂದಿಕೊಂಡಿರುವ ಕೋಣೆ ; ಅಟ್ಟದ ಕೋಣೆ : (ಕಿಸಂಗ್ರ. ೬೩). [ಮುಂಡು₂ + ಮಾಳಿಗೆ₁]

**ಮುಂಡುಮುಳಕ** 'ಮುಂಡುಮುಟುಕ' ನೋ.

**ಮುಂಡುಮುಳ್ಳುಗ** 'ಮುಂಡುಮುಟುಕ' ನೋ.

**ಮುಂಡುಮುಟುಕ**, ಮುಂಡುಮುಳಕ, ಮುಂಡುಮುಳ್ಳುಗ (ನಾ). ತಲೆಯನ್ನು ಆಗಾಗ ನೀರಿನಲ್ಲಿ ಮುಳುಗಿಸುವ ಒಂದು ಬಗೆಯ ಜಲಪಕ್ಷಿ ; ಗುಂಡುಮುಳುಕನ ಹಕ್ಕಿ : "ಪ್ಲವ ಎಂದು ಮುಂಡು ಮುಟುಕ ; ನೀರುಗೋಟೆಯೆಂದೂ ಎಂಬರು" (ಶಾರದಾ. ೬). ಮುಂಡು ಮುಳಕ : "ಆತಾಪೀ . . . ಚಿಲ್ಲಃ— ೨ ಮುಂಡುಮುಳಕನ ಹಕ್ಕಿ ಹೆಸರು" (ಸಿದ್ಧಾಂತ. ೧೩೯). ಮುಂಡುಮುಳ್ಳುಗ : ನೀರುಕೋಳಿ ಮುಂಡು ಮುಳ್ಳುಗ ಸಮುದ್ರದ ಕಾಗೆಗಳು ಇವು ಮೊದಲಾದ ಜಲಪಕ್ಷಿಗಳಿಂದಲೂ (ಕೃವಾಸ. ೩೦). [ಮುಂಡು₂ + ಮುಟುಕ]

**ಮುಂಡುವೋಗು** (ಕ್ರಿ). ತುಂಡಾಗು ; ಕತ್ತರಿಸಿಹೋಗು : ಆಗಳಿರ್ವರುವ ಕಡಿತಲೆಕಾಱರಲಗಲಗಿನೊಳ್ ಪಳಂಚೆ . . . ಕುಣಿಲ್ವಾಱುವ ಮುಂಡಮುಂ ಮುಂಡುವೋದ ಕಯ್ಯುಂ ಕಂಡುವೋದ ತೊಡೆಯುಂ ಪಿಸುಟ್ಟಿ ಕಿಟ್ಟೊಪ್ಪಡೆಯುಂ ಕಣ್ವೋದ ಕಣಕಾಲುಂ ದೊಣೆವೋದ ಮೇಗಾಲುಂ . . . ಅಗುರ್ವುವಡೆಯೆ (ಶಂರಾಮಾ. ೦೩-೩೪ ವ).

[ಮುಂಡು₂ + ಪೋಗು₁ (< ಪೋ) ]

**ಮುಂಡೆ₁** (ನಾ). ೧. ಗಂಡನನ್ನು ಕಳೆದುಕೊಂಡು ತಲೆಯನ್ನು ಬೋಳಿಸಿಕೊಂಡ ಹೆಂಗಸು : "ವಿಶ್ವಸ್ತಾ, ವಿಧವಾ–ಈ ೨ ಮುಂಡೆ" (ನಾಚಿರಾ. ೧೬೭) ; ಬಱಗೊಡನೆಣ್ಣೆ ಪಟ್ಟಿ . . . ಗಳಿತಾಶ್ರು ಮುಂಡೆ ಮೂಕೊಱತಿ ವಿಮುಕ್ತಕೇಶಿಯಿದಿರೊಳ್ ಬರೆ ಕಾಣಲುಮಾಗದು (ಲೋಕೋಪ. ೦೨-೦೦); ಕಂಡಿರೆಯಕ್ಕ ವಿಪರೀತವ ನಿಜಮುಂಡೆ ಮುತ್ತೈದೆ ಯಾದಳು ನೋಡಿರೇ (ಅವತಂ. ೨೯೭. ೦೩೦೦); ನಿನ್ನ ಪತಿಯ ಕೊಂದು ನೀ ಮೊದಲಾದಖಿಲವಲ್ಲಭೆಯರ ತಂದು ಮುಂಡೆಯರ ಮಾಡುವರು (ಅಂಶತ. ೦೪-೨೩೧); ಕಳ್ಳನ ಹೆಂಡತಿ ಎಂದಿದ್ದರೂ ಮುಂಡೆ (ಗಾದೆ). ೨. ಜೈನಸಂನ್ಯಾಸಿನಿ; ಕಂತಿ : "ಶ್ರಮಣಾ, ಭಿಕ್ಷುಕೀ, ಮುಂಡಾ–ಈ ೩ ಕಂತಿ" (ಹಲಾಯು. ೪೦-೩೩೩); ಗೊರತಿಯ ಕಂತಿಯ ಕುಂಟಣಿಯರ ಮುಂಡೆಯ . . . ನಾದಿತಿಯರ ಮುಂದಂ ನುಡಿಯಲೀಯಲಾಗದು ವಧುವಂ (ಮಂದಶ. ೬-೨೭). ೩. ನಡತೆಗೆಟ್ಟವಳು; ಜಾರೆ : ಕೆಟ್ಟ

ರ್ದಱುದುಂಬಿಮುಂಡೆಯುರ್ಮನೆಯೊಳಗುಳ್ಳುದಂ ತವಿಸಿ ಗಂಡರಸೇಂ ಕುಱಿಮಾಡಿ ತಿಂದಪರ್ (ಸಮುಕ. ೯-೦೦೩): ಗಂಡನ್ನ ತಾ ಬಿಡುತಿಹಳು ಪರಮಿಂಡನ್ನ ಕೂಡಿ ಲೋಲಾಡುತಿಹಳು. ಮುಂಡೇರು ಹೆಚ್ಚು ಜಗದೊಳು (ಶಿಶಂರ. ೦-೦೯೯-೩).

**ಮುಂಡೆಗಂಡ** = ವಿಧವೆಯ ಪತಿ : ಒಂದು ಬಯ್ಗುಳು : ಸತ್ತ ದನ ದನಕರುಗಳ ಮಾಂಸ ತಿನ್ನುವ ಈ ಮುಂಡೆಗಂಡರು . . . ನಮ್ಮ ಸತ್ವ ಹರಣರಾಗಬೇಕೆ ? (ಹೊಸೂಹ. ೧೯): ಅಯ್ಯೋ ಮುಂಡೇಗಂಡಾ ! ನೀನೂ ನಿಮ್ಮಪ್ಪನಿಗೇ ಅಂತೀಯೇನೋ ! (ರಂಗವ. ೨೨೩). **ಮುಂಡೆಮಗ** = ವಿಧವೆಯ ಪುತ್ರ; ಒಂದು ಬಯ್ಗುಳು : ಮುಂಡೆಮಗನೆ ನಾ ಹೇಳುವನೆಂದು ಬೈಬ್ಯಾಡಿ (ಜವಾಜ. ೦೩೦-೩) : ಎಲಾ, ಮುಂಡೇಮಗನೆ ನಾನು ಈ ವ್ಯಾಪಾರ ಬಿಟ್ಟುಬಿಟ್ಟರೆ ಊಟ ಕೊಡುವುದು ಯಾರು–ನಿನ್ನ ಅಪ್ಪನೋ ? (ಜುಂಗಾಮು. ೪). **ಮುಂಡೇದು** = (ಆಲಂ) ಹೀನವಾದುದು : ಕೀಳಾದುದು : ಅಲ್ಪವಾದುದು : ಮುಂಡೇದು ಈ ನಾಯಿ ದಾರಿಯಲ್ಲೇ ಮಲಗಿದೆ (ಆಡು). **ಮುಂಡೆದೈವ** = (ಆಲಂ) ಕೀಳಾದ ದೈವ; ಕ್ಷುದ್ರದೇವತೆ : ಕಂಡದ್ದು ಬಿಡದು ಮುಂಡೇದೈವ (ಗಾದೆ). [ಸಂ. ಮುಂಡಾ]

**ಮುಂಡೆ₂** (ನಾ). ಮಲ್ಲಯುದ್ಧದ ಒಂದು ವರಸೆ (?) : ತಿರುಣಿ ಕಾಳಾಡೆ ಬಾಹುಗೆಣೆ ಸಂದ ಸುಭಾಹುಡೆ ಮುಂಡೆ ಮುಷ್ಟಿ ಕಮ್ಮರಿ ಮುಹುಡಂ. ಪೋವುಡ ಚಲ್ಲಣವಟ್ಟೆ ಪಟ್ಟೆಕತ್ತರಿಗಳೆನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಶುಚ. ೨೬-೦೯). [ ? ]

**ಮುಂಡೆತನ** (ನಾ). ಗಂಡನಿಲ್ಲದಿರುವಿಕೆ ; ವೈಧವ್ಯ : ಅಂಗವೆಂಬ ಅಂಗನೆಯು ಆತ್ಮನೆಂಬ ಪುರುಷನಪ್ಪ ಮುಂಡೆತನ [ಪಾಠಾಂ. ನು]ವಿಲ್ಲದಿಪ್ಪ ಭೇದವ ತಿಳಿದು ನೋಡಿರಣ್ಣಾ (ಅರವ. ೩೨-೯೪). [ ಮುಂಡೆ₁ + –ತನ ]

**ಮುಂತಳರ್** ' ಮುಂದಳರ್ ' ನೋ.

**ಮುಂತಾಗು₁** ' ಮುಂತು₁ ' ಪರಾ.

**ಮುಂತಾಗು₂** ' ಮುಂತು₂ ' ಪರಾ.

**ಮುಂತಾಸನ** (ನಾ). ಮುಂಭಾಗದಲ್ಲಿರುವ ಆಸನ : ಅಗ್ರಪೀಠ : ದರ್ಶನಸ್ಥರ ಮುಂತಾಸನದಲ್ಲಿ ಕುಳ್ಳಿರಿಸಿಯುವರ್ಗಳ್ . . . ಶ್ರುತವನ್ನು ದೇವತಾಸ್ತುತಿಪಾರಮ್ಯಮನುಸಿರೆ (ಧರ್ಮ. ೬-೨೩). [ಮುಂತು₂ + ಆಸನ]

**ಮುಂತಿಕ್ಕು** ' ಮುಂದಿಕ್ಕು ' ನೋ.

**ಮುಂತಿಡು** ' ಮುಂದಿಡು ' ನೋ.

**ಮುಂತಿರ್** ' ಮುಂದಿರ್ ' ನೋ.

**ಮುಂತಿರಿಸು** ' ಮುಂದಿರಿಸು ' ನೋ.

**ಮುಂತು₁**, ಮುಂದು₁ (ನಾ). ೧. ಮುಂಭಾಗ : ಮುಂದುಗಡೆ : ದುಷ್ಪಾರ್ಶ್ವದ ಮುಂತುಂ ಪಿಂತುಂ. . . ಬೆಸನಿಯ ನುಡಿಯುಂ ನಡೆಯುಂ ಪೊಲ್ಲ (ಧರ್ಮಾಮೃ. ೯-೦೩೨); ತುಕಾರಕ್ಕೆ– ಮುಂದು. ಮುಂತು; ಪಿಂದು. ಪಿಂತು (ಕಮಪ. ೭೨೦ ಪ್ರಯೋ). ೨. ಮೊದಲ ಸ್ಥಾನದಲ್ಲಿರುವಿಕೆ; ಮೊದಲು : ಸಾಮಾನ್ಯಜಗದಾಳ ಮಲಿಯ ತೊತ್ತುಳಿಮುಳಿವ ಯತ್ತಿದ ವೊಸೆಗೆ ಮುನ್ನು ಕಡಿಕಾಳಗಕ್ಕೆ ಪಿನ್ನು (ಎಕ XII. ತಿಪಟೂ. ೦೦೯-೨೩; 1130); ನಾನು ಮುಂತು ನೀನು ಮುಂತು ಕಡಲು ಮೂರು ಮೊರೆವವಿಂತು (ಸೂರ್ಯಾ. ೨೨-೦೦). **ಮುಂದು₁** : ೧. ಆ ಧರಿತ್ರೀನಾಥನತ್ಯಂತ ಹರುಷಾಂತರಂಗನಾಗಿ ಸಿಂಹಾಸನದಿಂದಿೞಿದು ಮುಂದನೇೞಡಿಯಂ ನಡೆದು ಆವರರ್ದ ದೆಸೆಗೆ ಪೊಡೆವಟ್ಟು (ಸುಕುಮಾ: ೬-೯೬ ವ) : ಉರಿಯ ಬಣ್ಣದ ಸೀರೆಯನುಟ್ಟು ಹರಶರಣರೆಲ್ಲರು ಮದುವೆಗೆ ಹೋದರು ನಿಬ್ಬಣಿಗನ ಹಿಂದುಳಿಹಿ ಮದುವೆಯ ಹೞೆ ಮುಂದೊಳಿತ್ತು (ಮೋಕ್ಷಸಾ. ೯೦-೩೭೦); ಕುಮಾರನ ಮುಸುಡ ಮುಂದಕೆ ಬಿದ್ದು ಬದುಕುವುದುಂಟೆ ಭಟನಿಕರ (ಕುಮಾರ. ೬-೯೦). ೨. ಅಹಂಪೂರ್ವಿಕಾ . . . ನಾನು ಮುಂದು ತಾನು ಮುಂದುಯೆಂಬುದಾಗಿ ಮಾಡಲ್ಪಡುವ ಕೆಲಸಕ್ಕೆ ಹೆಸರು (ಚಿಂತಾ. ೨೬೮): ಕಣ್ಣಿಗೆ ಮುಂದು ಕಡಿವಾಣಕ್ಕೆ ಹಿಂದು (ಗಾದೆ). ೩. ಮೊದಲಿನದು ; ಮುಂಚಿನದು : ನಿರ್ಮಲನಾದ ಶಿಷ್ಯನು ಕಾಯ ಜೀವದ ಭ್ರಾಂತುಸೂತಕ ಹಿಂಗಿ ನಿಶ್ಶಂಕನಾದ ಗುರು ಈ ಉಭಯ ಭಾವ ದೊಳಗೆ ಆವುದು ಮುಂದು ಆವುದು ಹಿಂದೆಂದಱಿಯಬಹುದು (ಅಶಾಂ. ೨೦೮-೯೨೬); ನೀರ ಕ್ಷೀರದಂತೆ ನೀನಿಪ್ಪೆಯಾಗಿ ಆವುದು ಮುಂದು ಆವುದು ಹಿಂದು ಎಂದಱಿಯೆನು (ಬಸವಾದೇ. ೩. ೦೩-೦೦). ೪. ಅನಂತರದ ಕಾಲ: ತರುವಾಯದ ಕಾಲ : ನಂಬಿ ಹೋಗದು ದೇವಂ ನುಡಿದ ಮಾತಿಂಗೆ ನಂಬಿಯೆಂಬಾ ನಾಮವಾದುವದು ಮುಂದಿಂಗೆ[ಪಾಠಾಂ. ಮುಂದ್ದಿಂಗೆ] (ನಂಬಿರ. ೦-೮೯); ಶಿಶುವಿವನು . . . ಎಂದುಳುಹಿದೊಡೆ ರಕ್ಕಸನಹನು ಮುಂದಕೆ ತನಗವನು (ಕುಮಾರ. ೬-೨೯); ಈ ಚಂದ್ರಹಾಸಂ. . . ನಮಗೆ ಮುಂದಕೆ ಸರ್ವಥಾಮಿತ್ರನಪ್ಪಂ (ಜೈಮಿ. ೩೦-೨೩) : ಮುಂದಿನ ಮುಕ್ತಿಗಿಂತ ಈಗಿನ ಭುಕ್ತಿ ಲೇಸು (ಗಾದೆ). ೫. ಏಳಿಗೆ : ಉತ್ತರೋತ್ತರ : ಭವಿಷ್ಯ : ಹಿಂದಿಲ್ಲಾ ಸ್ವಾಮಿ ಮುಂದಿಲ್ಲಾ ಗೋವಿಂದ ನೀನಲ್ಲದೆ ಇಹಪರವಿಲ್ಲ (ಪುರಂದ. ೦-೨೯ ಪಲ್ಲ) : ಮುಂದನಱಿಯದ ಗುರುವು ಹಿಂದನಱಿಯದ ಶಿಷ್ಯ ಸಂದೆರಡುವರ್ಗವಱಿಯದಿರ್ದುಪದೇಶ ಕೊಂದು ಕೊಂಡಂತೆ (ಸರ್ವಜ್ಞ. ೯೯); ಕೂಸಿನಾ ಮುಂದು ಎಣಿಸದೆ, ನಿಂದೆ ಗಣಿಸದೆ, ಹಿಂದೆ ಬಂದಳು ಪಾಪಿಯೂ (ಕುಂತಿ. ೯೦ ೩೩).

**ಮುಂತಣ್**, **ಮುಂದಣ್** = ೧. ಎದುರು ; ಮುಂಭಾಗ; ಸಮ್ಮುಖ : ಮತ್ತೊರ್ವಂ ತನಗೆರಡಱಿಯದೊಲ್ದ ನಲ್ಲಳನೇತಱಿಕೊಳಪ್ಪೊಡಮೇವಮಂ ಮಾಡದೆ ಬೇಟಮಂ ಸಲಿಸುವುದರ್ಕೆ ಸುತಸಂಬಟ್ಟು ಮುಂತಣ್ಗೆ ಕಾಪ ನಿಟ್ಟಂತೆಂದಂ (ಪಂಪಭಾ. ೯-೯೨ ವ); ಎನ್ನ ಮುಂತಣಿಂ ತೊಲಗಿ ಪೋಗು (ಪಂಪಾಪು. ೦೯-೦೩ ವ): ಮಾಣ್ಗುಟಿಂದರ ಮೆಯ್ಮೆಗೆನೆ ಕಣ್ಗಳೆ ಕೋರ್ಬ್ಬಿಸ ತೊಳಗಿ ಬೆಳಗುತ್ತುಂ ಮುಂದಣ್ಗಾಗಿ ನಡೆದು ನೃಪನಂ ಜಾಣ್ಗೊಂಡ ನಿಜ ಪ್ರಗಲ್ಭವಚನದೆ ನುಡಿದಳ್ (ಕಾದಂಕಾ. ೭೩೩); ರೆಷ್ಟೊಂಪಿಸುತ ಮುಂದಣ ಗೊನೆದು ಬಿದ್ದನು ಭೀಮ ಪಾಂಡವಸೇನೆ ಕಳವಳಿಸೆ (ಕುಮಾರ. ೩-೨೬); ಮಂತ್ರಲಕ್ಷಂ ಮಿತವಚನಸಮೇತಂ ವಿವಿಧವಿಳಾಸಮಂ ತಳೆದು ಮುಂದಣ್ಗೆ ಬರೆವರೆ (ಅಜಿತ. ೦೩-೯೩ ವ). ೨. ಅನಂತರದ ಕಾಲ ; ಮುಂದೆ ಬರುವ ಕಾಲ : ಸರಸಿಜಾಸನ ಕೇಳು ಸ್ವದುದು ವದವವಗೆ ನಿನ್ನಿಂದ . . . ನೊಂದಿರಿ ಹಿರಿದು ನೀವದಱಿಂದ ಮುಂದಣಿಗರಿವಥಾಸಮಯಕ್ಕುಪಾಯುವ ಕೇಳಿ ನೀವು (ತೊರವ. ೦-೬-೬೩). **ಮುಂತಣ**, **ಮುಂದಣ**, **ಮುಂದಳ** = ೧. ಮುಂಭಾಗದಲ್ಲಿರುವ ; ಮುಂಬದಿಯ : ಬಲಿವು . . . ಮುಂತಣ ಪಿಂತಣರ್ಕಲಂಗಳ ಭಟರ್ಗಲ್ಲವೆಲ್ಲೆಡೆಯೊಳಂ ನೆರೆಮಾಂತುದುಮಲ್ಲದಾ ಮಹಾಬಲದನಿಬರ್ಗಮಂತನಿಬರಾಗಿಯೆ ತೋಱಿದನಾಜಿರಂಗದೊಳ್ (ಜಗಮ. ೬-೩೮) ; ಮುಂತಣ ವಿಪಿನಾಂತರದಲ್ಲಿ ವೀರವಸಂತಪಾದಪನಿಚಯವನು ಸಂತಸಗೊನರಿಸುತಿರುತಿರೆ ರತಿ ತನ್ನ ಕಾಂತನ ಬಿವಕೆ ನೋಡಿದಳು (ಮೋಹತ. ೯-೩೨) ; ಮುಂದಣ ಮಾನಸರಂ ಪಡಿಯಱರ್ ತೊಲಗಿಸುತ್ತುಂ ಬರೆ (ವಡ್ಡಾರಾ. ೯೦-೦೨) ; ಸಾಹಸಭೀಮಂ . . . ಪಾರ್ಥನ ಮನೆಯ ಮುಂದಣ ಬಂಡಿಯ ಕೂಟಂ ಕೆಯ್ಕೊಂಡು ನಿಲ್ಪುದಾಂ (ಪಂಪಭಾ. ೩-೨೬ ವ). ೨. ಮುಂದೆ ಬರುವ ; ಮುಂದಿನ : ಇಂತಿದನುಪ್ರಾಸಂ ಪಾದಾಂತ ದೊಳೊಂದಾವುದಾನುಮಿಟ್ಟಕ್ಕರಮಂ ಮುಂತಣ ಪಾದಾಂತಂಗಳೊಳಂ ತಡೆಯದೆ ಪೇೞ್ದೊಡಂತದಂತಪ್ರಾಸಂ (ಛಂದೋ. ೨-೯೩) ; ಪೆಱಗಣ ಮುಂತಣ ರಿತುಗಳ ತೆಱಿಯಂ ನಿಶ್ಚಯಿಸಿ ಮಧುಕರಂ ಮಧುಕರಮಂ ತೆಱಲಾಜಿದ ಪುಲ್ಲಿಗೆಯೊಳ್ ಸೆಱಿಗೆಯ್ದಂತಿರ್ದುದೊಂದು ಪೊಮಳಫಲಮಂ (ಆದಿಪು. ೩-೦೯) ; ಮುಂತಣ ಕಥೆಯ ವಿಸ್ತರವ ನಿರೂಪಿಸು (ಕಾಂತೀಶ. ೩-೨) ;

ಮನಂ ಬೆರ್ಚದೆ ಸಿಂಹಪೋತಕಮನೋಪಲುಮಾಕೆಯು ದೋಹಳಂ ಕರಂ ಪೆರ್ಚಿದುದಾ ಗುಣಾರ್ಣವನ ಮುಂದಣ ಬೀರಮನಂ[ದೆ] ತೋರ್ಪವೊಲ್ (ಪಂಪಭಾ. ೧-೧೪೨); ಮಗಧಾವನೀಶ್ವರಂ . . . ಅರ್ತಿಯಿಂ ಗೌತಮರಂ ಮುಂದಣ ನಿಸ್ಸಂಕೆಯು ಕಥೆಯುಂ ಬೆಸಗೊಳ್ವುದುಂ (ಧರ್ಮಾಮೃ. ೨-೪); ಮುಂದಣ ಸಂಕ್ರಾಂತಿಯ ದಿನ ಬಂದಿತು. ಪೂಜೆ ಮಾತ್ರ ಎಣಿಸಿದಂತೆ ನಡೆಯಲಿಲ್ಲ (ಕುಡಿಕೊ. ೭); ಹಿಂದಳ ಸುಖ ಮುಂದಳ ದುಃಖಂಗಳು ಮುಂದಳ ಸುಖ ಹಿಂದಳ ದುಃಖಗಳು ಇವ ತಾ ಸಂಧಿಸಿ ಅನುಭವಿಸಿದಲ್ಲಿ ಸಂಚಿತ ಪ್ರಾರಬ್ಧ ಆಗಾಮಿಗಳಿಂದು ಅಲ್ಲಿ ಅಲ್ಲಿ ಸಂಕಲ್ಪಿಸಿ ಕೇಳಲೀತಕ್ಕೆ (ಬಾಪೊಪ್ಮ. ೪. ೩೩೬-೦೩೬೧); ಮುಂದಣಿಂದ ಮುಂದಳ ಕಥೆಯು ಹೇಳುವೆನು (ಯುಪಳ. ೩). ಮುಂತಣಂ = ಮುಂಭಾಗದಲ್ಲಿರುವವನು; ಮುಂದುಗಡೆಯಲ್ಲಿರುವವನು: ಅಣ್ಣುತ್ತಿಪ್ಪ ದಿಗ್ವಾಚಕಂ ಪುಲ್ಲಿಂಗಮಪ್ಪೆಡೆಯೊಳ್ ಅಕಾರಮಂ ಕೈಕೊಳ್ಗುಂ . . . / ಮುಂತಣಂ. ಪಿಂತಣಂ (ಶಮದ. ೨೦೦ ಪ್ರಯೋ). ಮುಂತಾಗಿ, ಮುಂದಾಗಿ = ೧. ಮೊದಲುಗೊಂಡು; ಮೊದಲಾಗಿ: ಶಿವಪಡಗ ಹಾದರಿಗೆ ಬಂಟನೋಲೆಯಕಾರನೆಂದೆನಾದರೆ ನೀ ಮುಂತಾಗಿ ಬಂದ ಭಕ್ತರ ನೀಯೆನ್ನದಿದ್ದರೆ ಅದೇ ದ್ರೋಹ (ಬಸವ. ೭೦೬); ಅಜಾಪತ್ತುಗವುಡು ನಾಜಿಪ್ಪತ್ತುಸ್ಥಾನ ಸಾಸಿರದೇಳುನೂರು ಗವಡ ಗಂಡರು ಮುಂತಾಗಿ ಆ ಕುಸುಗೂರಲು ನೆರದು (ಎಕ. VII. ಶಿಕಮೊ. ೦೪-೦೦; 1309); ಶರಿತ ಮನ ಭಾವಗಳ ಗುರುಲಿಂಗಜಂಗಮಕೆ ಶರಣ ಮುಂತಾಗಿ ಅರ್ಪಿಸಿದ ಶರಣ ತಾ ಮರಳಿ ಜನಿಸುವನೆ (ಸರ್ವಜ್ಞ. ೦೪೩). ೨. ಮುಂಚಿತವಾಗಿ: ಮೊದಲೇ: ಪೂರ್ವಭಾವಿಯಾಗಿ: ಈ ಸ್ಪರ್ಶಾಂಗಗಳಿಂದ ಕೀಟ ಸನ್ನಿವೇಶವನ್ನು ಮುಂದಾಗಿ ಗ್ರಹಿಸುತ್ತದೆ (ಕೀಟಬಿ. ೦೩). ಮುಂತಾಗು₁, ಮುಂದಾಗು₁ = ೧. ಅಭಿಮುಖವಾಗು; ಎದುರಾಗು: ಆ ಊರ ಪೂರ್ವ್ವಸೀಮಾಪ್ರಮಾಣಂ ತೆಂಕ ಮುಂತಾಗಿ ಪಶ್ಚಿಮದ ದೇವಗಿರಿ ಆ ಊರ ದಕ್ಷಿಣಸೀಮಾಪ್ರಮಾಣ (ಸೌಇಇ. IX-i. ೩೨೬-೦೦೨; 1206); ಮೂಡಣ ಸೀಮೆ ಅರಕೆಱೆಯಿಂ ಪಡುವಲು ತೆಂಕ ಮುನ್ನಾಗಿ ನಡೆದ ಪೂರ್ವ್ವದ ಹಿರಿಯಿಂ (ಎಕ. VII. ಶಿಕಾ. ೩೨೩-೨೦; 1046). ೨. ಪ್ರಮುಖವಾಗು; ಪ್ರಧಾನವಾಗು: ಲಿಂಗ ಮುಂತಾಗಿ ಮನ ಹಿಂತಾಗಿ ಅಂಗಭಾವವಳಿದು ಅರ್ಪಿಸಿಕೊಳಬಲ್ಲ ಪ್ರಸಾದಿಯು ಪರಮ ಪರಿಣಾಮವೆ ಪ್ರಸಾದ (ಆದಪ. ೨೩-೭೩); ಆಚಾರಂ ನಿಜವಾಗಿ ಸಮ್ಯಗ್ಗುಣಗಣಂ ಮುಂತಾಗಿ ಮಂತ್ರಕ್ರಿಯಾಲೋಚಂ ನಿರ್ವ್ಯಭಿಚಾರಮಾಗೆ ಜಿನರಾಜಪ್ರಾಜ್ಯಸಾಮ್ರಾಜ್ಯದೊಳ್ . . . ನಮಗೀವರಕ್ಕೆ ನಯನಿಕ್ಷೇಪಪ್ರಮಾಣಂಗಳಂ (ಅರ್ಥಪೇ. ೦-೪); ನೀತಿ ಮುಂದಾಯಿತು ಜಾತಿ ಬೆನ್ನಿರಿಯಿತು ನೀತಿಗೆ ಬಂದಿತು ಸಾವು (ಜಂತಾಕ. ೨೦೩-೨). ೩. ಮುಂದುವರಿ; ಮುಂದೆಬರು: ತೊಡಗು: ಜಯಸೇನನನ್ನು ನೋಡಿ, ಆ ಮಾಯಾಸೈನಿಕರು ಈಟಿ ಭರ್ಚಿ ಖಡ್ಗಗಳನ್ನು ಹಿಡಿದು ಆವನೊಡನೆ ಯುದ್ಧ ಮಾಡಲು ಮುಂದಾದರು (ಮಜಿಸ. ೬೩); ಆ ಊರಲ್ಲಿ ಎಲ್ಲಾ ಕೆಲಸಗಳಿಗೂ ಅವರೇ ಮುಂದಾಗುವವರು (ದೇವೀಪ. ೨೭). ಮುಂತಾದ = (ಅನೇಕ ವ್ಯಕ್ತಿಗಳ ಹೆಸರುಗಳು, ವಸ್ತುಗಳು ಅಥವಾ ವಿಷಯಗಳನ್ನು ಕುರಿತು ಹೇಳುವ ಸಂದರ್ಭದಲ್ಲಿ ಒಂದೆರಡನ್ನು ಸೂಚಿಸಿದ ನಂತರ ಹೇಳುವಲ್ಲಿ) ಇವೇ ಮೊದಲಾದ; ಇತ್ಯಾದಿ: ಬಸದೊಳು ಹಿಮವೇಬ ಚೋರ ವೈದ್ಯೋಜ ಪಾದಪಲಕ್ಷ್ಮಿ ಬೆದಜ ಸೂಜಿಗೆಟ್ಟಂದದೆ ಪರಳ್ಗಾಯಿ ಮುಂತಾದ ತಾಜಿಕಿ ನೆಲಸುದುಜಿದುವು (ಪೋಹಕ. ೪-೯೩); ಅಂಕುಶಖಾನ ಮುಂತಾದ ಖಾನರುಗಳ ಶಂಕೆಯಿಲ್ಲದೆ ಕೂಡಿ ಕೊಟ್ಟು ಮುಂಕೊಂಡು ಪಾತ್ಸಾಹ್ಯವು ರಣಧೂಳಿಖಾನನ ಬೆಂಕದೆ ಬೀಳ್ಕೊಟ್ಟನಾಗ (ಕಂಪಿ. ೦೦-೯). ಮುಂದಕೆತರು, ಮುಂದಕ್ಕೆತರು = ಅಭಿವೃದ್ಧಿಗೆ ತರು: ಇಡ್ಡೊಬ್ಬ ಮಗನನ್ನು . . . ಮುಂದಕೆ ತರುವೆನೆಂದಕ್ಕ ಸಂಕಲ್ಪಿಸಿ ನಿಂತರು (ಜಂಜಾಕ. ೩೮-೯೩); ಅಪರು ತಂದು ಪ್ರಮಾಣಿಸಿ ಈ ಸಂಸ್ಥೆಯನ್ನು ಮುಂದಕ್ಕೆ ತಂದರು (ರೂಢಿ). ಮುಂದಕ್ಕೆಬರು = ಅಭಿವೃದ್ಧಿಗೆ ಬರು; ಏಳಿಗೆ ಹೊಂದು: ಮಕ್ಕಳು ಚೆನ್ನಾಗಿ ಓದಿ ಮುಂದಕ್ಕೆ ಬರಬೇಕು (ರೂಢಿ). ಮುಂದಕ್ಕೆಹಾಕು = ೧. ಮುಂಭಾಗಕ್ಕೆ ಹಾಕು: ಮುಂದುಗಡೆಯಲ್ಲಿಡು: ಅವನು ಆಟದ ಸಾಮಾನುಗಳನ್ನು ತಂದು ಮಗುವಿನ ಮುಂದಕ್ಕೆ ಹಾಕಿದನು (ರೂಢಿ). ೨. (ಯಾವುದೇ ವಿಚಾರ ಅಥವಾ ಕಾರ್ಯವನ್ನು) ಅನಂತರ ನಡೆಸುವುದಕ್ಕಾಗಿ ಸದ್ಯಕ್ಕೆ ನಿಲ್ಲಿಸು; ಮುಂದೂಡು: ಅನಿವಾರ್ಯ ಕಾರಣದಿಂದ ಆತ ಊರಿಗೆ ಹೋಗುವುದನ್ನು ಮುಂದಕ್ಕೆ ಹಾಕಿದನು (ರೂಢಿ). ಮುಂದಲು = ೧. ಮುಂಭಾಗ; ಮುಂದುಗಡೆ: ಅವನು ನಮ್ಮ ಮನೆಯ ಮುಂದಲಿಂದ ಹಾದುಹೋದನು (ರೂಢಿ). ೨. ಮುಂದಿನದು: ತರುವಾಯದ್ದು: ಮುಂದಲ ಮಾತನ್ನು ಈಗ ತೆಗೆಯಬೇಡ (ರೂಢಿ). ಮುಂದಿನವರು = ಮುಂದಿನ ಕಾಲಕ್ಕೆ ಸೇರಿದವರು: ಮುಂದೆ ಬರುವ ಜನಾಂಗ: ನಾವು ಮಾಡುವ ಕೆಲಸವು ಇಂದಿನವರು ಮಾತ್ರವಲ್ಲದೆ ಮುಂದಿನವರೂ ಮೆಚ್ಚುವಂತಿರಬೇಕು (ರೂಢಿ).

[<ಮುನ್₁./ತಮಿ. ಮುನ್ತು; ಮಲ. ಮುನ್ತಿ; ತೆಲು. ಮುಂದು; ಕೋತ. ಮುಂದ್]

**ಮುಂತು₂, ಮುಂದು₂** (ಅ). ೧. ಮುಂದುಗಡೆಯಲ್ಲಿ: ಮುಂಭಾಗದಲ್ಲಿ: ಪೆಜಗಸಿದಾಗಿ ಮುಂತಗಲಿತಪ್ಪುದಜಿಂದೆ . . . ಭೋಗದೆಸಳ್ ತುಜುಗಿರದಿಂದೆ ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೭೪೭ ಕೂಪ್ರಕ). ೨. ಎದುರಿನಲ್ಲಿ; ಅಭಿಮುಖವಾಗಿ; ಮುಂದೆ: ನಮ್ಮಂ ಕಾಣಲೆಂದೀಗಳಿಲ್ಲಿಗೆ ಮುಂತೀ ಬರುತಿರ್ಪರೀಕ್ಷಿಸಿನಿಸಂ ಪಂಕೇಜಪತ್ರೇಕ್ಷಣೇ (ಕಾದಂಬ. ೩೭೨); ಕಾಶೀಪುರಾಭಿಮುಖಮಾಗಿ ಗಮಿಸಿ ಮುಂತೆಸೆವ ಶಿವಪುರ ಶಿವಕ್ಷೇತ್ರತತಿಗಳುಮನಂತಸಮಪುಣ್ಯವನ ಪುಣ್ಯನದಿಗಳುಮನೋರಂತೀಕ್ಷಿಸುತಂ (ಶಬ್ರಾ. ೦೩-೨೬). ೩. ಪ್ರಾರಂಭದಲ್ಲಿ: ಪ್ರಥಮತಃ: ಧರ್ಮೋಪದೇಶಜ್ಞರಂ ಮುಂತಾ ಗೌತಮರು . . . ಶ್ರೇಣಿಕಂ ಸಂತೋಷಂ ಮಿಗೆ ಕೂರ್ತು ಕೇಳ್ವನಧಿಕಶ್ರೀಗಾರ್ಮಮಂ ಧರ್ಮಮಂ (ಧರ್ಮಾಮೃ. ೦-೭೧). ೪. ಮೊದಲು; ಮುಂಚೆ: ಮಿತ್ರರಂ ವಸ್ತ್ರನಿಕಾಯಾಕಲ್ಪಮಂ ಮುಂತೆನಗೆನುತೆ ಕರಂ ಕಾಂಕ್ಷೆಯಿಂ ಕೈರ್ಮೆಯಿಂದೆ ಕೈನಿತುಂ ಪುಣ್ಯಕ್ಕೆ ಮಾಡಲ್ಕಡದೆ (ರಶ್ನಾಕ. ೮). ೫. ತರುವಾಯ: ಅನಂತರ; ಅಪ್ಪೋಲೆ: ಓಹೋ! ಈಗಳಜಿತೆಂ, ಮುಂತ್ರೇಂ ಮುಂತೇಂ? (ರಾಮಾಶ್ವ. ೦೦-೧೦). ಮುಂದು₂: ೨. ಇತರೇಂದ್ರರ್ ಪರಿಚಾರಕಪ್ರಕೃತಿಯಿಂ ಮುಂದಾಡೆ . . . ಸಂತತಪೋನಂದು ಜನಾರ್ಥಕಂಗೆಸೆದುದೋ ಜನ್ಮಾಭಿಷೇಕೋತ್ಸವಂ (ಆದಿಪು. ೭-೬೦); ಪುರದೊಳಗಣ ಸೂಳೆಯರೆಲ್ಲರುಮಂ ಪಿಡಿದೆಬಿದು ತರಿಸಿ ಯಕ್ಷಿಯ ಮುಂದಾದರದಿಂದಿರುಳೆಲ್ಲಂ ಜಾಗರವಿರಿಸುವಂ (ಧರ್ಮಾಮೃ. ೨-೦೬). ೪. ಮೊದಲು ಬಂದಾನೆ ಪೇಟ್ಬಿವೆಂ ನಯದಿಂಗಲ್ಲಿಗೆ ತಕ್ಕುದೆಲ್ಲಮಂ ಮುನ್ನೀಂ ಪೋಗೆಂದು ಕಟುಪಲ್ಕೆ ಪೋದಂ ಮುಂದಾ ಕೇಯೂರಕಂ ಸುವಿಲುಳಿತಹಾರಂ (ಕಾದಂಬ. ೯೯೦). ೫. ಮುಂದೇಹದನುಜರೊಡನೆ ಕಾದಲು ರಕ್ತ ಬಂದು ವ್ಯೆಸೋಂಕಿ ಕೆಂಪಾಗೆ ಮುಂದನ ತೊಳೆವೊಲು ಪಶ್ಚಿಮಾಂಬುಧಿಗಿನನಂದಿಳಿದನು ತೀವ್ರದಿಂದ (ಕಂಪಿ. ೯-೧೭೩).

**ಮುಂತಾಗು₂, ಮುಂದಾಗು₂** = ೧. ಸಮ್ಮುಖಕ್ಕೆ ಬರು: ಎದುರಾಗಿ ಬರು: ಅಂತು ತುರಗಬಲಮೆಲ್ಲಮಂ ತವಿಸಿ ಪಿಂತಪ್ಪರನಲ್ಲದೆ ಮುಂತಪ್ಪರಂ ಕಾಣದೆ . . . ಪಾಪೇಭಕಂಠೀರವನಾ ವಿಜಯತ್ರಮಮನಾಚಿಸುತ್ತುಮಿರೆ (ಶಾಂತಿಪು. ೪-೦೭ ವ); ಕೊಯ್ಯರ ಅಜಯಪಾಲ್ಲಗೊರವ ಕೊಳಸೂಡಿಪ ಕದವು ಪರಿವಲ್ಲಿ ಮುನ್ನಾಗೆ ಬನ್ದು ತವರಬಣ್ಣ ಆಣಲೆಯರ ಮಗ ನೆಲ್ಮಲ್ಲ ಅಣ್ಣಮ್ಮನ್ ಅಳಿಯೆ ತೋಜುವನಿಕ್ಕಿಸಿ ಸಗ್ಗಯಾದಂ (ಎಕ. IX. ಹೊಸಕೋ. ೦೦೦ ೩; ಸು. ೯೦೦): ಇದೊಂದೆ ಮೆಯ್ಯುಚಿದುದಿನ್ನೆ

ನಗಾವುದೊ ಮೆಚ್ಚಿದೆಪ್ಪಿ ಮುಂದಾದ ವಿರೋಧಿಸಾಧನಮಂ ನಿನ್ನ ಗದಾಶಸ್ತ್ರಯಿಂದುರುಳ್ಚುವೆಂ (ಕುಶಾ. ೧೪-೯೯). ೨. ಮುಂದೆ ಒದಗಿಬರು : ಬಳಿಕ ಸಂಭವಿಸು : ಇತ್ತಲ್ ತಂತುವಾಯಿಕೆಯುಂ ತನಗೆ ಮುಂತಪ್ಪ ನಿರ್ಗಮೋಪಾಯಮಂ ಚಿಂತಿಸಿಕೊಂಡು ಸಂತಸಂಬಟ್ಟು (ಕಂಶಕಂ. ೬೬-೦೯) : ಮುಂತಪ್ಪ ಕಜ್ಜಗಳ್ ಕನಸಿನೊಳು ರಕ್ಕಸರ ಕಾಂತನರಿದು (ವಂಕಾರಾ. ೫-೬ ೩೬೫) : ಮುಂದಪ್ಪ ದುಸ್ವಪ್ನಫಲಂಗಳಂ ಆದಿಭಟ್ಟಾರಕರ್ ಬೆಸಸೆ (ಶಾಪುಂಪು. ೫೪) ; ಇಂದಿದೇಂ ಪೆರ್ಮೆವಾಂಟುವನೆಂದು ಕಯ್ಯಾಗಿ ಮುಂದಪ್ಪುದಂ ನೆರೆಯಲಣಿಯೆಸಲ್ ನಿಂದಂ (ಶಾಂಚರಿ. ೦೩೭-೨೯೫). ೩. ಹಿಂದೆ ಆಗಿಹೋಗಿರು ; ಮುಂದೆ ಸಂಭವಿಸು : ಸುರ ಮನುಜ ಭುಜಗ ಭುವನಾಂತರದೊಳ್ ಮುನ್ನಾದವಿನ್ನುದಿಪ್ಪವವಿನ್ನೀದೊರೆಯ ಜಿನಭವನವಿಲ್ಲೆಂಬರ ಮಾತು ದಿಟಂ (ಎಕ. VII. ಶಿಮೊ. ೯೭-೯೨ : 1113). ೪. ಮುಂಚಿತವಾಗಿ ಬರು : ಪೂರ್ವಭಾವಿಯಾಗಿ ಬರು : ಮುಂದಾಗಿ ದಿನಪನುದಯಾನಂದದೊಳಸ್ತಮಯಸಮಯದೊಳ್ ಸಂಜೆ ಕರಂ ಪಿಂದುಂಟಿದುದಂತೆ ಕೆಲರೊಡವಂದಾದುದಯದೊಳೆ ಸಾರ್ವರೆಡರೊಳಗಲ್ವರೆ (ಕಾವ್ಯಸಾ. ೮೯೯ ಕೂಪ್ರಕ).

[< ಮುಂತು₁. / ತೆಲು. ಮುಂದು ; ನಾಯ್ಕಿ. ಕುರುಖ್. ಮುಂದ್ ; ಪರ್ಜಿ. ಮಲ್ತೊ. ಮುಂದಿ]

**ಮುಂತುಗಾಣ್** 'ಮುಂದುಗಾಣ್' ನೋ.

**ಮುಂತುಗೆಡಿಸು** 'ಮುಂದುಗೆಡಿಸು' ನೋ.

**ಮುಂತುಗೆಡು** 'ಮುಂದುಗೆಡು' ನೋ.

**ಮುಂತುಗೊಳ್** 'ಮುಂದುಗೊಳ್' ನೋ.

**ಮುಂತುದಿ** (ನಾ). ಮುಂಭಾಗದ ತುದಿ : ಅಂಚು : (ಮುಂತುದಿಗಿಂತ) ಹಿಂಭಾಗ ನೀರಿನಲ್ಲಿ ಹೆಚ್ಚಾಗಿ ಮುಳುಗಿ (sterm. ಇಳಿ).

[ಮುಂ₁ (< ಮುನ್₁) + ತುದಿ]

**ಮುಂತೆ₁**. ಮುಂದೆ₁ (ನಾ). ೧. ಮುಂಭಾಗ : ಮುಂದುಗಡೆ : ತುಳಾರಕ್ಕೆ – ಮುಂದು. ಮುಂತು : ಹಿಂದು. ಹಿಂತು : ಮುಂದೆ. ಮುಂತೆ (ಶಬ್ದ. ೦೨೦ ಕೃಪೋ). ೨. (ಅಲಂ) ಮುಂದಿನ ಯೋಚನೆ : ಗಂಡುಬೀರಿಕೆಗೇನು ಚಿಂತೆ ಪ್ರಣಯಕಿಲ್ಲ ಹಿಂತೆ ಮುಂತೆ (ಸ್ವಶ್ನಹೊ. ೩೨೬). **ಮುಂದೆ₁** : ೧. ಮೇಲಿನ 'ಶಮದ' ಪ್ರಯೋಗವನ್ನು ನೋಡಿ. [< ಮುಂತು₁]

**ಮುಂತೆ₂**, ಮುಂದೆ₃ (ಅ). ೧. ಮುಂಭಾಗದಲ್ಲಿ ; ಮುಂದುಗಡೆಯಲ್ಲಿ : ಚಿತ್ರಪಟಮನಾ ಚೈತ್ಯಾಲಯದ ಕೆಲದ ಪಟ್ಟಸಾಲೆಯ ಮುಂತೆ ನೇಱಿ ನಿಜಾಭಿಲಷಿತಕಾರ್ಯಸಿದ್ಧಿಯನೆ ಹಾರುತ್ತಮಿರ್ದಳ್ (ಆದಿಪು. ೩-೯೫ ವ) : ಕಂತುಕವನು ಕೈಗೆ ಬರಲೀಯದೆ ಮೇಲಾಂತು ಕುಟಿಲದೇವತೆಗಳು ಕಾಂತೆಯೀ ಮುಂತರತ್ನ ರತ್ನಾಜಿಯ ಮುಂತೆ ಬೇಗದೊಳರಿಸಿದವು (ಶಬರಶಂ. ೩೧-೦೦೬). ೨. ಎದುರಿಗೆ : ಸಮ್ಮುಖದಲ್ಲಿ : ಸಮಕ್ಷದಲ್ಲಿ : ರೂಢಿಗೆಂದೆಲ್ಲರ ಮುಂದೆಯುಂ ಪೊಗಟಿಪೆಂ ಮರುಳಲ್ಲನೆ (ಸಮಾಚ. ೫-೬೦) : ಅರಸಂ . . . ಲಲಿತಾಂಗನಂ ಬರಿಸಿ ಮುಂತೆ ಕುಳ್ಳಿರಿಸಿ ಬೆಱಿಕ್ಕಮಿಂತೆಂದಂ (ಧರ್ಮಾಮೃ. ೨-೬೩) : ವೃಷಭರಾಜಂ ಹರುಷದಿಂದಿಪ್ಪ ಸಮಯದೊಳು ಮುಂತೆ ಕಿನ್ನರರು ನವರಸದಿ ಪಾಡಲ್ಕೆ (ಬಸವ. ೧-೨೩). ೩. ಮುಂಚಿತವಾಗಿ ; ಪೂರ್ವಭಾವಿಯಾಗಿ : ಮುಂತೆ ನೀಂ ಪೋಗಾನುಂ ಪೆಱಗನೆ ಬಂದಪೆಂ (ಆದಿಪು. ೦೦-೨೦) ; ನಿನಗೆ ವಸಂತದೂತಿ ಪೆಸರೊಪ್ಪುವುದೆಂತೆನೆ ಮುಂತೆ ಬಂದು ನೀನೆನಗೆ ವಸಂತನಾಗಮನಮಂ ನೆಱಿ ಸೂಚಿಸಿ ಕೊಟ್ಟೆ (ಕಂಪ್ರಪು. ೭-೯೦). ೪. ಅನಂತರದಲ್ಲಿ : ತರುವಾಯ ; ಆಮೇಲೆ : ಮುಂತೆ ಪೇಟ್ವ ಕುಱಿಪಂ ಕುಱಿಗೊಂಡು ಕವೀಶರಾರ್ಪಂತು ಪಿಂಗಿಸುಗೆ ಕಾವ್ಯದಿನಾ ಲಘುದೋಷಮಂ (ಕಬರಾ. ೦-೦೨೯) ; ಮುಂತೆ ಶರದ್ಘಟಭೂಮಿಕಾಂತಂಗರ್ಧಾಂಗಿಯಪ್ಪುದಂ ತೋರ್ಪವೊಲಾ ಕಾಂತೆ ಯಂ ಪೆಣ್ಗೂಂದಿಪಳಂತಗಲದೆ ಪರ್ವಿದತನುತಾಪೋದಯದಿಂ (ಲೀಲಾ. ೭-೩೭) : ಇಂತು ಕರ್ಣನ ಸಖ್ಯದಲಿ ಭೂಕಾಂತನಾ ಕೆಲಕಾಲವಿದ್ದಾ ಮುಂತೆ ಕಲಿತರು ದ್ರೋಣನಲಿ ಬಳಿಕಖಿಳವಿದ್ಯೆಗಳ (ಸಂಭಾ. ೦೯-೨೨). ೫. ಹಿಂದೆ ; ಪೂರ್ವದಲ್ಲಿ : ಅಂತ್ಯಜಾತಿಯೊಳಿರ್ಪ ಮುಂತೆ ತೀರ್ಥದೊಳಿರ್ಪ ವಂತಿಯೋಜಿರ್ಪ ತಿರಿದುಂಬ ಶಿವಯೋಗಿ ಎಂತಿರ್ದಡೇನು (ಸರ್ವಜ್ಞ. ೫೨೨); ಮುಂತೆ ರಾವಣನೆನಿಪನೊರ್ವನುದಿಸಲ್ ಬಾಧೆಯುಂ ತಡೆಯದಮರರುಂ ಹರಿಯ ಪ್ರಾರ್ಥಿಸೆ (ವಂಕಾರಾ. ೨-೨೦-೨೯). **ಮುಂದೆ₃** : ೧. ಗಱಿಯಿಸಿದರ್ಥಂ ಸಲೆ ಪಾಂಗಱಿಯದೆಯುಂ ಶಬ್ದಮೊಂದದಿರ್ದೊಡೆ ಮುತ್ತುಂ ಪೆಱಸುಂ ಕೋದಂತಿರ್ಕುಂ ಕಟಲ್ತಿ ಕಳೆಗೊಂದಿ ಮುಂದೆ ಬಾರದ ಪದಮಂ (ಕವಿರಾ. ೨-೫) ; ಮನೆಮನೆಗಳ ಬಾಗಿಲು ಬಾಗಿಲ ಮುಂದೆ ಕನಕದೋರಣದ ಸಾಲಿಂದ ಘನತರವಹ ನವಿಲುಯ್ಯಾಲೆಗಳಿಂದಲನಿಮಿಷಪುರವ ಪೋಲ್ತಿಹುದು (ಕುಶವ. ೨-೭೦) ; ಕುದುರೆಯ ಹಿಂದೆ ಅರಮನೆಯ ಮುಂದೆ ಇರಬಾರದು (ಗಾದೆ). ೨. ನಂದಿಮಿತ್ರಂ ಬಂದು ಮುಂದೆ ನಿಂದು ಕೈಗಳಂ ಮುಗಿದಿಂತೆಂದಂ (ಶಬ್ದಾರಾ. ೭೯-೩) ; ದನುಜಾಂತಕನೆಂಬೀ ನಿನ್ನ ನಚ್ಚುವೋದಂಕ ಮೆಲವೊ ಮುನ್ನೆನ್ನನ್ನಂ ದನುಜಂ ಪುಟ್ಟಿದೆ ಸಂದುಮು ನಿನಗೀ ಪೆಸರೆನ್ನ ಮುಂದೆಯುಂ ಸಂದಪುದೇ (ಕಂಕಥಾ. ೬-೫೪) ; ಗುರುವಂ ಮುಂದೆ ಪೊಗಟ್ಟುದು ಮಿತ್ರರಂ ಬಂಧುಗಳಂ ಪಿಂದೆ ಪೊಗಟ್ಟುದು (ಕುಶಕಂ. ೫೭-೦೬) ; ನಿಮ್ಮ ಶರಣರ ಮುಂದೆ ನಾನೇತಱ ಭಕ್ತನಯ್ಯಾ ನಿಮ್ಮ ಶರಣರ ಮುಂದೆ ನಾನೇತಱ ಯುಕ್ತನಯ್ಯಾ (ಬಸವ. ೩೩೩). ೩. ಮುಂದೆ ದಶಾಂಕೆಯಿಂದಿಱಿದುದಂ ಪರಮಾಯುವಿನಿಂದಮೆತ್ತ ದಲ್ ನಿಂದುದು ವರ್ಷಂ (ಜಾತಕ. ೨೪-೨೮) ; ತಂದೆತಾಯಿಗಳಿಗೆ ಮುನ್ನಗ್ನಿಯುಂ ಕೊಡದೆ ನೀ ಮುಂದೆ ಮಡಿಯಲುಬಹುದೆ (ಹಕಶಾ. ಕಂ. ೨೨೨-೨೦) ; ಹಿಂದೆ ಸೋಮೇಶನು ಬರುತ್ತಂ ಮುಂದೆಯೆನ್ನಂ ಕಳುಹಿದಡೆ ನಾ ತಂದೆ (ಬಸವ. ೫೩-೦೭). ೪. ಹಿಂದೆ ನಾನಾಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿಯಿಲ್ಲ (ಬಸವ. ೦೭) ; ಮುಂದಾ ಸ್ತ್ರೀರತ್ನಮನೊಲವಿಂದಂ ಪಡೆದಪ್ಪನೆಂಬುದಂ ಸೂಚಿಸುವಂತೊಂದೆರಡು ದಿನದೊಳತ್ಯಾನಂದದ ಕಡುಜಾಣ ಮಾಣಿಕಂಗಂಡಿರ್ದಳ್ (ಗಿರಿಕ. ೩-೨೦) : ಇಂದು ನೀನಾ ಪಾಂಡುಪುತ್ರರನಂದಗೆಡಿಸದೆ ಬಿಟ್ಟೆಯಾದೊಡೆ ಮುಂದೆ ಬೆಟ್ಟಿತು ರಾಜಕಾರಿಯ (ಕುಮ್ಮಾಅ. ೬-೨೦). ೬. ಮೊತ್ತಮೊದಲು ; ಪ್ರಥಮತಃ : ಮುನ್ನಮೆ ತೆಱಿದಱುದಿಂಗಳ್ವರಮಾಱಿದ ಕಾಂಡಕಪ್ರಪಾತ ಗುಹೆಯೊಳಗಣಿಂದ ಚಕ್ರರತ್ನಂ ಮುಂದೆ ನಡೆಯೆ (ಆದಿಪು. ೦೩-೬೦ ವ) ; ಕಳಸೋವರೆ ಕನ್ನಡಾಳಿಯ ಹಿಡಿವೆ ಬಂಡಿವಿಡಿದರೆ ನಿಮ್ಮಿಂದ ಮುಂದೆ ನಡವೆ (ಬಸವ. ೭೯೭).

ಮುಂದೆಬರ್, ಮುಂದೆಬರು = ೧. ಅನಂತರ ಸಂಭವಿಸು : ತರುವಾಯದಲ್ಲಿ ಉಂಟಾಗು. —ಒದಗು : ನಿಜಧೈರ್ಯದೆ ಗಣಿಸದೆ ಮುಂದೆಬರ್ಪುದಂ . . . ಬೆಳ್ಪಸವಾಳ್ವುದು ಕಜ್ಜಂ (ಶಾಂತೀ. ೦೩-೦೬) ೨. ಮುಂದುವರಿ : ಆಸಕ್ತಿವಹಿಸು : ಕಾಳೂರಿನ ಆಡಿಗಳು ಹೆಣ್ಣು ಕೊಡಲು ಮುಂದೆ ಬಂದರು (ಕಪ್ಪಕ. ೦೭). ೩. ಅಭಿವೃದ್ಧಿಯನ್ನು ಹೊಂದು; ಏಳಿಗೆಯಾಗು: ಅವಿರತವಾದ ಅವರ ದುಡಿಮೆಯಿಂದ ಎರಡೇ ವರ್ಷಗಳಲ್ಲಿ ಅವರ ಸಂಸ್ಥೆ ಮುಂದೆಬಂದಿತು (ಕೂಡ). [< ಮುಂತೆ₁]

**ಮುಂದಂಡೆ₁** (ನಾ). ಮುಂಭಾಗ ; ಮುಂದುಗಡೆ : ಹೆಂಗಸರು ಬಾಗಿಲಿಗೆ ಬಂದು ಗುಡಿಸಲುಗಳ ಮುಂದಾಡೆಯಲ್ಲಿ ನಿಂತುಕೊಂಡು . . . ಅಕ್ಕಪಕ್ಕದಲ್ಲಿದ್ದವರಿಗೆ ಅವನನ್ನು ತೋರುತ್ತಿದ್ದರು (ಭೂಹು. ೨೭೭).

[ಮುಂ₁ (< ಮುನ್₁) + ದಂಡೆ₂]

**ಮುಂದಂಡೆ₂** (ನಾ). ಮಲ್ಲಯುದ್ಧದ ಒಂದು ಬಗೆಯ ಪಟ್ಟು. —ವರಸೆ : ಚೀರದೇವಂ . . . ಅವನು ತುಡುಂಕೆ ಮುಳಿಸಿಂದವನಂ ಮೊಱಿದೆಟ್ಟು

ಮುಟ್ಟಿಗೆ ಮುಂದಂಡೆಯನೂಡಿ ಮೇಲ್ವರಿವನೇಂ ಬಗೆ ಸೊರ್ಕಿರೆ ಮುಂದು ದೋರ್ಕರ್ಪಮೇ (ಶಶಿ. ೯-೧೯೦).

[ ಮುಂ$_{1}$ ( < ಮುನ್$_{1}$ ) + ದಂಡೆ$_{3}$ ( < ದಂಡಿ$_{3}$ ) ]

**ಮುಂದಟ್ಟು** (ಕ್ರಿ). ೧. ಮುಂದಕ್ಕೆ ಅಟ್ಟು,–ಓಡಿಸು : ಮುಳಿಸಿಂ ಮುಟ್ಟುವ ನಾಯ್ಗಳನೆ ತುಂಡಿಸಲ್ಕೆಂದುಟಿ ಕಿಗುರ್ಟಟ್ಟುತೆ ಮುಂದಟ್ಟಿ ಪೆಡಂಮುಟ್ಟುತೆ ಸೂಕರನಡರ್ದು ಸಾರ್ದುದು ಮೆಳೆಯಂ (ಗಿರಿ. ೦-೦೦೨). ೨. ಮುಂಚಿತವಾಗಿ ಅಟ್ಟು ; ಪೂರ್ವಭಾವಿಯಾಗಿ ಕಳುಹಿಸು : ತನ್ನೊಳ್ ನೆರೆಯಲಿದು ಜಯಶ್ರೀಯೆ ಮುಂದಟ್ಟಿದೆಕ್ಕಾವಳಿಯೆಂ ಬಂತಿರ್ದುದಂ ಕಂಠಿಕೆಯಂ . . . ಕಟ್ಟಿದಂ ಖೇಚರೇಂದ್ರಂ (ಅಜಿ. ೦-೭೭); ಗಿರಿಜಾವಲ್ಲಭನೊತ್ತೆಗೊಟ್ಟ ಪೆಜಿಯಂ ಸೈತಿಕ್ಕವೇಟ್ಟುಂ ಬಂದಪಂ ಹರಿ ಮುಂದಟ್ಟಿದನಿಂದು ಕೌಸ್ತುಭಮಂ (ಸೂಕ್ತಿಸು. ೯–೦೩೩); ಆಳ್ಗಳಂ ಮುಂದಟ್ಟಿ ಸಡಗರದಿ ಬರುತಿರ್ಪನು (ಕಾಬೂರ. ೯೯–೦೬೮).

[ ಮುಂದು$_{2}$ ( < ಮುಂತು$_{2}$ ) + ಅಟ್ಟು$_{2}$ ]

**ಮುಂದಡಿ** (ನಾ). ಕಾಲಿನ ಮುಂಭಾಗ ; ಮುಂಗಾಲು : ಅಡಿಗಡಿಗೆ ಗಡಬಡಿಸುತಿಹ ಮುಂದಡಿ ಎಸೆಯೆ . . . ತವಜ ಕಂಗೆಟ್ಟು ಡೆಂಡಣಿಸಿ ಸರಳಸುವ ಹರಿಣಂಗಳಂ ನೋಡಿ ಮುಂದೋಡಿ ಕೆಡಹಿದವು ದೀಹದ ಹುಲಿಗಳು (ಸೋಮಕ. ೩–೨೯). [ಮುಂದು$_{1}$ (< ಮುಂತು$_{1}$) + ಅಡಿ$_{1}$]

**ಮುಂದಡಿಯಿಡು** (ಕ್ರಿ). ಮುಂದಕ್ಕೆ ಹೋಗು ; ಮುಂದುವರಿ : ತುಡುಕುವರೆ ಧನುವಿಲ್ಲ ಮುಂದಡಿಯಿಡಲು ಸಾರಥಿಯಿಲ್ಲ ರಥ ಕಡಿವಡೆದುದು (ಕುವ್ಯಾದ್ರೋ. ೬–೩೭); ದೃಢನಿಶ್ಚಯದಿಂದ ಪ್ರಯತ್ನಿಸು ವವನಿಗೆ ಎಂತಹ ದೊಡ್ಡಕಾರ್ಯವಾದರೂ ನಿಶ್ಚಯವಾಗಿ ಕೈಗೂಡು ವುದು. ಅವನು ಧೈರ್ಯದಿಂದ ಮುಂದಡಿಯಿಡಲಿಕ್ಕೆ ಬೇಕು ಮಾತ್ರ (ಧೃತಿ. ೩). [ಮುಂದು$_{2}$ ( < ಮುಂತು$_{2}$ ) + ಅಡಿಯಿಡು ]

**ಮುಂದರಿ** ' ಮುಂದುವರಿ ' ನೋ.

**ಮುಂದರಿವು** (ನಾ). ಮುಂದಿನದನ್ನು ತಿಳಿಯುವ ಜ್ಞಾನ ; ಭವಿಷ್ಯ ಜ್ಞಾನ : ಇವನು ಮೊದಲು ಟೈಟನರೊಡನೆ ಯುದ್ಧಮಾಡುತ್ತಿದ್ದ ಜ್ಯೂಸಿಗೆ ಸಹಾಯ ಮಾಡಿದನು. ಹಾಗೆ ಮಾಡಲು ಕಾರಣವೇನೆಂದರೆ ಅವನಿಗೆ ಮುಂದರಿವಿತ್ತು (ಐತ್ಯಕ್ರ. LX, ೩೬೩೬).

[ಮುಂದು$_{2}$ ( < ಮುಂತು$_{2}$ ) + ಅರಿವು ( < ಅಱಿವು) ]

**ಮುಂದರುಗು** (ಕ್ರಿ). ಮುಂದಕ್ಕೆ ಚಲಿಸು ; ಮುಂದುವರಿ : ಈ ಭವ ದೊಳಗೆ ಇರುಳಿದ್ದು ಭಾಸ್ಕರೋದಯವಾದ ಬಳಿಕ ಮುಂದರುಗುವೆವು (ಪಂಕಾರಾ. ೨–೦೫–೪). [ ಮುಂದೆ$_{3}$ ( < ಮುಂತೆ$_{2}$) + ಅರುಗು$_{1}$ ]

**ಮುಂದಲೆ** (ನಾ). ೧. ತಲೆಯ ಮುಂಭಾಗ : ಬಲದೆ ಸುಟಿದಾವರ್ತಂ ಪುಂಸ್ತ್ರೀಜನಕ್ಕೆ ಶುಭಪ್ರದಂ . . . ಒಂದೆ ಮುಂದಲೆಯ ಸುಟಿಯಿಂದಕ್ಕುಂ ಕಳ್ಳಂ ಮಹೀವಳಯಾಗ್ರದೊಳ್ (ಲೋಕೋಪ. ೧೧–೨೫); ಶಾಂಗೆಸೆದುದು ಮುಂದಲೆಯೊಳಗರಳೆಲೆ ಬಹುರತ್ನನೂತ್ನಕಾಂತಿಪ್ರಕರಂ (ಗಿರಿ. ೩–೬೦) : ಮಾರುತಿ ಹೊಯ್ದು ಕರ್ಣನ ಕೆಡಹಿದನು ಮುಱಿಯೊಡೆದನೆದೆಯನು ಹಾಯ್ದು ಮುಂದಲೆಗೆ (ಕುವ್ಯಾಕ. ೧೨–೨೭). ೨. ತಲೆಯ ಮುಂಭಾಗದಲ್ಲಿ ರುವ ಕೂದಲು; ಮುಂಗೂದಲು : ಕೃಷ್ಣೆಯ ಮುಂದಲೆಯಂ ಪಿಡಿದೆಟ ವಲ್ಲಿಯೆ ತಲೆವಿಡಿದರ್ ನಮ್ಮ ಬೀರಮಂ ಕೌರವರುಂ (ಪಂಪಭಾ. ೭–೫೭) ; ಮುಂದಲೆಯಂ ಪಿಡಿದೆನ್ನಯ ಮುಂದೆಟದನಲಜೆಯನುಯ್ದು ಪರಿಭವಿಸಿ ದಳ್ಳೆಂಮುರಿದು ಸೊರ್ಕಿದವನಂ ಕೊಂದಂ ಕುರುಪತಿಯುಮಂ ಕೊಲಲ್ಪಡೆದ ಪೆನೇ (ಗದಾಯು. ೭–೨೭); ನಿಲಲಿ ಸುಭಟರು ಜೋಡಿಯಲಿ ಪರಬಲಕೆ ಜಾಱುವ ಜಯಸಿರಿಯ ಮುಂದಲೆಯ ಹಿಡಿಹಿಡಿಯೆನುತ ಹೆಕ್ಕಳಿಸಿದನು ಕುರುರಾಯ (ಕುವ್ಯಾಶ. ೨–೫೦). ೩. ಮುಂಭಾಗ : ಮುಂದುಗಡೆ : ಮಳಿಗಾಲಿನ ಮುಂದಲೆಯುಪ್ಪರಿಗೆಯ ನೆಲೆ ಮೆಚ್ಚದೆ ಗುಡಿಸಲೊಳಹರೊಲಿದೆ (ಪರ್ಲ. ೨–೧೧). ೪. ಮುಂದಿನದು ; ಭವಿಷ್ಯಕ್ಕೆ ಸೇರಿದುದು : ಅಂಚು ಅಂಚುಗಳಲ್ಲಿ ಚಳಿಯು ಇರಿತ ಹದನವಾಗುತ್ತಿದ್ದರೂ ಮುಂದಲೆಯು, ಸಿಹಿಕಹಿಗಳಿಗಾಗಿ ಬಿಳಲೇಬೇಕಾಗಿತ್ತು (ರತ್ನರ. ೩೩೭).

ಮುಂದಲೆಯ ಹೂ = ಮುಂದಲೆಬೊಟ್ಟು : " ಮುಂದಲೆಯ ಹೂ ಲಲಾಮಕವೆಂಬುದು " (ಹಲಾಯು. ೯೦–೩೯೯).

[ ಮುಂ$_{1}$ ( < ಮುನ್$_{1}$ ) + ತಲೆ$_{1}$ ]

**ಮುಂದಲೆಗೊಡು** (ಕ್ರಿ). ತಲೆದೋರು : ಬೆಸುಗು ಬೆಳೆದುದು ಮನದ ಬಿಡುಕಿನ ಮಱುಕ ಮುಂದಲೆಗೊಟ್ಟುದಱವಿನ ಸೆಱಗು ಹಾಱಿತು (ಕುವ್ಯಾಸ. ೦೯–೨೬). [ಮುಂದಲೆ + ಕೊಡು$_{1}$ ]

**ಮುಂದಲೆಗೊಳ್** (ಕ್ರಿ). ಮುಂಗೂದಲನ್ನು ಹಿಡಿದುಕೊಳ್ಳು : ಕೆಡೆನುಡಿದಿಂತು ನಡೆದು ಮುಂದಲೆಗೊಂಡು ಕೆಡಹಿ ಕೆಕ್ಕಳಗೆಳದರ್ದೆಗೆ ಅಡಿಯಿಟ್ಟು ಕರುಳ ಸೀಱುಂಬುಳಾಡುವನೆಂದು ಪೊಡೆಗೆ ಕೂರಸಿಯಿತ್ತು ದಾಗ (ಶ್ರೀಶಾಂ. ೬೩೪). [ ಮುಂದಲೆ + ಕೊಳ್$_{1}$ ]

**ಮುಂದಲೆಬೊಟ್ಟು** (ನಾ). ಹೆಂಗಸರು ತಲೆಯ ಮುಂಭಾಗದಲ್ಲಿ ಧರಿಸುವ ಒಂದು ಬಗೆಯ ಆಭರಣ ; ಬೈತಲೆಬೊಟ್ಟು : ಮುಂದಲೆಬೊಟ್ಟು :– ಸ್ತ್ರೀವೇಷಕ್ಕೆ ಮಾತ್ರವೇ ಮೀಸಲಾಗಿರುವ ತೊಡಿಗೆ ಇದು (ಶಾರ್ಙಸು. ೪೭).

[ ಮುಂದಲೆ + ಬೊಟ್ಟು$_{2}$ ( < ಬಟ್ಟು) ]

**ಮುಂದಲೆವಣಿ** (ನಾ). = ಮುಂದಲೆಬೊಟ್ಟು : ವಣಿಜಸತಿಯರು . . . ಹಿಣಿಲ ಚಿಱಿಯ ಹೊಳೆವ ಮುಂದಲೆವಣಿಯ ಮುಕುರ ಮುಖಾಂಬುಜದ ಮಕರ್ಣಕರ್ಣಣತ್ಕೃತಿ ಜಡಿಯೆ ನಡೆದುದು ಬೀದಿಬೀದಿಯಲಿ (ಕುವ್ಯಾಗ. ೧೦–೦೭). [ ಮುಂದಲೆ + ಮಣಿ$_{3}$ ]

**ಮುಂದಲೆವಾಯ್** (ಕ್ರಿ). ತಲೆಯ ಮುಂಭಾಗಕ್ಕೆ ಹಾಯು,– ಎರಗು : ಹೊಯ್ದರೊಳಬಿದ್ದವರ ಮುಂದಲೆವಾಯ್ದು ತಿವಿದರು . . . ಉಭಯದ ಕಯ್ದುಗಾಱರು ನೀಗಿದರು ನಿಜಪತಿಯ ಹಣರುಣವ (ಕುವ್ಯಾಭೀ. ೦೯–೧೧).

[ಮುಂದಲೆ + ಪಾಯ್$_{1}$]

**ಮುಂದಲೆವಿಡಿ** (ಕ್ರಿ). ತಲೆಯ ಮುಂಭಾಗದ ಕೂದಲನ್ನು ಹಿಡಿದು ಕೊಳ್ಳು : ಮುಂದಲೆಯ ಜುಟ್ಟನ್ನು ಹಿಡಿದುಕೊಳ್ಳು : ಪಾಂಚಾಲಸುತನು . . . ಐದಿ ಮುಂದಲೆವಿಡಿದು ಬಾಗಿಸಿ ಕೊಯ್ದನಾತನ ಕೊರಳನು (ಕುವ್ಯಾದ್ರೋ. ೦೯–೨); ಅಪಸ್ಮಾರವತಿಕೋಪದಿಂ ರುದ್ರನಂ ಮುತ್ತೆ ಮುಂದಲೆವಿಡಿದು ಕೆಡಹಿ ಪಾದಂಗಳಿಂ ತೊತ್ತಳದುಳಿದು ತಾಂಡವ ರೂಪಮಂ ಧರಿಸಿ ಕುಣಿವುತಿರೆ (ಶಿವಪು. ೨೦–೩೨).

[ಮುಂದಲೆ + ಪಿಡಿ$_{1}$]

**ಮುಂದಳ**$_{1}$ (ನಾ). ಮುಂಭಾಗದಲ್ಲಿರುವ ಸೈನ್ಯ ; ಮುಂಚೂಣಿಯ ಪಡೆ : ಮುಂದಳವನು ಪೊಯ್ಯುತ ಕದನದೊಳುರುಳದನವನು (ಪರ್ವತ. ೬–೯೪); ಜಪಾನದವರು . . . ಮುಂದುವರಿಯುತ್ತ ಬಂದರೆ. ಅವರ ಮುಂದಳವನ್ನು ತಡೆಯುವದಕ್ಕಾಗಿ ಮೊಗಲ ಸರಾಯಿ ಎಂಬುದು ಎರಡನೆಯ ಸೇನಾಮುಖವೆಂದು ಬಗೆಯಲಾಯಿತು (ಪರಶ. ೩೭).

[ ಮುಂ$_{2}$ ( < ಮುನ್$_{2}$ ) + ದಳ$_{2}$ (=ದಲ) ]

**ಮುಂದಳ**$_{2}$ (ನಾ). ಮುಂಭಾಗದ ನೆಲ.—ಭೂಮಿ : ಗೋದಾವರಿಯು . . .ತುದ ನೀರನ್ನು ಬಾಗಿಲದ ಮುಂದಳಕೆ ಚಿಮುಕಿಸಿದಳು (ರತ್ನರ. ೩೩೭). 'ಮನೆದಳ' ಪರಾ. [ಮುಂ$_{2}$ (< ಮುನ್$_{2}$) + ತಳ (= ತಲ) ]

**ಮುಂದಳರ್**, ಮುಂತಳರ್ (ಕ್ರಿ). = ಮುಂದರುಗು : ಮೋಣದೊಳ್ ಮುಂದಳರುತ್ತೀ ಪಾಡಿದಾಕೆಗಳ್ಗೆ ಪಾವುಡಮಂ ಕುಡುವೆಂ (ಶಶಿ. ೦೭–೦೩೬೮). **ಮುಂತಳರ್** : ಮುಂತಳರ್ದು[ಶಾಕಾಂ. ತಣದಿ] ಮಿಗೆ ತನ್ನ ಬಾಂಧವ ಸಂತತಿಯನೊಡಗೊಂಡು ನಿಷಧನ ಚಿಂತೆಯನು ಪರಿಹರಿಸಬೇಕೆಂದೈದಿತಾ ಹಂಸೆ (ನಳಚ. ೨-೯೨). [ಮುಂ$_{2}$ (< ಮುನ್$_{2}$) + ಅಳರ್]

**ಮುಂದಳೆ** (ಕ್ರಿ). ಮುಂದಕ್ಕೆ ಚಲಿಸು; ಸಾಗು : ಆ ಬಲಂ ಕಂಡುದಫು ಮಾರ್ಗದೊಳೆ ಮುಂದಳೆಯುತಿಹ ಮೇಘನಾದನಂ (ಕೃ.ಐಶಾ. ೯-೦೩) ; ಸೌಮಿತ್ರಿ ಮತ್ತೆ ಭೂಜಾತೆಸಹಿತ. . . ಮುಂದಳೆದುಗ್ರಮೃಗಪಕ್ಷಿಗಣದಿಂದೆ ಘೋರ್ಮಿಸುವ ಹಳುವಮಂ ಪೊಕ್ಕನು (ಕೃ.ಐಶಾ. ೦೯-೬).
[ಮುಂ₂ (< ಮುನ್₂) + ತಳೆ₂]

**ಮುಂದಱಿ** (ಕ್ರಿ). ೧. ಮುಂದಾಗುವುದನ್ನು ತಿಳಿ : ಭವಿಷ್ಯವನ್ನು ತಿಳಿದುಕೊಳ್ಳು : ಅಂತೊಗೆದನೇಕೋತ್ಪಾತಂಗಳಂ ಕಂಡು ಮುಂದಱಿವ ಚದುರೆ ವಿದುರನಿಂತೆಂದಂ (ಕಂಪಿಶಾ. ೦-೦೩೩ ಪ) ; ಮುಂದಱಿಯದೆ ಪರಾಭವ ಕಳುಹಿ ಕೆಟ್ಟೆವು ಕಲಹಕವನಿಪನ . . . ಎಂದಳೆವಾಣಿತು ಸಕಲಸುರನಿಕರ (ಕೂರಚಾ. ೬-೫೦-೦೯). ೨. ಮುಂದಾಲೋಚನೆಯಿಂದ ಕೂಡು ; ದೂರದೃಷ್ಟಿಯನ್ನು ಹೊಂದು : ತಂದೆನಿಂದು ಮುಂದಱಿಯದೆ ಸೀತೆಯಂ (ಕಂಪಾಶಿಶಾ. ೯-೦೩೦) ; ಕಣ್ಣ ಕೋಪಕ್ಕೆ ಮುಂದಱಿಯದೆ ಸುಡಿದೆ ಮನ ಮೆಚ್ಚಿ ಮರುಳಾದೆ ನೋಡವ್ವಾ (ಬಸವ. ೩೩೦) : ಮುಂದಱಿಯದ ಮುಗ್ಧೆಯಿಂದುದಕ್ಕೆ ಸಗ್ಗುತ್ತುಂ ನಡೆದು (ಅಜಿತ. ೯-೩೩ ಪ). ೩. ದಾರಿ ಕಾಣು ; ದಿಕ್ಕು ತೋಚು : ಶಿವಶಿವಾ ಬಲುಮಬ್ಬಿನಲಿ ಮುಂದಱಿಯದೆನ್ನಯ ಕೊಬ್ಬನೇವಣ್ಣಿಸುವೆನು (ಕುಶ್ಚಾಶೀ. ೭-೬೭) ; ಇತ್ತಲವನಿಪನಸುರಹರನ ಕಳುಹಿದ ಚಿಂತೆಗಿತ್ತು ನಿಜಬುದ್ಧಿಯಂ ಮುಂದಱಿಯದಿರೆ (ಕೃ.ಐಶಾ. ೫-೩೦) ; ಭಾವಕಿಯೊರ್ವಳ ಬೆನ್ನಟ್ಟಿ ಕಡು ಮದನಾವಸ್ಥೆಯಿಂ ಮುಂದಱಿಯದೆ ನೀವಿಯನೆತ್ತಿ ಹಿಂಗೂಡಿ ನಗಿಪ ಹಾಸ್ಯ ಭಾವದ ವಿಟನೊರ್ವನೆಸೆದ (ಕಂಪಶಿ. ೬-೦೩೬).
[ಮುಂದು₁ (< ಮುಂತು₁) + ಅಱಿ]

**ಮುಂದಾಗು₁** 'ಮುಂತು₁' ಪರಾ.

**ಮುಂದಾಗು₂** 'ಮುಂತು₂' ಪರಾ.

**ಮುಂದಾಲೋಚನೆ** (ನಾ). ೧. ಮುಂದಾಗುವುದರ ಬಗೆಗಿನ ಆಲೋಚನೆ; ಮುಂದಿನ ಆಲೋಚನೆ : ಚಂದ್ರನಿಗೊ ಮಂಗಳಗ್ರಹಕ್ಕೊ ವಲಸೆ ಹೋಗುವ ಪ್ರಯತ್ನ ಈ ಮುಂದಾಲೋಚನೆಯಿಂದಲೆ ಆರಂಭವಾಗಿರದಿದ್ದರೂ, ಅದು ಬೇಗನೆ ಕೈಗೂಡದಷ್ಟು ಕ್ಲೇಶವೆಂದು ಕಾಣುತ್ತದೆ (ನೀಳಕ್ಕ. ೪೬). ೨. ವಿವೇಕ : ವಿವೇಚನೆ : ನಾನು ಆಗ ಮುಂದಾಲೋಚನೆಯಿಲ್ಲದೆ ಆ ಕೆಲಸವನ್ನು ಮಾಡಿದ್ದರಿಂದ ಈಗ ಪಶ್ಚಾತ್ತಾಪಪಡುತ್ತಿದ್ದೇನೆ (ರೂಢಿ). [ಮುಂದು₂ (< ಮುಂತು₂) + ಆಲೋಚನೆ]

**ಮುಂದಾಳ್**, ಮುಂದಾಳು (ನಾ). ೧. ಎಲ್ಲರಿಗಿಂತ ಮುಂದೆ ಇರುವವನು; ಮುಖಂಡ ; ನಾಯಕ : 'ಮುಂದಾಳ್ತನ' ಪರಾ. **ಮುಂದಾಳು** : ೧. ಆತ್ಮನಿರೀಕ್ಷಣೆಯಿಂದಲೇ ನಾವು ಮುಂದುವರೆಯಬಹುದು ಎಂಬ ಮುಂದಾಳುಗಳ ಭಾಷಣದಿಂದ ಏನೂ ಪ್ರಯೋಜನವಿಲ್ಲ (ಅಕಶಾ. ೩) ; ರಾಮರೂ ನಮ್ಮೂರಿನ ಒಬ್ಬ ಗಣ್ಯವ್ಯಕ್ತಿಗಳೆಂದೂ ಮುಂದಾಳುಗಳೆಂದೂ ಮಹಾಪುರುಷರೆಂದೂ ತಿಳಿದೇ ಇವರ ಸಹಾಯವನ್ನು ಅಪೇಕ್ಷಿಸಿರಬೇಕು (ರಾಜುಳ. ೫೦) ; ಶಾಸ್ತ್ರಜ್ಞರಲ್ಲಿ ಅವರು ಮುಂದಾಳು (ಕಶ್ಮಕೊ. ೯೦). 'ಮುಂದಾಳುತನ' ಪರಾ. ೨. ಮುಂದಕ್ಕೆ ಕರೆದೊಯ್ಯುವವನು : ಮುನ್ನಡೆಸುವವನು : ಅಂಧನ ಕೈಲಿ ಕೋಲಿತ್ತು ಕರದೊಯ್ವನು ಮುಂದಡಿ ತಪ್ಪಿ ಗುಂಡಿಗೆ ಕೆಡಪಲು ಅಂಧಕನ ತಪ್ಪೊ ಮುಂದಾಳನ ತಪ್ಪೊ (ಕಪಕ. ೦೨೦-೩). [ಮುಂದು₂ (< ಮುಂತು₂) + ಆಳ್₃]

**ಮುಂದಾಳಿಕೆ** (ನಾ). ನಾಯಕತ್ವ ; ಮುಂದಾಳುತನ : ಅವರ ಮುಂದಾಳಿಕೆಯಲ್ಲಿ ಇವರ ಕೆಲಭಾಗವನ್ನು ರಂಗದಲ್ಲಿ ತೋರಿ ನನ್ನ ಮನಸ್ಸಿಗೆ ಉಲ್ಲಾಸವನ್ನು ತಂದಿತು (ನೋಕುಂ. X, ಮುಖ್ಯಾ).
[ಮುಂದಾಳು (< ಮುಂದಾಳ್) + -ಇಕೆ]

**ಮುಂದಾಳು** 'ಮುಂದಾಳ್' ನೋ.

ಮುಂದಾಳುತನ 'ಮುಂದಾಳ್ತನ' ನೋ.

**ಮುಂದಾಳ್ತನ**, ಮುಂದಾಳುತನ (ನಾ). = ಮುಂದಾಳಿಕೆ : ಓಂದುಸ್ಥಾನವಿಂದು ಪೂರ್ಣಸ್ವಾತಂತ್ರ್ಯ ಪಡೆದಿದೆ. ಪೌರ್ವಾತ್ಯಜಗತ್ತಿನ ಮುಂದಾಳ್ತನದ ದಾರಿಯಲ್ಲಿ ಹೆಜ್ಜೆ ಇಟ್ಟಿದೆ (ಅಹುಗಾಂ. ೯) ; ಯಾವ ಕಾರ್ಯಕ್ರಮವಾಗಬೇಕಾದರೂ ರಂಗನ ಮುಂದಾಳ್ತನ ಬೇಕೇಬೇಕು (ರಂಗರೂ. ೨೮). **ಮುಂದಾಳುತನ**: ಸಮಾಜದ ಮುಂದಾಳುತನವನ್ನು ವಹಿಸಿ (ಶ್ರೀಪ. ೦೯).
[ಮುಂದಾಳ್ + -ತನ]

**ಮುಂದಿಕ್ಕು**, ಮುಂತಿಕ್ಕು (ಕ್ರಿ). ೧. ಮುಂಭಾಗದಲ್ಲಿ ಇಡು ; ಎದುರಿಗೆ ಇರಿಸು : ಸೂಟ್ಟೆಟ್ಟನಾಗಳ್ ಜವಂ ಒಡಿದೀಡಾಡುವ ಮಾಟ್ಕೆಯಂತೆ ಪಲರಂ ಕೊಂದಿಕ್ಕಿ ಮೆಯ್ಮುಟ್ಟವೇಡೆಯೊಳ್ ಮಾಣದುರುಳ್ಚಿ ಕಟ್ಟಿ ರಿಪುವಂ ಮುಂದಿಕ್ಕಿದಂ ದ್ರೋಣನಾ (ಕಂಕಶಾ. ೨-೬೨). ೨. ಮುಂದೆ ಮಾಡು ; ಮುಂದೆ ಒಡ್ಡು : ಪರುಸದಿಂ ಶೇಷನಂ ಮುಂದಿಕ್ಕಿಕೊಂಡು ಮಣಿವೆರಸಿ ರಣಮಂಡಲಕೆ ಕಲಿಬುಭ್ರುವಾಹನಂ ಬರಲು (ಕೃ.ಐಶಾ. ೨೫-೯೩). **ಮುಂತಿಕ್ಕು** : ೨. ಈ ಸಾಮುಹಮಂ ಮುಂಮ ಪ್ರಯೋಗಿಸದೇ ಕೆಟ್ಟಪುದೆಂದು ದಂಡಮನೆ ಮುಂ ಮುಂತಿಕ್ಕುವಂ ಮಂತ್ರಿಯೇ (ಕಂಕಶಾ. ೯-೦೯).
[ಮುಂದು₂ (< ಮುಂತು₂) + ಇಕ್ಕು]

**ಮುಂದಿಡು**, ಮುಂತಿಡು (ಕ್ರಿ). ೧. = ಮುಂದಿಕ್ಕು ೧ : ಇವು ದಿವದೊಳಗಗ್ಗಳವೆನಿಸುವ ರತ್ನವ್ರಾತಮೆಮ್ಮ ಮನೆಯೊಳ್ ಮಿಗಿಲಪ್ಪವು ನಿಧಿಗಧಿಪಾಪಿಸಲಪ್ಪವೆಂದು ರತ್ನಂಗಳನಿತುಮಂ ಮುಂದಿಟ್ಟಂ (ಅದಿತ್ತೈ. ೦೨-೦೬) ; ಇತ್ತಲ್ ಸೌಮಿತ್ರಿಯುಮಂ ತನ್ನ ಮನೆಗೆ ಬಂದು ಪೊನ್ನ ಪುಡಿಯನತ್ತವಿರ ಮುಂದಿಟ್ಟು ಪೊಡಮಟ್ಟೊಡೆ (ಕಂಕಕಂ. ೦೩೬-೦) ; ದಿನಮಣಿಯರುಣನ ಮುಂದಿಡದೊಡವನೆಂತು ತಮಮಂ ತೂಳ್ದಂ (ಕಾಕುಂಕ. ೦೦೦-೦೬). ೨. ಮುಂದುಗಡೆಯಲ್ಲಿ ನಿಲ್ಲಿಸು; ಇರುವಂತೆ ಮಾಡು ; ಮುಂದುಮಾಡಿಕೊಳ್ಳು : ಅಲ್ಲಿಯ ಮುನಿಜನಮೆಲ್ಲಮಾ ಕೂಸುಗಳುಮಂ ಕುಂತಿಯುಮಂ ಮುಂದಿಟ್ಟೊಡಗೊಂಡು ನಾಗಪುರಕ್ಕೆ ವಂದು (ಕಂಕಶಾ. ೨-೨೬ ಪ) ; ಅನಂ ಪ್ರಲಂಬಪ್ರಸೂದನನುಂ ಯಾದವಪರಿಪ್ಪಂದಮುಮಂ ಮುಂದಿಟ್ಟೊಡಗೊಂಡು ಪೋದವು (ಜಗಂ. ೯-೬೯ ಪ) ; ಕೇತಯ್ಯನಂ ಬಸವನನಸಂಖ್ಯಾತರ ಸಮಕ್ಷದೊಳನುನಯದಿ ಲಾಲಿಸುತ ಹರುಷಂಬಟ್ಟು ಮುಂದಿಟ್ಟು . . . ಸಾಷ್ಟಾಂಗದಂಡಪ್ರಣಮಮಂ ಮಾಡಿ (ಚಿತ್ತೈ. ೩೬-೫೦). ೩. ಮುಂದುವರಿ ; ಮುನ್ನುಗ್ಗು : ಕೊಂದು ಜಟಾಯುವನಾತಂ ಮುಂದಿಟ್ಟಾ ಜನಕಸುತೆಯನೊಯ್ದಂ (ಕಶರಾ. ೩-೦೯೯). ೪. ಮುಂದೆ ತರು ; ಗಮನಕ್ಕೆ ತರು; ಸೂಚಿಸು: ಬಯ್ಚಿಟ್ಟು ಕುಡುವುದೀ ಪಾತ್ರೆಯಂ ಎಂದದನವರ ಪಶದೊಳಿರಿಸಿ ಹತ್ತುಡಿಯುಟ್ಟು ಬಂದು ಮತ್ತೊಂದು ಕುಹಕವನಲ್ಲಿ ಮುಂದಿಟ್ಟು . . . ಇದ ನೀವೆ ಬಲ್ಲಂತೆ ಪರಿರಕ್ಷಿಸುವುದೆನುತ (ತಿರುರ. ರೀ. ೦೦-೦೪) ; ಅದೇ ಸಮಯದಲ್ಲಿ ಮನೆಯ ಯಜಮಾನಿತಿ ತನ್ನದೊಂದು ಬೇಡಿಕೆಯನ್ನು ಮುಂದಿಟ್ಟಳು (ಯೋಗಶ್ರೀ. ೨೯). ೫. ಒಪ್ಪಿಸು ; ಅರ್ಪಿಸು ; ಕೊಡು : ಬೆಸನಾವುದೆಮಗೆ ಬೆಸನಂ ಬೆಸಸೆನೆಯೆಬಾಟ್ಕಿಯೆಂದು ಮುಂದಿಟ್ಟರ್ ಸ್ರಗ್ಗಸನವಿಲೇಪನಭೂಷಾಪ್ರಸರಂಗಳನಲ್ಲಿ ಕೆಲಬರತಿಜಡಮತಿಗಳ್ (ಅದಿತ್ತೈ. ೯-೦೨೩) ; ಸಂಗಂಗೆ ಸಾಷ್ಟಾಂಗದಿಂದಲ್ಲಿ ಪೊಡಮಟ್ಟು ಓಂಗದೀಶಂಗೆ ಭಯಭಕ್ತಿಯಂ ಮುಂದಿಟ್ಟು . . . ಬೀಳ್ಕೊಂಡ ನಕ್ಷಜಂ ಲಾಲಿಸುತ್ತಾಲಿಸುತ (ಬಸರ. ೩-೬). ೬. ತೋರ್ಪಡಿಸು; ಪ್ರಕಟಿಸು : ಪ್ರದರ್ಶಿಸು : ಸಪ್ತಕಕ್ಷಪರಿಕ್ಷಿಪ್ತಮಾಗಿ ಅಡಕಿಲ್ಗೊಂಡಿರ್ದು ವೇಟಂ ಕುಳನಗಮೆನೆ ಶದ್ಮೂಮಿಕಾಸಪ್ತಕಂ ಮುಂದಿಡೆ ಚೆಲ್ವಂ (ಚಂದ್ರತ್ತೈ. ೦-೦೪೨). ೭. ಪ್ರತಿಯಾಗಿ ನಿಲ್ಲಿಸು; ಎದುರಾಗಿ ಒಡ್ಡು : ಲಲನಾ ಸ್ವರ್ಣಘನಸ್ತನೋಲ್ಲಸಿತಲಾವಣ್ಯಾಮೃತಸ್ನಾನಮಂಗಲಮಂ ಮುಖ್ಯಮನಂ ದೊಡರ್ಚಿ ನೃಪಸೌಂದರ್ಯಕ್ಕೆ ಮುಂದಿಟ್ಟು ತನ್ನಲರ್ದಿಲ್ಲಂ . . . ಅರ್ಧ್ಯ

ಮನೆತ್ತಿ ಮನ್ನಣೆಯಿಪಂ ಕೊಟ್ಟಂ ಮಹೋತ್ಸಾಹದಿಂ (ಪಂಪಭಾ. ೩-೩೦). ೮. ಉಂಟುಮಾಡು ; ಒದಗಿಸು : ಉದಯಂಗೆಯ್ವಮೃತಾಂಶುಬಿಂಬ ಮೆರ್ದೆಗಂ ಕಣ್ಗಂ ಮಹೋತ್ಸಾಹದೊಂದೊದವಂ ಮುಂದಿಡುವಂತೆ ತನ್ನ ಭುವನಪ್ರಖ್ಯಾತಸೌಂದರ್ಯದಿಂ . . . ಮನಂಗೊಳಿಸಿದಂ ಸಂಸಾರಸಾರೋದಯಂ (ಆದಿಪು. ೩-೬೨) ; ಜವದ ಜಾಣುಮೆಯುಂಜಿದು ಸೂಳ್ಗಳು ಸವಿಯ ಮುಂದಿಡೆ ಮೆಚ್ಚಿಪ ಮೈಗುಡೆ ಸವಿಸುಸಿಲ ಸುಖರಸದೊಳೋಲಾಡಿಸಿದನಾ ಕುವರ (ಸಾಳ್ವಭಾ. ೪-೧೧); ತನ್ನ ಕುಲಕಂ ಚಲಕಂ ಮುಂದಿಟ್ಟು ಕುಂದ ನೊಂದಿದ ದಂದುಗದೊಳ್ ಕೂಂಟಿ ನಡೆವ ಕಲಿಯುಂ ಕಲಿಯೋ ! (ರಾಮಾಶ್ವ. ೧೨೭-೧೪). ೯. ನೆಪವಾಗಿ ಇಟ್ಟುಕೊಳ್ಳು; ಕಾರಣವಾಗಿ ಮಾಡಿಕೊಳ್ಳು : ಮುಂದಿಟ್ಟು ಪಗೆಕಾಯ್ದ ಪೊಲುನೆಯ್ದ್ ಕೇಸ್ ಕಲಹಮನ್, ಅರ್ಪಟಿಸಿ ಮುಳಿದಾರ್ದು ನಾಡ ಮೇಲ್ ನುರ್ಗಿದನ್ (ಅಂತಿಗೊ. ೭-೯೬). ಮುಂತಿಡು : ೧. ಜಾಂಬವತಿಯೆಂಬ ಆತನ ಕುವರಿ ಕನ್ಯಾರತ್ನವು ಈ ಶಮಂತರರತ್ನವನ್ನು ಸಹಾ ಕೊಟ್ಟು ನನ್ನ ಮನ್ನಿಸಿದನು ಎಂದು ಅವರುಗಳ ಮುಂತಿಟ್ಟು (ಹಾಸ್ಯ. ೧೧೧-೨). ೨. ಅಂತು ಧರ್ಮಪುತ್ರನಂ ಮುಂತಿ[ಪಾಠಾಂ. ದಿ]ಟ್ಟು ಭೀಮಾರ್ಜುನನಕುಲಸಹದೇವರುಂ ದುರ್ಯೋಧನನಂ ಮುಂತಿಟ್ಟು ಯುಯುತ್ಸು ದುಶ್ಶಾಸನ. . . ಸದ್ಬಾಹುಗಳ್ ಮೊದಲಾಗಿ ನೂರ್ವರುಂ ಬಂದು (ಶಂಕರಾ. ೨-೭೦ ವ). ೪. ಹಿಮಕೃದ್ವಂಶಜರಪ್ಪ ಪಾಂಡುಸುತರಂ ಕೆಯ್ಕೊಂಡು ನಿನ್ನಯ್ದು ಬಾಡಮನಿತ್ತುಂ ನಡಪೆಂದು ಸಾಮಮನೆ ಮುಂ ಮುಂತಿಟ್ಟೊಡೆ (ಶಂಕರಾ. ೯-೬೮). ೬. ಶಿವಲಿಂಗ[ಂ] ಮೂರ್ತಿಗೊಂಡು ನಂದಿಯು ಹೃದಯಕಮಳಮನೊತ್ತರಿಸಿ ಪೊಱಮಟ್ಟು ಸದ್ಯೋಜಾತಮುಖಮಂ ಮುಂತಿಟ್ಟೊಳಗೊಳಗೆ ಗಳಗಳನೆ ನಡೆದು ಬರೆ (ಬಸರ. ೪-೬೦). ೧೦. ಮುಂದೆ ನಿಲ್ಲು; ಪ್ರಧಾನವಾಗಿ ನಿಲ್ಲು : ಅಂತವರ್ಗೆ ಜಾತಕರ್ಮನಾಮಕರಣಾನ್ನಪ್ರಾಶನಚೌಲೋಪನಯನಾದಿಷೋಡಶಕ್ರಿಯೆಗಳಂ ಗಾಂಗೇಯಂ ತಾಂ ಮುಂತಿಟ್ಟು ಮಾಡಿ (ಶಂಕರಾ. ೦-೯೭ ವ). [ಮುಂದು$_2$ (< ಮುಂತು$_2$) + ಇಡು$_1$]

**ಮುಂದಿರ್,** ಮುಂತಿರ್ (ಕ್ರಿ). ೧. ಮುಂಭಾಗದಲ್ಲಿರು; ಎದುರಿನಲ್ಲಿರು; ಸಮ್ಮುಖದಲ್ಲಿರು : ಧುರದೊಳ್ ಮೂಜಗಂಲೋಕಂ ನೆರೆದಿರೆಯುಂ ಕುಡುವ ಪೊ[ಟ್ರ]ಚ್ಚೊಳ್ ಮೇರುವೆ ಮುಂದಿರೆಯುಂ ಬೀರದ ಬಿಯದಂತರಕ್ಕೆ ಕಿಚ್ಚೆಂದು ಚಿರಿತಿಪಂ ಪ್ರಿಯುಗಳ್ಗಂ (ಶಂಕರಾ. ೦-೯೬); ಕುರುರಾಜನೂರ್ವರ್ನೆರೆದುಂ ಸುರಗಿರಿ ಮುಂದಿರ್ದುದಾದೊಡಂ ಕಾಣ್ಬರೆ (ಧರ್ಮಾಮೃ. ೭-೬೬); ಮುಂದಿರ್ದ ವೃಷಭಮುಖನಂ ಕರೆವುತಿರಲ್ಲಿ ಹರುಷದಿಂದೈತಂದು ಕೈಮುಗಿದು ನಿಂದಿರಲು (ಬಸರ. ೦-೨೦೩). ಮುಂತಿರ್ : ೧. ಮುಂತಿರೆ ಪಂಚಲಂ ಬೆಸಸಿ ಪಿಂತಿರೆ ನೂರ್ಮಡಿತೈಲನಾಂತ ಸಾಮಂತಕದಂಬಕಂ ತೊಲಗೆ ಪಂಚಲನಂ ಪೆಣದಿಕ್ಕಿ ಕೊಂದ ಶೌರ್ಯಕ್ಕಂ ತನಗುಗೆ (ಇಅ. XII. ೯೬-೪; 1187). ೨. ಮುಂದಾಗಿರು; ಪ್ರಮುಖವಾಗಿರು : ಮುಂತಿರೆ ಕೂರ್ಪು ನಯಜ್ಞತೆ ಪಿಂತಿರೆ ರಿಪುಮಂಡಳಂಗಳಂ ಕೊಂಡಿರೆ ನಿಶ್ಚಿಂತಮನಸಿ ಕೂರ್ಪಂ ತರ್ಪಂತುಪಶಮಮಿರ್ದುದಾ ನರೇಂದ್ರೋತ್ತಮನೊಳ್ (ಶಾಂತಿಪು. ೦೦-೦೦೦). [ಮುಂದು$_2$ (< ಮುಂತು$_2$) + ಇರ್$_1$]

**ಮುಂದಿರಿ** (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ; ಗೇರು ; ಗೋಡಂಬಿ : 'ಮುಂದಿರಿಪಪ್ಪು' ಪರಾ.

[ದೇ.॥ ತಮಿ. ಮುನ್ದಿರಿ ; ಮಲ. ಮುನ್ದಿರಿ]

**ಮುಂದಿರಿಪಪ್ಪು** (ನಾ). ಗೇರುಪಪ್ಪು : ಗೋಡಂಬಿ, ಗೇರುಪಪ್ಪು, ಮುಂದಿರಿಪಪ್ಪು, ಜಿಡಿ (ಪ್ರಶಿಗಿ. ೬-೦೦೩).

[ಮುಂದಿರಿ + ಪಪ್ಪು (< ಪರುಪ್ಪು)]

**ಮುಂದಿರಿಸು,** ಮುಂತಿರಿಸು (ಕ್ರಿ). ೧. = ಮುಂದಿಕ್ಕು ೧ : ಲವಲವಿಕೆಯುಂ ಪರಿಯಣಮಂ ಬಿತ್ತರಿಸಲುಂ ಪದ್ಮಿಕೆಯನಗಲಂ ತಂದು ಮುಂದಿರಿಸಲುಂ . . . ಪೇಟಿವ್ಯಾಗಳ್ (ಅಂಪು. ೭-೨೦ ವ); ಸಂದು ಪಿಂಗಿಲಿಲ್ಲದಡೆ ತಪ್ಪಿಂತೆಂದು ಭಂಡಾರದ ಸಿಪ್ಪೆಡಿಯುಂ ಮುಂದಿರಿಸಿ ಬಸವಣ್ಣನಾ ಕರಣಿಕರನೋಡಿಸಲು (ಬಸಪು. ೩೦-೨೯). ೨. ಮುಂಭಾಗದಲ್ಲಿ ಇರುವಂತೆ ಮಾಡು; ಮುಂದುಗಡೆಯಲ್ಲಿ ನಿಲ್ಲಿಸು : ತನ್ನಯ ರಾಣಿವಾಸವಂ ಕರೆಸುತ್ತ ಬಂದವರನೋಯಾರದಿಂದ ಮುಂದಿರಿಸುತ್ತೆ ತೋಱಲ್ಲರನೊಲ್ಲೆನೊಲ್ಲೆ ನೆಂದೆನುತಮಿರೆ (ಇಪರ. ದೇ. ೩೩-೧೨). ಮುಂತಿರಿಸು : ೧. ಸಕಲ ವಸ್ತ್ರಾಭರಣದುಡುಗೊಱೆಗಳ ಮುಂತಿರಿಸಿ ಸತ್ಕುಮಾರಂಗೆಜಗಿ ತನ್ನ ಮನೆಗಂ ತಿರುಗಿದಂ ಬಿಜ್ಜಳಂ (ಕಿಶು. ೩-೧೮). ೨. ನೂರ್ವರ್ ತಮ್ಮಂದಿರುಮಂ ಪಿಂತಿರಿಸಿ ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಮಂ ಮುಂತಿರಿಸಿ (ಶಂಕರಾ. ೯-೨೮ ವ). [ಮುಂದು$_2$ (< ಮುಂತು$_2$) + ಇರಿಸು]

**ಮುಂದಿರುಹಿಸು** (ಕ್ರಿ). ಮುಖವನ್ನು ತಿರುಗಿಸುವಂತೆ ಮಾಡು ; ಹಿಮ್ಮುಖವಾಗುವಂತೆ ಮಾಡು : ಅರ್ಜುನನು . . . ಕರ್ಣ ಮೊದಲಾದವರ ಮುಂದಿರುಹಿಸಿದು ಗರ್ಭವ್ಯೂಹವನು ಮುಱಿದ (ಕುಮ್ಯಾಭ್ರೋ. ೫೦. ೨೯೦). [ಮುಂ$_2$ (< ಮುನ್$_2$) + ತಿರುಹಿಸು (<ತಿರುವಿಸು)]

**ಮುಂದಿವಸ** (ನಾ). ಮಾರನೆಯ ದಿನ; ಮುಂಚಿನ ದಿವಸ : ಇಂದು ಚೊಡನು ಸುತ್ತಿದೋಲೆಯನೋದು ನಂದಿಯು ಹಳವಿಗೆಯನಾಗಳು ಹಿಡಿದುಕೊಂಡು ಮುಂದಿವಸದಲಿ ಹಗಲುಪಡಿಹಜ್ಜಿಯಂದವದಲಿ ಕಣಜಂಗಳಿಗೆ ಹರಿತಂದು ಪಡಿಗಳನಳೆವ ಬಾಚರಸಂಗೆ ಇಂತೆಂದ (ಬಸಪು. ೩೩-೦೭).

[ಮುಂ$_2$ (< ಮುನ್$_2$) + ದಿವಸ]

**ಮುಂದಿಱಿಪು** (ಕ್ರಿ). ಮುಂಭಾಗದಲ್ಲಿ ಇಳಿಸು ; ಮುಂದುಗಡೆಯಲ್ಲಿ ಇಳುಹು : ಪಡಿಯಱಿತಿ. . . ಕನ್ನಡವಕ್ಕಿಯ ಪಂಜರಮಂ ತಡಮುದೆ ತಂದವನಿಪತಿಯ ಮುಂದಿಱಿ[ಪಾಠಾಂ.ಟು]ಪುವುದುಂ (ಕಾದಂಪೂ. ೮೨) ; ಮುಂದಿಱಿಪಿ ತನ್ನ ತಂದಾ ನಂದನೆಯಂ (ನೇಮಿಚಿ. ೬-೭೭).

[ಮುಂ$_2$ (< ಮುನ್$_2$) + ಇೞಿಪು]

**ಮುಂದು$_1$** 'ಮುಂತು$_1$' ನೋ.

**ಮುಂದು$_2$** 'ಮುಂತು$_2$' ನೋ.

**ಮುಂದುಗ** (ನಾ). ಮುಂದಾಳು ; ನಾಯಕ : 'ಮುಂದುಗತನ' ಪರಾ.

[ಮುಂದು$_2$ (< ಮುಂತು$_2$) + – ಗ$_2$]

**ಮುಂದುಗಡೆ$_1$** (ನಾ). ೧. ಮುಂಭಾಗ; ಮುಂದಿನ ಭಾಗ : ಮುಂತೆ = ಮುಂದುಗಡೆಯಲ್ಲಿ (ಕಮಾಶ. ೪೨ ಟೀಕ); ಅವನು ಮುಂದುಗಡೆಯ ಬೆಂಚಿಯಲ್ಲಿ ಕುಳಿತಿದ್ದಾನೆ (ರೂಢಿ). ೨. ಎದುರು; ಅಭಿಮುಖ : ನಾವು ಹೋಗುವಾಗ ಮುಂದುಗಡೆಯಿಂದ ಒಂದು ಕಾರು ಬಂದಿತು (ರೂಢಿ).

[ಮುಂದು$_2$ (< ಮುಂತು$_2$) + ಕಡೆ$_3$]

**ಮುಂದುಗಡೆ$_2$** (ಅ). ಮುಂಭಾಗಕ್ಕೆ; ಮುಂದೆ : ನಡೆ ಪಜ್ಜೆವಿಡಿ . . . ಅಡಗಿ ಪೊಯ್ವುಡಿ ಕೋಲನಿಡು ಮುಂದುಗಡೆ ನಾಯ ಬಿಡು (ಕೃಪಿಂಚಾ. ೨೯-೯೩); ಅವರ ಮನೆಯ ಮುಂದುಗಡೆ ಬೃಂದಾವನವಿದೆ (ರೂಢಿ).

[< ಮುಂದುಗಡೆ$_1$]

**ಮುಂದುಗತನ** (ನಾ). ಮುಂದಾಳುತನ ; ಮುಖಂಡತ್ವ; ನಾಯಕತ್ವ : ನಿಯೋಗಿ ಹೂವಯ್ಯನ ಮುಂದುಗತನದಲ್ಲಿ – ಇಕ್ಕೇರಿಯ ಸಂಸ್ಥಾನದ ರಾಯಭಾರದ ಪ್ರವೇಶ (ಮುಂತ್ರಿಕ. ೦೨೦-೦೯). [ಮುಂದುಗ + – ತನ]

**ಮುಂದುಗಾಣ್,** ಮುಂತುಗಾಣ್, ಮುಂದುಗಾಣು (ಕ್ರಿ). ೧. ಮುಂದಿರುವುದನ್ನು ಕಾಣು ; ಮುಂಭಾಗವನ್ನು ನೋಡು : ಅಯ್ಯಾ ನಿಮ್ಮ ಮಹಾವ್ರತಗಳನಗಲಿ ಬರ್ಮಂಕಲಾಚಿನು ಶಿವಧೋ ಶಿವಧೋ ಕಂಗಳಶ್ರುಗಳಲ್ಲಿ ಮುಂದುಗಾಣೆನು (ಬಸವ. ೩೬೮). ೨. ಮುಂದಾಲೋಚನೆಯನ್ನು ಹೊಂದು ; ವಿವೇಚನೆಯನ್ನು ಪಡೆ : ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ ತನ್ನ ನೆಳಲಂ ಪ್ರತಿಗಜವೆಂದುಱದೆ

ಕಜಾತ್ರೈಬಿಗಿ . . . ಸಾರುತಿರ್ಪ ಮದಾಂಧಗಂಧಸಿಂಧುರಂಗಳಿಂ (ಗದ. ೧-೧೨೯ ಪ) ; ಉಚಿತಮನುಸಿರ್ದೊಡಮದನೊಂದುಮನವಧರಿಸ ದವಳನೊಲಿಸುವ ಬಗೆಯುಂ ತುದಂ ಕಾತರನಂತೆ ದಲೆಂದುಮುದೇಂ ಮುಂದುಗಾಣ್ಬರೇ ಕಾಮಾಂಧರ್ (ಕಾಶ್ಯಕ. ೩-೯೬). ೩. ದಾರಿ ಕಾಣು ; ದಿಕ್ಕು ತೋಚು : ವಿಹತಯೂಥಪತಿಮುಷ್ಟ ಕರಿಕಲಭ ದಂತತಿತ್ರಸ್ತನಾಗಿ ಮುಂದುಗಾಣದೆ ವಿಹ್ವಲನಾಗಿ . . . ಬರ್ಪನ್ನೆಗಂ (ಕಾದಂಬ. ೯೩೬). **ಮುಂತುಗಾಣ್ :** ೨. ಮುಂತುಗಾಣದೆ ಮೂಱು ಲೋಕದ ಪ್ರಭುಮನೀನಿಂತೊಯ್ವರೆ ತರಳಾಕ್ಷಿ (ಅಜಿತ. ೯-೨೭೦). **ಮುಂದುಗಾಣು :** ೨. ಮುಂದುಗಾಣದ ಪರಮಯೋಗಾನಂದಮೂರ್ತಿ ಯನನ್ಯಭಾವನೆಯಿಂದೆ ಭಾವಿಸಲಹುದೆ (ಬಸವ. ೩೯-೧೧) ; ಭೀಷ್ಮನ ಶಪಾತಿಗಂದಿದಿರಾದ ಮದದಲಿ ಮುಂದುಗಾಣನಿವ (ಕುಮಾರವ್ಯಾ. ೨-೯೦). ೩. ಬಂದಹೆನೆಂದಱಯಲಿಕ್ಕಿಲ್ಲಾಗಿ ಸಂದೇಹ ಬಿಡದು ಮುಂದುಗಾಣದು ಲೋಕ (ಬಸವ. ೯೨) ; ಸ್ವೈರಂಧ್ರಿ ತನ್ನಯ ಮಂದಿರಕೆ ಬರೆಯಾ ತಿಲೋ ತ್ತಮೆ ಮುಂದುಗಾಣದೆ ನಗ್ನೆಯಾಗಿರೆ ಶಾಪವಶೆಯಾಗಿ (ಸಂಕ್ಷ. ೩-೦೯) ; ತಾಪದಲಿ ಮುಮುಕ್ಷುಕಿತನಾದನು ಮುಂದುಗಾಣದೆ ಹಲವನೆಣಿಸುತ ಹರುಷ ಗೆಟ್ಟಂತೆಂದನಾ ಮುನಿಪ (ತೊರವ. ೦-೯-೨೯). ೪. ಮುಂದಾಗುವು ದನ್ನು ತಿಳಿ ; ಭವಿಷ್ಯವನ್ನು ಅರಿ : ಮಾಣದೆ ಅರಳೆಯು ತಿಟ್ಟನೆ ತಿರುಗುವ ಗಾಣದೆತ್ತಿನಂತೆ ಪೂರ್ವಲಿಖಿತ ಮುಂದುಗಾಣಲೀಯದು (ಬಸವ. ೩೯೦). [ಮುಂದು₂ (< ಮುಂತು₂) + ಕಾಣ್]

**ಮುಂದುಗಾಣಿಸು** (ಕ್ರಿ). ದಾರಿ ತೋರು ; ಉಪಾಯ ತೋಚು : ಇಂದಿವರನಾಂ ಕಳಪಲಸುರವೈರಿಗೆ ಬೇಸಱಿಂದಿನಿಸು ತೋಱದಿರ್ಪುದೆ ಜೀಯ ತನಗಿದಕೆ ಮುಂದುಗಾಣಿಸದು (ಕೃಷಿಕಾ. ೨-೯೩).

[ಮುಂದು₂ (< ಮುಂತು₂) + ಕಾಣಿಸು]

**ಮುಂದುಗಾಣು** 'ಮುಂದುಗಾಣ್' ನೋ.

**ಮುಂದುಗಾಣ್ಕೆ** (ನಾ). ಮುಂದಿನದನ್ನು ಕಾಣುವಿಕೆ ; ಮುಂದಾ ಲೋಚನೆ ; ದೂರದೃಷ್ಟಿ : ಪೊಗಟ್ಟಿಸಜ್ಜ. ನಿನ್ನ ಮುಂದುಗಾಣ್ಕೆ ಯನ್ (ಅಶ್ವತ್ಥ. ೨೨-೯೯೯). [ಮುಂದು₂ (< ಮುಂತು₂) + ಕಾಣ್ಕೆ]

**ಮುಂದುಗಿಡಿಸು** 'ಮುಂದುಗೆಡಿಸು' ನೋ.

**ಮುಂದುಗಿಡು** 'ಮುಂದುಗೆಡು' ನೋ.

**ಮುಂದುಗೆಡಿಸು**, ಮುಂತುಗೆಡಿಸು, ಮುಂದುಗಿಡಿಸು (ಕ್ರಿ). ೧. (ಭಯ, ದುಃಖ, ಕೋಪ, ಮುಂತಾದವುಗಳಿಂದ) ದಿಕ್ಕುತೋಚ ದಂತೆ ಮಾಡು ; ಕಂಗೆಡಿಸು : ಪಟ್ಟದಾನೆ . . . ಸಪ್ತಾವಸ್ಥೆಯು ಮದದಿಂ ಮುಂದುಗಾಣದೆ ಮಾವಂತರಂ ಮುಱಿದಿಕ್ಕುತುಂ ಆರೆಕಾಱರ ನರೆದು ಸಣ್ಣಿಸುತ್ತುಂ ಮಂದಿಯುಂ ಮುಂದುಗೆಡಿಸುತುಂ . . . ಬಂದು (ಪಂಪಭಾ. ೨-೨೯) ; ರಾಧೇಯನರಸನ ಮುಂದುಗೆಡಿಸದೆ ಮಾಣನೋ (ಕುಮಾರ. ೧೧-೩೨) ; ವಿಜಯನ ವಾಜಿ ಬಂದು ಕೊಳಸಂ ಪೊಕ್ಕು ಸೀಗುರ್ಡಿದು ಪುಲಿಯಾಗಿ ಮುಂದುಗೆಡಿಸಿತು (ಕೃಷಿಕಾ. ೦೩-೩೬). ೨. ವಿವೇಕವಿಲ್ಲದಂತೆ ಮಾಡು ; ವಿವೇಚನೆಯನ್ನು ಕಳೆದುಕೊಳ್ಳುವಂತೆ ಮಾಡು : ಕನಲೋಭ ಮನಲೋಭ ಧನಲೋಭ ಮುಂದುಗೆಡಿಸಿ ಕಾಡಿ ಹುವೆನ್ನಾ (ಬಸವ. ೩೦೩). **ಮುಂತುಗೆಡಿಸು :** ೧. ಮಱುಹು ಮನವ ಮುಂತುಗೆಡಿಸಲು ಹರಪಸಂ ಮಾಱಲಾದಿಮಯ್ಯಂ ತಾನಿದಿರಿದೆಂದಱಯ ದಿರುತಿರಲ್ಕಾ ದಿನಂ ತೀರ್ದುದು (ಸೋಮಕು. ೯-೯). ೩. ನಾಶಮಾಡು ; ಧ್ವಂಸಗೊಳಿಸು : ಶತಕೋಟ್ಯಕ್ಕ ಸದ್ವೃಕ್ಷಸಂತತಿಯಘುತಿಮಿರವನು ಮುಂತು ಗೆಡಿಪ ಮುನ್ನೇಸಱುದದಿ ಮುನಿಕಾಂತನ ಮೂರ್ತಿಯೊಪ್ಪಿದುದು (ಶ್ರೀಕಾಶಿ ೦-೩೬). **ಮುಂದುಗಿಡಿಸು :** ೧. ಭೂತಳದೊಳ್ ಹಿಮ ಮೊತ್ತರಿಸಿತು ಭೂವನಜನಮನುಱಿ ನಡುಗಿಸುತಂ . . . ಮುಂದುಗಿ [ಡಿಸು. ಗೆ]ಡಿಸುತುಂ ಮುಸುಕಿಡುತುಂ (ಗದ. ೯-೬೮) ; ಕಳ್ಪಡಗಿನ ವರ್ಗಳ್ ರತ್ನಂ ತುಂಬಿರ್ದ ತದ್ವಹಿತ್ರಮನೆಂಬುಗಳಿಂದೆಚ್ಚು ಮುಂದು ಗಿಡಿಸಿದರಾಗಳ್ (ಚಾವು. ೦೨-೩೬). [ಮುಂದುಗೆಡು + -ಇಸು₃]

**ಮುಂದುಗೆಡು**, ಮುಂತುಗೆಡು, ಮುಂದುಗಿಡು (ಕ್ರಿ). ೧. (ಭಯ, ದುಃಖ, ಕೋಪ ಮುಂತಾದುವುಗಳಿಂದ) ದಿಕ್ಕು ತೋಚದಾಗು ; ಕಂಗೆಡು : ಸಂಸಾರವೆಂಬ ಸರ್ಪ ಮುಟ್ಟಲು ಪಂಚೇಂದ್ರಿಯವಿಷಯವೆಂಬ ವಿಷದಿಂದೆ ಆನು ಮುಂದುಗೆಟ್ಟೆನಯ್ಯ (ಬಸವ. ೨೦) ; ದಸಿ . . . ಇಂತಂಗಾಲ ನೆಟ್ಟು ಕಟ್ಟುಗಿಯಲಾ ನೋವಿನಿಂ ನಡೆಯುಡುಗುತಂದು ನೊಂದು ಕಂದಿ ಕುಂದಿ ಮುಂದುಗೆಟ್ಟು (ಉತ್ತರ. ೦೦-೧೦೩ ಪ) ; ವಿವಿಧ ಭಾವದ ಭೇದದಲಿ ಮನ ಮುಂದುಗೆಡುತಿರ್ದುದು ಧನಂಜಯನ (ಕುಮಾರ. ೬-೩೨) ; ವಿರಹದೆ ಪಲುಬುವಳಳುವಳು ಮುಂದುಗೆಡುವಳು ಚಿಂತಿಪಳು (ಕಿಂಪಿ. ೯-೨೦೩). ೨. ವಿವೇಕವಿಲ್ಲದಾಗು; ವಿವೇಚನೆಯನ್ನು ಕಳೆದು ಕೊಳ್ಳು : ನಾರಿಯೆಂಬ ರೂಹಿಂಗೆ ನೀವು ಒಲಿದು ಬಂದಿರಣ್ಣ ಮೂತ್ರವು ಬಿಂದು ಒಸರುವ ನಾಳವೆಂದು ಕಂಗಾಣದೆ ಮುಂದುಗೆಟ್ಟು ಬಂದಿರಣ್ಣ (ಶಿವಶರ. ೩. ೬೬-೦೬೬) ; ಎಲ್ಲರುಂ ಮುಂದುಗೆಟ್ಟೀನುವಂ ಕಾಣದಿರೆ ಎಲ್ಲರ್ಗೆ ಭಯವೇಱೆ ನುಡಿ ಮುಂದುದೋಱದಿರೆ (ಶಿವತ. ರೇ. ೬೬-೬). ೩. ಏಳಿಗೆಯುಂ ಕೆಡು; ಭವಿಷ್ಯವು ಹಾಳಾಗು: (*). ೪. ನಷ್ಟಕ್ಕೊಳ ಗಾಗು; ಹಾನಿಗೊಳ್ಳು : (*). **ಮುಂತುಗೆಡು :** ೧. 'ಮುಂತು ಗೆಡಿಸು' ಪರಾ. **ಮುಂದುಗಿಡು :** ೧. ಕಾಮನ ಬಾಣಕ್ಕೆ ಗುಱಿಯಾಗಿ ಮಱುಗಿ ಮಲ್ಲಳಿಗೊಂಡು ಮೆಲ್ಲನೆಳ್ದು ಮುಂದುಗಿ[ಡು. ಗೆ]ಟ್ಟಂತಂತೆ ಸಿಂಗರಿಸಿ ಸಿಡಿಮಿಡಿಗೊಂಡು ನಡೆತರ್ಪಾಗಳ್ (ಗದ. ೨-೦೦೩ ಪ) ; ಮುಂದು ಗಿಡೆ ಗೂಗೆ ಬೆಳಗದೆ ನಿಂದನೆ ರವಿ ಜಗಮನಂತೆ ಕವಿ ದುರ್ಜನನೇಂ ಮುಂದುಗಿಡೆ ಬುಧರ್ಗೆ ಪರಮಾನಂದಂಬಡೆವಂತು ಪೇೞದಿರ್ಕುಮೆ ಕೃತಿಯಂ (ಕಾಶ್ಯಕ. ೦-೮೩). [ಮುಂದು₂ (< ಮುಂತು₂) + ಕೆಡು₁]

**ಮುಂದುಗೆಯ್** (ಕ್ರಿ). ಮುಖ್ಯವಾದುದೆಂದು ಪರಿಗಣಿಸು : ನಿಸಗಪ್ಪರಸ ದುರ್ಯೋಧನನೊಲವಂ ಮುಂದುಗೆಯ್ದು ಬೆಸಕಯ್ವರೆ ನಿನ್ನನುಜರೆ ರಱ್ದಿಸಿಗಂ ಕಿಸುಱನಿಸಾಗದು ಮಗನೆ ನೀನೊಡಂಬಡವೇೞ್ಕುಂ (ಪಂಪಭಾ. ೯-೬೩). [ಮುಂದು₁ (< ಮುಂತು₁) + ಕೆಯ್₁]

**ಮುಂದುಗೊಳ್**, ಮುಂತುಗೊಳ್, ಮುಂದುಗೊಳ್ಳು (ಕ್ರಿ). ೧. ಮುಂದೆ ಇಟ್ಟುಕೊಳ್ಳು : ತನತನಗೆ ಪೊನ್ನ ರಾಸಿಯನನವರತಂ ಮುಂದುಗೊಂಡನೇಕ ಕುಬೇರರ್ ಜನಿಯಿಸಿ ನಿಂದಂತಿರ್ಪುದು ಕನಕವ್ಯವ ಹಾರದಿಂದೆ ವೈಶ್ಯಕದಂಬಂ (ಗದ. ೨-೯೩). ೨. ಮುಖ್ಯವಾದುದಾಗು; ಪ್ರಮುಖವೆಂದು ಪರಿಗಣಿಸು : ತನ್ನ ಸ್ವೇಚ್ಛಾಲೀಲಾವಿಲಾಸದ ನೆನಹಿಂದ ತನ್ನ ಚಿತ್ಪ್ರಭಾಸಾಮರ್ಥ್ಯಶಕ್ತಿಯು ಮುಂದುಗೊಂಡು . . . ಅನಂತಕೋಟಿ ಆತ್ಮರುಗಳನು ತನ್ನಲ್ಲಿಯೆ ಪುಟ್ಟಿಸಿ (ಚೂಚ್ನಸಂ. ೨-೨) ; ಮುಂದೆ ತಮಂಧಮಿಟ್ಟಣಿಸಿ ರಾಹುವಿನಂತಿರೆ ಪೂರ್ವವೈರಮಂ ಮುಂದು ಗೊಳುತ್ತೆ ಎನ್ನನಿದು ಮಾಡುವ ಮಾಳ್ಕೆಯುನಿಂದು ಮಾಳ್ಪೆನಾನೆಂದು ತದೀಯರೂಪನುಱೆ ನುಂಗೆ (ಗದ. ೯-೦೦೦). **ಮುಂತುಗೊಳ್ :** ೩. ಮುಂದಾಗು; ಮುನ್ನುಗ್ಗು ; ಮುಂದುವರಿ : ಮುಂತುಗೊಂಡಲ್ಲಿ ಜಗಳವ ಹತ್ತಿಸುವೆನೆಂದು ಚಿಂತಿಸುವ ಮನ ಕೊಂಡೆಯಕ್ಕೆಳಸಿ ಗುರುಗದನ ತಿಂತೆಮಸಗುವ ಬಾಯಿ . . . ಸಿಂಗರಂ ನಾರದಂಗೆ (ಸೋಮಕು. ೦-೨೯). **ಮುಂದುಗೊಳ್ಳು :** ೨. ಆಳಿಯಾಸೆಯನ್ನೇ ಮುಂದುಗೊಂಡು ಸುಳಿದಾಡಿ . . . ತನ್ನನ್ನೇ ಮಾರಿ ಬಂದ ಸುಖವನೆಂಬ ಮೈಯರಿಯದ ಮರುಳು ಮಾನವನ ಕಾಡುಬಾಳಿನಂತಲ್ಲ ಆವರ ಬಾಳು (ಸೋಮಕು. ೩೩ ಕೃಸ್ತಾಪಪ).

[ಮುಂದು₂ (< ಮುಂತು₂) + ಕೊಳ್₁]

**ಮುಂದುಗೊಳ್ಳು** 'ಮುಂದುಗೊಳ್' ನೋ.

**ಮುಂದುದೆಗೆ** (ಕ್ರಿ). ಸ್ಪಷ್ಟಗೊಳಿಸು ; ವ್ಯಕ್ತಪಡಿಸು : ಸುಗ್ಗಿ ಬರ್ಪುದನೀ ನಂವನಕಾನೆ ಮುಂದುದೆಗೆದಂ (ಜಗ೦. ೧೪-೬೩).
[ಮುಂದು$_1$ (< ಮುಂತು$_1$) + ತೆಗೆ$_1$]

**ಮುಂದುದೋಱು್** 'ಮುಂದುದೋಱು' ನೋ.

**ಮುಂದುದೋಱು**, ಮುಂದುದೋಱು್ (ಕ್ರಿ). ೧. ತೋಱು ; ವ್ಯಕ್ತವಾಗು : ಎಲ್ಲರುಂ ಮುಂದುಗೆಟ್ಟೇನುವಂ ಕಾಣದಿರೆ ಎಲ್ಲರ್ಗೆ ಭಯಮೇಱಿ ನುಡಿ ಮುಂದುದೋಱದಿರೆ (ಮೋಹನ. ದೀ. ೬೬-೮). **ಮುಂದುದೋಱು್**: ೨. ವಿವೇಚನೆಯುಂಟಾಗು ; ವಿವೇಕದಿಂದಿರು : ಮುಳಿಸಿಂದವನುಂ ಮೊಱೆದಿಬ್ಬ ಮುಟ್ಟಿ ಮುಂದಂಡೆಯುನೂಱಿ ಮೇಲ್ವರಿವನೇಂ ಬಗೆ ಸೂರ್ಕೆರೆ ಮುಂದುದೋರ್ಕುಮೇ (ಜಕವಿ. ೪-೧೪೦).
[ಮುಂದು$_2$ (< ಮುಂತು$_2$) + ತೋಱು]

**ಮುಂದುರು** 'ಮುಂದುಱು$_1$' ನೋ.

**ಮುಂದುರುಗಯ್** (ಕ್ರಿ). ಮುಂದಕ್ಕೆ ಚಾಚಿದ ಹಸ್ತ: ನೀಡಿದ ಕೈ : ಗುಂಡಪ್ಪ:—(ಮುಂದುರುಗಯ್ಯಿಂದ ಅದನ್ನೆಳೆದುಕೊಂಡು ಓದಿಕೊಳ್ಳುತ್ತಿರುವನು) (ಮುಂತ್ರಶ. ೧೩೦-೪).
[ಮುಂದುರು (< ಮುಂದುಱು$_1$) + ಕಯ್$_2$ (< ಕೆಯ್$_2$)]

**ಮುಂದುವಡು** (ಕ್ರಿ). ಮುಂದಕ್ಕೆ ಸಾಗು; ಮುಂದೆ ಬರು: ಬೇಹುಕಾರ: — (ಮುಂದುವಟ್ಟು, ಲಿಂಗರಾಜನಿಗೆ ಗುಟ್ಟಿನ ವರದಿಯನ್ನು ಕಿವಿಗೇಳಿಸ ತೊಡಗುವನು) (ಮುಂತ್ರಶ. ೧೨೦-೧೪).
[ಮುಂದು$_2$ (<ಮುಂತು$_2$)+ಪಡು$_1$]

**ಮುಂದುವರಿ**, ಮುಂದರಿ-(ಕ್ರಿ). ೧. ಮುಂದಕ್ಕೆ ಹೋಗು, — ನಡೆ : ಒಂದೆರಡು ಕುಱುಹುಗಳ ಕಂಡೇ ಮುಂದುವರಿಯರು ನೀತಿವಂತರು (ಕೌಶಿರಾ. ೩೮-೫) ; ಸಮರಸಜೀವನದ ದೈವೀಪಥದಲ್ಲಿ ಅವನು ಮುಂದುವರಿಯುತ್ತಾನೆ (ಜಗದಾ. ೩೪). ೨. ರಭಸದಿಂದ ಮುನ್ನುಗ್ಗು ; ಧಾವಿಸು : ನೊಂದು ಮರಳದೆ ಮಸಗಿ ಸೂರ್ಯನ ನಂದನನು ತಾಗಿದನು ಗುರುಸುತ ಮುಂದುವರಿದನು ತಲೆ ಹಱಿದರೆನ್ನಟ್ಟಿ ಕಲಿಯೆನುತ (ಕುವ್ಯಾದ್ರೋ. ೧೪-೩೩) ; ಶರವಿಬ್ಬಗಿಯು ಮಾಡಿತು ಮುಂದುವರಿದಂಡಿಸಿದ ಸೂಕರನ (ತೊರರಾ. ೩-೩-೨೦) ; ಇದುವದನೆ ರುಕ್ಮಿಣಿದೇವಿಗೆ ಗರ್ಭ ನಿಂತು ಗರ್ಭಿಣಿಯಾದುದಕೆ ಮುಂದುವರಿದು ಮೇಘ ಗರ್ಜಿಸಿದುವು ದೇವದುಂದುಭಿಗಳ ಹೊಡೆದಂತೆ (ಮೋಹತ. ೪-೩೨). ೩. ಮುಂದಾಗು ; ಮುಂದೆ ಬರು : ಅವನದ್ದು ಯಾವ ಕೆಲಸಕ್ಕೂ ಮುಂದುವರಿಯುವ ಸ್ವಭಾವವಲ್ಲ (ರೂಢಿ). ೪. ಮೊದಲು ಕಾಣಿಸಿಕೊಳ್ಳು, — ಮೂಡು : ಅವಳಾಡಿದ ಮಾತಿಗೆ ಮೈನವಿರ್ಮುಂದುವರಿದು ಗುಡಿಗಟ್ಟಿ ಕುಂದದ ಗದ್ಗದದುಲುಹಿಂದ ಸಖಿಯೊಡನೆಂದಳು ಮಾಱುತ್ತರವ (ಕಂಪಿ. ೬-೧೩೮). ೫. ಮುಂಚಿತವಾಗಿ ಹೋಗು : ತನ್ನ ಮಯ್ದುನನಪ್ಪಮೋಘಾಸ್ತ್ರ ಧನಂಜಯನ ಬರವಿನ ಸಂತಸದೊಸಗೆ ಪಡೆಪಾತಂ ಮುಂದುವರಿವಱಿಪುವಂತೆ . . . ಕೆತ್ತಿತ್ತು ವಲ್ ಬಲಗಣ್ಣುಂ ಬಲದೋಳುಮಾ ಬಲಿಬಲಪ್ರಧ್ವಂಸಿಗೆ (ಪಂಪಭಾ. ೪-೩೨ವ). ೬. ಆತುರಪಡು ; ತವಕಿಸು : ಮನಮೊನ್ನಂ ಮುಂಬರಲ್ ಮುಂದುವರಿವುದನೆ ತೋರ್ಪಂತೆ ನೀಳ್ದತ್ತು ಸುಯ್ (ಕಾದಂಪೂ. ೬೫೬) ; ಬೆಲೆಗೊಂಡು ನತರ್ಕಳ ಪಾಪರಾಶಿಯುಂ ಭರವಹನಕ್ಕೆ ಮುಂದುವರಿವೀಯುಭಯಪ್ರದಹಸ್ತಮೊಂದು ಮೇಣ್ (ವಸ್ತವಂ. ೧-೫). ೭. ಅಭಿವೃದ್ಧಿ ಹೊಂದು ; ಏಳಿಗೆಯನ್ನು ಪಡೆ : ಆತ್ಮಸಿರೀಕ್ಷಣೆಯಿಂದಲೇ ನಾವು ಮುಂದುವರಿಯಬಹುದು (ಅಶನಾ. ೫) ; ಮುಂದುವರಿದ ರಾಷ್ಟ್ರಗಳ ಸರಿಸಮಕ್ಕೆ ನಮ್ಮ ದೇಶವೂ ನಿಲ್ಲಬೇಕು (ರೂಢಿ). ೮. ಅಧಿಕವಾಗು ; ಅತಿಶಯಗೊಳ್ಳು : ಮುಂದುವರಿದುತ್ಸವದ ಮೊಳೆನಗೆಯು . . . ಇಂದುಮುಖಿ ಗಂಪಸಂ ಕಲೆದಿರುಳು ಕನಸ ನಾನಿಂತಿಂತು ಕಂಡೆನೆನಲು (ಸೋಮಪುಚ. ೧-೬೩) ; ಮುಂದುವರಿದ ವಿಲಾಪಪಂತ್ರದ ಸಂದ ಪೂಜಾಸ್ತವವಲೊಯ್ಯನೆ ಸಂದರುಶನವ ಮಾಡಿದಳು ಮಾಯಾಮಹೇಶ್ವರನ (ತೊರರಾ. ೪-೫-೧೬). **ಮುಂದರಿ** : ೧. ಪತ್ನೀ ಸೋದರರು ಮಾರ್ಗಮಧ್ಯದಲ್ಲಿ ಮೃತರಾಗುತ್ತಾರೆ, ಯುಧಿಷ್ಠಿರನೊಬ್ಬನೇ ಮುಂದರಿಯುತ್ತಾನೆ (ಭಾರದ. ೧೦೩). ೨. ಎನ್ನಯಾ ಭಾರಿಗದೆಯು ನಿನ್ನ ಜಯಿಸಿ ಸಾರವರಿವುದು ಸಾರಿ ಮುಂದರಿವುತಿದೆಕೊ ಮಿಾರಿ ಬರುವುದು (ಕರ್ಣಕಾ. ೧೧). ೩. ಹೇಗಸರನ್ನು ಕೊಲ್ಲುವ ಗಂಡಸರ್ಪರೂ ಕತ್ತಿಯನ್ನೆತ್ತಿ ಮುಂದರಿಯುದ್ದರಿಂದ ವಿಷಕ್ಕೆ ಈ ಕಾರ್ಯವನ್ನು ಮಾಡಬೇಕಾಯಿತು (ಕೃಪಾಕು. ೨-೧). ೬. " ಮುಂದರಿ . . . ಆತುರದಿ ಕೆಲಸ ಮಾಡು ; ಮುನ್ನಡೆ ಇಡು " (ಶಾಪಕೋ. ೩೨). ೭. ಎರಡನೇ ದೇಶದವರಿಗಿಂತ ತಾವು ಮುಂದರಿಯಬೇಕೆಂದು ಯಾವಾಗಲೂ ಬಯಸುತ್ತಿರುತ್ತಾರೆ (ಮುಂಬಬು. ೪-೧೩೯).
[ಮುಂಪ್ಪು$_2$ (<ಮುಂತು$_2$) + ಪರಿ$_2$]

**ಮುಂದುವರಿಕೆ** (ನಾ). ೧. ಯಾವುದಾದರೂ ಕೆಲಸವನ್ನು ಮುಂದಕ್ಕೆ ಹಾಕುವಿಕೆ,–ಮುಂದೂಡುವಿಕೆ : " ನಿಲುವಳಿ, ಮುಂದುವರಿಕೆ " (Adjournment ಶತ್ರಿಸಿ. ೩). ೨. ಮುನ್ನಡೆಸುವಿಕೆ ; ಸಾಗಿಸುವಿಕೆ : ಈ ಕೆಲಸದ ಮುಂದುವರಿಕೆಗಾಗಿ ನಾವು ಎಲ್ಲ ಪ್ರಯತ್ನಗಳನ್ನೂ ಮಾಡಿದ್ದಾಯಿತು (ರೂಢಿ). [ಮುಂದುವರಿ + — ಕೆ]

**ಮುಂದುವರಿಸು** (ಕ್ರಿ). ಮುಂದುವರಿಯುವಂತೆ ಮಾಡು ; ಮುಂದಕ್ಕೆ ಸಾಗಿಸು : ಮನುಷ್ಯನು ಕಾರ್ಯ ಮಾಡುವದನ್ನು ನಿಲ್ಲಿಸಿದರೂ ಪ್ರಕೃತಿಯ ಗುಣಧರ್ಮಗಳು ತಮ್ಮ ಕಾರ್ಯವನ್ನು ಮುಂದುವರಿಸುತ್ತವೆ (ಧರ್ಮಸಾ. ೧೩೨) ; ಅಪ್ಪಾಜಿಯೂ ಆ ಬ್ರಾಹ್ಮಣನೂ ಸಂಭಾಷಣೆಯನ್ನು ಮುಂದುವರಿಸುತ್ತಾ ಕುಳಿತುಕೊಂಡರು (ಕೆಂಗಾಳ್ಯ. ೩).
[ಮುಂದುವರಿ + — ಇಸು$_3$]

**ಮುಂದುವಾಯ್** (ಕ್ರಿ). ಮುಂದುವರಿ : ಮುನ್ನುಗ್ಗು : ದಂಡೆಯ ನೊಡ್ಡಿ ನಿಂದು ಪರಿದಿತ್ತಲುಮತ್ತಲುಮೊರ್ಮೆ ಚೆಲ್ಲದಿಂ ಚೆಂಡಿಸಿ ಮುಂದುವಾಯೆ ಚಿಕದೇವನವಂ ಕವಿದೊತ್ತೆ (ಜಕವಿ. ೪-೧೪೦).
[ಮುಂದು$_2$ (<ಮುಂತು$_2$)+ಪಾಯ್$_1$]

**ಮುಂದುಱು$_1$**. ಮುಂದುರು (ಕ್ರಿ). ೧. ಮುಂದೆ ಸಾಗು; ಮುಂದುವರಿ: 'ಮುಂದುಱುವರಿ', 'ಮುಂದುಱುವಾಯ್ತರ್' ಪರಾ. **ಮುಂದುರು** : ೨. ಮುಂದಕ್ಕೆ ಚಾಚು,– ನೀಡು : 'ಮುಂದುರುಗಯ್' ಪರಾ.
[ದೇ.॥ ತಮಿ. ಮುನ್ನುಱು]

**ಮುಂದುಱು$_2$** (ನಾ). ಮುಂದೆ ಸಾಗುವುದು; ಮುಂದುವರಿಯುವುದು: " ಮುಂದುಱುವೆನಲ್ ಮುಂಬರಿವುದಕ್ಕೆ ನಾಮಂ " (ಶಬ್ದಕೈ. ೨೩) ; "ಮುಂಬರಿವುದು ಮುಂದುಱುವೆನಿಕು" (ಶಬ್ದಮಂ. ೫೦). [< ಮುಂದುಱು$_1$]

**ಮುಂದುಱುವರಿ** (ಕ್ರಿ). ಮುಂದೆ ಸಾಗು ; ಮುಂದುವರಿದು ಹೋಗು : ಗುಡಿಯುಂ ಸಿಂಧಂಗಳುಂ ಮುಂದುಱುವರಿಯೆ ದಿನಾಧೀಶಬಿಂಬುಂಬರಂ (ಶಂರಾವಿಜಾ. ೧೫-೨). [ಮುಂದುಱು$_1$ + ಪರಿ$_2$]

**ಮುಂದುಱುವಾಯ್ತರ್** (ಕ್ರಿ). ಮುಂದುವರಿದು ಬರು : ಧಾವಿಸಿ ಬರು : ಮುಂದುಱುವಾಯ್ತರ್ಪಳಗಂದಿಗಳ್ ತೊರೆದು ತೋರಂಬೆತ್ತ ಬಲ್ಗಿಚ್ಚಲೊಳ್ವೊಱೆಯುಂ ಪೆರ್ದೊಡೆಯಿಂದಿಱುಂಕಿ ಮೊಲೆಯಿಂ ಪಾಯ್ತರ್ಪ ಪಾಲಿಂದೆ ಪಾಲ್ದೊಱೆಯುಂತಾ ತೊಱೆಯುಪ್ಪುದು (ಲೀಲಾವ. ೫-೮೨).
[ಮುಂದುಱು$_2$ + ಪಾಯ್ತರ್]

**ಮುಂದೂಕು** (ನಾ). (ಕರಾ) ರೋಗ ಮುಂತಾದುವುಗಳ, ತುಂಬ ಮುಂದುವರಿದ ಸ್ಥಿತಿ,– ಉಲ್ಬಣಸ್ಥಿತಿ. [←ತುಳು. ಮುಂದೂಕು]

**ಮುಂದೂಡು** (ಕ್ರಿ). ೧. ಮುಂಭಾಗಕ್ಕೆ ತಳ್ಳು, –ನೂಕು : ರಘುನಾಥ ಮಾಸ್ತರರು ಮನೆಯ ಬಾಗಿಲವನ್ನು ಮುಂದೂಡಿದರು (ರಂಗರೋ. ೧೦೪).

೨. ಮುಂಭಾಗಕ್ಕೆ ನೀಡು : ಮುಂಚಾಚು : ಹಂದಿಯು . . . ಮುಂದಿರುವ ಬಲೆಯನ್ನು ಸೀಳಿಬಿಡಬೇಕೆಂದು ಮೂತಿಯನ್ನು ಮುಂದೂಡಿ ಬಲೆಯ ಕಣ್ಣಿನಲ್ಲಿ ಸಿಕ್ಕಿಕೊಂಡಿತು (ಹುಟ್ಟಿಹ. ೨೦). ೩. (ಕಾಲದ ವಿಚಾರದಲ್ಲಿ) ಮುಂದಕ್ಕೆ ಹಾಕು : ಇಷ್ಟುಕಾಲ ಮುಂದೂಡಿ ಅಂತೂ ಈ ದಿನ ಹೊರಟಿದ್ದ ನಮ್ಮ ಕಾಶೀಯಾತ್ರೆ — ನಿಮ್ಮ ಸಹವಾಸದಿಂದ ನನಗೊಂದು ಪುಣ್ಯಯಾತ್ರೆ ಎಂದೇ ಅನಿಸುತ್ತದೆ (ಹೊಸಕ್ಷಿ. ೩೫) ; ಬೇಗನೆ ಮಾಳ್ಪುದು ಪುತ್ರಿಯ ಮದುವೆಯ ಮುಂದೂಡಲಾಗದು ನೋಡ (೩೦ಕಾಶ. ೨೦೪-೬). ೪. ಮುಂದೆ ಹೋಗುವಂತೆ ಮಾಡು ; ಮುಂದುವರಿಯುವಂತೆ ಪ್ರೇರಿಸು : ಆ ಹಾಳುಗುಡಿಯ ದಾರಿಯಲ್ಲಿ ಯಾರೂ ಕಾಣಲಿಲ್ಲ . . . ಆದರೂ ಆಶೆ ಅವರನ್ನು ಬಿಡಲಿಲ್ಲ; ಮುಂದೂಡಿತು (ಕುಂಕುಮ. ೨೫).

[ಮುಂ₂ (<ಮುನ್₂) + ದೂಡು (<ದೊಂಟು₁)]

**ಮುಂದೂಳ್** (ನಾ). (?) : ತತ್ತಮೋಜಳದ ಮುಂದೂಳ ದಾಟಿಯಾಗ್ಗಳಂತಿರೋಳಿಯೊಳ್ ಕೇಳೀಮಯೂರಂಗಳ್ ಉದ್ದಮೊಗೆದು ಪೊಂಗಡೆಯ ಪಕ್ಕವಣಿಗೆ ಪಾಜಿಯುಂ (ವರ್ಧಪು. ೬-೨೩ ಪ). [ ? ]

**ಮುಂದೆ₁** ' ಮುಂತೆ₁ ' ನೋ.

**ಮುಂದೆ₂** (ನಾ). ಜಾಡಿಯಾಕಾರದ ಒಂದು ಬಗೆಯ ಹಿತ್ತಾಳೆಯ ಪಾತ್ರೆ : (೬). [ದೇ.॥ ತಮಿ. ಮುನ್ತೆ, ಪೊನ್ತೈ; ಮಲ. ಮೊಂತ ; ತೆಲು. ಮುಂತ; ಕೊ. ಮೂತ; ಕುವಿ. ಮೂಂತ]

**ಮುಂದೆ₃** ' ಮುಂತೆ₂ ' ನೋ.

**ಮುಂದೆಣಿಕೆ** (ನಾ). ಮುಂದಾಗುವುದನ್ನು ಕುರಿತು ಆಲೋಚಿಸುವಿಕೆ ; ಮುಂದಾಲೋಚನೆ : ಆ ವಿರಹಿಯುವಳ ಬೇಡಿಕೊಂಡು ಭರದಿಂದವನ ಕರೆಸಿ ಕೂಡಿದಳು ಕಾತರರ್ಗುಂಟೆ ಮುಂದೆಣಿಕೆಯು (ಕೃಕಂಶ. ೨-೪೬).

[ ಮುಂದು₂ ( < ಮುಂತು₂ ) + ಎಣಿಕೆ ]

**ಮುಂದೆಣಿಸು** (ಕ್ರಿ). ಮುಂದಾಗುವುದನ್ನು ತಿಳಿ : ಭವಿಷ್ಯವನ್ನು ಅರಿ; ರಾಯವಜೀರನೆಂಬ ಬಿರುದುಂ ಬಿರುದಾಂಕಿದಿರಾಂಪರಿಲ್ಲವೆಂಬೀಯದಟಿಂದೆ ಮುಂದೆಣಿಸಲಗ್ಗದ ವಾರುಪಮೊಗ್ಗರಂಗಳಿಂ . . . ಮುತ್ತಿದಂ (ಶಕಟ. ೨-೬೪). [ ಮುಂದು₂ ( < ಮುಂತು₂ ) + ಎಣಿಸು ]

**ಮುಂದೆಯ್ದು, ಮುಂದೈದು** (ಕ್ರಿ). ಮುಂದಕ್ಕೆ ಸಾಗು ; ಮುಂದುವರಿ : ನಡೆ ಸಾರ್ ಮುಂದೆ[ಶಾತಾಂ. ದ]ಯ್ದು ಬೆಳ್ನಾರಮನೆ ಬಗಿನಿಕುಂಜಂಗಳಂ ಸೋದಿಸು (ಕಬಕಂ. ೬-೪೯). ಮುಂದೈದು : ಮುಂದೈದುವ ತುರಂಗಮಾಧ ಕೂಡೆ ನಡೆಯುತ್ತೆ (ಕೈಬಿಭಾ. ೧೬-೨೦) ; ಮುಂದೈದಲಾ ಗಿರಿಯ ಸಾರವತ್ತಾದ ವೃಕ್ಷಗಳೆಲ್ಲ ಬಿಂದ್ಯೆದುತೋರಂತೆ ನಿಜಬಂಧುಗಳನು ಬೀಳ್ಕೊಡುವಂತೆ ಮಹೂರ್ತಮನುಸರಿಸಲು (ಶಂಕಾರಾ. ೫-೦-೨೦).

[ ಮುಂದು₂ ( < ಮುಂತು₂ ) + ಎಯ್ದು ]

**ಮುಂದೆಸೆ** (ನಾ). ಮುಂದುಗಡೆ ; ಎದುರು : ಸ್ಥೂಲ ಸೂಕ್ಷ್ಮ ಕಾರಣ ಈ ಮೂಜಿ ಮುಂದೆಸೆಯಲ್ಲಿ ಕಂಡೆ (ಮೋಳಮಾ. ೦೪೯-೫೬೬) ; ಬಸವನಂ ಬರಹೇಳ್ದು ಕಳುಹಲು ಬಸವನಾಗಳೆ ಕೇಳ್ದು ಬಂದಾ ವಸುಮತೀಶನ ಮುಂದೆಸೆಯೊಳಿರಲು (ಬಸಪು. ೫೬-೨೯) ; ನಳಿನಬಾಂಧವನ ಮುಂದೆಸೆಯೊಳುಮಿಗೆ ಮಿಂಚುಬುಳುವಿನ ಮಿನುಗು ರಂಜಿಪುದೇ (ಮೋಹತ. ೦೫-೦೦). [ ಮುಂ₂ ( < ಮುನ್₂ ) + ದೆಸೆ₂ ]

**ಮುಂದೆಱಪು** (ನಾ). ಮುಂಭಾಗದಲ್ಲಿರುವ ಖಾಲಿಯಾದ ಪ್ರದೇಶ ; ಮುಂದುಗಡೆಯ ಬಯಲು : ಸಜೀಜವ್ವನೆಯೊರ್ವಳ್ ಸೌಧದ ಮುಂದೆಱಪೊಳ್ಮೆಱೆದಳ್ (ಅದ್ಭದೀ. ೪೩-೨೩).

ಮುಂ₁ ( < ಮುನ್₁ ) + ತೆಱಪು ]

**ಮುಂದೈದು** ಮುಂದೆಯ್ದು ' ನೋ.

**ಮುಂದೊತ್ತು** (ಕ್ರಿ). ಮುಂದುವರಿ ; ಮುನ್ನುಗ್ಗು : ಭರದಿಂ ಬಂದೊತ್ತಿ ಮುಂದೆಮ್ಮ ಸಕದೆಸಕದಿಂ ತೀವಿ ಮುಂದೊತ್ತೆ ಗೋದಾವರಿ (ಸಮಶ. ೧-೩೯); ಮುಂದೊತ್ತುವ ನಾಯ್ಗಳ ಬೊಗಳುವ ಬಾಯ್ಗಳ ಗೇಣಂಬುಗಳಂ ಕಟ್ಟಿದೆನು (ಹದ್ಮರ. ೨೬-೭). [ ಮುಂದು₂ ( < ಮುಂತು₂ ) + ಒತ್ತು₁ ]

**ಮುಂದೊದಗು** (ಕ್ರಿ). ೧. ಮುಂದೆ ಹೋಗು : ಮುಂದಾಗು : ಶಚಿಯುಮೊಲಿದು ಕೈಗೊಟ್ಟು ಕರೆತರೆ ಜಿನನ ಕಾಣುತ್ತಲೆ ಮುಂದೊದಗಿ ಮೊಜಿವರ್ಧ್ಯಮೆತ್ತಿ ಜಯೆಂದು ಭಕ್ತಿಯುಲೆಱಗಿ (ಶಾಳ್ಶಾ. ೩೩-೯೦). ೨. ಅನಂತರದಲ್ಲಿ ಉಂಟಾಗು : ತರುವಾಯದಲ್ಲಿ ಸಂಭವಿಸು : ಮುಂದೊದಗಬಹುದಾದ ತೊಂದರೆಗಳಿಗೆ ಈಗಲೇ ಪರಿಹಾರವನ್ನು ಕಂಡುಕೊಳ್ಳಬೇಕು (ರೂ). [ ಮುಂದೆ₂ ( < ಮುಂತೆ₂ ) + ಒದಗು₁ ]

**ಮುಂದೋಳು** (ನಾ). ತೋಳಿನ ತುದಿ : ತನ್ನ ನಿತಂಬವು ನೀರಿನೊಳಲುಗಲು ಮುಂದೋಳು ದಡದೊಳಗಿರಲು ಮಂಡೂಕಿ ಪುರುಷಾಯಿತಾಸಕ್ತಳೆಂಬಂತೆ ಪ್ರತಿಬಿಂಬದೊಳು ತೋರ್ಪಳಲ್ತೆ (ಗಾಭಾಶ. ೪-೯೦).

[ ಮುಂ₁ ( < ಮುನ್₁ ) + ತೋಳು ( < ತೋಳ್ ) ]

**ಮುಂಧಾಳಿ** (ನಾ). ಮುಂದೆ ಧಾವಿಸಿ ಮಾಡುವ ಮುತ್ತಿಗೆ : ನುಗ್ಗಿ ಮಾಡುವ ಧಾಳಿ : ಮೇಲು ಮುತ್ತಿಗೆಯಾಯ್ತು ಯವನರ ಧಾಳಿ ಗಂಧರ್ವಾವಳಿಯ ಮುಂಧಾಳಿಗುರಗಾಧಿಪತಿಯೊಬ್ಬನೆ ನಿಂದನಿದಿರಾಗಿ (ಕಭಾಗ. ೪-೦೬-೦೬). [ ಮುಂ₁ ( < ಮುನ್₁ ) + ಧಾಳಿ ( < ದಾಟಿ ) ]

**ಮುಂಧೋರಣ** (ನಾ). ಮುಂದಾಗುವುದರ ಬಗೆಗಿರುವ ಗಮನ : ಮುಂದಿನ ಯೋಚನೆ ; ಮುಂದಾಲೋಚನೆ : ನಾನು ಸುಮ್ಮನಿದ್ದು, ಪರಾವಲಂಬಿಯಾಗಿ, ಮುಂಧೋರಣವಿಲ್ಲದ ಲಗ್ನಮಂಟಪದಲ್ಲಿ ಅವಮಾನಿತನಾಗತಕ್ಕದ್ದಲ್ಲ (ಗಂಮಾಯ. ೦೬೪).

[ ಮುಂ₂ ( < ಮುನ್₂ ) + ಧೋರಣ ]

**ಮುಂಧೋರಣೆ** (ನಾ). = ಮುಂಧೋರಣ : ನಾನು ಮುಂಧೋರಣೆಯವಳು. ಮುಖ್ಯ ಮುಖ್ಯ ಸಾಮಾನುಗಳನ್ನು ಬದಿಗೆ ಸರಿಸಿಟ್ಟುಕೊಂಡು ಉಳಿದ ತಿನಿಸನ್ನು ದಾನಧರ್ಮಕ್ಕಾರಂಭಿಸಿದೆ (ಸ್ವಾಕಿಶ. ೨೭೯) : ಪ್ರೇಮಭಂಗದಿಂದ ಸಾಯುವವರು ಜೀವಘಾತಕರೇ ಸರಿ. ಅದರಲ್ಲಿ ಧ್ಯೇಯವೂ ಇರುವುದಿಲ್ಲ . . . ಮುಂಧೋರಣೆಯೂ ಇರುವುದಿಲ್ಲ (ಜಯಂತ. ೩೨೭).

[ ಮುಂ₂ ( < ಮುನ್₂ ) + ಧೋರಣೆ ]

**ಮುಂಪಥ** (ನಾ). ಮುಂದಿನ ಮಾರ್ಗ : ಮರಾಳಧ್ವಜಂ . . . ಹರಿಯ ಮುಂಪಥದೊಳಡಗೆಡೆಯುತ . . . ಕೈಗಳ ಮುಗಿದನು (ಕೈಮಿಶಾ. ೦೪-೨೬).

[ ಮುಂ₂ ( < ಮುನ್₂ ) + ಪಥ ]

**ಮುಂಪಾಲು** (ನಾ). ಮೊದಲೇ ತೆಗೆದಿಟ್ಟ ಭಾಗ ; ಮಿಸಲು : ಮಿಂದು ಪೂಜ್ಯರ್ಗೆ ಮುಂಪಾಲಂ ನೀಡದೇಸನುಮುಣ್ಣನುಂ ಅಥರ್ವದಿಂ ಪಾಲ್ಗೆ ಗೋವಂಬೊಲ್ ಗೋವಂ ಕರೆಯುಂ ದಿಟಂ (ಶಾಪಂಡ. ೨-೦೯).

[ಮುಂ₂ ( < ಮುನ್₂ ) + ಪಾಲು₂ ( < ಪಾಲ್₂ ) ]

**ಮುಂಪುದಿ** (ನಾ). ಮುಂಬಾಗಿಲಿನ ಪಕ್ಕ, – ಪಾರ್ಶ್ವ : ಬರವ ಸೂಚಿಸಿ ಬಾರದಿರೆ ವಿಟಂ ಮುಂಪುದಿಗೆ ನೆಱೆ ನೆಮ್ಮಿ ನಿಂದು . . . ಮೈಮಱೆ ವೃತರೆಳಗೆಬ್ಬಱುತೆ - ಸಖಿಯರುಪಚರಿಸಲೊಂದೆಡೆಯೊಳರ್ದಳದೊರ್ವಳು (ಲಾಶಶ. ೬-೪೩). [ ಮುಂ₂ ( < ಮುನ್₂ ) + ಪುದಿ₂ ]

**ಮುಂಪೇಳ್** ' ಮುಂಪೇೞ್ ' ನೋ.

**ಮುಂಪೇೞ್, ಮುಂಪೇಳ್** (ಕ್ರಿ). ಮುಂಚಿತವಾಗಿ ಹೇಳು; ಮೊದಲೇ ಹೇಳು : ಜಾಂಬೂನದಂ . . . ಪೇಟಲಬತುರನಾದಂ ದನುಜಂಗೆ ದಿವ್ಯ ಮುನಿಗಳ್ ಮುಂಪೇಳ್ದ ವೃತ್ತಾಂತಮಂ (ಶಂರಾಪು. ೦೦-೭) ; ಎಂತುಂ ಮುಂ[ಶಾಕಾಂ. ಎಂತೆಯುಟು ಮುನ್ನಂ] ಪೇಟ್ದರ್ಥಾಂತರಮಂತುಟನೆ ಬಱಿಕ ತೋಱುವುದದು ದೃಷ್ಟಾಂತಂ (ಕಾವ್ಯಾವ. ೭೦೪). **ಮುಂಪೇಳ್** : ಮುಂಪೇಳ್ದ ಬಂಧನಿಯಮಸೂತ್ರಮಂ ಲೇಸಾಗಿ ಭಾವಿಸಿ ತೀರ್ಥಬಂಧಮ

ಸಂಯುಂತಾದಿ ಚತುರ್ಗುಣಸ್ಥಾನದೊಳೆಯುಕ್ಕುಂ (ಗೊಮ್ಮಸಾ. ೦೩-೦೦).
[ ಮುಂ$_2$ ( < ಮುನ್$_2$ ) + ಪೇೞ್ ]

**ಮುಂಪೋಗು** (ಕ್ರಿ). ೧. ಮುಂದಕ್ಕೆ ಹೋಗು ; ಮುಂದೆ ಸಾಗು : ತೇಜಾಷ್ಕುರುಗಳು ಮುಂಪೋಗಿ ವಿಮಲಸರೋಜಪತ್ರಿಕೆಯು ಪೊಟ್ಟಣದಿ ರ್‍ಾಜಾವೃತಮೆನೆ ತಣ್ಣೀರ ತಂದಿತ್ತರಾ ಜಿತಕಂತುನಂದನಗೆ (ಪೋಹಕ. ೦೯-೩೪). ೨. ಮುಂಚಿತವಾಗಿ ಹೋಗು ; ಮೊದಲು ಹೋಗು : ವ್ಯಪದೇಶಂ ಮುಂಪೋದುದನಪೂರ್ವಮಂ ಕಂಡು ನೆನೆವುದದು ತಾಂ ಸ್ಮರಣಂ (ಕಾವ್ಯಾ. ೭೦೩).
[ ಮುಂ$_2$ ( < ಮುನ್$_2$ ) + ಪೋಗು$_1$ ( < ಪೋ$_1$ ) ]

**ಮುಂಪ್ರತಿ** (ನಾ). "ಪ್ರಕಟನೆಯಾಗುವ ಮೊದಲು ಕಳುಹಿಸಿದ ಪುಸ್ತಕದ ಪ್ರತಿ; ಮುಂಪ್ರತಿ "(Advance copy of a book. ೩೦೪೩).
[ ಮುಂ$_2$ ( < ಮುನ್$_2$ ) + ಪ್ರತಿ ]

**ಮುಂಬಕ್ಕಿ** (ನಾ). ಸೂರ್ಯೋದಯಕ್ಕೆ ಮೊದಲು ಧ್ವನಿಮಾಡುವ ಹಕ್ಕಿ : ದಿವಕಿಂದು ದೇವಕುವರಂ ಮರಳಿ ಬಹನೆಂಬ ಗೆಲುವಿಂದ ದೇವ ದೂತರೆ ಬಾರಿಸುವರೊ ಮಂಗಲವಾದ್ಯವೆನಲು ಮುಂಬಕ್ಕಿಗಳ ಮೇಳವಂ ಮೊಳಗಾಡೆ (ಗೊಲ್ಲಕಾ. ೩೭-೯). [ಮುಂ$_2$ (< ಮುನ್$_2$ ) + ಪಕ್ಕಿ ]

**ಮುಂಬಗಲ್, ಮುಂಬಗಲು** (ನಾ). ಹಗಲಿನ ಮೊದಲ ಭಾಗ ; ಬೆಳಗ್ಗೆ ; ಪ್ರಾತಃಕಾಲ : "ಮುಂಬಗಲ್, ನಡುವಗಲ್, ಪಡುವಗಲ್ — ಇವು ೩ ತ್ರಿಕಾಲಂಗಳ್" (ಕಲಶಾ. ೩೭-೨೩೦) ; ಅಂತು ಮುಂಬಗಲ್ವರಂ ತುಮುಟಿ[3] ಕಾದುವ ಸಮ[ರಭರಂ] ಮನೋರಾಗಮಂ ಮಾಡೆಯುಂ (ಸಂಕಥಾ. ೦೩-೩೭ ಪ) ; ರಾಘವನೆನ್ನಂ ತೃಣದಿಂ ಲಘುವಮೆನೆ ಬಗೆದನೆಂಬ ಮನದುಮ್ಮಳದಿಂದಾಘಮನೊಳಕೊಂಡಂತೆ ನಿದಾಘದ ಮುಂಬಗಲೆ ತಳೆದುದಿಳೆ ಕಡುಗಾಯ್ಪಂ (ಸಂರಾಮಾ. ೭-೦೦೦) ; ಪಲ್ಬುಟಿಗುಟ್ಟುತ್ತುಮೆ ವಾನರಾಳಿ ನಡುಗುತ್ತಿರ್ದತ್ತು ಶಾಖಾಗ್ರದೊಳ್ ಸೆಜಿಗೆಯ್ವಂದದೆ ಮುಂಬಗಲ್ವರಮುದೆತ್ತುಂ ಪೋಗದಾ ಮಾಗೆಯೊಳ್ (ಸಂಸುಮಾ. ೭-೦೩). **ಮುಂಬಗಲು** : "ಇನನುದಯಕಾಲದೊಳ್ ಮುಂಬಗಲೆನಿಕ್ಕು" (ಕಶಕ. ೯೦) ; ಇಂದಿನ ಮುಂಬಗಲೊಳಗೀ ಕಾಂತೆ ನಾವೆಲ್ಲರು ಸಹಿತ ಕಂತುನಿವಾಸವೆಂದೆಂಬ ನಂದನಕತಿಸಂತೋಷದಿಂದೆಯ್ದಿದಳು (ಶ್ರೀಕಾಂ. ೩-೦೩) ; ಮುಂಬಗಲೀತು ಲೀಲೆಯೊಳು ಸಾಗಿತರ (ಶರಕ. ೯೦-೨೭) ; ಮೊದಲ ದಿನದ ಮುಂಬಗಲಿನಲ್ಲಿ ಪಾಂಡವಸೇನೆ ಭೀಷ್ಮರ ದಾಳಿಯಿಂದ ನಡುಕಹೊಂದಿತು (ವ್ಯಾಸಕ. ೩೨೩).
[ ಮುಂ$_2$ ( < ಮುನ್$_2$ ) + ಪಗಲ್ ]

**ಮುಂಬಗಲು** 'ಮುಂಬಗಲ್' ನೋ.

**ಮುಂಬಗೆ$_1$** (ಕ್ರಿ). ೧. ಮುಂದಾಲೋಚಿಸು ; ಪೂರ್ವಭಾವಿಯಾಗಿ ಗ್ರಹಿಸು : ಬೀರಮುನಿದನಾಪೊ[ಂ] [ಮು]ಮ್ಬಗೆದು ಪೊಗಟಲಱಿವೊಂ (೨೮. XX, ೭೦-೦೦; ೨ನೆಯ ಶಶ). ೨. ಮೊದಲು ಲಕ್ಷಿಸು,-ಗಮನಿಸು : ಪಲರುಂ ವಿದ್ಯಾಧರಸ್ತ್ರೀಯರುಮಮರಿಯರುಂ ಮಾನವಸ್ತ್ರೀಯರುಂ ತಮ್ಮೊಲವಿಂ ಮೇಲ್ವಾಯ್ದೊಡಂ ಮುಂಬಗೆಯದ ಬಗೆಯೇನಾದುದು (ಸಂರಾಮಾ. ೯-೮೩). [ಮುಂ$_2$ (< ಮುನ್$_2$) + ಬಗೆ$_1$]

**ಮುಂಬಗೆ$_2$** (ನಾ). ಪೂರ್ವದ ಹಗೆ : ಹಿಂದಿನ ದ್ವೇಷ : (೪).
[ಮುಂ$_1$ (< ಮುನ್$_1$) + ಪಗೆ$_2$]

**ಮುಂಬಜ್ಜೆ** (ನಾ) ಮುಂದಿನ ಹೆಜ್ಜೆ ; ಮುಂದಿನ ಹಾದಿ,- ಜಾಡು : ಎಡಬಲನತ್ತಿತ್ತ ನೋಡದೆ ಮುಂಬಜ್ಜೆವಿಡಿದು ನಿಟ್ಟಿಸುತೊಯ್ಯನೈದಿ (ಶರಕ. ೩-೦೬). [ಮುಂ$_1$ (< ಮುನ್$_1$) + ಪಜ್ಜೆ]

**ಮುಂಬಟ್ಟೆ** (ನಾ). ಮುಂದಿನ ದಾರಿ ; ಮುಂದಿರುವ ಮಾರ್ಗ : ತಂತಮ್ಮ ಮೇರೆಯಂ ತಪ್ಪಿದೊಡೆ ದಂಡಮಂ ಕೊಳ್ವ ಭೂಪಾಲರ ನಾಡವರ ಮಾಟದಿಂದೆ ಮುಂಬಟ್ಟೆಗಳೂರಂ ಪೊರ್ದಿ ಪೋಪಂತೆ (ರಕ್ಷಾಶಮ್ಮ. ೯-೬೮): ಕಂಬನಿದುಂಬಿದನೊಡನೆದ್ದು ದಕ್ಷಿಣ ಮುಂಬಟ್ಟೆಯೊಳಗಡ್ಡಬಿದ್ದು ಇಂಬುಗೊಳ್ಳಲೆ ಸ್ವಾಮಿ ನಿಮ್ಮ ಸೋಯಿಸಿದೆನೇನೆಂಬೆ ನಾನತಿಕ್ರೂರನು (ಶರಕ. ೯೬-೩೨). [ಮುಂ$_1$ (< ಮುನ್$_1$) + ಬಟ್ಟೆ$_1$]

**ಮುಂಬಡಿಸು** (ಕ್ರಿ). ಮುಂದೆ ನಡೆಯುವಂತೆ ಮಾಡು ; ಮುಂದುವರಿಸು : ಬಿನ್ನನಿರ್ದರಿವ ಪುರೆಗೆಯ್ಗಳ್ದು ಪಾಗೆಪೋಲಲುಗುಗೋಡೆನ್ನನಿಂಗಿಸದಿಂದೆ ಮುಂಬಡಿಸೆ ತೇಂಕುಮುಮ್ಮಗಿಲ್ಗೆ ಕಾಲ್ಮೊಳೆತಂತೆ ಕನಸಿನೊಳ್ (ಸಂಸಕ. ೩೨-೬). [ಮುಂಬಡು + — ಇಸು$_3$]

**ಮುಂಬಡು** (ಕ್ರಿ). ಮುಂದಕ್ಕೆ ಸಾಗು ; ಮುಂದೆ ನಡೆ : ಈ ಪರಿಯೊಳ್ ಸುಮಿತ್ರಾಪುತ್ರಂ . . . ದಮನನಂ ಸಂತವಿಟ್ಟುಂ ಮುಂಬಟ್ಟು ಪಡೆವೆರಸು ಹಯದ ಬೆನ್ನೊಳೆ ನಡೆಯುತಿರೆಯಿರೆ (ರಾಮಾಶ್ವ. ೦೦೦-೨೬).
[ಮುಂ$_1$ (< ಮುನ್$_1$) + ಪಡು$_1$]

**ಮುಂಬಡೆ** (ನಾ). ಮುಂಭಾಗದಲ್ಲಿರುವ ಸೈನ್ಯ : ಕಡಲು ಮೇರೆಯು ತಪ್ಪಿದೊಲು ಮುಂಬಡೆಗಳಸುರರ ಬಲವ ಮುಸುಗುತ ಸಿಡಿಲು ಬಡಿವಂದದಲಿ ಕಡಿದೊಟ್ಟಿದರು ಬೊಬ್ಬಿಡುತ (ಅಪಂರಾ. ೦-೦೦-೨).
[ಮುಂ$_1$ (<ಮುನ್$_1$) + ಪಡೆ$_2$]

**ಮುಂಬಣ್ಣ** (ನಾ). ಮೊದಲು ಕಾಣುವ ಬಣ್ಣ : ಪೊಸಜವ್ವನದ ಮುಂಬಣ್ಣದಂತೆ ಕರ್ಪಂ ಕೈಕೊಂಡು ಕತ್ತುರಿಯಲ್ ಬರೆದಂತಪ್ಪ ವಿಕ್ರಾಂತ ತುಂಗನ ಮೀಸೆಗಳಾತನ ತೀವ್ರಪ್ರತಾಪಾನಳಧೂಮಲೇಖೆಯಂತಾದುವು (ಸಂಕಥಾ. ೨-೩೯ ಪ). [ಮುಂ$_1$ (<ಮುನ್$_1$) + ಬಣ್ಣ]

**ಮುಂಬದ, ಮುಂಬದನ್** (ನಾ). ರತಿಕ್ರೀಡೆಯು ಆರಂಭದಲ್ಲಿ ಸೂಸುವ ಸುರತದ್ರವ : ಬೆಂಡೇಟ್ಟು ಕಣ್ ಬೀಯದಟ್ಟುಱೊಳಂ ಪಾಸಿಗೆ ನಾಂಬ ಮುಂಬದಮಳುಂಬಂ ಕೂಟದೊಳ್ ನಲ್ಲರಾ (ಸಂದ್ರಪು. ೯-೬೯) ; ಮುಂಬದಂ ಗೆಳಿಯಿಸೆ ಕೂಡಿ ಗದ್ಗದದ ಕಂಠದಿ ಕೂಜಿತಮಂ ನೆಗಳ್ಚಿದಳ್ (ರಾಜಶೇ. ೦೦-೧೯೩). **ಮುಂಬದನ್** : ಉಬ್ಬರಿಸುವ ಮೆಯ್ಮವಿರ್ಪಾನವ ಮುಂಬದನೊಪ್ಪಿರೆ ದೀವದೊಳ್ಮರಲ್ದಿರಲೆಯು ಭಾಪಮುಚ್ಚಿರಿಯನಚ್ಚಿಗೊಡರ್ಚಿದುದಾ ನೃಪೇಂದ್ರನಾ (ಅಪಂಪು. ೦೦-೯೦); ಒಂದೆರಡೊಳ್ಪುಡಿತವಕದೊಳೊಂದೆರಡಾಲಿಂಗನಂ ಮುಗುಳ್ನಗೆ ಸೋಟಂ ಸಂದಣಿಸುವ ಮುಂಬದನೊಳಗಿಂದೀವರನಯನೆ ಪಾಣ್ಬನಂ ಬೀಟಿಸ್ಕೊಂಡಳ್ (ಸೂತ್ರಸು. ೬-೦೭೭).
[ಮುಂ$_1$ (< ಮುನ್$_1$) + ಪದ$_1$]

**ಮುಂಬದಂಗೂಡು** (ಕ್ರಿ). ರತಿಕ್ರೀಡೆಯು ಆರಂಭದಲ್ಲಿ ಸುರತದ್ರವವನ್ನು ಸ್ರವಿಸು : ಮುಂಬದಂಗೂಡದಿರ್ಪಳ ಕೂಟಂ ಬಿಡದೇಳಜೂಟವುದನಾವಂ ನಚ್ಚುವಂ ಮೆಚ್ಚುವಂ (ರಾಜಶೇ. ೦೦-೦೩೪).
[ಮುಂಬದ + ಕೂಡು$_1$]

**ಮುಂಬದನ್** 'ಮುಂಬದ' ನೋ.

**ಮುಂಬದಿ** (ನಾ). ಮುಂಭಾಗ ; ಮುಂದುಗಡೆ : ಇದೇ ಗೋಡೆಯಲ್ಲಿ ರಂಗಸ್ಥಳದ ಮುಂಬದಿಗೆ ಇನ್ನೊಂದು ಬಾಗಿಲಿದೆ (ಶೀರಯೋ. ೦); ಸುಮಾರು ಐವತ್ತುವರ್ಷದ . . . ರೈತನೊಬ್ಬ ಗುಂಪಿನ ಮುಂಬದಿಗೆ ಬಂದನು (ಕೃವರು. ೨೩೪) [ಮುಂ$_1$ (<ಮುನ್$_1$) + ಬದಿ$_1$]

**ಮುಂಬನ** (ನಾ). ವನದ ಮುಂಭಾಗ ; ತೋಟದ ಮುಂದುಗಡೆ : ಬಲಗೂಡಿ ತೆರಳ್ದು ರಸಿಕರಾಜೇಂದ್ರ ಮುಂಬನದಲ್ಲಿ ಕಂಡು ರಂಜಿಸುವ ಚೆಂಚಿತಿಯರಾಟಗಳ (ಪೋಹಕ. ೦೯-೭೦). [ಮುಂ$_1$ (< ಮುನ್$_1$) + ಬನ$_1$]

**ಮುಂಬನಿ** (ನಾ). (ನೆಲದ ಮೇಲೆ ಬೀಳುವ) ಮೊದಲ ಮಳೆಯ ಹನಿ : ಮುಂಬನಿಯುಂ ಜಾದಗೆವಕ್ಕಿ ಹಂಸೆ ಕೊಳನಂ ಪದ್ಮಂಗಳಾದಿತ್ಯನಂ ನೆನೆವಂತಾಂ ನೆನೆವೆಂ ಸರೋಜಮುಖಿಯಂ (ಅಂಪು. ೦೨-೩೦); ಮುಂಬನಿಯಂ ಜಾದಗೆಯಿಂಟಿ ತನ್ನಯ ಪವಣ್ಗೀಂ ತುಷ್ಟಿಯಂ ಮಾಡದೇ

(ಶಾಂತೀಶ್ವ. ೧-೬೩); ಕಾವುರ್ಗಿಲ ಮುಂಬನಿಗಳೊಳು . . . ಜಿನುಗಿನಲಿ ಬಹುಮಳೆಗಳಲಿ ನೆನೆನೆದು ಸಾಗರತೀರದಲಿ ಬಂದನು ಕಿರೀಟಿ (ಕುವ್ಯಾ೦. ೦೯-೨೦). [ಮುಂ$_2$ (< ಮುನ್$_2$) + ಪನಿ$_2$]

**ಮುಂಬಯಣ** (ನಾ). ಮುಂಚಿತವಾಗಿ ಮಾಡುವ ಪ್ರಯಾಣ : 'ಮುಂಬಯಣಂಬೋಗು 'ಪರಾ.

[ಮುಂ$_2$ (< ಮುನ್$_2$) + ಪಯಣ]

**ಮುಂಬಯಣಂಬೋಗು** (ಕ್ರಿ). ೧. ಮುಂಚಿತವಾಗಿ ಪ್ರಯಾಣ ಮಾಡು. ೨. (ಅಲಂ) ಮುಂಚಿತವಾಗಿ ಸಾಯು,–ಮಡಿ : ಇಂಬಟ್ ದನುಪರದೊಳವಂ ಮುಂಬಯಣಂಬೋದಂ (ಶಂಕರಾ. ೦೨-೨).

[ ಮುಂಬಯಣ + ಪೋಗು$_1$ (< ಪೋ$_1$) ]

**ಮುಂಬಯಸು** (ಕ್ರಿ). ಮುಂಚಿತವಾಗಿ ಬಯಸು,– ಅಪೇಕ್ಷಿಸು : ಮುಂಬಯಸಿ ಕೈಗೈದ ಸೊಬಗಿನ ಕೆಂಬಲರ ಮ್ಯಾವಿಷ್ಟೆ ಕೆಂಬಲು ತುಂಬು ಗುಂಕುಮ ತಿವಿರು ಚೆಂದುಟಿಯುಟ್ಟರುಣ್ಣಿವಸನ (ಶಾಳ್ಮಶಾ. ೩-೩೪).

[ಮುಂ$_2$ (< ಮುನ್$_2$) + ಬಯಸು$_1$]

**ಮುಂಬರ್**, ಮುಂಬರು (ಕ್ರಿ). ೧. ಮುಂಭಾಗಕ್ಕೆ ಬರು ; ಮುಂದಕ್ಕೆ ಬರು : ಮಾನಮೆನ್ನಂ ಮುಂಬರಲ್ ಮುಂದುಮಾಳ್ಪುದನೆ ತೋರ್ಪಂತೆ ನೀಳ್ದತ್ತು ಸುಯ್ಲ್ (ಕಾವಂಶೂ. ೬೩೩); ಮುಂಬರ್ಪ ತನ್ನ ಮೊಮ್ಮನ ಕಾಲ ಸೊಪ್ಪಳಂ ಕೇಳ್ದು (ಗದಾಯು. ೩-೪೦ ವ); ಮುಂಬಂದೆಚ್ಚೊಡೆ ನಡು ವಾಯಂ ಬಗಿದೊಳಪೊಕ್ಕು ವಾಯುರಂಧ್ರದೊಳಂ ಬೀಳ್ವಂಬಂ ಕಡುವಿರು ಗುಬ್ ಕೂರ್ಕೊಂಬಿಂದು ಕಡಿದುದುದು ಪಟುಕಿಟಿಯುಮುಮಾ (ಹರಿಶ್ಚ.ರ. ೪-೯೩). **ಮುಂಬರು** : ೨. ಅನಂತರದಲ್ಲಿ ಬರು ; ಮುಂದೆ ಒದಗು : ತಮಗೆ ಮುಂಬಹ [ಶಾಶಾಂ. ಬಾಹ] ಸುಖದುಃಖಂಗಳನಜಿಯು ದವರು ಮತ್ತೊಬ್ಬರ ಸುಖದುಃಖಗಳ ಮೊದಲೆ ಅಜಿಯರು (ಶಬ್ದಶ. ೪. ೨೨೨-೪೪೩); ರಾಜ್ಯದ ಮಹಾದಣ್ಣಾಯಕನು ನಾಡಿನ ಮೇಲೆ ಹೀಗೆ ಸಂಚ ರಿಸಿದುದರಿಂದ ಮಂದಿಯ ಮನಸ್ಸು ಮುಂಬರುವ ಕಾಳೆಗದತ್ತ ತಿರುಗಿತು (ಸವಾ. ೬೨). [ಮುಂ$_2$ (< ಮುನ್$_2$) + ಬರ್ (< ವರ್)]

**ಮುಂಬರಪ** (ನಾ). ಮುಂಚಿತವಾಗಿ ಬರೆದ ಬರವಣಿಗೆ; ಮೊದಲೇ ಬರೆದ ಬರಹ : ಸಿರಿಯಾಡಿಸೋಂಕಿನಿಂ ಪಣೆಯ ಮುಂಬರಪಂ ಪಸನಾಗೆ ಸೈಪು ಬೀರ್ವರಿಯೆ . . . ಸಿಂದಳಮ್ಮಿತಾಬ್ಧಿತರಂಗದೆ ತೇಂಕುವಂನದಿಂ (ಅಪಾ. ೬-೨೪೯). [ಮುಂ$_2$ (< ಮುನ್$_2$) + ಬರಪ (< ಬರೆಪ)]

**ಮುಂಬರಿ$_1$** (ಕ್ರಿ). ೧. ಮುಂದೆ ಚಲಿಸು ; ಮುಂದೆ ನಡೆ ; ಮುಂದಕ್ಕೆ ಸಾಗು : ಸುಪ್ರಭಮುನೀಶನಮಳತನುಪ್ರಭೆ ಮುಂಬರಿದು ಬೆಳಗಿದತ್ತು ಶಿವಜ್ಞಾನಪ್ರಭೆ ದಯಾಮೃತಾಸಾರಪ್ರಭೆಯೆನೆ ತನ್ಮುನೀಶನನೊಡ್ಡೋಲ ಗವಂ (ಕುಸುಜಿ. ೩-೦೦೩): ಗೋಮುಖವ್ಯಾಘ್ರಂಗಳಂದದ ಕಾಮ ಮೊದಲಾದಖಿಳವಿಷಯಸ್ತೋಮವನು ಮುಂಚಿದಿಕ್ಕಿ ಮುಂಬರಿದಂತ ರಂಗದಲಿ ಆ ಮಹಾಶಿವಲಿಂಗಸಂಗಪ್ರೇಮಿಯಾಗಿ ಶಿವೈಕ್ಯಪದವನು ನೇಮಿ ಸಿದ ಮಹದೇವಿಯಕ್ಕಗೆ ಶರಣು ಶರಣಾರ್ಥಿ (ಶ್ರೀಭಂ. ೦-೩); ಅಂಬರ ಚರಿಯರನೀ ಪಟ್ಟಣದೊಂದು ಸಂಭ್ರಮವನು ನೋಡಿಯೆನುತ ಕುಂಭಿನಿ ಕೈಸೀಡಿ ಬರೆಪೋಲು ಡೆಂಕಣಿ ಮುಂಬರಿದೆಸೆದುವರ್ತಿಯಲಿ (ಕಂಸವಿ. ೬-೬). ೨. ಮುಂದಕ್ಕೆ ಹರಿ,– ಪ್ರವಹಿಸು : ಸಿಂದಿವನು ಸಿಮ್ಮಯ್ಯನಿದಿರಲಿ ಸಂಧಿಸುವ ರಣಗಲಿಗಳುಗ್ರಸ್ಕಂದನದ ಮುಂಭಾಗದಲಿ ಮುಂಬರಿವ ಹೆದ್ದೊ ಜೆಯು ಮುಂದೆ ನಿಲುವ ಮಹಾದ್ರಿಯಂತೊಲು . . . ಸಲವೇಜಿಮನು ಕಲಿ ಹನುಮ (ಕೂರಾ. ೬-೩೦-೦೬). ೩. ಮುಂದುವರಿ ; ಬೆಳೆ ; ಅಭಿವೃದ್ಧಿ ಹೊಂದು : ಈಗ ಸುಮಾರು ಮೂವತ್ತು ನಲವತ್ತು ವರ್ಷಗಳಿಂದಲೂ ನಮ್ಮ ಸಾಹಿತ್ಯ ನಾನಾಶಾಖೆಗಳಲ್ಲಿ ಮುಂಬರಿದು ಹಬ್ಬಿ ಹರಡುತ್ತಿದೆ (ಬಂಕಿಮ. IX, ಮುನ್ನುಡಿ). ೪. ಅಧಿಕವಾಗು ; ಹೆಚ್ಚಾಗು ; ವಿಶೇಷ ವಾಗು : ಅಂಬರಚರಿಯರ ತನುಗಂಧಿಗೆಜಿಗಂಪ ತುಂಬಿಯ ಬಳಗವಂದದಲಿ ಮುಂಬರಿದೆಸೆವ ಕಪ್ಪಿಡಿದ ಫಲಾಳಿಯಿಂ ಜಂಬುನೇಜಿಲೆಗಳೊಪ್ಪಿರುವು (ಕಂಸವಿ. ೨-೪೪); ಬೆರಲಂ ಕೊಟ್ಟೊಡೆ ಬೇಟಮೇ ಕ್ರುರುಳುಮಂ ಕೊಯ್ದು ತ್ತೊಡೇಂ ಕೂರ್ಮೆ ಕೇಳರಮಿಂದಾನನೆ ಮನ್ಮನಃಪ್ರಿಯುಮಿದಲ್ಲೀ ದೇಹಮಂ ನಲ್ಮೆ ಮುಂಬರಿವುತ್ತಿತ್ತೊಡಿದೆಲ್ಲಮೇಂ ಪೆಜತೆ (ರಾಜಶೇ. ೦೦-೦೫೬). ೫. ಹರಡು : ವ್ಯಾಪಿಸು : ಪಸರಿಸು : ತನ್ನ ತೇಜದೊದವಿಂ ಹಾರಂಗಳೆಂಬಂತೆ ಭಾಸುರದಂತದ್ಯುತಿಮಾಲೆ ಮುಂಬರಿವಿಸಂ ವ್ಯಾಖ್ಯಾನಮಂ ಮಾಡುತಚ್ಚರಿವೆತ್ತಿರ್ದ ಸುಧರ್ಮಯೋಗಿವರನಂ ಕಂಡಂ ಧರಾಧೀಶ್ವರಂ (ಕುಸುಜಿ. ೪-೯೯); ಮಣಿಭೂಷಣಮ್ಮತಿ ಮುಂಬರಿವುತಿರೆ ಬಂದನಾಕಯ ಹರಣ ಬಂದಂತೆ (ಶಾಳ್ಮಶಾ. ೩-೦೬); ಬಿಂಬಾಧರದ ಕೆಂಬೆಳಗು ಮುಂಬರಿದು ಕುಂಭಕುಚಕ್ಕೆ ಕೆಂಬರಲ ಸರವಂ ಕೆಳೆಗೊಳಿಸೆ (ರಾಜಶೇ. ೪-೦೪ ವ). ೬. ಉಂಟಾಗು ; ಒದಗು : ಬಳಲಿದೆನು ಬಲುಹಾಗಿ ಸಾಕಿನ್ನೆಳತಟವು ತನ ಗೆಂಬ ಬಗೆ ಮುಂಕೊಳಿಸಿದುದು ಮುಂಬರಿದುದುಗ್ರಾಟೋಪಕೋಪಶಿಖಿ (ಕೂರಾ. ೩-೯-೬೯). ೭. ಪರಿಣತವಾಗು ; ಪಕ್ವಗೊಳ್ಳು : ಪ್ರಾಚೀನ ಬೌದ್ಧಧರ್ಮವು . . . ಮುಂಬರಿದ ಚೇತನಗಳ ಏಕಾಂತತೆಯನ್ನೂ ಹೊರಗಿನ ನೆರವನ್ನೂ ಬಯಸದೆ . . . ಸ್ವಂತಪರಿಶ್ರಮದಿಂದ ಮೋಕ್ಷ ವನ್ನು ಗಳಿಸಬೇಕೆಂಬುದನ್ನೂ ಒತ್ತಿ ಹೇಳಿತು (ಕಕ್ಕಾಜ್ಞಾ. ೦೬೩).

ಮುಂಬರಿ ಬೀಳು=ಮುಗ್ಗರಿಸಿ ಬೀಳು : ಢಗೆ ಹೊಡೆದಳ್ಳಿ ಹೊಯ್ಯುತ ಬಿಸಿಲಿಂಗೆ ನಾಲಗೆನೀರು ತಟಗುಟ್ಟಿ ಸುರಿಯ ಮಿಗೆ ಓಡಿವವನ ಮುಂಬರಿ ಬೀಳಲೆಳೆವ ನಾಯಿಗಳಿಡಸಿದುವೆದಬಲದೆ (ಬೊಳಹತ. ೦೯-೦೪).

[ ಮುಂ$_2$ (< ಮುನ್$_2$) + ಪರಿ$_2$]

**ಮುಂಬರಿ$_2$** (ನಾ). ಮುಂದಕ್ಕೆ ಚಲಿಸುವಿಕೆ : ' ಮುಂಬರಿವರಿ ' ಪರಾ.

[ಮುಂ$_2$ (< ಮುನ್$_2$) + ಪರಿ$_3$ ]

**ಮುಂಬರಿತ** (ನಾ). ಮುಂದುವರಿಕೆ ; ಅಭಿವೃದ್ಧಿ : ಇದುವರೆಗಿನ ಎಲ್ಲ ವಿವರಣೆಗಳಿಂದ್ಯ ಸುಮಾರು ಕ್ರಿ. ಶ. ೧೨ನೆಯ ಶತಮಾನದ ಆರಂಭದಿಂದ ಕ್ರಿ. ಶ. ೧೭ನೆಯ ಶತಮಾನದ ವರೆಗಿನ ಕೋಟೆಗಾಳೆಗದ ' ಸಂವರಣೆ ' ಯ ಮುಂಬರಿತವನ್ನು ಕಂಡುಕೊಳ್ಳಬಹುದಾಗಿದೆ (ಕೋಟೆಗಾ. ೨೬). [ಮುಂಬರಿ$_1$ + – ತ$_2$]

**ಮುಂಬರಿವರಿ** (ಕ್ರಿ). ಮುಂದಕ್ಕೆ ಹೋಗು. ಚಲಿಸು : ವಿಕ್ಕು ಮುಂಬರಿವರಿದು ನೀಡಿವನಿಕ್ಕಿಲದ ಕೋಗಿಗಳ ಕಿಡಿ ಸಿಡಿದಿಕ್ಕಿ ಬಾಲದ ಶಿಖೆಯ ಸೀವರಿಸುವ ಶಿವಾಳಿಗಳ (ಕೂರಾ. ೩-೮-೪೬). [ಮುಂಬರಿ$_2$ + ಪರಿ$_2$]

**ಮುಂಬರು** ' ಮುಂಬರ್ ' ನೋ.

**ಮುಂಬರೆಯ** (ನಾ). ಹರೆಯದ ಆರಂಭ : ನವಯೌವನ : ಸಿರಿ ಚೆಲ್ವಂ ಸಿರಿಯಲ್ಲಿ ರೂಪು ಮಿಗೆ ಚೆಲ್ವಂ ರೂಪಿನೊಳ್ ಮತ್ತೆ ಮುಂಬರೆಯಂ ಚೆಲ್ವ ನಿನಿತ್ತುಮೆಯ್ದೆ ಕಡುಚೆಲ್ವಂ ಬೇಟದಿಂ ಬೇಟಮುಂಬರಸಂ ಮನ್ನಿಸದಂದ ನಾಯಕಮುಂ (ಅಜಿತಪು. ೯-೩೬); ಮುಜುಕದ ಗಾಡಿ ಮುಂಬರೆಯ [ಶಾಶಾಂ. ರಿಯ]ದೊಟ್ಟಜೆ ರಂಜಿಪ ದೇಸೆ ಸೌಷ್ಠವಂ ಮೆಜೆದಿರೆ (ಪಂಚಾ್ಸ್ಯ. ೭-೪); ಧರಿಸಿದ ಕನಕಾಂಬರದವಾರಶೋಭಾವೈಭವಮಂ ಮುಂಬರೆಯದ ಮೆಯ್ಸಿರಿಯಿಂ ಜರಿಯುತ್ತುಂ (ಮಣಾತ. ೩-೩೯ ವ).

[ ಮುಂ$_1$ ( < ಮುನ್$_1$) + ಪರೆಯ$_2$ (< ಪರಯ) ]

**ಮುಂಬಲ್**, ಮುಂಬಲ್ಲು (ನಾ). ಮುಂಭಾಗದ ಹಲ್ಲು ; ಮುಂದಿನ ಹಲ್ಲು : ಸಂಧಿಸಿ ಮಾತ್ರದೆ ಮುಂಬಲ್ಲಿಂದರಳೆಯ ಮುಗುಳನಗಿವುತುಂ ಘೂ ಘೂಯೆಂದಂದಭಿಮಂತ್ರಿಸಿ ಭಸ್ಮಮನಂದಿಟ್ಟಿವಳ್ ತೇಟ ವಿಷಮುದಾಕ್ಷಣ ವಿಟ್ಟಿಗುಂ (ಜಗದ. ೦೦-೦೧); ಮುಂಬಲ್ಲಂ ನಾಲ್ಕಕ್ಕಮದೆಂಬುದು ಸಂದುಂಶಮೆಂಬ ಪೆಸರುಂ ಮೇಗಣ ಕೆಂಬಲ್ಲುಮುಗ್ರದಂತವದೆಂಬುದು (ಅಶ್ವಶಾ. ೯-೯). **ಮುಂಬಲ್ಲು** : ಕುರುಳು ಬೆರಳು ಮುಡಮು ಮುಂಬಲ್ಲ

ಕೊಳ್ವ ಸಜ್ಜೆಯನಿಕ್ಕಿ ದಾಂಟಿದರೆ ಅಂತೆನ್ನ ನಂಬಾ (ಬಸವ. ೩೦೧); ಮುಂಬಲ್ಲು ಬಿದ್ದು ವಿೞಿಯುವ ಕಲ್ಲೊಳು ಜೆಜ್ಜಿ ತಿಂಬರಲ್ಲದೆ ಬಿಟ್ಟರಾರು (ಶರಶ. ೬೦-೧೧೨); ನಗೆಮುಖ ಮುಂಬಲ್ಲೆಲ್ಲ ಚೆನ್ನ ಕಾಣೆ ಗೆರೆ ಬರದಾ ವಿಭೂತಿ ಕಪ್ಪ್ಗೆೊರಳ ಕಾಣೆ (ಜಾಶರ. ೨೦೮).

[ಮುಂ$_{1}$ (<ಮುನ್$_{1}$) + ಪಲ್]

**ಮುಂಬಲ** (ನಾ). ಮುಂಭಾಗದ ಸೈನ್ಯ,– ದಂಡು ; ಮುಂಚೂಣಿ : "ಮುಂಗುಡಿಯೆನೆ ಮುಂದುಚೂಣಿಯೆನೆ ಮುಂಬಲಮುಂ " (ಶಕುಶಿ. ೦೬೬); ಮಲಯಮಾರುತನ ಬೆಂಬಲಮುಮಂ ಚೈತ್ರಮಿತ್ರನ ಮುಂಬಲ ಮುಮಂ . . . ದರ್ಪಕನ ದರ್ಪಂಬೆರಸೆಟಕುೞಿಗೊಂಡು ಗಂಡೋಜಿದ ಗಂಡಗಾಡಿ ರೂಢಿವಡೆಯೆ (ಅಪಂಪು. ೬-೨೨ ವ); ಚಂಡ ಕೋದಂಡನ ದಂಡಾಧಿನಾಯಕಂ ವೀರಜಂಭರಾಜಂ ಮುಂಬಲದೊಳ್ ಕದನಕ್ಕೆ ಕಡಂಗಿ ಕದುಂಬಿ ಸನ್ನದ್ಧನಾಗಿ (ಹರಿಶ್ಚಂ. ೩-೩೫ ವ); ಅೞಿದುೞಿದ ಬೆಂಬಲಂ ಮುಂಬಲವಾಗೆ ಬೆಂಗೊಟ್ಟೋಡಿ ತಮ್ಮಾಣ್ಮಂಗಿಂತಿದಂ ಕೇಳಿ ಸಿದರ್ (ರಾಮಾಶ್ವ. ೦೯೬-೧). [ಮುಂ$_{1}$ (< ಮುನ್$_{1}$) + ಬಲ$_{3}$]

**ಮುಂಬಲಿ** (ಕ್ರಿ). ಮೊದಲು ವ್ಯಾಪಿಸು : ಏರಿದಾದ ಚತುರಂಗದ ಪದಹತಿಯುಲಿ ಮುರಿದೇಳ್ವ ಕೆಂದೂಳ್ಗಳಾಗ ತರಣಿಮಂಡಲವ ಮುಂಬಲಿದು ಮುಂಕೊಳುತಂದು ಕಿರಣದೇೞಿಗೆಯು ತಗ್ಗಿಸಿತು (ಕಂಪಹ. ೦೬-೨೮).

[ಮುಂ$_{2}$ (< ಮುನ್$_{2}$) + ಬಲಿ$_{1}$ (< ಬಲ್$_{1}$)]

**ಮುಂಬಲ್ಲು** ಮುಂಬಲ್ ' ನೋ.

**ಮುಂಬಸಿಱು** (ನಾ). ಗರ್ಭ ಧರಿಸಿದ ಪ್ರಾರಂಭದ ಕಾಲ : ಬಿಸುಗದಿರಿನ ಮುಂಬಸಿಱೊಳು ಮೂಡಣ ದೆಸೆವೆಣ್ಣು ಸೀಮಂತದ ಒಸಗೆಯು ವಾದ್ಯ ಗಳೆನೆ ದೇಗುಲಗಳೊಳೆಸೆವವು ಶಂಖನಿನಾದಂ (ಶ್ರೀಶಾಂ. ೨-೨೮)

[ಮುಂ$_{1}$ (< ಮುನ್$_{1}$) + ಬಸಿಱು (< ಬಸಿಱ್) ]

**ಮುಂಬಳೆ** (ನಾ). ಕೈಯ ಮುಂಭಾಗದಲ್ಲಿ ಧರಿಸುವ ಬಳೆ : ಬಾಜೀ ಬಂದು, ಹಿಂಬಳೆ, ಮುಂಬಳೆ, ದೋರ್ಯ, ಪೌಂಚಿ . . . ಡಾಬು ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲೆಪಾಂ. ೩೮).

[ಮುಂ$_{1}$ (<ಮುನ್$_{1}$) + ಬಳೆ$_{2}$]

**ಮುಂಬಾಗಿಲ್**, ಮುಂಬಾಗಿಲು (ನಾ). **(ಕಟ್ಟಡದ)** ಮುಂಭಾಗದಲ್ಲಿರುವ ಬಾಗಿಲು; ಮುಂದಿನ ದ್ವಾರ; ತಲೆಬಾಗಿಲು: ಪೋಗಿ ನಿಂ ಗಿಳಿಯೆಮ್ಮ ದೇಗುಲದೊಪ್ಪವುನ್ನತವಾದ ಮುಂಬಾಗಿಲಲ್ಲಿ ತೊಳಪ್ಪ ಪೂಗೊಳದೊಳ್ಮ ಬ್ಬಂಗೆನಲು (ಉತ್ಪಲ. ೬-೦೦೦); ಅಗಳನೂನಸಂಭ್ರಮಪರಿಭ್ರಮ ದಂಗನೆಯರ್ . . . ಮುಂಬಾಗಿಲೊಳುನ್ನತಧ್ವಜಚಯಂಗಳನೆತ್ತಿಸಿ ರಂಗ ವಾಲಿಯುಂ ರಾಗದೊಳಿಕ್ಕಿ ಬೀದಿಯೊಳ್ ಸಿಂದುರಂ ಮಾಡಿದರಪ್ಪಶೋಭೆಯಂ (ಶಾರಶ. ೩-೧೫). **ಮುಂಬಾಗಿಲು:** ಇಂದ್ರಿಯದ ಬಾಗಿಲಲ್ಲಿ ಮನವಿಪ್ಪುದು ಮನದ ಮುಂಬಾಗಿಲಲ್ಲಿ ಭೋಗಲಿಂಗವಿದ್ದು ಸಕಲಭೋಗಂಗಳ ಭೋಗಿಸಿ . . . ಸೌರಾಷ್ಟ್ರಸೋಮೇಶ್ವರಲಿಂಗವ ಬಲ್ಲರೆ ಬಲ್ಲೆ (ಆದಯ. ೨೨-೬೦) ; ಕನಕಾಂಬುಜಮುಖಿಯಾ ಗೃಹದ ಮುಂಬಾಗಿಲ ಗೋಪುರದ ಚಿತ್ರದ ಭಿತ್ತಿ ಇಂಬಾಗಿರೆ ನೋಡಿದಳು (ಶ್ರೀಶಾರಿ. ೬-೯೫) ; ದಮಯಂತಿ ಗಂಡನನ್ನು ಎದುರುನೋಡುತ್ತಾ ಮುಂಬಾಗಿಲಿನಲ್ಲಿ ನಿಂತಿದ್ದಳು (ದೂಪಟ್ಟ. ೬೯).

[ಮುಂ$_{1}$ (< ಮುನ್$_{1}$) + ಬಾಗಿಲ್]

**ಮುಂಬಾಗಿಲು** ' ಮುಂಬಾಗಿಲ್ ' ನೋ.

**ಮುಂಬಾಗು** (ಕ್ರಿ). ಮುಂದುಗಡೆಗೆ ಬಾಗು ; ಮುಂದಕ್ಕೆ ಓಲು : ಒಂಬತ್ತುತಿಂಗಳು ಹೊತ್ತ ಮಾತೃಕೆಯ ಪಾದಾಂಭೋರುಹಕಲರ್ಗೆರೆದು ಮುಂಬಾಗಿ ಕೈನೀಡಿ ಶರಣೆಂಬ ರೀತಿಯೊಳ್ ಪೊಂಬಾಳೆ ಬನದೊಳೊಪ್ಪಿ ದುವು (ಮೋಹತ. ೨೪-೯೦). [ಮುಂ$_{2}$ (< ಮುನ್$_{2}$) + ಬಾಗು$_{1}$]

**ಮುಂಬಾಯ್**$_{1}$ (ಕ್ರಿ). ೧. ಮುಂದಕ್ಕೆ ನುಗ್ಗು : ಅವ ಪೆರ್ಗಡಲ್ ಅಗಳು ಅವ ಮಲೆ ಬಲ್ಗೋಂಟೆ, ಅದರ ಮುಂಬಾಯ್ವರಿವು ಮೊಗಗೆಟ್ಟು ನಿಲಲು (ಶಾರಸಿ. ೬-೦೨೯). ೨. ಮುಂದಕ್ಕೆ ಹಬ್ಬು, – ಹರಡು : ಚಂದ್ರಧ್ವಜಾ ವನಿಪಂ...ಮೇಧಾವಿಳಾಂಕನ ವಕ್ತ್ರೇಂದುವನೊಯ್ಯನೀಕ್ಷಿಸುತುಮುತ್ಕ್ಯಾತ್ಸುಕ್ಯ ದಿಂದೊಂದನೆಂದೆನಲುದ್ಯೋಗಿಸಿದಂ ದ್ವಿಜದ್ಯುತಿನಿಕಾಯಂ ನೀಟ್ದು ಮುಂಬಾ ಯ್ವಿನಂ (ಕುಸುಮಾ. ೦೫-೬೩). ೩. ಮುಂದಕ್ಕೆ ಹರಿ, – ಪ್ರವಹಿಸು : ಸೋರ್ವಾ ವಾರಿಧಾರಾವಳಿಯಿನಿರದೆ ಮುಂಬಾಯ್ವ ವಾರಿಪ್ರವಾಹಾವಳಿಯಾ ವಾರಿಪ್ರವಾಹಾವಳಿಯಿನಿಳೆ ಪಯೋರೂಪವಾದತ್ತದೆತ್ತಂ (ಕುಸುಮಾ. ೬-೩೦). [ಮುಂ$_{2}$ (< ಮುನ್$_{2}$) + ಪಾಯ್$_{1}$]

**ಮುಂಬಾಯ್**$_{2}$ (ನಾ). ಬಾಯಿಯ ಮುಂಭಾಗ ; ತುಟಿ : ಮುಂಬಾಯ ಕರ್ಪೂರವೀಳೆಯದಿಂದ ಕಣ್ಗೆಂಬಾದನಾ ಗಾಡಿಕಾಱ (ಭರತ. ೦-೩೫).

[ ಮುಂ$_{1}$ (< ಮುನ್$_{1}$) + ಬಾಯ್ ]

**ಮುಂಬಾರೆಕಾಱ** (ನಾ). ಸೈನ್ಯದ ಮುಂಭಾಗದಲ್ಲಿ ಕಠಾರಿಯನ್ನು ಹಿಡಿದು ಯುದ್ಧಮಾಡುವ ಸೈನಿಕ ; ಮುಂಚೂಣಿಯ ಭಟ : ತಿರುಹಿ ಬಿಸುಟುವು ಕಾಲುಗಾಹಿನ ತುರಗವನು ಮುಂಬಾರೆಕಾಱರ ಶಿರವನೈದಾಱೇಳ ನಡಸಿದವಣಲ ಹೊಳಲಿನೊಳು (ಕುವ್ಯಾಭೀ. ೪-೬೬).

[ ಮುಂಬು$_{2}$ + ಆರೆ$_{3}$ + – ಕಾಱ]

**ಮುಂಬಾಲೆ** (ನಾ). ಕಿವಿಯ ಹಾಲೆಯ ಮುಂಭಾಗ : ಮೇಲುದಂ ಮಱೆದು ಮೆಯ್ಮಱೆದೂರ್ವಳೊಱಲ್ದು ಮುಂಬಾಲೆಯಂ ತಿರಿಪಿ ನೂಂಕಿ ಪವಿತ್ರಮನಿಟ್ಟು ಪಚ್ಚೋಲೆವಚ್ಚದೊಳೊಡಂಬಡೆ ಬಂದು ವಿದಗ್ಧ ಭೂಪಾಲ ನಂದನನನಂದರುಣಾಧರೆ ನೋಡಿದಳ್ (ಕಾವ್ಯಾವ. ೨೨೦).

[ಮುಂ$_{1}$ ( < ಮುನ್$_{1}$) + ಪಾಲೆ$_{3}$]

**ಮುಂಬಾಳು** (ನಾ) ಮುಂದಿನ ಬಾಳು ; ಭವಿಷ್ಯದ ಜೀವನ : ಹಿಂದೆ ಮಾಡಿದ ತಪ್ಪುಗಳನ್ನು ಇನ್ನು ಮುಂದೆ ಮಾಡದೆ, ಮುಂಬಾಳನ್ನು ಹಸನಾಗಿಸಿಕೊಳ್ಳುತ್ತೇನೆ ಎಂಬ ವಿಶ್ವಾಸವು ಉಂಟಾಗಿರುತ್ತದೆ (ಮುಮೋಪಂ. ೨೩೪). [ಮುಂ$_{1}$ (< ಮುನ್$_{1}$) + ಬಾಳು$_{2}$ (< ಬಾೞ್$_{3}$)]

**ಮುಂಬಿಗ** (ನಾ). ೧. (ಸೈನ್ಯದ) ಮುಂಭಾಗದಲ್ಲಿರುವವನು : ಮುಂಚೂಣಿಯಲ್ಲಿರುವವನು : ಸೂತಸುತ ದಳಪತಿಯೆ ಘಡ ಮುಯ್ಯಾಂತರೇ ಮುಂಬಿಗರು (ಕುವ್ಯಾಕ. ೨-೮) ; ಅನಿತಱೊಳೆ ಗದೆಯಂ ಸದೆದು ಮೇಣೆರಡುಂ ಮುಂಬಿಗನಂ ನಿರಾಯುಧನಂಗೆಯ್ದು . . . ಕಣದೊಳ್ ಕೆಡೆಪಿದಂ (ರಾಮಾಶ್ವ. ೦೯೫-೨೯). ೨. (ಸಾಹಿತ್ಯಕ್ಷೇತ್ರದಲ್ಲಿ) ಪ್ರತಿಷ್ಠಿತನಾಗಿರುವ ವ್ಯಕ್ತಿ : ಮುಂಬಿಗರಿದನಂತೆ ನೂಕೆ, ಬಳ್ಳಿ ಬರಿದೆ ಕೊರಗಲೇಕೆ ? ಹೆತ್ತಳ್ಳಿಸೆ ಫಲಮನಾಕೆ ಕಡುಸಾಜತೆಗೆ ? (ಗೀಪಂ.೦೦೪-೩೬).

[ಮುಂಬು$_{2}$ + – ಇಗ]

**ಮುಂಬಿಡು** (ಕ್ರಿ). ೧. ಮುಂದಕ್ಕೆ ಬರುವಂತೆ ಮಾಡು : ಕಿಱಿಯಂ ಮುಂತ್ತಂ ಧನದಂ ಬಱುವಂ ತೊಱೆದಂ ಗೃಹಸ್ಥನೆನ್ನದೆ ಮುಂಬಿಟ್ಟಱಸಿ ಕೊಲುತಿರ್ಪ ಜವನೆಂಬಱೆಯ ಪಗೆವಂಗದೆಂತು ಪಂಗಿಗನಪ್ಪಂ (ಆದಿಪು. ೪-೬೬) ; ಏಂ ನಿಷ್ಕರುಣಿಯೊ ಪಸುಮಗನೆನ್ನದೆ . . . ಮರುಳಕ್ಕಟ ಮಾಣೆನ್ನದೆ ಮುಂಬಿಟ್ಟು ಕೊಂದಪಂ ಯಮರಾಜಂ (ಅಜಿತ. ೦೦-೨೫) ; ರಟ್ಟರ ಕೈಗೆ ಏರ್ದಳೆಯುಂ ಪಟ್ಟಮುಮಂ ರಟ್ಟರಾಜ್ಯದರಸುಗಳಂ ಮುಂಬಿಟ್ಟು ಕಱಿದೊಟ್ಟ ರಟ್ಟಘರಟ್ಟಂ ಚಾಳುಕ್ಯರಾಜ್ಯಪಟ್ಟಮನಾನ್ತಂ (ಎಕ. VII, ಶಿಕಾಂ. ೦೨೫-೦೨ ; 1029). ೨. ಎದುರಾಗು ; ಅಭಿಮುಖ ವಾಗು : ಮುಂಬಿಟ್ಟು ಪಕೆದ ಕಟ್ಟಲೆಯಂ ಬೆದಱಿ ತೆರಳ್ವ ಬೆಳಪಂ ಬೆಳಗಿಂದೆಸೆದಿರ್ಪಂಬುಜಸಖನಂತಿರೆ ಮಿಾನಂಬುಟು ಬೆಳಗಿದಪುದಖಿಳ ಗಗನಾಂತರಮಂ (ಕಾವ್ಯಾವ. ೩೬೨). ೩. ಮುಂದಕ್ಕೆ ಹರಡು : ಶೋಣಾಬ್ಜದೊಳ್ ಕೆಱಗೊಂಡಿಂದುಕಲಾಂಕುರಚ್ಛವಿಯವೋಲ್ ಬಿಂಬೋಷ್ಠ ವಿಂಬಾದ ಬೆಂಬಱಿಯೊಳ್ ಮುಂಬಿಡೆ ದಂತಕಾಂತಿ ಬಱಿಕೀತೆಂದಳ್

ಮಹೀಕಾಂತನೊಳ್ (ಅಸಂಪು. ೨-೩೨). [ಮುಂ$_2$ (< ಮುನ್$_2$) + ಬಿಡು$_1$]

**ಮುಂಬಿಡುವಲೆ** (ನಾ). (ಮುಂಭಾಗದಲ್ಲಿ ಅಗಲವಾಗಿ ಹಾಸುವಂಥ) ಒಂದು ಬಗೆಯ ಬಲೆ : ಗೂಂಟವಲೆ ಪೊಣರ್ಚುವ ಬಲೆ ಮುಂಬಿಡುವಲೆ ನಡುವಲೆ. . . ನಿಡುವಲೆಗಳೊಪ್ಪಿದವು ಲುಬ್ಧಕರೊಳ್ (ಗಂಕ. ೦-೬೦).
[ಮುಂ$_2$ (< ಮುನ್$_2$) + ಬಿಡುವಲೆ]

**ಮುಂಬಿಸಿಲ್**, ಮುಂಬಿಸಿಲು (ನಾ). ಪ್ರಾರಂಭದ ಬಿಸಿಲು : ಬೆಳಗಿನ ಬಿಸಿಲು : ಎಳೆಬಿಸಿಲು : ಊರಿಂ ಪೊಱಮಟ್ಟು ಗಾವುದದೊಳ್ ಮುಂಬಿಸಿಲಂ ಮೂಡಿಸಿದಂ (ಕಪ್ಪ. ಸು. ೩೪೭ ಪ್ಪ್ರ); ಹೊಂಬಣ್ಣವೆರಚುವುದು ಮುಂಬಿಸಿಲ್ (ಜಶ್ರೀಂಗ. ೩೩-೦೧೩೯). **ಮುಂಬಿಸಿಲು** : ಇಂಬಾಗಿ ನಗುನಗುವ ಮುಂಬಿಸಿಲ ಮೋರೆಯಲಿ, ಅಂಬುಜಸಖಂ ಬಂದನಂಬರದಲಿ (ಕುಪು. ೨೭-೦). [ಮುಂ$_1$ (< ಮುನ್$_1$) + ಬಿಸಿಲ್]

**ಮುಂಬಿಸಿಲು** ' ಮುಂಬಿಸಿಲ್ ' ನೋ.

**ಮುಂಬು$_1$** (ಕ್ರಿ). ೧. ಮುಂದಕ್ಕೆ ಬರು ; ಮುಂದೆ ಬರು : ಒದವಿದ ಮಾನಸಿಕೆ ತಲೆದೋಱಿದ ಮುನ್ನವೆ ಮುಂಬಿ ಮೂರ್ತಿಗೊಂಡುದು ಸಿರಿ ಕೆಚ್ಚುಗೊಂಡುದು ಮನಂ . . . ರಾಸಿಗೊಂಡುದು ನೆಗರ್ತೆಯ ತೇಜವನಪ್ಪಾಳನ (ಶಾಇಇ. IX-i, ೨೦೩-೫೭ ; 1126). ೨. ಮೊದಲು ಬರು : ಮುಂಚೆ ಬರು : ತೊಂಬತ್ತೇೞಱೊಳ್ ಪರಿಮೇಷಮಾದೊಡಂ . . . ನೂಱ ನಾಲ್ವತ್ತೇೞುಂ ದಿನದೊಳೆತ್ತ ಮುಂಬಿ ನಿಲೆ ಮುಗಿಲ್ ಕರ್ಗಿಕೊಂಡಿರ್ದೊಡಂ ಮೇಘಸಂತತಿಗಾದ ಗರ್ಭಮೆಲ್ಲಂ ತುಂಬಲ್ ಮಾತೇನೊ ಗಾಳಿಸಲೆಂದಱಿಗೆ ಱಟ್ಟಕಂದರ್ಪನ ಸೂತ್ರೇಷ್ಟದಿಂ (ಅಟ್ಟಸು. ೬-೭೦).
[ಮುಂ$_1$ (< ಮುನ್$_1$) + < - ಪು$_1$ ]

**ಮುಂಬು$_2$** (ನಾ). ೧. ಮುಂಭಾಗ; ಮುಂದುಗಡೆ ; ಎದುರು : ಅರಿಭಟರು ಪವನಜನನಾನುತ ಮರಳುತುಬ್ಬರಱವತವನು ತಂದರನಲೆಗೆ ಹಾಯ್ಕಿದರು ಕರ್ಣಾದಿಗಳ ಮುಂಬಿನಲಿ (ಕುಪ್ಪದ್ರೋ. ೦೩-೦೯) ; ದೇಶಿಯ ನಾಡಿದಳು ಪರವೆನಾಚಿ ವಲ್ಮೀಕನಾಥನ ಮುಂಬಿನೊಳು (ಶಾಂದಪು. ೬-೦೦); ಉಲುಹುಂದೆಗದೀಂಗುವ ಸಮುದ್ರದ ಸಲಿಲದವೊಲಾಯ್ತಖಿಳಸೇನಾಜಲಧಿ ಕೌಣಿಸು ಮಱೆವ ಮಹಿಪರ ಮುನಿಯು ಮುಂಬಿನಲಿ (ಕೊರರಾ. ೦-೦೭-೩) ; ಮುಂಬಿನೊಳನಿರುದ್ಧ ಪೊಱಮಟ್ಟು ನಿಖಿಳನಿತಂಬಿನಿಯರ ಸಮುದಯದಿ (ಮೋಹತ. ೯೦-೩೯). ೨. ಸೈನ್ಯದ ಮುಂಭಾಗ; ಮುಂಚೂಣಿ : ಬಪರಕೆ ನಿಲುವ ಚೂಣಿಗರಿಲ್ಲ ಮುಂಬಿಗೆ ಹೊಳಕ ಬಲ್ಲವರಿಲ್ಲ ನಮ್ಮಯ ಬಲದ ನಾಯಕರು (ಕುಪ್ಪದ್ರೋ. ೫೦. ೨೯೮-೬) ; ಕಳಕಳದ ಬೊಬ್ಬೆಗಳ ಕೈಮನಡುಭಯಬುಲ ಮೋಹಿದುದು ಮುಂಬಿನಲಿ (ಕೊರರಾ. ೭-೩೬-೦). ೩. ಮೊದಲು ; ಪ್ರಾರಂಭ : ಸುರತದ ಸುಗ್ಗಿ ಕಾಮನ ಸರಲ್ಗಳ ಪೂವಿನ ಪೊಬ್ಬು . . . ಸುರಾಗರಸಂಗಳ ಕಾರ ಮುಂಬು ತತ್ಪುರವರದಲ್ಲಿ ಸಾತ್ವಿಕದ ಮೈನಡುಕಂಗಳ ಮಾಗಿಯಾಗಳುಂ (ಅರ್ಜನೇ. ೦-೭೮) ; ಮತ್ತೆ ಭಾನು ಮೂಡುವ ಪದದೊಂದು ಮುಂಬಿನೊಳೆ ಬೆಳ್ಕರಿಪಂತಿರೆ ಕೂಡೆ ಪಾಂಡುರಚ್ಛವಿಯೊಳಕೊಂಡುದೋದೆ ದಿನವಿಂತುಟು ಚಿಂತೆ ನರೇಂದ್ರದೇವಿಯಾ (ಜಕ್ಕಶ. ೩-೦೦೦) ; ವನಿತೆಯರ್ವರಂ ಚಲವಿಲೋಚನವಿಂದುಕಳಾವಿಲಾಸಮಂ ಜನಿಯಿಸೆ ತನ್ನಿವಾಸದೊಳಳಂಕೃತಿಸುಂಶುಗಳಂತವಕ್ಕೆ ಮುಂಬಿನ ತೇಜದಿಂದೆ ಮುಂದುವರಿಯಲ್ ಬರೆ (ಮಹಾಪೇ. ೭-೭೮). ೪. ಮೊದಲು ಕಾಣಿಸಿಕೊಳ್ಳುವ ಗುರುತು: ಮುನ್ಸೂಚನೆ : ಉದಯಿಸಿತು ಕೇವಲಜ್ಞಾನದ ಮುಂಬಿದು ನೋಟಕ್ಕೊಡೆಂಬಿನಂ ತಪಮಂ ಕೊಳ್ವುದುಮೊಡನೆ ಮನಃಪರ್ಯಯ ಮುದಾತ್ತ ಮನನೆನಿಪ ತಮ್ಮನೀಂದ್ರೋತ್ತಮನೊಳ್ (ಕಂದ್ರಶ. ೦೩-೦೦೨). ೫. ಮುಂದಿರುವವನು ; ಮುಂದಾಳು : ಪಂಚಾನನದಂತೆ ಗರ್ಜಿಸಿ ದಶಾನನನೆಬ್ಬುರೆ . . . ಶಾಗಿದಂ ದಾನವರಶಿಷಸಂ ಜವನ ಮುಂಬಿವನೆಂಬಿನೆಗಂ ವಿಭೀಷಣಂ (ಶಂರಾತಾ. ೦೯-೦೦). ೬. ಹಿಂದಿನದು : ಹಿಂಬಿನದು : (ಕ). ೭. ಮುಂದಿನದು ; ಅನಂತರ ಒದಗುವುದು : ಭವಿಷ್ಯ : ' ಮುಂಬುಗಳೆ ' ಪರಾ. ೮. ಗುರಿ ; ಉದ್ದೇಶ : ಲಕ್ಷ್ಯ : ಮಕ್ಕಳು ನಿರ್ದಿಷ್ಟ ಮುಂಬಿನಲ್ಲಿ ಬೆಳವಣಿಗೆ ಸಾಧಿಸುವಂತೆ ಕಲ್ಪಿಸಬೇಕು (ಶಿಕ್ಷದ. ೯೬) . ೯. (ಜಮೀನಿನಲ್ಲಿ) "ಕೊಯ್ಯುವ ಸಾಲು : ಅಕ್ಕಡಿ" (ಜಾವಕೋ. ೩೩) ; "ಹೊಲಗದ್ದೆ ಕೊಯ್ಯುವವರು ಕ್ರಮಕ್ರಮಗೆ ಕೊಯ್ಯಲಾಗುವಷ್ಟು ಜಾಗದಲ್ಲಿ ಅಥವಾ ಮೊದಲೇ ಇರುವ ಸಾಲಿನಲ್ಲಿ ಕೊಯ್ಯುತ್ತ ಮುಂದುವರಿಯುವುದು'' (ವಪ್ಪರು.ಕೋಶ) : ಗದ್ದೆ ನಾಟಿಮಾಡುವಾಗ . . . ಹಾಡುತ್ತಾ ನಾಟಿಮಾಡುತ್ತಿದ್ದರೆ ಮುಂಬು ಹತ್ತುವುದೇ ಗೊತ್ತಾಗುವುದಿಲ್ಲವಂತೆ (ವಪ್ಪರು.೨೩).
[< ಮುಂಬು$_1$. / ತಮಿ. ಮುಣ್ಬು ; ಮಲ. ಮುಮ್ಬು : ತೆಲು. ಮುನುಪು]

**ಮುಂಬುಗಳೆ** (ಕ್ರಿ). ಮುಂದಾಗುವುದನ್ನು ಅಲಕ್ಷಿಸು : ಮುಂದೆ ಒದಗುವ ಅಪಾಯವನ್ನು ನಿರ್ಲಕ್ಷಿಸು : ಮುಂಬುಗಳೆದು ಕಾದಿದರರಿ ಬಿರುದರ್ ಕಾದುವಂತೆ ಕುರುಪಾಂಡುಸುತರ್ (ಗದಾಯು. ೬-೦೯).
[ಮುಂಬು$_2$ + ಕಳೆ$_1$]

**ಮುಂಬುಗೊಳ್** (ಕ್ರಿ). ಮುಂದೆ ಹರಡು, — ಆವರಿಸು, — ವ್ಯಾಪಿಸು. ಅದೆ ಪೂತ್ಕಾರೋಚ್ಚಳಚ್ಛೀಕರತಿಮಿತಚಮೂರೇಣು ದಿಗ್ಭಿತ್ತಿಯಂ ಮೆತ್ತಿದುದೆತ್ತಂ ಮುಂಬುಗೊಂಡಂಬರಮನಿತುಮನುದ್ಧೃತ್ತಹಕ್ಕಾಂಬರಂ ನುಂಗಿದುದು . . . ಎಂಬನ್ನಂ ಜಗನ್ಮಂಡಳಮೆಡೆಗಿಡೆ ಬಂದತ್ತು ಮತ್ತೇಭವ್ಯೂಹಂ (ಪರ್ಶಪು. ೬-೯). [ಮುಂಬು$_2$ + ಕೊಳ್$_1$]

**ಮುಂಬುಟ್ಟು** (ನಾ). ಮುಂದಿನ ಹುಟ್ಟು ; ಮುಂದಿನ ಜನ್ಮ ; ಭವಿಷ್ಯಜ್ಜನ್ಮ : ಗಂಡುಗಿಳಿ ಮರುಕವೆತ್ತದಂ ನಿರುಕಿಸುತೆ ಮುಂಬುಟ್ಟಿನೊಳಗಿವಳನಿಂತು ನಾಂ ತೊರೆಯಿಸುವೆನಿನನೆಂದೊರೆದು ಗಂಗಾವರ್ತದೊಳ್ಕೆಡೆದು ಮಡಿದುದು (ಕೀಸರಾ. ೩-೨೭).
[ ಮುಂ$_1$ (< ಮುನ್$_1$ ) + ಪುಟ್ಟು$_2$ ]

**ಮುಂಬೆಚ್ಚು** (ಕ್ರಿ). ಅತಿಶಯವಾಗಿ ಹೆಚ್ಚು : ವಿಶೇಷವಾಗಿ ವೃದ್ಧಿಯಾಗು : ಬೆಚ್ಚನಾದೆಡೆಯಿಂದೆ ಕಾತ್ರಿಸಿ ಮುಂದುಡುಗೊಂಬೆಚ್ಚಱಿಂದೇಳ್ವ ರೋಮಾಂಚನದೊಳಾಸೆ ಮುಂಬೆಚ್ಚೆ ಬೆಮರುವ ಬಾಲೆ ಬೇಸಱದೆ ನಿಂದು ನಿಟ್ಟಿಸುತಿರ್ದಳು (ಕೈಬಿಶಾ. ೩೦-೨೨).
[ಮುಂ$_2$ (< ಮುನ್$_2$) + ಪೆಚ್ಚು$_1$ (< ಪೆರ್ಚು$_1$)]

**ಮುಂಬೆದೆ** (ನಾ). ಮೊದಲ ಬಿತ್ತನೆಯ ಕಾಲ ; ಬಿತ್ತನೆಯ ಪ್ರಾರಂಭದ ಕಾಲ : ರೈತನಾದವನು ಭೂಮಿಯ ಹಿಂಬೆದೆ ಮುಂಬೆದೆಗಳ ಹದವನ್ನು ತಿಳಿದು ಬಿತ್ತನೆ ಮಾಡಿದರೆ ಒಳ್ಳೆಯ ಬೆಳೆಯನ್ನು ತೆಗೆಯಬಹುದು (ರೂಢಿ). [ಮುಂ$_1$ (< ಮುನ್$_1$) + ಬೆದೆ]

**ಮುಂಬೆಳಕು** ' ಮುಂಬೆಳಗು ' ನೋ.

**ಮುಂಬೆಳಗು**, ಮುಂಬೆಳಕು (ನಾ). ೧. ಮುಂಜಾನೆಯ ಮೊದಲ ಬೆಳಕು; ಉಷಃಕಾಲದ ಬೆಳಕು : ಪ್ರಸ್ತುತದೊಳೊಗೆದ ಮುಂಬೆಳಗಮಲದಂತದ ಗಭಸ್ತಿನವಪೂರ್ವಸಂಧ್ಯಾರುಣಂ ಭಾಳವಿನ್ಯಸ್ತಸಿಂಧೂರಂ (ಕೈಬಿಶಾ. ೦-೩) ; ಇಂಬಾದ ದೇಹಕ್ಕೆ ಮುಂಬೆಳಗು ಸಂಭ್ರಮಿಸಿ ತುಂಬಿನೇರಾದ ಮಧ್ಯದ ಪುರುಷನು ಶಂಖಿನಿಗೆ ಮೇಳ (ಸರ್ವಜ್ಞ. ೦೬೩೯); ಮೂಡಲೊಳು ಮುಂಬೆಳಗು ತೋರಿದ್ದುದು (ವೆಂಕಾರಾ. ೩-೩-೨೯). ೨. ಮುಂಜಾನೆ ; ಉಷಃಕಾಲ ; ಅರುಣೋದಯ ಕಾಲ : ಅನಿತಱೊಳ್ ಮುಂಬೆಳಗಿನ ಕೋಳಿ ಕೂಗಿತು ಮೂಡದೆಸೆಗೆಂಪಡರ್ದುದು (ತಬಪು. ೯೮-೩೩) ; ಇಂದೆ ಮುಂಜಾನೆ ಕನಸಾಂತು ನಾನತಿ ಸಂಕಟಂಬಟ್ಟೆ : ಮುಂಬೆಳಗ ಕನಸು ಬರಿದಾಗದೀ ಸರಪರಾಧಿಯ ತಂಟೆ ಬೇಡೆಮಗೆ

(ಗೂರ್ಜ್ರಕಾ. ೯೩-೧೬೩). **ಮುಂಬೆಳಕು :** ೧. ಮತ್ತೆ ಕತ್ತಲೆಳಿದುದಯ ದೆಡೆ ಮುಂಬೆಳಕು ಮೈದೋರಿದುದು ಮಳೆಯು ಮರ್ಬಿನಲಿ (ತತ್ತ್ವಾಂಗ. ೩೩-೨೨೭೩); ಈಗಿನ ಕತ್ತಲೆ ಹರಿದು ಮುಂಬೆಳಕು ತೋರಿರಿಯೇ ತೋರುತ್ತದೆ (ಕಳಕು. ೦೨೨). [ಮುಂ₁ (< ಮುನ್₁) + ಬೆಳಗು₂]

**ಮುಂಬೆಳಸು** (ನಾ). ಮುಂದಿನ ಬೆಳೆ.– ಫಸಲು : ಚೈತ್ರನ ರಥದ ಮುಂಬೆಳಸು ಮೆಚ್ಚಿದರ ಮನಮೆಚ್ಚು . . . ಎನಿಪ ಮಲ್ಲಿಗೆಗಳೇಂ ಬಿರಿದುವೋ (ತೆಂಕು. ೯೩-೨೬); ಎಂಬತ್ತು ನಾಲ್ಕುಲಕ್ಷದ ಜೀವರುಗಳೆಂದೆಂಬ ಬೀಜವ ಸೃಷ್ಟಿಕರ್ತ ಮುಂಬೆಳಸಿಗೆ ಪಣತವ ಕಟ್ಟಿದಂದದಿ ಪೊಂಬೆಟ್ಟ ಕಣ್ಗೆ ರಂಜಿಸಿತು (ಪೋಹತ. ೨-೦೨). [ಮುಂ₁ (< ಮುನ್₁) + ಬೆಳಸು₁]

**ಮುಂಬೆಜಗು** (ನಾ). ದೇಹವು ಮುಂದಕ್ಕೆ ಬಾಗಿ ಸೆಟೆದುಕೊಳ್ಳುವ ಒಂದು ಬಗೆಯ ಅಪಸ್ಮಾರ : ಶರೀರವ ಬಿಲ್ಲಿನ ಹಾಗೆ ಮುಂದಕ್ಕಾಗಿ ಬಗ್ಗಿಸಿ ನೋಯಿಸುವುದು . . . ಇದನೇ ಮುಂಬೆಜಗು ಎಂಬರು (ವೈದ್ಯಸಾ. I. ೯೦೫). [ಮುಂ₁ (< ಮುನ್₁) + ಬೆಜಗು]

**ಮುಂಬೊಗು** (ಕ್ರಿ). ಮುಂದಕ್ಕೆ ಪ್ರವೇಶಿಸು ; ಮುನ್ನುಗ್ಗು : ಹಡಗೊಡನೆ ಹಡಗು ಹತ್ತಲೆಯ ಮೂತಿ ಮೂತಿಗಳಮುರಿ ತೊಡರಿದುವು ; ಪೆಲನರವು ಕೊಕ್ಕು ಮುಂಬೊಕ್ಕು ಫಿನಿಷಿಯರ ಕಪ್ಪಲಿಂದೆಗರಿಸಿತು ಮುಂಬುಬೊಂಬೆಯನು (ಶಾರಿ. ೦೬-೩೬೬). [ಮುಂ₂ (< ಮುನ್₂) + ಪೊಗು]

**ಮುಂಬೊಳ್ತು** 'ಮುಂಬೊಟ್ತು' ನೋ.

**ಮುಂಬೊಟ್ತು, ಮುಂಬೊಳ್ತು** (ನಾ). ಬೆಳಗಿನ ಮೊದಲನೆಯ ಜಾವದ ಸಮಯ : ಮುಂಜಾನೆ ; ಪ್ರಾತಃಕಾಲ : "ಮುಂಬೊಟ್ತಿಂದು ಮುನ್ನೇಸಜಿ಼್" (ಕಕಸಾ. ೩೭ – ೨೩೨). **ಮುಂಬೊಳ್ತು :** ವಿಟನಾಂತರದಿ ಇನಿತು ಮುಂಬೊಳ್ತಿನೊಳಗೇಂಗೆಯ್ದು ತಿರುಗುತಿಪೆ ? (ತತ್ತ್ವಾಂಗ. ೦೨-೩೨೦). [ಮುಂ₁ (< ಮುನ್₁) + ಪೊಟ್ತು]

**ಮುಂಭಾಗ** (ನಾ). ಮುಂದಿನ ಭಾಗ ; ಮುಂದುಗಡೆ : ಶಂಬರಾಸುರ ಸೋಲಗ ನೀರೊಟ್ಟಲೆಂದೆಂಬಂತೆ ರಾಜಿಸುತಿರಲು ಕುಂಭಸಂಭವನಂತೆ ನಾರದಮುನಿರಾಯ ಮುಂಭಾಗದಲಿ ಬಂದಿಳಿದ (ಪೋಹತ. ೦೦-೬೯); ಮುಂಭಾಗಂಬಿಡಿದೆಯ್ತುತಿರ್ಪ ದಡಿಗರ್ ಮುಂಗಾಣಬರ್ ದಿಂಡೆಯರ್ ಶುಭುಸ್ಫಾರಮಹತ್ವಸಿದ್ಧಪಠನಂ ಕಾಣುತ್ತೆ (ಹಾಲಾಸ್ಯ. ೨-೩-೦೨); (ಪ್ರೇಕ್ಷಕರು) ಬಲಬದಿಗೆ ಒಂದು ಗುಡಿಸಲಿನ ಮುಂಭಾಗವೂ ತೆರೆದಿಟ್ಟ ಬಾಗಿಲೂ ಕಾಣಿಸುವುದು (ಅಶ್ವತ್ಥ. ೩೨). [ಮುಂ₁ (< ಮುನ್₁) + ಭಾಗ]

**ಮುಂಭಾರ** (ನಾ). ಮುಂದುಗಡೆ ಹೆಚ್ಚು ಭಾರವಾಗಿರುವಿಕೆ; ಮುಂಭಾಗದಲ್ಲಿ ಹೆಚ್ಚು ತೂಕವಿರುವಿಕೆ : ಮೂಗುತಿ ಮುಂಭಾರ ತುರುಬೀನ ಹಿಂಭಾರ ಸೇರಿನ ಒಂಕಿ ಕೈಭಾರ (ಹಳ್ಳಿಯ. ೬೭) ; ಗಾಡಿಯಲ್ಲಿ ಮುಂಭಾರವಾಗಿದೆ, ಹಿಂದಕ್ಕೆ ಒಂದಿಬ್ಬರು ಕುಳಿತುಕೊಳ್ಳಬೇಕು (ರೂಢಿ). [ಮುಂ₁ (< ಮುನ್₁) + ಭಾರ]

**ಮುಕ** 'ಮೊಗ' ನೋ.

**ಮುಕದಮಿ** 'ಮೊಕದ್ದಮೆ' ನೋ.

**ಮುಕರು** 'ಮುಕ್ಕುಳು₁' ನೋ.

**ಮುಕಾದಮ** (ನಾ). ಗ್ರಾಮದ ಪಟೇಲ,—ಮುಖ್ಯಸ್ಥ : ಅವನು ನನ್ನ ಕೈಕಳಿಗೆ ಕಟ್ಟಿಗೆಯನ್ನೊಡೆಯಲು ಬಂದಿದ್ದನು ಎಂಬ ಸಂಗತಿಯನ್ನು ಬಿಟ್ಟು ಮುಕಾದಮನು ಅವಳಿಗೆ ವಿಶದಪಡಿಸಿದನು- (ಬೋಧಾಶ. ೧೦). [← ಅರ. ಮುಕದ್ದಮ್; ಮರಾ. ಮುಕಾದಮ್]

**ಮುಕುಂದ** (ನಾ). ೧. ವಿಷ್ಣುವಿನ ಹೆಸರುಗಳಲ್ಲಿ ಒಂದು; ಕೃಷ್ಣ : "ವಿಷ್ಣುಃ, ಕೃಷ್ಣಃ, ಕೇಶವಃ . . . ಮುಕುಂದಃ, ಗೋಪೀಂದ್ರಃ . . . ಗದಾಧರಃ– ಈ ೪೫ ನಾರಾಯಣನ ಪೆಸರ್" (ಹಲಾಯು. ೩-೨೨); ಮುಕುಂದನನೇಕ ಮುಕುಂದಬೃಂದಂಗಳ್ ಮೊಟಗೆ ಶುಭಮುಹೂರ್ತದೊಳರಿಕೇಸರಿಯಂ ಮುಂದಿಟ್ಟು ಹಸ್ತಿನಪುರೋಪವನಮನೆಯ್ದೆ ವಂದಾಗಳ್ (ಪಂಪಭಾ.೦೯-೦೦ ವ); ಕಾವ್ಯಸಮಾಧಿಯಿಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ (ಜಗಪ. ೦-೦೭) ; ಮುರಹರ ನಗಧರ ಮುಕುಂದ ಮಾಧವ . . . ನಮೋ ನಮೋ (ಪುರಂದ. ದಾ. ೨-೬೬-೦). ೨. ಒಂದು ಬಗೆಯ ವಾದ್ಯ : ಮದ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶ ವೀಣಾಸ್ವರಂ ಗಳೆಸೆಯೆ (ತತ್ತ್ವಾರಾ. ೬೩-೨೮); ಸುರವ್ಯಾವಂಗರವಮೊಂದೆಡೆಯೊಳ್ ನೆಗಟ್ದುದು ರಾಜ್ಯಸಮರ್ಪಣಯುಗಪತ್ತ್ರಹತ ಮುಕುಂದ [ಶಾಕಾಂ. ಮಮುಂದ]ರವಮೋದೆಡೆಯೊಳ್ (ಅಂಶು. ೯-೬೬); ಸಕಳಗಣಸಂದೋಹ ನಂದಿತನಂದೀಶ್ವರ ಮುಕುಂದಹಸ್ತಾಹತವಿತತಮೃದುಮೃದಂಗಮಂಗಳರವ (ರಾಜಶೇ. ೦೩-೩೪ ವ). ೩. ಒಂದು ಬಗೆಯ ಸುಗಂಧದ್ರವ್ಯ; ಕುಂದುರುಷ್ಕ : "ಹೇಲಾಖ್ಯಂ, ಮುಕುಂದಃ, ಕುಂದಃ, ಕುಂದುರುಃ– ಈ ೪ ಕುಂದುರುಷ್ಕ" (ನಾಚಿರಾ. ೦೦೦) ; "ಪಾಲಂಕ್ಯಾ, ಮುಕುಂದಃ, ಕುಂದಃ, ಕುಂದುರು – ೪ ಕುಂದುರುಷ್ಕವೆಂಬುವ ಗ್ರಂಥದ್ರವ್ಯವು" (ಸಿದ್ಧಾಂತ. ೦೯೦); "ಮುಕುಂದಃ – ಕುಂದುರುಷ್ಕ" (ಓಷಧಿ. ೦೨೬). ೪. ಕುಬೇರನ ನವನಿಧಿಗಳಲ್ಲಿ ಒಂದು : ದಿಕ್ಪಾಲಕರೊಳು ಕುಬೇರನೇ ಪದ್ಮ ಮಹಾಪದ್ಮ ಶಂಖ ಮಕರ ಕಚ್ಛಪ ಮುಕುಂದ ಕುಂದ ನೀಲ ಚರ್ಚಂಗಳೆಂಬ ನವನಿಧಿಗೊಡೆಯನಾಗಿ ಈಶ್ವರನಿಗೆ ಸಖನಾಗಿರ್ಪಂ (ವಿವೇಕ. ೦೬೭). ೫. ಒಂದು ಬಗೆಯ ಪಕ್ಷಿ : ಕಾಗೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಕುಂದಂ ಬಲಾಕ ಲಾವುಗೆ ಸೇನಂ (ಕಾವ್ಯಸಾ. ೦೦೯೯ ಕೂಡ್ರಕ). [ಸಂ.]

**ಮುಕುಟ₁** 'ಮುಕುಡಕ' ನೋ.

**ಮುಕುಟ₂** (ನಾ). ಕಿರೀಟ; ಮಕುಟ : "ಮುಕುಟಂ ಕೋಟೀರಂ ಮೌಳಿ ಕಿರೀಟಂ ತಾನೆನಿಕ್ಕುಮುಷ್ಣೀಷಂ" (ವಸ್ತುಕೋ. ೬೩-೨); ಅದುರಿತು ಪಾದಾಘಾತದಿಂದ ಧರೆ ಬಿದಿರಿದುವು ಮುಕುಟ ತಾಗಿ ತಾರಕೆಗಳು ಉದುರಿದುವು ಕೈತಾಗಿ ಲೋಕಂಗಳೆಲ್ಲಾ . . . ನಮ್ಮ ಕೂಡಲಸಂಗಮ ದೇವನಿಂದು ನಾಟ್ಯವನಾಡೆ (ಬಸವ. ೩೯೦); ಉಜ್ವಳಿಪ ವಿದ್ರುಮಲತಾಂ ಕುರದಂತೆ ಕೆಂದಳಿರ ತೊಂಗಲಂತೆ ಪಸರಿಸುವ ಪದ್ಮರಾಗಮುಕುಟಮುಂ (ಕೃಷ್ಣಕು. ೫-೦೩ ವ). [ಸಂ.]

**ಮುಕುಟೆ** 'ಮುಕುಡಕ' ನೋ.

**ಮುಕುಡಕ, ಮುಕುಟ₁, ಮುಕುಟೆ, ಮುಕುತೆ, ಮುಕ್ಕಡಕ** (ನಾ). ಒಂದು ಬಗೆಯ ಸಸ್ಯ : ರಾಮಿ, ಮುಕುಡಕ, ಮುಕುತೆ, ಏನುಜಾರಿಗ (ವೃಕ್ಷಿನಿ. ೯೯-೯೬೦). **ಮುಕುಟ₁ :** "ಕೋಟೀರಃ – ಮುಕುಟ, ಗೋರ, ಗದುಗು, ಓತಿ, ಕೋತಿ, ಗಂಧ, ನಖ" (ಓಷಧಿ. ೯೦); ಅದಲ ತದನಾಸ್ತರ ಮುಕುಟ ಆಲದ ಹಾಳ ಅಧಲ ತದನಸ್ತರ ಚೈಕೋಲ ತಾಬಮರ (ಕೌಇ. IX–i. ೯೦-೨೫; ಸು. 11ಹಿಯ ೩೫). **ಮುಕುಟೆ :** "ಏನುಜಾರಿಗ, ರಾಮಿ, ಮುಕುಟೆ, ಮುಕುತೆ, ಮುಕುಡಕ" (ಸಸ್ಯಕೋ. ೬೨). **ಮುಕುತೆ :** ಮೇಲಿನ 'ಸಸ್ಯನಿ' ಪ್ರಯೋಗವನ್ನು ನೋಡಿ. **ಮುಕ್ಕಡಕ :** ಕೆಲವು ಕಡೆಗಳಲ್ಲಿ ಗುರಗಿ, ಬಿದಿರು . . . ಜಿಂಜರಗಿ, ಮುಕ್ಕಡಕ ಮುಂತಾದ ಗಿಡಬಳ್ಳಿಪೊದೆಗಳಿದ್ದವು (ಪಂಪಕಂ. ೨). [< ಸಂ. ಮುಕುಷ್ಟಕ = ಒಂದು ಬಗೆಯ ಹುರುಳಿ]

**ಮುಕುಡಿದೆಜ಼್** (ನಾ). ಒಂದು ಬಗೆಯ ತೆರಿಗೆ : ಕಳುವ ಸಾಯಣ್ಣನವರಿಗೆ ಆ ಶ್ರೀವೀರಬಲಂಜೆಳದೇವರಸರು ಆ ಸ್ಥಳದ . . . ಪಣ್ಣುಕಾಯಕ ಅಲೆದೆಜ಼್ ಮುಕುಡಿದೆಜ಼್ ಜೆಟ್ಟಿದೆಜ಼್ ಕೊಸೆದೆಜ಼್ ನಾನಾ ಸಂಬಳಪೊಳಗಾದ

ಪೂರ್ಬ್ಬಾಯಿಯ ಅಪೂರ್ಬ್ಬಾಯಿಯು ಯೆಲ್ಲವನೂ ಕಾರುಣ್ಯಂ ಮಾಡಿ ಧಾರಾ ಪೂರ್ಬ್ಬಕಂ ಮಾಡಿ ಕೊಟ್ಟರು (ಎಕ. VI. ಕಡೂರು. ೯೯-೧೨; 1291). [ಮುಕುಡಿ₂ + ತೆಱ₃]

**ಮುಕುತ** (ಗು). ೧. (ಬಾಣ ಮುಂತಾದುವನ್ನು) ಪ್ರಯೋಗಿಸಿದ; ಬಿಟ್ಟ: ನಕುಲ . . . ಯುಯುತ್ಸು ಸೃಂಜಯರು ಸಕಲಸನ್ನಾಹದಲಿ ಯುದ್ಧೋದ್ಯುಕ್ತರಾದರು ಚಡಿತಚಾಪರು ಮುಕುತ ಶಸ್ತ್ರಾವಳಿಯ ಮಳೆಗಾಲವನು ನಿರ್ಮಿಸುತ (ಕುಮ್ಮಾ.ಭಾ. ೬-೨೪). (ನಾ). ೨. ಬದುಕಿನ ಬಂಧನವನ್ನು ಕಳೆದುಕೊಂಡವನು; ಮರಣಹೊಂದಿದವನು: ಭಕುತವತ್ಸಲನಾಳ ಕೈಯಲಿ ಮುಕುತರಾದರು ಮೂಱುಸಾವಿರ ಮಕುಟವರ್ಧನರು (ಕೌರಿಂ. ೩೪-೧೭). ೩. ಲೌಕಿಕಬಂಧನಗಳಿಂದ ಬಿಡುಗಡೆಯನ್ನು ಹೊಂದಿದವನು; ಪ್ರಾಪಂಚಿಕವಿಷಯಗಳಿಂದ ಮುಕ್ತನಾದವನು: ನೀನನ್ಯರುಗಳಲ್ಲಿ ಯುಕುತಿಯಿಂದವೆ ತಿಳಿದು ನಡೆಯಲು ಮುಕುತನಹೆ [ಪಾಠಾಂ. ಯುಕುತಿಯಿಂದವೆ ಮಾಡಿದರೆ ನಿರ್ಮುಕುತನಹೆ, ಯುಕುತಿಯಿಂದದ ಮಾಡದಿರು ನಿರ್ಮುಕುತನಹೆ] (ಕುಮ್ಮಾ.ಉ. ೯-೧೩); ಮುಕುತ ನಾನಾದೆಂ ಪ್ರಕಟಮಾರ್ಗಕ್ಕಂ ಮುಕುತಿಯಿಾ ಭಸ್ಮಂ ಸುಕರ ಕೇಳೆಂದುಂ (ಪಾಲಾಸ್ಕ. ೪-೦೦-೩೯). [< ಸಂ. ಮುಕ್ತ]

**ಮುಕುತಿ** (ನಾ). ವಿಮೋಚನೆ; ಮೋಕ್ಷ; ಮುಕ್ತಿ: ಅಪರಿರವು ಮುಕುತಿ ಗಿಕುತಿಯು ಸುಖಿಗಳ ಪವಣೆ (ತಿರುಶ. ದೇ. ೯-೦೪); ಧೂರ್ತತನದಿಂ ಕಾದಿ ಕೂಡುವೆನಾರ್ತು ಪರಿಯಂತರದಲಾ ತ್ರ್ಯಮೂರ್ತಿಯನು ಮೂದಲಿಸಿದಲ್ಲದೆ ಮುಕುತಿಯಿಲ್ಲೆಂದ (ಕೌರಿಂ. ೨೩-೦೬); ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣಾ ಮುಕುತಿ (ಪುರಂದ. ೩-೦೪೯ ಪಲ್ಲವಿ). [< ಸಂ. ಮುಕ್ತಿ]

**ಮುಕುತಿವಟ್ಟೆ** (ನಾ). ಮುಕ್ತಿಯನ್ನು ಸಾಧಿಸುವ ದಾರಿ; ಮೋಕ್ಷಮಾರ್ಗ: ಎಱಗುವೆನಲರ್ವಕ್ಕಿಯೊಲು ಧರ್ಮಕರ್ಮದ ತೆಱವನೆಲ್ಲವ ಭವ್ಯತತಿಗೆ ಅಱುಪಿ ಮುಕುತಿವಟ್ಟೆದೋಱುವುಪಾಧ್ಯರ ಮಿಱುಪೆಂಬ್ರಿಯರುಣಾಂಬುಜಕೆ (ಶ್ರೀಪಾಲ. ೦-೬). [ಮುಕುತಿ + ಬಟ್ಟೆ₁]

**ಮುಕುತೆ** 'ಮುಂಕುಡಕ' ನೋ.

**ಮುಕುರ₁**, ಮುಕ್ಕರ, ಮುಖರ₁ (ನಾ). ಒಂದು ಬಗೆಯ ನಾಸಿಕಾಭರಣ; ಮೂಗುತಿ; ಮೂಗುಬೊಟ್ಟು; ನತ್ತು: ಪರಮಸೊಬಗಿಂ ದೆಸೆವ ಆ ದೇಶವೆಣ್ಣಿನ ಮುಕುರದಂತೆ ಒಪ್ಪಿ ವಿದ್ಯಾನಗರಮೆಸೆಯೆ (ಪ್ರೌ‌ಢರಾ. ೦-೬೬); ಮುತ್ತುಗೊಂಚಲು ಬುಗುಡಿ ಮುಕುರ ಚಳತುಂಬುಗಳು (ಬಾಲಾಳ. ೦೦). **ಮುಕ್ಕರ**: ಯುದ್ಧರಂಗಕ್ಕೆ ಬಂದ ರಾಮನು ರಾಮಬಾಣದಂತೆ ಆ ಪ್ರಬಲಸೈನ್ಯದೊಳಕ್ಕೆ ನುಗ್ಗಿ, ಮಾತಂಗಿಯೊಡನೆ ಕಾದಿ, ಅವಳ ಮುಕ್ಕರವನ್ನು ಹಿಡಿದೆಳೆಯುತ್ತ . . . ಧಿಕ್ಕರಿಸಿ ಅವರನ್ನು ಪ್ರಾಣಸಹಿತವಾಗಿ ಬಿಟ್ಟು ಬಿಟ್ಟನು (ಕರಾರ. ೦೦೦). **ಮುಖರ₁**: ನಿನ್ನ ಮೂಗಿನಲ್ಲಿ ಧರಿಸಿರುವ ಮುಖರವು ನಿನ್ನ ತೌರುಮನೆಯ ಕೊಡುಗೆಯಷ್ಟೆ (ಕಥಾ. ೦೯೦); ಗೃಹಿಣಿಯು ಒಮ್ಮೊಂದೊಮ್ಮೆ ಮೂಗಿನ ಮುಖರವನ್ನು ಅಲುಗಾಡಿಸುತ್ತ . . . ಪ್ರಫುಲ್ಲೆಯೂ ಅವಳ ತಾಯಿಯೂ ಬಂದ ಸಮಾಚಾರವನ್ನೆಲ್ಲಾ ಆದ್ಯೋಪಾಂತವಾಗಿ ಹೇಳಿದಳು (ದೇವೀಚ. ೯).

[ದೇ. ತೆಲು. ಮುಕ್ಕಱ, ಮುಂಗರ; ಕೋಲಾ. ಮುಕ್ಕರ, ಮೊಕರ]

**ಮುಕುರ₂** (ನಾ). ೧. ಕನ್ನಡಿ; ದರ್ಪಣ: "ಆದರ್ಶಃ, ದರ್ಪಣಃ, ಮುಕುರಃ — ಈ ೩ ಕನ್ನಡಿ" (ಹಲಾಯು. ೯೦-೯೦೦); ನೈರ್ಮಲ್ಯಶೋಭಾಕಲಿತಂ ತ್ರೈಲೋಕ್ಯಲಕ್ಷ್ಮೀಮಣಿಮುಕುರಮೆನಲ್ ಚೆಲ್ವುವಾಯ್ತಬ್ಜಷಂಡಂ (ಕಾದಂಪೂ. ೬೬೪); ಮುಕುರಂ ಕೈಯೊಳಿಅಲ್ಕೆ ನೀರ ನೆಳಲೇಕ್ಕೆ (ಸೋಮೇಶ.೩); ಮುಸುಬ್ಬು ಮಾಸಿದ ಮುಕುರಂಬೋಲಂತೆ ವಿಗತಪ್ರಭನಾಯ್ತುಮೃತಾಂಶುಮಂಡಲಂ (ಕುಸುಮಾ. ೯-೬೬); ಆನೆ ಮುಕುರದೊಳಡಗಿ ಭಾನು ಸರಸಿಯೊಳಡಗಿ ಅನಿನ್ನ ಗುರುವಿನೊಳಡಗಿ ಸಂಸಾರ ತಾನೆತ್ತಣದು (ಸರ್ವಜ್ಞ. ೩೬೩). ೨. ಕುಂಬಾರನ ಚಕ್ರದ ಹಿಡಿ, ತಿಗುರಿಯ ಹಿಡಿಕೆ. [ಸಂ.]

**ಮುಕುರಂದೋಱು** (ಕ್ರಿ). (ಪ್ರತಿಬಿಂಬವನ್ನು ನೋಡಿಕೊಳ್ಳಲು) ಕನ್ನಡಿಯನ್ನು ತೋರಿಸು: ಮಂಗಳಾರತಿಯೆತ್ತು ಚವರ ಸೀಗುರಿಯಿಕ್ಕಿ ಅಂಗಜಹರಂಗೆ ಮುಕುರಂದೋಱು ಮೈಯಿಕ್ಕಿ ನಿಂದಿರ್ದು (ಬಸವ. ೩-೬೨). [ಮುಕುರ₂ + ತೋಱು]

**ಮುಕುರತೋರಣ** (ನಾ). ಕನ್ನಡಿಗಳಿಂದ ತಯಾರಿಸಿದ ತೋರಣ; ಕನ್ನಡಿಗಳ ಸಾಲುತೋರಣ: ಮುಕುರತೋರಣಮೊಪ್ಪಿರೆ ಮಂಗಳಧ್ವಜಂ ಕುಣಿಯೆ . . . ಗುರುಪ್ರಣತಿಸಮುತ್ಸುಕಂ ಮುದದಿನಂದಿದಿರ್ಗೊಂಡ ನವಂ ನರಾಧಿಪಂ (ರಾಜಶೇ. ೩-೬೦). [ಮುಕುರ₂ + ತೋರಣ]

**ಮುಕುರಿಕ್ಕು** 'ಮುಕ್ಕುಱಿಕ್ಕು₁' ನೋ.

**ಮುಕುರಿಸು₁** 'ಮುಕ್ಕುಱಿಸು₁' ನೋ.

**ಮುಕುರು₁** 'ಮುಕ್ಕುಱು₁' ನೋ.

**ಮುಕುಲ₁**, ಮುಕುಳ (ನಾ). ೧. ಅರಳುತ್ತಿರುವ ಮೊಗ್ಗು; ಮುಗುಳು; ಕುಟ್ಮಲ: ಗಿರಿಶಿಖರ ಮುಕುಲದೊಲು ಮೊಗವನೆತ್ತಿವೆ ನಭವಲ್ಲಲ್ಲಿ (ಉಮ್ಯಾಂ. ೨೦-೩). ೨. ಮೊಗ್ಗಿನಂತೆ ಮುಗಿದ ಕೈ, ಜೋಡಿಸಿದ ಹಸ್ತ. **ಮುಕುಳ**: ೧. "ಕೋರಕಃ, ಜಾಲಕಃ, ಕಳಿಕಾ, ಕುಟ್ಮಳಃ, ಮುಕುಳಃ — ಈ ೫ ಪೂವಿನ ಮುಗುಳ್" (ಹಲಾಯು. ೩೦-೩೨); ಆತನ ಕರತಲಸ್ಪರ್ಶಸುಖದಿಂ ಕಪೋಲತಲಕದಂಬಮುಕುಳಕರ್ಣಪೂರದಂತುಣ್ಮಿರ್ದ ಪುಳಕಮುಂ ಬೆರಸು (ಕಾದಂಪೂ. ೭೯೦); ಮುಕುಳಂ ಮಾದಲ ರಾಯ್ತು ದುಯ್ಯರಿಸಿನಂ ಕಂಪೋಡಿತು (ರಾಜಶೇ. ೨-೩೪); ಸಲೆ ನಿಲೆ ಮಾವು ಪೂವು ವಕುಳಂ ಮುಕುಳಂ . . . ಕಂಪು ಸೊಂಪಗುಂದಲೆಯೆನೆ ರಮ್ಯಮಾ ವಿಷಯದುರ್ಗಳ ನಂದನವೃಂದವೆತ್ತಲುಂ (ತ್ರಿಪುರಾ. ೨-೨೩). ೩. [ಛಂದ] ಕನ್ನಡಛಂಧಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಗಳಲ್ಲಿ ಆರನೆಯದಾದ ಗಾಯತ್ರಿಛಂದಸ್ಸಿನ ಒಂದು ವೃತ್ತ: ಉರ್ವಗ್ಗಂ ಪುರುತಂ ಪರ್ದಿಂದಬಳೇ ಸರ್ವಾದ್ಯಂತದೊಳಂ ನಿರ್ವ್ಯಾಜಂ ಮುಕುಳಂ [ಪಾಠಾಂ. ಕಮಲಂ, ಕುಮುದಂ] (ಛಂದೋಂಬು. ೨-೬೦). ೪. [ನಾಟ್ಯ] ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತಹಸ್ತಗಳಲ್ಲಿ ಒಂದು: ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತಹಸ್ತಗಳು ಯಾವುವೆಂದರೆ — ೧. ಪತಾಕ, ೨. ತ್ರಿಪತಾಕ . . . ೨೨. ಮುಕುಳ, ೨೩. ಊರ್ಣನಾಭ, ೨೪. ತಾಮ್ರಚೂಡ (ಅಭಿನ. ೯೯). ೫. ಇಪ್ಪತ್ತು ಬಗೆಯ ಸಂಚಾರಿದೃಷ್ಟಿಗಳಲ್ಲಿ ಒಂದು; ಅಲಿಗಳನ್ನು ಚಲಿಸದೆ ರೆಪ್ಪೆಗಳನ್ನು ಮುಚ್ಚುವುದು: ಶೂನ್ಯ, ಮಲಿನ, ಶ್ರಾಂತ, ಲಜ್ಜಿತ, ಶಂಕಿತ, ಮುಕುಳ (ಅರ್ಧಮುಕುಳ), ಗ್ಲಾನ . . . ಮದಿರೆ — ಈ ಇಪ್ಪತ್ತು ಸಂಚಾರಿದೃಷ್ಟಿಗಳು (ಲಾಸ್ಯರಂ. ೩-೯ ವ); ಸೊಗಸಿಂದಂ ಕಣ್ಣೆವೆಗಳ್ ಮುಗುಳ್ದಿರ್ದುಂ ತಿರದ ತಾರೆ ಮುಕುಳಮೆನಿಕ್ಕುಂ (ಲಾಸ್ಯರಂ. ೩-೩೦). [ಸಂ.]

**ಮುಕುಲತೆ** (ನಾ). ಮೊಗ್ಗಿನಂತೆ ಸೇರಿಕೊಂಡಿರುವ ಸ್ಥಿತಿ, ಕೂಡಿಕೊಂಡಿರುವ ಸ್ಥಿತಿ: ಕ್ಷಿತಿಪತಿಯು ಕರಸರೋಜದ್ವಿತಯಮನಡಿಗಡಿಗೆ ಮುಕುಲತೆಯನೈದಿಸಿ ತದ್ಕ್ಷಿತಿಪತಿ ನಿಜಕುವಲಯಬಂಧುತೆಯಂ ಪ್ರಕಟಿಸಿದನಾ ಸಭಾಭ್ಯಂತರದೊಳ್ (ಕಂದ್ರಪ್ರು. ೩-೯). [ಸಂ. ಮುಕುಲತಾ]

**ಮುಕುಲನ** (ನಾ). ಕಣ್ಣನ್ನು ಮೊಗ್ಗಿನಂತೆ ಮುಚ್ಚಿಕೊಳ್ಳುವಿಕೆ: ಮುಕುಲನ ನಿಮಿಷಾಳನಂಗಳ್ ವಿಕಾಸಹಾಸಪ್ರಬೋಧನೋನ್ಮೇಷಂಗಳ್ ಪ್ರಕಟಿಸುಗುಮೈಕ್ಯಮಂ ನಿರ್ವಿಕಲ್ಪದಿಂ ಗೌಣಮುಖ್ಯವೃತ್ತಿಕೃತಂಗಳ್ (ಕಾವ್ಯಾವ. ೯೦೪). [ಸಂ.]

**ಮುಕುಲಿತ**, ಮುಕುಳಿತ (ಗು). ೧. ಮೊಗ್ಗಾದ; ಮೊಗ್ಗನ್ನು ತಳೆದ: ಚಾರುಮಿಟಪಾವಲೀವೃತಕೋರಕಿತಾಂಕುರಿತ ಪಲ್ಲವಿತ ಮುಕುಲಿತ [ಪಾಠಾಂ. ಮಮುಕುಳಿತ, ರುಚಿರ] ವಿಸ್ತಾರಿತ ರಮ್ಯಾಶೋಕಮಹೀರುಹಮುಮನಭವನಂಗ

ರುಚಿ ಪುದಿದಿರ್ಕುಂ (ಅರ್ಜು. ೦೦-೪೦). ೨. ಮೊಗ್ಗಿನಂತೆ ಮುಚ್ಚಿ **ಕೊಂಡಿರುವ, — ಸೇರಿಕೊಂಡಿರುವ** ; ಮುಗಿದ: 'ಮುಕುಲಿತಕರ', 'ಮುಕುಲಿತಾಂಜಲಿ' ಪರಾ. **ಮುಕುಳಿತ** : ೧. ಪುರಬಹಿರ್ಭಾಗವಿಸ್ತರಿತನಂದನದೊಳ್ಕುರಿತ ಪಲ್ಲವಿತ ಮುಕುಳಿತ ಕುಸುಮಿತಾಪರಿಮಿತ ಫಲಿತ ತರುಗಳಿ ಇಂತತಿಶಯವಿಲಾಸಕ್ಕೆ ನಿವಾಸಮುಂ (ಸುಕುಮಾ. ೨-೪೭) ; ಮುಕುಳಿತ ನೀಲೋತ್ಪಲಮಮೃತಕರೋದಯದೊಳಗಲರ್ದು ಪೊಜಿಸೂಸುವ ಪೋಲ್ಮೆ ಕರಂದಮ್ಮನಿನಿನಂ ಬಾಲಿಕೆ ನೋಡುತೆ ತಳೆದಲೊಗ್ಗುವ ಹರ್ಷಾಶ್ರುಗಳಿಂ (ಉದ್ಭಟ. ೬-೯೯). ೨. ಮುಕುಳಿತಪಾಣಿಪಲ್ಲವಪುಟರ್ಮಿತಾನನ ಪದ್ಮರೆಂದರಂತಕನಳವಂ ತ್ರಿಲೋಕದಟೆವಂ ಪರಿಭಾವಿಸಿ (ಮಲ್ಲಿ. ೦೩-೦೬೨). ೩. ಅರೆಮುಚ್ಚಿದ ; ಅರ್ಧಮುಚ್ಚಿದ : ಮುಕುಳಿತವಿಳೋಚನಂ ಕಂಟಕಿತಾಂಗಂ ಸ್ವೇದಬಿಂದುದಂತುರಿತಮುಖಂ ಪ್ರಕಟಶ್ವಸಿತೋತ್ಕಂಪಂ ನಿಕಾಮುಕಮನಿಯಮಾದುದಿಂತು ರತಾಂತಂ (ಕಾವ್ಯಾವ. ೯೦೫), (ನಾ). ೪. ಮೊಗ್ಗುಗಳುಳ್ಳುದು ; ಮುಗುಳುಗಳುಳ್ಳುದು : ಸಮುಪದಸ್ಖಲನಸುಖನಿಮೀಳಿತೋನ್ಮೀಲಿತನಯನಂಗಳಿಂ ಮುಕುಳಿತಮುಂ ಕುಸುಮಿತಮುಮಾದ ನಿಶ್ವಾಸಪವನನಿಂ ಪರಿಮಳಮುಂ ಬೀಱುವ ವಧೂವರರಾಗವಿಷಯವಲ್ಲರಿ ಫಲಿತಮಾದುದೆನಿಸಿ (ಜಗಂ. ೨-೩೨ ವ). [ಸಂ.]

**ಮುಕುಲಿತಕರ**, ಮುಕುಳಿತಕರ (ನಾ). ಮುಗಿದ ಕೈ ; ಜೋಡಿಸಿದ ಕೈ : ಮಾರುತಿ ಮೇಘರುತಿಯಿನುದಾತ್ತರಾಘವಂಗೆ ಮುಕುಲಿತಕರಸರೋಜನಾಗಿ (ಶಂರಾಮಾ. ೧೧-೪೨ ವ); **ಮುಕುಳಿತಕರ** : ಅನಂತರಂ ವಿಶ್ವಸೇನಾವನೀನಾಥನುಮೈರಾ... ಮಹಾದೇವಿಯುಂ ಕುರುಕುಳಾಗ್ರಗಣ್ಯರಪ್ಪ ಬಂಧುಗಳುಂ ಮುಕುಳಿತಕರಕಮಳರ್ ಬಳಸಿಯುಮಿರೆ (ಶಾಂತಿಪು. ೦೦-೭೮ ವ) ; ವಂದಿಸುತ ಮುಕುಳಿತಕರಂಗಳ ಸಂದಿಸಲು ಭಾಳಸ್ಥಳಗಳಿಂ ನಂದಿಕೇಶನನಂಕಿಸುತ ಕೀರ್ತಿಸಿದರರ್ತಿಯಲಿ (ಬಸವು. ೨-೨೬). [ಸಂ.]

**ಮುಕುಲಿತಾಂಜಲಿ**, ಮುಕುಳಿತಾಂಜಲಿ (ನಾ). ೧.=ಮುಕುಲಿತಕರ : ಅಂತು ವಿನತನಾದನಂತರಂ ಸುರೇಂದ್ರಮನ್ನು ವಜ್ರಬಾಹು ಪುರಂದರರೊಳಂ ವಿನಯವೃತ್ತಿಯಿಂ ಮೆಱೆದು ಸಮುಚಿತಾಸನದೊಳ್ ಕುಳ್ಳಿರ್ದು ಮುಕುಲಿತಾಂಜಲಿಪುಟನಾಗಿ . . . ಬಿನ್ನವಿಸೆ (ಶಂರಾಮಾ. ೨-೩ ವ). ೨. ಕೈಗಳನ್ನು ಮುಗಿದವನು,—ಜೋಡಿಸಿದವನು : ಹರ್ಷಿತಚಿತ್ತಂ ಮರುತ್ತನೃಪುಂ ರಾಮಚಂದ್ರಂಗೆ ಮುಕುಲಿತಾಂಜಲಿಯಾಗಿ . . . ಬಿನ್ನವಿಸೆ (ಶಂರಾಮಾ. ೦೦-೩೬ ವ) ; ಅಂತು ಪೊಕ್ಕು ಮುಕುಲಿತಾಂಜಲಿಯಾಗಿ ಮುಂದೆ ನಿಂದಿರ್ದ ಮೇದಿನೀದೇವಿಯ ದೈನ್ಯಭಾವಮಂ ವಿರಿಂಚಿ ಕಾರುಣ್ಯ ಚಿತ್ತದಿಂ ನೋಡಿ (ಜಗಂ. ೧-೨೭ ವ). **ಮುಕುಳಿತಾಂಜಲಿ** : ೧. ಅಂತು ಬೆಸಗೊಳ್ವುದುಂ ಮುಕುಳಿತಾಂಜಲಿಪುಟನಾಗಿ ವಿಪುಲಮತಿ . . . ಆಗಳುದ್ಯತನಾದಂ (ಶಂರಾಮಾ. ೦೦-೬೩ ವ) ; ತ್ರೇತೆಯೊಳಿಂದ್ರಂ . . . ಬಂದಾತುರನಾಗಿ ವಾರಿರುಹಸಂಭವನಂ ನುತಿಗೆಯ್ದು ಭಕ್ತಿಯುಕ್ತಾತಿಶಯೋಕ್ತಿಯಿಂ ಮುಕುಳಿತಾಂಜಲಿಯುಂ ಪಣೆಗಿಟ್ಟು ನಿಂದು (ಲಾಸ್ಕರಂ. ೦-೨). ೨. ಆ ವ್ಯತಿಕರಮಂ ಭಗೀರಥಂ ಕೇಳ್ದು ತಾನುಮವರಲ್ಲಿಗೆ ಬಂದು ಪಂಕ್ತಿಮುಚ್ಚಿಯಿಂ ಬಂದಿಸಿ ಕುಳ್ಳಿರ್ದು . . . ಬೆಸಸುವುದೆಂದು ಮುಕುಳಿತಾಂಜಲಿಯಾಗಿ ಬಿನ್ನಪಂಗೆಯ್ದಾಗಳ್ (ಅಜಪು. ೦೦-೦ ವ). [ಸಂ.]

**ಮುಕುವಾಡು** (ನಾ). ಒಂದು ಬಗೆಯ ಹಾಡು,—ಗೀತೆ : ಕುಣಿವವರ ಕಂಡು ತಾನುಂ ಮಗುಳ್ದು ನರ್ತಿಸುತಲಣಿಮುರದಿ ಮುಕುವಾಡುಗಳ ತಾನು ಹಾಡುತಂ . . . ಪ್ರಭುದೇವ ಬರಲು (ಶ್ರೀಶುಕು. ೯-೩೯). [? + ಪಾಡು₂]

**ಮುಕುಳ** 'ಮುಕುಲ' ನೋ.

**ಮುಕುಳಿ** (ನಾ). ೧. ಸ್ತ್ರೀಯ ಜನನಾಂಗ ; ಯೋನಿ : (*). ೨. ಆಸನದ್ವಾರ ; ಪೃಷ್ಠ : ಮಕ್ಕಳ ಮುಕುಳಿಯ ವರಸಿದ ಕೋರಿಯ ಸಿಕ್ಕಿಲ್ಲದೆ ಪೆಗಲೊಳಗೆ ಹೊತ್ತು ತಿರುಗುವ ಪಂದಿಗಳ ಮುಕ್ಕಣ್ಣನ ಭಕ್ತರೇದು . . . ಕೊಂಡಾಡುತಿರುವೆ ನೀ ಬಸವ (ಬಸ್ಸರಾ. ೯-೬೦) ; ಬಯನೆಟ್ಟನಿಂದ ತಿವೀರಿ ಆತನ ಮುಕುಳಿಗೆ, ಅವನ ಗುಟುಲುಸ್ವರ ಸ್ವಲ್ಪ ಕೇಳೋಣ (ಚರಕ್ಕ. ೨೨೦). 'ಪುಕುಳಿ' ಪರಾ. [ ? ]

**ಮುಕುಳಿತ** 'ಮುಕುಲಿತ' ನೋ.

**ಮುಕುಳಿತಕರ** 'ಮುಕುಲಿತಕರ' ನೋ.

**ಮುಕುಳಿತಹಸ್ತ** (ನಾ). ೧.=ಮುಕುಲಿತಕರ : ಎದ್ದು ಮುಕುಳಿತ ಹಸ್ತಗೂಡಿ ರಾಮಾಚಾರ್ಯರೊಲ್ದು ವಂದಿಸಿಯುನ್ನತಾಸನವನಿಕ್ಕಿ . . . ಶ್ರೀವಿಕರ್ಣಾಚಾರ್ಯರ ಕ್ಷೇಮಮಂ ಬೆಸಗೊಂಡು (ಐಕೋಶು. ೭-೩೬). ೨. ಕೈಮುಗಿದಿರುವವನು : ಸಾಷ್ಟಾಂಗ ದಂಡಪ್ರಣಾಮಮಂ ಮಾಡಿ ಮುಕುಳಿತಹಸ್ತನಾಗಿ ನಿಂದಿರ್ದ ನಿಜಶಿಷ್ಯನಂ ನೋಡಿ (ವಾವಾಗು. ೬-೦೦).
[ ಸಂ. ಮುಕುಲಿತಹಸ್ತ ]

**ಮುಕುಳಿತಾಂಜಲಿ** 'ಮುಕುಲಿತಾಂಜಲಿ' ನೋ.

**ಮುಕುಳಿಸು** (ಕ್ರಿ). ೧. ಮೊಗ್ಗಾಗು ; ಮೊಗ್ಗು ಬಿಡು : ಮುಕುಳಿಸಿ ತಲರೆಳಸಿದ ಚಂಪಕ ಮುಕುಳದ ಚೆಲ್ವನೆಸೆವ ಲಸಿತಸ್ವಾಭಾವಿಕನತಮಂದೋಚ್ಛ್ವಾಸಪ್ರಕರ್ಷನಾಸಾವಿಳಾಸಮಾ ನರ್ತಕಿಯಾ (ರೀಲಾವ. ೪-೦೦೬). ೨. (ಕಣ್ಣು) ಮುಚ್ಚು : ಮುಚ್ಚಿಕೊಳ್ಳು : ಆತನ ಕುಡುವಿಲ್ಲ ಜೇವಡೆಗೆ ಬಿಗುರ್ತಂತೆ ಕಣ್ ಮುಕುಳಿಸಿದುವು (ಕಾದಂಬ. ೭೬೬) ; ಮೊವಲೆವೆಗಳನು ಮುಕಳಿಸೆನ್ನ ಸಿರಿಯೋ ! ತೊದಲನ್ನು ನಿಲ್ಲಿಸೆನ್ನಯ ಹೊನ್ನ ಮರಿಯೋ ! (ಕಂಪು. ೨೪-೦).
[ ಮುಕುಳ (= ಮುಕುಲ) + —ಇಸು₃ ]

**ಮುಕುಳೀಕೃತ** (ಗು). ೧. (ಮೊಗ್ಗಿನಂತೆ) ಮುಚ್ಚಿರುವ ; ಜೋಡಿಸಿದ ; ಮುಗಿದ : ಸುಬಳಧರಾಧೀಶ್ವರಂ . . . ಸಮುದಾಯಮಂ ಬಂದಿಸಿ ಸಮುಚಿತೋದ್ದೇಶವಾಸನದೊಳ್ ಕುಳ್ಳಿರ್ದು ಮುಕುಳೀಕೃತ ಕರಕಮಲಯುಗಲನಾಗಿ (ಸುಕುಮಾ. ೬-೯೬ ವ). (ನಾ). ೨. (ಮೊಗ್ಗಿನಂತೆ) ಮುಚ್ಚಿಕೊಂಡಿರುವುದು : ಮುಕುಳೀಕೃತಂ ಲಳಿತ ಮಧುರಂ ಲಜ್ಜಾಲೋಳಂ ಸ್ಮರಾಕುಳಿತಂ ಮನಂ ದಳಿತಮಪಸನ್ಮುಗ್ಧಂ ಸ್ನಿಗ್ಧಂ ವಿಳೋಕನಮೋಪಳಾ (ಪಂಶಭಾ. ೪-೭೭). [ಸಂ. ಮುಕುಲೀಕೃತ]

**ಮುಕುಱು** 'ಮುಕ್ಕುಱು₁' ನೋ.

**ಮುಕೂಡಲ್** 'ಮುಕ್ಕೂಡಲ್' ನೋ.

**ಮುಕೋಪು** 'ಮೋಕೂಫ್' ನೋ.

**ಮುಕ್ಕ₁** (ನಾ). (ಮಣ್ಣು ಮೊದಲಾದುವನ್ನು) ಮುಕ್ಕುವಂಥದು : 'ನೆಲಮುಕ್ಕ', 'ಮಣ್ಮುಕ್ಕ' ಪರಾ. [ ಮುಕ್ಕು₁ + —ಅ₇ ]

**ಮುಕ್ಕ₂** (ನಾ). ಅಂಗಹೀನನಾದವನು ; ಊನ ಹೊಂದಿದವನು : ಮೋಟನಂ ಮುಕ್ಕನಂ ಕೀಳುಜಾತಿಯನು ಪುರುಳಳಿದ ಮೆಯ್ಯಾದೊಡಂ ಬೇಳಿ ಬೆಲೆಯಿತ್ತೊಡಮಂ ಕಾಮನೆಂಬ ದುಶ್ಶೀಲೆಯರು ಕಣ್ಗೆಸೆಧರು (ಜಕನಾ. ೪-೪೪). [ಮುಕ್ಕು₄ (<ಮುಱುಕು) + —ಅ₇]

**ಮುಕ್ಕ₃**, ಮೂರುಕ, ಮೂರ್ಖ (ನಾ). ತಿಳಿಗೇಡಿ ; ಅಜ್ಞ ; ಮೂಢ : "ಮುಕ್ಕ — ಮೂರ್ಖ = ಬುದ್ಧಿ ಹೀನ" (ಕನ್ನಕೋ. ೩೬) ; ನಾನ್ ಮೆಚ್ಚಿನ್ ಇಲ್ಲದಾಸಿಗೆ ಕಿರ್ಚು ಕಾಯಿಸುವ ಮುಕ್ಕನನ್ (ಅಕ್ಕತಾ. ೦೪-೪೦೦); ಈ ಮುಕ್ಕ ಸನ್ಯಾಸಿಯಾದರೆ ಬಟ್ಟೆಗೆ ಬಣ್ಣ ಕೇಡು (ಮಲ್ಲಿ. ೦೦). **ಮೂರುಕ** : ಕಾಮಿನಿಯರುಗಳಾರು ಕೆಲಬರು ಕಾಮಿತವ ಕಾಮಿಸುವರಲ್ಲದೆ ತಾಮುಸಧಿನಾ ಮೂರುಕರು ಪೂಜಿಸಿದ ಪೂಜೆಗಳ ಪ್ರೇಮದಿಂದೊಡಬಡುವರು (ಕುಮ್ಯಾಅ. ೩-೨೩) . **ಮೂರ್ಕ** : ಬಲ್ಲಂಗೆ ಮೂರ್ಕ್ಕಂಗಾಪದವ ನೋರ್ಪಡವಂ ಜವದೊಳ್ ಮಾರ್ಕ್ಕೊಳಲ ಭೈರವಂ (ಎಕ. VI. ತಕ್ಕೆರು. ೯೪-೨೦ ; ಕು. 1060 ?). [ <ಪ್ರಾ. ಮುಕ್ಖ /ಸಂ. ಮೂರ್ಖ ]

**ಮುಕ್ಕಂಡುಗ** 'ಮೂಗಂಡುಗ' ನೋ.

**ಮುಕ್ಕಂಡೆ** (ನಾ). (ಕರಾ) ಹಾಳು ; ನಾಶ; ಮೂರಾಬಟ್ಟೆ : ಮೂವರು ಹೋದ ಕೆಲಸ ಮುಕ್ಕಂಡೆ (ಮೂರಾಬಟ್ಟೆ) (ಕೃಷಮಾಂಸ. ೫೫). [ ? ]

**ಮುಕ್ಕಂದಿ** (ನಾ). ಮೂರುವರುಷಗಳಿಗೊಮ್ಮೆ ಕರುಹಾಕುವ ಹಸು : "ಮುಕ್ಕಂದಿ _ ಮೂರುವರುಷಕ್ಕೆ ಈಯುವ ಆಕಳು" (ಜಾನಕೋ. ೩೦). [ < ಮೂಱು + ಕಂದಿ$_2$ ]

**ಮುಕ್ಕಂಧಾಯ** 'ಮೂಗಂದಾಯ' ನೋ.

**ಮುಕ್ಕಟ,** ಮುಕ್ಕಟೆ, ಮುಕ್ಕಟ್ಟೆ, ಮುಕ್ಕಟ್ಟು$_3$ (ಅ). ೧. ಮುಂಚೆ ; ಮೊದಲು : ಪೂರ್ವಭಾವಿಯಾಗಿ ; ಮುಂಚಿತವಾಗಿ : ಈ ಪಿರಂಗೇರು ಬರೋ ಮುಕ್ಕಟ ಹೀಂಗೇ ಇರತಿತ್ತಂತ (ಕುವಜಾ. ೧೭೨). ೨. ಮುಂಭಾಗದಲ್ಲಿ ; ಮೊದಲಿನಲ್ಲಿ : ಎತ್ತು ಜತ್ತಗಿ ನುಂಗಿ ಛತ್ತ ಬಾನವ ನುಂಗಿ ಮುಕ್ಕಟ ತಿರುವೊ ಅಣ್ಣನ ಮೇಳಿ ನುಂಗಿತ (ಶಂಕ. ೨೯-೧೪). **ಮುಕ್ಕಟೆ** : ೧. ನೀ ಬರುವ ಮುಕ್ಕಟೆ ಈ ಮನೆಗೆ ಬಂದೀನಿ ಅವ್ವಾ ! (ಮಡಿಮು. ೫೭). **ಮುಕ್ಕಟ್ಟೆ**: ೧. ಆದರ ಯುವಸ್ತಾ ಮುಕ್ಕಟ್ಟೆ ಮಾಡಿದ್ದು ಶ್ಯಾಣೇತನ ಆತಿಲ್ಲೊ ಆಜಾರೆಪ್ಪ ? (ಗ್ರಾಪೂಯು. ೧೦೩) ; ಪಾವಳ್ಳಿ ಬಿಟ್ಟು ನಾ ಎಲ್ಲೂ ಹೋಗಾಣೆಲ್ಲಾ ಅಂತ ಅವರು ಮುಕ್ಕಟ್ಟೆ ಹೇಳಿದ್ದರರೀ (ಗ್ರಾಪೂಯು. ೫೦೩). **ಮುಕ್ಕಟ್ಟು$_3$** : ೧. "ಮುಕ್ಕಟ್ಟು-ಮೊದಲು, ಮೂರುಗಂಟು, ಮುಂಭಾಗ" (ಜಾನಕೋ. ೩೦). ೩. ಮುಂಭಾಗಕ್ಕೆ ; ಮುಂದಕ್ಕೆ ; ಮುಂದುಗಡೆಗೆ : ಮೂರು ಹಾಡಿನ ಮೂಳ ಮುಕ್ಕಟ್ಟು ಬರಬೇಡ (ಹಳ್ಳಿ. ೭೭) ; ರಥವು ಓಡುವಾಗ ಮುಂಜೋಲಿ ಇರುತ್ತದೆ ; ಆದರಿಂದ ಮುಕ್ಕಟ್ಟು ಹಾರಿಕೊಂಡರೆ ಬೊಕ್ಕಬೋರ್ಲ ಬಿದ್ದು ಬಹಳ ಪೆಟ್ಟು ತಾಗುವುದು (ಮುಂಬಯು. ೪-೭೨). [ < ಮುನ್$_1$ ]

**ಮುಕ್ಕಟೆ** 'ಮುಕ್ಕಟ' ನೋ.

**ಮುಕ್ಕಟ್ಟೆ** 'ಮುಕ್ಕಟ' ನೋ.

**ಮುಕ್ಕಟ್ಟು$_1$** (ನಾ). ಮುಂಭಾಗ ; ಮುಂದುಗಡೆ : ಮುಕ್ಕಟ್ಟಿಗೆ ಎಣ್ಣೆಯನೊತ್ತಿಕೊಳ್ಳುವುದರ್ಗುಣ (ಸಕವೈ. ೩೧) ; ಹಡಗಿನ ಮುಕ್ಕಟ್ಟಿನಲ್ಲಿ ಗಡುತರವಾದೊಂದು ಕಬ್ಬಿಣಸರಪಳಿಯು ಇರುವುವು (ಮುಂಬಯು. ೩-೦೦೩). 'ಮುಂಗಟ್ಟು' ಪರಾ. [ < ಮುನ್$_1$ + ಕಟ್ಟು$_2$ ]

**ಮುಕ್ಕಟ್ಟು$_2$** 'ಮುಗ್ಗಟ್ಟು' ನೋ.

**ಮುಕ್ಕಟ್ಟು$_3$** 'ಮುಕ್ಕಟ' ನೋ.

**ಮುಕ್ಕಡಕ** 'ಮುಕುಡಕ' ನೋ.

**ಮುಕ್ಕಡಪ್ಪು** (ನಾ). ಮೂರು ಹಾಯ್ಗಡಗಳನ್ನುಳ್ಳುದು : ಮೂಡ ಮುಕ್ಕಡಪ್ಪಿನ ಹೊಳೆ ತೆಂಕಯೆಂಣೆಯ ಹೊಳೆ ಪಡುವ ಪುಳಕಳಿಯುವ ಹೊಳೆ ಬಡಗ ಛಲಿಮೆಯ ಹೊಳೆ ಈ ನಾಲ್ಕು ಹೊಳೆಗಳನು . . . ದೇವರ್ಗೆ ಮಾಡಿಕೊಟ್ಟ ಧರ್ಮ ಕ್ಷೇಮದ ವಿವರ (ಎಕ. V, ೪೦-೬; 1587). [ < ಮೂಱು + ಕಡಪ್ಪು$_0$ (< ಕಡಪ್ಪು$_2$) ]

**ಮುಕ್ಕಡಲೆ** (ನಾ). ಕಡಲೆಯ ನುಚ್ಚು : ಸೇವಗೆಯ ಪಾಯಸ, ಮುಕ್ಕಡಲೆಯ ಪುಗ್ಗೆ, ಹಿಂಡಿಯ ಕಚ್ಚರಿ, ಅಲಸಂದೆಯ . . . ಕಾಣಿಕೆ ತಾಂಬೂಲ ಮಂತ್ರಸಮನ್ವಿತವಾಗಿ ಶಿಶುವಿಗೆ ಮೂರು ಸೂಳು ನಿವಾಳಿಸಿ (ಶಾಲಿವ. ೦೨೯-೨). [ಮುಕ್ಕು$_4$ (< ಮುಱುಕು) + ಕಡಲೆ]

**ಮುಕ್ಕಡಿ$_1$** (ನಾ). ೧. ಮೂಗು ಕಡಿದುಹೋಗಿರುವಿಕೆ ; ಮೂಗಿಲ್ಲದಿರುವಿಕೆ. ೨. ಮೂಗು ಕಡಿದು ಹೋದವನು ; ಮೂಗಿಲ್ಲದವನು: "ವಿಗ್ರಃ, ವಿಗತನಾಸಿಕಃ — ೨ ಮೂಗಿಲ್ಲದವನು, ಮುಕ್ಕಡಿಯುವನು" (ಸಿದ್ಧಾಂತಿ. ೦೬೦) ; ಮೂಗುಳ್ಳ ಮುಕ್ಕಡಿಗಳು ನಾವು . . . ಕಸ್ತೂರಿಯ ವಾಸನೆಯನ್ನು ನೋಡಿದೆವಾದರೆ ನಮಗೆ ಮೂಗಿನಲ್ಲಿ ನೆತ್ತರು ಬೀಳುವುದು! (ಸಾಹಿಜೀ. ೫೨). [ < ಮೂಗು + ಕಡಿ$_3$ ]

**ಮುಕ್ಕಡಿ$_2$** (ನಾ). ಮೂರು ತುಂಡು, — ಭಾಗ : ಪರದರ್ಶನಕುಳಿಶದಿನುದ್ಧರಮಿಥ್ಯಾತ್ವಾದ್ರಿಪಕ್ಷಮುಂ ದ್ವಿರದೇಂದ್ರಂ ಭರದಿಂ ಖಂಡಿಸೆ ಮುಕ್ಕಡಿನಿರತಂ ತಾನಾಯ್ತು ದುಸ್ತರಂ ಮಿಥ್ಯಾತ್ವಂ (ಪಾರ್ಶ್ವ. ೫-೪೨) ; ಕೂರಲಗನಾ ಕರ್ಣ ಬರೆಸೆಳೆದಾರಿ ಹಿಂದಣೆಸೆಚ್ಚು ಪಾರ್ಥಕುಮಾರಕನ ಚಾಪವನು ಮುಕ್ಕಡಿಯಾಗಿ ಖಂಡಿಸಿದ (ಕುಮಾದ್ರೋ. ೬-೩೨) ; ಮುಂದಣಯುಗಂಗಳಲಿ ಮನುಜಗೋಚರವಾಗದವೊಲೀ ವನನಿಧಿಯ ಸೇತುವ ವಿಭಾಗಿಪುದೆನಲು ಬಿಲುಗೊಪ್ಪಿಂದ ಮುಕ್ಕಡಿಯಾಗಿ ಖಂಡಿಸಿದ (ತೊರರಾ. ೬-೫೪-೦೭). [ < ಮೂಱು + ಕಡಿ$_3$ ]

**ಮುಕ್ಕಡಿಗೆಯ್** (ಕ್ರಿ). ಮೂರು ತುಂಡುಮಾಡು ; ಮೂರು ಭಾಗವಾಗುವಂತೆ ತುಂಡರಿಸು : ಮಂತ್ರಮಂ ತಂತ್ರದಿಂ ತಱಿದು ಪೊಸಮುಸೆಯ ವಿಶಿಖಂಗಳಿಂ ಪಗೆಯ ಬಿಲ್ಲಂ ಪುಲ್ಲು ಕಡಿವಂತು ಮುಕ್ಕಡಿಗೆಯ್ದು ಬೊಬ್ಬಿಱಿದಂ (ರಾಮಾಶ್ವ.೦೪೫-೨೭). [ ಮುಕ್ಕಡಿ$_2$ + ಕೆಯ್$_1$]

**ಮುಕ್ಕಣ್**, ಮುಕ್ಕಣ್ಣು (ನಾ). ಮೂರು ಕಣ್ಣುಗಳು : ಎರಡು ತೊಡೆಗಳ ಮೇಲೆ ಪರಮನನಿರಿಸಿ ಸತಿ ಅಭ್ಯಂಗನವನಾಚರಿಸುತ್ತೊಯ್ಯನೆ ಮೂಗನೊತ್ತುತ ಕಿವಿಯನೂದುತ್ತ ಒರೆಸುತಂ ಮುಕ್ಕಂಗಳಂ (ಬಸವ. ೦೫-೬). 'ಮುಕ್ಕಣ್ಣ' ಪರಾ. **ಮುಕ್ಕಣ್ಣು** : ಗಂಗೆಯ ಧರಿಸಿ ಭಸಿತವಿಟ್ಟು ಫಲದೊಳು ಪಿಂಗದೆ ಮುಕ್ಕಣ್ಣನಾಂತು ಅಂಗಜಹರನಂತೆಯಾರಾಮದೊಳಗಾ ತೆಂಗಿನ ಮರಗಳೊಪ್ಪಿದುವು (ಕಂಪವಿ. ೨-೪೨). [ < ಮೂಱು + ಕಣ್ ]

**ಮುಕ್ಕಣ್ಣ** (ನಾ). ೧. ಮೂರುಕಣ್ಣುಗಳುಳ್ಳವನು ; ತ್ರಿನೇತ್ರ ; ಶಿವ : "ಗೊರವನೆನಲ್ ಮುಕ್ಕಣ್ಣಂ" (ತತುವಿ. ೨೬) ; ಕಾಮಹರನೊಳ್ ಮುಕ್ಕಣ್ಣನೊಳಖಿಳವೇದಶಾಸ್ತ್ರಕ್ರಮಮಂ ವಿಕ್ಕವನೊಳ್ ಪಿತ್ರವನದೊಳ್ ಪೊಕ್ಕವನೊಳದೆಂತು ಚಿತ್ರವಿಟ್ಟೆ ಲತಾಂಗೀ (ಗಂಕ. ೩-೦೦೦) ; ರಕ್ಕಸನೆರಡು ತೋಳ್ಗಳ ಕಡಿದಪೆನೆಂದು ಚಕ್ರವ ಪುನರಪಿ ತುಡುಕೆ ಮುಕ್ಕಣ್ಣನೈತರು ತುಭಯವೀರರಿಗಡ್ಡ ಹೊಕ್ಕನು ಮಧ್ಯಸ್ಥನಾಗಿ (ವೋಹತ. ೪೦-೬೨). ೨. [ಜೈನ] ಜ್ಞಾನದ ಮೂರನೆಯ ಕಣ್ಣುಳ್ಳವನು ; ಕೇವಲಜ್ಞಾನಿ ; ಜಿನ : ಲೆಕ್ಕವಿಲ್ಲದೆ ಬಂದ ರಕ್ಕಸನಾಯಕರಿಕ್ಕಿದ ಪೌಜುಗಳೆಲ್ಲವನು ಮುಕ್ಕಣ್ಣನ ಪರಿವಾರ ಕಾಣುತ ಖತಿ ಮಿಕ್ಕು ನಡೆದುದಿದಿರಾಗಿ (ತ್ರಿಷಷ್ಟಿ. ೦೬-೨೦೩) ; ಎರಡುಗಣ್ಣಿಂದ ಲೋಕವ ನೋಡಬೇಕು ತನ್ನರವ ಸುಜ್ಞಾನ ದೃಷ್ಟಿಯೊಳು ತಿರುಗಿ ನಿಟ್ಟಿಸಬೇಕು ಮುಕ್ಕಣ್ಣಗಲ್ಲದೆಲ್ಲರಿಗೆ ಬಹುದೆ ಸುಖಸಿದ್ಧಿ (ಭರತ. ೫-೭೭).

ಮುಕ್ಕಣ್ಣನರಸಿ = ಶಿವನ ರಾಣಿ ; ಪಾರ್ವತಿ : ಮುಕ್ಕಣ್ಣನರಸಿಯು ಬೀಳ್ಕೊಂಡು ರತಿದೇವಿ . . . ಬಂದು ಹೊಕ್ಕಳು ಕುಸುಮಾವತಿಯ (ವೋಪತ. ೬-೪) ; ಮುಕ್ಕಣ್ಣನರಸಿಯಂಶವೆ ಬಂದು ಧರೆಯೊಳಗೆ . . . ನಿರ್ವಾಣಪದವಿಯನಾಂತ ಮಾದೇವಿಯಕ್ಕನ ಪದಕ್ಕೆ ಶರಣು (ಕವಿಪು. ೦-೦೫). [ಮುಕ್ಕಣ್ + — ಅ$_7$ ]

**ಮುಕ್ಕಣ್ಣವೈಜ್ಯ** (ನಾ). ಒಂದು ಬಗೆಯ ವಾದ್ಯ : ಮಕರತೋರಣ ಪಾಯಿಮುಪ್ರತ್ತಿಪು ಮುಕ್ಕಣ್ಣವೈಜ್ಯ ಬಸವನ ಡ್ಯಕ್ಕೆ ನಂದಿಧ್ವಜ ಭೇರಿ ಡ್ಯಂಕ ಪಂಚವಾದ್ಯ ಮುಂತಾಗಿ ನಮಸ್ಕರಿಸಿ ವನ್ದಿಶಿ ಯಿದವೆ (ಎಕ. VI, ತರೀಕೆರೆ. ೦೦೪-೩೭; 1717). [ ಮುಕ್ಕಣ್ಣ? + ವೈಜ್ಯ$_{40}$ ]

**ಮುಕ್ಕಣ್ಣು** 'ಮುಕ್ಕಣ್' ನೋ.

**ಮುಕ್ಕನಗಿಡು** (ನಾ). ಒಂದು ಬಗೆಯ ಸಸ್ಯ : "ಕಿಣಃ—ಬೂದಿ, ಮುಕ್ಕನಗಿಡು" (ಓಷಧಿ. ೩೩). [ ? + ಗಿಡು ]

**ಮುಕ್ಕಬ್ಬೆ** (ನಾ). ಒಬ್ಬಾಕೆಯ ಹೆಸರು : ಆತನ ಪೆಣ್ಡತಿ ಮುಕ್ಕಬ್ಬೆ ಮಾಡಿಸಿದಳ್ (ಎಕ. VIII, ಸೊರಬ. ೪೦೬-೦೨ ; 951 ?). [< ಮೂಕಾಂಬೆ]

**ಮುಕ್ಕರ** 'ಮುಕುರ$_1$' ನೋ.

**ಮುಕ್ಕರಿ** ' ಮುಕ್ಕುಱು' ನೋ.

**ಮುಕ್ಕರಿಪೆ** ' ಮೂಕರಿಪೆ ' ನೋ.

**ಮುಕ್ಕರೆ** ' ಮುಕ್ಕುಱು' ನೋ.

**ಮುಕ್ಕಲ್** (ನಾ). ಒಂದೇ ಎಡೆಯಲ್ಲಿ ಮೂರು ಕಲ್ಲುಗಳು ಸೇರಿರುವ ಪ್ರದೇಶ : ಅನ್ತೆ ಪೋಗಿ ಕಲ್ಕುಪ್ಪೆಯ ಅನ್ತೆ ಪೋಗಿ ಮುಕ್ಕಲ್ಲೆ ಪೋಗಿ ಅಡವಳಿಕೆಱೆಯ ಪಡುವಣ ಬಿಡೆಗೋಡೆ ಏರಿಯ ಮೇಗೆ (ಎಕ. XVI. ತಿಪಟೂ. ೦೧೦-೬೯; ಸು. ೯೦೦). [ < ಮೂಱು + ಕಲ್$_3$ ]

**ಮುಕ್ಕವಲು** ' ಮೂಗವಲ್ ' ನೋ.

**ಮುಕ್ಕಳಿಸು** ' ಮುಕ್ಕುಳಿಸು$_1$ ' ನೋ.

**ಮುಕ್ಕಳೆ** (ನಾ). ಮೂರು ಬಣ್ಣಗಳಿಂದ ಕೂಡಿದ ಕಾಂತಿ-ಹೊಳಪು : ಥಳಥಳಿಪ ಪೊಂಬಟ್ಟೆ ಪಟ್ಟಾವಳಿಗಳನು ತಾನುಟ್ಟು . . . ಉಳಿದ ಗೋಪರಿಗೆಲ್ಲ ನಸುವೂಂದಳಿರ ಸಾಲಿಯ ಚಂದ್ರಿಕೆಯ ಮುಕ್ಕಳೆ [ಪಾಠಾಂ.ಳೆ] ಯ ವಸ್ತ್ರವನಿತ್ತು ಹೊಕ್ಕನು ಮತ್ತೆ ಪಟ್ಟಣವ (ಅಕ್ರೂ‌ಚ. ೬-೨೬).

[ < ಮೂಱು + ಕಳೆ$_6$ (= ಕಲೆ$_3$) ]

**ಮುಕ್ಕಱಿಸು** ' ಮುಕ್ಕುಱಿಸು$_1$ ' ನೋ.

**ಮುಕ್ಕಾಂ**, ಮುಕಾಂ, ಮುಕ್ಕಾಮು, ಮೊಕಾಂ, ಮೊಕ್ಕಾಂ, ಮೊಕ್ಕಾಮ, ಮೊಕ್ಕಾಮು, ಮೊಖಾಮು (ನಾ). ತಾತ್ಕಾಲಿಕವಾಗಿ ತಂಗುವಿಕೆ,– ಬೀಡುಬಿಡುವಿಕೆ ; ಬಿಡದಿ ; ಶಿಬಿರ ; ಠಾಣ್ಯ : ಗಿರಗಾಂವ ನಿವಾಸದಿಂದ ನಾವು ನಮ್ಮ ಮುಕ್ಕಾಂ ಕಿತ್ತಿದ್ದೇವೆ (ರಕ್ತಗೋ. ೬೬); ನನ್ನ ಮುಕ್ಕಾಂ ಇದ್ದ ಊರಿನಿಂದ ಮಾವನ ಮನೆ ಸಮೀಪ ಇತ್ತು (ಕಂಡುಬ. ೦೦೪) ; ಡಾಕ್‌ಬಂಗಲೇದಾಗ ಈ ಸಾಬನ ಮುಕ್ಕಾಂ ಇತ್ತು (ದೀಕಥ. II, ೦೭). **ಮುಕಾಂ** : ಚೆನಪಟ್ಟಣದ ಗಿಡದಲ್ಲಿ ತೆಂದು ರ್ನೂಪೇಜಂಗಲ್ ತಿರುಗಿಸುತ್ತಾ ಧಣಿದು ಯಲ್ಲ ಮುಕಾಂ ಮಾಡಿ (ಹೃದಕ. ೯೩). **ಮುಕ್ಕಾಮು**: ಬೆಂಗಳೂರು ಮುಕ್ಕಾಮಿನಲ್ಲಿ ಕೆಲವು ದಿವಸ ಶಿವಪೂಜಾನಂದಲೋಲರಾಗಿರು ತ್ತಿರಲು (ಗುರುವ. ೦೩); ಒಂದು ಅನಪೇಕ್ಷಿತ ಕಾರಣಕ್ಕಾಗಿ ನನ್ನ ಇಲ್ಲಿಯ ಮುಕ್ಕಾಮನ್ನು ಅರ್ಧಕ್ಕೇ ಮುಗಿಸಬೇಕಾಗಿದೆ (ಹೊಸಕ್ರ. ೦೬೨). **ಮೊಕಾಂ** : ಪ್ರಜೋತ್ಪತ್ತಿಸಂವತ್ಸರದ ಮಾರ್ಗಸಿರ ಬ ೧ ಲು ಮೊಕಾಂ ಬೆಂಗಳೂರು ಬಿದು ಸೂರಪ್ಪ ಮುನಸಿ (ಎಕ. VI, ಕೊಪ್ಪ. ೯೮-೩೯; 1811). **ಮೊಕ್ಕಾಂ** : ಇಂಗ್ಲಿಷ್‌ಕಂಪೆನಿಕ್ಯಾವಲ್ರಿಯ ಪದ್ಧತಿಯಂತೆ ಏರ್ಪಟ್ಟ ೫೦೦ ಮಂದಿ ಸವಾರರು ಕ್ಲೋಸ್‌ಪೇಟೆಯಲ್ಲಿ ಮೊಕ್ಕಾಂಮಾಡಿದ್ದರು (ಮೈಪಾಲ. II, ೯೪); ಮೇರಿಯ ಮನೆಯಲ್ಲಿ ಅಧಿಕಾರಿಗಳ ಮೊಕ್ಕಾಂ (ಕಾವೇಂ. ೦೨೨); ಅಲ್ಲಿನ ಚಿಕ್ಕ ಇನ್‌ಸ್ಪೆಕ್ಷನ್ ಲಾಡ್ಜಿನಲ್ಲೇ ಮೊಕ್ಕಾಂ ಮಾಡಿದೆ (ಕಂಪ. ೩೩೩). **ಮೊಕ್ಕಾಮ** : ಬಿತ ಸುಬ್ಬರಾವ ಮುನಸಿ ಹಜೂರದ ಮೊಕ್ಕಾಮ ನಂಜನಗೂಡ ಸಾಲ್ಲೇಯಾಣ ಕಂಟಿರಾಯಿ ಐದುವರಹಾದ ಪ್ರಕಾರಾ ಜೋಡಿ ತಗೆದುಕೊಂಡು (ಮೈಅಂ. ೦೯೨೯, ೯೯-೯೫; 1813). **ಮೊಕ್ಕಾಮು** : ನಿಮ್ಮ ಹಿರಿಯರವರು ನಮ್ಮ ಅಜ್ಜಯ್ಯನವರ ಕೂಡೆ ಜಗಳ ಮಾಡಿ ಕೋಪ್ಪರದ ಮೊಕ್ಕಾಮಿನಲ್ಲಿ ತೀರಿಹೋದರು (ರಾಕಿ:ಂದ್ರ. ೩೨); ಡೆಪ್ಯೂಟಿ ಕಮಿಷನರು . . . ಒಂದು ಜವಾಬಂದಿ ಮೊಕ್ಕಾಮನ್ನು ಕದಬಹಳ್ಳಿಗೇ ಹಾಕಿದರು (ನನ್ನೂರು. ೦೩೩). **ಮೊಖಾಮು** : ಅವಳು ಅಲ್ಲೇ ಇದಾಳೆ, ಊರುಕೇರಿ ಬಿಟ್ಟು ಅಲ್ಲೇ ಮೊಖಾಮು ಅಂದ (ತಂಗೂಂ. ೦೯೮).

[ ← ಅರ. ಪಾರ. ಮುಕಾಮ್; ಹಿಂ. ಮರಾ. ಮುಕಾಮ್, ಮುಕ್ಕಾಮ್. ಮೋಕಾಮ್ ]

**ಮುಕ್ಕಾಣಿ** (ನಾ). ಮೂರು ಕಾಣಿ ; ಹಣದ ಅರುವತ್ತುನಾಲ್ಕನೆಯ ಮೂರು ಭಾಗ : ಕಾಣಿಯ ಹಾಕಿ ಮುಕ್ಕಾಣಿಯನಱಸುವನಂತೆ ಒಂದ ಬಿಟ್ಟು ಒಂದ ಹಿಡಿದಿಹೆನೆಂಬ ಸಂದೇಹಿಗೇಕೆ ಲಿಂಗಾಂಗ (ಷೋಡಶ. ೩೩-೨೯೭); ನಾಲ್ಕು ವೀಸ ಮುಕ್ಕಾಣಿ ಘಣಸಪಿತೇಕೊಪ್ಪ ವೃತಿರ್ದುದಕ್ಕಾಧಾರದಿಂದಂ ಪೇಳು ನೀಂ ಭಾವಿಸಿದರೇನತಿ ಮುತ್ತಾನಿರಲ್ ರಾಗದಿಂದಂ (ಬಾಸ್ಕರ. ೪೯-೪).

[ < ಮೂಱು + ಕಾಣಿ$_1$ ]

**ಮುಕ್ಕಾಮು** ' ಮುಕ್ಕಾಂ ' ನೋ.

**ಮುಕ್ಕಾಲ್**, ಮುಕ್ಕಾಲು$_1$ (ನಾ). ೧. ಮೂರು ಸಾಲು,– ಪಾದ : 'ಮುಕ್ಕಾಲ್ವಾಡು' ಪರಾ. ಮುಕ್ಕಾಲು$_1$ : ೨. ಮೂರು ಕಾಲು: 'ಮುಕ್ಕಾಲುಮಣೆ' ಪರಾ. ೩. ಮೂರು ಕಾಲುಗಳುಳ್ಳ ಮಣೆ, –ಪೀಠ ; ಮುಕ್ಕಾಲಿ ; ತ್ರಿಪಾದಿ : ಎಂಜಿನಿಯರನ್ನು ಕರೆದುಕೊಂಡು ಹೋಗಿ ಮನೆ ತೋರಿಸಿದ್ದಾಯಿತು. ಅತ ಟೇಪು ಮುಕ್ಕಾಲು ಮುಂತಾದ್ದೇನನ್ನೂ ತುದಿರಲಿಲ್ಲ (ಬೋರಳ್ಳ. ೨೬).

[ < ಮೂಱು + ಕಾಲ್$_1$ ]

**ಮುಕ್ಕಾಲಟ್ಟೆ** (ನಾ). ದೇವಸ್ಥಾನದ ಪರಿಚಾರಕರು ವಾಸಿಸುವ ಹಟ್ಟಿ : ಕುಂದಾಪುರದ ವೊಳಗಣ ಕುಂದೇಶ್ವರದೇವರ ಸಂನಿಧಿಯಲೂ ಪೂರ್ವದಲೂ ವೂರು ಜಗತ್ತು ಅದ್ದಿಕದಲೂ ಕುಡಾಕೂರ ದೇವಂಣಸೇನಬೋವ ಮಾಡಿಸಿದ ಧ(ಂ)ರ್ಮವೂ ನಡೆಯದೇಯಿರಲಾಗಿ ಆ ನರಸಿಂಹ್ವದೇವವೊಡೆಯರು ಕುಂದಾಪುರದೊಳಗಣ ಗ್ರಾಮ ಜಗತ್ತು ಮುಕ್ಕಾಲಟ್ಟೆಗ[ಳ]ನು ಕರಸಿ ವಿಚಾರಿಸಿ (ಸೌಇಇ. IX – ii, ೪೪೦-೦೫; 1425). [ ? ]

**ಮುಕ್ಕಾಲು$_1$** ' ಮುಕ್ಕಾಲ್ ' ನೋ.

**ಮುಕ್ಕಾಲು$_2$** (ನಾ). ೧. ನಾಲ್ಕನೆಯ ಮೂರು ಭಾಗ (¾) : ಮುಕ್ಕಾಲು ಮೊಗ ಕಾಣುವಂತೆ ನೋಡುತ್ತ ತನ್ನ ಕರದೊಳ್ ಕಪೋಲ ವನ್ನಿಟ್ಟು (ಸೌಗಂ. ೨೦೪-೦೫); ಶ್ರೀಮಂತನಾತನು ಸಂನ್ಯಾಸಿಯಾತನು ಎಂದೆಲ್ಲರುಗ್ಗಡಿಸಿರಲು ಒಕ್ಕಾಲು ಮಾತ್ರವೆ ವಿಟವೇಮ ತಿಳಿ ನೀನು ಸುಳ್ಳಿನ ಕಂತೆ ಮುಕ್ಕಾಲು (ಇಂಕಾಕ. ೨೦೬-೬೭); ಸ್ವಲ್ಪ ಸರಿ ಎಂದರೆ ಅರ್ಧ ಮುಕ್ಕಾಲು ಕೊಡುವ ಅನಿವಾರ್ಯವೇ ಇಲ್ಲ (ಕಿಶ್ವತ. ೩೩೨). ೨. ಒಂಬತ್ತು ಕಾಸು ; ಮುಕ್ಕಾಲಾಣೆ : ಮಂಗಳೂರು ನಶ್ಯ ಒಂದು ಮುಕ್ಕಾಲಿನದ್ದು ಮರೆಯಬೇಡ (ಪಾಗಿ. ೬೩). ೩. ಹಿಂದಿನ ಕಾಲದಲ್ಲಿ ಬಳಕೆಯಲ್ಲಿದ್ದ ಮೂರು ಕಾಸಿನ ಒಂದು ತಾಮ್ರದ ನಾಣ್ಯ : (೬).

**ಮುಕ್ಕಾಲಾಣೆ** = ಒಂಬತ್ತು ಕಾಸಿನ ನಾಣ್ಯ : ನನಗೆ ನನ್ನ ತಾಯಿ ಮುಕ್ಕಾಲಾಣೆ ಕೊಟ್ಟು ಕಳುಹಿಸಿದರು (ರೂಢಿ). **ಮುಕ್ಕಾಲುಪಾಲು**, **ಮುಕ್ಕಾಲುಮೂರುಪಾಲು** = ೧. ಮುಕ್ಕಾಲುಭಾಗ ; ನಾಲ್ಕರಲ್ಲಿ ಮೂರು ಭಾಗ ; ಬಹುಭಾಗ : ಮುಕ್ಕಾಲುಪಾಲು ಇವರೆಲ್ಲಾ ಊರೋಗೆ ರೈತರ ಮನೆಯಲ್ಲಿ ಜೀತಗಾರರಾಗಿದ್ದರು (ಹುಟ್ಟಿಕ. ೭೩); ಮಾನವನ ಮುಕ್ಕಾಲುಮೂರುಪಾಲು ಸಾಮಾನ್ಯವ್ಯವಹಾರವು ಪ್ರತ್ಯಕ್ಷ, ಅಪ್ರತ್ಯಕ್ಷವಾಗಿ 'ಆಹಾರನಿದ್ರಾಭಯಮೈಥುನಂ ಚ' ಎಂಬ ಸೂತ್ರದಲ್ಲಿ ಪರಿಣಮಿಸಿಹೋಗಿದೆ (ಸಾಹಿಒ. ೨೭). ೨. ಪ್ರಾಯಶಃ ; ಬಹುಶಃ : ಮುಕ್ಕಾಲುಪಾಲು ಈ ಹೊತ್ತಿನಲ್ಲಿ ಅವರು ಮನೆಯಲ್ಲಿರುವುದಿಲ್ಲ (ರೂಢಿ). **ಮುಕ್ಕಾಲುರೂಪಾಯಿ** = ಒಂದು ರೂಪಾಯಿಯಲ್ಲಿ ನಾಲ್ಕನೆಯ ಮೂರು ಭಾಗ; ಹನ್ನೆರಡಾಣೆ : (೬). **ಮುಕ್ಕಾಲುವಾಸಿ** = ೧. ಬಹುಪಾಲು : ಅವರ ಖಾಯಿಲೆ ಮುಕ್ಕಾಲುವಾಸಿ ಗುಣವಾಗಿದೆ (ರೂಢಿ). ೨. = ಮುಕ್ಕಾಲುಪಾಲು ೨ : ಅವರು ಮುಕ್ಕಾಲುವಾಸಿ ಇಂದು ನಮ್ಮ ಮನೆಗೆ ಬರಬಹುದು (ರೂಢಿ).

[ < ಮೂಱು + ಕಾಲು$_3$ (< ಕಾಲ್$_3$) ]

**ಮುಕ್ಕಾಲುಮಣೆ** (ನಾ). ಮೂರು ಕಾಲುಗಳುಳ್ಳ ಮಣೆ,– ಪೀಠ : ಇದು ಸಾಹಿತ್ಯವೆಂಬ ಮುಕ್ಕಾಲುಮಣೆಯ ಮೂರು ಕಾಲು (ರಾಮಾಣಾ. ೯೬).

[ ಮುಕ್ಕಾಲು$_1$ (< ಮುಕ್ಕಾಲ್) + ಮಣೆ$_1$ ]

**ಮುಕ್ಕಾಲ್ವಾಡು** (ನಾ). ಮೂರುಪಾದಗಳುಳ್ಳ ಹಾಡು ; ಮೂರು ಸಾಲಿನ ಗೀತೆ; ತ್ರಿಪದಿ : ಮುಕ್ಕುಮುಕ್ಕಾದೀ ಮುಕ್ಕಾಲ್ವಾಡುಗಳ್

ಸಿಕ್ಕೆ ಜೋಕೆಯಿಂ ಚೌಕಂಗೊಂಡು ಬಣ್ಣಿಗೆಯೊಳ್ ತುಂಬುವಾಡಂ ಪಾಡುವೆಂಬುದುಂ (ಶಕಶಿ. ೬-೦೫೪ ವ); ಸಾಂಗತ್ಯವಾದರೂ ಈ ಮುಕ್ಕಾಲ್ಪಾಡುಗಳು(ತ್ರಿಪದಿ) ಚೌಕಂಗೊಂಡಾದುವೆಂಬುದನ್ನೂ ಅವನು ಸೂಚಿಸದೆ ಇಲ್ಲ (ಶಾಹಿಶಿ. ೦೦೫). [ ಮುಕ್ಕಾಲ್ + ಪಾಡು$_2$ ]

**ಮುಕ್ಕಿ** (ನಾ). ಮುರ್ಖಳಾದ ಹೆಣ್ಣು; ತಿಳಿಗೇಡಿ ಹೆಣ್ಣು : ಇದ್ದರಲ್ಲಿ ಸಹಸ್ರಸಂಖ್ಯೆಯ ಮದ್ದುಕುಟಿಲದ ಮಾಯಕಾತಿಯರಿದ್ದೆಸೆಯ ಕವಿಗೊಬ್ಬೆಯರು ಮೂಳಿಯರು ಮುಕ್ಕಿಯರು (ಕೊರರಾ. ೫-೨-೩೪).

[ ಮುಕ್ಕ$_3$ + — ಇ$_2$ ]

**ಮುಕ್ಕಿಸು** (ಕ್ರಿ). ೧. ಮುಕ್ಕುವಂತೆ ಮಾಡು ; ಗಪಗಪನೆ ತಿನ್ನುವಂತೆ ಮಾಡು,— ತಿನ್ನಿಸು : ಹಕ್ಕಿಗಳು . . . ಕಾಳುಕಡ್ಡಿ ಹೆಕ್ಕಿ ಮರಿಗಳಿಗೆ ಮುಕ್ಕಿಸಿ ತಮ್ಮ ಆಹಾರಕ್ಕಾಗಿ ಹೊಲ ಗದ್ದೆಗಳಿಗೆ ಹಾರಿಹೋಗಿದ್ದವು (ಕುಶ್ಪಿರ. ೦೦). ೨. (ಅಲಂ) ನುಂಗುವಂತೆ ಮಾಡು; ನಾಶಗೊಳಿಸು: ಅರಿಭೂಭೃದ್ಬಳಕಾಳವಂಡಸೂಹೊಹೋ ಕೊಂದಿಕ್ಕಿಪಂ ಮುಕ್ಕಿಪಂ (ಎಕ. VIII. ಸಾಗರ, ೦೦೯-೩೦; 1042). [ ಮುಕ್ಕು$_1$ + — ಇಸು$_3$ ]

**ಮುಕ್ಕಿಱು** ' ಮುಕ್ಕುಱು$_1$ ' ನೋ.

**ಮುಕ್ಕು**$_1$ (ಕ್ರಿ). ೧. (ಕಾಳು, ಹಿಟ್ಟು ಮುಂತಾದುವನ್ನು ಬಾಯಿತುಂಬ ತುಂಬಿಕೊಂಡು) ಅವಸರವಸರವಾಗಿ ತಿನ್ನು; ಗಪಗಪನೆ ತಿನ್ನು: ಕಬಳಿಸು : "ಮುಕ್ಕು – ಖಾದನವಿಶೇಷೇ" (ಶಮಧಾ); ಪುಟಿ ಘನವಾಗೆ ಕೊಕ್ಕರಿಸಿ ಗುಗ್ಗುರಿಯಂ ಕೊಳೆ ಮುಕ್ಕಿ ಮಿಕ್ಕುದಂ ಕೆಲದವರ್ಗಿತ್ತು (ದಶಕು. ೬-೨೦೫). ೨. (ಅಲಂ) ನುಂಗಿ ನೊಣೆ ; ನಾಶಮಾಡು : ಇನ್ನುಮೆಲ್ಲರಂ ಯಮಸುತನುಂ ಸುರೇಂದ್ರಸುತನುಂ ಪೊಸದೀಗಳೆ ಮುಕ್ಕಿ ತೋಱಿರೆ (ಶಂಕಭಾ. ೪-೭): ಅನೆದಿಂಬಂಗಾಡಾವರಿದೆಂಬಪ್ಪೋಲ್ ಪೊಸೆದು ಮುಕ್ಕಲ್ ಸಾಲನೇ ಶಾಙ್ರ್ಗಿ ನಮ್ಮಂ ಗಂಡಾಳ್ತನಮೇಪ್ಪದಾಶ್ರಯಿಸುವಂ ಶ್ರೀಪಾದಮಂ ಕೃಷ್ಣನಾ (ಜಗಶಿ. ೬-೯೫) ; ಉಕ್ಕಿಱಿಪ ಕೋಪಾಗ್ನಿ ದಳ್ಳಿಸಿ ದಿಕ್ಕುಗಳನಳ್ಳಿಱಿದು ಲಕ್ಷ್ಮಣನೆಕ್ಕತುಳವಲಿ ಬಂದನಾ ಲಯಕಾಲದಲಿ ಜಗವ ಮುಕ್ಕಿ ಪೋದುವ ಮದನಹರನವೊಲು (ತೊರರಾ. ೨-೩-೦೦).

[ದೇ.॥ ತಮಿ. ಮುಕ್ಕು, ಮೊಕ್ಕು; ತುಳು. ಮುಕ್ಕು; ತೆಲು. ಬೊಕ್ಕು]

**ಮುಕ್ಕು**$_2$ ' ಮುಲುಕು$_1$' ನೋ.

**ಮುಕ್ಕು**$_3$ ' ಮುಱುಕು$_2$' ನೋ.

**ಮುಕ್ಕು**$_4$ ' ಮುಱಿಕು ' ನೋ.

**ಮುಕ್ಕು**$_5$ (ನಾ). (ಉಕ) ೧. ಒಂದು ಸಾರಿ ಮುಕ್ಕಳಿಸುವಷ್ಟು ದ್ರವ ; ಗುಟುಕು : ಮತ್ತೊಂದು ಮುಕ್ಕು ನೀರೇ ಹೆಚ್ಚಿಗೆ ಕುಡಿದು ಅಲ್ಲಿಯೇ ಕುಳಿತೆ (ಮೇದಿಮ. ೦೦); ಇಲ್ಲಿ ಮುಕ್ಕು ನೀರಿಗೂ ಗತಿಯಿಲ್ಲ (ಸ್ಮ.ತಿಶ. ೪೬೪); ಮನೆಯಲ್ಲಿ ಒಂದು ಮುಕ್ಕು ಕೂಡ ನೀರು ಇರುವದಿಲ್ಲ (ಹಂಶಾ. ೨೦). ೨. ಮುಷ್ಟಿಯಲ್ಲಿ ಹಿಡಿಸುವಷ್ಟು ಪ್ರಮಾಣ ; ಬೀಸುವ ಕಲ್ಲಿನ ಕುಳಿಯಲ್ಲಿ ಹಿಡಿಸುವಷ್ಟು ಪ್ರಮಾಣ ; ಒಂದು ಹಿಡಿ : ಬೆಕ್ಕು ಮನೆಯೊಳು ಲೇಸು ಮುಕ್ಕು ಕಲ್ಲಿಗೆ ಲೇಸು (ಸರ್ವಜ್ಞ. ೦೩೬೪); ಮುಕ್ಕು (ಒಂದು ಹಿಡಿ ಧಾನ್ಯ, ಬೀಸುವ ಕಲ್ಲಿನಲ್ಲಿ ಒಮ್ಮೆ ಹಿಡಿಯುವಷ್ಟು ಧಾನ್ಯ) ಮನ್ಯಾಗ ಮುಕ್ಕು ಜ್ವಾಳಿಲ್ಲ (ಸುವರ್ಣ. ೩೨೭) ; ಆದ ಮುಕ್ಕಿಗೆ ಶರಣು ಗೋದಿಕಲ್ಲಿಗೆ ಶರಣು (ಗರತಿ. ೦೩೭). [< ಮುಕ್ಕಳ್ ?]

**ಮುಕ್ಕುಗಳೆ** (ಕ್ರಿ). ಒಡೆ ; ಭಿನ್ನಗೊಳಿಸು ; ಭಂಗಮಾಡು : ತಾಗಿ ವಜ್ರವು ಮುಕ್ಕುಗಳೆವಡೆ ಸಾಗರದ ಹೊಗಲೇಕೆ ಗಿರಿಗಳು (ಕುಮಾರವ್ಯಾ. ಶಾ. ೦೭-೨೭).

[ಮುಕ್ಕು$_4$ (< ಮುಱಿಕು) + ಕಳೆ$_1$]

**ಮುಕ್ಕುಗೆಲಸ** (ನಾ). ಅಪೂರ್ಣವಾದ ಕಾರ್ಯ; ಪೂರ್ತಿಯಾಗದ ಕೆಲಸ : ಈಗಿನ ಕಾಲದಲ್ಲಿ ಕಂಟ್ರ್ಯಾಕ್ಟರ್‌ಗಳು ಬಹುಪಾಲು ಮಾಡುವುದೇ ಮುಕ್ಕುಗೆಲಸ (ರೂಢಿ). [ಮುಕ್ಕು$_4$ (< ಮುಱಿಕು) + ಕೆಲಸ]

**ಮುಕ್ಕುಚಿಕ್ಕೆ** (ನಾ). ಒಂದು ಬಗೆಯ ಧಾನ್ಯ,— ಕಾಳು (?) : ಬಿತ್ತುವರೆ ಬಿತ್ತುವದು ಮುಕ್ಕುಚಿಕ್ಕೆಯ ಕಾಳು ಮುತ್ತು ರತ್ನನವ ಬಿತ್ತಿ ಮಾಡದಿರು ಹೊಲ ಹಾಳು (ಗರ. ೩೦-೨); ಮುಕ್ಕುಚಿಕ್ಕೆಯ ಕಾಳನ್ನೇನೊ 'ಶ್ರೀ'ಯವರು ಬಿತ್ತಿದ್ದಾರೆ (ಗೊಕಶ್ರ. ಗು. ೦೩೦). [ ? ]

**ಮುಕ್ಕುಟುಕ** (ನಾ). ಒಂದು ಬಗೆಯ ಪಕ್ಷಿ: ಮುಕ್ಕುಟುಕ ಮರಕುಟುಗ . . . ಪೆಱುವರ್ದಪಱಿಕೊಳೊಪ್ಪಿದುದು (ಸಾಳ್ವಭಾ. ೫-೭೩). [ ? ]

**ಮುಕ್ಕುಡಿ** (ನಾ). ೧. ತೊಂದರೆ ; ವಿಪತ್ತು : "ಮುಕ್ಕುಡಿ ಯೆನಲಪಗಡಕೆ ನಾಮಂ" (ಕಾರಶಿ. ೪). ೨. ಹಾಳು ; ನಾಶ ; ಧ್ವಂಸ : ಬಿಳ ಪದಾತಿಯ ಮುಕ್ಕುಡಿಯ ಮಾಡಿದನು ರಣಮದದುಬ್ಬಿನಲಿ ರಾವು (ತೊರರಾ. ೬-೪೫-೫೭). [ ? ]

**ಮುಕ್ಕುಡಿತೆ** (ನಾ). ಮೂರು ಬೊಗಸೆ: ಶ್ರೇಯಾಂಸಂ . . . ನವವಿಧಪುಣ್ಯಸಪ್ತಗುಣಯುಕ್ತನಾಗಿ ಇಕ್ಷುರಸಮಂ ಮುಕ್ಕುಡಿತೆಯಂ ಕೊಂಡಕ್ಷಯ ದಾನಮೆಂಬುದುಂ (ಕುಮ್ಯಾಶ್ರ. ೦೦-೨೦ ವ); ಈ ಮಂತ್ರಮನೋಮಂತ್ರಂಬುಜಸಖನುದಯದಲ್ಲಿ ಮುಕ್ಕುಡಿತೆಯುಮಂ ಕೊಂಬುದು ಜಲಮಂ ಮೂಮೆಯುದುಂ ಬಾಜಿ(ಚಿ)ಸೆ ಪರರ ವಿದ್ಯೆಯುಂ ಛೇದಿಸುಗುಂ (ಜಮದ. ೨೪-೦೭). [<ಮೂಱು + ಕುಡಿತೆ]

**ಮುಕ್ಕುದಿ** (ನಾ). ಮೂರು ಕುದಿ ; ಮೂರು ಸಾರಿ ಕುದಿಯುವಿಕೆ : ಅಳಗೆಯೋಗಣ್ಣೆಯಂ ಬಿಟ್ಟುಪೊಗ್ಗರಿಸಿಯುದ ಮುಕ್ಕುದಿಯ ಬರಿಸಿಕೊಂಡು ಇಳುಹಿ (ಸೂಶಶಾ. ೩-೩೨). [< ಮೂರು + ಕುದಿ$_3$]

**ಮುಕ್ಕುಪ್ಪೆ** (ನಾ). ೧. ಮೂರು ಗುಡ್ಡೆ ; ಮೂರುರಾಶಿ,—ಒಟ್ಟಿಲು : ಹ್ರಸ್ವದ್ವಿತ್ವಂಗಳ್ಗೆ—ಮುಕ್ಕುಪ್ಪೆ . . . ಮುಪ್ಪುರಿ, ಮುಮ್ಮಾಱು (ಶಮದ. ೦೫೮ ಪ್ರಯೋ); ಮುಕ್ಕೊಡೆ, ಮುಕ್ಕೋಡಿ, ಮುತ್ತಟಿ, ಮುಕ್ಕುಪ್ಪೆ (ಶಬ್ದಾಮ. ೦೦೦ ಪ್ರಯೋ). ೨. ಜಮೀನಿನ ಉತ್ಪತ್ತಿಯನ್ನು ಮೂರುಭಾಗ ಮಾಡಿ ಒಂದು ಭಾಗವನ್ನು ಜಮೀನುದಾರನೂ ಎರಡುಭಾಗಗಳನ್ನು ರೈತನೂ ತೆಗೆದುಕೊಳ್ಳುವ ಒಂದು ವ್ಯವಸಾಯಕ್ರಮ : ಗಕ್ಕನೆ ಹಮ್ಮು ತಡೆದು ಗರ್ವವ ಮೈಯಿಕ್ಕಿದ ಹಾಗಿರಲೇನಹುದು ಪಕ್ಕಲಿಗನ ದೆಸೆಯಿಂ ಕೊಂಡರ್ಥಕೆ ಮುಕ್ಕುಪ್ಪೆಯ ಫಲವೆನಲಹುದು (ಕಕ್ತಶ. IV, ೦೨-೨೦); ಮುಕ್ಕುಪ್ಪೆ ಸಾಗುವಳಿ. ಮುಕ್ಕುಪ್ಪೆಪಾಲು (ಕಶ್ವದ್ರ. ೩೨೬). [< ಮೂಱು + ಕುಪ್ಪೆ$_1$]

**ಮುಕ್ಕುರಿ** ' ಮುಕ್ಕುಱು$_2$' ನೋ.

**ಮುಕ್ಕುರಿಕ್ಕು**$_1$ ' ಮುಕ್ಕುಱಿಕ್ಕು$_1$' ನೋ.

**ಮುಕ್ಕುರಿಕ್ಕು**$_2$ ' ಮುಕ್ಕುಱಿಕ್ಕು$_2$' ನೋ.

**ಮುಕ್ಕುರಿಸು** ' ಮುಕ್ಕುಱಿಸು$_1$' ನೋ.

**ಮುಕ್ಕುರು** ' ಮುಕ್ಕುಱು$_1$' ನೋ.

**ಮುಕ್ಕುರುಕು** ' ಮುಕ್ಕುಱಿಕ್ಕು$_1$' ನೋ.

**ಮುಕ್ಕುವೋಗು** (ಕ್ರಿ). ೧. (ಆಯುಧ ಮೊದಲಾದುವು) ಸ್ವಲ್ಪ ಮುರಿದು ಹೋಗು ; ಮುಕ್ಕಾಗು : ಬಾಳಂ ಕಲ್ಲ ಮೇಲೀಡಾಡಿದೊಡದು ಮುಕ್ಕುವೋದುದಂ ಕಂಡು ಕಡುಮುಳಿದು (ಶಂಶಶಿಂ. ೭೮-೦೯); ವಿಶಾಖನಂದಿಯಂ ಕಂಡು ಮುನ್ನಂ ತನ್ನಿಱಿಯೆ ಮುಱಿದು ಕಿಱುಮುಕ್ಕುವೋದ ಬಾಳನೀಡಾಡಿ (ವರ್ಧಮಾ. ೨-೩೩ ವ); ಪೆಸರಿಂಗೊಯ್ಯನೆ ಮುಕ್ಕುವೋದಡೆ ಬಱಿಕ್ಕಾ ಲಿಂಗಮಂ ಮುಟ್ಟಿ ಪೂಜಿಸಲಾಗ (ಸಪುಶ. ೯-೪). ೨. ಊನವಾಗು ; ಕುಗ್ಗು ; ನಾಶವಾಗು : ಹಿರೆಪೋಗದ ಚಲಮುಮಂ ಮುಕ್ಕುವೋಗದಳುರ್ಕುಮಂ ನೋಟಕರಪ್ಪನಮಪ್ಪವರಿಂ ಪೊಗಟಿಸುವೆನೆಂದು ತಱಿಸಂದು (ಶಾಂತಿಪು. ೪-೩೭ ವ); ಭಿಕ್ಷಾನ್ನಮನಿಕ್ಕುವಲ್ಲಿ ಸತಿಯಂ ಬೇಡೆಂದು ಕಣ್ಕೆತ್ತುವಂದಿನ ಸೊರ್ಕಕ್ಕಟ ಮುಕ್ಕುವೋಗಿ ಕಡೆಯೊಳ್ ಭೈಕ್ಷಕ್ಕೆಪಕ್ಕಾದಿರೇ (ಸುಕುಮಾ. ೪-೨೭). [ಮುಕ್ಕು$_4$ (< ಮುಱಿಕು) + ಪೋಗು$_1$ (<ಪೋ$_1$)]

**ಮುಕ್ಕುಳ್,** ಮುಕ್ಕುಳು (ನಾ): ೧. ಬಾಯಿಯ ಒಳಭಾಗ ಮತ್ತು ಬಾಯಿ ತುಂಬ ತುಂಬಿಕೊಂಡ ನೀರು ಇತ್ಯಾದಿ ದ್ರವಪದಾರ್ಥ: ಜಲಧಿಯೊಳಿರ್ದವರ್ದಿನ ಮುಕ್ಕುಳನುಗುಟಿುತ್ತಿಳಿಗೆ ವಂದುದೆನಿಸಿ ಖಲೀನಸ್ಖಲನಭವಬಹುಳಲಾಲಾಜಲಮುಗುತಿರೆ ತುರಗರತ್ನ ಮೆಸೆದತ್ತಾಗಳ್ (ಕಾದಂಪೂ. ೯೩೯); ತತ್ಸಿಂಧುಬಂಧದ ನೀರೆಲ್ಲಮನೊಂದೆ ಮುಕ್ಕುಳೊಳೆ ತಂದಾ ವಹ್ನಿಯಂ ತೂಳ್ದಿದಂ (ಜಗ. ೧೮-೫); ತೆಱವಿಂ ನೀಳ್ಕೆ ಗವಾಕ್ಷಮಂ ತೆಱೆವ ನೀರಂ ಮುಕ್ಕುಳೊಳ್ ತೀವಿಕೊಂಡೆಱೆವ . . . ಸೆಱಂಗಿಂ ಬೀಸುತಿರ್ಪೋಪರಬ್ಬೆಉಲಂಪಂಗನೆಯರ್ಗೆ ರಾಗಮನದೇಂ ಮಾಡಿತ್ತೊ ರತ್ಯಂತದೊಳ್ (ವರ್ಧಪು. ೬-೫೨). ೨. ಬಾಯಲ್ಲಿ ನೀರನ್ನು ತುಂಬಿಕೊಂಡು ಶುಚಿಮಾಡುವಿಕೆ; ಮುಕ್ಕುಳಿಸುವಿಕೆ; ಗಂಡೂಷ: "ಗಂಡೂಷಃ, ಮುಖಪೂರಣಾ..ಈ ೨ ಮುಕ್ಕುಳ್" (ಹಲಾಯು. ೦೩೦-೨೦೦); "ಮುಕ್ಕುಳೆನೆ ಗಂಡೂಷವು" (ಅಭಿಮಂ. ೭೦). ಮುಕ್ಕುಳು: ೧. ತುಳುಕುವೊಡೆಯ್ದುವೋರ್ಬಡಿತೆಗಂ ತೆಗೆದೀಂಟುವೊಡಾಗದೊಂದು ಮುಕ್ಕುಳಗೆನೆ ಸಾಲ್ವುದಿಲ್ಲ (ಜಗ. ೬-೦೭); ಮೊಗೆಯಿಂದ ಹೊಮ್ಮಿ ಬಂದ ಕಂಬಿಗೆ ಮೂಗೊಡ್ಡಿದ ಗುತ್ತಿಗೆ ಬ್ರಹ್ಮಾನಂದವಾಗಿ ಒಂದು ಮುಕ್ಕುಳು ಅದರಿಂದಲೇ ಕುಡಿದೇ ಬಿಟ್ಟನು (ಮಲೆಮ. ೫೬೦). ೨. "ಮುಕ್ಕುಳೆನಲು ಗಂಡೂಷದಭಿಧಾನ" (ಆಅಕ. ೯೦). ೩. ತುಳುಕಿಸುವಿಕೆ: ಹೊರಹೊಮ್ಮಿಸುವಿಕೆ: ಮೇಲುಸುರ ಬಿಕ್ಕುಳನ ಬಿಗುಹಿನ. ತಾಳಿಗೆಯ ನೀರುಗಳ ಮುಕ್ಕುಳನಾಲಿಗಳ [ಪಾಠಾಂ. ನಿದ್ರ್ಯವದ ನೀರೊಗುವಾಲಿಗಳ] ನರನಾಥ ತೆಗೆದಪ್ಪಿದನು ಫಲುಗುಣನ (ಕುವ್ಯಾಕ. ೧೮-೧).

[ದೇ.॥ ತುಳು. ಮುಕ್ಕುಲಿ, ಮುಕ್ಕುಳ]

**ಮುಕ್ಕುಳಿಸು₁,** ಮುಕ್ಕುಳಿಸು (ಕ್ರಿ). ೧. ನೀರು ಮೊದಲಾದ ದ್ರವವನ್ನು ಬಾಯಲ್ಲಿ ತುಂಬಿಕೊಳ್ಳು.— ಇಟ್ಟುಕೊಳ್ಳು: ಮುಕ್ಕುಳಿಸಿದಮರ್ದನುಗುಟ್ಟವಳಕ್ಕುಮಿವಳ್ ವಂಶಮುಖದಿನೆಸೆ ಕಳರುತಿ ಕೈಮಿಕ್ಕು ಕಿವಿವೊಕ್ಕು ಬಗೆಯಂ ಜಕ್ಕುಲಿಸೆ ಲತಾಂಗಿ ವಂಶಮಂ ಬಾಜಿಸಿದಳ್ (ಮಲ್ಲಿಪು. ೦೦-೦೦೦); ಎಳಿಗೆಲಿರ್ಪೊಯ್ನಿನಿಂದೊಸರ್ವ ಪಣ್ಗಳ ಸದ್ರಸಬಿಂದು ವೃಂದಮಂ ಫಳಿಲನೆ ಪೋಗಿ ಮುಕ್ಕುಳಿಸಿ ತಂದು . . . ತನ್ನ ಪೆಣ್ಗಳಿಗೆಱೆ ಯುತ್ತುಮಿರ್ದುದೆನಸುಂ ಸಲಿವಿಂ ಸುರತೋತ್ಸುಕಂ ಶುಕಂ (ಕುಸುಮಾ. ೫-೯೬); ಕೇದಗೆದೊಱೆಯ ನಿರ್ಮಳಸಲಿಲಮಂ ಮುಕ್ಕುಳಿಸಿ ಕಣ್ಣಿಂದನೊಲ ವಿಂದ ಬಲುಸರಳುಗಳು ಎಡದ ಕೈಯಲಿ ಬಲದ ಕೈಯಲಿ ಮಾಂಸವಿಹ ಪೇರೆಲೆಯ ಜೊನ್ನೆಯನಾ ಶಿವೈಕ್ಯಂ ಪಿಡಿದು ನಡೆತಂದು (ಬಸಪು. ೦೮-೩೦). ೨. ಬಾಯಲ್ಲಿ ನೀರನ್ನು ತುಂಬಿಕೊಂಡು ಗುಳುಗುಳಿಸು: "ಮುಕ್ಕುಳಿಸು-ಗಂಡೂಷೇ" (ಶಬ್ದಮ. ೫); ಬಳೆಯಲ್ಕಣ್ಮದುದಿಲ್ಲ ವಿಂಧ್ಯಗಿರಿಯುಂ ತನ್ನಾಜ್ಞೆಯಿಂದೊರ್ಮೆ ಮುಕ್ಕುಳಿಸಲ್ಕಂಬುಧಿ ಸಾಲ್ದುದಿಲ್ಲ (ಶಂಕಚಾ. ೯-೨೦); ಕುರುಕುಳಸರೋಘಾಜಹಂಸಂ . . . ಕರಚರಣವದನಪ್ರಕ್ಷಾಳನಂಗೆಯ್ದು ಮುಕ್ಕುಳಿಸಿಯುಗುಟ್ದಾಚಮನಕ್ರಿಯೆಗಳಂ ನಿರ್ವರ್ತಿಸಿ (ಗದಾಯು. ೬-೦೩ ವ); ಮಂತ್ರಿಸಿದ ಸಲಿಲವ ಮುಕ್ಕುಳಿಸಿಯುಗುಳ್ದ ಸಮುಸಾಹಸಿ ಕೊಂಡ ವರ ಕರ್ಪೂರದ ವೀಳೆಯವ (ಕುವ್ಯಾಕ. ೦೧-೩೦). ೩. ಪಕ್ಷಿಗಳು ಬಾಯಲ್ಲಿ ತುಂಬಿಕೊಂಡಿರುವುದನ್ನು ಮರಿಗಳಿಗೆ ತಿನ್ನಿಸು,—ಗುಟುಕುಕೊಡು: ದೀಪದ ಚಕೋರಿಗಳಬ್ಬೆಱಂ ಮುಕ್ಕುಳಿಪ ಮುಂಡಾಡುವ ಕರ್ಪೂರಂಕುವೊದೆವ ಚೆಲ್ಲಕೆ ಮೈಸಾರ್ಚಿಯುಂ (ಚಂದ್ರಪು. ೬-೯೯ ವ); ತನ್ನ ನಚ್ಚಿನ ನಳಿಳಂ ಗಜಿಸನ್ನೆಯಿಂ ಕೆಲಕ್ಕೆ ಕರೆವಳ್ಕಱಿಂ ಮುಕ್ಕುಳಿಸಿ ಪಿಂಬುಗೂಡಿ ಗಾಹೆಯಿಂದೆಱ ದವಲ್ಗೂಡಿ (ರಾಜಶೇ. ೨-೫೭ ವ). ೪. ಹೊರಹೊಮ್ಮು; ಹೂರಸೂಸು: ಸೊಕ್ಕು ಮುಕ್ಕುಳಿಸಿದಂತಿರ್ದಿರವುಂ ಬಟಲ್ದಂತೆ ಜೋಲ್ವಂದಮುಂ ಮುನ್ನ ಮಭ್ಯಾಸಮಿಲ್ಲದುದರ್ಕೇಂ ತು ದೊರೆಕೊಳ್ಗುಂ (ಕಾದಂಪೂ. ೬೩೯); ಅಕ್ಕುಳಿಸಿವೆ ಪೊಟ್ಟೆ ಕೆಕ್ಕರಿಸಿದ ಕಣ್ಣು ಮುಕ್ಕುಳಿಸಿದ ರಕ್ತ ಪೇನು ಸಿಕ್ಕನೆ ಸೀಳುತ ಬೊಬ್ಬಿಡುತಲಿ ಅಡಿಯಿಕ್ಕಿದರಾರು ನೀವೆನುತ (ವಸ್ತುಕಾ. ೬-೩೩); ಸ್ನೇಹಕಾಂತಿ ಮುಕ್ಕುಳಿಸುತ್ತಿದ್ದ ಅವಳ ಮುಖದಲ್ಲಿ ಕಣ್ಣುಗಳು ಪ್ರಮುಖವಾಗಿ ಎದ್ದು ಕಾಣುತ್ತಿದ್ದುವು (ಭುಸರು. ೦೯೨). ೫. ಹೊರಹೊಮ್ಮಿಸು: ಹೊರಕ್ಕೆ ಚಿಮ್ಮಿಸು: ಮುಕ್ಕುಳಿಸಿಯುಗುಟ್ಟ ಮಧುವಿಂ ಮಿಕ್ಕಸಿವಾಮೋದಮಿದಱ ತಣ್ಗಂಪಿನೊಳೊಳ ಪೊಕ್ಕುವೆನೆ ಮಧುಪ ಕಂಪಂ ಮುಕ್ಕುಳಿಸಿದ ವಕುಳಪಾರುಮಂ ಸೋಲಿಸದೇ (ಅರಿಪು. ೦೨-೦೨೦): ಶಶಿಕಳೆಯ ಮುಱಗಳಂ ಮುಕ್ಕುಳಿಸಿದೆಳಗಾರ ಕಿಱುಮುಗಿಲ ಜವಳಿಗಳಿವೆನಿಸಿ ವಿಮಳಶೀತಳಮೃಣಾಳಶಕಳಮಂ ಸೆಱಗೆಯ್ದ ಶತಪತ್ರಪತ್ರಪುಟಿಕೆಗಳುಂ (ವರ್ಧಪು. ೫-೬೩ ವ); ಅಗ್ನಿದೇವ. ನಿರ್ಮಲಪ್ರಭೆಯನ್ನು ಮುಕ್ಕುಳಿಸುವ ಸ್ಫಟಿಕದೀಪದಂತೆ ನಗುನಗುತ್ತ ಹೇಳಿದ (ಚಕಂಚಾ. ೪). ೬. ಸುರಿಸು; ಸ್ರವಿಸು: ಮದಮಂ ಮುಕ್ಕುಳಿಸಿರ್ದಿಭಂಗಳನುದಗ್ರಾಶ್ವಂಗಳಂ ತಕ್ಕಿನಗ್ಗದ ಬಾಡಂಗಳನಾಯ್ದು ಕೊಟ್ಟು ತಣಿದಂ (ಶಂಕಚಾ. ೨-೫೩); ಮದಮಂ ಮುಕ್ಕುಳಿಸಿದು ವೆಣ್ಬತ್ತಾನಾಲ್ಕುಲಕ್ಕ ಗಜಂಗಳ್ (ಶಾಂತಿಪು. ೦೦-೦೨೬); ಪದಿನೆಣ್ಬಾಸಿರ ಲೋಹವಕ್ಕರೆಯ 'ಜಾತ್ಯಶ್ವಂಗಳಿರ್ಭಾಸಿರಂ ಮದಮುಂ ಮುಕ್ಕುಳಿಸಿರ್ದ ದಂತಿಘಟೆಗಳ್ (ಕಾವ್ಯಾವ. ೭೭). ೭. ಹೊರದೂಡು; ನಿವಾರಿಸು; ಬಿಡು; ಕಳೆ: ನನೆಗಣೆಯಂ ಕೆಲಬಲದ ಪಸಾಯ್ತರ ಮೊಗಮಂ ನೋಡಿ ಮುಳಿಸಂ ಮುಕ್ಕುಳಿಸಿ ನಸುನಗೆವೆರಸು ಇಂತೆಂದಂ (ಕಬ್ಬಿಕಾ. ೧೮೮). ೮. ತಿರಸ್ಕರಿಸು; ಹೀಯಾಳಿಸು; ಹೀಗಳೆ: ರಸದಾಡಿಮದ ಬಿತ್ತುಮಂ ಪೊಸಮುತ್ತುಮಂ ಮುಕ್ಕುಳಿಸಿರ್ದತಪ್ಪ ವಿಬುಧವನಜವನಕಳಹಂಸನ ದಂತಪಂಕ್ತಿಗಳಮೃತಕಿರಣನ ಕಾಂತಿಗಳನಿಳಿಸುವಂತಾದುವು (ಶಂಕಚಾ. ೨-೩೯ ವ); ಹೊಳೆಹೊಳೆದುದಾಭರಣ ರತ್ನಾವಳಿಯ ರುಚಿ ಮಣಿರುಚಿಗಳನು ಮುಕ್ಕುಳಿಸಿತಂಗಚ್ಛವಿ ತರಂಗಪ್ರಭೆಯನಡೆಹಾಯ್ದು ಥಳಥಳಿಸಿದುದು ವದನ (ಶಂಭಕ. ೨೯-೨೪); ಹೊಳೆವ ಮಣಿದೀಪಾಂಶುಗಳ ಮುಕ್ಕುಳಿಸಿಪವು ಕಡೆಗಂಗಳಿಂದೊಪಳದ ಭಿತ್ತಿಯ ಬೆಳಗನಣೆದುವು ಬಹಳ ತನುಕಾಂತಿ (ಕುವ್ಯಾಅ. ೯-೦೫). ೯. (ಕಣ್ಣೊಳಗೆ) ಒಳಗೊಳ್ಳು; ತುಂಬಿಕೊಳ್ಳು: ಲಲಿತಮಧುರಾಪಾಂಗದಲಿ ಮುಕ್ಕುಳಿಸಿ ತಣಿಯವು ಕಂಗಳು (ಕುವ್ಯಾಅ. ೦೫-೩೪); ಉಕ್ಕಿದುದು ಮನವಱೆದು ಕಂಗಳು ಮುಕ್ಕುಳಿಸಿದುವು ಮೂರ್ತಿಯನು (ಕೃಶುಂಠೀ. ೨೨-೪೦). ೧೦. ತುಂಬು; ಆವರಿಸು; ವ್ಯಾಪಿಸು: ಹೊಕ್ಕವಾಸೆಗಳೆರಡುಸೇನೆಯೊಳೊಕ್ಕಲಿಕ್ಕಿದ ಪೆಸುವ ಜೋದರ ತೆಕ್ಕೆಗೋಲಿನ ಮಾಲೆ ಮುಕ್ಕುಳಿಸಿದವು ದಿಗುತಟವ (ಕುವ್ಯಾಭೀ. ೪-೬೫). ೧೧. ಹಿರಿದಾಗು; ಅತಿಶಯವಾಗು: ಸಲುಗೆ ಮುಕ್ಕುಳಿಸೆ ಮುಚ್ಚಿದ ಮುನಿಸುವೆರಸು ಕದಡಿದ ಗಂಗೆಯಂತ ಬಂಕೇಶವಾಧಿಪತಿಯ ಸಭೆಯಂ ಹೊಕ್ಕನು (ಸಿದ್ಧರಾ. ೬-೪೬). ೧೨. (ಅಲಂ) ಊದಿಕೊಂಡಿರು: ಅಕ್ಕಜದ ರುಜೆಯೇನು ಮಾನಸವೋ ಶರೀರಜವೋ ಮುಕ್ಕುಳಿಸಿಕೊಂಡಿರದಿರು (ಕುವ್ಯಾಸ. ೦೨-೦೦). ಮುಕ್ಕಳಿಸು: ೨. ಲಿಂಗಾಗ್ರದೊಳ್ನಿಂದು ಕಾಲ್ವೊಳಿದು ಮುಕ್ಕಳಿಸುವರೆ ಮೂಢರೆರೆಯನೆ ಎನುತ್ತಂ ಬೈದು (ಮಹಾಶಿ. ೦೪-೦೮); ಉಪ್ಪಿನ ನೀರಿನಿಂದ ಬಾಯಿಯನ್ನು ಚೆನ್ನಾಗಿ ಮುಕ್ಕಳಿಸಬೇಕು (ಕರಿಶಿ. ೨೫); ಉಣ್ಣೋದು ಗಂಜಿ, ಮುಕ್ಕಳಿಸೋದು ಪನ್ನೀರು (ಗಾದೆ). ೪. ಎಳೆದೇರ ಗೌರೀಶ ಸಿನ್ನೊಳಿಸೆವ ದಯೆಯ ಸೆರೆ ಮುಕ್ಕಳಿಪ ನೋಟವೆನ್ನ ಸುತ್ತು ಕಟ್ಟಿಕಾಯಲಿ (ಆಕೃಸ. II. ೩೩-೫). ೧೦. ವಿಕ್ಕ ಜಗತ್ಪ್ರದೇಶಮಂ ಮುಕ್ಕಳಿಸಿತ್ತು ಮತ್ತೆ ಜಯಭೇರಿಯ ಭೂರಿಗಭೀರನಿಸ್ವನಂ (ಚಂದ್ರಪು. ೦೦-೨). [ಮುಕ್ಕುಳ್ + ..... ಇಸು₃]

**ಮುಕ್ಕುಳಿಸು₂** (ಕ್ರಿ). ೧. ಗಪಗಪನೆ ತಿನ್ನು; ಮುಕ್ಕು: ಒರ್ವಳು ಕೈವೆರಲ್ಗಳಿಂದಲ್ಲೆಯಂ ಜಕ್ಕುಲಿಸಿ ಬಗೆಬಗೆಯಲ್ಲಿ ನಗುವ ಪ್ರಸಾದಮಂ

ಮುಕ್ಕುಳಿಸಿ ಕುಕ್ಷಿಯುಂ ಅಕ್ಕುಳಿಸಿ ಕಣ್ಣೀರಾಮುದೆಂದು ಮೋಹಿಸಿದು . . . ಮಮತೆಯಿಂ ಮನಮುಟ್ಟಿ ([illegible]). ೨. (ಆಲಂ) ನುಂಗಿ ನೊಣೆ; ನಾಶಮಾಡು : ಕಣೆಕಣೆಯ ಹಳಚಿದವು ಮಾರ್ಗಣೆ ಕಣೆಯ ಕಡಿದವು ಕವಿವ ಕಣೆ ಕಿಱುಗಣೆಯ ಮುಕ್ಕುಳಿಸಿದವು ಪೆಕ್ಕಳಿಸಿದವು ಪಱದೆಗರ ([illegible]). [< ಮುಕ್ಕು₁ + — ಇಸು₃]

**ಮುಕ್ಕುಳು** 'ಮುಕ್ಕುಳ್' ನೋ.

**ಮುಕ್ಕುಱಿಕು** 'ಮುಕ್ಕುಱಿಕ್ಕು₁' ನೋ.

**ಮುಕ್ಕುಱಿಕ್ಕು₁**, ಮುಕುರಿಕ್ಕು, ಮುಕ್ಕುರಿಕ್ಕು₁, ಮುಕ್ಕುರುಕು, ಮುಕ್ಕುಱಿಕು (ಕ್ರಿ). ಕವಿ; ಮುಸುಕು; ಆವರಿಸು ; ಮುತ್ತು : ಕಡುಮುಳಿದ ಪರಸಮಯಿಗಳ್ ಘುಡುಘುಡಿಸಿ ಬಂದು ಮುಕ್ಕುಱಿಕ್ಕಿ ತಕ್ಕುಗೆಡಿಸಿ ಭೋಂಕನೆ ಕೆಡಪಿ ..., ಅಭಿಮಾನಂಗಿಡಿಸಿ ಬಿಡಲೊಡಂ ([illegible]); ನಾಯ್ಗಳು ವೆರಸಿ ಮುಕ್ಕುಱಿಕ್ಕಲು . . . ಎಲ್ಲರೊಡಲ ಕಳವಳಿಗೆಯ್ದು ಬೀದಿವರಿದೊಕ್ಕಲಿಕ್ಕಿತ್ತು ರಕ್ಕಸವಿಂಗಂ ಕಾಡೊದಱಲು ([illegible]). **ಮುಕುರಿಕ್ಕು**: ತುಡುಕಿ ತಳ್ದೊಕ್ಕಲಿಕ್ಕಿಯೆ ಪಿಡಪಲದಲ್ಲಿ ಮುಕುರಿಕ್ಕಿ ಮಾಱಾಂತವರ × × × ತೊಲಂಪ ತೆಱದಿಂದಿಡವಳಿಯದೆ ತಿವಿದು ಕೊಂದನು ಸಮರಾಂಗಣದೊಳ್ (ಎಕ. VIII. ಸಾಗರ. [illegible] : 1203). **ಮುಕ್ಕುರಿಕ್ಕು₁** : ನನ್ನಿದಿರು ನೋಡಿದಲ್ಲೆಲ್ಲ ಪೂಜ್ಯಪೂರ್ವಜರಾದ ನಮ್ಮ ಎರೆಯಂಗ, ಬಿಟ್ಟಿದೇವ, ವೀರ ಬಲ್ಲಾಳರ ಕೃದ್ಧಪ್ರತಿಮೆಗಳು ಮುಕ್ಕುರಿಕ್ಕಿ, 'ಹೊಯ್ ಸಳ ! ಮತ್ತೆ ಹೊಯ್ ! ಹೊಡೆ ! ' ಎಂದು ತಿವಿತಿವಿದು ಆಡುತ್ತಿವೆ ([illegible]). **ಮುಕ್ಕುರುಕು** : ಸರಳೊಂದರಲಿ ಮುಕ್ಕುರುಕಿ ಬಿಡಲು ಶತಸಾವಿರಂ ಲಕ್ಷಶತಕೋಟಿಯರ್ಬುದವಾಗಲು (ತುರಂಗ. [illegible]); ಗೋಡೆಗಳ ಬಿರುಕು, ಮನೆಗಳ ಹರುಕು, ಬರಡಿಯ ಕೊಳಕು ಇವೆಲ್ಲಾ ಮುಕ್ಕುರುಕಿ ನನ್ನ ದುಃಖವನ್ನು ಉಕ್ಕಿಸಿದುವು ([illegible]). **ಮುಕ್ಕುಱಿಕು** : "ಮುಕ್ಕುಱಿಕಿದುದೆನೆ ಮುತ್ತಿದುದು" ([illegible]); ಮುಱಿಯೆಸುತ ಗಂಧರ್ವಬಲ ಮುಕ್ಕುಱಿಕಿ ಕೌರವಬಲವ ತತ್ತಱದಱಿದು ತರಹರವಿಲ್ಲೆನಿಸಿ ಹೊಗಿಸಿದರು ಪಾಳಯವ ([illegible]) ; ಘಡ ಸೂಕುಸೂಕೆನುತೇಱು ರಥಗಳನು ಮುಕ್ಕುಱಿಕಿ ಕವಿತರಲು ([illegible]); ಸಿಡಿದ ಜಲಕಣಾವಳಿ ಯುವರ ಮುಖಪಂಕಜಂಗಳೊಳಗೆ ಮುಕ್ಕುಱಿಕಿ ([illegible]).

[ಮುಕ್ಕುಱು₁ + ಇಕ್ಕು]

**ಮುಕ್ಕುಱಿಕ್ಕು₂**, ಮುಕ್ಕುರಿಕ್ಕು₂ (ಕ್ರಿ). ೧. (ಭಾರವನ್ನು ಹೊರುವುದರಿಂದ ಅಥವಾ ನೋವು, ಹೆದರಿಕೆ ಇತ್ಯಾದಿಗಳಿಂದ) ತಿಣುಕು : ಮುಕ್ಕು : ರಕ್ಕಸರು ತಾವೆಲ್ಲ ಭಯದಲಿ ಮುಕ್ಕುಱಿಕ್ಕಿ ನರಾದಿವರಹನಡಿಕ್ಕಲಸು ತಾ ಬಂದನಲ್ಲಿಗೆ ([illegible]) ; ದಿಗ್ಗಜಂಗಳ್ ಮುಕ್ಕುಱಿಕ್ಕಿದುವು ಪೊಱೆಯ ಬಲ್ಸುಗ್ಗಿಸಿಂ ಕುಸಿದ ತಲೆಗಳನೆತ್ತಿ ಕಚ್ಛಪಂ ಪಿಗ್ಗಿ ಕಾಲಾಡಿದಂ ([illegible]). ೨. (ಹಸು, ಎತ್ತು ಮೊದಲಾದುವು) ಅರಚು : ಪೆರ್ಚಿದೊಂದು ಸಂತಸದಿಂ ಬೈಗಿನೊಳ್ ಕೆಲೆದುಂ ಮುಕ್ಕುಱಿಕ್ಕಿಯುಂ ನೆಗೆದಾಡಿಯುಂ ಚಿದಱಿ ಪೋಪಾಕಳ ಮಂದೆಯ ಮಾಟಿಕ್ಕಿಯಿಂ ನೆರೆದು ಬಂದ ಚಾತ್ರಿಯ ಪಯಣಿಗರ್ ([illegible]); ಕಣ್ಗೊಳಿಸಿನ ಕರಡಿಯ ಮುಕ್ಕುಱಿಕ್ಕುವ ಕಾಟಿಯ್ಯೇಣನ . . . ಗಜಬಜದ ಸಂಚಾರಂ ಬಲ್ಪಿರಿದಾಯ್ತು ([illegible]). **ಮುಕ್ಕುರಿಕ್ಕು₂**: ೩. ಗೂಳಿಗಳು ಕಾಲು ಕೆರೆದು ಕದನಕ್ಕೆಂದು ಆರ್ಭಟಿಸು : ಹುಲಿಯ ಹೆದರಿಕೆಯಿಂದ . . . ಬೀಜದ ಹೋರಿಯು ಕಟ್ಟಿಹಾಕಿದುದರಿಂದ ಸರಿಯಾಗಿ ಹೊಟ್ಟೆಗಿಲ್ಲದ ದೆಸೆಯಿಂದ ಮುಕ್ಕುರಿಕ್ಕುವುದನ್ನೂ ಮರೆತು ಮೇಲೆ ನೋಡುತ್ತಿದೆ ([illegible]).

[ಮುಕ್ಕುಱು₂ + ಇಕ್ಕು/ತುಳು. ಮುಕ್ಕುರುಪಕ್ಕು]

**ಮುಕ್ಕುಱಿಸು₁**, ಮುಕುರಿಸು, ಮುಕ್ಕುಳಿಸು, ಮುಕ್ಕುರಿಸು (ಕ್ರಿ). ೧. ಕವಿ; ಆವರಿಸು ; ಮುತ್ತು : ನಾಡೆಯುಂ ಬೇಗೆಡೆದೆತ್ತಂ ಪೆಟ್ಟುಗಳ್ ಮುಕ್ಕುಱಿಸೆ ([illegible]); ಉಱುಗಲಿಳೆ ದಳಮುಕುರಿಸಿ ಮುಕ್ಕುಱಿಸಿ [[illegible]]ತಂಕಕೆ ಗಗನತಳ ಬಿಡದೊಱಲಿತಿವರವರದ್ರಿಗಳ ಕೈದುಗಳ ಕದನದಲಿ ([illegible]). **ಮುಕುರಿಸು** : ೨. ಮುತ್ತುವಂತೆ ಮಾಡು ; ಆವರಿಸುವಂತೆ ಮಾಡು ; ಆಕ್ರಮಿಸುವಂತೆ ಮಾಡು: ಬಭ್ರುವಾಹನ ಮಧುಬಾಣವನ್ನೆಚ್ಚು ಅವುಗಳ ಮೇಲೆ ಜೇನ್ನೊಳಗರೆದ ; ಮೇಲೆ ಪಿಪೀಲಿಕಾಸ್ತ್ರವನ್ನು ಬಿಟ್ಟು ಕಟ್ಟಿರುಹೆಗಳನ್ನು ಅವುಗಳಿಗೆ ಮುಕುರಿಸಿದ ([illegible]). **ಮುಕ್ಕುಱಿಸು**: ೧. ಭಂಗು ಮುಕ್ಕುಱಿಸಿರ್ಪ ಮುತ್ತಳನದೊರ್ವಂ ಕುಡಲು ತಾಯ್ನನ್ನಯಾ ಭಂಗಂ ಪೋಪುದು . . . ಎನುತ್ತೆಸಲೆ ಸಬ್ಬಂಗೆಯ್ವನಾ ತಾಣದೊಳ್ ([illegible]). **ಮುಕ್ಕುರಿಸು** : ೧. ಸೊಕ್ಕಿದೆಕ್ಕಲನೊಂದು . . . ಮುಕ್ಕುರಿಪ ನಾಯ್ಗಳಂ ಕೆಕ್ಕರಿಸಿ ಡುರುಗುಟ್ಟಿ ಸಿಕ್ಕದೋಡಿತು ಕಾಡೆ ಕೆಳದೋಡಿದವಂತೆ ([illegible]).

[ಮುಕ್ಕುಱು₁ + — ಇಸು₃]

**ಮುಕ್ಕುಱಿಸು₂** (ಕ್ರಿ). ಕಷ್ಟಪಡು ; ಒದ್ದಾಡು ; ಬಳಲು ; ಆಯಾಸ ಹೊಂದು : ಆ ವಸುದೇವ ಮನೆಯನು ಹೊಱವಡುತ ಬರೆ ಮುಂದೆ ಮಾರ್ಗಮಹಾಂಧಕಾರದಲಿ ಕಱೆವ ಮಳೆಯಲಿ ಕೆಸಱನಲಿ ಮುಕ್ಕುಱಿಸಿ ಮುಂಗುಡಿ ನೂಕದಿರಲದನಱಿದನಂತನು ಬಂದನಾಕ್ಷಣವಾಳ್ದನಿದ್ದೆಡೆಗೆ ([illegible]). [ಮುಕ್ಕುಱು₂ + — ಇಸು₃]

**ಮುಕ್ಕುಱು₁**, ಮುಕರು, ಮುಕುರು, ಮುಕುಱು, ಮುಕ್ಕಿಱು, ಮುಕ್ಕುರು (ಕ್ರಿ). ೧. ಕವಿ; ಮುತ್ತು ; ಆವರಿಸು: "ಮುಕ್ಕುಱು=ಮುಸುಱುಹಂ" ([illegible]); "ಮುಕ್ಕುಱು ಮುಸುಱುಹನೊಳ್" ([illegible]). **ಮುಕರು** : ೧. ಜೇನ ನೊಣಗಳು ಅಲ್ಲಲ್ಲಿಗೆ ಮುಕರಿಕೊಂಡು ಕೂತಿದ್ದವು ([illegible]); ಮನೆಯೆದುರು ಜನಜಂಗುಳಿ ಮುಕರಿತ್ತು ([illegible]); ಒಬ್ಬನು ಪತ್ರಿಕೆ ಕೊಂಡರೆ ಸಾಕು; ಹತ್ತುಜನ ಅವನ ಸುತ್ತಲೂ ಮುಕರಿರುತ್ತಾರೆ ([illegible]). **ಮುಕುರು** : ೧. ಗಾಳಿ ಬೆಳಕುಗಳು, ಸಂದುಗೊಂದುಗಳಲ್ಲಿ ಕೂಡ ನುಸುಳಿ ಅವರ ದೇಹವನ್ನು ತಟ್ಟಿದಂತೆ ಜನ ಮುಕುರಿತು ([illegible]); ನರಹರಿಯು ಬಂದೊಡನೆ ಅವನನ್ನು ನೋಡಲು ನೂರಾರು ಜನ ಮುಕುರಿದ್ದರು ([illegible]). **ಮುಕುಱು** : ೧. ಅಕಳಂಕಮುನಿಯೊತ್ತಿನೊಳಿರ್ಪ ಕುದುರೆಯಂ ಕಾಣುತಿವ ಕಳ್ಳನೆಂದು ಮುಕುಱಿಕೊಳುತಾತ್ತನಂ ಬಳಸಲ್ ([illegible]). **ಮುಕ್ಕಿಱು** : ೧. ಲೆಕ್ಕವಿಲ್ಲದ ರಾಜಕಾರ್ಯ ನಿನಗೆ ಬಂದು ಮುಕ್ಕಿಱಿದಿರೆ ಮುಂದೆ ರಾವು ([illegible]). ೨. ಎದುರುಬೀಳು; ವಿರೋಧಿಸು; ಪ್ರತಿಭಟಿಸು: ಇನಿಯನ ಸುದ್ದಿಗೇಳ್ವೆಡೆಗೆ ತಾನೆಯ್ತಂದು ಮನೆವಾಱ್ತೆಪೇಟ್ವ ಮಾತೆಯೊಳು ಮೊನೆದೋಱಿ ಮುನಿದು ಮುಕ್ಕಿಱಿದು ಕಳುಪಿ ಮುನ್ನಿನನುವಾತುಗಳ ನಾಲಿಪುದು ([illegible]). **ಮುಕ್ಕುರು**: ೧. ಸಮಸ್ತ ಉತ್ಪಾತಗಳು ತನ್ನ ತಲೆಯ ಮೇಲೆ ಮುಕ್ಕುರಿದರೂ ತಾಳ್ಮೆಯಿಂದ ಅವುಗಳನ್ನೆಲ್ಲ ಹೇಗೋ ಹೊತ್ತುಕೊಂಡು ನಡೆಯುತ್ತಿದ್ದನು ([illegible]); ಬದುಕಿಗಾಗಿ ಜನ ಯಾವುದೊಂದು ಪಾತಕಕ್ಕೂ ಮುಕ್ಕುರುವರು ([illegible]).

[< ಮುಸುಱು₁]

**ಮುಕ್ಕುಱು₂**, ಮುಕ್ಕರಿ, ಮುಕ್ಕರೆ, ಮುಕ್ಕುರಿ (ಕ್ರಿ). (ಭಾರವನ್ನು ಹೊರಲಾರದೆ ಅಥವಾ ನೋವು ತಡೆಯಲಾರದೆ) ಕಷ್ಟಪಡು : ಒದ್ದಾಡು; ಮೇಲುಬ್ಬಸ ಪಡು : 'ಮುಕ್ಕುಱಿಸು₂' ಪರ್ಯಾ. **ಮುಕ್ಕರಿ**: ರಾಮಯ್ಯಂಗಾರಿ . . . ತನ್ನ ಚೀಲವನ್ನು ಮುಕ್ಕರಿದು ತಲೆಯ ಮೇಲೆ ಹೊತ್ತುಕೊಂಡು ಊರ ಕಡೆ ಹೊರಟನು ([illegible]); ತಂಗಾಳಿಯು ಅದನ್ನೆಲ್ಲ ಹೊತ್ತು ತರಲಾರದೆ ಮುಕ್ಕರಿಯುವಂತೆ ಉಸ್ ಎಂದುಕೊಂಡು ನಿಧಾನವಾಗಿ ಬೀಸುತ್ತಿದೆ ([illegible] II. [illegible]). **ಮುಕ್ಕರೆ** : ಹಾಗು ಸೀತ,

ನೆಗಡಿಯಿಂದ ಮುಕ್ಕರಿಯುತ್ತಿದೆ (ಲಾಪ). **ಮುಕ್ಕುರಿ :** ತಳ್ಳಿ ಕತ್ತಲೆಯಾದ ಮೇಲೆ ಮುಕ್ಕುರಿಯುತ್ತ ಚೀಲವನ್ನು ಸುಂದರಿಯು ಬಜಾರಕ್ಕೆ ಸಾಗಿಸಿದ (ನವೋ್ನರು. ೨೯೦). [<ಮುಲುಕು$_1$]

**ಮುಕ್ಕುಳುವಲ್** (ನಾ). ಒಂದರ ಮೇಲೊಂದು ಬೆಳೆದಿರುವ ಹಲ್ಲು : ಕೆಕ್ಕಳಗಣ್ ಕಿದಱಿದ ಕೆಂಗೂದಲ್ ಮೊಕ್ಕನೊಸಲ್ . . . ಮುಕ್ಕುಳುವಲ್ ಮುಂದವೊಗ ನೀಡುಂದೋಳಕ್ಕಲಮಂ ಪೊದಮೆಯ್ಯೊಳೆಸೆವ ಪಲರಕ್ಕಸಿಯರ ತಂಡಂ ನಡೆತಂದುದು ತದ್ದೂರಧರಣಿಯೊಳು (ಜಯುಶಾ. ೬-೨೭). [ಮುಕ್ಕುಳು$_1$ + ಪಲ್]

**ಮುಕ್ಕೂಟ** (ನಾ). ೧. ಮೂರರ ಕೂಟ,— ಮೇಳ : "ಮೂರರ ತಂಡ, ಮುಕ್ಕೂಟ, ತ್ರಿತಯ " (Tern. ೬೦೪೩). ೨. (ಪರಸ್ಪರ ಸಂಬಂಧವಿರುವ ಅಥವಾ ಪರಸ್ಪರ ಪೂರಕಗಳಾದ) ಮೂರು ನಾಟಕಗಳ ಗುಂಪು: ಒರೆಸ್ಟಿಯುಮೆಂದು ಪ್ರಖ್ಯಾತವಾಗಿರುವ ಮುಕ್ಕೂಟದ . . . ಮೂರು ರುದ್ರನಾಟಕಗಳು (ಅಂಕಾ. ೨೧೨) ; ಮುಕ್ಕೂಟವು ಇವನಿಗೆ ಅಷ್ಟಾಗಿ ಹಿತವಾಗಲಿಲ್ಲವೆಂದು ಕಾಣುತ್ತದೆ (ಅಂಕಾ. ೨೦೩) ; ಈ ಮುಕ್ಕೂಟದಲ್ಲಿ ಮೊದಲನೆಯ ಭಾಗ ಇನ್ನೂ ಆಗ ತಾನೆ ನಾಟಕಕಲೆಯ ಅಭ್ಯಾಸಕ್ಕೆ ತೊಡಗಿರುವವನ ಕೆಲಸ (ಷೇಕ್ಸ್‌ಪಿ. ೮೦).

[< ಮೂಱು + ಕೂಟ$_1$]

**ಮುಕ್ಕೂಡಲ್.** ಮುಕೂಡಲ್, ಮುಕ್ಕೂಡಲು (ನಾ). ಮೂರು ಪ್ರದೇಶಗಳು ಕೂಡಿರುವ ಸ್ಥಳ.— ಜಾಗ : ಅನ್ತೆ ಬನ್ದು ನೈರಿತ್ಯನಾ ದೆಸೆಗೆ ಸೀಮೆ ಮೂಱು ಮೂರ ಪೊಲದ ಮುಕ್ಕೂಡಲೆ ವರುಣನಾ ದೆಸೆಗೆ ಸೀಮೆ (ಎಕ. IX (8), ಬೆಂಗಳೂ. ೦೫೦-೩೬; 828) ; ಕಡೆಕೊಳಂ ಪಾರವುರಂ ಪಯ್ದುಗೆಯ ಮುಕ್ಕೂಡಲ್ತೆಙ್ಕವೊಗದೆ ಪೋಗಿ (ಪ್ಕ್ಅಂ. ೦೯೩೪, ೩೮-೬; 11ನೆಯ ಶಶ). **ಮುಕೂಡಲ್ :** ಈಶಾನತಃ ಮುಕೂಡಲ್ . . . ಬಿದಿರೂರ್ಗ್ಗಱಿ ಮುಕೂಡಲ್ (ಎಕ. XII, ಗುಬ್ಬಿ. ೩೦-೪೮; 812). **ಮುಕ್ಕೂಡಲು :** ಅಸಗವೊಟಿಯ ಕಿಱುಬೇಡಿಂ ಬಟಿಯ ಪೊಣುಸೆ ಕಡೆಕೊಳಂ ಪಯ್ದುಗೆ ಪಾರವುರಂ ಮೂಱೂರ ಮುಕ್ಕೂಡಲಲ್ಲಿ ಪೊಲ ಸೀಮೆ ಕೂಡಿತ್ತು (ಪ್ಕ್ಅಂ. ೦೯೩೪, ೩೮-೨೦; 11ನೆಯ ಶಶ).

[< ಮೂಱು + ಕೂಡಲ್]

**ಮುಕ್ಕೂಡಲು** 'ಮುಕ್ಕೂಡಲ್' ನೋ.

**ಮುಕ್ಕೂಡಿಸು** (ಕ್ರಿ). ಮೂರುಪಟ್ಟು ಮಾಡು : ಕೊಪ್ಪದಲ್ಲಿ ಅಂಣ ಉಪಾಧ್ಯಗೆ ಅಗ್ನಿಯ ಮಾಡಿ ಹೊರಡಿಸಿದ ಸಂಮಂಧ ಆತನ ಸ್ವಾಸ್ತಿ ಅಡಕೇ ಮರ ಸಾ ೧೦೦೦ಕಂ ಕೊಟ್ಟ ರೊಕ್ಕ ಗ ೩೦ ವರಹಗೆ ಬಡ್ಡಿ ಗ ೬ ವರಹುಂನೂ ಮುಕ್ಕೂಡಿಸುತ ದೀವಿಗೆ ಸಹ ಬಿಟ್ಟುದು (ಎಕ. VI, ಕೊಪ್ಪ. ೩೦-೨೮; 1598). [< ಮೂಱು + ಕೂಡಿಸು]

**ಮುಕ್ಕೂಡು** (ನಾ). = ಮುಕ್ಕೂಡಲ್ : ಕಡೆಕೊಳಂ ಪಾರವುರಂ ತಣ್ಣೆಯುದ ಮುಕ್ಕೂಡು ಮೂಡ ನೊಗದೆ ಪೋಗಿ ಬೆಳ್ಮೊಱಡಿ ಕಡೆಕೊಳಂ ಪೆರ್ಪ್ಪಡು ತಣ್ಣೆಯುದ ಮುಕ್ಕೂಡು ಬಡಗ ಮೊಗದೆ ಪೋಗಿ (ಪ್ಕ್ಅಂ. ೦೯೩೪, ೩೮-೭; 11ನೆಯ ಶಶ); ಮುಕ್ಕೂಡು ದಾರಿಯಲಿ ಕೊಲೆಗೊಂಡನವನೆಂದು (ಮೂರುನಾ. ೦೨೨). 'ಮುಕ್ಕೂಡಲ್' ಪರಾ. [< ಮೂಱು + ಕೂಡು$_3$]

**ಮುಕ್ಕೆ** (ನಾ). ಮೂರ್ಖಳಾದ ಹೆಣ್ಣು ; ತಿಳಿಗೇಡಿಹೆಣ್ಣು : ಮುಡುಹಿನ ಮುಕ್ಕೆ [ಟಾಕಾಂ. ಕ್ಕಿ. ಕೈ] ಸೊಕ್ಕಿದಿರದೇನಭಿಮಾನದ ಜೋಡೆ ಬಾಲಮುಂ ಬಡಿವಡೆ (ಅಪಂಪು. ೬-೩೦; ಸೂಕ್ತಿಸು. ೬-೪೨೪ ನೋ); ಮನಮುಂ ನೋಯಲಾಡಿ ದೆನ್ ; ಮನ್ನಿಸೀ ಮುಕ್ಕೆಯುನ್, ತಾಯಿ (ಶ್ರೀರಾಮಾ. ೭೦೨-೯೦).

[ಮುಕ್ಕ$_3$ + — ಎ$_2$]

**ಮುಕ್ಕೇಡು** (ನಾ). ಮೂರು ಬಗೆಯ ಕೇಡು,— ಹಾನಿ : ತ್ರಿದೋಷ : 'ಬರೆಹಕೊಂಬರ ಕೈಗಳ ಕೇಡು —ಸುಣ್ಣನಪ್ಪಳಿಕದ ಕೇಡು—ಪೇಟೆ ಸಿದ್ದೊಡಥಾಹಿ ಕೇಡು ' ಎಂಬ 'ಬೆಳ್ಗಳ ಕೃತಿಬಂಧ'ದ ಈ ಮುಕ್ಕೇಡುಗಳನ್ನು ಬತ್ತಟ್ಟಿಗಿರಿಸಿ ಕೊಳ್ಳಿರಿ (ಸಾತೋಜ. ೦೯೩). [< ಮೂಱು + ಕೇಡು]

**ಮುಕ್ಕೊಂಗು** 'ಮೂಗೊಂಕು' ನೋ.

**ಮುಕ್ಕೊಡೆ** 'ಮೂಗೊಡೆ' ನೋ.

**ಮುಕ್ಕೊಡೆಯ** (ನಾ). [ಜೈನ] ಚಕ್ರವರ್ತಿಲಾಂಛನವಾದ ಮೂರು ಕೊಡೆಗಳನ್ನು ಉಳ್ಳವನು ; ಜಿನ ; ಅರ್ಹಂತ : ಮುಕ್ಕೊಡೆಯನ ದಿವ್ಯಮಂತ್ರಮೋಂ ಕೇವಳಮೋ (ಜಮಪು. ೦೦-೮).

[ಮುಕ್ಕೊಡೆ (< ಮೂಗೊಡೆ) + — ಅ$_7$]

**ಮುಕ್ಕೋಟಿ** (ನಾ). ಒಂದು ಸಂಖ್ಯೆ ; ಮೂರುಕೋಟಿ : ಭೀಷಣಂ ಮುಳಿದೆದ್ದು ನಡೆಯುತಿರಲು ಮುಕ್ಕೋಟಿರಕ್ಕಸರ್ವೊಱಮಟ್ಟರವನ ಕೂಡೆ (ಕೈಪಿಂಕಾ. ೦೬-೩೦) ; ವಾರುಣಾಸುರನೆನಿಪ ದೈತ್ಯನ ಮೈರುಚಿಯನನುಕರಿಸಿ ತೋರುವ ಘೋರಭೀಕರರಕ್ಕಸರು ಮುಕ್ಕೋಟಿ ಕಾಣಿಸಿತು (ಕೋಗಯು. ೨೩-೪೨). [< ಮೂಱು + ಕೋಟಿ$_1$]

**ಮುಕ್ಕೋಣ** (ನಾ). ೧. ಮೂರುಮೂಲೆ. ೨. ಮೂರುತುದಿಗಳಿಂದ ಕೂಡಿದ ಒಂದು ಬಗೆಯ ಆಯುಧ : ಈ ಸುಸ್ಮೃತಿಯು ಆಯುಧಗಳಲ್ಲಿ ಹರೆಯುವ ಆಯುಧಗಳು, ಮೊನಚಾದ ಆಯುಧಗಳು, ಮುಕ್ಕೋಣಗಳು, ಸುಧಾರಿತವಿಧಾನಗಳಿಂದ ಮಾಡಲ್ಪಡುತ್ತಿದ್ದವು (ಕವಿಕೋ. I, ೮೦೩). ೩. [ರೇಖಾಗ] ಮೂರುಕೋನಗಳಿಂದ ಕೂಡಿದುದು ; ತ್ರಿಭುಜ : ತ್ರಿಕೋನ: ಮೂರು ಸರಳರೇಖೆಗಳಿಂದ ಕೂಡಿದ ಕ್ಷೇತ್ರಕ್ಕೆ ತ್ರಿಭುಜವೆಂದೂ ಮುಕ್ಕೋಣವೆಂದೂ ಹೆಸರು (ಖೂಖಂಅ. ೯). [< ಮೂಱು + ಕೋಣ$_2$]

**ಮುಕ್ಕೋಲ್** (ನಾ). ಒಟ್ಟಾಗಿ ಸೇರಿಸಿ ಕಟ್ಟಿದ ಮೂರು ದಂಡಗಳು : ಯತಿಗಳು ಹಿಡಿಯುವ ದಂಡ ; ತ್ರಿದಂಡ : ಶ್ರೀ ನಾರಾಯಣನ ಸೇವಾಸಮಯದೊಳ್ ಕೊರಲ್ಗೆ ಧರಿಸಿದ ಸಂಪಗೆಯ ದಂಡಿಗೆಯಂ ಪೋಲ್ವ ಸಿರಿದೋಳ್ಗಳುಂ . . . ಪಟಿಸುಡಿಮೆಂಡಿರ ಕುರುಳ್ ಸಿಕ್ಕುವಿಡಿಸಲ್ಕೊಂಡ ಸಿಕ್ಕಟಿಗೆಯಂ ಪೋಲ್ವ ಮುಕ್ಕೋಲುಂ ಎಳವಿಸಿಲ ಸೋಂಕಿನೊಳೆಸೆವ ಕೆಂದಾವರೆಗಳಂತೆಳಗಾವಿಯುಡೆವಡೆದ ಸಿರಿಯುಡಿಯುಮಾಗಿ ಪದ್ಮಾಸನ ದೊಳಿರ್ಪುದಮಂ ತನ್ನ ಮನದೊಳ್ ಬಂದಿವಿಡಿದೆಣಿಸಿದಂ (ಚಕವಿ. ೦೦೯-೦೯).

[< ಮೂಱು + ಕೋಲ್$_1$]

**ಮುಕ್ತ** (ಗು). ೧. ಬಿಡುಗಡೆಯನ್ನು ಹೊಂದಿದ ; ಬಂಧಮುಕ್ತವಾದ. ೨. ಬಿಚ್ಚಿದ ; ಬಂಧನವನ್ನು ಕಳಚಿದ : ಚಕ್ಕಮುಕ್ಕಿಯ ಕಲ್ಲಿನಂತರಂಗ ದೊಳಗ್ನಿ ಗುಪ್ತವಾಗಿರ್ಪಂತೆ, ಬಾಹ್ಯವಿಸ್ಮೃತಿಯ ಮಧ್ಯೆ ಮಂಥರೆಯ ಹೃದಯದಲಿ ಸುಪ್ತವಾಗಿರ್ದ ರತಿ, ಚೆಲುವೊಲವುಗಳ ಚಲುಮೆ ತಾಂ ಕಣ್ತೆರೆದುದೊಯ್ಯನೆಯೆ ಮುಕ್ತ ಮುಕ್ತಾಹಾರಧಾರೆಯಲಿ (ಶ್ರೀರಾಮಾ. ೨೩-೭೨೩). 'ಮುಕ್ತಕೇಶ', 'ಮುಕ್ತಕೇಶಿ' ಪರಾ. ೩. ಬಿಟ್ಟ ; ತ್ಯಜಿಸಿದ ; ತೊರೆದ : 'ಮುಕ್ತಕಂಚುಕ' ಪರಾ. ೪. ತೆರೆದ : 'ಮುಕ್ತದ್ವಾರ' ಪರಾ. ೫. (ಬಾಣ ಮೊದಲಾದುವನ್ನು) ಪ್ರಯೋಗಿಸಿದ : ಎಸೆದ ; ತೂರಿದ : ಕೊಂಡಪುದುರಿ ಬನ ಮನದಂ ಕಂಡೆಂತಿರಲಿಕ್ಕುಮೆಂದು ತಾಗಿದ ನೆಗಟ್ಟ್ವೊಳ್ಗಂಡರ ಗಂಡೋಡು ವಿನಂ ಕೊಂದುವು ಗಾಂಡೀವಮುಕ್ತಬಾಣಗಣಂಗಳ್ (ಶಂಕಭಾ ೫-೮೯). ೬. ನಿರ್ಬಂಧವಿಲ್ಲದ ; ತಡೆಯಿಲ್ಲದ : ಸಾಹೇಬರು ಹೋಗುವಾಗ . . . ನನಗೆ ಬೇಕಾದದ್ದನ್ನು ಆರಿಸಿಕೊಳ್ಳುವ ಮುಕ್ತ ಮುಕ್ತೇ ಕೊಟ್ಟಿದ್ದರು (ದೇಶಹ. II, ೩೨೭). ೭. ನಿಷ್ಕಪಟವಾದ ; ಕುಟಿಲತೆಯಿಲ್ಲದ ; ಮುಚ್ಚುಮರೆಯಿಲ್ಲದ : 'ಮುಕ್ತಕಂಠ' ಪರಾ. ೮. [ತತ್ತ್ವಶಾ] (ಸಂಸಾರಬಂಧನದಿಂದ) ಬಿಡುಗಡೆಯನ್ನು ಹೊಂದಿದ ; ಮುಕ್ತಿಯನ್ನು ಪಡೆದ ; ಮೋಕ್ಷವನ್ನು ಹೊಂದಿದ : 'ಮುಕ್ತಾತ್ಮ' ಪರಾ. (ನಾ). ೯. ಬಿಡುಗಡೆಯನ್ನು ಹೊಂದಿದುದು ; ಬಂಧನದಿಂದ

ಕಳಚಿಕೊಂಡುದು : ಬದ್ಧವೆಂಬುದು ಮುಕ್ತವೆಂಬುದು ಬುದ್ಧಿಗೇ ಸರಿಯಾತ್ಮಕಿಲ್ಲಿಲೆ ಅದ್ವಯಾನಂದೈಕರಸವದಕೆಂತೊ ಆ ನುಡಿಯು (ಅನ್ನು.ಶ. ೩-೧೪೦). ೧೦. ತೆರೆದುದು ; ತೆಗೆದುದು : ಹದಿಬದೆಯಾದವಳಿಗೆ ಸ್ವರ್ಗದ ದಾರಿ ಮುಕ್ತವಿದೆಯೆಂಬ ಮಾತೂ ಅಷ್ಟೇ ಪ್ರಚಲಿತವಿತ್ತು (ಕರ್ನಾಕ. ೧೯೩). ೧೧. ಬಿಡುಗಡೆಯನ್ನು ಹೊಂದಿದವನು ; ಪಾರಾದವನು : ತೀವ್ರವೇ ಸಿಂಗಪ್ಪನೂ ಅವನ ಮಕ್ಕಳೂ ವಿಪತ್ತಿನಿಂದ ಮುಕ್ತರಾದರು (ಮುಂಬಿದು. ೪-೭೮). ೧೨. [ತತ್ತ್ವಶಾ] (ಸಂಸಾರದ ಬಂಧನದಿಂದ) ಬಿಡುಗಡೆಯನ್ನು ಹೊಂದಿದವನು ; ಮೋಕ್ಷವನ್ನು ಪಡೆದವನು : ಮುಕ್ತಾವಳೀತಪಸ್ತಪನತಾಪದಿಂ ಸಮಾಧಿಮರಣದಿಂದೀಶಾನ ಕಲ್ಪದೊಳ್ ಕನಕಪ್ರಭನೆಂಬೊಂ ದೇವನಾಗಿ ಬಂದಿಲ್ಲಿ ಪುಟ್ಟಿ ಮುಕ್ತನಕ್ಕುಂ (ಶಾಂತಿಪು. ೯-೧೪ ವ) ; ಮುಕ್ತನಪ್ಪನು ಜೀವನುಂ ನಿರ್ಮುಕ್ತನಪ್ಪನು ಶಿವನು (ಬಸಪು. ೩೦-೨೮) ; ಭಕ್ತನೆಂದೆನಿಸಯ್ಯ ಎನ್ನ ಮುಕ್ತನೆಂದೆನಿಸಯ್ಯ ಎನ್ನ (ಅಲಂದೇ. ೭೮-೭೦). [ಸಂ.]

**ಮುಕ್ತಕ$_1$** (ನಾ). ೧. ಅರ್ಥದೃಷ್ಟಿಯಿಂದ ಸ್ವಯಂಪೂರ್ಣವಾದ ಬಿಡಿಪದ್ಯ, – ಬಿಡಿಕವನ : ಇದುಕಂಗಬ್ಬಂ ಮುಕ್ತಕಂ (ಕಾವ್ಯಾವ. ೯೩೦) ; ಮುಕ್ತಕ ಕುಳಕ ಮುಂತಾದ ಕವಿತ್ವದ ಯುಕ್ತಿಯೊಳರುಹನ ಪೊಗಳ್ದು ಮುಕ್ತಿಗಾವಿಗಳಾತ್ಮಕಲೆಯ ಭೇದಾಭೇದಭಕ್ತಿಯೊಳೊರೆವರು ಮತ್ತೆ (ಶರತ. ೭೪-೭೪) ; ನಾಲ್ಕಾರು ಪಂಕ್ತಿಗಳಲ್ಲಿ ಸುಂದರವಾದ ಭಾವಪ್ರಪಂಚ ವೊಂದನ್ನು ಸೃಷ್ಟಿಸಬಲ್ಲ ಕವನರೂಪ 'ಮುಕ್ತಕ' (ಭಾವಗೀ. ೯೪) ; ಈ ಕಾಲದ ಸಾಹಿತ್ಯ ಎರಡು ರೂಪಗಳಲ್ಲಿ ನಮಗೆ ದೊರೆಯುತ್ತದೆ. ಮೊದಲನೆಯದು ಮುಕ್ತಕ-ಅಂದರೆ ಬಿಡಿಕಾವ್ಯಗಳು : ಎರಡನೆಯದು ಪ್ರಬಂಧಗಳು (ಭಾರತ. ೯೩೭). ೨. ಸಮಾಸಪದಗಳಿಲ್ಲದ ಸರಳವಾದ ಗದ್ಯ : ಕೆಲವರು ಮುಕ್ತಕ, ವೃತ್ತಗಂಧಿ, ಉತ್ಕಲಿಕಾಪ್ರಾಯ, ಚೂರ್ಣಕ ಎಂದು ನಾಲ್ಕುಭಾಗ ಮಾಡಿ ಅವುಗಳಲ್ಲಿ ಮುಕ್ತಕವು ಸಮಾಸರಹಿತವಾದದ್ದೆಂದೂ ಚೂರ್ಣಕವು ಅಲ್ಪಸಮಾಸವೆಂದೂ ಹೇಳುತ್ತಾರೆ (ಕೈಪಿಡಿ. ೧೭೪ ಅಡಿಟಿ). [ಸಂ.]

**ಮುಕ್ತಕ$_2$** (ನಾ). ಮುತ್ತುಗದ ಮರ ಮತ್ತು ಅದರ ಹೂವು ; ಕಿಂಶುಕ ; ಪಲಾಶ : ರಕ್ತಾಶೋಕಲತಾಂತದ ಮುಕ್ತಕಮಂಜರಿಯ ಸೂಸಕಂ ತಿಳಕದ ಸಮ್ಯಕ್ತಿಲಕಮುಮ[ರೆ] ತನಗನುರಕ್ತಂ ಮಾಡಿದಳನೇಕ ಕಾಮುಕಜನಮಂ (ಶಾಂತಿಪು. ೯-೨೦); ಸ್ಥಿರದಿಂ ಕಾಮೇಶ್ವರಮಂತ್ರ ಮನುಚ್ಚರಿಸುವುದೊಂದೇ ಲಕ್ಷವನು ತರದಿಂ ಪಂಚಾಶಿರ ಮುಕ್ತದೊಳ್ಪರಳಿಂ [ಪಾಠಾಂ. ಭರದಿಂದೈಸಾಸಿರ ಮುತ್ತದ ಪೊಸ ಅರಳಿಂ] ಮಾಳ್ಪುದು ಹೋಮವನು (ಜನವ. ೦೩-೨೪) ; ಆ ವನಂ ಘನಾಗಮಮಂತೆ ಘನಕದಂಬ ಮುಕ್ತಕವಿಲಸಿತಮುಂ . . . ತತತಾಪಸಸಮುಚ್ಚಯಮಾಗಿಯುಮಶೋಕ ಸಂಗತಮೆನಿಸಿರ್ದುದು (ರಾಜಶೇ. ೩-೭೪ ವ). [𝐏 ಇದು 'ಕನ್ನಡದ 'ಮುತ್ತುಗ' ಎಂಬುದರ ಸಂಸ್ಕೃತೀಕರಣರೂಪವಿರಬಹುದು]

**ಮುಕ್ತಕಂಚುಕ** (ನಾ). ಪರೆಯನ್ನು ಕಳಚಿದ ಹಾವು ; ಪರೆಬಿಟ್ಟ ಹಾವು : "ನಿರ್ಮುಕ್ತಃ, ಮುಕ್ತಕಂಚುಕಃ – ೨ ಪೊರೆ ಬಿಟ್ಟ ಹಾವಿನ ಹೆಸರು" (ಸಿದ್ಧಾಂತಿ. ೭೨). [ಸಂ.]

**ಮುಕ್ತಕಂಠ** (ನಾ). ಸಂಕೋಚವಿಲ್ಲದೆ ನೇರವಾಗಿ ಹೇಳುವ ಮಾತು ; ಬಿಚ್ಚುಮಾತು : ಆನಂದವರ್ಧನನ ಕಾಲದಲ್ಲಿ ಪ್ರಾಕೃತಕಾವ್ಯಕ್ಕೆ ಇನ್ನೂ ಹೆಚ್ಚಾದ ಮನ್ನಣೆಯಿತ್ತು . . . ಅದನ್ನು ಅವನು ಮುಕ್ತಕಂಠದಿಂದ ಹೇಳಿದ್ದಾನೆ (ಧ್ವನ್ಯಾಲೋ. XI, ಮುನ್ನುಡಿ) ; ಪುಣ್ಯಶಾಲಿಗಳು ಮುಕ್ತಕಂಠದಿಂದ ಹಾಡಿ ಲೋಕಕ್ಕೆಲ್ಲ ತಮ್ಮ ಸಂತೋಷವನ್ನು ಹಂಚುತ್ತಾರೆ (ಗಾಳಿಪ. ೯೨). [ಸಂ.]

**ಮುಕ್ತಕಾಲ** (ನಾ). ಪ್ರಾಪಂಚಿಕಬಂಧನದಿಂದ ಬಿಡುಗಡೆ ಹೊಂದಿದ ಕಾಲ ; ಮರಣವನ್ನು ಹೊಂದಿದ ಸಮಯ : ಅರಿಷ್ಟನೇಮಿದೇವರ್ ಬಾಚ್ಚಿಪ್ಪತೀರ್ತ್ಥದೊಳು ಮುಕ್ತಕಾಲಮು ಪಡೆದು (ಎಕ II, ೧೪-೨ ; ಕ್ರಿ. ೮೦೦). [ಸಂ.]

**ಮುಕ್ತಕೇಶ** (ನಾ). ಬಿಚ್ಚಿದ ತಲೆಗೂದಲು : ಸಮರತಸೌಖ್ಯದೊಳ್ ಸತಿ ದಿಗಂಬರವೇಷಮನಾಂತು ಮುಕ್ತಕೇಶಮುದೆಸೆಯಲ್ಕೆ ಕಣ್ ದರನಿಮೀಲಿತ ಮಾಗೆ . . . ತನ್ನಸೋರಮಣನ ಪ್ರನ್ನಿಧಾನಮನುಪಾರ್ಜಿಪ ಯೋಗಿನಿ ಯಂತಿರೊಪ್ಪಿದಳ್ (ಕಾವ್ಯಸಾ. ೭೭೩). [ಸಂ.]

**ಮುಕ್ತಕೇಶಿ** (ನಾ). ೧. ತಲೆಗೂದಲನ್ನು ಬಿಚ್ಚಿಕೊಂಡಿರುವ ವ್ಯಕ್ತಿ : ಎನಿತುಂ ದ್ರೌಪದಿ ಮುಕ್ತಕೇಶಿ ನಮೆವಳ್ ತದ್ದುಃಖಮಂ ಕಂಡು ಕಂಡೆ ನಿತುಂ ಸೈರಿಪೆನಾನುಮೆನ್ನನುಜರುಂ (ಗದಾಯು. ೭-೨೪) ; ಒರ್ವಂ ದ್ವಿಜಂ ಮುಕ್ತಕೇಶಿ ಜಟಿ ರಕ್ತಂ . . . ಕೊಂದಾಟಮಂ ಧೂಮಮಂ ನಿಪುಣರ್ ಕಂಡರೆ ಪೋಗರ್ಪೈ (ಸೋಮೇಶ. ೭೮). ೨. ಮರುಳು ; ಪಿಶಾಚಿ : ಕಪಾಲಪಾತ್ರೆಯನರೆನೆಗಹಿ ಕೊಂಕಿನಲಿ ಕುಡಿದರು ಮುಕ್ತಕೇಶಿಯರು (ಕುಮಾರರಾ. ೩-೩೨). ೩. ಒಬ್ಬ ಶಕ್ತಿದೇವತೆಯ ಹೆಸರು : ರತಿ ಮುಕ್ತಕೇಶಿ ಶವವಾಹಿನಿ ಮೋಹಿನಿ ಚಂಡಿ . . . ಮಾಲಿನಿಯೆಂಬ ಶಕ್ತಿಯರ್ (ಕಬಿಶಂ. ೩-೦೨). [ಸಂ. ಮುಕ್ತಕೇಶಿನ್]

**ಮುಕ್ತಛಂದ** (ನಾ). [ಛಂದ] ಛಂದಸ್ಸಿನ ಕಟ್ಟುಪಾಡುಗಳಿಂದ ಮುಕ್ತವಾದ ಕಾವ್ಯರಚನಾಬಂಧ ; ಛಂದಸ್ಸಿನ ಕಟ್ಟಿಗೆ ಒಳಪಡದ ಪದ್ಯ ರಚನೆ : 𝐏 'ಸ್ವಚ್ಛಂದಛಂದ' ಎಂದು ಮೊದಲು ನಾಮಕರಣಗೊಂಡ ಪದ್ಯಸ್ವರೂಪವೇ ಈಗ 'ಮುಕ್ತಛಂದಸ್ಸು' ಎಂಬ ಹೆಸರಿನಲ್ಲಿ ಪ್ರಚಾರದಲ್ಲಿದೆ. ಇದು ಫ್ರೆಂಚ್‌ಭಾಷೆಯ 'Verse Libre' ಅಥವಾ ಇಂಗ್ಲಿಷಿನ 'Free Verse' ಎಂಬ ಶಬ್ದಪುಂಜಗಳ ಕನ್ನಡ ಅನುವಾದ : ಮುಕ್ತಛಂದ—ಎಂದರೆ, ಕನ್ನಡದ ಸರಳ ರಗಳೆಯನ್ನು ಹೋಲುವ ಛಂದ (ಭಾರತ. ೯೭೦) ; ವಚನಸಾಹಿತ್ಯದಲ್ಲಿ ಈ ಮುಕ್ತಛಂದದ ಅಂದಚೆಂದಗಳೆಲ್ಲ ಪ್ರಯೋಗವಾಗಿವೆ (ಛಂದೋಬಿ. ೨೩೦) ; ಭಾವಗೀತಾತ್ಮಕವಾದ ಮುಕ್ತಛಂದದ ಮುಕ್ತಕಗಳು ಈ ವಚನಗಳು (ಶಂಶೀ. ೯೪). [ಸಂ. ಮುಕ್ತಛಂದಸ್]

**ಮುಕ್ತಛಂದಸ್ಸು** (ನಾ). = ಮುಕ್ತಛಂದ : ಹಿಂದಿಸಾಹಿತ್ಯದಲ್ಲಿ ಮುಕ್ತಛಂದಸ್ಸಿನಲ್ಲಿ ಕಾವ್ಯರಚನೆ ಮಾಡಿದ ಮೊದಲನೇ ಕವಿ ನಿರಾಲ (ಶಾಕದ. ೯೭೦); ಮುಕ್ತ ಛಂದಸ್ಸು : ಕನ್ನಡ ನಾಡಿನಲ್ಲಿ ಭಕ್ತಿಗೆ ಬಂದ ಹೊಸ ಉಕ್ಕಿನೊಡನೆ ಈ ಬಂಧಗಳು ಹೀಗೆ ಏರಿ ಬಂದುವು (ಛಂದೋವಿ. ೨೩೦). [ಸಂ. ಮುಕ್ತಛಂದಸ್]

**ಮುಕ್ತಜಾನು** (ನಾ). [ನಾಟ್ಯ] ನೃತ್ಯದಲ್ಲಿ ಕುಳಿತುಕೊಳ್ಳುವ ಒಂದು ಭಂಗಿ ; 𝐏 "ಉತ್ಕಟಸ್ಥಾನಕದಲ್ಲಿ ಒಂದು ಮೊಳಕಾಲನ್ನು ಮಾತ್ರ ನೆಲದ ಮೇಲಿಡುವುದು. ಹೆಂಗಸರನ್ನು ಒಲಿಸುವುದು, ಹವನ, ಸಜ್ಜನರನ್ನು ಸಂತೈಸುವುದು ಇವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಶಾಸ್ತ್ರರಂ. ೩೩೨ ಗದ್ಯಾನುವಾದ) : ಸ್ವಸ್ಥ, ಮಂದಾಲಸ, ಕ್ರಾಂತ, ವಿಷ್ಕಂಭಿತ, ಉತ್ಕಟ, ತ್ರಸ್ತಾಲಸ, ಜಾನುಗತ, ಮುಕ್ತಜಾನು, ವಿಮುಕ್ತ ಈ ಒಂಬತ್ತು ಕುಳ್ಳಿರ್ದ ಸ್ಥಾನಕಂಗಳ್ (ಶಾಸ್ತ್ರರಂ. ೭-೦೨ ವ) ; ಉತ್ಕಟ ಮಳವಟ್ಟ ಜಾನುವೊಂದುಮುದಿಳೆಯೊಳಗೊಂದಲ್ಕೆ ಮುಕ್ತಜಾನುವೆನಿಕ್ಕುಂ (ಶಾಸ್ತ್ರರಂ. ೭-೩೮). [ಸಂ.]

**ಮುಕ್ತದ್ವಾರ** (ನಾ). ೧. ಎಲ್ಲರಿಗೂ ಪ್ರವೇಶವಿರುವ ಬಾಗಿಲು ; ತೆರೆದ ಬಾಗಿಲು : ಮಾಮಾನ ಮನೆ ಎಲ್ಲರಿಗೂ ಮುಕ್ತದ್ವಾರ. ಅದರಿಂದ ಅವರಲ್ಲಿ ಸದಾ ಜನಸಂದಣಿ (ಸ್ವಪ್ನ. ೩೦). ೨. (ಅಲಂ) ಪೂರ್ಣ ಸ್ವಾತಂತ್ರ್ಯ : ನಿನಗೆ ಮುಕ್ತದ್ವಾರವಿದೆ (ಜಯುಂತ. ೪೩೭). ೩. ಎಲ್ಲರಿಗೂ ಇರುವ ಅವಕಾಶ : ವಿಚಾರಗೋಷ್ಠಿಯಲ್ಲಿ ಭಾಗವಹಿಸಲು ಸರ್ವರಿಗೂ ಮುಕ್ತದ್ವಾರವಿದೆ (ರೂಢಿ). [ಸಂ.]

**ಮುಕ್ತಮನ** (ನಾ). ಪೂರ್ವಗ್ರಹವಿಲ್ಲದ ಮನಸ್ಸು ; ತೆರೆದ ಮನಸ್ಸು : ದೇಶಸ್ಥರ ಮುಕ್ತಮನವು ಉದಾರಪೂರ್ಣವಾದದ್ದು (ಸ್ವ್ಯತಿಶ. ೨೬೦). [ಸಂ. ಮುಕ್ತಮನಸ್]

**ಮುಕ್ತಹಸ್ತ** (ನಾ). ೧. ಧಾರಾಳವಾಗಿ ನೀಡುವ ಕೈ ; ಕೊಡುಗೈ : ಕೃಷ್ಣಪ್ಪನವರದು ಮುಕ್ತಹಸ್ತ (ಅನಾಬಿ. ೨). ೨. ನೀಡಿದ ಕೈಯುಳ್ಳವನು : ಮೋಹಿನಿಯ ಪಾರ್ಶ್ವಗಳಲ್ಲಿ ಮುಕ್ತಹಸ್ತನಾದ ಗರುಡ ಮತ್ತು ಚಾಮರಧಾರಿಣಿಯರಿರುವರು (ಹೊಯ್ಸಳ. ೩೪). ೩. ಧಾರಾಳವಾಗಿ ನೀಡುವವನು ; ಕೊಡುಗೈಯವನು ; ಉದಾರಿ : ಶೌರ್ಯಮಿರೆ ಕೃಪಣವಿಧಿ ಮುಕ್ತಹಸ್ತಂ (ಶ್ರೀರಾಮಾ. ೬೨-೧೦೩). [ಸಂ.]

**ಮುಕ್ತಾಗುಣ** (ನಾ). ೧. ಮುತ್ತಿನ ಹಾರ : ಮೌಕ್ತಿಕದ ಸರ : "ತಾರಂ ಮುಕ್ತಾಗುಣಕಂ ಪರ್ಯಾಯಂ" (ಪಸ್ತುಕೋ. ೦೩೯-೦೨೩). ೨. ಮುತ್ತಿನ ಶ್ರೇಷ್ಠತೆ. ೩. ಮುತ್ತಿನ ಕಾಂತಿ. [ಸಂ.]

**ಮುಕ್ತಾಜಾಲ** (ನಾ). ಮುತ್ತುಗಳ ಸಮೂಹ : ಜೋಳವನುರು ಮುಕ್ತಾಜಾಳವಾಗಿಸಿ ಜಂಗಮಮಾಳಿಗಿತ್ತನು ಬಸವೇಶ (ಭೈರವೇ. ೨-೨೦೦). [ಸಂ. ಮುಕ್ತಾಜಾಲ]

**ಮುಕ್ತಾತ್ಮ** (ನಾ). ಸಂಸಾರಬಂಧನದಿಂದ ಬಿಡುಗಡೆಯನ್ನು ಹೊಂದಿದ ಆತ್ಮ ; ಮುಕ್ತಿಯನ್ನು ಪಡೆದ ಆತ್ಮ : ಕರ್ಮದಿಂದ ಸಂಪೂರ್ಣವಾಗಿ ಬಿಡುಗಡೆಹೊಂದಿದ ಆತ್ಮನು ಪುನಃ ಕರ್ಮದೊಂದಿಗೆ ಸೇರುವುದಿಲ್ಲ. ಇವಕ್ಕೇ ಮುಕ್ತಿಯೆಂದು ಹೆಸರು. ಈ ಮುಕ್ತಾತ್ಮನೇ ದೇವರು (ಭಾರದ. ೦೩೭). [ಸಂ. ಮುಕ್ತಾತ್ಮನ್]

**ಮುಕ್ತಾದಾಮ** (ನಾ). ಮುತ್ತಿನ ಹಾರ; ಮೌಕ್ತಿಕದ ಸರ : ಅನೂನ ಮರಕತರತ್ನಭಿತ್ತಿವಿಭ್ರಾಜದೊಳಾಲಂಬಮಾನಮುಕ್ತಾದಾಮಲಂಬೂಷಭೂಷಿತದೊಳ್ (ಸುಕುಮಾ. ೯-೦೭ ವ). [ಸಂ. ಮುಕ್ತಾದಾಮನ್]

**ಮುಕ್ತಾಧಾರ** (ನಾ). ೧. ಆಧಾರವಿಲ್ಲದಿರುವಿಕೆ; ಆಶ್ರಯವಿಲ್ಲದಿರುವಿಕೆ. ೨. ಮುತ್ತುಗಳಿಗೆ ಆಶ್ರಯವಾಗಿರುವುದು,– ಆಧಾರವಾಗಿರುವುದು. ೧, ೨ : ಆ ಮಹಾರ್ಣವಂ . . . ಮುಕ್ತಾಧಾರಮಾಗಿಯುಮನಂತಾಧಾರಮುಂ . . . ಚತುರ್ಮುಖನಂತೆ ಸರಸ್ವತೀಪತಿಯುಮೆನಿಸಿದುದು (ಜಗನ್. ೦-೪೪ ವ). [ಸಂ. (ಮುಕ್ತ + ಆಧಾರ; ಮುಕ್ತಾ + ಆಧಾರ)]

**ಮುಕ್ತಾಫಲ, ಮುಕ್ತಾಫಳ** (ನಾ). ೧. ಮುತ್ತು; ಮೌಕ್ತಿಕ:ಕರಿಮಕರಂಗಳ ಕಯ್ಯೊಳೀಜಿನೊಳ್ ಬಿಬ್ಬಿಜಾಬಿಜಾದೊಡೆವ ಶುಕ್ತಿಪುಟೋದರಂಗಳೊಳಗಣಿಂದ ಮುಚ್ಚಳಿಸಿದ ತಾರಾತರಲಮುಕ್ತಾಫಲಂಗಳುಮನಟ್ಟಿಪಟ್ಟು ನೋಡುತ್ತುಂ ಪೋಗೆಪೋಗೆ (ಆದಿಪು. ೦೨-೭೯ ವ); ನಯನಂ ನೀಳಸರೋಜಭಾಸಿ ರದನಂ ಮುಕ್ತಾಫಳ[ಶಾಕಾಂ.ಳ]ಸ್ಪರ್ಧಿ . . . ಸುರೂಪಾಶ್ಚರ್ಯಮಾ ಕನ್ನೆಯಾ (ಸುಕುಮಾ. ೩-೩೩); ಬೇಜಿಹ್ ಬೇಟಪರವರ್ಗೆ ಪ್ರತ್ಯೇಕವೊಂದೊಂದು ಬಳ್ಳ ಮುಕ್ತಾಫಲವಂ . . . ಒಂದು ಭಾರ ಪೊನ್ನಂ ಕುಡುವುದು (ಕೃಬಿಪಾ. ೨-೨೭). ೨. (ಆಲಂ) ಬಯ್ಗುಳು; ಕೆಟ್ಟಮಾತು : ಅತ್ತೆಯೂ ಬಹಳ ಸಂತಾಪಗೊಂಡಿದ್ದಳು. ಅವಳ ಬಾಯಿಂದ ಒಂದೇ ಸಮನೆ ಮುಕ್ತಾಫಲಗಳು ಉದುರುತ್ತಲೇ ಇದ್ದವು (ಸ್ವ್ಯತಿಶ. ೨೪). **ಮುಕ್ತಾಫಳ** : ೧. ಮೂಕಾಂಬಿಕಾ ಭಕ್ತಿಜನಿತಮುಕ್ತಾಫಳ ಲಕ್ಷ್ಮಾದೇವೀಮನಸ್ಸರೋವರರಾಜಹಂಸನಾಮಾದಿ ಸಮಸ್ತಪ್ರಶಸ್ತಿಸಹಿತಂ (ಎಕ. ಇ. XX, ೦೦೩-೬; 1146); ಕುಂಭಿಕುಂಭನೀಧರ ಶುಂಭತ್ಕುಂಭತಟಗಳಿತ ವಿಪುಳವಿಮಳಮುಕ್ತಾಫಳಾವಳೀಪರಿಷ್ಕೃತಮಹಿತ ಮಹಾಮಾಹಿಮಾನೀಕನುಂ (ರಾಜಶೇ. ೩-೧ ವ). [ಸಂ.]

**ಮುಕ್ತಾಫಳ** 'ಮುಕ್ತಾಫಲ' ನೋ.

**ಮುಕ್ತಾಭರಣ** (ನಾ). ೧. ಆಭರಣಗಳನ್ನು ಕಳಚಿದವನು; ನಿರಾಭರಣನಾದವನು : ವಿರಹಿಯಂತೆ ಮುಕ್ತಾಭರಣನುಂ . . . ಶಿಶಿರಸಮಯದೇಶಾರೂಢತಪಸಿಮಾಗಲೊಡಂ (ಶಂಪ್ರಪು. ೯-೪೦ ವ). ೨. ಮುತ್ತಿನ ಆಭರಣ, – ಒಡವೆ : ಧೃತಮುಕ್ತಾಭರಣಂ ಪಯಃಕಣಗಣಂ . . . ಮಲ್ಲಿಕಾಸ್ಮಿತದಾಮಂ ತರಿಮಾಲಿಯಾಗೆ ವಿಮಳಕ್ಷೀರಾರ್ಣವಶ್ರೀಯುನಾ ಶತಪತ್ರಾನನೆ ಪೋಲ್ತು ಬೆಳ್ಪಸದನಂಗೊಂಡೇರಿ ಮನಂಗೊಂಡಳೋ (ಶಂಪ್ರಪು. ೯-೪೪); ಧನಕನಕ ದೇವಾಂಬರಾದಿಮುಕ್ತಾಭರಣಪೂರಿವೀಟಿಕಾದಿಗಳನಿತ್ತು . . . ಬೀಳ್ಕೊಡಲು (ಶಾಪಶಂ. ೩-೩೦). [ಸಂ. (ಮುಕ್ತ + ಆಭರಣ ; ಮುಕ್ತಾ + ಆಭರಣ)]

**ಮುಕ್ತಾಮಾಳಿಕೆ** (ನಾ). ಮುತ್ತಿನ ಮಾಲೆ, – ಹಾರ : ತೋರಣಗ್ರಥನ ಮುಕ್ತಾಮಾಳಿಕಾಳಂಬನ ವ್ಯಸನವ್ಯಗ್ರಕರಂ ಕರಂ ಸೊಗಯಿಸಿತ್ತಂತಲ್ಲಿ ಕಾಂತಾಜನಂ (ಶಂಪ್ರಪು. ೬-೩೩). [ಸಂ. ಮುಕ್ತಾಮಾಲಿಕಾ]

**ಮುಕ್ತಾಮುಕ್ತ** (ನಾ). ಕೈಯಲ್ಲಿ ಹಿಡಿದು ಎಸೆದು ಪ್ರಯೋಗಿಸುವ ಈಟಿ ಮುಂತಾದ ಆಯುಧ : "ಶಕ್ತಿ ಮೊದಲಾಗೆ ಪಾಣಿವಿಮುಕ್ತಂ ಛುರಿಕಾದಿ ತಾನಮುಕ್ತಂ ಯಂತ್ರೋನ್ಮುಕ್ತಂ ಶರಾದಿ ಮುಕ್ತಾಮುಕ್ತಂ ಯಷ್ಟ್ಯಾದಿಕಂ ತದಸ್ತ್ರಾಂತರದೊಳ್" (ಪಸ್ತುಕೋ. ೬೪-೦೪); ಕರಮುಕ್ತವಾ ಯಂತ್ರಮುಕ್ತ ಮುಕ್ತಾಮುಕ್ತ ಉರುತರದ ಮೂದೆಜದ ಕೈದುಕಾಜಿರು ಸಿಂಗವಜಿಗಳೆನೆ ಕಡುಕೆಯಿದು ಹೂಡಿಸಿ ಪಚಾರಿಸುತೆ (ಶಾಳ್ಮಭಾ. ೨೩-೦೪); ಕರಮುಕ್ತ ಯಂತ್ರಮುಕ್ತ ಮುಕ್ತಾಮುಕ್ತ ವಿಮುಕ್ತವೆಂಬ ಪಲವು ತೆರದ ಕೈದುಗಳಿಂ (ಧರ್ಮಾಮೃ. ೦-೦೬). [ಸಂ.]

**ಮುಕ್ತಾಯ** 'ಮುಗಿತಾಯ' ನೋ.

**ಮುಕ್ತಾಯಗೊಳಿಸು** (ಕ್ರಿ). ಮುಗಿಸು ; ಪೂರೈಸು : ಗಾಯಕ ಅಥವಾ ಪ್ರಧಾನವಾದಕ ಕಚೇರಿಯ ಕಡೆಯಲ್ಲಿ ಮಂಗಳ ಹಾಡಿ, ಮಧ್ಯಮಾವತಿ ರಾಗಾಲಾಪನೆಯಿಂದ ಕಚೇರಿ ಮುಕ್ತಾಯಗೊಳಿಸುವುದು ಹಿಂದಿನಿಂದ ಬಂದ ಸಂಪ್ರದಾಯ (ಸಂಗೀತಂ. ೦೦೦).

[ಮುಕ್ತಾಯ (< ಮುಗಿತಾಯ) + ಕೊಳ್$_1$ + — ಇಸು$_3$]

**ಮುಕ್ತಾಯಗೊಳ್ಳು** (ಕ್ರಿ). ಮುಗಿ ; ಕೊನೆಗೊಳ್ಳು ; ಮೂಲನೊಳಂಬ ರಾಜವಂಶದ ಸಂತತಿ . . . ಕ್ರಿ. ಶ. ೧೦ನೆಯಶಳರಲ್ಲಿ ಮುಕ್ತಾಯಗೊಂಡಿತೆಂದು ಹೇಳಬಹುದು (ಪೊಳಂ. ೩೬); ನೆಕ್ಕಿದೋವನ ಮನೋರಥ ನಿರೀಕ್ಷೆಗಳ ಗನುಗುಣವಾಗಿಯೆ ವ್ಯವಹಾರ ಮುಕ್ತಾಯಗೊಂಡಿತ್ತು (ಭೃಪಮ. ೨೬೦).

[ಮುಕ್ತಾಯ (< ಮುಗಿತಾಯ) + ಕೊಳ್ಳು$_1$ (< ಕೊಳ್$_1$)]

**ಮುಕ್ತಾಲಿ, ಮುಕ್ತಾಳಿ** (ನಾ). ೧. ದುಂಬಿಗಳಿಂದ ಬಿಡುಗಡೆಯನ್ನು ಹೊಂದಿದುದು. ೨. ಮುತ್ತುಗಳಿಂದ ಮಾಡಿದ ಮಾಲೆ,—ಹಾರ. ೧, ೨ : ಆ ಮಂಟಪಂ . . . ಸಮಧುರವಿತತಚಾಪ್ಯೋಪಲಸಿತಮಾಗಿಯುಂ ಮುಕ್ತಾಲಿ [ಶಾಕಾಂ. ಳಿ] ವಿತಾನಮುಂ ಶಿವಪ್ರಭಾವಾಶ್ರಿತಮಾಗಿಯುಮುತನು ವಿಳಾಸಾಸ್ಪದಮೆನಿಸಿರ್ದುದು (ರಾಜಶೇ. ೬-೬ ವ). **ಮುಕ್ತಾಳಿ** : ೨. ಜಗಮೆಲ್ಲಂ . . . ಮುಕ್ತಾಳಿಯುಂ ತೊಟ್ಟುದೋ . . . ಎಂಬಿಂತದೇಂ ಪರ್ವಿದುದೊ ನೃಪನತಿಸ್ಫೂರ್ತಿಕೀರ್ತಿಪ್ರತಾನಂ (ಭರತಪು. ೩-೦೪); ಆಗಿನ ಅವರ ಆಭರಣಗಳೆಂದರೆ ಅಂಗುಟಿಕೆ ವೀರಮುದ್ರೆ, ಹೊನ್ನ ಕಾಲುಂಗರ . . . ಮುಕ್ತಾಳಿ, ರತ್ನಪದಕ . . . ಚೆಲುವನ್ನು ಹೆಚ್ಚಿಸಿ ತೋರಿಸುವಂತಹವು (ಕರ್ನಾಜ. ೦೩೨). [ಸಂ. (ಮುಕ್ತ + ಆಲಿ ; ಮುಕ್ತಾ + ಆಲಿ)]

**ಮುಕ್ತಾವಲಿ, ಮುಕ್ತಾವಳಿ** (ನಾ). ೧. ಮುತ್ತಿನ ಹಾರ, – ಸರ. **ಮುಕ್ತಾವಳಿ** : ೧. "ಹಾರಃ ಮುಕ್ತಾವಳೀ . . . ೨ ಮುತ್ತಿನ ದಂಡೆಗಳ ಹೆಸರುಗಳು" (ಒದ್ದಾಂಶ. ೨೦೦); ಕದಡುವ ಸುಣ್ಣೆಳಗಿಂ ಮುಕ್ತಾವಳಿ ಕಣ್ಗೊಳಿಸಿಮುದಂ ಗಜಪತಾಕೆಯಂದದಿನುರದೊಳ್ (ಕಾದಂಪೂ. ೬೩೩). ೨. [ಜೈನ] ಒಂದು ಬಗೆಯ ವ್ರತ : ತನ್ನ ಭವಸಂಬಂಧಮಂ ಕೇಳ್ದು ಮುಕ್ತಾವಳಿಯಂ ನೋಂತು . . . ಲಕ್ಷ್ಮಣೆಯೆಂಬೊಳಾಗೆ (ಶಾಪುಂಪು. ೩೪೪); ಮುಕ್ತಾವಳಿಯೆಂಬ ವ್ರತವಂ ಮಾಡಿ ಆಯುರಾಂತ್ಯದೊಳ್ ಮೋಕ್ಷಮನೈದಿದನು (ಧರುಕ. ೩೦). [ಸಂ.]

**ಮುಕ್ತಾವಳಿ** 'ಮುಕ್ತಾವಲಿ' ನೋ.

**ಮುಕ್ತಾವಳೀತಪ** (ನಾ). = ಮುಕ್ತಾವಲಿ ೨: ವಾಸವನುಂ ಮಹೀಧರಂಗೆ ವಿದ್ಯಾಧರ ವಿಭೂತಿಯುಂ ಕೊಟ್ಟರಿಂಜಯಾಖ್ಯಮುನಿಮುಖ್ಯನಿಕಟದೊಳ್ ಮುಕ್ತಾವಳೀತಪಮಂ ಕೈಕೊಂಡು ಗೆಲ್ಲಂಗೊಂಡಂ (ಅರಿತ್ತಿ. ೩-೫೮ ವ); ವಾಸವಂ ಮಹೀಧರಂಗೆ ವಿದ್ಯಾಧರಶ್ರೀಯುಂ ಕೊಟ್ಟರಿಂಜಯಮುನಿಪತಿಗಳ ಪಕ್ಕದೆ ಮುಕ್ತಾವಳೀತಪಮಂ ಕೈಕೊಂಡು ಗೆಲ್ಲಂಗೊಂಡಂ (ಕಾಪುಂತ್ತಿ. ೨೦). [ಸಂ. ಮುಕ್ತಾವಲೀತಪ]

**ಮುಕ್ತಾಸಾರ** (ನಾ). ಶ್ರೇಷ್ಠವಾದ ಮುತ್ತು : ಸಾರತರ ಕಾವ್ಯ ಪರ್ಣಿಯ ವಾರಿಯೊಳೆಳೆದಳಸಿ ಬಳೆದ ಶುಕ್ತಿಯ ಮುಕ್ತಾಸಾರಮನೀವ ಪಯೋನಿಧಿ ತೀರದ ನೃಪರಾತ್ಮಯಶಮನೀವಂತಾವರ್ (ಶಾಂತಿಪು. ೧೧-೧೩). [ಸಂ.]

**ಮುಕ್ತಾಸ್ಫೋಟ** (ನಾ). ಮುತ್ತಿನ ಚಿಪ್ಪು; ಶುಕ್ತಿ : "ಮುಕ್ತಾಸ್ಫೋಟಂ ಶುಕ್ತಿ ಶಂಬೂಕಮಂಭಶ್ಶುಕ್ತಿಪ್ರಖ್ಯಂ" (ಪದ್ಯಕೋ. ೨೩-೯). [ಸಂ.]

**ಮುಕ್ತಾಸ್ರಜ** (ನಾ). ಮುತ್ತಿನ ಸರ, —ಹಾರ : ನಿಜಪತಿಯಭಿಧಾನಮನೀ ದ್ವಿಜನಾಂತುದು ಮಣಿದೆಂದು ಹಂಸಂಗಾನೀ ರಜನಿ ಪಡೆದಿತ್ತ ಮುಕ್ತಾ ಸ್ರಜಮೆನೆ ತತ್ತನುವೊಳಿಡಿದ ಜಳಕಣಮೆಸೆಗುಂ (ರಾಜಶೇ. ೨-೬೩). [ಸಂ. ಮುಕ್ತಾಸ್ರಜ್]

**ಮುಕ್ತಾಹಾರ** (ನಾ). ೧. = ಮುಕ್ತಾಸ್ರಜ : ಬಾಹ್ಯವಿಕೃತಿಯ ಮಧ್ಯ ಮಂಥರೆಯ ಹೃದಯದಲಿ ಸುಪ್ತವಾಗಿರ್ದ ರತಿ, ಚಿಲುಮೊಲವುಗಳ ಚಿಲುಮೆ ತಾಂ ಕಣ್ದೆರೆದುದೊಮ್ಮನೆಯ ಮುಕ್ತ ಮುಕ್ತಾಹಾರಧಾರೆಯಲಿ (ಶ್ರೀರಾಮಾ. ೨೩-೬೨೩). ೨. ಆಹಾರವನ್ನು ತ್ಯಜಿಸುವುದು; ಅನಶನ; ನಿರಾಹಾರ. ೧, ೨ : ಬಿಡದೆ ಮುಕ್ತಾಹಾರದಿಂದೆ ಸಮರೂಪದಿಂ ದೃಢತವೆತ್ತೂರ್ಧ್ವ ಮುಖಮಾಗಿ ಕರ್ಕಶವೃತ್ತದೊಡಗೂಡಿ ಕುಚಯುಗಂ ಮೆಱೆದುದು ಕಠೋರತಪದಿಂದೆಸೆವ ಯೋಗಿಯಂತೆ (ಕೈವಾ. ೩೦-೧೨). [ಸಂ. (ಮುಕ್ತಾ + ಹಾರ ; ಮುಕ್ತ + ಆಹಾರ)]

**ಮುಕ್ತಾಳಿ** 'ಮುಕ್ತಾಲಿ' ನೋ.

**ಮುಕ್ತಿ** (ನಾ). ೧. ಬಿಡುಗಡೆ; ವಿಮೋಚನೆ; ಸ್ವಾತಂತ್ರ್ಯ. ೨. ಬಿಡುಗಡೆಯನ್ನು ಹೊಂದುವಿಕೆ; ಸ್ವತಂತ್ರವಾಗುವಿಕೆ. ೩. ಬಿಟ್ಟುಬಿಡುವಿಕೆ : ತ್ಯಜಿಸುವಿಕೆ. ೪. ಎಸೆಯುವಿಕೆ. ೫. ಬಿಡುಗಡೆ ಮಾಡುವುದು : ಬಂಧಮುಕ್ತಗೊಳಿಸುವುದು. ೬. ಬಿಚ್ಚುವಿಕೆ ; ಕಳಚುವಿಕೆ. ೭. (ಸಾಲದಂತೆ) ತೀರಿಸುವುದು; ಸಲ್ಲಿಸುವುದು. ೮. ಆತ್ಮವು ಹುಟ್ಟು, ಸಾವುಗಳ ಬಂಧನದಿಂದ ಕಳಚಿಕೊಳ್ಳುವುದು; ಮೋಕ್ಷ; ಕೈವಲ್ಯ : "ಕೈವಲ್ಯಂ. ನಿರ್ವಾಣಂ. . . ಮುಕ್ತಿಃ, ಮೋಕ್ಷಃ, ಮಹಾನಂದಃ—ಈ ೧೧ ಮೋಕ್ಷದ ಪೆಸರ್" (ಹಲಾಯು. ೨೦–೧೨೪); ಅನಾದಿಬಂಧನಬದ್ಧದ್ರವ್ಯಭಾವಕರ್ಮವಿಗಮದಿನನಂತಜ್ಞಾನಾದಿ ನಿಜರೂಪಮಂ ಪಡೆವುದು ಮುಕ್ತಿ (ಅದಿಪು. ೧೧-೬೩ ವ); ಒಲಿದೊಮ್ಮೆ ಶಿವ ಶರಣೆನ್ನಿರಯ್ಯಾ ಒಂದು ನೊಲ್ಲಿಂಗೆ ಮುಕ್ತಿಸಿದ್ಧಿ (ಬಸವ. ೧೫೦). [ಸಂ.]

**ಮುಕ್ತಿಕಲ್ಲು** (ನಾ). ಬಾವಿಯಲ್ಲಿ ಮತ ಹಾಕುವುದಕ್ಕೆ ಆಧಾರವಾದ ಉದ್ದನೆಯ ಕಲ್ಲು; ಈ ಕಲ್ಲನ್ನು ಹಾಕಿಸುವುದರಿಂದ ಬಾವಿಯ ಕೆಲಸ ಮುಕ್ತಾಯವಾಗುವುದರಿಂದ ಈ ಹೆಸರು ಬಂದಿದೆ : ಬಾವಿಗೆ ಮುಕ್ತಿಕಲ್ಲು ಹಾಕಿಸಬೇಕಾಗಿದೆ (ಬಳಕೆ). [< ಮುಗಿತ+ಕಲ್ಲು (< ಕಲ್)]

**ಮುಕ್ತಿಗಾಮಿ** (ನಾ). ಮೋಕ್ಷಮಾರ್ಗದ ಅಭಿಮುಖನಾಗಿರುವವನು : ಮುಕ್ತಕ ಕುಳಕ! ಮುಂತಾದ ಕವಿತ್ವದ ಯುಕ್ತಿಯೊಳರುಹನ ಪೊಗಳ್ದು ಮುಕ್ತಿಗಾಮಿಗಳಾತ್ಮಕಲೆಯ ಭೇದಾಭೇದಭಕ್ತಿಯೊಳೊರೆದರು ಮತ್ತ (ಭರತ. ೬೪-೭೪). [ಸಂ. ಮುಕ್ತಿಗಾಮಿನ್]

**ಮುಕ್ತಿಗೇಡಿ** (ನಾ). ಪರಮಪದವಿಯೆನ್ನು ಕೆಡಿಸಿಕೊಳ್ಳುವವನು : ಭಕ್ತಿಯ ಸ್ಥಳಕುಳವನಱಿಯದೆ ಬಱಿದೆ ಭಕ್ತರೆನಿಸಿಕೊಂಬ ಮುಕ್ತಿಗೇಡಿಗಳನೇನೆಂಬೆನಯ್ಯ (ಅಪ್ರಸಿ. ೭೪-೯೯). [ಮುಕ್ತಿ + ಕೇಡಿ$_1$]

**ಮುಕ್ತಿದಾಯಕ** (ನಾ). ಮೋಕ್ಷವನ್ನು ಕೊಡುವವನು: ಪರಮಾತ್ಮ : ಮುಕ್ತಿದಾಯಕ ನೀನು ಹೊನ್ನೂರುಪುರವಾಸ (ಕೃಹಂದ. ೦-೯೩-೩). [ಸಂ.]

**ಮುಕ್ತಿಪಥ** (ನಾ). ಕೈವಲ್ಯವನ್ನು ಹೊಂದುವ ಮಾರ್ಗ; ಮೋಕ್ಷ ಮಾರ್ಗ : ಎನ್ನ ಮುಕ್ತಿಪಥಕ್ಕೆ ಈ ರುದ್ರಾಕ್ಷಿ ಸಾಧನವಯ್ಯಾ (ಬಸವ. ೯೩೯). [ಸಂ.]

**ಮುಕ್ತಿಪದ** (ನಾ). ಮೋಕ್ಷಪದವಿ ; ಕೈವಲ್ಯ : "ಅಪವರ್ಗಂ ನಿಶ್ರೇಯಸಂ . . . ಮುಕ್ತಿಪದಂ ಬ್ರಹ್ಮಂ ಕೈವಲ್ಯಪದವಿ ಶಿವಗತಿ ನಿರಾಮಯಂ ನಿರ್ವಾಣಂ" (ಪದ್ಯಕೋ. ೨೧-೦೯); ಕಾರ್ಯಮಿದೆ ಸತತ್ರಮೊಮಗೆ ಸಪರ್ಯ ವಿದೇ ಮುಕ್ತಿಪದಮನೆಯ್ದುವಿನಂ (ಸುಕುಮಾ. ೦-೨೭). [ಸಂ.]

**ಮುಕ್ತಿಲೋಕ** (ನಾ). ಮೋಕ್ಷ; ಸ್ವರ್ಗಲೋಕ : ಅರ್ಚನೆಯವಸರ್ದೊಳು ದಲ್ಲಿ ಪುಣ್ಯದ ಫಲ ಭಕ್ತಿಯಿಂ ದ್ರವ್ಯವ ಕೊಡುವದು ಮುಕ್ತಿಲೋಕದೊಳಗು (ಶೋಭಾಮ. ೦೬-೬೦). [ಸಂ.]

**ಮುಕ್ತಿಸ್ಥಾನ** (ನಾ). = ಮುಕ್ತಿಪದ : ಕಷ್ಟಂ ದುಃಖಾಸಲಪರಿಪುಷ್ಟಂ ಚಿಃ ಗತಿಚತುಷ್ಟಯಂ ಪ್ರಾಣಿಗೆ ಸಂತುಷ್ಟತಯನೆಯ್ದೆ ಪಡೆದುಮಭೀಷ್ಟಸುಖ ಪ್ರದಮದೊಂದೆ ಮುಕ್ತಿಸ್ಥಾನಂ (ಅದಿತ್ತಿ. ೯-೫೦); ಆಗವೋಕ್ತ ಸಮಾಧಾನ ವಿಧಾನದಿಂ ಮುಡಿಪಿ ಮುಕ್ತಿಸ್ಥಾನಮಂ ಮುಂಚೆ ಸಾಧಿಸಿಕೊಂಡೊಳ್ಪು ಕುಮಾರಸೇನಮುನಿಪಂಗಕ್ಕುಂ ಪಱಿರ್ಗಕ್ಕುಮೇ (ಕಾವುಂತ್ತಿ. ೩). [ಸಂ.]

**ಮುಕ್ತಿಹೇತು** (ನಾ). ಮೋಕ್ಷಕ್ಕೆ ಕಾರಣವಾದುದು : ಷೋಡಶಜಿನ ಪತಿನುತಚರಣಾಡಂಬರಮುಘವಿಘಾತಿಯೆನೆ ತತ್ಪ್ರತಿಮಾನೀಡಾಗಮನಪು ಮಾರ್ಗಕ್ರೀಡನವುಂ ಮುಕ್ತಿಹೇತುವಪ್ಪುದು ಒರೆದೇ (ಶಾಂತಿಪು. ೦೨-೯೯). [ಸಂ.]

**ಮುಕ್ತೆ** (ನಾ). ೧. ಮುತ್ತು ; ಮೌಕ್ತಿಕ : "ಮುಕ್ತಾನಾಮಂ ಮೌಕ್ತಿಕಂ" (ಪದ್ಯಕೋ. ೨೩-೯). ೨. ವೇಶ್ಯೆ; ಸೂಳೆ : "ಬಂಧಕೀ, ಕುಲಟಾ, ಮುಕ್ತಾ, ಪುನರ್ಭೂ, ಪುಂಶ್ಚಲೀ, ಖಿಲಾ—ಜಾರಿಣಿಯರ ಹೆಸರು" (ರಸಂಧ. ೭-೩೫ ೬೬೪). ೩. ಒಂದು ಬಗೆಯ ಸಸ್ಯ. [ಸಂ. ಮುಕ್ತಾ]

**ಮುಕ್ತೇಸರ** 'ಮೊಖ್ತೇಸರ್' ನೋ.

**ಮುಕ್ತೋಷ್ಠ** (ನಾ). ೧. ತೆರೆದ ತುಟಿ. ೨. ಅತಿಯಾಗಿ ಮಾತನಾಡುವವನು; ಹರುಕುಬಾಯಿಯವನು : ಅವರೊಳೊರ್ಬಂ ಮುಕ್ತೋಷ್ಠನುಂ ನಿಕೃಷ್ಟನುಮಪ್ಪ ಭಟ್ಟನಿಂತೆಂದಂ (ಶಂಕರ. ೦೬-೯). [ಸಂ.]

**ಮುಕ್ತ್ಯಾತುರ್ಯ** (ನಾ). ಮೋಕ್ಷದ ಬಗೆಗಿರುವ ಆಸಕ್ತಿ (?) : ಹಸಿವು ತೃಷೆ ವೆಸನಂಗಳಲ್ಲಿ ಅಲಕ್ಷಿತನಾಗಿ ಪಾಶಬದ್ಧವಿರಹಿತನಾಗಿ ಗುಣಾವಗುಣವ ವಿಚಾರಿಸದೆ ಶಿಕ್ಷಾತುರ್ಯ ಮುಕ್ತ್ಯಾತುರ್ಯ ಸ್ಥಾಯಿಶ್ರ್ಯಾತುರ್ಯವೆಂಬ ಮೂಂಬ ಠಾವಿನಲ್ಲಿ ಬದ್ಧನಾಗದೆ ಸ್ತುತಿಗೆ ನಿಲ್ಲದೆ ನಿಂದೆಗೊಡದೆ ಉಭೆಯುವನೇನೆಂದು ಅಱಿಯದೆ (ಶರಗೋ. ೦೦೬-೦೨೫). 'ಶಿಕ್ಷಾತುರ್ಯ' ಪಾಠ. [ ? ]

**ಮುಕ್ರಿ$_1$** (ನಾ). ಮುಸಲ್ಮಾನರ ಧಾರ್ಮಿಕಗುರು : ಮಸೀದೆಯಿಂದ ಮುಕ್ರಿಗಳು ನಿನಗೆ ಆದೇಶ ಕಳುಹಿದರೂ ನೀನು ಕೇಳಲಿಲ್ಲ (ಮುಂಗಾರು. ೦೧). [ ← ಅರ. ಪಾರ. ಮುಕಿರ್ ]

**ಮುಕ್ರಿ$_2$** (ನಾ). ಕರ್ನಾಟಕದಲ್ಲಿ ಇರುವ ಒಂದು ಕೆಳವರ್ಗದ ಜನಾಂಗದ ಹೆಸರು : ಮುಕ್ರಿಗಳು– ಇವರು ಕಾನಡಾಜಿಲ್ಲೆಯಲ್ಲಿ ಘಟ್ಟದ ಕೆಳಗೆ ಇರುತ್ತಾರೆ (ಕನಾಗ. ೨೨೩) : ಮಾದಿಗರ ಅಥವಾ ಮುಕ್ರಿಯರ ಒಂದು ಮಗು ಮನೆಯೊಳಗೆ ನುಗ್ಗಿಬಿಟ್ಟರೆ ನಮಗೆ ಬ್ರಹ್ಮಾಂಡ ಕೋಪ ! (ಶಿಕಾರಿ. ೯೮). [ ? ]

**ಮುಖ** (ನಾ). ೧. ಬಾಯಿ : "ವಕ್ತ್ರಂ, ಆಸ್ಯಂ. . . ಮುಖಂ—೭ ಬಾಯಿ" (ಸಿದ್ಧಂತಿ. ೦೯೩) : ತಂಬುಲದಿಂ ವಿಭು ಪೋಲ್ಪನೋಲಗಂಗುಡುವೆಡೆಯೊಳ್

...ಪರ್ತಿತವಾದಂ ಕಟಶೋಧನದಿಂ ಪ್ರಭೇದಮಕ್ಕಡಸಿದ ಬೇರನಾಮದ ಕಲೆಬೆರಸಿರ್ದಮರೇಂದ್ರದಂತಿಯಾ (ಶಾಂತಿಪು. ೧೧-೯೩) ; ಲಿಂಗಪಥವ ತಪ್ಪಿ ನಡೆವರು ಜಂಗಮಮುಖದಿಂದೆ ನಿಂದೆ ಬಂದರೆ ಕೊಂಡ ಮಾಟಿಂಗೆ ಹೋಹುದು ತಪ್ಪದು (ಬಸವ. ೦೦೬) ; ಹಿಂದೆ ನಾರದಮುನಿಯ ಮುಖದಿಂದೆ ಕೇಳ್ದಂ ಮುಕುಂದನ ವಿಶಾಲಲೀಲಾಮಾಲೆಯಂ (ಕೃಷ್ಣ. ೧೧-೨). ೨. ಮೊಗ ; ಮೋರೆ : "ವದನಮಾನನಮಾಸ್ಯಂ ಮುಖಂ ತುಂಡಂ ಲಪನಂ ವಕ್ತ್ರಂ ಮೊಗಕ್ಕೆ ನಾಮಂ" (ಶಬ್ದ. ಕೋ. ೬೯-೦೫) ; ಉದಧಿವ್ಯತಿರ್ಕೋರ್ವಿಗೆ ಮುಖಮೆನಿಸಿದ ಬೆಳುವಲನಾಟ್ಗೆ ತಿಲಕದಂದದ ನಜಗುಂದದ ವಿಪ್ರ ಕುಲೋತ್ತಮನಭ್ಯುದಿತಯಶಂ ಶ್ರೀಧರಂ (ಜಾತಕ. ೧-೯) ; ಕಣ್ಮಲರೊಳಾನಂದಾಶ್ರು ಮೈಯೊಳ್ ಸಮುದ್ಗತರೋಮಂ ಮುಖದೊಳ್ ವಿಲಾಸ ಮೆಸೆಯುತ್ತಿರ್ಪನ್ನಮಿಂತೆಂದರಾನತಮೂರ್ಧರ್ ಪಿತೃಮಾತೃಗಳ್ (ಜಗನ್. ೩-೫) ; ಮುಖಚತುಷ್ಟಯದಾತನಾರೀ ಮುಖಗಳೈದಟ ಮಹಿಮಸಾರು (ಕೊರಟಾ. ೬-೧೧-೩೨); ಬಿರುನುಡಿಗಳಂ ತನ್ನ ಮೊಗಕಿರಿದು ಜರೆದೇಡಿಪರ್ಜುನನ ಮುಖಕೆ ದಿಟ್ಟಿಯಿನೊದ್ದು ಪಿಂತಿರುಗಿದಂ ಬಭ್ರುವಾಹನಂ (ಜೈಮಿನಿ. ೮೦-೨೨೦೦). ೩. ಪಕ್ಷಿಯ ಕೊಕ್ಕು ; ಚುಂಚು. ೪. ಪ್ರಾಣಿಯ ಮೂತಿ ; ಮುಸುಂಡಿ. ೫. ಮುಂಭಾಗ ; ಮುಂದುಗಡೆ : ಆ ವೀರನು ಸೇನೆಯ ಮುಖದಲ್ಲಿ ನಿಂತಿದ್ದನು (ಕೂಶಿ). 'ಮುಖಮಂಟಪ' ಪರಾ. ೬. ತಲೆ ಬಾಗಿಲಿನ ಮುಂಭಾಗ ; ಅಂಗಳ : "ಮುಖಂ, ನಿಃಸರಣಂ—ಈ ೨ ಹೆಬ್ಬಾಗಿಲ ಮುಂತು" (ಹಲಾಯು. ೪೮-೦೩೯). ೭. (ಬಾಣ, ಈಟಿ ಮುಂತಾದುವುಗಳ) ಚೂಪಾದ ತುದಿ ; ಮೊನೆ. ೮. ಮೊಲೆತೊಟ್ಟು ; ಚೂಚುಕ. ೯. ಪಾತ್ರೆ ಮೊದಲಾದುವುಗಳ ಬಾಯಿ. ೧೦. ಆಯುಧವ ಹರಿತವಾದ ಅಂಚು ; ಅಲಗು. ೧೧. ಮೇಲುಭಾಗ ; ಅಗ್ರಭಾಗ. ೧೨. ಹೊರಮೈ ; ಹೊರಭಾಗ : 'ಮುಖಲೇಪನ' ಪರಾ. ೧೩. ರಂಧ್ರ ; ತೂತು. ೧೪. ದಿಕ್ಕು ; ದಿಶೆ ; ಕಡೆ : ನೀವು ನೇರವಾಗಿ ಆ ಮುಖಕ್ಕೆ ಹೋದರೆ ಅವರ ಮನೆ ಸಿಕ್ಕುತ್ತದೆ (ಕೂಶಿ). 'ಒಮ್ಮುಖ' ಪರಾ. ೧೫. ನದಿಯು ಸಮುದ್ರಕ್ಕೆ ಸೇರುವ ಸ್ಥಳ ; ಅಳುವೆ. ೧೬. ಪ್ರಾರಂಭ ; ಉಪಕ್ರಮ ; ಮೊದಲು : "ಆದಿ ಮುಖಂ" (ಶಬ್ದ. ಕೋ. ೦೦೯-೬೦) ; ಶ್ರೀವಾಗ್ದೇವಿಗೆ . . . ನಿರ್ಮಲಮೂರ್ತಿಗೆ ಳಾವಂದ್ಯೆಗೆ ಶಾಸ್ತ್ರಮುಖದೊಳವನತನಪ್ಪೆಂ (ಶಬ್ದ. ೦. ೬೯೮) ; ಮುಖ ಮೆಂಬುದು ಪ್ರಾರಂಭಾರ್ಥವಚಃಪ್ರರ್ಥ (ಶಬ್ದ. ೩೦). 'ದಿನಮುಖ' ಪರಾ. ೧೭. ಏನನ್ನಾದರೂ ಸಾಧಿಸಲು ಸಹಾಯಕವಾದುದು ; ಸಾಧನ : "ಉಪಾಯ ಲಪನಾದಿ ವಾಚಕಂ ಮುಖಮಕ್ಕುಂ" (ಶಬ್ದ. ಕೋ. ೦೩೩-೯೨). ೧೮. ಮಗ್ಗುಲು ; ಪಾರ್ಶ್ವ ; ಬದಿ : ಹೊರಗಿನ ಕಂಬಗಳು ಹದಿನಾರು ಮುಖಗಳನ್ನು ಹೊಂದಿವೆ (ಹೊಯ್ಸಳ. ೨೨೩) ; ಪ್ರತಿಭಾಗಕ್ಕೂ ನಾಲ್ಕು ಮುಖಗಳುಂಟು (ಕೀಟಕ. ೧೧). ೧೯. ಮೂಲ ; ಕಾರಣ ; ಹೇತು. ೨೦. ಮಾತಾಡುವಿಕೆ ; ಉಚ್ಚರಿಸುವಿಕೆ. ೨೧. ಸಂದರ್ಭ ; ಸನ್ನಿವೇಶ : ಎಲ್ಲರೂ ವೀರರು ಎಲ್ಲರೂ ಧೀರರು ಎಲ್ಲರೂ ಮಹಿಮರು ಎಲ್ಲರೂ ಪ್ರಮಥರು ಕಾಳೆಗದ ಮುಖದಲ್ಲಿ ಕಾಣಬಾರದು ಓಡುವ ಮುಖದಲ್ಲಿ ಕಾಣಬಹುದು (ಬಸವ. ೯೯೯) ; ಸಮನಿಪುದಯತ್ನಕೃತ ಗೌರವ ಮುಖದೊಳ್ ಗುರು ಮುನೀಶ್ವರಾದಿ ವಿಶಿಷ್ಟೋದ್ಭವ ವಿನಯ ದೊಳೊಂದಿದಸಹ್ಯವೃತ್ತಿಯೊಳ್ ತಾಂ ಬಹುತ್ವಮೇತತ್ವದೊಳಂ (ಶಬ್ದ. ೦೦೨). ೨೨. ಮಾರ್ಗ ; ರೀತಿ : ಸ್ಥಾವರ ಜಂಗಮವೆಂಬುಭಯಪಕ್ಷ ಒಂದೇ ಆವ ಮುಖದಲಿ ಬಂದರೂ ತೃಪ್ತಿಯೊಂದೇ (ಬಸವ. ೬೦೩) ; ಎಲ್ಲಿಯುಮಾಮಂತ್ರಣದೊಳ್ ಬಲ್ಲರ್ ಪ್ರಥಮೈಕವಚನಮಂ ಲೋಪಿಸುವರ್ ನಿಲ್ಲದೆ ವಿಕಲ್ಪಮುಖದಿಂ ಸೊಲ್ಲಿಸುವರ್ ಹ್ರಸ್ವದೀರ್ಘ ಕಾಕುಗಳೆರಡಂ (ಶಬ್ದ. ೦೨೩). ೨೩. ಅಭಿಮುಖ ; ಎದುರು : ಮುಕ್ತಿಗೆ ಮುಖವಾಗಿ ಯುಕ್ತಿಗೆ ಹೊಜಗಾಗಿ ಅಜ್ಞಾನಿಂಗೆ ಅಜ್ಞಾನವಾಗಿಪ್ಪ ಭೇದ ಕಾಣಬಂದಿತ್ತು ನೋಡಾ (ಅಪಶಂ. ೨೦೨-೯೩೬). ೨೪. ಶ್ರೇಷ್ಠವಾದುದು ; ಉತ್ತಮವಾದುದು. ೨೫. ಮುಖ್ಯ ; ಪ್ರಧಾನ : ಸೊರ್ಕ್ಕಿನ ಗಾಮುಣ್ಡರುಂ ಎದೆಯ ಗಾಮುಣ್ಡರುಂ . . . ನೀರಿಲ್ಲಿಯಾ ಸಿನ್ದೆ ಜಿಗಾಮಿ ಗರುಂ ಮುಖವಾಗೆ ಎರಡುಂನಾಟ್ಕೆ ರಾಜಶ್ರಾವಿತವಾಗೆ ಪ್ರಸಾದಂಕೆಯ್ದಾರ್ (ಎಪಿ. XIX. ೦೯೫-೧೧ ; ಸು. ೬೮೦). 'ಮುಖಸ್ಥಾನ' ಪರಾ. ೨೬. ಮುಖ್ಯವಾದ ವ್ಯಕ್ತಿ ; ಪ್ರಧಾನವ್ಯಕ್ತಿ : ನಿಂದಿಸಿ ಧರ್ಮಜ ಪ್ರಮುಖರಂ ಮುಖರಂ ಮುಖರಂಧ್ರಘೋಷನಿಂತೆಂದಂ (ಜಗನ್. ೦೬-೩೩). ೨೭. ಪ್ರತ್ಯಕ್ಷ ; ಸಮಕ್ಷಮ : 'ಮುಖತಃ' ಹೋ. ೨೮. ದೃಷ್ಟಿ ; ಗಮನ : ಪರಮೇಶ್ವರನ ಅಜಿದವಂಗೆ ಜಗದಾಶೆಯ ಮುಖವಿಲ್ಲವೆಂದೆ (ಪೋ. ಪುರಾ. ೪೦-೦೬೭). ೨೯. (ಆಲಂ) ನೈತಿಕಬಲ ; ಸ್ಥೈರ್ಯ : ಗುರುರಾಜರಾಯರು . . . ಯಾವ ಮುಖದಿಂದ ಕೇಳುತ್ತಾರೆ (ಶುರಿಪ. ೦೬೯). ೩೦. [ಕಾವ್ಯವಿಮ] ನಾಟಕದ ಐದುಬಗೆಯ ಸಂಧಿಗಳಲ್ಲಿ ಒಂದು ; ಐದು 'ಅರ್ಥಪ್ರಕೃತಿ'ಗಳೂ ಐದು 'ಅವಸ್ಥೆ'ಗಳೂ ಕ್ರಮವಾಗಿ ಸೇರಿದಾಗ ವಸ್ತುವಿನಲ್ಲಿ ವಿಭಾಗಗಳಾಗುವ ಐದು ಬಗೆಯ ಸಂಧಿಗಳಲ್ಲಿ ಮೊದಲನೆಯದು : ಸಮಸಂದ ಮುಖಂ ಪ್ರತಿಮುಖ ಮವಮರ್ಶಂ ಗರ್ಭಮಂತೆ ನಿರ್ವಹಣಮೆನಿಪ್ಪುವವೆಯ್ದು ಸಂಧಿಯುಗ್ಮಂ ಸಹಿತ (ಕಾವ್ಯಾವ. ೯೩೭) ; ಮೇಲೆ ಹೇಳಿದ ಐದು 'ಅರ್ಥಪ್ರಕೃತಿ'ಗಳೂ ಐದು 'ಅವಸ್ಥೆ'ಗಳೂ ಕ್ರಮವಾಗಿ ಸೇರಿದರೆ, ವಸ್ತುವಿನಲ್ಲಿ ೧. ಮುಖ, ೨. ಪ್ರತಿಮುಖ, ೩. ಗರ್ಭ, ೪. ಅವಮರ್ಶ, ೫. ಉಪಸಂಹೃತಿ (ನಿರ್ವಹಣ) ಸಂಧಿಗಳೆಂಬ ಐದು ವಿಭಾಗಗಳಾಗುತ್ತವೆ (ಕೃಷಿಶಾ. ೨೦೮).

ಮುಖಕಪ್ಪಗೆಮಾಡಿಕೊಳ್ಳು = ಮುಖದ ಕಳೆಯನ್ನು ಕಳೆದುಕೊಳ್ಳು ; ಮಂಕಾಗು : ಅವನ ಮನಸ್ಸು ಸ್ವಲ್ಪ ದಿವಸದಿಂದ ವಿರಸವಾಗಿ ತನ್ನಲ್ಲಿ ಅಭಿಮಾನವನ್ನು ಬಿಟ್ಟಿದೆಯೆಂದು ಇವಳೂ ಹಾಗೆಯೇ ತನ್ನ ವಿಚಾರವಾಗಿ . . . ಪ್ರಬಲವಾದ ಅಸಮಾಧಾನವನ್ನು ತೋರಿಸುತಿದಾಳೆಂದು ಅವನೂ ತಿಳಿದುಕೊಂಡು ಮುಖ ಕಪ್ಪಗೆ ಮಾಡಿಕೊಂಡಿದ್ದರು (ಅದೃಷ್ಟ. ೦೩೩). ಮುಖಕಪ್ಪಿಡು = ಮುಖವು ಕಳೆಗುಂದು ; ಕಂಗೆಡು : ಮರುಕ್ಷಣವೇ ಮುಖ ಕಪ್ಪಿಟ್ಟಿತು (ಪಟಿಶಾ. ೩೩೦). ಮುಖಕಿರಿದಾಗು = ಮುಖವು ಮುದುಡಿ ಹೋಗು ; ಖಿನ್ನವಾಗು : ಅಳಿಯರ ಪಾಯೆಡೆಗೆ ಆಗ ಕಳುಹಲು ನಾನೆ ಬಹೆನಾ ಬಾಗಿಲೊಳಗಿರಲೆಂಬ ಬೆಸನಾಯಿತ್ತಾಗಲೆನಲೂಳಿಗರು ಮುಖ ಕಿರಿದಾಯ್ತು ಬಿಷ್ಟಣಗೆ (ಬಸವ. ೦೦೦-೪೦). ಮುಖಕಿವಿಚು = ಮುಖವನ್ನು ವಕ್ರಗೊಳಿಸು ; ಸೊಟ್ಟಗೆ ಮಾಡು : ನಾನು ನಿನಗೆ ಯಾವ ಅಪರಾಧವನ್ನು ಮಾಡಿದ್ದೇನೆ ಹೇಳು ; ನನ್ನನ್ನು ಕಂಡ ಕೂಡಲೇ ಮುಖ ಕಿವಿಚುತ್ತೀ (ರಂಗಕೋ. ೦೪೭). ಮುಖ ಕೆಂಪಗಾಗು = ಮುಖದ ಬಣ್ಣ ಕೆಂಪಾಗು ; ರಂಗೇರು : ನಾಚಿಕೆಯಿಂದ ಅವಳ ಮುಖ ಕೆಂಪಗಾಯಿತು (ಕೀರ್ತಿ. ೦೦೨). ಮುಖಕೆಂಪೇರು = ಮುಖ ಕೆಂಪಗಾಗು : ಖಾನ್ ಸಾಹೇಬರು ಮರಳಿ ಬಂದು ಕುಳಿತರು. ಅವರ ಮುಖ ಕೆಂಪೇರಿತ್ತು (ಪಟಿಶಾ. ೦೩೭). ಮುಖಕೆಡು = ಮುಖ ಕಪ್ಪಿಡು : ಲಜ್ಜಾಹೀನೆಯಾದ ಮೋತಿಬೀಬಿಯು ತಿರಸ್ಕಾರದಿಂದ ಮುಖ ಕಡದೆ . . . ಎಂದಳು (ಕಥಾಸಂ. ೩೩). ಮುಖಕೆಳಗೆಹಾಕು = ತಲೆ ತಗ್ಗಿಸು ; ಅವಮಾನವನ್ನು ಹೊಂದು : ನಾಳೆ ಪಂಚನಾಮೆಯ ಕಾಲಕ್ಕೆ ನಾನಾ ಸಾಹೇಬರು ನನಗಾಗಿ ಮುಖ ಕೆಳಗೆ ಹಾಕುವ ಪ್ರಸಂಗ ಬಂದೇ ಬರುವದು (ಸ್ವಾತಂ. ೦೯೦). ಮುಖಕೊಟ್ಟು ಮಾತನಾಡು = ನೇರವಾಗಿ ಮಾತನಾಡು : ಜಗಳವಾದಂದಿನಿಂದ ಅವರಿಬ್ಬರೂ ಸರಿಯಾಗಿ ಮುಖ ಕೊಟ್ಟು ಮಾತನಾಡುವುದಿಲ್ಲ (ಕೂಶಿ). ಮುಖಕ್ಕೆತಣ್ಣೀರೆರಚಿದಂತಾಗು = ನಿರುತ್ಸಾಹವುಂಟಾಗು ; ಉತ್ಸಾಹ

ಭಂಗವಾಗು : ಮಗನು ಸಹಾಸಾದ ಸುದ್ದಿಯನ್ನು ಕೇಳಿ ಅವರ ಮುಖಕ್ಕೆ ತಣ್ಣೀರೆರಚಿದಂತಾಯಿತು (ಅದೇ). **ಮುಖಕ್ಕೆಮಂಗಳಾರತಿ ಎತ್ತು** = ಮಾಡಿದ ತಪ್ಪನ್ನು ಎತ್ತಿ ಹೇಳಿ ಅವಮಾನಗೊಳಿಸು ; ಛೀಮಾರಿ ಹಾಕು : ಯಾರೂ ಮಾಡದ ಕೆಲಸ ತಾನು ಮಾಡಲು ಹೋಗಿ ಮುಖಕ್ಕೆ ಮಂಗಳಾರತಿ ಎತ್ತಿಸಿಕೊಂಡಳೆಂದಲ್ಲ! (ಐಶ್ವ ೩೦). **ಮುಖಕ್ಕೆ ಮಸಿ ಬಳಿ** = ಅವಮಾನಗೊಳಿಸು ; ನಾಚಿಕೆಗೀಡುಮಾಡು : ನಿಮ್ಮ ಮುಖಕ್ಕೆ ಮಸಿ ಬಳಿಯುವಂಥ ಕೆಲಸ ನಾನು ಮಾಡಿಲ್ಲ (ಅದೇ). **ಮುಖ ಗಂಟಿಕ್ಕು** = ಮುಖವು ಬಿಗಿದುಕೊಳ್ಳು, –ಗಡುಸಾಗು: "ಎಂತಹ ಕ್ರೂರಿಗಳಿರಬೇಕು ಇವರು " ಎಂದುಕೊಂಡು ಮುಖ ಗಂಟಿಕ್ಕಿ ನನ್ನ ಕೋಣೆಗೆ ಹೋದೆನು (ಪ್ರಕಾಶ. ೦೩೦). **ಮುಖ ಗಂಟುಹಾಕಿಕೊಳ್ಳು** = ಮುಖಗಂಟಿಕ್ಕು : ಇವರಿಬ್ಬರೂ ಈ ವಿಚಾರವಾಗಿ ಒಬ್ಬರ ಸಂಗಡ ಒಬ್ಬರು ಯಾವ ಮಾತನ್ನೂ ಆಡದೆ ಸುಮ್ಮನೆ ಮುಖ ಗಂಟುಹಾಕಿಕೊಂಡೇ ಇರುತ್ತಿದ್ದರು (ಅನ್ನಪೂ. ೧೬೦); ನಾನು ಅವರ ಕೈಗೆ ಕಾರ್ಡನ್ನು ಕೊಟ್ಟ ತಕ್ಷಣ ಅವರ ಕಣ್ಣಿಗೆ ಮೊದಲು ಬಿದ್ದದ್ದು ಆ ಎರಡು ನಂಬರು. ಅವರು ಮುಖ ಗಂಟುಹಾಕಿಕೊಂಡರು (ಕಾಲಮ. ೯೦). **ಮುಖ ಗಡಿಗೆಯಾಗು** = ದುಮ್ಮಾನವುಂಟಾಗು : ನಮ್ಮ ಮನೆ ಹುಡುಗನಿಗೆ ಓದೋ ವಿಚಾರ ಹೇಳಿದರೇ ಮುಖ ಗಡಿಗೆಯಾಗುತ್ತೆ (ಅದೇ). **ಮುಖ ಚಿಕ್ಕದಾಗು** = ಮುಖ ಕಿರಿದಾಗು : ಅದನ್ನು ಕೇಳಿ ಚಿಕ್ಕಜ್ಜಿಯ ಮುಖ ಚಿಕ್ಕದಾಯಿತು (ಕಂಕಣ. ೦೦೦). **ಮುಖ ತಗ್ಗಿಸು** = ಮುಖ ಕೆಳಗೆ ಹಾಕು : ಏನೂ ಮಾಡಲು ತೋಚದೆ ವಾಸಂತಿ ಮುಖ ತಗ್ಗಿಸಿ ನಿಂತುಬಿಟ್ಟಳು (ಕೀಪೋಠ. ೦೦೨). **ಮುಖತಪ್ಪಿಸಿಕೊಳ್ಳು** = ಜನರ ಕಣ್ಣಿಗೆ ಬೀಳದಂತಿರು ; ತಲೆ ತಪ್ಪಿಸಿಕೊಳ್ಳು ; ಮರೆಯಾಗಿರು : ವಸಂತರಾಯನಿಗೆ ರಾಘಪ್ಪ ಮುಖ ತಪ್ಪಿಸಿಕೊಳ್ಳುತ್ತಿದ್ದಾನೆಯೋ ಎಂಬ ಸಂದೇಹ ಬರತೊಡಗಿತ್ತು (ಗಂಪಾಠ. ೨೩). **ಮುಖ ತಿರುಗಿಸಿಕೊಳ್ಳು** = ತಿರಸ್ಕರಿಸು ; ನಿರ್ಲಕ್ಷ್ಯಮಾಡು : ನಾನು ಮಾತನಾಡುತ್ತಿರುವಂತೆಯೇ ಅವನು ಮುಖ ತಿರುಗಿಸಿಕೊಂಡು ಹೊರಟೇ ಹೋದ (ಅದೇ). **ಮುಖದ ನೀರಿಳಿಸು** = ತೇಜೋವಧೆ ಮಾಡಿ ಅಹಂಕಾರವನ್ನು ತಗ್ಗಿಸು : ಇನ್ನೊಂದು ಸಲ ಏನಾದರೂ ನನ್ನ ಕೆಣಕಲಿ, ಮುಖದ ನೀರಿಳಿಸಿ ಕಳಿಸಿ ಬಿಡುತ್ತೇನೆ (ಆಹಾಪೂ. ೦೦). **ಮುಖದ ನೀರಿಳಿಸು** = ಮುಖದ ನೀರಿಳಿಕು : ಎದುರಿದುರಿಗೇ ಇವನು ನಮ್ಮ ಮುಖದ ನೀರಿಳಿಸುತ್ತಿದ್ದಾನೆ (ಪಠಾ. ೨೬೩). **ಮುಖಪರಚಿಕೊಳ್ಳು** = ದಿಕ್ಕು ತೋಚದಾಗು : ಕೆಲಸ ಮಾಡಿ ಸಾಕಾಗಿ ಮುಖ ಪರಚಿಕೊಳ್ಳೋ ಹಾಗಾಗಿದೆ (ಅದೇ). **ಮುಖಮರೆಸಿಕೊಳ್ಳು** = ಮುಖ ತಪ್ಪಿಸಿಕೊಳ್ಳು : ಯಾವಾಗಲೂ ಹೀಗೆ ಮುಖ ಮರೆಸಿಕೊಂಡು ಕೂಡಬೇಡಿ (ಜುಕೇ. ೦೬೪). **ಮುಖ ಮುರಿ** = ೧. ಅವಮಾನಗೊಳಿಸು ; ಮುಖಭಂಗಮಾಡು : ಈ ಮಾನುನಿಯ ಕರದು ಮುಖ ಮುರಿದು ಅಯಿರಾವತವ ನೋಂಪಳಾನೆಂದದಿ ಕುಂತಿ (ಪಾಂಡಶ. ೬-೨೦); ರಾಮಚಂದ್ರಯ್ಯನವರು . . . ಬಂದಿರುವಾಗ ಮದುವೆಗೆ ಒಪ್ಪಲಿಲ್ಲವೆಂದರೆ ಅವರ ಮುಖ ಮುರಿದಂತಾಗುತ್ತದೆ (ಕಲಾ. ೬೦). ೨. ಹಿಮ್ಮೆಟ್ಟು ; ಹಿಂದಿರುಗು : ನಿನ್ನ ಸೈನ್ಯಗಳು ಆತನ ಪೆಟ್ಟುಗಳನ್ನು ತಡೆಯಲಾರದೆ ಮುಖ ಮುರಿದು ಓಡಿದವು (ಕೃವಾಂ. ೦೨೩). **ಮುಖಮರಳು** = (ಸಂತೋಷದಿಂದ) ಮುಖವು ವಿಕಾಸಗೊಳ್ಳು,– ಹಿಗ್ಗು : ಇಂದಿರೆಯ ಮುಖಮರಳಿತು. (ಐಶಾಕ. ೦೨೪). **ಮುಖ ಸಿಂಡರಿಸಿಕೊಳ್ಳು** = ಮುಖಗಂಟಿಕ್ಕು : ಆ ಮಾತನ್ನು ಮೊದಲೇ ನಿರೀಕ್ಷಿಸಿದ್ದಳು ಗಿರಿಜೆ. ಸುಮ್ಮನೆ ಮುಖ ಸಿಂಡರಿಸಿಕೊಂಡು ನಿಂತಳು (ರೀಪಠಂ. ೦೫೦). **ಮುಖಸುಕ್ಕು** = ಮುಖವನ್ನು ಹಿಂಜು,– ಕಿವುಚು : ಅವರು ಹೋಗುವುದನ್ನೇ ತುಟಿಗಚ್ಚಿ, ಮುಖಸುಕ್ಕಿ ನೋಡುತ್ತಾ ನಿಲ್ಲುತ್ತಾನೆ (ಕಂದ್ರಕ. ೦೩-೨೦). [ಸಂ.]

**ಮುಖಂಡ** (ನಾ). ಮುಂದಾಳು ; ನಾಯಕ : ಇಬ್ಬರು ಮುಖಂಡರು ಮುಂದಾಳಾಗಿ ನಾವು ಹೋಗುವೆವೆಂದರು (ಕೇಲಚ. ೨೬); ಈ ನಾನಾ ಸಾಹೇಬನೇ ಕ್ರಿ. ಶ. ೧೮೫೭ರ ಸಂಗ್ರಾಮಕ್ಕೆ ಮುಖಂಡನಾಗಿ ಮುಂದು ವರಿದನು (ಪ್ರಶಿಂಥ. ೩೬). [← ಮರಾ. ಮುಖಂಡ ]

**ಮುಖಕ್ಷೌರ** (ನಾ). ಮುಖದ ಮೇಲಿನ ಕೂದಲನ್ನು ಬೋಳಿಸು ವುದು : ನಾನು ಬೇಗಬೇಗನೇ ಮುಖಕ್ಷೌರ ಮುಗಿಸಿಕೊಂಡೆನು (ಹೇಮುಂತ. ೨೩೬). [ಸಂ.]

**ಮುಖಗೇಡಿ** (ನಾ). ಜನರೊಂದಿಗೆ ಸರಿಯಾಗಿ ಬೆರೆಯದವನು ; ಸಂಕೋಚಸ್ವಭಾವದವನು ; ಮುಸುಂಡಿ : ನಾವು ಸಾಮಾನ್ಯವಾಗಿ ಎಂಥವನನ್ನು ಸಿಡುಕು ಮುಖಗೇಡಿ . . . ಜೊತೆ ಬೇಡದ ಗೊಡ್ಡು ಎಂದು ಕರೆಯುತ್ತೇವೆಯೋ ಅಂಥವನು ಸಹ ಸಮಾಜಸಂಬಂಧಗಳನ್ನು ಒದರಡ ನ್ನಾದರೂ ಉಳಿಸಿಕೊಂಡಿರುತ್ತಾನೆ .(ರಾಶ್ವಶಾ. ೩೬). [ಮುಖ +ಕೇಡ$_1$]

**ಮುಖಗೊಡು** (ಕ್ರಿ). ಮುಖವನ್ನು ತೋರಿಸು ; ಕಾಣಿಸಿಕೊಳ್ಳು : ಬುಧರ ಮತಿಸಂಪಾದನೆಗೆ ಮುಖಗೊಡದ . . . ಬ್ರಹ್ಮೇಂದ್ರಾದಿ ಸುರರುಬ್ಬಟೆಗೆ ಸೋಲದನಾದಿದೇವರ ದೇವ ಶಿವನನು ಕಂಡನಬುಜಭವ (ಕುವ್ಯಾಶ. ೬-೦೬). [ ಮುಖ + ಕೊಡು$_1$ ]

**ಮುಖಚರ್ಯೆ** (ನಾ). ಮುಖದಲ್ಲಿ ತೋರಿಬರುವ ಅಭಿವ್ಯಕ್ತಿ : ಮುಖಭಾವ : ಮಾಸ್ಲೆಸಿಕೋವನ ಮುಖಚರ್ಯೆಯಲ್ಲಿ ನಿರುತ್ಸಾಹ ಪ್ಲಾನತೆಗಳು ತಲೆದೋರಿದುವು (ಪ್ರಪರು. ೨೬೦); ರಸಾನುಭವವನ್ನು ಉಪಾಧ್ಯಾಯರು ಅವರ ಮುಖಚರ್ಯೆಯಿಂದ ಅರಿತುಕೊಳ್ಳಬೇಕು (ಶಿಕ್ಷದ. ೨೯೦). [ಸಂ. ಮುಖಚರ್ಯಾ]

**ಮುಖಚಹರೆ** (ನಾ). ಮುಖದ ಮೋರೆ,– ರೀತಿ : ಅವಳ ಮುಖ ಚಹರೆಯುಕ್ಲಿದ್ದ ಒಂದೊಂದು ಗೆರೆಯೂ, ಸುಕ್ಕೂ ಅವಳ ಕಠೋರತೆ ಯನ್ನು ವ್ಯಕ್ತಪಡಿಸುತ್ತಿದ್ದವು (ಪುಷಾಂತ. ೨); ಬಾಲ್ಯದ ಕನಸುಕಾಣುವ ಮುಗ್ಧಹುಡಿಗೆಯಂತಿವಳ ಮುಖಚಹರೆ (ಕಂಠಾ. ೬೩-೩).

[ಮುಖ + ಚಹರೆ]

**ಮುಖಚಾರಿ** (ನಾ). [ನಾಟ್ಯ] ನೃತ್ಯದ ಒಂದು ಭಂಗಿ : ತಿರುಪುಗಳ್ಕರಿ ಲವಣ ಲಾಗು ಮುಖಚಾರಿವುಪ್ಪರುಬೆಡಗು ಗುಂಡಲಾದಿಯ ಬಿಂಕ ಬಿನ್ನಣದ ಗರುವಿಕೆಯ ಪಾತ್ರದೊಳು ನಿಲ್ಲಲು ಮಲುಹಣಿದು ಮಲುಹಣ ಕಂಡು ಬೆಜಗಾದನು (ಮಲಹ. ೨-೨೯). [ಸಂ. ಮುಖಚಾರೀ]

**ಮುಖಚಾಳಿಯ** (ನಾ). [ಸಂಗೀತ] ರಾಗೋಚಿತವಾದ ಸ್ವರಗಳನ್ನು ಗಮಕಸಹಿತವಾಗಿ ಪ್ರಯೋಗಿಸಿ ಹಾಡುವಿಕೆ.

**ಮುಖಚಾಳಿಯರು** = ರಾಗೋಚಿತವಾದ ಸ್ವರಗಳನ್ನು ಗಮಕ ಸಹಿತವಾಗಿ ಪ್ರಯೋಗಿಸಿ ಹಾಡುವವರು : ಮೇಳದಲಿ ಗಂಧರ್ವ ರಿಪ್ಪತ್ತೇಳು ತುಂಬುರಸಹಿತ ಶುದ್ಧದ ಸಾಳಗದ ಸಂಕೀರ್ಣದೇಶಿಯ ವಿವಿಧ ರಚನೆಗಳ ಬಾಳೆಯರ ಸುರಗಣಿಕೆಯರ ಮುಖಚಾಳೆಯರ ಸಂಗೀತತಾಳದ ತೂಳುವಟಿ ತುಂಬಿದುದು ಕುಸುಮಾಯುಧನ ಕಳಕಳವ (ಕುವ್ಯಾಸ. ೦-೨೦).

[ಮುಖ+ಚಾಳೆಯ (<ಚಳಯ್ಯು)]

**ಮುಖಚಿಟ್ಟು** (ನಾ). ಯಾವುದಾದರೊಂದು ಆಹಾರದ ಅತಿಸೇವನೆ ಯಿಂದ ಬಾಯಿಕೆಟ್ಟು ಜುಗುಪ್ಸೆಯುಂಟಾಗುವುದು, –ಚಟ್ಟರೆ ಯಾಗುವುದು : ಮೂರುದಿನಗಳಿಂದ ಮದುವೆಮನೆಯಲ್ಲಿ ಸಿಹಿ ಊಟಮಾಡಿ ಮುಖಚಿಟ್ಟು ಬಂದಿದೆ (ಅದೇ). [ಮುಖ+ಚಿಟ್ಟು$_3$]

**ಮುಖಚಿತ್ರ** (ನಾ). ಪುಸ್ತಕ, ಪತ್ರಿಕೆ ಮೊದಲಾದುವುಗಳ ರಕ್ಷಾಪುಟದ ಮೇಲಿನ ಚಿತ್ರ : ಈ ಪೀಠಿಕಾಭಾಗಕ್ಕೆ ಸಂಬಂಧಿಸಿದ ಭಾಗಗಳಾವುವೆಂದರೆ : (೧) ಪುಸ್ತಕದ ಸಂಕ್ಷೇಪವಾದ ಹೆಸರು, (೨) ಮುಖಚಿತ್ರ, (೩) ಮುಖ ಪತ್ರ . . . (೧೧) ಉಪನಾಮ (ಮುದ್ರಶ. ೯೨). [ಸಂ.]

**ಮುಖಚೂರ್ಣ** (ನಾ). ಅಲಂಕಾರಕ್ಕಾಗಿ ಮುಖಕ್ಕೆ ಹಚ್ಚಿಕೊಳ್ಳುವ ಒಂದು ಬಗೆಯ ಸುಗಂಧದ ಪುಡಿ : ಮುಖಚೂರ್ಣ ಎಂಬ ಪದವನ್ನು ರಘುವಂಶಕಾವ್ಯದಲ್ಲಿ ಕಾಳಿದಾಸಮಹಾಕವಿಯು ಉಪಯೋಗಿಸಿದ್ದಾನೆ (ಶಾರದ. ೩೭೯ ಅಡಿ) ; ಮುಖಚೂರ್ಣದ (Face Powder) ಬಳಕೆಗೆ ಯಾವಳೋ ಕಪ್ಪಗಿದ್ದ ಹೆಂಗಸೊಬ್ಬಳು ಕಾರಣವಿರಬಹುದು (ನಾಡಗೇ. ೨೭೭); ಬತ್ತಿದ ಕೆನ್ನೆಗೆ ಹತ್ತಿದೆ ಮುಖಚೂರ್ಣದ ಬಣ್ಣ (ಕಿರಾಂ. ೧೧-೧೯). [ಸಂ.]

**ಮುಖಚೇಷ್ಟೆ** (ನಾ). ೧. ಮುಖದ ಭಾವ ; ಮುಖಚರ್ಯೆ ; ಮುಖಭಂಗಿ : ಇವನ ಗತಿ ಮುಖಚೇಷ್ಟೆ ಭಾವೋತ್ಸವ ವಿಲಾಸವುಪೇಕ್ಷೆ . . . ಇವೇ ಸಾಕಿವನು ಘಾಟದ ವೀರನೆಂದರು ವೀರರರ್ಜುನನ (ಕುಮಾ.ಅ. ೧೫-೨೫). ೨. ಕೀಟಲೆ, ತಮಾಷೆಗಳಿಗಾಗಿ ಮಾಡುವ ಮುಖವಿಕಾರ : ರಂಗಮ್ಮ . . . ಮಗುವಿನೆದುರು ನಿಂತು, ತಮ್ಮ ಹಲ್ಲಿಲ್ಲದ ಬಾಯಿಯನ್ನು ತೋರಿಸುತ್ತಾ, ಮುಖಚೇಷ್ಟೆ ಮಾಡಿದರು (ರಂಗವ. ೯೩).

[ಸಂ. ಮುಖಚೇಷ್ಟಾ]

**ಮುಖಜ** (ನಾ). ೧. ಬ್ರಹ್ಮನ ಬಾಯಿಯಿಂದ ಹುಟ್ಟಿದವನು ; ಬ್ರಾಹ್ಮಣ ೨. ಬಾಯಿಯಲ್ಲಿ ಹುಟ್ಟಿದುದು ; ಹಲ್ಲು. ೩. ಅಂಗಜ ; ಕಾಮ. ೪. [ನಾಟ್ಯ] ಆಂಗಿಕಾಭಿನಯದ ಮೂರು ಬಗೆಗಳಲ್ಲಿ ಒಂದು : ಆಂಗಿಕಾಭಿನಯವು ಶಾರೀರ, ಮುಖಜ, ಚೇಷ್ಟಾಕೃತ ಎಂದು ಮೂರು ವಿಧ ; ಕೈ ಕಣ್ಣು ಮುಂತಾದ ಅಂಗೋಪಾಂಗಗಳ ಚಲನೆಗಳು ಶಾರೀರ ಮತ್ತು ಮುಖಜ (ಸಂನಾಟ. ೧೧) ; ಮುದ್ರೆಗಳು ಮೂರು ವಿಧವಾಗಿವೆ. ೧. ಶಾರೀರ, ೨. ಮುಖಜ, ೩. ಚೇಷ್ಟೀಕೃತ (ಅಭಾಪ. ೯೪).

**ಮುಖಜನ್ಯೆಯ** = ಮನ್ಮಥನ ತಂದೆ ; ವಿಷ್ಣು : ಮುಖಜನ್ಯೆಯನೆ ಮುಕುತಾರ್ಥವಾಹದೇನೊ ಅಖಿಳತಾಮಸಗಳು ಎನಗಿಲ್ಲವೊ (ಎಡಾಕ. ೧೧೭-೧). [ಸಂ.]

**ಮುಖತಃ** (ಅ). ಪ್ರತ್ಯಕ್ಷವಾಗಿ ; ಮೊಖ್ತಾ : ಶಚೀಂದ್ರನು ಅವನ ಹತ್ತಿರಕ್ಕೆ ಹೋಗಿ ವಿಷಯಗಳನ್ನೆಲ್ಲಾ ಮುಖತಃ ತಿಳಿದುಕೊಂಡನು (ಬಂಕಿಮ. ೯೨). [ಸಂ. ಮುಖತಸ್]

**ಮುಖದರುಶನ** (ನಾ). ಮುಖವನ್ನು ಕಾಣುವುದು : ವರುಣದೇವರಿಗೊಬ್ಬ ಪುತ್ರನ ವರಸಿ ಬೇಡಿದೆ ಪುತ್ರವರಮುಖದರುಶನವ ಮಾಡುವೆನೆನುತಲಾ ಮಗನು ಮೋಜಿಯನು ತೋಜಿ ಮಜುದಿನವಗಲಿ ಪೋದನು (ಸಂಭಶ. ಕಂ. ೧-೧೭) ; ಏನಯ್ಯ ಕಾಲಪುರುಷ ನಿನ್ನ ಮುಖದರುಶನವನೊಮ್ಮೆ ದಯಪಾಲಿಸಯ್ಯ (ಪಲಮು. ೫೭-೨). [<ಸಂ. ಮುಖದರ್ಶನ]

**ಮುಖದರ್ಶನ** (ನಾ). = ಮುಖದರುಶನ : ವನಜಮುಖಿ ಕೇಳ್ ಪುತ್ರ ಮುಖದರ್ಶನವು ಸುಲಭವೆ ಪುಣ್ಯಹೀನರಿಗೆ (ಕುಮಾ.ಅ. ೪-೨೯) ; ಅವನ ಮುಖದರ್ಶನದಿಂದ ಅವಳಲ್ಲಿ ಕೋಪವೇ ಎದ್ದು ನಿಂತಿತು (ಕಾಂಕಮ. ೧೮). [ಸಂ.]

**ಮುಖದಾಕ್ಷಿಣ್ಯ** (ನಾ). (ಮನಸ್ಸಿನಲ್ಲಿ ಇಷ್ಟವಿಲ್ಲದಿದ್ದರೂ) ಬೇರೆಯವರ ಮನಸ್ಸಿಗೆ ನೋವಾಗದಂತಿರಲು ತೋರಿಸುವ ಸೌಜನ್ಯ, ಕರುಣೆ ಮುಂತಾದುವು : ಆ ಸಿಟ್ಟಿನಲ್ಲಿ ಆತನಿಗೆ ಯಾವ ಸಂಯಮವೂ ಉಳಿಯುವುದಿಲ್ಲ, ಯಾರ ಮುಖದಾಕ್ಷಿಣ್ಯವನ್ನೂ ಆತ ನೋಡುವುದಿಲ್ಲ (ಚಿಕಂಬಾ. ೧೭). [ಸಂ.]

**ಮುಖದಿರುಹು** (ಕ್ರಿ). ೧. ಮುಖವನ್ನು ಹಿಮ್ಮುಖವಾಗಿ ಹೊರಳಿಸು ; ಹಿಂದಕ್ಕೆ ತಿರುಗು : ಬೆಜಗಡರಿ ಮುಖದಿರುಹಿ ಹಿಂದಣೆನಿಜದ ಕರ್ಣನ ನೋಡಿ ಮುಖದಲಿ ಕಿಜುನಗೆಯ ಕೇವಣಿಸಿ ನುಡಿದನು (ಕುಮಾ.ದ್ರೋ. ೭-೩೩). ೨. ಕೋಪ, ಅಸಮಾಧಾನಗಳಿಂದ ಮುಖವನ್ನು ಬೇರೆಡೆಗೆ ತಿರುಗಿಸು ; ದುಮ್ಮಾನವನ್ನು ಸೂಚಿಸು : ದಾಯಾದ್ಯರೊಳಗವತರಿಸಿದನು ಮಗನೆನುತ ಮುಖದಿರುಹಿದಳು ಗಾಂಧಾರಿ (ಕುಮಾ.ಅ. ೪-೪೪) ; ಎಲೆ ಹೊಲೆಯ ಪೋಗೆಂದಬಲೆ ಮುಖದಿರುಹಿದಳು ಪಾತಿಯಲಿ (ಕೂರಗ. ೫-೩-೫೫). ೩. ಹಿಂದಕ್ಕೆ ಹೋಗು ; ಹಿಮ್ಮೆಟ್ಟು ; ಸೋಲು : ಪವನಸುತ ಮುಖದಿರುಹಿದನು . . . ಕರ್ಣನ ಖಾತಿ ಮೊಪ್ಪರಿಸೆ ಐವರ ಮುಜಿದುದು ವಿಜಯಲಕ್ಷ್ಮಿಯು ಸವತಿ ಸೇರಿತು ಸುಭಟರಿಗೆ (ಕುಮಾ.ಕ. ೧೦-೪೦). ೪. ಹಿಮ್ಮೆಟ್ಟುವಂತೆ ಮಾಡು ; ಸೋಲಿಸು : ವಿಗಡರೆಸುಗೆಯ ಭೂರಿಬಾಣದ ಹಿಂಡು ತಜಿದವು ಹೊಗುವ ಗಂಡಿಗರ ವಾರುವನ ಮುಖದಿರುಹಿದವು ಮದವಾರಣಂಗಳ ಕೊಡಹಿದವು (ಕುಮಾ.ಅ. ೧೮-೪೧). ೫. ನಿರ್ಲಕ್ಷಿಸು ; ಉಪೇಕ್ಷಿಸು : ಜೀಯ ಸಾಕಿನ್ನುವರದೊಳಿನಗೇನ ಬೆಸಸಿದರನಿತ ತಾ ಮುಖದಿರುಹಿದರೆ ಡಿಂಗರಿಗನಲ್ಲ (ಕುಮಾ.ಶ. ೩-೯೦).

[ಮುಖ + ತಿರುಹು$_1$ (<ತಿರಿಪು$_1$)]

**ಮುಖದೋಱು** (ಕ್ರಿ). ಮುಖವನ್ನು ತೋರಿಸು ; ಕಾಣಿಸಿಕೊಳ್ಳು ; ಗೋಚರಿಸು : ಮುಂದೆ ಬರು : ಬಾಲಕರ ಪೂರ್ಣೇಂದು ಬಾರೋ ರಿಪುಕುಲಾಂತಕನಿಪುಣ ಮುಖದೋಱೊ (ಕುಮಾ.ದ್ರೋ. ೮-೨೦).

[ಮುಖ + ತೋಱು]

**ಮುಖದ್ರೋಣಿಕೆ** (ನಾ). [ಅಶ್ವಶಾ] ಕುದುರೆಯ ನಾಲಗೆಯು (ದೋಣಿಯಂತೆ) ಬಾಗುವ ಒಂದು ಬಗೆಯ ರೋಗ : ತಾವರೆಯಂ ಕನ್ನೆಬಿಳ್ದಲ ಪೂವಂ ಪೋಥಾಯುರೇಖೆ ಪೋಲೆ ವಿಶೇಷಂ ತೀವಿ ಮುಖದ್ರೋಣಿಕೆಯಿಂದಾ ವಾಜಿಗೆ ಮರಣವಿರ್ಪತಯ್ದುಬ್ದದೊಳ್ (ಅಶ್ವಶಾ ೫-೭೧).

[ಸಂ. ಮುಖದ್ರೋಣಿಕಾ]

**ಮುಖದ್ವಾರ** (ನಾ). ಬಾಯಿ : ಮುಖದ್ವಾರದಿಂದ ಗರ್ಭಕುಹರವನ್ನು ಪ್ರವೇಶಿಸಿದ ಆ ಮದ್ಯಭೂತವು ಸ್ವಲ್ಪ ಹೊತ್ತಿನೊಳಗಾಗಿ ಬುದ್ಧಿಯನ್ನೆಲ್ಲ ಹಾಳುಮಾಡಿದುದರಿಂದ ಮತ್ತನಾಗಿ ಅವಿವೇಕಿಯಾದನು (ಕಥಕ. ೩೯).

[ಸಂ.]

**ಮುಖಪಟ್ಟೆ** (ನಾ). ಕುದುರೆ ಮುಂತಾದ ಪ್ರಾಣಿಗಳ ನೆತ್ತಿಗೆ ಹಾಕುವ ಒಂದು ಬಗೆಯ ಅಲಂಕಾರಸಾಧನ : ಆಗ ಭಗದತ್ತನು ಹದಿನಾಲ್ಕು ತೋಮರಗಳನ್ನು ಆ ದಶಾರ್ಣದೇಶಾಧಿಪತಿಯ ಆನೆಯ ಮೇಲೆ ಇರುವ ಸುವರ್ಣಮಯವಾದ ಮುಖಪಟ್ಟೆಯ ಮೇಲೆ ಪ್ರಯೋಗಿಸಲು (ಕೃವಾಶೀ. ೧೪೮). 'ಮೊಗವಟ್ಟೆ' ಪರಾ.

[ಸಂ. ಮುಖಪಟ್ಟ. / ತಮಿ. ಮುಕಪಟ್ಟು. / ಮರಾ. ಮುಖಪಟ್ಟಾ]

**ಮುಖಪತ್ರ** (ನಾ). ಪುಸ್ತಕ ಅಥವಾ ಪತ್ರಿಕೆಯ ಮೊದಲಿನ ಪುಟ,– ಹಾಳೆ ; ಮುಖಪುಟ : ಈ ಪೀಠಿಕಾಭಾಗಕ್ಕೆ ಸಂಬಂಧಿಸಿದ ಭಾಗಗಳಾವುವೆಂದರೆ : (೧) ಪುಸ್ತಕದ ಸಂಕ್ಷೇಪವಾದ ಹೆಸರು, (೨) ಮುಖಚಿತ್ರ, (೩) ಮುಖಪತ್ರ (ಗ್ರಂಥದ, ಗ್ರಂಥಕರ್ತೃವಿನ ಮತ್ತು ಪ್ರಕಾಶಕನ ಹೆಸರುಳ್ಳದ್ದು) . . . (೧೧) ಉಪನಾಮ (ಮುದ್ರಶ. ೪೨); ಮುಖಪತ್ರ ಮುದ್ದಾಗಿ ಮುದ್ರಣವಾಗಿ . . . ವರ್ಣಚಿತ್ರಗಳಿಂದ ಪರಿಪೂರ್ಣವಾಗಿರಬೇಕು (ಶಿಕ್ಷದ. ೨೭೯); "ಬಲದೇವ ಮತ್ತು ತಾರೆಯರ ನರ್ತನವೆಂದು" ಮುಖಪತ್ರಗಳ ಮೇಲೆ ವರ್ಣಚಿತ್ರಗಳನ್ನೊಳಗೊಂಡು ಪ್ರಚಾರವಾಯಿತು (ಕಲಾಸಂ. ೧೦೩). [ಸಂ.]

**ಮುಖಪತ್ರಿಕೆ** (ನಾ). ಮುಖ್ಯವಾದ ಪತ್ರಿಕೆ ; ಪ್ರಸಿದ್ಧವಾದ ಪತ್ರಿಕೆ : ಇವರ ಹೆಸರು ಸಾಧ್ಯವಿದ್ದರೆ . . . ಮುಖಪತ್ರಿಕೆಯಲ್ಲಿ ಬಂದುಬಿಟ್ಟರೆ ಇವರಿಗೆ ಸದ್ಗತಿ ಸಿಕ್ಕಂತೆಯೇ (ಹುತ್ತುಹು. ೯೭). [ಸಂ. ಮುಖಪತ್ರಿಕಾ]

**ಮುಖಪರಿಚಯ** (ನಾ). (ಯಾರಾದರೊಬ್ಬ ವ್ಯಕ್ತಿಯನ್ನು) ಹಿಂದೆ ನೋಡಿದ ಗುರುತು : ಎಲ್ಲೋ ನೋಡಿದ ನೆನಪು . . . ಮುಖಪರಿಚಯವೂ ಇದೆ (ಕಳುಮ. ೪೭). [ಸಂ.]

**ಮುಖಪರಿಮಳ** (ನಾ). ಮುಖದಿಂದ ಹೊರಡುವ ಸುಗಂಧ ; ಉಸಿರಿನ ಸುವಾಸನೆ : ಚಂದ್ರಕಾಂತಸುಧಾವೇದಿಕಾಮಧ್ಯಭೂಮ್ಯಂತ

ರಾಳೆದೊಳ್ ಒರ್ವಳ್ ಮುಖಪರಿಮಳನಿಪತದ್ಭ್ರಮರವಾತಾಕ್ರಾಯಾಸಿತೆ ಯಾದಳಂ (ಶಾಂತಿಪು. ೮-೮೬ ಪ). [ಸಂ. ಮುಖಪರಿಮಲ]

**ಮುಖಪಾಠ** (ನಾ). ಪುಸ್ತಕದ ಆಧಾರವಿಲ್ಲದೆ ಬಾಯಲ್ಲಿಯೇ ಹೇಳುವಂತೆ ಅಭ್ಯಾಸಬಲದಿಂದ ಜ್ಞಾಪಕದಲ್ಲಿಡುವುದು ; ಬಾಯಿಪಾಠ ; ಉರು : ಅವುಗಳನ್ನು ಮೇಲಿಂದ ಮೇಲೆ ಓದಿ ಧ್ಯಾನದಲ್ಲಿಡಬೇಕು.. ಆದಷ್ಟು ಮುಖಪಾಠ ಮಾಡಬೇಕೆಂದು ಒತ್ತಾಯಪಡಿಸುತ್ತಿದ್ದರು (ಸೀಪಾಶ. ೩೭). [ಸಂ.]

**ಮುಖಪಾವಡ,** ಮುಖಪಾವುಡೆ (ನಾ). ೧. ಅವಕುಂಠನ ; ಮೊಸುಕು : ಹಡಪ ಕನ್ನಡಿಯು ಮುಖಪಾವಡ ಕುಜಾಯಮಂ ಪಿಡಿದು . . . ಮಾನಿನಿಯರು (ಪಪವೋ. ೫-೯೬). **ಮುಖಪಾವುಡೆ**: ೨. ಮುಖವನ್ನು ಒರಸಿಕೊಳ್ಳಲು ಉಪಯೋಗಿಸುವ ಬಟ್ಟೆ : ಅಳಿಳಂಕ ರೂಪನ ಮುಖಚಂದ್ರಮನ ಕೂಡಿ ಸುಖದೊಳೋಲಾಡು 'ನೀನೆಂದು ಸಖಿ ದರಹಸಿತ ಬೆಳ್ದಿಂಗಳೀವೊಲು ಶುಭ್ರಮುಖಪಾವುಡೆಯು ನೀಡಿದಳು (ಕಂಪಕಿ. ೨೪-೬೪). [ಮುಖ + ಪಾವಡ$_1$ (< ಪಾವುಡ$_1$)]

**ಮುಖಪಾವುಡೆ** 'ಮುಖಪಾವಡ' ನೋ.

**ಮುಖಪುಟ** (ನಾ). = ಮುಖಪತ್ರ : ಶ್ರೀ ಕಾರಂತರು ಈ ಪುಸ್ತಕದ ಮುಖಪುಟಕ್ಕೆ ತಮ್ಮ ಚಿತ್ರದಿಂದ ಈ ಸಂಗ್ರಹವನ್ನು ಅಲಂಕರಿಸಿದ್ದಾರೆ (ಕೇಪೋಡ. ೯ ಪತ್ನ ಪುಟ); ಇವುಗಳನ್ನು ಸಾಮಾನ್ಯವಾಗಿ ಗ್ರಂಥದರ್ಶಕದ ಮೇಲೆ, ಮುಖಪುಟದ ಹಿಂಬದಿಗೆ . . . ಬರೆಯಲಾಗುತ್ತದೆ (ಗ್ರಂಶಾಂ. ೩೨). [ಸಂ.]

**ಮುಖಪೂರಣ** (ನಾ). ನೀರು ಮುಂತಾದ ದ್ರವಪದಾರ್ಥಗಳಿಂದ ಬಾಯಿ ಮುಕ್ಕಳಿಸುವುದು : "ಗಂಡೂಷಃ , ಮುಖಪೂರಣಂ – ಈ ೨ ಮುಕ್ಕುಳ್" (ಅಣಾಯು. ೧೩೦-೦೨೦). [ಸಂ.]

**ಮುಖಪ್ರಕ್ಷಾಳನ** (ನಾ). ಮುಖವನ್ನು ತೊಳೆಯುವಿಕೆ ; ಮುಖಮಜ್ಜನ : ಅಂತು ನೃಪತಿ ವ್ಯಗ್ರನಾಗಿ ಮುಖಪ್ರಕ್ಷಾಳನಾರ್ಥಂ ಪೇರಡವಿಯೊಳಂಜಲಿಯಿಂ ಜಲಮಂ ತಂದು (ಶಾದಂಪೂ. ೭೦೦); ತಣ್ಣನೆಯ ನೀರಿನಲ್ಲಿ ಮುಖಪ್ರಕ್ಷಾಳನ, ಪಾದಪ್ರಕ್ಷಾಳನಗಳನ್ನು ಮಾಡಿ . . . ಪ್ರಯಾಣವನ್ನು ಮುಂದುವರಿಸಿದರು (ಶಾಂತಲಾ. ೨೪೮). 'ಪಾದಪ್ರಕ್ಷಾಲನ' ಪರಾ. [ಸಂ. ಮುಖಪ್ರಕ್ಷಾಲನ]

**ಮುಖಪ್ರಸಾಧನ** (ನಾ). ಮುಖದ ಅಲಂಕಾರ : ಪೊಸಮಾಣಿಕವಲ್ಲಣ ಮಚ್ಚಮುತ್ತು ತಳ್ತೆಸೆವ ಮುಖಪ್ರಸಾಧನಂ . . . ಒಪ್ಪೆ ಬಂದುಮಂದಸ ದೃಶವಾಜಿಗಳ್ (ರಾಶಚೇ. ೧೪-೬೨). [ಸಂ.]

**ಮುಖಬಿಲೆ** 'ಮೋಕಾಬಿಲೆ' ನೋ.

**ಮುಖಬೆಲೆ** (ನಾ). ೧. ಹಣ ಅಥವಾ ವಸ್ತುವಿನ ಮೇಲೆ ನಮೂದಿಸುವ ಬೆಲೆ ; ನಮೂದು ಬೆಲೆ : ಆ ಪುಸ್ತಕದ ಮುಖಬೆಲೆ ನಾಲ್ಕು ರೂಪಾಯಿ (೬೨೦). ೨. (ಅಲಂ) ಯೋಗ್ಯತೆ ; ಅಂತಸ್ತು : ಅವನು ಯಾರನ್ನಾದರೂ ಅವರ ಮುಖಬೆಲೆಗೆ ಮಾತ್ರ ಸ್ವೀಕರಿಸುವವನು (ಗಂಪಾಯು. ೭೫). [ಮುಖ + ಬೆಲೆ$_1$]

**ಮುಖಭಂಗ** (ನಾ). (ಅಲಂ) ಎದುರೆದುರಿಗೇ ಮಾಡುವ ಅವಮಾನ ; ತೇಜೋವಧೆ : ಊರಲ್ಲೆಲ್ಲ ಜಂಬ ಕೊಚ್ಚುತ್ತ ಅಲೆಯುತ್ತಿದ್ದ ಕಾಮಣ್ಣನ ಗುಂಪಿನವರಿಗೆಲ್ಲ ಮುಖಭಂಗವಾದಂತಾಗಿತ್ತು (ಶುಣ್ಣಿ. ಕೆ. ೭೮) ; ಹಿಂದೆ ಎಷ್ಟೋ ಸಲ ನಿಮ್ಮಿಂದ ಅವರಿಗೆ ಮುಖಭಂಗವಾಗಿದೆ (ಹಳ್ಳಿ ಹಾ. ೨೮). [ಸಂ.]

**ಮುಖಭಂಗಿ** (ನಾ). ಮುಖದ ಭಾವ, – ರೀತಿ ; ಮುಖಮುದ್ರೆ : ರಾಮನಂ . . . ಶೋಕಮುಖಭಂಗಿಯಿಂದಶ್ರುಲೋಚನನಾಗಿ ನಿಡುಸುಯ್ದುನೆರ್ದೆ ನೊಂದನೋಲ್ (ಶ್ರೀರಾಪಾ. ೦೯೬-೫೦೮); ಶಿಂಗನ ಮುಖಭಂಗಿಯನ್ನು ನೋಡಿಯಾದ ಮೇಲೆ ಸ್ವಲ್ಪ ಹಿಂದೇಟು ಹಾಕಿದ (ಪಸುಹೊ. ೬೬). [ಸಂ. ಮುಖಭಂಗೀ]

**ಮುಖಭಂಗಿತ** (ನಾ). ಅಪಮಾನವನ್ನು ಹೊಂದಿದವನು ; ನಾಚಿಕೆಗೆ ಈಡಾದವನು : ಮರುಕ್ಷಣ ನಾನು . . . ಕೋಣೆಯಿಂದ ಹೊರಗೆ ಮುಖಭಂಗಿತನಂತೆ ಬಂದೆನು (ಹೇಮಂತ. ೩೫೬). [ಸಂ.]

**ಮುಖಭದ್ರ** (ನಾ). ಮುಂಭಾಗದ ಅಂಗಳ ; ಮುಖಮಂಟಪ : ಶ್ರೀಮನ್‌ಮಹಾಮಣ್ಡಳೇಶ್ವರಂ ಎಚಿಹರಸದೇವಂ ಬಡಗಣಮುಖಭದ್ರವ ನಳಂಕಾರಸಹಿತ ಮಾಡಿಸಿದ ಮಂಗಳಮಹಾಶ್ರೀ (ಎಕ. VII (S). ಶಿಕಾ. ೩೫೦-೦ ; ಸು.1200). [ಸಂ.]

**ಮುಖಭಾವ** (ನಾ). = ಮುಖಭಂಗಿ :- ಅವನು ಮಾತಾಡುತ್ತಿದ್ದಾಗ ವ್ಯಕ್ತವಾಗುತ್ತಿದ್ದ ಮುಖಭಾವ ಅವಳ ನೆನಪುಗಳನ್ನು ಕೆರಳಿಸುತ್ತಿತ್ತು (ಕೃಪರು. ೦೯೦). [ಸಂ.]

**ಮುಖಮಂಟಪ** (ನಾ). ದೇವಾಲಯ, ಅರಮನೆ ಮುಂತಾದುವುಗಳ ಮುಂಭಾಗದ ಹಜಾರ ; ಮೊಗಸಾಲೆ : ಮುಖಮಂಟಪದ ಕ್ಷುಲ್ಲಕ ದ್ವಾರದ ಹೇಮಕುಂಭ ಎಂಟುಸಾವಿರ (ಕಪಾರಿ. ೦೬೭); ಅದರ ಮುಂದೆ ರಮಣೀಯವಾದ ಮುಖಮಂಟಪವನ್ನು . . . ಮಾಡಿದ್ದಾರೆ (ಶುಂಶಾಯು. ೬-೫೭); ಮುಖಮಂಟಪ ದೇವಾಲಯಗಳಲ್ಲಿ ನವರಂಗದ ಮುಂಭಾಗದಲ್ಲಿ ಸಾಧಾರಣವಾಗಿ ಇರುತ್ತದೆ. ಇದರ ಮೂಲಕವೇ ಜನಗಳು ಒಳಕ್ಕೆ ಹೋಗುವುದು (ಶೃಪಾಶು. ೩೪). [<ಸಂ. ಮುಖಮಂಡಪ]

**ಮುಖಮಂಡನ** (ನಾ). ತುಟಿಯನ್ನು ಅಂದಗೊಳಿಸುವಂತಹುದು ; ತಾಂಬೂಲ : 'ಮುಖಮಂಡನಕ್ರೀಡೆ' ಪರಾ. [ಸಂ.]

**ಮುಖಮಂಡನಕ್ರೀಡೆ** (ನಾ). ತಾಂಬೂಲಚರ್ವಣ : ಗಗನಮಂಡಲಮಂ ಚಕ್ರವರ್ತಿ ಮುಖಮಂಡನಕ್ರೀಡೆಯಿಂ ನೋಡುತ್ತಿರ್ಪನ್ನೆಗಂ (ಚಂದ್ರಪ್ರ. ೯-೪ ಪ). [ಸಂ. ಮುಖಮಂಡನಕ್ರೀಡಾ]

**ಮುಖಮಂಡಪ** (ನಾ). = ಮುಖಮಂಟಪ : ಹೊರಗಿನ ಮುಖಮಂಡಪ ಮತ್ತಾವುದೋ ದೇವಾಲಯದ ಕಲ್ಲುಗಳಿಂದ ನಿರ್ಮಿತವಾಗಿದೆ (ಹೊಯ್ಸಪಾ. ೯೫). [ಸಂ.]

**ಮುಖಮಜ್ಜನ** (ನಾ). ಮುಖವನ್ನು ತೊಳೆಯುವಿಕೆ; ಮುಖಪ್ರಕ್ಷಾಳನ; ರಾವಣನು ವಿದಿತ ಮುಖಮಜ್ಜನದ ಸಲಿಸಿರೆ . . . ಚಾರರು ಬಂದು ಹೇಳಿದರು (ಕೌಶಿರಾ. ೦೬-೦) ; ಹಾಸಿಗೆಯನ್ನು ಸುರುಳಿ ಮಾಡಿ ಒಳಕೋಣೆಯಲ್ಲಿರಿಸಿ, ಮುಖಮಜ್ಜನಕ್ಕೆ ಹೊರಟೆ (ಮುಕಶ್. ೬೬). [ಸಂ.]

**ಮುಖಮಣಿ** (ನಾ). ಹಾರದ ಮಧ್ಯದಲ್ಲಿರುವ ರತ್ನ ; ನಾಯಕಮಣಿ : "ತರಳಃ, ಹಾರಮಧ್ಯಗಃ—ಹಾರದ ನಡುವೆಯಿರುವ ನಾಯಕಮಣಿ . . . ಸರದ ಮುಖಮಣಿ" (ಸಿದ್ಧಾಂತಿ. ೦೯೯). [ಸಂ.]

**ಮುಖಮಾಯ** (ನಾ). ಮುಖವು ಕಾಣದಂತೆ ಮಾಡುವಿಕೆ,— ಅದೃಶ್ಯಗೊಳಿಸುವಿಕೆ : ಕತ್ತರಿ ಮಳಲು ಚಂಡವೇದಿಯು ಕಿತ್ತ ಹಿಡಿಯಂಬಿಡುವ ಕಲ್ಲುಂ ಮತ್ತೆ ಮುಖಮಾಯದ ತಿಲಕಮುಂ ಕರ್ಕಟಿಯ ರಜ್ಜು ನೀಲಗಪ್ಪಡ ದುಡಗೆ . . . ನಾಯಿಗಳ ಬಾಯ್ಕಟ್ಟು ಓಳಿಯಿಂದಿವು ಮೆಚಿಸಿಯೆ (ಬಸವು. ೫೦-೩). [ಸಂ. ಮುಖಮಾಯಾ]

**ಮುಖಮಾರ್ಜನ** (ನಾ).= ಮುಖಮಜ್ಜನ : ಮರುದಿವಸ ಮುಂಜಾನೆ ಮುಖಮಾರ್ಜನಾದಿ ವಿಧಿಗಳನ್ನು ತೀರಿಸಿಕೊಂಡು, ಬಾಬೂರಾಯನು ತನ್ನ ಆಫೀಸುರೂಮಿಗೆ ಬಂದು ಕುಳಿತುಕೊಳ್ಳಲು, ಆ ದಿನದ ಟಪಾಲು ಬಂತು (ಕಳ್ಳಿಗಾ. ೨೭). [ಸಂ.]

**ಮುಖಮಾರ್ಜನೆ** (ನಾ). ಮುಖವನ್ನು ತೊಳೆಯುವಿಕೆ: ಎದ್ದವನೇ ಕೆಳಗೆ ಹೋಗಿ, ಮುಖಮಾರ್ಜನೆ ಮಾಡಿಕೊಂಡ (ಅಕಪಾ. ೦೨). [ಸಂ. ಮುಖಮಾರ್ಜನ]

**ಮುಖಮುದ್ರಿತ** (ನಾ). ೧. ಬಾಯಿ ತೆರೆಯದಿರುವಂಥದು : ಶ್ರುತ ಲಕ್ಷ್ಮೀಬುಧ[ಸಭಾ]ಮುದ್ರಿತಮಾದುದು ಸುಜನವೃತ್ತಿ ದುರ್ಜನಮುಖ ಮುದ್ರಿತಮಾದುದೀ ಜಗನ್ಮುದ್ರಿತಮಾದುದು ಪೆಂಪನನ್ತದಣ್ಣಾಧಿಪನ (ಶಾಇ. XX, ೭೪-೨೩ ; 1112). ೨. ಬಾಯಿ ಕಟ್ಟಿಸುವವನು, — ಮುಚ್ಚಿಸುವವನು : ದಿಟನುಡಿವನ್ಯವಾದಿ ಮುಖಮುದ್ರಿತನುದ್ಧವಾದಿ ವಾಗ್ಬಲೋದ್ಭಟ ಜಯಕಾಳಮಂಡನಪಶುಬ್ದುಮದಾನ್ಧಕುವಾದಿ ದೈತ್ಯ ಧೂರ್ಜಟಿ ಕುಟಿಳಪ್ರಮೇಯ ಮದವಾದಿಭಯಂಕರನೆನ್ದು ಮಂಡುಳಂ ಸ್ಫುಟಪಟುಘೋಷದಿಕ್ತಟಮನೆಯ್ದಿತು ವಾಕುಪಟು ಗೋಪನನ್ದಿಯ (ಎಕ. II, ೬೯-೮೮ ; 1100). [ಸಂ.]

**ಮುಖಮುದ್ರೆ** (ನಾ). ಮುಖದಲ್ಲಿ ಕಂಡುಬರುವ ಭಾವ ; ಮುಖಚರ್ಯೆ : ಸ್ವಭಾವಮುಗ್ಧೆ ಮುಗ್ಧವದನವನಜಮುನಿಜಗಿ ತನ್ನ ಮುನ್ನಿನ ಜನ್ಮಂಗಳನಿಂತೆಂದು ಬರೆದು ತೋರ್ಪಂತೆ ನೆಲನಂ ಬರೆಯುತ್ತ ಮುಪಗತಮುಖಮುದ್ರೆಯಾಗಿ (ಆದಿಪು. ೩-೩೨ ವ) ; ಇದರಲ್ಲಿ . . . ರಸ ಭಾವಗಳನ್ನು ಸುವ್ಯಕ್ತವಾಗಿ ತೋರ್ಪಡಿಸುವ ಮುಖಮುದ್ರೆಗಳೂ ಇವೆ (ಭಾರಪ. ೫೫೭). [ಸಂ. ಮುಖಮುದ್ರಾ]

**ಮುಖಮುನಿಸು** (ನಾ). ಮನಸ್ತಾಪ ; ವೈಮನಸ್ಯ : ಮಾತಿಗೆ ಮಾತು ಕಲಿತು ನುಡಿಗೆ ನುಡಿಯು ಕಲಿತು ತರ್ಕಮರ್ಕಟರಂತೆ ಹೋರುವ ಬಯಲ ಸಂಭ್ರಮದ ತರ್ಕಿಗಳ ಕಂಡರೆ ಮಾಗಿಯ ಕೋಗಿಲೆಯಂತೆ ಮುಖಮುನಿಸಾ ಗಿರಿಪಯ್ಯ (ಸಿದ್ಧೇವ. ೭೫-೨೦೮). [ಮುಖ + ಮುನಿಸ್ಸು]

**ಮುಖಮೂಲ್ಯ** (ನಾ). ನಮೂದಿಸಿದ ಬೆಲೆ ; ಮುಖಬೆಲೆ : "(ನಾಣ್ಯ, ಕಾಗದದ ಹಣ, ಮೊ.ಗಳ ಮೇಲೆ ಹಾಕಿರುವ) ಮುಖಮೂಲ್ಯ ; ನಮೂದು ಬೆಲೆ" (Face Value. ಇಂಕನ). [ಸಂ.]

**ಮುಖರ**₁ 'ಮುಕುರ₁' ನೋ.

**ಮುಖರ**₂ (ಗು). ೧. ಅತಿಯಾಗಿ ಮಾತನ್ನಾಡುವ ; ಗಳಹುವ : ಹರಟುವ. ೨. ಸದ್ದುಮಾಡುವ ; ಧ್ವನಿಸುವ : ಧವಳಿತಮುರುಹ ಪವನನನಪಮಾನಂಗೆಯ್ದು ಕಂದ ನಿಷ್ಠುರಚೀರೀರವಮುಖರ ಪರುಷಕಾನನ ಪವಮಾನನ ಸೋಂಕನಾಸೆಗೆಯ್ಯಲ್ ಬಗೆದೈ (ಶಂರಾವಿಜ. ೭-೧೦). ೩. ಝಣಝಣಿಸುವ; ಝಣತ್ಕಾರ ಮಾಡುವ : ವರಹಂಸಕದಂಬಕ ಮದು ಶರದಂಬುದಮಲ್ತು ಮುಖರನೂಪುರಸಂವಾದಿರವಂ ನೆಗಲ್ದಪ್ಪುದು ಬಂಧುರಮದಜೀಂದಿದಜಿಸೊಳೆಂಬುದುಪಮಾಕ್ಷೇಪಂ (ಕವಿರಾ. ೩-೧೧೩). ೪. ಮಾರ್ದನಿಯನ್ನು ಕೊಡುವ ; ಅನುರಣನ ಮಾಡುವ. ೫. ಭಾವವನ್ನು ಸೂಚಿಸುವ, ಹೊರಗೆಡಹುವ. ೬. ತೆಗಳುವ; ನಿಂದಿಸುವ : 'ಮುಖರಭಾಷೆ' ಪರಾ. ೭. ಲೇವಡಿ ಮಾಡುವ : ಅಣಕಿಸುವ. (ನಾ). ೮. ಶಬ್ದ ; ಧ್ವನಿ : ಉಪಹಾರ ಕುಸುಮಮತ್ತಮಧುಕರಝಂಕಾರಮುಖರಮುಮಪ್ಪ ಪುರಮನರಮನೆಯು ಮನತಿವಿಭೂತಿಯಿಂ ಪುಗಿಸಿ (ಶಂರಾವಿಜ. ೬-೯೫ ವ) ; ಅವಿವೇಕಂ ತದ್ಧರ್ಮ ಶ್ರವಣದಿನೋಸರಿಸಿದಂತಿರಾತ್ರಿಯುಮಣಮಾಗವೆ ಚಂಪಕಧಾತ್ರೀರುಹನಿವಹಂ ಗಳ್ ಮುಖರಮಲಿನಮಧುಪವ್ರಜದಾ (ಶಂಪ್ರಪು. ೨-೯೪) ; ತನಗ ಹಮಿಕೆಯಿಂದಿರದೆಜಿಪ ನೃಪಾಳರ ಮೌಳಿಮಾಳೆ ಕುಟ್ಟಿಮಸಂಘಟ್ಟನದಿನತಿ ಮುಖರಮಾಗಿರ್ಪನೆಗಂ (ಶುಕ್ಲಪು. ೪-೭೦). 'ಮುಖರಗೊಳ್' ಪರಾ. ೯. ಚೆನ್ನಾಗಿ ಮಾತನ್ನಾಡುವವನು : ವಾಚಾಳಿ : ಮುನಿಪತಿನಾರದ ನಭಿನುತಮತಿಮುಖ[ಶಾಕಾಂ. ಕು]ರನಾಗಿ ಹರಿಗಿಂತೆಂದಂ (ಜಗವಿ. ೫-೯೮). ೧೦. ಮಾತು ಕೊಟ್ಟವನು : ಮುಖರನಾದೈ ಪಾರ್ಥ ಬರ್ಹಿರ್ಮುಖರ ಬಾಣಸದಾತನೀತನು ಸುಖವೆ ಹೇಳೈ ತಂದೆ ಖಾಂಡವವನದ ನಿರ್ವಹನ (ಕುವ್ಯಾಕ. ೨೦-೧೭). ೧೧. ನಿಂದಿಸುವವನು ; ಅಪ್ರಿಯವಾದ ಮಾತು ಗಳನ್ನಾಡುವವನು : "ದುರ್ಮುಖಂ ಮುಖರನವಂ" (ವಸ್ತುಕೋ. ೨೦೦-೧೭). ೧೨. ಅಣಕಿಸುವಿಕೆ ; ಪರಿಹಾಸ್ಯಮಾಡುವಿಕೆ. ೧೩. ಮಾತು : ನುಡಿ : ವಚನ : ಅಂತುತ್ತನ್ನಾಮಧಿಬೋಧಂ ಧರ್ಮಾಮೃತಾಸ್ವಾದನ ಪರನಾಗಿ ಕಿಜಿದುಪೊತ್ತನಿರ್ದು ನಿಜಮನೋಗತಕಾರ್ಯವಿಜ್ಞಾಪನಮುಖರ ಮುಖನಾಗಿ (ಆದಿಪು. ೧೫-೨೨ ವ) ; ಮುಹುರ್ಮುಹುರಾಶೀರ್ವಾದಮುಖರ ಮುಖನಾದ ರಾಮದೇವನಂ ಲಕ್ಷ್ಮಣಂ ಮದುಂಬಿಕೆಯುಂ ಕಂಡೆನಿಪ್ಪೆತ್ತಿರ್ದ ಪಳೆಂಬುದುಂ (ಶಂರಾವಿಜ. ೯-೧೩೨ ವ). 'ಮುಖರಿಸು' ಪರಾ. ೧೪. ಕಾಗೆ. ೧೫. ಮುಂದಾಳು : ಮುಖಂಡ : ನಾಯಕ. ೧೬. ಶಂಖ. [ಸಂ.]

**ಮುಖರಂಬ** 'ಮೊಗರಂಬ' ನೋ.

**ಮುಖರಗೊಳ್** (ಕ್ರಿ). ಧ್ವನಿಯಿಂದ ತುಂಬು : ನಾದಮಯವಾಗು : ಸಿದ್ಧರಾದ ಬ್ರಹ್ಮವೇತ್ತರಿಂದುಪಾಶ್ರಿತಮಾಗಿ ಹಾಜೂ ಹಾಜೂ ಹಾಯೆಂದು ಸಾಮಧ್ವನಿಯಿಂ ಮುಖರಗೊಂಡು (ವಿವೇಕ. ೨೮೮). [ಮುಖರ₂ + ಕೊಳ್₁]

**ಮುಖರತ** (ನಾ). [ಕಾಮಶಾ] ಚುಂಬನ : ರತದೊಳಗ್ಗಳಂ ಮುಖ ರತಂ ಸುರತೋತ್ಸವಕೆ (ಆದಿಪು. ೧೧-೯೭). [ಸಂ.]

**ಮುಖರತಿ** (ನಾ). [ಕಾಮಶಾ] ಬಾಯಿಯಲ್ಲಿ ಮಾಡುವ ಒಂದು ಬಗೆಯ ನೀಚತರವಾದ ರತಿಕೇಳಿ : ಸತಿ ತೊಡೆಯೊಳಿರ್ದು ಮುಖರತಿ ಗೆಯ್ಯುತಿರೆ (ಜನವ. ೧೦-೨೭). [ಸಂ.]

**ಮುಖರತೆ** (ನಾ). ೧. ಗಳಹುವಿಕೆ ; ಹರಟುವಿಕೆ : ಮೊದಮೊದಲು ಇಂಗ್ಲಿಷ್ ಕಲಿತವರು . . . ಮದ್ಯ ಮಾಂಸ ಮುಖರತೆ (ವಾಚಾಳತ್ವ) ಇವೇ ನಾಗರಿಕತೆಯ ಮುಖ್ಯಉಪಕರಣಗಳೆಂದು ತೀರ್ಮಾನ ಮಾಡಿ ಕೊಂಡರು (ಸಿವಿಂರ. II, ೨೯೦). ೨. ನಿಂದೆ ; ದೂಷಣೆ : ದಶಮುಖನ ಮುಖರತೆಯುಮನುದ್ಧೃತ್ತತೆಯುಮಂ ನೆಜೆಯೆ ಬಿನ್ನವಿಸಿ ಮಾಣ್ಬುದುಂ (ಶಂರಾವಿಜ. ೧೨-೭೭ ವ). ೩. ಶಬ್ದ ; ಗದ್ದಲ. ೨, ೩ : ಮುಖರತೆ ಪುರುಳಿಯೊಳ್ . . . ಮಹಾಮಾತ್ರವರ್ತನಂ ಸೃಣಿಯೊಳಲ್ಲದಿಲ್ಲಮೆಲ್ಲಿಯುಂ (ಶಂಪ್ರಪು. ೩-೯ ವ). [ಸಂ. ಮುಖರತಾ]

**ಮುಖರಭಾಷೆ** (ನಾ). ನಿಂದೆಯ ಮಾತು ; ತೆಗಳಿಕೆ : ಮೊಗಗಪ್ಪಾಗಿ, ತಮಿಳಲ್ಲಿ ಮುಖರಭಾಷೆಯಿಂದ ಕೊರಲ್ಚಿಯೊಳರಿಕೊಳ್ಳುತ್ತಿದ್ದು, ಕಟ ಪಾಯಲ್ಲಿ ನೊರೆಗಟ್ಟಿ, ಮುಚ್ಚಿಪೋಗಿ — ಮಲಗಿಸಲ್ಪಡುವನು (ಮುಂಕ್ರಕ. ೧೨೨-೫). [ಸಂ. ಮುಖರಭಾಷಾ]

**ಮುಖರಸ** (ನಾ). ೧. ಜೊಲ್ಲು ; ಲಾಲಾಜಲ : ನಿದ್ದೆಯೊಳ ಗಿಂದ ಎಚ್ಚರಿಸಿತ್ತು, ಬಂಜೆಗೆ ತೊರೆಗರೆಯಿಸಿತ್ತು. — ಈ ಮುಖರಸ (ಉಡ್ಯಾಶಿ. ೧೦೭-೯). ೨. ಮುಖದ ಕಾಂತಿ, — ಕಳೆ : ವಿಭೂಷಣ ಪ್ರಭಾತ್ಯುನ್ನತಿ ಮಾಣ್ದಪುಂ ಮುಖರಸೋನ್ನತಿ ಮಾಣದೆ ಜೈನತತ್ವ ಸಂಪನ್ನರನಾಜವಂಜವಭಯಂ ಗೆಲಲಾರ್ಕುಮೊ ಮಿಾಜಲಾರ್ಕುಮೋ (ಶಾಂತಿಪು. ೭-೭೯). [ಸಂ.]

**ಮುಖರಾಗ** (ನಾ). ಮುಖದ ಬಣ್ಣ, — ರಂಗು : ಪ್ರಕಟಿತಪ್ರವಾಳಮುಖ ರಾಗಮುಂ ಸ್ವಸ್ತಿಕಪ್ರಶಸ್ತಮಣಿದರ್ಪಣಸಮರ್ಪಿತಮುಮಪ್ಪ ಕಳಧೌತ ಮಂಗಳಕಳಶಮುಂ ಬಳಸಿ (ಮಲ್ಲಿಪು. ೯-೧೦೧). [ಸಂ.]

**ಮುಖರಿ**₁ (ನಾ). ೧. ಒಂದು ಬಗೆಯ ದೇಶೀತಾಳ: 'ಮುಖರಿಗಾನ' ಪರಾ. ೨. ಮದ್ದಳೆಗಳಲ್ಲಿ ಒಂದು ಪ್ರಕಾರ : ಶ್ರೀವಿರೂಪಾಕ್ಷ ನೋಲಗದಲ್ಲಿ ಮುಖರಿ ಮೊದಲಾದ ನಾಲ್ಕು ತೆಜದ ಮದ್ದಳೆಗಳೊಳಗೆ . . . ನುಡಿಸಿ (ವಿರೂಶಾ. ೮೦). [ಸಂ. ಮುಖರೀ]

**ಮುಖರಿ**₂ (ನಾ). ಒಂಬತ್ತು ಬಗೆಯ ವಿಷದ ಹಲ್ಲುಗಳಲ್ಲಿ ಒಂದು : ಅವರಲ್ಲಿಪೊಂಬತ್ತು ವಿಷದ ಹಲ್ಲುಗಳು ಅವಾವದೆನೆ ಕಾಳರಾತ್ರಿ ಕರಾಳಿ ಯಮದೂತಿ ವಿಭೀಷಣಿ ಭದ್ರಕಾಳಿ ಮುಖರಿ ಸರ್ಪದಂತಿ ಉಗ್ರಭೀಷಣಿ ಆತ್ಯುಗ್ರಭೀಷಣಿ (ವಿಷತ. ೬-೨). [< ಸಂ. ಮುಖರಾ ?]

**ಮುಖರಿಗಾಣ** (ನಾ). [ಸಂಗೀತ] ದೇಶೀತಾಳವನ್ನು ಪ್ರಯೋಗಿಸಿ ಹಾಡುವವನು: ನಾನಾವಿಧದಿಂ ಪ್ರಯೋಗಿಸುವುಪಾಂಗಂಗಳ್ ರಸಂಬೆತ್ತು ಬಿತ್ತರಿಪಂತಾಣತಿ ಮಾಡಿದಂ ಮುಖರಿಗಾಣಂ (ಮಲ್ಲಿಪು. ೬-೨೩) ; ರಾಜಾಂಗಣದೊಳಗೆ ಮಂಗಳಾಚಾರಸಂಗೀತಕವಂ ನೆಗಚ್ವ ಮುಖರಿಗಾಣರ ತಾಳವಾದ್ಯಕೋಳಾಹಳದೊಳಂ (ಅನಂತಪು. ೩-೩ ವ). [ಮುಖರಿ$_1$ + ಗಾಣ$_3$]

**ಮುಖರಿತ** (ಗು). ೧. ಶಬ್ದದಿಂದ ಕೂಡಿದ ; ಧ್ವನಿಸುವ : ವಧೂವರರಿರ್ವರುಮಂ . . . ಅಲಕ್ತಕದ್ರವಾರುಣಚರಣಸಂಚರಣರಣಿತಮಣಿನೂಪುರಮುಖರಿತದಿಗಂತರಾಂತಃಪುರಜನಾಶೀರ್ವಾದಕೋಳಾಹಳಮುಮೆಸೆಯೆ ಮುಂದಿಟ್ಟು ತಂದು (ಆದಿಪು. ೪-೯೭ ವ) ; ಪಾಂಡವಬಳಜಳನಿಧಿಯನಳಿಕುಳಝೇಂಕಾರಮುಖರಿತವಿಶಾಳಕರಟತಟಮಾ ದಿಶಾಗಜೇಂದ್ರಂ ಕಲಂಕೆ (ಗಂಗಾಪು. ೧೧-೬೦ ವ). (ನಾ). ೨. ಧ್ವನಿಯಿಂದ ಕೂಡಿದುದು ; ಶಬ್ದದಿಂದ ತುಂಬಿದುದು : ಜೀರುಂಡೆಯ ಸ್ವರದಿಂದ ವನಭೂಮಿ ಎಲ್ಲವೂ ಮುಖರಿತವಾಯಿತು (ಇಪ್ಪ೪. ೩೪೦) ; ಶಾಂತಿನಿಕೇತನದ ಶಾಲವನದ ನಡುವೆ ನನ್ನ ಜ್ಞಾಪನಸಭೆಯು , ಮರ್ಮರಿತವಾಗಲಿ, ಮುಖರಿತವಾಗಲಿ (ಸಿವಂಧ. II. ೧೬೩). [ಸಂ.]

**ಮುಖರಿಸು** (ಕ್ರಿ). ಸ್ಪಷ್ಟವಾಗಿ ಮಾತನ್ನಾಡು ; ಹೇಳು : ಸುಖದೊಳಿರ್ವಗೆಲ್ಲ ಸುಮುಖರಾಗಿರಬಹುದಖಿಲವ್ಯಾಕುಲ ತಟ್ಟಿದಾಗ ಮುಖಿಕೆ ಕವಿದ ನೋವನೊದಚುವುದರಿದೆಂದು ಮುಖರಿಸಿ ಪೊಗಳ್ದನಾ ಫಣಿಪ (ಭರತ. ೭೪-೬೬). [ಮುಖರ$_2$ + — ಇಸು$_3$]

**ಮುಖರೆ** (ನಾ). ಹೆಚ್ಚು ಮಾತನ್ನಾಡುವವಳು ; ಗಳಹುವವಳು ; ವಾಚಾಳಿ : ಈ ಆಭರಣಗಳೆಲ್ಲಾ ಆ ದೇಹಕ್ಕೇ ಒಪ್ಪತಕ್ಕವು . . . ನೀನೂ ಅವುಗಳನ್ನೆಲ್ಲ ಒಮ್ಮೊಮ್ಮೆ ಅವಳಿಗೆ ತೊಡಿಸಿ, ಮುಖರೆಯಾದೀ ವಿದೇಶೀ ಹೆಂಗಸನ್ನು ಜಪ್ಪಿಸಿಕೊ (ಕಪಾಕುಂ. ೩೦). [ಸಂ. ಮುಖರಾ]

**ಮುಖರೋಗ** (ನಾ). ಮುಖ ಅಥವಾ ಬಾಯಿಗೆ ಬರುವ ಒಂದು ಬಗೆಯ ರೋಗ : ಎಕ್ಕೆಯ ಎಲೆ, ಔಡಲ . . . ಅಪ್ಪುರಸ, ಈ ಸೊಪ್ಪುಗಳಂ ಸಮಾನಂಗೊಂಡು ಹಳೆಯ ಕಲಶವಂ ತುಂಬಿ ನೀರಂ ಹೊಯ್ದು ಲೇಸಾಗಿ ಕುದಿಸಿ ಮೈನೋವವರಿಗೆ, ಮುಖರೋಗದಾತಂಗೆ . . . ಸೇಕಂಗೊಳ್ಳಲು ಆ ವ್ಯಾಧಿ ತೀರ್ಗುಂ (ವೈದ್ಯವಿ. ೬೪) ; ಶುಂಠಿರಸವನ್ನು ಲೊಕ್ಕೀ ಸೊಪ್ಪಿನ ರಸದಲ್ಲಿ ಏಳುದಿನ ತೆಗೆದುಕೊಳ್ಳಲು ಮುಖರೋಗಂ ಮಾಣ್ಗುಂ (ಸಕವೈ. ೧೦೩). [ಸಂ.]

**ಮುಖರೋಮ** (ನಾ). ಮುಖದಲ್ಲಿ ಬೆಳೆಯುವ ಕೂದಲು : ಮೀಸೆ : "ಮುಖರೋಮಂ ಶ್ಮಶ್ರು" (ವಸ್ತುಕೋ. ೭೦-೨೨) ; ಅಬಾಲಶಾರ್ದೂಲ ಮುಖರೋಮ ಕರಾಳಸ್ಯಕ್ಕೋಪಾಂತಪ್ರರೂಢಶ್ಮಶ್ರುಜಾಲಂ (ಆದಿಪು. ೦೩-೪೩ ವ). [ಸಂ. ಮುಖರೋಮನ್]

**ಮುಖಲಕ್ಷಣ** (ನಾ). ಮುಖದ ರೀತಿ ; ಮುಖಚರ್ಯೆ : ಅವಳು ಎಳೆಹರೆಯದಲ್ಲಿ ಅನುಪಮಸುಂದರಿಯಾಗಿದ್ದಿರಬಹುದೆಂದು ಅವಳ ಮುಖಲಕ್ಷಣದಿಂದ ವೇದ್ಯವಾಗುತ್ತಿತ್ತು (ಕೃಪಸು. ೦೪೦) ; ಕಾದಂಬನಿಯ ಮುಖಲಕ್ಷಣ, ನೋಡಿದ ಮನುಷ್ಯ ಹೆದರುವ ಹಾಗಿತ್ತು (ಇಪ್ಪ೪. ೨೪). [ಸಂ.]

**ಮುಖಲೇಪನ** (ನಾ). ೧. ಯಾವುದಾದರೊಂದು ವಸ್ತುವಿನ ಮೇಲುಭಾಗಕ್ಕೆ ಬಳಿಯುವ ಮತ್ತೊಂದು ಲೇಪನವಸ್ತು : ಎಲೆಕ್ಟ್ರೋ ಫಲಕವು ಸ್ಟೀರಿಯೋಫಲಕಕ್ಕಿಂತ ಹೆಚ್ಚು ಉಪಯೋಗವುಳ್ಳದ್ದಾದರೂ ಅದರ ಬೆಲೆ ಹೆಚ್ಚು . . . ನಿಕ್ಕಲ್ ಮುಖಲೇಪನ ಮಾಡಿದರೆ ಅದರಿಂದ ಇನ್ನೂ ಹೆಚ್ಚು ಪ್ರತಿ ತೆಗೆಯಬಹುದು (ಮುದ್ರಣ. ೬೦). ೨. ಮುಖಕ್ಕೆ ಹಚ್ಚಿಕೊಳ್ಳುವ ಪೌಡರು. ಸ್ನೋ ಮುಂತಾದ ಕಾಂತಿವರ್ಧಕವಸ್ತು : ಟಿ.ವಿ. ಯಲ್ಲಿ ಮುಖಲೇಪನಗಳ ಅತ್ಯಾಕರ್ಷಕವಾದ ಜಾಹಿರಾತುಗಳನ್ನು ನೋಡುತ್ತೇವೆ (ರೂಢಿ). [ಸಂ.]

**ಮುಖಲೋಮಿ** (ನಾ). ಮುಖದ ಮೇಲೆ ಉದ್ದಕೂದಲುಗಳುಳ್ಳ ಒಂದು ಬಗೆಯ ಕೀಟ ; ಜಿರಲೆ : "ಮುಖಲೋಮಿ ತೊಡಂಗಿಯುಕ್ಕುಂ" (ಮಂಗರಾ. ೪೯-೦೩). [ಸಂ. ಮುಖಲೋಮಿನ್]

**ಮುಖವರ್ಣಿಕೆ** (ನಾ). (ನೃತ್ಯ, ನಾಟಕಗಳಲ್ಲಿ) ಮುಖಕ್ಕೆ ಹಚ್ಚುವ ಬಣ್ಣ, ಬಣ್ಣದ ಅಲಂಕಾರ, ವೇಷ ಮುಂತಾದುವು : ಕಥಾನಕದ ಪಾತ್ರಗಳಿಗೊಪ್ಪುವಂತೆ ವೇಷ, ಮುಖವರ್ಣಿಕೆಗಳನ್ನು ಸೃಷ್ಟಿಸಿದರು (ಯಕ್ಷಬ. ೦೦). [ಸಂ. ಮುಖವರ್ಣಿಕಾ]

**ಮುಖವಸ್ತ್ರ** (ನಾ). ೧. ಮುಖವನ್ನು ಒರೆಸಿಕೊಳ್ಳಲು ಬಳಸುವ ಬಟ್ಟೆ ; ಮುಖಪಾವಡ : ಮುತ್ತಿನುರೆ ಛತ್ರ ಚಾಮರ ಕುಂಚ . . . ವ್ಯಜನ ಮುಖವಸ್ತ್ರವೆತ್ತಿ ಬೀಸುವ ಧವಳಚಾರಿಯ ಜಡಾಳಿಪರಿಕ್ಕಲದಿ ವತ್ತರಿಸುತ (ನವಮೋ. ೩-೨೪); ಹಡಪ ಕನ್ನಡಿ ಹೂಜೆ ಕಾಳಂಜಿ ಮುಖವಸ್ತ್ರ . . . ಮಚ್ಚಧ್ವಜವಾಂತು (ನವಮೋ. ೪-೩೮). 'ಕರವಸ್ತ್ರ' ಪರ್ಯಾ. ೨. (ಪ್ರತಿಮಾಪ್ರತಿಷ್ಠಾನದ ವಿಧಿಯಂತೆ) ಮುಂಭಾಗದಲ್ಲಿ ತೊಡಿಸುವ ಬಟ್ಟೆ (?) : ಅಚಾಲ್ಯಪ್ರತಿಮೆಯಂ ಪಂಚಗವ್ಯಶುದ್ಧಿಯಂ ಮಾಡಿ ಸುಗಂಧಾನುಲೇಪನಂಗೆಯ್ದು ದರ್ಭೆಯಿಂದಲಂಕರಿಸಿ ಮುಖವಸ್ತ್ರ ಮನಿಕ್ಕಿಯಿರಿಸುವುದು (ಪ್ರತಿಷ್ಠಾ. ೩-೨ ವ). [ಸಂ.]

**ಮುಖವಾಡ** 'ಮೊಗವಡ' ನೋ.

**ಮುಖವಾದ್ಯ** (ನಾ). ಬಾಯಿಯಿಂದ ಊದುವ ಕೊಳಲು, ನಾದಸ್ವರ ಮುಂತಾದ ವಾದ್ಯ ; ಸುಷಿರವಾದ್ಯ. [ಸಂ.]

**ಮುಖವಾರ್ತೆ** (ನಾ). ಸಮಾಚಾರ ; ಸುದ್ದಿ ; ವಿಷಯ ; ವಿಚಾರ : ಧರ್ಮಪುತ್ರಂ . . . ವಿದುರನಟ್ಟಿದೋಲೆಯಾತಂ ಬಂದೇಕಾಂತದೋಲೆಯ ಸಿಕ್ಕಿದೊಡೆ ಮುಖವಾರ್ತೆಯೇನೆಂದೊಡೆ (ಬಂಹಂ. ೦೦-೩೮ ವ).

[ಸಂ. ಮುಖವಾರ್ತಾ]

**ಮುಖವಾಸ** (ನಾ). ೧. ಬಾಯಿಯನ್ನು ಸುವಾಸನೆಗೊಳಿಸುವ ಒಂದು ಬಗೆಯ ಪರಿಮಳದ್ರವ್ಯ : ವಿಧವಿಧದೊಳೆಸೆವ ಕುಸುಮೋತ್ಕರದ ಪರಿಮಳದ ಮಧುರಾಸವಕೆ ತಮ್ಮ ಮುಖವಾಸದೊಳ್ಗಂಪಿನಧರದಿನಿದಂ ಬೆರಸುವಂತೆ ಮೊಗವಿಟ್ಟು ಪೊಂಬಟ್ಟಲೊಳ್ಸವಿದು (ಜೈಮಿಭಾ. ೦೩-೪೩) ; ಗಂಧಹುಡಿಯರಂಗಡಿಗೈದಿ ಕಮ್ಮೆಣ್ಣೆ ಕಸ್ತುರಿಯ . . . ತಾಂಬೂಲಮುಖ ಮುಖವಾಸಗಳನೂ ತೆಗದು ಮುನ್ನಡೆದು (ನವಮೋ. ೦೭-೩೦). ೨. ಮುಖಕ್ಕೆ ಕಟ್ಟಿಕೊಳ್ಳುವ ಬಟ್ಟೆ, — ವಸ್ತ್ರ : ಪರಿಮಳಂ ತೀಡಿದಡೆ ಕಡೆಗೆ ಸಂಗಂಗೆನುತೆ ಚರಿತದಿಂ ಮುಖವಾಸಮಂ ಸುತ್ತಿ ರಂಜಿಸುತೆ (ಬಸರ. ೩-೧೬). [ಸಂ.]

**ಮುಖವಾಸನ** (ನಾ). ೧. = ಮುಖವಾಸ ೧ : "ಆಮೋದೀ. ಮುಖವಾಸನಃ — ೨ ಪಚ್ಚಕರ್ಪೂರ ಮುಂತಾದ ಮುಖಪರಿಮಳಕ್ಕೆ ತಕ್ಕ ಸುದ್ರವ್ಯದ ಹೆಸರುಗಳು" (ಸಿದ್ಧಾಂತಿ. ೪೬). ೨. = ಮುಖವಸ್ತ್ರ ೨ : ಆವಾಹನ ಆಸನ್ನ . . . ನೈವೇದ್ಯ ಮುಖವಾಸನ . . . ಆತ್ಮಾರೋಪಣವೆಂಬ ದ್ವಾತ್ರಿಂಶದುಪಚಾರಂಗಳಂ ಸಮಂತ್ರಕವಾಗಿ ಮಾಡಿ (ವಿವೇಕ. ೬೩). [ಸಂ.]

**ಮುಖವಿಕಾರ** (ನಾ). (ಮನಸ್ಸಿನ ಭಾವನೆಗೆ ತಕ್ಕಂತೆ) ಮುಖದಲ್ಲಿ ಉಂಟಾಗುವ ಬದಲಾವಣೆ, — ಮಾರ್ಪಾಟು : ಮುಖಭಾವ : ಮರುಷಾಳಾಪಮುಮತಿನಿಷ್ಠುರವೀಕ್ಷಣಮುಖವಿಕಾರಮುಂ ಮಜಿಸಿರೆಯುಂ ತರಳಾಪಾಂಗಮುಮಾಕೆಯ ದರಹಸಿತಮುಮಜೆಯೆ ಪೇಟ್ಗುಮೆಂಚಕಮು ನೆರ್ದೆಯೊಳ್ (ಕವಿರಾ. ೩-೦೦೯); ನಾನು ಹೇಳಿದ್ದೆಲ್ಲವನ್ನೂ ಅವರು ಯಾವ ಮುಖವಿಕಾರವಿಲ್ಲದೆ ಕೇಳಿಸಿಕೊಂಡರು (ರೂಢಿ). [ಸಂ.]

**ಮುಖವಿಕಾಸ** (ನಾ). ಮುಖವು ಅರಳುವಿಕೆ, — ಹಿಗ್ಗುವಿಕೆ : ವಿಪಕ್ಷ ಭ್ರಮಣಚೇತೋಭಾವಘಟನದ ಮುಖವಿಕಾಸದಲಿ ತಮಿದ ತಸಿಮಸಕದಲಿ

ಭುಜವಿಕ್ರಮ ಛಡಾಳಿಸಲೆದ್ದು ಭೂಪೋತ್ತಮನು ಕೊಂಡನು ಗದೆಯನು (ಕುವ್ಯಾಗ. ೭-೧೪). [ಸಂ.]

**ಮುಖವಿಕೃತಿ** (ನಾ). = ಮುಖವಿಕಾರ ೨ : ಭಂಗದಲಿ ಸಂದೇಹ ಮುಖವಿಕೃತಿಯಲಿ ದುರ್ನೀತಿ ಇಂಗಿತದಲಾಂಗಿಕದ ಭಾವಾಭಂಗವರಿಯನು ಯೋಗಯುಕ್ತನಯಂಗಳಲಿ ತಿಳಿದುಸುರದಿರ್ದುದು ಸಭೆ ಸುಭೀತಿಯಲಿ (ಕುವ್ಯಾಸ. ೧೪-೯೩). [ಸಂ.]

**ಮುಖವಿಕ್ಷೇಪಣ** (ನಾ). ಮುಖವನ್ನು ಅತ್ತ ಇತ್ತ ತಿರುಗಿಸುವಿಕೆ : ಬಲದ ಕೋಡ ಮೇಲೆ ಕೆಯ್ಯಂ ಪೇಱಿ ಮುಖವಿಕ್ಷೇಪಣಂಗೆಯ್ದು ಘನಾಘನನಿನಾದದಿಂ ಬೃಂಹಿತಂಗೆಯ್ವ ವಿಜಯಗಜಮುಂ (ಶಂಪಭಾ. ೯-೯೫ ವ). [ಸಂ.]

**ಮುಖವೀಣೆ** (ನಾ). ಬಾಯಿಂದ ಊದಿ ಬಾರಿಸುವ ಒಂದು ಬಗೆಯ ವಾದ್ಯ : ಮುಖವೀಣೆಯ ಮೋಹಿಗಳಿಂದಂ ರಾವಣವೀಣೆಯ ರಂಜಕರಿಂ . . . ಮೇಣ್ ಅಖಿಳನಿಯೋಗದಚ್ಚುಳಿಯ್ತುರಿಂದೊಪ್ಪಿದತ್ತಾ ಮಹಾಲಿಂಗದಾಸ್ಥಾನಂ (ಹರಿಶ್ಚರ. ೬-೯೦ ವ) ; ತಾಳ ದಂಡಿಗೆ . . . ವಿವಿಧ ವಿದ್ಯಾಜಾಲ ಮುಖವೀಣೆಗಳ ತಂದಿಳುಹಿದರು (ಜಾಗಹ. ೨೨-೩೯) ; ನುಡಿಸುವವನ ಶ್ವಾಸಗಾಳಿಯಿಂದ ನುಡಿಯುವ ವಾದ್ಯಗಳು : ಕೊಳಲು, ನಾಗಸ್ವರ . . . ಮುಖವೀಣೆ, ಶಹ್ನೈವಾದ್ಯಗಳೂ ಈ ವಂಗಡಕ್ಕೆ ಸೇರುತ್ತವೆ (ಸಂಗೀಶಂ. ೦೨೦). [ ಸಂ. ಮುಖವೀಣಾ ]

**ಮುಖವೇಣು** (ನಾ). = ಮುಖವೀಣೆ : ರಂಧ್ರಗಳಲ್ಲಿ ವಾಯುಸಂಚಾರದ ಮೂಲಕ ನಾದವನ್ನು ಸೃಷ್ಟಿಸುವುವು ಎರಡನೇ ಸುಷಿರಜಾತಿ : ಕೊಳಲು, ಸನ್ನಾಯಿ, ಮುಖವೇಣು ಮೊದಲಾದವು (ನಾನಳ. ೯೫). [ಸಂ.]

**ಮುಖಶಾಲೆ** (ನಾ). ದೇವಸ್ಥಾನ ಅಥವಾ ಭವನಗಳ ಮುಂಭಾಗದ ಹಜಾರ ; ಮುಖಮಂಟಪ ; ಮೊಗಸಾಲೆ : ಈಶ್ವರಸೆಟ್ಟಿ ಎರಡು ದೇಗುಲದ ಕಳಸಮನಿಡಿಸಿ ಮುಖಶಾಲೆಯುಂ ಸಮೆಯಿಸಿ (ಶಾಸಪ. ೫೦-೦೨ : 1005) ; ಪಚ್ಚೆಯ ತೊಲೆ ಪವಳದ ಕಂಬ ಬೋದಿಗೆ ನಿಚ್ಚಳವಹ ನೀಲದಿಂದ ಮುಚ್ಚುಳ ಮುಖಶಾಲೆಯ ಮಣಿಮಂಟಪವಚ್ಚರಿಯಾಗಿರುತಿಹುದು (ತ್ರಿಕೂಸಾಂ. ೭-೬೦). 'ಮೊಗಸಾಲೆ' ಪರ್ಯಾ. [ ಸಂ. ಮುಖಶಾಲಾ ]

**ಮುಖಶುದ್ಧಿ** (ನಾ). ೧. ಬಾಯಿಯನ್ನು ಮುಕ್ಕುಳಿಸುವುದು. ೨. (ಉಕ) ತಾಂಬೂಲ. [ಸಂ.]

**ಮುಖಶ್ರೀ** (ನಾ). ಮುಖದ ಸೌಂದರ್ಯ, – ಚೆಲುವು : ಕ್ಷಾಯಿಕದೃಷ್ಟಿ ತುಷ್ಟಿಯೊಳೊಡಂಬಡೆ ಜೈನವಚೋಮೃತಂ ಮುಖಶ್ರೀಯ ಪೊವಟ್ಕೆಯು ಬೆಳಗೆ (ಶಾಂತಿಪು. ೦-೪). [ ಸಂ. ]

**ಮುಖಸಂಧಿ** (ನಾ). [ಕಾವ್ಯಮೀ] ಐದು ಅರ್ಥಪ್ರಕೃತಿಗಳೂ ಐದು ಅವಸ್ಥೆಗಳೂ ಕ್ರಮವಾಗಿ ಸೇರಿದರೆ ವಸ್ತುವಿನಲ್ಲಿ ಆಗುವ ಮುಖ, ಪ್ರತಿಮುಖ, ಗರ್ಭ, ಅವಮರ್ಶ ಮತ್ತು ಉಪಸಂಹೃತಿಯೆಂಬ ಐದು ಬಗೆಯ ಸಂಧಿಗಳಲ್ಲಿ ಮೊದಲನೆಯದು : ಅದರ 'ಮುಖಸಂಧಿ'ಯೆಂಬ ಮೊದಲನೆಯ ಭಾಗದಲ್ಲಿ ಕಥೆ ಇನ್ನೂ ಬೀಜರೂಪವಾಗಿರುತ್ತದೆ (ಕೃಬಿಪ. ೨೦೬). [ಸಂ.]

**ಮುಖಸಾಲೆ** 'ಮೊಗಸಾಲೆ' ನೋ.

**ಮುಖಸಿರಿ** 'ಮೊಗಸಿರಿ' ನೋ.

**ಮುಖಸುತ್ತು** (ನಾ). ಕಕ್ಕಾಬಿಕ್ಕಿ ; ಗೊಂದಲ ; ಕಕವಿಕ : ನಿನ್ನೆಯ ಯುದ್ಧದಲ್ಲಿ ನೀವು . . . ಯಾವ ಶೌರ್ಯವನ್ನು ತೋರಿಸಿದಿರೋ ಅದರಿಂದ ಯವನಸೇನೆಗೆ ಮುಖಸುತ್ತಾಗಿದೆ (ಚಕ್ರಕೊ. ೯೦) ; ತುರುಕರನ್ನು ಇಟ್ಟುಕೊಳ್ಳತಕ್ಕದ್ದೇನೋ ನನಗೆ ಸರಿಯಾಗಿ ತೋರುವುದಿಲ್ಲ. ಈ ವಿಷಯದಲ್ಲಿ ಬಹು ಮುಖಸುತ್ತಾಗಿದೆ (ಮುಕುಗ. ೯೭). [ ಮುಖ + ಸುತ್ತು$_2$ ]

**ಮುಖಸುರತ** (ನಾ). = ಮುಖರತಿ : ಮುಖಸುರತಂ ಮುನಿಗಳಿಂ ದೂಷಣೆಯಪ್ಪುದರಿಂ . . . ಪೇಳಲಿಲ್ಲ (ಕಾಮಶಾ. ೨೯೩). [ಸಂ.]

**ಮುಖಸ್ತುತಿ** (ನಾ). ಎದುರಿನಲ್ಲೇ (ಅಕಾರಣವಾಗಿ) ಹೊಗಳುವುದು, – ಪ್ರಶಂಸೆ ಮಾಡುವುದು : ಇದನ್ನು ಮಾತ್ರ ಮುಖಸ್ತುತಿಯೆಂದು ತಿಳಿಯಬೇಡಿರಿ (ಅನ್ನ. ೧೭೫). [ಸಂ.]

**ಮುಖಸ್ಥಾನ** (ನಾ). ಪ್ರಮುಖವಾದ ಸ್ಥಳ : ಆ ಭೂಭಾಗದೊಳ್ ಉನ್ನತಂ ತಾನತ್ಯೂರ್ಜ್ಜಿತಮಲ್ಲಿ ಭೋಗಿಜನರಮ್ಯಂ ಬೆಳ್ವೊಲಂ ತನ್ಮುಖಸ್ಥಾನಂ ಶೋಭಿಕುಮಾಗಳುಂ ಪುರಿಕರಶ್ರೀರಾಜಧಾನ್ಯಾಹ್ವಯಂ (ಕಶಿಇ. XX, ೪೭-೦೪ ; 1074). [ಸಂ.]

**ಮುಖಹೀನ** (ನಾ). ಸಂಕೋಚಸ್ವಭಾವದವನು ; ಮುಖಹೇಡಿ : ಅಪರಿಚಿತಸ್ಥಳಕ್ಕೆ ಹೋದರೆ ಅವನು ಉದ್ಧಟನಾಗುತ್ತಾನೆ. ಇಲ್ಲವೆ ಮುಖಹೀನನಾಗುತ್ತಾನೆ (ಇಶ್ಯಕ. ೧). [ಸಂ.]

**ಮುಖಹೇಡಿ, ಮುಖೇಡಿ, ಮುಖೇಡಿ** (ನಾ). ಸಂಕೋಚಪ್ರವೃತ್ತಿಯ ವ್ಯಕ್ತಿ ; ಸಿಗ್ಗಾಳಿ : "ಲಜ್ಜೆಯಿಂದ ಕೂಡಿದ ; ನಾಚುವ ; ಮುಖಹೇಡಿಯಾದ ; ಸಂಕೋಚಪ್ರಕೃತಿಯ ; ಸಿಗ್ಗಾಳಿ" (Bashful. ಇಂಕಂ). 'ಮುಖಹೇಡಿತನ' ಪರ್ಯಾ. **ಮುಖೇಡಿ** : ಸಮುದ್ರ ಶಾಂತವಾಗಿದೆ, ಗಾಳಿ ಮುಖೇಡಿಯಂತಿದೆ (ಶಿಬಂಧ. II. ೨೦೭) ; ದಾಮು ಎಲ್ಲಾ ಅವರಪ್ಪನ ಹಾಗೇ ಮುಖೇಡಿ (ವೃದ್ಧಶಿ. ೦೩). **ಮುಖೇಡಿ** : ಅವಳ ಸ್ವಭಾವವೇ ಹಾಗೇಂದ್ರೆ. ಮೊದಲಿನಿಂದಲೂ ಅದು ಮುಖೇಡಿ (ಕಬಸಂ. ೨೫೫). ಹೆಡ್ಮಾಸ್ಟರ್ ಲಕ್ಷ್ಮಣರಾಯರು ಸುಬ್ಬುವಿನ ಬೆನ್ನು ತಟ್ಟಿ "ನೋಡಿದೆಯಾ, ಮುಖೇಡಿಯಾಗಬಾರದು" ಎಂದು ಬಹಳ ಹೊಗಳಿದರು (ಶೀಮುಕಾ. ೩೦). 'ಮುಖೇಡಿತನ' ಪರ್ಯಾ. [ ಮುಖ + ಹೇಡಿ ( < ಪೇಡಿ$_1$ ) ]

**ಮುಖಹೇಡಿತನ, ಮುಖೇಡಿತನ, ಮುಖೇಡಿತನ** (ನಾ). ಸಂಕೋಚಸ್ವಭಾವ ; ನಾಚಿಕೆಯ ಪ್ರವೃತ್ತಿ : ಮಕ್ಕಳು ವಿಲಕ್ಷಣರೀತಿಯಲ್ಲಿ ವರ್ತಿಸುವರು . . . ಕೆಲವರಿಗೆ ಮುಖಹೇಡಿತನ (ಶಿಕ್ಷರ. ೭೪೯) ; ಒಂದು ವಿಧವಾದ ಮುಖಹೇಡಿತನ ಅವನನ್ನು ಎಲ್ಲರಿಂದ ಬೇರೆ ಮಾಡಿತ್ತು (ಶಿರಾತ. ೭೩). **ಮುಖೇಡಿತನ** : ಈ ಮುಖೇಡಿತನವನ್ನು ಬಿಟ್ಟು ನಾಲ್ಕುಜನರ ಜತೆ ಓಡಾಡುವುದನ್ನು ಕಲಿ (ಕೂಂ). **ಮುಖೇಡಿತನ** : ನೀನು ಅವಳಿಗೆ ಬುದ್ಧಿ ಹೇಳಿ ಮುಖೇಡಿತನ ತಪ್ಪಿಸಬೇಕು (ಕಬಸಂ. ೨೫೭). [ ಮುಖಹೇಡಿ + – ತನ ]

**ಮುಖಾಂತರ** (ಅ). ಆ ಮಾರ್ಗವಾಗಿ ; ಮೂಲಕ : ಜೋಡು ರಿಪೇರಿಯವನ ಮುಖಾಂತರ ನನ್ನ ಕೊಬ್ಬು ಕರಗಿತ್ತು (ವೃದ್ಧಶಿ. ೦೦೬) ; ಬಂದಣ್ಣ . . . ವೈಸಿಯ ಮುಖಾಂತರ ಅಣ್ಣನ ಪರವಾನಿಗೆ ಪಡೆದುಕೊಂಡ (ವೃಶಿ. ೦೯೫).

**ಮುಖಾಂತರವಾಗಿ** = ಬೇರೆಯವರ (ಮಾತಿನ) ಮೂಲಕವಾಗಿ : ನಮ್ಮ ಅಪ್ಪಾಜಿಯವರ ಪ್ರಾರಂಭಕ್ಕೆ ಅಳಗಿಯ ಮನವಾಳ ರಾಮಾನುಜ ಜೀಯ್ಯರವರ ಮುಖಾಂತರವಾಗಿ ನಡೆಸಿಕೊಂಡು ಬರುವ ನಿತ್ಯಕಟ್ಟಳೆ ಕೈಂಕರ್ಯ (ಎಕ. III, ಶ್ರೀರಂಗ. ೦೦೦-೦೯೪; 1734) ; ಸೃಷ್ಟಿಯ ಮುಖಾಂತರವಾಗಿ ಕಾಣಿಸುವ ಆತನ ಮಹಿಮೆಯ ಕುರುಹುಗಳನ್ನು ತಿಳುಕೊಂಡು ಕೃತಜ್ಞರಾಗಿ ಭಕ್ತಿಯಿಂದ ನಾವು ಆತನನ್ನು ಯಾವಾಗಲೂ ಸೇವಿಸಬೇಕು (ಮುಂಬಯಿ. ೪-೩೦). [ < ಮುಖ ]

**ಮುಖಾಡ** 'ಮೊಗವಡ' ನೋ.

**ಮುಖಾಣೆ** (ನಾ). ಒಂದು ಬಗೆಯ ತೆರಿಗೆ : ಯಿ ಪಾರಪತ್ಯಗಾರ ೩ ಸೇನಭೋಗರು ಸುಂಕದ ಸೇನಬೋಗರು ಸಹ ಜನ ೧೯ಕ್ಕೆ ೧ ಮುಖಾಣೆ . . . ವರುಷಂಪ್ರತಿಯೂ ಪ್ರತಿವರುಷಂಗಳಿಗೂ ಮಹದೇ [ ವೇ ]ಶ್ವರಸ್ವಾಮಿಯವರ ಭಂಡವರಕ್ಕೆ ಕೊಡುವ ಹಾಗೆ ಕಟ್ಟಳೆಯನ್ನು ಮಾಡಿಸಿಯಿದ್ದೇವೆ (ಎಕ. IX, ಕಾನಹ. ೯೪-೨೭ ; 1662).

[ ? + < ಕಾಣೆ$_1$ ]

**ಮುಖಾಬಿಲೆ** 'ಮೊಕಾಬಿಲೆ' ನೋ.

**ಮುಖಾಮಿ** (ನಾ). ೧. ಒಡೆತನ ; ಸ್ವಾಮ್ಯ : ಅವನ ಮುಖಾಮಿಗೆ ೧೨ ವರಹದ ಭೂಮಿಯನ್ನೂ ಕೊಡುವದು (ಮುಖಾಮಂ. I, ೩೮). ೨. ಒಡೆತನವುಳ್ಳವನು; ಸ್ವಾಮ್ಯವುಳ್ಳವನು: ವಸ್ತ್ರಾಭರಣವವಿರತಂ ಕೊಡುತಿರುವರೆಂಬ ವರದಿಗೆ ಮುಖಾಮಿಗಳು ಕಾದಿರುತಿರ್ಪರು (ಸೃ.ಕೃ.೬.೨-೧೨). [?]

**ಮುಖಾಮಿತನ** (ನಾ). = ಮುಖಾಮಿ ೧ : ದೊರೆಗಳವರು . . . ಲಕ್ಷ್ಮಯ್ಯಂಗಾರಿ ಎಂಬವನಿಗೆ ಈ ಪರಕಾಲಮಠದ ಮುಖಾಮಿತನವನ್ನು ನೇಮಕ ಮಾಡಿಸಿದರು (ಮುಹಾವಂ. I, ೦೬೩). [ಮುಖಾಮಿ+-ತನ]

**ಮುಖಾಮುಖಿ** (ಗು). ೧. ಪ್ರತ್ಯಕ್ಷವಾದ ; ನೇರವಾದ : ಪ್ರತಿಯೊಬ್ಬ ಮತದಾರನಿಗೂ ಮತ್ತು ಹುರಿಯಾಳುವಿಗೂ ಮುಖಾಮುಖಿ ಸಂಬಂಧವನ್ನು ಒದಗಿಸಿಕೊಂಡು ಅವರಿಗೆ ಹೇಳಿಕೊಳ್ಳುವ ವಿಚಾರ, ಹೊಸಮನಿಯದು (ಆಶಪಾ. ೯೦) ; ಅವರಿಬ್ಬರೂ ಮುಖಾಮುಖಿ ಬೆಟ್ಟಿಯಾಗಲಿ, ಗೌಪ್ಯದ ಹಿಂದುಗಡೆಯಲ್ಲಿ ದಟ್ಟಯಿಸಿದ್ದ ಕತ್ತಲೆ ತೊಲಗಲಿ ಎಂದು ಅವಳ ವಿಚಾರ (ಎರಕ. ೦೩೦). (ನಾ). ೨. ಭೇಟಿ ; ಸಂದರ್ಶನ : ಹಿಂದೊಮ್ಮೆ ನೀನಲ್ಲಿ ಹೋಗೆ, ನಿನ್ನಯ ಬಯಕೆ ನೆರೆಯದೆಂದರಿತೊಡಂ ನಿನ್ನ ಜೀವಕೆ ಮೋಸವಿರದೆಂದೆ ಬೀಳ್ಕೊಟ್ಟೆ ನಿನ್ನನೀ ಹೊಸ ಮುಖಾಮುಖಿಯೊ ಜೀವಕ್ಕೆ ಮುಳ್ಳುವೇದೆ ಮನಸಿನ ಕವಲು ! (ಹಪ್ಪರ. ೦೯-೭೫). [ಸಂ.]

**ಮುಖಾರ** (ನಾ). ಮನೆಯ ಮುಂಭಾಗ : ಆ ಗೇಟಿನಿಂದ ಮನೆಯ ಮುಖಾರದ ವರೆಗೂ ಹೂವಿನ ಗಿಡಗಳ ಮತ್ತು ಚಿತ್ರವೃಕ್ಷಗಳ ವಲಯಾಕಾರವಾದೊಂದು ತೋಟವು ರಚಿಸಲ್ಪಟ್ಟಿತ್ತು (ಕಾವಿರುತಂ. ೨೦). [ ? ]

**ಮುಖಾರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಮುಖಾರಿ ಹಿಂದೋಳವಸಂತವೆಂಬವೇ ವಸಂತಮಿಶ್ರರಾಗಂಗಳು (ವಿವೇಕ. ೦೪೯) ; ವರವಸಂತ ಮುಖಾರಿ ಗುಜ್ಜರಿ . . . ಮೋಹನದ ರಾಗಂಗಳಲಿ ಪಾಡಿದರು (ಹೂರವ. ೦೦-೪೪) ; ಮುಖಾರಿ—ಪ್ರಸಿದ್ಧ ಪ್ರಾಚೀನರಾಗ. ೨೦ನೇ ಮೇಳಕರ್ತ ನಠಭೈರವಿಯಲ್ಲಿ ಜನ್ಯ (ಸಂಗೀತಂ. ೦೫೪). [ಸಂ.]

**ಮುಖಾವಲೋಕನ** (ನಾ). ಮುಖವನ್ನು ನೋಡುವುದು ; ಮುಖದರ್ಶನ : ಅವರು ಪಿತೃಗಳ ಮರಣಾನಂತರ . . . ಬಹಳ ವರ್ಷಗಳಿಂದಲೂ ಅನ್ಯೋನ್ಯಮುಖಾವಲೋಕನವಿಲ್ಲದವರಾಗಿದ್ದರು (ಕವಿಕ. ೦). [ಸಂ.]

**ಮುಖಾಸಿ** 'ಮೊಖಾಸ' ನೋ.

**ಮುಖಾಸೆ** 'ಮೊಖಾಸ' ನೋ.

**ಮುಖಿ** (ನಾ). ಅಧಿಕಾರಿ ; ಮುಖ್ಯಸ್ಥ : ಮಠಗಳ ಮುಖಿಗಳೂ, ತಿರುನಂದಿಯ ಕೈಲಾಸದೇಗುಲದ ಸ್ಥಾನಾಧಿಪತಿಗಳೂ ಸರ್ವಮಾನ್ಯದತ್ತವಾಗಿ ಭೂಮಿಯನ್ನು ಅನುಭವಿಸುವಂತೆ ರಾಜಾಜ್ಞೆ ಇತ್ತು (ತುಳುಪಾ. ೦೩೦). [ ←ತುಳು, ಮುಖಿ ]

**ಮುಖೇಡಿ** 'ಮುಖಹೇಡಿ' ನೋ.

**ಮುಖೇಡಿತನ** 'ಮುಖಹೇಡಿತನ' ನೋ.

**ಮುಖ್ತ್ಯಾರ್** 'ಮೊಖ್ತಿಯಾರ್' ನೋ.

**ಮುಖ್ತ್ಯಾರನಾಮೆ** 'ಮೊಖ್ತಿಯಾರ್‌ನಾಮು' ನೋ.

**ಮುಖ್ಯ** (ಗು). ೧. ಬಾಯಿ ಅಥವಾ ಮುಖಕ್ಕೆ ಸಂಬಂಧಿಸಿದ. ೨. ಪ್ರಮುಖವಾದ ; ಪ್ರಧಾನವಾದ : ಸರ್ವಜ್ಞತ್ವ ಸರ್ವೇಶ್ವರತ್ವ . . . ಸರ್ವಶಕ್ತಿತ್ವಾದಿಗಳೇ ಈಶ್ವರನ ಮುಖ್ಯಗುಣಗಳು (ವಿವೇಕ. ೨೮). ೩. ಉನ್ನತಮಟ್ಟದಲ್ಲಿರುವ ; ಶ್ರೇಷ್ಠವಾದ ; ಮೊದಲ ದರ್ಜೆಯ. ೪. ಅತ್ಯಂತ ಮುಂದಿರುವ ; ಅಗ್ರಸ್ಥಾನದ. ೫. ಮೊದಲಾದ ; ಮುಂತಾದ : ಲಕ್ಷ್ಮಿ ನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕ ಮಿಂದ್ರಮುಖ್ಯದಿವಿಜರ್ ಸ್ವಪರಿಗ್ರಹಂ (ಜಗು. ೦-೨೦) ; ಸರಸಿಜಾಸನ ಮುಖ್ಯದೇವರನೊರಸುವಂ ಗಡ (ಬಸವ. ೨೩-೨೨). (ನಾ). ೬. ಪ್ರಮುಖವಾದುದು ; ಪ್ರಧಾನವಾದುದು ; ಮಹತ್ತ್ವವಾದುದು : "ಅಗ್ರ್ಯಂ, ಪ್ರಧಾನಂ, ಪ್ರಮುಖಂ, ಪುರೋಗಂ, ಮುಖ್ಯಂ . . . ಅಗ್ರಣೀಃ— ಈ ೧೩ ಮುಖ್ಯಂ" (ಹಲಾಯು. ೦೦೫-೫) ; ಬಡವನಾಗಲಿ ಬಲ್ಲಿದನಾಗಲಿ ಇನಿತು ಮುಖ್ಯವಾಗಿ ಮಾಡಿಸಿಕೊಂಬುದು ಜಂಗಮಸ್ಥಲ (ಬಸವ. ೬೭೪) ; ಕೂಡಿ ನುಡಿವೆಡೆಯೊಳೆಂದುಂ ಕೂಡದು ಲಿಂಗತ್ರಯಕ್ಕೆ ತರತಮಭಾವಂ ನೀಡುಂ ವಾಕ್ಯದ ಕಡೆಯೊಳ್ ಕೂಡಿರ್ದುದದಾವುದದುವೆ ಮುಖ್ಯಮೆನಿಕ್ಕುಂ (ಶಬ್ದ. ೦೪) ; ರಸಾಭಿವ್ಯಕ್ತಿಗೆ ಮತ್ತೊಂದು ಮುಖ್ಯವಾದ ನಿಯಮವೆಂದರೆ—'ಮುಖ', 'ಪ್ರತಿಮುಖ', 'ಗರ್ಭ', 'ಅವಮರ್ಶ', 'ನಿರ್ವಹಣ' ಪಂಚಸಂಧಿಗಳನ್ನೂ . . . ಕೇವಲ ರಸಾಭಿವ್ಯಕ್ತಿಯ ದೃಷ್ಟಿಯಿಂದಲೇ ರಚಿಸುವುದು (ಧ್ವನ್ಯಾಲೋ. ೦೫೦). ೭. ಶ್ರೇಷ್ಠವಾದುದು ; ಉತ್ತಮವಾದುದು : "ಪ್ರಧಾನಂ, ಪ್ರಮುಖಃ, ಪ್ರವೇಕಃ, ಅನುತ್ತಮಃ, ಉತ್ತಮಃ, ಮುಖ್ಯಃ . . . ಅಗ್ರಿಯಂ— ೧೭ ಮುಖ್ಯವಾಗಿಯೂ, ಉತ್ತಮವಾಗಿಯೂ, ಇತರರಿಂದ ಅಪೇಕ್ಷಿಸಲ್ಪಡತಕ್ಕದ್ದಾಗಿಯೂ ಇರುವ ಶ್ರೇಷ್ಠವಾದಂಥಾದ್ದರ ಹೆಸರುಗಳು" (ಸಿದ್ಧಾಂತ. ೩೩೮). ೮. ಪ್ರಧಾನನಾದವನು ; ಪ್ರಮುಖವ್ಯಕ್ತಿ: "ಅಗ್ರೇಸರಂ ಪುರಸ್ಸರನಗ್ರಣಿ ಮುಖ್ಯಂ ಪುರೋಗಮಂ ಪ್ರಷ್ಠಂ" (ವಸ್ತುಕೋ. ೬೩-೯) ; ಅವರ್ಣವಾದಕ್ಕಡೆಯಾಗದೊಳ್ಪಿಂದವರ್ಣಿಕಾಮರ್ ಗುಣವೃದ್ಧಿಧಾಮರ್ ದಿವಾಕರರ್ ವ್ಯಾಕೃತಿನಾಮಿಗಳ್ವೋಲ್ ದಿವಕ್ಕೆ ಪನ್ನಿರ್ವರ್ ಮುಖ್ಯರಾದರ್ (ಕಾವ್ಯಾವ. ೧೩) ; ಪಾಲೆಯನೆತ್ತಿ ಮುಗಿಲೊಡೆಯನ ನಕ್ಕವನೇ ದೊರೆ ನಿನಗೆಂದೇ ಈ ಮುಖ್ಯನ ಕಳಿಸಿಹನೇ (ಗೋಕುಂ. ೪೭-೦೩). ೯. ಅಗತ್ಯವಾದುದು ; ಅವಶ್ಯವಾದುದು : ಈ ಕಾಲದಲ್ಲಿ ಎಲ್ಲ ವಿಚಾರಗಳಲ್ಲೂ ತುಂಬ ಎಚ್ಚರಿಕೆಯಿಂದಿರುವುದು ಬಹಳ ಮುಖ್ಯ (ರೂಢಿ). ೧೦. [ತತ್ತ್ವಶಾ] ಜೀವಸಂಬಂಧವಾದ ನಾಲ್ಕು ಬಗೆಯ ವಾಯುಗಳಲ್ಲಿ ಒಂದು : ವೈರಂಭ ಮುಖ್ಯ ಪ್ರಭಂಜನ ಅಂತರ್ಯಾಮಿ ಸೌಜ್ಞೆಯುಳ್ಳ ನಾಲ್ಕುಜೀವಸಂಬಂಧವಾದ ವಾಯುಗಳೇ ಮಾನಸಾದ್ಯಂತಃಕರಣ ಚೇಷ್ಟಾಕಾರಣಂಗಳಾಗಿರ್ಕುಂ (ವಿವೇಕ. ೩೪). [ಸಂ.]

**ಮುಖ್ಯತೂರ್ಯ** (ನಾ). (?) : ಖುಣಾತೂರ್ಯ ಮುಖ್ಯತೂರ್ಯ ಸ್ವೇಚ್ಛಾತೂರ್ಯವೆಂಬ ಮೂಱು ಮಾಟವ ಕಂಡು ಭಕ್ತಿ ಜ್ಞಾನ ವೈರಾಗ್ಯವೆಂಬ ತ್ರಿವಿಧವಿಶ್ವವನಱಿದು . . . ಕೂಡುವಲ್ಲಿ ಇಂತೀ ಭಾವ ಸವ್ಯಕ್ತನಸ್ಥಲ (ಮೋಳಿಪಾ. ೦೦೬-೪೫೬). 'ಖುಣಾತೂರ್ಯ' ಪಠಾ. [ ? ]

**ಮುಖ್ಯತೆ** (ನಾ). ೧. ಪ್ರಾಧಾನ್ಯತೆ ; ಪ್ರಾಮುಖ್ಯತೆ : ಕೂಡ ನುಡಿವೆಡೆಯೊಳ್ ಲಿಂಗತ್ರಯಕ್ಕೆ ತಮ್ಮೊಳ್ ಮುಖ್ಯತೆಯಮುಖ್ಯತೆಯುಮಿಲ್ಲ (ಶಬ್ದ. ೦೮೦ ವೃತ್ತಿ) ; ಪದನೆರಡುಂ ಮೇಣ್ ಪಲವುಂ ಪದಾರ್ಥಮಂ ಬಯಸುತಿರೆ ಬಹುವ್ರೀಹಿ ಪದಾರ್ಥದ ಗಡಣಂ,ದ್ವಂದ್ವಮೆನಿಪ್ಪುದವ್ಯಯೀಭಾವಮಾದಿಪದಮುಖ್ಯತೆಯಿಂ (ಶಬ್ದ. ೦೭೫). ೨. ಮೊದಲನೆಯ ಸ್ಥಾನ,—ದರ್ಜೆ. [ಸಂ. ಮುಖ್ಯತಾ]

**ಮುಖ್ಯತ್ವ** (ನಾ). =ಮುಖ್ಯತೆ ೧ : "ಬಲ್ಹಃ, ಬಲ್ಹನಂ, ಬಲ್ಹನೀಯಂ, ಈ ೩ ಮುಖ್ಯತ್ವಂ" (ಕಾಕಕ. ೦೨೩); ಪುರುಷತ್ರಯಂ ಕ್ರಮದಿನಿರ್ದೊಡಂ ವ್ಯತ್ಯಯಮಾಗಿರ್ದೊಡಂ ಕೂಡಿ ನುಡಿವೆಡೆಯೊಳ್ ಉತ್ತಮಪುರುಷಕ್ಕೆ ಮುಖ್ಯತ್ವಂ (ಶಬ್ದ. ೨೩೩ ವೃತ್ತಿ). [ಸಂ.]

**ಮುಖ್ಯನ್ಯಾಯಾಧಿಪತಿ** (ನಾ). ಶ್ರೇಷ್ಠನ್ಯಾಯಾಧೀಶ ; ಉಚ್ಚನ್ಯಾಯಾಧಿಪತಿ : ಭಾರತದ ಮುಖ್ಯನ್ಯಾಯಾಧಿಪತಿಯವರಿಂದ ನಿಯುಕ್ತವಾಗತಕ್ಕ ಮಧ್ಯಸ್ಥಗಾರರು ನಿರ್ಧರಿಸತಕ್ಕಂಥ ಅಂಶದಾನವನ್ನು . . . ಪಾವತಿ ಮಾಡತಕ್ಕುದು (ಭಾರಾಸ. ೦೭೬). [ಸಂ.]

**ಮುಖ್ಯನ್ಯಾಯಾಧೀಶ** (ನಾ). = ಮುಖ್ಯನ್ಯಾಯಾಧಿಪತಿ : ಜಿಲ್ಲೆಯ ಸಿವಿಲ್‌ನ್ಯಾಯಾಲಯದ ಮುಖ್ಯನ್ಯಾಯಾಧೀಶನೇ ಕ್ರಿಮಿನಲ್ ಪ್ರಕರಣ

ಗಳಿಗೆ ಸಂಬಂಧಿಸಿದಂತೆ ಜಿಲ್ಲೆಯ ಸೆಷನ್ಸ್ ವಿಭಾಗದ ಮುಖ್ಯನ್ಯಾಯಾಧೀಶ ನಾಗಿರುತ್ತಾನೆ (ಕರ್ನಾ. XI, ೩೯೭); ಮುಖ್ಯನ್ಯಾಯಾಧೀಶ ಹೊತ್ತಿಗೆ ಮುಂಚೆ ಕೋರ್ಟಿಗೆ ಬಂದಿದ್ದನು (ಭುವನ. ೨೩). [ಸಂ.]

**ಮುಖ್ಯಪ್ರಾಣ** (ನಾ). ಆಂಜನೇಯ ; ಹನುಮಂತ : ಕೂಸಿನ ಕಂಡೀರ್ಯಾ ಗುರು ಮುಖ್ಯಪ್ರಾಣನ ಕಂಡೀರ್ಯಾ (ಪುರಂದ. ೧-೦೯೩ ಪಲ್ಲವಿ): ಜೋ ಜೋ ಜೋ ಮುಖ್ಯಪ್ರಾಣಾ ಮಲ್ಲರ ಗಂಟಲ ಗಾಣಾ (ವಾದೀ. ೦೩೭ ಪಲ್ಲವಿ). [ಸಂ.]

**ಮುಖ್ಯಮಂತ್ರಿ** (ನಾ). ರಾಜ್ಯದ ಮಂತ್ರಿಮಂಡಲದ ಮುಖ್ಯಸ್ಥ ; ಪ್ರಧಾನಸಚಿವ : ಶಾಸನಸಭೆಯಲ್ಲಿ ಸಾವಿರಮಂದಿಯಿದ್ದರೂ ಕೆಲಸದ ಜವಾಬ್ದಾರಿ ಹೊರಲು ರಾಜ್ಯಕ್ಕೆ ಒಂದು ಮಂತ್ರಿಸಂಪುಟವೂ ಒಬ್ಬ ಮುಖ್ಯಮಂತ್ರಿಯೂ ಇರಬೇಕು (ರಾಜ್ಯಶಾ. ೬೩). [ಸಂ. ಮುಖ್ಯಮಂತ್ರಿನ್]

**ಮುಖ್ಯರಸ್ತೆ** (ನಾ). ವಿಶಾಲವಾದ ರಸ್ತೆ ; ಪ್ರಧಾನರಸ್ತೆ : ಗುಡಿಗಾರ ಪೇಟೆಯ ಒಂದು ಓಣಿಯಿಂದ ಹೊರಬಿದ್ದ ತುಂಗಕ್ಕ ಮುಖ್ಯರಸ್ತೆಯನ್ನು ಸೇರಿ ನಡೆಯುತ್ತಿದ್ದಳು (ಮುಕ್ತಿದಾ. ೦೩೭). [ಮುಖ್ಯ + ರಸ್ತೆ]

**ಮುಖ್ಯಸ್ಥ** (ನಾ). ಪ್ರಧಾನವಾದ ಅಧಿಕಾರವುಳ್ಳವನು : ಮುಖಂಡ; ನಾಯಕ : ಮಹಾಮಾತ್ಯನು ಮಂತ್ರಿಮಂಡಲದ ಮುಖ್ಯಸ್ಥನೆಂದು ಭಾವಿಸ ಬಹುದು (ಕನಾಅ. ೩೩೦). [ಸಂ.]

**ಮುಖ್ಯಸ್ಥೆ** (ನಾ). ಪ್ರಧಾನವಾದ ಅಧಿಕಾರವುಳ್ಳವಳು; ಮುಖಂಡಳು: ಅವರು ಈ ದಿನ ಆ ಕಚೇರಿಯ ಮುಖ್ಯಸ್ಥೆಯಾಗಿ ಅಧಿಕಾರವನ್ನು ವಹಿಸಿ ಕೊಂಡರು (ರೂಢಿ). [ಮುಖ್ಯಸ್ಥ + -ಎ$_2$]

**ಮುಖ್ಯಾಧಿಕಾರಿ** (ನಾ). = ಮುಖ್ಯಸ್ಥ : ತೆರೆಯು ನಿಧಾನವಾಗಿ ಎದ್ದು ಜೈಲಿನ ಮುಖ್ಯಾಧಿಕಾರಿಯ ಕೊಠಡಿಯು ಪ್ರಕಟವಾಗುವುದು (ವೀರಯೋ.೦). [ಸಂ. ಮುಖ್ಯಾಧಿಕಾರಿನ್]

**ಮುಖ್ಯಾನಂದ** (ನಾ). [ತತ್ತ್ವಶಾ] ಆನಂದದ ಅಷ್ಟಭೇದಗಳಲ್ಲಿ ಒಂದು : ವಿಷಯಾನಂದ ಬ್ರಹ್ಮಾನಂದ ವಾಸನಾನಂದ ಮುಖ್ಯಾನಂದ ನಿಜಾನಂದ ಆತ್ಮಾನಂದ ಅದ್ವೈತಾನಂದ ವಿದ್ಯಾನಂದವೆಂಬವೇ ಆನಂದದಷ್ಟ ಭೇದಂಗಳವಱಲ್ಲಿ . . . ಹಾನೋಪಾದಾನವಿಲ್ಲದುಪೇಕ್ಷಾಬುದ್ಧಿಯಲ್ಲಿ ತೋರ್ಪುದೇ ಮುಖ್ಯಾನಂದವೆನಿಸುವುದು (ವಿವೇಕ. ೨೯). [ಸಂ.]

**ಮುಖ್ಯಾರ್ಥ** (ನಾ). [ಕಾವ್ಯಮೀ] ಶಬ್ದಪ್ರಧಾನವಾದ ಅರ್ಥ : ವಾಚ್ಯಾರ್ಥ : ಒಂದು ಶಬ್ದವನ್ನು ಕೇಳಿದ ಕೂಡಲೆ ತಟ್ಟನೆ ಮನಸ್ಸಿಗೆ ಹೊಳೆಯುವ ಅದರ ಸುಪ್ರಸಿದ್ಧವಾದ ಅರ್ಥವು ಮುಖ್ಯಾರ್ಥ ಅಥವಾ ವಾಚ್ಯಾರ್ಥವೆನ್ನಿಸುತ್ತದೆ (ಕೃಬಿ೨. ೦೭೬). [ಸಂ.]

**ಮುಖ್ಯೆ** (ನಾ). = ಮುಖ್ಯಸ್ಥೆ : "ವರಾರೋಹೆಯೆನೆ ಮುಖ್ಯೆಯಕ್ಕು [ಪಾಠಾಂ. ಮುಖ್ಯಳಕ್ಕು]" (ಮಂಗರಾ. ೯೦-೬). [ಸಂ. ಮುಖ್ಯಾ]

**ಮುಗದಾಣ** 'ಮೂಗುದಾಣ' ನೋ.

**ಮುಗಲ್** 'ಮುಗುಳ್$_1$' ನೋ.

**ಮುಗಳಕ್ಕಿ** 'ಮುಗುಳಕ್ಕಿ' ನೋ.

**ಮುಗಳ** 'ಮುಗುಳ್$_1$' ನೋ.

**ಮುಗಿ** (ಕ್ರಿ). ೧. ಹೂವಿನ ದಳಗಳು ಮುಚ್ಚಿಕೊಳ್ಳು,–ಸಂಕೋಚನ ಹೊಂದು : "ಮುಗಿ–ಪುಷ್ಪಸಂಕೋಚನೇ (ಪೊಗಸ್ಗೆಗು)" (ಶಮಧಾ); ಸರಸಿಜಬಾಂಧವನಸ್ತಾಂತರಗತನಾಗಿರೆ ಸರೋಜಿನೀವನಮಾದಂ ಕೊರಗುತ್ತೆ ಮುಗಿಗುಮಿಾಶ್ವರವಿರಹದೆ ಶೋಕಾಕುಲಂ ವಿಶೇಷಾಪ್ತಜನಂ (ಶಬ್ದಾ.೩-೩೧); ಪಗಲಂತಿರ್ದಚ್ಚವೆಳ್ದಿಂಗಳನಿಸಕಿರಣದ್ಯೋತಿಗೆತ್ತಾಗಳಾಗಳೆ ಮುಗಿದಿರ್ದಂ ಭೋಜಮೋರಂತಲರ್ದುವು ... ವಲಯಪಂಡಂಗಳಾಶಂಕೆಯಿಂದಂ ಮುಗಿಯ ಲ್ಕೆಂದಿರ್ದವೇನುಜ್ಜುಳಿಸಿದುದೊ ಜಗಚ್ಚಕ್ರಮಂ ಚಂದ್ರಬಿಂಬಂ(ಅಜಿತ. ೦೨–೯); ದಿನಪನಪರಾಂಬುಧಿಯನ್ನೆಯ್ದಲು ವನಜ ಮುಗಿದವು (ಕುಮಾ.ರ. ೩-೬); ಮುಗಿದವೀ ಚಂದ್ರಾನನೆಯ ಬರವಿಗೆ ಸರೋರುಹಷಂಡ (ತೊರವೆ. ೩. ೮. ೨೦). ೨. ಕಣ್ಣು ತನಗೆ ತಾನೇ ಮುಚ್ಚಿಕೊಳ್ಳು,– ನಿಮೀಲಿತವಾಗು : ತವದ ಕಾಮೋದ್ರೇಕದಲಿ ಕೂಡುವ ಸಮಪ್ರಣಯಿಗಳ ನಿಡುಗಣ್ಣೆವೆಗಳರೆ ಮುಗಿವುತಿರೆ (ಜೈಮಿ.ಭಾ. ೦೮-೩೭) ; ಚೆನ್ನಿಗ ನಿನ್ನಂಗವ ನೋಳ್ಪೆವೆಂದಕ್ಷಿಯಿ ನ್ನೊಂದ ನಿಟ್ಟಿಸೆವೆಂದು ಮುನ್ನವೆ ಮುಗಿದಿವೆ ಚೆಲುವಿಕೆಯನು ತೋಱುತೆನ್ನ ನೇತ್ರಕೆ ಸುಖವೀಯೊ (ಕಂಸಾ. ೯–೦೮೦). ೩. ಕಣ್ಣನ್ನು ಮುಚ್ಚಿಕೊಳ್ಳು,– ನಿಮೀಲಿತಗೊಳಿಸು : ಅರೆಮುಗಿದಿರ್ದು ಜಾನಿಸುವ ಕಣ್ಮಲರಾಪ್ತ ಪದಾರ್ಥತತ್ತ್ವಮಂ ಸ್ಮರಿಯಿಪ ಚಿತ್ತಂ (ಸುಕುಮಾ. ೯-೦೬) ; ನಸು ಮುಗಿದ ಕಣ್ಣರೆಗಚ್ಚಿದೆಳಗಱುಕೆ . . . ಗೋರಿಗೆ ಸಿಕ್ಕಿದರಲೆಗಳನಕಟಕಟ ನಿಷ್ಕರುಣ ಲುಬ್ಧಕರು ಕಡೆಯೆಚ್ಚರು (ಹರಿಶ. ೮-೨೭) ; ಕುಮಾರಿತಿ . . . ಪಾರ್ವತೀ ಶಾಂಕರಿ ಶಿವೇಯೆನುತ ನೆನೆವುತಿರಲೊಂದು ದಿವರಾತ್ರಿಯೊಳು ನಿಡುಗಣ್ಮಲರ ಮುಗಿದಿರ್ದಳು (ಶಾಂತಪು. ೮-೨೭) ; ಭಾರವಿದು ನಿನಗಿದುವೆ ವ್ರತಸಂಸ್ಕಾರ ಪರಿಯಂತರಸ ಕೇಳೆಂದೂರುಜಪ್ರತಿ ಸರಳ ಕೀಲಿಸಿ ಮುಗಿದನಕ್ಷಿಗಳ (ತೊರವೆ. ೨-೫-೦೮). ೪. (ಗುರು ಹಿರಿಯರನ್ನು ಕಂಡಾಗ ಗೌರವಸೂಚಕವಾಗಿ ಕೈಗಳೆರಡನ್ನೂ) ಜೋಡಿಸು ; ಸೇರಿಸು : ನಂದಿಮಿತ್ರಂ . . . ಬಂದು ಮುಂದೆ ನಿಂದು ಕೈಗಳಂ ಮುಗಿದಿಂತೆಂದಂ (ವಡ್ಡಾ.ರಾ. ೭೯-೬) ; ಚಾರಣ ಯುಗಳಕ್ಕೆ ಕರಕಮಲಯುಗಲಮಂ ಮುಗಿದತಿತ್ವರಿತಗತಿಯಿಂ ಬರುತ್ತಂ (ಅಜಿತ. ೨–೯೯ ವ) ; ಕೈಯ ಮುಗಿದುದು ನಿಖಿಳಪರಿವಾರ (ಕುಮಾ.ದ್ರೊ. ೧-೩೮) ; ಕಾಣಿಕೆಯನಿತ್ತೆಱಗಿ ಕಂಡುದು ಸಕಲಜನಶ್ರೇಣಿ ತಮಾತಮಗೆ ಮುಗಿ ದೆತ್ತಿವನೊಸಲೆಡೆಗೆ ಪಾಣಿಗಳನು (ಕೃಬಿಭಾ. ೭–೦೩). ೫. ಪೂರೈಸು ; ಮುಕ್ತಾಯವಾಗು ; ಕೊನೆಗೊಳ್ಳು : ತದ್ಯಾಗಮೊಂದುಪರಿಸಕೆ ಮುಗಿ ವುದು (ಕೃಬಿಭಾ. ೮-೦೦) ; ಅಂತಪ್ಪೊಡೆ ನೀಂ ಪೇೞ್ವ ನಲ್ಗತೆ ಮುಗಿಯೆ ವಂದುದು (ರಾಮಾಶ್ವ. ೦೬೩-೨೭) ; ಮದುವೆ ಮುಗಿದರೂ ಮದುಮಗನ ನೋಡಲಿಲ್ಲ (ಗಾದೆ). ೬. ಬರಿದಾಗು ; ನಿಶ್ಶೇಷವಾಗು : "ಕುಸುಮ ಸಂಕೋಚನದೊಳಿಲ್ಲಮೆಯೊಳಂ ಮುಗಿಯೆನಿಸುಗು" (ಶಬ್ದಮಂ. ೯೦) ; ಆ ಪೊೞ್ತು ಕಾಮಂ ತನಗೆ ಬೆಂಬಲಮಾಗೆ . . . ನಿಷಂಗಂ ಮುಗಿವನ್ನಂ ಐವಡಿ ಗಣೆಯಿಂ ಮುಱುವಕ್ಕದೊಳಿರ್ದಾ ರಾಮನನಿಸುತಿರ್ದಂ (ರಾಮಾಶ್ವ. ೩೯-೦೯); ಬತ್ತಿಯುಮೆಣ್ಣೆ ಮುಗಿದ ದೀವಿಗೆಯಂತೆ ಕ್ಷಿತಿಜದಿಂ ಸಿಡಿದ ಮಿಂಚೆಂಬರ ದೊಳಣೆವಂತೆ ಭಗವಂತನೊಡನೆ ಪರಿನಿರ್ವಾಣವಡೆದಂ (ವೈಶಾಖ. ೮೮-೬೭೬). ೭. ಮುಳುಗು ; ಅಡಗು : ಗಗನನೀಲಿಮೆಯೆನ್ನ ಕಣ್ಗೆ ಸೊಗವೀವಂತೆ ಮುಗಿವ ತರಣಿಯ ರಕ್ತ ಹಿತವೆನಿಸದೇಕೋ (ಮಂಕುತಿ. ೩೨). ೮. ಕವಿ ; ಆವರಿಸು ; ವ್ಯಾಪಿಸು : ತನ್ನನರಿಯದ ವಿಶ್ವದಲಿ ನಿಂತು ತಾಳಿದರು ಒಳಗೊಳಗೆ ಬುದ್ಧಿಯದು ಕೆಣಕಲಿಸಗಿ ಜೀವಿಸದೆ ಹೋಗುವದು ಮಾನವನ ಜೀವಿತವು ಮುಕುರವದ ಮುಗಿದಂತೆ ಮಂಜು ಮಸುಗಿ (ಶಯಾಬ. ೩೮-೧೮). 'ಮುಗಿಬೀಳು' ಪರಾ. ೯. ಹೆಚ್ಚಾಗು ; ಮೀರು ; ಮಿಗಿಲಾಗು : ಸಗುಣಗುಣಾಢ್ಯಭೂಪತಿಗಳೇಕಾಂತದಿ ಮಗುಟಗಳೊಂದೊಂದೊರಸಿ ಉಗುವ ಮಾಣಿಕಹೇಮರದ ನೂಱುಕೋಟಿಗೆ ಮುಗಿದು ಕೊಟ್ಟಹರು ವೈಶ್ಯರಿಗೆ (ಮೋಹತ. ೨೦-೩೩). ೧೦. ಕೊನೆಗೊಳಿಸು ; ಮುಕ್ತಾಯಗೊಳಿಸು ; ಪೂರೈಸು : ಕಾರ್ಯವ ಮುಗಿದು ಬಂದವನೀಶಗುಸುರಲಾಶ್ಚರ್ಯವಾಯ್ತೆಂ ದಪ್ಪ ಮಗನ . . . ತಾತ್ಪರ್ಯದಿಂದಿತ್ತ ಮನ್ನಣೆಯೊ (ಭರತ. ೭೩-೨೦) ; ದುಗುಡವಿಲ್ಲದೆ ದಿನವ ತೋಷದೆ ಮುಗಿಪನೇ ಸುಖಿಮನುಜನೈ ! (ಮಂಕು. ೯೦-೩). ೧೧. ತೀರಿಹೋಗು ; ಸಾಯು : 'ಮುಗಿವು', 'ಮುಗಿಸು' ಪರಾ. [ದೇ.॥ ತಮಿ. ಮುಕಿ ; ತುಳು. ಮುಗಿ; ತೆಲು. ಮುಗಿಯು; ಕೂಇ. ಮೂಗು]

**ಮುಗಿಡಿ** ? (ನಾ). ಒಂದು ಬಗೆಯ ಭೂಮಿ (?) : ಮೆಚ್ಚೆ ಮಣ್ಣು ಮೂಗಣ್ಣುಫ ಪೊಲ×ನ್ನಿನ ಅ[ಡ್ಡ]ಕೆಯ ಕೆಯ್ಯ ಪಡುರ್ಮಣ್ಣುಗ ಕೊಳಗ

ಭತ್ತ ಮುಗಿಡಿಯ ಕೆಯ್ಯುಮಿನ್ನಿನಿತು ಸಲ್ಕೆ (ಸೌಇಇ. IX-i, ೩೩-೩೩ : ಸು. 10ನೆಯ ಶತ ?). [ ? ]

**ಮುಗಿತ** (ನಾ). ೧. ಸಂಕೋಚಗೊಳ್ಳುವಿಕೆ ; ಕುಗ್ಗುವಿಕೆ : "ಕುಚ–ಸಂಕೋಚನೇ. ಮುಗಿತದೊಳ್" (ಶಾಶಕ್ಕ. ೨೬೦). ೨. ಮುಕ್ತಾಯ ಗೊಳ್ಳುವಿಕೆ ; ಪೂರೈಸುವಿಕೆ : "ಯಮು_ಉಪರಮೇ. ಮುಗಿತದೊಳ್" (ಶಾಶಕ್ಕ. ೯೦). 'ಮುಗಿತಾಯ' ಪರಾ. [ಮುಗಿ + – ತ$_2$]

**ಮುಗಿತಾಯ**, ಮುಕ್ತಾಯ (ನಾ). ೧. ಕೊನೆ ; ಕಡೆ ; ಅಂತ್ಯ : ಮಂಗಳೂರಿನ ಘಟನೆಯೊಂದಿಗೆ ವಿದ್ಯೆಗೆ ಮುಗಿತಾಯ–ಮಾನವಸಹಾಯಕ್ಕೆ ಮುಗಿತಾಯ (ಜಾತ್ಸಂ. ೨೬೦). ೨. ಕೊನೆಯ ನಿರ್ಧಾರ ; ಅಂತಿಮ ನಿರ್ಣಯ : ಮಾವಿಯ ಸಂಗಡ . . . ಈ ಮಾತಿನ ಮುಗಿತಾಯ ಆಗಲೇಬೇಕೆಂದೂ ಅವುಲನು ನಿರ್ಧರಿಸಿದನು (ಇಶ್ಯಕ. ೨೬೩). 'ಉಳಿತಾಯ' ಹೋ. **ಮುಕ್ತಾಯ** : ೧. ವಿನೋದವೇ ಇಂಥ ಕಥೆಗಳ ಮುಕ್ತಾಯ (ಕಥಕ. ೨೯). ೩. ಕೊನೆಯ ಭಾಗ,–ಅಂಶ : ಮೂರು ನಾಲ್ಕು ನಿಮಿಷ ಹೊಂಡತನದಿಂದ ಮಾತಾಡಿದ್ದ ಕಡೆಗೆ ಸೋಲನ್ನೊಪ್ಪಿ ಮುಕ್ತಾಯಕ್ಕೆ ಸಂದುಬಿಟ್ಟೆ (ಪಂಟರು. ೩೯). ೪. [ಸಂಗೀತ] ಗಾಯನ ಅಥವಾ ವಾದನಗಳ ಏಳು ಹಂತಗಳಲ್ಲಿ ಕೊನೆಯದು : ಅಂಕುರ ಸ್ಥಾಯಿಕ ಶ್ರುತಿಸ್ಥಾಯಿ ಮೂರ್ಛನಸ್ಥಾಯಿ ಚೌಕ ಪೇಚರೀಸ್ಥಾಯಿ ರವಸಂಗತಿ ಮುಕ್ತಾಯಗಳೆಂಬ ಸಪ್ತಾವಸ್ಥೆಗಳಲ್ಲಿಯುಂ (ವಿವೇಕ. ೨೬೩) ; ಕೊರವರ ಭೀಮನು . . . ಸುದೀರ್ಘವಾದ ಪಲ್ಲವಿಯನ್ನು ಸನಾದದಲ್ಲಿ ನುಡಿಸಿ, ಕರಡಿಯವನನ್ನು 'ಮುಕ್ತಾಯ'ಕ್ಕೆ ಆಹ್ವಾನಿಸಿದ್ದಾನೆ (ಚಿಟ್ಟಿಹೊ. ೦೩).

**ಮುಕ್ತಾಯಕೊಡು** = (ಸಂಗೀತದಲ್ಲಿ) ಸಮಾಪ್ತಿಗೊಳಿಸು : ಉಪಸಂಹಾರ ಮಾಡು : ಮೇಳದವರು ಅದಕ್ಕೆ ಪೊಟ್ಟಮೊದಲು 'ಮುಕ್ತಾಯ' ಕೊಟ್ಟು, ಚಾಲತಿಯನ್ನು ಬಾರಿಸಿ ಮುಗಿಸುವರು (ಚಿಟ್ಟಿಹೊ. ೦೩). **ಮುಕ್ತಾಯಭಾಷಣ** = ಕಾರ್ಯಕ್ರಮದ ಕೊನೆಯಲ್ಲಿ ಮಾಡುವ ಭಾಷಣ : ಅಂದು ಅಧ್ಯಕ್ಷರೇ ಮುಕ್ತಾಯಭಾಷಣಮಾಡಿದರು (ರೂಾ). **ಮುಕ್ತಾಯಸಮಾರಂಭ** = ಕಾರ್ಯಕ್ರಮದ ಕೊನೆಯಲ್ಲಿ ನಡೆಸುವ ಸಮಾರಂಭ : ಮುಕ್ತಾಯಸಮಾರಂಭದ ದಿನ . . . ರಾಜ್ಯದ ನಾನಾ ಭಾಗಗಳಿಂದ ಆಗಮಿಸಿದ ಸಮಾಜದ ಜನರು ಹಾರಗಳನ್ನು ಸಮರ್ಪಿಸಿ, ಗೌರವಿಸಿದರು (ಟಿಪ್ಪೂಕಾಂ. IV. ಅಂಕ).

[ಮುಗಿತ + – ಆಯ$_4$./ತುಳು. ಮುಗುತಾಯಿ; ತೆಲು. ಮುಕ್ತಾಯ]

**ಮುಗಿತೆ** (ನಾ). ೧.=ಮುಗಿತ ೧ : "ಚುಣ – ಸಂಕೋಚೇ, ಮುಗಿತೆಯೊಳ್ . . . ಚುಣನಂ, ಚುಣನೀಯಂ, ಈ ೨ ಮುಗಿತೆ" (ಶಾಶಕ್ಕ. ೨೬೩). ೨.=ಮುಗಿತ ೨ : "ಲಡ – ಉಪಸೇವಾಯಾಂ. ಕೆಲಸದ ಮುಗಿತೆಯೊಳ್" (ಶಾಶಕ್ಕ. ೨೩೪). [ಮುಗಿ + – ತೆ$_2$./ತುಳು. ಮುಗಿತೆ]

**ಮುಗಿಬೀಳು** (ಕ್ರಿ). (ಉಕ) ಕವಿ ; ಮುತ್ತು ; ಮುಸುರು : ಅಗಣಿತರಾದ ಶಿವಾಜಿಯ ಭಟರು ಇರುವೆಯಂತೆ ಬೆಳವಡಿಕೋಟೆಯನ್ನು ಮುಗಿಬಿದ್ದರು (ಕಬಂಡ. ೬೨) ; ನನ್ನ ಪಾಡಿಗೆ ನಾನು ಹೂ ಹಡೆದರೇಕಿವರು ಮುಗಿಬೀಳುವರೊ ಮೇಲೆ ! (ಕರುಕಾ. ೦೩–೦೬).

[ಮುಗಿ + ಬೀಳು$_1$ (< ಬೀೞ್$_1$)]

**ಮುಗಿಯಿಸು**, ಮುಗಿಸು (ಕ್ರಿ). ೧. ಹೂವಿನ ದಳಗಳು ಮುಚ್ಚಿಕೊಳ್ಳುವಂತೆ ಮಾಡು : ವನಜದಳಂಗಳೊಳೊಂದೊಂದನೆ ಮುಗಿಯಿಸಿ ಕುಮುದವನದಳಂಗಳೊಳೊಂದೊಂದನೆ ಪಿಡಿವಲರ್ಚುತಿರ್ದಪುವೆನೆ ಪೂಗೊಳದೊಳಗೆ ಪೊಳೆದುವಿಂದುಕರಂಗಳ್ (ಕಾದಂಬ. ೯೩೦) ; ಜಿನಲಕ್ಷಣನಿರೀಕ್ಷಣಮೆಂಬ ಚಂದ್ರನಿಂದಂತರಾಯಮೆಂಬ ತಾವರೆಯುಂ ಮುಗಿಯಿಸದೆ (ಧರ್ಮಾಮೃ. ೭–೯೬). ೨. ಕೈಗಳನ್ನು ಜೋಡಿಸುವಂತೆ ಮಾಡು, — ಸೇರಿಸುವಂತೆ ಮಾಡು : ಮರ್ತ್ಯವಿದ್ಯಾಧರರಾಜವ್ಯಂತರಾಧೀಶ್ವರಕರಸರಸಿಜಂಗಳಂ ವಕ್ತ್ರಚಂದ್ರಸ್ಫುರಿತೋದ್ಯತ್ಕಾಂತಿ ನಿಚ್ಚಂ ಮುಗಿಯಿಸೆ (ಆದಿಪು. ೩–೯೬); ಇತರಪ್ರಚಂಡರ ಕರಾಬ್ಜಮನೀಕ್ಷಣಚಂದ್ರಕಾಂಶುವಿಂ ಮುಗಿಯಿಪುದೆಂಬಿನಂ ಮುಗಿದುವಂದವನೀಶಕರಾಂಬುಜೋತ್ಕರಂ (ಜಗಂ. ೦೩–೭೨). ೩. ಆವರಿಸುವಂತೆ ಮಾಡು; ಕವಿಯಿಸು : ಮುಗಿಯುವಿವೆಂದುವೆಂದೆನಿಪ್ಪವಂ ಹರಿಸೈನ್ಯರಜೋಂಧಕಾರದಿಂ ಮುಗಿಯಿಸಿದಂ ದಿವಾಕರಕರಾಬ್ಜಮಂ (ಜಗಂ. ೦೩–೭೨). **ಮುಗಿಸು** : ೧. ವಿಂಗಿಸಿದಂ ವಾದ್ಯರವದಿಂದಬ್ಧಿಘೋಷಮಂ ಮುಗಿಸಿದಂ ತಾವರೆಯನಾ ಬಭ್ರುವಾಹನಂ ಧೂಳ್ಗಳಿನನಂ ಮುಸುಕಲು (ಜೈಮಿಭಾ. ೦೭–೩೭); ಕೆಂದಾವರೆಗಳ ಮುಗಿಸುತ . . . ಪರಿಪೂರ್ಣೇಂದು ಪದನೆಯುರ್ಕೈದಿದರು (ಕಂನವ. ೨೦–೭೬). ೨. ಈ ಬಾಲಕಂ ಭೂಪಾಲಕರ ಕಯ್ಯಂ ಮುಗಿಸಿಕೊಂಡು ಬದರ್ಂಕುಪಧಿಗತಪರಮಾರ್ಥನಪ್ಪತ್ಯಂತ ಕಾರಣಿಕಂ (ಪಂಬರ. ೨–೭೬). ೪. ತೆಗೆಯದಂತೆ ಮಾಡು; ಮುಚ್ಚಿಸು : ಬಹುಚಾಟುಚಪಳರ ಬಾಯ ಮುಗಿಸಿ . . . ವಧೂಟಿಯರು . . . ಸುವಿಲಾಸದಿಂ ಬರುತಿರ್ದರು (ಪಪಪೋ. ೨೯–೨೨). ೫. ಕೊನೆಗೊಳಿಸು; ಮುಕ್ತಾಯ ಮಾಡು ; ಪೂರೈಸು : ವಿಂಗೆ ಮೂಜಗಂ ತಣಿಯ ಹಯಮೇಧಯಜ್ಞಮಂ ಮುಗಿಸಿ ಧರ್ಮಾತ್ಮಜಂ . . . ಸುಖದಿಂದೆ ರಾಜ್ಯಂಗೈದನು (ಜೈಮಿಭಾ. ೩೯ ಸೂಕ್ತ); ಹೊಸಗನ್ನಡದ ಕವಿತೆಯಲ್ಲಿ ಚರಣದೊಂದಿಗೆ ಪದವನ್ನೂ ಮುಗಿಸುವುದೇ ಪದ್ಧತಿ (ಸಮಾಲೋ. ೦೯೯). ೬. ಬರಿದು ಮಾಡು; ನಿಶ್ಶೇಷಗೊಳಿಸು : ಎಲ್ಲರ ತಿಂಡಿಯನ್ನೂ ಆ ಹುಡುಗ ಒಬ್ಬನೇ ಮುಗಿಸಿಬಿಟ್ಟಿದ್ದಾನೆ (ರೂಾ). ೭. ನಾಶಮಾಡು ; ಹಾಳುಮಾಡು ; ಧ್ವಂಸಗೊಳಿಸು : ಆ ಅವಿವೇಕಿ ತನ್ನ ತಂದೆಯ ಆಸ್ತಿಯನ್ನೆಲ್ಲಾ ಮುಗಿಸಿ ಬಿಟ್ಟನು (ರೂಾ). ೮. ಕೊಲ್ಲು ; ಸಾಯಿಸು; ತೀರಿಸು : ಅವಳಿಗೆ ದ್ರವ್ಯದಾಸೆ ತೋರಿಸಿ ಆವಳ ಮಗುವನ್ನು ನಮ್ಮ ವಶಪಡಿಸಿಕೊಂಡು . . . ರಾತ್ರೋರಾತ್ರಿ ಶ್ಮಶಾನಕ್ಕೆ ಒಯ್ದು ಮುಗಿಸಿಬಿಟ್ಟೆವು (ಶ್ರಶಾಕ. ೦೬). [ ಮುಗಿ + — ಇಸು$_3$ ]

**ಮುಗಿಲ್**, ಮುಗಿಲು (ನಾ). ೧. ಮೋಡ ; ಮೇಘ : "ಅಭ್ರಂ, ಅಬ್ದಃ, ಘನಃ, ಮೇಘಃ . . . ಜಲವಾಹಕಃ — ಈ ೧೦ ಮುಗಿಲ ಪೆಸರ್" (ಕಆಭಿಯು. ೦೦–೩೯); ತಡೆತಡೆದು ಕಾಂತನಲ್ಲಿಗೆ ನಡೆಯಲ್ ಬಗೆದನಗೆ ಕಾರ ಕಾರಿರುಳೊಳ್ ಸಯ್ಪುಡಮಡಿಕೆಗಳಂ ತೊಡೆದತ್ತೆಡೆವರಿಯುದೆ ಪೊಳೆವ ಮಿಂಚು ಮುಗಿಲೆಡೆಯೆಡೆಯೊಳ್ (ಕಂನ. ೩–೦೨೫); ಇರ್ವರುಂ . . . ಸಹಸ್ರಕೂಟಾಕಾರಮಪ್ಪದೊಂದು ಮುಗಿಲಂ ಕಂಡು (ವಡ್ಡಾರಾ. ೦೦೯–೩); ಪಾಱುವ ವಿಮಾನದೊಂದವಳ್ಗೇಱಿಂ ಪರಿದುಗುವ ಮುಗಿಲ ನೀರ್ಗಳ ಪಲವುಂ ಜೀಱುಗಳೊಳೆಳಸಿ ಖಚರರನಾಱಿಸಿದುದು ಗಗನದೊಳ್ ವಿಯುತ್ತಳಪವನಂ (ಆಂಪು. ೯–೯೬). ೨. ಬಾನು ; ಆಗಸ ; ಆಕಾಶ : "ಆಕಾಶದೊಳ್ ಕಾದಂಬಿನಿಯೊಳು ಮುಗಿಲ್" (ಕನ್ನಮಂ. ೦೦೬). ವಾಮನಕ್ರಮಂ ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ (ಅಲಾಸ. ೦–೦೦); ಅಲ್ಲಿಯ ಜನಂ ಮುಗಿಲೆಡೆಯೊಳೆಡೆವಿಡದೆಡೆಯಾಡಿ ಬಟಲ್ದ ಬಜ್ಜೋದರಿಯರ್ಕಳೆಱವಟ್ಟಿಗೆದಾಣಮೆಂಬಂತೆಸೆವೆಳನೀರ್ಗಳಂ ಪೊತ್ತಾಗಸದೆಡೆಗರ್ವ ಚೆಂದೆಂಗಿನ ಮರಂಗಳೊಳಂ . . . ಬಸಂತಂಗೆ ನೆಲೆವೀಡಾಗಿರ್ದುದು (ಕಬ್ಬಿಗಕಾ. ೩೦). **ಮುಗಿಲು** : ೧. "ಮುಗಿಲೆನಲ್ಮೇಘ" (ಕಕರ. ೯೦); ಮುಗಿಲು ಹರಿದು ಬಿದ್ದರೆ ಎನಗೆ ಮುಚ್ಚನಕ್ಕೆಱೆದರೆಂಬೆನು (ಪುರಾಣದೇ. ೩. ೩೦–೭೩); ಭಯರಸದ ಹಬ್ಬುಗೆಯಲುಬ್ಬಿದ ಶೋಕದೊಡ್ಡಿನ ಮುಗಿಲು ಕಱಿದುದು ಕುರುಬಲದ ಕಂಬನಿಯ ಬಿಱುಮಳೆಯ (ಕುಮಾಕ. ೨೦–೩೬); ಮುಗಿಲು ಮುಸುಕಿದ ಚಂದ್ರಬಿಂಬವೊ ಪಗಲೊಳೆಸೆವ ಸುದೀಪಕಾಂತಿಯೊ (ಪಳಕ. ೭–೨೯); ನೀಲಾಕಾಶದಲ್ಲಿ ನಿರ್ದಿಷ್ಟರೂಪದ ಬಿಳಿಯ ಮುಗಿಲೊಂದಿದ್ದರೆ ನಮ್ಮ ಗಮನ ಆ ಕಡೆ ಚೆನ್ನಾಗಿ ಬೀಳುತ್ತದೆ (ಕಿಶ್ವಕ. ೯೬೩). ೨. ಅಗಳಗಟ್ಟಣೆಯನಿಟ್ಟಿರುವರಲ್ಲದೆ ಮುಗಿಲಿಗಟ್ಟಣೆಯನಿಕ್ಕುವರೆ

(ಶಾಂತೀಶ. ೬-೩೦); ಮಳೆ ಯಾವಾಗ ಆದೀತೋ ಎಂದು ಮುಗಿಲ ಕಡೆ ನೋಡುವುದೇ ಅವನ ಕೆಲಸ (ಪಸಾ. ೩). ೩. ಮೇಲುಗಡೆ ; ಮೇಲು ಭಾಗ : ' ಮುಗಿಲ·ನೂಲು ' ಪರಾ.

**ಮುಗಿಲಂ ಮುಟ್ಟು, ಮುಗಿಲು ಮುಟ್ಟು** = ೧. (ಅಲಂ) ಮೇಲೇರು ; ಉಚ್ಚಾಶ್ರಯಸ್ಥಿತಿಯನ್ನು ತಲುಪು : ನೆಗಟ್ದಿಕ್ಷ್ವಾಕು ಕುಲಾಂಬರೇಂದುಭರತಂ ನಿನ್ನಗ್ರಜಂ ಸಾಹಸಂ ಮುಗಿಲಂ ಮುಟ್ಟಿ ... ದಿಗ್ವ್ಯಕ್ಕೆ ಪೊಜಮುಟ್ಟಾ ವೆಂಪು ಸಾಮಾನ್ಯಮೇ (ಆದಿಪು. ೧೪-೩೨). ೨. ಆಕಾಶವನ್ನು ತಲುಪು ; ಗಗನಕ್ಕೇರು : ವಿದ್ವಾಂಸರ ವೇದಾ ಶೀರ್ವಚನಗಳು ಪುರಜನರ ಜಯಘೋಷಗಳು ಮುಗಿಲು ಮುಟ್ಟುತ್ತಿದ್ದವು (ಶ್ರೀರಾಯ. ೩೪೪). **ಮುಗಿಲ ಕಿಚ್ಚು** = ಮೋಡಗಳ ಘರ್ಷಣೆ ಯಿಂದುಂಟಾಗುವ ಬೆಳಕು; ಮಿಂಚು : "ಮೇಘವಹ್ನಿಃ ಇರಮ್ಮದಃ— ಈ ೨ ಮುಗಿಲ ಕಿಚ್ಚು" (ಶಬ್ದಮ. ೦೩-೬೦). **ಮುಗಿಲ ದನಿ**=ಮೋಡಗಳ ಘರ್ಷಣೆಯಿಂದುಂಟಾಗುವ ಧ್ವನಿ ; ಗುಡುಗು ; ಮೇಘಧ್ವನಿ : "ಮೊಟಗು = ಮುಗಿಲ ದನಿ" (ಕಮುದ. ಶಂ. ೧); ಮುಗಿಲ ದನಿಯಂ ಕೇಳ್ದ ಮುದಿಹಂಸೆಯಂತೆಯಾ ಮಗನ ದನಿಯಂ ಕೇಳಿ ಕೈಯ ನೆಟ್ಟಿಯು ಮುಱಿದು (ಸಮ್ಮಕೌ. ೨-೬೪). **ಮುಗಿಲ ಧ್ವನಿ**=ಮುಗಿಲ ದನಿ : "ಮೊಟ ಗೆಂದು ಮುಗಿಲ ಧ್ವನಿಯದು" (ಶಕುಕ. ೦೬೫). **ಮುಗಿಲ ಹೂ**, ಮುಗಿಲ ಹೂ= ಮಳೆನೀರು : "ಮುಗಿಲ ಹೂವೆಂದು ಜಲಂ"(ಕಶನಾ. ೩೩-೦೪೪); "ಜಲವೆಂದುಂ ಮುಗಿಲ ಹೂ[ಶಾಶಾಂ. ಹೂ]ವೆನಿಕ್ಕುಂ" (ಶಬಕಂ. ೪೬೦-೪೦).

**ಮುಗಿಲಮಲ್ಲಿಗೆ, ಮುಗಿಲುಮಲ್ಲಿಗೆ** = ೧. ಒಂದು ಬಗೆಯ ಮಲ್ಲಿಗೆ : ಹೊರಗೆ ಎಡಬಲದಲ್ಲಿ ಎರಡು ಮುಗಿಲ ಮಲ್ಲಿಗೆಯು ಗಿಡಗಳಿರುವುವು (ಕೃಶಂಚ. ೪೩). ೨. (ಅಲಂ) ಕೈಗೆ ಎಟುಕದುದು; ದುರ್ಲಭವಾದುದು: ಅವರ ಗ್ರಂಥಗಳು ಕನ್ನಡಸಾಹಿತ್ಯಲೋಕಕ್ಕೆ ಮುಗಿಲ ಮಲ್ಲಿಗೆಯೇ ಆಗಿರುವುವು (ಶಾಚಿಸ. ೧); ಜ್ಞಾನಯೋಗವಂತೂ ನೂರಕ್ಕೆ ತೊಂಬ ತ್ತೊಂಬತ್ತು ಜನರ ಪಾಲಿಗೆ ಮುಗಿಲು ಮಲ್ಲಿಗೆ (ಧರ್ಮಸ. ೧೦೭).

**ಮುಗಿಲವಟ್ಟೆ** = ಆಕಾಶಮಾರ್ಗ ; ಗಗನಪಥ : ಆತನುಂ ಕೂಡೆ ಕಾವಲ್ಪೈತರೆ ಮುಗಿಲವಟ್ಟೆಯು ಬೇಹಿನಾಳಾಗಿ, ಬಟ್ಟೆವಿಡಿದರ್ ಪಂಚವಟಿಗೆ (ಶ್ರೀರಾಮಪು. ೦೪೪-೦೭). **ಮುಗಿಲಿಗೇರಿಸು** = (ಅಲಂ) ಹೊಗಳು ; ಅಟ್ಟಕ್ಕೇರಿಸು : ಸರ್ವಹಾನಿಗಳಿಗೂ ಕಾರಣವಾದ ಕ್ರೂರಕೃತ್ಯಗಳನ್ನು ಮೇರುಸಾಹಸಕೃತ್ಯಗಳೆಂದು ಮುಗಿಲಿಗೇರಿಸುವ ಸಮಾನಾಭಿರುಚಿಯ ಜನರ ನಡುವೆ ಈ ರಾಜಕೀಯದುರ್ಮಾರ್ಗಿಗಳು ಸ್ವಚ್ಛಂದದಿಂದ ವರ್ತಿಸು ತ್ತಿದ್ದಾರೆ (ಪುಶಸು. ೩೦೦). **ಮುಗಿಲುದ್ದ, ಮುಗಿಲುದ್ದಂ** = ಆಕಾಶದಷ್ಟು ಎತ್ತರ ; ಗಗನದಷ್ಟು ಎತ್ತರ : ನೆಗೆದು . . . ಮುಗಿಲುದ್ದವಾದ ನೋವಟಮಟಿಗಂ ದಿಟಕ್ಕನೆ ಕರಂ ಬಳೆದಂ ಮನದಂತೆ ವಾಮನಂ (ಅರ್ಧನೇ. ೬-೨೪); ಮುಗಿಲುದ್ದವಾಗಿ ಮೂವಳಿಸಿದ ಕೋಟೆಯಿಂ . . . ಉಗ್ಗಳೊಪ್ಪುಗು (ಶಾಇಇ. IX-i, ೨೯೭-೧೦; 1177); ಮುಗಿಲುದ್ದಂ ಪರಿದತ್ತು ಹರ್ಷರಸಮಾ ಪುರದೊಳ್ (ಶಂರಾಮಪು. ೪-೨೮). **ಮುಗಿಲು ಮಾಳಿಗೆ** = (ಅಲಂ) ಕಲ್ಪನೆಯ ಸೌಧ,–ಮಹಲು : ವಿಜಯಸಿಂಹನಿಗೆ ತಾನು ಯೋಚಿಸುತ್ತಿದ್ದ ವಿಷಯವು ಬಹಳ ಮನೋಹರವಾಗಿದ್ದುದರಿಂದ . . . ತನ್ನ ಮುಗಿಲುಮಾಳಿಗೆಯನ್ನು ಪುನಃ ಕಟ್ಟಿಕೊಳ್ಳಲಾರಂಭಿಸಿದನು (ರಾಜಿಶ. ೨). **ಮುಗಿಲು ಮೂರೇಗೇಣು** = (ಅಲಂ) ಅತ್ಯಂತ ಉನ್ನತ ಮಟ್ಟದಲ್ಲಿರುವಿಕೆ : ಆಂಗ್ಲಭಾಷೆಯ ರಚನಾಶಕ್ತಿಯ ಸಂಬಂಧದಲ್ಲಿ ಅವನ ಗ್ರಹಿಕೆ, ಇನ್ನೇನು ಮುಗಿಲು ಮೂರೇ ಗೇಣು ಎಂಬಂತಾಗಿತ್ತು (ಇಕ್ಕಳ. ೨೨೩). [ದೇ.॥ ತಮಿ. ಮಲ. ಮುಕಿಲ್; ತುಳು. ಮುಗಲ್, ಮುಗಳ್; ತೆಲು. ಮೊಗುಲು, ಮೊಯಿಲು; ಕೋಲಾ. ಮೊರ್ಗರ್; ಪರ್ಜಿ. ಮುಲ್ಗುರ್; ಗದಬ. ಮೊಗುಲ್, ಮೊಗ್ಗುಲ್; ಗೊಂಡಿ. ಮೊಯೊಲ್]

**ಮುಗಿಲಟ್ಟಣೆ** 'ಮುಗಿಲಟ್ಟಳೆ' ನೋ.

**ಮುಗಿಲಟ್ಟಳೆ, ಮುಗಿಲಟ್ಟಣೆ** (ನಾ). ಗಗನವನ್ನು ಮುಟ್ಟುವಷ್ಟು ಎತ್ತರವಾಗಿರುವ ಬುರುಜು; ಆಕಾಶವನ್ನು ಸೋಕುವಂಥ ಬತೇರಿ : ಮುಗಿಲಟ್ಟಳೆಗಳ ಕೆಲದಂಬುಗಂಡಿಯಿಂ ನುಸುಳ್ದು ಸಡೆವ ದಿನಕರನ ಹಯಂ ಗಗನಾಧ್ವಖೇದಮಂ ಪಟಯಿಗೆಗಳ ತಣ್ಣೆಲರ ಕೀಟದಿಂ ತೊಲಗಿಸುಗುಂ (ಶಂರಾಮಪು. ೦-೦೦೬); ಬಲಿದುದನಿತಕೆ ಕೋಟೆ ಪರಿಖಾವಳಯರಚನೆಯು ಲಾಳುವೇರಿಯ ಹುಲಿಮುಖದ ಮುಗಿಲಟ್ಟಳೆಯ ಸಾಲುಗಳ ಸೊಗಸಿನಲಿ (ತೊರಬಾ. ೦-೦೩-೨) ; ಕಣ್ಗೆ ರಮಣೀಯವಾಗಿವೆ ಕರ್ನಾಟನಯ ನೋಡೀ ಪುರದ ಮುಗಿಲಟ್ಟಳೆಯ ಸಾಲ್ಗಳು (ಕೃಬುಶಾ. ೩-೨೦). **ಮುಗಿಲಟ್ಟಣೆ** : ಅಗಟಿನೊಳಗಬ್ಧ್ಯಾಕೃತಿಯಿಂ ಮುಗಿಲಟ್ಟಣೆಯೊಳಗೆ ಚಂದ್ರಬಿಂಬಾಕೃತಿಯಿಂ ಮೊಗಮೊಪ್ಪೆ ಮಿನಾಸಲೋಚನೆ ಮೃಗೇಕ್ಷಣದೆ ಸಗರನೃಪನನಭಿವೀಕ್ಷಿಸಿದಳ್ (ಅಜಪು. ೯-೩೭) ; ಬೆಟ್ಟದ ಕಿತ್ತು ತಂದಿರಿಸಿದುದದಿ ಮುಗಿಲಟ್ಟಣೆತೆನೆಗಳಗ್ರ ದಲಿ ಬಟ್ಟರನ್ನಗಳ ಕೆತ್ತಿಸಿದ ಹೋಗಲಸಂಗಳಿಟ್ಟಿರ್ದುವು (ವೋಶಕ. ೨೦-೬).
[ಮುಗಿಲ್ + ಅಟ್ಟಳೆ]

**ಮುಗಿಲು** ' ಮುಗಿಲ್ ' ನೋ.

**ಮುಗಿಲುಗಡವು** ' ಮುಗಿಲ್ಗಡವು ' ನೋ.

**ಮುಗಿಲುನೂಲು** (ನಾ). ನೆಯ್ಗೆಯ ಮಗ್ಗದಲ್ಲಿ ಹಾಸುನೂಲಿನ ಮೇಲು ಭಾಗದಲ್ಲಿ ಬರುವ ನೂಲು, – ಎಳೆ : ಹಾಸನ್ನು ಇರಿಸಿಯಾಗಲು ಅದರ ಎಳೆಗಳನ್ನು ಬೇರೆಬೇರೆ ಹೊಕ್ಕುಗಳಲ್ಲಿ ತಂದು, ಪ್ರತಿ 'ಸರಿ' ಯ ನೂಲು ಮೇಲೆ ಬರಲು 'ಮುಗಿಲು'ನೂಲು ಕೆಳಕ್ಕೆ ಹೋಗುವಂತೆ ಏರ್ಪಡಿಸಿ, ಇವೆರಡರ ಎಡೆಯಿಂದ ಹೊಕ್ಕನ್ನು ತರುವ ಲಾಳಿಯನ್ನು ಓಡಿಸುವರು (ಶಾಂಕೃ. I. ೪೨೦).
[ಮುಗಿಲು (< ಮುಗಿಲ್) + ನೂಲು$_2$ (< ನೂಲ್$_2$)]

**ಮುಗಿಲುವಟ್ಟೆ** 'ಮುಗಿಲ್ವಟ್ಟೆ' ನೋ.

**ಮುಗಿಲೂಱು** (ಕ್ರಿ). ಗಗನವನ್ನು ಆಶ್ರಯಿಸು; ಅಂತರಿಕ್ಷದಲ್ಲಿ ಸೇರು: ಅಂತು ಮುಗಿಲೂಱಿದ ಮೂಱುಲೋಕಮುಂ ಕರ್ಣಾರ್ಜುನರ ಯುದ್ಧಮಂ ನೋಡಲ್ ನೆರೆದು(ಪಂಪಭಾ. ೦೨–೦೪೪ ವ). [ಮುಗಿಲ್ + ಊಱು$_1$]

**ಮುಗಿಲ್ಗಡವು**, ಮುಗಿಲುಗಡವು (ನಾ). ಒಂದು ಬಗೆಯ ಈಚಲು ಮರ : ಮೃಣಾಳನಾಳಧಾರಾಗ್ರಹಂಗಳ ಮೇಲೆ ಮುಗಿಲ್ಗಡವಿನಲರ ಧೂಳಿಯೊಳ್ ಪೊರೆದು ನಿಲಿಸಿದ ಯಂತ್ರಮಯೂರಂಗಳುಮಂ . . . ನೋಡುತ್ತಂ ಪೋಗೆ (ಕಾದಂಬ. ೨೦೪). **ಮುಗಿಲುಗಡವು** : "ನೀಪಃ, . . . ಹಲೀಪ್ರಿಯಃ—ಈ ೪ ಮುಗಿಲುಗಡವಿನ ಮರ" (ನಾತರಾ. ೦೦೭). [ಮುಗಿಲ್ + ಕಡವು$_3$ (< ಕಡಂಬ)]

**ಮುಗಿಲ್ಗಲ್**, ಮುಗಿಲ್ಗಲ್ಲು (ನಾ). ಮೋಡದಿಂದ ಬೀಳುವ ಕಲ್ಲು ; ಆಲಿಕಲ್ಲು : "ಆಲಿವರಲೆಂದುಂ ಮುಗಿಲ್ಗಲ್ಲೆಂದುಂ ಘನೋಪಲಂ" (ಕಶನಾ. ೩೩-೦೩೪). **ಮುಗಿಲ್ಗಲ್ಲು** : "(ವಾಯುಮಂಡಲದಲ್ಲಿಯ ನೀರಿನ ಆವಿ ಗಡ್ಡೆಗಟ್ಟಿ ಮಳೆಯಂತೆ, ಮಳೆಯೊಂದಿಗೆ ಬೀಳುವ) ಆಲಿಕಲ್ಲು ; ಮುಗಿಲ್ಗಲ್ಲು" (Hail. ಇಂಕನ). [ಮುಗಿಲ್ + ಕಲ್$_3$]

**ಮುಗಿಲ್ಗಲ್ಲು** 'ಮುಗಿಲ್ಗಲ್' ನೋ.

**ಮುಗಿಲ್ಗಿಚ್ಚು** (ನಾ). ಆಕಾಶದಿಂದ ಭೂಮಿಗೆ ಹರಿಯುವ ವಿದ್ಯುತ್ಪ್ರವಾಹ; ಸಿಡಿಲು; ಅಶನಿ : "ಮುಗಿಲ್ಗಿಚ್ಚೆಂದು ಸಿಡಿಲ್" (ಕಶನಾ. ೩೩-೦೫೩). [ಮುಗಿಲ್ + ಕಿಚ್ಚು]

**ಮುಗಿಲ್ದನಿ** (ನಾ). ಮೋಡಗಳ ಘರ್ಷಣೆಯಿಂದ ಉಂಟಾಗುವ ಶಬ್ದ ; ಗುಡುಗು ; ಮೇಘಧ್ವನಿ : "ಮೊಟಗು = ಮುಗಿಲ್ದನಿ" (ಕಮುದ. ೬. ಶಂ. ೧) ; "ಮೊಟಗೆನೆ ಮುಗಿಲ್ದನಿ [ಶಾಶಾಂ. ಮುಗಿಲ ದನಿ]" (ಕಾವ್ಯಸಾಂ. ೩೭).
[ಮುಗಿಲ್ + ದನಿ$_1$]

**ಮುಗಿಲ್ದುಱುಗು** (ಕ್ರಿ). ಮೋಡವು ಕವಿ,— ಆವರಿಸು : ಅಲ್ಲಿ ಮಹಾಂಬುಧಿಯೆ ಗೆತ್ತು ಮುಗಿಲ್ದುಱುಗಿ ನೀರ ಮೊಗೆವವೊಲಂದೇಂ ಕತ್ತಲಿಸಿ ಬಂದು ನೀರಾಡುತ್ತಿರ್ದುವು ಸುತ್ತಮಲ್ಲಿ ವನಕರಿನಿವಹಂ (ಗಾದಂಯು. ೧೧೮). [ಮುಗಿಲ್+ತುಱುಗು$_1$ (< ತುಱುಕು$_1$)]

**ಮುಗಿಲ್ದೇರ** (ನಾ). ಮೋಡಗಳನ್ನು ರಥವಾಗಿ ಉಳ್ಳವನು : ದೇವೇಂದ್ರ : "ಇಂದಿರಾ ಪಲಗಣ್ಣಂ, ಮುಗಿಲ್ದೇರಂ, ಸಗ್ಗಗರಾಣ್ಮಂ— ಈ ೪ ಇಂದ್ರನ ಪೆಸರ್" (ಕಕಾ. ೪೯–೨೦) ; ಅಂತಪ್ಪ ಬನದವಂ ನೋಡೆ ಅಲರಿಚಂ, ಮುಗಿಲ್ದೇರಂ, ಮುಂತಪ್ಪ ಬಿಡುಗಣ್ಣರುಂ, ನಾರದಾದಿ ರಿಸಿಗಳುಂ ಸಾರ್ತಂದು ಒಳಗೆ ಪುಗೆ ಗಲಭೆಗೆಯ್ದರ್ (ಅದ್ಭುತ. ೦೯). [ಮುಗಿಲ್ + ತೇರ್$_2$ + —ಅ$_7$]

**ಮುಗಿಲ್ತೊರೆ** 'ಮುಗಿಲ್ವೊರೆ' ನೋ.

**ಮುಗಿಲ್ಬಟ್ಟೆ** 'ಮುಗಿಲ್ವಟ್ಟೆ' ನೋ.

**ಮುಗಿಲ್ಮುಱಿ** (ನಾ). ಮೋಡದ ಚೂರು ; ಮೇಘದ ತುಣುಕು : ಇದುಪರಿದಿರ್ದ ಪಾವನೆ ಮುಗಿಲ್ಮುಱಿಯೆಂಬಿನಮಿಂಬುಗೆಟ್ಟು ಕಂದಿದ ಪಟಗಂಬುಗನ್ನಡಿವೊಲೇನಬಿದಾದುದೊ ಚಂದ್ರಮಂಡಲಂ (ಶಂಕ್ರತು. ೯–೩). [ಮುಗಿಲ್ + ಮುಱಿ$_2$]

**ಮುಗಿಲ್ವಟ್ಟೆ**, ಮುಗಿಲುವಟ್ಟೆ, ಮುಗಿಲ್ಬಟ್ಟೆ (ನಾ). ಮೋಡಗಳು ಸಂಚರಿಸುವ ಪಥ ; ಆಕಾಶ : "ಆಗಸಂ, ಮಿಾಂಬಟ್ಟೆ, ಎರಲ್ವಟ್ಟೆ, ಸಗ್ಗಗವಟ್ಟೆ, ಮುಗಿಲ್ವಟ್ಟೆ, ಬಾನ್—ಈ ೬ ಆಕಾಶಂ" (ಕಕಾ. ೪೯–೪೧) ; ಅಟ್ಟಿದ ಜಟ್ಟಿಗರ್ತಡೆದುದರ್ಕೆ ಕನಲ್ದು ವಿಭೀಷಣಂ ಮುಗಿಲ್ವಟ್ಟೆಯಿನಟ್ಟಿ ತಿಂಬ ಜವನಂತಿರಯೋಧ್ಯೆಗೆ ಬಂದು ಪೊಕ್ಕು (ಶಂರಾಪು. ೩–೨೮) ; ಮುಳಿದು ಮುಗಿಲ್ವಟ್ಟೆಗೆ ಮಿಾಱಿ ಪಾಱುವ ಬಜ್ರೋದರಿ ಬಿಗಿದುಟ್ಟ ಸುವರ್ಣಾಂಬರದ ಸೆಱಂಗು ನಿಶಿತಮೊನೆ ಕೊಂಕಿದ ನಿಜಕಂಟಕದೊಳ್ ತೊಡರ್ದು (ಕಶಂ. ೩–೩೫ ವ). **ಮುಗಿಲುವಟ್ಟೆ** : ಗಗನಮಾರ್ಗದಿ ನಾರದನು ಬರಲೊಗೆದವರ ಯುದ್ಧವದು ನಿಜದೃಷ್ಟಿಗೆ ಸೊಗಸುಗೊಡೆ ನೋಡುತಿರ್ದನು ಮುಗಿಲುವಟ್ಟೆಯಲಿ (ಶಾಳ್ವಭಾ. ೨೯–೩೦). **ಮುಗಿಲ್ಬಟ್ಟೆ**: "ಮುಗಿಲ್ಬಟ್ಟೆಯೆನೆ ಗಗನದೊಳ್" (ಕಜಗ. ೬೦–೨೩). [ಮುಗಿಲ್ + ಬಟ್ಟೆ$_1$]

**ಮುಗಿಲ್ವಟ್ಟೆಗ** (ನಾ). ಆಕಾಶದಲ್ಲಿ ಸಂಚರಿಸುವವನು : ದೇವತೆ : ಮೊಗದಿಂದ ಪಾರ್ವರ ಪಡೆದು ನಿಗಮಶಾಸ್ತ್ರಾದಿಗಳಿತ್ತು ಜನ್ನಗೈಸುತ್ತ ಮುಗಿಲ್ವಟ್ಟೆಗರಿಗೆ ಮುದವನಿತ್ತ ರಂಗೇಶ ಬಗೆವಂದು ಬಿಡದೆನ್ನ ಸಲಹು (ಕಕಸಾಂ. ೬–೨೯). [ಮುಗಿಲ್ವಟ್ಟೆ + — ಗ$_2$]

**ಮುಗಿಲ್ವನಿ** (ನಾ). ಮೋಡದಿಂದ ಬೀಳುವ ನೀರಿನ ತೊಟ್ಟು; ಮಳೆಯ ಹನಿ : ಜಲನಿಧಿಯುಂ ಮುಗಿಲ್ವನಿಗಳಿಂದಮುಗುರ್ವಿಸುವಂತೆ ನಿಮ್ಮನಾಂ ತಿಳಿಪಿದಪೆಂ ಗಡ (ಗಾದಂಶಾ. ೪೮೬). [ಮುಗಿಲ್ + ಪನಿ$_2$]

**ಮುಗಿಲ್ವೆಳಗು** (ನಾ). ಮೋಡಗಳ ಘರ್ಷಣೆಯಿಂದ ಉಂಟಾಗುವ ಬೆಳಕು; ಮಿಂಚು : "ಮುಗಿಲ್ವೆಳಗೆಂದು ಮಿಂಚು" (ಕಕಾ. ೫೩–೧೫೨). [ಮುಗಿಲ್ + ಬೆಳಗು$_2$]

**ಮುಗಿಲ್ವೊರೆ**, ಮುಗಿಲ್ತೊರೆ (ನಾ). ಮೋಡದ ಪದರ ; ಮೇಘದ ತೆರೆ : ನೀಱ್ ಮುಗಿಲ್ವೊರೆಯೊಳ್ ಮುಯ್ವೋಱುವ ಶಶಿಕಳೆಯು ಗಾಡಿಯುಂ ಗೆಲೆವಂದಳ್ (ಶಂರಾಪು. ೩–೪೦). **ಮುಗಿಲ್ತೊರೆ** : ಕರಿಯ ಮುಗಿಲ್ತೊರೆಯೊಳ್ ಸಂಚರಿಸುವ ವಿದ್ಯುಲ್ಲತಾವಿಳಾಸಮನಾಂತಾದರದಿಂ ನಿಜವಲ್ಲಭ ನೆಟ್ಟರಮುಂ ಪಾರುತ್ತುಮಿರ್ಪಳಂ ದ್ರೌಪದಿಯುಂ ಘೋಂಕೆನೆ ಕಂಡು (ನೇಬಾತು. ೧೦–೬೦). [ಮುಗಿಲ್ + ಪೊರೆ$_1$]

**ಮುಗಿವು** (ನಾ). ೧. ಕೊನೆ ; ಮುಕ್ತಾಯ ; ಅಂತ್ಯ : ನದಿಯ ತೆರೆಯವೊಲುರುಳಿ ಹೊರಳುತಿರುವುದು ಜೀವ ಮೊದಲಿಲ್ಲ ಮುಗಿವಿಲ್ಲ ನಿಲುವಿಲ್ಲವಮಕೆ (ಮಂಕುತ. ೧೯) ; ಲಕ್ಷ್ಮಣನೊಡನೆ ಬಳಿಯ ಪರ್ವತಮಾಲ್ಯವಂತನ ಗುಹಾಗೃಹದಿ ಮಳೆಯ ಮುಗಿವಂ ಪಾರುತಿರ್ದನ್ ರಘೂದ್ವಹಂ (ಶ್ರೀರಾದ. ೩೦೯–೪). ೨. ಸಾವು ; ಮರಣ : ಹದ್ದಿನಂತೆ ಹೊಂಚು ಹಾಕುತ್ತಿರುವ ಕೃಷ್ಣದೇವ ನನ್ನ ಮುಗಿವಿನ ನಂತರ ರಾಜ್ಯಾಧಿಕಾರವನ್ನು ಕಸಿದುಕೊಳ್ಳದೆ ಸುಮ್ಮನಿದ್ದಾನೆಯೆ! (ಅಳಿಶ. ೦೦). [ಮುಗಿ + — ವು/ತಮಿ. ಮುಕಿವು]

**ಮುಗಿಸು** 'ಮುಗಿಯಿಸು' ನೋ.

**ಮುಗಿಹ** (ನಾ). (ಕೈಗಳನ್ನು) ಜೋಡಿಸುವಿಕೆ ; ಸೇರಿಸುವಿಕೆ : 'ಕೈಮುಗಿಹ' ಪರಾ. [ಮುಗಿ + — ಹ$_2$ ( < — ಪ$_2$) ]

**ಮುಗುಟು** 'ಮೊಗಳು' ನೋ.

**ಮುಗುಡ್ಡೆ** 'ಮೂಗುಡ್ಡೆ' ನೋ.

**ಮುಗುದ**, ಮುದ್ದ$_2$ (ಗು). ೧. ಮುಗ್ಧತೆಯಿಂದ ಕೂಡಿದ ; ಕಪಟವರಿಯದ : ಕೊಟ್ಟು ಬೇಸಱದ ಮುಗುದರಸು ದೊರಕಿದನಲೇ (ಹಕಾ. ೯–೭). (ನಾ). ೨. ಕಪಟವನ್ನು ತಿಳಿಯದವನು ; ಸರಳ ಸ್ವಭಾವದವನು : ಎನ್ನ ಅಜಗಣ್ಣ ತಂದೆ ಶಬ್ದಕ್ಕೆ ಹೇಸಿ ಮುಗುದ ನಾದನು (ಕೊಸ್ವಸಂ. ೩೦–೨೯) ; ಅಗಯಲಲುಗುವ ತಲೆಯ ಮುಪ್ಪಿನ ಮುಗುದನೀತವ ಕಾದ ಹೇಳದು ನಗೆಯ ಸುರಿದೈ ರಾಯ ಕಟಕದೊಳು (ಕುವ್ಯಾಭೀ. ೦–೩೫) ; ನಿಗಮನುತ ಗೀರ್ವಾಣ ರಕ್ಷಿಸು ಮುಗುದರನು ಕರುಣದಲ್ಲಿ ಸೋಡುತಲಿ (ವಳಶ. ೩–೬೫). ೩. ದಡ್ಡ ; ತಿಳಿಗೇಡಿ ; ಮೂಢ : ಹಗೆಗಳಿಗೆ ತಂಪಾಗಿ ಬದುಕುವ ಮುಗುದರಿನ್ನಾರುಂಟು . . . ಲೋಕದಲಿ (ಕುವ್ಯಾಭಿ. ೩–೬೧) ; ಶ್ರೀಪಾದನಂಥ ಮುಗುದಯ್ಯನು ಹೇಗೆ ಎಲ್ಲಿಗೆ ಹೋಗಿದ್ದಾನು! (ಕವಕ. ೩೦). ೪. ಚೆಲುವ ; ಸ್ಫುರದ್ರೂಪಿ : "ಮುಗುದ (ಮುಕುಡು) — ಮುಗ್ಧ = ಸುಂದರ, ಮೂಢ" (ತದ್ಭಕೋ. ೩೬). **ಮುದ್ದ$_2$** : ೨. ಮುದ್ದರಾವ್ಯಂ ಲೌಕಿಕರು ಕರೆವರೆನ್ನ ಗೊಗ್ಗಯ್ಯನೆಂದು (ತ್ರಿಶುತ್ರು. ೬–೦೦೭). [ < ಸಂ. ಮುಗ್ಧ]

**ಮುಗುದತನ** (ನಾ). ೧. ಮುಗ್ಧಸ್ವಭಾವ ; ಸರಳತನ ; ಕಪಟವಿಲ್ಲದ ನಡವಳಿಕೆ : ನಗುತ ರಾಮನ ನರಚರಿತ್ರದ ಮುಗುದತನಕೆ ನಮೋ ಯೆನುತ ಪದಯುಗಳಕಾನತನಾಗಿ ಹಾಯ್ದನು ನಭಕೆ ವಿಹಗೇಂದ್ರ (ತೊರಾ. ೬–೦೭–೩೯). ೨. ಎಳೆತನ ; ಬಾಲ್ಯ : ಮುಗುದತನದೊಳಿದೆ ಮುಚ್ಚಿರೆ ಹರಯವೆ ತೆರೆಯದೆ ? ಅದ ನಚ್ಚಲು ಬಹುದೇ? (ಪಲ್ಲ. ೬–೨೨). [ಮುಗುದ + — ತನ ]

**ಮುಗುದಾಣ** 'ಮೂಗುದಾಣ' ನೋ.

**ಮುಗುದೆ** (ನಾ). ೧. ಸರಳಸ್ವಭಾವದ ಹೆಣ್ಣು; ಕಪಟವರಿಯದವಳು : "ಮುಗುದೆ — ಮುಗ್ಧಾ" (ತದ್ಭಕೋ. ೩೬); ನೇಹದ ಮುಗುದೆ ವಿಳೆಯಾಗಿ ಮಹಾಲಿಂಗಗಜೇಶ್ವರನಲ್ಲಿ ಏಕಾಹಾರಗೊಂಡು ಇದ್ದಳವ್ವೆ (ಸರ್ವವ. ೭೩–೪೦೪) ; ಕಳವಳದ ಕರಣದ ಮುಗುದೆ ಬಂದಳು ಬಾಣನಿನ ಮನೆಗೆ (ಕುವ್ಯಾವಿ. ೩–೩೫); ಸೊಗಯಿಪ ಚಂದ್ರಕಾಂತದ ಭಿತ್ತಿಯೊಳು ತನ್ನ ಯುಗಳಸ್ವರೂಪ ಬಿಂಬಿಸಲು ಅಗಲ್ದನಿಯನ ತೋಱಸು ಬಾಬಾ ಯೆಂದು ಮುಗುದೆ ಬಿದ್ದಳು ಚರಣದಲಿ (ಜೋಹಕ. ೦೮–೫೫). ೨. ಎಳೆಯ ವಯಸ್ಸಿನ ಹುಡುಗಿ ; ಬಾಲೆ : 'ಮುಗುದೆತನ' ಪರಾ. ೩. ಚೆಲುವೆಯಾದ ತರುಣಿ ; ಸುಂದರ ಯುವತಿ : ರತಿಕೌಶಲವ ಮೆಱೆವ ಮುಗುದೆಯರು ಮುರಹರನ ಮನವನು ಸೆಗೆಯಲರಿಯರು (ಹಿಭಾಗ. ೦೦–೬೭–೩೦). [ < ಸಂ. ಮುಗ್ಧಾ]

**ಮುಗುದೆತನ** (ನಾ). ಎಳೆತನದ ಸರಳಸ್ವಭಾವ ; ಅರಿವಿಲ್ಲದಿರುವಿಕೆ : ಕುಂತಿಭೋಜಗೆ ಮಗಳಹೆನು ತಾಂ ತನ್ನ ಬಾಲ್ಯದೆ ಮುಗುದೆತನದೊಳು ಬಳೆಯುತಿರಲು (ಕುವ್ಯಾಉ. ೬ಂಕ. ೦೦ ೩೦ ಅರಿಶತ್ರ). [ಮುಗುದೆ + — ತನ]

**ಮುಗುವಳಿ** (ನಾ). ೧. ಸಂಬಳ, ಬಾಡಿಗೆ ಕೆಲಸ ಮುಂತಾದವುಗಳ ಬಗ್ಗೆ ಮಾತುಕತೆ ಮುಗಿದ ಮೇಲೆ ಮಾಡಿಕೊಳ್ಳುವ ಒಪ್ಪಂದ, — ಕರಾರು, —ಗೊತ್ತುವಳಿ : ಈಗಲೇ ನಾವು ಗುಪ್ತವಾಗಿ ಹೋಗಿ ಪರ್ವತ ರಾಜನಲ್ಲಿ ಸೂರೆ ಮಾಡದಂತೆ ಮುಗುವಳೀ ಹೊತ್ತುಕೊಂಡು ಅವರವರ ಶಕ್ತ್ಯನುಸಾರವಾಗಿ ಹಂಚಿಕೊಂಡು ತುಂಟರಿಗೆ ಆಸ್ಪದವಾಗದಂತೆ ಮಾಡಬೇಕು (ಮುದ್ರಾಮಂ. ೧೦೬); ಈ ಮುಗುವಳಿಯು ಸದ್ಯಕ್ಕೆ ಮೂರು ತಿಂಗಳವರೆಗೆ ನಡೆಯಲಿ ; ಆಮೇಲೆ ನೋಡೋಣ (ರಾಜಾವಂ. ೦೫೫). ೨. ಮುಂಚಿತವಾಗಿ ತೆಗೆದುಕೊಳ್ಳುವ ಹಣ ; ಮುಂಗಡಹಣ : ಕೆಲವು ಜನಗಳ ಕಡೆಯಿಂದ ಮುಗುವಳಿಯನ್ನೂ ತೆಗೆದುಕೊಂಡು . . . ಶ್ರೀರಂಗಪಟ್ಟಣಕ್ಕೆ ಬಂದು ಸೇರಿದರು (ಮುಕಾವಂ. I. ೨೦೪); ನಾಟಕದ ಖರ್ಚಿಗೆ ಆಳಿಗೆ ಒಂದೊಂದು ರೂಪಾಯಿ ಮುಗುವಳಿ ಕೊಡಬೇಕೆಂದು ತೀರ್ಮಾನವಾಯಿತು (ಪಪೂಸ್ಮರು. ೩೦೩). [ < ಮುಗಿ + — ವಳಿ$_3$ ]

**ಮುಗುಳ್$_1$**, ಮುಗುಳು$_1$ (ಕ್ರಿ). ೧. ಮೊಗ್ಗಾಗು ; ಮೊಗ್ಗು ಕಾಣಿಸಿ ಕೊಳ್ಳು : "ಮುಗುಳ್ತುದೆಂದು ಮುಗುಳೇಱುದುದು" (ಶಶಶಾ. ೫೪-೦೯೦) ; ಮಾಧವಿ ಮುಗುಳ್ತೊಲಿರ್ದಳವೆಂಡಿರಿಂದಮೇಂ ಪಡೆದುವೊ ಲೀಲೆಯಂ ಮಣಿಮರೀಚಿವಿಚಿತ್ರಿತನಾಟ್ಯಶಾಲೆಗಳ್ (ಶುಲ್ಲಶ. ೨-೬೦) ; ಕಟಿದುದು ಮೊಲ್ಲೆ ಮಲ್ಲಿಗೆ ಮುಗುಳ್ತುದು (ಅರ್ಜನೀ. ೬-೫೯) ; ಮುಗುಳ್ಗೊಱಗಿರ್ದ ಮನೋಜ್ಞಮಲ್ಲಿಕಾಬ್ರೈದಮನೂನಪುಷ್ಪಚಯಮೊಪ್ಪಿರೆ ನಂದನಮಲ್ಲಿ ರಂಜಿಕುಂ (ಶಶಶಂ. ೨-೪೦). ೨. (ಹೂವು ತನ್ನ ದಳಗಳನ್ನು ಮುಚ್ಚಿ ಕೊಳ್ಳುವಂತೆ) ಕಣ್ಣನ್ನು ಮುಚ್ಚಿಕೊಳ್ಳು, — ನಿಮೀಲನಗೊಳಿಸು : "ಮುಗುಳ್ – ನಿಮೀಲನೇ (ಕಣ್ಣು ಮುಚ್ಚು), ಕುಟ್ಮಲೇ ಚ(ಮೊಗ್ಗು)" (ಶಮುಧಾ) ; ಸೊಗಯಿಪ ಮುನ್ನಿನಿರ್ದ ಪರಿಜಂ ಕಡುಚೆಲ್ವು ಗಡಂ ಜನೇಂದ್ರನಂ ಬಗೆವ ಮನಂ ಗಡಂ ಮುಗುಳ್ದು ಜಾನಿಪ ಕಣ್ ಗಡಮಾತ್ಮ ತತ್ತ್ವದೊಳ್ ಬಗೆ ಗಡಂ (ಆದಿಪು. ೨-೬೦) ; ಪಱಿದ ತಲೆ ಬಿಟ್ಟ ಬಾಯ್ ನಸುಮುರಿದ ಕೊರಲ್ಮುಗುಳ್ದ ಕಣ್ಗಳರುಣಜಲದಿಂ ಪೊರೆದ ತನುವೆರಸು ಬೀಭತ್ಸರಸಮನಭಿಯಿಸುತಿರ್ದರಲ್ಲಿ ಭಟರ್ಕಳ್ (ಗದಾಯು. ೪-೨೫) ; ನೆಱೆ ಮುಗುಳ್ದಕ್ಷಿಯ ಮಿಡುಕದಂಗದ . . . ಪೊಡರ್ಪೆಸೆಯೆ ತಾಪಸಂ ತಪಮಿರ್ದಂ (ಶಶಶಂ. ೨-೯೪). ೩. ಮೂಡು ; ಮೊಳೆ ; ಅಂಕುರಿಸು : ನೀರಜದ ನಗೆ ಮುಗುಳ್ತುದು . . . ಚಕೋರದ ಮದಮುಡುಗಿ ಪೋಯ್ತು ಮುನ್ನೇಸಱಿನೊಳ್ (ಕಂಸವಧಾ. ೧೦-೬೪). **ಮುಗುಳ್$_1$** : ೧. ಅಂಥ ಒಂದು ಅನುಭವಮುಹೂರ್ತವು ಸ್ಮೃತಿಬೀಜವಾಗಿ ರಸಸೇಚನವನ್ನು ಹೊಂದಿ ಮೊಳೆತು, ಚಿಗಿತು, ಕೊನರಿ, ಮುಗುಳಿ ಕಾವ್ಯಕೃತಿಯಲ್ಲಿ ಅರಳುವ (ಕಾಹಿಂ. ೦೯೦). ೩. ಎನಿತು ಚೆಲುವಿನ ನೋಟ ಏನು ಒಲವಿನ ಕೂಟ ಎಂಬ ಬಗೆಯಲಿ ನಗುವು ಮುಗುಳುತಿತ್ತು (ಚಿತಾಸಿ. ೦-೦೪). ೪. (ಹೂವಿನ ದಳಗಳು) ಸಂಕೋಚನ ಹೊಂದು ; ಮುಚ್ಚಿ ಕೊಳ್ಳು : ಬೆಳಕು ಮೂಡೆ ಮಲರಿ, ಮುಳುಗೆ ಮುಗುಳಿ . . . ಆಃ ಇಂತೆನ್ನ ಬಾಳರಳಿದರೆ ಧನ್ಯನಲ್ತೆ (ಅಶಕೀ. ೨೩-೦೪).

[ದೇ.॥ ತಮಿ. ಮುಕಿಟ್; ಮುಕಿಟಿ ; ತುಳು. ಮುಗುರು, ಮುಗುರು ; ತೆಲು. ಮೊಗುಡು]

**ಮುಗುಳ್$_2$**, ಮುಗುಳು$_2$ (ನಾ). ೧. ಅರೆಬಿರಿದ ಹೂವು ; ಕುಟ್ಮಲ : "ಕೋರಕಃ, ಜಾಲಕಃ, ಕಳಿಕಾ, ಕುಟ್ಮಲಃ, ಮುಕುಳಃ — ಈ ೫ ಪೂವಿನ ಮುಗುಳ್" (ಶಬಾಮು. ೩೦-೩೨) ; ತಾಮರೆಯುರಲೊಳ್ ಸರಸನಿಜಾ ಮೋದದೊಳೊಂದಿ ನಲಿದು ಮಕರಂದರಜೋವ್ಯಾಮುಗ್ಧದೊಳೀ ಮುಗು ಳೊಳಮಾ ಮಾಟ್ಕೆಯುನಜಿಸಿ ಸುಱಿವುದಳಿ ಕಲಕಲದೊಳ್ (ಕಶಿಶಾ. ೩-೦೫೭) ; ನಿನ್ನೆ ನೀನಾದಿತ್ಯಂಗೆ ನೀರಂ ಸೂಸಿ ಪೊಡೆಮಡುವಾಗಳಾ ನೀರ್ವೆರಸು ಸೂಸಿ ತಾಮರೆಗೆಱೆಯೊಳಗೆ ಮುಱುಗಿರ್ದ ಮುಗುಳ ಮೇಗೆ ತಗುಳ್ದಿರ್ದುದು (ವಡ್ಡಾರಾ. ೫-೦೫) ; ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಕಂಶಶಾ. ೦-೫೬ ರಗಳೆ) ; ಪೂವಳ್ಳಿಗಳ್ ನನೆಕೊನೆಮುಗುಳರೆಮುಗುಳ್ ಬಿರಿಮುಗುಳುಳ್ಳಲರ್ದ ಪೊಸ ಮಲರ್ಗಳಿಂದೆ ಸೊಗಯಿಸೆಯುಂ (ರಾಮಾಶ್ವ. ೦೬-೨). ೨. ಮೊಗ್ಗಿನಾಕಾರ ದಲ್ಲಿ ಮಾಡಿದ ಒಂದು ಬಗೆಯ ಆಭರಣ : ಬೆಳತಿಗಗಣ್ಣ ಬಳವಿಗಿದುವೆ ಗುಱಿಯೆಂದು ಕುಱುಪನಿಕ್ಕುವಂತೆ ಕೊನೆಗೊಡಂಕೆಯೊಳ್ ತೋರಮುತ್ತಿನ ಮುಗುಳಂ ತೆಗಳ್ಚಿಯುಂ (ಕಂದ್ರಪ್ರ. ೬-೬೩ ವ). **ಮುಗುಳು$_2$** : ೧. "ಕುಟ್ಮಲಃ, ಮುಕುಲಃ– ಈ ೨ ಮುಗುಳು" (ವಾಶಂ. ೦೦೬); ಆಕಾಶ ಸರಸಿಯೊಳಡಿದ ತಾವರೆಮುಗುಳುಗಳೂ ಸುರಪಡೆಯೊಳೊತ್ತಿದ ಮುಗಿದ ಕೈಗಳೂ ಚಿತ್ರವಾಯ್ತು (ಕುಮಾಕೃ. ೬-೩೬); ಸರಸಿಜಗಂಧಿಯ ವದನನಂದನದಲಿ ನೆಱೆ ಪೂತು ಸಾಲುಗೊಂಡೆಸೆವ ಪಿರಿದು ಮೊಲ್ಲೆಯ ಮುಗುಳ್ಗಳೆನೆ ಮೆಱೆದುವು ಮಿಱುಗುವ ದಂತಪಂಕ್ತಿಗಳು (ಕಂಶರ. ೯-೩೩).

ಮುಗುಳ **ಕಂಕಣ** = ಕೈಗೆ ತೊಡುವ ಒಂದು ಬಗೆಯ ಮೊಗ್ಗಿನಾ ಕಾರದ ಆಭರಣ : ಧುರದೊಳಸಿಲತೆಯನುಚ್ಚಿಡಡರಿನ್ನಿಪಯುವತಿಯರ ಮುಗುಳ ಕಂಕಣದಾ ಕೀಲ್ತರತರದಿನುಟ್ಟಿದವು ನಿಜಕರಯುಗ್ಮಮವರ್ಕ್ಕೆ ಕೀಲೆ ಶಾಸ್ತ್ರರನ್ನಪತಿ (ಎಕ. VIII, ನಗರ. ೫೬-೨೪; 1062). **ಮುಗುಳಾಗು** = ೧. ಮೊಗ್ಗಾಗು; ಹೂವಾಗಿ ಅರಳದಿರು : ಅಲರಾಗಿ ನಿರೀಕ್ಷಿಸಿ ಕಾದಲನಂ ಮುಗುಳಾಗಿ ನೋಂಕಿದೆಡೆಯೊಳ್ ಕಾಮಂಗಲಸದೆ ಸರಳಾಗಿ ಪಳಂಚಲೆವುದು ತೊಳಪವಳಪಾಂಗವಲರ್ಗಳ ಪಾಂಗಂ (ಅರ್ಜನೀ. ೦-೬೫); ಕಮಲವುದಯ ದೊಳರಳಿ ಸಂಜೆಯಲಿ ಮುಗುಳಾಗಿ ಸುವಾಸಪ್ಪುದಂತೆ ಮರುವಗಲು ಮುಗುಳ್ದು (ಮುಂಕುಕ. ೪೦). ೨. ಮೊಗ್ಗುಬಿಡು ; ಮೊಗ್ಗು ಕಾಣಿಸಿ ಕೊಳ್ಳು : "ಪದಪಿಂ ಮುಗುಳ್ತುದೆನೆ ಮುಗುಳಾದುದು" (ಕನ್ನಕೃ. ೦೪೩-೦೪); ಗಗನಾಪಗೆಯ ಜಲಕಣಾದಂಬಮೊ ಮುಗುಳಾದುದೊ ಗಗನ ವೆಂಬ ಕಡಬದ ಮರನುಂ (ಹರ್ಮ್ಯರಾ. ೨-೬೨).

[ < ಮುಗುಳ್$_1$. / ತಮಿ. ಮುಕಿಟವು. ಮೊಕ್ಕುಳ್; ಮಲ. ಮುಕಿಟ್; ತುಳು. ಮುಗುರು. / ಸಂ. ಮುಕುಲ ]

**ಮುಗುಳಂಬ** (ನಾ). ಮೊಗ್ಗಿನ ಬಾಣಗಳುಳ್ಳವನು ; ಪುಷ್ಪಬಾಣ; ಕಾಮ; ಮನ್ಮಥ : ಮುಗುಳಂಬನೊಡಲ ಬೇಡಿದಳು ರುಕ್ಮಿಣಿ ಗಂಡು ಮಗನಾಗಬೇಕೆನಲು (ಮೋಹತ. ೦೦-೦೦); ಮುಗುಳಂಬನುಱುಬೆಗಾಱದೆ ಪೊರಳುತಿಪ ಮಂತ್ರಿಮಗಳೆಡೆಗೆ ಪಂತಂದು ನುಡಿದಳೊಸಗೆಯನಾಪ್ತಸಖಿ ಯೊರ್ವಳವಳ ಕೂಡೆ (ಕೈಬಿಖಾ. ೩೦-೨) ; ಮುಗುಳಂಬನ ಮಾಡಿಗಮಂದ ಪರಿಮಳವೊಗುವ ಪೂದೊಂಬೆಯಂತಿಹರು (ಕಂಶರ. ೬-೯೪).

**ಮುಗುಳಂಬಕೇಳಿ** = ಮದನಕೇಳಿ ; ಕಾಮಕೇಳಿ ; ರತಿಕ್ರೀಡೆ : ಎನ್ನ ಬಿಗಿದಪ್ಪಿ ಚುಂಬನವನೀಯೆ ಕೂಡಿ ಮುಗುಳಂಬಕೇಳಿಯೊಳು ಸುಯ್ದು ಯೆಂಬುಗಡುರಕ್ಕಸನ ವಾಕ್ಯ ಕೇಳ್ದು ಕಂಗೆಟ್ಟು (ಶಾಂಡತ. ೩೩-೨೦). **ಮುಗುಳಂಬನಣುಗ** = ಮನ್ಮಥನ ಮಗ ; ಅನಿರುದ್ಧ : ಹೊಗಳಲಚ್ಚರಿ ಗೆಯ್ವ ಚೆಕತನಾರಿಯರನು ಮುಗುಳಂಬನಣುಗನೀಕ್ಷಿಸಿದ (ಮೋಹತ. ೦೬-೮೦).

[ ಮುಗುಳಂಬು +— ಅ$_2$ ]

**ಮುಗುಳಂಬು** (ನಾ). ೧. ಮೊಗ್ಗಿನ ಬಾಣ : ಬಿತ್ತರವ ಭಲ್ಲೆಯ ಮಾಟದಿ ಸುಸಂಪಗೆಯ ಮುಗುಳಂಬು ದೊರೆವಡೆದ ಕಣಗಿಲ ಪುಳುಂಬವ . . . ಬತ್ತಳಿಕೆಗಳು ನೆರೆದಿರ್ದುವವರಲ್ಲಿ (ಕಾಳ್ಳಭಾ. ೫-೦೪). ೨. (ಮನ್ಮಥನ) ಹೂಬಾಣ; ಪುಷ್ಪಬಾಣ : ಮಗಳೆ ನಿನ್ನಯ ರೂಪ ಗುಣ ಶೀಲವ ನೋಡಿದಗಣಿತಸುರನರೋರಗರು ಮುಗುಳಂಬಿಗೊಳಗಾದರು (ಮೋಹತ. ೨೫-೩೩). ೩. ಒಂದು ಬಗೆಯ ಚಿಕ್ಕಬಾಣ : ಕಿಱು ಮೊನೆಯ ಮುಗುಳಂಬುಗಳ ಸೈಗಱೆದನಭಿಮನ್ಯುವಿನ ಮೆಯ್ಯಲಿ ತುಱು

ದವು ಮುೞಿದುಂಬಿ ಕೆಂದಾವರೆಗೆ ಕವಿವಂತೆ (ಕುವ್ಯಾರ್ಥ್ರೋ. ೫-೫೪); ಅಲಿಸ್ಯ ಮುಗುಳೇಱು ಸಾವಿರವೇೞು ಬಳಿಕೊಂಬತ್ತುಸಾವಿರಕೋಲು ಮಿಾಂಟೆಯು ಕವಲುಗಣೆ ಹನ್ನೆರಡುಸಾವಿರವು (ಕುವ್ಯಾ.೪. ೦೬-೩೨).

[ ಮುಗುಳ್$_2$ + ಅಂಬು$_2$ ]

**ಮುಗುಳಕ್ಕಿ**, ಮುಗಳಕ್ಕಿ (ನಾ). ಸರಿಯಾಗಿ ಬೇಯದ, ಮೊಗ್ಗಿನಂತಿರುವ ಅನ್ನ ; ಪೂರ್ತಿಯಾಗಿ ಅರಳದೆ, ಅರೆಬೆಂದ ಅನ್ನ, — ಪಕ್ವವಾಗದ ಅನ್ನ : ಇವತ್ತು ಒಲೆ ಸರಿಯಾಗಿ ಉರಿಯದೆ ಅನ್ನ ಮುಗುಳಕ್ಕಿಯಾಯ್ತು (ಕೂಡ). **ಮುಗಳಕ್ಕಿ** : ಸಮಯ ತಪ್ಪಿ ಯಾವಾಗಲಾದರೂ ಇವಳು ಅಡಿಗೇ ಒಲೇ ಮುಂದಕ್ಕೆ ಹೋದರೆ, ಅನ್ನ ಮುಗಳಕ್ಕಿಯೋ ಇಲ್ಲ ಮಿಡ್ಡೆಯೋ ಆಗುತ್ತಿತ್ತು (ಮಾಮಠಾ. ೮೩).

**ಮುಗಳಕ್ಕಿಗಂಜಿ** = (ಔಷಧಕ್ಕಾಗಿ ಬಳಸುವ) ಅರೆಬೆಂದ ಅನ್ನದ ಗಂಜಿ ; ಪಕ್ವವಾಗದ ಅನ್ನದ ಗಂಜಿ : (೬).

[ ಮುಗುಳು$_1$ (< ಮುಗುಳ್$_2$) + ಅಕ್ಕಿ$_2$ ]

**ಮುಗುಳಲರ್** (ನಾ). ಅರಳುತ್ತಿರುವ ಹೂವು; ಅರೆಬಿರಿದ ಹೂವು : ಪೊಟಲ ಬೀದಿವೀದಿಗಳನಿತುಮನೋರಂತೆ ತಳಿದು ಗುಡಿಗಟ್ಟಿಸಿ ನೀಂ ನಸೆಯ ಮುಗುಳಲರ ತುಱುಗಲನನಂತಮಂ ನೆಱೆಯೆ ಕೆದಱಿವೇೞ್ ನೃಪತಿಳಕಾ (ಅಂತು. ೫-೬) ; ಮುರಹರನೇತಃಪುರಪುರಂಧ್ರಿಕಾನಿಕಾಯಮಾ ವನೋದರದ ಪೂವುರದ ಲತೆಯು ಸಂತತಿಯ ಮುಗುಳಲರ ತುಱುಗಲ್ಗಳಂ ನೆಱೆವಿನ ಮಾಯ್ದುಕೊಂಡು ಮಂಡನಾವಳಿಯನೆಸೆಯೆ ಸಮೆದು ಪಸದನಂಗೊಂಡು (ನೇಮಿಚಂ. ೦೩-೨೦ ಪ) ; ಮುಗುಳಲರ್ ಪೆಣ್ಣಾಯ್ತೊ ಪೆಣ್ಣೆ ಮುಗುಳಲ ರಾಯ್ತೊ (ಶ್ರೀಗಾಪುರ. ೦೧೪-೦೩೬). [ ಮುಗುಳ್$_1$ + ಅಲರ್$_2$ ]

**ಮುಗುಳಿ**$_1$, ಮುಗಲ್, ಮುಗಳಿ (ನಾ). ೧. ಒಂದು ಬಗೆಯ ಮುಳ್ಳಿನ ಮರ : ದಿಂಡ ಪಾತಂಗ ಮುಗುಳಿಯ ಮರನು. . . ಬಳಲಿ ಬಂದವರಿಗೆ ವಳಲೆಯಮೃತದಂತೆ ನೆಳಲಾಹ ವೃಕ್ಷವಲ್ಲಿಹವು (ಶಿಜಾಂ. ೧-೫೩); ಮುಗುಳಿಯ ಮರದ ನೆರಳಿಂದ ನುಂಗುವ ನೆಗಳು ಲೇಸೆಂದ (ಸರ್ವಜ್ಞ. ೦೩೬೬); ಮುಗುಳಿಯ ಒಳನಾರಂ ಆಡಿನ ಹಾಲಿನಲ್ಲಿ ಅರೆದು ಕುಡಿಯೆ ಎಂಥಾ ಕೆಮ್ಮುಲಾದರೂ ಮಾಣ್ಗುಂ (ಸಕಲ್ಪ. ೨೦೦). ೨. ಒಂದು ಊರಿನ ಹೆಸರು : ಪಸುಣ್ದ ಮುಗುಳಿ ಪರನ್ತಿ ಮುಳ್ಗುನ್ದ ಏತೇಷಾಂ . . . ಮಧ್ಯಸ್ಥಿತೇ (ಇಹ. VII, ೨೨೦-೨೪; 658); ಮುಗುಳಿಯ ನಾಗಮಯ್ಯ ಬಸವನ ಹಳ್ಳಿಯ ಬಸವಮ್ಮ (ಎಕ. XV, ಬೇಲೂರು. ೩೦೬-೦೦; 971). **ಮುಗಲ್** : ೧. "ಮುಗಿನ ಹುಳಿಮರ . . . ಮರುವನ ಹುಳಿ, ಮುಗಲ್, ಮರ್ಗಲ್, ಕೋಕಂಮರ" (ಸಸ್ಯನಿ. ೬೩). **ಮುಗಳಿ** : ೧. "ಮುಗಳಿ, ಮುಗ್ಗಿ, ಶಮಿ, ಚೆಲಮುದಿ, ಬನ್ನಿಮರ, ಮುಗಳಿ" (ಸಸ್ಯನಿ. ೪); ಮುಗಳಿ, ಮುಗ್ಗಿ (ವೈ ಶಿನಿ. ೨-೦೯) ; ಮುಗಳಿ, ಸೀಗೆ, ಬಾಗೆ, ಸೀಮೆಹುಣಿಸೆ (ಪಶುನು. ೨೩೪).

[ ದೇ.॥ ತಮಿ. ಮುಕಿಲ್, ಮುಕಿಲಮ್ ; ಮಲ. ಮುಕಿಲ್ ]

**ಮುಗುಳಿ**$_2$ (ನಾ). ೧. ಎತ್ತರವಾದ ಪ್ರದೇಶ; ದಿಣ್ಣೆ : 'ಮುಗುಳಿಗದ್ದೆ' ಪರಾ. ೨. (ದೇವಸ್ಥಾನ ಮೊದಲಾದುವುಗಳ) ಗೋಪುರ ; ಶಿಖರ; ಆ ದೇವಸ್ಥಾನದ ಮುಗುಳಿ ತುಂಬ ಎತ್ತರವಾಗಿದೆ (ಕೂಡ).

[ ← ತುಳು. ಮುಗುಳಿ ]

**ಮುಗುಳಿಗದ್ದೆ** (ನಾ). ಬೆಟ್ಟದ ತುದಿಯಲ್ಲಿದ್ದು ಮಳೆಯ ನೀರನ್ನೇ ಆಶ್ರಯಿಸಿರುವ ಗದ್ದೆ, — ಜಮೀನು : (ಕಸಂಗ್ರ. ೦೬೩).

[ ಮುಗುಳಿ$_2$ + ಗದ್ದೆ (< ಗಟ್ಟಿ) ]

**ಮುಗುಳಿಸು** (ಕ್ರಿ). ೧. ಮೊಗ್ಗು ಬಿಡು ; ಮೊಗ್ಗು ಕಾಣಿಸಿಕೊಳ್ಳು : ಪಂಪಕವಾದ ಚಂಪಕಲತೆಯ ಪಿಣಿಲೇಱಿದ ಕರವೀರಲತೆಯ ಮುಗುಳಿಸಿದ ವಕುಲಲತೆಯ ಬಾಳ್ಗೊಂಪದ ಬಳಸು ವಿಳಸಮಾದ ರತ್ನರಚಿತಕೃತಕಾಚಲಂ ಗಳೊಳ್ (ಅನಂತ. ೦೦-೨೪ ವ). ೨. (ಮೊಗ್ಗಿನಂತೆ) ಮುಚ್ಚಿಕೊಳ್ಳು : ತನ್ನ ಕಡುಸೊಡರ ಬೆಳ್ಪನ್ನ ತಿಳಿಮುಂಜಾವದನ್ನ ಮುಗುಳಿಸುವ ಬೆಳ್ಪಿಯು ಬಟ್ಟಲಿಂ ಚೆನ್ನೆಸುವ ಕೂರ್ಗಣೆಗಳಿನ್ನದೆಲ್ಲಿಹುದೆಂಬುದನ್ನರಿವೆಂತೊ ಕಂಗೊಳ ದನ್ನೆಗಂ (ಗಿಳಿಂ. ೫-೬). ೩. ಅರಳಿಸು; ವಿಕಾಸಗೊಳಿಸು: ಪೂಜೆಯಿಲ್ಲದಾ ಪೂಜ್ಯನು ಹೃದಯದಿ ಪೂನಗೆ ಮುಗುಳಿಸಿ ತಾಳುವನು (ಅರಳು. ೦೬೩-೦೪).

[ ಮುಗುಳ್$_1$ + — ಇಸು$_3$ ]

**ಮುಗುಳು**$_1$ 'ಮುಗುಳ್$_1$' ನೋ.

**ಮುಗುಳು**$_2$ 'ಮುಗುಳ್$_2$' ನೋ.

**ಮುಗುಳುಗಣ್**, ಮುಗುಳುಗಣ್ಣು (ನಾ). ಮುಚ್ಚಿಕೊಂಡಿರುವ ಕಣ್ಣು : ನಿಮೀಲಿತ ನೇತ್ರ : ಮುಗುಳುಗಂಗಳ ಮೇಲುಗುಡಿದೋಳುಗಳ ಮಿಡುಕುವ ತುಟಿಯ . . . ಪೊಸ ತಪಸಿ ತೊಡಗಿದನು ಬಲಂತಪವ (ಕಃವ್ಯಾ.೩. ೪-೪೩); ಅರ್ಘ್ಯಮೆತ್ತಿದ ಕೈಯು ಅಂಜಲಿಗದೇನೊ ಬಿಳ್ದಪೊಲಾಗ್ಯ ತವಳ ಮೆಯ್ ಜುಮ್ಮೆನೆ ನರ್ವಿನಿಮಿರಲೊಯ್ಯನೆ ಮುಲರ್ದುವಾ ಮುಗುಳು ಗಣ್ (ಶ್ರೀಗಾಪುರ. ೫೦೬-೨೦೫). **ಮುಗುಳುಗಣ್ಣು** : ಮುಗುಳುಗಣ್ಣುಗಳು, ಮೇಲೆತ್ತಿದ ತೋಳುಗಳು, ಮಿಡುಕುವ ತುಟಿಗಳು (ಕಾಮುಕಿ. ೯೨).

[ ಮುಗುಳು$_1$ (< ಮುಗುಳ್$_1$) + ಕಣ್ ]

**ಮುಗುಳುಗಣೆ** 'ಮುಗುಳ್ಗಣೆ' ನೋ.

**ಮುಗುಳುಗಣೆಯ** 'ಮುಗುಳ್ಗಣೆಯ' ನೋ.

**ಮುಗುಳುಗಣ್ಣು** 'ಮುಗುಳುಗಣ್' ನೋ.

**ಮುಗುಳುಗಾಯಿ** 'ಮುಗುಳ್ಗಾಯ್' ನೋ.

**ಮುಗುಳುಗೊಂಬು** (ನಾ). (ಆನೆಯ) ಮೂಡುತ್ತಿರುವ ಕೊಂಬು: ಮೊಳೆಯುತ್ತಿರುವ ಕೋರೆ, — ದಂತ : ಚೋಟುಕೊಂಬಿನ ಆನೆ ೧ಕ್ಕೆ ೩೦. ವರಹ ಕ್ರಯ, ಮುಗುಳುಗೊಂಬಿನ ಆನೆ ೧ಕ್ಕೆ ೨೫ ವರಹ ಕ್ರಯ (ಮುಹಾಮಂ. 1, ೩೯). [ ಮುಗುಳು$_1$ (< ಮುಗುಳ್$_1$) + ಕೊಂಬು$_1$ ]

**ಮುಗುಳುದೆನೆ** (ನಾ). ಅಂಕುರಿಸುತ್ತಿರುವ ತೆನೆ ; ಮೊಳೆಯುತ್ತಿರುವ ಹೊಡೆ : ವ್ಯರ್ಥವಲ್ಲವೆ . . . ಮುಗುಳುದೆನೆಯ ಎಳೆತುಳಸಿದಳಗಳ ತಂದು ಪ್ರೇಮದಿಂದ ಜಗನ್ಮೋಹನಪೂಜೆಯ ಮಾಡಿ ಚರಣಕೆಱಗದವನ ಜನುಮ (ಪುರಂದ. ಛಾ. ೨-೫೯-೨). [ ಮುಗುಳು$_1$ (< ಮುಗುಳ್$_1$) + ತೆನೆ$_1$ ]

**ಮುಗುಳುನಗು** 'ಮುಗುಳ್ನಗು$_1$' ನೋ.

**ಮುಗುಳುನಗೆ** 'ಮುಗುಳ್ನಗೆ' ನೋ.

**ಮುಗುಳುಬೊಕ್ಕೆ** (ನಾ). ಬಿರಿಯದಿರುವ ಬೊಕ್ಕೆ ; ಒಡೆಯದಿರುವ ಗುಳ್ಳೆ : "ಮುಗುಳು [ಪಾಠಾಂ. ಮುಳ್ಳು]ಬೊಕ್ಕೆ ಪಿಟಕಂ ಸ್ಫೋಟಕ ಮೆನಿಕ್ಕು" (ಮಂಗರಾ. ೦೦೩-೦).

[ ಮುಗುಳು$_1$ (< ಮುಗುಳ್$_1$) + ಬೊಕ್ಕೆ$_1$ ]

**ಮುಗುಳುವಾಳೆ** (ನಾ). ಬಾಳೆಯ ಹೂವು ; ಬಾಳೆಮೋತೆ : ಮುಗುಳು ವಾಳೆಯ ಹೊಡೆಯ ನುಚ್ಚಾಗಿ ಕತ್ತರಿಸಿ ಒಗರು ಹೋಹಂತೆ ಸುಣ್ಣದ ನೀರಿನಿಂ ಕುದಿಸಿ ತೆಗೆದು (ಸೂಪಶಾ. ೪-೭೦).

[ ಮುಗುಳು$_2$ (< ಮುಗುಳ್$_1$) + ಬಾಳೆ$_1$ (< ಬಾೞೆ) ]

**ಮುಗುಳುವಿಡಿ** (ಕ್ರಿ). ಮೊಗ್ಗು ಬಿಡು, — ಕಾಣಿಸಿಕೊಳ್ಳು : "ಮುಗುಳ್ತು ದೆನೆ ಮುಗುಳುವಿಡಿಮುದು" (ಶಬ್ದಾಂ. ೪೬೭-೭೬).

[ ಮುಗುಳು$_2$ (< ಮುಗುಳ್$_2$) + ಪಿಡಿ$_1$ ]

**ಮುಗುಳುಹೊಡೆ** (ನಾ). = ಮುಗುಳುದೆನೆ : ಮುಗುಳುಹೊಡೆಗಳರೆಪೊಡೆ . . . ಹಾಲುದುಂಬುದೆನೆಪು ಶಾಲಿ ಸೊಗಸನಿತ್ತುವು ನೋಳ್ಪರಿಗೆ (ಳಂಶಪ. ೫-೬೨). [ ಮುಗುಳು$_2$ (< ಮುಗುಳ್$_2$) + ಪೊಡೆ$_3$ (< ಪೊಡ್ಡ$_3$) ]

**ಮುಗುಳೇಱು** (ಕ್ರಿ). = ಮುಗುಳುವಿಡಿ : ಮುಗುಳೇಱಿದ ಚಂಪಕಲತೆವೋಲಿ ದರ್ಗಳಂತಾಕ್ಷಣದೊಳ್ (ಕಾದಂಬ. ೩೨೩); ಅವಳ ಕೋಮಲಿಕಾಯುತುಂಬ

ಪೊಳೆವ ಸನ್ಮಾರ್ಗಲತೆ ಮುಗುಳೇಱಿದೊಲ್ ಮೆಲ್ಪುವಳೆಯೆ ನೀರಾಡಿದರ್ ಗಾಡಿಯಿಂ ಕೂಡಿಯಾ ನಳಿನಾಯತಾಂಬಕಿಯರಿಂ (ಸಂಧಿವಿ. ೬-೨೯).
[ಮುಗುಳ್$_{2}$ + ಏಱು$_{1}$ (< ಏಱ್$_{1}$) ]

**ಮುಗುಳೊತ್ತು** (ಕ್ರಿ). ೧. ಅಂಕುರಿಸು ; ಮೊಳೆ ; ಮೂಡು : ಮೊಲೆ ಮುಗುಳೊತ್ತುವಂದು ಮೊದಲಿಂದುವರಂ ಬಗೆದಂತಿರಿಚ್ಛೆಯುಂ ಸಲಿಸಿ . . . ಕೂರ್ತ ಮನಃಪ್ರಿಯನಂ ಬಿಡೆಂದು ನೀನೆಲೆ ಮುದುಪಾಱಿದೊಳ್ತೆ ನುಡಿಯಲ್ಪಗೆದಂದುವನೆಂತು ಸೈರಿಪೆಂ (ರಾಜಶೇ. ೧೧-೧೬೨); ಉತ್ತಮಜ್ಞಾನಸಲಿಲವನೆಱೆದು ಶರೀರ ಸುಚಿತ್ರಭೂಮಿಯೊಳಳ್ತಿಯಿಂ ಬಿಳ್ತಲದುವೆ ಮುಗುಳೊತ್ತಿ ಪಲ್ಲವಿಸುತೇಕೋತ್ತರಶತಸ್ಥಲಂಗಳನಾಂ ರುತ್ತಿರ್ಪನಂ (ಕೊಟ್ಟೂರು. ೧-೬೯). ೨. ಅರಳು ; ವಿಕಾಸವಾಗು: . . ನ ದಯೆಗೆ ಚಿತ್ತಮಂಕುರಿಸಿ ಬುದ್ಧಿ ಪಲ್ಲವಿಸಿ ಮನಂ ಮುಗುಳೊತ್ತಿ ಕುಳ್ . . ಬಸವರಾಜನಂ . . . ಕಂಡು (ಬಸರ. ೨-೬೩). ೩. ಮೊಗ್ಗುಗಳಿಂದ ತುಂಬು, — ಕೂಡಿರು : ಸಮ್ಮದಮಂ ಕರಂ ತಳೆಯೆ ಜಾದಗೆಗಳ್ವಿಳಸತ್ಕದಂಬಜಾಲಂ ಮುಗುಳೊತ್ತೆ . . . ತಾಂ ಮುಂ ಮಟಿಗಾಲದೊಳ್ಮರೆದು ತೀಡಿದುದೊಯ್ಯನೆ ಪಶ್ಚಿಮಾನಿಲಂ (ಉದ್ಭಟ. ೯-೦೪೦). [ಮುಗುಳ್$_{2}$ + ಒತ್ತು$_{1}$]

**ಮುಗುಳ್ಗಣ್** (ನಾ). ಮೊಗ್ಗಿನಂತಿರುವ ಕಣ್ಣು ; ಕುಟ್ಮಲದಂತಿರುವ ನೇತ್ರ: 'ಮುಗುಳ್ಗಣ್ಣ' ಪರಾ. [ಮುಗುಳ್$_{2}$ + ಕಣ್]

**ಮುಗುಳ್ಗಣೆ**, ಮುಗುಳುಗಣೆ (ನಾ). ಮೊಗ್ಗಿನ ಬಾಣ ; ಹೂವಿನ ಸರಳು ; ಪುಷ್ಪಬಾಣ : ಪಗೆಗಳುಮಂ ಪೆಂಡಿರುಮಂ ಮಿಗೆ ಸೋಲಿಪುವವನ ಬಿ. . ಂ ಗಾಡಿಯುಮಾವಗಮಡಸಿ ತಾಗೆ ಕಣೆಯುಂ ಮುಗುಳ್ಗಣೆಯುಂ ಮೊಸೆಯೊಳಂ ಪೊಬಲ್ವಿದಿಯೊಳಂ (ಶಬ್ದಸಾ. ೯೯); ಸಲೆ ಪರವಶದೊಳಾದ ಕೊರುಗುರ ಕೊನೆವಲ್ಲ ಕಲೆ ಮೆಯ್ಯೊಳಿಲ್ಲದರ್ ಮುಗುಳ್ಗಣೆಯ ಮುದ್ರೆಯುಜ್ವಲಿಸದರ್ . . . ಮೋಹಿಗಳ ಕುಲಕೆ ಹೊಱಗೆಂದು ನೂಪುರರವದೆ ನಾದಮಂ ಪೊಯ್ಯುರಂಗನೆಯರಲ್ಲಿ (ಶಬ್ದಗಾ. ೯-೯೧); ನಿಜಕಟಾಕ್ಷಶರವಿರ್ದಂತೆ ಮುಗುಳ್ಗಣೆಗಳೇವಾಳ್ತೆಯೆಂದು ಕಾವನ ಕರತಳದಿನವಂ ಕಪರ್ತೆಗೊಂಡು ಚೆಲ್ಲುವಂತೆ ಪುಷ್ಪಪುಟಹಸ್ತದಿಂ ಪುಷ್ಪಾಂಜಲಿಯಂ ಕೆದರ್ದು (ರಾಜಶೇ. ೩-೦೯ ವ). **ಮುಗುಳುಗಣೆ** : ' ಮುಗುಳುಗಣೆಯ ' ಪರಾ.
[ಮುಗುಳ್$_{2}$ + ಕಣೆ$_{1}$]

**ಮುಗುಳ್ಗಣೆಯ**, ಮುಗುಳುಗಣೆಯ (ನಾ). ಹೂವಿನ ಬಾಣವನ್ನು ಹೊಂದಿದವನು ; ಕಾಮ ; ಮನ್ಮಥ : ಮುಕ್ತಿಪದದ ಹೊಲಬಂ ಮುಗುಳ್ಗಣೆಯನ ಶಕ್ತಿಗಿಡಿಪ ಪರಿವಿಡಿಯುಂ . . . ಯುಕ್ತಿಗೆ ಯುಕ್ತಮೆನಿಸುವಾಗಮಮಂ ವ್ಯಕ್ತೀಕರಿಸುವುಪಾಧ್ಯಾಯರನಾಂ ಭಕ್ತಿಯಿನಭಿವಂದಿಸುವೆಂ (ಜಗನ್ನಾ. ೦-೯). **ಮುಗುಳುಗಣೆಯ** : ಮುಗುಳುಗಣೆಯನ ಶಂಭು ಕುವರನು ರುಗುಮಿಣಿಯು ಸಾರಿರಲು ಕೋಡಿಮನಗರದಿಂ ಮಂತ್ರಿಗಳು ಬಂದೆಂದಂತೆ ಬಿನ್ನೈಸೆ (ಹರಿಶ್ಚಂ. ೩೦-೦೨). [ಮುಗುಳ್ಗಣೆ + — ಅ$_{7}$]

**ಮುಗುಳ್ಗಣ್ಣ** (ನಾ). ೧. ಮೊಗ್ಗಿನಂತೆ ಕಣ್ಣುಗಳನ್ನುಳ್ಳವನು. ೨. ಕೃಷ್ಣ : ಮೊಗಮೆಲ್ಲ ಮುಚ್ಚಿಕೊಂಡಿಪ ಕಣ್ಣ ಮುಗುಳ್ಗಣ್ಣ ತಾವರೆಯ ಕಣ್ಣ (ಕೃಷ್ಣಾ. ೩-೮೦). [ಮುಗುಳ್ಗಣ್ + — ಅ$_{7}$]

**ಮುಗುಳ್ಗಾಯ್**, ಮುಗುಳುಗಾಯಿ (ನಾ). ೧. ಆಗ ತಾನೆ ಹೂವಿನಿಂದ ಹೊರಬಂದ ಕಾಯಿ ; ಅತಿ ಎಳೆಯ ಕಾಯಿ ; ಹೀಚು : ಮುಗುಳ್ಗಾಯ್ ಅಮುಳ್ದೊಂಗಲ್, ಎಸಳ್ದಸೆ, ಅಮುಳ್ಚಂತ್ರಂ (ಶಬ್ದಮ. ೪೩ ಪ್ರಯೋ) : ತಳಿರ್ಗೆಂಪು, ಬೆಳರ್ಗೆಂಪು, ಮುಗುಳ್ಗಾಯ್, ಎಸಳ್ಗೆಂದಂ (ಶಬ್ದಾನು. ೬೩ ಪ್ರಯೋ). ೨. ಹೀರೆಕಾಯಿ ಮೊದಲಾದ ತರಕಾರಿಯಿಂದ ತಯಾರಿಸುವ ಒಂದು ಬಗೆಯ ಖಾದ್ಯ : ಕೆಲವ ಭಂಜಿತಶಾಕಮಂ ಕೆಲವ ಮುಗುಳ್ಗಾಯು . . . ಮಾಡಿ ಹಲವು ಚಂದದೊಳು ಹೀರೆಯ ಕಾಯ ಶಾಕಮಂ ಹಿರಿದಾಗಿ ಹಸಮಾಳ್ಪುದು (ಸೂಪಶಾ. ೩-೭).

**ಮುಗುಳುಗಾಯಿ** : ೨. ಭಂಜಿತಶಾಖ, ಮುಗುಳುಗಾಯಿ, ಸವಜಿಷ್ಟಸಂಧೆ . . . ಶಾಕವಂಗಿ ಮೊದಲಾದ ಹೀರೆಯ ಕಾಯ ಪಾಕವನ್ನು ಹಸನಾಗಿ ತಯಾರಿಸುವುದು (ಸೂಪಶಾ. ೩-೭ ಅವ). [ಮುಗುಳ್$_{2}$ + ಕಾಯ್$_{4}$]

**ಮುಗುಳ್ಚು** (ಕ್ರಿ). ೧. (ಹೂವು ಮೊದಲಾದುವನ್ನು) ಮುಚ್ಚಿಕೊಳ್ಳುವಂತೆ ಮಾಡು : ಮೊಗ್ಗಾಗಿಸು : "ಮುಗುಳ್ಚು — ಸಂಕೋಚಕರಣೇ (ಕುಗ್ಗಿಸು)" (ಕವಿಧಾ) ; ಪಗಲರ್ಕನಿರುಳ್ವಿಧುಬಿಂಬವಿಂಬುಮಾಳ್ಪಂತೆ ಮುಗುಳ್ಚುಗಂ ಕುಮುದಕಾನನಮಂ ಕಮಳಪ್ರತಾನಮಂ (ಲೀಲಾವ. ೬-೬೯). ೨. (ಕಣ್ಣು) ಮುಚ್ಚಿಕೊಳ್ಳು, — ಮುಗಿ : ಸುರತಾಂತದೊಳಕ್ಷಿಗಳಂ ಮುಗುಳ್ಚಿ ಪಟ್ಟಿರೆ ಪೆರಮಾಯು ತೀವಿತಿವಳೆಂದಿರದೋಡಿದನೊರ್ವನೂರಿಚಂ (ರಾಜಶೇ. ೧೧-೦೯೯). [ಮುಗುಳ್$_{1}$ + — ಚು$_{1}$]

**ಮುಗುಳ್ದೊಂಗಲ್** (ನಾ). ಮೊಗ್ಗುಗಳ ಗೊಂಚಲು; ಹೂಗೊಂಚಲು; ಪುಷ್ಪಗುಚ್ಛ: ಮುಗುಳ್ದೊಂಗಲ್, ಎಸಬಿಬ್ಬಾಣಂ (ಶಬ್ದಾನು. ೬೩ ಪ್ರಯೋ). [ಮುಗುಳ್$_{2}$ + ತೊಂಗಲ್]

**ಮುಗುಳ್ದೋಱ್** ' ಮುಗುಳ್ದೋಱು ' ನೋ.

**ಮುಗುಳ್ದೋಱು**, ಮುಗುಳ್ದೋಱ್ (ಕ್ರಿ). ಮೊಗ್ಗುಬಿಡು ; ಹೂಬಿಡು ; ಪುಷ್ಪಿತವಾಗು : "ಮುಗುಳ್ದುದು ತಾನದೆನೆ ಮುಗುಳ್ದೋಱಿದುದು " (ಶಬ್ದಮ. ೨೨೦-೨೨). **ಮುಗುಳ್ದೋಱ್** : ಬೆಳ್ಗೆ ಪುಟ್ಟಲ್ಕೆ ಸಂಪಗೆ ಮುಗುಳ್ದೋರ್ಪ ಸುದತಿಯರ ಬಟ್ಟಮೊಗಕಣೆಯಹವೆ ತಾವರೆಗಳೆಂದವಂ ಬಿಟ್ಟು ತುಂಬಿದ ಜವ್ವನೆಯರ ತನುಪರಿಮಳಕೆ ಕವಿದವಾಬನದಳಿಗಳು (ಕೃಷ್ಣಾ. ೯-೦೭). [ಮುಗುಳ್$_{2}$ + ತೋಱು]

**ಮುಗುಳ್ನಗು**$_{1}$, ಮುಗುಳುನಗು (ಕ್ರಿ). ಮಂದಹಾಸವನ್ನು ಬೀರು ; ನಸುನಗು : ಪಂಪಕವಿ ಪೊನ್ನನ ಕಡೆ ತಿರುಗಿ ಮುಗುಳ್ನಕ್ಕನು (ದಾನಚಿಂ. ೬). **ಮುಗುಳುನಗು** : ಚೋಳನು ಕೈಮುಚ್ಚಿ ಉಡುಗೊರೆ ಕೊಡಲು ಮುಗುಳುನಗುತ್ತ ಕೋಲ್ಕಾರರು ಹೀಗೆಂದರು (ಶಾಂತಲಾ. ೧೦ ಕಥಾಸಾರ). [ಮುಗುಳ್$_{2}$ + ನಗು$_{1}$]

**ಮುಗುಳ್ನಗು**$_{2}$ (ನಾ). ಮಂದಹಾಸ ; ನಸುನಗು : ಅವರ ಮುಗುಳ್ನಗುವನ್ನು ಕಂಡು ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು (ರೂಢಿ).
[ಮುಗುಳ್$_{2}$ + ನಗು$_{2}$]

**ಮುಗುಳ್ನಗೆ**, ಮುಗುಳುನಗೆ (ನಾ). = ಮುಗುಳ್ನಗು$_{2}$ : " ಸ್ಮಿತವೆಂಬುದು ಮುಗುಳ್ನಗೆ" (ಹಲಾಯು. ೯೩-೪೦೩) ; ಮಗಳ ಮೊಗಮಂ ಮುಗುಳ್ನಗೆವೆರಸು ನೋಡಿದಾಗಳ್ (ಅಂಜ. ೩-೯೬ ವ) ; ಮುಗುಳ್ನಗೆ ಪದೆಪಿಂ ಪೊದಟ್ಟುದು ಕುಮಾರನ ಕೋಮಳವಕ್ತ್ರಬಿಂಬದೊಳ್ (ಕುಸುಮಾ. ೬-೦೨೩) ; ದಾರಿಗನ ಮೋರೆಯಲ್ಲೊಂದು ಮುಗುಳ್ನಗೆ ಮಿಂಚಿತು (ಮಂಥನ. ೩). **ಮುಗುಳುನಗೆ** : ಮೃಗನಯನೆ ನೀನೆನ್ನನೀಕ್ಷಿಸಿ ಮುಗುಳುನಗೆಯುಂ ಚಿಂತೆಯುಂ ನಿನಗೇಕೆ ಪೇಳೆನಲು (ಬಸವ. ೪೦-೩) ; ಮುಗುಳುನಗೆ ನಸುವೊಳೆಯೆ ಭೀಮಾದಿಗಳಿಗೆಂದನು ಕೃಷ್ಣನು (ಕುಮಾ.ಭಾ. ೭-೦೨) ; ಮುಗುಳುನಗೆಯುಲಿ ಸೂರ್ಯತನುಜನ ಮೊಗವ ನೋಡಿ (ಹಾಕ್ಕಭಾ. ೪೩-೨೩) : ಅದೃಷ್ಟದ ಕುಲಿಮೆಯಿಂದ ನೆಗೆವ ಕಿಡಿಯಂತಿತ್ತು ಅವನ ಮುಗುಳುನಗೆ ! (ಅಕ್ಕಾರ್ಶ. ೦೬೭). [ಮುಗುಳ್$_{2}$ + ನಗೆ]

**ಮುಗುಳ್ನನೆ** (ನಾ). ಅರಳುತ್ತಿರುವ ಮೊಗ್ಗು, — ಕುಟ್ಮಲ : ಮುಗುಬ್ಬುಂ ಮುಗುಬ್ಬುಂ ಪೊಸಮಲ್ಲಿಗೆಯ ಮುಗುಳ್ನನೆಯ ದೇಸೆಯುಂ ಕಂದರ್ಪಂ ಪೊಗಟ್ಟಂ (ಪುಲ್ಗೆರೆ. ೩-೦೪) ; ಬಲ್ಲನೆಯ ಪೊದಱ್ ಮುಗುಳ್ನನೆಯ ಪೆರ್ಮನೆ . . . ಪೊಸವಣ್ಣ ಗೊತ್ತಿದೆನೆ ಕಣ್ಗೆಸೆದಿರ್ದುದದೊಂದು ಮಾಮರಂ (ಶಬ್ದಸಾ. ೦೦೦). [ಮುಗುಳ್$_{1}$ + ನನೆ]

**ಮುಗುಳ್ಮೊಲೆ** (ನಾ). ಮೊಗ್ಗಿನಂತಿರುವ ಕುಚ, — ಮೊಲೆ : ಹೊಗರೆಸೆವ ಮುಗುಳ್ಮೊಲೆಯೊಪ್ಪಿಗಂ . . ನೃಪನಂದನೆಗೆ (ಜಯನೃ. ೦೩-೦೨) ;

ಸಣ್ಣ ಮುಗುಳ್ಮೊಲೆಯು ಪರಳ್ಮೊಲೆಯು . . . ಬೆದರ್ದ ಕಣ್ಣಸೋಟದ ಬಾಲೆಯರ್ . . . ಎಸೆವರು (ಕಬಿಪು. ೧೦-೧೯). [ಮುಗುಳ್$_2$ + ಮೊಲೆ$_1$]

**ಮುಗುಳ್ವಡೆ** (ಕ್ರಿ). ಮೊಗ್ಗುಬಿಡು ; ಹೂಬಿಡು ; ಪುಷ್ಪಿತವಾಗು: ಬೊಗಸೆಗಂಗಳೆಯಂಗಲತಿಕೆಗೆ ತಿಗುರಿ ತೀಡಿದ ಮೃಗಮದದ ಮಗಮಗಿಪ ಸುರಭಿಯ ಕಾಮಿಯಭಿರತಿ ಮುಗುಳ್ವಡೆಯುತಾಸ್ವಾದಿಪಂತೆ (ಕೃಕಪ. ೩-೫-೫). [ಮುಗುಳ್$_2$ + ಪಡೆ$_1$]

**ಮುಗುಳ್ವದ** (ನಾ). ಮೊಗ್ಗು ಬಿಡುವ ಹದ ; ಹೂ ಬಿಡುವ ಸ್ಥಿತಿ : ಮುಗುಳ್ವದನಾವ ಸಂಪಗೆ ಪಡಲ್ವುದಿರ್ದುರ್ತೆ ಮರಲ್ದರಲ್ದ ಮಲ್ಲಿಗೆ ಮನಮಂ ಕವರುತ್ತಿರೆ (ಕಂಕಥಾ. ೫-೩೫) ; ಒರಿದು ಮೃದುವಾಗಿ ನನೆದಕ್ಕಿಯೊಳಗರಿಸಿನವ ಪೊರೆಯೊತ್ತಿ ಮುಗುಳ್ವದದಿ ಬೆಂದ ವಿದಳಗಳನೊಡೆವೆರಸಿ . . . ಪಾಕಂ ಮಾಡಿ ತೆಂಗಾಯ ತೆಗೆಯೆ ಕಾ ಹಸನಪ್ಪುದು (ಸೂಶಾ. ೩-೫) ; ಹುರಿಯಕ್ಕಿಯೊಳ್ಳು ಜೀರಿಗೆ ಮೆಣಸು . . . ಮುಗುಳ್ವದದಿ ಬೆಂದ ಬೇಳೆಯ ಹೆಸರು ಫುಲ್ಲಸೊಜ್ಜಿಗೆಯು ಕೂಳು (ಸೂಶಾ. ೯-೦). [ಮುಗುಳ್$_1$ + ಪದ$_1$]

**ಮುಗುಳ್ವಳೆ** (ನಾ). ಮೊಗ್ಗುಗಳ ಮಳೆ ; ಹೂಮಳೆ ; ಪುಷ್ಪವೃಷ್ಟಿ : ಮುಗುಳ್ವಳೆಯಂ ಸುರಿವ ಜಂತ್ರದ ಮುಗಿಲ್ಗಳ ತೆಗೆದು ತರಂಗೊಳಿಸಿದ ಪಂಚವರ್ಣಿಗೆಯ ಪಟ್ಟೆಯ . . . ಗಾಡಿವಡೆದ ಮಂಟಪದ ಮಧ್ಯದಲ್ಲಿ ನೆರೆದ ವಿಬುಧರಿಂ (ರಾಶೇ. ೮-೫ ವ). [ಮುಗುಳ್$_2$ + ಮಳೆ (< ಮೞೆ)]

**ಮುಗುಳ್ವಿಲ್** (ನಾ). ಹೂವಿನ ಧನುಸ್ಸು ; ಪುಷ್ಪಚಾಪ : 'ಮುಗುಳ್ವಿಲ್ಲ' ಪರಾ. [ಮುಗುಳ್$_2$ + ಬಿಲ್$_2$]

**ಮುಗುಳ್ವಿಲ್ಲ** (ನಾ). ಹೂವಿನ ಧನುಸ್ಸನ್ನುಳ್ಳವನು ; ಕಾಮ ; ಮನ್ಮಥ : ಮುಗುಳ್ವಿಲ್ಲಂ ಮುಗುಳ್ದೆಚ್ಚ ಶಿಲೀಮುಖ ಮುಗುಳೆ ಕುಲಟೆಯರ ಮೆಲ್ಲೆರ್ದೆಯೊಳ್ ನೆಱೆ ಮುಗಿದುವು ಮುನ್ನೀರಣುಗಿಯ ಸೆಜ್ಜೆವನೆಗಳಾ ರಾತ್ರಿಯೊಳು (ಶಯಾಶಾ. ೧೩-೬೩) ; ಮುಗುಳ್ವಿಲ್ಲನಾ [ಪಾಠಾಂ. ಮುಗುಳಿಲ್ಲವಾ]ರತಿದೇವಿಯರಾಡುವ ನಗರಜನದ ಸಾರಿಯಿರ್ಪ ಪಗಡೆವಾಸೆಂದೆನೆ ರವಿ ಸೋಮವೀಥಿಗಳೊಪ್ಪುಗಿಸಿಹವಾ ನಗರಿಯೊಳು (ಶ್ರೀಶಾ೦. ೦-೬೫). [ಮುಗುಳ್ವಿಲ್ + — ಅ$_7$]

**ಮುಗುಳ್ವುಣ್** (ನಾ). = ಮುಗುಳುಬೊಕ್ಕೆ : ಅಳುರೆ ಶರದದ ಬಿಸಿಲ್ ಕೋಮಳಿಕೆಯನುಱೆದನಿಸು ಬಾಡಿ ಕಂದಿರ್ದಳ್ ಕುಂದಳತಾಸಕುಮಾರಿ ಮುಗುಳ್ವುಣ್ಗೊ[ಪಾಠಾಂ. ಳ್ಗೊಳ್ಳೆ]ಳೆತೊಡೆ ಮೆಯ್ಯಾಯ್ದು ಬಡಬಡಾದಂತಾದಳ್ (ಲೀಲಾವ. ೫-೩೬). [ಮುಗುಳ್$_2$ + ಪುಣ್]

**ಮುಗುಳ್ವೆಳಗು** (ನಾ). ಮೊಗ್ಗಿನಂತಹ ಕಾಂತಿ : ಬೆರಲೆಡೆಯೊಳಡಸಿದ ಕಪ್ಪುರವಳುಕಿನೊಳೆ ನಗಿಸುವ ರೋಡಗರನಿಡುವ ನೆವದಿಂ ಪರಿವ ಮುಗುಳ್ನಗೆಯ ಮುಗುಳ್ವೆಳಗಿಂಗೆ ತಕ್ಕುಗುಡುವಂತೆಯುಂ (ಅನಂಪು. ೯-೭ ವ). [ಮುಗುಳ್$_2$ + ಬೆಳಗು$_2$]

**ಮುಗುಳ್ಸರಿಗೆ** (ನಾ). ಮೊಗ್ಗುಗಳಿಂದ ಮಾಡಿದ ಸರ, — ಹಾರ : ವನಕುಸುಮಂಗಳಂ ಬಗೆಗೆವಂದುವನಟ್ಟಿಯೊಳಾಯ್ದು ಕೊಯ್ದು . . . ಮುಗುಳ್ಸರಿಗೆ ತೋಳ್ವಳೆ ಕಂಕಣವಾರಮೆಂದು ಬೇಟ್ಪನಿತನೆ ಮಾಡಿ ತೊಟ್ಟು ಕರಮೊಪ್ಪಿದಳಾಕೆ ಬಸಂತಕಾಂತೆವೋಲ್ (ಕಂಕಥಾ. ೨-೦೬). [ಮುಗುಳ್$_2$ + ಸರಿಗೆ]

**ಮುಗುಟಿಸ್$_1$** (ಕ್ರಿ). (?) : ಶಿಥಿಲದ್ವಿತ್ವಕ್ಕೆ — ಮುಗುಟ್ಟಿಂ, ಅಗುಟ್ಟಿಂ. . . ಮುಗುಟ್ಟಿಂ, ತೆಗಟ್ಟಿಂ (ಕವಿರಾ. ೩೬ ಪ್ರಯೋ). [ ? ]

**ಮುಗುಟಿಸ್$_2$** (ನಾ). (?) : ಪೊಕ್ಕುಟಿಸ್, ಕೌಂಕುಟಿಸ್, ನೆಗಟಿಸ್, ಮುಗುಟಿಸ್, ನೆಮುಟಿಸ್, ತೆಮುಟಿಸ್ (ಶಬ್ದಾ.ಸು. ೦೯೦ ಪ್ರಯೋ). [ ? ]

**ಮುಗುಟಿತ್ತೆ** (ನಾ). (?) : ಅಗುಟಿತ್ತೆ, ಪೊಗಟಿತ್ತೆ, ಮುಗುಟಿತ್ತೆ, ನೆಗಟಿತ್ತೆ (ಶಬ್ದಾ.ಸು. ೫೩೯ ಪ್ರಯೋ). [ಮುಗುಟಿಸ್$_1$ + — ತ್ತೆ$_2$]

**ಮುಗ್ಗಟ್ಟು** (ನಾ). ೧. ವಿಷಮಸ್ಥಿತಿ ; ಕಷ್ಟ ; ತೊಂದರೆ ; ಪೇಚು : ಕಂಚಿನ ನಾಗರಿಕತೆಯು ಹರಡಿದ ಹಾಗೂ ತಾಮ್ರ ಮತ್ತು ತವರದ ಅಭಾವದಿಂದ ಎಲ್ಲರಿಗೂ ಹತಾರಗಳು ದೊರೆಯದೆ ಮುಗ್ಗಟ್ಟು ತಲೆದೋರಿತು (ಶಿಲ್ಪಶಾ. ೬೭) ; ಹೀಗೆ ಅವರನ್ನು ಬಲವಂತ ಮಾಡಿ ಮುಗ್ಗಟ್ಟಿಗೆ ಸಿಕ್ಕಿಸುವುದು ಬಹಳ ತಪ್ಪು (ಕುರಾಯ. ೭೦). ೨. ಕೊರತೆ; ಅಭಾವ : ಇಲ್ಲಿ ಸ್ಥಳಕ್ಕೆ ಬಹಳ ಮುಗ್ಗಟ್ಟಂತೆ ! (ಕೊಪಬೇ. ೨೪೯) ; ಅವನಿಗೆ ಹಣದ ಮುಗ್ಗಟ್ಟು ಬಲವಾಗುತ್ತಿತ್ತು (ರಕ್ತರೂ. ೮೩). 'ಇಕ್ಕಟ್ಟು', 'ಬಿಕ್ಕಟ್ಟು' ಪರಾ. [ದೇ. ॥ ತಮಿ. ಮುಕ್ಕಟ್ಟು]

**ಮುಗ್ಗರಿಸು** ' ಮುಗ್ಗುರಿಸು ' ನೋ.

**ಮುಗ್ಗಲು** (ನಾ). ೧. ಬೂಷ್ಟು ಹಿಡಿದುದು; ಮುಗ್ಗಿದುದು : ಒಂದೇ ಸಮನೆ ಮಳೆ ಹಿಡಿದು, ಥಂಡಿಯಿಂದ ಎಷ್ಟೋ ಹಪ್ಪಳ ಸಂಡಿಗೆಗಳು ಮುಗ್ಗಲಾದುವು (ಕೂಂ). (ಗು). ೨. ಬೂಷ್ಟು ಹಿಡಿದ; ಕೆಟ್ಟುಹೋದ : ದೊರೆಯು ಇವಳ ತೊಟ್ಟಿಗೆ ಕೊಡುತಾ ಇದ್ದ ಖಾಸಾಸೋಬಸ್ಕರವನ್ನು ದಿನಕ್ರಮೇಣ ಕಡಿಮೆ ಮಾಡುತ್ತಾ ಕಡೆಗೆ ಕಗ್ಗಲರಾಗಿ ಮುಗ್ಗಲ ಹುರಳಿಗೆ ಇಳಿಸಿದನು (ಪೇಟಿಪಾ. ೦೬). 'ಮುಱುಕಿಲ್$_1$' ಪರಾ.

**ಮುಗ್ಗಲಗೇಡಿ** = ಅಸಹ್ಯವ್ಯಕ್ತಿ : ಹೊಲಾ ಮನಿ ಎಲ್ಲಾ ಹಾಳು ಮಾಡೋ ಮುಗ್ಗಲಗೇಡಿಗೆ ಮಗಳ ಕೊಟ್ಟು ಯಾವ ನರಕಕ್ಕ ಹೋಗಬೇಕಂತೀರೀ ನೀವು ? (ಸಪುಶೇ. ೨೪೬). [ಮುಗ್ಗು$_2$ + — ಅಲು (< — ಅಲ್$_2$). /ತಮಿ. ಮುಕ್ಕಲ್ = ಮುಗ್ಗುನಾತ]

**ಮುಗ್ಗಾಲಿ** ' ಮೂಗಾಲಿ ' ನೋ.

**ಮುಗ್ಗಿಸು** ' ಮೊಟ್ಗಿಸು ' ನೋ.

**ಮುಗ್ಗಿಱು** (ಕ್ರಿ). ಮುಗ್ಗರಿಸಿ ಬೀಳು ; ಎಡವು : ಮುಡಿಗೆ ಮುಡಿಯೆಂದವಳ ಕೆಯ್ಯೊಳಗೆ ತಂದು ಕೊಡಲೊಡನೆ ಹಾವಾಗಿ ಹೂಂಕರಿಸಿ ಕೋಪದಿ ಕೆಯ್ಯ ಕಡಿಯಲಾ ಕ್ಷಣದೊಳಗೆ ವಿಷವೇಱೆ ಮುಗ್ಗಿಱಿದು ಕಾಮಲತೆ ಭೂತಳಕ್ಕೆ ಕೆಡೆಯಲು (ಸಮ್ಯಕ್ತ್ವ. ೬-೯೪) ; ಡೊಳ್ಳುಹೊಟ್ಟೆಯನೆತ್ತಿಕೊಂಡೋಡಲಾಱದೆ ಹಳ್ಳಕೊಳ್ಳದಲಿ ಮುಗ್ಗ[ಗ್ಗಿ]ಱಿದು ಮುಳ್ಳಲ್ಲಿ ಬಿದ್ದು ಮೂಗರಿಸಿಕೊಂಡರ ಲೆಕ್ಕವೆಲ್ಲವನಾರು ಬಣ್ಣಿಪರು (ಕಂಪಬಿ. ೦೭-೩೫). [ಮುಗ್ಗು$_1$ (< ಮೊಟ್ಗು$_1$) + ಇಱು$_1$]

**ಮುಗ್ಗು$_1$** ' ಮೊಟ್ಗು$_1$ ' ನೋ.

**ಮುಗ್ಗು$_2$** (ಕ್ರಿ). ೧. ಹಳಸು ; ಕೆಟ್ಟವಾಸನೆ ಬರು ; ಕೆಟ್ಟುಹೋಗು : ಅದಱಡಗು ಮುಗ್ಗಿ ಪುೞು ಪತ್ತಿದೊಡಾಱಲ್ ಪರಪೆ ಕಾಗೆಯುಂ ನಾಯುಂ ಮುಟ್ಟದುದು (ಯಕೋಚ. ೩-೫೮) ; ಇನಿವಣ್ಣಳಾವಾವವೂಟವಱವಱ ರಸಮನನುವಾಗಿ ಹಿಳಿದು ಹಂಜಿಯ ಅರಲೆಯೊಳಗೂಡಿಯಿನಿಸು ಮುಗ್ಗದ ತೆಱದಿ ನೆಳಲೊಳೊಣಗಿಸಿ (ಸೂಶಾ. ೨-೩೩) ; ಮುಗ್ಗದ ಮುಗಿಯದ ಬಾಡದ . . . ಪೂವೆ ಪೂಱನದೊಳಳುಂಬಂ (ರಾಮಾಶ್ವ. ೫೩-೨೫). ೨. (ಆಲಂ) ಅಸಹ್ಯವಾಗು ; ಇಂದಿನ ಹದಗೆಟ್ಟ ವಾತಾವರಣದಲ್ಲಿ ಮೋಜು ಮಾಟಲುಗಳು ಮುಗ್ಗಹತ್ತಿವೆ (ಕನ್ನಜಾ. ೩೫).

[ದೇ. ॥ ತಮಿ. ಮುಱು ; ತುಳು. ಮುಗ್ರು ; ತೆಲು. ಮುಗ್ಗು, ಮುಱುಗು, ಮುರ್ಕ್ಕು ; ಗೊಂಡಿ. ಮುರ್ಕಸ್ನಾನ]

**ಮುಗ್ಗು$_3$** (ನಾ). ಕೆಟ್ಟವಾಸನೆ ; ಹಳಸಲು ; ಬೂಷ್ಟು : ಖಂಡಸಕ್ಕರೆಯ ಮೆಲುವಾತ ಮುಗ್ಗಿನ ಹಿಂಡಿಗೆಱಗುವನೆ (ಸರ್ವಜ್ಞ. ೫೦೬) ; ಹೊಟ್ಟೆಗಿಲ್ಲದಕ್ಕ ಇದ್ದ ಮುಗ್ಗ ಕಾಳೆಲ್ಲ ಮುಕ್ಕಿಬಿಟ್ಟನರಿ (ಗ್ರಾಕಥಾ. ೬೩). [< ಮುಗ್ಗು$_2$./ತುಳು. ಮುಗ್ಗ, ಮುಗ್ಗು ; ತೆಲು. ಮುಗ್ಗ ; ಕೋಲಾ. ಮುರ್ಗ್ ; ಪರ್ಜಿ. ಮುರ್ಗ್, ಮುರು]

**ಮುಗ್ಗುಡಿ** (ನಾ). ಮೂರು ಕುಡಿ : ' ಮುಗ್ಗುಡಿವರಿ ' ಪರಾ. [< ಮೂಱು + ಕುಡಿ$_2$]

**ಮುಗ್ಗುಡಿವರಿ** (ಕ್ರಿ). ಮೂರುಕುಡಿಗಳಾಗಿ ಹಬ್ಬು : ಮುಗ್ಗುಡಿವರಿದು ರವಣಿಸಿಯೆ ತನತನಗುಗ್ಗಡದೊಯ್ಯಾರದ ಮೋಹರಿಸುವ ಭರದಿಂ ನೆರೆದುದು ಧರೆಯುಗಲದಲಿ (ವೀರೇಶ. ೨-೨೭). [ಮುಗ್ಗುಡಿ + ಪರಿ$_1$]

**ಮುಗ್ಗುಡ್ಡೆ** ' ಮೂಗುಡ್ಡೆ ' ನೋ.

**ಮುಗ್ಗುರಿಸು,** ಮುಗ್ಗರಿಸು (ಕ್ರಿ). ಎಡವಿ ಬೀಳು ; ಮುಗ್ಗು : ದೃಷ್ಟಮಲ್ಲದ ಸೂಕ್ಷ್ಮಮೋಹಸೂತ್ರದಿ ಪದಂ ಬಿಗಿದಂತೆಪೋಲಾಗೆ. ಮುಗ್ಗುರಿಸಿ ನಿಲ್ಲುತುಂ (ಚಕ್ರಾಂಗ. ೩೦-೧೬೯) : ೧೯೨೦ರಿಂದ ಬೆಳೆದು ಬಂದಿದ್ದ ರಾಷ್ಟ್ರದ ಶಕ್ತಿ ಕುಗ್ಗಿ ಮುಗ್ಗುರಿಸುವುದೋ ಎಂಬ ಹಾಗಿತ್ತು (ರಾಜವ. ೧೯). ಮುಗ್ಗರಿಸು : ಮುಗ್ಗರಿಸುವುದು ಮೊದಲಾದ ದುರ್ಗುಣಗಳಿಂದ ರಹಿತಗಳಾದ ಅಶ್ವಗಳು (ಸೌಗಂಧಿ. ೩೨೩-೪) ; ಯಾವುದೋ ಬಳ್ಳಿಯಲ್ಲಿ ಕಾಲು ಸಿಕ್ಕಿಹಾಕಿಕೊಂಡಿದ್ದರಿಂದ ಎಡವಿ ಮುಗ್ಗರಿಸಿ ಬಿದ್ದರು (ಹಸುಪೊ. ೭೭) ; ಬಿಡಿಸಿಕೊಳ್ಳಲು ಹೋದ ಅವಳು ಆಯ ತಪ್ಪಿ ಮುಗ್ಗರಿಸಿದಳು (ಅರಿಹೂ. ೩೦). ' ಕುಕ್ಕುಱಿಸು ', ' ಘುಂಡರಿಸು ' ಹೋ.

[< ಮುಗ್ಗು$_{n1}$ + — ಇಸು$_3$]

**ಮುಗ್ಗುರು ?** (ನಾ). ಎಡವಿ ಬೀಳುವಿಕೆ ; ಮುಗ್ಗುರಿಸುವಿಕೆ : ನಿಲಿಸಿ ಪರಾಶರಸ್ಮೃತಿಗೆ ನೀಂ ಕಲಿಕಾಲದಿ ಕೆತ್ತ ಕತ್ತಲಂ ತೊಲಗಿಪ ಕೆಯ್ದೀವಂಕ ವಿರುಟೀಕೆಯು, ಮಾಣಿಸಿದೆಮ್ಮ ಮುಗ್ಗುರಂ (ಗಿರಿಜಾ. ೩೦-೩).

[< ಮುಗ್ಗು$_{n1}$]

**ಮುಗ್ಗೇರಿ** (ನಾ). ಒಂದು ಪ್ರದೇಶದ ಹೆಸರು : ಎರಿಸಲ್ಮುಗ್ಗೇರಿಯುಂ ಮುಂ ಮುನಿಯ ಮುಸಕಮುಂ ಮುಳ್ಗಿಸಲ್ಕನ್ಯಕುಬ್ಜೇಶ್ವರನಂ ಹಿಮಾದ್ರಿಯುಂ ಪಾಯಿಸಲ(ರಾ?)ದರುಮಂ . . . ಕುಂಧರಾಜಂ (ಶಶಾಂ. ೭-೭; 999).

[? + ಕೇರಿ]

**ಮುಗ್ಗೊಲಿ, ಮುಗ್ಗೊಳಿ** (ನಾ). (ಹೈದರ್ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ವಿಧಿಸುತ್ತಿದ್ದ) ಒಂದು ಬಗೆಯ ತೆರಿಗೆ : (ಕಸಂಗ್ರ. ೦೩೩). ಮುಗ್ಗೊಳಿ : (ಕಸಂಗ್ರ. ೦೩೩). [← ತುಳು. ಮುಗ್ಗೊಲಿ, ಮುಗ್ಗೊಳಿ]

**ಮುಗ್ಗೊಳಿ** ' ಮುಗ್ಗೊಲಿ ' ನೋ.

**ಮುಗ್ತೆ** (ನಾ). ಒಪ್ಪಂದ ; ಕರಾರು ; ಕಂಟ್ರಾಕ್ಟು : ' ಮುಗ್ತೆಕೆಲಸ ' ಪರಾ. [← ತುಳು. ಮುಗಿತೆ. ಮುಗ್ತೆ]

**ಮುಗ್ತೆಕೆಲಸ** (ನಾ). ಒಪ್ಪಂದ ಮಾಡಿಕೊಂಡ ಕೆಲಸ ; ಕರಾರಿನ ಕೆಲಸ ; ಕಾಂಟ್ರಾಕ್ಟ್ : (ಕಸಂಗ್ರ. ೦೨೨). [ಮುಗ್ತೆ + ಕೆಲಸ]

**ಮುಗ್ಧ** (ಗು). ೧. ಮೂಢತನದಿಂದ ಕೂಡಿದ ; ಮೌಢ್ಯದ : ' ಮುಗ್ಧತನ ' ಪರಾ. ೨. ಕಪಟತನವಿಲ್ಲದ ; ಸರಳಮನಸ್ಸಿನ : ಯುದ್ಧಾನುಭವವಿಲ್ಲದಿಹ ಮುಗ್ಧರಾಮನಿಂ . . . ರಣವಿದಗ್ಧರನೆಂತು ಗೆಲಬಹುದೊ ? (ಶ್ರೀರಾಮಾ. ೨೯-೩೯); ಅವರ ಮುಗ್ಧ ನಡೆನುಡಿಗಳಿಂದ ಪ್ರಭಾವಿತರಾದವರು . . . ಧನ್ಯರು (ಶಿಕ್ಷದ. ೭೭೮). ೩. ಆಕರ್ಷಕವಾದ ; ಮೋಹಕವಾದ : ಬಳಲ್ದ ಶಿಶು ನೋವಂ ಮರೆತು ನೆಮ್ಮದಿಯನಾಂತು ಮುಗ್ಧನಿದ್ರಾಮುದ್ರೆಯಪ್ಪಂತೆ (ಶ್ರೀರಾಮಾ. ೧೭೪-೩೪೭). (ನಾ). ೪. ಮೌಢ್ಯ ; ಮೂಢತನ : ಮೂಗರ ಮೂಗರ ಪ್ರಸಂಗದಂತೆ ಇದೆ ಎನ್ನೊಳಗೆ ಅಱಿವಿನ ಪರಿಮಳ ಹೊಱಗೆ ನೋಡಿವರೆ ಮುಗ್ಧವಾಯಿತ್ತು (ಅವಚ. ೨೦೬-೯೩೪). ೫. ಆಕರ್ಷಕವಾದುದು ; ಮೋಹಕವಾದುದು : ಲಳಿತ ಮಧುರಂ ಲಜ್ಜಾಳೋಳಂ ಸ್ಮರಾಕುಳಿತಂ ಮನಂ ದಳಿತ ಮಹಸನ್ಮುಗ್ಧಂ ಸ್ನಿಗ್ಧಂ ವಿಳೋಕನಮೋಪಳಾ (ಶಂಶಾ. ೪-೭೭); ಅಱಿವು ಕರಗಿ ನಿರವಯಲಾಗಿತ್ತಾಗಿ ಅಖಂಡೇಶ್ವರನೆಂಬ ಶಬ್ದ ಮುಗ್ಧವಾಯಿತ್ತು (ಅಖಂಡೇ. ೩೦೩-೧೦೩). ೬. ಕಪಟವನ್ನು ತಿಳಿಯದವನು ; ಸರಳ ವ್ಯಕ್ತಿ : ತನಗರಿವಿಲ್ಲವೆಂಬರಿವಿರುವಾತನು ಮುಗ್ಧನು ನೀ ಬುದ್ಧಿ ಕಲಿಸು (ನಂಜಾಶ. ೦೩೦-೭೭). ೭. ಮೋಹಿತನಾದ ವ್ಯಕ್ತಿ ; ಆಕರ್ಷಿತನಾದ ವ್ಯಕ್ತಿ : ಅಂದು ನೀನು ಎಳೆಯ ಹುಡುಗನಾಗಿ ಅವಳ ಸೌಂದರ್ಯಕ್ಕೆ ಕೇವಲ ಮುಗ್ಧನಾದವನಾಗಿದ್ದೆ (ಹೇಮಂತ. ೪೦೯): ಆದನ್ನು ಪ್ರಭುಗಳೂ, ಮಹಾರಾಣಿ ಶಾಂತಲೆ, ಲಕ್ಷ್ಮಿಯರೂ ನೋಡಿ ಮುಗ್ಧರಾದರು (ಶಾಂತಲಾ. ೦೩೩). [ಸಂ.]

**ಮುಗ್ಧಜನ** (ನಾ). ಕಪಟವನ್ನು ತಿಳಿಯದ ಜನ ; ಸರಳಸ್ವಭಾವದ ಜನ : ಮುಗ್ಧಜನದಱಿತಮೆನಿಸಿ ವಿದಗ್ಧರುಮಿದು ಕನಕಗಿರಿಯೊ ರಜತಾದ್ರಿಯೊ ಸಂದಿಗ್ಧಮೆನಿಸಿದುದು ಸುರಗಿರಿ (ಕೃಕೃ. ೮೦-೪೦); ಮುಗ್ಧ ಜನರನ್ನು ಬಂಧಿಸಿ . . . ಅವರನ್ನು ವಂಚಿಸಿದ್ದಕ್ಕಾಗಿ ಆ ಪುರೋಹಿತರು ಅಪರಾಧಿಸ್ಥಾನದಲ್ಲಿದ್ದರು (ಕೃಪರು. ೦೮೦). [ಸಂ.]

**ಮುಗ್ಧತನ** (ನಾ). ಮೂಢತನ ; ಮೌಢ್ಯ : ಮುಗ್ಧತನವೇನೆಂದೆಣಿಸುವೆನು ಶಿವನನಲ್ಲದೆ ಪೆಱತನಱಿಯದದು (ಬಸವು. ೦೩-೦೭).

[ಮುಗ್ಧ + — ತನ]

**ಮುಗ್ಧತೆ** (ನಾ). = ಮುಗ್ಧತನ : ಮುದದಿಂದಲೊಮ್ಮೆ ಮುಗ್ಧತೆಯಿಂದ ಲೊಪ್ಪೊಮ್ಮೆ . . . ಅಚ್ಚಿಸುತ್ತ (ತಿರುರ. ದೇ. ೩-೪); ದೈತ್ಯಬಾಹು ಮುಗ್ಧತೆಯನು ಹಿಸುಕಲು ಚಾಚಿತು ಹಲ ಬಾರಿ (ನಂದಮು.೩೯-೦೩) ; ದುಗ್ಧ ಧವಳಿಮ ಮುಗ್ಧತೆಯ ಮೈ ಹೊರೆಯುವಂತೆ (ಅಖಿಳೇ. ೨೩-೪).

[ಸಂ. ಮುಗ್ಧತಾ]

**ಮುಗ್ಧತ್ವ** (ನಾ). = ಮುಗ್ಧತನ : ಸಮುಸಂದೊಂದಿದ ಲಜ್ಜೆಯುಜ್ಜುಗಮೆ ಲಜ್ಜಾಭಾವಮುಂ . . . ಮುಗ್ಧಭಾವಮೆ ಮುಗ್ಧತ್ವ ಮಹತ್ವಮುಂ ನೆಱೆಯೆ ಕಲ್ತಿತಾದುದಾ ಕನ್ನೆಯೊಳ್ (ಕಾದಂಬ. ೨೯೩); ಉತ್ತಮಮುಗ್ಧತ್ವಕ್ಕೆ ಮೆಚ್ಚಿದ್ದರ್ತಿಶಯಮಹಿಮಂ ಶಂಭು ರಕ್ಷಿಕ್ಕೆ ನಮ್ಮಂ (ಎಕ. XIV, ೨೭೦-೦೩ ;1181). [ಸಂ.]

**ಮುಗ್ಧಭಾವ** (ನಾ). ಕಪಟವಿಲ್ಲದ ಭಾವನೆ ; ಸರಳಭಾವ : ಸಮುಸಂದೊಂದಿದ ಲಜ್ಜೆಯುಜ್ಜುಗಮೆ ಲಜ್ಜಾಭಾವಮುಂ . . . ಮುಗ್ಧಭಾವಮೆ ಮುಗ್ಧತ್ವಮಹತ್ವಮುಂ ನೆಱೆಯೆ ಕಲ್ತಿತಾದುದಾ ಕನ್ನೆಯೊಳ್ (ಕಾದಂಬ. ೯೩) ; ಲೌಲ್ಯದೃಷ್ಟಿಯಿಂ ನೋಡುವ ನಂಬಿಯಣ್ಣನ ಮುಗ್ಧಭಾವಕ್ಕೆ ಮುಯ್ಯಾನುತಂ (ಸಂಬಸ. ೪-೮೯). [ಸಂ.]

**ಮುಗ್ಧಹೃದಯ** (ನಾ). ಕಪಟವಿಲ್ಲದ ಹೃದಯ ; ಸರಳಹೃದಯ . ನನ್ನ ಮುಗ್ಧಹೃದಯವನ್ನು ನಿಮ್ಮ ಅಧೀನವನ್ನಾಗಿ ಮಾಡಿ . . : ನಡೆಯಿಸುವೆನು (ಕವಿಳ. ೬). [ಸಂ.]

**ಮುಗ್ಧಾಂಗನೆ** (ನಾ). ಕಪಟತನವರಿಯದವಳು ; ಸರಳಸ್ವಭಾವದವಳು : ಸೋಜಿಗದಿಂ ನೋಳ್ಪರೊಲ್ದು ಮುಗ್ಧಾಂಗನೆಯರ್ (ಹರಿಶ್ಚಂ. ೪-೨೦). [ಸಂ. ಮುಗ್ಧಾಂಗನಾ]

**ಮುಗ್ಧಾಲಾಪ, ಮುಗ್ಧಾಳಾಪ** (ನಾ). ಕಪಟತನವಿಲ್ಲದ ಮಾತುಕತೆ ; ಸರಳಸಂಭಾಷಣೆ : ನಚ್ಚಿನ ಮುಗ್ಧಾಲಾಪಮಿಂಪಂ ಕಱದು ಬಱತ್ತು ದೇಬನ್ನೆಗಂ ಬತ್ತಿರಲ್ ಬಾಯ್ (ಕಾದಂಬ. ೩೨೩). **ಮುಗ್ಧಾಳಾಪ** : ಬಹುಮುಗ್ಧಾಳಾಪವಾಕ್ಯಂಗಳಾಪರಿಸುತ್ತುಂ ಪೊಸದೇಸೆವೆತ್ತಸೆಯೆ (ಸುಕುಮಾ. ೦೦-೪೦). [ಸಂ.]

**ಮುಗ್ಧಾಳಾಪ** ' ಮುಗ್ಧಾಲಾಪ ' ನೋ.

**ಮುಗ್ಧೆ** (ನಾ). ೧. ಕಪಟವನ್ನು ತಿಳಿಯದವಳು ; ಸರಳಸ್ವಭಾವದವಳು : ಮಾಮರನಲ್ಲಿದೊಂದು ಮಾಯದ ಮರನೆಂದು ಸಾರ್ದಳತಿಮುಗ್ಧೆ ಕುಜಾಂತರಮಂ ವನಾಂತದೊಳ್ (ಚಂದ್ರಕೃ. ೭-೦೦೬); ಓಘನ ತೆಱಂ ಪೆಱತಾದೊಡೆ ಮುಗ್ಧೆ ನಿಲ್ವಳೇ (ಕೃಕೃ. ೬-೩೯); ಕಪಟವೆನ್ನುವುದನ್ನೇ ಅರಿಯದ ಈ ಮುಗ್ಧೆಯನ್ನು . . . ತಿರಸ್ಕರಿಸುವುದು ನಿನಗೆ ಯುಕ್ತವಲ್ಲವಲಾ ? (ಶಾಕುಂತ. ೬೮-೦೪). ೨. ಚೆಲುವೆ ; ಸುಂದರಿ : ಮುಗ್ಧೇ ಕೈರವನೇತ್ರೆ ವಿಗ್ಧಯವೋಲ್ ಮುಳಿಸಾಂತೊಡಾನೆಂತಿರ್ಪೆಂ (ಗಂಗ.೯-೦೩೭);

ಮುಂದೆ ಕನ್ನಡಿವಿಡಿದು ನಡೆವ ಮುಗ್ಧೆಯರೊಳಗೆ . . . ಬರುತಿರ್ದ ನಪ್ರತಿಮಸುಕುಮಾರಶೇಖರಂ (ನಂಬಿರ. ೩-೮೩) : ಪೊಸ ಮುತ್ತಿನ ತಲೆಮುಡುಗೆಯ ಪಸರಿಪ ಕಾಂತಿಯುವಗುಂತಿಮಾಲೆವೊಲಿರೆ ಕಂಡು ಸಮಂತು ಮುಗ್ಧೆಯರ್ ಮುಡಿಯಿಸರೆ ಕೆಲರ್ ಮುಂಚಿ ಮುಡಿದರೆಂಬೀ ಭ್ರಮೆಯಿಂ (ಶ್ರೀಕೃಷ್ಣ. ೬-೩೩). ೩. [ಕಾವ್ಯಮೀ] ಮುಗ್ಧೆ, ಮಧ್ಯೆ ಮತ್ತು ಪ್ರಗಲ್ಭೆ ಎಂಬ ಮೂರುವಿಧವಾದ ನಾಯಿಕೆಯರಲ್ಲಿ ಒಬ್ಬಳು ; ತಾರುಣ್ಯ, ಲಜ್ಜೆ ಮತ್ತು ಸರಳತನಗಳಿಂದ ಮನಸ್ಸನ್ನಾಕರ್ಷಿಸುವ ಹೆಂಗಸು : ಅತಿಲಜ್ಜಾನ್ವಿತೆ ಸಂಚಳಮತಿಯುವಿರಳಲೋಲಭಾವಸಂಭ್ರಮೆಯಾವಿಷ್ಕೃತಚಿತ್ತೆಯೆನಿಪ ಬಾಲಿಕೆ ಸತತಮವಳ್ಮುಗ್ಧೆಯೆಂಬ ಪೆಸರಂ ಪಡೆಗುಂ (ಶೃಂಗಾರ. ೩-೨೮); ಪುರುಷನಿದಿರೊಳ್ಳೆದೆ ಲಜ್ಜೆವೆರಸು ಚಲಿಸುವ . . . ಲೋಭದಿರವನಱಿಯದವಳೆ ಮುಗ್ಧೆಯೆನಿಪಳು (ಶಬ್ದ. ೩-೬) ; ಸ್ತ್ರೀಯುಳಲ್ಲಿ ಯೌವನ ಮತ್ತು ಸಂಸಾರಾನುಭವದ ಮೇಲೆ 'ಮುಗ್ಧೆ', 'ಮಧ್ಯೆ', 'ಪ್ರಗಲ್ಭೆ' ಎಂದು ಮೂರುವಿಧ (ಕೈಪಿಡಿ. ೨೦೦). [ಸಂ. ಮುಗ್ಧಾ]

**ಮುಚುಕುಂದ** (ನಾ). ೧. ಒಂದು ಬಗೆಯ ಹೂವಿನ ಗಿಡ : "ಸದಾಪುಷ್ಪಮೆನಲು ಮುಚುಕುಂದಮಕ್ಕುಂ" (ಮಂಗರಾ. ೩೬-೨೩) ; ಕುಂದಮುಚುಕುಂದಮಂದಾರ . . . ಮಲ್ಲಿಕಾದ್ಯನೇಕಸುರಭಿಕುಸುಮಂಗಳಂ ಸಜ್ಜುಕಮಪ್ಪವಂ ಪುಟ್ಟಿಯೊಳ್ ತೀವಿಕೊಂಡು (ಶಂಕರ. ೦೮೭-೩); ಪಾಟಲ ಮುಚುಕುನ್ದ ಕುನ್ದ ಲತಿಕಾವೃತದಿಂದಮೆ ಒಳ್ಪುಗಾವಿ . . . ಒಪ್ಪಿತೋಱುಗುಂ (ಪ್ರಾಕಾ. ೦೯೪೦, ೩೬-೨೦; 1103). ೨. ಒಬ್ಬ ರಾಜಋಷಿಯ ಹೆಸರು : ಮಱೆವ ಮುಚುಕುಂದನೆಂಬನ ಮಱೆವೊಕ್ಕುದನೆಂದು ನೀನ್ ಜರಾಸಂಧುಗಂ ಬಿಱುತೋಡಿದುದಂ ಭೂತಳಮಱಿಯದೆ ನೆನೆಯಲಪ್ಪೊಗೋವುಗಾದುದು ಪುಸಿಯೇ (ಶಂಖಾ. ೭-೩೭) ; ಒಱಗಿರ್ದಂ ನಿದ್ರೆಯಿನೆಬ್ಬಿಸಿದರಂ ಕೋಪಶಿಖಿಯಿನುರುಪುವ ವರದಿಂ ನೆಱೆದು ಕೃತಯುಗದೊಳ ಸುರರೊಳಱಿದ ಪರಿಶ್ರಮದೆ ರಾಜಮುನಿ ಮುಚುಕುಂದಂ (ಜಗ. ೯-೯೩) ; ಮುಚುಕುಂದನ ಮನೆಗೆ ಮುಕ್ಕುಂದ ಬಂದಂತೆ (ಪುರಂದ. ಧಾ. ೧-೦೯೬-೧). [ಸಂ.]

**ಮುಚುಗ** (ನಾ). ಮುಟ್ಟಿದರೆ ತನ್ನ ಎಲೆಗಳನ್ನು ಮುಚ್ಚಿಕೊಳ್ಳುವ ಒಂದು ಬಗೆಯ ಗಿಡ ; ಮುಟ್ಟಿದರೆ ಮುನಿ : ಅವಳ ಆಶೆ ಮುಟ್ಟಿದರೆ ಮುದುಡಿಕೊಳ್ಳುವ 'ಮುಚುಗ'ದಂತೆ ಆಯಿತು (ದಂಶು. ೩೭). [<ಮುಚ್ಚು$_1$]

**ಮುಚ್ಚಂಜೆ** 'ಮುತ್ಸಂಜೆ' ನೋ.

**ಮುಚ್ಚಂಡಿ** 'ಮುಸುಂಡಿ$_1$' ನೋ.

**ಮುಚ್ಚಂದಿ** (ನಾ). ಮೂರುಪ್ರದೇಶಗಳ ಕೂಟ, —ಸೇರುವೆ : ಊರ ಪೊಲ ಮೇರೆ ಮೂಡ್ಯದೆಸೆ ಎಲವೆ ಕಿಱುವಜ್ಜಿಕ್ಕೆಱೆಎ ತೆಂಕಾ ಅದರುಳ್ಳಡುಗಲ್ಲೆ ಮುಚ್ಚನ್ದಿನ್ನಡುಗಲ್ಲೆ ಪಡುವಯಾಲೆ ತಾಯನ್ದೆಕೆಱೆಯೆ (ಎಕ. X (S). ಕಕ್ಕೂ. ೦೦೭-೭೪ ; 850); ಅಲ್ಲಿಂದ ಮೂಡಲು ಮುಚ್ಚಂದಿಯ ಯಲ್ಲೆಗಲ್ಲು (ಎಕ. XIV. ಮಂಡ್ಯ. ೦೦೩-೦೦೨; 1516).

[<ಮೂಱು + ಸಂದಿ (< ಸಂದು$_2$)]

**ಮುಚ್ಚಂಬೋಗು** (ಕ್ರಿ). ಮೂರ್ಛೆಹೋಗು ; ಎಚ್ಚರತಪ್ಪು : ಕೆಚ್ಚಗಿರೆ ಕಣ್ಣ ಪೊಟ್ಟೆಯುಮುಚ್ಚಗಳುಂ ತಾಲುದೇಶಮುಂ ಗುದಮುಖಮುಂ ಮುಚ್ಚಂಬೋಗಿ ಮನಂ ಕಣ್ಮುಚ್ಚಿರೆ ದಕ್ಕಾಲಿವೀಟಿ ಬಾಟದು ತುರಗಂ (ಅಶ್ವಶಾ. ೭-೭೨). [<ಮುಚ್ಚು$_2$ + ಪೋಗು$_1$ (<ಪೋ$_1$)]

**ಮುಚ್ಚಟೆ** (ನಾ). ೧. ಅಕ್ಕರೆ ; ಮಮತೆ ; ಪ್ರೀತಿ : ಹೆಣ್ಣು ಗಂಡಿನ ಮುಚ್ಚಟೆಯ ಮಾತುಗಳಿಗೆ ಬಾಯಿಬಿಟ್ಟು ತಾಯಿತನದ ಹೊರೆಗೆ ಹಿಂದು ಮುಂದು ತಿಳಿಯದೆ ತಲೆಕೊಡುವಷ್ಟು ತಿಳಿಗೇಡಿಯೇ ? (ಬಿದ್ಯಾರ. ೭೦); ಅವರು ತಮ್ಮನ್ನು ಮುಚ್ಚಟೆಯಿಂದ ಬೆಳೆಸಿದ್ದರು (ಶಂಕ್ಷ. ೪೯೨). ೨. ಅಚ್ಚುಕಟ್ಟು; ಓರಣ : ಲಕ್ಕಿ ಸಾಯಲು ಬಿಡಬಾರದಮ್ಮ. ಮಾದನ ಮುಚ್ಚಟೆ ಸಂಸಾರ ಕೆಟ್ಟುಹೋಗುತ್ತದೆ (ಗೃಹಂ. ೧೩೨); ಉಳಿದವರಂತೆ ತಾನೂ ಮುಚ್ಚಟೆಯಾಗಿ ಬದುಕಿ ಬಾಳುವ ಆಕಾಂಕ್ಷೆಯಿರಲಿಲ್ಲವೇ ? (ಮುರುಳು. ೧೩೦). ೩. ತಾತ್ಸಾರ; ತಿರಸ್ಕಾರ : ಗಂಡ ಅಂದರೆ ಅಷ್ಟು ಮುಚ್ಚಟೆಯಾಗಿ ಹೋಯಿತೇನೇ (ತಾಯಿ. ೦೭). ೪. ನಟನೆ; ಸೋಗು : ನಿಚ್ಚ ಏಳುವ ಸಮಯ ಮೀರಿತೋ ಇಂದೀಗ ಎಚ್ಚರಿಕೆ ಪುಟ್ಟದೇ . . . ಮುಚ್ಚಟೆಯಿದೇಂ ನಿದ್ರೆ ತಿಳಿಯಲಾಗದೆ ಸ್ವಾಮಿ (ಶಿವಾಕ. ೯೨-೬).

[ದೇ. ॥ ತಮಿ. ಮುಚ್ಚಟ್ಟು; ತುಳು. ಮುಚ್ಚಟೆ = ಉತ್ಸವ; ತೆಲು. ಮುಚ್ಚಟ ]

**ಮುಚ್ಚಣ**, ಮುಚ್ಚಲ, ಮುಚ್ಚಳ್, ಮುಚ್ಚಳ, ಮುಚ್ಚಳು, ಮುಚ್ಚುಳ್, ಮುಚ್ಚುಳ, ಮುಚ್ಚುಳು (ನಾ). ೧. ಪೆಟ್ಟಿಗೆ, ಕರಡಿಗೆ, ಪಾತ್ರೆ ಮುಂತಾದುವುಗಳ ಮುಚ್ಚುವ ಸಾಧನ. ೨. (ಮನೆಯ) ಮೇಲ್ಭಾಗದ ಛಾವಣಿ, — ಸೂರು : ನೆಲಗಟ್ಟು ನಾಗಲೋಕಂ ತಳಮುಮ್ಮ ದಶಾಭಿತ್ತಿ ಭಿತ್ತಿಬ್ರಜಂ ಸ್ವಸ್ತಲಭಾಗಂ ಮುಚ್ಚಣಂ ಮೇಗಣ ಸುರರ ವಿಮಾನೋತ್ಕರಂ (ಎಕ. II. ೨೩೪-೨೪; 1180). **ಮುಚ್ಚಲ** : ೧. ಆ ಹಾರ್ಮೋನಿಯಮ್ಮೊ — ಮುಚ್ಚಲ ತೆಗೆದ್ರೆ ಗೆಜ್ಜಲು ಬಂತೂಂತಾರಲ್ಲ ಹಾಗೆ . . . ಸಾಲು ಸಾಲಾಗಿ ಸೈನ್ಯವಾಗಿ ಹೊರಟುಬಿಟ್ಟುವು (ದುರಂಪ. ೯೨). **ಮುಚ್ಚಳ್** : ೨. ಬೋದಿಗೆಯ ಕೂಟದಂತೆ ಮುಚ್ಚಳಂತೆ ಪ್ರತಿಷ್ಠೆಯಂತೆ . . ಪದಿಮೂಱು ಗುಣಸ್ಥಾನಂಗಳಿರ್ದಪುವು (ಧರ್ಮಾಮೃ. ೦೨-೨೪) ; ಪಚ್ಚೆಗಳ ಕಂಬಂಗಳಿಂ ಪವಳಪಲಗೆಗಳ ಮುಚ್ಚಳ್ಗಳಿಂ . . . ಕೇರಿಕೇರಿಯೊಳ್ ಪಚ್ಚದುವು ಗೃಹಗೃಹದ್ವಾರಂಗಳೊಳ್ ಮಹಾಮೇರುವೆಗಳು (ಶಬ್ದ. ೩-೩). ೩. ಕದ; ಬಾಗಿಲು : ವಾಗೀಶ್ವರದೇವರಂ ದರ್ಚಿಸಲೆಂದು ಕೊಂಡು ಬಂದು ಪುರದ ಹೊಱಗಣ ಮಾಳಿಗೆಯೊಳು ಕಣ್ಗೊಳು ನೋಡಲರಿದೆನಿಸುವ ಸುಣ್ಣವಂ ಸುರಿದವರಂ ಪುಗಿಸಿ ಮುಚ್ಚಳಂ ಮುಚ್ಚಿ (ವಾಗೀಶ. ದೇ. ೨೭೭-೦೦). **ಮುಚ್ಚಳ** : ೧. ಎತ್ತಿ ಹೇಳಿಗೆಯ ಕೂಡೆ ಮುಚ್ಚಳ ವನಿಕ್ಕಿದ ಮತ್ತೆ ಮುಕ್ತಿಕೆ ಮುತ್ತಿ ಇಲ್ಲವೆಂದೆ (ಪೋಳ್ವ. ೪೮-೦೬೨); ಬಿಗಿದ ನೇಣ ಖಂಡಿಸಿ ಬಳಿಕ್ಕ ಮುಚ್ಚಳ ತೆಗೆದು ನೋಡಲು (ಸಿದ್ಧರಾ. ೯-೦೪); ನಿರ್ಧನಂ ನಿಧಿಗಂಡಂತೆ ತನ್ನ ಮನೆಗೆ ಮಂದಸಮಂ ಕೊಂಡು ಬಂದು ನಿಜ ವಧುವಪ್ಪ ಕುಸುಮಾವಳಿಗೆ ಕುಡುವುದುಮಾಕೆಯಾ ಮಂದಸಿನ ಮುಚ್ಚಳವಂ ತೆಱೆದು ನೋಟ್ಟನ್ನೆಗಂ (ಧರ್ಮಾಮೃ. ೨-೩೦ ಪ) ; ಮೇಲುಮುಚ್ಚಳ ತೆಱೆದ ತನುವಿನ ಹೇಳಿಗೆಯ ಶೋಕಾಹಿಯಂತಿರೆ (ಕುಮಾರ. ೨-೦೭); ಎಲ್ಲದಕ್ಕೂ ಮುಚ್ಚಳವಿರುವುದು ಒಳ್ಳೆಯದು (ಅಮುಗೆ. ೩೩). ೨. ರತ್ನಲೋವೆ ಮಿಸುನಿಯ ಮುಚ್ಚಳದ ಪಲಗೆಯಿಂ . . . ಭದ್ರಮಂಟಪಮೆಸೆದುದು (ಶಬರ. ೧-೨-೩೦). ೩. ಇಂದಿರೆ ಪದ್ಮಮಂದಿರದೊಳಿರ್ದು ಮಹಾಪ್ರಣಯಪ್ರಕೋಪದಿಂದೊಂದಿರುಳಿಕ್ಕೆ ಮುಚ್ಚಳವಂ (ದಶಕು. ೩-೩೪). **ಮುಚ್ಚಳು** : ೧. ಕಾಶೀ ಪಟ್ಟಣಕ್ಕೆ ಪೋಗಿ ಸೂರ್ಯನನಾರಾಧಿಸಿ ಆ ಸೂರ್ಯನಿಂದ ಮುಚ್ಚಳು ಸಟ್ಟುಗಸಹಿತಮಾದ ಅಕ್ಷಯಪಾತ್ರೆಯಂ ಕೊಟ್ಟು (ಕಾಶೀಮ. ೨೪೬-೩). **ಮುಚ್ಚುಳ್** : ೧. ಉಪೇಂದ್ರನುರ್ಬಿದ ಮುಳಿಸಿಂದೆ ಮಂದಸಿನ ಮುಚ್ಚುಳ ನುಂಗುಟದಿಂದೆ ಮೀಂಟಿ ಪೋಗೊದೆದು (ಜಗ. ೭-೩೦); ಬಿದಿ ಮಿಸುನಿಗೊಡಂಗಳ್ಲಿ ತೀವಿ ಮಿಸುಪ ನೀಲದ ಮುಚ್ಚುಳಿಟ್ಟವೊಲ್ ಮೊಲೆದುದಿಗಳ್ ಕರ್ಪಡಿದು ಮೆಱೆನುವಾ ಶಶಿಮುಖಿಯಾ (ಉದ್ಭಟ. ೭-೪೯). ೨. ಕೇಳೀವನದ ಕೃತಕಾಚಳದ ನಡುವಣ ವಜ್ರದ ಮುಚ್ಚುಳ ಸೆಜ್ಜೆಯ ಮನೆಯ ಹಂಸ ತೂಳದ ತಣ್ಣೆಳಲ ತಳ್ಪದೊಳ್ ಬಿಜಯಂಗೆಯ್ಸಿ (ಶಂಬರ. ೦೪-೩). ೩. ತೆಱೆದುವು ಮುನ್ನಮಿಕ್ಕಿದ ವಿಮಾನದ ಮುಚ್ಚುಳ್ (ಅನಂತಪು. ೦೨-೩೬). ೪. (ರೊಟ್ಟಿ ಸುಡುವ ಮೊದಲು) ಮೇಲೆ ಮುಚ್ಚಲು ಸಿದ್ಧಪಡಿಸುವ, ಕಲಸಿದ ಹಿಟ್ಟಿನ ಬಟ್ಟಲು, —ಕಣಕದ ಬಟ್ಟಲು : ನನೆದ ಸೊಜ್ಜಿಗೆಯ

ಸಲೆ ಕುಟ್ಟಿ ಸರಿಕನೆಯನಿಕ್ಕಿನಿಸು ಬೆಣ್ಣೆಯನಿಕ್ಕಿದಾ ರೊಟ್ಟಿಯನು ಮುಂಚ್ಚುಳೊಳಗಿಕ್ಕಿ ಬೇಯಿಸಲು ತಾನುದುರುರೊಟ್ಟಿವೆಸರಂ ಪಡೆದುದು (ಸೂಶಶಾ. ೦-೦೮). **ಮುಂಚ್ಚುಳ :** ೨. ಪಚ್ಚೆಯ ತೊಲೆ ಪವಳದ ಕಂಬ ಬೋದಿಗೆ ನಿಚ್ಚಳವಹ ನೀಲದಿಂದ ಮುಂಚ್ಚುಳ ಮುಖಶಾಲೆಯ ಮಣಿಮಂಟಪವಚ್ಚರಿಯಾಗಿರುತಿಹುದು (ಕೃಶಾಂ. ೬೦). **ಮುಂಚ್ಚುಳು :** ೧. ಬಳಿಕ ಬೇವಾಗ ಗಂಜಿಯ ಬಸಿದುಕೊಂಡು ಮುಂಚ್ಚುಳನಿಕ್ಕಿ . . . ಮೃದುವಾಗಿ ಮಾಡಿದುದು ತಾ ಶುದ್ಧಮಪ್ಪೋದನಂ (ಸೂಶಶಾ. ೩-೨); ಅಗರು ಚಂದನ . . . ಕರ್ಪೂರ ತುಂಬಿ ಮೊಱೆವ ಎಂಗೆ ಭರಣಿಯು ಮುಂಚ್ಚುಳನುಗಿದಂದದೆ ಮಗಮಗಿಸಿದುದಾಸ್ಥಾನ (ಕಂಪಾ. ೬-೦೨).

[ಮುಂಚ್ಚು$_1$ +–ಅಣ./ತಮಿ. ಮುಂಚ್ಚನ್; ತುಳು. ಮುಂಚ್ಚಲ, ಮುಂಚ್ಚಿ, ಮುಂಚ್ಚಿಲ್]

**ಮುಚ್ಚಣಿಕೆ** ' ಮುಚ್ಚಳಿಕೆ$_1$ ' ನೋ.

**ಮುಚ್ಚಲ** ' ಮುಚ್ಚಣ ' ನೋ.

**ಮುಚ್ಚಲಿಕೆ** ' ಮುಚ್ಚಳಿಕೆ ' ನೋ.

**ಮುಚ್ಚಲು,** ಮುತ್ತಲು (ನಾ). (ಮಕ್ಕಳಾಡುವ) ಸಣ್ಣ ಮೊರ : "ಮುಚ್ಚಲು=ಮೊರ, ಸಿಬ್ಬಲು, ಮುಚ್ಚುವ ಸಾಧನ, ಟಪ್ಪರಿಕೆ; ಒಂದು ಮಕ್ಕಳಾಟಿಕೆ" (ರಪಾಣಾಂ. ೩೦೩). **ಮುತ್ತಲು :** "ಮುತ್ತಲು = ಮಕ್ಕಳಾಡುವ ಸಣ್ಣಮೊರ" (ಜಾನಕೋ. ೩೨); ದೇವರ ಮನಿಯಾಗ ಹೋದಳ ಚೆಂಗಳಕಿ ಮುತ್ತ ತಂದಾಳ ಮುತ್ತಲಿ[ಲ]ತುಂಬ (ಲೋಕಗೀ. ೦೬೩). [ದೇ. ತಮಿ. ಮುಚ್ಚಿಲ್, ಮುಚ್ಚಿಲ್; ತೆಲು. ಮುಚ್ಚಲಿ]

**ಮುಚ್ಚವಡಿ,** ಮುಂಚ್ಚೋಡಿ (ನಾ). ೧. ಮೂರು ಜೊತೆ,—ಜೋಡಿ: ಮುಂಚ್ಚೋಟು, ಮುಂಚ್ಚವಡಿ (ಕಮುದ. ೦೮೮ ಪ್ರಯೋ) ; ಮು + ಕೊಡೆ, ಮುಕ್ಕೊಡೆ ಎವಂ ಮುಗ್ಗುಡ್ಡೆ, ಮುಚ್ಚವಡಿ (ಕಪ್ಪಾಸು. ೬೮ ಪ್ರಯೋ). **ಮುಂಚ್ಚೋಡಿ :** ೨. ಮೂರು ಮಡಿಕೆ,-ಪದರ : ನೀಡಗಲದ ಗಗನದ ನಟ್ಟನಡುವೆ ಮುಂಚ್ಚೋಡಿಯ ನಿಡುಚೀಲದಂತೆ ಕೂಡಿ ಗಾಳಿಗಳು ಮೂಱುವದಱೊಳು ತುಂಬಿದೀಡಿನಂತಿಹುವಾಱು ವಸ್ತು (ಶಕಶ. ೬೬-೬೯). [<ಮೂಱು + ಸವಡಿ$_1$]

**ಮುಚ್ಚಳ್** ' ಮುಚ್ಚಣ ' ನೋ.

**ಮುಚ್ಚಳ** ' ಮುಚ್ಚಣ ' ನೋ.

**ಮುಚ್ಚಳದೆಗೆ,** ಮುಚ್ಚಳ್ದೆಗೆ, ಮುಂಚ್ಚುಳಂದೆಗೆ, ಮುಂಚ್ಚುಳ್ದೆಗೆ (ಕ್ರಿ). ಪೆಟ್ಟಿಗೆ, ಕರಡಿಗೆ, ಪಾತ್ರ ಮುಂತಾದುವುಗಳ ಮುಚ್ಚಳವನ್ನು ತೆಗೆ, –ಬಾಯಿತೆರೆ : ತಡಬಡಂಬಡುತೆಯಳುಕುತ್ತ ಮುಚ್ಚಳದೆಗೆಯಲು ಅಲ್ಲಿರ್ದ ಪಾತ್ರೆಯಿಲ್ಲದಿರೆಯಚ್ಚಿಗಗೊಂಡು ತಲ್ಲಣಿಸಿ (ಸಿರ್ರಿಪು. ೦೯-೩೩). **ಮುಚ್ಚಳ್ದೆಗೆ :** ಕಡೆಗಾಲದ ಕಿಚ್ಚಿನ ಮುಚ್ಚಳ್ದೆಗೆದಂದದೆ ಘುಡುಘುಡಿಸುವ ನಡುಗಣ್ಣವಯೊಡೆಯಲು (ಶೀರೀಶ. ೨-೨). **ಮುಂಚ್ಚುಳಂದೆಗೆ:** ಬೆಳುದಿಂಗಳ ನಡುವಿರ್ದ ಚಂದ್ರಮನಂತೆ ಸರ್ವಾಂಗೋದ್ಧೂಳಿತಗಾತ್ರನಾಗಿರೆ ಮಱುದಿವಸಂ ಮುಂಚ್ಚುಳಂದೆಗೆದು ನೋಡಿ (ಶಾಗೀರ. ದೇ. ೨೬೬-೦೬); ಮುಂಚ್ಚುಳಂದೆಗೆದೇನುವಿಲ್ಲದಿರೆ ಬೆಜಗಾಗಿ (ಶಿರುರ. ದೇ. ೦೨-೦೩). **ಮುಂಚ್ಚುಳ್ದೆಗೆ :** ಶಾರಿಗಲಂಕರಿಸಕ್ಕೆ ಬಣ್ಣಗರಡಿಗೆಯ ಮುಂಚ್ಚುಳ್ದೆಗೆವ ರನ್ನಸರಮಂ ಸೆಗೆಟ್ಟುವ ಭಂಡಾರಿಗರಂತೆ ಬಗೆವಡೆದ ದಾಡಿಮಂಗಳುಂ (ಶಕಪಂ. ೦೦೨-೨೦); ಪ್ರಭಾಜಾಲಂ ನೀಲಂಬಡಿಸಿ ಮಸಗಿತ್ತಣ್ದೆಸೆಯೊಳಂ . . . ಚೆಂಬೊಂಗರಡಿಗೆಯ ಮುಂಚ್ಚುಳ್ದೆಗೆದವೋಲ್ (ಶಕಪಂ. ೩-೮೩).

[ಮುಂಚ್ಚುಳ (< ಮುಂಚ್ಚಣ) + ತೆಗೆ$_1$]

**ಮುಚ್ಚಳರೊಟ್ಟಿ** (ನಾ). (ಕಣಿಕದ ಬಟ್ಟಲೊಳಗೆ ಹಿಟ್ಟನ್ನಿಟ್ಟು ಲಟ್ಟಿಸಿ ಸುಡುವ) ಒಂದು ಬಗೆಯ ರೊಟ್ಟಿ : ಉತ್ತಮದ ಸೂಜ್ಜಿಗೆಯ ಬಟ್ಟುವಾಲೊಳು ನನೆಹಿ ಮೆತ್ತನಾದಾಗ ತೆಗೆದದನು ಪಟ್ಟಿಯ ಹಿಟ್ಟನೊತ್ತಿ ಲತೆಯಿಱಿದೆರಡು ಬಟ್ಟಲ ನಡುವೆಯಿರಿಸಿ ಎರಡೆಱುಗಳ ಮೂಱಿದು ಹೊತ್ತದಂದದೊಳು ಕೆಂಡದೊಳಿರಿಸಿ ಮೋಜಿಂದ ಮತ್ತದಂ ಬೀಸಿ ಬೇಯಿಸಿ ತೆಗೆದುಕೊಂಡಾಱಿಸುತ್ತ ತಿಳಿದುಪ್ಪ ಸಕ್ಕರೆಯ ಕಲಸೆ ಮುಚ್ಚ[ಶಾಣಾಂ.ಚ್ಚು]ಳರೊಟ್ಟಿವೆಸರಂ ಪಡೆದುದು (ಸೂಶಶಾ. ೦-೧೦).

[ಮುಚ್ಚಳ (< ಮುಚ್ಚಣ) + ರೊಟ್ಟಿ]

**ಮುಚ್ಚಳಿಕೆ$_1$.** ಮುಚ್ಚಣಿಕೆ, ಮುಚ್ಚಳಿಗೆ (ನಾ). ಮುಚ್ಚುವ ಸಾಧನ; ಮುಚ್ಚಳ : ಆ ದೋಣಿಯ ಅರೆಕಲ್ಲಿನಲ್ಲಿ ಒಂದು ಈ ಎರಡು ಗಜ ಪ್ರಮಾಣವಾಗಿ ಇರುವುದು ಅದಕ್ಕೆ ಮಂದು ಮುಚ್ಚಳಿಕೆಯು ಕಲ್ಲು ಸೇರಿಸಿ ವಜ್ರ ಬಿಗಿದಿರುವದು (ಛಶಪಿ. ೦೨೦-೩) ; ಭಯದ ಮುಚ್ಚಳಿಕೆಯು ಅದನ್ನು ಅದುಮಿತ್ತು. ಈ ಮುಚ್ಚಳಿಕೆಯನ್ನು ತೆಗೆದಾಗ ಜ್ವಾಲಾಮುಖಿಯು ಸ್ಫೋಟವಾಗದಿದ್ದೀತೆ? (ಹನ್ನಿಬಿ. ೦೬೩). **ಮುಚ್ಚಣಿಕೆ :** "ಮುಚ್ಚಳ" (ಜಾನಕೋ. ೩೨). **ಮುಚ್ಚಳಿಗೆ :** ಮನೆಯೊಳಗಣ ಒರಳು ಜಂಬೂದ್ವೀಪ ನವಖಂಡ ಪೃಥ್ವಿಯ ನುಂಗಿತ್ತು ನುಂಗಿದ ಮುಚ್ಚಳಿಗೆ ತೆಱಹಿಲ್ಲದೆ ಮತ್ತೆ ಆ ಮನೆಯ ನುಂಗಿತ್ತು (ನೋಳಿಪಾ. ೨೨೮-೬೮೦).

[ಮುಚ್ಚಳ (<ಮುಚ್ಚಣ) + — ಇಕೆ]

**ಮುಚ್ಚಳಿಕೆ$_2$.** ಮುಚ್ಚಲಿಕೆ (ನಾ). (ಅಪರಾಧಿಗಳಿಂದ ಸರಕಾರವು ಕರಾರು ಹಾಕಿ ಬರೆಸಿಕೊಳ್ಳುವ) ಒಳ್ಳೆಯ ನಡತೆಯ ಹೇಳಿಕೆಯುಳ್ಳ ಕರಾರುಪತ್ರ; ಒಡಂಬಡಿಕೆಯ ಪತ್ರ: ಸುಬೇದಾರನು ಪೈರುಪಚ್ಚೆ ಮುಂತಾದ ಬಾಬುಗಳಿಂದ ಹೆಚ್ಚು ಹುಟ್ಟುವಳಿಯನ್ನು ಮಾಡುವೆನೆಂದು ಮುಚ್ಚಳಿಕೆ ಬರೆದು ಕೊಟ್ಟು (ಮಹಾಪು. I. ೦೨೬); ಪಂಚಾಯತರು ಕೊಡುವ ತೀರ್ಮಾನಕ್ಕೆ ತಾವು ಬದ್ಧರಾಗಿರುವೆವೆಂದು ಕಕ್ಷಿಗಾರರು ಒಪ್ಪಿ ಮುಚ್ಚಳಿಕೆಯನ್ನು ಬರೆದುಕೊಡಬೇಕಾಗಿತ್ತು (ಮಹಾಪಂ. II. ೨೫) ; ಈ ಪ್ರಾಂತದಲ್ಲಿರುವ ತನಕ ಯೋಗ್ಯ ನಡತೆಯಿಂದಿರುವವರೆಂದು ಮುಚ್ಚಳಿಕೆ ಕೊಡಬೇಕು (ದೀಪದೂ. ೦೦೯). **ಮುಚ್ಚಲಿಕೆ:** ಘುಥಾವತ್ತಾಗಿ ದುಯಾಫ್ತ ಮಾಡಿ ರುಜು ಮುಚ್ಚಲಿಕೆಯು ಬರೆಸಿಕೊಂಡು (ಮಹಾಪಂ. II. ೩೯).

[← ಪಾರ. ಮುಚಲ್ಕಾ; ಹಿಂ. ಮುಚ್ಚಲಕಾ; ಮರಾ. ಮುಚಲಕಾ, ಮುಚಲ್ಕಾ]

**ಮುಚ್ಚಳಿಗೆ** ' ಮುಚ್ಚಳಿಕೆ$_1$ ' ನೋ.

**ಮುಚ್ಚಳು** ' ಮುಚ್ಚಣ ' ನೋ.

**ಮುಚ್ಚಳ್ದೆಗೆ** ' ಮುಚ್ಚಳದೆಗೆ ' ನೋ.

**ಮುಚ್ಚಱು** (ನಾ). ಸೊನ್ನೆ; ಶೂನ್ಯ : "ಮುಚ್ಚಱಿಂದುಂ ಸೊನ್ನೆಯೆಂದುಂ ಶೂನ್ಯಂ" (ಕಶಶಾ. ೩೯-೨೦೬); "ಮುಚ್ಚಱ್ ಸೊನ್ನೆಯು ಶೂನ್ಯಂ" (ಕಶಕಂ. ೦೩೦). [ ? ]

**ಮುಚ್ಚಾಲ್** (ನಾ). ಮೂರು ಸಾಲು,-ಶ್ರೇಣಿ : ಮುಚ್ಚೆರೆ ; ಮುಚ್ಚಾಲ್ (ಕಮುದ. ೬೬ ಪ್ರಯೋ). [<ಮೂಱು + ಸಾಲ್$_3$]

**ಮುಚ್ಚಾಲೆ** (ನಾ). ಒಬ್ಬರು ಕಣ್ಣು ಮುಚ್ಚಿಕೊಂಡು ಇತರರು ಅಡಗಿಕೊಂಡ ಮೇಲೆ ಕಣ್ತೆರೆದು ಅವರನ್ನು ಹುಡುಕುವ ಆಟ; ಕಣ್ಣು ಮುಚ್ಚಾಲೆ ಆಟ : ಮುಚ್ಚಾಲೆಯಾಡಿ ದೊಲ್ಲಯಿಸುವೇಕೆನ್ನ (ಗೀಶಂ. ೨೭-೨). [P ಇದು 'ಕಣ್ಣುಮುಚ್ಚಾಲೆ'ಯೆಂಬುದರ ಸಂಕ್ಷಿಪ್ತರೂಪ]

**ಮುಚ್ಚಿ** (ನಾ). ಸಾರ್ವಜನಿಕಕಚೇರಿಗಳಲ್ಲಿ ಮಸಿ ತಯಾರಿಸುವ, ಕಾಗದವನ್ನು ಒದಗಿಸುವ, ಪುಸ್ತಕಗಳ ರಟ್ಟುಕಟ್ಟುವುದೇ ಮೊದಲಾದ ಕೆಲಸಕ್ಕೆ ನೇಮಕಗೊಂಡ ವ್ಯಕ್ತಿ : (ಕೃಕಗ. II. ೩೩೬).

[< ಮುಚ್ಚು$_1$. / ತಮಿ. ಮುಚ್ಚಿ. / ಹಿಂ. ಮೋಚಿ]

**ಮುಚ್ಚಿಕೆ,** ಮುಚ್ಚಿಗೆ (ನಾ). ೧. ಹೊದಿಕೆ ; ಆವರಣ : ಚಿಪ್ಪಿನಾ ಮುಚ್ಚಿಕೆಯೊಳುಪ್ಪಹುದು ಮುತ್ತು (ಗೀಶಂ. ೩೦-೦೦೬). **ಮುಚ್ಚಿಗೆ :** ೨. ಮನೆಯ ಮೇಲುಭಾಗದ ಛಾವಣಿ,- ಸೂರು : ಚಂದ್ರಯ್ಯ . . .

ಕೊಟಡಿಯ ಮುಚ್ಚಿಗೆಯನ್ನು ನೋಡುತ್ತಾ ನಗತೊಡಗಿದ (ಶರಸ. ೮೩) ; ಅಡುಗೆಕೋಣೆಯ ಮುಚ್ಚಿಗೆ, ಗೋಡೆ . . . ನೆಲ–ಇವುಗಳ ಕಡೆಗೂ ಆಗಾಗ ಗಮನ ಕೊಡುತ್ತಿರಬೇಕು (ಅಡುಗಾ. ೩೭). 'ಮಚ್ಚಿಗೆ' ಪರ್ಯಾ.

ಮುಚ್ಚಿಗೆಯ ಮನೆ, ಮುಚ್ಚಿಗೆ ಮನೆ=ಇಟ್ಟಿಗೆ, ಗಾರೆಗಳಿಂದ ಕಟ್ಟಿದ ಮನೆ : ಮುಚ್ಚಿಗೆಯ ಮನೆಯಾದರೂ, ಮನೆಯ ಮಾಡು ಹೆಂಚಿನದಲ್ಲ. ಪ್ರತಿವರ್ಷ ಸೋಗೆ ಹೊಚ್ಚಬೇಕು (ಬಾಳ್ವೆ. ೧೭೯); ಸುಬ್ರಾಯರ ಮುಚ್ಚಿಗೆ ಮನೆ ಒಂದು ದಿವಸ ಗ್ರಾಮದವರ ಹಗೆಗೆ ತುತ್ತಾಯಿತು (ಹಹಸ. ೭೦).

[ಮುಚ್ಚು$_1$ + — ಇಕೆ]

**ಮುಚ್ಚಿಗ$_1$** (ನಾ). ೧. ಇಟ್ಟಿಗೆ ಅಥವಾ ಗಾರೆ ಕೆಲಸ ಮಾಡುವವನು; ಉಪ್ಪಾರ : ''ಪಲಗಂಡನನೆ ಮುಚ್ಚಿಗಂ'' (ಶಂಗರಾ. ೧೦೦-೪). ೨. ಕಲ್ಲು ಕೆಲಸ ಮಾಡುವವನು; ಕಲ್ಲುಕುಟಿಗ : (೬). [ಮುಚ್ಚು$_1$ + — ಇಗ]

**ಮುಚ್ಚಿಗ$_3$** 'ಮೊಚ್ಚಿಗ' ನೋ.

**ಮುಚ್ಚಿಗೆ** 'ಮುಚ್ಚಿಕೆ' ನೋ.

**ಮುಚ್ಚಿಲು** (ನಾ). ಒಂದು ಬಗೆಯ ಸಸ್ಯ : ಮುಚ್ಚಿಲು. ಕಲ್ಪೇಗ (ವೃಶಿಗ. ೩೦-೩೬೮). 'ನೆಲಮುಚ್ಚಿಲು' ಪರ್ಯಾ. [ ? ]

**ಮುಚ್ಚಿಸು** (ಕ್ರಿ). (ರಂಧ್ರ, ಬಾಗಿಲು ಮುಂತಾದುವನ್ನು) ಬಂದು ಮಾಡಿಸು : ಬಿಲದ ರಂಧ್ರವನ್ನು ಮಣ್ಣುಹಾಕಿಸಿ ಮುಚ್ಚಿಸಿದನು (ರೂಢಿ).

[ಮುಚ್ಚು$_1$ + — ಇಸು$_3$]

**ಮುಚ್ಚು$_1$** (ಕ್ರಿ). ೧. ಮರೆಮಾಡು ; ಹೊದಿಸು : "ಮುಚ್ಚು–ಆಚ್ಛಾದನೇ" (ಶಮದ) ; ಪೊಂಗೊಡನಂ ತಮಾಳಪಲ್ಲವದೊಳೆ ಮುಚ್ಚಿದಂದದೊಳೆ ಚೂಚುಕಮಾತ್ರದ ಕರ್ಪನಾಕೆಯಾ (ಶಂಶಭಾ. ೧-೦೨೫); ನಾಲ್ಕು ದಿಕ್ಕಿನ ಶರಧಿಗಳು ಪರಿತಂದು ಲೋಕವನರಸ ಮುಚ್ಚಲು (ಸಂಭಶ. ೪-೭). ೨. (ಕಣ್ಣನ್ನು) ಮುಗಿ ; ನಿಮೀಲನಗೊಳಿಸು : ಪೆಣನಂ ಕಂಡ ಪಂದೆಯಂತೆ ಕಣ್ಣಂ ಮುಚ್ಚುತ್ತುಂ (ಧರ್ಮಾಮೃ. ೧-೦೯೯). ೩. ಕಾಣದಿರುವ ಹಾಗೆ ಮಾಡು ; ಮರೆಸು : ಅಡಗಿಸು : ಪಚ್ಚು ಪರಿಕಲಿಸಿ ಬೆನ್ನಂ ಮುಚ್ಚಿರೆ ಮುಡಿ (ಕಾವ್ಯಸಾ. ೯೭೭ ಶೂದ್ರಕ) ; ಕವಿಮಾರ್ಗದೊಳೊಳಪೊಕ್ಕುಂ ನವರಸಮಂ ತಿಳಿಯೆ ನುಡಿದನೆನಿಸಿದ ಕವಿ ಸತ್ಕವಿಯೆನಿಸುಂ ಗೂಡಾರವ ಕವಿಯಂತಿರೆ ಮುಚ್ಚಿ ಪೋದ ಕವಿಯುಂ ಕವಿಯೇ (ಅಶಜ. ೧-೮೭) ; ಪರಗುಣಂಗಳ ಮುಚ್ಚುವ ತನ್ನನೆ ಪೊಗಳ್ವ ಲೋಗರಂ ಪಳಿವ ನೀಚನೊಳ್ ನೀಚಗೋತ್ರದಾಸ್ರವಮಕ್ಕುಂ (ಸುಕುಮಾ. ೬-೨೪). ೪. (ಬಾಗಿಲು ಮೊದಲಾದುವುಗಳನ್ನು) ಹಾಕು ; ಬಂದು ಮಾಡು : ಗುಹೆಯ ಬಾಗಿಲಂ ಪಿರಿದೊಂದು ಸಿಲೆಯಂ ತಂದಿಟ್ಟು ಮುಚ್ಚಿ (ಪಡ್ಕರಾ. ೦೨೨-೨೦) ; ತೆಱೆಯದೆ ಮುಚ್ಚಿದ ಪಡಿಗಳ್ ತೆಱೆದುವು (ಸುಕುಮಾ. ೯-೦೯) ; ಖಗರಾಜ ವಿನತೆಯರಮನೆಗೈದಿ ಬಾಗಿಲು ತನತನಗೆ ಮುಚ್ಚಿರಲು . . . ಬಂದನು ಮನೆಗೆ ಕದ್ರುವಿನ (ಸಂಭಶ. ೩-೫೨). ೫. ಗುಟ್ಟುಮಾಡು ; ರಹಸ್ಯವಾಗಿಡು : ಎರಡೆರಡು ಛಿದ್ರವನಾರು ಮಾಡಿದರು ಮುಚ್ಚಿದರು ನೀನೆಚ್ಚಿಯಾದೊಡೆ ಸಚ್ಚಿದಾನಂದೈಕನಾಣೆಯು ನಿಶ್ಚಯವ ಹೇಳೆಂದು ಪಾರ್ಥನ ಕೇಳದನು ಭೀಷ್ಮ (ಸಂಭಶ. ೦೮ ೦೫).

[ದೇ.॥ ತಮಿ. ಮುಚ್ಚು ; ಕೊಡ. ಮುಚ್ಚ್ ; ತುಳು. ಮುಚ್ಚು ; ತೆಲು. ಮುಚ್ಚು, ಮುಂಚು, ಮೂಯು ; ಕೋಲಾ. ಮುನ್ಸ್ ; ನಾಯ್ಕಿ. ಮುಸ್ ; ಪರ್ಜಿ. ಮುಯ್ಙ್ ; ಗದಬ. ಮೂಯ್ ; ಗೊಂಡಿ. ಮುಚ್ಚ್, ಮುಚ್ಚಾನಾ ; ಕುಇ. ಮುಸ, ಮುಸಿ ; ಕುವಿ. ಮೂಚಾಲಿ, ಮುಜ್ಜನೈ ; ಕುರುಖ್. ಮುಚ್ಚಾನ, ಮುಂಧಾನ ; ಮಲ್ತೊ. ಬ್ರಾಹುಇ. ಮುಸ್ಸ್]

**ಮುಚ್ಚು$_2$, ಮುಚ್ಚಿ$_1$** (ನಾ). ೧. (ಹೂವಿನ ದಳಗಳು) ಮುಚ್ಚಿರುವುದು : ಕೈರವಾಭ್ಯುದಯದರಲ್ಚು ನೀರಜದ ಮುಚ್ಚು ರಥಾಂಗದಗಲ್ಚು . . . ಜಗತ್ತಿನ ಪುಣ್ಯದಚ್ಚು ಬಂದುದಯಗಿರೀಂದ್ರಮಸ್ತಕದೊಳೆರ್ದುದು ಪೂರ್ಣಶಶಾಂಕಮಂಡಲಂ (ಸೂಕ್ತಿಸು. ೬-೨೨೪). ೨. ಮುಚ್ಚುವ ಸಾಧನ ; ಮುಚ್ಚಳ : ರಾಜನು ಗುಡಾಣದ ಮುಚ್ಚನ್ನು ತೆಗೆದು ಹೊರಗೆ ಬಂದನು (ಮಹಿಸ. ೯೨). ೩. ಗುಟ್ಟು ; ರಹಸ್ಯ : ಕುತ್ತುಂ ಪಗೆ ಮುಚ್ಚು . . . ವಿಷಾಗ್ನಿ ಬಾಧೆಯಿಂವು ಕೇಳೀ ನಾರಕಾವಸ್ಥೆಯಂ (ಅಪಂಪು. ೯-೪೨) ; ತನ್ನ ನೋಟದ ಕಳವು ನಗೆ ತೆರೆಯ ಮುಚ್ಚು (ಕಾಂಚೂರ. ೪೨-೫೪) ; ಮುಚ್ಚೇನು ಮತ್ತೆ ಬಿಚ್ಚೇನು ಇಲ್ಲಿ (ಮುಕ್ತಕಂ. ೦೫-೫). **ಮುಚ್ಚಿ$_1$**: ೨. ಮುಸುಂಕಿದಳ್ . . . ಮಱಪೆಂಬ ಮುಚ್ಚುಳಿಂದರೆಮುಗುಳ್ವಚ್ಚಿಯಂ ಸವಿಯ ಮುಚ್ಚಿದ ಮುಚ್ಚಿಯಿನಾಕೆ ಚಿತ್ತಮಂ (೦೯೮ವ. ೦೩-೧೭). 'ಎಸಮುರ್ಚೆ' ಪರ್ಯಾ.

[< ಮುಚ್ಚು$_1$./ತಮಿ. ಮುಚ್ಚು; ಕೊಡ. ಮುಚ್ಚಿ; ತುಳು. ಮುಚ್ಚ, ಮುಚ್ಚಿ, ಮುಚ್ಚು ; ತೆಲು. ಮೂತ : ಗೊಂಡಿ. ಮುಚ್ಚೀ, ಮುಚ್ಚಿ]

**ಮುಚ್ಚುಂಗಣ್**, ಮುಚ್ಚುಗಣ್ (ನಾ). ರೆಪ್ಪೆ ಮುಚ್ಚಿದ ಕಣ್ಣು; ಮುಗಿದ ಕಣ್ಣು : (ಎಮೆಯುಳಿದು ಅಂಗಾರಗಳಂತೆ ಹೊಳಪೊಳೆವ ಕ್ರೂರ ದೃಷ್ಟಿಗಳನ್ನು ಮಹಾರಾಜನ ಮುಚ್ಚುಂಗಣ್ಗಳಿಗೆ ನಟ್ಟು ನಿಲಿಸಿಕೊಂಡು) (ಚಟ್ಯಂ. ೬೯-೨೫). **ಮುಚ್ಚುಗಣ್** : ಈತನಿದ್ದನು ಬಲೆಗೆ ಸಿಲುಕಿದ ಕೋತಿಯಂದದಲುಸುರದೊಡಕಿನ ಧಾತುಗುಂದಿದ ಮುಖದ ಮುರುಹಿನ ಮುಚ್ಚುಗಂಗಳಲಿ (ಕೊರರಾ. ೫-೭-೧೯) ; ಮಚ್ಚರದಿ ನಡೆವ ಮಗ ಹೊಲ್ಲ ಸೊಳಿಗೆ ಮುಚ್ಚುಗಣ್ಣೊಳ್ಲ (ಸರ್ವಜ್ಞ. ೦೯೦೨). [ಮುಚ್ಚು$_1$ + ಕಣ್]

**ಮುಚ್ಚುಗಣ್** 'ಮುಚ್ಚುಂಗಣ್' ನೋ.

**ಮುಚ್ಚುಗಣೆ** (ನಾ). ಮೂಡಿಗೆಯಲ್ಲಿ ಅಡಗಿರುವ (ವಿಧ ವಿಧದ) ಬಾಣ: ಅಚ್ಚಕೈಗಂಕಣಕೆ ಮಣಿಮಯದಚ್ಚಗನ್ನಡಿಯೇಕೆ ನಮ್ಮಯ ಮು [ಪಾಠಾಂ. ನು, ಮು]ಚ್ಚುಗಣೆಗಳ ಕಲಹವನು ನೀ ನೋಡು (ಕೊರರಾ. ೭-೩೦-೯). [ಮುಚ್ಚು$_1$ + ಕಣೆ$_1$]

**ಮುಚ್ಚುಗತ್ತಿ** (ನಾ). ಒರೆಯೊಳಗೆ ಸೇರಿಸಿಟ್ಟಿರುವ ಕತ್ತಿ : ಸಡುವಿನಲ್ಲಿ ಮುಚ್ಚುಗತ್ತಿಯೂ ಕಠಾರಿಯೂ ಇದ್ದುವು (ಶ್ರೀಬಿದ್ಯ. ೭೩).

[ಮುಚ್ಚು$_1$ + ಕತ್ತಿ]

**ಮುಚ್ಚುಗದಹು** (ನಾ). ಮುಚ್ಚಿದ ಬಾಗಿಲು ; ಬಂದು ಮಾಡಿದ ಕದ : ಮುಚ್ಚುಗದಹುಗಳಂ ತೆಗೆದುಕೊಳುತುಚ್ಚದಿಂ ಗಮನಿಸುವ ಲಿಂಗ ಸಮುಚ್ಚಯಂ (ಬಸವ. ೫೭-೪೩). [ಮುಚ್ಚು$_1$ + ಕದಹು$_2$ (<ಕದವು$_1$)]

**ಮುಚ್ಚುಗಲ್ಲು** (ನಾ). ಕಾಲುವೆ, ಚರಂಡಿ ಮೊದಲಾದುವುಗಳನ್ನು ಮುಚ್ಚುವ ಕಲ್ಲು ; ಹಾಸುಗಲ್ಲು : ಚರಂಡಿಯ ಮುಚ್ಚುಗಲ್ಲು ಸೀಳಿ ಹೋಗಿದೆ (ರೂಢಿ). [ಮುಚ್ಚು$_1$ + ಕಲ್ಲು (<ಕಲ್$_3$)]

**ಮುಚ್ಚುದೂಂಬು** (ನಾ). (ನೀರು ಹೊರಕ್ಕೆ ಹೋಗದಂತೆ) ಹಾಕುವ ತೂಬು ; ಮುಚ್ಚಿದ ತೂಬು : ಉಚ್ಚಿದರು ದೋರ್ವಳತಟಾಕದ ಮುಚ್ಚುದೂಂ[ಪಾಠಾಂ. ದೂ]ಬನು (ಕೊರರಾ. ೩-೭-೧೮). [ಮುಚ್ಚು$_1$ + ತೂಂಬು]

**ಮುಚ್ಚುಮರೆ** 'ಮುಚ್ಚುಮಱೆ' ನೋ.

**ಮುಚ್ಚುಮಱೆ**, ಮುಚ್ಚುಮರೆ (ನಾ). ಬಚ್ಚಿಡುವುದು ; ಗೋಪ್ಯ : ರಹಸ್ಯ : ಇದು ಮಟ್ಟಮೆಂದು ತಾಂ ಚಪ್ಪರಿಸಿದೊಡಾನಿರೆನೆ ಮುಚ್ಚುಮಱೆಯೇಕೆಯೆ (ಅರ್ಜನೀ. ೫-೯); ಮುಚ್ಚುಮಱೆಯೇಕಿನ್ನು ನಮಗುಚಿತಬಡಿಸು (ಕುಮ್ಯಾಅ. ೨೦-೦೯); ಮುಚ್ಚುಮಱೆಯೇತಕೆ ಮನೆಮನೆಯಲಿ (ಪುರಂದ. ೧-೦೭೦-೨). **ಮುಚ್ಚುಮರೆ** : ತರಲ ಗೋವರ್ಧನರ ಭೆಟ್ಟಿಯಾಗಿ ಯಾವುದೂ ಮುಚ್ಚುಮರೆಯಾಗಿ ಉಳಿಯಲಿಲ್ಲವೆಂದು . . . ನಿಶ್ಚಿಂತಳಾದಳು (ಎರಸ. ೦೩೩); ತನ್ನ ಮನಸ್ಸಿನಲ್ಲಿದ್ದುದನ್ನು ಮುಚ್ಚುಮರೆಯಿಲ್ಲದೆ ಸ್ಪಷ್ಟವಾಗಿ ಉದ್ದೇಶಪೂರ್ವಕವಾಗಿ ಹೇಳಿದುದನ್ನೂ ಜ್ಞಾಪಿಸಿಕೊಂಡನು (ಮುಗಾ. ೭); ಯಾವ ಮುಚ್ಚುಮರೆಯೂ ಇಲ್ಲದೆ ಸ್ವಾಮಿ ಹೇಳಿಬಿಟ್ಟ (ಕಾನ್ಸಿ. ೪೩).

[ಮುಚ್ಚು$_1$ + ಮಱೆ$_2$]

**ಮುಚ್ಚುಮಾತು** (ನಾ). ಗುಟ್ಟಾದ ನುಡಿ; ಮುಚ್ಚುಮರೆಯ ಮಾತು: ಕನಕದಾಸರೂ ತಮ್ಮ ದೊರೆಯ ಹೆಸರನ್ನು . . . ಬಿಚ್ಚುಮಾತಿನಲ್ಲಿ ಹೇಳಿಲ್ಲವಾದರೂ ಮುಚ್ಚುಮಾತಿನಲ್ಲಿ ತುಂಬ ಹೇಳಿಪ್ಪಾರೆ (ಕರ್ಣಾಕ. ೬೭). 'ಬಿಚ್ಚುಮಾತು' ಪರಾ. [ಮುಚ್ಚು$_1$ + ಮಾತು$_1$]

**ಮುಚ್ಚುವಲಗೆ** (ನಾ). ಛಾವಣಿಯ ಹಲಗೆ; ಸೂರುಕಟ್ಟು: ವಿವಾಹ ಮಂಟಪಮಂ ಪೊಂಗೋಡೆ . . . ಬೆಳ್ಳಿಯ ಮುಚ್ಚುವಲಗೆ . . . ಮಿಕ್ಕ ಮಣಿ ಮಿಸುನಿ ಕುಸುರಿಗೆಲಸಂಗಳಿಂದಲಂಕರಿಸಿ (ಹಾಲಾಸ್ಯ. ೦-೬-೨೭ ವ). [ಮುಚ್ಚು$_2$ + ಪಲಗೆ]

**ಮುಚ್ಚುವಲೆ** (ನಾ). ಗುಬ್ಬಿ ಮುಂತಾದ ಸಣ್ಣಹಕ್ಕಿಗಳನ್ನು ಮುಚ್ಚಿ ಹಿಡಿಯುವಂಥ ಬಲೆ: ಗುಬ್ಬಿಯು ಮುಚ್ಚುವಲೆಯುಲಿ ಶಿವಶಿವಾ ಭೇರುಂಡ ಸಿಲುಕುವುದೆ (ಶಾಕ್ತರಾ. ೦೬-೩೭). [ಮುಚ್ಚು$_1$ + ಬಲೆ$_1$]

**ಮುಚ್ಚುಳ್** 'ಮುಚ್ಚಳ' ನೋ.

**ಮುಚ್ಚುಳ** 'ಮುಚ್ಚಳ' ನೋ.

**ಮುಚ್ಚುಳದೆಗೆ** 'ಮುಚ್ಚಳದೆಗೆ' ನೋ.

**ಮುಚ್ಚುಳಿಕ್ಕು** (ಕ್ರಿ). ೧. ಮುಚ್ಚುವ ಸಾಧನವನ್ನು ಹಾಕು; ಮುಚ್ಚು: ತರುಣಿ ಭರಣಿಗೆ ಮುಚ್ಚುಳಿಕ್ಕುವ ಪೋಲು ಲಿಂಗಸಂಗರವ ಮಾಡಿದಳು (ಶಿಕ. ೪೦-೦೩೦). ೨. ಕದ ಮುಚ್ಚು; ಬಾಗಿಲು ಹಾಕು: ಮುಚ್ಚುಳಿಕ್ಕಿ [ಪಾಠಾಂ. ಮುಚ್ಚಳಿಕ್ಕಿ] ಪೋದರವುಸೆಗಿಂದು ಪೇಟಿರೆ ಮಹತ್ತರರಂ ನೃಪಸಿಂಹ ನೀಂ ತಪಸ್ವರುಣಿಗೆ ಕೂರ್ತುದಂ ನುಡಿವೊಡೀಯುರೆ ಪೇಜಿಗರ್ಗಂಗಚಿತ್ರಮಂ (ಅಪಂಶು. ೩-೦೦೫). [ಮುಚ್ಚುಳ್(<ಮುಚ್ಚಳ)+ಇಕ್ಕು$_1$]

**ಮುಚ್ಚುಳು** 'ಮುಚ್ಚಳ' ನೋ.

**ಮುಚ್ಚುಳ್ದೆಗೆ** 'ಮುಚ್ಚಳದೆಗೆ' ನೋ.

**ಮುಚ್ಚುಱು** (ಕ್ರಿ). ಮೂರ್ಛೆಹೋಗು; ಪ್ರಜ್ಞೆತಪ್ಪು: "ಮುಚ್ಚುತ್ತಂ= ಮೂರ್ಛೆವೋದಂ" (ಶಮದ. ಶಂ. ೨); ಎಚ್ಚಂಬಿರ್ದೆಯಿಂದುರ್ಚಲ್ ಮುಚ್ಚುತ್ತುಂ ತಕ್ಕೆ ನಾಡೆ [ಪಾಠಾಂ. ಮುಚುರ್ತುಂತಕ್ಕನಾಡ] ತೆರ್ಪತ್ತಾಗಳ್ ಬೆಚ್ಚದೆ ಕೋಪಾನಲಮುಜಿ ಬಿಚ್ಚಳಿಸಲ್ ಪರಿ ಬಳಿಕ್ಕೆ ನಿಡುಸ್ಸೈವಿನೆಗಂ (ವೀರಾ. ೦೨-೩೭). [< ಮುಚ್ಚು$_2$ + ಉಱು]

**ಮುಚ್ಚೂಳು** (ನಾ). ಮೂರು ಬಾರಿ, —ಸಲ: ಅಲ್ಲಿಂ ವಿಗತಜೀವಿಗಳಾಗಿಯೆಲೆ ಭೂವಲ್ಲಭ ನಿನಗೆ ಮುಚ್ಚೂಳು ಸಲ್ಲಲಿತಾಕಾರದವಮುಳುಗಳಾಗಿ ತಾವುಲ್ಲಾಸದಿಂ ಜನಿಸುವರು (ವೀಖಂಸಂ. ೦೪-೦೩೦); ಬಲವಂದು ಮುಚ್ಚೂಳಂದವೆ ಧರಣಿಬಲನೇಶನಾ ದೇಗುಲದ. . . ಕುಲಿಶದ ಪಡಿಯ ನೋಡಿದನು (ಪ್ರೀಶಾಂ. ೬-೬೪). [< ಮೂಱು + ಸೂಳು$_2$ (< ಸೂಳ್)]

**ಮುಚ್ಚೆ$_1$** 'ಮುಚ್ಚು$_2$' ನೋ.

**ಮುಚ್ಚೆ$_2$, ಮುರ್ಚೆ** (ನಾ). ಮೈಮರೆಯುವುದು; ಎಚ್ಚರ ತಪ್ಪುವುದು; ಮೂರ್ಛೆ: "ಹಮ್ಮುದಾ, ಹರವಸಂ, ಮುಚ್ಚೆ—ಈ ೩ ಮೂರ್ಛೆ" (ಕರಶಾ. ೩೭-೨೩೨); ಎಚ್ಚ ಶರವಂ ಕಲಿ ಚಿಕ್ಕನೆ ಕಿಬ್ಬುರ್ಲಪ್ರದೇಶವಮನಿಸೆ ನೇತ್ರರೊಕ್ಕು ಪತಿ ಮುಚ್ಚೆಯೊಳ್ಚಿಯೆಗೆಟ್ಟು ಜೋಲ್ದೊಡೆ (ಶಂಶಶಾ. ೦೨-೦೦೬); ಮುಚ್ಚೆಯ ಬಾಷ್ಪಕ್ಕಾಗಳೆ ಮುಚ್ಚೆ[ಮುಂಪಾ]ಕ್ಷಣದೆ ಹಾಸ್ಯಮುಂ ಶೋಕಮುಂ. . . ಪಲ್ಲಚ್ಚನಮಪ್ಪುದಮನೂನ(ಮು)ಮಾಣ್ಬುದುಮಕ್ಕುಂ (ಜಪುಂದ. ೦೩-೨೦). **ಮುರ್ಚೆ**: ಸೀತೆ ದೊಪ್ಪನೆ ಕುಳಿತ್ತುಸ್ಸೆನುತ್ತೊರಗಿದಳ್ ಮರಕೆ ಮುಚ್ಚಿದುವಕ್ಷಿ ತಾಳಲಾರದ ಸೇದೆಯಿಂ ಪೇಳಿಳ್ದರಳ್ದುದೊ ಮುರ್ಚೆಗೆಂಬಂತೆ (ಪ್ರೀರಾಪಾ. ೦೨೮-೬೫). [< ಸಂ. ಮೂರ್ಚ್ಛಾ]

**ಮುಚ್ಚೆಗೊಳ್** (ಕ್ರಿ). ಮೈಮರೆ; ಎಚ್ಚರ ತಪ್ಪು; ಮೂರ್ಛೆಹೋಗು: ಆ ವರ್ಚಸ್ವಿಯುಂ ಕಣಿಣದಿರಲಾರೆ ಹಾ ರಾಮರಾಮೆಂದು ಮುಚ್ಚೆಗೊಂಡಂ (ಶರಶ. ೪-೬೨); ಇಂದ್ರಜಿತು ಕಾಲಮೇಘವನಡರಿ ಶಕ್ತ್ಯಾಯುಧವನಿಸಲ್ಕಾ ಲಕ್ಷ್ಮಣಂ ಮುಚ್ಚೆಗೊಳೆ (ಶರಶ. ೮-೨೩). [ಮುಚ್ಚೆ$_2$ + ಕೊಳ್$_1$]

**ಮುಚ್ಚೆದಿಳಿ** (ಕ್ರಿ). ಎಚ್ಚರವುಂಟಾಗು: ಜ್ಞಾನಬರು; ಪ್ರಜ್ಞೆಬರು: ಮುಚ್ಚೆದಿಳಿದರಸಿಯೊಳ್ ಬಗೆ ಬೆಚ್ಚಿರೆ ಶೀಲವತಿ ಸೀತೆ ಪೂಣ್ದುದನೆಂತುಂ ಪುಚ್ಚಱಿಯುಳೆನ್ನದಟಿಪಿಂ ಚೆಚ್ಚರಮಾ ಸಭೆಗೆ ರಾಘವಂ ಬಟಿಸಂದಂ (ಶಂರಾಮಾ. ೦೬-೩೩); ಆ ವೀರನೊಯ್ಯನೊಯ್ಯನೆ . . . ಮುಚ್ಚೆದಿಳಿದೆದ್ದನು (ಶೀಶಶಾ. ೦೮-೨೩); ಕಿಜಿದಾನುಂ ಬೇಗದಿಂ ಮುಚ್ಚೆದಿಳಿದು ದುಃಖಾರ್ತೆಯಾಗಿ . . . ಬಾಯಾಜಿ ಮಱುಗಿದಳ್ (ರಾಶಶಾಕ. ೩೩-೨೯). [ಮುಚ್ಚೆ$_2$ + ತಿಳಿ$_1$]

**ಮುಚ್ಚೆರೆ** (ನಾ). ಮೂರು ಬೊಗಸೆ.—ಸೇರೆ: ಕವರ್ಗ ಪವರ್ಗಮುಲ್ಲದಲ್ಲಿಯುಂಮಿಮಾ ಲಕ್ಷಣಮಾಯ್ತು. . . ಮುಚ್ಚೆರೆ, ಮುಚ್ಚಾಲ್ (ಶಮಂಶ. ೦೫೬ ಕೃಮೂ); ಅರೆದ ಸಾಸುವೆಯ ಶುಂಠಿಯುಸಿಕ್ಕಿ ಪೊಚ್ಚೆರೆ ಮೊಸರಿನಲ್ಲಿ ಮುಚ್ಚೆರೆ[ಪಾಠಾಂ. ಚ್ಚರೆ, ಚ್ಚಿಳಿ]ಯ ನೀರ ಕದಡಿ ಮೋದವನಿರದೆ ಸರೆಗೊಟ್ಟು ನೀರೋಗರವನಿಕ್ಕಲು ಸುಗಂಧತಕ್ರೋದನ (ಸೂಶಶಾ. ೩-೨೭). [< ಮೂಱು + ಸೆರೆ$_2$ (< ಸೇರೆ$_1$)]

**ಮುಚ್ಚೆವೋಗು** (ಕ್ರಿ). = ಮುಚ್ಚೆಗೊಳ್: ಅಱಿವನೆಡೆವಱಿದು ಕೆಟ್ಟುದನಱಿಸಲ್ ಪೋಪಂತೆ ಮುಚ್ಚೆವೋಪುದುಂ (ಶಾಂತಪು. ೪-೯೯); ರತಿಯತಿಶೋಕಂಗೆಯ್ದು. . . ಬಸಿಱಿಂ ಪೊಸೆದು ಚೇತನಂಗೆಟ್ಟು ಭೂತಳದೊಳ್ ಬಿಳ್ದು ಕಿಚ್ಚುಗಟ್ಟಿದಳಲಿಂ ಮುಚ್ಚೆ [ಪಾಠಾಂ. ಮೂರ್ಛೆ]ವೋಗಿ (೧೦ಕ. ೬-೭೭ ವ); ಮೇರೆದಪ್ಪುವ ಸುಖಿಕೆ ಮುಚ್ಚೆವೋಪಳೊ ಏನೊ ಕಂದನಂ ಕಂಡು (ಶಂಪ್ರಶ. ೪೦-೦). [ಮುಚ್ಚೆ$_2$ + ಪೋಗು$_1$ (< ಪೋ$_1$)]

**ಮುಚ್ಚೋಟು** 'ಮುಱಿಕೋಟು' ನೋ.

**ಮುಚ್ಚೋಡಿ** 'ಮುಚ್ಚೆಪಡಿ' ನೋ.

**ಮುಚ್ಚೋರೆ, ಮುತ್ತುಸಾರೆ** (ನಾ). ಅಕ್ಕಿ ಮತ್ತು ಹೆಸರುಬೇಳೆಯ ಹಿಟ್ಟನ್ನು ಕಲಸಿ, ಮೂರುರಂಧ್ರವಿರುವ ಒರಳಿನಲ್ಲಿ ಚಕ್ಕುಲಿಯಂತೆ ಒತ್ತಿ ಕರಿಯುವ ಒಂದು ಬಗೆಯ ತಿಂಡಿ,—ತಿನಿಸು: ಪೂರಿ, ಚಟ್ನಿ, ಮುಚ್ಚೋರೆಗಳನ್ನು ತಂದು. . . ಕರೆವಳು (ಕಿವಶಂ. ೦೦೬); ಮುಚ್ಚೋರೆ, ಕೋಡುಬಳೆ, ಆಂಬೊಡೆ ಮುಂತಾಗಿ ತಿಂಡಿಗಳನ್ನು ಮಾಡಿಸುತ್ತ (ಶಾಂಶ್ರ. II, ೦೦೬). **ಮುತ್ತುಸಾರೆ**: ಕರುಗಾದ ಮುತ್ತುಸಾರೆಯ ಚಕ್ಕುಲಿಗಳ ನರಸಿಯುನೆರಿಸಿರಿಕಿನುತ (ಜ್ಞಾಪಶ. ೩೯-೦೩೦). [< ಮೂಱು + < ಸೋರ್ು$_3$]

**ಮುಜಗರ, ಮುಜುಗರ** (ನಾ). ೧. ಸಂಕೋಚ; ದಾಕ್ಷಿಣ್ಯ: ಆ ಮನುಷ್ಯ ಏನೋ ಮುಜಗರಪಡುತ್ತಿದ್ದಂತೆ ಅವನ ಚರ್ಯೆಯಲ್ಲಿ ಕಂಡುಬಂದಿತು (ರಂಗಕ. ೩೬): ಮುಜಗರ ಮಾಡದೆ ತಗೋ ಎಂದು ಚಿರುಕಂಡ ಒತ್ತಾಯಿಸಿದ್ದ (ಚರಕ. ೦೩೫). ೨. ಹಿಂಸೆ; ಕಷ್ಟ: ಹೇಮಲತೆಯ ಅನಾರೋಗ್ಯದ ನಿಮಿತ್ತವಾಗಿ ಮುಜಗರಪಡುತ್ತಿದ್ದಳು (ಬಿಶಾಶ. ೩೦). ೩. ಬಿಗಿ; ಹಿಡಿತ: ಈಗಲೀಗ ಮನೆಯಲ್ಲಿ ವಿಪರೀತ ಮುಜಗರ (ಹಾಚಗೀ. ೯೮). **ಮುಜುಗರ**: ೧. ಏನೋ ಒಂದು ರೀತಿಯ ಮುಜುಗರ ಮನಸ್ಸಿನಲ್ಲಿತ್ತು (ದೂಬಿಟ್ಟಿ. ೦೫೨). ೨. ಮತ್ತೆಲ್ಲದರ ಜೊತೆಗೆ ಶಕುಂತಲೆಗೆ ಶಾರದೆಯನ್ನು ಶಾಮಣ್ಣ ತನ್ನ ಕಾರಿನಲ್ಲಿ ಕರೆದೊಯ್ದುದು ತುಂಬ ಮುಜುಗರವಾಗಿತ್ತು (ಕೂಸಿಶೀ. ೦೦೦); ಚಿಕ್ಕಮ್ಮ ತನ್ನ ಮಗಳೊಡನೆ ಯಾವುದೋ ವಿಷಯ ಮಾತನಾಡುತ್ತ ಮನಸ್ಸಿನಲ್ಲಿ ಬಹಳ ಮುಜುಗರ ಪಟ್ಟುಕೊಂಡು. . . ಹೇಳುತ್ತಿದ್ದುದು ಕೊಟಡಿಯಲ್ಲಿದ್ದ ಸರೋಜಳಿಗೆ ಕೇಳಿಸಿತು (ಪಾಹಾಗ. ೩೩೩); ಗಿರಿಜ ತಮ್ಮನ್ನು ಕೊಂದು ರಕ್ತ ಕುಡಿದರೂ ಅವರಿಗೆ ಇನಿತೂ ಮುಜುಗರವಿರಲಿಲ್ಲ (ಶಧ್ಮಶ. ೨೪೦). ೩. ಹೊರಗೆ ಮೋಡಗಳು ಭಾರವಾಗಿ ತೂಗಾಡುತ್ತಿದ್ದಾಗ ಮನೆಯಲ್ಲಿ ಎಂತಹ ಮುಜುಗರವೊದಗುವುದೋ ಅಂತಹ ವಾತಾವರಣ ಕಲ್ಪಿತವಾಗಿದೆ (ಕಶ್ರಪ. ೩). [?]

**ಮುಜರಾ** 'ಮುಜರೆ' ನೋ.

**ಮುಜರಾಯ್** 'ಮುಜರಾಯಿ' ನೋ.

**ಮುಜರಾಯಿ, ಮುಜರಾಯ್** (ನಾ). ದೇವಸ್ಥಾನ, ಮಠ ಮೊದಲಾದುವುಗಳ ದಾನದತ್ತಿಗಳಿಗೆ ಸಂಬಂಧಿಸಿದುದು: ಮುಜರಾಯಿ ಬಾಬಿನ ವಿಚಾರಣೆಗೋಸ್ಕರ ಅವಶ್ಯಕವಾದ ಲವಾಜಮೆಯು ಮೊಕರರಾಯಿತು (**ಮುಹಾಪಂ. II, ೧೧೧**); ಮೈಸೂರು ಶೀಮೆಯ ಮುಜರಾಯಿ ಕಮಿಷನರವರ ಕಚೇರಿ (**ಗುರುಚ. ೧೧**); ಅವರು ತಮ್ಮ ಜೀವನದಲ್ಲಿ ಮುಜರಾಯಿ ಗುಮಾಸ್ತಗಿರಿ. . . ಎಲ್ಲಾ ಮುಗಿಸಿ ಇಪ್ಪತ್ತು ಮೂವತ್ತು ಸಾವಿರ ರೂಪಾಯಿ ಸಂಪಾದನೆ ಮಾಡಿ (**ಅವತಂ. ೪೮**). **ಮುಜರಾಯ್ :** ಮಠದ ಆಸ್ತಿಯನ್ನೆಲ್ಲಾ ಮುಜರಾಯ್ ಇಲಾಖೆಗೆ ಬರೆದುಕೊಡಲಾಯಿತು (**ರೂಢಿ**).

[← ಹಿಂ. ಮುಜರಾಈ]

**ಮುಜರಾಯ್ಬಕ್ಷಿ** (ನಾ). ಮುಜರಾಯಿ ಇಲಾಖೆಯ ಅಧಿಕಾರಿ : ಒರಿಯರಸನೊಡನಾಡಿಯಿವನೆಂದುರೆ ಮಹತ್ವದ ಸಣಗೆ ಕಲ್ಪಿಸಿ ಪರಿಕಿಸದೆ ದಕ್ಷತೆಯ ಮುಜರಾಯ್ಬಕ್ಷಿ ಪದವಿತ್ತು (**ರಾವಿಸಂ. ೧-೧-೧೬**).

[ಮುಜರಾಯ್ (< ಮುಜರಾಯಿ) + ಬಕ್ಷಿ]

**ಮುಜರೆ, ಮುಜರಾ, ಮುಜುರೆ** (ನಾ). ೧. (ಗೌರವಪೂರ್ವಕವಾಗಿ) ಬಿಟ್ಟುಕೊಡುವುದು ; ಮಾಫಿ ; ವಜಾ : ದಿವಾನ್ ಪೂರ್ಣಯ್ಯನವರು ಅದುವರೆಗೆ ಸರ್ಕಾರಕ್ಕೆ ಬರಬೇಕಾಗಿದ್ದ ಕಂದಾಯ ಮುಂತಾದ ತೆರಿಗೆಯ ಬಾಕಿಯನ್ನೆಲ್ಲಾ ಮುಜರೆಯಾಗಿ ಬಿಟ್ಟುಕೊಟ್ಟು ಜಮೀನು ಮತ್ತು ಸಾಯರು ಬಾಬುಗಳಲ್ಲಿ ಹಿಂದಿನ ಮಹಾಪ್ರಭುಗಳವರ ಕಾಲದಲ್ಲಿದ್ದಂತೆಯೇ ತೆರಿಗೆಯನ್ನು ದಾಖಲ್ಮಾಡಿದರು (**ಮುಹಾಪಂ. II, ೩೧**). ೨. (ಗೌರವದಿಂದ ಅರ್ಪಿಸುವ) ನಮಸ್ಕಾರ ; ಸಲಾಂ ; ವಂದನೆ : ಭಯಭರಿತಭಕ್ತಿಯೊಡನೆ ನೆಲತನಕ ತಲೆಗಳಂ ಬಗ್ಗಿಸುತ ಮುಜರೆಯಂ . . . ನಿಲವಿಲ್ಲದೇ ಗೈದರ್ (**ಅರ್ಜಾವಿ. ೨೪-೬೦**) ; ಬಂದ ಜನರುಗಳು ಮುಜರೆಯಂ ಮಾಡಿದರು (**ಮುಹಾಪಂ. I, ೩೭**) ; ಎದ್ದು ನಿಂತು ಮುಜರೆ ಮಾಡಿ (**ಮುಂಜುಕ. ೧೩೪**); ಸಭಾಸದರೆಲ್ಲರೂ ಆತನಿಗೆ ನಜರು ಮುಜರೆಗಳನ್ನು ಒಪ್ಪಿಸಿದರು (**ರಾವಿಚ. ೭೩**). **ಮುಜರಾ :** ೧. ಲೆಖ್ಖಮಾಡುವದರಲ್ಲಿ ರತಲಿನ ಅಂಶ ಬಂದಿದ್ದರೆ, ಅದರ ಬಗ್ಗೆ ಒಂದು ರತಲ ಹಿಡಿದು ಲೆಖ್ಖವನ್ನು ಮಾಡಿ ಮುಜರಾ ಹಿಡಕೊಳ್ಳುವರು (**ಮುಂಬವ್ಯಾ. ೨೧೬**). ೨. ಮುಜರಾ— "ನಮಸ್ಕಾರ, ಸಲಾಮು" (**ಜಾನಕೋ. ೩೨**). **ಮುಜುರೆ :** ೨. ಕವಾತು ಮುಜುರೆಗಳನ್ನು ತೆಗೆದುಕೊಂಡಿಲ್ಲ (**ದೌಲತ್. ೧೨**).

[←ಅರ. ಮರಾ. ಮುಜರಾ, ಮುಜ್ರಾ; ಹಿಂ. ಮುಜರಾ]

**ಮುಜಾರಿಯಾನ್** (ನಾ). ಸಾಗುವಳಿ ಮಾಡಿದ ಜಮೀನು, – ಭೂಮಿ : ಮೊಕದ್ದಮಾನೆ ಮುಜಾರಿಯಾನೆ ತಾಲುಕೆ ಕೊಪದ ಹೋಬಳಿ ಸರಕಾರ . . . ಬರಸಿ ಕಳಿಪಿಸ್ತ ನಿರುಪ (**ಎಕ. VI, ಕೊಪ್ಪ. ೪೮-೨೨; 1811**).

[←ಅರ. ಮುಝಾರಿಅ ; ಪಾರ. ಮುಝಾರಿಆನ್ ; ಮರಾ. ಮುಜಾರಿಯಾನ್ = ವ್ಯವಸಾಯ ಮಾಡುವವನು]

**ಮುಜುಗರ** 'ಮುಜಗರ' ನೋ.

**ಮುಜುರೆ** 'ಮುಜರೆ' ನೋ.

**ಮುಜ್ಜಗ** 'ಮೂಜಗ' ನೋ.

**ಮುಜ್ಜು** 'ಮುಸ್ಕು$_2$' ನೋ.

**ಮುಜ್ಜ್ಯೋತಿ** (ನಾ). ಮೂರು ದೀಪಗಳು, – ಜ್ಯೋತಿಗಳು : ಎಸಳಾಟದ ಕಮಲಗಳೆಸಳುಗಳೊಳಗೆ ಪೊಸಳೆ ಮುತ್ತಿ ಮುಜ್ಜ್ಯೋತಿ ಉರಿವುತಿದೆ (**ಶಬಗ. ೮೪೨**). [< ಮೂರು + ಜ್ಯೋತಿ]

**ಮುಜ್ಝಟ** (ನಾ). ಮಲ್ಲಯುದ್ಧದ ಒಂದು ವರಸೆ: ಭೂರವಮಂ ಭಟಂ ನಿಮಿರ್ದು ಕುತ್ತಿದೊಡುರ್ಚಿದ ಚಂಡಶಾಸನಂ ಚಾರಣದಾಸೆಯಿಂ ನುಸುಳ್ದು ಮುಜ್ಝಟದೊಳ್ಪುಗುಟ್ಟಿಕ್ಕಿವಟ್ಟಿ ಸೈಪರಿಸೆ (**ಅಸಂಕ. ೧೧-೬೦**). [?]

**ಮುಟಗೆ** 'ಮುಟ್ಟಿಗೆ$_1$' ನೋ.

**ಮುಟ್ಟ** 'ಮುಟ್ಟೆ' ನೋ.

**ಮುಟ್ಟಗುಪ್ಪೆ** (ನಾ). ಒಂದು ಊರಿನ ಹೆಸರು : ಕಾರ್ತ್ತಿಕಬಹುಳ ಪಞ್ಚಮಿ ಬೃಹಸ್ಪತಿವಾರದಂದು ಮುಟ್ಟಗುಪ್ಪೆಯಂ ಮಹಾಜನಕ್ಕೆ ಕೊಟ್ಟು (**ಎಕ. VIII, ಸೊರಬ. ४೭೪-೧೭ ; 954**). [ಮುಟ್ಟು$_2$ + ಕುಪ್ಪೆ$_1$]

**ಮುಟ್ಟಯಿಸು,** ಮುಟ್ಟಯ್ಸು, ಮುಟ್ಟವಿಸು, ಮುಟ್ಟಿಸು, ಮುಟ್ಟೈಸು (ಕ್ರಿ). ೧. ಹತ್ತಿರ ಬರು ; ಸಮೀಪಿಸು : ಅಚ್ಚರಿವಟ್ಟಾರವಳೆಂದಜಿಪೊಡೆಂದು ಮುಟ್ಟಯಿಸಿ ಬಂದು (**ರಾಪಾಕ್ಕ. ४೦-४**) ; ಜೀಯ ಇವಳೆನ್ನಣುಗಿ, ಶ್ರೀಮತಿಯೆಂಬ ಪೆಸರ್. ಪ್ರದಾನಸಮಯಮುಮಂ ಮುಟ್ಟಯಿಸಿ ಬಂದುದು (**ಅದ್ಭುತ. ೮-೨೭**). **ಮುಟ್ಟಯ್ಸು :** ೨. ಮೇಲೆ ಬೀಳು ; ಮುತ್ತು ; ಎರಗು : ಪೊಯ್ಸು ಘನಭೇರಿಯಂ ಭಾರಿಯಂ ಕಕ್ಕೆ ಮುಟ್ಟಯ್ಸಲಿ ಚತುರ್ಬಲಂ (**ಶಬಕೃ. ४೭-೩೨**). ೩. ತಾಕು ; ತಟ್ಟು ; ತಗುಲು : ಮನಮಂ ಮುಟ್ಟಯ್ಸಿ [**ಪಾಠಾಂ.** ಟ್ಟೈಸಿ] ಮಧ್ಯಂದಿನದ ಬಿಸಿಲೆ ಬೆಳ್ದಿಂಗಳಂತಾಗೆ . . . ಯೋಗೀಂದ್ರನತಂದ್ರಂ ನಿರ್ನಿಮೇಷಂ ನಗನಿಕಟಘಟದ್ರತ್ನಕೂಟಂಬೊಲಿರ್ದಂ (**ಶಂರಾಪ್ರ. ೨-೦४**). **ಮುಟ್ಟವಿಸು :** ೧. ಉಟ್ಟ ಪೊಸ ಬೆಳುವಟ್ಟೆ ಪೊಮ್ಮಿಱ ಮುಟ್ಟವಿಸೆ ಪೊಂಬಣ್ಣವಾದುದು (**ತೊರರಾ. ೩-೮-೩೦**) ; ಬಾಳೆಯಂ ಮುಟ್ಟವಿಸಿ ನಡೆತರ್ಪ ನಕ್ರಮಂ ನಕ್ರಮಂ ಮೆಟ್ಟಿ ಬಹ ಶಕುಲಿಮಂ . . . ಬಣ್ಣಿಸಲ್ನೆರೆವರ್ಬರ್ (**ಶ್ರೀರಾಪು. ೩-೨೭**). ೨. ಗದೆಯಿಂ ಮುಟ್ಟವಿಪ ನೈರುತಿಯನಿರಿದನು ಖಳಚಿಲಾಯುಧದಿ (**ಅಂಬರಾ. ೨೨-೦೨**). **ಮುಟ್ಟಿಸು:** ४. ಸ್ಪರ್ಶ ಮಾಡು : ಸ್ಪರ್ಶಿಸು : ಕಾಯ ಭಿನ್ನವಾಯಿತ್ತೆಂದು ಮುಟ್ಟಿಸುವರು ಲಿಂಗವನು (**ಅವತಂ. ೯೦-೪೦೨**). ೫. ಸೇರುವಂತೆ ಮಾಡು ; ತಲುಪಿಸು ; ಬಿಟ್ಟು ಬೆರಸಿದೆ ಸಾಕು ಹರಿಬಕೆ ಮುಟ್ಟಿಸಿದ ಗೆಲವಾಯ್ತು (**ಕುಪ್ರಾಕ. ೦೨-೨೯**) ; ನನ್ನ ಮನೆಗೆ ಮುಟ್ಟಿಸಿಬಿಡಿ ಸ್ವಾಮಿ (**ಕಳಹು. ೬೯**) ; ಈ ಚೀಟಿ ಅವರಿಗೆ ಒಯ್ದು ಮುಟ್ಟಿಸು (**ಹೇಮಂತ. ೨೩೭**). ೬. ಕಚ್ಚು ; ಕಡಿ : ಲೋಹಿತಾಶ್ವ . . . ಹುಳ್ಳಿಯನು ತಾಹೆಡೆಯೊಳ್ ಫಣಿ ಮುಟ್ಟಿಸಿರ್ದುದಂ ನೆನೆಯಿರೆ (**ಕಜೀಕಂ. ೬೯**). ೭. ಎಡೆಮಾಡು ; ನೈವೇದ್ಯ ಮಾಡು: ಲಿಂಗವಿರಹಿತರು ಮಾಡಿದ ಬೋನವ ಲಿಂಗವ ಮುಟ್ಟಿಸುವರೆ ಯಾಪಾಕವ ಇಂತೀಯೆರಡು ಪ್ರಕಾರದಿ ನರಕಂ (**ರೀಕ್ಷಾಬೋ. ೮४-೨೭**). ೮. ಸಂದಾಯಮಾಡು; ಸಲ್ಲಿಸು : ಅವರ ಸಾಲ ಮುಟ್ಟಿಸು (**ರೂಢಿ**). **ಮುಟ್ಟೈಸು :** ೨. ಮುಟ್ಟೈಸುವ [**ಪಾಠಾಂ.** ಮುಟ್ಟೈದುವ, ಬೊಬ್ಬಿಱಿವುತ] ಸುರನಸೆಚ್ಚನಾರಾಮ (**ತೊರರಾ. ೬-೨೩-೨೩**). [ಮುಟ್ಟು$_1$ + — ಇಸು$_3$]

**ಮುಟ್ಟಯ್ಸು** 'ಮುಟ್ಟಯಿಸು' ನೋ.

**ಮುಟ್ಟಲ್,** ಮುಟ್ಟಲು, ಮುಟ್ಟಲೆ$_1$, ಮುಟ್ಟಳೆ (ನಾ). ೧. ಸಾಮೀಪ್ಯ; ಹತ್ತಿರ. ೨. ಹೊಲೆ ; ಮುಟ್ಟು ; ಸೂತಕ : "ಮುಟ್ಟವೆ, ಮಾಣಿಕಂ, ಮುಟ್ಟಲ್—ಈ ೩ ಸೂತಕಂ" (**ಶಶಾ. ೬೦-೬೦४**). **ಮುಟ್ಟಲು :** ೧. ಇದೆ ಲಗ್ನ ಮುಟ್ಟಲಾಯ್ತೆನೆ ತನ್ನ ತಂಗಿಯ ಪಡೆದು ಪಲ್ಲಕ್ಕಿಯೊಳಿಟ್ಟು ಮಪಮಪೆಯ ಮಂಟಪಕಾ ನಮಿರಾಜ ಗಾಡಿಯೊಳಿಯ್ದುತಿರ್ದನು (**ಶರಶ. ४೧-೨**). ೨. "ರಜಸಂ, ಪುಷ್ಪಂ, ಆರ್ತವಂ — ಈ ೩ ಮುಟ್ಟಲು" (**ನಾಣರಾ. ೧೧೭**) ; "ಮುಟ್ಟವೆ ಮಾಣಿಕವೆನುತುಂ ಮುಟ್ಟಲುಮೆನೆ ಸೂತಕಾಭಿಧಾನಂ" (**ಕವಿಕಂ. ೨೩೦**). **ಮುಟ್ಟಲೆ$_1$ :** ೨. 'ಮುಟ್ಟಲೆಗಾಣ್' ಪರಾ. **ಮುಟ್ಟಳೆ :** ೩. (?) : ತೊರವೆಯ ಪುರವರಾಧಿಪನಿನ ತನೂಜಾದಿಗಳ ಗಡಣದಲಿ ತಿರುಗಿದನು ಪಾಳೆಯಕೆ ಲಂಕಾಪುರಕೆ ಮುತ್ತಿಗೆಯಾದುದಾ ದಿನದಿರುಳಂಬುಖದಲಿ ಮುಟ್ಟಳೆಯ [**ಪಾಠಾಂ.** ಮಟ್ಟಳದ, ಮುಟ್ಟಳದ] ಕಟ್ಟಳೆಯ ಕಾಹಿನಲಿ (**ತೊರರಾ. ೬-೧೮-೩೯**).

[ಮುಟ್ಟು$_2$ + — ಅಲ್$_2$]

**ಮುಟ್ಟಲತಿ** (ನಾ). ಮುಟ್ಟಾದವಳು ; ರಜಸ್ವಲೆ : ಬಾಣತಿ ಬಸುರಿ ಮುಟ್ಟಲತಿಯಾದಲ್ಲಿ ಶೋಣಿತ ಶುಕ್ಲ ದುರ್ಮದವ ಕಾಣುತ ಹೊದಕುಳಿ ಗೊಳುತಿಹರದಜ್ಜಿ (ಶರಕ. ೬೩-೩೩).[<ಮುಟ್ಟಲ್ +_ತಿ1 (<–ಇತ್ತಿ)]

**ಮುಟ್ಟಲಮುರಕೆ** 'ಮುಟ್ಟಲುಮುರಿಕೆ' ನೋ.

**ಮುಟ್ಟಲವ್ವಿಯೂರ್** (ನಾ). ಒಂದು ಊರಿನ ಹೆಸರು : ಮುಟ್ಟಲವ್ವಿ ಯೂರ್ನ್ನಾಮಗ್ರಾಮಂ (ಎಸ್ಕಿಂ. ೧೯೩೬, ೩೩-೩೩ : 550).

[ ? + ಊರ್]

**ಮುಟ್ಟಲು** 'ಮುಟ್ಟಲ್' ನೋ.

**ಮುಟ್ಟಲುಗಾಣ್** 'ಮುಟ್ಟಲ್ಗಾಣ್' ನೋ.

**ಮುಟ್ಟಲುಮುರಿಕೆ**, ಮುಟ್ಟಲಮುರಕೆ, ಮುಟ್ಟಲುಮುರುಕ (ನಾ). ಮುಟ್ಟಿದರೆ ಮುರುಟಿಕೊಳ್ಳುವ ಒಂದು ಬಗೆಯ ಸಸ್ಯ ; ಮುಟ್ಟಿ ದರೆ ಮುನಿ : "ಮುಟ್ಟಲುಮುರಿಕೆ = ಖದಿರಿ, ಗಂಡಕಾರಿ, ಗಂಡಕಾಲಿ" (ಗಂಗಾಸು. ೬) . **ಮುಟ್ಟಲಮುರಕೆ :** ಮುಟ್ಟಲಮುರಕೆ ಮುಂತಾದ ಕೆಲವು ವನಸ್ಪತಿಗಳು ಕೈಹಚ್ಚಿದ ಕೂಡಲೇ ಮುಚ್ಚಿಕೊಳ್ಳುತ್ತವೆ (ಮುಂಜಯ. ೩-೩೩). **ಮುಟ್ಟಲುಮುರುಕ :** ಮುಟ್ಟಲುಮುರುಕದ ಸಸಿ ಯಂತಿದ್ದ ಇವನು ಒಂದುದೇಶದಿಂದ ಇನ್ನೊಂದುದೇಶಕ್ಕೊಯ್ಯುವದರ ಲ್ಲಿಯೇ ಕಮರಿಹೋಗಬಹುದೆಂಬ ಭೀತಿಯು ನೋಡುವವರಲ್ಲಿ ಹುಟ್ಟು ತ್ತಿತ್ತು (ಸಮಜ. ೩೬೯) ; ಪ್ರೀತಿ-ಸಮಾನುಭೂತಿಗಳಿಲ್ಲದ ಜೀವ ಒಂದು ನಾಚಿಕೆಗಿಡ ; ಮುಟ್ಟಲುಮುರುಕ (ನವ್ಯಕಾ. ೦೩).

[<ಮುಟ್ಟು1 +ಮುರಿಕೆ1 (<ಮುರಿಗೆ1)]

**ಮುಟ್ಟಲುಮುರುಕ** 'ಮುಟ್ಟಲುಮುರಿಕೆ' ನೋ.

**ಮುಟ್ಟಲೆ1** 'ಮುಟ್ಟಲ್' ನೋ.

**ಮುಟ್ಟಲೆ2** (ನಾ). ಮುಟ್ಟಾದವಳು ; ಹೊರಗಡೆಯಾದವಳು ; ರಜಸ್ವಲೆ : ಮುಟ್ಟಲೆಯಾಗಿ ಮಿಾಯದೆ ಸುಮ್ಮನಿರಬಹುದು ಸುಟ್ಟ ಭಸ್ಮವು ಪಣೆಯೊಳಿರಲು (ಬಕ್ಕರಾ. ೨-೯೦) ; ಮುಟ್ಟೆ ಕರಗಸದೆ ಸೀಳ್ವರು ಮುಟ್ಟಲೆಯಂ ತೆರಸಿ ನಡೆದ ಮಹಪಾತಕಿಯಂ (ಮುಂಕ್ತಾ. III. ಪ್ರತಸ್ಮರಣ).

[ಮುಟ್ಟಲ್ + –ಎ2]

**ಮುಟ್ಟಲೆಗಾಣ್** 'ಮುಟ್ಟಲ್ಗಾಣ್' ನೋ.

**ಮುಟ್ಟಲೆಗೊಳ್** (ಕ್ರಿ). ಮುಟ್ಟಾಗು ; ರಜಸ್ವಲೆಯಾಗು : ರಕ್ತಸ್ರುತಿಂ —ಮುಟ್ಟಲೆಗೊಂಬುದಂ ಕುರಿತು (ಜಾಹಟೀ. ೨-೦-೯೭ ಪ).

[ಮುಟ್ಟಲೆ1 (<ಮುಟ್ಟಲ್) + ಕೊಳ್1]

**ಮುಟ್ಟಲ್ಗಾಣ್**,ಮುಟ್ಟಲುಗಾಣ್, ಮುಟ್ಟಲೆಗಾಣ್(ಕ್ರಿ).ಮುಟ್ಟಾಗು: ರಜಸ್ವಲೆಯಾಗು : ರಜಸ್ವಲಾಭಿಗಾಮಿ=ಮುಟ್ಟಲ್ಗಂಡಳಂ ಪೋಪಲು ಗಂಡಳಂ (ಶೀತಿವಾ. ೨೩-೯೭). **ಮುಟ್ಟಲುಗಾಣ್ :** ಪುಟ್ಟದು ಜಗುಳ್ದೊಡೆ ಕೈಗಂ ನೆಟ್ಟನೆ ಬಪ್ಪಂತೆ ಬಂದೊಡಾತನೆ ಮಿಷ್ಟಂ ಇಟ್ಟೆಡೆಯ ವಸರಮಾದೊಡೆ ಮುಟ್ಟಿಟ್ಟನ್ನಲುಗಂಡಂತೆ ತೊಲಗುವಾತನೆ ಕಷ್ಟಂ (ಶೀತಿಸಾ. ೨೭೧). **ಮುಟ್ಟಲೆಗಾಣ್ :** "ಪುಷ್ಪವತಿ ಮುಟ್ಟಲೆಗಂಡ ಸ್ತ್ರೀ" (ನಾತಿಂ. ೬); ಮುಟ್ಟಲೆಗಂಡ ಸ್ತ್ರೀಯಂತಿಟ್ಟುಮಿರಲ್ಕಿಲ್ಲ ನಾಲ್ಕುದಿವಸಂ (ಧರ್ಮಾಮೃ. ೦೯-೦೩೬) ; ಮುಟ್ಟಲೆಗಂಡು ಮಕ್ಕಳನು ಹಡೆಯದಿರ್ದ ಹುಟ್ಟುಬಂಜೆ ಯರೆಂದೆನುತ . . . ಸಗುತಿಹರು (ಗೋಹುಟೀ. ೦-೦೨೯).

[ಮುಟ್ಟಲ್ + ಕಾಣ್]

**ಮುಟ್ಟಮಿಸು** 'ಮುಟ್ಟಯಿಸು' ನೋ.

**ಮುಟ್ಟವೆ** (ನಾ). ಮುಟ್ಟಾಗುವುದು ; ಹೊರಗಾಗುವುದು : "ಮುಟ್ಟವೆ, ಮಾಣಿಕಂ, ಮುಟ್ಟಲ್ – ಈ ೩ ಸೂತಕಂ" (ಶಶಾ. ೭೦-೬೦೯); ಮುಟ್ಟವೆ ಯುನಳಿದ ಸತಿಯಂತೆ ರಂಜಿಸಬೇಕು (ಲಿಂಗಪು. ೨೨-೨).

[< ಮುಟ್ಟು2 + –ವೆ]

**ಮುಟ್ಟವೆಗಾಣ್** (ಕ್ರಿ). = ಮುಟ್ಟಲ್ಗಾಣ್ : "ಅವೀ. ಉದಕ್ಯಾ. ರಜಸ್ವಲಾ. ಆತ್ರೇಯಿಕಾ, ಪುಷ್ಪವತೀ – ಈ ೫ ಮುಟ್ಟವೆಗಂಡವಳ್. ಕನ್ಯಕೆಯಾಗಿ ಮುಟ್ಟವೆಗಂಡವಳ್ ತಾಕಾಯೆಂಬುದು" (ಶಬ್ದಾಯು. ೬೦-೩೩೪).

[ಮುಟ್ಟವೆ + ಕಾಣ್]

**ಮುಟ್ಟಸ** 'ಮುಷ್ಟ2' ನೋ.

**ಮುಟ್ಟಸು** 'ಮುಷ್ಟ2' ನೋ.

**ಮುಟ್ಟಹಾಳ** 'ಮುಟ್ಟಾಳ' ನೋ.

**ಮುಟ್ಟಳೆ** 'ಮುಟ್ಟಲ್' ನೋ.

**ಮುಟ್ಟಾಟ** (ನಾ). ಪರಸ್ಪರ ಸ್ಪರ್ಶಿಸುವುದು, – ಮುಟ್ಟುವುದು : ಕಟ್ಟಾಸೆ ಅರಮನೆಗೆ ಮೆಟ್ಟಾಸೆ ಕಾಲಿಂಗೆ ಪಟ್ಟಣದಾಸೆ ಹರದಂಗೆ ಹಾದರಕೆ ಮುಟ್ಟಾಟದಾಸೆ (ಸರ್ವಜ್ಞ. ೦೬೬೯) ; ಅಡಕ – ನಗೆ ಕುಲುಕುಲಿಸಿ ಕಣ್ಣಮುಚ್ಚಣೆಕೆಯಲಿ ಮುಟ್ಟಾಟ ಹುಡುಕಾಟವಾಡುತಿಹುದು (ಗಂಗಾತ. ೬೦-೦). [ಮುಟ್ಟು2 + ಆಟ]

**ಮುಟ್ಟಾಳ**, ಮುಟ್ಟಹಾಳ, ಮುಟ್ಟುಹಾಳ, ಮುಟ್ಠಾಳ, ಮುಟ್ಟಾಳ, ಮುಠ್ಠಾಳ (ನಾ). ಮುಟ್ಟಿದುದನ್ನು ಹಾಳುಮಾಡುವವನು, ಬುದ್ಧಿಗೇಡಿ ಎಂಬರ್ಥದಲ್ಲಿ ಬಳಸುವ ಒಂದು ಬೈಗುಳು : ಗುರುಗಳು ಇವರು ಮುಟ್ಟಾಳರೆಂದು ನಿಶ್ಚಯಿಸಿ . . . ಹೊರಟುಹೋದರು (ಪಗಿಗ. ೦). **ಮುಟ್ಟಹಾಳ :** ನಮ್ಮ ಅಧಿಕಾರಿಗಳೆಲ್ಲಾ ಮುಟ್ಟಹಾಳರು, ಅವರಿಗೆ ಉಪಾಯವಾಗಿ ಕೆಲಸ ಮಾಡುವುದಕ್ಕೆ ಬಾರದು (ಕೀರಿಯು. ೩೯). **ಮುಟ್ಟುಹಾಳ :** "ಪ್ರತಿಷ್ಠೆ ತೋರಿಸುವ ಕೀಳಧಿಕಾರಿ, ಮುಟ್ಟುಹಾಳ" (Bumble. ೨೦೪೩). **ಮುಟ್ಠಾಳ :** ಛತ್ರದ ಜನರು ಮುಟ್ಠಾಳರಾಗಿದ್ದಾರೆ (ಮುಕ್ಕಮ. ೦೩೭) ; ಮೂರ್ಖ – ಮಂಕ – ಮಡೆಯ – ಮುಟ್ಠಾಳ (ಕೀವಾಕ್ಯ. ೩); ಮುಟ್ಠಾಳ, ತಿಳಿಗೇಡಿ, ದುರ್ವಿದಗ್ಧ ! ಮುಚ್ಚು ಬಾಯಿ (ರಾಜಮತ. ೭೩). **ಮುಟ್ಟಾಳ :** ನೆಕ್ಲುದೋವ್ ವಿಧಿಯಿಲ್ಲದೆ 'ಮುಟ್ಟಾಳ' ಎಂದು ಗೊಣಗಿದನು (ಪುನರು. ೨೩೩). **ಮುಠ್ಠಾಳ :** ನಮ್ಮ ವರ್ಗದಲ್ಲಿ ಈ ಮುಠ್ಠಾಳರನ್ನು ಬಿಟ್ಟರೆ ಇಂಥ ಹೇಸಿ ಕೆಲಸವನ್ನು ಮಾಡುವವರು ಇರುತ್ತಾರೇನವರೂ ಯಾರು ? (ರಂಗರೀ. ೯೦) ; ಏನು ಮುಠ್ಠಾಳನೊ ನೀನು ಹರಿ ! (ಪರಿಶಾ. II. ೬೬೭) ; ಲೋ ಮುಠ್ಠಾಳ, ಇದೇನೋ ಕಾಳಭೈರವನ ನೃತ್ಯ ! (ಕಲಾಪಾ. ೨).

[ದೇ.॥ ತಮಿ. ಮುಟ್ಟಾಳ್ ; ಮಲ. ಮುಟ್ಟಾಳ್, ಮುಟ್ಟಾಳನ್ ; ತುಳು. ಮುಟ್ಟಾಳ್]

**ಮುಟ್ಟಾಳು** (ನಾ). ಮುಟ್ಟಬಹುದಾದ (ಜಾತಿಗೆ ಸೇರಿದ) ಮನುಷ್ಯ. –ಆಳು ; ಅಸ್ಪೃಶ್ಯಜಾತಿಗೆ ಸೇರದವನು : ಪುಟ್ಟಣ್ಣ, ಸೇರೆಗಾರರು, ನಿಂಗ ಮೊದಲಾದ ಮುಟ್ಟಾಳುಗಳು (ಮುಟ್ಟಬಹುದಾದ ಜಾತಿಯವರು ಎಂದರ್ಥ . . . ) ಆ ಪದಾರ್ಥಗಳನ್ನೆಲ್ಲ ಹೇಳಿದಂತೆ ಎರಡು ಭಾಗವಾಗಿ ಬೇರೆ ಬೇರೆ ಮಾಡತೊಡಗಿದರು (ಕಾನೂರು. ೩೯೦); ಅಯ್ಯಾ, ಮುಟ್ಟಿದ್ದಕ್ಕೆ ಬೇಸರವಾಯಿತೇ ? ನಾನು ಗೌಡ, "ಮುಟ್ಟಾಳು" (ಜಗುಳ. ೦೦೦).

[ಮುಟ್ಟು1 + ಆಳು3 (< ಆಳ್3)]

**ಮುಟ್ಟಾಳೆ** (ನಾ). (ಕರಾ) ಅಡಕೆಪಟ್ಟೆಯಿಂದ ಮಾಡಿದ ಟೋಪಿ ; ಪಟ್ಟೆಟೋಪಿ : ವಾಸುದೇವಭಟ್ಟರು ತಲೆಗೆ ಮುಟ್ಟಾಳೆಯಿಟ್ಟು ಕೈಯಲ್ಲಿ ಕತ್ತಿ ಹಿಡಿದು ತೋಟಕ್ಕೆ ಹೊರಡಲನುವಾಗಿದ್ದರು (ಶ್ರಾಂತಿಸು. ೭೦) ; ಕಣ್ಣಿ ಮುಟ್ಟಾಳೆ ತಲೆಗಿಟ್ಟು ಬಳಿತೊಟ್ಟು ಹೊಂಗದಿರ ಕಳಕೆ ನಡೆತಂದ (ಜಾನಗೀ. ೨೬).

[← ತುಳು. ಮುಟ್ಟಲೆ, ಮುಟ್ಟಳೆ]

**ಮುಟ್ಟಿ1** (ನಾ). ಮುಚ್ಚಿದ ಅಂಗೈ ; ಮುಷ್ಟಿ : "ಮುಟ್ಟಿ – ಮುಷ್ಟಿ – ಬಲಿದ ಕೈಹಿಡಿ" (ಶಬ್ದಕೋ. ೩೭) ; ವೀರನಾದೊಡೆ ಕೈದು ಮುಟ್ಟಿಗಳ ಘೋರಪ್ರಹಾರವಂ ತೋಜಿಸು (ಕೃಖಾ. ೪-೩೩). [< ಸಂ. ಮುಷ್ಟಿ]

**ಮುಟ್ಟಿ$_2$** 'ಮುಟ್ಟಿಗೆ$_1$' ನೋ.

**ಮುಟ್ಟಿಗೆ$_1$**, ಮುಟಗೆ, ಮುಟ್ಟಿ$_2$ (ನಾ). ೧. = ಮುಟ್ಟಿ$_1$ : ಗಾಡಿಗ ಡಿಂಬು ಗಂಗೆ ಚಿಕ್ಕು ಮುಟ್ಟಿಗೆ ಹಸುರಂಬಲಿ ಮುಟ್ಟಿಗೆ ಹುರಿಬುತ್ತಿಯು ಬೇಡಿ . . . ಈಡಾಡಿದ ಕೂಳಂಬಲಿಯುನಾಯ್ದು ಕುಟುಕುವ ಪೇಸಿದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ (ಬಸವ. ೫೫೬) ; ಷಕಾರಕ್ಕೆ ಟತ್ವಂ . . . ಮುಷ್ಟಿಕಾ – ಮುಟ್ಟಿಗೆ (ಶಮದ. ೨೬೩ ಕ್ರಿಯೆ) ; ಗಟ್ಟಿಕಾಳುಗಳನ್ನೆ ಮುಟ್ಟಿಗೆಯಲ್ಲಿ ಹಿಡಿಯಬೇಕೆಂದೇಕೆ ಚಪಲ (ನೆಲಮು. ೨೭-೭). ೨. ಯಾವುದಾದರೂ ವಸ್ತುವೊಂದನ್ನು ಚಿವುಟಿ ಹಿಡಿಯುವ ಇಕ್ಕುಳದಂತಹ ಒಂದು ಬಗೆಯ ಸಾಧನ : "ಮುಟ್ಟಿಗೆ (ಮುಟ್ಟಿ) – ಮುಷ್ಟಿಕಾ = ಒಂದು ಉಪಕರಣ" (ತದ್ಭಕೋ. ೩೭) ; ಏಟನೆಯ ನರಕದೊಳ್ ಮೂವತ್ತುಮೂಱುಸಾಗರೋಪಮಾಯುಷ್ಯಮನೊಡೆಯರ್ ನಾರಕರಾಗಿ ಪುಟ್ಟಿ ಛೇದನಭೇದನಪೂರಣಚೂರಣಪೀಡನಬಂಧನಂಗಳುಮಂ ಮುಟ್ಟಿಗೆಯೊಳಿಟ್ಟು ತೆಗಪುವುದುಂ ಕೋಂತಂಗಳಿಂ ಮುಟ್ಟಿಗಳಿಂದಂ ಕರುಳ್ಗಳಂ ಸೋರೆಕುತ್ತುವುದುಂ . . . ಪೋಟ್ಟುದುಮೆಂದಿವು ಮೊದಲಾಗೊಡೆಯ ದುಃಖಂಗಳಂ . . . ಅನುಭವಿಸುವರ್ (ವಡ್ಡಾರಾ. ೪೭-೨೭) ; "ಮುಟ್ಟಿಗೆಯೊಳಿಟ್ಟು-ಕೊಡತಿಗಳಿಂದ ಹೊಡೆದು" (ವಡ್ಡಾರಾ. ಟಿಪ್ಪಣಿ). ೩. ದಿಕ್ಕುಗಳಿಗೆ ಎಸೆದು ಚೆಲ್ಲುವ ಬಲಿ : ಜಗಕ್ಕಿದು ಮಂಗಳವೆಂದು ರೌದ್ರದೇವತೆ ಪಿಡಿದಿಕ್ಕುವಾಮಿಷದ ಮುಟ್ಟಿಗೆಯೆಂಬಿನೆಗಂ ಸಿಡಿಲ್ದು ದಿಗ್ವಿತತಿಗೆ ಸೂಸೆ ಮುನ್ನಮೆರೆಯಾದ ರುರುಪ್ರಜಪಾಗಳಾಸ್ಯದಿಂ ಪ್ರತಿಘದೊಳೆತ್ತಿ ಬೀಸಿಮುದದೊಂದು ಮುದದ್ವಿರದಂ ಮಹಾಹಿಯುಂ (ಜಗವಿ. ೦೭-೭) ; ಧರೆಯೊಳತಿಬಲನೆನಿಪ ಕೀಚಕನ ಸಾನುಜರ ಮುಱಿದು ಮುಟ್ಟಿಗೆಯ ಮಾಡಿದೆಲ ಭಾಪುರೆ (ತೊರಂತ. ೩-೭೫-೨). ೪. (?) : ಕಟ್ಟಿದರು ರಕ್ಷೆಗಳ ವಜ್ರದ ಮುಟ್ಟಿಗೆಯ ತಾಯ್ತಿಗಳ ಮಣಿಗಳ ನೆಟ್ಟ ಕಾಲಂದುಗೆಯ ಖಿಡೆಯದೊಳೆಸೆವ ಗಜಪಾಳಿ (ಅಂಬಿಕಾ. ೨೬-೦೭). **ಮುಟಗೆ :** ೫. ಒಂದು ಬಗೆಯ ಆಯುಧ (?) : ತೀಮುಯ್ಯುಸೆಟಿ ಮಾಡಿ ಧರ್ಮ ಭೇರಿ ಜೇಗಟೆ ಕಂಚು ಮುಟಗೆ ಮಾಡಿದು ಮುಗುವಿನ ಪೋಗೆ ತ್ರಸೆಯಲಿ (ಕಾಇಶ. IX-ii, ೪೭೦-೪೭ ; 1482). **ಮುಟ್ಟಿ$_2$ :** ೨. "ಮುಟ್ಟಿಗೆ (ಮುಟ್ಟಿ) – ಮುಷ್ಟಿಕಾ = ಒಂದು ಉಪಕರಣ" (ತದ್ಭಕೋ. ೩೭). ೬. ನೆಲವನ್ನು ಕುಟ್ಟಿ ಸಮಮಾಡುವುದಕ್ಕಾಗಿ ಬಳಸುವ ಒಂದು ಬಗೆಯ ಮರದ ಸಾಧನ ; ದಮ್ಮಸು : 'ಕೈಮುಟ್ಟಿ' ಪರಾ.

[ < ಸಂ. ಮುಷ್ಟಿಕ./ತಮಿ. ಮುಟ್ಟಿಕೈ = ಸಣ್ಣ ಉಳಿ ; ಮಲ. ಮುಟ್ಟಿ = ಸಣ್ಣಉಳಿ]

**ಮುಟ್ಟಿಗೆ$_2$**, ಮುಟ್ಟುಗೆ (ನಾ). ೧. ಸೌದೆ ; ಕಟ್ಟಿಗೆ : ಅನಲಂಗೆ ಸಮಿಧೆ ದರ್ಭೆಯ ತುಪ್ಪಕೊಡಗಳಂ ಚೆನ್ನಾಗಿ ಮುಟ್ಟಿಗೆಯ ಹೊರೆಗಳಂ ವಿಪುಳತರ ಯಾಗಕಂ ಕೂಡಿಸಿದರು (ತುರಂಗ. ೭-೨೯). ೨. ಹೆಣವನ್ನು ಸುಡಲು ಒಟ್ಟಿದ ಸೌದೆಯ ರಾಶಿ ; ಚಿತೆ : ಮುಟ್ಟಿಗೆಯ ಮೇಲಿರ್ದ ಸುತನ ಹಿಂಗಾಲ್ವಿಡಿದು ಸೆಳೆದು ಬಿಸುಟಂ ಭೂಪನು (ಹಕಾ. ೦೨-೩೭). **ಮುಟ್ಟುಗೆ:** ೨. ಮುಟ್ಟುಗೆಯ ಪೆಣನನೊರ್ವಂ ಜೆಟ್ಟಿಂಗಂ ನೆಗಪೆ (ಮಹಾವೀ. ೪-೩೨).

[ ? ]

**ಮುಟ್ಟಿಗೆ$_3$**, ಮುಷ್ಟಿಗೆ (ನಾ). ಒಂದು ಬಗೆಯ ಸಸ್ಯ ; ದೊಡ್ಡಪತ್ರೆ : ತೆಗೆಟಿ ಕುಡಿಯಿಸುಗೆ ಶಿವೆ ಕಳವಿಗೆ ಬಾಳಂ ಕಕ್ಕೆ ಮುಸ್ತೆ ಪರ್ಪಟಕಂ ಮುಟ್ಟಿಗೆಯೆಂಬಿವಿನಿತುಮಂ ಪೈತ್ತಿಗಜ್ವರಂ . . . ಅಟುಗಾ (ಲೋಕೋಪ. ೯-೦೬). **ಮುಷ್ಟಿಗೆ :** ಸಿರಿಕಂಡಂ ಮುಷ್ಟಿಗೆ . . . ಕೊತ್ತುಂಬರಿಯೆಂಬಿವನೆಂಟೊಂದಾಗಿರೆ ಮಱುಗಿಸಿ ಕುಡಿಯೆ ಪೈತಿಕಜ್ವರಹರಣಂ (ಲೋಕೋಪ. ೯-೦೭) ; ಮಧುಕಂ ಮುಷ್ಟಿ[ಶಾಕಾಂ. ದ್ವಿ]ಗೆ ಸಕ್ಕರೆ ಮಧುಜೀವನಿ ಪದ್ಮಕಂಗಳಂ ತಳ್ತು (ಅಶ್ವಶಾ. ೭-೬೩). [ ? ]

**ಮುಟ್ಟಲಿ** (ನಾ). ಮುಟ್ಟಿದುದನ್ನು ಇಲ್ಲವಾಗಿ ಮಾಡುವವನು : ನಿಮ್ಮಂಥಾ ಮುಟ್ಟಲಿಗಳಿಂದಲೇ ನಮ್ಮ ದೇಶವು ಹಾಳಾಯಿತು (ಮುಸುಗ. ೦೪೭). [ ಮುಟ್ಟು$_1$ + – ಇಲಿ$_3$ ]

**ಮುಟ್ಟವಿಡಿ** (ಕ್ರಿ). ಮುಷ್ಟಿಯನ್ನು ಭದ್ರವಾಗಿ ಮುಚ್ಚು — ಬಿಗಿಗೊಳಿಸು : ಮುಟ್ಟವಿಡಿದಂದು ಗುರ್ದುತೆ ಕಷ್ಟರ್ ಸಕಲಾಯುಧಂಗಳಿಂ ಬಂಧಿಸುತಂ ದುಷ್ಟಪೂಜೆಗಳನೆಸಗುತ್ತೆ ಶಿಷ್ಟತೆಯಂ ಬಿಟ್ಟು ಕಟ್ಟು ನುಡಿವರ್ ತಡೆವರ್ (ಜಾಂಬಸ. ೪-೦೫-೨೬). [ಮುಟ್ಟ$_1$ + ಹಿಡಿ$_1$ (<ಪಿಡಿ$_1$)]

**ಮುಟ್ಟಿಸು** 'ಮುಟ್ಟಯಿಸು' ನೋ.

**ಮುಟ್ಟು$_1$** (ಕ್ರಿ). ೧. ಸೋಕು ; ಸ್ಪರ್ಶಿಸು ; ತಾಕು : "ಮುಟ್ಟು – ಸ್ಪರ್ಶನೇ, ಉಪಕರಣೇ ಚ" (ಶಮದ) ; ಉರಿ ಮುಟ್ಟಿದರಳೆಯುಂತಂ ಬಿರಮುರಿದತ್ತು (ಶಂಕರಾ. ೧೦-೩೭) ; ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನ ಕ್ರಮಂ ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ . . . ಕವಿಗಳ್ ಕೃತಿಬಂಧದೊಳಲ್ತೆ ಕಟ್ಟದರ್ ಮುಟ್ಟದರ್ (ರಾಜಶ. ೦-೧೦) ; ತೊಲಗು ತೊತ್ತಿನ ಮಗಳೆ ಮುಟ್ಟದಿರೆಲೆಲ್ವು ವಿಬುಧರ (ತೊರವೆ. ೧-೦೦-೦೩) ; ಮುಟ್ಟಿ ಭಾಷೆಯ ಕೊಟ್ಟು ಮೋಸವನೆ ಮಾಡುವರು (ಪುರಂದ. ೦-೨೬-೨). ೨. ಸೇರು ; ತಲುಪು : ಜಾಣನಂತು ಮೆಚ್ಚಿದ ತೆಱದಾಸವಟ್ಟಲಸದೆತ್ತಿದವೋಲ್ ದೊರೆವೆತ್ತು ದೂಱದಾಱದ ದನಿ ಮುಟ್ಟಿಮೇನಕೆ ಸರಸ್ವತಿ ಬಾಯ್ಬಿಱದಂತೆ ಪಾಡಿದಳ್ (ಶಂಕರಾ. ೭-೮೬) ; ಇಳೆಯುಂ ಸಾಸಿರಯೋಜನಂಬರೆಗಮೂನುರ್ಚಿರ್ದನಿರ್ದಂ ಮಹೀತಳಮಧ್ಯಸ್ಥನೆನಂತುಮಲ್ಲದೆಯುಮಿಂದ್ರಾವಾಸಮಂ ಮುಟ್ಟಿದಂ (ಸುಕುಮಾ. ೧-೭೫) ; ಮೊದಲೆಗಳಿವು ಮುಟ್ಟುವಡೆ ಮುನಿಸಾದಪೊಳ್ಳಿತು (ಕುಮಾರವ್ಯಾ. ೦೪-೨೭) ; ನೇಮಿಕೆಯ ಪತ್ರವು ಬಂದು ಮುಟ್ಟಿತು (ಹೇಮಂತ. ೦೬೦). ೩. ಹತ್ತಿರಬರು ; ಸಮೀಪಿಸು : ಸಿಡಿಲ್ವೊಡೆದವೊಲಟ್ಟಿ ಮುಟ್ಟಿ ಕಡಿದಿಕ್ಕಿದುದಾದೆಡರಂ (ಶಂಕರಾ. ೦-೪೯) ; ನೆಗಬ್ದಿದ್ಯಚ್ಛವಮೂರ್ತಿಗೀಯೆ ಸತಿಯಂ ತದ್ಬಾಂಧವಶ್ರೇಣಿ ಬಂದು ಗಡಂ ತಾಂ ಬಿಡದಟ್ಟಿ ಮುಟ್ಟಿ ಕವಿಯಲ್ (ಉದ್ಭಟ. ೦೨-೦೪). ೪. ಸೇವಿಸು ; ಸ್ವೀಕರಿಸು : ತನಗೆಂದಿಟ್ಟ ಪಾಲನೀ ಶಿಶು ಮುಂದೆ ಮುಟ್ಟನೆಂದುಮ್ಮಳಿಸಿ (ಸಿದ್ಧರಾ. ೦-೫೦) ; ಅವನು ಒಂದು ತುತ್ತು ಆಹಾರವನ್ನು ಮುಟ್ಟಲಿಲ್ಲ (ರಾಪಿಜ. ೫). ೫. ದೇಹ ಸಂಬಂಧವನ್ನು ಹೊಂದು ; ಕೂಡು : ಮುನ್ನ ಮುಟ್ಟಿತ್ತೆ ಮುಟ್ಟಿತ್ತು ಇನ್ನು ಮುಟ್ಟಿದೆನಾದರೆ ನಿಮ್ಮ ರಾಣಿವಾಸದಾಣೆ (ಬಸವ. ೪೪೭) ; ನೀಂ ಮುಟ್ಟದ ನಂದನೆಯಂ ಬಹುಮತಿಸುತೆ ನಿನ್ನನೆ ಪಾತ್ರೀಕರಿಸಿ ಬಿಟ್ಟ ಮುನಿಯ ವಿಮಾನ್ಯಂ (ಶಾಕುಂತ. ೩೬-೦೨೦). ೬. ಸಲ್ಲು ; ಸಂದಾಯವಾಗು : ಇದು ನನ್ನ ಪಾಲು, ನನಗೆ ಮುಟ್ಟಿತು (ಮುಂಬಯು. ೬. ೪-೦೦). 'ಮುಟ್ಟುವಳಿ' ಪರಾ. ೭. ಅನುಭವಿಸು : ಪುಟ್ಟದ ಜಾತಿ ಮೆಟ್ಟದ ನೆಲಂ ನೆಱೆ ಕೊಳ್ಳದ ಕಾಲ ಮೊರ್ಮೆಯುಂ ಮುಟ್ಟದ ಭಾವವೆಂದದ ಭವಂ ಪೆಱತಿಲ್ಲನೆ (ಶಬ್ದಶಾ. II. ೬೦೭). ೮. ಪಡೆ ; ಹೊಂದು : ಕೊಟ್ಟಿದ್ದು ಮುನ್ನಿಲ್ಲ ಮುಟ್ಟಿದಱವುಗಳಿಲ್ಲ ಕೆಟ್ಟ ವಿಷಯಗಳ ಬಿಡಲಿಲ್ಲ ಸ್ವರ್ಗದ ಬಟ್ಟೆ ಬೇಱೆ (ಸರ್ವಜ್ಞ. ೬೯೩). ೯. ಕಚ್ಚು ; ಕಡಿ : ಶಾಪದೆ ಪಾವು ಮುಟ್ಟದೊನ್ (ಎಕ. II, ೨೦-೦ ; 700) ; ಅಳುರದು ಕಿರ್ಚು ಮುಟ್ಟದು ವಿಷಾಹಿ ಮಹಾಸತಿಯಿರ್ದ ಮಂಡಲಂ ಬೆಳೆವುದು (ಅಜಿತ. ೦-೭೫). ೧೦. ತಿನ್ನು ; ಮೇಯು : ಆಡು ಮುಟ್ಟದ ಗಿಡುವಿಲ್ಲ (ಗಾದೆಕ್ಕು. ೩-೪೨).

**ಮುಟ್ಟಿದರೆಮುನಿ**=ಮುಟ್ಟಿದ ತಕ್ಷಣ ಎಲೆಗಳನ್ನು ಮುದುಡಿಕೊಳ್ಳುವ ಒಂದು ಬಗೆಯ ಸಸ್ಯ : "ಅಂಬಾಲಿಕ—ಮುಟ್ಟಿದರೆ ಮುನಿ" (ಅಕಾವಿ. ೦-೯) ; ಮುಟ್ಟಿದರೆ ಮುನಿ . . . ಲಜ್ಜಾವತಿ (ಪ್ರಶಿಗ. ೫೪-೦೦೭೯). **ಮುಟ್ಟಿದರೆ ಮುರುಟ**=ಮುಟ್ಟಿದರೆ ಮುನಿ : ಮುಟ್ಟಿದರೆ

ಮುರುಟಿಯುನ್ನು ಹಿಡಿಹಿಡಿಕೆಯನ್ನೂ ಅಂಬಿಲದಲ್ಲಿ ಅರೆದು ಪೂಸಲು ಅಂಡವಾತ ಮಾಣ್ಗುಂ (ವೈಶ್ಯಾ. ೬೦).

[ದೇ.॥ ಮಲ. ತುಳು. ತೆಲು. ಮುಟ್ಟು : ಕೋತ. ತೊದ. ಮುಟ್]

**ಮುಟ್ಟು₂** (ನಾ). ೧. ಸೋಕುವುದು; ಸ್ಪರ್ಶ : ಹಸುವಿಂಗೆ ಸಂಜ್ಞೆ ಎತ್ತಿಂಗೆ ಮುಟ್ಟು ಕಜುವಿಂಗೆ ಲಲ್ಲೆ (ತುಜಾಗಾ. ೪. ೩೩೬-೭). ೨. ಹತ್ತಿರ : ಸಮೀಪ : 'ಮುಟ್ಟೊಳಿಗ' ಪರಾ. ೩. ಅಶುದ್ಧತೆ ; ಮೈಲಿಗೆ : 'ಮುಟ್ಟುಪಡು' ಪರಾ. ೪. ಹೆಂಗಸಿನ ರಜಸ್ಸು : "ಮುಟ್ಟುವೆಯೆನೆ ಮಾಣಿಕವೆನೆ ಮುಟ್ಟನೆ ಪೊಲೆ ಸೂತಕಾಭಿಧಾನಂ" (ಕಕುಂ. ೩೦) ; ಮುಟ್ಟಿನ ಹೊಲೆಯೊಳಗೆ ಹುಟ್ಟಿಹನು ಶಿವಯೋಗಿ (ಸರ್ವಜ್ಞ. ೯೮೩) ; ಮುಟ್ಟಿನ ದೋಷದಿಂದ ಮಗುವಿಗೆ ಈರಲಾಗಿದೆ (ರೂಢಿ). ೫. ಸಾಮಾನು ; ಉಪಕರಣ ; ಸಾಧನ : "ಪರಿಸರದೊಳುಪಕರಣದೊಳ್ ಮುಟ್ಟು" (ಶಬ್ದಮಂ. ೮೯) ; ತೊಟ್ಟನೆ ಕೊಳೆ ಚತುರಂಗದ ಮುಟ್ಟಂ ಕೆದಱಿದವೊಲ್ (ಶಾಂತಿಪು. ೩-೩೪) ; ಕನ್ನದ ಮುಟ್ಟುಂಗಳಂ ತಂದಂ (ಶಂಕರಂ. ೮. ೧೭೦-೧೭) ; ಸುತ್ತಿಗೆಯು ಕೈವಾರದ ಕಂಬಚ್ಚಿನ ಕೊಱಪೆಯುಡಗಲ್ಲ ಅರಸ ಮುಟ್ಟೊಟ್ಟಯಿಸಿರೆ (ರಾಜಶೇಖ. ೧೦೩-೨೧). ೬. ಮದ್ದಳೆಯ ಮರದ ಚೌಕಟ್ಟು : (೬). ೭. ಚರ್ಮವಾದ್ಯವನ್ನು ಬಾರಿಸಲು ಬಳಸುವ ಕೋಲು : "ಆವುಜದ ಮುಟ್ಟಿನೊಳ್ ಲಾಳವಿಂಡಿಗೆಂಬೊಳಂ ಬಲ್ಲರಿಂದಗುಱಾಯುಕ್ಕುಂ" (ಸಂಜೀವ. ೧೩) ; ಅಗ್ಗಟಿಕೆ— ಲಾಳವಿಂಡಿಗೆ, ಆವುಜದ ಮುಟ್ಟು (ಶವುದ. ೫೦. ೧). ೮. ಅಡ್ಡಿ ; ಎಡರು : ಪ್ರತಿಬಂಧ : 'ಮುಟ್ಟುಗೋಳು'. 'ಮುಟ್ಟಿಡೆ' ಪರಾ. ೯. ಕಕ್ಕಾಬಿಕ್ಕಿ ; ದಿಗ್ಭ್ರಮೆ : (೬). ೧೦. ಉಪಯೋಗ ; ಪ್ರಯೋಜನ : ಆ ಗಿರೀಂದ್ರ ಕಂದರದೊಳ್ ತಪಂಗೆಯ್ವ ತಪೋಧನರ ತಪಂಗಳೆಲ್ಲಮಾತನ ತಪೋಮಯಶಿಖಿಗಳಿಂ ಬೆಂದು ಬೆಂದ ನುಲಿಯಂತೇ ತರ್ಕಂ ಮುಟ್ಟಿಲ್ಲದೆ ಮುಟ್ಟುಗಿಡೆ (ಶಂಕಶಾ. ೭-೬೦ ವ) : ಪರಮ ದಯೆಗೆಯ್ ನಿನ್ನೊಳ್ ತೊಟ್ಟೊಂದು ಭಕ್ತಿಯನಾದರಂಬೆರಸು ಪೆಱತೊಂದೇ ಮುಟ್ಟಾವೊಲ್ಲೆಮಂತದನೆಂಬ ತತ್ಪರಸಮುದಯಂ ಚೇತೋವಾಕ್ಕಾಯ ಶುದ್ಧಿಗಳೊಳ್ ತಮೋಹರನನೆಱೆದರ್ (ಶಾಂತಿಪು. ೧೦-೨೦). 'ಮುಟ್ಟುಗೆಡು' ಪರಾ. ೧೧. ಸಮಾನ ; ಸಾಟಿ : ಮಾನಿಯುಂ . . . ಮನಸ್ವಿಯುಮಪ್ಪಂತಾ ಮಾನಸರನಾರುಮಂ ಮನಕೇಸುಂ ಮುಟ್ಟಿಲ್ಲದಂತು ಬಗೆವುದು ದೋಷಂ (ಶಬ್ದಾ. ೩-೦೬೧) ; ಜಯವರ್ಮಂ ಕೊಟ್ಟಪೆನೆಂದಿರ್ದೊಡಾತನಚಿರಾಯುಷ್ಯಂ ಮುಟ್ಟಿ ಟ್ಟ ಲ್ಲನೆಂದು ಮಾಣಿಸಿ (ಚಂದ್ರಪ್ರ. ೩-೦೦೨).

**ಮುಟ್ಟಾಗು** = ಹೊರಗಡೆಯಾಗು : ರಜಸ್ವಲೆಯಾಗು : ಮುಟ್ಟಾಗಿ ಇದ್ದೇನೆ ಮನೆಯೊಳಗ್ಯಾರಿಲ್ಲ ನಿಷ್ಠುರ ಮಾಡದೆ ಹೋಗೋದಾಸಯ್ಯ (ಪುರಂದ. ೦-೦೩೦-೩) ; ಶಾರದೆ . . . ಮುಟ್ಟಾದಾಗ ಹೀಗೆ ತವರು ಮನೆಗೆ ಬಂದುಬಿಟ್ಟದ್ದು ಇದುವೆ ಮೊದಲ ಸಾರೆಯಲ್ಲ (ಮೂಕಜ್ಜಿ. ೩೬). ಮುಟ್ಟುತಟ್ಟು=ಮುಟ್ಟುಚಟ್ಟು ೧ : ಬ್ರಾಹ್ಮಣನ ಭಕ್ತಿ ಮುಟ್ಟುತಟ್ಟಿನಲ್ಲಿ ಹೋಯಿತು (ಮುಡಾಳಾ. ೦೩-೦೩) ; ಒಡವೆಯ ಒಡಲೆಲ್ಲ ಸವಿರೂಪು ನುಡಿಕಂಪು ಮುಟ್ಟುತಟ್ಟಿನೊಳಿದೆ ಭೂಭುವನ (ಮುಕ್ತಕಂ. ೨-೦೪). ಮುಟ್ಟುನಿಲ್ಲು = ಹೊರಗಡೆಯಾಗುವುದು ನಿಂತುಹೋಗು : ಅರೆತಲೆಬೇನೆ . . . ಕೆಲವೇಳೆ ಮುಟ್ಟು ನಿಂತ ಮೇಲೆ (ಮೆನೋಪಾಸ್) ಹೆಚ್ಚಾಗುತ್ತದೆ (ಶಶಿಕೋ. ೧. ೪೯೬). ಮುಟ್ಟುನೀರು = ಹೊರಗಡೆಯಾದ ಕೂಡಲೆ ಅಥವಾ ಹೊರಗಡೆಯಾದ ಮೂರುದಿನಗಳ ನಂತರ ಮಾಡುವ ಸ್ನಾನ : ಮುಟ್ಟುನೀರು ಹಾಕಿಕೊಂಡು ಆಕೆ ಊರಿಗೆ ಹೊರಟಳು (ರೂಢಿ). **ಮುಟ್ಟುಮನೆ** = ಹೊರಗಡೆಯಾದ ಅಥವಾ ಹೆತ್ತ ಹೆಂಗಸು ಇರತಕ್ಕ ಕೊಟಡಿ : (೬).

[<ಮುಟ್ಟು₁./ ತಮಿ. ತುಳು. ತೆಲು. ಮುಟ್ಟು; ತೊದ. ಮುಟ್ ]

**ಮುಟ್ಟುಂಗಾಱ** (ನಾ). ಮದ್ದಳೆಯನ್ನು ಬಾರಿಸುವವನು : ಲತೆಯ ಕೆಂದಳಿರ್ಗಳ್ ಬಡಗಾಳಿಯ ಸೋಂಕಿಂ ಪೊಸಪಱಿಸಿನ ನಿಡುವಣ್ಣಂ ಪೊಡೆಯುತ್ತಿರೆ ಚೈತ್ರವೆಸರ ಮುಟ್ಟುಂಗಾಱಂ . . . ಕುಲಿಶಕ್ಷಿನದ್ಧ ಮುರಜಮಂ ನುಡಿಸುವ ತೆಱನಾಯ್ತು (ಜಯುಶಾ. ೧೧-೭).

[ ಮುಟ್ಟು₂ + — ಕಾಱ. / ತಮಿ. ಮುಟ್ಟುಕ್ಕಾರನ್ ]

**ಮುಟ್ಟುಕಟ್ಟು** (ನಾ). ೧. ಮುಟ್ಟು ತಡವಾಗುವ ಒಂದು ಬಗೆಯ ರೋಗ. ೨. ಒಂದು ಬಗೆಯ ಮೂತ್ರರೋಗ : ಕೃಮಿಗೆ ವಿಳಂಗಚೂರ್ಣ ಜೇನುತುಪ್ಪದಲ್ಲಿ ಕೊಳ್ಳುವುದು. ಮುಟ್ಟುಕಟ್ಟಿಗೆ ಎಕ್ಕೆಹಾಲು ಬೂದಿ ಕಲಸಿ ಬಾಳೇಹಣ್ಣಿನಲ್ಲಿ . . . ಕೊಳ್ಳುವುದು (ವೈದ್ಯಾ. ೨೩); ಮುಟ್ಟುಕಟ್ಟಿಗೆ:— ಬೇವಿನ ಸೊಪ್ಪಿನ ಎಲೆಯ ರಸ. ಬೆಳ್ಳುಳ್ಳಿಗೆಡ್ಡೆ ರಸ, ಈ ಎರಡಕ್ಕೂ ಸರಿಯಾಗಿ ಎಣ್ಣೆಯನ್ನೂ ಕೂಡಿ . . . ಕೊಡಲು ಹುಳು ಮೂತ್ರದಲ್ಲಿ ಬೀಳುವುದು (ವೈದ್ಯಾ. ೦೦೯).

[ ಮುಟ್ಟು₂ + ಕಟ್ಟು₂ ]

**ಮುಟ್ಟುಕುಟ್ಟು** (ನಾ). ಹೊರಗಡೆಯಾಗುವುದಕ್ಕೆ ಮುಂಚೆ ಅಥವಾ ಆಮೇಲೆ ಬರುವ ನೋವು : (೬).

[ ಮುಟ್ಟು₂ + ಕುಟ್ಟು₂./ ತಮಿ. ಮುಟ್ಟುಕ್ಕುಟ್ಟು ]

**ಮುಟ್ಟುಗ** (ನಾ). ಅಶುದ್ಧವಾಗಿರುವವನು (?) : ನಗಧರನಗ್ರವಲ್ಲಭೆಯೆ ಸಾನೆಲೆ ಮುಟ್ಟುಗ ಮುಗ್ಧ ನಿನ್ನ ಮೈಲಗೆಯನದೇಕೆ ಪಿಂಡಿ [ದಪೆನಾಂ] (ಮುಹಾನೇ. ೦೪-೪೦). [ ಮುಟ್ಟು₂ + — ಗ₂ ]

**ಮುಟ್ಟುಗಿಡಿಸು** (ಕ್ರಿ). ಸಾಧನವಿಲ್ಲದಂತೆ ಮಾಡು ; ಅಸಹಾಯಕನನ್ನಾಗಿಸು : ಮೂವತ್ತಿರ್ವರುಮೊಳ್ಪಿಂಡಿರ್ಕಳುಮಂ ಮೂವತ್ತೆರಡುಕ್ಕೋಟಿ ಕಸವರಮುಮಂ ಕೊಳದ ಪುಲ್ಲ ದರ್ಕಂ ತೊಱೆವಂತನಿತುಮಂ ತೊಱೆದು ಕರ್ಮಕ್ಷಯಾರ್ಥಂ ತಪಂಬಟ್ಟಾತನನಿಳಿಸಿ ಪರಿಭವಿಸಿ ಮುಟ್ಟುಗಿಡಿಸಿ ನುಡಿಯಲ್ವೇಡ (ವಡ್ಡಾರಾ. ೪೬-೦೩).

[ ಮುಟ್ಟುಗಿಡು ( < ಮುಟ್ಟುಗೆಡು ) + — ಇಸು₃ ]

**ಮುಟ್ಟುಗಿಡು** 'ಮುಟ್ಟುಗೆಡು' ನೋ.

**ಮುಟ್ಟುಗೆ** 'ಮುಟ್ಟಿಗೆ₂' ನೋ.

**ಮುಟ್ಟುಗೆಡು**, ಮುಟ್ಟುಗಿಡು (ಕ್ರಿ). ೧. ಸಾಧನವನ್ನು ಕಳೆದುಕೊಳ್ಳು; ಅಸಹಾಯಕವಾಗು : ಕೂರದರ್ ನೆಲನನೊಟ್ಟಜೆಯಿಂ ಕೊಳೆ ಕೊಟ್ಟು ಮುಟ್ಟುಗೆಟ್ಟಿನ್ನುಮರಣ್ಯದೊಳ್ ನಮೆದಪಂ ಯಮನಂದನಂ (ಪಂಪಭಾ. ೭-೩೩) ; ಬೆಂಬಱಿಯುನುಱಿಯದೆ ಮುಟ್ಟೆಮಂದೀ ಮುಟ್ಟುಗೆಟ್ಟ ದುರಾತ್ಮನಂ ವಿದಾರಿಸುವೆಂ (ಪಂಪಭಾ. ೧೦-೦೦೯ ವ). ೨. ಪ್ರಯೋಜನವಿಲ್ಲದಂತಾಗು ; ನಿಷ್ಪ್ರಯೋಜಕವಾಗು: ಕಲ್ಲಂ ತಾಗಿದ ಮಿಂಚಿಯಂತೆ ಮುಟ್ಟುಗೆಟ್ಟು . . . ಶ್ರೀದತ್ತಸೆಟ್ಟಿ ಪುಸಿಗೂರ್ಮೆಯಿಂದಿಂದ್ರದತ್ತಸೆಟ್ಟಿಯನಿಂತೆಂದಂ (ಧರ್ಮಾಮೃ. ೦೦-೦೩೬) ; ಜರಾಸಂಧಚಕ್ರವರ್ತಿ ಕೇಳ್ದು ಮುಳಿದಾತನ ಮೇಲೆ ದಂ[ಡಂ] ಪೇೞ್ದೊ[ಡಾ] ದಂಡು ಕಾದಿ ಪಡಲ್ವಟ್ಟು ಸೋಲ್ದುಱಿಂಬೆ ಮುಟ್ಟುಗೆಟ್ಟು ಬಾಯ್ವಿಟ್ಟೋಡಿದೊಡೆ (ನೇಮಿಪು. ೩-೨೮ ವ). ಮುಟ್ಟುಗಿಡು : ೨. ಆ ಗಿರೀಂದ್ರಕಂದರದೊಳ್ ತಪಂಗೆಯ್ವ ತಪೋಧನರ ತಪಂಗಳೆಲ್ಲಮಾತನ ತಪೋಮಯ ಶಿಖಿಗಳಿಂ ಬೆಂದು ಬೆಂದ ನುಲಿಯಂತೇ ತರ್ಕಂ ಮುಟ್ಟಿಲ್ಲದೆ ಮುಟ್ಟುಗಿಡೆ (ಪಂಪಭಾ. ೭-೬೦ ವ). ೩. ಹೀಯಾಳಿಸು; ಜರಿ (?) : ನಿನ್ನ ಪರಿಜ್ಞಾನದ ತೆಱನನಱಿಯಲಾದುದು ನೀಂ ಮುಟ್ಟುಮಿರೆಂದಾ ಭಟ್ಟನಂ ಮುಟ್ಟುಗಿಡೆ ನುಡಿದಂ (ಶಂತಶಂ. ೦೬-೯).

[ ಮುಟ್ಟು₂ + ಕೆಡು₁ ]

**ಮುಟ್ಟುಗೋಲು** 'ಮುಟ್ಟುಗೋಳು' ನೋ.

**ಮುಟ್ಟುಗೋಳು**, ಮುಟ್ಟುಗೋಲು (ನಾ). ಸಾಲ ವಸೂಲಿ ಮುತ್ತಿತರ

ಕಾರಣಗಳಿಗಾಗಿ ಒಬ್ಬರಿಗೆ ಸೇರಿದ ಸ್ವತ್ತನ್ನು, ಸರ್ಕಾರ ಅಥವಾ ನ್ಯಾಯಾಲಯ ಮುಂತಾದುವುಗಳ ಆದೇಶದಂತೆ ಸ್ವಾಧೀನಕ್ಕೆ ತೆಗೆದುಕೊಳ್ಳುವುದು : ಈ ಮಹೀಪಾಲಕಂಗೀ ಮನೆಯನು ಮುಟ್ಟುಗೋಳಿಂಗೀಡುಮಾಡಿ ಮನೆಮಕ್ಕಳುಂ ಕಟ್ಟುವೋಪಂತೆ ಮಾಡಿದೆನಲಾ (ಸಮ್ಯಕೌ. ೧೦-೬೯) ; ತೋಳುಡಿದಸುರಾಧಿಪನ ಗೇಹವ ಮುಟ್ಟುಗೋಳ ತನ್ನಯ ದ್ರವ್ಯಸಹಿತ ಬಾಳುವೆಗಿರವೇಕೆನದು ವಂಚಿಸದೆ ಕೃಪಾಳುವಿಗಿತ್ತು ವಂದಿಸಿದ (ತೊರೆಜಹ. ೪೦-೩೫) ; ಇವನ ಸರ್ವೈಶ್ವರ್ಯವನ್ನು ಮುಟ್ಟುಗೋಲು ತೆಗೆದುಕೊಂಡು ಹೆಂಡಿರುಮಕ್ಕಳೊಡನೆ ಬಂಧಿಸಿ ಸೆರೆಗೆ ತಳ್ಳಿರಿ (ಕಾಳ್ಗಮು. ೨೬). ಮುಟ್ಟುಗೋಲು : ಸೇನಾವಿಧಿಯು ಮೇರೆಗೆ ಸಾದರಾದ ಯಾವುದಾದರೂ ದಂಡಾಜ್ಞೆಯನ್ನು, ವಿಧಿಸಿದ ಶಿಕ್ಷೆಯನ್ನು, ಆದೇಶಮಾಡಿದ ಮುಟ್ಟುಗೋಲನ್ನು ಅಥವಾ ಮಾಡಲಾದ ಇತರ ಕೆಲಸವನ್ನು ಮಾನ್ಯಗೊಳಿಸ ಬಹುದು (ಕಾಧಾಪ. ೨೦); ಪರಂಗಿಗಳು . . . ಇವೆಲ್ಲವನ್ನು ಇಲ್ಲಿ ಮುಟ್ಟುಗೋಲು ಕೊಟ್ಟು ಹೋಗಬೇಕಾಗುತ್ತದೆ (ಬ್ರಿಂಕ. ೨೪).

ಮುಟ್ಟುಗೋಲುಹಾಕು = ೧. ಸ್ವಾಧೀನಪಡಿಸಿಕೊಳ್ಳು ; ವಶಪಡಿಸಿಕೊಳ್ಳು: ಅಂಗಡಿಯಲ್ಲಿನ ಸಾಮಾನುಗಳನ್ನೆಲ್ಲ ಮುಟ್ಟುಗೋಲು ಹಾಕಿಕೊಂಡು ತನ್ನನ್ನು ಬಂಧಿಸಿ ಕೊಂಡೊಯ್ಯಲು ತಿಳಿಸಿರುವನೋ ಏನೊ (೧೦ಪ. ೦೦೩). ೨. ಸಂಪೂರ್ಣವಾಗಿ ನಿಲ್ಲಿಸು,— ಇಲ್ಲವಾಗಿಸು : ಆತನ ವಾರ್ಷಿಕವೇತನಕ್ಕೆ ಮುಟ್ಟುಗೋಲು ಹಾಕಲ್ಪಟ್ಟಿದೆ (ಚುಬಾಧ. ೯೯). ೩. ಅಡ್ಡಿಯುಂಟುಮಾಡು ; ಪ್ರತಿಬಂಧಿಸು.: ನಿಬಂಧನೆಯು ಕಮ್ಯೂನಿಸ್ಟ್‌ಪಕ್ಷವೊಂದನ್ನು ಬಿಟ್ಟು ಎಲ್ಲ ರಾಜಕೀಯಪಕ್ಷಗಳಿಗೂ ಮುಟ್ಟುಗೋಲು ಹಾಕಿದೆ (ಜಾಖಕ. ೬೦).

[ಮುಟ್ಟು$_2$ + ಕೋಲು$_2$ (< ಕೋಲ್)./ತೆಲು.ಮುಟ್ಟುಕೋಲು]

**ಮುಟ್ಟುಚಟ್ಟು**, ಮುಟ್ಟುಚಿಟ್ಟು, ಮುಟ್ಟುಚಟ್ಟು (ನಾ). ೧. ಮುಟ್ಟು, ಸೂತಕ ಮುಂತಾದುವುಗಳ ಸಂಸರ್ಗದಿಂದ ಉಂಟಾಗುವ ಮೈಲಿಗೆ, —ಹೊಲೆ : ಮನೆಯಲ್ಲಿ ದೇವತಾಕಾರ್ಯಗಳು ನಡೆಯುವಾಗ ಮುಟ್ಟುಚಟ್ಟು ಆಗಬಾರದು (ಬೂಶಿ). **ಮುಟ್ಟುಚಿಟ್ಟು** : ೧. ಮನೆಯಲ್ಲಿ ಏನೋ ಅನಾಚಾರ ನಡೆದು ಮುಟ್ಟುಚಟ್ಟು (ಮೈಲಿಗೆ) ಆಗಿಬಿಟ್ಟಿದೆ (ಕಾಷೂರು. ೬೦೯); ಜಾತಿಕೆಟ್ಟು ನೀತಿಕೆಟ್ಟು ಕೇರಿಗೆಲ್ಲ ಮುಟ್ಟುಚಟ್ಟು ! (ಬುರಿಪು. ೦೯೯). **ಮುಟ್ಟುಚಿಟ್ಟು** : ೧. ಮಕ್ಕಳಿಗೆ ದಡಾರ ಎದ್ದಾಗ ಮನೆಯಲ್ಲಿ ಮುಟ್ಟುಚಿಟ್ಟಾಗಬಾರದೆಂದು ಹಿರಿಯರು ಹೇಳುವುದುಂಟು (ಬೂಶಿ). ೨. ಅಶುದ್ಧತೆ; ಅಪಾವಿತ್ರ್ಯ : ವಿದ್ಯೆಗೆ ಮುಟ್ಟುಚಿಟ್ಟು ಎಲ್ಲಿಂದ ಬಂತು ? (ಚುಬ್ಬು. ೦೦೩).

[ಮುಟ್ಟು$_2$ + ಚಟ್ಟು$_2$./ ತುಳು. ಮುಟ್ಟುಚಟ್ಟು, ಮುಟ್ಟುಚಿಟ್ಟು]

**ಮುಟ್ಟುಚಿಟ್ಟು** 'ಮುಟ್ಟುಚಟ್ಟು' ನೋ.

**ಮುಟ್ಟುಚಿಟ್ಟು** 'ಮುಟ್ಟುಚಟ್ಟು' ನೋ.

**ಮುಟ್ಟುಡುಗು** (ಕ್ರಿ). ಹೊರಗಡೆಯಾಗುವುದು ನಿಲ್ಲು ; ಮುಟ್ಟುನಿಲ್ಲು: ಮುಟ್ಟುಡುಗಿ ಮುತ್ತ ಮುದುಪಾಗಿಯುಂ ಮೂವತ್ತುಂಬರಿಸಿದೆಳಜವ್ವನೆಯಂತೆ ಗಳಪುವವು (ಶಶಿಪ. ೬-೨೩೩ ಪ). [ಮುಟ್ಟು$_2$ + ಉಡುಗು$_1$]

**ಮುಟ್ಟುಪಡ** 'ಮುಟ್ಟುಪಡು' ನೋ.

**ಮುಟ್ಟುಪಡು.** ಮುಟ್ಟುಪಡ (ನಾ). ಮುಟ್ಟಲು ಅಯೋಗ್ಯವಾದುದು; ಸ್ವೀಕಾರಾರ್ಹವಲ್ಲದುದು : ಆನಜಿದುದೆ ಕೊಕ್ಕರಿಕೆಗೆ ಶಾನಖಿ[ದು] ಸಾಲ್ದಿರ್ದುಮುಜಿಯುವೆಟ್ಟುದೆ ಲೋಕಂ ಮಾನಿಸೆಗೆ ಮುಟ್ಟುಪಡ[ಶಾಶಾಂ. ಪಾ]ದ[ದು]ದೇನೊ ಪೆಜರ್ ಕಂಡಡಲ್ಲದಾಗದೆ ಬಿಸುಡಲ್ (ಶಂಪಂ. ೪-೯) ; ಮುಟ್ಟುಪಡಾಮ್ತು ಜೊನ್ನಮಣಿಸುಂಬ ಚಕೋರಜಮಕ್ಕೆ ಬಂಧನಂ ಬಿಟ್ಟುದು ಪದ್ಮಕೋಶವೊಳಕೊಂಬ ಮದಾಳಿಗೆ (ಸೂತ್ತಿಸು. ೬-೨೭). **ಮುಟ್ಟುಪಡ** : ಪಂದೋಲ್ . . . ಅಸ್ತಿಯೆಂಬಿವೇಬು ಕುಂದದವೆ ಮುಟ್ಟುಪಡವಕ್ಕುಮಾರ್ಹಸ ಮತದಿಂ (ಧರ್ಮಾಮೃ. ೫-೦೩೩) ; ವಿಮಲಶುದ್ಧ ತಪಃಫಲಸೌಖ್ಯಯೋಗದೊಳ್ ತಲೆನವಿರಲ್ತೆ ಮುಟ್ಟುಪಡ ಮೆಂಬವೊಲೂರ್ಜಿತಪುಣ್ಯಸಂಚಯಂ (ಲಕಂಕೃ. ೪-೯).

[ಮುಟ್ಟು$_1$ + < ಪಡು$_1$]

**ಮುಟ್ಟುಪಳಿ** (ನಾ). ಸಲ್ಲಬೇಕಾದ ಖರ್ಚು ; ಸಂದಾಯದ ವೆಚ್ಚ.— ವ್ಯಯ : ಮುಟ್ಟುವಳಿ ಸಾಲ ಬಡ್ಡಿ . . . ಎಲ್ಲಾವನ್ನೂ ಸಲ್ಲಿಸಿಕೊಳ್ಳುತ್ತಾರೆ (ಕಟ್ಟಿಂ. ೦೫೫-೨೪೨) ; ದೊರೆಗಳವರು ಒಂದುವರ್ಷ ಆದ ಫಲವನ್ನು ರೇಖಿಮಾಡಿಸಿ, ರೈತರ ಮುಟ್ಟುವಳಿಯನ್ನು ವಿಚಾರಿಸಿ ನೋಡುವಲ್ಲಿ ಹುಟ್ಟುವಳಿ ಮುಟ್ಟುವಳಿ ಸಮವಾಗಿದ್ದುದರಿಂದ . . . ಮುಂದೆ ಸಮವಾರ ಕೊಡುವಂತೆಯೂ ನಿಬಂಧನೆ ಮಾಡಿದರು (ಮಾಕಾಪಂ. I, ೦೦೯). 'ಹುಟ್ಟುವಳಿ' ಪರಾ.

[ಮುಟ್ಟು$_1$ + — ವಳಿ./ತುಳು. ಮುಟ್ಟುವಳಿ, ಮುಟ್ಟೊಳಿ]

**ಮುಟ್ಟುಹ** (ನಾ). ಸೋಕುವಿಕೆ : ಮುಟ್ಟುವಿಕೆ : ವರ್ಮವಂ ಮುಟ್ಟುಹ ವಿದಚ್ಚರಿಯೆನುತ ಶಿಶುವಂ ನುತಿಸುತಿಂತೆಂದ (ಸದ್ಮುಕು. ೬-೦೭).

[ಮುಟ್ಟು$_1$ + — ಹ$_2$ (< — ಪ$_2$)]

**ಮುಟ್ಟುಹಾಳ** 'ಮುಟ್ಟಾಳ' ನೋ.

**ಮುಟ್ಟೂಳಿಗ** (ನಾ). ಸಮೀಪದಲ್ಲಿ ಇದ್ದು ಮಾಡುವ ಸೇವೆ,— ಪರಿಚರ್ಯೆ : ನಿಟ್ಟುಸಿರಿಂದೆ ಕೀರ್ತಿವ ಹೊನ್ನ ಸೆಳೆಗೆಯ್ಯುಗುಟ್ಟವರಂಗಳ ಸನ್ನೆಯಲಿ ಮುಟ್ಟೂಳಿಗದ ಬೋಳುಕರನೆಲ್ಲರ ಬೀಳುಕೊಟ್ಟೊಳಪೊಕ್ಕ ನುತ್ಪಲದಿ (ಪೋಜಹ. ೨೦-೬೨). [ಮುಟ್ಟು$_2$ + ಊಳಿಗ (<ಊಟಿಗ)]

**ಮುಟ್ಟೆ**, ಮುಟ್ಟ (ಅ). ತನಕ : ವರೆಗೆ : ಹತ್ತುಕಯ್ಯಂ ಕಳದೂರೊಡೆಯರ ಮನೆ ಮುಟ್ಟೆ ಮನೆಯ ನಿವೇಶನದಗಲ ಕಯ್ ೫ಳ ತೆಜ್ಕಣ ಮೆಯ್ಯ ನೀಳಂ (ಎಕ. XIII. ೯೯-೭೫ ; 1112) ; ಬಡಗ ಮುನ್ನಾಗಿ ಹೋದ ಹುದುಗೆಜಿಯೊಳಗು ಮುಟ್ಟೆ ಗದ್ದೆಯಡಕ್ಕೆ ತೆಜಿಯೊನ್ದು ಹಣವ ನಿಕ್ಕುವರ್ (ಎಕ. V. ಹಾಸನ. ೩೩-೬೦ ; 1170) ; ಮುಟ್ಟೆ ಎಂಬುದುಂ ಸೀಮಾರ್ಥಮಂ ಪೇಟ್ಗುಂ (ಶಶುಶ. ೨೪೯ ಪ್ರಕ್ರಿ). **ಮುಟ್ಟ** : ಉದಯದೊಳು ಕಾದ ಹಾಲಂ ಸಂಜೆಮುಟ್ಟ ಕೆಂಡದೊಳಿರಿಸಿ . . . ಹೆಪ್ಪನಿಡೆ ಮೊಸರು ಕಡುಗೆಂಪಹುದು (ಸೂಶಶಾ. ೨-೭) ; ವೈಶಾಖಶುದ್ಧದ್ವಾದಶಿ ಮುಟ್ಟ ತಾಳಬೇಕೈಸೆನ್ನ ಮಾತ ಮನ್ನಿಪೊಡೆ (ಪೋಜಹ. ೨೩-೩೪).

[< ಮುಟ್ಟು$_1$. / ತಮಿ. ಮುಟ್ಟ, ಮುಜ್ಜ = ಸಂಪೂರ್ಣವಾಗಿ ; ತುಳು. ಮುಟ್ಟ]

**ಮುಟ್ಟೆಡೆ** (ನಾ). ಕಷ್ಟದ ಸಂದರ್ಭ ; ಆತಂಕದ ಪರಿಸ್ಥಿತಿ : ಪಟ್ಟಣ ಖಿಳವಶವಾಗೆ ಕರ್ಣಾಟಕ ಕೆಟ್ಟು ನಮ್ಮಯ ರಾಜ್ಯಸಿರಿಗೆ ಮುಟ್ಟ[ಟ್ಟೆ]ಡೆಯಾಗುವಂದವ ನಿಲಿಸಿದನು (ಕೆಂಶಪ. ೦೬-೯೩) ; ಅಟ್ಟುಂಬ ಕಾಲದಲಿ ಕೊಟ್ಟುಂಬುದೊಬ್ಬರಿಗೆ ಕೊಟ್ಟುಂಬುದಜಿಯದಧಮಂಗೆ ಹಲತೆಜದ ಮುಟ್ಟೆಡೆಗಳಕ್ಕು (ಸರ್ವಜ್ಞ. ೬೬೦). [ಮುಟ್ಟು$_2$ + ಎಡೆ$_1$]

**ಮುಟ್ಟೈಸು** 'ಮುಟ್ಟಯಿಸು' ನೋ.

**ಮುಟ್ಟಾಳ** 'ಮುಟ್ಟಾಳ' ನೋ.

**ಮುಟ್ಠಾಳ** 'ಮುಟ್ಟಾಳ' ನೋ.

**ಮುಡಾರಿ** (ನಾ). ಕೈಗೆ ಧರಿಸುವ ಒಂದು ಬಗೆಯ ಅಭರಣ : ಮುಂಗೈಯ ಮುತಾರಿ ಮೂರೇಣ ಕಡಗಾವ ಒಂಟಿ ನಾಗರಸುತ್ತ ಸಲಪೇಟ (ಲೋಗೀ. ೨೦೦). [ ? . /ಮರಾ. ಮುತಾರ=ಒಂದು ಬಗೆಯ ಆಯುಧ]

**ಮುತ್ಠಾಳ** 'ಮುಟ್ಟಾಳ' ನೋ.

**ಮುಡಕಲು** 'ಮುಡುಕಲು' ನೋ.

**ಮುಡದಾರ** (ನಾ). (ಉಕ) ಬುದ್ಧಿವಾದವನ್ನು ಕೇಳದವನು; ಮೂಢ : ಇಷ್ಟು ದಿವಸ ನಿನಗೆ ಹೇಳುವವರು ಕೇಳುವವರು ಯಾರೂ ಇದ್ದಿಲ್ಲ . . .

ಅದಕ್ಕ ಈ ಮುಡದಾರ ಮುದುಕನ್ನ ತಂದೀರೇನು ? (ಬಾಂಡಾಯ. ೩೮) ; ಇಂಥಾ ನಮ್ಮ ಗೌಡರ ಉಪಕಾರ ತೀರಸದ ಮುಡದಾರ ಅನಿಸಿಗೊಳ್ಳೋ ಜಾತಿ ನಮ್ಮದು ಅಲ್ಲ ತಗೀರಿ ! (ಗ್ರಾಪೂಡು. ೩೨೩).

[←ಪಾರ. ಮುರ್ದಾರ್ ; ಮರಾ. ಮುಡದರ್]

**ಮುಡದಾರಶಿಂಗಿ** ' ಮುರದಾರಸಿಂಗಿ ' ನೋ.

**ಮುಡದಾರಸಿಂಗ** ' ಮುರದಾರಸಿಂಗಿ ' ನೋ.

**ಮುಡದಾರಸಿಂಗಿ** ' ಮುರದಾರಸಿಂಗಿ ' ನೋ.

**ಮುಡಪು** ' ಮುಡಿಪು₃ ' ನೋ.

**ಮುಡಬ** ' ಮುಡುಬ ' ನೋ.

**ಮುಡಾವು** (ನಾ). ಒಂದು ಬಗೆಯ ಮೀನು : ನಿಮಗೆ ಬೇಕಾದ ಹೊಳೆಯ ಮೀನು, ಮುಡಾವು, ಅಬ್ರೋಣಿ, ಕೂಸೆ, ಕಲ್ಲೂರು, ಕೊಂತಿ ಯಾವುದೂ ಇಲ್ಲ (ಹೂಸಕ್ಕ. ೩೮). [←ತುಳು. ಮುಡುವು]

**ಮುಡಿ₁** (ಕ್ರಿ). ೧. (ಹೂ ಮುಂತಾದುವನ್ನು ತಲೆಯಲ್ಲಿ) ಧರಿಸು ; ತಾಳು ; ಸೂಡು : ಪುಟ್ಟಿಗೆಯನುಟ್ಟು ಮೆಯ್ಯಂ ಪೂಸಿ ಪೂಮಂ ಮುಡಿದು . . . ಮೆಱೆಯುತ್ತಂ (ಪಣ್ಪಾರಾ. ೦೩೩-೦) ; ಕಟ್ಟಿಯುಮೇನೊ ಮಾಲೆಗಾಜನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ (ಅಪಃಪು. ೦-೯೩) ; ಕರುಳ ದಂಡೆಯನ್ನೆದೆ ಸಿರಿಮುಡಿಗೆ ಅಂದದಿಂದಲೆ ಮುಡಿದು (ಕುಮ್ಮಾಸ. ೦೦೩. ೦೭-೯೩). ೨. (ತಲೆಗೂದಲನ್ನು) ಗಂಟು ಹಾಕು : ಮುಡಿಯಂ ಪಿಡಿದೆಳೆದವನಂ ಮುಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನಂ ಮುಡಿಯಿಸುವಿನೆಗಂ ಮುಡಿಯಂ ಮುಡಿಯೆಂ ಗಡ (ಶಂಶಹಾ. ೭-೦೦) ; ಮರುಳೆಂತೆ ಮರುಳೆ ತಲೆಯಂ ಪರಪಿರದೆ ಮನೋನುರಾಗದಿಂ ಮುಡಿ ಮುಡಿಯಂ (ಧರ್ಮಾಮೃ. ೩-೦೨೭). ೩. ಮುಗಿ ; ತೀರು ; ಕೊನೆಗೊಳ್ಳು : ಆದೊಡೆ ಬಲ್ಗತಿ ಕಣಾ ! ಒಂದೆರಟ್ಟಿವಸಕ್ಕೆ ಮುಡಿಯದು (ರಾಮಾಶ್ವ. ೩-೦೦). ೪. ನಿವಾರಣೆಯಾಗು; ಪರಿಹಾರವಾಗು: ಈವುಪಚಾರ ದಿನಾತನ ಪಸಿವುಂ ಬಟಲ್ಕೆಯುಂ ಮುಡಿಯೆ (ರಾಮಾಶ್ವ. ೦-೦೨). ೫. ಇಲ್ಲವಾಗು ; ನಾಶವಾಗು : ಅಂತು ತನ್ನ ಪಗೆಯುಂ ಬಗೆಯುಂ ಮೊದನೊಡನೆ ಮುಡಿಯೆ (ಶಂಶಹಾ. ೦೨-೦೩೩ ಪ) ; ಕೆಡುವಂತಿದ್ದಿತೇ ಕೌರವನ ರಾಜ್ಯ ಮುಡಿವಂತಿದ್ದಿತೇ ರಾವಣನ ಬಲ್ಮಾಳಿಕೆ (ಸಪಾಶ. ೦-೦೩). ೬. ಸಾಯು ; ಗತಿಸು : ' ಮುಡಿಪು₁ ' ಪರಾ. ೭. ಸಾಧ್ಯವಾಗು ; ಶಕ್ಯವಾಗು : 'ಕೈ ಯಾತಕ್ಕೂ ಮುಡಿಯು' ಎಂದು ಐತಾಳರು ಎಣ್ಣೆ ಸವರಿಕೊಂಡು ಉಜ್ಜುತ್ತಿದ್ದಾರೆ (ಮರಳು. ೩೩).

[ದೇ.॥ ತಮಿ. ಮಲೆ. ಮುಟಿ; ತುಳು. ಮುಡಿ; ತೆಲು. ಮೂಡು]

**ಮುಡಿ₂** (ನಾ). ೧. ತಲೆಯ ಕೂದಲು; ತಲೆಗೂದಲು : ಮುಡಿಯು ಸಂವರಿಸುಲೆ ಸೀರೆಯನುಡು ನವಾಂಬರವಿದೆ (ಕುಮ್ಮಾಅ. ೩-೦೮). ' ಒಳ್ಮುಡಿ ' ಪರಾ. ೨. ಕಟ್ಟು; ಗಂಟು : ಅವರ ಕೈಕಾಲುಗಳನ್ನು ಮುಡಿ ಹಾಕಿ ಬಿಗಿದರು (ಪಂಕಪ್ಪ. ೯೩೮). ೩. ಕಟ್ಟಿದ ತಲೆಗೂದಲು; ತುರುಬು : ಮುಡಿ ಮಕರಧ್ವಜಂಬೊಲೆಬಿಲುತ್ತಿರೆ (ಶಂಶಹಾ. ೪-೯೦) ; ಸುರರಮಣಿಯರ ಮುಡಿಗೆ ಮಲ್ಲಿಗೆಯರಲುಗಳಪೊಲು . . . ರಂಜಿಸಿತು (ಹಾಳ್ಳಹಾ. ೩೩-೩೭) ; ಬರುತಿದೆ—ಸಡಲಿಸಿ ಮಡದಿಯುರುಡಿಯನು ಮುಡಿಯನು . . . ತೆಂಕಣಗಾಳಿಯು (ಕುಕ್ಕು. ೨೬-೩): ' ಮುಡಿಯಿಕ್ಕು ' ಪರಾ. ೪. ತಲೆ; ಶಿರಸ್ಸು : ಪರ ಜಂಗಮಕೆ ಮಾನಕಂಜನಣುಗೆಯ ಮುಡಿಯನರಿದಿತ್ತು (ಚಕಕ್ಕು. ೩೩-೯೧) : ನಿನ್ನಡಿಯಾಣತಿಯನೆನ್ನ ಮುಡಿ ಮೊಳಾಂತೆನು (ಹರಿಶ. ೧-೯೪) ; ಅವಳು ಅಡಿಯಿಂದ ಮುಡಿಯವರೆಗೂ ನಡುಗಿಬಿಟ್ಟಳು (ಬಾಚಿಪ. ೩೯೯). ೫. ಕಿರೀಟ ; ಮಕುಟ : ಆ ಕುರುಜಾಂಗಲವಿಷಯ ಮಹೀಕಾಂತೆಗೆ ಪೊಸತೆ ಸಮೆದ ಮುತ್ತಿನ ಮುಡಿ ಧಾತ್ರೀಕರ್ಣಾಪೂರಮುಮೆನಿಸ್ಸೀಕರ ಲೀಲಾಂಬುಜಂ ಧರಿತ್ರೀತಿಳಕಂ (ಶಾಂತಿಪು. ೯-೦೩೯) ; ಮಕುಟಬದ್ಧರ ಮುಡಿಯ ರತ್ನಪ್ರಭೆಗಳಿಲಿ ಜರ್ಝರಿತ ತನುವಾಯ್ತು (ಕುಮ್ಮಾಕ್ರೊ. ೦೩-೨೭) ; ನೃಪ ಎಂಬ ಹೆಸರೊಡನೆ ಮುಡಿಯೊಂದನಾಂತೊಡನೆ ಕಳ್ಳರೊಡೆಯನು ಕೃಪೆಯ ಮೂರ್ತಿಯೇನು? (ಕೋಗಿರಿ. ೦೩-೪). ೬. ತುದಿ ; ಶಿಖರ : ಮೂಡುವೆಟ್ಟಿನ ಮುಡಿಯ ತಪನೀಯಮಣಿಯಂತೆ ತಳತಳಿಸುತಿರ್ಪುದಯ ತಪನಬಿಂಬದಿ ಮೂಡಿ (ತಶ್ಯಾಂಗ. ೭-೦೬೦). ೭. ಸುಮಾರು ನಲವತ್ತೆರಡು ಸೇರು ಧಾನ್ಯದ ಅಳತೆಯ ಪ್ರಮಾಣ : ಹಾನೆ ೪೦೮ ಮುಡಿ ೧ಲೂ ಮುಡಿ ೯ ಎಂಬತ್ತು ಮುಡಿ ಅಕ್ಕಿಯನು . . . ಕೊಟ್ಟು (ಪ್ರಕಾ. ೦೯೯೩, ೩೮-೪೦ ; 1673) ; ೧೪ ಕುಡವಕ್ಕೆ ೧ ಮುಡಿ, ೨೦ ಮುಡಿಗೆ ೧ ಖಂಡಗ (ಕಹಾಗ. ೨೯೦) ; ಒಂದು ಮುಡಿಯಲ್ಲಿ ಒಂದು 'ಮುರ' ಅಕ್ಕಿ ಇರುತ್ತದೆ. ಒಂದು ಮುರ ಎಂದರೆ ಎಂಬತ್ತು ತೊಲ ತೂಕದ ೪೨ ಸೇರು ಅಕ್ಕಿ (ಕೃನಾಇ. II, ೨೩೭). ೮. ಸುಮಾರು ನಲವತ್ತೆರಡು ಸೇರಿನ ಅಳತೆಯ ಧಾನ್ಯವನ್ನು ತುಂಬಿ ಕಟ್ಟುವ ಹುಲ್ಲಿನ ಚೀಲ : ಬೀಜಕ್ಕೆ ಇಡತಕ್ಕ ಬತ್ತವನ್ನು . . . ೭ ದಿನ ಒಣಗಿಸುವರು. ಇಷ್ಟಾದ ಮೇಲೆ ಮುಡಿಗಳನ್ನು ಕಟ್ಟಿ ಮನೆಗೆ ತರುವರು (ಮುಂಬಯು. ೩-೨೦೨). ೯. ಮೂಟೆ ; ಹೇರು ; ಹೊರೆ : ಅಣಿಮುತ್ತಿನ ಜಾಳಿಗೆಯೇಂ! ಕತ್ತುರಿಯ ಪೊಱೆಯೇಂ ! ಕಪ್ಪುರದ ಮುಡಿಯೇಂ ! (ರಾಮಾಶ್ವ. ೦೩-೦೭). ೧೦. ಕೊನೆ ; ಮುಕ್ತಾಯ : 'ಮುಡಿಗೊಳ್', 'ಮುಡಿವು' ಪರಾ. ೧೧. ಬೆಳ್ಳಿ ಅಥವಾ ಹಿತ್ತಾಳೆಯಿಂದ ಮಾಡಿದ ಬಳೆಯಾಕಾರದ ಟೊಳ್ಳು ಭಾಗದ ಒಳಗೆ ನಿರ್ದಿಷ್ಟವಾದ ಕೆಲವು ಸಸ್ಯಮೂಲಿಕೆಗಳನ್ನು ತುಂಬಿ, ತೋಳಿಗೆ ಕಟ್ಟಿಕೊಳ್ಳುವ ಒಂದು ಬಗೆಯ ರಕ್ಷಾ ಸಾಧನ : ತಡ ಕಟ್ಟುವವನ ಮುಂದೆ ಮುಡಿಬೇಕೇನು ? (ಗಾರ). ' ಮುಡಿಬಳೆ ' ಪರಾ. ೧೨. (ಆಲಂ) ಒಗಟು ; ಹದಿರು : ಪ್ರವೀಣೆ ನಿಮಗೆ ಒಡಹುಟ್ಟಿದವಳಾದಳೆನ್ನೇನೆನ್ನಲ್ಕವಳ ಮುಡಿಯ ಮಾತಂ ಕೇಳ್ದು ಮೊಳಿವ ನಸುನಗೆಯ ಬೆಳ್ಪಿಡಿಯೆ (ಸೈಬಿಚ. ೩೭-೦೪). ೧೩. [ಛಂದ] ಚರಣದ ಕೊನೆಗೆ ನಿಂತು ಮುಕ್ತಾಯವನ್ನು ತರುವ ಅಕ್ಷರ : ಚರಣದ ಕೊನೆಗೆ ನಿಂತು ಅದಕ್ಕೆ ಮುಡಿವು ಕೊಡುವ ಅಕ್ಷರಕ್ಕೆ "ಮುಡಿ" ಎಂಬ ಹೆಸರನ್ನು ಇಲ್ಲಿ ಕೊಡಲಾಗಿದೆ (ಸಹಶಕೋ. ೨೧೦) ; ಇದರಿಂದ ಆ ಗಣದ ಪೂರ್ವಾರ್ಧವು ಮೊದಲ ಒಳಪಾದಕ್ಕೆ "ಮುಡಿ"ಯಾಗಿಯೂ . . . ನಿಂತುಕೊಂಡಿತು (ಸಂಛಂತ. ೦೯೭).

**ಮುಡಿಕೊಡಿಸು** = ದೇವರಿಗೆ ಕೊಡುವೆನೆಂಬ ಹರಕೆ ಹೊತ್ತು ತಲೆಯ ಕೂದಲನ್ನು ಅರ್ಪಿಸು : ಮಗೂಗೆ ಮನೆದೇವರ ಗುಡಿಯಲ್ಲೇ ಮುಡಿಕೊಡಿಸ್ತೀವಿ (ಮನೋಸಂ. ೧೩೩). **ಮುಡಿಕೊಡು** = ದೇವರಿಗೆ ಕೊಡುವೆನೆಂಬ ಹರಕೆ ಹೊತ್ತು ತಲೆಗೂದಲನ್ನು ಕೊಡು : ಈ ಕೆಲಸ ಸುಸೂತ್ರವಾಗಿ ಮುಗಿದರೆ ನಂಜನಗೂಡು ನಂಜುಂಡೇಶ್ವರನಿಗೆ ಮುಡಿಕೊಡುವ ಹರಕೆಯನ್ನು ಹೊತ್ತಿದ್ದೆ (ಬಾರ). **ಮುಡಿಗಂಟು** = (ಕುಣಿಕೆ ಹಾಕಿ) ಕಟ್ಟುವ ಗಂಟು : ಅಕ್ಕ_ಪಕ್ಕದ ಮನೆಯ ಗಂಡಸರು ಬಂದು ಈ ದುರ್ಯೋಧನನ ಮುಡಿಗಂಟನ್ನು ಬಿಚ್ಚಿದ ಮೇಲೆ, ಅವರನ್ನು ಕಟ್ಟಿದವನು ಗಂಧರ್ವನಲ್ಲದೆ ಅವರ ತಮ್ಮ ಕಿಟ್ಟಪ್ಪನೇ ಎಂದು ತಿಳಿದು ಮನಸ್ಸಿನೊಳಗೇ ನಕ್ಕರು (ಪಂಕಪ್ಪ. ೯೩೨). **ಮುಡಿಬಿಡು** = ೧. ತುರುಬು ಕಟ್ಟದೆ ಕೂದಲನ್ನು ಇಳಿಬಿಡು : ಕರಮೆಸೆದರಬಲೆಯರ್ ನೋಟಕರ ಮನಪೊಸೆಯೆ ಮುಡಿಬಿಟ್ಟು ಸೋಗೆ ನವಿಲಂತೆ ಸೊಗಯಿಸಿ ತೋಱೆ (ಅಜಪು. ೯-೭ ರಗಳೆ). ೨. ದೇವರಿಗೆ ಮುಡಿಕೊಡುವ ಹರಕೆ ಹೊತ್ತು ತಲೆಯ ಕೂದಲನ್ನು ಕತ್ತರಿಸದೆ ಬೆಳೆಯಲು ಬಿಡು : ಕೊಂಡ ಹಾಯುವ, ಮುಡಿ ಬಿಡುವ, ಬಾಯಿಬೀಗ ಚುಚ್ಚಿಸಿಕೊಳ್ಳುವ ಸಂಪ್ರದಾಯ . . . ಚಾಲ್ತಿಯಲ್ಲಿದೆ (ಸಂಜಾಂತ. ೦೩೯).

[< ಮುಡಿ₁./ತಮಿ. ಮುಟಿ; ಮಲ. ಮುಟಿ, ಮುಟೆ; ತುಳು. **ಕೋಲಾ.** ಮುಡಿ ; ತೆಲು. ಮುಡಿ ; ಮುಡಿಯು]

**ಮುಡಿಕಟ್ಟು** 'ಮುಡಿಗಟ್ಟು₂' ನೋ.

**ಮುಡಿಕು** 'ಮುಡುಕ್ಕು₂' ನೋ.

**ಮುಡಿಗಂಪು** (ನಾ). ತಲೆಗೆ ಹಚ್ಚಿದ ಸುಗಂಧತೈಲ, ಮುಡಿದ ಹೂವು ಮುಂತಾದವುಗಳ ವಾಸನೆ : ಮುಡಿಗಂಪಿಂಗಾರ್ದು ಸಾರ್ತಂದೆಱಗೆ ಪಱಮೆಗಳ್ . . . ಮಣಿವಳವರ ದಿವ್ಯಾಂಘ್ರಿಯೊಳ್ ದೇವಿಯಾಗಳ್ (ರಾಜಶೇ. ೪-೨). [ಮುಡಿ₂ + ಕಂಪು]

**ಮುಡಿಗಚ್ಚು** (ಕ್ರಿ). (ಛಲ, ಕೋಪ ಮುಂತಾದುವುಗಳಿಂದ) ಎರಡು ಸಾಲುಗಳ ಹಲ್ಲುಗಳ ತುದಿಯು ಒಂದಕ್ಕೊಂದು ತಾಗುವಂತೆ ಕಡಿ : ಮಗರ ಅರಬಸ್ ಮತ್ತೆ ಬ್ಯಾಕ್ಟ್ರಿಯರ ಅರ್ತವಿಾಸ್ ಆ ಕರೆಯ ವಣ್ಣ ಮುಡಿಗಚ್ಚಿ ಸತ್ತೊಡಂ ಬಿಡೆವೆಂದು ಕಾದಿರ್ದರ್ (ಶಾರಸಿ. ೧೪-೩೦೪). 'ಹಲ್ಲುಮುಡಿ' ಪರಾ. [ಮುಡಿ₂ + ಕಚ್ಚು₁ (< ಕರ್ಚು₁)]

**ಮುಡಿಗಟ್ಟು₁** (ಕ್ರಿ). ೧. ತುರುಬನ್ನು ಕಟ್ಟು; ಕೇಶಾಲಂಕಾರಮಾಡು : ಒರ್ವ ಮಡದಿ ಬಲ್ಪಿನೊಳಬಲೆಗೆ ಮುಡಿಗಟ್ಟಿದಳ್ ಮುಡಿಗಟ್ಟುವಂತೆ ನೋಡುವರೆರ್ದ (ತ್ರಿಶುಂ. ೨೨-೪೨) ; ಮತ್ತೆ ಮುಡಿಗಟ್ಟಿ ಹೂಮುಡಿದು ಅಲಂಕರಿಸಿಕೊಂಡ ದ್ರೌಪದಿ . . . ಕಳೆಗೊಂಡು ಶೋಭಿಸಿದಳು (ಭಾಮುಕ. ೬೨). ೨. ತುರುಬನ್ನು ಕಟ್ಟಿಕೊಳ್ಳು : ಕವಲಿಱಿದು ನೀಳ್ದ ಬೆಂಬಿಸದಿಳಿವ ಕುಂತಳಂ ಕಾಮನ ಪತಾಕೆಯುಂತಿರೆ ಮೆಱೆವ ಮುಡಿಗಟ್ಟಿ ಕೋಮಳೆಯು ಲಾವಣ್ಯರಸವಲ್ಲಿ ಮಡುಗಟ್ಟೆ (ಮಾಪರ. ದೇ. ೦೬೪-೦). ೩. ಹೊರೆಗಟ್ಟು; ಪೆಂಡಿಗಟ್ಟು : ನಿಮ್ಮುವಂ ಸೀಳಿ ಪೊಳ್ಗಿಲದು . . . ಮೂಗರಿದು ಮುಡಿಗಟ್ಟುತ್ತ (ಸವಪೊ. ೪-೩೦). [ಮುಡಿ₂ + ಕಟ್ಟು₁]

**ಮುಡಿಗಟ್ಟು₂.** ಮುಡಿಕಟ್ಟು (ನಾ). ೧. ತಲೆಗೆ ಕಟ್ಟಿಕೊಳ್ಳುವ ವಸ್ತ್ರ; ಪಾಗು; ರುಮಾಲು : ಎಲ್ಲರುಮನೊಂದೆ ಸಮ್ಮೋಹನಾಸ್ತ್ರದಿಂ ಮೋಹಿಸಿ ಮೂರ್ಧಾಭಿಷಿಕ್ತರ ಮುಡಿಗಟ್ಟಿನ ಪಟ್ಟಿಗಳನಾಗಿಪಟಂಗೊಂಡು (ಜಗಪ. ೦೩-೩ ವ) ; ಬೆನ್ನಚಿತ್ರಾಳಿಕೆಯ ಸುತ್ತಿದ ಕೀಲಿಯ ಮುಡಿಗಟ್ಟಿನ ಪಟ್ಟೆಯ . . . ಸಿಂಗರಂಬೆರಸಿ (ಗಂಕ. ೭-೩೩ ವ). **ಮುಡಿಕಟ್ಟು:** ೨. ಕೂದಲನ್ನು ಸೇರಿಸಿ ಹಾಕಿದ ಗಂಟು ; ಮುರಿದಣೆಕ್ಕಿದ ಗಡ್ಡಮೀಸೆ ಮುಡಿಗಟ್ಟಂ ತಲ್ತ ಕೆಂಜಟ್ಟೆ (ಗಸಂಪು. ೦-೦೭೩). ೩. ತಲೆಗೆ ಧರಿಸುವ ಒಂದು ಬಗೆಯ ಆಭರಣ : ಮುತ್ತಿನ ಮೂಗುತಿ ಮುಡಿಕಟ್ಟು ಭುಜಕೀರ್ತಿ ವೃತ್ತಕುಚದ ನಡುವೆಸೆವ ಕಸ್ತೂರಿಯುಣ್ಣೆನ ಕಾಂತೆಗೊಲಿಯುದನ ವೃತ್ತಾಂತವನುಸುರುವೆನು (ಕುರಾಸಾಂ. ೧-೦೦೮). [ಮುಡಿ₂ + ಕಟ್ಟು₂]

**ಮುಡಿಗವಿ** (ಕ್ರಿ). ಕಿರೀಟವನ್ನು ಇಡು ; ಮಕುಟವನ್ನು ತೊಡಿಸು : ಮೃಗಮದಸಲಿಲದೊಳ್ ಪೊಲ್ಲಮೆಲ್ಲನುಳ್ಳಲರ್ದು ಚೆಲ್ವಿಂಗೆ ಮುಡಿಗವಿದಂತೆ ಶೋಭಿಸುವ ತೋರಮಲ್ಲಿಗೆಯ ಮುಡಿಯುಮೆಸೆಯೆ ಕೈಗೆಯ್ದಾಗಳ್ (ಆದಿಪು. ೪-೪೦ ವ) ; ನವುನಕುವಲಯಮಾಲೆಯುಮನಾಂತು ಬಬಿಲ್ಮುಡಿ ಚೆಲ್ವಿಂಗೆ ಮುಡಿಗವಿದಂತೆ ಸೊಗಯಿಸೆಯುಂ (ಶಂರಾಮಾ. ೩-೬೭ ವ). [ಮುಡಿ₂ + ಕವಿ₁]

**ಮುಡಿಗಾಱ** (ನಾ). ಸಮಸ್ಯೆಯನ್ನು ಒಡ್ಡುವವನು : ಕಡುದುರುಳತನದಿ ಮುಚ್ಚರವನೊಲಿದಿಕ್ಕೆಪ ಮುಡಿಗಾಱರೆರ್ವಗೆ ಕಿಚ್ಚಿಕ್ಕಿ ಶಿವಕವಿನಿಕರವಡಿ ವಿಡಿದು ನಡಸುವೆನು ವ್ಯಡನೊಲ್ಮೆಯಂ ಪಡೆವ ರಾಘವಾಂಕನ ಚರಿತವ (ರಾಶತ. ೦-೦೬). [< ಮುಡಿಗೆ + — ಕಾಱ]

**ಮುಡಿಗಾಱಿಕೆ** (ನಾ). ೧. ದ್ವಂದ್ವಾರ್ಥವುಳ್ಳ ಮಾತು (?) : ಮುಡಿಗಾಱಿಕೆಯ ನುಡಿಗಳಲ್ಲ ಕೇಳ್ನಿನ್ನಾಣೆ (ಪ್ರಭುಪು. ೩-೩೩) ; ೨. (?) : ಊರೊಳಗೆ ಪರರಲ್ಲಿ ಸಾಲವಂ ತೆಗೆದು ಮುಡಿಗಾಱಿಕೆಯೊಳೋಡಿ ಬಂದಾ ಸೊನ್ನಲಾಪುರದೊಳತಿಸಾಧುಸಜ್ಜನಸದಾಚಾರಿಯೊಲು ಬಿಲ್ಲೇಶಬೊಮ್ಮಯ್ಯನುಂ . . . ಸೇವೆಗೆಯ್ಯುತ್ತಿರ್ದಂ (ರಾಶತ. ೦೩-೩೯). [ಮುಡಿಗಾಱ + — ಇಕೆ]

**ಮುಡಿಗೆ** 'ಮುಂಡಿಗೆ₃' ನೋ.

**ಮುಡಿಗೆದರು** (ಕ್ರಿ). ತಲೆಕೆದರು ; ಕೂದಲು ಹರಡಿಕೊಂಡಿರು : ಶ್ರೀ ತಪೋಧನರು ಜರುರ್ಗರಿಸಿ . . . ವ್ಯಾಘ್ರಾಸನವ್ರಾತಗಳನುಳಿದು ಮುಡಿಗೆದರಿ ನಿಡುಜಡೆಗಳಿಳಿವುತ್ತೆಯುತಿಭಯದಿ ಪರಿದು (ಪವಪೊ. ೭-೨೪) ; ನಿಂತಿರುವಳು ರಣರಂಗದಲಿ ದ್ರೌಪದಿ ಮುಡಿಗೆದರಿ (ಶಾಂತಶ. ೧೩-೨೦). [ಮುಡಿ₂ + ಕೆದರು (< ಕೆದಱು₁)]

**ಮುಡಿಗೆಯಿಡು** (ಕ್ರಿ). ಆಣೆಯಿಡು ; ಪ್ರಮಾಣಮಾಡು : 'ಕೈಮೇಲೆ ಕೈಯಿಟ್ಟು ಭಾಷೆಕೊಡು' ಎಂದು ಮುಡಿಗೆಯಿಟ್ಟು . . . ಶಪಥ ಮಾಡಿದರಂತೆ ! (ಮುರಿಮು. ೩೦೩). [ಮುಡಿಗೆ (< ಮುಂಡಿಗೆ₃) + ಇಡು₁]

**ಮುಡಿಗೊಳ್** (ಕ್ರಿ). ಕೊನೆಯಾಗು ; ಪೂರ್ಣಗೊಳ್ಳು : ನಿನಗೆ ನಾನ್ ನಚ್ಚಿತ್ತು ಸಂತೈಸೆನಿಂದು, ತಱಸಂದ ತೀರ್ಪಿಂತು ಮುಡಿಗೊಳ್ಗೆದೆಂದು (ಅಂತಿಗೊ. ೪೨-೯೭೩). [ಮುಡಿ₂ + ಕೊಳ್₁]

**ಮುಡಿಗೊಳಿಸು** (ಕ್ರಿ). ತುರುಬು ಕಟ್ಟಿಕೊಳ್ಳು : ಕೆದರ್ದ ಕುಂತಳಮಂ ಮುಡಿಗೊಳಿಸಿ . . . ರತಿಯು . . . ಪ್ರಳಾಪಿಸುತೆ ಬರುತಿರ್ದಳು (ಪವಪೊ. ೭-೬೩). [ಮುಡಿ₂ + ಕೊಳ್₁ + — ಇಸು₃]

**ಮುಡಿದಂಡೆ** (ನಾ). ತುರುಬಿಗೆ ಮುಡಿಯುವ ಹೂವಿನ ಮಾಲೆ : ಕಡೆಹರುಷದೆ ಜಡೆಯೆಡೆಯೊಳು ಗಂಗೆಯ ಮುಡಿದಂಡೆಯಾಗಿ ಧರಿಸಿದ . . . ಚೆನ್ನನಂಜುಂಡನಡಿದಾವರೆಗೆಱಗುವೆನು (ಕಂಪಶಿ. ೦-೭). [ಮುಡಿ₁ + ದಂಡೆ₁]

**ಮುಡಿದಲೆ** (ನಾ). ಕಿರೀಟವನ್ನು ಧರಿಸುವ ತಲೆ : ಜಡೆದಲೆಗೆ ಕೊಟ್ಟನು ಮುಡಿದಲೆಯನೆನಲಲಘುಮತಿ ಕರವೂರ ಚೋಳನ ಭೃತ್ಯರಾಳಾನು (ಬಸಪು. ೨೭-೩೮) : ಪಗಲ್ಚೋಳನೆಂದೆಂಬ ಧಾರುಣೀಶಂ ಜಡೆಯ ತಲೆಗೆ ಮುಡಿದಲೆಯಿತ್ತು ಕಾರುಣ್ಯಸಾಗರನ ಕೈಲಾಸಮಂ ಪೊಕ್ಕನು (ಚೆಂಪು. ೩೩-೩೦). 'ಜಡೆದಲೆ' ಪರಾ. [ಮುಡಿ₂ + ತಲೆ₁]

**ಮುಡಿನಾಳಿ** (ನಾ). ಧಾನ್ಯವನ್ನು ತುಂಬಿ ಬಾಯಿ ಕಟ್ಟಿರುವ ಮೂಟೆಯಿಂದ ಪರೀಕ್ಷಾರ್ಥವಾಗಿ ಧಾನ್ಯವನ್ನು ಹೊರತೆಗೆಯಲು ಬಳಸುವ ಚೂಪಾದ ಸಾಧನ; ಸಕ್ಕರೆಗುತ್ತಿ; ಚಕ್ರಗುತ್ತಿ : (ಕಸಂಗ್ರಾ. ೬೯). [ಮುಡಿ₂ + ನಾಳಿ₁ (=ನಾಲಿ)]

**ಮುಡಿಪಿಕ್ಕು** (ಕ್ರಿ). (ದೇವರ ಹೆಸರಿನಲ್ಲಿ) ಯಾವುದಾದರೊಂದು ವಸ್ತುವನ್ನು ನಿರ್ದಿಷ್ಟ ಉದ್ದೇಶಕ್ಕಾಗಿ ತೆಗೆದಿಡು ; ಮಿಾಸಲಾಗಿರಿಸು : ಮುಡಿಪಿಕ್ಕಬೇಕೆಂದೂ ಮದ್ದೇ ಆಗಬೇಕೆಂದೂ ಕೆಲವರು ಹೇಳುತ್ತಿದ್ದಂತೆ ಒಬ್ಬನು ಮದ್ದೊಂದನ್ನು ಸಿದ್ಧಪಡಿಸಿದನು (ಕಾಲೂರ. ೧೪ ಕಥಾಸಾರ). [ಮುಡಿಪು₂ + ಇಕ್ಕು]

**ಮುಡಿಪಿಡು.** ಮುಡುಪಿಡು (ಕ್ರಿ). = ಮುಡಿಪಿಕ್ಕು : ನನ್ನ ಧ್ಯೇಯ ಸಾಧನೆಗಾಗಿ ಮುಡಿಪಿಟ್ಟ ಜೀವನ ನನ್ನದು (ದೀಶಕ. ೦೪೨) ; ಸತ್ವವರನೆಂಬ ವೀರವರನೆಂಬ ಮಗನು ತನ್ನ ಶಿರವನ್ನು ಕೊಯ್ದು ದೇವಿಗೆ ಮುಡಿಪಿಟ್ಟನು (ತಪಸಿ. ೪೭). **ಮುಡುಪಿಡು :** ಅದರ ಕೊನೆಮುಟ್ಟಲು ಒಂದೇ ಉಪಾಯ ನನ್ನ ಜೀವನವನ್ನು ನಿನಗೆ ಮುಡುಪಿಟ್ಟು ಧಾರೆಯೆರೆಯುವುದು (ಜಗದಾ. ೦೨) ; ಏಳೇಳು ರಾಜಕುವರ ಮನುಕುಲದ ಕಲ್ಯಾಣಕಾಗಿ . . . ಅದಕಾಗಿ ನನ್ನ ಜನನ ಮುಡುಪಿಡಲು ಬೇಕು ಪ್ರಾಣ (ಸ್ವರ್ಶಿ. ೭). [ಮುಡಿಪು₂ + ಇಡು₁]

**ಮುಡಿಪು₁.** ಮುಡಿಪ್ಪು, ಮುಡಿಹು, ಮುಡುಪು₁, ಮುಡುಹು₁ (ನಾ). ೧. [ಜೈನ] ನೋಂಪಿಯ ಮೂಲಕ ಗತಿಸು,— ಸಾವನ್ನು ಹೊಂದು : ಗೋವರ್ಧನಭಟ್ಟಾರರ್ ಸಮಾಧಿಮರಣದಿಂದಂ ರತ್ನತ್ರಯಮಂ ಸಾಧಿಸಿ ಮುಡಿಪಿ ದೇವಲೋಕಕ್ಕೆವೋದರ್ (ವಡ್ಡಾರಾ. ೭೪-೨೮) ; ಘೋರವೀರತಪದೊಳ್ ತನುವಂ ಬಡಮಾಡಿ ನೋಂಪಿಯೊಳ್ ಮುಡಿಪಿ

(ಆದಿಪು. ೩-೪೦). **ಮುಡಿಪ್ಪು**: ೧. ಶ್ರೀ ಅಗಟಿಯ ಮೋನಿಗುರುವರ ಶಿಷ್ಯ ಕೊಟ್ಟುರದ ಗುಣಸೇನಗುರುವನ್ನೋರ್ನನ್ತು ಮುಡಿಪ್ಪಿದಾರ್ (ಎಕ. II. ೯-೨ ; 700). **ಮುಡಿಹು** : ೧. ಮಾವಣ್ಣನ ಸಿಷ್ಯರುಂ ಸನ್ಯಸನಗೆಯ್ದು ಮುಡಿಹಿದ ನಿಸಿದಿ (ಎಕ. VI. ತರೀಕೆರೆ. ೩೦-೬ ; 1116) ; ಗೋಕಮೆಯ ಮಗಳು ಸ[ಮಾ]ಧಿವಿಧಿಯಿಂದ ಮುಡಿಹಿ ಸ್ವರ್ಗಸ್ತೆಯಾದಳು (ಬೆ.ಆಂ. ೦೯೪೦, ೩೦-೬ ; ಸಂ. 12ನೆಯ ಶತ). **ಮುಡುಪ್ಪು₁**: ೧. ನಿಜಾಯುರವಸಾನದೊಳ್ ಸಮಾಧಿವಡೆದು ಮುಡುಪಿ ಸೌಧರ್ಮಕಲ್ಪದೊಳ್ ಸಾಮಾನಿಕ ದೇವರಾದೊರ್ (ಶಾಂತಿ. ೬-೮೬ ವ) ; ತಪದಿಂ ತಾಳಿದ ತನುವಂ ನಿಧಾನದಿಂ ಮುಂ ಬಿಟ್ಟಂ ಅಂತು ಮುಡುಪಿ (ಅವಂತಿ. ೦೨-೩೩ ವ) ; ಹರಿಪಯನು ಸಮಾಧಿಇಂ ಮುಡುಪಿ ಸರ್ಗಪ್ರಾಪ್ತನಾದ (ಕಇ. IV. ೯-೬ : 1292). **ಮುಡುಹು₁** : ೨. ಸಾಯುವಂತೆ ಮಾಡು ; ಕೊಲ್ಲು ; ಸಾಯಿಸು : ಕಲಿಕರ್ಣನೀಗಳೆ ಮುಡುಹುವನು ಪವನಜನನೊಂದರೆ ಘಳಿಗೆಮಾತ್ರದಲಿ (ಕುಮಾ.ಕ. ೦೯-೨೩). [ಮುಡಿ₁ + —ಪು₁]

**ಮುಡಿಪ್ಪು₂**, ಮುಡಪು, ಮುಡುಪ್ಪು₂ (ನಾ). ೧. ಹೊರೆ ; ಮೂಟೆ : ರತ್ನಾಭರಣರಾಶಿಗಳ ಚಿತಾಮಣಿಯ ಮುಡಿಪುಗಳ ಪುರುಷದ ಕಣೆಯ ತನತನಗೆ ಪಿಡಿದು (ಗದಾ. ೦೦-೭೭ ವ). ೨. ಚೀಲ ; ಸಂಚಿ : ಮುಡುಪಿನೊಳಗೆ ಇಟ್ಟ ಕೈಜೀತವು (ಪುರಂದ. ೨-೦೩-೪). ೩. (ವಿಶೇಷವಾಗಿ ದೇವರ ಹೆಸರಿನಲ್ಲಿ ಹರಕೆಹೊತ್ತು) ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ (ಬಟ್ಟೆಯ ಗಂಟಿನಲ್ಲಿ) ಪ್ರತ್ಯೇಕವಾಗಿ ತೆಗೆದಿರಿಸಿದ ಹಣ, ಒಡವೆ ಮುಂತಾದ ವಸ್ತು ; ಮಾಸಲು : ಎನ್ನೊಡೆಯನನ್ ಮುಳಿವ ರುದ್ರನೇ ಪೊಯ್ದನೋ . . . ತನಗೆ ಮುಡಿಪನ್ ಕಟ್ಟಿ ತಂದುದಿಲ್ಲೆಂದು ? (ಅಕ್ಕಮ್ಮ. ೯-೭) ; ದೇವರ ಹೆಸರಿನಲ್ಲಿ ಮುಡಿಪು ತೆಗೆದಿಟ್ಟು ಬರುವ ಪ್ರಯತ್ನ ಮಾಡುತ್ತಿದ್ದೆ (ತದ್ಭ.ಕ. ೨೦೩). ೪. ಒಬ್ಬ ವ್ಯಕ್ತಿಗೆ ಮಾಸಲಾಗಿರುವುದನ್ನು ಸೂಚಿಸುವ ಪ್ರೀತಿಯ ಗುರುತು : ಕುರುಳೊಳ್ ಕೊಂಕಿದ ಭಂಗಿಯಂ ಸಮುಚಿ ವಕ್ಷೋಜಂಗಳೊಳ್ ಚಿತ್ರಮಂ ಬರೆದೊಪ್ಪತ್ತಿರೆ ಪಚ್ಚೆಮಾಲೆ ಮುಡಿಪಿಂಗೊಲ್ದಿಕ್ಕೆ ಮುಂಗೈಗೆ ಬೊಪ್ಪರಮಂ ಮುಟ್ಟೆ ಮುಸುಂಕಿ ದಂತವಲಯಂ ತಳ್ತೊತ್ತಿದಳ್ ಜೇಟಮಂ ಕರೆದಳ್ ಕೂರ್ತು ಬೊಜಂಗನೊಲ್ಲದುಬ್ಬಿವಂ (ಅಸಂತಿ. ೯-೦೪). **ಮುಡಪು** : ೩. ಆಚಂದ್ರಾರ್ಕಸ್ಥಾಯಿಯಾಗಿ ಸೋಮೇಶ್ವರದೇವರ ಮುಡಪಿಗೆ ಭಂಡಾರಕೆ ಸಲುವುದು (ಎಕ. III, ಶಂಜನ. ೦೬೩-೬ ; ?). **ಮುಡುಪ್ಪು₂** : ೧. ಒಡವೆಯೊಳಗರೆ ಕಾಣೆಯುಂ ಸವೆದಡೆ ಬಳಿಕ ನಾಂ ಭಕ್ತನಲ್ಲೆ ಮುಡುಪಿನೆಣಿಕೆಗೆ ಕುಂದ ದಂತೆ ವಿಚಾರಿಸೈ (ಅಸಕ್ತು. ೦೦-೦೪). ೩. ಮುಡುಪು ಮಾಡಿ ಚಂದ್ರನಿಗೆ ಯದುರಾಗಿ ಮೂರು ಭಾರಿ ನಿವಾಳಿಸಿ (ಶಾಗಂಂ. ೦೬೯-೬) ; ಬಲುವರ್ಷಗಳಿಂದ ಮನೆಯಲ್ಲಿದ್ದ ಮುಡುಪನ್ನೊಪ್ಪಿಸುವುದರ ವಿನಾ ಆತನಿಗೆ ಬೇರೆ ಉದ್ದೇಶವಿರಲಿಲ್ಲ (ಕಶಾ. ೦೦೨) ; ಬರಲಾರೆನಯ್ಯ ಬಹುದೂರ ನಿನ ಮುಡುಪ ಬರುವವರ ಕೂಡ ಕಳುಹೇನೊ (ಜನಗೀ. ೨೦).

**ಮುಡಿಪುಕಟ್ಟು** = ೧. ಮಾಸಲಾಗಿ ತೆಗೆದಿರಿಸು : ಬಂದ ಕಷ್ಟ ಪರಿಹಾರವಾಗಲೆಂದು ದೇವರಿಗೆ ಮುಡಿಪುಕಟ್ಟಿಟ್ಟೆ (ರೂಢಿ). ೨. ಸಮರ್ಪಿಸಿಕೊಳ್ಳು ; ಅರ್ಪಿಸಿಕೊಳ್ಳು : ಸಸ್ಯಸಂಪತ್ಸಂಗ್ರಹಣ ಕಾರ್ಯಕ್ಕೆ ಮುಡಿಪುಕಟ್ಟಿದ್ದವರಲ್ಲಿ ಬಹುಮಂದಿ ವರ್ಗೀಕರಣವಿಭಾಗದ ಹವ್ಯಾಸಿಗಳೇ ಆಗಿದ್ದಾರೆ (ಹಸುಹೂ. ೦೨೦). [ದೇ.॥ ತಮಿ. ಮುಟಿಪ್ಪು ; ಮಲ. ಮುಡಿಪ್ಪು ; ತುಳು. ಮುಡಿಪು,ಮುಡುಪು ; ತೆಲು. ಮುಡುಪು]

**ಮುಡುಪ್ಪು** 'ಮುಡಿಪ್ಪು₁' ನೋ.

**ಮುಡಿಬಳೆ** (ನಾ). = ಮುಡಿ₂ ೧೧ : ಸಿದ್ಧಿಕಾಲದೊಳ್ ಮಾಡಿದ ಮುಡಿಬಳೆ ವಿಭೂತಿಗಳು ಮಣಿಗಳು ಬಿತ್ತ ನವಿಲುಗರಿ ಅಂಕೋಲೆಕಡ್ಡಿ ಬೇವಿನ ಕೊರಡು ಗರಿಕೆ (ಶಾಗಂಂ. ೩೯-೩). [ಮುಡಿ₂ + ಬಳೆ₂]

**ಮುಡಿಯ** (ನಾ). ಒಬ್ಬಾತನ ಹೆಸರು : ಮುಡಿಯನುಂ ಎರೆಯನುಂ ಸನವಡಿಯನ್ನುಂ ಪರಿಯಟ್ಟರಾಳ ಕೆಂಪುತ್ತಕೈಯೂರ ಪೂರ್ವ್ವದ ಬೆಸಮಕ್ಕಳಾ ಪರುಂ . . . ಪೊಲದೆ ಸೀಮೆಯೆಲ್ಲಮಂ ಓಲೆಯೊಳ್ಪರೆನ್ದು × × ಕಲ್ಲು ಸಾಸನಮಾಗೆ ಬರೆದುಕೊಣ್ಡಮು (ಎಕ. III. ನಂಜನ. ೦೬೯-೦೦ ; 915 ?). [ ? ]

**ಮುಡಿಯಾಳ** 'ಮುಡಿವಾಳ' ನೋ.

**ಮುಡಿಯಿಕ್ಕು** (ಕ್ರಿ). ತಲೆ ಬಾಚು ; ಕೇಶಶೃಂಗಾರ ಮಾಡು : ಮುಡಿಯಿ [ಪಾಠಾಂ. ವಿ]ಕ್ಕುವಡಿಯೂಡುವಡಿಗಟ್ಟುವಾರತಿಯೆತ್ತುವ ತಿಲಕವಿಡುವ . . . ಆಕಾರವತಿಯರಂ (ತಂಶೃತಿ. ೬-೮೫ ವ) ; ಮುಡಿಯಿಕ್ಕುವ ತಿಲಕವಿಡುವ ತೊಡಂದುಡಿಸುವ . . . ನಿಖಿಳಪರಿಚಾರಿಣೀಜನಂ ನಿಜನಿಯೋಗನಿಷ್ಠಾಪರತೆಯಿಂ ನಿರಂತರಮೋಲಗಿಸುತೊಪ್ಪುತಿರೆಯಿರೆ (ಶಾಸುಮಾ. ೬-೬ ವ). [ಮುಡಿ₂ + ಇಕ್ಕು]

**ಮುಡಿಯಿಸು**, ಮುಡಿಸು (ಕ್ರಿ). ಹೂವು ಮೊದಲಾದುವುಗಳನ್ನು ತಲೆಗೆ ಸಿಕ್ಕಿಸು, – ಸೂಡು ; ಅಲಂಕರಿಸು : ಮುಡಿಯಂ ಪಿಡಿದೆಚಿದಪನಂ ಮುಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನಂ ಮುಡಿಯಿಸುವಿನೆಗಂ ಮುಡಿಯಂ ಮುಡಿಯೆಂ ಗಡ (ಸಂಶಬ. ೬-೦೦) ; ನೆಲೆಯುಂ ಗಾಡಿಯುಂ ಮಳಪಡೆ ಲಲನೆ ಪೆಚಿಳ್ ದಿವ್ಯಮಾಲೆಯಾಂ ಮುಡಿಯಿಸಿದಳ್ (ಜಗಂ. ೦೦-೦೨೬). **ಮುಡಿಸು** : ನಾನು ಪುಷ್ಪವ ಮುಡಿವುದಕ್ಕೆ ಮುನ್ನವೇ ಜಂಗಮಕ್ಕೆ ಪರಿಮಳಪುಷ್ಪವ ಮುಡಿಸುವೆ (ಮಹಾದೇ. ಬ. ೯೯-೨೦೩) ; ಭೀಮನ ತೋರಗರುಳಿನ ದಂಡೆಯನು ಕೈಯಾರೆ ಮಾರಿಗೆ ಮುಡಿಸುವೆನು (ಕುಮಾ.ಕ. ೩-೦೯). [ಮುಡಿ₁ + — ಇಸು₃]

**ಮುಡಿಯೊಡೆ** (ಕ್ರಿ). ಕೂದಲು ಬಿಚ್ಚಿ ಹೋಗು ; ತಲೆ ಕೆದರಿಹೋಗು: ಇರದೆ ಮುಡಿಯೊಡೆದು ಮುಂಗುರುಳ್ಕೆಯ್ಯುಘಮ್ಮೆದೆ ಬಂಧುರವದನಮಿಂದು ಮಂಡಲ ಮುಸುಕಲ್ . . . ಸತಿ ವಿರಹದಿಂ ಹುಡಿಯೊಳುರುಳ್ದು ರೋದಿಸುತ್ತೆ (ನವಪೋ. ೬-೩೪). [ಮುಡಿ₂ + ಒಡೆ₁]

**ಮುಡಿಲು** (ನಾ). ಒಂದು ಬಗೆಯ ಮೀನು : ಕೊರವಂ . . . ಮುಡಿಲುಂ ಪಂದಿಗನೆಂಬ ಮೀನ್ದೆಗೆದನಾ ಭಕ್ತಂ (ತ್ರಿಶೂ. ೩೭-೮). [ ? ]

**ಮುಡಿವಕ್ಕಿ** (ನಾ). ಸೋಗೆ ನವಿಲು : ನಡೆವಕ್ಕಿಯೊಡನೆ ನಡೆದಾಡಿ. . . ಮುಡಿವಕ್ಕಿಯೊಳ್ ಮುಡಿಯ ಮುಚಿಕಮಂ ಮಾಡಿ ಸವಗಡೆಯ ಸಚಿಮಿಂಡಿಯರ್ ಮಿಂಡೆಳ್ದು . . . ವಿಹರಿಸಿದರು (ಶಂವಿಶಾ. ೪-೨೨). [ಮುಡಿ₂ + ಪಕ್ಕಿ]

**ಮುಡಿವಣಿ** (ನಾ). ತಲೆಯಲ್ಲಿ ಧರಿಸುವ ರತ್ನ ; ಬೈತಲೆಮಣಿ : ಮುಡಿವಣಿಯಂ ಸೊಂಪಿಂದಿಟ್ಟು (ಕಲ್ಯಾಪ್ರ. ೩೨೩). [ಮುಡಿ₂ + ಮಣಿ]

**ಮುಡಿವಲೆ** (ನಾ). ಕೂದಲನ್ನು ಸೇರಿಸಿ ಕಟ್ಟಲು ಉಪಯೋಗಿಸುವ ಬಲೆಯಂತಹ ಒಂದು ಬಗೆಯ ಆಭರಣ : ಮೌಕ್ತಿಕಗಳ ಮುಡಿವಲೆ ಮೆಚಿಪ ಬಾವುಲಿಯ ನಿಡುಗುರುಳಿನ ಮುತ್ತಿನ ಕುಚ್ಚಿನಿಂದ ಬಲ್ಪೆಡಗಾಗಿ ಮೆಚಿದರರ್ಶಿಯಲಿ (ಕಂಪಿ. ೨೪-೪೨). [ಮುಡಿ₂ + ಬಲೆ₁]

**ಮುಡಿವಳ** 'ಮುಡಿವಾಳ' ನೋ.

**ಮುಡಿವಾಳ**, ಮುಡಿವಾಳ₂, ಮುಡಿಯಾಳ, ಮುಡಿವಳ (ನಾ). ಒಂದು ಬಗೆಯ ಸಸ್ಯ ಮತ್ತು ಸುವಾಸನೆಯಿಂದ ಕೂಡಿರುವ ಅದರ ಬೇರು: "ಕರಂ ಬಾಳಮೆಣಸೆ ಮುಡಿವಾಳಪುಳುಕ್ಕು" (ಶಬ್ದಮ. ೩೯-೨೯) , ನೆಲಗೊಂಡು ಮುಡಿವಾಳದ ನೆಲೆಗೆಯ್ದುಂದಗತಸಂಚಿ . . . ಪರಿಮಳದ ಬೇರ್ಗಳಂ ಬರೆತಗೆದಳ್ (ಗಿಂಕ. ೩-೬೩) ; ಮುಡಿವಾಳ ಬಾಳದ ಹರವರಿಯ ಹರಹಿದನು ಬಂಗೂಲದಲಿ ಕಲಿಹನುಮ (ಕೊರಂಗ. ೩-೪-೦೩) ; ಗೊಜ್ಜಿಗೆಯ ಜಾದಿಯ ಮುಡಿವಾಳದ ಮುಡಿಯ . . . ಋಷ್ಯಾಶ್ರಮೋಪವನಂ ಸೀತೆಗೆ ಕಣ್ಗೆವಂದತ್ತು (ರಾಮಾಶ್ವ. ೪೩-೬). **ಮುಡಿವಾಳ₂** : "ಇಕ್ಷುರಕಂ — ಮುಡಿ

ವಾಳ, ನಾಂಗುಲಿಕ" (ಹಿಪಂ. ೧೩) : ಜನದೊಳು ಮುಡಿವಾಳ ಲಾಮಂಚವಿಹವು (ಅಂಚಸ. ೨-೯೭). **ಮುಡಿಯಾಳೆ** : ಮುಡಿಯಾಳ ಮುಪ್ಪಾದರೆ ಪರಿಮಳ ಬಿಡುವುದೆ (ಹ್ಯಾಡು. ೧೬೩). **ಮುಡಿವಳ್ಳೆ** : ಕಿದಟೀವಡೆ ನಾಯಿದಜ ತಿಪ್ಪೆಯೊಳು ಮುಡಿವಳದ ಬೇರು ಕಾಣಿಪುದೆ ಯೆನಗೆ (ರಾಶಿತ. ೯-೩೭) ; ರತ್ನಗರ್ಭಾಂಗನೆಯು ಶಿರದಿ ಸದ್ಗಂಧಮೂಲವನು ನಿಕ್ಷೇಪಿಸಿದನೆನೆ ಮುಡಿವಳ ಗಳೆಸೆದವು (ಐಕೋಶ. ೩-೩೬). [ದೇ.॥ ತವಿ. ಮುಟಿವಾಟ್ಟಿ ; ತುಳು. ಮುಡಿವಾಳ, ಮುಡ್ಡೆಲ, ಮುಡ್ಯಲ, ಮುಡ್ಯೆಲ ]

**ಮುಡಿವಿಡಿ** (ಕ್ರಿ). ತಲೆಯನ್ನು ಹಿಡಿದುಕೊಳ್ಳು : ಅಂಗದನು ಖಳನ ಕಾಣಿಯ ಕಂಡು ಮುಡಿವಿಡಿದೆಳೆದು ಕೆಡಹಿದನು (ಕೌಶಿರಾ. ೩೮-೯೦) ; ವೀಣಾವಾದ್ಯವೊರ್ಕೆಯ್ಯು ಮತ್ತೊರ್ಕೆಯ್ಯಿಂ ಬಾಣನ ಮುಡಿವಿಡಿದೆತ್ತಿ ಕ್ಷೀಣ ಸಂತೋಷದೆ ಹರಸಲ್ಕೆ (ಪೋಹತ. ೩೩-೦೦). [ಮುಡಿ₂ + ಹಿಡಿ₁ ]

**ಮುಡಿವು** (ನಾ). ೧. ಕೊನೆ ; ಮುಕ್ತಾಯ : ಚರಣದ ಕೊನೆಗೆ ನಿಂತು ಅದಕ್ಕೆ ಮುಡಿವು ಕೊಡುವ ಅಕ್ಷರಕ್ಕೆ "ಮುಡಿ" ಎಂಬ ಹೆಸರನ್ನು ಇಲ್ಲಿ ಕೊಡಲಾಗಿದೆ (ಕಮಾರೀ. ೨೦೦). ೨. ತೀರ್ಮಾನ ; ನಿರ್ಣಯ : ಈ ವಿಷಯದಲ್ಲಿ ಯೋಚನೆಯನ್ನು ಮಾಡಿದ್ದೆಲ್ಲ ಮುಗಿದಿದೆ. ನನ್ನ ಮುಡಿವನ್ನು ತಿಳಿಸಿದ್ದೇನೆ (ಪಕುಹೊ. ೨೨೯).

[ ಮುಡಿ₂ + — ವು. / ತವಿ. ಮಲ. ಮುಟಿವು ]

**ಮುಡಿವೂ**, ಮುಡಿಹೂ (ನಾ). ತಲೆಯಲ್ಲಿ ಧರಿಸುವ ಹೂವು : ಮುಡಿವೂವಂ ಬಿಟ್ಟು ಝೇಂಕಾರಿಸುವಳಿಗಣಮಂ ನೀಟ್ದು ಪೋಲೇಚೆಯುಂ (ಕುಸುಪುಃ. ೬-೦೫೦) ; ಸೀಗುರಿ ಬಿಜ್ಜಣ ಮುಡಿವೂ ಕರಗಂಬೊತ್ತು ಮುಡದಿ ದುರ್ಗಂ ದೀವದ ಖಿಗಮೃಗಕಂ ಬಿಡದಪಸಿತು . . . ಕದುಸೋವು (ಜಯಣ. ೨-೯೦). **ಮುಡಿಹೂ** : ಕೊರಳ ಯಜ್ಞೋಪವೀತದ ಮುಡಿ ಹೂಗಳ ಪರಿಮಳಿಸುವ ಗಂಧದಿಂದ ಕರದೊಳು ಪಿಡಿಯಾನಾಂತರಸುಮಕ್ಕಳು ಗಳು ಧುರಕನುವಾದರು (ಕಂಪಹ. ೦೭-೯೨): ಈ ಮುಡಿಹೂಗಳ್ ಬಾಡದ ಸದ್ವಿಧದಿಂದಾ ಬಡಕೂಸನು ಸಲಹೊ ಮುಕುಂದಾ ! (ಕುಶ್ರು. ೬-೨೦).

[ ಮುಡಿ₂ + ಪೂ₂ ]

**ಮುಡಿವೆಜಿ³** (ನಾ). ಮುಂದಲೆಯಲ್ಲಿ ಧರಿಸುವ ಅರ್ಧಚಂದ್ರಾಕೃತಿಯ ಒಂದು ಬಗೆಯ ಆಭರಣ : ಮುಡಿವೆಜಿಯ ಮುತ್ತಿನ ಬೈತಲೆಯ ಮೂಗುತಿಯನೀಡಾಡಿ ಅಜಿಸಿದರು ಹರಿಹರಿದು ತಮ್ಮಮ್ಮೈಚೆಯರನು (ಕೊರರಾ. ೬-೫೦-೯೩). [ಮುಡಿ₂ + ಪೆಜಿ³]

**ಮುಡಿವೊಜಿ³** (ನಾ). ಹೊರೆಯಂತಿರುವ ತಲೆಗೂದಲು ; ಕೇಶಭಾರ : ಮುಡಿವೊಜಿಯ ವಿಷಯದ ಮಜಿಗೆ ಮದಾಂಧತಮಸಮಂ ಪೆಜಿಗಿಕ್ಕಿ ತನ್ನೊಳ್ ಮಾಲೆವ ಲಲನೆಯರ ವದನವಿಧುಬಿಂಬದೊಳ್ . . . ಪೊಕ್ಕು ಪೋರ್ಕುಳಿಯಿಕ್ಕಿಯುಂ . . . ವಿಜೃಂಭಿಸಿತ್ತಮಳಕೌಮುದೀವಿಸ್ತಾರಂ (ಪರ್ಶುಶು. ೬-೯೩ ವ). [ಮುಡಿ₂ + ಪೊಜಿ³ ]

**ಮುಡಿಸರ** (ನಾ). ಕಿರೀಟದಲ್ಲಿ ನೇಲುವಂತೆ ಅಳವಡಿಸಿರುವ ಎಳೆ.—ಹಾರ : ಅರಳುಮಲ್ಲಿಗೆಮುಡಿಸರವನಾಂತಿಪನಾರೆ ದುರಗಲಿ ನರಸರ್ಹಾಜೇಂದ್ರ (ಕಂಪಹ. ೨೩-೯೨). [ಮುಡಿ₂ + ಸರ₂]

**ಮುಡಿಸು** 'ಮುಡಿಯಿಸು' ನೋ.

**ಮುಡಿಹ** (ನಾ). ತಲೆಯಲ್ಲಿ ಧರಿಸುವುದು ; ಮುಡಿದುಕೊಳ್ಳುವುದು : ಪ್ರೀತವನದೊಳಗ ಬಳದ ಹೂವಾಕ ಮುಡಿಹಕ್ಕೆ ಯೋಗ್ಯಂ (ಹಕಗಾ. ೬-೦೮). [ಮುಡಿ₁ + — ಹ₂ ( < — ಪ₂ )]

**ಮುಡಿಹು** 'ಮುಡಿಪ್ಪು₁' ನೋ.

**ಮುಡಿಹೂ** 'ಮುಡಿವೂ' ನೋ.

**ಮುಡುಕಲು**, ಮುಡಕಲು (ನಾ). ಇಕ್ಕಟ್ಟಾದ ಜಾಗ : ಸಂದು : ತಪ್ಪಿಸಿಕೊಂಡಿದ್ದ ಹಸುವಿಗಾಗಿ ಅವನು ಊರಿನ ಮೂಲೆ ಮುಡುಕಲನ್ನೆಲ್ಲ ಹುಡುಕಿದನು (ರೂಂ). **ಮುಡಕಲು** : ಮೂಲೆ ಮುಡಕಲಲ್ಲಿದ್ದವರೆಲ್ಲ ದೊಡ್ಡ ಪದವಿಗೆ ಬರುತ್ತಾರೆ (ತೆಂಗಾಸ್ಕ. ೨೩).

[ ಮುಡುಗು₂ + — ಅಲು ( < — ಅಲ್₂ )]

**ಮುಡುಕು₁**, ಮುಡುಗು₁. ಮುದುಕು, ಮುದುಗು₁ (ಕ್ರಿ). ೧. ಬಗ್ಗು ; ಬಾಗು; ಕೊಂಕಾಗು : (ಕ). ೨. ತಬ್ಬು ; ಆಲಿಂಗಿಸು : "ಮುಡುಕು (ಮುದುಕು) — ಶರೀರೋಪಗೂಹನೇ (ಆಲಿಂಗನ ಮಾಡು)" (ಕವಧಾ). ೩. ಒದಗು ; ಉಂಟಾಗು : ಇನಿತು ಮೂರಂ ನಡೆತರಲು ಪೇಳ್ ನಿನಗೆ ಮುಡುಕಿದ ಕಾರ್ಯವೇನು (ಬಸಪು. ೨೯-೦೧). ೪. ತಡೆತಡೆದು ಮಾತನಾಡು ; ತಡವರಿಸು: ಬಳಲುನುಡಿಗಳಂ ನುಡಿವ ತಾ ತನ್ನೊಳು ನುಡಿಯುತ್ತಂ ಮುಡುಕಿ ನುಡಿವೆಡೆಯುಲಿ ಸಲಿಸಿ ದೀಪಿಸುವ ಶಿವಲಿಂಗದೊಳ ಡಂಗಿರಲು ನೆಜೆಯೊಲಿವ (ಬಸಪು. ೩೫-೨೦). **ಮುಡುಗು₁** : ೧. ಗುಡುಗಿನ ಮುಗಂ ಮುಡುಗಿ ಮೊರಸೆ ಕಿನ್ನರಿಗರಿಯನ್ನ (ಗಿಆಂ. ೯೩-೭೦). 'ಮುಡುಗುಗಿವಿ' ಪರಾ. ೫. ಬಾಗಿಸು ; ಕೊಂಕಿಸು : ಗಗನದನೊಡೆ ವೆನೊ ಮಿಡಿವೆನೊ ಶಶಿರವಿಗಳ ತಾರಗೆಗಳ ಮುಡುಗುವೆನೋ (ಹರಿಕ. ೨-೦೨). **ಮುದುಕು** : ೨. "ಮುಡುಕು (ಮುದುಕು) — ಶರೀರೋಪಗೂಹನೇ (ಆಲಿಂಗನಮಾಡು)" (ಕವಧಾ). **ಮುದುಗು₁** : ೬. ಮುದುಡು ; ಸಂಕುಚಿತವಾಗು : ನಡುನಡುಗಿ ನಡೆವನೊಲೆಯೆಡೆಗೆ ಮುದುಗಿಸ ಮೆಯ್ಯ ಲಕ್ಷ್ಮಣಂ (ಕ್ರೀರಾಪು. ೨೦೦-೧೩೨) ; ಯಾವುದೋ ಮಹಾ ದೊಡ್ಡದರ ಮುಂದೆ ತನ್ನ ಅಲ್ಪತ್ವ ಮುದುಗಿ ನಾಚಿ ಹೆದರಿ ಕುಗ್ಗಿ ನೆಲಸಮವಾಗಿ ಹೋದಂತಾಗಿತ್ತು ಅವನಿಗೆ (ಮಲಶಿವ. ೫೬೪).

[ ದೇ.॥ ತವಿ. ಮುಟಜ್ಜು. ಮುಟಕ್ಕು ; ಮಲ. ಮುಟಕ್ಕ; ತುಳು. ಮೊದಂಕು; ತೆಲು. ಮುಡುಗು; ಪರ್ಜಿ. ಮುಡ್ ]

**ಮುಡುಕು₂**, ಮುಡಿಕು, ಮುಡುಗು₂, ಮುದುಗು₂, ಮೊಡಕು (ನಾ). ೧. ಬಾಗಿರುವುದು ; ಕೊಂಕಿರುವುದು : (ಕ). ೨. ಮೂಲೆ ; ತಿರುವು : ಬೆಳಲ ಗದ್ದೆಯ ಮುಡುಕಿನಲು (ಎಕ. VIII, ತೀರ್ಥಹ. ೨೦೭-೨೨; 1415); ವಾಯುವ್ಯಭಾಗದ ಕಿಬ್ಬೆಯ ಕಂಬರೆ ಮುಡುಕಿನಲ್ಲಿ. . .ಯಲ್ಲಿಗಳು (ಎಕ. III, ತಿರುಮ. ೭೨-೦೯೫; 1622). ೩. ಇಕ್ಕಟ್ಟಾದ ಸ್ಥಳ; ಗೊಂದಿ: 'ಮುಡುಕಲು' ಪರಾ. **ಮುಡಿಕು** : ೨. ತೆಂಗಿನ ಮುಡಿಕಿನಲ್ಲಿ. . . ನೆಟ್ಟ ಕ ೧ (ಎಕ. III, ತಿರುಮ. ೬೩-೭೭೩; 1748). ೩. ಮನೆಯ ಸಂದಿ ಮೂಲೆ ಮುಡಿಕಿನಲ್ಲಿ ಹುಡುಕಿ ನೋಡಲ್ಕಿಲ್ಲದಿರಲು (ಭೈರಸೂ. 1, ೩೯೯). **ಮುಡುಗು₂** : ೧. 'ಮುಡುಗಿಸು' ಪರಾ. **ಮುದುಗು₂** : ೪. ಮುದುರುವಿಕೆ; ಸಂಕೋಚ : 'ಮುದುಗಿಸು' ಪರಾ. **ಮೊಡಕು** : ೩. ವಿಸ್ತಾರದಲಿ ಬಾಳು, ವೈಶಾಲ್ಯದಿಂ ಬಾಳು ಕತ್ತಲೆಯ ಮೊಡಕು ಮೂಲೆಗಳ ಸೇರದಿರು (ಮಂಕುತ. ೯೦೩). [ < ಮುಡುಕು₁. / ತವಿ. ಮುಟಜ್ಜು, ಮುಟುಕ್ಕ, ಮುಟುಕ್ಕು ; ಮಲ. ಮುಟಕ್ಕುವಾರ್. ಮುಟುಕ್ಕು: ತುಳು. ಮುಡಂಕ್, ಮೊಡಂಕ್ ]

**ಮುಡುಗಾರ** (ನಾ). ಒಂದು ವಂಶದ ಹೆಸರು (?) : ಬಿನವತಿಅಬ್ಬೆ ಊರಾಳಿ ಮುಡುಗಾರ ತೊಣ್ಣೆಸ್ವರ ಮಗನುಂ (ಕೌಶಾ. XX. ೦೦-೨ : ?).

[ ? ]

**ಮುಡುಗಿಸು**, ಮುದುಗಿಸು (ಕ್ರಿ). ೧. ಬಾಗಿಸು ; ಬಗ್ಗಿಸು ; ಕೊಂಕಿಸು : ಕಾಳಿಯ ನಾದದ ಕೇಳುತ ಗಜಗಳು ನೀಳದೋರುತಿಹ ತೋಳ್ಗಳ ಮುಡುಗಿಸಿ ಚಾಳಿಸಿವೋಡುತಲಿ (ಹವಾತ. ೦೮). **ಮುದುಗಿಸು**: ೨. ಸಂಕುಚಿತಗೊಳಿಸು; ಹುದುಗಿಸು : ತಲೆ ಕೆರೆದುಕೊಳ್ಳುತ್ತಾ ಮೈ ಮುದುಗಿಸಿ ನಿಂತಿದ್ದನು ಬಚ್ಚ (ಮಲಶಿವ. ೭೬೯).

[ ಮುಡುಗು₂ (< ಮುಡುಕು₂) + — ಇಸು₃ ]

**ಮುಡುಗು₁** 'ಮುಡುಕು₁' ನೋ.

**ಮುದುಗು$_2$** 'ಮುದುಕು$_2$' ನೋ.

**ಮುದುಗುಗಿವಿ** (ನಾ). ಬಗ್ಗಿದ ಕಿವಿ ; ಮುದುರಿಕೊಂಡ ಕಿವಿ : ಹನುಮನ . . . ಚಿಗಿವ ಬಾಲವ ಮುದುಗುಗಿವಿಗಳ ಪೊಳೆವ ದಂಷ್ಟ್ರಗಳಾ ನಗುವ ಮುಸುಡ ನಿರೀಕ್ಷಿಸುತಲಿ (ಅನಂರಾ. ೬-೩-೩೯).

[ಮುದುಗು$_1$ (< ಮುದುಕು$_1$) + ಕಿವಿ$_3$]

**ಮುದುಗುದಾವರೆ** (ನಾ). ಒಂದು ಬಗೆಯ ಸಸ್ಯ : ಮುಟ್ಟಿದರೆ ಮುನಿ, ಮುದುಗುದಾವರೆ, ನಾಚಿಕೆಗಿಡ, ಲಜ್ಜಾವತಿ (ವೃಕ್ಷಿಗಿ. ೩೯-೧೦೭೯).

[← ತೆಲು. ಮುದುಗುತಾಮರ, ಮುಡುಂಗುದಾಮರ]

**ಮುದುಪಿಡು** 'ಮುದಿಪಿಡು' ನೋ.

**ಮುದುಪು$_1$** 'ಮುದಿಪು$_1$' ನೋ.

**ಮುದುಪು$_2$** 'ಮುದಿಪು$_2$' ನೋ.

**ಮುದುಪು$_3$**, ಮುದುಬು$_3$, ಮುದುವು, ಮುದುಹು$_2$ (ನಾ). ಹೆಗಲು ; ಭುಜಾಗ್ರ : ಅಡಿಯಂ . . . ಮುಯ್ವಂ ಮುದುಪಂ ಬೆನ್ನಂ ಕೊರಲಂ ನಡುನೆತ್ತಿಯನೆತ್ತಿ ಪೊಯ್ದು ರೋರ್ವರನೋರ್ವರ್ (ಗದಾಯು. ೮-೦೩) ; ಮೊಳಮೇಲಿಂ ಮೇಲುದಂ ತಂದೆಡದ ಮುದು[ಪಾಠಾಂ. ಡಿ]ಪಿನೋಳ್ಸೇ ದುತುಂ (ಅರ್ಜನೀ. ೩-೬೩). **ಮುದುಬು$_3$** : 'ಮುದುಬುಶೂಲೆ' ಪರಾ. **ಮುದುವು**: 'ಮುದುವಿಕ್ಕು' ಪರಾ. **ಮುದುಹು$_2$**: "ಭುಜ ಶಿರಸ್, ಅಂಸ :— ಈ ೨ ಮುದುಹು" (ಶಾಶಶಾ. ೦೩೦) ; ಕುರುಳು ಬೆರಳು ಮುದುಹು ಮುಂಬಲ್ಲ ಕೊಳ್ಳು ನಿಜಯನಿಕ್ಕಿ ದಾಂಟಿದರೆ ಅಂತೆನ್ನ ನಂಬಾ (ಬಸವ. ೩೦೦) ; ಮುದುಹಂ ಪೊಯ್ದುಕೊಳುತ್ತುಂ (ಕುಸುಮಾ. ೦೦-೦೬೩). 'ಮುಯ್ಯು' ನೋ. [ದೇ.II ತುಳು. ಮುದು]

**ಮುದುಪುಕುಡು** 'ಮುದುಪುಕೊಡು' ನೋ.

**ಮುದುಪುಕೊಡು**, ಮುದುಪುಕುಡು (ಕ್ರಿ). ಮೀಸಲು ತೆಗೆದಿರಿಸು : ಒಡೆಯನೆಂದೋ ಬಂದು ಕೇಳ್ವನು . . . ಎನುವವೊಲು ಸುಜಾತೆಯಿಂದ ಒಡಲ, ಜಾಣಿನ, ಜೀವಶಕ್ತಿಗಳನೆಲ್ಲವನು ಮುದುಪುಕೊಟ್ಟನು ಭರತ (ಮಂಕುಶ. ೭೦೭). **ಮುದುಪುಕುಡು** : ಮಾತೆವೊಲೊ . . . ಭ್ರಾತಸುತ ಸಖಿರವೊಲೊ ಪಾತ್ರವೊಂದಕೆ ತಾಂ ಕಾತರಿಸುತಿಹುದು ತನ್ನೆಲ್ಲವನು ಮುದುಪುಕುಡೆ ಪ್ರೀತಿಯಾ ಪುಚ್ಛುಹಟ (ಮಂಕುಶ. ೩೨೭).

[ಮುದುಪು$_2$ (<ಮುದಿಪು$_2$) + ಕೊಡು$_1$]

**ಮುದುಬ**, ಮುಡಬ (ನಾ). ಊನವಾದ ಅವಯವಗಳುಳ್ಳವನು : ಅಂಗವಿಕಲ : ಅಲ್ಲಿ ಕೈ ಬಲಿಯದಿರೆ ಮುದುಬನಾ [ಪಾಠಾಂ. ದುಡೆಯಾ] ಗುತೆ ಬಂದು (ಬಿಂದೋರ. ಹ. ೩೦೦-೨೪) ; ಕೈಕಾಲ್ ಮುದುಬಗಳವಟ್ಟಂತೆ ಕುರುಡಗೆ ಕಣ್ಣು ಬಂದಂತೆ (ಕೃಶೂಲೀ. ೦೦-೨೪) ; ಎರಡುಕಾಲೊಡೆದು ಹುಣ್ಣಾಗಿ ಮುದು[ಡು]ಬನಾದನು (ಭೈರಸೂ. I. ೩೭೦). **ಮುಡಬ** : ತನ್ನ ಕರದೊಳಹ ಚೆಂಬಿನಲಿ ಭರದಿಂದೆ ಪೊಡೆಯಲ್ಕೆ ಎರಡುಮೊಳಕಾಲೊಡೆದು ಸುರಿವುತಿರೆ ರಕ್ತ ತರತರಿಸುತ್ತಲಾ ಭಾಗ್ಯನಿಧಿ ಮುಡಬನಾಗಿರ್ದನು (ಪ್ರಶಂಸ. ೩-೩೭) ; ಕಡಮೆಯವರ ಮಾತೇನು ದೊರೆ ರಾಯವಲ್ಲಭೆಯು ಮುದುಬಗೆ ಮನವಿಟ್ಟು ಬಳಿಕ (ಕುಮಾರಶಾಂ. ೦೭೦), 'ಉಡುಹು$_1$' ಪರಾ.

[ಮುದುಬು$_2$ + — ಅ$_7$. / ತಮಿ. ಮುಟವನ್]

**ಮುದುಬು$_1$** (ಕ್ರಿ). ಅಂಗವು ನ್ಯೂನತೆಯನ್ನು ಹೊಂದು ; ಊನವಾಗು: ಮಡದಿ ಮೊಣಕಾಲೂರಿ ಬಾಗುತ ನಡೆಯೆ ಮೊಣಕಾಲ್ ಕೈಗಳಂ ಮುದುಬಿ [ಪಾಠಾಂ. ಮುದುಡಿ]ವಡೆ (ಬಸವ. ೩೭-೩೯).

**ಮುದುಬು$_2$**, ಮುದುಹು$_3$ (ನಾ). ಅಂಗದ ನ್ಯೂನತೆ; ಊನ : ಕಲಿಕಾಪು ಭೂವರನಂಗದಲಿ ಶೂಲೆಯುದಿಸಿ ಕರಚರಣವು ಮುದುಬಾಗೆ (ಪೋಳಾಳ್ವ. ೨-೦೬೪). **ಮುದುಹು$_3$** : 'ಮುದುಹುಗೊಳ್' ಪರಾ.

[<ಮುದುಬು$_1$./ತುಳು. ಮುದುಬು—ಊನ]

**ಮುದುಬು$_3$** 'ಮುದುಪು$_3$' ನೋ.

**ಮುದುಬುಶೂಲೆ** (ನಾ). ಹೆಗಲಿನಲ್ಲುಂಟಾಗುವ ನೋವು : ಹೊಸ ತರುತುಂಬಿಯ ನಿಂಬೆಯ ಹಣ್ಣಿನ ರಸದಲ್ಲಿ ಅರೆದು ಕಟ್ಟುವುದು . . . ಮುದುಬುಶೂಲೆ ಹರ (ವಿಶ್ವಶಿ. ೦೧೭).

[ಮುದುಬು$_3$ (< ಮುದುಪು$_3$) + ಶೂಲೆ$_1$]

**ಮುದುಮುದಿಸು** (ಕ್ರಿ). ಥೀಳಿಡು ; ಆರ್ಭಟಿಸು (?) : ತಡಿಯೊಳೆಡೆ ಗೊಳದಲ್ಲಿಗಲ್ಲಿ ಗುಂಪುಗಳುಂ ಕೊಡುವ ಘನತುಂಬಿಗಳ ಕಂಡು ನೀರಾನೆಗಳ್ ಮುದುಮುದಿಸಿ ವೈರದಿಂ ಬಂದಿರಿಯೆ (ಪಂಚಶಾ. ೪-೨೦-೧೯).

[ಮುದುಮುದು + — ಇಸು$_3$]

**ಮುದುಮುದು** (ನಾ). ಒಂದು ಅನುಕರಣ ಶಬ್ದ : ವೈತ್ಯರು ಮುದು ಮುದು ಪಳಚಿ ಮತ್ಸರಿಸಿ ಕಡಿದಾಡುವ ಖಡ್ಗಧಾರೆಯಿಂದುರ್ಗಿದ ಕೆಂಗಿಡಿಗಳ ನೋಡುತೆಯ್ದುವಳು (ತೋಹಕ. ೨೯-೦೩).

**ಮುದುವಿಕ್ಕು** 'ಮುದುಹಿಕ್ಕು' ನೋ.

**ಮುದುವು** 'ಮುದುಪು$_3$' ನೋ.

**ಮುದುಹಿಕ್ಕು**, ಮುದುವಿಕ್ಕು (ಕ್ರಿ). ಭುಜವನ್ನು ಚಪ್ಪರಿಸು ; ಭುಜಾಸ್ಫಾಲನ ಮಾಡು : ಕಣ್ಣ ಕೆಂಚನೆ ಮಾಡಿ ಗಂಡುಗೆದಱಿ ಮುದು ಹಿಕ್ಕಿ ಕೆಲೆವವರ ಕಂಡಡಾಜಾವೆ (ಬಸವ. ೪೪೭) ; ಕೈಯೆತ್ತಿ ಕೂಗಿಟ್ಟು ಕರೆಕರೆದು ಹಿಗ್ಗುತುಂ ವ್ಯೆಯಿಕ್ಕಿ ಮುದುಹಿಕ್ಕಿ ಕಡುಹಿಗ್ಗಿ ಹೆಚ್ಚುತುಂ (ಕಂಠೀರ. ಹ. ೦೪೦-೨೭). **ಮುದುವಿಕ್ಕು** : ನಲಿದು ಮುದುವಿಕ್ಕಿ ಗುವ್ವಾಡಿ ಗೆಲವಂ ಪೆರ್ಗರಡಿಯುತೆ ಕುಪ್ಪಿಕ್ಕಿ ಕರಂ ಕೆಲವಂ ಕಣ್ಣಾಪ್ಪಂ ಮುಂದಲೆ ದುಜುಬಿ ದುವ್ವಾಸಾಲೆಯೆನುತಂ ಕೆಲವಂ ಖರಿದಂ ಕೊಂಬು ಕೊಳಲ್ ಮಹೌವರಿಗಳ ಸುಣ್ಣರಮನಾಸ್ಯದೊಳ್ ತೋಱುತ್ತ (ಕ್ರಿಕೃಪಿ. ೨೭-೦೩೭)

[ಮುದುಹು$_2$ (< ಮುದುಪು$_3$) + ಇಕ್ಕು]

**ಮುದುಹು$_1$** 'ಮುದಿಪು$_1$' ನೋ.

**ಮುದುಹು$_2$** 'ಮುದುಪು$_3$' ನೋ.

**ಮುದುಹು$_3$** 'ಮುದುಬು$_2$' ನೋ.

**ಮುದುಹುಗೊಳ್** (ಕ್ರಿ). ಊನವಾಗು ; ವಿಕಲತೆಯುಂಟಾಗು : ಕೆಡೆದವು ಮೇಘದೊಳಾಡುವ ಖಗತತಿ ಮುದುಹುಗೊಂಡ ರೆಕ್ಕೆ ಮುರುಟಿ (ಗೊಮ್ಮಟ. ೩-೪೦). [ಮುದುಹು$_3$ (< ಮುದುಬು$_2$) + ಕೊಳ್$_1$]

**ಮುಡ್ಡಿ** (ನಾ). ಹಿಂಭಾಗ; ಪೃಷ್ಠ : ಉಟ್ಟ ಪಟ್ಟೆಯ ಕಾಸೆ, ಹೊಂಬಟ್ಟೆಯ್ವ ನಡುಕಟ್ಟು ಮುಡ್ಡಿಯ ಮೇಲೆ ರಾರಾಜಿಸುವ ಐದಂಗುಲ ಅಗಲದ ಕಟಿಸೂತ್ರ (ಅವಕಾ. ೩೭ ಡಿಸೆಂ. ೫೨೬೭). [ದೇ.II ತುಳು. ಮುಡ್ಡಿ ; ತೆಲು. ಮುಡ್ಡಿ; ಮುಡಿ]

**ಮುಣುಂಗು** 'ಮುಳುಂಗು' ನೋ.

**ಮುಣುಗಿಸು** 'ಮುಳುಂಗಿಸು' ನೋ.

**ಮುಣುಗು$_1$** 'ಮುಳುಂಗು' ನೋ.

**ಮುಣುಗು$_2$** 'ಮುಳುಕು$_2$' ನೋ.

**ಮುತ್‌ಫರ್ಖಿತ್** 'ಮುತಫರ್‌ಖಾತು' ನೋ.

**ಮುತಫರ್‌ಖಾತು**, ಮುತ್‌ಫರ್ಖಿತ್ (ನಾ). ೧. ಬೇರೆ ಬೇರೆ ಬಗೆಯ ಸಾಮಗ್ರಿ, — ವಸ್ತು ; ವಿವಿಧ ಬಗೆಯ ಸರಂಜಾಮು. ೨. ಬೇರೆ ಬೇರೆ ವಿಭಾಗ : ಮುತಫರ್‌ಖಾತಿನಿಂದ (Mutfar-Khat) ಆರುಮಂದಿ ಮಾತ್ಬರ್‌ಜನರನ್ನೂ ಸಹ ಚುನಾಯಿಸಿ . . . ಪಂಚಾಯತರು ಎಂದು ಮೊಕರರ್ಮಾಡಿದರು (ಮೈಶಾಪ. II. ೨೬). **ಮುತ್‌ಫರ್ಖಿತ್** : ೩. ವಿಶ್ರಾಂತಿವೇತನ ; ಪಿಂಚಣಿ : (ವ್ಯಗಶ. IV. ೬೬೦).

[← ಅರ. ಮುತ್‌ಫರ್ರಿಕಾತ್ ; ಹಿಂ. ಮುತ್‌ಫರ್‌ಕಾತ್ ; ಮರಾ. ಮುತ್‌ಫರ್ಕಾತ್]

**ಮುತಯ್ಯ** (ನಾ). ಒಬ್ಬಾತನ ಹೆಸರು : ಮುತಯ್ಯನ ಮ[ಗ] (ಕ್ಕ್ನಾಇ. XI-i, ೨೯-೦೭; ಸಂ. 912). [ < ಮುತ್ತು$_3$ + ಅಯ್ಯ$_1$ (< ಅಯ್ಯ$_1$)]

**ಮುತವರ್ಜಿ** 'ಮುತುವರ್ಜಿ' ನೋ.

**ಮುತವ್ವೆ** 'ಮುತ್ತವ್ವೆ' ನೋ.

**ಮುತಾಕಲು** (ನಾ). (?) : ೭೨ ಸುತ್ತಲೂ ಮುತಾಕಲಿಗೆ ದೊಡ್ಡ ೨೦ ಚಿಕ್ ೫೨ (ಎಕ. XIV, ಕಂಚನ. ೨೯೯ ಪುಟ ೦೯೦ ; 1847). [ ? ]

**ಮುತಾಕು** (ನಾ). (?) : ೭೨ ಮುತಾಕಿಗೆ ದೊ ೨೦ ಚಿಕ್ ೫೨ (ಎಕ. XIV, ಕಂಚನ ೨೯೯. ಪುಟ ೦೩೯ ; 1847). [ ? ]

**ಮುತಾಬಕ್** (ಅ). ಅನುಸಾರವಾಗಿ ; ಮೇರೆಗೆ : ಜಿಹಾರೀಯ ಭಂದ್ ೨೧ನೇ ಮಾಹೆ ಜಿಲ್ಹಜ್, ೧೧೯೭ನೇ ಹಿಜರೀ ಮುತಾಬಕ್ ಛಂದ್ ೨೭ನೇ ಮಾಹೆ ನವೆಂಬರ್ ೧೭೮೩ನೇ ಇಸವಿ (ತಾವುಂ. ೨೨೭).

[← ಅರ. ಹಿಂ. ಮುತಾಬಿಕ್ ; ಮರಾ. ಮುತಾಬಿಕ್, ಮುತಾಬೀಕ್]

**ಮುತಾಲಿಕ**, ಮುತ್ತಲ್ಲಿಕ, ಮುತ್ತಾಲಿಕ (ನಾ). ಯಾವುದಾದರೂ ಒಂದು ವಿಶೇಷವಾದ ಕೆಲಸದ ನಿರ್ವಹಣೆಗಾಗಿ ನೇಮಕಗೊಂಡವನು ; ನಿಯೋಗಿ ; ಕಾರ್ಯಭಾರಿ : ಶ್ರೀಕೃಷ್ಣರಾಜವಡೆಯರೈಯ್ಯನವರು . . . ಮುತಾಲಿಕ ವೆಂಕಟರಾಮೈಗೆ ಬರೆಸಿ ಕೊಟ್ಟ ಕ್ರಯಭೂದಾನ ಶಾಮ್ರ ಸಾಧನದ ಕ್ರಮವೆಂತೆಂದರೆ (ಎಕ. IV (R), ಎಳಂದೂ. ೧೯೩-೭ ; 1763) ; ಕುಲಕರ್ಣಿ ಮುತಾಲಿಕ ತಿಂಮಪ (ಇಂ. ೧೯೯೭, ರಾಜವಿಷ್ಣುರ್, ೨೯೮-೨; ?).

**ಮುತ್ತಲ್ಲಿಕ:** ಬರದಾತ ಶಾನುಬೋಗರ ಮುತ್ತಲ್ಲಿಕ ನರಸಪ್ಪನ ಸ್ವದಸ್ತೂರ ಬರಹ (ಪ್ನ.ಅಂ. ೦೯೨೯, ೬೨-೯೯; 1768). **ಮುತ್ತಾಲಿಕ :** ಅವರ ಮುತ್ತಾಲಿಕರಾಗಿ . . . ನಾವು ಆ ಧನವನ್ನು ಬಡವರ ಉದ್ಧಾರಕ್ಕಾಗಿ ಉಪಯೋಗಿಸಬೇಕು (ಏಷ್ಯಾಪು. ೦೭೬).

[← ಅರ. ಹಿಂ. ಮುತಅಲ್ಲಿಕ್; ಮರಾ. ಮುತಾಲೀಕ್]

**ಮುತುವರ್ಜಿ**, ಮುತವರ್ಜಿ (ನಾ). ೧. ಆಸಕ್ತಿ ; ಶ್ರದ್ಧೆ ; ಆಸ್ಥೆ : ಪ್ರತಿಯೊಬ್ಬರೂ ನಿಮ್ಮ ನಿಮ್ಮ ಕೆಲಸಗಳನ್ನು ಪ್ರಮಾಣಿಕರಾಗಿ ಮುತು ವರ್ಜಿಯಿಂದ ಮಾಡಬೇಕು (ಕಾಲಿಮ. ೦೮೦); ಆಕೆಗೆ ತಕ್ಕ ಹಾಗೆ ಮುತು ವರ್ಜಿಯಿಂದ ಕೆಲಸ ಮಾಡುವ ತೋಟಗಾರರಿರಬೇಕು (ತರಚಿ. ೦). ೨. ಎಚ್ಚರಿಕೆ ; ಜಾಗರೂಕತೆ : ನೀನು ವಾರಕ್ಕೊಂದುಸಲ ಪರೀಕ್ಷೆ ಮಾಡಿಸಿಕೊಳ್ಳಬೇಕು. ತುಂಬ ಮುತುವರ್ಜಿಯಿಂದ ನಡೆದುಕೋಬೇಕು (ವಂಶವೃ. ೨೬೭). **ಮುತವರ್ಜಿ :** ೨. ಆ ಆಟವನ್ನಾಡಲು ನಾನು ಬಹಳ ಮುತವರ್ಜಿ ಮಾಡಬೇಕಾಗಿದೆ (ಗರುಡಾ. ೨೯).

**ಮುತುವರ್ಜಿ ವಹಿಸು, ಮುತವರ್ಜಿ ವಹಿಸು** = ಆಸಕ್ತಿಯನ್ನು ಹೊಂದು ; ಶ್ರದ್ಧೆವಹಿಸು : ನನ್ನನ್ನವನು ಸ್ಮೃತಿಸುತ್ತಿದ್ದನೇ ಹೊರತು ಅಷ್ಟೇನೂ ಮುತುವರ್ಜಿ ವಹಿಸಲಿಲ್ಲ (ಪ್ರಸರು. ೨೦೯) ; ಅಷ್ಟು ಮುತವರ್ಜಿ ವಹಿಸಿ ಮಾಡಿದ್ದ ಏರ್ಪಾಡುಗಳೆಲ್ಲ ಒಂದೇ ಒಂದು ಕ್ಷಣದಲ್ಲಿ ಪ್ಲೇಗಿನ ಅವಾಂತರದಿಂದ ಧ್ವಂಸವಾದುವಲ್ಲ (ರಂಗಕ. ೦೨೬).

[←ಅರ. ಹಿಂ. ಮುತಅವಜ್ಜುಹ್; ಮರಾ. ಮುತವಜೀ, ಮುತವಜ್ಜೀ, ಮುತವಜಾ]

**ಮುತ್ತ$_1$** 'ಮುದು$_1$' ಪರಾ.

**ಮುತ್ತ$_2$** (ನಾ). ೧. ವಯಸ್ಸಾದ ವ್ಯಕ್ತಿ : ಮುದುಕ ; ವೃದ್ಧ : ಕಿಱಿಯಂ ಮುತ್ತಂ ಧನದಂ ಬಱಿಯಂ ತೊಱೆದಂ ಗೃಹಸ್ಥನೆನ್ನದೆ ಮುಂಬಿಟ್ಟಱಿಸಿ ಕೊಲುತಿರ್ಪ ಜವನಂಬಱಿಕೆಯ ಪಗೆವಂಗದಂತು ಪಂಗಿಗನಪ್ಪೆಂ (ಅಂಕಿ. ೪-೭೭) ; ಮುತ್ತನಿವಂ ಕೂಸಿವಂ . . . ಎಂದಿಂತು ಮಂದೋನ್ನತ್ತಂ ಬಗೆದಪನೆ ಬಗೆಯಂತಕರಾಜಂ (ಜೀವಸಂ. ೯-೨೨). ೨. ಅಜ್ಜ ; ತಾತ : ಶ್ರೀಮತು ಶ್ರೀಬಿಟ್ಟಮಯನ ಮುತ್ತಂ ವಿನಯಾದಿತ್ಯ ಪೊಯ್ಸಳದೇವರ ರಾಜಂ (ಎಕ. VI. ತಕ್ಕ್ಮು. ೬೮-೪: 1012). ೩. ಹಿರಿತನವುಳ್ಳವನು : ಗಣ್ಯ : ನೆಲೆವೆತ್ತ ಮುತ್ತರಿಂ ಮಿಗೆ ನೆಲೆವೆತ್ತಂ ಚಾಮ ರಾಜಂ (ಚಕಪ. ೨-೬೩). (ಗು). ೪. ವಯಸ್ಸಾದ ; ಮುಪ್ಪಿನಿಂದ ಕೂಡಿದ : 'ಮುತ್ತಾಣ್ಮ' ಪರಾ. ೫. ಹಿಂದಿನ : ಪೂರ್ವಿಕ . ಇದು ನಮ್ಮ ಮುತ್ತ ಮೂವರ ಭವಪಂಚಕಪ್ರಪಂಚಿತಪ್ರೀತಿನಿಮಿತ್ತಂ (ಅರ್ಥನೀ. ೯-೯ ವ). ೬. ಇಳಿಯುವ ; ಅಡಗುವ : 'ಮುತ್ತಂಜೆ' ಪರಾ.

**ಮುತ್ತರ್, ಮುತ್ತವರು** (ಬಹುವ) : ಮುತ್ತರುಂ ಕುರುಡರುಮೆಂಬ ದೇವ್ಯ ನುಡಿಗೇಳ್ ಮಗನೇ (ಕಂಠಕಾ. ೦೬-೦೨); ನಿನ್ನನು ಹೆತ್ತವರು ಮುತ್ತ ವರು ಮುನಿಗಳು ಮುಕ್ತಿಕಾಮರು ಭಜಿಸುವರದಾವನ ಪದಾಂಬುಜವ ವರ್ತಿಸುವಳಾಜ್ಞೆಯಲಿ ಮಾಯಾಮುತ್ತಕುಲಿನಿ (ಚಿಹಾಗ. ೯-೦-೯೮).

[<ಮುದು$_1$. / ತಮಿ. ಮೂತ್ತವನ್, ಮೂತ್ತೋನ್; ಮಲ. ಮುತ್ತನ್; ತೆಲು. ಮುತ್ತ]

**ಮುತ್ತ$_3$** 'ಮುಟ್ಟುಗ' ನೋ.

**ಮುತ್ತಂಡ** (ನಾ). ಮೂರು ತಂಡ,– ಗುಂಪು : ಮುತ್ತಂಡದಲಿ ದಾಸ ವರು ಪೊಮ್ಮಲಾಗಿ ತಾನಿತ್ತನಯ್ಯನೊಳಾತಿ ಪ್ರಾಣಮಂ (ಲಕ್ಷ್ಮೀಶಾ. ೧-೦೯-೩೭). [<ಮೂಱು + ತಂಡ]

**ಮುತ್ತಂದೆ** (ನಾ). ಅಜ್ಜನ ಅಥವಾ ಅಜ್ಜಿಯ ತಂದೆ ; ಮುತ್ತಾತ : ಅವರ ಮನೆಯಲ್ಲಿ ಅವರ ಮುತ್ತಂದೆಯ ಕಾಲದಿಂದಲೂ ಆ ಪದ್ಧತಿಯನ್ನು ಅನುಸರಿಸುತ್ತಾ ಬಂದಿದ್ದಾರೆ (ಕೂ೨). [ಮುತ್ತ$_2$ + ತಂದೆ]

**ಮುತ್ತಕ** 'ಮುಟ್ಟುಗ' ನೋ.

**ಮುತ್ತಗ** 'ಮುಟ್ಟುಗ' ನೋ.

**ಮುತ್ತಜ** 'ಮುತ್ತಜ್ಜ' ನೋ.

**ಮುತ್ತಜ್ಜ**, ಮುತ್ತಜ (ನಾ). = ಮುತ್ತಂದೆ : ಅರಿಕೇಸರಿಗೆ ಮುತ್ತಜ್ಜ ನಾದ ಅವನು ಅರಿಕೇಸರಿಯೊಡನೆ ಹೋರಾಡಿದನೆಂಬುದನ್ನೂ ಒಪ್ಪಲಿಕ್ಕಾ ಗುವುದಿಲ್ಲ (ಪಾಕೋಶ. ೦೯೩); ಬಡತನವು ಹೆಚ್ಚಿದ್ದುದರಿಂದ ರೈತರು ಅಜ್ಜ; ಮುತ್ತಜ್ಜರು ಹೂತಿಟ್ಟಿದ್ದ ರೂಪಾಯಿಗಳನ್ನು ಕೊಟ್ಟಿದ್ದರು (ಹುಟ್ಟಿಹ. ೩). **ಮುತ್ತಜ :** ಶ್ರೀಮತು ಹಟಿಹೊಳಲೂರ ಗೌಡುಗಳ ಮಂಮಕ್ಕಳು ಮುತ್ತಜ ಬಚ್ರಪ್ಪಗೌಡನ ಮಗ . . . ಮಾಡಿದ್ದು ದೇವಸ್ಥಾನ ದೀಪಮಾಲೆ ಕಂಭ ಸಹಾ ಕೆರೆ ಸಹಾ ೨ (ಎಕ. VIII, ತೀಪಮೂ. ೯೨-೦; ?)

[ಮುತ್ತ$_2$ + ಅಜ್ಜ$_2$]

**ಮುತ್ತಜ್ಜಿ** (ನಾ). ಅಜ್ಜಿಯ ಅಥವಾ ಅಜ್ಜನ ತಾಯಿ : ಅವರು ತಮ್ಮ ಮುತ್ತಜ್ಜಿಯ ಕಾಲದ ಒಡವೆಗಳನ್ನು ಹಾಗೆಯೇ ಕಾಪಾಡಿಕೊಂಡು ಬಂದಿದ್ದಾರೆ (ಕೂ೨). [ಮುತ್ತ$_2$ + ಅಜ್ಜಿ]

**ಮುತ್ತಡಸು** (ಕ್ರಿ). ಮುತ್ತನ್ನು ಹದಿ,– ಮೆಟ್ಟು,– ಕೂರಿಸು : ಇತ್ತೀಚ ದೊಳು ನಿಂದಿಹ ಜೀವರನ್ನದ ಪುತ್ತಳಿಗಳು ಸೊಡರ್ವಿಡಿದು ಮುತ್ತಡ[ಡ] ಸಿದ ಮಹಮಪಕರಣಗಳಿಂದೆ ಚಿತ್ರಯಿಸಿದುವಲ್ಲಲ್ಲಿ (ವೀಠಪಕ. ೨೨-೯).

[ಮುತ್ತು$_5$ + ಅಡಸು]

**ಮುತ್ತತ್ತಿ** (ನಾ). ಒಂದು ಸ್ಥಳದ ಹೆಸರು : ನನ್ನಿಯ ಸೇಕರ ಶ್ರೀ [ಮು] ತ್ತತ್ತಿಯಂ ನಾಗಕುಮಾರಯ್ಯಂಗೆ ಕೊಟ್ಟಿಡೆಸ್ಸೊಡೆ (ಎಕ. V. (R), ತಿರುಮ. ೭೯-೩; ಸಂ. 9ನೆಯ ಶಕ). [?]

**ಮುತ್ತಪ್ಪ** (ನಾ). ಅಜ್ಜನ ಅಥವಾ ಅಜ್ಜಿಯ ತಂದೆ; ಮುತ್ತಾತ : ಈತನು ನಹುಷನ ಮಗನಾದ ಯಯಾತಿರಾಯನು ; ನನಗೆ ತಂದೆಯು . . . ನಿಮಗೆ ಮುತ್ತಪ್ಪನು ಆಗಬೇಕು (ಕೃಪಾಅ. ೦೯೭); ನಮ್ಮ ಮುತ್ತಪ್ಪ ನಾದ ಹಿರಣ್ಯಕಶಿಪುವು ಧರಿಸಿದ ಕುಂಡಲವು ಇವು (ಕೃಕ್ನಾ. ೬-೪೪).

[ಮುತ್ತ$_2$ + ಅಪ್ಪ$_1$]

**ಮುತ್ತಬ್ಬೆ** (ನಾ). ೧.=ಮುತ್ತಜ್ಜಿ. ೨. ತಾಯಿಯ ಅಥವಾ ತಂದೆಯ ತಾಯಿ : ಅಜ್ಜಿ : ಪೆಱರ ಕಿಬ್ಬಿಲೊಳಿಮ್ಮಬ್ಬೆಯುಂ ಮುತ್ತಬ್ಬೆಯುಂ

ಸಾರ್ದು ಬದಗುಗೆಯ್ದುಣೆ (ಆದಿಪು. ೩-೩೪ ವ); ಪಡುವಲ್ ಕೀಟುಲೊಳ್ಪಮ್ಮ ತೊಬ್ಬು ಪಡುವರ್ಲ್ ಮುತ್ತಬ್ಬೆಯಾ ಕೊಣೆಯೊಳ್ (ಕಾವ್ಯಾವ. ೬೦೭); ಮುತ್ತಬ್ಬೆಯುಂ ಪೆತ್ತ ತಾಯುಂ ಮೃತ್ಯುನಿವಾಸಮಂ ಪುಗಲು (ಧರ್ಮಾಮೃ. ೪-೯೩ ವ). [ಮುತ್ತು₂+ಅಬ್ಬೆ₁]

**ಮುತ್ತಮ್ಮ₁** (ನಾ). = ಮುತ್ತಯ್ದೆ: ಇಂದ್ರನೆಂಬ ವಿದ್ಯಾಧರಚಕ್ರವರ್ತಿ ನಿಮ್ಮ ಪಿರಿಯ ಮುತ್ತಮ್ಮನಪ್ಪ ಮಾಲಿಯುಂ ಕೊಂದು ನಮ್ಮನ್ವಯದಿಂ ಬಂದ ಲಂಕೆಯುಂ ಕೊಟ್ಟೊಡೀತನದೆನಾಳುತ್ತಿರ್ಪಂ (ಕಂದಾಪೂ. ೦೦-೧೪೩ವ). [ಮುತ್ತು₂ + ಅಮ್ಮ₁]

**ಮುತ್ತಮ್ಮ₂** (ನಾ). ಒಬ್ಬಾತನ ಹೆಸರು: ಕೇಸವಾದಿತ್ಯರ ದೇಗುಲ ಸಿದ್ಧೇಸ್ವರ ಮುತ್ತಮ್ಮನ ಕಲ್ಲನ್ತನ್ನ ಮಕ್ಕಳಿರ್ವ್ವರ ಕಲ್ಲ ಮಾಡಿಸಿದನ್ (ಸೌಇಇ. XI-i, ೩೩-೬; 933). [ಮುತ್ತು₆ + ಅಮ್ಮ₁]

**ಮುತ್ತಯ** 'ಮುತ್ತಯ್ಯ' ನೋ.

**ಮುತ್ತಯಿದೆ** 'ಮುತ್ತಯ್ದೆ' ನೋ.

**ಮುತ್ತಯ್ದೆ**, ಮುತ್ತಯಿದೆ, ಮುತ್ತೈದೆ (ನಾ). ೧. ವೃದ್ಧಳಾದ ಸುಮಂಗಲಿ: ಶೋಭನಾರ್ಥಕ್ಕಾದಡಂ ಕೆಲವಾಭರಣಮಂ ತೊಡಿಸಿಪೇಳ್ಕು ಮದೇಭಗಮನೆಗೆನುತ್ತೊಸೆದು ಮುತ್ತಯ್ದೆ [ಪಾಠಾಂ. ತ್ತೈದೆ]ಯರು ಬಂದು (ಐಸಪು. ೪-೩೩). ೨. ಸುಮಂಗಲಿ; ಸುವಾಸಿನಿ: ಮಿಣುಕಿದೆ ಕಿಡಿಯುಬ್ಬನಿ ನೋಡ . . . ಮುತ್ತಯ್ದೆಯ ಮೂಗುತಿ ಹರಳಂತೆ (ಅಸಿಕೇ. ೩೩-೯); ಮುತ್ತಯ್ದೆ ಕೆಯ್ಯ ಭಿಕ್ಷೆ ಮೂರು ಹಿಡಿ ಸಾಕು (ಗಾದೆ).

**ಮುತ್ತಯಿದೆ:** ೨. ಮುತ್ತಯಿದೆಯರೂ ಉಂಭ ಧರ್ಮ್ಮ ಆಚಂದ್ರಾರ್ಕವಾಗಿ ನಡವ ಹಾಗೆ ... ಮಾಡಿದ ಧರ್ಮ್ಮ (ಮೈಇಂ. ೦೯೩೪, ೧೮-೩; 1498).

**ಮುತ್ತೈದೆ:** ೩. "ಚಿರಂಟೀ, ಸುವಾಸಿನೀ-ಈ ೨ ಮುತ್ತೈದೆಯ ಹೆಸರು" (ನಾಚರಾ. ೦೦೬); ಜಗವೆಲ್ಲಾ ಅಜೀಯಲು ಏನಗೊಬ್ಬ ಗಂಡನುಂಟು ಅನು ಮುತ್ತೈದೆ ಆನು ನಿಟ್ಟೈದೆ (ಏಕವ. ೩೦೩); ವಿಲಾಸದಿಂ ವಾಜಿದರು ಮುತ್ತೈದೆಯರು ಶೋಭನವ (ವಳಕ. ೩-೬೬); ಮಹಾಪುರುಷರು . . . ಮುತ್ತೈದೆಯರಿಗೆ ಅರಿಸಿನ ಕುಂಕುಮ ಫಲಪುಷ್ಪತಾಂಬೂಲಗಳನ್ನೂ ದಕ್ಷಿಣೆಯನ್ನೂ ಇತ್ತು ಸತ್ಕರಿಸಿದನು (ಶ್ರೀಚಾಡು. ೬).

**ಮುತ್ತಯ್ದೆಯಾಗು**, **ಮುತ್ತೈದಾಗು**, **ಮುತ್ತೈದೆಯಾಗು** = ಗಂಡನುಳ್ಳವಳಾಗಿರು; ಸುಮಂಗಲಿಯಾಗಿರು: ಚಿತ್ತಜಾರಿಯನೊಲಿಸಿ ಗಂಡನನುಮಂ ಪಡೆದು ಮುತ್ತಯ್ದೆಯಾಗಿ ಕೆಲದಿನಮಿರ್ದು ಚೆನ್ನೆ ಬಳಿಕು ತ್ತಮದ ಪದವಿಯಂ ಪಡೆವಳು (ಶಿವಪು. ೩೩-೯೩); ಮುತ್ತೈದಾಗಿರಬೇಕು ಮುನದಿಂದಲಿ ಹತ್ತುಸೂಜುನಾಮದೊಡೆಯ ಪರಿನಾಮ ಪತಿಯೆಂದು (ಪುರಂವ. ೦-೩೪ ಕ್ಲ); ಸರ್ವರೊಳಗೆ ಮುತ್ತೈದೆಯಾಗಿರ್ದು ವೈಧವ್ಯವನಾಂತು ಬಾಳುವೆನೆ (ವೀರಹಕ. ೬-೩೬).

**ಮುತ್ತೈದೆಪೂಜೆ** = ಕೋಮಟಿ ಜನಾಂಗದವರ ಮದುವೆಯಲ್ಲಿ ನಾಲ್ಕನೆಯ ದಿನ ಮಾಡುವ ಒಂದು ವಿಧಿ; ಹಿಂದೆ ಸುಮಂಗಲಿಯಾಗಿ ಸತ್ತವರ ನೆನಪಿನಲ್ಲಿ ಮಾಡುವ ಪೂಜೆ: (ಏಕಪ್ಮ. IV. ೧೬).

**ಮುತ್ತೈದೆ ಬಾಗಿನ** = ಶುಭಸಂದರ್ಭಗಳಲ್ಲಿ ಸುಮಂಗಲಿಯರಿಗೆ ಕೊಡುವ ಬಾಗಿನ: ಗೌರಿಪೂಜೆಯನಂತರ ಸುಮಂಗಲಿಯರಿಗೆ ಮುತ್ತೈದೆಬಾಗಿನ ಕೊಡುವುದುಂಟು (ಶೂ೨).

**ಮುತ್ತೈದೆಸಾವಿತ್ರಿ** = (ಪುರಾಣಗಳಲ್ಲಿ ಹೇಳಿರುವಂತೆ, ಸತ್ತ ಗಂಡನನ್ನು ಯಮನಿಂದ ಮರಳಿ ಪಡೆದು) ಶಾಶ್ವತವಾದ ಸುಮಂಗಲೀಪದವಿಯನ್ನು ಪಡೆದ ಮದ್ರದೇಶದ ಅಶ್ವಪತಿಯೆಂಬ ರಾಜನ ಮಗಳು: ಮುತ್ತೈದೆಸಾವಿತ್ರಿಪೂಜೆಗಳು ನಡೆದವು (ಶಾಂತಲಾ. ೦೦೦)

**ಮುತ್ತೈದೆಸಾವು** = ಗಂಡನಿಗಿಂತ ಮೊದಲು ಹೆಂಡತಿ ಪಡೆಯುವ ಸಾವು; ಸುಮಂಗಲಿಯಾಗಿ ಸಾಯುವಿಕೆ: ಮಲ್ಲಿದೇವರ ಬಳಿ ಕೇಳಿ ಕೊಡದ್ದು ಮುತ್ತೈದೆಸಾವನ್ನು! (ಸೌಂದಕ. ೩೩೨).

[< ಮುತ್ತು₂ + ಅಯ್ದೆ₂/ತುಳು. ಮುತ್ತಯಿದೆ, ಮುತ್ತೈದೆ; ತೆಲು. ಮುತ್ತಯಿದುವ, ಮುತ್ತೈವ, ಮುತ್ತೈದುವ]

**ಮುತ್ತಯ್ದೆತನ**, ಮುತ್ತೈದೆತನ (ನಾ). ಸುಮಂಗಲಿಯಾಗಿರುವಿಕೆ; ಸುವಾಸಿನಿಯಾಗಿರುವಿಕೆ: ಉದಯಾಸತಿ ತನ್ನ ನಲ್ಲಂ ಉದಧಿಯೊಳಿಳಿಯಲ್ಕೆ ತನಗೆ ಮುತ್ತಯ್ದೆತನಕ್ಕಿದು ಸಲ್ಲದೆನುತ್ತುಂ ಹಾರವ ಮಣಿಯುಂ ಕಿಳಲುದಿರ್ದಪೊಲುಡುಗಣಮೆಸೆಗುಂ (ಗಿರಿಕ. ೯-೬೩ ಆದಿಪ್ರ); ಓಸರಿಸುತಿದೆ ಮುತ್ತಯ್ದೆ [ಪಾಠಾಂ. ಮುತ್ತೈದೆ, ನಟ್ಟೈದೆ]ತನವೆಲೆ ಸರಮೆ ಕಳುಹಾ ಬೇಗ ಪತಿಯೆಡೆಗೆ (ಕೊರರಾ. ೬-೦೨-೩೪): ಬಾಲೆಗೀ ಲಕ್ಷಣಂ ಮುತ್ತಯ್ದೆ [ಪಾಠಾಂ. ಮುತ್ತೈದೆ]ತನಮಾಗಲರಿಯದು (ಕೃವಿಚಾ. ೩-೩೩); ಅವಳ ಮುತ್ತಯ್ದೆತನ ತನ್ನ ಮುಟ್ಟಿಗೇ ಗುಟ್ಟಾಗಿದ್ದ ವಿಷಯ (ಎರಿಕ. ೯೬).

**ಮುತ್ತೈದೆತನ:** ಎಳಸಿ ಮುತ್ತೈದೆತನದಲಿ ಮುಂದೆ ಹೋದಪೆಂ ಕಳುಹಿಕೊಡಬೇಕೆಂದು ಮೈಯಿಕ್ಕಿ ಬೇಡಿಕೊಂಡಳು ಗಂಡನಂ ಚಂದ್ರಮತಿ (ಹಕಕಾ. ೦೦-೨೦); ಕೇಳಿದಳು ಹರುಷದಲಿ ಪತ್ರಕರೇಳಿಗೆಯ ಮುತ್ತೈದೆತನದಲಿ ಬಾಳುವೆಯ ಕೈಕೊಂಡೆನೆಂದಳು ನಗುತ ಗಾಂಧಾರಿ (ಕಂಚಕ. ೨೦-೬); ಮನದೊಳು ನೆನೆದೊಡೆ ಬರ್ಪ ನಿನ್ನಾಳ್ದ ಮನಸಿಜನೆನಿಸಿ ಜೀವಿಪನೆಂದು ಮುತ್ತೈದೆತನವಿತ್ತನೀಶ್ವರ ರತಿಗೆ (ವೀರಹಕ. ೬-೯೦). [ಮುತ್ತಯ್ದೆ+-ತನ]

**ಮುತ್ತಯ್ಯ**, ಮುತ್ತಯ, ಮುತ್ತಿಯ, ಮುತ್ತ್ಯ, ಮುತ್ತ್ಯಾ, ಮುತ್ತ್ಯಾ (ನಾ). ೧. ಅಜ್ಜಿಯ ಅಥವಾ ಅಜ್ಜನ ತಂದೆ; ಮುತ್ತಾತ: (೪). ೨. ತಾತ; ಅಜ್ಜ: ಪಾರ್ತ್ಥಗ್ಗಯ್ಯಂ ತಮ್ಮ ಮುತ್ತಯ್ಯಂ ಮಾಡಿಸಿದ ಬಸದಿಯಂ ಪಡಿಸಲಿಸಿ . . . ತನ್ನ ಕೀರ್ತ್ತಿಶಿಲಾಸ್ತಂಭಮನಾಚನ್ದ್ರಾರ್ಕ್ಕತ್ತಾರಂಬರಂ ನಿಲಿಸಿದ (ಸೌಇಇ. XI-i, ೬೮-೯೬; 1045); ಅಪ್ಪನು ಡೋಹಾರ ಕಕ್ಕಯ್ಯನಾಗಿ ಮುತ್ತಯ್ಯ ಚೆನ್ನಯ್ಯನಾದರೆ ಆನು ಬದುಕೆನೆ (ಬಸವ. ೩೪೨); ಗುರುವಲಾ ಮುತ್ತಯ್ಯ ನಮ್ಮನು ಹೊರೆದ ತಂದೆಗೆ ತಪ್ಪಿದರು ಕಡುನರಕಗಳು ಪಾಂಡವರು (ಕುವ್ಯಾಭೀ. ೦೦-೦೨). ೩. ಮುದುಕ: ವೃದ್ಧ: ಮುತ್ತಯ್ಯ ಚದುರಿದೇನು (ಕಾವ್ಯಾವ. ೩೦೨); ಮುತ್ತಯ್ಯ ಮುಳುವುಳು ಅತ್ತ (ಅರಳು. ೨೩೬-೩).

**ಮುತ್ತಯ:** ೧. ಮುತ್ತಯ ಸರಸಿಜಾಸನ ನಮ್ಮ ಹಿರಿಯರ ಹೆಸರ ಕಿಡಿಸದಿರು (ಕೌಶಿರಾ. ೦೯-೨೩): ಭೂಪರ ಪಿತಪಿತಾಮಹರ ಅವರ ಮುತ್ತಯ ಬದರಿಕಾಶ್ರಮದಿ ಕೃತುಸಹಸ್ರದನಂತಕೋಟಿ ಕ್ಷಿತಿಯೊಳುಳ್ಳ ಸಮಸ್ತತೀರ್ಥದ ಗತಿಯನೀವ ಮಹಾನುಭಾವರ ಪಿತನು ನಡೆತಂದ (ಕಂಚಕ. ೩-೦). ೨. ಮುತ್ತಯನ ಕರತಳದ ಧನುವನು ಕತ್ತರಿಸಿದನು (ಕುವ್ಯಾಭೀ. ೯-೪೬); ಕುಶನೆ ಕೇಳೈ ನಿಮ್ಮ ಮುತ್ತಯ ದಶರಥನು ಮಾಡಿದ ಮಹಾಧ್ವರದೆಸಕಕಿದು ಹೊಯ್ಕೈಯೆನಲು ಮಾಡಿದನು ಸತ್ಕ್ರತುವ (ತೊರರಾ. ೦-೦೨-೨೬).

**ಮುತ್ತಿಯ:** ೧. "ಮುತ್ತಪ್ಪ-ಮುತ್ತಿಯ (ಮುತ್ತ್ಯಾ)" (ಜಾಪಕೋ-೩೨).

**ಮುತ್ತ್ಯ:** ೧. ನಮ್ಮ ಅಜ್ಜ ಮುತ್ತ್ಯದಿರು ಈ ಪಟ್ಟಣವು ಬುನಾದಿಯಿಂದಿರುತ್ತದೆಂದು ಹೇಳುವರು (ಮುಂಬಯಿ. ೬-೨೬೬). ೨. ಬಲ್ಲಿದ ಕಂಸನ ಮುರಿದಿಟ್ಟ ಕೋಲು ಉಲ್ಲಾಸದಿ ಹೆತ್ತಾ ತಾಯಿಯ ಕಡೆಯಿಲ್ಲದೆ ಬಿಡಿಸೀಸಲ್ಲಿಸಿ ಮುತ್ತ್ಯಗೆ ಪಟ್ಟವ ಗಟ್ಟಿದ ಕೋಲು (ಶ್ರೀಕೃಪಾ. ೬೦).

**ಮುತ್ತ್ಯಾ:** ೧. ಅಜ್ಜ ಆರುತಲೆ, ಮುತ್ತ್ಯಾ ಮೂರುತಲೆ ನಡೆದುಬಂದುದೆಂದು ಹೇಳಿದರು (ದಾಸಪು. ೬೬). ೨. ಶ್ರೀವಿಜಯದಾಸರ ತಂದೆಗಳು ಶ್ರೀನಿವಾಸಪ್ಪನವರಿಗೆ ಮುತ್ತ್ಯಾ ದಾಸರ ಮುತ್ತ್ಯಾ ಈ ಉಭಯರಿಗೆ ಸಾಯಿಯ ಜನ್ಮ ಬಂದಿತ್ತಂತೆ (ವಿಜದು. ೦೩೯).

**ಮುತ್ತ್ಯಾ:** ೨. ಹೆತ್ತ ತಾವೆಯುನಲುಯನೆ ಮುತ್ತ್ಯಾನ ಪ್ರಸ್ತಾಪವ ಹೇಳುವ (ಅಬುಚ. ೦೦೬-೩೦). [ಮುತ್ತು₂ + ಅಯ್ಯ₁]

**ಮುತ್ತರ₁** (ನಾ). ಮೂರುಬಗೆ, - ವಿಧ: ಇದು ಪೃಥ್ವಿಯೊಳಗಣ ಮುತ್ತರದ ಅಚ್ಚಗವು ಇದ ಬಿಡಿಸಾ ನ್ನಿಕಳಂಕಮಲ್ಲಿಕಾರ್ಜುನಾ (ವೀರಪಪಾ. ೦೬೨-೬೦೬) [<ಮೂಜು + ತರ₆ (<ತರಹ)]

**ಮುತ್ತರ₂** (ನಾ). ಒಬ್ಬಾತನ ಹೆಸರು : ಶ್ರೀಮದೆಱೆಯಪ್ಪರಸನ್ ಸಮಸ್ತ ರಾಜ್ಯಙ್ಗೆಯ್ಯುತ್ತಮಿರೆ ಅವನ ಸಾಮನ್ತಂ ಶ್ರೀಮುತ್ತರ ಅತಿರಥಗಣ್ಡ . . . ಆಸನ್ದಿನಾಡನಾಳುತ್ತಿರೆ (ಎಕ. XV, ಅರಸೀ. ೨೧೩-೪; ಸು. 890). [< ಮುತ್ತರಸ]

**ಮುತ್ತರಸ** (ನಾ). ಒಬ್ಬಾತನ ಹೆಸರು : ಕೆಱೆಗಾಳೆ ಮದವ ಮುತ್ತರಸರಾ ಮರಪ್ಪನ ಪರಮಿಳ್ಳ ಎಱಿತು ವೀರಸ್ವರ್ಗ್ಗಂ ಪೊಕ್ಕಂ (ಎಕ. XII, ತುರ್ವೆಗ. ೯೭-೪; ಸು. 750) ; ಮುತ್ತರಸರ್ವೂನೆಯಿಂ ಪಡುವಾದ್ಯುನೆಯುಂ ಮುತ್ತರಸರ ಊರುಂ ಇಟ್ಟು (ಎಕ. III, ತಿರುಮ. ೧೦೩-೪; ಸು. 900). [ಮುತ್ತು₅ + ಅರಸ₁]

**ಮುತ್ತಲ** 'ಮುಟ್ಟಿಗ' ನೋ.

**ಮುತ್ತಲು₁** 'ಮುಚ್ಚಲು' ನೋ.

**ಮುತ್ತಲು₂** 'ಮುಟ್ಟಿಗ' ನೋ.

**ಮುತ್ತಲು₃** (ನಾ). ಒಣಗಿದ ಬೇರು : ಆಡುಸೋಗೆಯ ಮುತ್ತಲು. ಅಮರದವಳ್ಳಿಯ ಮುತ್ತಲು, ಮುಳ್ಳುಸೊಂಡೆಯ ಮುತ್ತಲು, ಈ ಮೂರನ್ನು ಕತ್ತರಿಸಿ ಜಜ್ಜುಗುಟ್ಟಿ ಕಷಾಯಮಿಟ್ಟು . . . ಸೇವಿಸುತ್ತಾ ಬರಲು . . . ಹಳಿಕೆಮ್ಮಲು, ಉಬ್ಬಸ ಸಹ ಪರಿಹಾರವಹುದು (ಸಕವೈ. ೨೨೪).

**ಮುತ್ತಲೆ** (ನಾ). ಮೂರು ತಲೆ : ಅವನ ತಲೆಗೆ ತಲೆಯ ಪಳಿಯೊಂದಲಿದು ತಿರುಕೊಳವಿನಾಚಿ ಮಡಗಿದರೆ ಮುತ್ತಲೆಯೊಡನೆಯೊದಱಿತ್ತು ಶಿವಮಂತ್ರವ (ಛಾಪಶಂ ೯-೩೮); ಮುತ್ತಲೆ, ಮೂಱುತಲೆ (ಶಬ್ದಾನು. ೩೬೦ ಪ್ರದೀ). [< ಮೂಱು + ತಲೆ₁ ]

**ಮುತ್ತಲ್ಲಿಕ** 'ಮುತಾಲಿಕ' ನೋ.

**ಮುತ್ತವರ** (ನಾ). ಒಂದು ಮನೆತನದ ಹೆಸರು : ಇದಾ ಪಡೆದೊರ್ ಸುಸೇನಪದಿಯರ ಸ್ವರ್ಣ್ಣಗೋಸಾಸಿ ಮುತ್ತವರರ ಅಡಿಮುಪಸೆಟ್ಟಿಯ (ಎಇ. IX, ೨೨-೦೦; ?). [ ? ]

**ಮುತ್ತವ್ವೆ**, ಮುತ್ತವ್ವೆ (ನಾ). = ಮುತ್ತಜ್ಜಿ : ತಮ್ಮ ಮುತ್ತವ್ವೆ ಲಚ್ಚಿಯಬ್ಬರಸಿಯರು ಮಾಡಿಸಿದ ಬಸದಿಯಲಿಪ್ಪ ರಿ(ಷು)ಷಿಯರ್ಗಾಹಾರ ದಾನನಿಮಿತ್ತಂ . . . ಮೂಱು ಪಣಮಂ ಕೆತ್ತುಂಬಿತಾಗಿ ಬಿಟ್ಟರು (ಎಇ. XVIII, ೧೭೩-೯೩; 1145); ಮುತ್ತಾಗವೆ ಮುತ್ತವ್ವೆ ಚಂಗಳೆ ಆತ್ತಿಯೇ ನಾನಿಹಗಿಹುದು ನಿನಗರ್ತಿಯೇ (ಬಸಕೃ. ೪೩-೩೯). ಮುತ ವ್ವೆ : ತಮ್ಮ ಮುತವ್ವೆ ಲಚ್ಚಿಯಬ್ಬರಸಿಯರು (ಬೆಂಕೆಶಾ. ೦೯೯೦, ಶರಸಗಾಹು. ೩೨-೪೩; 1067). [ಮುತ್ತು₂ + ಅವ್ವೆ]

**ಮುತ್ತಟಿ³** (ನಾ). ಮೂರುಸತ್ತಿಗೆಗಳು : ಮುಕ್ಕೋಡಿ. ಮುತ್ತಟಿ³. ಮುಕ್ಕುಪ್ಪೆ (ಶಬ್ದಾನು. ೦೦೧ ಪ್ರಯೋ): [< ಮೂಱು + ತಟಿ³]

**ಮುತ್ತಾಣ್ಣ** (ನಾ). ಪಯಸ್ಸಾದ ಗಂಡ: ಏಂ ಸಿಷ್ಕರುಣೆಯೊ ಪಸುಮಗನೆನ್ನದೆ ಮುತ್ತಾಣ್ಮನೆನ್ನದೆ . . . ಮುಂಬಿಟ್ಟು ಕೊಂದಪಂ ಯಮರಾಜಂ (ಅತಶೃ. ೦೦-೨೩). [ಮುತ್ತು₂ + ಆಣ್ಮ (<ಆಳ್)]

**ಮುತ್ತಾತ** (ನಾ). = ಮುತ್ತಜ್ಜ: ''ಪ್ರಪಿತಾಮಹಃ—೧ ತತ್ಪಿತಾ . . . ತಂದೆಗೆ ಪಿತಾಮಹ, ಮುತ್ತಾತ'' (ಸಿದ್ಧಾಂತ. ೦೭೭); ಇಲ್ಲಿ ನಮ್ಮ ಮುತ್ತಾತ ಅಂದರೆ, ಭೀಮರಾಯರ ತಂಗಿ ಬಳಗದವರು ಒಬ್ಬರಿದ್ದರಂತೆ (ಮುಕೇ. ೯೦); ತಾತನೋ ಮುತ್ತಾತನೋ ಹೆತ್ತಯ್ಯನೋ ಕಟ್ಟಿಸಿದ ಮನೆಯಲ್ಲಿ ಅವರ ಸಂತತಿ ವಾಸಿಸುತ್ತಾರೆ (ವಚಶಾ. II, ೯೭೯). [ ಮುತ್ತು₂ + ತಾತ ]

**ಮುತ್ತಾರ** (ನಾ). ಮುತ್ತಿನ ಸರ ; ಮೌಕ್ತಿಕದ ಮಾಲೆ : ಇಡಿದೊತ್ತಿಂ ಪೊಳೆ ಮುಂದೆ ಪಾಯೆ ಕುಣಿಯುತ್ತಿತ್ತಾಡೆ ಮುತ್ತಾರಮುಂ . . . ಕಾದಲೆಯರ್ಕಳಲ್ಲಿ ಮೆರೆವರ್ ಚೆಂಡಾಟದೊಳ್ರಯ್ಯದಿಂ (ಪ್ರಸೊಮ. ೪-೨೯). [< ಮುತ್ತು₅ + ಆರ₂. / ತಮಿ. ಮುತ್ತಾರಮ್. / ಸಂ. ಮುಕ್ತಾಹಾರ]

**ಮುತ್ತಾಲಿಕ** ' ಮುತಾಲಿಕ ' ನೋ.

**ಮುತ್ತಿಂಥಿಬೋಯ** (ನಾ). ಒಬ್ಬಾತನ ಹೆಸರು : ಮುತ್ತಿನ್ಥಿಬೋಯಸ್ಯ ಕೌಣ್ಡಿಲ್ಯಗೋತ್ರ ವೆಣ್ಣಶರ್ಮ್ಮಣ (ಇಆ. VII, ೦೪೯-೯೭ : 688). [ ? + ಬೋಯ ]

**ಮುತ್ತಿಕ್ಕು** 'ಮುದ್ದಿಕ್ಕು' ನೋ.

**ಮುತ್ತಿಗೆ** (ನಾ). ೧. ಆವರಿಸುವಿಕೆ ; ವ್ಯಾಪಿಸುವಿಕೆ ; ಹಬ್ಬುಗೆ : ಸುಡುವ ಪೊಸವಿಷದುರಿಯ ಮುತ್ತಿಗೆಯ ನಡುವಿರ್ದ ಮೃಡನಂತೆ [ಪಾಠಾಂ. ನಡುವಿರ್ದ ಮೃಡನಂತೆ ಬಿಜಯದಸಿ] . . . ಇರ್ದನವನಿಪ ಸುರಿಯ ದಾಳಿಯೊಳಗೆ (ಹತಣ. ೦೦-೦೨) ; ಮತ್ತೆ ಕವಿದುದು ಪೆಣನ ತುಳಿದೊತ್ತೊತ್ತೆಯಲಿ ರಿಪುಸೇನೆ ಮುಂಜಿನ ಮುತ್ತಿಗೆಯ ರವಿಯಂತೆ ಕಾಣಿಸು ಕಳಶಸಂಭವನ (ಕುಮಾವ್ಯಾ. ೦೯-೨೦) ; ಈ ತಮದ ಮುತ್ತಿಗೆ ತೆಗಸುವಡೆ ಮಾರ್ತಾಂಡನೇ ಕ್ಷಮನು (ಸಿಭಾಗ. ೦೦-೨೭-೦೩). ೨. ಬಳಸುವಿಕೆ : ಪದ್ಮಾವತಿಯುಂ ಆದಯ್ಯನಂ ಗಾಢಾಲಿಂಗನದ ಮುತ್ತಿಗೆಯತ್ತಲಗ್ಗಳವಾಗಿ ಸಕಲೇಂದ್ರಿಯಂಗಳೊಳಗುಗೊಟ್ಟು . . . ಸವಿವೃತ್ತಿಪರ್ಪ ಸುವಿಸುವಯದೊಳಂ (ಅದಂ. ಹ. ೯೪೪-೨೦). ೩. ಮೇಲೆ ಬೀಳುವಿಕೆ ; ಆಕ್ರಮಣ ; ಧಾಳಿ : ಅ ಪರ್ವಲಮೆಯ್ದೆ ಸುತ್ತಟಿದು ಮುತ್ತಿಗೆಯಂ ನೆಱೆ ಬಿಟ್ಟು ಬಂದು ಸೈತೊರ್ವ್ವಳಿಗೊಂಡು ಸಾದರ್ದಿರದಾಗಳೆ ಸಿಂಹ ಬಳಾವನೀಶನಾ (ಕುಸುಮಾ. ೦೦-೯೭) ; ಮುಸುಗಣದ ಮುತ್ತಿಗೆಗೆ ಏಳ ಬೆಸ್ಕಸನೆ ಬೆಱಗಾಗುತ್ತ ಸುಯ್ದನು (ಕೌಶಿರಾ. ೨೦-೯) ; ನವಿಲ್ಲಾ ಪೊಳಲ ಸೊತ್ತರಿಸಿದಾ ಮುತ್ತಿಗೆಯೊಳ್ ಹೆಂಡಿರ್ ಮಕ್ಕಳೆಲ್ಲರುಂ ಸತ್ತುಹೋದಂ ತಾಯಿತು (ಸಮ್ಯಕ್. ೬-೩೪).

ಮುತ್ತಿಗೆಯನಿಕ್ಕು = ಎರಗು ; ಆಕ್ರಮಣಮಾಡು : ಬರುತಲೇ ಮುತ್ತಿಗೆಯನಿಕ್ಕಿದರೆರಡುಮೈಯಲಿ ಬೀದಿವರಿದೊಡಮುರಿದು ವೆಡ್ಡೈಸಿದರು (ಕೂರಣ. ೭-೭-೩೨) ; ಮುತ್ತಿಗೆಯನಿಕ್ಕಿಕೊಂಡಿರ್ಪೆಳಮಿಸಿಲ್ಗಳೆನಲು ಗಗನ ಪಡರ್ದ ಸೌಧಂಗಳ ಮರೀಚಿಯಿಂ ಪೊಗರುಗುವ ಪೊಚ್ಚಪೊಸಪೊನ್ನ ಕೋಂಟೆಗಳ ಕಾಂತಿಗಳೈದೆ ಮುಸುಕಿಕೊಂಡೆಸೆದಿರ್ದುವು (ಕೃಬಿಶಾ. ೦೭-೭). **ಮುತ್ತಿಗೆ ಹಾಕು** = ೧. ಸುತ್ತುವರಿ ; ಬಳಸು : ಅದರ ಸುತ್ತಲೂ ಹೊರಗೆ ಸೊಳ್ಳೆಗಳು ಮುತ್ತಿಗೆ ಹಾಕಿ ಝೇಂಕಾರ ಮಾಡುತ್ತಿರುತ್ತವೆ (ಪಂಟರು. ೯೨) : ಜನ ಅವನಿಗೆ ಮುತ್ತಿಗೆ ಹಾಕಿದರು (ಕೃಶರು. ೨೮೭). ೨. = ಮುತ್ತಿಗೆಯನಿಕ್ಕು : ಮುಸಲ್ಮಾನರು ರಾಜಧಾನಿಗೆ ಮುತ್ತಿಗೆ ಹಾಕಿ ತಮ್ಮೆಲ್ಲರನ್ನೂ ತುಕ್ಕಡ ತುಕ್ಕಡ ಮಾಡಿಬಿಡುವರು (ಬಂಕಿಮ. ೩೦೯). [ಮುತ್ತು₁ + — ಇಗೆ. / ತಮಿ. ಮುತ್ತಿಕ್ಕೈ. ಮುಟ್ಟಿಕ್ಕೈ. ಮುಜ್ಜುಕ್ಕೈ ; ತುಳು. ಮುತ್ತಿಗೆ, ಮುತ್ತಿ ; ತೆಲು. ಮುತ್ತಿಕ]

**ಮುತ್ತಿಗೆದೆಗೆ** (ಕ್ರಿ). ಆಕ್ರಮಣವನ್ನು ಕೈಬಿಡು ; ದಾಳಿಯನ್ನು ಹಿಂದಕ್ಕೆ ತೆಗೆದುಕೊಳ್ಳು : ಅಳುಕಿ ಮುತ್ತಿಗೆದೆಗೆದು ಸಾಲ್ವನ ದಳ ಮುರಿದು ನಿಜಪುರಕೆ ಹಾಯ್ದುದು (ಕುಮಾವ್ಯಾ. ೨-೨೩) ; ಮಿಗೆ ಬಲಾಹಕ ಕಡೆಗೈದಲು ಕಾಂತಿಯಿಂ ಸೊಗಸುವ ಮಾರ್ತಂಡನಂತೆ ರಘುಗಣ್ಮಗಿಸಿದುದು ಪಟ್ಟಣ ಬಲು ಮುತ್ತಿಗೆದೆಗೆಯಲು (ಕಂಪರ. ೦೩-೦೨೭). [ಮುತ್ತಿಗೆ + ತೆಗೆ₁]

**ಮುತ್ತಿಗೆಯಿಕ್ಕು** (ಕ್ರಿ). ಎರಗು ; ಆಕ್ರಮಣ ನಡೆಸು : ಅರಿಪುರದೆಡ ಬಲ ಗಡಿದುರ್ಗಗಳನೀಗ ಭರದೆ ಮುತ್ತಿಗೆಯಿಕ್ಕಿ ಸೆಳೆಯೆ (ಕಂಪರ. ೪-೩೦). [ಮುತ್ತಿಗೆ + ಇಕ್ಕು]

**ಮುತ್ತಿಡು** ' ಮುದ್ದಿಡು ' ನೋ.

**ಮುತ್ತಿಯ** ' ಮುತ್ತಯ್ಯ ' ನೋ.

**ಮುತ್ತಿಸು** (ಕ್ರಿ). ಸುತ್ತುಗಟ್ಟುವಂತೆ ಮಾಡು; ಸುತ್ತುವರಿಯಿಸು : ''ಮುತ್ತಿಸು-ದುರ್ಗಸಂವೇಷ್ಟನೇ'' (ಕಧಾ).

ಮುತ್ತಿಸಿಕೊಳು = ಆವರಿಸಲ್ಪಡು; ಸುತ್ತುವರಿಯಲ್ಪಡು : ಬೆಲ್ಲವೆ

ನೀ ಮುದ್ದುಪೆಂಗಳ ಮೃದುವಾದ ಬೆಲ್ಲಪಾದಿರದೆ ಬಂದಿಲ್ಲಿ ಪೊಲ್ಲೆಹ ನೊಣನ ಮುತ್ತಿಸಿಕೊಳಬೇಡ (ಪೋಹಕ. ೨೦-೨೪). [ಮುತ್ತು₁ + -ಇಸು₃]

**ಮುತ್ತು₁** (ಕ್ರಿ). ೧. ಆವರಿಸು; ಕವಿ; ವ್ಯಾಪಿಸು : ಒಂದು ದೆಸೆಯೊಳ್ ತಗುಳ್ದ ಮುಕುಂದನ ಕರಚಕ್ರಂ. . . ಒಂದು ದೆಸೆಯೊಳ್ ಕುಂದದೆ ದಹನಾರ್ಚಿ ಸುತ್ತಿ ಮುತ್ತುವ ಪದದೊಳ್ (ಹಂಪಭಾ. ೩-೯೮); ಬಲವವಗಡಿಸಿ ನೊಕ್ಕುದು ಮಸಗಿದಂಬುಧಿ ಬಡಬನನು ಮೊಗೆವಂತೆ ಮುತ್ತಿತು ಕಳಶ ಸಂಭವನ (ಕುಮಾ ದ್ರೋ. ೧೭-೩೩); ಕಳಸಕಂಚಗಳ ಕಾವಿನಿಯುಕ್ತಿಗಳ ಕಾಂತಿ ಬಳಸಿ ಮುತ್ತಿತು ನೆರವಿಗರ (ಕಂಸವ. ೯-೬೮). ೨. ಸುತ್ತುಗಟ್ಟು; ಸುತ್ತುವರಿ; ಬಳಸು : ಸುತ್ತಿದ ಸಂದನವನದಿಂ ಮುತ್ತಿದ ಕೆಯ್ವೊಲಿ ದಿನೆಸೆವ ಪದ್ಮಾಕರದಿಂದುತ್ತುಂಗಜಿನಾಲಯದಿಂದುತ್ತಮಪುರವೆನಿಸಿ ನೆಗಳ್ದಿ ಚಂಪಾಪುರದೊಳ್ (ಧರ್ಮಾಮೃ. ೩-೩); ಸಿಂಹವರ್ಮಧರಾದೇವರ ಸೇನಾಪತಿ ಚಂಪಾಪುರಮಂ ಪರಿಯಿಟ್ಟು ಮುತ್ತಿದಂ ಮೂವಳಸಿಂ (ಕ್ಷತ್ರ. ೩-೦೨೭); ಹಾವಿನ ಹೆಡೆಯ ತುಳಿವರೇ! ಅಂಜಿಕಿಲ್ಲವೆ ಹಾವು ಮೈಗೆ ಮುತ್ತಿರಲು ಹೇಗೆ ಜೀವಿಸನೆ (ಪುರಂದ. ೨-೭೩-೯). ೩. ಧಾಳಿಮಾಡು; ಆಕ್ರಮಣ ನಡೆಸು; ಲಗ್ಗೆ ಹಾಕು : "ಮುತ್ತು—ನಿರೋಧಾವರಣೇ, ಮೌಕ್ತಿಕೇ ಚ" (ಕವಾಚ); ಬಲ್[ವ]ತೆ ಸು (ಸೂ)ದ್ರಕನ್ ಪ್ರಳಯಾಧನು ಮುತ್ತಿ ಅಣಿಯೆ [೦] ಕದಿವೊಂಗಂ ಚಲಮುಜಿಪೊಂಗಂ ಅಟ್ಟೊಪ್ಪೊಂಗಂ ಕುಡಲಪ್ಪೊಂಗಂ ಬಿಟ್ಟುನೊ(ನೆ) ಆಚಾರ್ಯ(ನ್ಯಾ)ನ್ (ಎಇ. XXIV, ೧೯೩-೭ ; ಸು. 885) ; ಅನಿತುಂ ಬಲಮುಂ ಮುತ್ತಿ ಬಳಾಕಾವರ್ತರ್ ಸುತ್ತಲುಮೋಸಾಡಿ ಪಿರಿದ ತಿಣಿಕಂ ತಂದರ್ (ಆದಿಪು. ೧೪-೭೦) ; ವಜ್ರಾಯುಧನ ಮೊಮ್ಮನ ರಥವ ನಿರ್ದಾಯದಲಿ ಮುತ್ತಿದರು ಕುರುಸೇನಾಪಹಾರಥರು (ಕುಮಾ ದ್ರೋ. ೩-೨೪). ೪. ಗುಂಪುಗೂಡು ; ಸಂದಣಿಸು : ಪೆಣ್ದುಂಬಿಗಳ್ ಮುತ್ತುತುಂ ಮುಸುಕುತ್ತುಂ ಬರೆ ಬಂದುದಿಂದ್ರವನದಿಂ ಪೂದಂವಲ್ (ಹಂಪಭಾ. ೯-೯೭); ಶ್ರೀವೀರನಾಥಂ ನೆಲಸಿರೆ ವಿಪುಳಾದ್ರೀಂದ್ರದೊಳ್ ಶೋಭೆಯಿಂ ಮುತ್ತಿದ ದೇವಾನೀಕದಿಂ . . . ಶ್ರೇಣಿಕಂ ಸಂತೋಷಂ ಮಿಗೆ ಕೂರ್ತು ಕೇಳ್ದನಧಿಕಶ್ರೀಗಾರ್ಮಮಂ ಧರ್ಮಮು (ಧರ್ಮಾಮೃ. ೦-೬೦) ; ಮುತ್ತಿ ಮುಸುಕುತ್ತು ಜನಂ ಕೆಡೆದಿರ್ದ ಯೋಗಿಯುಂ (ವರ್ಧ. ೩-೦೦). ೫. (?) : ಈ ಧರ್ಮಕೆ ಮುಟುವ ಮಾಜು ಸಲ್ಲದು ಮುತ್ತುವ ಬತ್ತೆ ಸಲ್ಲದು (ಕಾಇ. IX-ii, ೪೭೪-೩೨ ; 1472).

**ಮುತ್ತಿಕೊಳ್, ಮುತ್ತಿಕೊಳ್ಳು**=೧. ಆವರಿಸು; ಕವಿ; ಮುಸುರು : ತನ್ನೆರಡುಕೆಯ್ಯೊಳಮೆಚ್ಚ ಶರಾಳಿಗಳ್ ಭಯಂಕರತರಮಾಗೆ ಭೂಭುವನ ಮೆಲ್ಲಮನೊರ್ಮೆಯೆ ಸುತ್ತಿ ಮುತ್ತಿಕೊಂಡಿರೆ ದೆಸೆಗಾಣಲಾಗದು (ಹಂಪಭಾ. ೦೨-೦೦೭); ಮಧ್ಯಾಹ್ನಸೂರ್ಯನ ಜೀಮೂತವೆ ಮುತ್ತಿಕೊಂಡಂತೆ ಆತನ ಶರಕಿರಣಗಳಿಂದೆ ಮದಗಜವ್ರಾತ ನುಗ್ಗಾದುದು (ಪೋಹಕ. ೩೪-೪೦); ಬೆಲ್ಲಕ್ಕೆ ನೊಣಗಳು ಮುತ್ತಿಕೊಳ್ಳುತ್ತಿವೆ (ರೂ). ೨. ಮುತ್ತಿಗೆ ಹಾಕು; ಧಾಳಿ ನಡೆಸು: ಪೆಣ್ಪೈಮನಮನೆಯ ಮುತ್ತಿಕೊಳ್ವ ಜ್ವಾರಟಿವಿನೊಳೆ (ಎಕ. VIII, ಸೊರಬ. ೨೨-೨; ಸು. 800); ಕರ್ಣನಂ ಸುತ್ತಿ ಮುತ್ತಿಕೊಂಡು . . . ವಿವಿಧಾಯುಧಂಗಳೊಳಟ್ಟುಮೆಚ್ಚುವಿಂಜಿದುಮುಗುರ್ವುಮದ್ಭುತಮುಮಾಗೆ ಕಾದುವಾಗಳ್ (ಹಂಪಭಾ. ೦೨-೦೦೮ ವ); ಮತ್ತೆ ರಥವಜುವತ್ತುಸಾವಿರ ಮುತ್ತಿಕೊಂಡುದು ಗಜವನು (ಕುಮಾ ದ್ರೋ. ೩-೩೯).

[ದೇಶಿ ತಮಿ. ಮಲ. ಮುಜ್ಜು; ತುಳು. ಮುತ್ತು; ತೆಲು. ಮುಟ್ಟು; ಕೋತ. ಮುತ್]

**ಮುತ್ತು₂** 'ಮುದ್ದು₁' ಪರಾ.

**ಮುತ್ತು₃** 'ಮುದ್ದು'. ನೋ.

**ಮುತ್ತು₄** 'ಮುಟ್ಟಿಗೆ' ನೋ.

**ಮುತ್ತು₅** (ನಾ). ೧. ನವರತ್ನಗಳಲ್ಲಿ ಒಂದು : ಮೌಕ್ತಿಕ : "ಮುಕ್ತಾ ಮೌಕ್ತಿಕಂ, ಶೌಕ್ತಿಕೇಯಂ – ಈ ೩ ಮುತ್ತು" (ಅಭಿನಾ. ೧೯೯); ಗಜಯುಗಿವರ್ಧಂ ನಲೆ ಪಾಂಗಲೆಯುದೆಯುಂ ಶಬ್ದದೊಂದಿರ್ದೊದೆ ಮುತ್ತುಂ ಮೆಚ್ಚಿಸುಂ ಕೋದಂತಕ್ಕುಂ (ಕಬಾ. ೨-೩); ಲಂಬಣಂ ಪಜಿಯೆ ಮುತ್ತಿನ ಕೇಡನೆ ನೊಂದಿ ನೋಡಿ ಬಳ್ಳುತ್ತಿರೆ (ಹಂಪಭಾ. ೯-೬೪); ಮುತ್ತು ನೀರಲ್ಲಿ ಹುಟ್ಟಿ ಮುತ್ತೆ ನೀರಪ್ಪುದೆ (ಬಸವ,೭೭೭); ಮತ್ತಹಸ್ತಿಗಳ ಮಸ್ತಕದಿಂ ಬಿದಿರಿಂ ಫಣೀಂದ್ರೋತ್ತಮಾಂಗದಿನಗುರ್ವಿಪ ಮಂದಿಯ ಕೋಂಬಿಳಿಂ ಪತ್ತುವಿಟ್ಟಗನಿಕುಂಜದೊಳೊಕ್ಕಳಮುತ್ತನಾಮುಕ್ತಮಿರ್ದ ಶಬರಪ್ರಿಯಕಾನಿಸಿ ಯರ್ಕಳಿಂ (ಕಾವ್ಯಾವ. ೦೦೯; ಕಮಡ. ೧೩೩ ಕ್ರಡೋ. ನೋ ) : ಧವಳಶಂಬಿ ರ್ನುಪ ಮಸ್ತಕಾಂಬುಭೃದ್ವ್ಯತಿಕಂತ ಘನಸತ್ಕಣಂಗಳೊಳ್ ತಮೆಸುವೇಣು ಪೊಳಂದಾತ್ತದಂಷ್ಟ್ರ ಉತ್ಸವದ ಕೋರೆಯೊಳಭೇಂದ್ರದಂತದೊಳ್ ... ಸಿತೇಕ್ಷು ವಿನ ಪರ್ವದೊಳ್ ಶಾಲಿಯುಜ್ಜ್ವಳಾಯತದ ತಂಬದೊಳ್ ಲಲಿತಶುಕ್ತಿಯೊಳ್ ಲೋಕದೊಳ್ ಇಳಾಕರ[ಟ]ಮಾಯುದ್ಭಜದೊಳಂ ಸಮುಪ್ಲ್ಪತಮಾಕಳಾಯುತದ ಮುತ್ತು ತಾನೊಗೆದುದಲ್ತೆ ಭೂಷಾಪರಂ (ಚಾಚಾ. ೨-೦-೩೯). 'ಎಳೆಮುತ್ತು', 'ಜಾತಿಮುತ್ತು' ಪರಾ. ೨. ಮೂಗುಬಟ್ಟಿನ ಕೆಳಗೆ ನೇತಾಡುವಂತೆ ಧರಿಸುವ, ಮೂರು ಅಥವಾ ನಾಲ್ಕು ಮುತ್ತು, ವಜ್ರ, ಚಿನ್ನ ಮುಂತಾದುವುಗಳಿಂದ ಸಣ್ಣಸಣ್ಣ ಗುಂಡುಗಳ ಆಕಾರದಲ್ಲಿ ಮಾಡಿದ ಒಂದು ಬಗೆಯ ಆಭರಣ: ಕರಮೆಸೆದತ್ತು . . . ಅಂಬರವ ಪುಳಿಂದಿ ತಾಳ್ದಿಸಿದ ಮೂಗಿನ ಮುತ್ತು (ಗದಾ. ೪-೯೩). ೩. ಆನೆಯ ಕುಂಭಸ್ಥಳದಲ್ಲಿರುವುದೆಂದು ಭಾವಿಸಲಾದ ಬಿಳುಪಾದ ಗುಂಡನೆಯ ವಸ್ತು : ಮತ್ತಗಜಂಗಳ ಮಸ್ತಕಕ್ಕೆ ಪಾಯ್ದುಗಿಬಗಿಮಾಡುವಲ್ಲಿ ಪೊಳೆವಂಕುಶದಂತಿರೆ ಕೊಂಕುಮೆತ್ತ ಕೂರುಗುರ್ಗಳೊಳೆಯ್ದೆ ತೆತ್ತಿಸಿದ ಮುತ್ತಿನ ಲೋಭದೆ ಕೊಲ್ವೆರೆತ್ತಲುಂ ಮೃಗಪತಿಯೂಥಮಂ (ಕಾದಂಬ. ೯೯); ಮುತ್ತಿನ ಬಯ್ಕೆಯುಂ ತೆಗೆವೊ ಡಂಜಮೆಲ್ತೆ ಮದೀಯ ಖಡ್ಗಮೆಂದೆತ್ತಿದ ದಾಯದಿಂ ಗಜದ ಮಸ್ತಕಮಂ ಕಡುಕೆಯ್ದು ಪೊಯ್ದೊಡಾ ನತ್ತಿಯ ಮುತ್ತು ರ್ನುಲ್ಲೆನೆ ರಣಾಂಗಣದೊಳ್ ಕವಲ್ತೆ . . . ಖಂಡೆಯಕಾಜಿರೊಪ್ಪಿದರ್ (ವಕೆಳು. ೭-೭೨); ತಾರಕೆಗಳೆನೆ ದಭ್ರವೆನೆ ರಿಪುವಾರಣದ ಮಸ್ತಕದ ಮುತ್ತುಗಳೋರಣಿಸಲೊಪ್ಪಿದುದು (ಕುಮಾ ದ್ರೋ. ೬-೪೩). ೪. (ಅಲಂ) ಪ್ರೀತಿಪಾತ್ರರನ್ನು ಕರೆಯುವಾಗ ಬಳಸುವ ಒಂದು ಪದ : ಏಕೆ ಅತ್ತೆ ಹೇಳು ಮುತ್ತೆ ಹೊತ್ತು ಮರುಗುವಂದದಿ (ಪಾರ್ಕ. ೦೩-೦). ೫. ಕಣ್ಣೀರಿನ ಹನಿ : ಅಶ್ರುಬಿಂದು : ಎರಡೇ ಎರಡು ಮುತ್ತುಗಳು ಅವನ ಕಣ್ಣುಗಳಿಂದ ಉದುರುವುವು (ತುಂಗಪ. ೦೧೭). ೬. ಶ್ರೇಷ್ಠವಾದುದು ; ಉತ್ತಮವಾದುದು : 'ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸಪಶ್ಯತಿ' ಎಂಬುದು ಗೀತೋಪನಿಷತ್ತಿನ ಮುತ್ತಿನ ಮಾತು (ನಾಡೋಜ. ೨).

**ಮುತ್ತಿನಕಂತೆ**=''ಲಿಂಗವಂತರ ಒಂದು ಗೋತ್ರನಾಮ'' (ಎಕ್ಕಾ. ೨೪). **ಮುತ್ತಿನಚಿಪ್ಪು, ಮುತ್ತಿನಸಿಪ್ಪು** = ಮುತ್ತು ಹುಟ್ಟುವ ಚಿಪ್ಪು : ಬಿಟ್ಟದೆ ಬಿಗಿದ ಮುತ್ತಿನ ಚಿಪ್ಪಿನಂದದಿ . . . ಇರ್ದಗಣಿತಾಮಲ ಪುಣ್ಯಚರಿತೆಯ ಕಂಡನಾ ಹನುಮ (ತೊರಾ. ೩-೩-೨೪) : ಈಗಿಡವ ಎಲೆಗಳು ಮುತ್ತಿನ ಚಿಪ್ಪು (oyster shell) ನಂತೆ ಎರಡು ಮುಚ್ಚಳಗಳುಳ್ಳವು (ವಾಂಸ್ಪ. I. ೩೦೩) ; ''ಮುಕ್ತಾಸ್ಫೋಟಃ, ಶುಕ್ತಿಃ – ಈ ೨ ಮುತ್ತಿನ ಸಿಪ್ಪು'' (ಕರಾಹು. ೦೦೯-೪೨). **ಮುತ್ತಿನಬಲೆ** = ೧. ಮುತ್ತುಗಳನ್ನು ಸೇರಿಸಿ ಹೆಣೆದ ಬಲೆ : ರತ್ನದ ಸಂಕೋಲೆಯಾದರೆ ತೊಡರಲ್ಲವೆ ಮುತ್ತಿನ ಬಲೆಯಾದರೆ ಬಂಧನವಲ್ಲವೆ (ಮಹಾದೇ. ಬ. ೪೨-೯೨). ೨. ಮುತ್ತುಗಳನ್ನು ಹೆಣೆದು ಮಾಡಿದ ಒಂದು ಬಗೆಯ ಕೇಶಾಲಂಕಾರಸಾಧನ : ತುಂಬಿನ ಮುತ್ತಿನ ಬಲೆ ಬಿನ್ನಗೇದಗೆಗಳಿಂ ಸಿಂಗರಿಸಿದಳು (ಕುಂಬಾ. ೨೯-೯೭). **ಮುತ್ತಿನಬೀದಿ** = ಮುತ್ತುಗಳನ್ನು ಸಾಲುಸಾಲಾಗಿ

ಪೋಣಿಸಿ ಮಾಡಿದ ಅಲಂಕಾರಸಾಧನ (?) : ಪೊಂಗೆಜ್ಜೆ ಘಂಟೆ ಮುತ್ತಿನ ಜೋಬಿಯ ಜೀನ ಸಿಂಗರ ಲೋವೆಯನದಟ ಅಂಗದೊಳಗೆ ಸಂಗಡಿಸಲಾ ದಿವ್ಯತುರಂಗ ಕಣ್ಗೆಸೆದು ರಾಜಿಸಿದುದು (ಕುಂಡಾಸಾಂ. ೯-೮೯). ಮುತ್ತಿನ ಬೊಟ್ಟು = ಬೈತಲೆಯ ಮೇಲೆ ಧರಿಸುವ ಒಂದು ಬಗೆಯ ಮೌಕ್ತಿಕದ ಆಭರಣ : ಪೆಜೆನೊಸಲುಜೆ ಪಣೆಗಟ್ಟು ಮುತ್ತಿನ ಬೊಟ್ಟು . . . ಚಿನ್ನಗೇದಗೆಗಳಿಂಗಳಂ ಸಿಂಗರಿಸಿದಳು (ಕುಂಡಾಸಾಂ. ೨೯-೯೭). ಮುತ್ತಿನ ಮುಗುಳು = ಮುತ್ತುಗಳಿಂದ ಮಾಡಿದ ಒಂದು ಬಗೆಯ ಕರ್ಣಾಭರಣ : ಕಿವಿಗೆ ಮುತ್ತಿನ ಮುಗುಳನ್ನು ಅಂದವಾಗಿ ಜೋಡಿಸಿ ದೇವರಿಗೆ ಕೈಮುಗಿದು ಚಾಮರಸೇವೆಗೆ ಆರಂಭಿಸಿದಳು (ದೇವಹಂ. ೦೦). ಮುತ್ತಿನ ಸತ್ತಿಗೆ = ಮುತ್ತುಗಳ ಕುಚ್ಚುಗಳನ್ನು ಕಟ್ಟಿದ ಛತ್ರಿ : ಹಗೆ ಸುತ್ತಿ ಸಾವಡಸುತಿದೆ ನಿನ್ನ ಮುತ್ತಿನ ಸತ್ತಿಗೆಯನೆತ್ತು ಸಲಹು ಭೂಭುಜ (ಹಕಾ. ೭-೯). ಮುತ್ತಿನ ಸರ = ಮುತ್ತುಗಳನ್ನು ಸೇರಿಸಿ ಮಾಡಿದ ಹಾರ : ನೀವು ಈ ದಿನ ಬೆಳಗ್ಗೆ ನನಗೆ ಉಡುಗೊರೆಯಾಗಿ ಕಳುಹಿಸಿದ ಮುತ್ತಿನ ಸರ — ಅದರ ಬೆಲೆ ಎಷ್ಟೋ (ಏಕ್ಯಾಮು. ೦೩). ಮುತ್ತಿನಸುಣ್ಣ = ಮುತ್ತನ್ನು ಸುಟ್ಟು ಅದರ ಭಸ್ಮವನ್ನು ಹಾಕಿ ಮಾಡಿದ ಸುಣ್ಣ : ಮುತ್ತಿನ ಸುಣ್ಣ—ಒಂದು ಮಡಕೆಯಲ್ಲಿ ಒಳ್ಳೆಮುತ್ತು ಒಂದು ತೊಲೆ ಹಾಕಿ . . . ಪುಟಪಾಕಲು ಬೆಳ್ಳಗೆ ಸುಣ್ಣವಾಗುವದು (ಕಾಮಶಾ. ೨೭೦). ಮುತ್ತಿನ ಸೇಸೆ = ಮುತ್ತುಗಳಿಂದ ಮಾಡಿದ ಅಕ್ಷತೆ : ಗೆಲಿದನೆಸಸಂತನೆಂದು ಮುತ್ತಿನ ಸೇಸೆಯಂ ಪರಸಿ ತಳಿದರಿನಸಂಗನೆಯರು (ತೊರಬ. ೯-೯-೨೩). ಮುತ್ತಿನಹಾರ = ಮುತ್ತಿನ ಸರ : ವಕುಳಮಾಲೆಯೆಂಬ ವಿಳಾಸಿನಿಗೆ ಮುತ್ತಿನ ಹಾರಮಂ ಲಂಚಂಗೊಟ್ಟು (ಪುಣ್ಯಾಶ್ರ. ೦೦-೯ ವ); ಮುತ್ತಿನ ಹಾರ ಹಜೆಯಲು ಕೆದಜೆದವು ದೆಸೆದೆಸೆಗೆ ಮುತ್ತುಗಳು (ಕುಪ್ಯಾಭಿ. ೯-೯೭). ಮುತ್ತಿನಾರ = ಮುತ್ತಿನ ಸರ : ಪೊಸಮೃಣಾಳದ ತೋಳ್ವಳೆ ಮುತ್ತಿನಾರಂ . . . ಕಣ್ಗೊಳಿಸೆ ನೆಲಸಿರ್ದರಲ್ಲಿ ಜಲದೇವಿಯರಂತೆ ವಿಳಾಸಿನೀಜನಂ (ಕಾದಂಬ. ೪೩೯). ಮುತ್ತಿನಾರತಿ = ಮುತ್ತುಗಳನ್ನು ಅಲಂಕಾರವಾಗಿ ಹುದುಗಿಸಿದ ತಟ್ಟೆಯಲ್ಲಿ ಮಾಡುವ ಆರತಿ : ಮುತ್ತೈದೆವೆಂಗಳು . . . ಪಿಡಿಯುಕ್ಕಿದಳೆದು ಬಂದರು ಮುತ್ತಿನಾರತಿವಿಡಿದಾ ರತಿದೇವಿಯೊಡನೆ (ಮೋಹತ. ೦೭-೯೮); ಮುತ್ತಿನಾರತಿ ರನ್ನದಾರತಿಗಳ ತಂದು ಮುತ್ತೈದೆಯರೆತ್ತಿ . . . ತರಳನನರ್ತಿಯಿಂದಲಿ ಪಾಡಿದರು (ಕುಸಪ. ೯-೭೦). ಮುತ್ತಿನುಂಡೆ = ೧. ಮೌಕ್ತಿಕದ ಗೋಲಿಯು.—ಗೊಂಡೆ: ತೆತ್ತಿಸಿದ ನವರತುನದಿಂದಲಿ ಮುತ್ತಿನುಂಡೆಯ ಜೂಳಿಯಂಗಳ . . . ರಥಚಳಕ ಮೇಳೆಸಿಯ (ಕುಪ್ಯಾದ್ರೋ. ೭೦೩. ಕಂ. ೨೭೯). ೨. ಹಾಲು ತುಂಬಿ ಪಕ್ವವಾದ ಕಾಳುಗಳ ತನೆ : ಮುತ್ತಿನುಂಡೆಯ ಮುಡಿದ ಸಿರಿನೆತ್ತಿಯನ್ನುತ್ತು ಬತ್ತಮಂ ಬಿತ್ತಿ ಬೆಳೆಯುವ ಉತ್ತಮದ ಹೊತ್ತು ಹತ್ತಿರಕೆ ಹತ್ತಿರಕೆ ಬರುತಿರುವುದೊತ್ತೊತ್ತಿ! (ಕೋಗಿಲೆ. ೦೯-೭೦). ಮುತ್ತಿನೋಲೆ = ಮುತ್ತುಗಳಿಂದ ಮಾಡಿದ ಓಲೆ ; ಮೌಕ್ತಿಕದ ಕರ್ಣಾಭರಣ : ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ . . . ಸೆಳ್ಳುಗುರ ಮೆಯ್ವೊಳೆಪಿಂ ಮಿಗೆ ಪೆರ್ಚುವೆತ್ತು ಕಣ್ಗೊಳಿಸಿ ದಳಾಕೆ (ಕಬ್ಬಿಗಾ. ೭೯). [< ಸಂ. ಮುಕ್ತಾ./ಪ್ರಾ. ಮುತ್ತಾ. / ತಮಿ. ಮುತ್ತು, ಮುತ್ತಮ್, ಮುರುಮ್ಪು; ಮಲ. ತುಳು. ಮುತ್ತು ; ಕೊಡ. ಮುತ್ತ್ ; ತೆಲು. ಮುತ್ತಿಯಮು, ಮುತ್ತೆಮು, ಮುತ್ಯಮು ; ತೊದ. ಮುತ್]

**ಮುತ್ತುಂಗಾಲ್** (ನಾ). (ಅಲಂ) ಮುದಿವಯಸ್ಸು ; ಇಳಿವಯಸ್ಸು (?) : ಓಲೆಯೊಡನೆ ಮುತ್ತುಂಗಾಲೊಳ್ ನರೆ ಬರ್ಪನ್ನೆಗಮಿರು (ಕಪುದ. ೨೪೭ ಕ್ರಿಯೋ). [ ? ]

**ಮುತ್ತುಕ** 'ಮುಟ್ಟುಗ' ನೋ.

**ಮುತ್ತುಕಾರಾಟಿ** (ನಾ). ಒಂದು ಬಗೆಯ ಮರ : "ಮಾಚಿಪತ್ರೆ, ಗ್ರಂಥಪರ್ಣೆ, ಮುತ್ತುಕಾರಾಟಿ . . . ಕಾಡ ಉದ್ದು" (ಸಸ್ಯಶಿ. ೬೬); ಮುತ್ತುಕಾರಾಟಿ, ಮಾಸಿಪತ್ರೆ (ವ್ಯಕಿಗಿ. ೧೦-೭೯೩). [ಮುತ್ತು$_7$ + ಕಾರಾಟಿ]

**ಮುತ್ತುಕೊಡು** 'ಮುದ್ದುಗೊಡು' ನೋ.

**ಮುತ್ತುಗ** 'ಮುಟ್ಟುಗ' ನೋ.

**ಮುತ್ತುಗಣಿ** (ನಾ). ಮೌಕ್ತಿಕವು ದೊರೆಯುವ ನೆಲೆ ; ಮುತ್ತಿನ ಆಶ್ರಯಸ್ಥಾನ : ಪೇರಾನೆವೆಟ್ಟುಗಳ ನೆತ್ತಿಯ ಮುತ್ತುಗಣಿಯನಗುಟ್ಟಿ ಪಪ್ಪುವ ಗುದ್ದಲಿಗಳೆನಿಸಿ . . . ಅಳುಂಬಮಾದ ದಂಷ್ಟ್ರಾಂಕುರಂಗಳೊಳಂ (ವರ್ಧಮಾ. ೦೦-೩ ವ). [ಮುತ್ತು$_5$ + ಗಣಿ$_2$ (< ಕಣಿ$_6$)]

**ಮುತ್ತುಗದಬಳ್ಳಿ** (ನಾ). ಒಂದು ಬಗೆಯ ಸಸ್ಯ : ಮುತ್ತುಗದ ಬಳ್ಳಿ, ಮುಳ್ಳುಮುತ್ತುಗ (ವ್ಯಕಿಗಿ. ೦೩-೨೬೬). [< ಮುತ್ತುಗ + ಬಳ್ಳಿ]

**ಮುತ್ತುಗಾರ** (ನಾ). ಮೌಕ್ತಿಕವನ್ನು ಮಾರುವವನು : ಮುತ್ತಿನ ವ್ಯಾಪಾರಿ : ಮುತ್ತುಗಾರ ಭಾಗ್ಯವನ್ನು ಲೆಕ್ಕಿಸನವನು. ತಾಯ ಮುಖದಿಯ ಹರ್ಷಬಾಷ್ಪವೇ ಅವನ ಬದುಕಿನ ಹುರುಳು (ಉದಯ್ಯಾಲಿ. ೬-೬).

[ಮುತ್ತು$_5$ + — ಗಾರ (< — ಕಾಜ)]

**ಮುತ್ತುಗಿಡಿ** (ನಾ). ಆಡರಿಸುವ ಕಿಡಿ ; ಮುಸುರುವ ಕಿಡಿ : ಪೊತ್ತ ಹೊಗರಿನ ಮೊಜೆವ ಗಜಳಗಳ ಮುತ್ತುಗಿಡಿ [ಶಾಕಾಂ. ಪ] ಗಳ ಹೊಳೆವ ಧಾರೆಯ ಪೊತ್ತುದಂಬೋಳವು ಮೃತ್ಯುಂಜಯನ ಸಮ್ಮುಖಿಕೆ (ಕುವ್ಯಾಭ. ೬-೦೦). [ಮುತ್ತು$_1$ + ಕಿಡಿ]

**ಮುತ್ತುಗು** (ಕ್ರಿ). ಮುತ್ತು ಸುರಿ,–ಚೆಲ್ಲು : ಕರಿಶಿರದತ್ತಣಿಂ ಮುತ್ತೊತ್ತಕ್ಕು ಮೆಬಲ್ಲಿ ಕರಿಶಿರದಿಂ ಮುತ್ತೊಕ್ಕುವೆಂದಾಯ್ತು (ಕಶಬ್ದ. ೦೬೩ ಕ್ರಿಯೋ); ಕಣ್ಬನಿಗಳ್ಬೊಟ್ಟನೆ ಸತಿಯ ತೋರಮೊಲೆಗಾರಮನಾಗಳ್ನುಡಿಸಿ ನನ್ನಿ ಮಾಡಿದುವಬ್ಬರೆ ಮುತ್ತೊಕ್ಕುವೆಂಬರಣಕದನಾಡಿಯಂ (ರರ್ಮನಾ. ೩-೧೪೦).

[ಮುತ್ತು$_5$ + ಉಗ್ಗು$_1$]

**ಮುತ್ತುದೊಡವು** (ನಾ). ಮುತ್ತಿನ ಒಡವೆ ; ಮೌಕ್ತಿಕದ ಆಭರಣ : ನೇಜಿಲ ಪಣ್ಣಾನೆಣ್ಣೆಯುಳಿ ಎಳಸಿ ತೊಯ್ದಂತಪ್ಪ ಮೈಯುಮಪ್ಪಳಿಸುವಾನೆಯ ಮುತ್ತುದೊಡವಿನ ಚೆಲುವೆ (ಶಾಳ್ಯಸಾ. ೩-೦೦). [ಮುತ್ತು$_5$ + ತೊಡವು]

**ಮುತ್ತುಮಣಿ** (ನಾ). ಮುತ್ತಿನ ಮಣಿ; ಮೌಕ್ತಿಕ : ಪೊಸಜೋಳರಾಶಿಯಂ ಮುತ್ತುಮಣಿ ಮಾಡಿದಾ ಬಸವನೆಯ್ದಂದಪಂ (ಮಂದಿಕ್ಕ IV. ೬೨೩ ಬಸವಸ್ತೋತ್ರ). [ಮುತ್ತು$_5$ + ಮಣಿ$_3$]

**ಮುತ್ತುಮಸರ** (ನಾ). ಮುತ್ತನ್ನು ಮಾರುವ ಅಂಗಡಿ : ನೀರೊಳಿರ್ದೊಡೆ ಬೆಲೆವಡೆಯೆವಾವೆಂದು ಮುನ್ನೀರನುಳಿದು ಬಂದಂತೆ ನೀರನುಗುಳುತಿಸೆದವು ಮುತ್ತುಮಸರಗಳ್ (ಕುಂಡಾಸಾಂ. ೩-೭೬). [ಮುತ್ತು$_5$ + ಮಸರ]

**ಮುತ್ತುಮಸೆ** (ನಾ). ಮುತ್ತುಗಳನ್ನು ಅಳವಡಿಸಿ ಮಾಡಿದ ಪೀಠ ; ಮುತ್ತಿನ ಹಸೆಮಣೆ : ಆ ಯುವತೀಜನಂ . . . ತೋಯಜನೇತ್ರ ಸೌಂದರಿಗೆ ಮಂಗಳಮಜ್ಜನಮಂ ನಿಮಿರ್ಚಿಸಲ್ಕಾಯತಮಾಗಿ ಮುತ್ತುಮಸೆಯಂ ನಲಿದಿಕ್ಕಿಪರ್ (ಉದ್ಭಟ. ೯-೧೨). [ಮುತ್ತು$_5$ + ಮಸೆ$_2$]

**ಮುತ್ತುಸಾರೆ** 'ಮುಚ್ಚೋರೆ' ನೋ.

**ಮುತ್ತುಹ** (ನಾ). ಮೇಲೆ ಬೀಳುವಿಕೆ ; ಮುತ್ತಿಗೆ ಹಾಕುವಿಕೆ ; ಆಕ್ರಮಣ : "ಅಭ್ಯವಸ್ಕಂದನಂ ಅಭ್ಯಾಸಾದನಂ – ಪರಿದು ಮುತ್ತುಹ" (ನಾಶಾ. ೬). [ಮುತ್ತು$_1$ + —ಹ$_2$ (< —ಪ$_3$)]

**ಮುತ್ತೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು ; ಅದಿಮರ್ಜುತ್ತೆ : ಮುತ್ತೆ ನನೆದೋಜೆ ತಳಿಗಳ ನಾಡೆ ಪೇಜೆ . . . ಶೋಭಿಸುತ್ತೆಡವಿಪದೆತ್ತ [ಮುಗ್ಗಳಿಸಿ ನಾಡೆ ವಿ]ಗುರ್ವಿಸುವಷ್ಟೆ ಕಾಲದೊಳ್ (ಕುಸುಮಾ. ೬-೦೩). 'ಪರಿಮುತ್ತೆ' ಪರಾ. [< ಅದಿಮರ್ಜುತ್ತೆ]

**ಮುತ್ತೆರಿ** (ನಾ). ಒಂದು ಸ್ಥಳದ ಹೆಸರು ; ಗುರ್ದ್ದ(ಟ್ಟ)ದ ಪಳ್ಳಮ ಮುತ್ತೆರಿಯ(ಯೆ) (ಇಆ. VIII. ೨೦೩. ೨೩ : 10ನೆಯ ೬೩). [ ? ]

**ಮುತ್ತೈರೆಯು** (ನಾ). ಒಬ್ಬಾತನ ಹೆಸರು : ನಗರಲ ನನ್ನಯ್ಯನ ದೇಗುಲಕ್ಕೆ ಮುತ್ತೈರೆಯುಂ ಪಡೆದು ಕೊಟ್ಟಂ (ಎಕ. III, ನಂಜನ. ೧೫೩-೩ ; ಕ್ರಿ. ಶ. 970 ?). [ಮುತ್ತು$_5$ + ಎರೆಯ (<ಎಱೆಯ)]

**ಮುತ್ತೈಱ** 'ಮೂದೆಱ' ನೋ.

**ಮುತ್ತೈದೆ** 'ಮುತ್ತಯ್ದೆ' ನೋ.

**ಮುತ್ತೈದೆತನ** 'ಮುತ್ತಯ್ದೆತನ' ನೋ.

**ಮುತ್ತೈದೆವೆಣ್**, **ಮುತ್ತೈದೆಹೆಣ್ಣು** (ನಾ). ಸುಮಂಗಲಿ: ಸುವಾಸಿನಿ. **ಮುತ್ತೈದೆಹೆಣ್ಣು** : ಇಷ್ಟು ದೊಡ್ಡ ಅರಮನೆಯಲ್ಲಿ ಒಬ್ಬೇ ಒಂದು ಮುತ್ತೈದೆಹೆಣ್ಣು ಇಲ್ಲದಿರುವುದು ಎಲ್ಲ ಸಂತೋಷಗಳನ್ನೂ ಮೆಟ್ಟಿ ನಿಂತಿದೆ (ಶಾಂತಲಾ. ೩೦).

**ಮುತ್ತೈದೆವೆಂಗಳು** (ಬಹುವ) : ಮುತ್ತೈದೆವೆಂಗಳು ಸಿರಿಮುಡಿಯ ಪೂದುಂಡೆಗಳೊಡನೆ ಹಿಡಿಯಕ್ಕಿದೆಳೆದು ಬಂದರು ಮುತ್ತಿನಾರತಿವಿಡಿದು (ಮೋಹನ. ೧೭-೯೬). [ಮುತ್ತೈದೆ (<ಮುತ್ತಯ್ದೆ) + ಪೆಣ್]

**ಮುತ್ತೈದೆಹುಣ್ಣಿವೆ** (ನಾ). ಚೈತ್ರಶುದ್ಧಹುಣ್ಣಿಮೆ ಮುತ್ತು ಅಂದು ಆಚರಿಸುವ ಎಲ್ಲಮ್ಮನ ಹಬ್ಬ : ಚೈತ್ರಶುದ್ಧಹುಣ್ಣಿವೆಯಂದು ಶ್ರೀರೇಣುಕಾ(ಎಲ್ಲಮ್ಮ) ದೇವಿಯ ಸೌಮಾಂಗಲ್ಯಸಮಾರಂಭ ನಡೆಯುತ್ತಿದೆ. ಇದು ಮುತ್ತೈದೆಹುಣ್ಣಿವೆ ಎಂದು ಜನಸಾಮಾನ್ಯರಿಗೆಲ್ಲ ಪರಿಚಿತವಾಗಿದೆ (ಕಾಪ್ಪು. ೬೯). ¶ ಹಿಂದೆ ಕಾರ್ತವೀರ್ಯನಿಂದ ಜಮದಗ್ನಿಯು ಪ್ರಾಣಾಂತಿಕವಾಗಿ ಗಾಯಗೊಂಡಾಗ ರೇಣುಕೆಗೆ ವೈಧವ್ಯವು ಪ್ರಾಪ್ತವಾಗಿ ಪರಶುರಾಮನಿಂದ ಪುನಃ ಮುತ್ತೈದೆತನವು ಲಭಿಸಿತು. ಇದರ ನೆನಪಿಗಾಗಿ ಎಲ್ಲಮ್ಮನ ಜಾತ್ರೆಯಂದು ಭಕ್ತರು ದೇವಿಯ ಕೈಬಳೆಗಳನ್ನು ಒಡೆದು ಪುನಃ ತೊಡಿಸುತ್ತಾರೆ.

[ಮುತ್ತೈದೆ (<ಮುತ್ತಯ್ದೆ) + ಹುಣ್ಣಿವೆ (<ಪುಣ್ಣಿಮೆ)]

**ಮುತ್ತೈದೆಹೆಣ್ಣು** 'ಮುತ್ತೈದೆವೆಣ್' ನೋ.

**ಮುತ್ತೋಣಿ** (ನಾ). ಒಂದು ಓಣಿಯ ಹೆಸರು : ಮದೊರ ಕಾಲುವೆಯ ದಾಟಿ ಹಂಗಿಯ ತೆವರು ಮುತ್ತೋಣಿಯುಂ ದಾಟಿ . . . ಮೂಡಣ ಪಳ್ಳವ ಕೂಡಿತು (ಎಕ. IV (R), ಎಳಂದೂ. ೯೯-೧೮; 963). [? + ಓಣಿ]

**ಮುತ್ತ್ಯಾ** 'ಮುತ್ತಯ್ಯ' ನೋ.

**ಮುತ್ಯ** 'ಮುತ್ತಯ್ಯ' ನೋ.

**ಮುತ್ಯಾ** 'ಮುತ್ತಯ್ಯ' ನೋ.

**ಮುತ್ಸಂಜೆ**, **ಮುಚ್ಚಂಜೆ**, **ಮುಸ್ಸಂಜೆ** (ನಾ). ಸೂರ್ಯನು ಮುಳುಗುವ ಹೊತ್ತು ; ಇಳಿಹೊತ್ತು ; ಸಾಯಂಕಾಲ : ತುದಿಹಗಲಿನ ಮಬ್ಬಿನ ಮೇಲೆ ಸೂರ್ಯಾಸ್ತದ ಬೆಳಕು ಬಿದ್ದು ಅಂದಿನ ಮುತ್ಸಂಜೆ . . . ಮನೋಹರವಾಗಿ ಕಾಣುತ್ತಿತ್ತು (ಶಿಶಿರ. II. ೯೮). **ಮುಚ್ಚಂಜೆ** : ಬಂಧನಂ ನಚ್ಚಣಿಯು ಮೊಲೆಗಟ್ಟೊಳಚ್ಚರಿಯ ರಾಗಮುಂ ಮುಚ್ಚಂಜೆಯೊಳಗಲ್ಲದಿಲ್ಲವಾ ದೇಶದೊಳಗೆ (ಉದ್ಭಟ. ೨-೧೪) ; ಕೆಂಜವಿಯ ದೀಪ್ತಿ ದೇಗುಲ್ಬರಗಳೆಸದವಾ ಸಂಜೆಯೊಳ್ನಿಶಿಯ ಮುಚ್ಚಂಜೆಯೊಳ್ಪೊಂಬಿಸಿಲ್ಸಂಜೆಯೊಳ್ (ಮಿದೇಶ. ೦೩-೪) ; ಎಲ್ಲವೂ ನಶ್ವರ, ಮುಚ್ಚಂಜೆಯ ಮುಗಿಲಿನಂತೆ (ತುಂಗಭ. ೩೪). **ಮುಸ್ಸಂಜೆ** : ಈ ಮುಸ್ಸಂಜೆ ಹೊತ್ತಿಗೆ ಏಕೆ ಬಂದೆ ? (ಊಕಥ. ೯೮) ; ಅತಿ ಬಿಳುಪಲ್ಲದೆ ಮುಸ್ಸಂಜೆಯ ನಸುಗೆಂಪಿನಲ್ಲಿ ಮಿಲನವಾಗಬಹುದಾದ ವೈವರ್ಣ (ಕಾರ್ಗಿಡ. ೭೮).

[< ಮುತ್ತು$_2$ + ಸಂಜೆ]

**ಮುತ್ಸದ್ದಿ**, **ಮುಸದ್ದಿ** (ನಾ). ೧. ರಾಜ್ಯದ ವ್ಯವಹಾರಗಳನ್ನು ನೋಡಿಕೊಳ್ಳುವ ಒಬ್ಬ ಅಧಿಕಾರಿ : ಹನುಮನೀ ... ಮುತ್ಸದ್ದಿಯನು ಕಂಡು ಕೊಂಢ್ನೋಗಿ (ಅಕ್ಕಾಲಿ. ೩೦-೯೦) ; ಅರಮನೆಯ ಮುತ್ಸದ್ದಿಗಳು ಪುರೋಹಿತರನ್ನೂ ರಾಮಣ್ಣನವರನ್ನೂ ಆ ಬೈಠಕ್ಖಾನೆಗೆ ಕರೆದುಕೊಂಡು ಹೋದರು (ಶ್ರೀರಾಮ. ೭೩) ; ಆಯಾಸ್ಥಳಗಳಲ್ಲಿ ಅವರವರನ್ನು ಅರಮನೆಯ ಮುತ್ಸದ್ದಿಗಳು ಕೂಡಿಸುತ್ತಿದ್ದರು (ಸದೇವ. ೧೪೦). ೨. ನಿಯೋಗಿ; ಕಾರ್ಯಭಾರಿ : ಮೃತಪಟ್ಟವನ ಮುತ್ಸದ್ದಿಯಿಂದ ಅಥವಾ ಅವನ ನವುಕರನಿಂದ ಹಾಗೆ ಮಾಡಲ್ಪಟ್ಟರೆ ೭ ಸಂವತ್ಸರಗಳ ಪರ್ಯಂತರ (ಗ್ರಾವಶಾ. ೦೯೬). ೩. ಕಾರ್ಯನಿರ್ವಾಹಕ ; ವ್ಯವಸ್ಥಾಪಕ : ಸ್ಥಾನಿಕ ಪೆಬ್ಬಾರರು ಒಬ್ಬ ಮುತ್ಸದ್ದಿ ಯಾ ಮೆನೆಜರರನ್ನು ಇಟ್ಟುಕೊಂಡು ಸರ್ಕಾರಕ್ಕೆ ಲೆಕ್ಕ ಪತ್ರಗಳನ್ನು ಕಳುಹಿಸುತ್ತಿದ್ದರು (ಕುಗುಜಾ. ೦೦೩). ೪. ರಾಜಕಾರಣಪಟು ; ರಾಜನೀತಿನಿಪುಣ : ಅನೇಕ ವರ್ತಮಾನ ಪತ್ರಿಕೆಯ ಯುದ್ಧನಿರೀಕ್ಷಕರು ದೊಡ್ಡ ಮುತ್ಸದ್ದಿಗಳಂತೆ ಹೀಗೆ ಹೀಗೆ ಆಗುವುದು ನಿಶ್ಚಿತವೆಂದು ಕಾಯಾಸ ಕಟ್ಟಿ ಹೇಳುತ್ತಿದ್ದರು (ಅನ್ನ. ೩೩). ೫. ತೀಕ್ಷ್ಣವಾದ ಬುದ್ಧಿಯುಳ್ಳವನು; ಚಾಣಾಕ್ಷ : ಶರೀಫನು ತುಂಬ ಮುತ್ಸದ್ದಿ. ಈ ಕುಟಿಲತಂತ್ರಗಳನ್ನೆಲ್ಲ ಬಲ್ಲ (ಪೂರ್ಣಿ. ೨) ; ರಾವಜೀ ಕಾಕಾ, ಮುತ್ಸದ್ದಿ (ದೀಕಥ. II. ೩೭೩). **ಮುಸದ್ದಿ** : ೬. ಕರಣಿಕ; ಕಾರಕೂನ; ಗುಮಾಸ್ತ : ಸೀಮೆಯ ಜಮಾಖರ್ಚಿನಾ ಲೆಕ್ಕವ ಮುಸದ್ದಿಗಳೊಳಾಲಿಸುವುದೊಂದೆಸೆಯ ಠೊಕ್ಕ ಬರಬೇಕೆಂದು ವಿವರಿಸುತಲೊಂದೆಸೆಯ . . . ವಿಚಾರಿಸುತ್ತ (ಕೃಷ್ಣವಿ. ೩-೯೯).

[← ಅರ. ಮುತ್ಸದ್ದೀ; ಹಿಂ. ಮುತ್‌ಸದ್ದೀ; ಮರಾ. ಮುತ್‌ಸದೀ, ಮುತ್‌ಸದ್ದೀ, ಮುತ್ಸುದೀ, ಮುತ್ಸುದ್ದೀ]

**ಮುತ್ಸದ್ದಿತನ** (ನಾ). ೧. ರಾಜನೀತಿನೈಪುಣ್ಯ: ರಾಜತಂತ್ರಜ್ಞತೆ : "ರಾಜನೀತಿನಿಪುಣತೆ, ಮುತ್ಸದ್ದಿತನ" (statesmanship. ಶಪ್ರಿ. ೭೮). ೨. ಅತಿಬುದ್ಧಿವಂತಿಕೆ ; ಚಾಣಾಕ್ಷತನ : ಶ್ಯಾಮರಾಯನಲ್ಲಿ ಪಂತ ಕುಟುಂಬದ ದೊಡ್ಡಸ್ತಿಕೆ ಇರದಿದ್ದರೂ ಅವರಲ್ಲಿಯ ಮುತ್ಸದ್ದಿತನ . . . ರೋಮರೋಮದಲ್ಲಿ ಸೆಲೆಯಾಡುತ್ತಿತ್ತು (ದೀಕಥ. II. ೫೦).

[ಮುತ್ಸದ್ದಿ + — ತನ]

**ಮುದ** (ನಾ). ಹಿಗ್ಗು ; ಸಂತೋಷ; ಆನಂದ : "ಪ್ರೀತಿ ಸುಖಂ ಮುದಂ . . . ಸುಸುಖಮೆನಿಸಿಕ್ಕು" (ಮಂಗರಾ. ೬-೨೩) ; ವಿದಿತಸವಾ ಸಂಸ್ಕೃತೋದಿತಪದಂಗಳೊಳ್ ಪುದಿದು ಬೆರಸಿ ಬರೆ ಕನ್ನಡದೊಳ್ ಮುದಮನಪ್ಪು ತರ್ಕೆಂ (ಶಬ್ದಾ. ೦-೩೩) ; ಭರತೇಶ್ವರಂ . . . ವನಾಭ್ಯಂತರಮಂ ತೊಟಲಿ ಮನಸ್ಕಂತಿಲ್ಲದ ಮುದಮನುಂಟು ಮಾಡಿದುದು ಬನಂ (ಆದಿಪು. ೦೦-೯೦) ; ಅರ್ಜುನನು . . . ಮುರಹರನೊಡನೆ ಮುದದಲಿ ರಥಕೆ ಬಂದನು (ಕುವ್ಯಾದ್ರೊ. ೨-೦೬). [ಸಂ. ಮುದಾ]

**ಮುದಂಗೆಡು** (ಕ್ರಿ). ಸಂತೋಷವನ್ನು ಕಳೆದುಕೊಳ್ಳು ; ಆನಂದವಿಲ್ಲದಾಗು : ಬಹುದುಃಖದೊಗ್ಗಿನಿಂ ತಾಮಸದಿರ್ಕೆಯಿಂ ನೆರೆ ಮುದಂಗೆಡುತ್ತೈದನೆ (ಶಕಕ. ೦೬೦-೨೩). [ಮುದ + ಕೆಡು$_1$]

**ಮುದಂದಳೆ**, **ಮುದದಳೆ** (ಕ್ರಿ). ಹಿಗ್ಗು ; ಸಂತೋಷಿಸು : ತೊಳಗುವ ರನ್ನದೊಟ್ಟಿಲೊಳೆ ಪಟ್ಟಿರಿಸುತ್ತೆ ಕುಮಾರನಂ ಮುದಂದಳೆದೆಳ ವೆಣ್ಗಳೊಲ್ದು . . . ಏಘು ಜೋಯೆಸುತೊಪ್ಪಿ ತೂಗಿದರ್ (ರಾಜಶೇ. ೯-೬೦). **ಮುದದಳೆ** : ಚತುರಾಸ್ಯನಿವರನೆಲ್ಲಿಂದಲ್ಲಿ ಕೂಡಿಸಿದನೆಂದು ಯತಿ ಮುದವಳೆಯಲು (ನವಮೋ. ೩೩-೦೬). [ಮುದ + ತಳೆ$_1$]

**ಮುದಂಬಡು**, **ಮುದವಡು** (ಕ್ರಿ). = ಮುದಂದಳೆ : ನಿಜಬಳಂ ಮುದಂಬಡುತ್ತಮಿರೆ ಪಡಿಬಳಂ ಕಂಗೆಡುತ್ತಮಿರೆ . . . ಪನ್ನತಿಕೆಯಿಂ ತನ್ನ ಬಲಂಬೆರಸು ಸುತ್ತಿ ಪತ್ತಿದಾಗಳ್ (ರಾಜಶೇ. ೬-೦೦೩ ವ). **ಮುದವಡು** : ಬಂದು ಹೊಕ್ಕನು ಪುರವ ಮೆಚ್ಚಿವತಿಚಂದವನು ನೆಱೆ ನೋಡಿ ಮುದವಡುತಂದು [ ಪಾಠಾಂ. ಮನದೊಳಗೆಂದು ಕೊಂಡಾಡಿದನು] ಋತುಪರ್ಣನ ಮಹಾಸಿರಿಯ (ನಳಚ. ೬-೨೮) ; ನಿಟ್ಟಿಸುವಳು ಕೆಲಬಲನ ಇಟ್ಟದಿರೊಳು ಕಂಡುಂತಾಗಲಲ್ಲೆ ಮುದವಟ್ಟು (ಕರ್ಣಾಕ. ೨೨೭). [ಮುದ + ಪಡು$_1$]

**ಮುದಂಬೆರು** 'ಮುದಂಬೆಱು' ನೋ.

**ಮುದಂಬೆಱು,** ಮುದಂಬೆರು, ಮುದವೆಱು (ಕ್ರಿ) = ಮುದಂದಳೆ: ನಿಂಬಿಯಕ್ಕನ ಚೆನ್ನಭಕ್ತಿಗೆ ಮೆಚ್ಚಿಯಾರೋಗಿಸಿ ಮುದಂಬೆತ್ತು (ಬಸವು. ೨೪-೬೫); ಜಂಭರಿಪು ನಿಜರೂಪುಮೋಱುತೆ ಪರಸಿ ಮುದಂಬೆತ್ತು ಸಗ್ಗಕೆಯ್ದಿದಂ (ಶಬಶಂ. ೨-೬೨). **ಮುದಂಬೆರು :** ಎತ್ತಿದ ಪಲ್ಲವ ಪ್ರತಿಮ ಪಾಣಿಂಗಳಿಂ ವನದೇವಿಯರ್ ಮುದಂಬೆತ್ತೊಡನಿತ್ತರೀ ತೊಡವನೆಲ್ಲ ಮನನ್ಯಕುಜಂಗಳತ್ತಣಿಂ (ಶಾಕುಂತ. ೫೦-೬೩). **ಮುದವೆಱು :** ಗಂಡ ಹೆಂಡಿರು ನಂದಿಯಂ ಬಲಗೊಂಡು ವಂದಿಸಿ ಏರಿದು ಶುಭವಿದಿರ್ಗೊಂಡ ವೊಲು ನಿಜಮಂದಿರಕೆ ನಡೆತಂದು ಮುದವೆತ್ತು (ಬಸವು. ೨-೫೫); ಒಡಿದಳು ಗಲ್ಲವ ಮುದ್ದಿಸಿ ಮುದವೆತ್ತು ನುಡಿದಳು ಖಿಳರಾಯನರಸಿ (ಮೋಹತ. ೧೧-೪೦). [ ಮುದ + ಪೆಱು₁ ]

**ಮುದಗೊಳ್ಳು** (ಕ್ರಿ). = ಮುದಂದಳೆ : ಶಾಂತಲಾದೇವಿ ಮನಸ್ಸಿನಲ್ಲಿ ಮುದಗೊಂಡಳು (ಸವಿ. ೪೨). [ಮುದ + ಕೊಳ್ಳು₁ (<ಕೊಳ್₁)]

**ಮುದತಿ** 'ಮುದ್ದತು' ನೋ.

**ಮುದತ್ತು** 'ಮುದ್ದತು' ನೋ.

**ಮುದದಳೆ** 'ಮುದಂದಳೆ' ನೋ.

**ಮುದಮುಱು** (ಕ್ರಿ). = ಮುದಂದಳೆ : ಸುಧೆಯೊಳುದ್ಭವಮಾದ ಸುರ ಕರೀಂದ್ರನ ಮೇಲೆ ಮುದಮುತ್ತು ಹರಿಯೋಜಿಸಿರಲು (ಅನಂತ. ೬-೨೬).
[ ಮುದ + ಉಱು ]

**ಮುದಲ್** 'ಮೊದಲ್₁' ನೋ.

**ಮುದಲಿ** 'ಮೊದಲಿ' ನೋ.

**ಮುದಲಿಯಾರ್** 'ಮೊದಲಿಯಾರ್' ನೋ.

**ಮುದಲೆಕರು** 'ಮುದಲೆಗರು' ನೋ.

**ಮುದಲೆಗರು,** ಮುದಲೆಕರು (ನಾ). ಚಾವಣಿಯೋಣಿನ ತೊಲೆಗೆ ಆಧಾರವಾಗಿರುವಂತೆ ಜೋಡಿಸಿರುವ ಪಾರ್ಶ್ವದ ತೀರು, — ಜಂತೆ : (ಕಸಂಗ್ರಾ. ೩೦). **ಮುದಲೆಕರು :** (ಕಸಂಗ್ರಾ. ೩೦).
[ ← ತುಳು. ಮುದಲೆಗರು, ಮುದಲೆಕರು ]

**ಮುದವಡು** 'ಮುದಂಬಡು' ನೋ.

**ಮುದವಡೆ** (ಕ್ರಿ). = ಮುದಂದಳೆ : ಮುದವಡೆದೆಸೆವ ಚೌರಾಸೀತಿಬಂಧದ ವಿಧದ ರತಿಯು ತೋಱಿ ಮೆಱೆವ ಪುದುಗಿದ ಸವರತ್ನದ ಪ್ರತಿಮೆಗಳಿಂದ ಮದನವಿಲಾಸ ರಂಜಿಸಿತು (ಕುಂಶರ. ೭-೩೯). [ ಮುದ + ಪಡೆ₁ ]

**ಮುದವಲರ್** (ಕ್ರಿ). ಬಹಳವಾಗಿ ಹಿಗ್ಗು ; ಅತಿಯಾಗಿ ಆನಂದಿಸು : ಮುದವಲರ್ದಾಚರಿಸೆನೇ ಸಮುಗುರುಸಪರಿಯೆಗಳ (ಬಸವು. ೧೫-೧೭).
[ ಮುದ + ಅಲರ್₁ ]

**ಮುದವೂಡು** (ಕ್ರಿ). ಸಂತೋಷಗೊಳಿಸು : ಆನಂದವನ್ನುಂಟು ಮಾಡು : ಆಡು ಬಾ ಮುದವೂಡು ಬಾ ಭಯದೂಡು ಬಾ ಒಲವೇ (ಗೋಕುಂ. ೨೭-೬); ಬೇರೊಂದು ಹಕ್ಕಿಯು ಜತೆಗೂಡಿ ಹಾಡನು ಹಾಡುತ ಮುದವೂಡು ಮನಕೆ (ಶಂಕಾಶ. ೨೦೨-೪೮). [ ಮುದ + ಊಡು₁ ]

**ಮುದವೆಱು** 'ಮುದಂಬೆಱು' ನೋ.

**ಮುದವೇಱಿಸು** (ಕ್ರಿ). ಸಂತೋಷವನ್ನು ಹೆಚ್ಚು ಮಾಡು, — ಅಧಿಕ ಗೊಳಿಸು : ಪೆಣ್ಮಕ್ಕಳನಾದರಿಪುದು ಮುದವೇಱಿಪುದು ಮುದ್ದಿಪುದು (ಹರಿ. ೫-೨೬). [ ಮುದವೇಱು + — ಇಸು₃ ]

**ಮುದವೇಱು** (ಕ್ರಿ). = ಮುದಂದಳೆ : ಪಸುಮಕ್ಕಳ ಮುದ್ದಿಸಿ ಮುದವೇಱುವುದು (ಹರಿ. ೪-೪೦). [ ಮುದ + ಏಱು₁ (<ಏಱ್₁) ]

**ಮುದಶ್ರು** (ನಾ). ಸಂತೋಷದಿಂದ ಉಕ್ಕಿಬರುವ ಕಣ್ಣೀರು ; ಆನಂದ ಬಾಷ್ಪ : ಕಣ್ಗಳಿಂ ಸುರಿಯೆ ಮುದಶ್ರು . . . ಕಾಂತನೊಳ್ ನೆರೆದು ರಥಾಂಗಕಾಂತೆಯಿರ್ದೆಯಾಱದುದಾವಮೆ ತತ್ಪ್ರಭಾತದೊಳ್ (ಕಂಪ್ರಕ. ೬-೧೦೦) ; ಸುರಿವ ಮುದಶ್ರುವೆ ಚಳೆಯಂ . . . ಗದ್ಗದರುತಿ ವರವಾದ್ಯ ಮದಾಗೆ ಶಿವನಸವನಿದಿರ್ಗೊಂಡಂ (ರಾಜಶೇ. ೦೩-೩೦). [ಸಂ.]

**ಮುದಿ** (ನಾ). ೧. ಇಳಿವಯಸ್ಸು ; ವೃದ್ಧಾಪ್ಯ : ನಾಲಿಗೆಯ ಕೀಲವನು ಶೀಲದಲಿ ತಾನಱಿದು ಶೂಲವದು ರುಜೆಯು ಎಂದಿಹನು ಮುದಿಯಲಿ ಬಾಲನಂತಿಹನು (ಸರ್ವಜ್ಞ. ೨೦೦೩). ೨. ಮುದುಕ ; ವೃದ್ಧ : ಮುದಿಗಾ ಯುವ್ವನೆ ಶತ್ರುವೈ (ಕೋಮೇಶ. ೬೭) : ಜಮುರೆಯಲ್ಲದಳ ಮನೆವಾರ್ತೆ ಮುದಿ ಗೂರಲೊಡಜಿ ಸತ್ತಂತೆ (ಸರ್ವಜ್ಞ. ೦೭೨೬). (ಗು). ೩. ವಯಸ್ಸಾದ : ಮುಪ್ಪಿನ : ಆ ಮುದಿರೈತ . . . ಡಾಕ್ಟರನ ಕಡೆಗೆ ನೋಡಿದ (ಮಹಾಕ್ಷ್ಯಾ. ೫). ೪. ದೊಡ್ಡಗಾತ್ರದ : ಭಾರಿಯಾದ : ' ಮುದಿ ಕಾಗೆ ' ಪರಾ. ೫. ಹಳೆಯ ; ಹಿಂದಿನ : ' ಮುದಿಗನಸು ' ಪರಾ.
[ ದೇ.೫ ತುಳು. ಕೊಡ. ಮುದಿ ; ತೆಲು. ಮುದಿ, ಮುಂತ್ತಿ ]

**ಮುದಿಕಾಗೆ** (ನಾ). ೧. ವಯಸ್ಸಾದ ಕಾಗೆ : ಒಂದು ಮುದಿಕಾಗೆಯು ಹಾರಲಾರದೆ ಎರಡು ದಿನಗಳಿಂದ ಅಲ್ಲೇ ಕೂತಿದೆ (ರೂಂ). ೨. ಕಾಗೆ ಜಾತಿಗೆ ಸೇರಿದ ಒಂದು ಬಗೆಯ ದೊಡ್ಡ ಪಕ್ಷಿ : ಡೊಂಬಕಾಗೆ : " ದ್ರೋಣಕಾಕಃ, ಕಾಕೋಲಃ – ಈ ೨ ಮುದಿಕಾಗೆ " (ನಾಕಾಂ. ೦೦೪),
[ ಮುದಿ + ಕಾಗೆ ]

**ಮುದಿಕುಂಟಣಿ** ' ಮುದಿಗುಂಟಣಿ ' ನೋ.

**ಮುದಿಗನಸು** (ನಾ). ಹಳೆಯ ಕನಸು ; ಹಿಂದಿನ ಕನಸು : ಮುದಿಗನಸು ಗಳನು ತೂರುತ್ತ, ಹೊಸಗನಸನು ಪೊಳೆದೋರುತ್ತ, ಪಾವನಪವನನು ಬರುತಿಹನು (ಚಾಂಕಿ. ೨೩-೧೭). [ ಮುದಿ + ಕನಸು ]

**ಮುದಿಗಲ್ಲು** ' ಮುದುಗಲ್ ' ನೋ.

**ಮುದಿಗುಂಟಣಿ,** ಮುದಿಕುಂಟಣಿ (ನಾ). ಮುದುಕಿಯಾದ ಕುಂಟಲ ಗಿತ್ತಿ, — ತಲೆಹಿಡುಕಿ : ಇವ್ವರಲ್ಲಿ ಸಹಸ್ರಸಂಖ್ಯೆಯ ಮುದ್ದುಕುಟಿಲದ ಮಾಯ ಕಾತಿಯರು . . . ಮುದಿಗುಂಟಣಿ[ಪಾಠಾಂ. ಮುದುಕುಂಟಣಿ, ಮುದು ಗುಂಟಣಿ, ಮುದುಗೂಟಣಿ]ಗಳು (ತೊರಚಾ. ೫-೨-೩೯) ; ಮುದಿಗುಂಟಣಿ ಪೇಳ್ದ ಸೂಳೆಸಿದ್ಧಾಂತವ ಸವಿರೊಡವೆರಸು ಸಂತಸ ಮಿಗೆ ಕೇಳಿ ಸಲ್ಲಾಪ ದಿಂದ ಭೂಕಾಂತನೆಯ್ದುವನತ್ತತ್ತ (ನಾಗಕು. ೩೦-೦೫೫). **ಮುದಿಕುಂಟಣಿ :** ಮದಾಂತೆ ವೆಗ್ಗಳಿಸಿ ನಿಜತನುವ ನೋಯೆನ್ನಿಡದಿರೆಸುತಾಗ ಮುದಿಕುಂಟಣಿಯು ಬೋಧಿಸಿದಳಾತ್ಮಭವೆಗೆ (ಪಂಕಾರಾ. ೫-೬-೩೦). [ಮುದಿ + ಕುಂಟಣಿ]

**ಮುದಿಗೂಡು** (ನಾ). ವಯಸ್ಸಾದ ದೇಹ ; ಜೀರ್ಣಶರೀರ : ಮುಪ್ಪ ಮುದಿಗೂಡು ತಪದಿಂದೊಣಗಿತಿದನೊಲ್ಲೆನು (ಕೃಪಿಖಾ. ೨೬-೩೯).
[ಮುದಿ + ಗೂಡು]

**ಮುದಿಗೂಬೆ** (ನಾ). ೧. ವಯಸ್ಸಾದ ಗೂಬೆ ; ಮುದಿಯಾದ ಗೂಬೆ : ಮುದುಕ ಜವ್ವನೆಯನೊಡಗೂಡೆ ಮುದಿಗೂಬೆಯೊವಜಿಕೊಂಡಂತೆ (ಸರ್ವಜ್ಞ. ೦೬೦೩). ೨. (ವ್ಯಂಗ್ಯಾರ್ಥದಲ್ಲಿ) ಬಹಳವಯಸ್ಸಾದ ವ್ಯಕ್ತಿ : ನನ್ನಂಥ ಮುದಿಗೂಬೆಯ ಮಾತು ಯಾರಿಗೆ ಲಕ್ಷ್ಯ ? (ಅಪಾರೂ. ೬) ; ಒಂದು ಕಂಚಾಯಿತು, ಒಂದು ಮಿಂಚಾಯಿತು, ಮುಂದೆ ಕೂತಿಯಾ ಮುದಿಗೂಬೆ ? (ಗಾರ). [ಮುದಿ + ಗೂಬೆ (<ಗೂಗೆ)]

**ಮುದಿಗೊಡ್ಡು** (ನಾ). ಬಹಳ ವಯಸ್ಸಾದವನು ; ಮುದಿಯ : ನಿಮ್ಮಂಥವರು ಯಾವಾಗಲೂ ಅಂಥ ಮುದಿಗೊಡ್ಡಿನ ಹಿಂದೆ ಇರುವುದು ಸರಿಯಲ್ಲ (ಹಳ್ಳಿಹಾ. ೯೦) ; ಮುದಿಗೊಡ್ಡುಗಳಾಗಿ ಮದುವೆಯೇಕೆ ಮಾಡಿ ಕೊಳ್ಳುತ್ತಾರೋ ನನಗೆ ಗೊತ್ತಿಲ್ಲ (ಗಾಳಿಕ. ೦೪೮). [ಮುದಿ + ಗೊಡ್ಡು₁]

**ಮುದಿಗೋಡ** (ನಾ). ಮುದಿಕೋತಿ ; ವೃದ್ಧಕಪಿ : ಮನೆಯೊಳಗೆ ಕಟ್ಟಿರ್ದುದೊಂದು ಮುದಿಗೋಡನಂ ಬಸಕೆ ಹಿಡಿತರಿಸಿ (ಸಪ್ತ್ಯಾಳ. ೨-೮೦).
[ಮುದಿ + ಕೋಡ₁ (<ಕೋಡಗ)]

**ಮುದಿತ** (ಗು). ೧. ಸಂತೋಷಗೊಂಡ ; ಸಂತುಷ್ಟವಾದ : ಹಿಗ್ಗಿನಿಂದ ಕೂಡಿದ : ಪ್ರಭಾಮಂಡಲಂ ಪ್ರಪೋದಮುದಿತಹೃದಯನಾತನಂ ರಾಮಸ್ವಾಮಿಯಲ್ಲಿಗುಯ್ವುದುಂ (ಶಂಣವಾ. ೦೯-೬೭ವ) ; ಗೋಪಾಲರಂ ಕಂಡತಿಮುದಿತಹೃದಯನಾಗಿ ಮುಕುಂದಂ . . . ಅನುರಾಗದಿಂ ನೋಡಿ (ಜಗ. ೯-೬೦ ವ) ; ಮುದಿತ ತಾಂಡವರೂಪಮೆಂತೆನೆ ನೋಡು ನೀನು (ಬಸವು. ೦೭-೦೯). ೨. ಸಂತೋಷವನ್ನುಂಟುಮಾಡುವ : ಶೀಧಿತ್ರಿರದೆ ಮುದಿತವಿಶ್ವಂ ನಾಭಸಂ ಮಾತರಿಶ್ವಂ (ಕಂದ್ಪ ಕ. ೯-೩೦). (ನಾ). ೩. ನಲಿವು; ಹಿಗ್ಗು ; ಸಂತೋಷ : "ಮುತ್ . . . ಮುದಿತಂ . . . ಮೋದ್ಯಂ, ಈ ೧೨ ನಲಿವು" (ಶಾಶಕ್ಕ. ೬೩) ; ಮುದಿತ ಎಂದರೆ ಒಳ್ಳೆಯ ವಿಷಯಗಳನ್ನು ಕಂಡರೆ ಸಂತೋಷ (ಅಮ್ಮಕ. ೬-೩ ಟೀಕು). ೪. ಸಂತೋಷಗೊಂಡವನು : ನಿಲ್ಲಿಸೆಂಬ ಮಾತನಿಂತು . . . ಕೇಳಿ ಮುದಿತನಾದ ಹರಿಯು ಶುಭವನೆಸಗೆ ಮಾಡಲಿ (ಧ್ವನ್ಯಾಲೋ. ೨೨೧). [ಸಂ.]

**ಮುದಿತನ** (ನಾ). ಮುಪ್ಪು ; ಇಳಿವಯಸ್ಸು ; ವೃದ್ಧಾಪ್ಯ : "ಸ್ಥಾವಿರಂ, ವೃದ್ಧತ್ವಂ . . . ಮುದಿತನ, ಮುಪ್ಪು" (ಸಿದ್ಧಾಂತಿ. ೦೬೯) ; ರಂಗಾಭಟ್ಟರ ಬಾಳುವೆಗೆ ಮುದಿತನದಲ್ಲಿಯೂ ಒಂದು ಮುಗುಳು ಬಿಟ್ಟಂತಾಯಿತು ! (ಜೀಶರಂ. ೯೩). [ಮುದಿ + –ತನ]

**ಮುದಿಪಾಜಿ** (ನಾ). ವಯಸ್ಸಾದ ಸೂಳೆ ; ವೃದ್ಧವೇಶ್ಯೆ : ತನ್ನೊಳ್ ತಾನೆ ಜಿನುಂಗಿ ನುಡಿವ ಮುದಿ[ಶಾಶಂ. ದು]ಪಾಜಿಯಂ ನೋಡುತುಂ ನಗುತುಂ ಬರೆ (೧೦೪. ೯-೦೩೬ ವ) ; ಹಣ್ಣಿನೊಳಗುಳ್ಳ ವರಮಧುರ ಕಸು ಗಾಯೊಳುಂಟೆ ಕೂಡಿದೊಡೆನ್ನ ಪರಿಯ ತೋಱುವೆ ಪೊಸತ ನಿನ್ನಾಣೆಯೆಂಬ ಮುದಿಪಾಜಿಯಿರ್ದಳದೊಂದೆಡೆ (ಭಕ್ತಾಕ. ೨-೯೬) ; ಎನಗೆ ನೀನಲ್ಲದಾರಿಲ್ಲೆಂದು ನಿನ್ನ ಮನ ಸಿಲ್ಕಿಸದಿರೆಂದು ಮುದಿಪಾಜಿ ಮಗಳಿಗೆ ಬುದ್ಧಿಯಂ ಪೇಳ್ದಳು (ಶ್ರೀಕಂಠ. ೬-೦೦). [ಮುದಿ+ಪಾಜಿ]

**ಮುದಿಪ್ರಾಯ** (ನಾ). =ಮುದಿತನ : ಇಷ್ಟು ಮುದಿಪ್ರಾಯದಲ್ಲಿ ಅವರಿಗೆ ಇಂಥಾ ಕಷ್ಟ ಬರಬಾರದಿತ್ತು (ಕೂಶಿ). [ಮುದಿ+ಪ್ರಾಯ]

**ಮುದಿಭ್ರಾಂತಿ** (ನಾ). ಅರೆಮರುಳು ; ಅರ್ಧ ಹುಚ್ಚು : ಒಂದು ವೇಳೆ ಜಹಾಂಗೀರನಿಗೆ ನನ್ನ ಸಮಾಚಾರ ತಿಳಿದರೆ ನನಗೆ ಮುದಿಭ್ರಾಂತಿ ಹಿಡಿದಿತ್ತು ಎಂದು ನಗುವನೇ ? (ಶಿಕ್ಷಾಮು. ೬೨). [ಮುದಿ+ಭ್ರಾಂತಿ]

**ಮುದಿಮುಂಡೆ** (ನಾ). ವಯಸ್ಸಾದವಳನ್ನು ಕುರಿತು ಅವಹೇಳನಾರ್ಥದಲ್ಲಿ ಹೇಳುವ ಒಂದು ಬಯ್ಗುಳು : ನಡೆ ಮುದಿಮುಂಡೆ ನೀನೇಬೊತ್ತು ವಲ್ಲಿನ ಸುಬುದವೆಸೆದುದು ಸೂಳೆಗೇರಿಯಲಿ (ಕೂರರಾ. ೩-೬-೭೭).

[ಮುದಿ+ಮುಂಡೆ$_1$]

**ಮುದಿಯ** (ನಾ). ೧. ವಯಸ್ಸಾದವನು ; ಮುದುಕ; ವೃದ್ಧ : ತಾಟುತ್ತ ಪ್ಯೆಯು ಬಡಿವಾಗ ಮುದಿಯನ ಕೋಟಲೆಯ ನೋಡ (ಸರ್ವಜ್ಞ. ೦೬೦೦) ; ಸತ್ತರೆಲ್ಲ ಮುದಿಯನೊಬ್ಬನೊಂಟಿಯಾಗಿ ಮನೆಗೆ ಉಳಿದ (ಅರ್ಜುನ. ೦೦೦). ೨. ವಯಸ್ಸಾದುದು ; ಮುದಿಯಾದುದು: ಹಣಿಬ ಛಾಯುದ ವಿಷ್ಣು ನೋಡು ಸಿಂಹವನಯ್ದೆ ಕೆಣಕುವೆತ್ತಿನ ಮುದಿಯನಂತೆ ದಿವ್ಯಾಸ್ತ್ರಮಂ ಗಣನಾಯಕನ ಮೇಲೆ ಬಿಡಲು (ವೀಕ್ಕ ಕೃ. ೩-೯-೩೬).

[ಮುದಿ +–ಅ$_7$./ತಮಿ. ಮುತಿಯನ್. ಮುತ್ತಿಯಾನ್. ಮುತಿಯವನ್ : ತುಳು. ಮುದಿಯೆ]

**ಮುದಿಯಳು** (ನಾ). ಮುದುಕಿ ; ವೃದ್ಧೆ : ಗಣಿಕನ ನೆರೆ ಹೊಲ್ಲ ಗಣಿಕೆ ಮುದಿಯಳು ಹೊಲ್ಲ (ಸರ್ವಜ್ಞ. ೬೪೬).

[ಮುದಿಯ+–ಅಳ್$_4$ (< –ಅಳ್$_5$)]

**ಮುದಿರ್**, ಮುದುಡು$_1$, ಮುದುರು (ಕ್ರಿ). ೧. ಸೊರಗು: ಕೃಶವಾಗು: ಅಮೃತಮತಿಯಪ್ಪವಂಕಂಗೆ ಮರುಳ್ಗೊಂಡತ್ತೆ ಗಂಡನಂ ವಿಷದಿಂಕೊಂದು ಮುದಿರ್ತು ಯಮಂ ಕೊಲೆ ಪಂಚಮನರಕದೊಳಟ್ಟಿಳ್ (ಯಶೋಚ. ೯-೩೬). ೨. ಕಡಮೆಯಾಗು ; ಇಳಿ : ಎಳಮಿಸಿಲೀಗಳೀಗಳೆ ಮುದಿ[ಶಾಶಂ. ಸು]ರ್ದಪುದು ಜೊತಕುಜಾತಮಿಗಳೀಗಳೆ ಸನೆದೋಱಿತು (ಆದಿಪು. ೦೩-೩). ೩. ಮುಚ್ಚು ; ಮುಗಿ : ಪಾಣೆಲೆ ಜೋಗಿ . . . ಮುದಿರ್ದ ಕಣ್ಣೆವೆಯಂ ಬಿದಿರ್ಚಿ ನೋಡೆವ್ಯಂ (ರಾಮಪಾಕ್ಕ. ೬೦-೩).

**ಮುದುಡು$_1$**: ೪. ಅಡಗು; ಹುದುಗಿಕೊಳ್ಳು: ಆಣವಮಾಯಾಕಾರ್ಮಿಕ ಮೂಱುಸುರೆಯಲ್ಲಿ ಮುದುಡುತ್ತ ನಾ ತಂದ ಸುಧೆ ನಿಮಗಿಲ್ಲ ಎಂದೆ (ಸರ್ವ. ೦೯೨-೬೯೭) ; ಯಕ್ಷಂ ಮರುಳಾದಂ ಮಿಕ್ಕವರ್ಗೊಂಟಿನೊಳೆ ಮುದುಡಿವರ್ (ಅಪಂಶ್ಚ. ೦-೦೨೨) ; ಅಜಯ . . . ಜನಜಂಗುಳಿಯ ನಡುವೆ ಒಂದು ಮೂಲೆಯಲ್ಲಿ ಮುದುಡಿ ಕುಳಿತ (ಅತ್ಮಾರ್ಜ. ೦೩೬). ೫. (ಚರ್ಮ-ಬಟ್ಟೆ ಮೊದಲಾದುವುಗಳು) ಸುಕ್ಕಾಗು ; ಸುಕ್ಕುಗಟ್ಟು ; ನೆರಿಗೆ ಬೀಳು : ಚೆನ್ನಾಗಿ ಗರಿಮುರಿಯಾಗಿ ಇಸ್ತ್ರಿ ಮಾಡಿದ್ದ ಸೀರೆ ಬಸ್ಸಿನ ದೊಂಬಿಯಲ್ಲಿ ಮುದುಡಿ ಹಾಳಾಯಿತು (ರೂಢಿ). ೬. (ಬಿಸಿಯ ಝಳಕ್ಕೆ ತಾಗಿದ) ಹೂವು, ಎಲೆ ಮುಂತಾದುವುಗಳು ಸುರುಟು ; ಮುರುಟಿಕೊಳ್ಳು : "ಮುದುಡು—ಸಂಕೋಚನೇ" (ಶಮಧಾ) ; ಮಂಜಿನ ಭಾರದಿಂದ ಬಾಗಿ ಮುದುಡಿದ ಪುಷ್ಪಗಳು ಮತ್ತೊಮ್ಮೆ ಅರಳಿ ಎಸಳೆತ್ತಿ ಮುಂಬೆಳಕಿನಲ್ಲಿ ನಲಿವಂತೆ ನಮ್ಮ ಜೀವ . . . ಹಗುರವಾಯಿತು (ಸಂದಾ. I. ೩೯೩). ೭. ಬಾಗು ; ತಿರುಗು : ತಿರುಚಿಕೊಳ್ಳು : 'ಮುದುಡುಗಿವಿ' ಪರಾ. ೮. ಕೈ, ಕಾಲು ಮುಂತಾದುವು ಸೇದಿಕೊಳ್ಳು,— ಎಳೆದುಕೊಳ್ಳು : ಒಂದು ಪರುಷದ ಕೂಸಂ ನಂದಿನಿಯೆಂಬ ದೇವತೆ ಪಿಡಿದೊಡಾ ಕೂಸು . . . ಕೈಯಂ ಮುದುಡಿ ಕಚ್ಚಿಕ್ಕುಂ (ಚಾರಿತ. ೦೩೦-೩). ೯. ಕುಗ್ಗು ; ಕುಸಿ : ನಿರ್ಮಲೆಯ ಅರಳಿಕೊಂಡಿದ್ದ ಮನಸ್ಸು ಮುದುಡಿಬಿಟ್ಟಿತು (ತೇವಪೀತ. ೨೦೯). ೧೦. ಆಯಾಸಗೊಳ್ಳು; ಬಸವಳಿ : ಮಲಮೂತ್ರ ಹೇಸಿಕಿಂದಲೆಯಳಿದು ಸೂಲಗಿತ್ತಿಯು ಕೆಯ್ಯ ಪೊಱದೊಳ್ಮುದುಡಿ ಬೀಳ್ವ (ಬಿಂದೂರ. ಹ. ೩೦೦-೨೦). ೧೧. ಮುದ್ದೆಯಾಗು ; ಮುದುಡೆಯಾಗು: ತವೆ ರೋಗಂ ಪತ್ತಿ ಗಾತ್ರಂ ಧರಣಿಗೆ ಕೆಡೆದಿರ್ಪಲ್ಲಿಯುಗ್ರವ್ಯಪಂ ಬಂದವಿಚಾರಂ ಕಾಯ್ದುಬಲ್ಪಿಂದೊಡೆಯೆ ಮುದುಡಿ ಬೀಳ್ವಲ್ಲಿ . . . ನೀವಲ್ಲದಾರ್ ಕಾವವರ್ (ರಕ್ಷಾಶ. ೩೭); ಮೆಲ್ಲಗೆ ಆಕೆಯ ಕಿಸೆಯಿಂದ ಒಂದು ಮುದುಡಿದ ಬೆಕ್ಕಿನ ಮರಿ ಈಚೆಗೆ ಬರುತ್ತಿತ್ತು (ದಾಙಿ. ೨). ೧೨. ಅಡಗಿಸಿಕೊಳ್ಳು; ಹುದುಗಿಸಿಕೊಳ್ಳು : ಈ ವನಮಿದಂ ಸೋಂಕೆ ಸದ್ಗತಿಯಿಲ್ಲಪೆಂದು ರವಿ ತೊಲಗಿ ಕಿರಣಂಗಳಂ ಮುದುಡಿ[ಶಾಶಂ. ರುಬಿ] ಪೋಪನೊ ಪೇಳೆನೆ ಮಿತಿಯಿಲ್ಲದಾಗಸಕೆ ಬೆಳೆದ ತರುಪತ್ರಸಂತತಿಯ ಸಾಂದ್ರತ್ವದಿಂ ಕತ್ತಲಿಸುತಿದೆ (ಜೈಪು. ೦೦-೨೩). ೧೩. ಮುದ್ದೆ ಮಾಡು; ಮುದುಡೆಗೊಳಿಸು : ಕುಳಿಯೊಳಿಕ್ಕುವ ಮುದುಡಿ ಮುಚ್ಚಿ ಮುಗ್ಗುವ . . . ನೆಟ್ಟನೆ ಸುಲಿವ ಬಿಳತ ಕೋಲಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ.೯-೨೯); ಹಾಸ್ಯಕ್ಕಾಗಿ ಬರೆದ ಲೇಖನವನ್ನು ಮುದುಡಿ ಬಿಸುಡುವೆನು (ರಾಜಾಪು. ೩೯). ೧೪. ತಿರುಚು; ಮಡಿಸು; ಬಗ್ಗಿಸು : ಒಂದು ದಸಿಯಂಗಾಲ ನಟ್ಟೆಡೆ ನೊಂದು . . . ಹಿಂದೆಸೆಗೆ ಕಾಲ್ ಮುದುಡ ಬಾರದು ಮುಂದೆಸೆಗೆ ನೀಡಲ್ಕೆ ಬಾರದು (ಬಸವ. ೯೩-೬೯) ; ಕಯ್ದನ್ನೊಳಕೊಂಡ ಆ ವೀರನ ಮುಷ್ಟಿಯನ್ನು ವಿದ್ಯುದ್ವೇಗದಿಂದ ತುಡುಕಿ . . . ಅದನ್ನಾತನ ಬೆನ್ನ ಮುದುಡಿ, ತೋಳ್ಮುರಿಚಿ . . . ಕೆಡಹಿ ಬಿಡುವವನು (ಬರುಗಂ. ೦೩-೨೬). ೧೫. ಹಿಂದೆಗೆ; ಹಿಂಜರಿ; ಅಳುಕು : ದೇವದಾಸ ಮಾಂಸಾಹಾರಿಯಲ್ಲ. ಅದನ್ನು ನಾನು ಬಲ್ಲೆ. ಆದರೂ ಮನಸ್ಸು ಮೊದಲು ಮುದುಡಿತು (ಪಟಿಶಾ. ೩೬೬). ೧೬. ಹತೋಟಿಗೆ ತರು; ನಿಯಂತ್ರಿಸು; ನಿಗ್ರಹಿಸು : ಮಱಿಜ ಮುದುಡಿ ಅಜನಡಗಿಸಿ ಎಂಟ ಗಂಟಿಕ್ಕಿ . . . ಮುಂಡೆಯ ಮೇಲೆತ್ತಿದ ಮತ್ತ ಅವು ಹಿಂಗುವ ಠಾವಿಲ್ಲ (ಸರ್ವ. ೩೬-೦೬೦).

**ಮುದುರು** : ೪. ಮಕ್ಕಳೆಲ್ಲ ಮುದುರಿ ಕುಳಿತರು (ಪಶಿಶಾ. II, ೦೦೨೬); ಎಷ್ಟು ಹೊತ್ತು ತಾನೆ ಕಿಷ್ಕಿಂಧದಲ್ಲಿ ಮುದುರಿ ಕುಳಿತುಕೊಳ್ಳಬಲ್ಲ ? (ಹಸುಹೊ. ೨೩೬). ೫. ರೇಷ್ಮೆಬಟ್ಟೆಗಳು . . . ಇವಕ್ಕೆ ಸ್ಥಿತಿಸ್ಥಾಪಕಶಕ್ತಿ ಇರುವುದರಿಂದ ಬಟ್ಟೆಗಳು ಬೇಗ ಮುದುರುವುದಿಲ್ಲ (ಗೃಹಶಾ. ೬೬). ೧೭. ಗಾತ್ರವನ್ನು ಕಳೆದುಕೊಳ್ಳು; ಚಿಕ್ಕದಾಗು : ಭೂಮಿಯ ಒಳಭಾಗ ಇನ್ನೂ ಆರಿದ ಮೇಲೆ ಅದರ ಗಾತ್ರ ಕಡಿಮೆಯಾಯಿತು. ಸಂಕೋಚವಾಗುತ್ತಿದ್ದ ಒಳಪದರದ ಮೇಲೆ ಘನಪದರವು ಇಳಿದು, ಮುದುರಿ ಮುದುರಿ ಪರ್ವತಶ್ರೇಣಿಗಳನ್ನುಂಟುಮಾಡಿತು (ಭೂಹುಟ್ಟು. ೪೪); ಸೂರ್ಯನು ಮುದುರುತ್ತಿರುವನೆಂಬುದು ನಿಜವಾದರೂ ೮೬,೦೦೦ ಮೈಲು ವ್ಯಾಸವುಳ್ಳ ಅವನ ಮೈಯಲ್ಲಿ ೨೫೦ ಅಡಿ ಮುದುರುವಿಕೆಯು ಎಷ್ಟು ಸ್ವಲ್ಪ ! (ಖಾಂಶ್ರ. I, ೩೩).

**ಮುದುರಿಕೊಳ್ಳು, ಮುದುಡಿಕೊಳ್ಳು** = ೧. ಸುರುಟಿಕೊಳ್ಳು; ಮುರುಟು : ಸೂರ್ಯಕಿರಣ ಬಿದ್ದೊಡನೆಯೇ ನೆಯ್ದಿಲು ಮುದುರಿಕೊಳ್ಳಬೇಕೆಂಬ ನಿಯಮವೂ ಇಲ್ಲ (ಹಸುಹೊ. ೩೭೩); ಹೂಗಳು (ಕಮಲ, ತಾವರೆ ಇತ್ಯಾದಿ) . . . ಸಂಜೆಯಿಂದ ಮರುದಿನ ಮುಂಜಾನೆಯವರೆಗೆ ಮುದುಡಿಕೊಂಡಿರುತ್ತವೆ (ಸಸ್ಯಶ. ೦೦೪). ೨. ಅಡಗಿಕೊಳ್ಳು; ಹುದುಗಿಕೊಳ್ಳು : ಇದ್ದ ಜಾಗದಲ್ಲೇ ಎಲ್ಲರೂ ಮುದುರಿಕೊಂಡು ಮಲಗಿದರು (ಕೊಚ); ನಾನು ಕೊಂಚ ಮುದುಡಿಕೊಂಡು ಕುಳಿತುಕೊಂಡೆ (ಪಾಥೋಂ. ೩೮); ನಾಯಕ . . . ಅದರ ತುದಿಯಲ್ಲಿ ಮುದುಡಿಕೊಂಡು ಕುಳಿತುಕೊಳ್ಳುತ್ತಾನೆ (ಜೀಶಘೋ. ೩೪). ೩. ಒಳಕ್ಕೆ ಎಳೆದುಕೊಳ್ಳು,— ಸೆಳೆದುಕೊಳ್ಳು : ನಮ್ಮ ರೆಕ್ಕೆಗಳನ್ನು ಮುದುರಿಕೊಂಡು ಆಕಾಶದಿಂದಿಳಿದು . . . ಭೂದ್ವೀಪವನ್ನು ಮರಳಿ ಸೇರೋಣ (ಕ್ಷ್ಮೇಚಿರ್. ೬೮). ೪. ಕುಗ್ಗು; ಕುಸಿ : ಯೋಚನೆ ಮೂಡಿದಾಗ ಮೋಹಿನಿ ಒಳಗಿನಿಂದಲೇ ಮುದುಡಿಕೊಳ್ಳುತ್ತಿದ್ದಳು (ಕಮನ. ೦೦೬); ಗಿರಿಯನ ಮನಸ್ಸು ನಾಚಿಕೆಯಿಂದ ಮುದುಡಿಕೊಂಡಂತಾಯಿತು (ಹುಣ್ಣ.ಹ. ೬೪). ೫. ಬೇರೆಯವರೊಂದಿಗೆ ಬೆರೆಯದಿರು ; ಒಂಟಿಯಾಗಿರು : ನರಹರಿಯು ಇನ್ನಷ್ಟು ಮುದುಡಿಕೊಂಡ, ಯಾರೊಡನೆಯೂ ಅವನು ಮನಸ್ಸು ಬಿಚ್ಚಿ ಮಾತಾಡುತ್ತಿರಲಿಲ್ಲ (ಹಮಾಬ. ೪೦೩).

[ದೇ. ॥ ತಮಿ. ಮುತಿರ್; ಮಲ. ಮುತಿರು; ಕೊಡ. ಮುದರ್. ತೆಲು. ಮುದುರು]

**ಮುದಿರ** (ನಾ). ೧. ಮೋಡ ; ಮುಗಿಲು : ''ಅಭ್ರಂ, ಮೇಘಂ . . . ಮುದಿರಃ, ಜಲಮುಕ್, ಧೂಮಯೋನಿಃ—೧೫ ಮೇಘಗಳ ಹೆಸರುಗಳು'' (ಸಿದ್ಧಾಂತಿ. ೨೬); ತುದಿಯೊಳಗೆ ಸೆರೆಗೋಲಿಸಿ ಸಂಕನು ಮುದಿರನಿನದದಿ ಭೋರೆನುತ ಪೂರಿಸಿದನೊಡನೊಡನೆ (ಅಶ. ೨-೩೩). ೨. ಪ್ರಣಯಿ. ೩. ವಿಷಯಲಂಪಟ. ೪. ಕಪ್ಪೆ; ಮಂಡೂಕ. [ಸಂ.]

**ಮುದಿರೆ** (ನಾ). ಒಂದು ಊರಿನ ಹೆಸರು : ಇದಕ್ಕೆ ಸಕ್ಷಿ ಮುದಿರೆ ಬೂವಯ್ಯ ಬೆಳ್ಳನ ಕರಕುಡಿ ಬಾರದಕೆಚಿಯಮ್ಮ (ಎಕ. IV, ಹುಣಸೂ. ೬೨-೦೨; ಸು. ೪೪೦). [ ? ]

**ಮುದಿಪಾರ್ವ** (ನಾ). ವಯಸ್ಸಾದ ವಿಪ್ರ ; ವೃದ್ಧಬ್ರಾಹ್ಮಣ : ಈ ಮುದಿಪಾರ್ವರಂ ಗೆಲ್ಲದಿರಲಾಗ ಮುಪ್ಪೊಟಲೊಡೆಯನಾಗಿಯುಮಲ್ಲು (ಅದ್ಭುತ. ೩೦). [ಮುದಿ + ಪಾರ್ವ]

**ಮುದಿವು** (ನಾ)। = ಮುದಿತನ : ತನಗೆ ಮುಪ್ಪೊಟಲೊಡೆತನಮುಂ ಬರ್ಪಂತೆ ಮೇಣ್ ಮುದಿವಟಿವುಂ ಬಾರದಂತೆ ವಿಧಿಯಂ ಬಲಿಸಿಕೊಳ್ವುದು (ಅದ್ಭುತ. ೨೮). [ಮುದಿ + — ವು]

**ಮುದಿವೆಣ್** (ನಾ). ವಯಸ್ಸಾದ ಹೆಂಗಸು; ಮುದುಕಿ.

**ಮುದಿವೆಣ್ಣುಗಳು** (ಬಹುವ) : ಬಳೆದೊಡವ ಕುಂಟಣಿಯ ಸಡೆಯಿಸುವ ಮುದಿವೆಣ್ಣುಗಳು . . . ಬರುತಿರ್ದರು (ಚಂಶ. ೪೭-೪೩). [ಮುದಿ + ಪೆಣ್]

**ಮುದಿವೇಶಿ, ಮುದಿವೇಸಿ** (ನಾ). = ಮುದಿಪಾಜಿ : ಪರಾಸಿದ ಸೀರೆ ಮಸಿಯ ತಿಲಕದ . . . ಮುದಿವೇಶಿಯರೆಡೆಯಾಡುತಿಪರು (ಕಂಪಪ ೬-೦೮೦). **ಮುದಿವೇಸಿ** : ಸರೆದಲೆಯ ಮಸಿದೊಡೆದು . . . ಸುಳಿವರ ಕರೆವ ಮುದಿವೇಸಿಯರ ನಗುತವನೀಶನೀಕ್ಷಿಸಿದ (ತಿಭಂಶ. ೦೭-೩೪). [ಮುದಿ + ವೇಶಿ]

**ಮುದಿವೇಸಿ** 'ಮುದಿವೇಶಿ' ನೋ.

**ಮುದಿಷ್ಟ** (ನಾ). ಒಂದು ಬಗೆಯ ಸಸ್ಯ : ''ಮುದಿಷ್ಟಮೆನೆ ಕಿಜುಕು ಸಾಲೆಯುಕ್ಕುಂ'' (ಪಂಗಸಾ. ೪೨-೪೦). [ ? ]

**ಮುದಿಸೂಳೆ** (ನಾ). = ಮುದಿಪಾಜಿ : ತಕ್ಕೆಯೊಳ್ವರಿನ ಸಸುಸೋಕಿ ವಿಟರಿಂ ಪಣಂದೆಗೆಯೆಂದು ಮುದಿಸೂಳೆ ಮಗಳ್ಗುಸುರ್ದಳು (ಸಂಶಿಶಾ. ೨೩-೪೩); ಬಾಗಿಲ ಕೈಸಾಲೆಯಲ್ಲಿ ಮುಂಬಸೂಳೆಯುಂ ಯಳಿಹುದುಗಿಯುರಿಗೆ ಬುದ್ಧಿಯಂಗಲಿಸುತ್ತ (ಶಾಗಂ. ೧೧೦-೨). [ಮುದಿ + ಸೂಳೆ$_1$]

**ಮುದಿಹೋತು** (ನಾ). ಮುದಿಯಾದ ಗಂಡಾಡು.

**ಮುದಿಹೋತುತಲೆಯ** = ವಯಸ್ಸಾದ ಹೋತದ ತಲೆಯನ್ನು ಹೊಂದಿರುವವನು; ದಕ್ಷ : ಮುದಿಹೋತುತಲೆಯಂ ದಕ್ಷನಾಗ ನಡನಡುಗುತಂ ಸಾಷ್ಟಾಂಗವೆಱಗಿ ವಂದಿಸುತಿದ್ದು ಮೃಡನ ಕೀರ್ತಿಸುತಿರ್ದನು (ಜಿಕೃಷ್ಣ. ೩-೪-೩೬). [ಮುದಿ + ಹೋತು$_2$ (<ಪೋತು)]

**ಮುದು$_1$** (ಕ್ರಿ). ಮುತ್ತ$_1$ (ಭೂತಕೃ), ಮುತ್ತು$_2$ (ಭೂತನ್ಯೂ). ೧. ಮುದಿಯಾಗು; ವಯಸ್ಸಾಗು; ವೃದ್ಧಾಪ್ಯವನ್ನು ಹೊಂದು : ''ಮುದು –ವೃದ್ಧೌ''(ಶಮಂದಾ); ಮುಸು ಮುತ್ತಂತೆ ತೆರಳ್ದ ತನ್ನ ಪೊಗಮಂ ಕಂಡಳ್ಕನೋ (ಅಂಕ. ೨ ೪೩); ಪೆತ್ತುಂ ತೆಳ್ಪಟ್ಟುಯದ ನಡು ಮುತ್ತುಂ ಬೀಟದ ಪಯೋಧರಂ . . . ಮೆಯ್ಯೊತ್ತಿರೆ ಕರಮೊಪ್ಪಿದಪ್ಪರಲ್ಲಿಯ ಪೆಂಡಿರ್ (ಕಾವ್ಯಾಶ. ೭೪೪); ತೊಂಬತ್ತುವರುಷಂಗಳು ಸಲಲು ನೆಜ಼್ ಮುತ್ತುದಲ್ಲಾ ದೇಹವೆನ್ನದಹಂಗೆ ವರ್ತಿಸುತ (ಬಸಕೃ. ೪೪-೩). ೨. ಪಣ್ಣಾಗು; ಬಲಿ; ಪಕ್ವವಾಗು : ಕಾರಿಕಾಲಮ್ಮೆ ಮುತ್ತ ಮಾವಿನ ಹಣ್ಣನೀಯಲು ಮತ್ತೆ ಮೆಲಿದು (ಬಸಕೃ. ೦೫-೨೫); ಮುತ್ತೊಡೆ ಮಿಡಿ ಪಣ್ಣಕ್ಕುಂ ಮತ್ತಿನ ತಳಿರೇನುಣಲ್ಕೆ ಪಣ್ಣಾದಪುದೇ (ಜೀಶಿಮಂ. I, ೩೬). ೩. ಕುಗ್ಗು; ಕ್ಷೀಣಿಸು; ಕುಂದು : ಚಂದ್ರಿಕೆ ಕಂಡು ನಾರ್ತುದೋ . . . ರತಿ ಮುತ್ತುದೊ ಮೊಟ್ಟನಾದುದೋ ಕಾಮನ ಕೈದು (ಲೀಲಾಶ. ೨-೪೪); ಮುತ್ತುದು ನೇಸಜ ತೇಜಂ ಸುತ್ತುದು ದಾವಾಗ್ನಿ (ಕಮಂದ. ೨೩೪ ಕ್ರಯೋ); ಕೈದು ಕಾಜಿರ ದಟಂ ತಂತಮಗೆ ದಟವುಟದಿಂ ಕುಶಲವರಿಸುಗೆಯಿಂ ಸತ್ತುಂ ಮುತ್ತುಂ ಕಟಿದಮಯದುಂ ಪೋಪುದುಂ (ಶಾಹುಶ. ೦೫೪-೦೭).

**ಮುತ್ತಂಚೆ** = ಮುದಿಯಾದ ಹಂಸಪಕ್ಷಿ : ಕಮಳಮಧುಪಾನದಿಂ ಸೊಕ್ಕಿದ ಮುತ್ತಂಚೆಯ ಧ್ವನಿಗಳಂತೆ ಜರ್ಝರಮಾದ ಪೊಂಗೆಜ್ಜೆಗಳ ಮೆಲ್ಲುಲಿಯೊಳಂ (ಕಾದಂಪೂ. ೬೬). **ಮುತ್ತಕಾಯ್** = ಬಲಿತ ಕಾಯಿ : ''ತಲಿರ್=ಮುತ್ತ ಕಾಯ್'' (ಕಮುದ. ಶಂ. ೦); '' ತಲಿಲೆಂದು ಮುತ್ತ ಕಾಯ್'' (ಕಶಸಾ. ೫೦-೬೧). **ಮುತ್ತಜಾಣ್ಮೆ** = ಪಕ್ವವಾದ ಜ್ಞಾನ,- ತಿಳಿವಳಿಕೆ : ಆಂ ಮುನ್ನಮಾಗಳ್ವಾಗಳ್ ಪಲದಿಸದ ಹಿರಿಯ ಮುತ್ತಜಾಣ್ಮೆಯ ಬಲ್ಲಿದರ ನೆರೆಯ ಮಟಿಯ ನೆರಮುಂ ಪಾರುತುಮಿರ್ಪೊಡಾದಂ (ರಾಜಶೇಖ. ೦೦೯-೯). **ಮುತ್ತದಿನ** = ಮುದಿವಯಸ್ಸು; ಇಳಿಗಾಲ; ಮುಪ್ಪು : ತುರಂಗಮಂಗಳಿರ . . . ಇನ್ನೆಬರಂ ರಾಯನ ಹಯಶಾಲೆಯೊಳ್ ಬಳೆದುಂ ಪಾಟ್ಟುಮಿಾ ಮುತ್ತದಿನಂಗಳೊಳಿಂತೋದು ಯೋಗಂ ದೊರೆಕೊಂಡುದೆ ! (ರಾಜಶೇಖ. ೨೪-೩). **ಮುತ್ತನೇಸಱ್** = ಅಡಗುತ್ತಿರುವ ಸೂರ್ಯ; ಸಂಜೆಯ ಸೂರ್ಯ : ಬಗೆಯ ಕಾಪು ಕಡೆಮಗಲ ಮುತ್ತನೇಸಜ ಕಾಯ್ಪಿಂಗೆ ವಾಸಟಿಯಾಗೆ . . . ರಕ್ತಸಂ ಸೋಲ್ತು ಸುಣ್ಣದೊಳಾದಂ (ರಾಜಶೇಖ. ೦೦೩-೨೬). **ಮುತ್ತಸೊಡರ್** = ಮುತ್ತನೇಸಱ್ : ಏಸನ್ನ

ನುಡಿಯಂ ಕಡೆಗಣ್ಣ ಮುತ್ತಂ ಮುತ್ತಂ ಮುತ್ತ ಪೊಟ್ಟನಂತೆ ಪ್ಪೆವೆರ್ಚುವೈ? (ರಾಜಶ್ಯ. ೧-೧೨). ಮುತ್ತಮುದಿ=ಬಹಳ ವಯಸ್ಸಾದ ; ತುಂಬಾ ಮುದಿಯಾದ : ಮುತ್ತ ಮುದಿಯಾಗಿರ್ದ ಧೇನುವದೆಲ್ಲಿಯೆಲ್ಲಿ (ಕೃಷ್ಣಾ.ಕೋ. ೦೬೦). ಮುತ್ತಮುದುಕಿ = ಬಹಳ ವಯಸ್ಸಾದವಳು ; ಅತಿವೃದ್ಧೆ : ನಿಟ್ಟಸಿದರೆ ಮುತ್ತ ಮುದುಕಿಗಾದರು ಜುಮ್ಮುದಟ್ಟಿಸುತಿಹುದು ರೂಪವನ (ಛಲ. ೦-೫೦). ಮುತ್ತಮುದುಗುಂಟಣಿ = ಬಹಳ ವಯಸ್ಸಾದ ತಲೆಹಿಡಿಕಿ: ಮುತ್ತ ಮುದುಗುಂಟಣಿಯರ್ಕಳ ಕೃತ್ರಿಮಂಗಳಂ ಭಾವಕಚಕ್ರವರ್ತಿ ಕವಿಕೇಶವದೇವನೆ ಬಲ್ಲನುರ್ವಿಯೊಳ್ (ಸೂಕ್ತಿಸು. ೬-೩೮೦). ಮುತ್ತಸಂಜೆ = ಸಂಜೆಯ ಕೊನೆ : ಇಳಿಹೊತ್ತು : ಹೊತ್ತು ಎಷ್ಟಾದರೂ ಚಿತ್ರಜನಿಳನಿಂದು ಮುತ್ತ ಸಂಜೆಗೆ ಬಹನು (ಚಂದ್ರವೀ. ೪-೦೪).

**ಮುದ್ಕು**$_2$ (ನಾ). ೧. ವಯಸ್ಸಾದ ವ್ಯಕ್ತಿ; ಮುದಿಯ : ಕುರೂಪು ಕುತ್ಸು ಮುದು ಗುಜುಗುಜುಕುಂ ಸೂರುಳ್ವಂತುಂ ದುಷ್ಟುಂತುಂ ದೂಱುವುದುಂ ಮುನ್ನುಮ್ಮಂತುಸುಡು ಭೂತುಂತುಂ (ಮುಕಿ. ೦೦-೩). (ಗು). ೨. ವಯಸ್ಸಾದ; ಮುದಿಯಾದ: 'ಮುದುಗರಡಿ', 'ಮುದುಗಬ್ಬಿ' ಪರಾ. ೩. ಜೀರ್ಣವಾದ; ಹಳೆಯದಾದ : 'ಮುದುದೊವಲ್' ಪರಾ. ೪. ದೊಡ್ಡ; ಭಾರಿಯಾದ : ಮುದುಗರ$_1$ ' ದುಗಾಗೆ' ಪರಾ.

[ದೇ.॥ ತಮಿ. ಮುತು, ಮೂತು; ಮಲ. ಮುತು; ತುಳು. ಮುದು; ಕೋತ. ಮುದ್]

**ಮುದುಕ** (ನಾ). ೧. ವಯಸ್ಸಾದವನು ; ವೃದ್ಧ : "ಪ್ರವಯಾ, ಸ್ಥವಿರಃ ... ಜರತ್-ಈ ೬ ಮುದುಕನ ಹೆಸರು" (ನಾಜಿಲಾ. ೦೦೯); ಮುದುಕರಂತೆ ಲೋಳೆಸುರಿವ ಬಾಯುಂ ಕೀವುಗಿವಿಯವರಂತೆ ಕೀವುಸುರಿವ ಕಿವಿಯುಂ. . . ಅದ್ಭುತವಾಗೆ ಮೂಱುಂಲೋಕದ ಬೀಭತ್ಸಮನೆಲ್ಲಮನೊಂದು ಮಾಡಿ ವಿಧಾತ್ರುಂ ರೂಪು ಮಾಡಿದು (ರಸರ್ಚಾಪ್ಪು. ೪-೬೩); ಗಷ್ಟದ ಮುದುಕರಲ್ಲುಗುವ ತಲೆಯು ಕೈಕಾಲುಗಳ ಕಂಪನದ ಬೆದಱನಲಿ . . . ಕಂಗೆಟ್ಟು ಹಾಯ್ದರು (ಕೊರಡಾ. ೦-೦೦-೦೨); ಕಣಿವೆಯಲ್ಲಿ ಮುದುಕರೊಬ್ಬರು ಬರುತ್ತಿದ್ದರು (ಕಳಹು. ೦). (ಗು). ೨. ವಯಸ್ಸಾದ; ಮುದಿಯಾದ; ವೃದ್ಧಾಪ್ಯವನ್ನು ಹೊಂದಿದ : ಮುದುಕ ಜಂಗಮರು ಚಿಟ್ಟಗರೋಡಿದರು ಮುಂದೆ ಪಡೆದಾವು ಪಿಂದುಳಿದೆವೈ (ಸಿದ್ಧೇಪು. ೦೬-೦೫); ಕಡುಮುದುಕತಾಯ್ಮಂದಿಗಳ ಕಾವಡಿಯೋಟ್ಟಂ ಪೊತ್ತು ತಿರುಗುತಲಿ (ಅನಂತಾ. ೨-೩-೦೦); ಅಲ್ಲೊಬ್ಬ ಮುದುಕ ಬೇಸಾಯಗಾರನಿರುವನಂತೆ (ಹಾಹುತ್ತ. ೯೭).

[ಮುದು$_1$ + – ಕ$_3$./ಮಲ. ಮುತ್ತುಕ್ಕ; ತುಳು. ಮುದುಕೆ; ಕೊಡ. ಮುದೀಕೇ; ತೆಲು. ಮುದುಕ ; ಕೋತ. ಮುದ್‌ಕ್; ಪರ್ಜಿ. ಗದಬ. ಮುತ್ತುಕ್]

**ಮುದುಕತನ** (ನಾ). ಮುಪ್ಪು: ಮುದಿತನ; ವೃದ್ಧಾಪ್ಯ : "ವಾರ್ಧಕಂ ಅಂದರೆ ಮುದುಕತನಕ್ಕೂ ಪೆಸರಾಗುವುದು" (ಸಿದ್ಧಾಂತಿ. ೦೬೪); ಯಯಾತಿಗೆ ಮುದುಕತನ ಬಂತು (ಶೀತಮ. I, ೦೮). [ಮುದುಕ + – ತನ]

**ಮುದುಕಿ** (ನಾ). ವಯಸ್ಸಾದವಳು ; ವೃದ್ಧೆ : "ವೃದ್ಧಾ, ಪಲಿಕ್ನೀ- ಈ ೨ ಮುದುಕಿ" (ನಾಜಿಲಾ. ೦೦೭); ಮದನಜನಕ ನಿಚ್ಚ ಚೆಲುವನೆಂತೆಂಬೆನೆ ಮುದುಕಿ ಕುಬುಜೆಯನ್ನು [ಪಾಠಾಂ. ಮುದದಿಂದ ಕುಬ್ಜೆಯ] ಕೂಡುವನೆ (ಪುರಂದ. ದಾ. ೩-೯೬-೩): ನಾನು ಸುಮ್ಮನೆ ದಾರಿ ಹಿಡಿದು ಹೊರಟವರಂತೆ ಮುದುಕಿಗೆ ತೋರಿಸಿಕೊಂಡೆ (ಶ್ರೀಪತಿಕಾ. ೦೬೧).

[ಮುದುಕ + – ಇ$_2$./ ಕೊಡ. ಮುದೀಕಿ]

**ಮುದುಕು** 'ಮುದುಕು$_1$' ನೋ.

**ಮುದುಕೊತ್ತೂರ್** (ನಾ). ಒಂದು ಊರಿನ ಹೆಸರು : ಮುದುಕೊತ್ತೂರ ವಿಷಯೋ ಪೆಬ್ಬೊಟಲ್‌ಗ್ರಾಮೇ (ಎಕ. X, ಮುಳಬಾಗಿಲು. ೬೩. ೦೫; ಸು. 370 ಕ್ರಿಶ).

[ ? + ಊರ್ ]

**ಮುದುಗಣ್**, ಮುದುಗಣ್ಣು (ನಾ). ೧. ವಯಸ್ಸಾದ ಕಣ್ಣು; ಎಳೆಯದಲ್ಲದ ಕಣ್ಣು; ಮುದಿಕಣ್ಣು. ೨. ಜೀರ್ಣವಾದ ಕಣ್ಣುಗಳುಳ್ಳವನು; ಮುದುಕ; ವೃದ್ಧ : ಎರಡು ಮನೆಗೆ ತಾನೆ ಮುದ[ದು]ಗಣ್ [ಪಾಠಾಂ. ಣು] ತನ್ನಿಂದಮಗ್ಗಳಂ ಪೆಱರ್ವಿರ್ತರಿಲ್ಲದೞಿನೆಮ್ಮನಟ್ಟಿದ ಮಾನಸರಂ ಮುಂದಿಟ್ಟು ರಾವಣನಂ ಕಾಣಿಸಿ ಕಾರ್ಯಸಿದ್ಧಿಯಂ ಮಾಡುಗೆ (ಶಾಪುಂತು. ೩೦೯). ಮುದುಗಣ್ಣು : ೧. ಅಗ್ರಫೇನಾಪೆತ್ರೋವ್ನಳ ಮುದುಗಣ್ಣುಗಳಲ್ಲಿ ಹೊಳಪು ಮಿಂಚಿ ಮಾಯವಾಯಿತು (ಕೃಸವು. ೦೩೯).

**ಮುದುಗಣ್ಗಳ್, ಮುದುಗಂಗಳ್** (ಬಹುವ) : ಮುದುಗಣ್ಗಳಾಗಿ ನಿಮ್ಮಂತು ಪೞಯ ನುಡಿವರುಮೊಳರೇ (ಅಂತೀ. ೯-೦೦೩); ಮುದುಗಣ್ಗಳುಚಿತಮಂ ನುಡಿವುದು (ಶಾಂತಿಪು.೦೦-೧೨೦); ನೀಂ ವೀರಪರಿಗ್ರಹಮರೀತನಪ್ಪೆಯಾದಡಂ ಮುದುಗಂಗಳ ಮಾತಂ ಮೀಱಲಾಗದು (ಮುಹಾಪೇ. ೦೦-೦೦೦ ಪ).

[ಮುದು$_2$ + ಕಣ್ ]

**ಮುದುಗಣ್ಣು** 'ಮುದುಗಣ್' ನೋ.

**ಮುದುಗಣ್ತನ** (ನಾ). ಮುಪ್ಪು; ಮುದಿತನ; ವೃದ್ಧಾಪ್ಯ : ವಿನಯದಿನಾಮಿ ಭುವನೈಕನಾಥನಂ ಸಲ್ವೆರೆಸು ಬೇಡುತ್ತಿರೆ ಬಂದನುವಿಸುವ ನಿಮ್ಮ ಮುದುಗಣ್ತನದೊಳದೇನುಂತೆ ಬಟ್ಟೆವೋಪೊಡೆ ಪೋಗಿಂ (ಅಂತೀ. ೯-೦೦೬); ಒರ್ಮೊದಲೆ ಮೊಗುವ ಪಲವುಂ ತೆಱದ ಪಳಿಗಳೆಸೆ ವೃದ್ಧಾಮರಭಸದಿಂದಂ ಮಾರ್ದನಿವಿಟ್ಟು ಮುದುಗಣ್ತನಮನುಂಟು ಮಾಡಿದಂತೆ ಶಾಂತೀಶ್ವರಂಗೆ (ಶಾಂತಿಪು. ೦೦-೫೦ ಪ); ಮುದುಗಣ್ತನಂ ಶಿಶುತೆಯೇರುಂಜವ್ವನಂ . . . ಇಂತಿವೆಲ್ಲವರೊಳಂ ತಾನಿರ್ಪಂ (ಸಂಸಕ. ೪೪-೩೦). [ಮುದುಗಣ್ + – ತನ]

**ಮುದುಗರ**$_1$ (ನಾ). ೧. ದೊಡ್ಡ ಗ್ರಹ. ೨. ಶನಿಗ್ರಹ : ಮುಸಕಿಟ್ಟೊತ್ತೆಗೆ ಸಾರ್ದ ವೃದ್ಧನೊಳೊಡಂಬಟ್ಟೊತ್ತೆಯುಂ ಕೊಂಬ ತಾಯ್ಗೆ ಸರೋಜಾರುಣನೇತ್ರ. . . ಒರ್ವಳ್ ಮುದುನಾಯ ಮುತ್ತ ಮುದು ವೃದ್ಧಂಗೆನ್ನನಿಂತೋವದೊಪ್ಪಿಸಿ ಪೊಂಗಟ್ಟುವ ಚೀಲದೊಳ್ ಮುದುಗರಂ ತಂದಿಕ್ಕುಮೇ ನಿಕ್ಕುವಂ (ಸೂಕ್ತಿಸು. ೮-೪೩೭); ಅವನಿಪನ ಮುಪ್ಪಿನಲಿ ಮುದುಗರವವಚಿತು (ಕೊರಡಾ. ೨-೩-೦೨).

[ಮುದು$_2$ + ಗರ$_2$./ತಮಿ. ಮುತುಮಕನ್]

**ಮುದುಗರ**$_2$ (ನಾ). ಗುದಿಗೆಯಂಥ ಒಂದು ಬಗೆಯ ಆಯುಧ : "ಮುದುಗರ – ಮುದ್ಗರ = ಮಾರುದ್ದದ ಗುದಿಗೆ" (ಕರ್ಣಕೋ. ೩೩).

[ < ಸಂ. ಮುದ್ಗರ ]

**ಮುದುಗರಡಿ** (ನಾ). ಮುದಿಯಾದ ಕರಡಿ, – ಭಲ್ಲೂಕ : ಮುದುಗರಡಿಯ ಮುದುದೊವಲಂದದೆ ಕರಿಯಂ (ಹುಕೋಕ.೨-೪೦); ಅದು ಮುದುಗರಡಿಯಾಗಲಾಪುದಲಾ ಮಿಸುಕಲಾಱದೆ ಕುಳ್ಳಿರ್ದುದು (ಚತು. ೩೯-೬). [ಮುದು$_2$ + ಕರಡಿ$_1$ ]

**ಮುದುಗಲ್**, ಮುದಿಗಲ್ಲು, ಮುದುಗಲ, ಮುದ್ಗಲ್ (ನಾ). ಒಂದು ಸ್ಥಳದ ಹೆಸರು : ಶ್ರೀಕಾಲಿಕ(ಕಾ)ದೇವೀಕಮುಕ್ತೇಶ್ವರದೇವರ ದಿವ್ಯಶ್ರೀ ಪದ್ಮಪಾದಾರಾಧಕರಾದ ಮುದುಗಲ್ಲ (ಇಕ. X, ೬೨-೩ ; ಸು. ೬ನೆಯ ಶಕ); ಅತಿಪ್ರಸಿದ್ಧನೆನೆ ಸಂದನನಿಂದ್ಯಗುಣಾನ್ವಿತಂ ಸದಾವರನೆನೆ ಸರ್ವಶಾಸ್ತ್ರಕುಶಲಂ ಮುದುಗಲ್ಲೊಳುದಾತ್ತಕೀರ್ತಿಯಿಂ (ಜೋಕಲಾಕ. ೦-೫ ೬೬೮). ಮುದಿಗಲ್ಲು : ಬಾದಾಮಿ ಮುದಿಗಲ್ಲು ಕೊಪಣದ ತೆಱಿನ ರಾಜ್ಯವೆಲ್ಲವನು ಇಱದು ಕೆಡಿಸುತ ಕುಮ್ಮಟದುರ್ಗದೊತ್ತಿನ ತೆಱಪಿನೊಳಗೆ ಬಿಟ್ಟು ನೊಸೆದು (ಕುಮಾರಾಮ. ೦೯-೪೯). ಮುದುಗಲ : ಮಲ್ಲಿಸ್ಸಟ್ಟಿನಾಮಾಮಾತ್ಯ (ತ್ತೊ) ಮುದುಗಲಗ್ರಾಮೇ ವಸ(ಸ)ನ್ (ಇಕ. VII, ೩೦೪-೨೩; 1249).

**ಮುದ್ಗಲ್** : ರಾಯಚೂರ ಜಿಲ್ಲೆಯ ವಿಖ್ಯಾತ ಪುರಾತನ ಕೋಟೆಯಾದ ಮುದ್ಗಲ್ ಸಮೀಪದ ಓಕಳಿಹಾಳ ಎಂಬಲ್ಲಿ ಬೇರೆಬೇರೆ ಕಾಲದ ಸ್ತರಗಳು ಹೊರಟಿವೆ (ಕರ್ನಾಟ. ೧೧). [ ಮುದು$_1$ + ಕಲ್$_3$ ]

**ಮುದುಗಲ** 'ಮುದುಗಲ್' ನೋ.

**ಮುದುಗಲ್ಲೆ** (ನಾ). ಮುದುಕಿ ; ವೃದ್ಧೆ : ಇಂತು ಮುದುಗಲ್ಲೆ ನಿಯೋಜಿಸಿದಳ್ ತನೂಜೆಯೊಳ್ (ಶಾಂತೀಶ್ವ. ೦೦-೭೬). [ ? ]

**ಮುದುಗಲ್ಲೆಗೂಂಟಣಿ** (ನಾ). = ಮುದಿಗುಂಟಣಿ : ಮುದುಗಲ್ಲೆ ಗೂಂಟಣಿ ಮಗಳ್ಗುಪದೇಶಮನಿಂತು ಮಾಡಿದಳ್ (ಶಾಂತೀಶ್ವ. ೦೦-೯೭)
[ ಮುದುಗಲ್ಲೆ + ಕೊಂಟಣಿ (<ಕುಂಟಣಿ) ]

**ಮುದುಗಳ್ತಿ** ' ಮುದುಗಟ್ತಿ' ನೋ.

**ಮುದುಗಟ್ತಿ**, ಮುದುಗಳ್ತಿ (ನಾ). ಮುದಿಯಾದ ಕತ್ತೆ; ಮುದಿಕತ್ತೆ: ಕುದುರೆಯನೋವದೆ ಸೀಳ್ದೆತ್ತ ಮುದುಗಟ್ತಿಯನಿಟ್ಟು ಕೆಡಪಿದೈ ಬಲ್ಲಿದನೈ (ಜಗ. ೦೭-೯೩). **ಮುದುಗಳ್ತಿ** : ಮುದುಗಳ್ತಿಗಳೂ ಮೌನವಾಗಿರುವುದಿಲ್ಲ ! (ಮಂತ್ರಶ. ೦೦-೦೦). [ ಮುದು$_2$ + ಕಟ್ತಿ ]

**ಮುದುಗಾಗೆ** (ನಾ). ಒಂದು ಬಗೆಯ ದೊಡ್ಡ ಕಾಗೆ ; ಡೊಂಬಕಾಗೆ; "ದ್ರೋಣಕಾಕ" (ನಾಜಶಾ. ೬). [ ಮುದು$_2$ + ಕಾಗೆ ]

**ಮುದುಗಿಸು** 'ಮುಡುಗಿಸು' ನೋ.

**ಮುದುಗಿಳಿ** (ನಾ). ಮುದಿಯಾದ ಗಿಣಿ : ಬಱಗೆಯ್ದುತಿರ್ದ ಮಾಯ್ದುಱಿಗುಱಿ ಕರ್ವೇಡನಲ್ಲಿ ಮುದುಗಿಳಿಗಳುಮಂ (ಶಾಂತಿಪು. ೦೭೮).
[ ಮುದು$_2$ + ಗಿಳಿ ]

**ಮುದುಗು$_1$** ' ಮುಡುಕು$_1$' ನೋ.

**ಮುದುಗು$_2$** ' ಮುಡುಕು$_2$' ನೋ.

**ಮುದುಗುಂಟಣಿ** (ನಾ) = ಮುದಿಗುಂಟಣಿ : ಓರ್ವಳ್ ಮುದುಗುಂಟಣಿ ಪೊಱಗೆ ನಿಂದು ದೆಸೆಯಂ ನೋಡುವಾಕೆ ಲಲಿತಾಂಗನ ಬರವಂ ದೂರದೊಳೆ ಕಂಡು (ಧರ್ಮಾಮೃ. ೨-೩೩); ಗುಣಿ ರಾಗಮಂಜರಿಗೆ . . . ನೀತಿವಂತೆ ಮುದುಗುಂಟಣಿಯಪ್ಪಳ್ ಮಾತೆವೋಲ್ ಸೃಗಾಲಿಕೆಯೆಂಬಳ್ (ಧಕಶು. ೬-೨೨೦). [ ಮುದು$_2$ + ಕುಂಟಣಿ ]

**ಮುದುಗುಂದೂರ್** (ನಾ). ಒಂದು ಸ್ಥಳದ ಹೆಸರು : ಮುದುಗುನ್ದೂರ್ವೋಪವಿಷ್ಟ ರಾಷ್ಟ್ರಕೂಟಚಾಳುಕ್ಯಹೈಹಯಪ್ರಮುಖಪ್ರವೀರಸನಾಥ ವಲ್ಲಭಸೈನ್ಯವಿಜಯ ವಿಖ್ಯಾಪಿತಪ್ರಭವಃ (ಎಕ V (R). ಕೃಷ್ಣರಾ. ೧೯-೬೭; ೬೦೯). 'ಕುಂದೂರು' ಪರಾ. [ ? + ಊರ್ ]

**ಮುದುಗುಂಪೆ** ' ಮುದುಗುಪ್ಪೆ ' ನೋ.

**ಮುದುಗುಡ್ಡೆ** (ನಾ). ದೊಡ್ಡ ದಿಬ್ಬ ; ಎತ್ತರವಾದ ತೆವರು : ಆ ಊರ ಹಡುವಲು ಮುದುಗುಡ್ಡೆ ಅಲ್ಲಿಂ ಬಡಗಲು ಹುಣಿಸೆ (ಎಕ. V. ಬೇಲೂರು. ೦೭-೧೯ ; 1136). [ ಮುದು$_2$ + ಗುಡ್ಡೆ$_1$ ( < ಗುಡ್ಡ$_2$) ]

**ಮುದುಗುದುರೆ** (ನಾ). ವಯಸ್ಸಾದ ಕುದುರೆ: ಇವರಂ ನೀತಿವಿದರಪ್ಪಂತು ತಿಳಿಪುವಂದಂ ಮುದುಗುದುರೆಯಂ ತಿರ್ದುವಂತಕ್ಕುಂ (ಶುಕಸಂ. ೦೭-೦೦); ಮುದು [ಶಾಕಾಂ. ದಿ] ಗುದುರೆ ತಿರ್ದೆ ಬಡವಾದುದು (ಸಪುಶ. ೦೩-೯೦).
[ಮುದು$_2$ + ಕುದುರೆ]

**ಮುದುಗುಪ್ಪೆ**, ಮುದುಗುಂಪೆ (ನಾ). ಒಂದು ಸ್ಥಳದ ಹೆಸರು : ಮುದುಗುಪ್ಪೆಯ ಮಾರಸಿಙ್ಗಗಾವುಣ್ಡರುಂ ಎಱಿಗಙ್ಗಗಾವುಣ್ಡರುಂ... ಎನ್ಬರುಂ ನರಸಾಕ್ಷಿಯಾಗೆ ಪಡೆದಾವ್ (ಎಕ. VI(R). ಶ್ರಿಶಂಗ. ೬೬-೦೯; ಸು. 800). **ಮುದುಗುಂಪೆ** : ಮುದುಗುಂಪೆಯ ಇನ್ದರಗಾವುಣ್ಡರು ಶ್ರೀದಾವುಗವುಣ್ಡರುಂ . . . ವಾರದರುಂ ಎನೆವ್ವರುಂ ನರಸಾಕ್ಷಿ (ಎಕ. V (R). ಕೃಕ್ಷಕ. ೦೦೫-೭೦; ಸು. 890). [ ಮುದು$_2$ + ಕುಪ್ಪೆ$_1$ ]

**ಮುದುಗುರುಡ** (ನಾ). ವಯಸ್ಸಾದ ಕುರುಡ : ಈ ಮುದುಗುರುಡನಿಕ್ಕಿದ ನಂಬುಗೆಯ ವಿಷವ್ಯಸಲೇ ತಲೆಗೇಱಿತಗ್ರುಜನ (ಶಂಪ್ರಾ.ಸ. ೦೫-೬೫).
[ಮುದು$_2$ + ಕುರುಡ]

**ಮುದುಗೂಗೆ** (ನಾ). ೧. = ಮುದಿಗೂಬೆ ೧: ಶಿವಶಿವಾ ಮುದು [ಶಾಕಾಂ. ದಿ] ಗೂಗೆ ಮೆಚ್ಚದು ರವಿಯನು (ಶಂಪ್ರಾ.ಸ. ೦೦-೩೫). ೨. =ಮುದಿಗೂಬೆ ೨ : ಮುದುಗೂಗೆಯ ಬಾರಿಗೆ ಕೈನೆ ತಾನೆ ಮೈಗರೆದೆನಗೊತ್ತೆಗೊಟ್ಟ ಸುಖ ಮಾಟ್ಕೆವೆಪಟ್ಟದನಕ್ಕ ಬಲ್ಲದೆಂ ? (ಸೂಕ್ತಿಸು. ೬-೪೨೨). [ಮುದು$_2$ + ಗೂಗೆ]

**ಮುದುಗೆಱೆ** (ನಾ). ಒಂದು ಸ್ಥಳದ ಹೆಸರು : ಮುದುಗೆಱೆಯ ಪೂರ್ವ್ವಶೃಂಖ(ಗ)ದ ಪುಲ್ಲತ್ತಿಎ(ಯೆ) (ಇಆ. VIII. ೨೦೯-೩೭; 10ನೆಯ ಶತ).
[ಮುದು$_2$ + ಕೆಱೆ]

**ಮುದುಗೊಂಥಬೋಯ** (ನಾ). ಒಬ್ಬಾತನ ಹೆಸರು : ಮುದುಗೊನ್ಥಬೋಯಸ್ಯ ಭಾರದ್ವಾಜಗೋತ್ರ ದುಗ್ಗಶರ್ಮ್ಮಣ (ಇಆ. VII. ೦೮೮-೩೯; 668). [ ? + ಬೋಯ ]

**ಮುದುಡಿಸು** ' ಮುದುರಿಸು ' ನೋ.

**ಮುದುಡು$_1$** ' ಮುದಿರ್ ' ನೋ.

**ಮುದುಡು$_2$** (ನಾ). ೧. ಬಾಗು ; ಕೊಂಕು : " ಕ್ರುಂಚಾ= ಡೊಂಕು, ಮುದುಡು" (ಕಾಶಕ್ವ. ೦೦). ೨. ಸಂಕೋಚ ; ಕುಗ್ಗುವಿಕೆ: ' ಮುದುಡುಗೊಳ್ ' ಪರಾ. [ < ಮುದುಡು$_1$. / ತೆಲು. ಮುಡುತ = ಸುಕ್ಕು]

**ಮುದುಡುಗಿವಿ** (ನಾ). ಹೊರಭಾಗದಲ್ಲಿ ತಿರುಚಿಕೊಂಡಿರುವ ಕಿವಿ : ಮುದುಡು [ಶಾಕಾಂ. ರುಟು]ಗಿವಿಗಳ ಹಱುಕುಗಡ್ಡದ ಕಿದಱು ಮೀಸೆಯ . . . ಕಿಱುಕುಲರು ಬಂದರು ನೆರೆದು ಕಾಗೆಯ ಹಳವಿಗೆಯೊಳು (ಬಸಪು. ೫೬-೯೯). [ಮುದುಡು$_1$ ( < ಮುದಿರ್) + ಕಿವಿ$_3$]

**ಮುದುಡುಗೊಳ್** (ಕ್ರಿ). ೧. ಮುರುಟಿಕೊಳ್ಳು ; ಸುರುಟಿಹೋಗು : ಪಲವು ನೆನಹನೆಲ್ಲ ಮಱೆತು ಬೆಂದ ನಾಲಗೆ ಮುದುಡುಗೊಂಡ ಬಗೆಯ ನಾನೆಂತು ಪೇಱುವೆನಮ್ಮ (ಗೀತಗೋ. ೩೦-೪). **೨. ಅಡಗಿಕೊಂಡಿರು** ; ಮುದುರಿಕೊಂಡಿರು : ಬೆಚ್ಚನಾದೆದೆಯಿಂದೆ ಕಾತರಿಸಿ ಮುದುಡುಗೊಂಡೆ ಚ್ಚಱಿಂದೇಳ್ವ ರೋಮಾಂಚನದೊಳಾಸೆ ಮುಂಬೆಚ್ಚಿ ಬೆಮರುವ ಎಲೆಬ ಬೇಸಱದೆ ನಿಂದು ನಿಟ್ಟಿಸುತಿರ್ದಳು (ಶ್ರೀಮ:ಶಾ. ೩೦-೨೨); ಆ ದುಗುಡದಿಂದೊಂದೆಡೆಯೊಳ್ ಮುದುಡುಗೊಂಡು ಮುಸುಂಕಿ ಪಟ್ಟಿರಲ್ (ಚಕಾಂ. ೬-೦೯೩೮).
[ಮುದುಡು$_2$ + ಕೊಳ್$_1$]

**ಮುದುಡೆ** (ನಾ). ೧. ಸುಕ್ಕು ; ನೆರಿಗೆ : ಇಸ್ತ್ರಿ ಮಾಡಿ ಹಾಕಿಕೊಂಡಿದ್ದ ಬಟ್ಟೆಗಳು ದೊಂಬಿಯಲ್ಲಿ ಮುದುಡೆಯಾಗಿ ಹೋಯಿತು (ರೂಢಿ). ೨. ಮುದುರಿಕೊಂಡಿರುವುದು : ಮುದ್ದೆ : ಅಲ್ಲಿ ತನು ಬಲಿಯದಿರೆ ಮುದುಡೆಯಾಗುತೆ ಬಂದು ಜೀವಂ ಬಲಿಯದಿರಲ್ಬುಸುಱಿಳಿವುತಂ ಬಂದು (ಬಿಂಕೋಣಿ. ಹ. ೫೦೦-೦೦) ; ಪಡಸಾಲೆಯಲ್ಲಿ ಮುದುಡೆಯಾಗಿ ಕುಳಿತ ತಂದೆಯನ್ನು ನೋಡಿ ಜಾನಕಿ ಗಾಬರಿಯೇ ಆದಳು (ಮುಕ್ತ್ಯ.ರ. ೦೨); ಭಾಗೀರಥಿ ಕುಳಿತಲ್ಲಿಯೇ ಒರಗಿದಳು. ಮುದುಡೆಯಾದಳು (ಶಾಕಾ. ೦೯).
[ < ಮುದುಡು$_2$]

**ಮುದುತಪಸಿ** (ನಾ). ಮುದುಕನಾದ ತಪಸ್ವಿ ; ವೃದ್ಧನಾದ ಋಷಿ : ನೀನೀ ಜಿನಮುನೀಂದ್ರರಿಗೆಲ್ಲಕೆಗ್ಗಂ ಮುನಿದು ಮಾಡಿದೆ. ಮುದುತಪಸಿಗಳ ಮಂತ್ರಯಂತ್ರಾಳಿ (ಬಸಪು. ೫೨-೨೦). [ಮುದು$_2$ + ತಪಸಿ ( < ತಪಸಿ)]

**ಮುದುದೊವಲ್** (ನಾ). ಹಳತಾದ ತೊಗಲು ; ಜೀರ್ಣವಾದ ಚರ್ಮ : ಮುದುಗರಡಿಯ ಮುದು [ಶಾಕಾಂ. ಬು]ದೊವಲಂದದ ಕರಿಯಂ (ಜುಕೋಶ. ೨-೪೦). [ಮುದು$_2$ + ತೊವಲ್$_3$ ( < ತೋಲ್$_1$)]

**ಮುದುನಾಯ್** (ನಾ). ೧. ಮುದಿಯಾದ ನಾಯಿ. ೨. ಒಂದು ಬಯ್ಗುಳು : ಮುದುನಾಯ ಮುತ್ತ ಮುದುವೃದ್ಧಂಗೆನ್ನನಿಂತೀವ

ದೊಟ್ಟಿಸಿ ಪೊಂಗಟ್ಟುವ ಚೀಲದೊಳ್ ಮುದುಗುರಂ ತಂದಿಕ್ಕುವೆಂ ನಿಕ್ಕುವಂ (ಸೂಕ್ತಿಸು. ೬-೪೩೭). [ಮುದ್ದು₂ + ನಾಯ್]

**ಮುದುನೆಲ್ಲಿ** (ನಾ). ಒಂದು ಸ್ಥಳದ ಹೆಸರು : ಅನ್ತೆ ಬನ್ದು ನೆಲ್ಲಿಪಳ್ಳದಾ ಪೇರೊಟ್ಟಿಯೊಳಗಿರ್ಪ ಮುದುನೆಲ್ಲಿಯೆ ಆನ್ತೆ ಮೂಡನೋಡಿ ಪರಿದ ಪೇರೊಟ್ಟಿ (ಎಕ. IX (s), ಬೆಂಗಳೂ. ೦೫೦-೯೭; 828). [ಮುದ್ದು₂+ನೆಲ್ಲಿ ]

**ಮುದುಪ** (ನಾ). ೧. ಮುದುಕ ; ವೃದ್ಧ : "ಕಿಟಿವನೆನೆ ಮುದುಪಂ" (ಶಂಕೀಪ. ೯೩೦-೪); ಪಿಡಿದ ಬಿಲ್ಲೆ ದಂಟಿಂಗೆಣೆ ಮುದುಪಂಗೆ ಪಗೆವರ ನಿಟ್ಟೆಲ್ವಿಂ ಮುಜುಪೊಡೆನಗೆ ಪಟ್ಟಂಗಟ್ಟಾ (ಶಂಕಶಾ. ೦೦-೦೭); ಆ ಮುದುಪಂ ಗಡ ಕೊಟ್ಟನೊತ್ತೆಯಂ ಗರಗರನಾಯ್ತು ಬಳ್ಕೆ (ಸೂಕ್ತಿಸು. ೬-೪೨೨); ಮುದುಪಂ ಮುದವನಾಂತು ತಾನೆಡೆಮಾಡಿದ ಮನೆಗುಣಲ್ಪೋಗೆನೆಲ್ (ಕೃಷ್ಣಾಸ್ತ್ರ. ೩-೬೨ ಪ). (ಗು). ೨. ಮುದಿಯಾದ ; ವಯಸ್ಸಾದ : ಮುದುಪ ಬೊಜಂಗನಂ ಕಂಡ ಬೆಲೆವೆಣ್ಣಿನಂತೊಳಸಾರುತ್ತುಂ (ರಶರ್ಮವ್ಯ. ೪-೭೭); ಪರಿಕಿಸೆ ಕಡುಮುದುಪ ತಂದೆಗೋರ್ವನೆ ಕಂದಂ (ಕಕಶಿ. ೬-೭೦).
[ಮುದುಪು + —ಅ₁]

**ಮುದುಪತನ** (ನಾ). ಮುದಿತನ ; ವೃದ್ಧಾಪ್ಯ ; ವಾರ್ಧಕ್ಯ : 'ಮುದುಪತನಂಬೆಱು' ಪರಾ. [ ಮುದುಪ + — ತನ]

**ಮುದುಪತನಂಬೆಱು** (ಕ್ರಿ). ವೃದ್ಧಾಪ್ಯವನ್ನು ಹೊಂದು; ವಯಸ್ಸಾಗು : ಮುದುಪತನಂಬೆತ್ತಾ ದೇವರಾಜನರಪತಿಗಾದರ್ ನಾಲ್ಗುವರರ್ (ಕಕಶಿ. ೩-೪). [ಮುದುಪತನ + ಪೆಱು₁]

**ಮುದುಪಾರ್ವ** (ನಾ). ಮುದುಕನಾದ ಬ್ರಾಹ್ಮಣ ; ವೃದ್ಧಬ್ರಾಹ್ಮಣ: ಕಂಡು ನಿಜತನಯನಳಪೆರ್ದೆಗೊಂಡಿರೆ ಮುದುಪಾರ್ವನಾಗಿ ಮೆಲ್ಲನೆ ಸಾರ್ವಾ ಖಂಡಳನಂ ಕಾಣಲೊಡಂ ಗೊಂಡಿವಿಗಿರದರ್ಚಿ ಪಾಯ್ದುವಶ್ರುಜಲಂಗಳ್ (ಶಂಕಶಾ. ೬-೨). [ಮುದ್ದು₂ + ಪಾರ್ವ]

**ಮುದುಪಾಱಿ** (ನಾ). ವಯಸ್ಸಾದ ವೇಶ್ಯೆ ; ಮುದಿಸೂಳೆ : ನೆಱೆ ಜನಜಾಲದ ನಡುವೆ ನೃಪನನೀಕ್ಷಿಸುವುದು ಬಾಲಕಿಯಂದಮಿದಲ್ತೆನುತ್ತುಂ ಮುದುಪಾಱಿಪಲುಂಬಿದಳು (ಜಯುಕಾ. ೦೦-೫೯). [ಮುದ್ದು₂+ಪಾಱಿ]

**ಮುದುಪಾಱು** (ನಾ). = ಮುದುಪಾಱಿ : ಕೊಳೆತ ಹಾಡ ಬಗುಳುತ ಗಂಡುವೆಸರು ಸುಳಿಯಲ್ಕೆ ಬಾರೆನ್ನಾಣೆಯೆಂಬ ಮುದುಪಾಱಿರ್ದ ಳೊಂದೆಸೆಯೊಳು(ಹಕಶಾ.೪-೨೭); ಕೂರ್ತ ಮನಃಪ್ರಿಯನಂ ಬಿಡೆಂದು ನೀನೆಲೆ ಮುದುಪಾಱು[ಶಾಶಾಂ. ದಿ ಪಾಱು]ದೊಳ್ತೆ ನುಡಿಯಲ್ಬಗೆದೆಂದುದನೆಂತು ಸೈರಿಪೆಂ (ರಾಜಶೇ. ೦೦-೦೬೨). [ಮುದ್ದು₂ +ಪಾಱು₃]

**ಮುದುಪು** (ನಾ). ಮುಪ್ಪು ; ವೃದ್ಧಾಪ್ಯ : ಕಡುಮುದುಪಾದ ಕಾಲ ದೊಳು ತನ್ನಣುಗರಿಗಡಕಮೆನಿಪುದುಪೆಲೆಯುದ (ಹರಿವ. ೬-೪೭); ಪುರುಷನೇ ಮುದುಪಿನೊಂದು ಪರಿಜಿಂ ಮೆಂಕ್ಕೊಂಡು ನಡೆತಂದನೋ (ರಾಜಶಾಕ್ಷ. ೪೦-೦೪). [ ಮುದ್ದು₂ + —ಪು₂]

**ಮುದುಬಂಚೋಯ** (ನಾ). ಒಬ್ಬಾತನ ಹೆಸರು (?) : ಮುದುಬಂಬೋಯಸ್ಯ ಕೌಣ್ಡಿಲ್ಯಗೋತ್ರ (ಇಕ. VIII, ೦೪೭-೨೫; 688).
[ ? + ಬೋಯ ]

**ಮುದುಮಂಕಡ** (ನಾ). ಮುದಿಕೋತಿ : ಕಾಡ ಮುದುಮಂಕಡನೊಂದು ಕೈಚಳಕವಂ ಪರಿಕಿಪುದೆಂದು ತನ್ನಡಿಯಿನೆರ್ದೆಯನೊದೆದಂ (ರಾಜಶಕ್ಷ. ೯೯-೬). [ ಮುದ್ದು₂ + ಮಂಕಡ (< ಮಕ್ಕಡ) ]

**ಮುದುಮೊಗ** (ನಾ). ವೃದ್ಧಾಪ್ಯದಿಂದ ಸುಕ್ಕುಗಟ್ಟಿರುವ ಮುಖ ; ಮುದಿಮುಖ : ಮುಕ್ಕುಱುಕಲ್ ಮುದ[ದು]ಮೊಗ ನೀಡುಂ ದೋಳಿಕ್ಕಲವಂ ಪೊದಮೆಯ್ಕೊಳಿಸಿವ ಪಲರಕ್ಕಸಿಯರ ತಂಡಂ ನಡೆತಂದುದು (ಜಯುಕಾ. ೭-೨೭). [ಮುದ್ದು₂ + ಮೊಗ]

**ಮುದುರಿಸು**, ಮುದುಡಿಸು (ಕ್ರಿ). ಸುರುಟಿಕೊಳ್ಳುವಂತೆ ಮಾಡು ; ಮುರುಟಿಸು : ಹೂವನ್ನು ಬಿಗಿಯಾಗಿ ಹಿಡಿದು ಮುದುರಿಸಬೇಡ (ರೂಢಿ).

**ಮುದುಡಿಸು** : ಮುದುಡಿಸುತುಂ ಕೈರವಮಂ . . . ಉದಯಾಚಳ ಚೂಡದಲ್ಲಿ ಮೂಡಿದನರ್ಕಂ (ಗಿಗಿಕ. ೩-೬) ; ವಿದ್ಯಾರ್ಥಿಗಳಲ್ಲಿ ಸುಪ್ತವಾದ ಶಕ್ತಿಯನ್ನು ಅರಳಿಸುವುದೇ ಶಿಕ್ಷಕನ ಕರ್ತವ್ಯವಾಗಿರುವಾಗ ನಾನು ಆ ಶಕ್ತಿಯನ್ನು ಹೇಗೆ ಮುದುಡಿಸಲಿ ? (ಶಂಗಲೋ. ೨೦೦).
[ಮುದುರು (< ಮುದಿರ್) + — ಇಸು₃]

**ಮುದುರು** 'ಮುದಿರ್' ನೋ.

**ಮುದುವಕ್ಕ** (ನಾ). ಒಂದು ಸ್ಥಳದ ಹೆಸರು : ಮಣಲಿವಾಕ್ಕಿಯಸ್ಯ ಮುದುವಕ್ಕಗ್ರಾಮಸ್ಯ ಉಭಯತಟಯೋರ್ (ಪ್ರಿಂಇಂ. ೦೪೦೬. ೦೦ ; 700).
[ ? ]

**ಮುದುವನ್ನಿಕೊಱಲು** (ನಾ). ಒಂದು ಸ್ಥಳದ ಹೆಸರು : ಮೂಡಣ ಕೊರ್ನೆಡ್ದು ಮುದುವನ್ನಿಕೊಱಲು ಮೂಡನ ಸೀಮೆ ಕಳ್ಳಿವೆಟ್ಟಿನ ಮೂಡಣ ಪೊರೆಯೆ ಮಱೂಱು ಬೆಟ್ಟು ಒಳಗು (ಪ್ರಿಂಇಂ. ೦೪೨೭, ೨೨೨-೬೨; 808). [ ? ]

**ಮುದುವರ್ದು**, ಮುದುಹದ್ದು (ನಾ). ೧. ಮುದಿಯಾದ ಹದ್ದು : ದುಶ್ಶಾಸನನಂ ಕಂಡಾತನಂ ಮುತ್ತಿ ಸುತ್ತಿಱಿದ ಮುದುವರ್ದುಗಳುಮನಗಲೆ ಮೆಟ್ಟಿ ಪೋಟ್ದು (ಶಂಕಶಾ. ೦೩-೫೭ ಪ). **ಮುದುಹದ್ದು** : ೨. (ವ್ಯಂಗ್ಯಾರ್ಥದಲ್ಲಿ) ಮುದುಕ ; ಮುದಿಯ : ಮಿಂಚುದಲೆ ಒಣಕರುಂ ನಿಡುಗಯ್ಯ ದಡಿಗರುಂ . . . ಅಂಡಿದಲೆಯುತ್ತುಸ್ಕರು ಸವೆದ ಮುದುಹದ್ದುಗಳು . . . ಸುತ್ತಮುತ್ತಿರಲು (ವಾಗೀರ. ದೀ. ೨೫೪-೨೪).
[ಮುದ್ದು₂ + ಪರ್ದು]

**ಮುದುವುಣುಸೆ** (ನಾ). ಒಂದು ಸ್ಥಳದ ಹೆಸರು : ಆನೆಗಲ್ಲ ಕಮ್ಮಾರ್ ಕೊಟ್ಟಲೆಯು ಮುದುವುಣುಸೆ ಮಾಳ್ದಿಯುಳ್ ಕೂಡಿತ್ತು ಸೀಮೆ (ಎಕ. XVI, ಗುಬ್ಬಿ. ೭೫-೫೩ ; 733). [ ಮುದ್ದು₂ + ಪುಣುಸೆ (< ಪುಳಿಸೆ) ]

**ಮುದುವೇಡ** (ನಾ). ಮುದುಕನಾದ ಬೇಟೆಗಾರ : ಕೆಱಗೆಲ್ಲಂ ಪರೆದು ಬಿರ್ದ ಶುಕಸಂತತಿಯಂ ಗಟಗಟಿಸಿ ಕಟ್ಟಿ ನಡುಬೆನ್ನಿಱಿವಿನೆಗಂ ಪೊತ್ತು ಪೋದನಾ ಮುದುವೇ[ಶಾಶಾಂ. ಬೇ]ಡಂ (ಕಾದಂಪೂ. ೦೭).
[ಮುದ್ದು₂ + ಬೇಡ₁]

**ಮುದುವೊಳಲ್** 'ಮುದುವೊಟಲ್' ನೋ.

**ಮುದುವೊಱಸು** (ನಾ). ೧. ಮುದಿಯಾದ ಹೊರಸುಪಕ್ಷಿ. ೨. (ವ್ಯಂಗ್ಯಾರ್ಥದಲ್ಲಿ) ಮುದಿಯ ; ಮುದುಕ : ಸೀಂತುಂ ಮೊರೆದುಂ ನಿದ್ರೆಯನೆ ಕೆಡಿಪ ಮುದುವೊಱಸಂ ಮತ್ತೆರಡಿಲ್ಲದೊಲ್ಲಿಂ (ರಶರ್ಮವ್ಯ. ೨-೯೫).
[ಮುದ್ದು₂ + ಪೊಱಸು]

**ಮುದುವೊಟಲ್**, ಮುದುವೊಳಲ್ (ನಾ). ಒಂದು ಊರಿನ ಹೆಸರು ; P ಈಗಿನ ಬಿಜಾಪುರಜಿಲ್ಲೆಯ ಮುಧೋಳ : ನೆಗಟ್ದ ಮುದುವೊಟಲೊಳೆ ಪುಟ್ಟಿ ಸುಪುತ್ರನೆನಿಸಿದಂ ಕವಿರತ್ನಂ (ಅಜಪು. ೦೨-೪೭). **ಮುದುವೊಳಲ್** : ಮುದುವೊಳಲ ದಾರಿಯಿಂ ಬಡಗ . . . ಬಿಟ್ಟ ಮತ್ತರು (ಸೌಇಇ. XI-ii, ೦೦೪-೪೪; 948). [ಮುದ್ದು₂ + ಪೊಟಲ್]

**ಮುದುಹದ್ದು** 'ಮುದುವರ್ದು' ನೋ.

**ಮುದೋಡಿ** (ನಾ). ಮುಟ್ಟಿನಿಂದ ಕೂಡಿರುವ ವ್ಯಕ್ತಿ ; ಇಳಿವಯಸ್ಸಿನ ವ್ಯಕ್ತಿ : ಮುದೋಡಿಯಾದ ನಿಮ್ಮ ಅತ್ತೆಯು ಏನಾದರೂ ವಿಘ್ನವನ್ನು ತಂದಿಡಬಹುದು (ಕಪಶೀ. ೦೦೪). [ ? ]

**ಮುದ್ಗ** (ನಾ). ೧. ಒಂದು ಬಗೆಯ ದ್ವಿದಳಧಾನ್ಯವನ್ನು ಬಿಡುವ ಸಸ್ಯ ಮತ್ತು ಅದರ ಕಾಳು ; ಹೆಸರುಕಾಳು : "ಮುದ್ಗಮೆನಲ್ಕೆ ಹೆಸಱು" (ಶಬ್ದಂಗಣ. ೦೦೦-೩) ; ಕುಲತ್ಥಮುದ್ಗಮಾಷರಾಜಮಾಷ . . . ಜೀರಕಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ (ಆದಿಪು. ೬-೬೨ ಪ) ; ಇಂಗುಳಿಕ ದಣ್ಕೆಯಿಂ ನಯನಂಗಳ್ ಕಾಡಿಗೆಯ ತೊಡಪದಿಂ ರಂಜಿಸೆ ಸರ್ವಾಂಗಂ

ಮುದ್ಗಶ್ಯಾಮತರಂಗಿತತುಷ್ಟಂ ಸಪುಷ್ಪನೀ ಪರಪುಷ್ಪಂ (ಮಲ್ಲಿ. ೫-೩೭).
೨. ಮುಚ್ಚಳ ; ಹೊದಿಕೆ ; ಆಚ್ಛಾದನೆ. [ಸಂ.]

**ಮುದ್ಗಚೂರ್ಣ** (ನಾ). ಹೆಸರುಕಾಳಿನ ಹಿಟ್ಟು ; ಹೆಸರುಹಿಟ್ಟು : ಚರಣಯುಗ್ಮಂಗಳಿಗೆ ನಯಮುದ್ಗಚೂರ್ಣದಿಂದಿರದೆ ಪಾದೋದ್ವರ್ತನಮ ಮಾಡಿಯುಷ್ಣಾಂಬುವೆಱೆದು (ಲಿಕಿ೦. ೪೪-೩). [ಸಂ.]

**ಮುದ್ಗಚ್ಛವಿ** (ನಾ). ಹೆಸರುಕಾಳಿನ ಬಣ್ಣ ; ಹಸುರು : ಅಂತು ಗೋಮೂತ್ರಚ್ಛವಿಯುಂ ಮುದ್ಗಚ್ಛವಿಯುಂ ಕಪೋತಚ್ಛಾಯೆಯುಮಪ್ಪ ಘನೋದಧಿಯುಂ (ಅಶ್ವ. ೧೦-೪ ವ). [ಸಂ.]

**ಮುದ್ಗಪರ್ಣಿ** (ನಾ). ಒಂದು ಬಗೆಯ ಹೆಸರುಕಾಳಿನ ಗಿಡ : "ಮುದ್ಗಪರ್ಣೀ, ಕಾಕಮುದ್ಗಾ, ಸಹ್ಯಾ— ೩ ಕಾಡುಹೆಸರುಕಾಳಿನ ಗಿಡ, ಅಡವೀ ಹೆಸರುಗಿಡದ ಹೆಸರು" (ಸಿದ್ಧಾಂತಿ. ೦೩೭). [ಸಂ. ಮುದ್ಗಪರ್ಣೀ]

**ಮುದ್ಗರ** (ನಾ). ೧. ಒಂದು ಬಗೆಯ ಆಯುಧ : "ಮುದ್ಗರಃ, ದ್ರುಘಣಃ—ಈ ೨ ಡಂಗೆ" (ಹಲಾಯು. ೭೬-೩೨೦) ; ಮುಸುಂಡಿ ಭಿಂಡಿವಾಳ ಮುದ್ಗರ ಗದಾದಿ ವಿವಿಧಾಯುಧಂಗಳೊಳಮತಿಪ್ರವೀಣ[ನು]ಂ . . . ಅಗಿ (ಶಂಪಶಾ. ೨-೨೪ ವ) ; ಅಪ್ರಮೇಯಬಲನುದ್ಗತಮುದ್ಗರಹಸ್ತನೇಱಿ ರತ್ನ ಪ್ರಭಮಂ ವಿಮಾನಮನಗುರ್ವಿಸಿದಂ ನಭದೊಳ್ಳಿಭೀಷಣಂ (ಕಂಠಾಪಶ. ೦೩-೩೦) ; ಸುರಗಿ ಚಕ್ರಂ ಮುದ್ಗರಂಗಳಾ ಸಮುದದಿಂದೊಗೆದ ಕಿಡಿ ಗಜ ಗಲಿಸೆ (ಹಹಳಾ. ೫-೦೩). ೨. ಸುತ್ತಿಗೆ : ಲೋಹಸಂಸರ್ಗದೊಳಗ್ನಿದೇವನು ಘನಮುದ್ಗರಹತಿಪಡೆದಪನು (ಇಂಶಾಶ. ೨೦೪-೩೨). ೩. ಮೊಗ್ಗು ; ಮುಗುಳು. ೪. ಒಂದು ಬಗೆಯ ಮೀನು. ೫. ಒಂದು ಬಗೆಯ ಮಲ್ಲಿಗೆ. [ಸಂ.]

**ಮುದ್ಗಲ್** ' ಮುದುಗಲ್ ' ನೋ.

**ಮುದ್ಗಲ** (ನಾ). ೧. ಉಪನಿಷತ್ತುಗಳಲ್ಲಿ ಒಂದು : ಶ್ರೀರುದ್ರ ಬೃಹದಾರಣ್ಯಕ . . . ಮುದ್ಗಲ ಮುಂಡಕವೆಂಬಿವು ಮೊದಲಾದವೇ ಉಪನಿಷತ್ತುಗಳು (ಏಪೀಠ. ೩). ೨. ಒಬ್ಬ ಋಷಿಯ ಹೆಸರು : ಚ್ಯವನ ಮುದ್ಗಲ . . . ಮೃಕಂಡುಸುತಾದಿ ಭೂಮಿಪ್ರವರಮುನಿಗಳು ಬಂದು ಕಂಡರು ಧರ್ಮನಂದನನ (ಕುವ್ಯಾಗ. ೦೩-೨). [ಸಂ.]

**ಮುದ್ಗಾನ್ನ** (ನಾ). ಹೆಸರುಬೇಳೆ ಮತ್ತು ಅಕ್ಕಿಯನ್ನು ಒಟ್ಟಿಗೆ ಬೇಯಿಸಿ ಮಾಡುವ ಒಂದು ಬಗೆಯ ಖಾದ್ಯ ; ಹುಗ್ಗಿ ; ಕಿಚ್ಚಡಿ : ಹರಿದ್ರಾನ್ನ ಪರಮಾನ್ನ ಮುದ್ಗಾನ್ನ . . . ಗುಡಾನ್ನವೆಂಬ ಷಡ್ವಿಧಅನ್ನಾದಿ ನೈವೇದ್ಯಂಗಳಂ . . . ಸಂಪಾದಿಸಿ (ಏಪೀಠ. ೯೫) ; ಪರಮಾನ್ನವೆಂದು . . . ವಿಮಲಮುದ್ಗಾನ್ನಮಿವು ಷಡ್ವಿಧಾನ್ನನೈವೇದ್ಯ ಶಿವಗೆ (ಗುರುಕಾ. ೭-೫೫). [ಸಂ.]

**ಮುದ್ದ**$_1$ (ನಾ). ೧. ಮುದ್ದಾಗಿರುವವನು ; ಚೆಲುವ ; ಸುಂದರ : ಕಂದ ಮುದ್ದನ ಅಚ್ಚ ನಿಡುಹಣೆಗೆ ತಾಯ್‍ತರಳೆ ಚಂದದಿಂ ಬೊಟ್ಟಿಟ್ಟ ಕತ್ತುರಿಗೆ ಜೋ (ಕುಪು. ೪-೦). ೨. ಇಷ್ಟನಾದವನು ; ಆಪ್ತ : ಕವಿಗಳ ಮುದ್ದನಾಶ್ರಿತರ ಮುದ್ದನನಾಥರ ಮುದ್ದನ್ (ಎಕ. VIII (S). ಸೊರಬ. ೫೬೭-೯೫ ; 1201). ೩. ಒಬ್ಬಾತನ ಹೆಸರು : ಈ ಕಲ್ಲ ಸಂದಿಗರ ಬಳಿ × × × ಮುದ್ದನ್ನಿಱಿಸಿದೊಂ (ಎಕ. VII, ಶಿಕಾ೦. ೨೦೪-೩೩ ; 918) ; ಉಪ್ಪವಳ್ಳಿಯ ಪೋಚಿಗಾಮುಣ್ಡ ವಳಿಯೆಱಿ ಮುದ್ದಮಾಗುಣ್ಡಯೆಱಿಗ (ಎಕ. XV, ಬೇಲೂರು. ೩೦೬-೦೩ ; 971). [ಮುದ್ದು + — ಅ$_7$]

**ಮುದ್ದ**$_2$ ' ಮುಗುಂದ ' ನೋ.

**ಮುದ್ದಂಚೆ** (ನಾ). ಚೆಲುವಾಗಿರುವ ಹಂಸ : ಚೆಲ್ವಿಂದೆ ಸಾರ್ತಂದು ಬೇಡುವ ಮುದ್ದಂಚೆಗೆ ಕೈಯ ತಾವರೆಯ ಕಾವಂ ಚೆಲ್ಲದಿಂ ನೀಡುತುಂ (ಕರ್ಣಾ. ೦೩೭). [ ಮುದ್ದು + ಅಂಚೆ$_3$]

**ಮುದ್ದಂಚೆವಱಿ** (ನಾ). ಚೆಲುವಾದ ಹಂಸಪಕ್ಷಿಯ ಮರಿ : ಒಲ್ದಾಡುವ ಮುದ್ದಂಚೆವಱಿಗಳಂ ನಱುಗಂಪಿಂ ತೀಡುವೆಲೆಗಾಳಿಯಿಂ ಸಿರಿಗೂಡಿದ ಗೃಹದಂತಿರಿರ್ದುದಲರ್ದಂಭೋಜಂ (ರಾಜಶೇ. ೧೨-೨೩).
[ ಮುದ್ದಂಚೆ + ಮಱಿ ]

**ಮುದ್ದಕ** (ನಾ). ಒಬ್ಬಾತನ ಹೆಸರು : ಶಕವರ್ಷಮೆಂಟುನೂಱೆಣ್ಬತ್ತಯ್ದಾದನ್ದು ಮುದ್ದಕನ ನಾಶಕಾ ಭೋಗಿ ಅಗ್ನಿಪ್ರವೇಶಗೆಯ್ದಂ (ಎಕ. X, ಮುಳಬಾ. ೬೬-೨ ; 973). [ ಮುದ್ದ$_1$ + — ಕ$_3$]

**ಮುದ್ದಣ** (ನಾ). (ಕರಾ) (ಪ್ರಾಯಕ್ಕೆ ಬಂದಾಗ) ಮುಖದ ಮೇಲೆ ಏಳುವ ಗುಳ್ಳೆ ; ಮೊಡವೆ.
[ ← ತುಳು. ಮುದ್ದಣ್, ಮುದ್ದನ್, ಮುದ್ದಾನ್ ]

**ಮುದ್ದತಿ** ' ಮುದ್ದತು ' ನೋ.

**ಮುದ್ದತಿಠೇವು** (ನಾ). (ಬ್ಯಾಂಕು ಮುಂತಾದ ಕಡೆಗಳಲ್ಲಿ) ನಿರ್ದಿಷ್ಟ ಕಾಲಾವಧಿಯವರೆಗೆ ಇಡುವ ಇಡುಗಂಟು. — ಠೇವಣಿ : ಅವಧಿಯ ಇಡುಗಂಟಿನ (ಮುದ್ದತಿಠೇವು) ಅವಧಿ ಮುಗಿಯುವ ಪೂರ್ವದಲ್ಲಿ ಅದರ ರಕಮು ಸಿಗಲಾರದು (ಬ್ಯಾಂಕಕ್ಕೆ. ೦೦) ; ಗೌಡರ ಪೇಢಿಯಲ್ಲಿದ್ದ ಮುದ್ದತಿ ಠೇವಿನ ಹಣದ ಬಡ್ಡಿಯನ್ನು ಪಣಿಗೆ ಕಳಿಸುತ್ತಿರಬೇಕು (ದೀಕಪ. II. ೦೦೪).
[ ಮುದ್ದತಿ ( < ಮುದ್ದತು ) + ಠೇವು ]

**ಮುದ್ದತಿದರ** (ನಾ). (ವ್ಯಾಪಾರದಲ್ಲಿ) ನಿರ್ದಿಷ್ಟಕಾಲಾವಧಿಗೆ ಮುಂಗಡವಾಗಿಯೇ ವಸ್ತುಗಳ ಮೇಲೆ ಹಾಕುವ ಧಾರಣೆ ; ಸಟ್ಟಾ ; ಮುಂಗಡ ಒಪ್ಪಂದದ ದರ : ಬ್ಯಾಂಕುಹುಂಡಿಯನ್ನು ಕೊಳ್ಳುವಾಗ (೧) ಸ್ಪಾಟ್ ದರ, ತಕ್ಷಣದ ಸ್ಥಳದ ದರ (Spot Rate). (೨) ಮುಂಗಡ ಒಪ್ಪಂದದ ದರ, ಮುದ್ದತಿದರ (Forward Rate). ಎಂಬ ಎರಡು ಬಗೆಯ ದರಗಳಿರುವುವು (ಹಣಕ್ರ. ೦೦೪).
[ಮುದ್ದತಿ ( < ಮುದ್ದತು ) + ದರ$_3$ ]

**ಮುದ್ದತಿಪತ್ರ** (ನಾ). ವಾಯಿದೆ ದಿನದ ಪಟ್ಟಿ : ರಟ್ಟಿನ ಒಳಮಗ್ಗಲು ಪಾಕೀಟನ್ನೂ (Book packet) ಅದರ ಎದುರಿನ ಕಾಗದದ ಮೇಲೆ ಮುದ್ದತಿಪತ್ರವನ್ನೂ (Due date label) ಹಚ್ಚುವರು (ಗ್ರಂಥಾಲ. ೦೫).
[ಮುದ್ದತಿ ( < ಮುದ್ದತು) + ಪತ್ರ]

**ಮುದ್ದತಿಹುಂಡಿ** (ನಾ). ನಿರ್ದಿಷ್ಟಕಾಲಾವಧಿಗೆ ಮೊದಲೇ ನೀಡುವ ಚೆಕ್ಕು. — ಹುಂಡಿ : ಅವರು ನಡೆಸುವ ಹುಂಡಿಗಳ ವ್ಯಾಪಾರದಲ್ಲಿ — ಕೆಲವು ನಗದುಹುಂಡಿಗಳೂ ಇರಬಹುದು, ಇನ್ನು ಕೆಲವು ಮುದ್ದತಿ ಹುಂಡಿಗಳೂ ಇರಬಹುದು (ಠಾಅಶ್ರ. III. ೦೫೫೪).
[ಮುದ್ದತಿ ( < ಮುದ್ದತು ) + ಹುಂಡಿ$_1$]

**ಮುದ್ದತು**, ಮುದತಿ, ಮುದತ್ತು, ಮುದ್ದತಿ, ಮುದ್ದತ್ತು (ನಾ). ೧. ಒಂದು ನಿರ್ದಿಷ್ಟ ಕಾಲಾವಧಿ ; ಗಡುವು ; ವಾಯಿದೆ : ಜೀತದ ಮುದ್ದತಿನೊಳಗೆ ಸಾಲ ಕೊಟ್ಟವನು ತೀರಿದರೆ ಅವನ ವಾರಸುದಾರರು ದುಡಿಸಿಕೊಳ್ಳುವರು (ಕಭಾಗ. ೨೯೭) ; ಮೂರು ತಿಂಗಳ ಮುದ್ದತಾದರೂ ಕೊಡಿರಿ (ಕಮಜ. ೩೫). **ಮುದತಿ** : ೧. ಮುದತಿ (ವಾಯಿದ)ಯಿಂದ ನೀಲಿಯ ಡಿಕ್ರಿಯ ಬಗ್ಗೆ ಜಮಾ ಮಾಡಲ್ಪಟ್ಟ ರಕಮಿಗೆ . . . ನೂರಕ್ಕೆ ಒಂದು ರೂಪಾಯಿ ಒಟ್ಟು ಬೀಳುವದು (ಮುಂಬಿವ್ಯಾ. ೦೦೦). **ಮುದತ್ತು** : ೨. ಯಾವುದಾದರೊಂದು ವಿಷಯವನ್ನು ಮುಂದಕ್ಕೆ ಹಾಕುವುದು ; ಮುಂದೂಡುವುದು : ನನ್ನ ಬಿಟ್ಟೀದ ಕೆಲಸ ಬರೀ ಮುದತ್ತು ಹಾಕುತಾ ಇದಾರ (ಕೋಹಾ. ೦೨೨). **ಮುದ್ದತಿ** : ೧. ಮುದ್ದತಿಯಿಂದ ಕೊಟ್ಟ ನೀಲಿಯ ಮಾರಾಟದ ರಕಮು ಜಮೆ ಆಗುವದು (ಮುಂಬಿವ್ಯಾ. ೩೨ ಕ್ರಸ್ತಾವನೆ) ; ಆ ಮಾಲಿನ ಪೂರ್ಣ ಕಿಮ್ಮತು ಮುದ್ದತಿಯ ಒಳಗೆ ಆಸಾಮಿಯವರು ನಮ್ಮ ಕಡೆಗೆ ಕಳುಹಿಸಬೇಕು (ಮುಂಬಿವ್ಯಾ. ೨೬೪). **ಮುದ್ದತ್ತು** : ೧. ಎಷ್ಟೋ

ಕತಿಬಿಗಳ ಮುದ್ದತ್ತು ವಿಾರಿ ಗುಟು ಬಾರವಂತಾಯಿತು (ಗುರುಶ್ರ. ೭). ೨. ಖಚ್ಲೆಯ 'ಮುದ್ದತ್ತು' ಮುಂದೆ ಬೀಳುತ್ತ ನಡೆದಿತ್ತು (ಶಾಕರ. ೨೦೮).

**ಮುದ್ದತ್ತಿನ ಜ್ವರ** = ನಿಯಮಿತ ದಿನಗಳವರೆಗೆ ಇರುವ ಜ್ವರ ; ಕಟ್ಟಿನ ಜ್ವರ ; ವಾಯಿದೆಜ್ವರ : ದುರ್ದೈವದಿಂದ ತಾಯಿಯು ಮುದ್ದತ್ತಿನ ಜ್ವರದಿಂದ ಹಾಸಿಗೆ ಹಿಡಿದಳು (ಪುಣ್ಯಕೋ. ೬೮).

[ ← ಅರ. ಹಿಂ. ಮುದ್ದತ್ ; ಮರಾ. ಮುದ್ದತ್, ಮುದತ್ ]

**ಮುದ್ದತ್ತು** 'ಮುದ್ದತು' ನೋ.

**ಮುದ್ದಮೂಬೋಯ** (ನಾ). ಒಬ್ಬಾತನ ಹೆಸರು : ಮುದ್ದಮೂರ್ ಬೋಯಸ್ಯ . . . ರೇವಶರ್ಮ್ಮಣ (ಎಕ. VII, ೧೮೮-೯೦ ; 668).

[ ? + ಬೋಯ ]

**ಮುದ್ದಯ** 'ಮುದ್ದಯ್ಯ' ನೋ.

**ಮುದ್ದಯ್ಯ, ಮುದ್ದಯ, ಮುದ್ದೆಯ್ಯ** (ನಾ). ಒಬ್ಬಾತನ ಹೆಸರು : ರಾಚಾಲ ಪೊಂಪಲ ಚಲ್ಲನತ್ತವ್ಯ ಮುದ್ದಯ್ಯನುಮೆಂಜಿಯುಮ್ಮನೆಸುವ ರಾದಿತ್ಯಂ ತುಱುವನಿಕ್ಕಿಸಿ ಸತ್ತೊಂಗೆ ದಿಲೀಪಯ್ಯ × × × (ಎಕ. X, ತಂಕಾಮು. ೧೯೩-೦೦ ; 956 ?) ; ಮುದ್ದಯ್ಯ ಭಾವಿಯನ ಗಳಿಸಿದಂ (ಎಕ. VIII, ಸೊರಬ. ೯೬೦-೦೭ ; 1012). **ಮುದ್ದಯ** : ಕುನ್ದತೂರಬಾವಿನೊಳ್ × × × ಸಳಗ ತಿರಮಣ್ಣಗವುಣ್ಡರ ಮುದ್ದಯಂ ಕಾದಿ ಸ್ವರ್ಗಸ್ಥನಾದ (ಎಕ. X, ಮುಳವಾ. ೨೬೭-೭ ; ಸು. 900?). **ಮುದ್ದೆಯ್ಯ** : ಮುದ್ದೆಯ್ಯ ತುಱುಗೊಳೊಳ್ ಮುಕ್ತಿಗೆ ಸನ್ದ (ಎಕ. XII, ಹೊಳಲ್ಕೆ. ೬೮-೩ ; ಸು. 965) ; ನಾಗಮಯ್ಯನ ಮಕ್ಕಳು ಬಿದಿವಾರಯ್ಯನುಂ ಮುದ್ದೆಯ್ಯನುಂ ಬಿಟ್ಟರ್ (ಎಕ. III (R), ಹಂಜಪ. ೨೩೩-೦೦ ; ಸು. 10ನೆಯ ಶತ).  [ ಮುದ್ದು + ಅಯ್ಯ₁ ]

**ಮುದ್ದಲು** 'ಮೊದಲ್₁' ನೋ.

**ಮುದ್ದಾ** 'ಮುದ್ದೆ₂' ನೋ.

**ಮುದ್ದಾಂ** 'ಮುದ್ದಾಮು' ನೋ.

**ಮುದ್ದಾಟ** (ನಾ). ೧. ಮುದ್ದು ಮಾಡುವಿಕೆ ; ಲಲ್ಲೆ ; ಲಾಲನೆ : ಬೇಟಕ್ಕೆ ತವದ ಕೂಟಂ ಕೂಟಕ್ಕೆ ತನೂಜರಾ ತನೂಜರೊಳಂ ಮುದ್ದಾಟಂ ಫಲಮದೆ ತಮ್ಮೊಳ್ ನಾಟದು ಗಡ ಪೆಱವು ಸುಖಿಲವಂಗಳೊಳೇನೋ (ಸಂಪ್ರಶ. ೩-೯೨). ೨. ಚೆಲುವಾದ ಆಟ ; ಮನಸೆಳೆಯುವ ಕ್ರೀಡೆ : ಕಿಸುರಿಲ್ಲದ ಮುದ್ದಾಟಂ ಮುಳಿಸಿಲ್ಲದ ಕಾಟಂ ಬಾಲಭಾವಮಚ್ಚರಿ ಜನನ (ಅಪಂಶ. ೬-೮) ; ಸಾವು ಸುಳಿಯಲು ಬಾಳೆ ತಿಳಿಲು ಎನೆ ಸವಿಗೂಡಿ ಮುದ್ದಾಟವೆನೆ ಬಂತು ಕಾಳಿದಾಸನ ಸುಗ್ಗಿ (ಮುಕ್ತಕಂ. ೩೨-೦೯).

[ಮುದ್ದು + ಆಟ]

**ಮುದ್ದಾಡಿಸು** (ಕ್ರಿ). ೧. ಲಲ್ಲೆಗರೆ ; ಲಾಲಿಸು ; ಮುದ್ದಿಸು : ಕೂಸುಗಳಂ ಮುದ್ದಾಡಿಸಿ ದೇಸಿಯ ಮಾತುಗಳನಾಡಿ ಪೆರ್ಚಿಸಿ ಪೆಱರಂ ಲೇಸಾಗಿ ತನಗೆ ಬೆೊತ್ತಿಸುವಾಶಾಪರನ್ಯೆದಲಾಱನುಪುನಿರ್ವೃತಿಯಂ (ಧರ್ಮಾಮೃ. ೩-೯೦) : ಒಡಿದು ಚುಂಬುಕಾಗ್ರಮಂ ನಲವೊಡರಿಸೆ ಮುದ್ದಾಡಿಸುತ್ತು ವಿರ್ದರ್ ಸುತನಂ (ಜಂಪ್ರಶ. ೬-೯೭) ; ನವಿಲಂ ಮುದ್ದಾಡಿಸಿ . . . ಜೀವಿಸಾಚಂದ್ರಾರ್ಕಂ ಎಂದು ಪರಸುವುದುಂ (ಮಹಾಪೇ. ೩-೩೩ ವ). ೨. ಪರಸ್ಪರ ಮುದ್ದಾಡುವಂತೆ ಮಾಡು : ನೀರ ಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ ಬಯಲ ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿರ್ದನಯ್ಯ (ಚೂಪ್ಯಸಂ. ೨೭-೦೩).  [ಮುದ್ದಾಡು + -- ಇಸು₃]

**ಮುದ್ದಾಡು** (ಕ್ರಿ). ೧. ಪ್ರೀತಿಸು; ಲಾಲಿಸು; ಮುದ್ದಿಸು : ಪರಿದಾಡುವ ಮಗನಂ ಮುದ್ದಾಡುವಂತೆ . . . ಕೊಲ್ಲದ ವ್ರತಮಂ ಕೈಕೊಂಡು (ಧರ್ಮಾಮೃ. ೦೦-೭) : ಕಕ್ಕಯ್ಯ ಹರಿಯಯ್ಯ ಚಿಕ್ಕಯ್ಯ ಚೆನ್ನಯ್ಯ ಎತ್ತಿ ಮುದ್ದಾಡಿ ಸಲಹಿದರೆನ್ನ (ಬಸವ. ೩೩೨) ; ಕಣ್ಣೊಳು ಮುದ್ದಾಡಿ ಮನದ ಮಗ್ನಲೊಳಿರಿಸಿ ಚಿತ್ರದೊಳಚ್ಚೊತ್ತಿ (ಪಂಬರ. ೨-೭೦). ೨. ಚುಂಬಿಸು; ಮುತ್ತುಕೊಡು : ಪೂವಲಿಯೊಳ್ ಮುದ್ದಾಡೆ ತುಂಬಿಗಳ್ಮಿಗಿಲುವ್ದಂ ಪರಿದತ್ತು ಹರ್ಷರಸಮಾ ಪುರದೊಳ್ (ಶಂಕಾಮೂ. ೯-೨೮) ; ಮುದ್ದಾಡುವಳು ಮುಸುಡೊಗ್ಗಿ ಮುದ್ದಂ ಬೇಡುವಳು (ಬಸಪು. ೦೩-೦೯) ; ಎಂದಪ್ಪಿ ಕೊಂಬೆ ರಂಗಯ್ಯನ . . . ನಾನೆಂದು ಮುದ್ದಾಡುವೆ (ಪುರಂದ. ೨-೬೬ ಅನುಕಲ್ಲಬ).  [ಮುದ್ದು + ಆಡು₁]

**ಮುದ್ದಾವ್** 'ಮುದ್ದಾಮು' ನೋ.

**ಮುದ್ದಾಮ** 'ಮುದ್ದಾಮು' ನೋ.

**ಮುದ್ದಾಮು, ಮುದ್ದಾಂ, ಮುದ್ದಾವ್, ಮುದ್ದಾಮ** (ಅ). ೧. ಉದ್ದೇಶಪೂರ್ವಕವಾಗಿ ; ಉದ್ದೇಶದಿಂದ ಕೂಡಿ : "ನಿನ್ನ ಕತೆಯಲ್ಲಿ ಉಪ್ಪು - ಖಾರ ಇಲ್ಲವೇನು ?" "ಇರಬಹುದು ; ಆದರೆ ನಾನು ಮುದ್ದಾಮಾಗಿ ಏನೂ ಹಾಕಿಲ್ಲ" (ಮುಕ್ತ. ೯೩). ೨. ಖುದ್ದಾಗಿ ; ಸ್ವತಃ : ಅದರ ಸಲುವಾಗಿ ಮುದ್ದಾಮು ತಿಳಿಸುತ್ತೇವಲ್ಲಾ (ಮುಂಬಯ್ಯ. ೨೦೩); ಅವರು ವೆಂಕಟರಾಮುನನ್ನು ಮುದ್ದಾಮು ಹುಡುಕಿ, ಕಂಡು, ಹಸ್ತಲಾಘವ ಮಾಡಿ ಅವನ ಹಸ್ತದಲ್ಲೇ — ಒಂದು ಲಕೋಟೆಯನ್ನು ಬಿಟ್ಟು ಹೋದರು (ಅಳಿ. ೪). **ಮುದ್ದಾಂ** : ೧. ನಾನು ಮುದ್ದಾಂ ಬಡವರ ಸಲುವಾಗಿ ಅಂತ ಎರಡ ರೂಪಾಯಿ ಕಡಿಮೆ ಮಾಡೀನಿ (ನಡುಮ. ೨೭). ೨. ಮುದ್ದಾಂ ಸುಬ್ಬಕ್ಕನವರು ಆಡಿದ ಈ ಮಾತನ್ನು ಗೋವಿಂದರಾಯರ ಎದುರಿಗೆ ಹೇಳಿದನು (ಇತಿಶ್ರೀ. ೧೮೯) : ನೋಟೀಸನ್ನು ಮುದ್ದಾಂ ಕಳುಹಿಸಿದ ಕಾಲದಲ್ಲಿ ತಲುಪಿದ್ದಕ್ಕೆ ಒಂದು ಅಕನಾಲೆಡ್ಜ್ ರಶೀದಿಯನ್ನು ಪಡೆಯಬೇಕು (ಗ್ರಾಪಂಶ. ೮೦). ೩. ಖಂಡಿತವಾಗಿ; ನಿಖರವಾಗಿ : ಆತನಿಗೆ ಸಾಸುವೆಯಷ್ಟೂ ಸಂಶಯ ಬಾರದೆ 'ಮುದ್ದಾಂ' ಮಾತನಾಡಿದೆ (ಕೋಕೂ. ೨೯). **ಮುದ್ದಾವ್** : ೨. ನಾನೇ ಮುದ್ದಾವ್ ನಿಮ್ಮಲ್ಲಿಗೆ ಬಂದು ವಿಷಯ ಹೇಳುತ್ತೇನೆ (ಕೂಬ). **ಮುದ್ದಾಮ** : ೧. ನದೀತೀರದ ಊರಿನ ಮಿತ್ರರೊಬ್ಬರು ಮುದ್ದಾಮ ಅಲ್ಲಿಗೆ ಕರೆದೊಯ್ದು ಹೊಳೆಯ ದಂಡೆಯ ಮೇಲೆ ಸೊಗಸಾದ ಔತಣ ಕೊಟ್ಟರು (ಅಲ್ಪಾ. ೬೩). ೨. ಹೀಗೆ ಆಗಬಾರದೆಂಬುದರ ಸಲುವಾಗಿ ಮುದ್ದಾಮ ಸೂಚನೆ ಮಾಡೋಣದರಲ್ಲಿ ಬರುತ್ತದಲ್ಲಾ (ಮುಂಬಯ್ಯ. ೯೪). [← ಅರ. ಹಿಂ. ಮುದಾಮ್; ಮರಾ. ಮುದ್ದಾಮ್]

**ಮುದ್ದಾಯಿ, ಮುದ್ದೈ** (ನಾ). ದಾವಾ ಹಾಕುವ ವ್ಯಕ್ತಿ; ಫಿರ್ಯಾದಿ : ಸಾಹೇಬರಿಗೆ ಏಳಿ ಸಿಕ್ಕಿತು . . . ಮುದ್ದಾಯಿಯ ಕಡೆ ತಿರುಗಿದರು (ದಾಸಳು. ೪). **ಮುದ್ದೈ** : ಅವಳು ಮುದ್ದೈಯಾಗಿ . . . ಮೆಜಿಸ್ಟ್ರೇಟರ ಮುಂದೆ ಬಂದವಳಲ್ಲ (ಹಹಸ. ೩೦). [← ಅರ. ಮುದ್ದಈ ; ಹಿಂ. ಮುದ್ದಈ, ಮುದ್ದಇಯಾ ; ಮರಾ. ಮುದಾಈ]

**ಮುದ್ದಿಕೆ** 'ಮುದ್ದಿಗೆ₁' ನೋ.

**ಮುದ್ದಿಕ್ಕು, ಮುತ್ತಿಕ್ಕು** (ಕ್ರಿ). ೧. ಚುಂಬಿಸು ; ಮುತ್ತುಕೊಡು : ಅರವಿಂದಾನನೆ ಕೇಳು ಅರಮೊರೆಯಿಲ್ಲದೆ ಅಱಿಯದಂದದಿ ಬಂದು ಅಧರ ಮುದ್ದಿಕ್ಕಿದ (ಪುರಂದ. ೦-೨೦೬-೦) ; ಅಕಸ್ಮಾತ್ ಮುದ್ದಿಕ್ಕುವ ಪ್ರಸಂಗ ಬಂದಿದ್ದರೆ ಕುದುರೆಗಳಾದರೂ ಸರಿಯಬೇಕಿತ್ತು (ಬಂಗಾತ. ೩). ೨. ಸೋಂಕು; ಮುಟ್ಟು; ಸ್ಪರ್ಶಿಸು : ಕಾಡಿನ ಹೆಮ್ಮರಗಳು ಆಕಾಶವನ್ನು ಮುದ್ದಿಕ್ಕುತ್ತಿದ್ದುವು (ಕೂಬ). **ಮುತ್ತಿಕ್ಕು** : ೧. ಅವಳು ಪ್ರೀತಿಯಿಂದ ಮಗುವಿಗೆ ಮುತ್ತಿಕ್ಕಿದಳು (ಕೂಬ).  [ಮುದ್ದು + ಇಕ್ಕು]

**ಮುದ್ದಿಗ** (ನಾ). ಪ್ರೀತಿಗೆ ಪಾತ್ರನಾದವನು : ಹೊದ್ದಲೀಯದೆ ಮಾಯೆಯಂ ನೆಱೆಗೆದ್ದ ಶರಣರು ನೋಡಿ ಲಾಲಿಪ ಮುದ್ದಿಗಂ ಬಂದಂ (ಬಸಪು. ೨೯-೭).  [ಮುದ್ದು + — ಇಗ]

**ಮುದ್ದಿಗೆ₁, ಮಿದ್ದಿಗೆ, ಮುದ್ದಿಕೆ** (ನಾ). ದ್ರಾಕ್ಷಿಯ ಬಳ್ಳಿ ಮತ್ತು ಅದರ ಹಣ್ಣಿನ ಗೊಂಚಲು ; ಮೃದ್ವೀಕಾ – ಮುದ್ದಿಗೆ (ಕಮುದ. ೨೬೮ ಶ್ರಯೂ) :

ಎಲೆಗೊಂದು ಪಣ್ಗೊನೆಯನಾಂತಿರ್ಪ ಮುದ್ದಿಗೆಯಿಂ .... ಆ ವನಂ ಮೆರೆದುದು (ಶೀತಶಾ. ೭-೧೦೦); ಅಲ್ಲಿಗಲ್ಲಿಗೆ ಪಣ್ತ ತೊಂಗಲಿಂಬಿಡಿದ ಮುದ್ದಿಗೆಯ ಕಾವಣಮುಂ ... ಕಾತುವಲ್ಲಿಗೆಯ ಬಳ್ಳಿವಾಡಮುಂ ರಾಜಿಸೆ (ರಾಜಶೇ. ೪೦-೧೭). ಮಿದ್ದಿಗೆ : ಮೃದ್ವೀಕಾ, ಮಿದ್ದಿಗೆ (ಕರ್ಣಾ.ಶು. ೦೪೦ ಪ್ರಯೋ). ಮುದ್ದಿಕೆ : "ಮುದ್ದಿಗೆ (ಕೆ)–ಮೃದ್ವೀಕಾ" (ಕರ್ಣಕೋ. ೩೬). [< ಸಂ. ಮೃದ್ವೀಕಾ]

**ಮುದ್ದಿಗೆ₃** (ನಾ). ಮೊಹರು; ಮುದ್ರಿಕೆ: ಮುದ್ರಿಕಾ – ಮುದ್ದಿಗೆ (ಶಬ್ದಮ. ೩೩೦ ಪ್ರಯೋ); ಮುದ್ರಿಕೆ, ಮುದ್ದಿಗೆ (ಕರ್ಣಾ.ಶು. ೦೩೪ ಪ್ರಯೋ). [< ಸಂ. ಮುದ್ರಿಕಾ]

**ಮುದ್ದಿಡು, ಮುತ್ತಿಡು** (ಕ್ರಿ). ಚುಂಬಿಸು; ಮುತ್ತುಕೊಡು : ಗೋಪಿಯ ಭಾಗ್ಯವಿದು ಆ ಪರಮಾತ್ಮನ ಅಪ್ಪಿ ಮುದ್ದಿಡುವುದು (ಪುರಂದ. ದಾ. ೪-೨ ಕಲ್ಲಿ); 'ತಪ್ಪದಲೆ ಶಿವನ ಮುದ್ದಿಟ್ಟು', 'ಕಪ್ಪುಕಾಡಿಗೆ ಮಾಡಿ ಅಪ್ಪಿ ಮಗುವಿಗೆ ಹಚ್ಚಿ' ಮೊದಲಾದ ನುಡಿಗಳು ತಾಯ್ತನದ ಬೆಳ್ಳುಡಿಗಳಲ್ಲವೇ ? (ಕನ್ನಡಾ. ೦೬೭); ಮನೆಯ ದೀಪವೆಂದು ಮುದ್ದಿಟ್ಟರೆ ಗಡ್ಡ ಮೀಸೆ ಸುಟ್ಟಿತು (ಗಾದೆ). ಮುತ್ತಿಡು : ನುಣ್ಗಲ್ಲಮಂ ಬಿಡದಾಘ್ರಾಣಿಸಿ ಸೋಗೆ ಗಣ್ಗೊನೆಗಳಂ ಮುತ್ತಿಟ್ಟು ... ಪೇರಟ್ಟಿಯಿಂ ತೊಡರ್ದಲ್ಲಾ ಬೆರಳ್ವಣ್ಗಳಂ ನಲಿಯಿಸುತುಂ ತಣ್ಣಾಳಿಯೇಂ ನೋಂತುದೋ (ಶಿಶು. ೬-೩೭). [ಮುದ್ದು + ಇಡು₁]

**ಮುದ್ದಿಮಯ್ಯ** (ನಾ). ಒಬ್ಬಾತನ ಹೆಸರು ; ಮುದ್ದಿಮಯ್ಯಂಗೆ ಪರಕಯ್ಯಂ ಪನ್ನಿರ್ವರ ಅರಸಿನ ಸಾಥಿಕ್ಷಿತದೆಳ್ ಕಾಲಂ ಕರ್ಚಿ ಕೊಟ್ಟ ಭೂಮಿ (ಎಕ. XI. ಚಾಮರಾ. ೦೭-೧೦; ೩೩೨). [< ಮುದ್ದು + ಅಯ್ಯ₄]

**ಮುದ್ದಿಸು** (ಕ್ರಿ). ೧. ಪ್ರೀತಿಮಾಡು; ಲಲ್ಲೆಗರೆ : ಮೋಹಿಸಿ ಮುದ್ದಿಸಿ ಮರುಳಾದೆನವ್ವ (ಬಸವಾದಿ. ಬ. ೫೩-೯೯); ಮುನಿಯುತ್ತುಂ ಮುದ್ದಿಸುತ್ತುಂ ತೊನೆದು ತವಕಿಸುತ್ತುಂವೃತಮುಂ ಗರ್ವಿಸುತ್ತುಂ (ರಸ್ತಾಕಿ. ೩೩); ಪರಿಪರಿಯೊಳಿಂತಾ ಕುಮಾರನಂ ಮುದ್ದಿಸುತ್ತಿರೆ ಹರ ಹರಾ ಪುತ್ರಮೋಹ ವಿನ್ನೆಂತುಟೋ (ಬೊಕ್ಕ. ೫-೨೭). ೨. ಚುಂಬಿಸು : ಅಪ್ಪಿ ದೇವರೆ ಪೇಳೆನುತ ಬಿಗಿಯಪ್ಪುವಂ ಮುದ್ದಿಸುವಂ ... ಕಣ್ಣಪ್ಪದೇವನು (ಬಸವಪು. ೦೪-೩೩); ನೇಹಮುರ್ಬಿ ಮೊಗದಲ್ಲಿ ಮೊಗವಿಟ್ಟು ಮುಂಡಾಡಿ ಮುದ್ದಿಸುತೆ (ಶರ್ಮಾ. ೬-೩೦); ಭರದಿಂದೆ ಬಂದಪ್ಪಿದಂಗನೆಯು ... ಮುದ್ದಿಸಿ ತನ್ನ ಬೆರಳುಂಗುರಂಗೊಟ್ಟು ಸಂತೈಸಿ ವೃಷಕೇತು ಕಾಂತೆಯಂ ಬೀಳ್ಕೊಂಡನು (ಜೈಮಿನಿ. ೯-೦೨). ೩. ಪ್ರೀತಿಯಿಂದ ತಡವು,— ನೇವರಿಸು : ಕೋಣನ ಬೇಂಟೆಯಾಡಿ ಕಡು ನೊಂದು ವಿಜೃಂಭಿಪ ತಮ್ಮ ನಲ್ಲರಂ ಕಾಣುತೆ ಬಂದು ಮುದ್ದಿಸಿ ವಿಷಾಣ ವಿಘಾತದಿನಾದ ಗಾಯಮಂ ಮಾಣದೆ ಹಸ್ತಪಲ್ಲವದೆ ಮುಟ್ಟಿ ನಿರೀಕ್ಷಿಸುತೊಪ್ಪಿದ ರ್ಸಮಂತ್ರೇಣಕಿಶೋರನೇತ್ರಯರ್ (ಅನಂತ. ೨-೬೭); ಬಿರಿವೂಗಳ ಚುಂಬಿಸುತ, ಪರ್ಣಮಂ ಮುದ್ದಿಸುತೆ ... ತೀಡುತೈತಂದ ತಂಗಾಳಿಯಂ ಸುಖಿಯೆಂದು ಕ್ರೀಡಿಸುತೆ (ಚಿತ್ರಾಂಗ. ೬೨-೧೭೦೦); ಆರಾಧ್ಯರು ನನ್ನನ್ನು ಮುದ್ದಿಸಿ ಹರಸಿದರು (ತಂಗಾಳ. ೫೦). [ಮುದ್ದು + — ಇಸು₂]

**ಮುದ್ದು, ಮುತ್ತು₃** (ನಾ). ೧. ಅಕ್ಕರೆ ; ಒಲವು ; ಪ್ರೀತಿ : "ಅಱುಮೆಯು ತಾಂ ಲಲ್ಲೆಯೆನ್ನಲಿವು ಮುದ್ದಕ್ಕುಂ" (ಕವಿಕಂ. ೦೮೦); ಆಕೆಯ ಮಾತಾಕೆಯ ಮುದ್ದಾಕೆಯಂದವಾಕೆಯ ತನುಸೋಂಕು ... ಆಕೆಯ ಕೂಟಮೆ ದಲಿರ್ದುದರಸನ ಮನದೊಳ್ (ಕಾದಂಬ. ೬೬೨); ನಿನ್ನ ಮುದ್ದನೆ ನಚ್ಚಿ ಮೆಚ್ಚುಮೆನಾಗಳುಂ ನಿನ್ನಗಲ್ಕೆಯೊಳಿಂತು ಸೈರಿಸುವೆಂ (ಧರ್ಮಾಮೃ. ೩-೨೨೦); ಬಲದಾಯಿ ಮುದ್ದ ಬಲ್ಲಳೆ ನೊಂದ ನೋವ ನೋಯದವರೆತ್ತ ಬಲ್ಲರು (ಬಸವಾದಿ. ೩. ೦೪೦-೩೦೯); ನಾನೇದರೆ ಅವಳಿಗೆ ಎಷ್ಟೊಂದು ಮುದ್ದು ಎಂದು ಗೊತ್ತಿದೆಯೆ ? (ಅಪೋಲೋ. ೪೦). ೨. ಚುಂಬನ : "ಮುದ್ದು [ಹಾಕಾಂ. ತ್ರು] ಚುಂಬನಮುದೋಪ್ತವಾನಂ" (ಶಬ್ದಮ. ೯೭-೦೬); ಲಂಬೋದರ ಗುಹರ್ಗಂ ಮುದ್ದುಗಳನೂಡಿ ಬೇಡಿದರ್ಗಭಿಮತವಿತತಿಯಂ ನೀಡಿ (ಐಶಕ್ಕಿ. ೦-೫೦); ಅಳ್ತಿಯಿಂ ಮುದ್ದುಗಳನು ಬೇಡುವರ್ ಕೆಯ್ಗಳೊಳ್ ಮೆಯ್ಗಳೊಳ್ ಬಾಯ್ಗಳೊಳಗೆ (ಶಂಕ್ಷ. ೫-೨೬). ೩. ಅತಿಯಾದ ಪ್ರೀತಿ ಯಿಂದ ಉಂಟಾದ ಸಲುಗೆ ; ಸದರ : ಮುದ್ದು ವಿದ್ಯಾರ್ಥಿಗೆ ಸಲ್ಲ ... ಜಿದ್ದು ಬೋಧಕನಿಗೆ ಸಲ್ಲ (೨೦ಕಾಶ. ೦೭೦–೯೩); ಅಜ್ಜಿಯ ಮುದ್ದಿನಿಂದ ಮೊಮ್ಮಗ ಯಾರು ಹೇಳಿದ ಮಾತಿಗೂ ಕಿವಿಗೊಡುವುದಿಲ್ಲ (ರೂಢಿ). ೪. ಚೆಲುವು ; ಸೊಗಸು ; ಅಂದ : ಮಸೆದ ಮದನನಲಗಿನಲರ್ಗಳಂತೆ ಕಣ್ಗೊಳಿಸಿ ಬಳಸಿ ಬಂದಿರ್ದ ಪಾಟದಾಟದ ಮುದ್ದಿನ ಬರ್ದಿನ ಪರಿವಾರ ದೇವಿಯರುಮಂ ... ಕಂತು (ಅಂಕ್ಷ. ೨-೬೩ ವ); ನುಡಿಯ ಮಾತಿನ ಮುದ್ದು ಶಿವನನೊಲಿಸುವ ಮುದ್ದುತಾನೆಸಲ್ ಶಿವೆ ಪೇಳಿದಳು (ಶಂಕ್ಷ. ೩೭-೨೨); ಕಂದನಾಡುವ ಬಾಲಲೀಲೆಯಂ ನೋಡಿ ತೊದಲೋದಿದಿನಿ ವಾತನುರೆ ಕೇಳ್ದು ಮುದ್ದಿನ ಮುದ್ದೆಯುಂಪದಂಗವನೆತ್ತಿಕೊಂಡು ನಳತೋಳ್ಗಳಿಂದಪ್ಪಿ (ಜೈಮಿನಿ. ೦೮-೨೦). ೫. ಮಕ್ಕಳಾಟಿಕೆ ; ಬಾಲಲೀಲೆ : ನಡವ ತರ್ಳನಡೆಯೊಳ್ ಪುಡಿವುಡಿಯಾದುವು ಶಿಲೆಗಳೊಡೆದು ಕರಿಗಳ್ ಭೀಮಂ ಒಡದಡರ್ಮೊಡೆ ಬಾಬ್ಬುಟ್ಟಲ್ವಡಗಾದುವು ಮುದ್ದದೆಂತು ಸೊಗಯಿಸವೇಡಾ (ಕಂಕಶಾ. ೨-೫); ಇನಿವಿರಿದಬಲನ್ಯರೊಳಂ ಜನಿಯಿಸಿತನೆ ಬಯಸಿ ಪಡೆದು ತೊಡೆಯೇಱಿಸಿ ಮುದ್ದನೊಲ್ದು ನೋಡಿ ನಡೆಪಿದ ಜನನೀಜನಕರ್ಗದೆನಿತಬಲ್ ಜನಿಯಿಕುಮೋ (ಶಾಂತಿಪು. ೪೬೩); ಮುದ್ದಿಬಿನದಮನೊಡರ್ಚಿಯಾಡುವ ತನಯಂ ಸಂಸಾರಶರಧಿಸೀಮೆಯಿದಲ್ತೇ (ರಕಳು. ೫-೩೩). ೬. ಪ್ರೀತಿಗೆ ಪಾತ್ರವಾದ ವ್ಯಕ್ತಿ ಅಥವಾ ವಸ್ತು : ಎನ್ನ ಮುದ್ದೆ ಮುನಿಯದಿರಿದಾವ ಗಹನಂ (ಧರ್ಮಾಮೃ. ೨-೦೨೪); ಯಶೋದೆ ಪರಮಾಸುಖಾರ್ದ್ರಲೋಚನದಿನೀಕ್ಷಿಸಿ ನಂದನನಂ ... ಇದಾರ ನಿಧಾನವಿದಾರ ಮುದ್ದಿದಾರರಸಂ ... ಇದಾರ ಸಿಂಹಮೆಂದಿರ ದಮರ್ದಪ್ಪಿದಳ್ (ಜಗಂ. ೩-೪೦); ನಿನ್ನ ಮಗನು ಮುದ್ದು ನಿನಗಾದರೆ ಗೋಪಿ ಯಾರಿಗೇನೆ (ಪುರಂದ. ೨-೮೩ ಕಲ್ಲಿ). ೭. ತುಟಿ ; ಅಧರ : ನಿದ್ರಾನ್ವಿತೆಯಾಗಿ ಕಣ್ದಟ್ಟಿಯೊಳಗನಿರುದ್ಧನ ಕಂಡಮರ್ದಪ್ಪಿ ಮುದ್ದಾಡಿ ಮುದ್ದ ಬಾಯೊಳಗಿಟ್ಟು ಚುಂಬಿಸುತಿದ್ದಳು ರತಿಶಾಸ್ತ್ರದಲಿ (ಕೋಪಶ. ೩೭-೪೦). ೮. ಅಪೇಕ್ಷಿಸಿದುದು ; ಬಯಸಿದುದು ; ಇಷ್ಟಾರ್ಥ : ಆರುಂಟು ಶಿವಶರಣರೊಳ್ ಕುಲಗುಣಾದಿಗಳನಾರಯ್ಯದವರ ಮುದ್ದಂ ಸಲಿಸಿ ಸಂತವಿಪರೀ ರಸೆಯೊಳ್ (ಶರ್ಮಾ. ೦೩-೨೦). (ಗು). ೯. ಪ್ರೀತಿ ಪಾತ್ರವಾದ ; ನಲ್ಮೆಯ ; ಅಕ್ಕರೆಯ : ಅಳದೆ ನೀ ಒಡಿದಾಡಿದೆನ್ನಯ ಮುದ್ದುಬಾಲ (ಪುರಂದ. ೦-೨೨೬-೨); ಜಂಭಭೇದಿಯ ಮುದ್ದುಪೂರ್ವಜಿಯನ ಗೆದ್ದು ಬೊಂಬೆಯು ಕಾರೊಳಿಟ್ಟಹರು (ಮೋಹತ. ೧೯-೪೩); ನಿಮ್ಮ ಮುದ್ದು ಹುಡುಗಿಗೆ ತಕ್ಕಂತಹ ಅಚ್ಚುಮೆಚ್ಚಿನ ನವಯುವಕನೊಬ್ಬನನ್ನು ಹುಡುಕಿ (ಸುಂದು. ೩). ೧೦. ಚೆಲುವಿನಿಂದ ಕೂಡಿದ ; ಮನೋಹರವಾದ : ನೀಲೋತ್ಪಲನಿಭಾಂಗದ ಮುದ್ದುಮುಸುಡಿನ ಚಲುವ ದೇವರ ದೇವನೆಸೆದನು (ಕೂರಣ. ೦-೬-೮೦); ಪಾಲಿಸಮ್ಮ ಮುದ್ದುಶಾರದೆ (ಪುರಂದ. ೦-೦೪೦ ಕಲ್ಲಿ); ಓಲಗಶಾಲೆಯ ... ಮಣಿಯ ಭಿತ್ತಿಗಳೆಡೆಯಲಿ ಮುದ್ದುಬಾಲಕಿಯರು ರಾಜಿಸಿದರು (ಕಂಶಶಿ. ೨೦-೨೪). ೧೧. ಇಂಪಾದ ; ಮಧುರವಾದ ; ಸವಿಯಾದ : 'ಮುದ್ದುನುಡಿ' ಪರಾ. ಮುತ್ತು₃ : ೨. "ನಿರೋಧಾವರಣದೊಳು ವಶ್ಯೌಕ್ತಿಕದೊಳು ಚುಂಬನದೊಳುಂ ಮುತ್ತೆನಿಕ್ಕುಂ" (ಕನ್ನ.ಮುಂ. ೪೬); ಮುತ್ತಯ್ಯ ಚದುರಿದೇನೆನೆ ಮುತ್ತಲ್ಲದುದುಂಟೆ ವಸ್ತು ಪೇಱಿತೆನೆ ಸತಿ ನೀಮುತ್ತಿರಿಮೆನೆ ಕರಮೊಳ್ಳಿತ್ತಿತ್ತಾಗಡೆ ನಿಮ್ಮೊಳರ್ಪವೆನೆ ವೃದ್ಧವಿಟಂ "(ಅನ್ಯಾ.ಶ. ೬೦೨); ಮಸ್ತಕವನು ಚುಂಬಿಸಿ ಮಗುಳಿರದಪ್ಪಿ ಎತ್ತಿಕೊಂಡನು ಮುತ್ತನಿತ್ತು (ಅಂಜಶ. ೭-೩೦); ಆತ ಕೊಟ್ಟ ವಸ್ತು ಒಡವೆ ನನಗೆ ಅವಗೆ

ಗೊತ್ತು ತೋಳುಗಳಿಗೆ ತೋಳಬಂದಿ ಕೆನ್ನೆ ತುಂಬ ಮುತ್ತು (ನಾದಲೀ. ೩೯-೧೩). ಈ ಮೇಲಿನ 'ಕಾವ್ಯಾವ' ಮತ್ತು 'ನಾದಲೀ' ಪ್ರಯೋಗಗಳಲ್ಲಿ 'ರತ್ನ' ಎಂಬರ್ಥವೂ ಶ್ಲೇಷಾರ್ಥವಾಗಿ ಹೊರಡುತ್ತದೆ.

ಮುದ್ದಿನ ಕಣಿ = ಚೆಲುವಿನ ಆಕರ, –ನೆಲೆ ; ಸೌಂದರ್ಯದ ಖನಿ : ಮುದ್ದುಗಾರರ ಮನೆ ಮುದ್ದಿನ ಕಣಿಯಾಗಿ ಉದ್ಧರಿಸ ಬಂದೆ ನೀ ಲೋಕಕ್ಕೆ ಸೊನ್ನಲಗಿ ಸಿದ್ಧ ಸುಕ್ಷೇತ್ರ (ಸಿದ್ಧಪು. ೩-೯೬). ಮುದ್ದುಮುಚ್ಚಟೆ = ಅತಿಶಯವಾದ ಪ್ರೀತಿ, – ಪ್ರೇಮ : ವಿವಾಹಾದಿಕಾರ್ಯಗಳನ್ನು ಮಾಡಿ ಮುದ್ದುಮುಚ್ಚಟೆಗಳನ್ನು ತೀರಿಸಿಕೊಳ್ಳಲಿಕ್ಕೆ ಮತ್ತೆ ಯಾರೂ ಇಲ್ಲ (ಲಕ್ಷ್ಮೀಶ. ೧೧೨). [ದೇ.II ತಮಿ. ಮುತ್ತು, ಮುತ್ತಮ್ ; ಮಲ. ಮುತ್ತು, ಮುತ್ತಮ್, ಮುತ್ತಿ ; ತುಳು. ಮುದ್ದು ; ಮುತ್ತ, ಮುತ್ತು ; ಮುದ್ದ : ತೆಲು. ಮುದ್ದು ; ಕೊಡ. ಮುತ್ತ ; ಕೋಲಾ : ಮುದ್ ; ಪರ್ಜಿ. ಮೊತ್]

**ಮುದ್ದುಕೊಡು** 'ಮುದ್ದುಗೊಡು' ನೋ.

**ಮುದ್ದುಗ** (ನಾ). ಚೆಲುವನಾದವನು : ಅಂದಗಾರ ; ಸುಂದರ : ಗೋಪಿಯರ್ಕೈದೆ . . . ನಗುತ್ತೆತಂದು ಮುದ್ದುಗರಿರವನೀಕ್ಷಿಸುತೆಂದರುನ್ನತ ಬಾಲಲೀಲೆಗಳ (ಹರಿಭಗ. ೧೧-೯-೨೨) : ನನ್ನಿಯ ನಲ್ಲನಣ್ಣ ನಾಣ್ಮಂ ಪುಸಿವರ ಬೊಜಗಂ ಮುದ್ದುಗರ ಮೊದಲಿಗಂ . . . ಬಲ್ಲಿದರ್ ಬಲ್ಲಪನೇಬವು ಮೊದಲಾದ ಪಲವುಂ ಬಿರುದರಂ ಕೇಳ್ದು (ತಳಸಂ. ೬೩-೧೧).

[ಮುದ್ದು + — ಗ$_2$]

**ಮುದ್ದುಗಜ್ಜ** (ನಾ). ಪ್ರಿಯವಾದ ಕೆಲಸ : ಇಷ್ಟವಾದ ಕಾರ್ಯ : ಉದ್ದಂಡರಾಜ ವೇತಂಡರಾಜರು ಬಂದರಿದ್ದವರೆಲ್ಲರಿನ್ನೆಮ್ಮ ಮುದ್ದುಗಜ್ಜ ವನೆಸಗೆನಲೆಸಗಿದನೆಲ್ಲ ಬದ್ದಿನರನುಮತಿಪಂದ (ಭರತ. ೩೯-೬೦).

[ಮುದ್ದು + ಕಜ್ಜ$_1$]

**ಮುದ್ದುಗರೆ** 'ಮುದ್ದುಗಱೆ' ನೋ.

**ಮುದ್ದುಗಱೆ**, ಮುದ್ದುಗರೆ (ಕ್ರಿ). ೧. ಪ್ರೀತಿಯನ್ನು ಸೂಸು ; ಲಲ್ಲೈಸು ; ಅಕ್ಕರೆಯನ್ನು ತೋರಿಸು : ದೇಶಾವಳಲದಾತ್ಮಜನಂತೆ ನಿನ್ನಯ ಮಸ್ತಕಾಗ್ರದಲಿ ನಿಲಿಸುತಿದೆ ಪುಷ್ಕರವ ನಿನಗೀ ಪಲವು ತೆಱದಲಿ ಮುದ್ದುಗಱೆವುತ ನಲಿವುತಿದೆ ಇದ ನಿನ್ನನಗಲಿಸೆನಂಜಬೇಡ (ಅಷ್ಟಾಂ. ೯-೫೦). ೨. ಚೆಲುವನ್ನು ಬೀರು, –ಹೊರಹೊಮ್ಮಿಸು : ಸೋಗಿಲೊಳ್ ನಕ್ಕಾಡುತುಂ ಮುದ್ದುಗಱೆವುತಂ ಲೀಲೆಯಿಂ ಮಕ್ಕಳಾಟಿಕೆಯೊಳೆಸೆದಂ ಜಗವನಾಡಿಸುವ ಸೂತ್ರಧಾರಂ (ಕಂಪು. ೫-೩೬). **ಮುದ್ದುಗರೆ** : ೧. ಶಾಂತಲಾದೇವಿಯು ನೊಂದ ಮನಸ್ಸು ಮಗುವಿನ ಈ ಮುದ್ದುಗರೆವ ಮಾತನ್ನು ಕೇಳಿತು (ಸಲಿ. ೦೬೬); ಮಗುವಿನ. . . ಗಲ್ಲವನ್ನು ಸವರಿ ಮನಸ್ಸು ತಣಿಯುವಂತೆ ಮುದ್ದುಗರೆಯುತ್ತಿದ್ದಳು (ಹೊಸಕ್ಕ. ೬೬). ೩. ಚುಂಬಿಸು : ಪಾರಿಜಾತಗಳು ಮುದ್ದುಗರೆಯುವವು ಹವಳದುಟಿಗಳಿಂದ ಕಂಪ ಸೂಸಿ ಮಂದಾರ ಉಸಿರ ಬೆರೆಯುವವು (ಹಾಡುಹಾ. ೨೬).

[ಮುದ್ದು + ಕಱೆ$_1$]

**ಮುದ್ದುಗಾತಿ** (ನಾ). ಚೆಲುವೆ ; ಸೊಗಸುಗಾತಿ; ಸುಂದರಿ : ರಾಯನಂ ಅರೆನೋಟದಿಂ ನೋಡಿ. . . ಮುದ್ದುಗೊಳುತಲಿರುವ ಮುದ್ದುಗಾತಿಯಂ ನೋಡಿ (ಕೌಗಂಧಿ. ೩೬೦-೦೦೦). [ಮುದ್ದು + — ಕಾತಿ$_5$]

**ಮುದ್ದುಗಾರ** ' ಮುದ್ದುಗಾಱ ' ನೋ.

**ಮುದ್ದುಗಾಱ**, ಮುದ್ದುಗಾರ (ನಾ). ೧. ಚೆಲುವನಾದವನು; ಸುಂದರ : ಒಂದು ಪೊಳೆಯನುಂಡವಳಸುವನೆ ಕೊಂದ ಮುದ್ದುಗಾಱ ಕಳ್ಳ ಕೊಕೊಕೊ ಎನ್ನಿರೊ (ಕವಿ. ೨೦೦-೧). **ಮುದ್ದುಗಾರ** : ೧. ಮುದ್ದುಗಾರನಾದ ಮಂದಮಾರುತನ ಮುಂದುಮಾಡಿ. . . ಅಂದಗಾರನಾದ ಚಂದ್ರನು (ಕೌಗಂಧಿ. ೩೩೯-೪). ೨. ಅಂದವಾದುದು : ಚೆಲುವಾದುದು : ಕಣ್ಣಗಂದವಾದ ಮಗುವೊ. ಮುದ್ದುಗಾರನಾದ ಮರಿಯೊ ಕಣ್ಣು ನೆಟ್ಟು ನೋಡುತಿದ್ದನು (ಬಂಗೀಕ. ೯-೦೩); ಯಳಂದೂರು ಜಹಗೀರದಾರರ ಕಡೆಯ ಕನ್ಯೆ ಮುದ್ದುಗಾರನ ಹಾಗೆ ಇರಲಿಲ್ಲವೆ ? (ಬಾಗಿಡಿ. ೧೯೨).

[ಮುದ್ದು + — ಕಾಱ]

**ಮುದ್ದುಗುಪ್ಪು** (ಕ್ರಿ). ಪುನಃ ಚುಂಬಿಸು, – ಮುತ್ತುಕೊಡು : ಅಪ್ಪಿ ವಣಿಯನು ಮುದ್ದುಗುಪ್ಪಿ ತಾ ದಣಿಯ (ಶ್ರೀಕೃಪಾ. ೬೯).

[ಮುದ್ದು + ಕುಪ್ಪು$_1$]

**ಮುದ್ದುಗೆಯ್**, ಮುದ್ದುಗೈ (ಕ್ರಿ). ೧. ಪ್ರೀತಿಯನ್ನು ತೋರಿಸು; ಮುದ್ದಾಡು; ಲಲ್ಲೆಗರೆ : ನೂತನ ಮೊಳೆವಲ್ಲೊಗೆದುವು ತೊದಳ್ವಾತ ಮಾತನಾಡುವ ಮುದ್ದುಗೆಯ್ವ ಭೂತಳದೊಳಗಂಬೆಗಾಲಿಟ್ಟು ನಡೆವಂತೆ ಚೇತನವಾದುದಂಗಜಗೆ (ಪ್ರಭುಲಿ. ೧೧-೩೯); ನೀಡುಂ ನೀಡದ ಪಕ್ಕಿಯುಮೆನ್ನಂ ಬಂಜೆಯೆನುತೇಡಿಪಂತಿರೆನ್ನಿದಿರೊಳ್ ಒಳ್ಳೆಯುಂ ಮುದ್ದುಗೆಯ್ಯುಂ (ರಾಮಾಶ್ವ. ೧೯-೩). ೨. ಚುಂಬಿಸು; ಮುತ್ತಿಡು : ಮಲ್ಲಿಗೆಗೋಲನ ಥಣಂಗಿಯು ಸುತವಾತ್ಸಲ್ಯದಿ ಬಿಗಿಯಪ್ಪಿಕೊಂಡು ಚೆಲ್ಲಿದಳವಯವದಲ್ಲಿ ದಿಟ್ಟಿಯ ಸೊಲ್ಲಿಸಿದಳು ಮುದ್ದುಗೆಯ್ದು (ಪ್ರಭುಲಿ. ೦೬-೬೨). **ಮುದ್ದುಗೈ** : ೧. ಪಡೆದವರ್ಮುದ್ದುಗೈವಪರೂಟದೆಡೆಗಳೊಳ್ ಜೋ ವ್ಯ ಮಂ ದ ಳ್ ಸತ್ಯಭಾಮೆ ನಗುತ (ಕೃ ಮಿಕಾ. ೬-೪೭); ಬರೆತೆಗೆದಪ್ಪಿ ಬಾಯ್ಪಲಿಜಿಯ ನೊಯ್ಯನೆ ಚುಂಬಿಸಿ ಮುದ್ದುಗೈದು . . . ಪೊಂಪುಳಿಯಿಂ ಪೊದಿಸುತ್ತೆ ನಲ್ಲಳಾ (ರಾಜಶೇ. ೧೦-೦೦೪). [ಮುದ್ದು + ಕೆಯ್$_1$]

**ಮುದ್ದುಗೆಯಿತ** 'ಮುದ್ದುಗೆಯ್ತ' ನೋ.

**ಮುದ್ದುಗೆಯ್ತ**, ಮುದ್ದುಗೆಯಿತ (ನಾ). ೧. ಸರಸ; ವಿನೋದ : ಲಲ್ಲೆ : ಲೀಲೆಗಾಲಯಮಾದ ಮುದ್ದುಗೆಯ್ತಕ್ಕಂ ಗಾಡಿಗೆ ಪಾಡಾದ ಪಸದನಕ್ಕಂ. . . ಬೆಕ್ಕಸಂಬಟ್ಟು (ಶಾಂತಿಪು. ೩-೩೩ ಪ); ನೋಟದೆ ಬೇಟ ಮುಂಕುರಿಸಿದಪ್ಪುದು. . . ಮುದ್ದುಗೆಯ್ತದಲರ್ದಪ್ಪುದು (ಚಂದ್ರಪ್ರ. ೯-೩೨); ಒರ್ವಳ್ ತನ್ನ ವಲ್ಲಭನ ಮೋಹದ ಮುದ್ದುಗೆಯ್ತಮುಂ ನೆನೆದು ಕೆಲದೊಳಿರ್ದ ಬರ್ದಗಿಂತೆಂದಳ್ (ಅಜಿತಪು. ೯-೪೪ ವ). ೨. ಬಾಲಲೀಲೆ ; ಮಕ್ಕಳಾಟಿಕೆ : ಚುಂಬಿಸಿ ಲೋಳೆವಾಯ್ದೊಱೆಯನೀಕ್ಷಿಸಿ ಮಕ್ಕಳ ಮುದ್ದುಗೆಯ್ತದೊಳ್ಪಂ. . . ತಣಿವೆಯ್ದುವರೇಂ ಕೃತಾರ್ಥರೋ (ಚಂದ್ರಪ್ರ. ೩-೪೪): ಓಹೋ! ಮುದುಗಣ್ಣಸದ ಮುದ್ದುಗೆಯ್ತದ ರಮಣೀಯ ರಮಣ ! (ಮಂತ್ರಶ. ೩೦-೨೪). ೩. ಪ್ರಾಣಿಗಳ ಮರಿಗಳ ಸಂತೋಷದಾಯಕವಾದ ಆಟ : ಈ ತಮಾಳದ ತಳದೊಳಾಡುವ ಮಱಿಯಂಚೆಯ ಮುದ್ದುಗೆಯ್ತಮುಮಂ. . . ಕಂಡು (ಮಲ್ಲಿಪು. ೯-೨೩). **ಮುದ್ದುಗೆಯಿತ** : ೨. ನೋಡಿ ದಣಿಯರು ಗೋಪಿಯರು . . . ಕೊಂಡಾಡಿ ದಣಿಯರು ಬಾಲಕೃಷ್ಣನ ಮುದ್ದುಗೆಯಿತವನು (ಕಾಳ್ವಾ. ೨೦-೨೬).

[ಮುದ್ದು + ಕೆಯ್ತ$_1$]

**ಮುದ್ದುಗೈ** ' ಮುದ್ದುಗೆಯ್ ' ನೋ.

**ಮುದ್ದುಗೊಡು**, ಮುತ್ತುಕೊಡು, ಮುದ್ದುಕೊಡು (ಕ್ರಿ). ಚುಂಬಿಸು; ಮುತ್ತಿಡು : ಅಬ್ಬೊಳುವ ನಾಬ್ಗೆ ಮುದ್ದುಗೊಡಲೀಕ್ಷಿಸುವರ್ (ಸೂಕ್ತಿಸು. ೦೩-೬೦); ಒಲವಿಂದೆತ್ತಿ ತಕ್ಕೈಸಿ ಮುಂಡಾಡಿ ಮುದ್ದುಗೊಟ್ಟು (ಶಾಂತಪು. ೩-೪೯). **ಮುತ್ತುಕೊಡು** : ತಿರೆಯೊಲ್ಮೆ ಸಿರವೆತ್ತಿ ಸಗ್ಗನೀಲಿಗೆ ಮುತ್ತುಕೊಡುವಂತೆವೋಲ್ (ಶಕ್ರಾಂಗ. ೯೦-೨೯೯೩): ಚೆಲಿಗೆ ಮುತ್ತುಕೊಟ್ಟ ಹಾಗೆ (ಗಾದೆ). **ಮುದ್ದುಕೊಡು** : ಮೆಲ್ಲಮೆಲ್ಲನೆ ಬಂದು ಗಲ್ಲಕ್ಕೆ ಮುದ್ದುಕೊಟ್ಟು ನಿಲ್ಲದೆ ಓಡಿ ಹೋದ ಕಳ್ಳಗೆ ಬುದ್ಧಿ ಪೇಳೆ (ಪುರಂದ. ೦-೯೦ ಅಮುಪಲ್ಲವಿ); ಭಟ್ಟರ ಎರಡನೆಯ ಮಗುವನ್ನು ಸರಸ್ವತಿ. . . ಲಟಲಟ ಮುದ್ದುಕೊಟ್ಟಳು (ಹಳ್ಳಿ. ೦೩). [ಮುದ್ದು + ಕೊಡು$_1$]

**ಮುದ್ದುಗೊಸರು** (ಕ್ರಿ). ಸರಸದಲ್ಲಿ ಕೊಸರಾಡು: ಲಲ್ಲೆಯಿಂದ ತಪ್ಪಿಸಿ

ಕೊಳ್ಳಲು ಯತ್ನಿಸು : ಮುನಿಸ ಸಸುದೋರುತಿರು ಮುದ್ದುಗೊಸರುತ್ತ ಬಿರು. . . ಮನವೊಲಿದು (ಶಂಕರಾ. ೩-೬-೩೦).

[ಮುದ್ದು + ಕೊಸರು₁ (< ಕೊಸರ್)]

**ಮುದ್ದುಗೊಳು** (ಕ್ರಿ). ಪ್ರೀತಿಯನ್ನು ಹೊಂದು, – ಪಡೆ : ರಾಯನಂ ಅರೆನೋಟದಿಂ ನೋಡಿ. . . ಮುದ್ದುಗೊಳುತಲಿರುವ ಮುದ್ದುಗಾತಿಯಂ ನೋಡಿ (ಸೌಗಂಧಿ. ೫೧೦–೧೧). [ಮುದ್ದು + ಕೊಳು (< ಕೊಳ್₁)]

**ಮುದ್ದುತನ** (ನಾ). ಚೆಲುವು; ಮೋಹಕತೆ : ಸೋಗೆಯ ಮರಿಯ ಮುದ್ದುತನಮಂ ಮುದ್ದುಗಣ್ಗಳ ಬೆಳಗೆಂಬೆಳಮಿಂಚಿನ ಗೊಂಚಲಿಂ ಮುಂಡಾಡುತ್ತುಂ(ಅರ್ಜವೆ. ೧–೮೨ ವ); ನಿಜಾವಿಡಿದು ಮೊಗಮಂ ನೋಡುವ ತೂಗಾಡುವ ಮಗನ ಮುದ್ದುತನಮುಂ ಬಸವರಾಜಂ ಕಂಡು (ಬಸರ. ೧೧–೦೨೨); ಬೀಜುತಿರ್ದಳು ಮುದ್ದುತನವನು ಕಳೆಯೇಜುತಿರ್ದಳು ಮಾಯೆ (ಶ್ರಭುಲೀ. ೩–೩೧). [ಮುದ್ದು + –ತನ]

**ಮುದ್ದುದೋಜು** (ಕ್ರಿ). ಅಕ್ಕರೆಯನ್ನು ತೋರಿಸು ; ಪ್ರೀತಿಸು : ಮೂಜುಲೋಕದ ಕರ್ವು ಸಮಗಿದಿರೆ ದೀಕ್ಷೆದೋಜೆಂದು ಮುದ್ದುದೋಜಿ ದರು (ಶರಶ. ೭೦–೬೯). [ಮುದ್ದು + ತೋಜು]

**ಮುದ್ದುನಗೆ** (ನಾ). ಮೋಹಕವಾದ ನಗು; ಚೆಲುವಾದ ನಗೆ : ಗುರು ತರ ಶಿವಧ್ಯಾನಿ ಮುದ್ದುನಗೆಗಳ ದಾನಿ. . . ತೊದಳ್ನುಡಿಯ ತವಕಿಗಂ (ಬಸವ. ೦–೦೯೮); ಕಾಂತೆಯರ . . . ತಳಿರ್ದುಟಿಗಳಂ ಮುದ್ದುನಗೆಗಳಂ ಕಂಡು ನಡೆಯಲ್ ಮುಂದೆ ಕಾಲ್ಗೆಳೆದೆ. . . ಪಥಿಕಸಂಕುಳಮಿರ್ದುದು (ಕಬ್ಬಿ. ೦೦–೦೯). [ಮುದ್ದು + ನಗೆ]

**ಮುದ್ದುನುಡಿ** (ನಾ). ಸವಿಯಾದ ನುಡಿ; ಇಂಪಾದ ಮಾತು : ಕಾಂತೆಯರ ಮೇಲ್ನುಡಿಯುಂ ನಂಜಿನುರುಳೆನ್ನದೆ ಮುದ್ದುನುಡಿಯೆಂದೊಡಂ ತನ್ನ ಕೇಡಂ ಬಗೆವನಲ್ಲದೆ ಸುಖಮಂ ಬಗೆಯರ (ರವಿಚಣ್ಣ. ೭–೦೩೩); ಅಕ್ಕರಂಗಳೊಳೆಸೆಯದಿಹ ಮುದ್ದುನುಡಿಗಳಿಂ . . . . ಶಿಶುಲೀಲೆಯಿಂ ಕೆಲ ದಿನಂ ತಾಯ್ಗೆ ಹರುಷಂದೋಜಿದಂ ಕುವರನು (ತಂಪು. ೩–೪೩).

[ಮುದ್ದು + ನುಡಿ₂]

**ಮುದ್ದುಮರಿ** 'ಮುದ್ದುಮಜಿ' ನೋ.

**ಮುದ್ದುಮಜಿ**, ಮುದ್ದುಮರಿ (ನಾ). ಅಕ್ಕರೆಯ ಮರಿ; ಪ್ರೀತಿಯ ಶಾಬ : ವಿಹಂಗ ಸಂತೋಷದಿ ತನ್ನ ಮುಂಗಟ್ಟದ ಮುದ್ದುಮಜಿಗಳ್ಗೆ ಗುಟುಕೀಯೆ ಕಂಗೊಳಿಸಿತು ರುಕ್ಮಿಣಿಗೆ (ಮೋಹತ. ೪–೯). **ಮುದ್ದುಮರಿ:** ತನ್ನ ಮುದ್ದುಮರಿಗಳನ್ನು ಹಗಲೆಲ್ಲಾ ಅದು ನೋಡಿಕೊಳ್ಳುವ ರೀತಿ ಯಾರಿಗೂ ಒಂದು ಗಳಿಗೆ ನಿಂತು ನೋಡುವಂಥಾದ್ದು (ಪಕ್ಷಿಸ್ವಕು. ೦೩).

[ಮುದ್ದು + ಮಜಿ]

**ಮುದ್ದುಮಾತು** (ನಾ). ೧. ಪ್ರೀತಿಯ ಮಾತು ; ನಲ್ಮೆಯ ನುಡಿ : ಮೆಚ್ಚಿ ದಳಿನಿಮನಾಡಿದ ಮುದ್ದುಮಾತಿಗೆ (ಮೋಹತ. ೦೮–೯೨); ಮುದ್ದುಮಾತಿನಲಿ ಮೋಹದ ಬೀಜಾಯುವನೊಳಗಿದ್ದ ಹಣವ ತೆಗೆ (ಕುಷಾ. ೬_೦೩೦). ೨. = ಮುದ್ದುನುಡಿ : ಇವನ ಮುದ್ದುಮಾತುಗಳನ್ನು ಕೇಳಿ ಪಾರ್ವತಮ್ಮ ಮರುಳುಗೊಂಡ ಚಿಗುರಿಯಂತೆ ನೋಡುತ್ತಿದ್ದಾಳೆ (ಕಳುಹು. ೦೯೦).

[ಮುದ್ದು + ಮಾತು₁]

**ಮುದ್ದುಮೊಗ** (ನಾ). ಚೆಲುವಾದ ಮುಖ; ಸುಂದರವದನ : ಬಿಡದ ಡರಿ ಕೊಬ್ಬು ಕುಚಯುಗವೆಡಗಿಜಿದಿರೆ ಮುದ್ದುಮೊಗಮನೆಂದುಂ ನೋಡಲ್ ಪಡೆಯದೆ ಬಡವಾದಂತಿರೆ ಬಡನಡು ಸೊಗಯಿಸುವುದಾ ಸರೋಜಾಸನೆಯಾ (ಶಾರದಾ. ೯) ; ಕೆಂಚೆಡೆ ತಳರ್ನಡ ಮುದ್ದುಮೊಗಂ . . . ದಟ್ಟಡಿಯೊಳ್ಪರಿದೋಡುವಂಗಣಂ ನೆಜೆ ತನಗೊಪ್ಪವರ್ಧಕನನೊರ್ವನನಾಂ ಪಡೆವಂದವಪ್ಪುದೋ (ಸುಕುಮಾ. ೯–೯೯); ಥಳಥಳಿಸುವ ಮುದ್ದುಮೊಗದ ನರ್ತಕಿಯರು ಘಲಲನೆ ನಡೆತಂದರಾಗ (ಕಂಸಾ. ೬_೩೬). [ಮುದ್ದು + ಮೊಗ]

**ಮುದ್ದುವಡೆ** (ಕ್ರಿ). ಚೆಲುವಾಗು ; ಸೊಗಸಾಗು ; ಮನೋಹರತೆಯನ್ನು ಹೊಂದು : ಮುದ್ದುವಡೆದು ಮನೆಯಂಗಣದೊಳ್ ಮನವೊಸೆದಾಡುವ ಮಕ್ಕಳ ವಿನೋದಮಂ ಕಾಣ್ಬ ದಿವಸಮೆಂದಾದಪುದೋ (ಸುಕುಮಾ. ೯–೦೦೦). [ಮುದ್ದು + ಪಡೆ₁]

**ಮುದ್ದುವೀಜು** (ಕ್ರಿ). ಚೆಲುವನ್ನು ಹೊರಸೂಸು, – ಹೊಮ್ಮಿಸು : ಕೃಷ್ಣನ ಮೇಲೆ ಬಾಲೆ ಕಣ್ಣೋಲದಿನಂದು ಬಿತ್ತರಿಸಿದಳ್ ನಗೆವೀಜುವ ಮುದ್ದುವೀಜುವ . . . ಮುಗ್ಧ ಕಟಾಕ್ಷಮಾಲೆಯಂ (ಜಗದ. ೦೦–೭೯) ; ಕಡೆವಾಯೊಳ್ ಪಾಲಧಾರೆ ಪೊಳಪಲ್ಗಳ್ಪೋಲ್ ಬಿಡದೆಸೆಯೆ ಮುದ್ದುವೀಜುತ್ತಡಿಯಿಡುವುವು ಪಲ್ಲಮಜಿಯ ಮಜಿಗಳ್ ವನದೊಳ್ (ಶಬರ. ೩–೪೩). [ಮುದ್ದು + ಬೀಜು₁]

**ಮುದ್ದುವೆಣ್**. ಮುದ್ದುವೆಣ್ಣು (ನಾ). ಮುದ್ದಾಗಿರುವ ಹೆಂಗಸು : ಸುಂದರಿ ; ಚೆಲುವೆ : ಮುದ್ದುವೆಣ್ಗೆ ಅಸು ಮೋಹ ಹೊತ್ತನಜಿಯದೆ ಮೋಹಿಸುವರು ರಸಿಕರು (ಕುಮಾರಾಂ. ೨೪–೧೧೪) ; ಬೆಲ್ಲವೆ ನೀ ಮುದ್ದು ವೆಂಗಳ ಪ್ರ್ಯಡುವಾಪು ಬೆಲ್ಲವಾಗಿರದೆ ಬಂದಿಲ್ಲಿ ಹೊಲ್ಲಹ ನೊಣನ ಮುತ್ತಿಸಿ ಕೊಳಬೇಡ (ಮೋಹತ. ೨೦–೨೯). **ಮುದ್ದುವೆಣ್ಣು :** ಮುದ್ದುವೆಣ್ಣು ಮುದ್ದುವೆಣ್ಣಿಗೆ ಪೇಳದಳು ನಿನ್ನ ಬಿಟ್ಟು ಕಾಲಿದ್ದು ಪೋಪನೆ ಪೋಪುದಿಲ್ಲ (ಮೋಹತ. ೨೯–೩); ಬಣ್ಣದುಟಿಯ ಭಾವವ ಬೀಜುತ ಮುದ್ದುವೆಣ್ಣುಗಳ್ಕೆ ತಂದರಾಗ (ಕಂಸಾ. ೨೧–೭೪). [ಮುದ್ದು + ಪೆಣ್]

**ಮುದ್ದುವೆಣ್ಣು** 'ಮುದ್ದುವೆಣ್' ನೋ.

**ಮುದ್ದುಸೂಸು** (ಕ್ರಿ). ಪ್ರೀತಿಯನ್ನು ವ್ಯಕ್ತಪಡಿಸು ; ಒಲವನ್ನು ತೋರಿಸು : [ವಿನಯ ಪುಳಿಂದ . . . ಮುದ್ದುಸೂಸಿ ಚಂದ್ರಹಾಸನೆಡೆಗೆ ಓಡುತ್ತಾನೆ] (ಕಂಪ್ರಸ. ೩೮–೨೦). [ಮುದ್ದು + ಸೂಸು₁]

**ಮುದ್ದುಸೊಲ್ಲು** (ನಾ). = ಮುದ್ದುಮಾತು ೧ : ನೀನೆ ನಿನ್ನ ನಲ್ಲಗೆ ನೆಜೆ ಸೋತಳಹುದು ಅಲ್ಲಾದರರಸನನೀತು ಬಣ್ಣಿಪ ಮುದ್ದುಸೊಲ್ಲೇಕೆ ಏಮವಕ್ಕ ನಿನಗೆ (ಶರತ. ೭–೩೮). [ ಮುದ್ದು + ಸೊಲ್ಲು₂ (<ಸೊಲ್₂) ]

**ಮುದ್ದೆ₁** (ನಾ). ೧. ಕಲಸಿದ ಆಹಾರ, ಹಿಟ್ಟು ಮುಂತಾದುವುಗಳ ಮೆದುವಾದ ದಪ್ಪ ಉಂಡೆ : ಅಶನದ ಮುದ್ದೆಯ ಕೇಳಿ (ಕಲ್ಯಾಣಾಂ. ೩೦); ಪಾರ್ಥನ ಕರುಳ ದೊಂಡೆಯ ಕೊಳ ಮುದ್ದೆಯ ಬಡಿಸಿ ದೈತ್ಯರಿಗೆ . . . ದಣಿಸಿದಡರಸು ಕೌರವನೆನ್ನ ಸಾಕಿತಕಿಂದು ಫಲವು (ಕುಮಾವ್ಯ. ೮–೪೨); ತೆಂಗಾಯರೆದು ಕದಡಿ ಹಾಲೊಳಗೊಂದು ಮುದ್ದೆ ಬೆಣ್ಣೆಯನಿಕ್ಕಿ (ಕೂಡಲಾ. ೪–೯೩). ೨. ಕಲಸಿದ ಮಣ್ಣು, ಗಂಧ ಮುಂತಾದುವುಗಳ ಗಡ್ಡೆ, – ಕರಣೆ : ಊಳ್ದರುವೊಂದಪ್ಪಂತಿರೆಯು ಮಣ್ಣಮುದ್ದೆಯೊ ಪೇಟಿ (ಸಮಶ. ೨–೩೩); ಮೇಣದ ಮುದ್ದೆ . . . ಎಕ್ಕಲನ ಕಾರುಣೆಗಳಿಂತಿವನು ಕೊಂಡೊಲಿದು ಪೋಪ ಬೇಡರ ನೆರವಿಯೊಪ್ಪಿದುದು (ಶಾಕ್ಕಶಾ. ೦೩–೬); ಗಾತ್ರಾನುಲೇಪನಾ, ವರ್ತಿಃ– ಸುಗಂಧದ್ರವ್ಯಗಳೆಲ್ಲವನ್ನೂ ಕುಟ್ಟಿ ಅರೆದ ಮುದ್ದೆ (ಸಿದ್ಧಾಂತ. ೨೦೯). ೩. ರಾಗಿ ಮುಂತಾದವುಗಳ ಹಿಟ್ಟನ್ನು ಬೇಯಿಸಿ ಉಂಡೆ ಮಾಡಿದ ಒಂದು ಬಗೆಯ ಆಹಾರ ಪದಾರ್ಥ ; ಹಿಟ್ಟು : ಒಂದು ಮುದ್ದೆ ಸಲೀಸಾಗಿ ಹೊಡೀತಿದ್ದ ಬರಿ ಸಾರಿನಲ್ಲಿ. ಜೊತೆಗೆ ತುಂಡುಗಳು ಬಿದ್ದರಂತೂ ಎರಡು ಮುದ್ದೆಗೆ ಕಡಿಮೆಯಿಲ್ಲ (ಪಸ್ವರು. ೨೨೨) ; ಮುದ್ದೆಗೆ ಎದ್ದ, ಗುದ್ದಲಿಗೆ ಬಿದ್ದ (ಗಾದೆ). ೪. ಆಹಾರ : ಕೈಯ ಮುದ್ದೆಯ ಕೆಡಹಿದಲ್ಲಿ ಬಾಯಿಗೆ ಬಯಲು (ಪುರಾತ. ೨೬೬–೩೦); ಅವಜ ಮೇಲೆ ಸರುಗದ ಮುಟ್ಟಿಗೆಗಳನಿಟ್ಟು ಮುದ್ದೆಗಳನಿಟ್ಟು ಮೊದೆವಟ್ಟು (ಶ್ರಾವಣ. ೦೦೩–೩). 'ಮುದ್ದೆಗೊಳ್ಳು' ಪರಾ. ೫. ಒಂದು ಬಗೆಯ ತಿನಿಸು : ಹೂರೆ ಚಕುಲಿ ಚಿಗುಳಿಯು ಕಕುಳ್ಳ ಮುದ್ದೆಯು (ದೇವಾಂಕ. ೩–೨೨೩). ೬. (ಅಲಂ) ಮೊತ್ತ ; ರಾಶಿ ; ಸಮೂಹ : ಅಡಗಿದ ತತ್ವಂಗಳ ತತ್ವದ ಮುದ್ದೆಯು ತುತ್ತನೊಲ್ಲದೆ ನಿಶ್ಚಯನಾದ ನಿಃಕಳಂಕಮಲ್ಲಿಕಾರ್ಜುನಾ

(ಕೋಳಿವಾ. ೬-೦೯); ಮುದ್ದಿನ ಮುದ್ದೆ ಲಲ್ಲೆಯು ಮೆಲ್ಲೆದೆಗಾರ್ತಿ (ಅರ್ಧ.ಟಿ. ೩-೩೩ ಶ) ; ಕಂದನ . . . ಮುದ್ದಿನ ಮುದ್ದೆಯುಂವದಂಗವನೆತ್ತಿಕೊಂಡು ನಳಿತೋಳ್ಗಳಿಂದಪ್ಪಿ (ಕೃಮಿಶಾ. ೦೬-೨೦). ೭. ಮುರುಟಿದುದು : ಮುದುಂಡೆ : ಮುದ್ದೆಯಾಗಿ ಬಿದ್ದ ಅವಳ ಅವಸ್ಥೆ ಅವಳ ಮನಸ್ಸಿನ, ಅವಳ ದೇಹದ ಅವಸ್ಥೆಯನ್ನು ನಿರ್ದೇಶಿಸುವಂತಿತ್ತು (ಕಮುಕ. ೨೬೦); ಮಕ್ಕಳ ಚಟು ವಟಿಕೆಗಳಿಗೆ ಅವಕಾಶವಿದ್ದರೂ . . . ಮುದ್ದೆಗಳಂತೆ ಕುಳಿತಿರಬೇಕಾದ ಸನ್ನಿವೇಶ ಒದಗುತ್ತಾ ಬಂತು (ಶಿಕ್ಷಕ. ೯೬೦). ೮. ನೇಕಾರನು ನೇಯ್ಗೆಯ ಎಳೆಗಳನ್ನು ಬಿಗಿಗೊಳಿಸಲು ಉಪಯೋಗಿಸುವ ಗೂಟ : (೬).

ಮುದ್ದೆಮಾಡು = ೧. ರಾಗಿಹಿಟ್ಟನ್ನು ಬೇಯಿಸಿ ಉಂಡೆಮಾಡು : ಇಂದು ಊಟಕ್ಕೆ ಮುದ್ದೆಮಾಡಿ ಜೊತೆಗೆ ಅವರೆಕಾಳುಹುಳಿ ಮಾಡಿದ್ದೆ (ರೂಢಿ). ೨. ಒಟ್ಟುಸೇರಿಸು : ರಾಶಿಮಾಡು : ಮದನನ ಸೃಂಗಾರ ಮನೊರ್ಮೊದಲಂಗನೆ ಮುದ್ದೆಮಾಡಿ ತೋರ್ಪವೊಲೊಪ್ಪಿದುರ್ಗಮದು ಚೆಲ್ವ ಸೆಂಡುಮಿಟ್ಟರಳ್ಕೆದೆರ್ಯೊಯ್ಕನೆ ಕಂತುಕಾವತಿಯು ಬಲಗೆಯ್ಕೊಳ್ (ದಕಕು. ೦೨-೨೯). ೩. ಮುದುರಿಕೊಳ್ಳು : ಸಂಕುಚಿತಗೊಳಿಸಿಕೊಳ್ಳು ; ಹುದುಗಿಸು : ಗೌಡ ಮೈಯನ್ನು ಮುದ್ದೆಮಾಡಿ ಮೂಲೆಯಲ್ಲಿ ಒರಗಿದ್ದ (ಮೂಕರುಚಾ. ೬). ಮುದ್ದೆಯಾಗು = ೧. ದ್ರವಪದಾರ್ಥಗಳನ್ನು ಕಾಯಿಸಿ ಅಥವಾ ಹಾಗೆಯೇ ಹಿಟ್ಟು ಮುಂತಾದುವುಗಳನ್ನು ಸೇರಿಸಿ ಕಲಸುವುದರಿಂದ ಗಟ್ಟಿಯಾಗು,—ಮೆದುವಾದ ಉಂಡೆಯಾಗು : ಹದನಾಗಿ ಕಾಯ್ದು ಹಾಲಿನ ಗಟ್ಟಿ ಕೆನೆದೆಗೆವುತ . . . ತುಬುವೆಯು ಬೇರಿನಿಂ ತೊಳಸೆ ಮುದ್ದೆಯಹುದು (ಸೂಶಶಾ. ೦-೩೯) ; ಎರಡು ತೊಲೆ ಮೇಣ ಬೆರಸುವುದರಿಂದ ತೈಲವು ಸ್ವಲ್ಪ ದಪ್ಪವಾದೀತಲ್ಲದೆ ಬೆಣ್ಣೆಯಂತೆ ಮುದ್ದೆಯಾಗಲಾರದು (ಶೀಕುಸೂ. ೬-೨೦ ಅಡಿಟಿ); ಹಾಲನ್ನು ಕಾದಿಸಿ, ಚೆನ್ನಾಗಿ ಗಾಳಿಸಿದ ಹಿಟ್ಟಿನೊಡನೆ ಬೆರಸಿ ಮುದ್ದೆಯಾಗುವವರೆಗೆ ಕಲಸುವುದು (ಅಡುಶಾ. ೯೪). ೨. ಅಕ್ಕಿ, ರವೆ ಮುಂತಾದುವು ಹೆಚ್ಚು ನೀರಿನೊಂದಿಗೆ ಅತಿಯಾಗಿ ಬೇಯುವುದರಿಂದ (ಉದುರಾಗದೆ) ಮಿದ್ದೆಯಾಗು : ಇಂದು ಅನ್ನ ಮುದ್ದೆಯಾಗಿದೆ (ರೂಢಿ). ೩. ಹುದುಗು; ಅಡಗು : ಕುಗ್ಗು : ಚಳಿಯಿಂದಲೂ ಭಕ್ತಿಯಿಂದಲೂ ವಿನಮ್ರನಾಗಿ, ಮುದ್ದೆಯಾಗಿ ಒಳ ಸೇರುವ ಇನ್ನೊಬ್ಬ ಭಕ್ತನು . . . ನನ್ನ ಹೋಂಡದ ಮಾದರಿಯಲ್ಲಿ ಕಾಲಿಟ್ಟರೆ ಏನು ಗತಿ! (ದೀಳನ್ನ. ೯೪). [ದೇ.॥ ತಮಿ. ಮುತ್ತೈ, ಮೊತ್ತೈ; ತುಳು. ಮುದ್ದೆ; ತೆಲು. ಮುದ್ದ]

ಮುದ್ದೆ₂, ಮುದ್ದಾ (ನಾ). ೧. ವಿಚಾರ; ಸಂಗತಿ; ವಿಷಯ: ನಾನು ಬೆಳಗಾಂವ್ಯಾಗ ನಿಂತದ್ದು ಯಾಕ ಅನೂದನ್ನ ಹೇಳತೀನಿ ಅಂದಿದ್ದೆ. ಅದು ಮುಖ್ಯ ಮುದ್ದೇ (ಬೀಶಹ. II, ೭೩). ೨. ಮೊಕದ್ದಮೆಯಲ್ಲಿ ವಾದಿ, ಪ್ರತಿವಾದಿಗಳು ಮಾಡುವ ವಾದ : (ಕಸಂಗ್ರ. ೩೫). ೩. ಕದ್ದ ಮಾಲು; ಕಳುವಾದ ಪದಾರ್ಥ. ಮುದ್ದಾ : ೪. ಅಭಿಪ್ರಾಯ; ತಾತ್ಪರ್ಯ: ಈ ಮಾತಿನ ಮುದ್ದಾ ಏನು? (ಶ್ರೀಶಾಹಿ. ೯೬-೦೩).

ಮುದ್ದೆಹಿಡಿ = ಅಭಿಪ್ರಾಯವನ್ನು ಹೊಂದು : ಪತ್ರಗಳಲ್ಲಿಯ ಮಜಕೂರವು ಎಷ್ಟು ಸ್ವಲ್ಪದಲ್ಲಿ ಎಷ್ಟು ಮುದ್ದೆಹಿಡಿದು ಮತ್ತು ಕಲಮವಾರ ಇದ್ದೀತು ಅಷ್ಟು ಒಳತಾದದ್ದು (ಮುಂಬಿವ್ಯಾ. ೪೪). ಮುದ್ದೇಮೊಲ್, ಮುದ್ದೇಮಾಲು = ಕಳುವಾದ ಪದಾರ್ಥ ; ಕದ್ದ ಮಾಲು: ಅವರದ ಸಾಕ್ಷಿ ಹಾಕಿಸಿ ಮುದ್ದೇಮಾಲ್ ಸಹಿತ ಹಿಡಿದು ಪೋಲೀಸರ ತಾಬೇಕ್ಕ ಕೊಟ್ಟುಬಿಡತೇವು (ಹೊಸಂಶಾ. ೦೦೦). ಅವನು . . . ಮುದ್ದೇಮಾಲು ಸಹ ಹೇಗೆ ಪಾರಾಗಿ ಹೋಗುವನೋ ನೋಡೋಣ ! (ಕಳ್ಳಶಾ. ೨೩).

[←ಅರ. ಮುದ್ದಅ, ಮುದಾಅ ; ಹಿಂ. ಮುದ್ದಾ, ಮುದ್ದಅ; ಮರಾ. ಮುದ್ದಾ, ಮುದಾ]

ಮುದ್ದೆಗಣ (ನಾ). (?) : ಪೊಟ್ಟವಿನಿತೀಶ್ವರಕ್ಕುಂ ಸರ್ವ್ವಪರಿಹಾರಂ ಕೊಟ್ಟವರ್ಮ್ಮಣ್ಣುಂ ಮನೆಯುಂ ತೋಟ್ಟಕ್ಕಂ ದೇವೇನ್ದ್ರತಮ್ಮಡಿಗಳಾ ಮುದ್ದೆಗಣರಾ ಗೋಷ್ಠಿಥಮ್ಮಗ್ರವನ್ (ಎಕ. IV (R), ಶಾಮುಶಾ. ೧೯೭-೩; ಸು. 750). [ ? ]

ಮುದ್ದೆಗೊಳ್ಳು (ಕ್ರಿ). ಆಹಾರವನ್ನು ಸ್ವೀಕರಿಸು,—ತೆಗೆದುಕೊಳ್ಳು; ಊಟಮಾಡು : ಮುಸುಡ ಮುಚ್ಚುಂಕಿಸಿ ಮುದ್ದೆಗೊಳ್ಳೆಂದಾ ಹಸಿದು ಕೋಪದೊಳು ನಿಂದಿರ್ದ ಅಸುರನಿದಿರು ನಡೆದಣಕವಾಡುವನಾ ಅಸಮ ವಿಕ್ರಮಿಯನಿಲಜನು (ಸೇಮುಸಂ. ೨೩-೦೩೪).

[ಮುದ್ದೆ₁ + ಕೊಳ್ಳು₁ (<ಕೊಳ್₁)]

ಮುದ್ದೆಯ್ಯ 'ಮುದ್ದಯ್ಯ' ನೋ.

ಮುದ್ದೈ 'ಮುದ್ದಾಯಿ' ನೋ.

ಮುದ್ದೈಯಾಲೆ (ನಾ). ಆರೋಪಕ್ಕೆ ಗುರಿಯಾದ ವ್ಯಕ್ತಿ: ಪ್ರತಿವಾದಿ: ಅವಳು ಮುದ್ದೈಯಾಗಿ, ಇಲ್ಲವೆ ಮುದ್ದೈಯಾಲೆಯಾಗಿ—ಎರಡೂ ವಿಧದಿಂದಲೂ ಮೆಜಿಸ್ಟ್ರೇಟರ ಮುಂದೆ ಬಂದವಳಲ್ಲ (ಹಹಕ. ೩೦).

[←ಅರ.ಹಿಂ.ಮುದ್ದಾಅಲೇಹ್; ಮುದ್ದಾಲೇಹ್; ಮರಾ. ಮುದಾಇಲೈ]

ಮುದ್ರಕ (ನಾ). ಪುಸ್ತಕ, ಪತ್ರಿಕೆ ಮೊದಲಾದುವನ್ನು ಅಚ್ಚುಮಾಡುವವನು,—ಮುದ್ರಿಸುವವನು : ಪ್ರತಿಯನ್ನು ಓದಿ . . . ನಿವಾರಿಸದ ದೋಷಗಳು ಮುದ್ರಿಸಿದ ಪ್ರತಿಯಲ್ಲಿ ಕಂಡುಬರುವುದರಿಂದ ಮುದ್ರಕನ ಮೇಲೆ ಅದರ ದುಷ್ಪರಿಣಾಮಗಳು ಉಂಟಾಗುವುವು (ಮುದ್ರಶಿ. ೨೯). [ಸಂ.]

ಮುದ್ರಣ (ನಾ). ೧. ಅಕ್ಷರದ ಮೊಳೆ ಮುಂತಾದುವುಗಳನ್ನು ಜೋಡಿಸಿ ಕಾಗದ, ಬಟ್ಟೆ ಮುಂತಾದುವುಗಳ ಮೇಲೆ ಮುದ್ರಿಸುವುದು; ಅಚ್ಚು : ಅಕ್ಷರಗಳು, ಅಂಗಗಳು . . . ಕುರುಹುಗಳು ಮೊದಲಾದುವನ್ನು ಕಾಗದ, ಬಟ್ಟೆ, ಹಾಗೂ ಮತ್ತಾವುದಾದರೂ ಸ್ಥಿತಿಸ್ಥಾಪಕ ಗುಣವುಳ್ಳ ಹಾಳೆಯ ಮೇಲೆ ಒತ್ತುಯಂತ್ರದ ಒತ್ತಡದಿಂದ ಮಸಿಯಲ್ಲಿ ಪ್ರತಿ ತೆಗೆಯುವುದಕ್ಕೆ ಮುದ್ರಣವೆಂದು ಹೆಸರು (ಮುದ್ರಶಿ. ೧); ಕನ್ನಡ ವರ್ಣಮಾಲೆ ಕಲಿಯುವುದು ಕಷ್ಟ . . . ಮುದ್ರಣಕ್ಕೂ ತೊಡಕಾಗಿದೆ (ದ್ರಾವಿಐ. ೯೭). ೨. ಮುದ್ರೆಯೊತ್ತುವುದು: ಮೊಹರು ಮಾಡುವುದು. [ಸಂ.]

ಮುದ್ರಣಕಾರ (ನಾ). = ಮುದ್ರಕ : ನಾಲ್ಕೈದು ಮುದ್ರಣಕಾರರಲ್ಲಿ ಹೋಗಿ ಕೇಳಿದ್ದಾಯಿತು (ಕಂಗಾಳ್ಕ. iii, ಮುಮ್ಮು೩). [ಸಂ.]

ಮುದ್ರಣಯಂತ್ರ (ನಾ) ಅಚ್ಚುಮಾಡುವ ಯಂತ್ರ: ಛಾಪುಯಂತ್ರ: ಮುದ್ರಿಸಬೇಕಾದ ವಸ್ತುವಿನ ಮೇಲೆ ಮಸಿ ಲೇಪಿಸಿ ಕಾಗದವನ್ನು ಅದರ ಮೇಲಿಟ್ಟು ಒತ್ತಿ ಪ್ರತಿತೆಗೆಯಲು ಉಪಯೋಗಿಸುವ ಸಾಧನವೇ ಮುದ್ರಣಯಂತ್ರ (ಮುದ್ರಶಿ. ೧೭). [ಸಂ.]

ಮುದ್ರಣಾಲಯ (ನಾ). ಮುದ್ರಿಸುವ ಸ್ಥಳ : ಅಚ್ಚುಕೂಟ; ಛಾಪಖಾನೆ : ಗುಪ್ತ ಮುದ್ರಣಾಲಯವಿದ್ದ ಮನೆಯೊಂದರಲ್ಲಿ ಕೆಲವು ಸಂಚುಗಾರರೊಡನೆ ಅವಳು ವಾಸಿಸುತ್ತಿದ್ದಳು (ಕ್ರಾಪಕು. ೨೯೦). [ಸಂ.]

ಮುದ್ರಹಸ್ತ (ನಾ). ಯಾವನಾದರೂ ಒಬ್ಬ ರಾಜ, ದಂಡನಾಯಕ ಮುಂತಾದವರ ಪರವಾಗಿ ರಾಯಸದ ಪತ್ರಗಳಿಗೆ ಮುದ್ರೆಯನ್ನು ಒತ್ತಲು ಅಧಿಕಾರವನ್ನು ಪಡೆದಿರುವ ವ್ಯಕ್ತಿ (?) : ಶ್ರೀಮನು ಮಹಾಪ್ರಚಣ್ಡದಣ್ಡನಾಯಕ ಸೇ[ನಾ]ಧಿಪತಿ ಮುದ್ರಹಸ್ತಂ ಸುಂಕದ ಮಾಯಿದೇವದಂಡನಾಯಕರು (ಶಾಇ. XX. ೦೭೬-೯೯; 1193); ಆ ಸ್ಥಳದ [ಮುದ್ರಹ]ಸ್ತ ವಂಕುಡೆಯರ × × ಗೌಡನಾಡಗಲುಡ (ಶಾಇ. XX. ೨೨೭-೦೩; 1306)).

[ಔ ಇದು 'ಮುದ್ರಾಹಸ್ತ' ಎಂಬುದರ ಅಪಲಿಖಿತವಿರಬಹುದು]

ಮುದ್ರಾಂಕಿತ (ಗು). ೧. ಮುದ್ರೆಯೊತ್ತಿದ ; ಅಚ್ಚೊತ್ತಿರುವ. ೨. ಅಚ್ಚಾದ; ಮುದ್ರಿತವಾದ : (೬). (ನಾ). ೩. ಮೊಹರು

ಮಾಡಿದುದು : ಮುದ್ರೆಯುಳ್ಳುದು : ಅರಸಂಗೆ ಮನೆವೆರ್ಗಡೆ ಮುದ್ರಾಂಕಿತಮಪ್ಪಪಾಯಸದ ಮುದ್ರೆಯಂ ಕಳೆದು ಸುತ್ತನಟಿಸಿದು ತೋಱುವುದುಂ (**ಶಾಂತಿಪು. ೨-೨೨ ವ**). ೪. ಗುರುತು ; ಲಾಂಛನ : ಚರಣಾಲಕ್ತಕಲಾಂಛನಂ ನಿಟಿಲದೊಳ್ ಕೇಯೂರಮುದ್ರಾಂಕಿತಂ ಕೊರಲೊಳ್ . . . ತಳ್ತೊಪ್ಪಿಯ್ಕೆ ನಿಚ್ಚಂ ವಿಚಿತ್ರರತಪ್ರೌಢತೆ ಭಾವಗಮ್ಯ ಮೆನಿಕುಂ ಶ್ರೀರೂಪಕಂದರ್ಪನಾ (**ಜಗನ್ನಾ.೬.೨೫**). ೫. [ದ್ವೈತ] ವೈಷ್ಣವರು ಧರಿಸುವ ಶಂಖ, ಚಕ್ರ, ಗದಾ, ಪದ್ಮ ಮತ್ತು ನಾರಾಯಣ—ಎಂಬ ಐದು ಗುರುತುಗಳು : ಹೆಂಗಸರಲ್ಲಿಯೂ ಅನೇಕರು ಮುದ್ರಾಂಕಿತಹೊಂದಿ ಕೆಲಸಾರಿದರು (**ವಾಗ್ವಿ.೪**). ೬. ವಿಷ್ಣುಲಾಂಛನದಿಂದ ಕೂಡಿದ ಮುದ್ರೆಯನ್ನು ಹಾಕಿಕೊಳ್ಳುವವನು; ಮಾಧ್ವ: ವೈಷ್ಣವ : ದ್ವೈತದ ದಿವ್ಯಜ್ಞಾನವನ್ನು ಮುದ್ರಾಂಕಿತರಲ್ಲವವರಲ್ಲಿ ಮುದ್ರಿಸಿ ಹಂಚುವದು ಪಾಪವೋ ಪುಣ್ಯವೋ ಎಂಬ ಸಮಸ್ಯೆಯೇ ಇನ್ನೂ ಕೆಲವರಿಗೆ ಬಗೆಹರಿದಿಲ್ಲ (**ವಿಚಾಮಂ. ೫**). [ಸಂ.]

**ಮುದ್ರಾಕರ** (ನಾ). ೧. ಮೊಹರನ್ನು ತಯಾರಿಸುವವನು. ೨. ಚಿತ್ರ, ಅಕ್ಷರ ಮುಂತಾದುವನ್ನು ಕೆತ್ತುವವನು. ೩. ನಾಣ್ಯವನ್ನು ಟಂಕಿಸುವವನು. [ಸಂ.]

**ಮುದ್ರಾಕ್ಷರಶಾಲೆ** (ನಾ). =ಮುದ್ರಣಾಲಯ : ಶ್ರೀ ಸಿದ್ಧೇಶ್ವರಪುರಾಣವು . . . ಸ್ವಕೀಯ ಶಂಕರವಿಲಾಸ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಿ ಪ್ರಕಟಿಸಲ್ಪಟ್ಟಿತು (**ಸಿದ್ಧೇಪು. ಮೊದಲ ಪುಟ**). [ಸಂ. ಮುದ್ರಾಕ್ಷರಶಾಲಾ]

**ಮುದ್ರಾಧಾರಕ** (ನಾ). ೧. ಮೊಹರುಗಳನ್ನು ಹೊಂದಿರುವವನು. ೨. [ದ್ವೈತ] ತಪ್ತ ಮತೀಯಲಾಂಛನವಾದ ಮುದ್ರೆಯನ್ನು ಧರಿಸಿದವನು ; ವೈಷ್ಣವ ; ಮಾಧ್ವ. [ಸಂ.]

**ಮುದ್ರಾಧಾರಣ** (ನಾ). [ದ್ವೈತ] ವಿಶೇಷವಾಗಿ ಚಾತುರ್ಮಾಸದಲ್ಲಿ ಸುದರ್ಶನ ಹೋಮಮಾಡಿದ ಅಗ್ನಿಯಲ್ಲಿ ಶಂಖ, ಚಕ್ರಗಳ ಗುರುತುಗಳುಳ್ಳ ಲೋಹದ ಮುದ್ರೆಯನ್ನು ಕಾಯಿಸಿ, ಅದನ್ನು ಗುರುಗಳು ಗಂಡಸರ ಭುಜ, ಎದೆಗಳ ಮೇಲೂ ಹೆಂಗಸರ ಕೈ ಮೇಲೂ ಒತ್ತುವ ವಿಧಿ : ಮುದ್ರಾಧಾರಣದ ಮಾತು ಬಂದಾಗ ಮೇನಕೆ ಜಾನಕಿಬಾಯರ ನಡುವೆ ಮಹಾಯುದ್ಧವಾಗಿ ಕೊನೆಗೆ ಮೇನಕೆಯೇ ಗೆಲ್ಲುತ್ತಾಳೆ (**ನವಜೀ. ೬ ಹಿ೧೪**). [ಸಂ.]

**ಮುದ್ರಾಧಾರಣೆ** (ನಾ). ೧. = ಮುದ್ರಾಧಾರಣ : ಮುದ್ರಾಧಾರಣೆಯನ್ನು ಮಾಡಿಸಿಕೊಳ್ಳುವುದಕ್ಕಾಗಿ ಮಠದ ಶಿಷ್ಯರ ದೊಡ್ಡ ಸಮೂಹವು ನೆರೆದಿತ್ತು (**ವಾಗ್ವಿ. ೩**). 'ತಪ್ತಮುದ್ರಾಧಾರಣೆ' ಪರಾ. ೨. ಶಂಖ, ಚಕ್ರ, ಗದಾ, ಪದ್ಮ, ನಾರಾಯಣ ಎಂಬ ಐದು ಗುರುತುಗಳುಳ್ಳ ಲೋಹದ ಸಾಧನವನ್ನು, ಕಲಸಿದ ಗೋಪೀಚಂದನದಲ್ಲಿ ಅದ್ದಿ ಹಣೆ ಮತ್ತಿತರ ದೇಹಭಾಗಗಳಿಗೆ ಒತ್ತಿಕೊಳ್ಳುವಿಕೆ : ಆಚಾರ್ಯರು ಢಾಳಾಗಿ ಕಾಣುವಂತೆ ನಾಮವನ್ನು ಹಾಕಿಕೊಂಡು, ಮುದ್ರಾಧಾರಣೆ ಮಾಡಿಕೊಂಡರು (**ರಂಗ**). [ಸಂ. ಮುದ್ರಾಧಾರಣ]

**ಮುದ್ರಾಧಿಕಾರ** (ನಾ). ರಾಜನ ಅಂಕಿತದ ಉಂಡಿಗೆಯ ಮೇಲಿನ ಅಧಿಕಾರ : ಮಹಾಸ್ವಾಮಿಯವರ ಮಹಾಸನ್ನಿಧಾನವಲ್ಲದೆ ಸಂಪುಟದ ಮುದ್ರೆಯನ್ನು ಸಡಿಲಿಸಲಾಗದು . . ಮುದ್ರಾಧಿಕಾರವಿರುವುದು ಮಹಾಸ್ವಾಮಿಯವರಿಗೆ ಮಾತ್ರ (**ಮಂತ್ರಕ. ೧೦-೧೭**). 'ಮುದ್ರಾಧಿಕಾರಿ' ಪರಾ. [ಸಂ.]

**ಮುದ್ರಾಧಿಕಾರಿ** (ನಾ). = ಮುದ್ರಹಸ್ತ : ಮುದ್ರಾಧಿಕಾರಿ ಸಚಿವಾತಿ ವಿಶುದ್ಧವು (ಬು)ದ್ಧಿ[i] (**ಎಇ. XXX, ೦೬೭-೦೫: 13ನೆಯ ಶತ**). [ಸಂ. ಮುದ್ರಾಧಿಕಾರಿನ್]

**ಮುದ್ರಾಪಂಚಕ** (ನಾ). [ವೀಶೈ] ಭಿಕ್ಷಾಪಾತ್ರೆ, ಭಸ್ಮಘುಟಿಕೆ, ಕಂಥೆ, ದಂಡ ಮತ್ತು ಕಮಂಡಲುಗಳೆಂಬ ದೀಕ್ಷಾವಿಧಿಯ ಐದುಬಗೆಯ ಲಾಂಛನ : ನಿದ್ರೆಗೆಯ್ದಿರೆ ಭೂಪಾಲಂ ರುದ್ರಂ ಜಂಗಮವೇಷದಿಂ ಭದ್ರಾಕಾರದಿನೆಯ್ತಂದು ಮುದ್ರಾ[ಪಾಠಾಂ: ದ್ರ]ಪಂಚಕಯುಕ್ತದಿಂ (**ಹಾಲಾಸ್ಯ. ೦-೪-೩೦**). 'ಪಂಚಮುದ್ರೆ' ಪರಾ. [ಸಂ.]

**ಮುದ್ರಾಪಚಾರ** (ನಾ). ಅಧಿಕಾರದ ಮುದ್ರಿಕೆಯನ್ನು ದುರುಪಯೋಗಮಾಡಿಕೊಳ್ಳುವ ಅಥವಾ ಖೋಟಾನಾಣ್ಯಗಳನ್ನು ಬಳಸುವ ಅಪರಾಧ : ಮುದ್ರಾಪಚಾರೇ ವಿನಯೇ ರೂಪಕಾಃ ಷಟ್ಪಪಾದಾಃ ಸಹ ಧಾರ್ಮಿಕೇಣ (**ಎಇ. XXX, ೦೬೯-೦೪ ; 605**). [ಸಂ.]

**ಮುದ್ರಾಪಣ** (ನಾ). ಯಾವುದಾದರೊಂದು ನಿರ್ದಿಷ್ಟಲಾಂಛನವುಳ್ಳ ನಾಣ್ಯ,— ಹಣ : ದೇವಮಾನ್ಯವು ಧರ್ಮವಿಚಾರದಲ್ಲಿ ಮುದ್ರಾಪಣ ಮಾಡಿ (**ಕಲಿಂಶಾ. ೬-೨೫ ; 1091**); ಆ ದೇವರಲ್ಲಿ ಶಪಥಂಗೆಯ್ವರು ಕೊಟ್ಟ ಮುದ್ರಾಪಣಂ ಒಳಗಾಗಿ ಶ್ರೀರಾಮೇಶ್ವರದೇವರ ಗೋಪುರದೊಳಗಣ ಸಪ್ತೋದ್ಧಾರಕ್ಕಂ ಕೊಟ್ಟರು (**ಕಇಕ. ೦-೦-೦೯; 1092**); ಸೆಟ್ಟಿಗುತ್ತಂ ತನ್ನ ಬಿಟ್ಟಾಯಮಂತೆಂದೊಡೆ ಹಸುಂಬೆಯನಿಕ್ಕುವಲ್ಲಿ ಹಸೆಯ ಜವಳಿ ಗಂಧರ ಬಟ್ಟಲು ಒಂದು ಗೋಂಟು ವಿಚಾರಂಗೆಯ್ದವರಲ್ಲಿ ಮುದ್ರಾಪಣಂ ಹೊಂಗೆ ಹಾಗಂ (**ಎಇ. XIX, ೩೯-೩೦; 1144**). [ಸಂ.]

**ಮುದ್ರಾಪಣೆ** (ನಾ). ಹೈದರನ ಕಾಲದಲ್ಲಿ ಕಂದಾಯದ ಅಧಿಕಾರಿಗಳ ಅಗತ್ಯಗಳನ್ನು ಪೂರೈಸದಿದ್ದವನ ಮನೆಯನ್ನು ಗುರುತುಮಾಡಿ ಅಥವಾ ಮೊಹರುಮಾಡಿ ಮುಚ್ಚುತ್ತಿದ್ದ ಒಂದು ಕ್ರಮ ; ▷ ಹೀಗೆ ಮಾಡಿದ ಮೇಲೆ ಸೈನಿಕರು ಆ ಮನೆಗೆ ಮುತ್ತಿಗೆ ಹಾಕುತ್ತಿದ್ದುದರಿಂದ ಆ ವ್ಯಕ್ತಿಯು ಶರಣಾಗುತ್ತಿದ್ದನು: (**ಕಸಂಗ್ರಾ. ೦೩೪**). [ಸಂ. ಮುದ್ರಾ]

**ಮುದ್ರಾಪತ್ರಿಕೆ** (ನಾ). ಮೊಹರುಮಾಡಿದ ಕಾಗದ : ಮುದ್ರೆಯೋಲೆ: ಸಂಶಯಕ್ಕೆ ಎಡೆಯೇ ಇಲ್ಲ; ಅದು ನಮ್ಮ ಮುದ್ರಾಪತ್ರಿಕೆ (**ಮಂತ್ರಕ. ೧೩೦-೮**). [ಸಂ. ಮುದ್ರಾಪತ್ರಿಕಾ]

**ಮುದ್ರಾಪ್ರಭು** (ನಾ). = ಮುದ್ರಹಸ್ತ : ಕಲ್ಲಿನಾಥದೇವರ ಮಾನ್ಯ ಸರ್ಬ್ಬಮಾನ್ಯ ಸರ್ಬ್ಬಾಬಾಧೆ ಎಲ್ಲ ಪರಿಹಾರವೆಂದು ಆ ಮುದ್ರಾಪ್ರಭು ಮಾನ್ಯಕಾಜಿ ಸಮಸ್ತಪ್ರಜೆ . . . ದೇವರಿಗೆ ಬಿಟ್ಟ ಧರ್ಮ್ಮ (**ಕಇ. II. ೪೨-೨೯; 1306**). [ಸಂ.]

**ಮುದ್ರಾಮಂಜೂಷ** (ನಾ). ೧. ಮೊಹರುಮಾಡಿದ ಪೆಟ್ಟಿಗೆ,— ಸಂದೂಕ. ೨. ಕೆಂಪುನಾರಾಯಣನೆಂಬ ಕವಿಯು ಹತ್ತೊಂಬತ್ತನೆಯ ಶತಮಾನದಲ್ಲಿ ರಚಿಸಿದ ಒಂದು ಕನ್ನಡಗದ್ಯಗ್ರಂಥ : ಮುದ್ರಾಮಂಜೂಷವೆಂಬ ಗ್ರಂಥದಲ್ಲಿ ಪರ್ವತರಾಜ ಸೇನಾಗಮನ ಕಥನವೆಂಬ ಚತುರ್ಥಾಶಯಸ್ಸಮಾಪ್ತಃ (**ಮುದ್ರಾಮಂ. ೪೦**); ಕೆಂಪುನಾರಾಯಣನ ಒಂದೇ ಒಂದು ಗ್ರಂಥವಾದ—'ಮುದ್ರಾಮಂಜೂಷ'ವನ್ನು ನೋಡಿದರೆ ಹೊಸಗನ್ನಡ ಗದ್ಯದ ನಸುಕುಮೂಡಿತೆಂದು ನಿಚ್ಚಳವಾಗಿ ತೋರುತ್ತದೆ (**ಕಸಾತ. ೩೭೮**). [ಸಂ.]

**ಮುದ್ರಾರಾಕ್ಷಸ** (ನಾ). ೧. ವಿಶಾಖದತ್ತನೆಂಬ ಕವಿಯು ಸಂಸ್ಕೃತದಲ್ಲಿ ಬರೆದಿರುವ ಒಂದು ಪ್ರಸಿದ್ಧನಾಟಕ : 'ಇದು ಮುದ್ರಾರಾಕ್ಷಸವೆಂಬ ಸಂಸ್ಕೃತನಾಟಕಕ್ಕೆ ಗದ್ಯರೂಪವಾದ ಭಾಷಾಂತರವು' ಎಂಬ ಹೇಳಿಕೆ ಯಥಾರ್ಥವಲ್ಲ (**ಕಸಾತ. ೩೭೮**); ಮೌರ್ಯವಂಶದ ಚಂದ್ರಗುಪ್ತನಿಗೆ (ಕ್ರಿ.ಪೂ. ೩೨೩–೨೯೮) ರಾಜ್ಯಕೊಡಿಸುವ ಪ್ರಯತ್ನದಲ್ಲಿ ಚಾಣಕ್ಯನು ಜೈನರನ್ನು ಸಹಾಯಕ್ಕೆ ತೆಗೆದುಕೊಂಡ ವಿಷಯ ಮುದ್ರಾರಾಕ್ಷಸನಾಟಕದಲ್ಲಿ (ಕ್ರಿ.ಶ. ೪೦೦) ಬಂದಿದೆ (**ಕಶಾಲಿ. ೭೦**). ೨. (ಅಲಂ) ಮುದ್ರಣದಲ್ಲಿಯ ತಪ್ಪು,— ದೋಷ : ಮುದ್ರಾರಾಕ್ಷಸನನ್ನು ಹಿಡಿತದಲ್ಲಿ ತರಲು ಅಚ್ಚು ಕೂಟದಿಂದ ದೂರದಲ್ಲಿದ್ದ ನಮಗೆ ಸಾಧ್ಯವಾಗಲಿಲ್ಲ (**ಹಮ್ಮಿರ. XXV, ಮುನ್ನುಡಿ**). [ಸಂ.]

ಅವರಿಸುವಂತೆ ಮಾಡು : ತತ್ತ್ವಾರ್ಥಸೂತ್ರಮಂ ಬರೆದು ಗೃಧ್ರಪಿಂಛಾಚಾರ್ಯರ್ಜಸದಿಂ ದಿಗಂತಮಂ ಮುದ್ರಿಸಿ ಜಿನಶಾಸನದ ಮಹಿಮೆಯಂ ಪ್ರಕಟಿಸಿದರ್ (ಶಾಶಂಪು. ೨); ಚತುರಬ್ಧಿಮೇಖಲಾವಳಯಿತ ಭೂಮಿಗಾದನೆಱೆಯಂ ನೃಪತಿ ಪ್ರಭುಲೋಕಮಂ ನಿಜೋಜ್ಜ್ವಳತರಕೀರ್ತಿಯಿಂ ನೆಱೆಯೆ ಮುದ್ರಿಸಿ ಶೂದ್ರಕನೆಂಬ ಭೂಭುಜಂ (ಶೂದ್ರ. ೮); ಆವ ಮೇಲದೊಳರ್ಜುನನ ಬಾಣಾವಳಿಯು ತಱಿದೆಸೆಟ್ಟ ಮಗುೞ್ದ ಶರಾವಳಿಯ ಕೊನೆಗಳಲಿ ಮುದ್ರಿಸಿದನು ಧನಂಜಯನ (ಕುವ್ಯಾ.ಭೀ. ೨೦-೩೨). ೧೧. ಅಡಗು ; ಕಣ್ಣಿಗೆ ಕಾಣದಿರು ; ಮಾಯವಾಗು : ಜರಿದುದತಿರಥರಾಜಿ ಬಾಯಲಿ ಕರಿಷ ಹಾಯ್ದುದು ಭೂಮಿಪಾಲರ ಬಿರುದು ಮುದ್ರಿಸಿದವು ಸಮೀರಕುಮಾರನುರವಣೆಗೆ (ಕುವ್ಯಾ.ದ್ರೋ. ೧೪-೧೯). ೧೨. ಅಡಗಿಸು ; ಕಾಣದಂತೆ ಮಾಡು ; ಮರೆಮಾಡು : ಮುದ್ರಿಸಲಾದಿರಾಜಚರಿತಂಗಳ ಸಾತ್ಮಚರಿತ್ರಂ . . . ವಿಷ್ಣುಸಮುದ್ರನೊಪ್ಪುವಂ (ಎಕ. III (R). ಶಂಆಸ. ೨೩೮-೯; 1169); ಶಾಲಿಯಂತೆ ನಿಸ್ಸಂಭ್ರಮವೆಣೆಯ ಭಟಾಳತನವನು ಮುದ್ರಿಸುವೆನೆನುತೆಚ್ಚನಭಿಮನ್ಯು (ಕುವ್ಯಾ.ದ್ರೋ. ೫-೩೦). ೧೩. ಬಚ್ಚಿಡು; ಹುದುಗಿಸಂ : ಹುಗಿ : ತತ್‌ಚರಿತಮಂ ಖಂಡಿಸುತ ಶೋಧಿಸುತ ನೋಡುತ ತಂಡತಂಡದ ನವ್ಯಶಾಕಂಗಳನೊಲಿದು ಮಾಡಿ ಕ್ಷಾರದಲ್ಲಿ ಮುದ್ರಿಸಿ ಮಡದಿ ಜನರಾರುಮಱಿಯದ ಹಾಂಗೆ ರುದ್ರಾಕರನಂ ಬಿಜಯಂಗೆಯಿಸಿ (ಬಸವ. ೨೪-೨೨). [ಮುದ್ರೆ + -ಇಸು]

ಮುದ್ರೆ (ನಾ). ೧. ಹುಂಡಿ, ಭಾಂಗಿ ಮುಂತಾದುವುಗಳ ಮೇಲೆ ಭದ್ರತೆಗಾಗಿ ಹಚ್ಚುವ ಅರಗು, ಸೀಸ ಮೊದಲಾದವುಗಳ ಮೇಲಿನ ಮುದ್ರಿಕೆ. – ಉಂಡಿಗೆ, – ಮೊಹರು : ವಾಗ್ದೇವಿಯ ಭಂಡಾರದ ಮುದ್ರೆಯನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ (ಗದಾಯು. ೧-೩೮) ; ನಿಧಿ ನಿಕ್ಷೇಪ ಅಂಕ ಟಂಕ ಆಣೆ ಗೋಸನೆ ಮುದ್ರೆ . . . ಪಾರಣೆಯ ಜಂಗಮಾರಾ[ಧ]ನೆಗೆ ಕೊತ್ತಸಿಗೆ ಇ (ಈ) ಧರ್ಮಕ್ಕೆ [ಇ]ದು ವಿವರವೆಂದು ನಾಗರಸ[ರು] ಕೊಟ[ಟ್ಟ] ಸಾಸನ (ಎಇ. XXI. ೦೯-೬೩ ; 1300) ; ತನ್ನ ಮಗ ಮದನಂಗೆ ಮುದ್ರೆಸಹಿತ ಸರ್ವಜನಮಱಿಯದಂತೀವುದೀ ಪತ್ರಿಕೆಯನು (ಕೃರಾವಿ. ೨೯-೩೯) ; ಕರಣಿಕನು ಮುದ್ರೆಯನ್ನು ಒಡೆದು ಚೀಲದೊಳಗಿಂದ ಓಲೆಯನ್ನು ಹೊರತೆಗೆದ (ಶಾಕುಂತ. ೯೯). ೨. ಮೊಹರುಮಾಡುವ ಅರಗು, ಸೀಸಗಳ ಮೇಲೆ ಒತ್ತುವ– ಸರಕಾರ, ಅಧಿಕಾರಿ, ರಾಜ ಮುಂತಾದವರ ನಿರ್ದಿಷ್ಟ ಚಿಹ್ನೆಯುಳ್ಳ (ಲೋಹದ) ವಸ್ತು ; ಮುದ್ರಿಕೆ : ಹಿರಿಯ ಬಿರುದಿನ ಮುದ್ರೆಯಿದು ನಗರವಿದು . . . ಮೇಲುಳ್ಳ ಸರ್ವಸ್ವವಿದು ನೋಡಿಕೋ ಮಹಾಪುರುಷ (ಹಹಸ. ೯-೪). ೩. ಪತ್ರ, ದಸ್ತೈವಜು ಮುಂತಾದುವುಗಳ ಮೇಲೆ ಸ್ಥಿರೀಕರಣಕ್ಕಾಗಿ ಸರ್ಕಾರ ಅಥವಾ ರಾಜನ ಪರವಾಗಿ ಮೊಹರನ್ನು ಒತ್ತುವುದರಿಂದುಂಟಾಗುವ ಗುರುತು. –ಚಿಹ್ನೆ : ರಾಜನ ಮುದ್ರೆ ಪ್ರತಿ ಆಣೆಯ ಮೇಲಾದರೆ ದೇವರ ಮುದ್ರೆ ಪ್ರತಿ ಕಾಳಿನ ಮೇಲೆ ಇರುತ್ತದೆ (ಪಾಕಹ. ೩) ; ಹಣವೆಂದರೆ ಮೂಲತಃ ಯಾವುದಾದರೊಂದು ರಾಜ್ಯದಲ್ಲಿ ಅಲ್ಲಿನ ಅಧಿಕಾರಿಗಳು ತಮ್ಮ ಮುದ್ರೆ ಒತ್ತಿ ಬಳಕೆಗೆ ತರುವ ಒಂದು ಬಗೆಯ ಪದಾರ್ಥವಿಶೇಷ (ಹಅಕ್ರ. ೨). ೪. ಗುರುತು; ಲಾಂಛನ; ಚಿಹ್ನೆ : ಪದಗಳು ಜನಮನದ ಟಂಕಸಾಲೆಯಲ್ಲಿ ಭಾವದ ಮುದ್ರೆಯನ್ನು ತಳೆದು ಚಲಾವಣೆಗೆ ಬರುವ ನಾಣ್ಯಗಳಿದ್ದಂತೆ (ಶಾಂಕನ. ೯೨). ೫. ಸಂಕೇತವನ್ನು ಕೆತ್ತಿರುವ ಉಂಗುರ ; ಮುದ್ರಿಕೆ : "ಮುದ್ರಾಯೆಂಬುದು ಅಕ್ಕರಂ ಬೆರಸಿದುಂಗುರಂ" (ಶಬ್ದಮ. ೯೨-೪೦೩) ; ವರಕಥೆಗೆ ಕಿವಿಗೊಡುವ ಓಲೆಯ ಬೆರಳ ಧರ್ಮಕ್ಕೊಲಿವ ಮುದ್ರೆಯ ಧರಿಸಿಹರು ಪಾತಾಳಲಂಕೆಯ ಪುರದ ನಾರಿಯರು (ಕಾಭಾರ. ೩೮-೯). ೬. ಲಾಂಛನವನ್ನು ಮುದ್ರಿಸಿರುವ ನಾಣ್ಯ, ಪದಕ ಮುಂತಾದುವು. ೭. ರಹದಾರಿ ; ಪರವಾನಗಿ. ೮. ಮುಚ್ಚಿರುವಿಕೆ ; ತೆರೆಯದಿರುವಿಕೆ. ೯. ಸಂಧ್ಯಾವಂದನೆ, ಸಂಕಲ್ಪ, ಪೂಜೆ ಮುಂತಾದ ಸಂದರ್ಭಗಳಲ್ಲಿ ಬೆರಳುಗಳನ್ನು ನಿರ್ದಿಷ್ಟಕ್ರಮದಲ್ಲಿ ಮಡಿಚಿ ತೋರುವ ವಿನ್ಯಾಸ. ೧೦. ಕಾವ್ಯ, ಹಾಡು ಮುಂತಾದುವುಗಳ ಕೊನೆಯಲ್ಲಿ ಸೂಚಿತವಾಗುವ ಕರ್ತೃವಿನ ಇಷ್ಟದೈವ, ಕುಲದೇವರು ಅಥವಾ ಕೃತಿಕರ್ತನ ಹೆಸರು. – ಅಂಕಿತ : ಯಾವ ಕೃತಿಕರ್ತನೂ ತನ್ನ ದೇಹವನ್ನೂ ಕೃತಿಯನ್ನೂ ತನ್ನ ಆರಾಧ್ಯದೇವರಿಗೆ ಸಮರ್ಪಿಸುವುದು ಸಂಪ್ರದಾಯ. ಈ ಸಮರ್ಪಣೆ ಅಥವಾ ಮುಡಿಪಿಗೆ 'ಅಂಕಿತ' ಅಥವಾ 'ಮುದ್ರೆ' ಎಂದು ಹೆಸರು (ಸಂಗೀತಂ. ೬೦) ; ಪಟ್ಣಂ ಸುಬ್ರಮಣ್ಯ ಅಯ್ಯರ್ . . . ಕೆಲವು ರಚನೆಗಳಲ್ಲಿ " ವರದ ವೆಂಕಟೇಶ್ವರ ", " ಆದಿ ವೆಂಕಟೇಶ " . . . ಎಂಬ ಮುದ್ರೆಯನ್ನು ಉಪಯೋಗಿಸಿದ್ದಾರೆ (ಸಂಗೀತ. ೨೮). ೧೧. ಅಭಿವ್ಯಕ್ತಿ ; ಮುಖಭಾವ : ನಿದ್ರೆಯಿಂ ಸುಖವಿಲ್ಲ ಪವ್ರದಿಂ ಅರಿಯಿಲ್ಲ ಮುದ್ರೆಯಿಂದಧಿಕ ಮಾತಿಲ್ಲ (ಸರ್ವಜ್ಞ. ೨೪೦) ; ಹುಡುಗನ ಮುಖದಲ್ಲಿ ಕರುಣಾಜನಕಮುದ್ರೆ ಮೂಡಿ ನಿಂತಿತು (ಕುಗಿಸು. ೪) ; ದುಷ್ಟಬುದ್ಧಿಗೆ ಮಗಳನ್ನು ನೋಡಿದೊಡನೆ ಅಭ್ಯಾಸಬಲದಿಂದೆಂಬಂತೆ ಸಂತೋಷದ ಮಂದಸ್ಮಿತಮುದ್ರೆಯೊಂದು ಸುಳಿದು ಒಡನೆಯೆ ಮಾಯವಾಗಿ, ಬದ್ಧಭ್ರುಕುಟಿಯ ವದನವಿಕಾರತೆಯುಂಟಾಗುತ್ತದೆ (ಚಂದ್ರಹ. ೯೦-೩). ೧೨. (ಆಲಂ) ಬಿಗುಹು ; ಭದ್ರತೆ : ಯೌವನದ ಮುದ್ರೆಯನೊಡೆಯಲ್ ಬರ್ಪ ಮನೋಜನಂತೆ . . . ಸೌಂದರಂ ಪರವೆಯರ ಮನೆಗೆ ನಡೆತಂದು (ಸಂಬಿಕ. ೧೧-೩೦). ೧೩. ಪರಿಣಾಮ ; ಪ್ರಭಾವ ; ವರ್ಚಸ್ಸು : ಕಲಿಯುವಾಗ ಆಗುವ ಅನುಭವ ಮಕ್ಕಳ ನರವ್ಯೂಹದಲ್ಲಿ ತನ್ನ ಮುದ್ರೆಯನ್ನೊತ್ತುತ್ತದೆ (ಶಿಕ್ಷಣ. ೧೯೮) ; ಗುರು ಚರಣರ ಹೃದಯದ ಮೇಲೆ ಗಿರೀಂದ್ರನ ಮಾತುಗಳು ಚೆನ್ನಾಗಿ ಮುದ್ರೆಯನ್ನು ಹಾಕುತ್ತಿದ್ದುವು (ಶಂಜೀ. ೪೩). ೧೪. [ದ್ವೈತ] ವೈಷ್ಣವರ ಲಾಂಛನವಾದ ಶಂಖ, ಚಕ್ರ ಮೊದಲಾದುವುಗಳ ಗುರುತುಳ್ಳ ಲೋಹದ ಸಾಧನ ಮತ್ತು ಆ ಸಾಧನದಿಂದ ದೇಹದ ಮೇಲೆ ಹಾಕಿಕೊಳ್ಳುವ ಗುರುತು : ಒಂದೊಂದು ಕೈಮೇಲೆ ಒಂದೊಂದು ಮುದ್ರೆಯನ್ನು ಬಹು ಸೂಕ್ಷ್ಮವಾಗಿ ಒತ್ತಿಬಿಟ್ಟು . . . ಅವಳ ಕೃತಜ್ಞತೆಗೆ ಪಾತ್ರರಾದರು (ವಾಗ್ದೇವಿ. ೩) ; ಈ ಗುಣಗಳನ್ನು ಅಳವಡಿಸಿಕೊಳ್ಳುವುದೇ ನಿಜವಾದ ಧರ್ಮ, ಇದಿಲ್ಲದೆ ನಾಮ, ಮುದ್ರೆ, ಲಿಂಗ, ಜನಿವಾರ, ಗಡ್ಡಗಳೆಲ್ಲವೂ ಡಂಭಾಚಾರ (ಹುಕ್ಷಕ್ರ. ೧೬೨). ೧೫. [ವೀಶೈ] ದೀಕ್ಷಾವಿಧಿಯಂ ಭಿಕ್ಷಾಪಾತ್ರೆ, ಭಸ್ಮಘುಟಿಕೆ, ಕಂಥೆ, ದಂಡ ಮತ್ತು ಕಮಂಡಲುಗಳೆಂಬ ಐದುಬಗೆಯ ಸಾಧನ : ಕರದಲ್ಲಿ ಕಪ್ಪರವಿಲ್ಲ ಕೈಯಲ್ಲಿ ಕಟ್ಟಿಗೆ ಇಲ್ಲ ಕರ್ಣದಲ್ಲಿ ಮುದ್ರೆ ಇಲ್ಲ ಶಿರದಲ್ಲಿ ಜಟಾಬಂಧವಿಲ್ಲ ಕಕ್ಷೆಯಲ್ಲಿ ಭಸ್ಮಗಂಟಿಕೆ ಇಲ್ಲ (ಬೋಳಬಸ. ೧೩೩-೩೪) ; ಗುರೂಪದೇಶದಿ ಮುದ್ರೆಯನು ಮುಟ್ಟುವರು ಸೌಖ್ಯಸಮೃದ್ಧಿಯೊಳಗೋಲಾಡುವರು (ಶ್ರೀಕುಲೀ. ೦೦ ೧). ೧೬. [ನಾಟ್ಯ] ನೃತ್ಯ, ನಾಟಕಗಳಲ್ಲಿ ಅಂಗಗಳ ಚಲನವಲನದಿಂದ ತೋರಿಸುವ ವಿನ್ಯಾಸ : ಅಭಿನಯದಲ್ಲಿ ಮುದ್ರೆಗಳಿಗೆ ಇರುವ ಸ್ಥಾನವು ಅಗ್ರಗಣ್ಯವಾದುದು . . . ಅಭಿನಯದಲ್ಲಿ ನಟನ ಇಡೀ ದೇಹವು ಪ್ರವೃತ್ತವಾಗಿದ್ದರೆ, ಮುದ್ರೆಗಳಲ್ಲಿ ಅವನ ಒಂದೊಂದು ಅಂಗ ಮಾತ್ರ ಕೆಲಸ ಮಾಡುತ್ತದೆ. ಮುದ್ರೆಗಳನ್ನು ಮಾಡುವಾಗ್ಗೆ ಒಂದು ಅಂಗದ ಚಿಕ್ಕಚಲನೆ ಕೂಡ ಮಹತ್ತರವಾದ ಅರ್ಥವನ್ನು ಸೂಚಿಸಬಲ್ಲುದು (ಅಭಾಪ್ರ. ೪೩). ೧೭. [ಶಿಲ್ಪಶಾ] " ಪ್ರತಿಮೆಗಳ ಕೈ ಮತ್ತು ಬೆರಳುಗಳ ವಿಶೇಷ ಸ್ಥಿತಿಗೆ "ಮುದ್ರೆ" —ಎಂದು ಹೆಸರು" (ಶಾಕಶ. ೩೦೩). ೧೮. ಮಂತ್ರಶಾಸ್ತ್ರ ಪ್ರಸಿದ್ಧವಾದ ಒಂದು ಬಗೆಯ ವಿನ್ಯಾಸ (?) : ಅಸ್ತ್ರಮುದ್ರೆ ಚಕ್ರಮುದ್ರೆ . . . ಸಂಹಾರ

ಮುದ್ರೆಯೆಂಬ ಸಕಲಮುದ್ರಾಲಕ್ಷಣವಸಜಾದಾಯಾಕ್ರಿಯೆಗಳಲ್ಲಿ ಪ್ರಯೋಗಿಸಿ (ಏಕೀಳ. ೯೩). 'ದ್ರವ್ಯಮುದ್ರೆ' ಪರಾ.

**ಮುದ್ರೆಯಅದ್ದಿಕ** = ಮೊಹರಿನ ಮೇಲ್ವಿಚಾರಣೆ.— ಉಸ್ತುವಾರಿ: ಮುದ್ರೆಯಅದ್ದಿಕೆಕ್ಕೆ ಗ ೧೨ ಗಂಧಕಡಿ ನೀರವರಿಗೆ ೧೩ (ಎಕ. V (R), ತಿರುಚು. ೯೬-೯೪ ; 1276). **ಮುದ್ರೆಯವ** = ೧. ಸಾರ್ವಜನಿಕ ವ್ಯವಹಾರ ಪತ್ರಗಳಿಗೆ ಮುದ್ರೆಯೊತ್ತುವವನು: (*). ೨. ವಿಷ್ಣುವಿನ ಲಾಂಛನವಾದ ಶಂಖ, ಚಕ್ರ ಮುಂತಾದುವನ್ನು ತನ್ನ ದೇಹದ ಮೇಲೆ ಧರಿಸುವವನು ; ವೈಷ್ಣವ. **ಮುದ್ರೆಯಪೊಳಗ**= ರಾಜನ ಮೊಹರನ್ನು ನೋಡಿಕೊಳ್ಳುವ ಕೆಲಸ, — ಸೇವೆ : ಸೇನಬೋಕೆಪೊಂದಕ್ಕಂ ಗದ್ಯಾಣಂ ಹನ್ನೆರಡು ಮುದ್ರೆಯ ಪೊಳಗಕ್ಕೆ ಗದ್ಯಾಣಂ ಹನ್ನೆರಡು (ಎಕ. V (R), ತಿರುಚು. ೯೬-೯೭ ; 1276).

[ಸಂ. ಮುದ್ರಾ]

**ಮುದ್ರೆಕೊಳಗ** (ನಾ). ಸರಿಯಾದ ಅಳತೆಯದೆಂದು ಅಧಿಕೃತವಾಗಿ ಒಪ್ಪಿಗೆ ಪಡೆದು ಸರ್ಕಾರದ ಮೊಹರನ್ನು ಹೊಂದಿರುವ ಕೊಳಗ : ಆರೋಗಣೆಗೆ ಸಲುವುದು ಅವಸರವಂದಕೆ ಅಮೃತಪಡಿ ದಿನವೊಂದಕೆ ಮುದ್ರೆಕೊಳಗದಲಿ ೧೫೦ ॥ ಳಕೆ ಕೊಳಗ ಒಂದಕೆ ಪಡಿ ೧ಳಬಿ ಲೆಕದಲಿ ಸಲುವ ಪಡಿ ೧೯೬೬ಕೆ ಪ್ರಸಾದವೆಚ (ಎಕ. VI (R). ಕಾಂಡವ. ೧೨೯-೭ ; 1545). [ಮುದ್ರೆ + ಕೊಳಗ$_1$]

**ಮುದ್ರೆಕೋಲು** (ನಾ). ಅರಮನೆಯ ಅಪ್ಪಣೆಯನ್ನು ಮೀರಿ ನಡೆದವರ ಧಾನ್ಯದ ರಾಶಿಗೆ ಮುದ್ರೆಹಾಕಲು ತೋಟಿ, ತಳವಾರ ಮುಂತಾದವರು ಬಳಸುತ್ತಿದ್ದ ಮೊಹರುಳ್ಳ ಮರದ ಕೋಲು. —ದಂಡ : ಆಚೆ ಈಚೆ ಸೂರ್ಯಚಂದ್ರರನ್ನೂ ಮಧ್ಯೆ 'ದೇ' ಎಂಬ ಅಕ್ಷರವನ್ನೂ ಕೆತ್ತಿಸಿದ ಈ ಮುದ್ರೆಕೋಲನ್ನು ಗ್ರಾಮಗಳ ಚಾವಡಿಯಲ್ಲಿ ಇರಿಸಿ . . . ಆ ಮುದ್ರೆಕೋಲನ್ನು ತೆಗೆದುಕೊಂಡು ಹೋಗಿ ಮುದ್ರೆಹಾಕುವಂತೆ ನಿಬಂಧನೆ ಮಾಡಿದರು (ಕಾರುಕಂ. I. ೦೦೯).

[ಮುದ್ರೆ + ಕೋಲು$_1$ (< ಕೋಲ್$_1$)]

**ಮುದ್ರೆಗಟ್ಟು** (ನಾ). ಪತ್ರ, ಮುಂತಾದುವುಗಳನ್ನು ದಾರದಿಂದ ಕಟ್ಟಿ ದಾರದ ಗಂಟಿನ ಮೇಲೆ ಹಾಕುವ ಮೊಹರು. —ಉಂಡಿಗೆ: (ಓಲೆಯನ್ನೀಯಿಸಿಕೊಂಡು, ಅದರ ಮುದ್ರೆಗಟ್ಟನ್ನು ತಿರುಗಿಸಿ ಪರೀಕ್ಷಿಸಿ) (ಚಿಕ್ಕ. ೭೭-೨೭). [ಮುದ್ರೆ + ಕಟ್ಟು$_2$]

**ಮುದ್ರೆಗಾಣಿಕೆ** (ನಾ). ಒಂದು ಬಗೆಯ ತೆರಿಗೆ ( ? ) : ಹತ್ತಿಪೊಂಮು ಮಾರ್ಗದ ಸುಂಕ ದೇವರಾಯವಟ್ಟ ಪಟ್ಟಿಗಾಣಿಕೆ ಮುದ್ರೆಗಾಣಿಕೆ ಸೊಪ್ಪಿನ ತೋಟ . . . ನಿರ್ವಿವಾದವಾಗಿ ಸಲುವದು (ಎಕ. V (R). ತಿರುಚು. ೦೭-೦೭೭೯; 1749). [ಮುದ್ರೆ + ಕಾಣಿಕೆ (< ಕಾಣ್ಕೆ)]

**ಮುದ್ರೆಗೂಳಿ** (ನಾ). ಒಂದು ನಿರ್ದಿಷ್ಟ ಕಾರಣಕ್ಕಾಗಿ ಮೀಸಲು ಮಾಡಿ, ಯಾವುದಾದರೊಂದು ನಿರ್ದಿಷ್ಟ ಲಾಂಛನವನ್ನು ಬೆನ್ನಿನ ಮೇಲೆ ಮುದ್ರಿಸಿ ಸ್ವೇಚ್ಛೆಯಾಗಿ ತಿರುಗಲು ಬಿಟ್ಟಿರುವ ಗೂಳಿ : ಅಣ್ಣನು ಒಬ್ಬ ಗೌಳಿಗನ ವೇಷ ಹಾಕಿಕೊಂಡು ಆ ಮುದ್ರೆಗೂಳಿಯನ್ನು ತಂದು ಅರಮನೆಗೆ ಕೊಟ್ಟನು (ದೇಜಾಕಿ. ೩೩). [ಮುದ್ರೆ + ಗೂಳಿ$_1$]

**ಮುದ್ರೆಪಡಿ** (ನಾ). = ಮುದ್ರೆಕೊಳಗ : ಆ ಪೊನ್ನ ಮುದ್ರೆಪಡಿಯ ತಂದು ಅಳಕೊಳ್ಳಿ (ಕೆಕಾ. ೭೨). [ಮುದ್ರೆ + ಪಡಿ$_1$]

**ಮುದ್ರೆಪ್ರಭು** (ನಾ). = ಮುದ್ರಹಸ್ತ : ಆ ಮುದ್ರೆಪ್ರಭು ಮಾನ್ಯಕಾಜ ಸಮಸ್ತಪ್ರಜೆ [ಗಳು] ಆಚಂದ್ರಾರ್ಕಸ್ಥಾಯಿಯಾಗಿ ಕಲ್ಲಿನಾಥದೇವರಿಗೆ ಬಿಟ್ಟ ಧರ್ಮ (ಸೌಇಇ. XX. ೨೨೭-೨೯; 1300). [ಮುದ್ರೆ + ಪ್ರಭು]

**ಮುದ್ರೆಬಸವಿ** (ನಾ). (?) : ಬಲಗೈ ಎಡಗೈ ಮನೆ ೧೩ ಮುದ್ರೆಬಸವಿಗೆ ಮಗನಸಿವಾ ದೇವಾಂಗದವರು ಜಾತಿಗಟ್ಟಿಯವರು ಸಹಾಮಗ ೧ಕ್ಕೆ ಮೇರೆಯಲ್ಲು ಕೊಡಲುಳವರು (ಎಕ. XIV. ಗುಪ್ಕು. ೭೯-೬೩ ; ಸು. 1776 ). [ ? ]

**ಮುದ್ರೆಮನುಷ್ಯ** (ನಾ). = ಮುದ್ರಹಸ್ತ : ಮಲ್ಲರಸ ಅಯ್ಯನವರ ಮುದ್ರೆಮನುಷ್ಯನು . . . ರಾಮಾಯ್ಯನೂ (ಎಕ. IV (R), ಎಳಂದೂ. ೬೭-೦೦; 1531 ). [ಮುದ್ರೆ + ಮನುಷ್ಯ]

**ಮುದ್ರೆಯುಂಗುರ** (ನಾ). (ರಾಜ ಮುಂತಾದವರ) ಲಾಂಛನವನ್ನು ಕೆತ್ತಿರುವ ಉಂಗುರ, —ಮುದ್ರಿಕೆ : ಕಡಗ ಕಂಕಣ ಮುದ್ರೆಯುಂಗುರ . . . ದಿವ್ಯನೂಪುರಗಳನಾಂತ ಮಾಡದ ರನ್ನೆಯರ್ಕೈದಿದರು (ಕಂಕಾ. ೨೦-೦೫); ಬೆರಳಿಗೆ ಮುದ್ರೆಯುಂಗುರವಿದ್ದುದರಿಂದ ಹಿಂದೊಮುಹಿಳೆಯೆಂದು ಕೊಂಡೆ (ಕೃ.ತಿ. ೩೦೦). [ಮುದ್ರೆ + ಉಂಗುರ]

**ಮುದ್ರೆಯೂಳಿಗ** (ನಾ). ರಾಯಸ, ಪತ್ರ ಮುಂತಾದುವುಗಳಿಗೆ ರಾಜನ ಮೊಹರನ್ನು ಒತ್ತುವ ಕೆಲಸ : ಅರಮನೆಯ ಊಳಿಗದಾಳ್ಗಳು ರಾಯಸಿಗರು ; ಮುದ್ರೆಯೂಳಿಗದವರು (ಚಿಂಕ್ರಕ. ೭-೦೨). [ಮುದ್ರೆ + ಊಳಿಗ (< ಊಳಿಗ)]

**ಮುದ್ರೆಯೊಡೆ** (ಕ್ರಿ). ಮೊಹರನ್ನು ತೆಗೆ ; ಉಂಡಿಗೆಯನ್ನು ಒಡೆ : ಮುದ್ರೆಯೊಡೆದು, ಓದಿಕೊಂಡು, ಬೆಟ್ಟದ ಅರಸಿನ ಪೊದರ್ಗೆಗಯ್ದು (ಚಿಕ್ಕ. ೭೭-೨೩). [ಮುದ್ರೆ + ಒಡೆ$_1$]

**ಮುದ್ರೆಯೊತ್ತು** (ಕ್ರಿ). ೧. ರಾಜನ ಮೊಹರನ್ನು ಒತ್ತುವುದರ ಮೂಲಕ ಆಜ್ಞೆ, ಒಪ್ಪಿಗೆ ಮುಂತಾದುವನ್ನು ಸ್ಥಿರೀಕರಿಸು : ಇತರ ಪ್ರಭುಗಳಿಗೆ ನಮ್ಮ ಆಶ್ರಿತರಿಂದ ಉಪಟಳವು ನಷ್ಟವು ಅಪಮಾನವು ಆಡದಂತೆ ಮುದ್ರೆಯೊತ್ತಿ ನಿಬಂಧಿಸಿ (ಚಿಕ್ಕ. ೬೯-೦೬). ೨. ಪ್ರಭಾವವನ್ನು ಬೀರು ; ವರ್ಚಸ್ಸನ್ನು ಬೀರು : ಮಕ್ಕಳ ಎಳೆಯ ಮನಸ್ಸಿನ ಮೇಲೆ ಮುದ್ರೆಯೊತ್ತಿ ಅವರ ಬೆಳವಣಿಗೆಯನ್ನು ಸಾಧಿಸಬೇಕು (ಶಿಕ್ಷಣ. ೩೦೬). ೩. ಮಾಧ್ವರ ಲಾಂಛನವಾದ ಶಂಖ, ಚಕ್ರಗಳ ಗುರುತನ್ನು ಹಾಕು : ಶಂಖಚಕ್ರಮುದ್ರೆಗಳನ್ನು ಮುದ್ರಾಧಾರಣೆಯ ಹೋಮಾಗ್ನಿಯಲ್ಲಿ ಚೆನ್ನಾಗಿ ಕಾಯಿಸಿ . . . ಶಿಷ್ಯರಿಗೆ ಜಾಗ್ರತೆಯಾಗಿ ಮುದ್ರೆಯೊತ್ತಿಬಿಡುವರು (ಜಾಗ್ರ. ೪). [ಮುದ್ರೆ + ಒತ್ತು$_1$]

**ಮುದ್ರೆಯೋಲೆ** (ನಾ). ಮೊಹರು ಸಹಿತವಾದ ಕಾಗದ. —ಪತ್ರ : ನಂಜರಾಜಯ್ಯನವರನ್ನು ಸರ್ವಾಧಿಕಾರಿಯ ಊಳಿಗಕ್ಕೆ ನಿಯಮಿಸಿಕೊಂಡಿರುವ ಹಳೆಯಪಯ್ಯದವರ ಮಹಾಸಭೆಯ ಮುದ್ರೆಯೋಲೆಯಿಂದು (ಚಿಂಕ್ರಕ. ೦೩೦-೩). [ಮುದ್ರೆ + ಓಲೆ]

**ಮುದ್ರೆಪೊರು** (ಕ್ರಿ). ಆಜ್ಞೆಯನ್ನು ಪಡೆ ; ಅಪ್ಪಣೆಯನ್ನು ಹೊಂದು: ಇರುಳ ಕಯ್ದಾವಿಗಳ ಕಿರಿಯ ಪ್ರಮಾಣಗಳಲ್ಲಿಯೇ ಮುದ್ರೆಪೊತ್ತ ನಮ್ಮ ಕರ್ತವ್ಯಗಳನ್ನು ನೆರವೇರಿಸಿಕೊಳ್ಳೋಣ (ಚಿಕ್ಕ. ೬೩-೨೦). [ಮುದ್ರೆ + ಪೊರು (< ಪೊಱು)]

**ಮುದ್ರೆಹಸ್ತ** (ನಾ). = ಮುದ್ರಹಸ್ತ : ಲಕ್ಷ್ಮೀದೇವರ ಅಧಿಕಾರಿ ಮುದ್ರೆಹಸ್ತ ಮಲ್ಲಣ್ಣನುಂ ಪ್ರಭುಗಳುಂ . . . ಬಿಟ್ಟ ಮತ್ತರು (ಸೌಇಇ. XX. ೧೯೩-೩; 1197). [< ಸಂ. ಮುದ್ರಾಹಸ್ತ]

**ಮುದ್ಲಿಯಾರ್** ' ಮೊದಲಿಯಾರ್ ' ನೋ.

**ಮುಧಸೆ ?** (ನಾ). ( ? ) : ಕಿತ್ತೂರ ಪುದಿವತ್ತಮುಂ ಪೆರ್ಗಡೆ ಗದ್ಯಾಣ ಮುಧಸೆಮಟ್ಟಿಗೆಯುಂ ಪುದುಪೊದಲುಂ . . . ಪುದಿವತ್ತಮುಂ ಕೊಟ್ಟು (ಎಕ. III (R). ಹಗ್ಗಡ. ೦೨೩-೩೦; 1079). [ ? ]

**ಮುಧಾ** (ಅ). ೧. ವ್ಯರ್ಥವಾಗಿ ; ನಿಷ್ಪ್ರಯೋಜಕವಾಗಿ : ಅದನರಿಯದ ಬೋಧಬೋಧಿತ ತಪೋದಾನವಿಧಾನದಿಂ ಮುಧಾ ಕ್ಲೇಶಾಯಾಸನಿರತರಾಗಿ ನಮೆವರ್ (ಅನುಭ. ೨-೯ ಪ). ೨. ತಪ್ಪಾಗಿ ; ಸುಳ್ಳಾಗಿ; ಹುಸಿಯಾಗಿ. [ಸಂ.]

**ಮುನ್₁**, ಮುಂ₁, ಮುನ್ನ₁ (ನಾ). ೧. ಮುಂದುಗಡೆ ; ಮುಂದು ; ಎದುರುಭಾಗ : (+). ೨. ತರುವಾಯದ್ದು ; ಆಮೇಲಿನದು ; ಭವಿಷ್ಯಕ್ಕೆ ಸೇರಿದುದು ; 'ಮುನ್ನಱಿ' ಪರಾ. ೩. ಆದಿ ; ಮೊದಲು ; ಆರಂಭ. ೪. ಹಿಂದಿನದು ; ಪೂರ್ವಕಾಲಕ್ಕೆ ಸೇರಿದುದು ; ಮುಂಚಿನದು : ತತ್ಸೈನ್ಯಪಾದೋತ್ಥಿತಂ ಪುದಿದತ್ತುಂ ರಜಮಂಬರಸ್ಥಳಮುಮಂ ಮುಟ್ಟಿತ್ತು ತಳ್ತುರ್ವಿ ಪರ್ವಿದೊಡಾ ಮುನ್ನಿನ ತೆಳ್ಪುಗೆಟ್ಟು ಕೆಸಱಾಯ್ತಾಕಾಶಗಂಗಾಜಲಂ (ಶಂಕಶಾ. ೧೧-೨೯); ನಾಂ ಪತಿವ್ರತೆಯಾದೊಡೆ ಮನೆದೈವಂಗಳೆನಗೆ ಸನ್ನಿದವಾದೊಡೆನ್ನ ಮೂಗು ಮುನ್ನಿನಂತಾಗಲಿ (ಶಂಕಶಂ. ೭೭-೧೨); ಮುನ್ನಿನ ಕುಲಮಂ ಸಿರಿಯಂ . . . ಅಳಿಪಿಂದಂ ನೆನೆಯುತ್ತಿರ್ಪ ದುರ್ಜನಂ ಮುನಿಯಲ್ಲಂ (ಧರ್ಮಾಮೃ. ೩-೧೧೨). (ಗು). ೫. ಮುಂದುಗಡೆಯ ; ಮುಂದಿನ ; ಮುಂಭಾಗದ. ೬. ಅನಂತರದ ; ಆಮೇಲಿನ; ತರುವಾಯದ : ಎನ್ನ ಜನ್ಮಕೆ ಸಾಫಲ್ಯ ಮಾದುದು ನಿನ್ನ ಚೆನ್ನಡಿಯೂಳಿಗದಿಂದ ಪಿನ್ನೇಳು ಮುನ್ನೇಳು ತರದವರನಿ ಬರುಮುನ್ನತಿವಡೆದರೆನ್ನಿಂದ (ಹರಿಬ. ೧-೪೯). ೭. ಆರಂಭದ ; ಪ್ರಾರಂಭದ; ಶುರುವಿನ : 'ಮುನ್ನಿರುಳ್', 'ಮುನ್ನೇಸಱ್' ಪರಾ. ೮. ಹಿಂದಿನ ; ಮುಂಚಿನ ; ಪೂರ್ವದ : 'ಮುನ್ನಿರವು' ಪರಾ. ೯. ಅಭಿವೃದ್ಧಿಯ ; ಉತ್ಕರ್ಷದಿಂದಕೂಡಿದ ; ಏಳಿಗೆಯುಳ್ಳ : 'ಮುನ್ನಡೆ₂' ಪರಾ. **ಮುಂ₁** : ೧. 'ಮುಂಗಾಣ್' ಪರಾ. ೨. 'ಮುಂಗಾಣ್' ಪರಾ. ೩. ಮುಂ ಪಿಂತೆಂಬುದಿದಲ್ತೆ ನಿಳಿಂಪರುಗಕ್ಕೆಲ್ಲ ಮಿಂತು ಬಾಯುಟಿವುದೆ ಚಃ ಗಾಂಪು ಬಗೆಗೊಂಡು ಜಿನಪತಿಯಂ ಪೂಜಿಸು ಪಡೆಮೆಯಿನಿಯನಂ ಮಱುಭವದೊಳ್ (ಆದಿಪು. ೪-೧೭). ೫. 'ಮುಂಗುರುಳ್', 'ಮುಂಜಗಲಿ' ಪರಾ. ೬. 'ಮುಂಗಡೆ' ಪರಾ. ೭. 'ಮುಂಗಾರ್', 'ಮುಂಜಾವ' ಪರಾ. **ಮುನ್ನ₁** : ೩. "ಆದಿಃ, ಅಗ್ರಂ. ಪು(ರಾ)ರಂ, ಪೂರ್ವಂ, ಪ್ರಥಮಂ, ಪ್ರಾಕ್. ಪುರಃ –ಈ ೭ ಮುನ್ನಂ" (ಕರಾಯು. ೧೦೭-೩೩). ೪. ಕರಮೆಸೆಯೆ ಮುನ್ನಿನ ದಿನಂ ಶಂಕರ ನಿಗರ್ಚಿಸಿ ಮಱುದಿವಸ ಪರಿಹರಿಸಿದಾ ಪತ್ರಯನಿನಿತನಾವೋಹಿಲನು ತಂದು (ಬಸವು. ೪೩-೭೭) ; ಮುನ್ನಲುಳ್ಳಾಚಾರ್ಯರುಗಳ ಪದಗಳು ಮತ್ತೆನ್ನ ಚಿತ್ತದೊಳಿರ್ದ ಬಳಿಕ ಚೆನ್ನುನಡೆವುದು ಕವಿತೆ ಸೋಂಪುದೋರ್ಪುದು (ಪರ್ವಚ. ೧-೧೫) ; ಒಲಿದು ತನ್ನೊಡವುಟ್ಟು ಸೊಸೆ ಮಗಳೆಂದೆಂಬ ಪಲರು ಮುನ್ನಿನ ಬಾಂಧವರು ಕುಲದೇವತೆಯೆಂದು ಕೂರ್ತು ತಂತಮ್ಮಿಷ್ಟಫಲವ ಪಡೆವರೆನ್ನಿಂದೆ (ಹರಿಬ. ೧-೪೦). ೯. ಮುನ್ನಜನ್ಮದ ಪಡೆದ ಫಲವಿದು ಎನ್ನ ಬಿಡುವುದೆ (ಗೋಹಾಡು. ೧೮-೬೯). ೧೦. ಹಿಂಭಾಗದ ; ಹಿಂಬದಿಯ : ಪೊಸೆದು ಕಟ್ಟಿದ ಮುನ್ನ ಕಚ್ಚೆಯ ಬೆಸುಗೆ ಶಿಖಿಗಳ ಗಂಟು . . . ಎಸೆವ ಪೊಂಬಣ್ಣದ ಶರೀರದಿ ಮಿಸುಪ ವಾಮನರೂಪನಾಂತಾ ವಿಷ್ಣುಮುನಿ ಬಂದ (ಜಾಳ್ಳಭಾ. ೧೮-೨೫).

**ಮುನ್ನಾದಿನ** = ಹಿಂದಿನ ದಿನ : ಓಬಳಮ್ಮ ನಾಗತಿಯು . . . ತನಗೆ ಮುನ್ನಾದಿನ ಆದ ಸ್ವಪ್ನದ ಸಂಗತಿಯನ್ನು ಹೇಳಿದಳು (ಚಕ್ರಾಜಾ. ೭೧) ; ನಾನು ನಾಡಹಬ್ಬದ ಮುನ್ನಾದಿನ ಹಲಸಂಗಿಗೆ ಹೋಗಿ ತಲುಪಿದೆನು (ಪ್ರಬಂಧ. ೯೫). **ಮುನ್ನಿನವ** = ಹಿಂದಿನವನು ; ಪೂರ್ವಜ : ನಿಮ್ಮಲಿ ಮುನ್ನಿನವನು ಯಯಾತಿಯಯ್ಯನು ನನ್ನ ನಾಮವೆ ನಹುಷನೆಂಬುದು (ಕುಮಾ ಭಾ. ೧೩-೭೪). [ದೇ.॥ ತಮಿ. ಮುನ್ ; ಮಲ. ಮುನ್, ಮುನ್ನಂ ; ಕೊತ ಮುನ್, ಮು ; ತೆಲು. ಮುಂ, ಮುನಿ, ಮುನು, ಮುನ್ನು]

**ಮುನ್₂**, ಮುಂ₂, ಮುನ್ನ₂, ಮುನ್ನಂ (ಅ). ೧. (ಸ್ಥಳಕ್ಕೆ ಸಂಬಂಧಿಸಿದಂತೆ) ಮುಂದೆ ; ಮುಂಭಾಗದಲ್ಲಿ ; ಮುಂದಕ್ಕೆ : ಎದುರಿಗೆ: 'ಮುನ್ನುಗ್ಗು', 'ಮುನ್ನೂಕು' ಪರಾ. ೨. (ಕಾಲಕ್ಕೆ ಸಂಬಂಧಿಸಿದಂತೆ) ಅನಂತರದಲ್ಲಿ ; ಭವಿಷ್ಯದಲ್ಲಿ ; ಮುಂದೆ : ಪರಮಕವೀಶ್ವರ ಚೇತೋಹರಮೆಂಬಿನಮೆಸೆವ ಮಾಳವೀಮಾಧವಮಂ ವಿರಚಿಸಿದ ಕನ್ನಮಯ್ಯಂಬರಮಾಗಂ ಸುಕವಿ ಬಗೆವೊಡಿನ್ನುಂ ಮುನ್ನುಂ (ಶಂಕಶಂ. ೩-೮). 'ಮುನ್ನುಱಿ' ಪರಾ. ೩. ಮೊದಲು ; ಮುಂಚೆ ; ಆರಂಭದಲ್ಲಿ : ನಡೆನೋಡಲ್ ರೂಪು ಕೇಳಲ್ ನುಡಿ ಪುರದ ಜನಕ್ಕಾಯ್ತು ಮುನ್ನಂತೆ ಮೇಗಣ್ಣಡರ್ದಾಗಳ್ ಮೆಯ್ಯ ಕಾಣಲ್ ಕಳಕಳಮಿನಿಸಂ ಕೇಳಲಾಯ್ತು (ಆದಿಪು. ೭-೩೭) : ನೀವಿದನೆಮಗಱಿಪಿರ್ಮುನ್ನೀ ವಾರ್ತೆಯನಱಿಯೆವು (ಧರ್ಮಾಮೃ. ೨-೭೩) : ಮನದೊಳ್ ಮುನ್ನೊಗೆದಿರ್ದ ಸಂಶಯಮದೆಲ್ಲಂ ಪಿಂಗೆ ಚಂದ್ರಧ್ವಜಾವನಿಪಂ ಸಂತಸದಂತಮೆಯ್ದೆ . . . ಉದ್ಯೋಗಿಸಿದಂ (ಕುಸುಮಾ. ೧೩-೭೪). ೪. ಹಿಂದೆ ; ಪೂರ್ವದಲ್ಲಿ : ಮುನ್ನೆಗೆಟ್ಟ ವೇಳೆವಡಿಚರುಮಿನ್ನಪ್ಪೊರುಮಿಗದುಳ್ಳೊರುಂ ಬಗೆವೊಡವರ್ ನಿನ್ನನ್ನರೆ ನಿನ್ನನ್ನರೆ ನಿನ್ನನ್ನರೆ ನಿನಗೆ ನೀನೆ ದೊರೆಯಯ್ ಸಮುದ್ರ (ಇಆ. XX, ೭೧-೧೧ ; ಸು. ೨ನೆಯ ಕತ); ತನ್ನೊಳಗಣ ಪನ್ನಗನಂ ಮುನ್ನೀನ್ ಪಿಡಿದೊಗೆದು ಕಾಯಲಾಱದೆ ಪಿರಿದುಂ ಬನ್ನದ ಕರ್ಪೆಸೆದುದು ತೋಱಿಗಿನ್ನುಂ ಪರಗಳ ತಮಾಳನೀಳಚ್ಛವಿಯಿಂ (ಶಂಕಶಾ. ೩-೩೪) ; ಉರಗ ನರ ದಿವಿಜಾದಿಗಳಿಗಿದು ಪರಿಹರಿಸಲಳವಲ್ಲ ದೈವದ ಪರುಠವಣೆ ಮುನ್ನಾದಿಯಲಿ ನಿರ್ಮಿಸಿತು ಮೃತ್ಯುವನು (ಕುಮಾ ದ್ರೋ. ೭-೨೯). **ಮುಂ₂** : ೧. ದಂಪತಿಗಳೆ ಮಾಡಿಬೀಳ್ಕೊಟ್ಟು ಕೆಳೆಯರು ಮುಂ ಪೋಗಲನಿರುವ್ವನೊಡನೆ ಚಂಪಕಧಾಮು ಕೋಮಲೆಯರು ಮರುಳ್ಗೊಂಡು ಮುಂಪೋದುದೇನ ಪೇಳುವೆನು (ಮೋಹತ. ೧೮-೭೦) ; ಪೊಸನೀರ ಹೂರದೊಳಗೆ ಮಱಿಮೀನ್ಗಳು ಮಸಗಿ ಮುಂ ಪೊಳೆದಾಡುವಂತೆ ಮಿಸುಗುವ ವರಲಾವಣ್ಯಾಂಬುವಲಿ ಕಣ್ಣೆಸೆದುವು ಪೊಳೆಪೇಱಿ ನಗುತ (ಕಂಪ. ೧೧-೪೮). ೨. ಮುಂ ಕೆಲವಾನುಂ ದಿವಸಕ್ಕೆ ದೇವ ಪಡೆವೈ ಶ್ರೀಮಂಡನ ಕ್ಷಾತ್ರಮಂಡಲಮಾರ್ಗೋಚಿತಗಾತ್ರನಂ ಬಹುಕಳಾಸತ್ಪಾತ್ರನಂ ಪುತ್ರನಂ (ಕಾದಂಪೂ. ೪೭೦). ೩. ಪವಡಿಸಿದನಂತನೊಸೆದುಪ್ಪವಡಿಸಿ ತನ್ನೆರಡುಮಡಿಯನೊತ್ತುತ್ತಿರ್ದಾಹವವಿಜಯಯಪ್ಪ ವಿಜಯನನೆ ವಲಂ ಮುಂ ಕಂಡು ಬಱಿಕೆ ನೃಪನಂ ಕಂಡಂ (ಶಂಕಶಾ. ೯-೧೧) ; ತನಗಾಕಸ್ಮಿಕ ಶಂಕೆ ತನ್ನ ಮನದೊಳ್ ಮುಂ ಪುಟ್ಟೆ ತತ್ಕಾಂತೆಯಂ[ದಿನಿ]ರುಳ್ ಚಿಂತಿಸಿ ನಿದ್ದೆಗೆಟ್ಟು (ಸುಕುಮಾ. ೧೨-೧೯) ; ಬಸವಪಟ್ಟಣಕೆ ಮುಂ ಜಸದಿಂದ ನಡೆತಂದು ಪಸೆವ ಮುತ್ತಿಗೆಯನೆ ಬಲಿದು ಬಸಮಾಡಿಕೊಂಡರಂ ಕೋಪದೆ ತಾನೊಗಳೆಸವ ಸಂತಸವ ತಳೆದನು (ಕಂಪ. ೧೭-೨೭). ೪. ಮನುಷ್ಯಗತಿಯೊಳ್ ಪುಟ್ಟಿ ಮುಂ ಗೆಯ್ದ ಪಾಪಕರ್ಮದುದಯದಿಂದಂ . . . ದುಃಖಂಗಳನೆಯ್ದಿ (ವಡ್ಡಾರಾ. ೯೭-೧೪) ; ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾರತಮನಪೂರ್ವಮಾಗೆ ಸಲೆ ಪೇಟ್ದ ಕವೀಶ್ವರ[ರಿ]ಲ್ಲ (ಶಂಕಶಾ. ೧-೧೧) ; ಮುಂ ಪುಣ್ಯಕರ್ಮಮನಂತಾಗಿರೆ ಮಾಡದೀಗಳಱಲಿಂ ಪೇಱಿಂತಱುತಿರ್ದಳಕ್ಕುಮೆ (ಕಾದಂಪೂ. ೪೪೭). **ಮುನ್ನ₂** : ೧. (+). ೨. ಎನ್ನದಾನೆಂಬೆರಡಱಿಂದವೆ ಬನ್ನಬಡುವನು ಜೀವನಲ್ಲದೆ ಮುನ್ನವಿನ್ನೆಂದೆಂದಿಗಾತ್ಮಂಗಿಲ್ಲ ಭವಬಂಧ (ಕುಮಾ ದ್ರೋ. ೭-೨೮) ; ಎನ್ನ ವಂಶದ ಗೋವ್ಗಳೊಳಗೆ ನಿನ್ನ ವಂಶದ ಗೊಲ್ಲರೊಳಗೆ ಮುನ್ನ ಸಂಕ್ರಾಂತಿ ಹಬ್ಬದೊಳಗೆ ಚೆನ್ನಕೃಷ್ಣನ ಭಜಿಸಿಯೆ ಪಾಲುಪೊಂಗಲನಿಕ್ಕಿಸಯ್ಯ (ಗೋಹಾಡು. ೨೨-೧೧೯) ; ಚೆನ್ನೆನೀಂ ಪೋದೆಯಿನ್ನವನ ಹಿಂದೆಯೆ ಕಳುಹಿ ಮುನ್ನ ಬಾಳ್ದೆಯದೆಂತು ಪೇಳೆನ್ನ ಮಗಳೆ (ಕಾಬೂರ. ೧೭೪-೪೯೦). ೩. ದುರ್ಯೋಧನನಪ್ಪೊಡೆ ಶ್ವೇತಕೃಷ್ಣಕಾರಕಂ ಕೃಷ್ಣನಂ ತನಗೆ ಮಾಡದನ್ನೆಗಂ ಮುನ್ನಮೆ ಪನ್ನಗಶಯನನಂ ನಮಗೆ ಮಾಡುವುದುತ್ತಮಪಕ್ಷಂ (ಶಂಕಶಾ. ೯-೧೧ ವ) ; ಈ ಬಿಂಬೋಷ್ಠೆಯಂ ಸರ್ಪದಷ್ಟೆಯನೆನಗೆ ಮದುವೆಮಾಡಿರಪ್ಪೊಡೆ ನಾಳೆ ನೇಸಮೂಡಿರ್ದ ಮುನ್ನಮೆ ವಿಷಾಪಹಾರಂ ಮಾಡಿದಪ್ಪೆಂ (ಸುಕುಮಾ. ೭-೮ ವ) ; ನಾಳೆ ಪಡುವಣ ತರಣಿ ತೊಲಗದ ಮುನ್ನ ಕೊಲುವೆನು ವೈರಿ ಸೈಂಧವನ (ಕುಮಾ ದ್ರೋ. ೮-೪೫). ೪. ಅಂ ಮುನ್ನ ಜನನೀಚರ ಲಲಿತಾಂಗದೇವ

ನೊಳನುಬಂಧಿಸಿದ ಮೋಹದೊಳು ನಿನ್ನ ದೇವನಪ್ಪ ಲಲಿತಾಂಗಂ ಬೆರಸಿರ್ಪತ್ತಿ ರ್ವರ್ಲಲಿತಾಂಗದೇವರಂ **ಪೂಜಿಸಿದೆಂ** (ಶಾಪುಂಪು. ೨೦) ; ಧರೆಯೊಳ್ ದ್ವಾಪರ **ದೊಳ್** ವದಾನ್ಯತಿಲಕಂ **ಲೋಕೋತ್ತರಂ** ಮುನ್ನ ಭಾಸ್ಕರಪುತ್ರಂ ನಿಜ ದಾನದಿಂ ತಣಿಪಿದಂತೀರೇಳ್ಮ ಪೀಳಾಗಮುಂ **ದೊರೆವೆತ್ತುತ್ತಮ**ಭೋಗದೊಳ್ ತಣಿಪಿದಂ ಭೂಪೋತ್ತಮಂ (ಪಂಕತಂ. ೬-೧೧) ; ಈ ವಿಧಿಯಿಂ ಪಾಂಡವರಿಗ **ಕಟಾ** ಸ್ವಾವು ಸೇರದು ತನಗೆ ತಾ ಮುನ್ನಾವ ನೋಡಿಯನಳಿದೆನೋ ಭವ ಭವಸುಸ್ರದಲಿ . . . ಎನುತ ಮಿಗೆ ಮರುಗಿದನು ಧೃತರಾಷ್ಟ್ರ (ಕುಪ್ಕಾರ. ೧೬-೬). **ಮುನ್ನಂ** : ೧. (೫). ೨. ನಾಭಿರಾಜಂಗೆ ರಾಜ್ಯಾಭಿಷೇಕಂ ಗೆಯ್ದು ಮರುದೇವಿಗೆ ಮಹಾದೇವಿ ಪಟ್ಟಂಗಟ್ಟಿ ಪೂಜಿಸಿ ಮುನ್ನಮಾಱು ದಿಂಗಳುಂಟೆನೆ ವಸುಧಾರೆಯುಮುಮನಯೋಧ್ಯಾಪುರದೊಳು ಸುರಿವಂತು ಧನದಂಗೆ ಬೆಸಸಿದೊಡೆ (ಶಾಪುಂಪು. ೩೦). ೩. ಸಕ್ಕದಮುಮಂ ಪಾಗದಮುಮುಮಕ್ಕುಂ ಬಗೆದಂತೆ ಸಮಱಿ ಪೇೞಲ್ ಮುನ್ನಂ ನಿಕ್ಕುವಮೊಳವಪ್ಪುದೞಿಂತಕ್ಕಂತವ ಱವಱ ಲಕ್ಷ್ಯಮುಮಂ ಲಕ್ಷಣಮುಮಂ (ಕವಿರಾ. ೧-೪೧) : ಮುನ್ನಂ ಪೂಜಿಸಿ ಶರಮಂ ರನ್ನದ ಪಡಲಗೆಯೊಳಿಟ್ಟು ನಿಜಪರಿವಾರಂ ತನ್ನುಳ್ಳನಿತುಂ ಬೆರಸು ಭಯಮನ್ನಡುಕಮನೀಯೆ ಬಂದು ಕಂಡಂ ದಿವಿಜಂ (ಆದಿಪು. ೧೨-೧೨೦) ; ಈ ಬಿಱುನುಡಿಯಂ ಲಾಲಿಸುತಾ ಬಾಲೆ . . . ಮುನ್ನಂ ಕಾಣಿಸಿಕೊಂಡ ದಿವ್ಯ ಪುರುಷನಂ ಮನದೊಳ್ ಜಾನಿಸಿ ತವಸಿಗಳೊಳೊರ್ವಂಗೆ ಸರವನಿಕ್ಕುವೆನೆಂದು ಮುಂದಡಿಯಿಟ್ಟಳ್ (ಅದ್ಭುತ. ೧೨-೨೦). ೪. ಭೂಪಮುರ್ನ್ನಮಿಂತಾರ್ವಿರೋಧಿಗಳಂ ಸಾಧಿಸಿ ಪೀರಮಂ ತಳೆದರ್ (ಎಕ. XIII, ೩೨೯-೨ ; 929) ; ನುಡಿ ಮುನ್ನಂ ಸ್ಪಷ್ಟಮಾಗಿರ್ದುದು ಬೞಿಕವಿುದಸ್ಪಷ್ಟಮಾಯ್ತಾಗ್ನಿ ಶಾಪಂ ಗುಡಲಲ್ಲಿಂದಿತ್ತಲಿಂತೀ ಶುಕಸಮಿತಿಗೆ (ಶಾರಂಪೂ. ೬೬) ; ದುರ್ಧರದುಃಖ ಮೆನ್ನನಲೆವಂತುಂ ಮುನ್ನಮೇಗೆಯ್ದೆನೋ (ಸುಕುಮಾ. ೯-೧೦೯).

**ಮುಂಮುಂ**, **ಮುನ್ನಮುನ್ನ** (ದ್ವಿರುಕ್ತಿ) : ೧. ಮುಂದು ಮುಂದಕ್ಕೆ ; ತುಂಬ ಮುಂಭಾಗಕ್ಕೆ ; ಹೆಡೆ ನಿಮಿರಿ ಹರಿವಂತೆ ಹರಿದುದಾ ಸೇತುಸರ್ಪಂ. ಕ್ಷಣಕ್ಷಣಕೆ ಮುಂಮುಂ **ಬೆಳೆದು** (ತೊರಾಮಾ. ೫೯೨-೨೨೦). ೨. ಮೊದಮೊದಲು ; ತುಂಬಾ ಹಿಂದೆ : ಪುಣ್ಯವುಳ್ಳ ಕಾಲಕ್ಕೆ ಪಾಷಾಣ ಪುರುಷವಪ್ಪುದು ನೋಡುಯ್ಯ ಮಣ್ಣು ಹೊನ್ನಪ್ಪುದು ಮುನ್ನಮುನ್ನವೆ ಅಜ್ಯೋತ್ತಿದ ಭಾಗ್ಯವೆನ್ನ ಕಣ್ಣ ಮುಂದೆ ಕಾಣಬಂದಿತ್ತು ನೋಡಾ (ಬಸವ. ೨೦೬-೯೩೨). [<ಮುನ್$_1$]

**ಮುನ್$_3$** 'ಮುೞ$_1$' ನೋ.

**ಮುನಶಿ**, ಮುನಷಿ. ಮುನಿಷಿ, ಮುನುಷಿ. ಮುನ್ಷಿ (ನಾ). ೧. ಬರೆಹಗಾರ ; ಲೇಖಕ : **ಮೊಕಾಂ** ಬೆಂಗಳೂರು ಖುದು ಸುರಪ ಮುನಶಿ (ಎಕ. VI. ಕೊಪ್ಪ, ೪೬-೫೪; 1811); ಅಶ್ವಥನಾರಣ್ಯಯ್ಯ ಮುನಶಿ (ಮೈಆಂ. ೧೯೩೦,೯೩-೯೬; 1812). ೨. (ಅರಬ್ಬಿ, ಪಾರಸಿ ಭಾಷೆಗಳನ್ನು ಬಲ್ಲ) ಗುಮಾಸ್ತ : ಕಾರಕೂನ : ಮುನಶಿಯು ಚಮಸಲಾಲನನ್ನು ಕರೆಯ ಬೇಕೆಂದು ದಫೆದಾರನಿಗೆ ತಿಳಿಸಿದನು (ಏಧಿವ್ಯ. ೦೬೫). **ಮುನಷಿ** : ೧. ಸುಬ್ಬರಾವ ಮುನಷಿ (ಮೈಆಂ. ೦೯೨೯, ೯೪-೪೫; 1813). ೨. ಕಿರಿಯ ದಿವಾನರು ಅದನ್ನು ಚಂದವಾಗಿ ಓದಿ ನೋಡಿ ಮುನಷಿಯನ್ನು ಕರೆಸಿ . . . ನುಡಿದನು (ವಾಗ್ದೇವಿ. ೦೯೫); ಮೂರುವಿಧದ ಮುನಷಿಗಳನ್ನು ಇರಿಸಿ **ಕೊಂಡು** ಅವರ ಯೋಗ್ಯತಾನುಸಾರವಾದ ಸಂಬಳವನ್ನು **ಕೊಡುವುದು** ತಿಣ್ಣವಾಗಿತ್ತು (ಮುಸುಗ. ೪೫). **ಮುನಿಷಿ** : ೨. ಓರ್ವ ಮುನಿಷಿಯಂ ಕರೆದುಕೊಂಡುದಕ್ಷಿಣಿಗೈದಿ (ಅಶ್ವಾಂ. ೩೦-೩೮). ೩. (ಪಾರಸಿ, ಅರಬ್ಬಿ ಭಾಷೆಗಳ) ಶಿಕ್ಷಕ : (೫). ೪. ಕಾರ್ಯದರ್ಶಿ ; ಕಾರಭಾರಿ : (೫). **ಮುನುಷಿ** : ೨. ಕೋರ್ಟಿನ ಮುನುಷಿಯೊಬ್ಬನು ಪ್ರಮಾಣವಚನಗಳನ್ನು ಹೇಳಿಕೊಡಲಾರಂಭಿಸಿ (ಗಮಕ. ೧೬೬); ಶೀಲವತಿನೀರ್ಕಟ್ಟೆಯ ತಾಣದಲ್ಲಿ ಒಬ್ಬ ಸಾಮಾನ್ಯ ಮುನಶಿಯಾಗಿದ್ದ – ಹೆಸರು ಶೇಷಾಚಲಯ್ಯನೆಂದು (ಗೊಂಡಾರ. ೦೫೨). **ಮುನ್ಷಿ** : ೨. ದೊರೆಗಳ ಅಧೀನದಲ್ಲಿದ್ದ ಮುನ್ಷಿಗಳು ಫಾರಸಿ, ದಕ್ಖನಿ, ಕನ್ನಡ ಭಾಷೆಗಳನ್ನು ಚೆನ್ನಾಗಿ ಬಲ್ಲವರಾಗಿಯೂ ಇರುತ್ತಿದ್ದರು (ಕೂರ). ೫. ಬೇರೆ ಬೇರೆ ಭಾಷೆಗಳನ್ನಾಡುವವರ ಮಾತುಗಳನ್ನು ಭಾಷಾಂತರಿಸಿ ಪರಸ್ಪರರಿಗೆ ತಿಳಿಸುವವನು : (ಮೈಗಜೆ. IV, ೬೮೦).

[ ← ಪಾರ. ಹಿಂ. ಮುನ್ಶೀ : ಮರಾ. ಮುನಶೀ, ಮುನ್ಸೀ ]

**ಮುನಷಿ** 'ಮುನಶಿ' ನೋ.

**ಮುನಸಿಪ** 'ಮುನಸೀಫ' ನೋ.

**ಮುನಸಿಫ** 'ಮುನಸೀಫ' ನೋ.

**ಮುನಸೀಫ್** 'ಮುನಸೀಫ' ನೋ.

**ಮುನಸೀಫ**, ಮುನಸಿಪ, ಮುನಸಿಫ. ಮುನಸೀಫ್. ಮುನಸುಫ್. ಮುನಸೂಫ್, ಮುನಸೂಫ, ಮುನ್ಸೀಫ್ (ನಾ). ಕೆಳದರ್ಜೆಯ ನ್ಯಾಯಾಲಯಗಳಿಗೆ ಬರುವ ವ್ಯವಹಾರಗಳನ್ನು ಇತ್ಯರ್ಥಗೊಳಿಸುವ ನ್ಯಾಯಾಧೀಶ : ಈಗಿರೋ ಮುನಸೀಫರು ಅವರಿಗೆ ಬೇಕಾದವರು (ತಂದಕೋ. ೦೫೯); ಹೆಂಗಸರು ಮಾಮಲೇದಾರ – ಮುನಸೀಫರಾಗುವರು (ಸ್ತ್ರೀವಿ. ೨೦೪); ಹಳೆಮುನಸೀಫರಿಗೆ ವರ್ಗ ಆತು ಅಂತ ಚಹಾ ಕೊಡ್ತಾರೆ ವಕೀಲರೆಲ್ಲ (ಹನ್ನೊಂದ. ೦೦೯). **ಮುನಸಿಪ** : ಅಂಕೋಲಾ ತಾಲೂಕ ಮುನಸಿಪರು ಹರತಿ ಲಕ್ಷುಮಯನವರು (ಜೊಂಕಣಾ. ೦೯೪೦, ಕುಮುಟ. ೦೦೩-೬; 1771). **ಮುನಸಿಫ** : ಗ್ರಾಮ ಮುನಸಿಫನು ಗ್ರಾಮಕೋರ್ಟಿನಲ್ಲಿ ದಾಖಲ್ಮಾಡಲ್ಪಟ್ಟ ವ್ಯಾಜ್ಯಗಳ ಒಂದು ರಿಜಿಸ್ಟರನ್ನು ಇಡತಕ್ಕದ್ದು (ಗ್ರಾಮಾಕ. ೧೯). **ಮುನಸೀಫ್** : " ಪ್ರಾಡ್ವಿವಾಕಃ, ಅಕ್ಷದರ್ಶಕಃ . . . ನ್ಯಾಯನಿರ್ಣಾಯಕನ ಹೆಸರುಗಳು. ಜಡ್ಜ್. ಮುನಸೀಫ್. ಧರ್ಮಾಧಿಕಾರಿ " (ಸಿದ್ಧಾಂತ. ೨೩೬). **ಮುನಸುಫ್** : ಮುನಸುಫ್ – ಗ್ರಾಮದ ಶಿವಿಲ್ ಅಧಿಕಾರಗಳನ್ನು ಚಲಾಯಿಸತಕ್ಕವನಿಗೆ ಮುನಸೂಫ್, ಗ್ರಾಮ ಮುನಸೂಫನೆಂದು ಹೆಸರು (ಗ್ರಾಮಾಕ. ೧). **ಮುನಸೂಫ್** : ಮೇಲಿನ '**ಮುನಸುಫ್**' ಉಲ್ಲೇಖದ ಪ್ರಯೋಗವನ್ನು **ನೋಡಿ**. **ಮುನಸೂಫ** : ಚಿದೂ . . . ಸಾಹೇಬ ಆಗಲಿ. ಮುನಸೂಫ ಆಗಲಿ (ಮುಕ್ತ್ಯರಿ. ೬). **ಮುನ್ಸೀಫ್** : 'ಮುನ್ಸೀಫ್‌ಕೋರ್ಟು' ಪರಾ.

[ ← ಅರ. ಹಿಂ. ಮುನ್ಸಿಫ್ ; ಮರಾ. ಮುನಸಫ್, ಮುನಸಿಫ್, ಮುನಸೀಫ್, ಮುನಸೂಫ್, ಮುನ್ಸಫ್ ]

**ಮುನಸುಫ್** 'ಮುನಸೀಫ' ನೋ.

**ಮುನಸುಫ್‌ಕೋರ್ಟು** 'ಮುನ್ಸೀಫ್‌ಕೋರ್ಟು' ನೋ.

**ಮುನಸೂಫ್** 'ಮುನಸೀಫ' ನೋ.

**ಮುನಸೂಫ** 'ಮುನಸೀಫ' ನೋ.

**ಮುನಾಫೆ** (ನಾ). ಲಾಭ ; ಫಾಯಿದೆ ; ಆದಾಯ : ಅವರು ಮುನಾಫೆ ಬಿಟ್ಟಿಸಿ ಮಾರಿದ್ದೆಂಬುದೇ ಇಲ್ಲ (ಜಾರುದಾ. ೪೬); ಹತ್ತಿಪ್ಪತ್ತಕ್ಕೆ ಟಕ್ಕರ್ ವಿನಹ ನಿಮ್ಮಿಂದ ಒಂದು ಪೈ ಮುನಾಫೆಯಿಲ್ಲ (ಜೀವಮ. ೫೬).

[ ← ಅರ. ಮುನಾಫಅತ್, ಮುನ್ಫಅ, ಮುನ್ಫಅ್, ಮುನಾಫಾ ; ಹಿಂ. ಮರಾ. ಮುನಾಫಾ ]

**ಮುನಾಸಬು** (ಗು). ೧. ಉಚಿತವಾದ ; ಸೂಕ್ತ ; ತಕ್ಕುದಾದ : **ಈ** ಹದಿನೇಳು ಸ್ಥಳಗಳ ಪಾಳೆಯಗಾರರಿಗೆ ಅವರವರ ಸ್ಥಿತಿ ತರಗತಿಗಳಿಗನುಸಾರ ಮುನಾಸಬು ಮಾಹೇಯಾನಾ ಮಯಾಣದೆಯ ತಲಬು (stipend) ಮೊಕರೂರಾಯಿತು (ಮಹಾಮಂ. II, ೦೫). (ನಾ). ೨. ಅರ್ಹತೆ ; ಸೂಕ್ತತೆ : ಕುಳದ ಆದಾಯ ಮುನಾಸಬಿನಂತೆ ವಾರದ ದವಸದ ಗುಡ್ಡೆಯಲ್ಲಿ . . . ಸಲ್ಲುತ್ತಿತ್ತು (ಶಾಳಗಾ. ೫೪).

[ ← ಅರ. ಹಿಂ. ಮುನಾಸಿಬ್ ; ಮರಾ. ಮುನಾಸಬ್ ]

**ಮುನಿ₁ (ಕ್ರಿ).** ೧. ಸಿಟ್ಟಾಗು ; ಕೋಪಗೊಳ್ಳು : "ಮುನಿ—ಕ್ರೋಧೇ. ತಪಸ್ವಿನಿ ಚ" (ಶಮುಧಾ); ಅಳುವಬೇಡಮುಱುಸಾಸಿರನುಮಾನ್ ಚಿತ್ರ ವಾಹನನಾಳುತ್ತುಂ ಬಾಯ್ಕೇಳದಿರೆ ಮುನಿದು ಕೊಲ್ಲಿಪಲ್ಲವನೊಬಿವ್ವಂ ನೊಟವ್ವುರಾದಿತ್ಯನ್ ವೆಸಸಲ್ (ಎಕ. VIII, ಸೊರಬ. ೧೧-೩; ಸಂ. ೬೦೦); ಒಸೆಗೆ ಮೇಣ್ ಮುನಿಗೆ ಮೇಣವರೆಲ್ಲರುಮಂತೆ ಬಗ್ಗ[ಸುಗೆ] ಮತ್ಸುಟಿಾಯು ಲಾಗದು (ಕವಿರಾ. ೧-೦೩೩) ; ಮುನಿದಿರ್ಪತ್ತೊಂದುಸೂಱಿಾ ಕ್ಷತ್ರಿಯರ ನಱಿಸಿ ಕೊಂದಿಕ್ಕಿದಾ ರಾಮುನಿಂದಿತ್ತ ನರೇಂದ್ರರ್ ಪೊಕ್ಕರಿಲ್ಲೊಱಿರುಂ (ಗದಾಯು. ೧-೨೮); ಅವರಿವರ ಹವಣಲ್ಲ ಗುರು ಮುನಿದವಗಡಿಸಿದರೆ ನಿಬುವ ನಾವನು (ಕುಮಾ.ದ್ರೋ. ೪-೨೩); ಒಲಿದರೆ ನಾರಿ, ಮುನಿದರೆ ಮಾರಿ (ಗಾದೆ). ೨. ಅಸಮಾಧಾನಗೊಳ್ಳು ; ಬೇಸರಹೊಂದು ; ಜುಗುಪ್ಸೆ ಪಡು : ತನ್ನ ಕರಿ ಮಾಡಿದಪರಾಧಂ ತನ್ನದೆನುತಂ ಪೆದಱಿ ಜೋಳನು ತನ್ನ ಜೀವಕೆ ಮುನಿದನಂತಾಗಿ (ಬಸಪು. ೨೨-೨೦); ನೊಂದನೀಪರಿ ತನ್ನ ಕಂಗಳ ಮುಂದೆ ನರಪತಿ ಪಾರ್ಥನಿನ್ನೇನೆಂದು ಮುನಿವನೊ ಶಿವಶಿವಾ ಎಂದಳಲಿದನು ಭೀಮ (ಕುಮಾ.ಕ. ೧೨-೭). ೩. ಹೊಟ್ಟೆಕಿಚ್ಚುಪಡು ; ಮತ್ಸರಿಸು : ಒಡೆಯರ ಸಿರಿಯಂ ಕಂಡೊಡೆ ಬಡವರ್ ಮುನಿವಂತೆ ನರಕ ಗತಿಗಿಱಿವವರುಂ ತಡೆಯದೆ ನಿರ್ವೃತಿಸುಖಮಂ ಪಡೆವವರಂ ಕಂಡೊಡಾ ಗಳುಂ ಕಡುಗಾಯ್ವರ್ (ಧರ್ಮಾಮೃ. ೧೧-೪೬); ನಿಮ್ಮವರೊಡನೆ ಸರಸಾಗಿಪ್ಪ ವರ ಕಂಡರೆ ನಾನವರಿಗೆ ಮುನಿವೆ ನೋಡಾ ಕಪಿಲಸಿದ್ಧಮಲ್ಲಿನಾಥ ನೀನವರಲ್ಲಿ ಇಪ್ಪೆಯಾಗಿ (ಸಿದ್ಧವ. ೩೨-೧೭೪); ಈರ್ಷ್ಯೆಗೆ _ ಕವಿಗೆ ಕವಿ ಮುನಿವಂ (ಶಮುದ. ೦೩೦ ಶ್ರಜೋ). ೪. ಪ್ರತಿಭಟಿಸು : ಮಲೆ : ಮುನಿದಿದಿರ್ಬಾಗೆ ಶರಣ್ಬುಗೆ ಮನಮೊಲ್ದುದನೆರೆಯೆ ಫಲ್ಗುಣ(ನ)ಂ ಧಾತ್ರುಂ ಕರ್ಣ್ಣನೆನಲ್ ಗೊಜ್ಜಿಗಭೂಪಾಳನನೆಂಬ್ದುವ ಭೂಮಿಪಾ[ಳಕ]ರ್ಕಲರೊಳರೇ (ಎಕ. XIII, ೩೩೦-೧೧; ೫೭೬); ಸಾಕಿನ್ನಿವರವರಲೇನರ್ಜುನನು ಮಾಧವನು ಮುನಿದಡೆ ಗೆಲುವೆನಂಜದೆ. ರಥವ ಹರಿಸು (ಕುಮಾ.ದ್ರೋ. ೪-೩೭) ; ಮುನಿಯದಿರು ರಾಮಂಗೆ ಮಱೆತರೆ ಮರಣವಹುದು (ತೊರಾ. ೦೪-೨೪).

**ಮುನಿವರ ಸಿಂಗ** = ಪ್ರತಿಭಟಿಸುವವರನ್ನು ನಾಶಮಾಡುವವನು : ಒಂದು ಬಿರುದು : ನುಗುನಾಡ ರಾಘವಂ ಮುನಿವರ ಸಿಙ್ಗ ಮಾಚಕದಾವಳ ಚಣ್ಣವಿಕ್ರಮಂ (ಎಕ. III (R), ಟಿನರ. ೩೭-೩೦; 1057).

[ದೇ.॥ ತಮಿ. ಮಲ. ತುಳು. ಮುನಿ]

**ಮುನಿ₂ (ನಾ).** ೧. ತಪಸ್ಸನ್ನು ಆಚರಿಸುವವನು ; ಋಷಿ : ತಪಸ್ವಿ : "ಋಷಿಃ ತ್ರಿಕಾಲದರ್ಶೀ, ಮುನಿಃ, ವಾಚಂಯಮಃ _ ಈ ೪ ಋಷಿಗಳ್" (ಹಲಾಯು. ೬೮-೨೩೮); ಮುನಿವನಮನೆ ಬಿಸುಟುವು ಮುಂ ಮುನಿಯುರ ಸೋಂಕಿಲೊಳೆ ಒಳೆದ ಸಿಂಗಂಗಳ್ ಮುಂದ್ವಿನೊಳಡರ್ದ ಪಿಡಿವ ಗುರ್ದುಪ ಮುನೆಗೆಟಿಿಪನಿತರ್ಕಮಲಸಿ ಮರುದಾತ್ಮಜನಾ (ಕಂಕಥಾ. ೨-೬) ; ಬೆಟ್ಟದ ಮುನಿಯಂ ನೆನೆದೊಡೆ ಮುಟ್ಟವು ರಾಕ್ಷಸ ಪಿಶಾಚಿ ವಿಷಮಾಹಿಗಳುಂ (ನೇಮಿಪು. ೦-೦೭); ಅಂಬುಧಿಯು ಮುನಿಯಾಪೋಷಣದ ಕೊಂಬಿಲ್ಲಿ ಚಂದ್ರು ಮನದ್ಭಂದನೆ (ಬಸವ. ೨೩). P ವಿಶೇಷವಾಗಿ ವಿಷ್ಣು, ಶಿವ, ನಾರದ, ಭರತ, ಅಗಸ್ತ್ಯ, ವ್ಯಾಸ, ಪಾಣಿನಿ, ಅರ್ಹಂತ, ಬುದ್ಧ ಮುಂತಾದವರಿಗೆ ಈ ವಾಚಕವನ್ನು ಬಳಸುತ್ತಾರೆ. ೨. (ಏಕಾಂಗಿ ಯಾಗಿದ್ದುಕೊಂಡು) ಮೌನವ್ರತವನ್ನು ಆಚರಿಸುವ ತಪಸ್ವಿ. ೩. ದರ್ಭೆ. ೪. ಒಂದು ಬಗೆಯ ಮರ ; ಪಲಾಶ ; ಮುತ್ತುಗ. ೫. ಮಾವಿನ ಮರ. ೬. ಪ್ರಿಯಾಲವೃಕ್ಷ; P ಇನ್ನೂ ಅನೇಕ ಬಗೆಯ ಮರಗಳಿಗೆ ಈ ಹೆಸರುಂಟು : ಅಶೋಕ ಬದರಿ ಮಂದಾರ ಸುಪಟೀರ ಮುನಿ ಮಾತುಲುಂಗ . . . ಹೊನ್ನೆಯಿಂದಾ ಬನಂ ಕಣ್ಗೆಸೆದುದು (ಸಂಬಿಶಾ. ೩-೦೬). ೭. [ಜೈನ] ಶ್ರಮಣ; ಸವಣ : "ಮುನಿಃ, ತಪೋಧನಃ . . . ಶ್ವೇತವಾಸಾಃ ಸಂಯತಃ – ಈ ೯ ಸವಣರ ಪೆಸರ್" (ಶಬ್ದಮ. ೩೬-೦೯೦); ಆ ಮುನಿನಾಥಂ ತ್ರಿಗುಪ್ತಿಯೊಳ್ ನೆರೆದಂ ಈ ಮುನಿನಾಥಂ ಮಂತ್ರಗುಪ್ತಿಯೊಳ್ ನೆರೆದಂ (ಆದಿಪು. ೩-೨೪ ವ): ಮುನಿಮುಖ್ಯರ ಬರವಂ ಧೋಂಕನೆ ಕಂಡು (ಧರ್ಮಾಮೃ. ೯-೦೨). ೮. ಐದುವರ್ಗದ ಗುರುಗಳಲ್ಲಿ ಒಬ್ಬ: ಪಂಚಪರಮೇಷ್ಠಿಗಳಲ್ಲಿ ಒಬ್ಬ ; ಸಿದ್ಧ : ಮುನಿಜನದೋಳಿಸಿದೋಜೆಯೊಳನುವದಿಷ್ಟದಿದೊಂದೆ ಕೊಂಡಕುಂದಾನ್ವಯಸಂದನವನರುಕಮೆಂದೆನಗಿನಿಸನುಗ್ರಹಂಗೆಯ್ಗೆ ಕರುಣ ದಿಂ ಮುನಿನಿವಹಂ (ಆದಿಪು. ೧-೦೨೪); ಅರ್ಹತ್, ಮುನಿ(ಸಿದ್ಧ), ಆಚಾರ್ಯ, ಉಪಾಧ್ಯಾಯ, ಸಾಧು ಇವರು ಪಂಚಪರಮೇಷ್ಠಿಗಳು (ಹಿಂದಶಾ. ೯೦). ೯. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : ಗಿರಿ ಮುನಿ . . . ಪರ್ವತಾದ್ರಿಯೇಱಿಱಿ ನಾಮಂ (ವ್ಯವಹಾ. ೯-೭). ೧೦. [ಕಾಮಶಾ] ಸ್ತ್ರೀಯರ ಹನ್ನೆರಡು ಬಗೆಯ ಮನೋಧರ್ಮಗಳಲ್ಲಿ ಒಂದು: ಶಾಂತಸ್ವಭಾವ : ಸುರ ಯಕ್ಷ . . . ಮುನಿ ಪಿಶಾಚ ರಾಕ್ಷಸ ಕಿನ್ನರ ಖರಮೆಂಬ ಪೆಸರ ಪನ್ನೆರಡುಸತ್ತ್ವದ ಬಗೆಯನೊರೆವೆನು (ಜನವ. ೩-೨೩). 'ಮುನಿಸತ್ತ್ವ' ಪರಾ. [ಸಂ.]

**ಮುನಿಕೊಲ್ತ್ಬೋಯ (ನಾ).** ಒಬ್ಬಾತನ ಹೆಸರು : ಮುನಿಕೊಲ್ ಬೋಯಸ್ಯ ಭಾರದ್ವಾಜಗೋತ್ರ ಕನ್ನರಮ್ಮಣಾ ಎಕ್ಕಂಶಃ (ಎಕ. VII, ೧೬೬-೩೩; 668). [ ? ]

**ಮುನಿನಿವೇದಕ (ನಾ).** ತಪಸ್ವಿಯ ಆಗಮನವನ್ನು ತಿಳಿಸುವವನು : ಋಷಿನಿವೇದಕ : ನಡೆದೇಱಿಡಿಯುಂ ಜಿನನಿರ್ದೆಡೆಗೆಱಿಗಿ ಬಱಿಕ್ಕಂ ಮುಚ್ಚು ಗೊಟ್ಟಂ . . . ಆ ಮುನಿನಿವೇದಕಂಗೆ ನೃಪೇಂದ್ರಂ (ಶಾಂತಿಪು. ೦-೬೩).

[ ಸಂ. ]

**ಮುನಿಪ (ನಾ).** ತಪಸ್ವಿಗಳಲ್ಲಿ ಮುಖ್ಯನಾದವನು : ರಾಗವುಂ ಮುನಿಸುಮನೊಲ್ಲದಂ ಮುನಿಪನೆಂಬುದು (ಧರ್ಮಾ. ೨-೧೧೬): ಮುನಿಪಂ ಮಾಸೋಪವಾಸಾಂತರದೊಳನುನಯಂ ಪಾರಿಸಲ್ಕೆಂದು ಪೊಕ್ಕೊಯ್ಯನೆ ಚರ್ಯಾಮಾರ್ಗದಿಂ ಬರೆ (ಬಂಹಂ. ೩-೩೪); ಅತಿಪ್ರಮುಖಿಮುನಿಪಶ್ರೇಣಿಗಳ ವಾಙ್ಮನಸುಗಳಿಗೆ ಕ್ಷೀಣಪದದಲಿ ಮಿಱಿ ತೋಱುವ ನಿರುಪಮಿತಮೂರ್ತಿ (ಜೈಭಾ. ೩೦-೭೦). [ಸಂ.]

**ಮುನಿಮ** 'ಮುನೀಬ' ನೋ.

**ಮುನಿಮತ (ನಾ).** ೧. ಋಷಿಯ ಅಭಿಪ್ರಾಯ.– ಮತ. ೨. [ಛಂದ] ಇಪ್ಪತ್ತಾರನೆಯ ಉತ್ಕೃತಿ ಎಂಬ ಛಂದಸ್ಸಿನಲ್ಲಿ ಹುಟ್ಟುವ, ಒಂದು ಪಾದದಲ್ಲಿ ಇಪ್ಪತ್ತಾರು ಅಕ್ಷರಗಳಿಂದ ಕೂಡಿರುವ ಒಂದು ವರ್ಣವೃತ್ತ : ವಿನಮಿತಬಲಿಶಪದೋಕ್ತಿಗಳಿಂ ಜನಹಿತಮಿಂತಿದು ಮುನಿಮತಮೆಂಬುದು (ಛಂದೋಂಬು. ೨-೦೯೬). [ಸಂ.]

**ಮುನಿಯಿಸು, ಮುನಿಸು₁ (ಕ್ರಿ).** ೧. ಕೋಪಗೊಳ್ಳುವಂತೆ ಮಾಡು; ಸಿಟ್ಟು ಬರಿಸು : ಮುನಿಯಿಸಿದಂ ಕರಂ ಪಿರಿಯನಪ್ಪುದು ಬೇಟ್ಟನ ಬೇಟ್ಟ ವಸ್ತು ಕಾಂಚನಗಿರಿಯುಂದಮಗ್ಗಳಮೆನಿಪ್ಪದಾದೊಡಮೇನೊ . . . ದೊರೆಯಾರರಿಕೇಸರಿ ನಿನ್ನವೋಲ್ ಪೆಱಿ (ಕಂಕಥಾ. ೩-೭೭); ಮುನಿಯಿಸಿದ ರಾತಿಯಂ ಕೊಲ್ವೆನೆಂದು ಪೂಣ್ದಂತೆ ಪೂಣ್ಕೆ ತಪ್ಪದೆ ಕೊಲಲೇಂ ನಿನಗಲ್ಲದಿಂತು ಶೀರ್ಗುಮೆ (ಗದಾಯು. ೦೦-೬); ಮುನಿಯಿಸುವೆಂ ಸಪತ್ನಿಯು ರಸೆಂದಮರದ್ರುಮದೊಂದು ಪುಷ್ಪಮಂ ಮುನಿ ಹರಿಗಿತ್ತಂ (ಜಗ೦. ೦೩-೪). ಮುನಿಸು₁: ೧. ಮುನಿಯದ ಕೂರದ ಮುನಿಸದ ಮುನಿಪತಿ ಭಾವಿಪೊಡೆ ತಾನೆ ಜಿನಪತಿಯಲ್ತೆ (ಸುಕುಮಾ. ೪-೩೭); ವಾರಿಜೋದ್ಭವನೀ ಸರೋಜ ದಳಾಯತಾಕ್ಷಿಯ ಮೂಗಿನಾಕಾರಮಂ ನೆಱಿ ಪೋಲ್ತರೆಂದುಱಿ ನೋಡಿ ಸಂಪಗೆಗಳ್ಗೆ ನಿಷ್ಕಾರಣಂ ಮುನಿಸಿರ್ದನಪ್ಪುದಱಿಂದದೇಂ ಮನದಬ್ಬಱಿಂ ಸಾರಲಣ್ಮದೆ ಭಾವಿಪಂದವನೊಂದು ಪೊರ್ದವು ತುಂಬಿಗಳ್ (ಧರ್ಮಾಮೃ. ೩-೦೭೨ ಅವತರ). ೨. ಕೋಪಗೊಳ್ಳು : ಸಿಟ್ಟಾಗು : ಇಂತು ಪೊಯ್ಪ ಪೆ

ನಿಂತು ಬಯ್ದಾಪೇ ಮುನಿಸಿದೊಡೆ ತಿಳಿಪಿ ರತಿಯು ಕಾಲವಜಿದಿಂತು ನೆರೆವಪೆನವನೊಳ್ (ನೇಮಿ. ೧೪-೪೦); ಚಿಂತೆಯಾದರ್ನನು ಯಾರಿಗೆ ಹೇಳಾಲಿ ಅತ್ತೆ ಎಂದಾರೆ ಮುನಿಸ್ಯಾಳು ಸಿಡುಕ್ಯಾಳು (ಜಾನ. ೬೪). [ ಮುನಿ₁ + – ಇಸು₃ ]

**ಮುನಿವಧು** (ನಾ). ಋಷಿಯ ಹೆಂಡತಿ; ಋಷಿಪತ್ನಿ :– ಮುನಿವಧು ಗಾತ್ರವಲ್ಲಭನನಿತ್ತ ಪುಲೋಮಜೆ (ಧರ್ಮನಾ. ೨-೧೦೯); ಇನ್ನು ಪಾಂಡವ ರಾಜ್ಯಸಿರಿಯೆಮಗಿನ್ನು ಲೇಸಹುದಕಟ ದೈವದ ಗನ್ನಗತಕಪ್ಪೆಯೆಂನುತ ಓಗ್ಗಿತು ಮುನಿವಧೂನಿಕರ (ಕುಮಾ.ಭಾ. ೦೪-೩೩). [ ಸಂ. ಮುನಿವಧೂ ]

**ಮುನಿವಾಳು** (ನಾ). ಋಷಿಯ (ಶಾಂತವಾದ) ಬದುಕು.–ಜೀವನ : ಮನೆವಾಳು ಸಾಕಾಯ್ತು ಮುನಿವಾಳು ಬೇಕಾಯ್ತು (ಭರತ. ೩೨-೧೦೪). [ ಮುನಿ₂ + ಬಾಳ್ತು (< ಬಾಳ್₃) ]

**ಮುನಿವೃಕ್ಷ** (ನಾ). ಒಂದು ಬಗೆಯ ಮರ : ಅತ್ತಿಮಾಲವು ಅರಳಿ ಮತ್ತಿ ಮಹಿಪಾಕ್ಷಿ ಮುಂತ್ತುಕವು ಮುನಿವೃಕ್ಷ (ಶಬ್ದ. ೧೨೯-೬). [ಸಂ.]

**ಮುನಿಷಿ** 'ಮುನಸಿ' ನೋ.

**ಮುನಿಸತ್ತ್ವ** (ನಾ). ೧. ಋಷಿಯ ಚೈತನ್ಯ. ೨. [ಕಾವ್ಯಶಾ] ಸ್ತ್ರೀಯರಲ್ಲಿರುವ ಹನ್ನೆರಡುಬಗೆಯ ಮನೋಧರ್ಮಗಳಲ್ಲಿ ಒಂದು; ಶಾಂತಸ್ವಭಾವ : ವಿನಯದ ವಿವೇಕದಿಂಪಿನ ಸೈರಣೆಯ ನುಡಿಯ ಜನನಿ ಜನಕರ್ಗಂಜಿ ನಡೆವ ಹಿತವ ನೆನೆವ ನಿರ್ಮತ್ಸರದ ಘನಭಕ್ತಿರತದ ಮಾನಿನಿಯೆ ಮುನಿಸತ್ತ್ವದವಳು (ಜಸವ. ೫-೩೩). [ಸಂ.]

**ಮುನಿಸತ್ವ** (ನಾ). ೧. = ಮುನಿಸತ್ತ್ವ ೧. ೨. ಮುನಿಸತ್ತ್ವ ೨ : ದೇವಸತ್ವ . . . ವಾನರಸತ್ವ ಮುನಿಸತ್ವ ಪಿಶಾಚಸತ್ವ ರಾಕ್ಷಸಸತ್ವ ಕಿನ್ನರಸತ್ವ ಖೇಚರಸತ್ವವೆಂಬ ದ್ವಾದಶಸತ್ವ ಸತಿಯರಿಂ (ವಿವೇಕ. ೦೬೩). [ಸಂ.]

**ಮುನಿಸಪ್ತಕ** (ನಾ). ವಿಶ್ವಾಮಿತ್ರ, ಜಮದಗ್ನಿ, ಭರದ್ವಾಜ, ಗೌತಮ, ಅತ್ರಿ, ವಸಿಷ್ಠ ಮತ್ತು ಕಶ್ಯಪ ಎಂಬ ಏಳುಜನ ಋಷಿಗಳು; ಸಪ್ತರ್ಷಿಗಳು : ಚತುರಾನನನ ಸಭೆಯಲ್ಲಿ ಪೂಜ್ಯಂ ಮುನಿಸಪ್ತಕ ಮುನಜಿಕೊಳತ್ರಿಮುನಿವರನಧಿಕಃ (ಶಾಸನ. XX, ೨೯೬-೦೨; 1228). [ಸಂ.]

**ಮುನಿಸಾನು** (ಕ್ರಿ). ಕೋಪವನ್ನು ತಾಳು; ಕೆರಳು; ಸಿಟ್ಟಾಗು : ನೀನಿನಿತು ಮುನಿಸಾನು [ಪಾಠಾಂ. ಮಾಡು] ವರೆ ಸಾಕಿನ್ನಾರು ಗತಿಯೆನಗೆ (ತೊರ. ೩-೯). [ ಮುನಿಸು₂ + ಆನು₁ (< ಆನ್₁) ]

**ಮುನಿಸಿಪಾಲಿಟಿ**, ಮುನಿಸಿಪಾಲ್ಟಿ, ಮುನ್ಸಿಪಾಲಿಟಿ (ನಾ). ಸ್ಥಳೀಯ ಆಡಳಿತಾಧಿಕಾರವನ್ನು ಹೊಂದಿರುವ ನಗರದ ಸಂಸ್ಥೆ; ಪುರಸಭೆ; ನಗರಸಭೆ : ಕೆಲವು ಮುಖ್ಯವಾದ ಜಿನಸಿಗಳ ಮೇಲೆ ಮೊಕರರ್ರೀ ಅಕ್ಕಾಯಿ ಎಂಬ ತೆರಿಗೆಯೂ ಸರ್ಕಾರದ ಮೊಹತರ್ಫ ತೆರಿಗೆಯೂ ಈ ಮುನಿಸಿಪಾಲಿಟಿಗಳಿಗೆ ಸೇರಿದುವು (ಮಹಾಪಂ. II, ೧೦೨): ಭಾರತೀಯರು . . . ಮುನಿಸಿಪಾಲಿಟಿಗಳು, ಜಿಲ್ಲಾಬೋರ್ಡುಗಳು, ಪ್ರತಿನಿಧಿಸಭೆಗಳು, ಇವು ಹೇಗೆ ಕೆಲಸ ಮಾಡಬೇಕೆಂಬುದನ್ನು ತಿಳಿದರು (ಶಾರದ. ೪೨೭). **ಮುನಿಸಿಪಾಲ್ಟಿ** : "ಮುನಿಸಿಪಾಲ್ಟಿ" ನೀರಿನ ಖಾತೆ ಕೆಲಸಗಾರರ ಸಂಪಂತಲ್ಲ (ಸುಮ್ಮ.ಸು. ೨೩). **ಮುನ್ಸಿಪಾಲಿಟಿ** : ಮುನ್ಸಿಪಾಲಿಟಿಯ ಮೇಲೆ ದಾವೆ ಹೂಡಿ, ಈ ಕಾಯಿದೆ ತೆಗೆದುಹಾಕುವ ಕಾಲ ಎಂದು ಬಂದೀತು ? (ಅರ್ಧಾಂ. ೬). [ ← ಇಂ. Municipality ]

**ಮುನಿಸಿಪಾಲ್ಟಿ** 'ಮುನಿಸಿಪಾಲಿಟಿ' ನೋ.

**ಮುನಿಸು₁** 'ಮುನಿಯಿಸು' ನೋ.

**ಮುನಿಸು₂** (ನಾ). ೧. ಸಿಟ್ಟು ; ಕೋಪ : ಕ್ರೋಧ : "ಕೋಪಃ ಕ್ರೋಧಃ, ಅಮರ್ಷಃ, ರೋಷಃ, ಪ್ರತಿಘಃ—ಈ ೫ ಮುನಿಸು" (ಶಬ್ದಮ. ೩೯-೨೦೭) ; ವನರುಹದಳನಯನೇ ನಿನ್ನನೆ ನೆನೆನೆನೆದಿರುಳೊ ಳೊಜಗಿರೆ ಕಡೆಗಣ್ಣಕ್ಕುನಿಸನಫಿನಯಿಪವೊಲ್ಕೆಮ್ಮನೆ ರಕ್ತಾಂಭೋಜದಳಂಜಿಯ ನಿಟ್ಟಳಗೊಳ್ಳುಂ (ಕಬಿರಾ. ೦-೯೩); ನಿಮಗಂ ತಮಗಂ ಮುನಿಸುಂಟೆ ಕಾಯ್ದು ಬೆನ್ನೀರ್ ಮನೆ ಸುಡದೆಂಬೊಂದು ನುಡಿಯ ಪೋಲ್ ಕುರುರಾಜಾ (ಶಂಕರಾ. ೯-೩೯) : ಕಂದ ಮನ ಮುನಿಸಿಲ್ಲಲೇ ನಾವೆಂದ ನುಡಿಗೆ (ಕುಮಾ.ಭಾ. ೬-೭೭) ; ಕೊಟ್ಟು ಬರುವ ನಿಷ್ಠುರಕ್ಕಿಂತ ಕೊಡದೇ ಬರುವ ಮುನಿಸು ಲೇಸು (ಗಾದೆ). ೨. ಸೇಡು : ವೈರ ; ದ್ವೇಷ : ನೀನಿಂತಿರಾನನ್ನೆಗಂ ಮುನಿಸಂ ತೀರ್ಚಿ ನರೇಂದ್ರವೈರಿತರುವಂ ನಿರ್ಮೂಲನಂ ಮಾಡುವೆಂ (ಗದಾಯು. ೬-೨೩).

ಮುನಿಸಂಮಾಡು = ಕೋಪ ಬರುವಂತೆ ಮಾಡು : ಕೆರಳಿಸು ; ಸಿಟ್ಟುಬರಿಸು : ಆ ಮುನಿಗೆ ಮುನಿಸಂಮಾಡಲೆಂದಿದ್ದನುಪಾಯ ದೊಳಟ್ಟಿದ ವಜ್ರಕೀಟಂಗಳ್ ಕರ್ಣನೆರದುಂ ತೊಡೆಯುಮಂ . . . ಉರ್ಚಿ ಪೋಗೆಯುಂ (ಶಂಕರಾ. ೦-೦೦೪ ವ). [ಮುನಿ₁ + –ಸು₃]

**ಮುನಿಸುಗುಟ್ಟು** (ಕ್ರಿ). ಸಿಟ್ಟಾಗು : ಕೋಪಗೊಳ್ಳು; ಕೆರಳು ; ರೇಗು: ಭೂದೇವಿ, ನೀನು ಈ ಚರಾಚರಜಗತ್ತಿನ ಶರೀರವಾಗಿದ್ದೂ ಅಜ್ಞಾನಿಯಂತೆ ಅಳಿಯನ ಮೇಲೆ ಮುನಿಸುಗುಟ್ಟುತ್ತೀ (ಉರಾತ. ೦೨೪). [ಮುನಿಸು₂ + ಕುಟ್ಟು₁]

**ಮುನಿಸುಗೊಳ್ಳು** (ಕ್ರಿ). = ಮುನಿಸುಗುಟ್ಟು : ಮುನಿಸುಗೊಂಡಗ ಲಿರುವ ಪಿಟಿಪಿಟಿಜರ್ಜನಿತ ವಿರಹಾನಲನ ಪೆರ್ಚಿಸಲ್ಕನಿಸಿಜನಟ್ಟಿದ ಚರರವೊಲು ತಂಪೆಲರು ಪರಿತಂದು (ಶಾಗಜ. ೪೦-೦೭). [ಮುನಿಸು₂ + ಕೊಳ್ಳು₁ (< ಕೊಳ್₁)]

**ಮುನಿಸುವ್ರತ** (ನಾ). [ಜೈನ] ವರ್ತಮಾನಕಾಲದ ಇಪ್ಪತ್ತುನಾಲ್ಕು ಜನ ತೀರ್ಥಂಕರರಲ್ಲಿ ಇಪ್ಪತ್ತನೆಯ ತೀರ್ಥಂಕರನ ಹೆಸರು : ವೃಷಭ ಅಜಿತ . . . ಮುನಿಸುವ್ರತ ನಮಿ ನೇಮಿ ಪಾರ್ಶ್ವ ವರ್ಧಮಾನರೆಂಬಿಪ್ಪತ್ತು ನಾಲ್ವರ್ ತೀರ್ಥಂಕರರ್ (ಜಾವಂಶ. ೪೦೨). [ಸಂ.]

**ಮುನೀಂದ್ರ** (ನಾ). ೧. ಋಷಿಗಳಲ್ಲಿ ಮುಖ್ಯನಾದವನು : ಶ್ರೀದೇವೇಂದ್ರ ಮುನೀಂದ್ರವಂದಿತಗುಣವ್ರಾತಂ . . . ದಯೆಗೆಯ್ವನಕ್ಕೆಮಗೆ ಮುಕ್ತಿ ಶ್ರೀಸುಖಾವಾಪ್ತಿಯಂ (ಅಭಿ. ೦-೦) ; ಪಸರಿಸಿದ ಮುನೀಂದ್ರನ ವ್ಯದು ಕಿಸಲಯಸಮಪಾಣಿಪಾತ್ರದೊಳ್ ಶುದ್ಧಮನಂ ಮಸುಳ್ದೇಶನಿಕ್ಕಿದಂ ಪಾಯಸಮಂ (ಧ.ಪ್ರ.ಪು. ೦೪-೧೧). ೨. ಬುದ್ಧ. ೩. ಜಿನ. ೪. ಶಿವ. [ಸಂ.]

**ಮುನೀಬ**, ಮುನೀಮ (ನಾ). ೧. ಮೇಲ್ವಿಚಾರಣೆ ಮಾಡುವವನು : ನಿರ್ವಾಹಕ : ವ್ಯವಸ್ಥಾಪಕ : ಮುತ್ಸದ್ದೀರೂ ಮುನೀಬರೂ ಗಣತಿ ಮಾಡಿ ಜೀಗಾ ಹಾಕಿಸಿದರು (ಮುಸುಗ. ೦೬೦); ಅರಮನೆಯ ಮುತ್ಸದ್ದಿಯೂ ಮುನೀಬರೂ . . . ರಾಜಜಡಿಮನನ್ನು ಎದುರುಗೊಂಡರು (ಶ್ರೀರಾಮ. ೦೨೪). **ಮುನೀಮ** : ೨. ಲೆಕ್ಕಪತ್ರಗಳನ್ನು ನೋಡಿಕೊಳ್ಳುವವನು; ಗುಮಾಸ್ತ; ಕಾರಕೂನ : ದುಕಾನಿನ ಮುನೀಮನ ಪರಿಚಯದೊಳಗಿನವ ರಿದ್ದರೆ ಅಥವಾ ಅವರು ಮುನಿಮನಿಗೆ ತಪ್ಪು ಪಾತ್ರಿ ಕೊಟ್ಟರೆ . . . ರಕಮು ಕೊಡೋಣದರಲ್ಲಿ ಬಂತು (ಮುಂಬಯಿ. ೨೦). [ ← ಅರ. ಹಿಂ. ಮುನೀಬ್, ಮುನೀಮ ; ಮರಾ. ಮುನೀಮ್]

**ಮುನುಷಿ** ' ಮುನಸಿ ' ನೋ.

**ಮುನೂಜಿ** ' ಮೂನೂಜಿ ' ನೋ.

**ಮುನ್ನ₁** 'ಮುನ್₁' ನೋ.

**ಮುನ್ನ₂** 'ಮುನ್₂' ನೋ.

**ಮುನ್ನಂ** 'ಮುನ್₂' ನೋ.

**ಮುನ್ನಡಸು** 'ಮುನ್ನಡೆಯಿಸು' ನೋ.

**ಮುನ್ನಡಿ** (ನಾ). ೧. ಪಾದದ ಮುಂಭಾಗ : ಕಾಲಿನ ಮುಂದುಗಡೆ.– ಎದುರು : ಗಜೇಂದ್ರಂ ಭೋರೆನೆ ಪರ್ವಿ ಬೀಸಿ ಕಡುಪಿಂದೆಯ್ದೆಂದು

ಮಾಱಾಂತ ಸಾಮಜಸಂಘಾತಮನೊಂದುಗೊಳ್ಪೆರಡುಗೊಳ್ಪೆಂದುರ್ವಿ ಪೊಯ್ಯೊಂದು ಪೊಯ್ಗೆ ಜವಂಗುಂದಿ ಸಿಡಿಲ್ದು ಮುನ್ನಡಿಗುರುಳ್ವರ್ಪನ್ನೆಗಂ ಬೀೞೆ . . . ಕೊಂದು ಮರುನ್ನಂದನಂ (ಶಾಂತಿಪು. ೧೨–೧೦೨); ಯೋಗಿ ಪದತಳಮಿಳಿಯಂ ನೆಱೆ ಮುಟ್ಟದ ಮುಂದುಗುಲದ ಸೆಱಗಂ ಪಡಿಪಾಸಿ ಮೊಟ್ಟಿಗದಂ ಮುನ್ನಡಿಯೊಳ್ (ಚಂದ್ರಪ್ರ. ೫–೨೨); ದಿವಿಜಾರಾಧ್ಯನ ನಿಂದ ಮುನ್ನಡಿಗೆ ವಾನವ್ಯಂತರರ್ ಮಾಳ್ಪರಷ್ಟವಿಧಾಭ್ಯರ್ಚನಂ (ಅನಂತಪು. ೯–೯೬). ೨. ಕಾಲಿನ ಮುಂತುದಿ ; ಮುಂಗಾಲು : (ಕಿ). [ಮುನ್$_1$ + ಅಡಿ$_1$]

**ಮುನ್ನಡಿಯಿಕ್ಕು** (ಕ್ರಿ). (ಅಲಂ) ಆಸಕ್ತಿತೋರಿಸು ; ಆಸೆಪಡು ; ಬಯಸು : ನೀರ ಕಡೆದು ಬೆಣ್ಣೆದೆಗೆವಂತೆ ಗೊಡ್ಡಿಗಪಾರ ಮುನ್ನಡಿಯಿಕ್ಕುವಂತೆ (ಪುಣ್ಯಾ. ೦೨–೦೦೨). [ಮುನ್ನಡಿ + ಇಕ್ಕು]

**ಮುನ್ನಡೆ$_1$** (ಕ್ರಿ). ೧. ಮುಂದಕ್ಕೆ ಸಾಗು, –ಚಲಿಸು ; ಮುಂದುವರಿ: ಶಿಕ್ಷಣ ಫಲಮಾರ್ಗದಲ್ಲಿ ಮುನ್ನಡೆಯುವ ಸೂಚನೆ ವ್ಯಕ್ತಪಡುತ್ತದೆ (ಶಿಕ್ಷಣ. VIII, ಮುನ್ನುಡಿ); ಕಾಡುವೆಳೆಮಕ್ಕಳಂ ಪೊತ್ತು ಮುನ್ನಡೆದು (ಕಾಲೂರ. ೦೫೦–೩೬೦). ೨. ಮುನ್ನುಗ್ಗು ; ಮೀರಿನಡೆ : ಮಲೆಯ ಸೆರಗಂ ಸೆರೆಗೆ ಕೊಂಡೊಯ್ದು ನಾಡೊಡೆಯ ಗೆಲುವಡೆದು ಮುನ್ನಡೆಯೆ ಪಡೆಯ ಪಾಂಗಿನಲಿ (ಕಾಲೂರ. ೦೦೧–೨೦೨). [ಮುನ್$_2$ + ನಡೆ$_1$]

**ಮುನ್ನಡೆ$_2$** (ನಾ). (ಅಲಂ) ಏಳಿಗೆ ; ಪ್ರಗತಿ ; ಉತ್ಕರ್ಷ : "ಮುನ್ನಡೆ, ಅಭಿವೃದ್ಧಿ " (Advance. ಶಬ್ದಾ. ೯). [<ಮುನ್ನಡೆ$_1$]

**ಮುನ್ನಡೆಯಿಸು**, ಮುನ್ನಡಸು (ಕ್ರಿ). ಮುಂದಕ್ಕೆ ಒಯ್ಯು ; ಮುಂದುವರಿಸಿಕೊಂಡು ಸಾಗು : ರಾಷ್ಟ್ರವನ್ನು ಯುಕ್ತಮಾರ್ಗದಲ್ಲಿ ಮುನ್ನಡೆಯಿಸುವುದು ಇವರಿಂದಾದೀತೆ ? (ಲಾಜಪ. ೦೯). **ಮುನ್ನಡಸು** : ಆ ಶಾಲೆಯನ್ನು ಯೋಗ್ಯರೀತಿಯಲ್ಲಿ ಮುನ್ನಡಸಿದ ಕೀರ್ತಿ ಅಲ್ಲಿನ ಮುಖ್ಯೋಪಾಧ್ಯಾಯರಿಗೇ ಸಲ್ಲಬೇಕು (ರೂಢಿ). [ಮುನ್$_2$ + ನಡೆಯಿಸು]

**ಮುನ್ನಡೆವಿಡಿ** (ಕ್ರಿ). (ಅಲಂ) ಮೀರು; ಅತಿಶಯಿಸು : ಉನ್ನತಲಲಾಟಪಟ್ಟಂ ಮುನ್ನಿಸದಷ್ಟಮಿಯ ಚಂದ್ರನಂ ನಗೆಗಣ್ಗಳ್ ಮುನ್ನಡೆವಿಡಿದುವು ಕಮಳಮನಿನ್ನೇವಣ್ಣಿಪುದೊ ರಾಮನಭಿರಾಮತೆಯಂ (ಶಂಕರಾಭ್ಯು. ೩–೦೫೩). [ಮುನ್ನಡೆ + ಪಿಡಿ$_1$]

**ಮುನ್ನರಿ** 'ಮುನ್ನಱಿ' ನೋ.

**ಮುನ್ನಱಿ**, ಮುನ್ನರಿ (ಕ್ರಿ). (ಸೂಕ್ಷ್ಮಜ್ಞಾನದಿಂದ) ಮುಂದಾಗುವುದನ್ನು ಮೊದಲೇ ತಿಳಿ, – ಮುಂಚಿತವಾಗಿ ಊಹಿಸು : ಬಿನ್ನವಿಸಲೆಂದಿರ್ದ ಹದನಂ ಮುನ್ನಱಿದು ಪರಮೇಶ್ವರು ಹಿಮಗುನ್ನಯನದಿಂ ನೋಡುವವಸರದೊಳ್ (ಬಸವ. ೦–೫೫). **ಮುನ್ನರಿ** : ಸ್ಫೂರ್ತಿಯಿಂದ, ಸೂಕ್ಷ್ಮಜ್ಞಾನದಿಂದ, ಮಂತ್ರತಂತ್ರದಿಂದ ಅಥವಾ ಊಹೆಯಿಂದ ತಿಳಿ. ಊಹಿಸು; ಮುನ್ನರಿ: ಭವಿಷ್ಯ ತಿಳಿ (Devine. ೨೦೯೩); ಹಕ್ಕಿ ಮುನ್ನರಿಯುವುದೆ ತನ್ನ ಪಯಣದ ತೆರನ ? (ಮಂಕುತಿ. ೭೩೦). [ಮುನ್$_1$ + ಅಱಿ]

**ಮುನ್ನಱಿಕೆ** (ನಾ). ಮುಂದೆ ಆಗುವುದರ ಸೂಚನೆ, –ತಿಳಿವಳಿಕೆ : ಮೊದಲೆ ಮುನ್ನಱಿಕೆಯನ್ ಪೇೞ್ವನಿತು ಪೇೞ್ದಿನೇ ಅಕ್ಕ ! (ಶಂತಿಗೂ. ೫೬–೫೪೩). [ಮುನ್$_1$ + ಅಱಿಕೆ]

**ಮುನ್ನಿ** (ನಾ). ನೃತ್ಯಗಾರನು ನಡುಪಟ್ಟಿಗೆ ಸೇರಿದಂತೆ ನಡುವಿಗೆ ಕಟ್ಟಿಕೊಳ್ಳುವ, ನೆರಿಗೆಗಳುಳ್ಳ ಒಂದು ಬಗೆಯ ವಸ್ತ್ರಾಲಂಕಾರದ ವಸ್ತು : ನಡುಪಟ್ಟಿಯನ್ನೂ ಮುನ್ನಿಯನ್ನೂ ಮಾಲಿಂಗ ವೀರಭದ್ರನ ನಡುವಿಗೆ ಹೋದಿಸಿ ಬಿಗಿದ . . . ನಡುವಿಗೆ ಸುಂದರವಾದ ನಾಲ್ಕಾರು ಬೆರಳುಗಳ ಅಗಲದ ಪಟ್ಟಿ . ಅಲ್ಲಿಂದ ಕೆಳಕ್ಕೆ ಇಳಿದು ನಿಂತ ಅಷ್ಟೆ ಅಗಲದ ವೆಲ್‌ವೆಟ್‌ನಿಂದ ಮಾಡಿದ ಜರಿ ಹೊಂದಿಸಲ್ಪಟ್ಟ ಮುನ್ನಿ (ಯಕ್ಷ. ೯೦). [ ← ತುಳು. ಮುನ್ನಿ = ನೆರಿಗೆ ]

**ಮುನ್ನಿರವು** (ನಾ). ಮೊದಲು ಇದ್ದ ಸ್ಥಿತಿ, –ಅವಸ್ಥೆ : ಆನಾವಳೆನ್ನ ಮುನ್ನಿರವಾವುದು ಪುತ್ರೀ ನಿನ್ನ ದಯವಾವುದು (ಹರಿ. ೦–೩೮). [ಮುನ್$_1$ + ಇರವು$_1$ (< ಇರ್) ]

**ಮುನ್ನಿರುಳ್** (ನಾ). ರಾತ್ರಿಯ ಮೊದಲ ಭಾಗ ; ಮುಸ್ಸಂಜೆ : "ಮುನ್ನಿರುಳಂ ಪ್ರದೋಷಮೆಂಬುದು" (ಹಲಾಯು. ೦೯–೦೦೮). [ಮುನ್$_1$ + ಇರುಳ್]

**ಮುನ್ನಿಱಿ** (ಕ್ರಿ). ಮುಂದೆ ನುಗ್ಗಿ ಇರಿ ; ಮುನ್ನುಗ್ಗಿ ನಾಶಮಾಡು : ರಿಪುಸೈನ್ಯಮೆತ್ತ ಧುರದೊಳ್ ನೃಪರಂ ಮುನ್ನಿಱಿದು ಪಲವು ಕಾಳಗದೊಳ್ ಭೂಮಿಪಚೂಡಾಮಣಿಸಿಂಗಂ . . . ಪೆಸರಂ ಪಡೆದು (ಎಪಿ. VIII, ಸೊರಬ. ೦೬೯–೦೮ ; 1033 ?) ; ಮತ್ತಗಜವಂ ಕೊಂದದಱಿಸುವನೆತ್ತಿ ಮುನ್ನಿಱಿದವನ ಹರಣವನಿತ್ತು ಮೆಱೆದನು ಕಟೀದೊಳು ಮಡಿವಾಳ ಮಾಚಯ್ಯ (ಬಸವ. ೨೦ ಸೊತಕ). [ಮುನ್$_2$ + ಇಱಿ$_1$]

**ಮುನ್ನೀಡು** (ಕ್ರಿ). ಮುಂದಕ್ಕೆ ಚಾಚು, –ನೀಡು : (ಬಾಹುಗಳನ್ನು ಮುನ್ನೀಡಿ, ಪ್ರೇಮಾಲಿಂಗನಕ್ಕೆ ಮುಂಚುವನು) (ಚಿತ್ರ. ೦೯–೨೪). [ಮುನ್$_2$ + ನೀಡು$_1$]

**ಮುನ್ನೀರ್**, ಮುನ್ನೀರು (ನಾ). ಭೂಮಿಗಿಂತ ಮೊದಲು ಸೃಷ್ಟಿಯಾದ ಜಲ ; ಕಡಲು ; ಸಮುದ್ರ : "ಮುನ್ನೀರ್, ನೀರೊಟ್ಟಿಲ್, ಕೊಱೆಗಳಾಣ್ಮಂ, (ಕಡಲ್)— ಈ ೪ ಸಮುದ್ರಂ" (ಕಬ್ಬಿಗ. ೫೩–೦೪೦) ; ಸಾರಗುಣಂ ತದ್ರಾಜಕುಮಾರನೊಳೆಳ್ಳನಿತು ಪೆಱರೊಳಿಲ್ಲೆಂತೆನೆ ಮುನ್ನೀರೊಳ್ ನೆಲಸುಗುಮಲ್ಲದೆ ನೀರೊಳ್ ನೆಲಸುಗುಮೆ ಸಾರರತ್ನಾವಳಿಗಳ್ (ಶಾಂತಿಪು. ೨–೩) ; ಮುನ್ನೀರ್ಬ್ಬಳಸಿರೆ ಧರಣಿಯೊಳ್[ನ್ನುಂ] ಮಾಧುರ್ಯ್ಯ ಸುಕರಚಾತುರ್ಯ್ಯಗುಣಪ್ರೋನ್ನತರಿಲ್ಲೆನೆ ಸಾಸನಮನ್ನಿದೆ ಚೆಲ್ವಾಗೆ ಸಾಮಿಯಣ್ಣಂ ಬರೆದೋಂ (ಎಪಿಕ. XI-I, ೯೦–೧೧೩ ; 969) ; ಎನ್ನಂತೆ ರತ್ನವಿತತಿಗೆ ತಾನ್ನೆಲೆಯಾಯ್ತೆಂಬ ಸಮಗುಣಪ್ರಣಯದಿನಾ ಮುನ್ನೀರ್ ಬಂದಪ್ಪಿದುದೆನೆ ತನ್ನಗರಮನವಮಲಪರಿಖೆ ಬಳಸಿದುದೆತ್ತಂ (ಚಂದ್ರಪ್ರ. ೦–೦೧೫). **ಮುನ್ನೀರು** : "ಮುನ್ನೀರೆನಲ್ ಶರಧಿ" (ಕಾವ. ೯೦) ; ಆವರ್ ಶೀಘ್ರದಿಂ ಮುನ್ನೀರ ತಡಿಗೆಯ್ದಲ್ (ಪದ್ಮರಾ. ೦೦–೦೭೦) ; ತನ್ನನೆ ಹೀರಿ ಬಡವಾಳ್ವ ವಡಬಾಗ್ನಿಯಂ ತನ್ನನೇ ಹೆಚ್ಚುಗೆಯ ಮಾಳ್ಪಮೃತಕಿರಣನಂ ಮುನ್ನೀರು ತನ್ನ ಗಂಭೀರತನವನೇ ಮೆಱೆದು ಗರ್ಭೀಕರಿಸಿತಿಲ್ಲವೇ (ಸಮ್ಯಕ್ತ್ವ. ೬–೫೦) ; ಅಲ್ಲದೋ ಮುನ್ನೀರು ಅದರೊಳಗೆ ಚಾಚಿಹುದು ಭೂಮಿ ತಾ ಕೂರ್ಮದಂತೆ ! (ದ್ಯಾವಾಪೃ. ೯೭–೦). ☞ ಕಿಟೆಲ್ ಅವರ ನಿಘಂಟು ಮತ್ತು ತಮಿಳುಕೋಶಗಳಲ್ಲಿ ಈ ಶಬ್ದವನ್ನು 'ಮುನ್' (<ಮೂಱು)+ನೀರ್=ಮಳೆಯ ನೀರು, ನದಿಯ ನೀರು ಮತ್ತು ಒರತೆಯ ನೀರು ಎಂದು ಅರ್ಥ ಮಾಡಿದ್ದಾರೆ. [ಮುನ್$_1$+ನೀರ್./ತಮಿ. ಮುನ್ನೀರ್; ತೆಲು. ಮುನ್ನೀರು]

**ಮುನ್ನೀರಣುಗ** (ನಾ). ಕಡಲಿನಲ್ಲಿ ಹುಟ್ಟಿದವನು ; "ಚಂದ್ರ" (ಕ್ರಕಪ್ಪ). [ಮುನ್ನೀರ್ + ಅಣುಗ (<ಅಣುಂಗ)]

**ಮುನ್ನೀರಣುಗಿ** (ನಾ). ಕಡಲಿನಲ್ಲಿ ಹುಟ್ಟಿದವಳು ; ಲಕ್ಷ್ಮಿ : ಮುಗಿಯೆ ಪಗಲ್ ಮುಸುಕಲ್ ಮುಂಗತ್ತಲೆ . . . ಮುಗಿದುವು ಮುನ್ನೀರಣುಗಿಯ ನೆಚ್ಚುವನೆಗಳಾ ರಾತ್ರಿಯೊಳು (ಜಡಭ. ೦೩–೬೩). [ಮುನ್ನೀರ್ + ಅಣುಗಿ (<ಅಣುಂಗಿ)]

**ಮುನ್ನೀರು** 'ಮುನ್ನೀರ್' ನೋ.

**ಮುನ್ನೀರೆರೆಯ** 'ಮುನ್ನೀರೆಱೆಯ' ನೋ.

**ಮುನ್ನೀರೆಱೆಯ**, ಮುನ್ನೀರೆರೆಯ (ನಾ). ಕಡಲಿನ ಒಡೆಯ : ಸಮುದ್ರಾಧಿಪತಿ ; ವರುಣ : "ಮುನ್ನೀರೆಱೆಯಂ ಪ್ರಚೇತನೊಳ್ ಕಡಲೆ[ಱೆಯಂ]" (ಕರ್ಣಾಟ. ೦). **ಮುನ್ನೀರೆರೆಯ** : "ಮುನ್ನೀರೆರೆಯನೆನೆ ವರುಣ" (ಕಕಟ. ೯೦). [ಮುನ್ನೀರ್ + ಎಱೆಯ]

**ಮುನ್ನೀರ್ಗಂದ** (ನಾ). = ಮುನ್ನೀರಣುಗ : ರನ್ನವಸಿರ್ಪಲವೊಗ ವೇಳ್ವಾಲಗೆಯುನ್ನಿಲ್ಲದೆ ನಡೆವ ನೆರಲ್ಸರಿವುಮ್ಮುನ್ನೀರ್ಗಂದಂ ಬಿಸುಗದಿರ ನೊಡಲ್ಪಿಡಿದವನೆಂಬೆಂಟು ನಿನ್ನಯ ಪರಿಜು (ಉದ್ಭಟೀ. ೦-೩೨).
[ಮುನ್ನೀರ್ + ಕಂದ$_1$]

**ಮುನ್ನೀರ್ಗಟ್ಟೆ** (ನಾ). ಕಡಲಿನ ಎಲ್ಲೆ ; ಸಮುದ್ರದಿಂದ ಉಂಟಾದ ಸೀಮೆ,–ಗಡಿ : ಮುನ್ನೀರ್ಗಟ್ಟೆಯ ನಡುವಣ ಇಳೆಯೂಣ್ಮರು ಬೇಗದಿಂದ ತಳರ್ದರೋಲಗಕೆ (ಕುಂಞಾಂ. ೦೮-೩೦). [ಮುನ್ನೀರ್ + ಕಟ್ಟೆ$_1$]

**ಮುನ್ನೀರ್ಗಿಚ್ಚು** (ನಾ). ಸಮುದ್ರದ ಒಳಗಿರುವ ಬೆಂಕಿ ; ಕಡಲ್ಗಿಚ್ಚು ; ಬಡಬಾಗ್ನಿ : "ಕಡಲುರಿ ಮುನ್ನೀರ್ಗಿಚ್ಚೆನೆ ಪಡಬಾನಳಂ" (ತತುಃ. ೦೦೨). [ಮುನ್ನೀರ್ + ಕಿಚ್ಚು]

**ಮುನ್ನೀರ್ಮಗ** (ನಾ). =ಮುನ್ನೀರಣುಗ : "ಜೊನ್ನೊಡಲಂ ಪೆಗಲ್ವಗೆಯುಂ ಮುನ್ನೀರ್ಮಗಂ . . . ಎನ್ನಲ್ಕಿರುಳೆಱೆಯನಪ್ಪನು" (ತತುಃ. ೨೧೦).
[ಮುನ್ನೀರ್ + ಮಗ]

**ಮುನ್ನೀರ್ವಕ್ಕಿಗ** 'ಮುನ್ನೀರ್ವಟ್ಕಿಗ' ನೋ.

**ಮುನ್ನೀರ್ವಟ್ಕಿಗ, ಮುನ್ನೀರ್ವಕ್ಕಿಗ** (ನಾ). ಕಡಲನ್ನೇ ಹಾಸುಗೆಯನ್ನಾಗಿ ಉಳ್ಳವನು ; ವಿಷ್ಣು : "ಅರಲ್ದೊಡೆಯಂ . . . ಮುನ್ನೀರ್ವಟ್ಕಿಗಂ, ಕಾರೊಡಲಂ, ಕಾವನಯ್ಯಂ—ಈ ೧೨ ವಿಷ್ಣುಗೆ ಪೆಸರ್" (ಕಶಾ. ೪೭-೯). ಮುನ್ನೀರ್ವಕ್ಕಿಗ : "ರಕ್ಕಸವಗೆಯುಂ ಮುನ್ನೀರ್ವಕ್ಕಿಗಂ . . . ಹರಿಯುಕ್ಕುಂ" (ತತುಃ. ೭).
[ಮುನ್ನೀರ್ + ಪಟ್ಕೆ + — ಗ$_2$]

**ಮುನ್ನೀರ್ವೆಂಕೆ** (ನಾ). = ಮುನ್ನೀರ್ಗಿಚ್ಚು : "ಮುನ್ನೀರ್ವೆಂಕೆಯೆಂದು. ಕಡಲ್ಗಿಚ್ಚೆಂದು ಬಡಬಾನಲಂ" (ಕಶಾ. ೩೩-೦೯೭). [ಮುನ್ನೀರ್ + ಬೆಂಕೆ]

**ಮುನ್ನು** (ನಾ). ಒಂದು ಬಗೆಯ ಸಸ್ಯ : ಸರುವಲು, ನಾರಲೆ, ನರವೆ, ಮುನ್ನು, ಮಡಿಕೆ (ವ್ಯಜಿಗಿ. ೭೪-೦೩೦೦). [ ? ]

**ಮುನ್ನುಗ್ಗು** (ಕ್ರಿ). ರಭಸದಿಂದ ಮುಂದುವರಿ,—ಮುಂದಕ್ಕೆ ಸಾಗು : ಖಿನ್ನತೆಯ ಕ್ಷುಬ್ಧತೆಯ ತೋರಗೊಡದಲೆ . . . ಮುಂಗಾಲುಪುಟಿಗೆಯುಲಿ ಮುನ್ನುಗ್ಗುತಿರಬೇಕು (ಅರಳು. ೩೪೮-೦೨) ; ಎರಡನೆಯ ರಾಜೇಂದ್ರನು ಮತ್ತೆ ಮುನ್ನುಗ್ಗಿ ಚಾಳುಕ್ಯರ ಸೈನ್ಯವನ್ನು ಚೆಲ್ಲಾಪಿಲ್ಲಿಮಾಡಿದನು (ಕೊಳ್ಳಂಬ. ೩೮). [ಮುನ್$_2$ + ನುಗ್ಗು$_1$ (<ನುರ್ಗು$_1$)]

**ಮುನ್ನುಡಿ** (ನಾ.) ೧. ಯಾವುದಾದರೊಂದು ಗ್ರಂಥದ ಆದಿಯಲ್ಲಿ ಪ್ರಕೃತಗ್ರಂಥದ ವಸ್ತು, ಉದ್ದೇಶ, ವ್ಯಾಪ್ತಿ, ನಿರೂಪಣಾಮಾರ್ಗ, ಗ್ರಂಥಕರ್ತ ಮುಂತಾದ ವಿಚಾರಗಳನ್ನು ಕುರಿತು ಬರೆಯುವ ಪರಿಚಯಾತ್ಮಕವಾದ ಬರವಣಿಗೆ : ಪೀಠಿಕೆ ; ಉಪೋದ್ಘಾತ : ಮುನ್ನುಡಿಯ ಪದ್ಧತಿ ನನಗೇನೋ ಪ್ರಿಯವಾದದ್ದಲ್ಲ (ಮಪಾಗ. ii. ಸ್ನೇಹದ ಮಾತು) ; ಒಬ್ಬ ದೊಡ್ಡವರು . . . ಒಲಿದು ಮುನ್ನುಡಿ ಬರೆದು ಕೊಟ್ಟಿರುವರು (ಕಾರೂರ. ೫ ಬರೆದವನ ವಾಲ್ಕುಮಾತುಗಳು). ೨. (ಅಲಂ) (ಯಾವುದಾದರೊಂದು ಕಾರ್ಯದ) ಆರಂಭ ; ಮೊದಲು; ನಾಂದಿ: ಸಾಮಾನ್ಯದಿ ಸುಖಿಪುದೆ ಚಿರಶಾಂತಿಗೆ ಮುನ್ನುಡಿ (ಅಶಕೀ. ೩೪-೪) ; ಇನ್ನೆಗಂ ನೀನ್ ಕೇಳ್ದ ನುಡಿಗಳ್, ಮುಂದಾಗಲಿರ್ಪುದಕ್ಕೊಂದುಮುನ್ನುಡಿಯುಮಲ್ಲಂ (ಬಧ್ವಶ್ರ. ೩೯-೬೩೦). [ಮುನ್$_1$ + ನುಡಿ$_2$]

**ಮುನ್ನುಲಿ** (ನಾ). ಮೊದಲ ಮಾತು ; ಆರಂಭದ ನುಡಿ : ವೇದದ ಈ ಗೀತೆಗಳು . . . ಮಾನವಜನಾಂಗ ತನ್ನ ಮಹತ್ತಿಗೆ ಕಣ್ಣು ತೆರೆಯುತ್ತಿದೆ ಎಂಬುದರ ಮುನ್ನುಲಿಯಾಗಿದೆ (ಛಾಪಗೀ. ೦೦೪). [ಮುನ್$_1$ + ಉಲಿ$_2$]

**ಮುನ್ನುಸಿರ್** (ಕ್ರಿ). ಮುಂದಾಗಿ ಹೇಳು ; ಮುಂಚೆಯೇ ನುಡಿ,– ತಿಳಿಸು : ಈ ಎಣಿಕೆಯನ್ ಮುನ್ನುಸಿರ್ದು, ಆಗ್ನಮಿನ್ ಅಱಿಕದಾದೊಡ ಮಿರು (ಅಂತಗೂ. ೪-೭೯). [ಮುನ್$_2$ + ಉಸಿರ್$_1$]

**ಮುನ್ನುಟಿ** (ಕ್ರಿ). ಅನಂತರದಲ್ಲಿ ಬಿಡು,—ತ್ಯಜಿಸು (?) : ಗಟಿಗೂಸಾದುವರಿಂದ್ರನಂ ಗಿರಿಶನಂ ಸರ್ವಸ್ವಮಂ ಕೊಂಡು ಮುನ್ನುಟಿವರ್ (ಕಮುದ. ೬೫ ಕೃಹೋ). [ಮುನ್$_2$ + ಉಟಿ$_1$]

**ಮುನ್ನುಟಿವು** (ನಾ). ಮುಂದಿನ ಜೀವನ,—ಬದುಕು ; ಭವಿಷ್ಯ : ಚದುರ್ ತನಗುಳ್ಕೊಡೆ ಮೆಲ್ಪು ಮೇಳಮಂ ಪೊಸಯಿಸಿ ತನ್ನ ಮುನ್ನುಟಿವು ಬೇಟದ ಲಲ್ಲೆಯ ಬಲ್ಮೆ ಪತ್ತಿ ಸುತ್ತಿಸೆ ಪುರುಡಿಂಬುಕ್ಕೆಸೆ ಬಿಯಮಾಱಿಸಿ ಪೊದದವಂ ಬೊಜಂಗನೇ (ಅದಿಕೃ. ೦೨-೦೭). [ಮುನ್$_1$ + ಉಟಿವು]

**ಮುನ್ನೂಕು** (ಕ್ರಿ). ಒತ್ತಾಯದಿಂದ ಮುಂದಕ್ಕೆ ತಳ್ಳು ; ಮುಂದು ವರಿಯಿಸು : ನಮ್ಮ ಶತ್ರುಗಳಿಂದ ಮಾಡಲ್ಪಟ್ಟ ಈ ಯೋಚನೆ ನಮ್ಮನ್ನು ಕೂಡ ಪಾಪಮಾಡಲು ಮುನ್ನೂಕುತ್ತಿದೆ (ವ್ಯಾಸಪ. ೦೨೮).
[ಮುನ್$_2$ + ನೂಕು$_1$ (<ನೂಂಕು$_1$)]

**ಮುನ್ನೂರು** 'ಮೂನೂಱು' ನೋ.

**ಮುನ್ನೂಱು** 'ಮೂನೂಱು' ನೋ.

**ಮುನ್ನೆಗಪು** (ಕ್ರಿ). ಮುಂದಕ್ಕೆ ಚಾಚು,—ಎತ್ತು : ಶೌರ್ಯೋನ್ನತಿಯಿಂ ಮುಂಗಾಲ್ಗಳಂ ಮುನ್ನೆಗಪುತುಗುರ್ಗಳಿಂ ಪೊಯ್ದು ಮೇಲ್ವಾಯ್ದು ಗರ್ವೋದ್ಧತಗರ್ಜತ್ಸಿಂಹಮಂ . . . ಖಡ್ಗದಿಂ ಪೊಯ್ದನತ್ಯದ್ಭುತಸತ್ತ್ವಂ (ಕಬಿಶಂ. ೩-೬೩). [ಮುನ್$_2$ + ನೆಗಪು$_1$]

**ಮುನ್ನೆಣಿಕೆ** (ನಾ). ಮುಂಚಿತವಾಗಿ ಮಾಡುವ ಆಲೋಚನೆ ; ಮುಂದಿನ ಆಲೋಚನೆ ; ದೂರದೃಷ್ಟಿ : ತಾಯಿ ಹೇಳದ ವಿವೇಕ ಅವನ ಪ್ರೈಗಾವಲಿಗಿದ್ದರೂ ವಿಧಿಯ ಹತಕ್ಕೆ ಗೆಲುವಾಗಿ, ಅವಳ ಮುನ್ನೆಣಿಕೆ ನಿಜವಾಗುತ್ತದೆ (ಪಂಜುಂಡ. ೩೯) ; ಸಟೆಯ ಕರೆದಪರ್ ಬಾನವರ್, ಪ್ರಮಿತ್ಯೂಸ್ ಮುನ್ನೆಣಿಕೆಯುಳ್ಳವನ್ – ಎಂದು (ಬಧ್ವಶ್ರ. ೬-೦೨೭).
[ಮುನ್$_1$ + ಎಣಿಕೆ]

**ಮುನ್ನೆಲೆ** (ನಾ). ೧. ಮುಂಭಾಗ ; ಇದಿರು : ಎದುರುಭಾಗ ; ಬೆಟ್ಟಿನ ನೀರಟ್ಟಿನ ಪೋಲ್ಪಟ್ಟಿಳಿಗಳ್ ಬೆಟ್ಟಿತಾದೊಡಂ ಮುನ್ನೆಲೆಯೊಳ್ ನೆಟ್ಟನೆ ನಡುಗದೆ ಕದಡದೆ ಕಟ್ಟಿದಟಿಂ ದೊಡ್ಡದೇವನೆಸೆದಂ ದಿಟ್ಟಂ (ಶಶಿ. ೩-೦೮). ೨. ಮುಂಚೆ ಇದ್ದ ಜಾಗ ; ಮೊದಲಿನ ಸ್ಥಳ : ಒಲೆಯಿಂ ಪಾಲ್ಗಂದಲಂ ಕೀಟ್ಗಿಳುಪಿ ಕಡೆಮೊಸರ್ಗಂದಲಂ ಪಲ್ಲಟಂಗೆಯ್ದೊಲವಿಂ ಮಕ್ಕಳ್ಗೆ ಪೊಯ್ವಾಲಿಡಿದೊಳಲಿಗಳಂ ಕೌಚಿ ಪೋಣ್ ಸುಣ್ಣನೀರ್ ಮುನ್ನೆಲೆಯೊಳ್ ತೋರ್ಪಂತೆ ತುಂಬಿಟ್ಟು . . . ನಲಿಗುಮಾ ನಂದಬಾಲಂ (ಶಶಿ. ೩-೫೭). ೩. (ಅಲಂ) ಪ್ರಮುಖವಾದ ಸ್ಥಾನದಲ್ಲಿರುವ ವ್ಯಕ್ತಿ : ಒಲಿವ ಮುನ್ನ ಜಗಕೆಲ್ಲಕು ನಾ ಒಲಿದ ಮೇಲೆ ಜಗಕೆಲ್ಲಕು ನೀ ಹಿನ್ನೆಲೆ ನಾ ಮುನ್ನೆಲೆ ನೀ (ಗೋಕುಃ. ೨೫-೧೦). [ಮುನ್$_1$ + ನೆಲೆ$_1$]

**ಮುನ್ನೇಸಱ್, ಮುನ್ನೇಸಱು** (ನಾ). ೧. ಬೆಳಗಿನ ಸೂರ್ಯ; ಉದಯ ಕಾಲದ ನೇಸರು ; ಬಾಲಸೂರ್ಯ : ರನ್ನದ ತೊಡವು ರಂಜಿಸುವ ಮಕುಟ. ಪೊಸ ಪೊನ್ನಬಣ್ಣದ ಪ್ರ್ಯವೆಳಗು ಚೆನ್ನೆಸದನು ಬಿಸಿಯುಳಿದೇಗೆಯ್ದಂದ ಮುನ್ನೇಸಱಿಂಬ ಮಾಳ್ಕೆಯೊಳು (ಶ್ರೀಶಾಂ. ೩-೨೨) ; ತನಿಜೊನ್ನವಾಲನೀಂಟುವ ಪದೆದೊಳದು ಬತ್ತೆ ಮನದೊಳಂ ಕಂದಿತೋಱುವ ಹಂಸಪಾಱಿಯೊ ಪೋಳೆಸಲೆಪೆಮದಸ್ತಾದ್ರಿಯೊಳ್ ಚಂದ್ರಮಂಡಲಂ ಮುನ್ನೇಸಱಾಗಮದೊಳು (ತೆಂಕು. ೯೦-೯೦). ೨. ಪ್ರಾತಃಕಾಲ; ಅರುಣೋದಯದ ವೇಳೆ ; ಉಷಃಕಾಲ : "ಮುಂಬೊಟ್ಟೆಂದು ಮುನ್ನೇಸಱ್" (ಕಶಾ. ೩೭-೨೬೨); ಕರಿಣಿ ಕರ್ಣಂಗಳನೆಚ್ಚಱಿಸಿದುವಾಗಳ್ ಬಾಯುಂ ತೆಱೆದುವು ಪಿಂಗಳಿಗಳ್ಲ್ಲಿ ಮುನ್ನೇಸಱಿನೊಳ್ (ಕಾದಂಪೂ. ೦೪೩); ಬಾಡಿದ ದೇವಿಯ ತನುಲತೆ ಬಾಡಿಸಿದುದು ನೋಡಿ ಬಾಡುವೆನ್ನಯ ಮೊಗಮಂ ಬಾಡಿ ಜಸಪಟಮು ಸಸಿಯುಂ ಬಾಡಿಸಿದುತ್ಪಳಿಯಂತೆ ಮುನ್ನೇಸಱಿನೊಳ್ (ಅರ್ಜನೇ. ೦-೦೦೪) ; ಚಕೋರದ ಮುದಮುಡುಗಿ

ಪೋಯ್ತು ಮುನ್ನೇಸಜಜಿನೊಳ್ (ಕುಸುಮ. ೧೦-೬೯). **ಮುನ್ನೇಸಜು:** ೨. ನಿನ್ನನೊಲಿಸಿದಜೀಕೆಯು ಜಯಭೂಪಂ ಮುನ್ನೆಯರೊಳ್ಳಿನ್ನಿಪ್ಪೆಯು ವರನಂ ವರಿಯಿಪ ಮಂಡಪಕೆ ಮುನ್ನೇಸಜ ಪೊತ್ತಿಂಗೆಯ್ತರ್ಪಂ (ಜಯಚಾ. ೯-೪೪).

**ಮುನ್ನೇಸಜು** 'ಮುನ್ನೇಸಜಿನ್' ನೋ.

**ಮುನ್ನೊಡಲ್** (ನಾ). ಹಿಂದಿನ ಹುಟ್ಟು : ಪೂರ್ವಜನ್ಮ : ಎನ್ನೊಂದು ಮುನ್ನೊಡಲ ಅಟಿಗೆಯ್ದಿಯ ಬೆಸುಗೆಯನೀಗಳೇ ಪಾತಕಕ್ಕೆ ಕೈನೀಡು ಪೊಡಾವವಮಾಡೆಂ (ರಾಮಾಶ್ವ. ೩೭-೨೯). [ಮುನ್$_1$ + ಒಡಲ್]

**ಮುನ್ನೋಟ$_1$** (ನಾ). ಮೊದಲಿನ ಓಟ : ಮುಂಚಿತವಾದ ಓಟ : 'ಮುನ್ನೋಟವಿಕ್ಕು' ಪರಾ. [ಮುನ್$_1$ + ಓಟ]

**ಮುನ್ನೋಟ$_2$** (ನಾ). ೧. "ಮುಂದಿನ ನಿರೀಕ್ಷೆ" (ಕಾಂಡಿ. ೬೩-೦೩೩ ಅಟಿ) : ಒಸಗೆ ಸವಿಯುಂಲಿ ನನ್ನು ಮುನ್ನೋಟ ಕಂಪೊರೆಯ ಬಗೆಯ್ದೆಯ ತಣಿಯುತಿರೆ ಒಳಗಕ್ಕೆಂ ಪಾರ್ತಂ (ಕಾಂಡಿ. ೬೨-೦೩೩). ೨. ಮುಂದೆ ಪ್ರದರ್ಶಿತವಾಗುವ ಅಥವಾ ಪ್ರಕಟವಾಗುವ ದೃಶ್ಯ ಅಥವಾ ವಿಷಯಗಳ ಪೂರ್ವಚಿತ್ರ, —ಪೂರ್ವಪರಿಚಯ : ದೂರದರ್ಶನದಲ್ಲಿ ವಾರಕ್ಕೊಮ್ಮೆ ಆಯಾವಾರದ ಮುಖ್ಯಕಾರ್ಯಕ್ರಮಗಳ ಮುನ್ನೋಟ ವನ್ನು ತೋರಿಸುತ್ತಾರೆ (ಲೂಡಿ). [ಮುನ್$_1$ + ನೋಟ]

**ಮುನ್ನೋಟವಿಕ್ಕು** (ಕ್ರಿ). (ಯುದ್ಧವು ಪ್ರಾರಂಭವಾಗುವುದಕ್ಕೆ) ಮುಂಚೆಯೇ ಓಡಿಹೋಗು, —ಮೊದಲೇ ಪಲಾಯನ ಮಾಡು : ಹದುಳವಿಮುಪವರಿಲ್ಲ ಸೇನೆಯ ಮೊದಲಿಗರು ಮುನ್ನೋಟವಿಕ್ಕಿತು ಕದನದಲಿ (ಕುಮಾ.ಭಾ. ೯-೨೭). [ಮುನ್ನೋಟ$_1$ + ಇಕ್ಕು]

**ಮುನ್ನಿ** 'ಮುನಸಿ' ನೋ.

**ಮುನ್ಸಿಪಾಲಿಟಿ** 'ಮುನಿಸಿಪಾಲಿಟಿ' ನೋ.

**ಮುನ್ಸೀಫ್** 'ಮುನಸೀಫ್' ನೋ.

**ಮುನ್ಸೀಫ್‌ಕೋರ್ಟು**. ಮುನಸುಫ್‌ಕೋರ್ಟು (ನಾ). ಕೆಳವರ್ಜೆಯ ನ್ಯಾಯಾಲಯ: ಊರೆಲ್ಲಾ ನಮ್ಮ ಕೈಲೇ ಇವೆ. ಮುನ್ಸೀಫ್‌ಕೋರ್ಟನ್ನೂ ಹಿಡಿದುಕೊಂಡಿದ್ದೇವೆ (ಆಸ್. ೦೯). **ಮುನಸುಫ್‌ಕೋರ್ಟು** : ಬೊಂಬೈ ಮದ್ರೈದ ಪ್ರಾಂತ್ಯಗಳಲ್ಲಿಯೂ ಗ್ರಾಮಪಂಚಾಯಿತಿಗಳಂತಲೂ ಗ್ರಾಮ ಮುನ ಸುಫಕೋರ್ಟುಗಳಂತಲೂ ಮೊಕರೂರ್ಮಾಡಲ್ಪಡುವದು (ಗ್ರಾಮಾಚ. ೨). [ಮುನ್ಸೀಫ್ (< ಮುನಸೀಫ್) + ಕೋರ್ಟು]

**ಮುನ್ಸೂಚನೆ** (ನಾ). ೧. ಮುಂದೆ ಆಗುವುದರ ಬಗೆಗೆ ಮೊದಲೇ ಕೊಡುವ ತಿಳಿವಳಿಕೆ: ಅವರು ಕೊಟ್ಟ ಮುನ್ಸೂಚನೆಯಿಂದ ನನಗೆ ಬಹಳ ಉಪಕಾರವಾಯಿತು (ಲೂಡಿ). ೨. ಮುಂದೆ ಆಗುವುದರ ಬಗೆಗೆ ತೋರಿ ಬರುವ ಸುಳಿವು. — ಮಾಡು : ಮುಂದಿನ ಮುನ್ಸೂಚನೆಯನ್ನೇನೋ ಕಂಡಂತೆ ಆಗುತ್ತಿದೆ (ಸವತಿ. ೩೦). ೩. ಭವಿಷ್ಯವನ್ನು ತಿಳಿಸುವಿಕೆ : ಭವಿಷ್ಯವೇಳುವುದು ; (ಮುಂ. ಕೇಡಿನ) ಮುನ್‌ಸೂಚನೆ ; ಶಕುನ (Foreboding. ಇಂಕಿ). [ಮುನ್$_1$ + ಸೂಚನೆ]

**ಮುನ್ಸೂಚಿಸು** (ಕ್ರಿ). ಮೊದಲೇ ತಿಳಿಯಪಡಿಸು : ಕೇವಲ ಸಾಧಾರಣ ಒಂದು ತಿಗಣೆಯ ಜೀವಚಕ್ರವನ್ನು . . . ಯಾರೂ ಮುನ್ಸೂಚಿಸಲಾರರು (೬೬ಜಿ. ೯೯). [ಮುನ್$_2$ + ಸೂಚಿಸು$_1$]

**ಮುಪ್** 'ಮೂ' ನೋ.

**ಮುಪ್ಪಗ** 'ಮುಪ್ಪಾಗ' ನೋ.

**ಮುಪ್ಪಟ್ಟೆ** (ನಾ). ೧. ಮೂರು ಸಮಾನಾಂತರ ರೇಖೆಗಳುಳ್ಳ ಘನಾ ಕೃತಿಯ ಮೂರುಮುಖ : ಕೈಗಾರಿಕಾಕೇಂದ್ರಗಳಲ್ಲಿ ಯಂತ್ರಾಗಾರಗಳ ಕೆಳಗಿನ ಅಂತಸ್ತುಗಳಿಗೆ ಹೆಚ್ಚು ಬೆಳಕು ಬರುವ ಹಾಗೆ ಮುಪ್ಪಟ್ಟೆಯ ಗಾಜು ಗಳನ್ನು (Prisms) ಬಳಸುತ್ತಾರೆ (ಕಿಲ್ಲಾ. ೩೨೯) ೨. ಮೂರು ಮೂರು ಪಟ್ಟೆಗಳುಳ್ಳ ಒಂದು ಬಗೆಯ ಸೀರೆ (?) : ಮುಪ್ಪಟ್ಟೆಯ ಬಣ್ಣದ ಬೀರಮಡಲು ಕಡೆಯಲ್ಲಿ ಕಪೋತ ಕಂಪ್ತ ಮುಟ್ಟಿತ್ತು (ಸರ್ವ ೬೪-೪೩೩); ಕಂದರ್ಪ ಕುಸುಮಾಂಗಂಭೆಗೆಯಾಗಿ ಮೆರೆದಾ ಜಂಪಾಹಂದನ ಮುಪ್ಪಟ್ಟೆಗಳು (ಅಮುಸಾಂ. ೪-೦೯). [ಮುಪ್ (< ಮೂಱು) + ಪಟ್ಟೆ$_3$]

**ಮುಪ್ಪತ್ತು** 'ಮುವತ್ತು' ನೋ.

**ಮುಪ್ಪದರ** (ನಾ). ಮೂರುಪದರ, —ಮಡಿಕೆ, —ಸ್ತರ : ಪ್ರಾಣಿಯು ಇಪ್ಪದರದ ಜೀವಿಯೆ . . . ಮುಪ್ಪದರದ ಜೀವಿಯೆ ? (ಪ್ರಾಣಿಶಾ. ೦೫). [ಮುಪ್ (< ಮೂಱು) + ಪದರ (< ಪದರು)]

**ಮುಪ್ಪರಿಜು** (ನಾ). ಮೂರು ಬಗೆಯ ಆಕಾರ, —ರೂಪ, —ಆಕೃತಿ : ಪಿಡಿದೊನಾವನ್ ನಿಯತಿಯಧಿಕಾರಸೂತ್ರಮನ್ ? ಮುಪ್ಪರಿಜು ವಿಧಿದೇವಿ ಯರ್. ಮೋಹ್ ಮಾಜಿಯಮಾ ರೌದ್ರಿಯರ್ (ಬದ್ಧ.ಕೃ. ೨೭-೩೬೪). [ಮುಪ್ (< ಮೂಱು) + ಪರಿಜು]

**ಮುಪ್ಪಳ$_1$** (ನಾ). ಬಾಳೆ, ಮಾವು ಮತ್ತು ಹಲಸು ಎಂಬ ಮೂರು ಬಗೆಯ ಹಣ್ಣುಗಳು : ಶಿವಪಾದಾಮೃತಮಂ ರಸಪೂರ್ಸರ್ವ ಮುಪ್ಪಳಮಂ ಜಿಲುಪಾಲ ತಿರುಳ ಕರಚಿಗಳುಮಂ . . . ಶಿವಾರ್ಪಿತದೊಡನೆ ಕೈಕೊಂಡು (ಸಂಶರ ೦೦-೩೫). [ಮುಪ್ (< ಮೂಱು) + ಪಳ$_2$ (= ಪಲ$_2$). / ತಮಿ. ಮುಪ್ಪಟಮ್]

**ಮುಪ್ಪಳ$_2$** ? (ನಾ). (?) : ಆ ಅಯಿವತ್ತು ಹಾಂಸ್ನ ಹಣ ಮುಪ್ಪಳಲೂ ವಿಸಕ್ಕೆ (ಎಕ. VIII. ತೀರ್ಥಹ. ೦೯೦-೦೬: 1407). [ ?.]

**ಮುಪ್ಪಾಗ**. ಮುಪ್ಪಗ (ನಾ). ೧. ಮುಕ್ಕಾಲು ಭಾಗ : ನಾಲ್ಕನೆಯ ಮೂರು ಅಂಶ : ಆ ರಾಜಸತಿಗೆ . . . ಮೂಱುಗಳಿಗೆಯ ಕಳೆದು ಮುಪ್ಪಾಗದಿಂ ಮೇಲೆ ಸುತನಾದೊತ್ತೊಳ್ಳಿತು (ಶಾಂಪು. ೩-೩೯) ; ಅವರ ಅರ್ಥವಿವೇಚನೆ ನಿನ್ನಿನ ರಾತ್ರಿಯ ಕಟ್ಟಿತು,ಬಟ್ಟಹತ್ತುವುದಕ್ಕೆ ಮೊದಲಿಟ್ಟಾಗ ಮುಪ್ಪಾಗ ಕಟ್ಟಿತು (ಕಾಂತಲಾ. ೩೩೭). ೨. ಒಂದು ಬಗೆಯ ನಾಣ್ಯ : ಮುಕ್ಕಾಲು ಪಣ : ಹಿಂದಿನ ಕಾಲದ ಮೂರು ಆಣೆ : ಆರುಕಾಸುಗಳಷ್ಟು ಬೆಲೆಯುಳ್ಳ ಒಂದು ನಾಣ್ಯ : ಯೆಂಭತ್ತು ನಾಲ್ಕು ಮೊನ್ನು ಹಣ ಮುಪ್ಪಾಗವನು ತೆರುವುದು (ಎಕ. VI. ಕೊಪ್ಪ. ೩೫-೦೨ ; 1400) ; ಗಿಳಿಯು ಪಂಜರದೊಳಿಲ್ಲ . . . ಮುಪ್ಪಾಗ ಬೆಣ್ಣೆ ಯನ್ನು ತಪ್ಪದೆ ನಾ ಹಾಕಿ ಸಾಕಿದೆ (ಪುರಂದ. ೦-೦೦೨-೪) ; ಹಾಗದ ಕೋಳಿ ಮುಪ್ಪಾಗದ ಮೇವು ತಿಂದಿತು (ಗಾದೆ). ೩. ಅಳತೆಯ ಒಂದು ಪ್ರಮಾಣ : ಯರಡು ಬಳ್ಳ ಅಕ್ಕಿಯ ತಳಿಗೆ ಪ್ರಸಾದ ಎಂಟು ಮುಪ್ಪಾಗ ೞಷಾಯ ಇಷ್ಟನೂ . . . ಧಾರಾಪೂರ್ವಕವಾಗಿ × × × (ಎಕ. XIV. ಶ್ರೀರಂಗ. ೨-೨೦ ; 1529). **ಮುಪ್ಪಗ** : ೨. ಸಿಡಿಲಬ್ಬಂಗೆ ಪೊಂದಂ ಮುಪ್ಪಗ ವ್ರಿತ್ತಿ . . . ಅರ್ಜ್ಜುಯಂಗೆ ಮುಪ್ಪಗ ವ್ರಿತ್ತಿ (ಎಕ. XII. ತಿಪಟೂ. ೦೩-೨೦ ; 1251). [ಮುಪ್ (< ಮೂಱು) + ಪಾಗ$_1$]

**ಮುಪ್ಪಿಡಿ** (ನಾ). (ಮೂರು ಕಡೆ ಬಾಗುಗಳುಳ್ಳ) ಒಂದು ಬಗೆಯ ಆಯುಧ ; ಬಾಕು : ಬಡಿಕೋಲ್ಮುಪ್ಪಡಿ[illegible] ವಿದಿತಚಕ್ರಂ . . . ಪಡಿ ಮುಖ್ಯವಾದ ಕೈದುಗಳಂ ಪಿಡಿದು (ಶಾಂಪು. ೦೬-೩೭) : ಸೋಟದ ಮುಪ್ಪಿಡಿಯನು ಕಿತ್ತುಕೊಂಡು ದರ್ಪಕನೆರ್ದೆಯಲ್ಲಿ ತಿವಿದು ರಕ್ಕಸ ಬಹು ದರ್ಪವಡೆದು ನಿಂದಿರ್ದ (ಜೋತಕ. ೦೨-೬೬) : ಭಲ್ಲೆಯ ಕತ್ತಿ ಕಠಾರಿ ಮುಪ್ಪಿಡಿ ಪಂಕಿ ಸಲ್ಲಿಹ ಗದೆ . . . ಕಿರಿಸೆಗಳಾ ಗೃಹದಲ್ಲಿದ್ದವುರಿಮಾರಿ ಯಂತೆ (ಶರತ. ೨೦-೦೩೨).

[ ಮುಪ್ ( < ಮೂಱು ) + ಪಿಡಿ$_2$. / ತೆಲು. ಮುಪ್ಪಿಡಿ ]

**ಮುಪ್ಪಿಡು** ? (?)·(?) : ಅಪ್ಪಿದರಪ್ಪುವಳುಗುರಿಬ್ಬರುಗುರಿಕ್ಕಿ ಉಪ್ಪರಿ ಸುವಳೊದಬುವಳು ನೆಪ್ಪುಗಾತಿಯು ನೇವಂಗಾಣನು ಹೊಕ್ಕರು ಮುಪ್ಪಿಡೆ ಸಾವನೇಂದು (ಶರತ. ೦೦-೬೯). [ ? ]

**ಮುಪ್ಪು** (ನಾ). ಮುದಿತನ; ವೃದ್ಧಾಪ್ಯ; ಇಳಿವಯಸ್ಸು: "ಜರಾ, ವಿಸ್ರಸಾ —ಈ ೨ ಮುಪ್ಪು" (ಹಲಾಯು. ೬೬-೩೪೯); ಸಿಂಗದ ಮುಪ್ಪುಂ ನೆಗಟ್ದ ಗಾಂಗೇಯರ ಮುಪ್ಪುಮಿಟೀಕವಡೆಗುಮೆ (ಶಾಶಭಾ. ೧೦-೦೯); ಮುಪ್ಪಿಂದೊಪ್ಪವಳಿಯದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮ ದೇವನ (ಬಸವ. ೦೬೦); ಮುಪ್ಪಿನ ಮುಗುದನೀತನ ಕಾದ ಹೇಳದು ನಗೆಯ ಸುರಿದೈ ರಾಯ ಕಟಕದೊಳು (ಕುವ್ಯಾಭಾ. ೦-೩೪).

**ಮುಪ್ಪಿನ ಮುತ್ತೈದೆ** = ವಯಸ್ಸಾದ ಮುತ್ತೈದೆ; ವೃದ್ಧ ಸುಮಂಗಲಿ: ಮುಪ್ಪಿನ ಮುತ್ತೈದೆಯ ರೂಪದಿಂದಯಿರುವಳಾದ ಕಾವೇರಿನದಿಗೆ ಪುನಃ ನಮಸ್ಕರಿಸಿ (ಅರ್ಕಪುಚ. ೧೩೦). **ಮುಪ್ಪುಬೆಪ್ಪು** = ಅರೆಮರುಳಿನಿಂದ ಕೂಡಿರುವ ವ್ಯಕ್ತಿ: ನಾನಾಗಳೆಯೊ ನಿನ್ನ ತೆರೆದ ಪಿಟಕದೊಳೊಂದು ಸೀರೆಯಂ ಕಂಡೆನಾದೊಡಮರಿವುದೇತಯ್ಯ ಪೇಳ್. ಈ ಮುಪ್ಪುಬೆಪ್ಪು? (ತ್ರೈಲಾಚ. ೨೬೪-೨೯೩).

[ದೇ.೩ ತಮಿ. ಮಲ. ಮೂಪ್ಪು; ತುಳು. ಮುಪ್ಪು, ಮುಜ್ಜು; ತೆಲು. ಮುಪ್ಪು]

**ಮುಪ್ಪುದಪ್ಪುಗ** (ನಾ). ವೃದ್ಧಾಪ್ಯವಿಲ್ಲದವನು; ಅಮರ; ದೇವತೆ: ನಯಪತ್ತಿನಿನುಡಿಯಿಂ ಜಾಣ್ಮೆಯಿನಾವಗಮಿನಿಜಸೆರ್ದೆಯನಿರ್ಕುಳಗೊಳ್ವೀ ಮುಜಣನ ಗೆಣೆಯೆನಿಪಳ ಮನೆಮಯನೆನಿಕುಂ ಮುಪ್ಪುದಪ್ಪುಗರಪಸುವಾಗಳ್ (ಲೀಲಾ. ೬-೧೨೩).   [ಮುಪ್ಪು + ತಪ್ಪು$_{4}$ + — ಗ$_{2}$]

**ಮುಪ್ಪುರ** (ನಾ). ೧. ತಾರಕಾಸುರನ ಮಕ್ಕಳಾದ ಮೂರು ಜನ ದೈತ್ಯರು ನಿರ್ಮಿಸಿದ ಮೂರು ಪಟ್ಟಣಗಳು; ತ್ರಿಪುರ; ಪ ಆಕಾಶ ದಲ್ಲಿ ವಿದ್ಯುನ್ಮಾಲಿಯ ಕಬ್ಬಿಣದ ಪಟ್ಟಣ, ಅದರ ಮೇಲೆ ಅಂತರಿಕ್ಷ ದಲ್ಲಿ ಕಮಲಾಕ್ಷನ ಬೆಳ್ಳಿಪಟ್ಟಣ ಮತ್ತು ಅದಕ್ಕೂ ಮೇಲುಭಾಗದಲ್ಲಿ ತಾರಕಾಕ್ಷನು ನಿರ್ಮಿಸಿದ ಚಿನ್ನದ ಪಟ್ಟಣ: ಬಾಗಿಲ ಮುಂದೆ ನಿಂದಾ ಮುಪ್ಪುರದಂದಕೆ ನಿಜಮಕುಟವನು ಕಂದರ್ಪವಿಜಯನಲಾಗಿ ನುಡಿದನು ಮೋಹೇಂದ್ರನಧಟನಾವನೇದು (ತ್ರಿಕುಶಾಂ. ೨೨-೨೪೯); ಎಸೆವ ಮುಪ್ಪುರದ ಸುಯು ಬಣ್ಣಪೊಡಾವಗಂ ತೀರದು (ಶಬ್ದಾ. ೪೦-೨೩); ಹರನ ಸಾಹಸ ಕಂಜದೆ ಪಲವಗಲು ಮುಪ್ಪುರ ಪಡಿಬರಿಸಿ ಪೋರಿದುದು (ಹಲಿ. ೨-೪೮). ೨. ಮೂರುಲೋಕಗಳು; ತ್ರಿಲೋಕ: ಮುನಿ ಮಾರ್ಕಂಡೇಯಾ . . . ಮುಪ್ಪುರದೊಳಗಿದಕೆ ಎದುರುಗಾಣನೆಂದು ಅಲ್ಪಮನಸುಮಾಡದೆ ವಾಸವಾದನು ಇಲ್ಲಿ (ತೀರ್ಥಸು. ೩೬-೨). 'ಮುಪ್ಪುರಗೊಳ್' ಪರಾ.

**ಮುಪ್ಪುರ ಗೆಲಿದವನು** = ತ್ರಿಪುರವನ್ನು ಜಯಿಸಿದವನು; ಶಿವ: ಕಂಡೆ . . . ಮುಪ್ಪುರ ಗೆಲಿದವನ ಮುನಿಸುತ ಸರ್ಪಭೂಷಣ ಶಿವನ ಭವನ (ಪುರಂದ. ೦-೦೬೩-೬).   [ಮುಪ್ (< ಮೂಜು) + ಪುರ$_{2}$]

**ಮುಪ್ಪುರಗೊಳ್** (ಕ್ರಿ). ಮೂರುಲೋಕಗಳನ್ನು ಗೆಲ್ಲು; ತ್ರಿಲೋಕ ಗಳನ್ನು ಜಯಿಸು: ಮುಪ್ಪುರಗೊಂಡ ಮಾಧವನ ಅಪ್ಪಣೆವಡೆದು ಬತ್ತರಿಸುವ ಕೃತಿ ಜೇನ ತುಪ್ಪದ ತೊಜಿಯಾಗಲಿಜಿಯಾ (ಮೋಹತ. ೦೬-೦).

[ಮುಪ್ಪುರ + ಕೊಳ್$_{1}$]

**ಮುಪ್ಪುರವಗೆಯ** (ನಾ). ತ್ರಿಪುರವೈರಿ; ಶಿವ; "ಜಡೆಗ ಮುಪ್ಪುರ ವಗೆಯಂ ಎಲುಗೈಪು ಬೂದಿಮೆಯ್ಯಂ . . . ಸ್ಮರಹರಂಗೆ ನಾಮವಿದು" (ಕ೭ಕಂ. ೦೭).   [ಮುಪ್ಪುರ + ಪಗೆಯ]

**ಮುಪ್ಪುರಹರ** (ನಾ). ತ್ರಿಪುರಗಳನ್ನು ಧ್ವಂಸಮಾಡಿದವನು; ಶಿವ: ತುಪ್ಪೀನ ಅಭಿಷೇಕ ಅಪ್ಪ ಸಿದ್ಧರಾಮಯ್ಯ ಮುಪ್ಪುರಹರನಿಗೆ ಮಾಡುವಾಗ ಚರಾಚರ ತುಪ್ಪುಂಡು ತೇಗಿತು ಆ ಚಣ (ಸಿದ್ಧಕು. ೦೯-೦೨).

[ಮುಪ್ಪುರ + ಹರ]

**ಮುಪ್ಪುರಿ** (ನಾ). ೧. ಮೂರುಹುರಿಗಳು, — ಎಳೆಗಳು. ೨. ಮೂರುಹುರಿಗಳನ್ನು ಸೇರಿಸಿ ಹೊಸೆದ ದಪ್ಪಹುರಿ; ಹೊರಜೆ: ಕೆದಜಿದ ತಲೆಯುನಡಸಿ ಸುತ್ತಿದ ಮುಪ್ಪುರಿ [ಪಾಠಾಂ. ಮುಂಗುಡಿ, ಮುಂಗುರು]ಯ ಬಾರಿ ಕಡ್ಡಣಿಗೆಯ . . . ಬಿಜುನುಡಿಯ ಕಲಿ ವೀರ ಬಾಹುಕ ಬರುತ್ತಂ (ಹಕಶಾ. ೧೦-೦೭); ಕಾಳ್ಕಾನಿಸನೊರ್ವನುಂ ಕಾಪಟ್ಯದಿಂ ಕರೆದು ತಂದು . . . ಮುಪ್ಪುರಿಯಂ ಕಟ್ಟಿ ಲಟೀತಟಕ್ಕೆ ಸುಲಿದೊಳ್ಪಂ ಪಲ್ಗಳಂ ಕಾಲ್ಗಳಂ ಕರದಿಂದಂ ತೊಳೆದೊಂದು ಕೋವಣಮನಾಂತಂಗೊಲ್ದು ಕೆಯ್ಗೆಯ್ಯುತುಂ (ಕೃಷಿ. ೨೬-೦೧). ೩. (ಮೂರು ವಸ್ತುಗಳ)ಕೂಡಲು; ಸಂಗಮ; ಸಮಾಗಮ: ಅನವರತದಾನದಿಂ ವಿಕ್ರಮೋನ್ನತದಿನಸಮ ಶೌರ್ಯೋನ್ನತಿಯಿಂ ವನನಿಧಿಪರೀತ ಸಕಲಾವನಿಯೊಳ್ ಮುಪ್ಪುರಿವೂ ಲಾದುದಾ ನೃಪನ ಗುಣಂ (ಕಾವ್ಯಾವ. ೨೬೩); ಕುಮಾರನ ಯೌವರಾಜ್ಯ ಸಂಪದದೊಳಮಾಧಿರಾಜ್ಯನಿಜಲೀಲೆಯೊಳಂ ಪಿತೃ ವೃದ್ಧ ರಾಜ್ಯಸಂಪದದೊಳ ಮೊಪ್ಪಿದಂ ಸಿರಿಯ ಮುಪ್ಪುರಿವೊಲ್ಪುವನೈಕಭೂಷಣಾ (ಅಶಂಪು. ೯-೩); ವಿನಯಭಯಭಕ್ತಿಗಳು ಮುಪ್ಪುರಿಯೆನಿಸಿ ತನ್ನೊಳಗೆಸೆಯೆ ನಿಜಕಾಂತನಿಗೆಜಗಿ (ತಿಪ್ಪುಕ. ೨-೬೦). ೪. ಬಲವಾದುದು; ಬಿಗಿಯಾದುದು: ಮೂಢ ಮಾನವರು ಮುಪ್ಪುರಿಯ ಮಾಯಾಪ್ರಬಂಧಕೆ ತಪ್ಪದೊಳಗಾಗಿಪ್ಪರು (ಅಪ್ಪುಕ. ೨-೦೦೩). ೫. ದಪ್ಪವಾಗಿರುವುದು; ಒತ್ತಾಗಿ ಸೇರಿದುದು: ಮುಪ್ಪುರಿಯ-ಹುಬ್ಬುಗಳ ಮುರಿದ ಮಾಸೆಯ ಮೇಚಕಾದ್ರಿಯ ಸರಿಸದ ವನವನೀಗ ಮಂಡೋದರಿಯ ಮಗನು (ತೊರವೆ. ೬-೯-೮); ಮು[ಪಾಠಾಂ. ದ]ಪ್ಪುರಿಯ ಹುಬ್ಬುಗಳ ಸುಯ್ಲುಗಳ . . . ಅಸಮಭಟರೊದಗಿದರು ಸಮರದಲಿ (ತೊರವೆ. ೬-೦೯-೨೦). ೬. ಆಧಿಕ್ಯ; ಅತಿಶಯತೆ: 'ಮುಪ್ಪುರಿಗೊಳ್' ಪರಾ.

[ಮುಪ್ (<ಮೂಜು) + ಪುರಿ$_{3}$./ತಮಿ. ಮುಪ್ಪುರಿ; ತೆಲು. ಮುಪ್ಪಿರಿ]

**ಮುಪ್ಪುರಿಗೂಡಿಸು** (ಕ್ರಿ). ಮೂರುಎಳೆಗಳನ್ನು ಸೇರಿಸು, – ಕೂಡಿಸು: ನವಪವಿತ್ರಸೂಕ್ಷ್ಮವಾದ ಇಪ್ಪತ್ತೆಳೆಗಳಿಗೆ ಸಮಭಾಗದಿಂ ಮುಪ್ಪುರಿಗೂಡಿಸಿ ಪೋಣಿಸುವದಿದು ಉತ್ತಮ (ಶಿಪಲ. ೯೩).

[ಮುಪ್ಪುರಿಗೂಡು + — ಇಸು$_{3}$]

**ಮುಪ್ಪುರಿಗೂಡು** (ಕ್ರಿ). ೧. ಮೂರು ಎಳೆಗಳು ಸೇರು, – ಕೂಡು, –ಒಟ್ಟಾಗು: ತತ್ವದ ಕಾವು ನಿಜನಿಶ್ಚಯದ ಬದಿರು ಭಕ್ತಿ ಜ್ಞಾನ ವೈರಾಗ್ಯ ಇಂತೀ ತ್ರಿವಿಧ ಮುಪ್ಪುರಿಗೂಡಿದ ನೂಲಿನಲ್ಲಿ ಕಟ್ಟುಗಳ ಲಟ್ಟಿ (ಸರ್ವವ. ೬೦-೩೨೨). ೨. ಒಟ್ಟಾಗು; ಸೇರು; ಒಂದಾಗು: ಮೇಖಲೆಯ ಪಾರಿಹಾರ್ಯದ ಮಣಿನೂಪುರದ ಮಧುರಸ್ವನಂ ಮುಪ್ಪುರಿಗೂಡಿದ ಮದನಪಾಶಮೆನೆ ನಡೆತಂದಳ್ (ಶಂಕಾಪು. ೩-೬೪); ಕಣ್ಣ ಕೇಸುರಿಯುಂ ಪುರ್ವಿನ ತಳ್ತ ಕಬೊರ್ಗೆಯುಂಮುಗ್ರೇಭಪ್ರತಾಪಕ್ಕ ಮುಪ್ಪುರಿಗೂಡುತ್ತಿರ (ಅಶಂಪು. ೦೪-೭); ತಪ್ಪದಹುದು ಕೌಶಿಕನ ಕೋಟಲೆ ಈಗ ಮುಪ್ಪುರಿಗೂಡಿ ರಾಯನಿಗೆ ಹೆಪ್ಪಳಿಸಿತು (ಹಂಶಾಂ. ೦೬-೮೭). [ಮುಪ್ಪುರಿ + ಕೂಡು$_{1}$]

**ಮುಪ್ಪುರಿಗೊಳ್**, ಮುಪ್ಪುರಿಗೊಳು, ಮುಪ್ಪುರಿಗೊಳ್ಳು (ಕ್ರಿ). ೧. ಕೂಡು; ಸೇರು; ಒಂದಾಗು: ಹರಿವಿರಿಂಚಿಗಳ ಮನದ ಬಯಕೆಯುಂ ಕಂದರ್ಪನ ಪಂಚಬಾಣಾನುಸಂಧಾನಮುಂ ಪಾರ್ವತಿಯ ಮನೋರಥಮುಂ ಮುಪ್ಪುರಿಗೊಂಡು (ಗಿರಿ. ೬-೪೩ ಪ); ಮುಪ್ಪುರಿಗೊಂಡ ಹುಬ್ಬುಗಳ ನೆಗೆದ ರೋಮಾವಳಿಯ ಬಿಗುಹಿನ . . . ರಕ್ಕಸರನೀಕ್ಷಿಸಿ ನುಡಿದನಸುರೇಂದ್ರ (ತೊರವೆ. ೬-೨೩-೬). ೨. ಅತಿಶಯವಾಗು; ಅಧಿಕ ಗೊಳ್ಳು; ಹೆಚ್ಚಾಗು: ತುಱುಂಬಿದ ಕುಸುಮಾವಳಿಯ ಪೊಸಕಂಪುಂ ಸೊಗಯಿಸುವ ಸೊಂಪುಂ ಮೋಹಿಸುವ ಬೆಳಗುಂ ಮುಪ್ಪುರಿಗೊಂಡು ಬಳಸಿ ಬೀದಿಪರಿಯೆ (ಸುಲೋಚ. ಹ. ೦೬೮-೦೭); ಕೋಪಾಗ್ನಿ ಮುಪ್ಪುರಿಗೊಂಡು ಮುಂದಗೆಟ್ಟ ಮುಖದಿಂದೆ ವಲ್ಮೀಕನಾಥನ ಸದನಕೆಯ್ತಂದು ಬಿನ್ನಪಗೆಯ್ದ (ತ್ರಿಷಪು. ೦೭-೪೨); ಮುಪ್ಪುರಿಗೊಂಡ ವೈರದಲೆಮ್ಮೊಳು ಮೋರೆದಪ್ಪಿದ ದುಷ್ಕೃತದಿಂದೆ (ಕರ್ಣವ್ಯ. ೮-೩೪). ೩. ದೃಢಗೊಳಿಸು; ಬಿಗಿಮಾಡು:

ತಿರುವಂ ಮುಪ್ಪುರಿಗೊಂಡು ಮಿಳ್ಳಿಸುವ ಮಿಂಚಂ ಮಾಡಿ . . . ನಿದಾಘಮಂ ಬೆದಱೆ ಬೆಂಕೊಂಡತ್ತು ಮೇಘಾಗಮಂ (ಕಾದಂಉ. ೩೩೦).

**ಮುಪ್ಪುರಿಗೊಳು:** ೧. ಪರಮಹರುಷಾದ್ಭುತಭಯಂಗಳು ಬೆರಸಿ ತನ್ನಮ ಮನದೊಳಗೆ ಮುಪ್ಪುರಿಗೊಳಲು ನಮಿಸುತ್ತ ಸಂಸ್ತುತಿಸಿದನು (ತಿಪ್ಪ.ಅ. ೩-೪೦). **ಮುಪ್ಪುರಿಗೊಳ್ಳು :** ೧. ಮೂರುವಿಷಯಂಗಳು ಮುಪ್ಪುರಿಗೊಂಡು ಮಡಿಕೇರಿಯನ್ನು ಬಿಟ್ಟು ಹೊರಡುವ ವಿಷಯ ತೀರ್ಮಾನವಾಯಿತು (ಎಲ್ಮಾಕಿ. ೬೪) ; ಶಾಂತಿ, ಚೆಲುವು, ಜೀವನದ ಪ್ರಗತಿ, ಇವು ಆ ಸನ್ನಿವೇಶದಲ್ಲಿ ಮುಪ್ಪುರಿಗೊಂಡಿದ್ದವು (ಶಮಂಆ. ೦೦೬೪). ೨. ಸುರಪತಿಯೆಂಬ ಪೆರ್ವುಲ್ ದೆಸೆಯಾಣ್ಮರನಾಳ್ದಪೆನೆಂಬ ಹಮ್ಮು ದುರ್ಧರದಿತಿಜೇಂದ್ರನಂ ಜಯಿಸಿದಾಳ್ತನ ಮುಪ್ಪುರಿಗೊಂಡು (ರಚಾಪ. ೩-೩೦) ; ಘನರೋಷ ಮುಪ್ಪುರಿಗೊಂಡು ಪಾವಕನೆರಡುಗಣ್ಣೊಳು ಕಿಡಿಸಿದನೋ (ದೇಶೀಪು. ೪-೨). ೪. ತೀಕ್ಷ್ಣವಾಗು ; ಚುರುಕಾಗು : ಪ್ರತಿಭೆ, ಅಭ್ಯಾಸ, ಜ್ಞಾನಗಳಿಂದ ಮುಪ್ಪುರಿಗೊಂಡ ಇವರ ಕವಿತಾಶಕ್ತಿ ಇವರ ಪ್ರತಿಯೊಂದು ಕೃತಿಯಲ್ಲಿ ಬಿಂಬಿತವಾಗಿದೆ (ಜಗದಾ. ೨೯೦). [ಮುಪ್ಪುರಿ + ಕೊಳ್₁]

**ಮುಪ್ಪುರಿಗೊಳಿಸು** (ಕ್ರಿ). (ಗಟ್ಟಿಯಾಗುವಂತೆ) ಸೇರಿಸು ; ಕೂಡಿಸು : ಒಂದುಮಾಡು : ನವ್ಯದಿವ್ಯಾಂಬರನಿಕರಮಂ ಹೊಸೆ ಹೊಸೆದು ಮುಪ್ಪುರಿಗೊಳಿಸಿ (ಬಸಪು. ೩೭-೦೬). [ಮುಪ್ಪುರಿಗೊಳ್ + -ಇಸು₃]

**ಮುಪ್ಪುರಿಗೊಳು** 'ಮುಪ್ಪುರಿಗೊಳ್' ನೋ.

**ಮುಪ್ಪುರಿಗೊಳ್ಳು** 'ಮುಪ್ಪುರಿಗೊಳ್ ನೋ.

**ಮುಪ್ಪುರಿವಿಡಿ** (ಕ್ರಿ). ಹೊಸೆದು ಬಲಗೊಳಿಸು : ಸಿಡಿಲ ಬಳಗವ ಹಿಡಿದು ಮುಪ್ಪುರಿವಿಡಿದ ತೆಱನಂತಿರ್ದ ಕಣು (ಕುವ್ಯಾಆ. ಹಿಂ೩. ೦೦-೨೯ ಅಡಿಶರ್ರ). [ಮುಪ್ಪುರಿ + ಪಿಡಿ₁]

**ಮುಪ್ಪುರಿಸು** (ಕ್ರಿ). ಸೇರು ; ಕೂಡು ; ಒಂದಾಗು : ಕುಸಿದು ನಿಲ್ಲದ ಜಯಜಯಸ್ವನವಸದಳದ ವುಘೆಯುಘೆರವಂ ಪಸರಿಸಿದ ಹರಹರರಾವವುಂ ಮುಪ್ಪುರಿಸಿ (ಸಾಪಂತ. ೬-೭೩). [ಮುಪ್ಪುರಿ + -ಇಸು₃]

**ಮುಪ್ಪೊಡವಿ**(ನಾ). ಮೂರುಲೋಕ ; ತ್ರಿಲೋಕ : ಮುಪ್ಪೊಡವಿಯೊಳುಳ್ಳ ಕೃತ್ರಿಮಾಕೃತ್ರಿಮಮುಮಪ್ಪ ಮಾಣಿಕಬಸದಿಗಳ ಒಪ್ಪುವ ಚೈತ್ಯಬಿಂಬಗಳನೇ ಪೊತ್ತು ತಪ್ಪದೆಯಭಿವಂದಿಸುವೆನು (ಶ್ರೀಪಾಂ. ೦-೯); ಅವಿರಳಮಾದ ಸಮರಸನ್ನಾಹದ ವಿವಿಧ ಮಹಾಭೇರಿಯ ಬಲ್ದನಿ ಬಳಸಿತು ಮುಪ್ಪೊಡವಿಯನು (ಜಯಾಕಾ. ೬-೨೨).
[ಮುಪ್ (< ಮೂಱು) + ಪೊಡವಿ (< ಪೃಥುವಿ)]

**ಮುಪ್ಪೊಳಲ್** 'ಮುಪ್ಪೊಟಿಲ್' ನೋ.

**ಮುಪ್ಪೊಳಲು** 'ಮುಪ್ಪೊಟಿಲ್' ನೋ.

**ಮುಪ್ಪೊಳಲುರಿಕ** 'ಮುಪ್ಪೊಟಿಲುರಿಕ ನೋ'

**ಮುಪ್ಪೊಱಡು** 'ಮೂಹೊಱಡು' ನೋ.

**ಮುಪ್ಪೊಟಿಲ್**, ಮುಪ್ಪೊಳಲ್, ಮುಪ್ಪೊಳಲು, ಮುಪ್ಪೊಟಿಲು (ನಾ). ೧. ಮೂರುಊರುಗಳು, - ಪಟ್ಟಣಗಳು : ಈ ಚಿಕ್ಕದೇವನೊರ್ವನದಟಿಂದಂ ತೂಳ್ದಿದಂ ಚೆನ್ನರಾಯನ ದುರ್ಗಂ ಮಿಡಿಗೇಶಿ ಮದ್ದಗಿರಿಯೆಂಬೀ ಮುಪ್ಪೊಟಿಲ್ಪಿಂಕಮಂ (ಗೀತಗೋ. ೫೨-೮). **ಮುಪ್ಪೊಳಲ್ :** ೨. = ಮುಪ್ಪುರ ೧ : ರಕ್ಕಸರ ಮುಪ್ಪೊಳಲ ಜೈಸಿ ಪ್ರಮುದಮಂ ಸಕಲಲೋಕದೊಳು ಪೂರೈಸಿದನು (ಶಾಂಪಪು. ೦೩-೧). **ಮುಪ್ಪೊಳಲು : ೨.** ಆ ಗಿರಿಯ ತಪ್ಪಲೊಳಗಾ ಪಾರು ಶತಖಂಡಮಾಗಿ ಧೊಪ್ಪನೆ ಕೆಡೆಯಲೊಡನ್ಲೆ ಮುಪ್ಪೊಳಲೊಂದುಭಾಗವೆಂಬಂತೆಂದು ಬಳೆದ ಮಾರುತಿಯಂಗವಂ ಕಂಡು (ಶೀಶರಾ. ೦೯-೪೦). **ಮುಪ್ಪೊಟಿಲು : ೩.** ಮೂರುಲೋಕಗಳು : ತ್ರಿಲೋಕ : ಮುಪ್ಪೊಟಿಲುಂ ನಡುಗಿದುದು (ಅದ್ಭುತ. ೦೦-೦೬).
[ಮುಪ್ (< ಮೂಱು) + ಪೊಟಿಲ್]

**ಮುಪ್ಪೊಟಿಲು** 'ಮುಪ್ಪೊಟಿಲ್' ನೋ.

**ಮುಪ್ಪೊಟಿಲುರಿಕ**, ಮುಪ್ಪೊಳಲುರಿಕ (ನಾ). ತ್ರಿಪುರಗಳನ್ನು ದಹಿಸಿದವನು ; ಶಿವ : "ಎಳೆದೇರ ಗೊರವನೈ ಮೊಗ ಕಂದುಗೊರಲ ಮುಪ್ಪೊಟಿಲುರಿಕಂ . . . ಈಶ್ವರನ ನಾಮಂ" (ಕಶ್ಕಿಮಂ.೩) ; ಮುಪ್ಪೊಟಿಲುರಿಕನೊಳ್ಪೆಯುಂಟೆಂದುಂ, ಮುಪ್ಪೊಱಡೆ ಬಲ್ಲದು (ಅದ್ಭುತ. ೪೩-೩). **ಮುಪ್ಪೊಳಲುರಿಕ :** "ಮುಪ್ಪೊಳಲುರಿಕನೆನೆ ಮಹಾದೇವನಕ್ಕು" (ಕಶರ. ೯೦). [ಮುಪ್ಪೊಟಿಲ್ + ಉರಿಕ]

**ಮುಪ್ಪೋಳು** (ನಾ). ಮೂರುಹೋಳು, - ಭಾಗ, - ತುಂಡು : ಮುತ್ತ ಬಾಳೆಯ ಕಾಯನುಕ್ಕರಿಸಿ ಕದುಕಿಱಿದು ಮತ್ತದಂ ಮುಪ್ಪೋಳು ಮಾಡಿ (ಸೂಶಶಾ. ೪-೯೬).
[ಮುಪ್ (< ಮೂಱು) + ಪೋಳ್₂ (< ಪೋೞ್₂)]

**ಮುಫತ್ತು** (ನಾ). ಪುಕ್ಕಟೆ ; ಉಚಿತವಾದುದು : ಅವನಿಗೊಂದು ಎರಡನೆಯ ದರ್ಜೆಯ ಟಿಕೇಟನ್ನು ಮುಫತ್ತಾಗಿ ಕೊಟ್ಟಿದ್ದಾರೆ (ಅಆನಿ. ೪); ಒಂದು ಸದಸ್ಯರಾಷ್ಟ್ರದ ಅಂಚೆಯನ್ನು ಇನ್ನೊಂದು ಸದಸ್ಯರಾಷ್ಟ್ರ ಮುಫತ್ತಾಗಿ ಸಾಗಿಸಬೇಕೆಂದೂ ಒಪ್ಪಂದವಾಯಿತು (ಕಶಕೋ. I. ೬೪).
[← ಅರ. ಮುಫತ್, ಮುಫ್ತ್; ಪಾರ. ಹಿಂ. ಮುಫ್ತ್; ಮರಾ. ಮುಫತ್, ಮೋಫತ್]

**ಮುಬದಲು** 'ಮುಬಾದಲೆ' ನೋ.

**ಮುಬಾದಲೆ**, ಮುಬದಲು, ಮುಬಾದಿಲೆ, ಮೂಬದಲು,ಮೂಬದಲೆ, ಮೋಬದಲಿ (ನಾ). ೧. ಪ್ರತಿಯಾದುದು; ಅದಲುಬದಲು: ವಿನಿಮಯ : ಮುಬಾದಲೆ ಮುಂತಾದ ಖರ್ಚಿಗೆ ಅವಕಾಶವಾಗದಂತೆ ನೋಡಿಕೊಳ್ಳಬೇಕೆಂತಲೂ ಸನ್ ೧೮೨೬ರಲ್ಲಿ ಹುಕುಂನಾಮ ಸಾದರ್ಮಾಡಿದರು (ಮಹಾಪಂ. II. ೫೭). **ಮುಬದಲು :** ೧. ಮಹಾರಾಜನು ತನ್ನ ಸಹಾಯದ ಮುಬದಲು . . . ಇಂಗ್ಲಿಷರಿಗೆ ನೆರವಾಗುವೆನೆಂದು ಹೇಳಿದನು (ತಂಶಂ. ೨೦೬). **ಮುಬಾದಿಲೆ : ೨.** ತಾತ್ಕಾಲಿಕವಾಗಿ ಕೊಟ್ಟ ಸಾಲ : (ಕಸಂಗ್ನಾ. ೬೫). **ಮೂಬದಲು :** ೧. ತೋಟದೊಳಗೆ ಹೂ ಬೆಳೆಯೋದು ಹೆಚ್ಚಲ್ಲ, ಬಂಜರಭೂಮಿಯೊಳಗ ಹೂ ಬೆಳೆದರ ಅದ ನಿನ್ನ ಬುದ್ಧಿಗೆ ಮೂಬದಲು (ವಾಐಲ. ೦೦೪). **ಮೂಬದಲೆ :** ೧. "ಪ್ರತಿ, ಸಮಾನವಾಗಿರುವ ಮತ್ತೊಂದು ವ್ಯಾಪಕತ್ವ, ಅಸಾಧಾರಣ ಧರ್ಮ, ಮೂಬದಲೆ" (ಸಿದ್ಧಾಂತಿ. ೪೯೦). **ಮೋಬದಲಿ :** ೧. ನನ್ನ ರೂಪಾಯಿಗಳಿಗೆ ಮೋಬದಲಿಯನ್ನು ಮುಟ್ಟಿಸುತ್ತೇನೆಂದು ಕಾಗದ ಬರೆದುಕೊಡು (ಪೋಟಿಯಾ. ೯೬). [← ಅರ. ಮುಬಾದಲಾ; ಪಾರ. ಮುಬಾದಲ, ಮುಬದ್ದಲ್; ಹಿಂ. ಮುಬಾದಿಲಾ; ಮರಾ. ಮುಬಾದಲಾ, ಮುಬದಲಾ, ಮೋಬದಲಾ, ಮೋಬಾದಲಾ ]

**ಮುಬಾದಿಲೆ** 'ಮುಬಾದಲೆ' ನೋ.

**ಮುಬಾರಕ್** (ಗು). ೧. ಮಂಗಳಕರವಾದ ; ಶುಭದಿಂದ ಕೂಡಿದ ; ಒಳ್ಳೆಯ : ಯಾವದೊಂದು ಕಾರ್ಯಕ್ಕೂ ಆ ಇಂಗ್ರೇಜ ಬಹಾದ್ದರ ಕುಂಪನಿ ಮುಬಾರಕ್ ಮರ್ಜಿ ಯಾವ ವೇರೆ ಇದೆಯೋ ಅದರಲ್ಲಿ ಈ ದೋಸ್ತುದಾರರಿಗೆ ಅಬ್ರುಕೀರ್ತಿ ದೊಡ್ಡದಾದೀತು (ರಾಕೀಂಪ್ರ. ೨೪೪). (ನಾ). ೨. ಶುಭ; ಮಂಗಳಪ್ರದ.
[ ←ಅರ. ಪಾರ. ಹಿಂ. ಮರಾ. ಮುಬಾರಕ್ ]

**ಮುಬ್ಬಣ್ಣ** 'ಮೂವಣ್ಣ' ನೋ.

**ಮುಮ್** 'ಮು₁' ನೋ.

**ಮುಮುರಿದಂಡ** 'ಮುಮ್ಮುರಿದಂಡ' ನೋ.

**ಮುಮುಕ್ಷು** (ಗು). ೧. ಐಹಿಕ ವ್ಯವಹಾರಗಳಿಂದ ದೂರವಾಗಲು ಬಯಸುವ ; ಮೋಕ್ಷಾಪೇಕ್ಷೆಯಿಂದ ಕೂಡಿರುವ ; ಮುಕ್ತಿಯನ್ನು

ಬಯಸುವ : ಆವನೊಬ್ಬನ ವಿಮಳಕೀರ್ತಿಸುಧಾವಗಾಹನದಿಂದ ಪಾತಕ ಪಾವನತೆಯಂ ಪಡೆವುದೀ ಜಗವಪ್ರಯತ್ನದಲಿ ಸೇವಿಸುವುದನಾದಿನ ಮುಮುಕ್ಷುಜನಾವಳಿಗಳು (ವಿಶಾಗ. ೪-೩-೨೬). (ನಾ). ೨. ಮುಕ್ತಿಯನ್ನು ಬಯಸುವವನು; ಮೋಕ್ಷಾಪೇಕ್ಷಿ : ಆ ಮುಮುಕ್ಷುಗಳ ಸಮಕ್ಷದೊಳವರ ಪೇಳ್ದ ಮಾಳ್ಕೆಯೊಳೆ ಪರಮಜಿನಪತಿ ಪರಿಭಾಷಿತಮಪ್ಪ ಪೋಷಿತವ್ರತಮಂ ಕೈಕೊಂಡು (ಆದಿಪು. ೩-೪೦ ವ); ಅಕ್ಷಣದೊಳಗ್ನಿಭೂತಿ ಮುಮುಕ್ಷುಗೆ ಮೂಜಿನೆಯ ದಿವ್ಯಸರ್ವಾವಧಿ ಪುಣ್ಯಕ್ಷೇತ್ರ ಶುಭಸ್ಥಾನ ಸಮಕ್ಷದೊಳಾದುದು (ಸುಕುಮಾ. ೮-೪೭); ಶೌರಿ ಭವತ್ಸಾದ ಲಪದಿಂದೆ ಮುಮುಕ್ಷುಗೆ ಮೋಕ್ಷಲಕ್ಷ್ಮಿ ಸಂಸಾರಿಗೆ ರಾಜ್ಯಲಕ್ಷ್ಮಿ ದೊರೆಕೊಳ್ವುದು (ಜಗದ. ೧೭-೩೯). [ಸಂ.]

**ಮುಮುಕ್ಷುತ್ವ** (ನಾ). ಲೌಕಿಕವ್ಯವಹಾರಗಳಿಂದ ದೂರವಾಗಿ ಮುಕ್ತಿಯನ್ನು ಬಯಸುವಿಕೆ : ಮೋಕ್ಷಾಪೇಕ್ಷೆ : ಇಲ್ಲಿ ನಿತ್ಯವಸ್ತುವಿವೇಕದಿಂದ ಮೋಕ್ಷದಲ್ಲಿ ಇಚ್ಛೆಯೆಂಬ ಮುಮುಕ್ಷುತ್ವವೂ . . . ಭೋಗವೈರಾಗ್ಯವೂ ಬರುವುವು (ಹಿಂದಾ. ೨೨೦). [ಸಂ.]

**ಮುಮುಕ್ಷುವೃತ್ತಿ** (ನಾ). ಮುನಿಧರ್ಮ; ಮೋಕ್ಷಾಪೇಕ್ಷೆಯ ನಡವಳಿಕೆ : ಕಾಮಸುಖೋಚಿತಮತಿಗಳ್ ನಾಮೆತ್ತ ಮುಮುಕ್ಷುವೃತ್ತಿಯಂ ತಾಳ್ದಿದಪರ್ ತಾಮೆತ್ತ (ಆದಿಪು. ೫-೭೬). [ಸಂ.]

**ಮುಮೂರ್ಷು** (ಗು). ೧. ಪ್ರಾಣಬಿಡಲು ಇಚ್ಛಿಸುವ; ಜೀವವನ್ನು ತ್ಯಜಿಸಲು ಅಪೇಕ್ಷಿಸುವ. ೨. ಸಾವು ಸನ್ನಿಹಿತವಾಗಿರುವ; ಮರಣಾವಸ್ಥೆಯಲ್ಲಿರುವ : ತನ್ನ ತೊರೆವರ್ಥಕರ ಹಂಬಲಿಸುವ ಮುಮೂರ್ಷು ತಾಯಂತೆ. . . ತನ್ನಳಲನವರ ಹಾಬಲದಿ ಮರೆತುಸುರಿದಂ (ಗೊಲ್ಲೊಘಾ. ೦೨-೩೦೨). (ನಾ). ೩. ಸಾವು ಸಮೀಪಿಸಿದ ವ್ಯಕ್ತಿ; ಮರಣಾಸನ್ನನಾದ ವ್ಯಕ್ತಿ : ಆನೆಯನಿರುಳುಂ ಪಗಲುಂ ಜಾನಿಸಿ ತನು ಮೂರ್ಛಿವೃತ್ತಿ ಪೊರ್ದಿದವೊಲಜ್ಞಾನಿ ನಯಾನಯಚಿಂತೆಯನೇನುಮನರಿಯನೆ ಮುಮೂರ್ಷುತೆಯನರಿದಪನೇ (ಚಂದ್ರಪ್ರ. ೦೦-೩೭); ನವಕುಮಾರನು ಮುಮೂರ್ಷುವಿನಂತೆ ಕಾಪಾಲಿಕನ ಸಂಗಡ ಹೋದನು (ಕಪಾಕುಂ. ೨೫). [ಸಂ.]

**ಮುಮ್ಮಡ, ಮುಮ್ಮಡಿ**$_2$ (ನಾ). ಕಾಲಿನ ಹರಡಿನ ಮುಂಭಾಗ : ಪೆರ್ದೊಡೆ ಕಟಿ ಮುಮ್ಮಡಂ ಪರಡು ಸಂದಿ ನೊಸಲ್ ಪಣೆ ಕಣು ಕದಂಪಿವೆಂಬೆಡೆಯನೆ ನಟ್ಟುವುರ್ಚಿದುವು . . . ಪಾರ್ಥನಂಬುಗಳ್ (ಪಂಪಭಾ. ೦೦-೦೩೭); ಒಂದೆಡೆಯೊಳ್ ಗೋಣ್ಣವಿರ್ ಮುಮ್ಮಡಂಬರಂ ಮುಸುಂಕಿರೆ ಪಟ್ಟೊಂದು ಮುತ್ತ ಸಿಂಗಕ್ಕೆ ತನ್ನ ಕೇಸರಮೆ ಜಾಲಮಾಗಿ . . . ಎಬ್ಬಲರಾಟಿಸಿಯುಮಾಜಿದಿರೆ (ರಾಮಾಶ್ವ. ೪೨-೨೪). ಮುಮ್ಮಡಿ$_2$ : ಕಾಲು. ಕಣಕಾಲು, ತೊಡೆ, ಹಿಮ್ಮಡಿ, ಮುಮ್ಮಡಿಗಳ ಸಹಾಯದಿಂದ ಮಾಡುವ ಒಂದು ಚಲನೆಗೆ 'ಚಾರಿ' ಎನ್ನುತ್ತಾರೆ (ಆಹಾತ್ವ. ೫೦).

[ ಮುಂ$_1$ (< ಮುನ್$_1$) + ಮಡ$_1$ ]

**ಮುಮ್ಮಡಿ**$_1$ 'ಮೂವಡಿ' ನೋ.

**ಮುಮ್ಮಡಿ**$_2$ 'ಮುಮ್ಮಡ' ನೋ.

**ಮುಮ್ಮಡಿಸು** 'ಮೂವಡಿಸು' ನೋ.

**ಮುಮ್ಮಣ್ಣು** (ನಾ). ಮೂರುಸಲ ಬತ್ತದ ಬೆಳೆಯನ್ನು ಕೊಡುವ ಭೂಮಿ: (ಕಸಂಗ್ರ. ೦೭೫).

[ ಮುವ್ (< ಮೂಱು) + ಮಣ್ಣು (< ಮಣ್) ]

**ಮುಮ್ಮನ** (ನಾ). ಹಿಂದಿನ ನೆನಪು,–ಆಲೋಚನೆ : ಮರೆತಿದೆ ಪೂರಾ ಮುಮ್ಮನವು, ಆದರು ಆತ್ಮಕೆ ಘನ ನೆನವು (ಅರಳು. ೦೪೭-೦೩).

[ ಮುಂ$_1$ (< ಮುನ್$_1$) + ಮನ ]

**ಮುಮ್ಮನೆ**$_1$ (ನಾ). ೧. ಮುಂದಿರುವ ಮನೆ ; ಎದುರುಮನೆ : ನೆರೆಮನೆಯ ಮುಮ್ಮನೆಯ ಹೆಮ್ಮಕ್ಕಳ್ ಬೇಗ ಬರೆ (ಸಿದ್ಧರಾ. ೨-೨); ನೆರೆಮನೆಯ ಮುಮ್ಮನೆಯ ಭಕ್ತರು ನೆರೆರುವಟ್ಟಿಯುವ ಹಂಗೆ. . . ನಿಕ್ಷೇಪಮಂ ಮಾಡುತ್ತಿರಲು (ಬಸವ. ೪೮-೨೦). ೨. ಮನೆಯ ಮುಂಭಾಗ, –ಮುಂಬದಿ : ನಮ್ಮದು ತುಂಬ ಹಿಂದಿನ ಕಾಲದ ಮನೆ . . . ಮುಮ್ಮನೆ ಒಳಮನೆಗಳ ನಡುವೆ ತೋಟ (ನಿಬಂಧ. II. ೦).

[ ಮುಂ$_1$ (< ಮುನ್$_1$) + ಮನೆ ]

**ಮುಮ್ಮನೆ**$_2$ (ಅ). ಅತಿಯಾಗಿ; ಹೆಚ್ಚಾಗಿ : ಅತಿಶಯವಾಗಿ : ಪಿಂಗಳಕಂ . . . ಹಮ್ಮದಂಬೋಗಿ ಮುಮ್ಮನೆ ಬೆಮರ್ತಂ (ಪಂಚತಂ. ೪೭-೦೭). 'ಮುಮ್ಮಲನೆ' ಪಠಾ. [ ? ]

**ಮುಮ್ಮಯ್** 'ಮುಮ್ಮೆಯ್' ನೋ.

**ಮುಮ್ಮರಿ**$_1$ 'ಮುಮ್ಮುರಿ$_3$' ನೋ.

**ಮುಮ್ಮರಿ**$_2$ (ನಾ). ನಾಶ; ಹಾಳು : ತೇರ್ತೇರೊಳ್ ಸರಭಸದಿಂ ಮೂತ್ರಾಗೆ ಘಟಕರ್ಣಾದರ್ . . . ಕಾದಿ ನೆರಪಿ ಮುಮ್ಮರಿಯಾದರ್ (ಬಂಧು. ೭-೬೨).

[ ? ]

**ಮುಮ್ಮರಿದಂಡ** 'ಮುಮ್ಮುರಿದಂಡ' ನೋ.

**ಮುಮ್ಮಲ** (ನಾ). [ಜೈನ] ಜೀವನಿಗೆ ಅಂಟಿಕೊಳ್ಳುವ ಆಣವ, ಕಾರ್ಮಿಕ ಮತ್ತು ಮಾಯೆಗಳೆಂಬ ಮೂರುಬಗೆಯ ಮಲಗಳು,–ದೋಷಗಳು : ವ್ಯಸನಸಪ್ತಕದ ನೀಮುರ್ಕ್ಕುಳಿಸುತ ಮುಂದೆ ಮುಮ್ಮಲವೆಂಬ ಸುರೆಯನತಿಹೊಟ್ಟೆಯೊಡೆವಂದದಿಂದೀಂಟಿ . . . ಭವವನಾಳುವರ ಮೇಳವಂ ಬಿಡು (ಕವಿತ. II. ೦೭೩–ವೈರಾಗ್ಯಶಟ್ಪದಿ).

[ಮುವ್ (< ಮೂಱು) + ಮಲ$_3$]

**ಮುಮ್ಮಸಗು** (ಕ್ರಿ). ಮುಂಚೆಯೇ ಆವೇಶವನ್ನು ಹೊಂದು; ಮೊದಲೇ ಉದ್ವೇಗಗೊಳ್ಳು : ದಿವ್ಯರ್ ಗುಜುಗುಜಿಸದಿರಿಮತುಳರುದ್ರಗಣ ಮುಮ್ಮಸಗ ಬೇಡ (ತಿಂಪು. ೨-೨೭). [ಮುಂ$_1$ (< ಮುನ್$_1$) + ಮಸಗು]

**ಮುಮ್ಮಳಿ** 'ಮಣ್ಮಳಿ' ನೋ.

**ಮುಮ್ಮಳಿಗಡಲು** (ನಾ). ಕ್ಷೋಭೆಗೊಂಡ ಸಮುದ್ರ ; ಹೊಯ್ದಾಡುವ ಕಡಲು : ಘುಳುಘುಳಿಸಿ ಕವಿವ ತೆರೆಗಳು ಹಳಚಿ ಕುದಿವ ಮುಮ್ಮಳಿಗಡಲು (ಪಕಣಾ. ೦೦-೨೯). [ಮುಮ್ಮಳಿ (<ಮಣ್ಮಳಿ)+ಕಡಲು (< ಕಡಲ್$_2$)]

**ಮುಮ್ಮಳಿಗೊಳ್** 'ಮಣ್ಮಳಿಗೊಳ್' ನೋ.

**ಮುಮ್ಮಳಿಗೊಳು** 'ಮಣ್ಮಳಿಗೊಳ್' ನೋ.

**ಮುಮ್ಮಳಿಯೋಗು** 'ಮಣ್ಮಳಿವೋಗು' ನೋ.

**ಮುಮ್ಮಳಿಸು** 'ಮಣ್ಮಳಿಸು' ನೋ.

**ಮುಮ್ಮಳೆ** (ನಾ). ಬೇಸಗೆಯ ನಂತರ ಬರುವ ಮೊದಲ ಮಳೆ ; ಮುಂಗಾರು : ನಾನೆ ಮರ್ಬಿನ ಕರ್ಪು ನಾನೆ ಕದಿರ್ಜೊನ್ನವುಂ ಮುಮ್ಮಳೆಯ ತನಿಗಂಪು ಬೇಸಗೆಯ ಬಿರುಜಳಂ (ಸಂಕಪ. ೩೦-೪). 'ಮುಮ್ಮಳೆಗಾಲ' ಪಠಾ.

[ಮುಂ$_1$ (< ಮುನ್$_1$) + ಮಳೆ (<ಮಟೆ)]

**ಮುಮ್ಮಳೆಗಾಲ** (ನಾ). ಮಳೆಗಾಲದ ಆರಂಭ; ಮುಂಗಾರಿನ ಸಮಯ: ಶರಧಿ ಮುಮ್ಮಳೆಗಾಲದಲ್ಲಿ ಭೋರ್ಗರೆವವೊಲು ಭೋರೆಂದು ಹಚಿಯಬ್ಬರಿಸಿದುವು (ಕೊರಾ. ೭-೩೫-೧೦).

[ಮುಂ$_1$ (< ಮುನ್$_1$) + ಮಳೆಗಾಲ (< ಮಟೆಗಾಲ)]

**ಮುಮ್ಮಱಿದಂಡ** 'ಮುಮ್ಮುರಿದಂಡ' ನೋ.

**ಮುಮ್ಮಱಿಸು** (ಕ್ರಿ). ಎದುರಿಗೆ ಮರೆಮಾಚು (?) : ಘಡ ಹೋಗದಿರ್ ಮುಮ್ಮಱಿಸಿ ಮಂಟಪಕೆ ಕಿಚ್ಚನಿಕ್ಕಿದ ಕಳ್ಳಬಂಟರಿವರಂ ಬೇಗದಿಂ ಓಡಿ (ತಿಂಪು. ೩೦-೨೭).

[ಮುಂ$_1$ (< ಮುನ್$_1$) + ಮಱಿಸು (< ಮಱಿಯಿಸು)]

**ಮುಮ್ಮಟಿ** 'ಮಣ್ಮಟಿ' ನೋ.

ನೆಸಗೆ ಪೊಣ್ಣಕ್ಕುಮೆಂದಿಕ್ಕುಜುಂ ಮಾಡುವ ದಾನಂ ದಾನಮಲ್ಲಂತದು ಬಗೆವೊಡೆ ಮುಯ್ಯ್ಂಧುಗಳ್ಗೀವುದಕ್ಕುಂ (ಧರ್ಮಾಮೃ. ೪-೪೭) ; ನೆರೆವದಳ ದರೆವ ಸಾಂದಿನ ಮೊರೆವಳಿಗಳ ಪರೆವ ಕಂಪನೆರೆವನಿಳಸ ಮುಯ್ಯೊರೆವ ಪಿಟಭೋಗಿಗಳ ವಿಸ್ತರದಿಂ ಸೊಗಯಿಪುವು ಘಟ್ಟವಳರಂಗಡಿಗಳ್ (ಶಶ್ವ. ೨-೯೩) ; ಮುನಿವರನು ಬಿಜಯಂಗೈದು . . . ಮಕ್ಕಳ್ ಪರಮವಿಭ ವಕೆ ಮು[ಶಾಶಾಂ. ಮೈ]ಯ್ಯನಾಂತು ಮುನೀಂದ್ರನಿಂತೆಂದ (ಕುಮಾರ. ೪-೯). ೨. (ಮದುವೆಯ ಸಮಾರಂಭದಲ್ಲಿ ವಧೂವರರಿಗೆ ನೆಂಟರಿಷ್ಟರು ಕೊಡುವ) ಬಳುವಳಿ; ಉಡುಗೊರೆ : "ತಲ್ಲಟೆಯೆನಲ್ಕೆ ಮುಯ್ಯ್" (ಶಕುನ. ೭೦) ; ಘಟ್ಟಿ ಪಟ್ಟೆಯ ಸೀಳ ಸುರಳ ತಲೆಯ ಮೇಲಿಟ್ಟ ಶಂಭು ಕುಮಾರ ಮುಟ್ಟಿ ಮುಯ್ಯ್ಗಳ ಜೀರವಿಡಿದು ಕಣ್ಬಗೆಗಳಪಟ್ಟ ಬರಲು ಬಂದನಾಗ (ವೀರಸಂ. ೨೦-೩೦) : ಮೇದಿನೀಶ್ವರರಾಗ ಮುಯ್ಯ್ಗಳನೋದಿಸಿ ದರಪನಿಪಗೆ ಸತಿಗಿಸ್ಕೈದೆತಸ ಮಿಗಿಲೆಂದು ಪರಸಿತು ಮುನಿವಧೂನಿಕರ (ನಳಚ. ೯-೧೨). ೩. ಮಾಡಿದುದಕ್ಕೆ ಪ್ರತಿಯಾಗಿ ಮಾಡುವುದು ; ಪ್ರತೀಕಾರ ; ಸೇಡು : ಭೀಮಂಗೆ ಪಾರ್ಥಂಗೆ ಕೃಷ್ಣಂಗೆ ತೀರಿಸಿದ ಮುಯ್ಯ್ಗಳನ್ ಕೀಜು, ಅಣಕಿಸುತೆ . . . ಬಂದನ್ (ಅಶ್ವಶಾ. ೧೩-೨೭೦). ೪. ಮಾಡಿದ ಕೆಲಸಕ್ಕೆ ಪ್ರತಿಯಾಗಿ ದೊರೆಯುವ ಲಾಭ; ಪ್ರತಿಫಲ: ಸತ್ಯಪ್ರತಿಜ್ಞನೆನೆ ಕುರುಪತಯೂರುಕಿರೀಟಭಂಗಮಂ ಪಡೆದು ಜಗತ್ಸ್ತುತ್ಯ ಕೃತಕೃತ್ಯನೆನಿಸದೆ ಸತ್ಯಾಶ್ರಯಮೆಸರ್ಗೆ ಮುಯ್ಯನಾಂಪನೆ ಭೀಮಂ (ಗದಾಯು. ೦-೬೪) ; ಪೊಸದೇಸೆಯೊಳೊಂದಿದ ಮಾರ್ಗಮೊಳ್ಪುವೆತ್ತ ಸೆದಿರೆ ಪೇಟ್ಟು ಅಂಜಿಸದೆ ಕಮ್ಮನೆ ಬಲ್ಮೆಗೆ ಮುಯ್ಯನಾಂಪುದೇ (ಸುಕುಮಾ. ೦-೪೪) ; ಹಕ್ಕಲಂತೆ ಬಡಿಪಕ್ಕೆ ವಂದು ಮುಯ್ಯಿಲ್ಲದೊಕ್ಕಲಂತೆ ಬಡುಗುಲಿಗೆ ವಂದು (ಧರ್ಮಾಮೃ. ೩-೭೭) ೫. ಗೌರವ; ಸತ್ಕಾರ; ಆದರ : ಪ್ರಿಯಚಿತ್ತದಿಂ ನಿನ್ನ ಮೆಲ್ವಚನಂಗಳಂ ನೆಜ಼ ಕೇಳ್ದು ಮುಯ್ಯನೆ ಮಾಡುವೆಂ (ಧರ್ಮಾಮೃ. ೩-೨೨೦). ಮುಯ್ಯಿ$_1$: ೧. ಶುಭಮುಹೂರ್ತದಲಿ ಪಟ್ಟವ ಕಟ್ಟಿದರು ನೃಪಗೆ . . . ಧರೆಯರಸುಗಳು ಕೈಮುಗಿದು ಮುಯ್ಯಿಗಳನಿತ್ತರವನಿಪಗೆ (ರಾಮಚ. ೩೨-೦೦೭). ೨. ಹದಿನಾಜುದಿನಮುಟ್ಟ ನಮಿರಾಜ ತಮಗೆ ಮಾಡಿದ ಲೇಸ ಮಜಿಯದೆ ತಾವು ಮದುವೆಯೊಳ್ ನಚರಿ ಮುಯ್ಯಿಗಳ ಸಲಿಸಿ ತಿದ್ದಿದರು ಭೂಮಿಪರು ವ್ಯಂತರರು (ಭರತ. ೪೩-೦೦೬). ೪. "ಪ್ರತಿ ಯಾತನಂ ಪ್ರತಿ ಪ್ರತಿಕೃತಿಯೆನಲ್ಕೆ ಮುಯ್ಯಿ" (ಮಂಗರಾ. ೦೩೫-೩೭). ೬. ಪಡೆದುದಕ್ಕೆ ಪ್ರತಿಯಾಗಿ ಕೊಡುವುದು : ಎರವು . ಮುಯ್ಯಿ ಮುಟ್ಟುಂಟು ವಸ್ತ್ರೋತ್ಕರಗೊಳಗೆ ಭಾವಿಸಲು ಮಕ್ಕಳ್ ಸೆರವ ಕೊಟ್ಟವರುಂಟೆ ಮಾರಿಯ ನಾಲಿಗೆಯ ಸವಿಗೆ (ಕುಮಾರ. ೧೦-೦೮). ಮುಯ್ಯ : ೩. ಮುಯ್ಯಕ್ಕೆ ಮುಯ್ಯ ತೀರಿತು . . . ನಿನ್ನ ಮುಯ್ಯಕೆ ಮುಯ್ಯ ತೀರಿಸಿ ಕೊಂಡಯ್ಯ (ಪುರಂದ. ೧-೭೫-೨) : "ಮುಯ್ಯಕ್ಕೆ ಮುಯ್ಯ" ತೀರಿಸದೆ ಬಿಡುವುದಿಲ್ಲ ನಮ್ಮ ಜನ ಎಂಬುದೇ ಅವರ ಚಿಂತೆಯಾಯಿತು (ಹಬ್ಬಬ. ೪೦). ೪. ಗುರುವಿಂಗೆ ತನು ಲಿಂಗಕ್ಕೆ ಮನ ಜಂಗಮಕ್ಕೆ ಧನ ಇಂತಿವ ಕೊಟ್ಟು ಮುಕ್ತಿಯ ಗಳಿಸಿಕೊಂಡಿಹೆನೆಂಬ ಮುಯ್ಯ ಬಂಧುಗಳಂತೆ (ಮೋಳಿಮಾ. ೨೯-೦೦೭). ಮುಯ್ಯಿ : ೧. ಕೊಡಬೇಕು, ಸಂತರ ಮುಯ್ಯಿ, ದಾನ, ಬ್ರಾಂಬರಿಗೆ ಬಡವರಿಗೆ ಕಿರಿಜನರಿಗೆ (ಕಂಗೂರ. ೦೭೨) ; ಕರನಾಟಕದವರು ನಮ್ಮವರು ನಾರಿಗುಳ್ಳವ್ವ ಕರಕೀಯ ಮುಯ್ಯ ತಂದಾರ (ಕನ್ನಜಾ. ೦೪೩). ೨. ನಮ್ಮ ಕೈಲಾದರೆ ಮುಯ್ಯಿ ಉಡುಗರೆ ಮಾಡುತ್ತೇವೆಯೋ ವಿನಾ, ಇಲ್ಲದೆ ಇದ್ದರೆ ಇಲ್ಲ (ಮುಳ್ಳಹಾ. ೨೦). ೩. ಶ್ರೀರಾಮನಿಗೆ ಸರಿದೊರೆ ಯಾರು . . . ಸೀತಾಪಹರಣದ ಮುಯ್ಯಿಗಾಗಿ ರಾಕ್ಷಸವಂಶವನ್ನೆ ಹೆಸರಳಿ ಯಿಸಿದನು (ನಾಡೋಜ. ೩) ; ಒಂದೇ ಬೇಕು ನೊಂದ ಮನಕೆ ! ಸೇಡು ! ಮುಯ್ಯಿ ! (ಅರ್ಜುನ. ೦೦೨). ೪. ಸುತೆಯ ಪೋಷಿಸಿ ಬೆಳಸಿ, ಧನಕನಕ ದೊಡನವಳನ್ ಇತರ ಗೃಹಕಿತ್ತು ನೀಂ ಕೇಳ್ದ ಮುಯ್ಯೇನು ? (ಮುಂಕುಶ. ೯೭). ೫. "ಮುಯ್ಯಿನಲು ಮುರ್ಯಾದೆ" (ಕಥಾ. ೯೦). ೬. ಸಿರಿಯಾಳನಂತೆ ಉಣಲಿಕ್ಕ ಬಲ್ಲೆನೆ ದಾಸಿಮಯ್ಯನಂತೆ ಉಡಕೊಡ ಬಲ್ಲೆನೆ ಉಂಡುಟ್ಟು ಕೊಟ್ಟರೆ ಮುಯ್ಯಿಗೆ ಮುಯ್ಯಿನಿತ್ತು (ಬಸವ. ೩೦೯) ; ಮುಯ್ಯ ಮಾತಲ್ಲಿದುವೆ ನಮ್ಮಯ ಕಯ್ಯಲಹ ಸೇವೆಯನು ಕೈಕೊಂಡಯ್ಯ ನಾಗಿಹುದು (ಕೊರರಾ. ೩-೦-೪೫). ಮುಯ್ವು$_1$ : ೧. ಆ[ಶ್ಚ]ರ್ಯ ಪುರುಷ ಇಜಿದು ಬಸಮುಟ್[ಶ್ರುದ್ದ]ಬೀಟಿ್ವರನ್ ತೆಜನ ಮೆಚ್ಚದೊಂ . . . ನಣ್ದೇವಂಗಳಿಸ್ಲಿ ಮುಯ್ವುವ್ಪಡೆದೊಂಗರ ಅಲೆದೊಂ ಮೂವಲಿಪೊಂ (ಎಇ. XXIV, ೦೯೩-೦೩ ; ಸಂ. 885). ೩. ಕ್ಷಿತಿತಳದೊಳ್ ನೆಗಟ್ದುರ್ದ ಪ್ರತಿಮಲ್ಲನನಿಕ್ಕಿ ಮುಯ್ವನಣಮಾನದೆ ದರ್ಪಿತದುರಿತಮಲ್ಲನುಮನುಡಿವ ತಕ್ಕನಿಂ ಸಭೆಗೆ ನಡೆದನಿಂದ್ರಾರ್ಜಿತನಾ (ಆದಿಪು. ೧೪-೦೩೪). ೪. ಆತಂಗೀವ ಮುಯ್ವಂ ನಿನಗೆ ಕೊಡುವೆನೇಟಕ್ಕ ಪೋಗು (ಅನಂಪು. ೬-೦೩) ; ಬಯ್ವ ಹನಸುಗಳಿಂದ ಬೇಳ್ದ ಬಗೆ ದಳ್ಳಸಲ್ ಮುಯ್ವುಗಳ ಕೊಡುವೆನೆಂದಂ ಪಲ್ಲನಗಿದಂ (ಕಾಲೂರ. ೦೩೦-೨೭೮). ೫. ಮುಯ್ವನಾನುವುದವರ್ಗೆ ಭುವನವು ಬೈವುದೈ ನಿಮ್ಮನಿಬರನು (ಕುಮಾರ. ೦-೨೩).

ಮುಯಿಮಾಡು, ಮುಯ್ಮಾಡು, ಮುಯ್ಯಮ್ಮಾಡು = ೧. ಒಂದಕ್ಕೆ ಪ್ರತಿಯಾಗಿ ಮತ್ತೊಂದನ್ನು ಕೊಡು : ಕಮಲಕೆ ವದನವ ಹಂಸೆಗೆ ನಡೆಯನು ಕುಮುದಕೆ ಪೊಳೆವ ಕಂಗಳನು ಭ್ರಮರಕೆ ಕುರುಳನು ಮುಯಿ ಮಾಡಿ ಮೆಜಿದರಾ ರಮಣಿಯರಾ ವನದೊಳಗೆ (ಜೀವಂಧರ. ೦೯-೫೭) ; ಚುಂಬಿಸುಪಿದ ನಾಲವ ತಿದ್ದಿ ತೆಗೆವರು ತಂಬುಲ ಮುಯಿ ಮಾಡುತಿಹರು (ಭರತ. ೦೦-೦೦೩). ೨. ಪ್ರತೀಕಾರ ಮಾಡು : ಎನ್ನ ಉಪಕೃತಿಗಳನ್ ಇಂತು ದುಷ್ಕೃತಿಗಳನ್ ಮುಯ್ಮಾಡಿದೆಲ್ಲ ದೇವರ್ಕಳುಂ ಎನಗೆ ಪಗೆಗಳೆಂದೇ ಎಣಿಸಿವಪ್ಪನ್ (ಬಿದ್ದಕ್ರ. ೫೦_೦೦೨೪). ೩. ಬಳುವಳಿ ಕೊಡು : ಉಡುಗೊರೆ ನೀಡು : ಹರುಷದಿಂದವರ್ಗೆ ಸೀಸೆಯನಿಕ್ಕಿ ನವರತ್ನ ಖಚಿದಿದ ವಸ್ತ್ರಗಳನಿರದೆ ಮುಯ್ಯಮ್ಮಾಡಿ ತೆರಳಲು (ಸಿದ್ಧಕಾ. ೧೦-೩೭). ಮುಯ್ಯಿಗೆ ಮುಯ್ಯಿ = (ಒಳ್ಳೆಯದಾಗಲಿ- ಕೆಟ್ಟದಾಗಲಿ) ಪಡೆದುದನ್ನು ಹಿಂತಿರುಗಿ ಕೊಡುವುದು : ಪ್ರತೀಕಾರ : ಪಾದಾರ್ಚನೆಯ ಮಾಡುವೆನಯ್ಯಾ ಪಾದೋದಕದ ಹಂಗಿಂಗೆ . . . ಕೂಡಲಸಂಗನ ಶರಣರ ನಿಲವನರಿಯದೆ ಮುಯ್ಯಿಗೆ ಮುಯ್ಯಾಗಿ ಕೆಟ್ಟಿತ್ತಯ್ಯಾ ಎನ್ನ ಭಕ್ತಿ (ಬಸವ. ೩೯೭). ಮುಯ್ಯಿ ತೀರಿಸಿಕೊಳ್ಳು = ಸೇಡುತೀರಿಸಿಕೊಳ್ಳು ; ಹಗೆಸಾಧಿಸು : ಕುತುಬ್‌ಷಾಹಿ ದೊರೆಯು . . . ವಿಜಯನಗರದ ಮೇಲೆ ಮುಯ್ಯಿ ತೀರಿಸಿಕೊಳ್ಳಬೇಕೆಂದು ಸಮಯ ನೋಡುತ್ತಿದ್ದನು (ರಾಮಚ. ೦೦೨) ; ರಾತ್ರಿ ಅವರ ಶಿಬಿರಕ್ಕೆ ಹೋಗಿ ಮುಯ್ಯಿತೀರಿಸಿಕೊಂಡೆವು (ವತಭಾ. ೩೦೭). ಮುಯ್ಯಿತೀರು = ಸೇಡು ಕೊನೆಗೊಳ್ಳು : ಹಗೆಯು ಸಾಧಿತವಾಗು : ದಡಕ್ಕಾದರೂ ಹೋಗಿ ಗಟ್ಟಿನೆಲದ ಮೇಲೆ ನಿಂತುಕೊಂಡು ಮುಯ್ಯಿತೀರುವ ತನಕ ಬಯ್ಯುತ್ತಿರು (ಹಸುಹೂ. ೩೮೪). ಮುಯ್ಯಿಹಾಕು = ಉಡುಗೊರೆ ನೀಡು : ಬಳುವಳಿ ಕೊಡು : ಅಕಸ್ಮಾತ್ ಮದುವೆಗೆ ಹೋಗದಿದ್ದರೆ ಮುಯ್ಯಿಹಾಕುವುದನ್ನು ತಪ್ಪಿಸಿಕೊಳ್ಳುವುದಕ್ಕೋಸ್ಕರ ಬರಲಿಲ್ಲವೆಂದು ಆಕ್ಷೇಪಿಸುತ್ತಾರೆ (ವಸ್ತೂರು. ೯೨). [ ದೇ.■ ತಮಿ. ಕೊತ. ಮೊಯ್ ; ಕೊಡ. ಮುಯ್; ತುಳು. ಮುಯಿ ]

ಮುಯ್$_2$ 'ಮುಯ್ವು' ನೋ.

ಮುಯ್$_3$ 'ಮೂ$_1$' ನೋ.

ಮುಯಿ$_1$ 'ಮುಯ್$_1$' ನೋ.

ಮುಯಿ$_2$ (ನಾ). ಹಾಳು : ನಾಶ ; ಧ್ವಂಸ (?) : ದಿನಪತಿ [ಶನಿ] ನೋಡೆ ಕಾಡಿಗೆ ಧರಣಿಯ ತ[ನಯನೆ] ನೋಡೆ ಕಾಡಿಗೆ ಕಳಕುಳಂ ಘಣೆ ನೋಡೆ ಮುಯಿ ನಿಶ್ಚಯಮಕ್ಕುಂ (ಲೋಕೋಪ. ೨_೪೧) : ಘಣೆ ನೋಡೆ

ಮುಯಿ ನಿಶ್ಚಯಮುಕ್ಕುಂ ... ಮಂಗಳರಾಹುಗಳ ವೃಷ್ಟಿಯಿರ್ದೊಡೆ ಬೆಳೆ ಪಾಟಿಯಾಗಿ ಕೆಡುವುದು (ಲೋಕೋಪ. ೨-೪೦ ಟೀಕೆ). [ ? ]

**ಮುಯ್ಯಾಕಱು** (ಕ್ರಿ). ಸೇಡನ್ನು ಹೊರಹಾಕು ; ದ್ವೇಷವನ್ನು ಕಕ್ಕು ; ಅರೇಸ್ ದೇವನಲ್ಲಿ ತಾನ್ ಕಂಡನ್ . . . ಮುಯ್ಕಾಱಿ ಕಣ್ಗಳನ್ ಕೊಲೆಗಯ್ಯಿನಿಱಿದುದನ್ (ಅಂತಿಗೊ. ೪೩-೯೦೦).

[ಮುಯ್$_1$ + ಕಾಱು$_1$ (< ಕಾಱಿನ್)]

**ಮುಯ್ದೆಗೆ** (ಕ್ರಿ). ಪ್ರತೀಕಾರವನ್ನು ಮಾಡು ; ಪ್ರತಿಭಟಿಸು ; ಎದುರಿಸು : ಸುಭಟನ ಸಿಂಹನಾದಕೆ ಮುಯ್ದೆಗೆದು ಕರಿ ಕಾದುತಿರ್ದುದು ಭೀಮಸೇನನಲಿ (ಕುಮಾ.ದ್ರೋ. ೩-೩೬). [ ಮುಯ್$_1$ + ತೆಗೆ$_1$ ]

**ಮುಯ್ಪು, ಮುಯ್$_2$, ಮುಯ್ವು$_2$** (ನಾ). ೧. ಹೆಗಲು; ಭುಜಾಗ್ರ : "ಭುಜಾಗ್ರಃ, ಅಂಸಂ — ಈ ೨ ಮುಯ್ಪು" (ಹಲಾಯು. ೮೭-೩೭೦) ; ರಾವಣನಂ ಕೊಂದು ಜಯಶ್ರೀವಧುವಂ ತಾಳ್ದಿ ಮುಯ್ಪಿ [ಪಾಠಾಂ. ಯ್ವಿ] ನೊಳ್ ಪರಸೀತಾದೇವತೆಯುಂ ತರ್ಪನ್ನೆಗಮೋವದೆ ಪುರುಷವ್ರತೋಚಿತಂ ವೀರರಸಂ (ಪಂಪಾ. ೩-೧೯೦) ; ನೀಮುಮೆಡದ ಕೈಯನೆಟ್ಟಲಿಕ್ಕಿಯರ್ಧಗಪ್ಪಡ ಮನೆಡದ ಮುಯ್ಪಿನ ಮೇಗಿಕ್ಕಿ . . . ಬಲದ ಕೈಯೊಳ್ ಭೈಕ್ಷದ ಭಾಜನಮಂ ಪಿಡಿದು (ವಡ್ಡಾರಾ. ೯೨-೦೭) ; ಬಲವಂದು ಬಾಹುಬಲಿಯ ನಣಂ ಭೇದಿಸಲಾಱದುದಱಿಸಿರ್ದುದು ಮಸುಳ್ದಿಸಸಂಗೆಟ್ಟು ಬಲದ ಮುಯ್ಪಿನ ಕೆಲದೊಳ್ (ಆಪು. ೦೪-೧೦೭). ೨. ಪಕ್ಷಿಗಳ ರೆಕ್ಕೆಗಳು ಮೂಡುವ ಜಾಗ ;— ರೆಕ್ಕೆಗಳ ಮೂಲ : ಜೋಲ್ದಿಱಿಯಲ್ ಮುಯ್ಪುಗಳಾವಗೆಪಱಿಯಲ್ ಬಲಪಾಱದಂತು ಮುಟ್ಟಿಂ ಪಾಱಲ್ (ಕಾದಂಪೂ. ೧೩೫) ; ಎಱಕೆಗಳಂ ಪೆಲ್ಲನುರ್ಚೆತ್ತಿ ಸಿಂದೊಯ್ಯನೆ ಮುಯ್ಪುಂ ತ್ರೋಟಿಯಿಂದಂ ತೊಡೆದು . . . ಕುಕ್ಕುಟಂ ಕೂಗಿತಾಗಳ್ (ಸುಕುಮಾ.೪-೫೭). **ಮುಯ್$_2$** : ೧. "ತ್ರೋಳ್ದಲೆ ಮುಯ್ಯೆನಲ್ ಭುಜದ ತುದಿಪೆಸರು" (ಶಬ್ದಮ. ೭೨) ; ಪಿರಿದುಂ ಸಂತೋಷದಿಂದಂ ತನಗೆ ಸಕಲಸಾಮ್ರಾಜ್ಯಮುಂ ಕೈಗೆವಂದಂತಿರೆ ಪೆರ್ಚಿದರ್ಪಿಂದು ಮುಯ್ಯೆಲ್ಲದೆ ನಲಿದನನಂಗಾಂತಕಂ (ಧರ್ಮಾಮೃ. ೧_೨೦೯). **ಮುಯ್ವು$_2$**: ೧. "ತ್ರೋಳ್ದಲೆ ಮುಯ್ವು [ಪಾಠಾಂ. ಯ್ಯೆ] ನಲ್ ಭುಜಾಗ್ರಕ್ಕೆ" (ಶಬ್ದಕ್ಕೆ. ೬೬) ; ಬಳೆದುವು ತ್ರೋಳ್ಗಳೆಕ್ಕೆಯಿನಮಳ್ ಬಳೆವಂತಿರೆ ಮುಯ್ವುಗಳ್ ಕುಳಾಚಳಶಿಖರಂಗಳಂ ಮಸುಳಿಸಂದುವು (ಪಂಪಭಾ. ೨-೩೭) ; ಉರಮುಂ ಮುಯ್ವುಂ ಮುಂಡುಪುಂ ಬೆನ್ನುಂ ಕೊರಲುಂ ನಡುನೆತ್ತಿಯುನೆತ್ತಿ ಪೊಯ್ದರೊರ್ವರ ನೊರ್ವರ್ (ಗದಾಯು. ೯-೦೫). ೩. (ಪ್ರಾಣಿಗಳ) ಬೆನ್ನು; ಹಿಂಭಾಗ : ಆ ವೃಕ್ಷಮನಾಶ್ರಯಿಸಿದ ತಾವೆರಡು ಕಕುದಸಬಂಧಿಯುಂಶ(ಸ)ಮೆಸಿಕ್ಕುಂ ಆ ವಂಶದ ಮೊದಲಾಶ್ರಯ ತಾವಿನ ಮುಯ್ವುಗಳೆ ದಾಪಮೆಂಬಭಿಧಾನಂ (ಅಕ್ಷರಾ. ೯-೩೦). ೪. (ಆಲಂ) ಭುಜಬಲ ; ಸಾಮರ್ಥ್ಯ : ಕಲಿಸಿದ ಭಾರ್ಗವಾತ್ಮಜರ ನೋಡದೆ ತಜ್ಞರ ಮುಯ್ವು ನೆತ್ತಿಯುಂ ಗೆಲೆ ಸಲೆ ರಾಮಲಕ್ಷ್ಮಣರದೇಂ ನೆಱೆ ಕಲ್ತರೊ ಕೈದುವೆಲ್ಲಮುಂ (ಪಂರಾಮಾ. ೩-೧೫೦); ಬಲ್ಲಾಳದೇವನ ಬೆನ್ನ ಮುಟ್ಟಿ ನೋಡಿ ಮೆಚ್ಚಿ ಮುಯ್ವುಂ ಕೊಂಡಾಡೆ (ಪ್ಯ್ಕಿಅ. ೦೯೩೭, ೩೦-೭ ; 1310). 'ಮುಡುಪ್ಪು$_3$' ನೋ.

ಮುಯ್ಪುಂ ನೋಡು, ಮುಯ್ವುಂ ನೋಡು = ೧. ಸಾಮರ್ಥ್ಯವನ್ನು ಕಂಡುಕೊಳ್ಳು; ಭುಜಬಲವನ್ನು ಅರಿತುಕೊಳ್ಳು : ಎನ್ನಂತು ಸಂದ ಕಳ್ಳರಿಲ್ಲೆಂದು ಮುಯ್ಪುಂ ನೋಡಿ ಪತ್ತುಂ ತನ್ನೊಳಿಂತೆಂದಾಳೋಚಿಸಿದಂ (ಧರ್ಮಾಮೃ. ೭-೫೪).೨. ಹೆಮ್ಮೆಪಡು ; ಗರ್ವಿಸು ; ವಜ್ರಕುಮಾರನಂ . . . ಮಣಿಮಾಲಿಮಹಾದೇವಿ ಕಂಡು ಮುಯ್ವುಂ ನೋಡಿ ರಾಗದಿಂ ವಿಳಾಸಿನಿಯರ್ಗಿಂತೆಂದಳ್ (ಧರ್ಮಾಮೃ. ೯-೦೪೨); ಸುಂದರಿ ಯೆರಡುಂ ಮುಯ್ವುಂ ಪಡೆದಗ್ಗಳಿಕೆಗೆ ಮೆಯ್ಮೆರ್ಚಿ ವಿಧಾತ್ರನಿಂದೆ ಮುಯ್ವುಂ ನೋಟ್ಟಿಂ (ಕಾವ್ಯಾವ. ೧೯೦). ೩. ಹೆಗಲನ್ನು ಮುಟ್ಟಿಕೊಳ್ಳು : ಭುಜವನ್ನು ತಟ್ಟಿಕೊಳ್ಳು : ಕದನೋತ್ಸಾಹದೆ ಸೂಸೂಱಿದರೆ ಮುಯ್ವುಂ ನೋಡುತುಂ ಬಾಹುಕಾಂಡದ ಕಂಡೂತಿಗಳಂ ತೆರಳ್ದಲೆಡೆಯಾ ಯ್ತೆಂದಂದು ಮೆಯ್ಮೆರ್ಚಿದಂ (ಜಗನ್ನಾ. ೭-೪೪). ೪. ಸಂತೋಷಿಸು : ಉಬ್ಬು : ಕೆಟ್ಟ ಸಾಲಂ ಬಂದ ಪರದನಂತೆ ಮುಯ್ವುಂ ನೋಡಿ (ಧರ್ಮಾಮೃ. ೩-೦೨೫). **ಮುಯ್ವುಂ ನೋಡಿಸು** = ಸಂತೋಷಪಡುವಂತೆ ಮಾಡು : ಬಾಳಕಾಲದೊಳ್ ತೊಡರ್ದ ಪೊಡರ್ದಯ್ವರ ಬಾಲಕ್ರಿಯೆಯುಂ ಮುಯ್ವುಂ ನೋಡಿಸಿತು ತಾಯುಮಂ ತಂದೆಯುಮಂ (ಪಂಪಭಾ. ೨-೧೧); " ಮುಯ್ವುಂ ನೋಡಿಸಿತು — ತಮ್ಮ ಹೆಗಲುಗಳನ್ನು ತಾವು ನೋಡಿ ಕೊಳ್ಳುವ ಹಾಗೆ ಮಾಡಿತು ಎಂದರೆ ಇಂಥ ಮಕ್ಕಳು ಇದ್ದಾರಲ್ಲಾ ಎಂದು ಸಂತೋಷಿಸುವ ಹಾಗೆ ಮಾಡಿತು " (ಪಂಪದೀ. ೫೯). ಮುಯ್ಯಾಗು = (ಆಲಂ) ಆಧಾರವಾಗು ; ಆಶ್ರಯ ನೀಡು (?): ನಿಮಿರ್ಚಿ ಬಿಕ್ಕುಳಿಕೆ ಮೆಯ್ ಮುಯ್ಯಾಗೆ ಕಂಪಕ್ಕೆ ದಲ್ ಕುರುರಾಯಂ ಗದೆವೊಯ್ಲಿನಿಂದಿಳೆಗೆ ಬಿಟ್ಟಂ ಬೆಟ್ಟು ಬಿಟ್ಟಂದದಿಂ (ರಸರ. ೪-೧೯೦).

[ದೇ.॥ ತಮಿ. ಮೊಯ್ಪು; ಮಲ. ಮುಟಿಪ್ಪು; ತೆಲು. ಮೂಪು]

**ಮುಯ್ಮೆ** 'ಮೂಮೆ' ನೋ.

**ಮುಯ್ಯ** 'ಮುಯ್$_1$' ನೋ.

**ಮುಯ್ಯಚ್ಚಿ** 'ಮೂವಚ್ಚಿ' ನೋ.

**ಮುಯ್ಯಚ್ಚಿಗ** (ನಾ). ಮೂರುಕಣ್ಣುಗಳುಳ್ಳವನು ; ಶಿವ ; ಮುಯ್ಯಚ್ಚಿಗಂ ತನ್ನೊಳುಂ ತಾನೆ ಮಚ್ಚುತ್ತಂ ಶಯ್ಯೆಯಂ ಬಿಟ್ಟವಳ ಮೆಱೆವೆನೆಂದುಜ್ಜುಗಿಸಿ ಪೂಜಿಮುಟ್ಟು ಬಂದನು (ರಾಶತ. ೭-೦೦೪).

[ಮುಯ್ಯಚ್ಚಿ ( < ಮೂವಚ್ಚಿ ) + — ಗ$_2$]

**ಮುಯ್ಯಡಿ** (ನಾ). ಮೂರುಅಡಿ,_ಪಾದ : ಮುಯ್ಯೆಂಬುದರ್ಕೆ— ಮುಯ್ಯಿರಡಿ, ಮುಯ್ಯೆಂದಂ, ಮುಯ್ಯಡಿ (ಶಮದ. ೧೯೯ ಪ್ರಯೋ). 'ಮುಯ್ಯಡಿಯ' ಪರಾ. [ಮುಯ್$_3$ ( < ಮೂಱು ) + ಅಡಿ$_1$]

**ಮುಯ್ಯಡಿಯ** (ನಾ). " ಮೂಱುಪಾದಗಳುಳ್ಳವನು, ಭೃಂಗಿರಿಟಿ. ಭೃಂಗೀಶ " (ಪ್ರಶಬ್ದ) : ಅಮಳಕೈಲಾಸಪರ್ವತವಿಳಿದು ದೃಢದಿಂ ಮೃಡಾ ಭಿಷವಮಂ ಬಿಡದೆ ನಿಜದಿಂದೆ ಪೊಡಮಿಗಂ ನಡೆತಂದನತ್ಯಂತಮಹಿಮಾತಿಶಯ ಪಾಂತ ಮುಯ್ಯಡಿಯನು (ಪಾಸೋಪು. ೧-೭೨). [ಮುಯ್ಯಡಿ + — ಅ$_7$]

**ಮುಯ್ಯರ್ಧ** (ನಾ). ಮೂರು ಮತ್ತು ಅರ್ಧ ; ಮೂರುವರೆ : ಪಾದಿಪಮ್ಮಣ ಮುಯ್ಯರ್ದ್ಧಾಂಶಃ (ಇಅ. VII, ೦೮೭-೪೨; 688).

[ಮುಯ್$_3$ ( < ಮೂಱು ) + ಅರ್ಧ]

**ಮುಯ್ಯಾನ್$_1$, ಮುಯ್ಯಾನು$_1$, ಮುಯ್ವಾನ್$_1$** (ಕ್ರಿ). ೧. (ಒಳ್ಳೆಯದು ಅಥವಾ ಕೆಟ್ಟುದನ್ನು ಮಾಡಿದುದಕ್ಕೆ) ಪ್ರತಿಯಾಗಿ ಕೊಡು ; ಪ್ರತೀಕಾರ ಮಾಡು : ಅನುಜನ ನೆತ್ತರನೀಂಟಿದವನ ನೆತ್ತರ ಜೇಪಸಹಿತಮಿಾಂಟದೆ ದುರ್ಯೋಧನನೆಂಬ ಪೆಸರ್ಗೆ ಮುಯ್ಯಾಂಪೆನೆ (ಗದಾಯು. ೫-೮): ಪೂತುದು ಕುರವಕ ಫಲಪಣ್ಣು ಬರಲು ಮುಯ್ಯಾತುದು ಮಾಗಿ ಮರ್ತ್ಯರಿಗೆ (ಮೋಹತ. ೪-೪೨): ೨. ಉಡುಗೊರೆಯನ್ನು ಕೊಡು ; ಬಹುಮಾನವನ್ನು ನೀಡು : ಸೋತುದರಿಬಲ ಹೋಗೆನುತ ಮುಯ್ಯಾಂತು ಮನ್ನಿಸಿ ಹೊಸ್ನ ಬಟ್ಟಲೊಳಾತಗಳಗೊಲಿದಿತ್ತನೈ ಕರ್ಪುರದ ವೀಳೆಯವ (ಕುಮಾ.ದ್ರೋ. ೪-೧೧). ೩. ಬಹುಮಾನವನ್ನು ಪಡೆ ; ಮೆಚ್ಚನ್ನು ಗಳಿಸು : ವಾಜಿಮುಖ್ಯನ ಮನಂ ಮೆಚ್ಚಲ್ಕೆ ಮುಯ್ಯಾಂಪ ತನ್ನಿರವಿಂಗಳ್ಕುವ ಚಿಂತೆಯಿಂ ಬಲಿಸಿದಂ ಸೌಹಾರ್ದದಿಂ ಬಾಹುಕಂ (ನಳಚಂ. ೬೪೮). ೪. ಪ್ರತಿಭಟಿಸು ; ಸೆಣಸು ; ಎದುರಿಸು : ಇನ್ನುಂ ದನುಜರಿಪುವಿನೊಳ್ ಕಾದದೇಕಿರ್ಪೆ ಸಂಕ್ರಂದನ ನೀಂ ಪೌಲೋಮಿಯುಪ್ಪೆ ನ್ನಧಿಪನೆನಿಸಿ ಬನ್ನಕ್ಕೆ ಮುಯ್ಯಾಂತು ನಿಲ್ದೈ (ಜಗನ್ನಾ. ೦೩-೬೦) ; ಸೂತಸುತ ದಳಪತಿಯೆ ಘಡ ಮುಯ್ಯಾಂತರೇ ಮುಂಬಿಗರು (ಕುಮಾ.ಕ. ೨-೮).

೫. ಎದುರಾಗು ; ಅಭಿಮುಖವಾಗು ; ಇದಿರಾಗಿ ಬರು : ಒಯ್ಯನೆ ಕರೆದಡೆ ಮುಂದೆ ಬಂದು ನಿಂದಿತ್ತು ಮುಯ್ಯಾಂತಡೆ ಬಯಲಾಯಿತ್ತು ಗುಹೇಶ್ವರ (ಅಶಸಂ. ೮-೩೦) ; ಲಾಂಛನವ ಹೊತ್ತು ಮುಯ್ಯಾಂತು ಅಡಿಗೆಱಗಿ ಪ್ಪುಡನೆಂದೆ ಪ್ರಮಾಣಿಸಿ . . . ನಮೋ ನಮೋ ಎಂಬೆ (ಬೋಳಬಸ. ೪೬-೦೭೭). ೬. ಪ್ರತಿಫಲವನ್ನು ಅಪೇಕ್ಷಿಸು ; ಪ್ರಯೋಜನವನ್ನು ಬಯಸು : ತನ್ನ ಮಾಟಕೆ ತಾನೆ ಮುಯ್ಯಾನ ದಾಸೋಹಿ (ಶಿಶಗೀ. ೦೬-೬೨). ೭. ಸಲುಗೆಯನ್ನು ತೋರು : ಸದರ ದಿಂದಿರು : ದೇವನೊಳ್ಳಿದನೆಂದು ಮುಯ್ಯಾನಲು ಬೇಡಾ ಕಱಕಟ ಕಾಡಿದ ನೊಳ್ಳಿದನೆ (ಬಸಪ. ೦೪೬). ೮. ಹಿಗ್ಗು : ಸಂತೋಷಿಸು : ಧವಳತನುತ ಕೀರ್ತಿವರಂ ವಂದಿವೃಂದಾಧಾರಂ ಮುಯ್ಯಾಂತನೆತ್ತಂ ಸುಲಲಿತಕವಿತಾ ಕಲ್ಪವಲ್ಲೀವಸಂತಂ (ಕುಶಾ.ಸ್ರ. ೬-೩೪). ಮುಯ್ಯಾನು$_1$ : ೭. ಇಂತಪ್ಪ ಬೇಡಂಗೆ ಮುಯ್ಯಾನುವರೆ (ಕಶ್ರ.ರ. ದೇ. ೦೪೨-೯). ೮. ಮಾನನಿಧಿ ನಿಮಗೆ ನಾಂ ಕೈಯಾನುವೆ ಕರುಣಪ್ರಸಾದಮಂ ಕೊಟ್ಟರೆ ಮುಯ್ಯಾನುವೆ (ಶಂಕಳಂ. ೦೦-೩೭). ಮುಯ್ವಾನ್$_1$ : ೮. ತರಲಾಪಾಂಗದಿನಾ ನೃಪಾಲತಿಲಕಂ ಮುಯ್ವಾಂ [ಪಾಠಾಂ. ಯ್ಯಾಂ] ತರಲ್ದು . . . ನಿರಂತರ ಮುದ್ಯಾನವಿನೋದಮಂ ಸಲಿಸುವಂ ಭೂಕಾಂತನಾಕಾಂತೆಯಿಂ (ಅಶಂಪು. ೨-೦೮). ೯. ಪೈಪೋಟಿಯಾಗು ; ಪ್ರತಿಸ್ಪರ್ಧಿಯಾಗು : ವಿಷಯವರ ವನಿತೆಯ ಸೀಮಂತದ ಮಣಿಕಾಂತಿಗೆ ಮುಯ್ವಾಂತುದು ಚೆಲ್ವಿಂ ಪ್ರಭಾಕರೀ ಪಾಮಪುರಂ (ಶಾಂತಿಪು. ೦-೬೩).

ಮುಯ್ಯಾಂತುಕೊಳ್ = ಎದುರಿಸು ; ಸೆಣಸು : ಪ್ರತಿಭಟಿಸಂ : ನನ್ನ ಸರಲ ಮುಯ್ಯಾಂತುಕೊಂಡೊಡೆ ರುದ್ರಗರಿದು (ಪ.ಜೀಪಕ. ೦೨-೩೯).

[ಮುಯ್$_1$ + ಆನ್$_1$]

**ಮುಯ್ಯಾನ್$_2$**, ಮುಯ್ಯಾನು$_2$, ಮುಯ್ವಾನ್$_2$ (ಕ್ರಿ). ಗರ್ವಿಸು : ಬೀಗು ; ಹೆಮ್ಮೆಪಡು : ನಾನಾವಿಲಸನ್ಮನೋಹರಸುಖಂ ಬೇಱೊಂದು ಲಾವಣ್ಯಮೆನ್ನದೆ ಬೇಱೊಂದು ಪಲಾಲಮಂ ಗಟಪಿ ಚಾತುರ್ಯಕ್ಕೆ ಮುಯ್ಯಾಂಪುದೇ (ಸುಕುಂಚಾ. ೦೦-೦೦೪); ಅಬಲೆಯರೊಳ್ ಮುಯ್ಯಾಂಪಳ್ ಸೊಬಗಿಂಗಾ ಸತ್ಯಭಾಮೆ ಬೇಡಿಂ ತನಗಾ ಸೊಬಗೆಯುರಬರು ಪುಂಡಿದಿರೆ ಸೊಬಗೇಕಚ್ಛತ್ರಮಾಯ್ತು ಭೀಷ್ಮಕಸುತೆಯಾ (ಜಗಿಪು. ೦೨-೬೦). **ಮುಯ್ಯಾನು$_2$** : ಆ ಶರಣನು ತಾನು ತಾನಾಗಿ ಆಱುದರುಶನಕ್ಕೆ ಯಾಚಕನಲ್ಲ ಪಱುದರುಶನಕ್ಕೆ ಮುಯ್ಯಾನುವನಲ್ಲ (ಅಶಸಂ. ೨೫೦-೦೦೪೬). **ಮುಯ್ವಾನ್$_2$** : ಇಂತು ಸುಯೋಧನಂ ನಿನಗೆ ಮಾಡಿದ ರಾಜ್ಯವಿಭೂತಿ ಗುಂತೆ ಮುಯ್ವಾಂ [ಪಾಠಾಂ. ಯ್ಯಾಂ] ತಿರದಿರ್ (ಶಂಕಭಾ. ೨-೪೬); ಈ ಭಂಡಮನಿವ್ವೊಡಲಿಂ ಕೈಕೊಂಡುಂ ಗಡ ಜೀವನಾವಗಂ ಮುಯ್ಯಾಂಪಂ (ಶರಶಪು. ೦೨-೬೪). [ಮುಯ್$_2$ (<ಮುಯ್ಪು) + ಆನ್$_1$]

**ಮುಯ್ಯಾನು$_1$** 'ಮುಯ್ಯಾನ್$_1$' ನೋ.

**ಮುಯ್ಯಾನು$_2$** 'ಮುಯ್ಯಾನ್$_2$' ನೋ.

**ಮುಯ್ಯಾನೆ** (ನಾ). ಮೂರು ಆನೆ : ಮುಯ್ಯಾನೆ, ಮೂಱುಮ (ಶಬ್ದಾ.ಸು. ೩೨೦ ಪ್ರಯೋ). [ಮುಯ್$_3$ (< ಮೂಱು) + ಆನೆ$_1$]

**ಮುಯ್ಯಾಳ್**, ಮುಯ್ಯಾಳು (ನಾ). ಒಬ್ಬನ ಕೆಲಸಕ್ಕೆ ಪ್ರತಿಯಾಗಿ ಬರುವ ಮತ್ತೊಬ್ಬ ಆಳು; ಬದಲಿ ಆಳು : ರಂಗ ನೀ ಕಾರ್ಗದ್ದೆ ಕಳೆಯುವ ಹೆಂಗಳನು ಮುಯ್ಯಾಳ್ಗೆ ಕರಕೊಂಡಿಂಗದೇ ಕೀಳೆಂದು ನೇಮಿಸಿ (ಅಶಾಗೀ. ೩೦-೩೨). **ಮುಯ್ಯಾಳು** : ಮುಯ್ಯಾಳು ಬರದಿದ್ದರೆ ಲಗ್ನ ಕಟ್ಟಿದ ದಿನ ವಿವಾಹಭಂಗ ಮಾಡಿದವನ ಪಾಪವನ್ನು ಅವನ ತಲೆಯ ಮೇಲೆ ಹೊರಿಸುತ್ತಿದ್ದರು (ಹುಟ್ಟಿಹ. ೭೦) : ಗಿರಿಯಪ್ಪಗೌಡರೂ ಈರಪ್ಪನೂ ಮುಯ್ಯಾಳಿನ ಕೆಲಸಕ್ಕಾಗಿ ಬೇರೆ ಒಕ್ಕಲುಗಳ ಜಮೀನಿಗೆ ಹೋಗಿ ಕೆಲಸ ಮಾಡುತ್ತಿದ್ದರು (ಕಾಂಜಕು. ೧೯). [ಮುಯ್$_1$ + ಆಳ್$_3$]

**ಮುಯ್ಯಾಳು** 'ಮುಯ್ಯಾಳ್' ನೋ.

**ಮುಯ್ಯಾಱಡಿ** (ನಾ). ಹದಿನೆಂಟು ಅಡಿ : ಮುಯ್ಯೇಟ್ ಸೂಟ್, ಮುಯ್ಯಾಱಡಿ (ಛಾಪಾಘೂ. ೦೩೩ ಉದಾ); ಮುಯ್ಯಾಳ್, ಮುಯ್ಯೇಟು, ಮುಯ್ಯಾಱಡಿ (ಶಬ್ದಾ.ಸು. ೬೮ ಪ್ರಯೋ).

[ಮುಯ್$_3$ (< ಮೂಱು) + ಆಱು$_3$ + ಅಡಿ$_1$]

**ಮುಯ್ಯಿ** 'ಮುಯ್$_1$' ನೋ.

**ಮುಯ್ಯಿರ್**, ಮುಯ್ಯಿರ್ (ನಾ). ಒಂದು ಸಂಖ್ಯೆ; ಆರು: 'ಮುಯ್ಯಿ ರ್ಮೊಗ' ಪರಾ. **ಮುಯ್ಯಿರ್** : 'ಮುಯ್ಯಿರಡಿ' ಪರಾ.

[ಮುಯ್$_3$ (< ಮೂಱು) + ಇರ್$_3$]

**ಮುಯ್ಯಿರ್ಮೊಗ**, ಮುಯ್ಯಿರ್ಮೊಗ (ನಾ). ೧. ಆರುಮುಖ. ೨. ಆರು ಮುಖಗಳುಳ್ಳವನು ; ಷಣ್ಮುಖ: "ನವಿಲ್ದೇರಂ, ಮುಯ್ಯಿ ರ್ಮೊಗಂ (ಅಱುಮೊಗಂ), ಮುರಗೂಟ ಮಗಂ—ಈ ೪ ಕಾರ್ತಿಕೇಯಂಗೆ ಪೆಸರ್" (ಕಶಾ. ೪೭-೫). **ಮುಯ್ಯಿರ್ಮೊಗ** : ೨. "ತಾರಕಮಥನಂ ಮುಯ್ಯಿರ್ಮೊಗನೆನಿಸಿಕೊಂಬಂ" (ಚಶುಬಿ. ೫೦). [ಮುಯ್ಯಿರ್ + ಮೊಗ]

**ಮುಯ್ಯಿ** (ಕ್ರಿ). ಉಡುಗೊರೆ ನೀಡು ; ಬಳುವಳಿಕೊಡು : ಮದುವೆಗೆ ಬಂದ ಬಿಜ್ಜಾಧರರಾಯರ್ಗೆ ಸದಮಲಮಣಿಭೂಷಣಗಳ ಮುದದಿಂ ಮುಯ್ಯಿತ್ತು ... ಬೀಳ್ಕೊಟ್ಟನು (ಶ್ರೀಪಾಂ. ೦೦-೦೦). [ಮುಯ್$_1$+ಈ$_2$]

**ಮುಯ್ಯಿರ್** 'ಮುಯ್ಯಿರ್' ನೋ.

**ಮುಯ್ಯಿರಡಿ** (ನಾ). ೧. ಆರು ಪಾದ,–ಕಾಲು : ಮುಯ್ಯಂಬುದರ್ಕೆ– ಮುಯ್ಯಿರಡಿ, ಮುಯ್ಯಂದಂ, ಮುಯ್ಯಡಿ (ಕಶುದ. ೦೪೪ ಪ್ರಯೋ). ೨. ಆರುಕಾಲುಗಳುಳ್ಳುದು; ಆರಡಿ; ದುಂಬಿ : "ಮುಯ್ಯಿರಡಿ= ತುಂಬಿ" (ಕಶುದ. ಶಂ. ೨) ; ಮುಯ್ಯಿರಡಿ ಮೊತ್ತದ ಭೋಜನಶಾಲೆಯೊ ತಾನಿದೆನಲ್ಕೆಱ ರಂಜಿಸಿತು ಪೂವಿನ ಪಸರಂ (ಶಿರಪು. ೬-೧೦೨); ಬಂಡುಣ ಲೆಂದು ತಂಡತಂಡದಿಂ ಮಂಡಳಿಸಿ ಮುಯ್ಯಿರಡಿಗಳ್ ಬಂದೆಱಗುಗುಂ (ಛಾಪೂಶ್ಯ. ೯-೧). [ಮುಯ್$_3$ (< ಮೂಱು) + ಈರಡಿ]

**ಮುಯ್ಯಿರ್ಮೊಗ** 'ಮುಯ್ಯಿರ್ಮೊಗ' ನೋ.

**ಮುಯ್ಯೆರಡಡಿ** (ನಾ). = ಮುಯ್ಯಿರಡಿ ೨ : "ಅಲರ್ವಕ್ಕಿ . . . ಮುಯ್ಯೆ ರಡಡಿ—ಈ ೭ ಭ್ರಮರಂ" (ಕಶಾ. ೩೩-೦೪೬). [ಮುಯ್ಯೆರಡು + ಅಡಿ$_1$]

**ಮುಯ್ಯೆರಡು** (ನಾ). = ಮುಯ್ಯಿರ್ : 'ಮುಯ್ಯೆರಡಡಿ' ಪರಾ.

[ಮುಯ್$_3$ (< ಮೂಱು) + ಎರಡು]

**ಮುಯ್ಯೇಟ್**, ಮುಯ್ಯೇಟು (ನಾ). ಒಂದು ಸಂಖ್ಯೆ; ಇಪ್ಪತ್ತೊಂದು: ಮುಯ್ಯೇಟ್ ಸೂಟ್, ಮುಯ್ಯಾಱಡಿ (ಛಾಪಾಘೂ. ೦೩೩ ಉದಾ). **ಮುಯ್ಯೇಟು** : ರಾಯೆಂಬೀ ಪೆಸರಿಲ್ಲದಂತು ಮುಳಿಸಿಂ ಮುಯ್ಯೇಟು ಸೂಟೆಂತು ಕಟ್ಟಾಯಂ ಪೊಂಪುಳಿವೋಗೆ ತಂದೆಯುಟೆವಿಂಗಾ ಭಾರ್ಗವಂ ಕೊಂದಂ (ಶಂಕಭಾ. ೦೨-೩೮) ; ಚಲದಿಂ ಮುಯ್ಯೇಟುಸೂಟ್ ಕ್ಷತ್ರಿಯ ರನಱಿಸಿ ಕೊಂದಿಕ್ಕಿದಂ ಜಾಮದಗ್ನ್ಯಂ (ಕಶುದ. ೦೪೪ ಪ್ರಯೋ).

[ಮುಯ್$_3$ (< ಮೂಱು) + ಏಟ್$_2$]

**ಮುಯ್ಯೇಟು** 'ಮುಯ್ಯೇಟ್' ನೋ.

**ಮುಯ್ವಾನ್$_1$** 'ಮುಯ್ಯಾನ್$_1$' ನೋ.

**ಮುಯ್ವಾನ್$_2$** 'ಮುಯ್ಯಾನ್$_2$' ನೋ.

**ಮುಯ್ವು$_1$** 'ಮುಯ್$_1$' ನೋ.

**ಮುಯ್ವು$_2$** 'ಮುಯ್ಪು' ನೋ.

**ಮುಯ್ವೊನೆ** (ನಾ). ಹೆಗಲಿನ ತುದಿ; ಭುಜಾಗ್ರ : ಮನುಜರ ಗೆಯ್ತಮಂ ಬಿಸುಟು ದೇವರೆಮೆಂಬಭಿಮಾನಮೇಱೆ ಮುಯ್ವೊನೆಗಳ ನೋಟ್ಪರಿನ್ನೆರಡು ತೋಳೊಳವೆಂಬವೋಲುರ್ವರೇಶ್ವರರ್ (ಕಾರಂಪೂ. ೫೬೯).

[ಮುಯ್$_2$ (< ಮುಯ್ಪು) + ಮೊನೆ]

**ಮುರ₁** 'ಮುರಿವು' ನೋ.

**ಮುರ₂** 'ಮುರುವು₂' ನೋ.

**ಮುರ₃** (ನಾ). ಒಂದು ಬಗೆಯ ಸುಗಂಧವುಳ್ಳ ಸಸ್ಯ ಮತ್ತು ಅದರಿಂದ ತಯಾರಿಸುವ ಗಂಧದ್ರವ್ಯ : "ಮುರ—ಮುರ ಎಂಬ ಗಂಧದ್ರವ್ಯ" (ಓಶಂ. ೮೩). [ಸಂ. ಮುರಾ]

**ಮುರಕಲಿ** 'ಮುಟುಕಿಲ್₂' ನೋ.

**ಮುರಕಲು** 'ಮುರುಕಲು' ನೋ.

**ಮುರಕಳಿ** 'ಮುರುಕಳಿ' ನೋ.

**ಮುರಕಿ** 'ಮುರಿಗೆ₁' ನೋ.

**ಮುರಕಿಲ** 'ಮುಟುಕಿಲ್₂' ನೋ.

**ಮುರಗಡೆ**, ಮುರುಗಡೆ (ನಾ). (ಉಕ) ೧. ಮುರಿಯುವಿಕೆ ; ಭಗ್ನವಾಗುವಿಕೆ ; ಭಂಗವಾಗುವಿಕೆ : ವಿವಾಹ ಮುರಗಡೆಯಾಗುವದೇನು ಎಂಬ ವಿಲಕ್ಷಣ ಹೆದರಿಕೆಯಾಗುವದು (ಸುತ್ತುಹು. ೬೩). **ಮುರುಗಡೆ :** ೧. ತನ್ನ—ಶಕುನ ಮದುವೆಯ ಮುರುಗಡೆಯನ್ನು ಮಾಡಲು, ಶ್ಯಾಮರಾಯ ಅಸಮರ್ಥನಿದ್ದ ಬಗ್ಗೆ ಅವನಿಗೆ ಖಾತ್ರೀ ಇತ್ತು (ನೀಶಹ. II, ೨೩೯). ೨. ಸಂಬಂಧವು ಕಡಿದುಹೋಗುವಿಕೆ : ಗಂಗಕ್ಕ ನನಗ ಖಾಸ ಅಕ್ಕ ಆಗಬೇಕು . . . ಆಕೀದು ನನ್ನದು ಮುರುಗಡೆ ಆಗಿ ಇಂದಿನ ಮಿತಿಗೆ ಹದಿನೈದುವರ್ಷ ಆದವು (ಗಂಪಾಯಿ. ೦೦೨).

**ಮುರಗಡೆಮಾಡು** = ಮುಕ್ತಾಯವನ್ನು ತರು ; ನಿಲುಗಡೆ ಮಾಡು ; ನಿಲ್ಲಿಸು : ವೆಚ್ಚಿಗೆಯ ಮಾತಾಗಳಿಗೆ ಇಲ್ಲಿ ಮುರಗಡೆ ಮಾಡುತ್ತೇನೆ (ಗಾಳಿ. XI. ಮತ್ತಗಯ ಶಾಕು). [< ಮುಱ್₁ + ಕಡೆ]

**ಮುರಗಿ₁** 'ಮುರಿಗೆ₁' ನೋ.

**ಮುರಗಿ₂** (ನಾ). ಹೆಣ್ಣುಜಿಂಕೆ : "ಮುರಗಿ – ಮೃಗೀ – ಹರಿಣಿ" (ಕರ್ಣಕೋ. ೫೦). [<ಸಂ. ಮೃಗೀ]

**ಮುರಗಿಕಾಯಿ** 'ಮುರ್ಗಿಕಾಯಿ' ನೋ.

**ಮುರಜ** (ನಾ). ೧. ಒಂದು ಬಗೆಯ ಚರ್ಮವಾದ್ಯ ; ಮದ್ದಳೆ : "ಮೃದಂಗಃ, ಮುರಜಃ— ಈ ೨ ಮದ್ದಳೆ" (ಹಲಾಯು. ೦೭–೯೭) ; ಅದು ವಾಯುತ್ರಯವೇಷ್ಟಿತಂ . . . ವೇತ್ರಾಸನರಫಲ್ಲರೀಮುರಜದಂತೊಪ್ಪಿರ್ಪುದು (ಪಂಪಭಾ. ೦–೯೯) ; ಅಲ್ಲಿ ಮುರಜದ ಮದದ ಕಹಳೆಗಳ ದನಿಯೊಳಗೆ ಅಲ್ಲಿಯಾವುಜದ ಶಂಖದ ಘನಧ್ವನಿಯೊಳಗೆ . . . ಸಾಂದ್ರ ರುಚಿಗೊಡುವ ಪರಿಯಾಣಂಗಳುಮನಿಂತೆ ನೀಡುತಿರೆ (ಜಸರ. ೭–೦೦೫). ೨. [ಕಾವ್ಯಮೀ] ಚಿತ್ರಕವಿತ್ವದ ಒಂದು ಪ್ರಕಾರ ; ಒಂದು ಪದ್ಯವನ್ನು ಮದ್ದಲೆಯ ಆಕಾರದಲ್ಲಿ ರಚಿಸುವ ಒಂದು ಚಿತ್ರಬಂಧ: ಶರಶೂಲಚಾಪಚಕ್ರಾಸಿರೂಪವಿಭಿಧರಥತುರಂಗಪದಗತಪಾಠಂ ಮುರಜಂ ಗೋಮೂತ್ರಿಕೆ ಪುಷ್ಕರಮರ್ಧಭ್ರಮಣಸರ್ವತೋಭದ್ರಂಗಳ್ (ಕಾವ್ಯಾವ. ೩೬೯). [ಸಂ.]

**ಮುರಜಕೇತನ** (ನಾ). ಮದ್ದಳೆಯ ಚಿಹ್ನೆಯುಳ್ಳ ಬಾವುಟ ;_ಧ್ವಜ : ಆಗಳ್ ಧರ್ಮಪುತ್ರಂ ತ್ರಿಭುವನಂಗಳಾಕಂಪಂಗೊಳೆ ಮುರಜಕೇತನವಿರಾಜಿತ ಪುಷ್ಪ ತನ್ನ ರಥಮನದಿರದಿದಿರಂ ಪರಿಯಿಸಿ (ಪಂಪಭಾ. ೦೩–೯೯ ಪ). [ಸಂ.]

**ಮುರಜಬಂಧ** (ನಾ). = ಮುರಜ ೨ : ವರದಾನ ಪರಾದನ್ಯಂ ಪರದಾನ ಪರಾದವಂ ನೆರದಾವದಿರಾಜನ್ಯಂ ಪರಿಜನಪರಾದವಂ (ಮುರಜಬಂಧಂ) (ಕಲಿರಾ. ೨–೦೯೦) ; ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟುಮಾಡುವ ಇತರ ಶಬ್ದವೈಚಿತ್ರಕ್ಕೆ ಚಿತ್ರಕವಿತ್ವವೆಂದೂ 'ಬಂಧ' ವೆಂದೂ ಹೆಸರು . . . ಇವುಗಳಲ್ಲಿ . . . ಹಾರಬಂಧ, ಮುರಜಬಂಧ ಮೊದಲಾದ ನಾನಾವಿಧಗಳುಂಟು (ಕೃಶಿಬ. ೨೩೯). [ಸಂ.]

**ಮುರಜಬಂಧಕ** (ನಾ). = ಮುರಜ ೨ : [ಗೋಮೂತ್ರಿಕಂ] . . . ಶ್ರೀಮದರ್ಧಭ್ರಮಂ ಚಕ್ರನಾಮಂ ಮುರಜಬಂಧಕಂ ಇವು ದುಷ್ಕರ ಕಾವ್ಯಂಗಳ್ (ಸ) ವಿಶೇಷವರ್ತಿಗಳ್ (ಕಲಿರಾ. ೨–೦೦೨). [ಸಂ.]

**ಮುರಜೆ** (ನಾ). = ಮುರಜ ೧ : "ಮೃದಂಗಾಃ, ಮುರಜಾಃ–೨ ಮದ್ದಳೆ ಹೆಸರುಗಳು" (ಸಿದ್ಧಾಂತಿ. ೫೬) ; ಮುರಜೆಯ ಗತಿಯುಚಿದು . . . ಗುರು ಲಘು ಪ್ಲುತ ದ್ರುತವನು ತಾಳದೊಳವ ಪರಿವಿಡಿಯಿಂದೊತ್ತಿದನು (ಜೀಸಂಕಾಂ. ೯–೯೬) ; ಸುಜ್ಞಾನವೆಂಬ ಕೊಡತೆಯಿಂದ ಆ ಮಾಡಕೆಯಂ ತಟ್ಟುವ ಧ್ವನಿ . . . ಮುರಜೆ ಮೃದಂಗ ಪುಡುಕು ಕಹಳೆಯಂತಾಗೆ (ಶೃಂರಸೂ. I, ೨೩೯). [ಸಂ. ಮುರಜಾ]

**ಮುರಡಿ₁** 'ಮುರುಡಿ₁' ನೋ.

**ಮುರಡಿ₂** 'ಮೊರಡಿ₂' ನೋ.

**ಮುರಡು** 'ಮುರುಟ್ಟು₃' ನೋ.

**ಮುರದಾರಸಿಂಗಿ**, ಮುಡದಾರಶಿಂಗಿ, ಮುಡದಾರಸಿಂಗ, ಮುಡದಾರ ಸಿಂಗಿ, ಮುರುದಾರಶೃಂಗಿ, ಮುರುದಾರಸಿಂಗಿ (ನಾ). ಒಂದು ಬಗೆಯ ಖನಿಜಲವಣ ; ಮೈಲುತುತ್ತ : (ಕಸಂಗ್ರಾ. ೦೦೬). **ಮುಡದಾರ ಶಿಂಗಿ :** ಹವೆಯೊಳಗೆ ಇದನ್ನ ಕಾಸಿದರೆ ಅವ್ವವಿಕಾರದ (ಜಂಗಿನ) ಕೆನೆ ಬರುವದು . ಅದಕ್ಕೆ ಮುಡದಾರಶಿಂಗಿಯೆನ್ನುವರು (ಪುಂಜಿಶಾ. ೬–೨೬). **ಮುಡದಾರಸಿಂಗ :** ೨೦ ಮುಡದಾರಸಿಂಗ; ೨೧ ರೇವಚಿನ್ನಿ (ಜುಂಜಿಪ್ಪಾ. ೦೨೨) . **ಮುಡ ದಾರಸಿಂಗಿ :** (ಕಸಂಗ್ರಾ. ೦೦೬). **ಮುರುದಾರಶೃಂಗಿ :** ಮುರುದಾರಶೃಂಗಿಯಂ ತಂದು ನಿಂಬೇಹುಳಿಯಲ್ಲಿ ತೇದು ತೊಡೆಯಲು ಎನಿತಪ್ಪ ಸೊನೆಹುಣ್ಣು ಮಾಣ್ಗುಂ (ಏಶ್ವಪ. ೬೭). **ಮುರುದಾರಸಿಂಗಿ :** (೬). [<ಪಾರ. ಮುರದಾರ್‌ಸಂಗ್ ; ಹಿಂ. ಮುರದಾಸಂಖ್; ಮರಾ. ಮುಡದಾರಶಿಂಗ್, ಮುಡದಾರಸಿಂಗ್, ಮುಡದಾರ್‌ಸೇಂಗ್. / ತೆಲು. ಮುರುದಾರಸಿಂಗಿ]

**ಮುರಬ್ಬ**, ಮುರಬ್ಬಾ, ಮೊರಬ್ಬ (ನಾ). ಮಾವು, ನೆಲ್ಲಿ ಮುಂತಾದ ಕಾಯಿಗಳನ್ನು ಸಕ್ಕರೆ ಅಥವಾ ಬೆಲ್ಲದ ಪಾಕದಲ್ಲಿ ಹಾಕಿ ತಯಾರಿಸುವ ಒಂದು ಬಗೆಯ ಖಾದ್ಯ ; ಗುಳಂಬ : ಹಣ್ಣಿನ ಮುರಬ್ಬ. ಮಣ್ಣಿನ ಬೊಂಬೆ... ಮೊದಲಾದ ಆಶ್ಚರ್ಯ ಆಶ್ಚರ್ಯಕರವಾದ ಸಾಮಾನುಗಳು ಮಾರಿದುವು (ಶಿಂಂದ. II, ೦೦೯); ಹಕೀಮರ ಲೇಹ್ಯ, ಮುರಬ್ಬ ಎಲ್ಲವನ್ನೂ ತರಿಸಿದಂತೆ ತಿಪ್ಪೆಗೆ ಎಸೆದಾಯಿತು (ಶಿಂಂಬು. ೦೦೬). **ಮುರಬ್ಬಾ :** ಅತಿಯಾಗಿ ಮಾಗಿದ ಹಣ್ಣುಗಳಿದ್ದರೆ . . . ಮುರಬ್ಬಾ ತಯಾರಿಸಬಹುದು (ಅಡುಶಾ. ೬೬). **ಮೊರಬ್ಬ :** ಸಕ್ಕರೆಪಾಕದಲ್ಲಿ ಕೆಲವು ಹಣ್ಣುಗಳನ್ನು ಅಥವಾ ಹಣ್ಣಿನ ರಸಗಳನ್ನು ಬೇಯಿಸಿ ಜಾಂ . . . ಮೊರಬ್ಬಗಳನ್ನು ಮಾಡಿ ಕೆಲವು ದಿನ ಈ ಆಹಾರಗಳು ಕೆಡದಂತೆ ರಕ್ಷಿಸಲಾಗುತ್ತದೆ (ಗೃಹಪ. ೫೬).

[← ಅರ. ಮುರಬ್ಬ, ಮುರಬ್ಬಾ ; ಪಾರ. ಮುರಬ್ಬ ; ಹಿಂ. ಮುರಬ್ಬಾ ; ಮರಾ. ಮುರಂಬಾ, ಮುರಬ್ಬಾ, ಮೋರಂಬಾ]

**ಮುರಬ್ಬಾ** 'ಮುರಬ್ಬ' ನೋ.

**ಮುರಮು** (ನಾ). ಗಟ್ಟಿಮಣ್ಣಿನ ಪೆಂಟೆ : P ಕರಿಕಲ್ಲು ರೂಪಾಂತರಗೊಂಡು ಉಂಟಾದ ಗಟ್ಟಿಮಣ್ಣು ಅಥವಾ ಹರಳು. ಇದು ಕಪ್ಪು ಮೊದಲಾಗಿ ಅನೇಕ ಪ್ರಕಾರವಾಗಿರುತ್ತದೆ : ಮಾರ್ಗಗಳನ್ನು ಮಾಡಲಿಕ್ಕೆ ಮುರಮು ಮತ್ತು ಕಲ್ಲುಗಳ ಅನುಕೂಲವಿರಬೇಕು (ಶಿಶಾಕೂ. ೬೦).

[← ಮರಾ. ಮುರೂಮ್]

**ಮುರಮುರ** (ನಾ). (ಗರಿಗರಿಯಾಗಿರುವುದನ್ನು ಸೂಚಿಸುವ) ಒಂದು ಅನುಕರಣ ಶಬ್ದ : ಮುರಮುರ ಮಾಡಿಟ್ಟಿರುವ ಮುಚ್ಚಳಕನ್ನು ಬಿಸಿ ಮಾಡುವುದೆಂದರೇನು ? (ಪಡುಕೂ. ೨೬೦).

**ಮುರಮುರಿ** (ನಾ). ಪುರಿ ; ಚುರುಮುರಿ : ಕನ್ನಡದಲ್ಲಿಯ ಸಿಳ್ಳು . . . ಚುರಮುರಿ, ಮುರಮುರಿ, ಡಮರುಗ, ಝಾಂಗಟೆ, ಜೋಪೊಡೆ, ಟಂಕಾರ —

ಮೊದಲಾದ ಶಬ್ದಗಳು ಅನುಕರಣದಿಂದಲೇ ಬಂದುವು (ಶಾಶಾಶಾ. ೫).

[← ಹಿಂ. ಮರಾ. ಮುರಮುರಾ]

**ಮುರರ್ಜಿಲ** (ನಾ). ಒಂದು ಬಗೆಯ ಅಕ್ಕಿ: ಅರಸಿನ ಕೆಂಬಟ್ಟೆ, ಸುಕದಾಸ, ಮುರರ್ಜಿಲ, ಯಾಲಕ್ಕಿರಾಜಾ (ಕಸಂಗ್ರಾ. ೭). [ ? ]

**ಮುರಲಿ, ಮುರಳಿ$_1$** (ನಾ). ಒಂದು ಬಗೆಯ ಸುಷಿರವಾದ್ಯ; ಕೊಳಲು ; ವೇಣು : ಮುರಲಿನಾದವ ಕೇಳಿ ತರಳೆಯರೆಲ್ಲ ಮರುಳಾಗಿ ಬರುತಿದ್ದೇವೆ (ಪುರಂದ· ೨ಾ· ೪-೧೧೧-೭). 'ಮುರಲಿಗಾನ' ಪರಾ. **ಮುರಳಿ$_1$** : ಬಂದು ನಿಂದ ಕಣ್ಣು ಮುಂದೆ . . . ಮುರಳಿಯನೂದುತ್ತ ಮರುಳುಗೊಳಿಸಿ ಜನರ ಕೊರಳ ಪದಕ ಹಾರ ಧರಿಸಿ ತಾ ನಲಿಯುತ್ತ (ವಿದಾಕೃ. ೨೦-೨); ಮುರಳಿಯ ಕೈಕೊಳ್ಳುವಂದು ಮರಳಿ ಬರುವೆನು (ಗೋಕುಪ. ೫೪-೨೫).

[ಸಂ. ಮುರಲೀ]

**ಮುರಲಿಗಾನ, ಮುರಳಿಗಾನ** (ನಾ). ಕೊಳಲನ್ನು ಬಾರಿಸುವಿಕೆ ; ವೇಣುಗಾನ : ಪುರರಿಪು ವಿಧಿ ಪೊಗಳುತಿರಲು ವಿರಚಿಸಿದ ಪುರಂದರ ವಿಠಲ ಮುರಲಿಗಾನ.ಮಾಡಿದ (ಪುರಂದ· ೨ಾ· ೪-೯೪-೫). **ಮುರಳಿಗಾನ** : ವತ್ಸವ ಪರಿ ಕಾದನಾ . . . ಕೊಳಲು ತನ್ನ ಕೈಲಿ ಹಿಡಿದು ಮುರಳಿಗಾನ ಮಾಡುತ್ತ (ವಿದಾಕೃ. ೧೩-೧). [< ಸಂ. ಮುರಲೀಗಾನ]

**ಮುರಲೀಧರ, ಮುರಳೀಧರ** (ನಾ). ಕೊಳಲನ್ನು ಹಿಡಿದಿರುವವನು ; ವೇಣುಗೋಪಾಲ ; ಕೃಷ್ಣ. **ಮುರಳೀಧರ** : ಕೊಳಲುಲಿವಾಲಿಪೆವೆಲ್ಲ ಆದೊಡೆ ಮುರಳೀಧರ ಕಾಣರೊಲ್ಲ (ಗೋಕುಪ. ೦೦-೦೭). [ಸಂ.]

**ಮುರವ$_1$** ' ಮುರುವ ' ನೋ.

**ಮುರವ$_2$** (ನಾ). ಒಂದು ಬಗೆಯ ವಾದ್ಯ ; ಮುರಜ : ತಜ್ಜಲ ನಿಧಿಯಲ್ಲಿ ಲಕ್ಷಯೋಜನಗಾಧಮಧ್ಯಮಧ್ಯವಿಸ್ತಾರವಶಸಹಸ್ರಯೋಜನತಳವದನ ವಿಸ್ತಾರದ ಮುರವಾಕಾರದ ಪಾತಾಳಂಗಳ್ ದಿಕ್ಚತುಷ್ಟಯದೊಳ್ ನಾಲ್ಕುಂ . . . ಇರ್ಕುಂ (ಚತ್ರ್ರ. ೧೯೨) ; ಸಮಸ್ತಪಾತಾಳಂಗಳು ಸಾಸಿರದೆಂಟು ಮುರವದಾಕಾರವದಱ ತ್ರಿಭಾಗದ ಕೆಳಗೊಂದು ಭಾಗದೊಳಂ ವಾಯು ಪೊಂದೆ ತೀವಿರ್ಕ್ಕುಂ (ಶಾಸ್ತ್ರ ೬. ೨೬). ' ಮುರುಜ ' ಪರಾ.

[< ಪ್ರಾ. ಮುರವ, ಮುರಯ./ಸಂ. ಮುರಜ]

**ಮುರವತ್ತು, ಮುರುವತ್ತು** (ನಾ). ೧.(ಉ.ಕ.) ದಾಕ್ಷಿಣ್ಯ : ಹಂಗು : ಪಣ್ಣಾವಿ . . . ಯಾರ ಮುರವತ್ತು, ಒಲುಮೆ, ಬಲುಮೆಗಳಿಗೆ ಒಳಗಾಗಿ ಹೋಗಿದ್ದನೋ ತಿಳಿಯದು (ಶೂಬಿತಾ. ೬೫). ೨. ಒತ್ತಾಯ; ಜುಲುಮೆ; ಬಲಾತ್ಕಾರ : ಅರ್ಧ ಮುರವತ್ತಿಗಾಗಿ ಅರ್ಧ ಮಗನಲ್ಲಿಯ ವಿಶ್ವಾಸಕ್ಕಾಗಿ ಸರಹುರಿಯನ್ನು ಮುಂದೆ ಕಳಿಸಲು ಆಚಾರ್ಯರು ಒಪ್ಪಿಕೊಂಡರು (ನವುಜೀ. ೯೨) ; ಪೋಲೀಸರ ಮುರವತ್ತಿನಿಂದ ನಮ್ಮ ಪಂತನು ಆ ಪ್ರಕರಣದ ಶೋಧಕ್ಕಾಗಿ ಆ ಹಳ್ಳಿಗೆ ಹೋದನು (ಅಂಬಿಕೆ. ೬೨) ; ನಾಚಿಕೆ ಮುರವತ್ತುಗಳಿಂದಾಗಲಿ . . . , ಅಪ್ರಿಯವಿನ್ನವನ್ನು ಸ್ವಲ್ಪಾದರೂ ಭಕ್ಷಿಸಬೇಡಿರಿ (ಬ್ರಹ್ಮಶೀ. ೧೭೪). ೩. ಮರ್ಜಿ ; ಲಹರಿ : ಮಾನವು ಮಾರಾಟವಾಗಬಾರದೆಂದು ಎಷ್ಟು ಜನರ ಮುರವತ್ತು ಕಾಯಬೇಕಾಗುವದೋ ಕಾಣೆ (ಕನ್ನಡಬಾ. ೦೭೪). ೪. ಅಂಜಿಕೆ ; ಭಯ : ಅರುವತ್ತು ಮುಗಿದೀತು ಅರುವು ಮರುವಾದೀತು ಎಂಬ ಮುರವತ್ತಿನಲಿ ಹಾಡಲಾರೆ (ಜೀವಲ. ೭೦-೦೦) ; ಯಾರ ಭಿಡೆ—ಮುರವತ್ತುಗಳಿಲ್ಲದೆ ಮುಚ್ಚುಮರೆಯಿಲ್ಲದೆ ಅವನು ಕಂಡದ್ದನ್ನಾಡಿದ್ದಾನೆ (ಕಾಶಿ. ೬೪೫). **ಮುರುವತ್ತು** : ೨. ಬಳಗದಲ್ಲಿ ಮುರುವತ್ತಿಗಾಗಿ ಅನುರೂಪವಾಗದ ಗಂಡು ಹೆಣ್ಣನ್ನು ಮದುವೆ ಮಾಡುವುದೂ ಕಂಡುಬರುವುದು (ಕನ್ನಡಿ. ೦೨೩). ೩. ಮುಂದೆ ಮದುವೆ ಯಾವ ವೇಳೆ . . . ಇನ್ನೊಬ್ಬರ ಮೂಡು ಮುರುವತ್ತುಗಳನ್ನರಿತು ಅವರಂತೆ ನಡೆಯಬೇಕು (ನವಜೀ. ೧೯೭). [←.ಅರ. ಮುರವ್ವತ್ ; ಹಿಂ. ಮುರವ್ವತ್, ಮುರೌವತ್ : ಮರಾ. ಮುರವತ್]

**ಮುರವು$_1$** 'ಮುರಿವು' ನೋ.

**ಮುರವು$_2$** 'ಮುರುವು$_2$' ನೋ.

**ಮುರಸು, ಮುರುಸು** (ನಾ). (ಮನಸ್ಸಿನ) ವಿರೋಧ ; ವೈಷಮ್ಯ : 'ಇರಸಂಮುರಸು' ಪರಾ. **ಮುರುಸು** : ಅವನು ತನ್ನ ದೊಡ್ಡಿಯನ್ನು ತಲುಪಿ ಕಾರ್ಯನಿರತನಾದ ನಂತರ ಮನಸ್ಸಿನ ಮುರುಸು ಬೇಸರಗಳೆಲ್ಲ ಮಾಯವಾದುವು (ಕುವರು. ೨೯೪). ' ಇರಸುಮುರುಸು ' ಪರಾ.

[<ಮುರಿ$_1$ + — ಸು$_3$]

**ಮುರಳಿ$_1$** ' ಮುರಲಿ ' ನೋ.

**ಮುರಳಿ$_2$** ' ಮಿರಿಳೆ ' ನೋ.

**ಮುರಳಿ$_3$** (ನಾ). [ಅಶ್ವಶಾ] ಕುದುರೆಯ ಆರು ಬಗೆಯ ಲಕ್ಷಣಗಳಲ್ಲಿ ಒಂದು : ಭಂಜಳಿ ಮುರಳಿ ಝಳಂಪಿ ವಾಹಿಣಿ ರೂಪು ರಂಜಿಪ ರೇಬೆಯೆಂದೆಂಬ ಮಂಜುಳಮಾದ ಷಡಂಗದೊಳಾ ಹಯ ರಂಜನೆವಡೆದುದತ್ತಾಗ (ಶ್ರೀಪಾಲ. ೪-೦೨). ₽ ಇದು ಕುದುರೆಯ ಗತಿಭೇದವೇ ಎಂಬುದು ವಿಚಾರಣೀಯವಾಗಿದೆ.

[ ?./ತೆಲು. ಮುರಳಿ = ಅಶ್ವಗತಿಗಳಲ್ಲಿ ಒಂದು ಬಗೆ]

**ಮುರಳಿಗಾನ** ' ಮುರಲಿಗಾನ ' ನೋ.

**ಮುರಳೀಧರ** ' ಮುರಲೀಧರ ' ನೋ.

**ಮುರಾಡ** (ನಾ). ಹಟ ; ಮೊಂಡುತನ : ನಡೆಸಿಕೊಡದೆ ಏನು ? ಅದಕ್ಕೆ ಈ ಮುರಾಡವೇ ಅಣ್ಣ ? (ಕುಂಗಳ. ೫).

**ಮುರಾಡ ಹಾಕಿಕೊಳ್ಳು** = ಪಟ್ಟುಹಿಡಿ : ಹಟಮಾಡು : ಶ್ಯಾಮಲೆ ಬರುವುದಿಲ್ಲವೆಂದು ತಿಳಿದುಕೊಂಡೇ ಈ ಕುಮುದೆಯು ಮುರಾಡ ಹಾಕಿಕೊಂಡು ಕುಳಿತಿರುವಂತೆ ಕಂಡುಬರುತ್ತದೆ (ಮದುಸಂ. ೦೦೭).

[?./ ಅರ. ಹಿಂ. ಮರಾ. ಮುರಾದ್=ಆಸೆ, ಇಚ್ಛೆ]

**ಮುರಾಲಿ** (ನಾ). ಆನೆಗೆ ತೊಡಿಸುವ ಒಂದು ಬಗೆಯ ಆಭರಣ : ಆನೆಕೊಂಬಿಗೆ ಹಿತ್ತಾಳೆ ಅಣಸು ಮುರಾಲೀ ಆನೆಕಾಲಿಗೆ ಹಿತ್ತಾಳೆ ತೊಡೆ ಸರಪಣಿ (ಎಕ. XIV, ಹಂಜಪ. ೨೯೨-ಕುಪಿ. ೦೪೨; 1847). [ ? ]

**ಮುರಿ$_1$** (ಕ್ರಿ). ೧. ಬಾಗು ; ಬಗ್ಗು: "ಮುರಿ—ವಕ್ರಭಾವೇ(ಬಗ್ಗು)" (ಕಮುಲ); ಎಡಗೆಯ್ಯನೂಱ ಪೀಠದ ಕಡೆಯೊಳ್ ಮುಯ್ಯುದ್ದಮಾಗೆ ಮುರಿದ ಬೆಡಂಗಚ್ಚುಡಿದಿರೆ ಹಾರಂ ಕಲಕೋಗುರ್ಡಿಸೆ ನಿಜಾನುಜರೊಳಾಗಳೊರ್ವಂ ನುಡಿದಂ (ಶಾಂತಿಪು. ೫-೦೦೩); ಮುರಿದೆಡಗೈ ನಿಜಾಂಗಳನೋಸರಿಸೆ (ಅವಂಪು. ೭-೪೪) ; ಕಂಬಿಯೊಳೊಂದುದಿನದಲಿ ಹೊತ್ತುದಕವಂ ಶೀಘ್ರದಿಂದ ತರುತ್ತ ಹಳ್ಳವನಾಚೆ ದಾಟಲು ಬೆನ್ನು ಮುರಿದಿರಲು ಬಿಡದೆ ಕಂಬಿಯನವಚಿ ಕೊಂಡು (ಬಸವು. ೪೪-೫). ೨. ಬಾಗಿಸು; ಬಗ್ಗಿಸು : ವೃಕೋದರನೊಯ್ಯನೆ ನಕ್ಕು ಬಾಲವಂ ಸಲೆ ಮುರಿದೆತ್ತಲಾಟಿಸೆ ಧರಿತ್ರಿಗೆ ಕೀಲಿ[ಸಿ]ದಂತುಟಾಗೆ ದೋರ್ವಲದ ಪೊಡರ್ಪುಗೆಟ್ಟು ನಡೆನೋಡಿ ಮರುತ್ಸುತನಂ ಮರುತ್ಸುತಂ (ಸಂಕಭಾ. ೮-೩೨); ಕೆಂದಾವರೆಗೆತ್ತಡಿಯೊಳ್ ಸಂಧಿಸಿ ಕಳಭಂಗಳೆಳಸೆ ಕೆಯ್ಯಂ ಮುರಿದಾಸ್ಯಂದಮನೀಕ್ಷಿಸಿ ಸಿಂಗದ ಚಂದದಿನೆಂದಂಬೆಗಾಲೊಳೆಸೆವನೊ ಕಂದಂ (ಪುಷ್ಪಪು. ೩-೯೫). ೩. ವಕ್ರವಾಗು ; ಡೊಂಕಾಗು ; ಸೊಟ್ಟಾಗು : ಕರಂಗಳ್ ಚೆಲ್ವನಾಂತಿರ್ದೊಡಂ ಮುರಿದಂತಿರ್ಪರ ಮೇಲೆ ಪೇರಿ ನಡೆವರ್ (ಕೋಪೀಕ. ೫೩) ; ಮುರಿದ ಕಾಲ್ಗಳನೆಳೆಕೊಳುತೆ ಇಜ್ಜೋಡುಮಾಕಾಶವೀರರ ಕಂಡಳು ಪರೀಕ್ಷಾಂಬಿಕೆ ನಸುನಗುತೆ (ಮೋಹತ. ೨೯_೦೨). ೪. ಹೊರಳು ; ತಿರುಗು : ಪೋಪ ಬರ್ಪ ಜನವಂ ಮುರಿದೀಕ್ಷಿಸೆ ಕಾಂತೆ ಬೀದಿಯಂತೆಯ್ದುವಿನಂ ಪೊದಚಿದ್ದೆಸೆದನಂಗರಸಾಬ್ಧಿಯೊಳುಯ್ದು ತೊಯ್ದು (ಶಾಂತಿಪು. ೬-೮೭); ಮುರಿದ ಕೊರಲ್ ಬಚಲ್ದೆಳವಲಾಟಿಪ ಮೆಯ್ . . . ಕತ್ತುರಿವೊನೆಗೊಂಡೆಚಲ್ವ ಕವಿ ಸೂಚಿಸಿದಪ್ಪುದು ಸೋಲ್ದ ಭಾವವಂ (ಕಾದಂಪೂ. ೬೩೦): ಮಗುಳೊರ್ವಳಾಟದೊಳ್ ಮತ್ತೊರ್ವಳಂ ತನ್ನ ಬಗಸೆ

ಗಣ್ಣಿಂ ಮುರಿದು ನೋಡೆ (ಶಬ್ದಮ. ೬-೯೬). ೫. ಹೊರಳಿಸು ; ತಿರುಗಿಸು: ಗುರುಪಿತಾಮಹರಿಂದ ಮೋಱೆಯ ಮುರಿದ ವಿಜಯವಧೂಕಟಾಕ್ಷವ ತಿರುಹಿ ಹಾಯ್ಕುವ ಗಂಡನಾವನು ನೀವು ತಪ್ಪಿದಡೆ (ಕುಮ್ಯಾಶ. ೩-೩೩); ಅಗಲಲಾಱದ ಮುರಿದ ಮೋಱೆಯು ದುಗುಡದಲಿ ಹಯವಶ್ರುವಾರಿಯು ನುಗುಳೆ ಗತಿಗುಂದಿದವು ಗುಣಭರಿತನ ವಿಯೋಗದಲಿ (ತೊರಾಮ. ೨-೫-೨). ೬. ವಿಮುಖವಾಗು ; ಪರಾಙ್ಮುಖವಾಗು : ಮುರಿದು ಕಣ್ಣಟ್ಟರೆ ಕ್ಷಣಕೆ ಮುಕ್ತಿಯು ಕಾಂಬ ಭರತಚಕ್ರಿಯು ಹೇಳಲಳವೆ (ಶಕಕ. ೦-೨೦). ೭. ಓಲು; ಜೋಲು ; ಓರೆಯಾಗು : ಮುರಿಯೆ ಕೊರಲ್ ಕೆಲಕ್ಕೆ ಮುಡಿ ಜೋಲ್ವಿನೆಗಂ ಕರಮಂ ಕದಂಪು ಸಾರ್ತರೆ . . . ಕರುವಿಟ್ಟ ಚಿಂತೆಯನೆ ಚಿತ್ರಿಸಿದಂತೆ ವೊಲಿರ್ದ ನಲ್ಲಳಂ . . . ನರಪತಿ ಭಾವಿಸಿ (ವರ್ಧಪು. ೪-೭೭) ; ಮುರಿದ ಗೋಣಿನ ಕರದ ತಲೆಗಿಂಬುಗಳ ಕಾಲಾಳೊಱಗಿತವನಿಯಲಿ (ಕುಮ್ಯಾದ್ರೋ. ೦೩-೭). ೮. (ನಿದ್ರೆ, ಜಡತೆ ಮುಂತಾದುವನ್ನು ಹೋಗಲಾಡಿಸಲು ಕೈಕಾಲು ಮುಂತಾದುವುಗಳನ್ನು) ನೀಡು,— ಚಾಚು,— ನೆಟ್ಟಗೆ ಮಾಡು : ಒಂದು ದಿನದ ಕೂಸಂ ವನಧಿಯೆಂಬ ದೇವತೆ ಒಡಿದೊಡಾ ಕೂಸು ಬೆನ್ನಂ ಕೊರಳುಮಂ ಮುರಿವುತಿರ್ಕ್ಕುಂ (ಚಾಂಉ. ೦೨೪-೦೭); ಒತ್ತರಿಸಿ ನಡೆವುತ್ತ ಕಾಲ್ಬಿಚ್ಚುತ್ತ ಒದೆವುತ ಬೆನ್ನ ಮುರಿದುಕೊಳುತ್ತ . . . ಮುಂಡುಗಾಱನು ದಸರಿದೇವನ ಬಳಿವಿಡಿದು ಸಾರ್ದು (ಬಸವ. ೩೬-೦೭). ೯. ನುಲಿ ; ತಿರುಚು : ಕಾಲ್ಗಿಡಿಸಲುಂ ಮುರಿದು ಕಟ್ಟಿಡಂ ತಡಮೆಂಬವಱಿಂದಂ ಬಾಹು ಕೈಕೊಳ್ಳಿಬಿವು ಮೊದಲಾಗಿ ಗೋಮೂತ್ರಮಂಡಲಮು ಪತಾಕಾಶಂ ವೇಜವಿತಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲಂ (ಶಾಂತಿಪು. ೩-೨೩ ಖ); ಮಗಧೇಶನನಿಕ್ಕಿ ಮೆಟ್ಟಿಪೆಂ ಲಾಳನ ಗಂಟಲಂ ಮುರಿದಪೆಂ (ಶಾಶಾಸ. XI-i, ೩೨-೦೫; 1007 ?). ೧೦. ಹುರಿ ಮಾಡು ; ಹೊಸೆ; ತೀಡು : ಮುರಿದಣ್ಪಕ್ಕಿದ ಗಡ್ಡ ಮೀಸೆ ಮುಡಿಕಟ್ಟಿಂ ಶಳ್ಳ ಕೆಂಬಟ್ಟೆ (ಅಮಪು. ೦೦-೬೩); ನೆಲಕ್ಕೆ ತೂಂತಿಟ್ಟವೊಲಿರ್ದ ಮೈಮುರಿದ ಮೀಸೆ ಮಿಡುಂಕುವ ಬಾಯ್ವ್ (ಕಪ್ಪಾಸ್ಸ. ೬-೦೫) ; ಮೀಸೆಯು ಮುರಿದು ಹುಬ್ಬನು ಬಲಿದು . . . ಭಾರ್ಗವದತ್ತ ಬಾಣಕೆ ನೀಡಿದನು ಕರವ (ಕುಮ್ಯಾದ್ರೋ. ೦೬-೫೦). ೧೧. ಹೆಣೆದುಕೊಂಡಿರು ; ಸೇರಿಕೊಂಡಿರು : ಜಡೆಯೊಡೆಯ ಬಾಂದೊಱೆಯು ಮಕರಂದಸಂದೋಹದ ಮುರಿದ ಜಡೆಗಳ . . . ಪಂಪಾವಿರೂಪಾಕ್ಷಕಲ್ಪದ್ರುಮಂ ಪೊರೆಯಲಾನತಜನರನು (ಹಂಪೆ. ೩-೧). ೧೨. ಮತ್ತೆ ಬರು ; ಹಿಂದಿರುಗಿ ಬರು ; ಪುನಃ ಬರು : ಪೆಱಪಿಂಗುವನಂ ಮುರಿದಿಡದೆ ಒಡಿದು ಘಟ್ಟಿಸಿ ಒರಿಯಱೆಯೊಳ್ ಪೊಯ್ದು ನಸಗವ್ವೊಯ್ಯುಂ ಭೀಮಂ (ಹಂಪಾ. ೩-೩೦) ; ಕಮಲದಳಾಯತಾಂಬಕಿ ನಳನ ರೂಪಿನ ನಾಲ್ವರಿರೆ ಕಂಡು ಮಾಯವಿದು ತಾನಱಿಯೆನಿವರ ನಿಜಾಯತವ ನೆಂದೆನುತ ಮುರಿದಾ ವಾಯುಗತಿಯಲಿ ಬಂದು ಹೊಕ್ಕಳು ತನ್ನ ಮಂದಿರವ (ನಳಚ. ೩-೩೦). ೧೩. ಹಿಂಜರಿ ; ಹಿಮ್ಮೆಟ್ಟು ; ಹಿಂದೆಗೆ : ಉರವಣಿಸುತ್ತದು ಕೊಂಡ ಹಜ್ಜೆಗೆ ಮುರಿಯಲಾಗದು (ಕುಮ್ಯಾದ್ರೋ. ೦೫-೨೦); ಆ ತರುಣಿಯರ . . . ಸುತರಳಾಪಾಂಗರೋಚಿಯಲಿ ಮುರಿದುದಾ ಮರಗತ್ತಲೆಯು ವ್ಯಕಿರಿ (ತೊರಾಮ. ೦-೫-೯೫); ಒಡೆದ ನೆತ್ತಿಗಳಿಂದ ರಕುತದ ಮಡು ಹರಿಯೆ ತರಹರಿಸಲಾಱದೆ ಪಡೆ ಮುರಿದು ಬರುತಿರಲು (ನಳಚ. ೯-೨೭). ೧೪. ಹಿಮ್ಮೆಟ್ಟಿಸು : ಹಿಂದೆ ಸರಿಯುವಂತೆ ಮಾಡು : ತನಗೆ ಮಲೆತ ನರಸಿಂಹಪುರ ಬೇಲೂರ ಜನಪತಿಗಳ ಮುರಿದು (ಕಂಪಿಲ. ೩-೫೦). ೧೫. ಕುಗ್ಗು : ಅಡಗು ; ಕುಸಿ ; ತಗ್ಗು : ಪರೆಯಿಂದಂ ಪೂರ್ಬು ಜೋಲಲ್ ತೆರೆ ತರತರದಿಂದಮಪ್ಪ ಪೊಣ್ಮಲ್ಕೆ ಗಂಟಲ್ ಮುಱಿದತ್ತೊಂದೊಂದಱೊಳ್ ಕಳ್ತೊಗೆದು ಸಿರೆಗಳ್ (ಶಾಂತೀಪು. ೦೬೩): ಮೋಹದಿಂದಿನ್ನೆಗಂ ಭವವಾರ್ಧಿಯೊಳ್ ತಿರಿದೆಂ ಮನಂ ಮುರಿವನ್ನೆಗಂ (ಧರ್ಮಾಶ್ಯ. ೭-೦೨೦). ೧೬. ಅಣಿಗೊಳ್ಳು : ಸಿದ್ಧವಾಗು : ಅರಸನನುಜರುಸಹಿತ ಕೃಷ್ಣನ ಬೆರಳ ಸನ್ನೆಯೊಳೈದೆ ಬಿಡೆ ಮೋಹರಿಸಿ ನಿಂದುದು ಮುರಿದ ಮಕರವ್ಯೂಹರಚನೆಯಲಿ (ಕುಮ್ಯಾದ್ರೋ. ೪-೨೨); ಉರವಣಿಸಿದರು ಮುರಿದು ಮಕರವ್ಯೂಹದತಿರಥರು (ಕುಮ್ಯಾದ್ರೋ. ೦೦-೦). ೧೭. ಕಡೆಗಣಿಸು ; ತಿರಸ್ಕರಿಸು : ಅವರವರ ಕೃತಕರ್ಮಸಂಸ್ಕಾರ ಹೋರಿಸುವುದಳಿಸುವುದು . . . ಇದಕಹಿತ ಹಿತರೆಂದಾರ ಮುರಿವುದು ಮನ್ನಿಸುವುದೆ ಭೀಮ (ಕುಮ್ಯಾಅ. ೨೦-೦೬). ೧೮. ಬಿಚ್ಚು ; ಹರಡು : ಮುರಿದಿಳಿವ ವೇಣಿಕಾಬಂಧುರ ಯಮುನಾನದಿಯು ಪೂರ್ಣಪುಳಿನಸ್ಥಳದಂತಿರೆ ಕರಮೆಸೆದುದು ಘನಜೀವರಜಘನಂ ಚಕಿತತರುಣಹರಿಣೀಕ್ಷಣೆಯಾ (ಪ್ರಕಂ. ೪-೦೦೩). ೧೯. ಹೊರಹೊಮ್ಮು ; ಉಂಟಾಗು : ಪಾದರಿಗಲರ್ಗಂಗಳಿಂದೆ ಮಕರಂದಮುದಿಪ್ಪು ತುಟುಂಕೆ ಪಲ್ಲವಂ ಮುರಿದುವು ತೋಳೊಳಿಂದು ಮಲಯಾನಿಳನಿರ್ದಪನೆಂದು ತೋರ್ಪವೋಲ್ (ಅಜಿಪು. ೭-೦೦); ಅಲ್ಲಲ್ಲಿಯಕ್ಕಿ ಮುರಿವಲ್ಲಲ್ಲಿ ಕೆಂಪಾಗುವಲ್ಲಲ್ಲಿ ಕುಯ್ಯಲಾಗುವ ಪಲವು ಪೆಸರ್ವಡೆದ ನೆಲ್ಲ ಗದ್ದೆಗಳತಿ ಮುದಂಬಡಿಸಿದುವು ತಮ್ಮನೋಪಿದ ಕುಟುಂಬಗಳಿಗೆ (ಸಮ್ಯ. ೦-೨೨). ೨೦. (?) : ಉದ್ವವಟಪೊಟಱೆವರೆಂಬುದೆ ಬಿದ್ದಂ ಮುನ್ನಲ್ಲಿ ಕಡುಪಿನೊಳ್ ಬಹುವಿಧದಿಂದುದ್ದವಟಮೊಱೆದು ಮುರಿಗುಂ ಬಿದ್ದಮೆನಲ್ ಬಳಕ ಪೂಜಗನೆಱೆವ ಬೆಡಂಗಂ (ಎಕ. II. ೦೩೩-೦೦೯; ೯೫೫).

**ಮುರುತುಕೊಳ್ಳು, ಮುರಿತುಕೊಳ್ಳು**= ೧. ಬಿಗುವಾಗಿರು ; ಬಿಗಿಯಲ್ಲಿರು : ತನಗೆ ಬರೆಯಲಿಲ್ಲವಲ್ಲ ಎಂದು ಮುರುತುಕೊಂಡು ತಾನೂ ಬರೆಯಲಿಲ್ಲ (ಬಿಂಛಾ. ೭೯); ಅವನು ಮುರುತುಕೊಂಡೇ ಬಿಗಿಯಾಗಿ ನಡೆದನು (ಸಹನಾ. ೦೬೦). ೨. ಸಿಟ್ಟಾಗು ; ಕೆರಳು; ಕೋಪವಮಾಡಿಕೊಳ್ಳು : ತಾಯಿಯ ಮಾತೂ ಅವನಿಗೆ ಹಿತವಾಗಲಿಲ್ಲ; ಆದ್ದರಿಂದ ಮುರುತುಕೊಂಡು ಮತ್ತೆ ಸಭೆ ಬಿಟ್ಟು ಹೊರಟು ಹೋದನು (ಪಶಕಾ. ೨೫೬); ಹೀಗೆ ಅಳುತಾ ಕೊಡುವ ದಾನವನ್ನು ನಾನು ಒಲ್ಲೆನೆಂದು ಮುರಿತುಕೊಂಡು ಹೋದನು (ಹಿತಕಂ. XIII$_2$, ೨೭). [ದೇ.॥ ತಮಿ. ಮುರಿ ; ಮಲ. ಮೂರಿ ; ತುಳು. ಮುಲ್ಲು ; ತೆಲು. ಮುರಿಂಚು, ಮುರಿಯು ; ಪರ್ಜಿ. ಗದಬ. ಮುರ್ಗ್]

**ಮುರಿ$_2$** 'ಮುಱಿ$_1$' ನೋ.

**ಮುರಿ$_3$** 'ಮುರಿವು' ನೋ.

**ಮುರಿ$_4$** 'ಮೂರಿ' ನೋ.

**ಮುರಿಕ** (ನಾ). ೧. "ವಕ್ರಸ್ವಭಾವದವನು" (ಶ್ರಕ್ಷಿ). ೨. ಸಿಟ್ಟಿನ ಮನುಷ್ಯ: "ಮುರಿಕನೆನಲ್ ಕೋಪಿ" (ಚಾರು. ೯೩).
[ಮುರಿ$_1$ + — ಕ$_3$]

**ಮುರಿಕಟ್ಟು** (ನಾ). ಪಜಾ ; ಕಳೆಯುವಿಕೆ ; ಮುರಿದುಕೊಳ್ಳುವಿಕೆ: ನಿನ್ನ ಮಗಳಿಗೆ, ಅನ್ನ ಬಟ್ಟೆ ಎಲ್ಲಾನೂ ಕೊಟ್ಟು ಅದರ ಜೊತೆಗೆ ನಿನ್ನ ಸಾಲದೊಳಗೆ ವರ್ಷಾ ಹದಿನೈದುರೂಪಾಯಿ ಮುರಿಕಟ್ಟನೂ ಮಾಡಿಕೊಡಬೇಕು (ಸುಧಸಂ. ೬೦). [ಮುರಿ$_2$ (< ಮುಱಿ$_1$) + ಕಟ್ಟು$_1$]

**ಮುರಿಕಿನಾಡು, ಮುರಿಗನಾಡು, ಮುಲಕನಾಡು** (ನಾ). ಒಂದು ನಾಡಿನ ಹೆಸರು ಮತ್ತು ಅಲ್ಲಿಗೆ ಸೇರಿದ, ತೆಲುಗು ಮಾತನಾಡುವ ಸ್ಮಾರ್ತಬ್ರಾಹ್ಮಣರ ಒಂದು ಒಳಪಂಗಡ : ಇವರೊಳಗೆ ಕಾಸಲನಾಡು, ಮುರಿಕಿನಾಡು, ತೆಲಗನ್ಯ, ವಾಗನಾಡು, ವೇಲನಾಡು ಎಂದು ಐದು ಪೊಳಭೇದಗಳುಂಟು (ಆಧಾಗ. ೯೬). **ಮುರಿಗನಾಡು** : ಪಲ್ಲವಿಶೇಷಯ್ಯರ್ ಅವರು ಮುರಿಗನಾಡು ತೆಲಗು ಬ್ರಾಹ್ಮಣರು (ಹಂಗೀತ. ೯೭). **ಮುಲಕನಾಡು** : ಅವರು ಮುಲಕನಾಡು ಬ್ರಾಹ್ಮಣರು (ಕೂಂ).
[← ತೆಲು. ಮುರಿಕಿನಾಡು, ಮುಲಿಕಿನಾಡು, ಮುಲ್ಕಿನಾಡು, ಮುಱಿಕಿನಾಡು]

**ಮುರಿಕಿಲು** 'ಮುಱುಕಿಲ್$_2$' ನೋ.

**ಮುರಿಕಿಸು** 'ಮುಱುಕಿಸು' ನೋ.

**ಮುರಿಕೆ$_1$** 'ಮುರಿಗೆ$_1$' ನೋ.

**ಮುರಿಕೆ$_3$**, ಮುರಿಗ್ಗೆ, ಮುರುಕೆ (ನಾ). ೧. ಔಷಧೀಸಸ್ಯ; ವನಸ್ಪತಿ; **ಗಿಡಮೂಲಿಕೆ: (?)**. ೨. ಒಂದು ಬಗೆಯ ಸಸ್ಯ: ಮುರಿಕೆಯ ಕಾಯ್ ಮುಡುವಾಗಲ್ ಬೆರಸಿದ ಮಧುವಂ ವಿಲೋಚನಂಗಳೆಳೆಚ್ಚಲ್ ಪರಿಗುಂ ಕಡವಿನ ವಿಷಮುಂ (ಜಶುರ. ೦೬–೭೦). **ಮುರಿಗೆ$_2$** : ೨. ಜಾವನಿಗಾಲೆ . . . ಕಾಡುಪತಂಗ, ಮುರಿಗೆ (ಪ್ರಶಿಗ: ೪೦–೭೪೪). **ಮುರುಕೆ**: ೨. "ಮಾಹಾಜ್ವಾಲಿನೀ—ಮುರುಕೆಯ ಮರ" (ಓಶಂ. ೦೨೨): 'ಮುರ್ಗಿ', 'ಮುಱುಕಿಲ್$_2$' ಪರಾ. [ ? ]

**ಮುರಿಕೊಂಬು** (ನಾ). ಮೇಲುಮುಖವಾಗಿ ಬಾಗಿಕೊಂಡಿರುವ ಒಂದು ಬಗೆಯ ಊದುವ ವಾದ್ಯ: ಒದಗಿರ್ಪ ಪರೆಕೊಂಬು ಮುರಿಕೊಂಬುಗಳ ಮೊಳಗಿನ ಪದಪಿನಿಂ ಬೀಗರಂ ಕರೆದುಲಿಯುತಿತ್ತು (ಶಾಬೂರ. ೦೪೬–೨೦೬). [ಮುರಿ$_1$ + ಕೊಂಬು$_1$]

**ಮುರಿಗಟ್ಟಿಗೆ** (ನಾ). ನೆಯ್ಗೆಯ ಒಂದು ಉಪಕರಣ : ಹರುಗುಣಿ ಗೂಟ ಶವಣೆಗೋಲು ಲಾಳಿಯು ಮುರಿಗಟ್ಟಿಗೆಯು . . . ನಾಲಿಗೆಗೂಟವ ನಿರದೊಂದುಳಿಯದೆ ಕಟ್ಟಿದನು (ಅಪುಶಾಂ. ೩-೩). [ಮುರಿ$_1$ + ಕಟ್ಟಿಗೆ$_1$]

**ಮುರಿಗಡಲು** (ನಾ). (ಕ್ಷೋಭೆಯಿಂದ) ಹೊಯ್ದಾಡುತ್ತಿರುವ ಸಮುದ್ರ: ಮುಂದೆ ತವಕಿಗ ಭಟರ ತೆರಳಿಕೆಯಿಂದ ಮೊಳೆತವ ಗಭೀರಭೇರಿಯ ಮುಂದರದ ಮುರಿಗಡಲ ಗಜಱಿಸೊಲೊದಱಿತರಿಸೇನೆ (ಕುವ್ಯಾಪ್ರೋ. ೨-೦೪). [ಮುರಿ$_1$ + ಕಡಲು (< ಕಡಲ್$_2$)]

**ಮುರಿಗನಾಡು** 'ಮುರಿಕಿನಾಡು' ನೋ.

**ಮುರಿಗಿನಮರ** 'ಮುರುಗಿನಮರ' ನೋ.

**ಮುರಿಗೆ$_1$**, ಮುರಕೆ. ಮುರಗಿ$_1$. ಮುರಿಕೆ$_1$, ಮುಱುಕ್ಕು (ನಾ). ೧. ಸುರುಳಿ ; ಸುತ್ತು : ಮಸ್ತಕಾಂಬುಜಕೆ ಮುರಿಗೆಯಾಕಾರ ಕೃತ ಕೌಶೇಯದಂಬರಂ ದೇಹದೊಳ್ಮುರಿಗೆಯಾಗಿರೆ ಪೊದೆದ ಶಾಲುಮುದು ರಂಜಿಸು ತಿರೆ (ಮಹಾಶಾ. ೦೭–೬); ಚಿನ್ನಕಾರವೆಂಬ ಜಾತಿಯು ಕಾನಡಾಜಿಲ್ಲೆಯಲ್ಲಿ ಇಲ್ಲ . . . ಕೋಡು ೧೨ ಇಂಚು; ಬುಡದಲ್ಲಿ ಮುರಿಗೆಗಳಿರುತ್ತವೆ (ಕಶಾಗ. ೬೫). ೨. ಇರಿಕೆ ; ಸಿಂಬಿ : ಇವರಲ್ಲಿಯು ಬಂಧವು ದೇವಾಲಯಗಳ ಗೋಡೆಗಳಲ್ಲಿ ಕಲ್ಲುಗಳ ಮೇಲೆ ಅಲ್ಲಲ್ಲಿ ಕಂಡುಬರುವ ನಾಗರಹಾವಿನ ಮುರಿಗೆಯಂತಿದೆ (ಗೂಕ್ಕುಗು. ೦೬೬). ೩. ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ ; "ವಂಕಿ; ನಾಗಮುರಿಗೆ" (ಶಾಶಕೋ. ೩೩) : ಮುತ್ತಿನ ಚೌಕಳಿ ಮುರಿಗೆ ತಿದ್ದಿದ ಮಿಸೆ ಹತ್ತುಗಟ್ಟೀವು ಎಡಪದಕವ (ಕೋಕಗೀ. ೩೬). 'ನಾಗಮುರಿಗೆ' ಪರಾ. ೪. (ಅಲಂ) ತೊಡಕು; ಸಮಸ್ಯೆ; ಗೋಜು: ಮನಸ್ಸಿನ ಮುರಿಗೆಗಳನ್ನು ಕಳೆದು ಅದನ್ನು ಸರಲ ಮಾಡಲು ಭಗವಂತನನ್ನು ಅನನ್ಯಭಾವದಿಂದ ಪ್ರಾರ್ಥಿಸಲಾಗಿರುವುದು (ಶರಶ. ೪೬); ಈ ಮನಸ್ಸಿನ ಈ ಮುರಿಗೆಯೊಮ್ಮೆ ಬಿಚ್ಚಿದರೆ . . . ನಿರ್ಣಯಿಸುವುದು ಸುಲಭವಾದ ಮಾತು (ಜಾಶಜು. ೪೯). **ಮುರಕೆ** : ೫. ತಿರುವು ; ಬಾಗು : ಘಟ್ಟದ ಮುರಕೆಯಲ್ಲಿ ಮುಂದಿನ ವಿರು ಹಿಂದಿನ ಬಿಳಿ ನಿಟ್ಟಿನಲ್ಲಿಯೇ ಹೋಗುವಂತೆ ಕಾಣುತ್ತದೆ (ಮಾರ್ಗ್ರಶಾ. ೬೮); ಇವರು ರಸ್ತೆಯ ಈ ಮುರಕೆಯ ತನಕ ಮುಟ್ಟಿಸಿ ಹೋದರು (ಕುಂಕುರಾ. ೩೩). **ಮುರಗಿ$_1$** : ೧. ರತ್ನದ ಶಿಖರಗಳಿವೆ ಸಾವಿರ ಬಂಧನ ಮುರಗಿಗಳಿಂದ (ಕಥು. ೬೬೦). **ಮುರಿಕೆ$_1$** : ೬. ಮುದುರಿಕೊಳ್ಳುವುದು; ಸಂಕೋಚ : 'ಮುಟ್ಟಲುಮುರಿಕೆ' ಪರಾ. **ಮುಱುಕ್ಕು** : ೫. 'ಪೆರ್ಮುಱುಕ್ಕು' ಪರಾ. [ಮುರಿ$_1$ + — ಗೆ./ತುಳು. ಮುರಿಗೆ]

**ಮುರಿಗ್ಗೆ** 'ಮುರಿಕೆ$_3$' ನೋ.

**ಮುರಿಗೆಗೊಳ್ಳು** (ಕ್ರಿ). ಗೋಜಿನಲ್ಲಿ ಸಿಲುಕಿಕೊಳ್ಳು; ಸಿಕ್ಕಿನಲ್ಲಿ ಬೀಳು : ಕರುಳುಗಳು ಮುರಮುಲಿ ಮುರಿಗೆಗೊಳ್ಳುವುವು . . . ನೋವು ಪರಿಹರಿಸು ವವರಾರು? (ಶಕ್ರಶ. ೦೨೯). [ಮುರಿಗೆ$_1$ + ಕೊಳ್ಳು$_1$ (<ಕೊಳ್$_1$)]

**ಮುರಿಗೆಡಹು** (ಕ್ರಿ). ಚೂರುಚೂರಾಗುವಂತೆ ಕತ್ತರಿಸಿ ಬೀಳಿಸು : ನಾಶಮಾಡು : ಕವಿವ ಪದಾತಿ ಪೊಗುವಾನೆಗಳ ಕುದುರೆ ಪೊಂದೇರ್ಗಳ ಮುರಿಗೆಡಹಿದಂ (ಶುಕಂಗ. ೩೨–೦೫). [ಮುರಿ$_2$ (< ಮುಱಿ$_1$) + ಕೆಡಹು (<ಕೆಡಪು)]

**ಮುರಿಗೆಡು** (ಕ್ರಿ). ಭಂಗವಾಗು ; ಭಗ್ನವಾಗು: ಪರಮುವಾದ್ಯದ ನೆರವಿ ಮಧ್ಯದೊಳರರೆ ವಿಳಪತಿ ಸುರರ ದಳಗತಿ ನೆರೆಗೆಡಲು ಮುರಿಗೆಡಲು ಬೆರವಂತುರುಬಿ ತರುಬಿದನು (ಅಂಬಶಾ. ೪೦–೦೨). [ಮುರಿ$_2$ (< ಮುಱಿ$_1$) + ಕೆಡು$_1$]

**ಮುರಿಗೆಡೆ** (ಕ್ರಿ). ೧. ತಿರುಗು; ಹೊರಳು: ಊರ ಹೊಗುವರರಿದಱದು ಹೆಮ್ಮಾರಿಯನು ಕೇಡಾಯ್ತೆನುತ ಧವಳಾರಗೋಪುರದೇಱಿಕೆಯು ನೋಟಕರು ಮುರಿಗೆಡದು ದೂರದಲಿ ನಿಂದಿಹರು (ಕೂಶಕಾ. ೩-೭-೦೩). ೨. ಹಿಮ್ಮೆಟ್ಟು; ಹಿಂಜರಿ : ಗರುಡನ ಗಱಿಯ ಗಾಳಿಗೆ ಫಣಿಗಳ ಮೊತ್ತ ಮುರಿಗೆಡೆದೋಡು ವಂದದಲಿ ನರಸುರಾಜೇಂದ್ರನ ಸಾಹಸದುಱುಬಿಗೆ ತುರುಕರೋಡಿದರ್ದೆಸೆದೆಸೆಗೆ (ಕಂಶಂ. ೦೫–೦೦೪). [ಮುರಿ$_1$ + ಕೆಡೆ$_1$]

**ಮುರಿಗೇಶ** (ನಾ). ಡೊಂಕುಡೊಂಕಾಗಿ ಬೆಳೆದಿರುವ ಕೂದಲು ; ವಕ್ರವಾಗಿರುವ ಕೂದಲು : ಲೋಹದ ಕೋರೆಗಂಭಂಗಳೊಳಗೆ ಮುರಿಗೇಶದಿನೆಸೆವ ಶಬರರ ತಲೆಗಳೋಳಿಯಂತೆ ರಕ್ಷಾಮರಂಗಳ ಸೊಳಕೆಯ್ದು . . . ಚೆಂಡಿಕಾಗೋಪುರದ್ವಾರಪುರೋಭಾಗದೊಳ್ . . . ಅವತರಿಸಿ (ಕಾದಂಅ. ೨೬೪). [ಮುರಿ$_3$ (< ಮುರಿವು) + ಕೇಶ]

**ಮುರಿಚು**, ಮುರುಚು (ಕ್ರಿ). ೧. ತಿರುಗಿಸು; ತಿರುವು; ತಿರುಚು: ಸೆಳೆದು ಮುರಿಚುವ ತಿರುಚುತಾಕ್ಷಣ ಪೊಳಕೆ ತೊಡಚುವ ಬಾಹು ಬಗೆಯ (ಅಂಬಶಾ. ೦೬–೨೩). ೨. ನೂಕು; ತಳ್ಳು : ಕಡೆಯ ರಘುಣಿರಘುಣಿರವ ಮುಸಲವನೊಡನೆ ಹೊಱುವಂಟರು ನೃಪಾಲಕನೊಡನೆ ಮುರಿಚಿದರು ಹಿಡಿವ ಸಚಿವ ಪ್ರಾಯ್ತ ಮಂತ್ರಿಗಳ (ಕುವ್ಯಾಕ. ೦೨೩. ೯–೩೩). **ಮುರುಚು** : ೧. ಮದಮುಖನ ಭುಜಬಲವ ನೋಡುವವಿದು ವಿಕಾರವಲಾ ಎನುತ ಮುರುಚಿದನು ಬಲ ಬಲಗಯ್ಯುಸುರವಣಿಸಿದನು ಪಾತಿವುಲಿ (ಕುವ್ಯಾಗ. ೬–೩೦) : ಅರರೆ ಸುರಪನ ಪಟ್ಟದಾನೆಯ ತರುಬಿ ಹಿಡಿಹಿಡಿ ಕಾಲನಡಗನು ಮುರುಚಿ ಕೊಯತ್ ಕೊಯತ್ (ಅಂಬಶಾ. ೨೭–೭). ೨. ಉರೆ ತಡೆದರವರಂದೊಬ್ಬರೊಬ್ಬರು ಮುರುಚಿ ಕರತಳವ (ಅಂಬಶಾ. ೩೯–೪೪). ೩. ನುಣುಚಿಕೊಳ್ಳು ; ತಪ್ಪಿಸಿಕೊಳ್ಳು : ಕೈಯ್ಯ ಹಿಡಿವರೆ ಅಂತು ಮುರುಚುವೆ ಎನ್ನ ಉರದಲಪ್ಪಿ ಒಡಿವಡೆಂತು ಮುರುಚುವೆ (ಕೂಕ್ತಸಂ. ೪೭–೩೦).

**ಮುರುಚಿಕೊಳ್** = ನುಣುಚಿಕೊಳ್ಳು ; ತಪ್ಪಿಸಿಕೊಳ್ಳು : ಬಲು ನಾಯ ಬಾಯಿಂದ ಮುರುಚಿಕೊಂಡೋಡುವ ಮೊಲಂ (ಹಕಶಾ. ೩–೨೬) ; ದ್ರುಪದಸುತೆಯನ್ನು ಓಡಿದೆಳೆಯಲ್ಕೆ ಬಿಸ್ಮಯಿಂ ಹೊಗಿ ಖಳನನ್ನುಕ್ಕಿ ಮುರುಚಿಕೊಂಡಳಲಿದಳು (ಕುರಂಗ. ೨೫–೩). [ಮುರಿ$_1$ + —ಚು$_1$]

**ಮುರಿತ$_1$** (ನಾ). ೧. ಬಗ್ಗಿದುದು ; ಬಾಗು : ನಳೀ —. ಮುರಿತಂ (ಕಾಕಕ್ಕ. ೩೦). ೨. ಕೊಂಕುನಡೆ ; ವಕ್ರಗತಿ : 'ಇಂಗ್ಲಂಡ ನಾವಿಕರು' ಎಂಬ ಕವನದ ಛಂದದೋಜಸ್ಸು, ಮುರಿತ, ತಿರುವುಗಳ ಅಂದ, ಗಮಕದಿಂದಲೇ ಪ್ರಕಟವಾಗಬೇಕು (ಓಶಾಷು. ೦೨೬). [ಮುರಿ$_1$ + —ತ$_1$]

**ಮುರಿತ$_2$** 'ಮುಱಿತ' ನೋ.

**ಮುರಿತಾಪ** 'ಮುರುತಾಪು' ನೋ.

**ಮುರಿದಲೆ** (ನಾ). ವಾಲಿಸಿರುವ ತಲೆ ; ಓರೆ ಮಾಡಿದ ಶಿರಸ್ಸು : ಜಡವ ಒರಿಯುಬ್ಬಣದ ಹೆಚ್ಚಿದ ಮುಡುಹುಗಳ ಮುರಿದಲೆಯ ಚರಣದ ತೊಡರ ಮೊಳಗಿನ ಬಾವುಲಿಗಳಲಿ ಘಣಘಣಧ್ವನಿಯ . . . ದಡಿಗ ದಾನವನವನಿ ಹಪ್ಪೆಗೆ ಸೆಗ್ಗಳಿಕೈತಂದ (ಕುವ್ಯಾಪ್ರೋ. ೦೩–೪೪). [ಮುರಿ$_1$ + ತಲೆ$_1$]

**ಮುರಿದಿಟ್ಟಿ** (ನಾ). ಓರೆನೋಟ ; ಕೊಂಕುನೋಟ : ತರುಣ ಹರಿಣಗಣಕ್ಕೆ ಸರಸೇಕ್ಷಣದ ಸವಿನೋಟಮನುಪದೇಶಿಪ್ಪಂತೆ ದೆಸೆವಡೆದು ಮುರಿದಿಟ್ಟಿ ಪರಿದಿಟ್ಟಿ ನೆಟ್ಟ ಮಿಟ್ಟಿಯಿ (ಶಾಶಕೀ. ೧-೦೩೫ ವ). [ಮುರಿ$_1$ + ದಿಟ್ಟಿ]

**ಮುರಿನೋಟ** (ನಾ). ೧. = ಮುರಿದಿಟ್ಟಿ : (ತಮತಮಗೆ ಮುರಿನೋಟವನ್ನಾಡಿಸಿ, ನಕ್ಕುಬಿಡುವರು) (ಮಂತ್ರಶ. ೩೯-೧೭). ೨. (ಅಂತರಂಗದ ಕಡೆಗೆ) ತಿರುಗಿಸಿದ ದೃಷ್ಟಿ : ತನ್ನಚ್ಚಿಯ ಮುರಿನೋಟದ ವಿಶ್ರಾಂತಿಯೆಡೆಯಿದೆನೆ ನೀಳ್ದ ನಾಸಾಪುಟಂ ರಂಜಿಸೆ (ಶಾಪಶ. ೪೦-೨೨). [ಮುರಿ$_1$ + ನೋಟ]

**ಮುರಿಪಾತ್ರೆ** (ನಾ). ಬಾಗಿರುವ ಹಿಡಿಕೆಯುಳ್ಳ ಪಾತ್ರೆ : ಕಮಂಡಲ : ಲೋಹದಿಂದೆ ವಿರಚಿಸಿದ ಮುರಿಪಾತ್ರೆಯುಂ ಕುಂಡಲಂ ತನ್ನ ಕರದಿನಗಲದ ಶಾಂತಮಲ್ಲಿಕಾರ್ಜುನಲಿಂಗಮುರುಪ್ರಣವಮಂತ್ರಮಾ ಋಗ್ವೇದಮಾತುಳ ಕೇಸರಿವಾಹನಂ ಕೇಳ್ವುದು (ತಿಪು. ೫೯-೨೨). [ಮುರಿ$_1$ + ಪಾತ್ರೆ]

**ಮುರಿಪು$_1$**, ಮುರಿಹು, ಮುರುಹು$_1$ (ಕ್ರಿ). ೧. (ಮುಷ್ಟಿಯಲ್ಲಿ ಹಿಡಿದು) ನುಲಿ; ತಿರುಚು; ಹಿಂಡು : "ಮುರಿಪು– ಮುಷ್ಟಿ ಘ್ರಮಣೇ" (ಶಮುಧಾ). ೨. ಬಾಗಿಸು ; ಬಗ್ಗಿಸು : ಮುರಿಪಿದ ಕರಂಬಾಸಿಗದೆರಡುಂ ಕಪ್ಪುಂ ವಿಳಾಸವತಿ ಪಿಡಿದೆರಡುಂ ಕರದಿನ ನು ಕರಿಸಿ ವಳ್ ಸುರಶರಾಸನಶ್ರೀಯನಾಳ್ದ ಗಗನಶ್ರೀಯುಂ (ಶಂಪ್ರಪು. ೧೬-೭೯). **ಮುರಿಹು:** ೧. ವಸ್ತ್ರಕುಲಮನಲ್ಲಿ . . . ಏಕನಿಷ್ಠೆಯಿಂದ ತಿರಿಹಿ ಮುರಿಹಿ ಹಿಳಿದು ಹಿಂಡಿ (ತಿರುಕೊಂ. ದೀ. ೨೩೩-೦೦). **ಮುರುಹು$_1$** : ೧. ಬಯಸ್ಸು ಸುಯಿವ್ವು ತೆಗೆಯುಲಲ್ಲಿ ತಿರುಹಲ್ಲಿ ಮುರುಹಲಲ್ಲಿ ಮಾಳಿಗಳೊಳಗೆ (ತಿರುಕೊಂ. ದೀ. ೨೩೭-೦೩) ; ಸಾರಥಿ ತುಡುಕಿ ವಾಘೆಯ ಮುರುಹಿ ಮರಳಿಚಿ ರಥದ ಕುದುರೆಗಳ ತಡೆಯುದಶ್ವತ್ಥಾಮನಲ್ಲಿಗೆ ನಡೆದು ಬರುತಿರೆ (ಕುವ್ಯಾದ್ರೋ. ೦೯-೫) : ಮುರುಹಿ ಹಿಡಿಯಲು ಮಡದ ಸಸ್ನೆಗೆ ತಿರುಗಿತತಿವೇಗದಲಿ ಹಯವು (ನಳಚ. ೭-೭). ೨. ಬೆರಳ ದರ್ಪಣಿಯ ಹಜ್ಜೆಯ ಬಿಸುಟನು ಜೋಡುಸೀಸಕ ಬಾಹುರಕ್ಷೆಗಳ ಮುರುಹಿ ಬಿಗಿದನು (ಕುವ್ಯಾದ್ರೋ. ೯-೦೫). ೩. ಪಕ್ಕಕ್ಕೆ ತಿರುಗಿಸು, ಹೊರಳಿಸು : ನರನು ಕಳುಹಿಸಿ ಕೊಳಲು ಗುರುವೋಪರವನಪಸವ್ಯದಲಿ ವಂಚಿಸಿ ಮುರುಹಿದನು ಮುರವೈರಿ ರಥವನು ಮುಂದಣೊಡ್ಡಿಂಗೆ (ಕುವ್ಯಾದ್ರೋ. ೧೦-೦) ; ಮುರುಹುವೆ ಮುಸುಡ ನೇತಕೆ ಹೇಳುವೆವು ಪಾತಕವಿಘಾತಕವ (ಶಿಶಾಗ. ೭-೦೨-೪). ೪. ಕೊಂಕಿಸು ; ಸೊಟ್ಟಮಾಡು : ಪಾಂಚಾಲ ಮತ್ಸ್ಯರು ಹಲರು ನಡೆಯದೆ ಮಾರ್ಗವೆಂದೇ ಮುರುಹಿದೆರು ಮುಖವ (ಕುವ್ಯಾಶಿ. ೯-೨೭). ೫. ಮುರಿಗೊಳಿಸು ; ಹೊಸೆ : ಮುರುಹಿದನು ಮೀಸೆಯನು ಕಣ್ಣುಗಳರಳಿದವು (ಕುವ್ಯಾದ್ರೋ. ೦೯-೧೩) ; ತಿದ್ದಿ ಮೀಸೆಯ ಮುರುಹಿ ರಕ್ಕಸನೆದ್ದು ನಿಂದಿದ್ದನುಚರರ ಬಿಡಪದ್ದುಲಿಸೆ (ತೊರೆರಾ. ೫-೯-೩). ೬. ಬಾಗು ; ಬಗ್ಗು : ಮುರುಹಿ ನಿಂದವು ಕೊಡಹಿದವು ಕೇಸರವನಧ್ವರ್ಯುಮುದ ಘಗೆ ಪರಿಪರಿಸೆ ನೀರೊಳು ಮೊಗಸಿದವು ಹರಿಹಯಚತುಷ್ಟಯವ (ಕುವ್ಯಾದ್ರೋ. ೧೦-೩೪). [ಮುರಿ$_1$ + — ಪು$_1$]

**ಮುರಿಪು$_2$**, ಮುರುಪು, ಮುರುಹು$_2$ (ನಾ). ೧. ಹಿಮ್ಮೆಟ್ಟುವಿಕೆ : ಓಸರಿತ : ಹಿನ್ನಡೆ : "ಮುರಿಪೆನೆ ಮರಳಿದ ಭಾವಂ" (ರನ್ನಕಂ. ೨). ೨. ಯುದ್ಧ ಮಾಡುವಾಗ ಬಳಸುವ ಗತಿಗಳಲ್ಲಿ ಒಂದು ; ಸುತ್ತು ತಿರುಗುವುದು : ಆವರ್ತನೆ : ಬೆರಸಿ ಪೊಯ್ದಾಡಿಯುಮು . . . ಕೈದುಗಳೊಳು ಕರಚಮತ್ಕಾರ ಲಾಘವ ಬವಣೆ ಪಯಪಾಡು ಮುರಿಪು ವ್ಯೆಲುಂಳ ಲಾಗು ಲವಣೆ ಲಕ್ಷ್ಯಂಗಳಿಂ ಘುರದೊಳೇಜಂ ತೋಜೆ ವಿಜಾಜು ತತಿಬಲದಲ್ಲಿ ನಾನಾಪ್ರಕಾರದಿಂದೆ (ತಿಪು. ೩೬-೩೯). **ಮುರುಪು** : ೨. ಬಹುಲಾಗುವೇಗದಿಂ ತಿರುಪು ಮುರುಪುಗಳಿಂದ ಪೊಯ್ದಾಡಿ . . . ಕಾದಿದರು ಬಾತ್ರಿಯಿಂದುಭಯಬಘಟರು (ತುರಂಗ. ೩೩-೨೪). **ಮುರುಹು$_2$** : ೩. ಸುತ್ತು : ಬಾಗು ; ತಿರುವು : ಹಿರಿಯ ಭವನದ ಸುತ್ತುವಳಿಯುದ ಮುರುಹಿನಲಿ ಮನೆಮನೆಗಳಾ ಮಂದಿರನಿಕಾಯಕೆ ಬಾಗಿಲೊಂದಾ ದ್ವಾರದೇಶದಲಿ (ಕುವ್ಯಾಅ. ೯-೭೦) ; ಕೋಟೆಯಿದ್ದುದು ಮುಂದೆ ಶಿವನ ಕರೋಟಿಮಾಲಾವಳಿಯದವೊಲುಜ್ಜು ಪಾಟಿಸಿದ ಕೊತ್ತಳದ ಮುಗಿಲಟ್ಟಳೆಯ ಮುರುಹಿ[ಶಾಕಾಂ.ವಿ]ನಲಿ . . . ವಿವಿಧರಚನೆಯಲಿ (ತೊರೆರಾ. ೫-೨-೪). ೪. ನದಿಯ ಹರಿಯುವಿಕೆಯಲ್ಲಿರುವ ಬಾಗು. — ಮುರಿವು : ಚಕ್ರಾದಿಯೆನೆ ನೀರ ಮುರುಹಕ್ಕು (ಮಂಗರಾ. ೦೨೩-೦೩). ೫. ಕಿವಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ ; ಮುರು : ಬೆಂಡೋಲೆ ಮುರುಹು ಮಾಗಾಯ್ . . . ಉಡಿದಾರಂ ಭೂಮಂಡಲಪತಿಯಾತ್ಮಜಂಗೆ ರಂಜಿಸುತಿರ್ದುದಂ (ದಶಕು. ೨-೭೩) ; ಬೆಳ್ಳಿ ಮುತ್ತಿನ ಮುರುಹು ತಾಂಬ್ರಂ ನಲ್ಲ ಲೋಹಂ ಕಂಚು ಮೊದಲಾದೆಲ್ಲವಂ ಒಟ್ಟೈಸಿ ತರಿಸಿ (ಬಸವ. ೦೭-೯). ೬. [ನಾಟ್ಯ] ವೃತ್ತಾಕಾರವಾಗಿ ಸುತ್ತುವ ಒಂದು ಭಂಗಿ : ಮುರುಹು ತಿರುವು . . . ಕರಣ ಭ್ರಮರಿಗಳನಣಿದು ತರುಣಿ ರಂಗಸ್ಥಲದಲಿ ನರ್ತಿಸಿದಳು (ಜೀವಂಧಾ. ೯-೯೪) ; ಮುರುಹು ಗುಂಡಾಲಮೆನಿಪ್ಪಡಹುಗಳನು (ಶೀಪಾ. ೩೨-೪೯). [ಮುರಿ$_1$ + — ಪು$_2$]

**ಮುರಿಬಡಿ** (ಕ್ರಿ). ಹಿಂಜರಿಯುವಂತೆ ಮಾಡು ; ಹಿಮ್ಮೆಟ್ಟಿಸು : ದಂಗೆ ಎಬ್ಬಿಸಿದ್ದ ಸಾಮಂತರನ್ನೂ ವಿಜಯಾಕಾಂಕ್ಷಿಗಳಾದ ಶತ್ರುಗಳನ್ನೂ ಮುರಿಬಡಿದು . . . ಅಧಿಪತಿಯಾದನು (ಕರ್ನಾಅ. ೫೭). [ಮುರಿ$_1$ + ಬಡಿ$_1$]

**ಮುರಿಮಲಕು** (ನಾ). (ಬಟ್ಟೆಯನ್ನು) ತಿರಿಚಿ ಹಾಕಿದ ಗಂಟು : ಕಳಶ ಜಲದಲಿ ಮುಖ್ಯ ನೆತ್ತರ ತೊಳೆದು ಪೊಸಮಡಿವರ್ಗದಲಿ ಮುರಿಮಲಕ ಬಿಗಿದನು (ಕುವ್ಯಾಕ. ೨೪-೩೪). [ಮುರಿ$_1$ + ಮಲಕು$_2$]

**ಮುರಿಮೀಸೆ** (ನಾ). ಹುರಿಮಾಡಿದ ಮೀಸೆ : ಹೊಸೆದ ಮೀಸೆ : ನಿಡಿಯೊಡಲ ಮುರಿಮೀಸೆಗಳ ಕೆಂಪಡರ್ದ ಕಂಗಳ. ಹೊಳೆವ ದಾಡೆಯ ದಡಿಗದಾನವನವನಿ ಹಜ್ಜೆಗೆ ನೆಗ್ಗಲೈತಂದ (ಕುವ್ಯಾದ್ರೋ. ೧೫-೪೪) ; ಸರಸ ಸಂಗೀತವೆ ತಡಮಾಡಬೇಡಮ್ಮ ಭರತರಾಜೇಂದ್ರನ ಮೊಗದಾ ಮುರಿಮೀಸೆಯಂತೆ ಮೋಹಿಸುತ ಬಾ ಬಾರೆಂದು ಕರೆವುತ ನಗುತ ಹಾಡಿದಳು (ಭರತ. ೦೦.೭೦). [ಮುರಿ$_1$ + ಮೀಸೆ]

**ಮುರಿವಡೆ** (ಕ್ರಿ). ಹೊಸೆದುಕೊಂಡಿರು ; ಹುರಿಯಾಗಿರು : ಮುರಿವಡೆದ ಮೀಸೆಗಳ ಮಸೆಳಿಯ ಮಣಿಕಿರೀಟಗಳಾ ಥಳಥಳದ ರತ್ನಪ್ರಭಾಬಂಧುರದ ಹೊರಳಿಯೊಳಿಯಲತಿಸಿಂಗರಮೆಸಗೆ (ಅವಂರಾ. ೫-೨-೦೦). [ಮುರಿ$_2$ + ಪಡೆ$_1$]

**ಮುರಿವು**, ಮುರ$_1$, ಮುರವು$_1$, ಮುರಿ$_3$, ಮುರು$_1$, ಮುರುವು$_1$ (ನಾ). ೧. ಬಳುಕು ; ಕೊಂಕು : ಹರಿದು ಹುಟ್ಟುವ ಬಳ್ಳಿವೆಳಗಿನ ಮುರಿವು ಮಂಡಳಿಸಿದುದು (ಕುವ್ಯಾಶೀ. ೭-೩೩). ೨. ಬಾಗಿರುವುದು ; ತಿರುವು ; ಬಾಗು : ಹರಿಯ ವೀಧಿಯ ಸೋಮವೀಧಿಯ ಮುರಿವುಗಳ ಕೇರಿಗಳ ನೆಲೆಯುಪ್ಪರಿಗೆಗಳ ಹೊಂಗಲಸದಲಿ ಹೊಳೆಹೊಳೆದುದಾ ನಗರ (ಕುವ್ಯಾಅ. ೦೭-೧೦) ; ಸೋಮ ಸೂರ್ಯರ ವೀಥಿ ಕೇರಿಗಳ ಮುರಿವುಗಳ ಮಣಿಮಯದ ರಚನೆಯಿಂ ಪೊಳೆಪೊಳೆದು ಸುರಪುರಿಗೆ ಹರಸಖನ ಪುರಿಗೆ ಮಿಗಿಲೆನಿಸಿತದು (ತುರಂಗ. ೦೪-೦೯). ೩. ಡೊಂಕು ; ವಕ್ರತೆ : ಮಾತಿನ ಮುರಿವುಗಳು ಗೆಲ್ಲವಲೆ ನೀ ನೆಟ್ಟ ನೋಡು ಕೈಗುಣವ (ಕುವ್ಯಾದ್ರೋ. ೦೦-೫೩). ೪. ನದಿ ಮೊದಲಾದ ಜಲಾಶಯಗಳಲ್ಲಿರುವ ಸುಳಿ.— ಚಕ್ರ : "ಚಕ್ರಾದಿ, ಪುಟಭೇದ–ಈ ೨ ತೋಯಿಯ ಮುರಿವು" (ಹಲಾಯು. ೧೧೦-೪೯) ; ಮೊಟ್ಟಮೊಟ್ಟ ಘೂರ್ಮಿಸುವ ಪರಿವುಗಳ ಮುರಿವುಗಳ . . . ಮುನಿಜನಂ ಸೇವಿಸುವ ಭಾವಿಸುವ ಗಂಗೆಗವನಿಜೆ ಬಂದಳು (ಕೃಬಾಖಾ. ೦೯-೫). ೫. ಲೋಹದ ತಂತಿಯನ್ನು ಬಾಗಿಸಿ ಮಾಡಿರುವ, ಕಿವಿ ಅಥವಾ ಮೂಗಿಗೆ ಹಾಕಿಕೊಳ್ಳುವ ಒಂದು ಬಗೆಯ ಒಡವೆ : ಉಡಿಗಂಟೆ ಮುರಿವು ಮಾಗಾಯ . . . ಅಂದುಗೆ ಕಡುಚೆಲ್ವಾಗಿಪ್ಪ

ಸುತನಡಂಗಿದಂ (ದಕಕು. ೩-೬೫). ೬. ಹಿಂಜರಿತ : ಹಿಮ್ಮೆಟ್ಟುವಿಕೆ ; ಹಿಂದೆ ಸರಿಯುವಿಕೆ : ಸಿಂಗದ ಮುರಿವುಂ ಮೇಷದ ಪಿಂಗುಂ ನಯವಿದರ ವಿನಯಮಿಂತಿವು ಮೂಜಿಯಂ ಭಂಗಮೆನಿಸಲ್ಕೆ ಪಡೆಯವು (ಶಂಶಕಂ. ೨೬೮-೪); ಇಂದಿನೀ ಮೋಹರದ ಮುರಿವಸದಳ ನಿಧಾನಿಸಲರಿದು (ಕುವ್ಯಾದ್ರೋ. ೪-೨೬). ೭. ಆವರಿಸುವಿಕೆ ; ಸುತ್ತುವರಿಯುವಿಕೆ ; ಆವರಣ : (ಕ). ೮. ಸುತ್ತಿರುವುದು ; ಸುತ್ತು ; ಸುರುಳಿ : ಮಿಸುಪ ಮೊಳೆಗಳ ಮುರಿವುಗಳ ನೆಣವಸೆಯ ತೊರಳೆಯ ತೊಂಗಲಿಸೊಳಂದೆಸೆವ ಚಕ್ರವ ನೋಡಿದನು ದೈತ್ಯಾರಿ ಕೋಪದಲಿ (ಕುವ್ಯಾಶ. ೬-೩೨). ೯. ಕುಗ್ಗುವಿಕೆ ; ಕುಸಿತ : ಇದಿರುವಂದು ಸುಮಂತ್ರನಿಳಿಗಿಳುಹಿದನು ಮುದಕಲಿಯಿಂದ ಮುರಿವಿನ ಮುಂದದ ಮೊಳೆಪಶುಗಳ ಸಂತಾಪದಲಿ ರಘುಪತಿಯು (ತೊರರಾ. ೨-೨-೨೪). ೧೦. (ಕಣ್ಣು) ಮುಚ್ಚಿಕೊಳ್ಳುವಿಕೆ : ತಾರಕಿಯು ಮುರಿವುಗಳು ಕಾಣಿವ ಸಮೀರಣನ ಶಶಿಯೆಡೆಗೆ ರಜನೀನಾರಿ ತೋಳೆಡೆಗೊಟ್ಟ ಳಂಬುಜಬಂಧು ಹೊಜವಂಟ (ಕುವ್ಯಾದ್ರೋ. ೧೭-೪೫). ೧೧. (ಮನಸ್ಸಿನ) ಓಲುವಿಕೆ ; ತೊರಳುವಿಕೆ ; ಓಲಾಟ : ಚಿತ್ರದ ನೆಲೆಯುಜಿದು ನೆಮ್ಮುವುದು ಮುರಿವಿನ ಪೊಳವಜಿದು ಹಿಂಗುವುದು (ಕುವ್ಯಾಶ. ೧೫-೨೪). ಮುರ₁ : ೫. ಕಿವಿಯಲಿ ಹೊನ್ನಿನ ಅಗಸೆಯ ಹೂ, ಮುರ; ತಲೆ ಮೇಗಡೆ ವಾಗು (ರಾಮಸ. ೬-೦). ಮುರವು₁ : ೫. "ಮುರವು (ಮುರುವು) —ಕಿವಿಯ ಆಭರಣ" (ಬಾಪಕೋ. ೩೩). ಮುರಿ₃ : ೨. ಮುರಿಗಳಂ ರತ್ನರಿಗಳಂ ಕಳೆದಿವರು ಏರಿ ಕಂಡರು ಮೇಲಿಕಂ ಪರಿವ ಸುರನದಿಯನು (ತುರಂಗ. ೯೪-೨೩). 'ಬಲಮುರಿ' ಪರಾ. ೩. "ಕರಾಭರಣ ವಕ್ರತೆ ಬಲೀವರ್ದ ಸಮುಕಟ್ಟುಗಳೊಳಂ ಮುರಿಯುಲಾ" (ಕನ್ನವಂ. ೦೦೬). ೫. ಬಾಲನ ಕಿವಿಗೇ ಕಡಕುಂಟು ಮುರಿಯುಂಟು (ಪುಟ್ಟಿಹ. ೦೦೦). ೧೨. ಗೆರೆ ; ರೇಖೆ : 'ಮುಮ್ಮುರಿ₂' ಪರಾ. ೧೩. ಧಾರೆ ; ಪೊಸಲು : ಬಿಂಜಮೆಟ್ಟನಿಟಿ ತರ್ಪ ಶೋಣಾನವದೆರಡುಂ ಪೊಸಲೆಂಬಂತಿರೊಂದು ಪೃತ್ತಿನತ್ತಣಿಂ ಕವಲ್ವರಿವ ನೆತ್ತರ ಮುರಿಯುಂ . . . ನೋಟುದುಂ (ರಾಪಾಶ. ೩೬-೦೪). ೧೪. ಕೈಗೆ ತೊಡುವ ಒಂದು ಬಗೆಯ ಆಭರಣ : ಪಸ್ತದ ಮುರಿ ಮಣಿಮಯದುಡಿದಾರ ಬೆರಳುಂಗುರ ಗೆಜ್ಜೆಯುಂದುಗೆ ಮೊಜಿದುವಾ ಭರತ ರಾಜೇಂದ್ರನಾತ್ಮಜಗೆ (ಭರತ. ೨೫-೨೫). 'ಮುಂಗೈಮುರಾರಿ' ಪರಾ. ೧೫. ಕಬ್ಬಿನ ಗಾಣದಲ್ಲಿ ಯಂತ್ರಕ್ಕೆ ಅಳವಡಿಸುವ ಕಬ್ಬಿಣದ ಬಳೆಯಾಕಾರದ ಒಂದು ಬಗೆಯ ಸಾಧನ : (ಕ). ೧೬. ಎತ್ತು, ಕುದುರೆ ಮೊದಲಾದುವುಗಳ ತಡಿಯ ಬುಡದಲ್ಲಿ ಹಾಕುವ ಉಣ್ಣೆ ಅಥವಾ ತುಪ್ಪಳಿನ ಮೆತ್ತೆ : (ಕ). ೧೭. ಮಲ್ಲಯುದ್ಧದ ಒಂದು ಪಟ್ಟು. —ವರಸೆ : ಫುಲ್ಲಾಬ್ಜನಯನಂ ಜಲಂಧರಂ ಸಾಮಾನ್ಯರಲ್ಲ ರವದಿರು ಲವಣೆ ಲಾಗು ಮುರಿ ಮೊದಲ ಬಗೆಯಿಂದ ಹೆಣಗುತ್ತಿರ್ದರು (ಶಿಕೃತ. ೨-೦೨-೪೦). ಮುರು₁ : ೫. "ಮುರು . . . ಕಿವಿಯೋಲೆ. ಕರ್ಣಾಭರಣ" (ಕಸೂಕೋ. ೬೫೩). ಮುರುವು₁ : ೨. ಮೂಡಲ ವಿಲ್ಲಹಳ್ಳದ ಮುರುವಿನಲ್ಲಿ ನೈರಾತ್ಯದ ಕೋಣೊಳ್ ನಟ್ಟ ಕಲ್ (ಮುಂಬರಾ. X. ೨೨೬-೫೭ ; 1205) ; ಕಿಬ್ಬಯಲ ಮುರುವಿನ ಇಂನೆಸಟಿ ನಟ್ಟ ಕಲ್ಲಿಂದ ಬಡಗ (ಎಕ. XII. ತಿಪಟೂ. ೪೨-೪೦ ; 1229). ೪. ಒಂದರ ತರುವಾಯ ಒಂದರಂತೆ ಮೂರುವರ್ಷ ನದಿಯು ಮಣಿದು ಮುರುವಾಗಿದ್ದ ಮೆಟ್ಟಿನಲ್ಲಿ ಮೀನಗಳು ತೀರ ಕಡಮೆ ಬಂದವು (ಇಕ್ಕೇ. ೪೦೫). ೫. ವಾಲಿ ಮುರುವು ಬಾವುಲಿಗಳಲ್ಲಾಡುವಂತೆ (ಸೌಗಂಧಿ. ೨೦೭-೦೮). ೧೭. ಹದಿದು ಬೇಹಿನ ಚರರು . . . ಕಟಕದ ಗಜಬಜವನಲ್ಲಲ್ಲಿ ಮಾಣಿಸುತ ನೆರವಿ ನಗೆಗೆಡೆಯಾಗೆ ಮುಸುಕಿನ ಮುರುವಿನಲಿ ಪಾಳಯವ ಹೊಕ್ಕರು (ಕುವ್ಯಾದ್ರೋ. ೮-೪೮); ಪಟುಭಟರು ತಿರುವಿನೊಳ್ ಮುರುವಿನೊಳ್ ಹುರಿಕಟಿಸಿ ಬೊಬ್ಬಿರಿದು ಮಾರ್ವಲೆತರು (ತುರಂಗ. ೫೭-೫೫). [ಮುರಿ₁ + — ವು]

**ಮುರಿವೋಗು** (ಕ್ರಿ). ವಕ್ರತೆಯನ್ನು ಹೊಂದು : ಬಾಗುವಿಕೆಯನ್ನು ಪಡೆ : ಹೊಗೆ ಮರುತನಿಂದ ಮುರಿವೋಗಿ ಬಸದೆಡೆಗೆ ತೆರಳೆ ಬರ್ಪ ವಿಧಿಗಳ ಪರಿಪೂತಮೆಂದೆನಿಸಿ ಸಂದುವಂದು (ಬಂಣ. ೦-೪೩).
[ಮುರಿ₂ + ಪೋಗು₁ (<ಪೋ₁)]

**ಮುರಿಸು₁** 'ಮುಜಿಯಿಸು' ನೋ.

**ಮುರಿಸು₂** (ನಾ). ವಕ್ರ ; ಡೊಂಕು : ಅಪ್ಪಾದಿಡ್ಡಿ : ಆ ಬೊಕ್ಕಸಿಂಗನ ಕ್ರೂರಾಸಿವಿಘಾತಿಯಿಂ ಸದಾಶಿವನಾಯಕಂ . . . ಮೆಗಲ್ವಿಡಿದು ನಡುಬೆನ್ನಂ ಬರಂ ಮುರಿಸಾದ ಮಸೆದೋರಲಾಗಳಾ ಗಾಯಮಂ ಸೈರಿಸಿ (ಕೆಳನೃ. ೨-೮).
[ಮುರಿ₁ + — ಸು₃]

**ಮುರಿಹ** (ನಾ). ತಿರುಚುವಿಕೆ ; ನುಲಿತ : ಮೊಲನಂತೆ ಬಡಿಪಕ್ಕೆ ಬಂದು ಮುಡಿಯಂತೆ ಮುರಿಹಕ್ಕೆ ವಂದು (ಭವಾನಿಪು. ೩-೭೭).
[ಮುರಿ₁ + — ಹ₂ (<— ಪ₂)]

**ಮುರಿಹು** 'ಮುರಿಪು₁' ನೋ.

**ಮುರು₁** 'ಮುರಿವು' ನೋ.

**ಮುರು₂** 'ಮುರುವು' ನೋ.

**ಮುರುಂಗಿ** (ನಾ). ಒಂದು ಬಗೆಯ ಸಸ್ಯ : ನುಗ್ಗೆ : "ಮುರುಂಡಃ— ಮುರುಂಗಿ, ಸಿಗ್ರುಡಿತ. ಕಾಡನುಗ್ಗೆ" (೬ಕಂ. ೦೫೩). [ಸಂ. ಮುರುಂಗೀ]

**ಮುರುಂಟಿಸು, ಮುರುಟಿಸು₁** (ಕ್ರಿ.) ೧. (ಚಳಿ, ಭಯ ಮುಂತಾದುವುಗಳಿಂದ) ಕುಗ್ಗಿಸು ; ಮುದುಡುವಂತೆ ಮಾಡು; ಮುದುರಿಸು : ಉಜಿ ಹಿಮಂ ನೆನೆವ ಮನಮ ಮುರುಂಟಿಪುದಯ್ಯೊ (ಶಾಸಂತ. ೪-೦೨೭ ರಗಳೆ) ; ಚಿತ್ತದೊಳಾಕುಳೆ ಸುಯ್ದು ಸುಯ್ಲಿನಿಂ ತನ್ನ ಕರಾಗ್ರಪಂಕಜ ಮನೆಯ್ದೆ ಮುರುಂಟಿಸುತಿರ್ಪಳಾಪಗಂ (ಚಾರಪು. ೩-೮). **ಮುರುಟಿಸು₁** : ೧. ಮುತ್ತಿ ನೆರೆತಿಹ ಜೀವಜಾಲರಿಗೆತ್ತಿ ಕಾಮುಗ್ರಹವಿಕಾರತೆ ಮುತ್ತಿ ಮುರುಟಿಸುತಿರ್ದುದೇನೆಂದೆಂಬೆನಚ್ಚರಿಯ (ಕೃಶುಲೀ. ೩-೦೩) ; ಕೈಮೀರಿದವರನ್ನು ಹೊತ್ತು ಹೊಗಳಿ, ಮೀರದವರನ್ನು ಮುರುಟಿಸಿ ಮುಕ್ಕುವುದು ಚಳಿಗಾಲಪುರುಷನ ವಿಶಿಷ್ಟವಾದ ರಾಜನೀತಿ (ಚಿಣಬಿ. ೨೦). ೨. ತಿರುಚು : ಸೊಟ್ಟಮಾಡು : "ಎಷ್ಟು ದಿನ ಹೀಗೆ ಬ್ರಹ್ಮಚಾರಿ ಕೊರಡಾಗಿರುತ್ತಾನಂತೆ ಅವನು" ಎಂದು ಮುಖ ಮುರುಟಿಸಿ ಹೇಳುವುದನ್ನು ಕೇಳಿ (ಸ್ವಕ್ಷಸೂ. ೨೩೦). [ಮುರುಂಟು₁ + — ಇಸು₃]

**ಮುರುಂಟು₁, ಮುರುಟು₁, ಮುರುಡು₁** (ಕ್ರಿ). ೧. (ಎಲೆ, ಬಳ್ಳಿ ಮುಂತಾದುವು) ಸುರುಟಿಕೊಳ್ಳು : ಮೇಗಣ ನಾಲ್ಕುಜಿಳೈದಜಿ ಮೇಗಣಭಾಗದೊಳಗುರ್ವು ಘರ್ಮಂ ಹಿಮದಿಂದಾಗಳ್ ಮುರುಂಟುವರ್ ಮಹಿಭಾಗದೊಳುಟಪವಜಿಳಿನ್ನವೇಟಿಂ ನರಕರು (ಆದಿಪು. ೫-೮೨) ; ಗೆಂಟಾಗಿ ವಿಕಾಸಕ್ಕೆ ಮುರುಂಟಿದ ಮಲ್ಲಿಗೆಯಸಲರಿಪಂತೆ ವಸಂತಂ . . . ಪೊಕ್ಕಂ (ಅರ್ಜನೀ. ೪-೦೯೮). ೨. ಸೊಟ್ಟಾಗು ; ಡೊಂಕಾಗು ; ವಕ್ರಗೊಳ್ಳು : ತಾಂ ತೊನ್ನನಾಗಿ ಮುರುಂಟಿದ ಕೈಯುಂ ಕಾಲುಂ ಬೆರಸು . . . ಲೋಗರ ಮನೆಗಳೊಳ್ ಭೈಕ್ಷಮಂ ಬೇಡಿ (ವಡ್ಡಾರಾ. ೦೨೨-೨೨); ಉಂಬರಕುಷ್ಠಂ ಮೂಡಿದೊಡಿಂಬಟಿಯೆ ಮುರುಂಟಿ ಬಾತು ಕೀತೊಡೆ (ಬಂಹರಿ. ೧೩-೩೪). ೩. ಕುಗ್ಗು ; ಮುದುಡು : ನೆನೆದೊಡೆ ಮನಂ ಮುರುಂಟುವ ಸೀತಳದ ನಡುವೆ ತನು ಕರಗಿ ಕೋಡಿಸುವ ಬಹಳ ಶೀತದ ನಡುವೆ ಕೊಲುವ ಹಿಮವಾತಂಗೆ ಶಿಶಿರೋಪಚಾರವದು (ಮುಉಹ. ೫. ೦೭೪-೨೫) ; ಮಿಥ್ಯಾವೇದಿಪೇಟಕರ್ ದಂತಿಸಂತಾನದಂತೆ ಮುರುಂಟಿಯುಂ (ಅಪಂಪು. ೦೪-೪೭ ವ). **ಮುರುಟು₁** : ೧. ಹರಿದ ಗಾಳಿಂಗೆಸಳು ಮುರುಟಿದ ಕೊನೆ ಮುಜಿದ ನೆಜಿ ಮುತ್ತದಿಂ ತೊಜಿದು . . . ಸೋಂಪಿನ ಬಲ್ವಪತ್ರಿಯನಾಗ ಕೊಯಿತಂದು (ಬಸಪು. ೦೮-೩೦); ವೃಕ್ಷಗಳು ಯಲೆ ಮುರುಟಿದವು (ಕಾಕೇ. ೧೦೫-೨೦). ೨. ಕುಟುಸೊಸಲುಬಿಗಣಿಜಿವಾಯರ್ ಹಪ್ಪಳ

ಮೂಗಂ ಮುರುಟಿದ ಕಿವಿ (ಮುಕೋತ. ೨-೩೮) ; ಪಿರಿದಪ್ಪ ನೀರಡಿಕೆಯಿಂ ರಸವನು . . . ಪಾನವ ಮಾಡುವೆನೆಂದೆನ್ನ ಕರವ ನೀಡುವ ಸಮಯದೊಳು ಇದಜಿಳು ಮುರುಟಿದವೆನ್ನೀ ಹಸ್ತಗಳು (ಶೇಖಸಂ. ೦೦-೨೨೫) : ಮುರುಟಿದವು ರಸ ಸೋಂಕೆ ತನ್ನಯ ಕರಚರಣ (ಶಾಸ್ತ್ರಾ. ೦೭-೬೫). ೩. ಅರಗು ತಿಂದು ಕರಗುವ ದೈವವ ಉರಿಯ ಕಂಡರೆ ಮುರುಟುವ ದೈವವನೆಂತು ಸರಿಯೆಂಬೆನಯ್ಯಾ (ಬಸವ. ೫೫೬) ; ಒಮ್ಮೆ ಊಟ ಮುಗಿದು ಬಿಟ್ಟತೆಂದರೆ ತಾಯಿ ಹಾಸಿಕೊಟ್ಟ ಚಾಪೆಯಲ್ಲಿ ಮುರುಟಿ ಬಿದ್ದುಕೊಳ್ಳುತ್ತಿದ್ದೆ (ಮುಂಗಾಮು. ೬೮). ೪. ಸುಕ್ಕಾಗಿರು ; ನೆರಿಗೆಗಳಿಂದ ಕೂಡಿರು : ಕೊಂಕಿದ ಕೋಡಿನ ಮುರುಟಿದ ಮುಸುಡಿನ ಹಳ್ಳದ ಮೂಗಿನ . . . ಮೃಗವಿದಿಗೋ (ಭಾವಗೀ. ೪೪೭). ೫. ಕೀಳು ; ಚಿವುಟು ; ಕೊಯ್ಯು : ಮೋಳಿಯಲ್ಲಿ ಮುರುಟುವುದನದು ಬಲಿದ ಬಳಿಕ ಮುರುಟಲ್ಪಹುದೆ (ಸತ್ಯಶ್ರೀ. ೨-೪೦);ಮುರುಟಿದೆಯಲಾ ನೀನೆ ಮಳ್ಳಿ, ನೀನೆ ಬೆಳೆದ ಬಯಕೆ ಬಳ್ಳಿ ! (ಅಹಲ್ಯ. ೫೫-೦೯). **ಮುರುಡು**₁ : ೩. ತವರುಮನೆಯ ವಿಚಾರದಿಂದ ಅವಳ ಮನಸ್ಸು ಭಾರವಾಗಿತ್ತು. ಮನಸ್ಸು ಮುರುಡಿ ಕೊಂಡಿತ್ತು (ರವಂ. ೦೬೦).

**ಮುರುಟಿಕೊಳ್ಳು** = ಮುದುಡಿಕೊಳ್ಳು ; ಸುರುಟಿಕೊಳ್ಳು : ಯಶೋದೆ . . . ಮಲಗಿದಲ್ಲೆ ಮುರುಟಿಕೊಂಡಳು (ವಾತ್ಸಲ್ಯ. ೦) : ನೀನು ಚೇರಟೆಹುಳು ಕಂಡಿದ್ದೀಯಲ್ಲ, ಅದನ್ನು ಮುಟ್ಟಿದರೆ . . . ಥಟ್ಟನೆ ಮುರುಟಿಕೊಂಡು ಮಲಗಿ ಬಿಡುತ್ತದೆ (ಮೂಕಜ್ಜ. ೭೦).

[ದೇ.॥ ಮಲ. ಮುರಟು ; ತುಳು. ಮುರುಂಟು]

**ಮುರುಂಟು**₂, ಮುರುಟು₂ (ಕ್ರಿ). ೧. ಬೆಂಕಿಯನ್ನು ಹೊತ್ತಿಸು ; ಉರಿಯುವಂತೆ ಮಾಡು : "ಮುರುಂಟು — ದಹನಕರಣೇ" (ಶಬ್ದಮ). ೨. ಸುಡು ; ಸೀಯು ; ಕರಿಕಾಗು : ದೇಹದ ದಾಹ ದೇಟ್ಟಿಗಾಚಾಪಳನೇತ್ರ ಸುಯ್ಯೆ ಮುಖಸೌರಭಸೇವೆಗಡುರ್ತು ಸಾರ್ದ ಭೃಂಗೀಪಟಳಂಗಳಕ್ಷಣಮುರಲ್ದುವೆಂಕೆ ಮುರುಂಟೆ ಧಾತ್ರಿಯೊಳ್ (ಕುಸುಮಾ. ೦೩-೪೮) ; ಬೆಳಗಾಗಲೊಡಂ ಮುರುಂಟಿ ಏರ್ದಿರ್ದಾಟುಂ ಪೆಣಂಗಳಂ ಕಂಡು (ಮುಪಾಸೀ. ೯-೫೭ ವ) ; ಸಪ್ಪುಜಡಧಿಗಳ್ ತಕಪಕನೆ ಕುದಿದುಕ್ಕೆ ಬತ್ತುತಿರ್ದುವು ಕೆಳಗೆ ಫಣಿ ೭ರಿಗಳ ಹೆಡೆಗಳುಂ ಕೈಕಾಲ್ಗಳುಂ ಮುರುಂಟುತ್ತಿರ್ದುವು (ತಿಂಪು. ೯೭-೨೫). ೩. ಬಾಡು ; ಒಣಗು ; ಬತ್ತು : ಕುಡಿ ಮುಜುಂದಿರ್ದೊಡಂ ಕೊನೆ ಮುರುಂಟಿದೊಡಂ ನಮುಂಕೆ ದೋರ್ಡಂ ಬೆಳೆರ್ತೊಡಮೋಣಗಿರ್ದೊಡಂ ಸರುಜಮಿಾ ದ್ರುಮಮೆಂದಜಿಲು . . . ಕರಿಯ ಮಣ್ಣುಮನೊಟ್ಟುಗೆ ಬಾಟ್ಗುಮಾ ಮರಂ(ಲೋಕೋಪ. ೬-೦೩); ಪುಷ್ಪಬಾಣನಿಸೆ ನಾಂಟಿ ಮುರುಂಟಿದ ಪೂವೆ ಪುಳ್ಳಿಯಾಗಿರೆ ಮನಮೆಯ್ದೆ ಬೆಂದವಸ್ತಿಗಳಿಲ್ಲದೊಡೆಲ್ಲಿಸುದಂಗಜಾಸಳಂ (ಅರ್ಜು. ೪-೦೦೨) ; ನಾರಿಯನೆಚ್ಚ ನಾದೊಡಲರಂಬು ಮುರುಂಟುಗುಮೆಂದು ಮನ್ಮಥಂ ದೂರದೊಳಿರ್ಪನೋ (ನಳಚಂ. ೦೯೭). **ಮುರುಟು**₂ : ೨. ಕಿಚ್ಚಂ ಪೊಕ್ಕಲ್ಲಿ ಮುರುಟಿ ಸಾವವುರ್ದೊಳರ್ (ಸಮಚ. ಅನುಬಂ. I. ೧೨-೨೭) ; ತರಪಣಿಕೆಗೊಂಬುದೆ ತರಣಿಕಿರಣಸ್ಫುರಣೆಯಲಿ ಮಜಿಸೂಡಿದೆನು ತಪ್ಪಿಂಗೆ ಪಕ್ಷಗಳ ಮುರುಟಿ [ಶಾಕಾಂ. ಡಿ]ದವೆ ತನ್ನುಭಯಪಾರ್ಶ್ವದ ನಿರಿಕಿಸಿಮಪಕ್ಷಗಳು (ಕೂರಂ. ೪-೦೦-೦೪). ೩. ಉಷ್ಣಕರನ ಕರಂಗಳ್ ಪರೆಯುವ ಮುಟ್ಟದ ಮುನ್ನವೆ ಮುರುಟಿದುವೆನೆ ಮುಗಿದುವುತ್ಪಲಪ್ರಕರಂಗಳ್ (ರಾಜಾಪ. ೩-೬) ; ಈ ಹೊತ್ತೆನ್ನ ಕಾಲಿದ ಕುಡಿ ಮುರುಟಿತು (ಹಕಳ. ೦೨-೦೦). ೪. ಇಲ್ಲವಾಗು: ನಾಶಹೊಂದು ; ಹಾಳಾಗು : ಬಂದು ನುಡಿಯುಂ ತಲೆದೋಜದು ಚಿತ್ತದುತ್ಸವಂ ಮುರುಟಿತು (ರಳಕು. ೫-೫೭) ; ಯುಕುತಿ ಮಸುಳಿಸವ ಗುಣಕಡದ ಸತ್ವಾವರಣ ಮುರುಟಿದಿಹ ಘನವಿತರಣ (ಪಕಂ. ೪-೫೦) ; ಅಚ್ಚಳಿಯದ ಆ ಪ್ರೇಮಕ್ಕೇನಾಯಿತು ? ಅದು ಹಾಗೆಯೇ ಮುರುಟಿತೆ ? (ಮೂಕಸ. ೪೦).

**ಮುರುಟಿಹೋಗು** = ೧. ಬಾಡು ; ಬತ್ತು ; ಒಣಗು . ಅವಳ ಆಸೆಯ ಕುಡಿ ಮುರುಟಿಹೋಗಿತ್ತು (ಬಾಗಿಲಾ. ೬೮) ; ಅವರ ಎದೆಯ ಆಶೆ-ಆಕಾಂಕ್ಷೆಗಳು ಮರದಿಂದ ಕಿತ್ತು ಬಿಸಿಲಿಗೆ ಎಸೆದ ಮೂಂದಳಿರುಗಳಂತೆ ಅರೆಕ್ಷಣದಲ್ಲಿ ಮುರುಟಿಹೋಗುತ್ತಿದ್ದುವು (ಭೂಮಿ. ೦೪). ೨. ನಾಶವಾಗು; ಹಾಳಾಗು: ಈ ಹಾಳುಊರಿನಲ್ಲಿ ಮುರುಟಿ ಹೋಗ ಬಾರದು ಇವನ ಪ್ರತಿಭೆ (ಮುರುಟ. ೦೫೬). [ದೇ.॥ ತಮಿ. ಮಲ. ಮೂಟ್ಟು]

**ಮುರುಕ**₁ 'ಮುಱುಕ್ಕ₂' ನೋ.

**ಮುರುಕ**₂ 'ಮುಱುಕ್ಕು₂' ನೋ.

**ಮುರುಕಲು**, ಮುರಕಲು (ನಾ). ೧. ಮುರಿದುದು : ಚೂರು : ತುಂಡು : ಪೆಟ್ಟಿಗೆಯಲ್ಲಿದ್ದ ಚಕ್ಕುಲಿಯೆಲ್ಲ ಮುರುಕಲಾಗಿಬಿಟ್ಟಿವೆ (ಕಂಬ). (ಗು). ೨. ಮುರಿದ : ಭಗ್ನವಾದ : ಅದರಲ್ಲಿ ಇದ್ದು ದೆಂದರೆ ಫಲಕೊಡುವಂತಹ ಹತ್ತೆಂಟು ತೆಂಗಿನ ಮರಗಳು ; ಮತ್ತೊಂದು ಮುರುಕಲು ಗುಡಿಸಲು (ಚಾರುದ. ೨೦೩); ಮೊದಲು ಮೊದಲು ಮುರುಕಲು ಮಂಟಪವಿತ್ತು (ಹುಟ್ಟಿಹ. ೬೨). **ಮುರಕಲು** : ಆ ಮುರಕಲು ಮನೆಗೆ ವೃಥಾ ತೇಪೆಹಾಕಿದರೆ ಏನು ಪ್ರಯೋಜನ ? (ಹೋರಪು. ೨೮).

[ ಮುರುಕು₂ ( < ಮುಱುಕು ) + — ಅಲು ( < —ಅಲ್₂ ) ]

**ಮುರುಕಳಿ**, ಮುರಕಳಿ (ನಾ). ಮುರಿಯುವ ಸ್ಥಿತಿ ; ಭಗ್ನಾವಸ್ಥೆ : ಚಪ್ಪರದ ಹಲಭಾಗವು ಮುರುಕಳಿಗೆ ಬಂದಿತ್ತು (ಅಂಚಿ. ೨೮). **ಮುರಕಳಿ**: ಹಾಳಾಗಿದ್ದ ಉದ್ಯಾನಗಳೂ, ಮುರಕಳಿಗೆ ಬಂದಿದ್ದ ಕೃತಕಾದ್ರಿಗಳೂ . . . ದುಃಖದಾಯಕವಾಗಿ ನಾಯಕನ ಮೈಯಲ್ಲಿ ನಡುಗನ್ನು ಹುಟ್ಟಿಸಲು (ಕುಮುಂ. ೫). 'ಸವಕಳಿ' ನೋ. [ < ಮುರುಕಲು ]

**ಮುರುಕಾಟ** (ನಾ). ಬಿಂಕ : ಬಿನ್ನಾಣ : ಆಟ ಮುಗಿಯಿತು, ಗಂಗೆಯ ಮುರುಕಾಟ ಮುಗಿಯಲಿಲ್ಲ (ಸುಷಂ. ೬೨).

[ ಮುರುಕು₂ ( < ಮುಱುಕು₂ ) + ಆಟ ]

**ಮುರುಕಿಲು** 'ಮುಱುಕಿಲ್₂' ನೋ.

**ಮುರುಕು**₁ 'ಮುಱುಕು₁' ನೋ.

**ಮುರುಕು**₂ 'ಮುಱುಕು₂' ನೋ.

**ಮುರುಕು**₃ 'ಮುಱುಕು' ನೋ.

**ಮುರುಕುನುಡಿ** (ನಾ). ಒಯ್ಯಾರದ ಮಾತು ; ಬಿಂಕದ ನುಡಿ : ಮುರುಕುನುಡಿ . . . ಚವುಳಿನುಡಿಗಳಿಂ ಪುರುಷರನು ಬೆಗಡುಗೊಳಿಸುವ ಜಾಣೆಯ ನುಡಿಯ ಭಾವೆಯರು ಬರುತಿರ್ದರು (ಪಪಪೋ. ೨೪-೦೫)

[ ಮುರುಕು₂ ( < ಮುಱುಕು₂ ) + ನುಡಿ₂ ]

**ಮುರುಕೆ** 'ಮುಱಿಕೆ₂' ನೋ.

**ಮುರುಗ**, ಮುರುಘ (ನಾ). ೧. ಒಬ್ಬ ದೇವತೆಯ ಹೆಸರು ; ಸುಬ್ರಹ್ಮಣ್ಯ ; "ಷಣ್ಮುಖದೇವ" (ಶ್ರಶಬ್ದ). **ಮುರುಘ** : ೨. ಅರುವತ್ತುಮೂವರು ಪುರಾತನರಲ್ಲಿ ಒಬ್ಬನ ಹೆಸರು : "ಮುರುಘ– ಷಣ್ಮುಖಸ್ವಾಮಿ, ಅರುವತ್ತುಮೂವರಲ್ಲಿ ಒಬ್ಬ ಶರಣ" (ಶಿಕೋಶಾ. ೨೪-೬).

[ ದೇ.॥ ತಮಿ. ಮುರುಕನ್ ; ಮಲ. ಮುರುಗನ್ ]

**ಮುರುಗಕಾಯಿ** 'ಮುರ್ಗಿಕಾಯಿ' ನೋ.

**ಮುರುಗಡೆ** 'ಮುರಗಡೆ' ನೋ.

**ಮುರುಗಿಕಾಯಿ** 'ಮುರ್ಗಿಕಾಯಿ' ನೋ.

**ಮುರುಗಿನ ಮರ**, ಮುರಿಗಿನಮರ (ನಾ). ಒಂದು ಬಗೆಯ ಮರ : "ಮುಷ್ಕರಃ – ಮುರುಗಿನ ಮರ" (ಟಿಕಂ. ೦೨೬). **ಮುರಿಗಿನಮರ** : "ವಿಘಾಂಡೀ — ಆವರ್ತಿಕೆ, ಮುರಿಗಿನಮರ" (ಟಿಕಂ. ೦೫೪).

[ ಮುರುಗು₂ + ಮರ₁. / ತಮಿ. ಮುರುಕ್ಕೈ = ನುಗ್ಗೆಮರ. / ಸಂ. ಮುರಂಗೀ = ನುಗ್ಗೆ ]

**ಮುರುಗುಟ್ಟು** (ಕ್ರಿ). ಮುರಮುರ ಎಂದು ಶಬ್ದಮಾಡು : ಕೈಯಲ್ಲಿ ಕಾಗದ ಮುರುಗುಟ್ಟಿತು (ಸಂಚಿತ. ೯೮). [ < ಮುರಮುರ + ಕುಟ್ಟು$_1$ ]

**ಮುರುಗೆ** (ನಾ). (?) : ಮತ್ತೆ ನೋಡಿದ ಜೈನವಳಕಿದಿರೆತ್ತಿ ಮುರುಗೆಯ ಸೆತ್ತಿ ನೇವರಿಸುತ್ತ ಸುರಗಿಯ ಕಿತ್ತು ಪೊಕ್ಕನು ವೀರಬೊಪ್ಪೆಯಲಿ (ಶರಂ. ೩೩೭-೦೬). [ ? ]

**ಮುರುಘು** 'ಮುರುಗ' ನೋ.

**ಮುರುಚು** 'ಮುರಿಚು' ನೋ.

**ಮುರುಜ, ಮುರುಜೆ** (ನಾ). ಒಂದು ಬಗೆಯ ವಾದ್ಯ ; ಮುರಜ : ಝಲ್ಲರಿ ನಿಲೆ ಮುರುಜ ಡಿಂಡಿಮ ಪಟಹ . . . ಮೃದಂಗಚಯ ಮೊರೆದವು (ಕುರಂಗ. ೩೭-೯೭) ; ಧರೆಯ ನೃಪರಾರಾಧಿಸಿದೆಯುಮಿಾ ಮುರುಜವನು ಭಾಜಿಸಿಯುಂ ಮೆಚ್ಚಿಸಿ ತರುಣಿಮಣಿಯನು ಗೆಲ್ವುದು (ನಾಗಕ. ೨೨-೪೦). **ಮುರುಜೆ** : ಬಿಡದೆ ನಿಂದಿಪ ದುರ್ಜನನ ಬಾಯಿಗೆ ತುತ್ತನೊಡನಿತ್ತು ನುತಿಸಿಕೊಂಬಂತೆ ಕಡುಹೀನರವಗೆಪ್ಪು ಮುರುಜೆಗನ್ನವನಿಟ್ಟು ನುಡಿಸಿದ ಕುಶಲದಿಂದವನು (ಚೀವಂಕಾ. ೯-೮೯). 'ಮುರವ$_2$' ಪರಾ.
[ < ಸಂ. ಮುರಜ ]

**ಮುರುಜೆ** 'ಮುರುಜ' ನೋ.

**ಮುರುಟಿಸು$_1$** 'ಮುರುಂಟಿಸು' ನೋ.

**ಮುರುಟಿಸು$_2$** (ಕ್ರಿ). ೧. ಚಿವುಟು ; ಕೀಳು ; ಕತ್ತರಿಸು : ಮೊಳೆಯಲೇ ಮುರುಟ[ಪಾಠಾಂ. ಡಿ]ಸಲು ಬೇಕುದು ಬಲಿದ ಬಳಿಕದು ನಿನ್ನ ಹವಣೇ (ಕುವ್ಯಾ.ಆ. ೬-೦೬). ೨. ಇಲ್ಲವಾಗಿಸು ; ನಿರ್ನಾಮಮಾಡು ; ನಾಶಗೊಳಿಸು : ಬಳಿಯುಗುಡದೆ ತನಗಹಿತರಾದವರನು ಮೊಳೆಯೊಳೆ ಮುರುಟಿಸಬೇಕು (ಮೋಹತ. ೦೦-೦೨) ; ನಾನು ಕೊನರಿದ ಆಸೆಯನ್ನು ಅಲ್ಲಿಗೇ ಮುರುಟಿಸಿಕೊಂಡು ಡ್ರಾಯಿಂಗರೂಮಿನಿಂದ ಹೊರಗಾದೆ (ಮುಗಳೂ. ೬೬). [ ಮುರುಟು$_1$ ( < ಮುರುಂಟು$_1$ ) + — ಇಸು$_3$ ]

**ಮುರುಟು$_1$** 'ಮುರುಂಟು$_1$' ನೋ.

**ಮುರುಟು$_2$** 'ಮುರುಂಟು$_2$' ನೋ.

**ಮುರುಟು$_3$, ಮುರಡು, ಮುರುಡು$_2$** (ನಾ). ೧. ತಿರುಚಿಕೊಂಡಿರುವುದು ; ಡೊಂಕಾದುದು ; ಸೊಟ್ಟಗಿರುವುದು : 'ಮುರುಟುಗಟ್ಟು' ಪರಾ. ೨. ಮುದುಡಿಯಾದುದು ; ಮುದ್ದೆ : (೬). ೩. ಮೂಲೆ : ವಾಮನಮುದ್ರೆ ತಿದ್ದಿಯಿರುವ ಮುರುಟ ಹುಟ್ಟುಗಲ್ಲು ೧ (ಎಕ. XIV, ಮೈಸೂರು. ೦೦೩-೩೬೨ ; 1674) ; ಇದಕ್ಕೆ ವಾಯುವ್ಯದ ಮುರುಟೇ ಮೂಡಪತ್ತಿನಲ್ಲಿ ಈಶಾನ್ಯ ಮುಯಿವಾನೆ ೧ (ಎಕ. III, ತಿರುಮ. ೬೩-೯೩೭ ; 1748.) (ಗ್ರು). ೪. ಡೊಂಕಾಗಿರುವ ; ಸೊಟ್ಟಗಿರುವ ; ವಕ್ರವಾದ : ಛಂದೋಲಂಕಾರಲಕ್ಷಣಗಳ ಕುಂದ ನೋಡದೆ ಪುಣ್ಯಕಥೆಯ ಒದನೆ ನೋಡಿ ಮುರುಟುಚೇದನದೊಳು ಗಂಧಮ ಮುಖ್ಯವೆಂತಂತೆ ಆ ಕಥೆಯನು ಪೇಳ್ದರಾರೆನೆ (ಕಾಂತೀಶ. ೦-೦೨). **ಮುರಡು** : ೫. ಕೀಳಾದ : ಕ್ಷುದ್ರವಾದ : ಬಾಳಿಜಾರಿಗೆ ನಿಮ್ಮ ಹಾರೈಸಿ ಆನಂದ ವಾರಿಧಿಯಲಿ ಮಗ್ನರಾಗಿ ತಾರರು ಮನಸಿಗೆ ಮುರಡುದೇವತೆಗಳ ಸಾರ ಹೃದಯರು ನಿಂದಿಪರು (ಶಿವಾಕೃ. ೭೭-೩). **ಮುರುಡು$_2$** : ೧. ಮುರುಡಾದೊಡೆ ಮುಲಯುಜಂಗಳಂ ಕೊಂಕಿದೊಡೇಂ ಸ್ಮರಚಾಪಮನಿಳಿಕೆಯ್ವುರೆ (ಯುಕೋಶ. ೨-೪೨) ; ಒಳನೋಟ ಕುರುಡು ಕೈಕಾಲು ಮುರುಡು ಕುಟ್ಟುತ್ತಿರುಪೆ, ತವುದು (ತಂದ್ರಪು. ೩-೦). ೬. ಬಾಗಿರುವ ಭಾಗ : ಪಚ್ಚೆಯ ಬಟ್ಟಲೊಳ್ ಶುಂಬಿದ ಮುರುಡನಿಟ್ಟಿವಂತೆ ತಾವರೆಯಲೆಯೊಳಿವೆ ಮಿಡುಕದೆ ಕುಳ್ಳಿರ್ಪ ತರುಣಮರಾಳಂಗಳ್ (ಲೀಲಾವ. ೬-೭೯ ವ) ; ಶರಧಿಯ ನೊರೆಯುಂ ಶುಂಬಿದ ಮುರುಡುಂ ಪೊಸ ಚಲ್ಲಗೊಟ್ಟೆಯುಂ ಮಣಿಶಿಲೆಯುಂ ಪರಿಯಾಗಿರೆ ಮಧುವಿಂದಿಡೆ ಪರಿತರಿಕುಂ ಕಣ್ಣಾ ಪೂಗಳಂತರ್ಕ್ಷಣದಿಂ (ಗೋಲ್ಲಕೃದ. ೨೦೦-೬೨). ೭. ಗೂನು ; ಡೂಗು : ತಿರುಜ್ಞಾನಸಂಬಂಧಿ ಸೋಂಕಿದ ಮಾತ್ರದಿ ಮುರುಡೆಲ್ಲ ಪೋಗಿ ರುಜುವಾಗಿ ನಿಂದಿರಲು (ಸೌಂದಪು. ೦೨-೯೯). [ < ಮುರುಂಟು$_1$ ]

**ಮುರುಟುಕೂದಲು** (ನಾ). ವಕ್ರವಾಗಿರುವ ಕೂದಲು ; ಡೊಂಕು ಡೊಂಕಾಗಿ ಬೆಳೆದಿರುವ ಕೂದಲು : ಅಳಿಕುಂತಳಂದ ಮುರುಟು ಕೂದಲಾ ಬಲುಸಿಂಹನಡುವೆಂದ ಮೊಸಳೆಂತ ನಡುವನು (ಜಬಾವ. ೩೯-೬).
[ ಮುರುಟು$_1$ ( < ಮುರುಂಟು$_1$) + ಕೂದಲು ( < ಕೂಂದಲ್)]

**ಮುರುಟುಗಟ್ಟು** (ಕ್ರಿ). ಡೊಂಕಾಗು ; ಸೊಟ್ಟಾಗು : ಮುಡುಬರಾ ದರ್ಕಲರು ಕೈಕಾಲ್ಮುರುಟುಗಟ್ಟಿ ಗುಡುಗುರಿಸೆ ಕೆಲರು (ತತುಪು. ೯-೩-೩೯).
[ ಮುರುಟು$_3$ + ಕಟ್ಟು$_1$ ]

**ಮುರುಟುಗೈ** (ನಾ). ವಕ್ರವಾಗಿರುವ ಕೈ ; ಸೊಟ್ಟಗಿರುವ ಕೈ : ಮುರುಟುಗೈ[ಪಾಠಾಂ. ಕೆಯ್]ಮೋಟಿಗಳ ಕೌಟನ ಖಿರದೊಂದೆಸೆಯ . . . ವಿಗತಾಂಬರದ ಭಟರೊಂದೆಸೆಯ ಕಾಣಿಸಿತನಿಲನಂದನಗೆ (ಕೂರಣಾ. ೩-೬-೬೭). [ಮುರುಟು$_3$ + ಕೈ$_2$ ( < ಕೆಯ್$_2$) ]

**ಮುರುಟುರೋಗ** (ನಾ). ದೇಹದ ಅಂಗಾಂಗಗಳು ತಿರುಚಿಕೊಳ್ಳುವ ಒಂದು ಬಗೆಯ ರೋಗ : ಅವರ ದೇಹಗಳಲ್ಲಿ ಉಳಿದವುಗಳೆಂದರೆ ಎಲುವಿನ ಹಂದರಗಳು ಮಾತ್ರ. ಮುರುಟುರೋಗದಿಂದ ಸತ್ತಿರಬೇಕೆಂದೆನಿಸಿತು (ಅನ್ನಬಾ. ೩). [ಮುರುಟು$_1$ ( < ಮುರುಂಟು$_1$) + ರೋಗ]

**ಮುರುಟುಹ** (ನಾ). ಮುದುಡುವುದು ; ಸಂಕುಚಿತವಾಗುವುದು : ಹತ್ತಿದರೆ ಮುರುಟುಹಂ ರಕ್ಷಿಪದಿ ಶೀಘ್ರಿಯಿದು (ಪುಂಗಣಾ. ೪೩-೪೩).
[ಮುರುಟು$_1$ ( < ಮುರುಂಟು$_1$) + — ಹ$_2$ ( < — ಪ$_2$)]

**ಮುರುಡ$_1$, ಮೊರಟ, ಮೊರಡ**(ನಾ). ೧. ಮೈಯೆಲ್ಲಾ ಗಂಟುಗಂಟಾಗಿರುವವನು : ಕುಂಟನಾಗುವ ಮುರುಡನಾಗುವ ಕನ್ನವಿಕ್ಕುವ . . . ಮುನ್ನ ಸೊಡ್ಡಳನ ಆರಾಧನೆ ಇಲ್ಲದ ಕುನ್ನಿಗಳಿಗೆಲ್ಲಾ ಈ ವಿಧಿ ತಪ್ಪದು (ಸರ್ವವ. ೦೭೯-೬೯೭) ; ಗೊರವನ ರೂಪಮನಾ ನೀರುಮನುಪಸಂಹರಿಸಿ ಗುಜ್ಜನುಂ ಪೊಡಂಡನು[ಂ] ಮುರುಡನುಮಾಗಿ ಬರೆ ಕೇಡ[ಪಠ್ ನಗೆ] (ಬಂಹಂ. ೯-೨೫ ವ) ; ತಾಳಕಾಯ ಮೋಳಿಗೆಯೊಂದಂದದ ಮುರುಡನಪ್ಪ ವಕ್ರಂ ಮೊದಲೊಣಗಿದ ಕೂನಗೊಳಿಡಿನಂದದೆ ಕೊಂಕಂ (ಯುಕೋಶ. ೨-೪೦). ೨. ಒರಟಸ್ವಭಾವದವನು ; ಉದ್ಧತ ; ಅನಾಗರಿಕ : ಸುರೆಯಿಂದ ಸೊಕ್ಕುವನ ಪರದೇಶಕ್ಕೈದುವನ ಮುರುಡನ ನಪುಂಸಕನ . . . ಬಧಿರನ ಪೆಂಡಿರು ಪರರ ಪೆಂಡಿರಲ್ತೆ (ಜನವ. ೦೨-೪೯). **ಮೊರಟ** : ೨. ಈ ವಿಶ್ರಮರಾಯನು ಒಳ್ಳೆಯ ಬುದ್ಧಿಕೌಶಲಶಕ್ತಿಯುಕ್ತಿಶೌರ್ಯಸಾಹಸಗಳಲ್ಲಿ ಅಪ್ರತಿಮನಾಗಿರಬಹುದಾದರೂ . . . ಮೊರಟನೂ ಆಗಿರಬೇಕು (ಪಟ್ಟಿಆ. ೦೯೦-೦೦). **ಮೊರಡ** : (೬).
[ಮುರುಡು$_3$ ( < ಮುರುಟು$_3$) + — ಅ$_7$ / ತಮಿ. ಮುರಣ್ಣನ್, ಮುರುಟನ್ ; ಮುರಟನ್ ; ಮಲ. ಮುರಟನ್]

**ಮುರುಡ$_2$** 'ಮಿಡ' ನೋ.

**ಮುರುಡ$_3$** (ನಾ). ಒಂದು ಮನೆತನದ ಹೆಸರು : ಮುರುಡರ ಕಾವಿಸೆಟ್ಟಿ ಮಾದಿಸೆಟ್ಟಿ ಮುಖ್ಯವಾಗಿ ಸಮಸ್ತ[ ತ ]ಳದವರುಂ ಗವಚಿರಾಜಸೆಟ್ಟಿ ಓಲೆಯ ಚಟ್ಟಿಸೆಟ್ಟಿ . . . ಹಸುಂಬೆ[ ಗೆ ]ಹಾಗವಂ ಸ್ಥಾಯಿಯಾಗಿ ಬಿಟ್ಟರು (ಶಾಇ. XX, ೭೮-೨೯; 1118). [ ? ]

**ಮುರುಡಸುತ** (ನಾ). ೧. ಈಶ್ವರನ ಮಗ. ೨. ಗಣಪತಿ ; ವಿಘ್ನೇಶ್ವರ: ಮುರುಡಸುತನ ಅಂಘ್ರಿಗೆ ಎರಗಿ (ಕಪಾಗೀ. ೯೨). ೩. ಷಣ್ಮುಖ.
[ಮುರುಡ$_2$ ( < ಮಿಡ) + ಸುತ]

**ಮುರುಡಸೆ** (ನಾ). ಒಂದು ಬಗೆಯ ಗಿಡ : " ಆವರ್ತಿಕೆಯೆನಲ್ಕೆ ಮುರುಡಸೆ " (ಪುಂಗಣಾ. ೪೨-೩೬). [ ? ]

**ಮುರುಡಿ**, ಮುರಡಿ₁ (ನಾ). ಕೈಬೆರಳುಗಳ ಉಂಗುರಗಳೂ ಬಳೆಗಳೂ, ಸಣ್ಣ ಸಣ್ಣ ಸರಪಣಿಗಳ ಮೂಲಕ ಒಂದಕ್ಕೊಂದು ಹೊಂದಿಕೊಂಡಿರುವಂತೆ ಇರುವ ಒಂದು ಬಗೆಯ ಹಸ್ತಾಭರಣ : ಬೀದ ಲುಳಿ ಸರಪಳಿಯ ಮುಂಗೈತಳದ ಮುರುಡಿಗಳ . . . ಹಾರದ ಸುಗುಣ ಕಾಂಚಿಯ ದಾಮದಬಲೆಯುರ್ಕೈದಿದರು ಹರಿಯ . (ಅಕ್ರೂ ಚ. ೪-೪೦). **ಮುರಡಿ₁** : ನಾಯಕರು 'ಮುಂಗೈಯ ಮುರಿ, ಮುರಡಿಯ ಸರಪಳಿ, ಹೊನ್ನುಂಗುರ, ತೋಳಬಾಪುರಿ 'ಗಳಿಂದ ಸಿಂಗರಿಸಿಕೊಂಡಿರುತ್ತಿದ್ದರು (ಕಣಗಾ. ೧೭೦). [?./ ತೆಲು. ಮುರಿಡಿಗೊಲುಸು = ಮುಂಗೈಗೆ ತೊಡುವ ಒಂದು ಬಗೆಯ ಆಭರಣ]

**ಮುರುಡಿಸು** (ಕ್ರಿ). ಎದುರುಬೀಳು ; ವಿರೋಧಿಸು : ಗಂಡುಗಲಿಯಿವನೆಂದು ಭಯುವಲಿ ಕಂಡವರ ಮನ್ನಿಸುತ ಮುರುಡಿಸಿಕೊಂಡ ಮೂರ್ಖಂ ಸದೆದು ಸಪ್ತಾಂಗಗಳ ಕೈಕೊಳುತ (ಉತ್ತ ಚ. ೦೭-೩).

[ಮುರುಡು₃ + — ಇಸು₃]

**ಮುರುಡು₁** 'ಮುರುಂಟು₁' ನೋ.

**ಮುರುಡು₂** 'ಮುರುಟು₃' ನೋ.

**ಮುರುಡು₃**, ಮೊರಡು₁ (ನಾ). ೧. ಒರಟಾದುದು : ಬಿರುಸಾದುದು : 'ಮುರುಡುಗಲ್ಲು' ಪರಾ. ೨. (ಮರ. ಸೌದೆ ಮುಂತಾದುವುಗಳ) ಗಂಟುಗಂಟಾಗಿರುವ ಭಾಗ.–ಕೊರಡು : ಮುನಿಸ ಮುನಿದಡೆ ಶ್ರೀಗಂಧದ ಮುರುಡಿನ ಹಾಗಿರಬೇಕವ್ವಾ (ಸರ್ವಜ್ಞ. ೭೮-೩೬೩); ಮೂಬಿ ಬಿದಿರ ಮುರುಡಿನಂತೆ (ಕನಾರ. ೦೨). ೩. ಎದುರುಬೀಳುವುದು ; ವಿರೋಧಿಸುವುದು : 'ಮುರುಡಿಸು' ಪರಾ. **ಮೊರಡು₁** : ೧. ನೆಲದ ಒಳಉರಿದೆದ್ದು ತೂರಿರುವ ಮೊರಡಾದ ಸಿರಿಯ ಸಾವಿರದ ಗುಡಿ–ಬಸದಿ–ರಥ ಗೊಮ್ಮಟರ . . . ನುಡಿ–ಹೂವುಗಳ ತುಳಿಯುತಿಹರೊ ! (ಬಾಸಿಗ. ೩೩-೦೩). ೨. ಕಾಡುಹಂದಿಯೊಂದು ಮೂತಿಯನ್ನು ಮುಂದೆ ಚಾಚಿ, ತನ್ನ ಕೋರೆದಾಡೆಗಳಿಂದ ಕಾಡುಗೆಣಸಿನ ಮೊರಡೊಂದನ್ನು ಅಗೆಯುತಿತ್ತು (ಹುಂಜಾ. ೨೩೯). [ದೇ.॥ ತಮಿ. ಮುರಣ್ಣು: ಮುರಟು, ಮುರುಟು; ಮಲ. ಮುರಟು; ತುಳು. ಮುರುಡು; ತೆಲು. ಮೊರಡು, ಪ್ರೋಡು]

**ಮುರುಡು₄** (ನಾ). (ಕರಾ) ಮೀಸೆಗಳುಳ್ಳ ಒಂದು ಬಗೆಯ ಬಾವಿಮೀನು. [ದೇ.॥ ತುಳು. ಮೊರಂಟೆ: ತೆಲು. ಮುರಂಡ = ಒಂದು ಬಗೆಯ ಕ್ಷುದ್ರಜಲಜಂತು]

**ಮುರುಡುಗಲ್ಲು**, ಮೊರಡುಕಲ್ಲು (ನಾ). ಒರಟಾದ ಕಲ್ಲು; ಬಿರುಸಾದ ಶಿಲೆ : ಮುರುಡುಗಲ್ಲನು ಶರಣೆಯ ಮಾಡಿತೀ ಪಾದ (ಕೃಕೃಗೋ. ೩೪-೪೩). **ಮೊರಡುಕಲ್ಲು** : ಮೊರಡುಕಲ್ಲಿಗ ನೀರಿನಾ ಮೃದುತರವಿಶೇಷಂ ದೊರಕುವುದೇ (ಶಿವೇಶ. ೬-೨೦). [ಮುರುಡು₃ + ಕಲ್ಲು (< ಕಲ್₃)]

**ಮುರುಡುಗೊಳ್ಳು** (ಕ್ರಿ). ಬಾಗು ; ಗೂನಾಗು : ಮುರುಡುಗೊಂಡಿದೆ ದೇಹವೇಕೀ ಪರಿಯೊಳಾಯ್ತೆನುತ ಹರಿ ಚಿಬುಕವ ಕರದೆ ಪಿಡಿದೆತ್ತಿದನು ಚರಣದೊಳುಂಗುಟವ ಮೆಟ್ಟಿ (ಅಕ್ರೂ ಚ. ೭-೩೩).

[ಮುರುಡು₂ (< ಮುರುಟು₃) + ಕೊಳ್ಳು₁ (< ಕೊಳ್₁)]

**ಮುರುಡುಗೋಲ್** (ನಾ). ಅಂಕುಡೊಂಕಾದ ದೊಣ್ಣೆ; ಸೊಟ್ಟಗಿರುವ ಕೋಲು : 'ಮುರುಡುಗೋಲ್ವಿಡಿ' ಪರಾ.

[ಮುರುಡು₂ (< ಮುರುಟು₃) + ಕೋಲ್₁]

**ಮುರುಡುಗೋಲ್ವಿಡಿ** (ಕ್ರಿ). ಅಂಕುಡೊಂಕಾಗಿರುವ ಕೋಲನ್ನು ಹಿಡಿದುಕೊಳ್ಳು : ಮುರುಡುಗೋಲ್ವಿಡಿದು ತಡವರಿಸಿ ನಡೆದ ಮುದುಪಂ ಕಂಜಮುಖಿಯೊರ್ವಳಂ ಕಂಡು ಭ್ರಮೆಗೊಂಡು (ಶಬ್ದ. ೧೦-೭೭).

[ಮುರುಡುಗೋಲ್ + ಪಿಡಿ₁]

**ಮುರುಡೇಶ್ವರ** (ನಾ). ಶಿವನ ಹೆಸರುಗಳಲ್ಲಿ ಒಂದು : p ಉತ್ತರ ಕನ್ನಡಜಿಲ್ಲೆಗೆ ಸೇರಿದ ಭಟ್ಕಳದ ಸಮೀಪದಲ್ಲಿರುವ ಮುರುಡೇಶ್ವರ ಎಂಬ ದೇವಾಲಯ ಮತ್ತು ಆ ದೇವಾಲಯವಿರುವ ಊರು : ಮುರುಡೇಶ್ವರದೇ × × × ಭೂಮಿರಾಷೋಹ್ಯುದಯಂ ಯಮಶ್ಚ ಅಹ × × × (ಕ್ರಿ. I. ೩೭-೦೬; ಸು. 1424).

[ಮುರುಡ₂ (< ಮಿಡ) + ಈಶ್ವರ./ಸಂ. ಮೃಡೇಶ್ವರ]

**ಮುರುತಾಪು**, ಮುರಿತಾಪ (ನಾ). ಒಂದು ಬಗೆಯ ವಾದ್ಯ : ಕರಡೆ ಡವುಡೆ ಚಿನ್ನತಿತ್ತಿರಿ ಹೆಗ್ಗಾಳೆ ಮುರುತಾಪು ಡೋಳು . . . ಕೊಳಲ ರವಗಳಿಂದರಸನೈದಿದನಾಹವವ (ಜಯಬು. ೦೭-೧೦೦). **ಮುರಿತಾಪ** : ಪಟಹ ಡಿಂಡಿಮ ವಾದ್ಯ ಮುರಿತಾಪ ಭೇರಿ ತಂಬಟ ದಮಾಮಿಗಳಾದಿಯಲಿ ಲಟಕಟಿಸುವ ನಾನಾವಾದ್ಯ ಸಕಲದಿಕ್ತಟ ಬಿರಿವಂತೆ ಗರ್ಜಿಸಿತು (ಕೋಹಚ. ೩೭-೪).

[← ತುಳು. ಮುತ್ತಾಪ, ಮುತ್ತಾಮ = ಗರ್ವ; ಮುತ್ತಾಪದ ದೋಲು = ಒಂದು ಬಗೆಯ ಡೋಲು]

**ಮುರುದಲೆ** (ನಾ). ಅಡ್ಡರಸ್ತೆಗೆ ತಿರುಗುವ ಜಾಗ,— ಸ್ಥಳ : (೪).

[< ಮುರಿವು + — ದಲೆ]

**ಮುರುದಾರಶೃಂಗಿ** 'ಮುರದಾರಸಿಂಗಿ' ನೋ.

**ಮುರುದಾರಸಿಂಗಿ** 'ಮುರದಾರಸಿಂಗಿ' ನೋ.

**ಮುರುಪು** 'ಮುರಿಪು₂' ನೋ.

**ಮುರುಮುಚ್ಚಿ** 'ಮುರುಮುರಿ' ನೋ.

**ಮುರುಮುರಚಿ** 'ಮುರುಮುರಿ' ನೋ.

**ಮುರುಮುರಿ**, ಮುರುಮುಚ್ಚಿ, ಮುರುಮುರಚಿ, ಮುರುಮುರುಚಿ (ನಾ). ಒಂದು ಬಗೆಯ ಸಸ್ಯ : ಶುಂಠಿ, ನೆಗ್ಗಿಲ ಬೇರು . . . ಕೊಮ್ಮೆ ಬೇರು ಮುರುಮುರಿಯ ಸೊಪ್ಪು, ಇವರ ಕಷಾಯವ ಕೊಡಿಸುವದು (ಕೃರ್ಯಾ. I. ೩೩೦). **ಮುರುಮುಚ್ಚಿ** : "ದಾರ್ವೀ — ಮರದರಿಸಿನ, ಮುರುಮುಚ್ಚಿ" (ಓಷಧಿ. ೭೩) ; "ಮುರುಸತ್ರಾ — ಮುರುಮುಚ್ಚಿ (ಪುಂಜಿ)" (೬೩೦. ೦೨೬). **ಮುರುಮುರಚಿ** : "ಅದಾತಿ — ಮುರುಮುರಚಿ, ದೇವದಾಳಿ" (೬೩೦. ೦೦). **ಮುರುಮುರುಚಿ** : "ದಾರಿಕಾ— ಮುರುಮುರುಚಿ" (೬೩೧. ೭೩). [ದೇ.॥ ತಮಿ. ಮುರಿಮುರಿ]

**ಮುರುಮುರುಚಿ** 'ಮುರುಮುರಿ' ನೋ.

**ಮುರುವ**, ಮುರುವ₁, ಮುರವ₁ (ನಾ). ೧. ದಡ್ಡ ; ಮೂರ್ಖ : ಆಪೂರ ಗೌಡನ ಮನೆಯ ನಳಿನಮುಖಿಯರು ಶುಚಿಯವಳನ ಕರೆದು ಮುರುವ ನೀಂ ಕಚ್ಚಿದು ಕುಡಿದೆಯೊ ಹಾಲನು ತಳುವದುಸಿರು . . . ಎನೆ (ಸಿದ್ಧೇಶ. ೯-೩೬) ; ಸೂಳೇಗೆ ಹೋದವನು ಏನಾದ ಎಂತಾದ . . . ಆ ಮುರುವ ಸೂಳೆಕಾಲೀಗೆ ಕೆರವಾದ (ಹಳ್ಳಿ. ೧೦೯). ೨. ಬಡವ ; ದರಿದ್ರ ; ನಿರ್ಗತಿಕ : ಕತ್ತಿ ಹಿಡಿಯುವ ಕ್ಷತ್ರಿಯ; ಮೇಣಿ ಹಿಡಿಯುವ ಮುರುವನಾಗಬೇಕೇ ? (ಬೆಳುವ. ೧೦೦) ; ಕಾಣದ ಮುರುವ ಕನಸ ಕಂಡರೆ ಏಳುಬಾರಿ ಎದ್ದು ಕೂತ (ಗಾದೆ). **ಮುರುವ₁** : ೧. ಗಂಡಾನ ಕಾಣೇರೋ ಗಂಡ್ಗೊಟ್ಟಿ ಮುರುವಾನ . . . ಕೊಂಡ್ಹೋದ್ರು (ಹಳ್ಳಿ. ೦೭೩). ೨. ಹೊಟ್ಟೆಗಿಲ್ಲದೆ ಮುರುವ ಒಣಗಿ ತೆಳುವಾಗಿದ್ದ. ಕವಳ ದೊರಕಿತು ಊದಿದಾನೆ (ಪಠಾ. II. ೨೩). **ಮುರವ₁** : ೧. ಅಭ್ಯಾಸವಿಲ್ಲದ ಮುರವ ಔಪಾಸನ ಮಾಡಿ ಗಡ್ಡ ಮೀಸೆ ಸುಟ್ಟುಕೊಂಡ (ಗಾದೆ) : ತಲೀಕೂದಲು ಸೆರಿಯಾದ ಮೇಲೆ ತಬ್ಬಿಕೊಂಡ ತಬ್ಬಲಿ ಮುರವ (ಗಾದೆ).

**ಮುರುವತ್ತು** 'ಮುರವತ್ತು' ನೋ.

**ಮುರುವನ ಹುಳಿ** (ನಾ). ಒಂದು ಬಗೆಯ ಸಸ್ಯ : ಮುರುವನ ಹುಳಿ. ಮುಗಲ್, ಮುರ್ಗಲ್. 'ಕೋಕಂ' ಮರ (ಪ್ರಶಿಗ. ೩೯-೭೩೩). [?]

**ಮುರುವಿಕ್ಕು** (ಕ್ರಿ). (ದನ. ಕರು ಮುಂತಾದುವುಗಳಿಗೆ) ಕಲಗಚ್ಚನ್ನು ಇಡು.– ನೀಡು : ಮುರುವಿಕ್ಕಿ ಪೊರೆದು ಗೊಡ್ಡಂ ಕಟಿದೊಡ ಪಾಲುಂಟೆ (ರವರ್ಣಪು. ೧೦–೪೦). [ಮುರುವು$_2$ + ಇಕ್ಕು$_4$ ]

**ಮುರುವಿಡು** (ಕ್ರಿ). = ಮುರುವಿಕ್ಕು : ಮುಂಜಾನೆ ಎದ್ದು . . . ಕೊಟ್ಟಿಗೆಗೆ ಹೋಗಿ ಹಸುಗಳಿಗೆ ಮುರುವಿಟ್ಟು, ಹಾಲು ಕರೆದುಕೊಂಡು ಬರುವುದು (ದುಂಡಿ. ೯೮); ಆಕಳಿಗೆ ಮುರುವಿಟ್ಟು ಎಮ್ಮಿಗೆ ಸುರುಗಿಟ್ಟು ರಂಜಣಿಗಿ ಹಾಲು ಹಿಂಡ್ಯಾರೊ (ಕಪ್ರಶಾ. ೩೩೫).
[ ಮುರುವು$_2$ + ಇಡು$_1$ ]

**ಮುರುವು$_1$** ' ಮುರಿವು ' ನೋ.

**ಮುರುವು$_2$**, **ಮುರ್$_2$**, **ಮುರವು$_2$**, **ಮುರು$_2$**, **ಮುರುಹು$_3$** (ನಾ). ಹಾಲುಕೊಡುವ ದನಗಳಿಗೆ ಮತ್ತು ಎತ್ತುಗಳಿಗೆ ಹುರುಳಿ, ಹತ್ತಿಕಾಳು, ಹಿಂಡಿ, ಹೊಟ್ಟು ಮೊದಲಾದುವುಗಳನ್ನು ನೀರಿನೊಂದಿಗೆ ಬೆರಸಿಡುವ ಆಹಾರ; ಕಲಗಚ್ಚು, ಬೇಯಿಸಿದ ಅಂಬಲಿ, ಮುಸುರೆ ಇತ್ಯಾದಿ : ಅವಂ ತುಱುಸು ತಳೆಯುಕ್ಕು ತಡೆಯದೆ ಮುರುವಂ ಸುರಿ (ಅಭಿನವ. ೫–೧೧೯); P ಇಲ್ಲಿ ಪ್ರಾಸಸ್ಥಾನವೆಂದು ಗ್ರಂಥದಲ್ಲಿ 'ಱ' ವನ್ನು ಬಳಸಿದೆ ; ಎಳಗಱುವಂ ಬಿಡು ಮುರುವಂ ಕಳೆದು . . . ಗೋಕುಳವಂ ಕಟಿ (ತ್ರಿಪುರ. ೧೫–೨೬); ಆಕಳ ಕರೆಸಿ ವೃಷಕ ಮುರುವ ಹಾಕಿ ಶಿಶುಗಳಾಕ್ರೋಶವ ಕೇಳದೆ . . . ರಾಕಾಚಂದ್ರಾಸ್ಯೆಯರು ನಡೆದರು (ಶ್ರಸಭಾ. ೩೮–೪); ಹಿಂಡುವಾಗ ದನಗಳನ್ನು ಪ್ರಸನ್ನಗೊಳಿಸಬೇಕಾದರೆ, ಮುರುವು ಮೊದಲಾದ ತಿನಿಸು ಕೊಡಬೇಕಾಗುವದು (ಸ್ತ್ರೀಶಿಬು. ೧೦೦). **ಮುರ್$_2$** : ಸೀತಕ್ಕ ದನಗಳಿಗೆ ಕಲಗಚ್ಚು ಮುರ ಕೊಟ್ಟು ಹಾಲು ಕರೆಸಿ (ಕ್ರಕ್ಕಿ. ೧೨೨). **ಮುರವು$_2$**: ಪಾಲ್ಗೆ ಮುರವೇಂ ಬೆಲೆಯೆ (ಧರ್ಮಪಾ. ೦–೦೦೯); ಮನವೆಂಬ ಕರುವನ್ನು ಬಿಡು. ಘನಭಕುತಿಯ ಮುರವನ್ನಿಡು (ಹರಿಶ. ೦೭೬); ಅದಕ್ಕೆ ನಾನೇ ಮುಸುರೆ ಮುರವು ತಿನ್ನಿಸುತ್ತಿದ್ದೆ (ಸುಹಸಂ. ೬೭). **ಮುರು$_2$**: ಸಗಣೀ ಬಾಚುವುದು, ಮುರು ಬೇಯಿಸಿ ಕರೆಯುವ ಎಮ್ಮೆ ದನಗಳಿಗೆ ಇಡುವುದು (ಹುಲಿಹು. ೭೮೦); ಹೋದವರಗೇಡಿಗೆ ಹಿಂದೆಯು ಬಂದೆಯು ಮುರು ಕಂಡ ಎಮ್ಮೆಯು ಹಾಗೆ (ತಂತ್ರಶೀ. ೨೩–೪೦). **ಮುರುಹು$_3$**: ಪೊಲೆಯರ ಮನೆಯ ಮುರುಹ ಪೊಱಗಿರಿಸಿದಡೆ ಹಂದಿ ಬಂದು ಮೂಸಿ ಪೋದಂತೆ (ದೇವಾವ. ೩೪–೬೦).

**ಮುರುವಿನ ಒಲೆ** = ದನಗಳಿಗೆ ಅಂಬಲಿ ಮುಂತಾದುವನ್ನು ಬೇಯಿಸುವ ಒಲೆ : ಗುತ್ತಿ ಕಿರುಜಗಲಿಯ ಮೂಲೆಯಲ್ಲಿ ಮುರುವಿನ ಒಲೆಯ ಬೆಂಕಿಗೆ ಸ್ವಲ್ಪ ಹತ್ತಿರವಾಗಿ. . . ಕುಳಿತುಕೊಂಡನು (ಮಲೆಮ. ೦೬).

**ಮುರುಸು** ' ಮುರಸು ' ನೋ.

**ಮುರುಹು$_1$** ' ಮುರಿಪು$_1$ ' ನೋ.

**ಮುರುಹು$_2$** ' ಮುರಿಪು$_2$ ' ನೋ.

**ಮುರುಹು$_3$** ' ಮುರುವು$_2$ ' ನೋ.

**ಮುರುಹು$_4$** ' ಮುಱುಕು$_2$ ' ನೋ.

**ಮುರೆ** (ನಾ). ಸುಗಂಧದಿಂದ ಕೂಡಿದ ಒಂದು ಬಗೆಯ ಸಸ್ಯ ಮತ್ತು ಅದರಿಂದ ತಯಾರಿಸುವ ಸುಗಂಧದ್ರವ್ಯ : "ತಾಳಪರ್ಣೀ– ಮುರೆಯೆಂಬ ಗಂಧದ್ರವ್ಯ" (ಟೀಕಾ. ೬೭); ಮುರೆ ಬೋಟಂ ರುಜೆ ಮಾಂಸಿ ಪೂತಿಪಫಳಂ ತಾಮಿಂತಿವೊಂದಂಶಮಾಗಿರೆ (ಲೋಕೋಪ. ೭–೨೭); ಒಂದೆಲಗನ ಸೊಪ್ಪು . . . ಮುರಾ, ತ್ರಿಫಲೆ . . . ತನ್ನೆಲೆಹುಳಿಗನ ಗೆಡ್ಡೆ ಇವುಗಳನ್ನು ಸಮಾಂಶವಾಗಿ ಆನೆಯ ಮೂತ್ರದಲ್ಲಿ ಅರೆದು (ವೈದ್ಯಶಾ. II. ೫೦). [ ಸಂ. ಮುರಾ ]

**ಮುರ್ಕಾಲಿ** ' ಮುಱುಕಿಲ್$_2$ ' ನೋ.

**ಮುರ್ಗಾಲ್** ' ಮುಱುಕಿಲ್$_2$ ' ನೋ.

**ಮುರ್ಗಳ** ' ಮುಱುಕಿಲ್$_2$ ' ನೋ.

**ಮುರ್ಗಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ : 'ಮುರ್ಗಿಕಾಯಿ' ನೋ. [ ? ]

**ಮುರ್ಗಿಕಾಯಿ**, **ಮುರಗಿಕಾಯಿ**, **ಮುರುಗಕಾಯಿ**, **ಮುರುಗಿಕಾಯಿ** (ನಾ). ಒಂದು ಬಗೆಯ ಕಾಯಿ : (೯). **ಮುರಗಿಕಾಯಿ** : "ಎಡಮುರಿ, ಮುರುಡಿ . . . ಮುರಗಿಕಾಯಿ" (ಸಸ್ಯಶಿ. ೬೯). **ಮುರುಗಕಾಯಿ** : ಓಮು ಎಂಟು ತೂಕ, ಮುರುಗಕಾಯಿ ನಾಲ್ಕು ತೂಕ . . . ಸಕ್ಕರೆ ೧೨ ತೂಕ, ಇವನ್ನು ಚೂರ್ಣವಂ ಮಾಡಿ (ಶಿವ್ಯಶಿ. ೮೦). **ಮುರುಗಿಕಾಯಿ** : ಎಡಮುರಿ, ಮುರುಗಿಕಾಯಿ . . . ಕವರ್ಗಿ (ವ್ಯಶಿಗ. ೪೨–೬೩೨). [ಮುರ್ಗಿ + ಕಾಯಿ$_4$ (< ಕಾಯ್$_4$) ]

**ಮುರ್ಗಿನಕೋಡುಸೊಪ್ಪು** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಸೊಪ್ಪು : ಕಿರೀಹುಳಿಪ, ಹುಳಿ, ಮುರ್ಗಿನಕೋಡುಸೊಪ್ಪು, ಸಣ್ಣಗೂಗೆ, ಬಿಳಿಕೂಪೆ (ವ್ಯಶಿಗ. ೯–೦೨೬).
[ < ಮುರ್ಗಿ + ಕೋಡು$_5$ + ಸೊಪ್ಪು$_2$ ]

**ಮುರ್ಗು** ' ಮೊಟ್ಟು$_1$ ' ನೋ.

**ಮುರ್ಚೆ** ' ಮುಚ್ಚು$_2$ ' ನೋ.

**ಮುರ್ತೆ**, **ಮುರ್ತೆ** (ನಾ). ಈಚಲು, ತಾಳೆ ಮುಂತಾದ ಮರಗಳಿಗೆ ಕಚ್ಚುಮಾಡಿ ಹೆಂಡವನ್ನು ಇಳಿಸುವಿಕೆ : ಕೂಕ್ರ ತನ್ನ ಕುಲಕಸುಬು ಮುರ್ತೆಯನ್ನೇ ಮಾಡಿಕೊಂಡು ಬಂದ (೬೩ನ. ೪೭). **ಮೂರ್ತೆ**.

**ಮೂರ್ತೆ ಮಾಡು** = ಹೆಂಡವನ್ನು ಇಳಿಸುವುದಕ್ಕಾಗಿ ತಾಳೆ, ಈಚಲು ಮುಂತಾದ ಮರಗಳ ಕಾಂಡವನ್ನು ಕಚ್ಚುಮಾಡು: ಗದ್ದೆಯ ಸಮುದ್ರದ ಬದಿಯಲ್ಲಿರುವ ಮರಗಳನ್ನು ಮೂರ್ತೆಮಾಡಿದರು ಬಿಲ್ಲವರು (ತುಳುಜಾ. ೫೯) ; ಎಲ್ಲರ ಕೈಯಲ್ಲು ಮೂರ್ತೆಮಾಡುವ ಕತ್ತಿಗಳು (ಜಪನ. ೨೫). [ ← ತುಳು. ಮುರ್ತೆ, ಮೂರ್ತೆ ]

**ಮುದಾರಿ** (ಗು). ಮೂಢಸ್ವಭಾವದ ; ದಡ್ಡತನದ : ತಿಳಿವಳಿಕೆಯಿಲ್ಲದ : ಅವನ ವಿಷಯಕ್ಕೆ ಮಾತ್ರ ನಾನು ಏನನ್ನೂ ಹೇಳಲಾರೆ. ಅವನು ಮೊದಲೇ ಮುದಾರಿ ಮನುಷ್ಯ (ರೂಢಿ).
[← ಪಾರ. ಮುರ್ದಾರ್ : ಮರಾ. ಮುರ್ದಾಡ. ಮುಡದಾರ್]

**ಮುದಾರಿಕೆ** (ನಾ). ಮೂಢತನ ; ದಡ್ಡತನ : 'ಮುದಾರಿಕೆ' ಮಾಡಿ, ಛೀ ಎನ್ನಿಸಿ ನೂರು ವರ್ಷ ಬಾಳುವುದಕ್ಕಿಂತಲೂ ಒಳ್ಳೆತನದಿಂದ ಮನುಷ್ಯ ಹತ್ತೇ ವರ್ಷ ಬದುಕಿದ್ದರೆ ಚಂದ (೬೩ನ. ೬೦).
[ಮುದಾರ್ (P ← ಮರಾ. ಮುರ್ದಾರ್) + – ಇಕೆ]

**ಮುಮುರ್ಶರ** (ನಾ). ಹೊಟ್ಟು ಹಾಕಿ ಮಾಡಿದ ಬೆಂಕಿ : ಉಮಿಬೆಂಕಿ ; ತುಷಾಗ್ನಿ. [ಸಂ.]

**ಮುಲಕನಾಡು** 'ಮುರಿಕಿನಾಡು' ನೋ.

**ಮುಲಕಿ** 'ಮುಲ್ಕಿ' ನೋ.

**ಮುಲಕೀಪರೀಕ್ಷೆ** 'ಮುಲ್ಕಿ' ನೋ.

**ಮುಲಖಿ** ' ಮುಲ್ಕಿ' ನೋ.

**ಮುಲಾಖತು** 'ಮುಲಾಖತ್ತು' ನೋ.

**ಮುಲಾಖತ್ತು**, **ಮಿಲಾಖತು** , **ಮಿಲಾಖತ್ತು**, **ಮುಲಾಖತು** (ನಾ). ೧. ಹೊಂದಿಕೆ ; ಹೊಂದಾಣಿಕೆ : ಅವರಿಬ್ಬರ ಅಭಿಪ್ರಾಯಗಳು ಮುಲಾಖತ್ತಾಗಲಿಲ್ಲ (ರೂಢಿ). ೨. ಭೇಟಿ ; ಸಂದರ್ಶನ : ಅವರ ಮುಲಾಖತ್ತಿನ ವ್ಯಾಲಿಂದ ಏನ್ನ ಅನುಭವಕ್ಕ ಬಂದೇ ಬಂದದ (ಶಾಂತಾಯ. ೩೩) ; ಕುಸುಮಾ ಪ್ರಮಿಳೆಯರ ' ಮುಲಾಖತ್ತು ' ಸ್ಮರಣೀಯವಾಗಿದೆ (ಸಹುಜಾ. ೨೩ ೫೦೯). **ಮಿಲಾಖತು** : ೨. ತಾವು ಇಲ್ಲಿಗೆ ಬಂದು, ತಮ್ಮ ಮಿಲಾಖತಿನ ಫಾಯಿದೆಯಿಂದ ಸಂತೋಷಪಡಿಸಬೇಕು (ಶಾಕೇಂದ್ರ. ೫೬).

**ಮುಲಾಖಿತ್ತು** : ೨. ಮುಲಾಖಿತ್ತಿಗೆ ಬರಬೇಕು ಬಂದರೆ ರಾಜ್ಯಕೊಡುತ್ತೇನೆ (ಮುದಕ. ೯-೦೬). **ಮುಲಾಖಿತು** : ೨. ದೇರಣ್ಣ ಮಹಾ ಹುಮ್ಮಸದಿಂದ. ನನ್ನ ಅವನ ಮುಲಾಖಿತಿನಿಂದ ತೊಡಗಿ . . . ಯಾವತ್ತು ವಿಷಯಗಳನ್ನು ವಿವರಿಸಿದನು (ಶಬ್ಬಜೀ. ೮).

[← ಅರ. ಹಿಂ. ಮುಲಾಕಾತ್ : ಮರಾ. ಮುಲಾಕತ್, ಮುಲಾಖತ್, ಮುಲಾಕಾತ್]

**ಮುಲಾಜ್** 'ಮುಲಾಜು' ನೋ.

**ಮುಲಾಜು, ಮುಲಾಜ್** (ನಾ). ೧. ದಾಕ್ಷಿಣ್ಯ ; ಭಿಡೆ ; ಸಂಕೋಚ : ನಿಮ್ಮ ಕಸ್ತೂರಾಮರ ದೋಸ್ತಿ ಮುಲಾಜು ಮಡಗುವದು . . . ನ್ಯಾಯ ಮಾಡುವದು. ಇಂಥಾ ಅನ್ಯಾಯದ ಮಾರ್ಗಹಿಡಿದು ಹೋಗುವಂಥಾ ಜನರ ಮೇಲೆ ನಮ್ಮ ದಯ ಮಿಳ್ಳಿತಾಗಿ ಬರಲಿಕ್ಕಿಲ್ಲ (ರಾಜೇಂದ್ರ. ೨೩೪); ಧನಿಗಳ ಮಕ್ಕಳನ್ನು ಸಹ ಮುಲಾಜಿಲ್ಲದೆ ಛಗಳು ಕೋಲಿಂದ ಕಾಯಿಸುವು ದನ್ನು ಕಂಡಿದ್ದಾನೆ (ಸ್ವಕೃಷೊ. ೨); ಮಂಜನು . . . ತಿಮ್ಮಪ್ಪಹೆಗ್ಗಡೆಯ ನೀಚತನವನ್ನು ಮುಲಾಜಿಲ್ಲದೆ ಬಯಲಿಗೆಳೆಯತೊಡಗಿದನು (ಮರಳು. ೩೫೦). ೨. ಹಂಗು ; ಋಣ : ಮದುವೆ ಆಗಿಹೋಗಿದೆ. ಒಬ್ಬರ ಮುಲಾಜು ಇನ್ನೊಬ್ಬರಿಗಿಲ್ಲ ಸರಿ. ಬೀಗರನ್ನು ಜರೆಯಲು ಆರಂಭಿಸುತ್ತಾರೆ (ಪತ್ನಿ. ೦೦೩) ; ಮತ್ತೆ ಹೆದರಿಕೆ ಇಲ್ಲ. ಹಾಗಂತ ಹೆದರಲಿಕ್ಕೆ ತನಗೆ ಯಾರದು ಮುಲಾಜು (ಹೊಸಕ್ಕ. ೯೯). **ಮುಲಾಜ್** : ೧. ನಮಗೆ ಗರ್ಜು ಬಂದಾಗ ನಿಮ್ಮ ಹಣ ಬಾರದೆ ಹೋದರೆ ನಾವು ಮುಲಾಜ್ ಇರಿಸಿ ಕೊಳ್ಳುತ್ತೇವೆಯೋ ? (ಶಾರದಾ. ೦೨೦).

[← ಅರ. ಮುಲಾಹಜಾ, ಮುಲಾಹಜ಼ಾ ; ಹಿಂ. ಮುಲಾಹಜಾ ; ಮರಾ. ಮುಲಾಜಾ, ಮುಲಾಇಜಾ, ಮುಲಾಹಿಜಾ]

**ಮುಲಾಮು, ಮುಲಾವು** (ನಾ). ೧. ಚಿನ್ನ, ಬೆಳ್ಳಿ, ಹಿತ್ತಾಳೆ ಮೊದಲಾದ ಲೋಹಗಳಿಗೆ ಮೆರುಗು ಹೆಚ್ಚಿಸಲು ಬಳಿಯುವ ಚಿನ್ನ, ಬೆಳ್ಳಿ ಮೊದಲಾದ ಲೋಹಗಳಿಂದ ಮಾಡಿದ ಲೇಪನ ವಸ್ತು ; ಗಿಲೀಟು : ಚಿನ್ನದ ಮುಲಾಮಿನ ಕೆಲಸವನ್ನು ನೋಡಿ (ಮುಂಬಯಿ. ೯-೧೯೨) ; ಸುಲ್ತಾನನು ಬೇಟೆಗೆ ಹೋಗುವಾಗ . . . ಅವನನ್ನು ಹಿಂಬಾಲಿಸಿ . . . ಚಿನ್ನದ ಮುಲಾಮಿನ ಕವಚದಿಂದ ಅಲಂಕೃತವಾದ ಇನ್ನೂರು ಹಸ್ತಿದಳವೂ ಹಿಂಬಾಲಿಸುತ್ತವೆ (ಕೃವಾಇ. II. ೦೬೮) ; ಬೆಳ್ಳಿ ಮುಲಾಮಿನ ಹಿತ್ತಾಳೆಬೋಟಕ್ಕೆ ಕೊಟ್ಟಾವರೂ ತೋರು ಜಗಕೆ (ಚಂದ್ರಶೀ. ೩೦-೨೦). ೨. ಗಾಯ, ಹುಣ್ಣು ಮುಂತಾದುವುಗಳನ್ನು ಗುಣಪಡಿಸುವು ದಕ್ಕಾಗಿಯೂ ಸೌಂದರ್ಯವರ್ಧಕಗಳನ್ನು ಮಾಡುವುದಕ್ಕಾಗಿಯೂ ಬಳಸುವ. ಔಷಧದ್ರವ್ಯಗಳಿಂದ ಮಾಡಿದ ಒಂದು ಬಗೆಯ ಜಿಡ್ಡು ಪದಾರ್ಥ : ಗಾಯಕ್ಕೆ ಹಚ್ಚಲು ಮುಲಾಮು ಕೊಟ್ಟರು (ಕಕವು. ೩-೩೭): ಡಾರ್ವಿನ್ನನು . . . ಸ್ವತಃ ಒಂದು ಮುಲಾಮನ್ನು ತಯಾರಿಸಿ ತನ್ನ ಹಲವಾರು ಗಾಯಗಳಿಗೆ ಹಾಗಿಸಿದನು (ಜೋಡು. ೦೨) ; ಈ ಮರದ ಹಣ್ಣಿನಿಂದ ಸುವಾಸನೆಯ ಎಣ್ಣೆಯನ್ನು ತೆಗೆದು ಹೆಚ್ಚಾಗಿ ಮುಲಾಮಿಗೆ ಉಪಯೋಗಿಸುತ್ತಾರೆ (ಕೃವಾಇ. II. ೦೨೭). **ಮುಲಾವು** : ೧. ಚಿನ್ನದ ಮುಲಾವಿನ ಸಾಮಾನು ೧ ವಿಲಾಸದ ಅರಳೆಲೆ ೭ ಮೊಕಪಟೀ ತುಂಡು (ಎಕ. XIV. ಸಂಖ್ಯೆ. ೨೯೯- ೦ನೆಯ ಕಲಂ ; ಸು, 1848) ; ಈ ದೇವಸ್ಥಾನದಲ್ಲಿರುವ ಎಲ್ಲಾ ದೇವರಿಗೂ ಸಮರ್ಪಣೆ ಮಾಡಿರುವ ವಸ್ತುಗಳು ಯಾವುವೆಂದರೆ . . . ಬಾಗಿಲಿಗೆ ಚಿನ್ನದ ಮುಲಾವಿನ ಬಾಗಿಲವಾಳ (ಮಹಾಪಂ. II. ೦೨೭).

[← ಅರ. ಮುಲಮ್ಮಅ್ ಮುಲಮ್ಮಾ; ಹಿಂ. ಮುಲಮಾ, ಮುಲಮ್ಮಾ; ಮರಾ. ಮುಲಾಮಾ, ಮುಲಾಮ್ಮಾ]

**ಮುಲಾವು** 'ಮುಲಾಮು' ನೋ.

**ಮುಲು** (ನಾ). (ಹುಳುಗಳು ಹರಿದಾಡುವುದನ್ನು ಸೂಚಿಸುವ) ಒಂದು ಅನುಕರಣಶಬ್ದ: 'ಮುಲುಗುಟ್ಟು' ಪರಾ.

ಮುಲುಮುಲು (ದ್ವಿರುಕ್ತಿ) : ಇರುವೆಗೂಡಿನ ಹತ್ತಿರ ನಿಂತದ್ದರಿಂದ ಕಾಲುಮೇಲೆಲ್ಲಾ ಇರುವೆಗಳು ಮುಲುಮುಲು ಅಂತ ಹತ್ತಿಬಿಟ್ಟುವು (ರೂಢಿ).

**ಮುಲುಕು₁, ಮುಕ್ಕು₂, ಮುಲುಗು, ಮುಲ್ಗು, ಮೂಲಗು, ಮೂಲುಗು** (ಕ್ರಿ). ೧. ಹೆರಿಗೆಯ ಸಮಯದಲ್ಲಿ ಬೇನೆಯನ್ನು ತಾಳಲಾರದೆ ತಿಣುಕು, – ಮುಕ್ಕಿರಿ : "ಮುಲುಕು – ಪ್ರಸವನ ಕ್ರಿಯಾಯಾಂ" (ಕಮಧಾ) : ಮುಲುಕಿ ಬೆಳಗನ್ನೆಗ ಬಸುಱಿಯಸುಗಳೆವ ಕೂಸಂ ಹೆಱುವ ತೆಱದಿಂ . . . ಎನ್ನಿರವಳಿದು ನಿಃಫಲವೆನಿಸಿತಲ್ಲಾ (ಶಕವು. ೩೭-೦೩) ; ತಲೆ ಪೆಟ್ಟಿ ಮಾಱಿಯಿರೆ ಗರ್ಭಭಾರದಿ ಹುಲ್ಲೆ ಮುಲುಕುತಿರ್ದುದು ಬೇನೆ ಮಸಗಿ (ನಾಗಕು. ೦೩-೯): ಮುಲುಕಿ ಬೇನೆ ಯೊಳಿರುವ ಪುಲ್ಲೆಯ ಕಂಡು (ನಾಗಕ. ೦೩-೨೯). ೨. ಹೆಚ್ಚಾದ ವ್ಯಥೆ. ತಳಮಳ ಮುಂತಾದುವುಗಳಿಂದ ಸಣ್ಣದನಿಯಲ್ಲಿ ನರಳು: ಮಾಚಿಕಬ್ಬೆ ಸ್ವಲ್ಪ ಮುಲುಕಿದರು (ಬಂಕರಾ. ೩೨೭); ವೆಂಕಪ್ಪಯ್ಯನವರು ಮುಲುಕುತ್ತಾ ಪಜಾರದಲ್ಲಿ ಮಲಗಿದ್ದರು (ಬಿಡ್ಯಾರಿ. ೯) ; ಹನುಮಪ್ಪ ಮೂಕನಂತೆ ಮುಲುಕುತ್ತಾ ಕೂತನು (ಶಿಂಡಜೀ. ೭೨). ೩. ಭಾರವಾದ ವಸ್ತುವನ್ನು ಎತ್ತುವ ಮೊದಲಾದ ಹೆಚ್ಚು ಶ್ರಮಸಾಧ್ಯವಾದ ಕೆಲಸಗಳನ್ನು ಮಾಡುವಾಗ ಆಯಾಸದಿಂದ ಕೂಗು, – ಧ್ವನಿಮಾಡು : (ಶಬ್ದಕೋ. ೩೩). ೪. ಸರಿ ; ಚಲಿಸು ; ಕದಲು : "ಅಲುಗು . . . ಮಿಸುಕು, ಮುಲುಕು, ಸರಿ" (ಕಂಪಾಹು. ೭೮); ಎರಡು ಕಡೆ ಬೋರ್ಜಿಗಳಿಗೂ ಪೂರ್ತಾ ಜನ ನಿಂತು . . . ಪೆದ್ನ ಕೊಡದೆ ಹೋದರೆ ಈ ತೇರು ಮುಲುಕುವುದಿಲ್ಲ (ಗರುಡಾ. ೬೨). **ಮುಕ್ಕು₂** : ೩. ಆ ವೃದ್ಧರು ತಮ್ಮ ಕೈಯಲ್ಲಿದ್ದ ಚೀಲದ ಭಾರದಿಂದಾಗಿ ನಡೆಯಲಾರದೆ ಮುಕ್ಕುತ್ತಿದ್ದರು (ರೂಢಿ). **ಮುಲುಗು**: ೨. ಅಲರ್ದ ಚಂಪಕವೃಕ್ಷಕೆರಗಿಯಳಿವಳಿದಯುಳಿಬಳಗದಂದದಲಿ ಮುಲುಗುತ ಬರ್ಪಯುರೆಜೀವಿಗಳ ನೋಡಿ (ಜಹಕೋ. ೦೨-೯೭); ಲಲನೆ ಯರಿಗೆಳೆಯರ್ಕಳಿಗೆ ವೃದ್ಧರಿಗೆ ಬೇನೆಗಳು ಮುಸುಂಕಿದವು . . . ಮುಲು ಗುವ ಪಲುಂಬುವ ನರಳ್ವ ಹೊಯಿಕೊಳ್ವ ಬೊಬ್ಬಾಟವಿಡಿದುದಾಗ (ಜೈಭಾ. ೦೦-೨೩); ಒಳಗೆ ಹಾಸಿಗೆಯ ಮೇಲೆ ನವಾಬರು ಸಣ್ಣಗೆ ಮುಲುಗುತ್ತಾ ಮಗ್ಗುಲಿಗೆ ತಿರುಗಿದರು (ದಾಂಪ. ೦೦). **ಮುಲ್ಗು**: ೧. ಹೆರುವ ವೇದನೆ ಯಿಂದ ಮುಲ್ಗು ವಳರಸಿ(ಅನಂತ. ೩-೬). **ಮೂಲಗು**: ೨. 'ಮೂಲಗಿಸು' ಪರಾ. **ಮೂಲುಗು** : (೧).

[ ದೇ.॥ ತಮಿ. ಮುಕ್ಕು ; ಮಲ. ಮುಕ್ಕು, ಮೂಲುಕ ; ತುಳು. ಮುಕ್ಕುರು ; ತೆಲು. ಮುಕ್ಕು. ಮುಲುಗು, ಮೂಲ್ಗು ; ಕೋಲಾ. ಮೂಲ್ಗ್ ; ಕೋತ. ತೊದ. ಮುಕ್]

**ಮುಲುಕು₂** (ನಾ). ೧. ಹೆರಿಗೆಯ ಸಮಯದಲ್ಲಿ ನೋವಿನಿಂದ ಮುಕ್ಕಿರಿಯುವಿಕೆ,—ತಿಣುಕುವಿಕೆ : "ಪ್ರಸವವೇದನಮಸಹ್ಯತ್ವ ಮುಲುಕೆಂದಕ್ಕು" (ಶಬ್ದಮಂ. ೬೦): ಆರು ಪೆತ್ತವಳಿಗೆ ಮೂರು ಹೆತ್ತವಳು ಮುಲುಕು ಕಲಿಸಿದಳಂತೆ (ಗಾದೆ). ೨. ನರಳುವಿಕೆ ; ನರಳಾಟ; ಒದ್ದಾಟ; ಮರುಕ್ಷಣವೇ . . . ಜೀವ ಸಂಕಟದಿಂದ ನರಳುವ ಕೊನೆಯಿರದ ಮುಲುಕು (ಅವಾಳ. ೦೯).

[< ಮುಲುಕು₁./ಮಲ. ಮೂಳಲ್; ತೆಲು. ಮೂಲುಗು, ಮೂಲ್ಗು]

**ಮುಲುಕು₃** 'ಮುಲ್ಕಿ' ನೋ.

**ಮುಲುಖಿ** 'ಮುಲ್ಕಿ' ನೋ.

**ಮುಲುಖು** 'ಮುಲ್ಕಿ' ನೋ.

**ಮುಲುಗು** 'ಮುಲುಕು₁' ನೋ.

**ಮುಲುಗುಂದ** 'ಮುಳ್ಗುಂದ' ನೋ.

**ಮುಲುಗುಟ್ಟು** (ಕ್ರಿ). ೧. ಹುಳುಗಳು ಒತ್ತೊತ್ತಾಗಿ ಹರಿ,–ಸರಿದಾಡು : ತೇವವಿರುವ ಸ್ಥಳದಲ್ಲಿ ಗೆದ್ದಲುಹುಳುಗಳು ಮುಲುಗುಟ್ಟುತ್ತಿರುತ್ತವೆ

(ರೂಢಿ). ೨. ಹುಳುಗಳು ಮೈಮೇಲೆ ಹರಿದಾಡಿದಂತೆ ಭಾಸವಾಗು : ಬೆಳಗ್ಗೆ ಕೈ ಮೇಲೆ ಹಲ್ಲಿ ಬಿದ್ದಿದ್ದು ಆ ಜಾಗ ಇನ್ನೂ ಮುಲುಗುಟ್ಟುತ್ತಾ ಇದೆ (ರೂಢಿ). ೩. (ಅಲಂ) ಪರದಾಡು ; ಚಡಪಡಿಸು : ಎಲ್ಲ ಜ್ಯೂರಿಗಳಿಗೂ ಆಯಾಸವಾಗಿತ್ತು; ಯಾವುದಾದರೊಂದು ನಿರ್ಣಯಕ್ಕೆ ಬಂದು ತಮಗೆ ಬಿಡುಗಡೆಯಾದರೆ ಸಾಕೆಂದು ಮುಲುಗುಟ್ಟುತ್ತಿದ್ದರು (ಕ್ಷಮಾ. ೦೦೬) ; ಸೈಕೆ, ನಿಶ್ಚೇತನಳಾಗಿ ನೆಲದ ಮೇಲೆ ಬಿದ್ದು, ಮುಲುಗುಟ್ಟುತ್ತಾ . . . ನಿಟ್ಟುಸಿರಿಡುವಳು (ಕಲ್ಯಾ. ೯೬). [ಮುಲು + ಕುಟ್ಟು₁]

**ಮುಲುವುನ್ನೆ** (ನಾ). ಒಂದು ಬಗೆಯ ಔಷಧೀಸಸ್ಯ : ಹಿಪ್ಪಲಿ . . . ಮುಲುವುನ್ನೆಬೇರು, ನೆಲಗುಳ್ಳ, ಕೊನ್ನಾರಿಗೆಡ್ಡೆ ಇವನ್ನು ಕಷಾಯಮಾಡಿ ಕೊಡಲು ಕಫ . . . ಛರ್ದಿ ಸಹ ಗುಣವಾಗುವುವು (ಸಕವೈ. ಶಂ. ೯೩೬).

[ ? ]

**ಮುಲ್ಕಿ**, ಮುಲಕಿ, ಮುಲಖಿ, ಮುಲುಕ್ಕು, ಮುಲುಖಿ, ಮುಲುಖು (ಗು). ೧. ಕಂದಾಯಕ್ಕೆ ಸಂಬಂಧಿಸಿದ ; ಕಂದಾಯದ : ಅಲ್ಲಿಂದ ಮುಂದೆ ಮುಲ್ಕೀಕಚೇರಿಗಳ ಸಮೂಹದಲ್ಲಿ ಪ್ರವೇಶಿಸಿದರು (ಛಕಕ. ೬೪). ೨. ದೇಶೀಯ ; ಸ್ಥಳೀಯ : (೦). (ನಾ). ೩. ರೆವಿನ್ಯೂ ಇಲಾಖೆಗೆ ಸಂಬಂಧಿಸಿದುದು ; ಕಂದಾಯದ ವಿಷಯಕ್ಕೆ ಸೇರಿದುದು : ಈ ಕೋರ್ಟಿನಲ್ಲಿಯೇ . . . ಮುಲ್ಕಿ ಎಂದರೆ ರೆವಿನ್ಯೂ ಬಾಬಿನಲ್ಲಿ, ರೈತರು ಮುಂತಾದವರ ಫಿರ್ಯಾದುಗಳನ್ನು ಸಹ ವ್ಯಾಸರಾಯರು ಕೇಳಿ ವ್ಯವಸ್ಥೆ ಮಾಡುತ್ತಿದ್ದರು (ಮಹಾಶಂ. II, ೨೮); ಮುಲ್ಕಿ ಮತ್ತು ನ್ಯಾಯಖಾತೆಯಲ್ಲಿ ಕಂಡುಬಂದ ಈ ಮನುಷ್ಯಸ್ವಭಾವವೇ ದಂಡಿನಲ್ಲಿ ಇನ್ನೂ ಹೆಚ್ಚಿನ ಸ್ವರೂಪದಲ್ಲಿ ಅನುಭವಕ್ಕೆ ಬಂದರೆ ಸೋಜಿಗವೇನು ? (ಛತ್ರಪ. ೩೩). ೪. ಮಾಧ್ಯಮಿಕಶಾಲೆಯ ಕೊನೆಯ ವರ್ಗದ ಪರೀಕ್ಷೆ: ನೀನು ಹೇಗಾದರೂ ಮುಲ್ಕಿ ಆಗಿರುವಿ. ಅದರ ಬಲದಿಂದ ಎಲ್ಲಿಯಾದರೂ ಶಿಕ್ಷಕನಾಗಿ ಬಾಳು (ಹಣ್ಣು. ೦೩೯) ; ಹುಡುಗಿಯರಿಗೆ ಇಂಗ್ಲೀಷ್ ಬೇಡವೇ ಬೇಡ. ಮುಲ್ಕೀ ಪಾಸಾದರೆ ಸಾಕು (ಮುಕುಂದಾ. ೬೬). **ಮುಲಕಿ** : ೧. ಮುಲಕೀ ಕೆಲಸವು ಯೋಗ್ಯರೀತಿಯಿಂದ ನಡೆದಿರುವದೆಂಬುದನ್ನು ಪ್ರತ್ಯಕ್ಷವಾಗಿ ನೋಡಬೇಕು (ಕಜಾಕೂ. ೩೩). ೨. ಸರಕಾರದವರು ಕಾದಿಟ್ಟ ಅಡವಿಯ ನೆರೆಹೊರೆಯ ಊರವರಿಗೆ ಮುಲಕೀ ಅಧಿಕಾರಿಗಳು ಅಡವಿಗೆ ಬೆಂಕಿ ಹತ್ತಗೊಡಬಾರದೆಂತ ಆಗಾಗ್ಗೆ ತಿಳಿಸುತ್ತಿರಬೇಕು (ಶುಂಠಿಯ. ೩-೪). ೪. ನೆರೆಮನೆ ಪಾಂಡ್ಯಾ . . . ಈ ಸಲ ಮುಲಕಿ ಕುಂತಾನು (ಬಾಬಿ. ೯). **ಮುಲುಖು** : ೫. ಸ್ಥಳ; ಪ್ರದೇಶ : ನಮ್ಮ ಪ್ರೇಮಚಂದ ಈಗೀಗ ಮಾರವಾಡಿ ಮುಲಖಿ ಬಿಟ್ಟು ಬಂದಾವ್ (ತೋಳಿ. ೯೩); ಇದು ಜಾಲಿ ನಿಮ್ಮ ಮುಲಖಿದಾಗ್ ಬಹುತ್ ಅದಾವ್ (ತೋಟ. ೩೯). **ಮುಲುಕ್ಕು**: ೫. ಟೀಪುಸುಲ್ತಾನರ ಕಡೆಯ ಮನುಷ್ಯರು ತಮ್ಮ ಮುಲುಕಿನಲ್ಲಿ ಬರಲಿಕ್ಕೆ ಬಿಡದ ಹಾಗೆ, ಬಂದೋಬಸ್ತು ಮಾಡುವದು (ರಾಕೇಂದ್ರ. ೯೩). **ಮುಲುಖು** : ೫. ನೃಸಿಂಹವಾಡಿಯು ಕೊಲ್ಹಾಪುರದ ಛತ್ರಪತಿಗಳ ಜಹಗೀರಿನ ಮುಲುಖುವಾಗಿದ್ದು, ವಾಡಿಯ ಸುತ್ತಮುತ್ತಲು . . . ಬ್ರಿಟಿಶ್ ಮುಲುಖು ಇರುತ್ತದೆ (ದೇಶಕ. ೨೦). **ಮುಲುಖು** : ೫. ನಾನೀಗ ಏನಾದರೂ ದುಡುಕಿದರೆ. ಬಂತು ಪ್ರಾಣಕ್ಕೆ ಸಂಚಕಾರ! ಅಯ್ಯೋ, ಇದು ಮಹಮ್ಮದೀಯರ ಮುಲುಖಾಗಿದ್ದರೆ ! (ಅಶಾಂಛ. ೦೬೦).

**ಮುಲ್ಕೀಪರೀಕ್ಷೆ**, **ಮುಲಕೀಪರೀಕ್ಷೆ** = ಮಾಧ್ಯಮಿಕ ಶಾಲೆಯ ಕೊನೆಯ ವರ್ಗದ ಪರೀಕ್ಷೆ : ಶಿಶುನಾಳಶರೀಫಸಾಹೇಬರು . . . ಕನ್ನಡ ಮುಲ್ಕೀಪರೀಕ್ಷೆಯವರೆಗೆ ಅಧ್ಯಯನಮಾಡಿದರು (ಶರೀಫ. ೩೩) ; ಜಮುಳ ವಿದ್ಯಾಭ್ಯಾಸಂಗವು ಮುಲ್ಕೀಪರೀಕ್ಷೆಯವರೆಗೆ . . . ಸಾಗಿತ್ತು (ಜಾಗಿಕ. ೦೦); ಸುಮತಿಗೆ ಈಗ ೨೦ ವರುಷ ವಯಸ್ಸು. ಕನ್ನಡ ಮುಲಕೀಪರೀಕ್ಷೆ ಪಾಸಾಗಿ . . . ಶಿಕ್ಷಕಿಯಾಗಿದ್ದಾಳೆ (ಅಶೋಕ. ೬೩).

[← ಅರ. ಮುಲ್ಕ್; ಹಿಂ. ಮುಲಕೀ, ಮುಲ್ಕೀ; ಮರಾ. ಮುಲಕೀ, ಮುಲಖೀ, ಮುಲೂಕ್, ಮುಲೂಖ್, ಮುಲ್ಕೀ ]

**ಮುಲ್ಕಿಖಾತೆ** (ನಾ). ಕಂದಾಯದ ವಿಭಾಗ : ರೆವಿನ್ಯೂ ಇಲಾಖೆ : ನಾನು . . . ಮುಲ್ಕಿಖಾತೆಯಲ್ಲಿ ಗುಮಾಸ್ತೆಯ ಕೆಲಸವನ್ನು ಹೇಗೆ ಸರಿಯಾಗಿ ಮಾಡಬೇಕೆಂಬುದನ್ನು ಕಲಿತುಕೊಂಡೆನು (ಹೇಮಂತ. ೦೬೩).

[ಮುಲ್ಕಿ + ಖಾತೆ₂]

**ಮುಲ್ಕೀಪರೀಕ್ಷೆ** ' ಮುಲ್ಕಿ ' ಪರಾ.

**ಮುಲ್ಕು** ' ಮುಲುಕ್ಕು₁ ' ನೋ.

**ಮುಲ್ತಾನಿ** (ಗು). ೧. (ಅಲಂ) ದೊಡ್ಡಸ್ತಿಕೆಯ ; ಆಡಂಬರದ : ತವರನ್ನು ಬಾಯಿತುಂಬಾ ಹಳಿಯೋದಿಕ್ಕೆ ಬರುತ್ತಲ್ವೆ ನಿಮಗೆ ಬಾಯಿದ್ದ ? ನೋಡಬೇಕಾಗಿತ್ತು, ನೀವು ಮಾಡಿದ ಮುಲ್ತಾನೀ ಅಳಿಯತನವನ್ನು (ರೂಪಸಿ. ೩). (ನಾ). ೨. ಮುಲ್ತಾನವೆಂಬ ದೇಶ ಮತ್ತು ಅಲ್ಲಿಗೆ ಸಂಬಂಧಿಸಿದ ವ್ಯಕ್ತಿ : ಮುಲ್ತಾನೀ ಎಂಬ ಪೂರ್ವಪರ್ಶಿಯಾದೇಶದ ಯವನರ ಪುರದ ನಿವಾಸಿ (ಪುಂಡರೀ. ೩೯೦). ೩. [ಸಂಗೀತ] ಒಂದು ರಾಗದ ಹೆಸರು: ಬಿಲಾವಲ್, ಮುಲ್ತಾನಿ, ರಾಮಕಲಿ ರಾಗಗಳು ಕ್ಷಯರೋಗವನ್ನೂ . . . ಗುಣಪಡಿಸುವುವೆಂಬ ಭಾವನೆ ಉತ್ತರಭಾರತದಲ್ಲಿದೆ (ಭಾರದ. ೩೯೯) ; ಗೌಡಿಯು ರಾಮಕ್ರೀಮೇಳದಲ್ಲಿ ಹುಟ್ಟಿದೆ . . . ಮುಲ್ತಾನೀರಾಗವು ಇದರ ಪೂರ್ವೀಕ (ಪುಂಡರೀ. ೩೯೯). [← ಹಿಂ. ಮರಾ. ಮುಲತಾನೀ]

**ಮುಲ್ಲ** ' ಮುಲ್ಲಾ ' ನೋ.

**ಮುಲ್ಲಂಗಿ** ' ಮೂಲಂಗಿ ' ನೋ.

**ಮುಲ್ಲಗಿವಿ** (ನಾ). ತಿರುಚಿಕೊಂಡಿರುವ ಕಿವಿ : ಮುರುಟುಗಿವಿ : ನಿನ್ನ ಒಂದು ಕಿವಿ ಆಗಲೇ ಯಾರೋ ಕಿತ್ತು ಹಾಕ್ಯವರೆ (ಆದಕ್ಕೋಸ್ಕರವೇ ನನ್ನೂರ ಶಾನುಭೋಗರಿಗೆ 'ಮುಲ್ಲಗಿವಿ ಶಾನುಭೋಗ' ಅಂತ ಅಡ್ಡ ಹೆಸರೂ ಇತ್ತು) (ಶಷ್ಮರು. ೦೯೯) ; ಒಂದು ಕಿವಿ ಇರಲೇ ಇಲ್ಲ ಶಾನುಭೋಗರಿಗೆ. ಇನ್ನೊಂದು ಮುಲ್ಲಗಿವಿಯಾಗಿತ್ತು (ಶಷ್ಮರು. ೦೬೦). [ಮುಲ್ಲ₂ + ಕಿವಿ₃]

**ಮುಲ್ಲಶಾಸ್ತ್ರ** ' ಮುಲ್ಲಾಶಾಸ್ತ್ರ ' ನೋ.

**ಮುಲ್ಲಾ**, ಮುಲ್ಲ₁ (ನಾ). ೧. ಮುಸಲ್ಮಾನರ ಧರ್ಮಗುರು : ಮುಲ್ಲಾನು ಹೇಳುವುದನ್ನೋ ಅಥವಾ ಪಾರ್ಟರ್ ಪುರೋಹಿತ ಹೇಳುವುದನ್ನೋ ಕೇಳಿ (ಶುಲಿಪಾ. ೬೦). ೨. ಅರಬ್ಬಿ, ಪಾರಸಿ ಮುಂತಾದ ಭಾಷೆಗಳನ್ನು ಹೇಳಿಕೊಡುವವನು : ಮೌಲ್ವಿ : (೦). **ಮುಲ್ಲ₁** : ೧. ' ಮುಲ್ಲಶಾಸ್ತ್ರ ' ಪರಾ. [← ಅರ. ಮೌಲಾನಾ ; ಹಿಂ. ಮುಲ್ಲಾ ; ಮರಾ. ಮುಲನಾ, ಮುಲಾನಾ, ಮುಲ್ಲಾ]

**ಮುಲ್ಲಾಶಾಸ್ತ್ರ**, ಮುಲ್ಲಶಾಸ್ತ್ರ (ನಾ). ಮುಸಲ್ಮಾನರ ಧರ್ಮಗ್ರಂಥ : ಕೊರಾನು : ಕಾಲವನು ವಿಚಾರಿಂ ಬಾಳುವರೆ ಶ್ರೀವರ್ಧಮಾನವ್ಯಾಳೆ ಮುಲ್ಲಾಶಾಸ್ತ್ರವಾದುದು ಸಕಲ ಸಮ್ಯಕ್ತ್ವ (ಶಿಕ್ಷಾ ಪು. ೩೪-೪೦) ; ಆ ದಿವಸ ಮಸೀತಿಯಲ್ಲಿ ನೀನು ಮುಲ್ಲಾಶಾಸ್ತ್ರ ಓದುವುದನ್ನು ನೀನು ನನಗೆ ಮೊದಲು ತಿಳಿಸಲೇ ಇಲ್ಲ (ಶುಚಿಗ. ೦೩). **ಮುಲ್ಲಶಾಸ್ತ್ರ** : ಮುಲ್ಲಶಾಸ್ತ್ರದ ನೆಲೆಯ ಗುಜಿಂತಜೀಯದೆ ಜಳ್ಳುಕೂಗನು ಕೂಗಿ ಬಗುಳಿ ಬಾಯಾಚುವಂಥ ಕಳ್ಳ ತುರುಕರಿಗೆಲ್ಲ ವೀರಸ್ವರ್ಗನವುಂಟೆ (ಕಶಕ. ೦೨೬-೪). [ಮುಲ್ಲಾ + ಶಾಸ್ತ್ರ]

**ಮುಲ್ಲಿ** (ನಾ). (ಉಕ) ನಾಜೂಕು ; ಸೂಕ್ಷ್ಮ : ನನ್ನ ಮಾತ ನೀ ನಡಸದಿದ್ದರೆ ನಿನ್ನ ಲಗ್ನ ಹ್ಯಾಂಗ ಆಗತದ ನೋಡತೀನಿ ವಿಶ್ವಾಸ್ನ ಮುಲ್ಲೀ ಮಾಡಿ ಕೊಡಸ್ತೀನಿ (ದೀಶಹ. II, ೨೬೬). [← ಅರ. ಮುಲಾಯಮ್, ಮುಲಾಯಿಮ್ : ಹಿಂ. ಮುಲಾಯಮ್ ; ಮರಾ. ಮುಲಾಈಮ್, ಮುಲಾಯಮ್ ]

**ಮುಲ್ಲಾಕ**, ಮುಲ್ಲೂಕ (ನಾ). ಮುಸಲ್ಮಾನ ಸೈನಿಕ ; ಮಹಮ್ಮದೀಯ ಯೋಧ : ಮೋಡಿಯ ಹರಿಗೆಯ ಭಟರು ನೇಜೆಯುಗಳ ನೀಡುತಿರುವ

ಮುಲ್ಲುಕರ ಪಾಡುಗೆಡಿಸಿ ಹೊಯ್ದು ಜಯಿಯಟ್ಟಿ ದೆಸೆದೆಸೆಗೋಡಿಸಿದುದ ನೇವೇಳ್ವೆ (ಕಂಪ. ೦೩-೯೦). **ಮುಲ್ಲೂಕ** : ಕರಿಸಿದ ತಳವಾರ ರಾಮನ ಬೇಗದಿ ಕರಸಿದ ಮಲ್ಲ ಮುಲ್ಲೂಕರ (ಬಿಕ್ಕ.ರಾ. ೬-೬೫).

[←ಅರ. ಮುಲ್ಕ್; ಹಿಂ. ಮುಲುಕ್, ಮುಲ್ಕ್; ಮರಾ. ಮುಲೂಕ್, ಮುಲೂಖ್ = ಪ್ರಾಂತ, ರಾಜ್ಯ, ದೇಶ]

**ಮುಲ್ಲೂಕ** 'ಮುಲ್ಲುಕ' ನೋ.

**ಮುಲ್ಲೋಕ** 'ಮೂಲೋಕ' ನೋ.

**ಮುವಜ್ಜಲ್** (ನಾ). (ಮಹಮ್ಮದೀಯ ಕಾಯಿದೆ ಪ್ರಕಾರ) ಇಂತಿಷ್ಟು ವಾಯಿದೆಯೊಳಗೆ ಸಲ್ಲಿಸಬೇಕೆಂದು ನಿಗದಿಯಾಗುವ ಸ್ತ್ರೀಧನ: ೧೧೩. ಕೇಳಿದ ಕೂಡಲೆ ಕೊಡಬೇಕಾದ ಮುವಜ್ಜಲ್ ಎಂಬ ಸ್ತ್ರೀಧನದ ಬಗ್ಗೆ ಒಬ್ಬ ಮಹಮ್ಮದೀಯನಿಂದ. ಮೂರು ವರ್ಷಗಳು ೧೧೪. ಮುಂದೆ ಯಾವ ಸಮಯದಲ್ಲಿಯಾದರೂ ಕೊಡಬೇಕಾದ ಮುವಜ್ಜಲ್ ಎಂಬ ಸ್ತ್ರೀಧನಕ್ಕಾಗಿ ಒಬ್ಬ ಮಹಮ್ಮದೀಯನಿಂದ. ಮೂರು ವರ್ಷಗಳು (ಗ್ರಾ.ವ೩೪. ೬೪೯). [←ಪಾರ. ಮುಅಜ್ಜಲ್, ಮುಅಜ್ಜಿಲ್]

**ಮುವಾನೆ** (ನಾ). ಮೂರು ಹಾನೆಗಳಷ್ಟು ಅಳತೆ: ಕೊಡಗಿಯ ಶಂಕರ ನಾರಾಯಣದೇವರಿಗೆ ಮುವಾನೆ ಅಕಿಯ ನಯಿವೇದ್ಯ (ಕೌ೩೩. IX-ii, ೪೦೯-೯; 1380). [<ಮೂಱು + ಹಾನೆ]

**ಮುವೊಲ್ಪೊೞಿಗೆ** (ನಾ). ಒಂದು ಊರಿನ ಹೆಸರು: ತೊಱೆಕ್ಕಾರಾಟ್ಟಿಉ ಪೆಕ್ಕವಿಯ ಮುವೊಲ್ಪೊೞಿಗೆಯಕೂಡಲೂರು (ಎಕ. III (R), ಗುಂಡ್ಲು.ಪೇ. ೬೬-೩; ಸು. 750). [ ? ]

**ಮುವ್ವತ್ತು** 'ಮೂವತ್ತು' ನೋ.

**ಮುಶಲ** (ನಾ). ೧. ಒಂದು ಬಗೆಯ ಆಯುಧ; ಗದೆ. ೨. ಒನಕೆ. ೩. ದಂಡ; ಕೋಲು. [ಸಂ.]

**ಮುಶಲಿ$_1$** (ನಾ). ಗದೆಯನ್ನು ಧರಿಸಿರುವವನು; ಗದಾಧರ; ಬಲರಾಮ. [ಸಂ. ಮುಶಲಿನ್]

**ಮುಶಲಿ$_2$** (ನಾ). ೧. ಹಲ್ಲಿ: "ಮುಶ[ಸ]ಲಿ ಗೃಹಗೋಧಿಕಂ ಗೃಹಪಿಕಂ ಹಲ್ಲಿಯುದು" (ಮಂಗರಾ. ೪೪-೦೪). ೨. ಒಂದು ಬಗೆಯ ಸಸ್ಯ; "ನೆಲತಾಳೆ" (ಸಸ್ಯ.೩. ೪೨). [ಸಂ. ಮುಶಲೀ]

**ಮುಶಲಿಕೆ** (ನಾ). ೧. ಹಲ್ಲಿ; ಗೌಳಿ. ೨. ಹಲ್ಲಿಯ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ; ಉಡು: "ಗೋಧಂ ಮುಶಲಿಕಾಖ್ಯಮೆನಲುಡುವೆನಿಕ್ಕುಂ" (ಮಂಗರಾ. ೪೮-೦೦). [ಸಂ. ಮುಶಲಿಕಾ]

**ಮುಶಾಯಿರಾ** 'ಮುಶೈರಾ' ನೋ.

**ಮುಶಿ** 'ಮೂಸೆ' ನೋ.

**ಮುಶೀರಿ** (ನಾ). ಸಿಂಹಾಸನ (?): ಮುತ್ತು ಮಾಣಿಕ ರತ್ನ ವಜ್ರ ವೈಡೂರ್ಯದಿಂದರ್ಚಿಯ ಪೈದೊಡವುಗಳನಿತ್ತೂ ಹಸ್ಸರಿಕೆ ಹಲ್ಲಣ ಸಮ ಕಟ್ಟನು ಎತ್ತಬಾರದ ಮುಶೀರಿಯನು ತರಿಸಿಕೊಟ್ಟು (ಅರುಣಾ. ೩-೦೯). [p ಇದು 'ಪಶೀರ' ಎಂಬುದರ ಅಪಲಿಖಿತವಿರಬಹುದು]

**ಮುಶೈರಾ**, ಮುಶಾಯಿರಾ (ನಾ). ಅನೇಕ ಕವಿಗಳು ಒಂದೆಡೆ ಸೇರಿ ತಮ್ಮ ತಮ್ಮ ಕವಿತೆಗಳನ್ನು ವಾಚನ ಮಾಡುವ ಸಭೆ; ಕವಿಗೋಷ್ಠಿ: ಈವತ್ತು ಸಂಜೆ ರವೀಂದ್ರಕಲಾಕ್ಷೇತ್ರದಲ್ಲಿ ಪ್ರಖ್ಯಾತಕವಿಗಳ ಮುಶೈರಾ ನಡೆಯಲಿದೆ (ಲೂ). **ಮುಶಾಯಿರಾ** : ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ . . . ಶಬ್ದಗಳೆಂದರೆ ಕಚೇರಿ, ಮುಶಾಯಿರಾ, ಗೈರವರ್ಜಿ (ಚಂಶ್ರೀ. ೦೬೬).

[←ಅರ. ಮುಶಾಅರಹ್; ಹಿಂ. ಮುಶಾಯರಾ]

**ಮುಷಕರ** 'ಮುಷ್ಕರ$_1$' ನೋ.

**ಮುಷಿತ** (ಗು). ೧. ಕದಿಯಲ್ಪಟ್ಟ; ಕಳುವಾದ. ೨. ಕಳೆದುಹೋದ; ನೀಗಿದ; ಸೂರೆಹೋದ: ಹಯಕಂಠನುರ್ವಿಕಮಳಾಲಯದಿಂ ಸಿರಿ ಸಂಜೆವೊಟ್ಟು ಬರೆ ಮುಷಿತಸುಪ್ರೋದಯೆಯಾಗಿ ಪುಗಿಸಿ ತದ್ವೀಶಿಯಿಂದೆ ಮುಚ್ಚುವವೊಲಾಯ್ತು ನಳಿನನಿಕೋಚಂ (ಪರ್ಶು. ೬-೨೪). ೩. ನಾಶಮಾಡಿದ; ಧ್ವಂಸಗೊಳಿಸಿದ. ೪. ಸುತ್ತುವರಿದ; ಮುತ್ತಲ್ಪಟ್ಟ. (ನಾ). ೫. ಕಳುವಾದುದು; ಕದ್ದೊಯ್ದುದು: "ಮೂಷಿತಂ, ಮುಷಿತಂ – ೨ ಕದಿಯಲ್ಪಟ್ಟದ್ದು" (ಸಿದ್ಧಾಂತಿ. ೩೪೭). ೬. ಕದಿಯುವುದು; ಕಳ್ಳತನ. [ಸಂ.]

**ಮುಷ್ಕ** (ನಾ). ೧. ಅಂಡ; ವೃಷಣ: "ಮುಷ್ಕಂ ಅಂಡಃ . . . ಮುಷ್ಕಿಃ – ಈ ೬ ಅಂಡಂ" (ಶಬ್ದಾಯು. ೬೬-೩೩೯); ತಲೆ ಮೇಪಂ . . . ವೃಶ್ಚಿಕವಸತಿ ಗುದಂ ಮೇಹನಂ ಚಾಪ ಸಂಭ್ರೂನಿಳಯಂ ಮುಷ್ಕಂ ಮೃಗಾಖ್ಯಂ ಕಟಿಘಟವುರು ಮೀನೋದಯಂ ಬಾಲವಾಮ್ಯಂ (ಜಾತಕ. ೩-೩); ಆ ಮಹಾಮುನಿಯ ಶಾಪದೊಳಿಂದ್ರ ಮುಷ್ಕಾಂಡರಹಿತಘೋರಾ ಕೃತಿಯನು ತಾಮಸದೊಳಾಳ್ದು (ವಂಕಾರಾ. ೦-೦೬-೦). ೨. ಒಂದು ಬಗೆಯ ಮರ; ಮೊಕ್ಕೆ. [ಸಂ.]

**ಮುಷ್ಕಕ** (ನಾ). ೧. = ಮುಷ್ಕ ೧. ೨. = ಮುಷ್ಕ ೨: "ಗೋಲೀಢಃ . . . ಮೋಕ್ಷಃ, ಮುಷ್ಕಕಃ – ೬ ಮೊಕ್ಕೆಮರದ ಹೆಸರು" (ಸಿದ್ಧಾಂತಿ. ೦೨೦). [ಸಂ.]

**ಮುಷ್ಕರ$_1$**, ಮುಷಕರ (ನಾ). ೧. ಹಟ; ಮೊಂಡುತನ; ಆಗ್ರಹ: ಉಣುವಾಗ ಪೀನಘಂಟೆಗಳುಲಿದು ಬತ್ತಿಗಳಾನಿಸುತ ಕರ್ಣದಲಿ ಕಾಲವ ಸಾನಗಾಯ್ದಿಹರೆಲ್ಲ ಭವ್ಯರು ಮುಷ್ಕರಗಳಿಂದ (ಬಿಜ್ಜಳ. ೬-೨೪). ೨. ಸೊಕ್ಕು; ದುರಹಂಕಾರ: (+). ೩. ಯಾವುದೇ ಸಂಘ ಅಥವಾ ಸಂಸ್ಥೆಯ ಕೆಲಸಗಾರರು, ವಿದ್ಯಾರ್ಥಿಗಳು ಮುಂತಾದವರು ತಮ್ಮ ಬೇಡಿಕೆಗಳು ಮನವಿಗಳಿಂದ ಈಡೇರದಿದ್ದಾಗ ಅವನ್ನು ಕಾರ್ಯಗತ ಮಾಡಿಸುವ ಉದ್ದೇಶದಿಂದ ಮೂಲಸಂಸ್ಥೆಯ ವಿರುದ್ಧವಾಗಿ ಹೂಡುವ ಸಂಪು.— ಚಳುವಳಿ: ಎಷ್ಟೇ ಕಷ್ಟ ಬಂದರೂ ಮುಷ್ಕರಗಳನ್ನು ಹಿಡಿಯದೆ ತಮ್ಮ ನ್ಯಾಯವಾದ ಬೇಡಿಕೆಗಳನ್ನು ಶಾಂತರೀತಿಯಲ್ಲಿ ಪಡೆಯಬೇಕು (ಶಾಸ್ತ್ರಿ. ೪ ಮೊದಲಭಾಗ); ಈ ವರ್ಷ ಮುಷ್ಕರದ ಪರಿಣಾಮವಾಗಿ ಮಾಲೀಕ ಅವನನ್ನು ವಜಾಮಾಡಿದ್ದನು (ಭುವನ. ೦೫೪). **ಮುಷಕರ** : ೧. ವೆಂಕಟ್ರಾಮಶಾಸ್ತ್ರಿಗಳಿಗೆ . . . ನಾಲ್ಕು ತಡವೆ ಪ್ರವರ್ತಿಆಗಿ ತೀರಿ ಹೋದದ್ರಿಂದ ಅವರ ಕುಟುಂಬ ಸಹಗಮನ ಮಾಡಬೇಕೆಂಬದಾಗಿ ಬಹಾರು ಹೇಳಿದಾಗ್ಯು ಕೇಳದೆ ಮುಷಕರ ಮಾಡಿಕೊಂಡು ಅಪ್ಪಣೆ ಕೊಡ್ಬೇಕೆಂಬದಾಗಿ ಯಿದಾರೆ (ಪ್ಯಾಲೆ. ೦೪೩೬, ೩೩-೭; 1805).

**ಮುಷ್ಕರ ಹಿಡಿ** = ೧. ಹಟಹಿಡಿ; ಆಗ್ರಹಪಡಿಸು: ನನ್ನ ಮನೆಯವಳು . . . ನನ್ನೊಡನೆ ಬಂದೇ ತೀರುತ್ತೇನೆಂದು ಮುಷ್ಕರ ಹಿಡಿದಿದ್ದಾಳೆ (ಹುತ್ತು. ೯೩). ೨. ಸಂಪು ಹೂಡು; ಸತ್ಯಾಗ್ರಹವನ್ನು ಆರಂಭಿಸು: ಪರೀಕ್ಷೆಗಳನ್ನು ಮುಂದೂಡಬೇಕೆಂದು ವಿದ್ಯಾರ್ಥಿಗಳು ಮುಷ್ಕರ ಹಿಡಿದಿದ್ದಾರೆ (ಲೂ). ೩. (ವಿರೋಧದಿಂದ) ಕಾರ್ಯವನ್ನು ನಿಲ್ಲಿಸು; ಅಸಹಕಾರವನ್ನು ಸೂಚಿಸು: ಮೇಲಕ್ಕೆ ಅಡರುವ ಧೂಮ ಸ್ತೋಮವನ್ನು ಮೂಗು ಬಾಯಿಗಳು ಮುಷ್ಕರ ಹಿಡಿಯುವ ತನಕ ಹೀರಿ ಹೀರಿ . . . ಮಂತ್ರು ಜಪಿಸಿದೆ (ಹಟಿಲು. ೩೪). **ಮುಷ್ಕರ ಹೂಡು** = ಮುಷ್ಕರ ಹಿಡಿ ೨: ಕೆಲಸಗಾರರಿಗಂತೂ ಏನೂ ಉಪಯೋಗವಾಗಲಿಲ್ಲ. ಅಸಮಾಧಾನವಾದಾಗ ಮುಷ್ಕರ ಹೂಡುವುದೊಂದೇ ಅವರಿಗಿದ್ದ ದಾರಿ (ಹಿಂಸಾ. ೭೪). [ದೇ.॥ ತಮಿ. ಮುಷ್ಕರವ್, ಮುಣ್ಕರವ್; ಮಲ. ಮುಷ್ಕರವ್, ಮುಷ್ಕು=ಬಲ; ತೆಲು. ಮುಷ್ಕರ]

**ಮುಷ್ಕರ$_2$** (ನಾ). ಗಂಗರ ಒಬ್ಬ ರಾಜನ ಹೆಸರು: ಶ್ರೀಮತ್ಕೊಂಗಣಿವೃದ್ಧರಾಜಸ್ಯ ಪ್ರಣೀತಮುಷ್ಕರದ್ವಿತೀಯ ನಾಮಧೇಯಸ್ಯ ಸರ್ವವಿದ್ಯಾ

ಪಾರಗಸ್ಯ ಸೂನೋಃ (ಎಕ. IV (R). ಚಾಮರಾ. ೩೯೭-೯; 7ನೆಯ ಶ‌ಶ); ಮುಷ್ಕರನಾಮಧೇಯಃ ತಸ್ಯ ಪುತ್ರಃ ಚತುರ್ದಶವಿದ್ಯಾಸ್ಥಾನಾಧಿಗತ ವಿಮಲಮತಿಃ (ಎಕ. III (R), ನಂಜನ. ೯೦೨-೯; ೨೦೬). [ ? ]

**ಮುಷ್ಕರಕಾರ** (ನಾ). ಸಂಪು ಹೂಡುವವನು ; ಚಳುವಳಿ ನಡೆಸುವವನು: ರಾಜಕೀಯಮುಖ್ಯದಿಗಳು, ಸಮಾಜವಾದಿಗಳು ಮತ್ತು ಮುಷ್ಕರಕಾರರು ಅಂಥವರು (ಶೃಹು. ೯೦೩). [ಮುಷ್ಕರ₁ + — ಕಾರ₁ (< — ಕಾಜ)]

**ಮುಷ್ಕಿ₁** ಮುಸಿಗೆ (ನಾ). ಕೈಗಳನ್ನು ಬೆನ್ನಿನ ಹಿಂಬದಿಗೆ ತಂದು ಕಟ್ಟುವಿಕೆ ; ಹೆಡಮುರಿಗೆ : ನಿರ್ದಯವುಳ್ಳ ಆಳು ಆ ಕ್ಷಣ ಪೇಳಲಾಗ ಕಟ್ಟ ಮುಷ್ಕಿಗಳನ್ನು ಬೇಡಿಯೊಲು ಬೇಗ ನವಾಬರ ಕಡೆ ದಾರಿನವರು . . . ಒಳಕ್ಕೆ ಬಂದು ಆ ೬೦ ಮಂದಿಯನ್ನೂ ಹಿಡಿದು (ಕಾಪಶಾ. ೦೯) ; ಮುಷ್ಕೀ ಕಟ್ಟಿ ಪಹರೆಯಲ್ಲಿ ಇರಿಸಿದರು (ಚಾಮುಶಂ. ೨೩೦) ; ಬಾಚಿಗನನ್ನು ಹಿಡಿದು . . . ಹಗ್ಗಗಳಿಂದ ಮುಷ್ಕೀಕಟ್ಟಿ . . . ತಳ್ಳಿದರು (ಕಥಾಶಂ. IV, ೦೦೦). **ಮುಸಿಗೆ** : 'ಮುಸಿಗೆಬಿಗಿ' ಪಠಾ. [ ? ]

**ಮುಷ್ಕಿಲ್**, ಮುಷ್ಕೀಲು (ನಾ). ಕಷ್ಟ ; ಕ್ಲೇಶ ; ತೊಂದರೆ : ಬರುವ ಲಾಭದಲ್ಲಿ ಈ ದೊಡ್ಡ ಕುಟುಂಬದ ಜಾನಬಚಾವದ ಕೆಲಸವೇ ಮುಷ್ಕಿಲ್ ಆಗಿತ್ತು (ಬೀಚಶ. I, ೦೩೨) ; ಸವಕಳಿಯನ್ನು ಸಹಜಾಸಹಜೀ ಬಿಡುವದು ಮುಷ್ಕಿಲ್ (ಬೀಚಶ. II, ೩೨೮). **ಮುಷ್ಕೀಲು** : ನಮ್ಮ ಸೀಮೆಗೆ ಒಂದು ತೃಣ ಬಾರದಂತೆ ಪಥಮಾರ್ಗವೆಲ್ಲಾ ಈ ಏಳು ಎಂಟು ತಿಂಗಳಿಂದ ಬಂದು ಮಾಡಿ, ಬಹಳ ಮುಷ್ಕೀಲು ಮಾಡಿದ್ದಾರೆ (ರಾಜೇಂದ್ರ. ೦೪೭).

[← ಅರ. ಮುಶ್ಕಿಲ್; ಹಿಂ. ಮುಶ್ಕಿಲ್, ಮುಷ್ಕಿಲ್; ಮರಾ. ಮುಶಕೀಲ್, ಮುಶ್ಕೀಲ್, ಮುಸಕೀಲ್]

**ಮುಷ್ಕೀಲು** 'ಮುಷ್ಕಿಲ್' ನೋ.

**ಮುಷ್ಟ₁** (ಗು). ೧. ಕದ್ದ ; ಕಳವು ಮಾಡಿದ : ದೋಚಿದ. (ನಾ). ೨. ಕಳ್ಳತನ ; ಚೌರ್ಯ. [ಸಂ.]

**ಮುಷ್ಟ₂** ಮುಟ್ಟಸ, ಮುಟ್ಟಸು (ನಾ). ಮಂತ್ರ : ಮಾಟ : ಅಭಿಚಾರ. ನೆಲ ಸುಟ್ಟು ಬೆಲ್ಲ ಹಾಕಿದರೆ ಎಲ್ಲ ಮರೆತು ಹೋಗಿ ಸೇರಿದ ಮನೆಯನ್ನು ಬಿಡುವುದಿಲ್ಲವಂತೆ . . . ಅಂತೂ ನೆಲ ಸುಟ್ಟು ಬೆಲ್ಲದನ್ನ ಹಾಕಿ ಮಾಡಿದ 'ಮುಷ್ಟ' ಸುಳ್ಳಾಗಲಿಲ್ಲ (ಜೀರಶು. ೦೩೨); ಅವಳು ಹೊರಿಗೆ ಮಾಡಿಸುವುದು . . . ದನಕರುಗಳಿಗೆ ಕಾಯಿಲೆಯಾದರೆ ಮುಷ್ಟ ಮಾಡುವುದು . . . ಇತ್ಯಾದಿಗಳಲ್ಲಿ ತೊಡಗಿ ಜೀವನಯಾಪನೆ ಮಾಡುತ್ತಿದ್ದಳು (ಜೀರಶು. ೩೬೦). **ಮುಟ್ಟಸ** : ಬೇರು ಬಳ್ಳಿಗಳನ್ನು ತಂದು ಖಾಯಿಲೆಯಾದವರಿಗೆ ಮುಟ್ಟಸ ಮಾಡೋದು—ಏನಾದರೂ ಸಮಯ ಉಳಿದರೆ. ಜನಿವಾರ ಮಾಡ್ತ ಕೂರೋದು (ಹೊಸಕ್ಷ. ೨೯೯); ಹೀಗಾದರೂ ಇದು ಬದುಕಿಕೊಳ್ಳಲಿ ಎಂದು ಮುಟ್ಟಸಮಾಡಿ ಕತ್ತಿಗೆ ಹತ್ತು ಬಗೆಯ ತಾಯಿತ ಕಟ್ಟಿ (ಗ್ರಕ್ಕೆ. ೦೩೮). **ಮುಟ್ಟಸು** : ನಾಲ್ಕುದಿಕ್ಕಿಗೂ 'ಮುಟ್ಟಸು' ಮಾಡಿ ಕಟ್ಟಿದರಾಯಿತು. ಆಗ ಕದ್ದರೆ, ಕದ್ದವರು ರಕ್ತಕಾರಿ ಸಾಯುತ್ತಾರೆ (ಕುವೆಶೂ. ೦೩೮).

[< ಸಂ. ಮುಷ್ಟಿ ?]

**ಮುಷ್ಟಾಮುಷ್ಟಿ** (ನಾ). ಪರಸ್ಪರ ಮುಷ್ಟಿಗಳಿಂದ ಹೊಡೆದಾಡುವುದು ; ಗುದ್ದಾಟ : ಚೋಳಬುಲಿ ನಾಯಕರು ಒಟ್ಟೈಸಿ ಕೀಚಕನ ಮುರಿದರೆಯುಟ್ಟ ಪೊಪ್ಪರು ಪುರಕೆ ಮುಷ್ಟಾಮುಷ್ಟಿಯಲಿ ಗುರು ಭೀಷ್ಮ ರವಿಸುತರಷ್ಟ ಗಟ್ಟಿದರು (ಕುಮ್ಮಾ. ೬೦೩. ೨೫-೩); ಕೇಶಾಕೇಶಿ ಬಳಿಕ ದಂತಾದಂತಿ ಯೆಂದೆನಿಪ್ಪಾ ಬೆಡಗಿನಿಂದೆಸೆವ ಮುಷ್ಟಾಮುಷ್ಟಿಯಿಂ ಪೋರೆ ಪೊಡವಿ ಕಂಪಿಸೆ . . . ಆ ವೀರಭದ್ರಂ ಕೃತಕಘಣೆಗಳೇರ್ವರು ಘಾಪು ಕಾದಿದರಲಾ (ಅಜ್ಞಕ್ಕು. ೩-೬-೦೩). [ಸಂ.]

**ಮುಷ್ಟಿ₁** ಮುಷ್ಟೆ, ಮುಸುಟೆ (ನಾ). ೧. ಒಂದು ಬಗೆಯ ಮರ : "ಗಿರಿವೃಕ್ಷಃ — ಮುಷ್ಟಿ" (ಚಿತಾ. ೯೮). ೨. ಒಂದು ಬಗೆಯ (ಸೊಪ್ಪಿನ) ಗಿಡ : ಬಹುಮೂತ್ರವಾಗಿ ಇರುವಂಥವರುಗಳಿಗೆ ಕೊಡುವ ಪಥ್ಯವರ್ಗಂಗಳ ಕ್ರಮವು . . . ಮುಷ್ಟಿಯಸೊಪ್ಪು, ಮಜ್ಜಿಗೆ ೧ ಹೊನಗೊನ್ನೆ (ಅಶ್ವಶಿ. ೦೫೩). **ಮುಷ್ಟೆ** : ೨. "ದ್ಯುತಿಯೆನಲು ಮುಷ್ಟೆಯಕ್ಕು" (ಚುಂಗಶಾ. ೯೫-೯೮); "ಕಟುಕಾ _ ಮುಷ್ಟೆ, ಕಡಸಿಗ" (ಓಶ್ಚಿ. ೨೩). **ಮುಸುಟೆ** : ೨. "ಮುಸುಟೆ — ಋಕ್ಷಗಂಧೆ, ಭಗಲಾಂತಿ, ಅಮೇಗಿ, ವೃದ್ಧದಾರಕ, ಜಂಗ" (ನಾಶರಾ. ೯). [ದೇ.॥ ತಮಿ. ಮುಚುಟ್ಟೈ; ತೆಲು. ಮುಷ್ಟಿ, ಮುಸಿಂಡಿ, ಮುಸಿಡಿ, ಮುಸ್ಟಿ; ಹರ್ಜಿ. ಮೂಟಿ. / ಸಂ. ಮುಸಟೀ]

**ಮುಷ್ಟಿ₂** (ನಾ). ೧. ಬೆರಳುಗಳನ್ನು ಮಡಿಚಿದ ಮುಂಗೈ : ಮುಚ್ಚಿದ ಮುಂಗೈ; **ಮುಟ್ಟಿಗೆ** : "ಪಿ(ಹಿ)ಡಿಕೆಯ್ಸಿದ ಕೆಯ್ಯ ಕುಡಿತೆಯುಂ ಮುಷ್ಟಿ ಯೆಂಬುದು" (ಹಲಾಯು. ೬೮-೩೬೩) ; ಅಬ್ಬರಿಸಿ ಬಲುಮುಷ್ಟಿಗಳ ಸಭಕಬ್ಬಿ ಸುತ್ತ ಕಯ್ಯುಡ್ಡಾಕಿದರು ಸುರರುಬ್ಬರಿಯ ಸುಳಿಸಿದರು ಮುಷ್ಟಿಯ ಸೂಳು ಪಾಳಿಸಲಿ (ಕೂರಶಾ. ೯-೩-೯) ; ರ್ಘಗರ್ಘುಗಿಸೆ ಕೌಕ್ಷೇಯಕಂ ರಾಜಗೌರವಕೆ ಮುಷ್ಟಿಯುಲಿ, ಛಂದೋಗವಾಸದಿಂದೆ ಮನದಿಂದೆ ನಡೆದರ್ (ಜಕ್ಕಾಂಗ. ೯೯-೨೯೩೦). ೨. ಮಲ್ಲಯುದ್ಧದ ಒಂದು ವರಸೆ ; ಮುಷ್ಟಿಯಿಂದ ಹೊಡೆಯುವಿಕೆ : ಗುದ್ದುವಿಕೆ : ಪಲತೆಜದ ಜೊಯ್ಲು ರಂಜಿಸೆ ಪಲತೆಜ ದೋಜೆಗಳ ಕತಿಯೊಳಾಸಸಗತಿಯೊಳು ಪಲತೆಜದ ಮುಷ್ಟಿಯೊಳು ನಿಮ್ಮಗಳ ಮನೆ ತಿಳಿಪಲ್ಕೆ ಬಿಟ್ಟದೇವಂ ಬಲ್ಲಂ (ಎಕ. XII, ತಿಪ್ಪಾ. ೦೬-೨೯; 1215 ?): ಪೊದಜುಗಿಡಿಗಳ ಕೇಸರಿಯ ಹಾರದಲಿ ಪರಿತಂದಹಿತ ವಳಪತಿಯೆದೆಯ ನೊಡೆದುದು ನೆಲಕೆ ಸಟ್ಟಿದುದು ನಾಲ್ಕು ಮುಷ್ಟಿಯಲಿ (ಕುಮ್ಮಾಕ. ೩-೬೭). ೩. ಮುಚ್ಚಿದ ಕೈಯಲ್ಲಿ ಹಿಡಿಯುವಷ್ಟು ಪ್ರಮಾಣ : ಹಿಡಿಯಲ್ಲಿ ಅಡಗುವಷ್ಟು ಪ್ರಮಾಣ : ಆ ಮದ್ದಿಯನ್ನು ನೀನು ಹೇಗೆ ತಿನ್ನುತ್ತೀ ? ನಿನಗೆ ಬಲವಾದ ಅನ್ನ ಇದ್ದರೆ ಒಂದು ಮುಷ್ಟಿಯಾದರೂ ಹಿಡಿಯುತ್ತದೆ (ಮರಶು. ೨೨). ೪. ಕತ್ತಿ ಮೊದಲಾದ ಆಯುಧಗಳ ಹಿಡಿ.- ಹಿಡಿಕೆ : "ತ್ಸರುಃ, ಮುಷ್ಟಿಃ — ಈ ೨ ಪಿ(ಹಿ)ಡಿ" (ಹಲಾಯು. ೬೮-೩೨೯). ೫. ಕೈಯಿಂದ ಹಿಡಿಯಲು ಅನುಕೂಲವಾದ ಮಧ್ಯಭಾಗ.— ನಡುವಣ ಭಾಗ : "ಬಿಲ್ಲ ಹೆದೆ ಜೀವೆ ಸಿಂಜಿನಿ ಮೌರ್ವಿ ಜ್ಯಾಗುಣಮೆನಿಕ್ಕು ನಡು ಮುಷ್ಟಿಯಕ್ಕುಂ" (ಮುಂಗಶಾ. ೬೬-೩೩). ೬. ಉದ್ದವನ್ನು ಅಳೆಯುವ ಒಂದು ಅಳತೆ : ಅಂಗುಲವ ನಾಲ್ಕ ಕೂಡಲು ಮುಷ್ಟಿ [ಷ್ಟಿ] ಯಾರದುದೆ ಹಸ್ತ ಚತುರಕೆ ದಂಡು (ಚಾಸ್ಕರ. ೩೨-೦೦). ೭. ಭಿಕ್ಷೆ : ಮುಷ್ಟಿಯುಂ ಬೇಡಿ ತಂದಾ ದ್ರವ್ಯದೊಳಗೆ ತನ್ನಿಷ್ಟಗುರುವಿಂಗೆ ನಿರ್ಭರಭಕ್ತಿಯಿಂದ ಸಂತುಷ್ಟಿ ಯಪ್ಪಂದದಿಂ ನಿತ್ಯದಾನಂ ಮಾಡಿ (ಸಮ್ಯಕೌ. ೬-೩); ಮೃಡಭಕ್ತ ದ್ವಿಜವೇಷ ಮನುಡುಗದೆ ಕೈಕೊಂಡು ಬಂದು ಮುಂದೆ ನಿಲುತ್ತುಂ ಮಡದಿತಲೆರನ್ನೆ ಮುಷ್ಟಿಯನೊಡನಿತ್ತೊಡೆ ಸುಂದರೇಶನೋವಂಸಿನ್ನಂ (ಹಾಲಾಸ್ಯ. ೨-೬-೯೦). ೮. ಕದಿಯುವುದು. ೯. ವೃಷಣ ; ಅಂಡ : "ಮುಷ್ಕಂ . . . ಸಂಗ್ರಾಹಃ, ಮುಷ್ಟಿಃ — ಈ ೬ ಅಂಡಂ" (ಹಲಾಯು. ೬೩-೩೬೯); ಸಂಗ್ರಾಹಂ ಮುಷ್ಟಿ ಮುಷ್ಕಂ ವೃಷಣಮೆಂದೆನಲು ಲಿಂಗದೆಡೆಯಂಡಮಕ್ಕು" (ಚುಂಗಶಾ. ೯೬-೦೯). ೧೦. ಅಸ್ತ್ರಪ್ರಯೋಗವನ್ನು ಮಾಡುವ ಮಂತ್ರ : ತನಗೆ ದೇವೇಂದ್ರನಿತ್ತ ಐಂದ್ರಮೆಂಬ ದಿವ್ಯಾಸ್ತ್ರಮುಮಂ ನೈಷ್ಠಿಕಮೆಂಬ ಮುಷ್ಟಿಯುಮಂ ಕೆಯ್ಕೊಂಡು (ಹಂಪಶಾ. ೬-೩೬ ಪ) ; ಅವಸಾಗ್ರಪಾಶುಪತ ಬಾಣದಿನಲ್ಲದೆ ಸಾಯನಂತವಂ ಹರನೊಸೆದಿತ್ತುಮೇನದಜ ಮುಷ್ಟಿಯ ನೀಯನೆ . . . ಎಂದು ಚಕ್ರಿ ಶಿವನಲ್ಲಿಗೆ ಕೊಂಡೊಗೆದಂ ಕಿರೀಟಿಯಂ (ಹಂಪಶಾ. ೮೦-೦೩೦) ; "ಅದೃಷ್ಟ ಮುಷ್ಟಿಯಂ = ಅದರ ಮಂತ್ರವನ್ನೂ (?)" (ಹಂಪರ. ೯೨೯); "ಮುಷ್ಟಿ—ಮಂತ್ರ, ಪ್ರಯೋಗ ಕ್ರಮ" (ಹಂಪಶಾ. ೯೩೯೮). ೧೧. [ನಾಟ್ಯ] ಇಪ್ಪತ್ತು ನಾಲ್ಕು ಅಸಂಯಯುತಹಸ್ತಗಳಲ್ಲಿ ಒಂದು : ನಾಲ್ಕುಬೆರಳುಗಳನ್ನು ಮಡಿಚಿ ಹೆಬ್ಬೆರಳನ್ನು ಅವುಗಳ ಮೇಲೆ ಇಟ್ಟು ತೋರುವ ಒಂದು ಬಗೆಯ ಹಸ್ತವಿನ್ಯಾಸ :

ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ—೧. ಪತಾಕ, ೨. ತ್ರಿಪತಾಕ . . . ೭. ಮುಷ್ಟಿ (ಅಭಾಪ್ರ. ೪೭). 'ಮುಷ್ಟಿಕಸ್ವಸ್ತಿಕ' ಪರಾ. [ಸಂ.]

**ಮುಷ್ಟಿಕ** (ನಾ). ೧. ಅಕ್ಕಸಾಲಿಗ; ಚಿನಿವಾರ: "ನಾಡಿಂಧಮಃ, ಕಳಾದಃ, ಸುವರ್ಣಕಾರಃ, ಮುಷ್ಟಿಕಃ — ಈ ೪ ಅಕ್ಕಸಾಲೆ" (ಕಣಾಯು. ೯೭–೪೩೪); "ನಾಳಿಂಧಮಂ ಕಳಾದಂ ಮುಷ್ಟಿಕನದಕ್ಕಸಾಲೆಯೆನಿಸಿಕ್ಕು" (ಮಂಗರಾ. ೦೦೦–೦). ೨. ಮುಷ್ಟಿಯಿಂದ ಮಾಡುವ ಯುದ್ಧ; ಗುದ್ದಾಟ; ಮುಷ್ಟಾಮುಷ್ಟಿ. ೩. = ಮುಷ್ಟಿ ೧೧: 'ಮುಷ್ಟಿಕಸ್ವಸ್ತಿಕ' ಪರಾ. ೪. ಕಂಸನ ಆಸ್ಥಾನದಲ್ಲಿ ಇದ್ದು, ಕೃಷ್ಣ ಬಲರಾಮರೊಡನೆ ಸೆಣಸಿ ಹತನಾದ ಒಬ್ಬ ಜಟ್ಟಿ. [ಸಂ.]

**ಮುಷ್ಟಿಕಸ್ವಸ್ತಿಕ** (ನಾ). [ನಾಟ್ಯ] ಮೂವತ್ತು ಬಗೆಯ ನೃತ್ತಹಸ್ತಗಳಲ್ಲಿ ಒಂದು: P "ಒಂದು ಕೈಯನ್ನು ಅರಾಲಹಸ್ತದಲ್ಲಿ ಆವೇಷ್ಟಿತಹಸ್ತಕರಣದಿಂದಲೂ ಮತ್ತೊಂದು ಕೈಯನ್ನು ಅಲಪಲ್ಲವಹಸ್ತದಿಂದಲೂ ಅನೇಕಾವರ್ತಿ ಸುತ್ತಿಸಿ ಎರಡು ಕೈಗಳಿಂದಲೂ ಕಟಕಾಮುಖಹಸ್ತವನ್ನು ಮಾಡಿ ಒಂದನ್ನೊಂದು ಮುಟ್ಟುವಂತೆ ಕೈಗಳನ್ನು ಸ್ವಸ್ತಿಕಾಕಾರದಲ್ಲಿ ಹಿಡಿಯುವುದು" (ಲಾಸ್ಕರಂ. ಗದ್ಯಾನುವಾದ. ೨೩೪): ಚತುರಸ್ರ . . . ಮುಷ್ಟಿಕಸ್ವಸ್ತಿಕ . . . ವಲಿತ, ಲಲಿತ — ಈ ಮೂವತ್ತು ನೃತ್ತಹಸ್ತಂಗಳ್ (ಲಾಸ್ಕರಂ. ೨–೪೪ ವ). [ಸಂ.]

**ಮುಷ್ಟಿಕೀಲು** (ನಾ). ಮುಂಗೈಯ ಕೀಲು ಹಿಡಿದುಕೊಳ್ಳುವ ಒಂದು ಬಗೆಯ ರೋಗ: ೨೬ ತೇರಣದ ಬೀಜವಂ ಮೊಸರ ನೀರಿಂದ ತೇದು ತಣಿಗೆಗೆ ಮೆತ್ತಿ ಬಿಸಿಲಲ್ಲಿ ಇರಿಸಲು ತೈಲಂ ಬರುವುದು. ಆ ತೈಲವಂ ಪೂಸಿಕೊಂಡರೆ ಮುಷ್ಟಿಕೀಲು ಕಳೆವುದು (ಲಿವೈ. ೩. ೩೩).

[ಮುಷ್ಟಿ₂ + ಕೀಲು ( < ಕೀಲ್ )]

**ಮುಷ್ಟಿಕೆ** (ನಾ). ಮುಷ್ಟಿ; ಹಿಡಿ: "ಮುಷ್ಟಿಕಾ — ಮುಟ್ಟಿಗೆ" (ಕಮಿರ. ೨೩೩ ತ್ರಪೋ). [ಸಂ. ಮುಷ್ಟಿಕಾ]

**ಮುಷ್ಟಿಗೆ** 'ಮುಟ್ಟಿಗೆ₃' ನೋ.

**ಮುಷ್ಟಿಗೆಯ್** (ಕ್ರಿ). ೧. ಕೈಯ ಬೆರಳುಗಳನ್ನು ಮಡಿಸಿ ಹಿಡಿಯಾಗಿ ಮಾಡು; ಮುಷ್ಟಿಹಿಡಿ: ಕಯ್ಯ ಮುಷ್ಟಿಗೆಯ್ದು ಅಳೆಯೆ [ಪಾಠಾಂ. ಕೈಯಂ ಮುಷ್ಟಿಗೈದಳೆಯೆ] ರತ್ನಿಯಕ್ಕುಂ (ಮಂಗರಾ. ೯೩–೯). ೨. ಹಿಡಿಗೆ ಒಳಪಡುವಂತೆ ಮಾಡು: ಮುಷ್ಟಿಗೆಯ್ದು ಮಯೂರಪಿಂಛಸಮೂಹಮಂ ನೆಗೆವುತ್ತೆ ತಾವಷ್ಟು ಮಂತ್ರಿಸಿ ಬೀಸಲಾತನ ತಾಪಮಾಜದೆ ಪೆರ್ಚಿರಲ್ (ಜಾಲಾಸ್ಯ. ೪–೦೪–೨೭). [ಮುಷ್ಟಿ₂ + ಕೆಯ್₁]

**ಮುಷ್ಟಿಗ್ರಾಹ್ಯ** (ಗು). ೧. ಹಿಡಿಯಲ್ಲಿ ಹಿಡಿಯಬಹುದಾದ; ಮುಷ್ಟಿಯಲ್ಲಿ ಅಡಗುವ: ಮಧುಮಾಸಕುಸುಮಸಮೃದ್ಧಿಯಂತೆ ವಿಜಾತಿಯುಂ ಮದನಚಾಪಲತೆಯಂತೆ ಮುಷ್ಟಿಗ್ರಾಹ್ಯಮಧ್ಯೆಯುಂ . . . ಎನಿಸಿದೀಜುಂ ಜವ್ವನೆಯ ರೂಪಾತಿಶಯಮಂ ನೆಮೆಯಿಕ್ಕದೆ ನೋಡುತ್ತುಂ (ಶಾರಂಕು. ೪೯). (ನಾ). ೨. ಹಿಡಿಯಲ್ಲಿ ಅಡಗುವಂಥದು; ಮುಷ್ಟಿಯಲ್ಲಿ ಗ್ರಹಿಸಬಹುದಾದುದು: ಹಿಡಿಯೆನಿಪ್ಪ ನುಡಿ ಮುಷ್ಟಿಗ್ರಾಹ್ಯದ ಪೆಸರುಂ ಕಣ್ಣಿಯ ಪೆಸರಿದನಜಾ (ತಕುಪ. ೦೪); ಈ ಎಲ್ಲ ವೈವಿಧ್ಯಮಯವಾದ ರೂಪಗಳೆಲ್ಲವೂ ದೃಷ್ಟಿಗ್ರಾಹ್ಯವೇ ಹೊರತು ಮುಷ್ಟಿಗ್ರಾಹ್ಯವಲ್ಲ (ಸೌಂದರ್ಯ. ೪೯). [ಸಂ.]

**ಮುಷ್ಟಿಘಾತ** (ನಾ). ಮುಷ್ಟಿಯಿಂದ ಹೊಡೆಯುವಿಕೆ: ಗುದ್ದುವಿಕೆ. [ಸಂ.]

**ಮುಷ್ಟಿಘಾತ** (ನಾ). ಮುಷ್ಟಿಯಿಂದ ಹೊಡೆಯುವುದು; ಗುದ್ದುವುದು: ಮಲ್ಲಯುದ್ಧದ ದೋಷಗಳಲ್ಲಿ ಒಂದು: ಕಳಂಬೊಕ್ಕು ನಿರಿಸುಗೆಯ್ದು ನಖಹತಿ ದಶನಹತಿ ಪದಪಾತಂ ಮುಷ್ಟಿಪಾತಮೆಂಬ ದೋಷಂಗಳಿಂ ಪೊರ್ದದ ನಾಲ್ಕುಂ ಸ್ಥಾನದೊಳಂ . . . ಪಲತೆಜದ ಪಾತಂಗಳೊಳಂ ನೆಜೆದು (ಚಂದ್ರಪ್ರ. ೩–೭೭ ವ). [ಸಂ.]

**ಮುಷ್ಟಿಪ್ರಶ್ನೆ** (ನಾ). ಹಿಡಿಯಲ್ಲಿ ಅಡಗಿಸಿರುವುದನ್ನು ಬೇರೊಬ್ಬರು ಕಂಡುಹಿಡಿಯುವ ಸಮಸ್ಯೆ: ಕನಕದಾಸರ . . . ಬಾಳೆಯ ಹಣ್ಣಿನ ಕಥೆಯನ್ನು ಪವಾಡವೆಂದು ಹೇಳಲಿಕ್ಕೆ ಬಾರದಿದ್ದರೂ ಎರಡನೆಯ 'ಮುಷ್ಟಿಪ್ರಶ್ನೆ'ಯಂತೂ ಹೇಳಿ ಕೇಳಿ ಪವಾಡ (ಕನಕಕ. ೬೯).

[ಸಂ. ಮುಷ್ಟಿಪ್ರಶ್ನಾ]

**ಮುಷ್ಟಿಪ್ರಹಾರ** (ನಾ). ಮುಷ್ಟಿಯಿಂದ ಕೊಡುವ ಪೆಟ್ಟು,—ಹೊಡೆತ: ಗುದ್ದು: ಇನ್ನು ಕೈದುಗಳೇಕೆ ವೃಥ ಮುಷ್ಟಿಪ್ರಹಾರ ಪ್ರಕಟಸತ್ವರಿಗೆ (ಕುಮಾವ್ಯ. ೦೯–೩೪). [ಸಂ.]

**ಮುಷ್ಟಿಬಂಧ** (ನಾ). ೧. ಮುಷ್ಟಿಯನ್ನು ಬಿಗಿಮಾಡಿ ಹಿಡಿದುಕೊಳ್ಳುವಿಕೆ: "ಮುಷ್ಟಿಬಂಧಃ, ಸಂಗ್ರಾಹಃ — ೨ ಗಟ್ಟಿಯಾಗಿ ಹಿಡಿಯನ್ನು ಹಿಡಕೊಳ್ಳುವದಕ್ಕೆ ಹೆಸರು" (ಸಿದ್ಧಾಂತಿ. ೩೩೯). ೨. ಒಂದು ಹಿಡಿಯಲ್ಲಿ ಅಡಗುವಷ್ಟು ಪ್ರಮಾಣ. [ಸಂ.]

**ಮುಷ್ಟಿಬಲ** (ನಾ). ಮುಂಗೈಯ ಬಲ, —ಸಾಮರ್ಥ್ಯ: ದಾನವರು ದಕ್ಕಡರು ಧೈರ್ಯೋದ್ದಾನಶೀಲರು ಘಾಯವನು ಗಿರಿಯಾನಬಾರದು ಮುಷ್ಟಿಬಲವೆಗ್ಗಳರು ಸತ್ವದಲಿ (ಕುಮಾವ್ಯದ್ರೋ. ೦೩–೩೩). [ಸಂ.]

**ಮುಷ್ಟಿಮೈಥುನ** (ನಾ). [ಕಾಮಶಾ] "ಹಸ್ತದಿಂದ ಕೃತಕವಾಗಿ ಮಾಡುವ ರತಿಕೇಳಿ" (ಸಿಂಕೋ. ೪೩೩). [ಸಂ.]

**ಮುಷ್ಟಿಯುದ್ಧ** (ನಾ). ಪರಸ್ಪರ ಮುಷ್ಟಿಗಳಿಂದ ಹೊಡೆದಾಡುವುದು; ಮುಷ್ಟಾಮುಷ್ಟಿ: ಮಾಣ್ಗೆ ಶಸ್ತ್ರನಿಶಾತಾಸ್ತ್ರನಿಕಾಯದಿಂ ನೆಗಳ್ದ ಯುದ್ಧಂ ಮುಷ್ಟಿಯುದ್ಧಕ್ಕೆ ನಿಂದನುವಾಗು (ಕಬಿಶಂ. ೪–೩೩); ಸುಖಾರುವು ಮುಷ್ಟಿಯುದ್ಧದಲ್ಲಿ ಗಟ್ಟಿಗನಾಗಿದ್ದನು (ಮಹಸ. ೩೮). [ಸಂ.]

**ಮುಷ್ಟಿಶೂಲೆ** (ನಾ). ವೃಷಣಕ್ಕೆ ಸಂಬಂಧಿಸಿದ ನೋವು: ಮುಷ್ಟಿಶೂಲೆಗೆ:—ಬೆಲ್ಲ ಗಣಿಕೆಸೊಪ್ಪು ಅರೆದು ಆ ರೋಗಿಯ ಮೂತ್ರದಲ್ಲಿ ಕಲಸಿ ಬಿಸಿ ಮಾಡಿ ಇಕ್ಕಿ ಕಚ್ಚೆಯಲ್ಲಿ ಕಟ್ಟಲು . . . ತನ್ನ ಸ್ಥಾನಕ್ಕೆ ಬರುವುದು (ಲಿವೈ. ೦೪೭). [ಸಂ. ಮುಷ್ಟಿಶೂಲಾ]

**ಮುಷ್ಟೆ** 'ಮುಷ್ಟಿ₁' ನೋ.

**ಮುಸಂಡಿ** 'ಮುಸುಂಡಿ₁' ನೋ.

**ಮುಸಂಬಿ** 'ಮೂಸಂಬಿ' ನೋ

**ಮುಸಡಿ** 'ಮುಸುಂಡು' ನೋ.

**ಮುಸದ್ದಿ** 'ಮುತ್ಸದ್ದಿ' ನೋ.

**ಮುಸರೆ** 'ಮುಸುಜೆ₃' ನೋ.

**ಮುಸಲ₁**, ಮುಸಳ (ನಾ). ೧. ಬತ್ತ ಮೊದಲಾದುವುಗಳನ್ನು ಕುಟ್ಟಲು ಉಪಯೋಗಿಸುವ ಮರದ ಒಂದು ಸಲಕರಣೆ; ಒನಕೆ: "ಒನಕೆ ಮುಸಲಮೆನಿಕ್ಕು" (ಮಂಗರಾ. ೬೨–೨೨); ಮದದಂತಿದಂತಮುಸಲಪ್ರವಿಭಗ್ನಮಹಾಮಹೀರುಹಾಸ್ಪದಂ (ಪಂಪಭಾ. ೩–೦೦): ತೆಗೆದು ಸೀಳ್ವಡೆಯೊಳದಟ ಪೊಡೆಯೊಳಾ ಮುಸಲಾಂಶಮಂ ಮಾಂತೆ ಕಂಡು (ಪದ್ಮರಾ. ೦೦–೦೪೮); ಉಲೂಖಲದ ಸೋಮವಲ್ಲಿಯ ಮುಸಲದ . . . ಬಹುಸಾಧನಂಗಳಿಂ . . . ಮಖಶಾಲೆ ಕಣ್ಗೆಸೆದುದು (ಜೈಮಿಭಾ. ೩೩–೩೪); ೨. ಒನಕೆಯಾಕಾರದ ಒಂದು ಬಗೆಯ ಆಯುಧ: ಅಸಿ ಮುಸಲ ಕಣಾಯ ಕಂಪನ ಮುಸುಂಡಿ ಬಿಂಡಿವಾಳ . . . ಅಂಕುಶಾದಿ ಶಸ್ತ್ರಾಸ್ತ್ರಂಗೊಳೊಳೆಚ್ಚು (ಶಂಕಾಪುರಾ. ೦೩–೭೭ ವ); ಮುಸಲ ಗದಾ ತೋಮರ ಶಂಕು ಶಕ್ತಿ ಚಕ್ರಚ್ಛುರಿಕಾದ್ಯಾಯುಧದೊಳಧಿಗತಶ್ರಮನಾದಂ (ಕುಸುಪು. ೪–೬೧); ಮುದ್ಗರ ಮುಸಲ ತೋಮರ ಪೇಟಕಾದಿ ಸಮಸ್ತಶಸ್ತ್ರದ ಘಾಟದತಿಬಲಖಳರು ಕೂಡಿತು ಕೋಟಿಸಂಖೆಯಲಿ (ಕೃಷ್ಣರಾ. ೩–೩. ೦೩). ೩. ಗದೆ:

ಕಂಧರದ ಮುಸಲದ ವಿಮಳನೀಲಾಂಬರದ ರಾಮನ ಸುಳಿವ ಕಂಡರು ಕೃಷ್ಣಪಾಂಡವರು(ಕುವ್ಯಾ.ಗ. ೩-೩೬). ೪. ಗಂಟೆಯ ನಾಲಗೆ. ೫. ಒಂದು ಬಗೆಯ ಶಸ್ತ್ರಚಿಕಿತ್ಸೆಯ ಸಲಕರಣೆ. ೬. [ಜ್ಯೋತಿ] ನಕ್ಷತ್ರಪುಂಜ. ೭. "ಆಶ್ರಯಯೋಗಗಳಲ್ಲಿ ಒಂದು ; ಸ್ಥಿರರಾಶಿಗಳಲ್ಲಿ ಎಲ್ಲಾಗ್ರಹಗಳೂ ಇರುವುದು" (ಜಾತಕ. ಪರಿ. ೩, ೩೮೩) : ಚರರಾಶಿಯೊಳೇಱು ಗ್ರಹವಿರೆ ಯೋಗಂ ರಜ್ಜುವೆನಿಸುಗುಂ ಸ್ಥಿರಭೊಳ್ ಕೂಡಿರೆ ತಾನದು ಮುಸಲಂ (ಜಾತಕ. ೦೩-೦). ಮುಸಳ : ೧. "ಮುಸಳಮಯೋಗ್ರಂ" (ವಸ್ತುಕೋ. ೫೦-೩೨): ಮದಗಜದಂತಕಾಂತ ಮುಸಳಂಬಡಿದೆತ್ತುವ ತೋಳ ನುಣ್ಪುಗರ್ ಮದನನ ಬಾಳ ನುಣ್ಪುಗರನೇಱಿಸೆ (ಕೃಷ್ಣಕೃ. ೩-೯೨). [ಸಂ.]

**ಮುಸಲ₂** (ನಾ). ಇಸ್ಲಾಂ ಮತದವನು ; ಮಹಮ್ಮದೀಯ : ಆ ಮುಸಲರವ ಇಂದುಮತಿನ್ನ ಲಗ್ನಾದನಂತ ನೋಡ್ರಿ (ಅಕನಾ. ೨೦೩): ಮಂತ್ರೋಚ್ಚಾರದಿ ಮಂತ್ರಾಕ್ಷತೆಯನು ಬೀರಿದ ಕೂಡಲೆ ಮುಸಲರು ಚಿತೆಯನು ಸೇರುವರಯ್ಯಾ ಸೇರುವರು (ಕೂಗಿಲೆ. ೨೧-೬೫) : ಮಾತು ಅರಿಯದ ಮುಸಲಿ ಹಾಸುವ ಕವುದಿ ಒಯ್ಪ್ದ (ನಾದ). [< ಮುಸಲ್ಮಾನ]

**ಮುಸಲಘಾತ** (ನಾ). ಒನಕೆಯಿಂದ ಬೀಳುವ ಪೆಟ್ಟು.—ಹೊಡೆತ. [ಸಂ.]

**ಮುಸಲಧರ** (ನಾ). ಗದೆಯನ್ನು ಧರಿಸಿದವನು ; ಬಲರಾಮ : ಆ ನಿಖಿಳಪರಿವಾರದನುಸಂಧಾನ ವೃಷ್ಣಿಗಳತ್ತ ತಿರುಗಿದವೇನನೆಂಬೆನು ಮುಸಲಧರನಾಗಮನಸಂಗತಿಯ (ಕುವ್ಯಾ.ಗ. ೩-೩೭). [ಸಂ.]

**ಮುಸಲಧಾರೆ** (ನಾ). ಒನಕೆಯಷ್ಟು ದಪ್ಪವಾಗಿ ಸುರಿಯುವ ಮಳೆ : ಭಾವಗಳು ಮುಸಲಧಾರೆಯಾಗಿ ಸುರಿದು . . . ಓಡುವುದಕ್ಕೆ ಮೊದಲುಮಾಡಿದುವು (ಬಂಕಿಮ. ೧೯೫) ; ಮುಸಲಧಾರೆಯಾದ ಮಳೆ, ಪರಿಚಯವಿಲ್ಲದ ಸ್ಥಳ, ಅವಳು ಎಲ್ಲಿಗೆ ತಾನೇ ಹೋದಾಳು ? (ಅಜಾತ. ೬೯೧): ಇಷ್ಟರಲ್ಲಿಯೋ ಮುಸಲಧಾರೆಯಿಂದ ಮಳೆಯು ಸುರಿಯ ಬಹುದೆಂದು ನನ್ನ ನಂಬುಗೆಯು (ಓಬಾಕ. ೨೦೦). [ಸಂ. ಮುಸಲಧಾರಾ]

**ಮುಸಲಪಾಣಿ** (ನಾ). ೧. ಗದೆಯನ್ನು ಹಿಡಿದಿರುವವನು. ೨. ಬಲರಾಮ : ಕೌರವೇಂದ್ರನಂ ಮುಸಲಪಾಣಿ ಮನದೊಳ್ ಪೊಗಳ್ದಂ (ಗದಾಯು. ೭-೬೦). [ಸಂ.]

**ಮುಸಲಮಾನ್** ' ಮುಸಲ್ಮಾನ ' ನೋ.

**ಮುಸಲಮಾನ** ' ಮುಸಲ್ಮಾನ ' ನೋ.

**ಮುಸಲಸ್ನಾನ** (ನಾ). ಒನಕೆಯನ್ನು ನೀರಿನಲ್ಲಿ ಅದ್ದಿ ತೆಗೆಯುವಷ್ಟು ಕ್ಷಿಪ್ರಕಾಲದಲ್ಲಿ, ದೇಹವನ್ನು ನೀರಿನಲ್ಲಿ ಮುಳುಗಿಸಿ ಮೇಲೇಳುವಿಕೆ; ತೀರ್ಥಕ್ಷೇತ್ರಗಳಲ್ಲಿ ಮಾಡುವ ಕ್ಷಿಪ್ರಕಾಲದ ಸ್ನಾನ : ಈ ತೀರ್ಥದಲ್ಲಿ ಒನಕೆ ಮುಳುಗಿದಂತೆ ಸುಮ್ಮನೆ ಮುಳುಗುವ ಮುಸಲಸ್ನಾನವೂ ಸಮಸ್ತ ಪಾಪಗಳನ್ನು ಪರಿಹರಿಸುವದೋ ಆದರಿಂದ ಹೇಳಲ್ಪಟ್ಟಿತು (ಅರ್ಕಮಾ. ೨೦). [ಸಂ.]

**ಮುಸಲಹತಿ** (ನಾ). ಒನಕೆಯ ಪೆಟ್ಟು.—ಹೊಡೆತ : ಪುರಜನಂಗಳ ಮುಸಲಹತಿ [ಪಾಠಾಂ. ಪುರಜನದ ಮುಸಲಾಪಹತಿ]ಯಲಿ ಮುಱಿದು ಬಂದುದು ಕೌರವೇಂದ್ರನ ದಳ ವಿಘಾತಿಯಲಿ (ಕುವ್ಯಾ.ಅ. ೭-೩೫). [ಸಂ.]

**ಮುಸಲಾಯುಧ** (ನಾ). ೧. ಮುಸಲವೆಂಬ ಆಯುಧ. ೨. ಗದೆ. ೩. ಗದೆಯನ್ನು ಹಿಡಿದವನು ; ಬಲರಾಮ : ಹಲ ಮುಸಲಾಯುಧಂ ನಡೆವ ತಾರಣಗೇಂದ್ರಮನೊಂದು ಕಮರ್ಗಿಲ್ ಬಳಸಿದವೊಲ್ ವಿರಾಜಿಸೆ ವಿನಿಲಪಟಂ (ಶಂಠಾವಾ. ೩-೭೬). ೪. ಒಬ್ಬ ರಾಕ್ಷಸನ ಹೆಸರು : ಬಕಾಸುರ ಜಟಾಸುರರ ಮಕ್ಕಳ್ ಚತುಸ್ತ್ರಿಂಶತ್ಸಹಸ್ರನಕ್ತಂಚರಪರಿವೃತ ಮಳಂಭೂಷ ಮುಸಲಾಯುಧ ಕಾಳನೀಳ ವಿದ್ಯುನ್ಮಾಲ್ಯಾದಿಗಳುಂ ಬಂದು ಕೂಡೆ (ಶಂಶಭಾ. ೧೦-೨೭ ವ). [ಸಂ.]

**ಮುಸಲಿ₁** (ನಾ). ೧. ಗದೆಯನ್ನು ಧರಿಸಿರುವವನು. ೨. ಬಲರಾಮ: "ನೀಲಾಂಬರಂ. . . ಮುಸಲಿ ಹಲಿ ರೌಹಿಣೇಯಂ ತಾಳಧ್ವಜಂ ರಾಮನೆನಲು ಬಲನಕ್ಕು" (ಮಂಗರಾ. ೭-೨೦): ದಾನವಮದವಿದಳಿತ ಮುಸಲಿಯ ಮಾತಿಗಾನಂದವಡೆದು (ಮೋಹತ. ೦೫-೧೯). [ಸಂ. ಮುಸಲಿನ್]

**ಮುಸಲಿ₂** (ನಾ). ೧. ಹಲ್ಲಿ ; ಗೌಳಿ : "ಮುಸಲಿ ಗೃಹಗೋಧಿಕಂ ಗೃಹಪಿಕಂ ಹಲ್ಲಿಯಾದು" (ಮಂಗರಾ. ೯೯-೦೯). ೨. ಹಲ್ಲಿಯ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ: ಮೊಸಳೆ. ೩. ಹಲ್ಲಿಯ ಜಾತಿಗೆ ಸೇರಿದ ಒಂದು ಪ್ರಾಣಿ; ಓತಿಕೇತ: "ಸರಟಃ, ಕೃಕಲಾಸಃ—೨ ತೊಂಡೇ ಹೆಸರು, ಹೆಂಟೇಗೊದ್ದ. . . ಹಾವುರಾಣಿಗೂ ಇದೇ ಹೆಸರು" (ಸಿದ್ಧಾಂತಿ. ೦೫೭). ೪. ಒಂದು ಬಗೆಯ ಸಸ್ಯ ; ನೆಲತಾಳೆ : "ಮುಸಲೀ, ತಾಲಮೂಲಿಕಾ—೨ ನೆಲತಾಟ ಹೆಸರು. ನೆಲತಾಳೇಗೆಡ್ಡೆಯನ್ನು ಪರು" (ಸಿದ್ಧಾಂತಿ. ೧೩೯). ೫. ನಪುಂಸಕಸತ್ತ್ವದ ಕುದುರೆ : ಒಂದು ಪಾದ ಮಾತ್ರವೆ ರುಘ್ರವಾಗಿ ಪುಷ್ಟಿಹೀನವಾದ ಅಶ್ವವು ಮುಸಲೀಯೆನಿಸಿ ಕೊಳ್ಳುವದು (ಅಶ್ವಗಂ. ೩೦೨-೭). [ಸಂ. ಮುಸಲೀ]

**ಮುಸಲಿಕೆ**. ಮುಸಳಿಕೆ (ನಾ) ೧. ಹಲ್ಲಿ: ಗೌಳಿ. ೨. ಹಲ್ಲಿಯ ಜಾತಿಗೆ ಸೇರಿದ ಒಂದು ಪ್ರಾಣಿ : ಉಡ : "ಗೋಧಾ. ಮುಸಲಿಕಾ—ಈ ೨ ಉಡು" (ಹಲಾಯು. ೩೯-೮೧). **ಮುಸಳಿಕೆ** : ಮುಸು[ಸ]ಳಿಕಾದ್ಯಾಕ್ರ ಪರಿಸರ್ಪಂಗಳ ಉತ್ಕೃಷ್ಟಾಯುಃಸ್ಥಿತಿ ನವಪೂರ್ವಾಂಗಂ (ತತ್ತ್ವಸೂ. ೦೭೭). [ಸಂ. ಮುಸಲಿಕಾ]

**ಮುಸಲುಮಾನ** ' ಮುಸಲ್ಮಾನ ' ನೋ.

**ಮುಸಲ್ಮಾನ್** ' ಮುಸಲ್ಮಾನ ' ನೋ.

**ಮುಸಲ್ಮಾನ**, ಮುಸಲಮಾನ್, ಮುಸಲಮಾನ, ಮುಸಲುಮಾನ, ಮುಸಲ್ಮಾನ್, ಮುಸಿಲ್ಲಮಾನ, ಮುಸುಲಮಾನ, ಮುಸುಲುಮಾನ, ಮುಸುಲ್ಮಾನ (ನಾ). ಇಸ್ಲಾಂಧರ್ಮವನ್ನು ಅನುಸರಿಸುವವನು; ಮಹಮ್ಮದೀಯ : ತಾನೇ ಬಂದ ಮುಸಲ್ಮಾನರೆಂಬಭಿಮಾನದಿಂ (ಕದಂಶಿ. ೮೯); ಅರೇಬಿಯಾದಿಂದ ಶಕ್ತಿಯನ್ನು ರಕ್ಷಿಸಿಕೊಳ್ಳುತ್ತ ಹೊರಟ ಅಚ್ಚ ಮುಸಲ್ಮಾನರು ರೋಮಿನಲ್ಲಿರುವಾಗ ರೋಮನರಂತಿರು ಎಂದುಕೊಂಡು ಮುಂದುವರೆದಿರಬೇಕು (ಭಾರಧ. ೪೦೭). **ಮುಸಲಮಾನ್** : ಮುಸಲಮಾನ್ ನೃಪ ನಿಮ್ಮನ್ನು ಕೊಲ್ಲ ಹೇಳಿಯೆ (ಬಜ್ಜಲ. ೬-೦೩). **ಮುಸಲಮಾನ** : ಬಸವರಾಜನ ಭಾಗ್ಯವೆಲ್ಲವ ವಸುಧೆಯೊಳು ನಿಕ್ಷೇಪಿಸುತ ನೃಪ ಅಸುವ ಕಳೆಯಲು ಅಧಿಕಪಟ್ಟವು ಮುಸಲಮಾನರಿಗೆ (ಶರಂ. ೪೫೦-೦೪); ಮುಸಲಮಾನರು ಹಂದಿ ಭಕ್ಷಣೆ × × × (ಎಕ. IX, ತನ್ನಕ. ೦೭೫-೦೩ ; 1761) : ಆ ವಾರ್ತೆಯಂ ಮುಸಲಮಾನ ದೊರೆ ಕೇಳ್ದು (ಗುರುಶಾ. ೦೫-೫೯). **ಮುಸಲುಮಾನ** : ಮುಂದೆ ಮುಸಲುಮಾನರಾಗಲಿ (ಬೊಂಕಶಾ. ೦೯೩೬, ಲಕ್ಷ್ಮೀಶ್ವರ. ೪೭-೪ ; ?). **ಮುಸಲ್ಮಾನ್** : ಹಿಂದೂ ಮುಸಲ್ಮಾನ್ ಸಮಸ್ಯೆಗಳು. . . ಪ್ರಗತಿಗೆ ಕಂಟಕವಾಗಿ ಕುಳಿತಿವೆ (ಶಿಕ್ಷದ. ೨೫). **ಮುಸಿಲ್ಲಮಾನ** : ಯಾ ಧರ್ಮಂ ಅಳುಪಿದರೆ ಗೋಮಾಂಸಭಕ್ಷಣೆ ಮುಸಿಲ್ಲಮಾನರಿಗೆ ಹಂದಿಮಾಂಸಭಕ್ಷಣೆ (ಶಾಇಇ. XX, ೩೫೭-೨೨; 1576). **ಮುಸುಲಮಾನ** : ಮುಸುಲಮಾನ ತಪ್ಪಿದರೆ ಮಕ್ಕೆದಲ್ಲಿ ಮುಸಾಪ ಬಿಸಾಟ ಪಾತಕೆ ಹೋಹರೂ (ಇಅ. IX, ೯೯-೬; ?). **ಮುಸುಲುಮಾನ** : ಯಾ ಧ(ಂ)ರ್ಮವನು ಆ × × ಮುಸುಲುಮಾನರಾದರೆ ಅತಾ ಹೊಲೆಯ ಮಾದಿಗ ತುರುಕನಲ್ಲಾ (ಶಾಇಇ. XX, ೩೮೪-೬; 15ನೆಯ ಶತ): ಮುಸುಲುಮಾನರಲ್ಲಿ ಯಾರು ಅಡ್ಡಿ ಮಾಡಿದರು ಮಕ್ಕೆವಲ್ಲಿ ಹಂದಿಬಕ್ಷಣೆ ಮಾಡಿದ ದೋಷಕ್ಕೆಹೋಗಲುಳ್ಳವರು (ಎಕ.IX,ನೆಲಮಂ. ೮-೦೯;1763). **ಮುಸುಲ್ಮಾನ**: ಇತರ ದೇಶಗಳಲ್ಲಿ ಮುಸುಲ್ಮಾನ ಮೊದಲಾದವರ ಆಳ್ವಿಕೆಯಲ್ಲಿ ಈ ಧರ್ಮಕ್ಕೆ ಹೆಚ್ಚಿನ ಬಾಧೆಗಳು ಸಂಭವಿಸಿದರೂ ನಮ್ಮ ತುಳುನಾಡಿನಲ್ಲಿ ಅಂಥ ಅಪಾಯಗಳು ಸಂಭವಿಸಲಿಲ್ಲ (ತುಳುಶಾ. ೨೯೯).

[← ಪಾರ. ಮುಸಲಮಾನ್, ಮುಸುಲ್ಮಾನ್ ; ಹಿಂ. ಮುಸಲಮಾನ್ : ಮರಾ. ಮುಸಲಮಾನ್, ಮುಸಲ್ಮಾನ್]

**ಮುಸಲ್ಮಾನಿ** (ಗು). ೧. ಮುಹಮ್ಮದೀಯರಿಗೆ ಸಂಬಂಧಿಸಿದ. (ನಾ). ೨. ಮುಹಮ್ಮದೀಯರ ಭಾಷೆ ; ಉರ್ದು : ಮುಸಲ್ಮಾನಿಯಲ್ಲಿ ಮಾಝಿ ಎಂದರೆ, ಅಂಬಿಗನಿಗೆ ಹೆಸರು (ಕಹಾಕಿಸಿಂ. ೯).

[← ಅರ. ಮರಾ. ಮುಸಲಮಾನೀ, ಮುಸಲ್ಮಾನೀ : ಪಾರ. ಮುಸುಲ್ಮಾನೀ ; ಹಿಂ. ಮುಸಲಮಾನೀ]

**ಮುಸಳ** 'ಮುಸಲ₁' ನೋ.

**ಮುಸಳಿಕೆ** 'ಮುಸಲಿಕೆ' ನೋ.

**ಮುಸಾಂಬ್ರ** (ನಾ). ಒಂದು ಬಗೆಯ ಸಸ್ಯ ಮತ್ತು ಅದರಿಂದ ತಯಾರಿಸುವ ಔಷಧ ವಸ್ತು: "ಸೀಮೆಕತ್ತಾಳೆ, ಲೋಳೆಸರ, ಮುಸಾಂಬ್ರ ... ನೋಣಸರ" (ಸಸ್ಯಶಿ. ೯) ; ಲೋಳೆಸರ, ಮುಸಾಂಬ್ರ (ಕೃಷಿಗಿ. ೩-೯೦). [ದೇ.॥ ತೆಲು. ಮುಸಾಂಬ್ರು, ಮುಸಾಂಬರ]

**ಮುಸಾಫರ್‌ಖಾನೆ** 'ಮುಸಾಫಿರ್‌ಖಾನೆ' ನೋ.

**ಮುಸಾಫರ** 'ಮುಸಾಫಿರ' ನೋ.

**ಮುಸಾಫರಖಾನೆ** 'ಮುಸಾಫಿರ್‌ಖಾನೆ' ನೋ.

**ಮುಸಾಫಿರ್‌ಖಾನೆ,** ಮುಸಾಫರ್‌ಖಾನೆ, ಮುಸಾಫರಖಾನೆ. (ನಾ). ಪ್ರಯಾಣಿಕರು ಇಳಿದುಕೊಳ್ಳುವ ಸ್ಥಳ ; ಪ್ರವಾಸಿಬಂಗಲೆ : ಮಾತುಮಾತಾಡ್ತ ಬಂದೇ ಬಿಟ್ಟೆವಲ್ಲ ಮುಸಾಫಿರ್‌ಖಾನೆಗೆ (ಬದುಕ್ಕಿ. ೯೩) ; ಅಲಿಕಾದರನು ... ಮುಸಾಫಿರ್‌ಖಾನೆಗೆ ಹೋಗಿ ಒಂದು ಕೋಣೆಯಲ್ಲಿ ಇದುಕೊಂಡು ಆಲೋಚಿಸಹತ್ತಿದನು (ಮಚಿಕ. ೩೯). **ಮುಸಾಫರ್‌ಖಾನೆ:** ಅಧಿಕಾರಿಗಳು ಇಳಿದುಕೊಂಡಿದ್ದ ಮುಸಾಫರ್‌ಖಾನೆ ಹಾವಿನ ಹುತ್ತವಾಗಿ ತೋರಿತು (ಚಿಸ್ತಳ. ೦೦೯) ; ಈ ಕಟ್ಟಡಗಳೇ ಅಲ್ಲದೆ ಸಫವಿದೊರೆಗಳು ಹಲವು ಸರಾಯ್ ಅಥವಾ ಮುಸಾಫರ್‌ಖಾನೆಗಳನ್ನೂ ... ನೆಲದಡಿ ಕಾಲುವೆಗಳನ್ನೂ ಕಟ್ಟಿಸಿದರು (ಇತ್ಯಾಂಸಂ. ೦೫೨). **ಮುಸಾಫರಖಾನೆ :** ತಮ್ಮ ಗ್ರಾಮದ ಸರಹದ್ದಿನಲ್ಲಿರತಕ್ಕ ಛತ್ರ, ದೇವಸ್ಥಾನ, ಮುಸಾಫರ ಖಾನೆ, ರಾಜಮಾರ್ಗಗಳು ಮುಂತಾದವುಗಳಲ್ಲಿ ಗಸ್ತು ಮಾಡುತ್ತಿರಬೇಕು (ಗ್ರಾಮಕಾಕ. ೩೦) ; ರಾಮಚಂದ್ರನು ಪಾತಜ್ಜಿಯನ್ನು ಮನೆಗೆ ಬಿಟ್ಟು ಮುಸಾಫರಖಾನೆಗೆ ಬಂದನು (ಕಳೆಪು. ೦೦೯).

[← ಹಿಂ. ಮುಸಾಫಿರ್‌ಖಾನಾ ; ಮರಾ. ಮುಶಾಫರ್‌ಖಾನಾ]

**ಮುಸಾಫಿರ,** ಮುಸಾಫರ, ಮುಸಾಫಿರಿ (ನಾ). ಯಾತ್ರೆ ಮಾಡುವವನು ; ಯಾತ್ರಿಕ ; ಪಯಣಿಗ : ಹೊರಪ್ರಾಂಗಣದ ಚಾವಡಿಯಲ್ಲಿ ಮಾರ್ಗಿಗಳೂ, ಭಾವಜೀಗಳೂ, ಮುಸಾಫಿರರೂ ... ಬೀಡು ಬಿಟ್ಟಿರುತ್ತಾರೆ (ಜಾಕುಜಾ. ೩೭) ; ತಾವು ಉತ್ತರಹಿಂದುಸ್ಥಾನಕ್ಕೆ ಬಂದ ಮುಸಾಫಿರರು ; ನೆಲೆಯಿಲ್ಲದ ಜನರು ಎಂದು ಅನಿಸುತ್ತದೆ (೩ಗುಳ. ೦೦). **ಮುಸಾಫರ :** ಆ ಮಾತಿಗೆ ನಾಚಿಕೆಪಟ್ಟ ಈ ಮುಸಾಫರರು ಹೊರಟು ಹೋದರು (ಕಥಾಮಂ. IV. ೬೨). **ಮುಸಾಫಿರಿ :** ಹೇಣ್ತ್ಯ ಹ್ವಾದ ಮ್ಯಾಗ ನಾವೂ ಮುಸಾಫಿರೀನ (ವೃಶಿ. ೯೭).

[← ಅರ. ಹಿಂ. ಮುಸಾಫಿರ್ ; ಮರಾ. ಮುಸಾಫರ್, ಮುಶಾಫರ್]

**ಮುಸಾಫಿರಿ** 'ಮುಸಾಫಿರ' ನೋ.

**ಮುಸಾಫಿರಿಬಂಗ್ಲೆ** (ನಾ). = ಮುಸಾಫಿರ್‌ಖಾನೆ : ಈಗ ಮುಸಾಫಿರಿ ಬಂಗ್ಲೇದಾಗ ಚೌಕೀದಾರ ಆದೀನ್ರಿ (ವೃಶಿ. ೯೭).

[ ಮುಸಾಫಿರಿ (< ಮುಸಾಫಿರ) + ಬಂಗ್ಲೆ (< ಬಂಗಲೆ) ]

**ಮುಸಿ₁** (ನಾ). ಹುಸಿಯಾದುದು ; ಕೃತ್ರಿಮವಾದುದು : 'ಮುಸಿನಗು' ಪರಾ.

**ಮುಸಿಮುಸಿ ನಗು**=ಕೃತ್ರಿಮವಾಗಿ ನಗು ; ಹುಸಿನಗು : ಪಾಲಿ ಸುಮಪಾಲಿಗಳು ... ಹರಿಯ ಪಕ್ಷದಲಿ ಪೊಗಿಸೆ ಕೌರಂಬುಗಳ ಮುಸಿಮುಸಿ ನಗುತ ಶಾರ್ಙ್ಗವ ಪಿಡಿದು ವಿವಿಧಾಶುಗವನೆಚ್ಚೊಡೆಗಡಿದನು (ಅಷಂಣ. ೦-೬-೯೬) ; ವಿದ್ಯಾರ್ಥಿಗಳು ಸಿದ್ದಣ್ಣನತ್ತ ಮುಖ ತಿರುಗಿಸಿ ಮುಸಿಮುಸಿ ನಕ್ಕರು (ಒಡ್ಡಊ. ೩೩) ; ಅಂಬಿಗನು ಮುಸಿಮುಸಿ ನಗುತ್ತ ... ಹಲಗೆಯ ಕಡೆ ಕೈ ತೋರಿಸಿದ (ಹಸುಹೂ. ೩೩೨). [← ತೆಲು. ಮುಸಿ]

**ಮುಸಿ₂** 'ಮೂಸೆ' ನೋ.

**ಮುಸಿಕಟ್ಟು** (ಕ್ರಿ). ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸುವ ಸಾಧನವನ್ನು ಅಳವಡಿಸು ; ಮೂಸೆಯನ್ನು ಇಡು : ನಾಗಾರ್ಜುನನು ಪರ್ವತಕೆ ಮುಸಿಕಟ್ಟಿ ಬೆಳ್ಳಿಯ ರಸದ ಪ್ರಚಂಡವಾದ ಪ್ರವಾಹಗಳನ್ನು ಹರಿಬಿಟ್ಟಿರುವನೇನೋ (ಹುದುಡಾ. ೨೬).

[ಮುಸಿ₂ (< ಮೂಸೆ) + ಕಟ್ಟು₁]

**ಮುಸಿಕೆ** (ನಾ). ಓಕಳಿಯಾಟದಲ್ಲಿ ನೀರನ್ನು ತೂರಲು ಬಳಸುವ ಬಟ್ಟೆಯಿಂದ ಮಾಡಿದ ಜಾಳಿಗೆಯಂತಹ ಸಾಧನ (?) : ಕುಸ್ತಿಯ ಗರಡಿಗಳು ಹೊಂಡದ ನೀರನ್ನು ತಪ್ಪ ಧೋತ್ರದ ಚೀಲಿಯಲ್ಲಿ ತುಂಬಿಕೊಂಡು ಸೂಳೆಯರ ಮೇಲೆ ತೂರುವದು ಪ್ರಾರಂಭವಾಯಿತು. ಆ ನೀರಿನ ಮುಸಿಕೆಗಳ ಹೊಡೆತದಿಂದ ತಪ್ಪಿಸಿಕೊಳ್ಳಲು ಸೂಳೆಯರು ಪಾನೆಲ್ಲನ ಕಂಟಿಗಳನ್ನು ಉಪಯೋಗಿಸುತ್ತಿದ್ದರು (ಗ್ರಾಮಕಾಕು. ೨೩೯). [ ? ]

**ಮುಸಿಗಾರ** (ನಾ). ಲೋಹಾದಿಗಳನ್ನು ಮೂಸೆಯಲ್ಲಿಟ್ಟು ಕಾಯಿಸುವವನು : ಸಾಹಸಿಗಳಾದ ಮುಸಿಗಾರರು ಭೂಗರ್ಭವನ್ನು ಬಗೆದು ಬೆಳ್ಳಿ, ಬಂಗಾರ, ತಾಮ್ರ ಮುಂತಾದ ಧಾತುಗಳ ರಾಶಿಯನ್ನು ಒಟ್ಟುತ್ತಿದ್ದರು (ಶಿರಂಗ. ೦). [ ಮುಸಿ₂ (< ಮೂಸೆ) + -ಗಾರ (< -ಕಾಱ) ]

**ಮುಸಿಗೆ** 'ಮುಷ್ಕಿ' ನೋ.

**ಮುಸಿಗೆಬಿಗಿ** (ಕ್ರಿ). ೧. ಹಿಂಗಟ್ಟುಮುರಿ ಕಟ್ಟು ; ಹೆಡಮುರಿ ಹಾಕು : ಕೋಣೆಯ ಬಾಗಿಲು ತೆಗೆದು ಒಳಗಿನಿಂದ ಅದನ್ನು ಹಾಕಿ ನನ್ನನ್ನೂ ಮುಸಿಗೆಬಿಗಿದನು (ಪೀಂಐಮ. ೩೯). ೨. ಬಿಗಿಯಾಗಿ ಕಟ್ಟಲ್ಪಡು,-ಬಂಧಿಸಲ್ಪಡು: ಮರಕ್ಕೆ ಮುಸಿಗೆ ಬಿಗಿದಿದ್ದ ರಣದುಲ್ಲಾಖಾನನು ಆತನ ಕಣ್ಣಿಗೆ ಬಿದ್ದನು (ಭಾರ್ಗಕಿಶೇ. ೩೦). [ಮುಸಿಗೆ (<ಮುಷ್ಕಿ)+ಬಿಗಿ₁]

**ಮುಸಿನಗು** (ನಾ). ಹುಸಿನಗು ; ಕೃತ್ರಿಮವಾದ ನಗೆ : ಮುಸಿನಗುವಿನೊಳಗಿರಲಶಕ್ಯವೆ ಪಿಶಾಚಿಕೆಗೆ ? (ಮಂಕುತಿ. ೯೦೬). [ಮುಸಿ₁ + ನಗು₂]

**ಮುಸಿನಗೆ** (ನಾ). = ಮುಸಿನಗು : ಯಾಕೋ, ಈ ಮುಸಿನಗೆ ? ಗಟ್ಟಿಯಾಗಿ ನಗುವುದಕ್ಕೆ ಧೈರ್ಯವಿಲ್ಲವೆ ? (ಹಸುಹೂ. ೦೭೯).

**ಮುಸಿಮುಸಿನಗೆ** (ದ್ವಿರುಕ್ತಿ) : ದೆಸೆದೆಸೆಯ ಸೆಸಿವದನೆಯರ ಮುಸಿಮುಸಿನಗೆಯು ಗುಸುಗುಸುಗಳೆಸೆಗಿರಲು (ಅಷಂಣ. ೦-೨೩-೯೬).

[ಮುಸಿ₁ + ನಗೆ]

**ಮುಸಿಮನೆ** (ನಾ). ೧. ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸಲು ಬಳಸುವ ಸಾಧನವಿರುವ ಸ್ಥಳ. ೨. (ಅಲಂ) ಕಠಿಣವಾದ ಹಂತ,— ಮಜಲು : ಕವಿವಾಣಿ ಈ ನಾಲ್ಕು ಮುಸಿಮನೆಗಳಲ್ಲಿ ಹಾದು ಹದಗೊಂಡು ಪರಿಪಾಕಪೂರ್ತಿಯನ್ನು ಹೊಂದುವುದೆಂದು ಪಂಪನು ಹೇಳಿದ್ದಾನೆ (ಕಪಾ. ೬೦). [ಮುಸಿ₂ (< ಮೂಸೆ) + ಮನೆ]

**ಮುಸಿಯು** 'ಮುಸ್ಕು₂' ನೋ.

**ಮುಸಿಲ್ಲಮಾನ** 'ಮುಸಲ್ಮಾನ' ನೋ.

**ಮುಸು₁** (ನಾ). ಒಂದು ಅನುಕರಣ ಶಬ್ದ : 'ಮುಸುಗುಟ್ಟು' ಪರಾ.

**ಮುಸುಮುಸು** (ದ್ವಿರುಕ್ತಿ) : ಮುದ್ದುಕೂಸಿನ ಹಾಗೆ ಮುಸುಮುಸುಮಾಡುತ್ತ ಕುಣಿದಾಸ (ಸೂರ್ಯಜಾ. ೩೩-೩).

**ಮುಸ್ಕು₂,** ಮುಜ್ಜು, ಮುಸಿಯು, ಮುಸುವ, ಮುಸುವು, ಮೂಸ್ಕು₂ (ನಾ). ಕರಿಯ ಮುಖವೂ ಉದ್ದ ಬಾಲವೂ ಉಳ್ಳ, ಒಂದು ಬಗೆಯ

ದೊಡ್ಡ ಗಾತ್ರದ ಕಪಿ; ಗೋಲಾಂಗೂಲ: "ಗೋಲಾಂಗೂಲಃ, ಕೃಷ್ಣವಕ್ತ್ರಃ - ಈ ೨ ಮುಸು" (ಹಲಾಯು. ೩೯-೬೯); ಮುಸು ಮುತ್ತೆಂತೆ ತೆರಳ್ದು ತನ್ನ ಮೊಗಮಂ ಕಂಡಳ್ಕನೋ (ಆದಿಪು. ೨-೯೫); ಮೊಸಳೆ ಮುಸುವಿಂದಂ ವಂಚಿಸಲ್ಪಟ್ಟು ಮನಂಗೆಟ್ಟು ಪೋಪುದುಂ (ಶಾಂತಿಪು. ೨೧೫-೧೮); ವಾನರ ಸಿಂಗಳೀಕ ಮುಸು ಕರಡಿಯ ಬಲಂ ಮುತ್ತಿದುದು (ಕೃಷ್ಣರಾ. ೨೦-೧೮). **ಮುಜ್ಜು**: 'ಅದು ಕರಡಿಯಲ್ಲ ಮುಜ್ಜು, ದೊಡ್ಡ ಕಪ್ಪುಮಂಗ' ಎಂದ (ಜಾಗ. ೯೫); ಮಾವಿನ ಗಿಡದ ಕಾಯಿಗಳು ಎಲ್ಲಾ 'ಮುಜ್ಜು' ತಿಂದು ಹಾಳಾಗಿ ಹೋಗುತ್ತಿವೆ (ಕಹಾವ. ೧೬೦). **ಮುಸಿಯ**: ಮೊಲ, ಮುಸಿಯ, ತುಲಿ, ಕರಡಿ, ಕುರ್ಕ ಮುಂತಾದ ಇತರ ಪ್ರಾಣಿವರ್ಗಕ್ಕೆ ಕಾಡಿನಲ್ಲಿ ಮಿತಿಯೇ ಇರಲಿಲ್ಲ (ಕಂಕಹ. ೨). **ಮುಸುವ**: ನರಿ ಹದ್ದು ಜಂಬುಕ ಮುಸುವ ಶರಭ ಶಾರ್ದೂಲ ಸಿಂಹವು (ಪಪ್ಪಗ. ೦-೦೨೯); ಮರೆ ಹುಲ್ಲೆ ಸಿಂಗ ಮುಸುವನು . . . ಚಕೋರನ ಬಳಗವೊಪ್ಪಿತು ವನದೊಳು (ಗೋಪಾಕು. ೩-೦೦); ಬಸ್ಸು ನಿಂತಾಗ, ಬಸ್ಸಿನ ಬಳಿಗೆ ನೂರಾರು ಮುಸುವಗಳು ಬಂದು ತಿಂಡಿ ಬೇಡಿಕೊಂಡು ಹೋದುವು (ಅಜಾಪ. ೬). **ಮುಸುವು**: ಮರದ ಮರಿಯಿಂ ಮಾಳೀಮುಸುವಾದ ಮುಸುಂಬು ಮುಸುವಿನ ಮುಸುಂಬಿನಂತೆ (ಅರ್ಜಪ. ೫-೦೦೩ ಪ); ಮುಸುವೆನೆ ತನ್ನ ಮುತ್ತುಮುಸುಡಿಂದಿರದೇಡಿವಳ್ (ರಾಜಶೇ. ೦೦-೦೬೩). **ಮೂಸು**$_2$: ಕೋತಿಗಳಲ್ಲಿ ಜಾತಿ: ಸಿಂಗಳೀಕ . . . ಕೋಡಗ, ಮೂಸು, ಮುಸುವ (ಪಶುಪು. ೨೩೯).

[ದೇ.॥ ತಮಿ. ಮುಚು; ಮಲ. ಮೊಚ್ಚ; ತುಳು. ಮುಜ್ಜು, ಮುಜ್ಜಿ; ಕೊಡ. ಮುಚ್ಚೀ; ಕೋಲಾ. ಮುಯ್ ಮುಯಿಾ; ನಾಯ್ಕಿ. ಪರ್ಜಿ. ಮುಯ್; ಗೊಂಡಿ. ಮೂಜ್, ಪುೂಂಜ್; ಕೂ. ಮೂಸು; ಕುವಿ. ಮೂಹ]

**ಮುಸುಂಕಿಡು**, ಮುಸುಕಿಡು, ಮುಸುಗಿಡು (ಕ್ರಿ). ೧. ಮುಚ್ಚು; ಮರೆಮಾಡು; ಮುಸುಕುಹಾಕು: ನಯನೌಘಚ್ಛಲದಿಂದೆ ಪೈದಿಲೆಸಲಂ ಶಕ್ರಂ ಮುಸುಂಕಿಟ್ಟಂ (ಚಂದ್ರಪ್ರ. ೯-೩೬). ೨. (ಮುಖವನ್ನು) ಮರೆಮಾಡಿಕೊಳ್ಳು; ಮುಸುಕನ್ನು ಹಾಕಿಕೊಳ್ಳು: ಮೋಹದ ಮುನಿಸು ಮನದೊಳ್ ತೀವಿ ಪ್ರಣಯಕಲಹಂ ಬಲಿದು ಪ್ರಸಾದಮನೊಲ್ಲದೆ ಬಸವಂ ಮುಸುಂಕಿಟ್ಟು . . . ಪಟ್ಟಿರ್ದಿರೆ (ಬಸವ. ೯-೯೩); ವಸ್ತುಗಳ್ ಮುಸುಂಕಿಟ್ಟೋಡೆ ಸರಸಿಜಭವಂ ಕಂಡು ಕಂಡು ಕಾಳೆಗಕೆ ಮುಂಕೊಂಡಸು (ಕಂಪು. ೩೦-೯೯). **ಮುಸುಕಿಡು**: ೧. ದೆಸೆಯೆಲ್ಲಂ ತೀವ್ರಬಾಣಾಳಿಯೊಳ್ ಮೆಡಚಿದಂತಂಬರಂ ಬಾಣದಿಂದಂ ಮುಸುಕಿಟ್ಟಂತಾಗೆ (ಶಂಕರಾ. ೧೨-೨೦); ಕುಂಭದ್ವಯಕ್ಕೆ ಮುಸುಕಿಟ್ಟ ಬೆಳ್ಪಟ್ಟೆಯಂತಿರೆ ಗುರುಕುಚಂಗಳಂ ನೋಳ್ಪ ಕಾಮುಕನಿಕರದ ದಿಟ್ಟಿ ನಾಂಟದ ತೆಜದಿ ಮಜಿವಮಾಡಿದಂದದಿಂ ಕಟ್ಟಾಣಿ ಮುತ್ತುಗಳ ಕೆತ್ತಿಸಿದ ಮೊಲೆಕಟ್ಟ ಕಟ್ಟಿದಳ್ (ಸೌಂದರ್‍ಪು. ೬-೨೮). ೨. ಮುಸುಕಿಟ್ಟ ಪಟ್ಟಣಿಗೆಯುಂ ಪೊಜಪೊಣ್ಮುವ ಕಣ್ಣ ಬಿಳ್ಪುಮೋಪರ ಮನದೊಳ್ ತೆಜಂಬೊಳೆವ ಬಾಳೆಗಳಂತಿರೆ . . . ಬಂದುದೊಂದೊಡನೆ ಸಪ್ಪನಮೆಂಡಿರ ತಂಡಂ (ಆದಿಪು. ೧೧-೯೩ ಆಪಠ್ಯ); ನಿಜೋತ್ತರೀಯ ವಸನಾಂಚಲದಿಂ ಮುಸುಕಿಟ್ಟು ಚಿಂತೆಯೊಳ್ . . . ಜಾನಿಸುತ್ತಿರಲು (ರಾದಂಪ. ೩೬೬); ನಿಶೆಯೆಂಬ ವಧು ನೀಲಿಯ ವಸನವನುಟ್ಟು ಮುಸುಕಿಟ್ಟಳೆಂಬಂದದಲಿ ದಿಸೆ ಪದಿಸಾಜಿ ಜೊಳಿಯ್ದ ಕತ್ತಲೆ ಮುತ್ತಿ ಮುಸುಕಿದುದು (ಅಂಜನ. ೫-೦೦೨). ೩. ಆವರಿಸು; ತುಂಬಿಕೊಳ್ಳು: ಭೂತಳದೊಳ್ ಹಿಮಮೊತ್ತರಿಸಿ ಭುವನಜನಮನುಜಿ ನಡುಗಿಸುತುಂ . . . ಮುಂದುಗೆಡಿಸುತ್ತು ಮುಸುಕಿಪುತುಂ (ಗಿರಿ. ೯-೩೮); ಬಸಿಜೊಳ್ ಮೂಸೊತ್ತಿ ನೆತ್ತರ್ ಪಸರಿಸಿ ಕರುಳಂ ಸುತ್ತಿ ಮೂತ್ರಂ ಪುರೀಷಂ ಮುಸುಕಿಟ್ಟಿಲ್ಲಂಗದೊಳ್ ಕೆತ್ತಿರಲ್ (ಕಲ್ಲಾಕ. ೩). **ಮುಸುಗಿಡು**: ೨. ತಾಯಿ ದೊಡ್ಡಮ್ಮಾ ಏನುಟ್ಟು ಮೆರೆದಾಳು ಕಾಗೂಟ್ಟು ಕರಿದಾ ಮುಸುಗಿಟ್ಟು . . . ಮೆರೆದಾಳೂ (ಹುಟ್ಟಿಪ. ೬೩).

[ಮುಸುಂಕು$_2$ + ಇಡು$_1$]

**ಮುಸುಂಕು**$_1$, ಮುಸುಕು$_1$, ಮುಸುಗು$_1$ (ಕ್ರಿ). ೧. (ಗವಸಣಿಗೆ ಮೊದಲಾದುವುಗಳಿಂದ) ಮುಚ್ಚು; ಮರೆಮಾಡು; ಆಚ್ಛಾದಿಸು; ಹೊದೆಸು: ದೆಸೆ ಪಸುರೇಜಿ ಪಚ್ಚೆಯೊಳೆ ಮುಚ್ಚಿ ಮುಸುಂಕಿದ ಮಾಟ್ಕೆಯಾದುದು . . . ಮೇಘಕಾಲದೊಳ್ (ಶಂಕರಾ. ೬-೨೨); ಎಲ್ಲಿ ಹೊಕ್ಕಲ್ಲಿ ನಿನ್ನ ವಿಕಾರವ ಮಾಣೆ . . . ಕೋಡಗವ ಹುಲ್ಲಲ್ಲಿ ಮುಸುಂಕಿದಂತೆ [ಪಾಠಾಂ. ಮುಸುಕಿಟ್ಟಂತೆ] ಕೂಡಲಸಂಗಮದೇವ ನಿನ್ನ ಪರಿ (ಬಸವ. ೪. ೬೩೯); ಗಗನಲಕ್ಷ್ಮಿಯ ಪಯೋಧರಮಂ ಮುಸುಂಕಿದ ಚೀನಾಂಬರದ ಸೆಜಂಗಿನಂತೆ ತೊಳತೊಳಪ ವಳಯಿಗೆಯ ಪಟಲಗಳ್ಕಿರುತ್ತಿರೆ (ರಾಜಶೇ. ೦೩-೬೧ ಪ). ೨. ಮರೆಮಾಡಿಕೊಳ್ಳು; ಹೊದೆದುಕೊಳ್ಳು: ಆನನಿರೀಕ್ಷಿಸಲಾ ಲತಾಂಗಿ ಲಜ್ಜಿಸಿ ತನುವಂ ನಿಜಸ್ಮಿತಸಿತಾಂಶುಕಪಲ್ಲವದಿಂ ಮುಸುಂಕುವಳ್ (ರಾದಂಪ. ೯೯); ಆ ವಧು ವಿನ ಗೃಹಜೆಯ್ದಿ ಮುಸುಂಕಿದ ಧಾವಳ್ಯಾಂಬರಮಂ ತೆಗೆದು ಸ್ಮರನಸಿಯೊಜಿದೆಗೆದಂತೆ (ಜಯುಗಾ. ೨-೯೨). ೩. ಮುತ್ತು; ಕವಿ; ಮುಸುರು: ಶ್ರವಣನತಪಾರಿಜಾತಸ್ತವಕೋದ್ಗತಮಧುಮಳಕ್ಕೆ ನಂದನಭೃಂಗೀನಿವಹಂ ಕವಿದೆನ್ನ ಮುಸುಂಕುವಿನಂ ಪೊಜಮಟ್ಟೆನಾಗಳತಿಸಂಭ್ರಮದಿಂ (ರಾದಂಪು. ೯೯೦); ನೊಣಗಳ್ಮುಸುಂಕಿ . . . ಮುನಿಪತಿಯನಗಲದೆ ಸುಳಿವುವು ಜುಮ್ಮೆಂದು ಕಂಡಮರ್ಪಿಸುವಿನಂ (ರಹರೆಕ್ಕು. ೯-೬೬); ಅಬಲೆಯೊರ್ವಳರಮರುಳ್ಮುಂಬಿಯೋದಲರ್ದ ಪೊಂದಾವರೆಯ ಸಿರಿಗೆತ್ತು ಮೊಗಕಣಗೆ, ಕಯ್ಮೆತ್ತಿ ಪೊಯ್ಮೆ ಕೆಂದಾವರೆಯರಲೆನುತ್ತದಂ ಭರದಿಂ ಮುಸುಂಕೆ (ಶಬ್ದಾಣ. ೬-೯೬). ೪. ಹರಡು; ಹಬ್ಬು; ಆವರಿಸು; ವ್ಯಾಪಿಸು: ಭೋಗಾಂಗಮಾಗಿಯುಂ ಕೃಷ್ಣಾಗರುಧೂಪಂ ಮುಸುಂಕಿ ಕೊಂದಿಕ್ಕಿದುದಾ ಭೋಗಗಳನಿಂತು ಸಂಸ್ಕೃತಿಭೋಗಂಗಳ್ ಭೋಗಿಭೋಗದಿಂ ವಿಷಮಂಗಳ್ (ಆದಿಪು. ೫-೨೫); ಕುಸುಮಶರನ ಪೊಸಜಸದ ಬೆಳರ್ಪು ಮುಸುಂಕಿದುದೋ ಎನಲು ಅಸಿತೋತ್ಪಲಲೋಚನೆಯಾನನದೊಳ್ ಪಸರಂಗೊಂಡು ವಿವರ್ಣಂ ಮಿಗೆ ರಂಜಿಸಿವುದು (ಜಯುಗಾ. ೯-೦೮). ೫. ದಟ್ಟವಾಗಿರು; ನಿಬಿಡವಾಗಿರು; ಸಾಂದ್ರತೆಯಿಂದ ಕೂಡಿರು: ಪೊಸವೇಟಮೆಂಬ ಚಿಲ್ಪಡಿದಳ ಮಾಮರಂ . . . ಅನುರಾಗಮೆಂಬ ತಳಿರಿಂದೆಸೆದಟ್ಕಜನಾಳ್ದ ನೋಟಮಂ ಬಿಡಿದಲರಿಂ ಮುಸುಂಕಿ ಸುಸಿಲೆಂಬ ಬಸಂತದೊಳೇಂ ಪೊದಟ್ಟುವೋ (ಆದಿಪು. ೦೨-೨೯); ಎಯ್ದೆ ಮುಸುಂಕಿ ನೀದ ತಣ್ಣೆಳಗಳನೊಪ್ಪಿ ತೋರ್ಪ ಜಲಮಂಟಪದಲ್ಲಿಗೆ ಬಂದನಾ ನೃಪಂ (ರಾದಂಪ. ೯೫೮). ೬. ಒಟ್ಟಾಗು; ಸೇರು; ಕೂಡು: ಪೊಸಮುತ್ತಿನ ಲಂಬಣದೊಳ್ ಮುಸುಂಕಿದಂತಿಡಿಯೆ ಪೂತ ಸುರಯಿಯ ಮುಗುಳಂ . . . ಆಯ್ದಳ್ (ಆದಿಪು. ೧೦-೯೯). ೭. ತುಂಬಿರು; ಆವರಿಸಿರು: ವಿದ್ಯುಲ್ಲತಾಗರ್ಭೀಕೃತಶಾರದಾಭ್ರವಿಭ್ರಮದಂತೆ ಭಸಿತಂ ಮುಸುಂಕಿದ ಬಿಸುಗಣ್ಣಿಂ ಮೆಜಿವ ಲಲಾಟಪಟ್ಟದಿಂ (ಬಸವ. ೯-೦೯); ಮೊಸಳೆ ಮುಸುಂಕದಚ್ಚ ಪೊಸ ಬಾಂಬೊಲೆಯಿಂಬೊನಲೊರ್ವೆ ಕೂನೊರ್ಣಾ ಮುಸುಜಿದ ಜೇನ ಪಟ್ಟೆ (ಸಸಿ. ೩-೦೫೫). **ಮುಸುಕು**$_1$: ೧. "ಮುಸುಕು—ಆವರಣೇ, ಛಾವೇ ಚ" (ಶಬ್ದಾನು.); ದುಕೂಲಾಂಬರಂ ನಿಜಾಂಗದೊಳಂ ಸಂದೆಸೆದಿರೆ ಬೆಳ್ಮುಗಿಲಿಂದಂ ಮುಸುಕಿದ ನೀಲಾದ್ರಿ ಬರ್ಪ ತೆಜದೊಳ್ ಬಂದಂ (ಶಂಕರಾ. ೨-೩೮); ಮಹಾಸ್ತ್ರನೀರದೋಳಿಂತವನು ಮುಸುಕಿದಸು ಶರಮಯವಾಯ್ತು ರಣಭೂಮಿ (ಕುಮಾರ. ೨೦-೩೦); ಮುಸುಕಿದಳು ಮಾಯಾವಿಲಾಸದ ವಸನದಲಿ ಮಾಯಾನಿತಂಬಿನಿ ಮಿಸುಕದಂತಿರೆ (ಕೋರಣ. ೨-೦-೯೦). ೩. ಧರ್ಮವೆಂಬಿಂದು ಮಂಡಲಕ್ಕೆ ಮುಸುಕುವ ಕಾಳರಾಹುವಿನ ನಾಲಗೆಯೆನಿಪ ಸಿರಿಯಂ ಬಣ್ಣಿಪಂಗಾಂಪನಲ್ತೆ (ರಾದಂಪು. ೫೩೨): ಅಳಿನಿಕುರುಂಬಮಶೋಕೆಯ ತಳಿರಂ ಮುಸುಕುವವೊಲಂಘ್ರಿಪಲ್ಲವಮಂ ಕುಂತಳತತಿಗಳ್ಮುಸುಜ . . . ಪೊಡಮಟ್ಟಂ (ರಹರೆಕ್ಕು. ೨-೦೯೬); ಮುಸುಕಿ ರ್‍ಮುಮ್ಮನೆ ತಗೆವುತೆಜಗುತ ಮಸಗಿ ನೆಗೆದೋಡುವ ನೊಣಂಗಳ ದೆಸೆದೆಸೆಗೆ ಪೇಸಿಕೆಯು ನಾತವಧಿಕ

ಭಯಂಕರವು ಪಸರಿಸಲು (ಬಸವ. ೪೭-೩೯) ; ಪರಶುವಿನಿಂದೆ ಮುಸುಕಿ ಮುದ್ಗರದಿಂದಲಸಿಯುರೆದು . . . ದೆಸೆಗೆಡಿಸಿದರ್ ಸುರಪ್ರಸರಮಂ ದಾನವರ್ (ಶಾಂತಿ. ೪೪-೩೨). ೪. ಕುಸುಮಾಪಚಯವ್ಯಸನಾವಸಕ್ತ ಸುರಯುವತಿ ಪಾಣಿಪಲ್ಲವರಾಗಂ ಮುಸುಕಿದುದೆನಿಸಿದುದಸುಗೆಯ ಪೊಸದಳಿರ್ಗಳೊಳೆಸೆವ ಕೆಂಪು ನಂದನವನದೊಳ್ (ಆದಿಪು. ೭-೯೭) ; ಕೂಡೆ ಮೂಜಗವಂ ಮುಸುಕಿ ತೇಂಕಾಡಿಸುವ ಗಂಗೆಯನುಮೇಶನು ಸೂಡಿದನಲಾ (ಬಸವ. ೫೪-೩೩); ರವಿ ಪಶ್ಚಿಮಾದ್ರಿಯಂ ಮುಟ್ಟಿಗೊಳೆ ತಮಸ್ತೋಮಮವನಿಯಂ ಮುಸುಕಿತು (ಕೃಷ್ಣ. ೬-೪೯). ೫. ನನೆಯಿಂ ಮುಸುಕಿದ ತಳಿರಂ ಪೋಜಿದ ಪೊಸ ಮಾವುಗಳಿಂ ಬಸಂತಮೆಸೆದಪುದು (ಆದಿಪು. ೧೧-೬೩) : ಮಿಸುಪ ನದೀ ನಾರಿಯ ನೀಳ್ತೋಳೆನಲೆಸೆವಿರ್ತಡಿಗಾಲುವೆಯಿಂದಮೆ ನೆಟ್ಟ ಮುಸುಕಿ ಬೆಳೆದ ಚೆಂದೆಂಗೊಳ್ವಾಳೆಯಡಕೆ ಪಸುರೆಲೆವಳ್ಳಿ . . . ಒಪ್ಪಿದುವು (ಜಯನೃ. ೧-೩೯). ೬. ಕೇಯೂರಕಟಕಸಮಿತಿಯೋಗಾಯುತಬಾಹುಗಳೆನುಸ್ಮಿಪ್ರತ್ನ ಪಟಚ್ಛಾಯೆಯೊಳೆ ಮುಸುಕಿ ದೇಹಚ್ಛಾಯೆಯುಮಂ ಪುದಿಯೆ ರತ್ನತರುವೆನೆ ಪೋಲ್ತಂ (ಆದಿಪು. ೯-೪೦); ಅಲಘುವರ್ಣಕರೀತಿಯಿಂ ರಸಂ ಮುಸುಕಿಯುಜ್ವಳಿ ಪಂತೆ. . . ಬರೆಯಿಸುತೆ (ಶಬ್ದರಾ. ೦೨-೩೦). ೮. ಒದಗು ; ದೊರಕು ; ಉಂಟಾಗು : ರಸನೇಂದ್ರಿಯಂ ತೃಪ್ತಿಪಡೆಯಲಿಹಪರಸೌಖ್ಯ ಮುಸುಕುವುದು (ಸೊಹಶಾ. ೦-೩). ೯. ಅಡಗಿರು; ಮರೆಯಾಗು : ಆ ವಿರಾಟನ ರಾಜಧಾನಿ ಯೊಳೀ ವಿಳಾಸದಿ ಮುಸುಕಿ ತಾವ್ ಪರಸೇವೆಯಲಿ ಪಾಂಡವರು ಕಳೆದರು ಹತ್ತುಮಾಸವನು (ಕುಮಾ.ವಿ. ೨-೨) ; ಖರಕಿರಣ ಮೇಘದೊಳು ಮುಸು ಕಿರ್ದುರವಣಿಸಿ ಪೊಡಮಡುವ ತೆರದಿಂ (ಕೊಲ್ಲಾ. ೩೭). ೧೦. ಮುಚ್ಚಿಡು: ರಹಸ್ಯವಾಗಿಡು ; ಅಡಗಿಸು : ಕುಂತೀನಂದನರು ಸುಕ್ಷಾತ್ರತೇಜೋ ವೃಂದವನು ಮುಸುಕಿದರು ವಿಮಲಬ್ರಹ್ಮರಶ್ಮಿಯಲಿ (ಕುಮಾ.ಕ. ೧೦-೨). ೧೧. ಸುತ್ತುಗಟ್ಟು; ಬಳಸು; ಸುತ್ತುವರಿ : ಶಿಖಿಯ ಸೆಕೆ ತಾಗೆ ಮಿಗೆ ಕುಂದುತುಂ ಪುದಿದ ಮಾಸು ಮುಸು[ಪಾಠಾಂ. ಮುಸುಂ]ಕಲುಬ್ಬಸ ದೊಳೊಂದುತುಂ (ಬಿಂದೋರ. ಹ. ೩೦೦-೨೦) ; ಪೊಂಗೊಡಮೊಲೆವೆಂಗಳು ಮುಸುಕಿತು ವ್ಯಡತಪಧ್ವಂಸಿಯ ಬಿತಸ (ವೋಚತ. ೦೪-೩೦) ; ಅಸಿ ವರುಣೆಗಳಾ ಕಾಸಿಯ ಪುರವನು ಮುಸುಕಿ ಕಾದಿರುವಂದದಲಿ ಒಸೆದು ಪಟ್ಟಣವನು ವಾಹಿನಿಯೆರಡಾಗಿ ಪಸರಿಸಿ ರಕ್ಷಿಸುತಿಹಳು (ಕಂಸವ. ೩-೪೩). ಮುಸುಗು₁ : ೩. ಇಸೆ ಮುತ್ತಿ ಮುಸುಗಿ[ಪಾಠಾಂ. ಸುಜ್] ಪರಿಬಂಧಿಸಿ ದವು ನರರಥತುರಂಗಮಂಗಳಂ . . . ಅವನ ಸರಲ್ಗಳ್ (ಶಂಕರಾ. ೦೨-೦೭೩); ನುಣ್ಗೊರಲ್ದನಿಗೆ ಪಾರಾವತಾದಿ ವರಖಗತತಿ ಮುಸುಗಲು (ತಾಂಡಪ. ೦೬-೨೩) ; ಸಗರನ ತನೂಜರಾಗುರುಬಿ ಶರವರ್ಷಮಂ ಸೈಗರೆಯಲವು ಸಕಲ ನಾಗಬಲವಂ ಮುಸುಗುತೆ (ತತುಪು. ೪-೦೦-೩೯). ೭. ಮುಖವೆಲ್ಲ ಧೂಳು ಮುಸುಗಿದೆ (ವೇದವು. ೦೯೦). ೧೦. ಸತ್ಯವನ್ನು ಮುಸುಗುವ ಶಕ್ತಿ ಕ್ಷುಲ್ಲಕ ವಾದ ಅಸತ್ಯಕ್ಕಿದೆಯೇ ? (ಬೆಕಂಬಾ. ೧೨೦). ೧೧. ಆ ಕುವರನನು . . . ರಾಕೇಂದುವಿನಂದದ ಮೊಗವವರ್ಗಳ್ ನಾಕಸತಿಯರೊ . . . ಎಷ್ಟೆ ಮಿಗೆ ಮುಸುಗಿದರು (ಹಯಲ. ೦೦-೩೦). 'ಮುಚ್ಚು₁', 'ಮುಸುಕು₁' ಪರಾ.

**ಮುಸುಂಕು₂**, ಮುಸುಕ, ಮುಸುಕು₂, ಮುಸುಗು₂ (ನಾ). ೧. ಹೊದಿಕೆ; ಆಚ್ಛಾದನೆ : ಎಯ್ದೆ ಪಂದೆಳಸಿ ಮತ್ಸರ್ಯಾಂಕಮಂ ಪೊರ್ದುವಂ ಪದೆದಾನೀಕ್ಷಿಸೆ ಪೋಪಸೆಯಸೆ ಮುಸುಂಕಂ ಪೊಕ್ಕು ಮೆಯ್ಮುತ್ತಿಪಂ (ಕುಸುಮಾ. ೦೨-೦೩೦). **ಮುಸುಕ** : ೧. ತೆಗೆ ನಿನ್ನ ಮುಸುಕವ ನಗುತಂಬೆ ಮೊರೆಯನು ಜಗವನೆಲ್ಲವ ತಿರುಗಿ ಬಾಯಾಜಿ ಬಂದೆನು (ಪುರಂದ. ೦-೬ ಅನುಪಲ್ಲ). ೨. ತೆರೆ ; ಜವನಿಕೆ ; ಪರದೆ : "ಜವನಿಕೆ ಮುಸುಕಂ" (ಕಾರಪ. ೦೩). **ಮುಸುಕು₂** : ೧. ಮುಸುಕಿರ್ದ ಭವಬಂಧನವ ತೆಗೆದು ಕಳೆವಂತೆ ಮುಸುಕಂ ತೆಗೆದಂ (ಸಿದರ. ದೀ. ೭೭-೦೪) ; ತಲೆಯ ಮುಸುಕಿನ ಕಂಗಳೊಜಿತೆಸು ಜಲದ ಮಗುಡದ ಮುಖದ ಜನಪತಿ ಫಲುಗುಣನನೆತ್ತಿದನು (ಕುಮಾ.ದ್ರೋ. ೬-೦೭) ; ಆಗಳಿಸುತ . . . ಚರಿಯು ವೇಗೆ ಕವಿದ ಬಿಳು ಮುಗಿಲನೊತ್ತರಿಸುವಂತಾಗ ನೂಂಕಿದ ತನ್ನ ಮುಸುಕ (ಭರತ. ೧೦-೯೬). ೨. ಮುಸುಕು ಸರಿಯಲು ಮೋಡವೊಡೆದಿನಬಿಂಬದಂತೆಸೆವ ಮೊಯ್ವೊಳ ಗೆದ್ದು ಬೀದಿವರಿದು (ಸಿದ್ಧರಾ. ೨-೩) ; ಪಸರಿಸಿದ ಪರಿವಾರಮಧ್ಯದೊ ಳಸಮಬಲ ಹೊಳಕಿದನು ಮೇಘದ ಮುಸುಕನುಗಿದಿನನಂತೆ ಮೈದೋಜಿದನು ಕಲಿಭೀಮ (ಕುಮಾ.ಆ. ೭-೩೨) ; ಸೌಗಂಧಿಕಾದೇವಿಯು ಸಮೀಪದಲ್ಲಿರುವ ಸಖೀಮುಖವಂ ನೋಡಿ ಕನ್ನಡಿಯ ಮುಸುಕಂ ಮರೆಮಾಡುವಂತೆ ಸನ್ನೆಯಂ ಮಾಡಿ (ಸೌಗಂಧಿ. ೩೯೦-೧೧). ೩. ಮುಖವನ್ನು ಮರೆಮಾಡಿಕೊಳ್ಳುವ ಬಟ್ಟೆ: ಅವಕುಂಠನ; ಬುರುಕಿ : ಮೆಳ್ಪತೆ ಸುಡಿದೆಯ್ದೆವಂದು ಮುಸುಕಂ ತೆಗೆದಾಗಡೆ ಮೇಲೆವಾಯ್ದು ಬಲ್ದಡಿಗನವಂಕಿ ಬಲ್ಪಡಿಗನಂ ಪಿಡಿದೊರ್ವೆಯಿ ಮಲ್ಲಯುದ್ಧದೊಳ್ ಪೋರ್ದು (ಶಂಕರಾ. ೬-೭೭) ; ಮುಸುಕುಗಳ ಮೇಲ್ಸೆಜಿಗುಗಳ ಪಸೌಳಿಗಳ ಮಹಿಳಾಜನ ವಿರಾಜಿಸಿತು (ಶೂರರಾ. ೧-೩-೨೯). ೪. ಆವರಿಸುವಿಕೆ; ಕವಿಯುವಿಕೆ: ಮುಚ್ಚಿಕೊಳ್ಳುವಿಕೆ : ಎಸುಗೆ ಸಿಮಗೇಂದಾಯ್ತು ನಿದ್ರೆಯ ಮುಸುಕಿನಲಿ ಗೋಗ್ರಹಣದಲಿ ಜೀವಿಸಿದ ಜಾಣರು ನೀವು (ಕುಮಾ.ದ್ರೋ. ೭-೬). ೫. ಆವರಣ : ವ್ಯಾಪ್ತಿ : ಜಲಧಿಯ ಮುಸುಕನುಗಿದತಿಕರುಣೆಯೇ ಹೇಗುಜಿನ ಹರಿಬಕೆ ಕೃಪೆಯ ಮಾಡು (ಕುಮಾ.ಸ. ೦೪-೦೦೭) ; ರಸದ ಬಂಧದ ಬಿಗುಹು ಪಕ್ಕಿಯ ಮುಸುಕನುಗಿದುಳಿವುದೆ ಕುಮಾರನ ಮುಸುಡ ಮುಂದಕೆ ಬಿದ್ದು ಬದುಕು ವರೇ ಮಹಾದೇವ (ಕುಮಾ.ದ್ರೋ. ೭-೨೭). ೬. ಅಡ್ಡಪಟ್ಟಿ; ಮರೆ : ಕಂಗಳಲಿ ಕಟ್ಟಿದ್ದ ಮುಸುಕನಭಂಗನಾಗ ತೆಗೆದು ಬಿಸುಟು ನಯನಂಗಳಂ ಬಲುಹಿಂದ ತಜಿಪಜಿ ನೋಡಲು (ವಸು. ೩೦-೯೦). ೭. ಮುಚ್ಚುವ ಸಾಧನ ; ಮುಚ್ಚಳ : ಪೊನ್ನ ಕೊಪ್ಪರಿಗೆಗಳೊಳಗೆ ತೀವಿ . . . ಬಸವರಾಜನು ಮುನ್ನ ತಾಂ ಮುದ್ರಿಸಿದ ಮುಸುಕಂ ತೆಗೆಯಲೊಡನತಿನಿಸಿತ ಗರಳೋದ್ರೇಕವಹ್ನಿಪ್ರಸರಪೆಡೆಗೆಡೆಗೆ . . . ನೆಗೆವುತಿರಲು (ಬಸವ. ೫೬-೩೯). ೮. ಒರೆ; ಕೋಶ : ಮುಸುಕಿನ ಸುರಗಿ ಕೆತ್ತವು ಮುಂದಿ ದಳದುಳವಾಯ್ತು ನಿಮಿಷದಲಿ (ಕುಮಾ.ದ್ರೋ. ೭-೩). ೯. ಗುಟ್ಟು; ರಹಸ್ಯ; ಮುಚ್ಚು ಮರೆ : ಗೌಪ್ಯ ; ಮುಗುಡದ ಭರದ ಗುಜುಗುಜುಗೋಷ್ಠಿಗಳ ಜನಜನದ ಮುಸುಕುಗಳ . . . ಪಾಳೆಯದಿರವು ಲೇಸಲ್ಲೆನುತ ಬಂದನು ರಾಜ ಮಂದಿರಕೆ (ಕುಮಾ.ಕ. ೦೭-೩); ಮಾರಿಪಿಂಡು ಮತ್ತೆ ಮುಸುಕಿನ ದಂಡು ಮೈಗೆ ಮುತ್ತಿದರೇನು ವಾರಿಜನಾಭನ ವಸುದೇವಸುತನ ಸಾರುವಂಥ ಪರಿದಾಸರಿಗೆ (ಪುರಂದ. ೦-೦೩೬-೦); ಪೋಲ್ವೆಯಂ ತಿಳುಪೆಂದು ಮಗುಳೆ ಮಗುಳುಪಚರಿಸಿ ಮುಸುಕಿನಿಂ ಬೆಸಗೊಂಡರು (ಶರಶು. ೭-೨೪). ೧೦. ತೋರಿಕೆ ; ವೇಷ : ಸೋಗು : ಪುಸಿಯಾದ ಜಪ ಮಾಡುವವಗೆ ಮುಸುಕಿನ ಡಂಭವದೇಕೆ (ಪುರಂದ. ೦-೩೦-೩). ೧೧. ಮಂಕು ; ಮಬ್ಬು : ಹಿಡಿದ ದುಗುಡದ ಕವಿದ ಮುಸುಕಿನ ಗಡಣದಲಿ ಗುರುಕೃಪ ಜಯದ್ರಥರೊಡನೊಡನೆ ಬರುತಿರ್ದುದಖಿಳಮಹೀಶಪರಿವಾರ (ಕುಮಾ.ಭೀ. ೦೦-೦೭) ; ಗಂಡುಅಧ್ಯಾಪಕರಿಗೆಲ್ಲ ಒಂದು ಬಗೆಯ ನಿರುತ್ಸಾಹದ ಮುಸುಕು ಕವಿಯುತ್ತದೆ (ಹಸುಹೊ. ೩೨೭). ೧೨. ಪ್ರಕಟವಾಗದಿರುವಿಕೆ ; ವ್ಯಕ್ತ ವಾಗದಿರುವಿಕೆ : ಮುಸುಕು ಪೊಣೆಸುತ್ತು ಹೊದಕೆಗಳಸದೃಶದೊಳಿಪಿಕ ವಿಚಿತ್ರಪುಳಕವಿಲಾಸಪ್ರಸರಂ ಸನ್ನಾಹನವಿಂತೆಸೆವಾವೇಗಕ್ಕೆ ತರದಿನನು ಭಾವಂಗಳ್ (ರಸರ. ೪-೧೧೨ ಸೂತ್ರ). **ಮುಸುಗು₂** : ೧. ಥಂಡಿಯ ಮುಸುಗಿ ನಲ್ಲು ಬೆಚ್ಚಗೆ ಕನಸು ಕಂಡಿಲ್ಲ ? (ನೇಮು. ೩೩-೦). ೩. ಅರಸೀ ದೊಡ್ಡವ್ವಾ ಮುಸುಗೀನಾ ಬಣ್ಣಾಕೆ ಎರಸವ್ರ ನೀಲೀಕುದುರೇಯಾ (ಹುಬ್ಬ. ೭೩) ; ಮುಸುಗುಹಾಕಿಕೊಂಡರೆ ಏನು ನೋಡುವುದಕ್ಕಾಗುತ್ತೆ ಮಣ್ಣು! (ಶಾಮೇಬ್. ೩೪). ೮. ಇಂದು ಮುಸುಗಿನ ಮರೆಯ ಸುರಗಿಯಂದದಿ ಬರ್ಪಂ (ನವಮೋ. ೨೭-೩೪).

**ಮುಸುಕಿನ ಗುದ್ದು** = ೧. (ಆಲಂ) ಒಳಗೊಳಗೇ ಅನುಭವಿಸುವ ಹಿಂಸೆ ; ಹೊರಗೆ ಕಾಣದ ನೋವು : ಬಿಸಿ ಆಲೂಗೆಡ್ಡೆಯು ಬಾಯೊಳ ಗಿಟ್ಟಂತೆ ಕಸಿಮಿಸಿಗೊಳುತಿದೆ ಜೀವ ಹುಸಿಯಲ್ಲವೊ ಹಾಳುಸಂಸಾರದೀ ಚಿಂತೆ ಮುಸುಕಿನ ಗುದ್ದಲ್ಲೊ ದೇವ (೩೦ಶಾಕ. ೯೯-೮೯). ೨. ಕಣ್ಣಿಗೆ ಕಾಣ ದಂತೆ ಕೊಡುವ ಪೆಟ್ಟು ; ನೇರವಲ್ಲದ ಆಕ್ಷೇಪಣೆ : ಮುಸುಕಿನ ಗುದ್ದಿಗವಕಾಶವಿಲ್ಲದ ನಿಷ್ಕಾಪಟ್ಯ ; ಕೃತ್ರಿಮಸ್ಥಾನಮಾನಗಳಿಗಳುಕದ ನಿರ್ಭಯ. . . ಇವು ಅವರ ವ್ಯಕ್ತಿತ್ವದ ಪ್ರಧಾನಗುಣಗಳು (ಶ್ರೀಕೃಶ್ರ. vi, ಮುನ್ನುಡಿ). **ಮುಸುಕಿನ ಜೋಳ** = ಒಂದರ ಮೇಲೊಂದು ಎಲೆಯ ಮುಸುಕುಗಳನ್ನು ಉಳ್ಳ ಒಂದು ಬಗೆಯ ಜೋಳ : ಮುಸುಕಿನ ಜೋಳದ ಹಿಟ್ಟಿನ ರೊಟ್ಟಿಯನ್ನು ತಿಂದು, ಹಾಲು ಕುಡಿಯುವರು (ಶಾಂಕೃ. II. ೯೦೬); ಮುಸುಕಿನ ಜೋಳವನ್ನು ಹೆಚ್ಚಾಗಿ ಬೆಳೆಯುವಂತೆ ಸರಕಾರ ನಮ್ಮ ದೇಶದಲ್ಲಿ ಪ್ರಚಾರ ಮಾಡಬೇಕು (ಸರವ. ೩೪). **ಮುಸುಕಿನ ವಡೆ** = ಒಂದು ಬಗೆಯ ವಡೆ : ಉದ್ದಿನ ಬೇಳೆಯಂ ನನೆಯಿಕ್ಕಿ ತೊಳೆದು ಒರಳೊಳಾಡಿಸಿ . . . ತುಪ್ಪದಲ್ಲಿ ಬೇಯಿಸುವುದು. ಅದರ ಹೆಸರು ಮುಸುಕಿನ ವಡೆ (ಸೂಶಾ. ೦-೬೭ ಅ೨೭). 'ಮುಸುಕೊಡೆ' ಪರಾ. **ಮುಸುಕಿನೊಳಗಿನ ಗುದ್ದು** = ೧. ಮುಸುಕಿನ ಗುದ್ದು ೧ : ಈ ಮುಸುಕಿನೊಳಗಿನ ಗುದ್ದು ನನಗೆ ಸಹಿಸಲಸಾಧ್ಯವಾಗಿದೆ (ರೂ೦). ೨. = ಮುಸುಕಿನ ಗುದ್ದು ೨ : ಏನಿದ್ದರೂ ನೇರವಾಗಿ ಮಾತನಾಡು. ಈ ಮುಸುಕಿನೊಳಗಿನ ಗುದ್ದು ಸಾಕು (ರೂ೦). [< ಮುಸುಂಕು$_1$./ತೆಲು. ಮುಸುಕು, ಮುಸುಗು, ಮುಸುಗುಡು, ಮುಸುವು]

**ಮುಸುಂಕುಗಳೆ** (ಕ್ರಿ). ಆವರಣವನ್ನು ನೀಗು,–ಸರಿಸು : ದಂತಂ ಮುಸುಂಕುಗಳೆಯಲ್ಕಾಂತಿವೆ ನಡು ತನುವನೆಳಸದಿದೆ. . . ಕಾಂತಿ ಶರೀರ ಮುಸುರ್ಚಲಿದೆ ಪಾರ್ವತಿಯಾ (ಗಿಂಕ. ೪-೭). [ಮುಸುಂಕು$_2$ + ಕಳೆ$_1$]

**ಮುಸುಂಕುಗಳ್ತಲೆ**, ಮುಸುಕುಗತ್ತಲೆ (ನಾ). ಆವರಿಸಿರುವ ಕತ್ತಲೆ: ಕವಿದಿರುವ ಅಂಧಕಾರ : ನಸುಗಳ್ತಲೆಯುರೆಗಳ್ತಲೆ ಮುಸುಂಕುಗಳ್ತಲೆ . . . ರಸೆಗಳ್ತಲೆಯೆನಿಸಿ ಕೂಡೆ ತೀವಿತು ತಿಮಿರಂ (ಗಿಂಕ. ೪-೬೩). **ಮುಸುಕುಗತ್ತಲೆ** : ಮುಸುಕುಗತ್ತಲೆಯಲ್ಲಿ ಇನ್ನೂ ಕಣ್ಮುಚ್ಚಿಕೊಂಡವರಿಗೆ ಈ ಚಿಲಿಪಿಲಿಹಾಡಿನ ಅರ್ಥವಾಗುತ್ತಿರಲಿಕ್ಕಿಲ್ಲ (ಸುಹಿವಿ. ೯೩).
[ಮುಸುಂಕು$_1$ + ಕಳ್ತಲೆ (< ಕಱ್ತಲೆ)]

**ಮುಸುಂಡಿ$_1$**, ಮುಚ್ಚುಂಡಿ, ಮುಸಂಡಿ, ಮೂಸಂಡಿ, ಮೂಸುಂಡಿ (ನಾ). ೧. ವಕ್ರಬುದ್ಧಿಯುಳ್ಳ ವ್ಯಕ್ತಿ : ಕೊಂಕುಸ್ವಭಾವದ ವ್ಯಕ್ತಿ : ಮೊನೆಗಾತಿ ಮುಗುದೆ ಮುಸುಂಡಿಯಾಗಲಿ ನೆರೆವನೆ ಗರತಿಯು ನೀಕರಿಸಿದೆ . . . ಆವರಿಸುವುದು (ಹಂಬ. ೪-೩೭). ೨. ಸಂಕೋಚಸ್ವಭಾವದ ವ್ಯಕ್ತಿ ; ಮುಖಹೇಡಿ ; ಅಂಜುಕುಳಿ : ಆ ಹುಡುಗ ಬಲು ಮುಸುಂಡಿ. ನಾಲ್ಕು ಜನರೊಂದಿಗೆ ಸೇರುವುದಕ್ಕೆ ಹಿಂಜರಿಯುತ್ತಾನೆ (ರೂ೦). (ಗು). ೩. ಹೇಡಿಯಾದ ; ಅಂಜುಕುಳಿಸ್ವಭಾವದ : ಎಲೋ ಲಕ್ಷ್ಮಣಾ, ನಿನ್ನನ್ನು ಈ ಮುಸುಂಡಿ ರಾಕ್ಷಸ ಕೊಂದು ಬಂದನೆ ? (ಮುಂಬಬು. ೬-೨೯೩). **ಮುಚ್ಚುಂಡಿ** : ೧. ಆ ತಿರುಜ್ಞಾನಸಂಬಂಧರ ಸಮರ್ಥಿಕೆಯಂ ಕಂಡುರ್ಬಿ ಕೊರ್ಬಿ. . . ಶಿವಭಕ್ತಜನವುಬ್ಬಿ ಲಿಸುತಿರ್ಪ್ಪುದಂ ನೋಡಿ ಕಡುಗಾಯ್ದು ಮುಚ್ಚುಂಡಿಗಳಪ್ಪ ಛಂಡಸಪಣರಗ್ನಿಸ್ತಂಭಮೆಂದು ಮುಳಿದು ಮತ್ತಮಿಂತೆಂದರ್ (ತ್ರಿಪುಪು. ೩೩-೫೯) ; "ಹಟಮಾರಿ" (ತ್ರಿಪುವಿ. ೯೩೯). **ಮುಸಂಡಿ** : ೧. ಆಗ ಪುರಂದರಕೋಟೆಯೊಳಗೆ ಆ ಮುಸಂಡಿಗಳು ಶ್ರೀಧರಸ್ವಾಮಿಗಳನ್ನು ಸೆರೆಯಲ್ಲಿಟ್ಟಿದ್ದರು (ಳವಂ. ೯೯). ೨. ಅವನನ್ನು ಕೆಲವರು 'ಮುಸಂಡಿ' ಎಂದೂ ಕೆಲವರು 'ಸೀಬೈಟು' (ಅರ್ಧಹುಚ್ಚು) ಎಂದೂ ಕರೆಯುವರು (ಶ್ರೀಳಪ. ೧). **ಮೂಸಂಡಿ** : ೨. ಅವರ ರಕ್ತದಲ್ಲಿ ಬರಿಯ ಬಿಳಿಯ ಕಣಗಳೇ ಇರಬೇಕು. ಏನು ಸಪ್ಪೆಮುಖ . . . ಮೂಸಂಡಿಗಳು ! (ಆರಹೂ. ೧೨೪). ೩. 'ಮೂಸಂಡಿದೊತ್ತು' ಪರಾ. **ಮೂಸುಂಡಿ** : ೩. ಕೊಂದು ಬಂದನೆ ನಿನ್ನನೀ ಮೂಸುಂಡಿ ರಕ್ಕಸನು (ತೊರರಾ. ೬-೪೨-೩೩). [ದೇ.‖ ತಮಿ. ಮುಚುಣ್ಣರ್ = ಕೀಳು ದರ್ಜೆಯ ಜನ; ತುಳು. ಮುಸುಂಡಿ, ಮುಸುಡಿ = ನಾಚಿಕೆಗೆಟ್ಟ ಹೆಂಗಸು]

**ಮುಸುಂಡಿ$_2$**, ಮುಸುಂಡೆ, ಮುಸುಡ, ಮುಸುಡಿ$_2$ (ನಾ). ೧. ಒಂದು ಬಗೆಯ ಯುಧ : "ತೋಮರ . . . ಮುಸುಂಡಿ ಸ್ಫೋಟಗದೆ ಶಂಕು ಯಷ್ಟಿಗಳ್ ಕೈದುಗಳ ಭೇದಮುಕ್ಕುಂ" (ಮಂಗರಾ. ೮೮-೩೮); ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾವಿವಿಧಾಯುಧಂಗಳೊಳಿಟ್ಟುಂ. . . ಕಾದುವಾಗಳ್ (ಶಂಕಶಾ. ೦೨-೦೦೯ ವ); ಅಸಿಮುಸಲ ಕಣಾಯ ಕಂಪನ ಮುಸುಂಡಿ ಬಿಂಡಿವಾಳ. . . ಪಾಶಾಂಕುಶಾದಿ ಶಸ್ತ್ರಾಸ್ತ್ರಂಗಳೊಳೆಚ್ಚುಮಿಟ್ಟುಮಿಱಿದುಂ (ಶಂರಾಮಾ. ೦೩-೭೩ ವ): ಮುದ್ಗರ ಮುಸುಂಡಿ . . . ಸುರಗಿ ಮೊದಲಾಗಿರ್ದ ಕೈದುಗಳ ಪರಿವಿಡಿಯೊಳುರವಣಿಸಿ ಪೊಯ್ದುಂ (ಕೈಶುಶಾ. ೦೨-೨೪). **ಮುಸುಂಡೆ** : ೨. ಒಂದು ಬಗೆಯ ಸಸ್ಯ : 'ಪೆಮುರ್ಸಸುಂಡೆ' ಪರಾ. **ಮುಸುಡ** : ೧. ಮುದ್ಗರ ಕುಂತ ಮುಸುಡ ಭಲ್ಲೆಯ ಬಿಂಡಿವಾಳಂಗಳಂ ಕಳೆದು ಮುಸಕದಿಂದೈದಿದರ್ ಪಟುಭಟರ್ (ಸಂಪು. ೨೩-೩೫). **ಮುಸುಡಿ$_2$** : ೧. ದಂಡವಲಗೆಯ ಮುಸುಡಿ ಮುದ್ಗ ಕಠಾರಿಯುಬ್ಬಣದ ಗಂಡುಗಲಿಗಳು ಕವಿದರು (ಕುವ್ಯಾದ್ರೋ. ೫-೭೦). 'ಭುಸುಂಡಿ' ಪರಾ. [< ಪ್ರಾ. ಮುಸುಂಢಿ. ಮುಸಂಢಿ./ಸಂ. ಮುಸುಂಠೀ./ತಮಿ. ಮುಚುಣ್ಣಿ; ತುಳು. ಮುಸುಂಡಿ, ಮುಸುಡಿ; ತೆಲು. ಮುಸುಂಡಿ]

**ಮುಸುಂಡಿತನ** (ನಾ). ಮುಖಹೇಡಿತನ ; ಸಂಕೋಚಸ್ವಭಾವ : ಅಲ್ಲಿ ಕೆಲಸ ಮಾಡಬೇಕಾದರೆ ನಿನ್ನ ಮುಸುಂಡಿತನವನ್ನು ಮೊದಲು ಬಿಡಬೇಕು (ರೂ೦). [ಮುಸುಂಡಿ$_1$ + – ತನ]

**ಮುಸುಂಡು**, ಮುಸಡಿ, ಮುಸುಡಿ$_1$, ಮುಸುಡು, ಮುಸುಡೆ, ಮುಸುಣಿ, ಮುಸುಳಿ (ನಾ). ೧. (ಪ್ರಾಣಿಗಳ) ಉದ್ದವಾಗಿರುವ ಮುಖ—ಮೂತಿ : ಜಲದೊಳಗೆ ಮುಸುಂಡನಿಟ್ಟು ನೀರಂ ಕುಡಿಗುಂ. . . ಚಿರಾಯುಷಪ್ಪುದು ತುರಗಂ (ಅಶ್ವಶಾ. ೩-೨೭); ಹರಿಣಗಣಂ ಬಂದು ಮುಸುಂಡಂ ನೀಡಿ ಕಣ್ಮುಚ್ಚಿ ನೀರಂ ಕುಡಿದು ತಣಿದು ಮರಳ್ವುವು (ರಾಮಾಶ್ವ. ೩೦-೦೯). **ಮುಸಡಿ** : ೨. (ವಿಶೇಷವಾಗಿ ತಿರಸ್ಕಾರಾರ್ಥದಲ್ಲಿ ಮನುಷ್ಯರ) ಮುಖ ; ಮೋರೆ : ಅವನ ಮುಸಡಿ ಕಂಡರೆ ಹೇಸಿಗೆಯಾಗುತ್ತಿತ್ತು ನನಗ (ಮುಣ್ಣುಹ. ೦೮೬). **ಮುಸುಡಿ$_1$** : ೧. ಯಾವ ಅಶ್ವಕ್ಕೆ ಊರ್ಧ್ವಮುಖವಾಗಿ ಬಗ್ಗಿರುವ ಕೊನೆಯುಳ್ಳದ್ದಾಗಿ ವಾಮಭಾಗದಲ್ಲಿ ರೇಖೆಯು ಮುಸುಡಿಯಲ್ಲಿರುವದೊ ಆ ಅಶ್ವವನ್ನು ವ್ಯಾಗಜಂಭವೆಂಬ ರೋಗವು ಐದನೇ ವರ್ಷದಲ್ಲಿ ಕೊಲ್ಲುವುದು (ಸೌಗಂಧ. ೩೨೦-೦೩). ೨. ಪಾತಕರ ಮುಸುಡಿ ನೋಡಲಾಗದು (ಗಣಶಾ. ೦೩೮-೩); ಮುಸುಡಿ [ಶಾಕಾಂ. ಡು]ಗಳು ಕಂದಿದವು ಕುಂದಿದವೆಸೆವ ತನುಕಾಂತಿಗಳು (ತೊರರಾ. ೨-೪-೦೭) ; ಇಲ್ಲಿ ಕಳಸೇ ಅವನನ್ನು, ಅವನ ಮುಸುಡಿಯನ್ನಾದರೂ ನೋಡ್ತೇನೆ (ಮೂರುದಾ. ೦೭೬). **ಮುಸುಡು** : ೧. ಸೂಕರನಶುದ್ಧವ ತಿಂದು ಬಂದಜಿ ಮುಸುಡ ಒಂದು ಮೂಸಿ ನೋಡುವಂತೆ (ಮುಡಿಷೂ. ೮-೯) ; ವೃಷಭನು . . . ಕಿವಿಯುಸಲುಗಿಸುತ ಮುಸುಡೆತ್ತುತ್ತುಸಿರಿಡುತ . . . ಹತ್ತಿರಕೆ ಬಂದು (ಬಸಪು. ೩೨-೨೭); ನಾಯಿಗಳು ತಮ್ಮ ಮುಸುಡುಗಳನ್ನು ನಾಲಿಗೆಯಿಂದ ಒರೆಸಿಕೊಳ್ಳುತ್ತ . . . ಬಾಲವನ್ನು ಅಲ್ಲಾಡಿಸಿದುವು (ಊಳತ. ೯೯). ೨. "ಮುಸುಡೆನೆ ಮೊಗಂ" (ಶಬ್ದಮಂ. ೭೨) ; ಮುಸುಡೊಳಗೆ ಮೂಡಿತ್ತು ಕಾಂತಿಯಾತನ ಸತಿಗೆ (ಶಂಡೀರ. ದೇ. ೨೪೦-೦೨) ; ಭೀಮ ಕಷ್ಟವನೆಸಗಿದನು ಹಾಯೆಂದರಾದೊಡೆ ಮುಸುಡನಮರಾದ್ರಿಯಲಿ ತೀವಿನು ದೇವಸಂತತಿಯ (ಕುವ್ಯಾವಿ. ೩-೬೮) ; ಉಸುರದಿಪ್ಪರಸಂಗೆ

ಘೂರ್ಮಿಸಿ ಮಸಿಯ ಮುಸುಡಿನ ಕೈಕೆಯೆಂದೆಳು ಬಿಸುಡು ನೀ ಸಿಂಗಾರ ವೆಲ್ಲವನಡವಿಗೈದುವರೆ (ಕೌಶಿಕ. ೩-೬೮); ರಕ್ಕಸರನಬಿರೆಲ್ಲರುಂ . . . ಕಕ್ಕಸದ ಮುಸುಡವರ್ಬಹಳ ಮಾಯಾವಿಗಳ್ (ಜೈಮಿನಿ. ೦೬-೨೨). ೩. ಬಾಯಿ ; ವಕ್ತ್ರ : ಪಜಿಮೆಗಳು ಮುಸುಡಿಟ್ಟು ಓರ್ದ ಪುಷ್ಪಗಳನಲಿದು ತನಿಗಂಪನೀವ ಸೊಂಪಿಂದಲರೆ ಬಿರಿದ ಚೆಲ್ವಿನ ಸೊಬಗಿನುಳ್ಳಲರ ತಿಱಿದರಬಲೆಪ್ಪರು (ಕಾಶಿಸಂ. ೯-೨೭); ಬಸುಱ ಪೊಸೆದುಕೊಂಡು ಮುಸುಡ ಹೊಯಿದತ್ತಳುತೊಱಲಿ ದೆಸೆದೆಸೆಗಳಲ್ಲರಿಪರಿದು ನೋಡುತಲಾಗ ಅಸಮುಸದ್ದುಗ್ರುವಿನ ಶಿರವ (ಪದ್ಮಣಾ. ೦೯-೨೩). ೪. ಪಕ್ಷಿಗಳ ಕೊಕ್ಕು.—ಚಂಚು : ವಾಯಸಂ ಸ್ವಭಾವಚಪಲನಪ್ಪುದಱಂ ಕೆಲದೊಳಿರ್ದ ಗುಂಡಿಗೆಯ ನೀರಂ ಕಂಡಲ್ಲಿ ಮುಸುಡಂ ನೀಡುವುದುಂ (ಪಂಚತಂ. ೨೯೯-೬) ; ಪಕ್ಕಿಗಳು ಪಕ್ಕಗಳ ಮುಸುಡಿಂ ಕುಕ್ಕುತಿಕ್ಕಿಲಬಲವನಾರೈದಕ್ಕರಿಂ ಸರಗೈದು ಸರಸರಸದರಿ ಮಾಮರನ (ಕಾವೇಮ. ೩-೦೩). ೫. ಕುದುರೆಯ ಮೂಗು ಅಥವಾ ಮೂಗಿನ ಹೊಳ್ಳೆ : "ಪ್ರೋಥಃ ಘೋಣಾ—ಈ ೨ ಮುಸುಡು" (ಹಲಾಯು. ೬೨-೨೬೭) ; "ಮುಸುಡು ಘ್ರಾಣಂ ಪ್ರೋಥಮಕ್ಕು" (ಮಂಗರಾ. ೮೦-೦೩). ಮುಸುಡೆ : ೨. ನೀಲ . . . ಬಲಗೈಮುಷ್ಟಿಯಿಂದ ಫಪ್‌ನ ಮುಸುಡೆಗೆ ಬಿಗಿದನು (ಬಂಗಾತ. ೬) ; ಹೋಗು, ಹೊರಟುಹೋಗು ಮೊದಲು ! . . . ನಿನ್ನ ಮುಸುಡೆ ಬೇಡ (ಕಥಾಸ. ೨೦೬). ಮುಸುಣೆ : ೨. ಮೂಗರಿದಸು ಮುಸುಣೆಸಹಿತ (ಕುಮಾರಾಮ. ೩೯೯). ಮುಸುಳಿ : ೨. ನಾಸಿಕಾ ಚೆಂದ, ಚಿನ್ನಕ್ಕ ? ಕರಿಮುಸುಳಿ (ಮೇಘಕು. ೬೩೬). 'ಮುಸುಂಬು₁' ಪರಾ.

[ದೇ.॥ ತುಳು. ಮುಸುಂಡು, ಮುಸುಂಟು. ಮುಸುಂಡಿ, ಮುಸುಡಿ, ಮುಸುಡು; ಕೊಡ. ಮುಡೀ; ಕೋತ. ಮೊಂಡ್]

**ಮುಸುಂಡೆ** 'ಮುಸುಂಡು₂' ನೋ.

**ಮುಸುಂಬ** 'ಮುಸುಂಬು₁' ನೋ.

**ಮುಸುಂಬಿ** 'ಮೂಸಂಬಿ' ನೋ.

**ಮುಸುಂಬಿಡು** (ಕ್ರಿ). ಮೂತಿಯನ್ನು ಚಾಚು : ಪಸಿವಿನೆಸಕದಿಂದೆಸಳ ಕುಸುಂಕಱೊಳ್ಮುಸುಂಬಿಟ್ಟು ಮಿಸುಪ ಪೊಸ ಬಂಡನುಂಡು ಓಡುಗೊಂಡು ಮಂಡಳಿಸಿ ಕೆಲದ ಪುಂಡರೀಕದೊಳ್ಮಡಿಸಿದ ಮರಾಳ ಮಂಡಳಿಕ ಕಾಂಡಜಳದ ಮಂಡಳಿಗೆ ಶಂಕೆಯಂ ಭೋಂಕನಾಗಿಸಿ (ರಾಜಶೇ. ೨-೭೬ ವ).

[ಮುಸುಂಬು₁ + ಇಡು₁]

**ಮುಸುಂಬಿಳಿಪು** (ಕ್ರಿ). ಮೂತಿಯನ್ನು ಇಳಿಸು.—ಇಡು : ತುಂಬಿಗೆ ಮುಸುಂಬಿಳಿಪಲ್ಕರಲೊಂದು ತಳ್ತುಗೊಂದಳಿಸದಿನಿತ್ತು ವೃಕ್ಷ ಲತಿಕಾಕ್ಷು ಪಡಾಳದೊಳೆಂದು ನೋಟಿಪ್ಪಡೇನಳವಿಗಳುಂಬಮಾಯ್ತೊ ಪೊಸದೇಸೆಯ ಸಾಂತ ವಿಳಾಸಿನಿಜನಂ (ಶಂಕ್ರಕು. ೬-೦೦೨). [ಮುಸುಂಬು₁ + ಇಳಿಪು]

**ಮುಸುಂಬು₁**, ಮುಸುಂಬ (ನಾ). ೧. (ಪ್ರಾಣಿಗಳ) ಉದ್ದವಾಗಿರುವ ಮೂತಿ : ಪೊಸತಲರ್ದಂಭೋರುಹದೊಳ್ ಮುಸುಂಬು ಮುಱುಗುವಿನ ಪೆಱಗಿ ಗಂಧಮನಾಘ್ರಾಣಿಸಿತುಮಳಮಳಿಸುವಳಿಗಳ ಪಸವೋಡಿದುದಿಲ್ಲ (ಅಜಿತ. ೬-೬೬) ; ಮುಸುಂಬಿಂ ಮುಱುಗುವಿನಮರ್ದಿ ಮಧುಕರ ಕುಳಮುಂಡುವು ತಮ್ಮ ಪೆಯ್ಗೆ ಮೆಚ್ಚಿದ [ಬಂಡಂ] (ಧರ್ಮಪಾ. ೦೦-೯೨); ಆಳಿ ಮುಸುಂಬನಿಕ್ಕದ ಕುಸುಮಂ ಬಳಸದ ಸಿಧಿ ಬಹುಪುಣ್ಯದ ಫಲಮಾ ಪಥು ಸೇರೆ ಸಾರವಾಱ್ತೆ ಸಂಸಾರಂ (ಧಮ್ಮಕ. ೦-೦೦೬). ೨. ಮುಖ ; ಮೋರೆ: "ಮುಸುಂಬೆಂದು ಮುಸುಡು" (ಕಶಬಾ. ೬೬-೯೬೦); ಮುಯ್ಯು ಮುಸುಂಬು ಮೂಗು . . . ಕಣ್ ಕದಂಪುವೆಂಬೆಡೆಗಳೆ ಸಟ್ಟುವುರ್ಚಿದುವು ನೀರ್ದುವು ಸೀಳ್ದುವು ಪಾರ್ಥನಂಬುಗಳ್ (ಪಂಪಭಾ. ೦೦-೦೩೬): ಪೊಯ್ದು ಪೊಪ್ಪುಂಗೈಯಿಂ ಮೊಗವುಂ ಮುಸುಂಬು ಬಿಜುಂಬುವುಂಬೋಗೆ ವೀರಂಗೆ ದೋರ್ಭಂಗಂ ಮಾಡಿದನೇನೆಲಂಘ್ಯಬಲನೋ ರಾಮಾನುಜಂ ಲಕ್ಷ್ಮಣಂ (ಪಂಪರಾ. ೯-೨೯). ಮುಸುಂಬ : ೧. "ಮುಸುಡು ಮುಸುಂಬ

ಮದಕ್ಕುಂ" (ಕಬಿಕೌ. ೨೦೦). 'ಮುಸುಂಡು' ಪರಾ.

[ದೇ.॥ ಕುವಿ. ಮೂಂಬು, ಮೂಂಬೂ]

**ಮುಸುಂಬು₂** (ನಾ). ತೆರೆ ; ಆವರಣ ; ಆಚ್ಛಾದನೆ ; ಮುಸುಕು : "ಮುಸುಕಿಗೆ ಮುಸುಂಬಕ್ಕು" (ಶಬ್ದಮ. ೩೬): ನಿತ್ಯಬಿಂದುಗೆ . . . ಹಸುಂಬೆ, ಮುಸುಂಬು [ಶಾಕಾಂಬೆ] (ಕರ್ಣಾಟ. ೩೬ ಶ್ರ ಪೂ೩). [< ಮುಸುಕು₂]

**ಮುಸುಕ** 'ಮುಸುಂಕು₂' ನೋ.

**ಮುಸುಕಿ** (ನಾ). ಎತ್ತು, ದನಕರುಗಳು ಹೊಲದ ಕೆಲಸ ಮಾಡುವಾಗ ಏನನ್ನೂ ತಿನ್ನದಂತೆ ಅವುಗಳ ಬಾಯಿಗೆ ಕಟ್ಟುವ ಬಿದಿರಿನ ಬುಟ್ಟಿ ಅಥವಾ ಹಗ್ಗದಿಂದ ಮಾಡಿದ ಜಾಲರಿಯಂತಹ ಸಾಧನ; ಬಾಯಿಕುಕ್ಕೆ : ಎತ್ತುಗಳಿಗೆ ಮುಸುಕಿ ಹಾಕು (ಕೂ೨). 'ಮುಸುಗುಕ್ಕೆ' ಪರಾ.

[ <ಮುಸುಕು₂. /ಹಿಂ. ಮುಸಕಾ; ಮರಾ. ಮುಸಕೀ. ಮುಸಕೇ. ಮುಸ್ಕೇ, ಮುಸಕ್ಯಾ ]

**ಮುಸುಕಿಕ್ಕು** (ಕ್ರಿ). ಮುಸುಕು ಹಾಕಿಕೊಳ್ಳು : ನೀರಿನಲಿ ಪುಟ್ಟಿದುಸು ಕಲೆಸಿ ಬರಿಯುತ ಮೂಗ ಬೇರಸ್ಸು ಹಿಡಿದು ಮುಸುಕಿ[ಕ್ಕಿಕೊ]ಗ್ಗಿಲೇಸುಂಟು (ಪುರಂದ. ೧-೯೯-೧). [ಮುಸುಕು₂ ( < ಮುಸುಂಕು₂) + ಇಕ್ಕು]

**ಮುಸುಕಿಡು** 'ಮುಸುಂಕಿಡು' ನೋ.

**ಮುಸುಕು₁** 'ಮುಸುಂಕು₁' ನೋ.

**ಮುಸುಕು₂** 'ಮುಸುಂಕು₂' ನೋ.

**ಮುಸುಕುಗತ್ತಲೆ** 'ಮುಸುಂಕುಗತ್ತಲೆ' ನೋ.

**ಮುಸುಕುದಲೆ** (ನಾ). ಮರೆಮಾಡಿಕೊಂಡಿರುವ ತಲೆ: ಮುಸುಕುಹಾಕಿಕೊಂಡಿರುವ ತಲೆ : ನಾರಿಯರ ಕೈಹೊಯ್ಲು ನಗೆಯ ನಿಷ್ಠಾರ ಎಡಿದುದು ಮುಸುಕುದಲೆಯು ಮಹೀರಮಣರೋಸರಿಸಿ ಸಿಂಹಾಸನವ ಸಾರಿದರು (ಕುಮಾ೫. ೦೯-೬). [ ಮುಸುಕು₂ ( < ಮುಸುಂಕು₂) + ತಲೆ₁ ]

**ಮುಸುಕುವಲೆ** (ನಾ). ಮೃಗ, ಪಕ್ಷಿಗಳ ಮೇಲೆ ಕವಿಯುವಂತೆ ಹಾಕುವ ಒಂದು ಬಗೆಯ ಬಲೆ : ಜವಿವಲೆ ಮುಸುಕುವಲೆ ಬಿತ್ತರದ ನೇಣ್ವಲೆ ಮೊಕರವಲೆ ಬೇಡರ ಸಿರದೊಳೊಪ್ಪಿದುದು (ಶಾಸ್ತ್ರಶಾ. ೩-೦೯).

[ ಮುಸುಕು₁ (< ಮುಸುಂಕು₁ ) + ಬಲೆ₁ ]

**ಮುಸುಕೆಳೆ** 'ಮುಸುಂಕೆಱೆ' ನೋ.

**ಮುಸುಕೆಱೆ**, ಮುಸುಕೆಳೆ (ಕ್ರಿ). ೧. ಹೊದೆಯಿಸು : ಆಚ್ಛಾದಿಸು : ಅಱಿಲ ಪಱಿಯುಟ್ಟಿರುಳ್ ಪೊಗಸಿಂಗೆ ಮುಸುಕೆಱೆದು ಬರ್ಕಂದು . . . ಪಂಬಲಿಸುವಯ್ ನೀನ್ (ಇದ್ವಶ್ರ. ೨-೨೮). ಮುಸುಕೆಳೆ : ೨. ಹೊದೆದುಕೊಳ್ಳು : ಅದಳು ಚಳಿಯಿಂದ ಮುಸುಕೆಳೆದು ಮಲಗಿದವಳು (ಕೂ೨).

[ಮುಸುಕು₂ (< ಮುಸುಂಕು₂) + ಎಱೆ₁]

**ಮುಸುಕೊಡೆ** (ನಾ). ಒಂದು ಬಗೆಯ ವಡೆ : ಸುಫೇಣಿ ಮುಸುಕೊಡೆ ಬೆಣ್ಣೆದಜಿಗು ಹಾಲುಂಡೆ . . . ಎನಿಪ್ಪವಂ . . . ಪರವೆ ಗಡಣಿಸಿದಳಾಗ (ತೀರ್ಥಮ. ೦೦-೨೮). [ಮುಸುಕು₂ ( < ಮುಸುಂಕು₂ ) + ಒಡೆ₃ ( < ವಡೆ) ]

**ಮುಸುಗರೆ** (ಕ್ರಿ). ಆಯಾಸ, ಸಿಟ್ಟು ಮುಂತಾದುವುಗಳಿಂದ ಮುಸು ಮುಸು ಎಂದು ಶಬ್ದ ಮಾಡು : ಕುತ್ತವದು ಬಂದು ಮುಸುಗರೆವ ಮನುಜಂಗೆ ಮತ್ತೆ ಕಿಚ್ಚೀಕೆ (ಸರ್ವಜ್ಞ. ೦೯೯೬) ; ಹೊಸದಾಗಿ ಹೂಡಿದ ಮೂಡಲ ಹೋರಿ ಮುಸುಗರೆದು ಅಡ್ಡಾದಿಡ್ಡಿ ಜಗ್ಗುತಿದೆ (ಶಿಂಮು. ೩೨-೩).

[ ಮುಸು₁ + ಕರೆ₁ ]

**ಮುಸುಗಿಡು** 'ಮುಸುಂಕಿಡು' ನೋ.

**ಮುಸುಗಿಸು** (ಕ್ರಿ). ಹೊದೆಯಿಸು; ಮುಚ್ಚು : ಧೌತಾಂಬರವ ವನಿತೆಯರು ಸಿರಿಪಿಡಿದು ಮುಸುಗಿಸಿ ವೇಲಿಂದನು ಕುರುಳೊಳಗೆಗೈದ ಭುಜಮೊಳಗೆಳ

ವಿನಯದಿಂ ಮುಸುಂಗಿಸುತೆ (ನವಪೋ. ೨೩-೧೦).

[ಮುಸುಂಗು$_2$ (< ಮುಸುಂಕು$_2$) + — ಇಸು$_3$]

**ಮುಸುಗು$_1$** ' ಮುಸುಂಕು$_1$ ' ನೋ.

**ಮುಸುಗು$_2$** ' ಮುಸುಂಕು$_2$ ' ನೋ.

**ಮುಸುಗುಕ್ಕೆ** (ನಾ). =ಮುಸುಕಿ: ಎಣೆ ಬಿಟ್ಟಾದ ಮೇಲೆ ವನದ ಮುಸುಗುಕ್ಕೆ ಬಿಚ್ಚು (ರೂಢಿ). [< ಮುಸುಕು$_2$ + ಕುಕ್ಕೆ$_1$]

**ಮುಸುಗುಗಟ್ಟು** (ಕ್ರಿ). ೧. =ಮುಸುಗರೆ: ಘನರೋಷಾಗ್ನಿಯ ಕೊರ್ವು ಪರ್ವೆ ಮುಸುಂಗುಗಟ್ಟುತ್ತಿರ್ಪಂ . . . ಪಳಂಚಿದುವು ಕೋಣಂಗಳ್ (ಕಲಿಶ. II, ೩೬೦ ಪಂಕರದೀಕ್ಷಿತ ಕೃ೨೦ರ) ; ಕಾಡ ಹಂದಿಗಳು ಮುಸುಗುಗಟ್ಟುತ್ತ ಮುಂದುವರಿದವು (ಕಕಥೆ. ೭-೦೦೩). ೨. ಗೊಣಗುಟ್ಟು : ನಾದಿನಿ ಅತ್ತಿಗೆಯ ಕೂಡ ಹೊರಡಲಿಲ್ಲ. ಏನೋ ಮುಸುಗುಗಟ್ಟಿದಳು (ನಿಡಾಶ. ೯೯).

[ಮುಸು$_1$ + ಕಟ್ಟು$_1$]

**ಮುಸುಗುಡು** (ಕ್ರಿ). = ಮುಸುಗರೆ : ಗಾಳಿ ಜತಿಗೆ ನೀ ಗೂಳಿ ಹಾಂಗ . . . ಮುಸುಗುಡುತ ಹೊರಟಿ ಬಯಲಾಗ (ಕೃಕಸ. ೦೭-೦೬) ; ಕೆರಳಿದ ಸಿಂಹಿಣಿಯ ಹಾಗೆ ಆಕೆ 'ಮುಸುಗುಡುತ್ತ'ಲಿದ್ದಳು (ಬಿಕಹಾ. ೮).

[ಮುಸು$_1$ + ಕುಡು$_1$ (< ಕೊಡು$_1$)]

**ಮುಸುಗುಬ್ಬಸ** (ನಾ). (ಆಲಂ) (ದುಃಖ, ರೋಷಗಳಿಂದ ಒಳಗೊಳಗೇ ಉಂಟಾಗುವ) ಸಂಕಟ ; ತಳಮಳ ; ಮೂಗುಬ್ಬಸ : ಸೂಳುನಗೆ ಬಿಳನಗೆಯಲಡಿಗಡಿಗಾಳಿ ಮುಸು[ಪಾಠಾಂ. ಳು]ಗುಬ್ಬಸದಲಿದ್ದು ಕರಾಳ ಮತಿ ಸಂತೈಸಿ ನೆಚಿ ತನ್ನವರಿಗಿಂತೆಂದ (ಕುವ್ಯಾಸ. ೨-೭೭). 'ಮೂಗುಬ್ಬಸ' ಪರಾ. [ಮುಸುಗು$_2$ (<ಮುಸುಂಕು$_2$) + ಉಬ್ಬಸ]

**ಮುಸುಟೆ** ' ಮುಜ್ಜು$_1$ ' ನೋ.

**ಮುಸುಡ** ' ಮುಸುಂಡಿ$_2$ ' ನೋ.

**ಮುಸುಡಿ$_1$** ' ಮುಸುಂಡು ' ನೋ.

**ಮುಸುಡಿ$_2$** ' ಮುಸುಂಡಿ$_2$ ' ನೋ.

**ಮುಸುಡಿಕ್ಕು** (ಕ್ರಿ). (ಪ್ರಾಣಿಗಳು ತಮ್ಮ ಉದ್ದವಾದ) ಮೂತಿಯನ್ನು ಚಾಚು,— ನೀಡು : ತುಂಬಿ ಮುಸುಡಿಕ್ಕದ ಮಾಲರ್ (ಶ್ರೀಪುರಾ. ೨-೯೩); ಪಸಿದ ಪೆರ್ಬುಲಿವಾಯ್ಗೆ ಮೃಗಗಳ ಶಿಶುವು ಮುಸುಡಿಕ್ಕುವೊಲು ಭೂಚರ ರೆಸುವಂದ ಚೆನ್ನಾದುದು (ಪಾಗಕ. ೨೦-೬).

[ಮುಸುಡು (< ಮುಸುಂಡು) + ಇಕ್ಕು]

**ಮುಸುಡಿಡು** (ಕ್ರಿ). ೧. =ಮುಸುಡಿಕ್ಕು: ಪಜಿಮೊಗಳುಮುಸುಡಿಟ್ಟು ಪೀರ್ದ ಪುಷ್ಪಗಳನುಳಿದು . . . ಸೊಬಗಿನುಳ್ಳಲರ ತಿಟಿದರಬಲೆಯತು (ಪಾಪಕಾಂ. ೯-೩೭). ೨. ಮುಖವಿಡು ; ಮೋರೆಯಿಡು: ಮುಸುಡೊಳು ಮುಸುಡಿಟ್ಟು ನಾವೆ ಮುದ್ದಿಸುತಿರಲುಸುರದಿರ್ಪರೆ ಮಾನನಿಧಿಯೆ (ಶರ್ಕಶ. ೬-೨೫).

[ಮುಸುಡು (< ಮುಸುಂಡು) + ಇಡು$_1$]

**ಮುಸುಡು** 'ಮುಸುಂಡು' ನೋ.

**ಮುಸುಡುದೆಗೆ** (ಕ್ರಿ). ೧. ಮುಖವನ್ನು ತಿರುಗಿಸು. ೨. (ಆಲಂ) ತಿರಸ್ಕರಿಸು ; ಕಡೆಗಣಿಸು : ರಸಿಕನಲ್ಲದೆ ನರಪೂರ್ವಶಿಯಸು ಕಂಡು ಮುಸುಡುದೆಗೆವನೆಯವಳೊಳು ಹಸನಾಗದು ರತಿಯೆಂದೊಂದು ನೆವದಿಂದ ಬಿಸುಟನೆಲ (ಕುರಾಕಾಂ. ೯೯-೯೬), [ಮುಸುಡು (< ಮುಸುಂಡು)+ತೆಗೆ$_1$]

**ಮುಸುಡುದೋಱು** (ಕ್ರಿ). ಮುಖವನ್ನು ತೋರಿಸು ; ಮೋರೆಯನ್ನು ಕಾಣಿಸು : ನಿಮ್ಮವರಯ್ಯೇದು ಬೇಗದಿ ಮುಸುಡುದೋಱಿದಡಿದ ನಾನು [ಪಾಠಾಂ. ಗಾಣಿಸದೊಡಿವನು] ಮಿಸಿಮಿಲಿಮಾಡಿ ಕಂಡಿರಿಸಿಕ್ಕಿ ಪೋಗುವೆನು (ಕುರಾಕಾಂ. ೯-೦೦೬). [ಮುಸುಡು (< ಮುಸುಂಡು)+ ತೋಱು]

**ಮುಸುಡೆ** 'ಮುಸುಂಡು' ನೋ.

**ಮುಸುಡೋಣಗು** (ಕ್ರಿ). ಮೋರೆಯು ಬಾಡಿಹೋಗು ; ಮುಖವು ಕಳೆಗುಂದು : ತಗ್ಗಿತುಬ್ಬಾಳುಗಳು ಮುಸುಡೋಣಗಿ ತಂಟಿಯೋಣಗಿ ವೀರರಸ ಹಾರಿದ್ದುದು (ತುರಂಗ. ೩೬-೪೦).

[ಮುಸುಡು (< ಮುಸುಂಡು) + ಒಣಗು$_1$]

**ಮುಸುಣೆ** ' ಮುಸುಂಡು' ನೋ.

**ಮುಸುದೆ** (ನಾ). ಒಂದು ಬಗೆಯ ಸಸ್ಯ : " ಭಜೀ – ಮುಸುದೆ " (೬೫೦, ೦೦೦). [ ? ]

**ಮುಸುಮೊಗ** (ನಾ). (ಮುಸುವಿನಂತಿರುವ) ಅಂದಗೆಟ್ಟ ಮೋರೆ : ವಿಕಾರವಾದ ಮುಖ : ಮುಸುಮೊಗಮಾಯ್ತು ಮೊಗಂ ಕಾಲ ಸತ್ತುಗಂ ಪೋಯ್ತು ಪಲ್ಗಳಿಳ್ಳಾಡಿದುವೇಡಿಸುವಂತಿರ್ದಪಿರಿನ್ನುಂ ಬಿಸುಡಿರೆ ನೀವಜ್ಞ ನಿಮ್ಮ ನಿರ್ಲಜ್ಜೆಯಂ (ಅಶಪು. ೨-೦೦೦) ; ವೆಯ್ಯುವಿರಿಂದ ತುಱುಗಿದ ಮುಸುಮೊಗ ಪೆಣ್ಣ ತೆಱನಱಿಯದ ಕೂಟದೆಮ್ಮ ಪಾವನರೆ ಮಾಱಿವರೆ ಪೆಣ್ಣಿದಿರೊಳು (ಕುರಾಕಾಂ. ೯೯-೭). [ಮುಸು$_2$ + ಮೊಗ]

**ಮುಸುರ್** ' ಮುಸುಱು$_1$ ' ನೋ.

**ಮುಸುರಿಡು** (ಕ್ರಿ). ಬಳಸು ; ಸುತ್ತುಗಟ್ಟು : ನೀಡುಂ ಮೈ ಸುಬ್ಬರಾಯಾ ನಿನಗೆ . . . ಓಜಮುರ್ಸುರಿಡೆಯೊಡೆಯೊಳ್ಪಾಗಿ ನಿಲ್ವಗ್ಗಡ (ಮೈಸೂಮ. ೬-೨೨೦). [ಮುಸುರು$_1$ (< ಮುಸುಱು$_1$) + ಇಡು$_1$]

**ಮುಸುರು$_1$** ' ಮುಸುಱು$_1$ ' ನೋ.

**ಮುಸುರು$_2$** ' ಮುಸುಱು$_2$ ' ನೋ.

**ಮುಸುರು$_3$** (ನಾ). ಎಡೆಬಿಡದೆ ಸುರಿಯುವ ಮಳೆ : ಜಡಿಮಳೆ : ಸೋನೆ : ಇಂದ್ರಗೋಪದ ರುಚಿಯಿಂದೆಸೆವ ಮುಗಿಲಿಂದೆ ಜಗದೊಳ್ ಮುಸುರಲ್ಲದೆ ಬಿರಿಸು ಮುಟಿಗಳಾಗವು (ಅಬ್ಬಿಪು. ೬-೦೯). 'ಮುಸುರ್ಪು$_1$' ಪರಾ. [ ದೇ. ಹ ತೆಲು. ಮುಸುರು]

**ಮುಸುರುಗಟ್ಟು** (ಕ್ರಿ). (ಕಣ್ಣು) ಗೀಜಿನಿಂದ ಆವರಿಸು : ಗೀಜು ಕಟ್ಟಿ ಕೊಳ್ಳು : ಮಗುವಿನ ಕಣ್ಣು ಮುಸುರುಗಟ್ಟಿದೆ (ರೂಢಿ).

[ಮುಸುರು$_2$ (< ಮುಸುಱು$_2$) + ಕಟ್ಟು$_1$]

**ಮುಸುರೆ** ' ಮುಸುಱಿ ' ನೋ.

**ಮುಸುರ್ಪು$_1$** (ನಾ). ಮಳೆ ಬರುವ ಸೂಚನೆಯುಳ್ಳ ಮುಗಿಲು : ಮೋಡ : ' ಮುಸುರ್ಪುಗಟ್ಟು' ಪರಾ. [< ಮುಸುರು$_3$]

**ಮುಸುರ್ಪು$_2$** (ನಾ). (?) : "ಮುಸುರ್ಪೆನೆ ವಾರ್ಪೆನೆ ಕೈವಿಡಿದುದಕ್ಕುಂ" (ಕನ್ನಕಂ. ೧೨). [ ? ]

**ಮುಸುರ್ಪುಗಟ್ಟು** (ಕ್ರಿ). ಮಳೆಯು ಬರುವಂತೆ ಮೋಡವುಂಟಾಗು,— ಮೋಡವು ಮುಚ್ಚಿಕೊಳ್ಳು : ಸಂದಾಶ್ರಯುಜದ ಕಾಳದೊಳೊಂದಿದ ತೇರಸದ ಹಸ್ತದಿಂ ತೊಟ್ಟತ್ತಲ್ ಮುಂದಣಸುರಾಧಿಪರೆಗಂ ಮುಂದೈಸಿ ಮುಸುರ್ಪುಗಟ್ಟಿ ಪೆರ್ಮುಟಿಯಕ್ಕುಂ (ಅಬ್ಬಿಪು. ೬-೦೭೨).

[ಮುಸುರ್ಪು$_1$ + ಕಟ್ಟು$_1$]

**ಮುಸುರ್ವ** ' ಮುಸುಱು$_1$ ' ಪರಾ.

**ಮುಸುಲಮಾನ** ' ಮುಸಲ್ಮಾನ ' ನೋ.

**ಮುಸುಲುಮ** ' ಮುಸ್ಲಿಂ ' ನೋ.

**ಮುಸುಲುಮಾನ** ' ಮುಸಲ್ಮಾನ ' ನೋ.

**ಮುಸುಲ್ಮಾನ** ' ಮುಸಲ್ಮಾನ ' ನೋ.

**ಮುಸುವ** ' ಮುಸು$_2$ ' ನೋ.

**ಮುಸುವನಭತ್ತ** (ನಾ). ಒಂದು ಬಗೆಯ ನೆಲ್ಲು : ಹೆಸರಕಟ್ಟು. ಗೋಧಿ. ಮುಸುವನ ಭತ್ತದ ಅಕ್ಕಿಯ ಅನ್ನ . . . ಜೇನುತುಪ್ಪ ಇಷ್ಟನು . . . ಪಥ್ಯವೆಂದು ದೊಡ್ಡ ಋಷೀಶ್ವರರು ಹೇಳುವರು (ವೈದ್ಯಸಾ. I, ೦೯೬); ಮುಸುವನಭತ್ತದ ಅಕ್ಕಿ. ಸಣ್ಣಕ್ಕಿ . . . ಜೇನುತುಪ್ಪ ಇವೆಲ್ಲ ಉಣುವುದು ಪಥ್ಯಂಗಳು (ಸಕವ್ಯ. ೨೦೩). [ ? + ಭತ್ತ$_1$ (<ಬತ್ತ)]

**ಮುಸುವು** ' ಮುಸು$_2$ ' ನೋ.

**ಮುಸುಳಿ** ' ಮುಸುಂಡು ' ನೋ.

**ಮುಸುಱ್** ' ಮುಸುಱು$_1$ ' ನೋ.

**ಮುಸುಱು$_1$**, ಮುಸುರ್, ಮುಸುರು$_1$, ಮುಸುಱ್ (ಕ್ರಿ). ಮುಸುರ್ವ (ಪರ್ತೃಕ್ಕ). ೧. ಮರೆಮಾಡು ; ಮುಚ್ಚು : ಮುಸುಕು : " ಮುಸುಱು_ಸಂಛನ್ನೇ " (ಶಮದ); ಮುಗಿಲಂ ಮುಸುಱಿದ ನೇಸಱಂ ಕಂಡುದಱಿಂ ಕೇವಳಜ್ಞಾನಿಗಳಾಗರು (ಕಾವ್ಯಾಪ. ೩೩). ೨. (ದುಂಬಿ, ನೊಣ ಮುಂತಾದುವುಗಳಂತೆ) ಹಿಂಡುಹಿಂಡಾಗಿ ಮುತ್ತು.–ಕವಿ : " ಮುಸುಱುವವಕ್ಕೆ ಮುಕ್ಕುಱಿಂದಕ್ಕು " (ಕವ್ಯಾಕೈ. ೭೮); ನಡೆವ ಪರಿಶ್ರಮದಿಂದೊಗೆವ ಶ್ರಾಂತಿಯರ ಸುಯ್ಯ ಕಂಪಿಂಗಳಿಗಳ್ ಮೊಗಸಿ ಮುಸುಱಿದುವು (ಆದಿಪು ೧೦-೭೦); ಅಲರ್ದಲರ್ವಾಸುಗಳೊಳ್ ಪರಿಮಳಕ್ಕೆ ಪರಿತಂದು ಮುಸುಱುವಳಿಕುಲದಿಂದಾಕುಲತೆ ಪಿರಿದಾಗೆ . . . ಕಾಂತೆ ಪೊತ್ತಿ ಪೊಗೆಮಂತಿರ್ದಳ್ (ಕಾದಂಬ. ೩೩೭): ಪುರಜನಾಕರರ್ . . . ಗೂಗೆಯಂ ಕರಂ ಮುಸುಱುವ ಕಾಗೆಗಳಂತಿರೆ (ಅಸಂಪು. ೯-೩೦); ಜೇಂಗೊಡಮಂ ಮುಸುಱಿ ಮೊರೆವ ಮಱಿದುಂಬಿಗಳ ಗಾನದಂತೆ . . . ಪಾಡಿ ಪೊಗಟ್ಟಿ ಗಾಯಕಸಂದೋಹದಿಂ (ರಾಮಾಶ್ವ. ೨೩-೧೦). ೩. ಗುಂಪುಗೂಡು ; ಸಂದಣಿಸು; ಒಟ್ಟಾಗು: ಬಿಡಿ ಕೊಲ್ ಕಟ್ಟಿಱಿ . . . ಎಂದು ಮುಸುಱಿ ನಾರಕರಾಗಳ್ ಮತ್ತಂ ಕೊಂತಂಗಳಿಂದಂ . . . ಕುತ್ತುವುದುಂ (ಪಮ್ಮಾರಾ. ೦೨೭-೦೨) ; ಮುಸುಱಿದ ಮುಗಿಲ್ಗಳಿಂದಣಮುಸೆಯದೆ ನಿಂದರ್ಕ ಬಿಂಬಮಂ ಕಂಡುದಱಿಂ ಪೊಣ್ಮಿರ್ಪ ದುಷ್ಷಮಾಕಾಲದೊಳಸದ್ವ್ರತೈಪಲ್ಕ ಬೋಧ ದಿನಕರಬಿಂಬಂ (ಆದಿಪು. ೧೫-೩೩) ; ಮುಸುಱಿ ನೋಡುವ ನೋಟಕರು ಕಾಣಿಸದ ಕಾರ್ಯಕೆ ಬೆಗಡುಗೊಂಡರು (ಕೃಭಾರ. ೭-೩೮). ೪. ಆವರಿಸು ; ಹರಡು : ಪಸರಿಸು : ನೆನೆಯುಸುತಿರ್ದುದು ತ್ರಾಂತರ್ಪನಿ ಮುಸುಕಿದ ದುಗ್ಧವಾರ್ಧಿಯಂ ತಾನೆನಸುಂ ತನಿವೆಳ್ಪುಂಗಳ್ ಮುಸುಱಿದ ಮಿಸುಕಂದೊಪ್ಪುವ ನಭೋಂಗಣಂ ಧೃತಘನಂ (ಕುಸುಮಾ. ೧೦-೧೫); ಬಿಟೀಸಾರ್ವ ದೊರೆಯುನಮರ್ದ್ವಿತ್ರಿಲಾವರ್ ಮುಸುಱಿತ್ತು ಕೂರಬಿಲ ಮುಬ್ಬರ್ದಸು (ಅಂತಿಗೂ. ೩೩-೦೦೨೯). **ಮುಸುರ್** : ೨. ಕಾಂತೆಯರ ಕಂಠಮಾಲೆಗಳ ಕಟ್ಟುಗೆಮುತ್ತುಗಳ್ ಕೆಲಕ್ಕೆ ಸಿಡಿದುದುರಿ ಪುಷ್ಪ ಪರಿಮಳಂ ಪರಿಯೆ ಮಲ್ಲಿಗೆಯರಲ್ಗಳೆಂಬು ಮುಸುರ್ವ ತುಂಬಿಗಳ ಬಂಬಲ್ಗಳಪ್ಪಂ (ರಜಾಪ. ೨-೯ ಪ) **ಮುಸುರು$_1$** : ೨. ನಾನಾಶೋಕ ಮೋಹಾದಿಗಳು ಮುಂಗುಱಿಪರಿದು ಮುಸುರಿಹ (ಆತ್ಮಪ. ೦-೫೩); ನೊಣಗಳು ಮುಸುರಿ ಕೊಂಡು ಮನೆಯ ಮುಂದಿನ ಕೊಳಕುಗುಂಡಿ ಕೊಳೆಯುತ್ತಿದ್ದರೂ . . . ಬೊಗಸೆ ಮಣ್ಣನ್ನು ಅದರ ಮೇಲೆ ಹಾಕಿ ಮೂಗನ್ನು ಕಾಪಾಡಿಕೊಳ್ಳುವ ಯೋಗ್ಯತೆ ನಮಗಿಲ್ಲದೆ ಹೋಗಿದೆ (ಸಾಹಿಜೀ. ೯೭). **ಮುಸುಱ್** : ೨. ಪೊಸ ಪೂಗಳಂ ನೋಡಿ ನಳಿತೋಳ್ಗಳಂ ನೀಡಿ ಮುಸುರ್ವಳಿಗೆ ಕಾಯ್ವುತಂ ಕುಸುಮಮಂ ಕೊಯ್ವುತಂದೆಸೆದರ್ (ತಿಜಪು. ೯೩-೩೮); ಮೊಗದೊಳ್ ಮುಸುರ್ವ ಬಿದುಗುರುಳ ಬೆನ್ನೊಳ್ ಸಿಬ್ಬಿ ಸರಳ . . . ಪೊಯ್ವಳ್ಳಿಗಳ ಪೊತ್ತ ನಾಣ್ಚಿಕೆಯ ಸರ್ವಾಂಗಾಲಂಕರಣಾಲಂಕಾರಾಯುತ ಜನಾಗ್ರಹಾಂಗಾಳ್ಗನು (ತಂಪು. ೯೯-೨೯). ' ಮುಸುಂಕು$_1$ ' ಪರಾ.

[ದೇ.॥ ತಲು. ಮುಸುರು, ಮುಸರು]

**ಮುಸುಱು$_2$**, ಮುಸುರು$_2$ (ನಾ). ಆವರಣ ; ಮರೆ; " ಕೊವ್ವರಿ " (ಶಶಬ್ದ. ೬. I , ೩೩). **ಮುಸುರು$_2$** : ' ಮುಸುರುಗಟ್ಟು ' ಪರಾ.

[ < ಮುಸುಱು$_1$]

**ಮುಸುಱುಹ** (ನಾ). ಮುತ್ತುವಿಕೆ ; ಆವರಿಸುವಿಕೆ : " ಮುಕ್ಕುಱು ಮುಸುಱುಹನೊಳ್ " (ಶಬ್ದಾನು. ೯೦); " ಮುಕ್ಕುಱು ಮುಸುಱುಹಂ " (ಶಮದ. ಶಂ. ೨). [ಮುಸುಱು$_1$ + — ಹ$_2$ ( <— ಪ$_2$)]

**ಮುಸುಱೆ**, ಮುಸರೆ, ಮುಸುರೆ (ನಾ). ೧. ಪಾತ್ರೆಯಲ್ಲಿ ಅನ್ನ ಮುಂತಾದ ಆಹಾರಪದಾರ್ಥಗಳನ್ನು ಬೇಯಿಸಿದ್ದು, ಇನ್ನೂ ತೊಳೆಯದೆ ಇರುವುದರಿಂದ ಉಂಟಾಗಿರುವ ಅಶುಚಿ.– ಕೊಳೆ : ಮೃಗರಾಜಂ . . . ವನಮೃಗಮನುಗಿಬಗಿಮಾಡಿ ಬಿಡುಮೆಡೆಯೊಳೊಡ ನೊಡನೆ ಪೊರೆದು ಮುಸುಕಿದ ಪೊಸನೆತ್ತರ ಮುಸುಱೆಯಿಂ ಪೊಳೆವ ಪೊೞೆಯದೊಱೆಯೊಳ್ ಕಿಱಿದಿರ್ದ ಕೃತಾಂತನಂಕುಶಮಿದೆನಿಸಿಯುಂ (ವರ್ಧಪು. ೧೦-೫ ಪ); ನೀವೆಲ್ಲ ಮುಸುಱಿದ ನೊಣಂ ಬಸವನೇ ಮುಸುಱೆಯಾ ಮಡಕೆ (ಶೀಕೃಪು. ೮-೨-೩೩); ಸೊಣಗನು ಮತಿಗೆಟ್ಟು ಮುಸುಱೆಯ ಮಡಕೆಯೊಳಗೆ ಮೊಗವಿಟ್ಟು ದೆಸೆಗಾಣದೆ ಬಾಧೆಗೆ ತನುಗೊಟ್ಟು ಪೆಸರ್ಗೊಳಲಿದು ಸಂಸಾರದ ಗುಟ್ಟು (ಅಪರೂ. ೨೦). **ಮುಸರೆ** : ೧. ನಾಯಿ ಮುಟ್ಟಿದ ಗಡಿಗೆ ಮುಸರೆಯಾದರೇನು ? ಮಡಿಯಾದರೇನು ? (ಗಾದೆ). ೨. ದನಕರುಗಳಿಗೆ ಕುಡಿಯಲು ಇಡುವ ಕಲಗಚ್ಚು ; ಮುರು : ರಂಜಣಗಿಯಲ್ಲಿ ಮಹಿಪಿ ಮೊಗವದ್ದಿ ಗಂಜಿ ಮುಸರೆ . . . ಕುಡಿದಂತೆ (ಪೋಕ್ಷದಾ. ೯೯-೦); ಹಸುವಿಗೆ ಮುಸರೆ ಇಡು (ರೂಢಿ). ೩. ಅನ್ನ ಮೊದಲಾದ ಬೇಯಿಸಿದ ಪದಾರ್ಥಗಳು ಹಾಗೂ ಅವುಗಳನ್ನು ಬೇಯಿಸಲು ಬಳಸಿದ ಪಾತ್ರೆಗಳನ್ನು ಮುಟ್ಟುವುದರಿಂದುಂಟಾಗುವ ಅಶುಚಿ.– ಮೈಲಿಗೆ : ಮಾಸಿದ್ದಕ್ಕೆ ಹೆದರದವಳು ಮುಸರೆಗೆ ಹೆದರ ಯಾಳೇ ? (ಗಾದೆ). ೪. ಅನ್ನ ಮುಂತಾದ ಪದಾರ್ಥಗಳನ್ನು ಬೇಯಿಸಿದ್ದು, ತೊಳೆಯಬೇಕಾಗಿರುವ ಪಾತ್ರೆ: ಬೆಳಗ್ಗೆಯಿಂದ ಮುಸರೆ ತೊಳೆಯಲು ನನಗೆ ಬಿಡುವೇ ಆಗಲಿಲ್ಲ (ರೂಢಿ). ೫. ಅನ್ನ ಮುಂತಾದ ಬೇಯಿಸಿದ ಪದಾರ್ಥ : ಅದೇನ ಮುಸರೆ ಅಲ್ಲಾ ಮುರಲಿ ಅಲ್ಲಾ ತೊಕೋರಿ (ಜಾಬಿ. ೯೯). **ಮುಸುರೆ** : ೧. ಆಹಾರದ ಡಬ್ಬಿ ಅಲ್ಲಿಯೇ ಕುಳಿತು ಮುಸುರೆಯ ಕೆರೆದ ಜಾಯನ್ನು ತೋರಿಸಿತು (ಮುಕ್ತೈದೆ. ೫೯); ಗಂಡುಹೆಣ್ಣಿಗೂ–ಎಂಜಲು ಮುಸುರೆಗೂ ಜೋಡಿಯಲ್ಲ (ಮೂಳೆಕ್ಕ. ೨೩೮). ೨. ಉತ್ತಮಾನ್ನವ ನೀಡೆ ಮುಸುರೆ ಬಯಸುವಂತೆ (ಶಿದಾಕೃ. ೫೦-೩); ಅದಕ್ಕೆ ನಾನೇ ಮುಸುರೆ ಮಾರವು ತಿನ್ನಿಸುತ್ತಿದ್ದೆ (ಸುಪಸಂ. ೬೭). ೩. ಅನ್ನ ಮುಟ್ಟಿ ಕೈ ಮುಸುರೆಯಾಗಿದೆ, ತೊಳೆದುಕೊಂಡು ಬಾ (ರೂಢಿ).

**ಮುಸುರೆ ತಿಕ್ಕು** = ಅಡುಗೆ ಮಾಡಿದ ಪಾತ್ರೆಗಳನ್ನು ತೊಳೆ : ತಾಯಿ ವೆಂಕಮ್ಮ ಮುಸುರೆತಿಕ್ಕುವುದಕ್ಕೆಂದು ಕೆರೆಯ ಹಾದಿ ಹಿಡಿದಳು (ಮುಂಗಾರು. ೨೩). [ದೇ.॥ ತಮಿ. ಮೂಚಟ್ಟಿ ; ತುಳು. ಮುಸರೆ, ಮುಸ್ರು]

**ಮುಸ್ತ** (ನಾ). ಹುಲ್ಲಿನ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ ಮತ್ತು ಅದರ ಗೆಡ್ಡೆ ; ಭದ್ರಮುಸ್ತೆ. [ಸಂ.]

**ಮುಸ್ತಕ** (ನಾ). = ಮುಸ್ತ : "ಮುಸ್ತಕಃ, ಕುರುವಿಂದಃ, ಭದ್ರಾ, ಜಳದಃ_ ಈ ೪ ಭದ್ರಮುಸ್ತೆ" (ಕರ್ಣಾಟಕು. ೧೦೨-೯೬೮). 'ಭದ್ರಮುಸ್ತಕ' ಪರಾ.

[ಸಂ.]

**ಮುಸ್ತಕಿ** (ನಾ). = ಮುಸ್ತ : ಮುಸ್ತಕಿಯ ಚೂರ್ಣ: _ ಭದ್ರಮುಸ್ತೆ, ಕೋಷ್ಠ . . . ಕುಂಬಳದ ಬೀಜ, ಇಷ್ಟು ಔಷಧಗಳನ್ನು ಸರಿಯಾಗಿ ಕೂಡ ಚೂರ್ಣವ ಮಾಡಿ . . . ಕೊಡುವುದು (ವೈಕ್ಷಿ. ೯೯). [< ಸಂ. ಮುಸ್ತಕ]

**ಮುಸ್ತಯಿದೆ** ' ಮುಸ್ತೈದೆ ' ನೋ.

**ಮುಸ್ತಾಕಂದ** (ನಾ). ಭದ್ರಮುಸ್ತೆಯ ಗೆಡ್ಡೆ ; ಕೊನ್ನಾರಿಗೆಡ್ಡೆ : ಮೆಲ್ಲ ಮುಸ್ತಾಕಂದಂಗಳ ತಿರುಳ್ ಪಱಿದೊಕ್ಕು ಕಂಪಿಡುತ್ತಿರೆ ಪೋದ ಕಾಡುಪಂದಿಗಳ ಗೊಂದಣವಜ್ಜೆಗಳುಮಂ . . . ಕಂಡು (ಕುಸುಮಾ. ೦೯-೨೯ ಪ) ; ಮುಸ್ತಾಕಂದಮನೆತ್ತಿ ಬೇರ್ಗಳನಿತಂ ತಿಂದು (ದಶಕು. ೨-೦೦೬).

[ಸಂ.]

**ಮುಸ್ತಾದ** (ನಾ). ಗೇಕಿನ ಹುಲ್ಲು ತಿಂದು ಜೀವಿಸುವ ಒಂದು ಬಗೆಯ ಕಾಡುಹಂದಿ. [ಸಂ.]

**ಮುಸ್ತಾಭ** (ನಾ). ಒಂದು ಬಗೆಯ ಹುಲ್ಲು : 'ಮುಸ್ತಾಭಚೂರಣ' ಪರಾ. [ಸಂ.]

**ಮುಸ್ತಾಭಚೂರಣ** (ನಾ). ಮುಸ್ತಾಭದ ಬೇರಿನ ಚೂರುಗಳನ್ನು ತುಪ್ಪದಲ್ಲಿ ಹುರಿದು ಅಕ್ಕಿಹಿಟ್ಟು, ಸಕ್ಕರೆ ಮುಂತಾದುವುಗಳೊಂದಿಗೆ ಬೆರಸಿ, ವರಾಹಸ್ವಾಮಿಗೆ ನೈವೇದ್ಯಕ್ಕಿಡುವ ಒಂದು ಬಗೆಯ ಉಂಡೆ : (೪). [ಮುಸ್ತಾಭ + ಚೂರಣ]

**ಮುಸ್ತೆ** (ನಾ). = ಮುಸ್ತ : "ಅ ಮುಸ್ತಕಂ ಮುಸ್ತೆ ಭದ್ರಾತಕಂ ಗೇಕು" (ಜಾಂಗಣ. ೪೦-೩೩) ; ಇದು ಶೈತ್ಯಕಷಾಯಂ ಬಳ್ಳಿ ಮರುಚಿ ನೆಲಬೇವು ಮುಸ್ತೆ ಪರ್ಪಾಟಕದಿಂ ಕುದಿದಿಳುಪಿ ಕಟುಕರೋಹಿಣಿಯಂದಜಿಳೊಳಗಿರೆ (ಕಲ್ಯಾಕಾ. ೩-೩೨) ; ಇಂಗಿನೆಲೆ ಮುಸ್ತೆಯೆಳಲೆ ಲವಂಗಂ . . . ಮರಿಚ ಸೈಂಧವಲವಣಂ (ಅಶ್ವಶಾ. ೭-೪೪). 'ಭದ್ರಮುಸ್ತೆ' ಪರಾ. [ < ಸಂ. ಮುಸ್ತಾ ]

**ಮುಸ್ತೈದು** 'ಮುಸ್ತೈದೆ' ನೋ.

**ಮುಸ್ತೈದೆ**, ಮುಸ್ತಯಿದೆ, ಮುಸ್ತೈದು (ನಾ). ೧. ಸಜ್ಜು ; ಅಣಿ ; ತಯಾರು : ಥಳಥಳಿಪ ಕೊಪ್ಪರಿಗೆ ಚರುವಿಗೆಯು ಬಿಂದಿಗೆಯು ದಳವೇಱುತಂ ಹೇಱಿ ಮುಸ್ತೈದೆಯಾಗಲ್ಕೆ ಕಳಿಯೇಱುತಂ ಬಂದು (ಕ್ರಕುತು. ೬-೨೨೪) ; ಮಾರನೆಯ ದಿನ ಸೂರ್ಯಾಸ್ತಮಯವಾಗುತ್ತಲೇ ಯಥಾಪೂರ್ವ ಸಕಲ ಮುಸ್ತೈದೆಯ ಮಾಡಿಕೊಂಡು ಅರಸು ಭೃತ್ಯಾಲಯಮಂ ಪೊಕ್ಕು (ಕುಕಠ. ೨೦) ; ಸಕಲ ಆಯುಧವನ್ನು ಮುಸ್ತೈದೆಮಾಡಿ ಬಂದು ದೊರೆಗೆ ತಾನು ಚಂದದಿಂ ಪೇಳ್ದ (ಹುಶಳ. ೧೩೩). ೨. ಸಾಮಗ್ರಿ ; ಸಲಕರಣೆ ; ಉಪಕರಣ : ಬಲದೇವಮಂತ್ರಿ ತನ್ನ ಬಾಲೆಯಳಿಗಿತ್ತ ಬಹು ತಳತ ಹೇಮದ ಮಂಚ ಲೇಪು ಮುಸ್ತೈದೆ (ಕಠಂ. ೦೪೬) ; ಮುಸ್ತೈದೆಗಳೊಳಪೊಗದಂತು ಕಂಡಿ ಕಣಿವೆ ಪಥಂಗಳಂ ಕಟ್ಟಿ (ಕಕಶ್ಯ. ೩-೪೪). **ಮುಸ್ತಯಿದೆ :** ೧. ಭೂಮಿಯ ರಥ . . . ದಾನ ದಂಡ ಸಾಮ ಭೇದಂಗಳೆ ಚಬುಕು ಇಂತು ರಥ ಮುಸ್ತಯಿದೆಯಾಗಲು (ಕ್ರಿರಕೂ. I, ೩೦). ೨. ತಮ್ಮ ಕನ್ನಗಳವಿನ ಮುಸ್ತಯಿದೆ ಸಹವಾಗಿ ಪೋಗುವಲ್ಲಿ (ಕ್ರಿರಕೂ. I, ೪೪೯). **ಮುಸ್ತೈದು :** ೨. ಸಾಸುವೆ, ಮೆಂಥ್ಯ, ಜೀರಿಗೆ, ಇಂಗು ಮುಂತಾದ ಒಗ್ಗರಣೇ ಮುಸ್ತೈದುಗಳಿಂದ ಪೂರಿತವಾಗಿ (ಕ್ರವಾಶಿ. ೦೩).

ಮುಸ್ತೈದೆಯವರು = ಸಾಮಗ್ರಿಗಳನ್ನು ಹೊಂದಿದವರು ; ಉಪಕರಣಗಳನ್ನು ಹಿಡಿದಿರುವವರು : ಕಸ್ತೂರಿಗಂಧಿಯರ್ ಬನದೊಳ್ ಬಹುಫಲವಸ್ತುಗಳನು ಸೇದಿಕೊಂಡು ಮುಸ್ತೈದೆಯರಾಗಿ ಬಂದರು ಪರಮ ಪದಸ್ಥ ಶ್ರೀಕೃಷ್ಣನಿರ್ದೆಡೆಗೆ (ಪೋಃಹತ. ೪-೬೦). [← ಅರ. ಮುಸ್ತಅದ್, ಮುಸ್ತಇದ್ ; ಹಿಂ. ಮುಸ್ತೈದ್ ; ಮರಾ. ಮುಸ್ತೇದ್]

**ಮುಸ್ಲಮ** 'ಮುಸ್ಲಿಂ' ನೋ.

**ಮುಸ್ಲಿಂ**, ಮುಸುಲುಮ, ಮುಸ್ಲಮ, ಮುಸ್ಲಿಮ, ಮುಸ್ಲೀಮ (ಗು). ೧. ಇಸ್ಲಾಂಮತಕ್ಕೆ ಸೇರಿದ ; ಇಸ್ಲಾಂಧರ್ಮದ. (ನಾ). ೨. ಇಸ್ಲಾಂ ಮತಕ್ಕೆ ಸೇರಿದ ವ್ಯಕ್ತಿ ; ಮಹಮ್ಮದೀಯ : ಇಲ್ಲಿಯ ಮುಸ್ಲಿಂರು ಪಾಕೀಸ್ತಾನೀ ಮುಸಲ್ಮಾನರೊಡನೆ ಬೇಗತನ ಬೆಳೆಸುವುದು ಪರರಾಷ್ಟ್ರದೊಡನೆ ಸಂಬಂಧ ಮಾಡಿದಂತೆ ಎಂದು ಎಣಿಸಲೇಬೇಕಲ್ಲವೆ ? (ಯುಕ್ಷಸ್ರ. ೦೬೨). **ಮುಸುಲುಮ :** ೨. ಸೇತು ಕೇತಾರದ ನಡುವೆ ಮುಸುಲುಮರ ಜಾತಿಯಲ್ಲದೆ ಹಿಂದುವರ ಜಾತಿಧರ್ಮ ಸ್ಥಿತಿಯುಂಟೆ (ಕಾರಾಕಾಂ. ೩೪-೦೩೬). **ಮುಸ್ಲಮ :** ೧. ಧೀರ ಮುಸ್ಲಮಕುಳವನು — ಚಿಮ್ಮಿ, ಕೆರಳಿಸಿ, ಕಲೆತರು (ಹೊಂಗಳು. ೩-೨). **ಮುಸ್ಲಿಮ :** ೨. ಮುಸ್ಲಿಮರೂಪದ ರಾಕ್ಷಸರ ಶಕ್ತಿ ಹಿಂದೂಸಂಸ್ಕೃತಿಯ ನಾಶಕ್ಕೆ ಪಟ್ಟ ಪ್ರಯತ್ನ . . . ಇತಿಹಾಸಪ್ರಸಿದ್ಧ (ಪುಷ್ಪರ. ೦೦೪ ಶಿ(೪)). **ಮುಸ್ಲೀಮ :** ೨. ಹಿಂದು ಜೈನ ಮುಸ್ಲೀಮ ಕ್ರೈಸ್ತರೆಲ್ಲರೊಂದೇ ಬಾಂಧವರು (ಗೀಪಿಂ. ೪೬-೪) ; ಮುಸ್ಲೀಮರು . . . ಬಾಬಯ್ಯನ ಬೆಳ್ಳಿಯ ವಿಗ್ರಹಗಳನ್ನು ಸ್ಥಾಪಿಸಿ ಹೂವು, ಗಂಧ, ಚಂದನದಿಂದ ಪೂಜಿಸುತ್ತಿದ್ದರು (ಮಗಡಾಂ. ೦). [← ಅರ. ಮುಸಲಿಮ್, ಮುಸ್ಲಿಮ್ ; ಹಿಂ. ಮುಸಲಿಮ್, ಮುಸಲ್ಲಮ್ ; ಮರಾ. ಮುಸ್ಲಿಮ್, ಮುಸ್ಲೀಮ್]

**ಮುಸ್ಲಿಮ** 'ಮುಸ್ಲಿಂ' ನೋ.

**ಮುಸ್ಲೀಮ** 'ಮುಸ್ಲಿಂ' ನೋ.

**ಮುಸ್ಸಂಜೆ** 'ಮುತ್ಸಂಜೆ' ನೋ.

**ಮುಹಗ್ಗಳ ?** (ನಾ). ಮಲ್ಲಯುದ್ಧದ ಒಂದು ಪಟ್ಟು(?)ಎಸಿವ ಮುಹಗ್ಗ [ಶಾಕಾಂ. ಹುದ್ಗ]ಳಂ ಠಡಕಿ ಕಕ್ಷವಡಂ ಮುಹಡಂ ತುಳಾಡಿ . . . ಸಸಿಕುವೆನಿಪ್ಪ ಜಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (?) (ಕಂಪ್ರಕು. ೩-೬೮ ; ಕಾವ್ಯಸಾ. ೩೦೪ ನೋ). [?]

**ಮುಹಚಾಳೆಯ** (ನಾ). = ಮುಖಚಾಳೆಯ : ಕಳಿಯ ಮಯಣಮಂ ನುಣ್ಪಾಗೆ ತಿರ್ದಿ ಪುಂಬಿಸಿ ಹೊ[ಹೆ]ಲ್ಲಣೆಯ ಶುದ್ಧಮಾಗಿ ಮುಹಚಾಳೆಯಮುಮಾಡಿ . . . ತೋರ್ಕೆಗೊಳಿಸುವುದುಂ (ಕಾಂತಕ್ಕ. ೭-೯೩ ಪ). [P ಇದು 'ಮುಖಚಾಳೆಯ' ಎಂಬುವರ ಅಪಲಿಖಿತವಿರಬಹುದು]

**ಮುಹಡ**, ಮುಹುಡ (ನಾ). ಮಲ್ಲಯುದ್ಧದ ಒಂದು ಪಟ್ಟು .— ವರಸೆ : ಕಕ್ಷವಡಂ ಮುಹಡಂ [ಶಾಕಾಂ. ಹುಳಂ] ತುಳಾಡಿ . . . ಸಸಿಕುವೆನಿಪ್ಪ ಜಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (?) (ಕಂಪ್ರಕು. ೩-೬೮); ಅಂ ಪಿಡಿದುದೆ . . . ಹತ್ತೆ ದೊಕ್ಕರಂ ಚಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದಣುಪಟ್ಟಿ ಪಟ್ಟಿಸಂ (ಅಪಂಕು. ೨-೨೭). **ಮುಹುಡ :** ಕಮ್ಮರಿ ಮುಹುಡಂ ಜವತ್ತವಡಿ ಪಾಸಗೆ . . . ಪಟ್ಟಿಕತ್ತರಿಗೆಗಳೆನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ಕ್ರಿಪುಶಿ. ೨೬-೦೬). [?]

**ಮುಹಪೋವುಡ** (ನಾ). = ಮುಹಡ (?): ಸಸಿಕ್ಕು ಮುಹಪೋವುಡ ಚಲ್ಲಣ ವಟ್ಟಿ ಪಟ್ಟಿಕತ್ತರಿಗೆಗಳೆನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ಕ್ರಿಪುಶಿ. ೨೬-೦೬). [<ಮುಹಡ ?]

**ಮುಹಮ್ಮದೀಯ**, ಮಹಮ್ಮದೀಯ (ಗು). ೧. ಇಸ್ಲಾಂಧರ್ಮಕ್ಕೆ ಸೇರಿದ.— ಸಂಬಂಧಿಸಿದ. (ನಾ). ೨. ಮಹಮ್ಮದ್‌ಪೈಗಂಬರನ ಅನುಯಾಯಿ ; ಮುಸಲ್ಮಾನ : ಈ ಭಾಗದಲ್ಲಿ ಮುಹಮ್ಮದೀಯರ ೧೨ ತಿಂಗಳುಗಳ ಹಬ್ಬಗಳ ಸಾಮಾನ್ಯಕಲ್ಪನೆಯನ್ನು ಕೊಡಲಾಗಿದೆ (ಧಾಜನ್ಮ. ೦೪೪). **ಮಹಮ್ಮದೀಯ :** ೧. ಕ್ರೈಸ್ತ ಮಹಮ್ಮದೀಯ ಮತಗಳಲ್ಲಿ ಮತಾಂತರಹೊಂದಿ ಮದುವೆಯಾಗಲು ಅವಕಾಶವಿದೆ (ದಂಕಪು. ೨೦೩). ೨. ಮಹಮ್ಮದೀಯರಂತೆ ನಾನೂ ಉಪವಾಸ ಮಾಡಿದೆ. (ಕ್ರವಾಇ. II, ೦೬೨). [← ಅರ. ಹಿಂ. ಮುಹಮ್ಮದೀ]

**ಮುಹರಿ** 'ಮೌರಿ₁' ನೋ.

**ಮುಹರ್ರಮ್** 'ಮೊಹರಂ' ನೋ.

**ಮುಹುಃ** (ಅ). ಪುನಃ ; ಮತ್ತೆ : ಮತ್ತಕೋಕಿಲೋಚ್ಚೈರ್ಧ್ವಾನಂ ಮುಹುರಾಕರ್ಣಿಸ ಪೆಡೆದತ್ತಹರ್ನಿಶಂ ಪರ್ಚನಂತರಂಗಕ್ಕೆನ್ನಾ (ಕಶಿರಾ. ೦-೩೩); ಮುಹುಪಾರ್ಕಿಕ್ರೀಡೆಯನುಬಿಸಿದು ಕುಮಾರಕಚೂಡಾಮಣಿ ತಂದೆಯೆಂದುದರ್ಕೆರ್ದೆಗೊಂಡಂ (ಕಂಪ್ರಕು. ೨-೩೩).

**ಮುಹುರ್ಮುಹುಃ**, ಮುಹುರ್ಮುಹು (ದ್ವಿರುಕ್ತಿ) : ಮುಹುರ್ಮುಹುರಾಂದೋಳಿತಮಸ್ತಕನುಂ ಉದಂಚದ್ರೋಮಾಂಚಕಂಚುಕಿತನುಮಾಗಿ ನ್ನೋಡುತ್ತುಂ (ಅದಿಪು. ೦೦-೩೨ ಪ); ಮುಹುರ್ಮುಹುರಾಶೀರ್ವಾದಮುಖರ ಮುಖನಾದ ಕಾಮದೇವನಂ ಲಕ್ಷ್ಮಣಾ . . . ನುಡಿವುದುಂ (ಕಂಕಾಶು. ೯-೦೩೨ ಪ); ಚಿಕುಹೂಚ್ಚಿಕುಹೂ ಸನ್ನೆಯುಪೊಲು ಮುಹುರ್ಮುಹು

ಆರೆಚ್ಚರಕೀ ತುತ್ತೂರಿ ಬಾನೊಳು ಮೊಳಗುತಿದೆ? (ಗಣೇಶ. ೨೯-೨).
**P** ಕನ್ನಡದಲ್ಲಿ 'ಮುಹುರ್' ಎಂಬ ರೂಪವನ್ನು ಪ್ರತ್ಯೇಕವಾಗಿ ಎಲ್ಲೂ ಪ್ರಯೋಗಿಸಿರುವುದು ಕಂಡುಬಂದಿಲ್ಲ. ಆದ್ದರಿಂದ ಇಲ್ಲಿ 'ಪುನಃ' ಎಂಬ ಶಬ್ದಸಾಮ್ಯದಿಂದ 'ಮುಹುಃ' ಎಂಬ ರೂಪವನ್ನು ಮಾಡಲಾಗಿದೆ. [ಸಂ. ಮುಹುರ್]

**ಮುಹುಡ** 'ಮುಹಡ' ನೋ.

**ಮುಹುರಿ** 'ಮೌರಿ$_1$' ನೋ.

**ಮುಹುರ್ದೃಷ್ಟ** (ನಾ). ಮತ್ತೆ ಮತ್ತೆ ಕಂಡುದು ; ಪುನಃಪುನಃ ನೋಡಿದುದು : "ಅವಗೀತಂ, ಮುಹುರ್ದೃಷ್ಟಂ, ಉಪಲಬ್ಧಂ – ಈ ೩ ಮಗುಳ್ಚಿ ಮಗುಳ್ಚಿ ಕಂಡುದು" (ಹಲಾಯು. ೧೨೯-೬೦). [ಸಂ.]

**ಮುಹುರ್ಭವಿಸು** (ಕ್ರಿ). ಪುನಃ ಹುಟ್ಟು ; ಮತ್ತೆ ಮೂಡು : ಮತ್ತೊಮ್ಮೆ ಮೆಯ್ಗ್ಗನಗೆ ಗರಿ. ಮುಹುರ್ಭವಿಸುವೊಡೆ, ನಿನ್ನ ರಕ್ಷಸಮೆಯ್ಯ ನೆತ್ತರಿಂ ತನಿಯೆರೆವೆನೆನ್ನ ಸುಜನಾತ್ಮಕ್ಕೆ (ಶ್ರೀರಾಮಾ. ೩೯೦-೬೮೩).
[ಸಂ. ಮುಹುರ್ಭವ + — ಇಸು$_3$]

**ಮುಹುರ್ಭಾಷೆ** (ನಾ). ಹೇಳಿದುದನ್ನೇ ಮತ್ತೆಮತ್ತೆ ಹೇಳುವುದು : "ಅನುಲಾಪಃ ಮುಹುರ್ಭಾಷಾ–ಈ ೨ ಅಡಿಗಡಿಗೆ ನುಡಿವ ನುಡಿ" (ಹಲಾಯು. ೨೯-೧೯೯). [ಸಂ. ಮುಹುರ್ಭಾಷಾ]

**ಮುಹೂರ್ತ$_1$** (ನಾ). ನೆಲಸುವುದು ; ಆಸೀನಗೊಳ್ಳುವುದು : ಚಿಕ್ಕರಸರ ಸನ್ನಿಧಾನವು ಸೆಜ್ಜೆಯಲ್ಲಿ ಮುಹೂರ್ತಮಾಡುವವರೆಗೆ ನೀವು ಕುಳ್ಳಿರದಿರಿ ! (ಚಿಕ್ಕ.ಆ. ೩೩-೨೩) ; ಪೂರ್ಣಯ್ಯನವರು . . . ದೊರೆಗಳಿಗೆ ಮುಜರೆ ಮಾಡಿ. ಅವರಿಗೆ ಹಸ್ತಲಾಘವ ಕೊಟ್ಟು ಕರೆದೊಯ್ದು ಪಲ್ಲಕ್ಕಿಯಲ್ಲಿ ಮುಹೂರ್ತಮಾಡಿಸಿದರು (ಕೃಷ್ಣಭೂ. ೦೯೮). [<ಸಂ. ಮುಹೂರ್ತ]

**ಮುಹೂರ್ತ$_2$** (ನಾ). ೧. ಸ್ವಲ್ಪಹೊತ್ತು ; ಅಲ್ಪಸಮಯ : ಎಲೆ ಶಕುಂತಳೆ. ಇಲ್ಲಿಯೇ ಒಂದು ಮುಹೂರ್ತ ನಿಲ್ಲು (ಶಾಕುಂತ. ೯-೨೬) ; ಎಲೆ ಮಗಳೆ, ಒಂದು ಮುಹೂರ್ತ ಲಜ್ಜೆಪಡದಿರು (ಶಾಕುಂತ. ೬೭-೭). ೨. ದೈವಪ್ರತಿಷ್ಠಾಪನೆ, ದೀಕ್ಷಾಸ್ವೀಕಾರ, ಮದುವೆ. ಮುಂಜಿ ಮುಂತಾದ ಮಂಗಳಕಾರ್ಯಗಳಿಗಾಗಿ ಜ್ಯೋತಿಷ್ಕರು ನಿಶ್ಚಯಿಸುವ ಶುಭಗಳಿಗೆ ಮತ್ತು ಆ ಗಳಿಗೆಯಲ್ಲಿ ನಡೆಸುವ ಶುಭಕಾರ್ಯ : ಒಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು (ವಡ್ಡಾರಾ. ೬-೨) ; ಮಹೋತ್ಕೃಷ್ಟಮಪ್ಪ ಮುಹೂರ್ತದಿಂ ಸನಾಥಮಾದ ನಿಶಾಮಧ್ಯಸಮಯದೊಳ್ . . . ಶಾಶ್ವತನವತರಿಸಿರ್ದಂ (ಜಗವ. ೨-೯೯ ವ) ; ಮಜುದಿವಸ ಮಂಗಳಮಯಮುಹೂರ್ತದ ಜೋಯಿಸರ ಜೋಳಿಯಲಿ ನಿರ್ಗಮನಿರತನಾದನು ಕೃಷ್ಣನು (ಕುವ್ಯಾಉ. ೬-೪) ; ವಿಜಯದಶಮಿಯ ಸುಮುಹೂರ್ತದಲ್ಲಿ ವಿಜಯಯಾತ್ರೆ ಹೊರಡುವುದೆಂದು ನಿಶ್ಚಯವಾಯಿತು. ಆ ಮುಹೂರ್ತವೇ ಪ್ರಭುಗಳ ಜನ್ಮತಾರೆಗೆ ಚೆನ್ನಾಗಿ ಕೂಡಿ ಬಂದಿತ್ತು (ಶಾಂತಲಾ. ೦೯೭). ೩. ದಿನದ ಮೂವತ್ತನೆಯ ಒಂದು ಭಾಗ : ನಲವತ್ತೆಂಟುನಿಮಿಷಗಳ ಅವಧಿ : "ಕ್ಷಣಮಂದಾಜು ಘಟಿಗೆಯೆನಿಕ್ಕುಂ ಅವಜಿರಡೆರಡಂ ಕೊಂಡೊಡೆ ಬವರಿಸುವ ಮುಹೂರ್ತಮಂತದೊಂದಕ್ಕುಂ" (ವಸ್ತುಕೋ. ೦೩-೯೩) ; ಅದು ಸಮಯಾವಲಿಕೋಚ್ಛ್ವಸಸ್ತೋಕನಿಮೇಷನಾಡಿಕಾಮುಹೂರ್ತದಿವಸಪಕ್ಷಮಾಸರ್ತ್ವಯನಸಂವತ್ಸರಾದಿ ಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು (ಆದಿಪು. ೬-೯೮ ವ) : ತನ್ನಾಳೀಕಾಲಯುಗಂ ಮುಹೂರ್ತಮೆನೆ ವರ್ತಿಸುಗುಂ (ಶಂರಾವಿಜ. ೦-೩೦) : ದಿನಕೆಂಟು ಜಾವು ಬಂದುದು ಅಱುವತ್ತುಗಳಿಗೆ ಮುಹೂರ್ತಂಗಳು ಸಂದಿಸೆ (ಭಾಸ್ಕರ. ೩೨-೩) ; ಎರಡು ನಾಲಿಗಳಿಂದ ಮುಹೂರ್ತ. ಮೂವತ್ತು ಮುಹೂರ್ತಗಳಿಂದ ಒಂದು ಅಹೋರಾತ್ರ (ದಿವಸ)ವಾಗುತ್ತದೆ (ಕೈಪಿಠ. ೮೬೬). ೪. ಜ್ಯೋತಿಷ್ಕ ; ಜೋಯಿಸ.
**ಮುಹೂರ್ತಹಿಡಿ**=ಯಾವುದಾದರೊಂದು ಮಂಗಳಕಾರ್ಯಕ್ಕಾಗಿ ಶುಭಸಮಯವನ್ನು ಗೊತ್ತುಮಾಡು ; ಲಗ್ನವನ್ನು ನಿಶ್ಚಯಿಸು : ಲಗ್ನದ ಮುಹೂರ್ತಹಿಡಿಯಲು ಇನ್ನೆರಡು ತಿಂಗಳಿದ್ದಾವೆ ಎನ್ನುವಾಗ ಟೈಫಾಯಿಡ್ ಆಗಿ ಹುಡುಗ ತೀರಿಕೊಂಡ (ಮೂರುದಾ. ೬೬). [ಸಂ.]

**ಮುಹೂರ್ತವೇದಿ** (ನಾ). ಮಂಗಳಕಾರ್ಯಕ್ಕಾಗಿ ಒಳ್ಳೆಯಘಳಿಗೆಯನ್ನು ನಿಶ್ಚಯಿಸುವವನು ; ಜೋಯಿಸ : ಜನಪತಿ . . . ಸಿಂಹಪೀಠದೊಳ್ ಮನದೊಲವಿಂದೆ ಮೂಡ ಮೊಗದಿಂ ಮಿಗೆ ಕುಳ್ಳಿರೆ . . . ನುತ ಮುಹೂರ್ತವೇದಿನಿಚಯಂ ಬಲದಲ್ಲಿರವೇಳ್ಕುಂ (ರಾಸ್ಕರಂ. ೦-೩೪).
[ಸಂ. ಮುಹೂರ್ತವೇದಿನ್]

**ಮುಳ್**, ಮುಳು. ಮುಳ್ಳು (ನಾ). ೧. ಕಂಟಕ: ಪಾಟಿಸುವೆನೊಯ್ಯನೆ ಮುಳೊಳ್ಳೆ ಮುಳ್ಳಂ (ಶಂಶಭಾ. ೯-೬೭) ; ಮುಳ್ಳಿಲ್ಲದ ಬನ್ನಿಯ ಮಾರನುಳ್ಳೆಡೆಯೊಳಂ . . . ಒಂದು ಪುರುಷದೊಳ್ ನೀರಕ್ಕುಂ (ಲೋಕೋಪ. ೩-೦೦) ; ಅಡಿಯಲ್ಲಿ ಸಿಲ್ಕಿದ ಮುಳ್ಗಳಂ ನಿಲ್ಲದೊತ್ತಿ ಪುಳುಂಬನಿಂ ಕಳೆಯುತ್ತೆ ದೇಹಮನೊಷ್ಟುತುಂ ಪೆಲ್ಲೆಲರ್ಗಿರದಾಯೆನುತ್ತುಮರಣ್ಯಸಂಚರನೊಪ್ಪಿದಂ (ಉದ್ಭಟ. ೪-೦೨೦). ೨. ಕಂಟಕಗಳಿಂದ ಕೂಡಿದ ಗಿಡ, ಪೊದೆ ಮುಂತಾದುವು : ಬಳ್ಳಿಯೆಲ್ಲಂ ಲತೆ ಮುಳ್ಳೆಲ್ಲಂ ಕೇದಗೆ ಬೆಳೆಗಯ್ಯೆಲ್ಲಂ ಫಲಶಾಲಿಯೆಂದೊಡೇಪೊಗಟ್ಟುವದಂ (ಕಾವ್ಯಾವ. ೮೦). ೩. ಚೂಪಾದ ತುದಿ,–ಮೊನೆ : 'ಮುಳ್ಗಣೆ' ಪರಾ. ೪. ಚೇಳು ಮುಂತಾದುವುಗಳ ಕೊಂಡಿ : ಮಾಡಿದನೇಕೆಯೊ ಮೇಲಂ ನೋಡದೆ ಬಿದಿ . . . ರೂಢಿಸಿ ತೇಟಿಗೆ ಮುಳ್ಳಂ (ದರ್ಪಣ. ೧-೬೨). ೫. ತಕ್ಕಡಿಯ ಏರುಪೇರನ್ನು ಸೂಚಿಸಲು ತಕ್ಕಡಿಯ ಕೋಲಿನ ನಡುವಿನಲ್ಲಿರುವ ಚೂಪಾದ ಸಲಕರಣೆ : (೬). ೬. ಕುದುರೆಯನ್ನು ದೌಡಾಯಿಸುವುದಕ್ಕಾಗಿ ಸವಾರನು ಹಿಮ್ಮಡಿಗೆ ತೊಡುವ ಲೋಹದ ಚೂಪಾದ ಸಾಧನ: (೬). ಮುಳು: ೧. ಎತಪಿಯಮಂಗಾಲಮ್ಮಳು ನಡೆಯುಂ ತಾನೆಂತು ನೊಂದು ಮಱುಗುವಂನತೆಲ್ಲೆಡೆಗಳೊಳಂ ಪ್ರಾಣಿಗಳು ಮಡಿಪದೆ ನೋಯಿಸದೆ ಕಾವುದೆಂಬಂ ಜೈನಂ (ಸಮಶ. ೬-೬) ; ಅಡವಿಯ ಮಾರ್ಗದಲಿ ಕಲುಮುಳುಗಳೊಳು ಕಾಪಥಕೆ ಕೋಮಲಚರಣಗಳ ಕೊಡುತ ತೊಳಲಿದರು (ಕುವ್ಯಾಆ. ೮-೯೩). 'ಮುಳುಗಳ್ಳಿ' ಪರಾ. ಮುಳ್ಳು: ೧. "ಮುಳ್ಳು ಕಂಟಕಮುಳ್ಳು" (ಮಂಗರಾ. ೯೯-೯೩) ; ಮುಳ್ಳಿಗೆ ಮೊನೆಯ ಎಳ್ಳಿಗೆ ಎಣ್ಣೆಯ ತಂದಿರಿಸಿದವರಾರುಂಟೆ ಅಯ್ಯಾ (ಅಜಾಷೂ. ೦೨೯-೯೨) ; ಮುಳ್ಳಂ ಕಳೆದು ದಸಿಯಂ ಸಿಕ್ಕಿದಂತಾಯಿತ್ತಲಾ (ಬಸವ. ೩೩-೪೪) ; ಒಳ್ಳೆಯನು ಇರದೂರು ಕಳ್ಳನೊಡನಾಟವು ಸುಳ್ಳನ ಮಾತು ಇವು ಮೂಱು ಕೆಸಱೊಳಗೆ ಮುಳ್ಳು ತುಳಿದಂತೆ (ಸರ್ವಜ್ಞ. ೦೦೮೬) : ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು (ಗಾದೆ). ೭. ಕಾಡುಹಂದಿಯ ಮೈಮೇಲೆ ಚೂಪಾದ ಕಡ್ಡಿಯಂತಿರುವ ಬಿರುಗೂದಲು : "ಶಲಲಂ, ಶಲಂ–ಈ ೨ ಎಯ್ಯ ಮುಳ್ಳು" (ಹಲಾಯು. ೩೯-೮೦). ೮. ಧಾನ್ಯಗಳ ತೆನೆಯ ಮೇಲಿರುವ ಮೊನಚಾದ ವಸ್ತು; ಕೂಬು: "ಕಿಂಶಾರು, ಧಾನ್ಯಶೂಕ–ಧಾನ್ಯದ ತುದಿಯ ಮುಳ್ಳು" (ನಾಅರಾ. ೬). ೯. ಗಡಿಯಾರದಲ್ಲಿ ವೇಳೆಯನ್ನು ಸೂಚಿಸಲು ಅಳವಡಿಸಿರುವ, ಸೂಜಿಯಂತೆ ಮೊನಚಾಗಿರುವ ಉಪಕರಣ: ಗಡಿಯಾಳದ ತಗಡಿನ ನಡುವೆ ಸಣ್ಣದೊಂದೂ ದೊಡ್ಡದೊಂದೂ ಎರಡು ಮುಳ್ಳುಗಳು ಹಚ್ಚಿರುತ್ತವೆ (ಮುಂಬಯಿ. ೬. ೩-೮೬) ; ಕೀಲಿ ಕೊಟ್ಟಾಗ ಎಲ್ಲಾ ಗಡಿಯಾರಗಳ ಮುಳ್ಳುಗಳೂ ಬಲಕ್ಕೆ ತಿರುಗುತ್ತವೆ (ಜೀವಾಕ್ಕ. ೨೦೦). ೧೦. ಕಂಟಕಗಳಿಂದ ತುಂಬಿರುವ ಒಂದು ಬಗೆಯ ಸಸ್ಯ: "ಖಮುಖಾ–ಮುಳ್ಳು, ಹಿಡಹಿಡಕೆ" (ಓಷಧಿ. ೪೩). ೧೧. ಲೇಖನಿಯ ತುದಿಗೆ ಸಿಕ್ಕಿಸಿ ಶಾಯಿಯಿಂದ ಬರೆಯಲು ಉಪಯೋಗಿಸುವ ಲೋಹದ ಮೊನಚಾದ ಸಾಧನ: ನನ್ನ ಲೇಖನಿಯ ಮುಳ್ಳು ಸವೆದು ಹೋಗಿದೆ (ರೂಢಿ). ೧೨. (ಆಲಂ) ಹಿಂಸೆ ; ತೊಂದರೆ : ಅಗಲು

ವಿಕೆಯೆಂದರೆ ಜೀವಕ್ಕೆ ಮುಳ್ಳು (ಕನ್ನಪಾ. ೧೨೦). ೧೩. ದುಃಖ; ಚಿಂತೆ; ನೋವು: ನನ್ನ ಹೃದಯದಲ್ಲಿ ನೆಟ್ಟ ಮುಳ್ಳು ನೆಟ್ಟಂತೆಯೇ ಇದೆ (ಬಾಣಲ. ೬೬).

**ಮುಳ್ಳ ಪಂದಿ, ಮುಳ್ಳ ಹಂದಿ**= ಮೈಮೇಲೆ ಹರಿತವಾದ ಕಡ್ಡಿಗಳಂತಿರುವ ಗರಿಗಳುಳ್ಳ ಒಂದು ಬಗೆಯ ಕಾಡುಹಂದಿ: ವಿಚ್ಚಂಬುಗಳವು ರೋಮಮನುಚ್ಚಳಿಸಲ್ಕಾಜಿದಲ್ಲಿ ತೊಡರ್ದಿರೆ ಕೊಡಪುತ್ತುಚ್ಚರಿಯ ಮುಳ್ಳ ಪಂದಿವೊಲಚ್ಚಗಮಂ ಮಾಡಿ ಮಡಿಬಿದತ್ತದು ಸುರರಾ (ಕರಿಶಂ. ೪-೧೭); ಮುಳ್ಳುಹಂದಿಯ ಮುಳ್ಳನ್ನು ಕೆಲವರು ಬೈತಲೆ ತೆಗೆದುಕೊಳ್ಳಲು ಬಳಸುತ್ತಾರೆ (ರೂಢಿ). **ಮುಳ್ಳ ಹಾಸಿಗೆ**= (ಆಲಂ) ಯಾತನೆಯನ್ನುಂಟು ಮಾಡುವ ಸ್ಥಳ: ಅವನ ಪತ್ರ ಬಾರದಾಗಲು ಸಮಸ್ತಜಗತ್ತೇ ಚಾರುಗೆ ಮುಳ್ಳುಹಾಸಿಗೆಯಾಗಿ ಭಾಸವಾಯ್ತು (ಇಶ್ವಕ. ೨೮೯). **ಮುಳ್ಳಾಗು**=(ಆಲಂ) ಕಂಟಕಪ್ರಾಯವಾಗು; ಅಡ್ಡಿಯಾಗು: ಸಾವಿರದ ಮೇಲೇಳ್ನೂರು ಬಸದಿಗಳಿರಲವಕೆ ಮುಳ್ಳಾಗಿ ಪೊಂದಿರ್ದುದು ಶಿವಾಲಯವು ತಡೆಯದೀ ದೇಗುಲವನೀಗಳೆ ಕೆಡಿಸಬೇಕು (ಬಸಪು. ೫೦-೭೭); ಅತೋಭ್ರಷ್ಟ, ತತೋಭ್ರಷ್ಟನಾಗಿ, ಮನೆಗೆ ಮುಳ್ಳಾಗಬೇಡ (ಹಂಗಿತ. ೯೩). **ಮುಳ್ಳಾಡಿಸು** = (ಆಲಂ) ಚುಚ್ಚಿ ಮರುಕಳಿಸುವಂತೆ ಮಾಡು; ಕೆರಳಿಸು: ನೆನೆವು ಮುಳ್ಳಾಡಿಸಲು ಎದೆಯ ದನಿ ..ತಬಕದೊಲು ಮೈಮರೆವಿಸಲಿ ಭಾವ ತೋಡಲಾರೆ (ಚೀವಲ. ೭೦-೧೧). **ಮುಳ್ಳಿನ ಮೇಲಿರು** = (ಆಲಂ) ಮುಳ್ಳಿನ ಮೇಲಿದ್ದಂತೆ ಚಡಪಡಿಸು; ಬಲು ಆತಂಕಗೊಂಡಿರು : ದೂರದ ಶಾಲೆಯಿಂದ ಮಕ್ಕಳು ಮನೆಗೆ ಬರುವವರೆಗೂ ಆಕೆ ಮುಳ್ಳಿನ ಮೇಲಿದ್ದರು (ರೂಢಿ). **ಮುಳ್ಳುಹಾಕಿಸು** = ಬಟ್ಟೆ ಒಗೆಯುವ ಕಲ್ಲು, ಒರಳುಕಲ್ಲು, ಬೀಸುವ ಕಲ್ಲು ಮುಂತಾದುವುಗಳನ್ನು ಉಳಿಯಿಂದ ಹೊಡೆಯಿಸಿ ಒರಟಾಗಿಸು: ಬೀಸುವ ಕಲ್ಲು ತುಂಬಾ ನುಣುಪಾಗಿಬಿಟ್ಟಿದೆ. ಮುಳ್ಳು ಹಾಕಿಸಬೇಕು (ರೂಢಿ). **ಮುಳ್ಳೇಳು** = (ಆಲಂ) ರೋಮಾಂಚನಗೊಳ್ಳು; ಪುಲಕಿತಗೊಳ್ಳು; ನವಿರೇಳು: ಅವನ್ನು ನೆನೆದರೆ ಈಗಲೂ ನನ್ನ ಮೈ ಮುಳ್ಳೇಳುತ್ತದೆ (ಹಳ್ಳಹಾ. ೦೦೩); ಕೈಯೆತ್ತಿದಾಗ ಮಾಧವನ ಭುಜಕ್ಕೆ ಸೋಕಲು ಅವನಿಗೆ ಮೈಮೇಲೆ ಮುಳ್ಳೆದ್ದಿತು (ಐರಾಕ. ೫೮).

[ದೇ.॥ ತಮಿ. ಮಲ. ಕೋತ. ತೊದ. ಮುಳ್; ತುಳು. ಮುಳ್ಳು; ಕೊಡ. ಮುಳ್ಳೀ; ತೆಲು. ಮುಲು, ಮುಲ್ಲು ; ಕುವಿ. ಮುಲ್ಲು]

**ಮುಳಕ** (ನಾ). (ಕರಾ) ಹಲಸಿನ ತೊಳೆ, ನೆನೆಸಿದ ಅಕ್ಕಿ ಮುಂತಾದುವನ್ನು ತಿರುವಿ, ಬೋಂಡದಂತೆ ತುಪ್ಪದಲ್ಲಿ ಕರಿದು ಮಾಡುವ ಒಂದು ಬಗೆಯ ತಿಂಡಿ : ಮೇಳದಲ್ಲೊಂದು ಪಾರ್ಟಿ ಸಿಕ್ಕಿದ ಮೇಲೆ ಬೊಜ್ಜದ ಊಟ, ಬೊಜ್ಜದ ಪಾಯಸ, ಹಲಸಿನ ಹಣ್ಣಿನ ಮುಳಕಕ್ಕೆಂದು ಬದುಕುವ ಬ್ರಾಹ್ಮಣರ ಕೊಂಪೆಯಿಂದ ಪಾರಾಗಬಹುದು (ಸಂಸ್ಕಾರ. ೩೯).

[ ? ]

**ಮುಳಗಳ್ಳಿ** 'ಮುಳುಗಳ್ಳಿ' ನೋ.

**ಮುಳಲು** (ನಾ). ಒಂದು ಬಗೆಯ ಸಸ್ಯ: "ಕ್ರಮುಕಪಾದಿ__ಮುಳಲು, ದಸಿ" (ಬಿತಧಿ. ೨೮). [?./ತಮಿ. ಮುಬ್ಬರ್= ಗಜ್ಜುಗದ ಜಾತಿಯ ಗಿಡ]

**ಮುಳವು** 'ಮುಳುವು' ನೋ.

**ಮುಳಿ**$_1$ (ಕ್ರಿ). ೧. ಕೆರಳು; ವ್ಯಗ್ರವಾಗು; ಕೋಪಗೊಳ್ಳು: "ಮುಳಿ–ಕೋಪೇ" (ಶಮಂದ); ಸಿಮುಗೆಲ್ಲರಾಳು ಕುಜಿಕ್ಕಾಲರಮನಾಳಿಯುರ್ ರಣಾಲಿ ಅರಸರಲ್ಲಿನ್ನುಳಿಮ ಬಸ್ನು (ಎಕ. XVI, ಕುಮುಕೂ. ೯೪-೩; ಸಂ. 780); ತಣಿಯೆಯುಣಲಿಕ್ಕಿದೆನೆಂದೊಡೆ ಮುಳಿದು ಸಾಯೆ ಬಡಿದು ಮನೆಯಿಂ ಪೆಂಡತಿಯನಟ್ಟಿ ಕಳೆದೊಡೆ (ವಡ್ಡಾರಾ. ೭೭-೦೫); ಮುಳಿದಿರೆ ಪಾದಪಂಕಜ ನುನಾಂತಲೆಯೊಳ್ ನಿಲೆ ತಾಳ್ದಿ ನಲ್ಲಳೇ ತಿಳಿಯನೆ (ಆದಿಪು. ೪-೦೦); ವಿಧಿ ಮುಳಿಯುವಕಟಾ ಪಾಪಿಗಳಿಗೆ (ಕೊರಾ. ೨-೫-೨೩). ೨. ವಿರೋಧವಾಗು; ವಿಪರೀತವಾಗು: ಇನಿಯವು ಮೊದಲೊಳ್ ನಂಜಿನ ಪನಿವೊಲ್ ಬಟಿಕೆಯ್ದೆ ಮುಳಿದು ಕೊಂದಿಕ್ಕುವುವಿಂತೆನೆಯೆನೆ ವಿಷಯವಿಷಾಸ್ವಾದನದೊಳ್ ಲಂಪಟರಿದೇಕೆಯೋ ನರಪಶುಗಳ್ (ಆದಿಪು. ೦೪-೦೨೫).

**ಮುಳಿದರ್**=ಹಗೆಗಳು ; ಶತ್ರುಗಳು: ಮುಳಿದರನಿಕ್ಕುವೆವೆಂದು ಪ್ಮಳಿಸಿದರಿಜಿಯಲ್ಕೆ ನಕುಲಸಹದೇವರ್ಕಳ್ (ಗದಾಯು. ೯-೨೮); ಮುಳಿದರಂ ಜಂಕಿಸಿದವು ಬಿಡದಾರ್ದು ಕಾವನೆಚ್ಚಲರ್ಗಣೆಗಳ್ (ಕಪ್ಪಿಕಾ. ೩೦೦). **ಮುಳಿವರ ಭೀಮ** = ಕೆರಳಿದವರಿಗೆ ಭೀಮನಂತಿರುವವನು; ಒಂದು ಬಿರುದು : ಕಾಪ್ಪುರ ಭೀಮಂ ದುರದೆಡೆ ರಾಮಂ ಮುಳಿವರ ಭೀಮಂ (ಪ್ಯಇಂ. ೦೯೨೮, ೩೦-೦೫; 1056). **ಮುಳಿವರಾದಿತ್ಯ** = ಕೆರಳಿದವರಿಗೆ ತಾಪವನ್ನುಂಟುಮಾಡುವವನು ; ಒಂದು ಬಿರುದು : ನುಡಿದನ್ತ ಗಣ್ಡಂ ಮುಳಿವರಾದಿತ್ಯಂ ಮನ್ನೆಯಮಲ್ಲಭಂ (ಸೌಇಇ. XX, ೨೦-೭೮; 1019). 'ಮುನಿ$_1$' ಪರಾ.

[ದೇ.॥ ತಮಿ. ಮುಳಿ = ಕುದಿ, ಸುಡು, ಒಣಗು, ಹಾಳಾಗು]

**ಮುಳಿ**$_2$ (ನಾ). ಸಿಟ್ಟು; ಕೋಪ : 'ಮುಳಿಕೆಯ್' 'ಮುಳಿಯಿಸು' ಪರಾ. [<ಮುಳಿ$_1$./ಮಲ. ಮುಟ್ಟಿ]

**ಮುಳಿ**$_3$ (ನಾ). ಮನೆಯ ಛಾವಣಿಗೆ ಹೊದೆಸಲು ಬಳಸುವ ಒಂದು ಬಗೆಯ ಹುಲ್ಲು : ಈ ಸಾರಿ ಮುಳಿಹುಲ್ಲಿಗೂ ದರ ಏರಲಿಕ್ಕಿದೆ (ಮುಗಿಯು. ೩೭೩); ಗುಡ್ಡೆಯಲ್ಲಿ ಮುಳಿಹುಲ್ಲು ಹಸನಾಗಿ ಸೊಂಟದಷ್ಟು ಎತ್ತರ ಬೆಳೆಯುವ ಸಮಯ ಅದು (ರಕ್ತರೂ. ೩೪). [←ತುಳು. ಮುಳಿ, ಮುಲಿ]

**ಮುಳಿಕೆಯ್** (ಕ್ರಿ). ಕೋಪಗೊಳ್ಳು; ಸಿಟ್ಟಾಗು; ಕೆರಳು : ಎನ್ನ ಮನಕ್ಕೊಡಂಬಡನೊಡಂಬಡುವೈ ಪಟಿಗೆಯ್ದುದೇಪಮಂ ನೀನ್ನೆಗಟ್ಟಿದಲೆಂದು ಮುಳಿಕೆಯ್ದುಗಿದೊಪ್ಪದು ಸಮ್ಮತಾಪಸಾನನ್ನಳಿನಾನನೇ ಮುಳಿದದಂ ಬಿಸುಡೈ (ಶಾಂತಿಪು. ೯-೮೪). [ಮುಳಿ$_2$ + ಕೆಯ್$_1$]

**ಮುಳಿಯಿಸು** (ಕ್ರಿ). ಕೋಪ ಬರುವಂತೆ ಮಾಡು ; ಸಿಟ್ಟಿಗೆಬ್ಬಿಸು ; ಕೆರಳಿಸು : "ಮುಳಿಯಿಸು – ಕೋಪೇ" (ಶಮಂದ); ನಿಮ್ಮಂ ಮುಳಿಯಿಸಿದ ಸುರಾಸುರರುಮನೊಳರೆನಿಸಂ ಕರ್ಣನೆಂಬನೆನಗೇವಿರಿಯಂ (ಶಂಶಭಾ. ೦೨-೧೩೦); ಸಿಂಹಮಂ ಮುಳಿಯಿಸಿ ಪಲ್ಗಳಂ ಪಿಡಿದು ಕಿಟ್ತುವರಾರ್ (ಗದಾಯು. ೯-೨೦); ಮುಳಿಯಿಸದೆನ್ನಂ ಮಗುಳ್ದಂ ಬಳೆದೊಟ್ಟೊಡೆ ಗೆಲ್ವೆಯೆಂಬುದೊಟ್ಟೊಡೆ ಗೆಲ್ಲಯ್ (ಕಾವ್ಯಾವ. ೭೭೪). [ಮುಳಿ$_2$ + – ಇಸು$_3$]

**ಮುಳಿವು** 'ಮುಳುವು' ನೋ.

**ಮುಳಿಸಾಱು** (ಕ್ರಿ). ಕೋಪವು ಶಾಂತವಾಗು ; ಸಿಟ್ಟು ಇಳಿ : ಬಿರಯಿಯ ಮಿಟ್ಟು[ವೆ]ಂ ಮಿದಿದೊಡಲ್ಲದಣಂ ಮುಳಿಸಾಱಿದು (ಶಂಶಭಾ. ೨-೦೩).

[ಮುಳಿಸು + ಆಱು$_1$]

**ಮುಳಿಸು** (ನಾ). ಕೋಪ ; ಸಿಟ್ಟು ; ಮುನಿಸು : "ಕಿಸುಗಣ್ಣು . . . ಮುಳಿಸು, ಮುನಿಸು, ಒರಸೊರಸು, ಸೆಣಸು – ಈ ೮ ಕೋಪಂ" (ಳಕಾ. ೭೫-೪೮೭); ಮೆಲ್ಲನೆಸಪ ಮಲಯಾನಿಲನುಂ ಮುಳಿಸಂ ಕಟಲ್ಚಿ ಕಳೆದುವು . . . ಕಾಮಿಗಳಾ (ಳಪಂ. ೨-೭೦); ಸಿಗ್ಗನಾಟ್ ಮುಳಿಸಂ ನೀನ್ನೆದಿಂಗಂ ಬಿಸುಡು (ಆದಿಪು. ೦೪-೦೨೮); ಮುನಿ . . . ಮುನ್ನಿನ ಪಗೆಯಂ ಕುಂಡಲನಂ ನೆನೆದವಧಿಯಿನಳಪಿಗಟಿದ ಮುಳಿಸಂ ತಳೆದಂ (ಶಂರಾಮ. ೪-೦೪); ಪೊಲ್ಲದರೊಲುಮೆಯೊಳ್ಪದರ ಮುಳಿಸು ನಿಲಬಲ್ಲುದೆ (ಶರಾಸಂ. ೦-೫೫). 'ಮುನಿಸು$_2$' ಪರಾ. [ಮುಳಿ$_1$ + – ಸು$_3$]

**ಮುಳಿಸುಗ** (ನಾ). ಕೋಪಿಸಿಕೊಳ್ಳುವವನು ; "ಭಾಪುಕಃ, ಭಾಮಾನಃ– ಈ ೨ ಮುಳಿಸುಗಂ" (ಕಾಶಕ. ೦೦೮). [ಮುಳಿಸು + – ಗ$_2$]

**ಮುಳು** 'ಮುಳ್' ನೋ.

**ಮುಳುಂಕಿಸು** 'ಮುಟುಂಗಿಸು' ನೋ.

**ಮುಳುಂಕು** 'ಮುಟುಂಗು' ನೋ.

**ಮುಳುಂಗಿಸು** 'ಮುಟುಂಗಿಸು' ನೋ.

**ಮುಳುಂಗು** 'ಮುಟುಂಗು' ನೋ.

**ಮುಳುಕ$_1$** 'ಮುಟುಕ' ನೋ.

**ಮುಳುಕ$_2$** (ನಾ). ಒಂದು ಬಗೆಯ ಸಸ್ಯ : ಮುಳುಕದ ಹಗಿನು. ಇಂಗುಳ ಮಂ ನೀರಲ್ಲಿ ಅರೆದು ನುಂಗೆ ಮೂಱುದಿನಕ್ಕೆ ಬಂಜೆಗೆ ಗರ್ಭಮಕ್ಕುಂ (ಅಶ್ವ.ಶಾ. ೯೦). [←ತೆಲು. ಮುಲಕ, ಮುನಗ]

**ಮುಳುಕಿಸು** 'ಮುಟುಂಗಿಸು' ನೋ.

**ಮುಳುಕು$_1$** 'ಮುಟುಂಗು' ನೋ.

**ಮುಳುಕು$_2$** 'ಮುಟುಕು$_2$' ನೋ.

**ಮುಳುಕುನೀರ್** (ನಾ). ಮುಳುಗಿಸುವಷ್ಟು ನೀರು : ತನ್ನ ಮಾಯಾ ಲೇಶದಿಂ ಮೂಱುಂ ಜಗಮಂ ಮೋಸಂಗೊಳಿಪ ಮುಕುಂದಂಗೆ ಮೋಹ ರಸಮಂ ಮುಳುಕುನೀರೆನಿಪ ಮುಗುಳ್ನಗೆಯುಂ . . . ತಣಿಯದ ನೋಟಂ ಗಳುಂ ಪೆಣ್ಣಾಸುವ ಸಾಜದಿಂದಮೆ ಆದೊಡಂ (ಅಕಂ. ೦೦೩-೦೭).

[ಮುಳುಕು$_1$ (<ಮುಟುಂಗು) + ನೀರ್]

**ಮುಳುಕೂಗರಿ, ಮುಳ್ಳುಕೂಗರಿ** (ನಾ). ಒಂದು ಬಗೆಯ ಗಿಡ ಮತ್ತು ಅದರ ಕಾಯಿ : ಮುಳುಕೂಗರಿಕಾಯಿ (ಪಾಜಕಾಯಿರಿ, ಗಜ ಒಂಪಳಿ) (ಮುಂಜಾ. ೦೨೯). **ಮುಳ್ಳುಕೂಗರಿ** : ಪಾಜುಕುಯಿರಿ (ನಸು ಗುನ್ನಕಾಯಿ, ಮುಳ್ಳುಕೂಗರಿಕಾಯಿ) (ಮುಂಜಾ. ೦೩೦).

[ಮುಳು (<ಮುಳ್) + ಕೂಗರಿ]

**ಮುಳುಗ** 'ಮುಟುಕ' ನೋ.

**ಮುಳುಗಡೆ** (ನಾ). ನೀರಿನಲ್ಲಿ ಅಡಗಿಹೋಗುವುದು.— ಮುಳುಗಿ ಹೋಗುವುದು : ಅನೇಕ ಎಕರೆಗಳ ಅರಣ್ಯಪ್ರದೇಶವನ್ನೂ ಬಂಜರು ಜಮೀನನ್ನೂ ತಾತಾ ಅವರಿಗೆ ವಶಪಡಿಸಬೇಕಾಗಿದ್ದಿತು. ಅದರ ಪ್ರಯುಕ್ತವಾಗಿ ಕೆಲವು ವಾಸಸ್ಥಳಗಳು ನೀರಿನಲ್ಲಿ ಮುಳುಗಡೆಯಾಗುವ ಸಂಭವ ವಿದ್ದಿತು (ಜಾಗ್ಯ.ಶಿ. ೭೯). [<ಮುಳುಗು$_1$ + ಕಡೆ$_2$]

**ಮುಳುಗತ್ತಿ** (ನಾ). ಮುಳ್ಳನ್ನು ಸವರಲು ಬಳಸುವ ಕತ್ತಿ : ಕುಱುಬ ನುಱ್ ಮುಳುಗತ್ತಿಯಿಂ ತಿಱಿಯುಱುವೆಗಳು ಬರೆಗುಡುಹುವಂಡಗಿದ ಕುಱಿ ದೊವಲ ತದಿಯುಸೆಯಿ . . . ನೋಡುತ್ತ (ಬಸ. ೨೦-೦೨); ಆ ಕುರುಬ ಮುಳುಗತ್ತಿಯಿಂದ ಮಾದರಸ ಕಳೆತಿದ್ದ ಬೊಬ್ಬುಲಿಮರದ ಕಾಯಿಸೊಪ್ಪು ಗಳನ್ನೇ ಕಡಿಕಡಿದು ಕುರಿಗಳಿಗೆ ಮೆಯ್ಯಿಸತೊಡಗುತ್ತಾನೆ (ಪಶ. ೨೬೬).

[ಮುಳು (<ಮುಳ್) + ಕತ್ತಿ./ತೆಲು. ಮುಲುಕತ್ತಿ]

**ಮುಳುಗಳ್ಳಿ, ಮುಳಗಳ್ಳಿ, ಮುಳ್ಳುಗಳ್ಳಿ** (ನಾ). ಮುಳ್ಳುಗಳಿರುವ ಒಂದು ಬಗೆಯ ಕಳ್ಳಿಗಿಡ : ಕಳ್ಳಿಯೊಳು ಹಾಲು ಮುಳುಗಳ್ಳಿಯೊಳು ಹೆಜ್ಜೇನು ಎಳ್ಳಿನೊಳಗೆಣ್ಣೆ ಹನಿದಿರಲು ಶಿವಲೀಲೆ ಸುಳ್ಳೆನ್ನಬಹುದೆ (ಸರ್ವಜ್ಞ. ೧೯೯). **ಮುಳಗಳ್ಳಿ** : ಬಿದರಕ್ಕಿ, ಲೋಳಸರ, ಮುಳಗಳ್ಳಿ ಮುಂತಾದವುಗಳು ಸುಖದ ಕಾಲದಲ್ಲಿ ನಿರುಪಯುಕ್ತಪದಾರ್ಥಗಳೆಂದು ಎಣಿಸಲ್ಪಡುತ್ತವೆ (ಮುಂಜಾ. ೩-೨೩೯); ಬರಗಾಲದ ಆಹಾರ . . . ೧. ಬಾಳೇಕಾಯಿ. ಹೂವು. ೨. ತೊಂಡೇಕಾಯಿ. ೩. ಮುಳಗಳ್ಳೀಕಾಯಿ (ಕಶಾಗಿ. ಶಂ. ೦೧). **ಮುಳ್ಳುಗಳ್ಳಿ** : ಈ ಬೈಲುಸೀಮೆಯ ಅಡವಿಯಲ್ಲಿ ಸಾಧಾರಣವಾಗಿ ಎಲ್ಲ ಕಡೆಯಲ್ಲಿಯೂ ಜಾಲಿ, ಈಚಲು, ಕಳ್ಳಿ, ಮುಳ್ಳುಗಳ್ಳಿ . . . ಬಣಾದವರಿ ಮುಂತಾದವುಗಳು ದೃಷ್ಟಿಗೆ ಬೀಳುತ್ತವೆ (ಕಳಶ. ೩೦).

[ಮುಳು (<ಮುಳ್) + ಕಳ್ಳಿ$_2$]

**ಮುಳುಗಿಡು** 'ಮುಳ್ಗಿಡು' ನೋ.

**ಮುಳುಗಿಸು** 'ಮುಟುಂಗಿಸು' ನೋ.

**ಮುಳುಗು$_1$** 'ಮುಟುಂಗು' ನೋ.

**ಮುಳುಗು$_2$** 'ಮುಟುಕು$_2$' ನೋ.

**ಮುಳುಗುಂದ** 'ಮುಳ್ಗುಂದ' ನೋ.

**ಮುಳುಗುಮಿಂಹ** (ನಾ). ನೀರಿನಲ್ಲಿ ತಲೆಯನ್ನು ಮುಳುಗಿಸಿ ಮಾಡುವ ಸ್ನಾನ : ಖಗಗಳಿಗೆ ಸುಖದಮಾದುದು ನದಿಯ ಮುಳುಗುಮಿಂಹಂ (ತ್ರೀರಾಮ. ೨೨೬-೨೨). [ಮುಳುಗು$_1$ (<ಮುಟುಂಗು) + ಮಿಂಹ]

**ಮುಳುಗುಹಕ್ಕಿ** (ನಾ). ನೀರಿನ ಅಡಿಯಲ್ಲಿ ತಲೆಯನ್ನು ಮುಳುಗಿಸಿ ಮೀನು ಮುಂತಾದುವನ್ನು ಹಿಡಿಯುವ ಒಂದು ಬಗೆಯ ಪಕ್ಷಿ : ಮುಳುಗುಹಕ್ಕಿ, ಮುಳುಕ (Diver. ಇಂಕಿ).

[ಮುಳುಗು$_1$ (<ಮುಟುಂಗು) + ಹಕ್ಕಿ (< ಪಕ್ಕಿ)]

**ಮುಳುಗೆದಱು** (ಕ್ರಿ). ಮುಳ್ಳುಗಳನ್ನು ಚೆದರಿಸು.— ಹರಡು : ತಱು ಗಿದಂಬಿನಲೆಯ್ಯವ್ಯಗ ವ್ಯೈಯುಱುಬೆಯಲಿ ಮುಳುಗೆದಱುವಂದದಲುಱುಬಿ [ಶಾಸಂ. ಮುಳುಗೈದಾಡುವಂತಿರೆವುಱುಬಿ] ರಘಾಡಿಸಿ ರಘುಡಿತೆಯಲಿ ಮೇಲ್ವಾಯ್ದು (ಕೂರಾ. ೩-೦೦-೦೬).

[ಮುಳು (< ಮುಳ್) + ಕೆದಱು$_1$ (< ಕೆದಱ್$_1$)]

**ಮುಳುಗೊಗ್ಗಿ, ಮುಳ್ಳುಕೊಗ್ಗಿ, ಮುಳ್ಳುಕೊಗ್ಗೆ, ಮುಳ್ಳುಗೊಗ್ಗಿ** (ನಾ). ಒಂದು ಬಗೆಯ ಔಷಧೀಸಸ್ಯ : ನೆಲ್ಲಿ . . . ಮುಳು ಗೊಗ್ಗಿಯೆಂಬಿನಿತ್ತಱ ಪುಡಿಯಂ ಚೆಲ್ಲನೆ ಮೂಗಿನೊಳೂಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ (ಖಗೇಂ. ೬-೩೩). **ಮುಳ್ಳುಕೊಗ್ಗಿ** : "ಕಂಟಫಂಖಃ — ಮುಳ್ಳುಕೊಗ್ಗಿ" (೬ಕಧ. ೨೩); ಮುಳ್ಳುಕೊಗ್ಗಿಯ ಬೇರಿನ ಕಷಾಯವ ಕೊಡಿಸಲು ಅಂಗುರವಿಷ ಹರವಹುದು (ವೈದ್ಯಸಾ. II, ೨೨೯). **ಮುಳ್ಳುಕೊಗ್ಗೆ** : "ಕಂಟಾಲುಕ— ಜುಹುಸಂಗ್ರಾರೆ, ಮುಳ್ಳುಕೊಗ್ಗೆ" (೬ಕಧ. ೨೩); ಬೆಲ್ಲವತ್ತದ ಬೇರು, ಮುಳ್ಳು ಕೊಗ್ಗೆ ಬೇರು, ಈ ಎರಡು ಬಗೆ ಬೇರು ಪ್ರತ್ಯೇಕ ಮೂವತ್ತೆರಡು ಹಲಗಳ ನಾಗುಳ ನೀರಲ್ಲಿ ಕಷಾಯವೆತ್ತಿ (ವೈದ್ಯಸಾ. I, ೪೪೬). **ಮುಳ್ಳುಗೊಗ್ಗಿ** : "ಕಾರುನೀಲಿ, ಮುಳ್ಳುಗೊಗ್ಗಿ, ಗೊಗ್ಗಿ" (ಪತ್ಯ.ಶಿ. ೭೪).

[ಮುಳು (< ಮುಳ್) + ಕೊಗ್ಗಿ$_1$]

**ಮುಳುಗೋಲು, ಮುಳ್ಳುಕೋಲು, ಮುಳ್ಳುಗೋಲು** (ನಾ). ೧. ದನ, ಕರು, ಕುದುರೆ ಮುಂತಾದುವುಗಳನ್ನು ಚೋದಿಸಲು ಬಳಸುವ ಚೂಪಾದ ಕೋಲು ; ತಿವಿಗೋಲು : ಬಲವೃಳ್ಳೆರಡೆತ್ತುಗಳಂ . . . ಮುಳುಗೋಲಂ ಸಂಪಾದಿಸಿ (ಕಲ್ತಿ.ಸ. ೩-೨-೩) ; ದೊರೆ ಮಾತಿನ ಮುಳು ಗೋಲಿಂದ ತಿವಿದಾಗ ಮಂತ್ರಿ ಸ್ಮರಣೆ ಕಳೆದುಕೊಳ್ಳದೆ . . . ಮಾತು ಕೊಡುತ್ತಾನೆ (ಸಂಕ್ರಾಂತಿ. ೯೩). **ಮುಳ್ಳುಕೋಲು** : ೧. ದೇವಕೀನಂದನನು . . . ರಥಾಶ್ವಗಳ ಪಗ್ಗಗಳನ್ನು ಬಿಟ್ಟು ಹಸ್ತಕಮಲಗಳಿಂದ ಮುಳ್ಳು ಕೋಲನ್ನು ಹಿಡಿದು . . . ಭೀಷ್ಮನ ಮೇಲೆ ನಡೆದನು (ಭ.ಪಾರ್ವ. ೧೬೬). **ಮುಳ್ಳುಗೋಲು** : ೧. "ಪ್ರಾಜನಂ, ತೋದನಂ, ತೋತ್ರಂ—೩ ತಿವಿ ಗೋಲು, ಮುಳ್ಳುಗೋಲು" (ಸಿದ್ಧಾಂತ. ೨೬೬). ೨. ಒಂದು ಬಗೆಯ ಈಟಿ : "ಶಲ್ಯಂ, ಶಂಕುಃ — ೨ ಸೆಲ್ಲಿಹದ ಕೋಲು, ತಿವಿಗೋಲು, ಮುಳ್ಳುಗೋಲು" (ಸಿದ್ಧಾಂತ. ೨೬೬).

[ಮುಳು (<ಮುಳ್) + ಕೋಲು$_1$ (< ಕೋಲ್$_1$)]

**ಮುಳುದೊಡಕು** (ನಾ). ಗೋಜುಗೋಜಾಗಿರುವ ಮುಳ್ಳು : ಮುಳು ದೊಡಕಿನೊಳು ಕೂದಲೊಂದೇ ಸಿಲುಕಿ ನಿಂದವು ಚಮರಿಮೃಗ (ಕುಮಾ.ಭಾ. ೦೩-೨೯). [ಮುಳು (<ಮುಳ್) + ತೊಡಕು$_3$ (<ತೊಡಂಕು$_3$)]

**ಮುಳುಮುತ್ತ** 'ಮುಳ್ಮುಟ್ಟುಗ' ನೋ.

**ಮುಳುಮುತ್ತುಗ** 'ಮುಳ್ಮುಟ್ಟುಗ' ನೋ.

**ಮುಳುಮುಳು**(ನಾ). (ಸದ್ದಿಲ್ಲದೆ ಅಳುವುದನ್ನು ಸೂಚಿಸುವೆ) ಒಂದು ಅನುಕರಣಶಬ್ದ.

**ಮುಳುಮುಳು ಅಳು** = ಸದ್ದು ಮಾಡದೆ ಒಂದೇ ಸಮನೆ

ಅಳು : ಮುಳುಮುಳು ಅಳುತ್ತಾ ಶೀಲಿ ಅಲ್ಲೇ ಬಿದ್ದುಕೊಂಡಳು (ಕಣ್ಣ.ತಿ. ೩೦) ; ಸೀತಕ್ಕ ಮುಳುಮುಳು ಅತ್ತಳಂತೆ (ಮುಖರುದಾ. ೦೬೮).

**ಮುಳುಮುಱಿ** 'ಮುಳ್ಮುಱಿ' ನೋ.

**ಮುಳುಮೆಟ್ಟು** (ನಾ). ಕಾಲಿಗೆ ಮುಳ್ಳು ಚುಚ್ಚದಿರಲು ಹಾಕಿಕೊಳ್ಳುವ ಮೆಟ್ಟು,-ಪಾದರಕ್ಷೆ : ಕಳಕಳವ ಕಣ್ಣೆಱವೆಗಳ ಮುಸಗಲಿತನದ ಮುಳು ಮೆಟ್ಟುಗಳ ವೆಗ್ಗಳಿಯುರಿದ್ದುದ್ದು ಭೀಮಸಾತ್ಯಕಿಸೃಂಜಯಾದಿಗಳು (ಕುಮ್ಯಾ.ಕ. ೨೦-೦೪). [ಮುಳು (<ಮುಳ್) + ಮೆಟ್ಟು₂]

**ಮುಳುಮೊನೆ** 'ಮುಳ್ಮೊನೆ' ನೋ.

**ಮುಳುವಸೆ** 'ಮುಳ್ವಸೆ' ನೋ.

**ಮುಳುವು**, ಮುಳವು, ಮುಳಿವು (ನಾ). ೧. ಅಡ್ಡಿ ; ಕಂಟಕ : ವಿಘ್ನ : ನಮ್ಮ ಧರ್ಮ ನಮ್ಮ ಪ್ರಗತಿಗೆ ನೆರವಾಗಬೇಕೇ ಹೊರತು ಮುಳುವಾಗ ಬಾರದು (ಹೇಮುಕೊ. ೦೦೦). ೨. ಕೇಡು ; ನಾಶ : (ಕ). ೩. ಕೇಡಿಗೆ ಕಾರಣವಾದುದು ; ನಾಶಕರವಾದುದು : ನಿನ್ನ ಹಟಮಾರಿತನವೇ ನಿನಗೆ ಮುಳುವು ಆಯಿತು (ಮುಂಬಯು. ೬. ೨-೩೦) ; ಆ ಚಂಚಲತೆ ವಿಷ್ಣುವಿನ ಜೀವನಕ್ಕೆ ಮುಳುವಾಗಬಹುದೆಂದು ಅವನೆಂದೂ ತಿಳಿದಿರಲಿಲ್ಲ (ಕರುಶ. ೦೦೪೩) ; ನನ್ನ ಚೆಲುವೇ ನನಗೆ ಮುಳುವಾಗಿದೆ (ಕಮುವ. ೦೨). ೪. (ಕೆಡುಕಿಗೆ) ಕಾರಣ ; ಮೂಲ : ತಾನು ತನ್ನ ಅಣ್ಣನ ಸಾವಿಗೆ ಮುಳುವಾದೆನೇನೊ ಎಂಬ ಎದೆಗುದಿಯು ಬೆನ್ನುಹತ್ತಿ ಅವಳು ಒಳಗೊಳಗೆ ನವೆಯುತ್ತಿದ್ದಳು (ಕಪಕ. ೩೮). ೫. ಹಿಂಸೆಯನ್ನುಂಟು ಮಾಡುವಂತ ಹುದು ; ವೇದನೆಪಡಿಸುವಂತಹದು : ಗಂಡಸರ ಕಾಟದಿಂದಾದ ಅವಳ ಮನಸ್ಸಿನ ನಿರುತ್ಸಾಹ ನೆಕ್ಲೇದೋವನ ಮನಸ್ಸಿಗೆ ಮುಳುವಾಗಿತ್ತು (ಕುಪರು. ೪೪೭). ೬. ವಿರೋಧಿಸುವ ವ್ಯಕ್ತಿ ; ಎದುರಿಸುವ ವ್ಯಕ್ತಿ : ಈ ಇಲಾಖೆಯೊಳಗೆ ರೂಪಚಂದನಿಗೆ ಅವಳೊಬ್ಬಳು ಮಾತ್ರ ಮುಳುವಾಗಿದ್ದಾಳೆ (ಜಜಾನ್ಯಾ. ೪೫). **ಮುಳವು** : ೨. ಸುಲಭಮಾರ್ಗವ ಬಿಟ್ಟು ವಿಜಯವಿಠಲ ರೇಯ ಕೆಲಕಾಲವು ತಿರುಗಿ ಮುಳವು ಮಾಡಿಕೊಂಡೆ (ಪೋಕ್ಷದಿ. ೩೦-೨). **ಮುಳಿವು** : ೩. ದ್ವಿಜನಿಗಸಂತುಷ್ಟಿಯಿಂದ ವಿನಾಶವು ನೃಪನಿಗೆ ತುಷ್ಟಿಯೆ ಮುಳಿವು (೩ಂಶಾಕ. ೦೬೩-೨) ; ನನ್ನ ನಾಲಗೆಯೆ ನನಗೆ ಮುಳಿವಾಗಿದೆ (ಶ್ರೀಸೂಕ್ತ. ೪) ; ಗಂಡಸಿಗೆ ಸಾಲ ಮುಳಿವು, ಹೆಂಗಸಿಗೆ ಹಾದರ ಮುಳಿವು (ಗಾದೆ). 'ಮುಳ್' ಪರಾ.

**ಮುಳುವೇಲಿ**, ಮುಳ್ಳುಬೇಲಿ, ಮುಳ್ಳುವೇಲಿ (ನಾ). ೧. ಮುಳ್ಳು ಪೊದೆಗಳಿಂದ ರಚಿಸಿದ ಬೇಲಿ,—ಆವರಣ : ತವಗ ತಳಿ ಮುಳುವೇಲಿ ಬಾಗಿಲ ಜವಳಿಗದ ಬೀಯಗದಲಿದ್ದುದು ದಿವಿಜವನವೃದ್ಧಂಡತರ ಪರಿಮಳದ ಪೂರದಲಿ (ಕುಗ್ಮಾ.ಆ. ೦೬-೨೭) ; ಮುಳುವೇಲಿ ಮೋರುವೆ ತಳಿ ಸುರಂಗ ಗಳಿಂದ ಬಳಸಿ ಬಂಧಿಸಲಾ ಪುರವ ಪೊಳಲೊಳಗೆಸೆವ ಜನರು ಭೀತಿಗೊಂಡಾಗ ಕಳವಳಿಸಿದರು (ಕಂಪಪ. ೦೩-೬೩). **ಮುಳ್ಳುಬೇಲಿ**: ೧. ಅದಕ್ಕೆ ಮುಳ್ಳು ಬೇಲಿ 'ಕುತ್ತ'ದಿದ್ದರೆ, ಒಳಗೆ ಹಸುರು ಉಳಿಯಲಿಕ್ಕಿಲ್ಲ (ಬುರಮ. ೦೦). ೨. (ಅಲಂ) ಅಭಿಪ್ರಾಯಭೇದ ; ಅಂತರ : ಮನಮನಗಳ ಮುಳ್ಳುಬೇಲಿ ಮಮತೆ ದೂರ ತಳ್ಳಿವೆ (ಕಂಮು. ೨೪-೦೪). **ಮುಳ್ಳುವೇಲಿ** : ೨. ಈ ಮಾತು ಪುರುಷಭಾಗ್ಯದ ಮುಳ್ಳುವೇಲಿ. ನೀನು ಒಂದಿಲ್ಲೊಂದು ದಿನ ಕಿತ್ತಿ ಮುಂದೆ ಸಾಗಬೇಕಾಗುವುದು (ಜಯಂತ. ೭೪).

[ಮುಳು (<ಮುಳ್) + ಬೇಲಿ]

**ಮುಳುಹೊರಜೆ** (ನಾ). ಮುಳ್ಳುಮುಳ್ಳಾಗಿರುವ ಹಗ್ಗ : ಒರಟಾದ ಹಗ್ಗ : ಬಿಗಿದು ಪೊಮ್ಮಳಿಗಳನು ಮೊಸಱಂಚೆಗಳ ಜೋಡಿಸಿ ಕಟ್ಟಿ ಮುಳುವರಜ [ ಪೊರಜೆ ] ಗಳ . . . ನಿಡುಝಲ್ಲಿಗಳ ಸಾಲುಗಳೆಸೆಯೆ ಸಿಂಗರಿಸಿದರು ಮುಮಗಜವ (ತಿಪ್ಪುಲು ೩-೩೩).

[ಮುಳು (<ಮುಳ್) + ಪೊರಜೆ]

**ಮುಳುಸೌಂತೆ** 'ಮುಳುಸೌತೆ' ನೋ.

**ಮುಳುಸೌತೆ**, ಮುಳುಸೌಂತೆ, ಮುಳ್ಳುಸವುತೆ, ಮುಳ್ಳುಸೌತೆ (ನಾ). ಮುಳ್ಳುಗಳುಳ್ಳ ಒಂದು ಬಗೆಯ ಸೌತೆ : ಅಗಸೆ ಮುಳು ಸೌತೆ ತೊಂಡೆಯ ಪಲವು ಫಲಕಂದಗಳ ಶಾಖಾವಳಿಯ ಸವಿಯೊಪ್ಪುರಣೆ ಘಮ ಘಮಿಸಲಿಕೆ ಬಡಿಸಿದರು (ಅಶಂದಾ. ೭-೨೩-೩೪). **ಮುಳುಸೌಂತೆ**: ಕಣ್ಗೊಳಿಸುವ ಮುಳುಸೌನ್ತೆ ಕುಂಬಳ (ಬೊಂಕಶಾ. ೦೪೪೫, ಬಂಕಾಪುರ. ೨೭-೩; 1076). **ಮುಳ್ಳುಸವುತೆ** : (ಕ). **ಮುಳ್ಳುಸೌತೆ** : "ರೋಮಶೀ—ಮುಳ್ಳು ಸೌತೆ" (ಓಕಧಿ. ೦೪೦). [ಮುಳು (<ಮುಳ್) + ಸೌತೆ (<ಸವುತೆ)]

**ಮುಳುಹು**(ನಾ). ೧. ಮೊನೆಗೋಲಿನಿಂದ ಚುಚ್ಚುವಿಕೆ,-ಚೋದಿಸುವಿಕೆ: (ಕ). ೨. ಪ್ರಾಣಿಗಳನ್ನು ಚೋದಿಸಲು ಬಳಸುವ ಚುಚ್ಚು ಗೋಲು,— ಮೊನೆಗೋಲು : "ಪ್ರಾಜನಂ ಮುಳುಹು" (ಮಂಗರಾ. ೦೦೪-೨). [< ಮುಳ್]

**ಮುಳುಹುಗೋಲ್** (ನಾ). = ಮುಳುಹು ೨ : "ಪ್ರತೋದಃ ಪ್ರಾಜನಂ ತೋತ್ರಂ—ಈ ೩ ಮುಳುಹುಗೋಲ್" (ಹಡಾಯು. ೪೪-೪೨೩).

[ಮುಳುಹು + ಕೋಲ್₁]

**ಮುಳ್ಗಣೆ** (ನಾ). ಮೊನಚಾದ ತುದಿಯುಳ್ಳ ಬಾಣ ; ಹರಿತವಾದ ಸರಳು : ಜಗವ ಸುಂಗಿದ ನಿಱಿಯ ಮೋಹರ ವಿಗಡಸೂರ್ಯನ ಕಿರಣಗಳ ಬಲುಮುಳ್ಗಣೆಗಳು ತಾಗೆ (ದೀಶೀಮ. ೪-೩೪). [ಮುಳ್ + ಕಣೆ₁]

**ಮುಳ್ಗತ್ತಿಗೆ** (ನಾ). ಮುಳ್ಳುಮುಳ್ಳಾಗಿರುವ ಕತ್ತಿ: ಕರಾಗ್ರದಲ್ಲಿ ಮುಳ್ಗತ್ತಿಗೆಯುಂ ತಿರಿಯುಂ ಚಟಿಯುಂ ಘಟಮುಂ ಪರಶುವನಿರದಾಂತು (ಕೃತಪ. ೦೦-೩೦). [ಮುಳ್ + ಕತ್ತಿಗೆ]

**ಮುಳ್ಗಿಡು**, ಮುಳುಗಿಡು, ಮುಳ್ಳುಗಿಡ (ನಾ). (ಬೊಬ್ಬುಲಿ, ಜಾಲಿ, ಗುಲಾಬಿ ಮೊದಲಾದ) ಮುಳ್ಳುಗಳಿಂದ ತುಂಬಿರುವ ಗಿಡ : ಪಡೆಯದ ಬೇಟಮುಂ ಪಡೆದುದಂ ಕಿಡಿಸಲ್ ತೊಱೆಯೊಳ್ ಪೊದಱ್ದ ಮುಳ್ಗಿಡುಗಡಿಸಟ್ಟುಗೆಕ್ಕೊನಲಿಗಂ ದೊರೆಯಪ್ಪರೆ ಕೇಳರಪ್ಪವರ್ (ಕಾಂತಿಕ. ೬-೪೦); ಮುಳ್ಗಿಡುಗಳೊಳ್ ತೊಡರ್ದ ಮೆಯ್ಯುವಿರ್ ಪಱಿಗು ಮೆಂದು ಮಿಡುಕಲೊಲ್ಲದಲ್ಲಿಯೆ ನಿಂದು (ಕಂದ್ರಕ. ೩-೬೩ ಕ). **ಮುಳುಗಿಡು**: ಮುಳುಗಿಡು ತೆವರ್ಗಳ್ ಒರಿದಾಗಿಯುಂ (ಕಲ್ಯಾಣ. ೨-೪). **ಮುಳ್ಳುಗಿಡ**: ದುರ್ಲಭಚಂದ್ರನು . . . ಕಾಡುಮುಳ್ಳುಗಿಡಗಳಲ್ಲಿ ನುಸಿದು . . . ಓಡುತ್ತಾನೆ (ದೀಪೀತಾ. ೪೦); ಗಂಡಕವು . . . ಮುಳ್ಳುಗಿಡ, ಕಬ್ಬು, ಧಾನ್ಯ, ತೃಣ ಮುಂತಾದ್ದನ್ನು ತಿನ್ನುತ್ತದೆ (ಮುಂಬಯು. ೪-೪೭).

[ ಮುಳ್ + ಗಿಡು ]

**ಮುಳ್ಗು** 'ಮೊಟ್ಗು₁' ನೋ.

**ಮುಳ್ಗುಂದ**, ಮುಲುಗುಂದ, ಮುಳುಗುಂದ, ಮುಳ್ಗುಂದು (ನಾ). ಒಂದು ಸ್ಥಳದ ಹೆಸರು ; ಇದು ಈಗಿನ ಗದಗ್‌ತಾಲ್ಲೂಕಿನಲ್ಲಿದೆ : ಮುಳ್ಗುನ್ದಾಖ್ಯನಗರೇ (ಎಇ. XIII, ೦೪೨-೪; 902) ; ಮುಳ್ಗುಂದ ದೊಳ್ಮುನ್ನೆ ಸನ್ನ್ಯಸನಕ್ರಿಯೆಯ್ದಿ ನಿವೃತ್ತಿಗೆಯ್ದು . . . ಮುಡಿಪಿ (ಶಾಪುಂಕ. ೩). **ಮುಲುಗುಂದ** : ಮುಲುಗುಂದೇಂದ್ರ ಶಿವಪ್ಪ ಪುತ್ರ ಆತ್ರೇಯ ಗೋತ್ರಜಃ (ಎಕ. XII, ಕುಣಿಗಲ. ೦-೨೦೩ ; 1571). **ಮುಳುಗುಂದ** : ಮುಳುಗುನ್ದವಿದ್ಯಾಧರಂ ನಾಮಾದಿಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮುಳು ಗುನ್ದಪ(ಂ)ನ್ನೆರಡಱ ಮನ್ನೆಯಂ (ಸೌಇಇ. XI-i, ೪೭-೦೦ ; ೯೯೬) ; ಮುಳುಗುಂಡದೊಳಿರ್ದ ಮಹೋಜ್ವಳಧರ್ಮಾಮೃತಮನರ್ತಿಯಿಂದಂ ಭವ್ಯಾವಳಿಗಱುಪಿದಂ (ಧರ್ಮಾಮೃ. ೦೪-೦೬೮). **ಮುಳ್ಗುಂದು** : ಪರನ್ತ ಮುಳ್ಗುನ್ದು ಏತೇಷಾಂ ಮಧ್ಯಸ್ಥಿತೇ (ಇಇ. VII, ೨೨೦-೨೪ ; 658); ಮುಳ್ಗುನ್ದುಪನ್ನೆರಡುಮಂ ಮಾಯಿಮ್ಮರ್ನಾಳೆ (ಎಇ. XXVI, ೪-೦೦; ೯೦೬).

**ಮುಳುಗುಂದಗೊಂಡ ಗಂಡ** = ಮುಳುಗುಂದವೆಂಬ ಸ್ಥಳವನ್ನು

ವಶಪಡಿಸಿಕೊಂಡ ವೀರ; ಒಂದು ಬಿರುದು : ಮುಳುಗುಂದಗೊಂಡ ಗಂಡ ವೀರಬಲ್ಲಾಳ ಪೃಥ್ವೀರಾಜ್ಯಂಗೆಯ್ಯುತಮಿರೆ (ಎಫ್. XVI, ಶಿಕ್ಮಾ. ೬೯-೨೩ : 1177). [-ಮುಳ್ + ಕುಂದ$_3$]

**ಮುಳ್ಗುಂದಸಿಂದ** (ನಾ). ಒಂದು ವಂಶದ ಹೆಸರು : ಸ್ವಸ್ತಿಶಮಧಿಗತ ಪಂಚಮಹಾಶಬ್ದ ಮಹಾಸಾಮಂತಮುಳ್ಗುಂದಸಿಂದ ಶ್ರೀಮತ್ಜಾತರಸರ್ ಕಡಂಬಳಿಗೆಯಾಯಿರಮುಮಂ ಉತ್ತರೋತ್ತರವಾಗಿ ಆಳುತ್ತಿರೆ (ಎಫ್. XI. ದಾವಣ. ೦೦೯-೦೦; ೯೯೭). [ಮುಳ್ಗುಂದ + ಸಿಂದ$_1$]

**ಮುಳ್ಗುಂದು** 'ಮುಳ್ಗುಂದ' ನೋ.

**ಮುಳ್ತುಗ** 'ಮುಟ್ಟುಗ' ನೋ.

**ಮುಳ್ಪಂದಿ,** ಮುಳ್ಳುಪಂದಿ, ಮುಳ್ಳುಹಂದಿ (ನಾ). ಮೈಮೇಲೆ ಮುಳ್ಳಿನಂತೆ ಚೂಪಾದ ಗರಿಗಳುಳ್ಳ ಒಂದು ಬಗೆಯ ಕಾಡುಹಂದಿ : ಪುಳಿಂದರ್ . . . ಮುಳ್ಪಂದಿ ಪುಲ್ಲೆ ಕರಡಿಗಳಂ . . . ಖಡ್ಗಿಗಳನುಚ್ ಪಿಡಿದರ್ (ಪಬ್ಬ.ಕ. ೯-೩೯). **ಮುಳ್ಳುಪಂದಿ :** "ಕಪಾವ್ಯಗ – ಮುಳ್ಳುಪಂದಿ" (೬ಠಂ. ೦೩). **ಮುಳ್ಳುಹಂದಿ :** ಶಲಲೀ . . . ಮುಳ್ಳುಹಂದಿಯ ಕೂದಲಿಗೆ ಹೆಸರು (ಸಿದ್ಧಾಂತಿ. ೦೩೯) ; ಆ ಭೋಜಪತಿಯು ಮುಳ್ಳುಹಂದಿಯು ಹಾಗೆ ಶರಪೂರಿತಶರೀರನಾಗಿ ರಥದಿಂದ ಭುಮಿಕಿ ಶಕುನಿಯ ರಥಕ್ಕೆ ಹೋದನು (ಕೃಷ್ಣರಾ. ೦೨೬). [ಮುಳ್ + ಪಂದಿ. / ತಮಿ. ಮುಳ್ಳುಪ್ಪನ್ನಿ]

**ಮುಳ್ಪು** (ನಾ). ೧. ಕೆಂಪುಬಣ್ಣ; ಅರುಣವರ್ಣ : ಕೊಸಗಿನ ತುಱುಂಬು ಮುಳ್ಪಿನ ವಸನಂ ಕುಂಕುಮಾನವಾಂಗರಾಗಂ ಪರಿರಂಜಿಸೆ ರಾಗದಿಂದಮುತ್ಪಾದಿಸಿದನಜಂ ಭುವನಜನಮನೆನಿಸಿದುದು ಜನಂ (ಶಾಂತಿ. ೬-೦೯೩). ೨. ಕೆಂಪುಬಣ್ಣದ ಬಟ್ಟೆ; ರಕ್ತವರ್ಣದ ವಸ್ತ್ರ : ತಳ್ಪೊಯ್ದು ಸಂಜೆಗೆಂಪಿನ ತಳ್ಪಮರ್ದಿರೆ ಪೊರೆಯನೆತ್ತಿ ಪೊಲಿಸಿದ ತೆಜದಿಂ ಮುಳ್ಪಿನ ಪೊಸತೊಪ್ಪರಮಿನಕಳ್ಪಂಗಾ ಜೋಗಿಗೆಸೆದುದಸದಳಮಾಗಲ್ (ಲೀಲಾವ. ೯-೬೩); ಪೂತೆಲವಕ್ಕೆ ಪೌರವನಭೂರುಹಮೊಪ್ಪುವ ಮುಳ್ಪಿಗುಚ್ಛಳತ್ಯೆತನ ಚೀನಚೀಳವರುಣೋಪಲಭಿತ್ತಿಗೆ ಪೊನ್ನ ಕೋಂಟೆ . . . ದೊರೆಯಾಗಿ ತೋಱದತ್ತಾತನೋಲಾಂತು ಪುಣ್ಯಚಿದ ಬೇಚರಸೇನೆಯ ರಕ್ತಸೇಕದಿಂ (ಶಬ್ದ ಕೌ. ೬-೩೬).

**ಮುಳ್ಪೊಗು** (ಕ್ರಿ). ಮುಳ್ಳು ನಾಟು, – ಚುಚ್ಚು : ಮುಳ್ಪೊಕ್ಕವನಂತೆ ಕುಸಿಯುತ್ತುಂ (ರಶಜೀಜ್ಞು. ೦-೦೯೯). [ಮುಳ್ + ಪೊಗು]

**ಮುಳ್ಮರ,** ಮುಳ್ಳುಮರ (ನಾ). ಮುಳ್ಳುಗಳಿರುವ ಮರ : ಮುಳ್ಮರದ ಕೆಟಗಿರ್ದ ಲತೆಯಂತೋಸರಿಸುತ್ತುಂ (ರಶಜೀಜ್ಞು. ೩-೯೬); ಮುಳ್ಮರದ ಕೆಲದ ಮಾಲತಿಯೊಳ್ಪೊರ್ಬಿನ ಕೆಯ್ಯ ರತ್ನದೊಳ್ಪಮ ನೆನಿಸಿರ್ದಳ್ . . . ಶಬರಿ ಶಬರನ ಕೆಲನೊಳ್ (ಶಾಕ್ಕರಾ. ೦೨-೬೭). **ಮುಳ್ಳುಮರ :** ಮುಳ್ಳುಮರದ ಬೇರೆಡಹುಗಲ್ಲುಗಳೀವ ನಿಲ್ಲದೊಪ್ಪಿದುದು ಕಾಂತಾರ (ಕಂಶಿಜ. ೦೬-೯೩). [ಮುಳ್ + ಮರ$_1$]

**ಮುಳ್ಮುಡಿ** (ನಾ). ಮುಳ್ಳುಗಳಿಂದ ಮಾಡಿದ ಕಿರೀಟ : ಮುಳ್ಮುಡಿಯ ಕ್ರಿಸ್ತಮೂರ್ತಿಯು ಗಾಜಿನ ಸಂಪುಟವೊಂದನ್ನು ಬಲಗಡೆಯ ಮೂಲೆಯಲ್ಲಿ ತಗುಲಿಹಾಕಿತ್ತು (ಪುಶಿಜ. ೬೦). [ಮುಳ್ + ಮುಡಿ$_2$]

**ಮುಳ್ಮುತ್ತ** 'ಮುಳ್ಮುಟ್ಟುಗ' ನೋ.

**ಮುಳ್ಮುತ್ತಕ** 'ಮುಳ್ಮುಟ್ಟುಗ' ನೋ.

**ಮುಳ್ಮುತ್ತಗ** 'ಮುಳ್ಮುಟ್ಟುಗ' ನೋ.

**ಮುಳ್ಮುತ್ತುಗ** 'ಮುಳ್ಮುಟ್ಟುಗ' ನೋ.

**ಮುಳ್ಮುಚಿ,** ಮುಳುಮುಚಿ, ಮುಳ್ಳುಮುರಿ, ಮುಳ್ಳುಮುಚಿ (ಕ್ರಿ). ೧. ಮುಳ್ಳು ಚುಚ್ಚು, – ನಾಟು : ಸರ್ಪನಾಶ್ರಯಿಯುಪುದನುತಳ್ಕಿ ಮನೆಯಂ ಮಾಡದಿರ್ಪಲೇ ಮುಳ್ಮುಚಿಗುಮೆಂದು ಪಯಣಾಂಬೋಗ ದಿರ್ಪಲೇ (ಶಬ್ದಶಾ. ೦-೩೪೮). **ಮುಳುಮುಚಿ :** ೨. (ಅಲಂ) ಅಡ್ಡಿಯುಂಟಾಗು ; ತಡೆಯಾಗು : ಕೇಳಿದೈಯೆಲೆ ಕಂದ ತನ್ನಯ ನಾಲಗೆಗೆ ಮುಳುಮುಚಿದುದುತ್ತರವಾವುದೆನಗೆ (ತೊರವಿರಾ. ೬-೯೩-೦೩). **ಮುಳ್ಳುಮುರಿ :** ೧. ನೀನು ಹೇಳಿದೆ, ಬೀದೂ ಮತ್ತ ಓಡಿಹೋಗಿದ್ದಾನೆಂದು . . . ಕೇಳಿ ನನ್ನ ಎದೆಯೊಳಗೆ ಮುಳ್ಳುಮುರಿದಂತಾಯ್ತು (ಇಶ್ಕೃ. ೯೬೨). **ಮುಳ್ಳುಮುಚಿ :** ೧. ಮೃದುಪಾದಂಗಳಲಿ ಮುಳ್ಳುಮುಚಿಯಲೇ ನೆಂದಜೀಯಳು (ಜೈಮಿನಿ. ೩-೦೯).

[ಮುಳ್ + ಮುಚಿ$_1$]

**ಮುಳ್ಮುಟ್ಟುಗ,** ಮುಳುಮುತ್ತ, ಮುಳುಮುತ್ತುಗ. ಮುಳ್ಮುತ್ತ, ಮುಳ್ಮುತ್ತಕ, ಮುಳ್ಮುತ್ತಗ, ಮುಳ್ಮುತ್ತುಗ, ಮುಳ್ಳುಮುತ್ತಗ, ಮುಳ್ಳುಮುತ್ತಲ, ಮುಳ್ಳುಮುತ್ತುಕ, ಮುಳ್ಳುಮುತ್ತುಗ (ನಾ). ಮುಳ್ಳುಗಳಿರುವ ಪಲಾಶವೃಕ್ಷ : ನಿನ್ನ ಮುಳಿಸಿನ ಬೆಂಕೆಯಿಂ ಪೊತ್ತಿ ಪೊಗೆದುರಿವ ಪಗೆವರ ಬೀಡಿನಂತೆ ಸುತ್ತಲುಂ ಪೂತ ಮುಳ್ಮುಟ್ಟುಗದ ಮರಂಗಳೊಳಂ . . . ಬಕುಳಂಗಳೊಳಂ ಬಿಸದಕ್ಕೆ ಪಕ್ಕಾದ ಬನಮಂ ನೋಡಲ್ವೇಟ್ಟುದು (ಕಬ್ಬಿಗಾ. ೯೯). **ಮುಳುಮುತ್ತ :** "ಮುಳುಮುತ್ತಂ ಕಟು ತಿಕ್ತಮೆಂಬಿವು ಪಲಾಶಾಖ್ಯಂ" (ಜಾತಕ. ೦೯೬); ಮುಳುಮುತ್ತ ಹೂಶಂದದಲಿ ಹುದುಗಿದ ನೆತ್ತರಿನ ನೆಣವಸೆಯುಲೆಸೆದನು ರಣದೊಳಾ ಖಚರ (ಕಂಜ್ಞಾ. ೦೯-೩೯). **ಮುಳುಮುತ್ತುಗ :** ಬೆತ್ತ ಬೇವಗ್ನಾರಣಿಲೆ ಮುಳುಮುತ್ತುಗದ ತರು ಕರ್ಣಿಕಾರದ ಮೊತ್ತವಿದೆ ನೋಡಬುಲೆ (ತೊರವಿರಾ. ೩-೦-೨೬). **ಮುಳ್ಮುತ್ತ :** ಮುಳ್ಮುತ್ತಮಂಕೋಲೆ ಕಾಟಿಗ್ಗಿಣಸಿಂಗಳಂ ಕೊಸಗು ಗೇರ್ ಕಕ್ಕೆ ಬಿದಿರ್ಕಮ್ಮರಂ (ಸುಕ್ತಿ ಸು. ೩-೨೩) ; ಕರಿಕಕ್ಕೆ ಬಿಕ್ಕೆ ಮುಳ್ಮುತ್ತವಶೋಕೆ ಮಾವು . . . ಗುಗ್ಗುಳಂ ಮತ್ತಮನೇಕವೃಕ್ಷತತಿಯಿಂದೆಸೆದಿರ್ದುದು ತದ್ವನಾಂತರಂ (ಕಳಿಕಂ. ೬೦). **ಮುಳ್ಮುತ್ತಕ :** ಬೆತ್ತ ಬಿದಿರು ಮುಳ್ಮುತ್ತಕ ಕಗ್ಗಲಿ. . . ಕುತ್ತುಱುಮೆಳೆಗಳಿಂದಿರದಾ ಕಾನನವಿತ್ತುದಗುರ್ವನು (ಕುಮಾರಾಮ. ೨೬-೩೬). **ಮುಳ್ಮುತ್ತಗ :** ತತ್ತಿಸಿದ ಕಣೆಗಳಂ ಮೈಗಳ್ಮೆಮಿಗದೊಲಿರೆ ನೆತ್ತರೊಜತ ಗಳಿಂದೆ ತಸುಗಳಂಚಿ ಪೂತ ಮುಳ್ಮುತ್ತಗ [ಜಾಡಾಂ. ತ್ತುಕ]ದೊಲಿರೆ ತಂದೆ ಮಕ್ಕಳೆಚ್ಚಾಡಿದರ್ (ಕೈ ಬಿಜಾ. ೨೩-೯೦). **ಮುಳ್ಮುತ್ತುಗ :** ಅಲ ಮುಳ್ಮುತ್ತುಗ ಕೊಡಸಿಗೆ ಬನ್ನಿಗಳೆಲಕಡರಿ ಮುಸುಕಿಹುವು (ಕಂಶಿಜ. ೦೬-೩೬) ; ಇದಿರುಗಾಯುದೆ ಪೂತ ಮುಳ್ಮುತ್ತುಗದಂತೆ ಕದನದೆ ನಂಜೇಂದ್ರ ಮೆಚಿದ (ಕಂಶಿಜ. ೦೯-೮೦). **ಮುಳ್ಳುಮುತ್ತಗ :** "ಮುಳ್ಳುಮುತ್ತಗ –ಲೋಹಿ, ರೋಹಿತಕ, ಪ್ಲೀಹಶತ್ರು, ದಾಡಿಮಪುಷ್ಪಕ" (ಜಾತಕ. ೪) ; "ಚಕ್ರಶಾಲ್ಮಲೀ – ಮುಳ್ಳುಮುತ್ತಗ" (೬ಠಂ. ೩೩). **ಮುಳ್ಳುಮುತ್ತಲ :** ಮುಳ್ಳುಮುತ್ತಲ, ತಕ್ತರೋಹಿತಕ, ಲೋಹಿತಕ (ವೃ ಶಿಗಿ. ೯-೦೩೦) ; ಮುಳ್ಳುಮುತ್ತಲ (ಪಾಂಗಾರಾ). . . ಇದರ ಮಿದುವಾದ ಕಟ್ಟಿಗೆಯಿಂದ ಪೆಟ್ಟಿಗೆ ಮುಂತಾದವುಗಳನ್ನು ಮಾಡುವರು (ಕಭಾಗ. ೯೬). **ಮುಳ್ಳುಮುತ್ತುಕ :** "ರೋಹೀ, ರೋಹಿತಕಃ, ಪ್ಲೀಹಶತ್ರುಃ, ದಾಡಿಮಪುಷ್ಪಕಃ– ನಾಲ್ಕು ಮುಳ್ಳುಮುತ್ತುಕದ ಹೆಸರುಗಳು" (ಸಿದ್ಧಾಂತಿ. ೦೨೩) ; ಮುಳ್ಳುಮುತ್ತುಕ ಮತ್ತಿ ಹೊನ್ನೆ . . . ಬೆಟ್ಟದಾವರೆಗಳಿಂದಾ ವನಂ ಕಂಗೆಸೆದುದು (ಸಿದ್ಧಾ. ೬-೦೭). **ಮುಳ್ಳುಮುತ್ತುಗ :** "ರೋಹೀ, ರೋಹಿತಕಃ, ಪ್ಲೀಹಶತ್ರುಃ, ದಾಡಿಮಪುಷ್ಪಕಃ— ಈ ೪ ರೋಹಿಣದ ಮರಂ, ಮುಳ್ಳುಮುತ್ತುಗವೆಂಬರು" (ಜಾತಕ. ೦೦೭) ; ಮುಳ್ಳುಮುತ್ತುಗದ ಭಸ್ಮ, ಎಳ್ಳಿನ ಭಸ್ಮ, ಈ ಎರಡನು ಪಾವಡೆಯಲ್ಲಿ ಪೊಟ್ಟಣವ ಕಟ್ಟಿ ಕಷಾಯವ ಕಾಸಿ ಕೊಡಿಸಲು ರಕ್ತಗುಲ್ಮ ಪರ (ವೈಕೃಜಾ. I, ೬೦೯) ; ಅಲರ್ಮುದಡವಿಯ ಮುಳ್ಳುಮುತ್ತುಗಂ (ಜುಜಾಶ. ೮-೦೩).

[ಮುಳ್+ಮುಟ್ಟುಗ./ತೆಲು. ಮುಲುಮೋದುಗ]

**ಮುಳ್ಮೊನೆ,** ಮುಳುಮೊನೆ, ಮುಳ್ಳುಮೊನೆ (ನಾ). ಮುಳ್ಳಿನ ಚೂಪಾದ ತುದಿ : ಮುಳ್ಮೊನೆಯಂತೆ ಕ್ರೂರನಾಗಿ . . . ತೇಜೋನಂತೆಲ್ಲಾ ಪಟುಗಮೋಗಾದ್ಯ (ರಪರ್ಣಮ್ಮ. ೨-೦೦೫). **ಮುಳುಮೊನೆ :** ಮುಳು ಮೊನೆಗಳಲಿ ಗೀಜು ನೆತ್ತರಗಳೆದು ಹುಡಿಯಲಿ ಹೊರಳಿ ತಾ ಬಂದಳಂತ ಧೃತರಾಷ್ಟ್ರಂಗೆ ಭೀಷ್ಮಗೆ ದೂಜುವನು ಭೀಮ (ಕುಮ್ಹಾಲ. ೬-೬). **ಮುಳ್ಳು ಮೊನೆ :** ನೀನು ತೊಸಸೆಯ ಕೊಲೆಯ ಮಾಡಿದೆ ಮುಳ್ಳುಮೊನೆಯಲಿ (ಸಂಕಹ. ೦೪-೦೬) ; ಮುತ್ತಿ ಮುಸುಕಿತ್ತು ಕಗ್ಗತ್ತಲೆ ಧರಿತ್ರಿಯುಂ ಮುಳ್ಳು [ಪಾಠಾಂ. ಳ್]ಮೊನೆ ಕೊಳ್ಳದಂತೆ (ಕೈಬಶಾ. ೨೬-೬) ; ಮುಳ್ಳುಮೊನೆ ಯಷ್ಟು ಆಸ್ಪದ ಕೊಡದವನ ತಳ್ಳಿಗೆ ಹೋಗಬೇಡ (ಗಾದೆ).

[ಮುಳ್ + ಮೊನೆ]

**ಮುಳ್ವಟ್ಟೆ** (ನಾ). ಮುಳ್ಳುಗಳಿಂದ ತುಂಬಿರುವ ಹಾದಿ—ಮಾರ್ಗ : ಅಲ್ಲಲ್ಲಿಗೆ ಮುಳ್ವಟ್ಟೆಗಳಲ್ಲಲ್ಲಿಗೆ ಸುತ್ತಿ ಮುತ್ತಿ ತಿಂಬ ಕಡಂದುಜು (ರಪರ್ಣಮ್ಮ. ೩-೬೫). [ಮುಳ್ + ಬಟ್ಟೆ$_1$]

**ಮುಳ್ವತ್ತರಿಗೆ,** ಮುಳ್ಳುಪತ್ತರಿಕೆ (ನಾ). ಒಂದು ಬಗೆಯ ಸಸ್ಯ : ಸೊರೆ ದಾಸಣಮುಂ ಮುಳ್ವತ್ತರಿ[ಪಾಠಾಂ. ರ]ಗೆಯೆನಿಪ್ಪ ಮಜ ಬೇರ್ಗ ಳೊಳ್ ಮೆಚ್ಚಿದುದಂ ಕೊರಲೊಳ್ ಕಟ್ಟುಗೆ ಬಕರ್ಗಂ ನಿರುಪದ್ರವದಿಂದ ಮೆಯ್ದೆ ಶಿಶುವಿನ ಪಲ್ಗಳ್ (ಲೋಕೋಪ. ೯-೦೮೫). **ಮುಳ್ಳುಹತ್ತರಿಕೆ :** ಪಾಲ್ಗುಂಬಳದ ಬೇರ್, ದಾಸವಣದ ಬೇರ್, ಮುಳ್ಳು ಹತ್ತರಿಕೆಯ ಬೇರ್, ಇವಟೊಳಗೆ ದೊರಕಿದುದೊಂದಜ ಬೇರಂ ಕೊಂಡುಬಂದು ಶಿಶುವಿನ ಕೊರ ಲೊಳ್ ಕಟ್ಟಲ್ ಉಪದ್ರವವಿಲ್ಲದೆ ಪಲ್ಗಳ್ ಬರ್ಪುವು (ಲೋಕೋಪ. ೯-೦೮೫ ಟೀಕು). [ಮುಳ್ + <ಹತ್ತರಿಕೆ]

**ಮುಳ್ವಸೆ,** ಮುಳುವಸೆ (ನಾ). ೧. ಮುಳ್ಳಿನ ಹಾಸುಗೆ : ನುಡಿಗಟ್ಟು ಗಳು . . . ನುಡಿವುರುಳ್. ಮುಳ್ವಸೆ. ಬಗೆಗುದುರೆ (ಕಾಲೂರ. ೨ ಮುನ್ನುಡಿ). **ಮುಳುವಸೆ :** ೨. ಚುಚ್ಚುವ ಹಾಸುಗೆ ; ಒರಟು ಹಾಸುಗೆ : ಅರಸನು . . . ಮೊಳೆಗಲ್ಲ ಮುಳುವಸೆಯ ಮೇಲೆ ಹಸಿದಳವಳಿದು ಹೊದೆ ಯಲಿಲ್ಲದೆ ಹೊಯ್ದು ಓಮುವಸು ಇತಿರ್ದನೇವಣ್ಣಸುವೆನು (ಹವಶಾ. ೯-೪೭).

[ಮುಳ್ + ಪಸೆ$_2$]

**ಮುಳ್ವಾಗಿಲ್** (ನಾ). ಮುಳ್ಳಿನಂತೆ ಚೂಪಾಗಿರುವ ಮೊಳೆಗಳುಳ್ಳ ಬಾಗಿಲು ; ಕಂಟಕದ್ವಾರ : ಎಸಳ್ಗಳ್. . .ಮುಳ್ವಾಗಿಲ್ (ಶಬ್ದಾಮ. ೬೩ ಪ್ರಯೋ). 'ನುಸುಳ್ವಾಗಿಲ್' ಪಠಾ. [ಮುಳ್ + ಬಾಗಿಲ್]

**ಮುಳ್ವೆರಸು** (ಕ್ರಿ). ಮುಳ್ಳುಗಳಿಂದ ತುಂಬಿರು,—ಕೂಡಿರು : ಕುಳಿಲೆ ಯೆಂದು ಮುಳ್ವೆರಸಿದ ಗುಜುಜುಗೊಂಬು (ಶಮಃದ. ಪ. ೩೩ ವೃತ್ತಿ).

[ಮುಳ್ + ಬೆರಸು$_1$ (<ಬೆರೆಯಿಸು) ]

**ಮುಳ್ವೆಳೆ** (ನಾ). ಮುಳ್ಳಿನ ಪೊದೆ,—ಪೊದರು : ಇಳೆಯಾಣ್ಮನಾಜ್ಞೆ ಯಿಂದನುಚರರು ತಂದು ಮುಳ್ವೆಳೆಯುಳ್ಳ ತೊಟ್ಟಿಲಿಂ ಸಿಕ್ಕಿ ಬರಲು (೭೬ಕೃ. ೬-೪-೫೨).

[ಮುಳ್ + ಮೆಳೆ$_1$]

**ಮುಳ್ಸೀರೆ** (ನಾ). (?) : ಬೆಳ್ಬರಿ, ಬೆಳ್ಸರಿ : ಮುಳ್ಚೀರೆ. ಮುಳ್ಸೀರೆ (ಶಬ್ದಾಮ. ೯೩ ಪ್ರಯೋ). [ ? ]

**ಮುಳ್ಸೆಜುಂಗು** (ನಾ). (?) : ಕಣ್ಸೋಲಂ, ಮುಳ್ಸೆಜುಂಗು (ಶಬ್ದಾಮ. ೯೩ ಪ್ರಯೋ).

[ ? ]

**ಮುಳ್ಸೆಜ಼್** (ನಾ). (?) : ಮುಳ್ಚೆಜ಼್. ಮುಳ್ಸೆಜ಼್ (ಶಬ್ದಾಮ. ೯೩ ಪ್ರಯೋ).

[ ? ]

**ಮುಳ್ಳಂಕೋಲೆ,** ಮುಳ್ಳು ಅಂಕೋಲೆ (ನಾ). ಒಂದು ಬಗೆಯ ಮುಳ್ಳಿನ ಗಿಡ : ಅವರು ತಮ್ಮ ಕಾಂಪೌಂಡಿನ ಸುತ್ತಲೂ ಮುಳ್ಳಂಕೋಲೆಯನ್ನು ಬೆಳಸಿದ್ದಾರೆ (ರೂಢಿ). **ಮುಳ್ಳುಅಂಕೋಲೆ :** ನೀರುಪ್ಪಿಗಿಡ, ಮುಳ್ಳು ಅಂಕೋಲೆ. ಗೋರಿಮಿಡಿ. ಕೊಳಮಳಿಕ (ವೃಕ್ಷನಿ. ೦೦-೦೯೬).

[ಮುಳ್ಳು (<ಮುಳ್) + ಅಂಕೋಲೆ./ತುಳು. ಮುಳ್ಳಂಕಲೆ, ಮುಳ್ಳಂಕೋಲೆ]

**ಮುಳ್ಳಂಬು** (ನಾ). ಮೈ ಮೇಲೆ ಮುಳ್ಳುಗಳಿರುವ ಒಂದು ಬಗೆಯ ಬಾಣ,—ಸರಳು : ಆತನ ಆಯುಧಗಳ ಗಣನೆ ಎಷ್ಟೆಂತೆಂದಡೆ ಮುಳ್ಳಂಬುಗಳು ಸಾವಿರದೇಳ್ನೂಱು ಒಂಬತ್ತುಸಾವಿರ ಮಿಟ್ಟೆಯಂಬುಗಳು ಸರಳಂಬು ಹನ್ನೆರಡುಸಾವಿರ (ಶೃಂಗ. I, ೮೫).

[ಮುಳ್ಳು (<ಮುಳ್) + ಅಂಬು$_2$]

**ಮುಳ್ಳಕೀರೆ** 'ಮುಳ್ಳುಕೀರೆ' ನೋ.

**ಮುಳ್ಳಭಟ್ಟಾರಕ** (ನಾ) ಒಬ್ಬಾತನ ಹೆಸರು : ಬಭೂವೋಗ್ರತಪೋ ಯುಕ್ತಃ ಮುಳ್ಳಭಟ್ಟಾರಕೋ ಗಣೀ ತಚ್ಛಿಷ್ಯೋ ಗುಣವಾನ್ಸೂರಿಃ ಗುಣ ಕೀರ್ತಿರ್ಮುನೀಶ್ವರಃ (ಎಪಿಇ. XX, ೦೩-೬ ; 875).

[ಮುಳ್$_{\text{ವ0}}$ + ಭಟ್ಟಾರಕ]

**ಮುಳ್ಳಮುಂಜ** (ನಾ). ಒಂದು ಬಗೆಯ ಹುಲ್ಲು : 'ಅಧೋಮುಖಿ— ಎತ್ತಿನಾಲಿಗೆ. ಮುಳ್ಳಮುಂಜ" (೬೭೦. ೫). [<ಮುಳ್ + ಮುಂಜ$_2$]

**ಮುಳ್ಳಹೊಂಗೆ** 'ಮುಳ್ಳುಹೊಂಗೆ' ನೋ.

**ಮುಳ್ಳಾವಿಗೆ** (ನಾ). ಶಿವನ ಹಾಗೂ ವಿಷ್ಣುವಿನ ಭಕ್ತರು ಹರಕೆಗಾಗಿ ತೊಡುವ. ಕಬ್ಬಿಣದ ಚೂಪಾದ ಮೊಳೆಗಳನ್ನು ಒಳಭಾಗದಲ್ಲಿ ಮೆಟ್ಟಿರುವ ಮರದ ಹಾವುಗೆ : ಕಾಲು ಮುಳ್ಳಾವಿಗೆ ಕೈಯ ಡಮರುಗ ನುಡಿಸಿ ಉರಿಗಣ್ಣ ತಿಲಿ ಮೂತ ಕಂಡರಂಜಿಕಿ ಬರುವ ರುದ್ರ ಬಂದಿದ್ದನ ಸಪನದಲಿ (ಲೋಕಗೀ. ೦೪೩). [ಮುಳ್ಳು(<ಮುಳ್) + ಹಾವಿಗೆ(<ಪಾವುಗೆ)]

**ಮುಳ್ಳಿ ?** (ನಾ). ನೀರಿನ ಪಾತ್ರೆ (?) : ಸ್ವರದ ಮುಳ್ಳಿಯ ಕೊಂಡು ತಟಾಕಕ್ಕೆ ಹೋಗಿ ಹಿರಿಯರು ಬೋನವ ಮಾಡುತ್ತಿಪ್ಪರು (ಶವಗೀ. ೨೬-೬೮). [ ? ]

**ಮುಳ್ಳಿಕಾದಂಟು** 'ಮುಳ್ಳುಕಾದಂಟು' ನೋ.

**ಮುಳ್ಳಿಚುಳ್ಳಿ** (ನಾ). ಒಂದು ಬಗೆಯ ಸಸ್ಯ : ಹೊಳೆಚುಳ್ಳಿ. ಮುಳ್ಳಿ ಚುಳ್ಳಿ. ಪರಿಕಂಷ, ತುಡಚುಳ್ಳಿ (ವೃಕ್ಷನಿ. ೨-೩೪). [ಮುಳ್$_{\text{ವ0}}$ + ಚುಳ್$_{\text{ವ1}}$]

**ಮುಳ್ಳಿಡಿ** (ಕ್ರಿ). ಮುಳ್ಳುಗಳಿಂದ ತುಂಬಿರು ; ಕಂಟಕಮಯವಾಗಿರು : ನೀಷೆಂದುಮಂ ಮಾಡೆನೆಂದಾ ಚಂಡಿ ಚಂಡಿಪೋರೆ ಮುಳ್ಳಿಡಿದ ಮರನೇಜು ದಂತಾದುದು (ಕೈಬಶಾ. ೦೦-೨೪). [ಮುಳ್ಳು (<ಮುಳ್)) + ಇಡಿ$_2$]

**ಮುಳ್ಳಿಡು** (ಕ್ರಿ). ಮೈಯ ಕೂದಲು ನೆಟ್ಟಗಾಗು ; ರೋಮಾಂಚನ ಗೊಳ್ಳು : ಅವನ ಮೆಯ್ ಮುಳ್ಳಿಟ್ಟು (ಮುಂಬದು. ೬. ೫-೬೦) ; ಮೈಯು ಮುಳ್ಳಿಡಬಹುದು ಆದರು ಮನದೊಳಗೆ ಇದೆ ಧೈರ್ಯವು (ಅರಳು. ೫೯. ೦೩). [ಮುಳ್ಳು (<ಮುಳ್) + ಇಡು$_1$]

**ಮುಳ್ಳಿಬಳ್ಳಿ** (ನಾ). ಒಂದು ಬಗೆಯ ಸಸ್ಯ : (ವೃಕ್ಷನಿ. ೪೬-೯೦೦).

[ಮುಳ್$_{\text{ವ0}}$ + ಬಳ್ಳಿ]

**ಮುಳ್ಳಿಜ಼್** (ಕ್ರಿ). ೧. ಮುಳ್ಳು ಚುಚ್ಚು,—ನಾಟು : ಮುಳ್ಳಿಜ಼್ ಯುಲಿನಿತಾದಡಂ ತೆಜಹಿಲ್ಲದೇ ಸಂಕೀರ್ಣ ಪದದಿಂದೆಲ್ಲೆಡೆಯೊಳಂ ತಾನೆಯಾಗಿದ್ದಹನಲಾ ವಿಶ್ವವಲ್ಲಭಂ (ಬಸಪು. ೫೦-೩೪). ೨. ಮುಳ್ಳಿ ನಿಂದ ಚುಚ್ಚಿ ರಂಧ್ರಮಾಡು,—ಕೊರೆ : ಹೋಳಾಗಿ ಬಾಳೆಯ ಕಾಯ ಸಂಬಳಿಸಿ . . . ಮುಳ್ಳಿಜಿದು ಸಂಭಾರಮಂ ತುಂಬಿ (ಸೂಪಶಾ. ೪-೬೨).

[ಮುಳ್ + ಇಜ಼್$_1$]

**ಮುಳ್ಳು** 'ಮುಳ್' ನೋ.

**ಮುಳ್ಳುಅಂಕೋಲೆ** 'ಮುಳ್ಳಂಕೋಲೆ' ನೋ.

**ಮುಳ್ಳುಅಬ್ಬೆ** (ನಾ). ಒಂದು ಬಗೆಯ ಸಸ್ಯ : "ಕರೀರಃ, ಕ್ರಕರಃ, ಗ್ರಂಥಿಲಃ—೩ ಮುಳ್ಳುಅಬ್ಬೆಯ ಹೆಸರು" (ಸಿದ್ಧಾಂತಿ. ೦೩೦).

[ಮುಳ್ಳು (<ಮುಳ್) + ಅಬ್ಬೆ$_4$]

**ಮುಳ್ಳುಂಗೊಳ್ಕೆ** (ನಾ). ಮುಳ್ಳುಗಳುಳ್ಳ ಕುಣಿಕೆ : ಇಂತು ಬಂದು ಬಂದಿವಿಡಿದುಂ ನೇಣಂ ಬಿಗಿದುಂ ಮುಳ್ಳುಂಗೊಳ್ಕೆಯನಿಟ್ಟು ಮುಸೆದು ಮಾರ್ದುಂ ಸಾರ್ದುಮೆಟ್ಟಿ ಓಡಿಯ್ದಾಗಳ್ (ರಾಮಾಶ್ವ. ೭೯-೨೯).
[ ಮುಳ್ಳು (<ಮುಳ್) + ಕೊಳ್ಕೆ₀ (<ಕೊಲಿಕೆ) ]

**ಮುಳ್ಳುಕಂಟಿ** (ನಾ). ಮುಳ್ಳುಗಳಿರುವ ಪೊದೆ, –ಹೊದರು : ಇವುಗಳಲ್ಲಿ ಕವಳಿ, ಪರಗಿ, ಜಾಲಿ ಮುಂತಾದ ಮುಳ್ಳುಕಂಟಿಗಳು ಬೆಳೆಯುತ್ತವೆ (ಕಕಪು. ೭–೦೩). [ಮುಳ್ಳು (<ಮುಳ್) + ಕಂಟಿ₂]

**ಮುಳ್ಳುಕಾದಂಟು, ಮುಳ್ಳಿಕಾದಂಟು** (ನಾ). ಒಂದು ಬಗೆಯ ಸಸ್ಯ : "ಮುಳ್ಳುಕಾದಂಟು, ತಾರಿಕೆ" (ಸಸ್ಯಕೋ. ೯೭). **ಮುಳ್ಳಿಕಾದಂಟು** : ಮುಳ್ಳಿಕಾದಂಟು, ತಾರಿಕೆ (ವೃಶಿಗ. ೫೨–೦೦೩೭). [?]

**ಮುಳ್ಳುಕಾರೆ** (ನಾ). ಮುಳ್ಳುಗಳುಳ್ಳ ಒಂದು ಬಗೆಯ ಕಾರೆಗಿಡ : ಮುಳ್ಳುಕಾರೆ (ಕಾಟಿಗೊತ್ತಿ). ಸಾಧಾರಣವಾದ ಸಣ್ಣಗಿಡ . . . ಕಾಯಿಗಳಿಂದ ಚರ್ಮಕ್ಕೆ ಕರೆಬಣ್ಣ ಕೊಡುವರು (ಕಶಾಗ. ೯.).
[ಮುಳ್ಳು (<ಮುಳ್) + ಕಾರೆ₁. / ತಮಿ. ಮುಳ್ಳುಕ್ಕಾರೈ]

**ಮುಳ್ಳುಕೀರೆ, ಮುಳ್ಳಕೀರೆ** (ನಾ). ಮುಳ್ಳುಗಳಿರುವ ಒಂದು ಬಗೆಯ ಕೀರೆಸೊಪ್ಪು : "ಮುಳ್ಳುಕೀರೆಸೊಪ್ಪು, ಮುಳ್ಳುಹರಿವೆಸೊಪ್ಪು . . . ಮುಳ್ಳುಗೊಡಕೊಚ್ಚು" (ಸಸ್ಯಕೋ. ೦೦). **ಮುಳ್ಳಕೀರೆ** : ಮುಳ್ಳಕೀರೆಸೊಪ್ಪು, ಮುಳ್ಳುಹರಿವೇಸೊಪ್ಪು (ವೃಶಿಗ. ೭–೯೫).
[ಮುಳ್ಳು (<ಮುಳ್) + ಕೀರೆ. / ತಮಿ. ಮುಳ್ಳಚ್ಚೀರೈ, ಮುಳ್ಳುಕ್ಕೀರೈ]

**ಮುಳ್ಳುಕುರ** (ನಾ). ಕುದುರೆಯನ್ನು ಹತೋಟಿಯಲ್ಲಿಡಲು ಬಳಸುವ, ಮುಳ್ಳುಗಳಿರುವ ಒಂದು ಬಗೆಯ ಸಾಧನ : ಕುದುರೆಗಳಿಗೆ ಜೀನು ಹಾಕುವುದಿಲ್ಲ. ಕಡಿವಾಣಕ್ಕೆ ಬದಲು ಹದಮಾಡಿದ ಎತ್ತಿನ ಚರ್ಮದ ಮುಳ್ಳುಕುರ ಹಾಕುತ್ತಾರೆ. ಇದರ ಒಳಭಾಗದಲ್ಲಿ ಕಬ್ಬಿಣದ ಅಥವಾ ಹಿತ್ತಾಳೆಯ ಮುಳ್ಳುಗಳಿರುತ್ತವೆ . . . ಇದಕ್ಕೆ ಲಗಾಮನ್ನು ತಗುಲಿಸಿರುತ್ತಾರೆ. ಸವಾರನು ಲಗಾಮನ್ನು ಹಿಡಿದು ಎಳೆದಾಗ ಕವಲುಗೋಲು ಕುದುರೆಯನ್ನು ಹತೋಟಿಗೆ ತರುತ್ತದೆ (ಶ್ರವಾ I, ೯೦ ೬೩೭).
[ಮುಳ್ಳು (<ಮುಳ್) + ಕುರ₇]

**ಮುಳ್ಳುಕೂಗರಿ** 'ಮುಳುಕೂಗರಿ' ನೋ.

**ಮುಳ್ಳುಕೊಗ್ಗಿ** 'ಮುಳುಗೊಗ್ಗಿ' ನೋ.

**ಮುಳ್ಳುಕೊಗ್ಗೆ** 'ಮುಳುಗೊಗ್ಗಿ' ನೋ.

**ಮುಳ್ಳುಕೊಳಂಜಿ** (ನಾ). ಮುಳ್ಳುಗಳಿರುವ ಒಂದು ಬಗೆಯ ಸಸ್ಯ : (ವೃಶಿಗ. ೭೯–೦೫೦೮). [ಮುಳ್ಳು (<ಮುಳ್) + ಕೊಳಂಜಿ]

**ಮುಳ್ಳುಕೋಲು** 'ಮುಳುಗೋಲು' ನೋ.

**ಮುಳ್ಳುಗಳ್ಳಿ** 'ಮುಳುಗಳ್ಳಿ' ನೋ.

**ಮುಳ್ಳುಗಿಡ** 'ಮುಳ್ಗಿಡು' ನೋ.

**ಮುಳ್ಳುಗುಜುಜೆ** (ನಾ). ಮುಳ್ಳಿನ ಪೊದರು, –ಮೆಳೆ : ಬಿದಿರ್ವಿಂಡಲು ಮುಳ್ಳುಗುಜುಜೆ ಬಲ್ಮೆಳೆ . . . ಕಣಗಾಡಾ ಹಳುವಿನೊಳೊದವಿಹುದೆಲ್ಲಿ ನೋಡಿದರು (ಶ್ರೀಚಾಂ. ೭–೦೩).
[ ಮುಳ್ಳು (<ಮುಳ್) + ಕುಜುಜೆ₀ (<ಕುರುಚು) ]

**ಮುಳ್ಳುಗೆಣಸು** (ನಾ). ಒಂದು ಬಗೆಯ ಗೆಣಸು : (ವೃಶಿಗ. ೩೦–೫೯೦).
[ಮುಳ್ಳು (<ಮುಳ್) + ಗೆಣಸು (<ಗೆಲಸು) ]

**ಮುಳ್ಳುಗೆಜೆ³** (ನಾ). ಒಂದು ಸ್ಥಳದ ಹೆಸರು; P ಈಗಿನ ಶಿವಮೊಗ್ಗ ಜಿಲ್ಲೆಯ ಹೊಳೆಹೊನ್ನೂರುಹೋಬಳಿಯಲ್ಲಿರುವ ಒಂದು ಹಳ್ಳಿ : ಬೂತಯ್ಯನ ಮಾದಯ್ಯ ಸಿಂಗೆಯುತ ಮಾದಯ್ಯ ಗಾವುಣ್ಣಗೆಯ್ಯ ಮಣ್ಣಲೆಸಾಯಿರನಾಡ ತುಜುಗೋಲ್ ತೆರಳ್ದು ಸತ್ತಂ ಮುಳ್ಳುಗೆಜೆ × × × (ಎ.ಕ. ೦೯೩೫, ೩೩–೯ ; 939).
[ಮುಳ್ಳು (<ಮುಳ್) + ಕೆಜೆ³]

**ಮುಳ್ಳುಗೊಂಚೆ** (ನಾ). ಮುಳ್ಳನ್ನು ಒಟ್ಟಾಗಿ ಕಟ್ಟಿ ಮಾಡಿದ ಗೊಂಚಲು, –ಗುಚ್ಛ : ಎಂಟನೆಯ ವಸು ಕಾಮಧೇನುವ ಮುಳ್ಳುಗೊಂಚೆಯಿಂ ಪೊಡೆದಾತನು ಪೊಡೆಪುಯಲಿ ಬಹುಕಾಲವಿರಲಿ ಅವಸಾನದೊಳ್ ಬಿಡದೆ ಸರಳಿನ ಮಂಚದಲಿ ಮರಣಿಸಲಿ (ತುರಂಗ. ೯–೨೭).
[ಮುಳ್ಳು (<ಮುಳ್) + ಗೊಂಚೆ (<ಗೊಂಚಿ) ]

**ಮುಳ್ಳುಗೊಗ್ಗಿ** 'ಮುಳುಗೊಗ್ಗಿ' ನೋ.

**ಮುಳ್ಳುಗೊರಟಿ** 'ಮುಳ್ಳುಗೋರಂಟೆ' ನೋ.

**ಮುಳ್ಳುಗೊರಟೆ** 'ಮುಳ್ಳುಗೋರಂಟೆ' ನೋ.

**ಮುಳ್ಳುಗೋರಂಟ** 'ಮುಳ್ಳುಗೋರಂಟೆ' ನೋ.

**ಮುಳ್ಳುಗೋರಂಟಿ** 'ಮುಳ್ಳುಗೋರಂಟೆ' ನೋ.

**ಮುಳ್ಳುಗೋರಂಟೆ**, ಮುಳ್ಳುಗೊರಟಿ, ಮುಳ್ಳುಗೊರಟೆ, ಮುಳ್ಳುಗೋರಂಟ, ಮುಳ್ಳುಗೋರಂಟಿ, ಮುಳ್ಳುಗೋರಟೆ (ನಾ). ೧. ಮುಳ್ಳುಗಳುಳ್ಳ ಹಳದಿಸ್ಫಟಿಕದ ಗಿಡ ಮತ್ತು ಅದರ ಹೂವು : "ಕುರಂಟಕ, ಸಹಚರಿ, ಪೀತಝಿಂಟಿ – ಕೆಂಪಿನ ಮುಳ್ಳುಗೋರಂಟೆ (ಕುರವಕ) ; ಅರಿಸಿನಬಣ್ಣದ ಮುಳ್ಳುಗೋರಂಟೆ" (ಪಾವರಾ. ೯) ; "ಕುರಂಟಿಕ . . . ಮುಳ್ಳುಗೋರಂಟೆ, ಮುಳಜಾಲಿ" (ಸಸ್ಯಕೋ. ೦೯). **ಮುಳ್ಳುಗೊರಟಿ** : ೨. ಒಂದು ಬಗೆಯ ಔಷಧೀಸಸ್ಯ : ಅಮೃತಬಳ್ಳಿ, ಕೊಡಸಿಗೆ . . . ಸಹಚರಿ (ಮುಳ್ಳುಗೊರಟಿ), ಸಬ್ಬಸಿಗೆ, ಕಳ್ಳನ ಗಿಡ ಇವನ್ನು ಹಸಿಯದಿರುವಾಗಲೇ ಉಪಯೋಗಿಸಬೇಕು (ಸಕವೈ. xii, ಪ್ರಸ್ತಾವನೆ). **ಮುಳ್ಳುಗೊರಟೆ** : ೨. ನೆಲಗುಳ್ಳದ ಬೇರು . . . ಮುಳ್ಳುಗೊರಟೆ, ಶುಂಠಿ ಇವುಗಳನ್ನು ಸಮನಾಗಿ ಕಷಾಯಮಿಟ್ಟು . . . ಕುಡಿಯೆ ಶ್ಲೇಷ್ಮಜ್ವರ ಗುಣವಾಗುವುದು (ಸಕವೈ. ೯೮). **ಮುಳ್ಳುಗೋರಂಟ** : ೧. "ಕುರುವಕಃ, ಅರುಣೇತಸ್ಮಿನ್ – ಕೆಂಪು ಹುವ್ವುಳ್ಳ ಮುಳ್ಳುಗೋರಂಟದ ಹೆಸರುಗಳು" (ಸಿದ್ಧಾಂತಿ. ೦೨೯). **ಮುಳ್ಳುಗೋರಂಟಿ** : ೧. "ಸೈರೇಯಕಃ, ಝಿಂಟೀ – ಈ ೨ ಮುಳ್ಳುಗೋರಂಟಿ" (ನಾವರಾ. ೦೦೬). ೨. ನೆಲಗುಳ್ಳದ ಬೇರು . . . ಮುಳ್ಳುಗೋರಂಟಿ ಬೇರು, ಶುಂಠಿ ಸಹ ಕಷಾಯ ಕಾಯಿಸಿ ಸೇವಿಸಲು ಶ್ಲೇಷ್ಮಜ್ವರವು ನಾಶವಾಗುವುದು (ಸಕವೈ. ೯೮). **ಮುಳ್ಳುಗೋರಟೆ** : ೧. ಮುಳ್ಳುಗೋರಟೆಗಿಡದ ತುಂಬ ಹೂವು ಅರಳಿದ್ದುವು (ಕೂಂ).
[ ಮುಳ್ಳು ( < ಮುಳ್ ) + ಗೋರಂಟೆ. / ತೆಲು. ಮುಲು ಗೋರಂಟ ]

**ಮುಳ್ಳುಗೋರಟೆ** 'ಮುಳ್ಳುಗೋರಂಟೆ' ನೋ.

**ಮುಳ್ಳುಗೋಲು** 'ಮುಳುಗೋಲು' ನೋ.

**ಮುಳ್ಳುಚಮಚ, ಮುಳ್ಳುಚಮಚೆ** (ನಾ). ಗಟ್ಟಿಯಾದ ಆಹಾರ ಪದಾರ್ಥವನ್ನು ಚುಚ್ಚಿಹಿಡಿದು ತಿನ್ನಲು ಬಳಸುವ, ಚೂಪಾದ ಹಲ್ಲುಗಳುಳ್ಳ ಒಂದು ಬಗೆಯ ಚಮಚ : (ಭೋಜನ ಊಟ ಮಾಡುವಾಗ ಅಥವಾ ಅಡಿಗೆ ಮಾಡುವಾಗ ಉಪಯೋಗಿಸುವ) ಮುಳ್ಳುಚಮಚ (Fork. ೩೦೯೩). **ಮುಳ್ಳುಚಮಚೆ** : ಯಾರು . . . ಘಯುಜೂಖಾನ ಸಾಹೇಬನು ಮಾಡಿದ ಪಾಕವನ್ನು, ಮುಳ್ಳುಚಮಚೆ ಹಿಡಿದು, ಸೇವಿಸುವುದನ್ನು ಕಲಿತಿರುವರೊ ಅವರು ಈ ಪೀಡೆಯಿಂದ ಮುಕ್ತರಾಗಿರುವರು (ಕಮು೯. ೦೮). [ ಮುಳ್ಳು ( < ಮುಳ್ ) + ಚಮಚ ]

**ಮುಳ್ಳುಚಮಚೆ** 'ಮುಳ್ಳುಚಮಚ' ನೋ.

**ಮುಳ್ಳುಜವೆ** (ನಾ). ಒಂದು ಬಗೆಯ ಯವಧಾನ್ಯ : ಮುಳ್ಳುಜವೆಯು . . . ತ್ವಕ್‌ರೋಗಗಳನ್ನು ಕಳೆಯುವುದು (ಶಬ್ದಾಂಗ. ೦೦೪ ೬೪೯);

ಗೊಬ್ಬರದ ಭೂಮಿಯಾಗಿ ತಂಪು ಇರುವುದರಿಂದ . . . ಆವರಿಯಾದರೂ ಮುಳ್ಳುಜವೆಯಾದರೂ ಬಿತ್ತಿದರೆಯೂ ಬರುತ್ತದೆ (ಕೃ.ಶಿಕ್ರ.೩೭).

[ ಮುಳ್ಳು ( < ಮುಳ್ ) + ಜವೆ ]

**ಮುಳ್ಳುಜೇನಂಗಿ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಸಸ್ಯ : "ಪರಂಗಿಜಾಲಿಗಿಡ, ಮುಳ್ಳುಜೇನಂಗಿ" (ಸಸ್ಯಶಿ. ೦೦೨).

[ ಮುಳ್ಳು ( < ಮುಳ್ ) + ಜೇನಂಗಿ ]

**ಮುಳ್ಳುತಂತಿ** (ನಾ). ಮುಳ್ಳಿನಂತೆ ಚೂಪುತುದಿಗಳಿಂದ ಕೂಡಿದ ಲೋಹದ ಎಳೆ : ಬಿಟ್ಟರೋ ಕಾಡಲ್ಲಿ ಕಣ್ಣುಕಟ್ಟಿ ಸುತ್ತಲೂ ಬಿಗಿದಿಟ್ಟು ಮುಳ್ಳುತಂತಿ (ಸಪ್ತರ್ಷ. ೮೭). [ ಮುಳ್ಳು ( < ಮುಳ್ ) + ತಂತಿ ]

**ಮುಳ್ಳುತಾರೆ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ತಾರೆಯ ಗಿಡ : ಕುಡವಲೆ, ಪೆತ್ತರಿಮುಳ್ಳು, ಮುಳ್ಳುತಾರೆ, ಗಜಬೀರ (ವೃಶಿಗಿ. ೩೭-೭೩೯). [ಮುಳ್ಳು (<ಮುಳ್)+ತಾರೆ$_1$ (<ತಾಱಿ)]

**ಮುಳ್ಳುನಿವಂದಿಗೆ** (ನಾ). ಒಂದು ಬಗೆಯ ಔಷಧೀಸಸ್ಯ : ಬೇಲದ ಬೀಜ . . . ಮುಳ್ಳುನಿವಂದಿಗೆಸೊಪ್ಪು ಇವು ಸಹ ಕೊಂಡು ರಸವ ಹಿಂಡಿಕೊಂಡು ಈ ರಸದಲ್ಲಿ ಏಳುದಿನ ತೆಗೆದುಕೊಳ್ಳೆ ಪಥ್ಯದೊಳರೆ ಸಕಲ ಮೇಹ ಗುಣ (ಬಸ್ತಿವಿ. ೦೨೦). [ಮುಳ್ಳು ( < ಮುಳ್ ) + ನಿವಂದಿಗೆ$_1$]

**ಮುಳ್ಳುನೆಗ್ಗಿಲು** (ನಾ). ಮುಳ್ಳುಗಳುಳ್ಳ ಒಂದು ಬಗೆಯ ನೆಗ್ಗಿಲು ಗಿಡ : ಬಳ್ಳಿದುಂಡುಚಿ ನೆಱಿ ಮುಳ್ಳುನೆಗ್ಗಿಲು . . . ಹುಲ್ಲುಗಳ್ ಬೆಳೆದಾಗ ದಾರಿ ಬಿಡದೆ ಜಾಜುಗಲ್ಲ ಮುಚ್ಚಿಸಿಕೊಂಡಿಹುವು (ಕಂಪವಿ. ೦೮-೩೯).

[ ಮುಳು ( < ಮುಳ್ ) + ನೆಗ್ಗಿಲು (< ನೆರ್ಗಿಲ್ ) ]

**ಮುಳ್ಳುನೆಲ್ಲಿ** (ನಾ). ಒಂದು ಬಗೆಯ ಮುಳ್ಳಿನ ಗಿಡ : "ಕಕ್ಕುಚಂಡೆರೆ. ಮಣಿಕಣ್ಣು, ಮುಳ್ಳುನೆಲ್ಲಿ" (ಸಸ್ಯಶಿ. ೦೦೩).

[ ಮುಳ್ಳು (< ಮುಳ್ ) + ನೆಲ್ಲಿ ]

**ಮುಳ್ಳುಪಾರಿವಾಳ, ಮುಳ್ಳುಹಾಲಿವಾಣ** (ನಾ). ಮುಳ್ಳುಗಳುಳ್ಳ ಪಾಲಿವಾಣದ ಮರ : "ಕನಕಸ್ಥಾ–ಮುಳ್ಳುಪಾರಿವಾಳ" (ಓಷಧಿ. ೨೪). **ಮುಳ್ಳುಹಾಲಿವಾಣ** : ಮುಳ್ಳುಹಾಲಿವಾಣ, ಮುಳ್ಳುಮುತ್ತುಗ (ವೃಶಿಗಿ. ೩೩-೬೮೧). [ ಮುಳ್ಳು ( < ಮುಳ್ ) + ಪಾರಿವಾಳ$_2$ ]

**ಮುಳ್ಳುಬದನೆ** (ನಾ). ಮುಳ್ಳುಗಳಿರುವ ಒಂದು ಬಗೆಯ ಬದನೆ : "ಕಂಟಕವೃಂತಾಕಿ – ಮುಳ್ಳುಬದನೆ" (ಓಷಧಿ. ೨೭).

[ ಮುಳ್ಳು ( < ಮುಳ್ ) + ಬದನೆ ]

**ಮುಳ್ಳುಬೆಟ್ಟಮಾವು** (ನಾ). ಒಂದು ಬಗೆಯ ಮಾವು : ಮುಳ್ಳುಬೆಟ್ಟಮಾವು, ಗಚ್ಚನ್ನೆಕಾಯಿ (ವೃಶಿಗಿ. ೨೪-೪೪೦).

[ ಮುಳ್ಳು ( < ಮುಳ್ ) + ಬೆಟ್ಟ + ಮಾವು ]

**ಮುಳ್ಳುಬೇಲಿ** 'ಮುಳುವೇಲಿ' ನೋ.

**ಮುಳ್ಳುಮದರಂಗಿ** (ನಾ). ಒಂದು ಬಗೆಯ ಮುಳ್ಳಿನ ಗಿಡ : ಮುಳ್ಳುಗೋರಂಟಿಗಿಡ : ಕುರಂಟಿಕೆ, ಮುಳ್ಳುಗೋರಂಟಿ, ಮುಳ್ಳುಮದರಂಗಿ (ವೃಶಿಗಿ. ೦೦-೦೯೯). [ ಮುಳ್ಳು ( < ಮುಳ್ ) + ಮದರಂಗಿ ]

**ಮುಳ್ಳುಮರ** 'ಮುಳ್ಮರ' ನೋ.

**ಮುಳ್ಳುಮುಖ** (ನಾ). ೧. (ಸಿಡುಬು ಮುಂತಾದುವು ಎದ್ದು) ಗುಳ್ಳೆ ಕಲೆಗಳಿಂದ ಕೂಡಿ ಒರಟಾದ ಮುಖ. – ಗಂಟುಗಂಟಾಗಿರುವ ಮುಖ : ಅವನದು ಮುಳ್ಳುಮುಖ (ರೂಢಿ). ೨. ಪರುತಗ್ಗಾದ ಮೇಲ್ಮೈ : ಒರಟಾದ ಹೊರಮೈ : ಆ ಉಲ್ಕಗಳು ಕ್ರಮೇಣ ಒಟ್ಟುಗೂಡಿ ಉಂಡೆಯಾಗಿ ಚಂದ್ರನಾಯಿತೆಂತಲೂ ಒಳಗೆ ಸೇರಿದ ಉಲ್ಕಗಳಿಂದ ಬಿದ್ದ ಪೆಟ್ಟುಗಳೇ ಚಂದ್ರನ ಮುಳ್ಳುಮುಖಕ್ಕೆ ಕಾರಣವೆಂತಲೂ . . . ಹೇಳುವರು (ಜ್ಯೋತಿರ್ವಿ. ೨೦೦). [ ಮುಳ್ಳು ( < ಮುಳ್ ) + ಮುಖ ]

**ಮುಳ್ಳುಮುತ್ತಗ** 'ಮುಳ್ಮುತ್ತುಗ' ನೋ.

**ಮುಳ್ಳುಮುತ್ತಲ** 'ಮುಳ್ಮುತ್ತುಗ' ನೋ.

**ಮುಳ್ಳುಮುತ್ತುಕ** 'ಮುಳ್ಮುತ್ತುಗ' ನೋ.

**ಮುಳ್ಳುಮುತ್ತುಗ** 'ಮುಳ್ಮುತ್ತುಗ' ನೋ.

**ಮುಳ್ಳುಮುರಿ** 'ಮುಳ್ಮುಱಿ' ನೋ.

**ಮುಳ್ಳುಮುಱಿ** 'ಮುಳ್ಮುಱಿ' ನೋ.

**ಮುಳ್ಳುಮೊನೆ** 'ಮುಳ್ಮೊನೆ' ನೋ.

**ಮುಳ್ಳುಯಲಗ** (ನಾ). ಮುಳ್ಳುಗಳಿಂದ ಕೂಡಿದ ಎಲೆಗಳುಳ್ಳ ಒಂದು ಬಗೆಯ ಸಸ್ಯ : ಮುಳ್ಳುಯಲಗದ ಹೂವಿನಂತೆ ಹೆಮ್ಮರದ ಹೂವಿನಂತೆ ಕಾದ ಕಬ್ಬಿಣದಂತೆಯೂ ಇರುವ ಈ ಆರು ಬಗೆಯ ಹೊಳಪುವುಳ್ಳ ರತ್ನವು ವೈಶ್ಯಜಾತಿಯಾದ ಸೌಗಂಧಿಕವೆಂದು ತಿಳಿಯುವದು (ಸೌಗಂರ. ೩೭೭-೦೭).

[ ಮುಳ್ಳು ( < ಮುಳ್ ) + ಎಲೆ$_1$ + – ಗ$_2$ ]

**ಮುಳ್ಳುರಾಮಫಲ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಗಿಡ ಮತ್ತು ಅದರ ಹಣ್ಣು : (ವೃಶಿಗಿ. ೭-೦೨೦).

[ ಮುಳ್ಳು ( < ಮುಳ್ ) + ರಾಮಫಲ ]

**ಮುಳ್ಳುರ್ಚು** (ಕ್ರಿ). ಮುಳ್ಳು ಚುಚ್ಚು – ನಾಟು : ಪಳ್ಳದ ಕೇದಗೆಗೆ ಪಾಯ್ದು ಪತ್ತಿದ ಕಯ್ಯಂ ಮುಳ್ಳುರ್ಚೆ ತೆಱಿದು ಪಲ್ಲಂ ಘೊಳ್ಳನೆ ನಗಿಸಿದುದು ಕಟಕವಾ ಮರ್ಕಟಕಂ (ರಸರ. ೨-೯೯).

[ ಮುಳ್ + ಉರ್ಚು ]

**ಮುಳ್ಳುವಂದಿ** 'ಮುಳ್ಪಂದಿ' ನೋ.

**ಮುಳ್ಳುವೇಲಿ** 'ಮುಳುವೇಲಿ' ನೋ.

**ಮುಳ್ಳುವೊಂಗೆ, ಮುಳ್ಳುಹೊಂಗೆ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಹೊಂಗೆಮರ : "ಅಂಗಾರವಲ್ಲರಿ – ಮುಳ್ಳುವೊಂಗೆ" (ಅಕಾಶ. ೨-೦೦). **ಮುಳ್ಳುಹೊಂಗೆ** : "ಮರ್ಕಟೀ – ಅಜಮೋದ . . . ಮುಳ್ಳುಹೊಂಗೆ" (ಓಷಧಿ. ೦೧೩). [ಮುಳ್ಳು (<ಮುಳ್) + ಹೊಂಗೆ]

**ಮುಳ್ಳುವೊರೆ** (ಕ್ರಿ). ಮುಳ್ಳುಗಳಿಂದ ತುಂಬಿರು; ಕಂಟಕಮಯವಾಗಿರು: ಅರ್ಪಿಸುವರು ಮುಳ್ಳುವೊರೆದ ಲೋಹದೆಲವಮರದೊಳಕಟ (ಸಾವಂತ. ೭-೪೦). [ಮುಳ್ಳು (<ಮುಳ್) + ಪೊರೆ$_2$]

**ಮುಳ್ಳುಸವುತೆ** 'ಮುಳುಸೌತೆ' ನೋ.

**ಮುಳ್ಳುಸೀಗ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಸಸ್ಯ : "ಜನೀ, ಜತೂಕಾ . . . ಸಂಸ್ಪರ್ಶಾ – ಈ ೬ ಮುಳ್ಳುಸೀಗೆ" (ವಾಚರಾ. ೦೦೨). [ಮುಳ್ಳು (<ಮುಳ್) + ಸೀಗೆ$_1$]

**ಮುಳ್ಳುಸುಂಡೆ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಸುಂಡೆಬಳ್ಳಿ : ಮುಳ್ಳುಸುಂಡೆಹೂವು ಎರಡು ಮಾನ ಒಂದು ಮಾನ ಹಸುವಿನ ಹಾಲಿನಲ್ಲಿ ಬೇಯಿಸಿ . . . ತೆಗೆದುಕೊಳ್ಳೆ ವೀರ್ಯವೃದ್ಧಿ (ಕಾಮಶಾ. ೨೭೪). [ಮುಳ್ಳು (<ಮುಳ್) + ಸುಂಡೆ$_1$]

**ಮುಳ್ಳುಸೇವಂತಿಗೆ** (ನಾ). ಬಿಳಿಯ ಬಣ್ಣದ ಹೂವುಗಳನ್ನು ಬಿಡುವ, ಮುಳ್ಳುಗಳುಳ್ಳ ಒಂದು ಬಗೆಯ ಸಸ್ಯ : ಇಂಗಳದ ಹಣ್ಣು, ಮುಳ್ಳುಸೇವಂತಿಗೆ ಬೇರು . . . ಬಿಲ್ವಪತ್ರೆಕಾಯಿಯ ತಿರುಳು ಇವುಗಳ ನೈಲ್ಲಾ ಕಷಾಯವಿಟ್ಟು ಸೇವಿಸಲು ಎಂಥ ದೋಷಜ್ವರವಾದರುಂ ಕೆಡುಗುಂ (ಸಕವೈ. ೫೦೭).

[ಮುಳ್ಳು( <ಮುಳ್) + ಸೇವಂತಿಗೆ. / ತುಳು. ಮುಳ್ಳುಸೇವಂತಿಗೆ]

**ಮುಳ್ಳುಸೌತೆ**. 'ಮುಳುಸೌತೆ' ನೋ.

**ಮುಳ್ಳುಹಂದಿ** 'ಮುಳ್ಪಂದಿ' ನೋ.

**ಮುಳ್ಳುಹಣ್ಣು** (ನಾ). ಮುಳ್ಳುಗಳಿಂದ ಕೂಡಿದ ಹಣ್ಣು ಬಿಡುವ ಒಂದು ಬಗೆಯ ಗಿಡ : ಪುರ್ವಾಲಿ, ಮುಳ್ಳುಹಣ್ಣು (ವೃಶಿಗಿ. ೭೯-೦೬೩೩) ; ಹುಡುಗಿಯರೆಲ್ಲ ಮುಳ್ಳುಹಣ್ಣುಗಳನ್ನು ತೆಗೆಯಲು

ಪೋಗಿದ್ದವು (ಮೂರುವಾ. ೨೮೩).
[ಮುಳ್ಳು (<ಮುಳ್) + ಹಣ್ಣು₃ (<ಪಣ್₃)]

**ಮುಳ್ಳುಹತ್ತರಿಕೆ** 'ಮುಳ್ಳತ್ತರಿಗೆ' ನೋ.

**ಮುಳ್ಳುಹರಿವೆ** (ನಾ). ಮುಳ್ಳುಗಳಿರುವ ಒಂದು ಬಗೆಯ ಹರಿವೆ ಸೊಪ್ಪು : ಮುಳ್ಳುಕೀರೇಸೊಪ್ಪು, ಮುಳ್ಳುಹರಿವೇಸೊಪ್ಪು (ವೃಶಿಗ. ೬-೯೩). [ಮುಳ್ಳು (<ಮುಳ್) + ಹರಿವೆ₂ (<ಪಱುಹೆ)]

**ಮುಳ್ಳುಹಲಸು** (ನಾ). ಮೈಮೇಲೆ ದೊಡ್ಡ ದೊಡ್ಡ ಮುಳ್ಳುಗಳಿರುವ ಒಂದು ಬಗೆಯ ಹಣ್ಣು ಮತ್ತು ಅದರ ಗಿಡ ; ಅನಾನಸು : 'ಅನಾನಸ್' ಎಂಬ ಹಣ್ಣು ಮತ್ತು ಗಿಡ ; ಮುಳ್ಳುಹಲಸು ; ಪರಂಗಿ ಹಲಸು ; ನೆಲಹಲಸು (Ananus. ಇಂಕೊ).
[ಮುಳ್ಳು (<ಮುಳ್) + ಹಲಸು (<ಪಲಸು)]

**ಮುಳ್ಳುಹಾಲಿವಾಣ** 'ಮುಳ್ಳುಪಾರಿವಾಳ' ನೋ.

**ಮುಳ್ಳುಹಾಸಿಗೆ** (ನಾ). (ಆಲಂ) ಯಾತನೆಯನ್ನುಂಟುಮಾಡುವಂತಹುದು ; ಕಷ್ಟಕರವಾದುದು : ಯಾರಿಗೂ ಬೇಡವಾಗಿದ್ದೇನೆ ಎಂಬ ಅರಿವು ಕೆಂಪುದೇವಯ್ಯನಿಗೆ ಕ್ಷಣಕ್ಷಣಕ್ಕೂ ಉಂಟಾಗಿ ಅರಸುತನವು ತನಗೆ ಮುಳ್ಳುಹಾಸಿಗೆಯಂತಾಗಬೇಕು (ಶದೇವ. ೦೯೭).
[ಮುಳ್ಳು (<ಮುಳ್) + ಹಾಸಿಗೆ (<ಪಾಸುಗೆ₁)]

**ಮುಳ್ಳುಹುಳ** (ನಾ). ಮುಳ್ಳಿನಂತಹ ಕೊಂಡಿಗಳಿರುವ ಒಂದು ಬಗೆಯ ಹುಳು ; ಚೇಳು : "ವೃಶ್ಚಿಕಃ – ೧ ಮುಳ್ಳುಹುಳಚೇಳು." (ಸಿದ್ಧಾಂತಿ. ೩೭೦). [ಮುಳ್ಳು (<ಮುಳ್) + ಹುಳ (<ಪುೞು)]

**ಮುಳ್ಳುಹೊನಗೊನ್ನೆ** (ನಾ). ಮುಳ್ಳುಗಳಿರುವ ಒಂದು ಬಗೆಯ ಸಸ್ಯ, – ಹೊನಗೊನ್ನೆ : (ವೃಶಿಗ. ೩-೯೩).
[ಮುಳ್ಳು (<ಮುಳ್) + ಹೊನಗೊನ್ನೆ (<ಪೊನ್ನಗನ್ನೆ)]

**ಮುಳ್ಳುಹೊನ್ನೆ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಹೊನ್ನೆಮರ : ಮುಳ್ಳುಹೊನ್ನೆ . . . ಗಡುತರವಾಗಿ ಬೆಳೆಯುತ್ತದೆ. ಕಟ್ಟಿಗೆ ಗಟ್ಟಿ (ಕಶಾಗ. ೪೭).
[ಮುಳ್ಳು (<ಮುಳ್) + ಹೊನ್ನೆ (<ಪೊನ್ನೆ)]

**ಮುಳ್ಳೂರು** 'ಮುಳ್ಳೂಱು' ನೋ.

**ಮುಳ್ಳೂಱು, ಮುಳ್ಳೂರು** (ಕ್ರಿ). ಮುಳ್ಳನ್ನು ಚುಚ್ಚು, – ನೆಡು : ವಿಸರ್ಜಿಸಿ ಬಿಡುವಾಗ ಎಲ್ಲಿರ್ದನೊ ಮುಳ್ಳೂಱಿ ತೆಱಿಹಿಲ್ಲದಿಪ್ಪ ಅಖಂಡವಸ್ತು (ಬಸವ. ೯. ೦೨೦೩). **ಮುಳ್ಳೂರು** : ಅಂದಿನ ಸಭೆಯಲ್ಲಿ ಮುಳ್ಳೂರು ವಷ್ಟೂ ಸ್ಥಳವಿರಲಿಲ್ಲ (ರೂ೨). [ಮುಳ್ಳು (<ಮುಳ್) + ಊಱು₁]

**ಮುಳ್ಳೆಳ್ಳು** (ನಾ). ಮೊನೆ ಮುರಿಯದ ಎಳ್ಳು ; ಚೂಪಾಗಿರುವ ಎಳ್ಳು : ಭೂಮಿಗೆ ವಿಚಿತ್ರವಾದುದು ಮಂಟಪಂ ನೋಡೆ ಹೋಮಕುಂಡಂ ಸುಡುವ ಮುಳ್ಳೆಳ್ಳುಗಳ್ಕೂಡೆ (ಶೀರರ. ಹ. ೯೬೩-೩).
[ಮುಳ್ಳು (<ಮುಳ್) + ಎಳ್ಳು (<ಎಳ್)]

**ಮುಳ್ಳೊತ್ತು** (ನಾ). ೧. ಕಾಲಿಗೆ ಮುಳ್ಳು ನಾಟದಿರಲು ಹಾಕಿಕೊಳ್ಳುವ ಚಪ್ಪಲಿ, – ಮೆಟ್ಟು : ಗುರುವೆ ಮುಳ್ಳೊತ್ತುಗಳ ಮಾಡಿ ಕಾಲ ಹಾಕುವೆನು (ಕಗದ್ಯ. ೭೯); ಹಾಯೆ ಹರಿಗೋಲಾದೆ ; ರಾಯಭೇರಿಗೆ ಆದೆ ; ರಾಯರಾ ಕಾಲಿಗೆ ಮುಳ್ಳೊತ್ತುವಾದೆ (ಶೀಗಬ್ಬ. ೦೭೯). ೨. (ಆಲಂ) ಕಿರುಕುಳವನ್ನು ಕೊಡುವಂತಹುದು ; ಉಪದ್ರವಕಾರಿಯಾದುದು : ಕೃಷ್ಣದೇವರಾಯ ವಿಜಯಸಾಮ್ರಾಜ್ಯಕ್ಕೆ ಶತಮಾನಗಳಿಂದ ಮುಳ್ಳೊತ್ತಾಗಿದ್ದ ವಿಜಾಪುರರಾಜ್ಯವನ್ನೇ ಉಧ್ವಸ್ತಗೊಳಿಸುವ ಪ್ರಬಲಾಕಾಂಕ್ಷೆಯಿಂದ ಜೈತ್ರಯಾತ್ರೆಯನ್ನು ಮುಂದುವರಿಸಬಯಸಿದನು (ಅಳಿಳ. ೦೦೦). [ಮುಳ್ + ಒತ್ತು₂]

**ಮುಱಿ₁, ಮುರಿ₂** (ಕ್ರಿ). ೧. ತುಂಡುಮಾಡು ; ತುಂಡರಿಸು : "ಮುಱಿ–ಮೋಟನೇ, ಖಂಡೇ ಚ (ತುಂಡು)" (ಶಮ೨): ಕೈಯಿಂದೆಱೆ ಮುಱಿ ನಿಟ್ಟೆಲ್ವನರಿದು (ವಡ್ಡಾರಾ. ೧೨೭-೨) ; ಪಗೆವರ ನಿಟ್ಟೆಲ್ವಂ ಮುಱಿ ಪೊಡೆನಗೆ ಪಟ್ಟಂಗಟ್ಟಾ (ಶಂಶಖಾ. ೦೦-೦೭) ; ಕುಳಿಕನ ದಾಡೆಯುಂ ಮುಱಿವ ದಿಗ್ಗಜವುಂ ಪಡೆಪಾಯ್ವ . . . ಅಳವಂ ಸಮಂತು ತಳೆದಂ ರಣದೋಹಳನಾ ಕುಮಾರಕಂ (ಶಂಪ್ರಶು. ೬-೨೮) ; ರಥವನು ನಾಕುಶರದಲಿ ಮುಱಿದು ಸೂತನ ತಲೆಯನೆರಡಱಲಿ ನೂಕಿ . . . ಐದಿದನು ದ್ರೋಣ (ಕುವ್ಯಾದ್ರೋ. ೨-೯೨). ೨. ತುಂಡಾಗು ; ತುಂಡರಿಸಿ ಹೋಗು : ಮೂಗುಂ ಮುಱಿವನ್ನಂ ಮುಂದೆ ಮುಗ್ಗುತ್ತೆಡಬಲದೊಳಗಾಂ ಬೀಱುತುಂ ಪಕ್ಕಗೂಡಾಗೊಱಗುತ್ತುಂ ಪೋಗಿ (ಕಾದಂಪೂ. ೦೯೦) ; ಕುಳಿಕನ ಪಲ್ಗಳುಂ ಮುಱಿಯೆ ಪೋದಿದರಾರ್ (ಗದಾಯು. ೯-೨೦) ; ಚೆನ್ನಮಲ್ಲಿಕಾರ್ಜುನಯ್ಯ ನಿಱಿದಲಗು ಒಡಲಲ್ಲಿ ಮುಱಿದು ಹೊರಳುವೆನ್ನಳಲನು ನೀವೆತ್ತ ಬಲ್ಲಿರೆ (ಮಹಾದೇ. ೪. ೦೨೦-೨೯೦) ; ಗಿರಿಯ ಶಿರದಲಿ ಹೂತ ಕಕ್ಕೆಯ ಮರ ಮುಱಿದು ಬೀಳ್ವಂತೆ ವಿಮಳಾಭರಣಕಾಂತಿಯ ಕಡಲ ಕೋಮಲಕಾಯ ಭಗದತ್ತ ಉರುಳಿದನು (ಕುವ್ಯಾದ್ರೋ. ೩-೭೭). ೩. ಕಡಿ ; ಕತ್ತರಿಸು ; ಭೇದಿಸು : ಅರಸಂ ಕಂಡು ಕಡುಮುಳಿದದಟ ಗೋಣಂ ಮುಱಿದೊಡಾಗಳಿಯುಂ ಸತ್ತು (ವಡ್ಡಾರಾ. ೦೦೯-೧) ; ಬ್ರಹ್ಮಾಂಡಮುಂ ಪೊಕ್ಕನಪ್ಪೊಡಮಾ ಬ್ರಹ್ಮನ ಗಂಟಲಂ ಮುಱಿದಪೆಂ (ಶಂಶಖಾ. ೦೩-೭೭) ; ತಾಳತರುವನು ಮುಱಿದು ಸಮರಾಭೀಳದುಂದುಭಿಯಟ್ಟೆಯನು ತುದಿಗಾಲಲೊದದರಸಾದನಿನೆತ್ತೊಜಂಗೆ ರಘುನಾಥ (ತೊರರಾ. ೯-೨ ಸೂಚನೆ). ೪. ಕಡಿದುಹೋಗು ; ಕತ್ತರಿಸಲ್ಪಡು : ಮುತ್ತಿನ ಮುಱಿದ ಲಂಬಣಂಗಳ್ಪೆರಸೆಟಲ್ವ ಪಚ್ಚೆಯ ಸರವ ಹಾರದ ತೋರಣಂಗಳಂ ನುಗುಳುತ್ತುಂ ಬಂದು (ಆದಿಪು. ೪-೨೩ ವ). ೫. ಕೀಳು ; ಕೊಯ್ಯು : ಪಾದಪಂಗಳ ಪುಷ್ಪಸ್ತಬಕಂಗಳಂ ಮುಱಿವುತುಂ ಪೋಗಲ್ ಮದೇಭಂಗಳ್ (ಕಾದಂಪೂ. ೬೩೦) ; ಸುರಹೊನ್ನೆದೊಂಗಲ ಮುಱಿದು ಪರಮವ್ರತಸ್ಥೆ ಮತ್ತೊರ್ವಳು ಪಾದರಿಳ್ಪುರಲ್ಗಳ ತಿಱಿದಿಕ್ಕುವಳು (ಸೋಹಶ. ೨೯-೬೩). ೬. (ಬಿಲ್ಲಾಪಿಲ್ಲಿಯಾಗಿ) ಸೋತುಹೋಗು, – ಪರಾಜಯಹೊಂದು : ಅಂತು ಧನುರ್ವಲದ ಪೊಸೆ ಮುಱಿವಂತೆ ಪಲವುಮುಱಿಕೆಯ ಬಿಲ್ಲ ನಾಯಕರ್ಕಳುಗ್ರ ಸಾಯಕದಿಂ ಸಾಯೆ (ಶಾಂತಿಪು. ೯-೦೦ ವ) ; ಘೋರರುದ್ರನ ದಳ ಮುಱಿಯುತ್ತು (ಅವಹಂ. ೩೩-೨೩೩). ೭. ಪಾಲಾಗು ; ವಿಭಾಗವಾಗು : [ನಾ]ಗಘೋರನೆಂಬೋ ಬಟ್ಟೆಕೆಱಿಯ [ಧಾಱಿಗೆ] ಮುಱಿಯುವಡದ ಪೊಲನ ಕೊಳ್ವೆನೆನ್ದು ಬಸೊಡ್ಡಿ ನಿನ್ನಾನೆಂಬ ಮಾತಂ ಕೇಳ್ದು (ಕಶಾಇ. XI-i, ೨೦-೬; 893). ೮. ತೊಲಗು ; ಬಿಟ್ಟುಹೋಗು ; ಮರೆಯಾಗು : ಕೋಪವಡಗದೆ ತಾಪ ಮುಱಿಯದೆ ಬಱಿದೆ ಭಕ್ತರಾದೆವೆಂದು ಬೆಬ್ಬಬೆಱಿವವರ ಕಂಡು ಆನು ಮುಱುಗುವೆನಯ್ಯ (ಶ್ರಶುವ. ೩೭) ; ತ್ರಿಜಗಚೌಪಟಮಲ್ಲ ನೀನೆನಿಪ ಮಾನಗರ್ವವು ಮುಱಿಯದೇ ರಿಪುಸೇನೆ ನಗದೇ (ಕುವ್ಯಾಶ. ೩-೩೩). ೯. ಸೋಲಿಸು ; ಪರಾಭವಗೊಳಿಸು : ಕಳಿಂಗನಂ ಮುಱಿದು ಭಂಗಿಸಿದಾತ್ಮಭುಜಪ್ರತಾಪಮಂ ಕೇಳೆ (ಎಕ. VII, ಶಿವಮೊ. ೬೪-೦೩ ; 1112); ಅವಂದಿರಂ ಮಲ್ಲಯುದ್ಧದಿಂ ಮುಱಿದು ಕೊಲಿಸುವೆಂ (ಜಗಎ. ೬-೩೭ ವ) ; ಕೊರಲೊತ್ತುತೆ ಮುಱಿವನವನ್ ಬಟಲದ ಮಲೆಗೂಳಿಯುಮನ್ (ಅಂತಿಗೊ. ೦೭-೩೩೨). ೧೦. ನಾಶಮಾಡು; ಧ್ವಂಸಗೊಳಿಸು: ಎನ್ನ ಮಾಯದ ಮದವ ಮುಱಿಯಯ್ಯಾ (ಮಹಾದೇ. ೪. ೬-೯) ; ಮತ್ತೆ ಮುಱಿದನು ಹತ್ತುಸಾವಿರಮತ್ತಗಜವನು . . . ರಣಾಗ್ರದಲಿ (ಕುವ್ಯಾಶ. ೮-೩೨). ೧೧. ಕೆಡಿಸು ; ಹಾಳುಮಾಡು : ಅಱುಹಿದರೆ ವಿದುರಂಗೆ ಕಾರ್ಯವ ಮುಱಿವನಾತನು (ಕುವ್ಯಾಸ. ೦೨-೭೩). ೧೨. ಕೊಲ್ಲು ; ಸಾಯಿಸು : ಮುಱಿದೆಟ್ಟಿದುಯ್ಯೆ ನಿನ್ನನಿರದಂತಕನಾಂ ನಡೆ ನೋಡೆ ನೋಡೆ ನೀಂ ಕರಗಿದೆಯೆಂತುಂ (ಆದಿಪು. ೩-೧೪) ; ಹಾವಿನ ಬಳಗ ಗರುಡನ

ಮುಱಿಯ ಮುಱಿದವೊಲಾಯಿತಕಟ (ಕುಮಾರರಾ. ೬-೬೩); ತರಣಿವಂಶಜರು . . . ರಜನೀಚರ ವಿರೋಧನ ಮುಱಿದು ಸಾರ್ದರು ಪಂಚವಟಿವನವ (ತೊರರಾ. ೩-೧ ಸೂಚನೆ) ; ಏಗಳುಂ, ನೀನ್, ನೋಟ್ಪಿನ್, ಅಜಗುಲಿಗಳನ್ ಮುಱಿವ ನೋಂಪಿಯನ್ ನೋಂತಿರ್ಪ (ಅಕ್ಕಶಾ. ೧-೨). ೧೩. ನಿಲ್ಲಿಸು ; ಭಂಗಗೊಳಿಸು : ಮುಱಿದು ನಿದ್ರೆಯ ಕಾಪಿನಸುರರ ತರುಣಿಯರು ಬಳಸಿದರು (ತೊರರಾ. ೫-೩-೨೯). ೧೪. ಕೆಡು ; ಹಾಳಾಗು : ಮುಱಿದ ಮನಮಂ ಮೆಚ್ಚಿಸಿದವನೊ (ಬಸವ. ೪೦-೪೦) ; ಮುಱಿದ ಭರತಾನ್ವಯದ ಬೆಸುಗೆಯ ತೆಱಸು ತೋಱಿತೆ ಪುಣ್ಯವೆನುತೆಚ್ಚಱಿತು ನುಡಿದಳು (ಕುಮಾರ. ೩-೩). ೧೫. ಮೀರು ; ದಾಟು ; ಉಲ್ಲಂಘಿಸು : ನುತ ಸಮ್ಯಕ್ತ್ವಮಣುವ್ರತಸ್ಥಿತಿ ಸಮತ್ವೀಭಾವನಂ ಪ್ರೋಷಧವ್ರತಮೊಂದುಂ ಪಸಿಯೊಂದುಮಂ ಮು[ಪಾಠಾಂ. ಪ]ಱಿಯೆನೆಂಬೀ ಪೂಣ್ಕೆ ಮಾಡೆಂ (ಅಂಕು. ೬-೧೧) ; ಏಳುಕಡಲಿನ ಮೇಲೆ ಮುಱಿವರು ಕೀಲ ಕಳೆವರು ರವಿಯ ಬಂಡಿಯ (ಸಂಕಕ. ೭-೧೬) ; ದಂಡೆಯ ಮುಱಿದಂತೆ ಬಳೆದಿರ್ದ ಕರ್ಮಾಸೆ ಖಂಡೇಂದುಭಾಳಕಸ್ತೂರಿಯ . . . ಸುಪ್ರಚಂಡನ ಮೊಗವ ನೋಡಿದನು (ಮೋಹತ. ೩೫-೪೯). ೧೬. (ತುದಿಯು) ಮೊಂಡಾಗು ; ಮುಕ್ಕಾಗು : ಪಱಿದುವು ಗಱಿ ಚಂಚುಗಳುಂ ಮುಱಿದುವು ತಲೆನಡುಗುತಿರ್ದುವೆನ್ನದೆ ತರದಿಂ ಬಱಿಗೆಯ್ವುತಿರ್ದವಾಯ್ದುಱಗುಲಿ ಕರ್ವೇಡನಲ್ಲಿ ಮುದುಗಿಳಿಗಳುಮಂ (ಶಬ್ದಮ. ೧೭೯). ೧೭. ಚುಚ್ಚು ; ನಾಟು : 'ಮುಳ್ಮುಱಿ' ಪರಾ. ೧೮. ಇಲ್ಲವಾಗು ; ನಾಶವಾಗು : ಪುಲ್ ಮುಱಿದುದು ಬೆಳಸುಡುಗಿ ಬಯಲ್ ಮಸಗಿದುದು (ಅವಂತಿ. ೧೧-೩೯). ಮುರಿ₂ : ೧. ಅವಳು ರೊಟ್ಟಿಯನ್ನು ಮುರಿದು ಮುರಿದು ನಾಯಿಗೆ ಹಾಕುತ್ತಿದ್ದಳು (ರೂಢಿ). ೨. ಭರದೀದ ಯುಕ್ಕಲನ ಹೊಕ್ಕಿರಿದು ಕರಡಿ ಬಾಯ್ದೆರೆಯೆ ಮುಸುಡಂ ಮುರಿಯಲಿಕ್ಕಿ ಬಗ್ಗನ ಬಾಯೊಳಿರದೆ ಸೇರಿಸಿ ಕಠಾರಿ (ಸವಮೋ. ೧೬-೨೩); ಜಾರಿಬಿದ್ದುದರಿಂದ ಅವನ ಕೈಮೂಳೆ ಮುರಿದಿದೆ (ರೂಢಿ). ೬. ಕೆಲವರು ಮಡಿದು ಹೋದರು, ಕೆಲವರು ಮುರಿದು ಓಡಿ ಹೋದರು (ಮುಂಬಯಿ. ೬. ೫-೪೬). ೯. ಬಿತ್ತಿಸಿ ನೃಪಾಲರಾಟೋಪಮಂ ಕೋಪದಿಂ, ನೀಲಧ್ವಜನ ಮುರಿದು (ಜೈಮಿನಿಗ. ೭೨-೧೯೬೯). ೧೦. ಅವರ ಸೊಕ್ಕು ಮುರೀಲಿಕ್ಕೆ ಒಂದೇ ಹಾದಿ (ದಾಸಹು. ೩೬); ವೈಭವಗಳ ನೂರ ನೀವನು ದೇವನು ಮುರಿಯುವೊಡಧಮಜೀವವನು (ಇಂಶಾಪ. ೩೦-೪೩). ೧೪. ಚಿನ್ನರಿಹರೆಂಬೆಣಿಕೆ ಮುರಿಯೆ ಬಿಸುಸುಯ್ವುಂ (ಕಾವೇರಿ. ೩೬-೩೭); ಮನೆ ಮುರಿದರೆ ಕಟ್ಟಬಹುದು, ಮನ ಮುರಿದರೆ ಕಟ್ಟಲಾಸ (ಗಾದೆ). ೧೫. ಸಮಾಜದ ನೀತಿನಿಯಮಗಳನ್ನು ಮುರಿದುಬಿಡುವರು (ಶಿಕ್ಷದ. ೧೧೧). ೧೯. ಕಳೆ ; ವ್ಯಯವಾಗು : ಕೊಬ್ಬರಿಎಣ್ಣೆ ಡಬ್ಬಿಯೊಳಗಿಂದ ಬೇಡಿದ್ದಾದರೆ ಬಹಳ ಮೋಹನತ್ತು ಮತ್ತು ವೇಳೆ ಮುರಿಯುತ್ತದೆ (ಮುಂಬಯಿ. ೧೩೯). ೨೦. ತಡೆ ; ನಿರೋಧಿಸು ; ಅಡ್ಡಿಪಡಿಸು : "ಇಂದು ನಾಗಪಂಚಮಿ, ಉಚ್ಚುರದ ಹೊತ್ತಿಗೆ ಹೋಗಬೇಡಿರಿ" ಎಂದು ನಾವು ಹೊರಟಾಗ ಬಹಳಷ್ಟು ಜನ ಮುರಿದು ಮಾತಾಡಿದ್ದರು (ಸ್ವ.ಚಿ. ೪೬೪). ೨೧. ಸಾಯು ; ಮರಣಹೊಂದು : ಯುದ್ಧ ಒದಗಿ ಮರಣ ವುಂಟಾದರೆ ವೀರಸ್ವರ್ಗವನ್ನು ಪಡೆಯುತ್ತೇವೆ . . . ಕ್ಷತ್ರಿಯನು ಮುರಿದಾನೇ ಹೊರತು ಮಣಿಯುವುದಿಲ್ಲ (ವಚಭಾ. ೨೫೩). ೨೨. (ಇನ್ನೊಬ್ಬರು ಕೊಡಬೇಕಾದ ಹಣ ಮುಂತಾದುವನ್ನು) ವಜಾ ಮಾಡಿಕೊಳ್ಳು ; ಹಿಡಿದುಕೊಳ್ಳು ; ವಶದಲ್ಲಿಟ್ಟುಕೊಳ್ಳು : ಕಳುಹಿಸದೆ ಹೋದರೆ ಸಮದಾ ಯಾವ ವರ್ತಕನಿಗೆ ಕೊಟ್ಟಿರುತ್ತದೆಯೋ ಅವನು ಮುರುಕೊಂಡರೆ ಮುರಿಯುವೆವು, ಇಲ್ಲದಿದ್ದರೆ ಮಾಲ ಖರೀದಿ ಮಾಡಿ ಕೊಟ್ಟೇವು (ಮುಂಬಯಿ. ೨೬೩). ೨೩. ಮಾರ್ಪಡು ; ಬದಲಾಗು ; ವಿನಿಮಯವಾಗು : ವಾಯಿದೆಗಳನ್ನು ಹಾಕಿ ಮಾರುವ ಈ ಹುಂಡಿಗಳನ್ನು ಕೊಳ್ಳಲು ಉಪಯೋಗಿಸುತ್ತಾರೆ. ಪೇಟೆಯಲ್ಲಿ ಇವು ಧಾರಾಳವಾಗಿ ಸಂಚರಿಸುತ್ತವೆ, ನಗದಿಗೆ ಮುರಿಯುತ್ತವೆ (ಹಣಶ್ರ. ೨೦೯).

ಮುರಿದುಕೊಳ್ಳು = ೧. ತುಂಡಾಗು ; ಕತ್ತರಿಸಿ ಹೋಗು : ಸರಪಳಿಗೆ ತುಕ್ಕು ಹಿಡಿದಿದ್ದರಿಂದ ತನಗೆ ತಾನೇ ಮುರಿದುಕೊಂಡು ಹೋಯಿತು (ರೂಢಿ). ೨. (ಇನ್ನೊಬ್ಬರು ಕೊಡಬೇಕಾದ ಹಣ ಮುಂತಾದುವನ್ನು) ವಜಾಮಾಡಿಕೊಳ್ಳು ; ಹಿಡಿದಿಟ್ಟುಕೊಳ್ಳು ; ವಶಕ್ಕೆ ತೆಗೆದುಕೊಳ್ಳು : ನಾನು ನಿಮಗೆ ಕೊಡಬೇಕಾಗಿರುವ ದುಡ್ಡನ್ನು ಸಂಬಳದಲ್ಲೇ ಮುರಿದುಕೊಳ್ಳಿ (ರೂಢಿ). ೩. ಕೊಲ್ಲು ; ಸಾಯಿಸು ; ನುಂಗಿಹಾಕು : ಆಚಾರ್ರು ಗಾಳಿಯಾಗಿ ತನ್ನನ್ನು ಮುರಿದುಕೊಳ್ಳಬೇಕು ಎಂದು ಹೂಡಿದ್ದ ಹೂಟವನ್ನು ತೊದಲುತ್ತಾ ಹೇಳಿದ (ಸಮ್ಸ್ಕಾರ. ೨೦೨).

ಮುರಿದುಮುರಿದು ಮಾತಾಡು = (ಸಂಕೋಚ, ಅನುಮಾನಗಳಿಂದ) ತಡೆದುತಡೆದು ಮಾತನ್ನಾಡು : "ಹಾ ! ನೀವು ಇಬ್ಬರೇ ಇಲ್ಲಿ ಯಾವಾಗ–" ಎಂದು ಮುರಿದು ಮುರಿದು ಮಾತಾಡಿದೆ (ಕಥಾಕು. ೩೩).

[ದೇ.॥ ತಮಿ. ಮುಱಿ, ಮುರಿ; ಮಲ. ಮುಱಿ; ತೆಲು. ಮುಱಿಯು, ಮುರಿಯು]

**ಮುಱು₂** (ನಾ). ೧. ಚೂರು ; ತುಂಡು ; ತುಣುಕು : ಪಾಱಿದ್ದುದ ಭೃಂಗಪಖಿರ ಖುರಧಾರಾಟಂಕಾಹತಿ ಮುಗಿಲ ಮುಱುಗಳಂ ಕೆದಱಿದಿನಂ (ಶಾಂತಿಪು. ೧೧-೪೨); ವಿರಹಶಿಖಿಯುಳುರೆ ಜಳಶೀಕರನಿಕರಮ ಬಲಿತ ತೆಱದಿನ ಒಲೆಯ ಮೈಯೊಳ್ ಕರಮೈಸದಿರ್ದುವು ಸಖಿಯರ್ ಕರತಳದಿಂ ತಳಿಯ ತೊಳಪ ಮುತ್ತಿನ ಮುಱುಗಳ್ (ಲೀಲಾವ. ೧೧-೩೦); ಅರೆಗಣ್ಣಳಿಸಿವ ಕೋಣನ ತಲೆಯ ಮುಱುಗಳಿಂ . . . ಎಸೆವ ದುರ್ಗಾನಿಲಯಮಂ ಮಹೋದ್ಯೋಗದಿಂ ವಸುಧಾಧಿಪಂ ಪೊಕ್ಕಂ (ರಸಸು. ೫-೫); ಒರ್ವ ಪುಳಿಂದನಿತಂಬಿನಿ . . . ಸುರಧನುವಿನ ಮುಱಿಯಂ ಕೈವಿಡಿದು ಬಂದಂದ ದೊಳೊಂದರಗಿಳಿ ಸಹಿತಂ ನಿಂದಿರ್ದಪಳ್ (ಕಥಾಕು. ೨-೨೦). ೨. ಸೋಲು ; ಅಪಜಯ : 'ಮುಱುವಡೆ' ಪರಾ.

ಮುಱುಮುಱುಯಾಗು = ತುಂಡು ತುಂಡಾಗು ; ಅನೇಕ ಚೂರುಗಳಾಗು : ಸುಯ್ವ ಸುಯ್ಲ ಸುಟಿಗೆ ನೆಲೆಗಟ್ಟು ಮುಱುಮುಱುಯಾಗಿ ನಿಡುಗಂಬಂಗಳ್ ತೇಂಕೆ (ರಾಜಶೇ. ೧೬೦-೨೯). [< ಮುಱು₁/. ತಮಿ. ಮುಱಿ, ಮುರಿ; ಮಲ. ಮುಱಿ; ತೆಲು. ಮುರಿ, ಮುರಿಯು]

**ಮುಱಿಕಾಯಿ** (ನಾ). ಔಷಧಿಗೆ ಉಪಯೋಗಿಸುವ ಒಂದು ಬಗೆಯ ಕಾಯಿ : ಮುಱಿಕಾಯಿ ನುಗ್ಗಿನಖಮಂ . . . ವರದೇವದಾರು ಕಣ ಮೊಂದಿರೆ ಮಾಸಿಯೊಳರೆದು ಬೇದುಗಟ್ಟು ವಿಷಘ್ನಂ (ಖಗುಪ. ೧೬-೭೬).

[< ಮುಱಿಕಿಲ್₂ + ಕಾಯಿ₄ (< ಕಾಯ್₄) ]

**ಮುಱಿಕಿಸು** 'ಮುಱುಕಿಸು' ನೋ.

**ಮುಱಿಕು, ಮುಕ್ಕು₄, ಮುರುಕು₃, ಮುಱುಕು₃** (ನಾ). ೧. ತುಂಡು ; ಚೂರು ; ತುಣುಕು : ದುಱುದುಱಿಪ ತಲೆಮಿದುಳ ದಂಡೆಯ ಹಱಿಗರುಳ ನೆಣವಸೆಯ ಮೂಳೆಯ ಮುಱಿ[ಪಾಠಾಂ. ಱು]ಕುಗಳ ಕಡಿಖಂಡ ಮಯವಾಯ್ತವಿಳ ಚತುರಂಗ (ಕುಮಾರವ್ಯಾ. ೧೮-೩೩). ಮುಕ್ಕು₄ : ೨. ಯಾವುದಾದರೊಂದು ವಸ್ತುವಿನ ಸ್ವಲ್ಪಭಾಗವು ಮುರಿದು ಹೋಗಿರುವುದು ಮತ್ತು ಹಾಗೆ ಭಾಗಶಃ ಮುರಿದುಹೋದ ವಸ್ತು : "ಖಾದನವಿಶೇಷ ಗರ್ವಂಗಳೊಳ್ ಬಗೆಯ ಭಾಂಡದೊಳಗಿಂ ಪತ್ತುಂಡನಮುದಾಗೆ ಮುಕ್ಕು" (ಶಬ್ದಮ. ೮೦); ಹಾಲ ಕಂದಲು ತುಪ್ಪದ ಮಡಕೆಯ ಬೋಕು ಮುಕ್ಕನಬೇಡ (ಬಸವ. ೪೦೬); ಚಂದ್ರನು ಬಡವಾಗುತ್ತ ಬಂದು ಪ್ರಕಾಶಬಿಂಬದ ಒಂದು ಕಡೆಯಲ್ಲಿ ಮುಕ್ಕು ಕಾಣಿಸಿಕೊಂಡು, ಅದು ದೊಡ್ಡದಾಗುತ್ತ . . . ಕೃಷ್ಣಪಕ್ಷದ ಅಷ್ಟಮಿಚಂದ್ರನಾಗಿ ಬೆಳಗುವನು (ಜ್ಯೋತಿರ್ವಿ. ೨೦೫). ೩. ರಂಧ್ರ ; ಪೊಟರೆ : ಮುರುಡಿನಿಂ

ಮುಕ್ಕಿನಿಂ ತಗ್ಗಿನಿಂ ತೆವರಿನಿಂ . . . ಆ ಪಥಂ ಬಿವಜಿಸುವುದು (ಶಬ್ದ. ೩೭-೨೩); ಮನೆಯಲ್ಲಿರುವ ಬಿರುಕು ಮತ್ತು ಮುಕ್ಕುಗಳನ್ನೆಲ್ಲ ಮುಚ್ಚಿಸಿ . . . ಸುಣ್ಣ ಅಥವಾ ಬಣ್ಣಗಳನ್ನು ಬಳಿಸಬೇಕು (ಗೃಹವಿ. ೧೬೦). **ಮುರುಕು₃** : ೧. ಸಾಧಾರಣ ಕಾರ ಅರೆದು ಇರಿಸಿಕೊಂಡು ಒಟ್ಟಿನ ಮುರುಕನ್ನು ಅದಕ್ಕೆ ಸೋಕಿಸಿ (ಪಾಕಶಾ. ೦೭). ೨. ಸಾಮಾನುಗಳಲ್ಲಿ ತೋರುವ ಬಿರುಕುಗಳು ಅಥವಾ ಮುರುಕುಗಳನ್ನು ಸರಿಮಾಡಿಸಿ . . . ಪಾಲಿಷ್‌ಹಾಕಿಸಿದರೆ, ಇವು ಬಹಳ ಕಾಲ ಹೊಸದಾಗಿಯೇ ಇರುವುವು (ಗೃಹವಿ. ೦೭೩). ೪. ಭಿನ್ನತೆ ; ವ್ಯತ್ಯಾಸ : ಏನೋ, ಎಲ್ಲರೂ ಸೇರಿ ಇದ್ದ ಮುರುಕು ಸರಿಪಡಿಸಿಕೊಂಡು ಹೋಗುವುದಕ್ಕೆ ಸಹಾಯ ಮಾಡಬೇಕು (ಕಮಪ. ೩೬). ೫. (ಅಲಂ) ಮೂಲವಸ್ತುವಿನಂತೆಯೇ ಕಾಣುವ ವಸ್ತು ; ಪ್ರತಿರೂಪ : ಲೆಕ್ಕಿಗರರಸನಂತೆ ಇವನು . . . ಸತ್ಯವಂತ ಹರಿಶ್ಚಂದ್ರನ ಮುರುಕಂತೆ (ತುಂಗಭ. ೦೯); ಅಪ್ಪನ ವಂಶೋದ್ಧಾರಕನ ವಿಷಯ ಹೆಚ್ಚು ಹೇಳಬೇಕಾದ್ದಿಲ್ಲ. ಎಷ್ಟಾದರೂ ಅಪ್ಪನ ಮುರುಕು (ಹೋರಾಪು. ೯೩). (ಗು). ೬. ತುಂಡಾದ; ಮೋಟಾದ : ಮಾಣಿಕಲಾಲನು ತನ್ನ ಮುರುಕುಬೆರಳಿಗೆ ಒಂದು ಕೃತಕವಾದ ಬೆರಳನ್ನು ಮಾಡಿಸಿ ಸಿಕ್ಕಿಸಿಕೊಂಡು (ಬಂಕಿಮ. ೨೨೦). ೭. ಮುರಿದು ಹೋದ ; ಭಗ್ನವಾದ : ಮುರುಕುಗುಡಿಸಲು ಇರಲಿ ಚಾಟಿಗೆ. ಸಿರಿಯರಸ ಮತ್ತೇನ ಬೇಡೆನು (ಕಪು. ೧-೩); ನೆನೆನೆನೆದು ಮೈಮರೆತು ನಲಿಯುವೆನು . . . ಅಂದು ಬೆಟ್ಟದ ತುದಿಯ ಮುರುಕುದೇಗುಲದಲ್ಲಿ ತಂದು ವಿಧಿ ನನಗಿತ್ತ ಪ್ರೇಮನಿಧಿಯ (ಇಂಗೀತ. ೪೪-೭). **ಮುಱುಕು₃**: ೧. ಮೇಲಿನ ' ಮುಱಿಕು ' ಉಲ್ಲೇಖದಲ್ಲಿರುವ 'ಕುವ್ಯಾದ್ರೋ. ೧೮-೩೩ ' ಪ್ರಯೋಗದ ಪಾಠಾಂತರವನ್ನು ನೋಡಿ.

**ಮುರುಕುಮುರುಕು, ಮುಕ್ಕುಮುಕ್ಕು, ಮುರುಮುರುಕು(ದ್ವಿರುಕ್ತಿ)**: ಯಮುನೆಗೆ . . . ಮನಸ್ಸು ಮುರುಕುಮುರುಕಾಗಲು ಇದೊಂದು ದುರಂತವೇ ಸಾಕು ಎನಿಸಿತು (ಅಂಹಿ. ೦೦೪); ಮುಕ್ಕುಮುಕ್ಕಾದೀ ಮುಕ್ಕಾಲ್ವಾಡುಗಳ ನಿಲ್ಕೆ ಜೋಕೆಯಿಂ . . . ತುಂಬುವಾಡಂ ಪಾಡಿಂ (ಶಕವಿ. ೬-೦೩೪ ಪ); ಮಾನವನ ಮುರುಮುರುಕು ಮನಸ್ಸಿನ ಹರಹರಕು ಕಣ್ಣಿಗೆ ಕಾಣುವದದೆಷ್ಟು ? (ಶಿಹಿವಿ. ೭). **ಮುಕ್ಕಾಗು** = ೧. ತುದಿಯು ಮುರಿದುಹೋಗು : ಮುಕ್ಕಾಗಿ ತೋರ್ಪೊಡಿನಬಿಂಬಂ ತಾಂ . . . ಮೂಱುಮೊರಡು ತಿಂಗಳನಟುಗುಂ (ಶಸಾರ. ೩೭೦); ಮುಕ್ಕಾದ ಕೈದುವ ತರಿಸಿ ಕಳುಹಿಸುತಿರ್ದನತಿರಭಸದಲಿ ಕಲಿದ್ರೋಣ (ಕುವ್ಯಾದ್ರೋ. ೦೩-೦೬). ೨. ಕಡಮೆಯಾಗು : ಊನವುಂಟಾಗು : ಒಕ್ಕಲಿಯುವ ನಾದರೂ ತಿಮ್ಮಣ್ಣನಾಯಕನ ಪರಾಕ್ರಮ ಮುಕ್ಕಾಗಿರಲಿಲ್ಲ (ಕವೀರ. ೧೨೦); ಗೌಡರಿಗೆ ಮಾನ ಮುಕ್ಕಾದ್ದಾಗ ಆತು (ಆಮನಿ. ೭). ೩. ತಪ್ಪಾಗು ; ದೋಷಪೂರ್ಣವಾಗು : ನಿಮ್ಮ ತರ್ಕ ಮುಕ್ಕಾಯಿತ್ತು (ವಚನ. I. ೩೩೯-೦೩). **ಮುಕ್ಕುಮಾಡು** =(ಅಲಂ) ಹಾಳುಮಾಡು ; ನಾಶಮಾಡು: ಶಂಕರಭಟ್ಟರೊಬ್ಬರೇ ಮಾತ್ರ, ತಮ್ಮ ಮಗಳ ಸುಖದ ಮೊಗ್ಗೆ ಹೂವಾಗ ದೆಯೇ ಕಳಚಿಬಿದ್ದು, ಅವಳ ದೈವವನ್ನು ಮುಕ್ಕುಮಾಡಿದುದಕ್ಕೆ ಹಗಲಿರುಳು ಕೊರಗಪತ್ತಿದ್ದರು (ಗಂಗಾಸಾ. ೨೭).

[< ಮುಱಿ₁ / ತಮಿ. ಮುಱುಕ್ಕು = ತುಂಡುಮಾಡು]

Δ ಮುಱಿಕ್ಕು ' ಮುರಿಗೆ₁ ' ನೋ.

**ಮುಱಿಗಣ್** (ನಾ). ಗಿಡದಲ್ಲಿ ಹಣ್ಣು ಅಥವಾ ಎಲೆಯನ್ನು ಕಿತ್ತ ಜಾಗದಲ್ಲಿ ಕಾಣಿಸುವ ತಗ್ಗಾದ ಭಾಗ : ಅಡವಿಯಾನೆಗಳಡಿಗೊಂಬು ಗೊಂಡ ತದುಕಿನ ಮುಱಿಗಣ್ಣೊಳೊಗೆದ ಪಗಿನೊಳಗ್ಗಿವೆಗಡಿ ಕಾಲ್ಕೊಡರ್ದು ಮಿಡುಮಿಡುಕಿ ಕಳವಳಿಪ ಕಳವಿಂಕಸಂಕುಳಂಗಳುಂ . . . ಅಗುರ್ವುವಡೆಯೆ (ಚಂದ್ರಪ್ರ. ೩-೭೩ ವ). [ಮುಱಿ₁ + ಕಣ್]

**ಮುಱಿಗೆ** (ನಾ). ತುಂಡು ; ಚೂರು : ' ಮುಱಿಗೆಗೆಯ್ ' ಪರಾ. [ಮುಱಿ₁ + — ಗೆ]

**ಮುಱಿಗೆಗೆಯ್** (ಕ್ರಿ). ತುಂಡುಮಾಡು : ಚೂರುಮಾಡು : ಇಂಧನಕ್ಕೆ ವೃಷ್ಟಿಬಂಧನಮಾಗೆ ಮಸಂಗುಂದದೆ ಕೆಲಬಲಪಾಲಯಂಗಳ ಮರಂಗಳ ಜಂತಿಗೆಯಂ ಪೊದಳ್ದ ಪೆರ್ದೂಲೆಗಳನೆಲ್ಲಮಂ ಮುಱಿಗೆಗೆಯ್ದು (ವೃಕವಿ. ೦೪-೨೮). [ಮುಱಿಗೆ + ಕೆಯ್₁]

**ಮುಱಿಗೆಡೆ** (ಕ್ರಿ). ಸೋಲು ; ಪರಾಭವಗೊಳ್ಳು : ಕಲಿಭೀಮ ಮೃಗ ಯಾತುರದಲ್ಲೆದಿದನು . . . ಶಾರ್ದೂಲಕೇಸರಿಕರಿಕಳಭ ಮುಱಿಗೆಡೆದು ವೋಡಿದುವಖಿಳದೆಸೆದೆಸೆಗೆ [ಪಾಠಾಂ. ವೋಡಿದವು ದೆಸೆದೆಸೆಗೈದಿ ತಲ್ಲಣಿಸಿ] (ಕುವ್ಯಾಅ. ೬೦೩. ೪-೯); ನೋಡಿ ಕಂಡನು ಸುರರ ಮುಱಿಗೆಡದೋಡಿಕೆಯ ಕಳಕಳವನು (ಕೊರಟಾ. ೩-೭-೨೩). [ಮುಱಿ₁ + ಕೆಡ₁]

**ಮುಱಿಗೆಯ್** (ಕ್ರಿ). ಹಾಳುಮಾಡು ; ನಾಶಮಾಡು : ಅಳಿಗಬ್ಬವಂ ಕಡಂದುಱು ಮುಱಿಗೆಯ್ದು ಮಾಳ್ಕೆಯೊಳೆ ದುಷ್ಕವಿ ನೀನದನೋದಿ ಮುಚ್ಚಿಸುತ್ತಱಿಕೆಯ ಗಾಂಪರಂ ಬಱಿದೆ ಬಱಿನೆ ಬೀಗುವೆ (ವೃಕವಿ. ೦-೪೭). [ ಮುಱಿ₂ + ಕೆಯ್₁ ]

**ಮುಱಿಗೋಣ್**. (ನಾ). ಕತ್ತರಿಸಿದ ಕೊರಳು : ಮುಱಿಗೋಣ ಮಱಿಯ ಮರೆ . . . ಕರುಳೊಕ್ಕ ಕಱಿತ್ತೆ ಬೇಡರ ಬಗೆಗೆ ಬಂದುಂ ಬಾರದಾಯ್ತು (ರಾಮಾಶ್ವ. ೮೪-೦೭). [ ಮುಱಿ₁ + ಗೋಣ್ ]

**ಮುಱಿತ, ಮುರಿತ₂** (ನಾ). ೧. ಸೋಲು ; ಅಪಜಯ : ಇಱಿತ ಮುಱಿತದೊಳಂತುಟಿರ್ಬಲದ ಸುಭಟರೊಳ್ ಕುಱಿದಱಿಯಲು (ಶಬ್ದ. ೨೭-೦೯); ಚಿಂತೆಯೇತಕ್ಕಿಱಿತ ಮುಱಿತಮಿವು ಸಮರದೊಳಗೆಂತಪ್ಪವರ್ಗಾ ದೊಡಂ ಬರ್ಪುವು (ಶಬ್ದ. ೩೦-೩). **ಮುರಿತ₂** : ೧. ಅಳುಕು ಬಹುದೇಕೆನಗೆ, ಮತ್ತೆ ಭಯಂದಿರಿತ ? ಮತ್ತೆ ಮರಳದೊ, ನಮ್ಮ ದಳಕಿಹುದೊ ಮುರಿತ ? (ಶಾರಸಿ. ೭-೧೪೬). ೨. ಮುರಿದುದು ; ತುಂಡಾದುದು : " ತ್ರುಟಿಃ, ತ್ರೋಟನಂ, ತ್ರೋಟನೀಯಂ, ಈ ೩ ಮುರಿತಂ'' (ಶಾಕಕ. ೨೨೬). [ ಮುಱಿ₁ + — ತ₂ ]

**ಮುಱಿದಲೆ** (ನಾ). ಕಡಿದ ತಲೆ; ಕತ್ತರಿಸಿದ ಶಿರಸ್ಸು : ಕುಱಿಯ ಮಾಂಸದ ಕೋಳಿ ಕೋಣನ ಮುಱಿದಲೆಯ . . . ಕೂಳ ಮುದ್ದೆಗಳ ಅರಿನೃಪಾಲರ ಪಾಳೆಯದೊಳಾಯ್ತಿರುಳು ಮನೆಮನೆಗಳಲಿ ಶಸ್ತ್ರೋತ್ಕರ ಸಮಾರಾಧನೆಯೊಳಿದ್ದುದು ಕೂಡೆ ನೃಪಕಟಕ (ಕುವ್ಯಾದ್ರೋ. ಶಂ. ೨೬೩); ಕುಱಿಯ ಹಣದದ ಕೋಳಿ ಕೋಣನ ಮುಱಿದಲೆಯ . . . ಹೊಱಗೆ ಬಡಿಸಿದ ಭೂತಬಲಿ ಬೊಬ್ಬಿಱಿತದೊಡನುಬ್ಬೇಳ್ವ ಲಗ್ಗೆಯ ಹಱಿಗಳಬ್ಬರ ಮಾಯ್ತು (ಕುವ್ಯಾಕ. ೬-೬). [ ಮುಱಿ₁ + ತಲೆ₁ ]

**ಮುಱಿನೂಕು** (ಕ್ರಿ). ಸಾಯುವಂತೆ ತಳ್ಳು : ಈಯೊಳ್ಳೆಗನನೆಡಕಿಕ್ಕಿ ಹಾಯಿಸು ಕಲ್ಲೆಯಲಿ ಮುಱಿನೂಕು (ಕುವ್ಯಾದ್ರೋ. ೨-೩೪).

[ ಮುಱಿ₁ + ನೂಕು₁ ( < ನೂಂಕು₁) ]

**ಮುಱಿಯಿಸು, ಮುರಿಸು₁, ಮುಱಿಸು** (ಕ್ರಿ). ೧. ಕಡಿಸು ; ಕತ್ತರಿಸು : ಓರೊರ್ಮೆ ವಿರಹದ ತೊಡಿಗೆಗಳ್ಗೆಳ್ಳ ಮೃಣಾಳಂಗಳೆಲ್ಲಮಂ ಮುಱಿಯಿಸದಿರೆಂದು ಕಯ್ಮುಗಿವಂತೆ ಮುಗಿವ ಬಯಲ್ದಾವರೆಗಳೊಳರ್ಪಳ್ (ಕಾದಂಸಾ. ೩೩೪). **ಮುರಿಸು₁** : ೨. ಮುರಿಯುವಂತೆ ಮಾಡು ; ತುಂಡಾಗಿಸು : ನಾಜೂಕಾದ ಆಟಿಕೆಗಳನ್ನು ಮಗುವಿನ ಕೈಗೆ ಕೊಟ್ಟು ಮುರಿಸಬಾರದು (ಶಿಪೋ). ೩. ನಾಶಮಾಡು ; ಹಾಳುಗೆಡವು : ಹನ್ನೆರಡುಪರುಷಕ ಕೂಡಿಹಾಕಿದ ಬದುಕ ಮುರಿಸ್ಯಾರ ಮೂರ ಗಳಿಗ್ಯಾಗ (ಜೋಕಗೀ. ೦). ೪. ಹುಂಡಿ ಮೊದಲಾದುವನ್ನು ನಗದು ಹಣವನ್ನಾಗಿ ಮಾರ್ಪಡಿಸು,— ವಿನಿಮಯಮಾಡು : ಬ್ಯಾಂಕು . . . ಮುಚ್ಚುವುದರೊಳಗಾಗಿ ಚೆಕ್ಕ ಮುರಿಸಿ ಹಣ ತನ್ನಿ (ರಕ್ತಗೋ. ೬೬).

೫. ದೊಡ್ಡಮೊತ್ತದ ನೋಟಿಗೆ ಅಥವಾ ನಾಣ್ಯಕ್ಕೆ ಚಿಲ್ಲರೆಯನ್ನು ಮಾಡಿಸು : ಈ ನೂರರ ನೋಟನ್ನು ಮುರಿಸಬೇಕಾಗಿದೆ (ಆಡು). ೬. ಬಂಗಾರ, ಬೆಳ್ಳಿ ಮುಂತಾದ ಲೋಹದ ಒಡವೆಗಳನ್ನು ಕರಗಿಸು.– ಅಳಿಸು : ಒಂದು ಸಲ ಮಾಡಿಸಿದ ಆಭರಣವನ್ನು ಮತ್ತೆ ಮತ್ತೆ ಮುರಿಸುವುದರಿಂದ ತುಂಬಾ ನಷ್ಟವಾಗುತ್ತದೆ (ಆಡು). ೭. ಪದಾರ್ಥಗಳನ್ನು ಹಣಕ್ಕೆ ವಿನಿಮಯಮಾಡು ; ಮಾರು : ಅವನ ತಾಯಿ ತನ್ನ ಮೈಮೇಲಿನ ಚೂರುಚೂರು ವಸ್ತುಗಳನ್ನು ಮುರಿಸಿ, ಬಂದ ಹಣದಿಂದ ವರ್ಷ ಎರಡುವರ್ಷ ಬಡತನದಿಂದ ಕಾಲ ಕಳೆಯುತ್ತ (ಮುಂಬಯಿ. ೬. ೪-೫೦). ಮುಱಿಸು : ೮. ಕೊಲ್ಲಿಸು ; ಸಾಯಿಸು : ದೈತ್ಯಮಾಯುವ ಕೃಷ್ಣನಱಿಯೆನೆಂದೆನಬೇಡವವನ ಮುಱಿಸಬೇಕಾ ಶಿಶುವಿನ ಕಯ್ಯೊಳದಱಿಂದೆ ಕಱುಬರಂದದಿ ನೋಡುತಿರ್ದ (ಮೋಹತ. ೧೧-೨೫). [ ಮುಱಿ$_1$ + — ಇಸು$_3$ ]

**ಮುಱಿಯಿಱಿ** (ಕ್ರಿ). ಸಾಯುವಂತೆ ತಿವಿ : ಮುಱಿಯಿಱಿದಲ್ಲದೆ ಪೊಱಿದೆಸೆಯುವ ಪೆಸರಂ ತಳೆದ ಕೂರಾಳಿಂತೇದಂ (ಕಬ್ಬಿಗ. ೨೪೦).

[ ಮುಱಿ$_1$ + ಇಱಿ$_1$ ]

**ಮುಱಿಯೆಸು** (ಕ್ರಿ). ನಾಶವಾಗುವಂತೆ ಬಾಣದಿಂದ ಹೊಡೆ.– ಪ್ರಹರಿಸು : ಶ್ರುತಾಯುಧಂ . . . ಮುಱಿಯೆಸುತ ಮುಂಕೊಂಡು ಪಾರ್ಥನ ತಱುಬಿದನು (ಕುಮಾರವ್ಯಾ. ೧೧-೧೨) ; ಮೇಲಿಮೇಲೊಡಗವಿವ ಸುಮರಥಜಾಲವನು ಮುಱಿಯೆಚ್ಚು ನಿಮಿಷಕೆ ಧೂಳಿಪಟ ಮಾಡಿದನು ಕರ್ಣನ ಮನ್ನಣೆಯ ಭಟರ (ಕುಮಾವ್ಯಾ. ೧೩-೧೫). [ ಮುಱಿ$_1$ + ಎಸು$_1$ ]

**ಮುಱಿಯೊಡೆ** (ಕ್ರಿ). (ಅಲಂ) ಕ್ಷೋಭೆಗೊಳ್ಳು ; ಅಲ್ಲೋಲಕಲ್ಲೋಲವಾಗು : ಮಥನದಲಿ ಮುಱಿಯೊಡೆದ ಶೈಲವ್ಯಥಿತಸಾಗರದಂತೆ ಬಿರಿದವು ರಥನಿಕರ ಕಾಲಾಳು ಕುದುರೆಗಳೊಂದುನಿಮಿಷದಲಿ (ಕುಮಾರವ್ಯಾ. ೪-೬೦).

[ ಮುಱಿ$_1$ + ಒಡೆ$_1$ ]

**ಮುಱಿಯೊತ್ತು** (ಕ್ರಿ). ೧. ಧ್ವಂಸವಾಗುವಂತೆ ನೂಕು.– ಹಿಮ್ಮೆಟ್ಟಿಸು : ಆ ಖಗರಾಯನಾ ನಖಪಕ್ಷತುಂಡನಿಕಾಯದಲಿ ಮುಂಕೊಂಡು ಮುಱಿಯೊತ್ತಿ [ಪಾಠಾಂ. ದೌಕಿ]ದನು ಬಲುಗಜವ (ಶಿಖಾಗ. ೧೧-೬೦-೪೦) : ಮುತ್ತಿಗೆಯಿಕ್ಕಿದ ತುರುಕಬಲವ ಮುಱಿಯೊತ್ತಿಯೋಡಿಸುವೆನು (ಕಂಠೀ. ೧೨-೬೪). ೨. ಕುಗ್ಗಿಸು ; ಕುಸಿಯುವಂತೆ ಮಾಡು: ಮುಪ್ಪು ಮುಱಿಯೊತ್ತದ ಮುನ್ನ . . . ನಿಮ್ಮ ಪದಮಂ ನೆಱೆ ಪೂಜಿಸವೇಳ್ಕುಂ (ಕಂಠೀ. ೬-೧೪). [ ಮುಱಿ$_1$ + ಒತ್ತು$_1$ ]

**ಮುಱಿಯೊದೆ** (ಕ್ರಿ). (ಅಲಂ) ವಿಮುಖವಾಗಿಸು ; ದಿಕ್ಕುತಪ್ಪಿಸು ; ಹಿಮ್ಮೆಟ್ಟಿಸು : ಇದನು ಹೇಳುವ ಕೇಳುವಾ ಸದುಹೃದಯರುತಕನಾಸನವ ಮುಱಿಯೊದೆದು ಮುದದಿಂದೈದುವರು ನಿತ್ಯಾತ್ಮಶಿವಪದವ (ಶಿಖಾಗ. ೪-೪-೬೨). [ ಮುಱಿ$_1$ + ಒದೆ$_1$ ]

**ಮುಱಿವಡೆ** (ಕ್ರಿ). ೧. ಸೋಲನ್ನು ಹೊಂದು ; ಪರಾಭವಗೊಳ್ಳು : ನೆಯ್ದಿಲೆಗೆ ನೇಸಱಿನ ನೆಮ್ಮಿಗೆಯಾದ ತೆಱನಲಿ ಮುಱಿವಡೆದ ಮಾಯಾಂಗನೆಯ ಮುಖಭಂಗವನೆ ಕಂಡು ಮಱುಗುತಿರ್ದರು ಕೂಡೆ ಕೆಳದಿಯರು (ಶ್ರೀಖಂ. ೬-೬೦) ; ಕಿರೀಟಿಸುತನುಱುಬಿದೊಡೆ ಮುಱಿವಡೆದುರಗಸೇನೆ ಕೇಷಾದ್ದಡೆಗೋಡಿತು (ಕೃಮಿಶಾ. ೨೪-೩೫). ೨. ದಿಕ್ಕಾಪಾಲಾಗು ; ಚೆದರು : ಗಱಿಗೆ ಕಾಲಿಕ್ಕಿದೆಡೆ ಕಂಪಿಸಿತೆರಡುಮೈಯಲಿ ಶೈಲವದ ಕಂಡಿರದೆ ಹಾಯ್ದುವು ಮುಱಿವ[ಪಾಠಾಂ. ಗೆ]ಡೆದು ಮದಕರಿಗಳಗಲದಲಿ (ಕೆಶಿರಾ. ೪-೧೨-೨೩). [ ಮುಱಿ$_2$ + ಪಡೆ$_1$ ]

**ಮುಱಿಸು** ' **ಮುಱಿಯಿಸು** ' ನೋ.

**ಮುಱುಂಕಿಸು** ' ಮು[ಱು]ಕಿಸು ' ನೋ.

**ಮುಱುಂಗು** ' ಮುಱುಕು$_2$ ' ನೋ.

**ಮುಱುಕ$_1$** ' ಮುಱುಕು$_2$ ' ನೋ.

**ಮುಱುಕ$_2$**, ಮುರುಕ$_1$ (ಗು). ೧. ತುಂಡಾದ : ಚೂರಾದ : ಹಱಕುಹೋಳಿಗೆ ಲೇಸು ಮುಱುಕ ಹಪ್ಪಳ ಲೇಸು (ಸರ್ವಜ್ಞ. ೧೧೩೦). **ಮುರುಕ$_1$** : ೨. ಮುರಿದುಹೋದ ; ಭಗ್ನವಾದ : ಆ ಮುರುಕ ಮನೆಯನ್ನು ದುರಸ್ತಿ ಮಾಡಬೇಕು (ಆಡು). (ನಾ). ೩. ಮುರಿಯುವವನು ; ನಾಶಮಾಡುವವನು : 'ಮನೆಮುರುಕ' ಪರಾ.

[ಮುಱುಕು$_3$ (< ಮುಱಿಕು) + — ಅ$_7$]

**ಮುಱುಕಂಬೆಱು** (ಕ್ರಿ). ಚೆಲುವಾಗು; ಸೊಬಗಿನಿಂದ ಕೂಡಿರು : ಪದವಿನ್ಯಾಸಂ ಸಮಾಸಂಗಳಿಂ ಮುಱುಕಂಬೆತ್ತುದೆನಲ್ಕಳಂಕೃತಿಗಳಿಂ ತಳ್ಪೊಯ್ದು ಚಿತ್ರಾರ್ಥದೊಳ್ ಮೆಱೆದಿಂಪಂ ಪಡೆಯಲ್ಕೆ ಪೇಟ್ವಡೆ ವಲಂ ನಾಗಂ ಕಳಾವಲ್ಲಭಂ ನೆಱೆ ಬಲ್ಲಂ (ಕಾವ್ಯಾವ. ೧-೨೨).

[ಮುಱುಕ$_1$ (< ಮುಱುಕು$_2$) + ಪೆಱು$_1$]

**ಮುಱುಕಗಾತಿ** (ನಾ). ಬೆಡಗಿ; ಒನಪುಗಾತಿ : ತನಗೆಱಗಿದ ಪೆಣ್ಣ ನೋಡಿ ಮೊನೆಗಾತಿ ಬಲುಪೋಡಿಗಾತಿ ಮುಱುಕಗಾತಿ ಗೊನೆಹಕಾತಿ ಮಮಾಯೆಂದಾ (ಶರಶ. ೯-೧೩೬). [ಮುಱುಕ$_1$ (< ಮುಱುಕು$_2$) + – ಕಾತಿ$_5$]

**ಮುಱುಕದೋಱು** (ಕ್ರಿ). ಬೆಡಗುಮಾಡು : ಒನಪುದೋರು : ಲಲನೆ ಸುಳಿದಳು ಕುಚದ ಭರದಲಿ ಬಳುಕುತಡಿಗಡಿಗೊಲೆದೊಲೆದು ವೈಮಳಿಯ ಮಯೌಳಿಯ ಮ[ ಮು ]ಱುಕದೋಱುತ ಭೀಮನಿದಿರಿನಲಿ (ಸಂಭಕು೨೨-೧೩).

[ಮುಱುಕ$_1$(< ಮುಱುಕು$_2$) + ತೋಱು]

**ಮುಱುಕಲ್** (ನಾ). (?): ಮುಱುಕಲ್ಲಂ ಬಿದಂಬ ತರಿಸಿ × × × (ಎಕ. II, ೪೪೩; ಸು. ೯೦೦). [ ? ]

**ಮುಱುಕಿಲ್$_1$** (ನಾ). ಕೊಳಕು ; ಅಶುಚಿ : "ಪೊರಡಿಯಶುಚಿಗಳೊಳಂ ಮುಱು [ಪಾಠಾಂ. ಱು]ಕಿಲಕುಂ" (ಶಬ್ದಮಂ. ೧೮೬). 'ಮುಗ್ಗಲು' ಪರಾ.

[ದೇ.೫ ತಮಿ. ಮುಕ್ಕಲ್= ಮುಗ್ಗುನಾತ; ತೆಲು. ಮುಱಿಕಿ]

**ಮುಱುಕಿಲ್$_2$**, ಮುರಕಲಿ, ಮುರಕಿಲ, ಮುರಿಕಿಲು, ಮುರುಕಿಲು, ಮುರ್ಕಲಿ, ಮುರ್ಗಲ್, ಮುರ್ಗಳ (ನಾ). ಒಂದು ಬಗೆಯ ಮರ: "ಭೃವಿ ಭೃಮಿಯೆನಲು ಮುಱುಕಿಲ್" (ಶಬ್ದಮಣಿ. ೩೫-೧೪). **ಮುರಕಲಿ** : ಮರಗಳು : ಹೆಸಪ . . . ಅಂಕೋಲೆ, ಕಪುರಕ, ಮುರಕಲಿ (ಪಮ್ಮಪು. ೨೨೬). **ಮುರಕಿಲ** : " ಮುರಕಿಲಂ ಪೊರಸಿ ದ್ರುಮಂ" (ಕಿಶ. ೯೦). **ಮುರಿಕಿಲು** : " ಗ್ರಂಥಿಫಲಃ — ಮಂಗಾರೆ. ಮುರಿಕಿಲು. ಬೇಳ" (೬೫೦. ೪೬). **ಮುರುಕಿಲು** : "ಪಿತ್ರಪೀಲುಕಃ — ಮುರುಕಿಲುಮರ" (೬೫೦. ೯೬). **ಮುರ್ಕಲಿ**: (ವೃಕ್ಷಶಿ. ೧೪-೨೬೨). **ಮುರ್ಗಲ್** : ಮುರುವನ ಹುಳಿ. ಮುಗಲ್. ಮುರ್ಗಲ್, ಕೋಕಂಮರ (ವೃಕ್ಷಶಿ. ೩೮-೬೫೫). **ಮುರ್ಗಳ** : ಮುರ್ಗಳ . . . ಆಕಾರ ಮಧ್ಯಮ; ಕಟ್ಟಿಗೆ ಲಿಂಬೀಬಣ್ಣದ್ದು (ಕಾಗ. ೪೬). 'ಮೊರಡ$_2$' ಪರಾ.

**ಮುಱುಕಿಸು**, ಮುರಿಕಿಸು, ಮುಱಿಕಿಸು, ಮುಱುಂಕಿಸು (ಕ್ರಿ). ೧. ವಕ್ರಮಾಡು ; ಕೊಂಕಿಸು ; ಸೊಟ್ಟಮಾಡು : ಮನದೊಳಗೆ ನೊಂದಂತೆ ಮೋಱೆಯಂ ಮುಱುಕಿಸುತ ಬಂದು ದೂರದಿ ನಿಂದನು(ಸೋಮಶ. ೧-೩೬); ಅಳವಡಿಪ ಕಲಕೇತವೇಷಂದಳೆದು ಶಿವಭಕ್ತರ ನಿವಾಸಂಗಳಿಗೆ ಗಮನಿಸಿ ತನ್ನ ಮೋಱೆಯನಂತು ಮುಱುಕಿಸುತ (ಬಸವಪು. ೨೯-೫); ಭಾರತಿಯ ಕಂಡು ಮೊಗವಂ ಮುಱುಕಿಸುತ್ತೆ . . . ನಗಿಸುತೊಪ್ಪಿರ್ದನಾ ಭೃಂಗಿ (ಸಿದ್ಧೇಶಪು. ೧-೪೫). ೨. ನುಲಿ ; ತಿರಿಚು ; ತಿರುಗಿಸು : ಕೊಂಕಿ ನಡೆದು ಕಯ್ಯಂ ಮುಱುಕಿಸುತಂ ಟೊಂಕಮನುಱುಗಿಸಿ ನಿಂದೇಡಿಸುತಂ (ಶ್ರೀಂಗರ. ಹ. ೪೬೨-೨೬); ೧ ವರುಷದ ಕೂಸಂ ನಂದಿನಿಯೆಂಬ ದೇವತೆ ಒಡಿದೊಡಾ ಕೂಸು ನೆಲದಲ್ಲಿ ಕವಿಚಿ ಬೀಳುಗುಂ ಕೈಯನೂಱುಗುಂ ಮುಱುಕಿಸುಗುಂ ಕಾಲನಾಡಿಸುಗುಂ (ಬಾಲಗ್ರ. ೧೩೦-೪). ೩. ನುಣುಚಿಕೊಳ್ಳು; ತಪ್ಪಿಸಿಕೊಳ್ಳು:

ಮುಱುಕಿಸುವ ಪವನಜನ ನೆತ್ತಿಯನೆಱಗಿದನು (ಕುವ್ಯಾಕ. ೨-೩೨). ೪. ಹಿಂದು ಮುಂದು ನೋಡು; ಹಿಂದೆಗೆ : ಹೊಱವಡಲಿ ಸುದತಿಯರು ಸುಮ್ಮನೆ ಮುಱುಕಿಸಲು ಹಿಡಿತರಿಸಿ ಬಾಯನು ಹೞಿಯೆ ಹೊಯ್ಯುವೆ (ಕೌಶಿರಾ. ೯-೨೪). ೫. ಬೀಗು ; ಗರ್ವಿಸು ; ಸೊಕ್ಕು : ಮುಱುಕಿಸುವ ಮನ್ನೆಯರ ನಾಳವ ಮುಱಿವೆ (ಕುವ್ಯಾಕ. ೨-೨೭). ೬. ಏಡಿಸು; ಅಪಹಾಸ್ಯ ಮಾಡು: ಎತ್ತೆ ಮುಸುಡಂ ಮುಱುಕಿಸುತ ಕೆಲವೃತ್ತ ಕೇಕರಿಸುತ (ಏಕಥ. ೩೮-೦೭): ಮೂದಲೆಗೆ ಮುಱುಕಿಸುವ ಬುದ್ಧಿ ವಂಚಿಪ ಲಾಗು . . . ಮೆಱೆ ದೆಸೆವಮರಾಸುರರ ಘಟ್ಟಿಸೊಳು (ತೊಪು. ೨೫-೧೦). ೭. ಒನಪುಮಾಡು: ಒಯ್ಯಾರಮಾಡು : ಆ ಸತಿ ಮುಕುಂದಂಗೆಂದಳೊಯ್ಯನೆ ನಿಂದು ಮುಱುಕಿಸುತ (ಶಿಭಾಗ. ೧೦-೨೭-೪೦); ಕಂಬವನೊಱಗಿ ಮುಱುಕಿಪಳು ಹಾವರದ ಬೊಂಬೆ ಕಾಣಯ್ಯ (ಸರ್ವಜ್ಞ. ೧೬೩೭). ಮುಱಿಕಿಸು: ೨. ಕಾಡಿನ ಮೞೆಯೊಳಗೆ ಓಡುತ ಘನಕೋರೆದಾಡೆಯು ಮುಱಿಕಿಸಿ (ಹವಾಶ. ೧೬). ಮುಱಿಕಿಸು : ೫. ಮುಱಿಕಿಸುವ ಧರ್ಮ ಮೆಂದೊಡೆ ಗುಱುಗುಱಿಸುವ . . . ಕಿಸುಗುಳಿಯರನಱೆಪೊಡೆ ಪೋಲಿಪುದೆ ಧರ್ಮರತ್ನಾಕರೆಯಂ (ರವರ್ಮಾವ್ಯ. ೧೦-೭೬). ಮುಱುಂಕಿಸು : ೧. ಮುಸುಡ ಮುಱುಂಕಿಸಿ ಮುದ್ದೆಗೊಳ್ಳೆಂದಾ ಹಸಿದು ಕೋಪದೊಳು ನಿಂದಿರ್ದ ಅಸುರನಿದಿರುನಡೆವಣಕವಾಡುವನು (ನೇಮಿಸಂ. ೨೩-೦೩೪).

[ಮುಱುಕು$_2$ + — ಇಸು]

**ಮುಱುಕು$_1$**, ಮುರುಕು$_1$, ಮೊರ್ಕು, ಮೊಱಿಕು$_1$ (ಕ್ರಿ). ೧. ಮುಖವನ್ನು ಸೊಟ್ಟಗೆ ಮಾಡು, — ವಕ್ರಗೊಳಿಸು : "ಮುಱುಕು—ಮುಖವಿಕಾರೇ" (ಶಮಂದ). **ಮುರುಕು$_1$**: ೧. ಆ ಕನ್ನಡಿಯ ರಂಗದೊಳ್ ಹೌವ್ವನೆ ಮೊಗಂ ದೋರಿ ಮುರುಕುತ್ತುಂ ಕೊಕ್ಕರಿಸುತ್ತುಂ ಮರುಗಿಪೆನ್ನವತೆ (ಸಂಸಕ. ೨೨-೧); (ಮುರುಕಿ) ನೀವೂ ಅಮ್ಮಯ್ಯನವರಂತೆಯೋ—ವಿಚಿತ್ರ ಅಣ್ಣಾಜಿ (ಕಟ್ಟಿಶ. ೨೬-೨೩). ೨. ವಿರೋಧಿಸು; ಎದುರುಬೀಳು: ಕಾಲಸುಮೆನಗೆ ಮುರುಕ ನೆನೆ ಮತ್ತಿನವರೇಗೈವರು (ರಂಕ. ೨-೭೦). **ಮೊರ್ಕು** : ೩. ಬೀಗು; ಉಬ್ಬು: ಮೈಸೂರ ದೇಶಿಯರುಂ . . . ಅವಾಗಳುಮುತ್ಸುಕರ್ವಿಹರಿ ಪರ್ಸಂದಳ್ಕರಿಂ ಮೊರ್ಕುತಂ (ಪ್ರಸೂಪು. ೩-೨೩). **ಮೊಱಿಕು$_1$**: ೨. ಕಡಲ ದಾಂಟಿಯೆ ಮೊಱಿಕಿದಸುರೆಯ ಕೊಂದು ಲಂಕೆಯ ಪೊಕ್ಕ ಕಪಿರುದ್ರ (ಕೌಶಿರಾ. ೯ ಸೂತಸಾಹಿತ್ಯ). ೪. ತಿರುಗಿಸು; ಹೊರಳಿಸು : "ಮೊಱಿ(ರ)ಕು ದರ್ಪ(ಘೂ)ರ್ಣನೇ" (ಶಮಂದ. ೬). ೫. ಆರ್ಭಟಿಸು ; ಪೊರೆ : ಮೇಳಿಯ ಹೆಬ್ಬುಲಿಯಂತೆ ಪೊಱಕುತ (ಕೌಶಿರಾ. ೨೯-೨೪).

[ದೇ.॥ ತಮಿ. ಮುಱುಕು, ಮುಱುಕ್ಕು; ಮಲ. ಮುಱುಕು; ತೆಲು. ಮುರಕಟಿಂಚು; ಕೋತ. ತೊದ. ಮುರ್ಕ್]

**ಮುಱುಕು$_2$**, ಮುಕ್ಕು$_3$, ಮುರುಕ$_2$, ಮುರುಕು$_2$, ಮುರುಹು$_4$, ಮುಱುಂಗು, ಮುಱುಕ$_1$, ಮುಱುಗ, ಮುಱುವು, ಮುಱುಹು, ಮೊಱಿಕು$_2$ (ನಾ). ೧. ಡೊಂಕು; ವಕ್ರತೆ: ಸುಳಿದಳು ಸರಸಿರುಹಮುಖಿ ಬೊಬ್ಬಳು . . . ಮುಱುಕವ ಮಿಂಚಿನಂದದಲಿ (ಶಿಭಾಗ. ೬-೯-೧೦). 'ಮುಱುಕಿಸು' ನೋಡಿ. ೨. ಬಿಂಕ; ಬಿನ್ನಾಣ: ಬೆಡಗು : ಮುಱುಕು ಹೆಣ್ಣಿಗೆ ಲೇಸು (ಸರ್ವಜ್ಞ. ೧೧೩೦). ೩. ಸೊಕ್ಕು; ಗರ್ವ : ಈ ತೆಱದ ಮೆಱೆವ ಮಿಱಿಪಿಗರ ಮುಱುಕುಮಿಗಾ [ಪಾಠಂ. ಕಮಾ] ದೊರೆಯ ಭರದ ಜವ್ವನಿಗೆಯನೆಮ್ಮ ಕೆಯ್ಮಾರಲಿತ್ತಪ್ಪುದೆ ಪಿರಿದುಪೆಂಪು ಮುಱುಗಿ (ಪರ್ಗಪು. ೯-೪೩ ಪ). **ಮುಕ್ಕು$_3$**: ೩. "ಮುಕ್ಕೆನಲ್ ಗರ್ವಮೆನಿಸಿರ್ಕು" (ಕಬ್ಬಿಕ. ೭೩). **ಮುರುಕ$_2$** : ೨. ಗುರುಹಿರಿಯಾರ ನಿಂದಿಪಾನು ಸತಿ ಮುರುಕಕ್ಕೆ ಪಲ್ಲ ತೆರವನು (ತದಾಪ. ೩೨-೫); 'ಗಂಡಿಗೆ' ಸೀಸೆ ಮುಕ್ಕುವಾಗ ಗಂಗೆ ಮಾಡಿದ ಮುರುಕ ಎಷ್ಟು! (ಸುಪಶಂ. ೩೦). ೩. ನಾನು ಹೋಗಿ ಬಾಲಕರ ಮುರುಕವನ್ನು ಬಿಡಿಸಿ ಕುದುರೆಯನ್ನು ತರುವೆ (ಬಿಪಾಲ. ೨೦೭). ೪. ಚಮತ್ಕಾರ; ಚಾತುರ್ಯ: ಕೌಶಲ: ಒಮ್ಮೊಮ್ಮೆ ಉತ್ಸಾಹದ ಅತಿರೇಕದಲ್ಲಿ ಇಲ್ಲವೆ ಮಾತಿನ ಮುರುಕದಲ್ಲಿ ಕುಮಾರವ್ಯಾಸನ ವ್ಯಕ್ತಿತ್ವದಲ್ಲಿ ವಿಸಂಗತಿ ತೋರಿದರೆ ಅಚ್ಚರಿಯಲ್ಲ (ಕಗಾತ. ೨೭೨). **ಮುರುಕು$_2$** : ೨. ಎಷ್ಟಿದ್ದರೂ ಹೆಂಗಸರು! ಹಾಡು ಹೇಳೆಂದಾಗ ಕೊಂಚವಾದರೂ ಮುರುಕು ಮಾಡದೆ ಹಾಡುವುದು ಕಷ್ಟ (ಅಂಹೂ. ೯೯): ಮುರುಕು ಇಲ್ಲದ ಹೆಂಗಸಿಲ್ಲ, ಸುರುಕು ಇಲ್ಲದ ಊಟವಿಲ್ಲ (ಗಾದೆ). ೩. ತಪ್ಪಡು ತಿಂದರೂ ಮುರುಕು ಘನ (ಗಾದೆ); ತಿರುಕನಿಗೆ ಮುರುಕು ಇದ್ದಾಗ್ಯೂ ತಿರಿದುಂಬುವುದು ತಪ್ಪದು (ಗಾದೆ). ೫. ನಟನೆ ; ಸೋಗು : ಮುದಿಸೂಳೆಗೊಬ್ಬ ಎಳೆಸೂಳೆ ಕಟ್ಟುಕಿದಳು. ಸಾಕಮ್ಮಾ ಮುರುಕು ಒಯ್ಯಾರ (ಅರಳು. ೨೯೨-೨): ಗಂಡಿಗೆ ಹೆಣ್ಣಿನ ಬಣ್ಣ. . . ವೈಯಾರ, ಮುರುಕು, ಯಮುಕ, ಬುಳ್ಳಿತನ ಮೊದಲಾದುವುಗಳೇ ಮನಸ್ಸನ್ನು ಸೋಲಿಸುವುವು (ಕನ್ನಜಾ. ೦೦೫). ೬. ಅಕ್ಕಿ, ಕಡಲೆ ಮತ್ತು ಉದ್ದಿನ ಹಿಟ್ಟಿಗೆ ಉಪ್ಪು, ಕಾರ ಮುಂತಾದುವುಗಳನ್ನು ಬೆರಸಿ ಕಲಸಿ ಕರಿದು ಮಾಡುವ ಒಂದು ಬಗೆಯ ಚಕ್ರಾಕಾರವಾದ ತಿಂಡಿ; ಚಕ್ಕುಲಿ : ಮುರಮುರ ಮಾಡಿಟ್ಟಿರುವ ಮುರುಕನ್ನು ಬಿಸಿ ಮಾಡು ವುದೆಂದರೇನು (ಹಸುಹೊ. ೨೬೦). **ಮುರುಹು$_4$** : ೭. ಕುಟಿಲತೆ; ಕುಹಕ; ವಂಚನೆ : ಕವಡಿನ ನುಡಿಯ ಕಡಹಿನ ಮುರುಹುಗಳ ನಿರ್ಮೋಹ ನೋಟದ ಹೊರಿಗೆವಾಳರು ತೋರಿದರು ಬಿನ್ನಾಣದೆಸುಗೆಗಳ (ಅಂಬಿಶಾ. ೪೬-೭೯). ೮. ಅಬ್ಬರ ; ಜೋರು ; ರಭಸ : ಅದರ ದನಿಯೂ ಹನುಮಿಸುವ ಮುರುಹೂ ಸಲ್ಲಕ್ಷಣವನ್ನು ಸಾರುವುವು (ಶಿಟ್ಟಿಶ. ೦೬೦-೪). **ಮುಱುಂಗು** : ೬. ಬಿಗುಳಿಯು ಕೆಟುಳ್ಳ ಮುದ್ದೆಯು ತಱಗು ಮುಱುಂಗು ಲಡ್ಡುಗೆಯು (ದೇವಾಂಕ. ೫-೨೨೫). **ಮುಱುಕ$_1$** : ೧. ಕೆಮ್ಮುಗಿಲ ತೆಳ್ಪುರೆಯ ಮಱೆಯೊಳ್ ಮಿಱುಪ ಸಂಜೆವೆಱೆಯ ಮುಱುಕಮಂ ಮೆಱೆದುಮತಿಕುಟಿಲಕಿಂಶುಕಮುಕುಳಮಂಜರಿಯನೆಱನಿಯುಸಿ ರಂಜಿಸುವ ನಿಶಿತಖರನಖರಮಂಜರಿಗಳೊಳಂ (ಪರ್ಗಪು. ೧೦-೫ ಪ). ೨. ಮುಱುಕದ ಮೆಲ್ಪಿನ ಭಂಗಿಯ ನೆಱವಿನೊಳವೆ ಮಿಗಿಲವರ್ಕಮೆನೆ ಭರತನ ಕಣ್ಗೆ ಬಿಕಮನೆ ಪಡೆದು ಚೆಲ್ವಿಂ ಮಱಸಿದುವುದ್ಯಾನಲತೆಗಳುಂ ವನಲತೆಗಳ್ (ಆದಿಪು. ೧೧-೯೫): ಹಾವದ ಭಾವದ ಮುಱುಕದ. . . ಚೆನ್ನೆಯರಂ ತಂದಾ ವಿಭುಗೆ ತೆಱಿ (ಭುವ್ಯಾಸ್ತ್ರ. ೪-೪೬); ನೆಱಗನಮರಿಸುತೊಯ್ಯನೊಯ್ಯನೆ ಮುಱುಕ ಮಿಗೆ ಕಾಣಿಸುತ ಬಂದಳು ರಾಮನಿದ್ದೆಡೆಗೆ (ತೊರರಾ. ೩-೪-೬): ಮುಱುಕ ಮುನಿಸು. . . ಏಡಿಯುವನೆಲ್ಲಿ ಕಲಿತಳೆಂದು ಬೆಱಗಾಗಿ ತಲೆ ದೂಗುತಿಪ್ಪ (ಶರತ. ೯-೧೧೪). ೭. ಅಱಿಯರೇ ಸಮವರ್ತಿದೂತನ ಮುಱುಕವನು ನೀವೇಕೆ ನಿಮ್ಮನು ಮಱೆದಿರೆ (ಕುವ್ಯಾಕ. ೦೪-೯೪). ೮. ಮೆಱೆದುದಿದಿರಲಿ ನಿಖಿಳ ನದಿಗಳ ಮುಱುಕವನು ಮುಸುಳಿಸುವ ಮುಸಕದ ನಿಱಿಸಿನಲಿ. . . ಗೋದಾವರಿ (ತೊರರಾ. ೩-೦-೪೭). ೯. ಅಂದ; ಸೊಬಗು: ಮಧುರಕಟಾಕ್ಷವೀಕ್ಷಣದ ಮಾರನಯ್ಯನ ಮುಱುಕವೆನ್ನನು ಮಾಱುಗೊಳಲೀ ಲೋಕಗತಿಯನದಾರು ಬಲ್ಲರು (ಶಿಭಾಗ. ೧೦-೩೦-೨೦). ೧೦. ವಿಕಾರ ವಾದ ಬದಲಾವಣೆ,— ಮಾರ್ಪಾಟು : ನುಡಿ ತಡವಪ್ಪುದೊಂದು ಮೊಗ ದೊಳ್ ಮುಱುಕಂ ದೊರೆಕೊಳ್ವುದೊಂದು . . . ಕಳ್ಗುಡಿದವರಂದಂ (ಶಂಕಶಾ. ೨-೪೯). ೧೧. ಹೆಮ್ಮೆ; ಅಭಿಮಾನ : ಸ್ವಾಮಿಕಾರ್ಯದ ಹೊಱೆಗೆಯುಳ್ಳ ಸವಾಜು ಬಿರುದಿನ ಮುಱುಕವುಳ್ಳ ಭಟಾಳಿ ನಿಲುವುದು ತಡೆವುದರಿಭಟರ (ಕುವ್ಯಾಕ. ೨೨-೨೭). ೧೨. ಕೆಚ್ಚು ; ಪೌರುಷ : ಬೞಿ ತನಗ್ಗದ ಮಾಗಧೇಂದ್ರನ ಮುಱಿದ ಮುಱುಕಕೆ ಭೀಮನು (ಕುವ್ಯಾಕ. ೧೦-೨೨): ಉಱುವ ಬಾಲವ ಬೆಳಸಿ ದಾರಿಯ ತೆಱಹುಗೊಡದೆಡೆ ಯೊಡ್ಡಿ ಮನುಜನ ಮುಱುಕವನು ತಾ ಕಾಂಬೆನು (ಕುವ್ಯಾಅ. ಹಿಂದ. ೧೦-೦೪). ೧೩. ಹೆಚ್ಚಳ; ಆಧಿಕ್ಯ : ಕಣ್ಗೆಸಮರನೇಱಿಸಿಂ ಮುಱುಕದಿಂ. ಬೞಿ

ದೊಪ್ಪುವ ಕಬ್ಬುಗ್ಗದೋಂಟದಿಂ. . . ಒಪ್ಪುಗುಂ (ಕಇ. I, ೩೦-೭; 1252). ೧೪. ಗತಿ; ಚಲನೆ : ಮುಱುಕವ ಬಲಿದು ವಾಘೆಯನೆತ್ತಿ ಮಡಸನ್ನೆಯರಿಸುತ ವಿಭು ನಡೆಸಿದನು ಕುಱುವಜ್ಜೆಗಳ ಘಣಘಣನಿಟ್ಟು ಬೇಱೊಂದು ಮುಱುಕದಿ ನಡೆದುದಾ ತುರಗ (ಕರಪ. ೨೯-೩೩). ೧೫. ಪ್ರೀತಿ : ಒಲವು: ಮುಱುಕದೊಳಗೆ ಮೈಯೊಡೆವಂತೆಯುಮರ್ದಪ್ಪಿ (ಜ್ಞಾಪಪ. ೩-೮೯): ಹಣವ ಕಂಡರೆ ಮುಱುಕ ಹೆಣನ ಕಂಡರೆ ಮುಱುಕ (ಸರ್ವಜ್ಞ. ೧೯೩೯). ೧೬. ನಿಮಿರಿರುವಿಕೆ; ಸೆಟೆದಿರುವಿಕೆ : ಬಿಟ್ಟ ಕಣ್ಣುಂ ಬಿಗಿದ ಮೊಗಮುಂ ಮನದ ಮುನಿಸುಂ ಮೆಯ್ಯ ಮುಱುಕಮುಂ (ಅರ್ಧನೇ. ೬-೮೪ ವ). **ಮುಱುಗ :** ೨. ಅಪ್ಸರಸೆಯರು ಸಂಗಡಿಸಿದರು . . . ಸಡಗರದ ಮುಱುಗದಲಿ ಮೆಱೆದರು ಬಳಸಿ ಸುರರಿಪ್ಪುವ (ಚಿತಾಗ. ೭-೩-೭). **ಮುಱುವು :** ೧೩. ನೃಪಸುದತಿ ವರಗಾಂಧಾರಿ ಮೊದಲಾದಖಿಳ ರಾಣಿಯರು ಮುದದ ಮುಱುವಿನಲಿವರ ತೆಗೆದಪ್ಪಿದರು (ಕುಮ್ಯಾ ಆ. ೬-೮೦). **ಮುಱುಹು :** ೨. ಅನುಚಿತಕಾರಣಂಗಳು ತಡಬಡಂಗಳು ತಪ್ಪುಗಳು ಮುಂಡುಗಳು ಮುಱುಹುಗಳು (ಬಸಪು. ೪೦-೬೨). ೧೦. ದಶವದನ ಕದಪಿನ ಕೈಯಲಾಬೆಯ ವದನವನು ನೋಡಿದನು ನೋಡಿದುದಖಿಳ ಖಳನಿಕರ ನದುಳುನಗೆಗಳ ಮೊಗದ ಮುಱುಹಿನ ವದನದರೆಮುಸುಕುಗಳಲಿದ್ದುದು (ತೊರರಾ. ೩-೭-೦೩). **ಮೊಱಕು₂ :** ೩. ಹರಿದುಹೋಗುವುದಲ್ಲಿಗಾತನ ಮೊಱಕೆ ಮುಱಿಯದಿರವನ (ಕೌಶಿರಾ. ೯-೨).

[< ಮುಱುಕು₁. / ತಮಿ. ಮುಱುಕು, ಮುಱುಕ್ಕು; ತುಳು. ಮುರ್ತ್ರಪ, ಮುರ್ತ್ರಮು; ತೆಲು. ಮುಕರಮು, ಮುರುವು, ಮುರ್ವು]

**ಮುಱುಕು₃** 'ಮುಱಿಕು' ನೋ.

**ಮುಱುಗ** 'ಮುಱುಕು₂' ನೋ.

**ಮುಱುದೊಂಡೆ** (ನಾ). ಒಂದು ಬಗೆಯ ಸಸ್ಯ : ಮು [ಪಾಠಾಂ. ಮ]ಱುದೊಂಡೆಯೆಳೆಯ ಬೇರಂ ಮೇಣ್ ಸೌವೀರದೆ ನಸ್ಯಂಗೆಯ್ಯೆ ನಿವಾರಿಸುಗುಂ ಮೂಗಿನರುಸೆಯುಂ (ಲೋಕೋಪ. ೯-೮೦). [ಮುಱು₂ + ತೊಂಡೆ₁]

**ಮುಱುನುಯ್** (ನಾ). ಒಂದು ಸ್ಥಳದ ಹೆಸರು (?) : ಕನ್ನರಂ ಸಿನ್ದವಾಡಿ ಸಾಯಿರಮುಮನುತ್ತರೋತ್ತರಂ ಸುಖದಿನಾಳೆ ಮುಱುನುಯ್ಯಂ ಜ್ಞಾನಶಿವಭಟಾರರದ್ದೇ[ರ್ವ]ಭೋಗವಮಾಳೆ ಆಯ್ಚಣ ಗಾವುಣ್ಡನಾಗೆ (ಸೌಇಇ. IX-i, ೩೦-೭ ; 931). [ ? ]

**ಮುಱುಮುಟ್ಕಿ ?** (ನಾ). (?) : ನೊಳಮ್ಬಾಣಮಹಾರಾಜರಾ ಮುಱುಮುಟ್ಕಿವಿನ ಕಾಳೆಗದುಳೆ . . . ಇಱಿದಡೆ (ಎಕ. X, ಬಾಗೇಪ. ೬೨-೪ ; ಸು. ೯೦೦ ?). [ ? ]

**ಮುಱುವ ?** (ನಾ). ಒಂದು ಬಗೆಯ ತೆರಿಗೆ ( ? ): ಈ ಧರ್ಮಕೆ ಮುಱುವ ಮಾಱು ಸಲ್ಲದು × ಮುತ್ತುವ ಬತ್ತ ಸಲ್ಲದು (ಸೌಇಇ. IX-ii, ೪೬೪-೩೨ ; 1472). [ ? ]

**ಮುಱುವು** 'ಮುಱುಕು₂' ನೋ.

**ಮುಱುಹು** 'ಮುಱುಕು₂' ನೋ.

**ಮುೞುಂಕು** 'ಮುೞುಂಗು' ನೋ.

**ಮುೞುಂಗಿಸು**, ಮುಣುಗಿಸು, ಮುಳುಂಕಿಸು, ಮುಳುಂಗಿಸು, ಮುಳುಕಿಸು, ಮುಳುಗಿಸು, ಮುೞುಗಿಸು (ಕ್ರಿ). ೧. ನೀರು, ಎಣ್ಣೆ ಮುಂತಾದ ದ್ರವಪದಾರ್ಥಗಳಲ್ಲಿ ಅಡಗುವಂತೆ ಮಾಡು, — ಮುಳುಗುವಂತೆ ಮಾಡು. ೨. ತಲ್ಲೀನಗೊಳಿಸು; ಮಗ್ನವಾಗುವಂತೆ ಮಾಡು : ಬರ್ಬರೋರ್ಬರನಪೂರ್ವತರಕ್ರಿಯೆಯೊಳ್ ಮುೞುಂಗಿಸುತ್ತಮೆ ಬರುತಿರ್ದರಿಂತು ಕುಸುಮಾವಳಿದೇವಿಯುಮಾ ನರೇಂದ್ರನುಂ (ಕುಸುಮಾ. ೦೪-೨). **ಮುಣುಗಿಸು :** ೧. ಭಕ್ತಂ ನಂದಂ ನಿಂದಿರೆ . . . ಗಿರಿಜೇಶಂ ಕೊಂಡದೊಳಗೆ ಮುಣುಗಿಸುವುದೆನುತ್ತಂ ಕೊಂಡೆಮ್ಮಲ್ಲಿಗೆ ಬಪ್ಪುದೆನುತ್ತಂ (ತಿರುಪಾ. ದೇ. ೨೨೬-೩೩೫) ; ಘೋರಕರ್ಮಾಶ್ರಯದ ಪಾರಾವಾರದೊಳು ಮುಣು[ಪಾಠಾಂ. ಣುಳು]ಗಿಸುವೆನೆಂಬ ವಿಚಾರವಿಂತಿದು ನಿನಗೆ ಧರ್ಮವೆ (ಬಸಪು. ೩-೪೯). **ಮುಳುಂಕಿಸು :** ೧. ಗಂಡಿಗಂ ತಾಪಸನವರನೊಡಗೊಂಡು ಬಂದತಿಪೂತಜಲದಲಿ ದಂಡಮಂ ಪಿಡಿಯಿಸಿ ಮುಳ್ಳುಂಕಿಸಲು (ಬಸಪು. ೨೭-೩೫). **ಮುಳುಂಗಿಸು :** ೧. ತಿರುನಾಳ್ವೋವರನೊಡಗೊಂಡೊಲವಿಂ ಹರುಷಂಗೊಂಡಾ ಕೊಂಡದೊಳೊಲವಿಂ . . . ತಂದು ಮುಳುಂಗಿಸಿದಂ ನಂದೀಶಂ (ತಿರುಪಾ. ದೇ. ೨೨೬-೩೪೯) ; ಕೊಂಡಾಡುವವಿಳದೇವವ್ರಜವನಾಕ್ಷಣಂ ಖಂಡಪರಶು ಕೃಪಾಬ್ಧಿಯೊಳ್ ಮುಳುಂಗಿಸಿ (ಶಬಸ್ಥ. ೦೬-೦೯). **ಮುಳುಕಿಸು :** ೩. ನಾಟುವಂತೆ ಮಾಡು ; ಒಳಹೊಗಿಸು : ರಕ್ಕಸರಾಯ ಬಲರಾಮನೆದೆಯೊಳು ಮುಳುಕಿಸಿದನು ಕೂರ್ಗಣೆಯ (ಮೋಹತ. ೪೬-೩೩). ೪. ಇಲ್ಲವಾಗಿಸು ; ಕಾಣದಂತೆ ಮಾಡು ; ಮರೆಮಾಚು : ತೀಕ್ಷ್ಣ ಸಂಕಟದಿಂದ ಏರ್ಪಟ್ಟ ಹೃದಯಮಣ್ಡಲದ ನೆತ್ತರ್ಗಾಯಗಳನ್ನು ಮುಳುಕಿಸಿ ಗುಣಮಾಗಿಸಿಕೊಂಡು ನರಕಕ್ಕೆ ದುಢುಮ್ಮನೆ ಧುಮ್ಮಿಕ್ಕಿಬಿಡೋಣ (ಚಿಟ್ಟಿಅ. ೯೭-೦೬). **ಮುಳುಗಿಸು :** ೧. ಭಂಗಿಯೊಳರಾತಿಬಳಚತು[ರಂಗ]ವಮುಲ್ಲಸಿತನಿಶಿತ[ವರ]ಧಾರಾಸಂಗಮಜಲದೊಳ್ ಮುಳುಗಿಸುವಂಗಂ ಕೊಟ್ಟಗನುದಗ್ರನುಗ್ರಾಜಿಗಳೊಳ್ (ಸೌಇಇ. XI-i, ೪೦-೩೪ ; 969) ; ಪ್ರಳಯದಲಿ . . . ಸಕಲಜಲಧಿಗಳೇಕರೂಪದಲಿ ಧರೆಯ ಮುಳುಗಿಸಿ (ಕುಮ್ಯಾ ಆ. ೦೪-೦೯) ; ಈ ಭವಸಾಗರದಿ ಮುಳುಗಿಸದೆ ರಕ್ಷಿಸು (ಹಂಪಾ. ೨೭) ; ವೆಂಕಮ್ಮನು . . . ಕೊಡವನ್ನು ಭಾವಿಯೊಳಗೆ ಬಿಟ್ಟು ಹಗ್ಗವನ್ನು ಹಿಡಿದು ಕೊಡವನ್ನು ಮುಳುಗಿಸುವುದಕ್ಕೆ ಅಲ್ಲಾಡಿಸುತ್ತಿದ್ದರು (ಶಂಗಾಳ್ಯ. ೨೨೨) ೪. ಮುಳುಗಿಸಿದುದಾ ಖಳನ ಮೈಗತ್ತಲೆ ದಿವಾಕರಬಿಂಬವನು (ತೊರರಾ. ೩-೦-೬). ೫. ನೀರಿನಲ್ಲಿಡು ; ನೆನೆಹಾಕು : ವಿಷದ ಕುಂಬಳಕಾಯಂ ತಂದದಂ ಅಸಮಾಚಹುತೀರ್ಥದಲಿ ಮುಳುಗಿಸೆ ವಿಷವೆಂಬುದು ಹೋಗಿ ಸೀಕಾಯಹುದೇ (ಜ್ಞಾಪಸಿಂ. ೨೨-೨೯) ; ಕಟ್ಟಿಗೆಯ ಅಕ್ಷರಗಳನ್ನು ಕೆತ್ತಿಸಿ, ಅವನ್ನು ಒಂದು ತರದ ಜಿಗಟನ್ನ ರಸದೊಳಗೆ ಮುಳುಗಿಸಿ (ಮುಂಬಯಿ. ೪. ೪-೨೦೭). ೬. ತಲೆಯನ್ನು ನೀರಿನಲ್ಲಿ ಅದ್ದಿ ಸ್ನಾನಮಾಡಿಸು : (ಆ). ೭. (ಆಲಂ) ಧ್ವಂಸಗೊಳಿಸು ; ನಾಶಮಾಡು : ಖಾನರು . . . ಚಂದಾಸಾಹೇಬರ ಫೌಜು ಯಾವತ್ತು ಮುಳುಗಿಸಿದರು (ಕಾಶೀಂದ್ರ. ೦೫) ; ಕೆಲವರಿಗೆ ಒಳಿತು ಮಾಡುವದಕ್ಕೋಸ್ಕರ ಕೆಲವರಿಗೆ ಮುಳುಗಿಸಿದಂತೆ ಆದೀತು (ಮುಂಬಯಿ. ೪. ೫-೧೦೨). ೮. (ಹಣ, ಆಸ್ತಿ ಮುಂತಾದುವನ್ನು) ಒಳಹಾಕಿಕೊಳ್ಳು ; ಸೂರೆಹೊಡೆ : ನನ್ನ ಹಣ ಮುಳುಗಿಸುತ್ತಾನಂತೇನು ? ಬ್ರಹ್ಮಲೋಕಕ್ಕೆ ಹೋದರೂ ಬಿಡಲಿಕ್ಕಿಲ್ಲ (ಮುರಮು. ೦೪೦) ; ಕಂಡವರ ಗಂಟನ್ನು ಮುಳುಗಿಸಿ ಆ ಹಣವನ್ನು ದಕ್ಕಿಸಿಕೊಳ್ಳಲು ಸಾಧ್ಯವೇ ? (ಅದೇ). ೯. ಆವರಿಸು ; ಕವಿ : ಮುಸುರು : ಬೊಬ್ಬಿಱಿದುದಾ ಸೇನೆ ನಿಮಿಷಕೆ ಮುಬ್ಬು ಮುಳು[ಪಾಠಾಂ. ಳ]ಗಿಸಿತೀ [ಪಾಠಾಂ. ಮುಸುಂಕಿದುದೀ] ಬಲವನು (ಕುಮ್ಯಾ ಶ. ೨೩-೨೦). **ಮುೞುಗಿಸು :** ೧. ಯಮುನೆಂಬ ಸೋರೆವೊಗಂ ಬಂದು ಮುೞುಗಿಸಲ್ಜನ್ಮಜಳಧಿಯೊಳ್ ದೇಹಬಹಿತ್ರಮದೊಡೆಯೆ ಜೈನಮೆಂಬಾ ಪ್ರಮಾದವಲಗೆಯನೆ ಪಿಡಿಯುದವನಡಿಗಿಱಿಗುಂ (ಸಮುಪ. ೦೩-೬೩). ೭. ಕೊಂಕಣಗರಿವನ ಖಡ್ಗದ ಕಂಕಣಮದೆ ನಮ್ಮನೆಲವೊ ಮುೞುಗಿಸುಗೆನುತಂ ಭೋಂಕಲ್ ಕೆದಱುವಿನಂ ನಿಶ್ಶಂಕಂ ಪರಿಯಿಟ್ಟನಲ್ತೆ ವಿನಯಾದಿತ್ಯಂ (ಶಾಪಮು. ೨೭೨-೦೦೦೭). [ಮುೞುಂಗು + —ಇಸು₂]

**ಮುೞುಂಗು**, ಮುಣುಂಗು, ಮುಣುಗು₁, ಮುಳುಂಕು, ಮುಳುಂಗು, ಮುಳುಕು₁, ಮುಳುಗು₁, ಮುೞುಂಕು, ಮುೞುಕು₁, ಮುೞುಗು, ಮುೞ್ಕು, ಮುೞ್ಗು₁ (ಕ್ರಿ). ೧. ನೀರು ಮುಂತಾದ ದ್ರವ

ಪದಾರ್ಥಗಳಲ್ಲಿ ಅಡಗು : ನೆತ್ತರ ಕಡಲ್ಗಳೊಳ್ ಮುಳಿರ್ದ ಪಲವಿಗೆಗಳ್ ತಲೆದೋಱೆ ಮುಟುಂಗಿದ ರಥಂಗಳುಂ . . . ಪಂದಲೆಗಳುಮಗುರ್ವಂ . . . ರೌದ್ರರಸಂಗಳಂ ಪುದುಂಗೊಳಿಸೆ (ಶಂಶಖ. ೧೧–೧೧೩ ವ) : ಇಂತಿವು ಚಿತ್ರಸುಖಾನುರಾಗಮಂ ಬಗೆಗೊಳಿಸಲ್ಕೆ ಕೂಡುತತಿಸೌಖ್ಯಸುಧಾಂಬುಧಿಯೊಳ್ ಮುಟುಂಗಿದರ್ (ರಕಳು. ೦-೬೪). ೨. ತೋಯು : ನೆನೆ ; ಒದ್ದೆಯಾಗು : ಅಂತು ನೋಡಿ ಬೆವರೊಳ್ ಮುಟುಂಗಿ ನಡುಗುತ್ತುಂ ವಿಷಾದಮನವಲಂಬಿಸಿರ್ಪುದುಂ (ಕಾದಂಅ. ೩೮೮). ೩. ತಲೆಯನ್ನು ನೀರಿನಲ್ಲಿ ಅದ್ದಿ ಸ್ನಾನಮಾಡು, – ಮಿಾಯು : ನೀರೊಳಗೆ ಮುಟುಂಗುವರಂತೆ ಮಹೋಗಂ ಮುಟ್ಟಿಕೊಳ್ಳುತ್ತುಂ (ರಪ್ರಾಕಪ್ರ. ೪–೬೭). ೪. ತಲ್ಲೀನವಾಗು ; ಮಗ್ನವಾಗು : ಚಿಂತೆಯೊಳ್ ಮೂಡಿ ಮುಟುಂಗಿ ತನ್ನ ಮನದನ್ನರೊಳಂ ಮೊದಲಾಗಿ ಕನ್ನೆ ಮಾತಾಡದೆ ಜಾನಿಸುತ್ತಿರಲು (ಕಾದಂಅ. ೩೬೬). ೫. ಕವಿ ; ಆವರಿಸಿಕೊಂಡಿರು : ಅಮೃತಾಸಾರದಿನಾ ಪ್ರದೇಶಮನಿತುಂ ತೀಂಕಾಡಲಲ್ಲಿರ್ದರೆಲ್ಲಮಾದೇನೋ ಕವಿತರ್ಪುದೀಗಳೆನುತುಂ ತಳ್ಪೊಯ್ವ ತಣ್ಪಿಂದಮೆಯ್ದೆ ಮುಟುಂಗುತ್ತಿರಲ್ (ಕಾದಂಅ. ೬೦೦). ೬. (ಅಲಂ) ನಾಶವಾಗು ; ಹಾಳಾಗು ; ಕೆಡು : ನಾಂ ನಿನ್ನನೆ ನೋಡಿ ಶೋಕಮನಡಂಗಿಸಿ ಬಾಟ್ಕೆಯಿ ಲೇಸೆನುತ್ತಮಿರ್ಪನ್ನೆಗಂ ಮಮ್ಮ ನಿನ್ನನೊಡಗೊಂಡು ಮುಟುಂಗುವ ಕಾಲಮಾದುದೋ (ಕಾದಂಪೂ. ೦೮೦). **ಮುಣುಂಗು :** ೧. ವಾಗೀಶ್ವರದೇವರಂ . . . ಸಮುದ್ರದೊಳಗಿಕ್ಕುವುದುಂ . . . ಮುಣುಂಗಲೀಯದೆ ವರುಣಂ ಬಂದಾತು ಕೊಳಲೊಡಂ (ವಾಗೀಶ. ಶೇ. ೨೬೬–೧೧). **ಮುಣುಗು₁ :** ೧. ಅಗ್ನಿಸುತ ಗಜಗಂಧಮಾದನರು ಮುಣುಗಿದರು ರಕುತದಲಿ (ತೊರರಾ. ೬–೩೦–೨೦) ; ಹರಗೋಲು ತಪ್ಪಿ ಕೈಸೋತು ಕಡೆಗೆ ಬರುವ ಮನುಜ ನಡುವೆ ಮುಣುಗುವ ಪರಿಯಂತೆ (ಮೋಕ್ಷಂ. ೭–೦) ; ಮಂಜು ಸುರಿದರೆ ನಂಜನಗೂಡು ಮುಣುಗೀತೇ ? (ಗಾದೆ). ೭. ಕಾಣದಾಗು ; ಮರೆಯಾಗು ; ಅಸ್ತಮಿಸು : ನಾಲ್ಕನೆಯ ಜಾವದಲ್ಲಿ ಪಡುವಣತ್ತ ಮುಖವಾಗಿ ಹೊತ್ತು ಮುಣುಗುವಾಗ ಉದ್ದವಾಗಿ ಹಸುಮಿಸಲು ಗುಡುಗು ಮಿಂಚಿನಿಂದ ಕೂಡಿ ಮಳೆ ಬಹುದು (ಪ್ರಶ್ನಲೀ. ೦೯–೩) ; ಹೊತ್ತು ಮುಣುಗುತ ಬಂತು ಬತ್ತಲೆಯು ಜಗಕೆಲ್ಲ (ಕನ್ನಶಾ. ೨೯೯) ; ಹೊತ್ತು ಮುಣುಗಿತ್ತಾಗ ಕತ್ತಲೆ ಒಳಹೊರಗು (ಸಿದ್ಧಕೃ. ೪–೩೪). **ಮುಳುಂಕು :** ೩. ಕೊಳನ ಜಳಮ್ಮೆಡೆ ಚೆಲ್ವ ಪಾಲ್ಗಡಲಂತೆ ಪೊಱೆಯುಲು ಮುಳುಂಕಿ ನಿಂದಮೃತಮತಿ ಸಾಕ್ಷಾತು ಕಮಲೆ (ಶಾಪಚಂ. ೪–೨೩). ೪. ಕೆಲಬರು ಪೆಱನೊಸಲೊಳು ನೆಲಸುದುಮಂ ಕೆಲಬರು ಮಯನೇಂದೀವರವನಮೊಳು ಮೂಡಿ ಮುಳುಂಕಿದುವಂ . . . ಸಲೆ ಸಮಸಂಗಳನಾಱದೆ ತೆಗೆಯದೆ ನಿಲಲು (ಶಂಮುಚರಾ. ೪–೨೮). **ಮುಳುಂಗು :** ೧. ನಾಡೆ ಮುಳುಂಗಿ ಮೂಡಿದರುಜುಂಬಿ ತುಳುಂಕಿದರಂಬುವಂ (ಹರಿಶ್ಚರ. ೪–೨೭) ; ಜವದಿನುಪ್ಪಕಾಲಪೃಷಂ ತವೆ ಕದಡಿದುದೆನಿಸಿ ಮುಬ್ಬಿಪೆಳಗಂ ತಳೆದೊಪ್ಪುವ ಬಾಂಗೆಱೆಯೊಳ್ ಮಿಂಗಳ್ ತವಕದೊಳೆ ಮುಳುಂಗುವಂತಡಂಗಿದವಾಗಳ್ (ರಾಜಶೇ. ೧೨–೦೨). ೩. ತನುವಿಡಿದ ಜರೆಯನೋವದೆ ತೊಳೆದು ಕಳೆವಂತೆ ಕೊಂಡದೊಳು ಘಳಿಲನೆ ಮುಳುಂಗಿ ನಿಂದಿರ್ದ (ತಿರುಶ. ದೇ. ೨೩–೧೧). ೪. ಕೇಳಲೊಡಂ ಶಿವಿ ಸಭಿಯೊಳಗಾಳದೊಡಂ ತನ್ಮನಂ ಮುಳುಂಗಿದೊಡಂ . . . ಅದು ಸತ್ಯತಿಯೆ? (ಗಿರಿ. ೦–೨೦) ; ಸಂತತಂ ಶಿವಭಕ್ತಿಸಿರಿಯೊಳು ಮುಳುಂಗಿರ್ದ (ಇಹರ. ದೇ. ೨೯–೬). **ಮುಳುಕು₁ :** ೧. ನವರುಧಿರ ಧಾರೆಯೊಳ್ ಮುಳುಕಿದರಂ ಪೊಳೆಕಿದರ್ (ಶಬ್ದ. ೨೬–೦೯) ; ಮೂಡಿ ಮುಳುಕಿ ಮೋಹರಸದೆ (ಶಂಪರಿ. ೧೧–೩೧). ೮. ಮುಚ್ಚಿಹೋಗು: ಹುದುಗಿರು : ತುಂಬಿ ತುಳುಕಾಡಿದಪ್ಪದಯ್ಯನ ಲಂಬಜಠರವಿದೆನುತ ಮಾಣೇನೆಂಬೆನ್ನೆ ನಿಪುಣ್ಮಾಣೆಯಿಂದೆ ತಲೆ ಮುಳುಕ[ಪಾಠಾಂ. ಗ]ಲೆಱೆದ (ಬಸಕೃ. ೩೯–೦೭). **ಮುಳುಗು₁ :** ೧. ಕಾಯದಿದಿರ್ಪಾರ್ತನಾಕಲ್ಪಾನ್ತಂ ದುಃಖಾಬ್ಧಿಯೊಳ್ಮಾಣದೆ ಮುಳುಗುತ್ತ ಮೂಡುತ್ತಮೋರಂತಿರಿಕ್ಕುಂ (ಕೌಶಿ. XI-ii. ೦೩೮–೪೦; 1093) : ನಿರ್ಮಲಂ ಸಾಲ್ಕು ಮೊಲೆ ತೊರೆದು ಕಱೆಯಲ್ಕಿಂತೆ ಬಾಲಚಂದ್ರಂ ಮುಳುಗಿ ತೇಂಕಾಡುತಿರೆ ಕಱೆದು (ಶಂಪೇರ. ದೇ. ೨೯೬–೦೭) ; ಕುಮಾರಕನ . . . ಜಾಹ್ನವಿ ತರಂಗದಿ ನೋಯಲೀಯದೆ ಮುಳುಗಲೀಯದೆ ಬಾಚಿದಳು ತಡಿಗೆ (ಕುಮ್ನಾಕ. ೩–೨೨) ; ಆಗ ಅವನು ಮುಳುಗುತ್ತಾ ತೇಲುತ್ತಾ . . . ಅಯ್ಯೋ ಮುಳುಗಿದೆನು ಎಂದು ದೀನಸ್ವರದಿಂದ ಕೂಗಹತ್ತಿದನು (ಮುಂಬಯಿ. ೪–೩೮). ೩. ಹಲವು ತೀರ್ಥಂಗಳಲಿ ಮುಳುಗಿ ಹೆಬಬಿದರೆ ಫಲವೇನು . . . ಕಾಗೆಯಂತೆ ಮುಳುಗೆ ಮಾಘಸ್ನಾನಫಲವು ಬಾಹೊದೆ (ಪುರಂದ. ೦–೦೮೦–೦) : ತಣ್ಣೀರಲ್ಲಿ ಮುಳುಗಿದರೆ ಶೀತವಾದೀತು. ಬಿಸಿನೀರು ಬೇಡದೆ ಹೋದರೂ ಉಗುರುಬೆಚ್ಚಗೆ ಮಾಡಿ ಮಿಾಯಬಹುದಲ್ಲ (ಪುರಮ. ೬೦). ೪. ಸೌರಾಷ್ಟ್ರ ಸೋಮೇಶ್ವರನ ನಿಜವನಜಾಯದೆ ಮುಳುಗಿದರಲ್ಲಾ ಮಪ್ಪುರದಲ್ಲಿ (ಅದಮ. ೦೪–೩೦); ಭ್ರಾಮಕದೊಳೀ ವಿಷಯಸೌಖ್ಯದ ರಾಮಣೀಯಕದೊಳಗೆ ಮುಳುಗಿ ನಿರಾಮಯನು ಪರ ತತ್ತ್ವಮಯನಚ್ಯುತನು ತಾನಾದ (ಕುಮ್ನಾಕ. ೯–೭) ; ನೀನೇನೋ ಅಗಾಧವಾದ ಯೋಚನೆಯಲ್ಲಿ ಮುಳುಗಿದ್ದೆ (ರಾಮಾನ. ೧೦೭). ೫. ಹಳವಿಗೆಯ ಸೀಗುರಿಯ ಚಮರಾವಳಿಯ ವಿಮಳಚ್ಛತ್ರಪಂಕ್ತಿಯ ವಳಯದಲಿ ನಭ ಮುಳುಗೆ ಮುತ್ತಿತು ಸೇನೆ ರಿಪುಭಟನ (ಕುಮ್ನಾದ್ರೋ. ೩–೧೧). ೭. ಮೆಲ್ಲ ಮೆಲ್ಲನೆ ತರಣಿ ಮುಳುಗಿದಂ ಪಡುಗಡಲೊಳಲ್ಲಿಗಲ್ಲಿಗೆ ಮೂಡಿದುವು ಸಂಜೆದಾರಗೆಗಳು (ಕೈಬಭಾ. ೨೬–೩); ಅಪೂರ್ವನು . . . ಮರಳಿದಾಗ ಹೊತ್ತು ಮುಳುಗುವುದರಲ್ಲಿತ್ತು (ಶಾರತಿ. ೪). ೮. ಉಱೆ ಹಿಮಂ ನೆನೆವ ಮನಮಂ ಮುರುಂಟಿಪುದಯ್ಯೊ ತಱಿಸಲಲು ಮೂಗುವರೆ ಮುಳುಗುಗುಪೆಳೆಮಣಲಯ್ಯೊ (ಶಾನಂತ. ೪–೦೨೮); ಮುನಿಜನಕೆ ಮೈಯಿಕ್ಕಿದನು ಮುಳುಗಿದನಕ್ಷತೌಘದಲಿ (ಕುಮ್ನಾಕ. ೪–೨೯). ೯. ನಾಟು ; ತೂರು; ಒಳಸೇರು : ಅಲಗಿನೊರಸೊರಸಿಲ್ಲ ಕೈ ಮೈಗಳಲಿ ಮುಳುಗಿದ ಬಾಣವಿಲ್ಲ (ಕುಮ್ನಾಶೀ. ೩–೩೩);ಮುಳುಗಿರ್ದಂಬಸುಗಿದನು ಮಸ್ತದ ಮಜಾಕದಲಿ (ತೊರರಾ. ೪–೪–೬೩). ೧೦. (ಅಲಂ) ಸಾಯು; ಮರಣ ಹೊಂದು : ವಿಷಮವಿಷದಲಿ ಕಟ್ಟಿಹಾಯ್ಕಲು ವಿಷಕೆ ಮುಳುಗದೆ ಬೆಸೆದು ನಿಂದನು (ಬಸಕೃ. ೯೯–೩೯) ; ಕೇಡಿಗನು ಕುರುವಂಶಕೆಂದಿಳೆ ಯಾಡುವುದು ತನ್ನೊಬ್ಬನನು ನಾ ಮೂಡಿದೆನು ನೆಱೆ ಮುಳುಗಿದೊಡೆ ಕುಲಕೆಲ್ಲ ಲೇಸು (ಕುಮ್ನಾಶ. ೨೧–೨೯). **ಮುಟುಂಕು :** ೧. "ಮುಟುಕು, ಮುಟುಂಕು–ಜಲ ನಿಮಜ್ಜನೇ" (ಶಮಃ) : ಸುದತೀ ಮತ್ಪತಿ ಕಣ್ಗೊಳಂ ಮನದೊಳಂ ತಾನಿರ್ಪನಿರ್ದಂ ಮುಟುಂಕಿದನಿಲ್ಲಶ್ರುಜಲಂಗಳೊಳ್ ಪುದಿದ ಹೃತ್ಕಾಮಾಗ್ನಿಯಿಂ ಬೆಂದನಿಲ್ಲ (ಕಾವ್ಯಸಾ. ೩೬೭). ೩. ತಿಮಿರಾಘಮವರ್ಣಸ್ಪರ್ಶಮಾ ಪ್ರದೋಷದೊಳೊದರ್ಚೆ ರಜನೀಸತಿ ಚಂದ್ರಮಯೂಖ ಮಹಾಹ್ರದದೊಳಗೆ ಮುಟುಂಕಿದಳಾದಮಂಬರಂಬೆರಸಾಗಳ್ (ಶಂದ್ರಕೃ. ೬–೩೦) ; ಪೊಳ್ತಪೆಳೆವಾಳೆ ಚುಂಬಿಸಿ ಸೈಮುಟುಂಕಿರಲಂಜದಳ್ (ಅನಂಕೃ. ೭–೩೭). ೭. ಕರಂ ಪೆಗಲ ಬಿಣ್ಪಿಂ ಜೋಲ್ವ ಬಾಲಂ ಮುಟುಂ[ಪಾಠಾಂ. ಟಿಂ]ಕಿರೆ . . . ಪೆನೊರ್ಂರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತಾತ್ತ್ಕೀಕರಂ ಸೂಕರಂ (ಶಂದ್ರಕೃ. ೩–೬೦). **ಮುಟುಕು₁ :** ೧. "ಮುಟುಕು, ಮುಟುಂಕು–ಜಲ ನಿಮಜ್ಜನೇ" (ಶಮಃಧಾ); ಅಮೃತಕರನುದಯದೊಳ್ ಬಳೆದಮೃತಾರ್ಣವ ಲಹರಿಯಿಂದ ವೇಳಾವನಮಾಳೆ ಮುಟುಂಕಿದಂತೆ ಬನಮಾ ಸಘುಂದಾಯದ ಶಾಂತರಸದೆ ಮುಟುಕಿದುದರಸಾ (ಅನಂಕೃ. ೩–೩೨). **ಮುಟುಗು :** ೧. ಸಂಸಾರಮೆಂಬ ಸಮುದ್ರದೊಳ್ ಮುಟುಗುತ್ತಿರ್ದನ್ನಂ ಮುಟುಗಲೀಯದೆತ್ತಿಂ (ವಡ್ಡಾರಾ. ೦೩೩–೨೬) ; ಎನಿತು ಪರಿಗ್ರಹದ ತೊಡರ್ಪನಿತೆ ಮನೋದುಃಖಮುಂದಱ ಕುಂದೆನಿತು ಮನಕ್ಕನಿತೆ ಸುಖಮೆಂಬುದಂ ನೆಟ್ಟನೆ ತಿಳಿದಂ

ಜನ್ಮಜಲಧಿಯೊಳ್ ಮುಳುಂಗುವನೇ (ಆದಿಪು. ೩-೬೨); ಜಳದೊಳ್ಮೇಸಿರ್ಪ ಪೊಳ್ತೀಂ ಕೊಳದೊಳೆ ಮುಳುಗಿರ್ದಕ್ಕಟಾ ಕೋಡಸೇಡಿಂಗೊಳಗಾದ್ದೆ (ಗದಾಯು. ೭-೧೩). ೨. ಬೆಮರಿಂ ಮುಳುಗಿದಪೆಂ ಸಂಭ್ರಮದಿಂ ಬಿಟ್ಟಪ್ಪೆನರಸ ಕೈಗುಡು ನೀಂ ಬೇಗಂ (ಶಾದಂಕಾ. ೫೭). ೩. ಕೊಂಡಾಡಿದವಂ ಕೋಟಿಮಜ್ಜ ಫಲಯುತಂ ಮುಳುಗಿದವಂ ಮೋಕ್ಷಾತ್ಮಕಮೆನಲಸಮಮಹಿಮೆಯುಳ ತಳೆದು ಪರಿವ ತುಂಗಭದ್ರಾನದಿ ವಿರಾಜಿಸುತಿರ್ದುದು (ಉದ್ಭಟ. ೩-೭೦ ವ). ೪. "ಮುಳುಗು—ನಿಮಗ್ನೇ" (ಶಮದ). ೭. ವಾರಿಜನಾಥನನಾಥನಾಗಿ ತೊಟ್ಟಗೆ ಮು[ಳುಪಂ]ತೆವೋಲ್ ಮುಳುಗಿದಂ ಕಡುಕೆಯ್ದು ಪರಾಂಬುರಾಶಿಯೊಳ್ (ಶಂಶಪ. ೦೩-೦೦೭); ಪಡುವಣ ಕಡಲೆನಸುಂ ಮಿಸುಗೆ ಮುಳುಗಿದಂ ಬಿಸಜಸಖಂ (ಸುಕುಮಾ. ೪-೨೪). ೯. ಪೊಸತಲರ್ದಂಭೋರುಹದೊಳ್ ಮುಸುಂಬು ಮುಳುಂಗುವಿನಮೆಱಗೆ ಗಂಧಮನಾಘ್ರಾಣಿಸುತುಮಳಿಪಳಿಸು ವಳಿಗಳ ಪಸವೋಡಿದುದಿಲ್ಲ (ಅಜಿಪು. ೭-೭೭). **ಮುಳುಂಕು :** ೧. ಆಪತ್ಪಯೋಧಿಯೊಳಗಶ್ಯಾಪತ್ತಿಂದುಳ್ಕಿ ಮುಳುಂಕಿ ನಮೆವೆಮಗೆ ಶರಣ್ ಪಾಪಹರ ನೀಂವೆಂ (ಶಂಶಪ. ೭-೬೦). ೨. ಪಯಃಪ್ಲವದೊಳಗೆ ಮುಳುಂಕಿ ಪಾರಿಪ್ಲವ ನೇತ್ರೆಯರಮರಕಾಂತೆಯರ್ ಸೊಗಯಿಸಿದರ್ (ಅಜಿಪು. ೪-೬೦). **ಮುಳುಂಗ₁ :** ೧. ಆ ದೋಷದಿಂ ದುಃಖಭಾಗಿಯಿ ನೀಂ ಮುಳುಂಗದೆ ಘೋರಸಂಸರಣ ಪಾರಾವಾರಗಂಭೀರದೊಳ್ (ಸುಕುಮಾ. ೫-೨೪); ಜಲಂಬೊಕ್ಕು ವಿಮಾನದ ದಿಂದೀ ಶತಪತ್ರಾವಾಸದೊಳ್ ಮುಳುಂಗದತೆ ಕುಡುಗುವೋ ಧಾತ್ರಿಯುಂ ಧರ್ಮರಾಜಂ (ಜಗನ್ನಾ. ೦೩-೯).

**ಮುಳುಮುಳುಗು, ಮುಳುಗುಮುಳುಗು, ಮುಳುಮುಳುಂಗು (ದ್ವಿರುಕ್ತಿ) :** ಬೆಳಬೆಳಗಿದುದು ಮುಳುಮುಳುಗಿದುದು (ಶಬ್ದ. ಸು. ೩೯೩ ಕೃ ಹೋ); ಮುಳುಗಿ ಮುಳುಗಿ ಮೂಗ ಹಿಡಿಯಲೇಕೋ (ಬಸವ. ೫೮೯); ಆತ್ಮದಾನಂದದಲಿ ಮುಳುಗಿ ಮುಳುಗಿ ಮಿಂದು ನಾ ಧನ್ಯ (ಅಷೀ. ೯-೫); ಧರ್ಮ ಸೋತಿತು! ಮುಳುಮುಳುಗಿದ ಹಾಗೆ ತೋರಿತ್ತು ಆ ಸತ್ಯ (ಸೂರ್ಯಶಾ. ೪೭-೯). **ಮುಳುಂಕಾಡಿಸು, ಮುಳುಗಾಡಿಸು, ಮುಳುಕ್ಕಾಡಿಸು** = ೧. ನೀರು ಮೊದಲಾದ ದ್ರವಪದಾರ್ಥಗಳಲ್ಲಿ ಅಡಗುವಂತೆ ಮಾಡು ; ಮುಳುಗಿಸು : ಸುಮನಶ್ಶ್ರೀಳವನಾ ಜಿನಾಭಿಷವಣಕ್ಷೀರಾಂಬು ಧಾರಾಳಿಯಿಂದೆ ಮುಳುಂಕಾಡಿಸಿದಂದದಿಂ ಸಕಳಮರ್ತ್ಯಾಮರ್ತ್ಯರಂ ನೋಡೆ ನಾಡೆ ಮುಳುಂಕಾಡಿಸಿದಂ (ಶಾಂತೀಶ. ೦೪-೦೭೫); ಎನ್ನ ಕಣ್ಬೊಣರೆಂಬೀ ಮೀಂಬೊಣರಂ ಲಾವಣ್ಯರಸಾಂಬುಧಿಯೊಳ್ಪೀವಿ ಮೂಡಿ ಮುಳುಕ್ಕಾಡಿಸುವೆ (ಮಲ್ಲಿಪು. ೪-೬೪). ೨. ತನ್ಮಯವಾಗಿಸು; ಮಗ್ನವಾಗುವಂತೆ ಮಾಡು : ಸಕಳಮರ್ತ್ಯಾಮರ್ತ್ಯರಂ ನೋಡೆ ನಾಡೆ ಮುಳುಂಕಾಡಿಸಿದಂ ಸ್ವಕೀಯರಸಪನ್ನ್ಯತ್ಯಾಮೃತಸಾರದಿಂ (ಶಾಂತೀಶ. ೦೪-೦೭೫). ೩. ಮೀಯುವಂತೆ ಮಾಡು; ಸ್ನಾನಮಾಡಿಸು : ಕಾಗೆ ತಾನೊಂದು ಬಂದೆಲ್ಲರಂ ಮುಟ್ಟಿ ಮುಟ್ಟಿ ಮುಳುಗಾಡಿಸುತ್ತುದಯ ತೊಡಗಿ (ಸಿದ್ಧರಾ. ೪-೭೭). **ಮುಳುಂಗಾಡು, ಮುಳುಂಗಾಡು, ಮುಳುಕಾಡು, ಮುಳುಗಾಡು, ಮುಳ್ಕಾಡು, ಮುಳುಗಾಡು, ಮುಳುಕ್ಕಾಡು, ಮುಳುಗ್ಗಾಡು** = ೧. ನೀರು ಮೊದಲಾದ ದ್ರವಪದಾರ್ಥಗಳಲ್ಲಿ ಮುಳುಂಗಿ ಏಳು : ನೋಡಿದಳ್ ತರುಣಿ ಹರುಷಾಶ್ರುರಸದೊಳ್ ಮುಳುಂಗಾಡಿದಳ್ (ಲೀಪು. ೪೭-೭); ನೀಱೆಯೊರ್ವಳ್ . . . ಅಭವನ ಕಾಯಕಾಂತಿರಸದೊಳು ಮೂಡಿ ಮುಳುಕಾಡಿಮೋಲಾಡುತುಂ (ಲಕ್ಷ್ಮೀಶ. ೨-೭೭); ಕಾಳೆಗದ ಮುಖವಾವುದೆಂದಱಿಯದ ಹಂದೆನೃಪಂಗೆ ಒಬ್ಬ ಕ್ಷತ್ರಿಯಕುಮಾರ ಹುಟ್ಟಿ ಕಿಗ್ಗಡಲ ರಕ್ತದ ಹೊನಲಲಿ ಕಡಿದು ಮುಳುಗಾಡುವ ಕೊಳಗುಳವ ಕಂಡು ಪರಿಣಾಮಿಸುವಂತೆ ಆನು ಪರಿಣಾಮಿಸುವೆನಯ್ಯಾ (ಬಸವ. ೭೦೫); ರಕುತದ ಕಡಲೊಳಗೆ ಜೀವದ ಭಟರು ಬಾಯ್ಬಿಡುತ ತೇಕಾಡಿದರು ಮುಂಡದ ಹಿಂಡು ಮುಳುಗಾಡೆ (ಲುಬ್ಧಕಪ್ರೀ. ೫-೦೦); ರಕ್ತಮಂಪೋಲ್ವ ಲಾಕ್ಷಾದ್ರವದೊಳು ಬೊದ್ದಣ ಬಾವಿಯುಂ ತೀವಿದೊಡದಱೊಳ್ ಪೊಕ್ಕು ಮುಳುಗಾಡಿ [ಶಾಕಾಂ. ಓಲಾಡಿ, ಮುಕ್ಕುಳಿಸಿ ನೋಡಿ (ಜಾಪುಂಶು. ೧೪); ಸೂರೆನೆತ್ತರೊಳ್ ತೀವಿ ತನ್ನ ತಾಯ್ಗೆ ನೀರಿಱಿಯಲುಂ ತಂದೆಗೆ ನೀಗರ್ಡಲುಮೆಂದು ಮಾಡಿದ ಸ್ಯಮಂತ ಪಂಚಕಂಗಳೆಂಬ ಪೆಸರ ಮೆರ್ಮಡುಗಳೊಳಗೆ ಮೂಡಿ ಮುಳುಕ್ಕಾಡಿ (ಗದಾಯು. ೭-೨೬ ವ); ವಿಸ್ಮಯಾಂಬುರಾಶಿಯೊಳ್ ಮುಳುಗ್ಗಾಡಿ (ಪುಷ್ಪಪು. ೩-೭೭ ವ). ೨. ಓಲಾಡು ; ನಲಿ : ತುಂಗಭಕ್ತಿಯೆಂಬ ವಾರ್ಧಿಯೊಳ್ಮುಳುಂಗಾಡುತೊಪ್ಪಿದಂ ಲಸತ್ಕುಮಾರ ಪಾಲಘೂರ್ಜರಂ (ಉದ್ಭಟ. ೦೨-೦೦೭); ಕಣಿಕಣಿದಾಡಿ ರುಚಿರಾಭವಾನಂದಲೀಲೆಯೊಳ್ ಮೂಡಿ ಮುಳುಗಾಡುತ (ಶಬ್ದರಾ. ೭-೭೫); ಆಗಳ್ ಸುರತಮಕರಧ್ವಜಸುಮನಸ್ಸುಗಾಮೃತಪಯೋಧಿಯೊಳ್ ಮೂಡಿ ಮುಳುಗಾಡಿದರಂತೆ ಕಿಱಿದು ಬೇಗಮನಿರ್ದು (ಶಂಶಪ. ೫-೦೫ ವ); ಮುದದಿಂ ನಾನಾವಿನೋದಂಗಳನೊದವಿದ ಸಂಪ್ರೀತಿಯಿಂ ಮೂಡಿ ಮುಳುಕ್ಕಾಡಿದನೆತ್ತಂ (ಸುಕುಮಾ. ೯-೪೩); ತನೆ ಪಾಲೆಱೆದ ಶಾಲಿಗಂಪುಗಡಲೊಳು ಮುಳುಗ್ಗಾಡಿ ಮುಳುಗ್ಗಾಡಿ. . . ಪದ್ಮಿನಿಯೊಳ್ತುಂಬಿ ಮಲಂಗಿ ಸೇದೆಗಱಿಗುಂ (ಅಪಂಶು. ೩-೦೦). ೩. ನೀರಾಟವಾಡು; ಜಲಕೇಳಿಯಾಡು : ಕೃತಕಗಿರಿಯನೇಱು . . . ಶತಪತ್ರಾಕರದೊಳು ಮೂಡಿ ಮುಳ್ಕಾಡಿಯತಿವಿನೋದದೊಳಿರ್ದರಲ್ಲಿ (ಚೀಬಸಂ. ೦೨-೪); ವಿವಿಧಕೇಳೀಜಳದ್ರೋಣಿಯೊಳ್ ಮುಳುಕ್ಕಾಡಿ (ಚಿಕ್ಕಪ. ೨-೪೩ ರಗಳೆ). **ಮುಳುಂಗಿ ಪೋಗು, ಮುಣುಗಿ ಹೋಗು, ಮುಳುಗಿಹೋಗು, ಮುಳುಗಿಪೋಗು** = ೧. (ಮೇಲಕ್ಕೆ ಬರದಂತೆ) ನೀರಿನಲ್ಲಿ ಅಡಗಿ ಹೋಗು : ಮಿಂಗುಲಿಗರ್. . . ಸತ್ತಂತಿರ್ದುತ್ಪನ್ನಮತಿಯುಂ ಕಂಡು ಬಲೆಯಿಂ ತೆಗೆದು ನೆಲದೊಳಿರಿಸುವುದುಮದು ಪೊಳೆದು ಜಳದೊಳ್ ಮುಳುಂಗಿ ಪೋದುದು (ಶಂಶಕಂ. ೦೫೯-೯); ವನಿತೆಯಿಲ್ಲದ ಬಾಳ್ವೆ ಎಣಿಕೆಯಿಲ್ಲದಳ ಮನೆವಾರ್ತೆ ಹೊಳೆಯೊಳಗೆ ಮುಣುಗಿಹೋದಂತೆ (ಸರ್ವಜ್ಞ. ೦೭೩೭). ೨. ಕಾಣದಾಗು; ಮರೆಯಾಗು : ಇದರ. . . ವಿವರಗಳು ಕತ್ತಲೆಯಲ್ಲಿ ಮುಳುಗಿ ಹೋಗಿರುವುದು ಭಾರತೀಯ ಇತಿಹಾಸಕ್ಕೆ ತುಂಬಲಾಗದ ಕೊರತೆ (ದ್ರಾಶಿಶಿ. ೩೦). ೩. ನಾಶವಾಗು; ನಿರ್ನಾಮವಾಗು : ಒಂದು ಸಾವಿರ ಹೆಚ್ಚಾದರೆ ನಾವೇನು ಮುಳುಗಿಹೋಗುತ್ತೇವೆಯೋ ? (ಯೋರಕು. ೨೮); ಏನಪ್ಪ, ಮುಳುಗಿ ಪೋದೆವೊ ನಾವ್ ? ಅದೇನ್, ಅಱಿವು (ಅಶ್ವತ್ಥಾ. ೩೨-೬೨೦).

[ದೇ. ॥ ತಮಿ. ಮುಳುಕು, ಮುಳುಕ್ಕು, ಮುಟುಚು, ಮುಕ್ಕು, ಮೂಟ್ಕು; ಮಲ. ಮುಳುಕು, ಮುಙ್ಙು, ಮುಙ್ಙು; ತುಳು. ಮುಳುಗು, ಮುಣುಗು, ಮುರ್ಕು; ಕೊಡ. ಮುಙ್ಙ್, ಮುಕ್; ತೆಲು. ಮುಣುಗು, ಮುನುಗು ಮುನ್ಗು ; ಕೋತ. ಮುಳ್ಕ್ ಮುಳ್ಗ್ ; ತೊದ. ಮುಲ್ಕ್; ಕೋಲಾ. ನಾಯ್ಕಿ. ಮುಜ್ಗ್ ; ಪರ್ಜಿ. ಮುಳ್ಗ್ ; ಗದಬ. ಮುಲ್ಗ್; ಗೊಂಡಿ. ಮುಳುಂಗಾನಾ ; ಮಾಲ್ತೊ. ಮುಲ್ಗೆ, ಮುಲ್ಗ್ರೆ]

**ಮುಳುಕ, ಮುಳುಕ₁, ಮುಳುಗ** (ನಾ). ೧. ನೀರಿನಲ್ಲಿ ಮುಳುಗುವಂಥದು: 'ಮುಂಡುಮುಳುಕ' ಪರಾ. **ಮುಳುಕ₁ :** ೨. "(ಮುತ್ತಿನ ಚಿಪ್ಪಿಗಾಗಿ, ಮುಳುಗಿರುವ ಹಡಗು, ಮೊ.ಗಳ ಪರೀಕ್ಷೆಗಾಗಿ) ನೀರಿನಲ್ಲಿ ಮುಳುಗುವವನು . . . ಮುಳುಕ" (Diver. ೩೦೪೩). ೩. "(ಕೆಲವು ಜಾತಿಯ) ಮುಳುಗುಹಕ್ಕಿ ; ಮುಳುಕ" (—). **ಮುಳುಗ :** (+).

[ಮುಳುಕು₁ (< ಮುಳುಂಗು) + –ಅ₇./ತಮಿ. ಮುಳುವಲ್]

**ಮುಳುಕು₁** 'ಮುಳುಂಗು' ನೋ.

**ಮುಳುಕು₂, ಮುಣುಗು₂, ಮುಳುಕು₂, ಮುಳುಗು₂** (ನಾ). ೧. ನೀರಿನಲ್ಲಿ ಒಳಸೇರುವುದು; ನೀರಿನಲ್ಲಿ ಅಡಗುವುದು: 'ಮುಳುಕುಗೊಳಿಸು' ಪರಾ. **ಮುಣುಗು₂ :** ೨. ತಲೆಯನ್ನು ನೀರಿನಲ್ಲಿ ಮುಳುಗಿಸಿ ಮಾಡುವ ಸ್ನಾನ : ಮಾಣಿಕದ ಮಣಿ ಉರಿಯ ಬೆಳಗಲ್ಲದೆ ಸುಡುವುದಿಲ್ಲ

ಉದಕದ ಮಡು ಮುಣಾಗಲ್ಲದೆ ಕೊಲುವುದಿಲ್ಲ (ಪುಣ್ಯಗಾಥೆ. ೨೭೦-೯೩). ಮುಳುಕು₂. ಮುಳುಗು₂ : ೩. ಮರೆ; ಅಸ್ತಮಾನ : ಉದಯಾಚಲವ ಸೇರಿ ಮೇಲುಕಿಳಗು ಚಂದ್ರನೋಡಲು – ಅಲ್ಲಿ ರವಿಯು ಮುಳುಗು ! (ಕಯುಅ. ೦೬-೯) ; ನಿಮ್ಮ ಕೈಗೆಲ್ಲಾ ಸಿಕ್ಕಾನೆ ಆ ಜ್ಯೋತಿ . . . ಬೆಳಕಿನ ಮುಳುಗು ಬೆಳಕಿನೊಳಗೆ (ತುಂಗಭ. ೦೯೦). ೪. ಕೊನೆ ; ಅಂತ್ಯ ; ಅವಸಾನ : ಹುಟ್ಟು ತೀರಿದರೇನು ? ತೀರಿ ಹುಟ್ಟಿದರೇನು ? ನಿನ್ನವಿರೆ ಮೂಡು ಮುಳುಗು ? (ಕಯುಅ. ೦೦೦-೨) ; ಜೀವದಾಸರೆ ಚಿತ್ರ ; ಅದರೊಡನೆಯುಳಿವುಳಿವು ; ದಿವ್ಯಾನುಭೂತಿಗೂ ಮೂಡು ಮುಳುಗು (ಪುಲಿದೇ. ೫೮-೬).

**ಮುಳುಕುಹಾಕು, ಮುಳುಗುಹಾಕು** = ನೀರಿನಲ್ಲಿ ತಲೆಯು ಮುಳುಗುವ ಹಾಗೆ ಸ್ನಾನಮಾಡು : ನೀರು ಚೆನ್ನಾಗಿದೆ. ತಂಡಿ ಮಾತ್ರ ಹೆಚ್ಚು. ಒಂದು ಮುಳುಕುಹಾಕುವ ತನಕವೂ ಚಳಿ (ಬಟ್ಟಿಶೀ. ೨೩) ; ಬೇಗ ಹೋಗಿ ಒಂದು ಮುಳುಗುಹಾಕಿ ಬರುತ್ತೇನೆ (ಪುರಮ. ೨೨).

[< ಮುಟುಂಗು. / ತಮಿ. ಮುಟುಕ್ಕು ; ತೆಲು. ಮುನುಕ]

**ಮುಟುಕುಗೊಳಿಸು** (ಕ್ರಿ). ನೀರಿನಲ್ಲಿ ಮುಳುಗಿಸು : ತುಳಾಕೋಟಿ ಕಳಾಪಂಗಳೊಳ್ ಹಂಸಮಂಡಳಿಗಳಂ ಮುಟುಕುಗೊಳಿಸೆಯುಂ (ಅಜಿಪು. ೬-೦೦ ವ). [ಮುಟುಕು₂ + ಕೊಳ್₁ +– ಇಸು₃]

**ಮುಟುಗಿಸು** ' ಮುಟುಂಗಿಸು ' ನೋ.

**ಮುಟುಗು** ' ಮುಟುಂಗು ' ನೋ.

**ಮುಟ್ಟಿವಳ್ಳಿ** (ನಾ). ಒಂದು ಸ್ಥಳದ ಹೆಸರು : ಯಿದಕ್ಕೆ ಸಾಕ್ಷಿ ಮುಗುಳಿ ಚಣ್ಣಯೂರ ಪಶ್ಮಾಡಿ ಆಮ್ಮಾಳಿ ಕಿರಿಯಮುಗುಳಿ ಮುಟ್ಟಿವಳ್ಳಿ ನಲ್ಲೂರು ಮೂಗುಣ್ಡ ತೇಗೂರು ಆರ ಮಣ್ಣವರ್ ಬಿಟ್ಟ (ಎಕ. VI. ಕಳಸ. ೯೨-೨೦ ; 959). [ ? + ಪಳ್ಳಿ₁]

**ಮುಟ್ಟು** ' ಮುಟುಂಗು ' ನೋ.

**ಮುಟ್ಗು₁** ' ಮುಟುಂಗು ' ನೋ.

**ಮುಟ್ಗು₂** ' ಮೊಟ್ಗು₁ ' ನೋ.

**ಮುಟ್ಟನೂರ್** (ನಾ). ಒಂದು ಸ್ಥಳದ ಹೆಸರು : ಶ್ರೀಸ್ವಸ್ತಿ ಮುಟ್ಟನೂರ ಕೆಱೆಯುಗಟ್ಟಿಸಿದ ಕರಿಯ ಗಂಗಿಸೆಟ್ಟಿಯ ಮಗಂ ತಿಪ್ಪಣ್ಣಂ (ಎಕ. III (R). ಗುಂಡ್ಲು ಪೇ. ೩೬-೦ ; ?). [ ? + ಊರ್]

**ಮುಟ್ರ** ' ಮುಟ್ರುಗ ' ನೋ.

**ಮುಟ್ರಗಕಾಲ್** (ನಾ). ಒಂದು ಸ್ಥಳದ ಹೆಸರು : ಮುಟ್ರಗಕಾಲ ಪಡುವಣ ಒಱ್ಱೆಯಿಂ ಅನ್ತೆ ಬನ್ದು (ಎಕ. III (R). ಪಿಂಜಪ. ೨೦೪-೨೬; 10ನೆಯ ಶತ). [< ಮುಟ್ರುಗ + ಕಾಲ್₂]

**ಮುಟ್ರಗೆ** (ನಾ). ಒಂದು ಸ್ಥಳದ ಹೆಸರು : ರಾಚೆಯುಂ ಮುಟ್ರಗೆಯ ಕಲ್ನಾಡುವಡೆದು ಕಿಚ್ಚುವೊಕ್ಕು ಕೊಟ್ಟೋನ್ (ಎಕ. V. ಅರಕ. ೫-೯ ; ಸು. 916). [ ? ]

**ಮುಟ್ರದಕೆಱೆ** (ನಾ). ಒಂದು ಸ್ಥಳದ ಹೆಸರು : ನಾರಣಬ್ಬೆಯ ಕಟ್ಟಿಸಿದ ನೈರುತಿಭಾಗದ ಮುಟ್ರದಕೆಱೆಯ ಎರಡುಂಕಡೆಗೋಡಿನ ನಿಪ್ಪರಿಯೆ ಮೇರೆ (ಎಕ. XII. ತಿಪ. ೩೯-೩೫ ; 920). [<ಮುಟ್ರ₇ + ಕೆಱೆ]

**ಮುಟ್ರಿಲೆ** (ನಾ). (?) : ಕಟ್ರಿ, ಮುಟ್ರಿಲೆ, ಕಟ್ರಿಲೆ, ತೊಟ್ರಿ (ಕಮುದ. ೩೬ ಪ್ರಯೋ). [ ? ]

**ಮುಟ್ರುಗ**, ಮುತ್ತ₃, ಮುತ್ತಕ, ಮುತ್ತಗ, ಮುತ್ತಲ, ಮುತ್ತಲು₂, ಮುತ್ತು₄, ಮುತ್ತುಕ, ಮುತ್ತುಗ, ಮುಳ್ತುಗ, ಮುಟ್ರಿ (ನಾ). ಒಂದು ಬಗೆಯ ಮರ ; ಪಲಾಶ : ಕಿಂಶುಕ : "ಮುಟ್ರುಗಮೆಂದು ಪಲಾಶವೃಕ್ಷಂ" (ಕಶಾ. ೫೦-೬೨) ; ಮುಟ್ರಿಯು ಮುಟ್ರುಗದರಳಿಯು ಸಮಿದೆಗಳನಳತೆಯೊಳ್ ಕೊಯ್ದು ರ್ವಿನಾರಿಂ ತಲೆವೊಱೆಗಟ್ಟಿ ತರ್ಪ ವಟುಗಳಿಂದೆಯುಂ . . . ಪುಣ್ಯಾಶ್ರಮಂ ಮನೋಹರಮಾಯ್ತು (ರಾಜಶೇ. ೯೩-೦೫). ಮುತ್ತ₃ : "ಪಲಾಶಾಖ್ಯಂ ಮುತ್ತಂ" (ಪತ್ತಕೋ. ೩೩-೯) ; ಬಿಕ್ಕೆ ತೇಗುರಿ ಮುತ್ತಂ ತಱೆ ತಾಱೆ ಹೊನ್ನೆ ಕುಟಜಂ (ರಾಜ್ಯಶಾ. ೦೦೪೦ ಕಪ್ರ) ; ಆತುಕೂರಿಂಗೆ ಪೋದ ಬಟ್ಟೆಯ ಕಲದ ಪುತ್ತುಗಳಂ ಮುತ್ತಿಯ ಮುತ್ತದ ಮರಂಗಳು ಮೇರೆ (ಕಾಇಪ. IX – i. ೦೦೯-೪೦ ; 1057) ; ಸಿಸಿರಮುಸೆ ಒಡೆದು ಪರಕೆಗೆ ಬಸಂತನಲವೋದ ಮಾವಿನಡಿಮಂಚಿಕೆಯೊಳ್ ಕುಸುರಿದಱಿದಡಗಿನಂತೆಪೊಲೆಸೆದುವು ತದ್ವನದೊಳಸುದಿರ್ದ ಮುತ್ತದ ಸಿಟುಗುಳ್ಗಳ್ (ಯಕೋಕ. ೦-೩೭) ; ಗುರುಸುತನ ತಪೋ ಪೂತ ಮುತ್ತವೊ ತಳಿತೆಸೆವ ಕೆಂದಾವರೆಯು ಬನವೊ (ಕುಮ್ಮಾರ. ೩-೨೫). **ಮುತ್ತಕ** : ಮುತ್ತಕದ ತಳ್ತಲೆಗಳಂ ಛಂದದಿಂ ಹಾಸಿ (ಕನ್ನ.ರ. ದೇ. ೦೩೫-೨೦) ; ಆಗ್ನೇಯದಲ್ಲಿ ಕಟ್ಟಗಾಲಿವಿಯ ಮುತ್ತಕದ ಮರ (ಎಕ. VIII(R). ಹಾಸಪ. ೯-೦೬೦; 1561) ; ಅತ್ತಿ ಮುತ್ತಕ ಕಡವೆ ಹೊನ್ನೆ ಮೊರಡ ಅಂಗಾರೆ ಆಲ (ಕಾತೀಮು. ೩-೨). **ಮುತ್ತಗ** : ಮುತ್ತಗ :– ಈ ಬೀಜವಂ ನೀರಲ್ಲಿ ಅರೆದು ಮೂಱುದಿನ ಕುಡಿಯೆ ಗರ್ಭ ಕಳೆದು ಬೀಳುವುದು (ಶಿವ್ಯ.ಶಿ. ೬) ; ಎಲವಂ ಮುತ್ತ[ಶಾಕಾಂ. ತ್ತ]ಗ ಮತ್ತಿ ಮಳ್ತಿ . . . ಎಕ್ಕ ಮೊದಲಾದುರ್ವೀರುಹಂ ರಾಜಿಕುಂ (ಯಾದಕಂ. ೯-೯೫). **ಮುತ್ತಲ**: ಮುತ್ತಲ (ಪಳಸ) . . . ಕೆಂಪು ಹೂಗಳಿಂದ ಈ ವೃಕ್ಷವೆಲ್ಲ ಮುಚ್ಚಿದಾಗ ರಮಣೀಯವಾಗಿ ಕಾಣುವದು (ಕಶಾಗ. ೯೭) ; ಬಲಗೈಯೊಳಗೆ ಮುತ್ತಲದ ಕೋಲನ್ನೂ ಹಿಡಿದಿದ್ದನು (ಮುಂಬಯು. ೫-೩೦೯); **ಮುತ್ತಲು₂**: ರಮಾಬಾಯರು ಮುತ್ತಲೆಲೆ ಹಚ್ಚುತ್ತ ಕೂತಿದ್ದರು . . . ಲಟಕ್ಕನೆ ಸಿಬರನ್ನು ಸಿಟ್ಟಿನಿಂದ ಮುತ್ತಲೆಲೆಯಲ್ಲಿ ಮುರಿದು ರಮಾಬಾಯರೆಂದರು (ಸಮಶೀ. ೨೩೯). **ಮುತ್ತು₄**: ಮತ್ತಿ ಮೊಳಗರನೆಲ್ಲಿ ಮೂದಲ ಮುತ್ತು ಮಾವು . . . ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೊರಶಾ. ೩-೦-೨೭). **ಮುತ್ತುಕ** : ಜಾಲಿ ಮುತ್ತುಕಗಳ ವಿಶಾಲ ಕಗ್ಗಲಿಗಳ ಕರಾಳತೆಯೊಳಾ ವಿಪಿನ ಕಾಳಗತ್ತಲೆಯಾಗಿ (ರಾಕ್ಕಾಂಗ. ೯-೩೭); ಅರಳಿ ಮುತ್ತುಕ ಬೆತ್ತ ಬಿದಿರು . . . ಬಿಲ್ವಾದಿ ಬಹುವೃಕ್ಷಗಳಿಂದೆ ತುಂಬಿ (ಮುಹಾಶಿ. ೭-೧೮). **ಮುತ್ತುಗ** : " ಪಲಾಶಂ ಮುತ್ತುಗಂ " (ಮೀಗಶಾ. ೩೫-೦೩); ತಂಬುಲದಂತೆ ಸಂಗೀತದಂತೆ ದಿವಸದಂತೆ ಮುತ್ತುಗದಂತೆ . . . ದರ್ಶನಮೆಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಮೆಂಬ ಮೂಱರೊಳಂ ಕೂಡಿ ಮಹೋತ್ಸಾಹದಿಂ ನಡೆವುದು (ರಹಾಣ್ಯ. ೩-೨); ಮುತ್ತುಗವೆ ಮುತ್ತವ್ವೆ ಚಂಗಳಿ ಅತ್ತಿಯೇ (ಬಸತ. ೯೫-೩೮) ; ಮೊಗಚಿ ಮುತ್ತುಗದೆಲೆಯ ಮುಱಿವಿಡಿದಗಲಿದುಮ್ಮಹದಿಂದ ಜನಕನ ಮಗಳ ನಡೆಸುತ ತಂದರೊಂದು ಮಹಾ ಸರೋವರಕೆ (ಕೊರಶಾ. ೨-೯-೦೯) ; ಅರುಗಾಲ ಮಳೆ ಹೊಯ್ದರೂ ಮುತ್ತುಗಕ್ಕೆ ಮೂರೇ ಎಲೆ (ಗಾದೆ). **ಮುಳ್ತುಗ** : ಅರನೇಱಲಳಲೆ ಮುಳ್ತುಗ ಮಳ್ತಿ ಕಜ್ಜುರ . . . ಬೆಳೆದಿರಲಾ ಬಿಂಜಂ ಭೀಕರತರಮಾಯ್ತು (ಜಯಾಶ. ೦೫-೨೪); ಬಿಕ್ಕೆ ಮುಳ್ತುಗ . . . ಚೆನ್ನಂಗಿ ಬನ್ನಿ ಹೊನ್ನೆಯ ತರುಗಳ್ (ಹರಿವಂಶ. ೪-೭೯). **ಮುಟ್ರಿ** : ' ಮುಟ್ರದಕೆಱೆ ' ಪ್ರಯೋ:

[ದೇ.ಶ ತಮಿ. ಮುರುಕ್ಕು ; ಮಲ. ಮುರಿಕ್ಕು ; ತುಳು. ಮುತ್ತಕ ; ತೆಲು. ಮೋದುಗ, ಮೋದುಗು, ಮೋದುವು ; ಕುರುಖ್. ಮುರ್ಕಾ ; ಮಲ್ತೊ. ಮುರ್ಕೆ ; ಕೋಲಾ. ಮೊಡ್ಗ]

**ಮುಟ್ರಿ** (ನಾ). ಒಂದು ಸ್ಥಳದ ಹೆಸರು : ಬೆಗ್ಗಱೆಯ ಪೆಗ್ಗಯ್ಯಾಡಿಯ ಕುಲನ್ದೆಯ ಮುಟ್ರಿಯ ಬೆಳ್ಳಂವ್ವಾಡಿಯ ಗೊಟ್ಟವಾಡಿಯ ಇನ್ನಿನಿತು ಮೂರಜ್ಜಲ್ಗಾ ನಾಟ್ಗಾಮುಣ್ಡುಗಳ್ಗಂ ತಂಭುಲಶ್ರಾವಣಗೆಯ್ದು (ಎಕ. XII. ಪಂಶಪ. ೨೬೯-೯೬ ; 904). [ ? ]

**ಮುಟ್ಟಗೆರಿ** (ನಾ). ಒಂದು ಸ್ಥಳದ ಹೆಸರು : ಕೊಡಲಿಯುಂ ಬಲ್ಲಿಯುಮ ಕವ್ವಾಲುಂ ಮುಟ್ಟಗೆರಿಯೊಡೆಯೊಂ ಓದಲಪೋಲೆಯುಂ (ಚಿಕ್ಕಮ. ೦೯೩೪, ೫೮-೨೩ ; 10ನೆಯ ಶತ). [ ? ]

**ಮೂ₁**, ಮೂನ್₃, ಮುಪ್, ಮುವ್, ಮುಯ್₃(ಸಪೂರೂ). ಸಮಾಸಗಳಲ್ಲಿ 'ಮೂಱು' ಎಂಬ ನಾಮಪದಕ್ಕೆ ಬರುವ ಆದೇಶರೂಪ : 'ಮೂಗಂಡುಗ', 'ಮೂಜಗ' ಪರಾ. ಮೂನ್₃ : 'ಮೂನ್ನೂಱು' ಪರಾ. ಮುಪ್ : 'ಮುಪ್ಪಾಗ', 'ಮುಪ್ಪುರಿ' ಪರಾ. ಮುವ್ : 'ಮುಮ್ಮಡಿ₁' ಪರಾ. ಮುಯ್₃ : 'ಮುಯ್ಯಡಿ', 'ಮುಯ್ಯೇೞ್' ಪರಾ. [<ಮೂಱು]

**ಮೂ₂** (ಸಪೂರೂ). ಸಮಾಸಗಳಲ್ಲಿ 'ಮೂಗು' ಎಂಬ ನಾಮಪದಕ್ಕೆ ಬರುವ ಆದೇಶರೂಪ : 'ಮೂಗತ್ತಲೆ' ಪರಾ. [<ಮೂಗು]

**ಮೂಂಕಿಱು** 'ಮೂಗಿಱು' ನೋ.

**ಮೂಂಕು₁** (ಕ್ರಿ). ಮೂಗಿನ ಚಲನೆಯನ್ನು ಮಾಡು : ಹೂಂಕರಿಸಿ ಕೆಂಚನದೊಳ್ ಮೂಂಕುತೊಯ್ಯಾರದೊಳ್ (ವಚಿಂ. ೬-೧೬೮ ವ).

[< ಮೂಗು]

**ಮೂಂಕು₂** 'ಮೂಗು' ನೋ.

**ಮೂಕ** (ಗು). ೧. ಮಾತನಾಡಲಾಗದ. ೨. ನಿಶ್ಶಬ್ದವಾದ. (ನಾ). ೩. ಮಾತನಾಡಲು ಆಗದವನು ; ಮೂಗ : ಜಡಮತಿ ಕಿವುಡಂ ಪಂಗು ಮೂಕಂ . . . ನಿತ್ಯರೋಗಾಕುಳನೆಂಬೀ ನಾಮನಾಮಾವಳಿಗೆ ನಿಳಯನಕ್ಕುಂ ವ್ರತವ್ರಾತಹೀನಂ (ಚನ್ನ್ರಾ. ೧೧-೩೦) ; ಕುಬ್ಜವಾಮನಬಧಿರಮೂಕಕಿರಾತೋನ್ಮತ್ತ ಜಡಜನಂಗಳುಮಂ . . . ಕೊಟ್ಟು (ಆದಿಪು. ೪-೩೪ ವ) ; ಮುದುಕಂ ಮೂಕನು ಮೊಂಡ ಲಂಡ ಕಿವುಡಂ ಚಂಡಾಲ ತಾನಾದೊಡಂ . . . ಒಲಿವರ್ ಪೊನ್ನಿತ್ತೊಡಂ ಸೂಳೆಯರ್ (ಕೋಪಂಕ. ೭೦) : ಮೂಕರೆದುರಿಗೆ ಮೂಗು ತುರಿಸುವ ಜನರೇ ಹೆಚ್ಚು (ದಾಸಹು. ೯೩). ೪. ಮೀನು. ೫. ಹೇಸರಗತ್ತೆ. ೬. ಒಬ್ಬ ರಾಕ್ಷಸನ ಹೆಸರು : ಮುನಿನಿಕರ ಬಿನ್ನವಿಸೆ ಕರುಣಾವಸಥಿ ಶಂಭು ಕಿರಾತಮಯ ರೂಪಿನಲಿ ಹೊಕ್ಕನು ವನದರೆಚ್ಚನು ಮೂಕದಾನವನ (ಕುವ್ಯಾಲ. ೫ ಸೂಚನೆ). ೭. ದರಿದ್ರ; ಬಡವ.

ಮೂಕಬಸವ = (ಆಲಂ) ತನ್ನ ಭಾವನೆಗಳನ್ನು ಸ್ಪಷ್ಟವಾಗಿ ವ್ಯಕ್ತಪಡಿಸಲಾಗದವನು : ಶಾಸ್ತ್ರಿಗಳು . . . ಮೂಕಬಸವನಂತೆ ಅಲ್ಲೇ ನಿಂತು ನೋಡುತ್ತಿದ್ದ ಅಳಿಯನನ್ನು ಕಂಡು . . . ಬಿನ್ನವಿಸಿಕೊಂಡಿದ್ದರು (ಹೊಸಕ್ಷಿ. ೨೩): ಯಾರು, ಆ ಮೂಕಬಸವನೇ ? (ವ್ಯುದ್ಧಾಹ. ೯೮). [ಸಂ.]

**ಮೂಕಗಾಮುಂಡ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀಮತ್ ಶ್ರೀಪುರುಷಮಹಾರಾಜರ್ ಪ್ರಿಥುವೀರಾಜ್ಯಂಗೆಯೆ ಅವರಾ ಪೆರಯ ಮಗನಿ × × ತಮಾ ಕೞ್ ಅಳೆ . . . ರ ನಾಡು ಮೂಕಗಾಮುಣ್ಡನ್ × × × (ಎಕ. XIV, ತುಮಕೂ. ೯೭-೭ ; 790). [ಮೂಕ? + ಗಾಮುಂಡ]

**ಮೂಕಣಿ** (ನಾ). ಒಂದು ಬಗೆಯ ದ್ವಿದಳಧಾನ್ಯ: ಮಡ್ಡ್ಯಾಗ ಬಿತ್ತ್ಯಾದ ಮಡ್ಡ್ಯಾಗ ಬೆಳೆಯೂದು ತಂದವರ ಮನೆಗೆ ಬರುವೂದು ಮೂಕಣಿ ಹಪ್ಪಳ ಭೂಮಕ ಬರಬೇಕ (ಬೋಕಗೀ. ೪೯). [ ? ]

**ಮೂಕತೆ** (ನಾ). ಮಾತಿಲ್ಲದಿರುವಿಕೆ ; ಮೂಕತನ : ಅನ್ಯಪುಷ್ಟಮೂಕತೆಗಗದಂಗಳಾದ ಕೊನರಾವ ಮರಕ್ಕೊಳವು (ಕಂಪ್ರಕ. ೭-೪೩); ಏಕಾಂತ ಕೆಲರೊಳು ಯೋಚನೆ ಕೆಲರೊಳು ಮೂಕತೆ ಕೆಲರೊಳೊಂದೆರಡು ವಾಕು ಕೆಲರೊಳು (ಭರತ. ೪-೩೭). [ಸಂ. ಮೂಕತಾ]

**ಮೂಕತೆವೆಱು** (ಕ್ರಿ). ಮಾತಿಲ್ಲದಾಗು ; ಮೂಕವಾಗು : ಮಾಕಂದಂ ಬೀತಿರೆ ಜಂಬೂಕುಜಫಳದಿಂ ಶುಕಾಳಿ ಸುಖಿಯಾಯ್ತು ಪಿಕಂ ಮೂಕತೆ ವೆತ್ತಿರ್ದುದು ಮತ್ತೇಕಗ್ರಾಹಿಗೆ ಸುಖೋದಯಂ ಸಮನಿಪುದೇ (ಜಗು. ೪-೧೨).

[ಮೂಕತೆ + ಪೆಱು₁]

**ಮೂಕತ್ವ** (ನಾ). = ಮೂಕತೆ : ನನಗೆ ಈ ಜನ್ಮದಲ್ಲಿ ಪುಸ್ತಕಾಪಹಾರ ದೋಷದಿಂದ ಮೂಕತ್ವವು ಬಂದಿದೆ (ಕುಹಾವಂ. I, ೦೩೩) ; ಮುನಿಯದಿರಿ ಮೌನವಿರಿ ಕಿವುಡರಿರಾ ಕುರುಡರಿರಾ, ಮೂಕತ್ವವು ಲೇಸು (ಸೂರ್ಯಾಶಾ. ೩೭-೯). [ಸಂ.]

**ಮೂಕನಾಟಕ** (ನಾ). ಮಾತುಕತೆಗಳಿಲ್ಲದೆ ಕೇವಲ ಅಭಿನಯ ಮಾಡಿ ತೋರಿಸುವ ನಾಟಕ : ಮೂಕನಾಟಕ, ಛಾಯಾನಾಟಕ ಮೊದಲಾದ ಹಲವು ನವೀನತರಂಗಗಳು ಕರ್ನಾಟಕದಲ್ಲೇ ತಲೆಯೆತ್ತಿವೆ (ಜಾಂಕ್ರ. III, ೦೨೨೨); ಮೂಕನಾಟಕಗಳಾದ 'ಕಥಕಳಿ' ಮೊದಲಾದವು ಈ ವಾದದ ಪರಿಣಾಮಗಳೇ (ಸಾಹಿಜೀ. ೦೯).. [ಸಂ.]

**ಮೂಕನೋವು** (ನಾ). ಇತರರಿಗೆ ತಿಳಿಯಪಡಿಸಲಾಗದ ದುಃಖ,– ಸಂಕಟ : ರಾತ್ರಿಯೆಲ್ಲಾ ಆಲೆಕ್ಸಿಗೆ ಮಕ್ಕಳ ಚಿಂತೆ. ಎದೆಯಲ್ಲಿ ಒಂದು ಬಗೆಯ ಮೂಕನೋವು (ಹೋರಕ್ತ. ೨೦) ; ಗಂಗಪ್ಪನಿಗೆ ಇದರಿಂದ ಒಳಗಿಂದೊಳಗೆ ಮೂಕನೋವು ಬಹಳವಾಗಿತ್ತು (ಗಂಪತಾಯ. ೩೦).

[ಮೂಕ + ನೋವು]

**ಮೂಕಬಲಿ** (ನಾ). ಮಾತಿಲ್ಲದ ಪ್ರಾಣಿ,– ವ್ಯಕ್ತಿ : ಎದುರುವಾದಿಸಲು ಶಕ್ತಿಯಿಲ್ಲದ ವ್ಯಕ್ತಿ : ಮುಖ್ಯಪಾತ್ರವಾದ ಭಾಗೀರಥಿಯು ಒಂದು ಮೂಕಬಲಿ (ಹೊಸಂಶಾ. ೬೭). [ಸಂ.]

**ಮೂಕಯ್ಯ** (ನಾ). ಒಬ್ಬಾತನ ಹೆಸರು : [ಬಡಿವರ] ಸಿಪ್ಪವ್ಮನುಂ ಗೊತ್ತಯನುಂ ಮೂಕಯ್ಯನುಂ ಕೊಣ್ಡಯ × × ನೀಲಮ್ಮನುಂ (ಸೌಇಇ. IX-i, ೬೦-೨೨ ; 931). [ಮೂಕ? + ಅಯ್ಯ₁]

**ಮೂಕರಿವೆ**, ಮುಕ್ಕರಿವೆ (ನಾ). ಒಂದು ಬಗೆಯ ಸೊಪ್ಪು: ಮೂಕರಿವೆ, ಮೂಕಾರ್ತಿ, ಹಕ್ಕಿರಲು (ವೈಶಿಗ. ೩೩-೯೪೦). **ಮುಕ್ಕರಿವೆ** : ಕಂದ್ರಾಸಿ ಮುಕ್ಕರಿವೆ ಪೊಪ್ಪಳಿ (ಪಮ್ಯಮ. ೨೩೮). [ ? + ಹರಿವೆ₂ (< ಪಱುಹೆ) ]

**ಮೂಕರ್ಜಿ** 'ಮೂಗರ್ಜಿ' ನೋ.

**ಮೂಕಶೋಕ** (ನಾ). ಇತರರಿಗೆ ತಿಳಿಸಲಾಗದ ದುಃಖ,– ವ್ಯಕ್ತಪಡಿಸಲಾಗದ ಶೋಕ : ಮಣಿಪುರ ಮನದ ಮಹಾಸ್ಮೃತಿಸುಧಾಶಿವರೂಪಿ ತಾಂ ಮೆರೆದುದಾ ಮೂಕಶೋಕವ ಶಿಲೆಯ ಸಂಗೀತ ! (ಚಿತ್ರಾಂಗ. ೯೦-೨೪೯೬).

[ಸಂ.]

**ಮೂಕಾಂಬಿಕೆ** (ನಾ). ಪಾರ್ವತಿಯ ಹೆಸರುಗಳಲ್ಲಿ ಒಂದು : ನಿನ್ನ ಬೀಗರು ಮೂಕಾಂಬಿಕೆಯ ಭಕ್ತರು (ಮೂಕಜ್ಜ. ೦೨೮).

[ಸಂ. ಮೂಕಾಂಬಿಕಾ]

**ಮೂಕಾಂಬೆ** (ನಾ). = ಮೂಕಾಂಬಿಕೆ : ಬಸಿರಿನ ಬಯಕೆ ತೀರಲಿಂದೇ ಬಂದು ನಿಲ್ಲು ಜಗದಂಬೆ . . . ಮೂಕಾಂಬೆ (ಪಕ್ಷಿರ್. ೦೩-೨೨).

[ಸಂ. ಮೂಕಾಂಬಾ]

**ಮೂಕಾರತಿ** (ನಾ). ಒಂದು ಕ್ಷುದ್ರ ದೇವತೆಯ ಹೆಸರು (?) : ಮುಳ್ಳಿನ ಮಹಾವೀರ ಸಂಕಟ(ಚೌತಿ) ಜ್ಯೋತಿಗನು ಉಳ್ಳಾ ಮೂಕಾರತಿ . . . ಕರಿಯಾ ಶೀರಯಾ ಶಟವಿ (ಏಕಾಸು. ೩೮-೨). [ ? ]

**ಮೂಕಾರ್ತಿ** (ನಾ). ಒಂದು ಬಗೆಯ ಸಸ್ಯ : ಮೂಕರಿವೆ, ಮೂಕಾರ್ತಿ, ಹಕ್ಕಿರಲು (ವೈಶಿಗ. ೩೩-೬೪೦). [ ? ]

**ಮೂಕಾಸುರ** (ನಾ). ಒಬ್ಬ ರಾಕ್ಷಸನ ಹೆಸರು : ಭೀಕರಾಕಾರ ಮೂಕಾಸುರನಂ ತೊಟ್ಟನೆ ಕಟ್ಟಿದಿರೊಳ್ ಕಂಡು ಕಾಯ್ಪುಗೊಂಡು ಚಂಡ ಧನುರ್ಗುಣಮಂ ನೀವಿ ಜೇವೊಡೆಯಲ್ (ಶಬಶಂ. ೪-೦೭ ವ). [ಸಂ.]

**ಮೂಕಿ₁** 'ಮೂಗು' ನೋ.

**ಮೂಕಿ₂** (ನಾ). ಮಾತನ್ನಾಡಲಾರದವಳು ; ಮೂಗಿ : ಅವಳು ಆ ದೃಶ್ಯವನ್ನು ನೋಡಿ ಮೂಕಿಯಂತೆ ನಿಂತುಬಿಟ್ಟಳು (ರೂಶಿ).

[ಮೂಕ + – ಇ₂]

**ಮೂಕಿಸು** (ಕ್ರಿ). ಮಾತಿಲ್ಲದಂತೆ ಮಾಡು ; ಮೂಕವಾಗಿಸು : ಹೊಸ ಹುಟ್ಟು ಹೊಟ್ಟೆಯಲಿ ಹೊತ್ತ ಬಸಿರಿನ ಬಯಕೆ ತೀರಲಿಂದೇ ಬಂದು

ನಿಲ್ಲು ಜಗದಂಬೆ ಬಾಯುಂಟೆಂದೆ ಬೊಗುಳುವರ ಮೂಕಿಸುವ ಮೂಕಾಂಬೆ! (ಹನ್ನೆ. ೦೪-೨೨). [ಮೂಕು (< ಮೂಗು) + — ಇಸು$_3$]

**ಮೂಕೀಭಾವ** (ನಾ). ಮೂಕತನ ; ಮಾತನ್ನಾಡದಿರುವಿಕೆ ; ಮೌನ : ಏಕಗ್ರಾಹಿ ಕನಲ್ದು ಚೂತಕಳಿಕಾಸ್ವಾದವ್ಯವಚ್ಛೇದದಿಂ ಮೂಕೀಭಾವಮನಪ್ಪುಕೆಯ್ದುದು ವಿವೇಕವ್ಯಾಕುಳಂ ಕೋಕಿಳಂ (ಮಲ್ಲಿಪು. ೬-೯೨) ; ಪೊಗಟ್ಟ ಬಗೆಯುಳ್ಳೊಡಂ ನಾಲಗೆ ಪೊದರದು ಖಳರ್ಗೆ ಮದವಿಶೇಷದಿನು ಸಿರಲೇ ಬಗೆಪೊಡಮಕಾಲದೆಸಕದಿನಗಲದಪೊಲ್ ಪರಭೃತಕ್ಕೆ ಮೂಕೀಭಾವಂ (ಶಂಪ್ರಪು. ೧-೯೦). [ಸಂ.]

**ಮೂಕು** ' ಮೂಗು ' ನೋ.

**ಮೂಕುತಿ** ' ಮೂಗುತಿ ' ನೋ.

**ಮೂಕೆ$_1$** ' ಮೂಗು ' ನೋ.

**ಮೂಕೆ$_2$** (ನಾ). ಸೈನ್ಯ ; ಪಡೆ : ನಾಕಪತಿ ನಿಜದಿಂದ ನಿರ್ಜರಮೂಕೆಯನು ಪೊಡಗೊಂಡು ಭುಜಬಲದಾಕಿವಾಳಿಕೆಯಿಂದ ತಿರುವೇಂಕಟನು ತಾನಾದ ಲೋಕನಾಯಕನಾದ ವಿಷ್ಣುವನೇಕಕೃಪೆಯಲಿ ಕಾವನೆಂಬ ವಿವೇಕಮನದಲಿ ಚಲಿಸಲ್ಯಿದಿದ ಖಳನ ಪಟ್ಟಣಕೆ (ಕೋಗಹು. ೬-೦೦೦).

[ದೇ. ॥ ತೆಲು. ಮೂಕ]

**ಮೂಕೆ$_3$** (ನಾ). ಮಾತನ್ನಾಡಲು ಆಗದವಳು ; ಮೂಗಿ : ಸಿಂಹಾಸನಾರೂಢನಾರೂಢಯೌವನೆಯುಮಂತರ್ನಿಗೂಢಶೋಕೋದ್ರೇಕಮೂಕೆಯುಮಾಗಿರ್ದ ನಿಜತನೂಜೆಗೆ ಬಟ್ಟಿಯನಟ್ಟಿದಾಗಳ್ (ಆದಿಪು. ೩-೯೬ ವ).

[ಮೂಕ + — ಎ$_2$]

**ಮೂಕೆರೆ** (ಕ್ರಿ). ೧. ಮೂಗನ್ನು ಕೆರೆದುಕೊಳ್ಳು. ೨. (ಆಲಂ) ಜಗಳಕ್ಕೆ ಕರೆ : ಮೂಗಗೆ ಮೂಕೆರೆದೆ, ಜಗಳಕೆ ಕರೆದೆ (ಹನ್ನೆ. ೨೬-೯).

[ಮೂ$_2$ (< ಮೂಗು) + ಕೆರೆ$_1$]

**ಮೂಕೊರತಿ$_1$** ' ಮೂಕೊಜಿತಿ$_1$ ' ನೋ.

**ಮೂಕೊರತಿ$_2$** ' ಮೂಕೊಜಿತಿ$_2$ ' ನೋ.

**ಮೂಕೊರೆಯ** ' ಮೂಕೊಜೆಯ ' ನೋ.

**ಮೂಕೊಜಿತಿ$_1$**, ಮೂಕೊರತಿ$_1$ (ನಾ). ಮೂಗು ಕತ್ತರಿಸಿ ಹೋಗಿರುವವಳು ; ಮೂಗಿಲ್ಲದವಳು : ಬಜಿಗೊಡನೆಣ್ಣೆ . . . ಪುರಿಯೋಡು ಸುಟ್ಟಡಗು ಪಾವೊಲಂ ಗಳಿತಾಶು ಮುಂಡೆ ಮೂಕೊಜಿತಿ ವಿಮುಕ್ತಕೇಶಿ ಯಿದಿರೊಳ್ ಬರೆ ಕಾಣಲುಮಾಗದು (ಲೋಕೋಪ. ೦೨-೦೦) : ಮೋಟರ ಮದುವೆಗೆ ಭಂಡರು ಹಜಿಯ ಹೊಯ್ದು ಮೂಕೊಜಿತಿಯರೆಲ್ಲಾ ಕಳಶವ ಹೊತ್ತರಲ್ಲಾ (ಅಪಶಂ. ೦೦೨-೯೬೧) ; ನಿನ್ನ ಮಸಿವಣ್ಣದೀ ಚೆಲುವಿನೆಡೆಗೆ ಸೋಲ್ವರು ಗೊಲ್ಲತಿಯರು ಮೂಕೊಜಿತಿ ಮೋಟಗೆ ಮೋಹಿಸುವ ತೆಜದೊಳ್ಳೆ (ಹಾಳ್ಳಿಶಾ. ೨೩-೨೬). **ಮೂಕೊರತಿ$_1$** : ದುರುಳ ಮೂಕೊರತಿಗುಪಕಾರವೆಸಗಲ್ಬಂದು ತೊರೆವುದನುಚಿತ ತನುಗಳಂ (ವೆಂಕಾರಾ. ೩-೦೦-೦೩).

[ಮೂ$_2$ (< ಮೂಗು) + ಕೊಜಿತಿ]

**ಮೂಕೊಜಿತಿ$_2$**. ಮೂಕೊರತಿ$_2$ (ನಾ). ಒಂದು ಬಗೆಯ ಸಸ್ಯ : "ಆ ಪದನಾಮೆನಲು ಮೂಕೊಜಿತಿ" (ಮಂಗರಾ. ೩೭-೨೦) ; ಮೂಕೊಜ(ತಿ) ಭಾಸ್ಕರ ಚಿತ್ರಕ ನುಗ್ಗಿ ತಪಸಿಮಾರಗ್ವಧ ಕತ್ತರಿ ಬ್ರಹ್ಮದಂಡೆ ಬಿಲ್ವಾಗುರುಮಂಡಲಮಾರಿಬೇಬಿಪಂ ಕಟಾಯಿಂದಂ ಮರ್ಮರ್ದಿಸಿ ಪೂಸಲ್ . . . ತದ್ವಿಷಮುರವಣೆಯುಂ ಕಿಡುಗುಂ (ಖಸುರ. ೬-೦೬) ; ಹಾಲೆ ಬದಿರಪ್ಪೆ ಹುಣಿಸೆಂಕೋಲೆಲಚಿಯ ಬಾಗೆ ನೆಗರೆ ಮೂಕೊಜಿತಿಯ ತೇಗಾಲದ ನೇಜಿಲ ಪಾದರಿ ಜಾಲದ ಚೆನ್ನಂಗಿ ಬನ್ನಿ ಹೊನ್ನೆಯ ತರುಗಳ್ . . . ಮೆಜೆಗುಂ (ಹರಿಶ್ಚ. ೯-೬೯) ; ಮಹೋದರಕ್ಕೆ . . . ಚಿತ್ರಮೂಲದ ಬೇರು, ಕಾಗೆವಾರಿಯ ಬೇರು, ಮೂಕೊಜಿತಿಬೇರು. ಈ ಮೂಜನ್ನು ಸಮಾಸಂಗೊಂಡು ಚೂರ್ಣವಂ ಮಾಡಿ . . . ಮೂಜುದಿನಂ ಕೊಳ್ಳಲು ಗುಣ (ಒವ್ಯಾ. ೦೨೬). **ಮೂಕೊರತಿ$_2$** : ಪೈಶಾಕಮಂದ—ಗಣಜಲೆ. ಮೂಕೊರತಿ. ಜೆಳ್ಳಡಕಿಲ (೬೫೦. ೦೫೬).

**ಮೂಕೊಜಿಗ** (ನಾ). ಮೂಗು ಕತ್ತರಿಸಿಹೋಗಿರುವವನು : ಮೂಗಿಲ್ಲದವನು : ಓತು ಒಡಕು ಹುರುಳಿ ಪೋಟೆ ಹುರಿವಾಕೆಯ ಕೈ ಸೊತ್ತು ಕಣ್ಣು ಕುರುಡು ಮೆಲುವಾತ ಬೋಡ ಮೂಕೊಜಿಗ ಇಂತಿವರು. ತಮ್ಮ ಭೋಗಕ್ಕೆ ಸುರಪತಿಯ ಭೋಗವ ಜಜೀವ ನರಕುಜಿಗಳ ಸ್ಥಾನೇಸೆಂಬೆನಯ್ಯಾ (ಅಸವ. ೪೩-೨೭). [ಮೂ$_2$ (< ಮೂಗು) + ಕೊಜಿ$^1$$_1$ + —ಗ$_2$]

**ಮೂಕೊಜೆಯ**. ಮೂಕೊರೆಯ (ನಾ). = ಮೂಕೊಜಿಗ : "ಗತನಾಸಿಕಂ ಮೂಕೊಜೆಯನಕ್ಕು" (ಮಂಗರಾ. ೦೦೩-೬) ; ಮೂಗಿಲ್ಲದ ಮೂಕೊಜೆಯನೆಂತು ಕಣ್ಣಿಲ್ಲದ ಕುರುಡನೆಂತು . . . ಶುಭಕಾರ್ಯಕ್ಕಂ ರಾಜಸಭೆಗಂ . . . ಸಲ್ಲಂ (ರಸರತ್ನಾ. ೯-೩) ; ಮಗನ ಮದುವೆಗೆ ಶಕುನವ ನೋಡಹೋಪಾಗ ಇದಿರ್ಬ್ಬೊಬ್ಬ ಮೂಕೊಜಿತಿಯು ಹಾವಾಡಿಗನ ಕಂಡು ಶಕುನ ಹೊಲ್ಲೆಂಬ ಚದುರನ ನೋಡಾ ತನ್ನ ಪತಿ ಮೂಕೊಜಿತಿ ತನ್ನ ಕೈಯಲ್ಲಿ ಹಾವು ತಾನು ಮೂಕೊಜೆಯ (ಬಸವ. ೦೦೩) ; ಕುಡಿಮೂಗನುಜಿಕಚ್ಚಿ ಕಿವಿಗಳಂ ಕಿಳ್ತು ಕೈಯೊಡನೆ ಕಿವಿಮೂಗೆ ಮೂಕೊಜೆಯರಂ ಮಾಡಿ ನೆಜಿ ಬಡಿದಾಡುತಿರ್ದರೊಡವೆರಸಿಯಾ ತನುಜರುಂ ಮರುಳ್ಗಳುಂ (ಕಂಠೀ. ೩೨-೩೭). **ಮೂಕೊರೆಯ** : ಕಣೆಗಳಂ ಮೆತ್ತಿದರು ಮೂಕೊರೆಯ ದಂಡದೋಳ್ ಪಟುಭಟರು ನಿತ್ತರ್ಯ (ಕುರಂಗ. ೩೬-೨೩) ; ೧೨೦೦೦ಜನ ತುರುಕರ ಮೂಗುಗಳನ್ನು ಕೊಯಿದರು. ಆ ಮೂಕೊರೆಯರು ಎಲ್ಲರೂ ವಿಜಯಪುರಕ್ಕೆ ಓಡಿ ಹೋಗಿ . . . ಅಡ್ಡಬಿದ್ದರು (ಕಡಾಕಾ. ೦೯೩) ; ಅನೇಕ ದೈವವ ಭಜಿಸಿ ಮೂಕೊರೆಯ ಜನರ ಸಟೆ ಕುಟಿಲ ಮಹಿಮಂಗಳಿಗೆ ಭ್ರಾಂತಿನಿಂ ಮರುಳಾಗದೆ (ಪ್ರಲಾರ. ೩-೨೯).

[ಮೂ$_2$ (< ಮೂಗು) + ಕೊಜೆಯ]

**ಮೂಗ** (ನಾ). ೧. ಮಾತನ್ನಾಡಲು ಆಗದವನು ; ಮಾತು ಬಾರದವನು ; ಮೂಕ : "ಜಡಃ, ಕಡಃ—ಈ ೨ ಮೂಗಂ" (ಹಲಾಯು. ೦೦೦-೯೩೩) ; ಕಿಜುವಕ್ಕಳುಮಾ ಮೂಗರುಮಜಿಪಲ್ಕಜಿಯರ್ ವಿವೇಕಮಂ ಮಾತುಗಳಂ (ಕಬಿರಾ. ೧-೩೯) ; ಮೂಗರ್ ಕಂಡ ಕನಸಿನಂತೆ ಪೆಜರ್ಗೆ ಪೇಜಲಜಿಯದೆ ನಾಡೆಯುಂ ಬಡವಾಗಿರ್ಪುದುಂ (ರಸರತ್ನಾ. ೯-೦೨) ; ಮೂಗ ಕಂಡ ಕನಸಿನಂತಾಯಿತ್ತೆನ್ನ ಭಕ್ತಿ (ಬಸವ. ೨೯೯) ; ಮೂಗ ಬಧಿರರಂಧಕರಿಗೆ ಬೇಗದೆ ಹೆಸಗೆಹೆಸಗೆಯೊಳನ್ನವನೀವ ರಾಗದ ಭವನ ಪೊಪ್ಪಿದುದು (ಕಂಪವಿ. ೨೦-೯೬) ; ಕಿವುಡ ಯಜಮಾನನಿಗೆ ಮೂಗ ಬಂಟ (ಗಾದೆ). ೨. ಒಂದು ಬಗೆಯ ಹಕ್ಕಿ : ಕಾಗೆ ನವಿಲಿಬ್ಬಾಯ ಗುಬ್ಬಿ ಪಾರಿವ ಕೊಂಚೆ ಗೂಗೆ . . . ಮೂಗ ಸುರಿಗಣ್ಣ ಬಾಳಕ್ಕ ಬೆಳ್ಳಕ್ಕಿಯುಂ . . . ಹೊಡೆಹೊಡೆದಿಳಿಯಲಿಕ್ಕಿದಡೆ (ಸೋಮಸುತ. ೩-೯). ೩. (ಆಲಂ) ಅತಿಯಾದ ಭಯ, ಆಶ್ಚರ್ಯ, ದುಃಖ, ಸಂತೋಷ ಮುಂತಾದ ಭಾವನೆಗಳಿಂದ ಮಾತನ್ನಾಡಲಾರದಂತಾದವನು ; ಮೌನಿ : ಮೂಗನಾದನು ಬಹಳ ಧೈರ್ಯದ ಬೇಗಡೆಯ ಬಿಡೆ . . . ಧನಂಜಯನೋಲಿದು ನಿಜಶಿರವ (ಕುಮಾರ. ೬-೯೯).

[ಮೂಗು + — ಅ$_7$. / ಸಂ. ಮೂಕ. / ಪ್ರಾ. ಮೂಅ, ಮುಕ್ಕ]

**ಮೂಗಂಡುಗ**, ಮುಕ್ಕಂಡುಗ (ನಾ). ಮೂರುಖಂಡುಗದ ಅಳತೆ : ಪೆರ್ಜ್ಜಡಿಕೆಯ ಕೆಜೆಯ ಕೆಜಗೆ ಮೂಗಣ್ಣುಗಂ ಕಟನಿ ಮತ್ತು ಬಳಮಂಗಲದ ಕೆಜೆಯ ಕೆಜಗೆ ಮೂಗಣ್ಣುಗಂ ಕಟನಿ (ಎಕ. IX. ನೆಲಮಂ. ೩೦-೦೨೩; 797) ; ಎಜೆಯಪ್ಪರಸರ್ ಕೊಟ್ಟರ್ಕಣ್ಣು ಮೂಗಣ್ಣುಗ ಕಾಲ್ನಡು (ಎಕ. IV. ಹುಣಸೂ. ೯-೦೦; ೯೨೦) ; ಶಾಸನಗಳಲ್ಲಿ ಬರುವ ನಾಣ್ಯಗಳೂ ಅಳತೆಗಳೂ . . . ಕಂಡುಗ, ಮೂಗಂಡುಗ, ನಾಗಂಡುಗ (ಶುಳುಣಾ. ೨೬೦). **ಮುಕ್ಕಂಡುಗ** : ಇವರ್ಕೆ ಕೊಟ್ಟವಿರ್ಕ್ಕಬನಿಕಣ್ಣುಗಂ ಕಲಕಣ್ಣುಗ

ಮುಕ್ಕಣ್ಣುಗ ವಿಂಚಿ ನಿರಿಜ ಕೊಟ್ಟು ಪಣ್ಣರ (ಎಕ. X, ಕೋಲಾರ ೬-೯ : ಸು, 753). [ಮೂ$_1$ (< ಮೂಱು) + ಕಂಡುಗ (< ಖಂಡುಗ)]

**ಮೂಗಂದಾಯ**, ಮುಕ್ಕಂಧಾಯ (ನಾ). ೧. [ಜ್ಯೋತಿ] (ಒಂದು ವರ್ಷದ) ನಾಲ್ಕುತಿಂಗಳುಗಳ ಮೂರು ಅವಧಿ : (ಶ). **ಮುಕ್ಕಂಧಾಯ** : ೨. ಕಂದಾಯದ ಮೂರನೆಯ ಒಂದು ಭಾಗ : ಪೂರ್ವಭೋಕ್ತೃಗಳಹ ಬ್ರಾಹ್ಮರುಗಳು ಸಪ್ತವಿಂಶತಿವೃತ್ತಿ ಸಂಖ್ಯಾಕವಾಗಿ ಅನುಭವಿಸ್ಸಂ ಮುಕ್ಕಂಧಾಯವಾಗಿ ತೆರದೆ ಸುಖದಲಿಹಂತಾಗಿ ನಿಯತ ಶೋತ್ರವಾಗಿ ಬಾಚ್ಚಂಣ್ಣೊಡೆಯರು ಕೊಟ್ಟ ಧರ್ಮಶಾಸನ (ಪ್ರಾಅಂ. ೦೯೪೦. ೩೩-೫೫ ; 1399). [ಮೂ$_1$ (< ಮೂಱು) + ಕಂದಾಯ]

**ಮೂಗಕ್ಕೆ** 'ಮೂಗಟಿಕ್ಕೆ' ನೋ.

**ಮೂಗಣಂಗ** (ನಾ). = ಮೂಗಂಡುಗ (?) : ಲಿಂಗಪ್ರತಿಷ್ಟೆಗೆಯು ದೇವರ್ಗೆ ಕೊಟ್ಟ ಗಳ್ದೆ ಮೂಗಣಂಗ ಪಾಟಿ ಕಣ್ಣುಗ (ಎಕ. X (s), ಬಾಂಗ್. ೧೦೦-೨ ; 10ನೆಯ ಶತ).

[ಇದು 'ಮೂಗಂಡುಗ' ಎಂಬುದರ ಅಪಲಿಪಿತವಿರಬಹುದು]

**ಮೂಗತ್ತಲೆ** (ನಾ). ಮೌನವಾದ ಅಂಧಕಾರ ; ಕಗ್ಗತ್ತಲೆ: ಕೃಷ್ಣಪಕ್ಷದ ಮೂಗತ್ತಲೆಯಲ್ಲಿ ದಾರಿ ನಡೆಯುತ್ತಾ ಹೋದೆವು (ಶಾರವೀ. ೦೫೦).

[ಮೂ$_2$ (< ಮೂಗು) + ಕತ್ತಲೆ$_1$ (< ಕಟ್ಟಲೆ)]

**ಮೂಗಯ್** 'ಮೂಗೆಯ್' ನೋ.

**ಮೂಗರಿ$_1$** (ಕ್ರಿ). ಮೂಗನ್ನು ಕತ್ತರಿಸು, —ಕೊಯ್ಯು : ಲಲನೆಯ ಕದಪುಗಳೊಳ್ ಮಾರ್ಮಲೆದೊಡಜಂ ಪಿಂಗವೇೞ್ದು ಮೂಗರಿದುದಱಿಂದೆಲೆಗಳ ಲೋಕದೊಳೆಲ್ಲಿಯುಮೆಲೆಗಳ ಮೂಗರಿವುದಾದುದಂದಿಂ ಬಟಿಯಿಂ (ಕಾವ್ಯಸಾ. ೩೨೮ ಶೂದ್ರಕ) ; ಹರಿಗೆಯ ಗದೆಯ ನೇಜೆಯದೊಂಟಿಱಿಗಾಱರುರ ವಣಿಸುವ ತುರುಕರನು ಮುಱಿಯಲಿಱಿದು ಮೂಗರಿದು ತಂದಾಕ್ಷಣ ಸರಗಟ್ಟಿ ಮೆಱಿಸಿದರಾಗ (ಕಂಪ. ೦೫-೩೯); ಮೈಸೂರವನು ತನ್ನ ಕೈಗೆ ಬಿದ್ದು ನಿಸ್ಸಹಾಯರಾದ ಶತ್ರುವೀರರಿಗೆಲ್ಲಾ ಮೂಗರಿದು ಮಾನಭಂಗ ಮಾಡಿ ಹಲ್ಗಿರುವ ಪರಮಾರಣಧರ್ಮನವನೆಂಬುದನ್ನು, ನಾವಾರೂ ಮರೆತುದಿಲ್ಲ (ಐರಹಂ. ೦೯-೦೮). [ಮೂಗು + ಅರಿ$_1$]

**ಮೂಗರಿ$_2$** (ನಾ). ಮೂಗನ್ನು ಕೊಯ್ಯಿಸಿಕೊಳ್ಳುವಿಕೆ: ಪೊಕ್ಕಿಱಿಯಲ್ ಪೋಗಿ ಮೂಗರಿವಡೆದರ್ (ಕಂಕಂ. ೬೬-೦೬) ; ಎಱಗಿಸುವುದದುಗೆೞ್ವ ಪೆಜರ್ಗೆ ತಾನೆಱಗೆ ಪೋಗಿ ಪೋಗಿ ಮೂಗರಿವಡೆದರ ತೆಱನಪ್ಪುದೆಲಗೆ ಬೆಲೆವೆಣ್ಣ (ಲೀಲಾವ. ೨-೩೬). [< ಮೂಗರಿ$_1$]

**ಮೂಗರಿಕಿ** (ನಾ). ಮೂಗು ಕತ್ತರಿಸಿಕೊಂಡವಳು : ಮರುಳಲಾ ನೀನೆಲೆವೊ ಖಳ ಮೂಗರಿಕಿಗಾದಭಿಮಾನಭಂಗಕೆ ಧುರವನೆಸಗುವ ನಪ್ರಬುದ್ಧನೊ ಪೋಣ್ನಿಚಕ್ಷಣನೊ (ತೊರರಾ. ೩-೬-೫೨). [< ಮೂಗರಿ$_1$]

**ಮೂಗರ್ಜಿ, ಮೂಕರ್ಜಿ** (ನಾ). ಬರೆದವರು ಯಾರೆಂದು ತಿಳಿಸದೆ ರುಜುವಿಲ್ಲದೆ. ವಿಳಾಸ ಕೊಡದೆ ಬರೆಯುವ ಅರ್ಜಿ; ಬೇನಾಮಿ ಅರ್ಜಿ: ಶ್ಯಾನುಭೋಗನಿಗೆ ವಿರೋಧವಾಗಿ ನಿತ್ಯ ಒಂದೊಂದು ಎರಡೆರಡು ನಾರಾಯಣಿ (ಮೂಗರ್ಜಿ)ಗಳೂ ತಾಲ್ಲೂಕುಕಚೇರಿಗೆ ಬರತೊಡಗಿದವು (ಗರುಡಾ. ೦೦೨); ತನ್ನ ಕೈಯಿಂದ ಮೂಗರ್ಜಿಯೋಪಾದಿಯ ಪತ್ರ ಜೀವಣ್ಣನ ಅಣ್ಣನಿಗೆ ತಲುಪಿಸಿ . . . ಇಲ್ಲಿಗೆ ಬಂದರೆ ಗತಿಯೇನು ? (ಪಾಪುಪ. ೦೦೫). **ಮೂಕರ್ಜಿ** : ಮೂಕರ್ಜಿಗಿಂತ ಮಿಗಿಲಾಗಿ ಬರೆದರು ಸಟ್ಟರು (ಜಪಾ. ೮೨) ; ಅವನ ವಿರುದ್ಧವಾಗಿ ಮೂಕರ್ಜಿ ಬರೆಯುವ ಧೈರ್ಯ ಆ ಹಳ್ಳಿಯವರಾರಲ್ಲೂ ಇರಲಿಲ್ಲ (ಐರಬೀ. ೦೨೬).

[ಮೂಗು + ಅರ್ಜಿ$_2$]

**ಮೂಗವಲ್**, ಮುಕ್ಕವಲು (ನಾ). ೧. ಮೂರು ಬಗೆ, —ರೀತಿ : ಆದಿಶಕ್ತಿಯೆನಿಸಿರ್ದು ಮೂಗವಲಿಂ ಪರಿಹರಬ್ರಹ್ಮರ್ಕಳಂ ಮೋಹಿಸಿದ ವಿಸ್ಮಯಾಪಾವಿನೋದಮನಾರಱಿಗುಂ (ರಾಜಶೇ. ೬೨-೦೨). **ಮುಕ್ಕವಲು**: ೨. ಮೂರು ಕವಲು, —ಭಾಗ : ಅತಿಥಿಗಳೊತ್ತಟ್ಟು, ಮದುವಣಿಗರ ಮರುದಿಬ್ಬಣವೊತ್ತಟ್ಟು, ತನ್ನವರೊಡಗೂಡಿದ ವೀರಬಂಕೆಯನೊತ್ತಟ್ಟು, ಮುಕ್ಕವಲಾಗಿ ನೆರೆದ ಸಂದಣಿ ಹರಿದುದು (ವೀರಬಂ. ೦೦೫).

[ಮೂ$_1$ (< ಮೂಱು) + ಕವಲ್$_2$]

**ಮೂಗಳ್** (ಕ್ರಿ). ಹೇಳಲಾಗದೆ ಮೂಕವಾಗಿ ದುಃಖಪಡು ; ಒಳಗೊಳಗೇ ರೋದಿಸು : ಕೊರಳ್ ಬಿಗಿದು ಮೂಗಳ್ವಳಾ ದಿವ್ಯದುಃಖಿನಿ ನಗವ್ಯದಂ (ಶ್ರೀರಾಮಾ. ೫೦೩-೮೮).

[ಮೂಗು + ಅಳ್$_1$ (< ಅೞ್$_1$)]

**ಮೂಗಳ** 'ಮೂಗೊಳ' ನೋ.

**ಮೂಗಳು** (ನಾ). ಹೇಳಿಕೊಳ್ಳಲಾಗದೆ ಒಳಗೊಳಗೇ ದುಃಖಿಸುವಿಕೆ : ಮೌನರೋದನ : ಅವಳ ಮೂಗಳುವನ್ನು ಕೇಳುವವರು ಅಲ್ಲಿ ಯಾರೂ ಇರಲಿಲ್ಲ (ಶಬ್ದ). [ಮೂಗು + ಅಳು$_2$ (< ಅೞ್$_2$)]

**ಮೂಗಟಿಕ್ಕೆ**, ಮೂಗಕ್ಕೆ (ನಾ). = ಮೂಗಳು : ವಿರಾಟನ ಮಹಾದೇವಿಯುಂ ಪೇಡಿ ಸತ್ತಂತೇನುಮನೆನಲಱಿಯದೆ ನಾಣ್ಚಿ ತನ್ನೊಳೆ ಮೂಗಟಿಕ್ಕೆಯನಟ್ಟು ಕೆಮ್ಮನಿರ್ದಳ್ (ಕಂಕಥಾ. ೬-೮೨ ವ) ; ಒಳಗೊಳಗೆ ಮೂಗಟಿಕ್ಕೆಯುಟ್ಟುಟ್ಟು . . . ಮಮ್ಮಲಂ ಮಱುಗಿ (ಅರನೇ. ೬-೩೫ ವ). **ಮೂಗಕ್ಕೆ** : ನಡವಳಿಯ ಗುಣವೋ ಪುರಾಕೃತದೊಡಲ ದುಷ್ಕೃತ ಫಲವೋ ತನಗೆಂದಡಿಗಡಿಗೆ ಮೂಗಕ್ಕೆಯುಲಿ ಮಱುಗಿದನು ನರನಾಥ (ತೊರರಾ. ೦-೪-೯) ; ಸತಿ ಘನಗದ್ಗದಸ್ವರದಿಂದಲಾ ಮೂಗಕ್ಕೆಯುಲಿ ಕಡುನೊಂದಳು (ಕೋಗಯ. ೦೫-೫೬). [ಮೂಗು + ಅಟಿಕ್ಕೆ]

**ಮೂಗಟ್ಮೆ** (ನಾ). = ಮೂಗಳು : ಪೆಣ್ಣಿಂಗಿಟ್ಟೊಡೆ ಕಾಯ್ ಬಿರ್ದೆಂಬ ನಾಣ್ನುಡಿ ನುಡಿವರ ಮಾತೆನಗಾದುದೆಂದು ಮೂಗಟ್ಮೆಯುಟ್ಟು (ಧರ್ಮಾಮೃ. ೦೦-೧೯೫). [ಮೂಗು + ಅೞ್$_1$ + — ಮೆ$_1$]

**ಮೂಗಾಲಿ**, ಮುಗ್ಗಾಲಿ (ನಾ). ಮೂರು ಚಕ್ರಗಳುಳ್ಳ ವಾಹನ : ಇಗ್ಗಾಲಿ (ಬೈಸಿಕಲ್) – ಮೂಗಾಲಿ (ಟ್ರೈಸಿಕಲ್) (cycle. ೩೦೪೩). **ಮುಗ್ಗಾಲಿ** : "ಮೂರು ಚಕ್ರದ ಸೈಕಲ್ಲು, ಮುಗ್ಗಾಲಿ" (Tricycle. ೩೦೪೩). 'ಇಗ್ಗಾಲಿ', 'ಒಗ್ಗಾಲಿ' ಪರಾ.

[ಮೂ$_1$ (< ಮೂಱು) + ಗಾಲಿ]

**ಮೂಗಾವುದ** (ನಾ). ಮೂರು ಗಾವುದ : ಸೌಧರ್ಮಕ್ಕದಱಿಂದಮತ್ತ ಮೂಗಾವುದದೊಳ್ ನೆಲಸುವರನಂತಸುಖರಾ ಸಿದ್ಧರ್ (ಶಾಂತಿಪು. ೦೨-೮) ; ಅರೆಗಾವುದಮಂ ಪರಿದಂ ಮೂಗಾವುದಮುಂ ನಡೆದಂ (ಕಬುದ. ೦೨೮ ತ್ರಯೋ); ಯೋಗಂ ಮೂಗಾವುದಮೆನೆ ರಾಗಾವಿಲಚಿತ್ತರಾಗಿ (ಪಶ್ಚಪ. ೬-೩೦).

[ಮೂ$_1$ (< ಮೂಱು) + ಗಾವುದ]

**ಮೂಗಾಳಿ** (ನಾ). [ಜೈನ] ತನುವಾತ, ಘನವಾತ ಮತ್ತು ಘನೋದಧಿವಾತ ಎಂಬ ಮೂರು ವಾಯುವಲಯ : ಕಡೆಯಿಲ್ಲದಂಬರದೆಡೆಯೊಳು ಮೂಗಾ [ಶಾಶಾಂ. ಘಾ]ಳಿಯಡಕಿಲುಗೊಂಡು ಬಳಸಲು ಪಡುದ್ರುವತೀವಿ ಮೂಜಗ ಜನಬೋಧಂ ಪೊಡೆಯುಲಿ ತಾನೆ ರಂಜಿಪುದು (ಪರಕ. ೦-೪೨). [ಮೂ$_1$ (< ಮೂಱು) + ಗಾಳಿ$_1$]

**ಮೂಗಾಳಿವಿಡಿ** (ಕ್ರಿ). ಮೂಗಿನಿಂದ ವಾಸನೆಯನ್ನು ತಿಳಿ. — ಅರಿ : ಕಾಣಮದೊ ದಿಟದ ಮೃಗತತಿಯುದರ ಬಳಿ ಸುಳಿಯಲೆಂತಂಜಿ ಹಿಂಜರಿದು ಮೂಗಾಳಿವಿಡಿದು ನಿಂತಿಹವಲ್ಲಿ ಸಾಲ್ಗೊಂಡು ಚಿರ್ಜೆ ಗಾರಾಗಿ ! (ಶ್ರೀರಾಮಾ. ೨೩೪-೦೫೯). [ಮೂ$_2$ (< ಮೂಗು) + ಗಾಳಿವಿಡಿ]

**ಮೂಗಿ$_1$** (ನಾ). ಮಾತನಾಡಲು ಆಗದವಳು ; ಮೂಕಿ : "ಮೂಗಿ (ಕೆ) – ಮೂಕೀ" (ತದ್ಭವಕೋ. ೩೬) ; ನಿರ್ದಯದಿಂ ಪೀಡಿಸಿ ಬಳ್ಳುವೋ ಪಿಸಗಮೆಲ್ಲಂ ತಾಪಿಸಿನಂ ಪೋಗೆ ಮೂಗಿಯ ಮೂಗಂ ತಲೆವಾರ ಕೊಯ್ದು

(ಸುಕುಮಾ. ೭-೨೯) : ಮಾಗಿಯ ಕೋಗಿಲೆಯಂತೆ ಮೂಗಿಯಾಗಿರ್ದೆ ನೋಡವ್ವಾ (ವಚನ. I. ೦೭೦). [ ಮೂಗ + — ಇ₂ ]

**ಮೂಗಿ₂** (ನಾ). ಒಂದು ಬಗೆಯ ಹಕ್ಕಿ ; ಮೂಗ : "ಘ್ರಾ [ಪಾಠಾಂ. ಘ್ರು]ಣಿಯೆನೆ ಮೂಗಿ " (ಚುಂಗರಾ. ೩೨-೯) ; ಕೋಗಿಲೆ ಚಾದಗೆ ಪೋದಗೆ ಮೂಗಿ ಗಲಿಂಜಂಚೆ ಕೊಂಚೆ ನೂಲೆಳಗಂಪಂ ಕಾಗೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಕುಂದಂ ಬಲಾಕೆ ಅವುಗೆ ಸೇನಂ (ಕಾವ್ಯಸಾ. ೦೦೯೯ ಟಿಪ್ಪ) ; ಪುಗೆಯುಂ ಪೋಗೆಯುಮೆಡವತ್ತಲ್ ಪುಗೆ ಮೂಗಿಯ ಶಕುನಂಗಳಿಷ್ಟ ಫಲಮಂ ಕುಡುಗುಂ (ಲೋಕೋಪ. ೦೨-೦೮) ; ನಾಲಗೆಗೆಟ್ಟಾಕೆಯಂತೆ ಮೂಗಿ ನೆರನುಳ್ಳಂ ಪ್ರಿಯಂಗೆಯ್ದಂತೆ ಪಂಗಾಗೆ . . . ಅನೇಕ ಪಕ್ಷಿಜಾತಿ ಗಳಿಂ (ಜಂಹಂ. ೨-೩೬ ವ). [ ಮೂಗು + — ಇ₃ ]

**ಮೂಗಿಡು** (ಕ್ರಿ). (ಎತ್ತು, ಎಮ್ಮೆ ಮೊದಲಾದುವುಗಳನ್ನು ಹತೋಟಿ ಯಲ್ಲಿಡುವುದಕ್ಕಾಗಿ ಮೂಗಿಗೆ ದಾರ ಹಾಕಲು) ಮೂಗುಚುಚ್ಚು : "ನಸ್ಯೋತಃ, ನಸ್ತಿತಃ – ಈ ೨ ಮೂಗಿಟ್ಟುದು" (ಹಲಾಯು. ೯೯-೦೦೨) ; ಸುಡೆ ದಾವಾನಳನೊಂದನೊಂದು ತಿನೆ ಕುತ್ತುಂ ಪತ್ತೆ ಕೊಂದಿಕ್ಕೆ ಕಾಡೊಡೆಯು ಶ್ರೀತದ ವಾತದಾತಪದ ಧಾರಾಪಾತದತ್ಯಾತುರಂ ಮಡಿವಂ ಮಾಡೆ ಕರಾಂಕು ಶೋಪದತಿ ಸಂತಾಪಕ್ಕದರ್ವಾಗೆ ಮೂಗಿಡೆ ನಿರ್ಬಂಧದಿನೇಱ ಪೇಱ ತಿನೆ ತಿರ್ಯಗ್ಜಾತಿಗಳ್ಪಡರ್ದಗುಂ (ಪುಣ್ಯಪು. ೦೩-೦೦೦).

**ಮೂಗಿಟ್ಟೇಱು** = (ಅಲಂ) ಅಂಕೆಯಲ್ಲಿಡು ; ಹದ್ದುಬಸ್ತಿನಲ್ಲಿಡು: ತಲೆಮುಂ ಕಡಿಮೆಯುಂ ಕರುಳಸುರ್ಚಿಯುಂ . . . . ಮೂಗಿಟ್ಟ[ಟ್ಟೇ]ಱ ಯುಂ (ಅಜಿತಪು. ೦೦.೦೦ ವ); ಒತ್ತವ್ವದೆ ಮೂಗಿಟ್ಟೇಱದಂ ಮಾಳವನನ್ . . . ವಿಕ್ರಮಾದಿತ್ಯದೇವಂ (ಎಪಿ.ಕಂ. ೦೯೨೯, ೭೩-೦೮ ; 1081) ; ಏಱ ದೊನೆ ಮರಸನೆನ್ನಂ ಮೀಱದನುಜದಡಸಿ ಪಿಡಿದು ಪೇರಿದನಥಟಂ ಶ್ರೋಱದ ನೊಡೆವ[ಂ] ಮೂಗಿಟ್ಟೇಱದನೆಂದಳ್ಕಿ ಬಾಳನಹಿಪತಿಯಿತ್ತಂ (ಜಂಹಂ. ೮-೩೭). [ ಮೂಗು + ಇಡು₁ ]

**ಮೂಗಿರಿ** 'ಮೂಗಿಱ' ನೋ.

**ಮೂಗಿಲಿ₁** (ನಾ). ಮೂತಿಯು ಉದ್ದವಾಗಿರುವ ಒಂದು ಬಗೆಯ ಇಲಿ ; ಸೊಂಡಿಲಿ : "ಗಿರಿಕಾ, ಬಾಲಮೂಷಿಕಾ – ಈ ೨ ಮೂಗಿಲಿ" (ಪಾಶಾ. ೦೦೩). [ ಮೂಗು + ಇಲಿ₁ ]

**ಮೂಗಿಲಿ₂** (ನಾ). ಮೂಗು ಇಲ್ಲದಿರುವವನು : ಮೂಗಿಲಿಯೆಸವಂತಂ ಮನೆವಾಗಿಲ್ವಗೆ ಜೋಗಿ ಬಂದನೆಂದೆಳಮಕ್ಕಳ್ ಕೂಗಿಡೆ (ಅಪ್ರತಿ. ೦೯೦-೦೮); ಮೂಗಿಲಿಗಳ ಪುರಕೆ ಸೊಟ್ಟಮೂಗಿನಾತನರಸನೆಂಬ ಹಾಗೆ ನಿಮ್ಮ ಮೂರ್ಖ ಕುಲಕೆ ಆ ಗನ್ನಗತಕಿ (ಯೂವಾ. ೩೭). [ ಮೂಗು + — ಇಲಿ₃ ]

**ಮೂಗಿಱ**, ಮೂಂಕಿಱ, ಮೂಗಿರಿ (ಕ್ರಿ). ೧. ಮೂಗನ್ನು ಶಿವಿ,– ಚುಚ್ಚು. ೨. (ಅಲಂ) (ವಾಸನೆಯನ್ನು ನೋಡಲು) ಮೂಗನ್ನು ಸಮೀಪಕ್ಕೆ ತರು ; ಮೂಸು : ತುಱುಗಳ್ . . . ತದ್ಬಾಲಸಂ ಕಂಡು ಮೂಗಿಱಿಯುತ್ತುಂ ಕುಡಿವಾಲಮೆತ್ತಿ ಕೆನೆಯುತ್ತಾನಂದದಿಂ ಸುತ್ತಿ ಮುತ್ತಿಱದತ್ತಿತ್ತಲವೊಂಕಿ ಪೋಗದಿರೆ (ಧರ್ಮಾಮೃ. ೦೦-೦೯೭). ೩. ಹೀಯಾಳಿಸು ; ಅಪಮಾನಗೊಳಿಸು : ರಿಪುಜನದ ಪೆರ್ಚಿಂಗೆ ಪರಾಂಗನಾಜನದ ಮೆಚ್ಚಿಗಂ ಮೂಗಿಱವಂತೆ ಸೊಗಯಿಸುವ ಗಂಧೇಭ ವಿದ್ಯಾಧರನ ಮೂಗು ತನ್ನ ಸುಯ್ಯ ಕಂಪನಲ್ಲದೆ ಪೆಱರ ಕಂಪನಾಸ ವಡದಂತಾದುದು (ಶಂಖಾ. ೨-೩೯ವ) ; ಉಮ್ಮಳಿಕುಂ ಮೂಗಿಱಗುಂ ಕೆಮ್ಮನೆ ನೆವವಿಟ್ಟು ದೂಱುಗುಂ ಸೋಂಕುವೊಡಂ ಸಮ್ಮನಿಸದೆ ಜಱಗುಂ ನುಡಿಯುಮ್ಮಗುಂ ಪತಿಯನೊಲ್ಲದವಳ್ಪುರುಷ (ಮದನ. ೦೦-೯೦). **ಮೂಂಕಿಱ** : ೨. ದೆಸೆಗಳ್ಗೆ ಬೆರ್ಚಿ ಮೂಂಕಿಱವ ವನಮಹಿಷಗಳಿಂ ಮದಹಸ್ತಿಯಂತೆ ಮರವಾಯ್ದ ಪುಲಿಗಳನತಿಭಯಂಕರಾ ಕಾರಮಪ್ಪ ದ್ವೈತವನಕ್ಕೆ ಬಂದು (ಪಂಪಭಾ. ೭-೨೯ ವ). **ಮೂಗಿರಿ** : ೩. ಮಗುಳೆ ಮಗುಳೆನ್ನುವಂ ಮೂಗಿರಿದು ನಗುತ್ತೇದನು (ಹರಿಶ್ಚ. ೦೯-೩೩). [ಮೂಗು + ಇಱ₁]

**ಮೂಗು**, ಮೂಂಕು₂, ಮೂಕಿ₁, ಮೂಕು, ಮೂಕೆ₁ (ನಾ). ೧. ಪಂಚೇಂದ್ರಿಯಗಳಲ್ಲಿ ಒಂದು ; ಉಸಿರಾಡುವ ಮತ್ತು ವಾಸನೆಯನ್ನು ಹಿಡಿಯುವ ಅವಯವ ; ನಾಸಿಕ; ಘ್ರಾಣೇಂದ್ರಿಯ: "ಸಿಂಘಿನೀ, ನಾಸಿಕಾ, ನಾಸಾ, ಘ್ರಾಣಾ, ಘೋಣಾ –ಈ ೫ ಮೂಗು " (ಹಲಾಯು. ೬೭-೩೭೭) ; ತಾಂ ತೊನ್ನನಾಗಿ ಮುರುಂಟಿದ ಕೈಯುಂ ಕಾಲುಂ ಬೆರಸು ಮೂಗೊಳಗದರ್ದ ರಸಿಗೆ ಸುರಿಯೆ (ವಡ್ಡಾರಾ. ೦೨೨-೨೩) ; ಕಿವಿ ಮೆಯ್ ಕಣ್ ನಾಲಗೆ ಮೂಗಿವು ಶಬ್ದಸ್ಪರ್ಶರೂಪರಸಗಂಧಸಮುದ್ಭವ ಸುಖದೊಳ್ ತೊಡರ್ವುದೆ ಸುಖಂ (ಆದಿಪು. ೦೪-೦೨೭) ; ಮೂಗಿನೊಳುಳ ವಾತಂಗೆ ನೇಗಿಲಂ ಕೊಟ್ಟರೆಂಬಂತೆ (ಧರ್ಮಾಮೃ. ೨-೦೯೯) ; ಅರಸನನುಜನ ಕುಡಿದ ನೆತ್ತರ ಬರಿಸುವೆನು ಮೂಗಿನಲಿ (ಕುಮಾವ್ಯಾ. ೨೦-೩) ; ಮೂಗಿಲ್ಲ ದವಳಿಗೆ ಮೂಗುತಿ ಯಾಕೆ ? (ಗಾದೆ). ೨. (ಪಕ್ಷಿಗಳ) ಮೂತಿ : ಕೊಕ್ಕು : ಚಂಚು : ಅತರ್ದ ಕಮಂಡಲುಜಳಮಂ ತುಡುಂಕೆ ಕಂಡೊಳ ಗಣಸಡಿ ಕಾಗೆಯ ಮೂಗಂ ಪಿಡಿದುಜದಿಱಂಕೆ ಮುಱದವೊಲೆಡಗೆಯ್ದಡಿ ದೊತ್ತಿ ಮುಱಯೆ ಮೂಗಂ ಬೇಗಂ (ಅರ್ಥಸೇ. ೭-೭೩) ; ಕ್ಷಿತಿಯೊಳತಿಶಯ ಮಾದ ಪನಸಫಲಗಂಧದೋನ್ನತಿಗೆರಗಿ ಮೂಗಿನಿಂ ಕಚ್ಚಲದು ದೊರೆಯ ದಿರೆ ಗತಿಯುಳಿದು ಪೋಪ ಶುಕನಿಚಯಕಲ್ಲದೆ ದೋಷಮಾ ಸಮ್ಯಫಲಕಪ್ಪುದೇ (ಶಬರಾ. ೦-೩೮). ೩. ಮುಂದಿನ ತುದಿ ; ಮುಂಗುಡಿ ; ಅಗ್ರ : "ಮೂಗೆನೆ ಮುಂಗುಡಿಯಕ್ಕುಂ" (ಕಕುಂ. ೨೦೫) ; ಮುತ್ತು ಉರುಳಿ ಹೊರಳಿ ಮರಳಿ ಬರಲು ತುಟಿಯ ನನೆಗಿದೆ; ಮುಕ್ತಿ ಉಯ್ಯಲಾಟ ನೋಡು ಮೂಗ ಮೂಗ ತನೆಗಿದೆ (ಅರಳು. ೪೯೫-೭). ೪. ಪಾತ್ರೆ ಮೊದಲಾದುವುಗಳ ಮೂತಿ : (†). ೫. ಧಾನ್ಯ, ಕಾಳು ಮೊದಲಾದುವುಗಳ ತುದಿಯ ಭಾಗ : ನೆಲಗಡಲೆ ಬೀಜವನ್ನು ಹುರಿದು ಟೊಳೆಮಾಡುವಾಗ ಅದರ ಮೂಗನ್ನು ಬೇರ್ಪಡಿಸಬೇಕು (ರೂಢಿ). ೬. ಮಾತನಾಡಲು ಆಗದಿರುವಿಕೆ ; ಮೂಕತನ : 'ಮೂಗ', 'ಮೂಗಟ್ಟಿ' ಪರಾ. ☞ ಈ ಅರ್ಥವನ್ನು ಸಂಸ್ಕೃತದ 'ಮೂಕ' ಶಬ್ದದಿಂದಲೂ ನಿಷ್ಪನ್ನ ಮಾಡುವ ಸಾಧ್ಯತೆ ಇದೆ. **ಮೂಂಕು₂** : ೭. ಗಾಡಿಯ ಮುಂಭಾಗದ ಉದ್ದವಾದ ಮೂತಿ : ಮಿನುಗುವ ಕೊಂಬಿನಚ್ಚು ಕಿಱುಗೊಂಬಿನ ತಳ್ತರಗೀಲ್ . . . ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಗೆ ಚೆಲ್ವನೆ ನಡೆತಂದುವಂದಸುಗೆಯೆಂಬ ನೆಗಟ್ತೆಯ ತೇರ್ಗಳೆತ್ತಲುಂ (ಕಬ್ಬಿಗ. ೨೦೩). **ಮೂಕಿ₁** : ೭. ಕೊನೆಗೆ ಅರ್ಜುನನು . . . ಎದೆಗೆ ಹೊಡೆದನು. ಅದರಿಂದ ನೊಂದು ಭೀಷ್ಮನು ರಥದ ಮೂಕಿಗೆ ಒರಗಿದನು (ಪತ್ರಭಾ. ೦೭) ; ಜಾನಕಿ ಗಾಡಿಯ ಮೂಕಿಗೆ ನಮಸ್ಕರಿಸುತ್ತಿದ್ದಳು (ಗಂಬಾ. ೦೦). **ಮೂಕು** : ೭. ನೂಕಿ ಕೊಯ್ಗೊರಳುಗಳ ಮುಂಡದ ಮೂ[ಪಾಠಾಂ. ಮೋ]ಕಿನಲಿ ನೆಗೆದೊಗುವ ನೆತ್ತರು ನಾಕವನು ಸಾರಿದುದೆನಲು ಸವಱದನು ಪರಬಲವ (ಕುಮಾವ್ಯಾದ್ರೋ. ೩-೪೯). ೭. ಅಚ್ಚು ಮುಱದು ಮೂಕು ಗುಡುಗಿರಿದಾ ಗುಂಬ ನುಚ್ಚುನೂಱಾಗಲಾ ಶಕಟ ಬೆಚ್ಚಿದಂದದಿ ಮಾಯವಾಗಿ ಪೋಗಲು ಕಂಡಚ್ಚರಿಯನು ತಾಳ್ದರೆಲ್ಲ (ಹರಿವಂ. ೦೫-೬೮); ಭಾವಶುದ್ಧದೊಳಂತರಿಕ್ಷವಾ ಪುಷ್ಕರಾಖ್ಯಾವಿಶೇಷದ ಮೂಕು ಮೆಱದವಾ ಬಂಡಿಗಿಂತೆಸೆಯೆ ಪರಿನಿರ್ಮಿ ಸಿದನು (ಪೀಕ್ಷಿಪು. ೨-೦೦-೭) ; ಬಂಡಿಯ ಮೂಕಿನ ಮೇಲೆ ಕುಳಿತು (ಮುಂಬಾಪ. ೮). **ಮೂಕೆ₁** : ೭. ಕೊಲ್ಲಾರಿ ಬಕ್ಕಡಿಗೆ ಹೂಡಿರುವ ಎತ್ತುಗಳ ಕೊರಳ ಗೆಜ್ಜೆಯ ಸರವು ಟಿಂಟಿಣಿಸಲು ಮೂಕೆಯಲಿ ಕುಳಿತಿರುವ ಆಳು ಲಾವಣಿ ಹಾಡೆ ಕಿವಿಗೊಟ್ಟು ಕೇಳುವವು ಜಾನು ಬಯಲಾ ! (ಹಾಡು. ೩-೯೩).

**ಮೂಗ ಕೊಯ್** = (ಅಲಂ) ಅವಮಾನಗೊಳಿಸು ; ಮರ್ಯಾದೆಯನ್ನು ಕಳೆ : ಬಾಗಿಸಿದ ಬಿಲ್ಲಿನಲಿ ರಾಯರ ಮೂಗ ಕೊಯ್ದನು ಮದುವೆಯಲಿ (ಕುಮಾ.ವ್ಯಾ. ೬-೦೦). **ಮೂಗನುಳುಹು** = (ಅಲಂ) ಮರ್ಯಾದೆಯನ್ನು ಕಾಪಾಡು : ಮಾನವನ್ನು ರಕ್ಷಿಸು : ಅಸುರರ ಕೊಂದಮರರ ಮೂಗನುಳುಹಿದ ಬಿಸುಗಣ್ಣನುರುನಾಸಿಕಕೆ ವಸುಧೆಯೊಳಿಲ್ಲುಪಮಾನ (ಶರಾಸಾಂ. ೬-೦೩) ; **ಮೂಗಿಗೆ ಕವಡೆ ಕಟ್ಟಿಕೊಳ್ಳು** = (ಅಲಂ) ಎದುರು ಮಾತನಾಡದೆ ಜೀತದಾಳಾಗಿರು, ‒ ಅಧೀನವಾಗಿರು : ಮೂಗಿಗೆ ಕವಡೆ ಕಟ್ಟಿಕೊಂಡು ಆ ಮಡುಗಿ ಒಬ್ಬಳೇ ದುಡಿದು ಸಾಯಬೇಕು (ಶಿಂಡಿವ. ೬೨) ; ಇಷ್ಟನ್ನೆಲ್ಲ ಹೇಗೊ ಸಹಿಸಿಕೊಂಡು ಮೂಗಿಗೆ ಕವಡೆ ಕಟ್ಟಿಕೊಂಡು ಹೋಗುತ್ತಿದ್ದರೂ (ಮುಖವಾ. ೩). **ಮೂಗಿಗೆ ತುಪ್ಪ ಹಚ್ಚು** = (ಅಲಂ) ಆಸೆಯನ್ನು ತೋರಿಸು : ಬಯಕೆಯನ್ನು ಹುಟ್ಟಿಸು : ಶಿವಪೂಜೆ, ಗುರುಸೇವೆಗಳ ನೆವಮಾಡಿ ದೊರೆಗಳ ಮೂಗಿಗೆ ತುಪ್ಪ ಹಚ್ಚಿಕೊಡ್ರಿಸಬೇಕೆಂದು ಮಾಡಿದ್ದಾಳೆ! (ಗಂಪ. ೦೮೯) ; ನರಗುಂದ ಜಕಾತಿ ಕಟ್ಟಿ ಕೆಲ್ಸಾ ಕೊಡಸ್ತೇನಿ ಅಂತ ಮೂಗಿಗೆ ತುಪ್ಪಾ ಹಚ್ಚಿಕೊಡಿಸಿದಾ (ತಿನ್ಗು. ೬೬). **ಮೂಗಿನ ನೇರಕ್ಕೆ ಮಾತನಾಡು** = (ಅಲಂ) ತನ್ನ ಅನುಕೂಲಕ್ಕೆ ತಕ್ಕಂತೆ ಮಾತನ್ನಾಡು; ತನಗೆ ಸರಿಯಾಗುವಂತೆ ಮಾತನ್ನಾಡು : ನಿನ್ನ ಮೂಗಿನ ನೇರಕ್ಕೆ ಮಾತನಾಡಬೇಕಾದರೆ ಹೆಂಗಸರನ್ನು ಹೆಳವರನ್ನು ಮಂಕರನ್ನು ಮೂಢರನ್ನು ಕೇಳು ಹೋಗು (ಪಹಾ. ೯೯). **ಮೂಗಿನ ಮೇಲೆ ಬೆರಳಿಡಿಸು** = (ಅಲಂ) ಅತಿಯಾಗಿ ಆಶ್ಚರ್ಯಪಡಿಸು,‒ ವಿಸ್ಮಯಗೊಳಿಸು : ಆಕೆಯು . . . ತನ್ನ ಪ್ರಬಲವಾದ ಪರಾಕ್ರಮದಿಂದ ಮಹಾ ಚತುರರಾದ ಇಂಗ್ಲಿಷರಿಗೆ ಕೂಡ ಮೂಗಿನ ಮೇಲೆ ಬೆರಳಿಡಿಸಿರುವಳು (ಭೀಗಟ್ಟು. ೦೦೩). **ಮೂಗಿನಲಿ ಬೆರಳಿಡು** =(ಅಲಂ) ಅತಿಯಾಗಿ ಆಶ್ಚರ್ಯಪಡು,‒ ವಿಸ್ಮಯಗೊಳ್ಳು : ಕೊಂಡು ಬರುತಿದೆ ಭಟರು ಮನ್ನೆಯ ಗಂಡನಾಗ್ಯೆ ಜೀಯ ಎನೆ ಖತಿಗೊಂಡು ಕುರುಪತಿ ನೋಡಿದನು ಮೂಗಿನಲಿ ಬೆರಳಿಟ್ಟು (ಕುಮಾ.ದ್ರೋ. ೬-೨೩). **ಮೂಗಿನವರೆಗೆ ಕೆಲಸ** = (ಅಲಂ) ಬಹಳವಾದ ಕೆಲಸ ; ಅತಿಯಾದ ದುಡಿಮೆ : ಬೇಸಾಯದ ಸಮಯ ಅವನಿಗೆ ಮೂಗಿನವರೆಗೆ ಕೆಲಸ (ಸ್ವಸ್ಥೂ. ೭). **ಮೂಗು ಚಾಚು** = (ಅಲಂ) ಮತ್ತೊಬ್ಬರ ವಿಷಯದಲ್ಲಿ ತಲೆಹಾಕು ; ಅಧಿಕಪ್ರಸಂಗ ವಹಿಸು : ನಿಮ್ಮ ಮನೆತನದ ವಿಷಯದಲ್ಲಿ ಮೂರನೆಯವನಾದ ನಾನು ಮೂಗುಚಾಚಲು ಬರುವುದು ಸರಿಯಲ್ಲವೆಂದು ನನಗೂ ಅನಿಸುತ್ತದೆ (ಗಂಗಾಪ. ೬೩). **ಮೂಗು ತಿಕ್ಕಿಸು** = (ಅಲಂ) ನಿರುತ್ತರಗೊಳಿಸು ; ಸೋಲಿಸು : ತಂಟ ಕೇಶವನು ಸುಮ್ಮನಿರಲಿಲ್ಲ. ಅವನು ಇಂಥ ಎಷ್ಟೋ ಮಾಸ್ತರರನ್ನು ಮೂಗು ತಿಕ್ಕಿಸಿದ್ದನು (ಸಬಿಶೀ. ೨೩). **ಮೂಗು ತಿಕ್ಕು** = (ಅಲಂ) ನಿರುತ್ತರಗೊಳ್ಳು ; ಶರಣಾಗು ; ಸೋಲು : ಅವನ ಮುಂದೆ ದೊಡ್ಡ ದೊಡ್ಡ ಸನಾತನಿಗಳು ಮೂಗುತಿಕ್ಕಬೇಕು ! (ಕುಂಹಿಂ. ೨೨) ; ಶ್ರೀಮಂತರೆದುರಿಗೆ ಈವರೆಗೂ ಮೂಗುತಿಕ್ಕಲಿಲ್ಲ (ಜವಾ. ೫೬). **ಮೂಗುಮುರಿ** = (ಅಲಂ) ಅವಮಾನಗೊಳಿಸು ; ಅವಹೇಳನ ಮಾಡು : ಮೂದಲಿಸಿ ಮೂಗು ಮುರಿದಟ್ಟಿದರೋ ನಿನ್ನೆದೆಗೆ ನನ್ನ (ಕಾವ್ಯ. ೬೯); ವಯಸ್ಸಿಗೆ ಬಂದ ಹೆಣ್ಣಿಗೆ ಬೇಗ ಮದುವೆ ಮಾಡದಿದ್ದರೆ ನೋಡಿದವರೆಲ್ಲಾ ಮೂಗುಮುರಿಯುತ್ತಾರೆ (ಮಠೀ. ೬೬); ಮಹಾದೇವಿ ಮೂತಿ ತಿರುವಿದಳು, ಮೂಗುಮುರಿದಳು (ಸಂಶಾಂ. ೨೯). **ಮೂಗು ಮೇಲಾಗು** = (ಅಲಂ) ಗೌರವವು ಹೆಚ್ಚಾಗು : ಪ್ರತಿಷ್ಠೆಯು ಹೆಚ್ಚು : ಊರ ಹೆಂಗಸರು ಆಕೆಯ ಸಹಜ ಸಿಂಗಾರ ಬಣ್ಣಿಸಿದರು, ದೇಸಾಯರ ಮೂಗುಮೇಲಾಯಿತು (ಶಿರಾಶ. ೦೦೦). **ಮೂಗು ಹಾಕು** = ಮೂಗುಚಾಚು : "ನೀವು ನಮ್ಮ ಮಾತಿನಲ್ಲಿ ಮೂಗು ಹಾಕುವುದು ಬೇಡ" ಎಂದು ಸುಂದರಿ ಅವರಿಗೆ ಎಚ್ಚರಿಸಿದಳು (ಹಳ್ಳಿಹಾ. ೦೮೯). **ಮೂಗುಹಾಯಿಸು** = ಮೂಗುಚಾಚು : ತಮ್ಮ ವ್ಯವಹಾರದಲ್ಲಿ ಮೂಗು ಹಾಯಿಸುವ ಪ್ರೇತಾತ್ಮಗಳಿಗೆ ಕಾಣಿಕೆಗಳನ್ನು ಪ್ರಾಣಿಗಳನ್ನು . . . ಅರ್ಪಿಸುತ್ತಾರೆ (ಕಂಕೋ. I. ೬೬೦). **ಮೂಗು ಹೋಗು** = (ಅಲಂ) ಅವಮಾನವಾಗು ; ಮರ್ಯಾದೆಯು ಹೋಗು : ಈಗಲೀ ಧರ್ಮಶ್ರವಣ ನೀನಾಗಳೇಚಿಸಿ ನುಡಿದ ಭಾಷೆಗೆ ಮೂಗುಹೋದುದೆ ಮಚಿದಲಾ ಮಾತುಗಳು ಹಳಸುವವೆ (ಕುಮಾ.ಶ. ೨೬-೩೪). **ಮೂಗುಳ್ಳವ** = (ಅಲಂ) ಮಾನವಂತನಾದವನು ; ಸ್ವಾಭಿಮಾನಿ : ಈ ನಪುಂಸಕರೊಡನೆ ಹುಟ್ಟಿದ ನಾನು ಮೂಗುಳ್ಳವನೆ ಮಾನಿನಿ (ಕುಮಾ.ವಿ. ೩-೯೪).

[ದೇ.॥ ತಮಿ. ಮಲ. ಮೂಕ್ಕು ; ಕೊಡ. ಮೂಕಿ ; ತುಳು. ಮೂಗು, ಮೂಕು ; ತೆಲು. ಮುಕ್ಕು ; ‒ ಕೋಲಾ. ಮುಕ್ . ಮೂಕ್ಕೂ ; ನಾಯ್ಕ. ಮುಂಗರ್ ; ಪರ್ಜಿ. ಕುಇ. ಮುಂಗೆಲಿ ; ಕುವಿ. ಮುಂಗೆಲಿ, ಮೂಂಗೆಲ್ಲಿ]

**ಮೂಗುಂದ** (ನಾ). ಒಂದು ಪ್ರದೇಶದ ಹೆಸರು : ಮೂಗುನ್ದ ಪನ್ನೆರಡು ಪುಲಿವಟ್ಟೆ ಪನ್ನೆರಡುಂ ಕಲ್ವತ್ತಿಯೆಂಬುದ (ಎಕ. VIII. ಸೊರಬ. ೪೬೭-೦೩; 991): ಬಿಜ್ಜರಸರ್ ಎಡವಟ್ಟವೆಂಟ್ಟತ್ತುಮಂ ರಟ್ಟಪಳ್ಳಿಯೆಂಟ್ಟತ್ತುಮಂ ಮೂಗುನ್ದಂ ಪನ್ನೆ × × ತ್ರಿಭೋಗಾಭ್ಯಂತರಸಿದ್ಧಿ (ಕಇ. IV, ೪೦-೦೦ ; 11ನೆಯ ಶಶ). [ಮೂ$_1$ (< ಮೂಱು) + ಕುಂದ$_3$]

**ಮೂಗುಗಾಯ** (ನಾ). ಹೊರಗೆ ಗಾಯ ಕಾಣಿಸದಿದ್ದರೂ ಒಳಗೇ ನೋಯುವ ಗಾಯ : ಅವನು ಜಾರಿಬಿದ್ದುದರಿಂದ ಮಂಡಿಯಲ್ಲಿ ಮೂಗು ಗಾಯವಾಗಿದೆ (೬೭೨). [ಮೂಗು + ಗಾಯ]

**ಮೂಗುಜಾತಿ** (ನಾ). ಮಾತನ್ನಾಡಲು ಬಾರದ ಪ್ರಾಣಿ, ಪಕ್ಷಿ ಇತ್ಯಾದಿ : ಮೂಗುಜಾತಿಗಳ್ ಮೇವುದು ಪುಲ್ ಜಲಂ ಕುಡಿವುದಿರ್ಪೆಡೆಯುಂ ಪಟುವಂತುಮಿಷ್ಟಸಂಸೇವನೆಯುಲ್ಲಿ ಮೆಯ್ಯರಿಯದಿರ್ಪವನೇಂ ಗಳ ಕೊಲ್ವುದೊಳ್ವತೇ (ಶಿಂಪ. ೦೦-೯). [ಮೂಗು + ಜಾತಿ]

**ಮೂಗುಡ್ಡೆ**, **ಮುಗುಡ್ಡೆ** ; **ಮುಗ್ಗುಡ್ಡೆ** (ನಾ). ೧. ಮೂರು ಗುಡ್ಡೆ, ‒ರಾಶಿ : ಮುಗ್ಗುಡ್ಡೆ, ಮೂಗುಡ್ಡೆ : ಮುಕ್ಕೊಡೆ, ಮೂಗೊಡೆ (ಶಬ್ದ.ಸ. ೩೩೩ ಪ್ರಯೋ). **ಮುಗುಡ್ಡೆ** : ೨. ಮೂರು ಗಡಿಗಳು ಸೇರುವ ಕಡೆ ಗುರುತು ಮಾಡಿರುವ ಗುಡ್ಡೆಗಳು : ತೆಂಕಲು ಬೆಳ್ಳನೂರ ಪೊಲದ ಸೀಮೆ ನೈರಿತ್ಯದಲು ಶಂಖದ ಬಸದಿಯ ಬೆಳ್ಳನೂರ ಪೊಲದ ಮೇರೆಯ ಮುಗುಡ್ಡೆ (ಸೌಇ. XX, ೬೪-೩೫; 1112); ಮಾದೀಹಳಿಯ ಬೇಗೂರ ಮುಗುಡ್ಡೆಲಿ ನೆಟ ಕಲು (ಎಕ. XIV, ಗುಂಡ್ಲುಪೇ. ೦೨೬-೭; ?). **ಮುಗ್ಗುಡ್ಡೆ** : ೧. ಮುಗ್ಗುಡ್ಡೆ, ಮುಪ್ಪೊಟರ್ (ಶಮದ. ೦೯೮ ಪ್ರಯೋ) ; ಮುಗ್ಗುಡ್ಡೆ, ಮುಚ್ಚವಡಿ (ಶಬ್ದ.ಸ. ೬೮ ಪ್ರಯೋ). ೨. ತಸ್ಯ ಸೀಮಾನ್ತರವ ಆಗ್ನೇಯದ ಕೋಣೊಳ್ ಮುಗ್ಗುಡ್ಡೆಯ ನೊಸಕಲ್ಲೆಂಬ ಬಳಿಯ ಕಲ್ಲು (ಪ್ರಕ. ೦೯೨೦, ೦೦-೮೬೯; 967); ಕದ್ರಗಿನ ಪೊಲದ ಕಟ್ಟಲೆವಾಡದ ಪೊಲದ ಮುಗ್ಗುಡ್ಡೆಯ ಬೇಳದ ಮರಂ (ಸೌಇ. XI-i, ೪೮-೦೪; 1002) ; ಅದಕೆ ಪಶ್ಚಿಮ ಕಾರಡಿಕೆ ಬೇವಿನ ಹಳ್ಳಿ ಪೊನ್ನಾಪುರ ಹೊಲ ಕೂಡಿದ ಮುಗ್ಗುಡ್ಡೆ ಬಳಿಯ ವಾಮನಮುದ್ರೆ (ಎಕ. XIV, ೨೨೩-೨೩೮; 1551). ೩. (?) : ಪಿಡಿದ ಶಂಕುಪ್ರಮಾಣಿನ ಗೇಣಿಂದೆ ಉತ್ತಮವಾಗಿರೆ ಬೀಸಿ ಸೈತಿರಿಸಿ ನಡುವೆ ಶಂಕುವುಮಂ ಪೊಯ್ಕು ಪೊಱಮಟ್ಟ ನೆಟಲನಾ ರೇಖೆಯೊಳ್ಚಿಸಿಟ್ಟು ಪಿಡಿಯ ಸೂತ್ರಮಂ ಪಡುವಲುಂ ಮೂಡಲುಮಾಗಿರ್ಪಂ ಮತ್ತಲ್ಲಿ ಮಚ್ಚಂ ಬೀಸೆ ಬಡಗಲುಂ ತೆಂಕಲೆಂದಱಿ ಮೇಣ್ ಪ್ರಾವ[ತಾ]ರೆಯುಂ ನೋಡಿ ಮುಗ್ಗುಡ್ಡೆಯುಂ ನೀಡು ಕೊಳ್ಗೆ (ಲೋಕೋಪ. ೩-೦೬). [ಮೂ$_1$ (< ಮೂಱು) + ಗುಡ್ಡೆ$_1$]

**ಮೂಗುತಿ**, **ಮೂಕುತಿ** (ನಾ). ಮೂಗಿನಲ್ಲಿ ಧರಿಸುವ ಒಂದು ಬಗೆಯ ಒಡವೆ : ನಾಸಾಭರಣ ; ಮೂಗುಬೊಟ್ಟು : ಹೊನ್ನೋಲೆಯು

ಚನ್ನಿಗೆ ಮೂಗುತಿಯ ಮುಂಗುಳ್ಗೆ . . . ರುದ್ರಾಣಿಗೆ ರಕ್ಷಣಾರ್ಥಂ ತಂದೆ ನಿಯಾಮಿಸಿಕೊಟ್ಟ . . . ಶೋಡಷಸಹಸ್ರವಿಳಾಸಿನಿಯರ್ವೆರಸು ನಡೆತಂದು (ಗಿರಿಜಾ. ೩-೯೧ ವ); ಮಾಣಿಕ್ಯದ ಕರ್ಣಪೂರದ ಮೂಗಿನ ಮೂಗು[ಶಾಕಾಂ. ಕು]ತಿಯ ಪಚ್ಚೆಯ ಪದಕದ . . . ಶೃಂಗಾರಂ ಪಳಂಚನಾಗೆ (ರಾಜಶೇ. ೨-೨೩ ವ); ಮುತ್ತಿನ ಮೂಗುತಿಯಂ ವಿರಚನೆಗೆಯ್ದಳ ದೊರ್ವಳ್ ತರುಣಿಯ ನಾಸಾಪುಟಕುಳದೊಳು (ಚಿಕ್ಕುಶಾ. ೫-೯); ಮೂಗುತಿ ಮುಂಭಾರ ಎಣೆಗಂಟು ಹಿಂಭಾರ ನನ ಗೆಣೆಯ ನೀ ತಂದ ಬಣ್ಣ ಸೆರಿ ಭಾರ (ಹಳ್ಳಿಪಾ. ೭೫); ಮೂಗಿಗಿಂತ ಮೂಗುತಿ ಭಾರ (ಗಾದೆ). **ಮೂಕುತಿ :** "ಘೋಣಾಂಕುಶಂ ಪೇಟಿ ಮೂಕುತಿಯಕ್ಕು" (ಮಂಗರಾ. ೯೯-೨೩) ; ಮುಖಬಿಂಬದೊಳ್ ಮುತ್ತಿನ ಮೂಕುತಿಯಂ ಮೇಳೈಸಿ (ಪುಲಿರ. ಹ. ೦೭೭-೦೯) ; ಭೂಗಧಿನಾಥವಲ್ಲಭೆಯ ರೂಪು ಸಮಸ್ತನಿಳಿಂಪಕಾಮಿನೀ ಪೂಗದ ಚೆಲ್ವ ಮೂಕುತಿಗಳಲ್ಲಿಯ ಮುತ್ತುಗಳಲ್ಲಿ ಬೀಬಿಸಲ್ಕೆ (ಶಾರಕ. ೭-೫೮) ; ತುಱುಗಿದ ದಿವ್ಯಕಾಂತಿಯ ಮೂಕುತಿಯಿಂದ ಸರಸಿಜಗಂಧಿ ಯೊಪ್ಪಿದಳು (ಕಂಪಾ. ೯-೭೫). [ದೇ.॥ ತಮಿ. ಮಲ. ಮೂಕ್ಕುತ್ತಿ ; ತುಳು. ಮೂಕುತಿ, ಮೂಂಕುತಿ· ಮೂಂಕುತ್ತಿ, ಮೂಕುದಿ· ಮೂಗುತಿ]

**ಮೂಗುತಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : ಮೂಗುತಿಸೊಪ್ಪು, ಹೊನ್ನಾವರಿಕೇಸೊಪ್ಪು (ವೈಶಿಗ. ೭೭-೦೫೯೯).

[ಮೂಗುತಿ, + ಸೊಪ್ಪು$_2$]

**ಮೂಗುದಾಣ**, ಮುಗದಾಣ, ಮುಗುದಾಣ (ನಾ). ೧. ಪಸು, ಎಮ್ಮೆ ಮುಂತಾದ ಪ್ರಾಣಿಗಳನ್ನು ಹಿಡಿತದಲ್ಲಿಟ್ಟುಕೊಳ್ಳಲು ಮೂಗಿಗೆ ಹಾಕುವ ದಾರ ; ಮೂಗುದಾರ : ಕೋಣನಿಗೆ ಮೂಗುದಾಣವಿರಲಿಲ್ಲ (ಕಂಬಹು. ೪೫). ೨. (ಆಲಂ) ಅಂಕೆ ; ಹಿಡಿತ ; ನಿಯಂತ್ರಣ : ವೇಗವತಿನಾಮ ವಿಜಯವಿಠ್ಠಲ ವೇಗ ಮೂಗುದಾಣ ಇಕ್ಕಿ ಮೊಗ ಮಾಣಿ ಪದು (ಮೋಕ್ಷದೀ. ೪೩-೬) ; ಕೋಣಪನ ಮತಿಗೆ ಕಳ್ಳಂ ಕುಡಿಸಿ. ಗತಿಗೆ ಮೂಗುದಾಣವನಿಕ್ಕಿ· ಪಡೆಪಡೆಯ ಬೇಸರವನಾರಿಸಲ್· ಕುಣಿಕುಣಿಸಿ ಸೆಳೆ ದೊಯ್ಯುತಿಹನೆಮ್ಮ ಹಾಸ್ಯವಿದ್ಯಾಕುಶಲಸೇನಾನಿ ! (ಶ್ರೀರಾಮಾ. ೭೯೯-೩೦೦); ಸಂಪತ್ತಿನ ಮೂಗುದಾಣವು ನಿಮ್ಮ ಕೈಯಲ್ಲಿದೆ ಎನ್ನುತ್ತಾರೆ (ಎಷ್ಟುವು. ೦೫). **ಮುಗದಾಣ :** ೧. ಮುಗದಾಣ ಹಾಕಿ ಹಗ್ಗ ಹಚ್ಚಿದ ಎತ್ತು ಸುಮ್ಮನೆ ಯಜಮಾನನ ಭಾರವನ್ನು ಹೊರುವಂತೆ, ವರ್ಣಾಶ್ರಮಬದ್ಧರಾದ ಜನರು ಈಶ್ವರನು ನಿಯಮಿಸಿದ ಕರ್ಮಗಳನ್ನು ಸುಮ್ಮನೆ ಮಾಡುತ್ತ ಹೋಗುವರು (ಶಾಮ್ಯತ. ೩೨) ; ಸಾಕ್ರೆಟೀಸನ ಹನನ ಬ್ರೂನೋನ ದಹನ . . . ಎಲ್ಲೆಡೆಯೊಳೂ ಜ್ಞಾನ – ನಂದಿಗೇ ಮುಗದಾಣ ! (ಕರುಶ್ರಾ. ೯೪-೪). ೨ ಗೀತೆಯು . . . ಕಾಮಗಳನ್ನು ಕೊಲ್ಲಲಿಕ್ಕೆ ಹೇಳುವುದಿಲ್ಲ. ಕಾಮಗಳಿಗೆ ಮುಗದಾಣವನ್ನು ಹಾಕಲಿಕ್ಕೆ ಹೇಳುತ್ತದೆ (ಗೀತಾಸಂ. ೪೯) ; ಈ ಮೆರವಣಿಗೆಯ ಮುಗದಾಣ ಅವರ ಕೈಯಲ್ಲಿತ್ತು (ಸಮಜೀ. ೪೪೭). **ಮುಗುದಾಣ :** ೧. ಎತ್ತ ಕಾಯುವಣ್ಣ ನಮ್ಮೆತ್ತ ಕಂಡೇನೊ ಮುತ್ತೀನ ಹಗ್ಗ ಮುಗುದಾಣ ಹಾಕ್ಕೊಂಡು ಹುತ್ತೀನ ಕೆಳಗ ಮಲಗ್ಯಾನೊ (ಜನಗೀ. ೦೭), ಹಿಡಿ, ಹಗ್ಗ· ಮಿಣಿ· ಜತ್ತಿಗೆ, ಬಾರಕೋಲು· ಮೂಕ್ಕಡ· ಮುಗುದಾಣ ಇವೆಲ್ಲ ಸಾಮಾನ್ಯವಾಗಿ ಎತ್ತುಕಟ್ಟಿದವರ ಮನೆಯಲ್ಲಿ ಇರತಕ್ಕ ವಸ್ತುಗಳೇ (ಬೆಳವ. ೦೭೭). ೨. ಮೂಢಸಂಪ್ರದಾಯದ ಮುಗುದಾಣದಿಂದ ನೆರೆದ ಜನಗಳು ಕವಲೆತ್ತಿನಂತೆ ತಲೆಹಾಕಿ 'ಹೂಂ' ಎಂದರು (ಕೇದಾವ. ೮೩); ತಿಗುರಿ ಓಡುತ್ತಿರುವ ಕಾಲಿಗೆ ಪಥಿಕನ ಬಯಕೆಯೇ ಮುಗುದಾಣ (ರಕ್ತಧ್ವ. ೨೫೭). 'ಮೂಗುದಾರ' ಪರಾ. [ಮೂಗು + ದಾಣ$_0$ (< ದಾವಣಿ$_1$). /ಮರಾ. ಮುಗದಾಣ]

**ಮೂಗುದಾರ** (ನಾ). = ಮೂಗುದಾಣ ೧ : ಮೂಗುದಾರ ಹಾಕಿ ಎತ್ತುಗಳನ್ನು ಎಳಕೊಂಡು ಹೋಗೋ ಹಾಗೆ ಇನ್ನೊಬ್ಬರ ಭಾವನೆಗಳು ನಿಮ್ಮನ್ನು ಎಳಕೊಂಡು ಹೋಗಬಾರದು (ಮಾರ್ಗದ. ೫೩). 'ಮೂಗುದಾಣ' ಪರಾ. [ಮೂಗು + ದಾರ$_1$]

**ಮೂಗುದುಱಿಸು** (ಕ್ರಿ). ಮೂಗನ್ನು ಕೆರೆದುಕೊಳ್ಳು : ಅವರಿರ್ವರ್ಗ ಮೊರ್ವರೊರ್ವರೊಳ್ ಮೂಗುದುಱಿಸಲಾಗದ ಕಡ್ಡವುವರ್ಗೆಂತು ಪೊಡಂಬಡಾಗದು (ಸಂಶಖಾ. ೦೨-೦೦೩ ವ) ; ಈತಂ ಮನೆಯ ಕಿಱುಕುಳ ವ್ಯಸನಂ ಮಾಡದಿರೆ ತನ್ನ ಕಿಱಿಯಬ್ಬೆ ಜಡಿದೊಡೆ ಮುಳಿದು ಬಂದೊಂ ಮೂಗುದುಱಿಸಲಾಱದ ಕಡ್ಡನೆಂದಾ ತೆಱನಂ ಪೇೞ್ದು (ಶಾಪುಂಪು. ೬೩).

[ಮೂಗು + ತುಱಿಸು]

**ಮೂಗುನಾಚಿ** (ನಾ). (ಆಲಂ) ನಾಚಿಕೆಗೆಟ್ಟವನು ; ಲಜ್ಜೆಗೇಡಿ : ಈ ಸಕಲದೊಳಗೆ ಒಂದು ಸಯವಿಲ್ಲದೆ ನಾವು ಹಿರಿಯರು ನಾವು ಲಿಂಗವಂತ ರೆಂಬರು ಇದಿರ ಕೈಯಲ್ಲಿ ಎನಿಸಿಕೊಳುತ್ತಿಹರು ಮನನಾಚದೇ ಇಂತಾ ಮೂಗುನಾಚಿಗಳ ಮೆಚ್ಚುವನೇ . . . ಪೂರ್ವಾಚಾರ್ಯ ಸಂಗನ ಬಸವಣ್ಣ (ಸರ್ವವ. ೭೧-೩೯೦). [ಮೂಗು + <ನಾಚು$_2$ + — ಇ$_3$]

**ಮೂಗುನೇಣು** (ನಾ). = ಮೂಗುದಾಣ ೧ : ಹೇರ್ಗಳಂ ಬಿಸುಟ ಹೋರಿಗಳ ಚಪ್ಪರಣೆಯಿಂ ನಿಲಿಸಿ ಮೂಗುನೇಣಿಡುತೆ . . . ನಾನಾ ತೆಱದ ಸವಳಿಗಳ್ ನಡೆದು ಬರುತಿರ್ದರಂದು (ಜಿಬಕ. ೪೭-೪೭).

[ಮೂಗು + ನೇಣು (<ನೇಣ್$_1$)]

**ಮೂಗುನೋವು** (ನಾ). ೧. ಮೂಗಿನಲ್ಲಿ ಉಂಟಾಗುವ ನೋವು.– ಬಾಧೆ : ಮೂಗಿನ ಮೇಲೆ ಕುರು ಎದ್ದು ಅವನು ಮೂಗುನೋವಿನಿಂದ ಪರದಾಡುತ್ತಿದ್ದಾನೆ (ರೂಢಿ). ೨. = ಮೂಗುಗಾಯ : ಅವಳು ಮೇಲಿನಿಂದ ಬಿದ್ದುದರಿಂದ ಮೈಯಲ್ಲೆಲ್ಲ ಮೂಗುನೋವಾಗಿದೆ (ರೂಢಿ). ೩. (ಆಲಂ) ಹೇಳಿಕೊಳ್ಳಲಾಗದ ಸಂಕಟ.– ಹಿಂಸೆ ; ಮೂಕ ವೇದನೆ : ಅವನು ತನ್ನ ದುಃಖವನ್ನು ಯಾರೊಂದಿಗೂ ಹೇಳಲಾರದೆ ಮೂಗುನೋವನ್ನು ಅನುಭವಿಸುತ್ತಿದ್ದಾನೆ (ರೂಢಿ). [ಮೂಗು + ನೋವು]

**ಮೂಗುಬಟ್ಟು**, ಮೂಗುಬೊಟ್ಟು (ನಾ). = ಮೂಗುತಿ : ಅವಳು ಧರಿಸಿರುವ ಮುತ್ತಿನ ಮೂಗುಬಟ್ಟು ತುಂಬ ಚೆನ್ನಾಗಿದೆ (ರೂಢಿ). **ಮೂಗುಬೊಟ್ಟು :** ಮನೋರಮೆ . . ಸುಂದರಯುವತಿ . . . ಮೂಗಿನಲ್ಲಿ ಮೂಗುಬೊಟ್ಟು· ಕೈಯಲ್ಲಿ ಗಾಜಿನ ಎರಡೆರಡು· ಮುತ್ತಿನ ಒಂದೊಂದು ಬಳೆಗಳಿವೆ (ಕೃಣಾಕ. ೨). [ಮೂಗು + ಬಟ್ಟು]

**ಮೂಗುಬೊಟ್ಟು** 'ಮೂಗುಬಟ್ಟು' ನೋ.

**ಮೂಗುಬ್ಬಸ** (ನಾ). = ಮೂಗುನೋವು ೩ : ಮುಸುಕಿದರಿ ಶರ ಜಾಲವನು ಖಂಡಿಸಿ ರಘುಕ್ಷಿತಿನಾಥ ಮೂಗುಬ್ಬಸವ ಮಾಡಿದನೆಸುಗೆಯಲಿ ಬಳಿಕಾ ನಿಶಾಟಂಗೆ (ತೊರರಾ. ೩-೬-೩೭) ; ಚಿಂತಾಸಾಗರದೊಳ್ ಮುಱುಂಗಿದ ಮೂಗುಬ್ಬಸಮಂಱಿದು . . . ಪೋಪೆನೆಂಬುದುಂ (ತೆಳವಂ. ೪೮-೦೩) ; ಬಡತನದ ಮೂಗುಬ್ಬಸವನ್ನು ಇದಕ್ಕಿಂತ ಮೇಲಾಗಿ ವ್ಯಕ್ತಪಡಿಸುವುದು ಹೇಗೆ ! (ನವೂರೊ. ೩೭). [ಮೂಗು + ಉಬ್ಬಸ]

**ಮೂಗುಮಾಱಿ** (ನಾ). (ಆಲಂ) ಮರ್ಯಾದೆಯನ್ನು ಕಳೆದುಕೊಂಡ ವ್ಯಕ್ತಿ ; ಮಾನಗೇಡಿ : ಅಱಿದಱಿದು ಮತಿಗೆಟ್ಟ ಮಾನಪಕುಱಿಯಲಾ ನೆರೆಕಂಡು ಕಂಡೆಚ್ಚರದ ಖೂಳನಲಾ ವಿವೇಕದ ಮೂಗುಮಾಱಿಯಲಾ (ಕುಮ್ಯಾಅ. ೬-೮೦) ; ತಮ್ಮ ನಗರದ ಸೂಳೆಗೇರಿಯೊಳ್ ಪಂಥಮಂ ನುಡಿದು ನಿಲ್ಲದೆ ಬಂದ ಮೂಗುಮಾಱಿಗಳಿವರಲಾ (ಶಬಕು. ೨೫-೬).

[ ಮೂಗು + ಮಾಱು$_1$ + — ಇ$_3$ ]

**ಮೂಗುರಿ** 'ಮುಂಗುರಿ' ನೋ.

**ಮೂಗುರ್ಚ** (ನಾ). ೧. ಮೂಗು ಚುಚ್ಚಿಸಿಕೊಂಡವನು ; ಮೂಗುದಾರ ಹಾಕಿಸಿಕೊಂಡವನು. ೨. (ಆಲಂ) ಬೇರೆಯವರಿಗೆ ಅಧೀನನಾಗಿರುವ ವ್ಯಕ್ತಿ,– ಆಳಾಗಿರುವ ವ್ಯಕ್ತಿ : ಲೋಕದಲಿ ವಿಗಡ

ಬಿರುದನು ಬಿಸುಟು ಬಡಿಹೋರಿಗಳು ಪಾಂಡವರಂತೆ ಮೂಗುರ್ಚಿಗಳ ದಿನ್ನಾರ್ರುಂಟೆನುತ ಮುಱುಗಿದಳು ನಳಿನಾಕ್ಷಿ (ಕುಮ್ಮಾ.ಭಿ. ೩-೬೦).

[ ಮೂಗು + ಉರ್ಚು + — ಇ$_3$ ]

**ಮೂಗುರ್ಚು** (ಕ್ರಿ). (ಎತ್ತು, ಎಮ್ಮೆ ಮೊದಲಾದುವುಗಳ) ಮೂಗು ದಾರವನ್ನು ಕಳಚು; ಸ್ವೇಚ್ಛೆಯಾಗಿ ಬಿಡು: ಮೂಗುರ್ಚಿದೆಮ್ಮೆ ಪೋರಿಯುಂ ಪೆಱಪಟ್ಟದ ತಗರುಂ ತಾಗುವಂತೆ ತಂತಮ್ಮೊಳೆಱದಾನೆಗಳಂ ನೂಂಕಿ . . . ಇಱಿವ ಪದದೊಳ್ (ಶಾಂತಿಪು. ೬-೬೨ ವ).

[ ಮೂಗು + ಉರ್ಚು ]

**ಮೂಗುವಡಿಸು** (ಕ್ರಿ). ಮಾತಿಲ್ಲದಂತೆ ಮಾಡು; ಮೌನವಾಗಿಸು; ಮೂಕನನ್ನಾಗಿ ಮಾಡು: ಮತ್ತಪರ ನುಡಿಯುಲಿಯದೆ ಮೂಗುವಡಿಸಿ . . . ಕಾಡುತಲ್ಲಿಹುದೊಂದು ನಡ ಮೋಹರಾಜನ (ಶ್ರಿಕೃಸಾಂ. ೯-೯೮).

[ ಮೂಗುವಡು + — ಇಸು$_3$ ]

**ಮೂಗುವಡು** (ಕ್ರಿ). ಮಾತಿಲ್ಲದಂತಾಗು; ಮೌನವಾಗು; ಮೂಕವಾಗು: "ಮೂಗುವಡು (ಮೂಗು + ಪಡು) — ಮೌನೇ" (ಶಮಧಾ); ಮಿಡುಕದೆ ಭೀಷ್ಮ ನೋಡುತಿರು ಕುಂಭಜ ಸುರ್ಕಿರು ಕರ್ಣ ಮಿಕ್ಕು ಮಾರ್ನುಡಿಯದೆ ಮೂಗುವಟ್ಟಿರು (ಕುಂಶಪಾ. ೭-೩೩); ಗುರುಬಸವ ನಿನ್ನ ಕೋಡಿಂ ಸುರಭಿ ಕರಂ ಮೂಗುವಟ್ಟುದದು ಕಲ್ಲಾಯ್ತು ಪರುಷಂ (ಬಸಲ. ೯-೩); ಬಗ್ಗಿ ಸೆಲೆ ಕೋಗಿಲೆ! ಏನೀ ಮಾಮರದ ಸೆಳಿಗೊಂಬಿನೊಳ್ ಮೂಗುವಟ್ಟಿರ್ಪಯ್? (ರಾಮಾಶ್ರ. ೨-೦).

[ ಮೂಗು + ಪಡು$_1$ ]

**ಮೂಗುಸನ್ನೆ** (ನಾ). ಮೌನವಾಗಿ ಸಂಜ್ಞೆ ಮಾಡುವುದು; ಮಾತನಾಡದೆ ಅಂಗಾಂಗಗಳ ಚಲನೆಯಿಂದ ತಿಳಿಯಪಡಿಸುವುದು: ಮೂಗುಸನ್ನೆ ಮಾತ್ರ ಕಾಣಸಿದಾಗಿನ ಅನುಭವ ನನ್ನ ಶ್ರೋತೃಗಳಿಗೆ ಲಭ್ಯಿಸಬೇಕು (ಪಂಟಿರು. ೩೯).

[ ಮೂಗು + ಸನ್ನೆ$_2$ ]

**ಮೂಗುಸಿರ್** (ನಾ). = ಮೂಗುಜಾತಿ: ಎನ್ನೊಡೆಯ, ತಱಸಂದು ತುಱುಗಳನ್ ಕೊಲ್ವೆಯಾ? ಮೂಗುಸಿರ್ಗಳನ್ ತುಱಿಬಿ, ಮಂದೆಗಳ ನಿಡಿದು . . . ಕಲಿಗಳೊಳೆ ಕಲಿ ಎಂಬ ನೀನಿಂತು ನಿಲ್ವೆಯಾ (ಅಶ್ವತ್ಥಾ. ೯-೦೩೯).

[ ಮೂಗು + ಉಸಿರ್$_2$ ]

**ಮೂಗುಸೆಕೆ** (ನಾ). (ಅಲಂ) ಅತಿಯಾದ ಸೆಕೆ; ಹೆಚ್ಚಾದ ತಾಪ; ಉಬ್ಬುಸೆಕೆ: ಭಾವಣಿಯ ಕೆಳಗೆ ತೇವದ ಹವ ಕವಿಯುತ್ತದೆ; ಕಂಬಗಳ ನಡುವಿನ ಕೈಸಾಲೆಗಳಲ್ಲಿ ಮೂಗುಸೆಕೆ ಹಬ್ಬುತ್ತದೆ (ಹಸುಹೂ. ೨೬೯).

[ ಮೂಗು + ಸೆಕೆ ]

**ಮೂಗುಹರುಕ** (ನಾ). ೧. ಮೂಗು ಹರಿದಿರುವುದು; ಮೂಗಿಲ್ಲದುದು: ಮೂಗುಹರುಕನೊಂದು ಹಳಿಯ ತಲೆಬುರುಡೆ ನಡು ಸಿಲುಬೆಯುಡಿಯಾ ಜಗವ ಬಾಯ್ಕಿಸಿದು ನಗುತಲಿದೆ (ಗೂಲ್ಲೂ ಆ. ೦೩–೩೬೦). ೨. ಮೂಗನ್ನು ಕೊಯ್ಯಿಸಿಕೊಂಡವನು; ಮೂಗು ಹರಿದಿರುವವನು: ಮೂಗು ಹರ[ರು]ಕ ಜೋಗಿ . . . ತಲೆಕೆದರಿದವರು . . . ಲವಣ ಇವುಗಳು ಎದುರಾಗಿ ಬಂದರೆ ಕಾರ್ಯಹಾನಿಯಾಗುವುದು (ಸ್ವೇಗಂಧಿ. ೩೬೩–೨೦).

[ ಮೂಗು + ಹರುಕ ( < ಪಱುಕ ) ]

**ಮೂಗುಳ** 'ಮೂಗೊಳ' ನೋ.

**ಮೂಗುಳಬುದ್ಧಿ** (ನಾ). (ಅಲಂ) ಅತಿಯಾದ ಬುದ್ಧಿ,—ತಿಳಿವಳಿಕೆ: ಮುದಿಯನೂರೊಳ್ಸೆಂಪಗ್ಗಳದ ಬಣಂಜಿಗನೆನೆ, ಮೂಗುಳಬುದ್ಧಿಯ ಕೀರ್ತಿಸಟ್ಟಿಯ ಪೊಗಳದರಾರ್ (ಕಶಾಇ. IX-i. ೨೯೬–೨೭; 1176).

[ ಮೂಗುಳ ( < ಮೂಗೊಳ ) + ಬುದ್ಧಿ ]

**ಮೂಗೆಯ್**. ಮೂಗಯ್ (ನಾ). ಮೂರುಮೊಳದ ಅಳತೆ: ಮೂಗಾವುದಂ, ಮೂಗೋಱು, ಮೂಗೆ[ಪಾಠಾಂ. ಗ]ಯ್ (ಶಮದ. ೦೬೯, ಪ್ರಯೋ). **ಮೂಗಯ್**: ಶೀವಿರ್ದತ್ತು ಮೊದಲ್ಮೊದಲ್ಗೆ ಪಣೆಯುಂ ಮೂಗಯ್ಯು ಮೂಗಯ್ಯೆನಿತ್ತಾಪಕ್ಕೆಯ್ದಿ ಕವಲ್ಕವಲ್ತು ಪಲವುಂ ಕೊಂಬಾದು ವೊಳ್ಗೊಂಬುಗಳ್ (ಅಂಕೃ. ೦೦–೯೩); ಎಸೆವ ಮತ್ತಿಯು ಬಡಗ ಪುತ್ತಿರ್ದೊಡಂ ಪುತ್ತಿನಿಂ ಪಡುವ ಮೂಗಯ್ಯು ನೆಲನಂ ಬಿಸುಟು (ಅಬ್ಬಿಮ. ೦೦–೦೦).

[ ಮೂ$_1$ ( < ಮೂಱು ) + ಕೆಯ್$_2$ ]

**ಮೂಗೆಱೆ** (ನಾ). ಮೂರು ಗೆರೆ: ವರ ಮಂದ ಮಧ್ಯ ತಾರಸ್ವರ ಸೀಮಾರೇಖೆಯೆನಿಸೆ ಮೂಗೆಱೆ ಲಾವಣ್ಯರಸಾಬ್ಧಿಯೊಳಮರ್ದೆಸೆದುದು ಪರಿಕಲಿತ ಸುವರ್ಣಶಂಖಮೆನೆ ಗಳಮವಳಾ (ವೃಷವಿ. ೪–೦೦೦).

[ ಮೂ$_1$ ( < ಮೂಱು ) + ಗೆಱೆ ]

**ಮೂಗೇಟು** (ನಾ). = ಮೂಗುಗಾಯ: ಇತರರೂ ಸಣ್ಣಪುಟ್ಟ ಗಾಯಗಳಿಂದಲೂ ಮೂಗೇಟುಗಳಿಂದಲೂ ನೊಂದು ರೇಗಿ ಒಬ್ಬರ ಮೇಲೊಬ್ಬರು ದೂರು ಹೇಳುತ್ತಾ ಕೂಗಾಡುತ್ತಿದ್ದರು (ಮಲೆಮ. ೯೩೯).

[ ಮೂಗು + ಏಟು$_1$ ]

**ಮೂಗೇಣ್**, ಮೂಗೇಣು (ನಾ). ಮೂರುಗೇಣು ಉದ್ದದ ಅಳತೆ: ಮೂಗೇಣ್, ಮೂಗಾವುದಂ, ಮೂವಣ್ಣಂ (ಶಾಶಾಭೂ. ೦೫೩ ಉದಾ); ಮೂಗೇಣ್, ಮೂಗಾವುದಂ (ಶಮದ. ೦೬೯ ಪ್ರಯೋ). **ಮೂಗೇಣು**: ಮೂಗೇಣಗಲದ ಬಾವಿಗೆ ಆರುಗೇಣಗಲದ ಗಾತ್ರದ ಕುಂಭದ ಬಿಟ್ಟು ಹುರಿಗೂಡಿದ ಕಣ್ಣಿಯಲ್ಲಿ ಸೇದುತ್ತಿರಲಾಗಿ ನೀರು ನೆಲನ ಮುಟ್ಟದೆ ಕುಂಭವ ಬಿಟ್ಟು ಕಣ್ಣಿಯಲ್ಲಿ ತುಂಬಿ ಬಂದಿತ್ತು (ಮೋಳಿಮೂ. ೦೬೯–೭೩೯).

[ ಮೂ$_1$ ( < ಮೂಱು ) + ಗೇಣ್ ]

**ಮೂಗೇಣೆಡು** (ಕ್ರಿ). (ಅಲಂ) ಆಶ್ಚರ್ಯಪಡು: ಕಡುಗಲಿಯು ಪಡೆಬಿಟ್ಟುದಮುಮಾ ಕಡೆಯು ಕಾಣದೆ ಹಲವು ಕಣ್ಣಲಿ ದಡಿಗ ರಾವಣ ನೋಡಿ ಮೂಗೇಣೆಟ್ಟು ಬೆಱಗಾದ (ತೊರಾ. ೦೭–೦೩).

[ ಮೂ$_2$ ( < ಮೂಗು ) + ಗೇಣೆಡು ]

**ಮೂಗೇಣು** 'ಮೂಗೇಣ್' ನೋ.

**ಮೂಗೇರಿಸು** (ಕ್ರಿ). ೧. (ಅಲಂ) ಮೂಗನ್ನು ಅರಳಿಸು; ಆಶ್ಚರ್ಯ ಪಡು: ಇದೇನು ಅಚ್ಚರಿಯ ವಿಷಯವೆಂದು ಯಾರಾದರೂ ಮೂಗೇರಿಸ ಬಹುದು (ಶ್ರೀರಂಗ. ೭೮). ೨. ಅಹಂಕಾರವನ್ನು ತೋರಿಸು; ಬಿಂಕ ಮಾಡು: ನಾನು ಹುಚ್ಚಿಯೋ ಸರಿ ಅವರೇ ಯೋಗ್ಯರು ಒಳ್ಳೆಯವರು ಅವರ ಮನೆಗೆಯೇ ಹೋಗಿರಿ ಎಂದು ಮೂಗೇರಿಸಹತ್ತಿದಳು (ಜನಿಪಾತ್ನಾ. ೨೬); ನೋಡು ನೋಡು ಮಾತಿಗೆ ಮಾತುಕೊಡುವುದಕ್ಕೆ ಎಷ್ಟು ಚೆನ್ನಾಗಿ ಕಲಿತಿದ್ದಾಳೆ . . . ಮುದುಕ ಮೂಗೇರಿಸಿದ (ಮುಕಕೂ. ೩೦).

[ ಮೂಗು + ಏರಿಸು ( < ಏಱಿಸು ) ]

**ಮೂಗೊಂಕು**, ಮುಕ್ಕೊಂಗು (ನಾ). ಮೂರುಕಡೆಯ ಬಾಗು,— ವಕ್ರತೆ; ತ್ರಿಭಂಗಿ: ಅಂತ್ಯಲೋಪಕ್ಕೆ — ಮೂಗೊಂಕು, ಮೂವಿಟ್ಟೆ . . . ಮೊದಲೆ (ಶಮದ. ೦೬೬ ಪ್ರಯೋ); ಓ ಓ! ಒರ್ಪನೆಯ ಬಿಂಕಣಿಗಿವು ಮೂಗೊಂಕುದುಱಿಗಿನ ಪೇರೊಡಲ ಇಲಿದೇರ ಬೆನಕ! (ರಾಮಾಶ್ರ. ೬೬–೨೦). **ಮುಕ್ಕೊಂಗು**: ಆ ಗೋಪಾಲಕೃಷ್ಣಂ ನಲಿದು ಕೊಳಲನೂದುತ್ತಮಿರ್ದುದರಿಂದಾನಂದಂ ಕೈಗಣ್ಮಲಾ ಕಕ್ಕಿಯ ಮುರಣನದಂ ನೆಮಿ ಮುಕ್ಕೊಂಗಿನಿಂದಂ ನಿಂದಿರ್ದೊಪ್ಪಿತ್ತೆ (ಶ್ರೀಪುಶಿ. ೦೩–೩೯).

[ಮೂ$_1$ (<ಮೂಱು) + ಕೊಂಕು$_2$]

**ಮೂಗೊಡೆ**, ಮುಕ್ಕೊಡೆ (ನಾ). ೧. ಮೂರುಕೊಡೆ: ಮುಗ್ಗುಡ್ಡೆ, ಮೂಗುಡ್ಡೆ; ಮುಕ್ಕೊಡೆ, ಮೂಗೊ[ಪಾಠಾಂ. ಕೊ]ಡೆ (ಶಬ್ದಾಮ. ೩೩೩ ಪ್ರಯೋ). **ಮುಕ್ಕೊಡೆ**: ೨. [ಜೈನ] ಜೈನದೇವಾಲಯಗಳಲ್ಲಿ ಜಿನಪ್ರತಿಮೆಯ ಹಿಂದೆ ಸಾಲಾಗಿ ಇರುವ ಚಕ್ರವರ್ತಿಲಾಂಛನದ ಮೂರು ಛತ್ರಿ: ಶ್ರೀಮದಶೋಕಂ ಮುಕ್ಕೊಡೆ ಚಾಮರತತಿ ದಿವ್ಯಭಾಷೆ ಪುರತೂರ್ಯರವಂ ಪೂಮಱೆ ಕೇಸರಿಪೀಠಂ ಭಾಮಂಡಲಮೆಸೆಯೆ

ನೆಗಟ್ಟನೊಸೆದಾದಿಜಿನಂ (ಶಾಪುಂಕ. ೦) ; ದೇಹಾರದ ಮನೆಯಂ ಪೊಕ್ಕು . . . ದೇವರ ಮುಕ್ಕೊಡೆಯೊಳರ್ದ ವೈಡೂರ್ಯ ಮಾಣಿಕಮಂ ಕಾಣದೆ ಪೊಜಿಮಟ್ಟು (ರವರ್ಮ. ೬-೮೮) ; ಓಡಿಯೆನಿಪ್ಪುದು ಕರಿಣಿಯೊಳು ಮುಕ್ಕೊಡೆಯೆನಿಪ್ಪುದು ಜಿನಪತಿಯ ಮುಕ್ಕೊಡೆಯೊಳಲ್ಲದೆ ನೋಳ್ಪೊಡಿಲ್ಲಾ ಮೆಚಿವ ನಾಡೊಳಗೆ (ಶಾಶ್ವ. ೦-೬೦). ೩. ಜೈನದತ್ತಿಗಳ ಗಡಿಗಳನ್ನು ಸೂಚಿಸುವ ಮೂರು ಕೊಡೆಗಳ ಚಿತ್ರವಿರುವ ಮೇರೆಯ ಕಲ್ಲು : ನಾಲ್ಕು ದಿಕ್ಕಿಗು ನಾಲ್ಕು ಮುಕ್ಕೊಡೆ ಸಹ ನಾಲ್ಕು ನೆಟ್ಟ ಕಲ್ಲು (ಎಕ. XI, ಹೊಳಲ್ಕೆ. ೦-೨೩ ; 1154) ; ಆ ಕಿರುಕಟ್ಟದ ಪಡುವಣ ಕೋಡಿಯಲು ಹುಟ್ಟುಗುಂಡಿನಲಿ ಬರದ ಮುಕ್ಕೊಡೆ ಹಸುಬೆ ನೆಟ್ಟೆ . . . ದೇವಳಂಗೆಱೆಯ ತೆಂಕಣ ಕೋಡಿಯ ಗುಂಡಿನಲಿ ಬರದ ಮುಕ್ಕೊಡೆ ಹಸುಬೆ ನೆಟ್ಟೆ (ಎಕ. II, ೩೩೪-೨೯ ; 1282).

**ಮುಕ್ಕೊಡೆಯ ಕಲ್ಲು** = ಮುಕ್ಕೊಡೆ ೩ : ಶೈವದತ್ತಿಗಳ ಮತ್ತು ಜೈನದತ್ತಿಗಳ ಗಡಿಗಳನ್ನು ಹೇಳುವ ಕಲ್ಲುಗಳಿಗೆ 'ಲಿಂಗಮುದ್ರೆಯ ಕಲ್ಲು' 'ಮುಕ್ಕೊಡೆಯ ಕಲ್ಲು' ಎಂಬ ಹೆಸರುಗಳಿರುವ ಹಾಗೆ ಬೌದ್ಧದತ್ತಿಗಳ ಮೇರೆಯ ಕಲ್ಲುಗಳಿಗೆ 'ಶಾಕ್ಯಶಿಲಾ' ಎಂಬ ಹೆಸರಿತ್ತು (ಕಶಾಅ. ೦೦೩). **ಮುಕ್ಕೊಡೆಯೊಡೆಯ** = ಚಕ್ರವರ್ತಿಲಾಂಛನದ ಮೂರು ಛತ್ರಿಗಳನ್ನು ಉಳ್ಳ ಒಡೆಯ ; ಜಿನ ; ಅರ್ಹಂತ : ಅನೂನಭಕ್ತ್ಯನೇರ್ಪಡೆ ಪಿಡಿವುಲ್ಕೆ ಪೂರ್ಣಸಸಿಯಂ ನಗುವಂದದಿನೊಪ್ಪಿ ತೋರ್ಪ ಮುಕ್ಕೊಡೆಯೊಡೆಯಂಗೆ ಮಾಡುವುದು ಪೊಮ್ಮೆಯೆನೀ[ಯಾ]ಗುಮನಂತಸೌಖ್ಯಮಂ (ಸಮಪ. ೦-೦೩೦) ; ಮುಕ್ಕೊಡೆಯೊಡೆಯ ಜಿನೇಂದ್ರನನೊಲ್ದು ಪಾಡಿದರು (ಜಠಕ. ೦-೯೩). [ಮೂ$_1$ (<ಮೂಱು) + ಕೊಡೆ$_2$]

**ಮೂಗೊಲೆ** (ನಾ). ಉರಿಯು ಹೊರಗೆ ಕಾಣಿಸದಂತಿರುವ ಒಲೆ ; ಆವುಗೆ : ಮೆಯ್ಯಿದಿ ನೀಳ್ದ ಸಂಯ್ಯಿದಿಯಿಂವಿರಹಜ್ವರದೇಟ್ಗೆ ಕಿಚ್ಚು ಕೆಂಬಾಯ್ದೆಱೆ ಕೆಂಡದೊರ್ಬುಳಿಕೆ ಮೂಗೊಲೆ ಮೂಗೆನೆ ಪೂರ್ವನಿರ್ಗಳಿಂ ಕಾಯ್ಪುಡವಾಗದಂತು ಪಿಡಿದುಗಜಕಾರಿಂಕನಕ್ಷಿಬಾಣಮಂ ಸಯ್ಯುಱೆ ಕಾಸಿ ಕಾಮಿನಿಯ ಬಾಷ್ಪದೊಳೊಯ್ಯನೆ ನೀರನೂಡಿದಂ (ಶೃಂಗಾರ. ೪-೩೪).

[ಮೂಗ + ಒಲೆ$_1$]

**ಮೂಗೊಳ.** ಮೂಗಳ, ಮೂಗುಳ (ನಾ). ಮೂರು ಕೊಳಗಗಳ ಒಂದು ಅಳತೆ : ಪುತ್ತೂರೊಳು ಕಣ್ಣಂಗೂಳರಸ ಕನಕಾರಿಗೆ ಮೂಗೊಳಂ ೯ಟನಿ ಭಗವತಿಗೆ ಕೊಟ್ಟುದು (ಎಕ. X, ಕೋಲಾರ. ೨೩೦-೯ ; ಸು. 750) ; ನೂಱಾಱು ಖಂಡುಗ ಮೂಗೊಳವಾಗಿರೆ ಕಡಗೊಂಡು ತಿದ್ದಕೊಡುವಲಿ ಯಿಂದುಂ ಬೇರರುಗಳವುಂ ತೂರಲು ಪಾರಿದರಜವೆರಡುಬಳ್ಳ ಪೊಗಲಕ್ಕೆನೊ (ಕಾಸ್ವತ. ೨೯-೨). **ಮೂಗಳ** : ಒಕ್ಕಳ ಕಾಣದವೈಸೂಱ ಇಕ್ಕಳ ಕಾಣದವು ಸೂಱು ಮೂಗಳ ಕಾಣಂ (ವ್ಯವಹಾ. ಕರಣಿಕ ಸೂತ್ರ) ; ನಿನ್ನಿಷ್ಟದ ಕರುಣಿಸುವ ಬೇಡಿನಲು ನವಣೆ ಮೂಗಳದೆಣಿಕೆ ವರಚಕ್ರಗಳನೀವುದೆಂದು ಕೊಂಡಾಡಲ್ (ಕ್ರೌಂಚಾ. ೨-೯೩) ; ಕಾಳಮ್ಮನೆಂಬವಳ್ ಕಗ್ಗಲ್ಲಿನಿಂ ಕರೆದ ಹಾಲನೀಶಂಗುಣಿಸಿದಳ್ ಕಣ್ಣಿಳಂ ಕೊಟ್ಟು ಕಾಳಿದಾಸಂ ಮಗುಳೆ ಮೂಗಳದ ಕಣ್ಣನುರೆ ಪಡೆದನೊಲವಿಂ (ಶಿವಭಿ. ೩೩-೯೩ ರ) ; ಉಪ್ಪಿಲ್ಲದೆ ಮೂಗಳ ಗಂಜಿ ಕುಡಿಯುವವಗೆ ಉಪ್ಪಿದ್ದರೆ ನಾಗಳವೂ ಸಾಲದು (ಗಾದೆ). **ಮೂಗುಳ** : ಪತ್ತುಕೊಳಗ ಭತ್ತಮುಂ ಒನ್ದು ಉಂತೆಯುಂ ಬಣ್ಣಿಗೆ ಮೂಗುಳಮುಂ ಕಪ್ಪಡಕ್ಕೆ ಪಟ್ಟೆಯುಂ ಬ್ರಹ್ಮಲಿಂಗಿಭಟ್ಟರ್ಗೆ ಕೊಟ್ಟುದು (ಮೈಅಂ. ೦೯೪೬, ೨೮-೦೯ ; 1032) ; ಅಂಡೆಯಲ್ಲಿ ಏಗಳ ಕರೆದು ಕಂಡದಲ್ಲಿ ಸುರಿಯಲಾಗಿ ಮೂಗುಳವಾಯಿತ್ತು ಆ ಮೂಗುಳವ ಒಲೆಯ ದೆಸೆಯಲ್ಲಿ ಇರಿಸಲಿಕೆ ಕಾಸೂದಕ್ಕೆ ಮುನ್ನವೇ ನಾಶವಾಯಿತ್ತು (ಸರ್ವಶ. ೦೦೮-೩೭೮) ; ವೆಂಕಟನಿಗೆ ೫ ಕೊಳಗದಲ್ಲಿ ಮೂಗುಳ ಕೊಟ್ಟ (ಎಕ. IX, ಹೊಸಕೋ. ೨೪-೦೦ ; 1745). [ಮೂ$_1$ (<ಮೂಱು) + ಕೊಳ$_1$]

**ಮೂಗೋರು** (ನಾ). (ಕ್ಷೌರಮಾಡಿದ) ಮೂರುಪಟ್ಟೆ : ಕಿಡೆ ಮೂಗೋಱಿ [ರಂ] ಬೋಟಿಸಿ ನಡುದಲೆಯೊಳ್ ಮೆಚಸನೊಡೆದು ಪಣೆಯಂ (ಕಮಚ. ೦೮೮ ಪ್ರಯೋ). [ಮೂ$_1$ (<ಮೂಱು) + ಗೋರು$_1$]

**ಮೂಚೋಟು.** ಮುಚ್ಚೋಟು (ನಾ). ಮೂರು ಚೋಟು : ಒಂದು ಅಳತೆ : ಮುಚ್ಚೋಟು. ಮೂಚೋಟು (ಶಬ್ದಾಮ. ೩೨೦ ಪ್ರಯೋ). **ಮುಚ್ಚೋಟು** : ಮುಚ್ಚೋಟು, ಮುಚ್ಚವಡಿ (ಕಮಚ. ೦೮೮ ಪ್ರಯೋ); ಮುಚ್ಚವಡಿ, ಮುಚ್ಚೋಟು (ಶಬ್ದಾಮ. ೬೮ ಪ್ರಯೋ).

[ಮೂ$_1$ (<ಮೂಱು) + ಚೋಟು]

**ಮೂಜಗ.** ಮುಜ್ಜಗ (ನಾ). ೧. ಸ್ವರ್ಗ, ಮರ್ತ್ಯ ಮತ್ತು ಪಾತಾಳ ಎಂಬ ಮೂರು ಲೋಕಗಳು ; ತ್ರಿಲೋಕ : ಮೂಜಗದಲ್ಲಿ ನಿರತರು ಕೂಡಲಸಂಗನ ಶರಣರು ತ್ರಿವಿಧವನಱಿಯರು (ಬಸವ. ೯೦೦) ; ಉಗ್ರತಪದೊಳ್ ನೆಲಸಿ ನಿಲೆ ತಪಸ್ತೇಜಂ ಮೂಜಗಮಂ ಪರ್ಬಿದಾಗಳ್ (ಗಿರಿಕ. ೪-೦೩ ವ) ; ಮೂಜಗವನೆ ಗೆಲ್ಲುವಾಸೆಯ ತೋರ್ಪರು ಎಲ್ಲ ಕಾಮಿನಿಯರು ಹೊರಗೆ (ಶಂಕಾಶ. ೮೦-೪೦). **ಮುಜ್ಜಗ** : ೧. ವೀಣೆಯಂ ತಾಳವಂ ಮೇಳವಿಸಿ ಮುಜ್ಜಗಂಗಳು ಮೋಹಗೊಳಿಸುವಂತೆ (ಕೌಗಂ. ೦೯೦-೭). ೨. ಮೂರು ಲೋಕಗಳಿಗೆ ಒಡೆಯನಾದವನು; ಪರಮಾತ್ಮ. ೩. ವಿಷ್ಣು : ಮುಜ್ಜಗನ ಕೊಂಡಾಡೊ ಸಜ್ಜನರ ಕೂಡೊ (ಕವಕ. ೨೦೦-೨). ೪. ಶಿವ.

**ಮೂಜಗದೆಱೆಯ** = ಮೂರು ಲೋಕಗಳಿಗೂ ಒಡೆಯನಾದವನು; ವಿಷ್ಣು : ಮೂಜಗದೆಱೆಯನ ಕಾಲ್ಗೊಡ್ಡೆದಳು ಪೊನ್ನಭಾಜನ ಗಂಧವಾರಿಯಲಿ (ಮೋಹತ. ೪-೨೯). **ಮೂಜಗದೊಡೆಯ**, ಮುಜ್ಜಗದೊಡೆಯ = ೧. ಮೂರುಲೋಕಗಳಿಗೆ ಒಡೆಯನಾದವನು ; ಶಿವ : ಅಜಹರಿವಂದಿತ ಮೂಜಗದೊಡೆಯನು ಗಜಾಂಬರ ಹೊದಿಸೂ ಸಿದ್ಧಗೆ ಕರೆದು ಗಿರಿಜೆಗೆ ನಿನ ಕಂದನ ಕೊಳ್ಳೆಂದ (ಸಿದ್ಧಪು. ೩-೯೯). ೨. = ಮೂಜಗದೆಱೆಯ : ಒಳಗಣ್ಣಿನೊಳಗಿಂದ ನೋಡೋ ಮುಜ್ಜಗದೊಡೆಯನ (ಪುರಂದ. ೩-೩ ಅನುಬಂಧ).

[ಮೂ$_1$ (<ಮೂಱು) + ಜಗ]

**ಮೂಟೆ** 'ಮೂಡೆ' ನೋ.

**ಮೂಟೆಕಟ್ಟು** 'ಮೂಡೆಗಟ್ಟು$_1$' ನೋ.

**ಮೂಟೆಸುಂಕ** (ನಾ). ಹೊರೆಗಳ ಮೇಲೆ ಹಾಕುವ ತೆರಿಗೆ, – ಸುಂಕ : ಈ ಗ್ರಾಮಕೆ ಸಲುವ ಗೃಹಾರಾಮ ಕ್ಷೇತ್ರ ಗದ್ದೆ ಬೆದ್ದಲು ಕಾಡಾರಮ್ಭ ನೀರಾರಮ್ಭ ಹೊಗೆಹಣ ಮನೆವಣ ಮೂಟೆಸುಂಕ . . . ಚರಾದಾಯತೆರಿಗೆ ಮುಂತಾದಯೇನು ಉಂಟಾದರೂ ನಿಮಗೆ ಸಲುವುದು (ಮೈಅಂ. ೦೯೪೦, ೪೭-೦೮ ; 1669). [ಮೂಟೆ (< ಮೂಡೆ) + ಸುಂಕ$_1$]

**ಮೂಡ** 'ಮೂಡು$_3$' ನೋ.

**ಮೂಡಗಡಲ್** (ನಾ). ಪೂರ್ವದಿಕ್ಕಿನ ಸಮುದ್ರ : ಅಣಿಯರವಾಡಿ ಮೂಡಗಡಲೊಳ್ ತೆರೆವಾಲೆಯನೆತ್ತಿ . . . ಬಂದೆಸಗಿತ್ತತಿಶೈತ್ಯಕಾರಣಂ . . . ಇಂದ್ರದಿಶಾಸಮೀರಣಂ (ಜಗಪ. ೦೪-೪).

[ಮೂಡ (< ಮೂಡು$_3$) + ಕಡಲ್$_1$]

**ಮೂಡಗಡೆ** (ನಾ). ಪೂರ್ವದಿಕ್ಕು ; ಮೂಡಣ ದೆಸೆ : ನಡೆತಂದ ಚಂಗಳೆ ಸರಸರನೆ ಆ ಮೂಡಗಡೆ ಮೊದಲಾಗಿ ನೀಂದಿರ್ದ . . . ಸುತನಂ ಹಿರಿಯ ದನಿ ದೆಸೆಗೆಯ್ದೆ ಕಡೆಮಲು ತೊಡಗಿದಳು ಜನನಿ (ಬಸವು. ೨೪-೩೭) ; ಅತಿಹರುಷದೆ ಪೂರ್ವಚಂದ್ರನು ಮೂಡಗಡೆಯೊಳೊಪ್ಪಿದನರ್ತಿಯಿಂದ (ಕಂಪಶಿ. ೬-೪) ; ಪಾಳೆಯದೊಳಾ ಮೂಡಗಡೆಯೊಳು ಬಾಲದೊತ್ತಿನಲಿ ನಿಂದವನು ಪಾತಾಳಕೊಯ್ಯಲು ಪಥವ ಕಾಣದೆ ಕಂಡನೂಹೆಯಲಿ (ಉತ್ತಕ. ೩೩-೩೭). [ಮೂಡ (< ಮೂಡು$_3$) + ಕಡೆ$_3$]

**ಮೂಡಗರೆ** (ನಾ). ಪೂರ್ವದ ದಡ ; ಮೂಡಣ ತೀರ : ಬಸದಿಯ ಪಡುವಣ ಎಳೆದೋಣ್ಣುಮುಂ ಪಡುವಣ ತೊಱೆಯ ಮೂಡಗರೆಯ ಪೊಸದೋಣ್ಣುಮುಂ (ಎಕ. X, ಕೋಲಾರ. ೯೧-೯೬ ; 903).
[ಮೂಡ (<ಮೂಡು$_3$) + ಕರೆ$_4$]

**ಮೂಡಗೆ** ' ಮೂಡಿಗೆ ' ನೋ.

**ಮೂಡಗೆಂಪು** (ನಾ). ಪೂರ್ವದಿಕ್ಕಿನ ಕೆಂಪುಕಾಂತಿ : ತರೆ ಸರಳ್ವ ನಡುಗಡಲ ಹಡಗಿನೆಡೆ ಮೂಡಗೆಂಪೇರಿ ಮುತ್ತೊಮ್ಮೆ ಮೇಲೆ ನೆಗೆವ ದೇವರುರಿಗಣ್ಣಂತೆ ತೋರಿ ನೆಗೆಯುತಿದೆ ಮತ್ತೊಮ್ಮೆ . . . ಹಿರಿಯ ಬೆಳಕೊಂದು ಸಿರಿಸಾರಿ (ಹೊಂಗಳು. ೩೩-೯). [ಮೂಡ (< ಮೂಡು$_3$) + ಕೆಂಪು$_1$]

**ಮೂಡಗೆಱೆ** (ನಾ). ಒಂದು ಊರಿನ ಹೆಸರು : ಸೀಮಾನ್ತರಂ ಪಡುವಾಯ್ಕ್ಯಾವೇರಿಯೆ . . . ಮೂಡಗೆಱೆಎ ಬೊಜ್ಜಗೆಱೆಯ ಒಳಗೆಱೆಎ ಕೂಡಿತ್ತು ಸೀಮೆ (ಎಕ. VI (R), ಶ್ರೀರಂಗ. ೬೬-೨೯ ; 800).
[ಮೂಡ (< ಮೂಡು$_3$) + ಕೆಱೆ]

**ಮೂಡಣ್** ' ಮೂಡು$_3$ ' ಪರಾ.

**ಮೂಡಣ** ' ಮೂಡು$_3$ ' ಪರಾ.

**ಮೂಡಣಂ** ' ಮೂಡು$_3$ ' ಪರಾ.

**ಮೂಡದೇಶ** (ನಾ). ಪೂರ್ವದಿಕ್ಕಿನಲ್ಲಿರುವ ರಾಷ್ಟ್ರ,- ದೇಶ : ಪಾಪಕಲ್ಲ ಕುಲತಿಲಕಂ ×[ಳ್ಳ]ಪಿನಾಥ ಮೂಡದೇಶರಕ್ಷಕಂ (ಸೌಇಇ. XI-i, ೪೦-೨೨ ; 969). [ಮೂಡ (< ಮೂಡು$_3$) + ದೇಶ]

**ಮೂಡಮುಖ** (ನಾ). ಪೂರ್ವದಿಕ್ಕು ; ಮೂಡಲು : ಮೂಡಮುಖಂ ಕೇರಿವುಮಂ ಬಸದಿಯಿಂ ಮೂಡಲು (ಇಆ. XVIII, ೩೦೦-೦೬; 11ನೆಯ ಶತ).
[ಮೂಡ (< ಮೂಡು$_3$) + ಮುಖ]

**ಮೂಡಮೊಗ** (ನಾ). = ಮೂಡಮುಖ : ಜಗುನೆಯಂ ಪಾಯ್ದು ಮೂಡಮೊಗದೆ ಪಯಣಂಬೋಗಿ ಮತ್ಸ್ಯದೇಶಮಂ ಪುಗುತಂದರ್ (ಪಂಪಭಾ. ೬-೩೦ ವ) ; ಕಡೆಕೊಳಂ ಮಿೞರವುರಂ ತಣ್ಣೆಯದ ಮುಕ್ಕೊಡು ಮೂಡ ಮೊಗದೆ ಪೋಗಿ (ಪ್ಯಆಂ. ೦೯೩೪, ೩೮-೭ ; 11ನೆಯ ಶತ) ಮೂಡಮೊಗದಿಂ ತ್ರಿದಶಾರ್ಚಿತಪಾದಪಂಕಜಂ ನಿಂದಿರ್ದಂ (ವರ್ಧಪು. ೧೩-೬೦).
[ಮೂಡ (< ಮೂಡು$_3$) + ಮೊಗ]

**ಮೂಡಲ್** ' ಮೂಡು$_3$ ' ಪರಾ.

**ಮೂಡಲಿ** (ನಾ). ಒಂದು ಬಗೆಯ ಸಸ್ಯ : ನಾರೋಲಿ, ಮೂಢಮಾರ, ಮೂಢ, ಮೂಡಲಿ, ಕನಕಚಂಪಕ (ವೈ ಶಿಂ. ೩೬-೧೧೪೦). [ ? ]

**ಮೂಡಲು** ' ಮೂಡು$_3$ ' ಪರಾ.

**ಮೂಡವೆಟ್ಟ** ' ಮೂಡುವೆಟ್ಟ ' ನೋ.

**ಮೂಡವೆಟ್ಟು** ' ಮೂಡುವೆಟ್ಟ ' ನೋ.

**ಮೂಡಾಯ್**, ಮೂಡ್ಡೈ (ನಾ). ಪೂರ್ವದಿಕ್ಕು ; ಮೂಡಲು : ಅನ್ತೆ ಬನ್ದು ಮೂಡಾಯಿನ್ನಿಟ್ಟಿನ್ದ ನೀರಿಱೆವ ಅನ್ತೆ ಬನ್ದು ತೊಲ್ಲೊಱಡಿ ಎ (ಪ್ಯಆಂ. ೦೯೩೬, ೬೩-೨೬ ; 550) ; ತಸ್ಯ ಸೀಮೆ ಮೂಡಾಯ್ಪುರ್ವ್ವಗಳ ಮೆ . . . ಮೂಡಾಯ್ ನೋಡಿ ನಡದು ಇಬ್ಬುಲ್ಗೊಲ್ಲಿಯೆ (ಎಕ. III (R), ಹೆಗ್ಗಡ. ೯೦-೭ ; 750) ; ವಿಜಯಾದಿತ್ಯನ್ ವೀರಚೂಳಾಮಣಿ ಪ್ರಭುಮೇರು ವಡುಗವಟಿ ಪನ್ನಿಚಾಸಿರಮುವರ್ ಮಣ್ಣೆಯಿನ್ಮೂಡಾಯುವರ್ ಪೃಥುವೀ ರಾಜ್ಯಂಗೆ[ಯ್ದು] (ಸೌಇಇ. IX-i, ೩-೬ ; ಸು. ೮ನೆಯ ಶತ). **ಮೂಡ್ಡೈ** : ಪ್ರಥಮಂ ದುಗ್ಗನ್ಕೆಱೆ ಮೂಡ್ಡೈ ಕಡೆ ಗೋಡೆ ಎ (ಎಕ. X (S), ತಳ್ಳೂ. ೬೩-೦೬ ; 850). 'ತೆಂಕಾಯ್', ' ಪಡುವಾಯ್ ' ಪರಾ.
[ಮೂಡು$_3$ + — ಆಯ್$_2$./ತುಳು. ಮೂಡಾಯಿ, ಮುಡಯಿ. ಮುಡಾಯಿ]

**ಮೂಡಾಯಿ** ' ಮೂಡಾವಿ ' ನೋ.

**ಮೂಡಾವಿ**, ಮೂಡಾಯಿ, ಮೂಡಾವೆ (ನಾ). (ಮಲಗುವಾಗ ಅಥವಾ ಕುಳಿತುಕೊಳ್ಳುವಾಗ ಒರಗಿಕೊಳ್ಳುವ) ದಿಂಬು; ಒರಗು ; ಲೋಡು; ಮೆತ್ತೆ : "ಮೂಡಾವಿಯೆಂಬುದುಂ ಕೌಳುಡೆಯೆಂದುಂ ಮಲಗು" (ಕಶಾ. ೬೦-೩೨೯) ; ಕಣ್ಗೊಳಿಸುವ ಮುಡುಹಿನ ಮೂಡಾವಿಗೆ ಕೈಯಿಟ್ಟು ಸುಗೀಶ್ವರನ ಲಲಿತಾಂಗದ ಮೇಲಾ ಸತಿಯುಲರ್ಗಣ್ಣೆಳಗು ಪರಿವು ಮುಸುಕಲು (ಜಯುಕಾ. ೧೯-೭೩) ; ಸೆಳೆಗೊಂಬಿನ ಕೇರ್, ಪಣ್ಣಲೆಯ ಪೊದಕೆ, ಚೆಂದಳಿರ ಪಟ್ಕೆ, ಪೊಸಸುಟಿಯ ಮೂಡಾವಿ, ಅಲರ್ಜೊಂಪದ ಮೇಲ್ಕಟ್ಟು ಚೆಲ್ವಾಗೆ (ರಾಮಾಕ. ೦೯೯-೦೧) ; ಶಾಂತಲಾದೇವಿ . . . ಸೆಜ್ಜೆಯ ರೇಶಿಮೆಯ ಹೊನ್ನ ಜರಿಯ ಮೂಡಾವಿಗಳನ್ನು ಅನುಗೊಳಿಸಿದಳು (ಶವತ. ೪೯). **ಮೂಡಾಯಿ** : ರಾಮಣೀಯಕ ತಾರಕಬ್ರಹ್ಮವುಂ ಮಲಗು ಸಾಮವೇದಾದಿ ನಿಗಮಾರ್ಥಗಳ್ಮೂಡಾಯಿ ನಾಮರೂಪಕ್ರಿಯಾಪೂರಮುಪಚಾರಾಂಗ (ಬಕೋತ. ೨-೩೦). **ಮೂಡಾವೆ** : ಸುಖಾಸೀನದ ಮೂಡಾವೆಗಳಲ್ಲಿ ಸಿಂಗಾರಮ್ಮನು ನೀಳ್ಗೊರಗಿರುವಳು (ಪಟ್ಟಿ. ೧೦-೧). [< ಮೂಡೆ]

**ಮೂಡಾವೆ** ' ಮೂಡಾವಿ ' ನೋ.

**ಮೂಡಿ** (ನಾ). ಹುಟ್ಟುವುದು : ಉದಯ : "ಮೂಡಿ = ಉದಯಂ" (ಕಪುತ. ಶಂ. ೨) [< ಮೂಡು$_1$]

**ಮೂಡಿಕೆ** (ನಾ). ೧. ಭಾವನೆ ; ಅನಿಸಿಕೆ : ಸೌಂದರ್ಯಕ್ಕೆ ಸಂಬಂಧಿಸಿದಂತೆ ಕವಿಯ ಪ್ರತಿಭಾನವ್ಯಾಪಾರ ನಾಲ್ಕು ಘಟ್ಟಗಳಲ್ಲಿ ನಡೆಯುತ್ತದೆ: (೧) ಸುಂದರವಾದ ವಸ್ತುವನ್ನು ಕುರಿತು ಕಲಾವಿದನ ಅಂತರಂಗದಲ್ಲಿ ಆಗುವ ಮೂಡಿಕೆಗಳು (ಸೌಂದಶ. ೬೦). ೨. ಸ್ವರೂಪ : ಕರ್ಣಾಟಕಸಂಗೀತದ ಮಕುಟಮಣಿಗಳಾದ ಈ ತ್ರಿಮೂರ್ತಿಗಳು ಒಂದೇ ಕಡೆಯಲ್ಲಿ ನಡೆಸಿದ ಕಚೇರಿಯ ಅದ್ಭುತ ಮೂಡಿಕೆಯನ್ನು ಮಾತುಗಳಲ್ಲಿ ಅಳವಡಿಸಲು ಸಾಧ್ಯವೇ ಇಲ್ಲ (ಸಂಗೀತ. ೩೦). [ಮೂಡು$_1$ + — ಇಕೆ]

**ಮೂಡಿಗೆ**, ಮೂಡಗೆ (ನಾ). ೧. ಬಾಣಗಳ ಚೀಲ; ಬತ್ತಳಿಕೆ; ತೂಣೀರ: "ತೂಣೀರಂ, ಉಪಾಸಂಗಃ, ತೂಣಂ, ತೂಣೀ, ನಿಷಂಗಃ, ಇಷುಧಿಃ, ಬಾಣಾಶ್ರಯಃ, ಕಳಾಪಃ — ಈ ೮ ಮೂಡಿಗೆ " (ಹಲಾಯು. ೬೬-೩೧೦) ; ತನು ಮೂಡಿಗೆಯಾಗಿರೆ ತಳಿದನಹಿತರೆಜ್ಜೆಂಬುಗಳಂ (ವರ್ಧತು. ೮-೩೩); ನೀಡದೆ ಮೂಡಿಗೆಯಿಂ ಕೈಗೊಡಗುವಹೂಡದಮುನ್ನವೆ ತಿರುವಾಯ್ಗೆಱುವ . . . ಮಹಾದಿವ್ಯಶರಂ (ಜಯುಕಾ. ೭-೦೦). ೨. "ಮೂಡಿಗೆಗಳು ಎಂದರೆ, ಜೊಂಪ (ಚಪ್ಪರ) ಢೇರೆ ಮೊದಲಾದುವುಗಳಿಗೆ ಆಧಾರಗಳಾಗಿ ಮಧ್ಯದಲ್ಲಿ ಸಾಲಾಗಿ ನೆಲೆಗೊಳಿಸಿದ ನೀಳ್ಗಂಬಗಳು" (ಪಾಡೋಟಿ. ೩೦೩): ತೊವಲ್ವೆರಸು ನಟ್ಟಾಲಂಗಳುಮನಮರೆ ಮಾಡಿದ ಬಿಟ್ಟುಳಿಯ ಕಕ್ಕುಂಬ ತೊಡಂಬೆಯ ಮೂಡಿಗೆಯ ಕದಳಿಕಯ ಕಾಂಡಪಟಂಗಳುಮಂ (ಪಂಪಭಾ. ೩-೪೭ ವ) ; P ' ಪಂಪಭಾರತ ದೀಪಿಕೆ 'ಯಲ್ಲಿ ಈ ಪ್ರಯೋಗಕ್ಕೆ ' ಬತ್ತಳಿಕೆ ' ಎಂದೇ ಅರ್ಥ ಹೇಳಿದೆ. **ಮೂಡಗೆ** : ೩. (?) : ಅಱು ಪರಿಯಾಪ್ತಿಗಳೊಳಂ ನೆಱೆದು ತೋಱಲಾಗಿ ಪೊಟ್ಟನೊಡೆದ ಮೂಡಗೆಯ ಗೊಟ್ಟಯಂತಿರೆ ಸಿಡಿಲ್ದುಚ್ಚಳಿಸಿ ಪೋಗಿ ಕೆಟಗೆ ನಟ್ಟಿರ್ದನೇಕವಿಧ ನಿಶಾತಾಯುಧಂಗಳ ಮೇಲೆ ನುಚ್ಚುನೂಱಾಗಿ ಪಚ್ಚುಬಿರ್ದು ಮೂರ್ಛೆವೋಗಿ ಹಮ್ಮೈಸಿ ಮೆಯ್ಯಱಿಯದಿಪ್ಪುದುಂ (ವರ್ಧಮಾ. ೩-೨೬ ವ). [ ? ]

**ಮೂಡಿಸು** (ಕ್ರಿ). ೧. ಹುಟ್ಟಿಸು; ಉಂಟುಮಾಡು : ಅದಾರ್ಗೆ ಜನ ಮುಂದೆ ಮೂಡಿಸದೊ ಮುದದೊದವಂ (ಚಂದ್ರಪು. ೬-೯); ತದ್ದನುಜನ ತ್ನುಮ್ಮಪಾಂ ಸೀಳ್ದು ಲೋಕಂಗಳಂ ನಿರ್ಭಿನ್ನಾನಂದಾಬ್ಧಿಯೊಳ್ ಮೂಡಿಸಿದಳ್ ಜಯ ಮನ್ಮಾತೆ ಪಂಪಾಭವಾನೀ (ಉದ್ಭಟ. ೩-೪೪) ; ಮನ್ಮಥ ಹೊನ್ನ ಹೊದೆಯಿಂದಲೊಂದಂಬ ತೆಗೆದು ಎದೆಯ ಸಂಕುಲದಿ ಮೂಡಿಸಿ ತೋಱಿಸಿ ಬಿಲ್ಲ ಹದೆಯ ಕತ್ತರಿಸಲಿಕ್ಕಿದನು (ಸೋಹತ. ೩೮-೦೬). ೨. (ದೀಪವನ್ನು) ಹಚ್ಚು; ಹೊತ್ತಿಸು : ಒಳಗೆ ಹೋಗಿ ಕಂದೀಲನ್ನು ಮೂಡಿಸಿ, ಅಡುಗೆಯ

ಮನೆಯ ಹೊಸತಿಲ ಮೇಲೆ ತಂದಿಟ್ಟಳು (ಗಂಗಾಜ. ೬೦). ೩. ಅಚ್ಚು ಮಾಡು ; ಮುದ್ರಿಸು : ಉಗಿಯ ಯಂತ್ರದಿಂದ ಲೋಹದಗಳ ಮೇಲೆ ಅಕ್ಷರಗಳನ್ನು ಮೂಡಿಸುತ್ತಾರೆ (ಮುಂಬಯಿ. ೩-೨೯೯); ತನ್ನ ಹೆಸರನ್ನು ನಾನು ಮರೆಯಬಾರದೆಂದು ತನ್ನ ಕೊಡೆಯ ಮೇಲೆ ಮೂಡಿಸಿ ಇಟ್ಟದ್ದಾನೆ (ದೇಶಕ್ಕೆ. ೬೩). [ಮೂಡು₁ + – ಇಸು₃]

**ಮೂಡು₁** (ಕ್ರಿ). ೧. ಹುಟ್ಟು ; ಉತ್ಪತ್ತಿಯಾಗು ; ಉದಯಿಸು : "ಮೂಡು–ಉತ್ಪತ್ತೌ" (ಶಮಣಿ); ನೇಸಱ್ ಮೂಡಿದೊಡೆ ಭಟಾರರಲ್ಲಿಗೆ ನಂದಿಮಿತ್ರಂ ವಂದು ಬಂದಿಸಿ ಇಂತೆಂದಂ (ವಡ್ಡಾರಾ. ೯೨-೦೯); ನೇಸಱ್ ಮೂಡಿದುದು ಬಟಂಗೆ ಮಿಟ್ಟು ಮೂಡುವ ತೆಜದಿಂ (ಶಂಕಚಾ. ೩-೨೭); ಗಱಿ ಮೂಡಿದ ಬಟಿಕ ನೀನೆ ದಲ್ ಪೋದಪ್ಪೆ (ಕಾದಂಬ. ೬೯೩). ೨. ಉಂಟಾಗು ; ತಲೆದೋರು ; ಕಾಣಿಸಿಕೊಳ್ಳು : ಜತುಗೃಹದವಾಪುಟ ಸಂಧಿಗಳೊಳ್ ಸುರಂಗವಂ ಗಂಗೆಯೊಳ್ ಮೂಡುವಂತಾಗೆ ಸಮೆದು (ಶಂಕಚಾ. ೩-೯ ವ); ಮೂಡಿದುವುರದೊಳ್ ಬೊಲೆ (ಜಗನ್ನಾ. ೩-೨೩); ವಿದ್ಯಾರಣ್ಯರ ಮನಸ್ಸಿನಲ್ಲಿ ಸ್ವರಾಜ್ಯಸ್ಥಾಪನೆಯ ಸಂಕಲ್ಪ ಮೂಡಿತ್ತು (ಶ್ರೀವಿದ್ಯಾ. ೦೭೯).

**ಮೂಡಿ ಮುಟುಂಗಾಡು, ಮೂಡಿ ಮುಳುಗಾಡು, ಮೂಡಿ ಮುಟು ಗಾಡು, ಮೂಡಿ ಮುಟ್ಟಾಡು** = ೧. ಕಾಣಿಸಿಕೊಂಡು ಪುನಃ ಕಾಣ ದಂತೆ ಮುಳುಗು,–ಮರೆಯಾಗು. ೨. (ಅಲಂ) ಮಗ್ನವಾಗು ; ತಲ್ಲೀನವಾಗು : ಸಮುನ್ನತಭಕ್ತಿರಸಸುಧಾವಾರ್ಧಿಯೊಳ್ಮೂಡಿ ಮುಟುಂ ಗಾಡುತ್ತುದ್ಬಟ್ಟಕ್ಷಿತೀಂದ್ರಚಂದ್ರಮಂ . . . ಬೆಸಗೊಂಡಂ (ಉತ್ತರಪು. ೨-೨೨ ವ); ರುಚಿರಾಭವಾನಂದಲೀಲೆಯೊಳ್ಮೂಡಿ ಮುಳುಗಾಡುತ . . . ಪದ್ಮ ರಸಗುರುವಂ ನಿರೀಕ್ಷಿಸುತ್ತೆ (ಪದ್ಮರಾ. ೬-೬೩); ಪರಮಾನಂದರಸದೊಳಗೆ ಮೂಡಿ ಮುಳುಗಾಡಿ . . . ಕೈ ನೀಡಿ ಕೊಟ್ಟಂ ನಂದಿಯುಂಡಿಗೆಯ ಪೊಸ ಪೊನ್ನ ಮೊಗಮೊಗೆದು ಶಿವ ನೇಬಿಗೆ (ಸೌಂದರ. ೩-೨೭); ರಾಗರಸದೊಳು ಮೂಡಿ ಮುಳುಗಾಡಿದಳು ಜಿನದತ್ತೆ (ಸಾಳ್ವಭಾ. ೩-೨೩); ಮನಮನುಜಿ ಸೆಱೆವಿಡಿಥ ಸೀಯನಪ್ಪ ಗೇಯರಸಾಬ್ಧಿಪೂರದೊಳ್ ಮೂಡಿ ಮುಟು ಗಾಡುತ್ತುಂ (ಶಾಂತಿಪು. ೨-೨೨ ವ); ಅಂತಾ ರಜನಿಯೊಳ್ ರಾಜೇಂದ್ರ ಚಂದ್ರಂ ಸುರತಸುಖಾಂಭೋಧಿಯೊಳ್ಮೂಡಿ ಮುಟುಗಾಡಿ (ಕಾದಂಬ. ೬೦೬); ಅಂತು ಪುರಮುಮಂತಃಪುರಮುಮಾದಿಪುರುಷಜನ್ಮೋತ್ಸವಸುಧಾಂಬು ರಾಶಿಯೊಳ್ ಕೂಡಿ ಮೂಡಿ ಮುಟ್ಟಾಡುವುದಂ ನೋಡಿ (ಆದಿಪು. ೭-೦೧೩ ವ); ಪೊನಲೊಳಗೆ ಮೂಡಿ ಮುಟ್ಟಾಡುವವೋಲ್ (ಪುಷ್ಪಪು. ೦೩-೯೭).

**ಮೂಡಿ ಮುಟುಂಗು, ಮೂಡಿ ಮುಳುಕು, ಮೂಡಿ ಮುಳುಗು, ಮೂಡಿ ಮುಟ್ಟು** = ಮೂಡಿ ಮುಟುಂಗಾಡು : ನಿಜೋತ್ತರೀಯವಸನಾಂಚಲ ದಿಂ ಮುಸುಕಿಟ್ಟು ಚಿಂತೆಯೊಳ್ ಮೂಡಿ ಮುಟುಂಗಿ ತನ್ನ ಮನದನ್ನ ರೊಳಂ ಮೊದಲಾಗಿ ಕನ್ನೆ ಮಾತಾಡದೆ ಜಾನಿಸುತ್ತಿರಲು (ಕಾದಂಬ. ೩೬೬); ನೋಡುವವಳುಱೆ ಕಾತರಿಪಳು ಮೈಸೋಂಕಿ ಮೂಡಿ ಮುಳುಕಿ ಮೋಹರಸದೆ ಕೂಡಾಗ ಬಿಗಿಯಪ್ಪಿ ಮೊಗಮೊಗವೆರಸಿ ಮುಂಡಾಡಿದಳು (ಕಂಸವ. ೦೦-೩೦); ನೋಡಿ ಪುಳಕದೊಳ್ ಮೂಡಿ ಮುಳುಗುತ್ತೊಮ್ಮೆ ನೋಡಿಯುಮ್ಮಳಿಸುತಾ ನಂಬ್ಯಣ್ಣನಾ ವೃದ್ಧನಾ ಕೂಡೆ . . . ನುಡಿದು (ಸೌಂದರ. ೯-೬೯); ಲೀಲಾರಸದೊಳಗೆ ಮೂಡಿಮುಟ್ಟುವ . . . ಲೀಲಾಕೇಳಿಗಳೆ ವಿಲಾಸಕೇಳಿಗಳ್ ನೃಪನಟಿಯಾ (ಅಜಿತಪು. ೩-೯).

**ಮೂಡು₂** (ಕ್ರಿ). ತುಂಬಿಸು ; ಭರ್ತಿಮಾಡು : ಗಜಿಕೆಯ ತೊಳಚುಯ ದಾಂಗುಡಿಯಿಂ ಚಿವುಂಟಿ ಬಾಟಿವಟ್ಟಿಯೊಳ್ ಮೂಡಿ ತರ್ಪ ಬಾಲವಟು ಗಳಿಂದೆಯುಂ . . . ಪುಣ್ಯಾಶ್ರಮಂ ಮನೋಹರವಾಯ್ತು (ರಾಮಾಶ್ವ. ೯೩-೦೯). [ ? ]

**ಮೂಡು₃, ಮೂಡ** (ನಾ). ೧. ಸೂರ್ಯನು ಹುಟ್ಟುವ ದಿಕ್ಕು ; ಪೂರ್ವದಿಕ್ಕು : ಮೂಡ ದೆಸೆಯೊಳ್ಕೆಂಪು ದೊರೆಯೆ ತಾರಗೆ ಪರೆಯೆ ಕೂಡೆ ತಂಗಾಳಿ ಮುಂಬರಿಯೆ ಕಮಲಂ ಬಿರಿಯೆ . . . ಮೆಱೆದಂ ಪ್ರಭೆಯೊಳಾ ಸುತ್ಯನಾದಿತ್ಯನು (ಕೈವಲ್ಯಾ. ೨-೬೩); ಮುಂಗೋಳಿ ಕೂಗ್ಯಾವು ಮೂಡು ಕೆಂಪೇರ್ಯಾವು (ಹಳ್ಳಿಬಾ. ೦೯). **ಮೂಡ** : ಮೂಡ ಕಱೆಯ ಕಲ್ಪಡಿಗೆ ತೀರ್ತ್ಥವ ಕಲ್ಪಡುವ ಕವ್ಮುಱಿಕಲ್ ನೈರಿತಿಯೊಳೆ ಆ ವಡಕಲ್ ತೆಂಕ ಪೇರೂರ ಪಳ್ಳಂ (ಎಕ. XI, ಮೊಳಕಾ. ೨೭-೩ ; 962) ; ರತಿನಾಟಕಾಭಿ ನಯಮಂ ಕೃತಕೃತ್ಯಂ ಮಾಡಿ ರಯ್ಯವ್ವಾಗಿರೆ ದೀಪದ್ಯುತಿ ಯುವತಿಯ ರೊಳ್ ನಿದ್ರಾವಶರಾದತ್ತು ಮೂಡವೆಳಗಪ್ಪಾಗಳ್ (ಜಗಂ. ೦೬-೦೩೭); ಮೂಡ ಕೆಂಪೊತ್ತಿದುದು ಕಮತಣ್ಣನಾಳಗೆಲರ್ ತೀಡಿತು (ಶಬ್ದರಾ. ೬-೩).

**ಮೂಡಣ್** = ಪೂರ್ವದಿಕ್ಕು : ನೀಲಗಿರಿ ಬಡಗಣ್ದಾ ತಾರಂ ದ್ರಾವಣ ರಣವಕ್ಷಾರಂ ಮೂಡಣ್ಗೆ ತನಗೆ ಸೀಮೆಯೆನಿಕ್ಕುಂ (ಮಲ್ಲಿಪು. ೨-೦೨); ಮೂಡಣಂ, ಮೂಡಣ್ಗೆ (ಶಾಪಾಶೂ. ೩೭ ಉದಾ). **ಮೂಡಣ** = ೧. ಪೂರ್ವದಿಕ್ಕಿನ : ನೆಯ್ದಿಲ್ಗೆಱೆಯಾ ಏಱೆ ಮೂಡಣ್ಣಾಸೀಮೆ ಇಡೆ ವೆಟ್ಟದಾ ಪಡಗಣ್ದಾ ನೀರಿಱಿಗೆ (ಎಪ. XXI, ೦೭೬-೦೩; ಸು. 8 ನೆಯ ಶತ); ಮೂಡಣ ದೆಸೆಯ ವ[ರಾಹ]ಕಱೆಯಂ ಮೂಡಣ ಪಳ್ಳ ಅದಱ ತೆಙ್ಕಣದೆಸೆ [ಮಣ್ಣ ಗೆಱೆ]ಗೂಟ್ಟಂ (ಸೌಇ. XI-i, ೯-೨೭; 862) ; ದೇವತೆ . . . ಕೋಗಳಿಯ ಮೂಡಣ ದೆಸೆಯ ಪರ್ವತದ ಕೊಳದ ತಡಿಯೊಳ್ ಲತಾ ಮಂಟಪದೊಳಿರಿಸಿ ಪೋದೊಡೆ (ವಡ್ಡಾರಾ. ೦೦೬-೯); ನಡೆದು ಬಂದುದು ಕೌರವೇಂದ್ರನ ಪಡೆ ಕುರುಕ್ಷೇತ್ರಕ್ಕೆ ಮೂಡಣ ಕಡೆಯಲಲೆವಡಿಸಿದರು ಬೀಡಾಯಿತ್ತು ವಹಿಲದಲಿ (ಕುಮಾವ್ಯಾ. ೦-೩೦). ೨. ಪೂರ್ವದಿಕ್ಕು : ಪಡುವಣಕೆ ಸಂದ ರವಿ ಮೂಡಣದಿ ಎದ್ದ (ನಂಮು. ೩-೦೯); ಮೂಡಣದಲ್ಲಿ ತಂಗದಿರ ಮೂಡಿದಾಗ ಆ ನಾಲ್ವರು ಮನೆಯನ್ನು ತೊರೆದರು (ಹಾಕುಕ್ಕ. ೯೩). **ಮೂಡಣಂ** = ಪೂರ್ವದಿಕ್ಕಿನವನು : ಮೂಡಣಂ, ತೆಂಕಣಂ (ಶಮದ. ೦೦೦ ಸೃಟೋ). **ಮೂಡಲ್, ಮೂಡಲು, ಮೂಳ್ಲು** = ಪೂರ್ವದಿಕ್ಕು : "ಪ್ರಾಚಿಯೆನೆ ಪೂರ್ವಮೈಂದ್ರಿಯೆನೆ ಮೂಡಲೆನಿಕ್ಕು" (ಮಂಗರಾ. ೦೭-೦೯); ಮನೆಯುಂ ಪೆರ್ಚಿಸುಪೊಡೆ ಮುನ್ನಿನ ಮಾಱ್ಕಿಯೊಳಡ್ಡ ಮೂಡ ೧ ಬಡಗಲ್ ಪೊತ್ತಿ ನಿಮಿರ್ಚುಗೆ (ಲೋಕೋಪ. ೩-೦೭); ಇದು ಪೂರ್ವಾಚಲದುಮ್ಮಿದಿನ್ನಿದು ಸುರೇಂದ್ರಾಶಾದ್ರಿ . . . ಒಪ್ಪುವ ಮೂಡ ಲ್ಲದಿದು ತಾಂ ಮೂಡಲ್ಪನೋರಾಗದಿಂ (ರಘರಾಸ್ಯ. ೯-೦೩೯); ಬಸದಿಯಿಂ ಮೂಡಲು ದಾನಸಾಲೆಗೆ ಪನ್ನಿ[ರ್]ಕ್ಕಯನಿವೇಸಣಮುಮಂ . . . ಬಿಟ್ಟ (ಇಕ. XVIII, ೩೦೦-೦೭; ಸು. 11ನೆಯ ಶತ); ಮೂಡಲು ಮಗುಳೆ ಕೆಂಪೇಱೆ ಕದನಕೆ ಕಳನ ತುಂಬಿತು ಮತ್ತೆ ಕೌರವ ಪಾಂಡವರ ಸೇನೆ (ಕುಮಾವ್ಯಾಶೀ. ೬-೩); ಸೂರ್ಯನು ಪಡುವಣದಲ್ಲಿರುವವರಿಗಿಂತ ಮೂಡಲಿನಲ್ಲಿರುವವರಿಗೆ ಮೊದಲು ಗೋಚರಿಸುತ್ತಾನೆ (ಮುಂಬಯಿ. ೯-೬೭); ಶೆಟ್ಟಿಹಳ್ಳಿಗ್ರಾಮಕ್ಕೆ ಮೂಳ್ಲು ಬಾಗ್ಗನಹಳ್ಳಿ ದಕ್ಷಿಣ (ಎಕ. XIV, ತಿರುಮ. ೦೬೩-೦೯; 1662); ಹಾಲೆ ಬೇಲೂರುಗ್ರಾಮಕ್ಕೆಯಲ್ಲ ಚತುಸ್ಸಿಮ ವಿವರ ಹೇಮಾವತಿಗೆ ಮೂಳ್ಲು ಮೊರಸಾಗರಹಳ್ಳಿಗೆ ಪಶ್ಚಿಮ (ಮೈಕಕಂ. ೦೯೯೩, ೯೬-೦೭; 1666).

[ < ಮೂಡು₁./ ತುಳು. ಮೂಡು ]

**ಮೂಡುಗಟ್ಟನಗಿಡ** (ನಾ). ಒಂದು ಬಗೆಯ ಸಸ್ಯ : ಮೂಡುಗಟ್ಟನ ಗಿಡ, ಬೋಡುಕಡಲೆಸೊಪ್ಪು, ಕರಂಡೆ, ಮೂಡಿಗಿಡ (ಮೈಶಿಗಿ. ೬೦-೦೯೬೦).

[ ? + ಗಿಡ (< ಗಿಡು) ]

**ಮೂಡುನೇಸಱು** (ನಾ). ಹುಟ್ಟುತ್ತಿರುವ ಸೂರ್ಯ; ಉದಯರವಿ: ಮೊದಲ್ ಮೂಡುನೇಸಱ ಕಡೆಗೆ ತಿರುಗು (ಐದ್ಯಕ್ಷ. ೩೭-೯೦೯).

[ ಮೂಡು₁ + ನೇಸಱು ]

**ಮೂಡುವೆಟ್ಟ, ಮೂಡವೆಟ್ಟ, ಮೂಡವೆಟ್ಟು, ಮೂಡುವೆಟ್ಟು** (ನಾ). ಪೂರ್ವದಿಕ್ಕಿನಲ್ಲಿರುವ ಪರ್ವತ ; ಉದಯಾಚಲ : ಓರ್ವ ಅಗ್ನಿ

ಹೋತ್ರಿಯು . . . ಎಳನೇಸರು ಮೂಡುವೆಟ್ಟವನ್ನೇರುವ ಸಂಭ್ರಮವನ್ನು ನೋಡುತ್ತಾ ಮೈ ಮರೆತಿದ್ದನು (ಮಚಿಸ. ೧). **ಮೂಡವೆಟ್ಟ**: ಮೂಡ ವೆಟ್ಟದ ನಡುನೆತ್ತಿಯೊಳಿರ್ದ ಭಾಸ್ಕರನ ಕಂಡೆ ನಾನು (ನಾಗಕು. ೩-೩೨); ಕ್ಷೋದೀಯ್ಯತಾವಾಸಂ ಪರಿಜಾ ದುಃಖಂ ಪೋಗೆ ಮೂದೇವವಾಯ ಮೂಡ ವೆಟ್ಟದುದಿಯನ್ನಡರಿ ನೋಡಿದಂ ಪ್ರೀತಿಯಿಂದೆ (ವೆಂಕಾಶಾ. ೨-೨೭-೧೨). **ಮೂಡವೆಟ್ಟು**: "ಮೂಡವೆಟ್ಟೆಂದು ಪೂರ್ವಾಚಲಂ" (ಕಕಸ. ೪೪-೩೦); ದನಿವಾಡೆ ಕುಕ್ಕುಟ ಪರಿದೋಡೆ ತಿಮಿರ ಪದ್ಮಿನಿಗತಿಸಂತಸಗೂಡೆ ಮನುಜರು ಭೂಪಾಳಿ ಧನ್ಯಾಸಿಗಳ ಪಾಡೆ ಇನ ಮೂಡವೆಟ್ಟಿನೊಳ್ಮೂಡೆ (ಹೀವಂಕಾಂ. ೦೭-೩೪); ಘನಸತ್ತ್ವಂ ವಿಷ್ಣುಪದಾರ್ಚನೆಗೆಯ್ಮಲ್ ಮೂಡವೆಟ್ಟು ಶಶಿಶಂಖದೆ ಪಾಲ್ಗೊನಲಿನಭಿಷೇಕಮಂ ಮಾಟ್ಟಿನವೋಲ್ ಪಸರಿಸಿತೊ ಮಸಗಿ ಪೊಸವೆಳ್ದಿಂಗಳ್ (ಜಕಶ. ೬-೨೪). **ಮೂಡುವೆಟ್ಟು**: ತಾನೆ ಭಾಸ್ಕರಂ ಬೇಗನುಪ್ಪವಡಿಸಿ ಮೂಡುವೆಟ್ಟಿನ ಕೋಡುಗಲ್ಲನೇಱಿ ನಿಟ್ಟಿಸುತಿರ್ದಂ (ರಾವತಾಕ್ಷ. ೨೭-೧); ಹರಿಗೋಲು ಇರುಳೆಲ್ಲ ತೇಲಿ, ನೇಸರು ತನ್ನ ಪೊಂದೇರನ್ ಅಡರಿ ಮೂಡುವೆಟ್ಟಿನ ನೆತ್ತಿಗೈತಹ ಮುನ್ನ . . . ಬಂದು ಈ ದ್ವೀಪವನ್ನು ಸೇರಿದುದು (ಬಗಾಳ. ೨೩-೩). [ಮೂಡ್ತು₃ + ಬೆಟ್ಟ]

**ಮೂಡುವೆಟ್ಟು** 'ಮೂಡುವೆಟ್ಟ' ನೋ.

**ಮೂಡೆ**, ಮಟ್ಟೆ₂, ಮೂಟೆ, ಮೊಟ್ಟೆ₃ (ನಾ). ೧. ಹುಲ್ಲು, ನಾರು, ಬಟ್ಟೆ, ಮೊದಲಾದುವುಗಳಿಂದ ಕಟ್ಟಿದ ದೊಡ್ಡ ಗಂಟು,–ಕಟ್ಟು,–ಹೊರೆ: ನೂಱರ್ಪತ್ತ(ಣ್ಬು)ಕೊಂಬೆ ಗಾರೊಡಂ ಪಡೆಯುಂ ಮೆಣ್ಣ(ಸ್ಸ)ಮೂಡೆ ಜಮಳಿ ಒನ್ದು (ಎಇ. XXI, ಗಶಿಲ್‌೦೬; ೩ನೆಯ ಶಶ); ನೀರ ಮೂಡೆಯ ಕಟ್ಟಿ ಬಯಲಿಗೆ ಬಲೆಯ ಬೀಸಬಹುದೇ ಅಯ್ಯ (ಸಿದ್ಧೇವ. ೬೪೪). ೨. ಧಾನ್ಯ ಮೊದಲಾದುವನ್ನು ತುಂಬಿಸಿ ಕಟ್ಟಿದ ದೊಡ್ಡ ಚೀಲ: ಪುರದ ವೀಧಿಯೊಳಿಡದು ನೆಲ್ಲ ಮೂಡೆಗಳಿರಲು (ಶಂಬರ. ೦೧-೦೦೨); ಬಳ್ಳ ಐವತ್ತರ ಲೆಕ್ಕದ ಅಕ್ಕಿ ಮೂಡೆ ೨೪ (ಎಇ. XX, ೬-೪೩; 1556); ಕಣ್ಣಾಮುಚ್ಚೆ ಕಾಡೇಗೂಡೆ ಉದ್ದಿನ ಮೂಡೆ ಉರುಳೇ ಹೋಯ್ತು (ಹುಬ್ಬಿಕ. ೦೩೪); ಮೂಢನಿಗೆ ಭಯವಿಲ್ಲ, ಮೂಡೆ ಭತ್ತಕ್ಕೆ ಕೇಡಿಲ್ಲ (ಗಾದೆ). ೩. ಚಿಕ್ಕಪೊಟ್ಟಣ,– ಗಂಟು: ತಳಿರ ಮೂಡೆಯೊಳೆ ಮಲ್ಲಿಗೆಯ ಮುಗುಳ್ಗಳನೊಟ್ಟಿ ಮಿಕ್ಕ ಮುಗುಳ್ಗಳ ಮೇಲುದಿಂ ಮೊಟ್ಟೆಯಂ ಕಟ್ಟಿ (ಲೀಲಾವ. ೦೦-೦೦). ೪. ಒರಗಿಕೊಳ್ಳಲು ಉಪಯೋಗಿಸುವ ಉದ್ದವಾದ ದಿಂಬು; ಲೋಡು: ಪಾಡುವ ಗಾನವ ನಿಲಿಸಿ ಮತ್ತೊಱಗುವ ಮೂಡೆಯನೊಱಗಿ ಚಕ್ರೇಶ ನೋಡುತಿರ್ದನು (ಭರತ. ೩೯-೯೯). 'ಒಱಗುವಮೂಡೆ'. 'ಮಲಂಗುಮೂಡೆ' ಪರಾ. ೫. ಒಂದು ಅಳತೆ: ಶಾಸನಗಳಲ್ಲಿ ಬರುವ ನಾಣ್ಯಗಳೂ ಅಳತೆಗಳೂ . . . ಹಾನೆ, ಮೂಡೆ, ಮುಡಿ (ತುಳುಪಾ. ೨೬೦). **ಮಟ್ಟೆ₂**: ೧. ಮಾತೆಯಾ ತಲೆಗೊಂದು ಮಟ್ಟೆಯನ್ನಿರಿಸಿ ತಾಯಂ ಬಯ್ಯುತಂ ನಡೆದನಾ ಕಲ್ಕಿಯು (ತುರಂಗ. ೯೦-೬). **ಮೂಟೆ**: ೧. ಮಂದಿರದಿ ಮೊಟ್ಟೆಯನಿಟ್ಟು ಇಂದುಧರ ಜಂಗಮರ ಅಂದು ಪೂಜಿಸುವ (ಶರೀ. ೦೭೦-೭); ಲಲಿತಾ ಇನ್ನೊಂದು ಮೂಟೆಯನ್ನು ತೆಗೆದುಕೊಂಡು ಹಿಂದೆ ಹೊರಟಳ (ಸುಬ್ಬಿ. ೩೩). ೨. ಹಾಗೂ ಹೀಗೂ ಉದ್ದಿನ ಮೂಟೆ ಕುಲುಕಿದ ಹಾಗೆ ಜನಗಳು ಸವರಿಸಿಕೊಂಡು ಎಲ್ಲರೂ ಕುಳಿತರು (ರಾಮಾಪ. ೦೦೦). **ಮೊಟ್ಟೆ₃**: ೧. ಕುಡುವವನೇನನಿತ್ತಪನೊ ಕಟ್ಟಿ ಬುಧಾಳಿಗೆ ಪೊನ್ನ ಮೊಟ್ಟೆಯಂ ಕುಡುವೊಡೆ ಚೆಚ್ಚರಂ ಕುಡುವುದುಳ್ಳುದಂ (ಲೀಲಾವ. ೦-೩೩); ಮನ ಸೋಂಕಿದ ಸುಖವ ಮೊಟ್ಟೆಯ ಕಟ್ಟಬಹುದೆ (ಅವಕಂ. ೦೩೦-೫೪೯); ಕಂಬಳಿಯೊಳಾತನಂ ಮೊಟ್ಟೆಯಂ ಕಟ್ಟಿ ಪೊತ್ತು ತುದು ಬೀದಿಯೊಳಗೀಡಾಡುವೋಗೆ (ಕುಮ್ಯಾಸ್ರ. ೪-೨೦ ಪ); ಅಟ್ಟಿಕ್ಕುವವನಿಗೆ ಹೆಂಡತಿಯಾಗಬೇಡ, ಮೊಟ್ಟೆ ಹೊರುವವನಿಗೆ ಆಳಾಗಬೇಡ (ಗಾದೆ). ೨. ಭತ್ತವನ್ನು ರಾತ್ರಿಕಾಲದಲ್ಲಿ ಹೊತ್ತುಕೊಂಡು ಹೋಗುವಾಗ್ಯೆ ಭತ್ತದ ಮೊಟ್ಟೆ ತೂತಾದ್ದರಿಂದ ದಾರೀಕಡೆಗೂ ಚೆಲ್ಲಿದ್ದರಿಂದ (ಮೈಶಾಂ. ೦೯೭೯, ೦೯-೩೩; 1402). ೬. ಪೊಟ್ಟಣದಲ್ಲಿ ಕಟ್ಟಿದ ಆಹಾರ; ಬುತ್ತಿ: ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟದರೇನು ಹಸಿವು ಹೋಹುದೇ (ಅವಕಂ. ೪೨-೦೮೯). [ದೇ.॥ ತಮಿ. ಮೂಟೈ, ಮೂಟ್ಟೈ; ಮಲ. ಮೂಡ; ತುಳು. ಮೊಟ್ಟೆ; ತೆಲು. ಪರ್ಜಿ. ಮೂಟ; ಕುವಿ. ಮೂಂಟ; ಕುರುಖ್. ಮೋಠಾ. / ಸಂ. ಮೂಟ, ಮೂಟಕ, ಮೂಡಕ. / ಪ್ರಾ. ಮೂಡ. / ಮರಾ. ಮೂಡ್]

**ಮೂಡೆಗಟ್ಟು₁**, ಮಟ್ಟೆಗಟ್ಟು, ಮೂಟೆಕಟ್ಟು, ಮೊಟ್ಟೆಕಟ್ಟು, ಮೊಟ್ಟೆಗಟ್ಟು (ಕ್ರಿ). ೧. ಗಂಟುಕಟ್ಟು; ಹೊರೆಮಾಡು: ಪಾತಾಳದೊಳಗಿರ್ದ ಶೇಷನ ಕಿತ್ತು ಕೈಕಾಲ ಮುದುಡಿ ಮೂಡೆಗಟ್ಟಿ ಕಟ್ಟುತ್ತೆ (ಶೀಕೃಕೃ. ೨-೦೨-೪೩); ಮೂಡೆಗಟ್ಟಿದ ಧಾನ್ಯ ನಿರುತಾಗಿ ಮೊಳೆವಂತೆ ಕೂಡೆ ರೋಮಾಗಳು ಗುಡಿಗಟ್ಟೆ (ಕೃಕುಕು. ೪-೦೪). ೨. ಗಂಟಾಗು; ಬಾವು ಬರು: ಅಂಜನಚೋರಂಗೆ ಮುಳಿದು . . . ಕಾಲೊಳಂ ಕೈಯೊಳಂ ಮೂಡೆಗಟ್ಟುವಂತೆ ಮೋದಿ (ಧರ್ಮಾಮೃ. ೨-೦೨೦). **ಮಟ್ಟೆಗಟ್ಟು**: ೧. ತಂಬುಲಿಗರ ಸಂಬಲಿಯಂ ಮಟ್ಟೆಗಟ್ಟುವವರಂತೆ ಕೋಡಗಟ್ಟಂಗಟ್ಟಿ ಕಾಡುವಂ (ಧರ್ಮಾಮೃ. ೨-೭೭). **ಮೂಟೆಕಟ್ಟು**: ೧. ಅರ್ಜುನನನ್ನು ರಣಾಂಗಣದಲ್ಲಿ ಜಯಿಸುವುದಕ್ಕೆ ನಿಶ್ಚಯಿಸುವುದು ಘಾಳಿಯನ್ನು ಹಿಡಿದು ಮೂಟೆಕಟ್ಟುವುದಕ್ಕೂ . . . ಎಣಿಸಿದ ಹಾಗೆ (ಕೃವಾಕ. ೬೨); ಆ ವೀರಭೂಮಿಯ ಸ್ವತಂತ್ರರಾಣಿಯನ್ನು ಬಲಾತ್ಕಾರದಿಂದ ತಂದರೆ, ಹಿಂದೂ ಪಾಳೆಯಗಾರರ ವಿರೋಧಾನಲವನ್ನು ಮೂಟೆಕಟ್ಟಿ ಪಟ್ಟಣಕ್ಕೆ ತಂದಂತೆಯೇ ಸರಿ (ದುಗೇಶ. ೪೭). ೩. ಧಾನ್ಯ ಮುಂತಾದುವನ್ನು ಚೀಲದಲ್ಲಿ ತುಂಬಿಸಿ ಕಟ್ಟು: ಅವನು ಭತ್ತವನ್ನು ಮೂಟೆಕಟ್ಟಿ ಸಂತೆಗೆ ಮಾರಲು ತೆಗೆದುಕೊಂಡು ಹೋದನು (ರೂಢಿ). ೪. ಒಟ್ಟುಗೂಡಿಸು; ಒಟ್ಟಾಗಿ ಬಂಧಿಸು: ಹೆಣ್ಣಿನ ತಂಟೆ ಇನ್ನು ಬೇಡವೆಂದು ರೋಷವನ್ನೆಲ್ಲಾ ಮೂಟೆಕಟ್ಟಿ ಇಟ್ಟಿದ್ದ ಭೀಮನೂ ಮತ್ತೆ ಕೆರಳಿದನು (ಕಾವ್ಯಸ. ೮೪); ಆ ಸೇಡನ್ನು ಅವನು ಮೂಟೆಕಟ್ಟಿ ಮನದ ಮೂಲೆಯಲ್ಲಿ ಬಚ್ಚಿಟ್ಟುಕೊಂಡನು (ಬ್ರಾಕಾ. ೯೦). **ಮೊಟ್ಟೆಕಟ್ಟು**: ೧. ನನ್ನ ಜುಬ್ಬವನ್ನು ತೆಗೆದು ಪಂಚೆಯನ್ನು ಎತ್ತಿ ಮೊಟ್ಟೆಕಟ್ಟಿ ಕೆರೆಯೊಳಗಿಳಿದೆ (ಹಂಗಾಕ್ಕ. ೩೩೩). ೪. ಮಂದಾ ಅವಸರದಿಂದ . . . ಒದ್ದಾಡುವ ಮನಸ್ಸನ್ನು ಒಟ್ಟುಗೂಡಿಸಿ ಮೊಟ್ಟೆಕಟ್ಟಿ ಅಂತೂ ಕುಳಿತುಕೊಂಡಳು (ಇಕ್ಕೆಳ. ೨೩೩). **ಮೊಟ್ಟೆಗಟ್ಟು**: ೧. ಪುದಿಗತ್ತುರಿಯೆಂದು ಪಡಿಕಿಯ್ಸಿ ಪೂಸಲುಂ ಪಾಸಿ ಮೊಟ್ಟೆಗಟ್ಟಲುಂ . . . ಅಪ್ಪ ಕಾಳದ ಕಟ್ಟಲೆಯೊಳ್ (ಅರ್ಥಸೇ. ೩-೦೪ವ); ತನ್ನ ಮನದಣಿವನಿತು ಪೊನ್ನಂ ತನ್ನ ವಸನದಿಂ ಮೊಟ್ಟೆಗಟ್ಟಿ ಸಡಗರಂ ಮಿಗೆ ಪೊತ್ತು (ವೃಕಶ. ೦೯-೦೫ ವ); ಹುಟ್ಟುವಾಗಲೆ ಧನವ ಮೊಟ್ಟೆಗಟ್ಟಿಡಿಹನೆ (ಸರ್ವಜ್ಞ. ೬೦೯). [ಮೂಡೆ + ಕಟ್ಟು₁]

**ಮೂಡೆಗಟ್ಟು₂** (ನಾ). ಮೂಡೆಗಳನ್ನು ಕಟ್ಟುವಂತೆ ಕಟ್ಟುವ ಒಂದು ಬಗೆಯ ಬಿಗಿಯಾದ ಬಂಧ, – ಕಟ್ಟು: ಈಗಳೊರ್ವಂ ಗಂಧರ್ವಂ . . . ಕುರುರಾಜನುಮಂ ಯುವರಾಜನುಮನೊಡನೆ ಮೂಡೆಗಟ್ಟುಗಟ್ಟಿಕೊಂಡು ಗಗನಮಂಡಳಕ್ಕೊಗೆದು ಪೋದಂ (ಪಂಪಭಾ. ೦೦-೭೦ವ); ಮೂಡೆಗಟ್ಟಂ ಕಟ್ಟಿ ಹುಡುಕುನೀರೊಳ್ ಮೆಟ್ಟಿ ಕಾಡುತಿಹ ಪಾಮರರ ಕೈವಿಡಿತೆಗೊಳಗಾಗಿ (ರಾಜಶಂ. ೨-೬); ಮೂಡೆಗಟ್ಟಂ ಕಟ್ಟಿ ಹುಡುಕುನೀರೊಳಗದ್ದಿ ಕೂಡೆ ಮೂಗಂ ಕೊಯ್ದೊಡೆ (ಗುರುಪಾ. ೦-೩೩). [ಮೂಡೆ + ಕಟ್ಟು₂]

**ಮೂಡೈ** 'ಮೂಡಾಯ್' ನೋ.

**ಮೂಡೊಂಕು** (ನಾ). ಮೂರು ಕಡೆಗಳಲ್ಲಿ ಬಾಗಿರುವುದು, – ಡೊಂಕಾಗಿರುವುದು: ಮಲಷರನ ನಡುವೊಂದೆಸೆಗೆ ಒಲಿದೊಲಿದುಕೊಂಡಿದೆ . . . ಮೂಡೊಂಕಾಗಿ ಕಾಲೊಂದು ನೆಲನನೂಱಿತ್ತೊಡಲನಾಂತುದು ಉಳಿದ ಮೆಲ್ಲಡಿ (ಬಸವು. ೦೭-೨); ಜಡದ ಖಂಡೆಯದ ಮೂಡೊಂಕ ತಿದ್ದದ

ಮುನ್ನವಡಿಗೆಜಗಿದುದು ಕೇಶವನ ಪೊಸವಿ ತ್ರಿಖಂಡವೆ ಷೋಡಶರಾಯರು ಪಡೆದರು ಭೃತ್ಯಭಾವವನು (ವರ್ಧಿತ. ೬-೩೦).

[ಮೂ಼₁ (< ಮೂಜು) + ಡೊಂಕ್ಕು]

**ಮೂಢ** (ಗು). ೧. ತಿಳಿವಳಿಕೆಯಿಲ್ಲದ ; ಅವಿವೇಕದಿಂದ ಕೂಡಿದ : 'ಮೂಢನಂಬಿಕೆ', ' ಮೂಢಭಕ್ತಿ' ಪರಾ. (ನಾ). ೨. ತಿಳಿವಳಿಕೆಯಿಲ್ಲದವನು; ತಿಳಿಗೇಡಿ; ಅಜ್ಞ: "ವೈಧೇಯಃ . . . ಮೂಢಃ . . . ಮಾತ್ಯ ಶಾಸಿತಃ — ಈ ೧೧ ಅಜ್ಞರಿಯುದವಂ" (ಶಬ್ದಮಣಿ. ೩೬-೦೮೦); ಮೂಢ ಬಲ್ಲನೆ ಜ್ಞಾನದೃಢ ಭಕುತಿಯ (ಪ್ರಭುಲಿಂ. ರಾ. ೩-೦೪೦ ಕಲ್ಲಿಂ); ಮೂಢ ಪಿಂದಿರುಗಿ ಪೋಗಿ ಸಲಹಿಕೊ ಶರೀರಮಂ (ಪಂಚತಂ. ೩-೩-೦೦). ೩. ಪೆದ್ದ; ಮಂಕ : ಮೂಢಗೆ ಹೇಳಿದ ಬುದ್ಧಿ ಅಡಿಗೆ ಹಾಕಿದ ಮೇವು (ಗಾದೆ). ೪. ಆಲಸ್ಯ; ಸೋಮಾರಿತನ : ಮೂಢವೆಂದರೆ ತಮೋಗುಣದಿಂದ ನಿದ್ರೆಯಲ್ಲಿರುವ ಹಾಗೆ ಆಲಸ್ಯದಲ್ಲಿರುವುದು (ಹಿಂದಶಾ. ೧೦೩). ೫. = ಮೂಢತ್ರಯ : ಮೂಜುಮೂಢದಿನಾಜಿನಾಯತನಸೇವೆಯಿಂ . . . ಪಿಂಗಿದ ನಿರ್ಮಳಮಪ್ಪ ಸಮ್ಯಕ್ತ್ವರತ್ನಮಂ ಕೈಕೊಂಡು (ಸುಕುಮಾ. ೩-೬೪ ವ); ಬೆಸನಾವುದುಮೆನುತವೆ ಮೂಜುಮೂಢಗಳೊಳೆಸೆದು ಬಿನ್ನಹವ ಮಾಡುವರು (ತ್ರಿಷಷ್ಟಿ. ೬-೬೦); ಮೂರು ಮೂಢಗಳೆಂಟುಮಲವಿನ್ನಾರ ನಾಯತವಷ್ಟಮದಗಳ ಬೇರುಪಡಿಸಲು ದರುಶನೀಕನುಮೆನಿಪನು (ಜಗನ್ನಾಥ. ೩೯೯-೨೪). ' ಮೂಢತ್ರಯ ' ಪರಾ. [ಸಂ.]

**ಮೂಢತನ** (ನಾ). ತಿಳಿವಳಿಕೆಯಿಲ್ಲದಿರುವುದು ; ಮೂರ್ಖತನ : ರೂಢಿ ಮಾಡಿದ ಧರ್ಮಗತಿಯಲಿ ಗಾಢಮಾಡಿದ ಸರ್ವಜನಗಳ ಮೂಢತನ ಬಯಲಾಗಿ ಹೋಯಿತು (ಸಂಕಹ. ೪-೩೪). [ಮೂಢ + — ತನ]

**ಮೂಢತೆ** (ನಾ). ೧. = ಮೂಢತನ : ಮೂಢತೆಯಂ ಬಿಟ್ಟು ಪೆಜರ್ ಮಾಡುವ ಡೊಂಬಿಂಗೆ ಬೇಗಮೆಜಗದೆ ಮೂರ್ಖರ್ ಮಾಡುವುದಂ ಲೇಸೆನ್ನದೆ ಕೂಡುವುವಾರಯ್ದು ಮೂಢದೃಷ್ಟಿಯೊಳೆಜಿವಂ (ಧರ್ಮಾಮೃ. ೩-೩); ಬೀತುದು ಬಿಂಕಮೋಡಿದುದು ಮೂಢತೆ ಮೂಡಿದುದಶ್ರು ಕಣ್ಗಳೊಳ್ . . ಬೆಳ್ಪಳಿಸಿ ಬೇವಸಮಂ ತಳೆದಂ ಧನಂಜಮಂ (ಕಂಕಂ. ೪-೦೦೩). ೨.ದಿಗ್ಭ್ರಮೆ; ಕಕ್ಕಾಬಿಕ್ಕಿ. [ಸಂ. ಮೂಢತಾ]

**ಮೂಢತ್ರಯ** (ನಾ). [ಜೈನ] ಲೋಕಮೂಢ, ದೇವತಾಮೂಢ ಮತ್ತು ಪಾಖಂಡಿಮೂಢ ಎಂಬ ಮೂರು ಬಗೆಯ ಮೂಢತನ.– ಮೌಢ್ಯ : "ದೇವಮೂಢ, ಲೋಕಮೂಢ, ಗುರುಮೂಢ ಇವು ಮೂಢತ್ರಯಗಳು. ದೇವಮೂಢ : — ಮಿಥ್ಯಾದೇವರ ಉಪಾಸನೆ. ಲೋಕಮೂಢ : —ನದಿಸ್ನಾನ, ಪರ್ವತದ ಮೇಲಿಂದ ಬೀಳುವುದು ಮುಂತಾದವುಗಳು ಪುಣ್ಯಕರವೆಂದು ಭಾವಿಸುವುದು. ಗುರುಮೂಢ : — ಆರಂಭಪರಿಗ್ರಹಗಳುಳ್ಳ ವಿಷಯವಾಸನೆಯಿಂದ ಕೂಡಿದ ಪಾಖಂಡಿಗಳನ್ನು ಮುನಿಗಳೆಂದು ಭಾವಿಸಿ ಪೂಜಿಸುವುದು. ಇದಕ್ಕೆ ಪಾಖಂಡಿಮೂಢವೆಂದು ಅನ್ನುತ್ತಾರೆ" (ಆದಿಪು. ಶ್ಲೋಕಶಬ್ದಾರ್ಥ ಕೋಶ) : ಜೀವಾದಿ ನವಪದಾರ್ಥದೊಳಾವಗಮುಟ್ಟಿಯನೆ ಮಾಡು ಮೂಢತ್ರಯದೊಳ್ ಭಾವಮನೆ ಬಿಸುಡು (ಆದಿಪು. ೩-೩೬). [ಸಂ.]

**ಮೂಢತ್ವ** (ನಾ). = ಮೂಢತನ : ಪೀಡೆಪಟ್ಟರೂ ಮೂಢತ್ವ ಹೋದೀತೇ! (ಗಾದೆ). [ಸಂ.]

**ಮೂಢನಂಬಿಕೆ** (ನಾ). ಹಿಂದಿನಿಂದ ಬಂದ ಸಂಪ್ರದಾಯಗಳನ್ನು ವಿವೇಚನೆಯಿಲ್ಲದೆ ನಂಬುವುದು ; ಕುರುಡುನಂಬಿಕೆ : ಇದರ ಮೂಲಕ ದೇಶದಲ್ಲಿ ಒಂದು ಹೊಸ ದೃಷ್ಟಿ ಸಂಚಾರವಾಯಿತು. ಹಲವು ಮೂಢನಂಬಿಕೆಗಳು ಜಾರಿಹೋದುವು (ಶಾರದ. ೩೨೦) ; ವಿಚಾರಶೂನ್ಯವಾದ ಅಂಧಶ್ರದ್ಧೆ ಬೆಳೆದು, ಅಜ್ಞಾನ ಮೂಢನಂಬಿಕೆಗಳಿಂದ ಉದ್ಭವಿಸುವ ಸಂಕುಚಿತಮನೋವೃತ್ತಿ (ಜನ್ನಾರ. ೨೭ ೬೦೩೯). [ಮೂಢ + ನಂಬಿಕೆ]

**ಮೂಢಭಕ್ತಿ** (ನಾ). ತಿಳಿವಳಿಕೆಯಿಲ್ಲದ ಭಕ್ತಿ ; ಅಂಧಶ್ರದ್ಧೆಯಿಂದ ಕೂಡಿದ ಭಕ್ತಿ : ದೇವಸ್ಥಾನಗಳಲ್ಲಿ ನಡೆಯುವ ಉತ್ಸವವಿಶೇಷಗಳು ಪಾಮರರಂಜನೆಯಿಂದ ಅಜ್ಞಜನರೂ ಮೂಢಭಕ್ತಿಯಿಂದ ಮುಕ್ತರಾಗಲು ಸಹಾಯಕಗಳಾದುವು (ಶಾರದ. ೬೦). [ಸಂ.]

**ಮೂಢಮತಿ** (ನಾ). ತಿಳಿವಳಿಕೆಯಿಲ್ಲದ ವ್ಯಕ್ತಿ ; ಮೂರ್ಖವ್ಯಕ್ತಿ : ಮೂಢಮತಿಗಳಿಗಮಲಬ್ರಹ್ಮದ ಗೂಢವೆಂತಳವಡುವುದು (ಗಗಹಾ. ೦೨-೪೬). [ಸಂ.]

**ಮೂಢಮರ** (ನಾ). ಒಂದು ಬಗೆಯ ಮರ : ನಾರೋಲಿ, ಮೂಢಮರ, ಮೂಢ, ಮೂಢಲಿ, ಕನಕಚಂಪಕ (ವೃ.ಶಿಂ. ೩೭-೦೦೪೦).

[ಮೂಢ಼ + ಮರ₁]

**ಮೂಢಾತ್ಮ** (ನಾ). = ಮೂಢಮತಿ : ವಿತತಭಾಷಿತನಪ್ಪ ತನ್ನಿಂಗಿತ ವನವರಾಯತವನಜಿಯದ ಕ್ಷಿತಿಪನವ ಮೂಢಾತ್ಮಕನ್ನೆ (ಕುಮಾ.ಭಾ. ೩-೪೬); ಎಲವೊ ಮೂಢಾತ್ಮ ನೀನೆನ್ನ ಕಟ್ಟಳೆಯನಜಿದು . . . ಪಟ್ಟಣದೊಳೇಕೆ ತಳುವಿದೆ (ಕೈವಲ್ಯ. ೧೦-೩೬). [ಸಂ. ಮೂಢಾತ್ಮನ್]

**ಮೂಢೋಕ್ತಿ** (ನಾ). ತಿಳಿವಳಿಕೆಯಿಲ್ಲದ ಮಾತು ; ಮೂರ್ಖತನದ ನುಡಿ : ಪಾಳಾದ ದುಷ್ಕರ ಲಂಕಾಪುರವಂ ನಭೋಗಪುರವಂ . . . ಸುಸ್ಥಿರಹಮ್ಮಿರಪುರಕ್ಕೆ ತೋಡಿಸಲೊಡಂ ಮೂಢೋಕ್ತಿ ಮೂಲೋಕದೊಳ್ (ಹಮ್ಮಿ.ರ. ೧-೬೪). [ಸಂ.]

**ಮೂತಿ,** ಮೋತಿ (ನಾ). ೧. (ಸಾಮಾನ್ಯವಾಗಿ ಹೀನಾರ್ಥದಲ್ಲಿ ಹೇಳುವಾಗ ಮನುಷ್ಯರ) ಮುಖ ; ಮೋರೆ : ಜಾತಿಮರ್ಕಟ ಪಳಿದೊಡೇನಳಿವುದೆ ನಿಶಾಪತಿಯ ಮೂತಿಯೊಳಗಣ ಚೆಲುವು (ಪ್ರಭಾ.ಕ. ೬-೨೨) ; ಎಂಟುರೂಪಾಯಿ ಬಿಸಾಡುತಿದ್ದೆನಲ್ಲೇ ನಿನ್ನ ಮೂತಿಯ ಮೇಲೆ (ಸಕಲಾ. I, ೫೦೩) . ೨. ಹಂದಿ, ಹೆಗ್ಗಣ ಮುಂತಾದ ಪ್ರಾಣಿಗಳ ಉದ್ದವಾದ ಮುಖ ; ಮುಸುಡಿ : ಹಂದಿಯು . . . ಮುಂದಿರುವ ಬಲೆಯನ್ನು ಸೀಳಿಬಿಡಬೇಕೆಂದು ಮೂತಿಯನ್ನು ಮುಂದೂಡಿ ಬಲೆಯ ಕಣ್ಣಿನಲ್ಲಿ ಸಿಕ್ಕಿಕೊಂಡಿತು (ಹುಲಿ.ಹ. ೨೦). ೩. ಬಾಯಿಯ ಕೊನೆ ; ಕಟಬಾಯಿ ; ಸೋಟೆ : ಆಕೆ ಆ ಹುಡುಗಿಯ ಮೂತಿಯನ್ನು ತಿವಿದು ದೂಡಿದಳು (ರೂಢಿ). ೪. ಮುಂಭಾಗ ; ತುದಿ : ದೋಣಿಯ ಅಥವಾ ಹಡಗಿನ ಮೂತಿ (Bow. ೨೦೫೬) ; ಕುಡುಗೋಲಿನ ಮೂತಿ ಮುರಿದು ಹೋಯಿತು (ರೂಢಿ). ಮೋತಿ : ೧. ಹಿಂಗ್ಯಾಕ ಮೋತಿ ಮಾಡಕೊಂಡ ಕುಂತದಿ ? (ಶಿವ.ಹಿಂ. ೬೦). ೨. "ಜಾತಿ ವರ್ಣದ ಹಯಕ್ಕಂಖ್ರಿಮಳಯಂ ಪಾಲ ಮೋತಿ [ಪಾತಾಂ.ತು.ಟಿ]ಕಪ್ಪಾಗೆ ಸತ್ವಾಧಿಕಂ" (ಮಂಗರಾ. ೬೨-೦೭) ; ಕಚ್ಚಿದ ನಾಗರಹಾವನ್ನು ಮಂತ್ರಬಲದಿಂದ ಕರೆಯಿಸಿ ಆ ಹಾವೇ ತಾನು ಕಚ್ಚಿದ ಗಾಯಕ್ಕೆ ಮೋತಿಯಿಟ್ಟು ವಿಷ ಹೀರಿ . . . ಹೋಗುವಂತೆ ಮಾಡುತ್ತಿದ್ದನು ! (ಕಂಬಹು. ೪೨).

**ಮೂತಿತಿರುಗಿಸು**=ಅಲಕ್ಷ್ಯದಿಂದ ಮುಖವನ್ನು ಬೇರೆಕಡೆಗೆ ತಿರುಗಿಸು; ವಿಮುಖವಾಗು : ನನ್ನನ್ನು ನೋಡಿ ಅವಳು ಮೂತಿತಿರುವಿಕೊಂಡು ಹೋದಳು (ರೂಢಿ). **ಮೂತಿ ತಿವಿ** = ೧. ಸೋಟೆಯನ್ನು ಚುಚ್ಚು.— ತಿವಿ : ಕೋಪದಿಂದ ಆತ ಆ ಹುಡುಗನ ಮೂತಿತಿವಿದ (ರೂಢಿ). ೨. (ಆಲಂ) ಅಪಹಾಸ್ಯಮಾಡು ; ಅವಮಾನಪಡಿಸು : ಅಂದಿನ ಸಭೆಯಲ್ಲಿ ಜನರು ಅವನಿಗೆ ಮೂತಿತಿವಿದು ಕಳಿಸಿದರು (ರೂಢಿ).

[ದೇ.೫ ತಮಿ. ಮೂಣ್ಚಿ/ಮೂಞ್ಚಿ ; ಮಲ. ಮೂಚ್ಚು, ಮುಚ್ಚಿ, ಮೂಞ್ಚಿ, ಮೂಞ್ಚಿ, ಮೊತ್ತಿ. ಮೋನ್ತ ; ತೆಲು. ಕೋಲಾ. ನಾಯ್ಕಿ. ಮೂತಿ ; ಕುವಿ. ಮೂಂಬು. ಮೂಂಬೂ ; ಕುರುಖ್. ಮೊಚ್ಬಾ ; ಕೋತ. ಮುಚಿ. ಮೋಂಗ್]

**ಮೂತೆರ** ' ಮೂದೆಜ ' ನೋ.

**ಮೂತ್ರ** (ನಾ). ಮನುಷ್ಯ, ಪ್ರಾಣಿ ಮುಂತಾದ ಜೀವಜಂತುಗಳ ಶರೀರದಿಂದ ಹೊರಬರುವ ಕಲ್ಮಷಜಲ : ಉಚ್ಚೆ ; ಗಂಜಲ : "ಪಸುಜಲಮೆನಲ್ಕೆ ಮೂತ್ರಮಕ್ಕುಂ" (ಮಂಗರಾ. ೯೭-೧೪) ; ಪರಿಮೂತ್ರಂ ಭಿನ್ನಲಂಡಂ ಸುರಿಯೆ ಮದಜಳಂ ಮೆಯ್ಯೊಳ್ಳಲ್ಕಾಡೆ (ಮಲ್ಲಪು. ೧೦-೯೨) ; ಕೈಯಲ್ಲಿ ಕುಜುಹು ಬಾಯಲ್ಲಿ ಅಜುಹು ನುಡಿವುತ್ತಿಪ್ಪ ಅಯ್ಯಗಳೆಲ್ಲರು ಇಜುಹಿನ ಮೂತ್ರದಲ್ಲಿ ಪ್ರಳಯವಾದರು ನೋಡಾ (ಸಿದ್ಧೇವ. ೦೦೯-೩೩೭) ; ಮೂತ್ರ ಬಹಳವಾಗಿ ಹೋಗುವುದಕ್ಕೆ ಚಿಕಿತ್ಸೆ : — ಅಳಲೇಕಾಯಿ ಚೂರ್ಣ ಗ ೩ ತೂಕವನ್ನು ಜೇನುತುಪ್ಪದಲ್ಲಿ ಕೊಡುವುದು (ಶಿವ್ಯಪ. ೦೫೪). [ಸಂ.]

**ಮೂತ್ರಕಟ್ಟು** (ನಾ). ಮೂತ್ರವಿಸರ್ಜನೆಯಲ್ಲಿ ತಡೆಯುಂಟಾಗುವ ಒಂದು ಬಗೆಯ ರೋಗ : ಉಚ್ಚೆ ನಿಂತುಹೋಗುವುದು : ಮೂತ್ರಕಟ್ಟಿಗೆ : — ಗರಿಕೆಬೇರು, ಯಷ್ಟಿಮಧುಕ, ನೆಗ್ಗಿಲುಬೇರು, ತ್ರಿಫಲೆಯ ರಸದಲ್ಲಿ ಅಟ್ಟು ಕರ್ಪೂರ, ಶಿಲಾಧಾತುವಂ ಪ್ರತಿಪಾಕವಿಕ್ಕಿ ಕುಡಿಯೆ ಎಲ್ಲಾ ಮೂತ್ರಕೃಚ್ಛ್ರ ಮಾಣ್ಗುಂ (ಶಿವ್ಯಪ. ೧೭೦) ; ಜೋಳ ದರಗದ ರಸವನ್ನು ಹಸುವಿನ ಹಾಲಿನಲ್ಲಿ ಕೂಡಿಸಿ ಜೀರಿಗೆ ಗ ೨ ತೂಕ. ಸಕ್ಕರೆ ಗದ್ಯಾಣ ೩ ತೂಕ ಸಹ ಹಾಕಿ ಕೊಡಲು ಮೂತ್ರಕಟ್ಟು ಹೋಗುವುದು (ಸಕವ್ಯ. ಶಂ. ೪೪೪). [ಮೂತ್ರ + ಕಟ್ಟು₂]

**ಮೂತ್ರಕಲ್ಲು** (ನಾ). ಮೂತ್ರಕೋಶ ಅಥವಾ ಮೂತ್ರನಾಳದಲ್ಲಿ ಕಲ್ಲಿನಂತೆ ಗಟ್ಟಿಯಾದ ಗಂಟು ಉಂಟಾಗಿ ಮೂತ್ರ ವಿಸರ್ಜನೆಗೆ ತಡೆಯೊಡ್ಡುವ ಒಂದು ಬಗೆಯ ರೋಗ ; ಅಶ್ಮರಿ : ಮೂತ್ರಕಲ್ಲಿಗೆ ಗುಳಿಗೆಯ ಮಾಡುವ ಕ್ರಮ : — ಕೆಂಪಿನ ಅಂಕೋಲ ಬೇರು, ಹುಳಿಸೊಪ್ಪು . . . ಇವಕ್ಕೆ ಸಮ ಇಂಗು, ಅಂಬಿಲದಲ್ಲಿ ಅರೆದು ಮೂತ್ರಕಲ್ಲಿಗೆ ಗುರುಗುಂಜಿಯ ಪ್ರಮಾಣಕ್ಕೆ ಕೊಡುವುದು (ಶಿವ್ಯಪ. ೧೨೪).
[ ಮೂತ್ರ + ಕಲ್ಲು (< ಕಲ್$_3$) ]

**ಮೂತ್ರಕುಂಡಲಕ** (ನಾ). ಹನ್ನೆರಡು ಬಗೆಯ ಮೂತ್ರಸಂಬಂಧವಾದ ರೋಗಗಳಲ್ಲಿ ಒಂದು : ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ — ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ, ಮೂತ್ರಾತೀತ, ಮೂತ್ರಶುಕ್ಲ, ಮೂತ್ರಕುಂಡಲಕ, ಮೂತ್ರವಿಡ್ಘಾತ, ಮೂತ್ರವಾತ, ಮೂತ್ರಪ್ಲೀಹ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾದವೆಂದಿಂತು (ಸಕವ್ಯ. ೩೭೦). [ಸಂ.]

**ಮೂತ್ರಕುಂಡಲಿಕೆ** (ನಾ). = ಮೂತ್ರಕುಂಡಲಕ : ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ, ಮೂತ್ರಾತಿಸಾರ, ಮೂತ್ರಶುಕ್ಲ ಮೂತ್ರಕುಂಡಲಿಕೆ, ಮೂತ್ರವಿಡ್ಘಾತ, ಮೂತ್ರವಾತ, ಮೂತ್ರಾಷ್ಠೀಲ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I. ೨೩೪). [ಸಂ. ಮೂತ್ರಕುಂಡಲಿಕಾ]

**ಮೂತ್ರಕೂಪ** (ನಾ). ೧. ಉಚ್ಚೆಯು ಸಂಗ್ರಹವಾಗುವ ಗುಂಡಿ. ೨. ಒಂದು ನರಕದ ಹೆಸರು : ಪರ್ವತ ಯುಗಳಪರ್ವತ ಕ್ಷುರಧಾರೆ ಮೂತ್ರಕೂಪ ವಿಷ್ಠಾಕೂಪವೆಂಬೈಸು ಮುಂತ್ತಿನರಕಂಗಳು (ವಿವೇಕ.೦೫೩). [ಸಂ.]

**ಮೂತ್ರಕೃಚ್ಛ್ರ** (ನಾ). ಉರಿ ಮತ್ತು ನೋವಿನಿಂದ ಕೂಡಿದ್ದು ಸರಾಗವಾಗಿ ವಿಸರ್ಜನೆಯಾಗದಿರುವ ಒಂದು ಬಗೆಯ ಮೂತ್ರರೋಗ : ಅಮರದವಳ್ಳಿ, ಬಿಲ್ವಪತ್ರೆಕಾಯಿ . . . ಕಷಾಯ ಕಾಯಿಸಿ, ಹಿಪ್ಪಲಿ ಪ್ರತಿಪಾಕಗೊಂಡು ಸೇವಿಸೆ . . . ಅಸ್ಥಿಗತಜ್ವರ, ಮೂತ್ರಕೃಚ್ಛ್ರ ಮೊದಲಾದ ರೋಗಗಳು ಗುಣವಾಗುವವು (ಸಕವ್ಯ. ೯೦). [ಸಂ.]

**ಮೂತ್ರಕೃಚ್ಛ್ರ** (ನಾ). = ಮೂತ್ರಕೃಚ್ಛ್ರ : ಅಂತಪ್ಪ ರೇಖೆಗಳ್ ಕರ್ಪಂ ತಳೆದಾ ಪೊಥಮಧ್ಯದೊಳ್ ತೋರ್ಪುತೆ ಬಾಟ್ಗುಂ ತುರಗಂ ಷೋಡಷವರ್ಷಾಂತರವುಂ ಮೂತ್ರಕೃಚ್ಛ್ರಯಿಂದಂ ಮಡಿಗುಂ (ಅಶ್ವಶಾ. ೫-೨೦). [ಸಂ. ಮೂತ್ರಕೃಚ್ಛ್ರ]

**ಮೂತ್ರಕೋಶ** (ನಾ). ದೇಹದಲ್ಲಿ ಉಚ್ಚೆಯು ಶೇಖರವಾಗುವ ಚೀಲ : ಕಾಯಿಲೆ ತೀವ್ರಗತಿಯಲ್ಲಿರುವಾಗ ಕೆಲವು ವೇಳೆ ಮೂತ್ರಕೋಶ (urinary bladder) ಕ್ಕೆ ಲಕ್ವ ಹೊಡೆಯುತ್ತದೆ (ಕಿಂರೋ. ೪೫). [ಸಂ.]

**ಮೂತ್ರಕ್ಷಯ** (ನಾ). ಹನ್ನೆರಡು ಬಗೆಯ ಮೂತ್ರರೋಗಗಳಲ್ಲಿ ಒಂದು; ಸರಿಯಾದ ಪ್ರಮಾಣದಲ್ಲಿ ಮೂತ್ರೋತ್ಪತ್ತಿಯಾಗದಿರುವುದು : ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ . . . ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I. ೨೩೪) ; ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ . . . ಮೂತ್ರಸಾದವೆಂದಿಂತು (ಸಕವ್ಯ. ೩೭೦). [ಸಂ.]

**ಮೂತ್ರಗ್ರಂಥಿ** (ನಾ). = ಮೂತ್ರಕಲ್ಲು : ಮೂತ್ರೋತ್ಸಂಗ, ಮೂತ್ರಗ್ರಂಥಿ . . . ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I. ೨೩೪) ; ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ, ಮೂತ್ರಗ್ರಂಥಿ . . . ಮೂತ್ರಸಾದವೆಂದಿಂತು (ಸಕವ್ಯ. ೩೭೦). [ಸಂ.]

**ಮೂತ್ರಚೀಲ** (ನಾ). = ಮೂತ್ರಕೋಶ : ಬಹುಮೂತ್ರಕ್ಕೆ ಮೊದಲು ಹುಟ್ಟುವ ಉಪದ್ರವ ಮೂತ್ರಚೀಲವು ಗುದದ ಮೇಢ್ರದ ಮಧ್ಯದಲ್ಲಿ ಇಹುದು (ಶಿವ್ಯಪ. ೦೫೭). [ಮೂತ್ರ + ಚೀಲ]

**ಮೂತ್ರಜನಕಾಂಗ** (ನಾ). ಶರೀರದ ಶುದ್ಧೀಕರಣಾಂಗಗಳಲ್ಲಿ ಒಂದು; ಮೂತ್ರೋತ್ಪತ್ತಿಯನ್ನು ಮಾಡುವ ಅಂಗ : "ಸಸ್ತನಿಗಳ, ಪಕ್ಷಿಗಳ, ಉರಗಮನಿಗಳ, ಉದರಕುಹರದಲ್ಲಿರುವ, ರಕ್ತದಲ್ಲಿಯ ಉಪಯೋಗ ಕಳೆದ ಸಸಾರಜನಕಪದಾರ್ಥವನ್ನು ಹೊರದೂಡುವುದಕ್ಕಾಗಿ ತನ್ನಲ್ಲಿ ಹರಿಯುವ ರಕ್ತದಿಂದ ಬೇರ್ಪಡಿಸಿ ಮೂತ್ರದ ಮೂಲಕ ಸಾಗಿಸುವ, ನಾಳಗುಚ್ಛಾಂಗಗಳೆರಡರಲ್ಲಿ ಒಂದು : ಮೂತ್ರಜನಕಾಂಗ ; ಮೂತ್ರಪಿಂಡ" (Kidney. ಇಂಕಾ). [ಸಂ.]

**ಮೂತ್ರತಡೆ** (ನಾ). = ಮೂತ್ರಕಟ್ಟು : ಪೆಟ್ಲುಪ್ಪು ಗ ೧ ತೂಕವನ್ನು ಪುಡಿ ಮಾಡಿ ನಿಂಬೆಹಣ್ಣಿನ ರಸದಲ್ಲಿ ಕಲಸಿ ಸಕ್ಕರೆ ಗ ೩ ತೂಕ ಹಾಕಿ ಕುಡಿಯಲು ಆ ಕ್ಷಣವೇ ಮೂತ್ರತಡೆ ಹೋಗುವುದು (ಸಕವ್ಯ. ಶಂ. ೪೪೪). [ಮೂತ್ರ + ತಡೆ₂]

**ಮೂತ್ರದೋಷ** (ನಾ). ಮೂತ್ರಸಂಬಂಧವಾದ ರೋಗ : ಈ ಲೇಹ್ಯಕ್ಕೆ ಚ್ಯವನಪ್ರಾಶವೆಂದು ಹೆಸರು . . . ಇದನ್ನು ಸೇವಿಸಲು . . . ಮೂತ್ರದೋಷ, ಶುಕ್ರದೋಷ, ಸ್ವರಭಂಗ ಇವೆಲ್ಲವೂ ಪರಿಹರವಹವು (ವೈದ್ಯಸಾ. II. ೨೫೮). [ಸಂ.]

**ಮೂತ್ರದ್ವಾರ** (ನಾ). ಮೂತ್ರಕೋಶದಲ್ಲಿ ಶೇಖರವಾದ ಮೂತ್ರವು ಹೊರಬರುವ ರಂಧ್ರ ; ಮೂತ್ರವಿಸರ್ಜನೆಯಾಗುವ ನಾಳ ; ಮೂತ್ರನಾಳ. [ಸಂ.]

**ಮೂತ್ರನಾಳ** (ನಾ). = ಮೂತ್ರದ್ವಾರ : ಲೋಕ್ಕಿಯ ಸೊಪ್ಪಿನ ರಸದಲ್ಲಿ ಪಚ್ಚೆಕರ್ಪೂರದ ಚೂರ್ಣವ ಹಾಕಿ ಸ್ವಲ್ಪ ಎಣ್ಣೆಯ ಬಿಟ್ಟು ಬಾರಿಸಿ ಸಮರಸಂಗೈದು ಹಿಂಡಿ ಸಣ್ಣ ಪಾವಡೆಬತ್ತಿಗೆ ಆ ರಸವ ಮಾಡಿ ಮೂತ್ರನಾಳದಲ್ಲಿ ಮೇಲಕ್ಕೆ ಏರಿಸಲು ಆ ಉತ್ತರಕ್ಷಣದಲ್ಲಿಯೇ ಮೂತ್ರ ಝಲ್ಲನೆ ಬಿಡುವುದು (ವೈದ್ಯಸಾ. I. ೨೫೮) ; ಅಳಲೆಕಾಯಿ, ನೆಗ್ಗಿಲುಬೇರು, ತಿಲಕಹಣ್ಣು . . . ಜೇನುತುಪ್ಪ ಪ್ರತಿಪಾಕವಿಕ್ಕಿ ತೆಗೆದುಕೊಳ್ಳಲು ಮೂತ್ರನಾಳದಲ್ಲಿ ಸಿಕ್ಕಿಕೊಂಡಿರುವ ಕಲ್ಲು ಕರಗಿ ಬೀಳುವುದು (ಸಕವ್ಯ. ಶಂ. ೪೪೭).
[ಸಂ. ಮೂತ್ರನಾಲ]

**ಮೂತ್ರನಿರೋಧ** (ನಾ). = ಮೂತ್ರಕಟ್ಟು : ಸೌತೆಯ ಬೀಜಮಂ ನೀರಲ್ಲಿ ಅರೆದು ಕುಡಿಯೆ ಮೂತ್ರನಿರೋಧ ಮಾಣ್ಗುಂ (ಶಿವ್ಯಪ. ೭). [ಸಂ.]

**ಮೂತ್ರಪರೀಕ್ಷೆ** (ನಾ). (ರೋಗದ ಮೂಲವನ್ನು ಪತ್ತೆಹಚ್ಚಲು ರೋಗಿಯ) ಮೂತ್ರವನ್ನು ರಾಸಾಯನಿಕವಾಗಿ ವಿಭಜಿಸಿ ಪರಿಶೀಲಿಸುವಿಕೆ : ಅನೇಕ ರೋಗಗಳನ್ನು ಪತ್ತೆಹಚ್ಚಲು ಮೂತ್ರಪರೀಕ್ಷೆ ಸಹಾಯಕವಾಗುತ್ತದೆ (ಒಂಆ). [ಸಂ. ಮೂತ್ರಪರೀಕ್ಷಾ]

**ಮೂತ್ರಪಿಂಡ** (ನಾ). = ಮೂತ್ರಜನಕಾಂಗ : ಈ ವಿಷಾಣುಗಳು ಹೃದಯ, ಮೂತ್ರಪಿಂಡಗಳು, ಮಿದುಳು ಮತ್ತು ಮಿದುಳುಬಳ್ಳಿಯ ಅಣುಕೋಶಗಳ ಮೇಲೆ ಕೆಲಸ ಮಾಡಿ ಅಪಾಯವನ್ನು ತಂದೊಡ್ಡುತ್ತವೆ (ಕಂಠೋ. ೨೦). [ಸಂ.]

**ಮೂತ್ರಪ್ಲೀಹ** (ನಾ). ಮೂತ್ರಸಂಬಂಧವಾದ ಒಂದು ಬಗೆಯ ರೋಗ : ಹನ್ನೆರಡುಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ ಮೂತ್ರೋತ್ಸಂಗ . . . ಮೂತ್ರಪ್ಲೀಹ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾದವೆಂದಿಂತು (ಸಶವೈ. ೩೬೦).

[ಸಂ. ಮೂತ್ರಪ್ಲೀಹನ್]

**ಮೂತ್ರಬಂಧ** (ನಾ). = ಮೂತ್ರಕಟ್ಟು. [ಸಂ.]

**ಮೂತ್ರರಕ್ತ** (ನಾ). ಉಚ್ಚೆಯಲ್ಲಿ ನೆತ್ತರು ಹೋಗುವ ಒಂದು ಬಗೆಯ ರೋಗ : ಮೂತ್ರರಕ್ತಕ್ಕೆ :– ಚತುರ್ಭಾಗ ಚವುಡಂಗಿರಸ, ಆವಿನ ನೊರೆವಾಲು ಕುದಿಸುವುದು. ಕಿಜುಕುಸಾಲೆರಸದಲ್ಲಿ ತ್ರಿವಾರು ಕೂಡಿ . . . ಗುಳಿಗೆ ಮಾಡಿ ಕೊಳ್ಳೆ ಮಾಣ್ಗುಂ (ವೈ.ವಿ. ೦೩೪). [ಸಂ.]

**ಮೂತ್ರರೋಗ** (ನಾ). = ಮೂತ್ರದೋಷ : ಮೂತ್ರರೋಗಕ್ಕೆ :– ಏಲಕ್ಕಿ ೧ ತೂಕ, ತವಕ್ಷೀರ ೪ ತೂಕ . . . ಆಡಿನ ಹಾಲಲ್ಲಿ ಕದಡಿ ಕುಡಿಯಲು ಮೂತ್ರರೋಗ ಗುಣ (ವೈ.ವಿ. ೦೦೪); ಮೂತ್ರರೋಗ, ಛರ್ದಿರೋಗ . . . ವಾತರೋಗ ಇವೇ ಮೊದಲಾದ ರೋಗಗಳಿಂದ ಕೂಡಿದವರು ದೂತಧಾವನಕ್ಕೆ ಅನರ್ಹರೆಂದರಿವುದು (ಸಶವೈ. ೨೯). [ಸಂ.]

**ಮೂತ್ರವಸ್ತಿ** (ನಾ). ಮೂತ್ರಸಂಬಂಧವಾದ ಒಂದು ಬಗೆಯ ರೋಗ : ಹನ್ನೆರಡುಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ . . . ಮೂತ್ರವಸ್ತಿ . ಮೂತ್ರಸಾದವೆಂದಿಂತು (ಸಶವೈ. ೩೬೦). [ಸಂ.]

**ಮೂತ್ರವಾತ** (ನಾ). ಮೂತ್ರಸಂಬಂಧವಾದ ಒಂದು ಬಗೆಯ ರೋಗ : ಹನ್ನೆರಡುಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ . . . ಮೂತ್ರವಾತ . . . ಮೂತ್ರಸಾದವೆಂದಿಂತು (ಸಶವೈ. ೩೬೦). [ಸಂ.]

**ಮೂತ್ರವಿಡ್ಘಾತ** (ನಾ). ಒಂದು ಬಗೆಯ ಮೂತ್ರರೋಗ : ಮೂತ್ರೋತ್ಸಂಗ . . . ಮೂತ್ರವಿಡ್ಘಾತ . . . ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಶಾ. I, ೨೩೪). [ಸಂ.]

**ಮೂತ್ರವಿಸರ್ಜನೆ** (ನಾ.) ಮೂತ್ರವನ್ನು ಸುರಿಸುವಿಕೆ ; ಉಚ್ಚೆ ಹೊಯ್ಯುವಿಕೆ : ಕಾಯಿಲೆ ತೀವ್ರಗತಿಯಲ್ಲಿರುವಾಗ . . . ಮೂತ್ರವಿಸರ್ಜನೆ ರೋಗಿಯ ಸ್ವಾಧೀನ (control) ತಪ್ಪಿ ತನಗೆ ತಾನಾಗಿಯೇ ಮೂತ್ರ ಹನಿಹನಿಯಾಗಿ ಹೊರಬೀಳುತ್ತದೆ (ಕಂಠೋ. ೪೩).

[ಸಂ. ಮೂತ್ರವಿಸರ್ಜನ]

**ಮೂತ್ರವ್ಯಾಧಿ** (ನಾ). = ಮೂತ್ರದೋಷ : ಮುಳ್ಳುಮುತ್ತುಗದ ಒಳನಾರಂ ಚೂರ್ಣವಂ ಮಾಡಿ ಕರ್ಪೂರ, ಶಿಲಾಧಾತು ಬೆರಸಿ ಮಜ್ಜಿಗೆ, ಜೇನುತುಪ್ಪದಲ್ಲಿ ಕೊಳ್ಳೆ ಮೂತ್ರವ್ಯಾಧಿ ಮಾಣ್ಗುಂ (ವೈ.ವಿ. ೬೭). [ಸಂ.]

**ಮೂತ್ರಶಂಕೆ** (ನಾ). ಮೂತ್ರಸಂಬಂಧವಾದ ಒಂದು ಬಗೆಯ ರೋಗ; ಉರಿಯಿಂದ ಕೂಡಿ ಆಗಾಗ ಮೂತ್ರವಿಸರ್ಜನೆ ಮಾಡಬೇಕೆನ್ನುವ ತೀವ್ರವಾದ ಅನಿಸಿಕೆ : ಮೇಲುಬ್ಬುಸಮುಂಟಾಗಿ ಕಣ್ಣುಗಳಲ್ಲಿ ಡಾಳ ತಪ್ಪಿ . . . ಬಹಳವಾಗಿ ಮೂತ್ರಶಂಕೆಯು ಕಾಣಿಸುತ್ತಂ . . . ಇಂದ್ರಿಯಗಳು ಹೀನವಸ್ಥೆಯಿಂ ವ್ರಣದಿಂ ಕೂಡಿಕೊಂಡಿದ್ದ ಕ್ಷಯರೋಗವು ಅಸಾಧ್ಯ (ಸಶವೈ. ೨೪೭). [ಸಂ. ಮೂತ್ರಶಂಕಾ]

**ಮೂತ್ರಶರ್ಕರೆ** (ನಾ). ಮೂತ್ರದೊಂದಿಗೆ ಸಕ್ಕರೆಯ ಅಂಶವು ಹೆಚ್ಚಾಗಿ ಹೋಗುವುದು : ದಾಳಿಂಬದ ಬೀಜ, ಏಲಕ್ಕಿ, ಪಾಷಾಣ ಭೇದಿ, ಶಿಲಾಧಾತು, ಹಿಪ್ಪಲಿ ಇವಂ ಚೂರ್ಣಂ ಮಾಡಿ ರಾಜಾನ್ನದ ಅಕ್ಕಿಗಚ್ಚಿನಲ್ಲಿ ಕುಡಿಯೆ ಮೂತ್ರಕೃಚ್ಛ್ರಂ, ಮೂತ್ರಶರ್ಕರೆಯುಂ ಕೆಡುಗುಂ (ವೈ.ವಿ. ೨೦೭). [ಸಂ. ಮೂತ್ರಶರ್ಕರಾ]

**ಮೂತ್ರಶುಕ್ಲ** (ನಾ). ಮೂತ್ರದೊಂದಿಗೆ ರೇತಸ್ಸು ವಿಸರ್ಜನೆಯಾಗುವ ಒಂದು ಬಗೆಯ ರೋಗ : ಮೂತ್ರೋತ್ಸಂಗ, ಮೂತ್ರಗ್ರಂಥಿ . . . ಮೂತ್ರಶುಕ್ಲ, ಮೂತ್ರಕುಂಡಲಿಕೆ . . . ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಶಾ. I, ೨೩೪) ; ಹನ್ನೆರಡುಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ . . . ಮೂತ್ರಶುಕ್ಲ . . . ಮೂತ್ರಸಾದವೆಂದಿಂತು (ಸಶವೈ. ೩೬೦). [ಸಂ.]

**ಮೂತ್ರಶೂಲೆ** (ನಾ). ಮೂತ್ರವಿಸರ್ಜನೆಯ ಸಮಯದಲ್ಲಿ ನೋವುಂಟಾಗುವ ಒಂದು ಬಗೆಯ ರೋಗ : ಬಿಳಿದುರುಚಿ, ಅಣಲೇಕಾಯಿ, ಪಾಷಾಣಭೇದಿ, ನೆಲದಾಳೆ, ಕೊತ್ತುಂಬರಿ, ಕಕ್ಕೇಹಣ್ಣಿನ ತಿರುಳು ಇವ ಕಷಾಯವ ಕಾಸಿ ಸಕ್ಕರೆ ಹಾಕಿ ಪಾಕವಿಕ್ಕಿಕೊಳ್ಳಲು ಮೂತ್ರಕೃಛ್ರ, ಕಟಿಯ ಉರಿ, ಮೂತ್ರಶೂಲೆ ಮಾಣ್ಗುಂ (ವೈ.ವಿ. ೦೬೩).

[ಸಂ. ಮೂತ್ರಶೂಲ]

**ಮೂತ್ರಸಾದ** (ನಾ). ಬಣ್ಣವು ವ್ಯತ್ಯಾಸಗೊಂಡು ನೋವಿನಿಂದ ವಿಸರ್ಜನೆಯಾಗುವ ಒಂದು ಬಗೆಯ ಮೂತ್ರರೋಗ : ಮೂತ್ರೋತ್ಸಂಗ . . . ಮೂತ್ರವಸ್ತಿ, ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಶಾ. I, ೨೩೪). [< ಸಂ. ಮೂತ್ರಾಸಾದ]

**ಮೂತ್ರಸಿಕ್ಕು** (ನಾ). = ಮೂತ್ರಕಟ್ಟು : ಸೂಲೆ ಸುಭಿಕ್ಷಾ(ಕ್ಷಂ) ರೂಕ್ಷಾಸೂಲೆಯಿ ಸಲೆ ಮೂತ್ರಸಿಕ್ಕು ರಕ್ತಮೋಹಂ ಶೂ(ಲಾ)ವಿಷ್ಟಂಭ ಕೀಟಕ ಸೂಲಾಪ್ಸುವಿ ಸಿಂಘ(ಹ)ಣದ್ವಯಂ ವಾತಾಂತ್ಯಂ (ಅಶ್ವಶಾ. ೦೦-೬೦); ಏಲಕ್ಕಿ, ಪಾಷಾಣಭೇದಿಯುಂ, ಕಲ್ಲ ಅಗಿಲು, ಹಿಪ್ಪಲಿ ಎಂಬಿವುಗಳ ಪುಡಿಗಳಂ . . . ಮೂತ್ರಸಿಕ್ಕು ಬಹುಮೂತ್ರ ಸಂಕಟದೊಳು ಲೇಹ್ಯವಂ ಮಾಡುಗೆ (ವೈ.ವಿ. ೨೦) ; ಗಣಜಿಲಬೇರಂ ಸುಟ್ಟು ಬೂದಿಯಂ ಆಡಿನ ಹಾಲಿನಲ್ಲಿ ಕೂಡಿ ಕುಡಿಯೆ ಮೂತ್ರಸಿಕ್ಕು ಬಿಡುವುದು (ಸಶವೈ. ೩೬೩).

[ಮೂತ್ರ + ಸಿಕ್ಕು೩.]

**ಮೂತ್ರಾಘಾತ** (ನಾ). ಮೂತ್ರವಿಸರ್ಜನೆಯಲ್ಲಿ ತೊಡಕುಂಟಾಗುವ ಹನ್ನೆರಡು ಬಗೆಯ ವ್ಯಾಧಿ ; ಇವುಗಳ ಸಂಖ್ಯೆಯಲ್ಲಿ ಭಿನ್ನಾಭಿಪ್ರಾಯಗಳಿವೆ : ಹನ್ನೆರಡುಪ್ರಕಾರವಾದ ಮೂತ್ರಾಘಾತಂಗಳುಂಟು (ವೈದ್ಯಶಾ. I, ೨೩೪) ; ವಾತಪಿತ್ತಶ್ಲೇಷ್ಮಂಗಳು ವಸ್ತಿಸ್ಥಾನವನೈದಿ ತಮ್ಮ ತಮ್ಮ ಕಾರಣಗಳಿಂ ಪ್ರಕೋಪಿಸಿ ಮೂತ್ರಾಘಾತವೆಂಬ ಮಹಾರೋಗಗಳನು ಪುಟ್ಟಿಸುತಮಿರ್ಪುದು (ಸಶವೈ. ೩೬೦). [ಸಂ.]

**ಮೂತ್ರಾತೀತ** (ನಾ). ತಡೆತಡೆದು ಹೋಗುವ ಒಂದು ಬಗೆಯ ಮೂತ್ರರೋಗ : ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ . . . ಮೂತ್ರಾತೀತ . . . ಮೂತ್ರಸಾದವೆಂದಿಂತು (ಸಶವೈ. ೩೬೦). [ಸಂ.]

**ಮೂತ್ರಾಶಯ** (ನಾ). = ಮೂತ್ರಕೋಶ. [ಸಂ.]

**ಮೂತ್ರಾಷ್ಠೀಲ** (ನಾ). =ಮೂತ್ರಕಲ್ಲು: ಮೂತ್ರೋತ್ಸಂಗ . . . ಮೂತ್ರವಾತ, ಮೂತ್ರಾಷ್ಠೀಲ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಶಾ. I, ೨೩೪).

[ಸಂ. ಮೂತ್ರಾಷ್ಠೀಲಾ]

**ಮೂತ್ರಿ** (ನಾ). ರಸ್ತೆ, ಬಸ್‌ನಿಲ್ದಾಣ ಮುಂತಾದ ಸಾರ್ವಜನಿಕ ಸ್ಥಳಗಳಲ್ಲಿ ಮೂತ್ರವಿಸರ್ಜನೆಗೆ ಅನುಕೂಲವಾಗುವಂತೆ ಕಟ್ಟಿರುವ ಸ್ಥಳ : (ಖಾಸಗಿ ಅಥವಾ ಸಾರ್ವಜನಿಕ) ಮೂತ್ರಸ್ಥಳ, ಮೂತ್ರಿ (Urinal. ೨೦೫೩). [ < ಮೂತ್ರ ]

**ಮೂತ್ರಿಸು** (ಕ್ರಿ). ಉಚ್ಚೆಹೊಯ್ಯು : ಮೂತ್ರವಿಸರ್ಜನೆ ಮಾಡು: ನಡುವಟ್ಟೆಯೊಳ್ ಕೆಲಸಿ ಮೂತ್ರಿಸೆ ಪೇರಡಿ ತನ್ನನಟ್ಟಿಯಿಂ ನಲಿನಲಿದಾಡೆ ಪೋದ ಮನುಜಂ ಪಡೆಗುಂ ತನಗಿಷ್ಟಸಿದ್ಧಿಯಂ (ಲೋಕೋಪ. ೦೨-೨೩) ; ಸಗಣವನಿಕ್ಕುತಂ ಮೂತ್ರಿಸುತವಲರುತ ಕೆಲನ ನೋಡುತ ಚೆಲ್ಲವಾಡುತ್ತ . . . ವೃಷಭೇಶ್ವರನಿರಲು (ಬಸವ. ೩೩-೨೭) ; ಮಠದ ಹಿತ್ತಲಲ್ಲಿ ಅಯ್ಯ ಮೂತ್ರಿಸ್ತಾ ಕೂತಿದ್ಸ (ರುದ್ರಿ ವಾ. ೨೩).

[ ಮೂತ್ರ + - ಇಸು₃ ]

**ಮೂತ್ರೋತ್ಸಂಗ** (ನಾ). ನೋವಿನಿಂದ ಕೂಡಿದ್ದು ರಕ್ತಸಹಿತವಾಗಿ ಮೂತ್ರವಿಸರ್ಜನೆಯಾಗುವ ಒಂದು ಬಗೆಯ ರೋಗ : ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ, ಮೂತ್ರಗ್ರಂಥಿ . . . ಮೂತ್ರಸಾದವೆಂದಿಂತು (ಸಕವೈ. ೩೬೦). [ಸಂ.]

**ಮೂದಚ್ಚಾರಿ** (ನಾ). ಒಬ್ಬಾತನ ಹೆಸರು : ಶ್ರೀ ಆಸನ್ದೂರ ಮೂದಚ್ಚಾರಿ ಮಾಡಿದನ್ (ಎಕ. X, ಶಿಡ್ಲಘ. ೩೨-೦೩ ; ಸು. 870 ?).

[ಮೂದ್ಮ + ಆಚಾರಿ]

**ಮೂದಲಿಕೆ** (ನಾ). ಹಂಗಿಸುವಿಕೆ ; ಹೀಯಾಳಿಕೆ ; ಚುಚ್ಚುಮಾತು : ಕೆಳದಿಯರ ಸಂತೈಕೆ ಮೂದಲಿಕೆಯಂತಾಗೆ . . . ಮರುಗಿದಳಬಲೆ (ಜೈಮಿನಿ. ೩೩-೦೬೩) ; ಒಂದು ವೇಳೆ ಹೋದರೆ ತನ್ನ ತಾಯಿಯಿಂದ ಏನಾದರೂ ಮೂದಲಿಕೆ ಬರಬಹುದು ಎಂಬ ಭಯ (ಮಹಾಗ. ೦೦).

[ಮೂದಲ್₂ + -ಇಕೆ./ತೆಲು. ಮೂದಲಿಕ = ನಿದರ್ಶನ]

**ಮೂದಲಿಸು** (ಕ್ರಿ). ಹಂಗಿಸು; ಹೀಯಾಳಿಸು; ಅವಹೇಳನ ಮಾಡು: ಈ ನುಡಿಯಂ ಮಣಿಯಲ್ವೇಡೆಂದಿರ್ವರುಮೋರೊರ್ವರಂ ಮೂದಲಿಸಿ ಪ್ರತಿಜ್ಞೆಗೆಯ್ದು (ವಿಕ್ರಮಾ. ೦೨೯-೦೧) ; ಆ ಮಾತು ತನ್ನಂ ಮೂದಲಿಸಿ ದಂತಾಗೆ ವಿದ್ವಿಷ್ಟವಿದ್ರಾವಣನಿಂತೆಂದು (ಕಂಠೀರ. ೩-೬೨ ವ) ; ಶಸ್ತ್ರವ್ರಣವಂ ನಿನ್ನಂತೆ ಮೆಱೆವುದಿಱಿವ ಬೆಡಂಗಾ ಎಂದು ಮೂದಲಿಸಿ ನುಡಿಯೆ (ಗದಾಯು. ೨-೩ ವ): ಪೂತು ಮಝರೇ ಬಾಲ ಎಂದವನೀಶ ಮೂದಲಿಸಿದನು ತನ್ನವರ (ಕುಮಾರವ್ಯಾ. ೬-೨೪).

[ಮೂದಲ್₂ + - ಇಸು₃./ತೆಲು. ಮೂದಲಿಂಚು = ನಿರೂಪಿಸು]

**ಮೂದಲ್₁** (ನಾ). ಮೂರು ತಲೆ : ತಲೆ ಪಗೆವರ ಕೆಯ್ಕೊಳ್ ಸುರಲಲನೆಯ ತೋಳೊಳಗೆ ಪತಿಯ ಭಂಡಾರದೊಳಂ ನೆಲಸೆ ಸುಭಟರ್ಕಳೊಳ್ ಮೂದಲೆ ನೆಗಟ್ದುದು ಪೊನ್ನನನ್ನನಾವನೊ ಮೊನೆಯೊಳ್ (ಅಜಿತ. ೦-೬೭); ಇಲ್ಲಿ 'ಮೂರುತಲೆ' ಮತ್ತು 'ಮೂದಲಿಕೆ' ಎಂಬ ಶ್ಲೇಷಾರ್ಥವಿದೆ : ಅಾತ್ಮಲೋಪಕ್ಕೆ . . . ಮೂಲೋಕ, ಮೂದಲೆ (ಶಬ್ದಮ. ೦೮೮ ಕ್ರಿಯಾ).

ಮೂದಲೆಯ = ಮೂರು ತಲೆಗಳುಳ್ಳವನು : ಮೂದಲೆಯಂ, ಮೂಱು ತಲೆಯಂ (ಕವಿಜಿ. ೩೩೦. ಕ್ರಿಯಾ).

[ಮೂ₁ (< ಮೂಱು) + ತಲೆ₁]

**ಮೂದಲ್₂** (ನಾ). =ಮೂದಲಿಕೆ: ತಲೆ ಪಗೆವರ ಕೆಯ್ಕೊಳ್ ಸುರಲಲನೆಯ ತೋಳೊಳಗೆ ಪತಿಯ ಭಂಡಾರದೊಳಂ ನೆಲಸೆ ಸುಭಟರ್ಕಳೊಳ್ ಮೂದಲೆ ನೆಗಟ್ದುದು ಪೊನ್ನನನ್ನನಾವನೊ ಮೊನೆಯೊಳ್ (ಅಜಿತ. ೦-೬೭) ; ಕೋಕಿಲಧ್ವನಿ ಮೂದಲೆಯುಲಿಯಾಗೆ ಬಂದುದಂದು ಬಸಂತಂ (ಧರ್ಮೋಪ. ೦-೩೭) ; ಇರ್ವರುಂ . . . ಸೆಣಸಿಂಗೆ ಸೊಸು ಮೂದಲೆಗೆ ಮೂದಲೆಗಳಂ ಹೆಣಗಿದರ್ (ಶಬ್ದ. ೪೯-೪೩).

[ದೇ.॥ ತಮಿ. ಮೂತಲಿ. ಮೂತರಿ = ನಿರೂಪಿಸು; ತೆಲು. ಮೂದಲ = ಸಾಕ್ಷಿ]

**ಮೂದಲೆವಾತು** (ನಾ). ತಿರಸ್ಕಾರದ ಮಾತು ; ಅವಹೇಳನದ ನುಡಿ : ಮೂದಲೆವಾತುಗಳ್ ಗಡ ಮಹಾನಿಗಮೋಕ್ತಿಗತೀತನೊಳ್ ಜಯಾಹ್ಲಾದದ ರ್ಪಂಕಿಗಳ್ ಗಡ (ಬಸವ. ೪-೦೩೧). [ಮೂದಲ್₂ + ಮಾತು₁]

**ಮೂದಲೆಸೊಲ್ಲು** (ನಾ). =ಮೂದಲೆವಾತು : ಬಲ್ಲಿದ ಭಟರು ಭಾಷೆಯ ಮಾಡಿ ಮೂದಲೆ ಸೊಲ್ಲುಗಳಂ ತಱುಬಿದರು (ಕಂಠೀರ. ೦೬-೩೨).

[ಮೂದಲ್₂ + ಸೊಲ್ಲು₂ (< ಸೊಲ್₂)]

**ಮೂದಲ್ಮೆ** (ನಾ). = ಮೂದಲಿಕೆ : ತಂತವ್ಮು ಮನದ ಮಚ್ಚರದ ಮರ್ಚಿನ ಕಾದಲ್ಮೆ ಮೂದಲ್ಮೆಯಾಗಿ ಕೈಗೆಯ್ದು ಮೈಗೆಯ್ದದೆ ಪರಿಚ್ಛೇದಿಸಿ (ಅನಂತ. ೦೨-೦೨ ವ). [< ಮೂದಲ್₂ + - ಮೆ₃]

**ಮೂದಿಟ್ಟಿ** (ನಾ). ಮೂರುಕಣ್ಣು : ಮುನ್ನೀರ ಕಟ್ಟಲಾಱದನ ಸದನಾಗ್ರದೊಳ್ ನಿಂದ ಮೂದಿಟ್ಟಿಯುಳ್ಳತುಳರುದ್ರಂ (ಬಸೋವ. ೦೩-೩೦).

[ಮೂ₁ (< ಮೂಱು) + ದಿಟ್ಟಿ]

**ಮೂದಿರಿಕ** (ನಾ). ಮೂರು ಕಡೆಗೆ ತಿರುಗುವಂತಹುದು : ಉಗುಂಟಿಪ ಮೂಗಂ ಮುಚ್ಚಿಪ ಮೊಗವಂ ಮೂದಿರಿಕನಾಗಿಪುದ್ಗಾರವಮಾವಗ ಮೊಗೆಯಿಪ ಬೇಡರ ಪಳ್ಳಿಗಳಂ ಪತಿ ಪಾಯ್ದು ಪೋಗೆ (ಲೀಲಾವ. ೬-೩೬).

[ಮೂ₁ (< ಮೂಱು) + ತಿರಿಕ₁]

**ಮೂದಿವಸ** (ನಾ). ಮೂರು ದಿನ : ಅವರಿವರ ಸಖ್ಯಕೆ ನೆರೆದುದೇಕಾದಶ ಶತಕ್ಷೋಣಿ ತವಿಸುವರೆ ನನಗೊಂದುದಿನ ಪುಡಿದಿವಸದಲಿ ಗುರುವೈದು ದಿವಸಕೆ ರವಿಜ (ಕುಮಾರವ್ಯಾ. ೨-೩೦). [ಮೂ₁ (< ಮೂಱು) + ದಿವಸ]

**ಮೂದೆಕಲ್** (ನಾ). ಒಂದು ಊರಿನ ಹೆಸರು (?) : ಮಾಪಾಮತ್ತರಸರಾ ಪೊಲಳ್ಹುನಾ ಮೇಗೆಟ್ಟು ಮೂದೆಕ್ಲಾ ಕಾಳೆಗದುಳ್ . . . ಅನಿವರುಮ್ ಅನ್ನಿಱದು ಸತ್ತರ್ (ಎಕ. X. ಶ್ರೀನಿವಾ. ೪೦-೨ ; ಸು. 900).

[ಮೂದೆ + ಕಲ್₃]

**ಮೂದೆರ** 'ಮೂದೆಱ' ನೋ.

**ಮೂದೆಱ**, ಮುತ್ತೆಱ, ಮೂತೆರ, ಮೂದೆರ (ನಾ). ೧. ಮೂರು ಬಗೆ,—ರೀತಿ ; ತ್ರಿವಿಧ : ಮೂಲೋಕಂ, ಮೂದೆಱಂ (ಶಬ್ದಮ. ೦೫೬ ಉದಾ) ; ನಾಡೆಯುಂ ನಲವನಿಳಾಧಿಪಂಗೆ ನೆಲೆವೆರ್ಚಿಸಿದತ್ತು ಗೃಹಾಧಿದೇವತಾ ವಿಲಸದಪಾಂಗದೊಳ್ ನೆರೆದು ಮೂದೆಱದೊಪ್ಪುವ ಬಣ್ಣದಂದದಿಂ (ಕಂತ್ರ ಕು. ೩-೦೦೨) ; ದಿನದೊಳ್ ಮೂದೆಱನಾಯ್ತು ಭಾನುವಿನ ತೇಜಂ (ಕುಸುಮಾ. ೬-೬). **ಮುತ್ತೆಱ:** ೨. ಮೂರು ಭಾಗ : ಅವಂ . . . ಮುತ್ತೆಱನ ಮಾಡಿಯೊಂದಕ್ಕೆ ಹುಳಿಯೊಂದಕ್ಕೆಯುತ್ತಮದ ಸಿಹಿ ಹುರಿದ ಕಡಲೆಪುಡಿಯೊಂದಕ್ಕೆಯೊತ್ತರಿಸಿಯಿರಿಸಿ (ಸೂಪಶಾ. ೩-೨೦). **ಮೂತೆರ :** ೧. ಅಜ್ಞನಾಗಿರ್ಪವನಧಿಕಾರಿಯಾದಂದು ಮೂತೆರನಾದ ಕೇಡಹುದು ಅರ್ಥನಾಶನವಮಾದಪಕೀರ್ತಿಯುಪ್ಪುದು ನರಕಲೋಕದ ದುಃಖವಹುದು (ಜಂಬಾಶ. ೦೬೩-೫೨). **ಮೂದೆರ :** ೧. ಪ್ರಾಜ್ಞನಾಗಿರ್ಪವನಧಿಕಾರಿಯಾದಂದು ಮೂದೆರನಾದೊಳ್ಳಿತಹುದು ಯಶವಹುದಮಿತಧನಾಗಮವಪ್ಪುದು ನಾಕಲೋಕದ ಸುಖವಹುದು (ಜಂಬಾಶ. ೦೬೩-೫೦).

[ಮೂ₁ (< ಮೂಱು) + ತೆಱ₁]

**ಮೂದೇವರ್**, ಮೂದೇವರು (ನಾ). ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ; ತ್ರಿಮೂರ್ತಿ: "ಮೂದೇವರ್ಕಳ್ ತ್ರಿಮೂರ್ತ್ಯರ್ಥದೊಳ್" (ಕರ್ಣಾಶ. ೫೦) ; ಮೂದೇವರುಂ ವರಸಿ ನಿಜನಿವಾಸಂಗಳ್ಗೆ ಪೋದರ್ (ಕಂಠೀರ. ೫-೦೦೩ ವ). **ಮೂದೇವರು :** ಮೂದೇವರ ದೇವನ ಗೃಹದೊಳು ಬಲುಭೇದದ ಧ್ವಜನಿಕರಗಳು ವಾದಿಸಿ ವಾಯುಪಥಿಕರೊಡನವರಿಗೆ ಹಾದಿಯ ಕೊಡದಿರುತಿಹವು (ತ್ರಿಶುಲಾಂ. ೭-೭೮) ; ಅಗಣಿತಪರಮಮುಮುಕ್ಷುಗಳ ನಿವಹ . . . ನೆರೆದು ತಮ್ಮೊಳಗಾರು ಮೂದೇವರೊಳು ಮುಖ್ಯರೆನುತ್ತ

ಸಂಶಯಾಕಿರವ ತೆತ್ತರು ಮನವನು (ಶಿಲಾಗ. ೦೦-೯೨-೧).

[ಮೂ$_1$ (< ಮೂಱು) + ದೇವರ್]

**ಮೂದೇವರು** ' ಮೂದೇವರ್' ನೋ.

**ಮೂದೇವಿ** (ನಾ). ೧. ಒಬ್ಬ ದೇವತೆಯ ಹೆಸರು ; ಜ್ಯೇಷ್ಠಾದೇವಿ ; ಅಲಕ್ಷ್ಮಿ : ' ಜ್ಯೇಷ್ಠೆ ' ಹೋ. ೨. ಮಂಕುತನ ; ಜಡತ್ವ ; ಸೋಮಾರಿತನ : ಮದ್ದು ತಿಂದು ತಿಂದು ಮನೆಯೆಲ್ಲ ಬಜಿದಾಗಿ ಹೊದ್ದಿತು ಮೂದೇವಿ ಮೈದುನಗೆ (ಭಕಂದ. ೨-೯೪-೨) ; ಹೋದೆಹೆವೆಂದರೆ ಹಾದಿಯು ಕಾಣೆವು ಮೂದೇವಿ ಬಂದಿತುಯೆಮಗೆ (ಪುರಂದಾ. ೨-೦೨೦). ೩. ಚಟುವಟಿಕೆಯಿಲ್ಲದ ವ್ಯಕ್ತಿ ; ಸೋಮಾರಿ : ಒಬ್ಬನೇ ಮಗನಿಗೆ ಈ ಮೂದೇವಿ ಎಲ್ಲಿಂದ ಗಂಟುಬಿದ್ದಳೋ ಏನೋ (ಮಸಳಾ. ೩೦).

[ಮೂ$_1$+ದೇವಿ. /ತಮಿ. ಮೂತೇವಿ ; ಮಲ. ಕೊಡ ತೆಲು. ಮೂದೇವಿ]

**ಮೂಧ** (ನಾ). ಒಂದು ಬಗೆಯ ಸಸ್ಯ : ನಾರೋಲಿ, ಮೂಧಮರ, ಮೂಧ, ಮೂಡಲಿ, ಕನಕಚಂಪಕ (ಬೃಶಿಗ. ೩೭-೦೧೯೦). [ ? ]

**ಮೂನೂಱು**, ಮುನೂಱು, ಮುನ್ನೂರು, ಮುನ್ನೂಱು (ನಾ). ಒಂದು ಸಂಖ್ಯೆ ; ಮೂರುನೂರು : ಸ್ವಸ್ತಿಶ್ರೀ ಶ್ರೀಪುರುಷ ಮಾಹರಾಜರ್ ಪೃಥುವೀರಾಜ್ಯಂಗೆಯೆ ಸಿಯಗೆಲ್ಲರ್ ಮುಗರೆನಾಡುಮೂನೂಱೂಮಾಳೆ (ಎಕ. XVI, ತುಮಕೂ. ೮೭-೩;750); ಬೆಳ್ವೊಲಮೂನೂಱುಮನಾಳುತ್ತುಂ (ಎಇ. VIII. ೨೦೭-೦೯ ; 866); ನೂಱುರಥದಲಿ ಸರಳ ಹೊದೆ ಮೂನೂಱು ಪರಿಚಾರರು ಸಹಿತ ಮೈದೋಱಿ ನಿಂದನು ಭೀಮನೊಬ್ಬನೆ ತಱುಬಿ ಕುರು ಬಲವ (ಕುವ್ಯಾ. ೦೩-೩). **ಮುನೂಱು** : ರಾಜ್ಯಾಭಿವೃದ್ಧಿಗೆ ಉತ್ತರೇಶ್ವರದ ಆದಿತ್ಯ ಗ್ರುಹಮುಮುಗುಳ ×ಮುನೂಱು ಪೊಕಲೊಳ × (ಕಇಅ. ೦೦೭-೯೩-೭; 792). **ಮುನ್ನೂರು** : ತಮ್ಮ ರಾಜ್ಯದಲ್ಲಿ ನಿಡುಂಬರೆ ಕಟ್ಟುವ ಕೆಲಸದಲ್ಲಿ ಮುನ್ನೂರು ಚಿಲುವಾನು ಆಳು ಉಂಟಷ್ಟೆ (ರಾಜೇಂದ್ರ. ೦೯೩) : ಮುನ್ನೂರುಮಂದಿ ಕೂಲಿಗಳು, ಕುಂಬಾರಗುಂಡಿಯಲ್ಲಿ ದುಡಿಯುತ್ತಿರುವ ಕಾಲದಲ್ಲಿಯೇ, ಅಲ್ಲಿನ ಜ್ವರದ ಸುಗ್ಗಿಯೂ ಬಲಿಯಿತು (ಶಾರುದಾ. ೦೩೩). **ಮುನ್ನೂಱು** : ನಿನ್ನ ಪ್ರಾಯದಲಿ ಹಣವ ಗಳಿಪೆನೆಂದು ಮುನ್ನೂಱು ಮಂಚವ ಮುಱಿದೆ (ಕಂಸವಿ. ೭-೦೩೩).

**ಮೂನೂರ್ಬರ್**, **ಮೂನೂರ್ವರ್** = ಮೂರು ನೂರು ಜನ ; ಮುನ್ನೂರು ಮಂದಿ : ಎಪ್ಪದಿಂಬರುಂ ಮೂನೂರ್ಬ್ಬರುಂ ಜಕ್ಕಿಯ ಬ್ಬೆಯೊಳ್ ನುಡಿದವು ತಪ್ಪುರ್ಂ ಬಿಡಿಸಿದೋರ್ (ಎಕ. VII, ಶಿಕಾ. ೨೦೯-೦೯ ; 918) ; ಚಕ್ರವರ್ತ್ತಿ ಶ್ರೀವೀರವಾರಸಿಂಹ ದೇವರಸರಾಣಿ ಸೋವಲದೇವಿಯರಾಣಿ ಮೂನೂರ್ಬ್ಬರಿಗಂ ಮೂವತ್ತಿತ್ತ್ಸಿರಕಂ (ಎಕ. VI , ತರೀಕೆ. ೩೩-೯; 1290); ಕೋಡಾಮರ್ ಪೊಯ್ಗುಕೆಯಿ ಬಿಟ್ಟ ಮೂನೂರ್ವ್ವರುಂ (ಎಕ. VI, ಕೊಪ್ಪ. ೯೦-೭ ; ಸು. 1090).

[ಮೂ$_1$ ( < ಮೂಱು ) + ನೂಱು$_2$]

**ಮೂನೆಲ** (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳವೆಂಬ ಮೂರು ಲೋಕ ; ತ್ರಿಲೋಕ : ಅಪೂರ ಮುಳ್ಪಸಿಯ ಮೂನೆಲಂ ತನಗೆಂಬ ಆವನಿರ್ಪನೊ ಕೊರಗು ಪುರುಳೇವ ಪೆಸರು (ಶಾಂಪಿತ. ೨೮-೨೦).

[ ಮೂ$_1$ ( < ಮೂಱು) + ನೆಲ]

**ಮೂನೆಲೆ** (ನಾ). ಮೂರು ಅಂತಸ್ತು: ಮೂಱುಲೋಕಮನೆ ಪೋಲ್ತುದು ಮೂನೆಲೆಯಿಂ ಸಯುಂಬರಂ (ಶಂಕಶಾ. ೩-೩೩); ಮೂನೆಲೆವೆತ್ತ ಸಭೆ ಮೂಱುಲೋಕವೊಡನೊಂದಿರ್ದತ್ತೆನಲ್ ರಂಜಿಸುಂ (ವೇಪುರಾ. ೯-೯೦).

[ಮೂ$_1$ ( < ಮೂಱು ) + ನೆಲೆ$_1$]

**ಮೂಬದಲು** ' ಮುಬಾದಲೆ ' ನೋ.

**ಮೂಬದಲೆ** ' ಮುಬಾದಲೆ ' ನೋ.

**ಮೂಮಡಿ** ' ಮೂಪಡಿ ' ನೋ.

**ಮೂಮಡಿವೀರ** (ನಾ). ಮೂರು ಪಟ್ಟು ಶೂರ ; ಮಹಾವೀರ : ಜ್ವಾಲಾಂಬಿಕನ ತಪೋಭ್ರುಷ್ಟನ ಮಾಡಿದೋಲೆಯುಕಾಱಿನದಾರು ಮೂಲೋಕ ವಿಜಯ ಮೂಮಡಿವೀರ ಕಮ್ಮಲಗೋರ್ಲಸಲ್ಲವೆ ಪೇಳು ಜೀಯ (ಮೋಹತ. ೯-೦೩).

[ಮೂಮಡಿ (< ಮೂವಡಿ ) + ವೀರ]

**ಮೂಮರಿ** (ನಾ). (?) : ತೋಟ ತುಡಿಕೆ ಮಕ್ಕಿ ಹಕಲು ಮೂಮರಿ ಕೋಹು ಕಾಡಾರಂಭ ನಿಧಿನಿಕ್ಷೇಪ ಜಲಪಾಷಾಣ ಅಕ್ಷೀಣ ಆಗಾಮಿ ಸಿಧಸಾಧ್ಯ ಯಿಂತಿ ಅಷ್ಟ ಭೋಗ ತೇಜಸ್ವಾಂಮ್ಯ ಮುಂತಾಗಿ ಏನುಳಿದನು ನಿಮಗೆ . . . ಧಾರೆಯನೆಱದು ಕೊಟೆವಾಗಿ (ಎಕ. VIII, ತೀರ್ಥಹ. ೨೨-೨೦; 1405). [ ? ]

**ಮೂಮೆ**, ಮುಮ್ಮೆ, ಮುಯ್ಮೆ, ಮೂರ್ಮೆ, ಮೂವೆ (ನಾ). ಮೂರುಸಲ ; ಮೂರುಬಾರಿ : "ಮೂಮೆಯೆನೆ ಮೂಱುಂ ಸೂಟ್" (ಶಶುಶಿ. ೯೯) ; ಅನಿವಾರಿತಾಚಾರಿಗೆ ಮೂಮೆ ಪೆರ್ಜ್ಜಱಿಪುಪಟ್ಟಮು ತ್ರಿಭುವನಾಚಾರಿಯೆನ್ದು ಪೆಸರಿತ್ತು (ಇಅ. X, ೦೭೯-೩; 7ನೆಯ ಶತ): ಇರ್ವರುಮಂ ಮೂಮೆ ಸುರೇಂದ್ರಕಾಂತೆ ಬಲಗೊಂಡುದ್ಯನ್ಮನಃಪ್ರೀತಿಯಿಂ ಎಱಗಿ (ಆದಿಪು. ೭-೯೯); ಮೂಮೆ ಕೈಮಿಗೆ ಬಲವಂದು ಗಂಧ ಕುಟಿಯಂ (ಅಸಂಪು. ೦೦-೩೭); ಸಮವಸರಣಮಂಡಪಮಂ ಹೊಕ್ಕಾ ರಮಣಿ ಸುಲೋಚನೆ ಸಹಿತ ಜನಪನಂ ಮೂಮೆ ತಿರಿದು ಬಂದು (ಜಯಕಾ. ೦೭-೨೭). **ಮುಮ್ಮೆ** : ಮುಮ್ಮೆ, ಮೂಮೆ (ಶಬ್ದಾನು. ೩೩೯ ಪ್ರಯೋ). **ಮುಯ್ಮೆ** : ಮುಯ್ಮೆ, ಮುಯ್ವರ್ (ಶಬ್ದಾನು. ೩೭೦ ಪ್ರಯೋ). **ಮೂರ್ಮೆ** : " ಮೂರ್ಮೆಯೆನಲ್ ತ್ರಿಕವಾರದಲ್ಲಿ" (ಕನಾಟಕ. ೬೩) ; ಪೇಟಿವ್ಗಳೊರ್ಮೆಯೊ ಮೇಣಿರ್ಮೆಯೊ ಮೂರ್ಮೆಯೋ ಕುರುಕುಳಪ್ರಾರಬ್ಧದುರ್ವೃತ್ತಕಂ (ಶಾಪ್ರಶ. ೩೯೯) ; ಮೆ ಪ್ರತ್ಯಯಕ್ಕೆ . . . ಮೂರ್ಮೆ, ಸಾಸಿರ್ಮೆ, ಪಲರ್ಮೆ (ಶಮದ. ೨೦೭ ಪ್ರಯೋ); ಬೀರಪಂಡಿಗವರೋಹಿಸಿ, ಮಣಿದು ಮೂರ್ಚೆ ನಮಸ್ಕರಿಸಿ (ಬಿಪ್ಪಿಅ. ೦೦೯-೨೨). **ಮೂವೆ**: ದೇವದೇವನ ಬೆಸನ ಮಾಯಾದೇವಿ ತಲೆಯಲಿ ಧರಿಸಿ ಪದದಲಿ ಮೂವೆ ಬಲವಂದೆಱಗಿ ಹೋಗುವೆವೆನುತ ಬೀಳ್ಕೊಂಡು (ನಿಶಾಗ. ೦೦-೨-೩೪).

**ಮೂಮೂರ್ಮೆ** (ದ್ವಿರುಕ್ತಿ) : ಖಡ್ಗದ ಕೂರ್ಮೊನೆಯನ್ನು ಮಹಾ ರಾಜನ ಮುಖದ ಸುತ್ತಮೂ ಭುಜಕೀರ್ತಿಗಳನ್ನು ಬಳಸಿಯೂ ಮೂಮೂರ್ಮೆ ನಿವಳಿಸಿ (ಐರುಗಂ. ೩೨-೩).

[ಮೂ$_1$ (<ಮೂಱು) + − ಮೆ$_2$./ತಮಿ. ಮುಮ್ಮೆ; ಕೊಡ. ಮೂವು]

**ಮೂಮ್ಯೆ** (ನಾ). ಒಂದು ಬಗೆಯ ಸಸ್ಯ : " ಮಾರ್ಕಂಡೀಯಂ—ಮೂಮ್ಯೆ " (ಓಷಧಿ. ೦೨೩). [ ? ]

**ಮೂಮೊನೆ**, ಮುಮ್ಮೊನೆ$_1$ (ನಾ). ಯಾವುದಾದರೊಂದು ಆಯುಧದ ಚೂಪಾಗಿರುವ ಮೂರು ತುದಿ.– ಮೊನೆ : ' ಮೂಮೊನೆಗೈದು ' ಪರಾ. **ಮುಮ್ಮೊನೆ$_1$** : ಮುಮ್ಮೊನೆಯ ಬೋಳೆಯ ಸರಳಿನಲಿ ಸಾಧನ ಸಮಗ್ರರು ಶಿರುಪನೆಚ್ಚರು ದೆಸೆದೆಸೆಗೆ ಕವಿದು (ಕುವ್ಯಾದ್ರೋ. ೭-೦೦); ಪೊಳೆವ ತ್ರಿಶೂಲ ಮುಮ್ಮೊನೆಯಿಂದೆ ಕಂಗಿಡಿಗಳನುಗುಳ್ದು . . . ಪರಿಯುರಸ್ಥಲದಲ್ಲಿ ಬಂದು ಮೋಹಿಸಿತು (ಮೋಹತ. ೯೦-೭೭).

[ಮೂ$_1$ ( < ಮೂಱು) + ಮೊನೆ]

**ಮೂಮೊನೆಗೈದು**, ಮುಮ್ಮೊನೆಗಯ್ದು, ಮುಮ್ಮೊನೆಗೈದು (ನಾ). ಮೂರು ಹರಿತವಾದ ಮೊನೆಗಳುಳ್ಳ ಆಯುಧ ; ತ್ರಿಶೂಲ : " ಮೂಮೊನೆಗೈದು[ಶಾಕಾಂ. ಮುಮ್ಮೊನೆಗಯ್ದು]ವೆಂದುಂ, ತಿಸುಳ ಪೆಂದುಂ, ಶಿವಂ ಪಿಡಿವ ತ್ರಿಶೂಲಂ " (ಕಶಸಾ. ೯೭-೨). **ಮುಮ್ಮೊನೆಗಯ್ದು**: ಮೇಲಿನ ' ಕಶಸಾ.' ಪ್ರಯೋಗದ ಪಾಠಾಂತರವನ್ನು ನೋಡಿ. **ಮುಮ್ಮೊನೆಗೈದು** : " ಮುಮ್ಮೊನೆಗೈದುವೆನಲ್ ತಿಸುಳಂ " (ಶಶುಶಿ. ೬೦). [ಮೂಮೊನೆ + ಕೈದು$_1$ ( <ಕೆಯ್ದು)]

**ಮೂರ** (ನಾ). ತೊಗಟೆ ; ಸಿಪ್ಪೆ : " ಮೂರ " ಅಂದರೆ ತೊಗಟೆಯು ಸ್ವಲ್ಪಭಾಗವಿದ್ದು ಮೇಲಿನ ರೇಷೆಗಳು ಕೂದಲದಂತೆ ಶೀರಾಗಿರಬೇಕು (ಹುಂಡಾಪ್ರ. ೩೦). [ ? ]

**ಮೂರಡಿ** ' ಮೂಱಡಿ ' ನೋ.

**ಮೂರನ್ನ** (ನಾ). [ಜೈನ] ಮೋಕ್ಷವನ್ನು ಪಡೆಯಲು ಸಾಧಕವಾದ, ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ ಮತ್ತು ಸಮ್ಯಕ್‌ಚಾರಿತ್ರ ಎಂಬ ಮೂರು ಬಗೆಯ ರತ್ನ ; ರತ್ನತ್ರಯ : ಹೊದೆದು ಸುಜ್ಞಾನಾಂಬರವ ಮೂರನ್ನವ ಮುದದಿ ತೊಟ್ಟಪವರ್ಗವೆಂಬ ಸುದತಿಯಯೊದೆವನೆಯೊಳಗಿಪ್ಪ ಶಂಕರಪದಪದ್ಮಗಳಿಗೆ ನಮಿಸುವೆ (ಜೀಜಂಕಾ. ೦೩-೧); ವರತತ್ತ್ವಜಲವನು ಮಿಂದು ಸುಜ್ಞಾನಾಂಬರವ ಪೊದೆದು ಮೂರನ್ನವನು ಹರುಷದಿಂ ತೊಟ್ಟ ನಿರ್ಮಲಪುರುಷನಿಗಲ್ಲದರಸಿಯಹಳೇ ಮುಕ್ತಿರಮಣಿ (ಜೀಜಂಕಾ. ೦೯-೦೦).
[ಮೂ$_1$ (< ಮೂಱು ) + ರನ್ನ (< ರತುನ)]

**ಮೂರಾಬಟ್ಟೆ** (ನಾ). ಹಾಳು ; ನಾಶ ; ಕೇಡು : ನೋಡಲಿ ನೋಡಲಿ ನೋಡಲಿ ಅವರು ಮೂವರು ಕೂಡಿ, ರಚಿಸಿದ ಮೂರಾಬಟ್ಟೆಯ ನಾಟಕವ ! (ಗಂ. ೬೮-೦೩) ; ಈ ಮನೆಯ ಮೂರಾಬಟ್ಟೆ ಯಾರಿಂದ ಆಯಿತೆನ್ನುವುದು ನನಗೆ ತಿಳಿದ ವಿಷಯವಾಗಿದೆ (ಹುಚ್ಚಹು. ೩೭). [← ಮರಾ: ಮುರಾಬಟ್ಟೀ]

**ಮೂರಿ**. ಮುರಿ$_4$ (ನಾ). ೧. ಯಮನ ಭಯಂಕರವಾದ ಕೋಣ : ನಾಡರಸಂ ತಗುಳ್ದು ಕಡೆಗಾಲದ ಮಾರಿಯ ಮೂರಿಯಂತೆ ಕಣ್ಣಾಡದೆ ಬಾಲವೃದ್ಧವನಿತಾವಧೆಗೆಯ್ದು (ಶಂಬಾಪು. ೯-೩೮); ಮಾರಿಯ ಮೂರಿಯಂತೆ ಬರ್ಪ ಸೊರ್ಕಿದಾನೆಯುಂ ಕಂಡು (ರಶಾರ್ಚ್ಯ. ೦೩-೩೩); ಮಾರಿಯ ಮೂರಿ ಮೇಲೆಱಗುವಂದದೆ ಭೋಂಕನೆ ಮೇಲೆವಾಯ್ದು ಕಂಠೀರವಮಂ . . . ಕಡಿಕೆಯ್ದು (ಶರಶು. ೩-೪೪); ಭೈರವನ ಜವನ ಮಾರಿಯ ಮೂರಿಯ ಪೋಲ್ ನಿಂದ ಮಾರಿದತ್ತಂ (ಯುಶೋಚ. ೦-೩೮). ೨. (ಭಯಂಕರವಾಗಿ ತೆರೆದ) ಬಾಯಿ : ಮಾರಿಯ ಮೂರಿ ರಕ್ಕಸನ ರೌದ್ರತೆ . . . ಸಾಹಣಿ ಮಲ್ಲನ ಬಾಹುವಿಕ್ರಮಂ (ಶಿಂಶಾಸ. ೦೬-೦೭; 1189). ' ಮೂರಿಗೊಳ್ ', ' ಮೂರಿವಿಡು ' ಪರಾ. ೩. (ಹೆದರಿಕೆಯನ್ನುಂಟುಮಾಡುವಂಥ) ಗುಂಪು ; ಸಮೂಹ : ತಾರಗೆಯೆನೆ ತೂನೆದೊಟ್ಟಿದ ಮೂರಿಯ ರೋಮಂಥ ಫೇನಮಂಜರಿನಿಕರಂ ಕಾರಿರುಳ ತಿರುಳಿದೆನೆ ಮದಸೈರಿಭಮಿರ್ಪುವು ಚಳತ್ತಮಾಳದ ನೆಳಲೊಳ್ (ಅರ್ಜನೀ. ೩-೪೩) ; ಕಾಲಾಗ್ನಿಯ ಮಾಲೆಯಂತೆ ಮಾರಿಯ ಮೂರಿಯಂತೆ ಮೃತ್ಯುವಿನ ಕೊತ್ತಳಿಯಂತೆ . . . ಮುಂತಿರ್ದ ರಕ್ಕಸವಡೆಯ ನಡುವೆ ನಿಂದ ವೀರತಾರಕಾಸುರಂ (೧೦೪.೬-೩೩ವ); ಸಿಂಗದ ಸಂಗಮಂತರನ ತಿಂತಿಣಿ ಮಾರಿಯ ಮೂರಿ ಕಾಲರುದ್ರಂಗನುಸಾರಿ ಭೈರವನ ಭಾರಣೆ . . . ಎನಲೊಪ್ಪುವಪೋಲ್ ನೆರೆದಿರ್ದುದಾ ಕ್ಷಣಂ ಸಂಗರದುಜ್ಜುಗಕ್ಕೆ ಚತುರಂಗಬಲಂ (ದಕಶು. ೭-೪೪). ೪. ಆಯಾಸ ಅಥವಾ ಜಡತೆಯನ್ನು ಹೋಗಲಾಡಿಸಲು ಮೈ ಮುರಿಯುವಿಕೆ : ' ಮೂರಿಯಿಡು ' ಪರಾ. ಮುರಿ$_4$ : ೫. ಎತ್ತು, ವೃಷಭ : "ಶರಾಭರಣ ವಕ್ರತೆ ಬಲೀವರ್ದ ಸಮಕಟ್ಟುಗಳೊಳಂ ಮುರಿಯಲಾ" (ಕಪ್ರಹುಂ. ೦೦೭). ₱ ಈ ಶಬ್ದದ ಮತ್ತು ಇದರ ಸಮಾಸಪದಗಳ ಅನೇಕ ಪ್ರಯೋಗಗಳ ಅರ್ಥ, ಅದರ ಬೆಳವಣಿಗೆ ಮತ್ತು ನಿಷ್ಪತ್ತಿಯ ಬಗೆಗೆ ಭಿನ್ನಾಭಿಪ್ರಾಯಗಳಿಥ್ದು ವಿಚಾರಣೀಯವಾಗಿದೆ.
[ ದೇ.॥ ತಮಿ. ಮಲ. ತುಳು. ಮೂರಿ ]

**ಮೂರಿಗೊಳ್** (ಕ್ರಿ). ಒಟ್ಟಾಗಿ ಹಿಡಿ : ಅಡವಂ ಗೋಟ್ಟುಱಿಗೊಂಡು ದೋಟದಲೆಯುಂ ಮುಂಗೆಯ್ಗಳಿಂ ಮೂರಿಗೊಂಡಿಡುವಟ ಕೂಂಕಿ ಕೊಡಂಕೆಯುಂ ಮುಱಿವಂ . . . ಮಿಂಡರ ಮಿಾಸೆಯಂ ಸೆಳೆದು ಮೂಗಿಟ್ಟೇಱುವಂ ಮಕ್ಕಳಟ್ಟೊಡೆ ಬಾಯ್ವಾಯನೆ ಪೊಯ್ವನೇಂ ಸಿತಗನೋ ಕಾಳಾಹಿಕೋಳಾಹಳಂ (ಅರ್ಜನೀ. ೬-೮೪). [ಮೂರಿ + ಕೊಳ್$_1$]

**ಮೂರಿದು** ' ಮೂರಿಯಿಡು ' ನೋ.

**ಮೂರಿಯಿಡು**. ಮೂರಿಡು, ಮೂಲಿಯಿಡು (ಕ್ರಿ). ೧. ಆಯಾಸ ಅಥವಾ ಜಡತೆಯನ್ನು ಹೋಗಲಾಡಿಸಲು ಕೈಕಾಲುಗಳನ್ನು ನೀಡು; ಮೈಮುರಿ : ಮೂರಿಯಿಡುವೊಡಂ ಸುಱಿವೊಡಂ ಸಿಂಗರಂಗೆಯ್ವೊಡಂ ತಂಬುಲಂ ಮೆಲುವೊಡಂ ನೀರಂ ಕುಡಿವೊಡಂ ನುಡಿವೊಡಂ ಶೃಂಗಾರಂಗೆಯ್ವೊಡಂ . . . ಕಾಣಲೀಯಲಾಗದು ವಧುವಂ (ಶುದತಿ. ೦೦-೩೦). **ಮೂರಿಡು** : ೨. ಭಯಂಕರವಾಗಿ ಬಾಯಿತೆರೆ: ನೋಣೆಯಲ್ ನುಂಗಲಿ ಕಾತಳಂ ಮುರಿದು ಮೂರಿಟ್ಟಂತೆ. . .ಲಗ್ಗಗಾರ್ದು ವಸುಷೇಣಂ ಸಾರ್ದು ಸೂಟಿಸಿದಂ (ಅಪಂಶು. ೦೦-೮೩). ₱ ಈ ಶಬ್ದದ ಸ್ವರೂಪವು ಸಂದಿಗ್ಧವಾಗಿದೆ. **ಮೂಲಿಯಿಡು** : ೧. ಅಸನಪ್ರಾಶಯ್ಯಾತಳದಿಂದಂ ಕಾಂತೆಯಿಟ್ದೊಡಂ ಮೆಯ್ಯಂ ಕಮ್ಮಗೆ ಮೂಲಿಯಿಡುವೊಡಂ ಪಚ್ಚುವೊಡಂ ಇರವಂ ಭಯಸುವೊಡಂ ಪರಪುರುಷಸಮಕ್ಷದೊಳೆಪೆಲ್ಲವಸತೀಭಾವಂ (ಮದತಿ. ೮-೪೪). [ಮೂರಿ + ಇಡು$_1$]

**ಮೂರಿವಿಡು** (ಕ್ರಿ). ೧. (ಭಯಂಕರವಾಗಿ) ಬಾಯಿಬಿಡು; ಬಾಯಿತೆರೆ: ಆಗಳ್ ದುರ್ಯೋಧನನಂ ಮುಂದಿಟ್ಟೊಡಗೊಂಡು ಧೃತರಾಷ್ಟ್ರಕರ್ಣ ಶಲ್ಯಶಕುನಿ ಸೈಂಧವಪ್ರಭೃತಿಗಳ್ ನೆಲಂ ಮೂರಿವಿಟ್ಟಂತೆ ಸಭಾಕ್ಷೋಭಮಾಗೆ ತಳರ್ದು . . . ಪೋದರ್ (ಪಂಪಭಾ. ೨-೮೭ ವ) ; ಭವದೀಯವನಾಯುಜ ಹಯನಿವಹಂ ಕೇಳ್ ಮೂರಿವಿಟ್ಟು ನಿಶ್ವಾಸಂ ಸೈಂಧವಮಂ ಮಾಸಿಸೆ ಸೊಗಯಿಸಿತು ವಿನಿದ್ರಂ ದೇವ ದೀರ್ಘಪಟಮಂಡಪದೊಳ್ (ಶಾಂತಿಪು. ೩-೯೨).
೨. ಗುಂಪುಗೂಡು ; ಒಟ್ಟಾಗು : ದ್ರುಪದಂ . . . ತನ್ನ ಮಗಂದಿರುಂ ತಮ್ಮಂದಿರುಂ ಬೆರಸು ನೆಲಂ ಮೂರಿವಿಟ್ಟಂತೆ ಬರೆ (ಪಂಪಭಾ. ೪-೬೪ ವ); ಸಿಡಿಲ ಬಳಗಕ್ಕೆ ಕುಳಿಕನ ಕುಡುಹುದಾಡೆಗೆ ಮೂರಿವಿಟ್ಟ ಮಾರಿಗೆ ಮಾಱಿಂ ಪಡುವಣ್ಣ (ಎಪಿಕ. XV. ೦೯೨-೦೪; 1184). ೩.=ಮೂರಿಯಿಡು ೧ : ಮೂರಿವಿಡುತ್ತುಂ ನಿಂದು ಮೆಯ್ಯಂ ಬಿದಿರ್ದೆಳಸಿಮುದಶ್ವಾಳಿ ಮೋಹಿಂಗೆ (ಶರಶು. ೮-೩೪). [ಮೂರಿ + ಬಿಡು$_1$]

**ಮೂರು** 'ಮೂಱು' ನೋ.

**ಮೂರುಕ** ' ಮುಕ್ಕ$_3$ ' ನೋ.

**ಮೂರುಕಾಸು** (ನಾ). ೧. ಹಿಂದೆ ಇದ್ದ ಆಣೆಯ ಹನ್ನೆರಡನೆಯ ಹಿಂದು($\frac{೧}{೧೨}$)ಭಾಗದ ಬೆಲೆಯ ಮೂರುನಾಣ್ಯಗಳು ಮತ್ತು ಆ ಮೂರು ನಾಣ್ಯಗಳ ಬೆಲೆಯ ಒಂದು ತಾಮ್ರದ ನಾಣ್ಯ: ಇಂದಿನ ರೂಪಾಯಿಗೆ ಹಿಂದಿನ ಮೂರುಕಾಸಿನ ಬೆಲೆಯೂ ಇಲ್ಲವಾಗಿದೆ (ಕಅ). ೨. (ಆಲಂ) ಗಣನೆಗೆ ತಕ್ಕುದಲ್ಲದ ಕಾಸು ; ಅಲ್ಪಹಣ : ಹತ್ತು ಬಂಗ್ಲೆ ಊಟಲ್ಲ, ಅದನ್ನು ಮೂರುಕಾಸಿಗೆ ಇಲ್ಲಿ ಕೊಡುವುದು ಯಾಕೆ, ನೀನೇ ಒಯ್ದು ಬಿಡು (ಹೂಸಕ್ಷ. ೪೭). ೩. ತುಚ್ಛ ; ಅಲ್ಪ : ನನ್ನ ಚಾರಿತ್ರ್ಯದ ಬಗ್ಗೆ ಮಾತನಾಡಿದಳೇ ಈ ಮೂರುಕಾಸಿನ ಬಜಾರಿ (ಮೂರುದಾ. ೦೪೩).

ಮೂರುಕಾಸಿನವ = ಲೆಕ್ಕಕ್ಕೆ ಇಲ್ಲದವನು; ಗಣನೆಗೆ ಬಾರದವನು; ಅಲ್ಪವ್ಯಕ್ತಿ : ಹೀಂತ ಮೂರುಕಾಸಿನವ! (ರಕ್ತರೂ.೬೬). ಮೂರುಕಾಸಿನವಳು = ಲೆಕ್ಕಕ್ಕೆ ಇಲ್ಲದವಳು ; ಗಣನೆಗೆ ಬಾರದವಳು; ಅಲ್ಪಳು : ನೀನು ತಡೆದದ್ದರಿಂದ—ಇಲ್ಲವಾದರೆ ಆ ಮೂರುಕಾಸಿನವಳಿಗೆ ತೋರಿಸುತ್ತಿದ್ದೆ ಯಾರ ಚಾರಿತ್ರ್ಯ ಏನು ಎಂದು (ಮೂರುದಾ. ೦೪೬).
[ಮೂರು (< ಮೂಱು) + ಕಾಸು$_2$]

**ಮೂರುತಗೊಳಿಸು** (ಕ್ರಿ). ಕುಳಿತುಕೊಳ್ಳುವಂತೆ ಮಾಡು ; ಕುಳ್ಳಿರಿಸು; ಸಕಲ ಶಿವಭಕ್ತರಂ ಬರಿಸಿ ಮೂರುತಿ[ತ]ಗೊಳಿಸಿಯುಕುಟಲಂ ಕಾಲೊಟಿ ತೋದ್ಯಸತ್ಕಾರವಮಂ ಪ್ರಕಟಿಸಿ (ಪದ್ಮರಾ. ೨-೬೦).
[< ಮೂರ್ತ$_2$ + ಕೊಳ್$_1$ + — ಇಸು$_3$]

**ಮೂರುತಿ** (ನಾ) ೧. ದೇವರು, ಮನುಷ್ಯ ಮುಂತಾದವರ ಪ್ರತಿಕೃತಿ; ವಿಗ್ರಹ; ಪ್ರತಿಮೆ : "ಮೂರುತಿ—ಮೂರ್ತಿ = ವಿಗ್ರಹ. ಆಕಾರ" (ತದ್ಭವಕೋ. ೩೭): ವ್ಯರ್ಥವಲ್ಲ ತವ ತಪಸ್ಸು, ಮರೆದವಸಿಯು ಮೂರುತಿ (ಅಶಕೇ. ೦೭-೯). ೨. ರೂಪು; ಆಕಾರ ; ಆಕೃತಿ: ತುಂಬಿದವು ನವಮಾಸ ಬಳಿಕ ನಿತಂಬಿನಿಯರಿಗೆ ನಿರ್ಮಳಪ್ರತಿಬಿಂಬ ಕಾಣಿಸಿತಾದಿನಾರಾಯಣನ ಮೂರುತಿಯು (ಕೊರಟಾ. ೦-೬-೯) ; ಮೂರುತಿಯನೆ ನಿಲ್ಲಿಸೋ ಮಾಧವ ನಿನ್ನ ಎನ್ನ ಹೃದಯಕಮಲದೊಳು ಒದಗಿ ನೆನೆಯುವಂತೆ ನಿನ್ನ (ಪುರಂದ. ೦-೦೭ ಕಲ್ಲಾ). 'ಮೂರುತಿಗೊಳ್ಳು' ಪರಾ. [< ಸಂ. ಮೂರ್ತಿ]

**ಮೂರುತಿಗೊಳ್ಳು** (ಕ್ರಿ). ಆಕಾರವನ್ನು ತಳೆ ; ರೂಪುಗೊಳ್ಳು: ನಿಮ್ಮ ವೇದಶಾಸ್ತ್ರಂಗಳು ಮೂರುತಿಗೊಂಡಲ್ಲಿ ಚತುರ್ವೇದಿಗಳಿಗೊಮ್ಮೆ ಅಕ್ಕತ್ತೆ ಅಯ್ಯಾ (ಬಸವ. ೩೬೫). [ಮೂರುತಿ + ಕೊಳ್ಳು$_1$ (< ಕೊಳ್$_1$)]

**ಮೂರುನಾಮ** 'ಮೂಱು' ಪರಾ.

**ಮೂರುಸಂಜೆ** 'ಮೂಱುಸಂಜೆ' ನೋ.

**ಮೂರೆಲೆ** 'ಮೂಱೆಲೆ' ನೋ.

**ಮೂರೆಲೆಯಾಟ** (ನಾ). ಪ್ರತಿಯೊಬ್ಬ ಆಟಗಾರನೂ ಮೂರು ಮೂರು ಎಲೆಗಳನ್ನು ಹಾಕಿಕೊಂಡು, ಪಣವನ್ನಿಟ್ಟು ಆಡುವ ಒಂದು ಬಗೆಯ ಇಸ್ಪೀಟು ಆಟ ; ಪರೇಲ್ : ಈ ವೈದಿಗಳು ಮೂರೆಲೆಯಾಟದ ಶಕುನಿಯೊಡನೆ ಆಟವಾಡಿ ಸೋತು ಅವನಿಂದಲೆ ಹಣ ಸಾಲವಾಗಿ ಪಡೆದಿದ್ದರು (ಶ್ರೀಕು. ೫೧೭). [ಮೂರೆಲೆ (< ಮೂಱೆಲೆ) + ಆಟ]

**ಮೂರೆಲೆಪೊನ್ನೆ** 'ಮೂಱೆಲೆಹೊನ್ನೆ' ನೋ.

**ಮೂರೆಲೆಹೊನ್ನೆ** 'ಮೂಱೆಲೆಹೊನ್ನೆ' ನೋ.

**ಮೂರ್ಕ** 'ಮುಕ್ಕ$_3$' ನೋ.

**ಮೂರ್ಖ** (ನಾ). ತಿಳಿಗೇಡಿ ; ಅವಿವೇಕಿ : 'ವೈಧೇಯಃ. . .ಮೂರ್ಖಃ, ಮಾತೃಶಾಸಿತಃ— ಈ ೧೧ ಅಱಿಯದವರ್' (ಹಲಾಯು. ೫೭-೦೬೧) ; ರವಿ ... ಮಕರದೊಳಿರೆ ಮೂರ್ಖಂ ಖಳಂ ಲೋಭ ನೀಚವ್ಯವಹಾರಂ (ಜಾತಕ. ೦೭-೦೭);ಮೂರ್ಖನ ಕೆಯ್ಯ ರತ್ನದೊಳ್ಸಮವೆನಿಸಿರ್ದಳ್ ವನವಿಜಯಲಕ್ಷ್ಮಿಯು ಬಾಳ್ಕೊದಲೆ ನೇಮಿಸಿ ಶಬರಿ ಶಬರನ ಕೆಲದೊಳ್ (ಪಾರ್ಶ್ವಪು. ೦೨-೭೭) ; ಮೂರ್ಖಂಗೆ ಬುದ್ಧಿಯನು ನೂರ್ಕಾಲ ಪೇಳಿದರೆ ಗೋರ್ಕಲ್ಲ ಮೇಲೆ ಮಳೆ ಹುಯಿದರಾ ಕಲ್ಲು ಹೀರ್ಕೊಯುದುಂಟೆ (ಸರ್ವಜ್ಞ. ೦೦೩೧). [ಸಂ.]

**ಮೂರ್ಖತನ** (ನಾ). ತಿಳಿಗೇಡಿತನ ; ಅವಿವೇಕ : ಮನದಸ್ನ ಮದ್ವಾಕ್ಯವ ಕೇಳು ನೀ ಮೂರ್ಖತನದಿಂದ ಒಡೆದರೆ ನೀಱ ಘನಶಾಪವ ಕೊಟ್ಟುಯಿಾಕ್ಷಣ ಭೂವಿಭಾಜನವ ಮಾಳ್ಪಳು ಜೀಯ ನಿಮ್ಮ (ವೀಹಕ. ೧೦-೩೭); ಚೌಡಪ್ಪನವರ ಮೂರ್ಖತನಕ್ಕೋ ಅಥವಾ ಮರುಳುತನಕ್ಕೋ ಬಹಳ ಕೆಡುಕೆನಿಸುತ್ತದೆ (ಹಳ್ಳಿಚಿ. ೦೦೩) ; ಪರನಾರಿಯರೊಂದಿಗೆ ಬೆರೆಯುವುದು ಶುದ್ಧ ಮೂರ್ಖತನವಲ್ಲವೇ ? (ಜಾಪೀಠ. ೭). [ಮೂರ್ಖ + — ತನ]

**ಮೂರ್ಖತೆ** (ನಾ). = ಮೂರ್ಖತನ : ಧರೆಗೆಸದುತ್ತು ತಾರಕನ ದುರ್ಗತಿ ತಾರಕನೇಳ್ಗೆ . . . ತಾರಕನ ಮೂರ್ಖತೆ ತಾರಕನುತ್ಪಥಕ್ರಮಂ (೧೦ಕ. ೭-೦೦) ; ಮೂರ್ಖತೆ ಸಾಕು ರಾಜಕುಮಾರಗಿದು ತಾ ಯೋಗ್ಯವಲ್ಲ (ಕೊರಟಾ. ೯-೧೫-೦೨). [ಸಂ. ಮೂರ್ಖತಾ]

**ಮೂರ್ಖತ್ವ** (ನಾ). = ಮೂರ್ಖತನ. [ಸಂ.]

**ಮೂರ್ಖವೃತ್ತಿ** (ನಾ). = ಮೂರ್ಖತನ : ಅತಿವಯನಾಗಿ ಬಾಳವೃತ್ತಿಯಿಂದಱಿದಂದಿನ ಮೂರ್ಖವೃತ್ತಿ ಪಂಡಿತವೃತ್ತಿಯಿಂದಮಲ್ಲದದು ನೀಗದು (ಶಾಂತಿಪು. ೭-೪೦) ; ಅನೆಯನಿರುಳುಂ ಪಗಲುಂ ಜಾನಿಸಿ ತನು ಮೂರ್ಖವೃತ್ತಿ ಪೂರ್ವದವೋಲಜ್ಞಾನಿ ನಯಾನಯಚಿಂತೆಯನೇನುಮನಱಿಯನೆ ಮುಮಮೂಷ್ಮ ತೆಱನಱಿದಪನೇ (ಚಂದ್ರಪ್ರ. ೦೦-೩೭). [ಸಂ.]

**ಮೂರ್ಖಿಸು** (ಕ್ರಿ). ಅರಿವನ್ನು ಕಳೆದುಕೊಳ್ಳು ; ದಡ್ಡತನದಿಂದಿರು : ಮುನಿದು ಮೂದಲಿಸಿ ಮೋಡಿಯೊಳಿದ್ದು ಮೂರ್ಖಿಪ ಮೊಸೆಗಾತಿಯಿಾ ಕೃತಿಗೇಳ್ ಇನಿಯನ ಮೊಗವ ನೋಡದ ಮುನ್ನ ಪೋಡಿಸಿ ಮನಗರಗುವಳು (ಹರಿಶ. ೦-೫೫). [ಮೂರ್ಖ + — ಇಸು$_3$]

**ಮೂರ್ಚ್ಛೆಸು** (ಕ್ರಿ). ಮೈಮರೆ ; ಮೂರ್ಛೆಹೋಗು : ಈಶಾನುಭವ ಪರವಶದೊಳಾ ಸುತಂ ಮೂರ್ಚ್ಛೆಸುವನೆಂತೆಂದು ಧರೆಗೇಷ್ಯದರ್ಥವಂ ನಟಿಸಿ ತೋರ್ಪಂತೆ ಚಂದ್ರಾನನೆಗೆ ನಿದ್ರೆಯಾಯ್ತು (ಜೈಮಿ. ೨-೪೦) ; ದೇವದತ್ತಂ ನಿದ್ರಿಸಿದಂ, ಮೂರ್ಚ್ಛೆಸಿದಂ, ಸತ್ತಂ (ಶಬ್ದಾನು. ೨೦೯ ವ್ಯಾಖ್ಯಾ). [ಮೂರ್ಚ್ಛೆ + — ಇಸು$_3$]

**ಮೂರ್ಚ್ಛೆ** (ನಾ). ಅರಿವು ತಪ್ಪುವುದು ; ಎಚ್ಚರ ತಪ್ಪುವುದು : ಅಱಿವು ಇದಿರೆಡಗೆಟ್ಟಲ್ಲಿ ಎಣ್ಣೆ ಬತ್ತಿ ತೀರಿದ ಮತ್ತೆ ಬೆಳಗೆಂಬುದು ನಷ್ಟ . . . ಅದು ಮೂರ್ಚ್ಛೆ ಅಮೂರ್ಚ್ಛೆ ಅದು ಅಱಿವಿನ ಮಱವೆ (ಶೂನ್ಯಸಂ. ೦೦೬-೯೭೫). [ಸಂ. ಮೂರ್ಚ್ಛಾ]

**ಮೂರ್ಚ್ಛೆತಿಳಿ** (ಕ್ರಿ). ಎಚ್ಚರಹೊಂದು ; ಪ್ರಜ್ಞೆಯನ್ನು ಪಡೆ : ಪರಿಜನಂ . . . ಕಪ್ಪುರದ ರಜಂಬೊರೆದ ಕರಕಾಂಬುವಂ ತಳಿದರವುರನೆಟ್ಟಱಸೆ ಮೂರ್ಚ್ಛೆತಿಳಿದು ಕುಮಾರಂ ಈ ಪಟಮನಿಲ್ಲಿಗಾರ್ ತಂದರೆಂಬನ್ನೆಗಂ (ಅಂಪು. ೯-೦೭) ; ವಿಷಯವೆಂಬ ರಸವ ಕುಡಿದು ಅಜ್ಞಾನವೆಂಬುದೊಂದೆ ಹಾಸಿಕೆಯಲ್ಲಿ ಮಲಗಿ ಮೂರ್ಚ್ಛೆತಿಳಿಯದೆ ಇಪ್ಪುದ ಕಂಡು ನಾಚಿತ್ತಯ್ಯ ಎನ್ನ ಮನ (ಅಜೆಪ. ೦೩-೨೭). [ಮೂರ್ಚ್ಛೆ + ತಿಳಿ$_1$]

**ಮೂರ್ಚ್ಛೆವೋಗು** (ಕ್ರಿ). = ಮೂರ್ಚ್ಛೆಸು : ಹಾ ಸ್ವಯಂಪ್ರಭೇ ಎಂದು ಮೂರ್ಚ್ಛೆವೋಪುದುಂ (ಅಂಪು. ೪-೦೭). [ಮೂರ್ಚ್ಛೆ + ಪೋಗು$_1$ (< ಪೋ$_1$)]

**ಮೂರ್ಛನ** (ನಾ). ೧. ಅರಿವು ತಪ್ಪುವುದು : ಎಚ್ಚರ ತಪ್ಪುವುದು. ೨. [ಸಂಗೀತ] ಸಪ್ತಸ್ವರಗಳ ಆರೋಹಣ ಮತ್ತು (ಅದೇ ಕ್ರಮದ) ಅವರೋಹಣ : ಮೂರ್ಛನ— ಪ್ರತಿಸ್ವರದಿಂದಲೂ ಸ್ವರಸಪ್ತಕದ ಪೂರ್ಯಕೆ (ಸಂಗೀತಂ. ೨೮). [ಸಂ. ಮೂರ್ಛನಾ]

**ಮೂರ್ಛನೆ** (ನಾ). = ಮೂರ್ಛನ : ಮೃದುಪವನಾಘಾತದಿಂದೆ ಗಾಂಧಾರ ಗ್ರಾಮದ ಮೂರ್ಛನೆಗಳನುಚ್ಚರಿಸಿದುವಮರರ ಪೆಗಲ ಬೀಣೆಗಳ್ ಮಿಡಿಯದೆಯುಂ (ಚಂದ್ರಪ್ರ. ೦೨-೬೯) ; ಆಹತ ಕಂಪಿತ ಮೂರ್ಛನಾಗಮಕಸ್ಥಾಯಿ ಸಂಚಾರಿ (ಹರಿದಸಂ. ೩-೦ ಪ) ; ಸಪ್ತಸ್ವರಗಳ ಆರೋಹಣ ಮತ್ತು ಅವರೋಹಣಕ್ರಮಗಳಿಗೆ ಪ್ರಾಚೀನಶಾಸ್ತ್ರಕಾರರು ಮೂರ್ಛನೆ ಎಂದು ಕರೆದಿದ್ದಾರೆ (ಸಂಗೀತಂ. ೦೯). [ಸಂ. ಮೂರ್ಛನಾ]

**ಮೂರ್ಛಿತ** (ಗು). ೧. ಅರಿವು ತಪ್ಪಿದ ; ಪ್ರಜ್ಞೆಯನ್ನು ಕಳೆದುಕೊಂಡ. (ನಾ). ೨. ಮೂರ್ಛೆ ಹೊಂದಿದವನು : ಪತಿಯೆದ್ದೊಡನೆ ರಕ್ತಂ ಸುರಿವ ಕರಂ ಸರ್ಪನಂ ಕಂಡು ಆಗ ಪೌಪಸೆ ಹಾಱಿ ಮೂರ್ಛಿತನಾಗಿ ಸತ್ತಸನ (ಬಸಪು. ೯೭-೨೩) . ೩. ಗಟ್ಟಿಗೊಳಿಸಿದುದು ; ಗಡ್ಡೆ : ಸುರಸ ತೈಲಂಗಳಿಂ ಪಾಷಾಣಧೃತಿಗಳಿಂದಿರದೆ ಮರ್ದಿಸಿ ಮೂರ್ಛಿತಂ ಮಾಡಿ ಬಳಿಕ ರಸಮಂ ಕೊಂಡು ತದನಂತರಂ ಸಲೆ ಕಲ್ಕಮಂ ಮಾಡಿ (ಅರಾಕ. ೨-೦೩-೬). [ಸಂ.]

**ಮೂರ್ಛಿಸು** (ಕ್ರಿ). ಅರಿವಿಲ್ಲದಾಗು ; ಜ್ಞಾನತಪ್ಪು; ಎಚ್ಚರವನ್ನು ಕಳೆದುಕೊಳ್ಳು: ಕಣ್ಗಳಂ ಮುಚ್ಚಿ ಸೆರಬಿಗಿದು ದಡದಡಿಸಿ ದೊಪ್ಪನೆ ಬಿದ್ದು ಸಂಗ ಶರಣೆನುತ ಮೂರ್ಛಿಸೆ (ಬಸವ. ೨-೫೯); ಮೇದಾನಳನುರಿದೆರ್ದು ... ಹಾ ದೇವೀ ಎನುತುಮವನಿಪತಿ ಮೂರ್ಛಿಸಿದಂ (ಶಾಂತೀಶ್ವ. ೫-೦೬೨); ಗಾಯದಿಂ ಮೂರ್ಛಿಪರ್ ಚೇತರಿಪರು . . . ನಿಚ್ಚಟದ ಕಲಿಗಳಿಬ್ಬಾಗದರ್ ಹರಿ ಜಲಂಧರರ್ (ಕಂಪು. ೨೫-೦೯). [ಮೂರ್ಛೆ + — ಇಸು$_3$]

**ಮೂರ್ಛೆ** (ನಾ). ೧. ಎಚ್ಚರವನ್ನು ಕಳೆದುಕೊಂಡಿರುವ ಸ್ಥಿತಿ : ಮೈಮರೆವು : ಆ ಪಡಿತಂ . . . ಮೂರ್ಛೆಯಿಂದೆರ್ಚತ್ತಂತೆ

ಬೆಚ್ಚನೆ ಸುಯ್ದು (ಜಗನ್ನಾ. ೩-೬ ಪ) : ಪುದಿದಿರೆ ಮನಮುಂ ಮೋಹತಮಂ ದೀಪಂ ವಾತಾಹತಿಯಿಂ ನಂದುವಂತೆ ಮೂರ್ಛೆಗೆ ಸಂದಂ (ಕುಸುಮಾ. ೯-೦೦೬) ; ಅರಸು ಮೂರ್ಛೆಗೆ ಸಲಲು ವಿಭೀಷಣ ಹಿರಿದು ತನ್ನೊಳಗಳಲುತಿರಲು (ತೊರವೆ. ೨೨-೬೪). ೨. ಪ್ರಜ್ಞೆತಪ್ಪಿ ಬೀಳುವ ಒಂದು ಬಗೆಯ ರೋಗ ; ಅಪಸ್ಮಾರ ; ಮಲರೋಗ : ಕಕ್ಕೆಹಣ್ಣು, ಅಮರವಳ್ಳಿ, ಪರ್ಪಾಟಕ, ಭದ್ರಮುಸ್ತೆ, ಕಟುಕರೋಹಿಣಿ ಎಂಬಿವಂ ಕಷಾಯಮಂ ಕಾಸಿ ಕಕ್ಕೆಯ ಹಣ್ಣಂ ಕಲಸಿ ಕುಡಿಸಲು ಚಳುಕು ಹರ, ಮೂರ್ಛೆ, ಮಱವೆ, ಭ್ರಾಂತಿ, ದಾಹ, ಶ್ಲೇಷ್ಮಜ್ವರ ಹರ (ವೈದ್ಯಾ. ೦೮). ೩. [ಕಾಮಶಾ] ವಿರಹದ ಹತ್ತು ಬಗೆಯ ಅವಸ್ಥೆಗಳಲ್ಲಿ ಒಂಬತ್ತನೆಯ ಅವಸ್ಥೆ ; ಮೋಹ ಪರವಶತೆಯಿಂದ ಪ್ರಜ್ಞೆಯನ್ನು ಕಳೆದುಕೊಂಡಿರುವ ಸ್ಥಿತಿ: ಅಭಿಲಾಷೆ ಚಿಂತೆ... ಮೌನ ಮೂರ್ಛೆ ಮರಣವೆಂಬ ದಶಾವಸ್ಥಾದಿ ವಿಚಾರಪರರಿಂ (ಅವಿ:ಳ. ೦೬೪). ೪. [ಯೋಗ] ಎಂಟು ಬಗೆಯ ಕುಂಭಕಗಳಲ್ಲಿ ಒಂದು : ಸೂರ್ಯಭೇದನ . . . ಮೂರ್ಛೆ ಕೇವಲವೆಂಬಷ್ಟಕುಂಭಕಪ್ರಕಾರಂಗಳುಂ (೭ವೇಳ. ೦೭೦). [ಸಂ. ಮೂರ್ಛಾ]

**ಮೂರ್ಛೆಗೊಳಿಸು** (ಕ್ರಿ). ಪ್ರಜ್ಞೆತಪ್ಪಿಸು ; ಮೈಮರೆಯುವಂತೆ ಮಾಡು : ಶುರಿಯದಿಂ ಘಣಬಾಣಗಳ ಕಠೋರದಿಂದರಿಸೈನ್ಯವ ಮೂರ್ಛೆಗೊಳಿಸಿ ಪರಿತಂದು ಶೇಷಾಪರಾವತಾರನ ದಿವ್ಯಚರಣಂಗಳೊಳೈಕ್ಯವಾಯ್ತು (ತೋಟಾ. ೪೦-೫೬). [ಮೂರ್ಛೆ + ಕೊಳ್$_1$ + — ಇಸು$_3$]

**ಮೂರ್ಛೆತಿಳಿ** ‘ ಮೂರ್ಛೆದಿಳಿ ’ ನೋ.

**ಮೂರ್ಛೆದಿಳಿ, ಮೂರ್ಛೆತಿಳಿ** (ಕ್ರಿ). ಅರಿವನ್ನು ಪಡೆ; ಪ್ರಜ್ಞೆಯನ್ನು ಹೊಂದು; ಎಚ್ಚರಗೊಳ್ಳು : ಮುಗಿಯೆ ಕಣ್ಮಲರ್ಗಳ್ ನಸುಮುಚ್ಚಿ ಹೋಗಿ ತಣ್ಣಿಲರಲೆಯಿಂದೆ ಮೂರ್ಛೆದಿಳಿದಳ್ (ತಂರಾಮಾ. ೯-೦೦೦); ಚಿತ್ತಘನಾತ್ಮಸಂಭವ ಮೂರ್ಛೆದಿಳಿದೆಚ್ಚತ್ತನೊಂದರಿಗಳಿಗೆಯಲಿ (ಮೋಹತ. ೩೪-೩೩). **ಮೂರ್ಛೆತಿಳಿ** : ತೆರ್ವತ್ತಂ= ಮೂರ್ಛೆತಿಳಿದಂ (ಕವಿರಾ. ಕಂ. ೨). [ಮೂರ್ಛೆ + ತಿಳಿ$_1$]

**ಮೂರ್ಛೆವೋಗು, ಮೂರ್ಛೆಹೋಗು** (ಕ್ರಿ). =ಮೂರ್ಛಿಸು: ಗಾಂಗೇಯನೊಳ್ ಪರಶುರಾಮಂ ಕಾದಿ ಬಸವಳಿದುಸಿರಲಪ್ಪೊಡಮಾಱದೆ ಮೂರ್ಛೆವೋಗಿರ್ದನಂ ಕಂಡು (ಪಂಪಭಾ. ೦-೮೦ ವ); ಅತ್ಯಾಸಕ್ತಿಯಿಂ ಮರವಟ್ಟರಂತೆಯುಂ ಚಿತ್ರಿಸಿದರಂತೆಯುಂ ಮೂರ್ಛೆವೋದರಂತೆಯುಂ . . . ಮಿಡುಕದೆ ನೋಡುತಿರ್ದಾ (ಕಾದಂಪೂ. ೭೪೬) ; ಕಣ್ಣೀರ್ ಭರದಿಂ ಬೆಚ್ಚನೆ ಪಾಯ್ತರೆ ಕಣ್ಣರೆಮುಚ್ಚುತ್ತುಂ ಮೂರ್ಛೆವೋದುದಲ್ಲಿ ವರಾಹಂ (ಕಾಸಂ. ೪-೨೨). **ಮೂರ್ಛೆಹೋಗು** : ನಿಮ್ಮ ಈ ನಡತೆಯನ್ನು ಕಂಡು ನಮ್ಮ ಸ್ವಾಮಿನಿಯು ಭಯೋದ್ರೇಕದಿಂದ ಮೂರ್ಛೆಹೋಗಿರುವಳು (ಶಾಕು. ೬೫); ದಶರಥನು ... ಮೂರ್ಛೆಹೋಗಿ ಕೂಡಲೆ ಎಚ್ಚತ್ತುಕೊಂಡನು (ಶ್ರೀರಾಮ. I, ೦೪).

[ ಮೂರ್ಛೆ + ಪೋಗು$_1$ (<ಪೋ$_1$) ]

**ಮೂರ್ಛೆಹೋಗು** ‘ ಮೂರ್ಛೆವೋಗು ’ ನೋ.

**ಮೂರ್ತ$_1$** (ನಾ). ದೇವಕಾರ್ಯ, ಮದುವೆ, ಮುಂಜಿ ಮುಂತಾದ ಮಂಗಳಕಾರ್ಯಗಳನ್ನು ನೆರವೇರಿಸಲು ಗೊತ್ತುಪಡಿಸುವ ಶುಭಗಳಿಗೆ ; ಮುಹೂರ್ತ : “ಮೂರ್ತ–ಮುಹೂರ್ತ=ಶುಭಗಳಿಗೆ” (ಕನ್ನಕೋ. ೩೬); ಈ ರಗಳೆ ಹಚ್ಚಿಕೊಂಡರೆ ಮೂರ್ತ ಮಿಾರಿ ತೇರು ಹರೀದೆ ಇದ್ದರೆ ಇಡೀ ನಾಡಿಗೇ ಕೇಡಲ್ಲ (ತೊಂಗಕ. ೦೩೪). [<ಸಂ. ಮುಹೂರ್ತ]

**ಮೂರ್ತ$_2$** (ಗು). ೧. ನಿರ್ದಿಷ್ಟ ಆಕಾರವನ್ನು ಪಡೆದ,– ರೂಪವನ್ನು ಹೊಂದಿದ. (ನಾ). ೨. ಆಕಾರ ; ರೂಪ : ಮೂರ್ತ ಎಂದರೆ ಸಕಲ, ಸಾವಯವ; ಅಮೂರ್ತ ಎಂದರೆ ನಿಷ್ಕಲ, ನಿರವಯವ ಎಂದರ್ಥ (ಶಬ್ದಾ. ೨೬). ೩. ಆಕಾರವನ್ನು ಹೊಂದಿದವನು ; ಸ್ವರೂಪವನ್ನು ತಾಳಿದವನು : ಅಯ್ಯಾ ನಿಮ್ಮ ಶರಣನು ಮೂರ್ತನಲ್ಲ ಅಮೂರ್ತನಲ್ಲ ಲಿಂಗದಲ್ಲಿ ಪ್ರಾಣಸಂಚಿತ (ಚನ್ನಬ. ೪. ೦೨೮-೦೨೬೯). ೪. ಆಸೀನವಾಗಿರುವಿಕೆ; ಉಪಸ್ಥಿತಿ : ಅಲ್ಲಿಂದ ಕೈಲಾಸಕ್ಕೆ ನಡೆದಾರು ಅಲ್ಲಿ ತಳಿರುಚಪ್ಪರವಿಕ್ಕಿ ಮೂರ್ತವಂ ಮಾಡಾರು (ಜಾಲಕಂ. ೦೦). ‘ ಮೂರ್ತಂಗೆಯ್ ’ ಪರಾ.

**ಮೂರ್ತಮಾಡು**=ಕುಳಿತುಕೊಳ್ಳು : ಬಸವರಾಜನ ಗೃಹವ ಪೊಕ್ಕು ದಕಮಂ ಕೊಂಡು ಸಸಿನೆಯಾರೋಗಣೆಗೆ ಮೂರ್ತಮಾಡಿರಲ್ (ಶ್ರೀಶರಾ. ೨-೧೭). [ಸಂ.]

**ಮೂರ್ತಂಗೆಯ್** (ಕ್ರಿ). ಕುಳಿತುಕೊಳ್ಳು : ಆಸೀನವಾಗು : ಚೆನ್ನಬಸವೇಶ್ವರದೇವರು, ಅನುಭವದ ಮಂಟಪದಲ್ಲಿ ಮೂರ್ತಂಗೆಯ್ದಿರ್ಪ ಸಮಯದಲ್ಲಿ . . . ಬಿನ್ನೈಸಿದ ಪ್ರಸ್ತಾವದ ವಚನ (ಮಹಾಶಾ. IV, ೦೦೫೦).

[ಮೂರ್ತ$_2$ + ಕೆಯ್$_1$]

**ಮೂರ್ತಗೊಳ್** (ಕ್ರಿ). ೧. ರೂಪುದೋರು ; ಸಾಕಾರಗೊಳ್ಳು : ಹಡಪದಪ್ಪಣ್ಣನೆ ಎನ್ನ ಕರಸ್ಥಲಕ್ಕೆ ಲಿಂಗವಾಗಿ ಬಂದು ನೆಲೆಗೊಂಡನು ಚನ್ನಮಲ್ಲೇಶ್ವರನೆ ಎನ್ನ ಮನಸ್ಥಲಕ್ಕೆ ಪ್ರಾಣವಾಗಿ ಬಂದು ಮೂರ್ತಗೊಂಡನು (೦೦ಗಚ. ೭೦-೬೮). ೨. ಕುಳಿತುಕೊಳ್ಳು ; ಆಸೀನನಾಗು : ಅಹೀಂದ್ರಭೂಷಣಂ . . . ಸಭಾಮಂಟಪ ಮಧ್ಯಸ್ಥಿತ ಮಣಿಪೀಠಮನಲಂಕರಿಸಿ ಗಾಡಿಯಿಂ ಮೂರ್ತಿ[ರ್ತ]ಗೊಂಡು (ಶಬಶಂ. ೫-೩೬ ವ); ಪಾರ್ವತಿಯಾಣ್ಮಂ . . . ಕಾಂಚೀನಗರಮಂ ಪೊಕ್ಕು ಭಕ್ತಗೃಹಬಹಿರ್ದೇಶದಾಚಮರ ಮೊದಲೊಳ್ ಬಗ್ಗದೊಪಲ ಪಾಸುಗೆಯಲ್ಲಿ ಸಲ್ಲೀಲೆಯಿಂ ಮೂರ್ತಿ[ರ್ತ]ಗೊಂಡಿರೆಯಿರೆ (ವೃಷಭ. ೦೪-೩೦ ವ). [ಮೂರ್ತ$_2$ + ಕೊಳ್$_1$]

**ಮೂರ್ತಗೊಳಿಸು** (ಕ್ರಿ). ಕುಳ್ಳಿರಿಸು ; ಕುಳಿತುಕೊಳ್ಳುವಂತೆ ಮಾಡು: ತಂಡತಂಡದಿ ಬಪ್ಪವರ್ಗದಿರ್ಗೊಂಡು ಪುರಜನವೆದ್ದು ಮಸೆಗೊಡಗೊಂಡು ಬರುತಿರೆ ಮೂರ್ತಗೊಳಿಸಿ ಸುಖಾಸನಂಗಳಲಿ (ಐಕ್ಯ. ೪-೫); ವರ ಚಿತ್ರಲೇಖೆ ಪ್ರದ್ಯುಮ್ನಸುತನಾ ವಳಕಡೆಗೆ ಬಳಿಗೊಂಡು ಬಂದು ತತ್ಪಯಣಕ್ಕೆ ದಲಿ ಮೂರ್ತಗೊಳಿಸಿ (ಶಶಿಪೂ. ೨೬-೫೫) ; ಮಾರಯ್ಯ . . . ಮನೆಗೆ ಬಂದ ಜಂಗಮಮೂರ್ತಿಗಳಿಗೆ ಶರಣೆಂದು ಭಕ್ತಿಯಿಂದ ಬಾಗಿ ಆನಂದದಿಂದ ಬೇಗಿ ಅವರನ್ನು ಮೂರ್ತಗೊಳಿಸಿದ (ಮೋಳಿಗಾ. ೭೨ ಶ್ರ.ಸಾ.ಪ).

[ಮೂರ್ತಗೊಳ್ + — ಇಸು$_3$]

**ಮೂರ್ತತೆ** (ನಾ). ಆಕಾರಸಹಿತವಾದುದು ; ಸಾಕಾರತೆ : ವಿಚಾರವೆಂದರೆ ಮೂರ್ತತೆ, ಸಾಕಾರತೆ. ಅದಕ್ಕೆ ರೂಪವಿಲ್ಲದೇ ಇಲ್ಲ (ವಿಚಾರಮಂ. ೭೩).

[ಮೂರ್ತ$_2$ + — ತೆ$_3$]

**ಮೂರ್ತಿ** (ನಾ). ೧. ಆಕಾರ ; ಸ್ವರೂಪ : ಶ್ರುತಮೂರ್ತಿಯಾಗಿಯುಂ ರುಚಿರತನು ಧರಂ ಬಳಿಯುಳಾಗಿಯುಂ ಚತುರವಚೋನ್ವಿತೆ ಬಾಯ್ವಾಯೊಳ್ ನೆಲಸಿಯುಂ ಪತಿಶುಚಿ ವಾಗ್ದೇವಿ ಕೂರ್ತು ಮೊಟ್ಟೆಮುಗಳಿವಂ (ಜಾತಕ. ೦-೨); ವಿಷ್ಣು ಮನುಗಳು ಸಂದ ಪಾರ್ಥಿವಲೋಕಪಾಲಕರೊಂದು ಮೂರ್ತಿಯದು (ಕುಮಾರವ್ಯಾ. ೩-೬೮); ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು (ಗಾದೆ). ೨. ದೇಹ ; ಒಡಲು ; ಶರೀರ: “ತನುಃ . . . ಅಪರಘನಃ, ಮೂರ್ತಿಃ–ಈ ೧೭ ಶರೀರಂ” (ಹಲಾಯು. ೬೪-೩೫೬); ಅರಿರಾಧ್ರಂ ಕರದ್ವೈಷ್ಯ್ಯಮುಲ್ಲಸದಹೀನಾಲಂಕೃತಂ ಮೂರ್ತಿ . . . ದೇವಗಣಾಪಂ ರಕ್ಷಿಕ್ಕೆ ಭೂಚಕ್ರಮಂ (ಜಗು. ೦-೫). ೩. ಪ್ರತಿಮೆ ; ವಿಗ್ರಹ : ಕುಲಕ್ರಮದಿಂದ ಬಂದ ಇವೇ ಮೂರ್ತಿಗಳನ್ನು ಶ್ರೀರಾಮನೂ ಪೂಜಿಸಿದನಂತೆ! (ಕಥಾ. ೩೩೪); ಏಕಲವ್ಯನು ದ್ರೋಣಾಚಾರ್ಯರ ಮೂರ್ತಿಯನ್ನು ಮಾಡಿ, ಅದರ ಸಾನ್ನಿಧ್ಯದಲ್ಲಿ ಧನುರ್ವಿದ್ಯೆ ಕಲಿಯುತ್ತಿದ್ದುದು ಸರ್ವವಿದಿತ (ಶಾರದ. ೫೦೦). ೪. ಕಾಣಿಸಿಕೊಳ್ಳುವಿಕೆ ; ಸಾಕ್ಷಾತ್ಕಾರ. ೫. ಕಾಠಿಣ್ಯ; ದೃಢತೆ. ೬. ಸೌಂದರ್ಯ. ೭. ಕಾಗೆ ; ವಾಯಸ. ೮. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : ಹರನಯನ ಮೂರ್ತಿ ಪುರ ಶಿಖಿ ವರರತ್ನಂ

ಮೂರ್ತಿ ಲೋಕ ವಿಮಲತ್ರಿತಯಂ . . . ವರ್ಣತ್ರಯುವುದು ಮೂಱಱ
ನಾಮಂ (ಶೃಶಜಾ. ೯-೩). [ಸಂ.]

**ಮೂರ್ತಿಗೊಳ್.** ಮೂರ್ತಿಗೊಳ್ಳು (ಕ್ರಿ). ೧. ಆಕಾರವನ್ನು ಪಡೆ : ಸ್ವರೂಪವನ್ನು ತಾಳು : ಹರಹಾಸದ್ಯುತಿ ಮೂರ್ತಿಗೊಂಡುದೊ ವಿರಿಂಚ ಖ್ಯಾತಿ ಲೋಕಂಗಳೊಳ್ ಪರಿದಾಯಾಸದೆ ನಿಂದುದೋ . . . ಎಂಬಂತಿರೆ ದಿವ್ಯಸುಂದರಿ ಮನಕ್ಕಾನಂದಮಂ ಮಾಡಿದಳ್ (ಶಾದಂಪು. ೬೬೩) ; ತಾಯ ತಂದೆಯ ಚಿತ್ರಕ್ಕಮರ್ದಿನ ಮಟೆಯುಂ ಕಱಿದರೆ ಕುಮಾರಕರ್ ಮೂರ್ತಿಗೊಂಡ ಪುರುಷಾರ್ಥದವೋಲ್ (ಶಂರಾಷು. ೩-೦೪೪) ; ಪಶುಪತಿ ಬಸವನ ಮನವ ಮೊನೆಯೊಳೊಪ್ಪೆ ಮೂರ್ತಿಗೊಂಡು (ಬಸರ. ೪-೨೦). **ಮೂರ್ತಿಗೊಳ್ಳು** : ೨. ಸಾಕ್ಷಾತ್ಕಾರಗೊಳ್ಳು; ಗೋಚರಿಸು : ಪಂಚಸ್ಥಾನದಲ್ಲಿಪ್ಪ ಲಿಂಗವ ಕರಸ್ಥಲದಲ್ಲಿ ಮೂರ್ತಿಗೊಳ್ಳಲಿಕ್ಕಾಗಿ ಕಂಗಳು ತುಂಬಿ ಬಾಹ್ಯದೃಷ್ಟಿ ಅಱತು ಲಿಂಗದೃಷ್ಟಿ ಪರಿಪೂರ್ಣವಾದಲ್ಲಿ (ಚಂದೇವ. ೨೯೬-೬೬).
[ಮೂರ್ತಿ + ಕೊಳ್₁]

**ಮೂರ್ತಿಗೊಳ್ಳು** 'ಮೂರ್ತಿಗೊಳ್' ನೋ.

**ಮೂರ್ತಿತ್ರಯ** (ನಾ). ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ; ತ್ರಿಮೂರ್ತಿ : ಮುಂದಿ ಮೂರ್ತಿತ್ರಯವು ಕೇಳ್ವ (ಶ್ರಾಪಸಿಂ. ೧೯-೫೫).
[ಸಂ.]

**ಮೂರ್ತಿಪೂಜೆ** (ನಾ). ವಿಗ್ರಹಾರಾಧನೆ : ಕೆಲವರು, ಕಾಡುಜನರ ಪದ್ಧತಿಯಾದ ಮೂರ್ತಿಪೂಜೆಯನ್ನು ಹಿಂದೂಗಳು ಇನ್ನೂ ಬಿಟ್ಟಿಲ್ಲವೆನ್ನುತ್ತಾರೆ (೪೪೦. ೩೩೬). [ಸಂ. ಮೂರ್ತಿಪೂಜಾ]

**ಮೂರ್ತಿಬಲ** (ನಾ). ಮೈಯ ಕಸುವು : ದೇಹದ ಬಲ : ದಮಿತಾರಿಯ ಬಲಂ ಚಂದ್ರಬಲಮಿಲ್ಲದಂಕಕಾಜನಂತೆ ಸೋಲ್ತು ಮೂರ್ತಿಬಲಮಿಲ್ಲದ ಮಲ್ಲನಂತಿಕ್ಕುಪಟ್ಟು (ಶಾಂತಿಪು. ೪-೩೦ ವ). [ಸಂ.]

**ಮೂರ್ತಿಭಂಜಕತೆ** (ನಾ). ವಿಗ್ರಹವನ್ನು ಒಡೆಯುವಿಕೆ; ಪ್ರತಿಮೆಯನ್ನು ಭಂಗಮಾಡುವಿಕೆ : ಮಹಮ್ಮದೀಯರು ಮಾಡಿದ ಮೂರ್ತಿಭಂಜಕತೆಯಲ್ಲಿ ಹಿಂದುಗಳಿಗೆ ನೋವಾಯಿತು, ಅವಮಾನವಾಯಿತು (೪ವಾ೯೪. ೩೯). [ಸಂ. ಮೂರ್ತಿಭಂಜಕತಾ]

**ಮೂರ್ತಿಮಂತ** (ಗು). ಸ್ಪಷ್ಟವಾದ ಅಭಿವ್ಯಕ್ತಿಯನ್ನು ಹೊಂದಿದ ;—ಆಕಾರವನ್ನು ತಳೆದ : ಸುಂದರಿಗೆ ಮಗಳ ಸ್ವಭಾವದ ಮೂರ್ತಿಮಂತ ಕಲ್ಪನೆಯಾಗಿತ್ತು (ಹಳ್ಳಿಹಾ. ೦೦೦): ಮೂರ್ತಿಮಂತ ದೈನ್ಯವೇ ಅವಳಾಗಿ ನಿಂತಿರುವುದನ್ನು ಕಂಡಾಗ ಎಂಥಾ ಮಿಥ್ಯಾಪವಾದ ಎಂದಿತು ಮನಸ್ಸು (ಹೂಸಕ್ಕೆ. ೨೨). [ಸಂ. ಮೂರ್ತಿಮತ್]

**ಮೂರ್ತಿಮತಿ** (ಗು). ೧. ಆಕಾರವನ್ನು ಹೊಂದಿದ; ದೇಹವನ್ನು ತಾಳಿದ. ೨. ಗಟ್ಟಿಯಾದ ; ಕಠಿಣವಾದ. (ನಾ). ೩. ಆಕಾರವನ್ನು ಪಡೆದವಳು ; ರೂಪವನ್ನು ತಾಳಿದವಳು : ಆ ಮರುದೇವಿಮಹಾದೇವಿ . . . ನಾಭಿನರೇಂದ್ರನೆಪ್ಪೆಂ ಸಂಗಳಿಸಿದ ಕೀರ್ತಿ ಮೂರ್ತಿಮತಿ ತದ್ವದನಾಬ್ಜವಿಲಾಸವಾಸದೊಳ್ ತ ಳ ರ ದೆ ನಿಂದ ವಾಗ್ವನಿತೆಯೆಂಬಭಿಶಂಕೆಯನುಂಟುಮಾಡಿದಳ್ (ಆದಿಪು. ೭-೨೭); ಆತನ ಕೀರ್ತಿಲಕ್ಷ್ಮಿಯೆ ಮೂರ್ತಿಮತಿಯಾದಂತಾತ್ಮೀಯಪ್ರಾಣೇಶ್ವರನ ಮನಕ್ಕೆ ಮರೆ ಸೂಟ್ಗ ಮಂದು ಸುಪ್ತೆಯಾಗೆ (ಸುಕುಸೂ. ೯-೦೦೪ ವ). [ಸಂ. ಮೂರ್ತಿಮತೀ]

**ಮೂರ್ತಿವೆರು** 'ಮೂರ್ತಿವೆಱು' ನೋ.

**ಮೂರ್ತಿವೆಱು.**[1] ಮೂರ್ತಿವೆರು (ಕ್ರಿ). = ಮೂರ್ತಿಗೊಳ್ ೧ : ಸದ್ಧರ್ಮಮೇ ಮೂರ್ತಿವೆತ್ತು ಸಮದೃಷ್ಟಿಯೊಳ್ ನಿಂದ ವೃಷೇಂದ್ರನಿಂ . . . ಪಂಪನಾಳ್ದ ಪರಮನ ಸಭೆ ಕಣ್ಗೊಳಿಸಿದ್ದುದು (ಶಬಶಂ. ೦-೬೯ ವ). **ಮೂರ್ತಿವೆರು** : ಬೆದರಿದ ಹರಿಣಿಯಂತಿದ್ದ ಮುಖಭಾವ; ದೈನ್ಯವೇ ಮೂರ್ತಿವೆತ್ತು ಬಂದಂತೆ (ಜಾಕ್ಕಿ. ೬೩). [ಮೂರ್ತಿ + ವೆಱು₁]

**ಮೂರ್ತಿಶಿಲ್ಪ** (ನಾ). ಪ್ರತಿಮೆಯನ್ನು ಕಂಡರಿಸುವ ವಿದ್ಯೆ : ವಿಗ್ರಹದ ಕೆತ್ತನೆಯ ಕೆಲಸ : ಪ್ರಾಚೀನಭಾರತದಲ್ಲಾದರೋ ವೇದಗಳ ಕಾಲದಲ್ಲಿಯೇ (ಕ್ರಿ. ಪೂ. ೩೦೦೦ ?) ಮೂರ್ತಿಶಿಲ್ಪವು ತಲೆಯೆತ್ತಿದ್ದಿತು (ಭಾರರ. ೫೦೪); ಮೂರ್ತಿಶಿಲ್ಪದ ಸಾಲಿಗೇ ಸೇರಿಸಬಹುದಾದ ನೊಳಂಬರ ದೇವಾಲಯದ ಒಂದು ಭಾಗವೆಂದರೆ, ಅಲ್ಲಿಯ ಜಾಲಂಧ್ರಗಳು (ಕೊಳಂಬ. ೦೦೦). [ಸಂ.]

**ಮೂರ್ತಿಸು** (ಕ್ರಿ). ೧. ಆಕಾರವನ್ನು ಕೊಡು : ಸ್ವರೂಪವನ್ನು ನೀಡು ; ರೂಪಿಸು : ಪೊಗಳೆ ಮೂರ್ತ್ತಿಸಿದರಕ್ಕ ಸದರ್ತ್ಥಿವಲ್ಲಭ (ಎಕ. VII, ಶಿಮೊ. ೫-೨೨: 1218); ಸ್ವಾರಾಜ್ಯದೊಂದು ಘನಕನಸು ಕಂಡು ಕಟೆದಿಟ್ಟೆ ಆಗಿ ತ್ಯಾಗಿ, ಕಾರುಣ್ಯದಲ್ಲಿ ಮಾನವರ ಮರ್ಮ ಮೂರ್ತಿಸುವ ಶಿಲ್ಪಿಯಾಗಿ (ಸೂರ್ಯಕಾ. ೦೬-೦೨); ಕುಂಬಾರನಾಗಿದ್ದು ಅವನು ಮಣ್ಣಿಂದ ಮನುಷ್ಯನನ್ನು ಮೂರ್ತಿಸಿದ್ದ (ಜಿದ್ಯಕ್ರ. ii, ೬೯೮೪). ೨. ರೂಪವನ್ನು ತಾಳು ; ಆಕಾರವನ್ನು ಪಡೆ : ವಿಹಿತಾಪರಾಧಸ್ಮರಣೆ ಮನದಲಿ ಮೂರ್ತಿಸಲು ಸುರನಾಥನಿಂತೆಂದ (ಜಿಭಾಗ. ೦೦-೨೩-೨೨).
[ಮೂರ್ತಿ + — ಇಸು₃]

**ಮೂರ್ತೀಭವಿಸು** (ಕ್ರಿ). = ಮೂರ್ತಿಗೊಳ್ ೧ : ಸರ್ವಜನಮುಹಿಮೆಗಳುಂ ಮೂರ್ತೀಭವಿಸಿ ಗೋರೂಪಂಗಳಾಗಿರ್ಕುಂ (ಶಿವೇಕ. ೨೯೯) ; ಅರಸನುರುಕೀರ್ತಿಪ್ರತಾಪ ವಿಶ್ವಾಕಾರವೆರಸಿ ಮೂರ್ತೀಭವಿಸಿದಂತೆ . . . ತೋರ್ದ ರಚ್ಚರಿಯ ಪರಿಯ (ಶಂಶಾರಾ. ೨-೩-೫೬); ಕಲಾವಿದನ ಅಂತಸ್ಸತ್ವವೇ ಅಲ್ಲಿ ಮೂರ್ತೀಭವಿಸಿದಂತಿತ್ತು (ರಂಗರಾ. ೯೮). [< ಮೂರ್ತಿ + ಭವಿಸು]

**ಮೂರ್ತೆ** 'ಮುತ್ತೆ' ನೋ.

**ಮೂರ್ಧ** (ನಾ). ೧. ತಲೆಯ ಮುಂಭಾಗ ; ಮುಂದಲೆ ; ನೆತ್ತಿ. ೨. ತಲೆ ; ಶಿರಸ್ಸು : "ಮುಂಡಃ . . . ಶೀರ್ಷಃ, ಮೂರ್ಧಾ, ಕಂ — ಈ ರ ಮಂಡೆ" (ಹಲಾಯು. ೬೫-೩೬೪); ಧರೆಗಮರಾಧ್ವದಿಂ ಕಡೆವ ಚೈದ್ಯನ ಮೂರ್ಧವ ರತ್ನಭಾಃಪರಂಪರೆ ಕುಡಿಮಿಂಚಿನಂತೆಸೆಯೆ (ಜಗಂ. ೦೬-೫೮); ಮೂರ್ಧದ ಭಾಳನಯನದ ಭರಿತಪರಿಮಳದಂಗವಟ್ಟದ ಜಡಿದ ಕೆಂಜೆಡೆಯ . . . ಶಿವನನು ಕಂಡನಬುಜಭವ (ಕುಮಾವ್ಯ. ೬-೦೬). ೩. ಮುಂದೆ ಇರುವ ಪ್ರದೇಶ ; ಮುಂಭಾಗ. ೪. ಶಿಖರ ; ತುದಿ. ೫. ಮುಂದಾಳು ; ಮುಖಂಡ. ೬. [ವ್ಯಾಕ] ಎಂಟು ಉಚ್ಚಾರಣಾಸ್ಥಾನಗಳಲ್ಲಿ ಒಂದು ; ಅಂಗುಳು.

**ಮೂರ್ಧ್ನಿಘ್ರಾಣ** = ಪ್ರೀತಿ, ವಾತ್ಸಲ್ಯಗಳಿಂದ ನೆತ್ತಿಯನ್ನು ಮೂಸುವುದು ; ಮಂತ್ರ್ಪ್ರಾಣವೆ ಪೊನ್ನಜೆಯ ಪರುಷಮೇ ಮುಕ್ತಿಯ ನಿರ್ಮಾಣವೆ ಎನುತುಂ ಮೂರ್ಧ್ನಿಘ್ರಾಣಂಬೆರಸಗಲದಪ್ಪಿದಂ ಗಿರಿರಾಜಂ (ಗಿರಿಕ. ೩-೦೦೦); ನಂಬಿಯನೆತ್ತಿ ತಕ್ಕೈಸಿ ಶಂಕರಂ ಸಾದರ ಮೂರ್ಧ್ನಿಘ್ರಾಣವಂ ಮಾಡುತೆ (ಹಂಪಿರ. ೭-೦೩೪). P ಸಂಸ್ಕೃತದಲ್ಲಿ ಇದು ಒಂದು ಪದವಲ್ಲ. [ಸಂ. ಮೂರ್ಧನ್]

**ಮೂರ್ಧನ್ಯ** (ಗು). ೧. ತಲೆಗೆ ಸಂಬಂಧಿಸಿದ. ೨. ಶ್ರೇಷ್ಠತೆಯಿಂದ ಕೂಡಿದ ; ಉತ್ತಮ : 'ಮೂರ್ಧನ್ಯ ಬ್ರಾಹ್ಮಣ' ಪರಾ. (ನಾ). ೩. ತಲೆಗೆ ಸಂಬಂಧಿಸಿದುದು. ೪. ಪ್ರಮುಖವಾದುದು. ೫. ಪ್ರಮುಖ ವ್ಯಕ್ತಿ ; ಮುಖಂಡ : ಕ್ರಿಸ್ತ ಶಕ ೧೨ ರಲ್ಲಿ ಉಂಟಾದ ವೀರಶೈವಕ್ರಾಂತಿಯ ಮೂರ್ಧನ್ಯರಾದ ಶ್ರೀ ಬಸವಣ್ಣನವರ ಪ್ರಭಾವವನ್ನು ಅನೇಕ ತೆಲುಗುಕವಿಗಳ ಮೇಲೆ ಕಾಣಬಹುದಾಗಿದೆ (ಖಾಶಾಶಾ. ೨೪೫). ೬. [ವ್ಯಾಕ] ಬಾಯಿಯ ಮೇಲುಭಾಗದಲ್ಲಿ (ಅಂಗುಳಿನಲ್ಲಿ) ಹುಟ್ಟುವ ಅಕ್ಷರ; ಮೂರ್ಧಸ್ಥಾನದಲ್ಲಿ ಉಚ್ಚಾರಗೊಳ್ಳುವ ಅಕ್ಷರ : ರೇಫೆ ಮೂರ್ಧನ್ಯಂ (ಶಬ್ದ. ೦೯ ಸೂತ್ರ); ಮೂರ್ಧನ್ಯ ಋ. ಋೂ. ಟವರ್ಗ, ರ, ಷ, (ಜಿ. ಬಿ. ೪) (ಕೃಶಿಬಿ. ೫). [ಸಂ.]

**ಮೂರ್ಧನ್ಯಬ್ರಾಹ್ಮಣ** (ನಾ). ಶ್ರೇಷ್ಠನಾದ ಬ್ರಾಹ್ಮಣ : ಕಲಿಯುಗ ದಂದುಚ್ಚಂಗಿಯುಬ್ಬೆಯುಂಬಳ್ಳೊದಲಾಗಿ ಮೂರ್ಧನ್ಯಬ್ರಾಹ್ಮಣಕನ್ಯಕಿ (ಕ್ಶಾಇ. VI. ೩೭೮-೦೬ ; 1070). [ಸಂ.]

**ಮೂರ್ಧಪಿಂಡ** (ನಾ). ಆನೆಯ ಕುಂಭಸ್ಥಳ : "ಮೂರ್ಧಪಿಂಡಃ, ಕುಂಭಃ — ಈ ೨ ಆನೆಯ ಕುಂಭಸ್ಥಳಂ" (ಹಲಾಯು. ೩೭-೭೩); ಬೆದಱಿ ಮನಂ ವನಸ್ಥಲದೊಳೊಂದಿಭವಿದ್ರ್ಗದು ಮೂರ್ಧಪಿಂಡಮನ್ಶಿದು ಶಿಖರಸ್ಥಲಂ (ಶಂಠಾಚರಿ. ೧೦-೦೩೯). [ಸಂ.]

**ಮೂರ್ಧವ್ಯಾಧಿ** (ನಾ). ತಲೆಶೂಲೆ ; ಶಿರೋವ್ಯಾಧಿ : ಕೆಂಪಿನ ಅಗಸೆ:- ಈ ಹೂವಿನ ರಸವನ್ನು ದಿನ ಬಿಟ್ಟು ದಿನ ಒತ್ತಿ ನೀರಸೆಱಿದರೆ ಮೂರ್ಧ ವ್ಯಾಧಿ, ನೇತ್ರರೋಗ ಗುಣ (ಬಿಕ್ಕಿ. ೪). [ಸಂ.]

**ಮೂರ್ಧಾಭಿಷಿಕ್ತ** (ನಾ). ರಾಜ್ಯಭಾರದ ಅಧಿಕಾರವನ್ನು ಪಡೆಯು ವಾಗ ಶಾಸ್ತ್ರೋಕ್ತವಾಗಿ (ತಲೆಯ ಮೇಲೆ) ಅಭಿಷೇಕ ಮಾಡಿಸಿ ಕೊಂಡವನು; ಪಟ್ಟದ ಅರಸು; ರಾಜ : "ರಾಜಾ . . . ಮೂರ್ಧಾ ಭಿಷಿಕ್ತಃ . . . ಲೋಕಪಾಲಃ – ಈ ೧೨ ಅರಸು" (ಹಲಾಯು. ೩೯-೨೭೭); ವಿದಿತಂ ಮೂರ್ಧಾಭಿಷಿಕ್ತರ್ ಪಲಬರರಸುಗಳ್ ಪ್ರಾಜ್ಯಸಾಮ್ರಾಜ್ಯಲಕ್ಷ್ಮೀ ಪದಮಂ ಕೈಕೊಂಡು ತಮ್ಮಂ ಮಱೆದು (ಆದಿಪು. ೯-೩೯); ಮೂರ್ಧಾಭಿ ಷಿಕ್ತರಿರೆ ಗೋವರ್ಧನನಂ ಪೂಜಿಸೆಂದನಱಿಯದೆ ಭೀಷ್ಮಂ (ಜಗದಿ. ೦೭-೦೯): ನೀನು ದುರ್ಯೋಧನನ ಮಕುಟಭಂಗ ಮಾಡಿದ್ದು ಅಕ್ಷಮ್ಯ, ಭೀಮ; ಆತನು ಮೂರ್ಧಾಭಿಷಿಕ್ತನಾಗಿದ್ದ (ಅಗ್ರಹ. ೨). [ಸಂ.]

**ಮೂರ್ಧಾಭಿಷೇಕ** (ನಾ). ರಾಜನಾಗುವ ವ್ಯಕ್ತಿಗೆ ರಾಜ್ಯಭಾರದ ಅಧಿಕಾರವನ್ನು ವಹಿಸಿಕೊಡುವಾಗ ಶಾಸ್ತ್ರೋಕ್ತವಾಗಿ (ತಲೆಯ ಮೇಲೆ) ಅಭಿಷೇಕ ಮಾಡುವುದು; ಪಟ್ಟ ಕಟ್ಟುವುದು : ನಿಜಕೂಟಾಗ್ರ ದೊಳ್ ಪಾಯ್ವ ಗಂಗಾಜಲದಿಂ ಮೂರ್ಧಾಭಿಷೇಕೋನ್ನತಿ ನಿಲೆ . . . ಚಕ್ರೇಶತ್ವಮಂ ತಾಳ್ದಿದುದಖಿಳಧರಾರಮ್ಯಹೈಮಾಚಳೇಂದ್ರಂ (ಶಂಕರಾ. ೪-೦೪). [ಸಂ.]

**ಮೂರ್ಧಾಭಿಷೇಚನ** (ನಾ). = ಮೂರ್ಧಾಭಿಷೇಕ : ವರಪಾಂಚಾಲ ತನಯಂಗೆಸಗಿವರು ಮೂರ್ಧಾಭಿಷೇಚನವ (ಕುವ್ಯಾಉ. ೦೦-೩೪). [ಸಂ.]

**ಮೂರ್ವಡಿ** 'ಮೂವಡಿ' ನೋ.

**ಮೂರ್ವಡಿಸು** 'ಮೂವಡಿಸು' ನೋ.

**ಮೂರ್ಮೆ** 'ಮೂಮೆ' ನೋ.

**ಮೂಲ, ಮೂಳ**$_2$ (ನಾ). ೧. ಮರ, ಗಿಡ ಮುಂತಾದುವುಗಳ ಭೂಮಿಯೊಳಗಿರುವ ಭಾಗ; ಬೇರು; ಪಾದ : "ಪಾದಂ, ಮೂಲಂ– ಈ ೨ ಮರದ ಬೇರ್" (ಹಲಾಯು. ೩೦-೨೯); ಮೂಲ ಸಟಾಳಿಯಿಂದ ಮುರಗಾಲಯಮಂ ಬಹುಶಾಖೆಯಿಂದಮಿಂದ್ರಾಲಯಮಂ ಪಳಂಚಿ (ಶಂಠಾಚರಿ. ೭-೦೨೭); ಇದೆ ಬಿಲ್ವಮೂಲದೊಳ್ ಪುಲಿಯ ನಖಚಿಹ್ನಮಿಂತಿದೆ ಸರ್ವಮೃಗಪಕ್ಷಿಗಳ ಪಕ್ಕಯೆಂದು ಪರಿದೊದಱುವಾ ಪಡೆವೆರಸಿ ಬೇಂಟೆ ಯಾಡುತಿರ್ದಂ (ಚಾಚಂ. ೫-೦೦) ; ಮೂಲ ತಿಳಿದವನಿಗೆ ಎಲೆ ತೋರಿಸ ಬೇಡ (ಗಾದೆ). ೨. ಗೆಡ್ಡೆ; ಗೆಣಸು; ಕಂದ : ಆಕೆಯು ಸಾವಿರ ವರ್ಷಗಳವರೆಗೆ ಫಲ -– ಮೂಲಗಳನ್ನು ಭಕ್ಷಿಸಿದಳು (ತುಳಸೀ. ೨೩). 'ಕಂದಮೂಲ' ಪರಾ. ೩. (ಮರ ಮುಂತಾದುವುಗಳ) ಬುಡ; ಕೆಳಭಾಗ : ಆತ್ಮೋದ್ಭವಮೂಲಚ್ಛೇದನೋಪಾಯಮನೆಸದು ಮದ್ ಬುದ್ಧಿ (ಕಣ್ಣಕ. ೬೩) : ಮಲೆತು ನಿಮಿರ್ದ ಗರುವ ತರುವರಕುಲಂ ಮೂಲಮಂ ಕಿರಿಪಿ ವಿಸಾಟದವೋಲ್ ನೆಲಕ್ಕುರುಳಿದುವು (ಚಕ್ರಾಂಗ. ೪೬-೦೩೦೩); ಮೂಲ ಕಡಿದು ಅಲ್ಲಾಡಿಸಿದ ಬಳ್ಳಿಯಂತೆ ಬಳುಕಿತು ಜೀವ (ಹಾಡುಹಾ. ೦೭-೬). ೪. ಹುಟ್ಟುವ ಸ್ಥಳ; ಉಗಮ : ದಯವೇ ಧರ್ಮದ ಮೂಲವಯ್ಯ (ಬಸವ. ೨೪೭); ಹಲವರು ಬ್ರಾಹ್ಮಿಲಿಪಿಯ ಮೂಲ ಹೊರದೇಶಗಳಲ್ಲಿ ಹುಡುಕಬೇಕೆಂದು ತಿಳಿಸಿದ್ದಾರೆ (ಬ್ರಾಲಿವಿ. ೪೭). ೫. ಕಾರಣ : ಹೇತು : ಅವನ ಕಂಠದೊಳೊಂದುಸಾಲಗ್ರಾಮದುಪಲು ಪೊನ್ನ ಮಸೆ ಮಾಡಿಕೊಂಡೆಸೆಯುತಿಹುದಂತೆ ! ಆತನ ವಿಚಿತ್ರಕಥೆಗದೆ ಮೂಲವಂತೆ ! (ತಂದ್ರಸ. ೩೦-೦೪). ೬. ಪ್ರಾರಂಭ; ಆದಿ; ಮೊದಲು. ೭. ಒಂದು ಗ್ರಂಥದ ಮೊಟ್ಟ ಮೊದಲನೆಯ ಪ್ರತಿ ; ಅನಂತರದ ಪಾಠಗಳಿಗೆ ಆಧಾರವಾದ ಪ್ರಾರಂಭದ ಗ್ರಂಥ ; ಆಕರಗ್ರಂಥ : ಮೂಲದಲ್ಲಿದೆಯೆಂದು ತರ್ಜುಮೆಯಲ್ಲೂ ಉಳಿದು ಬಂದ ಒಂದೆರಡು ಪದಗಳನ್ನು ತೆಗೆದಿದ್ದರೆ ಇನ್ನೂ ಸುಂದರವಾಗುತ್ತಿತ್ತು (ಭಾರತ. XIV. ಮುನ್ನುಡಿ). ೮. (ವ್ಯಾಪಾರ ಅಥವಾ ಉದ್ಯೋಗದಲ್ಲಿ ತೊಡಗಿಸುವ) ಪ್ರಾರಂಭದ ಧನ; ಅಸಲು; ಬಂಡವಾಳ : ದನಿಯರು ಮೂಲವಾಗಿ ಕೊಂಡ ಬಾಳಿನ ವಿವರ (ಕಶಾಇ. IX–ii, ೪೦೯-೦೩; 1365) ; ಏಳುವರ್ಷದ ಬಡ್ಡಿ ಮೂಲಸಹಿತವಾಗಿ ತಾಳುವನಲ್ಲೇಳೊ ತಿರುಕ ಮುಂಡಾಳಿ (ಹರಿಂದ. ೦-೦೦೯-೦); ಸಾಲ ಮೂಲವ ತಿಂತು . . . ಬರ ಬಂದು ದೇಶವ ತಿಂತ್ರು (ಇಂಚಾರ. ೦೭೦-೪೮) ೯. ಹತ್ತಿರ ; ಸಮೀಪ. ೧೦. ಕೋಶ; ಭಂಡಾರ: ಊರನ್ನ ಅವಗೊಳಿರಾ. ಊರನ್ನ ಅಪಗೊಳಿರಾ ಲಾಡಾಯಿ ಮಾಡಾಕ ಹೋಗತೆಲ ಬರುತನಕ ಅರಮನಿ ಮೂಲ ಜತನಾವ (ಲೋಕಗೀ. ೨೨೨). ೧೧. ಹಕ್ಕು; ಅಧಿಕಾರ : ಯೆಕಪ್ಪನಾಯಕನು ಯಿಱಿದು ಯಿ[ಱಿಯಿಸಿ ಕೊಂಡು] ಬೀಳಲಾಗಿ ನಿಂಮ ಸಂತತಿ ಪರಂಪರೆಯಾಗಿ ಹೆಂಣಿಗೆ ದಾನ ಗಂಡಿಗೆ ಮೂಲ ಆಚಂದ್ರಾರ್ಕಸ್ವಾಯಿಯಾಗಿ ಬ[ಂ]ದು (ಕಇ. III-i, ೦೩-೭; 1542). ೧೨. ಬೀಳಲು. ೧೩. ಪೊದರು. ೧೪. ಆದಿ, ಅಂತ್ಯವಿಲ್ಲವವನು ; ಪರಬ್ರಹ್ಮ. ೧೫. [ವ್ಯಾಕ] ಯಾವ ಪ್ರತ್ಯಯ ವನ್ನೂ ಹಚ್ಚದ ಶಬ್ದದ ಅವಿಭಾಜ್ಯರೂಪ ; ಪ್ರಕೃತಿ ; ಧಾತು. ೧೬. [ಗಣಿತ] ಯಾವ ಒಂದು ಸಂಖ್ಯೆಯನ್ನು ಅದರಿಂದಲೇ ಒಂದು ಗೊತ್ತಾದಷ್ಟು ಸಲ ಗುಣಿಸಿದರೆ, ಒಂದು ನಿರ್ದಿಷ್ಟ ಸಂಖ್ಯೆ ಅಥವಾ ಮೊತ್ತ ಬರುತ್ತದೆಯೋ ಆ ಮೊದಲಿನ ಸಂಖ್ಯೆ : ಪ್ರಾಚೀನ ಚೀಣರು ವರ್ಗಸಮೀಕರಣಕ್ಕೆ ಒಂದೇ ಮೂಲವನ್ನು ಮಾತ್ರ ಕೊಟ್ಟಿದ್ದಾರೆ (ಗಚಿತ. ೦೭). 'ಘನಮೂಲ', 'ವರ್ಗಮೂಲ' ಪರಾ. ೧೭. [ಜ್ಯೋತಿ] ಒಂದು ನಕ್ಷತ್ರದ ಹೆಸರು: ಇಪ್ಪತ್ತೇಳು ನಕ್ಷತ್ರ ಗಳಲ್ಲಿ ಹತ್ತೊಂಬತ್ತನೆಯದು : "ಮೂಲವಾಶ್ಲೇಷೆ ಕೃತ್ತಿಗೆಯೊಳಾ ತಾರೆಯೆಂಟಹವು" (ಮುಂಗರಾ. ೦೯-೩); ಮೂಲಮಾಗಿರೆ ನಕ್ಷತ್ರಂ . . . ಪರಮಂ . . . ಬಂದು . . . ಆಶ್ರಯಿಸಿದಂ (ಕೃಕೃಪು. ೯-೦೦೩); ಆರ್ದ್ರೆ . . . ಮೂಲ . . . ಮಖೆಯೆಂಬವೆ ಕ್ರಮದಿಂದ ಷಡ್ಜಾದಿ ಸ್ವರಂಗಳ ಜನ್ಮನಕ್ಷತ್ರಂಗಳು (ಶಿವೀಳ. ೨೩೦). ೧೮. (ಆಲಂ) ಉಪದ್ರವಕಾರಿ : ಕಂಟಕ : ಅತ್ತೀಗೆ ಸೊಸಿ ಮೂಲ ಹಿತ್ತಲಾಗೆ ಕದ ಮೂಲ ಬಿತ್ತೀದ ಹೊಲಕೆ ಸದಿ ಮೂಲ ಊರಾಗೆ ಹಚ್ಚೀಗೆ ಮೂಲ ಬಡವಾಗೆ (ಗೌರಿಪ. ೨೨) ; "ಬಡವನ ಸಿಟ್ಟು ದವಡಿಗೆ ಮೂಲ" ಎನ್ನುವ ಹಾಗೆ ಬಡವನಾದ ಸಿದ್ದಣ್ಣನ ಸಿಟ್ಟು ಶ್ರೀಮಂತರಾದ ಬೆಳ್ಳೀಗೌಡ ರನ್ನು ಏನು ಮಾಡುವ ಹಾಗೆಯೂ ಇರಲಿಲ್ಲ (ಶಂಕರಂ. ೫೨). **ಮೂಳ**$_2$ : ೧. ಮಾತಂ ಕಾಳಮಲ್ಲದ ಕಾಳದೋಳ್ ಫಲಪುಷ್ಪದೊಳ್ ನೆಱೆದಂದು ಮೇಣ್ ಮೂಳದಿಂದಮಕಾರಣಂ ಕಿಡೆದಂದು ದೇಶದ ಹಾನಿ (ಲೋಕೋಪ. ೪-೫೪).

**ಮೂಲಂಬರಂ** = ಬುಡದ ವರೆಗೆ : ತಳದ ವರೆಗೆ : ಅಂತು ಪಾತಾಳಮೂಲಂಬರಂ ಮುಟುಗಿ ದಿವಿಜದೀರ್ಘಿಕೆಯೊಳ್ ಮುಟುಗಿ ನೆಗೆವ ಅಭ್ರಮೂಪತಿಯಂತೆ ನೆಗೆಯುತೊಡಂ (ತಂದ್ರಪು. ೫-೪೩ ವ). **ಮೂಲಚೂಲ** = ಆದಿ ಮತ್ತು ಅಂತ್ಯ : ಕೇವಲ ಆವರಣಗಳಿಗೆ ಪಡಿಮಿಡಿಯುವ ದೈಹಿಕವರ್ತನೆಗಳನ್ನೇ ಮಾನಸಿಕವ್ಯಾಪಾರದ ಮೂಲಚೂಲಗಳೆಂದು ಒಪ್ಪಲಾಗುವುದಿಲ್ಲ (ಶಾಂದಸ. ೯). [ಸಂ.]

**ಮೂಲಂಗಿ**, ಮುಲ್ಲಂಗಿ. ಮೂಲಗೆ (ನಾ). ತರಕಾರಿಯಾಗಿ ಬಳಸುವ ಒಂದು ಬಗೆಯ ಗೆಡ್ಡೆ : "ಮೂಲಕಂ ಮೂಲಂಗಿ" (ನಾವರ್ಮ: ೧೦೩) ; ಹದದ ನೆಲದ ಮೂಲಂಗಿಯ ಕೀಳ್ವಂತೆಯುದಜಿ ಕೊಂಬನು ಕಿಳ್ತುಕೊಂಡು (ನೇಮಿಸಂ. ೦೬-೦೦೭) ; ಚಕ್ರವರ್ತದ ಸೊಪ್ಪು, ಮೂಲಂಗಿ, ಮಜ್ಜಿಗೆ . . . ಇವು ಪಥ್ಯವರ್ಗ (ವೈದ್ಯಸಾ. I. ೪೦೩) ; ಮೂಲಂಗಿಯಲ್ಲಿ ಎರಡು ವಿಧಗಳಿವೆ. ಬಿಳಿಯದು ಉದ್ದವಾಗಿರುತ್ತದೆ. ಕೆಂಪುಬಣ್ಣದ್ದು ದುಂಡಾಗಿರುವುದು (ತರಶ. ೩೦). **ಮುಲ್ಲಂಗಿ** : "ಮೂಲಕವೆಂಬ ಶಾಕ ಮುಲ್ಲಂಗಿಯೆನಿಸಿರ್ಕು" (ಮಂಗರಾ. ೨೯-೫) ; ಮುಲ್ಲಂಗಿ, ಗಜ್ಜರಿಗಳಂಥ ಗಡ್ಡೆಗಳಲ್ಲದೆ ಇತರ ವನಸ್ಪತಿಗಳ ಬೇರುಗಳೂ ಕೂಡ ಇಲ್ಲಿ ಸಮಾವೇಶವಾಗುತ್ತವೆ (ಶ್ರಾವಣ. ೨೦೫-೨೨). **ಮೂಲಗೆ** : "ಮೂಲಕಾಯೆಂಬುದು ಮೂಲಗೆ (ಮೂಲಂಗಿಗೆಡ್ಡೆ)" (ಹಲಾಯು. ೨೭-೧೦) ; ಸವನಾಗಿ ನುಗ್ಗಿ ಬಜೆ ಸಾಸಿವೆ ಮೂಲಗೆ ಕರಿಯ ಬಸ್ಸಿ ಎಂಬಿವಿನಿತಱ ಬೀಜವನಾವ ತಕ್ರದಿಂದರೆದು ವಿಲೇಪಂಗೆಯ್ಯೆ ಕಳೆಗುಮವು ಗಂಟುಗಳಂ (ಲೋಕೋಪ. ೯-೦೨೭).

[ದೇ.॥ ತಮಿ. ಮಲ. ಮುಳ್ಳಂಙ್ಕಿ ; ತುಳು. ಮುಲ್ಲಂಗಿ, ಮೂಲಂಗಿ, ಮೂಲೆಂಗಿ ; ತೆಲು. ಮುಲ್ಲಂಗಿ. / ಸಂ. ಮೂಲಕ]

**ಮೂಲಕ₁** (ನಾ). = ಮೂಲಂಗಿ : "ಮೂಲಕವೆಂಬ ಶಾಕ ಮುಲ್ಲಂಗಿಯೆನಿಸಿರ್ಕು" (ಮಂಗರಾ. ೨೯-೫) ; "ಮೂಲಗೆ (ಮೂಲಂಗಿ, ಮುಲ್ಲಂಗಿ) =ಮೂಲಕ" (ಶಬ್ದಕೋ. ೩೭). [P ಸಂಸ್ಕೃತಕೋಶಗಳಲ್ಲಿರುವ 'ಮೂಲಕ' ಶಬ್ದವು ದೇಶೀಯಮೂಲದ್ದಾಗಿರಬಹುದು]

**ಮೂಲಕ₂** (ಅ). ಮುಖಾಂತರ : ದ್ವಾರಾ : ಆ ಸಂಶೋಧನೆಗಳನ್ನು . . . ಹಲವಾರು ಲೇಖನಗಳ ಮೂಲಕ ಪ್ರಕಟಿಸಿದನು (ಸಸ್ಯಕ. ೭೦) ; ಆ ಕಾರ್ಯ ಮಾನವರ ಮೂಲಕವೇ ಆಗಬೇಕು ಎಂಬುದಕ್ಕೆ ಕಾರಣವೇನು ? (ಚಿತಂಬ. ೮). [<ಸಂ. ಮೂಲ]

**ಮೂಲಕಂದ** (ನಾ). ಒಂದು ಬಗೆಯ ಸಸ್ಯ : "ಕಂದಲತಾ — ಮೂಲಕಂದ, ನೆಲಗುಂಬಳ" (ಓಷಧಿ. ೨೫). [ಸಂ.]

**ಮೂಲಕೃತಿ** (ನಾ). = ಮೂಲ ೭ : ಒಂದು ಪಾಠಪರಂಪರೆಯ ಭಿನ್ನಶಾಖೆಗಳ ನಡುವೆಯಾಗಲೀ ಅಥವಾ ಮೂಲಕೃತಿಗೂ ಲಭ್ಯಕೃತಿಗಳಿಗೂ ಮಧ್ಯೆಯಾಗಲೀ ಎಷ್ಟು ಬಾರಿ ಪಾಠಲೇಖನಗಳು ಜರುಗಿರಬಹುದು ಎಂಬುದನ್ನು ಎಲ್ಲ ಸಲವೂ ಹೇಳುವುದು ಸಾಧ್ಯವಿಲ್ಲ (ಶಾರಶ. ೬೫). [ಸಂ.]

**ಮೂಲಗಂಟು** (ನಾ). ವ್ಯಾಪಾರ ಅಥವಾ ಉದ್ಯೋಗಕ್ಕಾಗಿ ಹೂಡಿದ ಹಣ : ಬಂಡವಾಳ ; ಅಸಲು : (೪). [ಮೂಲ + ಗಂಟು]

**ಮೂಲಗಾರ** (ನಾ). ಜಮೀನಿನ ಪ್ರಾರಂಭದ ಒಡೆಯ,–ಮಾಲೀಕ : ಹೈಗನಾಡಿನೊಳಗಿನ ಭೂಮಿಯು ಪ್ರಜೆಗಳ ಆಸ್ತಿಯೆಂದೆಣಿಸಲ್ಪಡುತ್ತದೆ. ಭೂಮಿಯ ಬಾಧ್ಯಸ್ಥರೆಲ್ಲರು ಬಹುಶಃ ಬ್ರಾಹ್ಮಣರೇ. ಅವರಿಗೆ ವಾಡಿಕೆಯಾಗಿ ಮೂಲಗಾರರೆಂದೆನ್ನುವರು (ಮುಂಬಯಿ. ೫-೨೦೪) ; ಏಕಾಕಿಯಾದ ಒಬ್ಬ ಮೂಲಗಾರನು ಅನುಭವಿಸಿದಂತಾ ಒಂದು ವತನಿನ ಪರಾಧೀನವು ಆತನ ಮರಣದ ತರುವಾಯ ಅವನ ವಾರಿಸ್ದಾರನ ಅಭ್ಯಂತರಿಸಬಹುದು (ಶಾಶ್ಯಾ. ೪೪೭). [ ಮೂಲ + — ಗಾರ (< —ಕಾಱ) ]

**ಮೂಲಗಿಸು** (ಕ್ರಿ). ಕುಂಯ್ ಎಂದು ಸಣ್ಣದನಿಯಲ್ಲಿ ಶಬ್ದಮಾಡು ; ಕುಂಯಿಗುಡು : ತನ್ನ ಹೆಣ್ಣು ಗಂಡು ಶುನಕಪರಿವಾರ ಸಮೇತನಾಗಿ ಹುಲಿಯ ಅವನನ್ನು ಎದುರುಗೊಂಡಿತು. ಆದರೆ ಎಷ್ಟು ಬಾಲ ಅಳ್ಳಾಡಿಸಿದರೂ ಮೂಲಗಿಸಿದರೂ ಯಜಮಾನನಿಂದ ಯಾವ ವಿಶ್ವಾಸದ ಅಥವಾ ಮುದ್ದಿನ ಸೂಚನೆಯೂ ಹೊರಹೊಮ್ಮಲಿಲ್ಲ (ಮಳೆಮ. ೦೬೯).

[ಮೂಲಗು (<ಮುಲುಕು₁) + — ಇಸು₃]

**ಮೂಲಗು** 'ಮುಲುಕು₁' ನೋ.

**ಮೂಲಗುಂಡರ** (ನಾ). ಒಬ್ಬಾತನ ಹೆಸರು : ಮೂಲಗುಣ್ಡರರ ಮಗವರ್ (ಪ್ರಿ.ಎ. ೦೯೩೭, ೦೯೭-೮ ; ೪ನೆಯ ೭೩). [ ? ]

**ಮೂಲಗುಣ** (ನಾ). ೧. ಪ್ರಾರಂಭದಿಂದ ಇರುವ ಗುಣ : ಮೊದಲಿನಿಂದ ಇರುವ ಸ್ವಭಾವ. ೨. [ಜೈನ] ಮುನಿಗಳು ಆಚರಿಸಬೇಕಾದ ಇಪ್ಪತ್ತೆಂಟು ಬಗೆಯ ಆಚರಣೆಗಳು : ಇಪ್ಪತ್ತೆಂಟು ಮೂಲಗುಣಂಗಳೊಳಮುತ್ತರಗುಣಂಗಳೊಳಮುತ್ತರೋತ್ತರಂ ನೆಗಟ್ದು (ಆದಿಪು. ೬-೨೯ ವ) ; ಮೂಲಗುಣವಾದಿ ಸಕಲಗುಣಾಳಿಯೊಳಂ ಕಿಡದೆ (ಧರ್ಮಾಮೃ. ೫-೯೭). [ಸಂ.]

**ಮೂಲಗುತ್ತಿಗೆ** (ನಾ). ಮೊದಲಿನಿಂದ ಪಡೆದಿರುವ ಗುತ್ತಗೆ : ನಾವು ಹಾರಿಕಿಯ ಬೊಮ್ಮಣ್ಣಹೆಗ್ಗಡೆಯಿಂದ ಮೂಲಗುತ್ತಿಗೆಯ . . . ಮಾಡಿದ ಅಗ್ರಹಾರದ ಮಹಾಜನಂಗಳ ವಿವರ (ಎಕ. VI, ಶೃಂಗೇರಿ. ೩೫-೨೪ ; 1417).

[ಮೂಲ + ಗುತ್ತಿಗೆ (<ಗುತ್ತಗೆ)]

**ಮೂಲಗೆ** 'ಮೂಲಂಗಿ' ನೋ.

**ಮೂಲಗೇಣಿ** (ನಾ). = ಮೂಲಗುತ್ತಿಗೆ : ಸಟ್ರು ಅವನಿಗೆ ಮೂಲಗೇಣಿಗೆ ಮಾರಿ ತಿನ್ನುವ ಅಧಿಕಾರವಿರುವ ಶರ್ತದ ಮೂಲಗೇಣಿಗೆ ಒಂದು ಎಕ್ರೆಯಷ್ಟು ಸ್ಥಳವನ್ನು ಕೊಟ್ಟರು (ಒಡ್ಡಿಉ. ೩೧).

[ಮೂಲ + ಗೇಣಿ (<ಕೇಣ್₃)./ತುಳು. ಮೂಲಗೇಣಿ]

**ಮೂಲಗ್ರಂಥ** (ನಾ). ಆಧಾರಗ್ರಂಥ ; ಆಕರಗ್ರಂಥ : ಅನ್ನೆಗಮವ್ಯಕ್ತಕಾಲದೊಳೋದಿ ಮಱೆದ ವಿಷಮಶಾಸ್ತ್ರದ ಮೂಲಗ್ರಂಥಕ್ಕೆ ವಿವರಣೆ ಬರ್ಪವೊಲಿರದವಧಿಬೋಧದೆ ಬರೆ ಮನಕ್ಕೆ ಬಗೆಯೊಳ್ ಕಂಡಂ (ಶಾಂತಿಪು. ೭-೧೯ ವ) ; ಪರಂಪರಾಗತವಾಗಿ ಬಂದಿರುವ ಲಭ್ಯ ಹಸ್ತಪ್ರತಿಗಳ ಆಧಾರದಿಂದ ಮೂಲಗ್ರಂಥದ ಎಂದರೆ ಕವಿಯ ಸ್ವಹಸ್ತಾಕ್ಷರಪ್ರತಿಯ ಸ್ವರೂಪವೇನಿರಬಹುದೆಂಬುದನ್ನು ನಿರ್ಣಯಿಸಿ ಪರಿಷ್ಕಾರ ಮಾಡುವ ಕೆಲಸ ಗ್ರಂಥಸಂಪಾದನೆ (ಶಾರಶ. vii, ಮುನ್ನುಡಿ). [ಸಂ.]

**ಮೂಲಚ್ಛೇದ** (ನಾ). ೧. (ಮರದ) ಬುಡವನ್ನು ಕತ್ತರಿಸುವುದು. ೨. (ಅಲಂ) ಪೂರ್ಣವಾಗಿ ನಾಶಮಾಡುವುದು : ಇವರ ಬಲುಹಂತಿರಲಿ ಸಾಕಿನ್ನವರ ಕರೆಸು ವಿರೋಧಬಂಧವ್ಯವಸ್ಥಿತಿಗೆ ಫಲವಿಲ್ಲ ಮೂಲಚ್ಛೇದ ಕರ್ಮವಿದು (ಕುವ್ಯಾಆ. ೦೭-೦೮). [ಸಂ.]

**ಮೂಲಣ್ಣ** (ನಾ). ಒಬ್ಬಾತನ ಹೆಸರು : ಜೋಕಣ್ಣಂ ಮೂಲಣ್ಣಂ× ×ನ್ ಅಭ್ಯನ್ತರ ಸಿದ್ಧಿ ಪಡೆದರ್ (ಎಕ. VIII, ಸೊರಬ. ೫೦೦-೮ ; 958).

[ಮೂಲ₇ + ಅಣ್ಣ₂]

**ಮೂಲತಃ** (ಅ). ಮೊದಲಿನಲ್ಲಿ ; ಪ್ರಾರಂಭದಲ್ಲಿ : ಸಹಜವಾಗಿ ಅವರು (ದ್ರಾವಿಡರು) ಮೂಲತಃ ಆಡುತ್ತಿದ್ದ ಭಾಷೆಯು ಭಾರತಕ್ಕೆ ಬರುವ ಮುನ್ನ ಇದ್ದ ಪ್ರದೇಶದ ಇತರ ಪ್ರದೇಶಗಳೊಡನೆ ಕೆಲವು ರೂಪಸಾಮ್ಯಗಳನ್ನು ಪಡೆದಿದ್ದಿರಲೇಬೇಕು (ದ್ರಾವಿ. ೩೦). [ಸಂ. ಮೂಲತಸ್]

**ಮೂಲತತ್ತ್ವ** (ನಾ). ಆಧಾರಭೂತವಾದ ತತ್ತ್ವ ; ಮುಖ್ಯ ತತ್ತ್ವ : ಪತಿ – ಪಶು – ಪಾಶಗಳೆಂಬ ತತ್ತ್ವತ್ರಯಗಳೇ (ತ್ರಿಪದಾರ್ಥಗಳೇ) ಶೈವಾಗಮದ ಮೂಲತತ್ತ್ವಗಳು (ಶಾರದ. ೭೩) ; ಸತ್ಯ, ಪ್ರೇಮ, ತ್ಯಾಗ, ಅಹಿಂಸೆ . . . ದಯೆ, ಮಮತೆ ಇವೇ ಮಾನವಧರ್ಮದ ಮೂಲತತ್ತ್ವಗಳು (ಧರ್ಮಸಾ. ೩). [ಸಂ.]

**ಮೂಲತ್ರಿಕೋಣ** (ನಾ). [ಜ್ಯೋತಿ] ಸೂರ್ಯ ಮೊದಲಾದ, ಗ್ರಹಗಳ ರಾಶಿರೂಪವಾದ ಗೃಹ ; ರವಿಗೆ ಸಿಂಹ, ಚಂದ್ರನಿಗೆ ವೃಷಭ, ಕುಜನಿಗೆ ಮೇಷ, ಬುಧನಿಗೆ ಕನ್ಯಾ, ಗುರುವಿಗೆ ಧನುಸ್ಸು, ಶುಕ್ರನಿಗೆ ತುಲಾ ಮತ್ತು ಶನಿಗೆ ಕುಂಭ — ಇವು ಮೂಲ ತ್ರಿಕೋಣಗಳು : ದಿನಪಾದಿಗಳುಚ್ಚಕೇಟಿನೆಯ ಗೃಹಂ ನೀಚಮುವರ್ಗ ಹರಿ ವೃಷಮಜಮಂಗನೆ ಧನು ತೊಲೆ ಕುಂಭಮಿವಿಂತಿನಿತುಂ ಮೂಲತ್ರಿಕೋಣಮಕ್ಕುಂ ಕ್ರಮದಿಂ (ಜಾತಕ. ೧-೪೨) ; ಸೂರ್ಯಾದಿಗ್ರಹಗಳ ಉಚ್ಚರಾಶಿಗೆ ಏಳನೆಯದು ಆಯಾ

ಗ್ರಹಗಳಿಗೆ ನೀಚರಾಶಿ. ಸಿಂಹ ವೃಷಭ ಮೇಷ ಕನ್ಯಾ ಧನುಸ್ಸು ತುಲಾ ಕುಂಭ ಇವು ಕ್ರಮವಾಗಿ ಸೂರ್ಯಾದಿಗ್ರಹಗಳಿಗೆ ಮೂಲತ್ರಿಕೋಣರಾಶಿಗಳು (ಜಾತಕ. ೧-೪೨. ೮೩೬). [ಸಂ.]

**ಮೂಲದಂಡಿಗೆ** (ನಾ). ಹಿಂದೆ ಶಾಲೆಗಳಲ್ಲಿ ವಿದ್ಯಾರ್ಥಿಗಳನ್ನು ಶಿಕ್ಷಿಸಲು ಉಪಯೋಗಿಸುತ್ತಿದ್ದ ಒಂದು ಬಗೆಯ ಸಾಧನ ; ಕೋದಂಡ : ತೂಗುದಂಡಿಗೆ (ಉಕ) : ತಪ್ಪುಮಾಡಿದ ವಿದ್ಯಾರ್ಥಿಯನ್ನು ಶಿಕ್ಷಕರು ಚೆನ್ನಾಗಿ ದಂಡಿಸುತ್ತಿದ್ದರು. ಮೂಲದಂಡಿಗೆ ಹಾಕಿ ಜೋತುಬಿಡುತ್ತಿದ್ದರು (ರಂಗರೋ. ೦೨೪). [ಮೂಲ, + ದಂಡಿಗೆ]

**ಮೂಲದಳ** (ನಾ). ಮುಖ್ಯಸೈನ್ಯ ; ಮೀಸಲುಪಡೆ : ಕೋವಿದೆಯರೆಯ್ತಂದರುತ್ಸವದಿಂದಲಾ ಪರವೆಯೊಡನೆ ಪಂಚಾಯುಧನ ಮೂಲದಳವಾಡಿದಂತೆ (ಶಾಂದಪು. ೬-೫೫). 'ಮೂಲಬಲ' ಪರಾ. [ಸಂ. ಮೂಲದಲ]

**ಮೂಲದೇವರು** (ನಾ). ೧. ಯಾವುದಾದರೊಂದು ಮನೆತನಕ್ಕೆ ಆರಂಭದಿಂದಲೂ ಇರುವ ಅಭಿಮಾನಿದೇವತೆ : ಗೌಡಸಾರಸ್ವತರ . . . ಮೂಲದೇವರುಗಳು ಸ್ಮಾರ್ತಸಂಪ್ರದಾಯದ ದೇವತೆಗಳು (ತುಳುನಾ. ೦೬೦). ೨. ದೇವಸ್ಥಾನದಲ್ಲಿ ಅನೂಚಾನವಾಗಿ ಪೂಜಿಸುವ ದೇವರ ವಿಗ್ರಹ : ಈ ದೇವಾಲಯದ ಮೂಲದೇವರ ವಿಗ್ರಹ ತುಂಬ ಸುಂದರವಾಗಿದೆ (ರೂಢಿ). [ಮೂಲ+ದೇವರು (<ದೇವರ್)]

**ಮೂಲದ್ರವ್ಯ** (ನಾ). ೧. ವ್ಯಾಪಾರ ಮುಂತಾದುವಕ್ಕೆ ಮೊದಲ ಬಾರಿ ಹೂಡುವ ಹಣ ; ಬಂಡವಾಳ : ಸಂಪತ್ತಿಯನ್ನು ಹುಟ್ಟಿಸಲಿಕ್ಕೆ ಏನಾದರೂ ಮೂಲದ್ರವ್ಯ ಬೇಕು (ಮುಂಬಯಿ. ೫-೫೦). ೨. ಆಧಾರವಾದ ಮೊದಲನೆಯ ವಸ್ತು ; ಮೂಲವಸ್ತು : 'ಪಿಚ್‌ಬ್ಲೆಂಡ್' ಎಂಬ ಖನಿಜದಲ್ಲಿ ದೊರೆಯುವ ಒಂದು ಸ್ವಪ್ರಕಾಶ ಮೂಲದ್ರವ್ಯ (Actinium. ಇಂಕೋ). [ಸಂ.]

**ಮೂಲದ್ರಾವಿಡ** (ನಾ). ದ್ರಾವಿಡಭಾಷೆಗಳಿಗೆ ಮೂಲವಾಗಿ ಇದ್ದಿರಬಹುದಾದ ಪ್ರಾಚೀನ ಭಾಷಾರೂಪ ; ಪೂರ್ವದ್ರಾವಿಡ : ಮೂಲದ್ರಾವಿಡಭಾಷೆಯು ಕವಲೊಡೆದು ಅವುಗಳಲ್ಲಿ ಒಂದು ಕವಲು ಕನ್ನಡವೆಂಬ ಸ್ವತಂತ್ರಭಾಷೆಯಾಯಿತು (ಕ್ಕಬಿ. ೪೦೯) ; ಮೂಲದ್ರಾವಿಡಭಾಷೆಯಲ್ಲಿ 'ಬ' ಈ ಧ್ವನಿಯಿತ್ತೆಂಬುದರಲ್ಲಿ ಸಂದೇಹವಿಲ್ಲ (ಸೋಸಂಬಿ. ೯). [ಸಂ.]

**ಮೂಲಧನ** (ನಾ). = ಮೂಲದ್ರವ್ಯ ೧ : ಲೀಲೆಯಿಂ ಲಿಂಗಕ್ಕೆ . . . ಚಂದನಮನರ್ಪಿಸುತಿರಲು ತನ್ನ ಮೂಲಧನವೇಸುಂಟದೆಲ್ಲವನೋಳಿಯಲಿ ಚಂದನಕೆ ಸವೆಯಲು (ಬಸವು. ೬-೧) ; ಮೊದಲಿನದು ಕಾರ್ಖಾನೆಯ ಕಟ್ಟಡ, ಯಂತ್ರ, ಉಪಕರಣಗಳಿಗೆ ಬೇಕಾಗುವ ಮೂಲಧನ (ಬಾಲಶ್ರ. I, ೯೬೪). [ಸಂ.]

**ಮೂಲಧಾತು** (ನಾ). ೧. ಕೀವು ; ಲಸಿಕೆ. ೨. [ವಿಜ್ಞಾ] ರಾಸಾಯನಿಕವಾಗಿ ವಿಭಜಿಸಲು ಅಸಾಧ್ಯವಾದ ಘಟಕ, — ದ್ರವ್ಯ : ಅಣುಬಾಂಬಿನಲ್ಲಿ ಯುರೇನಿಯಮ್ ಎಂಬ ಮೂಲಧಾತುವಿನ ಪರಮಾಣುವಿನ ಒಡೆಯುವಿಕೆಯಿಂದ ದೊರೆಯುವ ಸ್ಫೋಟನಶಕ್ತಿಯು ಅಡಕವಾಗಿದೆ (ವಿಜ್ಞಾವಿ. ೧೨೩). [ಸಂ.]

**ಮೂಲನಕ್ಷತ್ರ** (ನಾ). [ಜ್ಯೋತಿ] ಒಂದು ನಕ್ಷತ್ರದ ಹೆಸರು : ಸಿತಪಕ್ಷದ ಪಂಚಮಿದಿನಪತಿವಾರಂ ಶುಭದ ಮೂಲನಕ್ಷತ್ರದೊಳನ್ವಿತಮಾಗೆ ನೆಗಟ್ದುದೀ ಮತ್ಕೃತಿ ಜಗದೊಳ್ (ಅದಿಪು. ೦೬-೬೬) ; ದಿನದೊಳುತ್ಪನ್ನನಾದಂ ಮೂಲನಕ್ಷತ್ರದಿಂದರಿಪ್ಪಾಂಶದೊಳ್ ಸುಕುಮಾರನು (ಕೈಶಿಖ. ೨೮-೦೯). [ಸಂ.]

**ಮೂಲನಿವಾಸಿ** (ನಾ). ಒಂದು ಪ್ರದೇಶದಲ್ಲಿ ಬೇರೆ ಪ್ರದೇಶದ ಜನರು ಬಂದು ನೆಲಸುವುದಕ್ಕಿಂತ ಮೊದಲೇ ಅಲ್ಲಿದ್ದಿರಬಹುದಾದ ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು ; ಆದಿವಾಸಿ : ಮೂಲನಿವಾಸಿಗಳಲ್ಲಿ ಒಬ್ಬನನ್ನು ಕುರಿತು ಬರೆದಿಟ್ಟ ಸಂಗತಿ (ಮುಂಬಯಿ. ೯-೦೦೬) ; ದ್ರಾವಿಡರೂ ಕೂಡ ಭಾರತದ ಮೂಲನಿವಾಸಿಗಳಲ್ಲ (ದ್ರಾಹಿ. ೨೮). [ಸಂ. ಮೂಲನಿವಾಸಿನ್]

**ಮೂಲಪತ್ರ** (ನಾ). (ನಕಲು ಪ್ರತಿಗಳಿಗೆ ಆಧಾರವಾದ) ಮೊದಲನೆಯ ಪ್ರತಿ : ಪಡಿಪತ್ರವಲ್ಲದ ಅಸಲುಪತ್ರ : ನಡೆ ನಿನ್ನ ಮೂಲಪತ್ರವನೆನಗೆ ತೋರು (ಹಂಪರ. ೬-೯೬) ; ಪಟುದೊಡೇನಾಯ್ತು ಪತ್ರವನೆಮ್ಮ ಸತಿ ಮುನ್ನಲಬಿದಿರ್ದ ಮೂಲಪತ್ರಗಳನು ಪೂಜಿಗಣ ಶಿವಭವನದೆ ಪೈತಿಟ್ಟಳೆಂದಳುಪೆ (ತ್ರಿಭುತಿ. ೦೦-೦೯). [ಸಂ.]

**ಮೂಲಪಾಠ** (ನಾ). ಕವಿಯೇ ರಚನೆಮಾಡಿದ ಕೃತಿಯ ಲಿಖಿತಭಾಗ ; ಗ್ರಂಥದ ಪ್ರತಿಗಳಲ್ಲಿ ದೊರಕುವ ಅತಿ ಪ್ರಾಚೀನವಾದ ಪಾಠ : ಕೆಲವು ಸಂದರ್ಭಗಳಲ್ಲಿ ಕವಿಯ ಮೂಲಪಾಠವೇನಿರಬಹುದೆಂಬುದನ್ನು ಊಹಿಸುವುದಕ್ಕ ಆಗದಂತೆ ಇರುತ್ತದೆ (ಕನ್ನಸಂ. ೨೦೬). [ಸಂ.]

**ಮೂಲಪುರುಷ** (ನಾ). (ವಂಶ ಅಥವಾ ಕುಲದ) ಮೊದಲನೆಯ ವ್ಯಕ್ತಿ : ಮೊದಲಿಗ : ಸಂತತಿಯಿಲ್ಲದ ಕುಲಗಳ ಸಂಪತ್ತುಗಳು ಮೂಲಪುರುಷರ ಅವಸಾನದಲ್ಲಿ ಅಸ್ಕರನ್ನು ಸೇರುವುವು (ಜಾಳಬಂತ. ೯೩-೨೬) ; ಕಳಲೆಯ ವಂಶಕ್ಕೆ ಇವನೇ ಮೂಲಪುರುಷನಾದನು (ಸಳವ್ಯ. V. ಕ್ರಸ್ತಾವನೆ). [ಸಂ.]

**ಮೂಲಪ್ರಕೃತಿ** (ನಾ). [ವೇದಾಂತ] ಜಗತ್ತಿನ ಸೃಷ್ಟಿಕಾರ್ಯಕ್ಕೆ ಮೂಲಕಾರಣವಾದ (ತ್ರಿಗುಣಾತ್ಮಕವಾದ) ಪ್ರಕೃತಿ : ಒಂದಕ್ಕೊಂದು ಹೆಚ್ಚು ಕಡಮೆಯಾಗದಂತೆ ಸಮಾನವಾದ ಸತ್ತ್ವರಜಸ್ತಮಸ್ಸೆಂಬ ಮೂರುಗುಣಗಳುಳ್ಳ ದ್ರವ್ಯವು ಮೂಲಪ್ರಕೃತಿಯೆನಿಸಿಕೊಳ್ಳುವುದು (ತತ್ತ್ವಕು. ೬) ; ಪ್ರಕೃತಿಯಲ್ಲಿ ವಿಶ್ರಾಂತಿಯಾದರೆ ಅದೇ ಮೂಲಪ್ರಕೃತಿ (ಹಿಂದಶಾ. ೫೭). [ಸಂ.]

**ಮೂಲಪ್ರತಿ** (ನಾ). ೧. ಕವಿಯು ಬರೆದ ಸ್ವಹಸ್ತಾಕ್ಷರ ಪ್ರತಿ. ೨. ನಕಲಿಗೆ ಆಧಾರವಾದ ಪ್ರತಿ : ಅಸಲುಪ್ರತಿ - ಮಾತೃಕೆ : ಕಳಲೆ ರಂಗಸ್ವಾಮಿಅಯ್ಯಂಗಾರ್ಯರ ಮೂಲಪ್ರತಿಯಿಂದ ಈ ಗ್ರಂಥವು ಬರೆಯಲ್ಪಟ್ಟಿದೆ (ಸಳವ್ಯ. V. ಕ್ರಸ್ತಾವನೆ) ; ಈ ತಪ್ಪುಗಳಿಂದಾಗಿ ಮೂಲಪ್ರತಿಯ ಪಾಠ ನಕಲಿನಲ್ಲಿ ಹಲವು ಕಡೆ ಕೆಟ್ಟುಹೋಗುತ್ತದೆ (ಕನ್ನಸಂ. ೬೬). [ಸಂ.]

**ಮೂಲಬಂಧ** (ನಾ). [ಯೋಗ] ಹಠಯೋಗದ ಮೂಲಬಂಧ, ಉಡ್ಯಾಣಬಂಧ ಮತ್ತು ಜಾಲಂಧರಬಂಧ ಎಂಬ ಮೂರು ಬಂಧಗಳಲ್ಲಿ ಒಂದು : ಅನಿಲ ನಿರೋಧನದಿಂದಾಧಾರವಾದಪಾನ ದಿನಪತಿಯನು ಹೃದಯದ ಶಶಿಯೆನಿಸುವ ಪ್ರಾಣದೊಡನೆ ಕೂಡಿ ನಡುನಾಡಿಗನುಗೂಡಲದೆ ಮೂಲಬಂಧವು (ಕೃಷ್ಣ. ೫-೦೫-೧) ; ಮೂಲಬಂಧ ಉಡ್ಯಾಣಬಂಧ ಜಾಲಂಧರಬಂಧವೆಂಬ ಬಂಧತ್ರಯಂಗಳುಂ (ಶಿವೇಕ. ೦೩೩). [ಸಂ.]

**ಮೂಲಬಲ** (ನಾ). ಯಾವುದಾದರೂ ತುರ್ತು ಸಂದರ್ಭಗಳಿಗಾಗಿ ಸದಾ ಸಜ್ಜುಗೊಳಿಸಿರುವ ಸೈನ್ಯ ; ಮೀಸಲುಪಡೆ : ಮುಖ್ಯಸೈನ್ಯ : ಮೂಲಬಲವಿಲ್ಲದ ತುಟಿಲಸದನಂತೆ ಬಿಲ್ಲೊಳ್ಕೊಟ್ಟನಾಗಿ (ಶಾಂತಿಪು. ೯-೩೦ ವ) ; ಕಾಳರಕ್ಕಸನ ಕವಿದು ಹಳಚಲು ಮೂಲಬಲ ಮುನ್ನೂಱು ಪದ್ಮವ ಭಾಳಲೋಚನನಂತೆ ಲಯಿಸಿದನೆಂದು ರಘುರಾಯ (ಕೌಶಿಕಾ. ೬೬ ಪದ್ಯ) ; ರಾವಣನ ಮೂಲಬಲ ಕಂಡು ಕಪಿಸೇನೆ ಆವಾಗಲೆ ಬೆದರಿ ಓಡಿದವು (ಪುರಂದ. ೯-೦೯೯-೧). [ಸಂ.]

**ಮೂಲಬೇರ** (ನಾ). ದೇವಸ್ಥಾನದ ಗರ್ಭಗುಡಿಯಲ್ಲಿ ಶಾಸ್ತ್ರೋಕ್ತವಾಗಿ ಪ್ರತಿಷ್ಠೆ ಮಾಡಿರುವ ಮೊದಲ ದೇವವಿಗ್ರಹ ; ಮೂಲಪ್ರತಿಮೆ : ಇದರ ಮಧ್ಯದಲ್ಲಿ ಪಿಂಡಿಕೆಯನ್ನಿಟ್ಟು ಅದರ ಮೇಲೆ ಪ್ರಭಾವಳಿ,

ಲತಾತೋರಣ, ಕೀರ್ತಿಮುಖಿಗಳ ಮಧ್ಯೆ ಮೂಲಬೇರವನ್ನು ಸ್ಥಾಪಿಸಿರು ವರು (ಹೊಯ್ಸಳವಾ. ೦೯). [ಮೂಲ+ಬೇರ₃. / ತಮಿ. ಮೂಲಪೇರವ್]

**ಮೂಲಭದ್ರಿಕೆ** (ನಾ). ಮೂಲಮಂತ್ರಾಕ್ಷರ ಮತ್ತು ಅವುಗಳನ್ನು ಒಳಗೊಂಡ ತಾಯಿತಿ : "ಷಡಕ್ಷರಳಮಿವು ಕ್ರಮದಿಂದ ಪಲ್ಲಟಿಸೆ ಮೂಲಭದ್ರಿಕೆಯಕ್ಕು" (ಮಂಗರಾ. ೦೦೩-೫). [ಸಂ.]

**ಮೂಲಭಾಷೆ** (ನಾ). ಯಾವುದೇ ಭಾಷೆಯ ಮೂಲಸ್ವರೂಪವನ್ನು ಹೊಂದಿರುವ ಭಾಷೆ ; ಅತಿ ಪ್ರಾಚೀನ ರೂಪದ ಭಾಷೆ : ಕನ್ನಡ ತೆಲುಗು ತಮಿಳು . . . ಬಡಗ ಮೊದಲಾದ ಭಾಷೆಗಳಿಗೆ ಪರಸ್ಪರ ಇರುವ ಹೋಲಿಕೆಯನ್ನು ನೋಡಿದರೆ ಈ ಭಾಷೆಗಳೆಲ್ಲವೂ ಒಂದೇ ಮೂಲಭಾಷೆ ಯಿಂದ ಹುಟ್ಟಿರಬೇಕೆಂದು ಗೊತ್ತಾಗುತ್ತದೆ (ಕೃಬಿಡಿ. ೩೦೩) ; ಇದೇ ಕುಲಕ್ಕೆ ಆಧುನಿಕಕಾಲದಲ್ಲಿ ಇಂಗ್ಲೀಷ್ . . . ಗುಜರಾತಿ ಭಾಷೆಗಳು ಸೇರುತ್ತವೆ. ಇವುಗಳನ್ನು ಮೂಲಭಾಷೆಗಳೆಂದು ಕರೆಯಬಹುದು (ಕಾರರ. ೯೫೬). [ಸಂ. ಮೂಲಭಾಷಾ]

**ಮೂಲಭೂತ** (ಗು). ಪ್ರಧಾನವಾದ ; ಮೊತ್ತಮೊದಲಿನ : ಜನತೆಯ ಮೂಲಭೂತ ಹಕ್ಕುಗಳಿಗಾಗಿ . . . ಹೊಡೆದಾಡಿದ ಆ ನಾಯಕರಿಗೆ ತಾವು ಎಷ್ಟು ಋಣಿಗಳೋ ಮುಂದಿನ ಪೀಳಿಗೆಯವರು ತಿಳಿದುಕೊಳ್ಳುವುದು ಒಳ್ಳೆಯದು (ಸಂಗೀತ. ಅಭುಬ). [ಸಂ.]

**ಮೂಲಮಂತ್ರ** (ನಾ). ೧. 'ಓಂ' ಎಂಬ ಮಂತ್ರಾಕ್ಷರ ; ಪ್ರಣವ. ೨. ಬೇರೆ ಬೇರೆ ದರ್ಶನಗಳ ಬೆಳವಣಿಗೆಗೆ ಆಧಾರವಾದ ವೇದಮಂತ್ರ. ೩. ಮುಖ್ಯವಾದ ಮಂತ್ರ ; ಪ್ರಧಾನವಾದ ಮಂತ್ರ : ಹರನ ದಾನಾಭಯಕರಂಗಳ ಪರಿಯೊಳತಿದಾನಾಭಯಪ್ರದಭರಿತಮಾಗಿಯು ಮೂಲ ಮಂತ್ರಂಗಳ ವಿಭಾತಿಯಲಿ (ಬಸಪು. ೩೯-೯೩); ಪರಮೂಲಮಂತ್ರವನು ಗುರುವು ಬೋಧಿಸಲಾಗ ಹರುಷದಿಂ ಶಿಷ್ಯಂಗೆ ಜ್ಞಾನ ಪಲ್ಲವಿಸಲ್ಕೆ (ಶ್ರೀಶಂಬ. ೭- ). [ಸಂ.]

**ಮೂಲಮಾನ** (ನಾ). ಮುಖ್ಯವಾದ ಅಳತೆಗೋಲು : ಆದರ್ಶಗಳನ್ನು, ಅವುಗಳ ಮಟ್ಟವನ್ನು ಸೂಚಿಸಬಲ್ಲ ಒಂದು ಮೂಲಮಾನ ಬೇಕು (ಶಿಕ್ಷರ. ೩೨೩): ಇದನ್ನು ಮೂಲಮಾನವನ್ನಾಗಿ ಮಾಡಿಕೊಂಡು ಕವಿಗಳನ್ನು, ಕಾವ್ಯ ಗಳನ್ನು ಪರಿಶೀಲಿಸಲು ಹೊರಟಿರುವುದರಿಂದ ಇದು ಎಷ್ಟರ ಮಟ್ಟಿಗೆ ಆಧುನಿಕ ವಿಮರ್ಶೆಯ ವಿಧಾನವಾಗಲು ಸಾಧ್ಯ (ಸೌಂದಸ. i. ಮೊದಲ ಮಾತು). [ಸಂ.]

**ಮೂಲರಸ** (ನಾ). [ಕಾವ್ಯವಿಜ್ಞಾ] ನವರಸಗಳಲ್ಲಿ ಮುಖ್ಯವಾದ ರಸ : ಭರತನ ನಾಟ್ಯಶಾಸ್ತ್ರದಲ್ಲಿ (VI, ೩೯-೪೧) ಶೃಂಗಾರ, ರೌದ್ರವೀರ, ಬೀಭತ್ಸ ಇವು ನಾಲ್ಕೂ ಮೂಲರಸಗಳೆಂದೂ . . . ಹೇಳಿದೆ (ಕೃಬಿಡಿ. ೨೦೦). [ಸಂ.]

**ಮೂಲರೋಗ** (ನಾ). ಗುದದ್ವಾರದ ರೋಗ ; ಮೊಳೆರೋಗ : ಆ ಕಷಾಯ . . . ಕೊಂಬುದು . . . ಅತಿಸಾರ, ಮೂಲರೋಗ, ಕಾಮಾಲೆ ತಿಮಿರ ಹರ (ಶಿವ್ಯಿ. ೦೯೬) ; ಕೊಡಸಿನೆಲೆಯ ಗುಣ: — ಇದರಲ್ಲಿ ಊಟ ಮಾಡುವುದರಿಂದ . . . ಮೂಲರೋಗ, ಭಗಂದರರೋಗ ಇವೇ ಮುಖ್ಯವಾದವುಗಳನ್ನು ಹೋಗಲಾಡಿಸಿ . . . ಸಮಸ್ತ ತಿಮಿರಗಳನ್ನೂ ನಾಶಮಾಡುವುದು (ಸಳಿವ್ಯ. ೪೯). [ಸಂ.]

**ಮೂಲವರ್ಣ** (ನಾ). ಇತರ ಬಣ್ಣಗಳಿಗೆ ಮೂಲಾಧಾರವಾದ ಬಣ್ಣ ; ಮುಖ್ಯ ಬಣ್ಣ : ಮುದ್ರಣ ಬಣ್ಣಗಳಲ್ಲಿ ಹಳದಿ, ಕೆಂಪು ಮತ್ತು ನೀಲಿ ಬಣ್ಣಗಳು ಮೂಲವರ್ಣ (primary)ಗಳು. ಈ ಮೂರನ್ನು ಸೇರಿಸಿದರೆ ಕಪ್ಪು (ಅಥವಾ ಕಂದು) ಬಣ್ಣವಾಗುತ್ತದೆ (ಮುದ್ರಳ. ೬೬). [ಸಂ.]

**ಮೂಲವಸ್ತು** (ನಾ). ೧. ಆದಿದ್ರವ್ಯರೂಪವಾದ ಪರಮಾತ್ಮತತ್ತ್ವ ; ಮೂಲತತ್ತ್ವ: ಸ್ವಯಂಭುವಳಿದು ಶೂನ್ಯವಾಯಿತ್ತು ಮೂಲವಸ್ತುವೆಂದು ಬೇಜುಂಟೇ ತಾನಲ್ಲದೆ (ಸಿದ್ಧೇವ. ೦೮೯-೫೬೬). ೨. =ಮೂಲಧಾತು ೨: ಪ್ರತಿಯೊಂದು ಮೂಲವಸ್ತು (Element)ವೂ ಅತಿಶಾಖವೇರಿರುವಾಗ ತನ್ನ ವಿಶೇಷವಾದ ಕಿರಣಗಳನ್ನು ಬೀರುತ್ತದೆ (ಕ್ಯೋಟಿರ್ಶ. ೦೯, ೫೨೬); ಬೇರೆ ಬೇರೆ ಮೂಲವಸ್ತು(Elements)ಗಳ ರೋಹಿತಗಳ ಪಟ್ಟಿಗಳನ್ನು ಹೋಲಿಸಿ ನೋಡಿದರೆ ಒಂದೊಂದೂ ಬೇರೆಯಾಗಿರುವುದು ಕಂಡುಬರುವುದು (ಭೌತಶಾ. ೨೦೬). [ಸಂ.]

**ಮೂಲವಿಗ್ರಹ** (ನಾ). =ಮೂಲಬೇರ : "ಅಚಲ" ಪ್ರತಿಮೆಗಳಿಗೆ "ಮೂಲ ವಿಗ್ರಹ"ವೆಂದೂ ಹೆಸರು (ಕಾರದ. ೧೫೨). [ಸಂ.]

**ಮೂಲವೀಸ** 'ಮೂಲೆವೀಸ' ನೋ.

**ಮೂಲವ್ಯಾಧಿ** (ನಾ). = ಮೂಲರೋಗ : "ಅರ್ಶಃ, ಗುದಕೀಲಃ— ಈ ೨ ಮೂಲವ್ಯಾಧಿ" (ಕಲಾಯು. ೯೯-೯೩೦) : ಪೆಡೆತಲೆ ಮಿಗೆ ನೋಗುಂ . . . ಮೂಲವ್ಯಾಧಿಯುಮುಡಸುಗುಮಿಂತಿನಿತೆ ಜೂದಿನಿಂದಪ್ಪ ಫಲಂ (ಸಮಶ. ೬-೩೦), ಎತ್ತುನಾಲಿಗೆ :— ಈ ಸೊಪ್ಪಂ ಅಕ್ಕಿಯಲ್ಲಿ ಹಿಟ್ಟುಕುಟ್ಟಿ ಸಪ್ಪರೊಟ್ಟಿ ತಟ್ಟಿ ತುಪ್ಪದಿಂದ ಮೆಲ್ಲಲು ಮೂಲವ್ಯಾಧಿ ಮಾಣ್ಗುಂ (ಶಿವ್ಯಿ. ೩). [ಸಂ.]

**ಮೂಲಶಬ್ದ** (ನಾ). [ವ್ಯಾಕ] ಪ್ರತ್ಯಯ ಮೊದಲಾದುವು ಇನ್ನೂ ಸೇರದಿರುವ ಶಬ್ದ : ದೇಶ್ಯಶಬ್ದಗಳನ್ನು ಮೂಲಶಬ್ದಗಳು, ನಿಷ್ಪನ್ನ (Derivative) ಶಬ್ದಗಳು, ಸಮಾಸಶಬ್ದಗಳು ಎಂದು ಮೂರು ವಂಗಡ ಗಳಾಗಿ ವಿಭಾಗಿಸಬಹುದು (ಕೃಬಿಡಿ. ೧೯). [ಸಂ.]

**ಮೂಲಶಿಕ್ಷಣ** (ನಾ). ಮುಂದಿನ ವಿದ್ಯಾಭ್ಯಾಸಕ್ಕೆ ಅತ್ಯಗತ್ಯವಾಗಿ ಬೇಕಾಗುವ ಆರಂಭದ ಶಿಕ್ಷಣ ; ಮೂಲಾಧಾರವಾದ ವಿದ್ಯಾಭ್ಯಾಸ: ಮಕ್ಕಳು ಜನ್ಮತಃ ಪಡೆದುಕೊಂಡು ಬಂದಿರುವ ವಿಧಾಯಕಶಕ್ತಿಗಳು ಅವರೇ ಕಥೆಯನ್ನು ಹೇಳುವಾಗ ಪ್ರಕಟವಾಗುವುವು. ಮೂಲಶಿಕ್ಷಣದಲ್ಲಿ ಇದಕ್ಕೆ ಆತ್ಮಪ್ರಕಾಶನವೆಂದು ಹೇಳುವುದುಂಟು (ಕಥೆ. ೯೬) ; ಪಾಕಶಾಸ್ತ್ರವನ್ನು ಮೂಲಶಿಕ್ಷಣದಲ್ಲಿ ಸೇರಿಸಬಹುದು (ಹೇಮಾತೀ. ೬೩). ☞ ಇದು ಇಂಗ್ಲಿಷಿನ 'Basic Education' ಎಂಬುದರ ಅನುವಾದ. [ಸಂ.]

**ಮೂಲಸಂಘ** (ನಾ). [ಜೈನ] ದಿಗಂಬರಪಂಥದ ಪ್ರಾಚೀನವಾದ ಒಂದು ಸಂಘದ ಹೆಸರು : ಸ್ವಸ್ತಿಶ್ರೀ ಮೂಲಸಂಘದೇಶಿಯಗಣ ಪೊಸ್ತಕಗಚ್ಛದ ಕೊಣ್ಡಕುನ್ದಾನ್ವಯ ಕೊಲ್ಲಾಪುರದ . . . ಪ್ರತಿಬದ್ಧದ ಶ್ರೀಮಾಘ ನಂದಿ ಸಿದ್ಧಾನ್ತದೇವರ ಶಿಷ್ಯರು (ಎಕ. II (R), ೩೨೬-೦ ; 13ನೆಯ ಶತ). [ಸಂ.]

**ಮೂಲಸ್ತಂಭ** (ನಾ). ಪ್ರಮುಖವಾದ ಅವಲಂಬನೆ ; ಆಧಾರಸ್ತಂಭ : ಬಲದೇವ ವಾಸುದೇವರ್ . . . ಶೌರ್ಯಮೂಲಸ್ತಂಭದಂತೆಯುಂ ಸಾಹಸ ದ್ರವಿಣಸಾಧನದಂತೆಯುಂ . . . ಸುಖಿಮಿರ್ಪನ್ನೆಗಂ (ಶಾಂತಿಪು. ೦-೮೦ ವ). [ಸಂ.]

**ಮೂಲಸ್ಥ** (ನಾ). ಪರಂಪರೆಯಿಂದ ಬಂದ ಯಾವುದಾದರೂ ಅಧಿಕಾರ ಸ್ಥಾನದಲ್ಲಿರುವ ವ್ಯಕ್ತಿ : ಶ್ರೀಮತು ಮಾಣಿಕ್ಯಪೊಳಲ ಮೂಲಸ್ಥ ಚನ್ದಕಕೋಜನ ಸುಪುತ್ರಂ ಪರವಾದಿಮಲ್ಲೋಜಂ (ಎಕ. VI (R), ಕೃಕ್ಕರಾ. ೦೦೬-೦೨ ; 1165 ?). [ಸಂ.]

**ಮೂಲಸ್ಥಾನ** (ನಾ). ೧. ಹುಟ್ಟುವ ನೆಲೆ ; ಉತ್ಪತ್ತಿಸ್ಥಾನ ; ಉಗಮ ಸ್ಥಳ : ವಿಭವದ ಮೂಲಸ್ಥಾನಮೆನಿಸಲಿದು ಕಾಮದೇವನಾಸ್ಥಾನಮೆನಿಸಲ್ . . . ಸಮೆದತ್ತು ವಿವಾಹ ಗೇಹಂ (ಆದಿಪು. ೯-೪೦ ರಗಳೆ). ೨. ದೇವಾಲಯ ದಲ್ಲಿ ಮೂಲವಿಗ್ರಹವನ್ನು ಇಟ್ಟಿರುವ ಒಳಭಾಗ ; ಗರ್ಭಗುಡಿ ; ಗರ್ಭಗೃಹ : ತಾವು ಮಾಡಿಸಿದ ಶಿವಾಲಯದ ಮೂಲಸ್ಥಾನದ ಶ್ರೀಸೋಮೇಶ್ವರದೇವರ್ಗ್ಗೆ ತಮ್ಮ ಪ್ರಭುತ್ವದ ದೋಣಿಯಿಂ . . . ತಮ್ಮಂ [ಶ]ಕ್ಕ ಬಂದ ಮತ್ತರಯ್ವತ್ತೇಳಱೊಳಗೊ (ಸೌಇಇ. XX, ೬೯-೯೩; 1107); ದೇವತಾಮೂರ್ತಿಗಳು ಮೂಲಸ್ಥಾನದಲ್ಲಿ (ಗರ್ಭಗೃಹದಲ್ಲಿ) ಶಿಲಾಮೂರ್ತಿ

ಗಳಾಗಿ ಉಪಾಸನೆಯ ಪ್ರಯೋಗ ವಿಧಾನಗಳಿಂದ ದೇವತಾ ಶಕ್ತಿಸಂಪಾದನೆ ಹಾಗೂ ಸಂರಕ್ಷಣೆಯು ಕೇಂದ್ರವಾಗಿದೆ (ಚಾರಚ. ೬೦). ೩. ಮುಖ್ಯವಾದ ಸ್ಥಳ ; ಕೇಂದ್ರ ; ಪ್ರಮುಖಕ್ಷೇತ್ರ : ಕೃತಯುಗದ ಕೇ[ದಾ]ರವೆಂಬ ಮೂಲಸ್ಥಾನ ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ ದ್ವಾಪರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ (ಚಚಚ. ೩೪೪). ೪. ಹುಟ್ಟೂರು : ಜನ್ಮಸ್ಥಳ : ಸ್ಥಾನಿಕರು ಶೃಂಗೇರಿಮಠದ ಶಿಷ್ಯರೆಂದೂ ಸುಬ್ರಹ್ಮಣ್ಯವು ಇವರ ಮೂಲಸ್ಥಾನವೆಂದೂ ಖಚಿತವಾಗುತ್ತದೆ (ತುಳುಜಾ. ೦೦೬). ೫. ತಳಹದಿ ; ಬುನಾದಿ ; ಆಧಾರ. ೬. ಪರತತ್ತ್ವ ; ಪರಬ್ರಹ್ಮ. ೭. ಗಾಳಿ ; ವಾಯು. [ಸಂ.]

**ಮೂಲಸ್ಥಾಪಕ** (ನಾ). ಸಂಘ, ಸಂಸ್ಥೆ, ಮತ, ಸಿದ್ಧಾಂತ ಮೊದಲಾದುವುಗಳನ್ನು ಸ್ಥಾಪನೆಮಾಡಿದವನು : ಆದ್ಯಪ್ರವರ್ತಕ : ಈ ಅನಾಥಾಶ್ರಮದ ಮೂಲಸ್ಥಾಪಕರು ಬಹಳ ಉದಾರಿಗಳು (ಶಂಖ). [ಸಂ.]

**ಮೂಲಜ್ಞಾನ** (ನಾ). [ವೇದಾಂತ] ಪ್ರಪಂಚದ ಪೂರ್ವಸ್ಥಿತಿ ; ಪ್ರಕೃತಿ : ಪ್ರಕೃತಿಯೆಂದರೆ ಮೂಲಾಜ್ಞಾನ, ಮಾಯೆ, ಅವಿದ್ಯೆ ಮೊದಲಾದ ಶಬ್ದಗಳಿಂದ ಹೇಳಲ್ಪಡುವ ಪ್ರಪಂಚದ ಪೂರ್ವಸ್ಥಿತಿ (ಶಂಚಡಾ. ೦೪೪). [ಸಂ.]

**ಮೂಲಾಣು** (ನಾ). ಗುಪ್ತಪುಷ್ಪೀಯ ಸಸ್ಯಗಳಲ್ಲಿ ಪ್ರತ್ಯೇಕ ಹೊಂದಿ, ಸ್ವತಂತ್ರವಾಗಿ ಬೆಳೆಯಬಲ್ಲ ಒಂದು ಕಣ ; ಬೀಜಕಣ : ನಿರ್ಲಿಂಗ ರೀತಿಯ ವಂಶಾಭಿವೃದ್ಧಿಯಲ್ಲಿ ನೈಪುಣ್ಯ ಪಡೆದ ಜೀವಕಣಗಳು ಉತ್ಪತ್ತಿಯಾಗುತ್ತವೆ. ಇವುಗಳನ್ನು ಮೂಲಾಣು ಅಥವಾ ಬೀಜಕಣ (spores) ಎಂದು ಕರೆಯುತ್ತಾರೆ (ಸಸ್ಯಶಾ. ೬೩) ; ಮೂಲಾಣು (spores)ಗಳು ಚದುರಿ ಮೊಳೆತು ಕಾಲಂಗುಲಕ್ಕೆ ಮೀರದ ಹಸುರುಬಣ್ಣದ ಹೃದಯಾಕಾರದ ಪೊರೆಗಳಾಗುತ್ತವೆ (ಹಸುಹೂ. ೦೪೦). [ಸಂ.]

**ಮೂಲಾಧಾರ** (ನಾ). ೧. ಮುಖ್ಯವಾದ ಅವಲಂಬನೆ, – ಆಸರೆ. ೨. ಪ್ರಮುಖವಾದ ಅಸ್ತಿವಾರ. ೩. ಹೊಕ್ಕುಳು ; ನಾಭಿ. ೪. [ಯೋಗ] ದೇಹದ ಸಕಲನಾಡಿಗಳಿಗೂ ಮೂಲಸ್ಥಾನವೆಂದು ಭಾವಿಸಲಾದ ಗುಹ್ಯಸ್ಥಾನ ಮತ್ತು ಜನನೇಂದ್ರಿಯಗಳ ಮಧ್ಯದ ಎರಡು ಅಂಗುಲಗಳ ಪ್ರದೇಶ, – ನಾಡೀಚಕ್ರ ; ಷಟ್ಚಕ್ರಗಳಲ್ಲಿ ಒಂದು : ಮೂಲಾಧಾರ [ಪಾಠಾಂ. ಮತ್ತಮಾಧಾರ] ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಗ್ನೇಯವೆಂಬ ಷಟ್ಚಕ್ರಂಗಳುಂ (ವಿವೇಕ. ೦೪೪); ಮೂಲಾಧಾರದ ಚಕ್ರದಲ್ಲಿ ಲಿಂಗರೂಪದಿಂದಿರುವ ಪರಬ್ರಹ್ಮನನ್ನು ಶಕ್ತಿಯು ಸರ್ಪರೂಪದಿಂದ ಕುಂಡಲಿನಿಯೆಂಬ ಹೆಸರಿನಲ್ಲಿ ಸುತ್ತಿಮಲಗಿರುವಳೆಂದೂ . . . ಶಕ್ತಿಪಂಥ ಪ್ರತಿಪಾದಿಸುತ್ತದೆ (ಚಾರಚ. ೩೦೬). [ಸಂ.]

**ಮೂಲಾನಕ್ಷತ್ರ** (ನಾ). = ಮೂಲನಕ್ಷತ್ರ : ಮೂಲ . . . ಮೂಲಾನಕ್ಷತ್ರಕೆ ಪೆಸರು (ಭಾಸ್ಕರ. ೬೩-೦) ; ಸಾವಿತ್ರಮ್ಮನವರು ಮೂಲಾನಕ್ಷತ್ರದ ಹುಡುಗಿ ಆಗುವುದಿಲ್ಲವೆಂದೇ ಸಾಧಿಸಿಬಿಟ್ಟರು (ಮುಕಚಾಪ. ೦೬).

[ ☞ ಇದು ' ಮೂಲನಕ್ಷತ್ರ ' ಎಂಬ ಶಬ್ದದ ತಪ್ಪುಬಳಕೆ ]

**ಮೂಲಾರ್ಥ** (ನಾ). ಶಬ್ದದ ಮೊದಲನೆಯ ಅರ್ಥ : ಅನೇಕ ವೇಳೆ ಶಬ್ದಗಳಿಗೆ ಇರುವ ಮೂಲಾರ್ಥವೇ ಇಲ್ಲದೆ ಹೋಗಿ ಬೇರಾರ್ಥ ಪ್ರಾಪ್ತವಾಗಬಹುದು (ಶಂಖ). [ಸಂ.]

**ಮೂಲಿ₁** (ಗು). ೧. ಬೇರಿನಿಂದ ಬೆಳೆಯುವ. ೨. ಕಾಯಂ ಹಕ್ಕಿರುವ: ಭೂಮಿ ಮನೆಗಳನು ಸಸಿ ಬಳಿ ಬಾಳೆ ನೆಡಿಸಿ ಗೈಸಿ ರೂಪ ಮಾಡಿಸಿ ಮೂಲಿ ವಕಲಗಳ ಕ್ರಿಯ ಕಾಲಕಾಲಂಪ್ರತಿಯಲು ತೆರಸಿಕೊಂಡು ಬಹಿರಿ (ಪ್ರಕಾಂ. ೦೪೨೯, ೯೩–೩೦ ; 1667). (ನಾ). ೩. ಕಾಯಂ ಹಕ್ಕಿರುವ ಸಾಗುವಳಿ ಭೂಮಿ, – ಜಮೀನು : (೬೩೦ಗಾ. ೦೩೬). ೪. (?) : ಆರು[ವ]ಬ್ಬರು ಮೂಲಿ ಮಾಡಿದಡೆ (ಸೌಇಂ. ೦೯೨೯, ಶಾಂಗಳರು. ೪೬೦–೦೯ ; 1297). [ ಸಂ. ಮೂಲಿನ್. / ತುಳು. ಮೂಲಿ ]

**ಮೂಲಿ₂** (ನಾ). ಒಂದು ಬಗೆಯ ಸಸ್ಯ : '' ಮೂಲಿಯೆನೆ ಹಣ್ಣ '' (ಶುಂಗಾರ. ೪೩–೪೪). ' ಅಣ್ಣೆ₂ ' ಹೋ. [ ? ]

**ಮೂಲಿಕ** (ಗು). ೧. ಮೂಲದ ; ಮೊತ್ತಮೊದಲಿನ. ೨. ಮುಖ್ಯವಾದ ; ಪ್ರಮುಖವಾದ. ೩. ಬೇರು, ಗೆಡ್ಡೆ ಇತ್ಯಾದಿಗಳನ್ನು ಆಹಾರವನ್ನಾಗಿ ಸೇವಿಸುವ. (ನಾ). ೪. ಋಷಿ ; ಮುನಿ. [ಸಂ.]

**ಮೂಲಿಕಾಸಿದ್ಧಿ** (ನಾ). ಅರುವತ್ತುನಾಲ್ಕು ಕುಶಲವಿದ್ಯೆಗಳಲ್ಲಿ ಒಂದು; ವನಸ್ಪತಿಯ ಉಪಯೋಗದ ಬಗೆಗೆ ಇರುವ ನಿಪುಣತೆ : ಅಕ್ಷರ ಲೆಕ್ಕ . . . ಮೂಲಿಕಾಸಿದ್ಧಿ . . . ಮಂತ್ರತಂತ್ರಸಿದ್ಧಿ ಇವೆಲ್ಲವ ಕಲಿತಡೇನೋ ಚೌಷಷ್ಟಿವಿದ್ಯಾಕಳಾವಿದನೆನಿಸಿಕೊಂಬನಲ್ಲದೆ ಲಿಂಗವಂತನೆನಿಸಿಕೊಂಬುದಿಲ್ಲ (ಪುತಿಪಾ. ೯೩–೬೦). [ಸಂ.].

**ಮೂಲಿಕೆ** (ನಾ). ೧. ಬೇರು ; ಮೂಲ. ೨. ಔಷಧವಾಗಿ ಉಪಯೋಗಿಸುವ ಬೇರು ; ವನಸ್ಪತಿ : ನಿಮಿತ್ತ ಲಗ್ನ . . . ಮೂಲಿಕೆಯಿಂದ ಕಡೆಯ ನಿನ್ನ ಇರವು (ಪೋಳಪಾ. ೨೬೯–೩೬) ; ಕೆಲವು ಮೂಲಿಕೆಗಳ ರಸವನ್ನು ಹಿಂಡಿ, ಗಾಯಕ್ಕರೆದು ಬಟ್ಟೆಯನ್ನು ಸುತ್ತಿ (ಶುಚಿಕ. ೦೬). ೩. ಸತ್ತವರನ್ನು ಬದುಕಿಸುವುದೆಂದು ಭಾವಿಸಲಾದ ಒಂದು ಬಗೆಯ ವನಸ್ಪತಿ : ವಾತಜನ ಮೂಲಿಕೆಗೆ ಕಪಿಬಲ ಬೀತರಿಸಿದುದು (೪೩೩ಚ. ೩೬-೩೦). ೪. ಲೋಹದಿಂದ ಚಿನ್ನವನ್ನು ತಯಾರಿಸಲು ಉಪಯೋಗಿಸುವರೆಂದು ಭಾವಿಸಲಾದ ಒಂದು ಬಗೆಯ ವನಸ್ಪತಿ : ಕಿಸುವಂ ಮೂಲಿಕೆಯುಂ ಪೊರ್ದಿಸೆ ನಗೆಯೋಳ್ ಹೇಮಮುಪ್ಪ ತೆಱದಿಂದಂ ಸಂಕಿಸದೆ ವರಧರ್ಮದೊಳ್ , ಕೂರ್ತೆಸಗುವ ನರನುಂ ವಿಶೇಷಸುಖಿಯಾಗಿರ್ಕುಂ (ಧರ್ಮಾಮೃ. ೪-೩೪). [ ಸಂ. ಮೂಲಿಕಾ ]

**ಮೂಲಿಗ** (ನಾ). ೧. ಔಷಧೀಸಸ್ಯಗಳ ಬೇರುಗಳಲ್ಲಿ ವ್ಯವಹರಿಸುವವನು ; ಮೂಲಿಕೆಗಳನ್ನು ಮಾರುವವನು ; ಗಂದಿಗ : (೬). ೨. ಮೂಲಕಾರಣನಾದ ವ್ಯಕ್ತಿ ; ಪ್ರವರ್ತಕ ; ಮೊದಲಿಗ : ಜೂದ ನೆವಮಾಗಿರೆ ಮೂಲಿಗನಾದನಾನೆ ಪೂಣ್ದಿಡುಮಗೆನ್ನೊಳವ ಕಿಸುರೆನ್ನೊಡವೋಪುದಿದೊಳ್ಳಿತು (ಶಂಕಚಾ. ೦೩-೦೮) ; ಮೂವತ್ತ್ರೋದುಸ್ಥಲದ ಮೂಲಿಗ ತಾನಯ್ಯಾ (ಚನ್ನಪ. ೪. ೬೮೩-೦೪೪೪) ; ಮೂಲದಲ್ಲಿ – ಮೂಲಿಗಂ (ಮೊದಲಿಗಂ) (ಶಬ್ದಮ. ಶು. ೦೬೦ ವೃತ್ತಿ). ೩. ಪರಂಪರೆಯಾಗಿ (ಯಾವುದಾದರೂ) ಅಧಿಕಾರವನ್ನು ಹೊಂದಿರುವ ವ್ಯಕ್ತಿ : ದೊರವಡಿಯೆಪ್ಪತ್ತರು ಪ್ರಭುಗಾವುಂಡಗಳುಂ ಮೂಲಿಗರುವೆಂಟುಹಿಟ್ಟುಗಳು ಸಹಿತ . . . ಭೀವರಾಶಿಪಂಡಿತರ ಪಾದಪ್ರಕ್ಷಾಳನಂಗೆಯ್ದು ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಸೌಇಇ. IX–i, ೨೫೩–೩೯ ; 1149); ಅಲ್ಲಿಯ ಮೂಲಿಗಮುಖ್ಯವಟುಗ್ಗಾಗವುಂಡುಗಳಿಗೆ ಪಾದಪೂಜ[ೆ]ಯುಂ ಕೊಟ್ಟು . . . ಪೂಜುಗೌಂಡು ಬಿಟ್ಟ ಎರೆಯ ಮತ್ತರು ನಾಲ್ಕು (ಕೊಪ್ಪಾಶಾ. ೦೩-೩೪; 1186). ೪. ಬಂಡವಾಳಗಾರ ; ವರ್ತಕ. [ಮೂಲ + – ಇಗ]

**ಮೂಲಿಗಗೆಯಿ** (ನಾ). ಪರಂಪರೆಯಾಗಿ (ಯಾವುದಾದರೂ) ಅಧಿಕಾರವನ್ನು ಹೊಂದಿರುವ ವ್ಯಕ್ತಿಗೆ ಕೊಟ್ಟ ಜಮೀನು, – ಉಂಬಳಿ : ಮಾನಸಬ್ರಾಹ್ಮಣರ್ಗೆ ಮೂಲಿಗಗೆಯಿಯಾಗಿ ಕೊಟ್ಟ ನೂಱುಮತ್ತರ್ಕ್ಕೆಯ್ಯುಮನಿನ್ನೂಱುಗದ್ಯಾಣಪೊನ್ನುಂ ಕೊಟ್ಟು ಕೊಂಡ ಮತ್ತರ್ನ್ನೂಱುಂ (ಸೌಇಇ. XX. ೯೩–೩೪; ?). [ಮೂಲಿಗ + ಕೆಯಿ ( < ಕೆಯ್₄ ) ]

**ಮೂಲಿಗಮಾನ್ಯ** (ನಾ). = ಮೂಲಿಗಗೆಯಿ : ×× ಬಮ್ಮಿಮಯ್ಯ ತಮ್ಮ ಮೂಲಿಗಮಾನ್ಯದ ಮೂಡಣ ಕೆಯಲು ಬಿಟ್ಟ ಕೆಯಿ ಮತ್ತರು ೬ (ಸೌಇಇ. IX–i, ೦೦೮–೬೫; 1107). [ಮೂಲಿಗ + ಮಾನ್ಯ]

**ಮೂಲಿಗವನೆ** (ನಾ). ಪರಂಪರೆಯಾಗಿ (ಯಾವುದಾದರೂ) ಅಧಿಕಾರವನ್ನು ಹೊಂದಿರುವ ವ್ಯಕ್ತಿಯ ನಿವಾಸ : ಕರಡಿಯ ಮಲಯನ ಮಂಠದಿಂ ಬಡಗ ಕೈ ೩೪ ಪಡುವ ಮೂಲಿಗವನೆಯ ಹೆ[ದ್ದಾ]ರಿ ಮೂಡಬಡಗ ಮುಖ ಬಂದ ಕೈ ೪೮ (ಶಾಶಾ. XI-i, ೬೯-೩೩; 1033).
[ಮೂಲಿಗ + ಮನೆ]

**ಮೂಲಿಗೆ** (ನಾ). ಔಷಧದಂತೆ ಉಪಯೋಗಿಸುವ ಬೇರು ; ವನಸ್ಪತಿ: ಮೂಲಿಕೆ: ' ಮೂಲಿಗೆಮರ್ದು ' ಪರಾ.
[< ಸಂ. ಮೂಲಿಕಾ./ತುಳು. ಮೂಲಿಗೆ]

**ಮೂಲಿಗೆಮದ್ದು** ' ಮೂಲಿಗೆಮರ್ದು ' ನೋ.

**ಮೂಲಿಗೆಮರ್ದು**. ಮೂಲಿಗೆಮದ್ದು (ನಾ). = ಮೂಲಿಗೆ : ಮಡದಿ ಬಾನ್ನೀಚಿಯೊರ್ವಳ್ ಚಂಚಲದೃಷ್ಟಿಯೆನಿತ್ತಮಿತ್ತಂ ನೋಟ್ಟಳ ಮೂಲಿಗೆಮರ್ದಂ ಕೊಂಡುಯ್ವೊಡಕ್ಕುಂ (ರಾಮಾಶ್ವ. ೦-೩). **ಮೂಲಿಗೆ ಮದ್ದು** : ಅಗಸ್ತ್ಯೋಪದಿಷ್ಟವಾದ ಮೂಲಿಗೆಮದ್ದಿನಂತಿರುವ ಅಶ್ವಮೇಧಯಾಗವನ್ನು ಜರುಗಿಸಲಿಕ್ಕಾಗಿ (ಕನ್ನಇ. ೯೮).
[ಮೂಲಿಗೆ + ಮರ್ದು]

**ಮೂಲಿತಿ ?** (ನಾ). ಒಂದು ಸಂಖ್ಯೆ ; ಐದು ( ? ) : ಪೇಳುವೊಡೆ ಕೇಮಿ ಆರಯೆ ಮುದ್ದಣಂ ಪದುಣ ಮೂಲಿತಿ ಪರಯ ಮಾರಯ ಕಾಳ ತಿಮ್ಮ ಸಗಾಳ ಮೇಲೊಂದಚಿಂ ಹತ್ತು ದಶ ಕಂಸ ಕಾರತಯ ನಗರೆಯಾಗಿ ತೇಯಾಂ (ಶುಂಗರಾ. ೦೦೨-೪). [ ? ]

**ಮೂಲಿಯಿಡು** ' ಮೂರಿಯಿಡು ' ನೋ.

**ಮೂಲಿವರ್ಗ** (ನಾ). ೧. ಜಮೀನಿನ ಒಡೆತನದ ಹಕ್ಕು ; ಹಿಡುವಳಿ : ಕನ್ನಡ ಜಿಲ್ಲೆಯ ಹೆಚ್ಚಿನ ದೇವಾಲಯಗಳು ಸ್ಥಾನಿಕರ ಮೂಲಿವರ್ಗದಲ್ಲೇ ಇದ್ದುದು ಕಂಡುಬರುತ್ತದೆ (ತುಳುನಾ. ೦೦೭). ೨. (ವರ್ಗದಾರರು ಕಂದಾಯ ಸಲ್ಲಿಸುವ) ಭೂಮಾಲೀಕ : ಜಮೀನುದಾರ : (ಕಸಂಗ್ರಾ. ೧೩೭). [ಮೂಲಿ$_1$ + ವರ್ಗ./ ತುಳು. ಮೂಲಿವರ್ಗ]

**ಮೂಲುಗು** ' ಮುಲುಕು$_1$ ' ನೋ.

**ಮೂಲೆ$_1$** (ನಾ). ೧. ಎರಡು ದಿಕ್ಕುಗಳ ನಡುವಿನ ದಿಕ್ಕು ; ವಿದಿಕ್ಕು : ಬೊಬ್ಬೆಯುಲಿ ದಿಕ್ಕಿನ ಮೂಲೆ ಬಿರಿದುದು ಜಚಿದವದ್ರಿಗಳು (ಕುಮ್ಮಾಕ. ೩-೩೩). ೨. ಕೊನೆ : ಅಂಚು : ನಡುಹೊಳೆಯ ಹಚಿಗೋಲ ಮೂಲೆಯ ಕಡಿದಿರಾದರೆ ನಮ್ಮ ಪುಣ್ಯದ ಬಿಡುಗಡೆಯ ಕಾಲವು ಶಿವಾ (ಕುಮ್ಮಾರಾ. ೯-೩); ಭೂಮಿಗೆ ನಾಲ್ಕು ಮೂಲೆಗೆ ಕಲ್ಲ ನೆಟ್ಟಿದ್ದು (ಎಕ. VII, ಶಿಕಾ. ೯೨-೨೮; ? ). ೩. ಬಾಗು ; ತಿರುವು : ಹೆಳವನ ಕಾಲುವೆ ಮುಂದೆ ಬಡಗಲು ಹರಿದ ಮೂಲೆ (ಎಕ. VII, ಶಿಕಮೊ. ೬೩-೧೦೨; 1527). ೪. ಕಟ್ಟಡಗಳ ರಚನೆಯಲ್ಲಿ ಎರಡು ಗೋಡೆಗಳು ಸೇರುವ ಜಾಗ : ಮೂಲೆಯಲ್ಲಿದ್ದ ಎರಡು ಮಣ ತೂಕದ ಬಂದೂಕವನ್ನು ಹೊತ್ತುಕೊಂಡು ಹೊರಗೆ ಬಂದೆ (ರಾಜುಕ. ೦೯). ೫. ಅಪ್ರಸಿದ್ಧವಾದ ಜಾಗ : ಯಾರೂ ಹೋಗದ ದೂರದ ಸ್ಥಳ: ತನ್ನ ಗುರುವಿನ ತತ್ತ್ವ ಸಂದೇಶವನ್ನು ದೇಶದ, ವಿಶ್ವದ ಮೂಲೆಮೂಲೆಯಲ್ಲಿ ಪಸರಿಸುವ ಪಣವನ್ನು ತೊಟ್ಟ ಧೀರ ನರೇಂದ್ರ (ರಮಾಣಾ. ೪೭). ೬. [ರೇಖಾಗ] ಒಂದೇ ಸಮರೇಖೆಯಲ್ಲಿರದ ಎರಡು ರೇಖೆಗಳು ಅಥವಾ ಎರಡು ಸಮ ಕ್ಷೇತ್ರಗಳು ಸಂಧಿಸುವ ಸ್ಥಳ : ಕೋನ : ಪ್ರತಿಯೊಂದು ಮೂಲೆ ಅಥವಾ ಶೃಂಗ (vertex)ದಲ್ಲಿಯೂ ಇವುಗಳಿಗೆ ಕ್ರಮವಾಗಿ ೩, ೩, ೪, ೩, ೫, ಮುಖಗಳು ಸೇರುತ್ತವೆ (ಗಣಿತ. ೨೮).

**ಮೂಲೆಗಳವರು** = ಆಗ್ನೇಯ, ನೈಋತ್ಯ, ವಾಯುವ್ಯ ಮತ್ತು ಈಶಾನ್ಯವೆಂಬ ಉಪದಿಕ್ಕುಗಳ ಅಧಿಪತಿಗಳು : ದೆಸೆಯವರು ಮೂಲೆಗಳ [ಶಾಕಾಂ. ಗೆಳೆ]ವರು ಮನ್ನಿಸುವರೇ ಸುರಲೋಕಸುಖವನು ವ್ಯಸನಭರ ಭಂಗಿಸದಲೇ ಪೇಳು (ಕುಷ್ಣಾಕ. ೦೦-೨೬). **ಮೂಲೆಗೆ ಕೂರು** = (ಆಲಂ) ಅಧಿಕಾರವನ್ನು ಕಳೆದುಕೊಂಡು ಯಾರಿಗೂ ಕಾಣದಂತೆ ಒಂದು ಬದಿಗೆ ಹೊರಟು ಹೋಗು ; ನಿಷ್ಪ್ರಯೋಜಕವಾಗು : ಮಂತ್ರಿಗಳೆಲ್ಲ ಮೂಲೆಗೆ ಕೂತರು (ಬಿಕ್ಕಿ. ೬ ಕ್ರಿಇಬಿಕ). **ಮೂಲೆಗೆ ನೂಂಕು, ಮೂಲೆಗೆ ನೂಕು** = (ಆಲಂ) ಅಧಿಕಾರವನ್ನು ಕಿತ್ತುಕೊಂಡು ಒಂದು ಬದಿಗೆ ತಳ್ಳು : ದುಷ್ಟಬುದ್ಧಿ ಎಂಬೊನ್ ಮಂತ್ರಿ. ವೃದ್ಧನಾಗಿಹ ದೊರೆಯನವನು ಮೂಲೆಗೆ ನೂಂಕಿ . . . ಧೂರ್ತನಾಗಿಹನು (ಕಂದ್ರಕ. ೩೪-೦೦); ಹಣವನ್ನೆಲ್ಲಾ ಕಳೆದುಕೊಂಡ ಅವನನ್ನು ಅವನ ಮಕ್ಕಳೇ ಮೂಲೆಗೆ ನೂಕಿದರು (ರೂಢಿ). **ಮೂಲೆಗೊತ್ತು** = ಪಕ್ಕಕ್ಕೆಹಾಕು; ಬದಿಗೆ ತಳ್ಳು : ಆಮದು ಮಾಡಿಕೊಂಡ ಬದನೆ ಬಗೆಗಳು . . . ನಮ್ಮ ನಾಡಿನದಾದ ಬಗೆಯನ್ನು ಮೂಲೆಗೊತ್ತಿವೆ (ಶಾಸಗಿ. ೩೮). **ಮೂಲೆಪಾಲಾಗು** = (ಆಲಂ) ಅಧಿಕಾರ, ಹಣ ಮುಂತಾದುವನ್ನು ಕಳೆದುಕೊಳ್ಳು : ನಿರುಪಯುಕ್ತವಾಗು : ಮೂಲೆಗುಂಪಾಗು : ವೈದಿಕದೇವತೆಗಳಲ್ಲಿ ಅನೇಕರು ಅಷ್ಟರೊಳಗಾಗಿ ಮೂಲೆಪಾಲಾಗಿದ್ದರು (ಅಆಪ. ೦೦೦). **ಮೂಲೆಮೂಡುಕು** = ಸಂದು ; ಗೊಂದಿ: ಕಳ್ಳರು ಈ ಕೋಟೆಯ ಮೂಲೆಮೂಡುಕುಗಳನ್ನೆಲ್ಲಾ ಹುಡುಕಾಡಿ ನೋಡಿದರು (ಶಾರಪ. ೭೩); ಯಾವುದೋ ಒಂದು ಸಣ್ಣ ಹಳ್ಳಿಯ ಮೂಲೆಮೂಡುಕುಗಳಲ್ಲಿ ವಾಸವಾಗಿದ್ದವರು ಎಂದೂ ಕಾಣದ ದೊಡ್ಡಪಟ್ಟಣಕ್ಕೆ ಬಂದರೆ . . . ದಿಗ್ಭ್ರಮೆ ಹಿಡಿಯುತ್ತದೆ (ಶಾಗ್ಯಕ. ೩). **ಮೂಲೆಯುವದಿರು** = ಮೂಲೆಗಳವರು : ಮೂಲೆಯುವದಿರು ನಿವಾಜಿದರಲಾಯೆನುತ ಸುರಪತಿ ತರಿಸಿದನು ಗಜವ (ಕಂಕಕ. ೨೦-೩೭).

[ದೇ.೩ ತಮಿ. ತೊದ. ಮೂಲೈ ; ಮಲ. ತೆಲು. ಪರ್ಜಿ. ಕುವಿ. ಮೂಲ ; ತುಳು. ಕೊಡ. ಮೂಲೆ ; ಕೋಲಾ. ಮೂಲಾ; ಕುಇ. ಮುಜು; ಕೋತ. ಮೂಲ್]

**ಮೂಲೆ$_2$** (ನಾ). ಉಂಬಳಿ : ಮಾನ್ಯ (?) : ' ಮೂಲೆವತ್ತ ', ' ಮೂಲೆಸುಂಕ ', ' ಮೂಲೆಹೇರು ' ಪರಾ. [< ಮೂಲ್ಯ]

**ಮೂಲೆಗ** (ನಾ). (ಆಲಂ) ಶ್ಮಶಾನದಲ್ಲಿರುವವನು ; ಶ್ಮಶಾನವಾಸಿ ; ಶಿವ : ಕಂದುಗೊರಳನ ಮೂಲೆಗನ ಸೌಂದರ್ಯಶಾಲಿಯ ರಂಗಗೆ ಸಾಟಿಯೆಂಬ ಮಂದಭಾಗ್ಯರ ಮಾತು ನಿಜವೆ (ಕಕಶಾಂ. ೯-೮೨).
[ಮೂಲೆ$_1$ + -ಗ$_2$]

**ಮೂಲೆಗಂಬ** (ನಾ). ಕಟ್ಟಡದ ಯಾವುದಾದರೂ ಗೋಡೆಗಳು ಸೇರುವ ಜಾಗದಲ್ಲಿರುವ ಸ್ತಂಭ: ಇತ್ತಲಿದೆ ಮೂಲೆಗಂಬ [ಶಾಕಾಂ. ಭ]ವನೆತ್ತಲ್ ತಳದಲ್ಲಿ ಬಾಗಿಲಿರ್ದಪುದು (ರಕಳು. ೯-೦೨೬).
[ಮೂಲೆ$_1$ + ಕಂಬ$_1$ (< ಕಂಭ) ]

**ಮೂಲೆಗದ್ದೆ** (ನಾ). ಗದ್ದೆಯ ಅಂಚು, ಮೂಲೆ : ಮಯೂರಮಿಥುನಂ . . . ಬೆಳೆದ ಗದ್ದೆಯ ಹಳದಿಗಿಳಿತಂದು ಮೆಲ್ಲನೆಯೆ ಮೂಲೆಗದ್ದೆಯಲಿ ಮೆಲ್ಲುತೆ ನೆಲ್ಲನು (ಶಕ್ಕಾಂಗ. ೩೪-೦೯೭೨). [ಮೂಲೆ$_1$ + ಗದ್ದೆ (<ಗಟ್ಟಿ)]

**ಮೂಲೆಗಲ್ಲು** (ನಾ). ಕಟ್ಟಡವನ್ನು ಪ್ರಾರಂಭಿಸುವಾಗ ಇಡುವ ಕಲ್ಲು : ಆಧಾರಶಿಲೆ : ಒಂದಾನೊಂದು ಕಾಲಕ್ಕೆ ನಮ್ಮ ಊರಿನಲ್ಲಿ ಗೌಂಡಿಗಳೆಂದು ದುಡಿದ ಶ್ರೀಎಲ್ಲಪ್ಪನವರಿಂದ ಮೂಲೆಗಲ್ಲು ಕೊಡಿಸಲ್ಪಡಲಿದೆ (ಅಕಶಾ. ೧೭೭).
[ಮೂಲೆ$_1$ + ಕಲ್ಲು (<ಕಲ್$_3$)]

**ಮೂಲೆಗಾಸು** (ನಾ). ಒಂದು ಬಗೆಯ ತೆರಿಗೆ (?) : ಉಭಯನಾನಾದೇಶ ಅಯ್ಯಾವಳೆ ಮುಖ್ಯವಾದಂತಾ ಸಮಸ್ತರು ಸೋರೆಕುಂಟೆಯ ಸಾತ್ತದೇವರಿಗೆ ಕೊಟ ಮೂಲೆಗಾಸಿನ ಧರ್ಮಶಾಸನದ ಕ್ರಮಮೆಂತೆಂದರೆ (ಎಕ.IX (8), ನೆಲಮಂ. ೯೦-೩; 1630). [ಮೂಲೆ$_2$ + ಕಾಸು$_2$]

**ಮೂಲೆಗುಂಪು** (ನಾ). (ಆಲಂ) ವ್ಯರ್ಥ ; ಹಾಳು.

**ಮೂಲೆಗುಂಪಾಗು** = ನಿರುಪಯುಕ್ತವಾಗು ; ಪ್ರಯೋಜನಕ್ಕೆ

ಬಾರದಾಗು : ಆದಷ್ಟೇ ಕಾರಣಕ್ಕೆ ನಿರಾಪರಾಧಿಯಾದ ಹೆಣ್ಣಿನ ಜೀವನ ಮೂಲೆಗುಂಪಾಗಿತ್ತು (ಮರಳಿ. ೯೩); ಗದ್ಯವು ಅನಾಮಧೇಯ ಪರಿಸ್ಥಿತಿಯಲ್ಲಿ ಮೂಲೆಗುಂಪಾಗಿದ್ದಿತೆಂದು ಹೇಳಿದರೂ ಸಲ್ಲುತ್ತದೆ (ಉದ್ಯೋಗ. ೯೦).
[ಮೂಲೆ$_1$ + ಗುಂಪು$_1$ (< ಗುಣ್ಪು$_1$)]

**ಮೂಲೆಗೊಂಗಡಿ** (ನಾ). ಮೂಲೆಯಾಕಾರದ ಗೊಪ್ಪೆ : ನಿಲುವಂಗಿ ವಸುಂಡಾಸು. ಮೂಲೆಗೊಂಗಡಿ . . . ಪಾದದೊಳ್ಪನ್ನದಾವುಗೆ ಮೆಟ್ಟಿ ಕಂಗೆಸದನಾ ಸಿದ್ಧನು (ಸಿದ್ಧ ರಾ. ೦೦-೦೨). [ಮೂಲೆ$_1$ + ಗೊಂಗಡಿ]

**ಮೂಲೆಮಟ್ಟ** (ನಾ). (ಕಟ್ಟಡಗಳ ನಿರ್ಮಾಣಕಾಲದಲ್ಲಿ) ಸಮಕೋನಗಳನ್ನು ನಿರ್ಮಿಸಲು ಅಥವಾ ಪರೀಕ್ಷಿಸಲು ಬಳಸುವ ಸಲಕರಣೆ : ಎರಡು ಕರಣೆಗಳು, ಒಂದು ತೂಕದ ಗುಂಡು, ಒಂದು ರಸಮಟ್ಟ, ಒಂದು ಸಣ್ಣ ಮೂಲೆಮಟ್ಟ (ಶ್ಯಾ ಕಶ. ೦೯೯).
[ಮೂಲೆ$_1$ + ಮಟ್ಟ$_1$. / ತಮಿ. ಮೂಲೈಮಟ್ಟಮ್ : ತೆಲು. ಮೂಲಮಟ್ಟಮು]

**ಮೂಲೆವತ್ತ**, ಮೂಲೆವರ್ತ (ನಾ). ಒಂದು ಬಗೆಯ ತೆರಿಗೆ (?) : ಪೊನ್ನಲು ಧಾನ್ಯ ಬಳ್ಳ ೧ ಮೂಲೆವತ್ತಂ ಮಾನ ೧ (ಕ೩ಇ. ೯೦-೩೮-೨೨ ; 1087) ; ಮೂಲೆವತ್ತಂ ಹೇಱಿಂಗೆ ಹಿರಿಯ ಸೊಳಸ ೨ ಸೊಂಟಿಗೆಯುಕ್ಕ (ಶಾಸ. IX-i, ೦೭೨-೪೦ ; 1106) ; ಹೇಱಿನಲು ಮೂಲೆವತ್ತ ಮಾನ ೧ (ನಾಇದೇಶ. ೭೯-೨೯ ; 12ನೆಯ ಶತ). **ಮೂಲೆವರ್ತ** : ತನ್ನಂತರ್ರಾಳಿಕೆಯ ಮೂಲೆವರ್ತ ಮುಖ್ಯವಾಗಿ ಹೆಱುಂಕದಧಿಕಾರಿ ಚಾವುಣ್ಣರಾಯನುಂ (ಪ್ಮಆ. ೦೯೨೯, ೬೨-೦೦ ; 1319). 'ಮೂಲ್ಯವತ್ತ' ಪರಾ.
[ಮೂಲೆ$_2$ + < ವಟ್ಟ]

**ಮೂಲೆವರ್ತ** 'ಮೂಲೆವತ್ತ' ನೋ.

**ಮೂಲೆವೀಸ**, ಮೂಲವೀಸ (ನಾ). ಒಂದು ಬಗೆಯ ತೆರಿಗೆ (?) : ದುಮ್ಮಿಯ ಪುರವರಾಧೀಶ್ವರ ಶ್ರೀವೀರಭದ್ರದೇವರ ಅಮೃತಪಡಿಗಾಗಿ ದುಮ್ಮಿಯ ನಿರಾಶ್ರಯಮಠದ ಕೆಂಚ್ಚಾವೀರಣ್ಣೊಡೆಯರು ಕೊಟ್ಟಂಥ ಮೂಲೆವೀಸದ ವಿವರ (ಎಕ. XI. ಹೊಳಲ್ಕೆ. ೦೩-೦೩ ; ಸು. 1525). **ಮೂಲವೀಸ** : ಚೆಂನಾಪುರಾಪಿಯವರೂ ಬರಸಿ ಕೊಟ್ಟ ಮೂಲವೀಸದ ಧರ್ಮಶಾಸನದ ಕ್ರಮವೆಂತೆಂದರೆ (ಎಕ. VIII. ತೀರ್ಥಹ. ೯೬-೦೯ ; 1694). 'ಮೂಲ್ಯ' ಪರಾ. [ಮೂಲೆ$_2$ + ವೀಸ]

**ಮೂಲೆಸುಂಕ** (ನಾ). ಒಂದು ಬಗೆಯ ತೆರಿಗೆ : ಒಕ್ಕಲುದೆಱೆ ಮೂಲೆಸುಂಕಂ . . . ಸರ್ವಾಬಾಧಪರಿಹಾರವಾಗಿ ಬಿಟ್ಟರು (ಎಕ. VIII, ಸೊರಬ. ೩೨೮-೬೬ ; 1159). [ಮೂಲೆ$_2$ + ಸುಂಕ$_1$]

**ಮೂಲೆಹೇರು** (ನಾ). (ಕೊಡುಗೆಯಾಗಿ ನೀಡಿದ ಜಮೀನಿನಲ್ಲಿ ಬೆಳೆದ ಯಾವುದಾದರೂ) ಸರಕಿನ ಹೆಸರು : ಯಡದೊರೆಕೋಟೆಮಾರ್ಗದಲ್ಲಿ ಮೂಲೆಹೇರ್ರಿಗೆ ಕಾಸು ೧ (ಎಕ. III (R). ನಂಜನ. ೨೩೭-೦೦ ; 1771).
[ಮೂಲೆ$_2$ + ಹೇರು$_2$ (< ಪೇಱು$_2$)]

**ಮೂಲೋಕ**, ಮುಲ್ಲೋಕ (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳವೆಂಬ ಮೂರುಲೋಕ : ತ್ರಿಲೋಕ : ಮೂಲೋಕಕ್ಕೆ ಪೆಂಪಿಂಧಗುಂದಲೆಯಾಗಿರ್ಪುದು ದೇವದುಂಪತಿರತಶ್ರೀಸುಂದರಂ ಮಂದರಂ (ಆಪು. ೦-೩೦) ; ಮೂಲೋಕದೊಳುವಯಿಸುವೀ ಬಾಲಿಕೆಗೆಣೆಯಿಲ್ಲವ್ವೆದೆ ಕಂಗೊಳಿಪ ವಧೂಜಾಲದೊಳೆಂದಿರದಱಿಪುವ ಪೋಲಡಗಿದುವವಳ ತ್ರಿವಳಿಗಳ್ (ಅಪ್ಪಟ. ೬-೯೮); ಅಱಿಪಿನೊಳ್ ಮೂಲೋಕಮಂ ಕಣ್ಬ . . . ಅರುಹಂತಂ ಸಲ್ಲೆಯಿಂ ಮಾಱಿಕ್ಕೆ ಬೇಡಿಮುದಂ ತನ್ನಱವಟ್ಟಿಗೆರ್ಗೆ (ಕವ್ಯಾಸಾ. ೪೯೩). **ಮುಲ್ಲೋಕ** : ಮುಲ್ಲೋಕದಲ್ಲಗಜೆ ಶ್ರೀರಾಮನಾಮ ಸರ್ವೋತ್ಕೃಷ್ಟವು (ವೆಂಕಟಾ. ೨-೨೨-೭).
**ಮುಲ್ಲೋಕದಲ್ಲಣ** = ಮೂರುಲೋಕಗಳಿಗೂ ತಲ್ಲಣವನ್ನುಂಟು ಮಾಡುವವನು : ಮುಲ್ಲೋಕ[ದಲ್ಲಣ ಮರ್ದೀಶ]ದಲ್ಲಣ ರಾವಣಾಸುರ ಮುಖ್ಯರಾಕ್ಷಸರ ನುಡಿದನು ಯುವಾಪುರಿಗೆ ರಣದೊಳಗೇಕಪತ್ನೀವ್ರತನು (ತೊರವ. ೬-೩೨-೯). [ಮೂ$_1$ (< ಮೂಱು) + ಲೋಕ]

**ಮೂಲೋತ್ಪಾಟ** (ನಾ). ೧. ಗಿಡ, ಮರಗಳನ್ನು ಬೇರುಸಮೇತ ಕೀಳುವುದು. ೨. (ಅಲಂ) ಸಂಪೂರ್ಣವಾದ ನಾಶ ; ನಿರ್ಮೂಲ : ಮಲೆಪರ ಮೇಲೆ ಯುದ್ಧಕ್ಕೆ ಹೋಗಿದ್ದ ಬೊಪ್ಪಣ ಅವರ ಮೂಲೋತ್ಪಾಟ ಮಾಡಿ, ದಂಡಿನೊಡನೆ ಹಿಂದಿನ ರಾತ್ರಿಯೇ . . . ಬಂದು ಸೇರಿದ್ದ (ಕಾಂತಲಾ. ೧೭೯). [ಸಂ.]

**ಮೂಲೋತ್ಪಾಟನ** (ನಾ). ೧. = ಮೂಲೋತ್ಪಾಟ ೧. ೨. = ಮೂಲೋತ್ಪಾಟ ೨ : ವರ್ಣಭೇದವನ್ನು ಮೂಲೋತ್ಪಾಟನ ಮಾಡಿದ ಅಪೂರ್ವಪುಣ್ಯವು ಸರ್ ಜೆ. ಸಿ. ಬೋಸರಿಗೆ ಲಭಿಸಿತು (ಜಗಹಂ. ೨). [ಸಂ.]

**ಮೂಲೋತ್ಪಾಟನೆ** (ನಾ). = ಮೂಲೋತ್ಪಾಟ ೨ : ಸಂಪ್ರದಾಯ ಪರಿಸ್ಥಿತಿಯ ಮೂಲೋತ್ಪಾಟನೆಗೆ ಆಜನ್ಮವಿಮುಖರಾಗಿರಲೆಂದೂ ಅವನು ಆಶಿಸಿದನು (ಪುವಸು. ೩೦೬) ; ಈಶ್ವರ ಜಗತ್ತನ್ನು ಲಯಗೊಳಿಸುತ್ತಾನೆ, ಅಧರ್ಮವನ್ನು ಮೂಲೋತ್ಪಾಟನೆ ಮಾಡುತ್ತಾನೆ (ತತ್ವಶಾ. ೩೩೦).
[ಸಂ. ಮೂಲೋತ್ಪಾಟನ]

**ಮೂಲ್ಯ** (ಗು). ೧. ಆರಂಭದ ; ಮೂಲದ. ೨. ಬೆಲೆ ಕೊಟ್ಟು ತರಬಹುದಾದ : ಕೊಂಡುಕೊಳ್ಳಬಹುದಾದ. ೩. ಬುಡಸಹಿತ ಕೀಳಲು ಯೋಗ್ಯವಾದ ; ಮೂಲೋತ್ಪಾಟನ ಮಾಡಬಹುದಾದ. (ನಾ). ೪. ಬೆಲೆ ; ದರ; ಧಾರಣೆ. ೫. ವೇತನ ; ಪಗಾರ ; ಸಂಬಳ: "ಭೃತಿಃ . . . ಮೂಲ್ಯಂ, ವೇತನಂ ಈ ೬ ಬೆಲೆ" (ಶಬ್ದಮ. ೦೨೦-೯೩). ೬. ಉಪಯುಕ್ತವಾದುದು ; ಬೆಲೆಯುಳ್ಳುದು : ನಿನ್ನೊಳ್ಭೇದಮಾದ ಕೊಂಡಾಟದನಂತಸೌಖ್ಯಮನೆ ಮರ್ಚಿದ ಮರ್ಚುಗೆಯೊಳ್ ತೊಡರ್ಚಿ ಮಾಱುವಾಟದಿನೆನ್ನ ದರ್ಶನವಿಶುದ್ಧಿಯೆ ಮೂಲ್ಯಮೆನಲ್ ಜಿನೇಶ್ವರಾ (ಶಂರಾಪು. ೩-೦೦). ೭. ಆದರ್ಶ ; ತತ್ತ್ವ ; ಮೌಲ್ಯ : ತನ್ನದೇ ವೈಯಕ್ತಿಕ ಹಾಗೂ ಸಾಮಾಜಿಕ ಮೂಲ್ಯಗಳನ್ನು ಹುಡುಕುವ ಹವ್ಯಾಸಕ್ಕೆ ಬಿದ್ದ (ಮುಕ್ತಿ. ೨೦) ; ಸಾಹಿತ್ಯದ ಕೆಲವು ಮೂಲ್ಯಗಳ ಬಗೆಗೂ ಅವರು ಚರ್ಚಿಸಿದರು (ವಿಮರ್ಶ. ೦೭). ೮. ಅಸಲು ; ಬಂಡವಾಳ : ಅವರ ಶ್ರಮ್ಮ ಶಕ್ತಿಯನ್ನು ಅದರ ಶುದ್ಧಮೂಲ್ಯಕ್ಕೆ ಕೊಳ್ಳದೇ ಅದನ್ನು ಜೀವಂತವಿಡುವ ವೆಚ್ಚಕ್ಕೆ ನಾನು ಕೊಳ್ಳುತ್ತೇನೆ. ಆ ಮೂಲ್ಯಕ್ಕಿಂತ ಈ ವೆಚ್ಚ ಎಷ್ಟೋ ಕಡಿಮೆ ಇರುತ್ತದೆ (ಕಾಪಿಟ. ೦೨೨). ೯. ಗಳಿಕೆ ; ಲಾಭ. ೧೦. ಬೆಲೆಕೊಟ್ಟು ಕೊಂಡ ವಸ್ತು ; ಕೊಂಡುಕೊಂಡ ಪದಾರ್ಥ. ೧೧. ಉಂಬಳಿ; ಮಾನ್ಯ ; ಕೊಡುಗೆ : 'ಮೂಲ್ಯವತ್ತ' ಪರಾ.
[ಸಂ.]

**ಮೂಲ್ಯಮಾಪನ** (ನಾ). ವಸ್ತು, ಕಲಾಕೃತಿ ಮುಂತಾದುವುಗಳ ಯೋಗ್ಯತೆಯನ್ನು ಕುರಿತಂತೆ ಮಾಡುವ ನಿರ್ಣಯ : ಈ ಅಲಿಪ್ತ ಭಾವ ಲೇಖಕರಿಗೆ ಸಾಧಿಸಿದರೆ ಸಂಸಾರದಲ್ಲಿ ಘಟಿಸಿದ ಘಟನೆಗಳ ಮೂಲ್ಯಮಾಪನವನ್ನು ಲೇಖಕ ಸರಿಯಾಗಿ ಗುರುತಿಸಲು ಸಮರ್ಥನಾಗುತ್ತಾನೆ (ಕೃತಿಶ. ೩). 'ಮೌಲ್ಯಮಾಪನ' ಪರಾ. [ಸಂ.]

**ಮೂಲ್ಯವತ್ತ** (ನಾ). ಒಂದು ಬಗೆಯ ತೆರಿಗೆ : ಅಮ್ಮಣಯ್ಯದಂಡನಾಯಕರು ಪ್ರಮುಖಕರಣಂಗಳು ತಮ್ಮಾಯದ ಹೇಱಿಂಗೊಬ್ಬಳ ಮೂಲ್ಯವತ್ತಮುಂ ಬಿಟ್ಟರು (ಎಕ. V, ೨೩-೨೯ ; 1165). 'ಮೂಲೆವತ್ತ' ಪರಾ. [ಮೂಲ್ಯ + < ವಟ್ಟ]

**ಮೂವಂಕ** (ನಾ). ಮೂರುಕಡೆಗಳಲ್ಲಿ ಬಾಗಿರುವುದು, – ಕೊಂಕಿರುವುದು : ಅವರ ಮೂವಂಕದ ಕೊಂಬುಗಳೆಯ ದನಿಗೇಳ್ವುದುಂ . . . ಬೆಚ್ಚಿ (ಶಕಾಂ. ೯೦೬). [ಮೂ$_1$ (< ಮೂಱು) + ವಂಕ$_1$]

**ಮೂವಚ್ಚಿ**, ಮುಯ್ಯಚ್ಚಿ (ನಾ). ಮೂರು ಕಣ್ಣು : ಮೂವಚ್ಚಿಯ್ಯ ಮೊಗದ ಶಿವ ಸುಮ್ಮಾನದಿಂ ಸಲಹುಗೆ (ಸುಂದಸೂ. ೨೦-೩೯). **ಮುಯ್ಯಚ್ಚಿ**: 'ಮುಯ್ಯಚ್ಚಿಗ' ಪರಾ. [ಮೂ$_1$ (< ಮೂಱು) + ಅಚ್ಚಿ$_5$]

**ಮೂವಚ್ಚೆ** (ನಾ). ಮೂರು ಗುರುತು,—ಚಿಹ್ನೆ : ಗುರುಕುಚಜಘನಂಗಳ ತೂಗವೇಳ್ಕೆಂದು ಸರಸಿಜಭವ ನಡು ಬಿಡಿದೆತ್ತಿ ಬೆರಲ ಮೂವಚ್ಚೆಗಳ ಮೃದು ರಂಜಿಸುವಂತೆ ತರಳೆಯ ತಿವಳಿಗಳೆಸೆದವು (ತ್ರಿಕುತಿ. ೨೦-೯೬).
[ಮೂ$_1$ (< ಮೂಱು) + ಪಚ್ಚೆ]

**ಮೂವಟ್ಟಲ್**, ಮೂವಟ್ಟಲು (ನಾ). ಪುಣ್ಯಾಹ ಮೊದಲಾದ ಶುಭಕಾರ್ಯಗಳಲ್ಲಿ ಮೂರುಪಾತ್ರೆಗಳನ್ನಿಟ್ಟು ಮಾಡುವ ಒಂದು ಧಾರ್ಮಿಕವಿಧಿ : ಮೂವಟ್ಟಲ್ ಬಲಿಮುಖ ನಾನಾವಿಧಲೌಕಿಕಶುಭಂಗಳಂ ವಿರಚಿಸಿ ಮೇಣಾವರಿಸಿದ ಮುದದಿಂ ತದ್ವೂವರನೆಸೆದಿರ್ದಂ (ಅಂದ್ಯಟಿ. ೬-೩೯). **ಮೂವಟ್ಟಲು** : ಈಜಿಲು ಮೂವಟ್ಟಲು ಹಸೆಹಂದರ ತೊಂಡಿಲು ಬಾಸಿಂಗ ಹಣೆಯಕ್ಕಿ ಹೆಣನ ಸಿಂಗಾರ ಶ್ರಾದ್ಧಕೂಳು ಈ ಪರಿಯ ಮಾಡುವನೆ ಶಿವಭಕ್ತ (ಚನ್ನಬ. ೪. ೦೦೬-೨೩೬) ; ಪಟ್ಟಣದೊಳು ಸಂಭ್ರಮವೆಡೆವಡದೆ ಮೂವಟ್ಟಲ ಮಾಡಿದರೊಲಿದು (ಬೋಜಚ. ೦೭-೪೦).
[ಮೂ$_1$ (< ಮೂಱು) + ಬಟ್ಟಲ್]

**ಮೂವಟ್ಟಲು** 'ಮೂವಟ್ಟಲ್' ನೋ.

**ಮೂವಟ್ಟೆ** (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳ ; ಮೂರು ಲೋಕಗಳು; ತ್ರಿಪಥ : ಜಾನಕಿಯ ಕಣ್ಗೆ ತೋಱಿತು ಮುಂದೆ ಸನ್ನುತ ರಘೂದ್ವಹನ ಕೀರ್ತಿಯೆನೆ ಮೂವಟ್ಟೆಯನ್ನಡೆದು ಮುಕ್ಕಣ್ಣನಂ ಸಾರ್ದು . . . ಪೆಂಪೊದವಿ ಪರಿವ ಬೆಳ್ವೊನಲ್ದಿವಿಜನದಿಯು (ಕೃಖಾ. ೦೯-೪).
[ಮೂ$_1$ (< ಮೂಱು) + ಬಟ್ಟೆ$_1$]

**ಮೂವಡಿ**, ಮುಮ್ಮಡಿ$_1$, ಮೂಮಡಿ, ಮೂವರ್ಮಡಿ (ನಾ). ೧. ಮೂರುಪಟ್ಟು ; ಮೂರರಷ್ಟು : ಜನನಪ್ರಸ್ತುತಕಾಲದೊಳ್ . . . ತ್ರಿಗುಣಮಂ ತಾನೀಗುಮಾ ಮೇಗೆ ಪೆತ್ತನಿತಂ ಮೂವಡಿ ಮಾಳ್ಪುದೊಮ್ಮೆಯೆ ಮಲಂ ದ್ವಿತ್ರ್ಯಾಹತಂ ಬಂದೊಡಂ (ಜಾತಕ. ೬-೩) ; ಧರೆಯೊಳ್ ಬೀರದ ಪೆಂಪಿಂ ನರನಿಂದಿರ್ಮಡಿ ಬಕಾರಿಯಿಂ ಮೂವಡಿ ಭಾಸ್ಕರಸುತನಿಂ ನಾಲ್ವಡಿ (ಗದಾಯ. ೬೦) ; ಮೂವಡಿ ನಾಲ್ಮಡಿಯೈವಡಿ ಸಂತಸದಿಂದೆ ತಂದೆ ಮಗಳಂ ಕರೆದಂ (ಗಿರಿ. ೩-೦೦೯). (ಗು). ೨. ಮೂರನೆಯ : ಶ್ರೀಮನ್ಮೂವಡಿ ಚಲ್ಲುಕದೇವರ್ . . . ಬಿತ್ತುವಟ್ಟದ ಕಳದೊಳೆ ಕಡುವರ್ (ಎಕ. IX, ಚನ್ನಪ. ೯೬-೬ ; 901 ?). **ಮುಮ್ಮಡಿ$_1$** : ೧. ಜೈನಭಕ್ತಿಯೊಳ್ ವರವಧುವಪ್ಪ ರೋಹಿಣಿಗೆ ಮುಮ್ಮಡಿ (ಧರ್ಮಾಮೃ. ೪-೦೯) ; ಅಂತಾಗದಡೆ ಕೊಳ್ಳದಱ ಬೆಲೆಯಂ ಹೇಳಿಯುದಱಿಂದ ಆಗದಡೆ ಇಮ್ಮಡಿಯು ಮುಮ್ಮಡಿಯಾಗಿ ಕೊಟ್ಟಹೆನು (ಬಸವ. ೨೯-೪೦). ೨. ಮೂರಿಯ ಮೂರಿಯಾನ್ತರಿಗೆ ಮುಮ್ಮಡಿ ಚೋಳನ ಗನ್ಧವಾರಣಂ (ಎಕ. III, ಶ್ರೀರಂಗ. ೧೪೦-೦೭ ; 1012) ; ಮಣ್ಣೆನಾಡ ಬಾಳೆವಾಡಿಯ ಮುಮ್ಮಡಿ ಚೋಳಗಾವುಣ್ಡನುಂ ಸಾಕ್ಷಿ (ಎಕ. IX. ಚಂಪ. ೦-೨೦ ; 1029). ೩. ಮೂರರಷ್ಟು ಇರುವ ; ಮೂರುಪಟ್ಟು ಅತಿಶಯವಾಗಿರುವ : ಬಣಗರ ತೊಲಗ ಪೇಳೆನುತ ಮುಮ್ಮಡಿ ರಾವಣನಂತೆ ನಿಂದು ಗರ್ಜಿಸಿದ (ಬೋಜಚ. ೦೨-೯೯). **ಮೂವಡಿ** : ೧. 'ಮೂವಡಿವೀರ' ಪರಾ. **ಮೂವರ್ಮಡಿ** : ೧. ಮಡದಲಿ ನೂಂಕೆ ವಾಜಿ ಗರುಡಂಗಮದಿರ್ಮಡಿ ವಾಯುವಿಂಗೆ ಮೂವರ್ಮಡಿಯೆನಿಪ್ಪೊಂದು ತನ್ನ ಜವದಿಂ ಪರಿಯಲ್ಕೆ (ಅರಂಪು. ೬೨೦) ; ವಸುಧೆಯೊಳಶ್ವಧಿಕಪಾಪಂ ಪುಸಿವುದದಱಿಂ ಕೇಳೆರಡು ಮಡಿ ಪಸುವ ಕೊಲ್ಲುವುದದಱ ಮೂವರ್ಮಡಿಯಾದ ಪಾತಕವು ಸಿಸುವ ಕೊಲ್ಲುವುದು (ಜೀವರಾ. ೦೦-೨೨).

**ಮೂವಡಿಗಂಡ** = (ಶತ್ರುಗಳಿಗಿಂತ) ಮೂರುಪಟ್ಟು ಪರಾಕ್ರಮಿಯಾದವನು ; ಮಹಾವೀರ ; ಒಂದು ಬಿರುದು : ಸಮಧಿಗತಪಂಚಮಹಾಶಬ್ದಮಹಾಮಣ್ಡಲೇಶ್ವರಂ . . . ಮೂವಡಿಗಣ್ಡಂ (ಎಕ. XII, ೨೬೯-೭ ; 1040). **ಮೂವಡಿಜೂಜು** = ಶತ್ರುಗಳ ಪಾಲಿಗೆ ಬಹಳ ಭೀಕರನಾದವನು ; ಒಂದು ಬಿರುದು : ಮೂವಡಿಜೂಜು ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಬೊಂಬಾ. ೦೯೩೬, ಹಾನಗ. ೭೩-೦೩; 975); ಮೂವಡಿಜೂಜು ನಾಮಾದಿ ಸಮಸ್ತಪ್ರಸಸ್ತಿ ಸಹಿತಂ ಶ್ರೀಮನ್ಮಹಾಮಣ್ಡಳೇಶ್ವರಂ ಕೀರ್ತ್ತಿವರ್ಮ್ಮದೇವರ ಬೆಸದೆ . . . ಬಿಟ್ಟ ಉಪ್ಪಿನ ಹೇಱು ಅಯ್ವತ್ತು (ಸೌಇಇ. XX, ೩೪-೦೩ ; 1053).
[ಮೂ$_1$ (< ಮೂಱು) + ಮಡಿ$_5$]

**ಮೂವಡಿಗೂಡು** (ಕ್ರಿ). ಮೂರರಷ್ಟು ಬೆರಸು ; ಮೂರುಪಾಲು ಸೇರಿಸು : ಜಳದಂ . . . ಕಟುಕಂ ಛಿನ್ನೇಜಮೆಂಬಿಂತಿವಂ ಜಳದೊಳ್ ಮೂವಡಿಗೂಡಿ ಕಾಸಿ ಮಧುಮಿಶ್ರಂ ಪೊಯ್ಗೆ (ಗೋವೈದ್ಯ. ೯-೨೩೩).
[ಮೂವಡಿ + ಕೂಡು$_1$]

**ಮೂವಡಿನಾಡು** (ನಾ). ಮೂರುಲೋಕ ; ತ್ರಿಲೋಕ : ಭಾವಿಸಿ ಭಜಿಸುವ ಭಕ್ತರ ಠಾವಿನೊಳಿರ್ಪೊಂದು ಹರ್ಷಮೆಲ್ಲಿಯುಮಿಲ್ಲಾ ಮೂವಡಿನಾಡೊಳಮಿಲ್ಲೆನೆಯೇವಣ್ಣಿಪೆನೆನ್ನ ಮನದ ನನ್ನಿಯ ನೆಲೆಯಂ (ಸೌಂದ. ೩-೯೭). [ಮೂವಡಿ + ನಾಡು]

**ಮೂವಡಿಸು**, ಮುಮ್ಮಡಿಸು, ಮೂಮರ್ಮಡಿಸು, ಮೂವಳಿಸು (ಕ್ರಿ). ೧. ಮೂರರಷ್ಟಾಗು ; ಮೂರುಪಟ್ಟಾಗು : ವಿರಹವಿಮ್ಮಡಿಸೆ ಸುಯ್ ಮೂವಡಿಸೆ ಮೈಬಿಸುರ್ಪಿರದೆ ನಾಲ್ವಡಿಸೆ (ಶಂಪು. ೯೭-೦೦). ೨. (ಅಲಾ) ಅಧಿಕಗೊಳಿಸು ; ಹೆಚ್ಚುಮಾಡು : ನೃಪನ ದಕ್ಷಿಣಪಾರ್ಶ್ವದೊಳೊಪ್ಪಿ ತೋರ್ಪ ತತ್ತರುಣಿಯ ಕೈಯ ಖಡ್ಗಲತೆ ಮೂವಡಿ[ಪಾಠಾಂ. ೪]ಸಿತ್ತು ಮನಕ್ಕೆ ಮೂರ್ಛೆಯಂ (ಪುಷ್ಪ. ೬-೦೦೭) ; ಕಣ್ಣ ಬೆಳಗುಂ ಮುಖದ ಕಾಂತಿಯುಂ ಮಿಗೆ ಸೊಗಸಂ ಮೂವಡಿಸೆ (ಗಿರಿ. ೭-೦೦ ಪ); ಇಮ್ಮಡಿಸಿ ಮೂವ[ಪಾಠಾಂ. ಮುಮ್ಮ]ಡಿಸಿ ಸಾಧುಗಳೆತ್ತ ಹರಕೆಗಳಿಂದಲೇನಹುದು (ಬಸವ. ೨೩-೩೭). **ಮುಮ್ಮಡಿಸು** : ೧. ನನ್ನ ದುಃಖ ಇಮ್ಮಡಿಸಿ ಮುಮ್ಮಡಿಸಿ, ಉಕ್ಕಿ ಹೊರಚೆಲ್ಲಿ ಹೋಯಿತು (ಕೃಶಿ. ೦೭೩) ; ತಿಂಗಳಿನ ವೆಚ್ಚಗಳು ಕುಳಿತಲ್ಲಿಯೇ ಮುಮ್ಮಡಿಸಿದವು (ಮುಗಿಯ. ೩೭೭). **ಮೂವರ್ಮಡಿಸು** : ೧. ಇರ್ಮಡಿಸಿ ಮೂವರ್ಮಡಿಸಿ ನೂರ್ಮಡಿಸಿದುದು ವೈರುಪಚ್ಚೆ (ಶಂಭ್ರಸ. ೩೯-೨೩). **ಮೂವಳಿಸು** : ೧. ಗಿಳಿಗಳ ಪಿಣ್ಡನಿನ್ದಸಿವ ಕೆಯ್ಯೊಲದಿಂ ಮುಗಿಲುದ್ದವಾಗಿ ಮೂವಳಿಸಿದ ಕೋಟೆಯುಂ . . . ಊರ್ಗ್ಗಳೊಪ್ಪುಗು (ಸೌಇಇ. IX-i, ೨೯೭-೦೦ ; 1177).
[ಮೂವಡಿ + –ಇಸು$_3$]

**ಮೂವಣ್ಣ**, ಮುಬ್ಬಣ್ಣ (ನಾ). ಮೂರುಬಣ್ಣ ; ತ್ರಿವರ್ಣ : ಮೂಗಾವುದಂ, ಮೂವಣ್ಣಂ, ಮೂವಳಸು (ಶಾಶಾಕೂ. ೦೫೩ ಶಾಸ) ; ಅಂದಂಬಡೆದ ಮೊದಲ ಮೂವಣ್ಣಮದೊಂದೊಂದಱೊಳೊಂದಿದ ಬಗೆ . . . ಕರಂ ಮನಸಂದುದು (ಶಯಾಶ. ೩-೩) ; ಮೂವಣ್ಣಕ್ಕೀಡಪ್ಪಂ ತಾವರೆವಾಗೆಯೊಂದದಿನದೊಳೆನುತದನಿಳಿಕ್ಕೆದಾ ವನಿತೆಯು ನುಣ್ಗದಪದು ಭಾವಿಸೆ ಶಾಶ್ವತನಿಜಪ್ರಕಾಶದಿನೆಸೆಗುಂ (ಶೃಶಿ. ೪-೦೦೩). **ಮುಬ್ಬಣ್ಣ** : ಕಾಂಬಳಿ ಫೋಟೋಗಳನ್ನೂ ತೆಗೆದೆವು. ಮುಬ್ಬಣ್ಣದ ಫೋಟೋಗಳನ್ನೂ ತೆಗೆದೆವು (ಹಸುಕೂ. ೨೦೭).

**ಮೂವಣ್ಣದಣ್ಣ** = (?) : ಮೂವಣ್ಣದಣ್ಣಗಳನು ಹೆ[ಪಾಠಾಂ. ಮೊ]ಣ್ಣ ಮಾಡಿಯೆ ಹಿಡಿತಹೆನು (ತ್ರಿಶಾಂ. ೦೨-೦೩೦). **ಮೂವಣ್ಣದಾಚೆ** = ಪರಾಶಕ್ತಿ ; ಆದಿಪ್ರಕೃತಿ ; ಮೂಲಶಕ್ತಿ : ಹರಹಿನಲಿ ಬೇಟದಲಿ ಮೂವಣ್ಣದಾಚೆಯು ಕೂಟದಲಿ ಕುಱುಹಾಗಿ ಮಿಗೆ ನಿಲ್ದೋರ್ಪುವ ನಿಜ ದಿಟ್ಟ ಬೊಮ್ಮವಿದು (ಕುಮಾ.ರ. ೯-೦೭). [ಮೂ$_1$ (< ಮೂಱು) + ಬಣ್ಣ]

**ಮೂವಣ್ಣಂಗೊಳ್**, ಮೂವಣ್ಣಗೊಳು (ಕ್ರಿ). ೧. ಮೂರುಬಣ್ಣಗಳಿಂದ ಕೂಡಿರು ; ತ್ರಿವರ್ಣವಾಗು. ೨. (ಅಲಂ) ಮೂರು ಬೇರೆ ಬೇರೆ ರೂಪಗಳಾಗು : ಮೂವರುಮವರ ತನೂಜರ್ ಮೂವಣ್ಣಂಗೊಂಡು ತೆಲುಗ ಕನ್ನಡ ತಿಗುಳರ್ ತೀವಿದ ನಾಡುಗಳಂ ಕಾಮೋವಲ್ಕೆಂದಡದರ್ದರಂದು ಮೂಱುಂ ಪೊಟಲಂ (ಶಶಿಪ. ೨-೩೦). **ಮೂವಣ್ಣಗೊಳು** : ೩. ವಿವರ್ಣವಾಗು ; ಪೇಲವವಾಗು: ಬಿಳಿವೆಣ್ಣುಗಳ್ ಕಾದಲರ್ ತೊಲಗೆ ಹೊಲಬಳಿದು ಮೂವಣ್ಣಗೊಳುತಿರ್ದರಂದು (ಉದ್ಭಟೇ. ೪-೪೦). [ ಮೂವಣ್ಣ + ಕೊಳ್$_1$ ]

**ಮೂವಣ್ಣಂಬರ್** (ಕ್ರಿ). ೧. ಮೂರುಬಣ್ಣಗಳಲ್ಲಿ ಹಾದುಬರು ; ಮೂರುರಂಗುಗಳನ್ನು ಹೊಂದು : ಕಂದಿದಳುಟೀದೊಡೆ ಬೆಳ್ಪಿನೊಳೊಂದಿದಳೊಂದದೊಡೆ ಬಂದೊಡತಿರಾಗಕ್ಕಂ ಸಂದಳಿವಳ್ ಮೂವಣ್ಣಂಬಂದಳ್ ನಿಷ್ಕರುಣ ತರುಣಿ ನಿಷ್ಕಾರಣದಿಂ (ಕಂದ್ರತ್ರಿ. ೬-೭೪). ೨. (ಬಾಲ್ಯ, ಯೌವನ ಮತ್ತು ಮುಪ್ಪು ಎಂಬ) ಮೂರು ಅವಸ್ಥೆಗಳನ್ನು ಹಾದು ಬರು: ಅವರಿಸೆ ಕೂಸುತನಮುಂ ಜೌವನಮುಂ ಮುಪ್ಪುಮಂತಱಿನಿಸ್ಸೆವಱಂ ಮೂವಣ್ಣಂಬರೆ ರೂಪಪರಾವರ್ತನವಿಧಿಯನವರ್ಗೆ ವಿಧಿ ವಿಧಿಯಿಸುಗುಂ (ಅಜಿತ. ೨-೯೩). ೩. (ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಎಂಬ) ಮೂರು ಬೇರೆಬೇರೆ ಸ್ವರೂಪವನ್ನು ಪಡೆ : ಅವಾವ ತೆಱದೊಳೆಂತುಂ ಭಾವಿಪ್ಪೊಡನೇಕರೂಪನಾಗಿರ್ಪವರಂ ದೇವರವರೆಂದು ನಂಬದೆ ಮೂವಣ್ಣಂಬಂದ ದೇವರಂ ನಂಬುವುದೇ (ಸಋಶ. ೦-೦೨೩). [ ಮೂವಣ್ಣ + ಬರ್ ( < ವರ್) ]

**ಮೂವಣ್ಣಂಬರಿಸು** (ಕ್ರಿ). ೧. ಮೂರುಬಣ್ಣಗಳು ಬರುವಂತೆ ಮಾಡು ; ತ್ರಿವರ್ಣವಾಗಿಸು. ೨. (ಬಾಲ್ಯ, ಯೌವನ ಮತ್ತು ಮುಪ್ಪು ಎಂಬ) ಮೂರು ಅವಸ್ಥೆಗಳನ್ನು ಉಂಟುಮಾಡು : ಸಾವನ್ನೆವರಂ ಸೈತಿರದಾವನೊಳಂ ಶೈಶವಂ ಯುವತ್ವಂ ಮುಪ್ಪೆಂಬೀ ವಿಧ ವಡೆದಿರ್ದಲ್ಲಿಯ ಮೂವಣ್ಣಂಬರಿಪ ದೇಹದೊಳ್ ಮೋಹಿಪುದೇ (ಧರ್ಮಾ. ೩-೯೩). ೨. (ಅಲಂ) ವಿವರ್ಣಗೊಳಿಸು ; ಪೇಲವವಾಗಿಸು : ಅಣ್ಣ ಮೊಱೆಗೊಳಿಸಿ ಜೋಳಕರಣ್ಣಲೆಯುಂ ತಳಿರನುಡಿಸಿ ನನ್ನುಗೆಯುಂ ಮೂವಣ್ಣಂಬರಿಸಿದನುರ್ವರೆ ಬಣ್ಣಸಲೆಱೆಯುಂಗನೃಪತಿಚಕ್ರಿಯು ಬೆಸದಿಂ (ಎಕ. V. ಅರಸೀ. ೦೦೨-೦೪ ; 1110 ? ). [ ಮೂವಣ್ಣ + ಬರಿಸು ( < ವರಿಸು$_1$ )]

**ಮೂವಣ್ಣಗೊಳು** ' ಮೂವಣ್ಣಂಗೊಳ್ ' ನೋ.

**ಮೂವಣ್ಣವಡೆ** (ಕ್ರಿ). = ಮೂವಣ್ಣಂಬರ್ ೨ : ಹಸುಳೆತನದೊಳೊಂದು ಹೊಸಹರೆಯದೊಳೊಂದು ಹಸಗೆಟ್ಟ ಮುಪ್ಪಿನೊಳೊಂದು ಮುಸುಕಿದ ಮೂವಣ್ಣವಡೆದು ಕಡೆದು ಮತ್ತೆ ಮಸಿವಣ್ಣಹುದೀ ಒಡಲು (ತ್ರಿಷಾಂ. ೦೪-೪೦). [ ಮೂವಣ್ಣ + ಪಡೆ$_1$ ]

**ಮೂವತ್ತು**, ಮುಪ್ಪತ್ತು, ಮುವ್ವತ್ತು (ನಾ). ಒಂದು ಸಂಖ್ಯೆ ; ಮೂರು ಹತ್ತು ; ತ್ರಿದಶ : ನಾಲ್ವತ್ತು ಸಾಂಪಿನೊಳೊನ್ದು ಮೂವತ್ತಱ ಕೆಟಗುಂ ಇನ್ನೂಱ ಮೇಲುಂ ಅರೆಸಾಂಪು (ಎಪ. VI. ೦೩೩-೭; ೯೯೩) ; ಕೂಟೂ ತೊಱದು ಮೂವತ್ತುಗಾವುದ × × × ದೆವಸದೊಳೆಯ್ದಿ (ಶಾಇಪ. XI-i, ೦೦-೦೭ ; ೨೬೬) ; ವೃಷಸೇನ ಸೌಬಲರ ಸರಳು ಮೂವತ್ತಱಿ . . . ಮುಱಿಯೆಚ್ಚು ವಿಮುಖರ ಮಾಡಿದನು ಭೀಮು (ಕುಮ್ಯಾಕ. ೦೩-೩೪). **ಮುಪ್ಪತ್ತು**. **ಮುವ್ವತ್ತು** : ಈಗ ಮುವ್ವತ್ತು ವರುಷಗಳ ಹಿಂದಲು ನಮ್ಮ ಊರ ನರಸಿಂಹಸ್ವಾಮಿಯ ವೈಭವವನ್ನು ಜ್ಞಾಪಿಸಿಕೊಂಡರೆ ದೇವರಿಗಿಂತ ಕಾಲವೇ ಪ್ರಬಲವಾದುದೆಂದು ತೋರುತ್ತದೆ (ಹೇಮೂಶೀ. ೪೩).

**ಮುವ್ವತ್ತೆರಡು ಕಲೆ** = [ವೀಶೈ] ಸದಾಚಾರ, ಸದ್ಭಕ್ತಿ ಇತ್ಯಾದಿ ಮೂವತ್ತೆರಡು ಬಗೆಯ ಕಲೆಗಳು; ಬತ್ತೀಸ ಕಲೆ : ಇಂತೀ ಮುವ್ವತ್ತೆರಡು ಕಲೆಗಳ ಸದ್ಗುರುಮುಖದಿಂದಱಿದ ಬಸವ ಮೊದಲಾದ ಸಮಸ್ತ ಪ್ರಮಥಗಣಂಗಳೆಲ್ಲ ವಿರಾಭಾರಿ ವೀರಶೈವಸನ್ಮಾರ್ಗವಿಡಿದಾಚರಿಸಿದರು ನೋಡಾ (ಮಹಾದೇ. ೩. ೪೦-೨೦೩). **ಮೂವತ್ತಾಱುಂ ಗುಣ** = [ಜೈನ] ಆಚಾರ್ಯನಿಗೆ ಅಗತ್ಯವಾದ ಮೂವತ್ತಾರು ಬಗೆಯ ಗುಣಗಳು : ಅನಶನಾದಿ ಹನ್ನೆರಡು ತಪಗಳು, ಸಾಮಾಯಿಕ ಪ್ರತಿಕ್ರಮಣಾದಿ ಆರು ಆವಶ್ಯಕಗಳು, ಉತ್ತಮಕ್ಷಮಾದಿ ಹತ್ತು ಧರ್ಮಗಳು, ಜ್ಞಾನಾಚಾರಾದಿ ಐದು ಆಚಾರಗಳು ಮತ್ತು ಮನೋಗುಪ್ತ್ಯಾದಿ ಮೂರು ಗುಪ್ತಿಗಳು : ಮೂವತ್ತಾಱುಂ ಗುಣಂಗಳ್ ತಮಗಮರ್ದಿರೆ ಸಂದೈದುಮಾಚಾರದೊಳ್ಸದ್ಭಾವಂ ಕೈಗಣ್ಗೆ . . . ಆಚಾರ್ಯರಿನ್ನೆಮ್ಮನೇನೋದಾವಂ ತಳ್ತಟ್ಟದಂತೋಸರಿಸಿ ಕಳೆಗೆ ಸಂಸಾರಕಾಂತಾರದಿಂದಂ (ಅದಿತ್ರ. ೦-೩); ಮೂವತ್ತಾಱುಂ ಗುಣದಿಂ ಭಾವಜನಂ ಕಟ್ಟಿ ಪೆಟ್ಟುವೆಟಿದರ್ ವೃಷದಿಂ ಭಾವಿಪೊಡೆ ಮೇಘಚಂದ್ರತ್ರೈವಿದ್ಯರದೆಂತೊ ಶಾಂತರಸಮಂ ತಳೆದರ್ (ಶಂಸಾಮೂ. ೦-೦೯). **ಮೂವತ್ತಿರ್ವರ್**, **ಮುವ್ವತ್ತಿರ್ವರ್**, **ಮೂವತಿಬ್ಬರ್**, ಮೂವದಿಂಬರ್=ಮೂವತ್ತೆರಡು ಮಂದಿ; ಮೂವತ್ತೆರಡು ಜನ : ಆಯಿರ್ವರ್ಗಂ ಮಕ್ಕಳ್ ಶ್ರೀವರ್ಧನಂ ವಿಜಯಂಧರಂ ವೀರಬಾಹು ಮೊದಲಾಗಿ ಮೂವತ್ತಿರ್ವರ್ ಕುಮಾರರುಂ (ಪಡ್ಮಾರಾ. ೧೩-೦೯) ; ಮುವ್ವತ್ತಿರ್ವರ್ಪೆಂಡಿರುಮಂ ಬಂಧುಜನಮುಮಂ ಜ್ಯೇಷ್ಠಪುತ್ರನುಮಂ ಕರೆದು (ಧರ್ಮಾಮೃ. ೦-೦೦೦) ; ಮೂವತಿಬ್ಬರುಂ ನಲ್ಗುಳ ಕಟುನಿ ಕೊಟ್ಟರ್ (ಎಕ. X. ಬಾಂಗ. ೪೨-೩; ಸು. ೯೭೦) ; ಪೊನ್ನೆಱನುಂ ಚೋಲಮಹಾರಾಜನುಂ ಮೂವದಿಂಬಪ್ಪಾರ್ವರಾನ್ ಕೊಂದಾ × (ಎಕ. XVI. ಚಿತ್ರ. ೦೦೬-೪ ; ೮ನೆಯ ಶತ). **ಮೂವತ್ತುಮುಕ್ಕೋಟಿ**, **ಮೂವತ್ತುಮೂರು ಕೋಟಿ**, **ಮೂವತ್ತುಮೂಕೋಟಿ** = (ಸಾಮಾನ್ಯವಾಗಿ ದೇವತೆಗಳ ಎಣಿಕೆಯನ್ನು ಸೂಚಿಸುವ) ಒಂದು ಸಂಖ್ಯೆ : ಮೂವತ್ತುಮುಕ್ಕೋಟಿ ದೇವೇಶ್ವರಯೋಗಿಹೃದ್ಧ್ಯಾನಗಮ್ಯ ಪರಮಪುರುಷ ಪುರುಷೋತ್ತಮ (ಮೋಹತ. ೩೭-೦೦) ; ಮಕ್ಕಳಿವರೇನಮ್ಮ ? ಮೂವತ್ತುಮೂರುಕೋಟಿ ! ನಾ ಹಡೆದ ಮೂವತ್ತುಮೂರುಕೋಟಿ (ಗಂ. ೩೦-೩) ; ಜಾನಕಿಯ ಕಣ್ಗೆ ತೋಱಿತು ಮುಂದೆ . . . ಮೂವತ್ತುಮೂಕೋಟಿ ವಿಬುಧರಂ ತನ್ನೊಳ್ಕೊಳುಗಿದರಣಿಕಿಪ ಪೊಪೊದವಿ ಪರಿವ ಬೆಳ್ಪೊನಲ್ದಿವಿಜನದಿಯ (ಕೈಶಿಖಾ. ೦೯-೮). **ಮೂವತ್ತುಮೂದೇವರ್** = ಹನ್ನೆರಡು ಆದಿತ್ಯರು, ಎಂಟು ವಸುಗಳು, ಹನ್ನೊಂದು ರುದ್ರರು, ಇಬ್ಬರು ಅಶ್ವಿನಿಗಳು ಎಂಬುದಾಗಿ ಮೂವತ್ತುಮೂರು ದೇವತೆಗಳು; ತ್ರಿದಶರು : ಏಕಾದಶರುದ್ರರುಂ ದ್ವಾದಶಾದಿತ್ಯರುಮಷ್ಟವಸುಗಳುಮಶ್ವಿನೀದೇವರುಂ ಮೊದಲಾಗೆ ಮೂವತ್ತ[ ತ್ತು ]ಮೂದೇವರುಂ . . . ನೆರೆದು (ಶಂಕಥಾ. ೦-೦೪೭ ಪ). **ಮೂವತ್ತುಮೂವರ್** = ಮೂವತ್ತುಮೂದೇವರ್ : ಮೂನೂಱಯ್ವತ್ತು ಸಮೀಚೀನವಿಮಾನಂಗಳುಂ ಮೂವತ್ತುಮೂವರ್ ದಿವಿಜರುಂ . . . ಅಱುವತ್ತುಮೂವರ್ ವಲ್ಲಭೆಯರುಂ ತನಗೆ ಪ್ರಸಿದ್ಧಮಾಗೆ (ಶಾಂತಿತ್ರ. ೪-೦೦೦ ಪ) ; ಮೂವತ್ತುಮೂವರಾದರ್ ದೇವರ್ (ಕಋಕ. ೯೯ ತ್ರಿಯೋ). **ಮೂವತ್ತುಮೂಱು**, **ಮುಪ್ಪತ್ತುಮೂರು**, **ಮೂವತ್ತ್ಮೂಱು** = ಒಂದು ಸಂಖ್ಯೆ ; ಮೂವತ್ತು ಮತ್ತು ಮೂರು : ಮೂವತ್ತುಮೂಱು ಸಾಗರೋಪಮಂಬರೆಗಮಾಯುಷ್ಯಮನೊಡೆಯರಾಗಿ (ಪದ್ಮಾರಾ. ೧೮-೦೩) ; ಸ್ವಸ್ತಿಶ್ರೀ ಸೀಯಮಲ್ಲವರಸರ್ . . . ಮುಪ್ಪತ್ತು ಮೂರು ಪರಿಹಾರ ಕೊಟ್ಟರ್ (ಎಕ. IX. ಹೊಸಕೋ. ೨೨-೪; ಸು. ೭೬೦) ; ಸುರಮೆನಲು ಮೂವತ್ತ್ಮೂಱುನಕ್ಷತ್ರಮಿಪ್ಪತ್ತೇಟನಿಕಂ (ಶುಂಗಠಾ. ೦೦೪-೯). **ಮೂವತ್ತೆರಡಾಯುಧ** = ಮೂವತ್ತೆರಡು ಬಗೆಯ ಅಸ್ತ್ರಗಳು; ಬತ್ತೀಸಾಯುಧ : ಕಟ್ಟಿದ ಪಟಯಿಗೆಗಳುಮೊಟ್ಟಿದ ಮೂವತ್ತೆರ

ಡಾಯುಧಂಗಳಿಂ ಬೆರಸಿ . . . ಪಡೆವೆರ್ಕಳ್ ಕುರುಕ್ಷೇತ್ರದೊಳ್ ಚಿತ್ರಿಸಿದಂತೊಡ್ಡಿ ನಿಂದಾಗಳ್ (ಶಂಪಭಾ. ೧೨-೩೧ ವ) ; ಪರಶು ಬಿಲು . . . ಶೂಲಂ ಸುರಗಿ ಮೊದಲಾಗೆ ಮೂವತ್ತೆರಡಾಯುಧಮಂ ಮಹೋತ್ಸವಂ ಬೆರಸಿನಿತಂ ನಿಲಿಪಿ ಪೂಜಿಸಿ (ಧರ್ಮಾಮೃ. ೨-೧೨೮). **ಮೂವತ್ತೆರಟ್ನಾಡು, ಮೂವತ್ತೆರಡುನಾಡು** = [ಜೈನ] "ವಿದೇಹಕ್ಷೇತ್ರದಲ್ಲಿ ಸೀತಾ, ಸಿತೋದಾ, ವಕ್ಷಾರಗಿರಿ ಮತ್ತು ವಿಭಂಗನದಿಗಳ ಮೂಲಕವಾಗಿ ಮೂವತ್ತೆರಡು ದೇಶಗಳಾಗಿವೆ" (ಆದಿಪು. ಕನ್ನಡ ಪಾರಿಭಾಷಿಕ ಕೋಶ) : ಬಂದಱೊಳ್ ಪದಿನಾಱಾಗಿ ನಿರಂತರಂ ಪೊಗಱುಕುಂ ಮೂವತ್ತೆರಟ್ನಾಡುಗಳ್ (ಆದಿಪು. ೨-೩೧) : ಉದಯಿಸಿರ್ಪುದು ನೋಡೆ ಮೂವತ್ತೆರಡುನಾಡುಗಳು (ಶಾಂತಿಪು. ೨-೩೩). [ಮೂ$_1$ (< ಮೂಱು) + ಪತ್ತು$_3$./ತಮಿ. ಮುಪ್ಪತು; ಮಲ. ಮುಪ್ಪತು, ನುಪ್ಪತ್ತು; ತುಳು. ಮುಪ್ಪ; ಕೊಡ. ನುಪ್ಪದೀ; ತೆಲು. ಮುಪ್ಪದಿ, ಮುಪ್ಪೈ; ಕೋತ. ಮುಅತ್]

**ಮೂವಳಸು$_1$** (ಕ್ರಿ). ಮೂರು ಸುತ್ತು ಆವರಿಸು; ತ್ರಿಪ್ರದಕ್ಷಿಣೆ ಹಾಕು: ಜಳರುಹನಾಭಂ ಕಣ್ಣೊಳ್ ಪೊಳೆದುಳ್ಕುವ ಸೂರ್ಯಹಾಸಮಂ ಕುಡೆ ಕೈಯೊಳ್ ಹಳಧರನ ದೇಹರುಚಿ ಮೂವಳಸುವುದುಂ ಚಂಪ್ರಹಾಸದೇಸಿಸಿತ್ತಾಗಳ್ (ಶಂಭಾವಿ. ೯-೨೬) ; ಮೂಱುಲೋಕಮಂ ಮೂವಳಸಿ ನಿಜಯಶಂ (ಮಲ್ಲಿಪು. ೪-೧೩೨) ; ನೃಪಾಲಕರು . . . ಭರದಿಂದೆಯ್ತಂದೆಡೆಯಿಲ್ಲದಂತಾ ಪುರವ ಮುತ್ತಿದರು ಮೂವಳಸಿ (ನೇಮಿಸಂ. ೦೨-೭೧).

[ಮೂ$_1$ (< ಮೂಱು) + ಬಳಸು$_1$]

**ಮೂವಳಸು$_2$** (ನಾ). ಮೂರು ಸುತ್ತು ; ಮೂರು ಆವರ್ತ : ಸಜ್ಞಾತಗಿರಿಯನೆಯ್ದಿಯಲ್ಲಿಯೆ ರಾತ್ರಿ ಪ್ರತಿಮೆ ನಿಂದೊರನ್ನೆಗಂ ಕಾಟ್ಸಿಚ್ಚು ಮೂವಳಸಂ ಬಳಸಿಯುಂ ತಗುಳ್ದು ತಮ್ಮಂ ಸುಡೆ (ವಡ್ಡಾರಾ. ೦೭೪-೬) ; ಮೂವಳಸಾಗಿ ಸುತ್ತಿ ಮುತ್ತಿ ಕಾದುತ್ತಿರ್ದ ವಿದ್ಯುದ್ದಂಷ್ಟ್ರನುಮಂ ಸುದಂಷ್ಟ್ರನುಮಂ ಕಂಡು (ಶಾಂತಿಪು. ೪-೬೦ ವ) ; ಅಮರಾವತೀಪುರಮಂ ಮೂವಳಸಾಗೆ ಮುತ್ತಿಕೊಳ್ವುದುಂ (ಧರ್ಮಾಮೃ. ೮-೩೨೪).

[ಮೂ$_1$ (< ಮೂಱು) + ಬಳಸು$_3$]

**ಮೂವಳಿಸು** 'ಮೂವಡಿಸು' ನೋ.

**ಮೂವಾಯಿಲರು** (ನಾ). ತಮಿಳುನಾಡಿನ ಚಿದಂಬರಕ್ಷೇತ್ರದಲ್ಲಿ ನೆಲಸಿ, ಶಿವನ ಮಹಾಭಕ್ತರೆಂದು ಪರಿಗಣಿತರಾಗಿದ್ದ ಮೂರುಸಾವಿರ ಬ್ರಾಹ್ಮಣರ ಒಂದು ವರ್ಗ : ಇಂತೊಪ್ಪುವಲ್ಲಿ ಮೂವಾಯಿಲರು ಕುಳ್ಳಿರಲು ಸಂತತಂ ಮೆಱೆವ ಪೊನ್ನಂಬಲದೊಳೆಸದಿರಲು (ತಿರುಶ. ದೀ. ೦೩-೭). [ ← ತಮಿ. ಮೂವಾಯಿರವರ್]

**ಮೂವಾಳ್** (ನಾ). ಮೂರುಸಾವಿರ ಉಳುಂಗಿ : ಇರ್ಪಾಳ್ ಮೂವಾಳಕ್ಕದುರ್ವರರೆಯೊಳ್ ಬೆಳೆಗೆ ಸಾರೆ ಕೊಳೆ ಪವಪುಗಳ್ ಕರ್ಬಿನ ಮಡಲಂತೆ ಕವಲ್ತುರ್ವಿದ ಕಱೊಲಗಳೆಸಗುಮೋರೊಂದೆಡೆಯೊಳ್ (ಜಾಪ್ಯ. ೨೦೭). [ಮೂ$_1$ (< ಮೂಱು) + ಬಾಳ್$_3$]

**ಮೂವಿಟ್ಟಿ** (ನಾ). ಸಂಬಳವಿಲ್ಲದೆ ಮಾಡುವ ಮೂರು ಬಗೆಯ ಕೆಲಸ : ಮೂರುಬಗೆಯ ಬಿಟ್ಟಿಕೆಲಸ : P "ಬಿಟ್ಟಿಯು ಮೂರು ತೆರನಾದುದು (ಇದೇ ಶಾಸನಗಳಲ್ಲಿ ಬರುವ ಮೂವಿಟ್ಟಿ) : (೧) ಶೋಧನ ಕರ್ಮ—ಮಾರ್ಗ ಮಧ್ಯದ ರಸ್ತೆಯನ್ನು ಸರಿಪಡಿಸುವುದು: ಸೇತುವೆ, ನದಿ, ಬಾವಿ ಇತ್ಯಾದಿಗಳನ್ನು ಪರೀಕ್ಷಿಸುವುದು. (೨) ವಹನಕರ್ಮ+ಆಯುಧ, ಕವಚ, ಧಾನ್ಯ ಮುಂತಾದುವನ್ನು ಹೊರುವುದು. (೩) ಅಪನಯನ ಕರ್ಮ —ಪೆಟ್ಟು ತಿಂದು ಕೆಳಕ್ಕೆ ಬಿದ್ದ ಸೈನಿಕರನ್ನು ಅವರ ಆಯುಧಗಳ ಸಮೇತ ಹೊರುವುದು" (ಕಶಾಲಿ. ೨೩೬); ಕೆಯ್ಗೆಱೆಯುಂ ಕೊಟ್ಟಳವಟ್ಟ ಸಾಧನಮಂ ಮೂವಿಟ್ಟಿಗಂ ಪೊಣ್ದು ಕಾಲ್ಗೆಱಗಿತ್ತಂತರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ (ಶಂಪಭಾ. ೬-೩೦) : ಕೊಟ್ಟೆಯ್ದೆ ಕಪ್ಪಮಂ ಮುಗುಳ್ದಟ್ಟಿದ ಬಟೆಗೊಲ್ದು ಪೇಟ್ದು ತಾಣಕ್ಕೆ ನೃಪರ್ ಬಿಟ್ಟು ಭುಜಗರ್ವಮಂ ಮೂವಿಟ್ಟಿಗೆ ಬರೆ ನೆಗಟ್ದು ನಿಳಿಯೊಳರವಿಂದನೃಪಂ (ಶಾಕ್ಕರ್ಪು. ೨-೩) ; ವೀರಾರಿನೃಪಾಳರಂ ಬರಿಸಿದಂ ಮೂವಿಟ್ಟಿಗಂ ಬಿಟ್ಟಿಗಂ (ಎಕ. XI, ದಾವಣ. ೨೩-೩೪; 1224) ; ಶೋಧನ ಕರ್ಮ, ವಹನಕರ್ಮ, ಅಪನಯನಕರ್ಮ ಎಂಬ ಮೂರು ಬಗೆಯಾದ ವಿಟ್ಟಿಗಳನ್ನು ಕನ್ನಡಕವಿಗಳು 'ಮೂವಿಟ್ಟಿ' ಎಂಬ ಪದದಿಂದ ನಿರ್ದೇಶಿಸಿರುವ ಹಾಗೆ ಕಾಣುತ್ತದೆ. ಸೋತ ರಾಜನು ಗೆದ್ದ ರಾಜನಿಗೆ ಈ ವಿಟ್ಟಿ ಕರ್ಮಗಳನ್ನು ಮಾಡುವ ದೈನ್ಯಾವಸ್ಥೆಗೆ ಗುರಿಯಾಗುತ್ತಿದ್ದರು . . . ಪಂಪ ಪೊನ್ನ ಪಾರ್ಶ್ವರ ಪದ್ಯಗಳಲ್ಲಿ 'ಮೂವಿಟ್ಟಿ'ಗೆ ಇರುವ ಆನುಪೂರ್ವಿ ಹೆಚ್ಚು ಕಡಮೆ ಒಂದೇ ರೀತಿಯಾಗಿರುವುದು ಸೋಜಿಗದ ವಿಷಯ (ಸಂಶಾವೆ. ೨೨೪).

[ಮೂ$_2$ (< ಮೂಱು) + ಬಿಟ್ಟಿ$_1$]

**ಮೂವಿಟ್ಟಿಗೆಯ್** (ಕ್ರಿ). ಮೂರು ಬಗೆಯ ಬಿಟ್ಟಿಕೆಲಸಗಳನ್ನು ಮಾಡು : ಭಕ್ತಿಯಿಂದಮೆ ಮಸಂಗೊಂಡಿರ್ಪ ಕಂದಿಪ್ಪ ಕಾಲ್ಗೆಱಗಿಪ್ಪ × × ಗೆಯ್ವುತ್ತಿರೆ × × × ಮೂವಿಟ್ಟಿಗೆಯ್ವಿರ್ಪ ಪೊಡರಂ × × × (ಶಾಇ. IX-i, ೦೬೦-೦೨; 1091). [ಮೂವಿಟ್ಟಿ + ಕೆಯ್$_1$]

**ಮೂವಿಧಿ** (ನಾ). ೧. ಮೂರು ಬಗೆಯ ತೊಂದರೆ : ತಾಪತ್ರಯ : 'ಮೂವಿಧಿಗಾಣ್' ಪರಾ. ೨. (?) : ಅಡಸು ಹರಿ ವಿಧಿಗಳಂ ಬಡಿಸು ಮೂವಿಧಿಗಳಂ ಸುಡಿಸು ಕೈಲಾಸಮಂ (ತಬಪು. ೪೬-೨೨).

[ಮೂ$_1$ (< ಮೂಱು) + ವಿಧಿ]

**ಮೂವಿಧಿಗಾಣ್** (ಕ್ರಿ). ತೊಂದರೆಗೊಳಗಾಗು: ತಾಪತ್ರಯ ಪಡು : ಹೊತ್ತ ನಿಜವಸಱುಯದತ್ತಲಿತ್ತ ಸುತ್ತಿ ಬಳಸುವಸಂತೆ ಹಿಡಿದಿರ್ದ ಲಿಂಗವ ಕಾಣದೆ ಮೂವಿಧಿಗಾಣ್ಬರನೇನೆಂಬೆನಯ್ಯ (ಆದವ. ವು. ೬೩-೦೦೪).

[ಮೂವಿಧಿ + ಕಾಣ್]

**ಮೂವಿಧಿಬಡು** (ಕ್ರಿ). = ಮೂವಿಧಿಗಾಣ್ : ಮುಟ್ಟರೊಂದುವನು ಮೂವಿಧಿಬಟ್ಟರೂ (ಬಸವ. ೩೮೩). [ಮೂವಿಧಿ + ಪಡು$_1$]

**ಮೂವೀದಿವಡಿಸು** (ಕ್ರಿ). ೧. ಮೂರುಬೀದಿಗಳನ್ನು ತಿರುಗಿಸು. ೨. (ಆಲಂ) ಅಲೆಯುವಂತೆ ಮಾಡು; ಸುತ್ತಾಡಿಸು : ಪೀತಾಂಶುಕನೆಂದು ಪಾವಕನು ಮೂವೀದಿವಡಿಸಿಯುಂ (ಜಗಾ. ೯-೩೩ ವ).

[ಮೂ$_1$ (< ಮೂಱು) + ಬೀದಿ + ಪಡಿಸು]

**ಮೂವೀಧಿಗೊಳ್** (ಕ್ರಿ). ಮೂರು ದಾರಿ ಹಿಡಿ; ಮೂರುಸೀಳಾಗು : ಮೂವೀಧಿಗೊಂಡು ಮುನ್ನೀರ ಬೀಳುತ ಚಂದ್ರಗಾವಿಯ ವಸನವ ತಳೆದು ಸಾವಿರಕ್ಕೆಯಿಂದೆ ಪೊಡೆವಟ್ಟನೆಂಬಂತೆ ಶೀವಿತು ಕಡುಸಂಜೆಗೆಂಪು (ಮೋಹತ. ೧೧-೦೭). [ಮೂ$_1$ (< ಮೂಱು) + ವೀಧಿ + ಕೊಳ್$_1$]

**ಮೂವೆ** 'ಮೂಮೆ' ನೋ.

**ಮೂವೆರಟಿ** (ನಾ). [ಸಂಗೀತ] ಒಂದು ಬಗೆಯ ಲಯ : ದೇಸಿಯ ತಾಳದೊಳಗೆ ಒತ್ತೆರಟಿ ಮೂವೆರಟಿ ಮೊದಲಾದ ಲಯದಿಂ . . . ಪಾಡುವ ಬಂಧವ್ಯಾಪ್ತಿಗಳಂ ಮೊಹ್ದೋಱಿಸಿ (ಚರೂಪಾ. ೭೬). [?]

**ಮೂವೆರಲ್, ಮೂವೆರಲು, ಮೂವೆರಳು** (ನಾ). ೧. ಮೂರುಬೆರಳು. ೨. ಮೂರುಬೆರಳುಗಳ ಒಂದು ಅಳತೆ : ಎರಡೂರ್ಧ್ವರೇಖೆಗಳ್ ಮೂವೆರಲಿಶ್ವ(ಳಸ್ಸ)ಪ್ರೋಥ ಮಧ್ಯದೊಳ್ ತೋಱೆ ಮಹಾಜ್ವರಪರಿತಾಪದೊಳಷ್ಟಮವರಿಸಕ್ಕಾ ವಾಜಿಗೆಯ್ದುಗಂ ಮರಣಭಯಂ (ಅಶ್ವಶಾ. ೩-೦೦). **ಮೂವೆರಲು** : ೧. ಸುರನರ ನಾಗಲೋಕದಿ ನರ್ತಿಸುವ ಸೌಂದರವೆಣ್ಣು ಬಾಣಸಂದವನೆಯ ಸರಿಯಿಲ್ಲವೆಂದು ಮೂವೆರಲಿಂದೆ ರತಿರಾಜ ಬರೆದಂತೆ ತಿವಳಿ ರಾಜಿಸಿತು (ಮೋಹತ. ೨೩-೨೦). **ಮೂವೆರಳು** : ೨. ನಾಲ್ವೆರಳು ಹಸ್ತಿನಿಗೆ ಮೂವೆರಳು ಚಿತ್ತಿನಿಗೆ ಇರ್ಬೆರಳು ಕುಚಮಧ್ಯ ಶಂಖಿನಿಗೆ (ಸರ್ವಜ್ಞ. ೧೬೩೩); ಲೊಕ್ಕಿಬೇರಿನ ತೊಕ್ಕನ್ನು ತೆಗೆದು ಒಣಗಿಸಿ ಚೂರ್ಣವ ಮೂವೆರಳಿನಷ್ಟನ್ನು

ಹಸುವಿನ ತುಪ್ಪದಲ್ಲಿ ಒಂದು ಮಂಡಲ ಸೇವಿಸೆ ಕ್ಷಯ ಖಾಸಂ ಗುಣಮಕ್ಕುಂ (ಸಳ್ವ. ೨೦೬). [ಮೂ₁ (<ಮೂಱು) + ಬೆರಲ್]

**ಮೂವೆರಲು** ಮೂವೆರಲ್ ' ನೋ.

**ಮೂವೆರಳ್** (ನಾ). ಮೂರು ಎರಡು; ಆರು: ' ಮೂವೆರಳ್ಮೊಗ ' ಪರಾ. [ಮೂ₁ (< ಮೂಱು) + ಎರಳ್ (< ಎರಡು)]

**ಮೂವೆರಳು** ' ಮೂವೆರಲ್ ' ನೋ.

**ಮೂವೆರಳ್ಮೊಗ** (ನಾ). ಆರುಮುಖ : ಸಾವಿರಭುಜದ ಶರಭ ಶತಮುಖದ ಶಾರ್ದೂಲ ಮೂವೆರಳ್ಮೊಗದೆರಲೆ . . . ಅನಿತುಮಂ ಕುವರಂಗೆ ತೋಱಿ ಸಿದನು (ಕೀಶಿಪ. ೦೨-೦೬). [ಮೂವೆರಳ್ + ಮೊಗ]

**ಮೂವೇಳೆ** (ನಾ). ಮೂರುಹೊತ್ತು; ತ್ರಿಕಾಲ : ಒಲಿದು ಮಜ್ಜನ ಮಾಡಿ ಧೌತವಸ್ತ್ರವನುಟ್ಟು ಸುಲಭಸದ್ಭಕ್ತಿಯೊಳ್ಕೂಡಿ ಬಲಗೊಂಡು ಮೂವೇಳೆ ಜಿನಭವನವ ಪೊಕ್ಕು ನಲಿದು ನಮಿಸಿದ ದೇವನಿಗೆ (ಜೀವಂಧಸಾಂ. ೬೯-೩); ಸುರಮುನಿಪಜಾಲಕ್ಕೆ ಮೂವೇಳೆ ಭಸ್ಮವಂ ತಳಿದು ಪ್ರಾಣವನಿತ್ತ ವಿಶ್ವೇಶ್ವರಂ (ಗುರುಚಾ. ೫-೬೭).

[ಮೂ₁ (< ಮೂಱು) + ವೇಳೆ (= ವೇಲೆ)]

**ಮೂಶೆ** ' ಮೂಸೆ ' ನೋ.

**ಮೂಷಕ** (ನಾ). ೧. ಒಂದು ಬಗೆಯ ಪ್ರಾಣಿ; ಇಲಿ : "ಆಖುಃ, ವೃಷಃ, ಮೂಷಕಃ — ಈ ೩ ಇಲಿ" (ಶಬ್ದಾಯು. ೩೯-೬೨); ಮುಂಗುರಿ ಮೂಷಕಂ . . . ನಿಜವೈರವಂ ಮಱೆದಿಪ್ಪುವೆನೆ ಮುನಿಯ ಮಹಿಮೆಯಂ ಪೊಗಳ್ವರಾರು (ಹಕಾ. ೩-೩೭). ೨. ಕಳ್ಳ; ಚೋರ. [ ಸಂ. ]

**ಮೂಷಕಪರ್ಣಿ** (ನಾ). ಒಂದು ಬಗೆಯ ಸಸ್ಯ; ಇಲಿಕಿವಿ ಗಿಡ : "ಚಿತ್ರಾ, ಉಪಚಿತ್ರಾ. . . ಮೂಷಕಪರ್ಣೀ—೧೦ ಎಲಿಯಾಲದ ಮರಕ್ಕೆ ಹೆಸರು, ಇಲಿಕಿವಿಗಿಡ" (ಸಿದ್ಧಾಂತಿ. ೦೩೨). [ಸಂ. ಮೂಷಕಪರ್ಣೀ]

**ಮೂಷಕವಿಷ** (ನಾ). ಇಲಿಯ ಕಡಿತದಿಂದ ಉಂಟಾಗುವ ನಂಜು : ತುಂಬುವುದುದಕಮುಮಂ ತಾನಂಬಿನೊಳಂ ಕೈಪೆಸೊರೆಯ ಗುಂಡಿಗೆಯೊಳ್ ಮೂಱೆಂಬ ದಿನಂಬರಮಿರಿಸಿದುದಂ ಬಿಡದಭಿಮಂತ್ರಿಸುವುದು ಸೂಟ್ಕೊಱು ವರಂ ಕುಡಿಸಲ್ಕಂತಾ ಜಳಮಂ ಕಿಡುಗುಂ ಮೂಷಕವಿಷಂಗಳಾಕ್ಷಣದಿಂ (ಖಪುರ. ೦೨-೩); ಕಿಱುನೆಲ್ಲಿ, ಕಿಱುಗಡಸಿಗೆ, ಸುರುಸುರುಕೆ, ಇವು ೩ ಸಮಾನಂಗೊಂಡು ಅರೆದು ಆಡಿನ ಹಾಲಲ್ಲಿ ಅರೆದು ಕುಡಿದು ಪೂಸುವುದು. ಮೂಷಕವಿಷ ಮಾಣ್ಗುಂ (ಚಿಕ್ಕಿ. ೦೯೬). [ಸಂ.]

**ಮೂಷಿಕ** (ನಾ). ಇಲಿ ; ಮೂಷಕ : ಈ ಮೂಷಿಕಂ ಸಾಮಾನ್ಯನಲ್ಲಂ (ಪ್ರಂಶಕ. ೨೩೦-೯). 'ಮೂಷಿಕವಾಹನ' ಪರಾ. [ಸಂ.]

**ಮೂಷಿಕಪರ್ಣಿ** (ನಾ). = ಮೂಷಕಪರ್ಣಿ : "ಮೂಷಿಕಾಹ್ವಯಂ— ಮೂಷಿಕಪರ್ಣಿ" (೭ಶಧಿ. ೦೨೭). [ಸಂ. ಮೂಷಿಕಪರ್ಣೀ]

**ಮೂಷಿಕವಾಹನ** (ನಾ). ಇಲಿಯನ್ನು ವಾಹನವಾಗಿ ಉಳ್ಳವನು; ಗಣೇಶ : ಪಾಶಾಂಕುಶಧರ ಪರಮಪವಿತ್ರ ಮೂಷಿಕವಾಹನ ಮುನಿಜನ ಪ್ರೇಮ (ಪುರಂದ. ೦-೩-೧); ಪ್ರಕಟಮಪುತೆಯಲಿ ಮೂಷಿಕವಾಹನನೆ ತಾನು (ಕುಪು. ೩೪-೯). [ಸಂ.]

**ಮೂಷಿಕೆ** (ನಾ). ೧. ಹೆಣ್ಣುಇಲಿ : ದಿವ್ಯಜ್ಞಾನದಿಂದಾಕೆ ಮೂಷಿಕೆಯಪ್ಪುದನಱಿದಿಂತೆಂದಂ (ಪಂತಕಂ. ೩೫೯-೪). ೨. ಹೆಗ್ಗಣ : "ದೀರ್ಘದೇಹಿ ಮೂಷಿಕಾ—೨ ಹೆಗ್ಗಣ" (ಸಿದ್ಧಾಂತಿ. ೦೫೭). ೩. ಜೇಡರ ಹುಳು. ೪. ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸುವ ಪಾತ್ರೆ; ಮೂಸೆ : ಭಸಿತವೇ ಘುಟಿಕೆ ರುದ್ರಾಕ್ಷಿ ಮೂಲಿಕೆ ಸಿದ್ಧರಸ ಮೂಲಮಂತ್ರ ನಿಜಹಸ್ತ ಮೂಷಿಕೆ ನಿಯಾಮಿಸುವಾಜ್ಞೆಯಿಂಧನಂ ಜ್ಞಾನಾಗ್ನಿಯಗ್ನಿ (ಸಿದ್ಧರಾ. ೦-೧೬). [ಸಂ. ಮೂಷಿಕಾ]

**ಮೂಷಿತ** (ಗು). ೧. ಕದ್ದ; ಅಪಹರಿಸಿದ. (ನಾ). ೨. ಕಳುವಾದುದು ; ಕದಿಯಲ್ಪಟ್ಟುದು : "ಮೂಷಿತಂ, ಮುಷಿತಂ-೨ ಕದಿಯಲ್ಪಟ್ಟದ್ದು" (ಸಿದ್ಧಾಂತಿ. ೩೯೭). [ ಸಂ. ]

**ಮೂಷೆ** (ನಾ). ೧. ಹೆಣ್ಣುಇಲಿ. ೨. = ಮೂಷಿಕೆ ೪ : ವಾಸವದಿಕ್ತಟಂ ಸಮೆದ ಮೂಷೆ. . . ಪಟಂಗಾಸಿನ ಪೊನ್ನ ಗಂಟೆಯವೊಲೊಪ್ಪಿದುದುದ್ಗತಭಾನುಮಂಡಲಂ (ಅಜಪು. ೬-೭೦); ಕುಕ್ಕುಟಗುದಿವ ವಜ್ರದ ಮೂಷೆಯೊಳಿಕ್ಕಿ ಕರಗಿಸುವುದುಂ (ಸುಕುಮಾ. ೦೦-೪೭ ವ); ಲೋಹದ ಸೂಕಳತ್ವಮಂ ಮೂಷೆಯೊಳಿಟ್ಟೆಱದಂತೆ ದುಷ್ಟತನದ ಪಟ್ಟಮನಾಂತಿಪ್ಪುದು (ಧರ್ಮಾಮೃ. ೩-೫೦ ವ). [ಸಂ. ಮೂಷಾ]

**ಮೂಷೆಯಿಡು** (ಕ್ರಿ). ಚಿನ್ನ, ಬೆಳ್ಳಿ ಮೊದಲಾದ ಲೋಹಗಳನ್ನು ಕರಗಿಸಲು ಮೂಸೆಯನ್ನು ಸಜ್ಜುಮಾಡು.–ಕೋಪೆಯನ್ನು ಅಣಿಗೊಳಿಸು : ಕೋಟಿಹೋಮಮುಮಂ ಬ್ರಾಹ್ಮಣಭೋಜನಮುಮಂ ಸೌಮ್ಯಗಿರಿಗುಹಾಗೇಹಂಗಳೊಳ್ ಮಂತ್ರಿ ಮಾಡಿದಪಂ . . . ಎಂದು ಡಂಗುರಮಂ ಪೊಯ್ಸೆ ಬಾಯ ಸವಿಗೆ ಪಾರ್ವರೆಲ್ಲಂ ಪರ್ವತಕ್ಕೆ ಮೂಷೆ [ಪಾಠಾಂ. ಶಿ. ಸೆ]ಯಿಡುವಂತೆ ಸುತ್ತಿ ಮುತ್ತಿ ಬೇಳ್ವೆಯುಮನಡುಗೆಯುಮಂ ಎಡೆಯುಡುಗದೊಡರಿಸೆ (ಅರ್ಧನೇ. ೩-೨೦ ವ). [ಮೂಷೆ + ಇಡು₁]

**ಮೂಸಂಜೆ** (ನಾ). ದಿನದ ಮೂರು ಸಂಧಿಕಾಲಗಳು ; ಬೆಳಗು, ಮಧ್ಯಾಹ್ನ ಮತ್ತು ಸಂಜೆ ; ತ್ರಿಸಂಧ್ಯೆ: "ಮೂಸಂಜೆಯೆನಿಪುದು ತ್ರಿಸಂಧ್ಯೆಯೊಳ್" (ಕಕಾ. ೯೨). ಮೂಱುಸಂಜೆ ' ಪರಾ.

[ಮೂ₁ (< ಮೂಱು) + ಸಂಜೆ]

**ಮೂಸಂಡಿ** 'ಮುಸುಂಡಿ₁' ನೋ.

**ಮೂಸಂಡಿದೊತ್ತು** (ನಾ). ಹೇಡಿಯಾದ ಸೇವಕಿ; ಮುಸುಂಡಿಯಾದ ದಾಸಿ : ಕೊಬ್ಬಿದಳು ಮೂಸಂಡಿದೊ[ಪಾಠಾಂ. ತೊ]ತ್ತಿವಳು (ಐಕ್ಷು. ೫೫-೨೯); ಕರೆಯುವಳ ಮೂಸಂಡಿದೊತ್ತಿನ ಮಱುಕ ಕರಲೇಸೆನಲವಳ ಹತ್ತಿರಕೆ ತಂದರು ಕೆಳದಿಯರು (ಕೊರಾ. ೨-೦-೩೦).

[ಮೂಸಂಡಿ (< ಮುಸುಂಡಿ₁) + ತೊತ್ತು (< ತೊಟ್ಟು)]

**ಮೂಸಂಬಿ, ಮುಸಂಬಿ, ಮುಸುಂಬಿ, ಮೋಸಂಬಿ** (ನಾ). ಈಳೆ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು : ನಿಂಬೆ. . . ಮೂಸಂಬಿ, ಟೊಮ್ಯಾಟೊ. ನೆಲ್ಲಿಕಾಯಿ, ಕಿರುನೆಲ್ಲಿಕಾಯಿ ಈ ಗುಂಪಿಗೆ ಸೇರಿವೆ (ಗೃಹಪ. ೪೫). **ಮುಸಂಬಿ** : ನಿಂಬೆಹಣ್ಣು . . . ಮುಸಂಬಿ . . . ಲೆಟ್ಯೂಸ್ ಇವುಗಳಲ್ಲಿ ವಿಟಮಿನ್ 'ಸಿ' ಇದೆ (ಗೃಹಪ. ೪೦). **ಮುಸುಂಬಿ**: "ಮುಸುಂಬಿ–ಸಿಹಿನಿಂಬೆ, ಒಂದು ಬಗೆ ಕಿತ್ತಳೆ" (ಸಂಕೋ. ೬೮). **ಮೋಸಂಬಿ** : ರಮಾ ನಿಧಾನವಾಗಿ ಮೋಸಂಬಿಯನ್ನು ಸುಲಿಯ ತೊಡಗಿದಳು (ಹೂಹಣ್ಣು. ೬೮). [←ಹಿಂ. ಮುಸಂಬೀ; ಮರಾ. ಮುಸಂಬೇ, ಮೋಸಂಬೇ]

**ಮೂಸಕ** (ನಾ). ೧. ಕಳ್ಳ : "ಮೂಸಕ—ಮೂಷಕ=ಇಲಿ, ಕಳ್ಳ" (ತದ್ಭಕೋ. ೩೭). ೨. ಇಲಿ : ಮೂಷಕ : ಅಳಿಗಂಧಭುಂಜನೆ ಮಧುಮಕ್ಷಿಕದ ಘೃತಗೊಡ ಮೂಸಕದ ದ್ವಾರಭೇದ (ಸರ್ವಶ. ೦೩೯-೬೮೩); ಮೂಸಕನ ಮೀಸೆಯ ಬಿಂದು ಮೂಱುಲೋಕವನು ಮುಳುಗಿತ್ತು (ಕಲ್ಯಾಕಾಂ. ೯-೦೦೪). [< ಸಂ. ಮೂಷಕ]

**ಮೂಸಕದೇರ** (ನಾ). = ಮೂಷಿಕವಾಹನ: "ಬಿಜ್ಜೆವಳಂ . . . ಮೂಸಕದೇರನೆನೆ ವಿನಾಯಕನ ನಾಮಂ" (ಅಭ್ಯಸ್ತ. ೫).

[ಮೂಸಕ + ತೇರ್₂ + — ಅ₇]

**ಮೂಸಜಿ** (ನಾ). ಒಂದು ಊರಿನ ಹೆಸರು : ಕಲ್ಲಮನೊಗ್ಗಾಣಮು [ಣ್ಣಗೆ]ಯ್ಕೆ [ಮೂ]ಸಜಿಚಿ ಕಳ್ಳವಳ್ಳ ಪೆದ್ದಮನಾಳುತ್ತುಮಿಟ್ಟು (ಕಇ. I, ೦೪-೩; ಸು. ೩೬೬). [ ? ]

**ಮೂಸು₁** (ಕ್ರಿ). ವಾಸನೆ ನೋಡು: ಆಘ್ರಾಣಿಸು: "ಮೂಸು–ಆಘ್ರಾಣೇ" (ಶಮದ); ಆ ದೇವರ ಮುಂದೆಳ ನಂದಿಯ ನೋಡಾ . . . ಅದು ಬಂದು

ಬಂದು ಪರಿವಾರದೇವತೆಗಳ ಮೂಸಿ ನೋಡಿತ್ತು ನೋಡಾ (ಸರ್ವಕ. ೨೫-೦೦೦); ಅರುಟ್ಟು ಕಳೆದ ಹೂ ನಿನ್ನ ಬಾಯದು ಕೇತಿವಾರಿಯೇ ಮೂಸಿ ಕೊಳು . . ಎಂದು ಕುಡಿದ ಮೂಳೆಯರು ನಗಿಸಿದರು ಬೀದಿಯ ಜನವನು (ಹಕಶಾ. ೪-೪೭). [ದೇ.॥ ತಮಿ. ಮೂಚು ; ಮಲ. ಮೂಕ ; ತುಳು. ಮೂಸು ; ಕೊಡ. ಪರ್ಜಿ. ಮೂಸ್ ; ತೆಲು. ಮೂಚುಚು: ಗೊಂಡಿ. ಮುಸ್ಕಾನಾ ; ಕುೞ. ಮೂಂಜ; ಕೋತ. ತೊದ. ಮೂತ್ ]

**ಮೂಸು₂** ' ಮುಸು₂ ' ನೋ.

**ಮೂಸುಂಡಿ** ' ಮುಸುಂಡಿ₁ ' ನೋ.

**ಮೂಸುಕೊಳವೆ** (ನಾ). ಮೂಗಿನ ಸೊಳ್ಳೆಗಳ ಮೂಲಕ ಗಾಳಿಯನ್ನು ಎಳೆದುಕೊಳ್ಳಲು ಅನುಕೂಲವಾಗುವಂತೆ ನಾಳವಿರುವ ಒಂದು ಬಗೆಯ ಸಲಕರಣೆ : ಆ ಮೂಸುಕೊಳವೆಯನ್ನು ಇಲ್ಲಿ ಕೊಡಿ (ಹಸುಹೊ. ೩೪). [ ಮೂಸು₁ + ಕೊಳವೆ (< ಕೊಟವಿ) ]

**ಮೂಸೆ, ಮುಶಿ, ಮುಸ್ಕಿ₂, ಮೂಶೆ** (ನಾ). ೧. ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸಲು ಬಳಸುವ ಸಾಧನ; ಕೋವೆ : "ಮೂಸೆ (ಮೂಸಿ, ಮೂಸಿ) ಮೂಷಾ–ಬಂಗಾರ ಮೊದಲಾದುವನ್ನು ಕರಗಿಸುವ ಕೋವೆ" (ಶಬ್ದಕೋ. ೩೮); ಬಳವೈರಿಯೆಂಬ ಸಾಧಕನಿಳೆಯಂ ಪೊಸಮೂಸೆ ಮಾಡೆ ಶಶಿಮಂಡಲಮಂ ಗುಳಿಗೆಯೆಡೆ ತಿಮಿರಕಾಳಿಕೆ ತೀಳಿದಂತೆ ಜಲಕ್ಕನಾಯ್ತು ಪೊಸವೆಳ್ದಿಂಗಳ್ (ಅನಂಪು. ೬-೯೩); ಗ್ರಾಫೈಟ್ ಮೂಸೆಗಳಲ್ಲಿ ಪುಡಿ ಮಾಡಿದ ಈ ಅದಿರನ್ನು . . . ಪಡೆಯಬಹುದು (ಕವಿಕೋ. I, ೬೩೯). **ಮುಶಿ :** ೧. ಟಂಕಸಾಲೆಯಲ್ಲಿ ೧೨೫೦ ರೂಪಾಯಿ ತೂಕ ಬೆಳ್ಳಿಯನ್ನು ತಸ್ತದಂಥಾದ್ದೊಂದು ಮುಶಿಯೊಳಗೆಯೆರಡು ಕಿದಿಗಳನ್ನು ಊದಿ ಕರಗಿಸುವರು (ಶಭಾಗ. ೨೬೨): ಈ ಕಬ್ಬಿಣದ ರಸವನ್ನು ಉಸುಬಿನ ಮುಶಿಗಳಲ್ಲಿ ಹೊಯ್ದು ನಳದ ಕೊಳವೆ . . . ಗುದ್ದಿಗೆ ಮುಂತಾದ ಪದಾರ್ಥಗಳನ್ನು ಮಾಡುವರು (ಮುಂಬಯು. ೬-೦೯). **ಮುಸ್ಕಿ :** ೧. ಪಾರಜ ಚಿನ್ನಗಳ ಮಿಶ್ರಣವನ್ನು ಮುಸಿಯೊಳಗಿಟ್ಟು ಕಾಸಿದರೆ ಪಾರಜವು ಉಗಿಯಾಗಿ ಹೋಗುವುದು (ಮುಂಬಯು. ೪-೦೦೨). ೨. ತಂಬಾಕನ್ನು ತುಂಬಿ ಸೇದಲು ಸಿದ್ಧಪಡಿಸಿದ ಮೂಸೆಯಾಕಾರದ ಹೊಗೆಕೊಳವೆ, – ಹೊಗೆಬತ್ತಿ: ಅಲ್ಲಿ 'ಮುಸಿ' ಸೇದುತ್ತ ಆಕೆಯ ಪತಿ ಬಸಪ್ಪ ಕುಳಿತಿದ್ದ (ಬರಹಾ. ೦೬) ; 'ಏಕ್ಕವಲೆ'ಯ 'ಮುಸಿ'ಯಲ್ಲಿ ತಂಬಾಕನ್ನು ತುಂಬಿ ಅದನ್ನು ಸೇದುವುದಕ್ಕ ಸಿದ್ಧಪಡಿಸಿಕೊಂಡು ಅವನು ಇನ್ನೂ ಆಕೆಯನ್ನು ನೆಟ್ಟ ಕಣ್ಣುಗಳಿಂದ ನೋಡುತ್ತಲಿದ್ದ (ಬನಸಿ. ೩). **ಮೂಶೆ :** ೧. ಗಂಧಕ ಆಲದ ಹಾಲಿನಲ್ಲಿ ಅರದು ಮೂಶೆಯಲ್ಲಿ ಅರ್ಧ ಮಡಗಿ ಮೇಲುಗಂಧಕ ಮಡಗಿ(ಗಂಧಶ್ರ. ೨-೨): ಭರತಖಂಡ ಕುಲುಮೆಯ ಮೇಲಿನ ಮೂಶೆಯಂತೆ ಇತ್ತು (ಶಾರದ. ೩೨೨).

[ ಸಂ. ಮೂಷಾ./ತುಳು. ಮೂಸೆ, ಮೂಚಿ ]

**ಮೂಹರಿ** (ನಾ). ೧. ಮೂರು ಬಗೆ ; ಮೂರು ರೀತಿ : ಮೂಹರಿಯ ಮೂರ್ತಿಗಳು ಸಹಿತಾನೆಂದಡಂಜುವರು (ಬಭಾಗ. ೬-೬-೮). ೨. (?) : ಭಾಗ್ಯದ ಮೂಹರಿಯ ಕಾಲದಲಿ ಖಗವರವಾಹನಾಂಘ್ರಿಯ ಭಕ್ತಿ ಶ್ರೀನೆಂತಂದಳಾ ದೇವಿ (ಬಭಾಗ. ೮-೦೩-೪೩). [ ಮೂ₁ (< ಮೂಱು) + ಪರಿ₃ ]

**ಮೂಹೊಱಡು, ಮುಪ್ಪೊಱಡು** (ನಾ). ಬೆನ್ನು, ಸೊಂಟ ಮತ್ತು ಮಂಡಿ– ಈ ಮೂರುಕಡೆಗಳಲ್ಲಿ ಉಂಟಾಗಿರುವ ಮೂರುಡೊಂಕು : ಮಾಣಿಸಿದವ್ಯೆ ದಿಟ ಘಟ್ಟಿವಾಳ್ತಿಯ ಮೈಯ ಮೂಹೊಱಡ (ಕುಮಾ.ಸ. ೦೦-೦೬). **ಮುಪ್ಪೊಱಡು :** ಈ ತೇಜವೀ ರೂಪು ತಕ್ಕುದೈ ಮುಪ್ಪೊಱಡು [ಪಾಠಾಂ. ಪೃಷ್ಠಜಗು] ವಿಧಿಕೃತವಕ್ಕು (ಬಭಾಗ. ೦೦-೩೬-೩೦).

[ಮೂ₁ ( < ಮೂಱು) + ಹೊಱಡು₂ (< ಪೊಱಂಡು₂)]

**ಮೂಹೊಱಡೆ** (ನಾ). ದೇಹದ ಮೂರುಕಡೆಗಳಲ್ಲಿ ಡೊಂಕನ್ನು ಹೊಂದಿರುವವಳು ; ಕುಬ್ಜೆ: ಚಂದನವಿತ್ತ ಮೂಹೊಱಡೆಯ ತನುವ ನೇರಂದವ ಮಾಡಿ ತೋಱಸಿದ ವೃಂದಾವನತಾತ್ಪರ್ಯನ ಕಾರುಣ್ಯದಿಂದೆ ಮೇಲ್ಗತೆಯ ವಿಸ್ತರಿಸು (ಮೋಹತ. ೪೦-೧). [ಮೂಹೊಱಡು + – ಎ₂]

**ಮೂಳ₁** ' ಮೂಟ ' ನೋ.

**ಮೂಳ₂** ' ಮೂಲ ' ನೋ.

**ಮೂಳಕಿವಿ** ' ಮೂಟಗಿವಿ ' ನೋ.

**ಮೂಳನಾಯಿ** (ನಾ). ಅಂಗವಿಕಲವಾದ ನಾಯಿ : ಸೂಳೆಯರ ಅವ್ವ ಮುದಿನಾಯಿ ಅವರಪ್ಪ ಮೂಳನಾಯಿ (ಸರ್ವಜ್ಞ. ೦೯೬೦); ಹೆಂಡತಿ ಹೆಗ್ಗಡತಿ ಯಾದರೆ ಗಂಡ ಮೂಳನಾಯಿಗಿಂತ ಕಡೆ (ಗಾದೆ).

[ ಮೂಳ₁ ( < ಮೂಟ) + ನಾಯಿ (< ನಾಯ್)]

**ಮೂಳಪ್ರತಿಷ್ಠೆ** (ನಾ). ಒಣಜಂಬ ; ಬಡಿವಾರ : ಆ ಜೋಯಿಸನು . . . ಎರಡನೇ ವರವಾದಾಗ್ಯೂ . . . ಮೂಳಪ್ರತಿಷ್ಠೆಯನ್ನು ಬಿಟ್ಟು ಮಗಳನ್ನು ಕೊಟ್ಟು ಮದುವೆ ಮಾಡುತೇನೆಂದು ನಿಶ್ಚೈಸಿಕೊಂಡಿದ್ದನು (ಮೂಮಗಾ. ೯).

[ಮೂಳ₁ ( < ಮೂಟ) + ಪ್ರತಿಷ್ಠೆ]

**ಮೂಳವಾಸನೆ** (ನಾ). ಅಲ್ಪವಾದ ಆಸೆ ; ಕೀಳುಬಯಕೆ : ಮನದೊಳಿದ್ದ ಕೀಳುಬುದ್ಧಿಯುಪರಾಧವ ಮೂಳವಾಸನೆಯ ಮೂಲವ ವೇದಾಂತಸಮ್ಮೇಳನದಿಂದ ಬಾಹ ಸುಖವ ಪೇಳುತ್ತ (ತತ್ವಪ. ೦೨೫–೨).

[ ಮೂಳ₁ ( < ಮೂಟ) + ವಾಸನೆ]

**ಮೂಳಿ** ' ಮೂಟಿ₁ ' ನೋ.

**ಮೂಳು** (ನಾ). ೧ ಕಿವಿಯಿಲ್ಲದಿರುವುದರಿಂದ ದೇಹದಲ್ಲುಂಟಾದ ಊನ,– ಅಂಗವಿಕಲತೆ : " ಮೂಳುಃ = ಕರ್ಣಹೀನತ್ವಂ " (ಶಾಶಕ್ಕ. ೨೬೨); ಈ ವಿಪಿನಾಂತ್ರರದ ಪರ್ಣಾಲಯದೊಳಿರುತಿಹರು ದಶರಥರಾಜ ನಂದನರು ಲೀಲೆಯಲಿ ತಾಂ ಚರಿಸುತಿರೆ ಕಟ್ಟಾಳುತನದಿಂ ಹಿಡಿದು ಮೋಸದಿ ಮೂಳು ಮಾಡಿದರು (ಅಪಂಶಾ. ೩-೪-೨). (ಗು). ೨. ಹರಿದುಹೋದ : 'ಮೂಳುಕಿವಿ' ಪರಾ. ೩.ಸಾಧಾರಣವಾದ : ನಾಡಾಡಿ : 'ಮೂಳು ನಾಯಿ' ಪರಾ. [ಮೂಳ₁ ( < ಮೂಟ) + – ಉ₄]

**ಮೂಳುಕಿವಿ** (ನಾ). ಹರಿದುಹೋದ ಹಾಲೆಗಳುಳ್ಳ ಕಿವಿ; ಹರಕುಕಿವಿ : ಮೂಳುಕಿವಿಯ ಮುದ್ದಿ ಮುಸಿದ ಗಂಡನ ಬಿಟ್ಟು ಕೇಳೂರೊಳೊಬ್ಬನ ಮೇಳಾದೊಳಿಹಳು (ಕರಕ. ೯೬–೫) [ಮೂಳು + ಕಿವಿ₃]

**ಮೂಳುನಾಯಿ** (ನಾ). ನಾಡಾಡಿ ನಾಯಿ ; ಸಾಧಾರಣವಾದ ನಾಯಿ ; ಬೀದಿನಾಯಿ : ಬೂದಿಗುಡ್ಡೆಯಲ್ಲಿಯೊ ಕಸದ ರಾಶಿಯಲ್ಲಿಯೊ ಮುದುರಿ ಮಲಗಿದ್ದ ಮೂಳುನಾಯಿಗಳು ಕಣ್ಣು ಬಿಡಲೂ ಮನಸ್ಸಿಲ್ಲದೆ ಮಲಗಿದ್ದುವು (ಮಲೆಮ. ೨೬೯). [ಮೂಳು + ನಾಯಿ (< ನಾಯ್) ]

**ಮೂಳೆ₁** (ನಾ). (ದೇಹದಲ್ಲಿರುವ) ಎಲುಬು ; ಅಸ್ಥಿ : "ಮೂಳೆ ಯೆಸಲ್ಕೆಲುಗಳು" (ಶಾರಸಿ. ೪೦) : ಮೂಳೆಯಂ ದಬ್ಬಾಕದಿಂದೆ ನುಗ್ಗುನುಱು ಚಪ್ಪಿಸೆಗಂ ಬಿತೆ ಬೀಸಿ ಪೊಯ್ದು (ಸುಕುಮಾ. ೬–೬) ; ಪೊಲೆಗೇರಿಯಂತೆ ಮೂಳೆಯ ಮಯಮಪ್ಪುದು (ರವರ್ಣಮ್ಮ. ೪–೦೬೫) ; ಮೂಳೆಗಳ ತುಪ್ಪವಂ ತಲೆಯೋಡಿನೊಳು ಹೊಯ್ದು (ವೀರರ. ಹ. ೪೯೬–೦೦).

ಮೂಳೆಚಕ್ಕಳವಾಗು, ಮೂಳೆಚಕ್ಕಳ ಆಗು=ದೇಹದಲ್ಲಿ ಎಲುಬು, ಚರ್ಮ ಎದ್ದುಕಾಣುವಂತೆ ಆಗು: ಬಹಳ ಬಡವಾಗು : ಈ ಪ್ರಕೃತಿಯ ಕನಿಷ್ಠವರ್ಗಕ್ಕೆ ಸೇರಿದವರು ಹೆಚ್ಚು ರಕ್ತಮಾಂಸಗಳಿಲ್ಲದೆ ತೀರ ಮೂಳೆ ಚಕ್ಕಳವಾಗಿರುತ್ತಾರೆ (ಕವಿಕೋ. I, ೪೦) ; ಒಂದು ಗರಿ ಹುಲ್ಲು ಸಿಕ್ಕೀತೇ ಎಂದು ದನಗಳು ಬೆಳಗಿನಿಂದ ಸಂಜೆಯವರೆಗೂ ಅಲೆಅಲೆದು ಮೂಳೆಚಕ್ಕಳ ಆಗಿದ್ದುವು (ದೇಶಾಂಕ. ೦). ಮೂಳೆ ಬಿಟ್ಟುಕೊಳ್ಳು=ದೇಹದಲ್ಲಿ ರಕ್ತ ಮಾಂಸವಿಲ್ಲದಾಗು : ಮೂಳೆಗಳು ಎದ್ದುಕಾಣು : ಸಾಯುವುದಕ್ಕೆ ಮುಂಚೆ ಕೆಲವು ದಿನಗಳ ಹಿಂದೆ ಅವಳು ಹೇಗೆ ಮೂಳೆಬಿಟ್ಟುಕೊಂಡು ವರ್ಣವಿಕಾರವಾಗಿದ್ದ ಬೆರಳುಗಳಿಂದ ತನ್ನ ಕೈಯನ್ನು ಅದುಮಿದ್ದಳೆಂಬು

ವನ್ನೂ . . . ಅವನು ಜ್ಞಾಪಿಸಿಕೊಂಡನು (ಭೃಸು. ೦೫೦).

[ದೇ. ತಮಿ. ಮೂಳೈ=ಮಜ್ಜೆ ; ಮಲ. ಮೂಳ=ಮಜ್ಜೆ ; ಕೊಡ. ಮೂಳೆ ; ತೆಲು. ಮೂಲಗ, ಮೂಲುಗು, ಮೂಲ್ಗ=ಮಜ್ಜೆ ]

**ಮೂಳೆ₂** (ನಾ). ತಿಳಿಗೇಡಿಯಾದ ಹೆಣ್ಣು; ಮೂಢಸ್ವಭಾವದ ಹೆಂಗಸು: ಮೂಳೆಯರರರಗುಲಿಗಳ್ ಪೆಣ್ಗಳ್ ಕಿಡುನಡೆಯರ್ (ಶಬ್ದಸಂದ. ೬-೩೩).

[ಮೂಳ₁ (< ಮೂಱು) + — ಎ₂]

**ಮೂಳೆದುಪ್ಪ** (ನಾ). ಎಲುಬಿನ ಮಧ್ಯದಲ್ಲಿರುವ ಮಾಂಸಸಾರ ; ಮಜ್ಜೆ : ಮೂಳೆದುಪ್ಪವನೆತ್ತಿ ತವಕದಿಂ ಕುಡಿಕುಡಿದು ಕಾಳಿಜದ ಖಂಡಮಂ ಸವಿಸವಿದು (ಶೀರರ. ೫. ೪೪೬-೦೬).

[ಮೂಳೆ₁ + ತುಪ್ಪ]

**ಮೂಳೆರೋಗ** (ನಾ). ದೇಹದ ಮೂಳೆಗಳು ಶಿಥಿಲವಾಗುವ ಒಂದು ಬಗೆಯ ರೋಗ ; ಹಕ್ಕಿರೋಗ : 'ವಿಟಮಿನ್ ಡ' . . . ದೇಹಕ್ಕೆ ಹಕ್ಕಿರೋಗ ಎಂಬ ಮೂಳೆರೋಗಗಳು ಬರದಂತೆ ಅವನ್ನು ರಕ್ಷಿಸುತ್ತದೆ (ಗೃಹಪ. ೪೦). [ಮೂಳೆ₁ + ರೋಗ]

**ಮೂಳ್ಳು** 'ಮೂಡ್ಲು' ಪರಾ.

**ಮೂಱಂಟೆ** (ನಾ). (?) : ದೇವರ್ಗ್ಗೆಲ್ಲಂ ಮೂಱಣ್ಟೆಯುಂ ಸೊಡರುಂ ಎರಡು ಪೊಟ್ಟುಂ ಸಂಕ × × × ಗೆಯ್ದು ಕಾಸಿಯನುಟ್ಟು (ಎಕ. X. ತಂಕಾಮು. ೩೯-೩, 955). [ ? ]

**ಮೂಱಚ್ಚೆ** (ನಾ). ಮೂರುಕಣ್ಣುಗಳು : ಮೂಱಚ್ಚೆಯುಳ್ಳನ ಮಸ್ತಕಂ ಗಂಡು ಬಹನೆಂದು ಭಾಷೆಯುಂ ಕೊಟ್ಟು ಬಂದೆ (ತಂಕೃ. ೦೬-೪೭). 'ಮೂವಚ್ಚೆ' ಪರಾ. [ಮೂಱು + ಅಚ್ಚೆ]

**ಮೂಱಡಿ.** ಮೂರಡಿ (ನಾ). ೧. ಮೂರುಹೆಜ್ಜೆ ; ಮೂರುಪಾದ. ೨. ಮೂರುಕಾಲು : ನಡವುದಾದಿಯುಗಂಗಳೊಳು ನಾಲ್ಕಡಿಯೊಳುನ್ನತಧರ್ಮವಾ ಮೂಱ[ಡಿಯಿಂ ವ]ಡಿಯೆ ನಡೆವುದು ಧರ್ಮವಾ ತ್ರೇತಾಯುಗಂಗಳಲಿ (ಜಿಚ. ೨-೩). ೩. ಮೂರುಹೆಜ್ಜೆಗಳಷ್ಟು ; ಮೂರು ಹೆಜ್ಜೆಗಳ ಪ್ರಮಾಣ : ಧರೆಗೊಡೆಯಂ ಚಕ್ರೇಶಂ ತಿರಿವನೆ ಬಲಿಯಲ್ಲಿ ಬೇಡಿ ಮೂಱಡಿನೆಲನಂ (ಸುಕು. ೬-೦೪೪). ೪. ಮೂರುಅಡಿಗಳ ಒಂದು ಅಳತೆ; ಮೂವತ್ತಾರು ಅಂಗುಲ : ಒಂದು ಕಾಲವರನೊಂದು ಕಣ್ಣವರ ಮೂಱಡಿಗಳವರ . . . ಕುದುರೆಮೊಗದವರ ದೇಶಂಗಳಂ ಕಂಡನಾ ಕಲಿಪಾರ್ಥನು (ಕೃಜಿಶಾ. ೦೬-೨೦). ೫. ಬೆಂಕಿಯ ಅಧಿದೇವತೆ ; ಅಗ್ನಿ : "ಅಗನಿ . . . ಇಂಗಳ ಕರ್ಬಟ್ಟಿಗ ತಾಂ ಮರಗೂಟನಿರದೆ ಮೂಱಡಿಯೆಂಬಂ" (ಕಶಿಸಂ. ೩೪). ☞ ಇದು ಸಂಸ್ಕೃತದ 'ತ್ರಿಪಾದ' ಎನ್ನುವುವರಿಂದ ಆಗಿದೆ. ೬. ತನ್ನ ಮೂಱು ಹೆಜ್ಜೆಗಳಿಂದ ಮೂರುಲೋಕಗಳನ್ನೂ ವ್ಯಾಪಿಸಿದವನು; ತ್ರಿವಿಕ್ರಮ. **ಮೂರಡಿ** : ೪. ಒಂದೊಂದೂ ಮೂರಡಿ ಎತ್ತರವಿತ್ತು (ಗಂಕೃ. ೯೭).

**ಮೂಱಡಿ ಮಾಡು**=ಮೂರುಹೆಜ್ಜೆಗಳಲ್ಲಿ ಅಳೆ ; ಮೂರುಹೆಜ್ಜೆಗಳ ಅಳತೆಗೆ ಹೊಂದಿಸು : ಮೂಱಡಿ ಮಾಡಿದಂದು ನೆಲನೆಲ್ಲಮನಾ ಬಲಿಗಾದ ರೂಪಮಂ ತೋಱಿದಂ . . . ಮುರಾಂತಕಂ (ತಂಶಶಾ. ೯-೬೦).

[ಮೂಱು + ಅಡಿ₁]

**ಮೂಱಡಿಗ** (ನಾ)=ಮೂಱಡಿ ೫ : "ಮರಗೂಟಂ . . . ಅಗನಿ ಮೂಱಡಿಗಂ . . . ಎಲರ್ಗೆಳೆಯಂ–ಈ ೧೩ ಅಗ್ನಿ" (ಕಶಾ. ೯೯-೩೩).

[ಮೂಱಡಿ + —ಗ₂]

**ಮೂಱಿರವು** (ನಾ). ನೀರು ಕುಡಿಯುವ ಜಾಗ, ಶತ್ರುವಿನ ಜಾಗ, ತನ್ನ ಮರಿ ಇರುವ ಜಾಗ–ಎಂಬ ಮೂರುಬಗೆಯ ಪ್ರಾಣಿಗಳ ನೆಲೆ: ಮೃಗದ ಮೂಱಿರವುಮನಾಱಯಮ್ಕೆಯುಮಂ ಗಾಳಿಯು[ಮನೆ]ಱಂಕೆಯುಮಂ ಬಲ್ಲನಾಗಿ (ತಂಶಶಾ. ೩-೪೩ ವ). [ಮೂಱು+ಇರವು₁(<ಇರ್)]

**ಮೂಱು.** ಮೂರು (ನಾ). ೧. ಒಂದು ಸಂಖ್ಯೆ : "ಪುರವಹ್ನಿತ್ರಯ ಮೂಱು" (ಶಂಗರಾ. ೦೦೩-೬) ; ಮೂಱುಮನ್ನಪ್ಪ ಒಸಗೆ ಉತ್ಸಾಹಂಗಳ್ ಒಂದೊಕ್ಕಲೊನ್ದು ಪುಟ್ಟಿಗೆ (ಎಕ. XIV. ೦೯೦-೦೭; 785); ಪಗರಣದೊಳು ಟಿವ ಮೂಱುಂ ನಗಿಸುಗುಮಪ್ಪುದಱಿನಲ್ಲಿಗಂತವದೋಷಂ (ಕಶಾ. ೦-೬೬); ನಡೆ ನೋಟಿಪ್ಪಿಡಮಂತುಮಿಂತು ಮೂಱಿಸಿಯವು ಮೂಱು ದೊಡ್ಡಿದುವು ಮೂಱಿಡೆ ಶೆಳ್ಳಿದುವಂಬುಜಾಕ್ಷಿಯಾ (ಕಂಶಶಾ. ೪-೬೨). ೨. ಮಕ್ಕಳು, ಹೆಂಡತಿ ಮತ್ತು ಹಣ ಎಂಬ ಮೂರರ ಮೇಲೆ ಮನುಷ್ಯನಿಗಿರುವ ಮೋಹ ; ಈಷಣತ್ರಯ : ಪ್ರಚುರಂ ಪತ್ತೊಳಗಾಗೆ . . . ಮೂಱು ನಂಬದೆರಡಂ ಬಿಟ್ಟೊಂದಱೊಳ್ ನಿಲ್ಲದಾ ವಚನಬ್ರಹ್ಮದೆ ಮುಕ್ತಿಯೇ (ಶೋಮೇಶ. ೦೦೦). ೩. ಸತ್ತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ಮೂರುಗುಣಗಳು: ತ್ರಿಗುಣ : ಮೂಱಱಿಂದಲಿ ಹೊಱಗೆ ತೋಱುವ ದನು ಗುರು ಆಱಱಿಂದಱೊಳಗೆ ತೋಱದಡೆ ಶಿಷ್ಯ ತಾನಾಱಡಿಗೊಂಬ (ಶರಣ. ೬೦). ೪. [ವೀಶೈ] ಇಷ್ಟ, ಪ್ರಾಣ ಮತ್ತು ಭಾವ ಎಂಬ ಮೂರು ಲಿಂಗಗಳು : ಅಱಿಕ್ಕೆ ಆಱ ನೆಲೆ ಮಾಡಿ ಮೂಱಱಿಕ್ಕೆ ಮೂಱ ಸಂಬಂಧಿಸಿ ಐದಕ್ಕೆ ಇನ್ನು ಪ್ರತಿಯಿಲ್ಲವೆಂದು ಅಱಿದ ವಿರಕ್ತರು ಪುರಾತನರಂತೆ ಸಮ್ಯಜ್ಞಾನಕ್ರೀಯಿಂದಲೆ ಆಚರಿಸುವುದು (ಶಶಿ. ೨೯-೨೩). **ಮೂರು:** ೧. ಅಂತೂ ಮೂರಕಂ ಗ ೭೨ (ಜ್ಯೋ. ೦೯೯೩.೯೭-೯೭; 1407); ಅವನಿಗೆ ಮುಗಿಲು ಮೂರೇ ಗೇಣು ಉಳಿದಂತೆ ಭಾಸವಾಯಿತು (ಸ್ಯ.ಶಿ. ೩೬೦).

**ಮೂರುನಾಮ**=ಶ್ರೀವೈಷ್ಣವರು ಹಣೆಯ ಮೇಲೆ ಉದ್ದುದ್ದವಾಗಿ ಧರಿಸುವ (ಎರಡು ಬಿಳಿ ಮತ್ತು ಮಧ್ಯೆ ಒಂದು ಕೆಂಪುಬಣ್ಣದ) ಮೂರು ಗೆರೆ. –ನಾಮ : ಮೂರುನಾಮದವ ಸ್ವರ್ಗಕ್ಕೆ ಹೋದರೆ ಹನ್ನೆರಡು ನಾಮದವ ಎಲ್ಲಿ ಹೋದಾನು ? (ಗಾದೆ). **ಮೂರುನಾಮ ಹಾಕು** (ಆಲಂ) ನಂಬಿಸಿ ಮೋಸಮಾಡು, – ವಂಚಿಸು : ಅವನು ಕೆಲಸ ಕೊಡಿಸುತ್ತೇನೆಂದು ಹಣ ತೆಗೆದುಕೊಂಡು ಎಲ್ಲರಿಗೂ ಮೂರುನಾಮ ಹಾಕಿ ಹೊರಟುಹೋದ (ರೂಢಿ). **ಮೂವರ್, ಮುವರ್, ಮುವ್ವರು, ಮೂವರು**= ಮೂರುಜನ ; ಮೂರುಮಂದಿ : ತನ್ನ ತಮ್ಮಂ ವಿಚಿತ್ರವೀರ್ಯಂಗಾ ಮೂವರ್ ಕನ್ನೆಯರಂ ಪಾಣಿಗ್ರಹಣಂಗೆಯ್ದಾಗಳ್ (ಪಂಪಭಾ. ೦-೬೪ ವ) ; ಆನುಂ ದುಶ್ಶಾಸನನುಂ ನೀನುಂ ಮೂವರೆ ದಲಾತನುಂ ಕಟಿದ ಬೞಿಕ್ಕಾನುಂ ನೀನೆ ದಲ್ (ಗದಾಯು. ೩-೦೦); ನಗರಲ ಪನ್ನಿರ್ವ್ವರು ಮಹಾಪರಿಶೆಯು ಎಡೆನಾಡ ಮುವನ್ನಾಱ್ವೊಕ್ಕಲುಂ ಮುಖ್ಯಗಳುಂ ಸಕ್ಷಿ (ಎಕ. III. ತಂಶ ೦೫೩-೯; ಸು. 970); ಅತ್ತೆ ಮಾಯೆ ಮಾವ ಸಂಸಾರಿ ಮುವ್ವರು ಮೈದುನರು ಹುಲಿಯಂಥಾ ಅವದಿರು (ಜಾನಪದ. ೭. ೦೯೩-೩೨೬); ಹಗೆಗಳುಳಿದಿರಿ ಮೂವರೆಂದನು ಭಾನುಸುತ ಮುಳಿದು (ಕುವ್ಯಾ. ೯-೦೬); ಮಡದಿಯರು ಮೂವರಿಗೆ . . . ವಿಂಗಡಿಸಿ ಕೊಟ್ಟನು ನೃಪತಿ ಪರಮೋದನವನುಚಿತದಲಿ (ತೊರವ. ೦-೭-೩೭). **ಮೂಱುಕೊಡೆ ಆಣ್ಡಯರ್**=ಹಿಬ್ಬಾತನ ಹೆಸರು : ಸಿಯಗೆಲ್ಲರ್ ಮೞುಗೆರೆನಾಡುಮೂನೂಱುಮನಾಳೆ ಮೂಱುಕೊಡೆ ಆಣ್ಡಯರ್ ಪೆಣ್ಣನೂರಾ ಏಱಿನುಳ್ಳೆಱಿದು ಬಿಟ್ಟಾರ್ (ಎಕ. XVI. ಕುಮು. ೯೬-೩; 750). **ಮೂಱುಬಟ್ಟೆ** = ೧. ಹುಟ್ಟು, ಬೆಳವಣಿಗೆ ಮತ್ತು ಸಾವುಗಳೆಂಬ ಮೂರು ಪಥ : ಮೂಱುಬಟ್ಟೆಯನಳಿದ ಬಟ್ಟಬಯಲೇ ದಿಟ್ಟದಿಟ್ಟಯಿಟ್ಟಪ್ಪ ನಿಜಲಿಂಗದೊಳಗೆಱಗೊಳೆ (ಅಪಶಂ. ೨೯೦-೦೨೯೦). ೨. ಮೂರು ದಿಕ್ಕು – ಹಾದಿ : ನಟ್ಟನಡುವಿನ ಬದುಕಿಗೇಕೆ ಚಿಂತಿಸುತ್ತಿರುವೆ ಕಟ್ಟಕಡೆಯಲಿ ಮೂಱುಬಟ್ಟೆ ತಾನಲ್ಲವೆ (ಪುರಂದ. ದಾ. ೨-೬೯-೦). **ಮೂಱುರಾಯಕಲಿಕುವರ**=ಒಂದು ಬಿರುದು : ಶರಣಾಗತವಜ್ರಪ್ರಾಕಾರಂ ಮೂಱುರಾಯಕಲಿಕುವರ . . . ಸೋಮೇಶ್ವರದೇವ (ಕಜಿ. ೩೦-೪೨-೦೭; 1124). **ಮೂಱುರಾಯರ ಗಂಡ**=ಒಂದು ಬಿರುದು : ಮೂಱುರಾಯರ ಗಂಡಾಂಕಃ ಪರರಾಯಭಯಂಕರಃ ಹಿಂದುರಾಯ ಸುರತ್ರಾಣಯಿ (ಇ)ತ್ಯಾದಿ ಬಿ(ರು)ದೋ(ದೋ)ನ್ವಿತಃ ತಸ್ಮಿಂನಚ್ಯುತಭೂಪಾಲೇ ಪಾಲಯತ್ಯ

ಖಿಲಾಂ ಮಹೀಂ (ಇಂ. IV, ೩೩೦-೦೦ ; 1538). ಮೂಱುರಾಯಾಸ್ಥಾನಕಲಿ=ಒಂದು ಬಿರುದು : ಬನವಾಸಿಪುರವರೇಶ್ವರಂ ಗಣ್ಡರ ಗಣ್ಡಗಣ್ಡಭೇರುಣ್ಡಂ ಮೂಱುರಾಯಾಸ್ಥಾನಕಲಿ . . . ನಾಮಾದಿ ಸಮಸ್ತ ಪ್ರಸಸ್ತಿ ಸಹಿತಂ (ಕ್ಕ. IV, ೯೦-೬; 1046).

[ದೇ.॥ ತಮಿ. ಮೂನ್ಱು, ಮೂಣ್ಣು; ಮಲ. ಮೂನ್ನು; ತುಳು. ಕೊಡ. ಮೂಂದ್; ಮೂಜಿ; ತೆಲು. ಮೂಡು; ಗದಬ. ಮೂಂಡ್; ಗೊಂಡಿ. ಮೂಂಡ್, ಮೂಂದ್, ಮುಂಡ್, ಮುಡು; ಕುಇ. ಮೂ, ಮುಂಜಿ]

**ಮೂಱುಂಕೇರಿ** (ನಾ). ಮೂರುಕೇರಿ, — ಬೀದಿ : ಪುಱಗೇಱಿಯಾ ಮೂಱುಙ್ಕೇರಿಯಾ ಪಟ್ಟಗಾಱರ ಸೇಣೀ(ಣಿ)ಯುನಿತ್ತ ಧರ್ಮ್ಮ ನಾಲ್ವತ್ತು (ಎ೩. VI, ೦೬೬-೯; 793). ಶ "ಒಂದು ನಿರ್ದಿಷ್ಟ ಪಂಗಡದ ವಿಭಾಗ, ಒಂದು ವರ್ಗಕ್ಕೆ ಮೀಸಲಾದ ವಸತಿ, — ಕೇರಿ, ಒಂದು ಊರಿನ ವಿಭಾಗ" (ಎ೩. VI, ೦೬೩ ೦೩೮). [ಮೂಱು + ಕೇರಿ]

**ಮೂಱುಗೆಯ್** (ಕ್ರಿ). ಮೂರುಭಾಗಗಳನ್ನಾಗಿ ಮಾಡು, -ವಿಂಗಡಿಸು: ಅಂತು ಮೂಱುಗೆಯ್ದು ಋತುಗಳಂ ಪಡೆವ ಪೃಥ್ವಿಯಂತೆ ಋತುಮತಿಯಾಗಿ ದೇವಕಿ ಪೆತ್ತ ಮಕ್ಕಳಸತ್ತ ನೈಗಮದೇವನೆತ್ತಿಕೊಂಡುಯ್ವಂ (ಅರಿಪು. ೭-೩೯ ಪ). [ಮೂಱು + ಕೆಯ್₁]

**ಮೂಱುಜಾತ್ರೆ** (ನಾ). (ವರ್ಷದಲ್ಲಿ ನಡೆಯುವ) ಮೂರು ಉತ್ಸವ, — ಪರ್ವ : ಅಲ್ಲಿ ಸೌಧರ್ಮೇಂದ್ರಪ್ರಮುಖಸುರಾಸುರಸಮಿತಿ ವರ್ಷಂಪ್ರತಿ ಮೂಱುಜಾತ್ರೆಯೊಳಷ್ಟಾಹ್ನಿಕಮೆಂಬ ಮಹಾಮಹಿಮೆಯ ಮಾಳ್ಪಂ (ಚಂದ್ರಪ್ರಭ. ೨೬-೩). [ಮೂಱು + ಜಾತ್ರೆ]

**ಮೂಱುಸಂಜೆ, ಮೂರುಸಂಜೆ** (ನಾ). ೧. ದಿನದ ಮೂರು ಸಂಧಿಕಾಲಗಳು ; ಬೆಳಗು, ಮಧ್ಯಾಹ್ನ ಮತ್ತು ಸಂಜೆ ; ತ್ರಿಸಂಧ್ಯೆ : ಮೂಱುಸಂಜೆ [ಪಾಠಾಂ. ಧ್ಯೆ]ಯೊಳಸುನಯಂ ಮಿಗೆ ತನ್ನ ಗುರುಪದವನಜರಜಮೋರಂತೆ ತನಗವತಂಸಮಾಗಿರಲು ಸ್ತುತಿಸುತಂ (ಬಸವ. ೩೯-೯). ೨. ಸಾಯಂಕಾಲ ; ಮುಚ್ಚಂಜೆ : ಒಂದು ಯೋಜನಪರ್ಯಂತಂ ಮೂಱುಸಂಜೆಯೊಳಲ್ಲದುಳಿದ ಪೊತ್ತಱೊಳು . . . ಸುಡಿಗುಂ (ಚಂದ್ರಪ್ರಭ. ೦೬-೯). **ಮೂರುಸಂಜೆ** : ೨. ಮೂರುಸಂಜೆಯ ಪೊತ್ತಿನೊಳಗೆ ಬಲುಸನ್ನಾಹದಿಂ ಸೇನೆಯಂ ನೆರಹಿ ಉಳುಕಲಿನ ಭಟುರ್ಗಂ ಕರೆಸಿ ಕರ್ಪೂರವೀಳ್ಯವನ್ನಿತ್ತು ಗುರು ನುಡಿದನು (ಕುಕಂಗ. ೫೬-೯೩) ; ಒಂದು ದಿನ ಮೂರುಸಂಜೆಯಲ್ಲಿ ಕೆಲವರು ತಮ್ಮ ತಮ್ಮ ಕೊಡಗಳನ್ನು ತಕ್ಕೊಂಡು ಹೊಳೆಯ ನೀರಿಗೆ ಹೊರಟರು (ಕಥಾ. ೩೬). [ಮೂಱು + ಸಂಜೆ]

**ಮೂಱೂರ್** (ನಾ). ಒಂದು ಊರಿನ ಹೆಸರು : ಅನ್ತು ಬನ್ದು ತಾಯೂರ ಇಗ್ಗಲಿಯ ಅರಿಷುರ ಮೂಱೂರ ಸನ್ದಿನಲ್ಲಿ ತಣ್ಣಾಲಿಗಾಲ ಮೂಡಣ ಪೇರೊಟ್ಟಿಯಿಂ (ಎಕ. III, ತಂ೩೫. ೦೩೯-೦೯; 916 ?) ; ಮೂಱೂರ ಗ್ರಾಮದೊಳಗೆ ತಮ್ಮ ಹರವರಿಯ ಭೂಮಿಯ ಕಾರಗದ್ದೆಯೊಳಗೆ . . . ಗದ್ದೆ ಮೂಡೆ ೧೦ (ಎ೩. XXVII, ೦೬೦-೩೦; 1256). [ಮೂಱ್ + ಊರ್]

**ಮೂಱೆಲೆ, ಮೂರೆಲೆ** (ನಾ). ೧. ಮೂರುಎಲೆ ; ಮೂರುದಳ : 'ಮೂಱೆಲೆಗನ್ನೆ', 'ಮೂಱೆಲೆಹೊನ್ನೆ' ಪರಾ. **ಮೂರೆಲೆ** : ೨. ಇಸ್ಪೀಟಾಟದಲ್ಲಿ ಮೂರು ಮೂರು ಎಲೆಗಳನ್ನಿಟ್ಟುಕೊಂಡು ಆಡುವ ಒಂದು ಬಗೆಯ ಆಟ ; ಪರೇಲ್ : 'ಮೂರೆಲೆಯಾಟ' ಪರಾ. [ಮೂಱು + ಎಲೆ₁]

**ಮೂಱೆಲೆಗನ್ನೆ** (ನಾ). ಒಂದು ಬಗೆಯ ಸಸ್ಯ : "ಮೂಱೆಲೆಗನ್ನೆ — ವಿದಾರಿಗಂಧೆ, ಸಾಲಪರ್ಣಿ, ಅಂಶುಮತಿ, ಸ್ಥಿರೆ, ಧ್ರುವೆ" (ಪಾ೩ರಾ. ೬). [ಮೂಱೆಲೆ + ಕನ್ನೆ₁]

**ಮೂಱೆಲೆಹೊನ್ನೆ, ಮೂರೆಲೆವೊನ್ನೆ, ಮೂರೆಲೆಹೊನ್ನೆ** (ನಾ). = ಮೂಱೆಲೆಗನ್ನೆ : "ಶಾರಿಬಾ — ಮೂಱೆಲೆಹೊನ್ನೆ" (ಪಾಶಬ. ೨-೨-೬೦) : "ಅಂಶುಮತಿ — ಒಂ(ಹೊಂ)ದೆಲಗ, ಮೂಱೆಲೆಹೊನ್ನೆ, ಇಂಗು" (೬೩ಧಿ. ೫) ; ಕಳ್ಳಂಗಡಲೆಯ ಬೇರು . . . ಮೂಱೆಲೆಹೊನ್ನೆ, ಇವ ಅಷ್ಟಾವಶೇಷವಾಗಿ ಕಾಸಿ ಕೊಡಿಸಲು ವಾತಶೋಣಿತ ಶಮನವಹುದು (ವೈದ್ಯಸಾ. I, ೯೩೯). **ಮೂರೆಲೆವೊನ್ನೆ** : "ಗಳಃ — ಮರದೇರಣ, ತದುಕು, ಮೂರೆಲೆವೊನ್ನೆ" (೬೩೦. ೯೯). **ಮೂರೆಲೆಹೊನ್ನೆ** : "ದಾವನಃ — ಚಿತ್ರಮೂಲ, ಮೂರೆಲೆಹೊನ್ನೆ" (೬೩೦. ೭೫) ; ನೆಲಬೇವು . . . ಮೂರೆಲೆಹೊನ್ನೆ, ಶುಂಠಿ ಇವುಗಳ ಕಷಾಯವಿಕ್ಕಿ ಸೇವಿಸಿದರೆ ವಾತಜ್ವರಂ ಕೆಡುಗುಂ (ಸಳವ್ಯ. ೬೫). [ಮೂಱೆಲೆ + ಪೊನ್ನೆ]

**ಮೂಟ, ಮೂಳ₁** (ನಾ). ೧. ಕಿವಿಯು ಹರಿದುಹೋದವನು ; ಕಿವಿಯಿಲ್ಲದವನು : "ಕಿವಿಯಿಲ್ಲದಂ ಮೂಳ[ಟ]ನಕ್ಕು" (ಮಂಗರಾ. ೦೦೫-೬). ೨. ಬುದ್ಧಿಯಿಲ್ಲದವನು ; ತಿಳಿಗೇಡಿ ; ಮೂಢ : ಗಾಳುಗಣ್ಣರಿಮವಾಸೆಯ ಮಸಗೆಯಂತೆ ಬೇಡಳೊಂದೊತ್ತೆಯನಿಲ್ಲ ಪೆಣ್ಣನಿಕಿ ಪಾವುಗೆಯಂ ಗಡಿಗಟ್ಟಿ ರೇಖೆಗಳ್ ಪತ್ತಿದುವಾದೊಡಂ ಬಱಿಯ ಸೋಲಮೆ ನೋಡಿರೆ ಮೂಳ[ಟ] [ಪಾಠಾಂ. ಲ]ನಾಟವಂ (ಅಪಂಪು. ೬-೦೫ ; ಸೂಕ್ತಿಸು.೬-೯೬೨ ನೋ). 'ಕುನ್ನಿಮೂಟ' ಪರಾ. (ಗು). ೩. ಹರಿದು ಹೋದ ; ಭಂಗಹೊಂದಿದ : 'ಮೂಟಗಿವಿ' ಪರಾ. **ಮೂಳ₁** : ೧. "ಮೂಳಃ — ಕರ್ಣಹೀನಂ" (ಕಾಕ್ಯ. ೨೬೨). ೨. ತುತ್ತಿನಾಸೆಗೆ ಲಿಂಗವ ಕೊಟ್ಟುಹೋಗುವ ವ್ಯರ್ಥಮೂಳ ನಿನಗೆ ಗುರುವಾದನಲ್ಲದೆ (ಪಪಸಂ. ೩೬೨-೦೯೦) : ಚಂಡಿತನವಲ್ಲೀಸುದಿನ ಕದ್ದಂಡ ಮೂಳನನೇನ ಮಾಡುವೆ ಮೆದನು (ಸಂಕಪ. ೧೬-೦೦೯). 'ಕಾಳುಮೂಳ' ಪರಾ. ೪. ಯಾವುದಾದರೂ ಅಂಗದ ನ್ಯೂನತೆಯುಳ್ಳವನು ; ಅಂಗಹೀನ : "ಮೂಳ — ಮುಕ್ಕ, ಅಂಗಹೀನ" (ಪಾಶಕೋ. ೩೯). ೫. ಬರಿದಾದ ಸ್ಥಿತಿ ; ಖಾಲಿಯಾಗಿರುವಿಕೆ ; ರಿಕ್ತತೆ : (ಕ). ೬. ಅಲ್ಪನಾದವನು ; ಕ್ಷುದ್ರ : ಖೂಳರು ಮೂಳರು ಕಾಳರು ಇದು ನಾಚಿಕೆಗೇಡು (ಅರಳು. ೩೯೩-೦೯). ೭. ಅಲ್ಪವಾದ : ಸ್ತ್ರೀಪುರನೆಚ್ಚು ಜಯಿಸಿದೊಂದು ಮೂಳವಿಡಾಯ ಮೇತಕೆ ಪಂಚಶರಗೆ (ಶರಶ. ೬-೮೦).

ಮೂಳಮೂಳುವ = ಅಲ್ಪನಾದವನು ; ಕ್ಷುದ್ರ : ಅವನೋ, ಆ ಚಿಕ್ಕಂದಿನ — ಬಿಡದ ಜಗಳ . . . ಮೂಳ ಮುತುವ ! (ಪುಂತ್ರಕ. ೦೦೬-೯). 'ಮೂಢ' ಹೋ. ಶ ಈ ಶಬ್ದದಲ್ಲಿ 'ಟ' ದ ಅಸ್ತಿತ್ವ ವಿಚಾರಣೀಯವಾಗಿದೆ. [ದೇ.॥ ತಮಿ. ಮಲ. ಮೂಳ]

**ಮೂಟಗಿವಿ, ಮೂಳಕಿವಿ** (ನಾ). ಹರಿದಿರುವ ಹಾಲೆಗಳುಳ್ಳ ಕಿವಿ ; ಹರುಕುಕಿವಿ : ಮತ್ತಂ ಮೂಳ[ಟ]ಗಿವಿಯುಂ ಪೊಱಮಾಯ್ದ ಪಲ್ಲುಂ . . . ತೊಟ್ಟ ಕಾಸಿಯುಂ ಬೆರಸು [ಹಂಸೆಯೊಳಗೆ ಹೊಱಸು ಬಂದಿರ್ಪಂತೆ ಬರ್ಪುದುಂ] (ವಡ್ಡಾರಾ. ೬-೨೨೫). **ಮೂಳಕಿವಿ** : ಮುಂಡೆಗೆ ಗಂಡ ಬಾಳನು, ಮೂಳಕಿವಿಗೆ ಓಲೆ ಬಾಳದು (ಗಾದೆ). [ಮೂಟ + ಕಿವಿ]

**ಮೂಟಿ₁, ಮೂಳಿ** (ನಾ). ೧. ಕಿವಿಯಿಲ್ಲದವಳು ; ಕಿವಿಹರುಕಿ : "ಮೂಟಿ = ಕಿವಿಯಿಲ್ಲದವಳ್, ಕರಗದ ನಾಳಿ (ಜೂಳಿ ?)" (ಕಪುರ. ಕಂ. ೦). ೨. ಕೆಟ್ಟವಳು ; ದುಷ್ಟೆ : "ಶುಕನ್ಯೆಯೊಳ್ ಜೂಳಿಯೊಳ್ ಮೂಟಿಯುಕ್ಕುಂ" (ಸಂಜೀಶ. ೦೫); ಕೇಡೆಣಿಸಿರ್ದ ಮೂಟಿ ನಿಮ್ಮಭ್ಯುದಯಮಂ ನೋಟ್ಪಳೇ (ಶ್ರೀಚಾತ. ೫-೦೦). **ಮೂಳಿ** : ೧. ಬಂದವರಿವರಾರು ಅಂದಗೇಡಿಯ ಮೂಳಿಯ ಮಕ್ಕಳು (ಸಳಶ. II, ೬೫೬-೦೮೬೬) ; ಇದ್ದರಲ್ಲಿ ಸಹಸ್ರಸಂಖ್ಯೆಯ ಮದ್ದುಳಟಲದ ಮಾಯಕಾತಿಯರಿದ್ದೆಸೆಯ ಕಿವಿಗೊಯ್ಕಿಯರು ಮೂಳಿಯರು ಮುಕ್ಕಿಯರು (ಕೊರಾ. ೫-೨-೩೯) ; ಅಸುರಪತಿ ಮಡದಿದೀ ಪರಿಯೊಳ್

ಮೂಳೆಯಿಂದೀ ಮುಪ್ಪದಿ (ವಿಂಕಾರಾ. ೬-೪೭-೬). ೨. ಕದವ ಮುಚ್ಚಿದ ಳಿಕೋ ಗಮ್ಯಾಳಿ ಮೂಳಿ (ಕುರಂದ. ೨-೯೬ ಶಬ್ದಿ) : ದುಷ್ಟಮೂಳಿ ಪೊಗಲೀಯಳು . . . ಎಂದು ಪತಿಕಾರ್ಯಮಂ ನೆನೆದು ಚಿಂತಿಸಿದ ಮರುತಭವನು (ವಿಂಕಾರಾ. ೩-೩-೦೩). ೩. ಬರಿದಾಗಿರುವಿಕೆ ; ಬೋಳಾಗಿರುವಿಕೆ : 'ಕತ್ತುಮೂಳಿ', 'ಕಾಲುಮೂಳಿ' ಪರಾ. ೪. ಕಿವಿಯಲ್ಲಿ ಯಾವ ಆಭರಣವೂ ಇಲ್ಲದವಳು : ಬೋಳುಕಿವಿಯವಳು : (?). ೫. ಗಂಡನಿಲ್ಲದವಳು : ವಿಧವೆ : ನನ್ನ ವಸ್ತ್ರವನ್ನು ಕಳೆದುಕೊಂಡು ತಲೆಗೆ ಮುಸುಕಿಳಿದುಕೊಂಡು ಮೂಳ್ಳ ನಾನೊಬ್ಬಳು ನಿನ್ನ ಪ್ರಾಣಕ್ಕೆ ತಗುಲಿ ಬಿದ್ದಿದ್ದೇನೆ (ಕುಹಾಗ. ೨). ೬. (?) : ಹೊಂನು ೧೫ ಮೂಳಿ ತೆಜಿ ಕೊಟರು (ಸೌಇಂ. ೦೯೨೯. ಉಡುಪಿ. ೪೯೦-೦೪ ; 1201).

[ ಮೂಟ + – ಇ₂./ ತಮಿ. ಮಲ. ಮೂಳಿ ]

**ಮೂಟೆ₂** (ನಾ). (ಮುಚ್ಚುಳವನ್ನುಳ್ಳ) ಪಾತ್ರೆಯ ಅಥವಾ ಗಿಂಡಿಯ ಸೊಂಡಿಲಿನಾಕಾರದ ಕೊಳವೆ ;–ನಳಿಕೆ : "ಮೂಟೆಯೆಂದು ಕಿವಿಯಿಲ್ಲದಳುಂ ಕರಗದ ಜೂಳಿಮುಮುಮುಕ್ಕು" (ಕಮುದ. ಪ. ೩೩ ಶ್ರಯೋ) ; "ಕುಕನ್ನೆಯೊಳ್ ಜೂಳೆಯೊಳ್ ಮೂಟೆಯುಕ್ಕು" (ಸಂಶೀಪ. ೦೩).

[ ದೇ.? ತಮಿ. ಮೂಟೆ ]

**ಮೂಟೆವಳ್ಳಿ** (ನಾ). ಒಂದು ಊರಿನ ಹೆಸರು : ಅರಸನ್ಗೆ ಬಾಳ್ಗಚ್ಚು ಪಲ್ಮಡಿಉಂ ಮೂಟೆವಳ್ಳಿಉಂ ಕೊಟ್ಟಾರ್ (ಪ್ರಮಿಂ. ೦೯೩೬, ೦೬-೦೨ ; 450).

[ ? + ಪಳ್ಳಿ₁ ]

**ಮೂಟ್ಟ್ಯಾಡು** (ನಾ). (?) : ಕಸವಯ್ಯ ಆಳ್ವೊನ ಬೆಸದೊಳ್ಮೆಯು ವಕ್ಕದ ಮೂಟ್ಟ್ಯಾಡಿನೊಳ್ಕಾದಿ ಇಸ್ವರಂ ಕೊಂಡು ತಾನುಂ ಸಗ್ಗಯಾದನ್ (ಎಕ. X, ಗುಬಳಿ. ೨೨೯-೬ ; ೯೦೦). [ ? + ಕಾಡು₂ ]

**ಮೂಟೆಗ್ಗೊಡಿ** (ನಾ). (?) : ಪನ್ನೆರಡುಗದ್ಯಾಣದಿಂದೊಳಗಾದ ದಣ್ಡಮುಂ ಮೂಟೆಗ್ಗೊಡಿ ಒಳ್ದೆಣ್ಟೆಯ×ಯುಮ ಬಿಟ್ಟಂ (ಎಕ. XI, ದಾವ. ೦೩೨-೩೯ ; ೯೮೦). [ ? ]

**ಮೂಟ್ಟಿಅರಸ** (ನಾ). ಒಬ್ಬಾತನ ಹೆಸರು : ಸಿಯಕೆಲ್ಲ ಕೆಸುವಣ್ಣ ನಾಡಾಳೆ ಮೂಟ್ಟಿಅರಸರಾಳ್ ಮಾರಿದಾಸಕರಿಯು ತಮ್ಮನ್ (ಎಕ. XVI, ಕುಡುಕಳು. ೯೩-೬ ; 780). [ ? + ಅರಸ₁ ]

**ಮೃಗ** (ನಾ). ೧. ಚತುಷ್ಪಾದಿ ; ಪ್ರಾಣಿ ; ಪಶು : "ಮೃಗದಲ್ಲಿಯುಂ ರೂಪಮೆಂಬುದು" (ಹಲಾಯು. ೦೩೬-೩೦) : ಮೃಗ ಪಶು ಶಕುನಿಗಣಂಗಳೊಳಗಣಿತನಿಜಜಾತಿಜನಿತಭಾಷೆಗಳೆಂದುಂ ನೆಗಟ್ದಂತಿರೆ (ಕಾಬಿ. ೦-೭) : ಮೃಗಮೆಲ್ಲಂ ಕೃಷ್ಣಮೃಗಂ ಖಗಮೆಲ್ಲಂ ಕೋಗಿಲೆ . . . ಎನಿಸಿದುದಾಗಳ್ (ವರ್ಧ. ೬-೩೦). ೨. (ಕಾಡಿನಲ್ಲಿರುವ) ದುಷ್ಟಜಂತು ; ಹಿಂಸ್ರಪ್ರಾಣಿ : ನೆಲನುಂ[ಗಾ]ಳಿಯುಂ ಕಮ್ಮುಂ ಮೃಗಮುಮನಜಿದು ಕಾಲಾಳೊಳಂ ಕುದುರೆಯೊಳಮೊಳಗಂ ಬರಲಾನೆ ಬಲ್ಲಂ (ಸಂಶಕಾ. ೩-೪೩ ವ). ೩. ಜಿಂಕೆ ; ಎರಳೆ : "ಏಣಃ, ಕುರಂಗಃ, ಹರಿಣಃ, ಮೃಗಃ — ಈ ೪ ಹುಲ್ಲೆ" (ಹಲಾಯು. ೩೯-೬೬) ; ಮೃಗಮುಂ ಪವನಂ . . . ವೃಷಭನುಂ ಹರನೇಜ್ ಸಭಕ್ತಿ ಸಲ್ವುದುಂ (ಜಗಂ. ೦-೩೬) ; ಹೊರಳುತ್ತತ್ತಳು ಆತನ ಮಾತೆ ಸರಳುಚೇದ ಮೃಗದೊಲು ವಿಖ್ಯಾತೆ (ಜಕಾ. ೦೨-೩೦ ರಗಳೆ). ೪. (ಹೊಟ್ಟೆಯ ಗ್ರಂಥಿಯೊಂದರಲ್ಲಿ ಸುಗಂಧದ್ರವ್ಯವನ್ನು ಉತ್ಪತ್ತಿ ಮಾಡುವ) ಕೊಂಬಿಲ್ಲದ ಒಂದು ಜಾತಿಯ ಜಿಂಕೆ ; ಕಸ್ತೂರಿಮೃಗ: ಮೃಗನ ನಾಭಿ ಸೊಸಲಿಗೊಪ್ಪುವ ಮೃಗಕಲಾನನೆ ದೇವಿಯ (ಶಿದಾಳ. ೬೩-೨). ೫. ಕಸ್ತೂರಿಮೃಗದಿಂದ ಉತ್ಪತ್ತಿಯಾಗುವ ಒಂದು ಬಗೆಯ ಸುಗಂಧದ್ರವ್ಯ ; ಕಸ್ತೂರಿ ; ಮೃಗಮದ : ಮೃಗದಂತಿರೆ ಮಗಮಗಿಸುವ ಸುಗಂಧ ವರಶೈಲಕ್ಷಣದ ಮೇಚಿನ ಸೊಡರ್ವರ್ಕ್ಯಗಳಿಂದೆ ಬೊಟ್ಟನಿಟ್ಟಳ್ ಮೊಗದೊಳ್ಕತ್ತುರಿಯ ತಿಲಕದಂತಿರೆ ಹರಿಯಾ (ಅರಕಿ. ೭-೩೬). ೬. (ದೇಹದ ಮೇಲೆ ವಿಶಿಷ್ಟವಾದ ಗುರುತುಗಳುಳ್ಳ) ಒಂದು ಬಗೆಯ ಆನೆ : "ಭದ್ರಃ, ಮಂದಃ, ಮೃಗಃ– ಎಂದಿಂತು ಆನೆಗಳ್ ಮೂಱುತೆಱನಕ್ಕುಂ" (ಹಲಾಯು. ೩೬-೬೨) ; ನಯನಿಪುಣಸೂತ್ರಧಾರರ್ ನಿಯಮಿಸುವರ್ ಭದ್ರಮಂದಮೃಗಸಂಕೀರ್ಣಾನ್ವಯದ ನೃಪಕರಿಗಳಂ (ಕುಕ್ತ್ರ. ೨-೩೬). ೭. ಚಂದ್ರಬಿಂಬದಲ್ಲಿರುವ ಜಿಂಕೆಯನ್ನು ಹೋಲುವ ಗುರುತು : "ಮೃಗಃ, ಅಂಕಃ . . . ಕಳಂಕಃ . . . ಈ ೮ ಚಂದ್ರಮಂಡಲದ ನಡುವಣ ಕರ್ಪು" (ಹಲಾಯು. ೯-೪೩). ೮. ಹುಡುಕುವಿಕೆ ; ಅನ್ವೇಷಣೆ : "ಅನ್ವೀಕ್ಷಣಂ, ವಿಚಯನಂ, ಮಾರ್ಗಣಂ, ಮೃಗಣಾ, ಮೃಗಃ – ಈ ೫ ಹುಡುಕಿ ನೋಡುವಿಕೆ" (ಸಿದ್ಧಾಂತಿ. ೩೬೬). ೯. ಬೇಟೆ ; ಶಿಕಾರಿ : 'ಮೃಗವ್ಯಸನ' ಪರಾ. ೧೦. ಯಾಚನೆ ; ಬೇಡಿಕೆ. ೧೧. ಮಾರ್ಗಶೀರ್ಷಮಾಸ. ೧೨. ಒಂದು ಬಗೆಯ ಸಸ್ಯ : "ಮೃಗಃ – ಮೃಗ, ಹುಳಿಮಾವು" (೭೩೦. ೦೨೬). ೧೩. [ಜ್ಯೋತಿ] ಒಂದು ನಕ್ಷತ್ರದ ಹೆಸರು ; ಮೃಗಶೀರ್ಷ ನಕ್ಷತ್ರ : "ಮೃಗಶಿರೆಯುಂ ಮೃಗಮೆನಿಕ್ಕುಂ" (ಶುಂಗರಾ. ೦೨-೭). ೧೪. ಒಂದು ರಾಶಿಯ ಹೆಸರು ; ಮಕರರಾಶಿ : ಶನಿ ಘಟ ಮೃಗಕ್ಕೆ ಗುರು ಝಷಧನುಗೆ . . . ತಮಂಶಕಕ್ಕುಮಧೀಶರ್ (ಜಾತಿ. ೦-೨೩). 'ಮೃಗಗೃಹ' ಪರಾ. [ ಸಂ. ]

**ಮೃಗಗೃಹ** (ನಾ). [ಜ್ಯೋತಿ] ಒಂದು ರಾಶಿಯ ಹೆಸರು ; ಮಕರರಾಶಿ : ಬಹುತನಯುಂ ಬಹುವಿತ್ತಂ ಮಹೀಶ್ವರಂ ಮೇಣ್ ಮಹೀಶ್ವರಾಧೀಶ ಸಮಂ ಮಹಿತನಯುಂ ನೆಲಸಿರೆ ಮೃಗಗೃಹದೊಳ್ ತನ್ನನುಜನೆನಿಸುಗುಂ (ಜಾತಿ. ೧೭-೨೧). [ ಸಂ. ]

**ಮೃಗಜಲ** (ನಾ). ೧. (ವಿಶೇಷವಾಗಿ ಮರಳುಗಾಡಿನ ಪಥದಲ್ಲಿ) ನೀರಿಲ್ಲದಿದ್ದರೂ ದೂರದಲ್ಲಿ ನೀರಿನ ಹರವಿನಂತೆ ಕಾಣುವ ಒಂದು ಭ್ರಮೆಯ ನೋಟ. ೨. (ಅಲಂ) ಬಿಸಿಲುಗುದುರೆ : ಭ್ರಮೆ ; ಇಂದು ಅವೆಲ್ಲವೂ ಮೃಗಜಲದಂತೆ ಮಾಯವಾದವು (ಕಂಪ. ೩) ; ಅವರು ಧಾವಿಸುತ್ತಿದ್ದುದು ಈ 'ಮೃಗಜಲ'ದ ಬೆನ್ನ ಮೇಲೇರಿ (ಮುಗಿಶು. ೬೬). 'ಮೃಗತೃಷ್ಣೆ' ನೋ. [ ಸಂ. ]

**ಮೃಗಜಾಲಿಕ** (ನಾ). (ಬೇಟೆಯಲ್ಲಿ) ಪ್ರಾಣಿಗಳನ್ನು ಹಿಡಿಯಲು ಬೀಸುವ ಬಲೆ : "ಮೃಗಜಾಲಿಕಂ ವಾಗುರಂ ಬೆಳ್ಪರವೆನಿಸಿಕ್ಕು" (ಶುಂಗರಾ. ೦೦೨-೩). [ ಸಂ. ಮೃಗಜಾಲಿಕಾ ]

**ಮೃಗಜಾಲಿಕೆ, ಮೃಗಜಾಳಿಕೆ** (ನಾ). = ಮೃಗಜಾಲಿಕ. ಮೃಗಜಾಳಿಕೆ: "ಪಾಶಃ, ಬಂಧನಗ್ರಂಥಿಃ, ವಾಗುರಾ, ಮೃಗಜಾಳಿಕಾ – ಈ ೪ ಬೆಳ್ಪಾರಂ" (ಹಲಾಯು. ೯೮-೪೪೩). [ಸಂ. ಮೃಗಜಾಲಿಕಾ]

**ಮೃಗಜಾಳಿಕೆ** 'ಮೃಗಜಾಲಿಕೆ' ನೋ.

**ಮೃಗಣೆ** (ನಾ). ಹುಡುಕುವುದು ; ಅನ್ವೇಷಣೆ : "ಅನ್ವೀಕ್ಷಣಂ . . . ಮೃಗಣಾ, ಮೃಗಃ — ೫ ಹುಡುಕಿ ನೋಡುವಿಕೆ" (ಸಿದ್ಧಾಂತಿ. ೩೬೬).

[ ಸಂ. ಮೃಗಣಾ ]

**ಮೃಗತತಿ** (ನಾ). ಪ್ರಾಣಿಗಳ ಗುಂಪು; ಪ್ರಾಣಿವರ್ಗ: ಮೃಗತತಿ ಸುಳಿಯವು . . . ಗಗನದ ಖೇಚರರು ಬಟ್ಟೆಗೆ ಸಾರರ್ ನಗಜೆಯುತುಳಿತಪದಾತಪದೊಳ್ (ಗಿಂಚ. ೯-೧೪) ; ಮೃಗತತಿ ಪೊದಟ್ದು ಮೃಗತೃಷ್ಣೆಗಳಂ ಜಲಮೆಂದು ಪರಿದುಮೋರಂತೊಡಲೊಳ್ ನೆಗೆದ ಕಡುತಾಪದಿಂ ಪೊಗೆ ಮೊಗದಿಂ ಸೂಸಿದುರ್ದಾ ನಿದಾಘದೊಳೆತ್ತಂ (ಕುಸುಮ. ೯-೦೨೩). [ಸಂ.]

**ಮೃಗತೃಷ್ಣಿಕೆ** (ನಾ). = ಮೃಗಜಲ ೧ : ವಿಗೆ ತೃಷ್ಣೆ ಪುಟ್ಟಲಿಂದ್ರಿಯ ಮೃಗಂಗಳಂ ಭೋಗಮೆಂಬ ಮೃಗತೃಷ್ಣಿಕೆ ಮೆಯ್ದುಗೆಯಲ್ಕೆ ಬಾರದಂತಿರೆ ತೊಡೆದೊಡಗೊಂಡೊಯ್ವುದೆಂಬುದೊಂದಚ್ಚರಿಯ (ಕಾದಂಬ. ೩೩೬) : ಬೇಸಗೆಯ ಬಿಸಿಲೊಳಾ ಕೈಲಾಸನಗಂ ನೆಱೆಯೆ ಕರಗಿ ಕಣ್ಗೆಟ್ಟು ಕರಂ ಸೂಸಿ

ಪರಿವಪುವು ದೆಸೆಗೆಸೆ ಪಾಸರವಾಗಿರ್ದುವೊನೆವ ಮೃಗತೃಷ್ಣಿಕೆಗಳ್ (ಶಂಧೃತಿ. ೯-೬೦) ; ಈ ಹೆಸರು ಮಾತ್ರ ಮೃಗತೃಷ್ಣಿಕೆಯಂತೆ ನನಗೆ ವಿಷಾದವನ್ನುಂಟುಮಾಡುವುದು (ಶಾಕುಂತ. ೧೦೭-೦೭).

[ಸಂ. ಮೃಗತೃಷ್ಣಿಕಾ]

**ಮೃಗತೃಷ್ಣೆ** (ನಾ). = ಮೃಗಜಲ ೧ : ಮೃಗತತಿ ಪೊವಟ್ಟು ಮೃಗತೃಷ್ಣೆಗಳಂ ಜಲಮೆಂದು ಪರಿದುಮೋರಂತೊಡಲೊಳ್ ನೆಗೆದ ಕಡುತಾಪದಿಂ ಪೊಗೆ ಪೊಗದಿಂ ಸೂಸಿರ್ದುದಾ ನಿದಾಘದೋಳೆತ್ತಂ (ಶಂತಿಪು. ೬-೦೨೫) ; ಪುಸಿವಚನಪೌರುಷ್ಯಲಲನಾದಿವಿಷಯಮೃಗತೃಷ್ಣಾಪಿಪಾಸಾವ್ಯಸನಿ ಬಲ್ಲನೆ ಧರ್ಮತತ್ತ್ವರಹಸ್ಯನಿಶ್ಚಯವ (ಶಬ್ದಾ. ೦೯-೯೫). [ಸಂ. ಮೃಗತೃಷ್ಣಾ]

**ಮೃಗದಂಶ** (ನಾ). ನಾಯಿ ; ಶುನಕ : "ಕೌಲೇಯಕಃ, ಸಾರಮೇಯಃ, ಶುನಕಃ . . . ಮೃಗದಂಶಃ, ಶಾಲಾವೃಕಃ— ಈ ೮ ನಾಯ್(ಯಿ)" (ಹಲಾಯು. ೪೭-೦೨೬). [ಸಂ.]

**ಮೃಗದಂಶಕ** (ನಾ). = ಮೃಗದಂಶ : ಕೌಲೇಯಕಃ . . . ಮೃಗದಂಶಕಃ, ಶುನಕಃ , ಭಷಕಃ , ಶ್ವಾನ್ – ೭ ನಾಯಿಯ ಪೆಸರು" (ಶಬ್ದಾಂತ. ೩೦೩). [ಸಂ.]

**ಮೃಗಧರ** (ನಾ). ೧. ಜಿಂಕೆಯ ಗುರುತನ್ನು ಹೊಂದಿರುವವನು ; ಚಂದ್ರ : ಸುಜಯಂ . . . ಕುರುಕುಳಗಗನಮೃಗಧರು ಬಂದನೆಂದು ಬಿನ್ನವಂಗೆಯ್ದುದುಂ (ಕಂಕಥಾ. ೦೩-೬೩ ವ); ಮೃಗಧರನಂಶುಮಾಲೆ ನಸು ಮುಟ್ಟುವುದುಂ ಜಲಸೂಕ್ಷ್ಮ ಬಿಂದುಗಳ್ ನೆಗೆದಪುವು (ಮಲ್ಲಿ. ೯-೨೯). ೨. ಜಿಂಕೆಯನ್ನು ಕೈಯಲ್ಲಿ ಧರಿಸಿರುವವನು ; ಶಿವ: (+). ೩. ಪ್ರಾಣಿಗಳಿಂದ ಕೂಡಿದುದು. ೧ . ೩ : ಕಲಾನಿಧಿಯಂತೆ ಮೃಗಧರಂ ಸಭದಂತೆ ಕುಜಯುತಂ . . . ದಿನಕರಪ್ರಭೆಯಂತೆ ಪುಂಡರೀಕೋಲ್ಲಾಸಕರಮಾಗಿ ತಚ್ಛೈಲಮೆಸೆದಿರ್ದುದು (ಕೈಖಾ. ೦೦-೫). ೪. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : ಯುಗ ಋತು ಗಜ ನಾಗಾಂಬರ ಮೃಗಧರ ನಗಪಟ್ಟಮೆನಿಪ ವೃತ್ತದ ಲೆಕ್ಕಂ ಸೊಗಯಿಸಿ ತೋರ್ಕುಂ (ಛಂದೋಂಬು. ೨-೨೦೦). [ಸಂ.]

**ಮೃಗಧರಧರ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದನು ; ಶಿವ: ಮೃಗಧರಧರಂ ನಗುತೆ ನುಡಿದಂ (ಜಾಶಿಶ. ೯-೯೯). [ಸಂ.]

**ಮೃಗಧೂರ್ತ** (ನಾ). ಪ್ರಾಣಿವರ್ಗದಲ್ಲಿ ಅತ್ಯಂತ ಮೋಸಮಾಡುವ ಪ್ರವೃತ್ತಿಯುಳ್ಳುದೆಂದು ಭಾವಿಸಲಾದ ಪ್ರಾಣಿ ; ನರಿ : ಕಂಡಂ ಮೃಗಗಣಪತಿಯುಂ ಮೃಗಧೂರ್ತನಧ್ವಜಕ್ಕೀರ್ಶಾರ್ತ (ಕಂಕಕಂ. ೪೫-೦೦).

[ಸಂ.]

**ಮೃಗಧೂರ್ತಕ** (ನಾ). = ಮೃಗಧೂರ್ತ : "ಜಂಬುಕಃ, ಶಿವಾ . . . ಮೃಗಧೂರ್ತಕಃ — ಈ ೮ ನರಿ" (ಹಲಾಯು. ೩೯-೬೬): [ಸಂ.]

**ಮೃಗನಯನೆ** (ನಾ). ಜಿಂಕೆಯ ಕಣ್ಣುಗಳಂತೆ ಕಣ್ಣುಗಳುಳ್ಳವಳು ; ಸುಂದರಿ : ಮೃಗನಯನೆಯರೊದೆಯೆಯುಮಾಕೆಗಳುದ್ಯನ್ಮದನಮದ್ಯಮಂ ಮುಕ್ಕುಳಿಸಿರ್ದುಗುಟ್ಟಿಯುಮಶೋಕೆ ವಕುಳದ ಮುಗುಳಲರ್ದುವು ರಮಣ ವದನಮುಲರ್ವಂತೆತ್ತಂ (ಶಾಂತಿಪು. ೭-೦೩೫) ; ಕೋಟಿದೀನಾರಮನಾ ಮೃಗನಯನೆ ಕೊಟ್ಟು ಕೊಂಡಳ್ ನೆಗಟ್ಟೆವೆತ್ತಿರ್ದ ರತ್ನಮಯಕಂಬಳಮಂ (ಸುಕುಮಾ. ೦೦-೦೦೯). [ಸಂ. ಮೃಗನಯನಾ]

**ಮೃಗನಾಭಿ** (ನಾ). ೧. ಕಸ್ತೂರಿಯೆಂಬ ಸುಗಂಧದ್ರವ್ಯವನ್ನು ತನ್ನ ಹೊಕ್ಕುಳಲ್ಲಿ ಉತ್ಪತ್ತಿಮಾಡುವ ಒಂದು ಜಾತಿಯ ಪ್ರಾಣಿ ; ಕಸ್ತೂರಿಮೃಗ : ಅಧಿಕಕಸ್ತೂರಿಯಂ ಕೊಡುವ ಮೃಗನಾಭಿ ತಾನಾವ ಲೇಸು (ಹಕಾ. ೭-೦೩). ೨. ಕಸ್ತೂರಿಮೃಗದ ಹೊಕ್ಕುಳಲ್ಲಿ ಉತ್ಪತ್ತಿಯಾಗುವ ಒಂದು ಬಗೆಯ ಸುಗಂಧದ್ರವ್ಯ ; ಕಸ್ತೂರಿ : "ಮೃಗನಾಭಿಃ, ಮೃಗಮದಃ, ಕಸ್ತೂರಿಕಾ — ಈ ೩ ಕಸ್ತೂರಿ" (ಹಲಾಯು. ೯೯-೩೯೦) ; ಮೃಗನಾಭಿಯಾನೆಯ ಕೊಂಬುಗಳಂ ಪೆರ್ವಿದಿರ್ ತೋರಮುತ್ತಂ ಕಣ್ಬೇಲಿಗಳಂ ಮುಂದಿಟ್ಟೊರ್ವಂ ಪುಗುತಂದಂ ರಾಜಭವನದೊಳಗಂ ಶಬರಂ (ಕಂರಾಪು. ೯-೦೦೬); ಗಂಧಪರಿಮಳದ್ರವ್ಯಮೃಗನಾಭಿ ಮೊದಲಾದ ಚಂದದಿಂದೀರ್ವರ್ಗೆ ಲೇಪನವ ಮಾಡಿ (ಶ್ರೀಕರಾ. ೬-೨೯).

[ಸಂ.]

**ಮೃಗನಾಭಿಜ** (ನಾ). = ಮೃಗನಾಭಿ ೨ : ಬೊಟ್ಟಿಡುವೊಡೆ ಫಾಳದಲ್ಲಿ ಮೃಗನಾಭಿಜಮಿಂದ್ರಮಣೀವಿಭೂಷಣಂ ತೊಡುವೊಡೆ ಜೋಡೆಯುರ್ಗೆ ಪಿರಿದಾದುದು ಪರ್ಬಿದ ಮರ್ಬು ಲೋಕದೊಳ್ (ರಾಜಶೇ. ೧೦-೨೨).

[ಸಂ. ಮೃಗನಾಭಿಜಾ ]

**ಮೃಗನಾರಿ** (ನಾ). ಒಂದು ಬಗೆಯ ಔಷಧೀಸಸ್ಯ ; ವಿಡಂಗ : "ಮೃಗನಾರಿಯೆಂದೆನೆ ವಿಳಂಗಮೆನಿಕ್ಕುಂ" (ಮಂಗರಾ. ೪೩-೪೮). 'ಮೃಗಾರಿ' ಹೋ. [ ? ]

**ಮೃಗನೇತ್ರ** (ನಾ). [ಛಂದ] ಪ್ರತಿಪಾದದಲ್ಲಿಯೂ ನಾಲ್ಕು ಅಕ್ಷರಗಳನ್ನುಳ್ಳ 'ಪ್ರತಿಷ್ಠೆ' ಎಂಬ ಛಂದಸ್ಸಿನ ಒಂದು ವೃತ್ತ : ಲಗಯುಗ್ಮಂ ನೆಗಟ್ದಾಗಳ್ ಮೃಗನೇತ್ರಃ ಮೃಗನೇತ್ರಂ (ಛಂದೋಂಬು. ೨-೬೪). [ಸಂ.]

**ಮೃಗನೇತ್ರೆ** (ನಾ). = ಮೃಗನಯನೆ : ಮೃಗನೇತ್ರೆಯ ತೊಳಗುವ ಕಾಲುಂಗುರ್ಗಳ ನೂಪುರದ ಪೊಳೆವ ವಜ್ರಂಗಳ ಕಾಂತಿಗಳೆಡರೆ ಪರ್ವಿ ಪಚ್ಚೆಯ ಜಗಲಿಯೊಳೊಪ್ಪಿದುವು ರಂಗವಲಿಯನಿಕ್ಕಿದವೊಲ್ (ಪುಷ್ಪ. ೩-೯೫); ಮಗನೆ ಕೋಪಿಸಲೇಕೆ ಹೋಗಿ ಬಂದಪೆವಯ್ಯ ಮೃಗನೇತ್ರೆ ಪರುವೆಯುಂ ಬೇಡಿಕೊಂಡಪೆವಯ್ಯ (ಕಂಠಕ. ೦೫-೦೫೬). [ಸಂ. ಮೃಗನೇತ್ರಾ]

**ಮೃಗಪಂಚಕ** (ನಾ). [ಜ್ಯೋತಿ] ಮೃಗಶಿರಾನಕ್ಷತ್ರದಿಂದ ಆರಂಭವಾಗುವ ಮೃಗಶಿರೆ, ಆರ್ದ್ರೆ, ಪುನರ್ವಸು, ಪುಷ್ಯ ಮತ್ತು ಆಶ್ಲೇಷೆ ಎಂಬ ಐದು ಮಳೆಯ ನಕ್ಷತ್ರಗಳು : ಮೃಗಪಂಚಕದಿಂದ ಮಳೆ ಬರುತ್ತದೆ (ಲೋಕ. [ಸಂ.]

**ಮೃಗಪತಿ** (ನಾ). ೧. ಪ್ರಾಣಿಗಳ ಒಡೆಯ ; ಸಿಂಹ : "ಹರಿಃ, ಮೃಗಪತಿಃ . . . ಕಂಠೀರವಃ—ಈ ೯ ಸಿಂಹದ ಪೆಸರ್" (ಹಲಾಯು. ೩೬-೬೦); ಮೃಗಪತಿ ಪೊಜಗಾದ ಕಿಶೋರಕೇಸರಿವಿಧಿಯಿಂದಂ . . . ತನ್ನನ್ವಯ ರಾಜಧಾನಿಯನನುಜಸಮೇತನಪರಾಜಿತನೆಯ್ದೆ ಪಂದು (ಶಾಂತಿಪು. ೦-೯೩ ವ). ೨. ಹುಲಿ ; ವ್ಯಾಘ್ರ. ೩. ಗಂಡುಜಿಂಕೆ. ೪. [ಜ್ಯೋತಿ] ಒಂದನೆಯ ರಾಶಿಯ ಹೆಸರು; ಸಿಂಹರಾಶಿ : ಭೃಗುಜನಿರೆ ಕರ್ಕಿಯೊಳ್ ಮೇಷಾ ಮೃಗಪತಿಯೊಳ್ ದ್ವಾದಶಾರಿಸಿಧನಸ್ಥಿತಸೌಮ್ಯಗಣಂ ವೀಕ್ಷಿಸುವೊಡೆ ಪೊಂದುಗುಮಾ ಲಗ್ನೋದ್ಭವಂ ಷಡಬ್ದಾಂತರದೊಳ್ (ಜಾತಕ. ೬-೨೫).

[ ಸಂ.]

**ಮೃಗಪೋತ** (ನಾ). ಜಿಂಕೆಯ ಮರಿ : "ಕೊಣಸನೆ ಮೃಗಪೋತ" (ಕಬಿಕಂ. ೫೯) ; ಮೃಗಪೋತನನು ಹಜಿಸೊಯ್ವುದುಚಿತವೆ (ಕುಮಾರರಾ. ೬-೨೯). [ಸಂ.]

**ಮೃಗಪೋತಕ** (ನಾ). = ಮೃಗಪೋತ : ವಾನರನ ಹಯಕುಂಜರನ ಪಂಚಾನನನ ಮೃಗಪೋತಕನ ಗುಣವಾ ನರೇಂದ್ರನೊಳಿರಲುಬೇಹುದು (ಕುಮಾರ. ೩-೦೦೯). [ಸಂ.]

**ಮೃಗಪ್ಲುತ** (ನಾ). [ನಾಟ್ಯ] ಮಾರ್ಗಆಕಾಶಚಾರಿಯ ಹದಿನಾರು ಪ್ರಭೇದಗಳಲ್ಲಿ ಒಂದು; ೮ "ಒಂದು ಕಾಲನ್ನು ಕುಂಚಿತಮಾಡಿ ಎತ್ತಿ ನೆಗೆದು ನೆಲದ ಮೇಲಿರಿಸಿ ಇನ್ನೊಂದು ಕಾಲನ್ನು ಅಂಚಿತಮಾಡಿ ಕಣಕಾಲನ್ನು ಮೊದಲ ಕಾಲಿನ ಮುಂದೆ ಇರಿಸುವುದು" (ಅಸ್ತ್ರರಂ. ೩೦೯ ಗದ್ಯಭಾವ) : ಚರಣಮನೊಂದಂ ಕುಂಚಿತದಿರಮಂಬೆತ್ತಿ ನೆಗೆದು ನೆಲದೊಳ್ ನಿಲಿಸುತ್ತಿರದಂಚಿತಪದಜಂಘೆಯನಿರಿಸಲ್ಕಾ ಪದದೆಸೆಗೆ ಮೃಗಪ್ಲುತಮೆನಿಕುಂ (ಅಸ್ತ್ರರಂ. ೯-೪೩). [ಸಂ. ಮೃಗಪ್ಲುತಾ]

**ಮೃಗಬಂಧಿನಿ** (ನಾ). ಪ್ರಾಣಿಗಳನ್ನು ಹಿಡಿಯಲು ಬಳಸುವ ಬಲೆ: "ವಾಗುರಾ, ಮೃಗಬಂಧಿನೀ—ಮೃಗಗಳ ಹಿಡಿಯುವ ಬಲೆಯ ಪೆಸರುಗಳು" (ಸಿದ್ಧಾಂತಿ. ೩೦೯). [ಸಂ. ಮೃಗಬಂಧಿನೀ]

**ಮೃಗಭೂ** (ನಾ). = ಮೃಗನಾಭಿ ೨ : ಮೃಗಭೂಯುದ್ಧವಿಳಾಸಿನೀ ಕಬರಿಕಾಬಂಧಂಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು . . . ಪಳಂಚಿ ಸುಚುಂದತ್ತಂದೊಂದು ಮಂದಾನಿಳಂ (ಶಂಶಬಾ. ೯-೬೦); "ಚೌರಿ" (ಶಂಶಬಾ. ೬೦೭); ಮೃಗಭೂಕುಂಕುಮಚಂದನದ್ರವ ವಿಲೇಪಂ ನೂತನಾನರ್ಘ್ಯರತ್ನಗುಣಾಲಂಕರಣಂ ವಿಚಿತ್ರವಸನಂ ಚೆಲ್ವಾಗೆ (ಜಗಪ. ೬-೯೩). [ಸಂ.]

**ಮೃಗಮದ** (ನಾ). ಕಸ್ತೂರಿಮೃಗದಿಂದ ಉತ್ಪನ್ನವಾಗುವ ಸುಗಂಧ ದ್ರವ್ಯ; ಕಸ್ತೂರಿ : "ಮೃಗನಾಭಿಃ, ಮೃಗಮದಃ, ಕಸ್ತೂರಿಕಾ—ಈ ೩ ಕಸ್ತೂರಿ" (ಹಲಾಯು. ೬೯-೩೯೦): ಮೃಗಮದಪತ್ರರೇಖೆಗಳನೇಕಗೆ ತಾಳ್ದಿರ[ದಾದು]ವೀ ಕದಂಪುಗಳ್ (ಶಂಶಬಾ. ೯-೬೨) ; ಸುದತಿಗೆ ಮೃಗಮದದ ಪತ್ರಲೇಖೆಗಳೆಸೆಗುಂ (ಜಗಪ. ೧೦-೦೨೩). [ಸಂ.]

**ಮೃಗಮದಾಮೋದ** (ನಾ). ೧. ಕಸ್ತೂರಿಯ ಕಂಪು,—ಸುವಾಸನೆ: ಮೃಗಮದಾಮೋದಾಸ್ಯ ನಿಶ್ವಾಸೆಯುಂ ತಳಿರೇ ತಾವರೆಯೋ ಮಂದಾಳಿ ಕುಲವೋ . . . ಕಂಡಿರೆ (ಶಂಶಬಾ. ೯-೧೦೮). ೨. ಕಸ್ತೂರಿಯೆಂಬ ಸುಗಂಧದ್ರವ್ಯದಲ್ಲಿ ಆಸಕ್ತನಾದವನು ; ಒಂದು ಬಿರುದು: ಮೃಗಮದಾಮೋದಶ್ರೀಮತ್ತ್ರಿಭುವನಮಲ್ಲದೇವಪಾದಾರಾಧಕಂ ಪರಬಳ ಸಾಧಕಂ ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಕಇಲ. ೯೦-೫೮-೦೨ ; 1087) ; ವಾಸಂತಿಕಾದೇವೀಲಬ್ಧವರಪ್ರಸಾದ ಮೃಗಮದಾಮೋದ ಶ್ರೀಮನ್ಮಹಾ ಮಂಡಳೇಶ್ವರಂ (ಎಕ. V (R), ತಿರುಮ. ೫೯೦-೦೬; 1180). [ಸಂ.]

**ಮೃಗಯಾವ್ಯಸನ** (ನಾ). ಪ್ರಾಣಿಗಳನ್ನು ಬೇಟೆಯಾಡುವ ಹವ್ಯಾಸ : ನಿಮಗೆ ಮೃಗಯಾವ್ಯಸನವ್ಯಾಪಾರಮಾದುದಕ್ಕೆ ಮಲ್ಲದಾಗಳಿದು ನಿಮ್ಮ ದುಷ್ಕರ್ಮದ ಫಲಂ (ಶಂತಶಂ. ೦೯೬-೯); ದ್ಯೂತ ಮೃಗಯಾವ್ಯಸನವಿವೃ ನ್ಮಪಜಾತಿಗಾದ ವಿನೋದ (ಕುಮ್ಯಾಗ. ೫-೦೨). [ಸಂ.]

**ಮೃಗಯು** (ನಾ). ಬೇಟೆಯಾಡುವವನು; ಬೇಟೆಗಾರ: "ಮೃಗಯುಃ, ಲುಬ್ಧಕಃ, ವ್ಯಾಧಃ, ವಾಗುರಿಕಃ—ಈ ೪ ಮಾವುಲಿಗಂ" (ಹಲಾಯು. ೯೬-೯೯೨); ಭೂಮಿಕಂಪಮಾಗೆ ಪರಿವ ಮೃಗಯುಗಳಚರಣಘಾತಶಬ್ದಂಗಳೊಳಂ (ಕಾದಂಪೂ. ೦೬೧). [ಸಂ.]

**ಮೃಗಯೆ** (ನಾ). ಪ್ರಾಣಿಗಳ ಬೇಟೆ: ಮೃಗವ್ಯಸನ : "ಆಚ್ಛೋಟನಂ, ಮೃಗಯಾ, ಮೃಗವ್ಯಂ, ಪಾಪರ್ಧಿಃ, ಆಖೇಟಕಃ—ಈ ೫ ಬೇಂಟೆ" (ಹಲಾಯು. ೬೦-೨೬೦); ಮೃಗಯಾವ್ಯಾಜದಿನೊರ್ಮೆ ಶಂತನು ತೊಟಲ್ತರ್ಪಂ ಪಳಂಚಲ್ಕೆ (ಶಂಶಬಾ. ೦-೬೦). [ಸಂ. ಮೃಗಯಾ]

**ಮೃಗರಾಜ** (ನಾ). ೧. = ಮೃಗಪತಿ ೧ : ಮೃಗಪ್ರಜದೊಡ್ಡೆಂ ಮೃಗರಾಜನಂ ನೆಱೆವುದೇ ತಾಂಗಲ್ಕೆ ಸಮ್ಮಾ ಬೃಹದ್ಧ್ವಜಿನೀಸಂಕುಳಮಾ ಜಗೀಷುವನಿದೇಂ ಸಂಗ್ರಾಮದೊಳ್ ಗೆಲ್ಗುಮೋ (ಆದಿಪು. ೦೩-೫೬); ದೊಲ ಕೊಡ್ಡಿದ ಬಲೆಯೊಳ್ ಮೃಗರಾಜು ತೊಡರ್ಗುಮೆ (ಶಾಂತಿಪು. ೩-೯೩ ವ). ೨. = ಮೃಗಪತಿ ೨. ೩. ಚಂದ್ರ. ೪. = ಮೃಗಪತಿ ೪. [ಸಂ.]

**ಮೃಗರಾಜವಿಷ್ಟರ** (ನಾ). ಸಿಂಹಾಸನ : ಶ್ರೀಮಂಟಪಮಂ ವಿರಚಿಸಿ ಮೃಗರಾಜವಿಷ್ಟರದೊಳ್ ಬಾಲಕನಂ ಪೂರ್ವಾಭಿಮುಖನಿವಿಷ್ಟನಂ ಮಾಡಿ (ಆದಿಪು. ೭-೬೬ ವ): ಭವ್ಯರತ್ನಾಕರನಂ . . . ಮೃಗರಾಜವಿಷ್ಟರ ದೊಳೇರಿಸಿ (ಕಕ್ಕಪು. ೯-೮೨ ವ). [ಸಂ.]

**ಮೃಗರಿಪು** (ನಾ): ಸಿಂಹ : "ಹರಿಃ . . . ಮೃಗರಿಪುಃ, ಸಿಂಹಃ, ಕಂಠೀರವಃ—ಈ ೯ ಸಿಂಹದ ಪೆಸರ್" (ಹಲಾಯು. ೩೬-೬೦); ಮೃಗರಿಪುವಂ ಮೃಗಾಪತಿಯು ನಂದನನೊರ್ವನೆ ನೀಂ ಕೊಂದು (ಶಶೆಪು. ೩-೯೬). [ಸಂ.]

**ಮೃಗಲಕ್ಷ್ಮ** (ನಾ). ಜಿಂಕೆಯ ಗುರುತನ್ನು ಉಳ್ಳವನು : ಚಂದ್ರ : ಮೃಗಲಕ್ಷ್ಮಂ ನಯನೇಷು ವಹ್ನಿನಿಧಿಶೈಲಸ್ಥಾನಂಗಳೊಳ್ ಕ್ರೂರರಮ್ಗು ಗುಣೇಶತ್ರುಗಳೊಳ್ ಶುಭಗ್ರಹಗಣಂ (ಲೋಕೋಪ. ೨-೩೨). [ಸಂ. ಮೃಗಲಕ್ಷ್ಮನ್]

**ಮೃಗಲಾಂಛನ** (ನಾ). ೧. ಚಂದ್ರಬಿಂಬದಲ್ಲಿರುವ, ಜಿಂಕೆಯನ್ನು ಹೋಲುವ ಗುರುತು : ನಿನ್ನೀ ಪೆಱನೊಸಲೊಳಿಟ್ಟ ಮೃಗಮದತಿಲಕ ಮದೆಡೆಗಿಡುವಿನಂ ಮೃಗಲಾಂಛನಮೆನಲ್ಕೆಸೆದುಮೆನ್ನ ಮನಕ್ಕೊಂದು ಲಾಂಛನಮನಾಗಿಪುದಿದೇತಱ ಪರಿ ರಮಣಿ ? (ರಾಶೂಕ್ಕ. ೨೦-೨). ೨. = ಮೃಗಲಕ್ಷ್ಮ : ಮೃಗಲಾಂಛನಮಂಡಳದೊಳ್ ಮೃಗತನು ಮಿಸುಪಂತೆ ನಿನ್ನ ಕುಚಮಂಡಳದೊಳ್ ಮೃಗಮದವಿಚಿತ್ರಪತ್ರಂ ಮೃಗಲೋಚನೆ ಬರೆಯ ದಿರ್ದಿಂದಿನ ತೆಱನೇಂ (ಕಾದಂಪೂ. ೩೩೫); ಜಗಕೆಲ್ಲ ತಂಪನೆಸಗುವ ಮೃಗಲಾಂಛನನಕಟ ತನ್ನ ಹಿಮರಶ್ಮಿಗಳಿಂ . . . ಎನ್ನ ಸುಡುವನೇಗೈದಪೆ ನಾಂ (ಕಾಕುಂಕ. ೩೨ ಆದಿ). [ಸಂ.]

**ಮೃಗಲಿಪಿ** (ನಾ). ಒಂದು ಬಗೆಯ ಲಿಪಿ : ದರ್ಪಣಲಿಪಿ ಮೃಗಲಿಪಿ ಪ್ರಬಂಧಲಿಪಿ . . . ನಂದಿಲಿಪಿ ಈ ಅಗಣಿತ ಲಿಪಿಗಳ ನೋಡಲಱಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತ್ತಿದ್ದರು ವಿದ್ವಾಂಸರುಗಳೆಲ್ಲ (ಬಾಸ್ಕರ. ೬೬-೬). [ಸಂ.]

**ಮೃಗಲೋಚನ** (ನಾ). ೧. ಜಿಂಕೆಯ ಕಣ್ಣಿನಂತೆ ಸುಂದರವಾದ ಕಣ್ಣು : ಮೃಗಲೋಚನಂಗಳಿರ್ದುವು ಮೃಗಮಿಲ್ಲಿರ್ದಪುದು ವಟಫಲಂ ವಟಮಿಲ್ಲೀ ಪಗಲುಮೆಸೆವಿಂದುವೆತ್ತಣಿನೊಗೆದುದೊ ಪೇೞೆಂಸು ನೋಡಿವಂ ನಗೆ ಮೊಗಮಂ (ಶಂತಾಪು. ೯-೬೮). ೨. ಚಂದ್ರ. [ಸಂ.]

**ಮೃಗಲೋಚನೆ** (ನಾ). ಜಿಂಕೆಯ ಕಣ್ಣಿನಂತೆ ಕಣ್ಣುಗಳುಳ್ಳವಳು ; ಸುಂದರಿ : ಮೇಘರಥಂಗಂ ಮೃಗಲೋಚನೆ ತತ್ಪ್ರಿಯೆ ಮಿತ್ರಗಂ ಮಗಂ ನಂದಿವರ್ಧನಂ ಪುಟ್ಟುವುದುಂ (ಶಾಂತಿಪು. ೯-೫೬); ಮೃಗಲೋಚನೆಯೊರ್ವಳ್ ಸಂಪಗೆಯೊಳ್ಮುಗುಳಾಯ್ದು ಮಗುೞೆ ಚಳಕೇಶರಕಾಂತಿಗಳಂ ಪೂಣ್ದಳ್ ಮುಯ್ಯಂ ಮುಗುಳಂ ಕೊಂಡಲರನೀವವೋಲ್ ಮಲ್ಲಿಗೆಯಂ (ಲೀಲಾವ. ೦೩-೬೮). [ಸಂ. ಮೃಗಲೋಚನಾ]

**ಮೃಗವಧಾಜೀವ** (ನಾ). ಪ್ರಾಣಿಗಳನ್ನು ಕೊಂದು ಜೀವಿಸುವವನು ; ಬೇಟೆಗಾರ : "ವ್ಯಾಧಃ, ಮೃಗವಧಾಜೀವಃ, ಮೃಗಯುಃ, ಲುಬ್ಧಕಃ—ಈ ೪ ಬೇಡರವನ ಪೆಸರು" (ಸಿದ್ಧಾಂತಿ. ೩೦೩). [ಸಂ.]

**ಮೃಗವಧೆ** (ನಾ). ಪ್ರಾಣಿಗಳನ್ನು ಕೊಲ್ಲುವುದು : ವನಚರನು ತನ್ನಯ ಕುಟುಂಬವನನುದಿನವು ಮೃಗವಧೆಯಲೇ ಸಲಹಿದನು (ಕುಮ್ಯಾಕ. ೦೬-೦೮). [ಸಂ. ಮೃಗವಧ]

**ಮೃಗವಾಹನ** (ನಾ). ಜಿಂಕೆಯನ್ನು ವಾಹನವಾಗಿ ಉಳ್ಳವನು ; ವಾಯು. [ಸಂ.]

**ಮೃಗವಿಂಡು** (ನಾ). = ಮೃಗತತಿ : ಸಿಲುಕಿದವು ಮೃಗವಿಂಡು ನಾನಾ ಬಲೆಗಳಲಿ (ಕೊರಣ. ೩-೩-೦೬). [ಮೃಗ + ಹಿಂಡು]

**ಮೃಗವ್ಯ** (ನಾ). ಬೇಟೆ ; ಮೃಗಯೆ : "ಆಚ್ಛೋಟನಂ, ಮೃಗಯಾ, ಮೃಗವ್ಯಂ, ಪಾಪರ್ಧಿಃ, ಆಖೇಟಃ—ಈ ೫ ಬೇಂಟೆ" (ಹಲಾಯು. ೬೦-೨೬೧); ಅಂತು ನರನಾರಾಯಣರಿರ್ವರುಂ . . . ಮೃಗವ್ಯ ವ್ಯಾಪಾರದಿಂ ಬಟಲ್ದು (ಶಂಶಬಾ. ೫-೫೦ ವ). [ಸಂ.]

**ಮೃಗವ್ಯಸನ** (ನಾ). = ಮೃಗಯಾವ್ಯಸನ : ಅರಸನಾರೋಗಣೆ ವಿಹಾರದೊಳಿರುಳು ಹಗಲು ಮೃಗವ್ಯಸನದೆಚ್ಚಱನೊಳಿಹುದೆಂದನಿಬರನು ಬೀಳ್ಕೊಟ್ಟನಸುರಾರಿ (ಕುಮ್ಯಾಶ. ೦-೦೦). [ಸಂ.]

**ಮೃಗಶಾಬ** (ನಾ). ಜಿಂಕೆಯ ಮರಿ: ಮೃಗಶಾಬಂ ಮಿಗೆ ಶಾರ್ದೂಲಗರ್ಜಿತ ಕ್ಕಂಜುವಂತೆ ತದ್ರಾತ್ರಿಯೊಳಾ ಮೃಗಶಾಬನೇತ್ರೆ ಬೆರ್ಚಿದಳಗಣಿತಪುರ

ರಕ್ಷಕರ್ಕಳ್ಪ್ಪರಕಾಗಲ್ (ವಚನ. ೬-೦೦೩); ಶಾಂತಲೆ ಬೆದರಿದ ಮೃಗಶಾಬದಂತೆ ಕಣ್ಣೆರೆದು ಸುತ್ತಲೂ ನೋಡಿದಾಗ . . . ಕಂಡಳು (ಶಾಂತಲಾ. ೦೩). [ಸಂ.]

**ಮೃಗಶಾಬಾಕ್ಷಿ** (ನಾ). ಜಿಂಕೆಯ ಮರಿಯ ಕಣ್ಣುಗಳಂತೆ ಕಣ್ಣುಗಳುಳ್ಳವಳು : ಸುಂದರಿ : ಮೃಗಯಾವ್ಯಾಜದಿನೊಮ್ಮೆ ಶಂತನು ತೊಟಲ್ವರ್ಪಂ ಪಳಂಚಲ್ಕೆ ತನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ ಸೋಲ್ತು (ಕಂಕಥಾ. ೦-೭೦); ಪಸ್ತತಳವುಂ ಸತ್ವಲ್ಲವಂಗಿತ್ತು ತನ್ಮೃಗಶಾಬಾಕ್ಷಿಯನಿಂತು ಮನ್ಮಥವನಶ್ರೀಗೆತ್ತು (ಸುಕುಮಾ. ೯-೯೦). [ಸಂ. ಮೃಗಶಾಬಾಕ್ಷೀ]

**ಮೃಗಶಿರ** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಐದನೆಯದು: ಮೃಗಶೀರ್ಷ : ಮೃಗಶೀರ್ಷಂ. ಮೃಗಂ. ಚಾಂದ್ರಂ. ಐಂದವಂ. ಹಿಮದೀಧಿತಿ—ಯಾ ೫ ಮೃಗಶಿರ ನಕ್ಷತ್ರಕ್ಕೆ ಪೆಸರು (ಚಾಸ್ಕರ. ೬೨-೭). [ಸಂ.]

**ಮೃಗಶಿರೆ** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಐದನೆಯದು ಮತ್ತು ಈ ನಕ್ಷತ್ರದಲ್ಲಿ ಬರುವ ಮಳೆ : "ಮೃಗಶಿರೆಯು ಮೃಗಮೆನಿಕ್ಕುಂ" (ಮಂಗರಾ. ೦೨-೭); ಮೃಗಶಿರೆ ಶೀಘ್ರಸ್ಥಿರ ಋಕ್ಷಗಳುದಿತೋದಿತ[ಮು]ವಾಗೆ ಕರ್ತೃಗೆ ವಸು ವಾರ್ಧಿಗೆ ದಿನಪತಿರಹಿತ ರಾಶಿಗಳುದಯಿಸೆ ಮಾಟ್ಟುದೈ ಸಮಾವರ್ತನೆಯುಂ (ಲೋಕೋಪ. ೨-೩೫); ಅಶ್ವಿನಿ ಭರಣಿ . . . ಮೃಗಶಿರೆ . . . ರೇವತಿಯೆಂಬವಿಪ್ಪತ್ತೇಳು ನಕ್ಷತ್ರಂಗಳುಂ ತಮ್ಮ ತಮ್ಮ ಅಧಿಕಾರಮಂ ಘಾಡುತ್ತಿರ್ಪವು (ವಿವೇಕ. ೨೦೦); ಮೃಗಶಿರೆಗೆ ಮಿಕ್ಕ ಎಳ್ಳು ಚೆಲ್ಲು (ಗಾದೆ). [ಸಂ. ಮೃಗಶಿರಾ]

**ಮೃಗಶೀರ್ಷ** (ನಾ). ೧. = ಮೃಗಶಿರ : ಮೃಗಶೀರ್ಷಂ ಮೂಜುಂ ಪೂರ್ವೆಗಳಶ್ವಿನಿಯಾರ್ದ್ರೆ ಚಿತ್ರೆ ಮೂಲಂ ರೇವತಿಯಾಗುರೀವೀ ಪತ್ತುಂ ತಾರೆಗಳೊಳ್ ಮಾಡುವುದು ಸಕಲವಿದ್ಯಾಗಮಮಂ (ಲೋಕೋಪ. ೦-೦೩). ೨. [ನಾಟ್ಯ] ಅಸಂಯುತ ಹಸ್ತಮುದ್ರೆಗಳಲ್ಲಿ ಒಂದು : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ ಪತಾಕ . . . ಮೃಗಶೀರ್ಷ (ಅಭಾನ್ಯ. ೯೮). [ಸಂ.]

**ಮೃಗಶೃಂಗ** (ನಾ). ೧. ಜಿಂಕೆಯ ಕೋಡು : 'ಮೃಗಶೃಂಗಧರ' ಪರಾ. ೨. ಬಲಮುರಿ ಎಂಬ ಸಸ್ಯದ ಕಾಯಿ : ಸುಮಾರು ಒಂದು ಒಂದೂವರೆ ಅಂಗುಲ ಉದ್ದವಿದ್ದು ಮೊನೆ ಚೂಪಾಗಿರುತ್ತದೆ : ಇದೇ ಕಾರಣದಿಂದ ಸಂಸ್ಕೃತದಲ್ಲಿ ಮೃಗಶೃಂಗ ಎನ್ನುತ್ತಾರೆ (ಹಸುಹೂ. ೩೦). [ಸಂ.]

**ಮೃಗಶೃಂಗಧರ** (ನಾ). ಜಿಂಕೆಯ ಕೋಡುಗಳನ್ನು ಧರಿಸಿದವನು : ಯಜ್ಞದೀಕ್ಷಿತನಾದವನು : ಅಮರ [illegible]ಕ್ಷದೊಳ್ ಧರ್ಮಜಂ ಮೃಗಶೃಂಗಧರನಾಗಿ ಯಾಜಮಾನ್ಯದೊಳೆಸೆದನು (ಜೈಮಿಭಾ. ೩೩-೯೦). [ಸಂ.]

**ಮೃಗಾಂಕ** (ನಾ). ೧. ಜಿಂಕೆಯ ಗುರುತುಳ್ಳವನು : ಚಂದ್ರ : "ಇಂದುಃ, ಚಂದ್ರಃ . . . ಮೃಗಾಂಕಃ. ವಿಧುಃ, ದಾಕ್ಷಾಯಣೀರಮಣಃ—ಈ ೨೧ ಚಂದ್ರನ ಪೆಸರ್" (ಶಬ್ದಮ. ೫-೯೩); ಶಾಂತಿನಾಥವಿಸುತ ಪ್ರತಾಪಮುಂ ತದ್ವಸುಧೇಶನ ಕಾಂತಿಯುಮೆಂದು ಮೃಗಾಂಕನ ಕಾಂತಿಯುಮೇಂ ದಿಗಂತಮಂ ಪರ್ವಿದುದೋ (ಶಾಂತಿಪು. ೦೦-೧೩೯). ೨. ಕರ್ಪೂರ. ೩. ಗಾಳಿ. [ಸಂ.]

**ಮೃಗಾಕ್ಷಿ** (ನಾ). ಜಿಂಕೆಯ ಕಣ್ಣುಗಳಂತೆ ಕಣ್ಣುಗಳುಳ್ಳವಳು : ಸುಂದರಿ : ಸೂಸಿ ಕಣ್ಣ ನೀರೊಡನೊಡನುಣ್ಮೆ ಕುಂಕುಮದೊಳರ್ದಿದ ಬಾಳೆಗಳನ್ನವಾಗಿ ಕೆಂಪಡರ್ದಲರ್ಗಣ್ಣಿಂದುಗುಟ್ಟಿ ನೋಡಿದುದಂ ನೆನೆವೇಂ ಮೃಗಾಕ್ಷಿಯಾ (ಆದಿಪು. ೦೨-೨೯); ಎಲೆ ಮೃಗಾಕ್ಷಿ ಪೇಳೇಕೆ ಕರ್ಣಪೂರದ ನೈದಿಲ್ ಕಾರ್ಗಿರುಳೊಳಮರ್ದ ತಾರಗೆಗೋರಗೆಯೆನಿಸಿರ್ದುದಿಲ್ಲ (ರಾಜಶೇ. ೩-೩೩). [ಸಂ. ಮೃಗಾಕ್ಷೀ]

**ಮೃಗಾಜಿನ** (ನಾ). ಜಿಂಕೆಯ ತೊಗಲು : ಮೃಗಾಜಿನಮುಂ ಪೊಲ್ತಿರ್ಪ ಮುಂಜಮೇಖಲೆಗಳನೊಪ್ಪವಡುವ . . . ವ್ಯವಸಾಯಮೆತ್ತಲುಂ (ಕಾದಂಪೂ. ೨೨೨); ಇಟ್ಟ ವಿಭೂತಿಯ ತೊಟ್ಟ ರುದ್ರಾಕ್ಷಿಯುಟ್ಟ ಮೃಗಾಜಿನದ . . . ಕಟ್ಟಣಕದ ಕಡು ಮಹಿಮೆಯಾಂತ ತಪೋಧನರಿರ್ಪ ತಾಣದಲ್ಲಿ (ರಾಜಶೇ. ೦-೦೨೫ ವ). [ಸಂ.]

**ಮೃಗಾದನ** (ನಾ). ನಾಯಿಯ ಜಾತಿಗೆ ಸೇರಿದ ಒಂದು ಬಗೆಯ ಮಾಂಸಾಹಾರಿಪ್ರಾಣಿ ; ಕತ್ತೆಕಿರುಬ : ಶಿವಂಗಿ : "ತರಕ್ಷುಃ, ಮೃಗಾದನಃ—೨ ಶಿವಂಗಿ ಹೆಸರುಗಳು" (ಸಿದ್ಧಾಂತಿ. ೦೫೩). [ಸಂ.]

**ಮೃಗಾಧಿಪ** (ನಾ). = ಮೃಗಪತಿ ೧ : ಮೃಗಾಧಿಪನಿನಂತುಗ್ರದ್ವಿಪಂ . . . ತೆರಳ್ವ ತೆಜದಿಂ ಮಿಥ್ಯಾರಜಂ ತೂಳ್ದು ಪಾಱುವಿನಂ ನಿರ್ಮಳಧರ್ಮಮೊಂದಿನಿಲೆ ಪೇಟ್ವಿಂ ಪಂಪನತ್ಯಂತಸೌಖ್ಯವದು[ದಾದಿ]ಪುರಾಣಮಂ (ಸುಕುಮಾ. ೧-೩೭); ಮೃಗಾಧಿಪನುಗಿದು ಬಗಿದು ತೋಡಿದ ಬಾಣದ . . . ಕಡವೆ ತುಳಿದ ಹೆಜ್ಜೆಗಳ ಚಿಹ್ನದ ಬೇಡನಾಯಕರು ನೆರೆದರು (ಪತಕಾ. ೫-೫). [ಸಂ.]

**ಮೃಗಾರಾತಿ** (ನಾ). ೧. ಸಿಂಹ : "ಹರಿ ಮೃಗೇಂದ್ರಂ . . . ಮೃಗಾರಾತಿ ಕಂಠೀರವಂ ಕರಿವೈರಿ ಕೇಸರಿಯೆನಲ್ ಸಿಂಹಮೆನಿಸಿಕ್ಕುಂ" (ಮಂಗರಾ. ೯೭-೭). ೨. ನಾಯಿ. ೩. ಹುಲಿ. [ಸಂ.]

**ಮೃಗಾರಿ** (ನಾ). ೧. ಸಿಂಹ : 'ಮೃಗಾರಿಪೀಠ' ಪರಾ. ೨. ಹುಲಿ : ವ್ಯಾಘ್ರ : "ವ್ಯಾಘ್ರಃ . . . ಮೃಗಾರಿಃ—ಈ ೭ ಹುಲಿ" (ಶಬ್ದಮ. ೩೬-೭೩). ೩. ನಾಯಿ. ೪. ಒಂದು ಬಗೆಯ ಮರ. [ಸಂ.]

**ಮೃಗಾರಿಪೀಠ** (ನಾ). ಸಿಂಹಾಸನ : ನಗಪತಿಗಿದೆ ಪೆಜ್ಜೆನೊಸಲೆನೆ ಸೊಗಯಿಪ ಪಾಂಡುಕಶಿಲೆಯೊಳದೇಂ ದಿಟ್ಟಿಗೆವಂದುದೊ ಮಾಣಿಕ್ಯದ ಮೃಗಾರಿಪೀಠಂ ಬಲ್ಲಾಮಮೆನೆ ಕುಂಕುಮದಾ (ನಂಪ್ರಪು. ೦೨-೦೦೦). [ಸಂ.]

**ಮೃಗಾಲಯ** (ನಾ). ಸಾರ್ವಜನಿಕರ ನೋಟಕ್ಕಾಗಿ ವಿಸ್ತಾರವಾದ ಪ್ರದೇಶದಲ್ಲಿ ಕಾಡುಮೃಗಗಳನ್ನೂ ವಿಶೇಷವಾದ ಜಲಚರಪ್ರಾಣಿ, ಪಕ್ಷಿ, ಸರ್ಪ ಮುಂತಾದುವುಗಳನ್ನೂ ಕೂಡಿಟ್ಟಿರುವ ಸ್ಥಳ: ಪ್ರಾಣಿಸಂಗ್ರಹಾಲಯ : ಇಲ್ಲಿ ಬಗೆಬಗೆಯ ಮೃಗಪಕ್ಷಿಗಳುಳ್ಳ ಮೃಗಾಲಯವಿದೆ (ಕಥಪು. ೫-೯೯). [ಸಂ.]

**ಮೃಗಾಸನ** (ನಾ). [ಯೋಗ] (ಜಿಂಕೆಯಂತೆ ದೇಹವನ್ನು ಬಗ್ಗಿಸುವ) ಒಂದು ಬಗೆಯ ಆಸನ : ಸಿದ್ಧಾಸನ . . ಮೃಗಾಸನ . . . ಅರ್ಧಾಸನಾದಿ ಎಂಭತ್ತುನಾಲ್ಕು ಆಸನಭೇದಂಗಳು (ವಿವೇಕ. ೦೩೦). [ಸಂ.]

**ಮೃಗಿ** (ನಾ). ಹೆಣ್ಣುಜಿಂಕೆ : ಮೃಗಕಂತಮಾದ ತತ್ಸಾಯಕಮುರ್ಚಿ ಪೋಗದೆ ಮೃಗೀಯುಗಳಂ ಮಡಿವಂತೆ ಸತ್ತರ್ (ಶಾಂತಿಪು. ೭-೯೯) : ಬಾಲತೃಣಂಗಳಿಂದೆಳಸುಗುಂ ಪಸುರ್ಗಲ್ಗಳ ಕಾಂತಿಯುಂ ಮೃಗೀಜಾಳಕಂ (ಶಂರಾಚ. ೦ ೦೩೭). [ಸಂ. ಮೃಗೀ]

**ಮೃಗಿತ** (ಗು). ೧. ಬೇಟೆಯಾಡಿದ. ೨. ಹುಡುಕಿದ. (ನಾ). ೩. ಹುಡುಕಿದುದು : "ಅನ್ವೇಷಿತಂ . . . ಮೃಗಿತಂ — ೫ ಹುಡುಕಲ್ಪಟ್ಟಿರುವುದು" (ಸಿದ್ಧಾಂತಿ. ೩೩೦). [ಸಂ.]

**ಮೃಗೇಂದ್ರ** (ನಾ). ೧. ಸಿಂಹ : "ಹರಿ ಮೃಗೇಂದ್ರಂ . . . ಕರಿವೈರಿ ಕೇಸರಿಯೆನಲ್ ಸಿಂಹಮೆನಿಸಿಕ್ಕು" (ಮಂಗರಾ. ೯೭-೭); ಇಂದ್ರಂ ಮೃಗೇಂದ್ರನಂತೆ ಗರ್ಜಿಸಿ ಚತುರಂಗಬಲಸಮೇತಂ ಪೊಱಮಟ್ಟು . . . ಬಂದು ತಾಗುವುದುಂ (ಶಾಂತಿಪು. ೭-೮೦ ವ) : ದ್ಯುಮಣಿಗೆ ಕಟ್ಟಿಲೆ ಶರಭಕ್ಕೆ ಮೃಗೇಂದ್ರಂ ಸೆಡೆವ ಮಾಟಕ್ಕಿಯಿಂ ಸೆಡೆವನಾವಂ ನಿಮಗೆ (ಶಂರಾಮಾ. ೭-೦೦೯). ೨. ಹುಲಿ : ವ್ಯಾಘ್ರ. ೩. [ಜ್ಯೋತಿ] ಸಿಂಹರಾಶಿ. [ಸಂ.]

**ಮೃಗೇಂದ್ರವಿಷ್ಟರ** (ನಾ). ಸಿಂಹಾಸನ : ಪುರುದೇವಂ ಮೃಗೇಂದ್ರವಿಷ್ಟರದೊಳಿರೆ (ಆದಿಪು. ೮-೭೦ ವ) ; ಅಶೇಷವಿದ್ವಜ್ಜನಸಭಾಭ್ಯಂತರ ಮೃಗೇಂದ್ರವಿಷ್ಟರಾರೂಢನಾಗಿರ್ಪುದುಂ (ಸುಕುಮಾ. ೨-೧೯ ವ). [ಸಂ.]

**ಮೃಗೇಕ್ಷಣ** (ನಾ). (ಜಿಂಕೆಯ ದೃಷ್ಟಿಯಂತೆ) ಚಂಚಲವಾದ ನೋಟ : ಮೀನಲೋಚನೆ ಮೃಗೇಕ್ಷಣದೆ ಸಗರನೃಪನನಭಿವೀಕ್ಷಿಸಿದಳ್ (ಅಜಿಪು. ೯-೩೭). [ಸಂ.]

**ಮೃಗೋತ್ಥ** (ನಾ). ಕಸ್ತೂರಿಮೃಗದಿಂದ ಉತ್ಪತ್ತಿಯಾದುದು ; ಕಸ್ತೂರಿಯೆಂಬ ಸುಗಂಧದ್ರವ್ಯ : ಮೃಗಮದ : ಮೃಗೋತ್ಥವಾಸಿತ ಧಾರಾಪರಿಕಲಿತ ಪರಾವೃತಮಂಬಿ ಪರಿಹಸ್ತಾಕೃಷ್ಟಕೇಶಹಸ್ತೆವೊಲೆಸೆದಳ್ (ಜಗಂ. ೧೪-೧೦೭) ; ಪಂಚರತ್ನದ ಘನಸಾರವಾರಿಯ ಮೃಗೋತ್ಥ ಕುಳತ್ಥದ ಬಾಯಿನಂಗಳಂ ಮುದದೊದವಿಂದಮಿತ್ತು ಮೆಟ್ಟಿದರ್ (ಚಂದ್ರಪು. ೭-೬೦). [ಸಂ.]

**ಮೃಗೋದ್ಭವ** (ನಾ). = ಮೃಗೋತ್ಥ : ಅಡರೆ ಕವಲ್ತುದೊಂದೆಡೆ ಮೃಗೋದ್ಭವದಿಂ . . . ಸರಸೀವಿಭಾಗದೊಳ್ (ಶಾಂತಿಪು. ೬-೨೯) ; ಶೀತಳಕರ್ಪೂರಮೃಗೋದ್ಭವಾಗುರು ಕುಮುಸ್ತಾಗ್ರಂಥಿಗಂಧಂಗಳಂ ತಳೆದೇಂ ಗಂದಿಗರಂತೆ ಬಂದೊಲೆದುದೋ ಮತ್ತೊಂದು ಮಂದಾನಿಳಂ (ಅರ್ಧನೇ. ೫-೯೭). [ಸಂ.]

**ಮೃಗ್ಯ** (ಗು). ೧. ಹುಡುಕುವ. ೨. ಹುಡುಕಲು ಯೋಗ್ಯವಾದ. (ನಾ). ೩. ಹುಡುಕಬೇಕಾದುದು ; ಶೋಧಿಸಬೇಕಾದುದು : ರಾಮಕಾರ್ಮುಕ, ಕೃಷ್ಣಯುಕ್ತಿ, ಗೌತಮಕರುಣೆ ಭೂಮಿಭಾರವನಿಳುಹೆ ಸಾಲದಾಗಿರಲು ಸಾಮಾನ್ಯರೆನಿತು ತಾಂ ವೆಣಗಿದೊಡಮೇನಹುದು ? ಕ್ಷೇಮವೆಂದುಂ ಮೃಗ್ಯ (ಪಂಚಾಶ. ೬೩೭). [ಸಂ.]

**ಮೃಚ್ಚೂರ್ಣ** (ನಾ). ಮಣ್ಣಿನ ಪುಡಿ ; ಧೂಳು : ಅನುನಯದಿ ಸರ್ವಗತನೆಂಬಂತೆ ಮೃಚ್ಚೂರ್ಣವನು ಹೊದ್ದದಿರ್ಪ ವಾಯುವಿನಂತೆ (ಏಕೋ ಪು. ೪-೭-೩೯). [ಸಂ.]

**ಮೃಜೆ** (ನಾ). ೧. ತೊಳೆಯುವಿಕೆ ; ಶುದ್ಧಿಮಾಡುವುದು : "ಮಾರ್ಷ್ಟಿಃ, ಮಾರ್ಜನಾ, ಮೃಜಾ – ೩ ಶ್ರೀಗಂಧ, ಕುಂಕುಮಕೇಸರಿ ಮುಂತಾದ ದ್ರವ್ಯಗಳನ್ನು ಮೈಗೆ ಹಾಕಿ ಉಜ್ಜಿ ತೊಳಕೊಂಡು ಕೊಳೆ ಹೋಗಲಾಡಿಸುವವಕ್ಕೆ ಹೆಸರುಗಳು" (ಸಿದ್ಧಾಂತಿ. ೨೦೫). ೨. ಶುಚಿ ; ನೈರ್ಮಲ್ಯ. [ ಸಂ. ಮೃಜಾ ]

**ಮೃಡ** (ನಾ). ಈಶ್ವರ : ಶಿವ : "ಈಶಾನಃ . . . ಮೃಡಃ . . . ನೀಲಲೋಹಿತಃ – ಈ ೪೫ ಮಹಾದೇವರ ಪೆಸರ್" (ಹಲಾಯು. ೪-೧೩); ಮೃಡನೊಳ್ ಪಾಶುಪತಾಸ್ತ್ರಂಬಡೆದಂ . . . ನಾರಾಯಣನೊಳ್ ಪಡೆದಂ ಗಾಂಡಿವಿ ಸುಭದ್ರೆಯುಂ ಭದ್ರಮನಂ (ಗದಾಯು. ೨-೩೮); ಮನವಿದು ವಿಷಯಕ್ಕೆ ಹರಿವುದು ಮೃಡ ನಿಮ್ಮ ನಸುದಿನ ನೆನೆಯಲೀಯದು. (ಬಸವ. ೩೪). [ ಸಂ. ]

**ಮೃಡರಿಪು** (ನಾ). ಈಶ್ವರನ ಶತ್ರು; ಮನ್ಮಥ: ಬೆರಲಂ ಮಿಡಿಯಿಸಿ ರುಕ್ಮಿಣಿ. ಜಗಮಂ ಮೃಡರಿಪು ಬೆರಲೆತ್ತಿ ನಿಲ್ವಿನಂ ಬಗೆಗೊಂಡಳ್ (ಜಗಂ. ೧೦-೧೦೯). [ ಸಂ. ]

**ಮೃಡಸುತ** (ನಾ). ೧. ಈಶ್ವರನ ಮಗ : ಗಣಪತಿ : ಮೃಡಸುತನಂತೆ ದಂತಹತಿ ಪೊರ್ದದೆ ಶೂದ್ರಕನಂತೆ ಶಕ್ತಿಯುಂ ಕಿಡಿಸದೆ (ಮಲ್ಲಿಪು. ೧೩-೪೪). ೨. ಸ್ಕಂದ ; ಷಣ್ಮುಖ. [ ಸಂ. ]

**ಮೃಡಾದ್ರಿ** (ನಾ). ಈಶ್ವರನ ವಾಸಸ್ಥಾನವಾದ ಕೈಲಾಸಪರ್ವತ : ದನುಸುತಂ ಕಿಟಿ ತನ್ನನಾ ಮುಳಿಸಿಂ ಮೃಡಾದ್ರಿಯಿ ಸಿಂಹವಾಹಿನಿಯ ರೂಪಿನೊಳಾಹವಕ್ಕೆ ಸಹಾಯಮಾಯ್ತು ರಘೂದ್ವಹಂಗೆನಿಸಿ (ಕಂರಾಜು. ೧೪-೫). [ ಸಂ. ]

**ಮೃಡಾನಿ** (ನಾ). ಈಶ್ವರನ ಪತ್ನಿ; ಪಾರ್ವತಿ : "ರುದ್ರಾಣೀ . . . ಮೃಡಾನೀ, ಹೈಮವತೀ . . . . ಮೇನಕಾತ್ಮಜಾ — ಈ ೨೦ ಗೌರೀದೇವಿಯ ಪೆಸರ್" (ಹಲಾಯು. ೪-೧೪); ಅವಳ ನೊಸಲೊಳಗಿನ ಗೋರೋಚನದ ಬೊಟ್ಟು ಬೇಡತಿಯಾದ ಮೃಡಾನಿಯು ಹಣೆಗಣ್ಣಿನಂತೆ ಶೋಭಿಸುತ್ತಿರುವುದು (ಮುಂಜಯು. ೫-೩೦೦). [ ಸಂ. ಮೃಡಾನೀ ]

**ಮೃಡಾಲಯ** (ನಾ). ಈಶ್ವರನ ನಿವಾಸ ; ಶಿವಾಲಯ : ಒಡಗೂಡಿರ್ಪ ಲಿಂಗವನಜಿಯದೆ . . . ಅಡವಿಗಿಡುಗಳಲ್ಲಿಪ್ಪ ಮೃಡಾಲಯಮಂ ಕಂಡು ಹೊಕ್ಕು ಸಡಗರಿಸಿಕೊಂಡು ವರವ ಹಡೆವೆನೆಂದು ಅಚ್ಚುಗಬಡುತ್ತಿದ್ದೇನೆ (ಪೋಲವಾ. ೨೦-೬೩). [ ಸಂ. ]

**ಮೃಣಾಲ, ಮೃಣಾಳ** (ನಾ). ತಾವರೆಯ ದಂಟು. – ದಿಂಡು : "ಮೃಣಾಲಂ, ಬಿಸಂ – ೨ ತಾವರೇ ಕಾವಿನ ಹೆಸರುಗಳು. ಇವೇ ತಾವರೆ ಬಳ್ಳಿಯ ಕೊಳವಿಗಳು" (ಸಿದ್ಧಾಂತಿ. ೯೦). ಮೃಣಾಳ : "ಮೃಣಾಳಂ, ಬಿಸಂ – ಈ ೨ ನಾಳಂ" (ಹಲಾಯು. ೧೧೨-೩೦); ಕಣ್ಗೆ ಗುರ್ವಿಸುವಿನಮೊಕ್ಕು ನೇಲ್ವ ಕರುಳೋಳಿಯೆ ಬಾಳಮೃಣಾಳಮಾಗೆ (ಕಂಕಣ. ೦-೭); ತರುಣ ಮೃಣಾಳಮಂ ತೆಗೆದು ಪೂಗೊಳದಿಂ ಪೊಱಗಿಕ್ಕುವಂದದಿಂ (ಮಲ್ಲಿಪು. ೩-೨೮). [ ಸಂ. ]

**ಮೃಣಾಳ** 'ಮೃಣಾಲ' ನೋ.

**ಮೃಣಾಳಗುಣ** (ನಾ). ತಾವರೆಯ ದಂಟಿನ ನೂಲು.– ನಾರು : ಬಳಸಿರೆ ಮೃಣಾಳಗುಣಮುಗ್ಗಳಿಸಿರೆ ಮಣಿದರ್ಪಣಂ ಮಹೌಷಧಿಗಳ್ಕಂಗೊಳಿಸಿರೆ ಪಲ್ಲವತತಿ ಸಂಗಳಿಸಿರೆ ಮಣಿಪೂರ್ಣಕುಂಭಮೊಪ್ಪಿದುದದಱೊಳ್ (ರಾಜಶೇ. ೬-೦೦). ಸಂ. ಮೃಣಾಲಗುಣ ]

**ಮೃಣಾಳನಾಳ** (ನಾ). ತಾವರೆಯ ದಂಟು ; ಕಮಲದ ನಾಳ : ಶಶಿಕಳೆಗಳಂ ಮೆಲ್ವ ಸೈಂಹಿಕೇಯನಂತೆ ಮೃಣಾಳನಾಳಗಳಂ ಮೆಲ್ದು (ಕಾದಂಪೂ. ೦೭೪). [ ಸಂ. ಮೃಣಾಲನಾಲ ]

**ಮೃಣಾಳನಾಳಿಕೆ** (ನಾ). = ಮೃಣಾಳನಾಳ : ಮೃಣಾಳನಾಳಿಕೆಗೆ ಚಂದನದಣ್ಕೆಗೆ ತಣ್ಪುಳಿಲ್ಗೆ ತಣ್ಗರಗದ ಸೂಸುನೀರ್ಗೆ ಕೊಳವೇರ್ಗೊಡಲಂ ಗುಱಿಯಾಗೆ ಮಾಡುವರ್ (ಮಲ್ಲಿಪು. ೩-೨೮). [ಸಂ. ಮೃಣಾಲನಾಲಿಕಾ]

**ಮೃಣಾಳಿಕೆ** (ನಾ). ತಾವರೆಯ ದಂಟಿನ ನಾರು ; ಬಿಸತಂತು : ಗರ್ಭಿಣಿಗೆ ತತ್ಸಮಯೋಚಿತ ಮಂಗಳಪ್ರಸಾಧನಮೆಸೆದತ್ತು . . . ಮುತ್ತಿನ ತಿಸರಂ ಮೃಣಾಳಿಕೆಯ ಮುದ್ರಿಕೆ ಪೂವಿನ ಪಿಂಡುಗಂಕಣಂ (ಕಂರಾಜು. ೩-೦೦೭). [ ಸಂ. ಮೃಣಾಲಿಕಾ ]

**ಮೃತ** (ಗು). ೧. ಸತ್ತುಹೋದ ; ಮರಣ ಹೊಂದಿದ. (ನಾ). ೨. ಸಾವು ; ಮರಣ. ೩. ಸಾಯುವವನು ; ಮರಣ ಹೊಂದುವವನು : ಜೀವನುಂ ಮೃತ ದುಃಖಿ ಅಮೃತಂ ದೇವನಾ ಜೀವನುವು ಶುದ್ಧನು ದೇವನತಿಶುದ್ಧನು (ಬಸಪು. ೫೦-೨೯) ; ಕಂದುಕಲೆ ತನಗೆತ್ತಣದು ನಿರ್ದ್ವಂದ್ವಕನು ಮೃತಜಾತ ತಾನಲ್ಲೆಂದು ಕಂಡರವಂಗೆ ಪಾಪ ವಿಲೇಪವಿಲ್ಲೆಂದ (ಕುವ್ಯಾಭಿ. ೩-೪೯). ೪. ಜೀವವಿಲ್ಲದುದು; ನಿರ್ಜೀವವಾದುದು : ಸರ್ವಸೌಂದರ್ಯಾಮೃತಂ ಮೃತವಂತಿಹುದು ನನಗೆ ನೀರಸಂ (ಶ್ರೀರಾಮಾ. ೯-೨೨೭). ೫. ಸತ್ತುಹೋದವನು ; ಮರಣವನ್ನು ಹೊಂದಿದವನು : "ಪರಾಸುಃ, ಉಪಸಂಪನ್ನಃ, ಪ್ರಮೀತಃ, ಸಂಸ್ಥಿತಃ, ಮೃತಃ – ಈ ೫ ಸತ್ತಾತಂ" (ಹಲಾಯು. ೦೦೪-೭) ; ಸ್ವಾಮಿಗಳು – 'ಮೃತನೆಲ್ಲಿ ತೋರಿಸಿ' ಎಂದರು (ಕಥಾ. ೩೪೫). ೬. ಯಾಚನೆಯಿಂದ ಪಡೆದ ಆಹಾರ ; ಭಿಕ್ಷೆ. [ ಸಂ. ]

**ಮೃತಕ** (ನಾ). ೧. ಸತ್ತ ವ್ಯಕ್ತಿ; ಮರಣ ಹೊಂದಿದ ವ್ಯಕ್ತಿ. ೨. ಜೀವವಿಲ್ಲದುದು ; ಹೆಣ : ಪ್ರತಿಕೂಲನಾಗಿ ನಿಲೆ ವಿಧಿ ಮತ್ತ ನಯಮನುಕೂಲಮಾಗಿ ನಿಲೆಯುಂ ಕಾರ್ಯಸ್ಥಿತಿಯುಂ ಸಾಧಿಸಲಾಗದು ಮೃತಕ ಕೃತೋಪಕೃತಿಯವೊಲನರ್ಥಾಯಾಸಂ (ಳಚಂ. ೩-೦೪೫); ಮೃತಕಮಂ ಕಂಡನಿಬರುಂ ಮೂರ್ಛೆವೋಗಿ ನೀಡಱಿಂದೆಚ್ಚತ್ತರ್ (ಕಥಾ.ರ. ೩೦-೭); ಈ ಮೃತಕಮಂ ನಿಷ್ಪ್ರಯೋಜನಮಿಂತೇಕೆ ಪೊತ್ತು ತೊಳಲ್ದಪೆಯೆನೆ

(ಶಂಗಶಶಾ. ೧೭-೩೩ ವ). ೩. ಸಾವು ; ಮರಣ. ೪. ಮರಣಸೂತಕ; ಮೃತಾಶೌಚ. [ಸಂ.]

**ಮೃತಕದುಂದುಭಿ** (ನಾ). ವ್ಯಕ್ತಿಯು ಸತ್ತ ಮೇಲೆ ಕೆಲವರಲ್ಲಿ ಒಂದು ವಿಧಿಯಾಗಿ ಬಾರಿಸುವ ತಮಟೆ : ಗಡಗಡನೆ ಪೊಡವಿ ನಡುಗಿತು, ದುಃಖವಾರ್ತೆಯಂ ಜಗಕೆಲ್ಲ ಕೇಳಿಸುವ ಮೃತಕದುಂದುಭಿಯಂತೆ (ಗೊರೂ್ರ ಶಾ. ೧೩-೩೯೨). [ಸಂ.]

**ಮೃತಕಲ್ಪ** (ಗು). ೧. ಸತ್ತಂತಿರುವ; ಮೈಮರೆತಿರುವ. (ನಾ). ೨. ಹೆಣಕ್ಕೆ ಸಮನಾದುದು: ಸತ್ತಂತೆ ಇರುವುದು : ಕಾಳರಕ್ಕಸ ಲೋಕವೆಲ್ಲವ ಗೋಳುಗುಟ್ಟಿಸೆ ಅಜನು ಶಪಿಸಿದ ಬೀಳು ನೀ ಮೃತಕಲ್ಪನಾಗೆನೆ ನಿದ್ದೆಗೈದಿಹನು (ಕೌಶಿರಾ. ೨೩-೮). [ಸಂ.]

**ಮೃತಕಸೆಜ್ಜೆ** (ನಾ). [ಜೈನ] ತಪಸ್ಸಿನ ಒಂದು ಭಂಗಿ : ಶವಾಸನ(?) : ಪ್ರಾಯೋಪಗಮನವಿಧಾನದಿಂ ಪ್ರಚ್ಛನ್ನಮಪ್ಪೆಡೆಯೊಳ್ ಮೃತಕಸೆಜ್ಜೆಯೊಳಿರ್ದು ಸಂನ್ಯಸನಂಗೆಯ್ದು ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಧ್ಯಾನಿಸುತ್ತಿರ್ಪನ್ನೆಗಂ (ವಡ್ಡಾರಾ. ೨೯-೦). [ ಮೃತಕ + ಸೆಜ್ಜೆ$_2$ ]

**ಮೃತಪಟಹ** (ನಾ). = ಮೃತಕದುಂದುಭಿ : ಮೃತಪಟಹಂ ಜಯಪಟಹಂ ಚಿತಾಗ್ನಿಧೂಮಂ ಜಯಧ್ವಜಂ ಜನಕರುಣಾರುತಿ ಜಯಮಂಗಳರುತಿಯೆನೆ ಕೃತಾಂತರಾಜಂಗೆ ರಾಜ್ಯಚಿಹ್ನವಿಂದಲ್ತೆ (ಅಜಿತ.೦೦-೨೯). [ಸಂ.]

**ಮೃತಪತ್ರ** (ನಾ). ವ್ಯಕ್ತಿಯು, ತಾನು ಸತ್ತ ತರುವಾಯ ತನ್ನ ಆಸ್ತಿಯು ಯಾರಿಗೆ ಸೇರಬೇಕೆಂಬ ಹಕ್ಕನ್ನು ಮತ್ತು ತನಗೆ ಸಂಬಂಧಿಸಿದ ಅಂತಿಮ ಇಚ್ಛೆಗಳನ್ನು ಬರೆದಿರುವ ಪತ್ರ; ಉಯಿಲು; ಮರಣಶಾಸನ : ಆ ಮುದುಕರು ಮೃತಪತ್ರ ಬರೆದಿಟ್ಟಿದ್ದಾರೆ (ಕೂಶಿ). [ಸಂ.]

**ಮೃತಭಾಷೆ** (ನಾ). ಬಳಕೆಯಲ್ಲಿ ಇಲ್ಲದೆ ಕೇವಲ ಗ್ರಂಥಸ್ಥವಾಗಿರುವ ಭಾಷೆ : ಈಗ ವ್ಯವಹಾರದಲ್ಲಿಲ್ಲದೆ ಗ್ರಂಥಗಳಲ್ಲಿ ಮಾತ್ರ ದೊರೆಯುವ ಭಾಷೆಯನ್ನು ಮೃತಭಾಷೆಯೆಂದು ಕರೆಯುತ್ತಾರೆ (ಕೈಪಿಡಿ. ೨೯೩).
[ಸಂ. ಮೃತಭಾಷಾ]

**ಮೃತಸಂಜೀವಕ** (ನಾ). ಸತ್ತವರನ್ನು ಬದುಕಿಸುವ ಔಷಧಿ, ರತ್ನ, ಮಂತ್ರ ಇತ್ಯಾದಿ : ತನ್ನ ರಮಣಂ ಬರ್ದುಕುವಂತೆ ಮೃತಸಂಜೀವಕದ ಮಣಿಯನೀವುದು (ಕೈಖಿಶಾ. ೨೪-೯). [ಸಂ.]

**ಮೃತಸಂಜೀವನ** (ಗು). ೧. ಸತ್ತವರನ್ನು ಮತ್ತೆ ಬದುಕಿಸುವ. (ನಾ). ೨. ಸತ್ತವರು ಪುನಃ ಬದುಕಿಕೊಳ್ಳುವುದು. ೩. ಸತ್ತವರನ್ನು ಬದುಕಿಸುವುದೆಂದು ಭಾವಿಸಲಾದ ಒಂದು ಮಂತ್ರ: ಮೃತಸಂಜೀವನ ಎಂಬ ಸಂಜೀವನತ್ರಯಮಂತ್ರಂಗಳಂ (ಶಿವೇಕ. ೬೦). [ಸಂ.]

**ಮೃತಸಂಜೀವನೀವಿದ್ಯೆ** (ನಾ). (ಮಂತ್ರ ಮಣಿ, ಔಷಧಿ ಮುಂತಾದುವುಗಳಿಂದ) ಸತ್ತವರನ್ನು ಪುನಃ ಬದುಕಿಸುವ ವಿದ್ಯೆ : ಅಸುರರ ಪುರೋಹಿತನಾದ ಶುಕ್ರಾಚಾರ್ಯನಿಗೆ ಸತ್ತವರನ್ನು ಬದುಕಿಸುವ ಮೃತಸಂಜೀವನೀವಿದ್ಯೆ ಗೊತ್ತಿತ್ತು (ವಚರಾ. ೩೯೯).
[ಸಂ. ಮೃತಸಂಜೀವನೀವಿದ್ಯಾ]

**ಮೃತಸಂಜೀವಿನಿ** (ನಾ). ಸತ್ತವರನ್ನು ಪುನಃ ಬದುಕಿಸುವ ಮಂತ್ರ, ಮಣಿ, ಔಷಧಿ ಮುಂತಾದ ಸಾಧನ ಮತ್ತು ವಿದ್ಯೆ : ಮೃತಸಂಜೀವಿನಿಯು ಬಳಿಯಿರಲು ಬಹಳ ವ್ಯಾಧಿ ಮಾಡುವ ದುರುಳತನ ತಾನೇನು (ಕುಮಾರರಾ. ೦೦-೪೪); ದೇವರಾಪನ ಕಟಕ ಮೃತಸಂಜೀವಿನಿಯಲಸುವಡೆದವೊಲಕ ವಿಭಾವರಿಯೊಳಂದಣ್ಣಯ್ತು ಲಂಕಾಪುರ ಪುನರ್ದಹನ (ತೊರರಾ. ೬-೩೭ ಕೂತಪ). [ಸಂ. ಮೃತಸಂಜೀವಿನೀ]

**ಮೃತಸ್ನಾತ** (ನಾ). ಶವಸಂಸ್ಕಾರವನ್ನು ಮಾಡಿದ ಮೇಲೆ ಸ್ನಾನ ಮಾಡಿದವನು : ಅಂತ್ಯಕ್ರಿಯೆಯ ನಂತರ ಸ್ನಾನಮಾಡಿದವನು.
[ಸಂ.]

**ಮೃತಸ್ನಾನ** (ನಾ). ಶವಸಂಸ್ಕಾರ ಮಾಡಿದ ಮೇಲೆ ಮಾಡುವ ಸ್ನಾನ : ಅಂತ್ಯಕ್ರಿಯೆಯ ನಂತರ ಮಾಡುವ ಸ್ನಾನ : "ಅಪಸ್ನಾನಂ ಮೃತಸ್ನಾನಂ — ಈ ೨ ನೀರಿಳಿಹು" (ಹಲಾಯು. ೦೦೩-೦೭) ; "ಅಪಸ್ನಾನಮೆನೆ ಮೃತಸ್ನಾನಕ್ಕೆ ಪೆಸರೆನಿಕ್ಕುಂ" (ಮಂಗರಾ. ೦೦೭-೩). [ಸಂ.]

**ಮೃತಾಲಕ** (ನಾ). ೧. ಒಂದು ಬಗೆಯ ಜೇಡಿಮಣ್ಣು. ೨. ಸುವಾಸನೆಯುಳ್ಳ ಒಂದು ಬಗೆಯ ಮಣ್ಣು : "ಆಢಕೀ, ಕಾಕ್ಷೀ, ಮೃತ್ಸ್ನಾ, ತುವರಿಕಾ, ಮೃತಾಲಕಂ, ಸುರಾಷ್ಟ್ರಜಂ — ಈ ೬ ಪಲಟ ಮಣ್ಣೆಂಬ ಗಂಧದ್ರವ್ಯ" (ನಾಶರಾ. ೦೦೦). [ಸಂ.]

**ಮೃತಾಶೌಚ** (ನಾ). ಒಬ್ಬ ವ್ಯಕ್ತಿಯ ಮರಣದಿಂದ ಆ ವ್ಯಕ್ತಿಯ ವಂಶಸ್ಥರಿಗೆ ಬರುವ ಮೈಲಿಗೆ ; ಮರಣಸೂತಕ : ವಂಶದಲ್ಲಿ, ಕೆಲವು ತಲೆಮಾರೊಳಗೆ, ಯಾರಾದರೂ ಜನಿಸಿದರೂ ಮೃತರಾದರೂ ನಿಯಮವಾದ ಕಾಲಪರ್ಯಂತವಾಗಿರುವ ಕರ್ಮಕ್ಕೆ ಅಧಿಕಾರವಿಲ್ಲದ ಅವಸ್ಥೆ — ಇದನ್ನು ಜಾತಾಶೌಚ, ಮೃತಾಶೌಚವೆನ್ನುತ್ತಾರೆ (ಆರ್ಯಧ. ೯೩). [ಸಂ.]

**ಮೃತಿ** (ನಾ). ಸಾವು ; ಮರಣ : ಮೃತಿಗಿನಿಸಪ್ಪೊಡಂ ಸೆಡೆಯದೀ ಭವದೊಳ್ ದೊರೆಕೊಂಡುದಿಲ್ಲ ದುಷ್ಕೃತದೊದವಿಂ ಮನಃಪ್ರಿಯಕರಗ್ರಹಣಂ (ಶಂಗಾಮೂ. ೬-೮) ; ಮತಿ ನಿರ್ವೇದ . . . ಮೋಹಾಮಯ ಮೃತಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೩) : ಆ ಪಕ್ವಾನ್ನಮೆ ಮೃತಿಗಜದ್ವೀಪನ ಪಿಂಡದವೊಲಾಗೆ . . . ವಿಂಧ್ಯದೊಳೊಗೆದಂ (ಚಾಕೋಕ. ೩-೩೪).
[ಸಂ.]

**ಮೃತಿಸು** (ಕ್ರಿ). ಸಾಯು; ಮರಣಹೊಂದು: ತನುಪತಿ ಚಂಚಲಿಸದಿರುತಿರಲು ಜನಿಸುತ ಸುತರು ಮೃತಿಸುವರು (ಕೇರಶ್ರ. ೬-೨೭). [ಮೃತಿ + -ಸು$_2$]

**ಮೃತ್ತಿಕೆ$_1$** (ನಾ). ೧. ಮಣ್ಣು : "ಮೃತ್, ಮೃತ್ತಿಕಾ—ಈ ೨ ಮಣ್" (ಹಲಾಯು. ೨೭-೪) ; ವಿವಾಹಗೇಹಮಂ ಸಮೆಯಿಸಿಯುದಟ ನಡುವಣಾರ್ದ್ರಮೃತ್ತಿಕಾವಿರಚಿತಮಪ್ಪ ಚತ್ವರಾಂತರದೊಳ್ . . . ಗುಣಾರ್ಣವನನಾದ್ರುಪದಜೆಯನೊಡನೆ ಕುಳ್ಳಿರಿಸಿ (ಪಂಪಭಾ. ೩-೭೪ ವ). ೨. ಪವಿತ್ರವಾದ ಮಣ್ಣು: ಅಗುಟಿದ್ದ ತುದಿಗೊಂಬಿನೊಳ್ ಮೆಲ್ಲಗೆ ಪೊತ್ತಭಿಷೇಕಮೃತ್ತಿಕೆಯನೊಡಸಂದತ್ತಗಲದನಿಸಿಂ ತಪೋವನಮೃಗಮಾ ಮುನಿವರನೊಳಾದ ಪರಿಚಯದಿಂದಂ (ಕಾದಂಪೂ. ೨೦೭) ; ರಾಜರು . . .ಕೈಯಲ್ಲಿದ್ದ ಮೃತ್ತಿಕೆಯನ್ನು ಕೊಟ್ಟು, ಇದನ್ನು ಲೇಪಿಸಿಕೋ ! ನಿನ್ನ ವ್ಯಾಧಿ ಪರಿಹಾರವಾಗುವುದೆಂದರು (ಕಥಾ. ೦೪೭) ; ನಮಿಸಿದನು ಮುಟ್ಟಿ ಮೃತ್ತಿಕೆಯನಾ ರಾಮಚರಣಸ್ಪರ್ಶಪೂಜ್ಯಮಂ (ಶ್ರೀರಾಮಾ. ೦೭೨-೨೭೮). ೩. ಜೇಡಿಮಣ್ಣು. ೪. ಒಂದು ಬಗೆಯ ಸುವಾಸನೆಯ ಮಣ್ಣು. ೫. ಒಂದು ನರಕದ ಹೆಸರು : ಪೂತಿವಕ್ತ್ರ ರಕ್ತಪೂತಿ ಮೃತ್ತಿಕೆ ಕಣಧೂಮವೆಂಬೈದು ಮಂತ್ರಿನರಕಂಗಳಿಂ ಬೆಱದು ಭೀಮವೆಂಬರಸುನರಕವಿಹುದು (ಶಿವೇಕ. ೦೩೩).

ಮೃತ್ತಿಕೆಯ ಲವಣ = ಭೂಮಿಯಲ್ಲಿ ಘನರೂಪದಲ್ಲಿ ದೊರೆಯುವ ಉಪ್ಪು ; ಕಲ್ಲುಪ್ಪು : ಮೃತ್ತಿಕೆಯ ಲವಣ ಸ್ವಯಂಪಾಕ ಮಿಕ್ಕಾದ ಲವಣ ಅಪ್ಪುಭೇದ (ಸ್ವಶಿ. ೪-I,೯೩೯-೦೭೩೩). [ಸಂ. ಮೃತ್ತಿಕಾ]

**ಮೃತ್ತಿಕೆ$_2$** (ನಾ). [ಅಶ್ವಶಾ] ಕುದುರೆಯ ಶರೀರದ ಒಂದು ಭಾಗ ; ಗುದದ ಎರಡು ಪಕ್ಕ : ಬಾಲದ ಕೆಟಗುಂ ಗುದಮುಂ ಲೀಲೆಯ ಗುದದೆರಡು ಕೆಲನ ಮೃತ್ತಿಕೆಯೆಂಬರ್ ತಾಳುವ ಮೃತ್ತಿಗೆ ಕೆಟಗುಂ ಪೇಟಾರೋಮಸ್ವಮೆಂಬ ಪೆಸರಂತಕ್ಕುಂ (ಅಶ್ವಶಾ. ೯-೯೭) ; ಬಾಲದ ಕೆಳಗಂ ಗುದವೆಂಬರು ಆ ಗುದದ ಎರಡು ಕೆಲಸಂ ಮೃತ್ತಿಕೆಯೆಂಬರು (ಅಶ್ವಟೀ. ೯-೪೭). [ ? ]

**ಮೃತ್ತಿಗೆ** (ನಾ). ೧. ಮಣ್ಣು : ಮೃತ್ತಿಗೆಯಲ್ಲಿ ಗಂಧಶಕ್ತಿಯಾಗಿಯು ಜಲದಲ್ಲಿ ರಸಶಕ್ತಿಯಾಗಿಯು . . . ಇವುಗಳಿಗೆಲ್ಲ ಆದಿಯಾಗಿ

ಇರುವಡೆ ಪರಾಮು (ತತ್ತ್ವ. ೧೨-೧೧). ೨. ಪವಿತ್ರವಾದ ಮಣ್ಣು. - ಮೃತ್ತಿಕೆ : ನಾನು ಅಪ್ಪಾಜಿಯ ಹತ್ತಿರವಿದ್ದ ತಟ್ಟೆ ಗಿಂಡಿ ವಿಭೂತಿ ಮೃತ್ತಿಗೆ ಹೂವಿನ ಬುಟ್ಟಿಯೆಲ್ಲವನ್ನು ಅವರ ಹತ್ತಿರವಿಟ್ಟೆ (ಕೆಂಗಾಳ್ಕ. ೦೨). [<ಸಂ. ಮೃತ್ತಿಕಾ]

**ಮೃತ್ತಿಸು** (ಕ್ರಿ). ಮಣ್ಣನ್ನು ಮೆತ್ತು, - ಲೇಪಿಸು : ಕಾಯ್ದು ಕಾಯ್ಗೊಂಡ ದೆಣ್ಣೆಯೊಳರ್ದಿ ಬರ್ದಿಸುತ್ತಮಾಪಾದಮಸ್ತಕಂಬರಂ ಮೃತ್ತಿಸಿ ಪತ್ತಿ ತಿದಿ ಯುಗಿಯುಂತ್ತೆ (ಆಜಿತ. ೧೦-೧೦ ವ). [ಮೃತ್ತು + - ಇಸು]

**ಮೃತ್ತು** (ನಾ). ಮಣ್ಣು ; ಮೃತ್ತಿಕೆ : ಮೃತ್ತುವಿನಿಂದಾದ ಮಡಕೆ ಮರಳಿ ಮಣ್ಣಾಪ್ಪುದೆ (ವರ್ಧಮಾ. ೩೪೭-೬೨). 'ಮೃತ್ತಿಸು' ಪರಾ. [<ಸಂ. ಮೃದ್]

**ಮೃತ್ಪಾತ್ರ** (ನಾ). ಮಣ್ಣಿನ ಪಾತ್ರೆ ; ಮಡಕೆ : ತಪೋವನಕ್ಕೆ ಪೋಪ ಭಾರ್ಗವಂ ದ್ರವ್ಯಾರ್ಥಿಯಾಗಿ ಬಂದ ಕುಂಭಸಂಭವನಂ ಕಂಡು ಕನಕ ಪಾತ್ರಕ್ಕುಪಾಯಮಿಲ್ಲಪ್ಪುದಱಂ ಮೃತ್ಪಾತ್ರದೊಳರ್ಘ್ಯಮೆತ್ತಿ ಪೂಜಿಸಿ (ಸಂಶಆ. ೨-೪೩ ವ). [ಸಂ.]

**ಮೃತ್ಪಿಂಡ** (ನಾ). ೧. ಮಣ್ಣಿನ ಮುದ್ದೆ, - ಉಂಡೆ : ಮೃತ್ಪಿಂಡದ ಹದನ ಚಕ್ರಿಯ ಚಿತ್ತದ ಕರದಂತೆ ಚಿತ್ರಜ್ಞನ ಚಿತ್ತದ ಲೆಕ್ಕಣಿಕೆಯ ಒಪ್ಪ ದಂತೆ (ಪೋಲವಚ. ೧೯೯-೬೯೩); ವಿಶ್ವವಿಶ್ವಂಭರೆಯಂ ಮೃತ್ಪಿಂಡಮಾತ್ರಾ ಕೃತಿಯೆನೆ ಬಗೆದಂ (ಚಂದ್ರಪು. ೧೦-೦೨೬). ೨. (ಅಲಂ) ದೇಹ ; ಶರೀರ : "ಮನುಷ್ಯಶರೀರ, ಪಾರ್ಥಿವದೇಹ. ಮೃತ್ಪಿಂಡ" (slime. ಇಂಕಪ). [ಸಂ.]

**ಮೃತ್ಯು** (ನಾ). ೧. ಸಾವು ; ಮರಣ : "ನಿಧನಂ, ನಾಶಃ, ಮೃತ್ಯುಃ . . . ದೀರ್ಘನಿದ್ರಾ _ ಈ ೧೨ ಸಾವು" (ಶಬ್ದಮ. ೦೦೩-೬); ಮೃತ್ಯು ಮುಟ್ಟದ ಮುನ್ನ ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೦೬೦); ಅರಣ್ಯದೊಳಿರುವ ಅರಳಿಯ ಮರನ ಸ್ವಕರದ್ವಯಂಗಳಿಂ ಮುಟ್ಟಿ ಸ್ಮರಿಸಿ ದೊಡೆ ನೂರೆಂಟು ವೇಳೆಯು ಪರಿದು ಪೋಪುದು ಮೃತ್ಯು (ಗಗಶಾ. ೪-೬೭). ೨. ಸಾವಿನ ಅಧಿದೇವತೆ ; ಯಮ : "ಪ್ರೇತಪತಿ ಸಮವರ್ತಿ ಮೃತ್ಯು ಕಾಳಿಂದಿ . . . ಕೃತಾಂತನಕ್ಕುಂ" (ಮಂಗರಾ. ೦೩-೦೦); ಮೃತ್ಯುವಿನ ಬಾಯಿಗೆ ತುತ್ತಾಗಲೇಕೆ (ಬಸವ. ೦೩೯). ೩. ಸಾವಿನ ದೇವತೆ ; ಮೃತ್ಯುದೇವತೆ : ಬ್ರಹ್ಮನ ಕಿತ್ತಡದ ಕೋಪದಲಿ ಜನಿಸಿದ ರುದ್ರನಿಂ ಬಳಿಕ ಮೃತ್ಯುವೆಂದವಳಾದಳಾ ಸತಿಯುತ್ತ ಕಂಬನಿ ರುಜೆಗಳಾದವು ತತ್ತಿಗರು ಷಡುವರ್ಗ ಕಾಮ ಕ್ರೋಧ ಮೊದಲಾಗಿ (ಕುವ್ಯಾದ್ರೋ. ೬-೩೪). 'ಮೃತ್ಯುದೇವಿ' ಪರಾ. [ಸಂ.]

**ಮೃತ್ಯುಂಜಯ** (ನಾ). ೧. ಯಮನನ್ನು ಜಯಿಸಿದವನು ; ಶಿವ : ತ್ರಾಹಿ ಮೃತ್ಯುಂಜಯ ಪಿನಾಕಿ ತ್ರಾಹಿ ಲೋಕೇಶ (ಕುವ್ಯಾಕ. ೬-೪೩); ಮೃತ್ಯುಂಜಯನನಱಿಯದೆ ಸಂಸಾರವೆಂಬ ಮೃತ್ಯುವಿನ ಬಾಯ ತುತ್ತಾಗಿ ಉತ್ಪತ್ತಿ ಸ್ಥಿತಿ ಪ್ರಳಯಕ್ಕೊಳಗಾದಿರಲ್ಲಾ (ಸಿದ್ಧೇವ. ೩೦-೦೪೦). ೨. (ಸಾವನ್ನು ತಪ್ಪಿಸುವುದೆಂದು ನಂಬಿ ಜಪಿಸುವ) ಒಂದು ಮಂತ್ರ : ಗಾಯತ್ರಿ ಮೃತ್ಯುಂಜಯ . . . ಭೈರವಾದಿ ಮಹಾಮಂತ್ರಂಗಳಂ . . . ಬೇಱಿ ಬೇಱಿ ವಿವೇಕಿಸಿ ನೋಡಿ (ವಿವೇಕ. ೬೩). 'ಮೃತ್ಯುಂಜಯ ಮಂತ್ರ' ಪರಾ. ೩. [ಜೈನ] ಜಿನ ; ಅರ್ಹಂತ. [ಸಂ.]

**ಮೃತ್ಯುಂಜಯತೆ** (ನಾ). ಸಾವನ್ನು ಗೆಲ್ಲುವ ಶಕ್ತಿ ; ಮರಣವನ್ನು ಜಯಿಸುವ ಬಲ : ಬಿದ್ದುದನು ನಿಲ್ಲಿಪುದೆ ನರನ ಮೃತ್ಯುಂಜಯತೆ (ಮಂಕುಕ. ೪೭೪). [ಸಂ. ಮೃತ್ಯುಂಜಯತಾ]

**ಮೃತ್ಯುಂಜಯಮಂತ್ರ** (ನಾ). = ಮೃತ್ಯುಂಜಯ ೨ : ಅನುಮರಿಸಿಯುಂ ತನ್ನನೀಶ್ವರದಿವ್ಯಪಿಚಿಸಮೃತ್ಯುಂಜಯಮಂತ್ರಸಾಮರ್ಥ್ಯಸಂಧಾರ್ಯಮಾಣಜೀವಿತರಾಗಿರ್ದರ್ (ಚಂದ್ರಪು. ೩-೩೩ ವ). [ಸಂ.]

**ಮೃತ್ಯುಂಜಯರಸ** (ನಾ). [ವೈದ್ಯಶಾ] ಒಂದು ಬಗೆಯ ಔಷಧಿ : ಮೃತ್ಯುಂಜಯ ರಸ : _ (ಸನ್ನಿಗೆ) _ ವತ್ಸನಾಭಿ ಗ ೧ ತೂಕ. ನಾಗಭಸ್ಮ ಗ ೧ ತೂಕ, ರಸ ಗ ೨ ತೂಕ, ಇವಂ ಅರ್ಕಕ್ಷೀರದಲ್ಲಿ ಚೆನ್ನಾಗಿ ಮರ್ದಿಸಿ . . . ತೇದು ಹಚ್ಚುವುದು (ವೈವಿ. ೪೪). [ಸಂ.]

**ಮೃತ್ಯುದೇವತೆ** (ನಾ). ಮರಣದ ಅಧಿದೇವತೆ ; ಸಾವಿನ ದೇವತೆ : ಮರ್ತ್ಯಲೋಕದ ಉದರದೊಳಗೆ ಮೃತ್ಯುದೇವತೆ ಕತ್ತೆ ಕುದುರೆಯ ಹಡದಳು ಪುತ್ರೋತ್ಸಾಹವ ಮಾಡುವದ ಕಂಡು . . . ಬೆಸಗೊಳಲು (ಸಿದ್ಧೇವ. ೦೪೬-೪೩೭); ಸ್ವತಃ ಮೃತ್ಯುದೇವತೆ ಬಾಗಿಲೆದುರು ಬಂದರೂ ಕವಿ ಅವಳನ್ನು ಸ್ವಾಗತಿಸುತ್ತಾನೆ (ರರ್ಮಸಾ. ೮೭). [ಸಂ. ಮೃತ್ಯುದೇವತಾ]

**ಮೃತ್ಯುದೇವಿ** (ನಾ). = ಮೃತ್ಯುದೇವತೆ : ಕಡಿದ ತಲೆಯ ನಿವಾಳಿ ಯೆತ್ತುವರುಡಿದ ಕೈಗಳ ಮೃತ್ಯುದೇವಿಗೆ ಕೊಡುವ ಹರಕೆಯ ಕಂಡು ರಾವಣ ನೋಡಿ ಮೆಚ್ಚಿರ್ದ (ಕೌಶಿರಾ. ೨೦-೦೨). [ಸಂ. ಮೃತ್ಯುದೇವೀ]

**ಮೃತ್ಯುಪತ್ರ** (ನಾ). = ಮೃತಪತ್ರ : ಮೃತ್ಯುಪತ್ರವನೀಗಲೇ ನಾನೇಕೆ ಬರೆದೆನೊ ತಿಳಿಯದು (ಪಲಮು. ೩೨-೩); ರಾತ್ರಿ ಎದ್ದು ಕುಳಿತು ಟಿಳಕರು ತಮ್ಮ ಮೃತ್ಯುಪತ್ರ ಸಿದ್ಧಪಡಿಸಿದರು (ಸ್ವ.ಶಿತ. ೪೪೪). [ಸಂ.]

**ಮೃತ್ಯುಮುಖ** (ನಾ). (ಅಲಂ) ಮರಣದ ಸಾಮೀಪ್ಯ : ಚಕ್ರವರ್ತಿಯು ಮೃತ್ಯುಮುಖದಿಂದ ಪಾರಾದುದು ಇಡೀರಾಜ್ಯವನ್ನೇ ಆನಂದದಿಂದ ತುಂಬಿಸಿತು (ಮಚಕ. ೨೦); ಹದಿನೈದುದಿವಸ ಮೃತ್ಯುಮುಖದಲ್ಲಿ ಪ್ರವೇಶಿಸಿದ ಮೆಹಬೂಬ ಒಂದು ದಿನ . . . ಜ್ವರದಿಂದ ಪಾರಾದಳು (ಗಂಪಮ. ೨೦೦). [ಸಂ.]

**ಮೃತ್ಯುರಾಜ** (ನಾ). ಸಾವಿನ ಅಧಿಪತಿ ; ಯಮ : ಅಘವೈರಿಯಲ್ಲ ದುಱಿದಂ ಗೆಲಲಾರ್ಕುಮೆ ಮೃತ್ಯುರಾಜನಂ (ಅದಿತ. ೩-೬). [ಸಂ. ಮೃತ್ಯುರಾಜ್]

**ಮೃತ್ಯುಲೋಕ** (ನಾ). ಯಮಲೋಕ : ಉತ್ತರಲೋಕದಲ್ಲಿ ಸತ್ಯಜ್ಞಾನಾನಂದವೆಂಬ ಅಂಗನೆ ಮೃತ್ಯುಲೋಕವನೆಯ್ದಲು (ಸಿದ್ಧೇವ. ೨೦೪-೬೩೦). [ಸಂ.]

**ಮೃತ್ಯುಶಿಲೆ** (ನಾ). ಮರಣ ಹೊಂದಿದವನ ಸಮಾಧಿಯ ಮೇಲೆ ನೆಡುವ ಕಲ್ಲು : ಅಲ್ಲಿ ಒಂದು ಮೃತ್ಯುಶಿಲೆ(ಕಬರ)ಯನ್ನು ನಿಲ್ಲಿಸ ಬೇಕೆಂದು ನನ್ನ ಆಪ್ತಮಿತ್ರರು ಇಚ್ಛಿಸುವುದಾದರೆ . . . ನನ್ನ ಕವಿತೆಯ ಸಾಲನ್ನು ಕೆತ್ತಿಸಬೇಕು (ಸ್ವ.ಶಿತ. ೪೪೩). [ಸಂ. ಮೃತ್ಯುಶಿಲಾ]

**ಮೃತ್ಯುಸೂತಕ** (ನಾ) = ಮೃತಾಶೌಚ : ಮೃತ್ಯುಸೂತಕವು ಹನ್ನೆರಡು ದಿನವು (ಪುರಂದ. ರಾ. ೨-೨೦-೩) ; ಪೆತ್ತ ಸೂತಕ ಹತ್ತು ದಿನಗಳಿಗೆ ಪರಿಹಾರ ಮೃತ್ಯುಸೂತಕವು ಹನ್ನೊಂದು ದಿನಕೆ (ಸಂಕೆ. ೩೩-೪). [ಸಂ.]

**ಮೃತ್ಯುಹರ** (ನಾ). = ಮೃತ್ಯುಂಜಯ ೧ : ಆ ನರನೆಚ್ಚ ಗಱಿಗಣೆ ಗಳಾವರಿಸಿ ಕರಂ ಮುತ್ತೆ ಮೃತ್ಯುಹರನಂಜುವನೇ (ಶಶಂ. ೪-೪೩). [ಸಂ.]

**ಮೃತ್ಸೆ** (ನಾ). ೧. ಮಣ್ಣು ; ಮೃತ್ತಿಕೆ. ೨. ಫಲವತ್ತಾದ ಮಣ್ಣು ; ಉತ್ತಮವಾದ ಮಣ್ಣು : "ಮೃತ್ಸಾ, ಮೃತ್ಸ್ನಾ _ ಈ ೨ ಒಳ್ಳೆಹ ಮಣ್" (ಶಬ್ದಮ. ೨೬-೪) ; "ಮೃತ್ಸೆಯೆನಲು ಒಳ್ಳಿತಹ ಮಣ್ಣು" (ಮಂಗರಾ. ೨೮-೨). ೩. ಒಂದು ಬಗೆಯ ಸುವಾಸನೆಯ ಮಣ್ಣು. ೪. ಒಂದು ಬಗೆಯ ಸಸ್ಯ ; ತೊಗರಿಗಿಡ. [ಸಂ._ ಮೃತ್ಸಾ]

**ಮೃತ್ಸ್ನಾಘಟ** (ನಾ). ಉತ್ತಮವಾದ ಮಣ್ಣಿನಿಂದ ಮಾಡಿದ ಪಾತ್ರೆ : ಶಿರಿಪುತ್ರಂ ಜವದಿಂ ಮುಕುಂದನಿಸೆ ವಿದ್ಯುದ್ವಿಕರಂ ವೈರಿಕಂಧರಮಂ ಕೊಂಡು ತದುತ್ತಮಾಂಗದೊಡನುದ್ದಂ ಪಾಱಿ ಮೃತ್ಸ್ನಾಘಟಂಬೆರಸುದ್ಯ ದ್ವ್ರಜದಂಡವರ್ತನದಿನುಗ್ರಾಡಂಬರಂ ಪೋಗೆ ಕೋಪರಚಕ್ರಂ ಶಿರಿವಂದದಿಂ ತಿಳಿದುದಾ ಚಕ್ರಂ ವಿಯಚ್ಚಕ್ರದೊಳ್ (ಶಾಂತಿಪು. ೪-೩೪). [ಸಂ.]

**ಮೃತ್ಸ್ನ** (ನಾ). ೧. = ಮೃತ್ಸೆ ೧. ೨. = ಮೃತ್ಸೆ ೨: " ಮೃತ್ಸಾ, ಮೃತ್ಸ್ನಾ, —ಈ ೨ ಒಳ್ಳೆಹ ಮಣ್ " (ಶಬ್ದಮ. ೨೬-೪) ; ಸುರರಾಜಾಸ್ಥಾನದ ಪೊಣ್ ಸುರಮದಗಜಕೋಡಮಣ್ಣುಮುಖಮಂ ನಾಗರಮನೆಯ ಮೃತ್ತಿಕೆಯುಮಾ ನರನಾಥಾಲಯದ ಮೃತ್ಸ್ನೆಯುಂ ಹ್ಯಲ್ಲೇಪಂ (ಅಕ್ಕಿಚ. ೯-೦೯). ೩. = ಮೃತ್ಸೆ ೩: "ಆಢಕೀ, ಕಾಕ್ಷೀ, ಮೃತ್ಸ್ನಾ . . . ಸುರಾಷ್ಟ್ರಜಂ – ೬ ಪಲಟಮಣ್ಣೆಂಬ ಗಂಧದ್ರವ್ಯ " (ಚಾಕಾ. ೦೦೦). ೪. = ಮೃತ್ಸೆ ೪. [ಸಂ. ಮೃತ್ಸ್ನಾ]

**ಮೃದಂಗ** (ನಾ). ೧. ಒಂದು ಬಗೆಯ ಚರ್ಮವಾದ್ಯ : " ಮೃದಂಗಃ, ಮುರಜಃ—ಈ ೨ ಮದ್ದಳೆ " (ಶಬ್ದಮ. ೦೭-೯೭) ; ಉದಿತ ಮೃದಂಗ ಧ್ವಾನವನೃತ್ಯನ್ಮಯೂರಾಂಚಿತಮೆಸೆವುದು ಕಾಂತಂ ದೇವಪೂಜಾನಿಶಾಂತಂ (ಚಂದ್ರಪ್ರ. ೦-೦೫೦) ; ಆಗವ ಪಟಹ ಮೃದಂಗ ಕಹಳಾದಿಗಳ ಕಳಕಳರಭಸ ದಶದಿಕ್ಕುಗಳ ಮಾತಾಡಿಸೆ ಮಹಾಬಲ ತೆರಳಿತಿಭಪುರಿಯ (ಭಾಪ್ಮ.ಶಿ. ೦-೯೭). ೨. ಶಬ್ದ ; ಘೋಷ. ೩. ಬಿದಿರಿನ ಜಲ್ಲೆ. [ಸಂ.]

**ಮೃದಂಗಫಲಿನಿ** (ನಾ). ಒಂದು ಬಗೆಯ ಸಸ್ಯ : " ಪೀರೆ ಮೃದಂಗ [ಪಾಠಾಂ. ಢಂಗಿ] ಫಲಿನಿ ಜಾಳಿನಿಯಕ್ಕು " (ಮಂಗರಾ. ೪೪-೪೪). [ಸಂ. ಮೃದಂಗಫಲಿನೀ]

**ಮೃದಂಗಯತಿ** (ನಾ). [ಸಂಗೀತ] ಆರು ಬಗೆಯ ಯತಿಗಳಲ್ಲಿ ಒಂದು: ಯತಿಯಲ್ಲಿ ಆರು ವಿಧ. ಕ್ರಮವಾಗಿ ಅವು – (೧) ಸಮಯತಿ (೨) ಗೋಪುಚ್ಛಯತಿ (೩) ಶ್ರೋತೋವಾಹಯತಿ (೪) ಡಮರುಯತಿ (೫) ಮೃದಂಗಯತಿ ಮತ್ತು (೬) ವಿಷಮಯತಿ (ಸಂಗೀತಂ. ೫೭). [ಸಂ.]

**ಮೃದಂಗವಾದಕ** (ನಾ). ಮೃದಂಗವನ್ನು ಬಾರಿಸುವವನು : ಭಾರತ ಸಂಗೀತದಲ್ಲಿ ಮೃದಂಗವಾದಕರು ಸಂಗೀತಗಾರರಿಗೆ ನೀಡುವ ಲಯವಿನ್ಯಾಸದ ನೆರವು . . . ಪಾಶ್ಚಾತ್ಯಸಂಗೀತದಲ್ಲಿ ಕಾಣಸಿಗದಂತಹುದು (ಸಂಗೀತ. ೦೦೬). [ಸಂ.]

**ಮೃದು** (ಗು). ೧. ಮೆದುವಾದ ; ಮೆತ್ತಗಿರುವ : ' ಮೃದುಗೂಳು '. ' ಮೃದುತಲ್ಪ ' ಪರಾ. ೨. ಕೋಮಲವಾದ ; ಸುಕುಮಾರವಾದ ; ನಾಜೂಕಾದ : ಮೃದುತರಕಪೋಲಫಲಕಂ . . . ಮುದವಂ ಪಡೆದತ್ತು (ಶಬರಾ. ೬-೦೭) ; ಮೃದುಕುಟಿಲಶಿರೋರುಹಂ ಸರಸೀರುಹವದನಂ (ಅಜಿತ. ೦-೩೯) ; ಮೃದುಕನಕಪದ್ಮಕೋಶಾಗ್ರದೊಳೆಸೆಗಿದ ತುಂಬಿ ಯೆಸೆದುದು (ಚಂದ್ರಪ್ರ. ೭-೬೦). ೩. ನಿಧಾನವಾದ ; ಮಂದವಾದ ; ಮೆಲು : ಮಂಡಲದ ತುಡುಗೆಯುಂ ಕೆಯ್ಕೊಂಡುಂ ಬಗೆಯಱಿದು ತುಡುಕಿಯುಂ ಮದವದ್ವೇತಂಡಮೃದುಗತಿಗೆ ಮಾಣಿಕಭಂಡಾರದ ಬೆಸಸ ನಮರಿಯರ್ ನಡೆಯಿಸುವರ್ (ಶಾಂತಿಪು. ೯-೦೮೩) ; ಮೃದುಗತಿವಿಲೋಲ ಹಾರರ್ ಪ್ರದಕ್ಷಿಣಂ ಬಂದು . . . ಪೂಜಿಸಿದರ್ (ಜಗ. ೦೦-೦೩೩). ' ಮೃದುಯಾನ ' ಪರಾ. ೪. ಇಂಪಾದ ; ಮಧುರವಾದ : ಮೃದು ಕಳಕಂಠವಾದ್ಯನಿಸದಂ ಪೊಣ್ಗೊಂಡು ಪೊದಟ್ಟ ಭೃಂಗಸಂಘದ ಮೃದುಗೇಯ ನಿಸ್ವನಮದುಂಕ್ಕೆ (ಕುಸುಮಾ. ೯-೨೪). 'ಮೃದುವಚನ' ಪರಾ. ೫. ಶಾಂತವಾದ ; ಸೌಮ್ಯವಾದ. ೬. ಅಶಕ್ತವಾದ ; ದುರ್ಬಲವಾದ. ೭. ಮೊಂಡಾದ ; ಹರಿತವಲ್ಲದ. (ನಾ). ೮. ಮಿದುವು ; ಮೆತುವು: ಎನಿಸು ಕಾಲ ಕಲ್ಲು ನೀರೊಳಗಿರ್ದರೇನು ನೆನೆದು ಮೃದುವಾಗಬಲ್ಲುದೆ (ಚಕ. ೯೪). ೯. ಕೋಮಲವಾಗಿರುವಿಕೆ ; ಸುಕುಮಾರತೆ : " ನಯಃ –ಮೃದುವೆಂ, ಧರ್ಮವುಂ, ನ್ಯಾಯವುಂ" (ಅಕಕ್ಕ. ೦೩೦) ; ತುಳು ಎಂಬ ಪದಕ್ಕೆ ಮೃದು ಎಂಬ ಅರ್ಥವೊಂದು ಹೇಳುತ್ತಾರೆ (ದ್ರಾ.ಶಿ. ೦೯೩). ೧೦. ಒಂದು ಗ್ರಹದ ಹೆಸರು ; ಶನಿಗ್ರಹ. [ಸಂ.]

**ಮೃದುಗಂಧಿ** (ನಾ). ಒಂದು ಬಗೆಯ ಸಸ್ಯ: "ಬಹುಪತ್ರಃ– ಮೃದುಗಂಧಿ" (ಬಿಪಿ. ೦೪೬). [ಸಂ. ಮೃದುಗಂಧೀ]

**ಮೃದುಗನ್ನಡ** (ನಾ). ಸುಕುಮಾರವಾದ ಕನ್ನಡಭಾಷೆ : ಸಂದರ್ಭಂ ಮೃದುಗನ್ನಡಂ . . . ಬಹುಭೇದ ಕನ್ನಡಗಳಂ ಬಲ್ಲಂ ಕವೀಶಂ ದಿಟಂ (ಕಂಪ. ೯-೩). [ಮೃದು + ಕನ್ನಡ$_1$]

**ಮೃದುಗೂಳ್** (ನಾ). ಮೆದುವಾದ ಅನ್ನ ; ಮೆತ್ತಗಿರುವ ಅನ್ನ : ನೆಲ್ಲನಟ್ಟು ಮೃದುಗೂಟನಟುವ . . . ಕಟ್ಟಿಗ್ಗನಂ ಪೋಲ್ವುಂ (ರಹರಮ್ಮ. ೦೨-೨೯ ವ). [ಮೃದು + ಕೂಳ್$_1$]

**ಮೃದುಜಲ** (ನಾ). ಗಡುಸಲ್ಲದ ನೀರು ; ಕಠಿನವಲ್ಲದ ನೀರು : ನೀರೊಳಗೆ ಕ್ಷಾರಾಂಶವು ಕಡಿಮೆ ಇದ್ದರೆ ಅದಕ್ಕೆ ಮೃದುಜಲವೆನ್ನುವರು (ಮುಂಬಯಿ. ೬-೩೬). [ಸಂ.]

**ಮೃದುತಲ್ಪ**, ಮೃದುತಳ್ಪ (ನಾ). ಮಿದುವಾದ ಹಾಸಿಗೆ : ಮೆತ್ತನೆಯ ಶಯ್ಯೆ : ಪೊಳೆವ ಪಚ್ಚೆದೊಳೆ ಸೊಗಯಿಸುವ ಮೃದುತಲ್ಪದೊಳ್ . . . ಭಾವಿಜಿನಜನನಿ ಸತಿ ಪವಡಿಸಿ ನಿಶಾಂತದೊಳ್ (ಅಂಕು. ೭-೨೭ ರಗಳೆ). **ಮೃದುತಳ್ಪ** : ನಿಪ್ಪುತಸತಿನೆ ಸೊಗಯಿಪ ಮೃದುತಳ್ಪದೊಳಾತಂ ವಿಲಾಸದಿಂ ಪವಡಿಸುವಂ (ಸುಕುಮಾ. ೦೦-೦೦೩). [ಸಂ.]

**ಮೃದುತಳ್ಪ** ' ಮೃದುತಲ್ಪ ' ನೋ.

**ಮೃದುತ್ವ** (ನಾ). ಕೋಮಲತೆ ; ನಾಜೂಕು ; ಸುಕುಮಾರತೆ : ಒಂದು ರೇಖೆ ಮೃದುತ್ವ ಅಥವಾ ಗಡುಸುತನವನ್ನಷ್ಟೇ ಅಲ್ಲ ಮಾನವ ಮನೋಕಾಮನೆಗಳ ಸಮಗ್ರಸಾರವನ್ನೇ ವ್ಯಕ್ತಪಡಿಸಬಲ್ಲದು (ಭಾರದ. ೫೪೦). [ಸಂ.]

**ಮೃದುಪದ** (ನಾ). ೧. ಮೃದುವಾದ ಶಬ್ದ, – ಪದ : ಇಲ್ಲಿಗಿದು ತಕ್ಕುದು ಇಲ್ಲಿಗೆ ಪೊಲ್ಲದಿದೆಂದಱಿದು ಸಮಱಿ ಬಲ್ಲಂತೆಲ್ಲಂ ಸೆಲ್ಲುಂ ಮೊಸರುಂ ಗುಡಿದಂತಲ್ಲದೆ ತಲ್ಲಣಿಸದಲಸದಿಡು ಮೃದುಪದವಮಂ (ಶಬರಾ. ೨-೪). ೨. ಕೋಮಲವಾದ ಪಾದ : ಸುರಾಸುರೇಂದ್ರವೃಂದವಂದಿತಪಾದಂಗೆ ಮೃದುಪದಂಗಳೊಳ್ ಕಳರವರಣಿತಮಣಿನೂಪುರಂಗಳಂ ತುಡಿಸಿ (ಅಂಕು. ೭-೦೦೬ ವ) ; ಮೃದುಪದಪಂಕಜಂ ನಡೆದು ಕೆಂಪು ಮರಲ್ದು ನಿಜಾರುಣಾಂಶು ಪಾಸಿದ ದುಗುಲಕ್ಕೆ ಬಾಸರದ ಮಾಸರಮಂ ಕುತೆ (ಅಪಂಕ್ತಿ. ೯-೦೩). ೧, ೨ : ವಿಳಸಿತಮಪ್ಪಲಂಕರಣಶಾಸ್ತ್ರದವೊಲ್ಸೆಸಗಳ್ ಪ್ರಸನ್ನಮಂ ತಳೆದು . . . ಮೃದುಪದನ್ಯಸನೋಚಿತಮಾಯ್ತಿಳಾತಳಂ (ಶಾಂತೀಶ್ವ. ೦೨-೬೩). [ಸಂ.]

**ಮೃದುಪದಗತಿ** (ನಾ). ೧. (ನರ್ತನದಲ್ಲಿ) ಕೋಮಲವಾದ ಪಾದಗಳ ಗಮನ, – ಚಲನೆ : ಮೃದುಪದಗತಿಯಿಲ್ಲದ ಲಾಸ್ಯಮಿಂತದೇಂ ಮೆಚ್ಚಿದಪುದೇ (ಚಂದ್ರಪ್ರ. ೩-೯೩). ೨. [ವ್ಯಾಕ] ಉಚ್ಚರಿಸಲು ಸುಲಭವಾದ, ಕೋಮಲವಾದ ಅಕ್ಷರಗಳಿಂದ ಕೂಡಿರುವುದು. ೧, ೨ : ಮೃದುಪದಗತಿಯಿಂ ರಸಭಾವದ ಪೆರ್ಚಿಂ ಪುಣ್ಯವನಿತೆವೊಲ್ ಕೃತಿ ಸೌಂದರ್ಯದ ಚಾತುರ್ಯದ ಕಣಿಮೆನೆ ವಿದಗ್ಧಬುಧಜನದ ಮನಮನಲೆ ಯಲೆವೇಡಾ (ಅಂಕು. ೦-೦೭). [ಸಂ.]

**ಮೃದುಪಾಕ** (ನಾ). [ವೈದ್ಯ] ಮೃದು, ಮಧ್ಯ (ಚಿಕ್ಕಣ), ಖರಗಳೆಂಬ ಮೂರು ಬಗೆಯ ಪಾಕಗಳಲ್ಲಿ ಒಂದು ; (ಔಷಧವಸ್ತುಗಳನ್ನು ತುಪ್ಪ, ಎಣ್ಣೆಗಳಲ್ಲಿ ಕಾಯಿಸಿ ಇಳಿಸುವ) ಎಳೆಯ ಪಾಕದ ಹದ : ಮೃದುಪಾಕಕ್ಕೆ ಕಟ್ಟುವ ತೆಗೆದು ನೋಡಲು ಬೆರಳ ಹತ್ತದೆ ಇಹುದು (ವೈದ್ಯಸಾ. I. ೬೨೦) ; ನಸ್ಯ ಮಾಡುವುದಕ್ಕೆ ತೈಲವನ್ನಾಗಲೀ ಘೃತವನ್ನಾಗಲೀ ಮೃದುಪಾಕದಲ್ಲಿ ಇಳಿಸಬೇಕು (ಸಕಪ್ಪ. XIII, ಕೃಷ್ಣಾಪಿ). 'ಖರಪಾಕ'. 'ಚಿಕ್ಕಣಪಾಕ' ಪರಾ. [ಸಂ.]

**ಮೃದುಬಂಧ** (ನಾ). ಕೋಮಲವಾದ ಶಬ್ದಗಳ ಜೋಡಣೆ, – ರಚನೆ : ಮೃದುತರವರ್ಣಾನುಗಮಾಸ್ಪದವಿರಚನೆಯೊಳಗೆ ತೋರ್ಪುದದು ಮೃದುಬಂಧಂ (ಶಬರಾ. ೨-೫೭) ; ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದು

ವುದೊಂದಿ ದೇಸಿಯೊಳ್ ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಮೊಪ್ಪುಗುಂ (ಕಂಶಿಆ. ೧-೬). [ಸಂ.]

**ಮೃದುಬಂಧನ** (ನಾ). = ಮೃದುಬಂಧ: ಶಾಂತಿಪ್ರೇರಣಮೇಂ ಕರಂ ನವರಸಮೇಂ ಸಮರ್ಥಯುತಮೇಂ ಮೃದುಬಂಧನಮೇಂ ಪ್ರಸನ್ನಮೋ (ಶಾಂತಿಪು. ೧-೩೭). [ಸಂ.]

**ಮೃದುಯಾನ** (ನಾ). ನಿಧಾನವಾದ ನಡಗೆ; ಮಂದಗಮನ: ಸೋಗೆನವಿಲ್ಪಟಲ್ಮಡಿಗೆ ಭೃಂಗಂ ಕುಂತಲಕ್ಕಂಚೆಗಳ್ ಮೃದುಯಾನಕ್ಕೆ ಪಿಕಂ ರವಕ್ಕೆಳಸೆ ತಂತಮ್ಮ ಸ್ವಜಾತೀಯ ಸಂಮದದಿಂ ಪಾಮರಿಯರ್ ಜಿತಾಮರಿ ಯರಿರ್ಪರ್ಕಾದು ಕೇದಾರಮಂ (ಮಲ್ಲಿಪು. ೨-೨೦); ಮೃದುಯಾನದಿಂ ಪತಿಯುಮಾ ಸತಿಯುಂ ಬರೆ (ತಂಪ್ರಕೃ. ೭-೧೧೯); ಮೃದುಯಾನಂ ಗಜಯಾನಮಂ ಜಜಿಸಿಯೆ . . . ರತ್ನಕಳಶಾದರ್ಶಂಗಳಂ ತಾಳ್ದು ತಾನಿದಿರ್ವಂದತ್ತುರುಭೂಷಣಾದ್ಯತಿಯುತಾಂಗಂ ಶೈವಕಾಂತಾಜನಂ (ವೃಷಭ. ೩-೧೫). [ಸಂ.]

**ಮೃದುರೇಖೆ** (ನಾ). ತೆಳುವಾಗಿ ಎಳೆದಿರುವ ಗೆರೆ; ಸೂಕ್ಷ್ಮರೇಖೆ: ಲಾಕ್ಷಾರಸರೇಖಾಶುದ್ಧಿಯುಮಂ ನೇತ್ರಕ್ಕಂ ಸೂತ್ರಕ್ಕಮೆಳೆವಡಿಸಿದ ದೇಶೀಯ ಮುಮಪ್ಪ ಭಂಗಿಯುಮಂ ಮೃದುರೇಖಾವಿಳಾಸಮುಮಂ ಪರಿಭಾವಿಸಿ ನೋಡಿ (ಮಲ್ಲಿಪು. ೩-೪೨). [ಸಂ. ಮೃದುರೇಖಾ]

**ಮೃದುಲ, ಮೃದುಳ** (ಗು). ೧. ಮೆದುವಾದ; ಕೋಮಲವಾದ: ಅವನ ಕೈಯು ಟೇಬಲ್ಲಿನ ಕೆಳಗಿನಿಂದ ಹಾಯ್ದು ಮೈಲಿಸಳ ಕರದ ಮೃದುಲಸ್ಪರ್ಶ ವನ್ನು ಪಡೆದಿತ್ತು (ಸಮಜೀ. ೯೦೩). ೨. ಇಂಪಾದ; ಮಧುರವಾದ: ಮೃದುಲವಚಶ್ಶೋಭಿತೆ ತಳ್ವದೆ ತಚ್ಛಿವಭವ್ಯನಿಂತು ನುಡಿಯೆರ್ದೆಗೊಳಲಾ ಪುದಿವಸುಗೆಯು ಪೊಸಬನಮಾ ವಸ್ತಿದದಿಂ ಪೊಜಮಟ್ಟು ಪೋದಳ್ (ಅನ್ನಟಿ. ೭-೨೭). (ನಾ). ೩. ಕೋಮಲವಾದುದು: ಕಾಣುತಿಹುದದೊ ನೀಲದೂರಕ್ಕೆ ಮೃದುಲಮೆನೆ ತೋರ್ಪ ಶಿಖರೇಶ್ವರಂ (ಶ್ರೀರಾಮಾ. ೧೯೬-೦೨೨); ಸುಜನರ ಚಿತ್ತವು ಸುಖದೊಳು ಮೃದುಲವು ಕಷ್ಟದೊಳ ತುಳಕರ್ಕಶವು (ಇಂಶಾಪ. ೨೦೩-೭೭). ಮೃದುಳ: ೧. ಪಜ್ಜಳಿಪ ಬಜ್ಜರದಸಜ್ಜ ವನೆಯ ಸಿರಿಮಂಚದ ಸಿರಿಸಮೃದುಳತಳ್ಪಸ್ಥಳದಲ್ಲಿ (ರಾಜಶೇ. ೧೦-೦೨೫ ವ). [ಸಂ.]

**ಮೃದುಲತೆ₁** (ನಾ). ಕೋಮಲವಾದ ಬಳ್ಳಿ: ಮೃದುಲತೆಯಿಂ ಬಿಸಕಾಂಡದ ಮೃದುಲತೆಯಂ ಜಯಿಸುವಮಳಬಾಹುಲತೆಯೊಳ್ ಪುದಿದೆಳೆದಳಿರಂ ಪೋಲ್ತಿಪ್ಪ ದಿದೆಸೆ ಕರಮೆಸೆದುದವಳ ಕರಸರಸಿರುಹಂ (ರಾಜಶೇ. ೭-೪೨). [ಸಂ. ಮೃದುಲತಾ (ಮೃದು + ಲತಾ)]

**ಮೃದುಲತೆ₂** (ನಾ). ಮಾರ್ದವತೆ; ಕೋಮಲತೆ; ಮೃದುತ್ವ: ಮೃದುಲತೆಯಿಂ ಬಿಸಕಾಂಡದ ಮೃದುಲತೆಯಂ ಜಯಿಸುವಮಳಬಾಹುಲತೆ ಯೊಳ್ ಪುದಿದೆಳೆದಳಿರಂ ಪೋಲ್ತಿಪ್ಪ ದಿದೆಸೆ ಕರಮೆಸೆದುದವಳ ಕರಸರಸಿರುಹಂ (ರಾಜಶೇ. ೭-೪೨); ಕೂರ್ಮೆಗೆ ಮಣಿವ ಮೃದುಲತೆಯಿರ್ಪುದವನೆರ್ದೆಯು ಕಬ್ಬಿನಕೆ (ಶ್ರೀರಾಮಾ. ೭೦೬-೨೩೩). [ಸಂ. ಮೃದುಲತಾ]

**ಮೃದುವಚನ** (ನಾ). ಮಧುರವಾದ ಮಾತು; ಸವಿನುಡಿ: ಹಿತಮಿತ ಮೃದುವಚನಂ ಲಲಿತಮಧುರಸುಂದರವೇಷಂ (ಆದಿಪು. ೦-೨೪); ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ ಮೃದುವಚನವೇ ಸಕಲಜಪಂಗಳಯ್ಯಾ (ಬಸವ. ೨೪೪). [ಸಂ.]

**ಮೃದುವಪು** (ನಾ). ೧. ಕೋಮಲವಾದ ಶರೀರ. — ದೇಹ. ೨. ಕೋಮಲವಾದ ಶರೀರವುಳ್ಳವನು: ಇರೆ ಲಗ್ನಕ್ಕೆ ಚತುರ್ಥದೊಳ್ ಹಿಮಕರಂ ಸತ್ಪುತ್ರವಿತ್ತಾಢ್ಯಂ . . . ಅರಾತಿಸ್ಥಾನದೊಳ್ ಕೂಡೆ ನಿಷ್ಠುರ ನಾಲಸ್ಯಸಮನ್ವಿತಂ ಮೃದುವಪುಃಕಾಮಾಗ್ನಿ ನಾಸನಾರಿ (ಜಾತಕ. ೦೬-೭). [ಸಂ. ಮೃದುವಪುಸ್]

**ಮೃದುವಾಕ್ಯ** (ನಾ). ೧. = ಮೃದುವಚನ. ೨. ಮಧುರವಾಗಿ ಮಾತನಾಡುವವನು; ಸವಿಮಾತಿನವನು: ಮೃದುವಾಕ್ಯಂ ಸುಭಗಂ ಚಪಳದೃಷ್ಟಿ ಪೆಂಪೊಡೆಯನತಿಧನಾಢ್ಯಂ . . . ಉದಕಚ್ಛಾಯನಕ್ಕು [ಪೊಪ್ಪವ] ಪುರುಷಂ (ಲೋಕೋಪ. ೧೧-೯೦). [ಸಂ.]

**ಮೃದುವಾತು** (ನಾ). = ಮೃದುವಚನ: ಗಿಳಿಯ ಮೃದುವಾ [ಕಾಣಂ. ಮಾ]ತುಗಳ ಮಜಿಗೋಗಿಲೆಯ ಮಧುರಧ್ವನಿಯ . . . ವನವನದ ಸಿರಿ ಬಗೆಗೊಳಿಸಿತ್ತೆ ಪೂರ್ವಾಭಿಭಾಷಣದಲಿ ಧನಂಜಯನ (ಕುಮ್ಮಾರ. ೯-೩೭). [ಮೃದು + ಮಾತು₁]

**ಮೃದುವಾಸು** (ನಾ). ಮೆತ್ತಗಿರುವ ಹಾಸಿಗೆ; ಕೋಮಲವಾದ ಶಯ್ಯೆ: ಓರಣಿಸಿದ ಗೋಪುರಮಧ್ಯದ ಚಂದ್ರಪಾರಾವತಶಯ್ಯೆಯೊಳಗೆ ತೋರ ಮಾಣಿಕಮಂಚಮೃದುವಾಸೊಳೊಜಗಿದ ನಾರಾಯಣನ ನೋಡಿದಳು (ಪೋಚಕ. ೨೯-೯೦). [ಮೃದು + ಹಾಸು₁]

**ಮೃದುವೆಜು** (ಕ್ರಿ). ಕೋಮಲವಾಗಿರು; ಮೃದುತ್ವವನ್ನು ಹೊಂದಿರು: ಲಾಲಿತ ಚೆಂಬಾವುಗೆ ಮೆಟ್ಟಿ ಮೃದುವೆತ್ತ ಸಾಲಿಯ ದುಪ್ಪಟದಾಳ್ದು ಸೋಲಿಸಿ ತೊಲಗಿ ಪೋದವನ ನಿಟ್ಟಿಸುವ ಸಲೀಲೆಯಿಂದಿದ್ದಳಾ ಕುವರಿ (ಪೋಚಕ. ೨೮-೭). [ಮೃದು + ಪೆಱು₁]

**ಮೃದುಸಂದರ್ಭ** (ನಾ). ಕೋಮಲವಾದ ಸನ್ನಿವೇಶಗಳಿಂದ ಕೂಡಿ ದುದು: ಸೂಕ್ಷ್ಮವಾದ ವಸ್ತುವಿನ್ಯಾಸವನ್ನುಳ್ಳದು: ಸುಂದರಂ ಸೂಕ್ತಿ ಗರ್ಭಂಮೃದುಸಂದರ್ಭಂ ವಿಚಾರಕ್ಷಮಂ . . . ಕಾವ್ಯಮೆಂದನ್ವಿತಸುಕ ವಿಜನಂಮೆಚ್ಚೆ (ಆದಿಪು. ೦-೨೭). [ಸಂ.]

**ಮೃದುಸಿಂಜ** (ನಾ). (ಕಾಲಂದುಗೆ ಮೊದಲಾದುವುಗಳ) ಇಂಪಾದ ಶಬ್ದ: ಮಂಜೀರಕ ಮಂಜುಳ ಮೃದುಸಿಂಜಪರಿಸ್ಫುರಿತಮೆಸೆಯೆ ಭರತದ ಪಲವುಂ ಪಂಜಿಕೆಗಳಂತದೇಂ ಸುರಲಂಜಿಕೆಯರ್ ವಿಷಮಮುಮಂ ಸಮಂ ಮಾಡಿದರೋ (ಶಾಂತಿಪು. ೭-೩೩). [ಸಂ. ಮೃದುಸಿಂಜಾ]

**ಮೃದುಸ್ಮಿತ** (ನಾ). ಮೆಲುನಗೆ; ಮಂದಹಾಸ: ಚಂಡಕೋದಂಡ ಮನೆತ್ತಿ ಪೊದ್ದುನವನೀಶನ ಪೇರುರಮಂ ಕಪರ್ದಿ ಮುಂಕೊಂಡು ಮೃದು ಸ್ಮಿತಂ ಮಿಸುಗೆ ತದ್ದನುವಂ ಸೆಳೆದಂ ಕರಾಗ್ರದಿಂ (ಜಗಂ. ೯-೩೯). [ಸಂ.]

**ಮೃದುಹೃದಯ** (ನಾ). ಕೋಮಲವಾದ ಮನಸ್ಸು; ಮೃದುವಾದ ಮನಸ್ಸು: ಮೃದುಹೃದಯದ ನಲ್ಲರನೆಂದುದನೆನಸಲೆ ನಾಡ ಸುಭಗೆಯರ್ ಸುರತದೊಳುನ್ಮದ ತಮ್ಮಿಂಚರದಿಂದೆಂದುದನೆನಿಪರ್ ಕೃತಕಶೈಲಮಂ ಕಲ್ಲೆರ್ದೆಯಂ (ಮಲ್ಲಿಪು. ೨-೨೪). [ಸಂ.]

**ಮೃದುಳ** 'ಮೃದುಲ' ನೋ.

**ಮೃದೂಕ್ತಿ** (ನಾ). = ಮೃದುವಚನ: ಅತಿಗಂಭೀರಮೃದೂಕ್ತಿ ವಕ್ತ್ರ ದೊಳೊಡಂಬಟ್ಟೊಪ್ಪೆ (ಶಾಂತಿಪು. ೦-೬); ಕಿವಿಗಳ್ ನಿನ್ನ ಮೃದೂಕ್ತಿಯಂ ಬಯಸಿ ಕೇಳುತ್ತಿರ್ಕೆ (ಸುಕುಮಾ. ೮-೩೭). [ಸಂ.]

**ಮೃದೂಚ್ಚಾರಣೆ** (ನಾ). ಕೋಮಲವಾದ ಉಚ್ಚಾರಣೆ: ಉದಾರತಮಂ ಕರುಣಾರಸಂ ಮೃದೂಚ್ಚಾರಣೆಯಿಂದಂ . . . ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತ[ದ]ಂ (ಕಿಂಚಾ. ೨-೯೯). [ಸಂ. ಮೃದೂಚ್ಚಾರಣ]

**ಮೃದ್ಭಾಜನ** (ನಾ). ಮಡಕೆ ಮುಂತಾದ ಮಣ್ಣಿನ ಪಾತ್ರೆ: ಪೃಥಿವ್ಯಾದಿತತ್ವಚತುಷ್ಟಯಸನ್ನಿಪಾತಮೆ ಚೈತನ್ಯಮಂ ಪುಟ್ಟಿಸುಗು ಮಪ್ಪೊಡೊಳೆಯ ಕಿಚ್ಚಿನಮೃದ್ಭಾಜನದೆಸಟಿ ನೀರಬಾಣಸಿಗರುರಿಪುವ ಗಾಳಿಯ ಸಂಯೋಗದೊಳ್ ಚೈತನ್ಯಮದೇಕೆ ಪುಟ್ಟದು (ಶಾಂತಿಪು. ೬-೦೫೭ ವ). [ಸಂ.]

**ಮೃದ್ವಂಗಿ₁** (ನಾ). ಕೋಮಲವಾದ ಶರೀರವನ್ನು ಉಳ್ಳವಳು; ಕೋಮಲಾಂಗಿ: ಮೃದ್ವಂಗಿಯೆಂತಂತು ನುಣ್ಪುವಡೆದುಂ, ಗಾಡಿಯಿಂ ನಡೆವ ಕೃಶೋದರಿಯೆಂತಂತು ಬಳ್ಕಿಯುಂ . . . ಪೂವಳ್ಳಿ ಮಡಲ್ತೆಸೆಗುಂ (ರಾಮಾಶ್ವ. ೩೩-೨೭). [ಸಂ. ಮೃದ್ವಂಗೀ]

**ಮೃದ್ವಂಗಿ₂** (ನಾ). ೧. ಮೆದುವಾದ ಅವಯವದಿಂದ ಕೂಡಿದ ಹುಳು : ಬಸವನ ಹುಳು ಮೊದಲಾದ ಜಂತು : ಬಾರ್ನಕಲ್ (Barnacle) ಎಂಬ ಕಠಿಣಚರ್ಮಿಯನ್ನು ಲಿನಿಯಸ್ ಮೊದಲಾದ ವೈಜ್ಞಾನಿಕರು ಬಸವನ ಹುಳ, ಕಪ್ಪೆಯ ಚಿಪ್ಪು ನೀರಿನ ಗುಳ್ಳೆಗಳನ್ನು ಒಳಗೊಂಡ ಮೃದ್ವಂಗಿಗಳ (Mollusca) ಗುಂಪಿಗೆ ಸೇರಿಸಿದ್ದರು (ಪ್ರಾಣಿಶಾ. ೧೧); ಕೆಲವು ಜಾತುಗಳು . . . ಮೃದ್ವಂಗಿಗಳನ್ನು ಅಥವಾ ಮೀನುಗಳನ್ನು ಹಿಡಿದು ತಿನ್ನುವುವು (ಕವಿಕೋ. I, ೬೯೬). ೨. ಒಂದು ಬಗೆಯ ಮೆದುಶರೀರದ ಹಕ್ಕಿ : ಕೆಲವು ಪಕ್ಷಿ ಜಾತಿ. ಚಿಪ್ಪುಳ್ಳ ಒಂದು ಜಾತಿಯ ಮೃದ್ವಂಗಿ (Gaper. ೩೦೪೩). [ ಸಂ. ಮೃದ್ವಂಗಿನ್ ]

**ಮೃದ್ವಗ್ನಿ** (ನಾ). ಸಣ್ಣ ಉರಿ : ಮಂದವಾದ ಅಗ್ನಿ : ತೈಲ ಮತ್ತು ಘೃತಗಳನ್ನು ಮಾಡಬೇಕಾದರೆ ಸಾಮಾನ್ಯವಾಗಿ . . . ನಾಲ್ಕನೆಯ ಒಂದು ಭಾಗ ಕಲ್ಕವನ್ನು ಹಾಕಿ ಮೃದ್ವಗ್ನಿಯ ಮೇಲೆ ಕಾಯಿಸಿ ಶೋಧಿಸಬೇಕು (ಸಕಕ. XIII, ಪ್ರಸ್ತಾವನೆ). [ಸಂ.]

**ಮೃದ್ವಸ್ಥಿ** (ನಾ). ಮೆದುವಾದ ಮೂಳೆ; ಮೃದುವಾದ ಎಲುಬು : ಮೃದ್ವಸ್ಥಿಯಲ್ಲಿ ರಕ್ತನಾಳಗಳಿರುವುದಿಲ್ಲ (ಪ್ರಾಣಿಶಾ. ೯೦). [ಸಂ.]

**ಮೃದ್ವೀಕೆ** (ನಾ). ದ್ರಾಕ್ಷೆ : "ಮೃದ್ವೀಕಾ, ಗೋಸ್ತನೀ, ದ್ರಾಕ್ಷಾ, ಹಾರಹೂರಾ — ಈ ೪ ದ್ರಾಕ್ಷೆ" (ಹಲಾಯು. ೩೨-೪೦); ರತಿಯ ಮದನನ ಮದುವೆಯೊಳ್ ಪೊಸಯಿಸಿದ ಪಸುರ್ವಂದರಂತೆ ಮಿಸುಪ ಮೃದ್ವೀಕಾಲತೆ (ಚಂದ್ರಕು. ೧-೧೦೬ ಪ). [ ಸಂ. ಮೃದ್ವೀಕಾ ]

**ಮೃಧ** (ನಾ). ಕಾಳಗ: ಯುದ್ಧ : "ಯುದ್ಧಂ . . . ಮೃಧಂ . . . ಯುದ್ಧಕ್ಕೆ ಹೆಸರುಗಳು" (ಸಿದ್ಧಾಂತಿ. ೨೬೯). [ಸಂ.]

**ಮೃಲ್ಲಿಂಗ** (ನಾ). ಮಣ್ಣಿನಿಂದ ಮಾಡಿದ ಶಿವಲಿಂಗ : ವಿಚಾರಶರ್ಮರು ಆ ಕೊಡಗಳ ಹಾಲನ್ನು ಆ ಮೃಲ್ಲಿಂಗಕ್ಕೆ ಅಭಿಷೇಕಮಾಡಿಸಿ (ಪುರಾತ.೧೧೯). [ಸಂ.]

**ಮೃಷ** (ನಾ). ಸುಳ್ಳು: ಹುಸಿ: ಮಿಥ್ಯೆ : "ಕಪಟಂ ನಿಭಂ ಕೈತವಂ ಮೃಷಂ . . . ವ್ಯಾಜಮಕ್ಕುಂ" (ಮಂಗರಾ. ೦೨೪-೧೧). [ ಸಂ. ಮೃಷಾ ]

**ಮೃಷಾನಂದ** (ನಾ). [ಜೈನ] ಹಿಂಸಾನಂದ, ಮೃಷಾನಂದ, ಸ್ತೇಯಾನಂದ ಮತ್ತು ಪರಿಗ್ರಹಾನಂದ ಎಂಬ ರೌದ್ರಧ್ಯಾನದ ನಾಲ್ಕು ಪ್ರಕಾರಗಳಲ್ಲಿ ಒಂದು : "ಸುಳ್ಳುಮಾತನಾಡುವುದರಲ್ಲಿ ಆನಂದ ಪಡುವುದು" (ಜೈಪಕೋ. ೨೦೦) : ಸ್ವಸಂವೇದ್ಯಮಪ್ಪ ಆಧ್ಯಾತ್ಮಿಕಮುಂ ಹಿಂಸಾನಂದ ಮೃಷಾನಂದ ಸ್ತೇಯಾನಂದ ಸಂರಕ್ಷಣಾನಂದಮೆಂದುಂ ಚತುರ್ವಿಧಮಕ್ಕುಂ . . . ಸ್ವಮತಿವಿಕಲ್ಪಿತಮತಂಗಳಂ ಪೆರ್ಚಿರ್ ನಂಬುವರೆಂದವರಂ ಬಂಚಿಸಲೆಂದು ನುಡಿವ ಮೃಷಾವಚನದೊಳಪ್ಪ ಸಂಕಲ್ಪಾಧ್ಯವಸಾನಂ ಮೃಷಾನಂದಮೆಂಬುದಕ್ಕುಂ (ಅಜಿಪು. ೬-೨೬ ವ). [ಸಂ.]

**ಮೃಷಾಪಾತಕ** (ನಾ). ಸುಳ್ಳಾಡಿದುದರಿಂದ ಬರುವ ದೋಷ,— ಪಾಪ : ಗುರುವಂ ಬ್ರಾಹ್ಮಣನಂ ತೊದಳ್ನುಡಿದು ಕೊಂದಾಗಳ್ ಮೃಷಾಪಾತಕಂ ಪರಮೆಂಬೀ ನುಡಿಯಿಂ ಪೃಥಾಪ್ರಿಯಸುತಂ ಪಾಪಕ್ಕೆ ಪಕ್ಕಾಗನೇ (ಗದಾಯು. ೩-೨೩). [ಸಂ.]

**ಮೃಷಾರೋಪ** (ನಾ). ಸುಳ್ಳಾರೋಪ,—ಕೋಪ : ಮೃಷಾರೋಪದಿಂ ಮಂದಹಾಸದಿಂ ಬಾಬಾ ಒಡನಾಡೆನ್ನುವ ಸನ್ನೆಗೆ ಅಸ್ತು ಎನ್ನುತಾ ಹಿಮಾದ್ರಿಕನ್ನೆಗೆ ಮಾನಟರಾಜಂ ಪೀಠವನುಳಿದಂ (ಗತೀಕ. ೦೬-೪೭೨). [ಸಂ.]

**ಮೃಷೆ** (ನಾ). ೧. ಸುಳ್ಳು ; ಹುಸಿ ; ಮಿಥ್ಯೆ : "ಅಳೀಕಂ, ವಿತಥಂ, ಮಿಥ್ಯಾ, ಮೃಷಾ, ಅನೃತಂ—ಈ ೫ ಅಸತ್ಯದ ಪೆಸರ್" (ಹಲಾಯು. ೨೩-೦೪೩); ಮುಳಿಸು ಹೊಲೆ ಮೃಷೆ ರೌದ್ರಮವು ದುರ್ಬಲವೆ ಜೀವನ್ಮೃತವು (ಜೀವಂಶ. ೫-೭೦); ಲಿಂಗಾಭಿಮಾನಿತ್ವವರ್ತನಮಿಹಾತ್ಮಸಮರ್ಪಣಂ ಮೃಷೆ ಬಳಿಕ್ಕೆಲ್ಲಂ ಶಿವಾವಲ್ಲಭಾ (ಶಶಿ. ೪೫). ೨. ವ್ಯರ್ಥವಾದುದು : ನಿಷ್ಪ್ರಯೋಜಕವಾದುದು : ಕುಸುಮಕೋಮಲಗಾತ್ರ ಶೂರ್ಪಣಖಿಗರಿದಾಯ್ತು ? ವಿಷದ ಪೂತನಿ ನಯನಪಕ್ಷ್ಮದೊಳಗಿರಳೆ ? ಮಾಸಿನಗುವಿನೊಳಗಿರಲಶಕ್ಯವೆ ಪಿಶಾಚಿಕೆಗೆ ? ಮೃಷೆಯೊ ಮೈಬೆಡಗೆಲ್ಲ (ಮಂಕುತಿ. ೪೦೬). [ಸಂ. ಮೃಷಾ]

**ಮೃಷ್ಟ** (ಗು). ೧. ಉಜ್ಜಿಹಾಕಿದ; ತೊಡೆದು ಹಾಕಿದ; ಅಳಿಸಿದ. ೨. ಬಳಿದ; ಲೇಪಿಸಿದ. ೩. ತೊಳೆದ; ಬೆಳಗಿದ ; ಶುದ್ಧಗೊಳಿಸಿದ. ೪. ರುಚಿಕರವಾದ ; ರಸವತ್ತಾದ : 'ಮೃಷ್ಟಭೋಜನ', 'ಮೃಷ್ಟಾನ್ನ' ಪರಾ. (ನಾ). ೫. ಶುದ್ಧಗೊಳಿಸಿದುದು; ಶುಭ್ರವಾದುದು : "ನಿರ್ಣಿಕ್ತಂ, ಶೋಧಿತಂ, ಮೃಷ್ಟಂ . . . ಕಲ್ಮಷವಿಲ್ಲದ ಹಾಗೆ ಶುದ್ಧಗೊಳಿಸಲ್ಪಟ್ಟದ್ದು" (ಸಿದ್ಧಾಂತಿ. ೩೩೬). ೬. ಮೆಣಸು. [ಸಂ.]

**ಮೃಷ್ಟಭೋಜನ** (ನಾ). ರುಚಿಕರವಾದ ಊಟ; ರಸವತ್ತಾದ ಭೋಜನ: ಮೃಷ್ಟಭೋಜನದಿಂದ ನಾವ್ ಸಂತುಷ್ಟರಾಗೊಲಿದುದನು ಬೇಡೆನೆ ದುಷ್ಟ ಕೌರವ ನಮ್ಮನಟ್ಟಿದ ಧೂರ್ತವಿದ್ಯೆಯಲಿ (ಕುಮಾವ್ಯಾ. ೦೬-೪೪). [ಸಂ.]

**ಮೃಷ್ಟಾನ್ನ** (ನಾ). ರುಚಿಕರವಾದ ಆಹಾರ; ರಸವತ್ತಾದ ಊಟ; ರಸಗವಳ : "ಮೃಷ್ಟಾನ್ನಂ ಪರಮಾನ್ನಂ" (ಕಾಕೈ. ೨೯೦); ಒಬ್ಬನೇ ಉಣಬಾರದೈ ಮೃಷ್ಟಾನ್ನ ಫಲಗಳನು (ಕೌಶಿರಾ. ೯-೨೪): ಬಿಡದೆ ಕಳವಿಂದೆ ಲೋಗರ ಮನೆಗಳಂ ಪೊಕ್ಕು ತುಡುತಿಂದವನ ಭೋಜನಕ್ಕೆ ಮೃಷ್ಟಾನ್ನ ಮಾದೊಡೆ ಕೆಲಬಲಂಗಳಂ ನೋಡುವನೆ (ಜೈಮಿಭಾ. ೬-೫೩); ರಾಜಕುಮಾರಿ . . . ಮೃಷ್ಟಾನ್ನವನ್ನು ಭೋಜನಕ್ಕಿಟ್ಟಳು (ಕಂಕಕ. ೦೬೪). [ಸಂ.]

**-ಮೆ₁** (ಪ್ರ). ಒಂದು ಕೃದಂತಭಾವನಾಮಪ್ರತ್ಯಯ : ಚೇತನವಿಷಯೇ . . . ಮೆ, ತನ ಇತ್ಯೇತೇ ಪ್ರತ್ಯಯಾ ಭವಂತಿ (ಶಾಶಾಭೂ. ೦೭೯ ವೃತ್ತಿ); ಮೆಕಾರಕ್ಕೆ—ಒಲ್ಮೆ, ಬಲ್ಮೆ (ಶಮದ. ೨೦೦ ಪ್ರಯೋ); ಮೆ — ಕೂರ್, ಒಲ್ — ಕೂರ್ಮೆ, ಒಲ್ಮೆ (ಕೈಪಿದ. ೦೬).

**-ಮೆ₂** (ಪ್ರ). ಆವೃತ್ತಿ ಎಂಬ ಅರ್ಥದಲ್ಲಿ ಸಂಖ್ಯಾವಾಚಿಗಳಿಗೆ ಹತ್ತುವ ಪ್ರತ್ಯಯ : ಸಂಖ್ಯಾವಾಚಿನಾಂ ವಾರಾರ್ಥೇ ಮೆ ಪ್ರತ್ಯಯೋ ವಾ ಭವತಿ (ಶಾಶಾಭೂ. ೦೭೬); ಮೆ ಯೆಂಬುದಕ್ಕುಮೆಣಿಸುವ ಸೂಟಿಗೊಳ್ . . . ಒರ್ಮೆ, ಇರ್ಮೆ, ಸಾಸಿರ್ಮೆ (ಶಮದ. ೨೦೬); ಒಂದು ಮೊದಲಾದ ಸಂಖ್ಯಾವಾಚಿಗಳಿಗೆ ಆವೃತ್ತಿ ಎಂದರ್ಥದಲ್ಲಿ ಮೆ ಸೇರುವುದು—ಒರ್ಮೆ, ಇರ್ಮೆ (ಕೈಪಿದ. ೫೨).

**-ಮೆ₃** (ಪ್ರ). ಒಂದು ತದ್ಧಿತಭಾವನಾಮಪ್ರತ್ಯಯ : 'ಜಾಣ್ಮೆ', 'ಪಟಿಮೆ', 'ಪೆರ್ಮೆ' ಪರಾ.

**ಮೆಂಚಿಗೆ** ಮಂಚಿಗೆ ನೋ.

**ಮೆಂಟಿಕೆ**, ಮಂಟಿಕೆ, ಮಾಂಟಗೆ, ಮಂಟಿಕೆ, ಮಂಟ್ಟಿಗೆ, ಮಿಂಟಿಗೆ, ಮೆಂಟಿಗೆ (ನಾ). ( ಹೆಂಗಸರು ) ಕಾಲುಬೆರಳಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ; ಕಾಲುಂಗುರ : ವೀರಮುದ್ರೆಯ ಮೆಂಟಿಕೆಯ ವಿಸ್ತಾರದಂಗುಲಿಯುಂಗುರಂಗಳ . . . ನಾರಿಯರು ನಡೆತಂದರಾ ಮಾಯಾಂಗನೆಯ ಕೂಡೆ (ಪ್ರಭುಲಿ. ೪-೩೦) ; ಸರಪಣಿ ಪಿಲ್ಲಿ ಮೆಂಟಿಕೆ ಪಾದಸರ . . . ಮುಂತಾದ ಪರಿಪರಿಯಾಭರಣಂಗಳ ಬಿಸುಟರು (ಶಶಿ. ೭೭-೦೨೦) ; ಅಳವಡಿಸಿ ತೋಳ ಬಾಪುರಿ . . . ಅಂದಿಗೆ ಪಿಲ್ಲೆ ಮೆಂಟಿಕೆಗಳ (ಪಪಕೋ. ೦೦-೨೫). **ಮಂಟಿಕೆ :** ಸ್ತ್ರೀಯರುಗಳು ಕಾಲುಬೆರಳುಗಳಲ್ಲಿ ಉಂಗುರಗಳು, ಪಿಲ್ಲಿ, ಮಂಟಿಕೆ ಮುಂತಾದವುಗಳನ್ನು ಧರಿಸಿದಲ್ಲಿ ಹೆಚ್ಚಾದ ಮಂಗಳವೂ . . . ಸದಾ ಆನಂದವೂ ಆಗುವುವು (ಸಕಕ. ೪೦) ; ವೀರಮುದ್ರಿಕೆ ರತ್ನ ಮಂಟಿಕೆ ಪೇರಣೆಯ ವೈಡೂರ್ಯದಂದುಗೆಯೋರಣದ ಕಿರಿಗೆಜ್ಜೆ ಸೊಬಗಿಂದೆಸೆದರನುವಾಗಿ (ಉಂಬಾ. ೪೫-೩೫). **ಮಂಟಿಗೆ :** ಅಂದುಗೆಯ ಮಂಟಿಗೆಯ ಕಂಕಣದ ಝಣರವದ ಗೊಂದಳಪ ಬಳೆಯ ಕಿಂಕಿಣಿಯ ಗೆಜ್ಜೆಯ . . .

ಕಾಂತೆ ಮಾಳಿಗೆಯ ಭದ್ರದ ಬಯಲೊಳಾಡಿದಳು ಹೊಡೆಸೆಂಡನು (ಹಕಾ. ೯-೧೨). **ಮೆಂಟಿಕೆ** : ಬಾಲೆಯ ಪದದೊಳ್ ಮೆಱೆವವು ಕಾಲುಂಗುರ ವೀರಮುದ್ರೆ ಕಿಱುಮೆಂಟಿಕೆಗಳ್ (ನೇಶಂ. ೩೦೫) ; ಮುತ್ತಿನ ಮೆಂಟಿಕೆ ಕಾಲಪೆಂಡೆಯ ಮುದವೆತ್ತ ನೂಪುರ ಹೊನ್ನ ದಾರ ಉತ್ತಮ ಮಿಸುನಿಯ ಗಂಟೆಸರಗಳಿಂದ ಮತ್ತೇಭಯಾನೆಯೊಪ್ಪಿದಳು (ಕಂಕಾ. ೯-೭೦). **ಮೆಂಟಿಗೆ**: ಹೊಗಳಿಪುಂಗುಟದೆಳೆಗಳಂ ಮೆಂಟಿಗೆಗಳಂ ಪಿಲ್ಲಿಗಳನಿಟ್ಟಂದುಗೆಗಳಂ ಮಣಿ ಪಾಮುವಟ್ಟಂಗಳನವರ್ಚಿವರು (ಬಿಕಪು. ೯-೩೬) ; ಅಸುಗೆಮರಲುಂಗುರ ಮನುತ್ಪಳದ ಮೆಂಟಿಗೆಯುಮುಜ್ಜ್ವಲಿಪ ಗೊಜ್ಜಗೆಯು ಸಜ್ಜುಕದ ಚಳಕಿಗೆಯು . . . ಎಸಗಿ (ರಾಶಚೇ. ೧೦-೩೬ ರಗಳೆ). **ಮಿಂಟಿಗೆ** : ಸರಪಣಿ ಪಿಲ್ಲಿ ಮಿಂಟಿಗೆ ಪಾದಸರ . . . ಮುಂತಾದ ಪರಿಪರಿಯಾಭರಣಂಗಳ ಬಿಸುಟರು (ಶಶಚ. ೭೭-೧೨೦): ಉದ್ದಾಮವಹ ವೀರಮುದ್ರಿಕೆ ಮಿಂಟಿಗೆಯ ಪಿಲ್ಲಿಗಳುಮೆಲ್ಲಿಹವೆಂದೊಡೆ (ಶ್ರಶುಕ. ೯-೩೬). **ಮೆಂಟಿಗೆ** : ಪದಕ ಮೆಂಟಿಗೆ ಪಿಲ್ಲಿ ಅಣಿಮೆಟ್ಟೊದವಿದುಂಗುರ ಗೆಜ್ಜೆ ಸರಪಣಿಯಿಂದ ಸಿಂಗರಿಸಿ (ಜಪಕಾ. ೦೭-೨೨). ' ಮೆಟ್ಟು₂ ' ಪರಾ. [ದೇ.॥ ತಮಿ. ಮೆಟ್ಟಿ, ಮೆಟ್ಟು ; ತೆಲು. ಮಟ್ಟೆಯ, ಮಟ್ಟೆ, ಮೆಟ್ಟೆಯ, ಮೆಟ್ಟೆ, ಮೆಂಡಿಯ, ಮೆಂಡೆ, ಮೆಂಡೆಯ = ತೋರಬೆರಳು ಅಥವಾ ತರ್ಜನಿಗೆ ತೊಡುವ ಉಂಗುರ ; ತುಳು. ಮೇಂಟಿಗೆ; ನಾಯ್ಕಿ. ಮಟ್ಟೆ; ಪರ್ಜಿ. ಮಟ್ಟ]

**ಮೆಂಟಿಗೆ** ' ಮೆಂಟಿಕೆ ' ನೋ.

**ಮೆಂಟಿ** ' ಮೇಂಟಿ ' ನೋ.

**ಮೆಂಡಿ** (ನಾ). ಒಂದು ಸ್ಥಳದ ಹೆಸರು : ' ಉತ್ತಮಮೆಂಡಿ ', ' ಮೆಂಡಿಮಂಗಲ ' ಪರಾ. [ ? ]

**ಮೆಂಡಿಮಂಗಲ** (ನಾ). ಒಂದು ಊರಿನ ಹೆಸರು : ನಾಗಯ್ಯನು ಕೊಣ್ಣಯ್ಯನು ಶ್ರೀ ಮೆಣ್ಡಿಮಂಗಲದ ಮಹಾಜನಙ್ಗೆ ಪದಿನಾಱುಗದ್ಯಾಣ ಪೊಱಕೊಟ್ಟುಕೊಂಡ ಧರ್ಮ್ಮ (ಎಕ. X, ಕೋಲಾರ. ೯-೬; 925).
[ಮೆಂಡಿ + ಮಂಗಲ]

**ಮೆಂಡಿಮುದುಳಗಾವುಂಡ** (ನಾ). ಒಬ್ಬಾತನ ಹೆಸರು : ಮಣಿಘಟ್ಟಿಯ ಮಾಣಿಕಾ ಮೆಣ್ಡಿಮುದುಳಗಾಮುಣ್ಡರ ಮಗಂ ಕಸವಯ್ಯ . . . ಕಾದಿ ಇಪ್ಪರಂ ಕೊಂದು ತಾನು ಸಗ್ಗಯಾದಂ (ಎಕ. X, ಮುಳಬಾ. ೨೨೯-೯: 909). ' ಮೆಂಡೆಗಾವುಂಡ ' ಪರಾ. [ಮೆಂಡಿ + ಮುದುಳ₂ + ಗಾಮುಂಡ]

**ಮೆಂಡು** (ನಾ). ಹೆಚ್ಚಳ ; ಆಧಿಕ್ಯ ; ಅತಿಶಯ : ಹಿಂಡು ಗೋವು ಹರಿಯ ಕೃತಿಯ ಕಂಡು ಧ್ಯಾನದಲ್ಲಿ ತಂದು ತಂಡ ನೆಗಹಿ ಬಾಲವೆತ್ತಿಕೊಂಡು ನಿಂತವು ತಂಡತಂಡ ಒಪ್ಪಿದವು ಹಂಡೆ ಪವಳೆ ಹುಲುಗಚ್ಚಿಕೊಂಡು ನಿಂತ ವಲ್ಲಿಗಲ್ಲಿ ಮೆಂಡಲಿದ್ದವೆ (ಕೃಕಬಾ. ೯೯-೬); ಮದ್ದಾನೆಗಳ ಗಂಡಭಾಗಂಗಳಿಂದ ಪೆಂಡಾಗಿ ಸುರಿಯುವ ಮದಧಾರೆಗಳಿಂದ ಕೆಸರಾಗುವಂತೆ ಮಾಡಿ ವಿತರಣ ಗುಣದಲ್ಲಿ ಕಲ್ಪವೃಕ್ಷಮಂ ಮರಮೆಂದು ಕಾಮಧೇನುವಂ ಪಶುವೆಂದು . . . ತಿರಸ್ಕಾರಮಂಗೈದು (ಕೌಗಂರಿ. ೨೨೩-೯). [ದೇ.॥ ತೆಲು. ಮೆಂಡು]

**ಮೆಂಡೆಗಾವುಂಡ** (ನಾ) . ಒಬ್ಬಾತನ ಹೆಸರು : ಬಾಗೆಯೂರ ಕಮ್ಮಾಱ ಗಾವುಣ್ಡನು ಸವುಳಙ್ಗದ ಮೆಣ್ಡೆಗಾವುಣ್ಡನು (ಎಕ. V, ಚನ್ನರಾ. ೨೫೦-೦೩ ; 925). [ಮೆಂಡೆ₂ + ಗಾವುಂಡ ( < ಗಾಮುಂಡ ) ]

**ಮೆಂಡೆಯತನ** (ನಾ). ಬಲಾತ್ಕಾರ ; ಬಲವಂತ ; ಜುಲುಮೆ : ಚಿದ್ದಯನು ಜಕ್ಕಯ್ಯನುಮೆಂಬ ಪಾರುಪವರು . . . ಎಡೆಯಾಯ್ಲತನದಿಂ ರಾಜ ಗಾಮಿತಂಗೆಯ್ದು ಮೆಣ್ಡೆಯತನದಲೂರಸೆನ್ನದೆಸ್ದು ಮೂಱುಪರಿಷ ದುಣ್ಬಳಿಯ ಪೊಸಗ ತೊಟ್ಟುಣುತಮಿರ್ಪುದು ಕಣ್ದು (ಕೌಇ. IX-i, ೦೨೩-೦೭: 1059). [ ? + — ತನ]

**ಮೆಂಡೆಹ** (ನಾ). (?) : ಪಡುವನಾಡ ಕೊಟ್ಟುಬಾವಿಮ ಮೆಂಡೆಹ [ಪಾಠಾಂ. ಯ]ವ ಕಾಯಕದ ಚೌಡು ಬಟ್ಟಕೆಱೆಯಲಿ ಬಸವನಳವಿಂಡ್ಯ ಮರುಳಯ್ಯ ಕಟ್ಟಿ ಧಿಕರಿಸಿವ ಪ್ರಮಥಗಣನಾಯಕರ ಚರಣಾಂಬುಜಕ್ಕೆ ಶರಣು (೧೬ಶಿಇ. ೩೯-೦೩೩). [ ? ]

**ಮೆಂತಯ** ' ಮೆಂತೆಯ ' ನೋ.

**ಮೆಂತೆ** ' ಮೆಂತೆಯ ' ನೋ.

**ಮೆಂತೆಯ**, ಮೆಂತಯ, ಮೆಂತೆ, ಮೆಂತ್ಯ, ಮೆಂಥಿಯ, ಮೆಂಥೆಯ₁ (ನಾ). ಒಂದು ಬಗೆಯ ಧಾನ್ಯ ಮತ್ತು ತರಕಾರಿಯಾಗಿ ಬಳಸುವ ಅದರ ಸೊಪ್ಪು : ಜೀರಿಗೆ ಮೆಂತೆಯಂ ಶುಂಠಿ ನೀರುಳ್ಳಿಯಿಕ್ಕಿಯಿನಿಸಾ ಎಣ್ಣೆಯಿಂಗಿಕ್ಕಿಯೊಗ್ಗರಿಸಿ (ಸೂಶಕಾ. ೩-೨೦) ; ಮೆಂತೆಯ ತೂಕ ೧ ಒಪ್ಪಲಿ ತೂಕ ೯ . . . ಇಷ್ಟನ್ನೂ ಕಲಸಿ ಅಟ್ಟು ಕಾರೇಕಾಯಷ್ಟು ಮೆಲ್ಲಲು ಗೂಡೆ ಮಾಣುವುದು (ಬಿಪ್ಪಿಂ. ೮೭) ; ಸಾಸಿವೆ ಮೆಂತೆಯ ನೀರುಳ್ಳಿ ಬೆಳುಳ್ಳಿ ಅರಿಸಿನ ಶುಂಠಿ ಮುಂತಾದ ಜಿನಸನು (ಎಕ. VIII, ತೀರ್ಥಹ. ೭೨-೨೦ ; 1711). **ಮೆಂತಯ** : ಜೀರಗೆ ಮೆಂತಯ ಯಿಂಗು ಸಾಸವೆ ಉಪ್ಪು ನಿಂಬೆಯ ಹಂಣು ಸಹ ಕ್ರಮ ವರಹ ಗ ೧ (ಎಕ. XV, ಶೀಲೂರು. ೭೦-೩೭ ; 1484). **ಮೆಂತೆ** : "ಮೆಂತೆ — ಮೇಥಿಕಾ (ಮಂಥಾ) = ಒಂದು ಜೀನಸು" (ಶದ್ವಕೋ. ೩೬) ; ಸ್ವಾತಿಮಳೆಯಲ್ಲಿ . . . ಮೆಂತೆ ಬಿತ್ತಬೇಕು (ಕೃಶಿಶ್ರ. ೬೨) ; ಮೆಂತೆ ತಿಂದಾಕ್ಷಣ ಕುಂತೀ ಮಗನಾದಾನೇ ? (ಗಾದೆ). **ಮೆಂತ್ಯ** :ಅಜಮೋದ, ಮೊತ್ಯ, ಯಷ್ಟಿ ಮಧುಕ, ಜಟಾಮಾಂಸಿ ಇವುಗಳನ್ನು ಪ್ರತ್ಯೇಕ ಒಂದೊಂದು ಪಲವಂ ಚೂರ್ಣಿಸಿ ಹಾಕಿ . . . ಸೇವಿಸಲು ಶೀತಜ್ವರಂ ಶಮನಮಕ್ಕುಂ (ಸಕಪ್ಪ. ೬೨) ; ನೆಲ್ಲಿಕಾಯಿ ಮೆತ್ತಗಾದಾಗ . . . ಒಣಮೆಣಸು ಮತ್ತು ಮೆಂತ್ಯ ಇವುಗಳ ಒಗ್ಗರಣೆ ಹಾಕಿ, ಆಮೇಲೆ ಭರಣಿಯಲ್ಲಿ ಹಾಕಿ ಮುಚ್ಚಳವಿಕ್ಕಿ ಬಾಯಿಗೆ ವಸ್ತ್ರದ ತುಂಡನ್ನು ಕಟ್ಟಿ ಇರಿಸುವುದು (ಅಡುಸಾ. ೦೦೭). **ಮೆಂಥಿಯ** : " ಮೆಂಥೀ — ಮೆಂಥಿಯ " (ಓಕಧಿ. ೦೨೯). **ಮೆಂಥೆಯ₁**: ''ಪೀತಬೀಜ—ಮೆಂಥೆಯ'' (ಓಕಾಂ. ೯೯); ಬೇವಿನೆಲೆ ಬಳಿಯ ಗಣಜಿಲ ಮಾವಿನ ಪಾಲಿಂದಮರೆದು ಶರ್ಕರೆಸಹಿತಂ ಸೇವಿಸೆ ಜೀರಗೆ ಮೆಂಥೆಯದೋಷದ ವಿಷಹರಮದಕ್ಕುಂ (ಖಡುದ. ೨-೩೬).

**ಮೆಂತ್ಯದ ಸೊಪ್ಪು, ಮೆಂತೆಸೊಪ್ಪು** = ಒಂದು ಬಗೆಯ ತರಕಾರಿ ಸೊಪ್ಪು : ಚಕ್ಕೊತ್ತಿಸೊಪ್ಪು, ಮೆಂತ್ಯದ ಸೊಪ್ಪುಗಳನ್ನು ಸಸಿಗಳಲ್ಲೇ ಕಿತ್ತು ಅಡಿಗೆ ಮಾಡಿದರೆ ಮೇಲು (ತರಶಿ. ೦೭); ಮೆಂತೆಸೊಪ್ಪಿನ ಹುಳಿ ಬಹಳ ಚೆನ್ನಾಗಿರುತ್ತದೆ (ಲೂಂ).

[ದೇ.॥ ತಮಿ. ಮೆನ್ತಿಯಮ್, ಮೇತಿ, ಮೇನ್ತು, ವೆನ್ತಯಮ್, ವೆನ್ತಲ್, ವೆನ್ತಿಯಮ್; ಮಲ. ವೆಂತಯಮ್; ತುಳು. ಮೆಂತಿ, ಮೆಂತೆ, ಮೆತ್ತಲೆ, ಮೆತ್ತಿ. ಮೆತ್ತೆ; ತೆಲು. ಮೆಂತಿ, ಮೆಂತುಲು./ಸಂ. ಮಂಥಾ]

**ಮೆಂತ್ಯ** ' ಮೆಂತೆಯ ' ನೋ.

**ಮೆಂಥಯ** ' ಮೆಂಥೆಯ₂ ' ನೋ.

**ಮೆಂಥಿಯ** ' ಮೆಂತೆಯ ' ನೋ.

**ಮೆಂಥೆಯ₁** ' ಮೆಂತೆಯ ' ನೋ.

**ಮೆಂಥೆಯ₂**, ಮೆಂಥಯ (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು ; ಮಾಧವಿ : ''ಮೆಂಥೆಯಮೆನೆ ವಸಂತದೂತಿಕೆಗೆ ಪೆಸರ್'' (೯ಚಿ. ೬೨); ''ಮದನಿ–ಮೆಂಥೆಯ, ಅದಿರ್ಗಾಂತಿ, ಕಸ್ತೂರಿ'' (ಓಕಾಂ. ೦೦೩). **ಮೆಂಥಯ** : "ಅದಿಮುರ್ಕ್ತ್ತೆ, ಮೆಂಥಯ [ಪಾಠಾಂ. ಮೆಂದೆ] ಅದಿರ್ಗಾಂತಿ — ಈ ೩ ಮಾಧವಿಲತೆ" (ಕಕಶಾ. ೩೯-೦೬೦). [ ? ]

**ಮೆಂದ** ' ಮಯಿಂದ ' ನೋ.

**ಮೆಂದಣ್ಣ** (ನಾ). ಒಬ್ಬಾತನ ಹೆಸರು : ನೊಳಂಬಸೇನವಾರನ ಮಗ ಮೆನ್ದಣ್ಣ (ಎಕ. IX, ಕಾಪಕಾ. ೫೨-೬: ೯೦೦).
[ಮೆಂದ.( < ಮಯಿಂದ) + ಅಣ್ಣ₁]

**ಮೆಂದವ್ವ** (ನಾ). ಒಬ್ಬಾತನ ಹೆಸರು : ಇ ಕೊಡಙ್ಗಿಯ ಬಳಸಿದೋರ್ ನಾಟಬ್ಬಾಮಣ್ಣ ಬಿಯಳನುಂ ಪಿರಿಯ ಮುಗುಳಿಯ ಕೋಮರಯ್ಯನುಂ ಪಲ್ಲಾಡಿಯ ಮೆನ್ದವ್ವ ಬೆಣ್ಣಿಯೂರ ದೇವಗಣನು (ಎಕ. VI. ಶೃಂಗೇರಿ. ೩-೦೪; 899). [ಮೆಂದ (< ಮಯಿಂದ) + ಅವ್ವ$_{1}$]

**ಮೆಂದಯ್ಯ** (ನಾ). ಒಬ್ಬಾತನ ಹೆಸರು : ಸಡದೋರ್ಕ್ಕರಣಸಹಿತ ಮೈನ್ದಯ್ಯನುಂ ಪೆನ್ಜೆಜುವಿನ ಸೊಬಮ್ಮಗಾವುಣ್ಣನುಂ (ಎಕ. XII. ಶಿರಾ. ೨೬-೭೬; 943). [ಮೆಂದ (< ಮಯಿಂದ) + ಅಯ್ಯ$_{1}$]

**ಮೆಂದು** 'ಮೇ$_{1}$' ಪರಾ.

**ಮೆಂದೆ** (ನಾ). ಜಮೀನಿನ ಒಂದು ಅಳತೆ (?) : ಐನೂರ್ಬ್ಬರುಂ ಕೂಡಿ ಶ್ರೀ [ಪೊಜ್ಜೇ] ಶ್ವರದೇವರ್ಗ್ಗೆ ಬಿಟ್ಟ ಧಮ್ಮಮೆನ್ತೆಂದಡೆ . . ಹಂನೆರಡು ಮೆಂದೆಯ ಬಂಜರು ಸಮಸ್ತಂ ಕೂಡಿಯಾಳಲು ವೀಸವಂ ಕೊಟ್ಟರ್ (ಕ೩ಇ. ೩೫-೭೬-೯೦; 1143). [ ? ]

**ಮೆಂಬರು** (ನಾ). ಸಂಘಸಮಿತಿ ಮುಂತಾದ ಘಟಕಗಳಲ್ಲಿ ಸಂವಿಧಾನ ಮೂಲಕವಾದ ಸಂಬಂಧವನ್ನು ಹೊಂದಿರುವವನು : ಸದಸ್ಯ : (೧)ನೆಯ ಉಪಪ್ರಕರಣದಲ್ಲಿ ಹೇಳಿರುವ ಪಟ್ಟಿಯಲ್ಲಿ ನಮೂದಿಸಿರುವ ಯಾವನೊಬ್ಬ ಮನುಷ್ಯನನ್ನಾದರೂ ಸದರಿಬೆಂಚಿನ ಮೆಂಬರಾಗಿ ನೇಮಿಸ ಬಹುದು (ಗ್ರಾಮಾಕ. ೦೭). [←ಇಂ. Member]

**ಮೆಕ್ಕಲು** (ನಾ). ೧. ಬೆಟ್ಟದ ಮೇಲಿನಿಂದ ಹರಿಯುವ ನದಿಗಳು ಮೇಲಿನಿಂದ ದೂಡಿಕೊಂಡು ಹೊತ್ತು ತರುವ ಮೇಲುಮಣ್ಣು ; ರೇವೆಮಣ್ಣು : ಫಲವತ್ತಾದ ಮೆಕ್ಕಲಿನ ಮೈದಾನಗಳಲ್ಲಿ ಇವು ಪ್ರವಹಿಸು ತ್ತವೆ (ಭೂಶಿ. ೨೪೩). ೨. ಮೆಕ್ಕಲುಮಣ್ಣಿನಿಂದ ಕೂಡಿದ ಪ್ರದೇಶ,— ಸ್ಥಳ : ಇವು ದಕ್ಷಿಣ ಭಾರತದ ಪಶ್ಚಿಮ ಮತ್ತು ಪೂರ್ವತೀರಪ್ರದೇಶ ಗಳಲ್ಲಿ ಸಮುದ್ರ ಮತ್ತು ಬೆಟ್ಟಸಾಲುಗಳ ಮಧ್ಯೆ ಇರುವ ಇಕ್ಕಟ್ಟಿನ ಮೆಕ್ಕಲುಗಳು (ಕವಿಕೋ. XII, ೬೩೪). [ ? ]

**ಮೆಕ್ಕಲುಮಣ್ಣು** (ನಾ). = ಮೆಕ್ಕಲು ೧ : ನದಿಗಳು . . . ಹರಿಯುವಾಗ ಬೆಟ್ಟದಿಂದ ಕಲ್ಲು, ಮಣ್ಣು, ಮರಳು ಮುಂತಾದವುಗಳನ್ನು ದೂಡಿಕೊಂಡು ಬರುತ್ತವೆ . . . ಇದೇ ಮೆಕ್ಕಲುಮಣ್ಣು (ವಿಶಂ. ೨೩) ; ಮೆಕ್ಕಲುಮಣ್ಣು ಗಳಲ್ಲಿ . . ತೀರಪ್ರದೇಶದ ಮಣ್ಣುಗಳು ಮತ್ತು ನದೀಮುಖಜ ಭೂಮಿಯ ಮೆಕ್ಕಲುಮಣ್ಣುಗಳು ಎಂದು ಎರಡುಭಾಗ ಮಾಡಬಹುದು (ಕವಿಕೋ. XII. ೬೩೪). [ಮೆಕ್ಕಲು + ಮಣ್ಣು (<ಮಣ್)]

**ಮೆಕ್ಕಿ$_{1}$** 'ಮಕ್ಕಿ$_{1}$' ನೋ.

**ಮೆಕ್ಕೆ$_{2}$** (ನಾ). ೧. ಒಂದು ಬಗೆಯ ಜೋಳ : 'ಮೆಕ್ಕೆಜೋಳ' 'ಪರಾ. ೨. ಮೆಕ್ಕೆಜೋಳದ ಹಿಟ್ಟು (?) : ಅಕ್ಕಿಯಿಂ ತೆಂಗು ಜಾನಕ್ಕಿಯಿಂ ಲಂಕೆಯು ಮೆ[ಪಾಠಾಂ. ಮ]ಕ್ಕೆಯಿಂ ಕಣಿಕ ಕೆಡುವಂತೆ ದುರ್ಬುದ್ಧಿ ಹೊಕ್ಕಲ್ಲಿ ಕೇಡು (ಸರ್ವಜ್ಞ. ೬೬೨). [?./ ಮರಾ. ಮಕ್ಕಾ, ಮಕಈ./ಇಂ. Maize= ಮುಸುಕಿನಜೋಳ]

**ಮೆಕ್ಕೆ$_{3}$**, ಮೇಕೆ$_{2}$ (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ : "ಉರ್ವಾರುವೆನೆ ಮೆಕ್ಕೆ" (ಮಂಗರಾ. ೪೪-೪೬) ; ಮೆಕ್ಕೆಯ ಕಾಯ್ಗಳ್ ಮೊದಲೊಳ್ ಕೈಪೆಯಪ್ಪುವು (ರರ್ಮಾವ್ಯ. ೭-೨೬೦) ; ಎಜೆಯ ವಂಕಿಯೊ ಕಳಿತ ಮೆಕ್ಕೆಯೊ . . , ಅಕ್ಕಿಸುಂಡೆಯೊ ಸವಿಯ ಚಿತ್ರಕವೊ (ಕುವ್ಯಾ.ಅ. ೮-೬೬) ; ಎಂತು ಕಲ್ಪನೆನಾಗಿ ಮಾಲತಿಯುಂ ಮೆಕ್ಕೆಯಿಂ ಸಿಂಗರಿಸಿದಯ್ (ರಾಮಾಶ್ವ. ೩೬-೨೪). ಮೇಕೆ$_{2}$ : "ಪೃಥುವಿಶಾಲ – ಮೇಕೆ" (ಓಶಂ. ೦೦೨). [?./ ಮರಾ. ಮೇಕೀ. ಮೇಕೇ]

**ಮೆಕ್ಕೆಜೋಳ** (ನಾ). = ಮೆಕ್ಕೆ$_{2}$ ೧ : (ಭತ್ತ) . . . (ಮೆಕ್ಕೆಜೋಳ) ಇವುಗಳ ಬೆಳೆಗೆ ಅವಶ್ಯಕವಾದ ಅನುಕೂಲಗಳಾವುವು (ಭೂವಿಶ. ೨೦೦). [ಮೆಕ್ಕೆ$_{2}$ + ಜೋಳ./ತಮಿ. ಮೊಕ್ಕಚ್ಚೋಳರ್]

**ಮೆಚ್ಚವಣಿಗೆ** 'ಮೆಚ್ಚುವಣಿಗೆ' ನೋ.

**ಮೆಚ್ಚಿ** . ಮಚ್ಚಿಕೆ (ನಾ). ೧. ಇಷ್ಟ : ಪ್ರೀತಿ : ನೀನು ತುಂಬ ಜೋರಿನ ಹುಡುಗಿ ಎಂದೇ ಅವರಿಗೆ ಅದು ಮೆಚ್ಚಿಕೆಯಂತೆ (ಕಪೋತ. ೦೦೦) : ವೀರಣ್ಣನ ಮೇಲೆ ತೋರಿದ್ದ ಮುನಿಸು ಮೆಚ್ಚಿಕೆಯ ರೂಪ ತಾಳಿತು (ಕಾಹುತ್ತ. ೦೦೭). ೨. ಒಪ್ಪಿಗೆ ; ತೃಪ್ತಿ : ಈ ಅಂಶಗಳನ್ನು ನೀವು ಮನನ ಮಾಡಿಕೊಂಡರೆ ಕುಟುಂಬದವರಿಗೆ ಮೆಚ್ಚಿಕೆಯಾಗುವ ರೀತಿಯಲ್ಲಿ ಮತ್ತು ನಿಮ್ಮ ಹಣಕಾಸಿನ ಸ್ಥಿತಿಗೆ ತಕ್ಕಂತೆ ನಿತ್ಯದ ಅಡುಗೆಗಳನ್ನು ತಯಾರಿಸುವುದು ಕಷ್ಟವಾಗಲಾರದು (ಅಡುಶಾ. ೩೬) ; ಅವುಗೆ ಯಾವು ದೊಂದು ಮೆಚ್ಚಿಕೆಯಾಗುವುದಿಲ್ಲ (ಒಂಟಿದ.೭). ೩. ಕೊಂಡಾಟ; ಹೊಗಳಿಕೆ: ಅವಳಿಗೆ ಏನಾದರೂ ಒಂದು ಮೆಚ್ಚು ಕೊಡಬೇಕು ಎಂದು ಮೆಚ್ಚಿಕೆಯ ದನಿಯಲ್ಲಿ ಹೇಳಿದ (ಕಾಹುತ್ತ. ೯೩). **ಮಚ್ಚಿಕೆ** : ೧. ಮನವನೀಯಲು ಬಹುದು ಮಚ್ಚಿಕೆಯನುವನಜಿದಾ ಪ್ರಾಣವಂ ಮತ್ತೆಂತು ಕೊಡಲಹುದು (ಬಸಪು. ೩೭-೩೩) ; ಸಟಿಸಿ ಪ್ರೇಮದಿ ತೃಪ್ತಿಯೊಂದಿಸುವ ಮಚ್ಚಿಕೆಯ ಗೋವಿನೊಲು (ಗಗಶಾ. ೦೦-೯). ೪. ಸಂತೋಷ ; ಹರ್ಷ: ಸಕಲದೇವ ದ್ರೋಹಿಗಳು . . . ವಿಕಟಮತಿಗಳು ಖಳಪತಿಯು ಚಿತ್ತಕೆ ವಿಕಾರವ ಪುಟ್ಟಿಸುತ ಮಚ್ಚಿಕೆಯೊಳಿಹರು ( ಅಪಂಪ. ೦-೩-೯ ). ೫. (?) : ಫಲರಸ ವರ್ಣ ಕೊಂಡಂತಿರಬೇಕು . . . ದೃಷ್ಟಿಯ ಚಿತ್ತದಂತಿರಬೇಕು ಅಪ್ಪುವಿನ ಮಚ್ಚಿಕೆಯಂತಿರಬೇಕು (ಪೋಳಿವಚ. ೦೦೦-೪೦೨). 'ಮೆಚ್ಚುಗೆ' ಪರಾ. [ಮೆಚ್ಚು$_{1}$ + —ಇಕೆ./ತೆಲು. ಮಚ್ಚಿಕ]

**ಮೆಚ್ಚಿಗೆ** 'ಮೆಚ್ಚುಗೆ' ನೋ.

**ಮೆಚ್ಚಿತು**, ಮೆಚ್ಚಿದು (ನಾ). ಪ್ರಿಯವಾದುದು ; ಇಷ್ಟವಾದುದು : ಮೆಚ್ಚಿತು ಮಾಡಲ್ಕೆ ಸಮರ್ಥನಪ್ಪಡಪ್ಪುದು ಗರ್ವಂ (ಸಮಶ. ೪-೦೦೩) ; ಮುಂದದಿನೀಗಳೆ ಬೇಡು ಮೆಚ್ಚಿತಂ (ಕುಮುರಾ. ೨-೬೩). **ಮೆಚ್ಚಿದು** : ನಿನ್ನ ಮೆಚ್ಚಿದುಗೆಯ್ ಎಂದು ಪರಿಚ್ಛೇದಿಸಿ ನುಡಿವುವಂ (ಸುಕುಮಾ. ೭-೨೨ ವ).

**ಮೆಚ್ಚಿತ** = ಹೊಗಳಿಸಿಕೊಂಡವನು : ಸ್ತುತ್ಯನಾದವನು : ಪುರಹರ ಮೆಚ್ಚಿತ ಪುರುಷೋತ್ತಮನುತ ಶರಣುಹೊಕ್ಕೆನು ಸಲಹೆನ್ನ (ಕಕಶಾಂ. ೬೩-೨೪). [<ಮೆಚ್ಚು$_{1}$]

**ಮೆಚ್ಚಿದು** 'ಮೆಚ್ಚಿತು' ನೋ.

**ಮೆಚ್ಚಿಸು**, ಮಚ್ಚಿಸು, ಮರ್ಚಿಸು (ಕ್ರಿ). ೧. ಒಡಂಬಡಿಸು ; ಒಪ್ಪಿಸು : ಗಂಧಮಿತ್ರ(ಕ್ಷೀಣ)ನಂ ಮೆಚ್ಚಿಸಿ ಬುದ್ಧಿಸೇನೆಯಂ ನಿಗ್ರಹದಿಂ ತನಗೆ ವಶ್ಯಂಮಾಡಿಕೊಂಡು (ಕಾವುಂಪು. ೦೬೦) ; ಈಕೆಯನು ಮೆಚ್ಚಿಸದು ರಾಜಕಿ ನೀಕ (ಸಂಕಶ. ೩೦-೩೬) ; ನಂಬುಗೆಯಿಲ್ಲದಿದ್ದರೂ ಅಮ್ಮೆಯ್ಯನ ಮನಸ್ಸು ಮೆಚ್ಚಿಸುವುದಕ್ಕೆ ಹಾಗೆ ಮಾಡಬೇಕಾಯ್ತು (ಚಂಗಾಸ್ಯ. ೦೦೯). ೨. ಸಂತೋಷಗೊಳಿಸು ; ಹರ್ಷಗೊಳಿಸು : ಆ ವಿನಾನಂ ಸಮಂತೆಚ್ಚು ಮೆಚ್ಚಿಸಿದಂ ದೇವರುಮಂ ಧನುರ್ಧರರುಮಂ (ಪಂಪಭಾ. ೩-೬೩) ; ಪರಿಣತ ರೆನಿಸುವ ನಿರ್ಮತ್ಸರರಂ ಮೆಚ್ಚಿಪುದು ಗಹನಮಲ್ಲದು (ರರ್ಮಾವ್ಯ. ೧-೪೩) ; ಹ್ಯಾಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ ನಾಗಶಯನನೆ (ಪುರಂದ. ೨-೬೯-೦). **ಮಚ್ಚಿಸು** : ೨. ಮಚ್ಚಿಸುತ ತೆಗೆದು ಮುಂಡಾಡುತ್ತ (ಹಿರಿಂ.ಕ. ದೇ. ೩-೦೦) ; ಎನ್ನಯ ತನುವಿನಲಿ ನೀ ಸುಳಿದು ಮಚ್ಚಿಸಿ ಯಿನಿತು ಧಾವತಿ ಗೊಳಿಸಿ (ಶ್ರಕುಲೀ. ೭-೪೦) ; ಅಖಂಡೇಶ್ವರನ ಮಚ್ಚಿಸುವಾತನೇ ಮಹಾ ಸದ್ಭಕ್ತನು (ಅಖಂಡೇ. ೭೯-೬೩). **ಮರ್ಚಿಸು** : ೩. ಒಲಿಯುವಂತೆ ಮಾಡು ; ಅನುರಕ್ತಗೊಳಿಸು : ಮನೆಯನಿವಕ್ಕೆ ಮರ್ಚಿಸಿದ ಮರ್ಚಿಸಿ ಕೂರಿಸಿದೆಯ್ದೆ ಕೂರ್ತು ನಚ್ಚಿನ ರುಚಿ ಬೆರ್ಚಿ ಬಿಚ್ಚತಿಕೆಯಂ ಬಗೆ ಕೂಡದಕೆಯ್ದೆ ಮಾಡಿದೋಪನನುಟಿದೊತ್ತಿಗಿರ್ದೆಡೆಯೊಳೊಂದೆನಗಿತ್ತಪುದು (ಶಾಂತಿಪು. ೬-೮೦). [ಮೆಚ್ಚು$_{1}$ + – ಇಸು$_{3}$]

**ಮೆಚ್ಚು₁**, ಮಚ್ಚು₁, ಮರ್ಚು₁, ಮೆರ್ಚು (ಕ್ರಿ). ೧. ಒಲಿ ; ಪ್ರೀತಿಸು ; ಬಯಸು : ಸೋಂಬಸಂ ಮೆಚ್ಚಿ ಬೇಜಾರ್ಗೆ ಪೋದ ಸೂಳೆಯಂತೆ (ಕಾವ್ಯಸಾ೪ ೩೨೯ ಕೂಡ್ರಕ) : ಸ್ವಯಂಬರದೊಳ್ ಸುಮತಿಬಿಲ್ಲರಂ ನೋಡಿ ಯಾರುವಂ ಮೆಚ್ಚದೆ ಸಿರಿದಿಣ್ಣಂಗೆ ಮಾಲೆ ಸೂಡಿದೊಡೆ (ವಡ್ಡಾರಾ. ೦೦೬-೨೦). ೨. ಇಷ್ಟವಾಗು ; ಸೇರು : ಒಂದು ಪೊತ್ತಗಲದೆ ಮೆಯ್ಗೆ ಮೆಚ್ಚಿದಂ ತೊಡಿಸ್ತಂ ಕಾದಂಬರಿಯೊಳ್ಳಿರದು (ಕಾದಂಬ. ೩೨೬). ೩. (ದೇವರು, ಋಷಿ ಮುಂತಾದವರು) ಅನುಗ್ರಹಿಸು : ಪ್ರಸನ್ನವಾಗು : ಸಹಜ ಕವಚರತ್ನಕುಂಡಲಂಗಳಂ . . . ಕೊಟ್ಟುವರ್ಕೆ ಮೆಚ್ಚಿ ದೇವೇಂದ್ರ ನಾತಂಗಮೋಘಶಕ್ತಿಯನಿತ್ತಂ (ಪಂಪಭಾ. ೯-೭೩ ವ) : ನೆಚ್ಚಿನಯ್ಯ ಹರಿ ಮೆಚ್ಚನಯ್ಯ (ಹರಿಂದ. ೨-೬೬೦). ೪. ಒಪ್ಪು ; ಸಮ್ಮತಿಸು : "ಮೆಚ್ಚು – ಅಭ್ಯುಪಗಮೇ" (ಶಮದಾ) : ಪರಮಾರ್ಥಂ ಮೆಚ್ಚೆನಾನೀ ಧರಣಿಯುಳರ ವಾಸೆನ್ನು ಸನ್ನಾಸಂಗೆಯ್ದು (ಎಕ. II, ೬೬-೩ : ಸು. 700) ; ಇಜ್ಜಿದು ಬಸವಣಿ[ಯದ] ಬೀಜಸ್ವೊರನ್ ತೆಜ[ಜ][ನ] ಮೆಚ್ಚದೊಂ (ಎಕ.XXIV. ೦೯೩-೦೨ : ೫೫) : ತಾಪಸಾಚರಣಂ ತಪೋರೂಪವರ್ಗಮಂ ಮೆಚ್ಚದೆ ಮಿಥ್ಯಾಂಧಕಾರಾವಕುಂಠಿತಸಮ್ಯಗ್ದರ್ಶನನಾಗೆ (ಶಾಂತಿಪು. ೭-೯೩ ವ). ೫. ಕೊಂಡಾಡು ; ಹೊಗಳು ; ಶ್ಲಾಘಿಸು : ತೆತ್ತುತನಕ್ಕೆ ತೆತ್ತುತನಮಂ . . . ಪೊಣರ್ಚುತ್ತುಮುಪಾಯದಿಂ ಕಳಿಯ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೯೩ ಕೂಡ್ರಕ) : ಗುಣಯುತನಪ್ಪನಂ . . . ಪರೋಪಕಾರಕಾರಣಪರನಪ್ಪನಂ ಮನದೆ ಮೆಚ್ಚದರಾಭಿಮಾನಿಯಪ್ಪನಂ (ಕವಿರಾ. ೦-೦೨೩) ; ವಿದ್ವಜ್ಜನಂ ಮೆಚ್ಚೆ ವಿದ್ಯಾವಿಷ್ಟಂಭಮನಪ್ಪುಕೆಯ್ದು (ಎಕ. II, ೬೯-೬೩ : 1163) ; ತಿಳಿಯ ಹೇಳುವ ಕೃಷ್ಣಕಥೆಯನು ಇಳೆಯ ಜಾಣರು ಮೆಚ್ಚುವಂತಿರೆ (ಕುಮ್ಮಾಭ. ೦-೦೩). **ಮಚ್ಚು₁** : ೧. ತ್ವದಂಘ್ರಿಪದ್ಮಂಗಳ ನೈದೆ ಮಚ್ಚಿ ನೆಲಸಿರ್ದಪುವೀ ಪುಲಿ ಪಂದಿ ಕೋಡಗಂ ಮುಂಗುರಿ (ಆದಿಪು. ೩-೦೪) : ರಿಪುರಾಜ್ಯಂಗನೆ ವಿಜಯಕೆ ಮಚ್ಚಿ ಮನಂಗೊಳ್ವಂತೆ (ಶಾಂತಿಪು. ೦೦-೪೯) ; ಹಣವ ತೆಕ್ಕೊಂಡು ಘಾಳಕರ ಕ್ಷಣದೊಳ್ಬಿಟ್ಟು ಮಚ್ಚದಿರೆಂದು ಮಗಳಿಗೆ ಬಣಗು ವೃದ್ಧಪ್ಪೆ ಹೇಳಿದಳು (ಪೋಹತ. ೦೬-೭೩). ೩. ದಮಿತಾರಿಯು ಭುಜಬಲವಿಕ್ರಮದಳವಿಗೆ ಮಚ್ಚಿ ಮಚ್ಚುಗುಡಿಸುವವೊಲ್ (ಶಾಂತಿಪು. ೯-೩೬) : ಐರುಸಿಂಹಚಕ್ರಿ ದಯೆಯಿಂ ಕೆಯ್ಕೊಂಡು ಸರ್ವಾಧಿಕಾರಮನಿತ್ತಮ್ಮೆಜಿಕೊಳೆಯ್ದೆ ಮಚ್ಚಿ ಪೊರೆದಂ ಜಾನೆಂದೊಡೆ . . . ಉನ್ನತಿಕ್ಕೆ ವಡೆದಂ ಚಾವುಂಡನೇಂ ಧನ್ಯನೋ (ಲೋಕೋಪ. ೦-೦೩ ಪೀಠಿಕ) ; ಮಾಡಿದ ಪೂಜೆಯ ಕೊಂಡು ಮಚ್ಚಿ ತಲೆದೂಗಿ ಲಿಂಗಯ್ಯನ ಮನ ಕರಗಿ (ಮೋಳಿಮಾ. ೦೨೯ ಶೃಸ್ತಾವನೆ). ೪. ಎಂತು ಮಾಡುವೆನೀ ಮನವನ್ನು ಕೂಡಲಸಂಗಮದೇವನ ಶರಣರ ನಚ್ಚುವ ಮಚ್ಚದ ಬೆಂದ ಮನವನು (ಬಸವ. ೩೬) ; ನಚ್ಚುಗೆ ಮನ ನಿಮ್ಮಲ್ಲಿ ಮಚ್ಚುಗೆ ಮನ ನಿಮ್ಮಲ್ಲಿ (ಮಹಾದೇ. ಬಿ. ೩೦-೬೬) ; ವೀರಶೈವದಲಿ ಒಳ್ಳಿತೇನುಂಟೆಂದು ಮಚ್ಚಿದನಲ್ಲವುನು ಹೇಳು (ಪ್ರಭುಲೀ. ೨೩-೦೦). ೫. ಕುಮಾರಿಯರ್ ಬೆಸಗೊಳೆ ದಿಕ್ಕುಮಾರಿಯರೆನಲ್ಬೊರೆ ಯಾದುದವರ್ಕೆ ಮಚ್ಚಿ ಬಣ್ಣಿಸಲಭಿಯೋಗಮಾಯ್ತನಗೆ (ಗದಾಯು. ೦-೩೩) ; ಮಚ್ಚದೊನಿಲ್ಲ ನಿನ್ನಕವಂ (ಕಾವ್ಯಾವ. ೪೯೪). **Δ ಮರ್ಚು₁** : ೧. "ಮರ್ಚ- ಅತಿಪರಿಚಯೇ" (ಶಮದಾ) : ಕಳವನೆ ಮರ್ಚಿ ಪೆರ್ಚಿ ಬೆಸನಂ ಪೆಜರರ್ಥಮನೀಟ್ಟುಕೊಳ್ಳ ತಕ್ಕಳವಿಗಳುಂಬವಾಗಿ ನಿಲೆ ಕಸ್ಸಮನಿಕ್ಕುವ . . . ನಿನ್ನ ಗೊಡ್ಡಮಂ ತಿಳಿದವಧರಿಸು (ವರ್ಧಮಾ. ೩-೩೦) ; ಉನ್ನತಗುರುಶ್ರೀಪಾದಮಂ ಮರ್ಚಿ ಬೆನ್ನನೆ ಪೋದಂತಿರೆ ಮೂರ್ಛೆಪೋದನರಸಂ ವ್ಯಾಮೋಹಮೇಗೆಯ್ಯದೋ (ಅರ್ಹತ್ಪ. ೨-೯೬). ೪. ಜನಂ ತನಗೊಪ್ಪತೆ ಮರ್ಚಿ ನಚ್ಚಿ ಪೋದುದೆ ಪುದುವಾಳ್ವೆಪೋಲ್ ವಿಧಿಸಂಪೂಜಿಸಮಂದಮೆ ಲೋಕಶಾಸನಂ (ಪಂಪಭಾ. ೩೯-೦೦). **ಮೆರ್ಚು** : ೫. ದೇವನಿಕಾಯಂ ನೆಲೆವೆರ್ಚಿ ಮೆರ್ಚಿ ಜಯಮಂ ಕೈಕೊಂಡೆ (ಶಾಂತೀಶ್ವ. ೫-೩೦) ; ಮೆರ್ಚಿ ಪಿಡಿದಿರ್ಪವನೆ . . . ಸಲ್ಲಕ್ಷಣಂ (ಜಗನ್ನಾ. ೩-೩೯).

[ ದೇ.॥ ತಮಿ. ಮೆಚ್ಚು, ಮೆಯ್ಚ್ಚು ; ತುಳು. ಮೆಚ್ಚು ; ತೆಲು. ಮೆಚ್ಚು, ಮೆಚ್ಚು ; ಕೊಡ. ಮೆಚ್ ; ಕೋತ. ಮೆಚ್ ]

**ಮೆಚ್ಚು₂**, ಮಚ್ಚು₂, ಮರ್ಚು₂ (ನಾ). ೧. ಪ್ರೀತಿ ; ಇಷ್ಟ ; ಒಲುಮೆ : ಮದನನ ಕಾಯ್ದು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ (ಪಂಪಭಾ. ೩-೦೬) ; ಮೆಚ್ಚಿದಂತಿರುತಿಹಳು ಮೆಚ್ಚು ಮಾತ್ರೂಬ್ಬನೊಳು (ಸರ್ವಜ್ಞ. ೦೯೪೦). ೨. ಪ್ರಿಯವಾದುದು ; ಇಷ್ಟವಾದುದು : ಈ ಪುಣ್ಯಕಥೆ ಪುಣ್ಯಜೀವಿಗಳಿಗೆ ಮೆಚ್ಚು ಕಾಪುರುಷರಿಗೆ ಮೆಚ್ಚಲ್ಲ (ಭರತ. ೦-೦೭). ೩. ಇಷ್ಟಪಟ್ಟು ಕೊಡುವ ಕಾಣಿಕೆ : ಬಹುಮಾನ : ತನ್ನ ನಲ್ಲಂಬುಗಳಿಂದೆಚ್ಚೆಚ್ಚು ಮೆಚ್ಚಂ ಸಲಿಸುವಂ (ಪಂಪಭಾ. ೪-೨೩) : ಅರಸುಮಕ್ಕಳ ಮುಂದೋದಿ ಮೆಚ್ಚಂ ಕೊಳ್ಳಕ್ಕರಿಗರಬ್ಬರದೊಳಂ (ಕಬ್ಬಿಗ. ೪೪); ಅರಮನೆಯೊಳ್ ರನ್ನಗಡಗಮಂ . . . ಮೆಚ್ಚನೀವರ್ (ರಾಜಶೇಖ. ೩-೦೭). ೪. ಒಪ್ಪಿಗೆ : ಸಮ್ಮತಿ : ಮೆಚ್ಚಿಲ್ಲದೆ ಜಡನಾಗಿ ದೇವಗುರುಗಳ ಪೊರ್ದದೆ (ರಪಪ್ರ. ೩-೦೩೭) ; ಹೆಚ್ಚದೆ ಹಿಗ್ಗದೆ ಇಪ್ಪರೆ ಲೋಕಕ್ಕೆ ಮೆಚ್ಚು ಕೇಳೆಚ್ಚಜಿಕೆ(ಹರಿಂದ. ೨-೪೩ ಅನುಪಲ್ಲವಿ). ೫. ಹೊಗಳಿಕೆ: ಪ್ರಶಂಸೆ: ಬಜಿದಲ್ತು ಮೆಚ್ಚು ಶೌಚ್ಯು ಕಿಜಿದಲ್ತು . . . ಎನಿಸಿದುದು ನಿಜಗುಣಂ ಬೋಜುಗನ (ಸೌತ್ಇ. XI-i. ೪೦-೨೪: 969). **ಮಚ್ಚು₂** : ೧. ಅರಸರ್ ಮಚ್ಚು ತಮ್ಮ ಮನದೊಳ್ ನಿಲೆ ಸೈರಿಸಿದಂತ ನಿತ್ಯಮಾ ನರರ ವಿಭೂತಿಯೆಂಬ ಬಗೆ ಬಂದಿರೆ ಮಾಣದೆ ತಮ್ಮುತಮ್ಮ ಪುತ್ರರನಧಿಯೋಗದಿಂದೆತಿಬಲಂಗೆ ನಿಯೋಜಿಸಿ ಮಾಣ್ದಿರ್ (ಆದಿಪು. ೨-೫೦); ವಿಷಯಂಗಳೊಳಪ್ಪ ಮಚ್ಚಂ ಕೆಯ್ಕೊಂಡಂಗಾ ಮಚ್ಚು ಕಷಾಯಮಂ ಪುಟ್ಟಿಸುಗುಂ (ಕಬ್ಬಸಂ. ೦೪೦-೦೦ ವ) : ಕಳವಿನೊಳ್ ನಡೆವುದೇ ಸುಖದ ಸುಗ್ಗಿ ತಲೆದೋಜುತಿರ್ಪುದೇ ಮಚ್ಚು ನಿನಗೆ (ಜಿನಪು. ೦೦-೫೨). ೩. ಕೂರ್ತಿಚ್ಚೆ ಬೆಚ್ಚಂತಿರೆ ಮಚ್ಚಂ ಮೆಚ್ಚಿದಂದದೊಳೆ ಸಲಿಪ . . . ವಾರನಾರೀಕದಂಬಂ (ಸುಕುಮಾ. ೯-೬೩) ; ಬೀರಬಲ್ಲನಿಗೆ ಮಚ್ಚು (ಬಹುಮಾನ) ಕೊಡಿಸಬೇಕು (ಬೀರಬ. ೬೦). **Δಮರ್ಚು₂** : ೧. ಸಹಜಧಾತುವುಂ ಭಾವಮಕ್ಕುಂ . . . ತಡೆ ನಡೆ ಬಿಸು ಪೆರ್ಚು ಮರ್ಚು (ಶಮದ. ೨೦೩ ಸೂತ್ರ). ೬. ಅಲಂಕಾರ: ಶೃಂಗಾರ : 'ಮೆಯ್ಮರ್ಚು' ಪರಾ.

[< ಮೆಚ್ಚು₁./ತಮಿ. ಮೆಚ್ಚು, ಮೆಯ್ಚ್ಚು: ತೆಲು. ಮೆಚ್ಚು]

**ಮೆಚ್ಚುಕಾಜ** (ನಾ). ಪ್ರೀತಿಪಾತ್ರನಾದವನು : ಕಡುಚದುರರ ಮೆಚ್ಚುಕಾಜ (ಭರತ. ೭೩-೧). [ಮೆಚ್ಚು₂ + – ಕಾಜ]

**ಮೆಚ್ಚುಕೆಯ್** (ಕ್ರಿ). ಬಯಸಿದಂತೆ ಮಾಡು : ಇಷ್ಟಬಂದ ಹಾಗೆ ಮಾಡು : ಪಟುದಿವಸದಿಂದೊಳಗೆ ಕಳ್ಳನನಾರಯ್ಯಲಾಜದಾಗಳ್ ದೇವರೆನ್ನಂ ಮೆಚ್ಚುಕೆಯ್ವುದು (ವಡ್ಡಾರಾ. ೦೨೩-೨೩) ; ನೀನಿನ್ನೆನ್ನಂ ಮೆಚ್ಚುಕೆಯಿಮೆಂಬುದುಂ (ಸುಕುಮಾ. ೭-೨೪ ವ). [ಮೆಚ್ಚು₂ + ಕೆಯ್₁]

**ಮೆಚ್ಚುಗ** (ನಾ). ಇಷ್ಟ ಪಡುವವನು; ಬಯಸುವವನು : "ಸ್ತುಕ್, ಸ್ತೋಚಃ, ಸ್ತೋಚಕಃ, ಸ್ತೋಚಮಾನಃ – ಈ ೪ ಳ ಮೆಚ್ಚುಗಂ" (ಕಾಕಶ್ಕ. ೯೩) ; ಸಾಹಿತ್ಯರಚನೆಯ ಮೊದಲ ಮೆಚ್ಚುಗ ಸ್ವತಃ ಕೃತಿಕಾರನೇ ಆಗಿರುತ್ತಾನೆ (ಸಂಕೋಧ. ೦೯೬). [ಮೆಚ್ಚು₁ + – ಗ₂]

**ಮೆಚ್ಚುಗಾಣಿಕೆ** (ನಾ). ಇಷ್ಟಪಟ್ಟು ಕೊಡುವ ಬಹುಮಾನ : ತಮ್ಮ ಲೋಕೋತ್ತರವಾದ ಕಲಾವೈಭವಕ್ಕೆ ಬೆರಗಾಗಿ ಬೇಳಾಗಿ ನನ್ನ ನಾಟ್ಯಕಲೆಯ ಮೆಚ್ಚುಗಾಣಿಕೆಯಿತ್ತು ನನ್ನ ಸರ್ವಸ್ವವನ್ನೂ ತಮಗೆ ಎಡೆ ಮಾಡಲು ಬಂದಿದ್ದೇನೆ (ತುಂಗಭ. ೯೬). [ಮೆಚ್ಚು₁ + ಕಾಣಿಕೆ (< ಕಾಣ್ಕೆ)]

**ಮೆಚ್ಚುಗುಡು** 'ಮಚ್ಚುಗೊಡು' ನೋ.

**ಮೆಚ್ಚುಗೆ**, ಮಚ್ಚುಗೆ, ಮರ್ಚುಗೆ, ಮೆಚ್ಚಿಗೆ (ನಾ). ೧. ಪ್ರೀತಿ ; ವಿಶ್ವಾಸ : ಅಭಿಮಾನ : ಬಂಧುವರ್ಗದವರೆಲ್ಲಾ ತಮ್ಮನ್ನು ಮೆಚ್ಚುಗೆ

ಯಿಂದ ಕಾಣುತ್ತಾರೆ (ಕೂಂ). ೨. ತೃಪ್ತಿ; ಸಂತೋಷ : ತಮ್ಮ ಕರ್ಮವಶದಿಂ ಸಂಸಾರಿಜೀವಂಗಳೆಲ್ಲಿ ಪುಟ್ಟುಗುಮಲ್ಲಿಯಲ್ಲಿಯುಚಿತ್ತಿಯುಂ ಮೆಚ್ಚುಗೆಯುಮಕ್ಕುಂ (ತತ್ತ್ವರಾ. ೦೩೯-೨೦) ; ಸಹಜಸ್ಥಿತಿಯಲ್ಲಿ ಅವನು ಅತ್ಯಂತ ಚುರುಕಾಗಿರುತ್ತಾನೆ ಎಂದು ಮಾಸ್ಟರ್ನಿಕೊವ್ ಮೆಚ್ಚುಗೆ ಸೂಚಿಸಿದನು (ಕ್ರಿಸದ:. ೨೩೦). ೩. ಹೊಗಳಿಕೆ : ಕೊಂಡಾಟ; ಪ್ರಶಂಸೆ : ಜಗದೀಶಚಂದ್ರರು . . . ಜನರ ಮೆಚ್ಚುಗೆಗೆ ಮತ್ತು ಕೃತಜ್ಞತೆಗೆ ಪಾತ್ರರಾದರು (ಸಸ್ಯ. ೦೦೩). ಮಚ್ಚುಗೆ : ೩. 'ಮಚ್ಚುಗೆವೆಱು' ಪರಾ. ಮಚ್ಚುಗೆ : ೧. ನಿಸ್ಸೊಳಭೇದವಾದ ಕೊಂಡಾಟದನಂತಸೌಖ್ಯಮನೆ ಮಚ್ಚದ ಮಚ್ಚುಗೆಯೊಳ್ ತೊಡರ್ಚೆ . . . ಜಿನೇಶ್ವರಾ (ಶಂಗಾಪು. ೩-೦೦). ಮೆಚ್ಚಿಗೆ : ೧. ಅವರು ತಮ್ಮ ಸರಸಸಜ್ಜನಿಕೆಗಳಿಂದ ಎಲ್ಲರ ಮೆಚ್ಚಿಗೆಯನ್ನೂ ಗಳಿಸಿದ್ದಾರೆ (ಕೂಂ). 'ಮೆಚ್ಚಿಕೆ' ಪರಾ.

[ಮೆಚ್ಚು₁ + — ಗೆ./ತುಳು. ಮೆಚ್ಚಿಗೆ ; ತೆಲು. ಮಚ್ಚಿಗ]

**ಮೆಚ್ಚುಗೊಡು**, ಮಚ್ಚುಗುಡು, ಮಚ್ಚುಗೊಡು, ಮೆಚ್ಚುಗುಡು (ಕ್ರಿ). ಬಹುಮಾನವನ್ನು ಕೊಡು ; ಉಡುಗೊರೆಯನ್ನು ನೀಡು: ಬಿನ್ನಪಂಗೆಯ್ದು ಬೇಂಟೆಯಾತಂಗೆ ವ್ಯಾಗ ವ್ಯಾಯಾಮ ಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು (ಶಂಶಕಾ. ೩-೯೭ ವ) ; ಎನ್ನ ಪೆಂಡತಿಯೇನಂ ಪಡೆವಳೆಂದು ಬೆಸಗೊಂಡೊಡೆ ಗಂಡುಗೂಸಂ ಪಡೆವಳೆಂದು ಪೇೞ್ದೊಡೆ ಕೇಳ್ದಾ ಭಟ್ಟಂಗೆ ಮೆಚ್ಚುಗೊಟ್ಟು (ಶಂಕಶಂ. ೦೭೭-೨೨) ; ಮನವೊಲಿದು ಬೇಡಿದುದ ಮೆಚ್ಚುಗೊಡುವೆ (ಸೌಂದರ್ಯ. ೩-೨೩). ಮಚ್ಚುಗುಡು : 'ಮಚ್ಚುಗುಡಿಸು' ಪರಾ. ಮಚ್ಚುಗೊಡು : ಆಕೆಗಳಾಡಿದಾಟಮನಿಂದ್ರಂ ನೋಡಿ ಮಚ್ಚಿ ಮಚ್ಚುಗೊಟ್ಟು ಪಸಂಪಾರಿಸಿ (ಚಂತಿಕ್ರಿ. ೭-೩೯ ವ) ; ಒಸಗೆವಾತಂ ಪೇೞ್ದವಂಗೆ ಮಚ್ಚುಗೊಟ್ಟು (ಕಾದಂಪೂ. ೯೨೮) ; ಮಚ್ಚುಗೊಟ್ಟಪುದೆಂಬ ಮಾಳ್ಕೆಯಿಂ . . . ಕರ್ಣಪೂರಂ ಜಗುಳ್ದು ಬೀಳುತ್ತಿರೆ (ರಾಜಶೇ. ೭-೦೭ ವ). ಮೆಚ್ಚುಗುಡು: ನೆಗಟ್ಟಿಂದಾಪ್ರದ್ಯಮರೌಘಮೋಲಗಕೆ ವಂದು . . . ಮೆಚ್ಚುಗುಡಲ್ಕೊಂಡು ಮಹಾಪ್ರಸಾದಮೆನುತಿರ್ಪುರ್ವಿಶ್ವೇಶ್ವರಾಸ್ಥಾನದೊಳ್ (ಜಗಪು. ೧೦-೩೭); ವಿಷ್ಣು ಒಪ್ಪುವನು ಮೆಚ್ಚುಗುಡುವನು (ನತದಾ. 1, ೯೯೦). [ಮೆಚ್ಚು₂ + ಕೊಡು₁]

**ಮೆಚ್ಚುಗೊಳ್** (ಕ್ರಿ). ಬಹುಮಾನವನ್ನು ಪಡೆ; ಉಡುಗೊರೆಯನ್ನು ಹೊಂದು : ನಿಚ್ಚಂ ಮೆಚ್ಚುಗೊಳ್ವಿಂದ್ರನ ಕೈಯೊಳ್ (ಆದಿಪು. ೯-೦೮) ; ಬೇಗಂ ಪರಿದು ಪೋಗಿ ಪರಮೋತ್ಸವದಿಂದಂ ಬಿನ್ನವಿಪ ಜನಂ ಕಾದಂಬರಿಯುಂ ಮೆಚ್ಚುಗೊಳ್ಳದಿರ್ದಮೆ ಪಿರಿದುಂ (ಕಾದಂಬ. ೩೦೯).

[ಮೆಚ್ಚು₂ + ಕೊಳ್₁]

**ಮೆಚ್ಚುದೋಱು** (ಕ್ರಿ). ಪ್ರೀತಿಯನ್ನು ತೋರು : ಕಡೆಗಣ್ಣೊಳ್ ಮಾತಾಡುವುದೆಡೆನುಡಿಯೊಳ್ ಮೆ[ಪಾಠಾಂ: ಮ]ಚ್ಚುದೋರ್ಪುದು . . . ಇದುವೆ ವೇಶ್ಯಾಧರ್ಮಂ (ದಶಕು. ೬-೨೧). [ಮೆಚ್ಚು₂ + ತೋಱು]

**ಮೆಚ್ಚುಮದ್ದು**, ಮಚ್ಚುಮದ್ದು (ನಾ). ಪ್ರೀತಿಯಿಲ್ಲದ ವ್ಯಕ್ತಿಯಲ್ಲಿ ಪ್ರೀತಿಯು ಹುಟ್ಟುವಂತೆ ಮಾಡುವುದೆಂದು ನಂಬಲಾದ ಔಷಧಿ : ವಶೀಕರಣದ ಮದ್ದು : ಇದೊಂದು ಮೆಚ್ಚುಮದ್ದು . . . ಇದಂ ನಿನ್ನ ಗಂಡನಿಗೆ ಊಟದಲ್ಲಿಯಿಕ್ಕು (ಚುಕಸ. ೦೨೩). ಮಚ್ಚುಮದ್ದು : ಮೋಹದ ಮಚ್ಚುಮದ್ದೊಡಲಿಟ್ಟುದೆನೆ ಸತಿ ಮೆಚ್ಚಿ (ಸಾಶ್ಯಶಾ. ೩೨-೩೦); ಮಚ್ಚುಮದ್ದು ಎಂದು ಕೊಟ್ಟಿದ್ದು ಹುಚ್ಚುಮದ್ದಾಯಿತು (ಗಾದೆ).

[ ಮೆಚ್ಚು₂ + ಮದ್ದು ( < ಮರ್ದು ) ]

**ಮೆಚ್ಚುವಡು** (ಕ್ರಿ). ತೃಪ್ತಿಪಡು ; ಆನಂದಿಸು : ದುರ್ಗುಣದೊಳನುದಿನಂ ಮೆಚ್ಚುವಟ್ಟಿರ್ದನಂ ಮಾಣಿಸಲೆನ್ನಂ ಬರ್ಕುಮೋ ಸದ್ವಚನಶತದೊಳಂ (ಕಶಿ. 11, ೦೦೨, ಅರ್ಧೇಂದು ಮಾಸೀಕಶತ). [ಮೆಚ್ಚು₂ + ಪಡು₁]

**ಮೆಚ್ಚುವಡೆ**, ಮಚ್ಚುವಡೆ (ಕ್ರಿ). ೧. ಪ್ರೀತಿಯನ್ನು ಹೊಂದು ; ಮೆಚ್ಚಿಗೆ ಹೊಂದು : ಸಂಪಗೆಯಲರ್ ಸುರಹೊನ್ನೆಯು ಪೂಗಳೆಂಬಿವಂ ಮುರರಿಪುಗಿತ್ತು ಮೆಚ್ಚುವಡೆಮುತ್ಸವದಿಂ ನುಡಿದಂ ಪ್ರಿಯೋಕ್ತಿಯುಂ (ಜಗಪು. ೦೯-೯೯): ಕಿಚ್ಚುಗಣ್ಣನ ತಪವಳಿವುದು ಪೂಗೋಲೊಳೆಚ್ಚು ಮನ್ಮಥ ಪೀಡಿಸಲು ಮೆಚ್ಚುವಡೆದು ಪಾರ್ವತಿಯೊಳು ರಮಿಸಲು (ಮೋಹತ. ೩-೦೮). ೨. ಬಹುಮಾನವನ್ನು ಪಡೆ,— ಹೊಂದು : ಕರಮೊಸೆದು ಬೇಡಿಕೊಳ್ಳೆಂದರಸಂ ದಯೆಮೆರಸು ನುಡಿಯೆ ಬಲಿಯೆಂದಂ ಭೂಸುರತೇಜ ಮೆಚ್ಚುವಡೆದೆನದಿರಲಿಂ ಭಂಡಾರದೊಳ್ ಜಗತ್ಪ್ರಥಿತಯಶಾ (ನೇಮಿಪು. ೩-೦೧). ೩. ಕಾಣಿಕೆಯಾಗಿ ಪಡೆ ; ಬಹುಮಾನವಾಗಿ ಹೊಂದು : ತನ್ನ ಮನಮಂ ಮುನ್ನಮೆ ಮೆಚ್ಚುವಡೆದ ಖೇಚರಚರಂಗೆ ನಿಜಹೃದಯದಾನ ಪೌನರುಕ್ತ್ಯಮಂ ಮಾಡಲಿಚ್ಚೈಸಿ (ವರ್ಧಪು. ೪-೬೩ ವ). ಮಚ್ಚುವಡೆ : ೨. ಇಚ್ಚೆಗಾರ್ತಿ ಪಚ್ಚಿಪಿಲ್ಲರಿಂ ಮಚ್ಚುವಡೆದಚ್ಚರಿ ಮಿಗೆ ತಳದೊರ್ಚೆರೆ ಗಣ್ಣ ಪರ್ಚಿನಚ್ಚರಿಯುರಿ (ರಾಜಶೇ. ೦-೦೩೩ವ). [ಮೆಚ್ಚು₂ + ಪಡೆ₁]

**ಮೆಚ್ಚುವಣಿಗೆ**, ಮೆಚ್ಚವಣಿಗೆ (ನಾ). ಮೆಚ್ಚಿಗೆಯನ್ನು ಹೊಂದಿರುವುದು; ಪ್ರೀತಿಪಾತ್ರವಾಗುವುದು : "ಮೆಚ್ಚುವಣಿಗೆಯು ಮೆಚ್ಚನುಳ್ಳುದಕ್ಕರ್ಥ" (ಶಬ್ದಮಂ. ೩೭) ; ಮುಳಿಸಿನ ಮೋಪಿನ ಗಂಡಮಚ್ಚರದ ಮೆಚ್ಚುವಣಿಗೆಯಂಕಕಾಱರ್ . . . ಒರ್ವರೊರ್ವರೊಳ್ ಕಾದೆ (ಶಂಶಕಾ. ೦೨-೭೭ ವ). ಮೆಚ್ಚವಣಿಗೆ : "ಮೆಚ್ಚವಣಿಗೆ = ಮೆಚ್ಚನುಳ್ಳುದು" (ಶಮರ. ಶಂ. ೨) ; ಓಲಗವುರುಡಿಲ್ಲ ಮೆಚ್ಚವಣಿಗಿಲ್ಲ ಕರಂ ಮುಳಿಸಿಲ್ಲ ಕಾಯ್ದು ಕೆಮ್ಮಗೆ ಬಟಿಸಂದು ಕೊಂದಪನಕಾರಣದಿಂ ಮೋಱಯೋ ಮನೋಭವಾ (ಆದಿಪು. ೦೨-೩೩) ; ಪೆಱವುಂ ಕಚ್ಚಕಳಿಗಳ ತೊಡರ್ಪಿನ ಮೆಚ್ಚವಣಿಗೆಯಂಕಮಂ ಮಹೀಶಂ ನೋಡುತ್ತುಂ (ಕಾವ್ಯಾವ. ೯೯೯) ; ಕೆಲರ್ ನುಡಿವಳಿಗಳಂ ಪೊಗೞಿಸುತ್ತ[ಂ] ಮೆಚ್ಚವಣಿಗೆಯುಮರಂ ತೆಗೞಿಸುತ್ತ ಮಿರ್ದರ್ (ಬಂಹಂ. ೦೩-೬೦ ವ). [ ಮೆಚ್ಚು₁ + — ವಣಿಗೆ ]

**ಮೆಚ್ಚುವೆಣ್** (ನಾ). ಒಲಿದ ಹೆಣ್ಣು : ಮಚ್ಚರಮನತಿರೂಪಿನಿಂದ ರತಿಯೊಳ್ಮಾಳ್ಪ ಮೆಚ್ಚುವೆಂಗಳ ಮೋಹವೇ ಮುಕ್ತಿಯಲ್ಲವೇ ಭಾವಿಸಲ್ (ಸಮ್ಯಕ್. ೩-೭). [ ಮೆಚ್ಚು₁ + ಪೆಣ್ ]

**ಮೆಚ್ಚುವೇೞ್** (ಕ್ರಿ). ಇಷ್ಟವಾದುದನ್ನು ಹೇಳು ; ಬಯಸಿದುದನ್ನು ತಿಳಿಸು: ಮೆಚ್ಚುವೇೞಾಱನೇಯಾಶ್ಚೋತ್ಕರಂ ಬಾಚಿತ್ತಿಯೊ ಮಣಿನಿಚಯಂ ಬಾಚಿತ್ತಿಯೋ ಪೇೞಿಮೆಂದಾ ದೀನಾನಾಥರ್ಗೆ . . . ಧರ್ಮಜಂ ಸೂಱೆಗೊಟ್ಟಂ (ಶಂಶಕಾ. ೭-೯೦). [ಮೆಚ್ಚು₂ + ಪೇೞ್]

**ಮೆಚ್ಚೋಲೆ** (ನಾ): ಹೊಗಳಿಕೆಯನ್ನು ವ್ಯಕ್ತಪಡಿಸಿದ ಪತ್ರ; ಪ್ರಶಸ್ತಿ ಪತ್ರ : ಕೊಟ್ಟುಕೋ ನಿನಗೆ ನೀ ನೂರು ಮೆಚ್ಚೋಲೆ (ಕಲ್ಲೋಲ. ೩೭-೪).

[ಮೆಚ್ಚು₂ + ಓಲೆ]

**ಮೆಟಕಿ** 'ಮಡಕಿ' ನೋ.

**ಮೆಟಗುಳಿಹಂಬು** (ನಾ). ಒಂದು ಬಗೆಯ ಬಳ್ಳಿ : (ಪ್ಯಾಶಿಗ. ೨೭-೪೬೩).

[ಮೆಟಗುಳಿ₀ + ಹಂಬು₂ (< ಪರಪ್ಪು₂)]

**ಮೆಟರು**, ಮೆಟರೆ, ಮೆಟ್ಟರೆ, ಮೆಟ್ರೆ, ಮೆಡರು (ನಾ). ಕುತ್ತಿಗೆಯ ಮುಂಭಾಗ; ಗಂಟಲು : 'ಮೆಟರುಗಂಟು', 'ಮೆಟರುಗಟ್ಟು' ಪರಾ. ಮೆಟರೆ : ಮುಂಗತ್ತು. ಕೊರಲು. ಮುಂಗೊರಲು. ಮೆಟರೆ. ಗೋಣು. ಗೋನಾಳಿ (Throat. ೩೦೬೩). ಮೆಟ್ಟರೆ : ಅವನ ಜುಟ್ಟನ್ನು ಹಿಡಿದು ನೆಲದ ಮೇಲೆ ಕುಕ್ಕಿ ಹಾಕಿ, ಮೆಟ್ಟರೆ ಹಿಸುಕಿ. ಕತ್ತು, ಎದೆ. ಕಾಲು ಎಲ್ಲೆಂದರೆ ಅಲ್ಲಿ ಹೊಡೆದನು (ವಶಕಾ. ೩೦೭). ಮೆಟ್ರೆ : ಮೊನ್ನೆ ಯಾರೋ ಅವನನ್ನು ಮೆಟ್ರೆ ಹಿಸುಕಿ ಸಾಯಿಸಿಬಿಟ್ಟರು (ಕೂಂ). 'ಮೆಟ್ರೆಗಟ್ಟು' ಪರಾ. ಮೆಡರು : 'ಮೆಡರುಗಟ್ಟು' ಪರಾ. [ದೇ.॥ ತಮಿ. ಮಿಟರು, ಮಿಟಿಲ; ಮಲ. ಮಿಟಱು; ತೆಲು. ಮೆಡ = ಕುತ್ತಿಗೆ]

**ಮೆಟರುಗಂಟು** (ನಾ). ಒಂದು ಬಗೆಯ ಗಂಟಲುರೋಗ; ಗದ್ದಕಟ್ಟು : ಮಂದಾಗ್ನಿಯವರು. . . ಕುಷ್ಠರೋಗದವರು. ಮೆಟರುಗಂಟಿನ ರೋಗ

ದವರು. . . ಇವರಿಪ್ಪೊ ವಮನಯೋಗ್ಯರೆಂಧೀವುದು (ಸಕಶ್ಯ. ೨೩). 'ಮೆಟರುಗಟ್ಟು' ಪರಾ. [ಮೆಟರು + ಗಂಟು]

**ಮೆಟರುಗಟ್ಟು**, **ಮೆಟ್ರೆಕಟ್ಟು**, **ಮೆಟ್ರೆಗಟ್ಟು**, **ಮೆಡರುಗಟ್ಟು** (ನಾ). ಗಂಟಲಿನ ನಾಳಗಳು ಊದಿಕೊಳ್ಳುವ ಒಂದು ಬಗೆಯ ರೋಗ; ಗದ್ದಕಟ್ಟು : ಮಂಡೆಯ ನೋವು ಕಾಣಿಸಿ, ಮೆಟರುಗಟ್ಟು (?), ಮೈಯುರಿತವುಂಟಾಗಿ ಅಜ್ಞಾನವು, ಶರೀರದಲ್ಲಿ ಕಂಪನವು ಪುಟ್ಟಿ, ಜ್ವರವು . . . ತಾಪವು, ಕಳವಳವು ಉಂಟಾಗಿರ್ಪುದೆ ಕಂಠಕುಬ್ಜ ಸನ್ನಿಪಾತವೆಂದರಿವುದು (ಸಕಶ್ಯ. ೦೩೯). **ಮೆಟ್ರೆಕಟ್ಟು** : ನರಡೀರೋಗ, ಚಪ್ಪೆರೋಗ, ಮೆಟ್ರೆಕಟ್ಟು ಮುಂತಾದ ರೋಗಗಳು (ಗ್ರಾಮಾಶ. ೦೨೦). **ಮೆಟ್ರೆಗಟ್ಟು**: (೯). **ಮೆಡರುಗಟ್ಟು**: ಕುಷ್ಠರೋಗದಲ್ಲಿ, ಮೆಡರುಗಟ್ಟಿನಲ್ಲಿ. . . ವಮನಕ್ರಿಯೆ ಮಾಡಿಸುವುದು (ವೈದ್ಯಶಾ. I, ೩೦). 'ಮೆಟರುಗಂಟು' ಪರಾ. [ಮೆಟರು + ಕಟ್ಟು₂]

**ಮೆಟರೆ** ' ಮೆಟರು ' ನೋ.

**ಮೆಟ್ಟಕ್ಕಿ** (ನಾ). ಮದುವೆಯ ಸಮಯದಲ್ಲಿ ವಧೂವರರು ಮೆಟ್ಟಿ ನಿಲ್ಲಲು ಬಿದಿರಿನ ತಟ್ಟೆಯಲ್ಲಿರಿಸಿದ ಅಕ್ಕಿ : ಚಂದ್ರಿಕಾತಂಡುಲವೋ ಎನೆ ತೊಳಗಿ ತೋರ್ಪ ಮೆಟ್ಟಕ್ಕಿಗಳಂ (೧೦೪. ೦೦-೬೩); ತರುಣಿ ಸಹಿತ ಕುಮಾರ ಮಣಿವಿಸ್ಫುರಿತ ಮೆಟ್ಟಕ್ಕಿಯನು ಮೆಟ್ಟಿಸೆ (ಶೀಪಂಶ. ೯-೩೭); ಮೆಟ್ಟಕ್ಕಿಯ ಮೇಲೆ ನಿಲಿಸಿ ಶ್ರೀಪ್ಪರು ಮಂಗಳಾಪ್ಪಕದಿ ನಿರೀಕ್ಷಣೆಗೊಟ್ಟರು ದಂಪತಿಗಳಿಗೆ (ಸೋಹಶ. ೩-೬೯); ಕಾಂಡಪಟದ ಮುಂದೆ ರಜತಫಲಕದ ಮೇಲೆ ಹರವಿದ್ದ ಮೆಟ್ಟಕ್ಕಿಯ ಮೇಲೆ ಬಂದು ನಿಂತರು (ಶಾಂಶಲಾ. ೦೦೯).

[ ಮೆಟ್ಟು₁ + ಅಕ್ಕಿ₁ ]

**ಮೆಟ್ಟಡಿ** (ನಾ). ೧. ಎಕ್ಕಡ ; ಪಾದರಕ್ಷೆ : ಮೆಟ್ಟಡಿಯಂ ಕಳೆದು ಬಟ್ಟೆಯಂ ತೊಲಗಿ ಸಾಷ್ಟಾಂಗವೆಱಗಿ (ಪೋಕಶು. ೩೦-೧೨೬); ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ (ಬಸವಪು. ೯೬೩-೦೭೦೦); ಅಟ್ಟೆಯ ದುರ್ಗುಣ ಕೆಟ್ಟು ಮೆಟ್ಟಡಿಯುವರೆಗೆ ಮೆಟ್ಟಿಸ ಬಂದೆ (ಸರ್ವವ. ೦೦೨-೩೩೯). ೨. ಪಾವಟಿಗೆ ; ಮೆಟ್ಟಲು : ತಟತಟನೆ ಪೊಳೆದು ಬಿತ್ತರಂಬಡೆದ ಬಿಡುಗಲ್ಲ ಸುತ್ತಣ ಮೆಟ್ಟಡಿಯಂ (ರಾಮಾಶ್ವ. ೩೨-೦೯); ಆ ಬೆಳ್ಳಿಯ ಮೆಟ್ಟಡಿಗಳನ್ನೇ ಕಳಚಿಕೊಂಡು ಹೋಗಿದ್ದಾರೆ (ಚಟ್ಟಿಶ. ೦೦೬-೨೩).

[ ಮೆಟ್ಟು₂ + ಅಡಿ₁ ]

**ಮೆಟ್ಟರೆ** ' ಮೆಟರು ' ನೋ.

**ಮೆಟ್ಟಲಿ** ' ಮಿಟಲಿ ' ನೋ.

**ಮೆಟ್ಟಲಿಗೆ** (ನಾ). ಪಾವಟಿಗೆ ; ಮೆಟ್ಟಲು ; ಸೋಪಾನ : ಹೆದರಿಸುವ ಹಿರಿದಾದ ಬಂಡೆಗಲ್ಲುಗಳ ಮೆಟ್ಟಲಿಗೆಗಳು (ಕನಧ್ಯ. ೮೯). [ < ಮೆಟ್ಟಲು ]

**ಮೆಟ್ಟಲು**, **ಮೆಟ್ಲು** (ನಾ). ೧. ಪಾವಟಿಗೆ ; ಸೋಪಾನ : ಐದಾರು ಮೆಟ್ಟಲುಗಳನ್ನು ಒಟ್ಟೊಟ್ಟಿಗೆ ಹಾರಿ ಮಹಡಿಯನ್ನು ಹತ್ತಿದೆ (ರಾಶಪಾಶ. ೦೦೭); ಇಬ್ಬರೂ ಅಲ್ಲಿಯೇ ಇದ್ದ ಒಂದು ಮೆಟ್ಟಲಿನ ಮೇಲೆ ಕುಳಿತವು (ಅಂಹೂ. ೯೩). ೨. ಹಂತ ; ಮಜಲು ; ಘಟ್ಟ : ಕರ್ಮಯೋಗವು ಜ್ಞಾನಯೋಗದಿಂದ ಪಡೆಯಬಹುದಾದ ಸಾಕ್ಷಾತ್ಕಾರಕ್ಕೆ ಒಂದು ಮೆಟ್ಟಲು ಮಾತ್ರ (ಕಕ್ಕಪ್ರ. ೩೩೩); ಕರ್ಮ ನಿನ್ನನು ಕಟ್ಟಿ ಕೆಡಹಲದನೇ ಮೆಟ್ಟಿ ಮುಂದೆ ಮೆಟ್ಟಲನೇರು ! (ಶಾಂಕಪ. ೯೯-೩). **ಮೆಟ್ಲು** : ೧. ದೂರಕ್ಕೇ ಆ ಸೌಧದ ಮೆಟ್ಲುಗಳು ಸಾಲಾಗಿ ಕಾಣುತ್ತವೆ (ಜಾ೨). ' ಮೆಟ್ಟಿಲು ' ಪರಾ. [ ಮೆಟ್ಟು₁ + — ಅಲು ( < — ಅಲ್₂ ) ]

**ಮೆಟ್ನಾಡು** (ಕ್ರಿ). (ಪ್ರಾಣಿ, ಪಕ್ಷಿ ಮೊದಲಾದುವು) ಸಂಭೋಗಿಸು : ಹೆಣ್ಣುಹಂಸೆಯ ಮೆಟ್ನಾಡುವ ರಾಜಹಂಸೆಯರ ರತಿಕ್ರೀಡೆಯಂ ನೋಡೆಂದು ತೋರಿ (ಶೌಗಂಥ. ೩೩೦-೩). [ ಮೆಟ್ಟು₁ + ಆಡು₁ ]

**ಮೆಟ್ನುಗಾಲು** ' ಮೆಟ್ಟುಗಾಲು ' ನೋ.

**ಮೆಟ್ಟಿಕೆ** (ನಾ). ಮೆಟ್ಟಿಲು ; ಸೋಪಾನ : ಕಟ್ಟೆಯ ಕಟ್ಟಿದರು ಭವಸಾಗರಕೆ . . . ಮೆಟ್ಟಿಕೆಯಿಂದಲಿ ದಾಟಿ ಪೋದರು (ರಜಶ್ಯ. ೦೯೯-೦); ಹಾವುಗೆಯುಂ ಮೆಟ್ಟಿ ಮೆಟ್ಟಿಕೆಗಳನೇರಿ ಬರುವಾಗ (ಶೌಗಂಧ. ೩೯೦-೩).

[ಮೆಟ್ಟು₁ + — ಇಕೆ ]

**ಮೆಟ್ಟಿಗೆ** ' ಮೆಟ್ಟುಗೆ ' ನೋ.

**ಮೆಟ್ಟಿಲು** (ನಾ). ೧. ಪಾವಟಿಗೆ; ಸೋಪಾನ : ಬೆಟ್ಟದ ಮೆಟ್ಟಿಲುಂಗಳಂ ಮೆಟ್ಟಿ ಮುನ್ನಡಿಯಟ್ಟು ಮಾಂಗಿರೀಶನ ನೆನೆದು ಕರಯುಗವ ಮುಡಿಯ ಮೇಲ್ಮುಗಿದಿಟ್ಟ ಭರತನಂ ಶ್ರೀರಾಮನತಿದೂರದೊಳ್ ಕಂಡನು (ಶರಶ. ೯-೦೨೬). ೨. ಹಂತ ; ಘಟ್ಟ: ಅದರೂ ಅಂಕಗಳೇನು? ಅವುಗಳೊಂದು ಸಾಧನವಷ್ಟೆ! ಮೇಲೆ ಮೇಲೆ ಹೋಗಲು ಮೆಟ್ಟಿಲುಗಳು (ಕೋ೬೩೦೯ . ೭). 'ಮೆಟ್ಟಲು' ಪರಾ.

**ಮೆಟ್ಟಿಲ ಮಂಚ**= ಪಾವಟಿಗೆಗಳಿರುವ ಎತ್ತರವಾದ ಮಂಚ : ಆ ಮೆಟ್ಟಿಲಮಂಚಕ್ಕೆ ಇಲ್ಲಿಯ ಉಪಸ್ಕರ ಅಲಂಕಾರಗಳಿಗೆ(ಶುಂಶ್ರಕ. ೨೩-೦೦).

[ಮೆಟ್ಟು₁ + — ಇಲು₂ ( < — ಇಲ್₃)]

**ಮೆಟ್ಟಿಸು** (ಕ್ರಿ). ೧. ಕಾಲಿನಿಂದ ತುಳಿಯುವಂತೆ ಮಾಡು ; ತುಳಿಸು: ಪಸರಿಸಿ ಪಂದಲೆಯಂ ಮೆಟ್ಟಿಸಿ ವೈರಿಯ ಫಲ್ಲ ಪಣೆಗೆಯಿಂ ಬಾರ್ಚಿ . . . ಅವನ ಕರುಳ್ಗಳೆ ಪೊಸಮಾಸಿಗವಾಗೆ ಕೃಷ್ಣೆಪಂ ಮುಡಿಯಿಸಿದಂ (ಕಂಶಪಾ. ೦೨-೦೫೩); ಕರಿಘಟೆಯಿಂದಿಕ್ಕಿ ಮೆಟ್ಟಿಸುವನರ್ದೆಯಂ (ರಶೂರಮ್ಮ. ೬-೦೯೩); ಆ ಹುಲ್ಲ ಒಕ್ಕಿ ಮೆಟ್ಟಿಸಿ ತೂಱುವಾಗ ಹೊಟ್ಟು ಕಳೆದು ಭತ್ತ ನಿಂದು ಹುಲ್ಲು ಹೋರೆಗಟ್ಟಿತ್ತು (ಪೋ೯ಪವಾ. ೦೯೩-೩೩೩); ಅರಗಂ . . . ಗುಗ್ಗುಲಮಂ ಖರಮಂ ಪೂಸುಗೆ ಒಟಿಕಾ ಖರಮಂ ಮೆಟ್ಟಿಸುಗೆ ಕಾಸಿ ತಂದಿಟ್ಟಿಗೆಯುಂ (ಅಶ್ವಶಾ. ೦೫-೩). ೨. (ನರ್ತನದಲ್ಲಿ) ಹೆಜ್ಜೆ ಇಡುವಂತೆ ಮಾಡು; ಹೆಜ್ಜೆಯಿಡಿಸು: ಅಮರರಾಜನೊಡನೆ ಮಹೋತ್ಸವದಿಂ ತಾಳಲಯಕ್ರಮಕೆ ವಿಚಿತ್ರಂ ಮೆಟ್ಟಿಸುತ್ತುಂ (ಅಜಕ್ಕು. ೩-೩೭). ೩. (ಪಾದರಕ್ಷೆಯನ್ನು) ಕಾಲಿಗೆ ತೊಡಿಸು; ಕಾಲಿನಲ್ಲಿ ಧರಿಸುವಂತೆ ಮಾಡು : ಅಟ್ಟೆಯ ದುರ್ಗುಣ ಕೆಟ್ಟು ಮೆಟ್ಟಡಿಯುವರೆಗೆ ಮೆಟ್ಟಿಸ ಬಂದೆ ಮೆಟ್ಟಡಿಯ ತಪ್ಪಲ ಕಾಯದೆ ಮೆಟ್ಟಡಿಯ ಬಟ್ಟೆಯ ನೋಡಿಕೊಳ್ಳಿ (ಸರ್ವವ. ೦೦೨-೩೩೯); ರತ್ನಮಯದ ಹಾವುಗೆಯ ಮೆಟ್ಟಿಸಿದರಚ್ಯುತಗೆ (ಪೋಹಶ. ೯೨-೩೬).

[ಮೆಟ್ಟು₁ + — ಇಸು₃]

**ಮೆಟ್ಟು₁** (ಕ್ರಿ). ೧. ಹೆಜ್ಜೆಇಡು ; ನಡೆ : "ಮೆಟ್ಟು—ಪದವಿನ್ಯಾಸೇ, ಪಾದರಕ್ಷೇ ಚ" (ಶಮಂ೨); ದೇವಾಂಗದ ಸಕಳವಟ್ಟೆಗಳುಮಂ ಮೆಟ್ಟುವೆಡೆಗಳೊಳೆಲ್ಲ ಪಾಸಿ (ಅಂಕ್ಕು. ೯-೩೯ ಪ); ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯಾ (ಬಸಾವಾ. ೬. ೦೦೨-೨೩೭); ಅಗಿದು ಮೆಟ್ಟಿದಡವನಿ ಪಡುವಲು ನೆಗೆದುದಡರಿದು ಮುಂದೆ ಮೆಟ್ಟಲು ಚಿಗಿದುದಿಳೆ ಮೂಡಲು ಮಹಾಗಜವೃದಿ ತಾಹವದ (ಕುಮಾವ್ಯಾ. ೩-೯). ೨. ಕಾಲಿನಿಂದ ತುಳಿ; ಪಾದದಿಂದ ಒತ್ತು —ಅದುಮು : ಬಳೆಯ ಪೇಱನಾನೆ ಮೆಟ್ಟಿದಂತೆ ನುರ್ಚುನುಱುಪ್ಪಿನಮುಪುಂಕಿ (ಕಂಶಪಾ. ೮-೭೬ ಪ); ಬಲಿಕುಸುಮಂಗಳೊಳ್ ನಲಿವ ಭೃಂಗಮನಂಗನೆ ನೋಯೆ ಮೆಟ್ಟುಗುಂ . . . ಪೇಟಿನೆ ನೂಪುರಂ ತಗುಳ್ದುಲಿಯೆ ಲತಾಂಗಿ ಗರ್ಭಭರದಿಂ ಸುಟಿವಳ್ ನವರತ್ನರಂಗದೊಳ್ (ಧಶ್ವಕ್ಕು. ೯-೦೯); ಸಜ್ಜನೆ ಸೀಳ್ದಿದಗ್ಗದ ಮಂಡೆಯಮೆಟ್ಟಿ (ಸೋಹಶ. ೦೨-೦೦). ೩. ಪಾದರಕ್ಷೆಯನ್ನು ಕಾಲಿನಲ್ಲಿ ಧರಿಸಿಕೊಳ್ಳು,— ಹಾಕಿಕೊಳ್ಳು : ದುಕೂಲಾಂಬರಮನುಟ್ಟು ಪೊಸಪಾವುಗೆಯುಂ ಮೆಟ್ಟಿ (ಕಂಶಪಾ. ೦೨-೦೦೬ ಪ); ಪಳುಕಿನೊಳ್ಪಾವುಗೆಗಳಂ ಮೆಟ್ಟಿ (ಶಧ್ಯಶಾ. ೨-೩೨); ವ್ಯಾಪಾರ ನಮಗಾಯಿತು . . . ಪರಮಪಾಪಿ ಕಲಿ ಎಂಬೊ ಪಾಪಾಸು ಮೆಟ್ಟಿ ದುರಾತ್ಮರಾದವರ ಎದೆ ಮೇಲೆ ನಡೆವಂಥ (ಪುರಂದ. ೨-೦೩-೦). ೪. ಕುಂದಣಿಸು; ಕೆಚ್ಚು : ಚಿನ್ನದ ಬಳೆಗಳಿಗೆ ಕೆಂಪು ಹರಳು ಮೆಟ್ಟಿದೆ (ಜಾ೨). ೫. ಸಸಿಯನ್ನು ಹಾಕು,— ನಾಟು:

ನಿನ್ನೆ ಮೆಟ್ಟಿದ ನಾಟಕಯು ಮೊನ್ನೆ ಮೇಳ್ವದ ಕಂಡೆ (ಸರ್ವಜ್ಞ. ೬-೨೦). ೬. (ಪಕ್ಷಿ, ಪ್ರಾಣಿ ಮೊದಲಾದವು) ನೆರೆ; ಸಂಭೋಗಿಸು: 'ಮೆಟ್ಟಾಡು' ಪರಾ. ೭. (ನೆಲದ ಮೇಲೆ) ಕುಟ್ಟು: ಶಕುನಿ ಮುನ್ನೆ ತನ್ನ ಮಾಡಿದ ನಾಟ ವಾಸಗೆಗಳನರಸಾಳಂತೆ ಕಣ್ಣ ಜೀದು ಮೆಟ್ಟಿ ಮುಟ್ಟಮುಜೀದಿಕ್ಕುವಾಗಳ್ (ಕಂಕಥಾ. ೬-೭೦ ವ). ೮. (ಪಿಶಾಚಿ, ದೆವ್ವ ಮೊದಲಾದುವು) ಅಮರಿಕೊಳ್ಳು; ಹಿಡಿ: ಬಹಳ ದಿನದಿಂದ ಮೆಟ್ಟಿದ್ದ ದೆವ್ವವನ್ನು ಆ ದೇವಸ್ಥಾನದಲ್ಲಿ ಬಿಡಿಸಿಬಿಟ್ಟರು (ರೂಢಿ). ೯. ಲಿಖಿತವಾಗು; ಬರೆದಿರು: ಪಟ್ಟಿ ಮುಂಚ ತಿರುಪಿಟ್ಟರೆ ಫಣೆಯೊಳು ಮೆಟ್ಟಿದ ಭ್ರಮಣೆಯು ಬಿಟ್ಟೀತೇ (ಪುರಂದ. ೦-೦೫೬-೨). ೧೦. ನರ್ತನದ ಹೆಜ್ಜೆಯನ್ನು ಹಾಕು: ಅಂತೆ ಮೆಟ್ಟುವಳ್ ನೋಡಿದರೆಲ್ಲರಂ ಒಡಿದು ಮೆಟ್ಟಿದಳಿಟ್ಟಳಮಾಯ್ತು ದೇಸಿ (ಕಂಕಥಾ. ೬-೯೦); ಚತುರಿಂದಂ ಮೆಟ್ಟಿ ತೋರ್ಪಳೋ (ಅಕಥ. ೨-೪೩); ಅಚ್ಚರಸಿ . . . ಭೂಮಿಯನ್ನು ಮೆಟ್ಟದೆ ಮೆಟ್ಟುತಿರೆ ಜತಿಗೆ (ಶಾಕ್ಯಶಾ. ೩೨-೩೦). ೧೧. (ಆಲಂ) ಸೋಲಿಸು; ಮರುಳಾಗಿಸು: ಅಂತೆ ಮೆಟ್ಟುವಳ್ ನೋಡಿವರೆಲ್ಲರಂ ಒಡಿದು ಮೆಟ್ಟಿದಳಿಟ್ಟಳವಾಯ್ತು ದೇಸಿ (ಕಂಕಥಾ. ೬-೯೦). ೧೨. ನಾಶಮಾಡು; ಧ್ವಂಸಗೊಳಿಸು: ಪೋಟ್ದುರ ಮಿಥ್ಯಾತ್ವಪ್ರಮೂಢಸ್ಥಿರತರ ನೃಪನಾನ್ಮೆಟ್ಟಿ ಗನ್ಧೇಭಮುಯ್ದಾನ್ . . . ಚರಿತಶ್ರೀನಾಮಧೇಯಪ್ರಭು ಮುನಿಪ್ರತಗಳ್ನೋನ್ತು ಸೌಖ್ಯಸ್ಥನಾಯ್ದಾನ್ (ಎಕ. II, ೦೨-೩; 700).

ಮೆಟ್ಟಿಕೊಳ್ಳು = (ಗಾಳಿ, ಪಿಶಾಚಿ, ಗ್ರಹಚಾರ ಮೊದಲಾದುವು) ಅಮರು; ಹಿಡಿ: ಅವನಿಗೂ ಮೆಟ್ಟಿಕೊಂಡಿತು ಗ್ರಹಚಾರ (ಶಾರಮ. ೩೩); ಹಣ ಕೈಗೆ ಸೇರಿತೆಂದರೆ ಕ್ರೋಧ ಲೋಭ . . . ಮೆಟ್ಟಿಕೊಳ್ಳುತ್ತದೆ (ವಕಥಾ. ೩೪೬); ಸ್ತ್ರೀಪುರುಷರಿಗೆ ಮೆಟ್ಟಿಕೊಳ್ಳುವ ಗಾಳಿಯನ್ನು ಬಿಡಿಸುತ್ತಾನೆ (ಪೋರದೇ. ೫೬). ಮೆಟ್ಟಿಕ್ಕು = (ಆಲಂ) ನಾಶಮಾಡು; ಹತ್ತಿಕ್ಕು: ನಾನು . . . ಶತ್ರುಗಳ ತಲೆಯನ್ನು ಮೆಟ್ಟಿಕ್ಕಿದೆ (ವಕಥಾ. ೩೦೦). ಮೆಟ್ಟನಿಲು, ಮೆಟ್ಟನಿಲ್ಲು = (ಆಲಂ) ಹತ್ತಿಕ್ಕು; ನಿಯಂತ್ರಿಸು: ಕಾಲಕರ್ಮವ ಮೆಟ್ಟನಿಲಿ ಭಗವಂತನೆನಿಸುವೆ (ಕುವ್ಯಾಖ. ೪-೬); ಬುದ್ಧಿಶಕ್ತಿಯನ್ನು ಮೆಟ್ಟನಿಲ್ಲುವ ಬೇರೊಂದು ಬಗೆಯ ಮನೋವೃತ್ತಿ ಬೇಕಾಗಬಹುದು (ಯೋಗಕ. ೪೨). ಮೆಟ್ಟಿ ಬೀಳು = (ಆಲಂ) ಬೆಚ್ಚಿ ಬೀಳು: ನಾನು ಮೆಟ್ಟಿಬಿದ್ದೆ. ನನ್ನ ಮನಸ್ಸಿನ ಆಳವನ್ನು ತಿಳಿದುಕೊಂಡಳೇ ಅವಳು? (ದೀಕದ. ೨೪); ಅವನು ಮೆಟ್ಟಿ ಬಿದ್ದು ಹಣೆಹಣೆ ಗಟ್ಟಿಸಿಕೊಂಡನು (ಇಶ್ವಕ. ೩೩೨). [ದೇ. ಶ ತಮಿ. ತೆಲು. ಮೆಟ್ಟು]

**ಮೆಟ್ಟು₂** (ನಾ). ೧. ತುಳಿಯುವಿಕೆ: ತುಳಿತ: ಚಿತ್ರಮಿದು ಜಗದೊಳೆತ್ತ ಮೆಟ್ಟಿತ್ತ ಚಪ್ಪಟಿಯೆಂಬ ನಾಣ್ನುಡಿಯನಭಿನಯಿಸುವಂತಾದುದು (ಕಬಕ. ೩೬-೭೪). ೨. ಪಾದರಕ್ಷೆ; ಚಪ್ಪಲಿ: ಕೆರ: "ಕೆರ್ಬಿನೊಳ್ ಮೆಟ್ಟು" (ಶಬ್ದಮಂ. ೩೯); ಮೆಟ್ಟಿನ ಹೊಲಿಗೆ ಕಣ್ಣಿಟ್ಟು ಸಾಧುಗಳನ್ನು ದೃಷ್ಟಿಸಿ ನೋಡಲರೆಕ್ಷಣ ಬಿಡರಮ್ಮ (ಪುರಂದ. ೨-೪೩-೪); ಚುಕ್ಕಿಗಳನು ಮೆಟ್ಟು ಮಾಡಿ ಬರುತಲಿಹಳು ತಾಯಿಯು (ಅರಳು. ೪೯೪-೦೯). ೩. ಒಂದು ಹೆಜ್ಜೆಯಷ್ಟು ಅಳತೆ: ಒಂದು ಪಾದದ ಪ್ರಮಾಣ: ಅಲ್ಲಿ ಬೆಳೆ ನೆಲನೊಂದು ಮೆಟ್ಟಿನೆಡೆಯುಂ ಬಿಡಲಿಲ್ಲದನೇಕಧಾನ್ಯಸಂಕುಳಬಹುವರ್ಣಪೂರ್ಣಕಣಿಶಾವಳಿಯುಂ ನವರತ್ನರಾಶಿಯುಂ ಬೆಳೆವೊಲಿರ್ಪುದು (ಅನಂಪು. ೦-೭೬); ಧರಣಿಯೊಳು ನಿನಗೊಂದು ಮೆಟ್ಟು ಬಾರದು ಸಾರು (ತುರಂಗ. ೭೨-೦೩); ಇದು ಮೂವತ್ತೆರಡುಮೆಟ್ಟಿನಲ್ಲಿ ಅಳೆದು ಬಂದ ಕಂಭವಕ್ಕುಂ (ಕ್ಷೇತ್ರಗ. ೩೬-೦೭;) ಮೆಟ್ಟು ಮಿಸುಕದು ಕಡವಿನಲ್ಲಿ ನನ್ನನಿಲ್ಲಿಗೆ ನಸುಕಿನಲ್ಲಿ ತಂದು ಮುಟ್ಟಿಸಿದಂಬಿ ಎಲ್ಲಿ? (ಗೀಶಿಮಿ. ೫೪-೦೭). ೪. ನರ್ತನದಲ್ಲಿ ಇಡುವ ಹೆಜ್ಜೆ: ಪಾದವಿಕ್ಷೇಪ: ಲಸನ್ನೇತ್ರಂಗಳಂ ಕೂಡೆ ಬಿಂಚಿಸುತುಂ ಮೆಟ್ಟುವ ಮೆಟ್ಟಿನೊಳ್ಪು ಜನತಾನೇತ್ರಂಗಳಂ ನಾಡೆ ಚಲ್ಪಿಸೆದತ್ತು . . . ದೇವಾಂಗನಾನರ್ತನಂ (ಆದಿಪು. ೬-೦೨೩). ೫. ಪಾವಟಿಗೆ; ಮೆಟ್ಟಿಲು; ಸೋಪಾನ: ಮೋಕ್ಷನಿಶ್ರೇಣಿಗಿವು ಮೆಟ್ಟಿ ನಿಸಿರ್ಪಪ್ಪತ್ತೆಂಟು ಮೂಲಗುಣಂಗಳುಮಂ (ಧರ್ಮಾಮೃ. ೦-೧೭೬); ಒಡಹುಟ್ಟಿದವರೀ ದೇಹವನೊಯ್ದು ಸುಡುಗಾಡೊಳಿಟ್ಟು ಬರುವರ ಮಡದಿ ಮನೆಯ ಮೆಟ್ಟಿಳಿಯಳು (ನಾಗಕು. ೩೨-೫೬); ಇವ್ವಾಗ ದಾನ ಧರ್ಮಂಗಳ ಮಾಡೋದು ಕೈವಲ್ಯಕೆ ಮೆಟ್ಟು (ಪಿರಾಕ್ಯ. ೮-೨). ೬. ಸ್ಥಳ; ಜಾಗ: ಆ ಗಾಯದ ಮೆಟ್ಟಿಗೆ ನನ್ನ ಉಟ್ಟ ದುಕೂಲ ಹರಿದು ತೊಯಿಸಿ ಕಟ್ಟಿದೆನು (ಕತಕ. ೦೯೦). 'ಗಂಡುಮೆಟ್ಟು' ಪರಾ. ೭. ಜಾಡು: ಹಾದಿ; ದಾರಿ: ಅನುಭವಿಸುವವರಿಗೇ ಅದರ ಮೆಟ್ಟು ಗೊತ್ತು (ಮೇದಿಮ. ೫೪); 'ನೀನಲ್ಲದೆನಗಿಲ್ಲ' ಎನ್ನುವವರ ಮೆಟ್ಟು ಬೇರೆ (ಶಾಪಿಬಿ. ೦೩೮). ೮. ಕಾಲಿನ ಬೆರಳಿಗೆ ತೊಡುವ ಆಭರಣ; ಕಾಲುಂಗುರ: (೬). 'ಮೆಂಟಿಕೆ' ಪರಾ. ೯. "ರಾಶಿಯನ್ನು ಮಾಡುವಾಗ ಮೇದವನ್ನು ತೂರಲು ಉಪಯೋಗಿಸುವ ಎತ್ತರವಾದ 'ತ್ರಿವುಟಿಗೆ' (stand)" (ಕನ್ನಜಾ. ೬೩೨ ಅಡಿಟಿ): ಮೂರು ಕಾಲಿನ ಮೆಟ್ಟು, ಮೂರು ಲಿಂಗಗಳೇನೊ ತೂರುವನು ಜೀವಿ, ಚಿತ್ಕಳಿಯು ವಚನಗಳು ತೂರಿದಾ ರಾಶಿ ಶಿವಮಂತಕ (ಕನ್ನಜಾ. ೦೩೨). ೧೦. ವೀಣೆ ಮುಂತಾದ ತಂತೀವಾದ್ಯಗಳಲ್ಲಿ ಸ್ವರಸ್ಥಾನವನ್ನು ಗುರುತಿಸಲು ಅಳವಡಿಸಿರುವ ಮನೆ, – ಹಂತ: ಎಡಗೈಯೊಳಮರಿಸಿ ವೀಣೆಯನಾಂತು ಮೇಗಡೆ ಮೆಟ್ಟನೊಳು ಬೆರಳಾಡೆ (ಭರತ. ೦೦-೩); ಮೆಟ್ಟುಗಳ ಸರಿ ತಿದ್ದಿ ವೀಣೆಯ ಮುಟ್ಟುವಳು (ದೀಪೀವು. ೫-೬೭). ೧೧. [ನಾಟ್ಯ] ಹತ್ತುಬಗೆಯ ಅಡವುಗಳಲ್ಲಿ ಒಂದು: ಪ್ರಸಿದ್ಧ ನಾಟ್ಯಚಾರ್ಯರು ಈ ಅಡವುಗಳನ್ನು ಹತ್ತುವಿಧವಾಗಿ ವಿಂಗಡಿಸಿದ್ದಾರೆ: (೧) ತಟ್ಟು, (೨) ಮೆಟ್ಟು . . . (೧೦) ಸಪ್ಪೈ (ಅಭಿನ್ಯ. ೩೨). [< ಮೆಟ್ಟು₁. / ತಮಿ. ತೆಲು. ಮೆಟ್ಟು]

**ಮೆಟ್ಟುಂಗುಟ** (ನಾ). (ಶಬ್ದವಾಗದಂತೆ ನಡೆಯಲು ಅಥವಾ ಎತ್ತರದಿಂದ ನೋಡಲು) ಉಂಗುಷ್ಟದ ಮೇಲೆ ನಿಲ್ಲುವಿಕೆ: ಮೆಟ್ಟುಂಗುಟದ ಮೆಲ್ಲಿತ್ತಾದ ಮೃದುಳಯಾನದಿಂದ ಬಂದು, ಅರೆನೋಟದಿಂದ ರಣಧೀರನನ್ನು ಕಂಡು, ಜವನಿಕೆಯ ಹಿಂದಣ್ಗೆ ತೇಲ್ದು ಹೋಗಿ, ಹುದುಗಿ ನಿಲ್ಲುವಳು (ಮಂತ್ರಕ. ೦೦೦-೬). [ಮೆಟ್ಟು₁ + ಉಂಗುಟ]

**ಮೆಟ್ಟುಂಗುಡ್ಡೆ** (ನಾ). ಒಂದು ಸ್ಥಳದ ಹೆಸರು: ಸೊಗಿಲ್ಲವಳ್ಳವೆ ಗುಡ್ಡೆ [ಬಿಡ]ಗಣ[ದು]ಡ್ಡ ಮೆಟ್ಟುಂ[ಗು]ಡ್ಡೆ [ಮೊಳ್ಗ]ಜ್ಜಗುಡ್ಡೆ (ಸೌಇಇ. XI-i, ೯-೩೭; 802). [ಮೆಟ್ಟು₁ + ಗುಡ್ಡೆ₁ (< ಗುಡ್ಡ₂)]

**ಮೆಟ್ಟುಕತ್ತಿ** 'ಮೆಟ್ಟುಗತ್ತಿ' ನೋ.

**ಮೆಟ್ಟುಕಲ್ಲು** 'ಮೆಟ್ಟುಗಲ್ಲು' ನೋ.

**ಮೆಟ್ಟುಗಟ್ಟೆ** (ನಾ). ಮೆಟ್ಟಿಲುಗಳ ಕಟ್ಟೆ; ಸೋಪಾನಕಟ್ಟೆ: ಈ ಉಪ್ಪರಿಗೆಗಳಲ್ಲಿ ಹೋಗಲಿಕ್ಕೆ . . . ಸುತ್ತಿರುಗುವ ಮೆಟ್ಟುಗಟ್ಟೆಗಳಿವೆ (ಮುಂಬಯಿ. ೬-೦೦೬); ತಿರುಗಿ ದೇವಾಲಯದ ಕಡೆಗೆ ಹೊರಟು ಬಂದು ಮೆಟ್ಟುಗಟ್ಟೆಯ ಮೇಲೆ ನಿಂತು . . . ಪ್ರಾರ್ಥನೆಗೆ ಸುರುವು ಮಾಡಿದನು (ಮೊಬಾಶಾ. ೩೮). [ಮೆಟ್ಟು₂ + ಕಟ್ಟೆ₁]

**ಮೆಟ್ಟುಗತ್ತಿ, ಮೆಟ್ಟುಕತ್ತಿ** (ನಾ). ಮೆಟ್ಟಿಕೊಂಡು ಕುಳಿತು (ತರಕಾರಿ ಮೊದಲಾದುವನ್ನು) ಕತ್ತರಿಸುವಂತೆ ಮಣೆಗೆ ಅಳವಡಿಸಿರುವ ಕತ್ತಿ, – ಈಳಿಗೆ: ಸಾಕಿಷ್ಟು ಸುಲಿದುದು ಬಿಡು ಮೆಟ್ಟುಗತ್ತಿಯ (ಚಂದ್ರಶೇ. ೦೨೬-೪); ಅಂಗಳದಲ್ಲಿ ಮೆಟ್ಟುಗತ್ತಿಯ ಮೇಲೆ ಕುಳಿತು ಒಂದೊಂದಾಗಿ ಅಡಿಕೆಗಳನ್ನು ಚುಚ್ಚಿ ಸುಲಿಯತೊಡಗಿದರು (ಕಬ್ಬಿಣ. ೦೨೦). ಮೆಟ್ಟುಕತ್ತಿ: ಎಳಚಿತ್ತಾಯರು ಮೆಟ್ಟುಕತ್ತಿಯ ಮೇಲೆ ಕುಳಿತಿದ್ದರು (ಜಗುಳ. ೮೩); ಮೆಟ್ಟುಕತ್ತಿಯೊಂದನ್ನು ತಂದು ಅರ್ಧಹಣ್ಣಾದ ಪೇರ್ಲೆಹಣ್ಣನ್ನು ಹೆಚ್ಚಿ (ಬಾಳ್ವೆ. ೦೭೩). [ಮೆಟ್ಟು₁ + ಕತ್ತಿ]

**ಮೆಟ್ಟುಗಲ್ಲು**, ಮೆಟ್ಟುಕಲ್ಲು (ನಾ). ೧. ಮೆಟ್ಟಿಲು ; ಸೋಪಾನ : ಕುಟ್ಟಿ ಮುಚುವುತ ನಿಮ್ಮ ಜಿನನ ರೂಪೆಲ್ಲಮಂ ಮೆಟ್ಟುಗಲ್ಗಳ ಮಾಡನೇ (ಬೀಶ್ಮಪು. ೪-೬-೩) ; ಒಲಿದ ಹೃದಯವೇ ಆಗ ಮಾಡುವುದು ಅದನು ಮೆಟ್ಟುಗಲ್ಲು ! (ಪಚಂ. ೪೬-೦೬) ; ಎಂದೂ ಇಲ್ಲದೆ ಇಂದು ನೀವು ನಮ್ಮ ಮನೆಯ ಮೆಟ್ಟುಗಲ್ಲನ್ನು ಹತ್ತಿರುವುದೇ ಸಾಕ್ಷಿ (ತುಂಗಠ. ೦೦೯). ೨. "ಹೊಳೆ, ಕೆಸರು, ಮೊ.ನ್ನು ಕಾಲು ಒದ್ದೆಯಾಗದಂತೆ ದಾಟು ವುದಕ್ಕಾಗಿ ಹಾಕಿರುವ ಕಲ್ಲು" (stepping-stone. ಇಂಕ.). **ಮೆಟ್ಟುಕಲ್ಲು** : ೧. ಒಮ್ಮೆ ರಾಮರಾಯರು ಹೊಲಗಳೆಡೆಗೆ ಸಾಗಿ ಬಂದು ಮನೆಯ ಮೆಟ್ಟುಕಲ್ಲಿಗೆ ಕಾಲಿರಿಸಿದ್ದರಷ್ಟೆ (ಕುರುಕಾ. ೩೬).

[ಮೆಟ್ಟು$_1$ + ಕಲ್ಲು (<ಕಲ್$_3$)]

**ಮೆಟ್ಟುಗಾಲು**, ಮೆಟ್ಟಿಂಗಾಲು (ನಾ). ಉಂಗುಷ್ಟದ ಮೇಲೆ ನಿಂತ ಕಾಲು. **ಮೆಟ್ಟಿಂಗಾಲು** : ಮೆಟ್ಟಿಂಗಾಲ ಮೇಲೆ ನಿಂತು ನೋಡುತ್ತ (ನವಿವಾ. I, ೩೯೩) ; ಅದು ಮೆಟ್ಟಿಂಗಾಲು ಇಟ್ಟುಕೊಂಡು ಸಾಧ್ಯವಾದಷ್ಟು ಮಟ್ಟಿಗೆ ನೆಟ್ಟಗೆ ನಿಲ್ಲುತ್ತದೆ (ಪಿಶಂಠ. II, ೦೦೦).

**ಮೆಟ್ಟುಗಾಲಿನಲಿ ನಿಲ್ಲು**, **ಮೆಟ್ಟುಗಾಲಲ್ಲಿ ನಿಲ್ಲು** = (ಆಲಂ) ತುದಿಗಾಲಲ್ಲಿ ನಿಲ್ಲು ; ಆತುರಪಡು ; ತವಕಿಸು : ಇವರು ಮಾಡುವ ಭಕ್ತಿ ಮೆಟ್ಟು ಗಾಲಿನಲಿ ನಿಂದು ತುತ್ತ ನುಂಗಿದಂತೆ (ಮೋಣಪಾ. ೯೬-೦೯೬) ; ಕೆಲವರು ಮೆಟ್ಟುಗಾಲಲ್ಲಿ ನಿಂತರು (ಪುಸರು. ೦೬೪). [ಮೆಟ್ಟು$_1$+ಕಾಲು$_1$ (<ಕಾಲ್$_1$)]

**ಮೆಟ್ಟುಗೆ**, ಮೆಟ್ಟಿಗೆ (ನಾ). ೧. ಮೆಟ್ಟಿಲು ; ಸೋಪಾನ : 'ಮೆಟ್ಟುಗೆಗೆಯ್' ಪರಾ. **ಮೆಟ್ಟಿಗೆ** : ೧. ಒಂದು ಮೆಟ್ಟಿಗೆಯೊಳಲ್ಲಿ ಮಂಡಿಸಿ (ನವಮೋ. ೬-೩೬) ; ಅಟ್ಟಳೆಗಟ್ಟಿಸಿದನು ಸ್ವರ್ಗಕಡರುವ ಮೆಟ್ಟಿಗೆಯೆನೆ ಶೋಭಿವೆತ್ತು (ಗೊಮ್ಮಕ. ೭-೨೨೩). ೨. ಹಂತ ; ಘಟ್ಟ ; ಮಜಲು : ಭಾರತದ ಪಾರಾಯಣ . . . ಯೋಗ್ಯ ಮೆಟ್ಟಿಗೆಗೆ ಬಂದಿದ (ಮುಕ್ತಕೆ. ೨೬). ೩. ಬೀಡು : ನಾನು ನನ್ನ ಮೆಟ್ಟಿಗೆಯನ್ನು ಬನವನ್ನು ಬಿಟ್ಟು ದೂರದಲ್ಲಿ ಬಯಲೊಳಗೆ ಮಾಡಿದ್ದೇನೆ (ಕಾಳಿಠಾ. ೦೦೦).

[ಮೆಟ್ಟು$_1$+ – ಗೆ]

**ಮೆಟ್ಟುಗೆಗೆಯ್** (ಕ್ರಿ). ಮೆಟ್ಟಿಲನ್ನು ಮಾಡು ; ಸೋಪಾನವನ್ನು ನಿರ್ಮಿಸು : ಪೇರಟ್ಟಿಗಳನೆ ಮೆಟ್ಟುಗೆಗೆಯ್ದು . . . ದಿಟ್ಟರಡರ್ದರ್ (ಶಾಂ. ೨-೦೦೯). [ಮೆಟ್ಟುಗೆ + ಕೆಯ್$_1$]

**ಮೆಟ್ಟುಗೆಯ್** (ಕ್ರಿ). = ಮೆಟ್ಟುಗೆಗೆಯ್ : ಪಡಲ್ವಟ್ಟಟ್ಟಿಗಳು ಮೆಟ್ಟುಗೆಯ್ದು (ಶಿಶಂ. ೯೭-೩). [ಮೆಟ್ಟು$_2$ + ಕೆಯ್$_1$]

**ಮೆಟ್ಟುಹುರುಳಿ** (ನಾ). ಒಂದು ಬಗೆಯ ಔಷಧೀಸಸ್ಯ : ಹುಣ್ಣು ಕೆಂಪುಹುಟ್ಟಿದಾಗ ಮೆಟ್ಟುಹುರುಳಿಯ ಹಾಲ ತೊಡೆಯಲು ಮೂರು ದಿನದಲ್ಲಿ ವಾಣ್ಗುಂ (ಶಿವ್ಯಶಿ. ೭೭). [ಮೆಟ್ಟು$_?$ + ಹುರುಳಿ (<ಪುರುಳ್ಳಿ)]

**ಮೆಟ್ರಿ** 'ಮೆಟರು' ನೋ.

**ಮೆಟ್ರಿಕಟ್ಟು** 'ಮೆಟರುಗಟ್ಟು' ನೋ.

**ಮೆಟ್ರಿಗಟ್ಟು** 'ಮೆಟರುಗಟ್ಟು' ನೋ.

**ಮೆಟ್ಲು** 'ಮೆಟ್ಟಿಲು' ನೋ.

**ಮೆಡ** (ನಾ). ಕುತ್ತಿಗೆ : ಕತ್ತು : 'ಮೆಡಶಿರ' ಪರಾ.

**ಮೆಡಮೆಟ್ಟೆಯನ್ನು ಹತ್ತು** = (ಆಲಂ) ಸವಾರಿಮಾಡು ; ಅಧಿಕಾರವನ್ನು ಚಲಾಯಿಸು (?) : ಅವರ ದೂರುಗಳನ್ನು ಕೇಳದೆ ಅವರ ಸಂಗಡ ಮಾತನಾಡದರೆ ತಮ್ಮ ಗೌರವ ಭಂಗವಾಯಿತೆಂದು ಮೆಡಮೆಟ್ಟೆಯನ್ನು ಹತ್ತುತ್ತಾ, ಸುಮ್ಮನಿದ್ದರೆ ಅವರ ದೂರೇ ಏನೂ ಇಲ್ಲವೆನ್ನುತ್ತಾ . . . ಮಾಡುವ ಕೆಲಸವೆಲ್ಲಾ ದೊರೆಯ ಅಪ್ಪಣೆಯಂತೆ ಮಾಡಿದೆವೆನ್ನುತಾರೆ (ಪಾಪಮುಠಾ. ೬೦). [←ತೆಲು. ಮೆಡ]

**ಮೆಡರು** 'ಮೆಟರು' ನೋ.

**ಮೆಡರುಗಟ್ಟು** 'ಮೆಟರುಗಟ್ಟು' ನೋ.

**ಮೆಡಲು**, ಮೆಡ್ಲು (ನಾ). ಪ್ರಶಸ್ತಿಪದಕ : ಯಾರು ಕೊಟ್ಟರೋ ಬಾನಿಗೊಂದು ಬಂಗಾರದ ಮೆಡಲು (ಭಾವಗೀ. ೩೦೭); ಎಷ್ಟು ಬಂಗಾರದ ಮೆಡಲುಗಳು ಬಂದಿತ್ತು (ಠಾಡುಕ. ೬೩); ಅನೇಕ ಮೆಡಲುಗಳನ್ನು ಪಡೆದು ಎಂ. ಎಸ್‌ಸಿ. ಪಾಸುಮಾಡಿದ (ಚಾರಿತ. ೦). **ಮೆಡ್ಲು** : ಅವನ ಕಲೆಗೆ ಮೆಚ್ಚಿ ಮೆಡ್ಲು ಕೊಟ್ಟರು (ಜೀವಾನ. ೩೪). [←ಇಂ. Medal]

**ಮೆಡಶಿರ** (ನಾ). ತಲೆಯ ಕೆಳಭಾಗ ; ಕುತ್ತಿಗೆಯ ಹಿಂಭಾಗ ; ಹೆಕ್ಕತ್ತು : ಆವಾಗಿನಿಂದ ರಂಗಪ್ಪನಿಗೆ ಮೆಡಶಿರದ ನೋವು ಬರ್ತಾ ಇದೆ (ಮನೋಶಂ. ೦೯೩). [ಮೆಡ + ಶಿರ]

**ಮೆಡಸಿ** (ನಾ). ಒಂದು ಬಗೆಯ ಸಸ್ಯ : "ಮೆಡಸಿಯೆನಲ್ ಕುಜಿಯ ಮರನಕ್ಕು" (ಮುಂಗಠಾ. ೩೬-೦೬). [ ? ]

**ಮೆಡಚು** (ಕ್ರಿ). ಹೆಣೆ ; ಕಟ್ಟು : ದೆಸೆಯೆಲ್ಲಂ ತೀವ್ರಬಾಣಾಳಿಯೊಳ್ ಮೆಡಚಿದಂತಂಬರಂ ಬಾಣದಿಂದಂ ಮುಸುಕಟ್ಟಂತಾಗೆ (ಶಂಕಠಾ. ೦೨-೨೦); ಅತ್ತ ನಿರಂಕುಶಂ ಮೆಡಚಿದಾಳಣೆಯಂ ಮುಚಿದಂಗಜನ್ಮನುನ್ಮತ್ತ ಮತಂಗಜಂಬೊಲೆಸೆದು (ಅರ್ಜಸೀ. ೩-೩೩). 'ತಟ್ಟಿಮೆಡಚು' ಪರಾ.

[ದೇ.॥ ತಮಿ. ಮಿಟೈ, ಮುಟೈ ; ಮಲ. ಮಿಡಯು ; ತುಳು. ಮುಡೆ]

**ಮೆಡ್ಡ** 'ಮೆಳ್ಳೆ' ನೋ.

**ಮೆಡ್ಡಗಣ್ಣ** 'ಮೆಳ್ಳೆಗಣ್ಣ' ನೋ.

**ಮೆಡ್ಡಗಣ್ಣು** 'ಮೆಳ್ಳೆಗಣ್' ನೋ.

**ಮೆಡ್ಡರಿಸು** (ಕ್ರಿ). ಕಣ್ಣಿನ ಚಲನೆಯು ನಿಂತು ಬಿರುಗಣ್ಣಾಗು: ಇವು ಬೇಟೆಗಳನ್ನು ಎಷ್ಟು ಬಿಗಿಯಾಗಿ ಹಿಡಿಯುತ್ತವೆಂದರೆ ಇವುಗಳ ಮೂಗಿನ ಹೊಳ್ಳೆಗಳಿಗೆ ನೀರನ್ನು ಸುರಿದ ಹೊರತು ಹಿಡಿದ ಬೇಟೆಯನ್ನು ಬಿಡುವುದಿಲ್ಲ. ಕಣ್ಣುಗಳು ಮೆಡ್ಡರಿಸಿಕೊಳ್ಳುವವರೆಗೂ ರೋಷಾವೇಶದಿಂದ ಹಿಡಿಯುತ್ತವೆ (ಶ್ರವಾಇ. I, ೨೭). 'ಮೆಳ್ಳಿಸು' ಪರಾ. [ ? + – ಇಸು$_3$]

**ಮೆಡ್ಡೆ** 'ಮಡ್ಡಿ$_1$' ನೋ.

**ಮೆಡ್ಲು** 'ಮೆಡಲು' ನೋ.

**ಮೆಣಸಿಕೆ** 'ಮೆಳಸಿಗೆ' ನೋ.

**ಮೆಣಸಿಗ** (ನಾ). ಮೆಣಸಿನ ವ್ಯಾಪಾರವನ್ನು ಮಾಡುವವನು : ತಂಬುಲಮಂ ಕೊಳ್ವಂ ಮಾಱುವಂ ಮೋಣ್ ತಂಬುಲಿಗಂ. ಏವಂ ದವಸಿಗಂ, ಗಂಧಿಗಂ, ಮೆಣಸಿಗಂ, ಪಿಪ್ಪಲಿಗಂ (ಶಬ್ದಾನು. ೯೦೯ ಶ್ರ.ಯೋ).

[ಮೆಣಸು (<ಮೆಳಸು) + – ಇಗ]

**ಮೆಣಸಿಗೆ** 'ಮೆಳಸಿಗೆ' ನೋ.

**ಮೆಣಸಿನಕಾಯಿ** (ನಾ). ಅಡುಗೆಯಲ್ಲಿ ಕಾರಕ್ಕಾಗಿ ಬಳಸುವ ಒಂದು ಬಗೆಯ ತರಕಾರಿ : ವಹವ್ವಾರೆ ಮೆಣಸಿನ ಕಾಯಿ ಒಣರೊಟ್ಟಿಗೆ ತಂದೆನೊ ತಾಯಿ (ಪುರಂದ. ೩-೬೩ ಪಲ್ಲ.); ಮೆಣಸಿನಕಾಯಿ . . . ಇದು ಮೈಸೂರು ರಾಜ್ಯದ ಕೆಲವುಭಾಗಗಳಲ್ಲಿ ಮತ್ತು ಮುಂಬಯಿರಾಜ್ಯದ ಕೆಲವುಭಾಗಗಳಲ್ಲಿ ಮುಖ್ಯವಾಗಿ ಬೆಳೆಯುತ್ತದೆ (ಸಸ್ಯಶಾ. ೦೩೪) 'ದೊಡ್ಡಮೆಣಸಿನಕಾಯಿ', 'ದೊಣ್ಣೆಮೆಣಸಿನಕಾಯಿ' ಪರಾ.

[ಮೆಣಸು (< ಮೆಳಸು) + ಕಾಯಿ$_4$ (<ಕಾಯ್$_4$)]

**ಮೆಣಸು** 'ಮೆಳಸು' ನೋ.

**ಮೆತು** 'ಮಿದು' ನೋ.

**ಮೆತುಮನುಷ್ಯ** (ನಾ). ಮೃದುಸ್ವಭಾವದ ಮನುಷ್ಯ ; ಕೋಮಲವಾದ ಮನಸ್ಸಿನವನು : ಮೆತುಮನುಷ್ಯರನ್ನು ಕಂಡರೆ ಎಲ್ಲರೂ ಸವಾರಿ ಮಾಡುತ್ತಾರೆ (ಮುಹಾಗ. ೬೬). [ಮೆತು (< ಮಿದು) + ಮನುಷ್ಯ]

**ಮೆತ್ತಗೆ** (ಅ). ೧. ಮೃದುವಾಗಿ ; ಕೋಮಲವಾಗಿ : ನೆಲ ಮೆತ್ತಗೆ ಅಂತ ಗುದ್ದ್ಯೋ ಜನ ಇದು (ಕಪ್ಪುಟಿ. ೩೬); ಸೆಣೆದ ಕಲ್ಲು ಮೆತ್ತಗೆ ಆದೀತ ?

(ಗಾದೆ). ೨. ನಿಶ್ಶಕ್ತವಾಗುವಂತೆ ; ದುರ್ಬಲಗೊಳ್ಳುವಂತೆ : ವಿರುದ್ಧ ಪಕ್ಷದವರನ್ನು ಮೆತ್ತಗೆ ಮಾಡುವ ಮಸಲತ್ತು (ಮುಕಹ. ೨೦). ೩. ಮೆಲ್ಲಗೆ ; ನಿಧಾನವಾಗಿ: ಅವನು ಮೆತ್ತಗೆ ನಡೆದುಕೊಂಡು ಬರುತ್ತಾ ಇದ್ದಾನೆ(ರೂಢಿ).

**ಮೆತ್ತಗಾಗು** = ೧. ಮೃದುವಾಗು ; ಕಾಠಿಣ್ಯವನ್ನು ಕಳೆದುಕೊಳ್ಳು : ನೆಲ್ಲಿಕಾಯಿ ಮೆತ್ತಗಾದಾಗ . . . ಮೆಣಸಿನ ಹುಡಿಯನ್ನು ಸೇರಿಸುವುದು (ಅಡುಗೆ. ೦೦೬); ಆ ರಾಜಕುರು ಮೆತ್ತಗಾಯಿತು (ಮುಹಕ. ೦೯). ೨. ನಿಶ್ಶಕ್ತವಾಗು ; ದುರ್ಬಲವಾಗು : ಹೆಚ್ಚಿಚ್ಚು ತರಿಗೆಗಳನ್ನು ಈಗಾಗಲೆ ತೆತ್ತು ಪೂರ್ತಿ ಮೆತ್ತಗಾಗಿದ್ದಾರೆ (ಹುಡುಹು. ೬೬).

[< ಮೆತು + – ಅಗ್ಗೆ]

**ಮೆತ್ತನ** ' ಮೆತ್ತನೆಯ ' ನೋ.

**ಮೆತ್ತನೆ** (ಅ). ೧. =ಮೆತ್ತಗೆ ೧ : ಮೆತ್ತನಪ್ಪಂತು ಪಾಕಂ ಮಾಡಿಯೋದನ ಕ್ಕುತ್ತಮದ ಬೆಣ್ಣೆಯಂ ಪುಸಿಯಡಕೆಯನಿಕ್ಕಿ . . . ಬಳಿಕ ಗಂಜಿಯ ಬಸಿಯಲುದುವೆ ನವನೀತೋದನಂ (ಸೂಶಕಾ. ೩-೩). ೨. = ಮೆತ್ತಗೆ ೩: ಮೆಲ್ಲನೆ ಮೆತ್ತನೆ ನಡೆತರುತಲ್ಲಲ್ಲಿ ಕುನುಂಗಿ ಕುರ್ಗಿ (೧೦ಳ. ೭-೦೩).

**ಮೆತ್ತಮೆತ್ತನೆ** (ದ್ವಿರುಕ್ತಿ) : ಕತ್ತುರಿ ಸಾರಣೆ ಪೂವಲಿ ನೆಲನೊಳು ಮೆತ್ತಮೆತ್ತನೆ ಬರುತಿರ್ದ (ಚಕ. ೯೭-೩೬). [< ಮೆತು + –ಅನೆ$_1$]

**ಮೆತ್ತನೆಯ**, ಮೆತ್ತನ, ಮೆತ್ತನ್ನ (ಗು). ಮೃದುವಾದ ; ಕೋಮಲವಾದ : ಮೆತ್ತನೆಯ ಗಾದಿ ವಗೈರೆ ಇರಲಿಲ್ಲ (ಕಂಬಹು. ೦); ಮೆತ್ತನೆಯ ಒರಗುದಿಂಬುಗಳು ಬೇಕು (ಕಾಪಿಚಿ. ೧೦); ಮೆತ್ತನೆಯ ಹಾಸಿನೊಳು ಮಲಗಿಸಿದರೊಡನೆ (ಶಾಬೂಕ. ೦೦೩-೨೦೯). **ಮೆತ್ತನ** : ಅತ್ತಿತ್ತ ಅಲೆದಾಡಿ ಮೈಯೆಲ್ಲ ಧೂಳಾಗಿ ಮೆತ್ತನ ಮನಕೆ ಗಾಯಾಗಿ (ಸಿದ್ಧ ಕೃ. ೫-೯). **ಮೆತ್ತನ್ನ**: ಮೈಮೇಲೆಲ್ಲ ಮೆತ್ತನ್ನ ಉಣ್ಣೆ ಇರುತ್ತದೆ (ಮುಂಬಹು. ೪-೨೦೭).

[< ಮೆತು + – ಅನೆಯ$_1$]

**ಮೆತ್ತನ್ನ** ' ಮೆತ್ತನೆಯ ' ನೋ.

**ಮೆತ್ತಿಗೆ** (ನಾ). ೧. ಹಚ್ಚುವಿಕೆ ; ಬಳಿಯುವಿಕೆ ; ಲೇಪಿಸುವಿಕೆ : ಉರಿಕೊಂಡ ಕರ್ಪೂರಕ್ಕೆ ರೂಪಿಂಗೆಡೆ ಇಲ್ಲ ಬಯಲ ಬಡವಡವಂಗೆ ಕೈಗೆ ಮೆತ್ತಿಗಿಲ್ಲ (ಪೋಕೀಶಾ. ೨೦–೬೪೬). ೨. ಅಂಟಿಕೊಂಡಿರುವುದು ; ಮೆತ್ತಿಕೊಂಡಿರುವುದು : ಕರುಳಿನ ಕುಸುರಿಗಳ ತಲೆವಿಡುಳ ಮೆತ್ತಿಗೆವಸೆಯ ತೊರಳೆಯ ತೊಗಲಲಿ ರಂಜಿಸಿತು ರಣಭೂಮಿ (ಕುವ್ಯಾ.ಕ. ೦೯-೨೦). ೩. ಮೆತ್ತುವ ಸಾಧನ ; ಅಂಟುಲೇಪ : ನಯಗಾರೆ ; ಮೆತ್ತಿಗೆ ; ಅಂಟುಪುಡಿ ; ಅಂಟುಲೇಪ (Compo. ೩೦೪೩). [ಮೆತ್ತು + – ಇಗೆ]

**ಮೆತ್ತಿಸು** (ಕ್ರಿ). ಮಣ್ಣು, ಗಾರೆ ಮೊದಲಾದುವನ್ನು ಲೇಪಿಸು : ಈ ವಾರಾಹನಿಗೆ ಆ ಕಟಿಗೆ ಮೆತ್ತಿಸಿ ಧರ್ಮ್ಮದ ಉದಕವನೂ ಇರಿಸಿಸಿ . . . ಆ ಧರ್ಮ್ಮವ ಆಚಂದ್ರಾರ್ಕ್ಕವಾಗಿ ನಡಸುವರು (ಶಾಇಇ. IX-ii, ೪೭೬-೩೦; 1500). [ಮೆತ್ತು + – ಇಸು$_1$]

**ಮೆತ್ತು** (ಕ್ರಿ). ೧. (ದಟ್ಟವಾಗಿ) ಬಳಿ ; ಲೇಪಿಸು ; ತೊಡೆ ; ಹಚ್ಚು : ಮೃದುವತ್ತುಷ್ಣಮೆನಿಪ್ಪ ಮಂಡಗೆಯಂ . . . ನಾಳಿಕೇರದ ತೋಯಂ ಸಿತಮಂಬಿವಂ ಕಲಸಿ ಮಣ್ಣೊಳ್ ಭಾಂಡಮಂ ಮೆತ್ತಿ ಸುತ್ತಿದ ಕಿರ್ಚಿಂ ಸುಡೆ (ಲೋಕೋಕ. ೬-೭); ಬಿತ್ತದ ಹೊಲ ಹೊಲ್ಲ ಮೆತ್ತದ ಮನೆ ಹೊಲ್ಲ (ಸರ್ವಜ್ಞ. ೦೦೬೦). ೨. ತುರುಕು ; ಗಿಡಿ ; ಒತ್ತು : ಅದಿರ್ದಾನಕರವದಿಂದೊಡೆದ ದಿಕ್ಕಾಭಿತ್ತಿಗಳನಮರೆ ಮೆತ್ತಲ್ಕುಯ್ವಂದದಿನನು ಕೂಲಾನಿಳಮುಯ್ದುದು ಮದಜಳದೊಡನೆ ಬೆರಸಿ ತದ್ವಳರಜಮಂ (ಪರ್ವಕೃ. ೬-೦೬); ಆ ವಾಟಿಯೊಳಗೆಯುಪ್ಪಿನ ಹುಡಿಯ ತಡಹಿಕೊಂಡು ಗೊಂದಣಾದ ಸಂಭಾರಮಂ ಮೆತ್ತಿ (ಸೂಶಕಾ. ೪-೬೪); ಇಲೀ ಒಳಗೆ ಬಿಟ್ಟು ಬಿಲಕ್ಕೆ ಮಣ್ಣು ಮೆತ್ತಿದ (ಗಾದೆ). ೩. ಅಂಟಿಕೊಳ್ಳು ; ಹತ್ತಿಕೊಳ್ಳು ; ಕೂಡು : ನೆತ್ತರ ಧಾರೆಯಿಂ ಮೆತ್ತಿದ ಕಣ್ಗಳನೊತ್ತಂಬದಿಂ ತೆಗೆದು (ಕಂಶಭಾ. ೦೩–೦೦೪ ವ); ಪಿರಿದಪ್ಪ ಪುತ್ರಿಸೊಳೊತ್ತಿ ಪೋರ್ದ ಮೆತ್ತಿದ ಕರ್ದಮಂ ನಿಟಿಲತಟದೊಳ್ ಪತ್ತಿರ್ದ ಧೂಳಿ ಮೆಯ್ಯೊಳೆ ಮೆಚಿಯೆ . . . ಕಾಳಿರಕ್ಕಸರಂತಿರ್ಪ ಕಾಳ್ಕೋಣಂಗಳಿಂ (೧೦ಳ. ೦-೦೨೬ ವ). ೪. ರಚಿಸು : ನಿರ್ಮಿಸು : ಇನ್ನವಂ ಬಿಲ್ಲೋಜನಾ ಮಣ್ಣ ಗೊಂಬೆಯಂ ಮೆತ್ತದಿರನದರ ಮುನ್ನಿಂದು ಬಿಲುವಿದ್ಯೆಯನ್ನಭ್ಯಾಸ ಮಾಡದಿರನಿಳೆಯೊಳಗೆ ಪಿರಿಯ ಬಿಲ್ಗಾರ ತಾನಾಗದಿರನೀ ಬಾಲ ! (ಪಶ್ವರ. ೦೫–೦೨೦). ೫. (ಆಯುಧ, ಬಾಣ ಮೊದಲಾದುವುಗಳಿಂದ) ಚುಚ್ಚು; ನಾಟು : ದುರಿಯೋಧನನ ಮೆಯ್ಯಲಿ ಮೆತ್ತಿದನಾ ಮುಮ್ಮೊನೆಯ ಬೋಳೆಗಳ (ಕುವ್ಯಾ.ದ್ರೋ. ೦೯–೩೦) ; ಪಲವಾಯುಧಂಗಳಿಂ ಮೆತ್ತುವರ್ ಕುತ್ತುವರ್ ಜ್ವಲಿತ ಕೋಪಾಗ್ನಿಯಿಂಧುಬುಬುವರ್ ತಜುಬುವರ್ ಗುಹನನಾ ಖಳನನುಜರು (ತಂಪ್ರ. ೩೯–೨೪) ; ಕಣೆಗಳಂ ಕಣೆಗಳಿಂ ಕತ್ತರಿಸಿ ಮೆತ್ತುವರೊಡಲೊಳಂಬಂ (ಸ್ಕಂಬಾ. ೦೨–೨೭). ೬. ಕವಿ ; ಆವರಿಸು; ತುಂಬು : ಪಲವುಂ ವ್ರತತಿಗಳಪ್ಪಿದವೊಲಿಳಾಪತಿ ಮೆಯ್ಯಂ ಪುತ್ತು ಪತ್ತಿ ಮೆತ್ತಿದುವೆನಿತುಂ (ಶಾಂತಿಪು. ೯–೨೯) ; ಜ್ವರಮಾದರಂತೆ ದಾಹದಿಂ ಮೆತ್ತಿ ಕಾಯ್ದು ಕಬ್ಬುನದಂತೆ ಮೆಯುರ್ ಕಾಯ್ದು (ರಹರ್ಷಾಮ್ನ. ೦೩-೦೦೬). [ದೇ.॥ ತಮಿ. ತುಳು. ತೆಲು. ಮೆತ್ತು; ಕೋತ. ಕೊಲಾ. ಪರ್ಜಿ. ನಾಯ್ಕಿ. ಮೆತ್]

**ಮೆತ್ತೆ** (ನಾ). ೧. ಮೃದುವಾದ ಹಾಸು ; ಸುಪ್ಪತ್ತಿಗೆ : ಮಜ್ಜನ ಭೋಜನ. . . ತಾಂಬೂಲ ರತ್ನಾಭರಣ ಮೆತ್ತೆ ಶಯನ ಸ್ತ್ರೀಸಂಸರ್ಗ ಒಡೆಯಂಗೆ ಆಯಿತ್ತೆಂಬುದ ಕೇಳಿ . . . ತನ್ನ ಸ್ವಸ್ತಿಗೆ ಕೊಟ್ಟಷ್ಟನಾಗಬೇಕು (ಸಕವ. I, ೪೩೬–೪೩) ; ಅಂತಃಪುರದಲ್ಲಿ ಮೃದುವಾದ ರೇಷ್ಮೆಯ ಮೆತ್ತೆಗಳ ಮೇಲೆಯೂ ಎಷ್ಟೋ ರಾತ್ರಿಗಳನ್ನು ಅವನು ಕಳೆದಿದ್ದನು (ಸಗಹೊ. ೦). ೨. ಮೃದುವಾದ ದಿಂಬು : ಖುರ್ಚಿಗೆ ಮೆತ್ತೆಗಳು ಬಂದಿವೆ (ಕಹಾರ. ೨೪); ಆ ಆಸನಗಳ ಮೇಲೆ ಕಿಂಕಾಪಿನ ಮೆತ್ತೆಗಳು ಇದ್ದವು (ಶ್ರೀರಾಯ. ೦೯೬).

[ದೇ.॥ ತಮಿ. ಮೆತ್ತೈ; ಮಲ. ತೆಲು. ಮೆತ್ತ; ಕೊಡ. ಮೆತ್ತೆ]

**ಮೆತ್ತೈಸು** (ಕ್ರಿ). ಮೆತ್ತಗಾಗುವಂತೆ ಮಾಡು ; ಮಿದುವಾಗಿಸು : ಖರ್ಜೂರ ದ್ರಾಕ್ಷಿ ಸಕ್ಕರೆ ಬೆಲ್ಲ ಮೆತ್ತೈಸಿದ ಕಾಯ ಭಾಗ ಒತ್ತದೆ ಕಳತ ಪಣ್ಣಸರಂಗಳೆತ್ತಬದಲಿ ಮಾಜುತಿಹವು (ಪೋಹಕ. ೩-೨೦).

[< ಮೆತು + – ಇಸು$_1$]

**ಮೆದ** (ನಾ). ಸುಗ್ಗಿಯ ಕಣದಲ್ಲಿ ಒಕ್ಕಣೆಯಾದಾಗ ಉಬ್ಬಲುಸಹಿತವಾಗಿರುವ ಕಾಳು : ತೂರುವ ಮೆದಕ್ಕೆ 'ಬಿಳಿಬಂಟ'ನನ್ನೂ ರಾಶಿಗೆ 'ಕರಿಬಂಟ' ಅಥವಾ 'ಬಿಳಿಬಂಟನನ್ನೂ' ಕಟ್ಟುವ ಸಂಪ್ರದಾಯವು ಸುಗ್ಗಿಯ ಕಣದಲ್ಲಿ ಉಂಟು (ಕನ್ನಜಾ. ೦೩೩). [ ? ]

**ಮೆದಕಟನಿ** (ನಾ). ಬತ್ತವನ್ನು ಬೆಳೆಯುವ ಮೃದುವಾದ ಭೂಮಿ; ಗದ್ದೆ (?) : ಆಯ್ದೂವುಪ್ಪು ಮೆದಕಟನಿಯಾ ಎಟ್ವೊವುಪ್ಪು ಬಾಳೆ ತೊಟ್ಟ ಪಟ್ಟು ಬ್ರಹ್ಮದೇಯಂ ಕೊಟ್ಟೊದು (ಎಕ. X, ಕೋಲಾರ. ೩೩೦-೪; ಸು. 800?). [P ಇದು 'ಮೆದುಕಟನಿ' ಎಂಬುದರ ಅಪಲಿಖಿತವಿರಬಹುದು]

**ಮೆದಗೊಂಡ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಮೆದಗೊಣ್ಡವರಾ ಮಗನ್ (ಎಕ. VII, ಶಿಕಾರಿ. ೪೫–೨೪; 890).

[ ? + ಗೊಂಡ$_1$ (< ಗಾವುಂಡ)]

**ಮೆದಡು** ' ಮಿದುಳ್ ' ನೋ.

**ಮೆದಲು** (ಕ್ರಿ). ಅಲುಗು; ಕದಲು; ಚಲಿಸು : ಕುಮಾರನು ಹರಹರಯೆನುತಲಿ ಮೆದಲದೆ ಬಂಡೆಯ ಮೇಲೊರಗಿದನು (ಶಾರಂಗ. ೨೪) ; ಅವನನ್ನು ಹೊತ್ತುಕೊಂಡು ಕಟ್ಟ ಕದಲದೆ ಮೆದಲದೆ . . . ಇದ್ದನು (ಕಥಾಮಂ.IV, ೨೨); ಮೂರನೆಯ ಸಲ ಔಷಧಿಯನ್ನು ಕೊಟ್ಟ ಮೇಲೆ ಲಕ್ಷ್ಮೀದೇವಿಯ ಕೈಕಾಲು ಸ್ವಲ್ಪ ಮೆದಲಿದವು ( ಶಾಂಕಲಾ. ೩೯೩ ). 'ಕದಲು$_1$' ಪರಾ. [ದೇ.॥ ತುಳು. ಮದುಕು ; ತೆಲು. ಮೆದಲು, ಮೆದುಲು]

**ಮೆದು** ' ಮಿದು ' ನೋ.

**ಮೆದುಗ** ' ಮಿದುಗ ' ನೋ.

**ಮೆದುಗಿ** (ನಾ). ಮೃದುಸ್ವಭಾವದವಳು ; ನಿಧಾನಸ್ಥೆ : ನೀನು ಶುದ್ಧ ಮೆದುಗಿ (ಕಜಾಕೂ. ೨೭) : ನೀನು ಶುದ್ಧ ಮೆದುಗಿ. ಹೀಗೆಯೇ ಇದ್ದರೆ ಆ ಎಲ್ಲರೂ ನಿನ್ನನ್ನೆ ಆಳಿಸಿಬಿಡುತ್ತಾರೆ (ಕಂಕಥ. ೧೩೭).
[ಮೆದುಗ (< ಮಿದುಗ) + — ಇ$_2$]

**ಮೆದುಗು** (ಕ್ರಿ). ಮೆತ್ತಗಾಗು; ನುರಿ; ನುಣುಪಾಗು : ಸೀಕಲುರೊಟ್ಟಿ ಮೆದುಗದ ಚಟ್ನಿ ತಿಂದು ಮುದುಕಿಗೆ ಬೇಸರವಾಯಿತು (ದೇಜಾಂಕ. ೬೦).
[ ← ತೆಲು. ಮೆದುಗು]

**ಮೆದುಳು** ' ಮಿದುಳ್ ' ನೋ.

**ಮೆದೆ**$_1$ (ನಾ). ೧. ಹುಲ್ಲಿನ ರಾಶಿ,–ಒಟ್ಟಿಲು ; ಬಣವೆ : ಮೆದೆಯಂ ಸುಟ್ಟರಳಂ ಕುಱುಕುವ . . . ಪೊನ್ನಂ ಬಿಟ್ಟು ಮಸಿಯುಂ ಕಟ್ಟುವೆಗ್ಗನಂ ಪೋಲ್ವೆನೀ ದರ್ಶನಮಂ ವ್ರತಮುಮಂ ಬಿಟ್ಟೆನಪ್ಪೊಡೆ (ಧರ್ಮಾಮೃ. ೩-೨೦) ; ಊರು ಮೆದೆಗಳೊಳು ಕಿಚ್ಚಿಕ್ಕುವವರು (ಜೀಕೃತಿ. ೯-೦೭-೨೭) ; ಡಿಳ್ಳಿಯ ಖಾನರೆಂದೆಂಬ ಮೆದೆಗೆ ಬಲುಗೊಳ್ಳಿಯೆಂದೆಂಬ . . . ಕೊಳ್ಳಿಯ ನಾಗ ನೆಯ್ದಿದನು (ಕುಮಾರಾಂ. ೦೦-೩೩). ೨. ರಾಶಿ; ಒಡ್ಡು; ಗುಂಪು : ಮಿದುಳ ಕೋಟಿಗ್ಗೆಸಱೊಳ್ಪೊಕ್ಕು ಕರುಳ ಮೆದೆಯಂ ಪಿಕ್ಕಿ (ಗದಾಯು. ೬-೨೮ ವ) : ಹಾಱುತಟ್ಟಿನ ಹೆಣನ ಮೆದೆ ಹೇರಾಳ ಶಂಜಿಸಿತು (ಕುಮಾರವ್ಯಾ. ೦೦-೬) ; ಸ್ವಾಮಿ ಸೇವಗೆಯ ಮೆದೆ ಎರೆಯಪ್ಪಿದಡಕಿಲ್ (ಸಮ್ಯಕ್ತ್ವ. ೭-೨೫). ೩. ಹೆಡ್ಡತನ; ಮಂಕುತನ (?) : "ತೃಣರಾಶಿ ಹೆಡ್ಡತ್ವಗಳೊಳೆಸೆಗು ಮೆದೆ" (ಕಶ್ರಾಸು. ೦೦೦).

**ಮೆದೆಮೆದೆ** (ದ್ವಿರುಕ್ತಿ) : ಕದಳಿಯ ಫಲ ನಾಳಿಕೇರ ಖರ್ಜೂರಗಳ್ಮುದ್ರಿದಿಕ್ಷುದಂಡಗಳ ಮೆದೆಮೆದೆಯಾಗಿ ಸಾಲ್ಗೊಳಿಸಿ (ಕಂಕವ. ೨೨-೨೭).
**ಮೆದೆಯೊಟ್ಟು** = ಹುಲ್ಲನ್ನು ರಾಶಿಮಾಡು; ಬಣವೆ ಮಾಡು : ಮೆದೆಯೊಟ್ಟುವ ಕೆಲಸ ಮುಗಿಯಿತು (ಜನಪ). **ಮೆದೆಹಾಕು** = ಮೆದೆಯೊಟ್ಟು : ಮುನಿಯನು ಕುಯ್ದು ಮೆದೆಹಾಕಿದನು (ಮುಂಜಾ. ೩೦).

**ಮೆದೆ**$_2$, **ಮೆದ್ದೆ** (ನಾ). ೧. ಒಂದು ಬಗೆಯ ಸಸ್ಯ : "ಶಲ್ಯವೃಕ್ಷಃ – ಉತ್ತರಣೆ. ಮೆದೆ. ಶಲ್ಯಮೃಗ" (೬ತಧಿ. ೦೬೦). ೨. (?) : ವನ ಗಿರೀ ನದಿ ಮೆದೆ ಹೊದರು ಗಹ್ವರ ಹುತ್ತ ವನರಾಶಿ ದ್ವೀಪ ಪಾತಾಳ . . . ಜನನಿಜಠರದೋಳಿರಲು ಅಣುಮಾತ್ರ ತಪ್ಪುವುದೆ ಬರಹ ಪ್ರಾಣಿ (ಹಜಾಕ್ಕ. ೧೯-೨೨). **ಮೆದ್ದೆ** : ೧. ' ಮೆದ್ದೆಸೊಪ್ಪು ' ಪರಾ.
[ ದೇ. ಆ ತಮಿ. ಮೆತ್ತ್ಯ]

**ಮೆದೆಗಟ್ಟು** (ಕ್ರಿ). ರಾಶಿಹಾಕು : ಇಂಪುವಾಳೆಯ ಹಣ್ಣಿನಾ ರಾಯ ಲಾಲಿತಪ್ರತಿಮೆಯ ಭುಜಮುಟ್ಟ ಮೆದೆಗಟ್ಟಿ ಧಾಳಿಪಂತಭಿಷೇಕಗೈದ (ಕಕಕ. ೦೩–೬೯).
[ಮೆದೆ$_1$ + ಕಟ್ಟು$_1$]

**ಮೆದೆಗೆಡಹು** (ಕ್ರಿ). ರಾಶಿಯಾಗಿ ಬೀಳಿಸು ; ಹಿಂಡಾಗಿ ಕೆಡವು : ಕರಿಗಳ ಮೊಗ್ಗರವ ಮೆದೆಗೆಡಹಿದನು (ಕುಮಾರವ್ಯಾ. ೦೯. ೬–೯೭) ; ರಾವುತರ ರಣದೊಳು ಮೆದೆಗೆಡಹಿದನು ಬಾಹುದಂಡ ಪದಾಭಿಘಾತದಲಿ (ಕೂಕರಾ. ೬–೩೦–೯೯); ಮೆದೆಗೆಡಹುವ ನಿನ್ನ ಬಲವ (ಸೋತತ. ೯೦–೩೯).
[ ಮೆದೆ$_1$ + ಕೆಡಹು (< ಕೆಡವು) ]

**ಮೆದೆಗೆಡೆ** (ಕ್ರಿ). ರಾಶಿಯಾಗಿ ಬೀಳು ; ಒಟ್ಟಾಗಿ ಬೀಳು : ಮದವುಡುಗಿ ಮೆದೆಗೆಡೆದು ಮುಂದುಗೆಟ್ಟು (ಗಂಕ. ೬–೩ ವ); ಎರಡುದಳ ಗಂಟಿಕ್ಕಿದುದು . . . ಹೊಯ್ದುರುರುಳ್ವ ಶಿರದ ಬೀಳುವ ಭಟರ ಮೆದೆಗೆಡೆವಾನೆಕುದುರೆಗಳ (ಕುಮಾರವ್ಯಾ. ೯–೨೯); ವಿಲಯಸಮಯದ ವೀತಿಹೋತ್ರನ ಕಿಡಿಯ ರಾಶಿಯ ರೀತಿಯಲಿ ಮೆದೆಗೆಡೆದವು (ಅಕಂಠ. ೬–೨೦–೦೨). [ ಮೆದೆ$_1$ + ಕೆಡೆ$_1$ ]

**ಮೆದ್ದು** ' ಮೆಲ್$_1$ ' ಪರಾ.

**ಮೆದ್ದೆ** ' ಮೆದೆ$_2$ ' ನೋ.

**ಮೆದ್ದೆಸೊಪ್ಪು** (ನಾ). ಒಂದು ಬಗೆಯ ಸಸ್ಯ : (ವೈಕಿಶಿ. ೦೦–೦೭೨).
[ ಮೆದ್ದೆ (< ಮೆದೆ$_2$) + ಸೊಪ್ಪು$_2$ ]

**ಮೆಪ್ಪಿಕ್ಕು** (ಕ್ರಿ). ಜಾನುವಾರುಗಳಿಗೆ ಮೇವನ್ನು ಹಾಕು : ತುಂಗಭದ್ರೆಯಾ ತಡಿಯೊಳ್ ಕಾಣಬೀಡುಗಳಲ್ಲಿದ್ದ ರಾಮೇಶ್ವರ ಎಪ್ಪ ತೀರ್ತ್ಥದಾ ಮೊದಲೊಳ್ ಮೆಪ್ಪಿಕ್ಕಿ ಪೊರದ ಪನ್ನಿಗಳನಿಱಿಯಲ್ ಬನ್ದಲ್ಲಿ(ಲ್ಲಿ) (ಎಕ. XI. ೦೨೬–೯; 803); (ಎಇ. XXXIII. ೩೩೦–೯; 803 ನೋ).
[ ☞ ಇದು 'ಮೇಪಿಕ್ಕು' ಎಂಬುದರ ಅಪಲಿಖಿತವಿರಬಹುದು ]

**ಮೆಮೊ** (ನಾ). "(ಜ್ಞಾಪಕಕ್ಕೆ ತರಲು ಸಹಾಯಕವಾದ) ನೆನಪಿನ ಟಿಪ್ಪಣಿ ; ಜ್ಞಾಪಕಪತ್ರ" (Memo–ಇಂಕೊ) : ಒಂದು ಸಂಕ್ಷೇಪವಾದ ಮೆಮೊ ಬರೆದು ರವಾನಿಸಬೇಕು (ಗ್ರಾಮಾಕ. ೦೫೬); ಯಾಕೆ, ಮೆಮೋ ನೋಡಲಿಲ್ಲವೇ ನೀವು ? (ಬಳಕ. ೦೬). [← ಇಂ. Memo]

**ಮೆಮೊರಾಂಡಂ** (ನಾ). = ಮೆಮೊ : ಮೆಮೊರಾಂಡಂನ ಮೂಲಕ ಸ್ಟೇಷನ್‌ಹೌಸ ಆಫೀಸರವರಿಗೆ ತಿಳಿಸತಕ್ಕದ್ದು (ಗ್ರಾಮಾಕ. ೯೭).
[ ← ಇಂ. Memorandum ]

**ಮೆಯ್**$_1$ ' ಮೇ$_1$ ' ನೋ.

**ಮೆಯ್**$_2$, **ಮೆಯಿ**, **ಮೈ**$_1$ (ನಾ). ೧. ದೇಹ ; ಶರೀರ : ಮೆಯ್ಯೆಲ್ಲಂ ದಿಟ್ಟಿಗಳಾದೊಡಿಂದ್ರನೆನಿಸಲ್ಕಾರ್ತಂ ಮಹೇಂದ್ರಾಂತಕಂ (ಕಾವ್ಯಾ. ೩೩೦ ಕೂಡ್ರಿಕ); ಓಡುಗೆ ನಿಮ್ಮ ಮೆಯ್ಯ ಪಸಿವು (ಪಂಪಭಾ. ೩–೮೩); ಪುಟ್ಟಿತು ಗದ್ಗದ ಮೆಯರ್ಳ್ಚುಮ್ಮಿ ರ್ಝುಮ್ಮೆಂದು ತಟ್ಟಿತು ಮನಮೂರ್ಛೆ ರತಿಗೆ (ಸೋಕತ. ೦೦–೯೨). ೨. ಪಕ್ಕ ; ಪಾರ್ಶ್ವ : ಬಡಗಣ ಮೆಯು ಮದಳ ಗಟ್ಟದ ತೆಂಕಣ ಮೆಯುಲೆರೆ ಮ ೨ . . . ಸರ್ವಬಾಧಾಪರಿಹಾರವಾಗಿ ಮಾ(ಂ)ನ್ಯಮಂ ಬಿಟ್ಟರು (ಕಾಇ. IX–i. ೩೨೦–೦೬; 1196). ೩. ಹುಟ್ಟು; ಜನ್ಮ : ' ಮಱುಮೆಯ್ ' ಪರಾ. ೪. ಧೈರ್ಯ ; ಸ್ಥೈರ್ಯ : 'ಮೆಯ್ಗೊಡು' ಪರಾ. ೫. ಶೌರ್ಯ; ಪರಾಕ್ರಮ : 'ಮೆಯ್ದೋಱಿಸು' ಪರಾ. **ಮೆಯಿ** : ೧. 'ಮೆಯಿಜೀವಿತ', 'ಮೆಯಿದೆಱೆ' ಪರಾ. **ಮೈ**$_1$ : ೧. ಬೆಡಂಗಿಲ್ಲದ ಮೈ ಕೆರಕಿಂ ತುಱಿಯಿಂ ತೀವಿದ ಕರಚರಣಂ (ಧರ್ಮಾಮೃ. ೭– ೨೨೯); ಬೆಳುದಿಂಗಳಲಿ ಮೈ ಬೆವರುವುದೆ (ಕುಮಾರವ್ಯಾ. ೨–೬೨); ಕಯ್ಯಂ ಪಿಡಿದೊಡೆ ಮೈ ಹಾನಿ ಬಹುದು (ಕೃಷಿಶಾ. ೦೦–೩). ೨. ಹೋದ ಮೈಯಲಿ ಹೋಗಲೆನುತ . . . ಅನಿಲಶರದಿಂದೂದಿದನು ಜಲನಿಧಿಯ ತೆಂಕಣತೀರಕಾ ಖಳನ (ಕೂಕರಾ. ೦–೦೦–೨೦). ೩. ' ಮಱುಮೈ ' ಪರಾ. ೫. 'ಮೈದೆಗೆ' ಪರಾ. ೬. ರೀತಿ; ಬಗೆ : ಜನಜೀವನದ ಅರುಮೈಗಳನ್ನು ಗುರುತಿಸಲು ಯತ್ನಿಸಿದೆ (ಕೃಜಾಕ. ಜಾನಪದ ಕಾತು). ೭. [ನಾಟ್ಯ] ಹತ್ತು ಬಗೆಯ ಅಡವುಗಳಲ್ಲಿ ಒಂದು : ಪ್ರಸಿದ್ಧ ನಾಟ್ಯಾಚಾರ್ಯರು ಈ ಅಡವುಗಳನ್ನು ಹತ್ತುವಿಧವಾಗಿ ವಿಂಗಡಿಸಿದ್ದಾರೆ (೧) ತಟ್ಟು . . . (೬) ಮೈ . . . (೧೦) ನತ್ತ್ಯ (ಅಶಾಕ್ಕ. ೩೨).

**ಮೆಯ್ಮೆಯ್ಗೆ** = ಒಬ್ಬೊಬ್ಬರಿಗೂ; ಪ್ರತಿಯೊಬ್ಬರಿಗೂ: ಎಮ್ಮ ಗಂಡವಾತುಮಳುಂಬಂ ಭೃತಮಕ್ಕುಮೆಂದು ಮೆಯ್ಮೆಯ್ಗೆ ಬೆಸಸೆಂಬುದುಂ (ಪಂಪಭಾ. ೬–೨೬ ವ). **ಮೆಯ್ಯನಿಕ್ಕು** = ದಂಡಪ್ರಣಾಮಮಾಡು ; ನಮಸ್ಕರಿಸು : ಮಕುಟಬದ್ಧಾಧೀಶರಾಗಳ್ ವಸುಂಧರೆಯಂ ಪರ್ವಿರೆ ಮೆಯ್ಯ[ ಪಾಠಾಂ. ಮೈಯ ]ನಿಕ್ಕೆಯುಂಮುದಾತ್ಯೋತ್ಸಾಹದಿಂ ರಾಜಮಂದಿರಮಂ ಪೊಕ್ಕನುಮಾರಸಾರವಿಭವಂ ಸಂಸಾರಸಾರೋದಯಂ (ಅಜಿತ. ೦೨–೦೨೯) ; ಯುವತೀಮಣಿ ಪೆರ್ಚಿ ಮೆಯ್ಯನಿಕ್ಕಿದಲ್ (ಉದ್ಭಟ. ೦೨–೩); ಭಕ್ತಿಯಿಂ . . . ಮೆಯ್ಯನಿಕ್ಕಿ ಬಳಿಕಿಂತೆಂದನು (ಶಬರ. ೯–೨೯). **ಮೆಯ್ಯಳಿದನ್** = ದೇಹವು ನಾಶವಾದವನು ; ಕಾಮ ; ಮನ್ಮಥ : ಕಾಳರಕ್ಕಸನೆನ್ನ ಕಂಡು ಮೆಯ್ಯ[ಪಾಠಾಂ. ಮೈಯ]ಳಿದನಂಬಿಗೆ ಗುಱಿ

ಯಾವನು (ಸೂಬಸೂ. ೭-೩೭). ಮೈಗೆ ಹತ್ತು = ದೇಹಕ್ಕೆ ಹೊಂದಿಕೊಳ್ಳು ; ರಕ್ತಗತವಾಗು : ಅದಕ್ಕೆ ತಿಂದದ್ದು ಮೈಗೆ ಹತ್ತುವುದಿಲ್ಲ (ಗೃಹು. ೧೨೯). ಮೈಬಗ್ಗಿಸು = (ಅಲಂ) ಶ್ರಮವಹಿಸು ; ಕಷ್ಟಪಡು : ಮಕ್ಕಳು ಮೈಬಗ್ಗಿಸಿ ಕೆಲಸ ಮಾಡುವಂತೆಯೂ . . . ಬೋಧಿಸಬೇಕು (ಶ್ರಮೂಶಿ. ೬). ಮೈಬರು = ದೇಹವು ದಪ್ಪವಾಗು.—ಸ್ಥೂಲವಾಗು; ಬೊಜ್ಜುಬರು : ಊರಲ್ಲಿ ನಿಮ್ಮ ರುಕ್ಮಿಣಿ ಚೆನ್ನಾಗಿದ್ದಾಳೆ. ಈಗ ಸ್ವಲ್ಪ ಮೈಬಂದಿದೆ (ಸ್ವಶ್ನಹೂ. ೧೫೩). ಮೈಮೇಲೆಬರು = ೧. (ದೆವ್ವ ಅಥವಾ ದೇವರು) ಮನುಷ್ಯನ ಮೇಲೆ ಆವಾಹನೆಯಾಗು : ಆ ಗುಡಿಯ ಪೂಜಾರಿಗೆ ದೇವರು ಮೈಮೇಲೆ ಬರುತ್ತದೆಯಂತೆ (ರೂಢಿ) ; ಅವನಿಗೆ ದೆವ್ವ ಮೈಮೇಲೆ ಬಂದಿದೆ (ರೂಢಿ). ೨. (ಅಲಂ) ಜವಾಬ್ದಾರಿ ಬೀಳು : ಅಪ್ಪ ಸತ್ತ ಮೇಲೆ ಎಲ್ಲ ಅವನ ಮೈಮೇಲೆ ಬಂತು (ರೂಢಿ). ಮೈಮೇಲೆಬೀಳು = ಮೈಮೇಲೆ ಬರು ೨ : ಜವಾಬುದಾರಿಯೆಲ್ಲ ಮೈಮೇಲೆ ಬಿದ್ದು ಹುಚ್ಚಾದವ (ಮೂಠರುದಾ. ೫೭). ಮೈಮೇಲೆ ಹಾಕಿಕೊಳ್ಳು = (ಅಲಂ) ಎದುರುಹಾಕಿಕೊಳ್ಳು; ದ್ವೇಷವನ್ನು ಗಳಿಸು : ಎಲ್ಲರನ್ನೂ ಮೈಮೇಲೆಹಾಕಿಕೊಳ್ಳುವುದು ಜಾಣತನವಲ್ಲ (ಜಂಜಶಂ. ೧೯೩). ಮೈಮೇಲೆಹಾಕು = (ಅಲಂ) ಜವಾಬ್ದಾರಿಯನ್ನು ಹೊರಿಸು : ಅಣ್ಣ ತನ್ನ ತಂಗಿಯ ಮದುವೆಯ ಹೊಣೆಯನ್ನೆಲ್ಲಾ ತಮ್ಮನ ಮೈಮೇಲೆ ಹಾಕಿದನು (ರೂಢಿ). ಮೈಯೆಲ್ಲಾ ಕಣ್ಣಾಗು =(ಅಲಂ) ಜಾಗರೂಕವಾಗಿರು ; ಎಚ್ಚರಿಕೆಯಿಂದಿರು : ಮೈಯೆಲ್ಲಾ ಕಣ್ಣಾಗಿ ಸರೀಕ್ಷಿಸುತ್ತಿರಬೇಕು (ಗ್ರಂಥಾಲ. ೬೬). ಮೈಹಚ್ಚು =ದೇಹವನ್ನು ಒರಗಿಸು : ಗೋಡೆಗೆ ಮೈಹಚ್ಚಿ ಕೆಳಗೆ ಮುಖ ಬಾಗಿಸಿ ಕತ್ತೆಯೊಂದು ಸುಮ್ಮನೆ ನಿಂತಿರುತ್ತದೆ (ಅನ್ನ. ೧೯೦). ಮೈಹತ್ತು = ಮೈಗೆ ಹತ್ತು : ಯುಧಿಷ್ಠಿರನ ಆ ಐಶ್ವರ್ಯವನ್ನು ನೋಡಿದ ಮೇಲೆ ನನಗೆ ತಿಂದದ್ದು ಮೈ ಹತ್ತುತ್ತಿಲ್ಲ (ವಚರಾ. ೬೯).

[ದೇ.॥ ತಮಿ. ಮೆಯ್ ; ಮಲ. ಮೆಯ್, ಮೈ ; ತುಳು. ಮಯಿ, ಮೈ ; ಕೊಡ. ಮಯ್; ತೆಲು. ಮೆಯಿ, ಮೇ].

**ಮೆಯಿ** ' ಮೆಯ್$_2$ ' ನೋ.

**ಮೆಯಿಗಂಧ** ' ಮೆಯ್ಗಂಧ ' ನೋ.

**ಮೆಯಿಗೂಟ** ' ಮೆಯ್ಗೂಟ ' ನೋ.

**ಮೆಯಿಜೀವಿತ** (ನಾ). ಉಪಜೀವನ ; ಜೀವನನಿರ್ವಾಹ : ಮಂಮಾಲಿಗೆಯ ಮಾರಯಂಗೆ ಇನಾಗವೇದಿಯುಂ ಮೆಯಿಜೀವಿತಕ್ಕೆ ಕೊಟ್ಟಲ್ಲಿ (ಮೈಕಂ. ೦೯೩೭, ೦೬-೨೭ ; 1289). [ ಮೆಯಿ ( < ಮೆಯ್$_2$ ) + ಜೀವಿತ]

**ಮೆಯಿದೆಜು$^3$, ಮೈದೆಜು$^3$** (ನಾ). (ಕೋಣ, ಎತ್ತು ಮುಂತಾದುವುಗಳ ಮೇಲೆ ಹಾಕುವ) ಒಂದು ಬಗೆಯ ತೆರಿಗೆ : ನಾ[ಲ್ಕುಂ]ಪಟ್ಟಣಂಗಳು ನೂಲಿನಾಡೊಳಗೆ ಸಂತೆಗಳ್ ಆಯದಾಯ ಇಪ್ಪತು ಕೋಣನ ಮೆಯಿದೆಜು$^3$ ಸುಂಕ ಹದಿನೆಂಟ್ಟು (ಎ೩. XXI. ೦೪-೭೭ ; 1260). **ಮೈದೆಜು$^3$** : ಗಾಣವಣ ಮೈದೆಜು$^3$ ಮನ್ನೆಯ ತಿಪ್ಪೆಸುಂಕ ಸಂಮಾನಿಸುವ ಬೂರಗೂಳ್ಬಳಿವಣಂ (ಎ೪. VIII, ಸೊರಬ. ೨೭೬-೨೭ ; 1070).

[ ಮೆಯಿ ( < ಮೆಯ್$_2$ ) + ತೆಜು$^3_3$ ]

**ಮೆಯ್ಕೊಡು** ' ಮೆಯ್ಗೊಡು ' ನೋ.

**ಮೆಯ್ಕೊಳ್** ' ಮೆಯ್ಗೊಳ್ ' ನೋ.

**ಮೆಯ್ಕೊಳಿಸು, ಮೈಗೊಳಿಸು** (ಕ್ರಿ). ೧. ಉಟ್ಟಿರು ; ಧರಿಸಿರು : ಪೊಳೆವೆಳವಾಳೆ ಚುಂಬಿಸಿ ಮುಟುಂಕಿರಲಂಜಿದಳೆಟ್ಟಮೆ[ಳೆ]ಯ್ದ ಮೆಯ್ಕೊಳಿಸಿದ ನಾಗವಟ್ಟಳಿಗೆ ನಾಂದು ಪಗಿಲ್ತಿರೆ ನಾಣ್ಚಿದಳ್ (ಅನಂಥ. ೭-೩೭). **ಮೈಗೊಳಿಸು** : ೨. ರೂಢಿ ಮಾಡಿಕೊಳ್ಳು : ರೆವಿನ್ಯೂ ಡಿಪಾರ್ಟ್‌ಮೆಂಟಿನ ಖಾಸ ಚಟಗಳನ್ನು ಸರಾಗವಾಗಿ ಮೈಗೊಳಿಸಿದ ಅವನಿಗೆ ಅದು ಒಟ್ಟಿನ ಮೇಲೆ ಹಿತಕರವೇ ಕಂಡಿತು (ಗಂಮಾದಾ. ೧೨೩). ೩. ನೆರವೇರಿಸು ; ನಡೆಸು : ಗಂಗೆಯ ತಡಿಯೊಳು ಕರ್ಮವಿಧಿಯ ನಿಯಮಂಗಳ ಮೈಗೊಳಿಸಿದರು (ಕರ್ಣಪ. ೨-೩).

[ ಮೆಯ್ಕೊಳ್ ( < ಮೆಯ್ಗೊಳ್ ) + - ಇಸು$_3$]

**ಮೆಯ್ಗಂಡ** (ನಾ). ಶರೀರದ ಮಾಂಸ : ತತ್ತಳಗುದಿದು ಕೋಟ್ಗದಿಗೊಳ್ವ ಮೆಯ್ಗಂಡಮಂ ತಾಳಿಸೆ ಸುರುಂಟಿ ಬಗಿದಾ ಮೆಯ್ಯಂ ಸುಡೆ ಬಿಸಿಲ ಬೆಣ್ಣೆಯಂತೆ ಕರಗಿ (ಶಾಂತಿಪು. ೭-೯೫ ವ). [ಮೆಯ್$_2$ + ಕಂಡ$_1$]

**ಮೆಯ್ಗಂಧ, ಮೆಯಿಗಂಧ** (ನಾ). ೧. ಶರೀರದ ಸುಗಂಧ : ಚಂದನ ಮೊದಲಾದ ನಿಖಿಲ ಪೂಗಳಿಗೆ ಮೆಯ್ಗಂಧವ ಕಡಗುಡುವಂತೆ ನಂದನವನ ಲಕ್ಷ್ಮಿಯ ಪೋಲ್ದು ಬಾಣಜೆ ಬಂದಳು (ಮೋಹತ. ೨೯-೭೯). **ಮೆಯಿಗಂಧ** : ೨. ದೇಹದ ವಾಸನೆ : ವನಚರಾದ್ರಿಯ ಕುಣಪಾದ್ರಿಗಳೊಳ್ ಮೊಳೆತ ವಾಸನೆಯುಪ್ಪದವನ ಮೆಯಿ[ಪಾಠಾಂ. ಮೈ]ಗಂಧ (ವರ್ಧಚ. ೬-೬೯).

[ಮೆಯ್$_2$ + ಗಂಧ]

**ಮೆಯ್ಗಂಪು, ಮೈಗಂಪು** (ನಾ). = ಮೆಯ್ಗಂಧ ೧ : ನಸುನಗುತೆ ಮೆಯ್ಗಂಪನೆಣ್ದೆಸೆಗೆ ಸೂಸುತೆ . . . ಶರಣಪದ್ಮರಸರಿರ್ದೆಡೆಗೆಯ್ದೆ (ಶರ್ಮರಾ. ೫-೯೩) ; ಚಂದನಗಂಧಿ ರುಕ್ಮಿಣಿ ಸತ್ಯಭಾಮೆಯರ್ ನಂದನದೊಳಪೊಕ್ಕು ಸುಳಿಯೆ ಸಂವಣಿಸಿದ ವೃಕ್ಷ ಮೆಯ್ಗಂಪಿನಿಂದ ಶ್ರೀಗಂಧವ ಕಿಳ್ತಡಿಸಿದುವು (ಮೋಹತ. ೪-೫೭). **ಮೈಗಂಪು** : ಸಂಪಗೆಯ ಬಿಜಿ ಮುಗುಳಿನೋರಗೆಯ ಮೈಗಂಪು (ಸೌಂದಪು. ೭-೩೪).

[ ಮೆಯ್$_2$ + ಕಂಪು ]

**ಮೆಯ್ಗಚ್ಚು** ' ಮೆಯ್ಗರ್ಚು ' ನೋ.

**ಮೆಯ್ಗಡಿತ** (ನಾ). ದೇಹಕ್ಕೆ ಆದ ಪೆಟ್ಟು.–ಗಾಯ : ಕಡೆದವಗ್ಗದ ತುರಗದಳ ಮೆಯ್ಗ[ಪಾಠಾಂ. ಮೈಗ]ಡಿತದಲಿ ಮುಂಕೊಂಡು ಹೊರಳಿತು ಕೊಡೆ ಪಾಯದಳ (ಕುಮಾರರಾ. ೯-೧೨). [ಮೆಯ್$_2$ + ಕಡಿತ$_2$]

**ಮೆಯ್ಗಣ್, ಮೈಗಣ್$_1$, ಮೈಗಣ್ಣು** (ನಾ). ೧. ದೇಹದಲ್ಲೆಲ್ಲಾ ಇರುವ ಕಣ್ಣು ; ಮೈತುಂಬ ಇರುವ ಕಣ್ಣು : 'ಮೆಯ್ಗಣ್ಣ' ಪರಾ. **ಮೈಗಣ್$_1$** : ಶಿಶುಚೋರಕನ ಶೌರ್ಯಮಂ ಪೊಲಿದು ನೋಡಲ್ಕೆಯಾಗಸವೆಣ್ಣು ಮೈಗಣ್ಣಳಾಂತಂತೆ (ನವವಿ. ೧೦-೨೩). **ಮೈಗಣ್ಣು** : ಕ್ರತುಭುಜರೊಡೆಯನೆಂಬೆನೆ ಮೈಗಣ್ಣಿಲ್ಲ (ಕಂಪವಿ. ೯-೧೦೪).

[ ಮೆಯ್$_2$ + ಕಣ್ ]

**ಮೆಯ್ಗಣ್ಣ, ಮೈಗಣ್ಣ** (ನಾ). ೧. ದೇಹದಲ್ಲೆಲ್ಲಾ ಕಣ್ಣುಗಳನ್ನು ಹೊಂದಿರುವವನು ; ಇಂದ್ರ : "ಮೆಯ್ಗಣ್ಣಂ ಸಹಸ್ರಾಕ್ಷಂ" (ಕರ್ಣಾಪ. ೯೪) ; ಮುನ್ನಂ ಮೆಯ್ಗಣ್ಣನಱಿಯನೇ (ಕಬ್ಬಿಗ. ೧೬೭) ; ಶಚೀವರಂ ಮೆಯ್ಗಣ್ಣಂ (ಶಬ್ದಮ. ೬-೯೦) ; ಮೆಯ್ಗಣ್ಣನಿಂದ್ರಾಣಿ ಉಡುಪತಿಯುಂ ರಾಗದಿ ರೋಹಿಣಿ ಕಯ್ವಿಡಿದಂದದಿ (ಜಯುಕಾ. ೨-೧೦). **ಮೈಗಣ್ಣ** : ಬಡವರೊಡವೆಗಂಡಂತೆ ಮೈಗಣ್ಣನ ಮಡದಿ ಮೈಮನನೆತ್ತಿಕೊಂಡು ಸಡಗರದಿಂ ಬರೆ (ನೇಮಿಸಂ. ೨೨-೧೨೫). [ಮೆಯ್ಗಣ್ + – ಅ$_7$]

**ಮೆಯ್ಗರಗು** (ಕ್ರಿ). (ಅಲಂ) (ದೇಹದಲ್ಲಿರುವ ಗೆರೆ, ರೇಖೆ ಮುಂತಾದುವು) ಕಾಣದಾಗು; ಅದೃಶ್ಯವಾಗು : ಆ ಪದ್ಮಪತ್ರಾಯತಾಕ್ಷಿಯ ತ್ರಿವಳಿಸ್ವರೂಪಗಳ್ ಮೆಯ್ಗರಗಿದುವು (ಮೋಹತ. ೧೭-೭).

[ ಮೆಯ್$_2$ + ಕರಗು ( < ಕರಂಗು ) ]

**ಮೆಯ್ಗರೆ, ಮೈಗರೆ** (ಕ್ರಿ). ಅಡಗು ; ಮರೆಯಾಗು ; ಮೈಮರೆಸಿಕೊಳ್ಳು : ಸೈಂಧವನವರಂ ಛಿದ್ರಿಸಲೆಂದು ಮೆಯ್ಗರೆದು ಬಂದು (ಶಂಶಭಾ. ೭-೩೦ ವ); ಅಂಜೆ ತಾಂ ಮೆಯ್ಗರೆದಿರ್ದುದ್ರಾದ್ಮರಂತಾ ನೆವದೊಳ್ ದೆಸೆಯುಂ ಕೂಡೆ ಪೊಕ್ಕರ್ (ಕುಸುಮಾ. ೩-೦೩) ; ಆನಾ ಕಲ್ಪಸುಂದರಿಯ ಬರವನಱಿದು ಲತಾಭವನದ ಮಾಧವೀಗುಲ್ಮದೊಳ್ ಮೆಯ್ಗರೆದಿರ್ಪುದಂ

(ದಶಕು. ೧೧-೭೪ವ). **ಮೈಗರೆ :** "ಮೈಗರೆವನೆಂದು ಅಡಂಗಿದಂ" (ಶಶಸಾ. ೬೩-೪೩೦) ; ಚಂದ್ರಾರ್ಕರುಂ ಮೈಗರೆದಿರ್ಪರ್ (ಶಂರಾಪಾ. ೦-೬೧); ಮೈಗರೆವುತಿರ್ದರ್ ಮಡಿದ ಗಜಹಯಂಗಳ ಮಱಿಯೊಳಳವಳಿದು ದಿವಿಜ ಭಟರು (ಕಬಿಕು. ೨೪-೨೩) : ಈಸುದಿವಸಪರಿಯಂತ ಮೈಗರೆದಲ್ಲಿ ವಾಸ ವಾಗಿರ್ದ ಚೆನ್ನಿಗನೆ (ಕಂಪಬ. ೦೦-೩೨). [ಮೆಯ್$_{2}$ + ಕರೆ$_{3}$]

**ಮೆಯ್ಗರ್ಚು, ಮೆಯ್ಗಚ್ಚು, ಮೈಗರ್ಚು** (ಕ್ರಿ). ದೇಹವನ್ನು ತೊಳೆ ; ಸ್ನಾನ ಮಾಡು : ಅಷ್ಟದಿಙ್ನಾಗರಾಜಿಗೆ ಮೆಯ್ಗರ್ಚಿಕೊಳಲ್ಕಜಂ ಸಮೆದ ತೋಯೋದ್ದೇಶಮೋ (ಗದಾಯು. ೬-೦೦). **ಮೆಯ್ಗಚ್ಚು :** ಸಲೆ ಮೆಯ್ಗಚ್ಚುವ ಪಲ್ಲಂ ಸುಲಿವ ವಿಲೇಪನಮನಾಗಳುಂ ಪೂಸುವ ತಂಬುಲಮಂ ಮೆಲ್ವ ತಪಸ್ವಿಗಳೊಲಿಪರ್ಬಿಲೆವೆಣ್ಣೊಲಿಸರಪ್ಪ ತಾಂಗನೆಯಂ (ಸಮುಕ. ಕಂ. ೩೮೭-೧). **ಮೈಗರ್ಚು :** ಮೈಗರ್ಚಿಕೊಳ್ವ ಮದಗಜಂಗಳ ಕಟಿತಟದ ಮದಕರ್ದಮದಿನೊಡವೆರೆದು ಕಲಸಿ ಕಲಂಕಿ ಕಡುಗರ್ಪನಾಳ್ದು ಕಾಳಿಂದಿಯಂತೆ ಕಣ್ಗೆವಂದು (ರಾಜಕೇ. ೨- ೮ ವ).

[ಮೆಯ್$_{2}$ + ಕರ್ಚು$_{2}$ (< ಕಚ್ಚು) ]

**ಮೆಯ್ಗಪ್ಪು, ಮೈಗಪ್ಪು** (ನಾ). ದೇಹದ ಕಪ್ಪುಬಣ್ಣ : ಪರ್ವರಿಕೆಯುಮೆರ್ಪುಂ ಮೆಯ್ಗಪ್ಪುಂ ಮೊದಲಾಗಿ ರೇಫಸಂಯೋಗಂಗಳ್ (ಕಮರ. ೩೯). **ಮೈಗಪ್ಪು :** ತೇರ್ಸಿ ಬರ್ಪ ತುಂಬಿಗಳ ಮೈಗಪ್ಪು ಮುಂಗಾರ ಮುಗಿಲವೊ ರ್ಝೇಂಕಾರವೆ ಮೊಳಗು (ಕಬಿಕು. ೪೩-೨೨).

[ಮೆಯ್$_{2}$ + ಕರ್ಪು$_{1}$]

**ಮೆಯ್ಗಲಿ, ಮೈಗಲಿ** (ನಾ). ದೈಹಿಕಬಲವುಳ್ಳವನು : ಶೂರ ; ವೀರ ; ಸಾಹಸಿ : ಇದು ರಣಮೆನ್ನೊಳಾಂತಿಱಿವ ಮೆಯ್ಗಲಿಯುಂ ಸಮರೈಕ ಮೇರು (ಶಂಪಶಾ. ೦೧-೪೩) ; ಪಲರಿರ್ದು ಕಾದಿದರ್ ಮೆಯ್ಗಲಿಗಳ್ (ಗದಾಯು. ೪-೩೩) ; ಆ ಪೊಱಲ ನೆರೆದ ದರವುರಗಲಿಗಳುಂ ಮೆಯ್ಗಲಿಗಳುಂ ಭೀಮಸೇನನ ಭೀಮಾಕಾರಮುಮಂ . . . ಕಂಡು ಭಯಂಗೊಂಡು ತಮ್ಮೊಳಿಂತೆಂದರ್ (ಪೇಬಿಪು. ೦೦-೦೦೦ ವ). **ಮೈಗಲಿ :** ಎಮ್ಮೊಡನಾಡಿದ ಕಾರಣದಿಂದೀ ಪುಲಿಯುಮೊಂದಿಲಿಯುನಪ್ಪೊಡಂ ಕೊಲಲಣ್ಮದಿಂತಪ್ಪ ಮೈಗಲಿಗಳೆನೆ (ಶಂಶಕಂ. ೦೪೦-೦೬) : ಕುಸುಮಬಾಣನ ರೂಪಡಗೆ ಮರ್ದಿಸಿದ ಮೈಗಲಿ ಬೋಧಸಿಂಧುವೆ ಜಯಜಯ (ಶಾಳ್ಶಾ. ೦೬-೪೨) ; ಕಾಪಿನಾಳ್ಗಳ್ ತತ್ತಱದಿನೊತ್ತರಿಸಿ ಪತ್ತೆ ಸಾರ್ದು ರಾಯುಗುವರನಂ ಸುತ್ತಂಮುತ್ತಿ, ಮೈಗಲಿಯಂ . . . ಎಂದರ್ (ರಾಮಾಶ್ವ. ೯೬-೦೨). 'ಮನಗಲಿ' ಪರಾ. [ಮೆಯ್$_{2}$ + ಕಲಿ$_{2}$]

**ಮೆಯ್ಗಲಿತನ, ಮೈಗಲಿತನ** (ನಾ). ದೈಹಿಕ ಶೌರ್ಯ, -ಪರಾಕ್ರಮ, -ಸಾಮರ್ಥ್ಯ : ಎಯ್ದೆ ಮೆಯ್ಗಲಿತನಮಂ ಸರಿತ್ಸುತ ಘಟೋದ್ಭವರಂ ಪೊಣರ್ದಿಕ್ಕಿ ಗೆಲ್ದರೊಳ್ ಕಲಹಮೆ ಪೇೞ್ಗುಂ (ಪಂಪಭಾ. ೦೨-೪೮) ; ಮೆಯ್ಗಲಿತನದಿಂ ತೊಡರ್ಚಿದುವು ಕಾಳೆಗಮಂ ಕಡುಕೆಯ್ದು ಕೋಟಿಗಳ್ (ದಶಕು. ೦೧-೩೦). **ಮೈಗಲಿತನ :** ತಡೆದವರನ್ನು ಇರಿದು ಮೆರೆದು ಕಾದಿ ತಮ್ಮ ಮೈಗಲಿತನವನ್ನು ತೋರ್ಪಡಿಸಿದರು (ಕವೀರ. ೦೦೪) ; ಕೌರವನ ಮೈಗಲಿತನಕ್ಕೆ ಮೆಚ್ಚಿ ತಲೆದೂಗಿ (ಕಾಮಡಿ. ೭೦). 'ಮನಗಲಿತನ' ಪರಾ. [ಮೆಯ್ಗಲಿ + ತನ]

**ಮೆಯ್ಗಾಡಿ** (ನಾ). ದೇಹದ ಚೆಲುವು, - ಸೊಬಗು : 'ಮೆಯ್ಗಾಡಿ ವಣ್ಣ' ಪರಾ. [ಮೆಯ್$_{2}$ + — ಗಾಡಿ$_{1}$]

**ಮೆಯ್ಗಾಡಿವಣ್ಣ** (ನಾ). ದೇಹದ ಚೆಲುವಿನ ಕಾಂತಿ : ಮೂಡುವೆಳನೇಸಱಿಂದುಱಿ ನವಿಸಿಕೊಳ್ವ ಮೆಯ್ಗಾಡಿವಣ್ಣದಿನೇಳ್ಗೆವೆತ್ತು ಥಳಥಳಿಪ ಶಿಶುಚೂಡಾಮಣಿಯನೀಕ್ಷಿಸುತ್ತೆ (ಶಬ್ಧರಾ. ೨-೬೪). [ಮೆಯ್ಗಾಡಿ + ಬಣ್ಣ]

**ಮೆಯ್ಗಾಣ್, ಮೈಗಾಣ್** (ಕ್ರಿ). ದೇಹದಲ್ಲಿ ಆಯುಧವು ನಾಟಿ ಹೊರಬಂದು ಕಾಣು : ಬಱಿಯುಂ ಮೆಯ್ಗಂಡು ಪುಂಖಾನುಪುಂಖ ಮಿಸುತ್ತಿರ್ಪೆಡೆಯೊಳ್ (ಅಬಿಕು. ೦೩-೬೦). **ಮೈಗಾಣ್ :** ಮೈಗಂಡ ಸರಳ ಮೊನೆಯಿಂ ಸುರಿವ ರುಧಿರ ಡೆಂಡಣಿಪ ನಡೆ . . . ಎಳಲ್ವ ಕಿವಿವೆರಸು ಕಂಗೆಟ್ಟೊಂದು ಹರಿಣನೆಯ್ತಂದು (ಸಿದ್ಧರಾ. ೪-೪೨) ; ಪಿಂಡಘಾರವ ದೇಹಿಯನು ಮೈಗಂಡು ನೋಯಿಸಬಲ್ಲವಲ್ಲದೆ ಖಂಡಿಸುವುದೇ ಬಯಲ ದೇಹಿಯನಾವ ಕೈದುಗಳು (ಪ್ರಭುಲೀ. ೦೩-೦೬). [ಮೆಯ್$_{2}$ + ಕಾಣ್]

**ಮೆಯ್ಗಾಣಿಸು, ಮೈಗಾಣಿಸು** (ಕ್ರಿ). ೧. ಕಾಣಿಸಿಕೊಳ್ಳು ; ಮೈದೋರು : ಆದಿನಾಥನೆ ತಾನಿದೊಂದು ವಿನೋದವೇಷವ ಧರಿಸಿ ತನ್ನಯ ಸಾಧಕರ ಸಂಕಲ್ಪಸಿದ್ಧಿಯನೀಯಬೇಕೆಂದು ಮೇದಿನಿಗೆ ಮೆಯ್ಗಾಣಿಸಿದನು (ಪ್ರಭುಲೀ. ೦೯-೩೮). **ಮೈಗಾಣಿಸು :** ೨. ಪರಾಕ್ರಮವನ್ನು ತೋರು ; ಶೌರ್ಯವನ್ನು ತೋರಿಸು : ಕ್ಷೋಣಿಪರೆನುತ್ತ ಬರಿಹೆಮ್ಮೆಯಿಂ ನೆರೆದೆ ಮೈಗಾಣಿಸದೆ ಜಾರ್ವರಾ ಬಾಳ್ವೆಯಂ ಸುಡಲೆನಲ್ ಮಾಣದತಿರಥರು ಮೂದಲೆಗಂಜಿ ರಣದೀಕ್ಷೆಯಂ ಗೊಂಡರಾಕ್ಷಣದೊಳು (ತುರಂಗ. ೭೩-೦೭). [ಮೆಯ್ಗಾಣ್ + — ಇಸು$_{3}$]

**ಮೆಯ್ಗಾಪು, ಮೈಗಾಪು, ಮೈಗಾಹು** (ನಾ). ಮೈಗಾವಲು ; ಅಂಗರಕ್ಷಣೆ : ಮೆಯ್ಗಾಪುವಮಾ ವೇಳೆಗೊಂಡಿರ್ದತ್ಯುಗ್ರಭಟರ್ಕಳುಂ ಕವಚಮುಂ ಮಿತ್ರರ್ಕಳುಂ ಮಿಟ್ಟು ಮೇಲೆರ್ದಾಗಳ್ ಶರಣಪ್ಪೊಡೇಕೆ ಮಡಿದರ್ ಪನ್ನಿರ್ವರುಂ ಚಕ್ರಿಗಳ್ (ವಡ್ಡಾರಾ. ೦೪೩-೦೬) ; ಮೂವತ್ತಿರ್ಛಾಸಿರ್ವರ್ ಮೆಯ್ಗಾಪಿನ ಗಣಬದ್ಧದೇವರುಂ (ಆದಿಪು. ೦೩-೩ ವ) ; ತಂತಮ್ಮಯ ಮೆಯ್ಗಾಪಿನ ಹಯಭಟದಂತಿವರೂಥವ್ಯೂಹವನು . . . ನಿಲಿಸಿ (ಜಯಾಕಾ. ೭-೮). **ಮೈಗಾಪು :** ಮೈಗಾಪಿನ ಬಿಚ್ಚುಗತ್ತಿಯ ಕುದುರೆಯವರು ಕಾವಲ್ಗುಡುತ್ತ ನಡೆದರು (ಸವತಿ. ೦೮೭). **ಮೈಗಾಹು :** ಸೈಂಧವನ ಮೈಗಾಹ ಬಲಿವೆನು (ಕುಮಾ.ದ್ರೋ. ೮-೬೬); ಈ ಜಗದ ಮೈಗಾಹಿಗೋಸುಗ ಜನ್ಮವೆಂಬಿವು ಜೋಹವೈಸೆ (ತೊರರಾ. ೧-೯-೩೭).

**ಮೈಗಾಹಿನವರು** = ಅಂಗರಕ್ಷಕರು : ಮೋಹದವಳಿ ವೈದ್ಯರಲಿ ಮೈಗಾಹಿನವರಲಿ . . . ಪ್ರತ್ಯೂಹವನು ವಿರಚಿಸೆಯಲೇ ಭೂಪಾಲ ಕೇಳೆಂದ (ಕುಮಾ.ಸ. ೦-೩೮). [ಮೆಯ್$_{2}$ + ಕಾಪು]

**ಮೆಯ್ಗಾವಲಿಗ** (ನಾ). ಅಂಗರಕ್ಷಕ ; ಮೈಗಾವಲಿನವನು : ತೊಟ್ಟಿಲಯ್ಯ . . . ಮಹಾರಾಜನ ವಿಶೇಷದ ಮೆಯ್ಗಾವಲಿಗ (ಮುಂತ್ರಕ. ೭ ಶಾಸ್ತ್ರಶಂಕಯು).

[ಮೆಯ್ಗಾವಲು + — ಇಗ]

**ಮೆಯ್ಗಾವಲು, ಮೈಗಾವಲು** (ನಾ). = ಮೆಯ್ಗಾಪು : ಮಂತ್ರೀಶ್ವರನ ಮೆಯ್ಗಾವಲ ರಥರಾಜಿದಂತಿಗಳಾಹವದೊಳಗೆ . . . ತೊಂತಿತ್ತು ನೀಲಾಂಬರನ (ಮೋಹತ. ೪೦-೬೩). **ಮೈಗಾವಲು** . . . ಹನುಮನ ಮೈಗಾವಲಭಟರು ಬೇಲೂರ ಜನಪನ ಸಮ್ಮುಖದವರು . . . ಚಿನಕಡಿಯಾದರಾ ರಣದೆ (ಕಂಪಬ. ೦೩-೯೩) ; ಪಂಡಿತನಂತೂ ಮೈಗಾವಲಿನ ಭಂಟನಾಗಿ ಎಡೆಬಿಡದೆ ಇರುತ್ತಿದ್ದ (ಜಡೇಪ. ೨೦).

[ಮೆಯ್$_{2}$ + ಕಾವಲು (< ಕಾಪಲ್$_{1}$) ]

**ಮೆಯ್ಗಾಳಿ** (ನಾ). ದೇಹದ ವಾಸನೆ ; ಶರೀರದ ವಾಸನೆ : ಊಳಿಗದವರಲ್ಲದೆ ಪೊಸಬರ ಮೆಯ್ಗಾಳಿ ಸೋಂಕಲು ಖುರದಿಂದ ಪೋಳುಮಾಡುವುದವನಿಯ (ಕುರಾಸಾಂ. ೯-೪೩). [ಮೆಯ್$_{2}$ + ಗಾಳಿ$_{1}$]

**ಮೆಯ್ಗಿಡು** 'ಮೆಯ್ಗೆಡು' ನೋ.

**ಮೆಯ್ಗುಂದು, ಮೈಗುಂದು** (ಕ್ರಿ). ೧. ಬೆಚ್ಚಿಬೀಳು: ಗಾಬರಿಯಾಗು : ಪಡಿಮೊಗವಾಗಲೊಡಂ ಕನ್ನಡಿಯುಂ ನೋಡುವರ ತೆಱದೆ ಮೆಯ್ಗುಂದುವರುಗ್ಗಡದರಸುಮಕ್ಕಳ್ (ಕಬ್ಬಿಕಾ. ೪೯). **ಮೈಗುಂದು:** ೨. ಬಡವಾಗು; ಸೊರಗು : "ಇಱಿದಂ=ಮೈಗುಂದಿದಂ, ಕೆಟಗಣ್ಗೆವಂದಂ" (ಕಮುಕ. ಕಂ. ೦) ; ಮೈಗುಂದದ ಚೆಂದವಿಂಗೊರಲ ಮೆಲ್ಲುಲಿಯೊಪ್ಪಿದುದೊಲ್ವ ಕೂಟದೊಳ್ (ಶಂದ್ರಕು. ೮-೬೭). [ಮೆಯ್$_{2}$ + ಕುಂದು$_{1}$]

ಪೆಗೊಡಪಿದುವು ಗಿರಿಜೊಂದು (ಶ್ರಶುಲೀ. ೧೯–೨೯):
[ಮೆಯ್$_{2}$ + ಕೊಡವು]

**ಮೆಯ್ಗೊಡು**, ಮೆಯ್ಗುಡು, ಮೈಗುಡು, ಮೈಗೊಡು (ಕ್ರಿ). ೧. ದೇಹವನ್ನು (ಪೆಟ್ಟು, ಹೊಡೆತ, ಸಾವು, ಯುದ್ಧ ಮೊದಲಾದುವುಗಳಿಗೆ) ಗುರಿಯಾಗಿ ಒಡ್ಡು ; ಗುರಿಮಾಡು : ಮೆಯ್ಗೊಡದೆ ಬೀರಮಂ ಮೂಜುವರ್ ಮಾಜುವರ್ ಮೆಯ್ಗಳಂ ವಿಕ್ರಮದ್ರವ್ಯಕಿರ್ದರ್ ಸುಭಟರ್ (ಜೆಬಿಪು. ೦೬–೪೯). **ಮೆಯ್ಗುಡು** : ೧. ಪೆಟ್ಟಿಗೆ ಮೆಯ್ಗುಡದೆಸಗೆಯ್ಯೊಳಿಸಿದು . . . ನೊಸಲೊಡೆವಂತೆ ಪೆಟ್ಟಿದ ವಜ್ರಮುಷ್ಟಿಯುಲಿ (ಪೋಹಶ. ೦೨–೯೮). ೨. (ಸಂಭೋಗಕ್ಕೆ) ಶರೀರವನ್ನು ನೀಡು : ದೇಹವನ್ನು ಒಪ್ಪಿಸು : ಕೂಡಲೊಡರ್ಚಿರೆ ಲಜ್ಜೆಯೊಕ್ಕು ಪೆಯ್ವಳಿಯೊಳ್ ಸಂದು ಮೆಯ್ಗು[ಪಾಠಾಂ. ಮೈಗು]ಡುತವಳ್ಪಿಡಿದಳ್ಮನಮುಂ ಮನೋಜ್ಞನಾ (ರಾಜಶೇ. ೮–೮೩). **ಮೈಗುಡು** : ೧. ಸೋಲದ ಗೆಲುವಿನುದಯ ಮುಹೂರ್ತವಶ ಮೈಗುಡದೆ ಕಾದುವುದು (ಕುಮಾರವ್ಯಾ. ದ್ರೋ. ೦೩–೫೨): ಸಮರವ ಮೆಚ್ಚಿವುದುಳ್ಳಡೆ ಮೈಗುಡುವುದಗ್ಗಳಿಕೆ ನಿಮಗೆ (ಕೊರಟಾ. ೫–೯–೨). ೨. ಜವದ ಜಾಣುಮೆಯೂಜಿದು ಸೂಳ್ಗಳ ಸವಿಯ ಮುಂದಿಡೆ ಮೆಚ್ಚಿಪ ಮೈಗುಡೆ ಸವಿಸುಸಿಲು ಸುಖರಸದೊಳೋಲಾಡಿಸಿದನಾ ಕುವರ (ಸಾಳ್ವಭಾ. ೯–೦೦). **ಮೈಗೊಡು** : ೧. ಓಪದೆ ಕಾಯ್ದು ಕಡಂಗಿ ಪೊಯ್ಯೆ ಮೈಗೊಟ್ಟ ಸನುಯ್ಯೆ ದೇಪತತಿ (ಪ್ಕಆ. ೧೯೩೭, ೨೩–೦೦; 1276 ) : ಕಾಲರುದ್ರನ ಪಡೆಯಲಾಡುವನೀತನೋ ಮೈಗೊಡದಿರೋ (ಕುಮಾರವ್ಯಾ. ಶ. ೯–೨೯); ವಿಕ್ರಮ ಜೀಮೂತವಾಹನನರಪಾಲರೀ ಕ್ರಮದೊಳು ಮೈಗೊ [ಪಾಠಾಂ. ಗೆ]ಟ್ಟು ಶಕ್ರಸ್ತುತರಾದುದಿಲ್ಲವೆ (ಶ್ರೀಪಾಂ. ೮–೫೩). ೨. ಪರರಂಗನೆಗೆ ಮೈಗೊಟ್ಟ ಪರ ಶಿಕ್ಷಿಸದೆ ಬಿಡೆವು (ಕೊರಟಾ. ೯–೪–೪೭); ಭಂಡಾಟದಿ ಮೈಗೊಟ್ಟು ಗೋಪಿಯರು ಪಾವನ ನನ್ನಿಂದ್ಯೆ (ಪುರಂದ. ೦–೧೭೫–೦). ೩. (ಆಲಂ) ಅವಕಾಶ ಕೊಡು,—ನೀಡು : ಪಂದನೆಗೆ ಮೈಗೊಟ್ಟು ನಿಲ್ಲದೆ ನಿಂದೆಗೆಡೆಗೊಟ್ಟೋಡಿ ಹೋಗದೆ . . . ನಿಂದ ಧೀರೋದ್ಧಾರಗಲ್ಲದೆ ಹುಂದೆಗಹುದೇ ಭಕ್ತಿಯಿಂಬುದು (ಶ್ರಶುಲೀ. ೦೭–೪೭). ೧, ೩ : ಜಗದೊಳ್ಕುಶಾಸ್ತ್ರ ಪ್ರಕರಕೆ ಮೈಗೊಟ್ಟುಪಂ ಮಿಗೆ ಪತಿತನಾಗದಿರ್ದಪನೆ (ಕೈಖಾ. ೨೦–೨೧). ೪. ಪ್ರತಿಫಲ ಕೊಡು ; ಫಲಿಸು : ನಮ್ಮಯ ನುಡಿಯು ನೀ ಪಾಲಿಸಿದಡದು ಮೈಗೊಡುವ ಭಾಗ್ಯದ ಬೆಳಸಲೇ ನಮಗೆ (ಕೊರಟಾ. ೦–೯–೨೭). [ಮೆಯ್$_{2}$ + ಕೊಡು$_{1}$]

**ಮೆಯ್ಗೊಲೆ** (ನಾ). ದೇಹದಿಂದ ಒತ್ತಿ ಮಾಡುವ ಕೊಲೆ : ಕಯ್ಗೊಲೆ ಬಾಯ್ಗೊಲೆ ಮೆ[ಪಾಠಾಂ. ಮ]ಯ್ಗೊಲೆ ಕಾಲ್ಗೊಲೆ ಕೋಳ್ಗೊಲೆಯುಂ ಕಲಿಪ ಕಡುಬಿನ್ನಣಂಬಡೆದು ಕಟ್ಟಾಳ್ತನಂಬೆತ್ತಿಂತು ಗಜಾರೋಹಣಧುರೀಣರಾದಾ ಘೋರಣರ್ನೆರೆನೆರೆದು (ರಾಜಶೇ. ೭-೦೦೪). [ಮೆಯ್$_{2}$ + ಕೊಲೆ$_{2}$]

**ಮೆಯ್ಗೊಳ್**, ಮೆಯ್ಕೊಳ್, ಮೈಗೊಳ್, ಮೈಗೊಳ್ಳು (ಕ್ರಿ). ೧. ಕಾಣಿಸಿಕೊಳ್ಳು ; ಪ್ರಕಟವಾಗು : ವ್ಯಕ್ತವಾಗು : ಮೆಯ್ಗೊಂಡೊಲವಿಂದಗಲ್ಕೆಗಣವಾಜಿದ ಪಕ್ಕಗಳೆಲ್ಲಮಂ ಮರುಳ್ಗೊಂಡಪೊಲಾಳ್ದು ಕೂಡೆ ಬೆಸಗೊಂಡು ಬಟ್ಟಲ್ಪು ಜಕ್ಕವಕ್ಕಿಗಳ್ (ಶಂಕಶಾ. ೪–೯೮). ೨. ಮೈಮೇಲೆ ಬರು ; ಆವೇಶಗೊಳ್ಳು : ದಿಘೊನೂಸೂಸ್ ಮೆಯ್ಗೊಂಡಾ ಪೆಣ್ಗಳ ನಾಜಿಸಪೋಪನ್ (ಅಂತಿಗು. ೯೩–೮೮೯). **ಮೆಯ್ಕೊಳ್** : ೩. ತೊಡು : ಧರಿಸು: ' ಮೆಯ್ಕೊಳಿಸು ' ಪರಾ. **ಮೈಗೊಳ್**: ೪. ಅವತರಿಸು; ದೇಹವನ್ನು ತಾಳು : ವಿಶ್ವಂಭರಾಭಾರಾಪರೋದನಕೆ ಧರಣಿಯಲಿ ಮೈಗೊಂಡು ದೈತ್ಯರನೊರಸಿದನು (ಕುಮಾರವ್ಯಾ. ಆ. ೨–೪). ೫. ಮನಸ್ಸು ಮಾಡು; ತೊಡಗು : ಕೈಗೊಳ್ಳು : ಮೋಕ್ಷಕ್ಕೆ ಕೊಂಡೊಯ್ವ ದೀಕ್ಷೆಗೆ ಮೈಗೊಳ್ಳದನಿತ್ಯಮೆಂದೆನಿಸುವೀ ಸಾಮ್ರಾಜ್ಯಮೋಹಕ್ಕೆ ದಂದುಗದಿಂ . . . ನೀನಿಂತಿರಲ್ ತಕ್ಕುದೆ (ಅಶಿ. ೭-೭೦). **ಮೈಗೊಳ್ಳು** : ೧. ಕಾದಂಬರಿಯ ದರ್ಶನ ಪ್ರಮುಖವಾಗಿ ಮೈಗೊಂಡಿರುವುದು ಮೂರು ಸಂಪತ್ತುಗಳು (ಸಮುಜ. ೨೯ ಜೀ೦೪); ಅರ್ಪಣವೆ ಮೈಗೊಂಡ ಹಾಗೆ ಇರುವೆ (ಜೀವಂ. ೭-೦೦); ಶ್ರೀ ಕನಕದಾಸರ ವಾಣಿಯಲ್ಲಿ ಸಹಜ ಸೊಮ್ಮು, ದೇಸಿಯ ಸವಿತಿರುಳು ಮೈಗೊಂಡಿವೆ (ಜಗದಾ. ೦೨೭). [ಮೆಯ್$_{2}$ + ಕೊಳ್$_{1}$]

**ಮೆಯ್ಚಾಚು**, ಮೈಚಾಚು(ಕ್ರಿ). ೧. ದೇಹವನ್ನು ನೀಡು,–ಚಾಚು: ಹೆಡೆಯ ಮಣಿಗಳ ಕಂಡು ಸೂಸಿದ ಕಿಡಿಗಳಹಹಾಯೆನುತ ಶಿರಗಳ ಕೊಡಹಿ ಮುಜುಗಿದರು ರಗಿಯರು ಮಾಜಿಗಳಿಗೆ ಮೆಯ್ಚಾ [ಪಾಠಾಂ. ಮೈಚಾ] ಚಿ (ಕುಮಾರವ್ಯಾ. ಆ. ೨೦-೭೦). **ಮೈಚಾಚು**: ೧. ನೀವು ಹೋಗಿ ಎಂದು ಯಶೋದೆ ಹೇಳಿ ಅಲ್ಲೇ ಮಲಗಲು ಮೈಚಾಚಿದಳು (ವಾತ್ಸಲ್ಯ. ೦೨). ೨. ದೇಹವನ್ನು ಬಾಗಿಸಿ ನಮಸ್ಕರಿಸು; ದೀರ್ಘದಂಡಪ್ರಣಾಮ ಮಾಡು: ಅವರು. . .ನಮಃಶಿವಾಯ ಎನ್ನುತ್ತ ನೆಲದಲ್ಲಿ ಮೈಚಾಚಿದರು (ಶಾಮಣ. ೯೫). [ ಮೆಯ್$_{2}$ + ಚಾಚು$_{1}$ ]

**ಮೆಯ್ಜೋಡು**. ಮೈಜೋಡು (ನಾ). ೧. ಶರೀರದ ರಕ್ಷಣೆಗಾಗಿ ಹಾಕಿಕೊಳ್ಳುವ ಕವಚ ; ತನುತ್ರಾಣ : ಚಿಲಖತ್ತು : ಮೆಯ್ಜೋ[ಪಾಠಾಂ. ಮೈಜೋ]ಡು ಹೊರಳಿಯ ಝಲ್ಲಿ ಹರಿಗೆಯ ಬಿರಿದು ಚೂಡಾಯುತ ಬಿಗಿದುಟ್ಟ ದಟ್ಟಿಯ ಹರಿಗೆಯವರು ತಜುಬಿವರು (ಕುರಾನಾಂ. ೦೦–೩೦): ಪಾಪಂಗಳ ಮೆಯ್ಜೋಡನುಗಿದು ಬಿಸುಡುವ ಗಂಗೆ ಬೆನಜುದಳು (ಕೈಖಾ. ೯–೨೭). ೨. (ಆಲಂ) ಸಹಾಯ; ರಕ್ಷಣೆ: ನೆರವು: ಮೆಚ್ಚು ಮೆಯ್ಜೋಡಾಗಿ ... ಬರುವಾ ಪ್ರೇಮವೀರಗೆ ಬೇರೆ ಮೋರೆಯನು ತೋರುವುದು (ಅನಶೇ. ೨-೧೯). **ಮೈಜೋಡು** : ೧. ''ಸವಗವೆಂದು ಮೈಜೋಡಕ್ಕು'' (ಕಬ್ಬಿಗ. ೯೨); ಏಜಿದ ಮೈಜೋಡಿನ ದಿಟ್ಟಜೋದರ ಎತ್ತಿದ ಬಲ್ಪಿನ ಬಿತ್ತರದ ಪಟ್ಟೆಯ. . . ಹಿಂದೆ ಮುಂದೆ ಸಂದಣಿಸಿ ಹರಿದಾಡುವ ನಿಟ್ಟೆಕಾಜರ (ಹರಿಶ್ಚ. ೩–೩೩ ವ); ಭೂಪಾಲರ ಪಡೆ. . . ತಳುವದೆ ಮೈಜೋಡು ಧರಿಸಿ ರಥವನೇಜಿ ಕಳಕಳದೊಡನೆ ಕವಿದುದು (ಕರ್ಣಮ. ೫-೦೭). ೨. ಇವರ ಕರುಣೆಯೇ ಇವರ ವಿರೋಧಿಗಳ ಮೈಜೋಡು (ಶಂಗಶ. ೯೯).
[ಮೆಯ್$_{2}$ + ಜೋಡು]

**ಮೆಯ್ಝಳ**, ಮೈಝಳ (ನಾ). ದೇಹದ ಶಾಖ ; ಶರೀರದ ಕಾವು : ಸಾರಿದರು ಪೂಗೊಳನನಾ ಚಂಡಾಂಶುವಿನ ಮೆಯ್ಝಳ [ಪಾಠಾಂ. ಮೈಝ] ಳದ ಝಾಡಿಯ ಜೋಡಿಯಧ್ವಶ್ರಮದ ಭಾರವಲಿ (ಕೊರಟಾ. ೨–೭–೩). **ಮೈಝಳ** : ತಳಿತ ಕಿಡಿಗಳ ಕೈದುವಿನ ಮೈಝಳದ ಝಾಡಿಯೊಳುಭಯ ಬಲದಗ್ಗಳದ ಹರುಷವಿಷಾದವಾರಿಧಿ ಕಾಲುಹೊಳೆಯಾಯ್ತು (ಕುಮಾರವ್ಯಾ. ದ್ರೋ. ೦೭–೫೦). [ಮೆಯ್$_{2}$ + ಝಳ (< ಜಲ್$_{1}$)]

**ಮೆಯ್ದಡವು**, ಮೆಯ್ದಡಹು, ಮೈದಡವು, ಮೈದಡಹು (ಕ್ರಿ). (ಪ್ರೀತಿಯಿಂದ) ದೇಹವನ್ನು ನೇವರಿಸು : ಶರೀರವನ್ನು ಸವರು : ಸತ್ಕರಿಸಿ ಮೆಯ್ದಡವಿ ಕಣ್ಣೀರ್ಗಳಂ ತೊಡೆದು (ಶಬ್ದರಾ. ೩–೨೨); ದಿವ್ಯದೇಹ ಕೂರ್ಗೋಲಿಂದೆ ನೊಂದಿರೆ ಮೆಯ್ದಡವಿದನು (ಪೋಹಶ. ೪೫-೫೦). **ಮೆಯ್ದಡಹು** : ಕತ್ತರಿಸಿದ ಬಾಹುಮೂಲದೆ ಚೆಲ್ಲುವ ನೆತ್ತರ ನಿಲಿಸಿ ಮೆಯ್ದಡಹಿ . . . ಕಸ್ತುರಿಸಿದ ಕೃಪೆಯಿಂದೆ (ಪೋಹಶ. ೯೦–೮೫). **ಮೈದಡವು** : ಅಂದಗಜೆ ನೋಡಿ ಮೈದಡವಿ ಕೊಂಡಾಡುತಂ (ಬಿಪಾರ. ದೀ. ೦೨೩–೨೯) : ಮೈದ[ಪಾಠಾಂ. ಮೆಯ್ದ]ಡವುತ ಕರಗುತ ಒಡನೊಡನೆ ಬಿಗಿದಪ್ಪಿಕೊಳುತಂ ಗುಡಿಯೊಳಾಗಳೆ ಪೊಕ್ಕನು (ಬಿಶಪು. ೭೦–೭೨): ಬಾರ್ಯ ಕರ್ಣಬಾಯೆನುತ ತುಳುಕಿದನು ಕಂಬನಿಯ ಕೋಮಳತಳದಿ ಮೈದಡವಿದನು (ಕುಮಾರವ್ಯಾ. ದ್ರೋ. ೧–೨೩). **ಮೈದಡಹು** : ಅಕ್ಕಜಿಂ ಮೈದಡಹಿ ಮಗನಂ ತಕ್ಕವಿಸಿ (ಬಿಶಪು. ೯–೭೦); ಮಾನಿನಿಯ ಮೈದಡಹಿ ಚಿಂತೆಯದೇನು ತಂಗಿ ಬತಾಂಗಿ ಹೇಳಾ ಮೌನಮುದ್ರೆಯದೇನೆನಲು (ಕುಮಾರವ್ಯಾ. ಆ. ೦೭–೪೩); ತಪ್ಪುಂಟದನು ಮಜಿಯೆಂದು ಮೈದಡಹಿ ಶಂಕರಂ ಕೂರ್ತು . . . ಪಾಡೆಂದು ತಾಳವನಿತ್ತನು (ಸಾಂಡಕು. ೫–೨೩). [ಮೆಯ್$_{2}$ + ತಡವು$_{2}$]

**ಮೆಯ್ದಡಹು** 'ಮೆಯ್ದಡವು' ನೋ.

**ಮೆಯ್ದರ್** (ಕ್ರಿ). (ಆಲಂ) ಮನಸ್ಸುಮಾಡು; ಇಚ್ಛೆಪಡು: ಜೈನದೀಕ್ಷೆಗೆ ಮೆಯ್ದಂ ತರುಣಜನಂಗಳ್ ತರ್ಪರ್ ಪರಿಣತವಯಸರ್ಕಳ ಪ್ಪವರ್ ಮೆಯ್ದಾರರ್ (ಆದಿಪು. ೦೩-೪೪); ಇನಿದೆಂಬಯ್ ವಿಷಮುಪ್ಪ ದುರ್ವ್ಯಸನಮುಂ ಧರ್ಮಾಮೃತಂ ಕೈಪೆಯೆಂದೆನಸುಂ ಮೆಯ್ದರಲಾಜ್ (ಶಬ್ದಸಂ. ೦೭೨-೦೭); ಮದಿರಾಪಾನಕ್ಕೆ ಮೆಯ್ದಾರದೆ ಸುಚರಿತ್ರರಂ ಪಾರದೆ . . . ಏಕಾಂತದೊಳ್ ನಿಲ್ಲದಿರಾಂ ಬರ್ಪನ್ನವಾಯ್ತುಂ ನಿನಗಿದು ವಿಗತಾಪಾಯಮುಪ್ಪೊಂದುಪಾಯಂ (ಜಗದ. ೦೬-೦೨೭). [ಮೆಯ್$_{2}$ + ತರ್]

**ಮೆಯ್ದಳಿ** (ಕ್ರಿ). ಮೈಮೇಲಿನ ಪರಿವೆ ಬರು; ಚೇತರಿಸಿಕೊಳ್ಳು; ಎಚ್ಚರಾಗು: ತುಱುಗಿಲಾಳ್ಗಳ ಶೈತ್ಯೋಪಚಾರದತ್ತಣಿಂ ಮೆಯ್ದಳಿದೆತ್ತುಂ ದಿಟ್ಟಿಸುವ ಭರದೊಳ್ ಇದಿರ್ಗೆ ಬಂದ ತನ್ನಯ್ಯನ ಬೆಂಬಲದ ಸೇನೆಯುಂ ಕಂಡು ತಾನವಜಿಗೊಳೊಂದಿದಂ (ರಾಜಶೇ. ೯೪-೨೪). [ಮೆಯ್$_{2}$ + ತಿಳಿ$_{1}$]

**ಮೆಯ್ದಾಂಟೆ** (ನಾ). ದೇಹದ ತೀಟೆ, – ನವೆ: ಜೇಂಟದ ಸುಳಿವಿಲ್ಲದೆ ಕಲಾವಿಹೀನತೆಯಿಂದ ಮೆಯ್ದಾಂಟೆಯನ್ನು ಮಸಗಿಸಿ ತುರಿಸಿ ತೀರ್ಚುವ ಮೃಗವೇ ಮೊರೆತು . . . ಸಂಸ್ಕಾರಕಾರಕನಲ್ಲಪಹುದು (ಮಂತ್ರಶ. ೯೯-೦೯).

[ಮೆಯ್$_{2}$ + ತೀಂಟೆ$_{1}$]

**ಮೆಯ್ದಾವಿಗೆ** (ನಾ). (ಆಲಂ) ದೇಹದ ಕಾಂತಿ; ಶರೀರದ ತೇಜಸ್ಸು: ಕೆಯ್ದಾವಿಗೆ ಮುಂದೆ ನವಕಿರ್ದಾ ರಾಯ ಮೆಯ್ದಾವಿಗೆಯೊಳ್ ನಡೆವನು (ಶಠಕ. ೦೨-೦೦). [ಮೆಯ್$_{2}$ + ದೀವಿಗೆ]

**ಮೆಯ್ದಾವು** (ಕ್ರಿ). ಶರೀರವನ್ನು ಆವರಿಸು; ವ್ಯಾಪಿಸು: ಭಾವ ಸುರತಮಂ ಮಾಡಿದ ಸವಿ ಮೆಯ್ದಾವಲ್ಪಟ್ಟಿದ ಪರವಶವೋ ಎನೆ ಶಿವಿದುಪಾ ಪ್ರಳಯಂ (ಜಯುಕಾ. ೪-೨೩). [ಮೆಯ್$_{2}$ + ತೀವು]

**ಮೆಯ್ದುಂಬು**, **ಮೈದುಂಬು** (ಕ್ರಿ). ೧. ದೇಹವನ್ನೆಲ್ಲ ಆವರಿಸು; ಶರೀರವನ್ನೆಲ್ಲ ತುಂಬು: ಭಸಿತವಂ ಮೆಯ್ದುಂ[**ಪಾಠಾಂ.** ಮೈದುಂ]ಬಲುದ್ಧೂಳಿಸುತ (ಬಸವ. ೦೨-೦೭). ೨. ದೇಹವು ಚೈತನ್ಯದಿಂದ ಕೂಡು: ಬಸವನಸು ಉರವಣಿಸಿ ಬಂದಿತು ಕಿನ್ನರಯ್ಯಗಳ ಅಸುವೊದಗಿ ಮೆಯ್ದುಂಬಿ ಬರೆ (ಬಸವ. ೩೩-೩೭). **ಮೈದುಂಬು**: ೧. ಬಿರುಗಾಳಿ ಮೈದುಂಬಿ ಆಗಸದ ಮೂಲೆಮೂಲೆಯಲಿ ಸಿಡಿಲು ಮಿಂಚಿನ ಚಾಟುಕೋಲು ಬೀಸಿ ಮಧುರಯಾತನೆ ಬಾಳ ಸುತ್ತುವರಿಯಿತು ಮೊರೆದು (ಪಂಪು. ೪೨-೦೩). ೩. ಶರೀರದ ಮೇಲೆ ದೈವಶಕ್ತಿಯ ಆವಾಹನೆಯಾಗು: ಆ ಮಹಾರಾಯಿತೀಗೆ ಅಮ್ಮ ಮೈದುಂಬಿದೆ . . ಎಂದು ಸಿಡುಕಿದರು (ಪಂದಿಪ. ೪೦); ದೇವರು ಮೈದುಂಬಿ ಊರಿಗೆ ಕೇಡು ಅಂತ ಹೇಳಿತು (ರೂಢಿ). [ಮೆಯ್$_{2}$ + ತುಂಬು$_{1}$]

**ಮೆಯ್ದುಡಿಗೆ** 'ಮೆಯ್ದೊಡಿಗೆ' ನೋ.

**ಮೆಯ್ದುನ**, **ಮೇಹುದು**, **ಮಯಿದುನ**, **ಮಯ್ದುನ**, **ಮೈದ**, **ಮೈದುನ** (ನಾ). ೧. ಗಂಡನ ಅಥವಾ ಹೆಂಡತಿಯ ತಮ್ಮ. ೨. ತಂಗಿಯ ಗಂಡ: ಎನ್ನ ಮೆ[**ಪಾಠಾಂ.** ಮ]ಯ್ದುನನಪ್ಪ ವಜ್ರಬಾಹುಗಮೆನ್ನ ತಂಗೆಯಪ್ಪ ವಸುಂಧರೆಗಂ ವಜ್ರಜಂಘನೆಂಬ ತನುಜನಾದಂ (ಆದಿಪು. ೩-೬೩ ವ); ಎನ್ನ ಮೆ[**ಪಾಠಾಂ.** ಮ]ಯ್ದುನಂ ವಜ್ರಬಾಹುಗಮೆನ್ನ ತಂಗೆ ವಸುಂಧರೆಗಂ ವಜ್ರಜಂಘನೆಂಬ ಮಗನಾದೊಂ (ಚಾವುಂಪು. ೨೩). **ಮೇಹುದು**: ೧. ಶ್ರೀಮನುಮಹಾಪ್ರಧಾನಂ ಜಾತೆಯ ದಣ್ಣಾಯಕರ ಮೇಹುದು ಆ ಮಾಳವೂರಧಿಕಾರಿಗಳ ಕೊವಾರ ಕೇಸವಪ್ಪನೂ (ಎಕ. IX (ಪ), ಚನ್ನಕ. ೭೬-೦೪; 1306). **ಮಯಿದುನ**: ೧. ಧೀರನುದಾರಮೇರು ರಕ್ಷಿತ್ರ(ಪ್ರ) ಮಯಿದುನ ಸೊಯ್ಯನ್ (ಎಕ. XI, ಚಿತ್ರದು. ೦-೨೦; 1310); ದೇವಪ ದಂಣಾಯಕರ ಮಯಿದುನ ಬಿಮುಳಪನವರು (ಎಕ. XVI, ತುಮಕೂ. ೭೯-೯; 1314). **ಮಯ್ದುನ**: ೧. ಭಾನುಮತಿಗೆ ನಿನ್ನಾಣ್ಮನುಮಂ ನಿನ್ನ ಮಯ್ದುನನುಮಂ ನೀನೊಪ್ಪುಗೊಳ್ಳೆಂಬುದುಂ (ಪಂಪಭಾ. ೭-೩೯ ವ); ದಂಡನಾಯಕ ಮಹಾದೇವಮ್ಯಗಳುಂ ಅವರ ಮಯ್ದುನಂ ಶ್ರೀಪುರದ ಹೆರ್ಗಡೆ (ಸೌಇಇ. XI-i, ೩೦-೨೪; 1138). ೨. ಕಾಶ್ಯಪಿಯೆಂಬೊಳೆನಗೆ ತಂಗೆಯಿಲ್ಲ ಸೋಮಶರ್ಮನೆಂಬೊಂ ಮಯ್ದುನನುಮಿಲ್ಲ (ವಡ್ಡಾರಾ. ೩-೦೯). ೩. ಪ್ರಿಯ; ನಲ್ಲ: 'ನೆಯ್ದಿಲಮಯ್ದುನ' ಪರಾ. **ಮೈದ**: ೧. ಅಂತೂ ಮೈದನ್ನ ಬಯ್ಯೋದರಲ್ಲಿ ನೀವು ನನ್ನ ಮರ್ಯಾದೇನ ತಿಪ್ಪೇಗೆ ಎಸೀತಿದ್ದೀರಿ (ಕಳಾ. ೨೦೩). **ಮೈದುನ**: ೧. ತನ್ನ ಮೈದುನನಪ್ಪ ಮೇಘಮಾಳಿ ವಿದ್ಯಾಧರನಲ್ಲಿಗೆ ಪೆರ್ಗಡೆಗಳಂ ಕೂಸಂ ಬೇಡಿಯಟ್ಟೆ (ವಡ್ಡಾರಾ. ೪೨-೦೨); ಅತ್ತೆ ಮಾಯೆ ಮಾವ ಸಂಸಾರಿ ಮುವ್ವರು ಮೈದುನರು ಹುಲಿಯಂಥಾ ಅವದಿರು (ಜಾನಪದ. ೨. ೦೪೩–೩೨೯). ೨. ಏದೊರೆಯಂ ಯಮನಂದನನೇದೊರೆಯಂ ಭೀಮಸೇನನೇದೊರೆಯಂ ಕಂಜೋದರನ ಮೈದುನಂ (ಪಂಪಭಾ. ೭-೦೭); ಚರಣ ವದನವ ತೊಳೆದು ನಿರ್ಮಳವರಜಲವನೀಂಟಿದರು ನಿರುಪಮಪರಮಕರುಣಾರ್ಣವನು ಮೈದುನ ಸಹಿತ ಸರಸಿಯಲಿ (ಕುಮಾರರಾ. ೦೦-೩೭); ಸಹೋದರಿ ಗಿರಿಜೆ ಮೈದುನನು ಶಂಕರನು ಸುರರೆಲ್ಲ ಕಿಂಕರರು (ಹರಿಶಾ. ೨೩).

[ದೇ.೩ ತಮಿ. ಮೈತುನನ್, ಮಚ್ಚಾನ್, ಮಚ್ಚುನನ್; ಮಲ. ಮಚ್ಚುನನ್, ಮಚ್ಚಿನನ್; ತುಳು. ಮೈತಿನೆ, ಮೈದುನೆ; ಕೊಡ. ಮಚ್ಚಣ; ತೆಲು. ಮೋಸ; ಗೊಂಡಿ. ಮೈದೊ = ಗಂಡ]

**ಮೆಯ್ದುನಿಸು** (ಕ್ರಿ). ಮೈದುನನೊಡನೆ ತೋರಿಸುವ ಸಲಿಗೆಯನ್ನು ತೋರಿಸು: ಭಾವಾ ನಮೋಸ್ತು ನಿಮ್ಮಡಿ ದೇವಕಿ ಮೆಯ್ದುಣಿವಳೆಂದು ಬಂದಿರೆ ಲೇಸಾಯ್ತಾವುದನುಡತಂದಿರೆನುತ್ತಾ ವಧು ಮೆಯ್ದುನಿಸಿ ನಗುತ್ತು ಮಡ್ಡಂ ಬಂದಳ್ (ಅರ್ಜನೇ. ೭-೩); ಮೆಯ್ದುನಿಸಿ ದೇವಕಿದೇವಿಯಾನಂದ ವಸ್ತ್ರಮಂ ತೋಱಿ ತಱಕಟವಾಡಿದೊಡೆನಗೆ ನಗೆಬೆಂದಱಾಯುದತಿಮುಗ್ಧಕ ಮುನಿ ಮುನಿದು (ಅರ್ಜನೇ. ೭-೦೩ ವ). [ಮೆಯ್ದುನ + – ಇಸು$_{1}$]

**ಮೆಯ್ದೂಳು** (ನಾ). ದೇಹಕ್ಕೆ ಅಂಟಿದ ಧೂಳು: ಹತ್ತಿದ ಮೆಯ್ದೂಳ ಕೊಡಹಿ ಕರವ ಹಿಡಿದೆತ್ತಿದಳಬುಜಾಯತಾಕ್ಷಿ (ಮೋಹತ. ೬-೨೭).

[ಮೆಯ್$_{2}$ + ದೂಳು (< ದೂಳಿ)]

**ಮೆಯ್ದೆಗೆ**, **ಮೈದೆಗೆ** (ಕ್ರಿ). ೧. ಹೆದರು; ಅಂಜು; ಭಯಗೊಳ್ಳು: ತಿರುವಾಯೊಳಿಡೆ ಸುರರ್ ಮೊಱೆಯಿಟ್ಟರ್ ಭರದೆ ತಗೆನೆಱಿಯೆ ಮೆಯ್ದೆಗೆದರವಿಂದೋದ್ಭವನಿನೊಗೆದುದಾ ಬ್ರಹ್ಮಾಂಡಂ (ಪಂಪಭಾ. ೦೨-೦೯೨); "ಮೆಯ್ದೆಗೆದ = ಮೈಯಳಿದ ಎಂದರೆ ಗರ್ಭಸ್ರಾವವಾದ" (ಪಂಪದೀ. ೪೯೯). ೨. ಹಿಮ್ಮೆಟ್ಟು; ಓಂಜರಿ; ಹಿಂದೆಗೆ: "ಅಕ್ಕುಳಿಸಿತೆಂದುಂ, ಮೆಯ್ದೆಗೆದುದೆಂದುಂ. . .ನುಣ್ಚಿತೆಂದುಂ, ಪಾರಗೆಯ್ಕೆಂದುಂ—ಈ ೧೩ ಅಪಸರಣಕ್ಕೆ ಪೆಸರು" (ಶಶಾ. ೭೨-೬೪೯); ವಲ್ಲಭೆಯ ವಚನಮಂ ಮನವಲ್ಲದ ಮನದೊಳ್ . . . ಸೈರಿಸೆ ಮೆಲ್ಲನೆ ಮೆಯ್ದೆಗೆವು (ಶಾಂತಿಪು. ೯-೩೦); ಅವರ ಬಲಕ್ಕೆ ಸುಗಿದು ಮೆಯ್ದೆಗೆವ ಬೇಡವಡೆಯುಂ (ಪಂಪಭಾ. ೪-೬೩ ವ); ಶೃಂಗಾರರಸಕ್ಕೆ ಮನಂದಂದು ವೈರಾಗ್ಯರಸಕ್ಕೆ ಮೆಯ್ದೆಗೆದು (ಗಿಂಕ. ೩-೪೭ ವ); ಜಾಜಿದರು ಪಡಿತಳಕೆ ಮೆಯ್ದೆಗೆದರಡಹೊಯ್ದನವಿ (ಸಂಭಪ. ೦೯-೩೭). ೩. ಕೃಶವಾಗು; ಸಣ್ಣಗಾಗು: ಬತ್ತು: ಕೊರಗಿ . . . ಮೆಯ್ದೆಗೆದುವೆಂಬಂತೆ ತಾವರೆಗಳ್ಮೃಗಿಯೆ (ಶಾಮಂಉ. ೩೭೩). **ಮೈದೆಗೆ**: ೨. ಮೈದೆಗೆಯದಿರಿ ಕಲಿಯಾಗಿಯೆಂದನು ನೃಪತಿ ಸುಭಟರಿಗೆ (ಕುಮಾಭಾ. ೦-೨೨); ಹುರಿಯೊಡೆದು ಮೈದೆಗೆದು ಸಲೆ ಕೈಮುಱಿದು ಕೈದುವ ಬಿಸುಟು ಪಡೆ ಮೊಗದಿರುಹಲೆಚ್ಚನು ಕೊಚ್ಚಿದನು ಪುಷ್ಕರ ಚತುರ್ಬಲವ (ನಳಚ. ೯-೩೦); ವರ್ತಮಾನ ತಿಳಿಯುವ ಮೊದಲಿಗೇ ಮೈದೆಗೆದುಬಿಡುವ ಎತ್ತುಗಡೆ ಅವನದು (ಬಶ್ಯಕ. ೨೭೨). ೩. ಕೆಱೆ ಹಳ್ಳ ಬಾವಿಗಳು ಮೈದೆಗೆದರೆ ಗುಳ್ಳೆ ಗೊರಜೆ ಚಿಪ್ಪುಗಳ ಕಾಣಬಹುದು (ಬಸವ. ೬೭೦); ಸರೋಧಿ

ಮೈದೆಗೆದುದು . . . ಗಗನಮಣಿ ಕಿರಣಮಂ ಪಸರಿಸಿದನು (ಸಿದ್ಧರಾ. ೬-೪೩) ; ಭಾರ್ಗವನ ಮಾತಿಗೆ ಕಡಲು ಮೈದೆ [ಪಾಠಾಂ. ತೆ]ಗೆದಂತೆ ತೆಗೆದುದು ಸರ್ವ ಪರಿವಾರ (ತೊರರಾ. ೬-೦೩-೬). ೪. ದೇಹವನ್ನು (ಆಲಿಂಗನದ ಬಂಧನದಿಂದ) ಬಿಡಿಸಿಕೊಳ್ಳು,-ಹಿಂದಕ್ಕೆ ತೆಗೆದುಕೊಳ್ಳು : ಎಱಗಿದಕ್ರೂರನನು ಕೈದಣಿಯೆ ತೆಗೆದು ತಕ್ಕಯಿಸಿದನು ಮಿಗೆ ಮೈದೆಗೆಯಲೀಯದೆ ಜಿಗಿದ ಪುಳಕಾಳಿಗಳ ಸುಪ್ರೇಮಾರ್ದ್ರಹೃದಯೋಕ್ಷಣದಲಡಿಗಡಿಗೆ (ಶ್ರೀಭಾಗ. ೧೦-೩೪-೫). ೫. ಪರಾಕ್ರಮವನ್ನು ತೋರು: ಎಯ್ದೆ ಹಗೆಯಲಿ ಹೂಣೆ ಹೊಗದಿರು ಮೈದೆಗೆದು ಕಾದುವುದು ಜಯಸಿರಿಯ್ಯೆದೆತನ ನಿನ್ನಿಂದ ಮೆಱೆವುದು ಕಂದ ಕೇಳೆಂದ (ಕುಮಾರರಾ. ೪-೪೪). ೬. ಕಳೆ ; ಮುಗಿ ; ತೀರು : ಅಗಲದೆ ಕಟ್ಟಿ ಕಱೆವ ಮುಱೆಗಾಲಂ ಮೈದೆಗೆದ ಸಮನಂತರದಲ್ಲಿ (ಉದ್ಭಟ. ೧೧-೨ ಪ). [ ಮೆಯ್$_{2}$ + ತೆಗೆ$_{1}$ ]

**ಮೆಯ್ದೆರೆ** (ನಾ). ಶರೀರದ ಸುಕ್ಕು,—ಮಡಿಕೆ : ಪಾಮರಿಯರ ಜೋಲ್ವ ಮೆಯ್ದೆರೆಗಳಂ ನೆಱೆ ಭಾವಿಸಿ ಬೀಡುವೆತ್ತು ಬಿತ್ತರಿಸುವ ದಾಡಿಮವ್ರಜಮಿದೆಂಬಭಿಶಂಕೆಯನಪ್ಪುಕೆಯ್ದು ಪೀವರಕುಚದಲ್ಲಿ ತಾಗಲನುಗೆಯ್ದುದು ಕೀರಕುಳಂ (ಕುಸುಮಾ. ೨-೪೩). [ ಮೆಯ್$_{2}$ + ತೆರೆ$_{4}$ ]

**ಮೆಯ್ದೊಗಲ್**, ಮೆಯ್ದೊಗಲು, ಮೈದೊಗಲ್ (ನಾ). ದೇಹದ ಚರ್ಮ : ಸುಟ್ಟು ಕರಿಮುರಿವೋಗಿ ಚನ್ನಮೆಯ್ದೊಗಲ್ ನಿನತು ಬಣ್ಣಮೋಡುವುದು (ಬಿದ್ದಶ್ರ. ೨-೨೬). **ಮೆಯ್ದೊಗಲು** : ಹಱಿದ ಮೆಯ್ದೊ [ಪಾಠಾಂ. ಮೈದೊ:]ಗಲುಗಳ ಸೀಸಕ ಮುಱಿದೊಗುವ ನೆತ್ತರಿನ ನೆತ್ತಿಯ . . . ಮಿಗೆ ತೂಪಿಱುವ ರಕುತದ ರಣದ ನಾಟಕದಬಿಕಿಕಾಱರು ತಾವುರಿಯಲೊದಗಿದರು ಸರಿಸದಲಿ (ತೊರರಾ. ೬-೦೪-೨೨). **ಮೈದೊಗಲ್** : ಕಾಸಿದೆಣ್ಣೆಯ ಪೊಯ್ಲಿಗೆ ಪಟುಭಟರ ಮೈದೊಗಲ್ ಕೀಸಿದುದು (ಚೆಂಕು. ೮೨-೩೪). [ಮೆಯ್$_{2}$ + ತೊಗಲ್ ( < ತೋಲ್$_{1}$ ) ]

**ಮೆಯ್ದೊಗಲು** ' ಮೆಯ್ದೊಗಲ್ ' ನೋ.

**ಮೆಯ್ದೊಡವು**, ಮೈದೊಡವು (ನಾ). ದೇಹಕ್ಕೆ ತೊಡುವ ಆಭರಣ,-ಒಡವೆ : ಗಾಡಿ ಮೆಯ್ದೊಡವೆನೆ ಮಾಸಿ ರೂಪುಗರೆದಿರ್ದೊಡಮಾತನ ರೂಪಿದೊಂದು ಕಣ್ದೊಡವೆನೆ (ಶಂರಾಮಾ. ೩-೩೯) ; ಕಡೆಗಣ್ಣ ಬೆಳಗು ಪೊಸ ಮೆಯ್ದೊಡವುಜ್ಜಳಿಪ ಮೊಗಂ ಕನ್ನಡಿಯೆನೆ ಬಳೆದಂ (ಕಬ್ಬಿಗ. ೦೨) ; ಪುಷ್ಪಸರನ ರಾಣಿಗೆ ಮೆಯ್ದೊಡವನುವೊಪ್ಪಿಸಿ ತುತಿಯ ಮಾಡಿದರು (ಮೋಹತ. ೦೬-೪೩). **ಮೈದೊಡವು** : ತರುಣೀತನುಜ ಹಸಾದವೆನುತಾ ಧರಣಿಜೆಯ ಮೈದೊಡವುಗಳ ಬೈತಿರಿಸಿದನು (ತೊರರಾ. ೪-೨-೦೨) ; ಮುಡಿ ಮೇಘ ಮೈದೊಡವೊಳಪು ಬಿಡದಿಂದ್ರಚಾಪದಂತಿರಲಾಗ ಕಾರ್ಗಾಲದೊಡತಿಯೊಲವಳು ನಡೆದಳು (ಶಂಸವಿ. ೯-೪೫). [ಮೆಯ್$_{2}$ + ತೊಡವು]

**ಮೆಯ್ದೊಡಿಗೆ**, ಮೆಯ್ದುಡಿಗೆ, ಮೈದೊಡಿಗೆ, ಮೈದೊಡುಗೆ (ನಾ). = ಮೆಯ್ದೊಡವು: ರಾರಾಜಿಪ ನವ್ಯವಸ್ತ್ರಸಂತತಿ ಸಪ್ತವಾರ ಮೆಯ್ದೊಡಿಗೆ. . . ತೋರಮುತ್ತುಗಳ ಪಾಲಿಸಿದ (ಮೋಹತ. ೦೫-೦೬) ; ಮೆಯ್ದೊಡಿಗೆಯ ದುಗುಲವನಿತ್ತನಿವನಂತೆ ಕೆಯ್ದೊಱೆವವನಾವನೆನಿಸಿ (ಶರಶ. ೩೮-೫೮). **ಮೆಯ್ದುಡಿಗೆ** : ತೊಟ್ಟ ಮೆಯ್ದು [ಪಾಠಾಂ. ಮೈದು]ಡಿಗೆಗಳ . . . ಕಾಂತಿ ಸೂಸುತಿರೆ (ಶ್ರೀಬಿಂಬಾ. ೩೩-೨೨). **ಮೈದೊಡಿಗೆ** : ಮಟ್ಟಿಯ ಧೂಸರದ ಮೈದೊಡಿಗೆ ಮೆಱೆಯೆ ವಿಳಾಸದಲಿ ನಡೆತಂದನರ್ಜುನದೇವ ನಿದ್ದೆಡೆಗೆ (ಕುಮಾಭಾ. ೨೦-೦೩). **ಮೈದೊಡುಗೆ**: ರುದ್ರಾಕ್ಷಿಯೇ ಮೈದೊಡುಗೆ ಯೆನಗೆ (ಬಸವಪು. ಬಿ. ೩೬-೭೮). [ಮೆಯ್$_{2}$ + ತೊಡಿಗೆ (<ತೊಡುಗೆ)]

**ಮೆಯ್ದೊಳೆ**, ಮೈದೊಳೆ (ಕ್ರಿ). ಶರೀರವನ್ನು ತೊಳೆ,-ಶುದ್ಧಿಗೊಳಿಸು; ಸ್ನಾನ ಮಾಡು : ಮೆಯ್ದೊ [ಪಾಠಾಂ. ಮೈದೊ]ಳೆದು ನೊಸಲಲಿ ಪರಭಸಿತಮಂ ಪೂಸಿ (ಬಸವು. ೩-೩೨) ; ಬಿಸಿನೀರಿಂದೆ ಮೆಯ್ದೊಳೆದು . . . ಕಪ್ಪಿಟ್ಟು ನಯನದೊಳಸಿತಾಂಜನವನಿಕ್ಕಿದಳು (ಮೋಹತ. ೧೧-೪೬); ಬಳಲ್ಕೆಗಳೆಯಲೆಳಸಿ ಘಳಲನೊಳಪೊಕ್ಕು ಮೆಯ್ದೊ [ಪಾಠಾಂ. ಮೈದೊ]ಳೆದು (ರಾಜಶೇ. ೬-೨೪ ಪ). **ಮೈದೊಳೆ** : ಕುದುರೆಯಂ ನೀರೂಡಿ ಮೈದೊಳೆದು [ಪಾಠಾಂ. ಮಿಸಿಸಿ, ಮಿಸಿ]ಕಟ್ಟಿ ತಾನು ನೀರ್ಗೆ ಕುಡಿದು (ಪದ್ಮರಾ. ೧೬೨-೨೦). [ಮೆಯ್$_{2}$ + ತೊಳೆ$_{1}$]

**ಮೆಯ್ದೋಱಿಸು** (ಕ್ರಿ). ಕಾಣಿಸಿಕೊಳ್ಳು ; ಪ್ರತ್ಯಕ್ಷವಾಗು : ಶ್ರೀಮಹಾದೇವ ದೇವೇಶ ಸರ್ವಜ್ಞ ಶಿರೋಮಣಿ ಮೆಯ್ದೋಱಿಸನಗೆ (ಮೋಹತ. ೨೬-೫೬). [ಮೆಯ್ದೋಱು + — ಇಸು$_{3}$]

**ಮೆಯ್ದೋಱು**, ಮೈದೋರು, ಮೈದೋಱು (ಕ್ರಿ). ಕಾಣಿಸಿಕೊಳ್ಳು ; ಪ್ರಕಟವಾಗು : ಉಗ್ರಾರಿವಂಶಲತಾವಲ್ಲರಿಗಳ್ಗೆ ದಾವಶಿಖಿವೊಲ್ ಮೆಯ್ದೋಱೆ (ಶಂಶಭಾ. ೩-೩೩) ; ದುರಿತಸಂತಾನಾಷ್ಟಕವನಪಹರಿಸಿ ನಿಜಗುಣವೆಂಟು ಮೆಯ್ದೋಱಿರಲು (ಜೀವಂಧ. ೦-೨) ; ಸೋತವಳೊಡನೆ ವಂಚನೆ ಬೇಡ ಮತ್ಪ್ರಾಣನಾಥ ಮೆಯ್ದೋಱೆಂದಳಬಲೆ (ಮೋಹತ. ೨೬-೪೬). **ಮೈದೋರು**: ಪೂರ ಮೈದೋರೆನೆಂಬಾ ಕಪಟಿಯುಂಶಾವತಾರದಿಂದಾರ್ಗೇನು (ಮುಂಕುಳ. ೩೮) ; ದೂರದ ದಿಗಂತದಲಿ ಗಿರಿಯುತ್ತಮಾಂಗದಲಿ ಮೈದೋರಿದನು ಆಹ ಹೊಂಬಿಸಿಲಿನೆಳನೇಸರು ! (ಚಿತ್ರಾಂಗ. ೬-೦೫೯) ; ಮುಗಿಲ ಮರೆಯನ್ನು ಕಳೆದು ಚಂದ್ರಮನು ಶರತ್ಕಾಲದಲ್ಲಿ ಮೈದೋರುವಂತೆ, ನಾನು . . . ಬರುವೆನು (ಮುಚಿಶ. ೪). **ಮೈದೋಱು** : ಎನ್ನೊಳಗಿರ್ದು ಮೈದೋಱದ ಭೇದವ ನಿಮ್ಮಲ್ಲಿ ಕಂಡೆನು (ಬಸವರಾ. ಬಿ. ೨೬-೫೦) ; ಒರಿದೊಂದಜ್ಞಾನದಿಂ ಯೌವನವಿಕಳತೆ ಮೈದೋಱೆ (ರಘುತ. ೫) ; ಧರಣಿಯಲಿ ಮೈದೋಱಿದನು ಶಂಕರನು ವೃಷಭಾಕಾರದಲಿ (ತೊರರಾ. ೦-೮-೬೮). [ಮೆಯ್$_{2}$ + ತೋಱು]

**ಮೆಯ್ನಡುಕ**, ಮೈನಡುಕ (ನಾ). ಶರೀರದ ಕಂಪನ ; ಮೈ ನಡುಗುವಿಕೆ : ತತ್ಪುರವರದಲ್ಲಿ ಸಾತ್ವಿಕದ ಮೆಯ್ನಡುಕಂಗಳ ಮಾಗಿಯಾಗಳುಂ (ಅರ್ಜುನ. ೦-೬೮). **ಮೈನಡುಕ** : ಮೈನಡುಕ ನಿಂತಿತು (ಬಳಿಶ. ೦೦೨). [ಮೆಯ್$_{2}$ + ನಡುಕ]

**ಮೆಯ್ನಡುಗು** , ಮೈನಡುಗು (ಕ್ರಿ). ದೇಹವು ಕಂಪಿಸು ; ಶರೀರದಲ್ಲಿ ನಡುಕವುಂಟಾಗು : (ಮೆಯ್ನಡುಗಿ) ಅಯ್ಯೋ ! ಎಂದೂ ಇಲ್ಲದ ಭಯವು ನನಗೇಕೆಯೋ ಇಂದುಂಟಾಗಿದೆ. (ಸುಗುಣ. ೫-೦೬). **ಮೈನಡುಗು** : ಬೆರ್ಚಿ ಭಯವಶದಿಂ ಮೈನಡುಗೆ (ಧರ್ಮಾಮೃ. ೬-೮೪). [ಮೆಯ್$_{2}$ + ನಡುಗು$_{1}$]

**ಮೆಯ್ನವಿರ್**, ಮೆಯ್ನವಿರು, ಮೈನವಿರ್, ಮೈನವಿರು (ನಾ). ಶರೀರದ ಮೇಲಿನ ಕೂದಲು : ಆತನ ನಸೆಯಂಬಿನ ಮೊನೆಗಣೆಗಳೆಂಬಿನಂ ಮೆಯ್ನವಿರ್ನಿಮಿರ್ದುವು (ಕಾದಂಬ. ೭೩೮) ; ಬಾಷ್ಪಾಂಬು ಕೈಗಣ್ಕೆ ಕಣ್ಮಲರ್ಗಂ ಮೆಯ್ನವಿರ್ಗಳ್ ಪೊದಟ್ಟೊಗೆಯೆ (ಶಂರಾಮಾ. ೬-೫೦) ; ಇಷ್ಟಶಿಷ್ಟಜನ ಕಲ್ಪಮಹೀಜರನೆಯ್ದೆ ಮೆಯ್ನವಿರ್ನಾಲಗೆಯೊದದಂ ಪೊಗಳಲಾರ್ಪವೆ ವಾಸುಗಿಯಯ್ನುದಿಂಬರ (ಇಶಾಪ. IX–i. ೨೩೬-೩೨; 1160). **ಮೆಯ್ನವಿರು**: ಕಾರೊಡಲು ಮೇಗಡರ್ದ ಮೆಯ್ನವಿರು . . . ಕೂರಂಭು ದೀರ್ಘಧನು ವೆರಸಿ ನೆರೆದುದು ಕಾನನಾಂಗಳೆನಿಪ್ಪ ಶಬರಾಧಿಪರು (ಹರಿಶ್ಚ. ೫-೨); ಕರಮೆ ಮೆಯ್ನವಿರೇಳುತಾಲಿವರಲಂತೆ ಕರಗುತ್ತೆ . . . ಅಮಲಸಾತ್ವಿಕವೆ ಸಾಕಾರವಾದಂತೆ ಬಂದು (ಸಿದ್ಧರಾ. ೦೩-೫೬) ; ಕುಟಿಲಾಳಕಿಯರ . . . ಮೆಯ್ನವಿರ ಸುಟಿಯಿಂದ ಗುಡಿಗಟ್ಟಿಸುವ ಮಾಗಿಯ ಹಿಮ ವಿಟನಂತೆ ಕಣ್ಗೆ ರಂಜಿಸಿತು (ಮೋಹತ. ೪-೪೫). **ಮೈನವಿರ್** : ಸೀರ್ಪನಿಯಾಂತ ಮೈನವಿರ್ (ಶಬರ. ೩೬-೭೯) ; ಅವಳಾಡಿದ ಮಾತಿಗೆ ಮೈನವಿರ್ಮುಂದುವರಿದು ಗುಡಿಗಟ್ಟಿ ಕಂದದ ಗದ್ಗದದುಲುಹಿಂದ ಸಖಿಯೊಡನೆಂದಳು ಮಾಱುತ್ತರವ (ಶಂಸವಿ. ೯-೦೩೮). **ಮೈನವಿರು**: ' ಮೈನವಿರೇಳು ' ಪರಾ. [ಮೆಯ್$_{2}$ + ನವಿರ್]

**ಮೆಯ್ನವಿರು** ' ಮೆಯ್ನವಿರ್ ' ನೋ.

**ಮೆಯ್ನಾಟು** (ಕ್ರಿ). ದೇಹಕ್ಕೆ ಚುಚ್ಚಿಕೊಳ್ಳು ; ಅಂಗದಲ್ಲಿ ನೆಡು : ಬೇಟಕಾರ್ತಿಯರು ನೋಡಿದರರೆಬರು ಮೆಯ್ನಾಟೆ ಮನಸಿಜನಂಬುಗಳು (ಶಬರಶಂ. ೩೦-೦೦). [ಮೆಯ್$_2$ + ನಾಟು$_1$ (< ನಾಂಟು)]

**ಮೆಯ್ನೀರ್**, ಮೈನೀರು (ನಾ). ಉಚ್ಚೆ ; ಮೂತ್ರ : ಇದು ಪೇಳಿದು ಮೆಯ್ನೀರೆಂಬುದನಱಿಯದೆ ಮೆಯ್ಗೆ ಪೂಸಿಕೊಳ್ವುವು ಮಕ್ಕಳ್ (ಧರ್ಮಾಮೃ. ೩-೦೭೬). **ಮೈನೀರು :** ಮಲೆತ ಮೈನೀರೆಂದು ಸಿಂಧುವ ಜಱಿದಿಳಿಗೊಲವೀವ ಕೆಱೆಗಳೊಪ್ಪುದುವು (ಪ್ರಭುಲಿ. ೨-೬೭) ; ಬಾಯಾರಿಕೆ ಹೆಚ್ಚಾಗಿ ಮೈನೀರು ಬಹಳವಾದಾಗ ಈ ಮದ್ದು ಉಪಯೋಗಿಸುತ್ತೇವೆ (ಹಸುಹೊ. ೦೦೨). [ಮೆಯ್$_2$ + ನೀರ್]

**ಮೆಯ್ನೆಳಲ್** (ನಾ). ಶರೀರದ ನೆರಳು: ಅಭೀಳಲಯಾಹಿನಿಷ್ಠುರಫಣೌಘದ ಮೆಯ್ನೆಳಲುದ್ಧತಾರಿಗೆ . . . ವೀರಬಲ್ಲಾಳನ ತೋಳ ಬಾಳು ನೆಳಲಾದುದು (ಎಕ. VII. ಶಿಮೊಗ್ಗ. ೩-೦೩; 1218). [ಮೆಯ್$_2$ + ನೆಳಲ್ (< ನೆೞಲ್$_1$)]

**ಮೆಯ್ನೆಱಿ**, ಮೈನಾರು, ಮೈನೆರೆ, ಮೈನೆಱಿ (ಕ್ರಿ). ಮೊದಲನೆಯ ಸಲ ಮುಟ್ಟಾಗು,–ಋತುಮತಿಯಾಗು ; ಪ್ರಾಯಕ್ಕೆ ಬರು : ಭುವನ ತ್ರಿತಯಂ ತೃಣದಿಂದ ವಸ್ತುವೆನಿಸಿದುದು ಸುಮತಿ ಮೆಯ್ನೆಱಿಯಲೊಡಂ (ಶಾಂತಿಪು. ೪-೬೮) ; ನಿಮ್ಮಡಿ ದೇವಕಿ ಮೆಯ್ನೆಱಿದಳ್ (ಅರ್ಥನೇ. ೭-೬). **ಮೈನಾರು :** ಹುಡುಗಿ ಮೈನಾರಿದಳು (ರೂಢಿ). **ಮೈನೆರೆ :** ಕನ್ನೆ ಬೆಳೆದು ಮೈನೆರೆಯಲ್ (ತ್ರಿಗಂಧ. ೩೩-೭); ಮದುವೆಗೆ ಮೊದಲೇ ಮೈನೆರೆವ ಪಳಸ್ಸೂ . . . ಮುಟ್ಟಬಾರದು (ಕೃಪಾಲ. ೯೪); ಮೈನೆರೆದ ಮೇಲೆ ಮದುವೆ ಮಾಡುವುದೇನು ಚೆಂದ (ಹೊಸಕ್ಷಿ. ೦೮). **ಮೈನೆಱಿ :** ಇವಳ ತಂದಾ ಮನೆಯುಂಮಿವಳು ಮೈನೆಱಿವ ಸಮಯದೊಳ್ ಹಾಳಾಗುವುದೆ ಸತ್ಯಂ (ಸಮ್ಯಕ್ತ್ವ. ೪-೨೪) ; ದೇವಕಿಯು ಮೈನೆಱಿವಳು (ಶಾಸ್ತ್ರಶಾ. ೨೦-೭). [ಮೆಯ್$_2$ + ನೆಱಿ$_1$]

**ಮೆಯ್ನೋಟ**, ಮೈನೋಟ (ನಾ). ೧. ತನ್ನ ಸ್ವರೂಪವು ಇತರರಿಗೆ ಕಾಣುವ ಸ್ಥಿತಿ : ಕೋಟಲೆಯ ಕೊಲ್ಲಣಿಗೆಯುಲಿ ಮೆಯ್ನೋ[ಪಾಠಾಂ. ಮೈನೋ]ಟಕಲಸದೆ ಬಿಸಿಲಲಿವರು ಮಹಾಟವಿಯ ಮಧ್ಯವನು ಹೊಕ್ಕರು (ಕುಮಾರ. ೮-೯೪). **ಮೈನೋಟ :** ೨. (ಅಜ್ಞಾತದಲ್ಲಿರುವವರನ್ನು) ಎದುರಲ್ಲಿ ಕಾಣುವುದು : ದಾಟಿದೆವು ನುಡಿದವಧಿಯನು ವೈರಾಟಪುರದಲಿ ತುಱುವಿಡಿದು ಮೈನೋಟಕೋಸುಗ ಬಂದು ನುಗ್ಗಾಯಿತ್ತು ಕುರುಸೇನೆ (ಕುಮಾರ. ೦೦-೩೭). [ಮೆಯ್$_2$ + ನೋಟ]

**ಮೆಯ್ಪಿಂಗಿಸು** (ಕ್ರಿ). ಹಿಮ್ಮೆಟ್ಟಿಸು : ವಿಮುಖವಾಗಿಸು : ಯುಷ್ಮದೀಯ ವಿಲೋಕಂ ಯಮಲೋಕಮಂ ಪ್ರಜಿಸದಿಂ ಮೆಯ್ಪಿಂಗಿಸಿತ್ತು (ಜಗವಾ. ೦೦-೦೩). [ಮೆಯ್$_2$ + ಪಿಂಗಿಸು]

**ಮೆಯ್ಪೊರ್ದು** (ಕ್ರಿ). ದೇಹವನ್ನು ತಾಗು, — ಸ್ಪರ್ಶಿಸು . . ಎನಗಿನ್ನೇ ನೊಳಗಾದಲೆಂದೆಸೆವ ದೇಹಚ್ಛಾಯೆ ಮೆಯ್ಪೊರ್ದೆ ಕಾಮಿಸಿ ತಳ್ತಪ್ಪಿದಳೀಗ ಳೆಂದು ಬಗೆವಂ ಭೂಪಾಲವಿದ್ಯಾಧರಂ (ಕಾದಂಬ. ೩೭). [ಮೆಯ್$_2$ + ಪೊರ್ದು]

**ಮೆಯ್ಬಣ್ಣ** 'ಮೆಯ್ವಣ್ಣ' ನೋ.

**ಮೆಯ್ಬಲಿ** (ಕ್ರಿ). ದೇಹವನ್ನು ದೃಢವಾಗಿಸು, — ಗಟ್ಟಿಗೊಳಿಸು : ಈತನಾರೀಜಜನಿಯಧಿಪನೌದೊತ್ತಿ ಮೆಯ್ಬಲಿ[ಪಾಠಾಂ. ಮೈಬಲಿ]ದ (ಕುಮಾರ. ೦೪-೦೦). [ಮೆಯ್$_2$ + ಬಲಿ$_1$ (< ಬಲ್$_1$)]

**ಮೆಯ್ಬಿಡು** 'ಮೆಯ್ವಿಡು' ನೋ.

**ಮೆಯ್ಬಿಸುಪು**, ಮೈಬಿಸುಪು (ನಾ). ದೇಹದ ಶಾಖ; ಶರೀರದ ತಾಪ : ಓರೊರ್ಮೆ ಮೆಯ್ಬಿಸುಪಿನೆಸಕಧಿಂ ಪೊಕ್ಕ ನೀರ್ಕದಡಿ ಕುದಿವಿನಂ ಕೃತ್ರಿಮ ತರಂಗಿಣಿಯ ಪೊನಲೊಳ್ ಪೊರಳ್ದು (ಪರ್ವತಿ. ೪-೩೯ ಪ); ಆಕೆಯ ಮೆಯ್ಬಿಸುಪೇಸಳ್ವಿಂಬವೋ (ಚಿತ್ರಶಾ. ೩೦೩). Δ **ಮೈಬಿಸುಪು :** ವಿರಹವಿಮ್ಮಡಿಸೆ ಸುಯ್ ಮೂವಡಿಸೆ ಮೈಬಿಸುಪ್ಪೇರಿದೆ ನಾಲ್ವಡಿಸೆ (ಕಬಿಪು. ೪೭-೦೦). [ಮೆಯ್$_2$ + ಬಿಸುಪು]

**ಮೆಯ್ಬೆದಱು**, ಮೈಬೆದಱು (ಕ್ರಿ). (ಗಾಬರಿಯಿಂದ) ದೇಹವು ಬೆದರು; ಬೆಚ್ಚಿಬೀಳು : ನಿದ್ರಾಮುದ್ರಿತೇಕ್ಷಣಂ ಪದವ ಹಿಡಿದಲ್ಲಾಡಿದಡೆ ಮೆಯ್ಬೆ [ಪಾಠಾಂ. ಮೈಬೆ]ದಱುತೇನೇನೆನುತ (ಕುಮಾರಗ. ೯-೬). **ಮೈಬೆದಱು :** ಗೋಡಗಟ್ಟಾಗಿ ಬಳಸಿಕೊಂಡ ವೀರರ ನೋಡಿ ನಾಗೇಂದ್ರ ಮೈಬೆದಱಿ (ಶರಶ. ೩೬-೪೪). [ಮೆಯ್$_2$ + ಬೆದಱು$_1$]

**ಮೆಯ್ಮರೆ** 'ಮೆಯ್ಮಱಿ' ನೋ.

**ಮೆಯ್ಮರ್ಚು** (ನಾ). ಶರೀರಕ್ಕೆ ಮಾಡುವ ಅಲಂಕಾರ; ದೇಹಾಲಂಕಾರ : ತಾನೆ ಲಕ್ಷ್ಮಿಗೆ ಮೆಯ್ಮರ್ಚನೊಡಚ್ಚುರ್ತಿರ್ಪ್ಪ ಪುರುಷಂ (ಎಕ. XII. ೪೩-೪೪ ; 1112). [ಮೆಯ್$_2$ + ಮರ್ಚು$_2$ (< ಮೆಚ್ಚು$_2$)]

**ಮೆಯ್ಮಸೆ** (ನಾ). ಶರೀರದ ಮೇಲೆ ಉಂಟಾದ ಸಣ್ಣಸಣ್ಣ ಗಾಯ : ಏಱುವಡೆದರು ಹೊಕ್ಕವರು . . . ತಾರುಥಟ್ಟನೊಳಟ್ಟಿ ಮೆಯ್ಮ[ಪಾಠಾಂ. ಮೈಮ]ಸೆ ಸೂಱಿಕಾಱರು ಮಿದುಳ ಜೊಂಡಿನ ಜೋಱುಗಳ ಬೀಱಿದವು ಬೇತಾಳರಿಗೆ ಭಟನಿಕರ (ಕುಮಾರದ್ರೋ. ೦-೩೨) ; ಮೆಯ್ಮ [ಪಾಠಾಂ. ಮೈಮ] ಸೆಯರುಣವಾರಿಯೊ ಮಳೆಗಳಿಲ್ಲದ ಹೊನಲೊ ರಣದಲಿ ಚಿತ್ರವಾಯ್ತು (ಕುಮಾರದ್ರೋ. ೦೪-೭). [ಮೆಯ್$_2$ + ಮಸೆ$_2$]

**ಮೆಯ್ಮಱವೆ** (ನಾ). ಶರೀರದ ಮೇಲೆ ಎಚ್ಚರವನ್ನು ಕಳೆದುಕೊಂಡಿರುವ ಸ್ಥಿತಿ: ಸೋಕುವುದು ಮೆಯ್ಮ [ಪಾಠಾಂ. ಮೈಮ]ಱವೆ ಮಱವೆಯನೋ ಕರಿಸುವುದು ಚಿತ್ತವೃತ್ತಿ (ಕುಮಾರ. ೯-೮). [ಮೆಯ್$_2$ + ಮಱವೆ]

**ಮೆಯ್ಮಱುಕ**, ಮೈಮಱುಕ (ನಾ). ೧. ಮನಸ್ಸಿನ ತಾಪ,– ಕಳವಳ : ತನ್ನ ಬಾಟ್ಕೆಯಿನ್ನೇತಱದೆಂಬ ಮೆಯ್ಮಱುಕದಿಂ ನವಚಿತ್ರಪಟಂಬೊಲಿರ್ಪನಾ ಭೂತಳವಲ್ಲಭಂ (ವಳಶಂ. ೬೩). **ಮೈಮಱುಕ :** ೨. ಶಾರೀರಕವಾದ ತಾಪ ; ದೇಹದ ಅಸ್ವಸ್ಥತೆ : ನಿರತಿಶಯಭಕ್ತಿಪೂರ್ವಕಮಾಹಾರದಾನಮ ನೀಯೆ ಮೈಮಱುಕದಿಂದುಚ್ಚಳಿಸಿದ ಪರಿಕ್ಲಿನ್ನಾಂಗಕ್ಕೆ ಪೇಸಿ ಪಾನೆಯಿಂ ಪೊಜವಟ್ಟು (ಶಾಂತಿಪು. ೪-೬೭ ಪ). [ಮೆಯ್$_2$ + ಮಱುಕ]

**ಮೆಯ್ಮಱುಗು**, ಮೈಮಱುಗು (ಕ್ರಿ). ೧. ದೈಹಿಕವಾಗಿ ತಾಪಗೊಳ್ಳು; ಶರೀರತಾಪವನ್ನು ಹೊಂದು : ನಿಷ್ಠುರರ್ಮೆಯ್ಮಱುಗುವಿನಂ ಪಿಡಿದು ಬಡಿದು ಕಿಚ್ಚಿನೊಳಿಡುವರ್ (ಧರ್ಮಾಮೃ. ೩-೬೪). ೨. ವ್ಯಸನಗೊಳ್ಳು ; ಸಂತಾಪಗೊಳ್ಳು ; ಮರುಕಪಡು : ಕ್ಷಣಮಗಲ್ದು ನಿಲಲಾಱದ ಮೆಯ್ಮಱುಗಿ ಮದೀಯಮಯಸ್ಯನನಱಸುತ್ತುಂ (ಕಾದಂಬ. ೩೩೪). **ಮೈಮಱುಗು :** ೧. ಬಾಯ್ ಬಱುಬಱುತ್ತುತ್ತುಂ ಮೈಮಱುಗಿ ಮಹಾಭರದಿನಱಸುತಿರ್ಪವಸರದೊಳ್ (ಧರ್ಮಾಮೃ. ೯-೨೩). [ಮೆಯ್$_2$ + ಮಱುಗು]

**ಮೆಯ್ಮಱಿ**, ಮೆಯ್ಮರೆ, ಮೈಮರೆ$_1$, ಮೈಮಱಿ$_1$ (ಕ್ರಿ). ೧. (ಕೋಪ, ಸೊಕ್ಕು, ಆನಂದ, ಗರ್ವ, ದುಃಖ, ಭಯ ಮೊದಲಾದುವುಗಳಿಂದ) ದೇಹದ ಅರಿವು ಇಲ್ಲದಾಗು ; ಶರೀರದ ಮೇಲೆ ಲಕ್ಷ್ಯವಿಲ್ಲವಾಗು : ಕರ್ಣನೊಳಾದ ಶೋಕಾನಲನೊಳ್ ಬಾಯಱಿದು ಮೆಯ್ಮಱಿದು ಪಳಯಿಸುವ ನಿಜತನೂಜನ ಶೋಕವಮನಾಱಿಸಲೆಂದು ಧೃತರಾಷ್ಟ್ರನುಂ ಗಾಂಧಾರಿಯುಂ ಬರೆವರೆ (ಪಂಪಭಾ. ೦೩-೭ ಪ); ಒದವಿದ ನಿರ್ಭರಯೌವನ ಮದದಿಂ ಮೆಯ್ಮಱಿದು (ಕಾದಂಬ. ೦೦೦೭) ; ಮದ್ಯವೀಂಟಿ ಸೊರ್ಕಿದಂ ಮೆಯ್ಮಱಿದು (ಶಬ್ದಮಣಿ. ೦೦-೦೪೪); ಬಸವನಾನಂದದೊಳ್ ಮೆಯ್ಮಱಿದನು (ಬಸವಪು. ೪-೨೪). **ಮೆಯ್ಮರೆ :** ೧. ಕುಳಿತಿಲ್ಲಿ ಒಂದಿನಿತುವೊಳ್ತು ಮೆಯ್ಮರೆಯುವಂ ಸೌಂದರ್ಯತೀರ್ಥದಲಿ ಮುಳುಗುತಾನಂದದಿಂ (ಚಂದ್ರಶ. ೩೦-೧೨). **ಮೈಮರೆ$_1$ :** ೧. ಧರ್ಮರಾಯನು ಸಂತೋಷ ದಲ್ಲಿ ಮೈಮರೆತನು (ರಾಜಶೂ. ೪೨) ; ಅವಳು ಅಂಗಳದಲ್ಲಿ ನಡೆಯುತ್ತಿದ್ದು

ದನ್ನು ನೋಡಿ ಬೆದರಿ ಮೈಮಱೆಯುತ್ತಿದ್ದಳು (ಕೃಸು. ೧೪೨). **ಮೈಮಱೆ:** ೧. ಸಂತಸದೆ ಮೈಮಱೆದು ಕೂಡೆ ಕುಣಿವಜ್ಜರಿಂ (ಅಶಕು. ೪-೭ ರಗಳೆ); ಮೈಮಱೆದು ತನ್ನಳವಿನ ಮಾರ್ಗಮೆಲ್ಲಮಂ ಪೇೞ್ (ಧರ್ಮಾಮೃ. ೨-೧೦೬); ಮೈಮಱೆದು ಕಣ್ಗೆಡಲಪ್ಪ ಮನೋನುರಾಗದಿಂ ನೆರವೆನದೆಂದೊ (ಶಂಪಾಶ. ೪). ೨. ಮೂರ್ಛೆ ಹೊಂದು; ವಿಸ್ಮೃತಿಗೊಳ್ಳು : ಅರಸಂ ನಿಟಿಲದ ಗಾಯಕ್ಕೆ ತೇಂಕಿ ಮೈಮಱೆದಂ (ದಶಕು. ೨-೩೦); ಜೀವಿತವ ಹಿಡಿದಿರಲಾಱೆ ನೆನುತವೆ ರಾಮ ಮೈಮಱೆದ (ತೊಶರಾ. ೨೨-೭೩) ; ಅಂಗಜನ ಹೂಮೂಡಿಗೆಯ ಸರಳಂಗದೊಳಗಕ್ಕಾಡಿದವು ಮೈಮಱೆದಳು (ತೊರಾ. ೩-೪-೪). ೩. ಮಾರುವೇಷದಿಂದಿರು ; ಅಜ್ಞಾತವಾಗಿರು: ಮತ್ಸ್ಯೇಶನ ಪುರಾಂತರದೊಳಗೆ ಮೈಮಱೆದನುಪಮಿತಭುಜಸತ್ವರಿದ್ದರು (ಕುವ್ಯಾವಿ. ೬೦೩. ೦-೩೨). [ಮೆಯ್$_2$ + ಮಱೆ$_1$]

**ಮೆಯ್ಮಱಪು.** ಮೈಮರೆಹು, ಮೈಮಱಪು, ಮೈಮಱಹು (ನಾ). ೧. ಶರೀರದ ಮೇಲೆ ಎಚ್ಚರವಿಲ್ಲದಿರುವಿಕೆ,_ಪರಿವೆಯಿಲ್ಲದಿರುವುದು: ಮೆಯ್ಮ[ಪಾಠಾಂ. ಮೈಮ]ಱಪಂ ಪುಟ್ಟುವ ಸೊರ್ಕಿ ಸೂಟ್ವಿಡದ ಕೂಟಂ . . .ಅಳುಂಬಂ ಕೂಟದೊಳ್ ನಲ್ಲರಾ (ಚಂದ್ರಪು. ೮-೭೮). **ಮೈಮರೆಹು:** ೨. ಮೂರ್ಛೆ ; ವಿಸ್ಮೃತಿ : ಬೆಳ್ಳುಳ್ಳಿ, ಸೈಂಧವಲವಣ, ಹಿಪ್ಪಲಿ . . . ಬಿಸಿ ನೀರಿಂದರೆದು . . . ನಶ್ಯಂ ಮಾಡೆ ಅಭಿನ್ಯಾಸಸನ್ನಿಯುಂ ಮೈಮರೆಹುಂ ಗುಣವಾಗಿ ಎಚ್ಚರಗೊಡುವುದು (ಕಳವೈ. ೧೭೮). **ಮೈಮಱಪು:** ೧. ಎಳೆನಗೆ ಸವಿಮಾನಿಸು ಮೈಮಱಪುಯೆಚ್ಚಱು ಮೋಳ ವೈಸಿಕ ವಿರಹ ಮೋಹನ ಲಲ್ಲೆ ಚಲ್ಲವು (ಸಾಳ್ವಭಾ. ೦೭-೨೭). **ಮೈಮಱಹು :** ೧. " ಅನವಧಾನವಾ ಪ್ರಮಾದಮೆನಲ್ಕೆ ಮೈಮಱಹು " (ಮಂಗರಾ. ೦೩೩-೨೯). [ಮೆಯ್$_2$ + ಮಱಪು (<ಮಱವು)]

**ಮೆಯ್ಮಾಱಿ** (ನಾ). ಉಪಜೀವನಕ್ಕಾಗಿ ತನ್ನ ದೇಹವನ್ನು ಇತರರಿಗೆ ಮಾರಿಕೊಂಡವನು : ಮೆಯ್ಮಾ[ಪಾಠಾಂ. ಮೈಮಾ]ಱಿಗಳ ಮುಕ್ಕುಱಿಕಿ ದಿವದಿರ ತಿದ್ದಿ ಬಹನಿದೆಯೆನುತ ತೆಗೆದೆಚ್ಚ (ಕುವ್ಯಾದ್ರೋ. ೨-೪೪). ' ಮನ ಮಾಱಿ ' ಪರಾ. [ ಮೆಯ್$_2$ + ಮಾಱು$_1$ + − ಇ$_3$ ]

**ಮೆಯ್ಮುಟ್ಟು,** ಮೈಮುಟ್ಟು (ಕ್ರಿ). ದೇಹವನ್ನು ತಾಕು,– ಸ್ಪರ್ಶಿಸು : ಮೆಯ್ಮುಟ್ಟೆ ವಂದೆಡೆಯೊಳ್ ಮಾಣದುರುಳ್ಚಿ ಕಟ್ಟಿ ರಿಪುವಂ ಮುಂದಿಕ್ಕಿದಂ ದ್ರೋಣನಾ (ಕಂಕಥಾ. ೨-೭೨). **ಮೈಮುಟ್ಟು :** ಮೈಮುಟ್ಟೆ ಹೆಣಗಿದನಾ ಕ್ಷಣಕೆ ಸಾಲಿಟ್ಟು ಸರಿದುದು ಸಕಲಕೌರವಸೇನೆ (ಕುವ್ಯಾಕ. ೦೭-೨೯) ; ಕಣ್ಣು ಕಾಣದೆ ಮೈಮುಟ್ಟಿ . . . ಹೋಗುವಾಕೆ (ಗಂ. ೦೦೭-೨೦). [ಮೆಯ್$_2$ + ಮುಟ್ಟು$_1$]

**ಮೆಯ್ಮುರಿ,** ಮೈಮುರಿ (ಕ್ರಿ). ೧. ದೇಹವನ್ನು ಚಾಚಿ ಮೈ ಕೈಗಳನ್ನು ಸಡಿಲಿಸು,_ ಚೈತನ್ಯಗೊಳಿಸು: ಅಂತು ಮೆಯ್ಮುರಿದೆಚ್ಚತ್ತು ತನ್ನ ತಳ್ತಪ್ಪಿರ್ದ ಗಂಧರ್ವರಾಜನಂದನೆಯುಂ ಕಂಡು (ಕಾದಂಉ. ೭೮೭) ; ತನ್ವಂಗಿ ತಾರುಣ್ಯಭಾರಾತಿನಿರೋಧಾಲಸ್ಯದಿಂ ಮೆಯ್ಮುರಿದಳೆನೆ . . . ಶೋಭೆವೆತ್ತಳ್ (ಜಗಚಿ. ೦೪-೦೦೩) ; ಸದಮಲಶೈವಸಂಕೀರ್ತನೆಗಳ ಕೇಳ್ದು ಸುದತಿ ಮೆಯ್ಮುರಿದೆದ್ದಳೊಲಿದು (ಮೋಹತ. ೨೭-೭). **ಮೈಮುರಿ :** ೧. ಮೈಮುರಿದೆದ್ದು ಮೆಲ್ಲನೈತಂದು (ಬಸರ. ೯-೦೭೩); ಕಂಗಳ ತೆಱೆದು ಮೈಮುರಿದೆದ್ದ (ತೊಶರಾ. ೨೨-೭೭); ನಗುವಳು ಮೇಲಿಕ್ಕುವಳು ಮೈಮುರಿದೊಡೆ ಮುಗಿದಕ್ಷಿಯಿಂದ ನೋಡುವಳು(ಕಂಪಬಿ.೯-೦೯೩). ೨. ಮೈಯನ್ನು ಬಾಗಿಸು ; ನಮಸ್ಕರಿಸು : ಕಾಣಿಕೆಯಿಕ್ಕಿ ಮೈಮುರಿದ ಮೇಲವನಿಗೆ ಕ್ಷೋಣಿಯೊಳೊಡೆತನವುಂಟೆ (ಭರತ. ೩೯-೩೮). ೩. ದೇಹವನ್ನು ದಂಡಿಸು; ಶ್ರಮವಹಿಸು : ರೈತನು ಹೊಲದಲ್ಲಿ ಮೈಮುರಿದು ಕೆಲಸ ಮಾಡುತ್ತಾನೆ (ರೂಢಿ).

ಮೈ ಮುರಿಯು = ದೇಹಕ್ಕೆ ಶ್ರಮವಾಗುವಂತೆ : ಕೂಲಿಗಳ ಜೊತೆಯಲ್ಲಿ ತಾವೂ ಮೈಮುರಿಯು ನಿಂತು ದುಡಿದು (ಹತ್ತುಮು. ೦೭೨). [ಮೆಯ್$_2$ + ಮುರಿ$_1$]

**ಮೆಯ್ಮುರಿಚು** (ಕ್ರಿ). = ಮೆಯ್ಮುರಿ ೧ : ಮೆಯ್ಮುರಿಚಿ ಮೆಲ್ಲಗೆ ಎದ್ದು (ಬಟ್ಟಿತ. ೦೦-೭). [ಮೆಯ್ಮುರಿ + − ಚು$_1$]

**ಮೆಯ್ಮುಱಿಕ** (ನಾ). ಅಂಗಹೀನವಾದುದು : ಮೆಱೆವ ಗಜಹಯಶಾಲೆಯಲಿ ಮೆಯ್ಮು[ಪಾಠಾಂ. ಮೈಮು]ಱಿಕ ವೃದ್ಧ ವ್ಯಾಧಿತಾವಳಿ ಮುಱಿ ಗುದುರೆ ಮುಱಿಯಾನೆ ತೆಗೆದವು ಲಕ್ಷಸಂಖ್ಯೆಯಲಿ (ಕುವ್ಯಾಗ. ೪-೦೭). [ಮೆಯ್$_2$ + ಮುಱಿ$_1$ + − ಕ$_3$]

**ಮೆಯ್ಮೆ** ' ಮಯ್ಮೆ$_1$ ' ನೋ.

**ಮೆಯ್ಮೆಚ್ಚಿಕೆ** (ನಾ). ಮೈಗಾವಲು (?) : ಸಕಲದಳಸಹಿತ ಮೈದುನನ ಮೆಯ್ಮೆ [ಪಾಠಾಂ. ಮೈಮೆ]ಚ್ಚಿಕೆಗೆ ಮುಖತುರಂಗದೊಡನೈದಿದಂ (ಕೃಬಿಭಾ. ೨೩-೨). [ಮೆಯ್$_2$ + ಮೆಚ್ಚಿಕೆ$_2$ ]

**ಮೆಯ್ಮೆಟ್ಟು** (ಕ್ರಿ). ದೇಹವನ್ನು ಒತ್ತು ; ಅಂಗಮರ್ದನ ಮಾಡು : ಸಂವಾಹಕ_ಮೆಯ್ಮೆಟ್ಟುವನುಂ (ಶೀತಿವಾ. ೦೩-೮). [ಮೆಯ್$_2$ + ಮೆಟ್ಟು$_1$]

**ಮೆಯ್ಮೇಟಿ,** ಮೈಮೇಟಿ (ನಾ). ೧. ಶರೀರವನ್ನು ಒತ್ತುವವನು ; ಅಂಗಮರ್ದನ ಮಾಡುವವನು ; ಸಂವಾಹಕ : " ಸಂವಾಹಕಃ, ಅಂಗಮರ್ದಃ_ ೨ ಮೆಯ್ಮೇಟಿ" (ಹಲಾಯು. ೯೭-೪೩೭). **ಮೈಮೇಟಿ:** ೨. (ಆಲಂ) ಒಡನಾಡಿ ; ಜೊತೆಗಾರ : ತಳೆವಿಡಿದ ಮೈಮೇಟಿ ಬಳಿವಿಡಿಯುಲೆಳೆಯರುಂ ಕೆಳವರುಂ ಕೋಲೂರಿ ಪೊರಟರೇಂ ಪರ್ವೆ (ಕಾರೂರ. ೦೪೯-೩೨೭). [< ಮೆಯ್ಮೆಟ್ಟು]

**ಮೆಯ್ಮೇಳ,** ಮೈಮೇಳ (ನಾ). ೧. = ಮೆಯ್ಗೂಟ : ಜವ್ವನಂ ನೋಟಂ ತಂಬುಲಮುಂಪು ಕಂಪು ವಿಭವಂ ಮೆಯ್ಮೇಳಮೆಂದಿಂತಿವು ಬೇಟಕ್ಕಾಗರಂ (ಕಾವ್ಯಾವ. ೭೩೩); ಮೆಯ್ಮೇಳಂ ಮಾಳಂ ತಾಳಿಗೆಯಾಳಿಗೆಯುಱುಕುಳಿಯು ವಾದಿಯಾಗಱೆ ಕುಳನಂ (ಕಮುದ. ೨೭). **ಮೈಮೇಳ :** ೨. ಸಹವಾಸ ; ಸಂಪರ್ಕ : ಗಾರುಡವ ನಾ ಬಲ್ಲೆನೆನುತ ಮಹೋರಗನ ಮೈಮೇಳ ಸುಖವೇ (ಶಿಭಾಗ. ೩-೪-೨೭). [ಮೆಯ್$_2$ + ಮೇಳ (= ಮೇಲ)]

**ಮೆಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮನ್ಮೆಯ್ಯಂ ಬರದೊ ಮಂಗಳ ಮಹಾಶ್ರೀ (ಎಕ. X, ಕೋಲಾರ. ೩೭-೦೯; 925). [ ? ]

**ಮೆಯ್ಯಲಸಿಕೆ** (ನಾ). ದೇಹಾಲಸ್ಯ ; ಶರೀರದ ಜಡತೆ : ಮನೆವಾಳ್ತೆ ಮೆಯ್ಯಲಸಿಕೆ ಮಕ್ಕಳ ಮುದ್ದುಬಿನ್ನದಂಗಳನು ಬಿಟ್ಟೆದ್ದು . . . ಅನುವಱಿ ತನುಸರಿಸುವುದು (ಹರಿಬಿ. ೩-೦೩). [ಮೆಯ್$_2$ + ಅಲಸಿಕೆ]

**ಮೆಯ್ಯಲಸು,** ಮೈಯಲಸು (ಕ್ರಿ). ಶರೀರವು ಆಯಾಸಗೊಳ್ಳು,– ದಣಿ : ಅಂಬುಜೋದರನಂ ಮೆಲ್ಲನೆ ನೋಡಿ ಮೆಯ್ಯಲಸಿದಂತೆಂತಾನು ಮೆಟ್ಟಿರ್ದ (ಕಂಕಥಾ. ೯-೩೦). **ಮೈಯಲಸು :** ತನಿಗಂಪಂ ತಣಿದುಂಡು ಮೈಯಲಸಿ ಬಿಟ್ಟಿಂದಿಂದಿರಾನೀಕಮಂ ಮನವೊಲ್ದೆತ್ತಿ (ಅದ್ವಟ. ೮-೨೦). [ ಮೆಯ್$_2$ + ಅಲಸು$_1$ ]

**ಮೆಯ್ಯವುಚು** (ಕ್ರಿ). ದೇಹವನ್ನು ಅಮುಕು ; ಶರೀರವನ್ನು ಅದುಮು : ಇವನು ಗಡ ಚಿಕ್ಕಂದು ಮೊಲೆಗೊಟ್ಟವಳ ಹಿಂಡಿದ ಗಂಡಬಂಡಿಯ ಜವಳಗಾಲಲಿ ಮುಱಿದನೈ . . . ಸವಡಿಮರ ನೆಗ್ಗಿದವ ಗಡ. ಮೆಯ್ಯ[ಪಾಠಾಂ. ಮೈಯ]ವುಚಿದರೆ (ಕುವ್ಯಾಸ. ೦೦-೦೩). [ಮೆಯ್$_2$ + ಅವುಚು (< ಅಮುಚು)]

**ಮೆಯ್ಯವುತೆ** (ನಾ). ದೇಹದ ಕವಚ ; ಮೈಜೋಡು : ರಕ್ಕಸನ ಕೈಯ ಕೋಲುಂ ಮೆಯ್ಯವುತೆಯುಂ, ತಲೆಯ ಸೀಸಕಮುಂ ಕಡಿವಡೆದುದು (ರಾಮಾಶ್ವ. ೦೦೩-೨೭). [ಮೆಯ್$_2$ + ಅವುತೆ$_1$]

**ಮೆಯ್ಯೞುಕು** (ಕ್ರಿ). ಶಾರೀರಕ ಅಪಾಯಕ್ಕೆ ಅಳುಕಿ ಹಿಂಜರಿ ; ದೇಹಕ್ಕೆ ಒದಗಬಹುದಾದ ಕೇಡಿಗೆ ಹೆದರಿ ಹಿಮ್ಮೆಟ್ಟು : ಅಸಮಸಿಗೆ

ಮೆಯ್ಯ[ಪಾಠಾಂ. ಮೈಯು]ಳುಕದೆಱಗುವ . . . ದಿಬ್ಬವಾಳರು ಹೊಕ್ಕು ಹೆಣಗಿದರು (ಕುಮ್ಯಾಸ. ೨-೧೧೫).

[ಮೆಯ್$_2$ + ಅಳುಕು$_1$ (< ಅಳ್ಕು$_1$)]

**ಮೆಯ್ಯಱಿ**, ಮೈಯರಿ (ಕ್ರಿ). ೧. ದೇಹದ ಅರಿವನ್ನು ಹೊಂದಿರು ; ಎಚ್ಚರವಾಗಿರು : ಅಂತು ಕಯ್ಯ ತೊವಲ್ವೆರಸು ಮೆಯ್ಯಱಿಯದೆ ಪುಯ್ಯಲಿಡುವ ಪಾರ್ವನ ಪುಯ್ಯಲಂ . . . ಕೇಳ್ದು (ಆಪು. ೧೦-೧೦ ವ); ಸಿರಿಯುಳ್ಳರು ಮದ್ದುಗುಣಿಕೆಯಂ ತಿಂದವರುಂ ಪಿರಿದುಂ ಪಿತ್ತಾಧಿಕರುಂ ಧರೆಯೊಳ್ ಮೆಯ್ಯಱಿಯರೆಂಬ ನುಡಿ ತಪ್ಪುಗುಮೇ (ಧರ್ಮಾಮೃ. ೪-೨೪೬); ಸಿವನೆಂಬ ದುಟ್ಟಗೊರವಂ . . . ಮೇಲೆ ಬಿಟ್ಟ ಪಾವುಂ ನೇವಾಳ ವಾಗೆ ಮೆಯ್ಯಱಿಯದಿರ್ಪಂ (ಶಬ್ದಮ. ೧೪೫). ೨. ಗಣನೆ ಮಾಡು ; ಲೆಕ್ಕಿಸು : ಸುರಪನಂಕುಶವೌಕಿದರೆ ಮೆಯ್ಯಱಿಯದೈರಾವತಕೆ ಕಬ್ಬಿನ ಲಿಱಿದರಂಜಿಕೆಯುಂಟೆ (ಕುಮ್ಯಾದ್ರೋ. ೫-೫೫). **ಮೈಯರಿ** : ೩. (ವಿಸ್ಮೃತಿಯಿಂದ) ಎಚ್ಚರಗೊಳ್ಳು ; ಮೈತಿಳಿ : ಮೈಯರಿಯುತೊಡನೆದ್ದು ತಬ್ಬಿದಳ್ ಮಗಳಂ (ಕಾಲೂರ. ೧೭೦-೩೮೨). [ಮೆಯ್$_2$ + ಅಱಿ]

**ಮೆಯ್ಯಱಿವು** (ನಾ). ಮೈಮೇಲಿನ ಎಚ್ಚರ ; ಪ್ರಜ್ಞೆ : ಇನ್ನುಮಿರೆ ಮೆಯ್ಯಱಿವು ತೆಗೆದಪ್ಪಿಕೊಂಡನೆ ಕನ್ನೆಯನ್ (ಅಂಶಿಗು. ೫೪-೧೦೫೯).

[ಮೆಯ್$_2$ + ಅಱಿವು]

**ಮೆಯ್ಯಱು**$^3$ (ಕ್ರಿ). ದೇಹವು ಒಣಗು,– ಸೊರಗು : ಗಡಿಯಾಗಲಬುಧಿ ನೀರಸವೆತ್ತು ಚಂದ್ರ ಕೆಂಗಿಡಿಯಾಗಲಗ್ನಿ ಮೆಯ್ಯಱಿತು ನಿಡಿಯಾದರಾಗ ಬೇಕಲ್ಲದೆ ನೀ ಪೇಳ್ವ ನುಡಿಯೊಳು ಪುಸಿಯಿಲ್ಲ (ಪೋಹತ. ೨೫-೨೯)

[ಮೆಯ್$_2$ + ಅಱು$^3_1$]

**ಮೆಯ್ಯಟು** (ಕ್ರಿ). ದೇಹವು ನಾಶವಾಗು ; ಸಾಯು : ಮೆಯ್ಯಟು ವಂತಿರೆ ರಥಮಂ ಪುದಿದು ಕುದಿದು ಕಿರೆ ಕೆಲರ್ ಭಟರ್ (ಶಾಂತಿಪು. ೪-೩೮); ಬಟಿಕಂ ಪಲಗಾಲದ ಮೇಲಿವರೆಲ್ಲರುಂ ಮೆಯ್ಯಟಿಯೆ (ಅದ್ಭುತ. ೧೬-೭).

[ಮೆಯ್$_2$ + ಅಟು$_1$]

**ಮೆಯ್ಯಾಟ**, ಮೈಯಾಟ (ನಾ). ದೇಹದ ಅಲುಗಾಟ ; ಶರೀರದ ಚಲನೆ : ನುಡಿಯಬಿತಂದು ನೋಟ ನಿಂದುಮ ಮೆಯ್ಯಾಟ ತಡೆದುದು ಚೇತನವಿರದೆ ನಡುನೆತ್ತಿಗೇಱಿತು (ಕುರಾಸಾಂ. ೨೨-೧೨). **ಮೈಯಾಟ** : ನುಡಿ ನಡೆ ನೋಟ ಮೈಯಾಟವಳಿದು ಲೆಪ್ಪದೊಡಲ ಪುತ್ಥಳಿಯಂತೆ ಕುಳಿತು ಮಿಡುಕುವ ಮನವನಾತ್ಮನೊಳಡಗಿಸಲದು ನುಡಿವರೆಲ್ಲರು ಧ್ಯಾನವೆಂದು (ಭರತ. ೬೯-೨೪). [ಮೆಯ್$_2$ + ಆಟ]

**ಮೆಯ್ಯಾನ್**, ಮೈಯಾನ್ (ಕ್ರಿ). ೧. ದೇಹವನ್ನು ಧರಿಸು : ಆಕಾರವನ್ನು ತಳೆ : ಮಿಂಚಿನ ಬೆಳಗು ನೆಲೆ ಮೆಯ್ಯಾಂತುದೆಂಬ ಪೊಗಳ್ತೆಗಿಂಬಾಗಿ (ಸಾಳ್ವಭಾ. ೩-೩೫). ೨. ದೇಹವನ್ನು ಒಡ್ಡು ; ಶರೀರವನ್ನು ಈಡುಮಾಡು ; ವಿನತಾಪುತ್ರನ ವಜ್ರತುಂಡಹತಿಗಂ ಮೆಯ್ಯಾಂತು . . . ಜೀಮೂತವಾಹನನೆಂಬಂಕದ ಬಾಗಿ . . . ನಾಗಾನಂದಮಂ ಮಾಡಿದಂ (ಶಂಕಭಾ. ೪-೨೭); ಬಾಡಿಗೆಯ ಮನೆಗೆ ತಿವಿದು ಕೊಳ್ವ ಚತ್ರದ ಕೂಟಿಗೆ ಮೆಯ್ಯಾಂಪ . . . ಪಟ್ಟೆಯಂ ಪಱಿದು ಚಂಡಂ ಮಾಡುವ ಕಟ್ಟೆಗರಂತೆ (ಧರ್ಮಾಮೃ. ೯-೧೭೨). **ಮೈಯಾನ್** : ೧. ಇವ ಮೈಯಾಂತ ಮದನನೊ ವಿವರಿಸಲಿವ ಜೀವಂಧರನೊ (ಜೀವಂಧ. ೧೭-೩೦) ; ಲಲಿತಮಿಸುನಿಯ ಲತೆಗಳನು ಮಾರ್ಪಳಿವ ತನುರುಚಿಕಿರಣ ಸೂಸುತ ಲಲನೆರಲಶರಸರಸಿಯಿಂ ಮೈಯಾಂತಳೆಂಬಂತೆ (ನಾಗಕ. ೭-೧೨).

[ಮೆಯ್$_2$ + ಆನ್$_1$]

**ಮೆಯ್ಯಾನಿಸು** (ಕ್ರಿ). ೧. ದೇಹವನ್ನು ಗುರಿಮಾಡಿಸು ; ಶರೀರವನ್ನು ಒಡ್ಡಿಸು. ೨. ಈಡಾಗುವಂತೆ ಮಾಡು ; ಗುರಿಯಾಗಿಸು. ೧, ೨: ಸವಣಿಸಿ ಮನದೊಳ್ ರತ್ನತ್ರಯಮಂ ಶರಜಾತಹತಿಗೆ ಮೆಯ್ಯಾನಿಸಿದಂ ಕ್ರಮದೆ ಬಟಿಕ್ಕಂ ಪ್ರಜೆಯಂ ಪ್ರಮದೆಯನೆಂತಂತೆ ಸಯವಿದಂಗರಿದುಂಟೇ (ಚಂದ್ರಪು. ೪-೨೭). [ಮೆಯ್ಯಾನ್ + _ಇಸು$_3$]

**ಮೆಯ್ಯಾರ್**$_1$ (ಕ್ರಿ). ದೇಹವು ತಣಿ ; ಶರೀರವು ತೃಪ್ತಿಹೊಂದು.

**ಮೈಯಾರೆ** = ಶರೀರವು ತಣಿಯುವಂತೆ ; ದೇಹಕ್ಕೆ ತೃಪ್ತಿಯಾಗುವಂತೆ : ಸರ್ವಾಂಗವನೆನ್ನಂಗಗಳೊಳ್ಮೆಯ್ಗರೆದುವೆನಿಸಿ ಮೆಯ್ಯಾರೆ ತಳ್ತಪ್ಪಿ (ಕಾದಂಉ. ೫೨೨) ; ಒಂದುಗಡಿಯೊಳಗೆ ಮೆ[ಪಾಠಾಂ. ಮೈ] ಯಾರೆ ತನ್ನ ಬಳಲ್ಕೆಗಳೆಯಲಿಕ್ಕಿರ್ದನು (ಸಾಳ್ವಭಾ. ೦೭-೭೬). [ಮೆಯ್$_2$ + ಆರ್$_2$]

**ಮೆಯ್ಯಾರ್**$_2$ ' ಮೆಯ್ಯಾಱು ' ನೋ.

**ಮೆಯ್ಯಾಱು**, ಮೆಯ್ಯಾರ್$_2$ (ಕ್ರಿ). (ದೈಹಿಕವಾಗಿ) ಸಮರ್ಥವಾಗು: ಜನಾಗಮದುಡುಗಿಗೆ ಮೆಯ್ಯಾಱದೆ ಕುಬುದ್ಧಿಗಳುಂ ಸೋಂಬರುಂ ಸಪ್ತವ್ಯಸನಾಪೇಕ್ಷಿತರುಂ . . . ಜಿನಧರ್ಮಂ ಪೊಲ್ಲಮೆಂಬರ್ (ಧರ್ಮಾಮೃ. ೬-೭೫). **ಮೆಯ್ಯಾರ್**$_2$ : ಆ ದ್ರೋಹಿ ದಳವಾಯಿಗೆ ನಾವು ಅನುವರ್ತಿಗಳಾಗಿ ಮೆಯ್ಯಾರದ ಮಾನವಿಲ್ಲದ ಕುರುಡ ಕೀಟಗಳಾಗಿದ್ದೇವೆ (ಬಗಿ. ೫೦-೧೭) ; ಹೀಗೆ ಮೆಯ್ಯಾರ್ತರ್ನ ನಡೆತ್ತಂದಿರುವ ಸಾಹಸವು ದಿಟ್ಟತನವು . . . ತಕ್ಕದಣ್ಣನ _ಅದನ್ನು ಪ್ರತೀಕ್ಷಿಸುತ್ತಿದೆ ! (ಪಟ್ಟಂ. ೨೯-೦೪).

[ಮೆಯ್$_2$ + ಆಱು$_1$]

**ಮೆಯ್ಯಿಕ್ಕು**, ಮೈಯಿಕ್ಕು (ಕ್ರಿ). ೧. ದೇಹವನ್ನು ಬಾಗಿಸಿ ವಂದಿಸು,– ನಮಸ್ಕರಿಸು : ಬ್ರಹ್ಮಿಯುಂ ಸೌಂದರಿಯುಂ ಮೆಯ್ಯಿಕ್ಕಿ ದೂರಾಂತರದೊಳ್ ಪೊಡೆವಟ್ಟು (ಆದಿಪು. ೬-೫೭) ; ಎಮಗೆ ಲೇಸಾಯ್ತೆನುತ ಮೆಯ್ಯಿಕ್ಕಿದರು ಶಿವನಂಘ್ರಿಯಲಿ (ಕುಮ್ಯಾಅ. ೬೦೩. ೭-೭೭) ; ಪೇಟ್ದಲ್ಲದೆ ಬಿಡೆಂ –ಎಂದು ಮೆಯ್ಯಿಕ್ಕುವಳ್ (ರಾಮಾಶ್ವ. ೦೦೬-೪). ೨. ಶರೀರವನ್ನು ಒರಗಿಸು ; ಮಲಗು : ಕಣ್ಮುಚ್ಚಿರ್ದ ಮೆಯ್ಯಿಕ್ಕಿ ರ್ಘೋಂಪಿಸೆ ಕಷ್ಟಂ ಜಯಯಾತ್ರೆಯೊಳ್ . . . ವಾರಣಂ (ಲೋಕೋಪ. ೦೨-೨೦) ; ಅಂಗನೆ ಮಿಸುಪಂಭೋರುಹದೆಲೆಯೊಳು ಪಿಂಗದೆ ಮೆಯ್ಯಿಕ್ಕಿದ ಪೆಣ್ಣಂಚೆಯ ಪಾಂಗಿಂ ಪೊಸ ಪಸುರ್ವಟ್ಟೆಯ ಪೆ ಲ್ಪಾಸಿನ ಮೇಲೊಱಗಿದಳು (ಜಯನ. ೨-೪೦). ೩. (ಯುದ್ಧದಲ್ಲಿ) ಮುನ್ನುಗ್ಗು ; ಮುಂದುವರಿ ; ಮೇಲೆ ಬೀಳು : ಪೂರ್ವಾಪರಪಾರಾವಾರಪತಿಗಳಿರ್ವರುಮೋರೊರ್ವರೊಳ್ ಗರ್ವದಿಂ ಹಸ್ತಿನಯುದ್ಧಕ್ಕೆಂದಣೆದು ಬಿಟ್ಟಕ್ಕೆ ಮೊಗಂಬೊಕ್ಕು ಮೆಯ್ಯಿಕ್ಕಿದ ಮದಕರಿಯುಗಳಮನೆ ಪೋಲ್ತು (ಶಾಂತಿಪು. ೩-೦೯ ವ) ; ಹೊಕ್ಕರು ಕೂಟಗಾಱರು ರಾವುತರ ಮೆಯ್ಯಿಕ್ಕಿ ತಿವಿದು ಕಕ್ಕಿದುರೆಗಳ ಲೆಕ್ಕವಿಲ್ಲದೆ ಕೆಡಹಿದರು (ಕುರಾಸಾಂ. ೧೩-೩೬). ೪. ಜಿಗಿ ; ನೆಗೆ ; ಹಾರು : ಸೊಕ್ಕಿದ ಕುಂಭಾಂಡ ರಣದೊಳು . . . ಸಿಕ್ಕಿದ ಸಿಕ್ಕಿದನೆನಲಾಗಿ ಜುಣುಗಿ ಮೆಯ್ಯಿಕ್ಕಿದ ಗಗನಸ್ಥಳಕೆ (ಪೋಹತ. ೪೦-೭೨). ೫. ಸಾಯು ; ಮರಣಹೊಂದು : ಕೂರಾಳ್ಗಳ್ ತಲೆಯೊತ್ತಿ ಕಟ್ಟಿದಲಗಿಂದಂ ಕುತ್ತಿ ಮೆಯ್ಯಿಕ್ಕಿದರ್ (ಶಬ್ದಮ. ೨೭೭). **ಮೈಯಿಕ್ಕು** : ೧. ಮುಂದೆ ಪರಮೋತ್ಸಾಹದಿಂದುಕ್ಕಿ ಮೈಯಿ[ಪಾಠಾಂ. ಮೆಯ್ಯಿ]ಕ್ಕಿ ಇಂದುಮೌಳಿಯ ಕೃಪೆಗೆ ಮತ್ತೊಮ್ಮೆ ಮೈಯಿಕ್ಕಿ (ಬಸರ. ೦-೩೫) ; ಮೂಲೋಕದ ಅರಸಂಗೆ ಮೈಯಿಕ್ಕಿ ತಿರುಪಾಡ ಪಾಡುತ್ತ (ಸಾಂದಪು. ೦೦-೦೧) ; ಮುನಿಪಾದಾಂಬುಜದ ಕೆಲದಲ್ಲಿ ಮೈಯಿಕ್ಕಿದನು ಭಕ್ತಿಯಲಿ (ಸಾಳ್ವಭಾ. ೫-೪೦). ೨. ಇರುಳುಂ ಪಗಲುಂ ನಮೆವರೆ ಮೈಯಿಕ್ಕುವನಿತು ಪೊತ್ತಾದೊಡಂ (ಶ್ರಾವಕಾ. ೨೩-೨೨). ೬. (ಅಲಂ) ವಿಸ್ತರಿಸು ; ಅಗಲವಾಗು : ಆ ಸಜ್ಜಿಗೆಯನಾಗಲಿ, ಕಣಕವನಾಗಲಿ ಉದಕದಲಿ ನೆನೆಯಿಕ್ಕಿ . . . ಗೋಳಕಗಳ ಮಾಡಿ. ಅವನು ಸೀರೆಯ ಮೇಲೆ ಹಾಕಿ ಮೇಲೆ ಮಡಿ ಒದ್ದೆಪಾವಡೆ ಮುಚ್ಚಲಾಗಿ ಮೈಯಿಕ್ಕುವುದು (ಲಿಸುಸೂ. ೨೨). [ಮೆಯ್$_2$ + ಇಕ್ಕು]

**ಮೆಯ್ಯಿಡು**, ಮೈಯಿಡು (ಕ್ರಿ). ೧. ಶರೀರವನ್ನು ಇಡು,– ಒರಗಿಸು ; ತಂಗು : ಅಂಭೋಜಷಂಡಂಗಳಂ ಪುದಿದುಷ್ಣಾಂಶುವಿನೂರ್ಧ್ವಗಾಂಶು

ಸಿವಪುಂ ಮೆಯ್ಯುಟ್ಟಲರ್ಚುತ್ತುಮಿರ್ಪುದು (ಶಂಕರಾ. ೪-೨೨). **ಮೈಯಿಡು:** ೨. = ಮೆಯ್ಯಿಕ್ಕು ೬ : ಕಣಕ ಮೈಯಿಟ್ಟ ಮೇಲೆ ಹೋಳಿಗೆಗೆ ಉರುಳೆ ಮಾಡಬೇಕು (ಸೂಶಿ). [ಮೆಯ್$_2$ + ಇಡು$_1$]

**ಮೆಯ್ಯಿಳಿಸು** (ಕ್ರಿ). ದೇಹವನ್ನು ಬಡವಾಗುವಂತೆ ಮಾಡು.– ಕೃಶ ವಾಗಿಸು.—**ಸೊರಗಿಸು** : ಅಳುಪಿ ನೋಡಿದಡೊಂದು ಚಿಂತಿಸಿದಡೆರಡು ಸುಯ್ ಮೊಳೆಯೆ ಮೂಱು ಜ್ವರಂ ತೋಱಿದಡೆ ನಾಲ್ಕು ಮೆಯ್ಯಿಳು ತಲಯಿಪ್ಪುದು ಟವಂ ಬಿಡಲಾಱು . . . ತನುವಳಿಯೆ ಪತ್ತುವು ದಶಾವಸ್ಥೆಯಿವ ಱಿದವಂ ತಿಳಿಯೆ ಕೇಳು (ಹತಕಾ. ೪-೯೩).

[ಮೆಯ್$_2$ + ಇಳಿಸು$_1$ (<ಇೞಿಪು)]

**ಮೆಯ್ಯು** ' ಮೇ$_1$ ' ನೋ.

**ಮೆಯ್ಯುಡುಗು**, ಮೈಯುಡುಗು (ಕ್ರಿ). ೧. ದೇಹವು ಕುಗ್ಗು, –ಸಂಕುಚಿತಗೊಳ್ಳು. ೨. ಶಕ್ತಿಗುಂದು : ದಣಿ : ಬಳಲು : ಮೆಯ್ಯು[ಪಾಠಾಂ. ಮೈಯು]ಡುಗಿ ನೊಂದೆಳತಟಕೆ ಬಿದ್ದ ವಾನರ ಶ್ರೇಷ್ಠರಂ ತುದಿತ್ತು (ಕೃಷ್ಣಭಾ. ೨೦-೯೦). ೩. ಪ್ರಭಾವವು ಕಡಿಮೆ ಯಾಗು,– ಕುಂದು : ಆ ಮೃಡನ ನಿಟಿಲಾಕ್ಷಶಿಖಿ ಮೆಯ್ಯುಡುಗಿದುದು (ಕುಸುಮಾ. ೭-೦೯). **ಮೈಯುಡುಗು** : ೨. ಮೈಯುಡುಗಿ ನಡುಗುತ್ತ ದನಕರು ಮೇದು ಬರುತಿವೆ ಒಟ್ಟಿಗೆ (ಕಂಕು. ೦೩-೩).

[ಮೆಯ್$_2$ + ಉಡುಗು$_1$]

**ಮೆಯ್ಯುಬ್ಬು**$_1$ ' ಮೆಯ್ಯುರ್ಚು ' ನೋ.

**ಮೆಯ್ಯುಬ್ಬು**$_2$ (ನಾ). (ಅಲಂ) ಸಂತೋಷ ; ಹಿಗ್ಗು : ಭಕುತಿಯ ಭಾವರಸದಲಿ ನೆನೆದು ಹೊಂಪುಳಿವೋಗಿ ರೋಮಾಂಚನದ ಮೆಯ್ಯು [ಪಾಠಾಂ. ಮೈಯು]ಬ್ಬಿನಲಿ . . . ಮನದೊಳಗೆ ಮಂದಿಸಿದಳು (ಕುಮಾ.ಥ. ೦೩-೬೦).

[<ಮೆಯ್ಯುಬ್ಬು$_1$]

**ಮೆಯ್ಯುರ್ಚು**. ಮೆಯ್ಯುಬ್ಬು$_1$, ಮೈಯುಬ್ಬು (ಕ್ರಿ). (ಅಲಂ) ಸಂತೋಷಿಸು ; ಹಿಗ್ಗು : ಬೀಗು : ಕಂದನ ತೊದಲ್ನುಡಿಗಳಿಂದು ಮೆಯ್ಯುರ್ಚಿ ಪುಳಕಂದಾಳ್ದು (ಕದ್ಯಶಾ. ೦-೩೩). **ಮೆಯ್ಯುಬ್ಬು**$_1$ : ಅಯ್ಯಯ್ಯ ಎಂಬ ಪೊಲರ್ಬೆಂದು ತುಳುವರು ಮೆಯ್ಯುಬ್ಬಿ ಕೇಳಬೇಕಣ್ಣ (ಕಠತ. ೦-೬). **ಮೈಯುಬ್ಬು** : ಶ್ರೀಶಾರದಾಂಬೆಯುಸದೆ ಮೊದಲಿಗೆ ನೋಡಿ ಮೈಯುಬ್ಬಿ ಮನವುಬ್ಬಿ ಮಣಿದೆ (ಇಂತಾಪ. ೦೬-೬೩).

[ಮೆಯ್$_2$ + ಉರ್ಚು$_1$]

**ಮೆಯ್ಯೇಱು** (ನಾ). ದೇಹದ ಗಾಯ ; ಶರೀರದ ವ್ರಣ : ಜಾಱಿದೆ ತನ್ನಾನೆಯಿನಾ ಮಾಱಾನೆಯ ಕುಂಬತಳಕೆ ಪಾಯ್ದಳವಿಂ ಕೈದೋಱಿ ಮಱಿ ವಾನಿಸಂ ಮೆಯ್ಯೇಱಿಂ ಕಂಡುಗದು ಜೋಲೆ ಕೊಂದನದೊರ್ವಂ (ಕವ್ಯಾ. ೨೯೩). [ಮೆಯ್$_2$ + ಏಱು$_4$ (<ಏಱ್$_4$)]

**ಮೆಯ್ಯೊಡ್ಡಿಸು** (ಕ್ರಿ). ದೇಹವನ್ನು ಗುರಿಯಾಗುವಂತೆ ಮಾಡು : ಅವನ ಕಾವನಂಬಿಗೆ ಮೆಯ್ಯೊಡ್ಡಿಸಿ ಸಿಳಿದು ಸಂಭಾವಿಸು ಮೋಹರತಿಯೊಳು (ಕಂಪಿ. ೯-೩೬). [ಮೆಯ್$_2$ + ಒಡ್ಡಿಸು]

**ಮೆಯ್ಯೊಡ್ಡು**, ಮೈಯೊಡ್ಡು (ಕ್ರಿ). ೧. ದೇಹವನ್ನು ಈಡು ಮಾಡು ; ಶರೀರವನ್ನು ಅರ್ಪಿಸು : ಕೌರವರ್ ದ್ರುಪದನಂಬೇಱಂಗೆ ಮೆಯ್ಯೊಡ್ಡದೊಡ್ಡಿಡದೋಡುತ್ತಿರೆ (ಕಂಕಥಾ. ೨-೬೨); ಮೆಯ್ಯೊಡ್ಡಿದಂ ದುಃಖಸಂಕುಲಕೆ (ಕಾರಂಜಾ. ೩೬೬). ೨. ದೇಹವನ್ನು ಚಾಚು, –ನೀಡು : ಎಳತೆಯೆಳಸಿ ಮಳೆಗೆ ಮೆಯ್ಯೊಡ್ಡುವವೋಲ್ (ಶಯುಕಾ. ೨-೪೯) ; ತೆಳುವೆಲರ್ಗೆ ಮೆಯ್ಯೊಡ್ಡಿ ಮಾರ್ಗಶ್ರಮವನು ಕಳೆದರಧ್ವಗರು (ಕೃಷ್ಣಭಾ. ೯-೩). **ಮೈಯೊಡ್ಡು** : ೧. ಪ್ರಕೃತಿವಶಕ್ಕೊಳಗಾಗದ ಇಂದ್ರಿಯಂಗಳಿಗೆ ಮೈಯೊಡ್ಡದೆ . . . ಕಾಯವಿದ್ದು ಅಕಾಯರಾಗಿಪ್ಪ ರಯ್ಯಾ (ಅಮಪ. ೩೦-೮೬) ; ಮಱಿಗೆ ಮಱೆಯಾಗಿ ಮೈಯೊಡ್ಡಿ ಮಾಡಿದುವ ಕೆಲವು (ಕೃಷ್ಣಭಾ. ೨೯-೩೦). ೨. ಬಿಸಿಲಿಗೆ ಮೈಯೊಡ್ಡುವುದರಿಂದಲೂ ' ಡಿ ' ಜೀವಾತನ್ನು ಪಡೆಯಬಹುದು (ಆಹಾರ. ೬೦); ಹೆಂಗುಸರು ಮರದ ನೆರಳಲ್ಲಿ ಮೈಯೊಡ್ಡಿದ್ದರು (ಶ್ರೀಕಾಶ್ರ. ೦೯೭). [ಮೆಯ್$_2$ + ಒಡ್ಡು$_1$]

**ಮೆಯ್ಯೊಲಪು**, ಮೆಯ್ಯೊಲವು, ಮೈಯೊಲವು (ನಾ). ದೇಹದ ಬಾಗು,— ಒಲೆದಾಟ : ಕಟಗೊಂದಿದ ಕರಕಮಲವಂಗುಷ್ಠದ ನಟನೆಯ ಮೆಯ್ಯೊಲ[ಲ]ಪುಗಳ ಸುಟಿಯೊಳಾವರ್ತ ತಿರುಪುಗೊಂಡು ನಾಟ್ಯವ ಪಟು ಗೊಳಿಸಿದರೇವೇಳ್ವೆ (ಕಂಪಿ. ೨೦-೦೦೪). **ಮೆಯ್ಯೊಲವು** : ನೆಲನ ತಗ್ಗು ನಲುಪ್ಪರದ ಮೆಯ್ಯೊಲವಿನಲಿ ಪಾರಗದ ಬವರಿಯ ಸುಳುಹಿನಲಿ . . . ಕಾದಿದರು (ಕುಮಾ.ದ್ರೋ. ೦೪-೬). **ಮೈಯೊಲವು** : ಮಾರ್ಚು ಭಾಷೆನುತ ಮೈಯೊಲವಿ[ಪಾಠಾಂ. ಹಿ]ನಲಿ ಮನವುಬ್ಬಿ ನಿಂದಿದಳಧಿಕಹರುಷದಲಿ (ತೊರಣಾ. ೦-೦೦-೩). [ಮೆಯ್$_2$ + ಒಲವು]

**ಮೆಯ್ಯೊಲವು** ' ಮೆಯ್ಯೊಲಪು ' ನೋ.

**ಮೆಯ್ಯೊಲೆ** (ಕ್ರಿ). ದೇಹವನ್ನು ತೂಗಾಡಿಸು.— ಅಲುಗಾಡಿಸು : ಅಡಿ ಗಡಿಗೆ ಮೈ ಬಿದಱಿ ಬೆಱಗಹನಡಿಗಡಿಗೆ ಮೆಯ್ಯೊಲೆವಾಬ್ಬದ ರೋಮಪುಳಕ ದಲಿ (ಕುಮಾ.ಭೀ. ೩-೬೨). [ಮೆಯ್$_2$ + ಒಲೆ$_1$]

**ಮೆಯ್ವಚ್ಚ**, ಮೈವಚ್ಚೆ (ನಾ). ದೇಹಕ್ಕೆ ತೊಡಿಸುವ ಅಲಂಕಾರ, –ಭೂಷಣ: ಪದಿನೆಂಟುಂ ಸ್ಥಲವರ್ಣನಮಿವರ್ಕೆ ಮೆಯ್ವಚ್ಚಮೆನಿಸಿ ಪೇಳ್ದಂ (ಕಸುರ.ಪ. ೨೦೩ ಶ್ರಯೋ). **ಮೈವಚ್ಚೆ** : ಸೊಬಗಿನ ಕೆಂಬಲರ ಮೈವಚ್ಚೆ ಕೆಂಬಲು ತುಂಬುಗೆಂಕುವು ತಿವಿರು ಚೆಂದುಟಿಜಾಟ್ಟಿರುಣವಸನ ಕೆಂಬಳಗು ಗುಡೆ (ಶಾಳ್ವಭಾ. ೩-೩೪). [ಮೆಯ್$_2$ + ಪಚ್ಚ$_2$]

**ಮೆಯ್ವಡೆ**, ಮೈವಡೆ (ಕ್ರಿ). ಸಾಕಾರವಾಗು ; ರೂಪುಗೊಳ್ಳು ; ಮೈ ತಳೆ : ವನಪಾವನದೊಳ್ ಮೆಯ್ವಡೆದ ಮತ್ಸ್ಯಮಕರಸಿಂಹವ್ಯಾಘ್ರಾದಿ ಪತಾಕಾನೀಕದೊಳಂ . . . ಪರಭಾಗಂಬಡೆದು (ಶಾಂತಿಪು. ೦೦-೨೦ ಪ); ಅಱಿಂ ದ್ರವ್ಯದಿಂ ಮೆಯ್ವಡೆವಖಿಲಜಗಂ ರಜ್ಜುವೀರೇಬಱುದ್ಧಂ ಪಡೆದತ್ತು (ಕಂಠಾಕಾ. ೦-೪೨); ಬಹುವ್ಯಾಗ ಪೊಸತುಪ್ಪಟಕಾಂತು ಮೆಯ್ವಡೆಯಲ್ಕೆ ನರ ರಳಲಿದರು (ಮೋಹತ. ೪-೪೪). **ಮೈವಡೆ** : ನಲ್ಲ ಹೂಬಿಸಿಲಿಂದ ಬೀಸು ತಿರುವೆಲರಿಂದ ಕಾಲ್ಪಿಡಿಯುತೋಲಯಿಸಿ ಮೈವಡೆವಳಿಲ್ಲ (ಗಾಯಕ. ೨೩-೦೦).

[ಮೆಯ್$_2$ + ಪಡೆ$_1$]

**ಮೆಯ್ವಣ್ಣ**. ಮೆಯ್ಬಣ್ಣ, ಮೈಬಣ್ಣ (ನಾ). ದೇಹದ ಬಣ್ಣ, –ರಂಗು : ಇಂತುಟಪ್ಪ ಮೆಯ್ವಣ್ಣಕ್ಕಂತೀ ಪೂವಿನೊಳೀ ತುಡುಗೆಯೊಳೀ ಪುಟ್ಟಿಗೆಯೊಳ್ ಬೆಡಂಗುವಡೆದೆಸೆದಿರ್ಕುಂ (ಕಂಕಥಾ. ೩-೯೩); ಮಾಣಿಕ ಮೆಯ್ವಣ್ಣದ ಚಾಯ ಮಿಾನ . . . ಕೈಗಾಣಿಕೆ ಕೊಟ್ಟ ರಕ್ಕಸಗೆ (ಮೋಹತ. ೦೦-೩೪). **ಮೆಯ್ಬಣ್ಣ** : ವಿಷಯದ ಬೇರನ್ನು ಬಿಸಿಮಾಡಿ ಕುಡಿದಾತ ಪಶುಪತಿಯಕ್ಕು ಸಸಿನಕ್ಕು ಮೆಯ್ಬಣ್ಣ ಮಿಸುನಿಯಂತಕ್ಕು (ಸರ್ವಜ್ಞ. ೩೦೯). **ಮೈಬಣ್ಣ** : ಮಾಸಲುಕಪ್ಪಾದ ನನ್ನ ಹೆಂಡತಿಯ ಮೈಬಣ್ಣ ಬಿಳಿಛಾಯೆ ಯದಾಗಲೆಂದೂ . . . ಮೂರುಸಾಬೂನುಬಿಲ್ಲೆಗಳ ಒಂದು ಪೆಟ್ಟಿಗೆಯನ್ನೇ ಕೊಂಡುಕೊಟ್ಟೆನು (ಪಾಠಗೇ. ೨೯೩). [ಮೆಯ್$_2$ + ಬಣ್ಣ]

**ಮೆಯ್ವತ್ತಿಸು** (ಕ್ರಿ). ಅನುಸರಿಸುವಂತೆ ಮಾಡು : ಎತ್ತಿಸಿದಂ ಶಿವ ಗೃಹಮಂ . . . ಮತ್ತನಿಸದೆ ಪ್ರಜೆಯಂ ಮೆಯ್ವತ್ತಿಸಿದಂ ಸತ್ಯದಿಂದೆ ತಾರಕಗೌಣ್ಡಂ (ಎಕ. VIII, ಸೊರಬ. ೨೯೩-೯೩; 1168); ಎತ್ತಿಸಿದಂ ಜಿನೇಂದ್ರಗೃಹವಂ ಧರೆ ಬಣ್ಣಿಸಲೆಯ್ದೆ ತನ್ನ ಮೆಯ್ವತ್ತಿಸಿದಂ ಪ್ರಜಾ ಪ್ರಕರಮಂ (ಎಕ. VIII, ಸೊರಬ. ೩೪೩-೩೩; 1171).

[ಮೆಯ್ವತ್ತು + — ಇಸು$_3$]

**ಮೆಯ್ವತ್ತು** (ಕ್ರಿ). ೧. ದೇಹಕ್ಕೆ ಅಂಟು ; ಶರೀರಕ್ಕೆ ಹತ್ತು : ಅರಸಿನದಂತೆ ಮೆಯ್ವತ್ತಿ ಪೊಣೆವರ್ (ರಚಯಶು. ೩-೬೩); ವೃಷಭಸ್ವಾಮಿ ಮೆಯ್ವತ್ತಿ ದನಂತಕವರ್ಚಭಟರಂ ಷಣ್ಮಾಸಂಬರಮಿಕ್ಕುವ ತಕ್ಕಸಂ ಕೈಯಿಕ್ಕಿ ನಿಲ್ವುದು

(ವರ್ಧಪು. ೧೦-೯೦ ವ) : ಅಂಜನಗಿರಿಯಂ ಚೂರ್ಣಿಸಿ ಪಿಂಜಳವುಪ್ಪಂತೆಯುದಂ ಮೆಯ್ಪುತ್ತದವೊಲ್ ರಂಜಿಪಂಜಾಂಡಕರಂಡದೊಳಂಜನಮಂ ತುಂಬಿ ಬೊಮ್ಮನಿರಿಸಿದನೋ (ಹರಿಶ್ಚ.ರ. ೩-೦೩). ೨. ಬೆನ್ನುಹತ್ತು ; ಹಿಂಬಾಲಿಸು : ಅದಟಂ ಬಿಟ್ಟೋಟಿಂದಂ ಸೆಡೆದನೆ ನೆಟ್ಟನೆ ಮೆಯ್ಪುತ್ತಿ ಲಗ್ಗೆಯುಂ ಮಾಟ್ಪುಗಳ್ (ಪಾರ್ಶ್ವಪು. ೩-೦೯೦). [ಮೆಯ್$_2$ + ಪತ್ತು$_1$] 5

**ಮೆಯ್ಪುತ್ತುಗೆ** (ನಾ). ಹಿಂಬಾಲಿಸುವುದು ; ಅನುಸರಣೆ : ಪರಿಗ್ರಹದ ಮೆಯ್ಪುತ್ತುಗೆಯಾಗಲಾವ ರಾಜಕಾರ್ಯಮುಂ ತೀರುವುದೆಂಬುದು ತಾತ್ಪರ್ಯಂ (ಶಿಶಿಪಾ. ೨೯-೭೬). [ಮೆಯ್ಪುತ್ತು + – ಗೆ]

**ಮೆಯ್ಪರ್ಚಿಸು** (ಕ್ರಿ). ಹೊಂದಿಕೊಳ್ಳು ; ಸೇರು : ದೆಸೆಯಂ ಖಿಡ್ಗಾಂಶು ಜಾಲಂ ಬೆಳಗೆ . . . ಮೇಘಾಳಿಯುಂ ಧೂಳಿ ಮೆಯ್ಪ[ಯ್ಪ]ರ್ಚಿಸೆ 10 . . . ದೃಷ್ಟದ್ವಳಂ ಮಾಮಸಕಂಗೊಂಡತ್ತಿ ಬಂದಂ (ಚಂದ್ರಪು. ೧೦-೩೬). [ಮೆಯ್$_2$ + ಪರ್ಚಿಸು$_2$ (< ಪಚ್ಚಿಸು$_2$)]

**ಮೆಯ್ಪಸ, ಮೈವಸ** (ನಾ). ಆಶೆ ; ಅಪೇಕ್ಷೆ : ಮೆಯ್ಪಸಮೊಂದೆ ಪೂವಿನೊಳೆ ಪೋಗೆ ತೆಱಂದಿರಿದಳ್ಳಿಗೊಂಬಿನೊಳ್ ಪಾಯ್ಪುದುಂ (ಶಾಂತಿಪು. ೦-೬೩) ; ಮೆಯ್ಪಸದಿಂ ಜವನುಂಡು ಕಾಱಿದಂತಿರೆ ಕಡಿಖಂಡಮಾಗೆ 15 ಶರವಮಾಸುರವಾದುದು ಸಂಗರಾರಿಗಣಂ (ಶಂಖಪು. ೦೩-೭೮) ; ಮೆಯ್ಪಸದ ಮಾಸರಮಂ ಪಿಡಿವ ಪಾಂಗಂ ಚಿತ್ರವಚನಚಮತ್ಕಾರಮಂ . . . ತೋಱುತ್ತುಮಿರೆ (ಕುಸುಮಾ. ೭-೬೩ ವ). **ಮೈವಸ** : ಸುಳಿಗರೆಯ್ವಂದು ತಱುಬಿದರೆಂದು ಕೋಟಿಯ ಮೈವಸ[ಪಾಠಾಂ. ಶ]ದೊಳು ಮಿಱುಗೆ ಸುಳಿ ಕಯ್ಕೊಳೆ (ಕುರಾಸಾಂ. ೦೦-೩೯). [ಮೆಯ್$_2$ + ಪಸ$_1$] 20

**ಮೆಯ್ಪುಸುರ್** (ನಾ). ದೇಹದ ಹೊಂಬಣ್ಣ : ಅವಿರಳಮಾವ ಮೆಯ್ಪುಸುರ್ ಪಚ್ಚೆದಿಮಿರ್ ತಳಿರುಟ್ಟ ಪಟ್ಟೆ (ಚಂದ್ರಪು. ೭-೯೩). [ಮೆಯ್$_2$ + ಪಸುರ್$_2$]

**ಮೆಯ್ಪಸೆ, ಮೈವಸೆ** (ನಾ). ದೇಹದಲ್ಲಿರುವ ನೆಣ, – ಕೊಬ್ಬು : ಮಹೋಗ್ರಚಾಪದ ಗುಣವ ಸಡಿಲಿಸಿ ಬಸಿವ ಮೆಯ್ಪ [ಪಾಠಾಂ. ಮೈವ] ಸೆಗಳನು ಬಳಿದಿಕ್ಕಿ . . . ರಕ್ಕಸರಣಭಯಂಕರನೈದಿದನು (ತೊರವೆ. 25 ೩-೭-೫೭). **ಮೈವಸೆ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಮೆಯ್$_2$ + ವಸೆ]

**ಮೆಯ್ಪಳಲ್ಕೆ, ಮೈಬಳಲಿಕೆ** (ನಾ). ಶರೀರದಲ್ಲುಂಟಾಗುವ ದಣಿವು ; ದೇಹಾಲಸ್ಯ : ಪೊಯ್ದೊಳ್ವಾರ್ ಮೆಯ್ಪಳಲ್ಕೆಯುಂ ಕಳೆಯಲೆಂದು ಶಯನಂಗೆಯ್ವಾರ್ (ರಪ್ಪಪ. ೨-೯). **ಮೈಬಳಲಿಕೆ** : ಜಳಧಿಮೇರೆಯ 30 ಮಧ್ಯದಲಿ ಭೂವಳಯವೆಲ್ಲವ ಶೋಧಿಸುತ ಮೈ[ಪಾಠಾಂ. ತನು]ಬಳಲಿಕೆಯ ಭಾವಿಸದೆ ನಡೆದರು ಮುಂದೆ ಪಥವಿಡಿದು (ಸಳಚ. ೮-೦೨).
[ಮೆಯ್$_2$ + ಬಳಲ್ಕೆ (< ಬಳಲ್ಕೆ)]

**ಮೆಯ್ಪಳಿ** 'ಮೆಯ್ಪಟಿ' ನೋ.

**ಮೆಯ್ಪಳಿಗೊಳ್** (ಕ್ರಿ). ಹತ್ತಿರಕ್ಕೆ ಹೋಗು ; ಸಮೀಪಿಸು : ವಿಧಾತ್ರನಂ 35 ಚಾಳಿಪೆನೆನುತ್ತ . . . ಸಡಗರಿಸಿ ಮೆಯ್ಪಳಿಗೊಂಡು ಉಳಿವೆತ್ತು (ಶಂಸಕ. ೨೩-೩). [ಮೆಯ್ಪಳಿ (<ಮೆಯ್ಪಟಿ) + ಕೊಳ್$_1$]

**ಮೆಯ್ಪಟಿ, ಮೆಯ್ಪಳಿ, ಮೈವಳಿ, ಮೈವಟಿ** (ನಾ). ೧. ಬಳಿ ; ಹತ್ತಿರ ; ಸಮೀಪ : ಅಱುಪನ್ನಂ ತರಳಿಕೆ ಮೆಯ್ಪಟಿಯಿಂ ಪಿಡಿದೊಪ್ಪು ನೆತ್ತಿ ಮೆಲ್ಲನೆ ತಡಿಗಾಗಿಱತಂದೀ ಕೊಳದೊಳ್ ನೀರಿಟಿಯಿಸೆ (ಕಾದಂಪೂ. 40 ೯೩೦) ; ಪರಿಚಿತೆ[ನೀಂ]ತಳೋದರಿಗೆ ಮೆಯ್ಪಟಿಯಿಂ ಮನಮಂ ತೊಡಂಕೆ ನಾಂ ತುಱಿಪದಿನಿರ್ದು ನಿಂದಟಲನಾಟಿಸು (ಅಸಂಪು. ೦೦-೯೬). ೨. ವಶ ; ಅಧೀನ ; ಪತೋಟಿ : ಮದಕರಿಯ ಮೇಗಣ ಬದಗನಂತೆ ಮೆಯ್ಪಟಿಗೆ ಸಂದಳಕೆಗೊಳಿಸುವನಂತೆ ತನ್ನಿಚ್ಚೆಗೆ ತಂದು ಮತಿಯಂ (ಲೀಲಾವ. ೪-೭೬ ವ); ಮಾಸದ ವಿಳಾಸಮೆ ಮೆಯ್ಪಟಿಯಾದ ದೇವಿ ತಾಂ ಋತುಮತಿಯಪ್ಪು 45 ದಚ್ಚರಿಯೋ (ಪುಷ್ಪಪು. ೯-೯೨). ೩. ಸಲುಗೆ ; ಸದರ ; ಅನುಸರಣೆ ; ಕುದಿವೆರ್ದೆಯೊಳ್ ಮುಲಿಯುಱಮನೊತ್ತಿ ತಳಿರ ಬಿಜ್ಜಣಿಗೆಯುಂ ಬೀಸಿ ಬೞಲ್ಕೆಯಂ ಕಳೆದು ಮೆಯ್ಪಟಿಯಿಂ ತದ್ವೃತ್ತಾಂತಮಂ ಬೆಸಗೊಳ್ವುದುಂ (ಲೀಲಾವ. ೦೦-೭೮ ವ) ; ಆಗಳುದಾತ್ತರ್ . . . ತದ್ರೂಪನಂ ಮೆಯ್ಪಟಿಯಿಂ ಮಾತಾಡಿಸುತ್ತೊಯ್ಯನೆ ಸಹಜಶರೀರಂಗಳಂ ತಾಳ್ದಿ ನಿಂದರ್ (ಶಳತಂ. ೨೩೬). ೪. ಸಾಮರ್ಥ್ಯ ; ಕೆಚ್ಚು : ಅಳವಿಗೆ ಸಾರ್ದನೇ ಬೆಱಗುವಾದನೆ ಮೆಯ್ಪಟಿ ಯಿಂದೆ ಪೋರ್ದನೇ (ಜಗನ್ನಾ. ೭-೨೯). ೫. ಕೋಪ ; ರೋಷ : ತಳೆದು ಕಣ್ಣೀರಂ ಕಯ್ಗಟಿದೆಬಲಿಗೆ ಮಗನಂ ಮೆಯ್ಪಟಿಯಿಂದಮೆ ನುಡಿದನಂದು ತಾರಾಪೀಡಂ (ಕಾದಂಬ. ೯೭೩). **ಮೆಯ್ಪಳಿ** : ೧. ಕಯ್ವಳಿಯ ಜಯಶ್ರೀ ಯುಂ ಮೆಯ್ಪಳಿಯ ಶ್ರೀಯುಮಿರುವೆರಲು ಬಲ್ಲಾಳಂ ಸಯ್ಪಳಿಯ ನಡದು (ಎಕ. XI. ಚಿತ್ರದು. ೭೯-೨೦ ; 1214) ; ನೆಳಲಂತೆ ಮೆಯ್ಪಳಿಗೆ ಸಾದು . . . ಶುಶ್ರೂಷೆಗಳ ಮಾಡುವ . . . ಮಹಾಪಾತಿವ್ರತಾಜನಂ ಕಂಗೊಳಿಸಿತು (ಕಬ್ಬಿಗ. ೨೦-೦೩). ೩. ಕಲಹ ಬೇಡವೆಮ್ಮೊಳಗೆಂದು ಮಂತ್ರಿಗಳು ಮೆಯ್ಪಳಿ ಯಲವರ ತಿಳುಹಿದರು (ಕುರಾಸಾಂ. ೦೩-೦೩೬). ೪. ಕಲ್ಪಭೂಜದ ಮೆಯ್ಪಳಿಯುಂ ತ್ರಿಗಳ್ದತಿಕರದರ್ಗಿಣವನು (ಎಕ. VII. ಶಿಕಾರಿ. ೦೮೩-೩೯ ; 1200). **ಮೈವಳಿ** : ೨. ಧರೆ ನಮಗೆ ಪರವರ್ತಿ ಖಂಡೆಯ ಸಿರಿ ನಮಗೆ ಮೈವಳಿ (ಉತ್ತರಾ.ಸ. ೨-೩) ; ಕಲಿಸುವನೊಡೆಯ ತನ್ನ ಮೈವಳಿಯೊಳು ನಿಲಿಸುವನನುಭವಸಿದ್ಧಾ (ಶರಕ. ೩-೯೭) ; ಮದಾಂಧಸಿಂಧುರವರ್ಗಮಸ್ತಕ ಮಸಗಿದು ಪೃಥ್ವ್ಯಂಕುಶದೆ ಮೈವಳಿಗೆ ತರ್ಪ ಜೋದರ ಹಿಂಡು ನಡೆಗೊಂಡುದು (ಕಬ್ಬಿಗ. ೯೦-೩೦). ೩. ಮುಂದುಮೆಸಗಿ ಮೈವಳಿಯಲಿ ಹದನುಗೊಳಿಸಿ ಸೋಕಿ (ಜನವ. ೦೦-೩೦); ಪರಿಚಿತೆಯಾಗಿ ಮೈವಳಿಯೊಳಾಕೆಗೆ ನೀನು ಪಿರಿದುಪಚಾರವನೆಸಗಿ (ಅನಂತ. ೦೮-೧೦೭). ೪. ಆ ನರವಿಭುವಿ ನೋಲಗದ ಕೆಳದಿಯರ ಕೈಸನ್ನೆಗಳ ಮೈವಳಿಯ ಮಾತಿಂಗೇಳ್ವ ಕುಳ್ಳಿರುವಳವಡಿಕೆ ಬಲ್ಲರಿಗೆ ಬೆಱಗೇನಲ್ಲವೇ (ತೊರವೆ. ೦-೬-೭೩). ೬. (ಆಲೋಚನೆ, ಕಾರ್ಯ ಮುಂತಾದುವುಗಳ) ಅನುಸರಣೆ : ಮಾತ್ತದಂತಿಗಳೊಗ್ಗುವಿಡಿದು ಬಂದವು ಮಾವತಿಗರೆತ್ತ ತಗೆದತ್ತ ಬರುತೆ ಮೈವಳಿಯಾಗಿ ನೆಗೆವ ಕಾರ್ಮುಗಿಲ ಮೋಹರದಂದದಿಂ (ಶ್ರೀಂಪು. ೦೮-೦೩) ; ದೇವ ಬಿನ್ನಹ ನಿಮ್ಮ ದೇಹವ ಮೈವಳಿಯ ನೆಳಲಾನಲಾ ನೀವೇ ವಿಚಾರಿಸಿ ತನಗೆ ಬೇಱನ್ಯತ್ರ ಗತಿಯುಂಟೆ (ತೊರವೆ. ೨-೩-೩೩). **ಮೈವಟಿ** : ೩. ಮೈವಟಿಯೊಳೆ ಮೇಲುದಂ ತೊಲಗ ನೂಕಿ ಕುಚದ್ವಯದೊಳ್ ಪಳಂಚಿ ಪೊಕ್ಕುಟಿಕೊಳಿಟದಾಡಿ ತೀಡಿದುದು ಪಲ್ಲವನಂತಿರೆ ಮಂದಮಾರುತಂ (ಸೂಕ್ತಿಸು. ೯-೦೯೦). ೪. ರಾಯಂ ತನ್ನ ಕಿಱಿದಮ್ಮನ ಬೀರದ ಮೈಸಿರಿಯ ಬಿಂಕದ ಮೈವಟಿಯ ನುಡಿಗೆ ಸಂತಸಂಗೊಂಡು (ರಾಮಾಶ್ವ. ೯೭-೯).

[ಮೆಯ್$_2$ + ಬಟಿ$_3$. /ತೆಲು. ಮೈವಡಿ = ಅನುಕೂಲ್ಯ, ನೇರ್ಪು, ರೀತಿ]

**ಮೆಯ್ವಿಡಿ, ಮೈವಿಡಿ** (ಕ್ರಿ). ಮೈತಾಳು ; ಸಾಕಾರವಾಗು : ಕರಮೆ ಮ[ಱುಗಿ ಮೆಯ್ವಿಡಿದುರಿವ] ನ್ನೀಯೆರ್ದೆಯನಾಱಿಸಲ್ [ನೀಂ]ಬಾಯೊಳ್ದಂ ಬುಲಿಮನಪ್ಪಿಡಂ ದಯೆಗೆಯ್ವೊ (ಶಂಸಕ. ೮-೭೯) ; ಮೆಯ್ವಿಡಿದನುರಾಗ ರಸವೆ ಪೊಱಪೊಣ್ಮುದುದೆನೆ ಮಾಣಿಕಗಂಡ ಬಡನಡುವಿನ ಭಾಮಿನಿ ತಳಿರ್ಗ ಯೊಳ್ ಪಿಡಿದಪರಂಜಿಯ ಸೆಳೆ . . . ವಿರಾಜಿಸಿತು (ಜಯನೃ. ೨-೯೭). **ಮೈವಿಡಿ** : ಕಡಲುರಿ ಮುಗಿಲುರಿ ಬನದುರಿಗೂಡಿ ಮೈವಿಡಿದಂತಿರ್ದ ಸಿಂಗವ ಕಂಡ (ಸೊಬಗಿ. ೩-೩೨). [ಮೆಯ್$_2$ + ಪಿಡಿ$_1$]

**ಮೆಯ್ವಿಡು, ಮೆಯ್ಬಿಡು, ಮೈಬಿಡು, ಮೈವಿಡು** (ಕ್ರಿ). ೧. (ಗಿಡ, ಮರ ಮುಂತಾದುವು) ಕವಲೊಡೆ–ಟಿಸಿಲೊಡೆಗು : ಮೆಯ್ವಿಟ್ಟು ಕೆಯ್ವಿಟ್ಟಶೋಕೆ ಕರಂ ಪೋಲ್ತುದು ಮಿಂದು ನಿಂದು ಮುಡಿಯಂ ಬಿಟ್ಟಾಟಿಸುತ್ತಿರ್ದ ಕಾಮುಕಿಯಂ (ಶಾಂತಿಪು. ೭-೦೩೯). ೨. ಧೈರ್ಯ ದಿಂದ ಕೂಡಿರು ; ನಿರ್ಭೀತಿಯಿಂದಿರು : "ಮೆಯ್ವಿಡು (ಬೊಯ್+ ಬಿಡು) — ನಿಶ್ಶಂಕಿತಾಯಾಂ (ನಿರ್ಭಯದಿಂದಿರು)" (ಶಬ್ದಮ) ; ಎನಸುಂ

ನಿರ್ಝರಚಂದ್ರಿಕಾಜಲದೊಳೊಲ್ದೋಲಾಡಿ ಮೆಯ್ವಿಟ್ಟು ಮಂಜಿನ ತಂತು ವರ್ಣನಿಯೊಳ್ ಪೊದಟ್ದು (ಕಾದಂಬ. ೯೨೮). ೩. ಸಲುಗೆಯಿಂದಿರು : ಸದರದಿಂದ ವರ್ತಿಸು : ಮೆಯ್ವಸದಿಂ ಕೆಯ್ವಸದಿಂ ಬಾಯ್ವಸದಿಂ ಮಂತ್ರ ತಂತ್ರದಿಂದ ಸುಖಮಂ ಮೆಯ್ವಿಡೆ ವನಿತೆಗೆ ಪಡೆದಾ ಮೆಯ್ಯೋಗಕ್ಕೆಳಸಿ ಸೋಲ್ವನೆಟ್ಟ ವೊಜಂಗಂ (ಕಾವ್ಯಾವ. ೬೭). ೪. (?) : ಬಿಟ್ಟಯ್ದ ಮೆಯ್ವಿಟ್ಟು ಸಿದ್ಧರಸಂ (ಕೊಂಕಣಾ. ೦೯೩೭, ಸಿಂಧಗಿ. ೮೮-೦೭ ; ?).
**ಮೆಯ್ಬಿಡು** : ೫. ಆಶ್ರಯತಪ್ಪು ; ಆಧಾರವಿಲ್ಲವಾಗು : ತೊಟ್ಟನೆ ಬಳ್ಳಿಳಾ ಲತಾಂಗಿ ಸುಟ್ಟುರಿಯಿಂದೊಲೆದಿಳೆಯೊಳು ಲತೆ ಮೆಯ್ಬಿಟ್ಟುರುಳುವ ತೆಱನಾಯ್ತು (ಶ್ರೀಪಾಲ. ೭-೭೪). **ಮೈಬಿಡು** : ೬. ಚೆಲ್ಲಾಪಿಲ್ಲಿಯಾಗು ; ಚೆದರು : ಥಟ್ಟು ಮುರಿದುದು ಕೊಂಡ ನೆಲನನು ಬಿಟ್ಟು ಹಿಂಗಿತು ನಮ್ಮ ಬಲ ಮೈಬಿಟ್ಟು ತಲೆದೋಱಿದನು ಸಾತ್ಯಕಿ ದೊರೆಗಳಿದಿರಿನಲಿ (ಕುಮಾ.ಭ. ೩-೬). **ಮೈವಿಡು** : ೨. ಸಗ್ಗಿಗರಾಣ್ಮನ ಘನಕರಿಘಟೆಗಳ್ ಬೇಸಗೆಯ ಬಿಸರಕ್ಕೆ ಬಸವಟ್ಟುದುಃ ಬಾಯಾಱಿ, ಮುನ್ನೀರ ನೀರಂ ಕಂಡು . . . ಪೀರ್ದುರ್, ಸೊರ್ಕಿ ಪೋಪಡೆಯೊಳ್ ಮೈವಿಟ್ಟು, ಗೀಟಿಟ್ಟು (ರಾಮಾಶ್ವ. ೩-೦೦). ೭. ದೇಹವನ್ನು ಚಾಚು,—ನೀಡು : ಮುಳ್ಳೂನೆಯಂತೆ ಕ್ರೂರನಾಗಿ ಸತ್ತರಂತೆ ಮೈವಿಟ್ಟು (ಧರ್ಮಾಮೃ. ೨-೦೦೫). [ಮೆಯ್$_{2}$ + ಬಿಡು$_{1}$]
**ಮೆಯ್ಬಿದಿರ್** (ಕ್ರಿ). ದೇಹವು ಕಂಪಿಸು : ಪುಲ್ಲೆಗಳ ಪಿಂಡೊಡೆಯದೊಡನೆ ಮೆಯ್ಬಿದಿರುತ್ತೆ (ಅನಂಪು. ೯-೦೭ ರಗಳೆ). [ಮೆಯ್$_{2}$ + ಬಿದಿರ್$_{1}$]
**ಮೆಯ್ಬೆಂಕೆ** (ನಾ). ದೇಹದ ಉಷ್ಣ : ಶರೀರ ತಾಪ : ನಿನ್ನ ಮೆಯ್ಬೆಂಕೆಯಿಂದೆಮಗಾಹಾರಮಪ್ಪಿಲ್ಲಿಯ ಮೃಣಾಳಂಗಳೆಲ್ಲಮಂ ಕೊರಗಿಸದಿರೆಂದು ಚಪ್ಪರಿಸುವಂತಿರ್ದ ಹಂಸ ಚಕ್ರವಾಕಂಗಳುಲಿಪಕ್ಕೆ ಬೆಗಡುಗೊಂಬಳ್ (ಕಾದಂಬ. ೩೩೪) ; ಪಿರ್ದ ಗಾಡಿಕಾರ್ತಿ ಸಂದಣಿಸಿ ಚೆಂದಂಬಡೆದ ಕೆಂದಳಿರ ಪಂದರಮಂ ಮೆಯ್ಬೆಂಕೆಗಂಜಿ ಪತ್ತೆಸಾರ್ದಿಂತೆಂದಳ್ (ಶಬ್ದಸಾ. ೭೦).
[ಮೆಯ್$_{2}$ + ಬೆಂಕೆ]
**ಮೆಯ್ಬೆಚ್ಚು** ' ಮೆಯ್ಬೆರ್ಚು$_{1}$ ' ನೋ.
**ಮೆಯ್ಬೆರಸು** (ಕ್ರಿ). ಒಂದಾಗು ; ಜೊತೆಗೂಡು : ಅಮಳ್ವಕ್ಕಿವಿಂಡು ಮೆಯ್ಬೆರಸುವ ಕೊಂತಗಾಱರಣಿಯಾಗಿರೆ ಬಂದು ಬಸಂತನೊಲ್ದು ಸಂವರಣೆಯನೆಯ್ದೆ ತೋಱೆ ತಲೆದೂಗಿಸಿದಂ ನನೆವಿಲ್ಲ ಬೀರನಾ (ಶಬ್ದಸಾ. ೨೦೦) ; ನೆರೆದೆ ಪುಷ್ಪಿತ ಪದ್ಮಿನಿಯ ಮೆಯ್ಬೆರಸಿದನು ವಾರುಣಿಯು (ಜೀವಂಧ. ೪-೦೪).
[ಮೆಯ್$_{2}$ + ಬೆರಸು$_{1}$ (<ಬೆರೆಯಿಸು)]
**ಮೆಯ್ಬೆರ್ಚಿಸು** (ಕ್ರಿ). ಮೈಯುಬ್ಬುವಂತೆ ಮಾಡು ; ಸಂತೋಷಗೊಳಿಸು : ಚಳಕೇಶಪಾಶಕುಸುಮಾಮೋದಾಸವಾಸಕ್ತಭೃಂಗರವಂಗಳ್. . . ವಧೂಕದಂಬಕಮನೇಂ ಮೆಯ್ಬೆರ್ಚಿಸಲ್ಕಾರ್ತುದೋ (ಆದಿಪು. ೦೦-೪೨).
[ಮೆಯ್ಬೆರ್ಚು$_{1}$ + —ಇಸು$_{3}$]
**ಮೆಯ್ಬೆರ್ಚು$_{1}$**, ಮೆಯ್ಬೆಚ್ಚು, ಮೈವೆಚ್ಚು, ಮೈವೆರ್ಚು (ಕ್ರಿ). ೧. ಅಧಿಕವಾಗು ; ಹೆಚ್ಚಾಗು : ಅತಿಶಯಿಸು : ಶೃಂಗಾರವಾರಾಶಿ ಘೋಂಕನೆ ಬೆಳ್ಳಂಗೆಡೆದತ್ತೊ ಕಾಮನೆಱೆಮೆ[ಯ್ಬೆರ್ಚಿ]ತ್ತೊ (ಶಂಕರಾ. ೪-೪೨); ವಕ್ಷವಾತಂ ಪೀನಂ ಮೆಯ್ಬೆರ್ಚುವನ್ನಂ ಭ್ರಮಿಯಿಸಿ ಸಡೆದಂ . . . ಗರುಡಂ (ಜಗದ. ೨೮-೯೯) ; ವನಜಕ್ಕೊಯ್ಯನಲರ್ಕೆಯುಂ ಸಮನಿಸುತ್ತೋರಂತೆ ಮೆಯ್ಬೆರ್ಚಿ ತಣ್ಣನೆ ತೀಡಿತ್ತನಸುಂ . . . ಶೀತಾನಿಳಂ (ಶಾಂತೀಶ್ವ. ೦೦-೯೪). ೨. ಕೊಬ್ಬು ; ಬೀಗು : ಆಗಳ್ ಮೆಯ್ಬೆರ್ಚಿ ಬಂದು ಪೆಣೆದ ಭೀಮ ನಕುಳ ಸಹದೇವರುಮಂ ಶಲ್ಯಂ ವಿರಥರ್ಮಾಡಿ ಪಿಡಿದುಕೊಂಡು (ಶಂಕರಾ. ೦೩-೪೧ ವ) ; ಪಲವುಂ ಶಾಸ್ತ್ರಮನೋದಿದ ಬಲದಿಂ ಮೆಯ್ಬೆರ್ಚಿ ಗರ್ವದಿಂ (ಧರ್ಮಾಮೃ. ೫-೮೮). ೩. ಸಂತೋಷಗೊಳ್ಳು ; ಹಿಗ್ಗು : ಪುತ್ರೋತ್ಸವಂ ತನ್ನನಾಳ್ದಂ ಪೆರ್ಚಿ ಪೊರೆದುದರ್ಕೆ ಕರಂ ಮೆಯ್ಬೆರ್ಚಿ ನುಡಿದಂ (ಶಂಕರಾ. ೦೦-೩೯ ವ) ; ತನುಜಾತೋದಯಮಪ್ಪ ಪುಣ್ಯದಿನಮಂ ಮೆಯ್ಬೆರ್ಚಿ ಕಾಣಲ್ಕೆ ನೋಂತೆನೊ (ಸುಕುಮಾ. ೯-೦೦೩) ; ರಾಜನ್ಯಕೋತ್ತರರ್ ಮಾಗಳ್ ಪೊಗಬುತ್ತಿರಲ್ಕೆ ಪಿರಿದುಂ ಮಾದೇವಿ ಮೆಯ್ಬೆರ್ಚಿದಳ್ (ಸುಕುಮಾ. ೮-೨೯). ೪. ಮೇರೆವಿಾರು ; ಉಕ್ಕು : ಎರಡುಂ ಪಕ್ಕದ ವಜ್ರವೇದಿಕೆಗಳಂ ಮೆಯ್ಬೆರ್ಚಿಯುಂ ಕ್ಷೀರಸಾಗರಮುಲ್ಲಂಘಿಸದಂತೆ ಪೆರ್ಚಿವಡೆದುಂ ಧರ್ಮಾರ್ಥಮುಂ ಕಾಮರಾಗರಸಮಂ ಮಿಾಱದೆ . . . ಭೂಚಕ್ರಮಂ ತಾಳ್ದಿದಂ (ಮಲ್ಲಿಪು. ೩-೫೦) ; ಬಿಪ್ಪರ್ ಬೆಳ್ಳಗೆಯೊಳ್ ಸರ್ಕ್ಕ ಪೊರ್ಮೆ ಮೆಯ್ಬೆರ್ಚಿ ನಲಿನಲಿದುಂ . . . ಗಂಗೆ ಕಂಗೊಳಿಸಲೊಡಂ (ರಾಮಾಶ್ವ. ೩೦-೨೭). **ಮೆಯ್ಬೆಚ್ಚು** : ೩. ನಿಂದಿಸಿದಡದುವೆ ತೊಡವೆಂದು ಮೆ[ಶಾಂ. ಮು]ಯ್ಬೆಚ್ಚುವಂ (ತಿರುಕ. ದೇ. ೨೪-೧). ೫. ವಿಜೃಂಭಿಸು ; ಮೆರೆ : [ಮೆ]ಚ್ಚಿದಳೀಗಳಿಂಗ ಕಲಿಬಮ್ಮಗಾವುಂಡ × × ಳೊಳಬ್ದ ಮೆಯ್ಬೆಚ್ಚಿದ ವೀರಲಕ್ಷ್ಮಿ (ಸೌಇಇ. XX, ೭೬-೩೫; 1118). ೬. ಹರಡು; ಪಸರಿಸು : ತಮಮೆತ್ತಲು ಪಸರಿಸಿದುದಾ ಬ್ರಹ್ಮನೆಸುವ ಪ್ರತ್ಯಕ್ಷದೊಂದೆಸಕಮಂ ಮಿಾಱಿ ಮೆಯ್ಬೆಚ್ಚಿದುದು (ತೆರಿಪು. ೪೯-೨೯). **ಮೈವೆಚ್ಚು** : ೩. ಗಿರಿಜೇಶನರಮನೆಯನೊಳಪೊಕ್ಕು ಬಿಡದೆ ಮೈವೆಚ್ಚುತಲಿ (ಬೀರರ. ೫-೩೨) : ಆ ಸುದತಿಯಾಲಿಂಗಿಸಿದ ನವಮಾಸವಾಯ್ತು ಮೈವೆಚ್ಚಿ ಕೈವಿಡಿವ ಪತಿಗೆ (ಸೋಮಶ. ೧-೬೨). ೪. ಶರಧಿ ತರೆಗಳಿಂ ಮೈವೆಚ್ಚಿ ನಾಕವ ತುಡುಕುತೊಪ್ಪಿದುದು (ಕಂಸವ. ೪-೨೦). **ಮೈವೆರ್ಚು** : ೧. ಪವನವ್ಯೋಮ ವಸುಂಧರಾಸಲಿಲತೇಜೋಲೀಲೆ ಮೈವೆರ್ಚಲುತ್ಸವಮಾದತ್ತು ಸಮಸ್ತ ಭೂತಳದೊಳ್ (ಜಗದ. ೬-೭೯) ; ಬಲಿಮೆಲ್ಲಂ ಕಡಿಖಂಡಮಾಯ್ತುಪಜಯಂ ಮೈವೆರ್ಚಿರಲ್ ದುರ್ಯಶಂ ತಲೆದೋಱಿತ್ತು (ದಶಕು. ೦-೭೪). ೨. ಏನನ್ನ ನುಡಿಯಂ ಕಡೆಗಣ್ಚಿ ಮತ್ತಂಮತ್ತಂ ಮತ್ತ ಪೊಱಸಂತೆ ಮೈವೆರ್ಚುವೆ ? (ರಾಮಾಶ್ವ. ೦-೦೨). [ ಮೆಯ್$_{2}$ + ಪೆರ್ಚು$_{1}$ ]
**ಮೆಯ್ಬೆರ್ಚು$_{2}$** (ನಾ). ಸೊಕ್ಕು ; ಗರ್ವ : ಮೆಯ್ಬೆರ್ಚಿನಿಂ ದೇಹೋಹಂ ಎಂದೆಂಬುದಂ ಮಾಣಿಸು (ಶಂಕರಾ. ೦೬). [ ಮೆಯ್$_{2}$ + ಪೆರ್ಚು$_{2}$ ]
**ಮೆಯ್ಬೆಲೆ** (ನಾ). ದೇಹಸುಖಕ್ಕಾಗಿ ವೇಶ್ಯೆಗೆ ತೆರುವ ಹಣ, - ಒತ್ತೆ : ಬೆಲೆವೆಣ್ಗೆ ನಿಚ್ಚಮುಮ್ಮೆಯ್ಬೆಲೆಯಾಯದೆ ಠಕ್ಕುದೋಱಿ ನೆರವ ಬೊಜಂಗಂ ಸಲೆಯುವಳ ಜೀವಪವನನನೆಲೆ ಪೀರ್ವ ಭುಜಂಗನಲ್ತೆ (ವೃತ್ತವಿ. ೨೯-೦೩).
[ ಮೆಯ್$_{2}$ + ಬೆಲೆ$_{1}$ ]
**ಮೆಯ್ಬೆಸ** (ನಾ). ೧. ದೇಹದ ಕ್ರಿಯೆ : ತಱಿಂದಿರಿದಾಂತ ಮೆಯ್ಬೆಸಂ ಸುತ್ತುವ ಬಲ್ಪು . . . ತಮ್ಮೊಳೆಯ್ದೆ ಮೆಯ್ವತ್ತಿರೆ ಬಿಚ್ಚತಂ ಪೊಣರ್ದು ಪಂದೆರಡುಂ ಬಲದಂಕದಾನೆಗಳ್ (ಚಂದ್ರಪ್ರ. ೦೦-೮೪). ೨. [ಕಾಮಶಾ] ಸ್ತ್ರೀಯ ಕಲಾಸ್ಥಾನಗಳನ್ನು ಮುಟ್ಟಿ ಉದ್ರೇಕಗೊಳಿಸುವ ಕ್ರಿಯೆ : ಮೆಯ್ಬೆಸದಿಂ ಕೆಯ್ಬೆಸದಿಂ ಬಾಯ್ಬೆಸದಿಂ ಮಂತ್ರತಂತ್ರದಿಂದಂ ಸುಖಮಂ ಮೆಯ್ವಿಡೆ ವನಿತೆಗೆ ಪಡೆದಾ ಮೆಯ್ಯೋಗಕ್ಕೆಳಸಿ ಸೋಲ್ವನೆಟ್ಟವೊಜಂಗಂ (ಕಾವ್ಯಾವ. ೬೭). [ ಮೆಯ್$_{2}$ + ಬೆಸ$_{1}$ ]
**ಮೆಯ್ಬೆಳಗು**, ಮೈವೆಳಗು (ನಾ). ೧. (ಶರೀರದ) ಹೊಳಪು ; ಕಾಂತಿ: ಅಭ್ರಕಪಟಲಂಗಳ ಮಱೆಯೊಳಿರ್ದಳೆನೆ ಮೆಯ್ಬೆಳಗಿಂ ನೆಱೆಯಱಿಯಲಾದುದಿಲ್ಲಂಗನೆಯುಂ (ಕಾದಂಬ. ೬೬೦) ; ಇರದೊಪ್ಪುವ ಪೊಸಚಿನ್ನದ ತಗಡೆನೆ ಕರಮೆಸೆದುದು ಮೆಯ್ಬೆಳಗು ಮಹೀಪತಿಯಣುಗಿನ ನಂದನೆಗೆ. (ಜಯುಕಾ. ೩-೫೩). **ಮೈವೆಳಗು** : ೧. ಚಂದ್ರನ ತಾರಕಿಯ ಮೈವೆಳಗು ಮಸುಳಿದವು (ತೊರರಾ. ೧-೦೪-೦) ; ಬಾಲಸೂರ್ಯನ ಪೋಲ್ವ ಮೈವೆಳಗಿನಿಂ ಪೊಳೆವುತ (ಪವಪೋ. ೦೨-೫). ೨. ಶೋಭೆ ; ಒಪ್ಪ : ಇಂತು ಪಂಪಾಪುರದ ಪೆಂಪಿನ ಮೈವೆಳಗಂ ಪೇಱ್ದು (ಉದ್ಭಟ. ೩-೮೦ ವ).
[ ಮೆಯ್$_{2}$ + ಬೆಳಗು$_{2}$ ]
**ಮೆಯ್ವೆಱು**, ಮೈವೆರು, ಮೈವೆಱು (ಕ್ರಿ). ೧. ದೇಹವನ್ನು ಧರಿಸು : ಹುಟ್ಟು : ಅರವಿಜನಾರಿಂದ . . . ಅಚ್ಚರರು ಮರುಮರುವುಟ್ಟಾಂತು

ಮೆಯ್ವೆತ್ತರು (ಕಣಾಂ. ೦೩-೭೯). ೨. ಮೈದಾಳು ; ಸಾಕಾರವಾಗು: ಉತ್ತಮತಪಂಗಳಿಂದತ್ಯುತ್ತಮದೇಹರ್ ವಿದೇಹರಪ್ಪುದಱಿಂ ಮೆಯ್ವೆತ್ತನ್ನ ರ್ಥತೆಯುಂ ತಾಳ್ದಿತ್ತು ವಿದೇಹಂ ವಿದೇಹಮೆಂಬೀ ಪೆಸರಂ (ಆದಿಪು. ೦-೩೩) ; ಬೆಡಂಗು ಮೆಯ್ವೆತ್ತಿರೆ ಕಾಲ ಪೊಂದೊಡರ ದೈತ್ಯರ ಹಾಹೆಗಳೊಪ್ಪೆ . . . ಗೋವಳರಾಯನ ಲೀಲೆ ರಂಜಿಕುಂ (ಜಗಂ. ೩-೯೩) ; ರನ್ನದ ನುಣ್ಗದಿರ್ ನೆಗೆದು ನೀಳ್ದೊಂದೊಂದಱೊಳ್ ಕೂಡಿ ಮೆಯ್ವೆತ್ತಿರ್ದಿಂದಿರವಿಲ್ಲ ಪಾಂಗ ನೆನಸುಂ ಬಾಂಬಟ್ಟೆಯೊಳ್ ಬೀಱಿ (ಕಬ್ಬಿಗ. ೩೭). ೩. ಪ್ರಕಟವಾಗು; ತೋರು ; ಕಂಡುಬರು : ಕೆತ್ತುವ ಮಿಸೆ ಕಂಪಡರ್ದ ಕಣ್ . . . ಮೆಯ್ವ[ಪಾಠಾಂ. ಮೈಪೆ]ತ್ತ ಬವರಾರ್ ಮನಂಗೊಳಿಸೆ (ಶಾಂತಿಪು. ೩-೬೮). ೪. ಒಪ್ಪು ; ಶೋಭಿಸು : ಕವಿಚಕ್ರವರ್ತಿಪೆಸರೇಂ ರನ್ನಂಗೆ ಮೆಯ್ವೆತ್ತುದೋ (ಅಜಿತ. ೦-೬೫) ; ನಿರುತಂ ತನ್ನೊಳು ಮೆಯ್ವೆತ್ತಿರೆ ಸಾಸಿರದೆಂಟು ನಾಮಮುಂ (ಸಮಯ. ೦-೬೩). ೫. ಎಡೆಬಿಡದಂತಿರು ; ಹೊಂದಿಕೊಂಡಿರು : ಅತ್ತಿತ್ತಂ ಮಿಸುಕದೆ ಮೆಯ್ವೆತ್ತಿದ ಮನ್ಮಥಸುಖೋತ್ತಮಾಂಗದೊಳಿರುತಂ . . . ಕೋಕಂ (ಗಂಗ. ೯-೬೭). **ಮೈವೆರು :** ೩. ಷವಿ ಮುಮತೆ ಮೈಪೆತ್ತಿಸುಮು ಮಾತ್ರುಮಾತಿನಲಿ (ಚಿಕದ. ೨೮-೩) ; ಮಾತಿನಲ್ಲಿ ಆತಂಕ ಅಸಹಸನೆಗಳೆರಡೂ ಮೈವೆತ್ತಿದ್ದವು (ಮರಳ. ೯೪).

**ಮೈವೆಱು :** ೨. ಆ ಆದಿನಾರಾಯಣನಿಂತು ಮೈವೆತ್ತು ಪುಟ್ಟಿ . . . ಕಾದಿ ಬಂಡಣದೊಳನಿಬರಂ ಸೈಮಿಸಿಗಟ್ಟನುಮು ಜನಮೆ ಎಂಗುಂ(ರಾಮಾಶ್ವ. ೦೯-೯). [ ಮೆಯ್$_2$ + ಪೆಱು$_1$ ]

**ಮೆಯ್ಯೊಗರ್,** ಮೈವೊಗರ್ (ನಾ). = ಮೆಯ್ವೆಳಗು ೧ : ಬಾಲ್ಯಮಂ ನಟಿಯಿಸಿ ಲೀಲೆಯಿಂದಾಡುತ್ತ . . . . ಮೆಯ್ಯೊಗರಿಂ ತೊಳಗುತಿರ್ದ ನಾಲ್ವರ್ ಕುಮಾರರ್ಗೆ ಏಳೆಂಟುವರ್ಷಮಪ್ಪುದುಂ (ದಶಾವ. ೬-೭೦ ವ). **ಮೈವೊಗರ್ :** ಮೈವೊಗರ ಜಗುನೆಯೊಳ್ ಕೆಂದಾವರೆ . . . ಈ ವಾರಿಜನಾಭನರುಣಹಸ್ತಸರೋಜಂ (ವತ್ಸ ವಂ. ೦೩-೬೭). [ ಮೆಯ್$_2$ + ಪೊಗರ್ ]

**ಮೆಯ್ಯೊಣರ್** (ಕ್ರಿ). ರಭಸದಿಂದ ಕಾದಾಡು, — ಸೆಣಸು : ಕ್ರಮದಿಂ ಮೆಯ್ಯೊಣರ್ದಾಜಿದಕ್ರಮದೆ ಮಾತಂ ಬಿಟ್ಟು ತನ್ನಿಟ್ಟ ಚಕ್ರಮದುಂ ನೀಪ್ರಭವಾಗೆ ಸಿಗ್ಗನೊಳಕೊಂಡು (ಎಕ. II, ೨೩೯-೩ ; ಸು.1180) ; ವಿಧುವ ಪಗೆಯಪ್ಪ ರಾಹುವಿನೊಳ್ ಕಡುಪಿನಿಂ ತೊಡರ್ದು ಮೆಯ್ಯೊಣರ್ದಪ್ಪುದು (ಶಂಕ್ರಪು. ೬-೯೩ ವ) ; ಕೈದುಗೊಳ್ಳದೆ ಕೆಲಸುರ್ದು ಮೆಯ್ಯೊಣರ್ದು (ಕಾವ್ಯಸಾ. ೦೦೦೩). [ ಮೆಯ್$_2$ + ಪೊಣರ್$_1$ ]

**ಮೆಯ್ಯೊಣರ್ಚು** (ಕ್ರಿ). ೧. = ಮೆಯ್ಯೊಣರ್ : ರಥಕ್ಕೆವಾಯ್ದುಡಿಗಿಡೆ ಮೆಯ್ಯೊಣರ್ಚುವ ಮಹಾರಥರಾಜಿಯೊಳಂತಗುರ್ವಿನಚ್ಚುಡಿದಿರೆ (ಶಂಕರ. ೦೦-೦೦೯) ; ದಮಿತಾರಿ ತನ್ನ ಪರಾಕ್ರಮಮೊಂದಱಿಂದಮೆ ಮೆಯ್ಯೊಣರ್ಚಿ ಗೆಲ್ವ ತನ್ನ ಜಾಗದ ಭೋಗದ ಯಶೋರಾಶಿಯುಮಂ . . . ಪೊಗೞಿಸುವೆನೆಂದು ತಱಿಸಂದು (ಶಾಂತಿಪು. ೯-೭೭ ವ). ೨. ದೇಹವನ್ನು ಚಾಚು, —ನೀಡು : ಭುಜಾದಂಡಂಗಳಂ ಸಾರ್ಚಿ ಬಿರ್ಚಿದಿಳಾಸಂಧಿಗೆ ಮೆಯ್ಯೊಣರ್ಚಿ ನೆಲೆಯಿಂದಕ್ಷೂಣಸತ್ತ್ವಂ . . . ಕಿಟ್ಟಂ . . . ಸಿದ್ಧಶೈಲೇಂದ್ರಮಂ (ಶಂರಾಮ. ೦೦-೯). [ ಮೆಯ್$_2$ + ಪೊಣರ್ಚು ]

**ಮೆಯ್ಯೊರೆ** (ಕ್ರಿ). ಸೇರು : ಕೂಡಿಕೊಳ್ಳು : ಚರುಚಾರುಗಂಧದೊಳ್ ಮೆಯ್ಯೊರೆದು ಪುರೋಡಾಶಪೂಣ್ಯತರಪರಿಮಳದೊಳ್ ಪೊರಳ್ದು . . . ಎಸೆಪುದು ಪಾವನಂ ತಪೋವನಪವನಂ(ಚಾದಂಪು. ೨೨೦) ; ಅಂಭಃಕ್ರೀಡೆಯಿಂ ಮೆಯ್ಯೊರೆದ ಮದದ ತೀನೋಡೆ ನೀಡಿಯುಂ ಮನಂ ಮೆಚ್ಚುವಿನಂ ಪೊರ್ಕ್ಕುಡಿ ಕಾಡಾನೆಗಳಿರೆ (ವರ್ಧಪು. ೦೦-೦೩). [ ಮೆಯ್$_2$ + ಪೊರೆ$_2$ ]

**ಮೆಯ್ಯೊಳೆಪು** (ನಾ). = ಮೆಯ್ವೆಳಗು ೧ : ತಿಸರಂಗಳ ಸೀಳ್ದ ಡಾಳದಿಂ ಬಳೆದೆಸೆದಿರ್ಪ ಸೆಳ್ಳುಗುರ ಮೆಯ್ಯೊಳೆಪಿಂ ಮಿಗೆ ಪೆರ್ಮೆವೆತ್ತು ಕಣ್ಗೊಳಿಸಿದ ಶಾಕೆ (ಕಬ್ಬಿಗ. ೭೯). [ ಮೆಯ್$_2$ + ಪೊಳೆಪು ( < ಪೊಳೆಪ ) ]

**ಮೆಯ್ಯೋಗ** (ನಾ). ದೇಹಸುಖ ; ದೈಹಿಕಸಂತೋಷ : ಸಂಗಡ ವರ್ಪವರೊಳ್ಪನಿಂದೆ ಮೆ ಯ್ಯೋ[ಯ್ಯೋ]ಗಮುಳುಂಬಮಪ್ಪ ಬಿಯಮಾಗಿರ್ದಗಂ ಬರೆ ಬರ್ಪ ಪಾಂಗಗುವರ್ಪಾಗಿರೆ (ಶಂಕರ. ೯-೬೭); ಮೆಯ್ವೆಸದಿಂ ಕೆಯ್ವೆಸದಿಂ ಬಾಯ್ವೆಸದಿಂ . . . ವನಿತೆಗೆ ಪಡೆದಾ ಮೆಯ್ಯೋಗಕ್ಕೆಳಸಿ ಸೋಲ್ವನೆಟ್ಟುವೊಜಂಗಂ (ಶಾವ್ಯಾವ. ೬೭). 'ಮೈಭೋಗ' ಪಠಾ.
[ ಮೆಯ್$_2$ + ಬೋಗ ]

**ಮೆಯ್ಸನ್ನೆ,** ಮೈಸನ್ನೆ (ನಾ). [ಕಾಮಶಾ] ಸ್ತ್ರೀಯ ಕಲಾಸ್ಥಾನಗಳ ಸ್ಪರ್ಶದಿಂದ ನೀಡುವ ಸಂಜ್ಞೆ, — ಸೂಚನೆ : ಕೈಸನ್ನೆಯಿಂದ ಕಾತರದಿಂದ ಪೊಯ್ವನು . . . ಮೆಯ್ಸ[ಪಾಠಾಂ. ಮೈಸ]ನ್ನೆಯಿಂದ ಚಿತ್ತದೊಳೊಡಗೂಡುವೆನ್ನೆಸರಲನ ಸಮರೂಪ (ಶಂರಾಶಾಂ. ೨೬-೦೯೦). **ಮೈಸನ್ನೆ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ ಮೆಯ್$_2$ + ಸನ್ನೆ$_2$ ]

**ಮೆಯ್ಸಲ್,** ಮೈಸಲ್ (ಕ್ರಿ). ೧. ದೇಹವನ್ನು ಒಪ್ಪಿಸು, — ಅರ್ಪಿಸು: ಬಂದೊಡೆ ನೋಡೆ ಬಾರದೊಡ ದೂದಮಿಯಟ್ಟುವೆ . . . ಸೈತಿರೆ ಸಾರ್ಚಿಸುಯ್ವೆ ಮೆಯ್ಸಂ[ಪಾಠಾಂ. ಮೈಸಂ]ದಪುರ್ದಪ್ಪಲಾತುರಿಸೆ (ರಾಜಶೇ. ೦೦-೦೨೩). **ಮೈಸಲ್ :** ೨. ದೇಹಕ್ಕೆ ಹೊಂದಿಕೊಳ್ಳು ; ಮೈಗೊಡು: ನಾನಾಮಣಿವಿದ ವೀರವೃತ್ತಿ ಮೈಸಂದಿರಲ್ ಕಂಡು ಶಿವನೆತ್ತಿದಂ ಬೊಮ್ಮತಂದೆಯನಲ್ಲಿ (ಬೊಮ್ಮರ. ೦೬೬-೦೩). [ ಮೆಯ್$_2$ + ಸಲ್$_1$ ]

**ಮೆಯ್ಸವಿ** (ನಾ). ಶರೀರದ ಸೊಬಗು ; ದೇಹಸೌಂದರ್ಯ : ಬಾಯ್ಸವಿಗೆ ಮೆಯ್ಸವಿ ಕಣ್ಸವಿಯಪ್ಪ ರೂಪು (ಕಮುದ. ೬೮.ಶ್ರಯೋ); ಕಾಂಬೆಯೆಂದೆನ್ನ ಮೆಸ್ಸವಿಯಾ (ಗೀರಂ. ೯೬-೦೯).
[ ಮೆಯ್$_2$ + ಸವಿ$_2$ ]

**ಮೆಯ್ಸಾರ್,** ಮೈಸಾರ್ (ಕ್ರಿ). (ದೇಹವನ್ನು) ಸಮೀಪಿಸು; ಹತ್ತಿರಕ್ಕೆ ಹೋಗು : ಚಳಿವೆಟ್ಟಾಣ್ಮನ ಪುತ್ರಿ ಸಾರ್ಚಿ ಚಳಿಯಿಂ ಮೆಯ್ಸಾ[ಪಾಠಾಂ. ಮೈಸಾ]ರ್ದು ತಾನಪ್ಪಿ ಸಂಚಳಿಸಲ್ (ರಾಜಶೇ. ೯-೦೭); ಶಶಿಕಾಂತದೊಡ್ಡುಂಗಲ್ಲೊಳ್ ತನ್ನ ಪಡಿನೆಳಲಂ ಕಂಡು ಮೆಯ್ಸಾ[ಪಾಠಾಂ. ಮೈಸಾ]ರ್ದು ಸಿಂದು (ಶಬಶಂ. ೩-೩೩ ವ). **ಮೈಸಾರ್ :** ಮೇಲಿನ ಪ್ರಯೋಗಗಳ ಪಾಠಾಂತರವನ್ನು ನೋಡಿ. [ಮೆಯ್$_2$ + ಸಾರ್$_1$]

**ಮೆಯ್ಸಾರ್ಚು,** ಮೈಸಾರ್ಚು (ಕ್ರಿ). ೧. ದೇಹವನ್ನು ಒಡ್ಡು, — ಅರ್ಪಿಸು : ಶರೀರವನ್ನು ಚಾಚು : ಕೃಷ್ಣಾಹಿಯ ಕೋಳ್ಗೆ ಬೆರ್ಚದಿದಿರೊಳ್ ಮೆಯ್ಸಾರ್ಚಿ ಬಾಚ್ಚಿನ್ನರಾರ್ (ಶಂರಾಮ. ೯-೬೯); ಅಂತು ಬಂದ ತೆಂಗಾಳಿಗೆ . . . ಕಂಪಂ ಮೆಚ್ಚುಗುಡುವಂತೆ ಮೆಲ್ಲನೆ ಮೆಯ್ಸಾರ್ಚಿ ಬಟಿಯುಂ ಬಸವಂ ನೋಡಲ್ವೇಟ್ಕುಮೆಂದು ನನೆಯುಂಬಂ ಬಗೆಯೊಳ್ ನೆನೆಯುತ್ತಿರ್ಪನ್ನೆಗಂ (ಕಬ್ಬಿಗ. ೬೭). ೨. ವಿಶಾಲವಾಗಿ ಹರಡು, — ಪಸರಿಸು : ಬಾಲರಸಾಲಂಗಳ ಮಕರಂದಘರ್ಮಜಲಕಣಮನುದಿರ್ಚಿ ಮೆಯ್ಸಾ[ಪಾಠಾಂ. ಮೈಸಾ] ರ್ಚಿ ಸರಳ ಶಾಖೆಗಳಂ ಪೊತ್ತೆತ್ತಿ (ರಾಜಶೇ. ೨-೭೭ ವ). **ಮೈಸಾರ್ಚು:** ೧. ದೀಹದ ಚಕೋರಿಕೆಗಳಟ್ಟಿಱಿಂ ಮುಕ್ಕುಟಿಪ ಮುಂಡಾಡುವ ಕರ್ದುಂಕುವೊದವ ಚೆಲ್ಲಕೆ ಮೈಸಾರ್ಚಿಯುಂ (ಕಂದ್ರಪು. ೮-೯೩ ವ). [ ಮೆಯ್$_2$ + ಸಾರ್ಚು ]

**ಮೆಯ್ಸಿರಿ,** ಮೈಸಿರಿ (ನಾ). ೧. ದೇಹದ ಸೊಬಗು, — ಚೆಲುವು : ದೇವನಿಕಾಯದೊಳ್ ನೆರೆವುದೊಂದುತ್ಸಾಹಮುಂ ತನ್ನ ಮೆಯ್ಸಿರಿ ಭಾಗ್ಯಂ ನೆರಮಪ್ಪುದೊಂದೆ ರಣದೊಳ್ (ಶಂಕರ. ೦೦-೯೩); ಎಯ್ದೆ ಲೋಕಮಂ ಬಗೆಗೊಳಿಸಿತ್ತು ಮೆಯ್ಸಿರಿಯ ಸೊಂಪು ಧರಾರಮಣೀಶಪುತ್ರಿಯಾ (ವರ್ಧಪು. ೯-೩೨); ಜವ್ವನದೇರೊಳು ಗೆಲವಿನ ಗುಡಿಗಳ ಊರಿದ ಮೆಯ್ಸಿರಿ ಮೊಗ ಮಾಟ (ಶಲ್ಯ. ೩-೦೬). ೨. ಲಾವಣ್ಯ; ಶೋಭೆ : ಮೃದುಪದಬಂಧಮಂ ಬಗೆಯು ಭಾವದ ಮೆಯ್ಸಿರಿಯಂ ರಸಪ್ರವಾಹದ ನೆಲೆವೆರ್ಚನಿಂ

ಬಣ್ಣಿಸಿ ಭಾವಿಸಿ (ಶಂರಾಮಾ. ೧-೨೯); ಪುರುಳಂ ಲಕ್ಕಣಮುಂ ಮೆಯ್ಸಿರಿಯುಂ ತಳ್ತಿಸೆಯೆ ಪೇಟ್ದ ಕಬ್ಬಂ . . . ರನ್ನದಂತೆರ್ದೆವುಗದೇ (ಕವ್ಯಾಕಾ. ೬). ೩. ಸಾಮರ್ಥ್ಯ : ಸತ್ತ್ವ : ಜವನಧಿಕಾರಂ ಮಿಟ್ತುವ ಜವಕೆ ಮೊಗಂದಿರುಪೆ ಕೊಲ್ವ ಮೆಯ್ಸಿರಿ ನೆಲಸಿತ್ತುವನೊಂದು ಗದೆಯೊಳ್ (ಜಗವಿ. ೯-೯೩); ಕದನಕರ್ಕಶನ ಮೆಯ್ಸಿರಿಯು ರಾವುತರ್ ಮಾವುತರ್ ಬಳಸಿ ಪೇಡಯ್ಸಿ ಬರಲ್ (ಕಬಿಕ್ಕ. ೪೬-೩೨). ಮೈಸಿರಿ : ೧. ಸಿರಿಯು ಮೊಗರಸದ ಪೊಸ ಮೈಸಿರಿಯೆನಿಕುಂ ಪೂಗೊಳಂಗಳ್ (ಶಂರಾಮಾ. ೧-೬೪): ಹರಿದ ಪರುಷಣದಾನನದ ಮೈಸಿರಿಯುಱಿದು ಕೈಮುಗಿದು . . . ಕೇಳಿದ ನವನಿಜೇಶ್ವರನ (ತೊರರಾ. ೪-೬-೨೩); ತನ್ನ ಕಿಱುದಮ್ಮನ ಬೀರದ ಮೈಸಿರಿಯು ಬಿಂಕದ ಮೈಪಳಿಯು ನುಡಿಗೆ ಸಂತಸಂಗೊಂಡು (ರಾಮಾಕ್ಷ. ೪೬-೯). ೩. ಸುಭಟರ ವೀರವೃತ್ತಿಯು ಬಲ್ಲೆ ಮಾನ್ಯರ ಮೈಸಿರಿಯು ತಿಳಿವೆ (ಕುಮ್ಯಾಕ. ೩-೨೨); ದಾಶರಥಿಸುತ ಆ ಸರೋಜಾಂಬಕನು ವಿನಯದಲಧಿಕ ತೇಜದಲಿ ಕೇಳ್ ಕಪರ್ದಿಯು ಮೈಸಿರಿಯು ಮಿಕ್ಕನು (ತೊರರಾ. ೨-೪-೦೩).

[ ಮೆಯ್$_2$ + ಸಿರಿ ]

**ಮೆಯ್ಸಿರಿಗಾಣ್** (ಕ್ರಿ). ಚೆಲುವನ್ನು ಕಾಣು : ಸೊಬಗನ್ನು ನೋಡು : ನಾರಿಯರ ಬಟ್ಟಮೊಗದ ಮೆಯ್ಸಿರಿಗಂಡು (ಶಬ್ದರಾ. ೯-೭೩).

[ ಮೆಯ್ಸಿರಿ + ಕಾಣ್ ]

**ಮೆಯ್ಸಿರಿಗುಂದಿಸು** (ಕ್ರಿ). ಸೊಬಗನ್ನು ಕುಗ್ಗಿಸು : ಮದನಮತಂಗಜವಂ ಮೆಯ್ಸಿರಿಗುಂದಿಪ ಮೃದುತರಗಮನಂ (ಜಯಕಾ. ೨-೯).

[ ಮೆಯ್ಸಿರಿ + ಕುಂದಿಸು ]

**ಮೆಯ್ಸಿರಿಗೆಡು** (ಕ್ರಿ). ಸಾಮರ್ಥ್ಯವಿಲ್ಲದಾಗು; ಸತ್ತ್ವಗುಂದು : ಮೆಯ್ಸಿರಿಗೆಟ್ಟುಮಿಂತು ನೆಲದೊಳ್ ವಾಣ್ಗುಂದಿ ನಿಂದಿರ್ಪರ್ (ಕಮ್ಯಾಕಾ. ೦೭೨).

[ ಮೆಯ್ಸಿರಿ + ಕೆಡು$_1$ ]

**ಮೆಯ್ಸಿರಿವೆಱು** (ಕ್ರಿ). ಚೆಲುವನ್ನು ಪಡೆ ; ಶೋಭೆಗೊಳ್ಳು : ಮೆಯ್ಸಿರಿವೆತ್ತ ತಟ್ಟಲಿಂ ಪೆಟ್ಟಮದೊಂದು ದಿಟ್ಟಗೆಡೆಯಾದುದು ತೊಟ್ಟನೆ ಕರ್ಪವಿಲ್ಲನಾ (ಕಮ್ಯಾಕಾ. ೨೨೦). [ ಮೆಯ್ಸಿರಿ + ಪೆಱು$_1$ ]

**ಮೆಯ್ಸುಕ** ' ಮೆಯ್ಸೊಗ ' ನೋ.

**ಮೆಯ್ಸುಖ**, ಮೈಸುಖ (ನಾ). ೧. [ಕಾಮುಶಾ] ಕಾಮಸುಖ ; ಭೋಗ : ಪೊಸಮುಡು ಸಿಚ್ಚನಿಚ್ಚಂ ಪೊಸಗಂಡರ್ . . . ಭಾವಿಸುವಂದು ಮೆಯ್ಸುಖಂ ರಂಜಿಸೆ ಬೆಲೆವೆಣ್ಣುಕ್ಕುಮುಟೀದ ಸತಿಯುಗುರ್ಗಂಟೇ (ರವಾಣಮ್ಯ. ೩-೦೩೨). **ಮೈಸುಖ** : ೨. ದೇಹಕ್ಕೆ ಹಿತಕರವಾದುದು : ನಮ್ಮ ಜನಾಂಗದವರ ತಾರತಮ್ಯಪಟ್ಟಿಯಲ್ಲಿ ಮೈಸುಖಕ್ಕಿಂತ ಮನಸ್ಸಿನ ಸುಖ ದೊಡ್ಡದು (ಕಾರದ. ೬). [ ಮೆಯ್$_2$ + ಸುಖ ]

**ಮೆಯ್ಸುಡು**, ಮೈಸುಡು (ಕ್ರಿ). ದೇಹವನ್ನು ತಾಪಗೊಳಿಸು : ಮೆಯ್ಸುಡುವ ಬಿಸಿ ನೋಡಿ ಹೆತ್ತವಳ್ . . . ಕಾಡಿಗೆ ಪೋದೆಯೇಕಯಿಂದೆನಲು (ಕಾಲೂರ. ೦೩೨-೨೮೨). **ಮೈಸುಡು** : ಇವತ್ತು ಮೈಸುಡುವ ರಣಬಿಸಿಲು ಇದೆ (ರೂಢಿ).

ಮೈಸುಟ್ಟುಕೊಳ್ಳು = ಉರಿ ಹಚ್ಚಿಕೊಂಡು ದೇಹವನ್ನು ತಾಪಗೊಳಿಸು : ಹುಲೀ ಬಣ್ಣಕ್ಕೆ ನರಿ ಮೈಸುಟ್ಟುಕೊಂಡ ಹಾಗೆ (ಗಾದೆ).

[ ಮೆಯ್$_2$ + ಸುಡು ]

**ಮೆಯ್ಸೆಡೆ** (ಕ್ರಿ). ಹಿಮ್ಮೆಟ್ಟು ; ಹೆದರು : ಮುರವಿಧ್ವಂಸಕನಂಜಿ ಮೆಯ್ಸೆಡೆಯೆ ಬೆನ್ನಂ ಪತ್ತುವಂ ಪತ್ತುವಂ (ಜಗವಿ. ೭-೩೭).

[ ಮೆಯ್$_2$ + ಸೆಡೆ$_1$ ]

**ಮೆಯ್ಸೊಂಕು$_1$** ' ಮೆಯ್ಸೋಂಕು$_1$ ' ನೋ.

**ಮೆಯ್ಸೊಂಕು$_2$** ' ಮೆಯ್ಸೋಂಕು$_2$ ' ನೋ.

**ಮೆಯ್ಸೊಕ** ' ಮೆಯ್ಸೊಗ ' ನೋ.

**ಮೆಯ್ಸೊಗ**, ಮೆಯ್ಸುಕ, ಮೆಯ್ಸೊಕ (ನಾ). ದೇಹದ ಸುಖ, –ಸಂತೋಷ: ಅಲಸದೆ ಮಾಡಿ ಬೇಸಱದೆ ಸಾಲ್ಗುಮಿದೆನ್ನದೆ ಮೆಯ್ಸೊಗಕ್ಕೆ ಪಂಬಲಿಸದೆ (ಶಂಶಛಾ. ೧-೦೩೬); ಇಪ್ಪತ್ತಯ್ಸಾಸಿರವರ್ಷಂ ಸಿರಿ ಮೆಯ್ಸೊಗಮಂ ಚಕ್ರವರ್ತಿಯೊಳ್ ಭೋಗಿಸಿದಳ್ (ಶಾಂತಿಪು. ೧೧-೯೬). **ಮೆಯ್ಸುಕ** : ಅಕ್ಕರಗೊಟ್ಟಿಯುಂ ಚದುರರೊಳ್ವಾತುಂ ಕುಳಿರ್ ಕೋಟ್ಟಿ ಜೊಂಪಮುಮೇವೇಟ್ಪುದನುಳ್ಳ ಮೆಯ್ಸುಕಮುಮಿಂತೆನ್ನಂ ಕರಂ ನೋಡಿ ನಾಡೆ ಮನಂಗೊಂಡಿರೆ ತೆಂಕನಾಡ ಮಱೆಯಲ್ಕಿನ್ನೇಂ ಮನಂ ಬರ್ಕುಮೇ (ಶಂಶಛಾ. ೪-೩೦). **ಮೆಯ್ಸೊಕ**: ಬಗೆಯದೆ ಮೆಯ್ಸೊಕ[ಪಾಠಾಂ. ಗ]ಮಂ ಬಗೆ ಪಗೆವರ ಕಡುವೆರ್ಚಂ (ಶಂಶಛಾ. ೭-೬೬). [ಮೆಯ್$_2$ + ಸೊಗ]

**ಮೆಯ್ಸೊಬಗು**, ಮೈಸೊಬಗು (ನಾ). ದೇಹದ ಸೌಂದರ್ಯ : ಬಾಯ್ಸವಿಗೆ ಮೆಯ್ಸೊಬಗು[ಪಾಠಾಂ. ಮೆಯ್ಸವಿ] (ಕಮರ. ೭೯ ಪ್ರಯೋ). **ಮೈಸೊಬಗು** : ಕಂಗಳ ಕಾಂತಿ ಮೊಗೆಯಲು ವಿಚಿರ ಮೈಸೊಬಗ (ಕಂಸಿಪಿ. ೨೩-೦೩೦). [ಮೆಯ್$_2$ + ಸೊಬಗು]

**ಮೆಯ್ಸೋಂಕು$_1$**, ಮೆಯ್ಸೊಂಕು$_1$, ಮೈಸೋಂಕು, ಮೈಸೋಕು (ಕ್ರಿ). ೧. ದೇಹವನ್ನು ಮುಟ್ಟು : ಶರೀರವನ್ನು ತಾಕು : ಅಘೀಳ ಮಹಾದಾವಾಗ್ನಿ ಮೆಯ್ಸೋಂಕಿದ ತೆಱವೆ ತರುಸ್ತೋಮದು ಸಾರ್ದ್ರಪತ್ರಾಳಿ ಮುರುಂಟಿತ್ತು (ಕುಸುಮಾ. ೯-೦೦೯); ಕುಳಿರ್ವ ಕರದ ಚಂದ್ರ ತಂಗಾಳಿ ಮೆಯ್ಸೋಂಕಿ ಸುಳಿದುದು ಹರನ ಸಮ್ಮುಖಿಕೆ (ಸೋಹಕ. ೬-೯). **ಮೆಯ್ಸೊಂಕು$_1$** : ೧. ಕಿಱಿಚದಿರ್ ಮೆಯ್ಸೊಂಕದಿರ್ ಕೈಗಳಂ ಮುಗಿದಿರ್ (ಕಬ್ಬಿಕಾ. ೦೬೬); **ಮೈಸೋಂಕು** : ೧. ಮಂದೇಹದನುಜರೊಡನೆ ಕಾದಲು ರಕ್ತಬಿಂದು ಮೈಸೋಂಕಿ ಕೆಂಪಾಗೆ ಮುಂದದ ತೊಳೆವೊಲು ಪಶ್ಚಿಮಾಂಬುಧಿಗನಂದಿಳಿದನು (ಕಂಸಿಪಿ. ೯-೦೬೩). **ಮೈಸೋಕು** : ೨. ಎದುರಿಸು ; ಮೇಲೆಬೀಳು : ಆ ಕಿರೀಟಿ ವೃಕೋದರರು ಮೈಸೋಕಿದರೆ ಸಂತೋಷ (ಕುಮ್ಯಾದ್ರೋ. ೩-೪೩). [ಮೆಯ್$_2$ + ಸೋಂಕು$_1$]

**ಮೆಯ್ಸೋಂಕು$_2$**, ಮೆಯ್ಸೊಂಕು$_2$ (ನಾ). ಶರೀರದ ಸಾಮೀಪ್ಯ : ಮಟ್ಗಿಸಿದುದು ಮೆಯ್ಸೋಂಕಿನ ಹರವಸವನಱಿವುಮನರರೆ (ಚಂದ್ರಪ್ರ. ೬-೯೩). **ಮೆಯ್ಸೊಂಕು$_2$** : ಮೆಯ್ಸೊಂಕು, ಬಾಯ್ಸವಿ, ಕಯ್ಸೊರೆ (ಶಾಸಿಶೂ. ೩೨ ಟಾಕಾ). [ ಮೆಯ್$_2$ + ಸೋಂಕು$_2$ ]

**ಮೆರಗು** ' ಮೆರುಗು$_2$ ' ನೋ.

**ಮೆರತ** ' ಮೆರೆತ ' ನೋ.

**ಮೆರಪು** ' ಮೆರ್ಪು ' ನೋ.

**ಮೆರವಣ** ' ಮೆಱವಣ ' ನೋ.

**ಮೆರವಣಗೆ** ' ಮೆಱವಣಿಗೆ ' ನೋ.

**ಮೆರವಳಿಗೆ** ' ಮೆಱವಣಿಗೆ ' ನೋ.

**ಮೆರಸು** ' ಮೆಱೆಯಿಸು ' ನೋ.

**ಮೆರಿ** (ಕ್ರಿ). ಕುಟ್ಟು ; ತೊಳಸು : ಮುತ್ತಿರು ಮೆರಿಯಲಿ ಮುಮುಕಿಯು ಕೇರಲಿ . . . ಬತ್ತ ಮೆರಿಯಲು ಮೂವರನ್ನಿಲ್ಲಿ ಅಪೇಕ್ಷಿಸಿದ (ಸಂಕೋಲ. ೦೪೯).

[ ? ]

**ಮೆರುಗು$_1$** (ಕ್ರಿ). ಮೆರೆ ; ವಿಜೃಂಭಿಸು : ಐಶ್ವರ್ಯ, ವೈಭವಗಳಲ್ಲಿ ಕಲಾನೈಪುಣ್ಯದಲ್ಲಿ ಮೆರುಗುವ ಶ್ರೀದೇವಿಯು ಹೆಚ್ಚೋ ? (ಶ್ರೀರಾಜು. ೧೧) ; ಮೈಸೂರಿನ ಹೆಸರು ದಕ್ಷಿಣದೇಶದಲ್ಲಿ ಸ್ವಲ್ಪ ಸ್ವಲ್ಪ ಮೆರುಗುತ್ತಿದ್ದಿತು (ಶ್ರೀರಾಜು. ೬೦). ' ಮಿಱುಗು$_1$ ' ಪರಾ. [ ← ತೆಲು. ಮೆಱುಗು ]

**ಮೆರುಗು$_2$**, ಮೆರಗು (ನಾ). ೧. ಹೊಳಪು ; ಕಾಂತಿ : ವಾರ್ನಿಷ್ ಹಾಕಿದ ಮೇಲೆ ಆ ಕಿಟಕಿಗಳಿಗೆ ಮೆರುಗು ಬಂದಿದೆ (ರೂಢಿ). ೨. ಗಿಲೀಟು; ಲೇಪನ ವಸ್ತು: ಅವೆರಡೂ ಚಿನ್ನದ ಮೆರುಗು ಹಾಕಿದ ಬಳೆಗಳು (ರೂಢಿ). ೩. ಶೋಭೆ ; ಕಳೆ : ಸುಧಾ ಮತ್ತು ಶೀಲೂ . . . ಆ ಪೂಜೆಗೊಂದು

ವಿಶೇಷ ಮೆರುಗನ್ನು ತಂದೊಡ್ಡಿದ್ದರು (ಕಂಬಹು. ೧೨೭) ; ಅವನ ಈ ವಿದ್ಯೆಗೆ ಮೆರುಗು ಕೊಟ್ಟವರೂ ನೀವೇ (ಸವಿ. ೬೨). **ಮೆರಗು :** ೧. ಮಂಚ ಕುರ್ಚಿ ಮೇಜುಗಳನ್ನು . . . ಮೆದುವಾದ ಬಟ್ಟೆಯಿಂದ ಉಜ್ಜಿದರೆ. ಅವಕ್ಕೆ ನುಣುಪು ಮತ್ತು ಮೆರಗು ಬರುತ್ತವೆ (ಗೃಹಶಿ. ೦೭೪). ೩. ಬಾಸಿಂಗ ಈಗ ಲಲಿತೆಯ ಮುಖಕ್ಕೆ ಮೆರಗು ಕೊಡುತ್ತಿತ್ತು (ಅಂಹೂ. ೬೪). 'ಮಿಱುಗು$_2$' ಪರಾ. [< ಮೆರುಗು$_1$./ತಮಿ. ಮೆರುಕು; ತುಳು. ಮೆರ್ಪು : ತೆಲು. ಮೆಱುಗು]

**ಮೆರುಗೆಣ್ಣೆ** (ನಾ). ಮರ ಮೊದಲಾದ ಸಾಮಾನುಗಳಿಗೆ ಹೊಳಪುಂಟುಮಾಡಲು ಬಳಸುವ ಒಂದು ಬಗೆಯ ಎಣ್ಣೆ : ವಾರ್ನಿಷು : ಬರ್ಮಾದೇಶದಲ್ಲಿ ಮೆರುಗೆಣ್ಣೆ (ವಾರ್ನೀಸು) ಬಳಿದ ಇಂಥ ಫಲಕಗಳು ಸಾಮಾನ್ಯ (ಶಾರಶ. ೦೪) ; ರಾಳವನ್ನು ಅಗಸೆಎಣ್ಣೆಯಲ್ಲಿಯೋ ಸ್ಪಿರಿಟ್ಟಿನಲ್ಲಿಯೋ ದ್ರಾವಣಮಾಡಿ ಮೆರುಗೆಣ್ಣೆಗಳನ್ನು ತಯಾರಿಸುತ್ತಾರೆ (ಶಿಂಪ್ರಾ. ೩೨೭). [ ಮೆರುಗು$_2$ + ಎಣ್ಣೆ. / ತಮಿ. ಮೆರುಕೆಣ್ಣೆ ]

**ಮೆರೆ** 'ಮೆಱೆ$^3$' ನೋ.

**ಮೆರೆಕೋಲು** 'ಮೆಱೆಗೋಲು' ನೋ.

**ಮೆರೆಗೋಲು** 'ಮೆಱೆಗೋಲು' ನೋ.

**ಮೆರೆತ,** ಮೆರತ (ನಾ). ೧. ಉತ್ಸವ : ಮೆರವಣಿಗೆ : ನಮ್ಮೂರಿನ ಜೀವಾಳವಾದ ಹಾಡುಪಾಡುಗಳು, ಕುಣಿತ ಮೆರೆತಗಳು ಕಣ್ಮರೆಯಾದರೆ ಉಳಿಯುವುದೇನು ? (ನಮ್ಮೂರು. ೩೧೭). ೨. ಪ್ರದರ್ಶನ : ಬಹಿರಾಡಂಬರ : ನಿಮ್ಮಂಥ ಹೇಡಿಗಳಿಗಾದ್ರೆ ಅವೆಲ್ಲಾ ಮೆರೆತಾ ಬೇಕು. ನನಗ್ಯಾಕೆ (ಚಾಗಿಶ. ೩೩). **ಮೆರತ :** ೨. ಆತನಿಗೆ ಮೆರತದ ಮರುಳೂ ಇದೆ, ಹೊಗಳಿಕೆಯ ಹುಚ್ಚೂ ಇದೆ (ತತ್ರ್ಯ. ೫ ಮುನ್ನುಡಿ).
[ ಮೆರೆ (<ಮೆಱೆ$^3$) + — ತ$_2$ ]

**ಮೆರೆಯಿಸು** 'ಮೆಱೆಯಿಸು' ನೋ.

**ಮೆರೆವಣಿಗೆ** 'ಮೆಱವಣಿಗೆ' ನೋ.

**ಮೆರೆಸು** 'ಮೆಱೆಯಿಸು' ನೋ.

Δ**ಮೆರ್ಚು** 'ಮೆಚ್ಚು$_1$' ನೋ.

**ಮೆರ್ಪು,** ಮೆರಪು (ನಾ). ೧. (ಕರಾ) ಧಾನ್ಯವನ್ನು ಸಂಗ್ರಹಿಸಿಡುವ ಸಾಧನ ; ಗಳಗೆ (?) : ಒಳಅಂಗಣದ ಒಂದು ಮಗ್ಗುಲಲ್ಲಿ ಅಕ್ಕಿ ತುಂಬಿಸುವ ಮೆರ್ಪಿತ್ತು (ಶಿರಾಟ. ೩೨) ; ಎರಡೆರಡು ಮೆರ್ಪುಗಳ ಅಂಗಡಿಯದು. ಅದರಿಂದಲೇ ಕತ್ತಲು ತುಂಬಿದ್ದು (ಶಾರುದಾ. ೨೭). **ಮೆರಪು :** ೨. (ಕರಾ) ಗೋಡೆಯಲ್ಲಿ ಸಾಮಾನುಗಳನ್ನು ಇಡಲು ಕೊರೆದ ಕಿಂಡಿ.
[ ? ]

**ಮೆರ್ಪುದೆಱೆ$^3$** (ನಾ). ಒಂದು ಬಗೆಯ ತೆರಿಗೆ : ಸುಂಕ ಮೆರ್ಪುದೆಱೆ ಸಮಸ್ತಾವಳಕ್ಕೆ ದೂಪಕ್ಕೆಱೂ ಬಿಟ್ಟ ಧರ್ಮ (ಎಕ. VIII, ಸೊರಬ. ೦೩೭-೪ ; 1272). [ಮೆರ್ಪು$_1$ + ತೆಱೆ$^3_3$]

**ಮೆಲ್$_1$,** ಮೆಲಿ, ಮೆಲು$_1$, ಮೆಲ್ಲು (ಕ್ರಿ). ಮೆದ್ದು, ಮೆಲ್ದು (ಭೂತಕೃ), ಮೆಲ್ವ(ಭವಿಕೃ). ೧. ತಿನ್ನು : ಪಸಕರಿ ಮೆಲ್ಲದೆ ಲಲಿತಸಲ್ಲಕೀಪಲ್ಲವಮಂ ಸ್ಮರವಶದಿಂದಿರ್ದುದು (ಶಬರಾ. ೩-೬): ಇಱಿ ತಱಿ ಕೊಲ್ ಮೆಲ್ (ಅವಿಶ್ವ. ೩-೯೩) ; ಹಣ್ಣು ಮೆದ್ದ ಬಳಿಕ ಆ ಮರವನಾರು ತಱಿವರೇಸು (ಮುಶಾದೇ. ೩. ೪೯-೦೦೭) ; ವಿಷದ ಲಡ್ಡುಗೆ ಮೆದ್ದಿತು ಕೂಸು (ಪುರಂದ. ೦-೦೯೩-೨). **ಮೆಲಿ :** ೧. ಅಪ್ಪಿದರೆ ಸುಖವಿಲ್ಲ ಮೆಲಿದರೆ ರುಚಿಯಿಲ್ಲ (ಬಸವ. ೦೨೭) ; ಸಿಂಬಸುಪತ್ರದೊಳಂ ಬಜೆಯಂ ಬೆರಸದನಡಸಿ ಮೆಲಿದು (ಖಮದ. ೧೦-೨೩). **ಮೆಲು$_1$ :** ೧. ಅಡಕೆಯ ಭಾಗಂ ಬಾಯಿಂ ಕೆಡದೊಡದಂ ಕಳೆದುಕೊಂಡು ಮೆಲುವವರ್ಬೂದರ್ (ಸಮಶ. ೧೨-೬) ; ಮೆಲುವೊಡ ಲೋಚಪೂರ್ಣಪುಂಟು (ಹಶಾ. ೬-೬೨) ; ಕೊಲುವ ಕೈಯೊಳು ಪೂಜೆ ಮೆಲುವ ಬಾಯೊಳು ಮಂತ್ರ (ಸರ್ವಜ್ಞ. ೦೭೭). **ಮೆಲ್ಲು :** ೧. ಸುದತಿ . . . ಬೆಳ್ಳಿಲೆಯ ಮೆಲ್ಲುತೆ ಸಖಿಗೂಡಿ ಬಂದಳು ದಿವಾಣಕ್ಕೆ (ಮೋಹತ. ೨೭-೭) ; ಜೀರಿಗೆಯಂ ಹುರಿದ್ದು ಪುಡಿಮಾಡಿ ಬೆಲ್ಲವೆರಸಿ . . . ಮೆಲ್ಲಲು ಛಳಿಜ್ವರ ಬಿಡುವುದು (ಸಕವೈ. ೭೪) ; ಮೊಸರು ಅವಲಕ್ಕಿ ಮೆಲ್ಲುವವು ಹಿಟ್ಟು ಮುಕ್ಕುವವು (ಸಮುಕೀ. ೭೭). ೨. (ಅಲಂ) ಮೆಲುಕುಹಾಕು ; ಹಿಂದಿನದನ್ನು ನೆನಪು ಮಾಡಿಕೊಳ್ಳು : ಗತಕಾಲದ ವೈಭವವನ್ನು ಮೆಲ್ಲುತ್ತಿರುವ ಜನಾಂಗ ನಾವಾಗಕೂಡದು (ಶಾರದ. ೩೨೪).
[ದೇ.॥ ತಮಿ. ಮೆಲ್ : ಮಲ. ಮೆಲ್ಲು ; ತುಳು. ಮೆಲಿ = ಹಿಟ್ಟಿನಂತೆ ನಾದು ; ತೆಲು. ಮೆಕ್ಕು ; ಕೋತ. ಮೆಕ್ = ಜಗಿಯುವಿಕೆ ; ತೊದ. ಮೆಳ್ಕ್ = ಜಗಿಯುವಿಕೆ]

**ಮೆಲ್$_2$,** ಮೆಲು$_2$ (ಗು). ೧. ಮೃದುವಾದ ; ಮೆತ್ತನೆಯ : ಕೋಮಲವಾದ: 'ಮೆಲ್ಗಯ್', 'ಮೆಲ್ವಾಸು' ಪರಾ. ೨. ಇಂಪಾದ: ಮಧುರವಾದ : 'ಮೆಲ್ಲುಲಿ$_2$' ಪರಾ. ೩. ಸಾವಕಾಶವಾದ : ನಿಧಾನವಾದ : 'ಮೆಲ್ನಡೆ' ಪರಾ. ೪. ಸಣ್ಣ ; ಚಿಕ್ಕ : 'ಮೆಲ್ಗುಟುಕು' ಪರಾ. ೫. ಕೆಳಸ್ವರದ: ತಗ್ಗಿನ: 'ಮೆಲ್ದನಿ' ಪರಾ. **ಮೆಲು$_2$:** ೨. 'ಮೆಲುನುಡಿ' ಪರಾ. ೩. 'ಮೆಲುನಡೆ' ಪರಾ. ೫. 'ಮೆಲುನುಡಿ' ಪರಾ. ೬. ತೀಕ್ಷ್ಣವಲ್ಲದ ; ಹಿತವಾದ: 'ಮೆಲುಗಿಚ್ಚು' ಪರಾ.
[ದೇ.॥ ತಮಿ. ಮಲ. ಮೆಲ್ ; ತುಳು. ತೆಲು. ಮೆಲ್ಲ; ಕೊಡ. ಮೆಲ್ಲ್]

**ಮೆಲಕಾಡಿಸು** 'ಮೆಲುಕಾಡಿಸು' ನೋ.

**ಮೆಲಕಾಡು** 'ಮೆಲ್ಕಾಡು' ನೋ.

**ಮೆಲಕು** 'ಮೆಲ್ಕು' ನೋ.

**ಮೆಲಿ** 'ಮೆಲ್$_1$' ನೋ.

**ಮೆಲಿಸು,** ಮೆಲ್ಲಿಸು (ಕ್ರಿ). ತಿನ್ನಿಸು : ಉಣ್ಣಿಸು : ಕಲ್ಲನಾದಿಗೆ ಕಬ್ಬ ಮೆಲಿಸಿದನು (ರೇವಣ. ೦-೦೯): ಎಣ್ಣೆಯ ತಲೆಗೂಡುವುದಿಲ್ಲ ನೊರೆವಾಲು ಬೆಣ್ಣೆಯ ಮೆಲಿಸುವುದಿಲ್ಲ (ಮೋಹತ. ೪-೯೦): ದೊರೆತ ದೋರೆಹಣ್ಣನವನಿಗೆ ಮೆಲಿಸುವೆ (ಗೆಲಿಂ. ೭೦-೩೨). **ಮೆಲ್ಲಿಸು :** ಕಜ್ಜಾಯ ತುಪ್ಪ ಸಕ್ಕರೆಯ ಕೊಜ್ಜೆಯರಿಗೆ ಮೆಲ್ಲಿಸುತೆ ಮಿಕ್ಕುದ ಬಾಗಿಲಜ್ಜಿಯರಿಗೆ ತುಂತ್ರಿಸಿದ (ಮೋಹತ. ೦೯-೦೪) : ವೈಶಂಪಾಯನನಿಗೆ ಹಣ್ಣುಹಂಪಲ ಮೆಲ್ಲಿಸಿ . . . ಕಳುಹಿಸಿಬಿಟ್ಟು ಇದ್ದೇವೆ (ಪತಾ. ೨). [ಮೆಲ್$_1$ + — ಇಸು$_3$]

**ಮೆಲು$_1$** 'ಮೆಲ್$_1$' ನೋ.

**ಮೆಲು$_2$** 'ಮೆಲ್$_2$' ನೋ.

**ಮೆಲುಕಸ್ತೂರಿ** (ನಾ). ಒಂದು ಬಗೆಯ ಕಸ್ತೂರಿ : ಮೆಲುಕಸ್ತೂರಿ ೧ ಹಣ ತೂಕ, ಗುಬ್ಬಚ್ಚಿಹಕ್ಕಿಯ ಹಿಕ್ಕೆ ೧ ಹಣ ತೂಕ (ಸಕವೈ. ೩೭೦).
[ಮೆಲು$_1$ + ಕಸ್ತೂರಿ]

**ಮೆಲುಕಾಟ** (ನಾ). ಸುರಿಸುವಿಕೆ : ಜಗಿಯುವಿಕೆ : ಅವರ ವಿನೋದದ ಮೆಲುಕಾಟಕ್ಕೆ ಲಾಲಾರಸದ ಅರ್ಘ್ಯವನ್ನರ್ಪಿಸದ ಮತಿವಿಕಾರವುಂಟೇ ? (ಗಾಳಕ. X, ಮುನ್ನುಡಿ): ಈ ಅನಂತನರಕದ ಮೆಲುಕಾಟ ಬೇಡ (ರೀಶಕ. II. ೨೨೦). [ಮೆಲುಕು (<ಮೆಲ್ಕು) + ಆಟ]

**ಮೆಲುಕಾಡಿಸು,** ಮೆಲಕಾಡಿಸು (ಕ್ರಿ). ೧. (ಎತ್ತು, ಒಂಟೆ ಮುಂತಾದ ಪ್ರಾಣಿಗಳು) ಅರೆಜೀರ್ಣವಾದ ಆಹಾರಪದಾರ್ಥವನ್ನು ಮರಳಿ ಬಾಯಿಗೆ ತಂದುಕೊಂಡು ಅಗಿ-ಸುರಿಸಿ ನುಣ್ಣಗೆ ಮಾಡು : ಮೈ ಮರೆತು ಕಣ್ಮುಚ್ಚಿ ನಿಧಾನವಾಗಿ ಆಗೊಮ್ಮೆ ಈಗೊಮ್ಮೆ ಮೆಲುಕಾಡಿಸುತ್ತ ನಿಂತಿತ್ತು (ಶಕಸ. ೨). ೨. (ಅಲಂ) ಹಿಂದಿನ ವಿಷಯಗಳನ್ನು ಪುನಃ ಪುನಃ ನೆನಪು ಮಾಡಿಕೊಳ್ಳು, — ಮಥನ ಮಾಡು: ಮಲಗಿದ್ದಲ್ಲಿಂದಲೇ ಪುಷ್ಪಾ ಆ ರಸ-ನಿಮಿಷ ಮತ್ತು ದುಃಖದ ದಿನಗಳನ್ನು ಮೆಲುಕಾಡಿಸಿದಳು (ಕೇಮೋದ. ೬೦). **ಮೆಲಕಾಡಿಸು :** ೧. ಮೆಲಕಾಡಿಸುತ್ತ ಸಂತೋಷದಿಂದ

ಬಿದ್ದುಕೊಂಡಿರುತ್ತವೆ (ಮುಂಬಯಿ. ೩-೧೦); ಎತ್ತುಗಳು ಯಾವ ಸಂಶಯವಿಲ್ಲದೆ ಮೆಲಕಾಡಿಸುತ್ತಿದ್ದುವು (ಶಾಶಂ. ೨೨). ೨. ಮನಸ್ಸು ಬೆಳಗಿನ ಮಾತುಗಳನ್ನು ಮೆಲಕಾಡಿಸುತ್ತಿತ್ತು (ಶಾಶಂ. ೬೭).

[ಮೆಲುಕು (<ಮೆಲ್ಕು) + ಆಡಿಸು]

**ಮೆಲುಕಾಡು** 'ಮೆಲ್ಕಾಡು' ನೋ.

**ಮೆಲುಕಿಡು** (ಕ್ರಿ). ಮೆಲುಕು ಹಾಕು ; ಮೆಲುಕಾಡಿಸು : ತಮ್ಮಯ ಮುಖಂಗಳ ಮೇಲೆಕೆತ್ತಿ ಸಂತಸದಾಳ್ದು ಮೆಲುಕಿಡುತೆ . . . ಮಲಗಿರ್ಪ ಮಹಿಷೀನಿಕರವೆಸದಿರ್ದುವು (ಸಿದ್ಧೇಪು. ೦೭-೩೮).

[ಮೆಲುಕು (< ಮೆಲ್ಕು) + ಇಡು$_1$]

**ಮೆಲುಕಿರಿ** 'ಮೆಲ್ಕಿಱಿ' ನೋ.

**ಮೆಲುಕಿಱಿ** 'ಮೆಲ್ಕಿಱಿ' ನೋ.

**ಮೆಲುಕು** 'ಮೆಲ್ಕು' ನೋ.

**ಮೆಲುಗಾಳಿ** (ನಾ). ನಿಧಾನವಾಗಿ ಬೀಸುವ ಗಾಳಿ ; ಮಂದಮಾರುತ : ಸ್ವಾಗತವೀವುದು ಕಮ್ಮನೆ ಮೆಲುಗಾಳಿ (ಇಂಕಾಶ. ೬೪-೯) ; ಹೂಗಂಪು ಪೊತ್ತು ಬನಬನವಲೆವ ಮೆಲುಗಾಳಿ (ಶಕ್ಯಾಂಗ. ೩೨-೬೭೯).

[ಮೆಲ್ಕು$_2$ (< ಮೆಲ್$_2$) + ಗಾಳಿ$_1$]

**ಮೆಲುಗಿಚ್ಚು, ಮೆಲುಗಿರ್ಚು** (ನಾ). ತೀಕ್ಷ್ಣವಲ್ಲದ ಬೆಂಕಿ ; ಸಣ್ಣ ಉರಿ: ತುಪ್ಪಮನಸ್ಸಿಬಿಂ ಬೆರಸಿ ಕಾಸಿ ಮೆಲುಗಿಚ್ಚಿಂ ತುಪ್ಪಮದುಟಾಯಲಟ್ಟು (ಶಸುದ. ೯-೯). **ಮೆಲುಗಿರ್ಚು :** ಕೈವೆಸೂರೆಯೊಪ್ಪುವ ಕಾಯ ರಸಂಬರಲ್ಕದಂ ಓಟಿ ಮೆಲುಗಿರ್ಚಿನಿಂದಡು (ಶಸುದ. ೨-೧೭).

[ಮೆಲ್ಕು$_2$ (< ಮೆಲ್$_2$) + ಕಿಚ್ಚು]

**ಮೆಲುಗಿರ್ಚು** 'ಮೆಲುಗಿಚ್ಚು' ನೋ.

**ಮೆಲುದನಿ** 'ಮೆಲ್ದನಿ' ನೋ.

**ಮೆಲುದಳ** 'ಮೆಲ್ದಳ' ನೋ.

**ಮೆಲುನಗು** (ನಾ). ಮೃದುವಾದ ನಗೆ ; ಮಂದಹಾಸ : ಅವಳು ಮುಖದ ಮೇಲೆ ಮೆಲುನಗುವನ್ನು ಸೂಸಿದಳು (ಕನಾಮು. ೬೩).

[ಮೆಲ್ಕು$_2$ (< ಮೆಲ್$_2$) + ನಗು$_2$]

**ಮೆಲುನಗೆ** 'ಮೆಲ್ನಗೆ' ನೋ.

**ಮೆಲುನಡೆ** 'ಮೆಲ್ನಡೆ' ನೋ.

**ಮೆಲುನುಡಿ** 'ಮೆಲ್ನುಡಿ' ನೋ.

**ಮೆಲುಪು** 'ಮೆಲ್ಪು' ನೋ.

**ಮೆಲುಮಳಲು** (ನಾ). ಮೆತ್ತನೆಯ ಮರಳು; ಸಣ್ಣನೆಯ ಉಸುಕು : ಸರೋವರದ ಮೆಲುಮಳಲ ಮೌಕ್ತಿಕದ ಪುಳಿನಸ್ಥಳದಲಾಡುವ ಸಿದ್ಧ ಕಿನ್ನರ ಲಲನೆಯರ ವಿಭ್ರಮದಲೆಸೆದುದು ಗಿರಿಪನೋದ್ದೇಶ (ಕಭಾಗ. ೯-೨-೧೦).

[ಮೆಲ್ಕು$_2$ (< ಮೆಲ್$_2$) + ಮಳಲ್ಕು$_2$ (< ಮಣಲ್)]

**ಮೆಲುಮಾತು** 'ಮೆಲ್ಮಾತು' ನೋ.

**ಮೆಲುವಾತು** 'ಮೆಲ್ವಾತು' ನೋ.

**ಮೆಲುವಾಸು** 'ಮೆಲ್ವಾಸು' ನೋ.

**ಮೆಲುವು** 'ಮೆಲ್ಪು' ನೋ.

**ಮೆಲುವೆಲೆ** (ನಾ). ತಿನ್ನುವ ಎಲೆ ; ವೀಳ್ಯದೆಲೆ : ಮೆಲುವೆಲೆಯಂ ಟಂಕಣವುಂ ಬೆರಸಿ ತಿನಲ್ (ಶಸುದ. ೦೬-೩೦).

[ಮೆಲ್ಕು$_1$ (< ಮೆಲ್$_1$) + ಎಲೆ$_1$./ ತಮಿ. ಮೆಲ್ಲಿಲೈ]

**ಮೆಲುಹು** 'ಮೆಲ್ಪು' ನೋ.

**ಮೆಲ್ಕಾಡು, ಮೆಲಕಾಡು, ಮೆಲುಕಾಡು** (ಕ್ರಿ). = ಮೆಲುಕಾಡಿಸು ೧ : ರುಚಿರಮರಕತಶ್ಯಾಮದೂರ್ವಾಂಕುರಗ್ರಾಸದೊಳಂ ಅತಿಸ್ವಚ್ಛಸ್ವಾದುಸಲಿಲ ಪಾನದೊಳಂ ಮೆಲ್ಲಮೆಲ್ಲನೆ ಮೆಲ್ಕಾಡಿ (ಕಂಶಕಂ. ೨೯-೦೯) ; ಮೇದು ಮೆಲ್ಕಾಡುವ ಸೈರಿಭಂಗಳ್ . . . ಗರ್ಜಿಪ ತರಕ್ಷುಗಳೊಪ್ಪುಗುಂಮಾ ವನಾಂತದೊಳ್ (ರಾಜಶೇ. ೫-೬೩) ; ಮಱಿಗೊಣಸುಗಳ್ . . . ಅರೆ ಮುಚ್ಚಿದ ಕಣ್ಗಳಿಂ ಮೆಲ್ಕಾಡುತಿರ್ದುವು (ರಾಮಾಶ್ವ. ೩೦-೨೦). **ಮೆಲಕಾಡು :** ಗೂಳಿ ಗಬಗಬನೆ ತಿಂದ ಹುಲ್ಲನ್ನು ಗಿಡದ ನೆರಳಿನಲ್ಲಿ ನಿವಾಂತವಾಗಿ ಮಲಗಿ ಮೆಲಕಾಡುವಂತೆ, ನಿನ್ನನ್ನು . . . ಬಲಿಕೊಳ್ಳದಿರಲಾರದು (ದೀಪಕ. II, ೨೨೦). **ಮೆಲುಕಾಡು :** ಕೆಲದಲೊಂದು ಬಂದು ಮೆಲುಕಾಡಿತ್ತು ನೋಡಾ (ಅವಶಂ. ೧೦-೩೯). [ಮೆಲ್ಕು + ಆಡು$_1$]

**ಮೆಲ್ಕಿಱಿ, ಮೆಲುಕಿರಿ, ಮೆಲುಕಿಱಿ** (ಕ್ರಿ). = ಮೆಲುಕಾಡಿಸು ೧ : ನೀರ್ಗುಡಿಯದ ಮೆಲ್ಕಿಱಿಯದಿರ್ಪೊಡೆ . . . ಪಶುಗಳ್ಗೆಲ್ಲಂ ಕೊಡುವುದು ಬೇವಿನ ಕಷಾಯಮಂ (ಲೋಕೋಪ. ೯-೨೦೭) ; ನಡೆಗೊಳ್ವ ಘಾತದಿಂದಂ ಕದಡಾಗಿ ಮೆಲ್ಕಿಱಿವ ಮೆಲ್ನೊರೆಯಿಂ ನೊರೆಯೇಱಿ (ಲೀಲಾವ. ೫-೬೪) ; ಮೆಲ್ಕಿಱಿವ ಕೋಣನೊಪ್ಪುವ ಕಿವಿಯೊಳ್ ಪೊರೆದಿರ್ಪ ಕೊಗ್ಗಿಯಂ ತಂದಿರದಿಕ್ಕುಗೆ ಪುಳ್ಗೆ (ಶಸುದ. ೨-೨೦೩). **ಮೆಲುಕಿರಿ :** ಕೆಲದಲ್ಲಿ ಮತ್ತೊಂದು ಬಂದು ಅಲ್ಲಿ ಮೆಲುಕಿರಿವುದ ನಾ ನೋಡಿದೆ ನಿಂದು (ಪ್ರಭುಲಿ. ೦೬೬-೪). **ಮೆಲುಕಿಱಿ :** ವೃಷಭನು . . . ಹುಲುಗಚ್ಚಿ ಹಾಯ್ಕುತ ಮೆಲುಕಿಱಿದು ತನು ಹೆಚ್ಚುತುಪರಿಗೆ ನೆಗೆವುತಂ (ಬಸವು. ೩೨-೨೬) ; ಕುಱಿಗಳೋಪಾದಿಯಲಿ ಕಬ್ಬಿನ ಹೊಱಗಣೆಲೆಯನೆ ಮೇದಕಟ ಮೆಲುಕಿಱಿವುತಲ್ಲಸುಖಕ್ಕೆ ಸೋಲದೆ (ಪ್ರಭುಲೀ. ೦-೦೪) ; ಮಲಗಿದು ಮೆಲುಕಿಱಿದ ನೊರೆವೆಳೆಯ . . . ಮರಗಾಡುಗಳೊಳಗೆ ಕೆಟ್ಟುಲ್ಬುಹುದೋಱದೆ ಹೊಕ್ಕುದಗಲಕೆ ಶಬರಸಂದೋಹ (ಕೊರಂ. ೩-೩-೦೦). [ಮೆಲ್ಕು + ಇಱಿ$_1$]

**ಮೆಲ್ಕು, ಮೆಲಕು, ಮೆಲುಕು** (ನಾ). ೧. (ಎತ್ತು ಮುಂತಾದ ಪ್ರಾಣಿಗಳು) ಅರೆಜೀರ್ಣವಾದ ಆಹಾರಪದಾರ್ಥವನ್ನು ಮರಳಿ ಬಾಯಿಗೆ ತಂದುಕೊಂಡು ನುರಿಸಿ ನುಣ್ಣಗೆ ಮಾಡುವಿಕೆ : ಸ್ವಚ್ಛದಿನುಗೆ ನೊರೆದುಪ್ಪವಿಶಾಕ್ಷರನೇಂ ಮೇದು ಮೆಲ್ಕನಿಱಿಯದೆ ಕಟುಕಂಠಕ್ಷಣತಮಪರಿಮಿತಪರಿಪಕ್ವತರೋದಾರಕಾವ್ಯಸಸ್ಯೋತ್ಕರಮಂ (ಲೀಲಾವ. ೦-೨೦) ; ಬಿಲ್ಲಾಳ್ಗಳ ರಾಜ್ಯಬಣಬೆ ಕಂಪಿಲಭೂವಲ್ಲಭನಾಳು ಭಾವಿಸಲು ಬಲ್ಲಿದ ಬಸವಗಳಾಗಿ ಪಱಿದು ತಿಂದು ನಿಲ್ಲದೆ ಮೆಲ್ಕು ಮಾಡುವವು (ಕುಮಾರಾಮ. ೦೦-೦). ೨. ಕೆಳ ದವಡೆ : ಕಟುಕತ್ರಯಮುಮುನರೆದೆಚ್ಚುಗೆ ಮೆಲ್ಕು ಸಿಲ್ಕುತಿರ್ಪೊಡೆ (ಲೋಕೋಪ. ೯-೨೦೦) ; ಕರಿಯರಲೆಯ ಮೆಲ್ಕಿನುಗುವ ನೊರೆಗಳ ಸರಿಯೊಳ (ಚಕಶ. ೬-೨೭). **ಮೆಲಕು :** ೨. ಆತನ ಮೆಲಕಿಗೆ ಹೊಡೆಯಲು ದೈತ್ಯನ ಕಣ್ಣುಗುಡ್ಡೆಗಳು ಹೊರಬಿದ್ದು ಆತನು ಮರಣ ಹೊಂದಿದನು (ಭಾಪ್ರುಕ. ೦೦೭). **ಮೆಲುಕು :** ೨. ಹುಲಿ ಹುಲ್ಲೆಯ ಕೋಡಿನಲ್ಲಿ ಸತ್ತು ಗಜ ಅಜದ ಮೆ[ಶಾಕಂ. ಮಿ]ಲುಕಿನಲ್ಲಿ ಸಿಕ್ಕಿ (ಕುಜುಗಾ. ೫-೦೭) ; ಅವನು . . . ಘಪ್‌ನ ಮೆಲುಕಿನ ಮೇಲೆ ಜೋರಿನಿಂದ ಪ್ರಹಾರ ಮಾಡಿದನು (ಬಂಗಾಹ. ೯).

**ಮೆಲಕು ಹಾಕು, ಮೆಲುಕುಹಾಕು** = ೧. = ಮೆಲುಕಾಡಿಸು ೧ : ಮೆಲಕುಹಾಕುತ್ತಿರುವ ಗೃಹಧೇನುಗಳ ದವಡೆಗಳಲ್ಲಿ ಕೂಡ ಆಲಸ್ಯ ಉಟಾಗಿತ್ತು (ಶಾಅ. ೨೦೬) ; ಆಡು : ದನ ಕುರಿಗಳ ಹಾಗೆ ಟೊಳ್ಳು ಕೊಂಬಿನ ಸೀಳುಗೊರಸಿನ ಮೆಲುಕುಹಾಕುವ ದನದ ಬಳಗಕ್ಕೆ (ಬೋವಿಡೆ) ಸೇರಿದ ಸಸ್ತನಿ (ಕವಿಕೋ. I, ೭೭೭). ೨. = ಮೆಲುಕಾಡಿಸು ೨ : ತನ್ನ ಎಳೇಮನಸ್ಸಿನಲ್ಲಿ ಇವೇ ವಿಚಾರಗಳನ್ನು ಮೆಲುಕುಹಾಕುತ್ತಿದ್ದಾನೆ (ಮುಂಗಾರು. ೩೪) ; ನೆನ್ನೆಗಳನ್ನು ಮೆಲುಕುಹಾಕುವ ಈ ಚಾಳಿ (ಹೊಸಕ್ಷಿ. ೨೬೬). [ದೇ.॥ ತಮಿ. ಮೆಲ್ಕು = ಮೃದುವಾಗು ; ಕೋತ. ಮೆರ್ಕ್; ಕುಇ. ಮ್ರೇಡ]

**ಮೆಲ್ಕುರಾಡ** (ನಾ). ಮೃದುವಾದ ಹಾಸುಗೆ (?) : ಬೋಬೆಯ ಮೆಲ್ಕುರಾಡವ ಸೆಳೆವಂಚಕ್ಕೆ ನಂಬಿಸುತೆನ್ನ ನೀನೊಯ್ದು ಬಿಂಬಾಧರದ

ಸವಿಯು ತೋಱೆ ನೆಱೆ ರಸದಂಬುಲಿಗುಟುಕಿತ್ತು ಕೂಡೊ (ಶಿಸಪ. ೯-೧೮೯).
[ಮೆಲ್$_2$ + ಕುರಾಡ ?]

**ಮೆಲ್ಕೊತ್ತು** (ಕ್ರಿ). ೧. = ಮೆಲುಕಾಡಿಸು ೧ : ಸೃಕ್ಕಂಗಳಿಂ ಸೂಸೆ ಫೇನಪ್ರಸರಂ ಮೆಲ್ಕೊತ್ತುತುಂ ನಿಂದುದು ವನಮಹಿಷೀವೃಂದಂ (ಶಂಖಪೂ. ೭-೧೫೭); ಮೆಲ್ಕೊತ್ತುತುಂ ಸಲೆ ವಿಭ್ರಾಜಿಸುತಿರ್ಪುದಾ ವಿಷಯದೊಳ್ ಧೇನುವ್ರಜಂ (ಶಬ್ದಮ. ೨-೪೦); **ಮೆಲ್ಕೊತ್ತುತಿರ್ಪ** ಜವಹುರದ ಜಕ್ಕಂದೊಟಿಲಿಯುಂ ಗೆಲೆವರ್ಪ ಕಾಟಿಕ್ಕೋಣವಳಗದಿಂದೆಯುಂ . . . ವನಾಂತರಂ ಮನೋಹರಮಾದುದು (ರಾಮಾಶ್ವ. ೩-೨೪). ೨. (ಅಲಂ) ಹಿಂದಿನದನ್ನು ನೆನಪು ಮಾಡಿಕೊಳ್ಳು : ಉರ್ವಿ ಗೌರವಿಪವೋಲ್ ಮೆಲ್ಕೊತ್ತುವರ್ ಕಬ್ಬಿಗರ್ (ಸಂಶತ. ೧೯-೦೨). [ಮೆಲ್ಕು + ಒತ್ತು$_1$]

**ಮೆಲ್ಗಯ್** (ನಾ). ಮೃದುವಾದ ಕೈ ; ಕೋಮಲ ಹಸ್ತ : ಮೆಲ್ಗಯ್ಗಳಿನ್ ಪಿಡಿಯ ಈ ದಿವ್ಯಧನುವನ್ (ಅಕ್ರಕಾ. ೨೩-೪೭).
[ಮೆಲ್$_2$ + ಕಯ್$_2$ (< ಕೆಯ್$_2$)]

**ಮೆಲ್ಗುಟುಕು. ಮೆಲ್ಗುಡುಕು** (ನಾ). ಸಣ್ಣ ಗುಟುಕು, – ತುತ್ತು : ಮತ್ತಾಣೇಶ್ವರಿ ಪ್ರೇಮದಿಂದೆಸಗಾಗಲ್ ತಿಳಿದಿಲ್ಲಿ ಮೆಲ್ಗುಟುಕನೀಯುತ್ತಿರ್ದ ತಾಪಿಂತಿದು (ಶಬ್ದಮ. ೪-೨೦). **ಮೆಲ್ಗುಡುಕು** : ಬಿಸಿಲಟ್ಟೆ ಕರಂ ಬಟಿಲ್ದು ಮೆಲ್ಗುಡುಕುಗೊಳಲ್ಕಮೊಲ್ಲದಿರೆ (ಲೀಲಾವ. ೬-೪೮). [ಮೆಲ್$_2$ + ಕುಟುಕು$_2$]

**ಮೆಲ್ಗುಡುಕು** ' ಮೆಲ್ಗುಟುಕು ' ನೋ.

**ಮೆಲ್ಗೆಸಱ್** (ನಾ). ನಯವಾದ ಕೆಸರು : ಕಾಷ್ಠಸಂತತಿ ಮೃಣಾಳಂ ಚಂದನಂ ಮೆಲ್ಗೆಸಱ್ ನವಸಂದಾಪಿಗೆಗಿಜ್ಜು ಮೆಲ್ಪೆಲೆಯು ಸೂಡು (ಸೂಕ್ತಿಸು. ೦೫-೩೪). [ಮೆಲ್$_2$ + ಕೆಸಱ್]

**ಮೆಲ್ಪಡ** (ನಾ). ಮೃದುವಾದ ಪಾರ್ಶ್ವ, – ಪಕ್ಕ : ಮೆಯ್ ಪುಳಕಿಸಿ ನೋಂಕಿ ನುಣ್ಗೊಡೆಯ ಮೆಲ್ಪಡಮುಂ ಬಿಡೆ ತಳ್ತು ಮಧ್ಯಮುಂ (ಅನಂಪು. ೭-೩೩).
[ಮೆಲ್$_2$ + ದಡ$_3$ (< ತಡ$_2$)]

**ಮೆಲ್ದನಿ. ಮೆಲುದನಿ** (ನಾ). ೧. ತಗ್ಗು ಧ್ವನಿ ; ಮೆಲ್ಲಗಿನ ಸ್ವರ : ಅಜ್ಞಾತವ್ಯಕ್ತಿಯು . . . ನಮ್ಮರಸರ ಬಂದೂಕುಧಾರಿದಳಕ್ಕೆ ಇವನೇ ಯೋಗ್ಯನಾಗಿರುವನು ಎಂದು ಮೆಲ್ದನಿಯಿಂದ ಹೇಳಿದನು (ದೋಧರು. ೬). **ಮೆಲುದನಿ** : ೧. ಅವರಿಬ್ಬರೂ ಮೆಲುದನಿಯಲ್ಲಿ ಮಾತನ್ನಾಡುತ್ತಿದ್ದರು (ರೂಢಿ). ೨. ಇಂಪಾದ ಧ್ವನಿ : ಮೆಲುದನಿಯ ಬೀರಿವದೆ ತುಂಬಿಯ ಲಲಿತಗೀತದ ವನವನದ ಸಿರಿ ಬಗೆಗೊಳಿಸುತ್ತೆ (ಕುವ್ಯಾಕ. ೪-೩೭); ಭಟ್ಟನ ಎದ್ದು ಕುಳಿತು ಮೆಲುದನಿಯಲ್ಲಿ ಹೇಳಿದಳು (ಬಾಣಕ. ೪೦೬).
[ಮೆಲ್$_2$ + ದನಿ$_1$]

**ಮೆಲ್ದಳ. ಮೆಲುದಳ** (ನಾ) ಕೈ ಅಥವಾ ಕಾಲಿನ ಮೃದುವಾದ ಒಳಭಾಗ : ಅಡಿಗಡಿಗೆ ಮೃದಪದ ಹುಡಿಯುಸು ತೊಡೆಸು ಮೆಲ್ದಳದಿಂದ ಮೆಲ್ಲನೆ ನೀವಿದನು (ಚಿಭಾಗ. ೪-೬-೨೨). **ಮೆಲುದಳ** : ಅಸುರರಿಪು ಕೈ ನೀಡಿ ನಿಂದನು ಗರುಡನಂಗದ ಮೇಲೆ ಕರತಳದ ರೂಢಿಯಲಿ ಸಮತಳದಲಂಘ್ರಿಯ ಜೋಡಿಗಳ ಮೆಲುದಳದೊಟ್ಟಿರೆ ನೋಡುತಿರ್ದನು ನೃಪನನು (ಚಿಭಾಗ. ೪-೦೩-೪೦). [ಮೆಲ್$_2$ + ತಳ್ (= ತಲ)]

**ಮೆಲ್ತೆರಳ್ಕೆ** (ನಾ). ನಿಧಾನವಾದ ಚಲನೆ, — ಅಲುಗಾಟ : ಪೊಂಗಡಲ ನುಣ್ತೆರೆಗಳ ಬಿನ್ನನ ಮೆಲ್ತೆರಳ್ಕೆಯು ಗಾಂಭೀರ್ಯದಿಂದ ಚಳಚಳಿಸುತ್ತ (ಮಂಕ್ರಿಕ. ೮೭-೦೭). [ಮೆಲ್$_2$ + ತೆರಳ್ಕೆ]

**ಮೆಲ್ನಗೆ. ಮೆಲುನಗೆ** (ನಾ). ಮೃದುವಾದ ನಗೆ : ಮಂದಹಾಸ : ನಗೆಗಣ್ಗಳೊ[ಳಗೆ ಮೆಲ್ನಗೆ]ಸೊಗಯಿಸೆ (ಗದಾಯು. ೬-೩೪); ತನುಭವನೆಲ್ಲಿದಂ . . . ಮೆಲ್ನಗೆಯಿಂಬಿನ ಸೊಬಗನೆಲ್ಲಿದಂ (ರಾಜಶೇ. ೦೩-೧೦೪); ಅವಳು ಮೆಲ್ನಗೆ ನಗುತ್ತ ಪುನರುಚ್ಚರಿಸಿದಳು (ಹೊಮಂತ. ೨೪೭). **ಮೆಲುನಗೆ** : ತಾ ನೀಳೆಯುವನೆನುತವೆ ಮೆಲುನಗೆಯುಲಿತಿರಥರ ಜಱೆದನು ಕೌರವರ ರಾಯ (ಕುವ್ಯಾದ್ರೋ. ೭-೩೬) ; ಸಿರಿಯೊಡನೆ ಸಿರಿರಾಯನುತ್ಸವದಿ ನಿಂತಿಹನು ಕಡುಸವಿಯ ಮೆಲುನಗೆಯೊಳು (ಮಲದೇ. ೪೬-೧೧). [ಮೆಲ್$_2$ + ನಗೆ]

**ಮೆಲ್ನಡೆ. ಮೆಲುನಡೆ** (ನಾ). ನಿಧಾನವಾದ ನಡಗೆ ; ಮಂದಗಮನ : ಮೆಲ್ಲನೆ ನಡೆವಂಚೆಯುಂ ಜಡಿವ ಮೆಲ್ನಡೆಯಿಂದೆ . . . ಒಪ್ಪುವಳೊಪ್ಪದಿ ನಿಚ್ಚಗಾರ್ತಿ (ಅಬ್ಧಕಾ. ೧೨೦); ಅಳಿಕುಂತಳದ ಮೆಲ್ನಡೆಯ ಶಬರಿ ಹಳುವ ದೊಳ್ತನ್ನ ಕಾಂತನ ಬಳಿಯೆ ಬರಲು (ಕೃಬೀಶಾ. ೨೮-೪೯). **ಮೆಲುನಡೆ** : ದಟ್ಟಡಿ ಬಳುಕುನಡೆ ಮೆಲುನಡೆ [ಪಾಠಾಂ. ಮೆಲ್ನಡೆ] (ಕೂರಲ. ೦-೬-೭೭).
[ಮೆಲ್$_2$ + ನಡೆ$_2$]

**ಮೆಲ್ನವಿರು** (ನಾ). ಮೃದುವಾದ ಕೂದಲು : ತೋರಕುಚದ ತೋರದುಟಿ ತೋರದುಱುಬಿನ ತೋರಿದ ಮೆಲ್ನವಿರುಗಳ . . . ಚಿಕ್ಕನಿಸಾರಿಯರೆಸೆ ದರತಿಯಲಿ (ಕಂವಿಶ. ೨೦-೮೦). [ಮೆಲ್$_2$ + ನವಿರು$_2$ (< ನವಿರ್)]

**ಮೆಲ್ನುಡಿ. ಮೆಲುನುಡಿ** (ನಾ). ೧. ಇಂಪಾದ ಮಾತು ; ಸವಿನುಡಿ : ನೋಟದೊಳಟ್ಟಿಜಂಬಡೆದು ಮೆಲ್ನುಡಿದೊಳ್ ಬಗೆವೊಕ್ಕು (ಶಂಶಧಾ. ೩-೮೨); ದೂದವಿಯರ ಲಲ್ಲೆವೆರಸಿದ ಮೆಲ್ನುಡಿಯೆ ಕರ್ಣಪೂರವಾಗೆಯುಂ (ಮಲ್ಲಿಕ. ೩-೦೨); ಕೇಳಿದನವರ ಮೆಲ್ನುಡಿಯನು ಪರಿಸವ ತಾಳಿವನನಿಮುದ್ರ (ಮೋಹತ. ೦೮-೭೯): ಗದರಿಸದೆ ಮೆಲ್ನುಡಿಗಳಿಂದಲೇ ಅವನನ್ನು ಮಾತನಾಡಿಸಿ (ಕೃಮಹ. ೯೩). **ಮೆಲುನುಡಿ** : ೧. ಮೆಲುನುಡಿಗಳಿನದಂ ನೆನೆವನು (ಲಕ್ಷ್ಮೀ. ೪೨-೨೩); ಮೆಲುನುಡಿಗೆ ಗಿಣಿ ಹೊದ್ದುವವು . . . ಕಮಲಾನನೆಯರ ಕೆಳದಿಯರ (ಕುವ್ಯಾಆ. ೮-೧೧). ೨. ಕೆಳಸ್ವರದಲ್ಲಿ ಹೇಳಿದ ಮಾತು : ಲಲಿತೆಯು ಮೆಲುನುಡಿಯಲ್ಲಿ ಎಂದ ಈ ಶಬ್ದಗಳು ಶೇಖರನಿಗೆ ಕೇಳಿಸಲೇ ಇಲ್ಲ (ಶಂಡೀ. ೦೪). [ಮೆಲ್$_2$ + ನುಡಿ$_2$]

**ಮೆಲ್ನುಡಿಗ** (ನಾ). ಸವಿಯಾದ ಮಾತುಗಳನ್ನಾಡುವವನು ; ಮೃದುಭಾಷಿ : ಮೆಲ್ನುಡಿಗರ್ ಅಱಿವರ್ ಆರ್ಪರ್ (ವಕಪಂ. ೦೪೪-೧).
[ಮೆಲ್ನುಡಿ + — ಗ$_2$]

**ಮೆಲ್ನುಡಿಗೇಳ್** (ಕ್ರಿ). ಸವಿಯಾದ ಮಾತುಗಳನ್ನು ಕೇಳು : ಕಿವಿಗಳಾತನ ಮೆಲ್ನುಡಿಗೇಳ್ವ ಕೇಳಿ ಮೆಯ್ದೆಗೆವುವು ಕೀಚಕಧ್ವನಿಯೆ ಗೆತ್ತು ವಿಪಂಚಿಯು ನುಣ್ಚರಕ್ಕೆ (ವರ್ಧಪು. ೪-೩೩). [ಮೆಲ್ನುಡಿ + ಕೇಳ್]

**ಮೆಲ್ನುಡಿಗೊಡು** (ಕ್ರಿ). ಇಂಪಾದ ಮಾತುಗಳನ್ನಾಡು : ಕುಮಾರಕಂ . . . , ಎಱಗಲೊಡನೆ . . . ಮೆಲ್ನುಡಿಗೊಟ್ಟಳ್ಮದವಾಂತಳಾ ಜನನಿ (ರಾಜಶೇ. ೧೪-೭೩). [ಮೆಲ್ನುಡಿ + ಕೊಡು$_1$]

**ಮೆಲ್ನೆಣ** (ನಾ). ಮೃದುವಾದ ಕೊಬ್ಬು : ತಣಿವನ್ನಂ ರುಧಿರಾಂಬುವಂ ಪದೆಪಿನಿಂದೀಂಟುತ್ತಮಲ್ಲೊಕ್ಕ ಮೆಲ್ನೆಣನಂ ಗಬ್ಬನೆ ನುಂಗಿ (ಶಬ್ದಮ. ೧೧-೯೩). [ಮೆಲ್$_2$ + ನೆಣ]

**ಮೆಲ್ನೊರೆ** (ನಾ). ಮೃದುವಾದ ನೊರೆ, – ಬುರುಗು : ಘಾತದಿಂದಂ ಕದಡಾಗಿ ಮೆಲ್ಕಿಱಿವ ಮೆಲ್ನೊರೆಯಿಂ ನೊರೆಯೋಱೆ (ಲೀಲಾವ. ೩-೮೪).
[ಮೆಲ್$_2$ + ನೊರೆ$_2$]

**ಮೆಲ್ಪಾಡು** ' ಮೆಲ್ವಾಡು ' ನೋ.

**ಮೆಲ್ಪು, ಮೆಲುಪು, ಮೆಲುವು, ಮೆಲುಹು** (ನಾ). ೧. ಕೋಮಲತೆ: ಮೃದುತ್ವ : ಪೊಸತಲರ್ದ ಕೆಂದಾವರೆಯ ಕೆಂಪುಮಂ ಮೆಲ್ಪು [ಪಾಠಾಂ. ಬೆಳ್ಪು] ಮನಿಟ್ಟುಕೊಳಗೊಂಡು . . . ಕೆಂಪವಾದಂತಾದುವು (ಶಂಶಧಾ. ೨-೩೯ ವ); ನಗೆಗಣ್ಗಳೊ[ಳಗೆ ಮೆಲ್ನಗೆ] ಸೊಗಯಿಸೆ ಕರಚರಣತಳದ ಮೆಲ್ಪೆಸೆಯೆ (ಗದಾಯು. ೬-೩೪). ೨. ಇಂಪು ; ಮಾಧುರ್ಯ : ನುಡಿ ಬಳಲ್ದೊಪ್ಪುತಿರೆ ಮೆಲ್ಪಿನ ಗುಣಂಗಳಿಂ (ಬಸರ. ೧-೦೦೪); ಹರಭಕ್ತ ಹಸರವಿಡಿದಿರದೆ ಹರಿದಾಡಿ ಮೆಲ್ಪೊರೆದ ನುಡಿವದಿನಿಂ ಕೈಮುಗಿವುತಂ (ಸಾನಂಶ. ೩-೨೭). ' ಮೆಲ್ಪುಗುಂದು ' ನೋ. ೩. ಮೃದುವಾದ ಸ್ವಭಾವ : ಮಿಸಮಂ ಮೆಲ್ಪಂ ನುಡಿಯ ಬಲ್ಮೆಯುಂ . . . ಧೈರ್ಯಮುಂ

ಎಂದಿವು ಮೊದಲಾಗೊಡೆಯುವಾತನೊಳ್ ನೆಲಸಿರ್ದ ಗುಣಂಗಳಂ ನೆನೆನೆನೆದು (ಶಬ್ದಾ.ರಾ. ೩೦-೯); ಮೆಲ್ಪಿಂಗೆ ಮೆಚ್ಚಿತ್ತು ತನ್ನ ಸಮಸ್ತಂ ಪರಿವಾರಂ (ಅಭಿ. ೦-೭೮). ೪. ನಿಧಾನವಾದ ಚಲನೆ ; ಮಂದಗತಿ : ತೆರೆಗಳ್ಮೆಲ್ಪಿಂದೆ ನೀರ್ವಿಜ್ಜಣಿಗೆಯು ತೆಱದಿಂ. ಬೀಸೆ (ಕಾದಂಬ. ೦೪೭). **ಮೆಲುಪು** : ೧. ಮೆಲುಪು ಬಲುಪಿನ ಶಕುತಿಗಳುಡುಗಲಿ (ಏಸೀಗೀ. ೦೦೪-೯). ೨. ಗಾನ, ಮೆಲುಪಿನ ಕೊರಲು ಕುಗ್ಗಲು, ಹೊಳಪು ಕೊಡುವುದು ಮನದೊಳು (ಇಂಗೀತ. ೭೩-೦). ೫. ಸಾವಕಾಶ ; ನಿಧಾನ : ಶಿಕ್ಷಿತಮಪ್ಪ ವಾಜಿಯು ಬೆಂಗೆವಾಯ್ದೊಡಂ ಮುನ್ನಂ ಮೆಲುಪಿ [ಪಾಠಾಂ. ಮೆಲ್ಪಿ]ನೊಳ್ ಸ್ವಭಾವ ಮನಾರಯ್ದುಂ (ಜೀವಸಂ. ೫೩-೨೫). **ಮೆಲುವು** : ೨. ನೀನು ಅದನ್ನು ಎಷ್ಟು ಮೆಲುವಾಗಿ . . . ಎಷ್ಟು ಮೋಹಕವಾಗಿ ನುಡಿಸುತ್ತಿದ್ದೆ (ಹೊಸಕ್ಷಿ.೮). **ಮೆಲುಹು** : ೧. ಎನಗೆ ಬಲವುಂ ನೀನೆ ಎನಗೆ ಮೆಲುಹುಂ ನೀನೆ (ಕೃಷ್ಣರ. ೦೦-೨೩); ಮೆಲುಹು ಮರೆಸಿದ ಬಿರುಸು ಮೆಲುಹಾಗಿ ತೋರುವುದು (ಯುಕೋರ. ೫೮). [ಮೆಲ್$_{2}$+—ಪು$_{2}$]

**ಮೆಲ್ಪುಗುಂದು** (ಕ್ರಿ). ಇಂಪನ್ನು ಕಳೆದುಕೊಳ್ಳು : ಪುಗಲೆನ್ನದೆ ದಲ್ ಪುಗಿಮೆಂದು ಮೆಲ್ಪುಗುಂದದ ದನಿಯಿಂ ತಳಿರ್ತಸುಗೆಯೊಳ್ ನೆಲಸಿರ್ದ ಪಿಕಾಳಿ ಮೆಲ್ಲನೊಳ್ಕುದು (ಶಂಶಬ. ೦೪-೦೨).

[ಮೆಲ್ಪು + ಕುಂದು$_{1}$]

**ಮೆಲ್ಪುಗೆಡು** (ಕ್ರಿ). ಮೃದುತ್ವವನ್ನು ಕಳೆದುಕೊಳ್ಳು; ಒರಟಾಗು : ಮೆಲ್ಪುಗೆಟ್ಟು ಬಲಿದಿರೆ ಮೆಯ್ . . . ಸತ್ತಪುದಾ ವಾಜಿ (ಅಶ್ವಶಾ. ೭-೪೦).

[ಮೆಲ್ಪು + ಕೆಡು$_{1}$]

**ಮೆಲ್ಪುಗೊಳ್** (ಕ್ರಿ). ಮಾರ್ದವವನ್ನು ಪಡೆ ; ಇನಿದಾಗು : ಗುಜ್ಜುಗೊಂಡುದು ನಡೆ ಮೆಲ್ಪುಗೊಂಡುದು ಸರಂ (ಜಗನ್. ೨-೯೫).

[ಮೆಲ್ಪು + ಕೊಳ್$_{1}$]

**ಮೆಲ್ಪುದೋಱು** (ಕ್ರಿ). ಮಾರ್ದವದಿಂದ ಕೂಡಿರು ; ಹಿತವಾಗಿರು : ನೆವದಿಂ ಸೋಂಕುವ ಮೆಲ್ಪುದೋಱುವ ಭವಚ್ಚಾತುರ್ಯದಿಂದೆನ್ನೊಳಾನವಲಜ್ಜಾನತಿ ಪಿಂಗೆ ಪಿಂಗಿದುದು ಕನ್ಯಾಭಾವವು (ಜಗನ್. ೦೨-೦೦೦).

[ಮೆಲ್ಪು + ತೋಱು]

**ಮೆಲ್ಪುವೆರು** ' ಮೆಲ್ಪುವೆಱು ' ನೋ.

**ಮೆಲ್ಪುವೆಱು, ಮೆಲ್ಪುವೆರು** (ಕ್ರಿ). ಕರ್ಕಶತೆಯನ್ನು ಹೊಂದದಿರು; ಮೃದುವಾಗು : ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂಗುಡಿವಿಡುವಂತೆ ನೀಳ್ದು ನಿಲೆ ಪೇೞ್ವುದು ನೀತಿನಿರಂತರಕ್ರಮಂ (ಕವಿರಾ. ೦-೦೪೯). **ಮೆಲ್ಪುವೆರು** : ಸಂಸ್ಕೃತಪದಗಳು ಹವಣಾಗಿರಬೇಕು, ಮೆಲ್ಪುವೆತ್ತಿರಬೇಕು (ಕಸಾಇ. ೭೦). [ಮೆಲ್ಪು + ಪೆಱು$_{1}$]

**ಮೆಲ್ವೊಗೆ** (ಕ್ರಿ). = ಮೆಲ್ಪುದೋಱು : ಕಡೆಗಣ್ಗಳೊಳ್ ಪೊಳೆವ ಬೆಳ್ಪು ಶಿಖಾಗ್ರದೊಳೊಂದಿದೊಳ್ಪು ಮೆಲ್ವೊಗದಿರೆ ಕೇಗುವಿಂಚರದ ನುಣ್ಪು ಮನಂಗೊಳೆ ಚೆಲ್ವನಾಳ್ದುದೀ . . . ವಿಚಿತ್ರಶಿಖಂಡಮಂಡಲಂ (ಕಾವ್ಯಾವ. ೭೦೯). [ಮೆಲ್ಪು + ಒಗೆ$_{1}$]

**ಮೆಲ್ವೊದೆ** (ನಾ). ಮೃದುವಾದ ಹೊದಿಕೆ : ಮುಳಿಸಿಂ ಪೋರ್ದಾನೆ ಮೆಯ್ಯಾತನಾ ತೊವಲಂ ಮೆಲ್ವೊದೆ ಮಾಡಿ (ಕಬ್ಬಿಕಾ. ೦೫೮)

[ಮೆಲ್$_{2}$ + ಪೊದೆ$_{2}$]

**ಮೆಲ್ಮಲರ್** (ನಾ). ಮೃದುವಾದ ಹೂವು ; ಕೋಮಲ ಪುಷ್ಪ : ಮಗಮಗಿಪ ಪರಿಮಳಂ ಪುದಿದ ಮೆಲ್ಮಲರಂತೆ . . . ಸೌಂದರಮಹೀಪಾಲ ನೆಳವರೆಯದಲಿ ಕಂಗೊಳಿಸಿದನು (ಸೌಂದರಕ. ೪-೬). [ಮೆಲ್$_{2}$ + ಮಲರ್$_{3}$]

**ಮೆಲ್ಮುಸುಕು** (ನಾ). ನವಿರಾದ ಮುಸುಕು,–ಅವಕುಂಠನ : ಕೆಳದಿಯರ್ ಸುತ್ತ ಬರುತಿರೆ . . . ಆನೆ ಕುದುರೆಗಳ ಮೇಲೆ ಮೆಲ್ಮುಸುಕಿನಿಂ ಕೆಲಕೆಲಬರು ಬಳಿಕೈನಲ್ (ತಂಇ. ೪೭-೩೯). [ಮೆಲ್$_{2}$+ಮುಸುಕು$_{2}$ (< ಮುಸುಂಕು$_{2}$) ]

**ಮೆಲ್ಮೊಗ್ಗೆ** (ನಾ). ಮೃದುವಾದ ಮೊಗ್ಗು : ಕೆಂದಾವರೆಯ ವಿಸಪ ಮೆಲ್ಮೊಗ್ಗೆಯಂ ಮಾಣದೆಂದುಂ ನಿನಗೀವೆಂ (ಕಬ್ಬಿಕಾ. ೩೦೮).

[ಮೆಲ್$_{2}$+ಮೊಗ್ಗೆ]

**ಮೆಲ್ಲ** (ಅ). ೧. ಮೆಲ್ಲನೆ ; ನಿಧಾನವಾಗಿ : ಧನ್ಯಳಾದೆನು ನಾನು ಪೋಪೆ ಮೆಲ್ಲ (ಪಡೆದಾ. I. ೪೦೮). ೨. ಮೃದುವಾಗಿ; ನಮ್ರವಾಗಿ : ದೊರೆಯ ಕಂಡನು, ನಾಚಿಕೊಂಡನು . . . ಇರದೆ ನಡೆದನು, ಮೆಲ್ಲ ನುಡಿದನು (ಕುಶ. ೦೭-೫). [ದೇ.॥ ತಮಿ. ತುಳು. ತೆಲು. ಮೆಲ್ಲ; ಮಲ. ಮೆಲ್ಲೇ; ಕೊಡ. ಮೆಲ್ಲೆ; ತೊದ. ಮೆಲ್ಯ]

**ಮೆಲ್ಲಗೆ** (ಅ). ೧. ನಿಧಾನವಾಗಿ ; ಸಾವಕಾಶವಾಗಿ : ಲಘುವ್ರಜಂಗಳೆಡೆಯೊಳ್ ನಿಂದಂಕಮಂ ಕೂಡಿ ಮೆಲ್ಲಗೆ ಮತ್ತೊಂದನೆ ಕೂಡು (ಛಂದೋಂಬು. ೭-೨೬೩). ೨. ಮೃದುವಾಗಿ; ನಯವಾಗಿ : ಬಗೆದರ್ಥಮನೞಪದೆ ಮೆಲ್ಲಗೆ ತಿರ್ದುವ ಬಗೆಯನದಱ ನೆವದಿಂ ಪೇೞತಂ ನಿಗದಿಸುವುದು ಪರ್ಯಾಯೋಕ್ತಗತಾಳಂಕಾರಂ (ಕವಿರಾ. ೩-೦೩೦); ನೀಂ ಪಾ ಪೋಪಮೆಂದಂಗೆ ಮೆಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ ಎಂಬುದುಂ (ಶಂಶಬ. ೦-೭೦). ೩. ನೇರವಾಗಿ ; ಸರಿಯಾಗಿ (?) : ಒಂದೆ ಕೆಲ್ಲಂಬಿನಿಂ ಮೆಲ್ಲಗೆ ಪಾರ್ದರ್ದೆಚ್ಚಂ (ಶಂಶಬ. ೦೨-೦೮).

ಮೆಲ್ಲಮೆಲ್ಲಗೆ (ದ್ವಿರುಕ್ತಿ) : ಹೀಗೆ ಮೆಲ್ಲಮೆಲ್ಲಗೆ ಹೆಜ್ಜೆಯಿಟ್ಟರೆ ಊರನ್ನು ಸೇರುವುದು ಎಂದಿಗೆ ? (ಮರ್ಕಮ. ೦೯೨).

[ಮೆಲ್$_{2}$ + – ಅಗೆ$_{3}$ ]

**ಮೆಲ್ಲಡಿ** (ನಾ). ಮೃದುವಾದ ಪಾದ ; ಕೋಮಲವಾದ ಅಡಿ : ತಡಕುಂ ಪಿಟ್ಟೆಯುಮೊತ್ತೆ ಮೆಲ್ಲಡಿಗಳಂ (ಶಂಶಬ. ೩-೯); ದೆಸೆದೆಸೆಗೆ ಪರಿವರ್ಭಕನ ಮೆಲ್ಲಡಿಗಳೊಡನೆ ದಿಟ್ಟಿಗಳ್ ಪರಿಯೆ (ಮಲ್ಲಿಕು. ೩-೦೦೫); ತಳಿರಡಿಪು ಮೆಲ್ಲಡಿಯ್ ತಾವರೆಗಳಡಿಯು ಥಳಥಳಿಪ ಚೆನ್ನಡಿಗಳಸಿಯಡಿಯು ಲಲಿತಾಂಗಿಯರ್ . . . ತಳರ್ದರ್ (ತಂಇ. ೩೭-೪೦); ತಾವರೆಯಂತಿರೆ ಕೆಂಪನಾಂತು ಕಂಗೊಳಿಸುವ ನಿನ್ನ ಮೆಲ್ಲಡಿಯನೊತ್ತುವೆನು (ಶಾಕುಂತ. ೪೦-೭೨). [ಮೆಲ್$_{2}$ + ಅಡಿ$_{1}$ ]

**ಮೆಲ್ಲಡಿಯ** (ನಾ). ಮೃದುವಾದ ಪಾದವುಳ್ಳವನು : ಕೆಂದಲೆಯಂ, ಮೆಲ್ಲಡಿಯಂ, ಕುಱುಗೆಯ್ಯಂ (ಶಾಶಾಕೂ. ೧೩೦ ಉದಾ).[ಮೆಲ್ಲಡಿ + – ಅ$_{7}$]

**ಮೆಲ್ಲಡಿಯಿಡು** (ಕ್ರಿ). ಮೃದುವಾದ ಪಾದಗಳನ್ನಿಡು ; ಕೋಮಲವಾದ ಹೆಜ್ಜೆಗಳನ್ನಿರಿಸು : ತೊಪರ ಝಣಝಣರವದ ಮೆಲ್ಲಡಿಯಿಡುವ ಗಮನದ ಭರದಿ ಕಿಱುಬೆಮರಿಡುತ ಬಂದಳು (ಪಳಕ. ೭-೭೫) ; ಲಲಿತಚವಲಬೊಂಬಾಳವನೇಱ ಮೆಲ್ಲಡಿಯಿಟ್ಟ ವಿವರವನೇನ ಬಣ್ಣಿಪೆನು (ಮೋಹತ. ೪೨-೨೨). [ಮೆಲ್ಲಡಿ + ಇಡು$_{1}$]

**ಮೆಲ್ಲನೆ** (ಅ). ೧. ನಿಧಾನವಾಗಿ ; ಸಾವಕಾಶವಾಗಿ ; ಮಂದಗತಿಯಲ್ಲಿ : "ಮೆಲ್ಲನೆನೆ ಮಾಂದ್ಯ ನಾಮಂ" (ಕಬಿಕಂ. ೨೭೮) ; ಮೊರೆವಳಿಕುಳಂಗಳುಂ ಮೆಲ್ಲನೆಸೆವ ಮಳಯಾನಿಳನುಂ ಮುಳಿಸಂ ಕಟಿಲ್ಚಿ ಕಳೆದುವು . . . ಕಾಮಿಗಳಾ (ಕವಿರಾ. ೨-೭೦) ; ತನಗಂ ಮೆಲ್ಲನೆ ಮೃತ್ಯು ಸಾರೆ (ಶಂಶಬ. ೭-೫) ; ಅರವಿಂದಸಖ ಹೊದ್ದಿದನು ಮೆಲ್ಲನೆ ಪಶ್ಚಿಮಾಂಬುಧಿಯ (ಕುಮಾರವ್ಯಾ. ೦೪-೩೩). ೨. ನಯವಾಗಿ : ನಂಬಿಸಿ ಮೆಲ್ಲನೆ ಬೆಸಗೊಳ್ವುದುಂ (ಧರ್ಮಾಮೃ. ೨-೦೦೭) ; ಮೆಲ್ಲನೆ ನೋಯದಂತೆ ಗಿಳಿಗನ್ನತ ಮಾಧುಪಚಾರದೇಟಿಗೆಯಂ ನಿಲ್ಲದೆ ಮಾಡುತಂ (ಉದ್ಭಟ. ೯-೦೨೮).

ಮೆಲ್ಲಮೆಲ್ಲನೆ, ಮೆಲ್ಲನೆಮೆಲ್ಲನೆ (ದ್ವಿರುಕ್ತಿ) : ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮಂ ಸಂದೀಂಟುವಲ್ಲಿ (ಕಾವ್ಯಸಾ. ೯೭೩ ಶೂದ್ರಕ) ; ಮೆಲ್ಲಮೆಲ್ಲನೆ ಕೆಲಕ್ಕೆ ವಂದು (ಶಂಶಬ. ೪-೯೨ ವ) ; ಮೆಲ್ಲಮೆಲ್ಲನೆ ಬಂದನೆ ಗೋಪ್ಯಮ್ಮ ಕೇಳೆ (ಕೃಕಂದ. ೦-೯೦ ಪಲ್ಲವಿ) ; ನೆನೆದು ಚೇತರಿಸಿ ಮೆಲ್ಲನೆ ಮೆಲ್ಲನೆಚ್ಚತ್ತು (ಬಸರ. ೩-೦೨೩). [ಮೆಲ್$_{2}$ + —ಅನೆ$_{1}$]

**ಮೆಲ್ಲರಳಿವಾಸು** (ನಾ). ಮೃದುವಾದ ಅರಳೆಯ ಹಾಸುಗೆ: ಒಱಗುವಳತ್ತೆ ಮೆಲ್ಲರಳಿವಾಸಿನೊಳ್ (ಛಕಶ. ೧೦೬-೦೪). [ಮೆಲ್$_2$ + ಅರಳೆ$_1$ + ಪಾಸು$_2$]

**ಮೆಲ್ಲಾಯ** 'ಮೇಲಾಯ್ಮ' ನೋ.

**ಮೆಲ್ಲಿತು, ಮೆಲ್ಲಿತ್ತು, ಮೆಲ್ಲಿದು** (ನಾ). ೧. ಮೃದುವಾದುದು ; ಕೋಮಲವಾದುದು : "ಮೆಲ್ಲಿತೆನಲು ಮೃದುವಾದುದುಂ" (ಛಕಶ. ೦೨೯) ; ಮೆಲ್ಲಿತಾಪಸಕೆ ಸೂಚನೆದೋಱಿ ಕುಳಿತನು (ಛಕಶ. ೩೬-೦೦) ; ಪೂಗುಡಿ ಮೂಡಿ ತೋಱುದಿರ್ದಳಲತೆ ಮೆಲ್ಲಿತಲ್ಲದೆಲರಿಲ್ಲೆನೆ ಶದ್ವನಮೇಂ ಮನೋಜ್ಞಮೋ (ರಾಜಶೇ. ೨-೩೩). ೨. ಮೃದುತ್ವ ; ಕೋಮಲತೆ: ಸಲ್ಲದು ಸಲ್ಲದಂಬಿದನಿಸಲ್ಗಡ ಮೆಲ್ಲಿತರಿಂದೆ ಕೂಡಿದೀ ಪುಲ್ಲೆಯ ಮೆಯ್ಯೊಳ್ (ಶಾಕುಂತ. ೫-೦೦). **ಮೆಲ್ಲಿತ್ತು :** ೧. ಕಲ್ಲೆನ್ನಳ್ ಮುಳ್ಳೆನ್ನಳ್ ಮೆಲ್ಲಿತ್ತಿದು ಬೆಟ್ಟಿತೆನ್ನಳತಿಭಕ್ತಿಯೊಳಂ (ಗಿಂಕ. ೩-೧೦೦) ; ಒಳ್ಳಿತ್ತು, ಒಳ್ಳಿತು ; ಮೆಲ್ಲಿತ್ತು, ಮೆಲ್ಲಿತು (ಶಬ್ದಾನು. ೫೯ ಶೃಯೋ). **ಮೆಲ್ಲಿದು :** ೧. ತಳಿರ್ಗಳಳ್ಪೋಲ್ ಮೆಲ್ಲಿದುವೀ ತಳಂಗಳ್ (ಶಬಂ. ೩-೧೬) : ಮೆಲ್ಲಿದು ವಪ್ಪ ಪಾರಿಕಣಜಾಲದೆ ಮೌಕ್ತಿಕಜಾಲಮುಪ್ಪಪೊಲ್ (ಕಾದಂಬ. ೩೨೮).

**ಮೆಲ್ಲಿದ** = ಮೃದುಸ್ವಭಾವದ ವ್ಯಕ್ತಿ : ಮೆಲ್ಲಿದರಂತೆ ಬಂದು ಕರಿಯಲ್ ಖಳರುಗ್ಗೊಡೆ ಪೋಪೊಡೆ (ಐವ.ರ. ೦೯-೬೦) : ಬಲ್ಲಿದರ ಮುಂದೆ ತನ್ನನೆ ನೆನೆದುಕೊಳ್ಳುವುದು ತನಗಿಂತ ಮೆಲ್ಲಿದರ ಮೇಲೆ ತಾನೇರಿ ಹೋಗು ವಂದು (ಕುಙಿ. ೦೦೬-೨೩೦). **ಮೆಲ್ಲಿದಳ್** = ವಿನಯದಿಂದ ಕೂಡಿ ದವಳು : ಅಗ್ನಿಭೂತಿರಿಸಿಯರ್ ತಿಳಿಯೆ ಧರ್ಮಮಂ ಪೇಟ್ದೊಡೆರ್ದೆ ಯೊಳ್ ಮೆಲ್ಲಿದಳಾಗಿ ತನ್ನ ಭವಾಂತರಂಗಳಂ ಧರ್ಮಾಮುಮಂ ಕೇಳ್ದಱಿದು (ವಡ್ಡಾರಾ. ೦೦-೨೮). [ < ಮೆಲ್$_2$./ತಮಿ. ಮೆಲ್ಲಿತು. ಮೆಲ್ಲಿಚು ; ಮಲ. ಮೆಲಿಚ್ಚಲ್ = ಕೃಶವಾದ ]

**ಮೆಲ್ಲಿತ್ತು** 'ಮೆಲ್ಲಿತು' ನೋ.

**ಮೆಲ್ಲಿದ** 'ಮೆಲ್ಲಿತು' ಪರಾ.

**ಮೆಲ್ಲಿದಳ್** 'ಮೆಲ್ಲಿತು' ಪರಾ.

**ಮೆಲ್ಲಿದು** 'ಮೆಲ್ಲಿತು' ನೋ.

**ಮೆಲ್ಲಿಸು** 'ಮೆಲಿಸು' ನೋ.

**ಮೆಲ್ಲು** 'ಮೆಲ್$_1$' ನೋ.

**ಮೆಲ್ಲುಲಿ$_1$** (ಕ್ರಿ). ಇಂಪಾಗಿ ಹೇಳು ; ಮಧುರವಾಗಿ ನುಡಿ : ಚಕ್ರವಾಕ ಗಳಂತೆ ಕೂಡಿ ಮೆಲ್ಲುಲಿದಿರ್ಪೇ (ಚಸೀಗೀ. ೭೯-೩). [ಮೆಲ್$_2$ + ಉಲಿ$_1$]

**ಮೆಲ್ಲುಲಿ$_2$** (ನಾ). ಮಧುರವಾದ ಧ್ವನಿ ; ಇಂಪಾದ ದನಿ : ಎಸೆವ ವಿಮಾನಘಂಟಿಗಳ ಮೆಲ್ಲುಲಿ ಕಿನ್ನರಗೇಯದೊಳ್ ಪೊದಟ್ಟಿಸೆಯು (ಆದಿಪು. ೨-೪೦); ಪಾಡುವ ಗೇಯದೊಂದು ಮೆಲ್ಲುಲಿ ಕಿವಿಯಂ ಪಳಂಚಲೆಯೆ (ಧರ್ಮಾಮೃ. ೩-೦೭೪) ; ಮೆಲ್ಲುಲಿ ನುಣ್ಗೊರಲೊಂಣ್ಮಲಿಂಚರಂಗೆಯ್ಯು ತಿರ್ಪಲರ್ಮಕ್ಕಿವಳಗದಿಂ . . . ಆ ಕೊಳಂಗಳ್ ಮೆಱೆದುವು (ಕಬ್ಬಿಗಾ. ೬-೩೯). [ಮೆಲ್$_2$ + ಉಲಿ$_2$]

**ಮೆಲ್ಲುಲಿಪು** (ನಾ). = ಮೆಲ್ಲುಲಿ$_2$ : ಪುಲ್ಲೆವಿಂಡು ಬೆಚ್ಚುವ ಬಳೆಗೆಯ್ಯ ಮೆಲ್ಲುಲಿಪೊ ಷೇಳೆನಲ್ (ನಳಚಂ. ೬೨೭). [ಮೆಲ್$_2$ + ಉಲಿಪು]

**ಮೆಲ್ಲೆದೆ** 'ಮೆಲ್ಲೆರ್ದೆ' ನೋ.

**ಮೆಲ್ಲೆರ್ದೆ, ಮೆಲ್ಲೆದೆ** (ನಾ). ೧. ಕೋಮಲವಾದ ವಕ್ಷಸ್ಥಳ, – ಎದೆ: ಪಡಪಡಮಾಯ್ದು ಮೆಲ್ಲೆರ್ದೆಗಳಂ ಕರಯುಗ್ಮದಿನೊತ್ತಿ (ಅಜಿತಪು. ೬-೦೨೦). ೨. ಕೋಮಲವಾದ ಹೃದಯ ; ಮೃದುವಾದ ಮನಸ್ಸು : ನಲ್ಲರ ಮೆಲ್ಲೆರ್ದೆಗಳ್ ಬಸಂತದೊಳ್ ಬರಿದುವು (ಕಂಶಶಾ. ೫-೩೩) ; ಮೆಲ್ಲೆರ್ದೆಯೊಳ್ ನಾಣ್ಗೊಳಿತುದು (ಜಯುಸಾ. ೩-೨೫). **ಮೆಲ್ಲೆದೆ :** ೧. ಎಲ್ಲಾ ಕಲೆಗಳನೊಳಕೊಂಡು ರಾಜಿಪೆ ಮೆಲ್ಲೆದೆಗುಱುಹಿಲ್ಲಿ ತೋಱು (ಪೋಕಳ. ೬-೦೩) ; ಸುಳಿನಾಭಿಯೊಳು ಪುಟ್ಟಿ ಮೆಲ್ಲೆದೆಯೊಳು ಬೆಳೆದೊಳು ಗೊರಳೊಳು ಪ್ರಾಯಪಡೆದು (ಛಕಶ. ೦೦-೦೪). ೨. ಮೆಲ್ಲೆದೆತಣ್ಪೋ, ಕೊಡುಗೈಯ ಬಿಣ್ಪೋ ! (ಹೂಂಗಳು. ೦೬-೦೦). [ಮೆಲ್$_2$ + ಎರ್ದೆ]

**ಮೆಲ್ಲೆರ್ದೆಗ** (ನಾ). ಕೋಮಲ ಹೃದಯವುಳ್ಳವನು : ನೀಂ ಜಾಣ ಮೆಲ್ಲೆರ್ದೆಗನಂ ಒಲಿದ ತರಳೆಯೊಳಿಂತು ಮುನಿವರೇ (ಶಬಪು. ೦೦-೬೦). [ಮೆಲ್ಲೆರ್ದೆ + — ಗ$_2$]

**ಮೆಲ್ಲೆಲರ್, ಮೆಲ್ಲೆಲರು** (ನಾ). ನಿಧಾನವಾಗಿ ಚಲಿಸುವ ಗಾಳಿ ; ಮಂದಮಾರುತ : ವಾರವಿಲಾಸಿನಿಯರ್ವೊಲ್ಲೆಲರ ಪೀಲಿಬಿಜ್ಜಣಿಗೆಯ ನೊಯ್ಯನೆ ಬೀಸುತ್ತಿರೆ (ಕಾದಂಬ. ೪೩೩) ; ತನ್ನ ಮನದನ್ನರಪ್ಪ ಬಸಂತ ಮೆಲ್ಲೆಲರ್ಗಳೆಂಬ ಕೆಳೆಯರೊಡನೆ . . . ಪೇಱೆ (ಕಬ್ಬಿಗಾ. ೦೯೬). **ಮೆಲ್ಲೆಲರು :** ಮೆಲ್ಲೆಲರೊಳು ಸರಸೀರುಹದಂದದಿ ಧ್ಯಾನದಿ ಚಲಿಸುವ ಚರಣಕೆ ನಾಂ ಶರಣೆನುವೆಂ (ಗೋಕುಂ. ೨೨-೨) ; ಕನ್ನಡ ನಾಡ ನಂದನದ ಮೆಲ್ಲೆಲರೊಂದು ತಣ್ಣನಲೆದಾಡುತ್ತಿದ್ದೆ (ನಾಡೋಜ. ೨೨೬). [ಮೆಲ್$_2$ + ಎಲರ್]

**ಮೆಲ್ಲೆಲರು** 'ಮೆಲ್ಲೆಲರ್' ನೋ.

**ಮೆಲ್ಲೆಲುಬು** (ನಾ). ಮೃದುವಾದ ಮೂಳೆ ; ಮೃದ್ವಸ್ಥಿ : ಮೆಲ್ಲೆಲುಬಿನಲ್ಲಿ (ಕಾರ್ಟಿಲೇಜ್) ಆಧಾರವಸ್ತು ಧಾರಾಳವಾಗಿದೆ (ಶರೀಕೋ. I. ೫೩). [ ಮೆಲ್$_2$ + ಎಲುಬು (< ಎಲ್ವು) ]

**ಮೆಲ್ಸಟಬ್** (ನಾ). ಮೃದುವಾದ ದಳ : ಪಿಡಿದಲರ್ವಿಲ್ಲಂ ಮೆಲ್ಸಟಬಿಡೆ ದೊವಲಂ ಮಿಸುಪ ನನೆಯ ಮೊನೆಯಂಬುಂ ನೇರ್ಪಡೆ ಮೇಲೆ ಮೇಲೆ ನಡೆದುದು ಗಡಣದೆ ಮಱಿಮುಂಬಿಯೆಂಬ ಬಿಲ್ಲಣಿಬೀರರ್ (ಕಬ್ಬಿಗಾ. ೨೦೫). [ ಮೆಲ್$_2$ + ಎಸಟು ]

**ಮೆಲ್ಲೊಡಲ್** (ನಾ). ಮೃದುವಾದ ದೇಹ ; ಕೋಮಲಶರೀರ : ಬಿಸಖಂಡಂಗಳಿಂ ಪರಿಮಳಿಪ ನಿನ್ನ ಮೆಲ್ಲೊಡಲಿರಿದೇಳುತ್ತೆಂತಿದೆನ್ನನಿಂದು ಪಚರಿಕುಂ (ಶಾಕುಂತ. ೩೯-೬೯). [ ಮೆಲ್$_2$ + ಒಡಲ್ ]

**ಮೆಲ್ವಚನ** (ನಾ). ಇಂಪಾದ ನುಡಿ.— ಮಾತು : ಪ್ರಿಯಚಿತ್ತದಿಂ ನಿನ್ನ ಮೆಲ್ವಚನಂಗಳಂ ನಿಱಿ ಕೇಳ್ದು ಮುಯ್ಯನೆ ಮಾಡುವೆಂ (ಧರ್ಮಾಮೃ. ೩-೨೨೦). [ ಮೆಲ್$_2$ + ವಚನ ]

**ಮೆಲ್ವಾಡು, ಮೆಲ್ಪಾಡು** (ನಾ). ೧. ಇಂಪಾದ ಹಾಡು : ಪ್ರಾತಃಕಾಲದ ಪದ— ಮೆಲ್ವಾಡುಗಳನ್ನು ಕೇಳದೊಡನೆ ಹಾಡುತ್ತಿದ್ದ ಪಾಠಕರ ಸಂಗೀತ ಘೋಷದಿಂದಲೇ ವಿಚಿತ್ರ ಬಂಕಿಯನು ಮುಖವುಜ್ಜನಾದಿಗಳನ್ನು ತೀರಿಸಿದನು (ಜೀರಿಖಂ. ೦೨). ೨. [ಕಾವ್ಯಮಿ] ಒಂದು ಪದ್ಯಜಾತಿಯ ಹೆಸರು : ಸಂದಿಸಿರೆ ಕಂದಮುಂ ಪೆಱತೊಂದೆಱಿಕೆಯ ವೃತ್ತಜಾತಿಯುಂ ಪದಮವು ತಳ್ತೊಂದಿರೆ ಪನ್ನೆರಡುವರಂ ಸಂದುದು ಮೆಲ್ವಾಡೆನಿಕ್ಕುಮದು ಕನ್ನಡದೊಳ್ (ಕಾವ್ಯಾವ. ೯೩೨). **ಮೆಲ್ಪಾಡು :** ೧. ಭಾವದೆಸಕಂ ಮೆಲ್ಪಾಡಿನೊಳ್ಪಂತೆ ಕೂಡಿದ ನಾನಾರಸಸಾರದಾನಮೆಸೆದತ್ತು (ಸೂಕ್ತಿಸು. ೬-೧೦೦). [ ಮೆಲ್$_2$ + ಪಾಡು$_2$ ]

**ಮೆಲ್ವಾತು, ಮೆಲುಮಾತು, ಮೆಲುವಾತು** (ನಾ). ೧. = ಮೆಲ್ವಚನ : ಸಾತಿಶಯಾರ್ಥಮುಮಂ ಮೆಲ್ವಾತುಮನೊಸೆದಿತ್ತರೊಲಿದು ತವಗಿಲ್ಲದುಮಂ (ಶಮಂರ. ೬೭ ಶೃಯೋ) ; ಮೆಲ್ವಾತಿನೊಳಕ್ಕಱಿಂ ನೆಗಳ್ದ ಬಿನ್ನಪಕುದ್ಭೃತ ನಾದಂ (ರಾಘ್ಯಾಂ. ೦-೨). **ಮೆಲುಮಾತು :** ೧. ನಗುನಗುತ್ತ ಮೆಲು ಮಾತಿನ, ಕಲುಕುಲುನಗುವಿನ ಹೊನಲನ್ನು ಹರಿಸುತ್ತಿದ್ದಾನಲ್ಲ (ರೂಪಶಂ. ೪೬). ೨. ಇತರರಿಗೆ ಕೇಳಿಸದಂತೆ ಮೆಲ್ಲನೆ ಆಡುವ ಮಾತು : ಅವರ ಬಾಯಿಯ ಗೊಣಗು, ಇಲ್ಲವೆ ಮೆಲುಮಾತುಗಳು ಒಂದು ರೀತಿಯಿಂದ ಅವರ ಆತ್ಮಗತಗಳು (ಕುಟುಕಥ. ೨೦೯). **ಮೆಲುವಾತು :** ೨. ಆಯುರ್ವೇದವನ್ನು ಕಲಿತು . . . ವೈದ್ಯರಾಜನೆನಿಸಿಕೊಳ್ಳಬೇಕೆಂದಿರುವೆನು ಎಂದು ಮೆಲುವಾತಿನಿಂದ ನುಡಿದನು (ಮುತಸ. ೩). [ ಮೆಲ್$_2$ + ಮಾತು$_1$ ]

**ಮೆಲ್ವಾಸು**, ಮೆಲುವಾಸು (ನಾ). ಮೆತ್ತನೆಯ ಹಾಸುಗೆ : ಮೃದು ತಲ್ಪ : ಹಂಸೆಯ ತುಳಿಯ ಮೆಲ್ವಾಸಿನಲಿ ಪವಡಿಸುವಿೀಕೆಗಿಂದೀಗ . . . ಕಲುನೆಲದೊಳೊಱಗಿದಳು (ಶಬ್ದಾ. ೯-೩೦) ; ರಾರಾಜಿಸಿದನವಂ ಮೆಲ್ವಾಸಿನೊಳ್ಮೆಱೆವ ಮಣಿಮಂಚದಾಸನದೊಳು (ಸ್ಕಂಭಾ. ೧೦-೨೪). **ಮೆಲುವಾಸು** : ಸ್ವಯಂಪ್ರಭೆಯೊಳು ಕೂಡಿ ಮೆಲುವಾಸಿನೊಳೊಱಗಿದನು (ವರ್ಧತ. ೬-೯). [ ಮೆಲ್$_2$ + ವಾಸು$_2$ ]

**ಮೆಲ್ವಿನ್ನಣಿ** (ನಾ). ವಿನಯಶೀಲನಾದ ಕಲಾನಿಪುಣ : ಬಹುವ್ರೀಹಿಗೆ . . . ಚಲವಾದಿ, ಮೆಲ್ವಿನ್ನಣಿ (ಶಮದ. ೦೬೩ ಕೃ ಯೋ). [ ಮೆಲ್$_2$ + ಬಿನ್ನಣಿ ( < ಬಿನ್ನಾಣಿ$_2$) ]

**ಮೆಲ್ವಿಲ್** (ನಾ). ಮೃದುವಾದ ಬಿಲ್ಲು : ಬೆಳ್ಗಬ್ಬಿನ ಮೆಲ್ವಿಲ್ಲೇವು ದೊಗೆವ ಕಾಮನ ಬಿಲ್ಲುಳ್ಳೊಡೆನುತ್ತೆ ಕಂತು ಮುಯ್ಯಾಂತಿರ್ಪಂ (ಕಂದ್ರಕೃ. ೪-೪೩). [ ಮೆಲ್$_2$ + ಬಿಲ್$_2$ ]

**ಮೆಲ್ವೆಣ್ಣು** (ನಾ). ಕೋಮಲೆ ; ಸುಕುಮಾರಿ : ನೆಲೆಮೊಲೆ ಸುಣ್ಗಲ್ಲ ಮೆಱೆಯೆ ಮೆಱೆವ ಮೆಲ್ವೆಣ್ಣು ಮೇಲಿಕ್ಕೆ ಮೆಯ್ ಮಱೆದನೆ ಮದನಾಸ್ತ್ರದಿಂದ (ಕುರಾಸಾ. ೩೩-೪). [ ಮೆಲ್$_2$ + ಪೆಣ್ಣು ( < ಪೆಣ್ ) ]

**ಮೆಲ್ಸರ** (ನಾ). ಮೃದುವಾದ ಸ್ವರ : ಇಂಪಾದ ಧ್ವನಿ : ಪಾದ ಸಂಚರಣದಿನುಣ್ಮೆ ನೂಪುರದ ಮೆಲ್ಸರಂ (ಕಂದ್ರಕೃ. ೩-೯೩) ; ಎನ್ನನೆ ಕೂರ್ತರ್ಗೆ ಮೆಲ್ಸರದೆ ಪಾಡುತೆ ಪಟ್ಟಿರೆ (ರಸರ. ೦-೪೯). [ಮೆಲ್$_2$ + ಸರ$_1$]

**ಮೆಲ್ಸರಿ** (ನಾ). ಸಣ್ಣದಾಗಿ ಬೀಳುವ ಮಳೆ : ಪೆರ್ಮೞೆ ಮೆಲ್ಸರಿ ತುಂತುಱ್ . . . ನಟ್ಟ ಬಡಪಮೆನಲ್ಸುರಿದುವು (ಜಗಪಿ. ೪-೩೨) ; ಕಾಲ್ಸ ಮನಿಸೆ ಪೊಸಬುಂಡಿನ ಮೆಲ್ಸರಿಯಂ ಸುರಿಯುತಿರ್ಪ ಸಂಪಗೆವೂಗಳ್ ಬಲ್ಸೞೆ ಪಿಡಿವಂತಿರ್ದುವು ಮೆಲ್ಸರದಿಂ ಪಾಡುತಿರ್ಪ ಪೆಣ್ದುಂಬಿಗಳಂ (ಕಬ್ಬಿಕಾ. ೩೦); ಮೆಲ್ಸರಿ ಸೂಳ್ಸರಿ ಮುಗಿಲೊಳ್ಗಲ್ಸರಿ ತಳ್ಸರಿ . . . ಸುರಿದು ಕಱೆದುವಿರುಳುಂ ಪಗಲುಂ (ರಾಜಶೇ. ೯-೦೦೨). [ಮೆಲ್$_2$ + ಸರಿ$_5$]

**ಮೆಲ್ಸುಯ್** (ನಾ). ನಿಧಾನವಾದ ಉಸಿರು : ಮೆಲ್ಸುಯ್ಯುಗ್ತಿ ನಿಂದೊಂದಿದ ಹೃದಯುಮುಪಸ್ಸಂಗಪದ್ಮಂಬೊಲುನ್ಮೀಳಿಸೆ (ಆದಿಂಪು. ೭೮೭). [ ಮೆಲ್$_2$ + ಸುಯ್$_2$ ]

**ಮೆಲ್ನೋಂಕು** (ನಾ). ಕೋಮಲವಾದ ಸ್ಪರ್ಶ ; ಮೃದುಸ್ಪರ್ಶ : ಆ ಗಾಳಿಯ ಮೆಲ್ನೋಂಕಿಂವಾಗಳೆ ಬೆಮರೊಡನೆ ಬಳೆದ ಸೇದೆಯುದೆತ್ತಂ ಪೋಗೆ (ಕಬ್ಬಿಕಾ. ೯೯). [ ಮೆಲ್$_2$ + ಸೋಂಕು$_2$ ]

**ಮೆಷಿನ್ನು** 'ಮಿಷನ್ನು' ನೋ.

**ಮೆಸ್ತರ** (ನಾ). ಒಬ್ಬನ ಹೆಸರಿನ ಹಿಂದೆ ಗೌರವಸೂಚಕವಾಗಿ ಸೇರಿಸುವ ಪದ : ಮೆಸ್ತರ ಶೇಂಡಿಪೋರು ಸಾಹೇಬರನ್ನು (ರಾಜೇಂದ್ರ. ೩೩).

[ ← ಇಂ. Mister ]

**ಮೆಹನತು** 'ಮೆಹನತ್ತು' ನೋ.

**ಮೆಹನತ್ತು**, ಮೆಹನತು, ಮೋನತ್ತು, ಮೇಹನತ್, ಮೇಹನತ್ತು (ನಾ). ೧. ಪರಿಶ್ರಮ ; ಪ್ರಯತ್ನ : ಈ ಮೆಹನತ್ತು ಮಾಡಿ ಐದು ದಿವಸಗಳಲ್ಲಿ ಆ ಕೋಟೆಯನ್ನು ತೆಗೆದುಕೊಂಡರು (ರಾಜೇಂದ್ರ. ೨೭) ; ದೊರೆಗಳವರು ಹೈದರಲ್ಲೀಖಾನನು ಮಾಡಿದ ಮೆಹನತ್ತು ಎಲ್ಲವನ್ನೂ ಚಿತ್ತಕ್ಕೆ ತಂದು (ಮಹಾಪಂ. I, ೦೮೨). ೨. ಮೆಚ್ಚುಗೆ ; ಶಹಭಾಸ್‌ಗಿರಿ : ನಿಮ್ಮನ್ನು ನಾಯಿಗಳಂತೆ ಗುಂಡಿಕ್ಕಿ ಕೊಲ್ಲಿಸುತ್ತೇನೆ. ಅದರಿಂದ ನನಗೂ ಮೇಲಿಂದ ಮೆಹನತ್ತು ದೊರಕುತ್ತದೆ (ಕೃಶರು. ೪೪೭). **ಮೆಹನತು** : ೧. ಬೆಳನಡಿವಿನ ಗ್ರಾಮದ ಕೋಟೆ ಕೊತ್ತಲ ಹೊಸ್ತಾಗಿ ಹಾಕಿಸಿ ಬಹಳ ಮೆಹನತು ಮಾಡಿ ಏಕನಿಷ್ಠೆಯಲ್ಲಿ ನಡಕೊಂಬದರಿಂದಲ್ಲು (ಎಕ. XVI, ತಳ್ವಾ. ೯೪-೧೦ ; 1746). **ಮೋನತ್ತು** : ೧. ಪತ್ತಲನ್ನೆ ಲಕ್ಷಣವಾಗಿ ಸುತ್ತಿ . . . ಮೋನತ್ತಿನಿಂದ ಅಲಂಕರಿಸಿಕೊಂಡಳು ಗಿರಿಜ (ದೇವಹಂ. ೯೩). **ಮೇಹನತ್** : ೧. ಪರೀಕ್ಷಾರು ತಿಂಗಳು ಬಹಳ ಮೇಹನತ್ ಮಾಡಿ. ಒಮ್ಮೆ ಪರೀಕ್ಷೆಯು ಕುತ್ತಿನಿಂದ ಗೆದ್ದೆವು (ದೀಕಹ. II, ೨೩೦). **ಮೇಹನತ್ತು** : ೧. ಬೊಬ್ಬರಿಎಣ್ಣೆ ಡಬ್ಬಿಯೊಳಗಿಂದ ಜೇಡಿದ್ದಾದರೆ ಬಹಳ ಮೇಹನತ್ತು ಮತ್ತು ವೇಳೆ ಮುರಿಯುತ್ತದೆ (ಮುಂಬಿಬ್ವಾ. ೦೯೩).

[←ಅರ. ಮೇಹನತ್. ಮಿಹನತ್ : ಹಿಂ. ಮರಾ. ಮೇಹನತ್]

**ಮೆಹರಬಾನಗಿ** ' ಮೆಹರ್ಬಾನಗಿ ' ನೋ.

**ಮೆಹರೆ** (ನಾ). ಒಂದು ಸ್ಥಳದ ಹೆಸರು ( ? ) : ಅಸ್ತೆ ಬಸ್ತು ಮೆಹರೆಯ ಕೊಳ ಅಸ್ತೆ ಬಸ್ತು ಕೊಟ್ಟಿಲೆಪಳ್ಳದ ಅಲಕಿಜಕಿಯ ಕಗ್ಗಲ್ಲ ಒಳ್ಪಿಯ (ವ್ಯಕಿ. ೦೯೦೯, ೧೦-೬೧ : ೯೦೦). [ ? ]

**ಮೆಹರ್ಬಾನ್**$_1$ (ನಾ). ದಯಾಳು; ಉಪಕಾರಿ : ಮೆಹರ್ಬಾನರೆ ವಾನಿಶ್ ಮಂದಖಾನರು ಜ್ಞಾನಿಗಳ ಶಿರೋಮಣಿಗಳು (ಶಿರಂಗ. ೩೪); ಮೆಹರ್ಬಾನ್ ಮದ್ರಾಸ್ ಗವರ್ನರ್ ಸಾಹೇಬರವರು (ಕಂಜಿಸ. ೯೦). [←ಅರ. ಪಾರ. ಹಿಂ. ಮೆಹರ್ಬಾನ್: ಮರಾ. ಮೆಹರ್ಬಾನ್, ಮೆಹರ್ವಾನ್]

**ಮೆಹರ್ಬಾನ್**$_2$, ಮೋರುಮಾನಿ (ನಾ). ಅನುಗ್ರಹ; ಕೃಪೆ: ಉಪಕಾರ : ನಿನಗೆ ಮೆಹರ್ಬಾನಾಗಿ ಪಡಿಗೇನಹಳ್ಳಿ . . . ಉಂಬಳಿಯಾಗಿ ಕೊಟ್ಟು ಯಿರ್ದೇವೆ (ಎಕ. IX, ದೇಹಸ. ೩೪-೪; ಸು. 1700). **ಮೋರುಮಾನಿ** : ಕಾಶೀ ಪಂತರಿಗೆ. . . ದಪಲತ್ತು ಕೊಟ್ಟು ಬಹಳ ಮೋರುಮಾನಿಯಂ ಮಾಡಿ (ಕಳಸ. ೯-೩೯). [←ಅರ. ಪಾರ. ಹಿಂ. ಮೆಹರ್ಬಾನೀ; ಮರಾ. ಮೆಹರ್ಬಾನೀ, ಮೆಹರ್ವಾನೀ]

**ಮೆಹರ್ಬಾನಗಿ**, ಮೆಹರಬಾನಗಿ. ಮೆಹೆರಬಾನಗಿ, ಮೇಹರ್ಬಾನಗಿ (ನಾ). ಅನುಗ್ರಹ; ದಯೆ : ನಿನ್ನ ಮೇಲೆ ಕೊಡಗಿನ ರಾಜರ ಬಹಳ ಮೆಹರ್ಬಾನಗಿ ಇದೆ (ರಾಜೇಂದ್ರ. ೪೦): ತಮ್ಮ ಮೆಹರ್ಬಾನಗಿ ಇದ್ದರೆ ತಿರುಗಿ ಈ ಸ್ಥಲಕ್ಕೆ ತಾವು ಬರಬಾರದು (ಮುಂಬಿಯು. ೩-೩೭). **ಮೆಹರಬಾನಗಿ** : ಇನಶಾಅಲ್ಲಾಹು ಕಾಲದ ಮೆಹರಬಾನಗಿಯಿಂದ ಸ್ವಲ್ಪ ದಿವಸದಲೇ. . . ಎಂದು ತಿಳಿಯುತ್ತೇನೆ (ಮದತ. ೯-೩). **ಮೆಹೆರಬಾನಗಿ** : ಇನಾಮು ತಮಗೆ ಅಯೋಗ್ಯವಾಗಿ ಕಂಡಲ್ಲಿ, ಮೆಹೆರಬಾನಗಿಯಿಂದಾದರೂ ತಮ್ಮ ಲಕ್ಷ್ಯವು ಈ ಕಾರ್ಯದಲ್ಲಿರಲಿ (ಕಳ್ಳಾ. ೩೦). **ಮೇಹರ್ಬಾನಗಿ** : ದಾದಲ್ಯಾಸ ಸಲುವಾಗಿಯಾದರೂ ಅಡ್ಡಿಯಿಲ್ಲ_ಮೇಹರ್ಬಾನಗೀ ಮಾಡಿ ಅವನ ಸರ್ಟಿಫಿಕೇಟ್ ಅನ್ನು . . . ಮ್ಯಾಟ್ರಿಕ್‌ಕ್ಲಾಸಿಗೆ ಧಕಲಾಯಿಸುವ ಬಗ್ಗೆ ವಚನ ತೆಗೆದುಕೊಂಡೆವು (ದೀಕಹ. II, ೦೯).

[←ಅರ. ಪಾರ. ಮೆಹೆರ್ಬಾನಗೀ; ಹಿಂ. ಮೆಹರ್ಬಾನ್‌ಗಿ ; ಮರಾ. ಮೆಹರ್ಬಾನಗೀ, ಮೆಹರ್ವಾನಗೀ]

**ಮೆಹೆತರಿ**. ಮೆಹೆತ್ರಿ (ನಾ). ೧. ಝಾಡಮಾಲಿ : ತೋಟಿ : ಇದನ್ನು ಒಬ್ಬ ಮೆಹೆತರಿಯು (ಹಲಾಲಖೋರನು) ಕಟ್ಟಿಸಿದನೆಂದು ಹೇಳುತ್ತಾರೆ (ಮುಂಬಿಯು. ೬-೦೦೬). **ಮೆಹೆತ್ರಿ** : ೨. ಒಬ್ಬನ ಹೆಸರಿನ ಮುಂದೆ ಸೇರುವ , ನಾಯಕ ಎಂಬ ಅರ್ಥದ ಪದ : ಜನ್ಮ ಕೊಮಾರಪೈಕರ ಜನ್ಮ ಭಾಷೆ ಕೊಂಕಣೀ ಮಿಶ್ರ ಕನ್ನಡ. ಇವರು ತಮ್ಮ ಹೆಸರಿನ ಮುಂದೆ ನಾಯಕ, ಇಲ್ಲವೆ ಮೆಹೆತ್ರಿ ಎಂಬ ಉಪಪದವನ್ನು ಧರಿಸುವರು (ಕಥಾಗ. ೦೭೮). [←ಅರ. ಪಾರ. ಮಿಹತರ್ ; ಹಿಂ. ಮೆಹತರ್; ಮರಾ. ಮೆಹತರ್, ಮೆಹಾತರ್]

**ಮೆಹೆತ್ರಿ** ' ಮೆಹೆತರಿ ' ನೋ.

**ಮೆಹೆರಬಾನಗಿ** ' ಮೆಹರ್ಬಾನಗಿ ' ನೋ.

**ಮೆಳ್** ' ಮೆಱ್ ' ನೋ.

**ಮೆಳಸಿಗೆ**, ಮೆಣಸಿಕೆ, ಮೆಣಸಿಗೆ (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ : ಕರಮೆಸೆವ ಮಾಂಮಿಡಿಗಳು ಬೆಳಲ ಕಿಱುಗಾಯನಿರದೆಸೆವ ಮೆಳಸಿಗೆಯ ತೋಳ್ಗತಣಗಳನೆಪ್ಪಿ ಭರದಿಂದೆ ತಿಱಿದುಕೊಂಡು

(ಅಜಾಕ. ೩-೬-೨೩). ಮೆಣಸಿಕೆ : ೨. ಒಂದು ಬಗೆಯ ಸಸ್ಯ ಮತ್ತು ಅದರ ಬೇರು : ಮೆಣಸಿಕೆ ಕೃಷ್ಣನೀಲಿ ಕುಟಜಂ ನಿ(ಗಿ)ಡುಗೊಂಡೆಯೆನಿಪ್ಪ ವೆಲ್ಲಮಂ ಗುಣನಿಧಿ ಸಾಧಿಸಿಟ್ಟಿಡಿದು (ಖಸುಕ. ೧೬-೦೦೯). ಮೆಣಸಿಗೆ : ೨. "ಮರೀಚಿಕಾ–ನಾಯಿತೊಳಸಿ, ವೆಣಸಿಗೆ" (೬೩೦. ೦೦೬) ; ಕ(ಕೊ)ಡಸಿಗೆ ಮೆಣಸಿಗೆ . . . ತೊಟ್ಟೆ (ಖಸುಕ. ೦೬-೧೦೩). ೩. ಒಂದು ಬಗೆಯ ಬತ್ತ : ಶ್ರೀಶಾಲಿ . . . ರಾಜಾನ್ನಂ ನಾನಾಶಾಲಿ ಕಟವೆ ಮೆಣಸಿಗೆ ಕೇಸರಿವೆಸರಿಪ್ಪೆಗಟವೆ ಶಾಲಿವಿಶೇಷಂ (ಪಶಚಂ. ೬೨೩). [< ಮೆಟಸು]

**ಮೆಳಸು** ' ಮೆಟಿಸು ' ನೋ.

**ಮೆಳಿ ?** (ಕ್ರಿ). (?) : ಪುಸಿವಂಗಂ ಕಂಡಲ್ಲಿ ಸಿಡಿವಂಗಂ ಕಳ್ಳೊತ್ತೆಯಿಡು ವಂಗಂ ಮೆಳಿವ[ ಪ್ಪ ]ಂಗಂ . . . ಕಿಸುಗುಳ್ಳನಪ್ಪಂಗಂ ಸೂಳೆಸುಖಂ ಸಲ್ಲ ದಲ್ತೆ (ಮಠತ. ೦೦-೬೬). [ ? ]

**ಮೆಳೆ₁** (ನಾ). ದಟ್ಟವಾಗಿ ಬೆಳೆದ ಗಿಡಗಳ ಗುಂಪು ; ಪೊದರು : "ನಿಕುಂಜಃ, ಕುಂಜಃ – ಈ ೨ ಬೆಟ್ಟದ ಮೆಳೆಯ ಪೆಸರು" (ಶಾತರಾ. ೦೦೩); ಪುಲಿವುಲಿ ಪರಿಪರಿ. . . ತೊಲತೊಲಗೀ ಮೆಳೆಗೆ (ಕಪಿರಾ. ೨-೨೬); ಕಲದ ಲತೆಯ ಮೆಳೆಯೊಳ್ ಬಿಲ್ಲುಮಂಬುಮಂ ಸಾರ್ಚಿ ಕೊಳನಂ ಪೊಕ್ಕು (ಶಂಕರಾ . ೯-೩೯ ವ); ಧರಣಿಗೆ ಮೆಳೆ ಪಿಡಿದ ತಳೆಗಳಾದುವು ಮಳೆಯೊಳ್ (೧೧೯. ೯-೩೬); ಎಳೆಯ ಬಾಳೆಯ ಸುಳಿಗೆ ಸೀಗೆಯ ಮೆಳೆಯೊಡನೆ ಸರಸವೆ (ಶುಪ್ರಾದ್ರ್ಶಿ. ೦೨-೨೯). [ದೇ.॥ ತಮಿ. ಮಿಳೈ]

**ಮೆಳೆ₂** ' ಮಾಳ₂ ' ನೋ.

**ಮೆಳೆಗುತ್ತಿ** (ನಾ). ಪೊದರನ್ನು ಕತ್ತರಿಸಿದಾಗ ಉಳಿಯುವ ಕೂಳೆ : ಮೆಳೆಗುತ್ತಿಯ ನೈಷ್ಫುರ್ಯದ ಜೀವನವಿಲ್ಲಿಲ್ಲ; ತುಂಬಿದ ಬಾಳ್ವೆಯ ಸಂತಸ ಹೊರಹೊಮ್ಮಿದೆ ಇಲ್ಲಿ (ಅಹಕೆ. ೦೦೦-೦೩). [ಮೆಳೆ₁ + ಕುತ್ತಿ₁]

**ಮೆಳೆದಾಗುಡಿ** (ನಾ). ಒಂದು ಬಗೆಯ ಬಳ್ಳಿ : "ಪಾತಾಳಗರುಡಿ_ಮೆಳೆ ದಾಗುಡಿ" (೬೩೦. ೯೬). [ಮೆಳೆ₁ + ದಾಗುಡಿ]

**ಮೆಳೆವಕ್ಕೆ** (ನಾ). ಪೊದರಿನ ಆಶ್ರಯ, —ನೆಲೆ : ಮೆಳೆವಕ್ಕೆಯೊಳ್ ಮೃಗ ಮಸಂದೊಡ್ಡೊಡ್ಡಿ ಸುತ್ತಾರ್ಪಿನುಗ್ಗಡದಿಂ ತೀಡಿದುದೊಂದು ಘೋರಪವನಂ (ದಶಕು. ೩-೭೦). [ಮೆಳೆ₁ + ಪಕ್ಕೆ₁ (< ಪಟ್ಟಿ)]

**ಮೆಳೆವಱ⁵** (ನಾ). ಪೊದರಿನ ಹಿಂಭಾಗ : ಕುತ್ತುಱು ಮೆಳೆವ[ಶಾಕಾಂ. ಮು] ಱಿಗಳೊಳು ತುತ್ತುಱಬಾಗಿ ನಿಂದರು . . . ಕಾಲವರು (ಶಂಕಶಾಂ. ೩೯-೬).
[ಮೆಳೆ₁ + ಮಱ₂]

**ಮೆಳ್ಪಡು** ' ಮೆಟ್ಪಿಡು₁ ' ನೋ.

**ಮೆಳ್ಪಡೆ** ' ಮೆಟ್ಪಿಡೆ ' ನೋ.

**ಮೆಳ್ಳ** ' ಮೆಳ್ಳೆ ' ನೋ.

**ಮೆಳ್ಳಗಣ್ಣ** ' ಮೆಳ್ಳೆಗಣ್ಣ ' ನೋ.

**ಮೆಳ್ಳಗಣ್ಣು** ' ಮೆಳ್ಳೆಗಣ್ ' ನೋ.

**ಮೆಳ್ಳಗವಾಸಗುರವ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಇನು ಜೂರಾ ಮೆಳ್ಳಗವಾಸಗುರವರ್ ಕಬ್ಬಪ್ಪಬೆಟ್ಟಮ್ಮೇಲ್ಕಾಲಂಕೆಯ್ದಾರ್ (ಎಕ. II. ೨೮-೦ ; ಸು. 700). [ಮೆಳ್ಳಗವಾಸ₁ + < ಗುರು₂]

**ಮೆಳ್ಳಿ** (ನಾ). ಮಾಲುಗಣ್ಣಿನವಳು ; ಕೋಸುಗಣ್ಣಿ : ಆ ಹೆಣ್ಣು ಹಾಗೆಂದು ಈ ಪೆಣ್ಣು ಹೀಗೆಂದು ದೂಷಿಸಿ ಮರಳಿದ ನೀನು ಈ ಮೆಳ್ಳಿ ಮಳ್ಳಿಯನೊಪ್ಪಿದೆ ಹೇಗೆ (ಕಂದ್ರಪೀ. ೦೯೬-೮೨). [ಮೆಳ್ಳ (<ಮೆಳ್ಳೆ)+ – ಇ₂]

**ಮೆಳ್ಳಿಸು** (ಕ್ರಿ). ಕಣ್ಣುಗುಡ್ಡೆಯನ್ನು ಹೊರಳಿಸು; ಕಣ್ಣನ್ನು ಸುತ್ತು ತಿರುಗಿಸು : ಅಳ್ಳೆಯನೆರಡುಕರದಿ ಬಿಡಿಟುತ್ತಂ ಮೆಳ್ಳಿಸಿ ನೋಡುತ ಪುರ್ಬಾ ಕೆತ್ತುತೆ (ಶ್ರೀಂಗೀರ. ೫. ೯೬೩-೬) ; ಕಂಗಳಂ ಮೆಳ್ಳಿಸುತೆ ಪಲ್ಗಿರಿದು . . . ಭೃಂಗಿ ನಗಿಸುತ್ತೀಡಿಸುತ ಶಿವನಿದಿರೊಳಾಡುತ್ತ (ಬಸತು. ೦-೪೯) ; ನೋಡುತಂ ಕಣ್ಣ ಮೆಳ್ಳಿಸಿ ಕಿವಿಯನಲುಗಿಸುತ . . . ನಾಟ್ಯವಾಡುವ ಭೃಂಗಿಪನ ಕಂಡು ಪರಶಿವಂ ನಸುನಗುತಿರೆ (ಶ್ರಕುತ್ತ. ೨-೬೯). [ಮೆಳ್ಳ (< ಮೆಳ್ಳೆ) + – ಇಸು₃]

**ಮೆಳ್ಳು** ' ಮೆಳ್ಳೆ ' ನೋ.

**ಮೆಳ್ಳುಗಣ್ಣು** ' ಮೆಳ್ಳೆಗಣ್ ' ನೋ.

**ಮೆಳ್ಳೆ**, ಮೆಡ್ಡ, ಮೆಳ್ಳ, ಮೆಳ್ಳು (ನಾ). ೧. ಕಣ್ಣು ಓರೆಯಾಗಿರುವಿಕೆ.– ಮಾಲಿರುವಿಕೆ : ಕುರುಡಿಗಿಂತ ಮೆಳ್ಳೆ ವಾಸಿ (ಗಾದೆ). (ಗು). ೨. ಓರೆಯಾದ ; ಸೊಟ್ಟಗಿರುವ : ' ಮೆಳ್ಳೆಗಣ್ ' ಪರಾ. ಮೆಡ್ಡ : ೩. ಮಾಲುಗಣ್ಣುರುವವನು ; ಕೋಸುಗಣ್ಣಿನವನು : ಹೆಡ್ಡನ ನೆರೆ ಹೀನ ಮೆಡ್ಡನ ಗುರಿ ಹೀನ (೩೦ಕಾಶ. ೯೬-೬೩). ಮೆಳ್ಳ : ೨. ' ಮೆಳ್ಳಗಣ್ಣು ' ಪರಾ. ೩. ಪ್ರಸಂಗಾವಧಾನವುಳ್ಳ, ಬಾವಪಹನು ಮೆಳ್ಳನಂತೆ ಕಣ್ಣು ಸೊಟ್ಟ ಮಾಡಿಕೊಂಡು ನಿಂತನು (ಅಕ್ಕರ. ೦೬೨) ; ಕುರುಡರೊಳಗೆ ಮೆಳ್ಳನೇ ಶ್ರೇಷ್ಠ (ಗಾದೆ). ಮೆಳ್ಳು: ೧. ಎಡದ ಕಣ್ಣು ಮೆಳ್ಳಾಗಲೂ ಪುರುಷನಂ ಧಿಕ್ಕರಿಸುವಳು (ಶಾಶೀವು.೦೯೬-೩).
[ದೇ.॥ ತೆಲು. ಮೆಲ್ಲ]

**ಮೆಳ್ಳೆಗಣ್**, ಮೆಡ್ಡಗಣ್ಣು, ಮೆಳ್ಳಗಣ್ಣು, ಮೆಳ್ಳುಗಣ್ಣು, ಮೆಳ್ಳೆಗಣ್ಣು (ನಾ). ಓರೆಯಾಗಿರುವ ಕಣ್ಣು; ಮಾಲುಗಣ್ಣು; ಕೋಸುಗಣ್ಣು: ತಟಿಟದಲೆಗಳ ಮೆಳ್ಳೆಗಂಗಳ ಬೆಱಿತ ಮೋಱೆಯ . . . ಕ್ಷಿಬಿಕುಬರು ಬಂದರು (ದಕಪು. ೩೬-೯೯). ಮೆಡ್ಡಗಣ್ಣು : ಸೆರೆಮನೆವಾಸ ಅನುಭವಿ ಸುತ್ತಿದ್ದ ಮೆಡ್ಡಗಣ್ಣಿನ ಹೆಂಗಸೂ ಅವಳ ಚಿಕ್ಕಮಗಳೂ . . . ಬಂದರು (ಕೃಪರು. ೦೯೬). ಮೆಳ್ಳಗಣ್ಣು : ಮೂಗನ್ನೇ ನೋಡಿ ನೋಡಿ ಅವಳಿಗೆ ಮೆಳ್ಳಗಣ್ಣಾಗಿತ್ತು (ತುಟಿರಾ. ೬೯) ; ಮೆಳ್ಳಗಣ್ಣುಮಾಡುವುದು . . . ಕಾರಣವಿಲ್ಲದೆ ರೇಗುವುದು ಮುಂತಾದ ಚಿಹ್ನೆಗಳು ದೃಷ್ಟಿದೋಷವಿದ್ದಲ್ಲಿ ಕಾಣಿಸಿಕೊಳ್ಳುವುವು(ಕಷ್ಟುದೃ. ೩೨). ಮೆಳ್ಳುಗಣ್ಣು: ಕುಂಟಕಾಲು ಬಚ್ಚು ಬಾಯಿ ಮೆಳ್ಳುಗಣ್ಣು ನಿಮ್ಮ ಸೇವೆ ಮಾಡಲಾರೆನು (ಕಪಸೋ. ೬೦-೬). ಮೆಳ್ಳೆಗಣ್ಣು: "ವಲಿರಃ, ಕೇಕರಃ_ ಮೆಳ್ಳೆಗಣ್ಣಿನವನು" (ನಾತರಾ. ೬); ಗಂಟುಮೂಗಿನ ಮೆಳ್ಳೆಗಣ್ಣಿನ ಅಂಟುಪುರ್ಬಿನ ಜೋಲುದುಟಿ (ಅಜಪ. ೨೨-೩); ಆ ಹುಡುಗಿಗೆ ಮೆಳ್ಳೆಗಣ್ಣು ಇತ್ತು (ಉಡುಸ. ೦೯೨). [ಮೆಳ್ಳೆ + ಕಣ್]

**ಮೆಳ್ಳೆಗಣ್ಣ**, ಮೆಡ್ಡಗಣ್ಣ, ಮೆಳ್ಳಗಣ್ಣ (ನಾ). ಮಾಲುಗಣ್ಣಿರುವವನು; ಕೋಸುಗಣ್ಣಿನವನು : ಧರ್ಮಿಷ್ಠರಂ ಮುಳಿವುತಜ್ಞಾನದಿಂ ನೋಡಿದರ್ ಮೆಳ್ಳೆಗಣ್ಣರಹರ್ (ವೀಕ್ಕತು. ೯-೨೨-೩೩). ಮೆಡ್ಡಗಣ್ಣ: ಶಸ್ತ್ರಚಿಕಿತ್ಸೆಯ ನಂತರ ಆ ಮೆಡ್ಡಗಣ್ಣನ ಕಣ್ಣುಗಳು ಸರಿಹೋಗಿವೆ (ರೂಢಿ). ಮೆಳ್ಳಗಣ್ಣ : ಸರಿಯಾದ ವೈದ್ಯರ ಬಳಿಗೆ ಹೋದರೆ ಆ ಮೆಳ್ಳಗಣ್ಣನ ಕಣ್ಣುಗಳು ಸರಿ ಹೋಗುವುವು (ರೂಢಿ). [ಮೆಳ್ಳೆಗಣ್ + – ಅ₇]

**ಮೆಳ್ಳೆಗಣ್ಣು** ' ಮೆಳ್ಳೆಗಣ್ ' ನೋ.

**ಮೆಱವಣಿ**, ಮೆರವಣಿ, ಮೆಱಿವಣಿ, ಮೆಱೆವಣಿ (ನಾ). ೧. ಹೆಚ್ಚು ಗಾರಿಕೆ ; ಅತಿಶಯ ; ಹೆಚ್ಚಳ : ನೈವೇದ್ಯವೇಳೆಯೊಳಮರ್ದು ಮೆಱವಣಿ ಯಲಿ ಸುರಗಿಯಂ ಕಿತ್ತು ಹರಣಕ್ಕ ಅಪಮಾನ್ಪೂರೆಯಂ ಕೊಯ್ವುವ್ಪೋಲುತ್ತ ಮನದಂ ಕೆಲದಲಿ ಮಡಗಿ (ಬಸಪು. ೩೩-೦೦). ಮೆರವಣಿ : ೨. ದೇವರು. ಪೀಠಾಧಿಪತಿಗಳು. ವಧೂವರರು ಮುಂತಾದವರನ್ನು ಆಡಂಬರ ದಿಂದ ಊರಲ್ಲಿ ಸುತ್ತಾಡಿಸಿಕೊಂಡು ಬರುವುದು ; ಉತ್ಸವ : ಸಂದೀಧ್ವಜದ ಮೆರವಣಿ ಕಾಯಿಕಗಳೆಂಬ ಸಂಗವನು ಪರಿಹರಿಸಿ (ಬಪ್ಪತು. ೬೯-೦೦). ಮೆಱವಣೆ : ೧. ಮೆಱವಣೆಯ ನೆಱೆ ಬೇಂಟೆಕಾಱಂಗುಱಿ ಮೃಗಂಗಳನಸುಗಳೆವುದೇತಱ ಘನಂ (ಬಸತು. ೩೯-೩೬). ಮೆಱೆವಣೆ : ೧. ಪುರಹರಂ ಮೆಱೆಮಿಂಡದೇವನ ನಿರತಭಕ್ತಿಯ ಮೆಱೆವಣಿಗೆ ಕೂರ್ತು (ಬಸತು. ೨೬-೬೩). [< ಮೆಱೆ./ತಮಿ. ಫುರುವಣ್ಣ; ತೆಲು. ಮೆಱವಡಿ. ಮೆಱಪಣ. ಮೆರವಡಿ. ಮೆರವಣ]

**ಮೆಱವಣಿಗೆ,** ಮೆರವಣಿಗೆ, ಮೆರವಳಿಗೆ, ಮೆರೆವಣಿಗೆ (ನಾ). ೧. ಮೇಲ್ಮೆ : ಹೆಚ್ಚಳ ; ಅತಿಶಯ : ವರಚರಿತಗಳನೆಯ್ದೆ ನಾದಸಭರಿತಮಾಗಿರೆ ಪಾಡುತೊಬ್ಬೊಬ್ಬರ ಮಹಾಭಕ್ತರ ಮೆಱವಣಿಗೆಗಳ ಶಿವನ ಮುಂದೆ ಪರಮಭಕ್ತನು ನಂಬಿ ಪೊಗಳುವ ಪರಿಯುಮಂ ಪರಿ ಕೇಳು ನೀನು (ಬಸವ. ೨೭-೬೯). **ಮೆರವಣಿಗೆ :** ೨. = ಮೆಱವಣಿ ೨ : ರಾಜಮಾರ್ಗದಲ್ಲಿ ಒಂದು ದೊಡ್ಡ ಮೆರವಣಿಗೆ ಹೋಗುತ್ತಿತ್ತು (ಪಾಡಿಲ. ೧೨) : ನದಿಯಂತೆ ಪರಿದಿರ್ದ ನಾಗರಿಕನರನಾರಿಯರ ದಳದ ಮೆರವಣಿಗೆ ಚಲಿಸಿತು ಕಡಲ ತಡಿಗೆ (ಚಿತ್ರಾಂಗ. ೬೬-೨೧೧೦). **ಮೆರವಳಿಗೆ :** ೨. ಪಡುವಣ ಬಾಗಿಲು ನಕಮಾಡಿದ ಮೇರೆಯೊಳಗೆ ಶುಭಶೋಭನ ಮೆರವಳಿಗೆ ಮಾಡಿಕೊಂಬುದು (ಎಕ. XI. ಹಿರಿಯೂ. ೪೬-೦೫ ; 1732). **ಮೆರೆವಣಿಗೆ :** ೨. ಈ ಪ್ರಕಾರ ಸರ್ವಾಣದ ಸ್ವಾಮಿಗಳು ಮೆರೆವಣಿಗೆಯಿಂದ ಅರಮನೆಗೆ ದಯಮಾಡಿಸಬೇಕೆಂತ ಗೊತ್ತಾಯಿತು (ಮುಸುಗ. ೫೯) ; ಒಂದರ ಹಿಂದೆ ಒಂದರಂತೆ ವ್ಯವಸ್ಥಿತವಾದ ಸಾಲಿನಲ್ಲಿ ಜನರ (ಅಥವಾ ದೋಣಿ, ಮೊ. ಗಳ) ತಂಡ ಮುಂದುವರಿಯು(ತ್ತಿರು)ವುದು. . . ಮೆರೆವಣಿಗೆ (Procession. ಇಂಕಪ).

[ಮೆಱವಣಿ + – ಗೆ./ತುಳು.ಮೆರವಣಿಗೆ, ಮೆರಣಿಗೆ]

**ಮೆಱವಣೆ** ' ಮೆಱವಣಿ ' ನೋ.

**ಮೆಱಸು** ' ಮೆಱೆಯಿಸು ' ನೋ.

**ಮೆಱಹು,** ಮೆಱೆಹು (ನಾ). ೧. ಕಾಂತಿ ; ಪ್ರಕಾಶ : ಪೊಱಮಟ್ಟುದ ಖಿಳಪುರಜನಮ್ಮುದೆ ಸಿಂಗರದ ಮೆಱಹುಗಳ ಮಾಳಿಯಿಂ ಮೇಳವದ ರಚನೆಗಳ ತರತರದ ವಿದ್ಯಾವಿನೋದದಿಂ (ಕೈವಲ್ಯ. ೩೩-೦೯). **ಮೆಱೆಹು :** ೨. ಶೋಭಿಸುವಂಥದು : ಬರೆದೋಲೆಯಚ್ಚುದೆ ಸಖಿನನಟ್ಟಿದೆನದು ಮೆಱೆಹಾದುದಿಲ್ಲೆಂದು ನೊಂದ (ಶಬರ. ೯೯-೩೭).

[ಮೆಱೆ³ + – ಹು( < – ವು)]

**ನೆಱೆ³,** ಮೆರೆ (ಕ್ರಿ). ೧. ಹೊಳೆ ; ಪ್ರಕಾಶಿಸು : ಅಖಿಳರಾಯರ ಮೌಳಿ ಮಾಣಿಕ್ಯಕಮಣಿಮಯೂಖನಿವಾಳಿಯಲಿ ನೆಱೆ³ ಮೆಱೆ³ವುದಾತನ ಪಾದಪದ್ಮಯುಗ (ಕುವ್ಯಾ.ಪ. ೦-೨೦) : ಮಿಗೆ ಹುರುಡಿಸುತ ಪೂರ್ವದಿಶಾನಿತಂಬಿನಿ ಸಿತಕೋಪದ ಕಿಡಿಯನುಗುಳಿದಳೆನಲು ರವಿ ಮೆಱೆ³ದ (ಕುವ್ಯಾ.ದ್ರೋ. ೨-೦೩). ೨.ಎದ್ದು ತೋರು : ವ್ಯಕ್ತವಾಗು ; ಸ್ಪಷ್ಟವಾಗಿ ಕಾಣಿಸಿಕೊಳ್ಳು : ಕುಱಿತಂತೆ ಪೇೞ್ವ ಪದದೊಳ್ ಮೆಱೆಯದೊಡೆಲ್ಲಂ ವಿವಕ್ಷಿತಾರ್ಥಮಶೇಷಂ (ಕವಿರಾ. ೦-೧೦೦) ; ನಿನ್ನಿಂದ ತನ್ನಯ ಕೀರ್ತಿ ಮೆಱೆ³ವುದು ಮೂಱು ಲೋಕದಲಿ (ಕುವ್ಯಾ.ದ್ರೋ. ೯-೫೦). ೩. ಒಪ್ಪು ; ಶೋಭಿಸು : ತಮ್ಮಿಯ್ವರುಮೊಡನೆ ಮೆಱೆದು ಪರಮಾನುರಾಗದಿಂ ಬಂದು ಪೊಕ್ಕರಂದರಮನೆಯಂ (ಶಂಶಖಾ. ೩-೨೩): ಇಂತೀ ಐವತ್ತೆರಡು ವಿಧದಲ್ಲಿ ನಿಪುಣನಾಗಿ ಮೆಱೆ³ವ ನಮ್ಮ ಬಸವಣ್ಣನು (ಪಾಷಾದೇ. ಬ. ೬೫-೨೦೬); ಜಯಸಿರಿಯ್ಯಿದೆತನ ನಿನ್ನಿಂದ ಮೆಱೆವುದು (ಕುವ್ಯಾ.ದ್ರೋ. ೪-೪೪) ; ಪರಮತೇಜೋಮಯನು ಮೆಱೆ³ದನು ಪಂಚವಕ್ತ್ರದಲಿ (ಕೊಲರಾ. ೦-೨-೨). ೪. ಪ್ರಸಿದ್ಧವಾಗು : ಪ್ರಖ್ಯಾತವಾಗು : ತಾನಿಱಿವಂ ಪೆಱರ್ಗಿಱಿವಂ ತನಗಿಱಿವಂ ಮೇಣ್ ಮೆಱೆ³ವನೀವನಿಱಿವ ಬೆಡಂಗಂ (ಗದಾಯು. ೦-೨೯): ಬಾಗೆವಾಡಿಯೊಳಗೆ . . . ಕಮ್ಮೆಕುಲದಿಂದೆ ಮೆಱೆ³ದಿರ್ಪ ವಿಪ್ರನಿರ್ಪಂ (ಬಸರ. ೦-೯೮): ವರಮಹಾಭಾರತವಿದೊಂದೇ . . . ಪರಮಶ್ರುತಿಯೆಂದೆನಿಸಿ ಮೆಱೆ³ವುದಿರೇಳು ಲೋಕದಲಿ (ಸಂಪಶ. ೨೦೩). ೫. ತೋರಿಸು: ಪ್ರದರ್ಶಿಸು : "ಪೆಱೆ³ ಪಿಡಂಬೇ" (ಶಮಣ): ಆರಸಂ ತನ್ನ ಬಿನ್ನಣಮಂ ನೆರೆದ ನೆರವಿಗೆ ಮೆಱೆ³ಯಲ್ವೇಡಿ ಗೆಂಟಱಿಂ ಚಕ್ರದಿಂ ನಾಲ್ಕುಕಾಲುಮ ನೊಮೊಣದಲೆ ಪಱಿಯಿಟ್ಟೊಡೆ (ವಡ್ಡಾರಾ. ೧೨೦-೦೬) ; ಮಣಿಕನಕಂ ವಸ್ತ್ರವಿಭೂಷಣಾಂಬರಂ ಕೊಟ್ಟು ಪೆಂಡಿರೊಲ್ವರೆ ಗಂಡರ್ ಗುಣಮನೆ ಮೆಱೆ³ವುದೆ (ಗದಾಯು. ೨-೩) ; ನೀಮ್ಮೆಱೆ³ವುದು ನಿನ್ನ ಭಕ್ತಿಯಂ ಶಕ್ತಿಯುಮಂ (ಸುಕುಮಾ. ೦೨-೪); ಭಕ್ತಾಧೀನ ನೀನೆಂಬ ಬಿರುದು ಮೆಱೆ³ವುದ್ಯೋಯ (ಕೊರರಾ. ೦-೬-೬೦). ೬. ಅಲಂಕರಿಸು; ಸಿಂಗರಿಸು : ಸೂಳೆಯಂತೆ ಚೆನ್ನಂ ಮೆಱೆ³ಯುದೆ ಬಾಲಕನಂತೆ ಪೊಲ್ಲಮಂ ಪಿಡಿಯದೆ (ರಘೂಪ್ತ. ೩-೯೯); ಬಲಗೈಯೊಳೊಪ್ಪಿರೆ ವನಜವೆಡಗೆಯ್ಯ ಮೆಱೆದಿರೆ ಮಾತುಳಂಗಫಲ (ಶಾಸ್ತ್ರಾ. ೦-೯). ೭. ಅಹಂಕರಿಸು: ಬೀಗು : ಪೆಱರಂ ನುಡಿಯದೆ ತನಗೊಂದಱಿತಮೆನಲ್ ತನ್ನ ಮೊಗದೊಳೊಂದಕ್ಕರಮಂ ಪೊಱಮಡಿ ಸಲೆಱಿಯದಱಿತಮನಱಿಯದರೊಳ್ ಮೆಱೆ³ವ ಸಾಸಿಗಂಗಿದಿರುಂಟೇ (ಮಲ್ಲಿಕೃ. ೦-೩೩); ಮೆಱೆದಿದಿರಾಗಿ ತಾಗಿದ ಗಜಾಸುರನಂ ಪಿಡಿದೆತ್ತಿ ಚಮ್ಮ ಮಂ ಸೆಱಿಸೆಱಿಸಱಿನೆ ಸೀಳ್ದ (ಎಕ. XVI. ಹಳ್ಳಿಪಾ. ೭೦-೨೩; 1235). **ಮೆರೆ:** ೧. ಕಗ್ಗತ್ತಲೆಯ ರಾತ್ರಿ ನಕ್ಷತ್ರಮಾಲೆಯಿಂ ಮೆರೆವಂತೆ . . .ಮೆರೆದಳಾ ಪಾರ್ಥವಕುಮಾರಿ (ಚಿತ್ರಾಂಗ. ೦೯-೫೦೦). ೩. ಪುಷ್ಪೋಪಹಾರದಿಂ ಮೆರೆವ ಮಂಗಲಚಂದ್ರಮಾಳಿಗೆ ಮಣಿದು (ಚಿತ್ರಾಂಗ. ೫೦-೧೯೭೭). ೪. ಆ ತರುಣಿಯ ನಾಣಂ ಮದನಂ ನೆರೆ ಮರೆಯೆನಿಸಿಲ್ಲಮಂತೆ ಮೆರೆದನು ಮಲ್ಲಂ (ಶಾಕುಂತ. ೨೩-೪೭). ೫. ದಿವ್ಯತರಶಕ್ತಿಯಂ ಮೆರೆದೆಮ್ಮ ಸಲಹಿದಯ್ಯ (ಶಿವಸೋ. ೦೬-೪): ಮುಕ್ತಾಯಕ್ಕ . . . ದೊಡ್ಡತನವನ್ನೇ ಮೆರೆದಿದ್ದಾಳೆ (ಕವಿಸ್ವಕು. ೦೦೩). ೭. ಮೆರೆಯದೆಯೆ ಹಡೆದ ಮಾತೆಯ ಸೇವೆಯನು ಮಾಡಿ ಮೌನದಿಂ ಮಡಿದವನು ಧನ್ಯ ಸತ್ಯಾಗ್ರಹಿ! (ಶಾಂತಪ. ೨೦-೦೯); ನಾಳೆ ಆ ಸೀರೆಯ ನೀನುಟ್ಟು ಮೆರೆದಂತೆ ಕನಸನು ಕಾಣೆನ್ನ ಚನ್ನ (ಇಂಚಾಪ. ೯೦-೪೩).

[ದೇ.॥ ತುಳು. ಮೆರೆ; ತೆಲು. ಮೆಱಚು, ಮೆಱಯು, ಮೆಱುಂಗು; ಕೋಲಾ. ನಾಯ್ಕಿ. ಮೆರ್ಪ್]

**ಮೆಱೆ³ಕೋಲು** ' ಮೆಱೆ³ಗೋಲು ' ನೋ.

**ಮೆಱೆ³ಗಾಱ** (ನಾ). ಕಾಳಗದಲ್ಲಿ ವಿಜೃಂಭಿಸುವವನು ; ವೀರ : ವಾಮಶಕ್ತಿದೇವರ ಬಂದಿಯ ಹಿಡಿದಲ್ಲಿ ತೊಣವತ್ತಿಯ ಮೆಱೆ³ಗಾಱ ಬಾಚಿಯ ನಾಯಕ ಕಾದಿ ಸ್ವರ್ಗಸ್ಥನಾದಲ್ಲಿ (ಎಕ. VII. ಶಿಕಾರಿ. ೦೩೯-೪: 1160).

[ಮೆಱೆ³ + – ಕಾಱ]

**ಮೆಱೆ³ಗೋಲು,** ಮೆರೆಕೋಲು, ಮೆರೆಗೋಲು, ಮೆಱೆ³ಕೋಲು (ನಾ). ಹೊಲಗದ್ದೆಗಳಲ್ಲಿ ಚೆಲ್ಲಾಡಿದ ಹುಲ್ಲನ್ನು ಒಟ್ಟುಗೂಡಿಸಲು ಬಳಸುವ ಕೊಕ್ಕೆಕೋಲು : "ಉತ್ಕಲಿಯೆನಲು ಮೆಱೆ³ಗೋಲು" (ಮಂಗರಾ. ೦೦೯-೩). **ಮೆರೆಕೋಲು :** ಮೆರೆಕೋಲು ಹಿಡಿದು, ಕಣದಲ್ಲಿ ಹರಡಿರುವ ಹುಲ್ಲು ಸೊಪ್ಪನ್ನು ಕೆದರುತ್ತಿದ್ದರೆ ಅವನ ಮನಸ್ಸೂ ಕೆದರಿಕೊಳ್ಳುವುದು (ಶಳುಮ. ೦೯೦). **ಮೆರೆಗೋಲು :** ಆತ ಮೆರೆಗೋಲಿನಿಂದ ಹುಲ್ಲನ್ನು ಒಟ್ಟುಗೂಡಿಸಿದನು (ರೂಢಿ). **ಮೆಱೆ³ಕೋಲು :** ವೃಷಭನವಯವದಿಂ ನೋಡಿಕೊಣ್ಡು ಕಡುಮೂರ್ಖತೆಯಿಂ ಮೆಱೆ³ಕೋಲ ಕಟಿದುಕೊಳ್ಳುತ ಬಱಿಸಿಡಿಲ್ ಎಱಗುವಂತೆ ಬನ್ದು ವಾಮನಭಟ್ಟಂ ಕಱುಪಿನ್ನಮೆಯ್ದು ಪೊಯ್ಯಲು (ವ್ಯಾಅಂ. ೦೯೨೭. ೩೪-೨; 11ನೆಯ ಶತ).

[ಮೆಱೆ³, ( ಪ್ರ← ಕೋತ. ಮಾರ್ = ಕಬ್ಬಿಣದ ಕೊಕ್ಕೆಯುಳ್ಳ ಉದ್ದ ಮರದ ಹಿಡಿಕೆಯುಳ್ಳ ಸಾಧನ) + ಕೋಲು$_1$ (< ಕೋಲ್$_1$)]

**ಮೆಱೆ³ಯಿಸು,** ಮೆರಸು, ಮೆರೆಯಿಸು, ಮೆರೆಸು, ಮೆಱಸು, ಮೆಱೆ³ಸು (ಕ್ರಿ). ೧. (ವಿಜೃಂಭಣೆಯಿಂದ) ಮಾಡಿಸಿಕೊಳ್ಳು ; ನೆರವೇರಿಸಿಕೊಳ್ಳು : ಬಿಜ್ಜರಾಜನೀಂದೆನಗೆ ರಾಜರಾಜಾಭಿಷೇಕಮಂ ಮೆಱೆ³ಯಿಸುವೆಂ (ಜಗಂ. ೬-೭೬ ಪ). **ಮೆರಸು :** ೨. ಪ್ರಕಾಶಗೊಳಿಸು; ಹೊಳೆಯುವಂತೆ ಮಾಡು : ಕಣ್ಣಿಗಳವಡುವೆಲ್ಲ ವಸ್ತುಗಳು ಮೆರಸುವೋಲು ತಮ್ಮ ಹೊಳೆಸುವ ರವಿಯ ತೇಜದಲೆಯ ಗವಿಯುಳಿದ ಹೊನಲಿನಂತಿವರೆನಗೆ ಹೊಳೆಸುವರು ಗುಡಿಯೆಲ್ಲೆಯನು ಕಳೆದ ದೇವಕಳೆಯ (ಮಲೆದೇ. ೪೪-೩). **ಮೆರೆಯಿಸು:** ೩. ಪ್ರದರ್ಶಿಸು ; ತೋರಿಸು : ನೀನು ಭುಜಬಲವನ್ನೂ ಚಾತುರ್ಯವನ್ನೂ ಮೆರೆಯಿಸುತ ಭೀಮಸೇನನೊಡನೆ ಮಹಾಯುದ್ಧಕ್ಕೆ ಉದ್ಯೋಗಿಸು

5 10 15 20 25 30 35 40 45

(ಶೃಂಗಾ. ೭೭). **ಮೆರೆಸು** : ೪. ಪ್ರಕಟಗೊಳಿಸು; ವ್ಯಕ್ತವಾಗುವಂತೆ ಮಾಡು : ವರುಷ ಮಾಸಗಳುರುಳಿ ಉರಿಸಿ ಕಾಯಕ ಬತ್ತಿ ಮೆರೆಸುದಕೆ ಬಂತು ಚಳಿಗಾಲ (ಕನ್ನಡಾ. ೨೦೪). ೫. ಮೆರವಣಿಗೆ ಮಾಡು : ಅಣ್ವಸ್ತ್ರಗಳ ಹಿಡಿದು ಹೊರಟವರ ತಲೆಯ ಸುಣ್ಣಗೆ ಮಾಡಿ . . . ವಿಶ್ವಸಂಸ್ಥೆಯ ಮುಂದೆ ಮೆರೆಸೋಣ (ಶಿಲಾಪು. ೦೭-೯). ೬. ಶೋಭಿಸುವಂತೆ ಮಾಡು; ರಾರಾಜಿಸುವಂತೆ ಮಾಡು : ಇನ್ನು ಉಷಸ್ . . . ಸುಮಾರು ೨೦ ಸೂಕ್ತಗಳಲ್ಲಿ ಅವಳನ್ನು ಮೆರೆಸಿದ್ದಾರೆ (ಶಾರದ. ೨೨). **ಮೆಱಸು** : ೫. ವಿಹಾರ್ಯರ್— ಎಲ್ಲಾ ಎಡೆಯೊಳಂ ಮೆಱಸಿ, ಆರೋಹಯೇತ್— ಧ್ವಜದಂಡದ ಮೇಲೆ ಏರಿಸುವುದು (ಶ್ರೀಶಾ. ೧೭-೯). **ಮೆಱೆಸು**: ೩. ಮಾಣಿಕವೆಸದ ಹೊನ್ನಂವಣದೊಳು ಕಂತುರಾಣಿಯು ಮುಚ್ಚಿ ಬೈತಿಟ್ಟು ಓಣಿಯೊಳ್ ಮೆಱೆಸುತ ಕರಕೊಂಡು ಬಂದಾಗ ಕಾಣಿಸಿದರು ಶಂಬರಗೆ (ಮೋಹತ. ೦೦-೧೦).
೭. ಆಚರಿಸುವಂತೆ ಮಾಡು : ಮತ್ತಾನುಂ ಬ್ರತ ಮೆಱೆಸಿ ವೃತ್ತಿಗರಂ ಕಿಡಿಸಲಾಗದು (ಶಾಇ. IX-i, ೦೦೭-೩೯; 1055). [ಮೆಱೆ³ + — ಇಸು₃]

**ಮೆಱೆವಣಿ** ' ಮೆಱವಣಿ ' ನೋ.

**ಮೆಱೆಸು** ' ಮೆಱೆಯಿಸು ' ನೋ.

**ಮೆಱೆಹು** ' ಮೆಱಹು ' ನೋ

**ಮೆಟ್**, ಮೆಳ್ (ನಾ). ೧. ಮರುಳು; ಮೋಹ : 'ಮೆಟ್ಟಿಡಿಸು' ಪರಾ. ೨. ತಬ್ಬಿಬ್ಬು : ದಿಗ್ಭ್ರಮೆ ; ಭ್ರಾಂತಿ : ' ಮೆಟ್ಟಿಡು₁ ' ಪರಾ. ೩. ಮೋಸ; ವಂಚನೆ : 'ಮೆಟ್ಟಿಡಿಸು' ಪರಾ. **ಮೆಳ್**: ೨. 'ಮೆಳ್ಪಡೆ' ಪರಾ. P 'ಮೆಟ್ಟಿಡಿಸು', 'ಮೆಟ್ಟಿಡು' ಮುಂತಾದ ಶಬ್ದಗಳನ್ನು ವ್ಯಾಪಕವಾಗಿ ಕವಿಗಳು ಬಳಸಿದ್ದಾರೆ. ಇಲ್ಲಿ 'ಪಡಿಸು', 'ಪಡು' ಮುಂತಾದುವು ಸೇರಿರುವುದರಿಂದ ಇವುಗಳ ಮೂಲಶಬ್ದ 'ಮೆಟ್' ಇದ್ದಿರಬೇಕೆಂದು ಊಹಿಸಲಾಗಿದೆ. ಇದಕ್ಕೆ ಪ್ರತ್ಯೇಕವಾಗಿ ಕಾವ್ಯಪ್ರಯೋಗಗಳು ದೊರಕಿಲ್ಲ.

**ಮೆಟಪಯ್ಯ** (ನಾ). ಒಬ್ಬಾತನ ಹೆಸರು : ಮೆಟಪಯ್ಯ (ಎಕ. II, ೪೩೨; 1000). [ ? + ಅಯ್ಯ₆₁ ]

**ಮೆಟಸು**, ಮೆಣಸು, ಮೆಳಸು, ವೆಳಸು (ನಾ). ೧. ಒಂದು ಬಗೆಯ ಬಳ್ಳಿ ಮತ್ತು ಸಂಭಾರಕ್ಕೆ ಉಪಯೋಗವಾಗುವ, ಕಾರವಾದ ಅದರ ಕಪ್ಪು ಕಾಳು : ಶಬ್ದಮೊಂದವಿರ್ದೊಡೆ ಮುತ್ತುಂ ಮೆಟಸುಂ ಕೋದಂ ತಕ್ಕುಂ (ಶಬ್ದ. ೨-೩) ; ಬೂದಿಜೆಡೆ . . . ಶರಾಸನಂ ಕಪಚಮೆಂತಾದುದೊ ಮುತ್ತುಂ ಮೆಟಸುಂ ಕೋದಂತುಟೆ ನಿನ್ನ ಪಾಂಗೆಂತು ಗಡಾ (ಶಂಕಥಾ. ೭-೯೨): ಸುಂಟಿ ಪಿಪ್ಪಲಿ ಮೆಟಸೆಂಬೀ ಮೂಱನಾತ್ಮಜಲದಿಂ . . . ನಸ್ಯಂಗೆಯ್ದಿಂ (ದಶಕು. ೯-೧೦೦). **ಮೆಣಸು** : ೧. ಮೆಣಸು ಸುಂಟಿ ಪೊಸ ಸುಣ್ಣಮಿಮ್ಮಂ ಚಪ್ಪರಿಸಿ (ಧರ್ಮಾಮೃ. ೭-೩೦): ಮೆಣಸು ಹುಳಿತಡೆ ಜೋಳದಿಂ ಕುಂದೆ (ಹಕಾ. ೦೧-೦೯) ; ಉಪ್ಪು ಮೆಣಸುಗಳ ಹಿರಿಯ ಮೂಗಿನ ಹೋರು ತುಂಬಲು (ಕೌಶಿಕಾ. ೨೪-೩) : ಮೆಣಸಿನ ಬಳ್ಳಿಯು ಎಲೆಯು ಬಳ್ಳಿಯು ಹಾಗೆ ಇರುತ್ತದೆ (ಕೃಷಿ. ೦೯೩). ೨. ಒಂದು ಬಗೆಯ ಗಿಡ ಮತ್ತು ಹಸಿಯಾಗಿಯೂ ಒಣಗಿಸಿಯೂ ಅಡುಗೆಗೆ ಬಳಸುವ, ಕಾರವಾಗಿರುವ ಅದರ ಕಾಯಿ : ನೀರುಳ್ಳಿ, ಬೇವುಸೊಪ್ಪು ಮತ್ತು ಮೆಣಸನ್ನು ಸಣ್ಣದಾಗಿ ಕೊಚ್ಚಿ. ಅನಂತರ ಎಲ್ಲ ಪದಾರ್ಥಗಳನ್ನು ಮಿಶ್ರ ಮಾಡಿ ಸ್ವಲ್ಪ ನೀರು ಹಾಕಿ ಕಲಸುವುದು (ಅಡುಗೆ. ೦೦೦). **ಮೆಳಸು** : ೧. ಮೆಳಸಿವು ಪೆರ್ಬ್ಬೆಳಸಡವಿಯು ಬೆಳಸು ಪಿರಿದು (ಎಕ. VIII, ಸಾಗರ. ೦೦೯-೪೬: 1042) ; ಕಾರಡಕೆ ಮೆಳಸಿನ ಪೇಱಂಗೆ ಅರೆಪೇಸೆ (ಶಾಇ. IX-i. ೨೨೩-೪೪: 1127): ಕಬ್ಬು ಜೇನು ಮೆಳಸು ಎಲ್ಲೆಲ್ಲು ಎಲ್ಲವೂ ತಿರುಳಿಟ್ಟು ಹೊರವಾಗುತಿರಲಿ (ಅಪಾತಂ ೨೪-೯). **ವೆಳಸು** : ೧. ವೆಳಸಿನ ಪೇಱಂಗೆ ಪದಿನ (ನಾ) ಱುಪಲಂ (ಎಇ. IX, ೨೨-೯; 800).

ಮೆಣಸಿನಪುಡಿ, ಮೆಣಸಿನಹುಡಿ=೧. ಒಣಗಿದ ಮೆಣಸಿನಕಾಯನ್ನು ಕುಟ್ಟಿ ಮಾಡಿದ ಪುಡಿ : ಪದಾರ್ಥಗಳು . . . ೬ ಚಮಚ ಮೆಣಸಿನ ಪುಡಿ; ೧ ಚಮಚ ಸಾಸಿವೆ (ಅಡುಗೆ. ೦೦೭); ನೆಲ್ಲಿಕಾಯಿ ಮೆತ್ತಗಾದಾಗ . . . ಸಾಸಿವೆ ಹುಡಿ ಮತ್ತು ಮೆಣಸಿನ ಹುಡಿಯನ್ನು ಸೇರಿಸುವುದು (ಅಡುಗೆ. ೦೦೭). ೨. ಒಣಮೆಣಸಿನ ಕಾಯಿ, ಧನಿಯ, ಕರಿಮೆಣಸು, ಜೀರಿಗೆ ಮುಂತಾದುವನ್ನು ಹುರಿದು ಮಾಡಿದ ಪುಡಿ : ಸಾರಿನ ಪುಡಿಯನ್ನು ಮೆಣಸಿನ ಪುಡಿಯೆಂದೂ ಹೇಳುತ್ತಾರೆ (ರೂಢಿ). **ಮೆಟಸಿನಕರೆ**, ಮೆಣಸಿನಕರೆ = ಕರಿಮೆಣಸಿನ ಗೊಂಚಲು.—ಗುತ್ತಿ: ಎಳಮಾವಿನ ಮಿಡಿ ಮಾಗುಳಿ ಮೆಟಸಿನ ಕರೆ . . . ಈಳೆಯ ಗೊಲೆಯಿಂದಳವಟ್ಟಿರೆ ಲಾವಣಕಂಗಳನಿಕ್ಕಿದರಾಗಳ್ (ಸುಕುಮಾ. ೦೦-೩೦); ನಳನಳಿಸುವ ಮೆಣಸಿನ ಕರೆ . . . ಕಱಿವೆಯ ಕಾಯ್ಗಳ್ ಬೇಱೆವೇಱೆ ಸವಿವಡೆದಿರವೇ (ನೇಮಿ. ೪೭೩).
[ದೇ.॥ ತಮಿ. ಮಿಳಕು; ಮಲ. ಮಿಳಕು, ಮುಳಕು; ತುಳು. ಮೆಣಂಚಿ, ಮಣ್ಚ ;ಕೊಡ. ಮಳು./ಸಂ. ಮರಿಚ]

**ಮೆಟುವಿಡು** (ನಾ). ಒಂದು ಸ್ಥಳದ ಹೆಸರು; P ಈಗಿನ ಧಾರವಾಡ ಜಿಲ್ಲೆಯ ಮೇವುಂಡಿ : ಸುಖದಿಂ ನಿಜರಾಜರಾಜಧಾನಿ ಮೆಟುವಿಡುನೊಳಿನ್ದ್ರವಿಮಾನಸಮಾನಮಪ್ಪ [ದೇಗು]ಲಮಂ ಮಾಡಿ (ಶಾಇ. XI-i. ೨೨-೮; 897). [ ? + < ಬೀಡು ]

**ಮೆಟ್ಕಿಸು** (ಕ್ರಿ). ಗಂಧ ಮೊದಲಾದುವನ್ನು ಬಳಿ; ಲೇಪಿಸು; ಹಚ್ಚು: ಕಲ್ಲೊತ್ತಿಗರ್ಕದುಗ್ಧವ ಮೆಳ್ಳ[ಟ್ಕಿ]ಸಿಯೊಲೆಗಲ್ಲ ಸೇಕಗೆಯ್ಯಲ್ ಮಾಣ್ಗುಂ (ರೋಗೋಪ. ೯-೦೭೩). [ಮೆಟ್ಕು + — ಇಸು₃]

**ಮೆಟ್ಕು**, ಮೇಕು₁ (ಕ್ರಿ). ೧. (ಗಂಧ ಮೊದಲಾದುವನ್ನು) ಬಳಿ ; ಹಚ್ಚು; ಲೇಪಿಸು : ' ಮೆಟ್ಕಿಸು ' ಪರಾ. ೨. (ಆಲಂ) ನಾಶಗೊಳ್ಳು ; ನಿರ್ನಾಮವಾಗು : ಇಂದ್ರಂ ತನ್ನ ಬಲಮೆಲ್ಲಮಟ್ಟು ಮೆಟ್ಕಿದಂತಾದುದೆಂಬುದಂ ಕೇಳ್ದು (ಶಂಕಥಾ. ೩-೦೦೦ ವ) : "ಅಟ್ಟು ಮೆಟ್ಕಿದಂತಾದುದು—ನಾಶವಾಗಿ ಸಾರಿಸಿದಂತಾಗಲು" (ಶಂಕಟೀ. ೨೦೨) : ಬಾಂಧವಜನಮುಂ ಪ್ರಿಯಾನುಜಾತ್ಮಜಪ್ರಕರಮುಮಟ್ಟು ಮೆಟ್ಕಿದಂತಾಗೆ ಶೋಕರಸಮುಂ ಕೋಪರಸಮುಮೊಡನೊಡನೊದವಿ ಬಳೆಯೆ . . . ಮಿಳಿರ್ದ ಮಿಳ್ಳಿಗೊಂಡು (ವರ್ಧಮಾ. ೪-೯೦ ವ). **ಮೇಕು₁** : ೩. (ಗಂಧ ಮೊದಲಾದುವನ್ನು) ಬಳಿದುಕೊಳ್ಳು : ಹಚ್ಚಿಕೊಳ್ಳು : ತಲೆವಱಿದು ಟ್ಟುದಂ ಬಿಸುಟು ಮಿಾಯದೆ ಮೇಕದೆ ದಂತಪಂತಿಯಂ ಸುಲಿಯದೆ . . . ಉಪಾಸಕವಾಸದೊಳೇಕಭುಕ್ತಮಂ ಸಲಿಸುವ ಘೋರವೀರತಪಮಾ ತಪಮಾತಪದಿಂದಮಗ್ಗಳಂ (ಸುಕುಮಾ. ೩-೨೯).
[ದೇ.॥ ತಮಿ. ಮಲ. ಮೆಟುಕು; ತೆಲು. ಮೇಂಗು, ಮೇಗು, ಮ್ರೇಗು; ಕೋತ. ಮೆಕ್ = ಸಾರಿಸು; ಕೋಲಾ. ಮೇಗ್ ; ನಾಯ್ಕಿ. ಮೇಘ್]

**ಮೆಟ್ಟಿಡಿತು** (ನಾ). ಮೋಸ : ವಂಚನೆ : ಭೀಮಸೇನಂ ಧರ್ಮಪುತ್ರಂಗೆಂದನುಟ್ಟಿಕ್ಕಿದೊಡೆ ತುಪ್ಪದ ಮೆಟ್ಟಿಡಿತೆಂಬಂತೆ ನಮ್ಮ ಕಮ್ಮನಿರ್ಪರ ವಿದೇಕಾರಣಂ (ಶಂಕಥಾ. ೭-೦೭ ವ). [ < ಮೆಟ್ಟಿಡು₁ ]

**ಮೆಟ್ಟಿಡಿಸು** (ಕ್ರಿ). ೧. ಮರುಳುಮಾಡು : ವಶಪಡಿಸಿಕೊಳ್ಳು : ಒಡಮೆಂಚುನೀಯದಿತ್ತೆನೆನಿಸಲ್ ಕಱಿದಂ ಪಿರಿದಾಗೆ ಕೊಟ್ಟು ಮೆಟ್ಟಿಡಿಸಲ್ (ಕಾಂತಿಶ. ೮-೬೦); ಆತನಂ ಮದನರಾಗೋಪೇತನಪ್ಪಂತು ಮೆಟ್ಟಿಡಿಸು (ನೇಮಿಶ. ೪-೪೪ ವ). ೨. ಮೋಸಮಾಡು ; ವಂಚಿಸು : ಪಾಸಂಗೆಯಂ ಪೊರಳ್ಚಿ ಮುನ್ನಂ ನೆತ್ತಮನಱಿಯನಂತವರ ದಾಯಮನಾಡೆ ಮಡಿಮಡಿಗು ಱುವುದು ಮೊಂದು ಪತ್ತೆಂಟು ಪಲಗೆಯಂ ಮೆಟ್ಟಿಡಿಸಲೆಂದು ಸೋಲ್ತು (ಶಂಕಥಾ. ೩-೭೦ ವ). [ಮೆಟ್ + ಪಡಿಸು]

**ಮೆಟ್ಟಿಡು₁**, ಮೆಳ್ಪಡು (ಕ್ರಿ). ೧. ಮರುಳಾಗು ; ಮೋಹಗೊಳ್ಳು : ತಡೆಯದೆ ನಿನಗಪ್ಪುದನೀಗಡೆ ಬಗೆ ಮೆಟ್ಟಿಡದಿರ್ (ಆದಿಪು. ೩-೭೨); ಇಂದ್ರ

ಜಾಲದ ಸಿರಿಗೇಕೆ ಮೆಟ್ಟಿಡುವಿರಿ (ಗದಾಯು. ೧-೩೩); ನುಡಿಗೆ ಮೆಟ್ಟಿಟ್ಟು ನೋಟಕ್ಕೆ ಬಸವಾಗಿ ಮಡದಿಯೊಡವಟ್ಟಿನೆಂದನೊರ್ವಂ (ಸುಕುಮಾ. ೬-೧೩). ೨. ತಬ್ಬಿಬ್ಬಾಗು ; ದಿಗ್ಭ್ರಮೆಹೊಂದು: ಎಡೆವೆತ್ತೊರ್ಮೆಯೆ ಮುಪ್ಪುಕುತ್ತ್ರದೊಳೊಡಂಬಟ್ಟೊತ್ತೆ ಮತ್ತಲ್ಲಿ ಮೆಟ್ಟಿಡದಾರ್ತಣ್ಮ ತಪಕ್ಕೆ ಪೋಪ ಪದದೊಳ್ (ಆದಿಪು. ೨-೩೮). **ಮೆಳ್ಪಡು :** ೩. ಮಿತಿಮೀರು; ವಿಕೋಪಕ್ಕೆ ಹೋಗು : ಮೆಳ್ಪಟ್ಟು ಕುಳಿರಿರುಳ್ ಬಾಳ್ಗಳಂ ಜುಜುರ್ತಿದೆ (ಶಾಂತಿಪು. ೬೬-೧೬೨). [ಮೆಟ್$^3$ + ಪಡು$_1$]

**ಮೆಟ್ಟಿಡು$_2$** (ನಾ). ೧. ಮೋಹ ; ಮೈಮರೆವು : ತೊಡರ್ದೀ ಪುತ್ರಕಲತ್ರಮೋಹದೊಳಿದೇಕಟ್ಟಿರ್ದಪೈ ನಿನ್ನ ಮೆಟ್ಟಿಡಿದೇ ಕಾರಣಂ (ಆದಿಪು. ೦-೬೯). ೨. ಭ್ರಾಂತಿ; ಭ್ರಮೆ : ಎಮಗಾರ್ ಶರಣೆಲ್ಲಿಗೆ ಪೋಪೆವೆಂದು ಮೆಟ್ಟಿಡಿನಸಿಪತ್ರನಂದನಮುನೊಯ್ಯನೆ ಸಾರ್ವುದುಂ (ಆದಿಪು. ೫-೮೮) ; ನೋಟ್ಟಂಗೆ ಮೆಟ್ಟಿಡಂ ಪಡೆದು ತೋಜುವಸಿಪತ್ರವನಮಂ . . . ಎಯ್ದೆವಂದು ಸಾರ್ವುದುಂ (ವರ್ಧಮಾ. ೫-೩೬ ವ). [ < ಮೆಟ್ಟಿಡು$_1$ ]

**ಮೆಟ್ಟಡೆ,** ಮೆಳ್ಪಡೆ (ನಾ). ಭ್ರಮೆ ; ಭ್ರಾಂತಿ : "ಮೆಟ್ಟಿಡೆಯೆಂಬುದು ಮರುಳ್ತನಮಿರ್ಪುದು" (ಕರ್ಣಾಶ. ೩೬). **ಮೆಳ್ಪಡೆ :** ಮೊಡಮಿಯೊಳಮಂ ನೀಂ ಪೆಸರ್ವಿಡಿವರೆ ಕೇಳ್ಕುನಿಯೆ ನಿನಗೆ ಮೆಳ್ಪಡೆಯುಂಟೇ (ಶೀರಬ. ೦೦-೦೬). [< ಮೆಟ್ಟಿಡು$_1$]

**ಮೇ$_1$,** ಮೆಯ್$_1$, ಮೆಯ್ಯು, ಮೇಯು (ಕ್ರಿ). ಮೇದ$_1$(ಭೂತಕೃ). ಮೆಂದು, ಮೇದು$_2$ (ಭೂತನ್ಯೂ). ೧. ದನ ಮುಂತಾದ ಪ್ರಾಣಿಗಳು ಹುಲ್ಲು ಮುಂತಾದ ಆಹಾರಪದಾರ್ಥಗಳನ್ನು ತಿನ್ನು,— ಸೇವಿಸು : "ಮೇ–ತಿರ್ಯಕ್ಖಾದನೇ (ಮೇಯು)" (ಕವಾಧಾ ) ; ಬೇಲಿ ಹೊಲನೆಲ್ಲಂ ಮೇದೊಡಂ . . . ಹರ ಕೊಲ್ಲಲ್ ಪರಕಾಯ್ವನೇ (ಸೋಮೇಶ. ೨೯) ; ಅನಿತುಂ ಗಿರಿಗಳು ಖಾಂಡವವನಮಂ ಹಸಿವ್ರೋಗೆ ಮೇದು ಮೆಲೊಕ್ಕುತ್ತುತಿರಲ್ ವನಪಾಲಕನೀಕ್ಷಿಸಿ . . . ಪುಯ್ಯಲನಿಟ್ಟಂ (ಧರ್ಮಶ. ೩-೩೩) ; ಗೋವ್ಗಳೆಲ್ಲ . . . ದಟ್ಟೈಸಿದಾ ಸಸಿಗಳೆಡೆಯೊಳು ಮುಟ್ಟಿ ಮೇದವು ಹುಲ್ಲನು (ಗೋಹಾಡು. ೯-೪೪). **ಮೆಯ್$_1$:** ೧. ಹಸಲೆಗಳೊಳಸೆದು ಮೆಯ್ದ್ವಳಕಟುಗಳ್ ಕಡೆವಾಯಿನೊಜಿವ ನೀರ್ವೆರಸುಗುತ್ತೆ ಪೋದ ಹರಿಣಹರಿಣೀವೃಂದದ ಮಂದವಜ್ಜೆಗಳುಮಂ ಕಂಡು (ಸುಕುಮಾ. ೦೪-೨೯ ವ) ; ಹಿಂಗದೆಡೆಗೆಡೆಗಾಕಳುಗಳುದರಂಗಳಾಗಳು ತುಂಬ ಮೆಯ್ದುದಕಂಗಳಂ ಕುಡಿವುತ್ತೆ (ಬಸವಪು. ೬೦-೩೪) ; ಅಲಸದೆ ಪರಿದುಂ ಮೆಯ್ದುಂ . . . ತುರಗಂ (ಅಶ್ವಶಾ. ೫-೨೬). **ಮೆಯ್ಯು :** ೧. ದುರ್ಗದ ದನಗಳು ತನ್ನ ಸೀಮೆಯ ಸರಹದ್ದಿನಲ್ಲಿ ಬಂದು ಮೆಯ್ಯುತಾ ಇವೆ (ಶತ್ರುಶಾ. ೬೨). ೨. (ಅಲಂ) ಕಷ್ಟಪಡದೆ ಹೊಟ್ಟೆ ತುಂಬಿಸಿಕೊಳ್ಳು : ಬಸಗೋಂಡನ ಹೆಂಡತಿ, ಬಸವಂತಿ ಕೂತು ಮೆಯ್ಯಲಿಕ್ಕೆ ಬಂದವಳೆಂದು ಚುಚ್ಚುತ್ತಿದ್ದಳು (ದೀಶಹ. II, ೦೪೧). **ಮೇಯು :** ೧. ಮೃಗಸಂತತಿ ಗಹ್ವರದಿಂ ಪೊಱಮಟ್ಟು ಮೇಯುತಿವೆ ಮೊಳೆವುಲ್ಲಂ (ಗಿರಿಜಾ. ೯-೬೩) ; ಆ ಕುದುರೆಯು ಒಂದು ಹುಲ್ಲುಗದ್ದೆಯಲ್ಲಿ ಮೇಯುತ್ತ ನಿಂತಿರುವುದು ಅವನ ದೃಷ್ಟಿಗೆ ಬಿತ್ತು (ಮುಂಬಯಿ. ೪-೬೯) ; ಹೊಲದಲ್ಲಿ ಚೆನ್ನಾಗಿ ಮೇದು ಬಂದ ಎತ್ತುಗಳು ಆನಂದದಿಂದ ಬಾಲವನ್ನಾಡಿಸುತ್ತಾ, ತಮ್ಮ ಮೈಮೇಲೆ ಕುಳಿತ ನೊಣವನ್ನೋಡಿಸುವ ಕಾರ್ಯದಲ್ಲಿ ತೊಡಗಿದ್ದುವು (ಜತೆಸ. ೧). ೩. ನಾಶಮಾಡು : ಧ್ವಂಸಗೊಳಿಸು : ದೇಶದುದ್ಧಾರಕ್ಕೆ ದೇಹವನು ತೇಯುಬಲ್ಲ ; ಮಂದಿ ಹೊಲಗಳ ನುಗ್ಗಿ ಮೇಯುಬಲ್ಲ (ನರಿಮು. ೨೯-೦). ೪. ಆವರಿಸು : ಆಕ್ರಮಿಸು : ಚಿಮಣಾಳ ಆಸಕ್ತಿ . . . ಅವನ ಹೃದಯವನ್ನೇ ಮೇಯ ಹತ್ತಿತು (ಗ್ರಾಮಾಯ. ೩೬೮).

[ದೇ.॥ ತಮಿ. ಮಲ. ಕೊಡ. ಕೋತ. ಪರ್ಜಿ. ಮೇಯ್ ; ತುಳು. ಮೇಯು, ಮೇಪು ; ತೆಲು. ಮೇಯು ; ನಾಯ್ಕಿ. ಮಿಾಯ್ ; ಕುವಿ. ಮೆಯುಲಿ ; ಕುರುಖ್, ಮೆನ್ನಾ ; ಮಲ್ತೊ. ಮಿನೆ]

**ಮೇ$_2$** ' ಮೇಂ ' ನೋ.

**ಮೇ$_3$** (ನಾ). ಕುರಿ, ಮೇಕೆ ಮುಂತಾದುವುಗಳ ಕೂಗನ್ನು ಅನುಕರಿಸುವ ಒಂದು ಶಬ್ದ: ಮಗುವಿನ ಧ್ವನಿಯಂತೆ 'ಮ್ಯೇ' ಎನ್ನುವ ಧ್ವನಿಯೂ ಕೇಳಿಸಿತು . . . ಹುಲಿ ಅವನ ದನವನ್ನು ಕಡಹಿ ಹಿಡಿದಿತ್ತು (ಕಾರೂರ. ಕಥಾಸಾರ. ೬).

**ಮೇಂ,** ಮೇ$_2$ (ಸಪೂರೂ) ' ಮೇಲ್ ' ಎಂಬ ನಾಮಪದಕ್ಕೆ, ಸಮಾಸಪದಗಳಲ್ಲಿ ಬರುವ ಆದೇಶರೂಪ : 'ಮೇಂಗಾಲ್', 'ಮೇಂಗೆಯ್' ಪರಾ. ಮೇ$_2$ : 'ಮೇಗರೆ', 'ಮೇಗಾಲ್' ಪರಾ. [<ಮೇಲ್$_1$]

**ಮೇಂಗಣ್ಣು** (ನಾ). ಹಣೆಯ ಮೇಲುಭಾಗದಲ್ಲಿರುವ ಕಣ್ಣು : ಹಣೆಗಣ್ಣು : ಅಂತ್ಯವರು ವಿಕ್ರಮಶಾಲಿಗಳು . . . ಕೆಂಗಣ್ಣಸಗುತ ನಗನಂದನೆಯ ಕಾಂತನ ಪಂಚಮುಖದ ಮೇಂಗಣ್ಣುರಿಯಿಂತೀಯುಂದಮನನುಕರಿಸಿದು ಪೇಬಂತಿರೆಯುಗ್ರತೆಯಿಂ ಸಂಹರಿಸಿದರಸುಹೃದ್ವಾಹಿನಿಯ (ಜಯಸಾ. ೬-೫೦). [ಮೇಂ (< ಮೇಲ್$_1$) + ಕಣ್ಣು (< ಕಣ್)]

**ಮೇಂಗಯ್** ' ಮೇಂಗೆಯ್ ' ನೋ.

**ಮೇಂಗಾಲ್,** ಮೇಗಾಲ್, ಮೇಗಾಲು (ನಾ). ಕಾಲಿನ ಮೇಲುಭಾಗ : ಕಾಮನ ತಿಳಿಗೊಳವೆನಿಪ ನಿಕಾಮನಖದ್ಯುತಿಜಲಪ್ರವಾಹದೊಳೆಸೆವಾ ವಾಮೆಯ ಮೇಂಗಾಲ್ ಸೊಗಯಿಸುವಾಮೆಯನನುಕರಿಸಿ ಮನಮನಿಟ್ಟುಕೊಳಗೊಳ್ಗುಂ (ಜಗಪಿ. ೦೦-೨೦) ; ಪಡೆದುವೆ ನಮ್ಮುನ್ನತಿಯಂ . . . ಇಂತೀ ಮಡಮುಂ ಬೆರಲ್ಗಳುಂ ಕಿತ್ತಡಿಯುಮೆನುತ್ತುರ್ವಿದಂತೆ ಮೇಂಗಾಲೆಸೆಗುಂ (ಪುಷ್ಪಪು. ೩-೨೯) ; ಅಂಗಯ್, ಅಂಗಾಲ್ ; ಮೇಂಗಯ್, ಮೇಂಗಾಲ್, (ಶಮದ. ೦೬೩ ಪ್ರಯೋ). **ಮೇಗಾಲ್ :** ಕಿಟ್ಟೊಪ್ಪಡೆ ಮೇಗಾಲ್ ಪೆರಲುಂ ಗುಟಂ ಬರಿ ಸೊಸಲ್ ನಿಟ್ಟೆಲ್ವು ಗೋನಾಟ್ ಬೆನ್ . . . ಕಾಲಡಿಯಿಂದಂ ತಿವನುರ್ಚಿ ಪೋದುವಿಸೆ ತತ್ಸಾಜನ್ಯಕಂದಾಂಕುರಂ (ಶಾಂತಿಪು. ೪-೦೬); ನದೀಲತಾಂಗಿಯ ಮೇಗಾಲ್ಗಳೆನಿಪ್ಪ ಪರಿಕಾಲ್ಗಳುಂ . . . ಅನೂನಶೋಭೆಯಂ ಪಡೆಯೆ (ಪುಷ್ಪಪು. ೯-೨೨ ವ) ; ಜನನುತಮುಪ್ಪುತ್ತಮಗತಿಯಂ ಪಡೆದನಿಶಂ ತನಗೆ ವಿರಕ್ತರನೆಜಗಿಪ ವನಿತೆಯ ಮೇಗಾಲ್ಗಳ ಪಾಸಟಿಯಂ ನಾಮೆಯ್ದುವೆವೆಂದು ಮನದೊಳ್ ಭಾವಿಸಿ (ಜಯಸಾ. ೩-೨೮). **ಮೇಗಾಲು :** "ಪದಾಶ್ರಂ, ಪ್ರಪದಂ ಈ ೨ ಮೇಗಾಲು" (ನಾಚರಾ. ೧೨೦) ; ಶಿವೆ ಬ್ರಾಹ್ಮಣ ನಯನ ಕ್ಷತ್ರಿಯ . . . ಮೇಗಾಲು ಮುಚ್ಚಿಗ (ಸರ್ವಶ. ೦೬೨-೬೬೬) ; ಹೆಬ್ಬೆಟ್ಟುಗಳು, ಪದತಳಗಳು, ಮೇಗಾಲು, ಹರಡು . . . ಕಣ್ಣುಗಳು, ಶಿರಸ್ಸು ಮುಂತಾದ ಸ್ಥಾನಗಳೇ ಸ್ತ್ರೀಯರುಗಳಿಗೆ ಕಳಾಸ್ಥಾನಗಳೆನಿಸಿಕೊಂಬುವು (ಸಳವ್ಯ. ೬೦) ; ಕೀಳ ಕಣಕಬೇಡ ಮೇಗಾಲು ತುರಿಸಬೇಡ (ಗಾದೆ). [ಮೇಂ (< ಮೇಲ್$_1$) + ಕಾಲ್$_1$]

**ಮೇಂಗೆಯ್,** ಮೇಂಗಯ್, ಮೇಂಗೈ, ಮೇಗೆಯ್, ಮೇಗೈ (ನಾ). ೧. ಮಣಿಕಟ್ಟಿನಿಂದ ಹಿಡಿದು ಕಿರುಬೆರಳಿನ ವರೆಗಿನ ಭಾಗ ; ಕೈಯ ಮೇಲುಭಾಗ : ಕಿಟ್ಟೊಪ್ಪಡೆ, ಮೇಂಗೆಯ್, ಮೇಂಗಾಲ್ (ಶಾಶಾರೂ ೦೨೯ ಉದಾ). **ಮೇಂಗಯ್ :** ೧. ಅಂಗಯ್ ; ಮೇಂಗಾಲ್, ಮೇಂಗಯ್ (ಶಮದ. ೦೬೩ ಪ್ರಯೋ) ; ಕಯ್ಯ ಮೇಗು ಮೇಂಗಯ್ (ಶಬ್ದಾ ಮ. ೩೪೮ ಪ್ರಯೋ). **ಮೇಂಗೈ :** ೨. (ಅಲಂ) ಜಯ ; ಗೆಲುವು ; ಮೇಲುಗೈ : ಬೆಂಗಯ್ಗಳ್ನಲೆ ಸಾಸಿರಂಗಳೆಮಗುಂಟೆಂದೆಂಬ ಗರ್ವಂಗಳಿಂ ಮೇಂಗೈಯಪ್ಪೆವೆನುತ್ತೆ ಬಂದಿರಿಂ (ಶೀರಬ. ೦೦-೪೮). **ಮೇಗೆಯ್ :** ೧. "ಕರೋರ್ಧ್ವ ಮೆನಲ್ಕೆ ಮೇಗೆಯ್ಗೆ ನಾಮಮಕ್ಕುಂ" (ಮಂಗರಾ. ೯೩-೮). **ಮೇಗೈ :** ೧. ಮೊಳಕೈ ಮುಂಗೈಗಳನಾಡಿಸುತಂ ಮೊಳಕಾಲಿಕ್ಕುತೆಟಗುತೆ ನಿಲುತಂ ಅಂಗೈ ಮೇಗೈಗಳನಾಡಿಸುತಂ [ಶಾಕಾಂ. ಕಾಲುಂ ಕೆಯ್ಯುಂ] ಬೆಂಗೊಂಡಾಗಿರೆ (ಶೃಂಗಾರ. ಹ. ೪೬೩.೨). [ಮೇಂ (< ಮೇಲ್$_1$) + ಕೆಯ್$_2$]

**ಮೇಂಗ್ಯೆ** 'ಮೇಂಗೆಯ್ಯ್' ನೋ.

**ಮೇಂಟಿ**, ಮೆಂಟೆ, ಮೇಂಟೆ, ಮೇಟಿ, ಮೇಟೆ, ಮೇಣಿ, ಮೇಳಿ, ಮೇಟಿ$_1$ (ನಾ). ೧. (ಶೌರ್ಯದ ಅಥವಾ ಗೆಲುವಿನ ನೆನಪಿಗಾಗಿ ನೆಡುವ) ಕಂಬ; ಸ್ತಂಭ: ಬೆಳೆ ಮತರು ಕೊಟು ನಿ[ಂ]ತಾ ಮೇಂಟಿಯನ (ಎಕ. XVIII. ೩೦೧-೯; ಸು. ೫ನೆಯ ಶತ); ಧರಣೀ ಮಧ್ಯದೊಳೊಪ್ಪೆ ಮೇಂ[ಟಿ]ಯವೊಲಿರ್ಕ್ಕುಂ ಮೇರು[ವಾ] ಮೇರು ಮಂದಿರದಿಂ ದಕ್ಷಿಣಭಾಗದಲ್ಲಿ ಭರತಕ್ಷೇತ್ರಂ (ಕಇ. IV, ೧೧-೨; 1121); ಆದ್ಯಕ್ಷರದ ಬಿಂದುವಿಂಗೆ . . . ಮರ್ಕಟ – ಮಂಕಡ, ಮಕ್ಕಡ; ಮೇಥಿ– ಮೇಂಟಿ (ಶಮದ. ೨೯೩ ಶ್ರ ಯೊ). ೨. ಕಟಾವಿನ ಕಾಲದಲ್ಲಿ ಧಾನ್ಯವನ್ನು ಒಕ್ಕಲು ಕಣದಲ್ಲಿ ನೆಡುವ ಕಂಬ: ಮೇಟಿಗಂಬ: ಮೇಂಟಿ (ಮೇಟಿ) – ಮೇಥಿ (ಮೇಥಿ) = ಒಕ್ಕುವ ಕಂಬ. ಕೃಷಿ" (ತದ್ಭಕೋ. ೩೭). ೩. ಬೇಸಾಯ; ಉಳುಮೆ; ಕೃಷಿ: ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. ೪. (ಗ್ರಾಮದ ಮುಖ್ಯಸ್ಥನಿಗೆ ಕೊಟ್ಟ) ಮಾನ್ಯದ ಭೂಮಿ: ವೈಸಕ × × [ಗಾ]ಮುಣ್ಡಗಂ[ಬೀರ] ಗಾಮುಣ್ಡಗಂ . . . ನಾಲ್ಕು ಬರಿಸ ಪರಿಯಾರವು ಐದಾನೆ ವರಿಸ ಪಡು ವಾರಮುಂ ಮೇಣ್ಟಿಯು ಸಕ್ತಗಮು ಇನೆತ್ತುಮಾ[ನ್]ಪ್ರಸಾದಂಗೆಯ್ದಾರ್ (ಎಕ. IX–i, ೩೦–೧೭; ೯ನೆಯ ಶತ); ಸ್ವಸ್ತಿ ಸಮಸ್ತಗುಣಸಂಪನ್ನರಪ್ಪಊ ವತ್ತೊಕ್ಕಲುಮಿರ್ದು ಬಿಟ್ಟ ಧರ್ಮ್ಮಮಾವುದೆಂದಡೆ ಮೇಂಟಿಯಲು ಪಣ ೧ ತೋಂಟದಲು ಪಣ ೧ (ಎಕ. XI–ii, ೦೩೮-೦೯; 1109). **ಮೆಂಟೆ:** ೧. ಆತನನೀಗಳೆ ಅಜನರಮನೆಯಂಗಣಕ್ಕೆ ಮೆಂಟೆಯನಾಗಿಸುವೆನು (ರಾಮಕಥೆ. ೦೦೦-೦೨). **ಮೇಂಟಿ:** ೫. ಒಂದು ಬಗೆಯ ತೆರಿಗೆ: ಆ ನಾಂಡು ಅರಸು ಮಾಡಿಕೊಟ್ಟ ಮಾನ್ಯ × × × ಪಾಳು ಮೇಂಟಿ ಸೇಸೆ ಸಿದ್ಧಾಯ ಹೊದಕೆ ಹದಿಕೆ × × × ಬೇಡು ಬಿಟ್ಟು . . . ಮೊ[ದ]ಲಾಗಿ ಆವು ದೊಂದುಯಿಲ್ಲದೆ × × × ಸರ್ವ್ವಬಾಧೆ ಪರಿಹಾರ (ಎಕ. IX–ii, ೪೦೯-೩೦; 1364). ೬. ಒಂದು ಪ್ರದೇಶದ ಹೆಸರು: ಅಣಿಲಾಪುರದ ಪೆರ್ವ್ವಟ್ಟೆ ತೆಂಕಣ ಸೀಮೆ ಮೇಣ್ಟೆಯ ಪೆರ್ವ್ವಟ್ಟೆ ಪಡುವಣಸೀಮೆ ಮತ್ತಮಾ ಸಮಣ್ಗಟಿಯೇಟಿಯ ಬಡಗಣ ಕೋಡಿಯ ಪಡುವಲ್ಪಾಳಕಟ್ಟನ ಮೋ[ಗ] ಳೆಯ ಬರುಹು ತೋಂಟಯಾಗಿ ಪಡುವಣಭಾಗದೊಳ್ ಮೇಣ್ಟೆಯ ಬಟ್ಟೆಯುಂ ಮುಟ್ಟೆ ಬಡಗಣ ಸೀಮೆ (ಎಕ. XI–i, ೭೯-೩೦; 1045). **ಮೇಟಿ:** ೧. ದ್ರವಿಳಾಳೀಪತಿಯೆಂಬ ಚೋಳಕರ ರಾಜ್ಯಾಪಕ್ರಮಶ್ರೀಗೆ ಕಾಂಚಿ ಪೊಲಿದ್ರೋಪ್ಪುವ ಕಂಚಿ ಸಂಚಳಿಸೆ ತೆಂಕಲ್‌ಘಟ್ಟಮಂ ದಾಂಟೆ ಸಾಸಾವಿನೊಳ್ ರಾಜಿಗನೊಕ್ಕಲಂ ಬಡಿದು ತಂದೊಕ್ಕಲ್ ಜಮಂ ನಟ್ಟ ಮೇಟಿವೊಲಾದತ್ತನೆ ನೆಟ್ಟನೊಟ್ಟಜಿಕೆಯಿಂ ತಂಬಂ ಜಯಸ್ತಂಭಮಂ (ಪ್ರಕಂ. ೦೯೩೦, ೭೭-೨೭; 1080): ಇಳಾತಳವೆಂಬ ಕಳದೊಳು ಓತು ವಿಲಯಕರ್ತ್ರ ನಿಲಿಸಿದ ಮೇಟಿಯ ರೀತಿಯಾಯ್ತು ಮೇರುಶಿಖರಿ (ನೇಮಿಸಂ. ೧–೩೦); ಆ ಸ್ವರ್ಲೋಕ ವೈಭವವನಾರು ಬಣ್ಣಿಪರಲ್ಲಿಯಾ ಧೃವಂ ಮಿಸುಪ ನೀಲದ ಲಿಂಗಮಂ ಶ್ರೀ ಭಕ್ತಿಯಿಂ ಭಜಿಸಿ ಬುವಿಗೆ ಮೇಟಿಯವೋಲು ಮಹಾಭಾಸದಿಂದಿಹಂ (ಏಕಶ್ಯ. ೪-೦೩-೭). ೩. ಮೇಟಿಯಿಂ ಜಾಟಿ ನಡೆದುದಲ್ಲದೆ ದೇಶದಾಟವೆ ಕೆಡುಗು (ಸರ್ವಜ್ಞ. ೦೩೩೭); ಮೇಟಿ ಬಲವಿದ್ದರೆ ಕೋಟೆ ಗೆಲಬಹುದು (ಗಾದೆ). ೭. ಶ್ರೇಷ್ಠವಾದುದು; ಉತ್ತಮವಾದುದು: ಮೇಟಿ ಪುರುವಳ್ಳಿ ಎಲೆಯುತ್ತಾಟಿಸುಗುಂ ನಸ್ಯಕರ್ಮದೊಳ್ ವಿಷಮನದಂ ಪಾಟಿಸಿ ಮರಿಚದೋಳೀಯಲ್ ಕೋಟಿಲತಾಕುಲಮದೇವುದಿಂತಿದಜೀದಿರೊಳ್ (ಶಮದ. ೭-೯೯). ೮. ಶ್ರೇಷ್ಠ ವ್ಯಕ್ತಿ: ಸವಿನಯಂಗಳ ಮೇಟಿ ದಾಸೋಹವಸಲರ್ಚವ ಚೀಟ . . . ದಯಾಳುಶಂಕರನೊಲುಮೆಯುಳ್ಳಾಳು (ಬಸವು. ೬-೦೦). ಮಾರನೃಪತಿಯ ತೇಜಿ ಭೂರಿಮೋಹನರಾಜಿ . . . ತೋರ ಮುಡಿಯ ವಧೂಟಿ ನಾರಿಯರೊಳುಂ ಮೇಟಿ (ವೆಂಕಾರಾ. ೩-೭-೩೭): ತಾವು ಎಷ್ಟು ಶಾಸ್ತ್ರವನೋದಿ ತಪಗಳನು ಗೆಯ್ದರೂ ಸಿದ್ಧಿಯಲಿ ಕಸಕಣ್ಣ ನಿಜದಿ ತಮಗೂ ಮೇಟಿ (ನಪರಾ. IV, ೭೯). ೯. ಮುಂದಾಳು; ಮುಖಂಡ; ನಾಯಕ: ಸೀತಾರಾಮು ಮತ್ತು ರಾಮಚಂದ್ರ ಇಬ್ಬರೂ ಮೇಟಿಗಳಾಗಿ ಒಂದು ಕಲ್ಲುಬಂಡೆಯ ಮೇಲೆ ಕುಳಿತಿದ್ದರು (ಕೆಳಹು. ೦೪); ಬಾರಾ, ಓ ಬಾನ್ ಮಿನ್ಗಳ ಮೇಟೀ . . . ಬಾರಾ, ನಲ್ಲಿರುಳುಲಿ ಗಳ್ಗೊಡೆಯಾ! (ಅಂತಿಗೂ. ೩೧-೦೦೭೮). ೧೦. ಮುಖ್ಯ ಸೇವಕ: ಮೇಟಿಯ ಉಸ್ತುವಾರಿಯಲ್ಲಿ ಕೆಲಸಗಾರರು ಅಚ್ಚುಕಟ್ಟಾಗಿ ಕೆಲಸವನ್ನು ಪೂರೈಸಿದರು (ರೂಢಿ). ೧೧. ನಡುವಿನ ಭಾಗ; ಕೇಂದ್ರ: ಮೇಟಿ ಶೀಲವ್ರತಶಿವೈಕ್ಯರ ಪಾಟಿಯೆನಿಪುಪ್ಪರಗುಡಿಗಳಂ ಮಾಟಕೂಟದ ಮಹ ಮನೆಗಳೆನಿಸಿದವು (ಬಸವು. ೩೩-೩೩). **ಮೇಟೆ:** ೨. ಹೊಟ್ಟು ಕಳೆದು ಭತ್ತ ನಿಂದು ಹುಲ್ಲು ಹೊಚಿಗಟ್ಟಿತ್ತು ಒಕ್ಕದ ಮೇಟೆ ಕಿತ್ತಿತ್ತು ಹುಲ್ಲು ಮೆದೆಗೆ ಹೋಯಿತ್ತು (ಮೋಳಮೂ. ೦೪೩–೩೩೩); ಕಳನ ಕೆತ್ತುವ ಮೇಟಿಯಂ ನೆಡುವ ಕುಡುಗೋಲನುಳಿಯದೇ ಮಸಯಿಸುವ ಗೋಂದಣಂ ಕುಡಿಯರುಗಳೊಳ ಗೊಪ್ಪಮಂ ಪಡೆದುದು (ಸಮ್ಯಕ್. ೦–೨೪); ಹೂದಂಡೆಯನ್ನು ಮೇಟಿಗೆ ಕಟ್ಟಿ, ಉಳಿದ ಉಪಕರಣಗಳಿಗೆ ಸಾಲುಶರಣರೆಂದು ಹೂಮಾಲೆಗಳನ್ನು ಹಾಕಿ ಪೂಜೆ ಮಾಡುವರು (ಕನ್ನಜಾ. ೦೩೪). **ಮೇಣಿ:** ೧೨. ನೇಗಿಲು; ರೆಂಟೆ: ಪೂಜಿಸಿ ಪೊಡವಟ್ಟೊಪ್ಪೆ ವಿರಾಜಿಸಿ(ಬೆ)ದೆಯನಜಿದು ಪರಿಪೂರ್ದ್ದಾಂಟದೆ ನೀನೋಜೆಯ ಬಲ್ಲೆಟ್ಟುಗಳಂ ಯೋಜಿಸಿ ಸಲೆ ಪಿಡಿದು ಮೇಳಿ(ಣಿ)ಯುಂ ತತ್ಕ್ರಮದಿಂ (ಅಟ್ಟಮ. ೯-೨೯); ಆರು ಕಟ್ಟಿ ಉಳುತ್ತಿದ್ದ ಆ ಮನೆಯ ಮುದುಕಯಜಮಾನ ಗಾಡಿಯನ್ನು ಗುರುತಿಸಿ, ಮೇಣಿಯನ್ನು ಬೇರೆಯವರ ಕೈಗೆ ಕೊಟ್ಟು, ಓಡಿ ಬಂದು (ಮಲೆಮ. ೪೯೪). ೧೩. ನೇಗಿಲಿನ ಹಿಡಿ.—ಗೂಟ: ಏಟೋದಿದ್ರೇನು ಮೇಣಿ ಮೇಲೆ ಕೈ ಮಡ್ಗೋದು ತಪ್ತ (ಹುಟ್ಟಿಹ. ೦೭೪); ನೇಗಿಲಿನ ಮೇಣಿಯನ್ನು ಮಾತ್ರ ಕೈಯಲ್ಲಿ ಹಿಡುಕೊಂಡ ರಾಮಯ್ಯನು ಮೇಲಿನ ಗದ್ದೆಯಲ್ಲಿಯೆ ನಿಂತಿದ್ದನು (ಕಾನೂರು. ೨೦೦). **ಮೇಳಿ:** ೧೨. ಉತ್ತಪೆನೆಂದು ಮೇಳಿಯ ಪಿಡಿ ದಾಯೆರಡೆತ್ತದಾಯೆಂದು ನಡೆಸಲು (ಧನ್ಯಕ. ೦೭೮); ಎತ್ತು ಜತ್ತಗಿ ನುಂಗಿ ಭತ್ತ ಬಾನವ ನುಂಗಿ ಮುಕ್ಕಟತಿರುವೊ ಅಣ್ಣನ ಮೇಳಿ ನುಂಗಿತ (ಶಂಕಶ. ೨೯-೪). ೧೩. ಪೂರ್ವಕ್ಕೆ ತಾಳಾಗಿ ಉತ್ತರಕ್ಕೆ ತಲಹಾಗಿ ಬಿದ್ದ ಮರನ ತಂದು ನಿಬದ್ಧಿಯ ಕಾರುಕನ ಕೈಯಲ್ಲಿ ಸುಬದ್ಧಿಸಿ ಶುದ್ಧೈಸಿ ಅನಾದಿಯೆಂಬ ಹುಗಿಲುದೆಗೆದು . . . ಇಷ್ಟವೆಂಬ ವಿಶ್ವಾಸದ ಮೇಳಿಯುಂ ಬೆಟ್ಟ (ಸಳವ. III, ೪೭-೯೮). **ಮೇಟಿ$_1$:** ೧೨. ಧನ್ಯ ಕುಮಾರಂ ಉಟ್ಟು ನೋಟ್ಟಿನೆಂದು ಮೇಟಿಯುಂ ಪಿಡಿದು ಪಿಡಿದೊತ್ತಿ ಪೊಡೆಯೆ ನೇಗಿಲ್ ನಡೆಮೊನೆಯೊಳ್ ನೆಗೆದ ಕಳಶಮಂ ಕಂಡು (ವ್ರತವಸಂ. ೦೯೯–೩೪ ವ).

ಮೇಣಿಮುರುಕ = ಭೂಮಿಯ ಮೇಲೆ ನೇಗಿಲನ್ನು ತಿರುಗಿಸಿ ವ್ಯವಸಾಯ ಮಾಡುವವನು; ಕೃಷಿಕ; ಒಕ್ಕಲಿಗ: ಸಾಕುಯೆಲೊ ಮೇಣಿಮುರುಕ ಒಕ್ಕಲಿಗನೆ ಭರದಿ ಸೀಳುಕ್ಕಿಯುತ್ತುತ್ತು (ಜ್ಞಾನಪ. ೦೩-೭); ಇಷ್ಟೊಂದು ಓದಿ ಮತ್ತೂ ಮನೆಗೆ ಬಂದು 'ಮೇಣಿಮುರುಕ'ನಾಗಬೇಕು ಅನ್ನು (ಬೆಳುವ. ೨೨೯). [ದೇ. ॥ ತಮಿ. ಮೇಟ್ಟಿ, ಮೇಟಿ; ಮಲ. ಮೇಟಿ; ತುಳು. ಮೇಟಿ; ತೆಲು. ಮೇಟರಿ. ಮೇಟಿ, ಮೇಡಿ; ಕೋತ. ಮೇಯ್ಪ್; ಕುವಿ. ಮೇರಿ. /ಸಂ. ಮೇಠೀ, ಮೇಢೀ, ಮೇಥಿ]

**ಮೇಂಟಿಖಂಡುಗ** 'ಮೇಂಟಿಗಂಡುಗ' ನೋ.

**ಮೇಂಟಿಗಂಡುಗ**, ಮೇಂಟಿಖಂಡುಗ, ಮೇಟಿಗಂಡುಗ (ನಾ). ೧. ಒಂದು ಬಗೆಯ ತೆರಿಗೆ; "ಧಾನ್ಯದ ರಾಶಿಗೆ ಹಾಕುತ್ತಿದ್ದ ತೆರಿಗೆ" (ಕಶಾಅ. ೪೦೦): ಧನಬಳಂ ಕಾಳಗೊಲ್ಗು ಮೇಂಟಿಗಂಡುಗ (ಪೊಂಕಶಾ. ೦೯೩೭, ಏಕ್ಕೋಕ್ಕರ. ೨೯-೩೩; ೪೪೯); ಅಲ್ಲಿ ಮನ್ನೆಯ ನಿಬನ್ಧದ ಕಿಜುದೆಜೆಗಳವಾವು

ಪೆನ್ನಡೆ ಮನೆವಣಂ ಪರಿಚಾರವಣಂ ಧನಬಳಂ ಕಾಳಗೊಲ್ಲು ಮೇಂಟಿ ಗಣ್ಣುಗವಂಗಡಿಯ ತಿಂಗಳನ ಬೇಳೆಯೊನ್ದು (ಶಾಇಇ. XX. ೪೭-೩೭; 1074). **ಮೇಂಟಿಖಂಡುಗ** : ೨. ಒಂದು ಬಗೆಯ ಅಳತೆ : ಮೇಂಟಿಖಂಡುಗ ದೇವರ್ಗ್ಗೆ ಇನ್ನೀ ಧರ್ಮವಂ ಪ್ರತಿಪಾಳಿಸಿದವರ್ ವಾರಣಾಸಿ ಕುರುಕ್ಷೇತ್ರ ಪ್ರಯಾಗಾಗ್ರ್ಯತೀರ್ತ್ಥಂಗಳೊಳ್ ಪತ್ತು[ಸಾ]ಸಿರಕಪಿಳೆಯಂ ದಾನಂಗೊಟ್ಟ ಫಳಮಕ್ಕುಂ (ಶಾಇಇ. XI-i, ೨೩-೪೦ : 897). **ಮೇಂಟಿಗಂಡುಗ** : ಮೇಂಟಿಗಂಡುಗಮುಮಂ ಹನ್ನರಹಣಮುಮಂ ಬಿಟ್ಟರು (ಕಇ. IV. ೩೯-೨೭; 1111). [ ಮೇಂಟಿ + ಕಂಡುಗ (< ಖಂಡುಗ) ]

**ಮೇಂಟೆ** ' ಮೇಂಟಿ ' ನೋ.

**ಮೇಂಡ** (ನಾ). ಟಗರು ; ಕುರಿ : "ಅವಿಃ. ಊರ್ಣಾಯುಃ . . . ಮೇಷಃ, ಮೇಂಡಃ—ಈ ೮ ಕುರಿ" (ಹಲಾಯು. ೪೭-೧೨೪). [ಸಂ. ಮೇಂಢ]

**ಮೇಂದು** (ನಾ). ೧. ಮಿದುಳು : ' ಮೇಂದುಜ್ವರ ' ಪರಾ. ೨. ಬುದ್ಧಿ : ಮಲಗಿಕೊಂಡಲ್ಲಿಯೇ ವಿಷ್ಣು 'ಕಮ್ಯುನಿಜಂ'ದ ಭಕ್ತನಾದ. ಮಂದವಾದ ಅವನ ಮೇಂದೂ ಈ ವಿಚಾರಪ್ರವಾಹವನ್ನು ತಡೆಯಲಸಮರ್ಥವಾಯಿತು (ಕಮುಜೀ. ೦೦೦೦). [← ಮರಾ. ಮೇಂದೂ]

**ಮೇಂದುಜ್ವರ** (ನಾ). ಮಿದುಳಿಗೆ ಬರುವ ಜ್ವರ : ಊರ ಜನರನೆಲ್ಲ ಉರಿದಾಡಿಸುವ ನಿಮಗೆ ಹುಚ್ಚು ಹಿಡಿದಿಲ್ಲವಷ್ಟೆ ? ಮೇಂದುಜ್ವರ ಬಂದಿಲ್ಲ ವಷ್ಟೆ ? (ಇವನಾ. ೬೯). [ಮೇಂದು + ಜ್ವರ]

**ಮೇಂಬೊಲ, ಮೇಬೊಲ** (ನಾ). ಪ್ರಾಣಿ, ಪಕ್ಷಿಗಳು ಆಹಾರವನ್ನು ಹುಡುಕಿ ಮೇಯುವ ಭೂಮಿ.—ಸ್ಥಳ : ಆ ಧೀವರಂ ನಲಿಯು ತೊಂದುದಿನದುದಯದೊಳಗಾ ಹಕ್ಕಿ ದೆಸೆದೆಸೆಗೆ ಮೇಂ[ಪಾಠಾಂ. ಮೇ]ಬೊಲಕೆ ಹವವು ಮಿಗೆ ಹಾರಿ ಪೋದುದನರಿತು (ಸಮ್ಯಕೌ. ೨-೩೨) ; ಎಳಗರುವಿಗೆಳ್ಪು ಮೊಲೆಯಂ ಕೊಟ್ಟು ಮೇಂ[ಪಾಠಾಂ. ಮೇ]ಬೊಲಕೆ ತಳರಿದವು ಬಹುವಿಧಂಬಡೆದ ಮೃಗನಿಕುರುಂಬ (ಸಮ್ಯಕೌ. ೧೦-೩೮). **ಮೇಬೊಲ** : ಮೇಲಿನ ಪ್ರಯೋಗಗಳ ಪಾಠಾಂತರವನ್ನು ನೋಡಿ. [ಮೇ$_1$ + ಪೊಲ]

**ಮೇಕು$_1$** ' ಮೇಟ್ಟು ' ನೋ.

**ಮೇಕು$_2$** ' ಮೇಗು ' ನೋ.

**ಮೇಕು$_3$** ' ಮೇಖು ' ನೋ.

**ಮೇಕುದೋಟಿಗ್** ' ಮೇಗುದೋಟು ' ನೋ.

**ಮೇಕುದೋಟು** ' ಮೇಗುದೋಟು ' ನೋ.

**ಮೇಕೆ$_1$** (ನಾ). ಆಡು : ಕರಿಯ ಮೇಕೆ [ಪಾಠಾಂ. ಮೆಕ್ಕೆ]ಯ ಕಾಳಸರ್ಪನ ತರಿಸಿ ತಾಟಿಯ ಸಮಿತೆಗಳ ಸಂವರಿಸಿ ದೀಕ್ಷಿತನಾದನಾ ಖಳ ಮಾರಣಾಧ್ವರಕೆ (ಕೊರಡಾ. ೭-೪೨-೭) ; ಜವಾನನು ಒಂದು ಮೇಕೆಯನ್ನು ಹಿಡಿದುಕೊಂಡು ಬಂದ (ರಾಯುಕ. ೧೯) ; ನೂಕಿಸಿಕೊಂಡು ಹೋಗುವುದಕ್ಕಿಂತ ಮೇಕೆ ಕಾಯೋದು ಲೇಸು (ಗಾದೆ).

[< ಸಂ. ಮೇಕ./ ತೆಲು. ಮೇಂಕ, ಮೇಕ; ಕೋಲಾ. ನಾಯ್ಕಿ. ಮೇಕೆ; ಪರ್ಜಿ. ಮೇವ ; ಗದಬ. ಮೇಗೆ ; ಗೊಂಡಿ. ಮೆಕಾ]

**ಮೇಕೆ$_2$** ' ಮೆಕ್ಕೆ$_3$ ' ನೋ.

**ಮೇಕೆಕೊಂಬುಬಳ್ಳಿ** (ನಾ). ಹೋತದ ಕೊಂಬಿನಂತೆ ಕಾಣುವ ಕಾಯಿಗಳನ್ನು ಬಿಡುವ ಒಂದು ಬಗೆಯ ಬಳ್ಳಿ : ಮಾಧೀಫಲ, ಮಗ್ನಿಕ. ಮೇಕೆಕೊಂಬುಬಳ್ಳಿ (ವೃಕ್ಷಿನಿ. ೩೯-೦೦೭೮). ' ಮೇಷಶೃಂಗಿ ' ಪರಾ. [ಮೇಕೆ$_1$ + ಕೊಂಬು$_1$ + ಬಳ್ಳಿ]

**ಮೇಖಲೆ, ಮೇಖಳೆ** (ನಾ). ೧. ಹೆಂಗಸರು ಸೊಂಟದಲ್ಲಿ ಧರಿಸುವ ಒಂದು ಬಗೆಯ ಒಡವೆ; ಒಡ್ಯಾಣ ; ಡಾಬು: ಆ ಖಚರಿಗೆ ವಿಜಯವಿಭವವು ಲೇಖವಾದುದುಪೆಂದು ಸಿಂಧುಸಮೇಖಲಾಲಂಕೃತೆಯ ಸುತೆಕೊಂಡಾಡಿದಳು ಕಪಿಯ (ಕೊರಡಾ. ೭-೩೨-೭) ; ಸುಲಲಿತ ಜಘನಸ್ಥಳ ಮೇಖಲೆಯುಗ್ರದೊಳೆಸೆವ ಮಂಜುಮಣಿದೀಪದ ಕಜ್ಜಲರೇಖೆ ನೆಗೆದುದೆನೆ ಕಣ್ಗೊಲವಿತ್ತುವು ರೋಮರಾಜಿ ರಾಜಾನನೆಯಾ (ರಾಜಶೇ. ೭-೩೪). ೨. ಗಂಡಸರು ಧರಿಸುವ, ಮುಂಜತೃಣದಿಂದ ಮಾಡಿದ ಉಡಿದಾರ : "ರಸನೆ ಮೇಖಲೆ ಕಾಂಚಿ ಸಪ್ತಕಿ ಕಳಾಪಿ ಸಾರಸನಘನಲುಡಿದಾರಮಕ್ಕು" (ಮಂಗರಾ. ೦-೩೦); ಜಲರುಹಬೀಜರಾಜಿಗಳನಾಜಿಪ . . . ಮುಂಜಮೇಖಲೆಗಳನೊಪ್ಪಮಾಡುವ ಸಮಿತ್ಕುಶಮಂ ತರವೋಪ . . . ವ್ಯವಸಾಯ ಮೆತ್ತಲಾರ(ಕಾದಂಪೂ. ೨೨೨). ೩. ಕತ್ತಿ ಮುಂತಾದುವನ್ನು ಸಿಕ್ಕಿಸುವ ಸೊಂಟದ ಪಟ್ಟಿ ; ನಡುಕಟ್ಟು : " ಮೇಖಲಾ . . . ಆಯುಧವು ಜಾರಿಹೋಗದ ಹಾಗೆ ಕಟ್ಟಿದ ಕಟ್ಟು" (ಸಿದ್ಧಾಂತಿ. ೨೭೩). ೪. ನಡುವಿನ ಭಾಗ ; ಮಧ್ಯಭಾಗ : ಮಲಯಮೇಖಲೆಯಂತೆ ಚಂದನಪಲ್ಲವಾವತಂಸೆಯುಂ . . . ಯಕ್ಷಾಧಿಪಲಕ್ಷ್ಮಿಯಂತಳಕೋದ್ಭಾಸಿ[ಯು. ಪ]ನಿಸಿ ದೇಜುಂಜವ್ವನೆಯ ರೂಪಾತಿಶಯಮನೆವೆಯಿಕ್ಕದೆ ನೋಡುತ್ತಂ (ಕಾದಂಪೂ. ೪೯). ೫. ಸೊಂಟದ ಹಿಂದಿನ ಕೆಳಭಾಗ ; ಜಘನ ; ನಿತಂಬ : "ತಿಗದಲ್ಲಿ ಮೇಖಲೆಯೆನಿಪ್ಪುದು" (ಮಂಗರಾ. ೦೪೨-೦೯). ೬. ಪರ್ವತದ ಸಾನು,—ತಪ್ಪಲು. ೭. ಪರ್ವತದ ಅಗ್ರಭಾಗ ; ಶಿಖರ ; "ಕಾಂಚಿಯುಂ ವಸ್ತ್ರಂ ಪರ್ವತದಗ್ರಮುಂ ಜಘನಮಿಂತುಂ ಮೇಖಲಾ ವಾಚಕಂ" (ನಾನಾರ. ೦೦೯). ೮. [ಅಶ್ವಶಾ] ಕುದುರೆಯ ಒಂದು ಅವಯವ : ರಂಧ್ರದ ನಾಭಿಯೆಡೆಗೆ ಉಪರಂಧ್ರಮೆಂಬ ಪೆಸರಕ್ಕು ರಂಧ್ರದ ಉಪರಂಧ್ರದ ನಡುವೆ ಮೇಖಲೆಯೆಂಬ ಪೆಸರಕ್ಕುಂ (ಅಶ್ವಶಾ. ಪುಟ. ೬೯). **ಮೇಖಳೆ** : ೧. ಮತ್ತೊತ್ತವರ್ಣಳತಿಸಂಭ್ರಮತ್ವರಿತದಿಂ ಮೇಖಳಾ ಕಳಿತನುಚಿರ ಲುಳಿತಾಧರಪಲ್ಲವೆ ನೋಟ್ಟು ದಂಡುಗಳೊಳಂಡುಗೊಂಡು ಸೂರ್ಕಿದಾನೆ ಬರ್ಪಂತೆ ಬಂದು (ಶಂಕಪಾ. ೪-೩೭ ವ) ; ಮೇಖಳೆ ಘನಾಗಮಲಕ್ಷ್ಮಿಗೆ ದೀಪಮಾಲೆ ಜಾರಾಗಮನಕ್ಕೆ . . . ಎನಲ್ ನಭೋಭಾಗದೊಳಂದು ಬಿತ್ತರಿಸಿದತ್ತು ತಟಿಲ್ಲತೆ (ಪುಲ್ಲಪು. ೮-೯೯) ; ನಕ್ಷತ್ರ ಖಚಿತಮೇಖಳೆಯಾದುದಯ್ ಪೇಳೆ ಕೃಷ್ಣಾಂಬರಾನಿಶಿ ಚತುರ್ದಶಿಗೆ (ಶ್ರೀರಾಮಪ. ೭೭೭-೦). ೨. ಸಲೆ ಭೈಕ್ಷವಶನಮಜಿನಂ ಪಲಾಶದುಡಂ ಜಟಾಳಿ ಕೌಪೀನಂ ಮೇಖಳೆಯೆಂಬಿಂತಿವೆ ಪೇಟ್ದಾತ್ಮಲಿಂಗದೊಳ್ ಬ್ರಹ್ಮಚಾರಿವರ್ಣಯೆನಿಕ್ಕುಂ (ವಸ್ತುಕೋ. ೩೭-೩೦). ೬. ಮಂದರಮಹೀಧರದ ನಂದನಮೆಂಬ ಮೇಖಳೆಯಿಂ ಸಾಸಿರದ ನೂಱಿಪ್ಪತ್ತೊಂದು ಯೋಜನಮಗಲದಿಂ ತಾರಾಗಣವಿಮಾನಂಗಳಿರ್ಕುಂ (ಸುಕುಮಾ. ೧೦-೫೯ ವ); ಶ್ರೀಜಿನಭವನಚತುಷ್ಟಯರಾಜಿತಮೊಂದೊಂದೆನಿಪ್ಪ ಮೇಖಳೆ ನಾಲ್ಕುಂ ರಾಜಿಸೆ ಮಂದರಮೆಂತಾರಾಜಿಸಿದುದು ಲಕ್ಷಯೋಜನೋನ್ನತಿಯಿಂದಂ (ಪುಲ್ಲಪು. ೨-೦). ೮. ರಂಧ್ರದ ನಾಭಿಯೆಡೆಯೊಳುಪರಂಧ್ರಮೆನಿಕ್ಕುಂ ಸರಂಧ್ರದುಪರಂಧ್ರದ ನಡುವಂದಕ್ಕುಂ ಮೇಖಳೆಯುಂ (ಅಶ್ವಶಾ. ೯-೪೨). [ಸಂ. ಮೇಖಲಾ]

**ಮೇಖಳೆ** ' ಮೇಖಲೆ ' ನೋ.

**ಮೇಖು, ಮೇಕು$_3$** (ನಾ). ೧. ಕೋಲು ; ಬೆತ್ತ : ಸಕಲಪಣಕಟ್ಟುಗಳ ಅಧಿಕಾರಿಗಳನ್ನು ಹಿಡಿತರಿಸಿ ನಯದಿಂದಲೂ ಪೊಂಡರಿಗೆ ಮೇಖು ಛಡಾಯಿಸಿ ಕೊರಡೆಗಳಯಿಂದಲೂ ಸಹ ಗರಮಾಗರಮಿ ಮಾಡಿ ಜನರಿಂದ ನ್ಜರಾನೆ ತೆಗೆದು (ಕೃದರ. ೩೯). **ಮೇಕು$_3$** : ೨. ಗೂಟ ; ಬೆಣೆ ; ದಸಿ : "ಸ್ಥಾಣುಃ, ಧ್ರುವಃ, ಶಂಕುಃ – ೩ ಮೋಟಿನ ಹೆಸರು, ಗೂಟ, ಮೇಕು" (ಸಿದ್ಧಾಂತಿ. ೦೦೦) ; ಬಲುವೆಯ ಕಾಲ ಪೆಂಡೆವುಹು ಮಾಸ್ಗರಿ ಭಾರಿ ನಗಾರಿ ಮೇಕು ಮುಂಗುಲಿವ ಸುರಾಂತ ಸತ್ತಿಗೆ ನಿಶಾನೆಯು ಮಾಯ್ಮರುತಾಪು ಸಿಂಹನಿಂದುಲಿವ ಸುಡೆಕ್ಕೆ ವೀರ್ಜಡೆಯು ಶಂಖ ಸುಚಕ್ರವು ರಾಜರಾಜನಿಂದಲಿ ಪಡೆದಾತ ಘಂಟೆಯ ನರೇಶ್ವರ ಭೀಕರ ಶತ್ರುಸಂಹರಾ (ಬೀಳವಂ. ೦-೦೫೭). ೩. " ಮಾಂಸವನ್ನು ಬೇಯಿಸುವಾಗ ಅದನ್ನು ಸರಿಯಾಗಿ ಹಿಡಿದಿಟ್ಟು

ಕೊಳ್ಳುವ ಮರದ ಅಥವಾ ಲೋಹದ ಕೋಲು. ಕಂಬಿ, ಸಲಾಕಿ. ಮೇಕು" (skewer. ೩೦೪೩). [← ಪಾರ. ಹಿಂ. ಮರಾ. ಮೇಖ್]

**ಮೇಗ** (ನಾ). ಮೋಡ : ಮುಗಿಲು : "ಮೇಗಂ ಮುಗಿಲೆಂದು ನೀರ ತೇರೆಂದು ಘನಂ" (ಕಬಕಂ. ೪೬); "ಮೇಗ – ಮೇಘ = ಮೋಡ" (ತದ್ಭಕೋ. ೩೬). 'ಮೇಗವಣ್ಣಿಗೆ' ಪರಾ. [< ಸಂ. ಮೇಘ]

**ಮೇಗಡೆ** (ನಾ). ೧. ಮೇಲುಭಾಗ : ಉಪರಿ : ವ್ಯಗ್ರವಾನೆಯು ಸುಂಡಿಲಿಂ ಹಸ್ತಾಗ್ರದಿಂ ಪಿಡಿದೊತ್ತಿ ಬರಸೆಳೆದಾಗ್ರಹಿಸಿ ಹಿಂದಕ್ಕೆ ತೆಗೆದಾ ಮೇಗ [ಪಾಠಾಂ. ಮೇಲ್ಗಡೆ] ಗೆ ಪಾಯ್ದು (ಬಸವ. ೩೨–೦೫) : ಗಗನದ ನಡುವೆ ಪಿರಿದುಂ ಬಳಸಿದಾ ತ್ರಿತಯದೊಳರ್ದಮುದ್ವಳೆಯಾ ತಲೆಯ ಮೇಗಡೆ ನಿಲಿಸಿದಿಡಿಮುದ್ದಳೆಯೆನಲದಸ್ತಿಯರ್ಗೂರ್ಧ್ವೋರ್ಧ್ವೇಜ್ವಳವಿಭೇದದಿ ಮೂಜಗಂ ಷಡ್ದ್ರವ್ಯಭರಿತವದು (ಜಾಸ್ತ್ರ. ೧–೫೦): ಅಂಬುಪೂರಿತೋದರಮೆನಿಪಂಬುದಾವಳಿಯ ಮೇಗಡೆಯ್ಯೆತರುತಿರ್ಪ ಪಾಂಗ ಶೀಕರದೊಳೆ ನಾಂದ ನೇಮಿಗಳನಾಂತ ಭವದ್ರಥವಿಲ್ಲಿ ಸೂಚಿಕುಂ (ಶಾಕುಂತ. ೧೧೧–೧೬೦). ೨. ಬಹಿರಂಗ: ಬಾಹ್ಯ: ಬಚ್ಚಿದೆ ಬೋಳೈಸದಿರು ಕಾರ್ಯದ ಹೊಜ್ಜೆಗೆಯೇನದ ಹೇಳು ಮೇಗಡೆ ಮೆಚ್ಚುವವರು ನಾವಲ್ಲ (ಕುಮಾರ. ೫–೦೮).

[ಮೇ₂ (< ಮೇಲ್₁) + ಕಡೆ₃]

**ಮೇಗಣ್** 'ಮೇಗು' ಪರಾ.

**ಮೇಗಣ** 'ಮೇಗು' ಪರಾ.

**ಮೇಗರೆ** (ನಾ). ೧. ಮೇಲಿನ ತುದಿ : ಮೇಲುಭಾಗ : ಅವನಾಗಮೋಕ್ತದಿ ಮತ್ತೆ ಲಿಂಗದ ಮೇಗರೆಯ ನಿರ್ಮಾಲ್ಯವನು ಬೇರ್ಪಡಿಸಿ ಭಕ್ತಿಯಲಿ . . . ನಮಃಶಿವಾಯೆನುತಿತ್ತ ಮುಂದಾದ (ಕುಮಾಅ. ೬–೯೮) ; ಸುರಿದುದತಿವಳೆಯೆಂದು ಕುಲಗಿರಿ ಕರಗುವುದೆ ಮೇಗರೆಯ ಶಿಲೆಯುಬ್ಬೆರಳು ನೆನೆವುದೆ (ಕುಮಾಕ. ೪–೨೨). ೨. ಮೇಲುಮೇಲಿನದು ; ತೋರಿಕೆ : ಬಾಹ್ಯ : ಮೇಗರೆಯ[ಪಾಠಾಂ. ಯೆ] ಮಾತಲ್ಲ ಬಾಲಕನಾಗುಹೋಗಿನ ಕೊಚಿತ ನಿನ್ನನು ತಾಗುವುದು ನೀ ಸೈರಿಸು (ಕುಮಾಸ. ೧೧–೩೫) ; ನಿಜಬಂಧುಜನದನುರಾಗ ಮುನ್ನಿನ ಪರಿಯುಳಿರದಸ್ಮದ್ವಿರೋಧದಲಿ ತಾಗಿ ಬಾಗಲದೇಕೆ ದೇಹತ್ಯಾಗ ಪರಿಯಂತಹುದವಜ್ಞೆಗೆ ಮೇಗರೆಯ ಮಾತಲ್ಲವೆಲೆ ನಳಿನಾಕ್ಷಿ (ಶಿಭಾಗ. ೪–೧–೩೦): ಚಾರುನ ಹೃದಯಕ್ಕೆ ಗಭೀರತೆ ಎಂಬುದೇ ಇಲ್ಲವೇ ? ಕೇವಲಿ ಅವಳು ಮೇಗರೆಯ ಚೆಲ್ಲಾಟವನ್ನಷ್ಟೇ ಬಲ್ಲಳೇ ? (ಇಶ್ವಕ. ೨೬೬).

[ಮೇಗು + ಕರೆ₄./ತುಳು. ಮೇಗರೆ. ಮೇಗಲೆ, ಮೇಗಳ = ಆರೋಪ]

**ಮೇಗವಣ್ಣಿಗೆ** (ನಾ). ೧. ಮೋಡದ ಬಣ್ಣ : ಮೇಘವರ್ಣ : ಚಂದ್ರಿಕೆ ತಾಂಬೂಲಾದಿ ಮೇಘವಣ್ಣಿಗೆಸೀರೆ . . . ಕಂದವಾದದ ಸೀರೆ ಕೈಬರಹದ ಬಣ್ಣವಂಡವನೇನ ಬಣ್ಣಿಸುವೆ (ಅಮುಕಾಂ. ೪–೯). ೨. ಮೇಘವರ್ಣದ ರೇಷ್ಮೆ ಬಟ್ಟೆ : ಮೇಗವಣ್ಣಿಗೆಯ ಪೊದಕೆಯ ಪೊದೆದು ಪರಮಾನುರಾಗದಿಂದಖಿಳಶಿವಭಕ್ತಜನಮಂ ಪೊರೆಯುತ . . . ಇರ್ಪ ಚರಮೂರ್ತಿಯಾದಿ (ಸಿದ್ಧೇಪು. ೦೫–೪೫). [ಮೇಗ + ಬಣ್ಣಿಗೆ₁]

**ಮೇಗಳ** 'ಮೇಗು' ಪರಾ.

**ಮೇಗಜು** (ಕ್ರಿ). ೧. ಒಳ್ಳೆಯದನ್ನು ಗ್ರಹಿಸು : ಹಿತವನ್ನು ಮನಗಾಣು : ಮೇಗಜುಯುದಬಳೆಯರ್ ಗತರಾಗಿಗಳಾಗಿಸಿದ ಕೃತ್ರಿಮಂಗಳ್ ಕಿಡುಗುಂ (ಜವುದ. ೦೪–೫೯). ೨. ಮುಂದೆ ಆಗುವುದನ್ನು ತಿಳಿ .–ಗ್ರಹಿಸು : ಮೇಗರೆ[ಜು]ಯುದುಬ್ಬಿನಲಿ ಸಕ್ಕರೆ ಹೋಗಿಬಿಡುವೆನೆ ಸೋಲಿಸದೆ ಹೊಜಸಾಗುವೆನೆಯೆನ್ನೊಡನೆ ಸೆಣಸು (ಕುಮಾವಿ. ೬೦೩. ೪–೫೭).

[ಮೇಗು + ಅಜು]

**ಮೇಗಾಲ್** 'ಮೇಂಗಾಲ್' ನೋ.

**ಮೇಗಾಲು** 'ಮೇಂಗಾಲ್' ನೋ.

**ಮೇಗಾಲ್ತುಡಿಗೆ** (ನಾ). ಕಾಲಿಗೆ ತೊಡುವ ಆಭರಣ ; ಕಾಲಿನ ಸರ : ಜುಡೆನೂಲ್ ಸಡಿಲ್ದು ಮೇಗಾಲ್ತುಡಿಗೆಯ ಕುಸುರಿಯೊಳೆ ತೊಡರೆ ಕಾಮಿನಿ ಮಿಡುಕಲ್ (ಕಾದಂಬ. ೦೩೪).

[ಮೇಗಾಲ್ (<ಮೇಂಗಾಲ್) + ತುಡಿಗೆ (<ತೊಡುಗೆ)]

**ಮೇಗಾವಲು** (ನಾ). ಮೇಲ್ವಿಚಾರಣೆ ; ಉಸ್ತುವಾರಿ : ಬಲದ ಮುಂಗುಡಿ ನೀಲನದು ಪಿಂಗಲಿಯ ಕಾಹು ಸುಷೇಣನದು . . . ವೀರ ಕಳ್ಳೇಜುಗಳ ಮೇ [ಪಾಠಾಂ. ಮ್ಯ] ಗಾವಲು ವಿಭೀಷಣದೇವನದು (ತೊರಾ. ೬–೬–೮). [ಮೇ₂ (<ಮೇಲ್₁) + ಕಾವಲು (<ಕಾವಲ್₁)]

**ಮೇಗಾಹು** (ನಾ). ಮಿಗಿಲಾದ ಕಾವಲು ; ಭದ್ರವಾದ ರಕ್ಷಣೆ : ಬಟ್ಟಿದೇವನ ಮೇಗಾಹಿನ ಲೆಂಕ . . . ನಿಲಿಸಿದ ಕಲ್ಲು (ಮೈಅಂ. ೦೯೪೦, ೦೦.೫ : 1194). [ಮೇ₂ (<ಮೇಲ್₁) + ಕಾಹು₁ (<ಕಾಪು)]

**ಮೇಗಾಳಿ** (ನಾ). ಮೇಲುಗಡೆಯ ದಿಕ್ಕಿನಿಂದ ಬೀಸುವ ಗಾಳಿ : ಬೇಟೆಯಾಡುವ ಮೃಗ ಅಥವಾ ಬೇಟೆಗಾರನಿರುವ ದಿಕ್ಕಿನಿಂದ ಬೇಟೆಗೆ ಗುರಿಯಾಗುವ ಪ್ರಾಣಿಯ ಕಡೆಗೆ ಬೀಸುವ ಗಾಳಿ : ಗೋರಿವೇಂಟೆಯ ನಾಡಿ ಭೂಪರಂ ತಿರುಗಿ ಕಾಂತಾರದೊಳು ಮೃಗವ ನೆಲೆಗೊಳಿಸಿ ಮೇಗಾಳಿಯಿಂ ದೂರದಿಂ ತೋಚುತ್ತಸೊಡ್ಡಿ ಕಿಗ್ಗಾಳಿಯಿಂ ಬಂಡಿಯಿಂ ದಿಳುಹಿ ಹುಲಿಯ (ಹಕಕಾ. ೫–೩೦) : ಹಿಡಿಂಬನೆಂಬವನು . . . ಮುರಿ ಮುರಿದು ಮೇಗಾಳಿಯಲಿ ಮೂಗರಳೆ ಮಾನವಗಂಧವಿದು ಗೋಚರಿಸಿತ್ತೆ ತೃಣದೋ ಮಹಾದೇವೆನುತ ಬೆಜಗಾದ (ಕುಮಾಆ. ೯–೧೦) ; ಬೇಟೆಯಾಡುವ ಮೃಗದ ಮೇಲಿಂದ ಬೇಟೆಗೆ ಗುರಿಯಾದ ಪ್ರಾಣಿಯ ಕಡೆಗೆ ಬೀಸುವ ಗಾಳಿಗೆ ಮೇಗಾಳಿಯೆಂದೂ ಪ್ರಾಣಿಯ ಕಡೆಯಿಂದ ಆ ಮೃಗದ ಕಡೆ ಬೀಸುವ ಗಾಳಿಗೆ ಕಿಗ್ಗಾಳಿಯೆಂದೂ ಹೆಸರು (ಸಂಭಾನ. ೨೦೫). 'ಕಿಗ್ಗಾಳಿ' ಪರಾ.

[ಮೇ₂ (<ಮೇಲ್₁) + ಗಾಳಿ₁]

**ಮೇಗು**. ಮೇಕು₂ (ನಾ). ೧. ಮೇಲುಭಾಗ ; ಮೇಲುಗಡೆ : ಆ ನಾಗಶರ್ಮಂ ರಾಗಿಸಿ ಮೇಗಂ ನೋಡಿ ತನ್ನೊಡನೆಯ ಬಡಪಾರ್ವಂಗಿಂತೆಂದಂ (ಶಂತಕಂ. ೦೯೬–೩) ; ಉರಗಂ ಕೊಂಡಲ್ಲಿಂ ನಾಲ್ವೆರಲನಿತಂ ಕಳೆದು ಕಟ್ಟಿ ಮೇಗಂ ಬೇಗಂ ಸೆರೆವಿಡುಗೆ ಸುಡುಗೆ . . . ನಿರ್ವಿಷಮಕ್ಕುಂ (ಕಾವ್ಯವ. ೨೬೮) ; ನೆರವಿಗರ್ಬಳಿಕ ಸುಮ್ಮಾನವೆ ಮೇಗ ನಿಟ್ಟಿಸುತ ಮಾನಿನಿಯಾಸ್ಯೇಂದುಮಂಡಲವನು ಕಂಡಾನಂದವಿಡಿದು ನುಡಿವರು (ಕಂನವಿ. ೯–೮೯). ೨. ಮಿಗಿಲು : ಮೇಲು : ಉತ್ತಮ : ಜಗತ್ತ್ರಿತಯಂಗಳೊಳ್ ಜಸಕ್ಕಾಗರಮಾದ ಬದ್ದೆಗನಾ ನರಸಿಂಹನಿಸತ್ತ ನಾಲ್ವೆರಲ್ ಮೇಗು ಪೊದಟ್ಟ ಚಾಗದೊಳಮೊಂದಿದ ಬೀರದೊಳಂ ಗುಣಾರ್ಣವಂ (ಶಂಪಭಾ. ೧–೫೦) ; ಸಿರಿಯ ಸಾರ್ಕಗಮಾಯಶಿಯರ್ಕೆಗಂ ಪೆಜರ್ ಮೇಗೆನಲಿಲ್ಲದಂತು ನೆಗಟ್ದಿರ್ದುದಜಿಂ (ಶಾಂತಿಪು. ೦–೬೮) ; ಇದೆ ದಿವ್ಯಶ್ರೀ ವಿಲಾಸಾಲಯಮಿದೆ ಸುರಭೋಗೋಪಭೋಗಾಸ್ಪದಂ ಮತ್ತಿದಜಿಂ ಮೇಗಿಲ್ಲ ಕಲ್ಪಂ (ಸುಕುಮಾ. ೯–೨೭). ೩. ಘನತೆ : ಹಿರಿಮೆ : ಗೌರವ : ದ್ರುಪದಂ ರಾಜ್ಯಮದಿರಾಮದೋನ್ಮತ್ತನುಂ ಗರ್ವಗ್ರಹವ್ಯಗ್ರಚಿತ್ತನುಮಾಗಿ ಮೇಗಿಲ್ಲದೆ . . . ನುಡಿದಂ (ಶಂಪಭಾ. ೨–೪೬ವ). ೪. ಒಳ್ಳೆಯದು : ಹಿತವಾದುದು : ಮೇಗಂ ಬಗೆವೊಡೆ ವಧೆ ಹಿತಮಾಗದು ಮರ್ತ್ಯಂಗೆ (ಜುಶೋಕ. ೩–೦೫) ; ಜ್ಞಾನವಹ್ನಿಯ ಬಾಗು ಸಾರಾನೂನಭಕ್ತಿತ್ರಯದಾಗು ಸುಮಾನಸದ ಬ್ರತಿಗಳಿಗೆ ಲಾಗುವದನ್ಯರಿಗೆ ಮೇಗು (ಬಸಪು. ೬–೯). ೫. ಆಡಂಬರ : ಡೌಲು ; ಒಣಜಂಭ : 'ಮೇಗುದೋಜು' ಪರಾ. ೬. ಮುಂದೆ ಆಗುವುದು.–ನಡೆಯುವುದು : 'ಮೇಗುಗಾಣ್' ಪರಾ. ೭. (?) : ದೀವದ ಬೇಂಟೆಯುಂ ಬಿನ್ನಪಂಗೆಯ್ವೊಡೆ ಗಾಳಿಯುಂ ಕಟುವುಮುಜಿಪ್ಪುಂ ಕಾಪ್ಪುಂ ಮೇಪ್ಪುಂ ತೋಡುಂ ಬೀಡುಂ ದೆಸೆಯುಂ ಕೊಸೆಯುಂ ಮೆಚ್ಚುಂ ಬೆಚ್ಚುಂ ಪೋಗುಂ ಮೇಗುಂ ಬೆದಜುಂ [ಕದಜುಂ] ಪೆರ್ಚುಂ ಕುಂದುಮುನ ಜುದು (ಶಂಪಭಾ. ೫–೪೩ವ). ಮೇಕು₃ : ೮. ಒನಪು: ಬೆಡಗು ;

ಒಯ್ಯಾರ : ಅರಲಂಬನಂಗಡಿ ರತಿಯ ರಾಗದೋವರಿ ಪದಿರ ಪಾಳಯಂ ಮೇಕಿನಾಟೆ ಗಾಡಿಯ ಗಡಿ ಕುವರಿಯುಂಪರಿಯೆನಿಪುದಂಗಜನ ಘಾರಾಘಾರಿ ರಾಜಿಸುವ ಸೂಳೆಗೇರಿ (ಶಕ್ಕರಾ. ೯-೮೬). ೯. ಮೇಲಾಟ ; ಹುರುಡು ; ಪ್ರತಿಸ್ಪರ್ಧೆ : ಇವು ಇವನ ಹಿರಿಮೆಗೆ ತಕ್ಕುದಲ್ಲ. ಇದೆಲ್ಲ ಮಕ್ಕಳಾಟ, ಮಕ್ಕಳ ಮೇಕಿನಾಟ (ಶುಂಗಾಳ. ೦೦೩). ೧೦. ದ್ವೇಷ ; ಸೇಡು : ಆ ರೇವಕ್ಕನ ಮೇಕಿನ ಮೇಲೆ, ಆ ಮಾದನ ಮೇಕಿನ ಮೇಲೆ ಮದುವೆ ಮಾಡಿಕೋತೇನೆ (ಶಿಳುಬು. ೦೦೬).

**ಮೇಮೇಗು, ಮೇಗುಮೇಗು** (ದ್ವಿರುಕ್ತಿ) : ಮೇಮೇಗು, ಮೂಮೂಗು (ಶಬ್ದಾಮ. ೩೯೩ ಪ್ರಯೋ) ; ಮೇಗು ಮೇಗು—ಮೇಮೇಗು (ಕೃಬಿ. ೭೦). **ಮೇಕುಡಾಕು** = ಡೌಲು ; ಆಡಂಬರ : ಅಟವಾಸಿಯು ಮಾಗಿ ಬರುವ ಸಮನಂತರದಿ ಕೂಟಸಾಕ್ಷಿಯಲಿ ನೆತ್ರಗಳನಲ್ಲೆಂಬರತಿ ಮಿಹಾದ ಮೇಕುಡಾಕುಗಳ ತೋರ್ದನಗಿವರು (ಲಕ್ಷ್ಮೀಶಾ. ೨-೩-೩೯). **ಮೇಗಂ ತೋಱು** = ಹೆಚ್ಚೆಂದು ತೋರ್ಪಡಿಸು ; ಮೇಲೆನಿಸು : ಮೇಗಂ ತೋಱದೆ ನಲ್ಮೆಯನಾಗಳುಮೊಲಿದಂತೆಮಾಡಿ ಸುರತೋತ್ಸವದೊಳು ರಾಗವುನೆ ಪಡೆದು ಗೆಯ್ವುದು ಬೇಗಂ . . . ಚದುರವಿಟಂ (ಮದನ. ೯-೦೦). **ಮೇಗಣ್** = ಮೇಲಿನ ದಿಕ್ಕು ; ಮೇಲುಗಡೆ ; ಮೇಲುಭಾಗ : ಅನ್ತೆ ಬನ್ದು ಭಾಣಗಗೆಬೆಯ ಏರಿಯ ಮೇಗಣಂ (ಎಪಿ. IV, ಹಂಣಸ. ೦೩೬—೨೨ ; ೨೧೨ ?) ; ಅಡಿಯಂ ಮೇಗಣ್ಗೆತ್ತುವ ಕಡುಗಾಳಿಯ ಪೊಯ್ಲೊಳಿದಬಿ ನೀರೊಗೆದವುದು (ಆದಿಪು. ೦೩-೩೨) ; ಕಾಗೆ ಮರದ ಮೇಗಣ್ಗೆ ಪೋದುದು (ಕಂಕಹಂ. ೩೦೯-೬). **ಮೇಗಣ, ಮೇಗಳ** = ೧. ಮೇಲಿರುವ; ಮೇಲಿನ: ಕರುಗೋಷ್ಠಿಯ ಪೊಲ ಮೇಲೆ ವಾಯವ್ಯದ ಮಿಡಿಯ ಮೇಗಣ . . . ಪೂಣಾಸಿಯಿನ್ದ ನಕ್ಕಿಕೊಣ್ಪಿಯನ್ದೆ (ಎಪಿ. X (8), ಶಕ್ಕಬಿ. ೦೦೬-೬೮ ; 850); ಮೇಗಣ ನಾಲ್ಕುಜಿಲ್ಕಿದಬಿ ಮೇಗಣ ಭಾಗದೊಳಗುರ್ವು ಘರ್ಮಂ ಓಮದಿಂದಾಗಳೆ ಮುರುಂಟುವರ್ (ಆದಿಪು. ೩-೬೨) ; ಮುತ್ತು ಮಾಣಿಕ ನವರತ್ನ ತೆತ್ತಿಸಿದಂತಿಹ ಉಪ್ಪರಿಗೆ ಮೇಗಳ ಶಿವಾಲಯವ ಕಂಡು . . . ನಿಜಮುಕ್ತಳಾದೆನಯ್ಯ (ಶಿಂಗದ. ೪. ೭೭-೮೦) ; ಕೀಚಯುಗಗಳದಲಿ ಬಾಳರಕ್ತವನೀಂಟುವ ಜಿಗುಳೆಯೊಲಿರ್ಪ ತೊಳ ಮೇಗಳ ಸೀಳ್ಗಳೇನೇ (ಮೋಹತ. ೦೯-೭೭). ೨. ಹೊರಗಿನ ; ಬಾಹ್ಯದ : ರಾಗಿಸಿ ಸಮಯಿಗಳಂ ಕಂಡಾಗಳೆ ಸಂತಜಿಪ್ಪ ಮಾಟ್ಪರಲ್ಲದೆ ಕೊರಲಿಂ ಮೇಗಣ ಮಾತಂ ನುಡಿಯುರದೇಗೆಯ್ದುಂ (ಸಮಸ. ೪-೬೩). **ಮೇಗಳ್ವಣ** = ತೆರಿಗೆಯ ಮೇಲೆ ಕೊಡಬೇಕೆಂದು ಕೇಳುವ ಹೆಚ್ಚಿನ ಹಣ : ಅರಸರ್ಗೆ ಸೇಸೆಯೆನ್ದರಸರ ಕಾಣಿಕೆಗಾಯ ಧರ್ಮಮುಪ್ಪಾದೆಜಿಯೆಂದರುವಣ ಮೇಗಳ್ವಣಮೆನ್ದರೆಗಾಣಿಯುನಕ್ಕೆ ಕೊಣ್ಣವರ್ಟಾಣ್ಣಾಳರ್ (ಸೌಇಇ. XI-ii, ೦೬೩-೬೦ ; 1113). [ ದೇ. ೫ ತಮಿ. ಮೇಕ್ಕು : ತುಳು. ಮೇರ್ ]

**ಮೇಗುಗಾಣ್** (ಕ್ರಿ). ಮುಂದಾಗುವುದನ್ನು ಕಾಣು ; ಭವಿಷ್ಯವನ್ನು ತಿಳಿ : ಅರಸನೀತನ ಭಕ್ತಿಗಂ ವ್ಯವಸಾಯಕ್ಕಂ ಮೆಚ್ಚಿ ತನ್ನ ತಂದೆರ್ಮಗಳೊಳೊಂದುಮಂ ಕೊಳ್ಳದೆ ನೀನೆ ಕೊಳ್ಳೆಂದು ಕೊಟ್ಟೊಡಾ ದಯೆಗೆ ನಯಂ ಬಡೆದೆನೆಂದು ತಲೆಕೆಟಗಾಗಿ ಮೇಗುಗಾಣದೆ . . . ಚಂದ್ರಮತೀಮಹಾದೇವಿಯ ಕೀಲಾರದ ಧೇನುಗಳಂ ಸೂಜಿಗೊಳ್ವಂತೆ ಕೊಂಡುಪೋದೊಡೆ (ಸುಕುಮಾ. ೭-೩೩ ವ). [ ಮೇಗು + ಕಾಣ್ ]

**ಮೇಗುತಿ** (ನಾ). ಜೈನರ ಒಂದು ಬಸದಿಯ ಹೆಸರು : ಮೇಗುತಿ ಎಂಬ ಜೈನದೇವಾಲಯವು ಎರಡನೆ ಪುಲಿಕೇಶಿಯ ಕಾಲದಲ್ಲಿ (ಕ್ರಿ.ಶ. ೬೩೪) ನಿರ್ಮಿತವಾಯಿತು (ಭಾರದ. ೩೦೩) : ಗ್ರಾಮದ ಪೂರ್ವಕ್ಕೆ ಸ್ವಲ್ಪ ಮೇಲ್ಭಾಗದಲ್ಲಿ ಮೇಗುತಿ ದೇವಾಲಯವಿದೆ. ಮೇಗುತಿ ಎನ್ನುವುದು ಮೇಗುಡಿ (ಮೇಲಿನ ಗುಡಿ) ಎಂಬುದರ ಅಪಭ್ರಂಶವೆಂದು ಹೇಳುತ್ತಾರೆ (ವೈಜಾಸ್ತು. ೬೯). [ ? ]

**ಮೇಗುದೋಱ್** 'ಮೇಗುದೋಱು' ನೋ.

**ಮೇಗುದೋಱು, ಮೇಕುದೋಱ್, ಮೇಕುದೋಱು, ಮೇಗುದೋಱ್** (ಕ್ರಿ). ೧. ಮೇಲಾಗಿ ಕಾಣುವಂತೆ ಮಾಡು ; ಹೆಚ್ಚೆಂದು ತೋರ್ಪಡಿಸು ; ಮೇಲೆನಿಸು : ರಾಜ್ಯಲಕ್ಷ್ಮಿಯಂ . . . ದುಸ್ಸಹ ಮಹಾಕಲುಷಕಲುಷಿತಸ್ವಭಾವೆಯೆಂದು ಪರಪುರುಷಕಂಠಗ್ರಹಾನುರಕ್ತಭಾವ ರಸಿಕೆಯೆಂದು ಮನದೊಳೇವಯಿಸಿ ಪುರುಡು ಪುಟ್ಟೆ ಮೇಗುದೋಱಿ ಸಪತಿ ಮಾಡುವಂತೆ . . . ಚಂದ್ರಿಕಾದೇವಿಗೆ . . . ಇತ್ತನಗ್ರಮಹಿಷೀಪದಮಂ (ಕುಕ್ಕು. ೦೩-೭ ವ). ೨. ಆಡಂಬರವನ್ನು ತೋರಿಸು ; ಡೌಲನ್ನು ಪ್ರದರ್ಶಿಸು : ಮೇಗುದೋಱುವಳ್ಳುಳ್ಳು ಪಣಂ ನೊಯ್ವರ್ಮೆಳ್ವಡಂ ನುಡಿವರ್ಥಿದ್ರುಮನೆ ಪಾರ್ವರ್ (ಮದಶ. ೦೦-೬೩). **ಮೇಕುದೋಱ್** : ೩. ಬೀಗು ; ಗರ್ವಿಸು : ಡಾಳನಂ ನೆಗಪು ಟಕ್ಕೆವನಂ ತುಟಿ ಮೇಕು [ಶಾಶಂ. ಗು]ದೋರ್ಪನಂ ಮಾಳಬೆಗಿಕ್ಕು (೦೬ಣಾವ. ೨-೦೭೬). ೪. ಒಯ್ಯಾರವನ್ನು ಮಾಡು ; ಬಿಂಕಮಾಡು : ಕಾಡುವ ಬೇಡುವ ಮೇಕುದೋರ್ಪ . . . ಮನಂಗೊಡದಿರ್ಪ ಕೈತವಂಗಳೊಳಿರುತಾಗಳುಂ ಹಳಿಯುಮಿಲ್ಲದೆಯುಂ ನೆಱೆದಿರ್ದಳೋ ಇವಳ್ (ಶೃಂಗಾರ. ೩-೯೭). **ಮೇಕುದೋಱು** : ೨. ಅನೃತವಾದಿಯೊಳು ಮಾತಿನೊಳ್ಮೇಕುದೋಱುವ ನೊಳಾಡುವುವದು ನೀತಿಯುಲ್ಲಱ ಬೆಲೆವೆಣ್ಗೆ (ಕಂದಾಶಾಂ. ೨೮-೬೯) ; ಬೆಲೆವೆಣ್ಣಿ[ಣ್ಗೆ]ಯದ ಮೇಕುದೋಱುವವನಂ . . ಅವಗಂ ಒಲಿಯರ್ (ಪೀಠಿ. ೬-೦೦೯). ೪. ನೀಱರೊಡನೆ ಮೇಕುದೋಱಿ ಬೇಕಾದ ಭಂಗಾರ ಪಡೆವುದದೇಗೆಯ್ತು (ನಾಗಕು. ೩೦-೦೫೦). ೫. ಸ್ಪರ್ಧಿಸು ; ಪೈಪೋಟಿ ನಡೆಸು : ಮೇಕುದೋಱಿ ಓರೊರ್ವರ ಗುಣಕ್ಕೆ ಮಚ್ಚರಿಸಿ ತೋಱುತ್ತಿರ್ಪರೀ ಕಾಲದರಸುಗಳ್ (ಕಂಕಹಂ. ೩೦-೦೩). **ಮೇಗುದೋಱ್** : ೬. ಮೋಸಮಾಡು ; ವಂಚಿಸು : ಬೆಸವರಿಗೆಯ್ವ ಬೇಸ[ಱ]ಸುವಿತ್ತುದ ನೆತ್ತುವ ಮೇಗುದೋರ್ಪ ಕಂಟಸುವ ಕನಲ್ದ ಕಡ್ಡಯಿಸುವೇಱಿದನಂ ತಿಳಿಪಲ್ ಮನಂಗೊಳಲ್ (ಶಾಂತಿಪು. ೯-೦೦೩). [ಮೇಗು + ತೋಱು]

**ಮೇಗುವೇಱ್** (ಕ್ರಿ). ಮೋಸದ ಮಾತನ್ನಾಡು : ಎನಗಂ ಮೇಗುವೇಱ್ದುಪ್ಪೆಯಿಲ್ಲಾರ್ಪೊಡೆ ನಿನ್ನಂ ಕಾವ ಗಂಧರ್ವರಿ ಬಿಡಿಸುಗೆ ಪೋಗು (ಕಂಕಹಂ. ೮-೭೦). [ಮೇಗು + ಪೇಱ್]

**ಮೇಗುಸಿರ್** (ನಾ). ಏದುಬ್ಬಸ ; ಮೇಲುಸಿರು : 'ಮೇಗುಸಿರಿಡು', 'ಮೇಗುಸಿರ್ಗೊಳ್' ಪರಾ. [ಮೇಗು + ಉಸಿರ್$_2$]

**ಮೇಗುಸಿರಿಡು** (ಕ್ರಿ). ಮೇಲುಸಿರು ಬಿಡು ; ತೇಕು : ಮೇಗುಸಿರಿಡುಗುಂ ತಲೆಯಂ ಬಾಗುಗುಂ ಮುಂಘ್ರಿಗಳು ನಡುಗಳುಂ ಕಂಪಿಸುಗುಂ (ಅಕ್ಕಾಶಾ. ೦೦-೦೬) ; ಮೇಗುಸಿರಿಡುಗುಂ ತಲೆಯಂ ಬಾಗಿರ್ಕುಂ ಮೇಯದಿರ್ಕುಂ (ಅಕ್ಕಾಶಾ. ೦೦-೩೩). [ಮೇಗುಸಿರ್ + ಇಡು$_1$]

**ಮೇಗುಸಿರ್ಗೊಳ್** (ಕ್ರಿ). = ಮೇಗುಸಿರಿಡು : ಬೇಗಮುಸಿರ್ ಮುಟ್ಟಿಗೆವರೆ ಮೇಗುಸಿರ್ಗೊಂಡೊರ್ಮೆಗೊರ್ಮೆಗಗಿವೊಟ್ಟದೆ ಬಂದಾಗಳೆಱಗಿರ್ಪನಂದು ನಭೋಗತಿಯೊರ್ವಂ ನೃಪೇಂದ್ರಪದಸರಸಿಜದೊಳ್ (ಶಾಂತಿಪು. ೯-೬೩). [ಮೇಗುಸಿರ್ + ಕೊಳ್$_1$]

**ಮೇಗುಸಿರ್ವಡು** (ಕ್ರಿ). = ಮೇಗುಸಿರಿಡು : ಮೇಗುಸಿರ್ವಟ್ಟು ಸುಯ್ಯುಂ . . . ಬೇತಾಳನ ಬಸಿಱಂತೆ ಬೆನ್ನಂ ಪತ್ತಿದ ಬಸಿಱುಂಬೆರಸು ಬರ್ಪ ವೃದ್ಧ ತಾಪಸನಂ ಕಂಡು (ಕಂಕಹಂ. ೭೩-೬). [ಮೇಗುಸಿರ್ + ಪಡು$_1$]

**ಮೇಗುಸಿರ್ವಿಡು** (ಕ್ರಿ). = ಮೇಗುಸಿರಿಡು : ಪಂದೆಯಂ ಪಾಮಡರ್ದಂತೆ ಮೇಗುಸಿರ್ವಿಟ್ಟು ಹಮ್ಮುದಂಬೋಗಿ (ಕಂಕಹಂ. ೯೭-೦೬). [ಮೇಗುಸಿರ್ + ಬಿಡು$_1$]

**ಮೇಗೆ** (ಅ). ೧. ಮೇಲಕ್ಕೆ ; ಮೇಲೆ : ನೆಲಕ್ಕೆ ವರುತಿರ್ಪ ವಿಮಾನಂ ಬಾರದೆಡೆಯಿಂದ ಮೇಗೆ ಮಗುಟ್ಟುದುಮಂ . . . ಕಂಡೆನೆಂದು (ವಡ್ಡಾರಾ.

೬೩-೨೪) ; ನಿಜಪಾದಾಂಬುರುಹಕ್ಕೆ ಪಾದ್ಯವಿಧಿಯಂ ನೇತ್ರಾಂಬುವಿಂ ಮಾಡುವಗ್ರಜನತ್ಯುನ್ನತಮಪ್ಪ ಪುಸ್ತಕದ ಮೇಗೋರಂತೆ ಪಾಯ್ವತ್ತು ಬಾಷ್ಪಜಲೌಘಂಗಳಿಂ (ಅಂತ್ಯ. ೦೪-೦೩೩) ; ಆ ಗಿರಿಯ ಮೇಗೆ ರಂಜಿಪು ದತುಳವೀರಶೈವಾಗಮದ ಕೋಂಟೆಯಿಂದಮೃತದಗಳಿಂದೆ . . . ಪುಣ್ಯಂಗಳ ನಿವಾಸಮಘನಾಶಮಾ ಕೈಲಾಸವಾಸಂ (ಕಂತ್ಯ. ೨-೦೨). ೨. ಮತ್ತು ; ಅದರೊಂದಿಗೆ : ಇನ್ನು : ಮಡಗಿನ ಮಣ್ಣ ಮೇಗೆ ಒನ್ದು ಕೊಲಿಮೆಗೆ ಒರ್ಕಣ್ಡುಗ ಮಣ್ಣು (ಸೌಇಇ. IX-i, ೦೪-೦೬ ; 883). ೩. ಮುಂದಕ್ಕೆ; ಮುಂದೆ : ನಿಯಮಿತಕಾಲದುಪರಿತನ ಕಾಲದೊಳ್ ಸೋಕಮರ್ಾ ಹಾರಮುಂಟಪ್ಪುದಱಿಂದಂ ಹಾರತಂಗಳುಮಕ್ಕುಮಲ್ಲಿಂ ಮೇಗೆ ಯಥಾಗತಿ ಪರಿಣತ್ಯನುಸಾರಿಯಾಗಿ ಯೋಜಿಸಿಕೊಂಬುದು (ಕಸಾರ. ೦೦೩೭) ; ಪುರದಿಂ ಪಡುವಲು ತೊಱೆಯ ಕೂಡಿದ ಹಳ್ಳ ನೀರುವರಿವಿ ಮೇರೆಯಾಗಿ ಮೇಗೆ ಕಲುಕಟಗಗೆಱೆ ಬಸವಗೋಡಿ ಬಡಗಲು ಮೊಸರಗುತ್ತಿವಿ ರಾರವಿಡ[ದು] ಮೂಡಲು ಜಂಬೆಗಲ್ಲ ಕಣೆ ಕುಚ್ಚಗೋಡಿಯಿಂ ಬಂದ ಹಳ್ಳ ನೀರುವರಿವಿ (ಎಇ. XXI, ೦೪-೭೬; 1260). ೪. ಬಳಿಕ; ಆಮೇಲೆ; ನಂತರ : ಮದುವೆ ಮಾಡಿದಾ ಮೇಗಾ ಸಂಡಗೆಯ ನೀಡಲಾಗದೆಂಬಮರ್ೂಢರ್ (ಸಮುಕ. ೦೨-೭೪); ಸ್ವಸ್ತಿಶ್ರೀ ಶಕಾಬ್ದ ೧೩೫೫ ಱ ಮೇಗೆ ಸಲುವ ಪ್ರಮಾದೀಚ ಸಂವತ್ಸರದ ವಯಿಶಾಖ ಶು ೧೩ (ಎಕ. IX (S). ಹೊಸಕೋ. ೦೪೪-೨ ; 1433); ಈತ ವೈರೋದ್ಯೋಗಗತಿಗೊಡರಿಸಿದನಾದೊಡೆ ಕಾಗೆ ಹದ್ದಿಗೆ ಪರಹುವೆನು ಕಡಿದೀ ಚತುರ್ಬಲವ ಮೇಗೆ ಬರಲಪಕೀರ್ತಿಯದಕೇನ್ನಿಗಲೆಣಿಕೆ (ಕೊರರಾ. ೨-೬-೦೪). ೫ ಎದುರಾಗಿ; ವಿರುದ್ಧವಾಗಿ : ವಿಭೀಷಣನ ಮೇಗಾಕ್ಷೇಪದಿಂ ಪೋಗಿ ವಸ್ತುಗಳಂ ಕಪ್ಪಮನಲ್ಲಿ ಕೊಣ್ಡು (ಎಕ. VII, ಶಿಕಾ೦. ೦೨೬-೩; 1036). [ < ಮೇಗು ]

**ಮೇಗೆಯ್** 'ಮೇಂಗೆಯ್' ನೋ.

**ಮೇಗೆರೆ** (ನಾ). ಮೇಲೆ ಎಳೆದ ಗೆರೆ,—ರೇಖೆ : ಮೂರ್ತಿಯು ಕಣ್ಮರೆಗಾದರು ಕೀರ್ತಿಯು ಕಣ್ಮರೆಯೋ ? ನೆನವಿನ ಹಿಮಗಿರಿ ಕೊರೆದಿದೆ ಒಲವಿನ ಮೇಗೆರೆಯೋ? (ಅರಳು. ೩೪೦-೨೦).

[ ಮೇ$_2$ ( < ಮೇಲ್$_1$ ) + ಗರೆ ( < ಗೆಱೆ[3] ) ]

**ಮೇಗೈ** 'ಮೇಂಗೆಯ್' ನೋ.

**ಮೇಗೊಗೆ** (ಕ್ರಿ). ಮೇಲಕ್ಕೆ ನೆಗೆ, – ಹಾರು : ನಿಮ್ನನಾಭಿಮಂಡಳ ಮನೊಳಪೊಕ್ಕು . . . ಮೇಗೊಗೆದು ಬಟ್ಟಮೊಲೆಯುಟ್ಟೆಡೆಯೊಳ್ ಬಟ್ಟೆಗಾಣದೆ ಬಳಸಿ ಸುೞಿದಾಡಿಯುಂ ಸಾಯಂತನಸಮಯಸಮೀರಣಂ ಸೌಖ್ಯಸಾರಸರ್ವಸ್ವಮೆನಿಸಿದಾಗಳ್ (ಚಂದ್ರಪ್ರ. ೬-೪೫) ; ಬೆಳೆದನಾ ವೈಕುಂಠಣದಲರೆಗಳಿಗೆಯೊಳು ಮುಗಿಲುಚ್ಚಳಿಸಿ ಮಿಂಗಳಿ ತನಗೆ ಕಣ್ಣಾಲ ಗೆಜ್ಜೆಗಳೆನಿಸಿ ಮೇಗೊಗೆದು (ಶಾಲ್ಯಶಾ. ೦೬-೨೮). [ ಮೇಗೆ + ಒಗೆ$_1$ ]

**ಮೇಗೋಲ್** (ನಾ). (ಕಬ್ಬಿನ) ಜಲ್ಲೆಯ ಮೇಲುಭಾಗ : ಆಗರದೊಳು ರಸದಾಳಿ ತಂಗಾಳಿಯಿಂ ತಾಗಲೊಂದಱೊಳೊಂದು ಹಳಚಿ ಮೇಗೋಲ್ಗಳೊಡೆದಿನಿರಸದ ಪರಿಯೊಳಿಕ್ಷುಸಾಗರ ತುಂಬಿದಂತಾಯ್ತು (ಮೋಹಕ. ೨-೪೮).

[ ಮೇ$_2$ ( < ಮೆಸಿಲ್$_1$ ) + ಕೋಲ್$_1$ ]

**ಮೇಘ** (ನಾ). ೧. ಮೋಡ ; ಮುಗಿಲು: "ವಾರಿಧರಮಬ್ದಮಭ್ರಂ . . . ಜೀಮೂತಮೆನಲು ಮೇಘಕ್ಕೆ ಪಾಮಂ" (ಮಂಗರಾ, ೧೩-೩); ಮೇಘ ಮುಖರೆನಿಸಿ ಸಂದುರಘೌಘದಿನಂದೋಘಮೇಘಮುನೊಡೆ ಮುೞಿ ಶೌರ್ಯಾಘಾತಂ ನೆಗೞ್ದ ಬಲವ್ಯಾಘಾತಂ ನಿನ್ನ ಪತಿಗಾದುದು ಪೇಸಿಯೋ (ಅಂತ್ಯ. ೦೪-೭೧); ಆಲದಮರದವೊಲೊಗೆದು ವಿಶಾಲತೆಯಿಂ ವರ್ತಿಪ್ಪ ಮೇಘದಿಂ ಮುೞಿಯುಕ್ಕುಂ (ಅಟ್ಟಮ. ೬-೨೦); ಬೆಟ್ಟದ ಬುಡದಲ್ಲಿ ತರೆತರೆಯಾಗಿ ಹೊಯ್ದಾಡುತ್ತಿದ್ದ ಮೇಘಗಳು ಕ್ಷಣಕ್ಷಣಕ್ಕೂ ಹೆಚ್ಚು ಹೆಚ್ಚು ಕಪ್ಪಾಗುತ್ತಿದ್ದುವು (ಮರಿಣಾ. ೩೦). ೨. ಗುಂಪು : ರಾಶಿ : ಮೊತ್ತ. ೩. ಪರಿಮಳಯುಕ್ತವಾದ ಒಂದು ಬಗೆಯ ಹುಲ್ಲು ; ಕೊನ್ನಾರಿ. ೪. ಒಂದು ಬಗೆಯ ಔಷಧದ್ರವ್ಯ; ಅಜಾಜಿ : "ಅಜಾಜಿ :–ಎಲೆಗಳ್ಳಿ, ಜೀರಿಗೆ, ಮೇಘ, ಓಮ" (೬ಶಂ. ೨). ೫. ಕಾಗೆಬಂಗಾರ ; ಅಭ್ರಕ. ೬. [ಸಂಗೀತ] ಒಂದು ರಾಗದ ಹೆಸರು : ತಾನು ಮೊದಲವು ಮುನ್ನವವಱೊಳು ಗಾನವೊಪ್ಪುವ ದಂಡಿಗೆಯನವಧಾನಿಸುತ ಮಿಗೆ ಮೇಘ ಚಾಳವನೊಡನೆಯಗೌರಾಣ . . . ಪೊಟ್ಟವಣಿ ಸಾರಣಮುಂದಿರ್ದರಲು (ಬಸವು. ೦೯-೪). [ ಸಂ. ]

**ಮೇಘಕಾಲ** (ನಾ). ಮೋಡಗಳು ಮಳೆಯನ್ನು ಸುರಿಸುವ ಸಮಯ; ಮಳೆಗಾಲ ; ಇದಮೋಘಂ ಮೇಘಕಾಲಂ ಬರೆ ಗಗನಗೃಹದ್ವಾರದೊಳ್ ತೋರಣಂ ಕಟ್ಟಿದುದೋ . . . ಎಂಬಿನಂ ಕಣ್ಗೆಸೆದುದು ಶಬಲ ಚ್ಛಾಯೆಯಿಂ ಶಕ್ರಚಾಪಂ (ಕಂರಾಮಾ. ೭-೦೪೩). [ ಸಂ. ]

**ಮೇಘಕುಸುಮ** (ನಾ). ಮೋಡದಿಂದ ಹುಟ್ಟುವಂಥದು ; ನೀರು : "ಅಂಭಸಮಂಬು ತೋಯಂ ಜಲಂ ಜೀವನಂ ಮೇಘಕುಸುಮಮುದಕಂ" (ಮಂಗರಾ. ೦೦೯-೦). [ ಸಂ. ]

**ಮೇಘಘಟೆ** (ನಾ). ಮೋಡಗಳ ಗುಂಪು,— ಸಮೂಹ : ಮರಸಂ ಮುಟ್ಟಿದನಿಲ್ಲ ಮೇಘಘಟೆಯೊಳ್ಕಾಲಿಕ್ಕಿದನಿಲ್ಲಿಲ್ಲ ಭೂಧರಮಂ ದಾಂಟಿದನಿಲ್ಲ (ಅರ್ಜನೀ. ೬-೨೬). [ ಸಂ. ಮೇಘಘಟಾ ]

**ಮೇಘಚುಂಬಿ** (ಗು). ಗಗನವನ್ನು ತಾಕುವ; ಮುಗಿಲು ಮುಟ್ಟುವ : ರಾಯನಡಿದಾವರೆಗೆ ತನ್ನ ಪಣೆಮಣಿಯೊಡ್ಡಿ ತಲೆ ನಿಮಿರ್ದುದಾ ಮೇಘ ಚುಂಬಿಶೃಂಗೋತ್ತಮಂ(ಶ್ರೀರಾಮಾ. ೩೩೩-೩೪೪). [ ಸಂ. ಮೇಘಚುಂಬಿನ್ ]

**ಮೇಘಜ್ಯೋತಿ** (ನಾ). ಮುಗಿಲುಗಳ ಪರಸ್ಪರ ಘರ್ಷಣೆಯಿಂದುಂಟಾಗುವ ಬೆಳಕು ; ಮಿಂಚು ; ವಿದ್ಯುತ್ತು : "ಮೇಘಜ್ಯೋತಿಃ, ಇರಮ್ಮದಃ — ೨ ಮೇಘದೊಳಗಿರುವ ತೇಜಸ್ಸಿನ ಹೆಸರುಗಳು" (ಸಿದ್ಧಾಂತಿ. ೨೪). [ ಸಂ. ಮೇಘಜ್ಯೋತಿಸ್ ]

**ಮೇಘಡಂಬರ** (ನಾ). ೧. ಮೋಡಗಳ ಸಮೂಹ,– ಗುಂಪು. ೨. ಮೋಡಗಳ ಪರಸ್ಪರ ಘರ್ಷಣೆಯಿಂದುಂಟಾಗುವ ಧ್ವನಿ; ಗುಡುಗು : ಗಭೀರದುಂದುಭಿರವಂ ಮೊೞಗಂ ಮಿಗೆ ಮೇಘಡಂಬರಂ ಘಟಿಯಿಸೆ ಮೇಘಡಂಬರಮನೇಂ ಕಱದತ್ತೊ ವಿಭೀಶಿಯೆಂಬ ಪರ್ಮಟಿಯಂ (ಚಂದ್ರಪ್ರ. ೦೦-೨೬). ೩. ಆತಪತ್ರ; ಕೊಡೆ; ಛತ್ರಿ : "ತಟ್ಟೆ, ಕೊಡೆ, ಮೇಘಡಂಬರಂ — ಈ ೩ ಆತಪತ್ರಂ" (ಕಶಾ. ೬೦-೩೨೬); ತಲೆವಱಿದಾನೆ ಸುತ್ತಿ ಪಲವುಂ ಬರೆ ತಳ್ತಿರೆ ಮೇಘಡಂಬರಂ . . . ಬರ್ಪಲಘುಪರಾಕ್ರಮಂ ದಶರಥಂ (ಕಂರಾಮಾ. ೫-೦೦೪); ಎತ್ತಿದ ಶೀಲಿಯ ಸತ್ತಿಗೆ ಮುತ್ತಿನ ಕೊಡೆ ಮೇಘಡಂಬರಂ ಗಲೆ . . . ಬರುತ್ತಿರ್ದುದು ಜನಕೆ ಪೆಂಡವಾಸದ ತಂಡಂ (ಜಗಾ. ೦೪-೫೨); ಎಳೆಮುತ್ತಿನ ಮೇಘಡಂಬರಂ ಬಗೆಗೊಳಿಕುಂ (ರಾಜಶೇ. ೬-೦೫). [ ಸಂ. ]

**ಮೇಘದ್ವಾರ** (ನಾ). ೧. ಆಕಾಶ; ಗಗನ : "ವಿಹಾಯಸಃ, ನಾಕಃ . . . ಮೇಘದ್ವಾರಂ, ಮಹಾಬಿಲಂ—೭ ಆಕಾಶದ ಹೆಸರುಗಳು" (ಸಿದ್ಧಾಂತಿ. ೨೬). ೨. ಸ್ವರ್ಗ. [ ಸಂ. ]

**ಮೇಘನಂದಿ** (ನಾ). ಒಬ್ಬ ಜೈನಯತಿಯ ಹೆಸರು : ಶ್ರೀ ಮೇಘನನ್ದಿ ಮುನಿ ಜ್ಞಾನ್ನಮಿಲೂರ್ವ್ವರಸಂಘದಾ × × × ತೀರ್ಥದಿ ಸಿದ್ಧಿಯಾನ್ (ಎಕ. II. ೦೦೪-೦; ಕು. 700). [ ಸಂ. ಮೇಘನಂದಿನ್ ]

**ಮೇಘನಾದ** (ನಾ). ೧. = ಮೇಘಡಂಬರ ೨. ೨. ವರುಣನ ಹೆಸರುಗಳಲ್ಲಿ ಒಂದು. ೩. ರಾವಣನ ಮಗ ; ಇಂದ್ರಜಿತು. ೪. ಘಟೋತ್ಕಚನ ಮಗ : ಈ ಘಟೋತ್ಕಚನ ತನುಸಂಭವಂ ಒಡವನೇ ಮೇಘನಾದಂ (ಕೃವಿಜಾ. ೦೨-೭೪). ೫. ಮುತ್ತುಗದ ಮರ , ಪಲಾಶ : ಸುರೂಪೆಯು ಪಾಣ್ಬೆಯು ಮೇಘನಾದ

ದಿಂದಿರೆಯು . . . ಕಂಡದಪ್ಪಿನೀವರನಭಿಧಾನವುಂ ತಳೆದ ಘೂರುಹಮೊ ಪ್ಪುಗುಂ (ರಾಜಶೇ. ೩-೩೭). ೬. ಒಂದು ಬಗೆಯ ಸಸ್ಯ. [ಸಂ.]

**ಮೇಘನಾದಿ** (ನಾ). ಒಂದು ಬಗೆಯ ಸೊಪ್ಪು : ಕಿರುಕುಸಾಲೆ : "ಕಿಱುಕುಸಾಲೆಯುಂಪುದಕ್ಕುಂ ನಿರುತಂ ತಾಂ ಮೇಘನಾದಿ" (ಕರಿಶಂ. ೭೦). [ಸಂ. ಮೇಘನಾದಿನ್]

**ಮೇಘನಿನದ** (ನಾ). ೧. = ಮೇಘಡಂಬರ ೨ : ಪಂಗೋಪಾಲಪದಕ್ಕೆ ತೂರ್ಯಪಟುಘೋಷಂ . . . ಕಳಹಂಸಯೂಥಗಮನೋದ್ಯೋಗಕ್ಕೆ ಭೇರೀಗಭೀರರವಂ ತಾನೆನೆ ನವ್ಯ ಮೇಘನಿನದಂ ಪೊಣ್ಮಿತ್ತು ರೋದೋಂತ ದೊಳ್ (ಜಗ. ೯-೮). ೨. ಒಂದು ಬಗೆಯ ಸೊಪ್ಪು : ಕಿರು ಕುಸಾಲೆ : (೬). [ಸಂ.]

**ಮೇಘನಿರ್ಘೋಷ** (ನಾ). = ಮೇಘಡಂಬರ ೨. [ಸಂ.]

**ಮೇಘನಿಸ್ವನ** (ನಾ). = ಮೇಘಡಂಬರ ೨ : ಪರೆವ ಕಱು ಮುಗಿಲ್ ಕರತಳಾಹತಿಯಿಂ ಪಱಿದೊಕ್ಕ ಮುಕ್ತಿಕಾಭರಣದ ಮುತ್ತುಮಾಲಿವರಲಾ ಸುಗಳಧ್ವನಿ ಮೇಘನಿಸ್ವನಂ (ಸೂಕ್ತಿಸು. ೧೧-೨೦೩).  [ಸಂ.]

**ಮೇಘಪರ್ವತ** (ನಾ). ಕುಲಪರ್ವತಗಳಲ್ಲಿ ಒಂದು : ಶಂಖಕೂಟ . . . ಮೇಘಪರ್ವತ ಹೇಮುಪ್ರಭಾ ವರಾಹಗಿರಿ ಮಯೂರನಗ ಚಾರುಧಿಶ್ಯಲೇಂದ್ರ ವೆಂಬ ಹದಿನೇಳು ಕುಲಗೋತ್ರಂಗಳೇ ಪೂರ್ವೋಕ್ತ ಸುಪಾರ್ಶ್ವವೆಂಬ ಕೀಲಕ ಪರ್ವತಕ್ಕೆ ಬಡಗಣದಿಕ್ಕಿನಲಿಹವು (ಐವೇಶ. ೧೭೩). [ಸಂ.]

**ಮೇಘಪಾಷಾಣ** (ನಾ). [ಜೈನ] ಮುನಿಗಳ ಒಂದು ವರ್ಗ : ಗಚ್ಛ ಗಳು : ಪೊಗು, ಪುಸ್ತಕ, ತಗರಿಗಲ್, ಸರಸ್ವತಿ . . . ಮೇಘಪಾಷಾಣ (ಶಾಸಂ. ೮೬). [ ? ]

**ಮೇಘಪುಷ್ಪ** (ನಾ). ೧. = ಮೇಘಕುಸುಮ : "ಅಪಃ (ಪ್), ತೋಯಂ, ಘನರಸಂ, ಪಯಃ, ಪುಷ್ಕರಂ, ಮೇಘಪುಷ್ಪಂ . . . ಜೀವ ನೀಯಂ—ಈ ೨೬ ನೀರ್" (ಹಲಾಯು. ೦೦೭-೨೩) ; ಹರಿಸದಿ ಮೇಘ ರಂಜಿಗೆ ಮೇಘಪುಷ್ಪವ ತೂರೆದ ಮೇಘದ ತೆಜಿನಾಯ್ತು (ತ್ರಿಶಾಂ. ೩-೯೭). ೨. ವಿಷ್ಣುವಿನ ನಾಲ್ಕು ಕುದುರೆಗಳಲ್ಲಿ ಒಂದು : ಎಡಗಡೆ ಯಲ್ಲಿ ಕಟ್ಟಿರುವುದು ವೇಗದಲ್ಲಿ ಮೇಘಪುಷ್ಪವೆಂಬ ಕುದುರೆಗೆ ಸದೃಶ ವಾದದ್ದು (ವಕಶಾ. ೨೦೮). [ಸಂ.]

**ಮೇಘಮಲ್ಲಾರ** 'ಮೇಘಮಲ್ಹಾರ' ನೋ.

**ಮೇಘಮಲ್ಹಾರ್** 'ಮೇಘಮಲ್ಹಾರ' ನೋ.

**ಮೇಘಮಲ್ಹಾರ.** ಮೇಘಮಲ್ಲಾರ. ಮೇಘಮಲ್ಹಾರ್ (ನಾ). [ಸಂಗೀತ] ಒಂದು ರಾಗದ ಹೆಸರು : P ಈ ರಾಗವನ್ನು ಹಾಡಿದರೆ ಮಳೆ ಸುರಿಯುವುದೆಂಬ ನಂಬಿಕೆಯಿದೆ : ನಮ್ಮಲ್ಲಿ . . . ಅಮೃತ ವರ್ಷಿಣಿ ಮತ್ತು ಮೇಘಮಲ್ಹಾರ ರಾಗಗಳು ಮಳೆ ಬರಿಸುವುದು ಮುಂತಾದ ಭಾವನೆಗಳೂ ಅದರ ಕಥೆಗಳೂ ಇವೆ (ಶಾರದ. ೩೯೯). **ಮೇಘಮಲ್ಲಾರ** : ಮೇಘಮಲ್ಲಾರದಲ್ಲಿ ಜಗತ್ತಿನ ಎಲ್ಲ ಮಳೆಯ ಅಶ್ರು ಪಾತಧ್ವನಿ ಸೇರಿ ಅದೇ ಒಂದು ನವತರ ಭಾಷೆಯಾಗುತ್ತದೆ (ಚಿಂದ. I, ೨೭೧). **ಮೇಘಮಲ್ಹಾರ್** : ಮೇಘಮಲ್ಹಾರ್ ಹಾಡಿ ಮಳೆ ಬರುವಂತೆ . . . ಮಾಡಿದ ತಾನಸೇನರ ಕಥೆಗಳನ್ನು ಕೇಳದವರಿಲ್ಲ (ಸಂಗೀತಂ. ೨೦೩) ; ಮೇಘಮಲ್ಹಾರ್ ಅಂತ ಹಿಂದೂಸ್ಥಾನಿಯವರು ಹೇಳುವ ಒಂದು ರಾಗ ವನ್ನು ಕೆಲವು ದಿನದ ಹಿಂದೆ ನಾನು ಕೇಳಿದ್ದೇನೆ (ರೂರಸ. ೩೮).

[←ಮರಾ. ಮೇಘಮಲ್ಹಾರ್. / ಸಂ. ಮೇಘಮಲ್ಲಾರಿಕಾ]

**ಮೇಘಮಾರ್ಗ** (ನಾ). ಆಕಾಶ : ನಾಕಜರಸರ್ಕಲಂಬಿಡದದೇಂ ನಡೆ ಗೊಂಡರೊ ಮೇಘಮಾರ್ಗದೊಳ್ (ಜಗ. ೦-೯೦). [ಸಂ.]

**ಮೇಘರಂಜಿ** (ನಾ). [ಸಂಗೀತ] ಒಂದು ರಾಗದ ಹೆಸರು : ಸರಸ ಬಿಕಾಲಾಬಿಯ ಸವಿವಾಡುಗೇಳ್ದರಲೇಱುದು ನವಮೇರು ಹರಿಸದಿ ಮೇಘ ರಂಜಿ[ಪಾಠಾಂ. ಪಿ]ಗೆ ಮೇಘಪುಷ್ಪವ ತೂರೆದ ಮೇಘದ ತೆಜಿನಾಯ್ತು (ತ್ರಿಶಾಂ. ೩-೯೭) : ಮೇಘರಂಜಿಯನೊರ್ವ ನಾಲಾಪಿಸಿದರೆ ನಿದಾಘ ಕಾಲದೊಳು ತತ್‌ಕ್ಷಣವೆ ಮೇಘ ಕವಿದು ಮಳೆಗಱೆವುತಿರಲು ಕಂಡು ಮೇಘರಂಜಿಯ ನಿಲಿಸಿದನು (ಭರತ. ೭೮-೮). [ಸಂ. ಮೇಘರಂಜೀ]

**ಮೇಘರಂಜನಿ** (ನಾ). = ಮೇಘರಂಜಿ : ಕೌಶಿಕ ವೇಳಾವಳಿ . . . ಮೇಘ ರಂಜನಿ [ಪಾಠಾಂ. ಮೇಘರಂಜಿ] . . . ಎಂಬ ಮೂವತ್ತುನಾಲ್ಕು ಭಾಷಾಂಗದಿಂದಾದ ರಾಗಂಗಳು (ಶಿವೇಶ. ೦೬೬). [ಸಂ. ಮೇಘರಂಜನೀ]

**ಮೇಘಲೋಕ** (ನಾ). ಆಕಾಶ ; ಗಗನತಳ : ಸಂಧ್ಯಾಶಿಲ್ಪಿಯು ಸುವರ್ಣ ಯಕ್ಷಿಣಿ ಮೇಘಲೋಕಕೆ ಓಕುಳಿಯೆರಚಿದೆ (ಕಕ್ಷಿಕಾ. ೬೭-೨). [ಸಂ.]

**ಮೇಘವಣ್ಣಿಗೆ** (ನಾ). ೧. = ಮೇಗವಣ್ಣಿಗೆ ೧. ೨. ಆಕಾಶಬಣ್ಣದ ಒಂದು ಬಗೆಯ ರೇಷ್ಮೆಬಟ್ಟೆ : ಅಲ್ಲಲ್ಲಿ ಕಟ್ಟಿದ ಪುಲ್ಲಿಯ ಪಟ್ಟೆಗಳ ಮೇಲೆ ಬಳಸಿದ ಮೇಘವಣ್ಣಿಗೆಯ ಚೌಕದ ವಿಳಾಸದ ಕಥಾಯಿಯ ಸುಚ್ಚ ಮಯನೀವ ಪಚ್ಚೆಯ ಪಟ್ಟೆಗಳ (ಗಂಕ. ೦೦-೨೮ ವ) ; ಪಳ ಪಟ್ಟೆ ಪುಲ್ಲಿ ಚೀನಾಂಬರ ದಸರಿಗಬ್ಬುಳಗಂಡಿ ಮೇಘವಣ್ಣಗೆಯ ತಲೆಯ ಮೇಲೆಲ್ಲರ್ಗೆ ಕಱೆದರು ವಸ್ತ್ರದ ಮಳೆ ತಾನೆ ಕಱೆದುದೆಂಬಂತೆ (ಭರತ. ೭೩-೦೦೩) ; ವಿಶಾಲವಾದ ಸ್ತಂಭಗಳ ನಡುವೆ ಮೇಘವಣ್ಣಿಗೆಯ ಮೇಲುಕಟ್ಟು, ಚೌಕ ವಿಲಾಸದ ಕಡೆಗಟ್ಟು . . . ನೇತ್ರಾವಳಿ, ರತ್ನಾವಳಿಗಳಿಂದ ಮಂಟಪ ಸುಂದರವಾಗಿ ರಾರಾಜಿಸುತ್ತಿತ್ತು (ಗಂಸ. ೦೨೩).

[ಮೇಘ + ಬಣ್ಣಿಗೆ₁. / ತೆಲು. ಮೇಘವನ್ನೆ]

**ಮೇಘವರ್ಣ** (ನಾ). ಮುಗಿಲಿನ ಬಣ್ಣ ; ಬೂದುಬಣ್ಣ. [ಸಂ.]

**ಮೇಘವಹ್ನಿ** (ನಾ). ಮುಗಿಲುಗಳ ಪರಸ್ಪರ ಘರ್ಷಣೆಯಿಂದ ಭೂಮಿಗೆ ಇಳಿಯುವ ವಿದ್ಯುತ್ಪ್ರವಾಹ ; ಸಿಡಿಲು ; ಅಶನಿ : "ಮೇಘವಹ್ನಿಃ, ಇರಮ್ಮದಃ—ಈ ೨ ಮುಗಿಲ ಕಿಚ್ಚು" (ಹಲಾಯು. ೧೩-೭೦) ; ಮೇಘ ವಹ್ನಿ ಧರೆಗೆಱಗುತ್ತ ಲೋಕವ ಬೆಸಗೊಂಡಿತ್ತೆ (ಅವತಂ. ೨೪೭-೦೦೨೩). [ಸಂ.]

**ಮೇಘವಾಹನ** (ನಾ). ೧. ಮುಗಿಲನ್ನು ವಾಹನವಾಗಿ ಉಳ್ಳವನು : ಇಂದ್ರ : "ಇಂದ್ರಃ . . . ಮರುತ್ವಾನ್, ಮೇಘವಾಹನಃ—ಈ ೩೯ ದೇವೇಂದ್ರನ ಪೆಸರ್" (ಹಲಾಯು. ೦೦-೩೨) : ಸ್ವಸ್ತಿಸಮಸ್ತಜಗದ್ವಿನಮಿತ ವೀರ್ಯ್ಯರುಂ ಭೂದೇವಿಲಬ್ಧವರಪ್ರಸಾದರುಂ ಮೇಘವಾಹನಪ್ರಸಾದ ಜನಿತಜೀವನರು . . . ಎಂಭತ್ತನಾಲ್ಕುಲಕ್ಷಯೋನಿಮುಖಜೀವಕ್ರಾದ ರರುಂ ಎಲ್ಲಾ ಸಮಯಕ್ಕುತ್ತವರ್ಣಸಿಯನಿಪನುಂ (ಎಕ. IV (R), ಶಾಮಲಾ. ೨೬೮-೦೦ ; 1289). ೨. ಶಿವ ; ಈಶ್ವರ. [ಸಂ.]

**ಮೇಘವಿಸ್ಫೂರ್ಜಿತ** (ನಾ). ೧. = ಮೇಘಡಂಬರ ೨. ೨. [ಛಂದ] ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸು ಗಳಲ್ಲಿ ಹತ್ತೊಂಬತ್ತನೆಯದಾದ, ಅತಿಧೃತಿಯೆಂಬ ಛಂದಸ್ಸಿನ ಒಂದು ವೃತ್ತ : ವಸಕ್ಷ್ಮಾನಾಕೇಂದ್ರಂ ಹುತವಹಸಖಂ ವಹ್ನಿಯುಗ್ಮಂ . . . ಜನಪ್ರಖ್ಯಾತಂ ಸೂತ್ರಂ ಬುಧಜನಹಿತಂ ಮೇಘವಿಸ್ಫೂರ್ಜಿತಾಖ್ಯಂ (ಛಂದೋಂಬು. ೨-೦೭೨). [ಸಂ.]

**ಮೇಘಶಿಖಾವಹ** (ನಾ). = ಮೇಘವಹ್ನಿ : ಗಜದಱಿಂ ಮುಗಿಲ್ ಗಜಱಿ ಗರ್ಜಿಪ ರುಂಡಕದೆಂಬ ಘೋಷಂ . . . ಘಾಲಿಶಿಖಿ ಮೇಘಶಿಖಾವಹನಾಗೆ ನರ್ತಿಪಂ ಗಜಱಿಪವೊಲ್ ಘನಾಗಮಮುದೇಂ ಬಗೆಗೊಂಡುದೊ ನೋಟಕ ರ್ಗಳಾ (ರಾಜಶೇ. ೮-೦೦೭). [ಸಂ.]

**ಮೇಘಶ್ಯಾಮಳ** (ಗು). ಮೋಡದಂತೆ ನೀಲಮಿಶ್ರಿತ ಕಪ್ಪಾಗಿರುವ ; ಶ್ಯಾಮವರ್ಣದ : ಮೇಘಶ್ಯಾಮಳಾಂಗಂ ತ್ರಿಭಂಗದಿನಿಂಬಾಗಿರೆ . . . ತಾನಾಗಳಾಡಿದಳ್ . . . ಕನ್ನೆ ರೋದೋಂತದೊಳ್ (ಜಗ. ೩-೦೭).

[ಸಂ. ಮೇಘಶ್ಯಾಮಲ]

**ಮೇಘಾಗಮ** (ನಾ). ಮೋಡಗಳು ಮಳೆಯನ್ನು ಸುರಿಸುವ ಕಾಲ : ಮಳೆಗಾಲ : ಉದ್ದಾಮನಿದಾಘಮಂ ಬೆದಱೆ ಬೆಂಕೊಂಡತ್ತು ಮೇಘಾಗಮಂ (ಕಾದಂಬ. ೩೩೦); ನಿದಾಘಘೋಷನ ಹಿಡಿದು ಹೆಕ್ಕಳಿಸಿದನು ಮೇಘಾಗಮಮಹೀಪಾಲ (ತೊರವೆ. ೪-೬-೪). [ಸಂ.]

**ಮೇಘಾಧ್ವ** (ನಾ). ಆಕಾಶಮಾರ್ಗ ; ಗಗನ : ಮೇಘಾಧ್ವದೆ ಪರಬಲ ಶಬಲೌಘದ ಭಟಕೋಟಿ ಕಱೆವ ಶಸ್ತ್ರಾಸ್ತ್ರಚಯಂ ಜ್ಯಾಘಾತಜಾತ ಪವನ ವ್ಯಾಘಾತದೆ ಮಸುಳಲಸುರಪರನಿಸುತಿರ್ದುಂ (ಜಗನ್ನಾ. ೦೬-೮೪).

[ಸಂ. ಮೇಘಾಧ್ವನ್]

**ಮೇಘೇಶ್ವರ** (ನಾ). ಮುಗಿಲುಗಳ ಒಡೆಯ ; ಇಂದ್ರ : ಜಯನ ಭುಜವಿಜಯಸೂಚಕವಾಗಿ ಮೇಘನಾದಸಮಾನಮಾದ ಸಿಂಹನಾದಕ್ಕೆ ಚಕ್ರವರ್ತಿ ಮೆಚ್ಚಿ ಮೇಘೇಶ್ವರ [ಪಾಠಾಂ. ಮೇಘಸ್ವರ]ನಾಮಮಂ ವೀರಾಗ್ರಗಣ್ಯ ಪದವಿಯುಂ ದಯೆಗೆಯ್ದು (ಆದಿಪು. ೦೩-೬೭ ವ). [ಸಂ.]

**ಮೇಚಕ** (ಗು). ೧. ಕಡುನೀಲಿ ಬಣ್ಣದ : ದಟ್ಟನೀಲಿಯ ಬಣ್ಣದ. ೨. ಕಪ್ಪು ಬಣ್ಣದ; ಕರಿಯ : ಆ ವಿಕಚ ಮೇಚಕೋತ್ಪಲಲೋಚನೆಯರೊಳಾ ವಿಮುಕುಲಕಮಲದಲವಿಲೋಲಲೋಚನಂ . . . ನೆರೆದಿರೆ (ಆದಿಪು. ೮-೨೩ ವ); ಭೃಂಗಚಯಕ್ಕೆ ಮೇಚಕೋದಂಚಿತ ದರ್ಪಮುಬ್ಬರಿಸದಿರ್ಕೆ (ಚಂದ್ರಪು. ೭-೭೬); ಮುರಿದ ಮೀಸೆಯ ಮೇಚಕಾದ್ರಿಯ ಸರಿಸದವನವನೀಗ ಮುಂಡೋದರಿಯ ಮಗನು (ತೊರವೆ. ೬-೯-೮). (ನಾ). ೩. ಕಡುನೀಲಿಬಣ್ಣ ; ದಟ್ಟವಾದ ನೀಲವರ್ಣ : ನಾಚಿ ನೇಜಿಲಫಲ ಮೇಚಕವಾಗಲು (ಕರಮಾ. ೩-೨೯). ೪. ಕಪ್ಪುಬಣ್ಣ : "ಅಸಿತಂ, ಶಿತಿಃ, ಕೃಷ್ಣಂ, ಕಾಳಂ, ನೀಳಂ, ಮೇಚಕಂ_ಈ ೬ ಕರಿದು" (ಹಲಾಯು. ೦೨೦-೪೯); ಘೋರಾಂಧಕಾರಕ್ಕೆ ಮಾಡಿದ ಕೂಪಂ . . . ತಾನೆ ದಲೆಂಬಂತಿರೆ ಕಾಚಮೇಚಕಚಯಚ್ಛಾಯಾಂಬುವಿಂ ಗುಣ್ಪಿನಿಂ ಪುದಿದಿರ್ದತ್ತು ಸರೋವರಂ (ಶಂಕರಾ. ೦೩-೭೨); ತೊಲಗೆ ರಜಂ ತಮಮುದು ಪೊಱತೊಲಗುವಂತೆಸೆಯೆ ಮೇಚಕಂ ಚೂಚಕಂ (ರಾಜಶೇ. ೪-೩೩). ೫. ದಟ್ಟವಾದ ಹಸುರುಬಣ್ಣ : ಮಂಗಳಮಾಗಳುಂ ನೆಲಸಿದಾ ಜಿನಗೇಹದ ಪಂಚರತ್ನಕೂಟಂಗಳ ತಳ್ತ ಮೇಚಕಮರೀಚಿಲತಾಳಿಯ ಪರ್ವಿನಿಂ ನಭೋರಂಗಮದೊಪ್ಪಿ ತೋಱಿದುದು (ರೇಣಾವ. ೮-೬೭). ೬. ನವಿಲು ಗರಿಯಲ್ಲಿರುವ ಕಣ್ಣು ; ಚಂದ್ರಕ : "ಚಂದ್ರಕಃ, ಮೇಚಕಃ _ಈ ೨ ಹೀಲಿಯ ಕಣ್ಣು" (ಹಲಾಯು. ೪೦-೮೯); ಆ ಪುರುಷಕೇಕಿ ಬರ್ಹಿಣಿಯ ಸಮ್ಮುಖದಿ ಬಿರ್ಚುತೆ ಕಲಾಪಮೇಚಕಸಹಸ್ರಂಗಳಂ ರಚಿಸಲನುಗೆಯ್ದಪುದು ಪ್ರಣಯಮಯನರ್ತನದಿ ದೇವಾಪ್ಸರಾಲಾಸ್ಯಮಾಯನಂದನೋದ್ಯಾನಮಂ (ಚಿತ್ರಾಂಗ. ೩೪-೦೪೬೭). ೭. ಮೋಡ ; ಮುಗಿಲು. ೮. ಕತ್ತಲೆ ; ಅಂಧಕಾರ. ೯. ಕೃಷ್ಣಪಕ್ಷ : ಮೇಚಕಚತುರ್ದಶಿಯ ರಾತ್ರಿಯಲಿ ಮಾತ್ರಮಾ ಮೇಚಕಾಷ್ಟಮಿಯ ರಾತ್ರಿಯೊಳಾರ್ದ್ರೆಯಲ್ಲಿ ಬಿಡದಾಚರಿಸಿಯಕ್ಷತೆಯನರ್ಚಿಸಲ್ಕಧಿಕ ಫಲಂ (ಚತುರ್ಮು. ೬-೪-೩೯). [ಸಂ.]

**ಮೇಚಕತೆ** (ನಾ). ಕಪ್ಪುಬಣ್ಣ : ತದ್ವನಿತೆಯ ಹೃದಯದ ಕಾಳಿಕೆಯೆನೆ ಸೊಗಯಿಸಿದತ್ತು ಮೇಚಕತೆ ಚೂಚುಕದೊಳ್ (ಚಂದ್ರಪು. ೩-೮೭). [ಸಂ.]

**ಮೇಚಕಿತ** (ಗು). ೧. ಕಡುನೀಲಿಯ ಬಣ್ಣದ ; ದಟ್ಟವಾದ ನೀಲವರ್ಣದಿಂದ ಕೂಡಿದ : ಉತ್ತುಂಗಮಣಿವಿಭೂಷಣಮರೀಚಿಮೇಚಕಿತ ದೇವಾಂಗನಾನಿಕಾಯಸಮೇತನಿಶಾನ ಕಲ್ಪದಕೃತ್ರಿಮಚೈತ್ಯಾಲಯಂಗಳಂ ಅರ್ಚಿಸಿ (ಆದಿಪು. ೨-೬೯ ವ); ಬಿಸ್ವದೋ ಮುಗಿಲೆನೆ ದಂತಿದಾನರಸಮೇಚಕಿತಾಂಬುಸರಂ ವಿರಾಜಿಕುಂ (ಚಂದ್ರ. ೨-೩೦). (ನಾ). ೨. ಕಪ್ಪು ಮಿಶ್ರಿತವಾದ ನೀಲಿಯ ಬಣ್ಣ : ಪಕ್ಷಸ್ಥಿತೋಭಯಕುಲಶುದ್ಧನೃಪತಿಮಣಿಮಕುಟಮರೀಚಿಮೇಚಕಿತಮುಮಪ್ಪ ಸಂಗ್ರಾಮಭೂಮಿಯ ನಡುವೆ (ಶಂಕರಾ. ೦೩-೩೩ ವ). [ಸಂ.]

**ಮೇಚಣಿಗೆ** (ನಾ). (ಕರಾ) ಗರ್ಭಿಣಿಯಾದ ಹೆಂಗಸಿಗೆ. ಆರಂಭದಲ್ಲಿ ಬೆಳಗಿನ ಹೊತ್ತು ಉಂಟಾಗುವ ಓಕರಿಕೆ, ಅರುಚಿ ಮುಂತಾದುವು.

[ ? ]

**ಮೇಚು** (ನಾ). ಒಂದು ಬಗೆಯ ತಂತಿ (?) : ನಾರ ಸೀರೆಯನುಟ್ಟು ನಲಿದು ಕಿನ್ನರಿಗಳ ತೋರಮೊಲೆಗಳ ಮೇಲಿಟ್ಟು ಸೇರಿಸಿ ತಂತ್ರಿಯ ಸಂಚಿನಿಂ ಮೇಚನು ಬಾರಿಸುತೆಸೆಯೆ ಭಾವೆಯರು (ಜೀವಂಧರಾಂ. ೨೦-೦೩). [ ? ]

**ಮೇಜ** ' ಮೇಜು ' ನೋ.

**ಮೇಜರ್** ' ಮೇಜರು ' ನೋ.

**ಮೇಜರು, ಮೇಜರ್** (ನಾ). ೧. ಸೈನ್ಯದಲ್ಲಿ ಕ್ಯಾಪ್ಟನ್ ಹುದ್ದೆಗೆ ಮೇಲ್ಪಟ್ಟ ಮತ್ತು ಲೆಫ್ಟಿನೆಂಟ್ ಕರ್ನಲ್ ಹುದ್ದೆಗೆ ಕೆಳಗಿನ ಹುದ್ದೆಯಲ್ಲಿರುವ ಒಬ್ಬ ದೊಡ್ಡ ಅಧಿಕಾರಿ : ಸಾಮಾನ್ಯ ಯೋಧನಾಗಿದ್ದ ಅವನು ಇಂದು ಮೇಜರು ಹುದ್ದೆಗೆ ಬಂದಿದ್ದಾನೆ (ರೂಢಿ). **ಮೇಜರ್ :** ೧. ನೀನು ಕುಡಿದು ಕುಡಿದು, ಇನ್ನೂ ಯೋಧನಾಗೇ ಉಳಿದಿದ್ದೀಯೆ ನೋಡು, ನಾನಾಗಲೇ ಮೇಜರ್ ಆಗಿದ್ದೇನೆ (ಪಾಡಿಗೇ. ೪೦). ೨. ಕಾನೂನಿನ ಗಣನೆಗೆ ಬರುವ ವಯಸ್ಸಿನ (ಹದಿನೆಂಟು ವರ್ಷಗಳಿಗೆ ಮೇಲ್ಪಟ್ಟ) ವ್ಯಕ್ತಿ : ಅವರ ಮಗ ಮೇಜರ್ ಆಗಿರುವುದರಿಂದ ಅವನ ಒಪ್ಪಿಗೆಯಿಲ್ಲದೆ ಪಿತ್ರಾರ್ಜಿತ ಆಸ್ತಿಯನ್ನು ಮಾರುವಂತಿಲ್ಲ (ರೂಢಿ). [←ಇಂ. Major]

**ಮೇಜವಾಣಿ** ' ಮೇಜವಾನಿ ' ನೋ.

**ಮೇಜವಾನಿ, ಮೇಜವಾಣಿ, ಮೇಜುವಾನಿ** (ನಾ). ಸತ್ಕಾರ ; ಆತಿಥ್ಯ ; ಔತಣಕೂಟ : ಒಂದು ದಿನ ಆ ಗೃಹಸ್ಥನು ತನ್ನ ಸ್ನೇಹಿತನಲ್ಲಿ ಮೇಜವಾನಿಗೆ ಹೋದಾಗ . . . ಪ್ರಬಲವಾದ ಅಜೀರ್ಣವಿಕಾರವಾಯಿತು (ಮುಂಬಯಿ. ೪-೦೦೬); ಎರಡು ಮೂರು ದಿವಸ ತನಕ ಮೇಜವಾನೀ ಸಮಾರಂಭವು ನಡೆಯಿತು (ಮಂಜುಳ. ೪೭). **ಮೇಜವಾಣಿ :** ಸಂತೇಮರಹಳ್ಳಿಯಲ್ಲಿ ಚಾಮರಾಜನಗರ ಜಮಾಬಂದಿ ಮುಗಿಸಿದ ಮೇಜವಾಣಿಯಾದ್ದಕ್ಕೆ . . . ನಾನೂ ಹೋಗಿದ್ದೆ (ಕಲಿತ. ೩೩೭). **ಮೇಜುವಾನಿ :** ಕುರ್ಣೀರದ ದನಕರುಗಳಿಗೂ ಅಕ್ಕೀ ಸಕ್ಕರೆಯ ಮೇಜುವಾನಿ ಮಾಡುವಂತೆ ಸಾಹೇಬರು ಅನುಗ್ರಹಿಸಿದರಲ್ಲಾ ಎಂದು ಒಂದು ಕಡೆ . . . ಸಂತಸವಾದರೆ ಇನ್ನೊಂದು ಕಡೆ ತಡೆಯಲಾರದ ನಗು (ಚಕಿತ. ೪೭); ದೊಡ್ಡ ಬೆಟ್ಟದ ಚಹವೋ ? . . . ಬಿದ್ದಣ ? ಮೇಜುವಾನಿ ? (ಜಂತಪ. ೬೯-೦೨).

[←ಪಾರ. ಮೇಜಬಾನೀ, ಮೇಙ್ಬಾನೀ; ಹಿಂ. ಮೇಜಬಾನೀ ; ಮರಾ. ಮೇಜಬಾನೀ, ಮೇಝವಾನೀ]

**ಮೇಜಿಟ್ಟಿಗೆ** (ನಾ). ಆಕಾರವನ್ನು ನಿಷ್ಕೃಷ್ಟವಾಗಿಡಲು ಮೇಜಿನ ಮೇಲಿಟ್ಟು ತಯಾರಿಸುವ ಇಟ್ಟಿಗೆ : ಒಳ್ಳೆಯ ಇಟ್ಟಿಗೆಗಳನ್ನು ಮೇಜಿನ ಮೇಲೆ ತಯಾರಿಸುತ್ತಾರೆ . . . ಮೇಜಿಟ್ಟಿಗೆಗಳನ್ನು ಚೌಕಟ್ಟುಗಳ ಮೇಲೆ ಬಿಸಿಲಿನಲ್ಲಿ ಒಣಗಿಸುತ್ತಾರೆ (ಶಿಲ್ಪಶಾ. ೨೬೦).

[ ಮೇಜು + ಇಟ್ಟಿಗೆ (< ಇಟ್ಟಿಗೆ₁) ]

**ಮೇಜು, ಮೇಜ** (ನಾ). ೧. ನಾಲ್ಕುಕಾಲುಗಳು ಮತ್ತು ಮೇಲೆ ಚಪ್ಪಟೆಯಾದ ಹಲಗೆ ಇದ್ದು, ಓದುವುದು, ಬರೆಯುವುದು ಮುಂತಾದ ಕೆಲಸಗಳಿಗೆ ಉಪಯೋಗಿಸುವ ಮರ, ಲೋಹ ಮುಂತಾದವುಗಳಿಂದ ಮಾಡಿದ ಉಪಕರಣ : ಮಂಚ ಖುರ್ಚಿ ಮೇಜು ಪೆಟ್ಟಿಗೆ ಮೊದಲಾದ ಸಾಮಾನುಗಳನ್ನು ನೋಡಿರಿ (ಕೃತಿಚಿತ್ರ. ೨೬೩) ; ಸಂಜೆಯಾದ ಬಳಿಕ ಮೇಜಿನ ಬಳಿ ಕುಳಿತು ಕೆಲಸಮಾಡುವುದು ಅಶಕ್ಯವಾಗುತ್ತದೆ (ಪಂಟರು. ೪೩). ೨. ಇಸ್ಪೀಟು, ಜೂಜು ಮೊದಲಾದುವುಗಳಲ್ಲಿ ಮೇಜಿನ ಮೇಲೆ ಪಂದ್ಯವಾಗಿಡುವ ಹಣ ; ಒಡ್ಡು; ಪಣ : ಅವನು ದಿನದಿನಕ್ಕೆ ಮೇಜು ಹೆಚ್ಚಿಸುತ್ತ ಹೋಗುತ್ತಾನೆ (ಕಾಯಕ. ೪೦). **ಮೇಜ :** ೧. ನಾವು ಸಾಮಾನ್ಯಜ್ಞಾನದಿಂದ ಮೇಜ

ಒಂದು ವಸ್ತು ಮತ್ತೊಂದು ಪದಾರ್ಥ ಎಂದು ಅವುಗಳು ಅನೇಕ ಭಾಗದಿಂದ ಆಗಿದ್ದಾಗ್ಗೂ ಹೇಳಬಹುದು (ತತ್ತ್ವಶಾ. ೦೯೬); ಆಚಾರ್ಯರ ಸೂಚನೆಯಂತೆ ತಿನಸುಗಳ ತಟ್ಟೆಗಳೂ, ಕಾಫಿಯ ಕಪ್ಪುಗಳೂ ಬಂದು ನಮ್ಮ ಮುಂದಿನ ಮೇಜವನ್ನು ಅಲಂಕರಿಸಿದುವು (ಕಾಂಚನಾ. ೧೦).
[ ←ಪಾರ. ಹಿಂ. ಮರಾ. ಮೇಜ್ ]

**ಮೇಜುಕಟ್ಟು₁** (ಕ್ರಿ). ಜೂಜಿನ ಮೇಜಿನ ಮೇಲೆ ಪಣವಾಗಿ ಹಣವನ್ನು ಒಡ್ಡು ; ಪಂದ್ಯಕಟ್ಟು : (*). [ ಮೇಜು + ಕಟ್ಟು₁ ]

**ಮೇಜುಕಟ್ಟು₂** (ನಾ). ಗೋಡೆಯ ಕೆಳಭಾಗದಲ್ಲಿ ಮೇಲುಗೋಡೆಗಿಂತ ಸ್ವಲ್ಪ ಉಬ್ಬಿರುವಂತೆ ಕಟ್ಟಿರುವ ಭಾಗ : "ಗೋಡೆಯ ತಳದಿಂದ ಸ್ವಲ್ಪ ಎತ್ತರದವರೆಗೂ ಹಲಗೆ ಸೇರುವೆಯಿಂದಲೊ, ಮೇಲ್ಭಾಗದಂತಲ್ಲದೆ ಬೇರೆ ಬಣ್ಣ ಹಾಕಿರುವುದರಿಂದಲೊ, ಆಳವಡಿಸಿರುವ ಗೋಡೆಯ ಅಡಿಭಾಗ ಮೇಜುಕಟ್ಟು" (Dado. ೩೦೬೬). [ ಮೇಜು + ಕಟ್ಟು₂ ]

**ಮೇಜುವಾನಿ** ' ಮೇಜವಾನಿ ' ನೋ.

**ಮೇಟ** ' ಮೇಂಟಿ ' ನೋ.

**ಮೇಟಕಂಬ** ' ಮೇಟಿಕಂಭ ' ನೋ.

**ಮೇಟಕಂಭ, ಮೇಟಿಕಂಬ** (ನಾ). ಧಾನ್ಯವನ್ನು ಒಕ್ಕುವ ಅಂಗಳದ ಅಥವಾ ಕಣದ ನಡುವೆ ಎತ್ತುಗಳನ್ನು ಕಟ್ಟಿ ತುಳಿಸಲು ಅನುಕೂಲವಾಗುವಂತೆ ನಟ್ಟ ಕಂಬ : ಮೇಟಿಕಂಭದ ಹತ್ತಿರದ ಮಂಚದ ಮೇಲೆ ಶೀನಪ್ಪ ಒರಗಿಕೊಂಡು ಆಕಾಶವನ್ನೇ ನೋಡುತ್ತಿದ್ದ (ಅನಾಥ. ೨೪೦). **ಮೇಟಿಕಂಬ :** ಹನ್ನೆರಡೆತ್ತಿನ ಬಾರಿ ಹೊನ್ನ ಮೇಟಿಕಂಬ ಬಾಸಿಂಗ್ದ ಬಲಗೈಯ ಕೊಳಗಾದಿ ಕಂದಯ್ಯ ರಾಶಿ ಅಳಿಯೋದೆ ಬೆಳಗಾಯ್ತು (ಜನಪದ. ೯). [ ಮೇಟಿ (<ಮೇಂಟಿ) + ಕಂಭ ]

**ಮೇಟಕೊಳವೆ** (ನಾ). ಕಿವಿಗೆ ತೊಡುವ ಮೇಟಿಯ ಆಕಾರದ, ಒಂದು ಬಗೆಯ ಆಭರಣ : ಕೊಪ್ಪು : ಹೆಂಗಸರ ಒಡವೆಗಳನ್ನು ಹೀಗೆ ಪಟ್ಟಿ ಮಾಡಬಹುದು . . . ಕಿವಿಗೆ : ೧. ಮೇಲುಕಿವಿಗೆ ಬುಗಡಿ, ಸಿಂಹನ ಮೆಟ್ಟಿದ ಮುರುವು ; (ಮುತ್ತಾಕಿದ ಮುರುವು, ಹಲಸಿನಕಾಯಿ ಮುರುವು, ಕಲ್ಲಾಕಿದ ಮುರುವು) ; ತಟ್ಟುಬಾಬುಲು, ಮೇಟಿಕೊಳವೆ, ಇತ್ಯಾದಿ (ಜಾನಪದ. I, ೬೨೪). [ ಮೇಟಿ (<ಮೇಂಟಿ) + ಕೊಳವೆ (<ಕೊಟವಿ) ]

**ಮೇಟಗಂಡುಗ** ' ಮೇಂಟಿಗಂಡುಗ ' ನೋ.

**ಮೇಟಗೂಟ** (ನಾ). = ಮೇಟಿಕಂಭ : ಕಲ್ಲಪ್ಪನನ್ನೂ ದರದರನೆ ಎಳೆದುಕೊಂಡು ಹೋಗಿ ಕಣದ ಮಧ್ಯದ ಮೇಟಿಗೂಟಕ್ಕೆ ಅಲುಗಾಡದಂತೆ ಬಿಗಿವರು (ಬಿಡಾರ. ೩). [ ಮೇಟಿ (<ಮೇಂಟಿ) + ಗೂಟ (<ಗೂಂಟ) ]

**ಮೇಟಗೊಳಗ, ಮೇಟುಕೊಳಗ, ಮೇಟಿಗೊಳಗ** (ನಾ). ಧಾನ್ಯಗಳನ್ನು ಅಳೆಯುವ ಒಂದು ಪ್ರಮಾಣ : ಶ್ರೀಕಾರ್ಯ ನಡೆವಂತಾಗಿ ಕೊಟ್ಟ ಮೇಟಗೊಳಗವೊಂದು (ಮುಂಬಯಿ. ೨೪೯-೭೮ ; 1219). **ಮೇಟುಕೊಳಗ :** ಅನುವು ಕೊಡವೀಸ ಹಂದರಹಣ ಹರವಿಗೂಳು ಮೇಟುಕೊಳಗ . . . ಮುಂದೆ ಹುಟ್ಟುವ ಪೂರ್ವಾದಾಯ ಸಹವಾಗಿ ಸರ್ವಬಾಧೆ ಪರಿಹಾರಕ್ಕೆ ಗದ್ಯಾಣ ಗ ॥ (ಪ್ರಾಆಂ. ೦೯೩೯, ೨೭-೨೨ ; 1430). **ಮೇಟಿಗೊಳಗ :** ಮತ್ತಮಾ ಪಂನಿರ್ವ್ವರ್ ಗಾವುಂಡುಗಳ್ ಮುಖ್ಯಸಮಸ್ತಪ್ರಜೆಗಳುಂ ದೇವರ ನಿತ್ಯೋಪಹಾರಕ್ಕೆಂದು ಚಂದ್ರಾರ್ಕಸ್ಥಾಯಿಯಾಗಿ ಮೇಟಗೊಳಗವ ಕೊಟ್ಟರ್ (ಎಪಿಇಂ. XX. ೨೪೯-೬೮ ; 1228).
[ ಮೇಟಿ (<ಮೇಂಟಿ) + ಕೊಳಗ₁ ]

**ಮೇಟಪಾಲು, ಮೇಣಿಪಾಲು** (ನಾ). ವ್ಯವಸಾಯ ಮಾಡಲು ನೆರವು ನೀಡಿದವನಿಗೆ ಹೊಲದ ಒಡೆಯನು ಕೊಡಬೇಕಾದ ಫಸಲಿನ ಭಾಗ : (*). **ಮೇಣಿಪಾಲು :** (*).
[ ಮೇಟಿ (<ಮೇಂಟಿ) + ಪಾಲು₂ (<ಪಾಲ್₂) ]

**ಮೇಟವಿದ್ಯ** (ನಾ). ವ್ಯವಸಾಯ ಮಾಡುವ ತಿಳಿವಳಿಕೆ ; ಕೃಷಿಯ ಅರಿವು : ಕೋಟಿ ವಿದ್ಯೆಗಳಲ್ಲಿ ಮೇಟಿವಿದ್ಯವೆ ಮೇಲು ಮೇಟಿಯಿಂ ರಾಟಿ ನಡೆದುದಲ್ಲದೆ ದೇಶದಾಟವೆ ಕೆಡುಗು (ಸರ್ವಜ್ಞ. ೧೩೩೭).
[ ಮೇಟಿ (<ಮೇಂಟಿ) + ವಿದ್ಯ ]

**ಮೇಟಹುರುಳಿ, ಮೇಟುಹುರುಳಿ** (ನಾ). ಒಂದು ಬಗೆಯ ಔಷಧೀ ಸಸ್ಯ : ಮೇಟಿಹುರುಳಿಯ ಬೇರ ತಂದು ಮೇಗಣ ತಿಗಡ ತೆಕ್ಕೊಂಡು ಸಣ್ಣನೆ ಅರೆದು ಅವರೆಪ್ರಮಾಣ ಗುಳಿಗೆಯಂ ಮಾಡಿ ಒಂದು ಗುಳಿಗೆ ಅಕ್ಕಿಗಚ್ಚಿನಲ್ಲಿ ಕೊಂಬುದು (ವೈದ್ಯಶಿ. ೦೬೭). **ಮೇಟುಹುರುಳಿ :** ತೂಲಫಲಾ—ಎಲವ, ಎಕ್ಕೆ, ಮೇಟುಹುರುಳಿ (ಓಷಧಿ. ೬೨). [ ? ]

**ಮೇಟಕೊಳಗ** ' ಮೇಟಿಗೊಳಗ ' ನೋ.

**ಮೇಟುಹುರುಳಿ** ' ಮೇಟಿಹುರುಳಿ ' ನೋ.

**ಮೇಟೆ** ' ಮೇಂಟಿ ' ನೋ.

**ಮೇಟೆಗೊಳಗ** ' ಮೇಟಿಗೊಳಗ ' ನೋ.

**ಮೇಠಿ** (ನಾ). ೧. ಸ್ತಂಭ ; ಕಂಬ. ೨. = ಮೇಟಿಕಂಭ. ೩. ಪಶುಗಳನ್ನು ಕಟ್ಟುವ ಗೂಟ. ೪. ಬಂಡಿಯ ಮೂಕಿಗೆ ಆಧಾರವಾಗಿರುವ ಆನಿಕೆ. [ ಸಂ. ]

**ಮೇಡ₁** (ನಾ). (ಕರಾ) ಮರದ ಚಿಲಕ.—ಅಗಳಿ : ನಾನು ಬರಲು ತಡವಾದರೆ ಕದದ ಮೇಡ ಹಾಕಿಕೊಂಡು ಮಲಗಿಕೊ (ರೂಢಿ).
[ ←ತುಳು. ಮೇಡೆ ]

**ಮೇಡ₂** (ನಾ). [ಸಂಗೀತ] ವೀಣೆ ಮುಂತಾದ ವಾದ್ಯಗಳಲ್ಲಿ ಬೇರೆ ಬೇರೆ ಸ್ವರಸ್ಥಾನಗಳನ್ನು ನಿರ್ದೇಶಿಸುವ (ಅರಗಿನ) ರಚನೆ.—ಕಟ್ಟಣೆ.—ಮೆಟ್ಟಿಲು : ಅರಗಿನ ಮೇಡವನ್ನು ಮಾಡಿಸಿದರೆ ಅದು ದಂಡಿಯ ಸುಲಭವಾದ ಸ್ಪಂದನವನ್ನು ತಡೆಯುತ್ತದೆ (ಸಂಗೀತ. ೬೮). [ < ಮೇಳ ]

**ಮೇಡಂ, ಮಡ್ಡಮ್ಮ, ಮೇಡಮ್, ಮೇಡಮ್ಮ** (ನಾ). ಹೆಂಗುಸನ್ನು ಕುರಿತ ಗೌರವಸೂಚಕವಾದ ಸಂಬೋಧನೆ : P ಈ ಶಬ್ದವು ಉಪಾಧ್ಯಾಯಿನಿ, ಆಂಗ್ಲಸ್ತ್ರೀ, ಶ್ರೀಮಂತ ಹೆಂಗಸು, ಯಜಮಾನಿ ಮುಂತಾದ ವಿವಿಧಾರ್ಥಗಳಲ್ಲಿ ಇಂದು ಬಳಕೆಯಾಗುತ್ತಿದೆ : ಕ್ಷಮಿಸಿ ಮೇಡಂ ಈ ದಿನ ಪಠಾರದಲ್ಲಿ ಒಂದು ಮದುವೆ. ಆದ್ದರಿಂದ ತಡ ಆಯ್ತು (ಹಿಂದಿನ. ೪) ; ಮೇಡಂಗಳನ್ನು ಕಟ್ಟಿಕೊಂಡು ತೊಲಗು (ಅಗಸ್ತ್ಯ. ೬೮). **ಮಡ್ಡಮ್ಮ :** ಸಂಬಳವಾದ ಮರುದಿನ ಸಾಹೇಬರ ಮಡ್ಡಮ್ಮರು . . . ಲೆಕ್ಕ ಚುಕ್ತಾಮಾಡಿಬಿಡುತ್ತಿದ್ದರು (ದೀಕ್ಷಿ. I, ೬೪): ನನ್ನ ಹಿಂದೆ ಮನೆಯ ಮಕ್ಕಳು . . . ಎದುರಿಗೆ ಟಿಳಕರು ಮತ್ತು ಆ ಮಡ್ಡಮ್ಮ (ಸ್ಮೃತಿಶ. ೨೨೦). **ಮೇಡಮ್ :** ಮೇಡಮ್ . . . ಮಿಸ್ ವೇದವಲ್ಲಿ ! (ಹಿಂದಿನ. ೪). **ಮೇಡಮ್ಮ :** ಆಕೆ ನಮ್ಮ ಹುಡುಗರ ಅಚ್ಚುಮೆಚ್ಚಿನ ಮೇಡಮ್ಮ (ರೂಢಿ).
[← ಇಂ. Madam]

**ಮೇಡಮ್** ' ಮೇಡಂ ' ನೋ.

**ಮೇಡಮ್ಮ** ' ಮೇಡಂ ' ನೋ.

**ಮೇಡಿ** (ನಾ). ಒಂದು ಬಗೆಯ ಮರ; ಅತ್ತಿ ; ಉದುಂಬರ : (*).
[ದೇ.॥ ತಮಿ. ಮೇಡಿ]

**ಮೇಡು** (ನಾ). ೧. ಎತ್ತರವಾದ ನೆಲ; ದಿಣ್ಣೆ ; ದಿಬ್ಬ: ಕಾಡುವೊಂದು ಮೇಡುವೈದು ಓಡುವೊಂದು ಒಲೆಯು ಮೂಜು ನಾಡನಾಯ ಕೂಡಿಕೊಂಡು . . . ಜೋಡುಮುಖದ ಕಪಿಯನೆಚ್ಚು ಓಡಿನಲ್ಲಿ ತಿಂದು ತನ್ನ ನೀಗಲಾಡಿದ (ಅಪಕಂ. ೨೪೯-೦೫೦೪); ತೆಂಕಣ ಕೋಟೆಯ ಮೇಡಿನ ಕೇರಿಯ ಮನೆಯನು ಹದಿಮೂಜು ನಿವೇಶನವನು ಮಾಡಿ (ಎಕ. XIV, ಶ್ರೀರಂಗ. ೬೬-೪೦; 1471); ನಾಡು ಮೇಡು ಕಾಡೊಳೆಲ್ಲು ಸೊಗವು ಮೂಡಿ ಬರುತಿದೆ (ಮಾಂಗಲ. ೯-೭). ೨. (ಪಶುಗಳ) ಓಣಲು; ಡುಬ್ಬ; ಅಗ್ಗದ

ನಿಡುಗೋಡು ಮೇಡುಮುಮುರುತ್ತುಮಿಡುಂಕಿದ ಕೆಚ್ಚಲಿತ್ತಮೆತ್ತಿವ ಕುಡಿವಾಲಮುಂದೆಸೆಯೆ ಕರ್ಬಸುಗಳ್ ಪರಿಗೊಂಡುಮಾಜಿಯೊಳ್ (ಶಂಕಥಾ. ೬-೧೦೪). 'ಮಿಟ್ಟೆ' ಪರಾ. [ದೇ.II ತಮಿ. ಮೇಟು, ಮುಟ್ಟು, ಮೆಟ್ಟು; ಮಲ. ಮೇಟು. ಮಾಟು: ತೆಲು. ಮಿಟ್ಟ, ಮೆಂಡು, ಮೆಟ್ಟ, ಮೆಟ್ಟು; **ಕೋಲಾ.** ಮೆಟ್, ಮೆಟ್ಟಾ, ಮೆಟ್ಟ್; ನಾಯ್ಕಿ. ಮೆಟ್ಟ್; ಗೊಂಡಿ. ಮಟ್ಟಾ, ಮೆಟಾ, ಮೆಟ್ಟೆ]

**ಮೇಡುಗದ್ದೆ** (ನಾ). ಎತ್ತರದಲ್ಲಿರುವ ಗದ್ದೆ : ಅಣಹಳ್ಳಿ ತೋಪಿನಲ್ಲಿ ನೂತನವಾಗಿ ಮಠ ಕಟ್ಟಲಾಗಿ . . . ಕೆಲಉ ಭೂಮಿ ತೆಗೆದುಕೊಂಡ ಬದಲಿಗೆ ಹಾಗಲವಾಡಿ ಕೆರೆ ತುಂಬಿ ಜೇರಿಗೆ ಮೇಡುಗದ್ದೆಗ್ಗೆಯ್ವಲ್ಲಿ ಸಣ್ಣ ಹಳ್ಳಿಭೂಮಿಯಲ್ಲಿ ಒಂದು ಖಂಡುಗ ಗದ್ದೆಗೆ ನೀರ ಅಪ್ಪಣೆ ಪಾಲಿಸಿಯಿದ್ದೇವೆ (ಎಕ. XII, ತಕ್ನಾ. ೩೮-೩೯; 1669). [ಮೇಡು + ಗದ್ದೆ (< ಗಟ್ಟಿ)]

**ಮೇಢಿ** (ನಾ). ೧. ಸ್ತಂಭ ; ಕಂಬ. ೨. = ಮೇಟಿಕಂಭ. ೩. ಪಶುಗಳನ್ನು ಕಟ್ಟುವ ಗೂಟ. ೪. ಬಂಡಿಯ ಮೂಕಿಗೆ ಆಧಾರವಾಗಿರುವ ಆನಿಕೆ. [ಸಂ. ಮೇಢೀ]

**ಮೇಢ್ರ** (ನಾ). ೧. ಟಗರು; ಗಂಡುಕುರಿ. ೨. ಪುರುಷನ ಜನನೇಂದ್ರಿಯ; ಶಿಶ್ನ : "ಶಿಶ್ನಃ, ಶೇಫಃ, ಮೇಢ್ರಃ . . . ಶೇಫಸ್-ಈ ೬ ಶೇಫಂ" (ಪಠಾಯು. ೬೩-೩೭೦); ಖುರ ಮೇಢ್ರ ಮುಷ್ಕವಾಲಧಿ ಶಿರದೊಳೆ ಕರಿದಾಗಿ ತೋರ್ಪೊಡಂತದು ಕಷ್ಟಂ (ಅಶ್ವಶಾ. ೨-೮೨) ; ತಿಂಗಳ್ ನಾಲ್ಕುಕಕ್ಷಿನಾಸಾಪುಟಂ ಶ್ರವಣ ಗುದ ಮೇಢ್ರ ರೋಮಂಗಳಪ್ಪುವು (ಕಬಿಕ್ಷಿ. ೩೬-೭); ಮೇಢ್ರದಲ್ಲಿಯೂ ತೊಡೆಸಂದಿನಲ್ಲಿಯೂ ಬಹಳವಾದ ವೇದನೆಯುಂಟಾಗಿರ್ಪುದು (ಸಶಪ್ರ. ೩೭೦). [ಸಂ.]

**ಮೇಣ್**, ಮೇಣು (ಅ). ೧. ಇನ್ನು; ಮತ್ತು ; ಜೊತೆಗೆ; ಹಾಗೂ ; ಅಲ್ಲದೆ : ಕಟ್ಟಿದ ಸಿಂಘಮನ್ ಕೆಟ್ಟೊಡೇನೆಮಗೆಂದು ಬಿಟ್ಟಪೊಲ್ ಕಲಿಗೆ ವಿ[ಪ]ರೀತಂಗಹಿತರ್ಕ್ಕಳ್ ಕೆಟ್ಟಮೆರ್ಮ್ಮೇಣ್ ಸತ್ತರ ವಿಚಾರಿರವು (ಇಕ. X, ೭೦-೧೧; ಸು. 700); ಒಡನೆ ಸುರಾಸುರರ್ ಕನಕಪರ್ವತಮಂ ಕಡೆಗೋಲ ಮಾಡಿ ಮೇಣ್ ಪೆಡೆ ಪಲವಪ್ಪ ವಾಸುಕಿ ಮಹೋರಗನಂ ಕಡೆಗಣ್ಣ ಮಾಡಿ ಪಾಲ್ಗಡಲನುಪಾಯದಿಂ ಕಡೆಯೆ (ಕಾವ್ಯಸಾ. ೯೩೮ ಟಿಪ್ಪ೪); ಫಲ್ಲಿ ಮೇಣಾವ ಸ್ವರೂಪದಿಂ ಬಂದಿರಿದನೆನಗೆ ತಿಳಿಯೆ ಪೇಟಿಂ (ವಡ್ಡಾರಾ. ೩೭-೧): ಕಾವಡೆನ್ನಳವಲ್ಲ ಮೇಣ್ ಗಾಂಡೀವಿ ಕೊಲುವವನಲ್ಲ (ಕುಮಾವ್ಯಾದ್ರೋ. ೯-೭೦). ೨. ಅಥವಾ ; ಇಲ್ಲವೆ : ಏನಾಗಿಯುಮೇನೋ ತೀರ್ದಪುದೆ ತೀರದೊಡಂ ಮುಜಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್ (ಶಂಕಥಾ. ೪-೨೯);ಲಿಂಗಜಂಗಮಮೊ ಮೇಣ್‌ಜಂಗಮವೆ ಲಿಂಗವೋ (ಬಸರ. ೩-೧೫೩); ಮರ್ತ್ಯಂಗೆ ನಿಟ್ಟೆಯೀ ಮಾನಸವಾಟೀಗಳೊ ಮೇಣಾಗಳೊ ಮೇಣ್ ಸಾಗುದುರೆಗೆ ಪುಲ್ಲನಡಕಿ ಕೆಡುವನೆ ಚದುರಂ (ಹುಕೋಕ. ೩-೧೫); ನಿನ್ನ ಮಕ್ಕಳ ಸಲಹು ಮೇಣ್ ಕೊಲ್ಲೆನುತ ನುಡಿದನು ವಿನಯದಲಿ ಪಾರ್ಥ (ಕುಮಾವ್ಯಾದ್ರೋ. ೯-೪೯). ೩. ಖಂಡಿತವಾಗಿಯೂ ; ನಿಶ್ಚಯವಾಗಿಯೂ : ಮಗನಂ ಪಡೆವಂತಿರೆ ಬಂಜೆಗೆ ಮರ್ದಂ ಮಾಟ್ಪೆನೆಂಬ ನಾಸಿಗನೇಂ ತಾಂ ಪುಗಿಸುವನೆ ಜೀವಮಂತದುವೆ ಗರ್ಭದೊಳು ಮರ್ದಿ ಮೇಣದಕ್ಕುಮೆ ಜೀವಂ (ಸಮಶ. ೧೨-೩೫); ಕುಡುವಿಲ್ಲನೆಚ್ಚ ಸರಲುಂನಡದು ದಲಂದೊರ್ವನೆರ್ದೆಯನೊಳ್ಗಬ್ಬಮುಮೊಳ್ನುಡಿಯುಂ ಗೇಯಮುಮುರ್ಚದ ಕಡುಗಲ್ಲೆರ್ದೆಯೆರ್ದೆಯನಂಬು ಮೇಣುರ್ಚುಗುಮೇ (ಕಾವ್ಯಾವ. ೨೦೪). **ಮೇಣು:** ೨. ವೈರಿನಾಯಕರು ಕೊಂದರೆಂಬೆನೊ ಮೇಣು ನಾನೇ ಕೊಂದೆನೆಂಬೆನೊ (ಕುಮಾವ್ಯಾದ್ರೋ.೭-೧೧) : ಜವನ ಜನನಿಯೊ ಮೇಣು ಲಯಭೈರವನ ಭಗಿನಿಯೊ . . ಎಂಬವೊಲು ನಡೆತಂದಳೆದಿರಿನಲಿ (ತೊರರಾ. ೦-೧೧-೭): ಕಾಮುಪಶ್ಯದ ಘುಟಿಕೆಯ ರಾಶಿಯೊ ಮೇಣು ಕಾಮನ ಹಾಜುಗುಪ್ಪೆಗಳೊ (ವರ್ಧಶ. ೦-೧೦೪) ; ಅಸಮುಸಮ್ಮುಗ್ಗರು ವರದಯಾಮೃತರಸಸರೋವರ ಮಧ್ಯದಲಿ ಪದಬಿಸರುಹಂಗಳು ಮೇಣು ವಿಕಸನವಾದವು (ಬಸಕ್ಷಿ. ೩೯-೫೭).

☞ ಈ ಶಬ್ದವು ಅನೇಕ ವೇಳೆ ಪಾದಪೂರಣಾರ್ಥವಾಗಿ ಉಪಯೋಗವಾಗುತ್ತದೆ. 'ಮೇಗು' ಪರಾ.

**ಮೇಣ** 'ಮಯಣ' ನೋ.

**ಮೇಣಗಟ್ಟು** (ಕ್ರಿ). ಜಿಡ್ಡುಗಟ್ಟಿ ಕೊಳೆಯಾಗಿರು : ಅವಳ ತೊಡೆಯ ಮೇಲೆ ಒಂದು ವರ್ಷದ ಕೂಸೊಂದು. ಅದರ ತಲೆಗೆ ಒಂದು ಮೇಣಗಟ್ಟಿದ ಕುಲಾವಿ (ರಾವಊಸ. ೧೧೦). [ಮೇಣ (<ಮಯಣ) + ಕಟ್ಟು$_1$]

**ಮೇಣಗಪಟ** 'ಮೇಣಗಪ್ಪಡ' ನೋ.

**ಮೇಣಗಪ್ಪಟ** 'ಮೇಣಗಪ್ಪಡ' ನೋ.

**ಮೇಣಗಪ್ಪಡ**, ಮೇಣಗಪಟ, ಮೇಣಗಪ್ಪಟ. ಮ್ಯಾಣಗಪ್ಪಟ (ನಾ). ಎಣ್ಣೆ. ಮೇಣ ಮೊದಲಾದುವುಗಳಿಂದ ಪರಿಷ್ಕರಿಸಿ ನೀರಿಳಿಯದಂತೆ ಮಾಡಿದ ಬಟ್ಟೆ : ಕೊಡೆ ಮೇಣಗಪ್ಪಡ ಗೊಂಗಡಿ ಬಹುರವ್ಯಾಪಡೆದಿರ್ದ ಸಕಲಾತಿದಳೆದು . . . ನೀರ್ಮನುಜರಂತೆಡೆಯಾಡುತಿರ್ದರೂರುಗರು (ಮೋಹತ. ೪-೪೦) ; ಅಪಾದಮಸ್ತಕ ಮೇಣಗಪ್ಪಡದ ನಿಲುವಂಗಿ ಹೊದ್ದು ಅಡ್ಡಾಡಲು ಹೊರಬಿದ್ದೆ (ಇಕೃಕ. ೦೬೦). **ಮೇಣಗಪಟ** : "ಎಣ್ಣೆಯಿಂದ ಪರಿಷ್ಕರಿಸಿ ನೀರಿಳಿಯದಂತೆ ಮಾಡಿದ ಬಟ್ಟೆ ; ಮೇಣಗಪಟ ; ತೈಲಪಟ" (oilcloth. ೩೦೪೩). **ಮೇಣಗಪ್ಪಟ** : ಮಗುವಿಗೆ ನ್ಯಾಪ್‌ಕಿನ್ . . . ಮೇಣಗಪ್ಪಟ, ಬ್ಲಾಂಕೆಟ್ . . . ಹತ್ತಿಯ ಸುರಳಿ, ಇವುಗಳನ್ನು ಸಿದ್ಧ ಮಾಡಿಕೊಳ್ಳಬೇಕು (ಗೃಹವಿ. ೦೦೨). **ಮ್ಯಾಣಗಪ್ಪಟ** : ಗಾಡಿಗೆ ಮ್ಯಾಣಗಪ್ಪಟದ ಗೌಸು (ಎಕ. XIV, ಸಂಜನ. ೨೯೨ ; 1847). [ಮೇಣ (<ಮಯಣ) + ಕಪ್ಪಡ]

**ಮೇಣದಬತ್ತಿಮರ** (ನಾ). ಅಂಟುದ್ರವವನ್ನು ಸ್ರವಿಸುವ ಒಂದು ಬಗೆಯ ಮರ : (ವೃಶಿಗ. ೭೯-೦೭೯೫). [<ಮೇಣ + ಬತ್ತಿ + ಮರ$_1$]

**ಮೇಣಬತ್ತಿ** (ನಾ). ಮೇಣದಿಂದ ಮಾಡಿದ ಬತ್ತಿ; ಮೋಂಬತ್ತಿ: ಮೇಣಬತ್ತಿಯ ಪೆಟ್ಟಿಗೆಯಲ್ಲಿ ೩೦ ಪುಡಿಗಳಿರುತ್ತವೆ . . . ಎಲ್ಲಾ ಕೂಡಿ ೧೮೦ ಮೇಣಬತ್ತಿಗಳು ಒಂದು ಪೆಟ್ಟಿಗೆಯಲ್ಲಿರುತ್ತವೆ (ಮುಂಬವ್ಯಾ. ೧೩೭). [ಮೇಣ (< ಮಯಣ) + ಬತ್ತಿ]

**ಮೇಣಾ** 'ಮೇನಾ' ನೋ.

**ಮೇಣಿ** 'ಮೇಂಟಿ' ನೋ.

**ಮೇಣಿಪಾಲು** 'ಮೇಟಿಪಾಲು' ನೋ.

**ಮೇಣು** 'ಮೇಣ್' ನೋ.

**ಮೇಣುಹುಣ್ಣು** (ನಾ). ಒಂದು ಬಗೆಯ ಹುಣ್ಣು : ಸರ್ವವ್ರಣಗಳಿಗೆ . . . ಜೇನುತುಪ್ಪದಲ್ಲಿ ಒಂದು ಗುಳಿಗೆಯಂ ನುಂಗುವುದು . . . ಮೇಣುಹುಣ್ಣು. ಗಂಡುಹುಣ್ಣು. ಸರ್ವವ್ರಣಗಳು ಗುಣ (ಬಿವೈಬಿ. ೭೯). [ಮೇಣು$_2$ + ಹುಣ್ಣು (< ವ್ರಣ್)]

**ಮೇಣೆ** 'ಮೇನಾ' ನೋ.

**ಮೇತ** (ನಾ). ಮೇಯುವಿಕೆ ; ಮೇಯುವುದು : ಸುಟಿಯದು ಗಾಳಿ ವ್ಯಗಂ ಕೆಯ್ವಟೀಗಳ ಮೇತದೊಳ್ ತಣಿದಪುವು (ಶಂಕಥಾ. ೩-೩೯) ; ಹದನಂ ಹಸ್ತಾಗ್ರದಿಂ ಘ್ರಾಣಿಸಿ ಬೆದೆವಿಡಿಯಂ ಮೆಚ್ಚಿ ಮೇತಕ್ಕೆ ಮೆಯ್ದಾಜದೆ ನೀಡುಂ ನಿದ್ದೆಯಂ ತೀನುಮನಜಿಯದೆ . . . ಇರ್ದುದು ಗಿಡಗಿಡಿಜಂತ್ರಂಬೊಲಂ ದೋಂದಿಭೇಂದ್ರಂ (ಲೀಲಾವ. ೯-೩). [ಮೇ$_1$ + -ತ$_2$]

**ಮೇಥಿಕೆ** (ನಾ). ಮೆಂತ್ಯ. [ಸಂ. ಮೇಥಿಕಾ]

**ಮೇಥಿನಿ** (ನಾ). = ಮೇಥಿಕೆ. [ಸಂ. ಮೇಥಿನೀ]

**ಮೇದ$_1$** 'ಮೇ$_1$' ಪರಾ.

**ಮೇದ$_2$**, ಮೇದರ. ಮೇದಾರ (ನಾ). ಬಿದಿರಿನಿಂದ ಬುಟ್ಟಿ, ಚಾಪೆ. ಮೊರ ಮೊದಲಾದುವನ್ನು ಹೆಣೆದು ಮಾರಿ ಜೀವಿಸುವ ವೃತ್ತಿಯ

ವರನ್ನುಳ್ಳ ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ: "ವಂಶಚ್ಛೇದಿ ಚಪಕಾರಕಂ ಮೇದಂ" (ಮಂಗರಾ· ೦೦೦–೨) ; ಕಮ್ಮಾಱನಂತೆ ಕಾಸಿ ಬಡಿವರ್ ಮೇದನಂತೆ ಸೀಳ್ವರ್ (ರಶರ್ಣಾಷ್ಟ. ೩-೭೩) ; ಮೇದರೊಳಲ್ಲದೆ ವಂಶಚ್ಛೇದಂ ಗಾರುಡರೊಳಲ್ಲ (ಸೂಕ್ತಿ ಸು. ೮–೧೪) ; ಮೇದನ ಕೈಗತ್ತಿ ಕೇದಗೆ ರಾಜವಾಣೀಧವರುಗಳಂತಲ್ಲ (ಶೃರವೇ. ೩-೯೭). **ಮೇದರ** : ಶರಣ ಮೇದರ ಕೇತಿದೇವನ ಹರಣವಂ ಬಸವಣ್ಣನಸುವಂ ಹರನ ಕೈಯಲಿ ಮರಳಿ ಪಡೆದನು ಮಾಚಿದೇವಯ್ಯ (ಬಸಪು. ೩೭ ಸೂತನ) ; ಇನ್ನು ಅಂಬಿಗ ಚವುಡ ಮೇದರಗ[ನ]ನ್ನು ಕೇತನು ಚನ್ನ ಮಾದಿಗ[ನ]ನ್ನು ನುಲಿಚಂದ್ಯಯ್ಯ ಕೂಗಿನ ಮಾರನೆನ್ನುವನು (ಚೆನ್ನಪು. ೯೭–೯೩). **ಮೇದಾರ** : ಈತನೇ ಮೇದಾರ ಕೇತಯ್ಯನೆಂಬಾತನೀತನೇ ಡೋಹಾರ ಕಕ್ಕಯ್ಯನೆಂಬಾತನು (ತಂಪು. ೩೭–೩೭); ಮೇದಾರರು ಇಲ್ಲವೆ ಬುರುಡರು—ಇವರು ದೊಡ್ಡ ಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ ವಾಸಿಸುತ್ತಾರೆ (ಕರಾಗ· ೧೩೪).

[ದೇ.॥ ತಮಿ. ಮೇತರ್· ಮೇತರವರ್· ಮೇತವರ್: ತೆಲು. ಮೇದರ. ಮೇದರಿ./ಸಂ. ಮೇದ = ಒಂದು ಮಿಶ್ರಜಾತಿ]

**ಮೇದ₃** (ನಾ). ಕೊಬ್ಬು ; ಮೇದಸ್ಸು: "ವಸೆ ಮೇದಂ ವಪೆ" (ವಸ್ತುಕೋ. ೬೨–೨೪). [ಸಂ. ಮೇದ. ಮೇದಸ್]

**ಮೇದಕ** (ನಾ). ಭಟ್ಟಿಯಿಳಿಸಲು ಉಪಯೋಗಿಸುವ ದ್ರವ,—ಮದ್ಯ : "ಮೇದಕಃ. ಜಗಲಃ— ೨ ಮದ್ಯ ಮಾಡುವುದಕ್ಕೆ ನಾನಾದ್ರವ್ಯಗಳೂ ಕೂಡಿಸಿದ ಮುದ್ದೆಯ ಹೆಸರು" (ಒಟ್ನಾಂತಿ. ೩೦೯). [ಸಂ.]

**ಮೇದದೆಱೆ** (ನಾ). ಮೇವರು ತೆರಬೇಕಾದ ತೆರಿಗೆ,—ಸುಂಕ : ಪೊಡ್ಡದೆಱೆ ಮೇದದೆಱೆ ಸಾದೆಱೆ ಉಡುವಲುದೆಱೆ. . .ಇನ್ತಿನಿಸಱ ತೆಱೆಯನು ಧಾರಾಪೂರ್ವಕಂ ಮಾಡಿಬಿಟ್ಟರು (ಎಕ. IV (R), ಹುಣಸೂ. ೨೪–೯೦ ; 1843). [ ಮೇದ₂ + ತೆಱೆ₃ ]

**ಮೇದನಾಗಿಡ** (ನಾ). ಒಂದು ಬಗೆಯ ಸಸ್ಯ : ಮದನಬುಡಮೆ ಗಿಡ, ಮೇದನಾಗಿಡ. ಮದನಗಂಟಿ (ವೃಕ್ಷಿ. ೦೩–೩೩೫). [? + ಗಿಡ (<ಗಿಡು)]

**ಮೇದಯ್ಯ** (ನಾ). ಒಬ್ಬಾತನ ಹೆಸರು : ಪೊಕ್ಕುಂದದ ತುಱುಗೊಳೆ ಕೊಜ್ಜ ಮಂಗಲದ ಮೇದಯ್ಯ ಕಾದಿ ಸತ್ತು ಸ್ವರ್ಗೆಯ್ದಿದ (ಎಕ. X· ಬಂಗಾರಪೇ. ೯೦–೪ ; ಸು. 950). [ಮೇದ₂ + ಅಯ್ಯ₁]

**ಮೇದರ** ' ಮೇದ₂ ' ನೋ.

**ಮೇದಸ್ಸು** (ನಾ). ೧. ದೇಹದ ರಕ್ತ. ಮಾಂಸ. ಚರ್ಮ. ಮೇದಸ್ಸು. ಸ್ನಾಯು. ಅಸ್ಥಿ. ಮಜ್ಜೆಗಳೆಂಬ ಸಪ್ತಧಾತುಗಳಲ್ಲಿ ಒಂದು; ಕೊಬ್ಬು; ನೆಣ: ಹರಿ. . .ದಾನವರ ಸೀಳಿ ಬಿಸುಟನು ಏಳರ ಮೇದಸ್ಸಾಳಿ ಮುಳುಗಿತು ಜಲದೊಳದಱಿಂ ಮೇಲುವಸರಾಯ್ತಿಳೆಗೆ ಮೇದಿನಿಯೆಂಬ ನಾಮದಲಿ (ಕಬ್ಬಾಕ. ೯–೨೪) : ಪರಿಕಿಸಲ್ ಪಿತ್ತಮುಂ ಶ್ಲೇಷ್ಮಮುಂ ತಿಳಿಯಲೊಂದೆರಡು ಬಳ್ಳಿಂ ಮಾಂಸ ಬಸೆ ರಕ್ತ ಮೇದಸ್ಸು . . . ನಿರುತ ಮುಸ್ಸೂಱಱು ವತಸ್ಥಿಗಳೀ ಸೇರಿರ್ಪುವು (ಕಂಪು. ೩೬–೧೨) ; ಪಂಡಿತನೆ ಪಂಡ ಅಥವಾ ಪೂಂತ ಪಶುಕಲಿಯ ಬಿಂಪದಲಿ ಮೇಧಸ್ಸು ; ಮೇದಸ್ಸು (ಪದ್ಮಕೃ. ೦೩–೦೨). ೨. ಬೊಜ್ಜು : ಮೇದಶ್ಚೇದನದಿಂದೆ ಕೃಶೋದರಮೆಂದೆನಿಸಿದೊಡಲಿ ದುತ್ಸಾಹಕ್ಕೀಂಬಾಪುದು (ಶಾಕುಂತ. ೨೨–೩೯). ೩. [ವಿಜ್ಞಾ] ದೇಹಕ್ಕೆ ಬೇಕಾಗುವ ಜೀವಸತ್ವಗಳಲ್ಲೊಂದಾದ ಜಿಡ್ಡಿನ ಅಂಶ : ಭೇದಿ ಮಾದರೆ ಸಸಾರಜನಕ ವಸ್ತುಗಳು . . . ಹೆಚ್ಚಾಗಿರುವ ಮತ್ತು ಮೇದಸ್ಸು (Fat) ಕಡಮೆಯಾಗಿರುವ ಆಹಾರವಸ್ತುಗಳನ್ನು ಕೊಡಬೇಕು (ಶಿಲೆಬೋ. ೬೩) ; ಮೇದಸ್ಸು. ಇಂಗಾಲ, ಜಲಜನಕ ಮತ್ತು ಆಮ್ಲಜನಕ ಇವುಗಳ ಸಂಯುಕ್ತವಸ್ತು (ಗೃಹಶಿ. ೦೪) ; ಕೀಟಗಳು ಶರ್ಕರಪಿಷ್ಟಗಳಿಂದ ಅಥವಾ ಸಸಾರಜನಕದಿಂದ ಮೇದಸ್ಸುಗಳನ್ನು ಸಂಯೋಜಿಸುತ್ತವೆ (ಕೀಟಶಿ. ೩೦). [ಸಂ. ಮೇದಸ್]

**ಮೇದಾರ** ' ಮೇದ₂ ' ನೋ.

**ಮೇದಿನಿ** (ನಾ). ೧. ಭೂಮಿ : ಇಳೆ ; ಪೃಥ್ವಿ : "ಸ್ಥಿರೆ ಧರಣೆ ಧಾತ್ರಿ ಮೇದಿನಿ ಧರಿತ್ರಿ ಧರೆಯವನಿ . . . ಭೂಮಿ ಭೂ ಗೋತ್ರ ನೆಲಂ" (ವಸ್ತುಕೋ. ೨೬–೧) ; ಜಲ ಕೂರ್ಮ ನಾಗ ಮೇದಿನಿ ಸಪ್ತಸಾಗರ ಅಖಂಡ ಭಾಂಡ ಹರಿವಿರಿಂಚಿಗಳು ನಿಮ್ಮ ಉದರದ ಕೊನೆಯ ಪ್ರಾಣಿಗಳಯ್ಯ (ಬಸವ. ೩೩೫) ; ಮಂಗಳಂ ಮೇದಿನಿಗೆ ಸುರಬಿಗೆ ಮಂಗಳಂ ಕೇಳ್ದರಿಗೆ ಪೇಳ್ದಗೆ ಮಂಗಳಂ (ಕೌಶಿರಾ. ೪೪–೩೯). ೨. ದೇಶ ; ರಾಜ್ಯ : ಮೇದಿನಿಯಂ ಕೆಯ್ಕೊಳ್ ಪದನಾದುದು ಜಿನದೀಕ್ಷೆಗೆನಗೆ ಮಗನೇ (ಶಾಂತಿಪು. ೬–೩೬) ; ತನಗುಳ್ಳ ಸರ್ವರಾಜ್ಯವನು ವಿಶ್ವಾಮಿತ್ರಮುನಿಗೆ ಧಾರೆಯನೆಱೆದನವನೀರ ನೆಂದು ಮೇದಿನಿಯೊಳೆಲ್ಲಂ ಸಾಱೆ (ಹಠರಾ. ೯–೩೩).

**ಮೇದಿನೀಮಿಸೆಯರ ಗಂಡ, ಮೇದಿನೀಮಿಸರಗಂಡ**=ಜಗತ್ತಿನಲ್ಲೇ ಶೂರರೆನಿಸಿಕೊಂಡವರನ್ನು ಸೋಲಿಸುವಂತಹ ವೀರ ; ಒಂದು ಬಿರುದು: ಶ್ರೀಮನ್ಮ ಮಹಾ ಮೇದಿನೀಮಿಸೆಯರ ಗಂಡ ಕಠಾರಿಸಾಳುವ ನರಸಿಂಗರಾಯ . . . ಸುಖದಿಂ ರಾಜ್ಯವನಾಳುತ್ತಮಿರ್ದ್ದು (ಎಕ. III (R). ಹೆಗ್ಗಡ. ೦೯೩–೬ ; 1497) ; ಶ್ರೀಮನ್ಮಹಾಮಂಡಳೇಶ್ವರ ಮೇದಿನೀಮಿಸರ ಗಂಡ ಕಠಾರಿಸಾಳ್ವ . . . ಶ್ರೀ ನರಸಿಂಗರಾಯ ಮಹಾರಾಯರು ಪೃಥ್ವೀರಾಜ್ಯಂಗೆಯಿಉತ್ತಿರಲು (ಎಕ. IX, ಬಂಗಳೂ· ೧೨೩–೩; 1495). [ಸಂ. ಮೇದಿನೀ]

**ಮೇದಿನಿಪ** (ನಾ). ಭೂಮಿಯ ಒಡೆಯ : ದೊರೆ ; ರಾಜ : ಬೂದಿಗುಂಟಿಳದ ಕಾಯಂಗಡಿಯೊಳಿಟ್ಟರಲು ಮೇದಿನಿಪ ಕಂಡು . . . ಪೇಳೆ (ಗುರುಬಾ. ೮–೨೯). [ಮೇದಿನಿ + — ಪ₃]

**ಮೇದಿನೀಧರ** (ನಾ). ಭೂಧರ ; ಬೆಟ್ಟ : ಪರ್ವತ : ನಾಲುಕುಭೇದ ದೌಷಧಿಯುಂಟು . . . ಆ ದಿವಿಜಗಿರಿಯಿಂದ ಮುಂದಣ ಹಾದಿಯಲಿ ಹರಿದಶ್ವನಾಮದ ಮೇದಿನೀಧರವಮಲಚಂದ್ರ ದ್ರೋಣನಾಮಕದ (ಕೊರಾ. ೬–೦೬–೨೬).

**ಮೇದಿನೀಧರರಾಜ** = ಪರ್ವತರಾಜ: ಮೇದಿನೀಧರರಾಜಮೇನೆಯರ್ ಬಹಳ ಹರುಷೋದಧಿಯೊಳಾಳ್ದವರ್ಗಂಗಚಿತ್ರವನಿತ್ತಿ ದಿರ್ಗೊಳಲ್ ಪೂಜಿ ಮುಟ್ಟರು (ತಂಪು. ೩೬–೦೬). [ಸಂ.]

**ಮೇದಿನೀಪತಿ** (ನಾ). = ಮೇದಿನಿಪ : ಮೇದಿನೀಪತಿ ಪಾಂಡು ಸೋಮಕ ರಾದಿಯಾದನ್ವಯವನಗಣಿತ ಬಂಧುಬಳಗವನು ಆದರಿಸಿದನು (ಕಬ್ಬಾಪಿ. ೦೦–೯೦) ; ಒಂದು ಚೋದ್ಯವ ನೋಡು ಬಾರೆಂದು ಮೇದಿನೀಪತಿಯ ಕೈವಿಡಿದು . . . ಆದಿದೇವನ ಎಡೆಗೈದಿ (ಹಂಶಾಂ· ೦೯–೯೦). [ಸಂ.]

**ಮೇದಿನೀಪಾಲ** (ನಾ). ಭೂಮಿಯನ್ನು ರಕ್ಷಿಸುವವನು ; ದೊರೆ ; ರಾಜ : ಮೂಲೋಕದೊಳ್ನಸಗೆ ಸಮರಾದ ಮೇದಿನೀಪಾಲರಂ ಸುಭಟರಂ ಕಾಣೆನು (ಕೈಬಿವಾ. ೪–೩೦). [ಸಂ.]

**ಮೇದಿನೀಸುತೆ** (ನಾ). ಭೂಮಿಯ ಮಗಳು ; ಸೀತೆ : ಮೇದಿನೀಸುತೆ ಬಸುಱ ಬಡಿದಳುವಂತೆ ಮಾಡುವೆನು (ಕೌಶಿರಾ. ೨೬–೪). [ಸಂ. ಮೇದಿನೀಸುತಾ]

**ಮೇದಿನೀಸುರ** (ನಾ). ಭೂಸುರ ; ಬ್ರಾಹ್ಮಣ : ವಾದಿಸದೆ ಬಸವಣ್ಣ ಕೇಳಾ ಮೇದಿನೀಸುರ ಮಾರ್ಗದಿರವಂ (ಬಸಪು. ೩–೫೨) ; ಅಂದಿನ ಜಾತ ಕರ್ಮದಿ ಮೇದಿನೀಸುರವರ್ಗ ವಣಿದುದು ಗೋಧನ . . . ಹಿರಣ್ಯದಾನದಲಿ (ಕೌಶಿರಾ. ೦-೬೭). [ಸಂ.]

**ಮೇದಿಸು** (ಕ್ರಿ). ೧. ನೆನೆಯುವಂತೆ ಮಾಡು; ಅದ್ದು ; ತೋಯಿಸು : ಮೊಮ್ಮನ ಹಣೆಯ ಮೇಲೊಗಿಸಿದನು ಪನ್ನೀರಿನಲಿ ಮೇದಿಸಿದ ಕಣಲಿಗೆಯ ಕುಸುಮಂಗಳನು (ಕೊರಾ. ೬–೫೦–೯೩). ೨. ಲೇಪನಮಾಡು ; ಬಳಿ ; ಲೇಪಿಸು : ರಾಯ ಮರರಥನಸುವಿಸಂಚಿತಕಱಯುವನು ನವತಪ್ತತೈಲದ

ಲಾಯಸಂಬಡಿಸಿದರು ಮೇದಿಸಿದರು ಸುಗಂಧವಳಿ (ಕೊರಾ. ೨-೬-೧). ೩. ಸಿಂಪಡಿಸು ; ತಳಿ : ಜಾದಿಯರಲ್ಗೆ ಜವಾದಿಯನೊಲವಿಂ ಮೇದಿದ ರಲ್ಲದೆ ಕಾಬ್ರುಜುಚಿಗದಂ ಮೇದಿಪರೇ ನಿಜಕಾಂತೆಯರೊಲವಂ ಸಾಧಿಸುವರು ಸಕಲಕೈಕಸುವರೇ (ಅಮವು. ೬-೩೯) ; ಬೀದಿಬೀದಿಗಳೊಳಗೆ ಕಸ್ತೂರಿ ಸಾದುಗಳ ಸಾರಣೆಯು ಪರಿಮಳ ಮೇದಿಸಿದ ಪನ್ನೀರ ಚಳೆಯದ ಪಡಿಸಣ ಗೈದ ಧೂಪದ ಧೂಮಪವನನಲೆಸೆದುದಾ ನಗರ (ಕೊರಾ. ೨-೧-೨೬).

[ಮೇದು$_1$ + – ಇಸು$_3$. / ತೆಲು. ಮೇದಿಂಚು]

**ಮೇದು$_1$** (ಕ್ರಿ). ೧. ನೆನೆಯಿಸು ; ಅದ್ದು : ತೋಯಿಸು. ೨. ಬಳಿ : ಲೇಪಿಸು. ೩. ಸಿಂಪಡಿಸು; ತಳಿ : 'ಮೇದಿಸು' ಪರಾ.

[ದೇ. ॥ ತೆಲು. ಮೇದು]

**ಮೇದು$_2$** 'ಮೇ$_1$' ಪರಾ.

**ಮೇದುರ** (ಗು). ೧. ನುಣುಪಾದ ; ಮೃದುವಾದ : ಪ್ರತಿಲೇಖನದೊಳ ನಾಲೋಕಿತಮನುಚಿತಮೆಂದು ಪಲವು ಕಣ್ಬಡೆದವೊಲಾ ಯತಿಪತಿಯು ದಯಾ ಧ್ವಜಮೇನತಿಶಯಮಾದತ್ತೊ ಮೇದುರಂ ಮಾಯೂರಂ (ಧರ್ಮಪು. ೧೧-೦೩೫). ೨. ದಟ್ಟವಾದ ; ಸಾಂದ್ರವಾದ; ಒತ್ತಾಗಿರುವ : ಮೇದುರ ನೀಲಾಶ್ಮಮನಂಭೋದಭ್ರಾಂತಿಯೊಳೆ ನೋಡಿ ಕುಣಿದುವು ಶಿಖಿಗಳ್ (ಜಗಂ. ೧೬-೩೩). ೩. ಸ್ಥೂಲವಾದ ; ತೋರವಾದ : ನೆಲಸಿರೆ ಮೇದು ರೋದರದೊಳಂದು ಜಿನಾರ್ಭಕನಂತರಂಗದೊಳ್ ನೆಲಸಿದುದೆಯ್ದೆ ಸಂತಸದ ಸಂತತಿ (ಶಂಪ್ರಪು. ೦೨-೨೨). ೪. ಅತಿಶಯ ; ಆಧಿಕ್ಯ : ಹೆಚ್ಚಳ : ದ್ವಿಜತತಿಗೆ ಮೇದುರದ ದುಮ್ಮಾನಮನಿಸೆ (ಪಂಭಾರಾ. ೫-೨-೨೬). (ನಾ). ೫. ಶ್ರೇಷ್ಠನಾದವನು; ಉತ್ಕೃಷ್ಟವ್ಯಕ್ತಿ: ಭರದೆ ನಟಿಪೆಡೆಯೊಳಂತಸ್ಸ್ವರ ಸಂಪನ್ನನುರುಪರಮಗಗನಮಧ್ಯಸ್ಥಂ ಪರಾನಂದತರಮೇದುರಂ ಮಹಾ ವಿಮಲಬೋಧಸುಧಾರಸಮಪಾರಮತುಲವಿಭವಂ (ಶದ್ಮರಾ. ೧೧-೨೦೩).

[ಸಂ.]

**ಮೇದೆ** (ನಾ). ಔಷಧಕ್ಕೆ ಬಳಕೆಯಾಗುವ ಎಂಟು ವಿಧವಾದ ಮೂಲಿಕೆ ಗಳಲ್ಲಿ ಒಂದು; ಶುಂಠಿಯನ್ನು ಹೋಲುವ ಒಂದು ಬಗೆಯ ಬೇರು : ಕಾಕೋಳಿ, ಮೇದೆ, ಮಹಾಮೇದೆ . . . ಕಾಡಹೆಸರು ಇವಿಷ್ಟನ್ನೂ ಪ್ರತ್ಯೇಕ ನಾಲ್ಕು ವರಹ ತೂಕವನು ಸಣ್ಣನಾಗಿ ಚೂರ್ಣಿಸಿ ಹಾಕಿ (ವೈದ್ಯಸಾ. 11, ೫೪) ; ಶ್ರೀಗಂಧ, ಮುಡಿವಾಳ . . . ಮೇದೆ, ಮಹಾಮೇಧೆ . . . ಕಾಯಿಸಿ ಪಾಕದಲ್ಲೆಳಹಿ ಶರೀರಕ್ಕೆ ಲೇಪಿಸೆ ಪಿತ್ತಜ್ವರ, ಉನ್ಮಾದ. ಮೂರ್ಛೆ ಸಹ ಮಾಣುವುವು (ಸಳವೈ. ೯೫) ; ಮೇದೆ ಅತಿಮೇಧಿ ಕಾಕೊಳ ಕ್ಷೀರ ಕಾಕೊಳ ಚಂಗಲಕೋಷ್ಠ . . . ಇವು ಪ್ರತ್ಯೇಕ ನಾಲ್ಕು ತೂಕ ಚೂರ್ಣಿಸಿ ಹಾಕಿ ಕಾಸಿ ಹದವಲ್ಲಿ ಇಳುಹಿ (ಭ್ರಾಕ್ಷಾಕು. ೩-೧). 'ಅಷ್ಟವರ್ಗ' ಪರಾ.

[ಸಂ. ಮೇದಾ]

**ಮೇದೋಜೀರಕ** (ನಾ). [ವೈದ್ಯ] ಆಹಾರವನ್ನು ಪಚನಗೊಳಿಸುವುದ ರಲ್ಲಿ ಸಹಾಯಕವಾಗುವ ರಸಗಳಲ್ಲಿ ಒಂದು : ಈ ಮೇದೋಜೀರಕವು ಸೇರಲು ಆಹಾರದಲ್ಲಿನ ಪಿಷ್ಟ. ಪ್ರೋಟೀನಪದಾರ್ಥಗಳು ಚೆನ್ನಾಗಿ ರೂಪಾಂತರವಾಗುವುವು (ಶಾಂಕೃ. I, ೨೫೦). [ಸಂ.]

**ಮೇದೋಜೀರಕಗ್ರಂಥಿ** (ನಾ). ಜಠರದ ಸಮೀಪದಲ್ಲಿ ಇರುವ, ಮೇದೋಜೀರಕರಸವನ್ನು ಸ್ರವಿಸುವ ಒಂದು ಗ್ರಂಥಿ : ಆಹಾರದ ಪಚನಕ್ರಿಯೆಗೆ ಸಹಾಯಕವಾಗುವ, ಮುಖ್ಯವಾದ ಗ್ರಂಥಿಗಳಲ್ಲಿ ಒಂದು : ಪಿಷ್ಟ ಪದಾರ್ಥಗಳ ಜೀರ್ಣತೆಗೆ ದೇಹದಲ್ಲಿರುವ ಮೇದೋ ಜೀರಕಗ್ರಂಥಿಯು ಬಹಳ ಮುಖ್ಯವಾದ ಅವಯವವಾಗಿರುತ್ತದೆ (ಜವ್ಯವೈ. ೦೦೯). [ಸಂ.]

**ಮೇದೋಧಾತು** (ನಾ). ದೇಹದ ಸಪ್ತಧಾತುಗಳಲ್ಲಿ ಒಂದು; ಮೇದಸ್ಸು : ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು, ಮೇದೋಧಾತು, ಅಸ್ಥಿಧಾತು, ಮಜ್ಜಧಾತು, ಶುಕ್ಲಧಾತು ಎಂದು ಏಳು ತರನಾಗಿವೆ (ಸಳವೈ. ೯೮). [ಸಂ.]

**ಮೇಧ** (ನಾ). ಯಜ್ಞ ; ಯಾಗ : ಮೇಧಾದಿ ಕರ್ಮಗಳು ಮಾಡಿದರೇನು ಬ್ರಹ್ಮವಾದಿಗಳ ಸಂಗವಿಲ್ಲದನಕ (ಪಿಶಾಸು. ೬೨-೧). [ಸಂ.]

**ಮೇಧಾಯುಕ್ತ** (ನಾ). ಬುದ್ಧಿಶಕ್ತಿಯುಳ್ಳವನು ; ಬುದ್ಧಿವಂತ : ದಿನನಾಥಂ ಸಿಂಹದೊಳ್ ಕೂಡೆ . . . ಅತಿ ಮೇಧಾಯುಕ್ತನಕ್ಕುಂ ನರಂ (ಜಾತಕ. ೦೭-೦೫). [ಸಂ.]

**ಮೇಧಾವಂತ** (ನಾ). = ಮೇಧಾಯುಕ್ತ. [ಸಂ. ಮೇಧಾವತ್]

**ಮೇಧಾವಿ** (ನಾ). ೧. ಬುದ್ಧಿಶಕ್ತಿಯು ಬಲವಾಗಿರುವವನು: ಬುದ್ಧಿ ವಂತ : ಕನ್ನೆಯೊಳ್ ಚಂದ್ರ ಕೂಡಿರೆ ಮೇಧಾವಿ ಮಹಾಗುಣಾಂಬುನಿಧಿ . . . ವಿತರಣವ್ಯಾಪಾರಶೂರಂ ನರಂ (ಜಾತಕ. ೦೭-೨೩) ; ಮೇಧಾವಿ ಗಳಾದ ಯಜ್ಞಕರ್ತರು ಉದಕದ ಸ್ಥಾನವನ್ನು ರಕ್ಷಿಸುತ್ತಾರೆ (ಋಗ್ವೇ. ೩೭); ಇಡೀ ಕಾಲೇಜಿಗೆ 'ಮೇಧಾವಿ' ಎಂದು ಅರಿಸಲ್ಪಟ್ಟನು (ಸಸ್ಮೃ. ೦): ೨. ವಿದ್ವಾಂಸ; ಪಂಡಿತ : "ಸೂರಿ ಮೇಧಾವಿ . . . ಎನಲ್ಕೆ ವಿದ್ವಾಂಸ ನೆನಿಸಿಕ್ಕು" (ಮಂಗರಾ. ೬೭-೨) ; ತಾವು ನಿಜವಾಗೂ ಮೇಧಾವಿಗಳು (ದಾಸಪಿಂ. ೭೦). ೩. ಗಿಳಿ; ಶುಕ. ೪. ಅಗ್ನಿಕಾರ್ಯ ಮುಂತಾದುವು ಗಳನ್ನು ಮಾಡಿದ ಮೇಲೆ ಅಗ್ನಿಕುಂಡದ ಅವಶೇಷದಿಂದ ಹಣೆಯ ಮೇಲೆ ಇಟ್ಟುಕೊಳ್ಳುವ ಬಟ್ಟು. —ರಕ್ಷೆ : ಪಿಡಿವ ಪಾತ್ರೆ ಪಿತಾಮಹನ ತಲೆ . . . ಇಡುವ ಮೇಧಾವಿಯೆ ಭಸಿತವೆಡಬಿಡದೆಸೆವ ಚಂಡಿಕೆಗಳ್ಳದುಂ ಜಡೆ ಕೊರಳ ಕೃಷ್ಣಾಜಿನವೆ ಕಲಿಯುಜಿಸವಾಗಿರಲು (ಬಸಪು. ೬-೫೪).

[ಸಂ. ಮೇಧಾವಿನ್]

**ಮೇಧಾವಿತನ** (ನಾ). ಬುದ್ಧಿವಂತಿಕೆ : ಮಗನ ಮೇಧಾವಿತನವನ್ನು ಬೇಸರ ದಿಂದಲೇ ಹೇಳಿದ ವರದಪ್ಪನಾಯಕ (ಹೇಮುಕೂ. ೯).[ಮೇಧಾವಿ + – ತನ]

**ಮೇಧಾವಿಳ** (ನಾ). ಬುದ್ಧಿವಂತ ; ಮೇಧಾವಿ : ಮೇಧಾವಿಳನೆನಿಸಿದುರ್ಗಂ ಮೇಧಾವಿಳಮತಿಗಿದೆಲ್ಲ ತಕ್ಕುದೆ (ಕುಸುಮಾ. ೧೧-೩೯). [ಸಂ. ಮೇಧಾವಿಲ?]

**ಮೇಧಾಶಕ್ತಿ** (ನಾ). ಬುದ್ಧಿಶಕ್ತಿ : ಅಪ್ಸರೆಯರಿಗೆ ವಿಚಿತ್ರವಾದ ಒಂದು ಮೇಧಾಶಕ್ತಿಯಿರುವುದು (ಮಹಾಣ. ೦೬೨); ಧನ ವ್ಯಯವಾದೀತೆಂದು ಈ ಕಾರ್ಯ ಸಾಧಿಸಲು ಹಿಂಜರಿಯುವುದಾದರೆ ನಾಡಿನ ಮೇಧಾಶಕ್ತಿ ಉಚಿತ ಮಾರ್ಗದಲ್ಲಿ ಪ್ರವಹಿಸಲಾರದೆ ಖಹುವಾಗಿ ಅಡ್ಡದಾರಿ ಹಿಡಿದು ವ್ಯರ್ಥ ವಾದೀತು (ಕಿಕ್ಷದ. ೦೭೪). [ಸಂ.]

**ಮೇಧೆ** (ನಾ). ೧. ಬುದ್ಧಿಶಕ್ತಿ ; ಪ್ರತಿಭೆ : "ಪ್ರತಿಭಾ ಸಂವಿತ್ಪ್ರಜ್ಞಾ ಮತಿ ಮೇಧಾ ಬುದ್ಧಿ" (ವಸ್ತುಕೋ. ೯೬-೩); ವಿರತಿ . . . ಮೇಧಾ . . . ನಿಷ್ಠೆಯ ಮುಂತಾದ ಸಾತ್ವಿಕಗುಣಗಳಿಂ (೭ವೇಕ. ೨೪೭); ಶೇಷಣ್ಣನವರು ರಸಿಕರು. ಸುಕುಮಾರರು. ಬಹಳ ಚುರುಕಾದ, ಕದಡಿಲ್ಲದ ಮಿದುಳು. ಮರವರಿಯದ ಮೇಧೆ (ಗಾಪಕ. ೪೦). ೨. ಮನಸ್ಸಿನ ಷೋಡಶವಿಕಾರ ಗಳಲ್ಲಿ ಒಂದು : ಐತರೇಯೋಪನಿಷತ್ತಿನಲ್ಲಿ ಸಂಜ್ಞಾನ (ಚೇತನಭಾವ). ಆಜ್ಞಾನ (ಈಶ್ವರಭಾವ). ವಿಜ್ಞಾನ (ಕಲಾದಿಪರಿಜ್ಞಾನ). ಪ್ರಜ್ಞಾನ. ಮೇಧಾ. ದೃಷ್ಟಿ. ಧೃತಿ . . . ಸಂಕಲ್ಪ. ಕ್ರತು, ಅಸು, ಕಾಮ, ವಶ ಈ ಹದಿನಾರು ಮನಸ್ಸಿನ ವಿಕಾರಗಳೆಂದಿರುವವು (ಅಮ್ಮಕ. ೬-೨೬ ಟೀಕ).

ಮೇಧಾದಕ್ಷಿಣಾಮೂರ್ತಿ = ೧. ಶಿವ. ೨. ಅಪೂರ್ವವಿದ್ವತ್ತು ಗಳಿಸಿದ ಹಿರಿಯರನ್ನು ಗೌರವಸೂಚಕವಾಗಿ ಸಂಬೋಧಿಸುವ ಶಬ್ದ: ಈ ಶತಮಾನದ ಪ್ರಾರಂಭದಲ್ಲಿ ಅಪೂರ್ವವಿದ್ವತ್ತು ಗಳಿಸಿದ ಹಿರಿಯರನ್ನು 'ಮೇಧಾದಕ್ಷಿಣಾಮೂರ್ತಿ' ಎಂದು ಸಂಬೋಧಿಸುತ್ತಿದ್ದರು (ರೂಢಿ).

[ಸಂ. ಮೇಧಾ]

**ಮೇಧ್ಯ** (ಗು). ೧. ಯಜ್ಞ, ಯಾಗಗಳಿಗೆ ಯೋಗ್ಯವಾದ. ೨. ನಿರ್ಮಲವಾದ : ಶುಚಿಯಾದ. ೩. ತಿನ್ನಲು ಯೋಗ್ಯವಾದ ;

ಸೇವಿಸಲು ಅರ್ಹವಾದ. (ನಾ). ೪. ಶುಚಿಯಾದುದು ; ಪವಿತ್ರವಾದುದು : "ಶುಚಿ, ಮೇಧ್ಯಂ, ಪವಿತ್ರಂ, ಪುಣ್ಯಂ, ಪಾವನಂ–ಈ ೫ ಶುದ್ಧಮಪ್ಪ ವಸ್ತು" (ಹಲಾಯು. ೨೨–೦೩೨); "ಪಾವನಂ ಶುಚಿ ಮೇಧ್ಯವೆನೆ ಪವಿತ್ರಮುದಕ್ಕುಂ" (ಮಂಗರಾ. ೯–೨೯). ೫. ಶುಚಿಯಾಗಿದ್ದು, ತಿನ್ನಲು ಯೋಗ್ಯವಾದುದು : ಬೇಂಟೆಯೂಡದರಲ್ಲಿ ಮೇಧ್ಯಂಗಳಂ ಮೃಗಗಳಂ (ಶ್ರೀರಾಮಾ. ೦೩೯–೪೯೩). ೬. ಆಡು ; ಮೇಕೆ. ೭. ಮುಂಜ ಹುಲ್ಲು. ೮. ಕಗ್ಗಲಿಮರ. [ಸಂ.]

**ಮೇನ** ' ಮೇನಾ ' ನೋ.

**ಮೇನಕಾತ್ಮಜೆ** (ನಾ). ಮೇನಕೆಯ ಮಗಳು ; ಪಾರ್ವತಿ : "ರುದ್ರಾಣೀ, ಶರ್ವಾಣೀ... ಗಿರಿಜಾ, ಮೇನಕಾತ್ಮಜಾ–ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೪–೦೭). [ಸಂ. ಮೇನಕಾತ್ಮಜಾ]

**ಮೇನಕೆ** (ನಾ). ೧. ಅಪ್ಸರಸ್ತ್ರೀಯರಲ್ಲಿ ಒಬ್ಬಳು ; ದುಷ್ಯಂತನ ಪತ್ನಿಯಾದ ಶಕುಂತಲೆಯ ತಾಯಿ : "ಘೃತಾಚೀ, ಮೇನಕಾ, ರಂಭಾ, ಊರ್ವಶೀ, ತಿಲೋತ್ತಮಾ, ಸುಕೇಶೀ, ಮಂಜುಘೋಷಾ–ಇವರು ಮೊದಲಾದವರ್ ಅಚ್ಚರಸಿಯರ್" (ಹಲಾಯು. ೦೫–೮೮) ; ದನಿಯಿಂಪು ಬೀಣೆಯಂ ಮಿಡಿವವೊಲಾಗೆ ಗಾನದೊಳೊಡಂಬಡೆ ಮೇನಕೆ ಮುಂದೆ ಪಾಡಿದಳ್ (ಶಂಪಶಾ. ೬–೯೯); ಮೇನಕೆ ರಂಭೆ... ಮಂಜುಘೋಷೆಯೆಂಬೀ ನೆಗೞ್ದಗ್ಗದಚ್ಚರಿಯರಚ್ಚರಿಯಪ್ಪ ವಿಳಾಸಮಂ ಘಜಭ್ರೂನಟನ್ನಿಕದೇಶಮೆ ತಱುಂಬಿದುದು (ಪುಷ್ಪ. ೨–೭೬). ೨. ಪರ್ವತರಾಜನ ಪತ್ನಿ ; ಪಾರ್ವತಿಯ ತಾಯಿ : ಮಿಗೆ ಬಾಸೆ ಬಣ್ಣವೇಱಿತು... ಬಳಲ್ಕೆಯ ನೊಗೆದುವು ನವನವಮನೋರಥಂ ಮೇನಕೆ [ಪಾಠಾಂ. ಮೇನೆ]ಯಾ (ಗಿಂಕ. ೩–೩೯). [ಸಂ. ಮೇನಕಾ]

**ಮೇನತ್ತು** ' ಮೆಹನತ್ತು ' ನೋ.

**ಮೇನಾ, ಮೇಣಾ, ಮೇಣೆ, ಮೇನ, ಮೇನೆ$_2$, ಮ್ಯಾನಾ** (ನಾ). ಹಿಂದೆ ಸಿರಿವಂತರು ಉಪಯೋಗಿಸುತ್ತಿದ್ದ ಸಾಮಾನ್ಯವಾಗಿ ಬೋಯಿಗಳು ಹೊರುತ್ತಿದ್ದ, ಬಾಗಿಲುಗಳುಳ್ಳ ಪಲ್ಲಕ್ಕಿಯಂತಹ ಒಂದು ವಾಹನ : ಇವರಲ್ಲಿ ಕೆಲವರು... ಡೋಲಿ ಮತ್ತು ಮೇನಾಗಳನ್ನು ಸಾಗಿಸುವುದಕ್ಕೂ ನೇಮಕವಾಗಿದ್ದರು (ಮುಜಾಪಂ. II, ೨೦); ಮಧ್ಯೆ ಮಧ್ಯೆ ಗಲ್ಲಿಯಿಂದ ಮೇನಾ ಹೊರುವವರ ಹಾಂ ಹೂಂ ಎಂಬ ಕೂಗೂ... ಕಿವಿಗೆ ಬೀಳುತ್ತಿತ್ತು (ಚಿಂಅರ. II, ೩). **ಮೇಣಾ** : "ಶಿಬಿಕಾ, ಯಾಪ್ಯಯಾನಂ, ೨ ಅಂದಲದ ಹೆಸರು, ಮೇಣಾ, ಡೋಲಿ, ಪಾಲಕಿ" (ಸಿದ್ಧಾಂತ. ೨೫೨). **ಮೇಣೆ** : ಕೂಡಲೆ ಅವರು ಅವಳನ್ನು ಹೊರಗಿದ್ದ ಮೇಣೆಯಲ್ಲಿ ಕೂಡ್ರಿಸಿಕೊಂಡು ನಡೆದರು (ಅಂಬಿಕೆ. ೬೮); ಆ ಕೋಣೆಯಿಂದ ಕೆಳಗಿಳಿದು ಬಂದು ಈ ಮೇಣೆಯಲ್ಲಿ ಕುಳಿತು... ಬೆಳಗಿನಲಿ ಶಾಂತವಾಯ್ತು (ನಂದಾಮು. ೩೭–೧). **ಮೇನ** : ಇಂದಿರೆಯು ಮಹೇಶಪುರದ ಊರ ಹೊರಗೇ ಮೇನವನ್ನು ನಿಲ್ಲಿಸಿ ತಂದೆಯ ಮನೆಗೆ ನಡೆದು ಹೋದಳು (ಬಂಕಿಮ. ೦೨೨). **ಮೇನೆ$_2$** : ಮೇನೆಯು ಆ ಗುಡ್ಡಗಾಡಿನ ಕಾಲುದಾರಿಯಲ್ಲಿ ಸಾಗಿಬರುತ್ತಿತ್ತು (ಕಥಾ. ೦೫); ಶಾಂತಲಾದೇವಿಯೂ... ಮೇನೆಯಲ್ಲಿ ಕುಳಿತು ಅಂತಃಪುರವನ್ನು ಸೇರಿದಳು (ಸಶಾ. ೩). **ಮ್ಯಾನಾ** : ಬೆಳ್ಳಿ ಪಾಲಿಕಿ ೧ ಸಾದಾ ಪಾಲಿಕಿ ೧ ಮ್ಯಾನಾ ೨ ರಥಗಳು ೪ (ಗುರುರ. ೧೦); ಶ್ರೀದೇವಿಯನ್ನು ಎತ್ತಿ ಮ್ಯಾನಾದಲ್ಲಿ ಮಲಗಿಸಬೇಕೆಂದು ಸಂಕಲ್ಪ ಮಾಡಿದನು (ಶ್ರೀರಾಧು. ೦೬೨). [←ಪಾರ. ಮಿಯಾನಾ, ಮ್ಯಾನ್; ಹಿಂ. ಮಿಯಾನಾ, ಮೇನ; ಮರಾ. ಮೇಣಾ, ಮೇನಾ]

**ಮೇನಾಗಿಡ** (ನಾ). ಒಂದು ಬಗೆಯ ಸಸ್ಯ : (ವೈಶಿಗಿ. ೩೮–೭೩೦).

[ಮೇನಾ$_?$ + ಗಿಡ (< ಗಿಡು)]

**ಮೇನಾತ್ಮಜೆ** (ನಾ). = ಮೇನಕಾತ್ಮಜೆ : " ಉಮೆ ಪಾರ್ವತಿ ಕಾತ್ಯಾಯನಿ ಹಿಮವತ್ಸುತೆ ಚಂಡಿ ದುರ್ಗೆ ಮೇನಾತ್ಮಜೆ... ಎಂಬಿವಂಬಿಕೆಯ ಪೆಸರ್" (ವಸ್ತುಕೋ. ೩–೦೭) ; ಮೇನಾತ್ಮಜಾನಾಥ ಕೋಪಿಸಲು ಕೊಲ್ಲುವನು ತಾನು ಒಲಿದಡೆ ಕಾಯ್ವನು (ಶಶಿಕೋ. ೬–೬೨). [ಸಂ. ಮೇನಾತ್ಮಜಾ]

**ಮೇನಿಯ** (ನಾ). (ಕರಾ) ಎಣ್ಣೆ ತೆಗೆಯುವವನು; ಗಾಣಿಗ : ಮಳೆಗೆ ಮುಂಚೆಯೇ ಆ ಕಾಯಿಗಳನ್ನು ಒಡೆದು ಬಿಸಿಲಿಗೆ ಹಾಕಿದ್ದರೆ, ಮೇನಿಯನಿಗೆ ಕೊಡಬಹುದಿತ್ತು (ಪಾರಮ. ೨೫) ; ಆದರೆ ತಿಮ್ಮಪ್ಪ ಈಗಲೂ ಮುದುಕನಾಗಿ ಮೂರುವರೆ ಹಲ್ಲು ಮಾತ್ರ ಉಳಿದರೂ ಎಣ್ಣೆ ಮೇನಿಯನಾಗಿಯೇ ಇದ್ದಾನೆ (ಹಹಸ. ೬೩). [ ? ]

**ಮೇನೆ$_1$** (ನಾ). = ಮೇನಕೆ ೨ : ಮೇನೆಯ ನಿನ್ನ ತಪಕ್ಕತಿ ಮಾನಿ ಮಹಾದೇವಿ ಕರುಣದಿಂ ನಿನ್ನುದರಸ್ಥಾನದೊಳಂ ಜನಿಯಿಸಿ ಸುಜ್ಞಾನಿಯನೆಲೆ ಪುತ್ರಿಯೆಂಬರೇ ಧಾರಿಣಿಯೊಳ್ (ಗಿಂಕ. ೪–೫೦); ಮೇದಿನೀಧರರಾಜಮೇನೆಯರ್ ಬಹಳ ಹರುಷೋದಧಿಯೊಳಾಳ್ದು ... ಪೂಜಿಸುವಟ್ಟರು (ಕಐಪು. ೩೭–೦೭). [ಸಂ. ಮೇನಾ]

**ಮೇನೆ$_2$** ' ಮೇನಾ ' ನೋ.

**ಮೇಪು, ಮೇಹು** (ನಾ). ೧. ಜಾನುವಾರುಗಳು, ಹುಲ್ಲು ಮೊದಲಾದ ಆಹಾರವನ್ನು ಮೇಯುವಿಕೆ : ದೀಪದ ಬೇಂಟೆಯುಂ ಬಿನ್ನಪಗೆಯ್ವೊಡೆ ಗಾಳಿಯುಂ ಕಟಿಪುಮುಂಟಿವಂ ಕಾಪುಂ ಮೇಪುಂ ತೋಡುಂ ಬೀಡುಂ... ಪೆರ್ಚುಂ ಕುಂದುಂಮನಱಿದು (ಶಂಪಶಾ. ೫–೪೩ ವ). ೨. ಜಾನುವಾರುಗಳು ತಿನ್ನುವ ಆಹಾರ ; ಜಾನುವಾರುಗಳಿಗೆ ಹಾಕುವ ಆಹಾರ : ದನಿಯ ಪೊಗರ್ ಮನೋಭವನ ಬಾಳ್ವೊಗರಂತಿರೆ ಚಿತ್ರಮಿತ್ತು, ಮೇಪನೆ ಮಱಿದಾಲಿಸುತ್ತಿಪ ಪುಲ್ಲೆಯುಂ (ಲೀಲಾವ. ೮–೩೨); ಮೇಪಿಂ ಪುಲ್ಮಿಗಮುಂ ಬೆಳ್ಮಿಗಮುಂ ಪುಲ್ಮಿಗಮುಂ ತಣಿಮಾವು (ಅಸಂಪು. ೦೦–೩೯); ಆನೆ ಕುದುರೆಗಳ ಮೇಪುಗಳ್ಗಂ ಜೋದರಾವುತವಾಯದಟದ ಜೀವಿತಂಗಳ್ಗಂ... ದಂಡುಗಂಗೊಂಬುದೆನಿತಾನುಪಾಯಂಟು (ಶಶಿಪಂ. ೪೫–೦೨). ೩. ಜಾನುವಾರುಗಳನ್ನು ಮೇಯಿಸುವುದು : ಮೇಪಿನ ಮಂಜ ಹಳೆ ಅಳಿಯ ಬಯಲಾಟಕ್ಕೆ ಹೋದವನು ಬೆಳಗಿನ ಜಾವ ವಾಪಸು ಬರುವಾಗ ಕತ್ತಲೇ ಆವರಿಸಿತ್ತು (ದೇಶಹಂ. ೫೫); ದನಕರುಗಳು ಹಾಯಾಗಿ ಮೇಯುತ್ತಿದ್ದವಲ್ಲಿ ; ಮೇಪಿನ ಹುಡುಗರು ತಾಳ ಹಾಕುತ್ತ ಹಾಡತೊಡಗಿದರು (ನಡೆದಾ. I, ೪೪೨). ೪. ಜಾನುವಾರುಗಳು ಮೇಯುವ ಸ್ಥಳ,– ಪ್ರದೇಶ ; ಹುಲ್ಲುಗಾವಲು : ಮೇಪಿನ ದಾರಿಯಲ್ಲಿದ್ದ ಹುಣಸೆಮರದಲ್ಲಿ ಈ ಬೊಬ್ಬರ್ಯ ಇತ್ತಂತೆ (ದೇಶಹಂ. ೫೭). **ಮೇಹು** : ೨. ಮೇಹನಿಕ್ಕಿ ಮೈಯನೊರಸಿದಡೆ ಪಶುಗಳೆ ಮೆಚ್ಚುವವು ಅನ್ನವನಿಕ್ಕಿ ಹಿರಣ್ಯವ ಕೊಟ್ಟಡೆ ಜಗವೆ ಪೊಗಳುವುದು (ಸವಚಾವ. ೪. ೬೦೨–೮೩); ತುರಗಾನೀಕದ ಮೆಯ್ಯೋ ನೊತ್ತಿಸುವ ಸಿಚ್ಚಂ ಮೇಹನಾರೈವ... ಚಿಂತೆಯಿಂ ನೆಲಸಿದಂ ಸೌಹಾರ್ದದಿಂ ಬಾಹುಕಂ (ನಳಚಂ. ೬೪೮) ; ಪೊರೆವ ದೀಹದ ಮಿಗಂಗಳ್ಗೆ ಮೇಹಂ ನೀಡಿ ಕರೆದು ಬೇಂಟೆಗಳನುಱೆ ಕಲಿಸುತಂ (ಕಐಪು. ೫೩–೨೦).

[ ಮೇ$_1$ + — ಪು$_2$/ತುಳು. ಮೇಪು ]

**ಮೇಪುಗಾಡು, ಮೇಹುಗಾಡು** (ನಾ). ೧. ಜಾನುವಾರುಗಳು ಆಹಾರವನ್ನು ಹುಡುಕಿ ತಿನ್ನುವ ಸ್ಥಳ,– ಮೇಯುವ ಸ್ಥಳ : ಹುಲ್ಲುಗಾವಲು ; ಗೋಮಾಳ : ಮೇಪುಗಾಡಿಂ ಹಕ್ಕದಲೆಗೆ ಹರಿಯಿಡುವ ಹರಿಣೀಗಣದ ಕಡೆವಾಯೊಳೆರೆಮೆಲ್ದುಟಿದೆಳೆಗಱುಂಕೆಯಸಟ್ಟಳಂ ಸೆಳೆದು ತಂದಾ ಬಯಲೊಳ್ ಬಳ್ವಿವಸಲೆಯುಂ ಪೊಸಯಿಸಿಯುಂ (ಚಂದ್ರಪ್ರ. ೬–೪ ವ); ಹುಲ್ಲೆಯ ಹಿಂಡು ಮಲ್ಲಣಿಸಿ ತಲ್ಲಣಗೊಂಡವು ಬೊಬ್ಬೆಯುಬ್ಬರ ಕ್ಕೊಲ್ಲದೆ ಮೇಪುಗಾಡೊಳರದೋದಿತು ಪೆರ್ಮರೆ ... ಮೃಗಂಗಳಂ ಮಿಡುಕುಗೆಟ್ಟರುತಿರ್ದುದು ಕೂಡೆ ಬೇಂಟೆಯೊಳ್ (ಸೂಕ್ತಿಸು. ೩–೧೦೭). **ಮೇಹುಗಾಡು** : ೧. ಮೇಹುಗಾಡಿನೊಳವರ ಮೈ ಮಿಗೆ ಸೋಹಿದರೆ

ಘುವ್ವಳೆಯು ಸುಚ್ಚುಲಿಯಾಹವದಲ್ಲೇ ತೋಳ ತಕ್ಕೆಯ ತೋಟಿ ತೀಗುವರೆ (ಕುವ್ಯಾ. ೦೩-೦೭) ; ತುರುವುಂದೆ ಮೇಹುಗಾಡಿಂದ ಝಣಝಣಿಸಿ ಮನೆ ಮರಳುತಿರೆ (ವೃಶಾಖ. ೬೪-೨೬೪). ೨. ಹುಲಿ ಮುಂತಾದ ಪ್ರಾಣಿಗಳು ತಮ್ಮ ಆಹಾರವನ್ನು ಹುಡುಕಿ, ಬೇಟೆಯಾಡಿ ತಿನ್ನುವ ಸ್ಥಳ : ಮರೆ ಉಲಿಯ ವ್ಯಾಘ್ರ . . . ಕರಿಕಳಭ ಖಡ್ಗಿಪ್ರತಾನದ ಮೇಹುಗಾಡಿನಲಿ ಪರಿದು ಬೆರಸಿತು ಬೇಡಪಡೆ (ಕುರಂ. ೩-೩-೦೩). ೩. (ಆಲಂ) (ಅಗ್ನಿಗೆ) ಆಹಾರವಾಗುವ ಸ್ಥಳ ; ಗ್ರಾಸವಾಗುವ ಪ್ರದೇಶ : ಊಹೆದಗಹಿನ ಕಂಬನಿಯ ತನಿಮೋಹರದ ಘನಶೋಕವಹ್ನಿಯ ಮೇಹುಗಾಡಿನ ಮನದ ಕೌರವನಿತ್ತನೋಲಗವ (ಕುವ್ಯಾದ್ರೋ. ೪೦-೧೨). [ಮೇಪು + ಕಾಡು$_2$]

**ಮೇಪುಗೊಳ್**, **ಮೇಹುಗೊಳ್** (ಕ್ರಿ). ಮೇವನ್ನು ತೆಗೆದುಕೊಳ್ಳು ; ಮೇಯು : ಮೃಗಾಳಿ . . . ಮೊಬಗುಗೇಳ್ದು ಜಗದ್ವಿಪರಾಂತಮಪ್ಪ ರಾವಣನ ಘನಚಾಪದಂಡರವಮಂ ಸೆನೆದೆತ್ತಲುವಿಷಾಕ್ಷಿಸುತ್ತೆ ಕಂಬನಿಗಳಸಿಕ್ಕಿ ಮೇಪುಗೊಳಲೊಲ್ಲವು ರೂಢಿಯ ಶಾಡ್ವಲಂಗಳೊಳ್ (ಕಾದಂಪೂ. ೦೦೧); ನಿಶ್ಚೇಷ್ಟೆಯಿಂ ಮೇಪುಗೊಳ್ಳದೆ ಕಣ್ಮುಚ್ಚಿ ಹಿಮಾನಿಯಿಂ ನಡುಗುತಿರ್ಪಾ ಪುಲ್ಲೆಯುಂ ಕಂಡಿಸಲ್ ಪದಸೆಂದೇಟಲೊಡರ್ಚಿಯುಂ . . . ಪಟ್ಟದ್ದುದು ಕೂಡೆ ಬೇಡಪಡೆ (ಜಗಪ. ೦೪-೦೪) ; ತೊಱೆಗದಡಿಳಿದು ಪರಿದವು ಪಂಸೆಕೊಳ ಕೊಳನ ಷಾರಿದವು ಷಶುಮೃಗಂ ಮೇಪುಗೊಂಡು (ಸಂಧವಾ. ೨೨-೩೪).

**ಮೇಹುಗೊಳ್**: ಚರಣಮನಾಪಗಂ ಬಡಿಯೆ ಜೀವಧನಂ ತನುಬೀಡೆ . . . ನಿರುಜನಮರ್ತ್ಯ ಮೇಹುಗೊಳುತುಂ ಬಡವಪ್ಪೊಡೆ ಹಾನಿ ರಾತ್ರಿಯೊಳ್ ಕಱಿಯಿ ಸಿರಾಕುಳಂ ಬಱಿದು ತತ್ಪತಿಗಾಗಳೆ ಕೇಡ ಮಾಡುಗುಂ (ಲೋಕೋಪ. ೪-೭೯); ಮೇಹುಗೊಳ್ಳದು . . . ಜ್ವರವಿಕಾರಮಾದೊಡೆ (ಹಯಕಂ) ತುರಗಂ (ಅಶ್ವಶಾ. ೦೩-೧). [ಮೇಪು + ಕೊಳ್$_1$]

**ಮೇಪುದೊಱೆ** (ಕ್ರಿ). ಮೇಯುವುದನ್ನು ಬಿಡು ; ಆಹಾರವನ್ನು ತೊರೆ : ಪುಲಿ ಬಿರಿತೋಡೆ ಋಕ್ಷವವನೀಜವನೇಱೆ ರುರುವ್ರಜಂ ಮಹಾಕುಲತೆಯನೆಯ್ದಿ ಮೇಪು[ಶಾಕಂ. ವು]ದೊಱೆದೇಣ[ಣ]ಗಳೊಗ್ಗೊಡದೆಯ್ದು . . . . ಬೇಂಟೆವಱಿಯಬ್ಬರಮುಣ್ಮಿತು ತದ್ವನಾಂತದೊಳ್ (ತ್ರಿಪುದ. ೨೭-೪೯). [ಮೇಪು + ತೊಱೆ$_1$]

**ಮೇಪುವಿಡು** (ಕ್ರಿ). = ಮೇಪುದೊಱೆ : ಕತ್ತರಿಸಿರೆ ಮೇಪುವಿಟ್ಟು ಕಪಿಯುಂ ಹುಮಸಂತತಿ ಕರ್ಣತಾಳವಿಸ್ಫುರಿತಮನೊಪ್ಪ ಕೇಳೆ ಗಜರಾಜಿ ಲಯಾಂತಕಘೋಷಭೀಷಣಂ ಪುರದೊಳಗುಣ್ಮಿದತ್ತು ಭಯವಿಷ್ಟುಲಪೌರಕೃತಂ ಮಹಾರುತಂ (ಶಂಪ್ರ. ೯-೪೪). [ಮೇಪು + ಬಿಡು$_1$]

**ಮೇಬಳ್ಳಿ** (ನಾ). (ಕರಾ) (ಮೇಯಲು ಬಿಟ್ಟಾಗ ಓಡಿಹೋಗಲು ಸಾಧ್ಯವಾಗದಂತೆ) ದನಗಳ ಒಂದು ಕಾಲನ್ನು ಕುತ್ತಿಗೆಗೆ ಅಥವಾ ಮೂಗುದಾರಕ್ಕೆ ಸೇರಿಸಿ ಕಟ್ಟುವ ಬಳ್ಳಿ, — ಹಗ್ಗ : ಅಯ್ಯೋ ಮಾವವೆಯೆಂದರೆ ಮೇಬಳ್ಳಿ ಹಾಕಿದ ಹಸುವಿನ ಹಾಗಾಯಿತು. ಇದೇನಿಲ್ಲ, ಗೋ ಬಿಟ್ಟ ಬಸವನಂತೆ ತಿರುಗಬಹುದಲ್ಲ (ಸರಸ. ೨೮). [ಮೇ$_1$ + ಬಳ್ಳಿ]

**ಮೇಬೊಲ** ' ಮೇಂಬೊಲ ' ನೋ.

**ಮೇಯ** (ಗು). ೧. ಅಳತೆಗೆ ಸಿಗುವ ; ಅಳೆಯಬಹುದಾದ : ಹಾಲಿನೊಳು ಬೆಣ್ಣೆಕಡಲೊಳಗೆ ನೀರ್ಗಲ್ಲವೊಲು ತೇಲುವುದಮೇಯಸತ್ತ್ವದಲಿ ಮೇಯ ಜಗಮೂಲವರೆಯೊಳಗೊಂದು. ಮಾಪನದ ಬಗೆಗೆರಡು ಗಾಳಿಮುಸಿರುಗಳಂತೆ (ಮಂಕುತಿ. ೦೦೦). ೨. ತಿಳಿಯಬಹುದಾದ : ಅರಿಯಲು ಶಕ್ಯವಾದ. (ನಾ). ೩. ಅಳತೆಗೆ ಸಿಗುವಂಥದು ; ಅಳೆಯಬಹುದಾದುದು. ೪. ತಿಳಿಯಲಾಗುವಂಥದು; ಅರಿಯಲು ಶಕ್ಯವಾದುದು : ಮೇಯವಲ್ಲದ ಮಹಿಮೆ ಛಾಯೆಯಾ ಬ್ರಹ್ಮನದು ಶಾಯಿವಳು ನೀಂ ಮಗುವು (ಮಂಕುತಿ. ೦೪೩). [ಸಂ.]

**ಮೇಯರ್** ' ಮೇಯರು ' ನೋ.

**ಮೇಯರು**, **ಮೇಯರ್** (ನಾ). ಪುರಸಭೆಯ ಅಧ್ಯಕ್ಷ ; ಮಹಾಪೌರ : ಹಿಂದೆ ನಮ್ಮ ಚಿಕ್ಕಪ್ಪ ಈ ಊರಿನ ಮೇಯರು ಆಗಿದ್ದರು (ರೂಢಿ). **ಮೇಯರ್** : ಇಂದು ನಾಗರಿಕಸೌಲಭ್ಯಗಳ ವಿಸ್ತರಣೆಯ ಬಗೆಗೆ ಮೇಯರ್‌ರವರು ಮಾತನಾಡಿದರು (ರೂಢಿ). [ ← ಇಂ. Mayor]

**ಮೇಯಿಸು**, **ಮೇಸು** (ಕ್ರಿ). ೧. ದನಕರುಗಳು, ಪಕ್ಷಿ ಮುಂತಾದುವು ಹುಲ್ಲು, ಆಹಾರಗಳನ್ನು ತಿನ್ನುವಂತೆ ಮಾಡು; ಮೇವನ್ನು ನೀಡು : ವಿಷಯರಹಿತನ ಮಾಡಿ ಭಕ್ತಿರಸವ ದಣಿಯೆ ಮೇಯಿಸಿ . . . ಸಲಹಯ್ಯಾ (ಬಸವ. ೩೦); ಗೋಕದಂಬಮಂ ಕರೆದು ಮುರಾರಿ ಮೆಯ್ವೊಡೆದು ಮೇಯಿಸಿಯುಂ ತಿಳಿನೀರನೂಡಿಯುಂ . . . ಮೆಱೆದಂ ನಿಜಗೋಪಲೀಲೆಯಂ (ಜಗಪ. ೩-೪೨); ಕರುಣಾಂ ಮಿಗೆಯೊಳ್ಗುಡುಕುಗಳಂ ಮುಂಬರಿಪಿ ವಿನೋದದಿ ಮೇಯಿಸಿ ಬಳಿಕುಱೆ ಹರಿಸದಿನಾ ಪಣ್ಬಕ್ಕಿಯನುಡನಿಱುವಱೆಯೊಳಡಂಗಿಸುತ (ಶಮುಶಾ. ೦೨-೪೦). ೨. (ಆಲಂ) ಲಂಚವನ್ನು ಸ್ವೀಕರಿಸುವಂತೆ ಮಾಡು ; ಲಂಚವನ್ನು ಕೊಡು : ಅವನಿಂದ ಏನಾದರೂ ಕೆಲಸವಾಗ ಬೇಕಾದರೆ ಮೊದಲು ಅವನಿಗೆ ಚೆನ್ನಾಗಿ ಮೇಯಿಸಬೇಕು (ರೂಢಿ).

**ಮೇಸು** : ೧. ಹರುಷದಿ ಎಲ್ಲರು ಹರಿಯ ಗುಣಂಗಳ ಸ್ಮರಿಸುತ ಗೋಗಳ ಮೇಸಿದರು (ಶ್ರೀಕಥಾ. ೨೭-೬); ಕೂಡಿ ತುರುಗಳ ಮೇಸುತಿರೆ ಕೈನೀಡಿ ಸನ್ನೆಯದೋರಿ (ಜನಶಾ. ೩೮-೨೩) ; ಒಬ್ಬ ಕುರುಬಹುಡುಗನು ಕುರಿಗಳನ್ನು ಮೇಸುವುದಕ್ಕೆ ದಿನಾಲು ಅಡವಿಗೆ ಹೋಗುತ್ತಿದ್ದನು (ಮುಂಬಯಿ. ೨-೩೪). [ಮೇ$_1$ + — ಇಸು$_3$]

**ಮೇಯು** ' ಮೇ$_1$ ' ನೋ.

**ಮೇರಯ** (ನಾ). ಒಂದು ಬಗೆಯ ಮಾದಕಪಾನೀಯ. — ಸುರೆ : ಸುರಾ ಮೇರಯ ಮದ್ಯಗಳನ್ನು ಸೇವಿಸುವುದರಿಂದ ಆಗುವ ಕೇಡು ಆರು (ಬುದ್ಧಕ. ೧೬೯). [ < ಸಂ. ಮೈರೇಯ]

**ಮೇರು$_1$** (ನಾ). ೧. ಪುರಾಣೋಕ್ತವಾದ ಒಂದು ಪರ್ವತದ ಹೆಸರು ; ಹೇಮಾದ್ರಿ ; ಕನಕಾದ್ರಿ ; ₱ ೮೪,೦೦೦ ಯೋಜನಗಳ ಎತ್ತರದ ಈ ಪರ್ವತವು ಜಂಬೂದ್ವೀಪದ ನಡುವೆ ಇದ್ದಿತೆಂದೂ ಚಿನ್ನ ಮತ್ತು ಮುತ್ತುರತ್ನಗಳನ್ನು ಒಳಗೊಂಡ ಇದು ಬ್ರಹ್ಮನ ವಾಸಸ್ಥಳವೆಂದೂ ಪುರಾಣಗಳಲ್ಲಿ ವರ್ಣಿತವಾಗಿದೆ : " ಮೇರುಃ, ಸುರಪರ್ವತಃ, ಸುಮೇರುಃ – ಈ ಮೂಱು ಮೇರುಪರ್ವತಂ" (ಶಬ್ದಮ. ೨೨-೦೩೩); ಮೇರುಗುಣವನಱಿಸುವುದೆ ಕಾಗೆಯಲ್ಲಿ (ಬಸವ. ೬೭) : ಕೈಲಾಸವಮಕ ಹುರುಡಿಸುತಲಿರ್ಪುದು ನೋಡ ಮೇಲೆನಿಪ ಮೇರು ಸೆಣಸುತ್ತಿರ್ಪುದು ನೋಡ (ಶಿರುಕ. ದೇ. ೩-೨೦). ೨. ಜಪಸರದ ನಡುವೆ ಇರುವ ದೊಡ್ಡ ಮಣಿ, — ನಾಯಕಮಣಿ : ಜಪವ ಮಾಡುತ ನುಡಿದಿರೋ . . . ಜಪಸರದಿ ಮೇರುವಿಗೆ ಬಾರದೆಯರ್ಧಮಣಿಯೊಳಗೆ ಜಪವ ಬಿಟ್ಟರೊ (ಶಂಕರ. ೭-೦೩). ೩. ಶ್ರೇಷ್ಠವಾದುದು ; ಮಿಗಿಲಾದುದು ; ಉತ್ತಮವಾದುದು : ಕಳೆಗಳೊಳು ನಾಸಿಕವಿಮ್ಮಿಗಿಲುಯಾಭರಣಂಗಳೊಳು ಮೇರು ಮೂಗುತಿಯು (ಶಶಮೋ. ೦೦-೨೩). ೪. ನಡುವೆ ಇರುವಂಥ ವ್ಯಕ್ತಿ, ಕೇಂದ್ರವ್ಯಕ್ತಿ ; ಅಗ್ರೇಸರ : ಕಟ್ಟಾಯದ ಕಣ ಪೆಂಪಿನ ಕಟ್ಟಳೆ ಚೌವಟದ ಮೇರು ಸನ್ನಿಯ ತವರೂರ್ ನೆಟ್ಟನೆನಿಸಿದ ಜಸಂ ನೇರ್ಪಟ್ಟರೆ ನಿಟ್ಟಾಯುವಕ್ಕೆ ದುಟ್ಟತಳಕ್ಕಂ (ಕಾವ್ಯಾವ. ೨೨೯). [ಸಂ.]

**ಮೇರು$_2$** (ನಾ). ಎಲ್ಲೆ ; ಗಡಿ ; ಸೀಮೆ : ಜಾಲಿಪುರದ ಬೇಗೂರ ಮಧ್ಯದ ಹಳಸಾಗರ ಮೇರುವಾಗಿ ಸಲುವುದು (ಎಕ. XIV, ಗುಂಡ್ಲುಪೇ. ೦೨೭-೨೧: ೪). [ ₱ ಇದು 'ಮೇರೆ' ಎಂಬುದರ ಅಪಲಿಖಿತವಿರಬಹುದು ]

**ಮೇರುಕೃತಿ** (ನಾ). ಅತ್ಯಂತ ಶ್ರೇಷ್ಠವಾದ ಕೃತಿ ; ಅತ್ಯುತ್ತಮವಾದ ಗ್ರಂಥ : ಶ್ರೀ ಕುವೆಂಪುವ ಸೃಜಿಸಿದೀ ಮಹಾಛಂದಸಿನ ಮೇರುಕೃತಿ, ಮೇಣ್ ಜಗದ್ಭವ್ಯ ರಾಮಾಯಣಂ! (ಶ್ರೀರಾಮಾ. iv, ೨೭ ಮುನ್ನು.): ಪೆಲ್ಲಿ

ಪ್ರಮಿಾತ್ಯೂಸ್ ಕತೆಯನ್ನು . . . ತನ್ನ ಪ್ರತಿಭೆಯ ಪ್ರಭಾವದಿಂದ ಬೌದ್ಧಿಕ ತಾತ್ತ್ವಿಕ ನೈತಿಕಮೂಲಗಳನ್ನುಳ್ಳ ಮೇರುಕೃತಿಯಾಗಿ ಮಾರ್ಪಡಿಸಿದನು (ಐದ್ವಕ್ರ. LXXi, ೩೬೩೪) ; ಸಮಾರಂಭಗಳಲ್ಲಿ ಪಂಪರನ್ನರ ಮೇರುಕೃತಿಗಳ ಬಗ್ಗೆ . . . ಉಪನ್ಯಾಸಗಳನ್ನೇರ್ಪಡಿಸುವುದುಂಟು (ಕಥಕ. ೩).
[ಸಂ.]

**ಮೇರುದಂಡ** (ನಾ). [ಯೋಗ] ಮೆದುಳುಬಳ್ಳಿ ; ಬೆನ್ನುಹುರಿ : ಮೇರುದಂಡವು ಚಾಗಿತು ಹೂತ ಹಾಗೆ ಹೃದಯದಾಕೂತಿಗಿದೆ ಕಣ್ಣು ಮೇಗೆ (ಸೂರ್ಯಗಾ. ೦-೦೨). [ಸಂ.]

**ಮೇರುದಂಡೆ** (ನಾ). = ಮೇರುದಂಡ : ಬೆನ್ನಿನ ಮೇರುದಂಡೆಯ ಎರಡೂ ಪಕ್ಕಗಳಲ್ಲಿ ವಿದ್ಯುಚ್ಛಕ್ತಿಯು ಹರಿವಂತಾಗಿ . . . ಸ್ಫೋಟಿಸುತ್ತದೆ (ವಾಕೋಪಂ. ೩೦೦). [ಸಂ. ಮೇರುದಂಡ]

**ಮೇರುನಗ** (ನಾ). ಪುರಾಣೋಕ್ತವಾದ ಒಂದು ಪರ್ವತದ ಹೆಸರು; ಮೇರುಪರ್ವತ : "ಸುರಗಿರಿ ಮೇರುನಗಂ ಮಂದರಾದ್ರಿ ಕನಕಾಚಳಂ ಸುಮೇರುಮಹೀಧ್ರಂ" (ಪಸ್ತುಕೋ. ೦೦-೩೬) ; ಮೇರುನಗಾಗ್ರದಿಂ ಧರೆಗುರುಳ್ವೆನೋ . . . ನಾರಕದುಃಖಮಂ ಸೆಣಿಸಿಯೊಳೂಡುವೆನೋ ಪಲಕಾಲಮಿಾತನಂ (ಕಂದ್ರಖ. ೩-೩೭) [ಸಂ.]

**ಮೇರುಪರ್ವತ** (ನಾ). = ಮೇರುನಗ : ಈ ರಾಷ್ಟ್ರದ ಪ್ರಚಾರ ಮೇರುಪರ್ವತದ ಮೇಲೆ ಆಯಿತು (ಭಾರದ. ೨೬೩). [ಸಂ.]

**ಮೇರುಪ್ರಸ್ತಾರ** (ನಾ). [ಛಂದ] ಎಂಟು ಬಗೆಯ ಪ್ರಸ್ತಾರಗಳಲ್ಲಿ ಒಂದು ; ಒಂದು ಛಂದಸ್ಸಿನ ಪ್ರಸ್ತಾರದ ಎಲ್ಲ ಪ್ರಕಾರಗಳನ್ನೂ ತಿಳಿಸುವ ಚಿತ್ರರೂಪವಾದ ಪ್ರಸ್ತಾರ : " ಒಂದುದಿಯಿಂದಿಪ್ಪತ್ತಾಱು ಛಂದಂಬರಂ ಮೇರುಪ್ರಸ್ತಾರಮಕ್ಕುಂ " (ಛಂಗರಾ. ೦೦೬-೨೩). [ಸಂ.]

**ಮೇರುಮಂದರ** (ನಾ). [ಜೈನ] ಬಾಹುಬಲಿವಿಗ್ರಹದ ಮುಂದಿರುವ ಮಂದರವೆಂಬ ತೇರಿನ ಭೇದಗಳಲ್ಲೊಂದು : ಬಾಹುಬಲಿವಿಗ್ರಹ . . . ಇದರ ಮುಂದಿರುವ 'ತೇರಿ'ಗೆ ಮಂದರವೆಂದು ಹೆಸರು. ಮಂದರಗಳಲ್ಲಿ ನಂದೀಶ್ವರ ಮತ್ತು ಮೇರು ಎಂಬ ಭೇದಗಳಿವೆ ಎಂದೂ ಇದು ಮೇರುಮಂದರವೆಂದೂ ಹೇಳಲಾಗಿದೆ (ಪೊಮ್ಮವಾ. ೨೦೭). ' ನಂದೀಶ್ವರ ' ಪರಾ. [ಸಂ.]

**ಮೇರುಮಾನಿ** ' ಮೆಹರ್ಬಾನ್$_2$ ' ನೋ.

**ಮೇರುವೆ** (ನಾ). ೧. ಶತ್ರುಗಳ ಕೋಟೆಯನ್ನು ಕೆಡವಲು ಕೋಟೆಗಿಂತ ಎತ್ತರವಾಗಿರುವಂತೆ ಕಟ್ಟುವ ಪ್ರತಿಕೋಟೆ : ಇದು ಕೋಟೆಯ ಫಿರಂಗಿಯಲಿಯಗಳ ಹೂಳು ಬಿಡದೆಬ್ಬಿಸು ಮೇರುವೆಯ (ಕಂಪಖ. ೦೩-೪೩) ; ಆಗಸವನು ತುಡುಕುವ ಮೇರುವೆಗಳ ಮೇಗೇಱಿ ಖಾನನ ಭಟರು ಬೇಗದೆ ಪಟಲಗುಂಡುಗಳ ಮಳೆಯನು ಸರಾಗದೊಳುಬ್ಬಿ ಕಱೆದರು (ಕಂಪಖ. ೦೪-೦೩). ೨. ಕೋಟೆಗಳ ಮೇಲೆ ಮಾಡಿರುವ ಅಲಂಕಾರಸಾಧನ : ತಳಿರ ಗುಡಿತೋರಣದ ಸಾಲ್ಗಳಿಂದೆಡೆಗೆಡೆಗೆ ತೊಳಪ ಮುಕುಳದ ಮಕರ ತೋರಣಗಳಿಂದೆ ಪೂಗಳ ಕುರುಜು ದೊಡ್ಡ ಮೇರುವೆಗಳಿಂದ . . . ಚೆಲ್ವದುದಾ ಬಸಂ (ಚಂಪ್ರ. ೪೩-೨೭); ಬಳಸಿದ ತಳಿಯ ಮುರಿದು ಕೋಟೆಯ ಮೇರುವೆಗಳಿಗೆ ಕಿಚ್ಚನ್ನಿಕ್ಕಿದರು (ಕವೀರ. ೦೦೩). ' ಮೇರು$_1$ ' ಪರಾ. [ ? ]

**ಮೇರೆ$_1$** (ನಾ). ೧. ಎಲ್ಲೆ ; ಗಡಿ ; ಸೀಮೆ ; ಸರಹದ್ದು : ಪರಿಹಾರ ಸಮಾನ್ವಿತಮುದಕಪೂರ್ವನ್ದತ್ತ ಪೊಲ ಮೇರೆ (ಎಕ. X (S), ಮುಳಬಾ. ೩೨೬-೪೪; 650); ಎಮ್ಮಾಳ್ವ ಪಟ್ಟಂಡಕಿಂತಿದಱಿಂದಿತ್ತೆಯ ಮೇರೆ ನೋಡಿಮೆಮಗೀ ಶೈಳೇಂದ್ರಮೆಂದೆಂದು ತೋಱಿದಂ . . . ಹೈಮಾದ್ರಿಯಂ (ಅಂಪು. ೦೩-೬೪); ಮೂಡಲು ಸುಗ್ಗಾವೆಯ ಪೊಲ ಮೇರೆ ಬಡಗಲು ಬಟ್ಟೆ ತೆಂಕಲು [ಎಲವದ] ಮೇರೆ (ಪಾಂಡೇಷ್. ೬-೩೩; 1065); ಪಿಡಿದ ಜಕ್ಕಮನ್ನೆಯನ ಮೇರೆಯಿಲ್ಲದ ಬಲವಾರಿಧಿಯನು ನೋಡಿದಾರುಭಟೆಯನೇವೇಳ್ವೆ (ಕಂಪಖ. ೩-೬೪). ೨. ಮಿತಿ : ಸಹನಶಕ್ತಿಗೂ ಒಂದು ಮೇರೆಯಿದೆ (ಹಾಹುತ್ತ. ೪೪). ೩. ಆಶ್ರಯ ; ನೆಲೆ : ಬೀಡು : " ಇಕ್ಕೆ, ಇಂಬು, ಗೊತ್ತು, ನೆಲೆ, ತಾಣಂ, ತಾಯ್ಮನೆ, ಮೇರೆ . . . ಆಗರಂ – ಈ ೧೫ ಆಶ್ರಯಕ್ಕೆ ಪೆಸರ್" (ಕಟಾ. ೩೯-೨೯೦). ೪. ಅಭಿಪ್ರಾಯ : ಅರ್ಥವ್ಯಾಪ್ತಿ : ಈ ಶಾಸನದ ಮೇರೆಯೊಳ್ ಸ್ವಯಂಬುದೇವರ್ಗ್ಗೆ ಬಿಟ್ಟ ಧರ್ಮ್ಮಮಂ ರಕ್ಷಿಸಿದಾತಂ . . . ಕ್ರತುಶತಮಂ ಯ × ಕೊಟ್ಟ ಫಲಮನೆಯ್ದುಗುಂ (ಕರ್ಇಇ. XI–i, ४६-೨೩; 1002).
[ದೇ.೫ ತಮಿ. ಮೇರೈ; ಮಲ. ತೆಲು. ಮೇರ ; ತುಳು. ಮೆಯರೆ, ಮೇರೆ. / ಸಂ. ಮರ್ಯಾ]

**ಮೇರೆ$_2$** (ಅ). ಪ್ರಕಾರವಾಗಿ ; ರೀತಿಯಲ್ಲಿ : ಈ ಮೇರೆ ತಿಳಿಯತಕ್ಕದ್ದು (ಸಿದ್ಧಾಂತಿ. ೨೩೩) ; ಈ ಮೇರೆ ಊಹಿಸತಕ್ಕದ್ದು (ಸಿದ್ಧಾಂತಿ. ೩೩೪). ' ಮೇರೆಗೆ ' ಪರಾ. [< ಮೇರೆ$_1$]

**ಮೇರೆಗಟ್ಟು** (ಕ್ರಿ). (ಆಲಂ) ಅಧಿಕಾರದ ಪರಿಮಿತಿಯನ್ನು ನಿಶ್ಚಯಿಸು : ಆ ವೇಂಕಟಪತಿರಾಯನು ಈ ಶಾಸನದಲ್ಲಿ ಈ ಪಟ್ಟಣದ ರಾಜ್ಯಶ್ರೀಯ ಅರಸುತನವನ್ನು . . . ರಾಜಒಡೆಯನಿಗೆ ವಹಿಸಿಕೊಟ್ಟು . . . ಮಾಣ್ಣಲಿಕ ಎಂದು ಮೇರೆಗಟ್ಟಿ ಮುದ್ರಿಸಿದ್ದರೆ ? (ಪಾಂಕ್ರಕ. ೦೨-೯).
[ಮೇರೆ$_1$ + ಕಟ್ಟು$_1$]

**ಮೇರೆಗಲ್ಲು** (ನಾ). ಗಡಿಯನ್ನು ಸೂಚಿಸಲು ಗುರುತಾಗಿ ನೆಡುವ ಕಲ್ಲು ; ಗಡಿಕಲ್ಲು : ಬಾಂದುಕಲ್ಲು : ವೈಷ್ಣವದಾನವಾಗಿದ್ದರೆ ಗರುಡನ ಕೆತ್ತನೆಯುಳ್ಳ ಮೇರೆಗಲ್ಲುಗಳನ್ನೂ ನಿಲ್ಲಿಸಬೇಕು (ಶಾಸಂ. ೩) ; ಕಾಲಪಥದಲ್ಲಿ ನನ್ನ ಪ್ರೇಯಸಿಯ ಮರಣವು ನೆಟ್ಟ ಮೇರೆಗಲ್ಲನ್ನು ದಾಟಿ . . . ಬರೆಯಲು ಹೊರಟರೆ (ಹೋರಪ. ೪೭). [ಮೇರೆ$_1$ + ಕಲ್ಲು ( < ಕಲ್$_3$)]

**ಮೇರೆಗಳೆ** (ಕ್ರಿ). ೧. ಗಡಿಯನ್ನು ಮಿಾರು ; ಎಲ್ಲೆಯನ್ನು ದಾಟು ; ಅತಿಕ್ರಮಿಸು : ಮಾರಯ್ಯನ ಪರಮಾನಂದ ಮೇರೆಗಳೆದ ಮಹಾಸಾಗರದಂತೆ ಹರಿಯಿತು (ಮೋಳಿಮಾ. ೭೪ ಶ್ರಸ್ತಾವನೆ). ೨. (ಕವಿವರ್ಣನೆಯಲ್ಲಿ) ಲೋಕಸ್ಥಿತಿಯ ಎಲ್ಲೆಯನ್ನು ಮಿಾರು : ಮೇರೆಗಳೆದಿರೆ ವಿಶೇಷವಿಚಾರಮನಧಿಕೋಕ್ತಿಯೊಳ್ ತಗುಳ್ಚುವುದಕ್ಕುಂ (ಕವಿರಾ. ೩-೯೦). [ಮೇರೆ$_1$ + ಕಳೆ$_1$]

**ಮೇರೆಗಿಡು** ' ಮೇರೆಗೆಡು ' ನೋ.

**ಮೇರೆಗೆ** (ಅ). ರೀತಿಯಲ್ಲಿ; ಪ್ರಕಾರವಾಗಿ ; ಅನುಗುಣವಾಗಿ : ಇವಳ ಪ್ರಾರ್ಥನೆ ಮೇರೆಗೆ ರಾಯನು ಅಲ್ಲಿ ಒಂದು ದೊಡ್ಡಕೆರೆಯನ್ನು ಕಟ್ಟಿಸಿದನು (ಕೃದೇವ. ೦೪); ನಿನಗಿಂತ ಹಿರಿಯರಾದವರು ಹೇಳಿದ ಮೇರೆಗೆ ನಡೆ (ಮುಂಬಯಿ. ೪-೩೯); ವಿಶ್ವದ ಚಟುವಟಿಕೆಗಳೆಲ್ಲ ಪ್ರಕೃತಿಯ ಆಜ್ಞೆಯ ಮೇರೆಗೆ ಸಾಗುತ್ತವೆ (ಧರ್ಮಗಾ. ೦೩೨). ' ಮೇರೆ$_2$ ' ಪರಾ.
[ < ಮೇರೆ$_1$ ]

**ಮೇರೆಗೆಡಿಸು** (ಕ್ರಿ). (ಆಲಂ) ಅಸ್ತಿತ್ವವಿಲ್ಲದಂತೆ ಮಾಡು ; ಲಯಗೊಳಿಸು ; ಪ್ರಳಯಮಾಡು : ಆ ರಜೋಗುಣದಿಂದ ನೀನೇ ಘೋರಿ ಜಗವನು ಮಾಳ್ಪೆ ಸಲಹುವೆ ಸಾರಸತ್ವಗುಣಾವಲಂಬನದಿಂದ ಮತ್ತಿದನು ಮೇರೆಗೆ[ಪಾಠಾಂ. ಗಿ]ಡಿಸುವೆ . . . ಎಂದನಕ್ರೂರ (ಖಭಾಗ. ೦೦-೪೩-೨೩).
[ಮೇರೆ$_1$ + ಕೆಡಿಸು$_1$]

**ಮೇರೆಗೆಡು, ಮೇರೆಗಿಡು** (ಕ್ರಿ). ಮಿತಿಮಿಾರು ; ಅಳವಿಗೆ ಸಿಗದಿರು : ಮೇರೆಗೆಟ್ಟ ಕೋಟಲೆಗಳನುಣ್ಣನೆಂಬಲ ಸ್ಮರಣೆಯೋ (ಕಾದಂಪೂ. ೯೨೦) ; ಮೂದಲಿಸಿ ಹಾಡುತಂ ಮುದ್ದಿಸುತೆ ಹಾಡುತಂ ಆದರಿಸಿ ಹಾಡುತಂ ಮೇರೆಗೆಡೆ ಹಾಡುತಂ (ಬಸರ. ೯-೦೯೬). **ಮೇರೆಗಿಡು** : ಬಾರಾ ಉಮೇ ನಮ್ಮ ಭಕ್ತನಂ ನೋಡುವಂ ಮೇರೆಗಿಡೆ ಜೀವಪರಿಯಂತರಂ ಕಾಡುವಂ (ಅಂಕ. ದೀ. ೦೭೩-೦೦). [ಮೇರೆ$_1$ + ಕೆಡು$_1$]

**ಮೇರೆಗೊಳ್** (ಕ್ರಿ). ಎಲ್ಲೆಯನ್ನು ಅನುಸರಿಸು: ಮೂಡಲು ಹಳ್ಳಸಾಗರ ಮೇರೆಗೊಂಡು ಬಂದು ಪಟ್ಟದರಸೀ ಆಲದ ತಾಳ್ಕಿನಲ್ಲಿ ದೇವರಾಯಪುರದ ಕಲ್ಲುವತ್ತಿನಲ್ಲಿ ನೆಟ್ಟ ಕಲ್ಲು ೧ (ಎಕ. XIV. ಮೈಸೂರು. ೧೦೭-೬೬; 1664). [ ಮೇರೆ$_1$ + ಕೊಳ್$_1$ ]

**ಮೇರೆದಪ್ಪು** (ಕ್ರಿ). ೧. ಗಡಿ ಅಥವಾ ದಡವನ್ನು ಮೀರು ; ಎಲ್ಲೆಯನ್ನು ದಾಟು : ಅತಿಕ್ರಮಿಸು : ಪ್ರಳಯಕಾಲದ ಸಮುದ್ರಂ ಮೇರೆ ದಪ್ಪಿದಂತೆ ಚಾತುರ್ದಂತಬಲಂಬೆರಸು ಬಂದು ಪೊಟಲಂ ಮೂವಳಸಾಗಿ ಮುತ್ತಿದೊಡೆ (ವಡ್ಡಾ. ೦೯೯-೩) ; ಪ್ರಳಯಕಾಲಜಳನಿಧಿಗಳಂತೆ ಮೇರೆ ದಪ್ಪಲ್ ಬಗೆದ ತನ್ನ ನಾಲ್ವರ್ ತಮ್ಮಂದಿರ ಮುನಿದ ಮೊಗಮಂ ಕಂಡು (ಪಂಪಭಾ. ೭-೬ ವ) ; ಈ ಟಿಟ್ಟಿಭನ ತತ್ತಿಗಳಂ ವಾರಿಧಿ ಮೇರೆದಪ್ಪಿ ಕೊಂಡುಯ್ದೊಡೆ ಪುಯ್ಯಲಿಡಲ್ಪಂದವು (ಪಂಚತಂ. ೦೬೬-೭) ; ಅಂಭೋನಿಧಿ ಮೇರೆದಪ್ಪಿದ ತೆಱಂ ಬಂದತ್ತನೀಕಾರ್ಣವಂ (ಕಾವ್ಯಸಾ. ೪೬೩). ೨. ಅಧಿಕವಾಗು; ಅತಿಶಯಿಸು : ಸತತಂ ಪೊರೆವಾಳ್ದನೆ ಬಾರ ಮೇರೆದಪ್ಪಿದ ಕರುಣಾಬ್ಧಿ ಬಾರ (ಪಂಪಾಶ. ೦೭) ; ಮೇರೆದಪ್ಪಿತು ಕೌರವನ ಪರಿವಾರದಲಿ ಬೇಹವರು ಮಕುಟದ ಭಾರಿಯಾಳುಗಳಾಂತುಕೊಂಡರು ಪಾರ್ಥನಂದನನ (ಕುಮಾವ್ಯಾ. ೬-೦). [ಮೇರೆ$_1$ + ತಪ್ಪು$_{-1}$]

**ಮೇರೆಮೀರು** 'ಮೇರೆಮೀಱು' ನೋ.

**ಮೇರೆಮೀಱು**. ಮೇರೆಮೀರು (ಕ್ರಿ). ೧. (ಯಾವುದೇ ವಿಷಯದಲ್ಲಿ) ಪರಿಮಿತಿಯನ್ನು ಮೀರು : ಅತಿಕ್ರಮಿಸು ; ಉಲ್ಲಂಘನೆ ಮಾಡು : ಮೇಳಗೊಳುವುದವನೊಳು ಮೇರೆಮೀಱದೆ (ಹರಿಶ. ೩-೪೪). **ಮೇರೆ ಮೀರು** : ೨. ಅತಿಶಯವಾಗು : ಅಧಿಕವಾಗು : ಮೇರೆಮೀರಿದ ವಾತ್ಸಲ್ಯ ಕಕ್ಕುಲತೆಯು ಇದಕ್ಕೆ ಕಾರಣವಾಗಿರುತ್ತವೆ (ಮುಕ್ತಕ. ೦೭೩). [ಮೇರೆ$_1$ + ಮೀಱು]

**ಮೇರೆಯಱ** (ಕ್ರಿ). (ನಡವಳಿಕೆಯ) ಪರಿಮಿತಿಯನ್ನು ತಿಳಿ ; ಇತಿಮಿತಿಯನ್ನು ಅರಿತುಕೊಳ್ಳು : ನಾರಿ ಕೇಳ್ನಿನ್ನ ಮನೋರಥ ನೆಱ ಕೈಸಾರಿತು ಜಲುಪರಱಿಯನ ಮೇರೆಯಱತು ನಡಿಸು (ಕಂಪರಾ. ೦೦-೫೬). [ಮೇರೆ$_1$ + ಅಱ]

**ಮೇರೆವರಿ** (ಕ್ರಿ). ಎಲ್ಲೆ ಅಥವಾ ದಡವನ್ನು ಮೀರಿ ಮುನ್ನುಗ್ಗು : ಅಂತಾಗಸಮಿಾಪದಂತೆಯುಮೆಳೆ ಬೆಸಲಾದಂತೆಯುಂ ಮುನ್ನೀರ್ ಮೇರೆ ವರಿದಂತೆಯುಂ ನಡೆದು . . . ನಿಲಲೊಡನೆ (ಕಬ್ಬಿಗಕಾ. ೨೩೭) ; ಶ್ರೀವಧು ವಿನಂಬಕಚಕೋರಕಂ ಪೊರೆಯೆ ಭಕ್ತಾವಳಿಯ ಪ್ರತ್ಯುಮುಮದಕೋರಕಂ ಬಿರಿಯೆ ಜಗತೀವಲಯದಮಲಸೌಭಾಗ್ಯರತ್ನಾಕರಂ ಪೆರ್ಚಿನಿಂ ಮೇರೆವರಿಯೆ (ಕೃಷಿಭಾ. ೦-೦). [ಮೇರೆ$_1$ + ಪರಿ$_2$]

**ಮೇರೆವಿಡಿ** (ಕ್ರಿ). = ಮೇರೆಗೊಳ್ : ಮೇರೆವಿಡಿದು ವ್ಯತ್ಯಾಸವಾದಂದಾಗ ಸೂರಮಂಡಲವ ತುಡುಕುತ ಚಾರುತರದ ದಿವ್ಯನವರತ್ನದ ಕೋಟಿ ತೋಱತು ಕಣ್ಗೆ ಕೌತುಕವ (ಕಂಪರಾ. ೨-೩೯). [ಮೇರೆ$_1$ + ಪಿಡಿ$_1$]

**ಮೇರೆಸಾಲು** (ನಾ). ಗಡಿಯನ್ನು ಸೂಚಿಸಲು ನೆಟ್ಟ ಕಲ್ಲುಗಳ ಸಾಲು. -ಶ್ರೇಣಿ : ಮುಂದಣ ಕೆಱೆಯ ಒಂದೆ ಗದ್ದೆ ಕೊ ೧೦ ಹಿರಿಯತಿಲಮಾಳ ಕೆಱಿ ಬೊಪ್ಪಸಮುದ್ರದ ಹಿಂದಣ ಹರಳ ಕೆಱಿ ಇವೆಲ್ಲ ತೋಱುಮನ್ನು ಚಿತುಸೀವೆಗೆ ನಟ್ಟ ಕಲ್ಲ ಮೇರೆಸಾಲು (ಎಕ. XVI, ತಪ್ಪಸಾ. ೫೮-೨೯; 1260). [ ಮೇರೆ$_1$ + ಸಾಲು$_2$ ( < ಸಾಲ್$_3$) ]

**ಮೇರ್ತಲೆ** (ನಾ). (ಅಲಂ) ಶ್ರೇಷ್ಠವ್ಯಕ್ತಿ : ಮೇರ್ತ್ತಲೆಯೆನಿಸಿದೊಂ ಕಲಿ ತೋಱಲ್ಪೂಳದುದಿಕ್ಕೆ ಪರೆಯ ಭಾನೂದಯದೊಳ್ಕರ್ತಳೆಯನ್ನಿರೆ ರಿಪುಗಳ್ಕರ್ತ್ತಲೆವೆಸರಾದುವಾತನೊಕ್ಕಲ್ವೆಸರಿಂ (ಶಾಸನ. XI-i. ೪೩-೪ ; 980). [ < ಮೇಲ್$_1$ + ತಲೆ$_1$. / p ಇದು ಪ್ರಾಸಕ್ಕಾಗಿ ಮಾಡಿಕೊಂಡ ರೂಪವಿರಬಹುದು].

**ಮೇಲ್**$_1$, ಮೇಲು$_1$ (ನಾ). ೧. ತುದಿ ; ಅಗ್ರಭಾಗ ; ಉಪರಿಭಾಗ : ಅದ್ರಿ ಮೇಲಶನಾದಿವಿಟ್ಟ ಪುನರ್ಭವಕ್ಕೆಱ ಆಗಿ (ಎಕ. II, ೩೦-೪; ಸು. 650); ಕಾಲ್ಗಳಂ ನೀಡಿ ಬಂಬಂ ಬೆರಂಟಿ ಬಿಸಿಲ್ಗಾಯ್ದು ಪಸಿವೆತ್ತಿ ಮೇಲಂ ನೋಡಿ (೧೦ಕ. ೦-೦೨೮ ವ); ಶಾಖಾಗ್ರದೊಳಸರ್ದಲಂಗಲ್ದೂಸೆ ಮೇಲೈಕೆ ಲೆತ್ತಂ ಸಾಳೀಜಂಘಂ ಕರಂ ಪಲ್ದೆಱಿದು ನಡುಗಿ ಪಱೆಂದು ಪುರ್ಬಿಕ್ಕಿ ತಾಗಳ್ (ರಾಜಶೇ. ೯-೨೯). ೨. ದೇಹ, ವಸ್ತು ಮುಂತಾದುವುಗಳ ಹೊರಭಾಗ,— ಮೇಲ್ಮೈ: ಪಂದೆಯ ಮೇಲ್ಪಾವಡವರ್ಣಂತಿರೆ ದೇಹಂ ಮರವಡೆ ಕಣ್ಣೀಸುರ್ಯಿಯೆ ತಳದಿನದನೊತ್ತುತ್ತುಂ (ಧರ್ಮಾಮೃ. ೦-೦೪೨). ೩. ಹೆಚ್ಚಿನದು; ಅತಿಶಯವಾದುದು ; ಅಧಿಕವಾದುದು : ಮೇಲೆಟ್ಟಿ ಬಲಂ ಕೋಟಿಗೆ ಮೇಲಪ್ಪೊಡಮನ್ಯವನಿತೆ ನೆಗಟ್ಟೂರ್ವರ್ಶಿಗಂ ಮೇಲಪ್ಪೊಡಮಕ್ಕೆ (ಪಂಪಭಾ. ೧-೯೭); ಹರಹಾಸಕ್ಕೊಂದೆರಟು . . . ಕೈಲಾಸಧಾತ್ರೀಧರಕೆಂಟೊಂಬತ್ತು ಮೇಲಾಗಿರೆ [ಶಿಕಾಂ. ಪತ್ತೊಂದೆನೆ] ಪಸರಿಸಿದಂ ಕೀರ್ತಿಯಂ ನಾಗವರ್ಮಂ (ಛಂದೋಂಬು. ೦-೨೩). ೪. ಶ್ರೇಷ್ಠವಾದುದು : ಉತ್ತಮವಾದುದು : ದಿವದೊಳ್ ಮೇಲಪ್ಪ ರತ್ನಂಗಳೆಂತನಿತಂ ಮುಂ ಮಣಿಮಾಳಿಗಿತ್ತಂ (ಅದಿಪು. ೨-೦೩); ಸೊಗಯಿಪ ಭೋಗಾವತಿಗಂ ಮಿಗಿಲಮರಾವತಿಗಮಿದುವೆ ಮೇಲೆನಿಸುವುದೀ ಜಗದೊಳ್ . . . ಉಜ್ಜೇನಿಪುರಂ (ಸುಕುಮಾ. ೯-೬೬); ಆಳಿಗೊಳುತಂ ಒಡಿವರಲ್ಲದೆ ಲಾಲಿಸುವರೇ ಸುಕವಿಯೆಂದಡೆ ಮೇಲಹುದು ಕೃತಿ ಕುಕವಿಯೆಂದಡದೇನ ಹುದು ಕಡೆಗೆ (ಬಿಸವು. ೦-೨೦). ೫. ಶ್ರೇಷ್ಠನಾದ ವ್ಯಕ್ತಿ ; ಉತ್ತಮನಾದ ಮನುಷ್ಯ: ಮೇಲಾದ ಪಾಂಡುಸುತರನುಪಾಲಂಭಗೆಯ್ಯುತಿರ್ಪ ದುರ್ಯೋಧನನಂ ಲೀಲೆಯೆ ನುಂಗುವ ಮೃತ್ಯುವ ನಾಲಗೆಯೆನೆ ನೆಗೆದುಪುರಿಯ ನಾಲಗೆ ಪಲವುಂ (ಪಂಪಭಾ. ೩-೬) ; ಜಗದೊಳ್ ನೀವಿರೆ ಮೇಲೆನಿಸುವರಾರೊ ಕುಲದೊಳಂ ಶೀಲದೊಳಂ (ಧರ್ಮಾಮೃ. ೧-೦೨೪) ; ಕೀಳಾರು ಮೇಲಾರು ಹದುಳಿಪ್ಪ ನಾನು ಚಾಂಡಾಳನೋ ಹುಸಿಯ ಹೋಯಂ ಹೊಱುವ ನೀನು ಚಾಂಡಾಳನೋ (ಹರಿಶ. ೧೧-೨೦). ೬. ಒಳ್ಳೆಯದು; ಶುಭ; ಮಂಗಳ: ನಿನಗೆ ಮೇಲಕ್ಕೆ ! ಮೇಣ್ ಪಯಣಂ ಸೊಗಮಕ್ಕೆ ! (ರಾಜಶೇ. ೩೮-೨೭). ೭. ಪಶ್ಚಿಮದಿಕ್ಕು: ಪಡುವಣ ದೆಸೆ: ಬಡಗ್ಗೆ ನಿಟ್ಟರುಳಿಎ ಕರಡಿಗುಱುಕೆ ಮೇಲ ಕೋಡುಱ್ಲಗಲ್ ಮೂಡ್ಡೆ ನೋಡಿ ನಡದು (ಎಕ. X (S), ಪಕ್ಕ. ೬೬-೨೦; 850). ೮. ಉಚಿತವಾದುದು ; ಯುಕ್ತವಾದುದು ; ಲೇಸು : 'ಮೇಲಱ' ಪರಾ. ೯. ಏಳಿಗೆ ; ಅಭಿವೃದ್ಧಿ : 'ಮೇಲ್ಪೋಗು' ಪರಾ. ೧೦. ಮುಂದಾಗುವುದು ; ಅನಂತರದ ಪರಿಣಾಮ : ಮೇಲನಱಯದೆ ಮಿಕ್ಕು ನುಡಿದಪೆ (ಬಿಸವು. ೨೦-೨೩). (ಗು). ೧೧. ಮೇಲ್ಭಾಗದ ; ಮೇಲಿನ : 'ಮೇಲಂತಸ್ತು', 'ಮೇಲ್ಛಾವಣಿ' ಪರಾ. ೧೨. ಎತ್ತರವಾದ : ಎತ್ತರದ: 'ಮೇಲ್ನಾಡು', 'ಮೇಲ್ಮುಕ್ಕಿ' ಪರಾ. ೧೩. ಹೆಚ್ಚಾದ : ಮಿಗಿಲಾದ ; ಅತಿಶಯವಾದ : 'ಮೇಲೊಡ್ಡ' ಪರಾ. ೧೪. ಮುಂದಿನ ; ಅನಂತರದ : 'ಮೇಲ್ಗತೆ' ಪರಾ. ೧೫. ಉತ್ತಮವಾದ; ಶ್ರೇಷ್ಠವಾದ: 'ಮೇಲಕ್ಕಿ', 'ಮೇಲ್ವರ' ಪರಾ. ೧೬. ಹೊರಭಾಗದ ; ಸ್ಥೂಲ : 'ಮೇಲ್ನೋರಿಕೆ' 'ಮೇಲ್ನೋಟ' ಪರಾ. **ಮೇಲು**$_1$ : ೧. "ಅಯ್ಯೋ ಮುಳುಗಿದೆನು ಯಾರಾದರೂ ಬಂದು ಮೇಲಕ್ಕೆ ತೆಗೆಯಿರೋ" ಎಂದು ದೀನಸ್ವರದಿಂದ ಕೂಗಹತ್ತಿದನು (ಮುಂಬಯಿ. ೪-೩೮). ೪. ಖೂಳನನು ಹಿಡಿತಂದು ಧರಣೀಪಾಲರಲಿ ಸರಿ ಮಾಡಿ ರಾಜ್ಯದ ಮೇಲೆ ನಿಲಿಸಿದೆ . . . ಕೀಳು ಮೇಲಿನ ಸೀಮೆ ನಿನ್ನಲಿ ಬೀಳುಕೊಂಡುದು (ಕುಮಾವ್ಯಾ. ೫-೨೩). ೫. ಕಾಲಿಲ್ಲವಲೆ ಹರಿಗು ತೋಳಿಲ್ಲದಲೆ ಹೊಱುಗು ನಾಲಿಗಿಲ್ಲವಲೆ ಉಲಿವುದು ಕವಿಕುಲದ ಮೇಲುಗಳು ಪೇಳಿ (ಸರ್ವಜ್ಞ. ೨೦೨೪) ; ಅವರೆಲ್ಲರಲಿ ಅರ್ಜುನನೆ ಮೇಲುಗಳ ಮೇಲು (ಹರಿಶ್ಚ. ೬-೦೧); ಬಲದಲ್ಲಿ ವಾಲಿ ಮೇಲು. ಛಲದಲ್ಲಿ ರಾವಣ ಮೇಲು (ಗಾದೆ).

೮. ನೀನು ಈ ಸಂದರ್ಭದಲ್ಲಿ ಸುಮ್ಮನೆ ಇರುವುದೇ ಮೇಲು (ಆಡು). 'ಮೇಲುಗಾಣು' ಪರಾ. ೯. 'ಮೇಲೇರು' ಪರಾ. ೧೦. ಮರುಳೇಳಿಗೆಯಲುಬ್ಬೆದ್ದು ಕರ್ಣನ ಸದೆದ ಗರ್ವದಲಿ ಮೇಲನರಿಯು (ಕುವ್ಯಾದ್ರೋ. ೫-೩೦) ; ಮೇಲನರಿಯದೆ ಬೆಟ್ಟದ ಚಾಮೇಂದ್ರಭೂಪಾಲನ ಕೆಣಕಿ ದುಷ್ಕೀರ್ತಿಪಾಲಿಗೆ ಪತಿಯಾದೆನು (ಕಂಸವ. ೩-೪೯). 'ಮೇಗು' ಪರಾ. ೧೧. 'ಮೇಲಟ್ಟು', 'ಮೇಲುಮಂಚು' ಪರಾ. ೧೨. 'ಮೇಲುಗುಡಿ' ಪರಾ. ೧೩. 'ಮೇಲಧಿಕಾರ' ಪರಾ. ೧೪. 'ಮೇಲುಹೊತಿ' ಪರಾ. ೧೫. 'ಮೇಲುನೋಟ' ಪರಾ. ೧೬. ಮೊದಲಿನ ; ಅಗ್ರ : 'ಮೇಲುಪಂಕ್ತಿ', 'ಮೇಲುಸಾಲು' ಪರಾ. ೧೭. ಬೇರೆಯ ; ಮತ್ತೊಂದು : 'ಮೇಲುವೆಸರು' ಪರಾ.

ಮೇಲ್ಮೇಲ್, ಮೇಲುಮೇಲು (ದ್ವಿರುಕ್ತಿ) : "ಎಕ್ಕೆಕ್ಕೆ ತೇನತೇನವಿಡಕ್ಕಂ ಮೇಲ್ಮೇಲೆನಿಪ್ಪುದು" (ಶಮು. ೭೫); ಆಳುವ ನೃಪರಿಗೆಲ್ಲ ಕಾಂಚನದಾಸಿ ಮೇಲುಮೇಲಾಯಿತಲ್ಲ (ಕುಂಡ. ೦-೦೬೦-೯). ಮೇಲಣ = ೧. ಅಗ್ರಭಾಗದ : ಉಪರಿಭಾಗದ ; ಊರ್ಧ್ವಭಾಗದಲ್ಲಿರುವ : ಬೆಕ್ಕುಪಾಲನಲ್ಲದೆ ಮೇಲಣ ಬಡಿಯಂ ಕಾಣದಂತಿಲ್ಲಿಯಾ ಸುಖಮನೆ ಬಗೆದೆಯಲ್ಲದೆ ಮುಂಬಭವದೊಳಾದ ಮಹಾದುಃಖಮಂ ಬಗೆದೆಯಿಲ್ಲಂ (ಧರ್ಮಾಮ. ೬-೦೨೮) : ಧರೆಯ ಮೇಲಣ ವೈರಿನೃಪರ ದಂಡಿಸಿ ತಂದ ವರವಸ್ತುಚಯ ಮೆರೆದಿರಲು (ಕಂಪಾ. ೨-೨೬). ೨. (ಮುಂಭಾಗದಲ್ಲಿ) ಎತ್ತರದಲ್ಲಿರುವ : ಗದೆಯ ಮೇಲಣ ತೋಟ ಮನೆ ಮಕ್ಕಳ ಅರವೆ ಸಹಿತವಾಗಿ ಪೋಟೂರ . . . [ವಿ]ಷ್ಣುಭಟ್ಟೋಪಾಧ್ಯಾಯರಿಗೆ ಕೊನಿಗಾರ ಗದ್ದೆಯೊ[ಳಗೆ] ಮಡಿಗ ಮೂಡೆ ೩ (ಎಂ. XXVII. ೦೬೦-೪೨; 1256) ; ಮಾದನ ಹಳಿಯ ಪಡುವಣ ಮಾರಗಳುಡನ ಕಟ್ಟೆ ಮೇಲಣ ಗಂಡಭೇರುಂಡನೆಂಬ ಮಾವಿನ ಮರನಸೂ (ಎಕ. X (8). ಮುಳಬಾ. ೩-೬ ; 1430). ೩. ಅನಂತರದ ; ತರುವಾಯದ ; ಮುಂದಿನ : ಕೇಳು ಜನಮೇಜಯಧರಿತ್ರೀಪಾಲ ದಿನ ಮೂಜಾಯ್ತು ಭೀಷ್ಮನ ಕಾಳೆಗದೊಳಲ್ಲಿಂದ ಮೇಲಣ ಕವನಕೌತುಕವ (ಕುವ್ಯಾಭೀ. ೭-೧) ; ತಿಂಗಳೇಳಲಿ ಗರ್ಭದಲಿ ರಘುಪುಂಗವನನಗಲಿದಳು ಮೇಲಣ ತಿಂಗಳೆರಡಕೆ ಪೂರ್ಣವಾಯಿತು ಗರ್ಭವವನಿಜೆಯ (ತೊರರಾ. ೦-೩-೮). ೪. ಕುರಿತ ; ಸಂಬಂಧಿಸಿದ ; ಬಗೆಗಿನ : ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು (ಸುಜಾದೀ. ಬ. ೨೫-೪೮) ; ತಂದೆ ನೀನೆನ್ನ ಮೇಲಣ ಮಮಕಾರದಿ ಬಂದೆ ಬದುಕಿದೆನು ಜೀಯ (ತೊತತ. ೦೨-೫) ; ನಿಮ್ಮ ಮೇಲಣ ತನಿವೆ ಇದು ಎಂದು ಭಾವಿಸಲಾಗದು (ಸಬಸ. ೪೬). ಮೇಲುದಾಗು, ಮೇಲುತಾಗು ಒಳ್ಳಿತು ಮತ್ತು ಕೆಡುಕು : ನೀನರಿ ಮೇಲುದಾ [ಜಾಕಾಂ. ತಾ] ಗಜಿಯದ ಪೆಣ್ಗಳಂತೆ ಪೂಗಣೆಯಗೆ ಮೆಯ್ಯಾಳಿ ಬಿಲ್ಲಂಬೆಜಗಾಗಿ ಸಂದಿಪರೆ ಸೀಸಂತು (ಜಾಬಾಂ. ೨೫-೩೦) ; ಮೇಲುತಾಗಂ ನೋಡದುಕ್ಕು ಸೊಕ್ಕಿಂ ಬೆಳೆದು ಜವ್ವನಂಬಡೆದು ಜೂದುಂಗಾಜನಾದೆಯಲ್ಲ (ಶಮ್ಮ. ೯. ೦೦-೬) : ಮೇಲುತಾಗೆಂಬುದನೇನೆಂದರಿಯರು ಕಾಲೋಚಿತವ ಭಾವಿಸರು . . . ಲೋಲಾಕ್ಷಿಯರಿಳೆಯೊಳಗೆ (ಪೇಬಸಂ. ೦೨ ೫೬). [ದೇ.॥ ತಮಿ. ಮಲ. ಮೇಲ್; ತುಳು. ತೆಲು. ಮೇಲು ; ತೊದ. ಮೆಲ್]

ಮೇಲ್₂. ಮೇಲು₂ (ಅ). ೧. ಮೇಲ್ಭಾಗದಲ್ಲಿ ; ಅಗ್ರಭಾಗದಲ್ಲಿ ; ಮೇಲೆ : 'ಮೇಲಾಡು'. 'ಮೇಲಿಕ್ಕು' ಪರಾ. ೨. ಮೇಲ್ಭಾಗಕ್ಕೆ ; ಮೇಲಕ್ಕೆ : 'ಮೇಲೆತ್ತು'. 'ಮೇಲೇಟಿತ್' ಪರಾ. ಮೇಲು₂ : ೧. 'ಮೇಲಿಡು', 'ಮೇಲುಕ್ಕು' ಪರಾ. ೩. ಮತ್ತೆಮತ್ತೆ : ಮೇಲೆ ಮೇಲೆ ; ವೇಗವಾಗಿ : 'ಮೇಲುಬ್ಬಸ', 'ಮೇಲುಸಿರ್' ಪರಾ. ೪. ಪುನಃ : ಮತ್ತೊಮ್ಮೆ : 'ಮೇಲ್ಮನಿಖೆ' ಪರಾ. [< ಮೇಲ್₁]

ಮೇಲ. ಮೇಳ (ನಾ). ೧. ಸೇರುವಿಕೆ : ಕೂಡುವಿಕೆ : ಕೂಟ. ೨. ಹೊಂದಾಣಿಕೆ ; ಹೊಂದಿಕೆ. ೩. ಗುಂಪು : ಸಂದಣಿ. ೪. ಸಭೆ ; ಗೋಷ್ಠಿ ; ಸಮ್ಮೇಳನ. ೫. ವಿನೋದ ; ಕೇಳಿ. ೬. ಜಾತ್ರೆ : ಸಂತೆ. ೭. ಸಂಗೀತಗಾರ, ವಾದ್ಯಗಾರ ಅಥವಾ ನರ್ತಕರ ಗುಂಪು ಮತ್ತು ಇವರು ಸಾಮೂಹಿಕವಾಗಿ ಮಾಡುವ ಕಲಾಪ್ರದರ್ಶನ. ಮೇಳ : ೧. ಪೊಗಳಲ್ಕೆ ಬೇಡವಂತಿರಲಿ ಮದೀಯವಲ್ಲಭೆಯ ಮೇಳಮುಮಾಕೆಯ ರೂಪುಮಾ ತಳೋದರಿಯ ವಿಳಾಸಭಾವಮುಂ . . . ಅಡಂಗಿದುದೆನ್ನ ಚಿತ್ತದೊಳ್ (ಶೃಂಗಾರ. ೩-೩೪) ; ಕೇಳಿ ಕಿವಿ ಮುಚ್ಚಿದಳು ತನ್ನಯ ಮೇಳದೈವರ ನೆನೆದು (ಕುವ್ಯಾವಿ. ೨-೨೪). ೨. ಅಸಾರ ಮಾನವಿಯರಿಗೆ ಮೇಳವೆ ಪತಿಯ ಬಿಡು ಸತಿಯ (ಕೌಶಿರಾ. ೩೮-೦೦) ; ಮಾಳಿಗೆಯ ಮನೆಯಾಗಿ ಮೇಳದ ಸತಿಯಾಗಿ ಹೋಳಿಗೆ ತುಪ್ಪ ಉಣಲಾಗಿ ಇಂದ್ರಿಯವ ತಾಳದವ ಯೋಗಿ (ಸರ್ವಜ್ಞ. ೯೯೬) : ಮೇಳ ಕೂಡಿಸದೆ ತಾಳ ಬಡಿದ ಹಾಗೆ (ಗಾದೆ). ೩. "ಮೇಳಮೆನೆ ಸಮೂಹಂ" (ಶಶಶ. ೯೩) ; ತರುಣಿಯರ ಮೇಳದಲಿ ಬಂದಳು ಧರಣಿಸುತೆ ನವಪುಷ್ಪದಾಮವ ಹರಿಯ ಕಂಠದಲಿಕ್ಕಿ (ಕೌಶಿರಾ. ೨-೪೯) ; ಹೊಳಲು ಹೊಸರೀತಿಯಲಿ ಮಿಗೆ ಕಂಗೊಳಿಸುತಿರ್ದುದು . . . ಗಳಹುವರಗಿಳಿವಿಂಡಿನಲಿ ಹಕ್ಕಳಿಪ ಕೋಗಿಲೆಗಳಲಿ ಮೊರೆವಳಿಕುಳದ ಮೇಳದಲಿ (ತೊರರಾ. ೦-೯-೦೦) ; ಈ ಪರಿ ಭೂಲೋಕದ ವಿವಿಧ ಯಾತ್ರಿಕರ ಮೇಳವನ್ನು ನೋಡಿದರೆ . . . ಅದು ನಾನಾತರಹದ ಗಣಂಗಳಿಂದ ಕೂಡಿದ ಶಿವಪಾರ್ವತಿಯರ ಮೆರವಣಿಗೆಯಂತೆಯೆ ಸೈ (ಹಯಾತ್ರಿಕ. ೬೬). ೪. ಉನ್ನತವಾದ ಮೇಳದೆಡೆಯೊಳ್ ಶಾಂತಂಗೆ ತನ್ನ ನೃತ್ಯಮಂ ಬಿಡದಾನಂದದಿನಂದು ತೋಱಿಸುವ ತತ್ಪದ್ಮಾಕ್ಷಿಯಂ ಕಂಡು ತನ್ನೊಡಲಂ ಮಲ್ಲಣಿಗಿತ್ತಂ (ಉದ್ಭಟ. ೦೨-೪೨) ; ಮೇಳದಲಿ ಮಂಡಳಿಸಿದರಿನೃಪಜಾಲವಲಿ ಯಮಸೂನುವಾವನು ಮೇಲೆ ಭೀಮಾರ್ಜುನರ ವಿವರಿಸಿ ತೋಱಬೇಕೆಂದ (ಕುವ್ಯಾಭೀ. ೨-೭). ೭. ಇಂದುಕಿರಣಕ್ಕಮೃತವಾರಿನಿಧಿ ಪರ್ಚಿ ಭೋರೆಂದುಬ್ಬಿಪ್ಪೊಲು ಮುನ್ನ ಮೇಳವೊಡ್ಡೈಸಿರಲ್ಕೊಂದೆರೆಯ ಪೊರೆಯ ಮಱಿವಿಡಿದು ಸಖಿಯರುಮೆರಸಿ ನಿಂದಳು ವಿಲಾಸದಿಂದ (ಸೌಂದರ್ಯ. ೮-೨); ಮತ್ತೊಂದೆಡೆ ಪಾಠರದ ಮೇಳವು ಕುಣಿಯಬೇಕು (ಶವ್ವತಾ. ೨); ನನ್ನ ಮಂದರ್ತಿ ಮೇಳ ಬಂದಿತ್ತು (ಗಂಪಾ. ೫). ೮. ಜೊತೆ : ಸಹವಾಸ ; ಸಂಪರ್ಕ : ಸಖ್ಯ : ಒಡನಾಡಿ ಬಳೆದ ಮೇಳದ ಕೆಳದಿಯರುಂ (ಅಪು. ೩-೨೩ ವ) ; ಮೇಳದ ಕೆಳದಿ ಮೆಲ್ಲನಿಂತೆಂದಳ್ (ಶಕ್ಕಾ. ೬೬) ; ಕಮಲಾನನೆಯರನು ಕಂಡನು ಸುದೇಷ್ಣೆಯ ಮೇಳದಬಲೆಯರ (ಕುವ್ಯಾವಿ. ೨-೪). ೯. ಸಂಬಂಧ : ನಂಟು : ಇನಿವಿರಿದೊಂದು ಮೇಳಮುಮೊಡರಿಬಡು ವಟ್ಟಜಮೆನ್ನ ನಿನ್ನ ಮುನ್ನಿನ ಭವದೊಂದು ಕೂರ್ಮೆಯೊಳೆ ಕೂಡಿದುದು (ಆದಿಪು. ೪-೫೨) ; ಸುತನೆಂಬ ಮೇಳದಿಂ ನಿನಗತರ್ಕ್ಯಬೋಧಂಗೆ ಯುಕ್ತಿಯಂ ತೋಱಿ ಜಗನ್ನುತ ನೋಡ ನನ್ನಿಯಾದುದು ಸುತಂಗೆ ಕಥೆವೇಟ್ಟರೆಂಬ ನಾಟ್ನುಡಿ ಜಗದೊಳ್ (ಆದಿಪು. ೬-೦೪). ೧೦. ಸಮವಾದುದು ; ಸಾಟಿ; ಸಮಜೋಡಿ : ಅಲಿಸಲವೆಲವೊ ಮತ್ಸರಮದೇಂ ದಕ್ಷಮುಖಶಾಲಿಯೋ ನಿನ್ನ ಸಾಮರ್ಥ್ಯಕಿಮ್ಮಿಯ ರಣಂ ಮೇಳವಿದೆ ಕೊಳ್ಳದೊಡೆನುತೆ ಮೂವತ್ತೆಂಟುಬಾಣದಿಂ ಖಳನೆಸೆಯಲು (ಶಿದಕ್ಷ. ೪೩-೪೬) ; ತಪಸ್ವಿ ಎಂಬುದಕ್ಕೆ ಕನ್ನಡಿಯಲ್ಲಿ 'ಕಿತ್ತಡಿ' ಎಂಬ ಮೇಳದ ಮಾತಿದೆ (ಚುಕ್ಕಶ್ರ. ೧೪೮). ೧೧. ಸ್ಪರ್ಧೆ : ಸೆಣಸಾಟ : ಘಡ ಕುಮಾರಕ ದೊಡ್ಡಗರ ಸದೆಬಡಿದ ಗರ್ವಿತತನವಕಟ ನಮ್ಮೊಡನೆಯೇ ನೋಡಿಲ್ಲಿ ಮೇಳವೆ ಸಾರು ಸಾರೆನುತ ಒಡನೊಡನೆ ನಾರಾಚನಿಚಯವ ಗಡಣಿಸಿದರು (ಕುವ್ಯಾದ್ರೋ. ೫-೬೬) : ನಿಲ್ಲು ಗರುಸುತ . . . ಹುಲುಜೀವರಿಗೆ ಜವನಲ್ಲಿ ಮೇಳವೆ ಉಗುಳು ಪಂಚಪ್ರಾಣವಿದೆನುತರ (ಕುವ್ಯಾಗ. ೦೦-೦೭). ೧೨. (ಆಲಂ) ಅಳು; ರೋದನ: ಆಟವಾಡುತ್ತಿದ್ದರೆ ಇಷ್ಟು ಚೆನ್ನಾಗಿ ಆಡುತ್ತಿರುತ್ತಾಳೆ, ಮೇಳ ಶುರುವಾದರೆ ಮಾತ್ರ ನಿಲ್ಲಿಸೋದು ಕಷ್ಟ (ರಜಾ). ೧೩. [ಸಂಗೀತ]

ಸ್ವರಗಳ ಹೊಂದಾಣಿಕೆ : ಸ್ವರಗ್ರಾಮ : ಸ್ವರಮೈತ್ರಿ : ತಾಳದಿಂ ಮೇಳದೆ ಪಾಡುವರ್ ಪದೆದು ಪಾಡುವರಟ್ಟಿಗೆ ನೆತ್ತವಾಡುವರ್ (ಶಶಿಪ. ೫-೪೫) : ಪ್ರಾಚೀನಸಂಗೀತಶಾಸ್ತ್ರಕಾರರು ಏರಿಕೆಯ ಮತ್ತು ಇಳುವರಿಯ ಕ್ರಮದಲ್ಲಿ ಕೆಲವು ಸ್ವರಗಳನ್ನು ಜೋಡಿಸಿ, ಮತ್ತಾವ ನಿಬಂಧನೆಗೂ ಒಳಪಡಿಸದೆ. ಆ ಸ್ವರಜೋಡಣೆಯನ್ನು 'ಮೇಳ' ಎಂದು ಕರೆದರು (ಸಂಗೀತಶಾ. ೩೫) ; ಆದ್ದರಿಂದ ಮಾಯಾಮಾಳವಗೌಳದ ಎರಡೆರಡು ಶ್ರುತಿಗಳ ಮೇಳದಿಂದ . . . ಆರಂಭಿಸುವುದು ಸುಲಭ (ಪೀಮಾಶೂ. ೧೦೫). ೧೪. = ಮೇಡ್ಲ₂ : 'ಮೇಳಕಟ್ಟು' ಪರಾ.

ಮೇಳದವರು = (ಶುಭಸಂದರ್ಭಗಳಲ್ಲಿ) ಓಲಗವನ್ನು ಊದುವವರು ; ವಾದ್ಯದವರು : ಮೇಳದವರು ಬರುವವರೆಗೆ ಮದುವೆಮನೆಯಲ್ಲಿ ಯಾವ ಕೆಲಸವೂ ಪ್ರಾರಂಭವಾಗುವಂತಿಲ್ಲ (ರೂಢಿ). **ಮೇಳಮಾಡು** = ೧. ಜೊತೆಗೊಳಿಸು ; ಸೇರಿಸು : ನೃಪತುಂಗನ ವಿಷಯಕವಾದ ಆದರವನ್ನೂ, ಪದ್ಯರಚನೆಯ ಆಗತ್ಯವನ್ನೂ ಮೇಳ ಮಾಡಿ ಇಂಥಲ್ಲಿ ಗ್ರಂಥಕಾರನು . . . ಹೇಳಿದ್ದಾನೆ ಎನ್ನಲು ಅಡ್ಡಿಯಿಲ್ಲ (ಕಸಾತ. ೫೩). ೨. ಓಲಗವನ್ನು ಊದು : ಇನ್ನು ಶಾಸ್ತ್ರಗಳನ್ನು ಮಾಡಲು ಶುರು ಮಾಡಬೇಕು ಮೇಳ ಮಾಡಲು ಹೇಳಿ (ರೂಢಿ). ೩. ಜೋರಾಗಿ ಅಳು : ರೋದಿಸು : ಬಸ್ಸಿನಲ್ಲಿ ಒಂದು ಮಗು ಮೇಳ ಮಾಡತೊಡಗಿತು (ರೂಢಿ). **ಮೇಳವಾಗು** = ದ್ವಂದ್ವಯುದ್ಧವಾಗು : ತೋಳುವಲಕಿದಿರಿಲ್ಲ ಬಿನುಗುನೃಪಾಲನೆಲವೋ ಕರ್ಣ ಘಡಘಡ ಮೇಳವಾದರೆ ಮೊಗೆವೆನರುಣಾಂಬುವನು ನಿನ್ನೊಡಲ (ಕುವ್ಯಾದ್ರೋ. ೧೩-೨೫). [ಸಂ.]

**ಮೇಲಂಕ** 'ಮೇಲಂಕಣ₁' ನೋ.

**ಮೇಲಂಕಣ₁**, ಮೇಲಂಕ, ಮೇಲಕ್ಕ (ನಾ). ಕೆರೆಯ ಮೇಲ್ಭಾಗದ ತೂಬು: ಕಡವದ ಕೊಳದ ಕೆಱೆಯ ಮೇಲಂಕಣಕ್ಕೆ ನಗರಿಯ 'ಜೋಗಿನ ಹಳ್ಳದಿಂ ಬಡಗದಿಕ್ಕ ಗುಡಿಯಿಂ ತೆಂಕ ಕಂಬ ೨೦೦ . . . ಕೆಯ್ಯನು ಆಚಂದ್ರಾರ್ಕತಾರಂಬರಂ ಮಹಾಜನಂಗಳು ಪ್ರತಿಪಾಳಿಸುವರು (ಎಕ. VI, ಕಡೂರು. ೫೮-೨; 1225 ?) ; ಆ ಕೆಱೆಗಳ ಮೇಲಂಕಣ ಮೊದಲಾದ ಎಲ್ಲಾ ಕೆಲಸಂಗಳಿಗವೂ . . . ಹದಿಕೆಯ ಬಿಟ್ಟು ತೆಱುವರು (ಎಕ. XII, ಚಿಕ್ಕನಾ. ೨-೭೭; 1261) ; ಮೇಲಕ್ಕವೆಂದರೆ ಕೆರೆಯ ತೂಬು. ಇದನ್ನೇ ಮೇಲಂಕವೆಂದೂ ಮೇಲಂಕಣವೆಂದೂ ಶಾಸನಗಳಲ್ಲಿ ಕರೆದಿರುವರು (ಸಂಭಾವಿ. ೨೦೦). **ಮೇಲಂಕ** : ಮಾಕಗವುಡನು ತಾನು ಕಟ್ಟಿಸಿದ ಕೆಱೆಯ ಮೇಲಂಕಕ್ಕೆ ವರ್ಷಂಪ್ರತಿ . . . ಕಪ್ಪ ೧೩೦ನು ಆಚಂದ್ರಾರ್ಕತಾರಂಬರಂ ನಡವಂತಾಗಿ ಕಾರುಣ್ಯಂಗೆಯ್ದು ಕೊಟ್ಟರು (ಎಕ. VI, ಕಡೂರು. ೭೪-೨ ; 1225 ?). **ಮೇಲಕ್ಕ** : ಮುಂದದಿಂದಿಕ್ಕಿಸಿದನೆಸೆವಿನಂ ಮೇಲಕ್ಕಮನೀ ಕೆಱೆಗೆ ರಾಜಮಾಂಧಾತನೃಪಂ ಬಿತ್ತುವಟ್ಟಮಂ ಮೇಲಕ್ಕಕ್ಕೆ ಬಿಟ್ಟಂ (ವ್ಯಾಆರಿ. ೦೬೨೮, ೦೨-೬: 1062) ; ಮೇಲಕ್ಕ :— ಮೇಲಕ್ಕವೆಂದರೆ ಕೆರೆಯ ತೂಬು (ಸಂಭಾವಿ. ೨೦೦). [ಮೇಲ್₁ + ಅಂಕಣ₀ (p ← ತವಿ. ಅಜ್ಞಣವ್ = ಕೊಳಾಯಿ, ತೂಬು) ]

**ಮೇಲಂಕಣ₂** (ನಾ). ಸ್ಪರ್ಧೆಯಿಂದ ನಡೆಯುವ ಯುದ್ಧ : ಗಣನೆಯಿಲ್ಲದು ಮತ್ತೆ ಮೇಲಂಕಣದ ಧಾರಣೆ ನೂಕಿತೆಲವೋ ರಣದ ವಾರ್ತೆಯ ದೇಸಿನುತ ಜನವೆಲ್ಲ ಗಜಬಜಿಸೆ (ಕುವ್ಯಾವಿ. ೫-೫) : ಕದನವಿಜಯದ ಭಂಗಿ ತಲೆಗೇಱಿಂದೊ ಮೇಲಂಕಣದಲೊಡವುಟ್ಟಿದನ ನೆತ್ತರುಗುಡಿಹಿ ನಿನ್ನೊಡನೆನಗೆ ಮಾತೇನು (ಕುವ್ಯಾಗ. ೦೧-೬೩).

[ಮೇಲು₁ (< ಮೇಲ್₁) + ಅಂಕ₂ + ಣ₁ (< ಕಳ್₃) ]

**ಮೇಲಂಕವಣೆ** (ನಾ). ಕುದುರೆಯ ಮೇಲೆ ಹತ್ತಲು ಅನುಕೂಲಿಸುವಂತೆ ಅದರ ಜೀನಿಗೆ ಅಳವಡಿಸುವ ಉತ್ತಮವಾದ ಬಳೆ : ಶ್ರೇಷ್ಠವಾದ ರಿಕಾಪು : ಪಂಸೆರಳ್ ಸಾಸಿರದಶ್ವಶ್ರೇಣಿ ಮೇಲಂಕವಣೆಯ ಮಣಿಯ ಪರ್ಯಾಣದಿಂ ತೋರ್ಕೆವೆತ್ತೆಯ್ದುರೆ (ಎಕ. XI. ದಾವಣ. ೨೫-೩೨: 1224).

[ಮೇಲ್₁ + ಅಂಕವಣೆ₁]

**ಮೇಲಂಗಿ** (ನಾ). ಒಳಅಂಗಿಯ ಮೇಲೆ ಧರಿಸುವ ಮತ್ತೊಂದು ಅಂಗಿ : ಬೆಳ್ಳಿಯ ನಡುಕಟ್ಟು — ನೀಲಿಯ ಮೇಲಂಗಿ . . . ಒಂದು ಛುರಿಕೆಯು ನಡುವಿನಲ್ಲಿ ನೇತಾಡುತ್ತಿದೆ (ಅರ್ಜುನ. ೦) ; ನನ್ನ ಬಳಿ ಮೇಲಂಗಿಯು ಇದ್ದಿರಲಿಲ್ಲ (ಮಹಾತ್ಮಾ. ೩೯).

[ಮೇಲು₂ (< ಮೇಲ್₂) + ಅಂಗಿ₂]

**ಮೇಲಂತಸ್ತು** (ನಾ). ಮೇಲಿನ ಉಪ್ಪರಿಗೆ ; ಮಹಡಿ : ಮಂದಿರದ ಮೇಲಂತಸ್ತಿನೊಳ್ ನಿಂತಿದ್ದ ಕುಸುಮಲತೆಯು ಯಾ ಪುರುಷನೆ ತನ್ನ ಮಂದಿರಕ್ಕೆ ಬರುವನು (ಶೌಗಂಧಿ. ೩೪೦-೬); ಸ್ವಲ್ಪ ಸಮಯದಲ್ಲೇ ಗೋಪುರವನ್ನೂ ಏರಿ ಮೇಲಂತಸ್ತಿನ ಕಿಟಕಿಯ ಹತ್ತಿರ ನಿಂತನು (ಮಹಿಸ ೪೬). [ಮೇಲು₁ (< ಮೇಲ್₁) + ಅಂತಸ್ತು]

**ಮೇಲಕ**, ಮೇಳಕ (ನಾ). ೧. ಸೇರುವಿಕೆ : ಕೂಡುವಿಕೆ : ಕೂಟ. ೨. ಸಭೆ : ಸಮಿತಿ. **ಮೇಳಕ** : ೧. "ಸಂಸರ್ಗಂ ಮೇಳಕಂ" (ವಸ್ತುಕೋ. ೦೦೩-೦೬) : "ಮೇಳಕಃ, ಸಂಗಃ, ಸಂಗಮಃ – ೩ ಕೂಡಿಕೆ. ಸೇರಿಕೆ" (ಸಿದ್ಧಾಂತ. ೩೬೬). [ಸಂ.]

**ಮೇಲಕ್ಕ** 'ಮೇಲಂಕಣ₁' ನೋ.

**ಮೇಲಕ್ಕಿ** (ನಾ). ಉತ್ತಮವಾದ ಅಕ್ಕಿ : ಶ್ರೇಷ್ಠದರ್ಜೆಯ ಅಕ್ಕಿ : ತುಪ್ಪಮುಂ ಸೊಲ್ಲಗೆಯುಂ ಎಂದಿಂಗಮಿಲ್ಲ ಕುಳ್ಗೇಳಿಬ್ಬಳ್. ಮೇಲಕ್ಕಿ (ಎಕ. IV, ಶಾಮರಾ. ೮೫-೦೦ ; ಸು. ೫೦೦ ?). [ಮೇಲ್₁ + ಅಕ್ಕಿ₁]

**ಮೇಲಚ್ಚು₁** (ನಾ). ಒಟ್ಟಾಗಿ ಮುದ್ರಿತವಾದ ಲೇಖನ ಮುಂತಾದುವುಗಳನ್ನು ಪ್ರತ್ಯೇಕವಾಗಿ ಪುನರ್ಮುದ್ರಣಮಾಡಿದ ಭಾಗ : ನನ್ನ ಲೇಖನದ ಇಪ್ಪತ್ತು ಮೇಲಚ್ಚುಗಳನ್ನು ಕಳುಹಿಸಿಕೊಡಿ (ರೂಢಿ).

[ಮೇಲು₁ (< ಮೇಲ್₁) + ಅಚ್ಚು₃]

**ಮೇಲಚ್ಚು₂** (ನಾ). ಗಾಡಿ ಅಥವಾ ರಥದ ಶ್ರೇಷ್ಠವಾದ ಅಚ್ಚು. – ಇರಚಿ : ಉರಗನಾಳದ ಹೊರಜೆ ನವಸಾವಿರದ ಕುಱುಗುಣಿಯಾಸುಗಳು ಶಾವೆರಡು ಮಡಿ ತೊಂಬತ್ತುವೊಂದು ಸಹಸ್ರದರ್ಪದು ಏರಿಯ ನೊಗನ ದಜಿನಿತು ಸಂಖ್ಯೆಗೆ ಸರಿಯೆನಿಪ ಮೇಲಚ್ಚು ಮಂಗಳತರವೆನಿಪ ನವರತ್ನರಚನೆಯು ಚಿತ್ರರಥವೆಂದ (ಕುವ್ಯಾಅ. ೬-೬೪). [ಮೇಲ್₁ + ಅಚ್ಚು₇]

**ಮೇಲಟ್ಟ** (ನಾ). ೧. (ಅಲಮಾರಿನ) ಮೇಲ್ಭಾಗದ ಹಲಗೆ ಅಥವಾ ಬಡು : (ಕಸಂಗ್ರ. ೮೦). ೨. ಮೇಲುಮಾಳಿಗೆ : ಉಪ್ಪರಿಗೆ ; ಮಹಡಿ : ಮೂರುಮನೆ ಮೇಲಟ್ಟದಲ್ಲಿ ಮೆರವಣಿಗೆನ[ಯ]ಷ್ಟೆ ಮಾಡಿಸಿದೆ (ಶದಾವ. ೬೫-೦೨) ; ಮೇಲಟ್ಟದ ಮನೆಗೆ ಹೋಗಿ ದೀಪ ಹಚ್ಚಿ ಇಬ್ಬರೂ ಕುಳಿತರು (ಇಕೃಕ. ೩೦೪). [ಮೇಲು₁ (< ಮೇಲ್₁) + ಅಟ್ಟ₁]

**ಮೇಲಣ** 'ಮೇಲ್₁' ಪರಾ.

**ಮೇಲಧಿಕಾರ** (ನಾ). ಹೆಚ್ಚಿನ ಅಧಿಕಾರ : ವಿಶೇಷವಾದ ಅಧಿಕಾರ : ಸೆಂಟ್ರಲ್‌ಬ್ಯಾಂಕಿನ ಮೇಲಧಿಕಾರಕ್ಕೆ ಒಳಪಟ್ಟಲ್ಲದೆ ಪೇಟೆಗೆ ಅನೇಕವೇಳೆ ಕೆಲಸ ನಡೆಯದಾಗುವುದು (ಹಣಶ್ರ. ೦೮೦).

[ಮೇಲು₁ (< ಮೇಲ್₁) + ಅಧಿಕಾರ]

**ಮೇಲಧಿಕಾರಿ** (ನಾ). ಮೇಲ್ಮಟ್ಟದ ಹುದ್ದೆಯಲ್ಲಿರುವ ವ್ಯಕ್ತಿ : ಅವರು ಮೇಲಧಿಕಾರಿಯಾಗಿ ಇರುವ ಆಫೀಸಿನಲ್ಲೇ ದುಡಿಯುವ ಪ್ರಸಂಗ (ವಾತ್ಸಲ್ಯ. ೦೪೪) ; ಮೊದಲು ಮೇಲಧಿಕಾರಿ ಸರಿ ತಿದ್ದಿಕೊಳುವುದು ತನ್ನ ಚಾರಿತ್ರವನಂತೆ (ರಂತಾಕ. ೨೦೪-೬).

[ಮೇಲು₁ (< ಮೇಲ್₁) + ಅಧಿಕಾರಿ₁]

**ಮೇಲನ**. ಮೇಳನ (ನಾ). ಒಟ್ಟಾಗಿ ಸೇರುವಿಕೆ : ಕಲೆಯುವಿಕೆ. **ಮೇಳನ** : ಹೊಂದಿದರೆ ಮೇಣೆರಡುವಸ್ತುಗಳುಂದವರ ಗುಣಮೇಳನಂ

ಬಳಿಸಂದಿರಲ್ಕೇಗಾಯ್ತುವಕೆ ಗುಣಾಂತರವ್ಯಾಪ್ತಿ (ವಿವೇಕ. ೫-೨೦) ; ವೈರಾಗ್ಯ ಕಾರುಣ್ಯಮೇಳನವೆ ಧೀರತರ ಹೋರುದಾತ್ತತೆಯಿಂದ (ವಂಕೂಶ. ೫೭೪).

[ಸಂ.]

**ಮೇಲರ್ಜಿ** (ನಾ). ಕೆಳಗಿನ ಅಧಿಕಾರಿ ಅಥವಾ ನ್ಯಾಯಾಸ್ಥಾನವು ನೀಡಿದ ತೀರ್ಪಿನ ಪುನಃಪರಿಶೀಲನೆಗಾಗಿ ಮೇಲಿನ ಅಧಿಕಾರಿ ಅಥವಾ ನ್ಯಾಯಾಸ್ಥಾನಕ್ಕೆ ಸಲ್ಲಿಸುವ ಮನವಿಪತ್ರ,– ಅಪೀಲು : ಮೇಲರ್ಜಿ ಹಾಕಿಕೊಳ್ಳುವ ವಿಷಯದಲ್ಲಿ ವಕೀಲರು ಏನು ಹೇಳುತ್ತಾರೆ, ತಿಳಿಸು (ಪುಸರು. ೦೪೮). [ಮೇಲು$_1$ (< ಮೇಲ್$_1$) + ಅರ್ಜಿ$_3$]

**ಮೇಲಱಿ** (ಕ್ರಿ). ೧. ಒಳ್ಳೆಯದನ್ನು ತಿಳಿ ; ಶುಭವಾದುದನ್ನು ಅರಿ : ಮೇಲಱಿಯದೀ ಮಗಂಗೀ ಬಾಲೆಯನೀವುದೆ (ವರ್ಧಪು. ೭-೩೮). ೨. ಸರಿಯಾದುದನ್ನು ಗ್ರಹಿಸು ; ಔಚಿತ್ಯವನ್ನು ಅರಿ : ಬಾಲ್ಯದೊಳ್ ಮೇಲಱಿಯದೆ ಮಲದಿಂ ಮೂತ್ರದಿಂ ಶ್ಲೇಷ್ಮದಿಂ ತೊಯ್ದಾನಾರೆಂದೇನುಮಂ ಭಾವಿಸದೆ . . . ಚರಿಸಿದೆನು (ರತ್ನಾಕ. ೪) ; ಆ ಲಲಿತಾಂಗಿಯ ನಡುವಣ ನೇಕಜ ಮೇಲಱಿಯದೆ ಪುಟ್ಟಿಸಿದನೊ (ಕುರಾಶಾಂ. ೭-೨೧) ; ಮೇಲಱಿಯದ ಧಿಕರೊಳು ಕಾಳಗವ ತೊಡಗಿದರೆ ಬಾಳುವೆಯು ಕೆಟ್ಟು ಬಡಪಕ್ಕ ಬೆಸಲಾದ ಚೇಳಿನಂತಕ್ಕು (ಸರ್ವಜ್ಞ. ೭೪೦). [ಮೇಲ್$_1$ + ಅಱಿ]

**ಮೇಲಱಿಕೆ** (ನಾ). ಹೆಚ್ಚಿನ ಪ್ರಸಿದ್ಧಿ : ಆಗಳವರೊಳೊರ್ವಂ ಮೇಲಱಿಕೆಯ ಕೈದುಕಾಱರ ಬೀರಂ ಪುಷ್ಕಲಂ . . . ರಕ್ಕಸವಡೆಯನಿದಿರ್ಚಿ ಬಾರಿಸದೆ ಬೆಂಗೊಟ್ಟೆನಾದೊಡೆ ಪಱಿವಾತಂ ಪಱಿವ ಕೂಟನೊಂದು ಗತಿ ತನ್ನೊಳಕ್ಕೆ ಎಂದು ಪೂಣ್ದಂ (ರಾಮಾಶ್ವ. ೧೧೦-೨೩). [ಮೇಲ್$_1$ + ಅಱಿಕೆ]

**ಮೇಲಾಟ** (ನಾ). ೧. ಸ್ಪರ್ಧೆ : ಹುರುಡು : ಪೈಪೋಟಿ : ಪರೀಕ್ಷೆಯು ಇನ್ನೊಂದು ತಿಂಗಳು ಮುಂದಿದೆಯೆನ್ನುವಷ್ಟರಲ್ಲಿ ಕಾಲೇಜಿನ ಚರ್ಚಾ ಸಂಘದ ಮೇಲಾಟಗಳು ಬಂದವು (ಸಮುಜೀ. ೦೫೪) ; ಹೊಟ್ಟೆಗಾಗಿ, ಬದುಕುಳಿಯಬೇಕೆಂಬ ಬಯಕೆಯ ಬೇಗೆಯಲ್ಲಿ ಬಡವರು ತಮ್ಮ ಶ್ರಮವನ್ನು ಮಾರಲು ಮೇಲಾಟ ನಡೆಯಿಸುತ್ತಿರುವಲ್ಲಿ (ಮಾವಾದ. ೦೩೨). ೨. ಹವ್ಯಾಸ ; ಉಪವೃತ್ತಿ : ರಂಗಪ್ಪನಿಗೆ ಬೇರೆ ವಿಧವಾದ ಆದಾಯವೂ ಇದ್ದುದರಿಂದ ಅವನಿಗೆ ಕಂಟ್ರಾಕ್ಟು ಕೇವಲ ಒಂದು ಮೇಲಾಟವಾಗಿತ್ತೇ ಹೊರತು ಜೀವನೋಪಾಯ ಆಗಿರಲಿಲ್ಲ (ಶೀಮುಕಾ. ೪೯).

[ಮೇಲು$_1$ (< ಮೇಲ್$_1$) + ಆಟ]

**ಮೇಲಾಟಗಾರ** (ನಾ). ಸ್ಪರ್ಧಿಸುವವನು ; ಸ್ಪರ್ಧೆಗಾರ : ಇವರಿಂದ ಉತ್ಪಾದನೆಯನ್ನು ಕುಗ್ಗಿಸಬೇಕು ಅಥವಾ ಇತರ ಮೇಲಾಟಗಾರರನ್ನು ತಗ್ಗಿಸಬೇಕು (ಮಾವಾದ. ೧೩೦). [ಮೇಲಾಟ + –ಗಾರ (< –ಕಾಱ) ]

**ಮೇಲಾಡು** (ಕ್ರಿ). ೧. ಅಗ್ರಭಾಗದಲ್ಲಿ ಹಾರಾಡು, – ಸುತ್ತು, – ತಿರುಗು : ಮೇಲಾಡುವ ತುಂಬಿಗಳಿಂಚರಮಂ ಲಾಲಿಸುತ್ತಲರ್ಗೆ ಱವಳಿಸಂಚರಮಂ ಬಿಡಿಸುತ್ತುಂ ಚಾಂಪೇಯದ ಮುಗುಳ್ಗಂ ಪಿಡಿದಾಡುತ್ತುಂ (ಉದ್ಭಟ. ೦-೫೨). ೨. ಸ್ಪರ್ಧಿಸು ; ಪೈಪೋಟಿ ನಡೆಸು ; ಹುರುಡಿಸು : ಕೂಗಿ, ನಾಡೆಲ್ಲಾ, ಬೀಗಿ, ಬೀಡೆಲ್ಲಾ ಓಲಾಡಿ ಊರೆಲ್ಲ, ಮೇಲಾಡಿ ಹಳ್ಳಿಗಾಡೆಲ್ಲಾ, ಸೋಲು ನಮಗಿಲ್ಲಿಲ್ಲ, ಗೆಲವೆ ಇನ್ನೆಲ್ಲಾ ! (ಹೊಂಗಳು. ೩೩-೦೭) ; ಭಾರತದ ಸರಕುಗಳನ್ನು ತರಿಸಿಕೊಳ್ಳಲು ಆ ವಿದೇಶಗಳವರು ಮೇಲಾಡುತ್ತಿದ್ದರು (ಭಾರವ. ೩೭೯) ; ಎನ್ನ ಮೇಲಾಡಿ ಶ್ರೀಗಂಗೀನ ತಂದಿ ಎನ್ನ ತಪ್ಪೇನು ಕಂಡಿ (ಮಲ್ಲಗಿ. ೨೦).

[ಮೇಲ್$_2$ + ಆಡು$_1$]

**ಮೇಲಾಪ**, ಮೇಳಾಪ (ನಾ). ೧. ಜೊತೆಯಾಗಿ ಹೊಂದಿಕೊಂಡಿರುವುದು : ಜೋಡಣೆ ; ಹೊಂದಾಣಿಕೆ : ಇದು ಮಹಾಸಭೆಯಲ್ಲಿ ಮೇಲಾ [ಪಾಠಾಂ. ಳಾ]ಪದಲಿ ಕುರುಪಾಂಡವರು ಸದ್ಯೂತದಲಿ ರಮಿಸುವರೀನು ಹೊಲ್ಲೆಹವೆಂದನಂಧನೃಪ (ಕುವ್ಯಾಸ. ೦೨-೭೮); ಆ ತರುಣಿರ್ವರುಂ ಮಧುರವೀಣೆಗಳ ಮೇಲಾ[ಪಾಠಾಂ. ಳಾ]ಪದಾಲಾಪಂಗಳ ಗೀತದೊಳ್ . . . ಪಾಡುವರ್ದೇವನಗರೀನಿಕೇತನ ಶ್ರೀಪತಿಯ ಚಾರಿತ್ರಮುಪ್ಪ ಧಾಮಾಯಣವನನುದಿನದೊಳು (ಕೃಪಂಕಾ. ೦೯-೫೫). ೨. ಮಿಲನ ; ಕೂಟ ; ಸಂಭೋಗ : ಸ್ತ್ರೀಪುಂಸರತಿಸಮುತ್ಥವ್ಯಾಪಾರಂ ತಾನದಲ್ತೆ ಶೃಂಗಾರಂ ಮೇಲಾ [ಪಾಠಾಂ. ಳಾ] ಪದಿನಗಲ್ಕೆಯಿಂ ಸುನಿರೂಪಿತಸಂಭೋಗವಿಪ್ರಲಂಭಸಮಾಖ್ಯಂ (ಕಾವ್ಯಾವ. ೭೯೯). ೩. ಗುಂಪು ; ಸಮೂಹ : ಸಕಳದಳ ಮೇಲಾ[ಪಾಠಾಂ. ಳಾ]ಪದಲಿ . . . ಕುರುಪರಿಯಂತ ರಾಜಪ್ರಕರ ನೆರೆದುದು (ಕುವ್ಯಾಸ. ೭-೪). **ಮೇಳಾಪ** : ೧. ಜಂಗಮದ ನುಡಿಗಡಣವ ಮೇಳಾಪವದೆಂತಿರಬೇಕಯ್ಯ ಎಂದೊಡೆ ಪ್ರಚ್ಛನ್ನವಾಗಿ ಲೋಕಕ್ಕೆ ತೋಱಿ ಲೋಕಕ್ಕೆ ಅದೃಶ್ಯನಾಗಿರಬೇಕು (ಚನ್ನವ. ೫೫-೦೧). ೨. ಸತಿಸಹಿತ ಸಂಕಲ್ಪ ಸಾಧನಗತಿಯ ಮೇಳಾಪದಲಿ ನೆಱೆ ನಿಶ್ಚಿತವ ಮಾಡಿ ಮನಸ್ಸಿನೇಕೋಭಾವನಿಷ್ಠೆಯಲಿ . . . ಸುಜ್ಞಾನಿ ನಿರಹಂಕಾರರೊಪ್ಪಿದರು (ಶ್ರಶಾರೀ. ೭-೦೭). ೩. ಯುಧಿಷ್ಠಿರಾದಿಗಳಾಳ ಮೇಳಾಪದಲಿ ಹೊಕ್ಕರು ಕಾಳೆಗದ ಕಳನ (ಕುವ್ಯಾದ್ರೋ. ೯-೨೯). ೪. ಸಹವಾಸ ; ಸಖ್ಯ ; ಸ್ನೇಹ : ಒಂದಜ ಮೋಱೆಯನೊಂದು ಮೂಸಿ ನೋಡಿ ಮತ್ತೊಬ್ಬ ಹೊತ್ತಿಂಗೆ ಕಚ್ಚಿಯಾಡಿ ಹೋದಂತಾಯಿತ್ತು ನೋಡಿರೇ ಕಲಿಯುಗದೊಳಗಣ ಮೇಳಾಪವ (ಅವಸಂ. ೭೩-೩೦೮) ; ಗೋಪುರ ಮಂಗಡದ ಮೇಳಾಪದಲಿ ಮೂಜಗವ ಮೋಹಿಸುತ . . . ನಿಂದಿರೆ (ಶಿಶಾಗ. ೧೦-೬೩-೪೮); ಭವಿವ್ರಜದ ಮೇಳಾಪಕ್ಕೆ ಪಕ್ಕಾದೆನೊ (ವೃಶಲಿ. ೩೦-೨೪). ೫. ಸಭೆ ; ನೆರವಿ ; ಸಮಿತಿ : ಸಮಸ್ತ ಮೇಳಾಪದ ಚಚ್ಚಗೋಷ್ಠಿಯ ಭಂಡರೆಲ್ಲರು ಬಲ್ಲರೆ ಹೇಳಿರೆ (ಅವಸಂ. ೭೪-೩೨೯). ೬. ಸಂಬಂಧ ; ನಂಟು : ನರನ ಮಾರಂಕದ ಮಹೇಂದ್ರಗೆ ಚರಣಯುಗ ಬೆನ್ನನಲಿ ಬವರದೊಳರಿದಲ್ಲೆ ಭೀಷ್ಮಾದಿಗಳಿಗೀ ರಣದ ಮೇಳಾಪ (ಕುವ್ಯಾಕ. ೨೦-೩೩). [ ಸಂ. ]

**ಮೇಲಾಪಕ**, ಮೇಳಾಪಕ (ನಾ). ೧. = ಮೇಲಾಪ ೧ : ಅವಱ ಚಾಪಚ್ಛದಚ್ಛಾಯಾನುಕಾರಿಯಪ್ಪ ಮಸೃಣವರ್ಣಪ್ರಸರಮೇಲಾಪಕ[ಪಾಠಾಂ. ಮೇಳಾಪ] ವೈಚಿತ್ರ್ಯಮಂ ಚಿತ್ರಕಳಾವಿಶಾರದಂ ಪರಿಭಾವಿಸುತ್ತುಂ (ಚಂಪ್ರಶು. ೪-೫೦ ವ). ೨. [ಸಂಗೀತ] ಗೀತಪ್ರಾರಂಭ ಮತ್ತು ಗೀತದೇಹಗಳನ್ನು ಅಥವಾ ಗೀತಪ್ರಾರಂಭ ಮತ್ತು ಪದೇಪದೇ ಪುನರುಕ್ತವಾಗುವ ಭಾಗವನ್ನು ಒಟ್ಟುಗೂಡಿಸುವ ಹಾಡಿನ ಭಾಗ : ಉದ್ಗ್ರಾಹ ಧ್ರುವಗಳೆರಡನ್ನೂ ಪರಸ್ಪರವಾಗಿ ಒಟ್ಟುಗೂಡಿಸುವ ಕಾರಣದಿಂದ ಪ್ರಬಂಧದ ಎರಡನೆಯ ಭಾಗವು ಮೇಲಾಪಕವೆಂದು ಹೇಳಿದೆ (ತತುಶ್ರ. ೮೦). ೩. ಮೃದಂಗ ಮೊದಲಾದ ಅವನದ್ಧವಾದ್ಯಗಳಿಗಾಗಿ ಏರ್ಪಟ್ಟ ಒಂದು ವಾದ್ಯಪ್ರಬಂಧ. **ಮೇಳಾಪಕ** : ೧. ಸುವತೀರತ್ನ ಕರೀಂದ್ರರತ್ನಹಯರತ್ನಾನೀಕ ರತ್ನಾದಿರತ್ನದ ಮೇಳಾಪಕದಿಂದ . . . ಆ ನಗರಿ . . . ರತ್ನಾಕರಲಕ್ಷ್ಮಿಪೋಲ್ ನೃಪವರಂ ಬರ್ಪಾಗಳೇನೊಪ್ಪಿತೋ (ಕಾದಂಪೂ. ೪೭೭) ; ಈ ನೃಪರತ್ನವಾಕೆಗನುರೂಪಂ ರತ್ನಮೇಳಾಪಕಂ ದೊರೆವೆತ್ತಿರ್ಕುಂ (ಕಂರಾವಾ. ೪-೯೭). ೨. ಮೇಳಾಪಕಮನೊಡನೆ ದೇಶಾಖ್ಯಪದ್ಧತಿಯನಾಳಾಪಚಾರಿಣಿಯನಾಕುರವ ವೈಖರಿಯ ಲೀಲೆಯಂ . . . ಕೂಟಮಾನಮನೆಸೆವ ಬೈಸಿಗೆಯನೆತ್ತಿ ಬಾಜಿಸುವ ಮದ್ದಳಿಗನಂ ಮನ್ನಿಸುತ್ತುಂ (ಕದ್ಯರಾ. ೩-೭೦). ೪. = ಮೇಲಾಪ ೩ : ಪರಿಜನಮುಂ ತಿಂತಿಣಿಯಾಗಿರೆ ಸಭೆ ಪೋಲ್ತತ್ತು ರತ್ನಮೇಳಾಪಕಮಂ (ಕಂರಾವಾ. ೭-೭೫). ೫. = ಮೇಲಾಪ ೫ : ಆಸ್ಥಾನಮಂಟಪದೊಳೋಲಗಂಗೊಟ್ಟು ವೀರನೊಳ್ಬಂ ವೀರಮೇಳಾಪಕದೊಳಿರ್ದು (ಶಾಇಇ. XX, ೪೯-೨೩ ; 1076$_7$). [ ಸಂ. ]

**ಮೇಲಾಪಿಸು**, ಮೇಳಾಪಿಸು (ಕ್ರಿ). ೧. ಕೂಡಿಸು : ಜೋಡಿಸು ; ಹೊಂದಿಸು : (*). ೨. ಸಜ್ಜುಗೊಳಿಸು: ಅಣಿಮಾಡು : (*).

**ಮೇಳಾಪಿಸು :** ೨. ವಿಷಮವೀರನು ರಥವ ಮೇಳಾಪಿಸದ ಮುನ್ನವೆ ಹರಿವನೆನೆ ಸೈರಿಸಿದ ಬಳಿಕೀ ಕರ್ಣ ಕೈಕೊಂಬನೆ ತ್ರಿಯಂಬಕನ (ಕುಮಾ.ಭ. ೨೬-೦೯); ರಥವ ಮೇಳಾಪಿಸೆನಲು ಪ್ರೇರಿಸಿದರು ಸಾರಥಿಗಳು ರಥವಾಜಿಗಳನು (ಕಂಕ್ರನಾಂ. ೨೦-೦೬೦). [ ಮೇಳಾಪ + — ಇಸು$_3$ ]

**ಮೇಲಾಯ$_1$** (ನಾ). (ಶರೀರದ) ಮೇಲ್ಭಾಗ : ಎದೆಯ ಕಡೆ ಅಗಲವಾಗಿ ಕೆಳಕ್ಕೆ ಸೊಂಟದವರೆಗೂ ಸಣ್ಣವಾಗುತ್ತಾ ಬಂದಿರುವ ಮೇಲಾಯ (ಅಶೂಟ. ೬೬). [ ಮೇಲು$_1$ ( < ಮೇಲ್$_1$ ) + ಆಯ$_1$ ]

**ಮೇಲಾಯ$_2$,** ಮೆಲ್ಲಾಯ (ನಾ). ೧. ಹೆಚ್ಚಿನ ಆದಾಯ,-ಸಂಪಾದನೆ: ಮೂ[ಡೆ]ಡಿಸಿ ಮೇಲಾಯದಿಂದ ಕಾಣಿಕೆ ಹೊಂನು ಸಹವಾಗಿ (ಸೌಇಇ. ಉಡುಪಿ. ೩೦೩-೧೮; 1397). ೨. = ಮೇಲ್ತೆರಿಗೆ : ಖರಸಂವತ್ಸರದ ವೈಶಾಖ ಶು ೫ಲು ಮೇಲಾಯದ ಅಧಿಕಾರಿಗಳು ಪುರದ ಬಸವಪ (ಎಕ. V (R), ತಿರುಮ. ೨೯೯-೩ ; ಸು. 17ನೆಯ ಶತ). **ಮೆಲ್ಲಾಯ :** ೨. ಮೆಲ್ಲಾಯದಿಂದ ಕಾಟಿ ಗ ೧ (ಪ್ರಸಂ. ೦೯೩೪, ೨೫-೨೩; 1394).

[ ಮೇಲ್$_1$ + ಆಯ$_7$ ]

**ಮೇಲಾರಯ್ಕೆ,** ಮೇಲಾರೈಕೆ (ನಾ). ಮೇಲ್ವಿಚಾರಣೆ : ಬೇಖ ರೇಖೆ : ತರುಣ ಕೇಳ್ವೆ ತುರಗಮೇಧಾಧ್ವರದ ಮೇಲಾರಯ್ಕೆ [ಪಾಠಾಂ. ಮೇಲಾರೈಕೆ] ನಡೆಮುದು (ತೊರಠಾ. ೦-೬-೨೪); ನಿನ್ನಂ ಕಳುಹು ವಂದು ಹಯದ ಮೇಲಾರಯ್ಕೆ [ಪಾಠಾಂ. ರೈಕೆ]ಗೆನ್ನನಟ್ಟಿದನಲಾ ಪಿತನು (ಕೈಜಾಶಾ. ೦೨-೦೦). **ಮೇಲಾರೈಕೆ :** ಬೀಳುವಾಯುಧವನು ನಿವಾರಿಪ ಕೋಲದೊಂದು ಪದಾತಿ ಹಯ ಕುಡಾಲ ರಥಕೊಂದೊಂದು ಮೇಲಾರೈಕೆಗೊಂದಂಬು (ತೊರಠಾ. ೩-೬-೦೦) ; ಅವರ ಮೇಲಾರೈಕೆಗಾ ವಿಷ್ಣುವಿನ ಪಾರ್ಶ್ವದರಾಡುತಿಹರೀ ಭುವನದಲಿ (ತಿಜಾಗ. ೬-೩-೪೪) ; ದಾವೂದನು . . . ಪ್ರತಾಪಸಿಂಗನ ಮೇಲಾರೈಕೆಯಲ್ಲಿದ್ದ ರಾಜಪುತ್ರುದಳದ ಬಳಿಗೆ ಹೋಗಿ ಅದನ್ನು ಸುತ್ತಿಕೊಂಡನು (ಪಾರಜೀ. ೬೦).

[ ಮೇಲು$_1$ ( < ಮೇಲ್$_1$ ) + ಆರಯ್ಕೆ ]

**ಮೇಲಾರೈಕೆ** ' ಮೇಲಾರಯ್ಕೆ ' ನೋ.

**ಮೇಲಾಳ್,** ಮೇಲಾಳು (ನಾ). ೧. ಕುದುರೆ, ಆನೆ, ರಥ ಮುಂತಾದುವುಗಳ ಮೇಲೆ ಕುಳಿತು ಯುದ್ಧ ಮಾಡುವವನು : ಕೆನ್ನರ ಕೇತನುಂ ಎಜಿವಿಟ್ಟನುಂ ತಂಬದ ಕೇತನುಂ ಪರಿಚ್ಛೇ[ಚ್ಛೇ]ದಂಗೆಯ್ದು ಮೂವರುಂ ಮೇಲಾಳುಂ ಕುದುರೆಯುಮಂ[ಂ] ಕೊನ್ದು ಮೋಕ್ಷಕ್ಕೆ ಸನ್ದರ್ (ಎಇ.XVIII, ೦೬೨-೪; 985); ವರವಿಪ್ರತ್ಯವಿಷರ್ಜ ಗಾಯಕ ಪುರಾಣಜ್ಞರ್ . . . ಕಾಲಾಳು ಮೇಲಾಳರ್ ದೊರೆಯೊಡ್ಡೋಲಗ ಮೊಪ್ಪುಗುಂ (ಸೋಮೇಶ. ೫೮); ಕುದುರೆಯನೇರಿಯಾನೆಯನೇರಿ ತೇರೇರಿ ಯಿದಿರಾಗಿ ಬಂದು ಬಾನೆಡೆಗೆ ವದನವನೆತ್ತಿ ಕೈಮುಗಿವುತ ಜಯಯೆಂದು ಚದುರ ಮೇಲಾಳ್ಗಳೊಪ್ಪಿದರು (ಭರತ. ೪೬-೨೩). **ಮೇಲಾಳು :** ೧. ಪೂತು ಮಝ ಮೇಲಾಳು ಬಂದುದೆ ಅಕಟಿನುತ ಪಲುಮೊರೆದನಾ ದ್ರೋಣ (ಕುಮಾದ್ರೋ. ೦-೬೪); ಕಾಲಾಳ ಮೇಲಾಳ ಸಂದಣಿಯ ಸನ್ನಾಹದ . . . ಸಂಭ್ರಮಂ ಕಣ್ಗೆಸೆದುದು (ತಂಕ್ರಿ. ೨೬-೮): ಕಾಲಾಳು ಮೇಲಾಳು ವೊಂಟರಿಗಾಜಿರ ಜಾಲ ಬಿರುದಿನ ನಾಯಕರ ಸಾಲುಸಾಲೆಸೆದಿರೆ (ಕಂನವಿ. ೦೩-೪೩). ೨. ಅಗ್ರಗಣ್ಯ ; ಮುಖಂಡ : ನಾಯಕ : ಮಾಧವ ಸೋಮಯಾಜಿ ಆ ಅಗ್ರಹಾರಗಳಿಗೆಲ್ಲ ಮೇಲಾಳು. ಅಲ್ಲದೆ ಗುರಿಕಾರನು (ನಾಡೋಜ. ೬೪). [ ಮೇಲ್$_1$ + ಆಳ್$_3$ ]

**ಮೇಲಾಳಿಕೆ** ' ಮೇಲಾಳ್ಕೆ ' ನೋ.

**ಮೇಲಾಳು** ' ಮೇಲಾಳ್ ' ನೋ.

**ಮೇಲಾಳ್ಕೆ,** ಮೇಲಾಳಿಕೆ (ನಾ). ೧. ಮೇಲುಸ್ತುವಾರಿಯ ಅಧಿಕಾರ; ಮೇಲ್ವಿಚಾರಣೆಯ ಕಾರ್ಯ : ಅವರಾಳ್ವ ಬಾಡಂಗಳೊಳೆಲ್ಲಂ ಮೇಲಾಳ್ಕೆಯುಂ ಕಿಱುದೆಱೆಯುಮಿಲ್ಲ (ಎಕ. XI, ಚಿತ್ರದು. ೬೪-೨೬; 968) ; ಶ್ರೀಮನ್ಮಹಾ [ ಸಾಮನ್ತಂ ] ಮೂಕರಸರ್ಪ್ಪಗರಿಟೆನಾಡ ಮೇಲಾಳ್ಕೆಯುಂ ದುಷ್ಟನಿಗ್ರಹ ಶಿಷ್ಟಪ್ರತಿಪಾಳನದಿನ್ದಮಾಳುತ್ತಿರೆ (ಸೌಇಇ. XX, ೨೬-೬; 1040); ಬಂಧುರತರ ಬನವಾಸಿದೇಶಮುಂ ಮೇಲಾಳ್ಕೆ ನಿರಂತರವಾಗಲ್ ಆಳ್ದನ್ . . . ದಣ್ಡನಾಥ ಮಹಾದೇವರಸಂ (ಎಇ. XVI, ೪೦-೫೦; 1152). ೨. (ಮೂಲಆಸ್ತಿಗೆ ಚ್ಯುತಿಬರದಂತೆ ಇರುವ) ಫಲಾನುಭವದ ಹಕ್ಕು : ಕಲ[ಲ್ಲ]ವಣದ ಮೇ[ಲಾ]ಳ್ಕೆ ಮನ್ನೆಯಂ ಕಾಣಿಕೆಯಾಯುದಾಯ ಕಿಱುಕುಳಸಹಿತಂ ಸರ್ವ್ವಾಯಶುದ್ಧಿಯಾಗಿ . . . ಬಿಟ್ಟ (ಎಇ. XVI, ೪೦-೬೦; 1152). **ಮೇಲಾಳಿಕೆ :** ೧. ಶ್ರೀಮನ್ಮಹಾಮಣ್ಡಳೇಶ್ವರಂ ಕುಮಾರತೈಲಪದೇವ[ರ್ಗ]ಮ ಮೇಲಾಳಿಕೆಯ ಭಾಗಿಯಬ್ಬರಸಿಯುಂ (ಎಇ. XXVII, ೬೩-೩೬; 1114); ಪೂರೊಡೆಯ ಮಹಾದೇವಣ್ಣನು ಬನವಸೆ ಪನ್ನಿಚ್ಛಾಸಿರದ ಮೇಲಾಳಿಕೆಯ ದಣ್ಣಾಯಕ ಬೊಮ್ಮಯ್ಯ ಪ್ರ[ಮು]ಖ ಕರಣಂಗಳ್ಗಂ ಈಶ್ವರದೇವಗಂ ಬಿನ್ನಪಂಗೆಯ್ದು (ಕಇ. IV, ೦೩-೬೬; 1165). ೩. ಅಧಿನಾಯಕತ್ವ; ಅಧಿರಾಜತ್ವ : ಈ ಹೊಸ ವಿಜಯನಗರದ ದೊರೆಗಳ ಮೇಲಾಳಿಕೆಯನ್ನು ಒಪ್ಪಿಕೊಂಡ ಆಳುಪರಲ್ಲಿ ವೀರಕುಲಶೇಖರದೇವನೇ ಮೊದಲಿಗನು (ತುಳುನಾ. ೬೬).

[ ಮೇಲ್$_1$ + ಆಳ್ಕೆ ]

**ಮೇಲಿಕ್ಕು** (ಕ್ರಿ). ೧. ಮೇಲ್ಭಾಗದಲ್ಲಿ ಇಡು. – ಇರಿಸು. ೨. ಅಗ್ರಭಾಗದಲ್ಲಿ ಧರಿಸು : ಗಂಗೆಯಂ ಹೊತ್ತ ಹರನೊಳ್ ಪುರುಡಿಸಿ ಶಿರೋಮಧ್ಯದೊಳಿರಿಸಿದ ಕುಂತಳಕಾಳಿಂದೀನದಿ ಹೊಱಸೂಸುಗುಮೆಂದು ಮೇಲಿಕ್ಕಿದ ರುದ್ರಾಕ್ಷಿಯ ಶಿರೋಮಾಲೆಯೆಂಬ ಸುತ್ತೇರಿಯ್ಯೆಂದೊಸರ್ದ ಕಾಳಿಮಜಲಕಣಂಗಳಂತೆ ನೊಸಲೊಳು ಕುಣಿವ ನೀಳಾಳಕಂಗಳ (ಬಸರ. ೨-೨೦). ೩. ಉನ್ನತಸ್ಥಾನದಲ್ಲಿ ಇರಿಸು : ಎತ್ತಿಹಿಡಿ; ಎತ್ತಿ ಕಟ್ಟು: ಧಿಕ್ಕರಿಸಿ ತೊತ್ತಿನ ಮಗಳ ಮೇಲಿಕ್ಕಿ ನೀವಿಂತೆಮ್ಮನೞಿವಱ ದೆಕ್ಕಸಕ್ಕವನಾಡಿ ಮೊದಲಿಗೆ ಕೊಂಡೆ ಗುದ್ದಲಿಯ (ಬಸಪು. ೫೩-೪೪). ೪. ಮೇಲೆಬೀಳು ; ಮೇಲೆರಗು ; ಮುತ್ತು : ಹಿರಿದು ಆಗ್ರಹದಿಂದೆ ನೀನೆನ್ನ ಮೇಲಿಕ್ಕಿ ಒಲ್ಲೆ ಸಾರೆಂದರೆ ಹೋಹೆ ಕಾಣಾ ಅಯ್ಯ (ಬೂವಸಂ. ೪೬-೫೦ ; ಸಿದ್ಧವ. ಕ.೦೬೪-೫೫೦ ನೋ); ಈತನಳವಿಯ ಕೆಡಿಸಿ ಮೇಲಿಕ್ಕಿದರು ಭೂಪನ ಮೊನೆಯ ನಾಯಕರು (ಕುಮಾದ್ರೋ. ೬-೩೯) ; ಕೊಕ್ಕರಿಸುತುಗುವ ತನಿಗೆಂಡದಿಂಡೆಗಳ ಸಲೆ ಮುಕ್ಕುಳಿಸಿ ಮೊಗೆವ ಪೆರ್ಗಿಚ್ಚುಗಳ ಮಂಕೆ ಮೇಲಿಕ್ಕಿದುವು (ಕೈಪಿಶಾ. ೧೩-೦೨). ೫. ಮುಂದುವರಿದು ಮೇಲೇರಿ ಬರು : ಕುಮಾರರಾಮಗೆ ರತ್ನಿ ಬೇಳಿದಳಾ ರಾಮನವಳ ಮೇಲಿಕ್ಕುವಂತಾಗಬೇಕಿದೆನ್ನಿಷ್ಟವೆಂದಾ ಲಲಿತಾಂಗಿ ಪೇಳಿದಳು (ಕುಂರಾಸಾಂ. ೨೬-೦೫) : ಪುರುಷರ ನುಡಿ ಹೊಱಡದ ಮುನ್ನ ಸ್ತ್ರೀಯರು ಹವಿಸದೆ ಮೇಲಿಕ್ಕುವರು (ಮೋಹತ. ೦೦-೦೫) ; ಮೇಲಿಕ್ಕಿದ ಹೆಣ್ಣು ಹಾಗವಡೆಯ ಳೆಂಬಾಳಪದ ಗಾದೆಯಱಿತು ತೂಳಿಸಿ ಮೋಹದ ಕಾಣಿಸುವುದು ಪ್ರೌಢಲೋಲಾಕ್ಷಿಯರ ಘುತವಲ್ಲ (ಕಂನವಿ. ೯-೦೫೬). ೬. ಅಪವಾದ, ನಿಂದೆ ಇತ್ಯಾದಿಗಳನ್ನು ಹೊರಿಸು ; ದೋಷಾರೋಪಣೆ ಮಾಡು : ಮಿಥ್ಯಾಭಿಶಂಸನ = ಇಲ್ಲದ ಹೊಲ್ಲಹಂ, ಮೇಲಿಕ್ಕಿ ನುಡಿಹ (ಪ್ರಾತರಾ. ೪).

[ ಮೇಲ್$_2$ + ಇಕ್ಕು ]

**ಮೇಲಿಡು** (ಕ್ರಿ). ೧. = ಮೇಲಿಕ್ಕು ೧ : ಚಿಕ್ಕಮಕ್ಕಳು ಪುಸ್ತಕ, ಪದಾರ್ಥಗಳನ್ನು ಹಾಳುಮಾಡದಂತೆ ಮೇಲಿಡಬೇಕು (ಕೂಶ). ೨. = ಮೇಲಿಕ್ಕು ೩ : ಒಂದು ಕಾಲಕ್ಕೆ ಮೇಲಿಟ್ಟು ಪೂಜಿಸಿದ ಜನವೇ ಒಂದು ಕ್ಷಣದಲ್ಲಿ ಕೆಳದೂಡಲು ಹಿಂದೆ ಮುಂದೆ ನೋಡುವುದಿಲ್ಲ (ಕೂಶ). ೩. = ಮೇಲಿಕ್ಕು ೬ : ಮಕ್ಕಳೊಳಗೆ ಪುಂಡ ಮನೆಮನೆಗಳ ಹೊಕ್ಕು ಸಕ್ಕರೆ ನೊರೆಹಾಲು ಸವಿಸವಿದು ಬೆಕ್ಕಿನ ಮೇಲಿಟ್ಟು. ಬೆಣ್ಣೆಯ ತಾ ಮೆದ್ದು ಸಿಕ್ಕದೆ

ಜಿಗಿದೋಡಿ ಪೋಗುವ ಕಳ್ಳನ (ಕುಠಂದ. ೨-೬೬-೪).

[ ಮೇಲು$_2$ (<ಮೇಲ್$_2$) + ಇಡು$_1$ ]

**ಮೇಲು$_1$** 'ಮೇಲ್$_1$' ನೋ.

**ಮೇಲು$_2$** 'ಮೇಲ್$_2$' ನೋ.

**ಮೇಲುಕಟ್ಟು** 'ಮೇಲ್ಗಟ್ಟು$_2$' ನೋ.

**ಮೇಲುಕಾಲುವೆ** 'ಮೇಲುಗಾಲುವೆ' ನೋ.

**ಮೇಲುಕೋಟೆ** 'ಮೇಲುಗೋಟೆ' ನೋ.

**ಮೇಲುಕ್ಕು** (ಕ್ರಿ). ಅಗ್ರಭಾಗಕ್ಕೆ ಸೂಸಿ ಬರು; ಮೇಲ್ಭಾಗಕ್ಕೆ ಹೊಮ್ಮಿಬರು: ಆ ದಿವಿಯು ಮೇಲುಕ್ಕಿದುದು ಶಿವಪಾದಭಕ್ತಮಹತ್ವಮಂ ಸಮ್ಮೋದದಿಂ ಸುರಗಂಗೆಯುಂ ಕೇಳಲ್ಕೆ ಬಂದಂತೆ (ಬಸವ. ೬೨-೬೫); ಎಷ್ಟೊಂದು ಆಳದೊಳಿಲ್ಲಡಗಿದ್ದರು ನ್ಯಾಯವು ಬರುವುದು ಮೇಲೆ ತೈಲದ ಬಾವಿಯ ತಳದಿಂದಲಾದರು ಮೇಲುಕ್ಕುವೆಣ್ಣೆಯವೋಲ್ (ಬಂಡಾಯ. ೨೦೫-೬೯). [ ಮೇಲು$_2$ (<ಮೇಲ್$_2$) + ಉಕ್ಕು$_1$ (<ಉಕ್ಕ್$_1$) ]

**ಮೇಲುಖಡ್ಗ** (ನಾ). ಮೇಲಕ್ಕೆ ಎತ್ತಿದ ಖಡ್ಗ: ಅಹಹ ಕೃತಪ್ರಾಯಸ್ತ್ರಾಹಾರಹವಿದೇನೆನೆನುತ ರಾಯನ ಮಹಿಳೆ ಬಿದ್ದಳು ಮೇಲುಖಡ್ಗಕೆ ತನ್ನ ನಡೆಯೊಡ್ಡಿ (ಕುಮಾ.ಭ. ೦೬-೩). [ಮೇಲು$_2$ (<ಮೇಲ್$_2$)+ಖಡ್ಗ]

**ಮೇಲುಖರ್ಚು** (ನಾ). ಸಂಸಾರ ಮುಂತಾದುವನ್ನು ಸಾಗಿಸಲು ಬೇಕಾಗುವ ಮುಖ್ಯವಾದ ವೆಚ್ಚವನ್ನು ಬಿಟ್ಟು ಆಗಿಂದಾಗ ಬರಬಹುದಾದ ಹೆಚ್ಚಿನ ವೆಚ್ಚ: ಹೇಗಿದ್ದರೂ ವರ್ಷಕ್ಕೆ ನಾಲ್ಕು ಕಾಳು ಭತ್ತ ಬರುತ್ತದೆ. ಬರುವ ಮನೆಬಾಡಿಗೆ ಮೇಲುಖರ್ಚಿಗೆ (ಬಾಡಿಬ. ೧೦). 'ಚಿಲ್ಲರೆಖರ್ಚು' ಪರ್ಯಾ.

[ ಮೇಲು$_1$ (<ಮೇಲ್$_1$)+ಖರ್ಚು (<ಕರ್ಚು$_4$) ]

**ಮೇಲುಗಟ್ಟು$_1$** 'ಮೇಲ್ಗಟ್ಟು' ನೋ.

**ಮೇಲುಗಟ್ಟು$_2$** 'ಮೇಲ್ಗಟ್ಟು$_2$' ನೋ.

**ಮೇಲುಗಡೆ** 'ಮೇಲ್ಗಡೆ' ನೋ.

**ಮೇಲುಗಣ್ಣು** (ನಾ). ೧. ಮೇಲುನೋಟ; ಸ್ಥೂಲದೃಷ್ಟಿ: ಮೇಲುಗಣ್ಣಿಗೆ ಹಳೆಯ ಉತ್ಸಾಹ, ರತಿ, ಶೋಕ, ಕ್ರೋಧ, ವಿಸ್ಮಯಗಳೇ ಹೊಸಸಾಹಿತ್ಯದಲ್ಲಿ ಕಂಡರೂ ಹೊಸಬಗೆಯ ವ್ಯಷ್ಟಿಭಾವಗಳು ಸಮಷ್ಟಿಭಾವಗಳೂ ರಸಸಿದ್ಧಿಗಾಗಿ ಹೆಣಗಾಡುತ್ತಲಿವೆ (ಸಾಹಿ. ೯೬). ೨. ಆಯಾಸ ಮುಂತಾದುವುಗಳಿಂದ ಸ್ಥಿರತೆ ತಪ್ಪಿದ ಕಣ್ಣು, – ದೃಷ್ಟಿ: 'ತೇಲುಗಣ್ಣು' ಪರ್ಯಾ. [ ಮೇಲು$_1$ (<ಮೇಲ್$_1$) + ಕಣ್ಣು (<ಕಣ್) ]

**ಮೇಲುಗವಚ** (ನಾ). ಯೋಧನು ಅಂಗರಕ್ಷಣೆಗಾಗಿ ಧರಿಸುವ ಹೊರಕವಚ, —ಲೋಹದ ರಕ್ಷಾಕವಚ: ಮೇಲುಗವಚವ ನಂಬಿ ನಮ್ಮೊಳು ಕಾಳೆಗವ ನೀ ಬಯಸಿ ಬಂದೆ (ಕುಮಾ.ದ್ರೋ. ೧೦-೩೦).

[ ಮೇಲು$_1$ (< ಮೇಲ್$_1$) + ಕವಚ ]

**ಮೇಲುಗವಿ** (ಕ್ರಿ). ಮೇಲೆಬಿದ್ದು ಆಕ್ರಮಣಮಾಡು; ಮುತ್ತು: ಮೇಲುಗವಿದನು ಜಲಧಿಯಾಗಿ ನೃಪಾಲನಿಕರದೊಳುರುಳಿದನು ಗಿರಿಜಾಳವಾಗಿ ಘಟೋತ್ಕಚನು (ಕುಮಾ.ದ್ರೋ. ೦೬-೯).

[ ಮೇಲು$_2$ (<ಮೇಲ್$_2$) + ಕವಿ$_1$ ]

**ಮೇಲುಗಾಣು** 'ಮೇಲ್ಗಾಣ್' ನೋ.

**ಮೇಲುಗಾಲುವೆ**, ಮೇಲುಕಾಲುವೆ (ನಾ). (ಹಿಂದೆ ಹಂಪೆ ಮುಂತಾದ ನಗರಗಳಲ್ಲಿ) ನೀರನ್ನು ಸರಬರಾಜು ಮಾಡುವುದಕ್ಕಾಗಿ (ಕಲ್ಲಿನಿಂದ) ಎತ್ತರದಲ್ಲಿ ರಚಿಸುತ್ತಿದ್ದ ಕಾಲುವೆ: ಮೇಲುಗಾಲುವೆಗಳನ್ನು ಕಲ್ಲುಗಾರರು ಅರ್ಧವರ್ತುಳಾಕಾರದ ಕಮಾನುಗಳ ಮೇಲೆ ಸೇತುವೆಗಳನ್ನು ಕಟ್ಟಿದ ಹಾಗೆ ಕಟ್ಟುತ್ತಿದ್ದರು (ಶಿಲ್ಪಶಾ. ೬೬); ನಗರಗಳಿಗೆ ಕುಡಿಯುವ ನೀರನ್ನು ಮೇಲುಗಾಲುವೆಗಳಲ್ಲಿ (Acqueducts) ಎಷ್ಟು ದೂರ ಬೇಕಾದರೂ ಸಾಗಿಸುತ್ತಿದ್ದರು (ಶಿಲ್ಪಶಾ. ೯೦). **ಮೇಲುಕಾಲುವೆ**: "ನೀರನ್ನು ಸಾಗಿಸುವುದಕ್ಕಾಗಿ ಕಲ್ಲಿನಿಂದ ಎತ್ತರದಲ್ಲಿ ಮಾಡಿದ ಕಾಲುವೆ: ಮೇಲುಕಾಲುವೆ" (Acqueduct. ಇಂಗ್ಲಿ).

[ ಮೇಲು$_2$ (<ಮೇಲ್$_2$) + ಕಾಲುವೆ (<ಕಾಲ್ವಾಯ್) ]

**ಮೇಲುಗಾವಲು** 'ಮೇಲ್ಗಾವಲು' ನೋ.

**ಮೇಲುಗಾಹು** 'ಮೇಲ್ಗಾಪು' ನೋ.

**ಮೇಲುಗಾಳಗ** 'ಮೇಲುಗಾಳೆಗ' ನೋ.

**ಮೇಲುಗಾಳೆಗ**, ಮೇಲುಗಾಳಗೆ (ನಾ). ಸ್ಪರ್ಧಾತ್ಮಕವಾದ ಯುದ್ಧ,– ಕದನ: ವಂಜಿನ ಮೇಲುಗಾಳೆಗವೆಂಟೆ ಬಲುಬೇಸಗೆಯ ಬಿಸಿಲೊಳಗೆ (ಕುಮಾ.ದ್ರೋ. ೪-೪೦); ಸುರರೊಡನೆ ಮೇಲುಗಾಳೆಗವಾದುದದನೇನೆಂಬೆನು (ಹರಿಗ. ೭-೬-೩೨). **ಮೇಲುಗಾಳಗ**: ಅವರಿರ್ಬರ ಮೇಲುಗಾಳಗವನೇನೆಂಬೆ (ಕುಠಾಸಾಂ. ೦೦-೫೮). [ ಮೇಲು$_1$ (<ಮೇಲ್$_1$) + ಕಾಳೆಗ ]

**ಮೇಲುಗುಡಿ** (ನಾ). ಎತ್ತರವಾದ ಗುಡಾರ: ಮೇಲುಗುಡಿಗಳ ಭದ್ರದುಪ್ಪರಶಾಲೆಗಳ ಮಂಡವಿಗೆಗಳ . . . ಹೊಗೆಲಸದಲಿ ರಾಜಾಲಯವನನುಕರಿಸಿದರು ಕುಂತೀಕುಮಾರರಿಗೆ (ಕುಮಾ.ಅ. ೦೧-೪೪).

[ ಮೇಲು$_1$ (<ಮೇಲ್$_1$) + ಗುಡಿ$_3$ ]

**ಮೇಲುಗುದುರೆ** (ನಾ). ಶ್ರೇಷ್ಠವಾದ ಕುದುರೆ: ಮೇಲುಗುದುರೆಗಳೊವಗಿದವು ಭೂಪಾಲಕರು ತಲೆಗೆದಜು ಹುಯ್ಯಲನಾಲಿಸುತ ಹೊಜಿವಂಟು ತಳಕೆಳಕಾಯ್ತು ನೃಪಕಟಕ (ಕುಮಾ.ದ್ರೋ. ೬-೪೪); ಮೇಲುಗುದುರೆಯ ಸಾವಿರವ ಲೀಲೆಯಿಂ ಒಡಿದಾ ಸುರುತಾಳಬಲವನು ಕಾಲನೆಡೆಗೆ ಕಳುಹಿದರು (ಕುಠಾಸಾಂ. ೦೯-೦೦೨). [ ಮೇಲು$_1$ (<ಮೇಲ್$_1$) + ಕುದುರೆ ]

**ಮೇಲುಗೆಯ್** 'ಮೇಲ್ಗೆಯ್' ನೋ.

**ಮೇಲುಗೆಲಸ** (ನಾ). ೧. ಮೇಲುಸ್ತುವಾರಿಯ ಕೆಲಸ; ಮೇಲ್ವಿಚಾರಣೆಯ ಕಾರ್ಯ: ಗಾಣದ ತೆಜಿಯನ್ನು ಶ್ರೀರಾಮನಾಥದೇವರ ಕಲ್ಲ ಕೆಲಸಕ್ಕಂ ಸ್ವತೆಯ ಮೇಲುಗೆಲಸಕ್ಕಂ ಬಿಟ್ಟರು (ಎಕ. VIII, ಸೊರಬ. ೩೦೫-೦೪; 1197). ೨. (ಮುಖ್ಯವಲ್ಲದ) ಹೊರಗಿನ ಕೆಲಸ; ಸುತ್ತುಗೆಲಸ: ಅವರ ಮನೆಯಲ್ಲಿ ಮೇಲುಗೆಲಸಕ್ಕೆ ಒಬ್ಬ ಚಿಕ್ಕ ಹುಡುಗನನ್ನು ನೇಮಿಸಿಕೊಂಡಿದ್ದಾರೆ (ರೂಢಿ).

[ ಮೇಲು$_1$ ( < ಮೇಲ್$_1$ ) + ಕೆಲಸ ]

**ಮೇಲುಗೈ$_1$** (ಕ್ರಿ). ಶ್ರೇಷ್ಠನೆನಿಸುವಂತೆ ಮಾಡು; ಮೇಲಾಗಿಸು: ಶಬರನಾಗಿ ವರಹನಟ್ಟುವ ನೆವದಿ ಸೆಣಸಿ ಸೋತವನಂತೆ ವರಕಿರೀಟಿಯ ಮೇಲುಗೈದು ಧರೆಯೊಳ್ ಬಿದ್ದು (ಪಪಪೂ. ೨೫-೨).

[ ಮೇಲು$_1$ (<ಮೇಲ್$_1$) + ಗೈ (<ಕಯ್$_1$) ]

**ಮೇಲುಗೈ$_2$** 'ಮೇಲ್ಗೆಯ್' ನೋ.

**ಮೇಲುಗೊಂಬು** (ನಾ). ಉತ್ತಮವಾದ, ಕಹಳೆಯಂತಹ ಒಂದು ಊದುವ ವಾದ್ಯ,–ಕೊಂಬು: ಸಿಡಿವಲೆಯ ಮಿಡಿವಲೆಯ ಕಾಲುಗಣ್ಣಿಯ ಹೆಬ್ಬಲೆಯ . . . ಮೇಲುಗೊಂ [ಪಾಠಾಂ. ಕೊಂ]ಬಿನ ಬೇಟೆಗಾಜರು ಬಳಸಿದರು ಶಿವನ (ಕುಮಾ.ಅ. ೫-೬೬).

[ಮೇಲು$_1$ (<ಮೇಲ್$_1$) + ಕೊಂಬು$_1$]

**ಮೇಲುಗೋಟೆ**, ಮೇಲುಕೋಟೆ (ನಾ). ೧. (ಬೆಟ್ಟದ) ಮೇಲ್ಭಾಗದಲ್ಲಿ ಕಟ್ಟಿರುವ ಕೋಟೆ, – ದುರ್ಗ. ೨. ಕರ್ನಾಟಕದ ಶ್ರೀರಂಗಪಟ್ಟಣದ ಸಮೀಪದಲ್ಲಿರುವ, ಚೆಲುವರಾಯಸ್ವಾಮಿಯ ದೇವಾಲಯವಿರುವ ಶ್ರೀವೈಷ್ಣವರ ಒಂದು ಯಾತ್ರಾಸ್ಥಳ: ಮೇಲುಗೋಟೇ ಜಾತ್ರೆಯಲ್ಲಿ ನನ್ನ ಬೋಳದಾಸಯ್ಯನ ಕಂಡೆಯಾ? (ಗಾದೆ). **ಮೇಲುಕೋಟೆ**: ೧. ಕೀಳುಕೋಟೆಯೊಳೊಬ್ಬ ಅಗಸಾಲ ಸತ್ತರೆ ಮೇಲುಕೋಟೆಯೊಳೊಬ್ಬ ಅಗಸತಿ ಅಳುವಳು (ಕುಠಂದ. ೨-೦೨-೩). ೨. ಶ್ರೀಪತಿಯೆ ನೀ ಸಲಹೋ

ಕರುಣಾಧಿ ಈ ಪರಿಯಲಿ ಮೇಲುಕೋಟೆ ಇಂದಿರೆವರ ಆಪದ್ಬಂಧುವೆ ಭಕ್ತರಘುಹರನೆ (ಕುರಂದ. ೨-೯-೩).

**ಮೇಲುಗೋಟೆನಾಮ**=ಮೇಲುಕೋಟೆಯ ಸುತ್ತಮುತ್ತ ಸಿಗುವ, ಶ್ರೀವೈಷ್ಣವರು ಹಣೆಯಲ್ಲಿ ಧರಿಸುವ ಬಿಳಿಯ ಮಣ್ಣಿನ ನಾಮ. **ಮೇಲುಗೋಟೆನಾಮ ಹಾಕು** = (ಆಲಂ) ಮೋಸಮಾಡು ; ವಂಚನೆ ಮಾಡು; ಮಂಗನಾಮಹಾಕು : ಅವರು ಇಲ್ಲಿಯವರೆಗೂ ನಂಬಿಸಿ ಮೇಲು ಗೋಟೆನಾಮ ಹಾಕುತ್ತಾರೆಂದುಕೊಂಡಿರಲಿಲ್ಲ ನಾನು (ರೂಢಿ).

[ಮೇಲು$_2$ (<ಮೇಲ್$_2$) + ಕೋಟೆ$_1$ (<ಕೋಂಟೆ)]

**ಮೇಲುಗೋಪ** (ನಾ). ಹೆಚ್ಚಾದ ಕೋಪ ; ಅತಿಶಯವಾದ ಕ್ರೋಧ: ಆಲಿ ಕಿಡಿಗಿಡೆ ಕುಣಿವ ಮೀಸೆ ಕರಾಳವದನದ ಬಿಗಿದ ಹುಬ್ಬಿನ ಮೇಲು ಗೋಪದ ಭೀಮ ಬಂದನು ಬಿಟ್ಟ ಸೂಠಿಯಲಿ (ಕುವ್ಯಾಗ. ೨-೩೭).

[ಮೇಲು$_1$ (< ಮೇಲ್$_1$) + ಕೋಪ]

**ಮೇಲುಚೀಟಿ** ' ಮೇಲ್ಚೀಟು ' ನೋ.

**ಮೇಲುಜಗ** (ನಾ). ಮೇಲಿನ ಲೋಕ ; ದೇವಲೋಕ : ಉದ್ದಂಡ ಕೋದಂಡವನು ಜೇವೊಡೆಯೆ ಮೇಲುಜಗವಲ್ಲಾಡಿದವು ಕೊರಳೊಳಿ ಕೆದಱಿತು ಉಸಿದನಹಿ ಪಾತಾಳಗೂಳಿಯ ತೆಗೆಯಲಳ್ಳಿರಿಯಿತ್ತು ಬಿಲುರಭಸ (ಕುವ್ಯಾದ್ರೋ. ೪-೩೭). [ಮೇಲು$_1$ (< ಮೇಲ್$_1$) + ಜಗ]

**ಮೇಲುಜಾತಿ** (ನಾ). ಶ್ರೇಷ್ಠವಾದ ಜಾತಿ; ಉತ್ತಮವಾದ ಕುಲ : ಇಂದಿನ ಸಮಾಜದಲ್ಲಿ ಮೇಲುಜಾತಿ. ಕೀಳುಜಾತಿ ಎಂದು ವರ್ಣಭೇದ ಮಾಡುವುದು ಸರಿಯಲ್ಲ (ರೂಢಿ). 'ಕೀಳ್ಜಾತಿ' ಪರಾ.

[ಮೇಲು$_1$ (<ಮೇಲ್$_1$) + ಜಾತಿ]

**ಮೇಲುಜೂಜು** (ನಾ). ಕುದುರೆ, ಕೋಳಿ ಮುಂತಾದುವುಗಳ ಜೂಜು ಗಳಲ್ಲಿ ಪ್ರೇಕ್ಷಕರು ತಮಗೆ ತೋರಿದ ಯಾವುದಾದರೂ ಒಂದು ಪಕ್ಷದ ಮೇಲೆ ಇಂತಹುದೇ ಗೆಲ್ಲುತ್ತದೆಂದು ತಮ್ಮತಮ್ಮೊಳಗೆ ಕಟ್ಟಿ ಕೊಳ್ಳುವ ಪಂದ್ಯ : ಕುದುರೆಯ ಜೂಜಿನಲ್ಲಿ ನೆರೆದ ನೋಟಕರು 'ಆ ಕುದುರೆ ಗೆಲ್ಲುತ್ತದೆ' , 'ಈ ಕುದುರೆ ಗೆಲ್ಲುತ್ತದೆ'ಎಂದು ತಮ್ಮತಮ್ಮಲ್ಲಿಯೆ ಜೂಜುಗಟ್ಟುವಂತೆ 'ಮೇಲುಜೂಜು' ಕಟ್ಟಲು ಬಂದಿದ್ದರು (ಕಾನೂರು. ೫೦೮).

[ಮೇಲು$_2$ (<ಮೇಲ್$_2$) + ಜೂಜು$_1$ (<ಜೂದು)]

**ಮೇಲುಡಿ** (ನಾ). (?) : ನುಡಿಯನಡಗಿಸು ಕೋಕಿಲನ ಗಾರುಡಿಸು ವಿಷಯ ವಿಷಾಹಿಯನು ಮೇಲುಡಿಯ ಹಾಯ ಹತ್ತನೆಯವಸ್ಥಾಂತರದ ದಳವುಳಕೆ (ತೊರರಾ. ೩-೪-೧೮); ಬೀಳುತೊದಱಿದ ಬೆದಱುದನಿ ರಘುಪತಿಯ ದನಿಯಂತೆ ಮೇಲುಡಿಯ ಬಿಮ್ಮದು ವಿದೇಹನೃಪಾಲಕನ ಕನ್ನಿಕೆಯ ಕರ್ಣದೊಳೋಲ ಗಿಸಿದುದು ಮನವನಪಗತರಾಘವಾಳಾಪ (ತೊರರಾ. ೩-೯-೦) ; ಆಲಿಸಿದನಪ್ಪ ರವನೊಯ್ಯನೆ ತೋಳುಗಳ ಪಸರಿಸುತ ಮುಂದಕೆ ಮೇಲುಡಿಯ ಬಿದ್ದಿಭ ಲುಲಾಯ ಕುರಂಗ ಕರಡಿಗಳ (ತೊರರಾ. ೩-೦೨-೧೭). [ ? ]

**ಮೇಲುಡುಪು** (ನಾ). ಶರೀರದ ಮೇಲ್ಭಾಗದಲ್ಲಿ ಧರಿಸುವ ವಸ್ತ್ರ : ಗುಪ್ತರ ಕಾಲ ವಿಗ್ರಹಶಿಲ್ಪಕ್ಕೆ ಅತ್ಯಂತ ಹೆಸರುವಾಸಿಯಾದುದು. . .ಕಂಚಿನ ಬುದ್ಧನ ವಿಗ್ರಹಗಳು ಸುಂದರವಾಗಿ ಮಾಡಲ್ಪಟ್ಟಿವೆ. ಅವುಗಳ ಮೇಲುಡುಪು ಅಂಗಸೌಷ್ಠವವನ್ನು ಮರೆ ಮಾಡಿಲ್ಲ (ಭಾರರ. ೪೯೭) ; ಮೇಲು ಡುಪನ್ನು ಸರಿಮಾಡಿಕೊಂಡು ಕುಳಿತಳು (ದೌಲತ್. ೦೪೭).

[ಮೇಲು$_2$ (<ಮೇಲ್$_2$) + ಉಡುಪು]

**ಮೇಲುಡೆ** (ನಾ). = ಮೇಲುಡುಪು : ಮೃಗಮದದಂಗರಾಗಮುಸಿತೋತ್ಪಲ ಮಾಲೆಯ ಚೊಲ್ಲೆಯಂ ಮನಂಬುಗುವ ತಮಾಲಪಲ್ಲವದ ಮೇಲುಡೆ . . . ಸೊಗಯಿಸೆ ದೇವಿಯುರ್ಬಿಳಿಸಿ ನಿಂದೆಸೆದಿರ್ದರಗೇಂದ್ರಪುತ್ರಿಯಾ (ಶಬಶಂ. ೩-೦೦). [ಮೇಲ್$_2$+ ಉಡೆ$_2$]

**ಮೇಲುತನ** (ನಾ). ಹೆಚ್ಚುಗಾರಿಕೆ ; ಅತಿಶಯತೆ: ಹಿರಿಮೆ : ' ಸೂಜಿಯ ಕಣ್ಣೊಳಗಿಂದ ಒಂಟೆ ಹಾಯ್ದುಹೋಗಬಹುದು ; ಆದರೆ ಸ್ವರ್ಗದ ಹೆಬ್ಬಾಗಿಲೊಳಗಿಂದ ಸಿರಿವಂತನು ಹಾಯ್ದುಹೋಗಲಾರನು' ಎಂದುಸುರಿದ ಮಾತಿನಲ್ಲಿ ಮೂಡಿದ್ದು ಬಡತನದ ಮೇಲುತನವಲ್ಲ : ಸಿರಿವಂತಿಕೆಯ ಕೀಳುತನ (ಶಾಹಿಂ. 111). 'ಕೀಳ್ತನ' ಪರಾ.

[ಮೇಲು$_1$ (< ಮೇಲ್$_1$) + − ತನ]

**ಮೇಲುತರ** ' ಮೇಲ್ತರ ' ನೋ.

**ಮೇಲುತೆರಿಗೆ** ' ಮೇಲ್ತೆರಿಗೆ ' ನೋ.

**ಮೇಲುತ್ತರ** (ನಾ). ಒಳ್ಳೆಯ ಜವಾಬು ; ಶ್ರೇಷ್ಠವಾದ ಪ್ರತಿಮಾತು : ಎನ್ನ ಕಾವ್ಯಾರ್ಥಮಂ ಕಿವಿಯ ಸೆಱಗುಗಳಲಿ ತಳೆದ ಕವಿಗಳ ಗಮಕಿಗಳ ವಾದಿಗಳ ವಾಗ್ಮಿಗಳ ರಸಾವೇಶಿಗಳ ತಲೆದೂಗಿಸುವೆಂದಡುಳಿದ ದುರ್ಜನರು ಮೆಚ್ಚದೊಡೆಂತೆನಲ್ಕದಕೆ ಕೇಳು ಮೇಲುತ್ತರವನು (ಹತಕಾ. ೦-೨೩). [ಮೇಲು$_1$ (<ಮೇಲ್$_1$) + ಉತ್ತರ]

**ಮೇಲುದ** ' ಮೇಲುದು ' ನೋ.

**ಮೇಲುದಾಯ** ' ಮೇಲ್ದಾಯ ' ನೋ.

**ಮೇಲುದು, ಮೇಲುದ, ಮೇಲುದೆ, ಮೈದಿಲು** (ನಾ). ೧. ಮೈಮೇಲೆ ಹೊದ್ದುಕೊಳ್ಳುವ ವಸ್ತ್ರ; ಉತ್ತರೀಯ : ಶಲ್ಯ : "ಪ್ರಾವರಣಂ, ಸಂವ್ಯಾನಂ. ಪ್ರಚ್ಛಾದನಂ. ಉತ್ತರೀಯಂ —ಈ ೪ ಮೇಲುದು" (ಹಲಾಯು. ೯೦-೩೯೨); ಒಳಗಱಿಯದೆ ಕೌರವಬಳಜಳನಿಧಿ ಬೊಬ್ಬಿಱಿದು ಮೇಲುದಂ ಬೀಸಿದೊಡೆ (ಶಂಕಶಾ. ೧೨-೨೦೨); ಗುರುನಂದನಂ ವಿಪ್ರಳಾಪಂಗೆಯ್ದು ತನ್ನ ಮೇಲುದಱ ಸೆಱಂಗಿಂದಾತನ ತಲೆಯ ಮೇಲೆ ಕೆದಱಿರ್ದ ಭೀಮಸೇನನ ಚರಣರಜಮಂ ತೊಡೆದು ಕಳೆದು (ಗದಾಯು. ೯-೨೨ ವ) ; ಜರತಾರಿಯ ಮೇಲುದುಗಳನ್ನು ಬಹುಮಾನವಾಗಿ ಕೊಟ್ಟರು (ದೌಲತ್. ೨೨೦). ೨. ಹೆಂಗಸರು ಹೊದೆಯುವ ವಸ್ತ್ರ— ಸೆರಗು : ನೊಸಲ ತೊಂಗಲ್ಗುರುಳ್ ಮೇಲುದನೊಗೆವ ಕುಚಂ. . . ಉರಮಂ ಸಂಚಳತ್ಸಾರ ಹಾರಂ ಪಸರಂಬೆತ್ತೆತ್ತಮೋರಂತಲೆಯೆ ಭರತನಂ ನೋಡಲೈತಂದಳೊರ್ವಳ್ (ಆದಿಪು. ೦೦-೦೭); ಎಲರಲೆಪದಿಂದೆ ಮೇಲುದು ತೊಲಗಲ್ ಸಂಭ್ರಮಿಸಿ ಭುಜಲತಾಯುಗದಿಂ ಪೆರ್ಮೊಲೆಯಂ ಮುಚ್ಚುತಂ (ಶಬದಂಶಾ. ೦೩೦) ; ಮೊಲೆಯ ಮೇಲುದು ಜಾಱೆ (ಕುವ್ಯಾಶಾ.೦-೨೫). **ಮೇಲುದ** : ೨. "ಕುಚದ ಸೆರಗು ಮೇಲುದಮುಕ್ಕು" (ಕಕಿರ.೯೩); ರಾಜವದನೆಯರು ಬೆಱಗಾಗಿ ಮೇಲುದ ಜಾಱೆ ಮುಡಿ ಬಿಚ್ಚಿದಱವಿಲ್ಲದೆ . . . ನಸೆಗಣೆಗೆ ಗುಱಿಯಾಗಿರೆ (ಶ್ರೀಕೃತಾ.೦೯-೩೦); ಸಾಧಾರಣ ಜರಿಯಂಚಿನ ರೇಶಿಮೆಯನ್ನು ಉಟ್ಟು ಮೇಲು ದವನ್ನು ತಲೆಯ ಸುತ್ತ ಬಳಸಿ .. . . ಓಡಿಯಂತೆ ನಡೆದುಬಂದಳು (ಸವಿತ. ೦೯). **ಮೇಲುದೆ** : ೨. ನಡುವಿಗೆ ಬಿಳಿಯ ಸೀರೆ ಸುತ್ತಿ, ಕೊರಳ ಸರಕ್ಕೆ ಮೇಲುದೆ ಸಿಕ್ಕಿಸಿ . . . ಆಚೀಚೆ ಸರಿದಳೆಂದರೆ, ಕೇರಿಯ ಹತ್ತೆಂಟು ಗಂಡು ಗಳಲ್ಲಿ ಆಸೆ ಕೆರಳುತ್ತದೆ (ಕುಂಕೆಶ. ೨೭). **ಮೈದಿಲು** : ೨. ಸುರತಾಂತದ ಶ್ರಮವಳಿದೊಡೆ ಮೈದಿಲ ಸೆಱಗ ಜಾಱಿಸಲಂಗನೆಯ ಮಿಱುಗುವ ಬಡಬಾಸೆ ಯೊಪ್ಪಿತು (ಕಂಪಶಿ. ೬-೦೨೯) ; ಪೀತಾಂಬರ ಮೈದಿಲ ಸೆಱಗಿನೊಳೊರ್ವ ಜಾತಿನಾಯಕಿ ಹರುಷದಲಿ ಪ್ರೀತಿಯಿಂ ಸಿರಿಮುಡಿ ಭದ್ರಕಾಯವ ಬಲು ರೀತಿಯೊಳೊಲಿದೊರಸಿದಳು (ಕಂಪಶಿ. ೨೨-೩೮).

[ದೇ. ॥ ತಮಿ. ಮೇಲಾಟ್ಟೈ ; ತುಳು. ಮೇದಲ್]

**ಮೇಲುದುಗುಡ** (ನಾ). ಅಧಿಕವಾದ ದುಃಖ ; ಅತಿಯಾದ ಶೋಕ : ಮೇಲುದುಗುಡದ ಮೊಗದಲವನೀಪಾಲ ಕರ್ಣ ಕೃಪಾದಿ ಭಟರಿಗೆ ಹೇಳಿದನು ಮಗನಳಿದನಸ್ವತ್ಥಾಗ ತನಗೆಂದು (ಕುವ್ಯಾದ್ರೋ. ೦೮-೬೭).

[ಮೇಲು$_1$ (<ಮೇಲ್$_1$)+ದುಗುಡ]

**ಮೇಲುದುಟಿ** ' ಮೇಲ್ದುಟಿ ' ನೋ.

**ಮೇಲುದುಪ್ಪಟ** ' ಮೇಲುದುಪ್ಪಟ ' ನೋ.

**ಮೇಲುದುವ್ವಟ**, ಮೇಲುದುಪ್ಪಟ (ನಾ). (ಪ್ರ್ಯಾ)ಮೇಲೆ ಹೊದೆದು ಕೊಳ್ಳುವ ವಸ್ತ್ರ ; ಉತ್ತರೀಯ : ಮೇಲುದುವ್ವಟ ಪೈರಣೆ ಮಂಡಲಿಕರ ಜಾಲವೈತಂದುದುಬ್ಬಿನಲಿ (ಶಂಪವಿ. ೨೩-೮೩). ಮೇಲುದುಪ್ಪಟ : ಮೈಯಲ್ಲಿ 'ಪೈರಣೆ'ಗಳನ್ನು ತೊಡುತ್ತಿದ್ದರು. ಭುಜದ ಮೇಲೆ 'ಮೇಲು ದುಪ್ಪಟ'ವಿರುತ್ತಿತ್ತು (ಕರ್ನಾಕ. ೧೭೦).
[ಮೇಲು₂ (<ಮೇಲ್₂) + ದುವ್ವಟ (<ದುಪ್ಪಟ)]

**ಮೇಲುದೆ** ' ಮೇಲುದು ' ನೋ.

**ಮೇಲುದೋಱು** (ಕ್ರಿ). (ಒಬ್ಬರಿಗಿಂತ ಇನ್ನೊಬ್ಬರು) ಶ್ರೇಷ್ಠವೆಂದು ಕಾಣಿಸು ; ಉತ್ತಮವೆಂದು ತೋರಿಸು : ಇನಿಯನ ಪೆಱಗಣ ಕೇರಿ ನೊಳನಿಬರ ರೂಪುಗಳನೊರ್ವ ಕಾಮಿನಿ ಕಂಡೊಯ್ಯನೆ ನಕ್ಕು ನಲ್ಲನೆನಗೀ ಯನಿಬರುಮಂ ಮೇಲುದೋಱಿ ಕಾಡಿಪನಱಿದೆಂ (ಧರ್ಮಾಮೃ. ೭-೨೦೩).
[ಮೇಲು₁ (<ಮೇಲ್₁) + ತೋಱು]

**ಮೇಲುನಾಡು** ' ಮೇಲ್ನಾಡು ' ನೋ.

**ಮೇಲುನೆಲ** ' ಮೇಲ್ನೆಲ ' ನೋ.

**ಮೇಲುನೋಟ** ' ಮೇಲ್ನೋಟ ' ನೋ.

**ಮೇಲುಪಂಕ್ತಿ** ' ಮೇಲ್ಪಂಕ್ತಿ ' ನೋ.

**ಮೇಲುಪಚ್ಚಳ** (ನಾ). (ಪ್ರ್ಯಾ)ಮೇಲೆ ಹೊದೆಯುವ ವಸ್ತ್ರ : ಬಾಲ ಸೂರ್ಯನ ಪ್ರಭೆಯನು ಸೋಲಿಸುವ ರತ್ನಜಾಲದುಭಯುತರಕಸದ ಮೇಲು ಪಚ್ಚಳದರಳೆಲೆಯ ತುರಂಗವ ಸಾಲುಗೊಂಡೈತಂದುವಾಗ (ಶಂಪವಿ. ೨೩-೮೨). [ಮೇಲು₂ (<ಮೇಲ್₂) + ಪಚ್ಚಳ₁ (<ಪಚ್ಚಡ)]

**ಮೇಲುಪಾರಪತ್ಯ** (ನಾ). ಮೇಲುಸ್ತುವಾರಿ ; ಮೇಲ್ವಿಚಾರಣೆ : ಯಾ ಸತ್ರಕ್ಕೆ ನಿಂಮಡಿಗಳು ನಡಸುವ ಕಟ್ಟಳೆ ಉಂಬ ಮಂದಿಯ ಬ್ರಾಹ್ಮರ ಜನ ೮ ಅಡಿಗೆಯ ಮಾಡುವ ಬ್ರಾಹ್ಮರ ಜನ ೨ ಉಡಿಗೆಯ ಕೊಡುವ ಬ್ರಾಹ್ಮರ ಜನ ೧ ಮೇಲುಪಾರಪತ್ಯವ ಮಾಡುವ ಯತಿಗಳ ಜನ ೧ (ಎಕ. VI, ಕೊಪ್ಪ. ೩೨-೦೯ ; 1448).
[ಮೇಲು₁ (<ಮೇಲ್₁) + ಪಾರಪತ್ಯ (<ಪಾರುಪತ್ಯ)]

**ಮೇಲುಪೈರು** (ನಾ). ಬೇರುಬಿಡುವ ಭಾಗವನ್ನು ಬಿಟ್ಟು ಭೂಮಿಯ ಮೇಲ್ಭಾಗದಲ್ಲಿ ಫಲವನ್ನು ನೀಡುವ ಬೆಳೆ : ರೈತರು ನೆಲಗಡಲೆ, ಗೆಣಸು, ಈರುಳ್ಳಿ, ಬೆಳ್ಳುಳ್ಳಿ ಮುಂತಾದ ಕೀಳುಪೈರನ್ನು ಹಾಕಿ ಭರತನ ಬಳಿಗೆ ಬಂದು 'ಸ್ವಾಮಿ ಈ ಸಲ ಮೇಲುಪೈರು ಫಲವನ್ನು ಕೊಡಲಿಲ್ಲ . . . ಈ ಸಾಲು ರಾಜಾದಾಯವನ್ನು ತೆಗೆದುಕೊಳ್ಳಕೂಡದು ; ನಾವು ಬಡವರು' ಎಂದರು (ಜಾಬ್ರ.ಹ. ೧೬೨). 'ಕೀಳುಪೈರು' ಪರಾ.
[ಮೇಲು₂ (<ಮೇಲ್₂) + ಪೈರು (<ಪಯಿರ್)]

**ಮೇಲುಪೋಗು** ' ಮೇಲ್ಪೋಗು' ನೋ.

**ಮೇಲುಪ್ಪರ** (ಗು). ೧. ಅತಿ ಎತ್ತರವಾದ : ಚಪ್ಪರಮಂಚ ಗುಜ್ಜರಿ ಗಾಲಮಂಚ ಮೇಲುಪ್ಪರಮಂಚ ಹೂಮಂಚ . . . ಒಪ್ಪವಾಂತೆಸೆದುವಲ್ಲಲ್ಲಿ (ಭರತ. ೦೩-೨೭). ೨. ಅತ್ಯಂತ ಶ್ರೇಷ್ಠನಾದ,–ಉತ್ತಮನಾದ : ಮೇಲುಪ್ಪರ ಮಹಾರಾಯ ರಾಯಪರಮೇಶ ಜಯ ಜೀಯಯೆಂದುಲಿಯೆ ಕಂಚುಕಿಗಳಲ್ಲಿ (ರಾಜಶಂ. ೭-೩). [ಮೇಲು₁ (<ಮೇಲ್₁) + ಉಪ್ಪರ₂]

**ಮೇಲುಪ್ಪರಿಗೆ** (ನಾ). ಮೇಲಿನ ಅಂತಸ್ತು ; ಮಹಡಿ : ಮೇಲು ಮಾಳಿಗೆ : "ಚಂದ್ರಶಾಲೆ=ಮೇಲುಪ್ಪರಿಗೆ" (ಗಂಗಾಮು. ೦೨೭) ; ನೀನೆನ್ನ ಹೊಱಬಿಸಿವ ಕೇಳಿ ಕರುಣದಿಂದ ಭೋರನೆ ಬಂದರೆ . . . ಕಂಬಳಿಯಲ್ಲಿ ಪ್ರೀತ ವನೊಲ್ಲದೆ ಪ್ರನಮಹೀತವನಕ್ಕಿ ಮೇಲುಪ್ಪರಿಗೆಯ ಪೊರತಯ ತಂದು ಪಾದಾರ್ಚನೆಯ ಮಾಡಿ . . . ಪಾದೋದಕ ಕೊಂಡೆ (ಸಿದ್ಧವ. ೩೬-೨೦೩) ; ಸಾಲ ಮುತ್ತಿನ ಕುಚ್ಚಿನ ಪೊಸರತ್ನದ ಮೇಲುಪ್ಪರಿಗೆಗೆನ್ನನೊಯ್ದು (ಶಂಪವಿ. ೯-೦೪೦). [ಮೇಲು₁ (<ಮೇಲ್₁) + ಉಪ್ಪರಿಗೆ]

**ಮೇಲುಬಟ್ಟೆ** ' ಮೇಲ್ಬಟ್ಟೆ ' ನೋ.

**ಮೇಲುಬೀಯ** (ನಾ). = ಮೇಲುಖರ್ಚು : ಮೇಲುಬೀಯ ತಿಂಗಳಿಂಗೆ ವೀಸವಯ್ದು (ಕೊಲ್ಹಾ.ಶಾ. ೩-೪೦ : 1076).
[ಮೇಲು₁ (<ಮೇಲ್₁) + ಬೀಯ₃ (<ಬಿಯ)]

**ಮೇಲುಬ್ಬಸ** (ನಾ). ಮತ್ತೆ ಮತ್ತೆ ಬರುವ ಉಬ್ಬಸ,–ಏದುಸಿರು : ಸಾಸಿವೆಯುಂ ಪಾಜ್ಜಿಗೆಯುಲ್ಲರೆದು ಕುಡಿಯೆ ಮೇಲುಬ್ಬಸ ನಾಶನ (ಸಕವೈ. ೨೨೯) ; ಭಯದ ಮೇಲುಬ್ಬಸದ ಜೊತೆಗೆ ಅವಳ ಮುಖವಿಡೀ ಬೆವರೊಡೆಯಿತು (ಒಪ್ಪಿ.ಉ. ೩). [ಮೇಲು₂ (<ಮೇಲ್₂) + ಉಬ್ಬಸ]

**ಮೇಲುಭಾಗ** ' ಮೇಲ್ಭಾಗ ' ನೋ.

**ಮೇಲುಮುಕ್ಕಿ** ' ಮೇಲ್ಮುಕ್ಕಿ ' ನೋ.

**ಮೇಲುಮುಚ್ಚು** ' ಮೇಲ್ಮುಚ್ಚು ' ನೋ.

**ಮೇಲುಮುಟ್ಟ** ' ಮೇಲ್ಮುಟ್ಟ ' ನೋ.

**ಮೇಲುಮದ** (ನಾ). ೧. ಅತ್ಯಂತ ಹೆಚ್ಚಾದ ಹೆಮ್ಮೆ : ಅಧಿಕವಾದ ಗರ್ವ : ಕುರುಭೂಪಾಲನಲ್ಲಿಗೆ ಬಂದರುಬ್ಬಿನ ಮೇಲುಮದದ ಜಯ ಪ್ರಚಂಡರು ಕಂಡರವನಿಪನ (ಕುಮ್ಯಾ.ಗ. ೦೦-೦). ೨. ಆನೆಯ ಗಂಡಸ್ಥಳ ದಿಂದ ಉಕ್ಕುತ್ತಿರುವ ದಾನಜಲ,–ಮದೋದಕ : ಕೀಳ್ಮದ ಮೇಲು ಮದಗಳನೊಗೆದ ಪಿಂಗಲನೇತ್ರಯನಪತು ಬಂದುದೊಂದಡೆಗೆ (ಸಾಳ್ವಭಾ. ೦೬-೦೦). [ಮೇಲು₁ (<ಮೇಲ್₁) + ಮದ]

**ಮೇಲುಮಾಡು** (ನಾ). = ಮೇಲುಪ್ಪರಿಗೆ : (ಕ).
[ಮೇಲು₁ (<ಮೇಲ್₁) + ಮಾಡು₂ (<ಮಾಡ₁)]

**ಮೇಲುಮಾಳಿಗೆ** ' ಮೇಲ್ಮಾಳಿಗೆ ' ನೋ.

**ಮೇಲುಮುಚುಳಿ** ' ಮೇಲ್ಮುಚ್ಚಳ ' ನೋ.

**ಮೇಲುಮುಚ್ಚಳ** ' ಮೇಲ್ಮುಚ್ಚಳ ' ನೋ.

**ಮೇಲುಮುತ್ತಿಗೆ** (ನಾ). ಒಂದು ಆಕ್ರಮಣದ ಮೇಲೆ ಮಾಡುವ ಮತ್ತೊಂದು ಆಕ್ರಮಣ : ಮೇಲುಮುತ್ತಿಗೆಯಾಯ್ತು ಯವನರ ಧಾಳಿ ಗಂಧರ್ವಾವಳಿಯ ಮುಂಧಾಳಿಗುರಗಾಧಿಪತಿಯೊಬ್ಬನೆ ನಿಂದನಿದಿರಾಗಿ (ಕಿರಾತ. ೪-೦೩-೦೬). [ಮೇಲು₂ (<ಮೇಲ್₂) + ಮುತ್ತಿಗೆ]

**ಮೇಲುಮುದ್ದೆ** ' ಮೇಲ್ಮುದ್ದೆ ' ನೋ.

**ಮೇಲುಮುನಿದನಹಂಬು** (ನಾ). ಒಂದು ಬಗೆಯ ಔಷಧೀಸಸ್ಯ : ಅಂಡವಾತಕ್ಕೆ :–ಬಿಳಿಯ ಹಿಡಿಹಿಡಿಕೆ ಮೇಲುಮುನಿದನ ಹಂಬು ಸಮೂಲ . . . ಇವುಗಳ ರಸವಂ ತೆಗೆದುಕೊಂಡು ಎಳ್ಳೆಣ್ಣೆ ಸಹ ೩ ದಿನ ಕೊಂಬುದು (ವೈದ್ಯಸಿ. ೦೯೭). [? + ಹಂಬು₂ (<ಪರಪ್ಪು)]

**ಮೇಲುಮುಸುಕು** ' ಮೇಲ್ಮುಸುಕು' ನೋ.

**ಮೇಲುಮೊಗ** (ನಾ). ಮುಖದ ಮೇಲ್ಭಾಗ ; ಹಣೆ ; ನೊಸಲು : ಬಾಲಕಿ ಕಡಿವಾಣವನಿಕ್ಕಿ ಕುದುರೆಯ ಮೇಲುಮೊಗಕೆ ಹಲ್ಲಣವ ಪೇಳಲಳವ ಕಟ್ಟಿ ಕಂಗಟ್ಟು ತುರುಕರ ಜಾಲವೈದಿತು ದೆಸೆದೆಸೆಗೆ (ಶಂಪವಿ. ೦೩-೯೩).
[ಮೇಲು₁ (<ಮೇಲ್₁) + ಮೊಗ]

**ಮೇಲುವಚ್ಚಲ್** (ನಾ). ಮೇಲ್ಭಾಗದ ಕಾಲುವೆ : ಎತ್ತರದಲ್ಲಿರುವ ಕಾಲುವೆ : ತೆಂಕಣಸೀಮೆ ಆಱಿಕೆಱೆಯ ತೆಂಕಣ ಕೋಡಿಯಿಂ ಪಡುವ ಮುಂದಾಗಿ ಹರಿವ ಪಳ್ಳದ ಮೇರೆ . . . ಬಡಗಲಾ ಪೊಲಕೆ ಹರಿವ ಮೇಲುವಚ್ಚಲ್ ಮೇರೆ (ಎಕ. VII, ಶಿಕಾರಿ. ೩೨೩-೨೪ ; 1046).
[ ಮೇಲು₁ ( < ಮೇಲ್₁ ) + ಬಚ್ಚಲ್ ]

**ಮೇಲುವಣ** (ನಾ). ತೆರಿಗೆಯ ಮೇಲೆ ಕೊಡಬೇಕೆಂದು ಕೇಳುವ ಹೆಚ್ಚಿನ ಹಣ : ಭತ್ತ ಸ ೨ ಮೇಲುವಣದಿಂದ ಕ ೨ ಹೊನ್ನಿನ ಮಟ ಗಂಧಕ ೨ . . . ದೇವಾಲ್ಯದ ಕೆಲಸಕೆ ದೇವರ ಆಧಾರವಾಗಿ ಪ್ರತಿ ವರುಷದಲೂ ಮಿಕ್ಕು ಬಹದು (ಎಕ. VI, ಶೃಂಗೇರಿ. ೩೦-೨೦ ; 1458) ;

ನೀಉ ಮಾಡಿದ ಘಳಿಯಗಳು ಖಿಲವಾಗಿ ಮುಂಚಿಡು ಹೋದವೆನ್ನು ಕೀಳಿ ಕಾಣಿಕೆ ನೇಲುವಣ ಕಬ್ಬಿನ ಸುಂಕವನೂ ಬಿಟ್ಟೆಉ (ಎಕ. XI· ದಾವಣ. ೦೦೭-೦೭; 1528). [ ಮೇಲು$_1$ (< ಮೇಲ್$_1$) + ಪಣ$_3$]

**ಮೇಲುವತ್ತಿಗೆ** (ನಾ). ಗಾಲಿಯ ಹೊರಭಾಗದ ಸುತ್ತು; ಚಕ್ರದ ಪರಿಧಿ: "ಪ್ರಧಿ ನೇಮಿ ಮೇಲುವತ್ತಿಗೆಯಕ್ಕು" (ಪಂಗರಾ· ೬೪-೨೪)· [ ಮೇಲು$_1$ (< ಮೇಲ್$_1$) + ಪತ್ತಿಗೆ$_1$ (< ಪತ್ತುಗೆ) ]

**ಮೇಲುವರಿ$_1$** 'ಮೇಲ್ವರಿ' ನೋ.

**ಮೇಲುವರಿ$_2$** (ನಾ)· ಹೆಚ್ಚಾಗಿರುವುದು; ಹೆಚ್ಚುವರಿ: ವಿದೇಶೀ ಜನರು ಅದನ್ನು ಹೊತ್ತುಕೊಂಡು ಹೋಗಲು ಬಿಟ್ಟರೆ, ನಮಗೆ ಉಳಿಯುವುದು ಕೊಂಚ ಮೇಲುವರಿ ಹಣ ಮಾತ್ರ ಮತ್ತು ಜನರಿಗೆ ಕೂಲಿ ಮಾತ್ರ (ದಾರಾಪ· ೦೪೭)· 'ಇಳಿವರಿ' ಪರಾ.
[ ಮೇಲು$_1$ (< ಮೇಲ್$_1$) + -ವರಿ$_2$ ]

**ಮೇಲುವಲಗೆ** 'ಮೇಲ್ವಲಗೆ' ನೋ.

**ಮೇಲುವಾಯ್** 'ಮೇಲ್ವಾಯ್' ನೋ.

**ಮೇಲುವಾಸಿ** (ನಾ). ೧. ಒಳ್ಳೆಯ ಪರಿಣಾಮವನ್ನು ಕೊಡುವಂಥದು; ಮಂಗಳಕರವಾದುದು: ಒಮ್ಮೆ ಮುಚಿವುದು ವೈರಿದಳ ಮತ್ತೊಮ್ಮೆ ಮುಂಚಿವುದು ನಮ್ಮ ದಳ . . . ಹಮ್ಮ ದೆಸೆ ಬಲುದೊರೆಗಳಳಿವಿ ನೊಳೊಮ್ಮೆ ಹೋಯಿತು ಹೊತ್ತು ರಣದಲಿ ನಮ್ಮ ವಿಳಸಕೆ ಮೇಲುವಾಸಿ ನೃಪಾಲ ಕೇಳೆಂದ (ಕುವ್ಯಾಕ. ೩೩-೪೦). ೨. ಬೆಲೆಯಲ್ಲಿ ವ್ಯತ್ಯಾಸವುಳ್ಳ ಮಾಲುಗಳನ್ನು ಬದಲಾಯಿಸಿಕೊಳ್ಳುವಾಗ ಎರಡನೆಯವನಿಗೆ ಕೊಡುವ ಅಥವಾ ಅವನಿಂದ ಪಡೆದುಕೊಳ್ಳುವ ವ್ಯತ್ಯಾಸದ ಮೊಬಲಗಿನ ಮೊತ್ತ: ಈಗ ನನ್ನಲ್ಲಿ ೧೫೦ ರೂಪಾಯಿ ಬೆಲೆಯ ಹಾರ್ಮೋನಿಯಮ್ ಇದೆ. ನಿಮ್ಮಲ್ಲಿ ೧೭೫ ರೂಪಾಯಿ ಬೆಲೆಯ ರೇಷ್ಮೆಯಿದೆ. ನಾವು ನಮ್ಮಲ್ಲಿ ಈ ಮಾಲುಗಳನ್ನು ಬದಲಿಸುತ್ತೇವೆ. ನಿಮಗೆ ನನ್ನ ವಸ್ತುವನ್ನು ಕೊಟ್ಟು ೨೫ ರೂಪಾಯಿ ಮೇಲುವಾಸಿಯನ್ನು ಕೊಟ್ಟು ಬಿಟ್ಟರೆ ನಮ್ಮ ಲೆಕ್ಕವು ಮುಗಿಯಿತು (ದಾಲಶ್ಚ· II, ೬೬೬)· 'ಕೀಳುವಾಸಿ' ಪರಾ. [ ಮೇಲು$_1$ (< ಮೇಲ್$_1$) + ವಾಸಿ$_1$ ]

**ಮೇಲುವಾಸು** 'ಮೇಲ್ವಾಸು' ನೋ.

**ಮೇಲುವೀಸ** (ನಾ) ತೆರಿಗೆಯ ಮೇಲೆ ಕೊಡಬೇಕಾದ ಹೆಚ್ಚಿನ ನಾಣ್ಯ (?): ಕಟ್ಟಲೆಗಳ ಪ್ರಹರಪ್ರಮಾಣವಿಚಾರ ಮೇಲುವೀಸ ಕೊಡವೀಸ ಸಹ ವರ್ತಕರಿಗೆ ಸಲುವ ಮಾನ್ಯಮರ್ಯಾದೆಗಳನ್ನು ನಡೆಸಿಕೊಟ್ಟು (ಎಕ. VIII· ಸೊರಬ· ೨೬೫-೨೬; 1627 ?)· 'ಕೊಡವೀಸ' ಪರಾ.
[ ಮೇಲು$_1$ (< ಮೇಲ್$_1$) + ವೀಸ ]

**ಮೇಲುವೆಚ್ಚ** (ನಾ)· = ಮೇಲುಖರ್ಚು: ಪ್ರತಿದಿನದಲ್ಲಿ ಒಬ್ಬ ಬ್ರಾಹ್ಮಣನ ಭೋಜನಕ್ಕೆ ಅವನ ಮೇಲುವೆಚ್ಚ ವೀಳೆಯಕ್ಕೆ ದೇವರ ಹಾನೆಯಲ್ಲಿ ಯಿದಕ್ಕೆ ಅಕ್ಕಿಯು ಮರ್ಯಾದೆಯಲಿ ಪ್ರತಿವರ್ಷವಲಿ ೩೪ ಮಾಡೆಯೂ (ಸೌಇಇ. IX-ii, ೪೨೬-೪೦ ; 1402); ತಮಗೂ ತರಮ ಕಡ ಸಹ[ವಾಸವಾಗಿಹ ಹಿ]ರಿಯರುಗಳಿಗೂ ನೈವೇದ್ಯ ಮೇಲುವೆ[ಚ್ಚ]ಗಳಿಗೆ ಮೂಡಣಕೋಟೆಯ ಸೀಮೆಯಲ್ಲಿ ತಮ[ಗೆ] ಲಿಂಗಮುದ್ರೆ ಶಿಲಾಶಾಸನ ಪೂರ್ವ್ವಕ[ವಾಗಿ ಕೊಟ್ಟು]ಯಿಹ ಬೊಪ್ಪನಹಳಿಯ ಗ್ರಾಮ (ಶ್ಮಕಂ· ೦೪೨೬, ೬೪-೦೨ ; 1514)· [ಮೇಲು$_1$ (< ಮೇಲ್$_1$) + ವೆಚ್ಚ]

**ಮೇಲುವೆಚ್ಚು ?** (?). (?): ಚೋಳಂ ಮುತ್ತಿದ ಹನ್ನೆರಡುವರ್ಷಕ ಪೊನ್ನೆದಾಳಾಪಂ ಬೆರಸಾಡೊಡೊನ್ದು ಮೊಳನಂ ಮೇಲುವೆಚ್ಚುವುಚ್ಚಂಗಿಯು ಹೇಳಸಾಧ್ಯವಾದುದೆನ್ದು ಧವಿಜಂ ಛೋದ್ಯಂಬಡುತ್ತಮಿ ಬಲ್ಲಾಳಂ ಗಿರಿದುರ್ಗಮಲ್ಲಮೆಸರಂ ಬಲ್ಲಾಳಭೂಪಾಳಕಂ (ಎಕ. XVI, ಚಳ್ಳಕೆ· ೭೦-೪; 1286). [ ? ]

**ಮೇಲುವೆಸರು** (ನಾ)· ಬೇರೆಯ ಹೆಸರು; ಮತ್ತೊಂದು ಹೆಸರು; ಉಪನಾಮ: ದಾನವರ ಸೀಳಿ ಬಿಸುಟನು ಖಳರ ಮೇದಸ್ಸಾಳಿ ಮುಳುಗಿತು ಜಲದೊಳವಜಂ ಮೇಲುವೆಸರಾಯ್ತಿಳೆಗೆ ಮೇದಿನಿಯೆಂಬ ನಾಮದಲಿ (ಕುವ್ಯಾಕ· ೯-೨೪).
[ ಮೇಲು$_1$ (< ಮೇಲ್$_1$) + ಪೆಸರು$_1$ (< ಪೆಸರ್) ]

**ಮೇಲುವೊದಕೆ** 'ಮೇಲ್ವೊದಕೆ' ನೋ.

**ಮೇಲುವೊನ್ನು**, ಮೇಲುಹೊನ್ನು (ನಾ). ದಾನವಾಗಿ ನೀಡುವ ದವಸ ಧಾನ್ಯ ಮುಂತಾದುವುಗಳ ಜೊತೆಯಲ್ಲಿ ನೀಡುವ ಹೆಚ್ಚಿನ ನಗದು ಹಣ; ದಕ್ಷಿಣೆ: ಗಿಳಿಕಲ್ಲು ಇಕ್ಕುವ ಭತ್ತ ಸ ೪೪೦ ಮೇಲುವೊನ್ನು ಗ ೪ ಬೋಳೂರು ಇಕ್ಕುವ ಭ × × ದಿಸ ೧೧೦ ಮೇಲುವೊನ್ನು ಗ ೨ (ಶ್ಮಕಂ· ೦೪೩೩, ೨-೦೨ ; 1350). **ಮೇಲುಹೊನ್ನು**: ಆ ಬಾಳಿಂದಲೂ ಬಹ ಮೇಲುಹೊಂನು ಕಾಟಗದ್ಯಾಣ ಸಂ × × × ಯಿದು ಹೊಂನು (ಸೌಇಇ· IX-ii. ४೦೭-೦೭ ; 1377).
[ ಮೇಲು$_1$ (< ಮೇಲ್$_1$) + ಪೊನ್ನು (< ಪೊನ್) ]

**ಮೇಲುಶೋಧನೆ** (ನಾ)· ವಾಂತಿ; ವಮನ: ಭದ್ರಮುಸ್ತೆ, ಬಿಳಿಯ ಹಜುಪೆ, ತ್ರಿಫಳೆ, ದೇವದಾರು, ನುಗ್ಗೆಯ ಬೇರು, ಎಂಬಿವಂ ಸಮಾನಂಗೊಂಡು ಮರಳಿಸಿದ ನೀರುಂ ಹಿಪ್ಪಲಿ ಬೆರಸಿ ಅವಿಯೊಳಗೆ ಪುಡಿಮಾಡಿ ಪ್ರತಿಪಾಕವಿಕ್ಕಿ ಕುಡಿಯಲು ಕೀಳುಶೋಧನೆ. ಮೇಲುಶೋಧನೆ, ಹಲವು ಕಾಲ ನಡೆದಂತಹ ರೋಗಗಳು ಕ್ರಿಮಿಗಳು ಎಲ್ಲವನ್ನೂ ಕೆಡಿಸುವುದು (ವೈವಿ· ೦೯).
[ ಮೇಲು$_1$ (< ಮೇಲ್$_1$) + ಶೋಧನೆ ]

**ಮೇಲುಸಂಪಾದನೆ** (ನಾ)· ವೇತನ ಅಥವಾ ಸಂಬಳವಲ್ಲದೆ ದೊರಕುವ ಹೆಚ್ಚಿನ ಆದಾಯ; ಲಂಚ; P ಸಾಮಾನ್ಯವಾಗಿ ನ್ಯಾಯ ವಿರುದ್ಧವಾದ ಕೆಲಸವನ್ನು ಮಾಡಿಕೊಡಲು ಬೇರೆಯವರಿಂದ ಒತ್ತಾಯಪೂರ್ವಕವಾಗಿ ಪಡೆಯುವ ಹಣ: ನಿಮ್ಮ ಯಜಮಾನ್ರಿಗೆ ಕೈತುಂಬಾ ಸಂಬಳ ಬರುತ್ತಿಲ್ಲವೆ? ಮೇಲುಸಂಪಾದನೆಯೂ ಇರಬೇಕು (ಕುಸುಸಂ· ೩೦)· [ ಮೇಲು$_1$ (< ಮೇಲ್$_1$) + ಸಂಪಾದನೆ ]

**ಮೇಲುಸಾಲು** (ನಾ)· ೧. ಮೊದಲಿನ ಸಾಲು. — ಪಂಕ್ತಿ; ಅಗ್ರಶ್ರೇಣಿ: ವೈದಿಕರು ಮೇಲುಸಾಲಿನಲ್ಲಿ ಊಟಕ್ಕೆ ಕುಳಿತಿದ್ದಾರೆ (ರೂಢಿ). ೨. ಮೇಲುಪಂಕ್ತಿ; ಮಾದರಿ: ಏನೇ ಇರಲಿ, ಏನೆ ಇರಲಿ, ಹಮ್ಮುಹೆಮ್ಮೆಗಳೇನೆ ಇರಲಿ. ತಿರುಳರಿವು, ಹಿರಿಯ ನಡತೆ, ಮೇಲುಸಾಲು, ಏನೆ ಇರಲಿ (ತಂಗೀಕ. ४೬-೬).
[ಮೇಲು$_1$ (< ಮೇಲ್$_1$) + ಸಾಲು$_2$ (< ಸಾಲ್$_3$) ]

**ಮೇಲುಸಿರ್**, ಮೇಲುಸಿರು, ಮೇಲುಸುರು (ನಾ). ಮತ್ತೆ ಮತ್ತೆ ವೇಗವಾಗಿ ಬರುವ ಉಸಿರು; ಏದುಸಿರು: ಎಳೆವ ಬಾಳ್ದಲೆಯೊಸಲ್ ಮೇಲುಸಿರ್ ನೆಗೆಯುತಿರಲಲ ತಾಳದೆ ಕೊರಗು ಮರುಗುಪಂ ಗೋಳು (ಕಾಂಆರ. ೦೭೨-४೬೩)· **ಮೇಲುಸಿರು**: ಪೆಣ್ಮಣಿಯು ಕೋಮಲೆಯು ಮೇಲುಸಿರು ಸೂಸುತ್ತ ಶಕ್ತಿಯುದು ಕುಂದುತ್ತ ಬಾಯಾರಿ ಸೊರಗಿಹಳು (ಕಚಕೋ. ೭೬-೨೨); ವೇಗವಾಗಿ ನಡೆದು ಬಂದದ್ದರಿಂದ ಅವರಿಗೆ ಮೇಲುಸಿರು ಹತ್ತಿತ್ತು (ಮೂಕರುದಾ. ೭೫)· **ಮೇಲುಸುರು**: ದೈತ್ಯಬಲವುಲಿದಡಿ ಯಿಡಲು ಮೇಲುಸುರು ಮಸಗಿತು ಫಣಿಪ ಕಮಠರಿಗೆ (ಕುವ್ಯಾದ್ರೋ. ೦೩-೪೩). [ ಮೇಲು$_2$ (< ಮೇಲ್$_2$) + ಉಸಿರ್$_2$ ]

**ಮೇಲುಸಿರಿಡು**, ಮೇಲುಸುರಿಡು (ಕ್ರಿ)· ಮತ್ತೆ ಮತ್ತೆ ವೇಗವಾಗಿ ಉಸಿರಾಡು; ಏದುಸಿರು ಬಿಡು: ಒರಿದಪ್ಪ ಶ್ರಮದಿಳಿ ನಿತ್ತರಿಸದೆ ತಲೆ ತಿರುಗಿ ಮುಚುಗಿ ಮೇಲುಸಿರಿಟ್ಟುರ್ವರೆಗೆ ಕೆಡೆದುರುಳ್ದ ಮುನಿಪನಸರಸಂ ತಾಳ್ದಿರ್ದನೊಂದುಜಾವಂಬರೆಗಂ (ರಪರಾಶ್ವ. ೪-೦೭೦)

**ಮೇಲುಸುರಿದು** : ಎರಡು ದಿನದ ಕೂಸಂ ಕುಂಭಿನಿಯೆಂಬ ದೇವತೆ ಒಡಿದಡಾ ಕೂಸು ವಿಕಾರವೆರಸಿಕ್ಕುಂ ಕಣ್ಣ ತೆಱೆಯದುಂ ಮೇಲುಸುರಿ ಷುಗುಂ (ಬಾಲಗ್ರ. ೦೨೪). [ಮೇಲುಸಿರ್ + ಇಡು₁]

**ಮೇಲುಸಿರು** ' ಮೇಲುಸಿರ್ ' ನೋ.

**ಮೇಲುಸುರಿದು** ' ಮೇಲುಸಿರಿಡು ' ನೋ.

**ಮೇಲುಸುರು** ' ಮೇಲುಸಿರ್ ' ನೋ.

**ಮೇಲುಸೆಜಿಗು** ' ಮೇಲ್ಸೆಜಿಗು ' ನೋ.

**ಮೇಲುಸ್ತುವಾರಿ** (ನಾ). ಮೇಲ್ವಿಚಾರಣೆ : ಸಿಂಹಸ ಅರಸಿಯು ಕಂಚಿಯಲ್ಲಿ ಕೈಲಾಸನಾಥದೇವಾಲಯ ಕಟ್ಟಡ ಕೆಲಸದ ಮೇಲುಸ್ತುವಾರಿಯನ್ನು ನೋಡಿ ಕೊಳ್ಳುತ್ತಿದ್ದಳು (ದಕಾ೩. ೦೦೬).

[ಮೇಲು₁ (< ಮೇಲ್₁) + ಉಸ್ತುವಾರಿ]

**ಮೇಲುಹವಿ** (ನಾ). ಅಗ್ನಿಗೆ ಉಪರಿಭಾಗದಿಂದ ಬೀಳುವ ಹವಿಸ್ಸು : ಬೀಳುವಾಹುತಿಗಳನ್ನು ಸವಿದುರಿನಾಲಗೆಗಳುಬ್ಬೆದ್ದು ಕುಣಿದವು ಮೇಲುಹವಿ ಗವ್ವಳಿಸಿ ಹರಹಿನಲಗ್ನಿಕುಂಡವಲಿ (ಕೊರರಾ. ೦.೬-೪೮).

[ಮೇಲು₁ (< ಮೇಲ್₁) + ಹವಿ]

**ಮೇಲುಹಾಸಿಗೆ** (ನಾ). ಹಾಸಿಗೆಯ ಮೇಲೆ ಹಾಸುವ ಬಟ್ಟೆ; ಮಗ್ಗುಲು ಹಾಸಿಗೆ ; ವುಪಟಿ: "ನಿಚೋಳಃ, ಪ್ರಚ್ಛದಪಟಃ--೨ ಮೇಲುಹಾಸಿಗೆ, ಹಾಸಿಗೆ ಮೇಲೆ ಹಾಸುವ ನೌರುಬಟ್ಟೆ" (ಸಿದ್ಧಾಂತಿ. ೨೦೪).

[ಮೇಲು₂ (< ಮೇಲ್₂) + ಹಾಸಿಗೆ (< ಪಾಸುಗೆ₁)]

**ಮೇಲುಹೊದಕೆ** ' ಮೇಲ್ಹೊದಕೆ ' ನೋ.

**ಮೇಲುಹೊದಿಕೆ** ' ಮೇಲ್ಹೊದಕೆ ' ನೋ.

**ಮೇಲುಹೊನ್ನು** ' ಮೇಲುವೊನ್ ' ನೋ.

**ಮೇಲುಹೊಳೆ** (ನಾ). ನದಿಗಳಲ್ಲಿ ಅಧಿಕಪ್ರವಾಹದಿಂದ ನೀರಿನ ಮಟ್ಟವು ದಡವನ್ನು ಮೀರಿ ಹರಿಯುವುದು : ಜಲೋಚ್ಛ್ವಾಸಾಃ, ಪರೀವಾಹಾಃ— ೨ ನೀರು ಕಡಲ ತುಳಕಿ ಮೇಲ್ವಾಯ್ದು ಬರುವ ತೆರೆಗಳ ಹೆಸರು. ಮೇಲುಹೊಳೇ ಅಥವಾ ನೀರು ಅಲ್ಲಾಡಿ ತುಳಕಾಡುವಿಕೆ (ಸಿದ್ಧಾಂತಿ. ೭೬). [ಮೇಲು₁ (< ಮೇಲ್₁) + ಪೊಳೆ₃ (< ಪೊಟಿ)]

**ಮೇಲೂರ್** (ನಾ). ೧. ಮೇಲೆ ಇರುವ ಊರು : ಸ್ವರ್ಗಲೋಕದ ಪಟ್ಟಣ; ಗರಗರಿಕೆವಡೆದೆಳವೆಂಡಿರ ತಂಡದಿಂ ನೆಗಟ್ಟೆವಡೆವಾ ಮೇಲೂರ್ಗಳ ಮುಂದಾಡುವಂತಾಗಸಕೆ ನೆಗೆದ ಬೀದಿವಾಡಂಗಳ . . . ಚೆಲ್ವನೋಳ್ಕೊಂಡಿ ರ್ಪುದು (ಕಬ್ಬಿಗ. ೦೪). ೨. ಒಂದು ಊರಿನ ಹೆಸರು : ಮೇಲೂರಾ ಕೆಱೆ ಕೆಱೆ ಪಡಿ ಕಣ್ಣು ಗಮ್ ವ್ರೀಹಿ ಭೂಮಿಮ್ (ಎಕ. IX, ಚಿತ್ರ. ೬೭-೦೪; ೩೬೨): ಶ್ರೀರಾಮ[ನಾ]ಥದೇವರಿಗೆ [ಮೇ] ಲೂರ ಕಾಚ [ದೇ] ವನ ಮಗ ... ಇ[ಕ್ಕಿದ] ಗಾಣ ಶ್ರೀ [ರಾಮ] ದೇವ (ಎಕ. IV (R), ತಾವುರಾ. ೨೯೬ ೩; ಸಂ. 14ನೆಯ ೬೪). [ಮೇಲ್₂ + ಊರ್]

**ಮೇಲ್₁** (ಅ). ೧. ತುದಿಯಲ್ಲಿ; ಅಗ್ರಭಾಗದಲ್ಲಿ; ಉಪರಿಭಾಗದಲ್ಲಿ : ತುಂಗಗಿರಿಶಿಖರದಿಂದುಂ ಲಂಗಿಸಿ ಶೂದ್ರಕನ ಪೊಳೆವ ಸುಂಗಿಯ ಮೊನೆಯೊಳ್ ಪೊಂಗಿ ಸೊಡರ್ಗುಡಿಯ ಮೇಲೆ ಪತಂಗಂಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಕಾವ್ಯಸಾ. ೦೦೦೪ ಕಾದ್ಬ. ೪); ಒಂದು ದಿವಸಂ ತನ್ನ ತೊಡೆಯ ಮೇಲೆ ತಲೆಯನಿಟ್ಟು ಪರಶುರಾಮಂ ಮಱೆದೊಱಗಿದಾ ಪ್ರಸ್ತಾವದೊಳ್ (ಶಂಪಾ. ೦-೦೦೪ ವ): ಉಭಯರಾಯರ ನಿಚ್ಚಟಕೆ ಮಾರ್ಮು ಪೂತುರೆಂದುದು ಮೇಲೆ ಸುರಕಟಕ (ಕುವ್ಯಾ.೪. ೪-೩೩). ೨. ಹೊರ ಮೈಯಲ್ಲಿ: ಮೇಲ್ಭಾಗದಲ್ಲಿ: ಮೊರಪದರದಲ್ಲಿ : ಎಣ್ಣೆಯು ನೀರಿನ ಮೇಲೆ ತೇಲುತ್ತದೆ (ರೂಢಿ). ೩. ಮುಂದೆ; ಮುಂಭಾಗದಲ್ಲಿ; ಮುಂದಕ್ಕೆ: ಸಿನ್ನ ಮುಂದಿರದ ಮೇಲಿರಡು ಯೋಜನದೊಳೆನ್ನಯ ಕೀರ್ತಿಪುರ ಹೇಮಪಿರಚಿತಮೊಳರಬೇಹುದು (ಶಕಾ. ೦೪-೦೩). ೪. ಹೊರತು ; ವಿನಾ ; ಉಳಿದು : ನಾನು ಇಷ್ಟರ ಮೇಲೆ ಇನ್ನೇನೂ ಹೇಳಲಾರೆ (ರೂಢಿ). ೫. ಅನಂತರ; ಆ ಬಳಿಕ : ಮೂಲಧನ ವೇಸುಂಟದೆಲ್ಲವನೋಳಿಯುಲಿ ಚಂದನಕೆ ಸವೆಯಲು ಮೇಲೆ ಕಡುಬಡತನವಡ ಸಿರಲು (ಬಸವು. ೨೬-೦); ಫಾಳನೇತ್ರನ ವರದ ಗರುಡಿಯ ಕಾಳಿಯೆನಿಸುತಂಟ ನಿತನಿವರಲಿ ಮೇಳವಿಸಿದನು ಮೇಲೆ ತಿಂಗಳು ದಿವಸಕಾ ಮುನಿಪ (ಕೊರರಾ. ೦-೦೨-೦); ದುಃಖದ ಮೇಲೆ ಸುಖ ಸುಖದ ಮೇಲೆ ದುಃಖ (ಗಾದೆ). ೬. ಮತ್ತೂ; ಜೊತೆಗೆ; ಇನ್ನೂ : ನಾಲ್ಕು ಲಕ್ಷದ ಮೇಲೆ ತೊಂಬ ತ್ತಾಱು ಸಾವಿರ (ಬಸವು. ೨೨-೩೨): ಸೀಳಿದನು . . . ಅಗ್ಗದ ರವಿಸುತನ ಮಂತ್ರಿಗಳೊಳ್ಳೆವರನು ಮೇಲೆ ಕೇರಳರೊಳಗೆ ಹತ್ತು ನೃಪಾಲರನು (ಕುವ್ಯಾ.ದ್ರೋ. ೬-೪೬). ೭. ಕುರಿತು ; ಸಂಬಂಧದಲ್ಲಿ ; ವಿಚಾರದಲ್ಲಿ : ಇನ್ನಪ್ಪೊಡೆನ್ನ ಮೇಲೆ ದೋಷಮಿಲ್ಲ (ಶಂಕರಂ. ೦೩೦-೩): ಹರಿಯೊಲಿದ ಮನುಜರ ಮೇಲೆ ಮುನಿದೇಗುವರು ಕೆಲಬರು (ಕುವ್ಯಾ.ದ್ರೋ. ೦-೨೮): ಸಾವಿರಸಂತಾನವಡೆದಳೆ ಮುಮುಕಾರ ತೀವಿಹುದುಬಲನ ಮೇಲೆ (ನೇಮಿಹತ.೦-೦೦). ೮. ಸಮೀಪವರ್ತಿಯಾಗಿ ; ಹತ್ತಿರವಾಗಿ : ಅದರ ಬಣ್ಣ ಎಂಥಾದು ? ಅದು ಕಪ್ಪಿನ ಮೇಲೆ ಅದೆ (ಮುಂಬಯಿ. ೦-೨೪). ೯. ಆಧಾರದಿಂದ ; ಹೊಣೆಯಿಂದ : ಅವನ ಮಾತಿನ ಮೇಲೆ ನಾನು ಇವನಿಗೆ ಸಾವಿರ ರೂಪಾಯಿ ಸಾಲ ಕೊಟ್ಟಿದ್ದೇನೆ (ರೂಢಿ). ೧೦. ಉದ್ದೇಶದಿಂದ; ಕಾರಣ ದಿಂದ; ಉದ್ದೇಶಕ್ಕಾಗಿ : ಅವನು ವ್ಯಾಪಾರದ ಮೇಲೆ ಆ ಊರಿಗೆ ಹೋಗಿದ್ದಾನೆ (ರೂಢಿ). ೧೧. ವಿರುದ್ಧವಾಗಿ : ಪ್ರತಿಯಾಗಿ : ಪಾರ್ಷ್ಣಿ ಗ್ರಾಹ — ತಾನು ಹಗೆಯ ಮೇಲೆ (ದಂಡನ್) ಎತ್ತಿ ಹೋದಲ್ಲಿ ಹಿಂದೆ ರಾಜ್ಯವನುಪದ್ರವ ಮಾಡುವವನು (ನಾಕರಾ. ೪). ೧೨. ಉತ್ತಮ ಮಟ್ಟಕ್ಕೆ; ಅಭಿವೃದ್ಧಿಗೆ : ಮನುಷ್ಯನು ಮೇಲೆ ಹೋದಷ್ಟೂ ವಿನಯ ವಂತನಾಗಬೇಕು (ರೂಢಿ). ೧೩. ದೂರದಲ್ಲಿ ; ಅಂತರದಲ್ಲಿ : ಆ ಪಟ್ಟಣ ದಿಂದ ಕೆಲವು ಹರದಾರಿಗಳ ಮೇಲೆ ಒಂದು ಸಣ್ಣ ಹಳ್ಳಿ ಅದೆ (ಮುಂಬಯಿ. ೪-೩೦); ಇಲ್ಲಿಂದ ಅಯ್ದು ಹರದಾರಿಯ ಮೇಲೆ ಇರುವ ರಾಮಪುರವೆಂಬ ಊರಿಗೆ ಹೋಗು (ಮುಂಬಯಿ. ೪-೦೬೪). ೧೪. ಅನುಸರಿಸಿ : ಸಂಬಂಧಿಸಿ ದಂತೆ : ಉಪಯೋಗದ ಮೇಲೆ ಪದಾರ್ಥಗಳ ಬೆಲೆಯು ಹೆಚ್ಚು ಕಡಿಮೆ ಇರುವದಿಲ್ಲ (ಮುಂಬಯಿ. ೩-೬೪). ೧೫. ಹೊರಗಡೆಯಲ್ಲಿ ; ಸ್ಥೂಲ ವಾಗಿ : ಮೇಲೆ ನೋಡಿದಾಗ ಅವರ ವಿಚಾರದಲ್ಲಿ ತಪ್ಪು ಭಾವನೆ ಹೊಂದು ವವರೇ ಹೆಚ್ಚು (ರೂಢಿ).

**ಮೇಲೆಮೇಲೆ** (ದ್ವಿರುಕ್ತಿ) : ೧. ತುಂಬ ಮೇಲಕ್ಕೆ ; ಅತಿ ಎತ್ತರಕ್ಕೆ : ವಿಮಾನವು ಮೇಲೆಮೇಲೆ ಹೋದಷ್ಟೂ ಕಣ್ಣಿಗೆ ಚಿಕ್ಕದಾಗಿ ಕಾಣಿಸುತ್ತದೆ (ರೂಢಿ). ೨. ಒಂದರ ನಂತರ ಮತ್ತೊಂದರಂತೆ; ಸಾಲಾಗಿ; ನಿರಂತರವಾಗಿ : ಸುತ್ತಲುಂ ಸೊಗಯಿಸಿ ಮೇಲೆಮೇಲೆ ಕವಿತಂದುವು ಘೋಂಕನೆ ಪೂವಿಸಂಬುಗಳ್ (ಕಬ್ಬಿಗ. ೩೦೬). ೩. ವೇಗವಾಗಿ ; ರಭಸ ವಾಗಿ : ಮೇಲೆಮೇಲೀತನ ತಪೋಗ್ನಿಜ್ವಾಲೆ ಜಡಿದುದು (ಕುವ್ಯಾ.೪. ೩-೦೦); ಮುಪ್ಪುರದ ಜನಂ . . . ಮೇಲೆಮೇಲೈತಂದು ಕೋಂಟೆಯಂ ಪತ್ತಿ ಪೊಱಪಾಳೆಯವನೀಕ್ಷಿಸುತ್ತಿರ್ಪನಂ (ಶಬ್ದ. ೪೨-೦೩). ೪. ಮತ್ತೆ ಮತ್ತೆ; ಪುನಃಪುನಃ : ನೀವು ಹೀಗೆ ಮೇಲೆಮೇಲೆ ಹೋಗುವುದರಿಂದ ಅವರಿಗೆ ತೊಂದರೆಯಾಗಬಹುದು (ರೂಢಿ). **ಮೇಲಿಂದ ಮೇಲೆ** = ಪುನಃ ಪುನಃ : ನೀವು ಮೇಲಿಂದ ಮೇಲೆ ಅವರನ್ನು ಕಂಡು ಹೇಳದಿದ್ದರೆ ಯಾವ ಕೆಲಸವೂ ಆಗುವುದಿಲ್ಲ (ರೂಢಿ). **ಮೇಲೆ ಹಾಕಿಕೊಳ್ಳು** = ವಿರೋಧವನ್ನು ಕಟ್ಟಿಕೊಳ್ಳು : ತಾತ ಭೀಷ್ಮ ತಾನೆ ಆಮೇಲೆ ಏನು ಮಾಡಬಲ್ಲ ? ಕೌರವರ ಮೇಲೆ ಕೋಪಿಸಿಕೊಳ್ಳಬಹುದು; ಕೋಪಿಸಿಕೊಂಡು ಅವರನ್ನು ಏಕೆ ಮೇಲೆ ಹಾಕಿಕೊಳ್ಳುತ್ತಾನೆ ? (ವಕಥಾ. ೩೨). [< ಮೇಲ್₁]

**ಮೇಲೆ₂** (ನಾ). ೧. ಬರೆಯಲು ಬಳಸುವ ಕಪ್ಪುಬಣ್ಣದ ದ್ರವಪದಾರ್ಥ; ಶಾಯಿ ; ಮಸಿ : ' ಮೇಲೆನೆಲ್ಲಿ ' ಪಾಠ.

೨. ಒಂದು ಬಗೆಯ ಗಿಡ; ನೀಲಿ. ೩. [ಸಂಗೀತ] ಸ್ವರಶ್ರೇಣಿ; ಸ್ವರಗ್ರಾಮ. [ಸಂ. ಮೇಲಾ]

**ಮೇಲೆಣಿಕೆ** (ನಾ). ಉತ್ತಮವಾದ ಆಲೋಚನೆ : ಹಳೆಯ ಹಂದರ ಬಾನು ಅರಿಲರಲ ಕಿರುಸೊಡರ್ ಮೇಲೆಣಿಕೆ ನಡೆವಳಿಯು ನೊಡುದೋಳೆಂ ಪಸೆಯ (ಕಾಬಂಕ. ೬೭-೦೦೪). [ಮೇಲು$_1$ (< ಮೇಲ್$_1$) + ಎಣಿಕೆ]

**ಮೇಲೆತ್ತು** (ಕ್ರಿ). ೧. ಕೆಳಗಿರುವ ವಸ್ತುವನ್ನು ಮೇಲುಭಾಗಕ್ಕೆ ಎತ್ತು; ಊರ್ಧ್ವಭಾಗಕ್ಕೆ ತರು : ಕೆಳಗೆ ಬಿದ್ದಿದ್ದ ಪುಸ್ತಕವನ್ನು ಮೇಲೆತ್ತಿ ಮೇಜಿನ ಮೇಲೆ ಇಟ್ಟನು (ರೂಢಿ). ೨. (ಸಸ್ಯ, ಪೈರು ಮೊದಲಾದುವನ್ನು ಬೆಳೆದು) ಎತ್ತರಕ್ಕೆ ಬರುವಂತೆ ಮಾಡು : ಕಸ ಕಳೆಗಳ ಕಿತ್ತು ಪಯಿರನು ಮೇಲೆತ್ತು ಬರುವ ಭಾಗ್ಯವ ಲೆಕ್ಕ ಹಾಕು (ಇಂಚಾಕ. ೦೧೭-೭೪). ೩. ಮೇಲಕ್ಕೆ ಒತ್ತಿಕೊಂಡು ಬರು : ಕೆಮ್ಮುಳ್ಳಂತೆ ಮೇಲೆತ್ತುವ ಶ್ವಾಸವುಂ (ರತ್ನಕರಂಡ. ೪-೭೩). ೪. (ಮುಸುಕು ಮೊದಲಾದುವನ್ನು) ತೆಗೆ ; ಅನಾವರಣ ಮಾಡು : ದಿವದ ಬೆಳಕಿನ ಬೆರಳು ಬಂದು ಈ ಲೋಕದ ಮೇಲೆ ಕವಿದ ಕಪ್ಪು ಹೊದಿಕೆಯನ್ನು ಮೇಲೆತ್ತುತ್ತಿದೆ (ಸೌಂದರ. ೦). ೫. ದಂಡೆತ್ತಿ ಹೋಗು; ದಾಳಿಮಾಡು : ಏನಗಾಬರ್ಸ್ಲಿ ದರೆಂದು ವಂಗವಿಷಯಾಧೀಶಂ ಭರಂಗೆಯ್ದು ಭೋಂಕನೆ ಮೇಲೆತ್ತಿ ಕಟುತ್ತು ಮಾಣದೆನಸುಂ ವಜ್ರಾಯುಧಂ ಚಂದ್ರವಾಹನನೊಳ್ ಕಾದಲೊಡರ್ಚಿ ಬಂದು (ಸುಕುಮಾ. ೭-೩) ; ಮೇಲೆತ್ತಿ ಮಹಾಪದ್ಮನೃಪಾಲಕನೆಟ್ಟಿದನೆಂದೊಡಗಿದೋಡಿದನಾಲೋಲಬಲಂ (ಶ್ರೀಪು. ೬-೪೬). ೬. ಉದ್ಧರಿಸು; ಕಾಪಾಡು ; ರಕ್ಷಿಸು : ಹಂಡತಿಯನ್ನು ಅಧರ್ಮದಿಂದ ಮೇಲೆತ್ತಬೇಕೆಂಬ ಗಂಡನ ಕರ್ತವ್ಯಪಾಲನೆಗಾಗಿ . . . ನಿನ್ನನ್ನು ಕೊಲ್ಲಲೇಬೇಕು (ಚಿಕಲ. ೨೩೬); ಕಲೆ ಶಾಸ್ತ್ರ ಮಾತ್ರವಾದರೆ ಸಪ್ಪೆಯಾಗೀತು; ಆದರ್ಶವಾಗಿದ್ದರೆ ಮಾತ್ರ ನಮ್ಮನ್ನು ಮೇಲೆತ್ತೀತು (ಸೌಂದರ. ೬೯).

**ಮೇಲೆತ್ತಿ ಬರ್** = ದಂಡೆತ್ತಿ ಬರು; ದಾಳಿಮಾಡು : ಕಚದ್ರುಮನ ರಾಜ್ಯಂ ಕಳಕುಳಮಾಗಿರ್ದುದನಾತನ ದಾಯಾದಂಸಿಂಹಬಳನೆಂಬವು ಮೇಲೆತ್ತಿ ಬರೆ (ಶಂತಕಂ. ೨೮-೦೭). **ಮೇಲೆತ್ತಿ ಬರಿಸು** = ದಂಡೆತ್ತಿ ಬರಲು ಪ್ರೇರಿಸು; ದಾಳಿಗೆ ಬರುವಂತೆ ಮಾಡು : ಪೋಗೆಲವೊ ದೂತ - ಕೃಷ್ಣನನೀಗಳೆ ಮೇಲೆತ್ತಿ ಬರಿಸು (ಜಗವ. ೮-೩೬). [ಮೇಲ್$_2$ + ಎತ್ತು$_1$]

**ಮೇಲೆನೆಲ್ಲಿ** (ನಾ). (ಶಾಯಿಯನ್ನು ತಯಾರಿಸಲು ಬಳಸುವ) ಒಂದು ಬಗೆಯ ನೆಲ್ಲಿ,-ಆಮಲಕ : ಮೇಲೆನೆಲ್ಲಿ, ಮದರಾಸ್‌ನೆಲ್ಲಿ (ವೃಕ್ಷಕೋ. ೬೦-೦೨೪೭). [ಮೇಲ್$_2$ + ನೆಲ್ಲಿ]

**ಮೇಲೆಬರು** 'ಮೇಲೆವರ್' ನೋ.

**ಮೇಲೆಬೀಳ್** 'ಮೇಲೆವೀಟು' ನೋ.

**ಮೇಲೆಬೀಳು** 'ಮೇಲೆವೀಟು' ನೋ.

**ಮೇಲೆಬೀಟು** 'ಮೇಲೆವೀಟು' ನೋ.

**ಮೇಲೆವರ್**, ಮೇಲೆಬರು (ಕ್ರಿ). ೧. (ಯುದ್ಧಕ್ಕೆ) ದಂಡೆತ್ತಿ ಬರು ; ಆಕ್ರಮಿಸು; ದಾಳಿಮಾಡು : ಪ್ರತಿವಾಸುದೇವಂ. . . ಸುಂದರ್ಶನ ಪುರುಷಸಿಂಹರ ಪೆರ್ಚಂ ಸೈರಿಸದೆ ಕಪ್ಪಮಂ ಬೇಡೆಯಟ್ಟಿ ಪಡೆಯದೆ ಮುಳಿದು ಮೇಲೆವಂದು ಕಾದಿ ತನ್ನ ಚಕ್ರದೊಳಿಪ್ಪೊಡೆ (ಚಾವುಂಪು. ೦೭೬); ರಘುವಂಶಜಾತಂ ಸೇತುವಂ ಬಂಧನಂಗೆಯ್ದು ಮೇಲೆವರಲಿರ್ಪುದಂ ರಾವಣಂ ಕೇಳ್ದು (ಶಂತಕಂ. ೦೬೩-೦) ; ಅಂತು ಮೇಲೆವಂದು ಬೂತಟ್ಟಿದ ವಜ್ರಾಯುಧನ ಮೇಲೆ ಹಸ್ತ್ಯಶ್ವರಥಪದಾತಿಚಾತುರ್ವಲಸಹಿತಂ ಬಳನೆಂಬ ದಂಡಾಧಿನಾಥನನೀತನಟ್ಟಿದೊಡೆ (ಸುಕುಮಾ. ೭-೩ ವ). **ಮೇಲೆಬರು** : ೨. ಅಭಿವೃದ್ಧಿಯನ್ನು ಹೊಂದು; ಏಳಿಗೆಯನ್ನು ಪಡೆ : ತನ್ನ ಸ್ವಂತ ಪ್ರಯತ್ನದಿಂದ ಅವನು ಮೇಲೆಬಂದನು (ರೂಢಿ). [ಮೇಲ್$_1$ + ಪರ್]

**ಮೇಲೆವರಿ** (ಕ್ರಿ). = ಮೇಲೆವರ್ ೧ : ಏಲೆ ಚಂದ್ರಹತಕ ಮದನನ ಬಲದಿಂದಂ ಮೇಲೆವರಿದು ಕೊಂದಿಂತೆನ್ನಂ ನಿಲಲಜ್ಜಿಯೆಯ್ (ಕಾದಂಬ. ೬೦೦); ಹೊಲಮೇರೆಯ ಸೀಮಕ್ಕೆ ಕಟಕದ ಆಚಂದ್ರದಂಡನಾಯಕನ ಕುದುರೆ ಮೇಲೆವರಿದಡೆ ಹಜಿತೆಗೆಯದೆ ಎರಡ್ಕುದುರೆಅ ನೆಚ್ಚಿ ಕಟ್ಟಿನಲಗಿನಲು . . . ಕೊಂದು (ಶಾಸನ. IX-i. ೨೬೪-೯; ೧). 'ಮೇಲ್ವರಿ' ಪರಾ. [ಮೇಲ್$_1$ + ಪರ್$_2$]

**ಮೇಲೆವಾಯ್** (ಕ್ರಿ). ೧. = ಮೇಲೆವರ್ ೧ : ಎಯ್ದುವಂದು ಮುಷ್ಟಿಕಂ ತೆಗೆದಾಗಡೆ ಮೇಲೆಮಯ್ದು ಬಲ್ಲಡಿಗನವೊಕೆ ಬಲ್ಲಡಿಗನಂ ಒಡೆದೊರ್ಮೆಯೆ ಮಲ್ಲಯುದ್ಧದೊಳ್ ಪೋರ್ದು (ಶಂಶಬಾ. ೬-೭೬); ಮೇಲೆವಾಯ್ದು ಮಹಿಷಾಸುರನಂ ತವೆ ಕೊಂದಳಾವಳಾ ಭಗವತಿ ಕೂರ್ತು ಬೀರಸಿರಿಯಾಗೆ ಭುಜಾಟಿಗೆ ನಾಗವರ್ಮನಾ (ಛಂದೋಂಬು. ೧-೪); ಅಂತಹಳಾಧ್ಯವಸಾಯನಾದುದರ್ಕೆವೈಸಿ ಮುಸಕದಿಂದಸಿಧೇನುವಂ ಕಿಟ್ಟು ಮೇಲೆವಾಯ್ದುಜಿಯಲಡಹಡಿಸಿ ಬರ್ಪಲ್ಲಿ (ಶಂಪ್ರಶ. ೬-೬೪ ವ). ೨. ಮೇಲೆ ಕೆಡೆ, -ಬೀಳು : ಒಡಿದಮರ್ದಪ್ಪಲೆಂದು ನಿಮಿರುತ್ತಿರೆ ದೋರ್ಲತೆ ಮೇಲೆವಾಯಲೆಂದೊಡರಿಸೆ ದೇಹವಿನ್ನೆಗವದೇಕೆಂಯೊ ನಲ್ಲನೆ ರೂಪುದೋಚಿ (ಜಗವ. ೦೭-೦೨೦). 'ಮೇಲ್ವಾಯ್' ಪರಾ. [ಮೇಲ್$_2$ + ಪಾಯ್$_1$]

**ಮೇಲೆವೀಟು**, ಮೇಲೆಬೀಳ್, ಮೇಲೆಬೀಳು, ಮೇಲೆಬೀಟು (ಕ್ರಿ). ೧. ಮೇಲೆರಗು; ಆಕ್ರಮಿಸು ; ಕವಿ; ಮುತ್ತು. ೨. ಒತ್ತಾಯಮಾಡು; ಬಲಾತ್ಕರಿಸು : ಏಡವಸನಾದರದಿಂ ಬಂದಡೆ ಸಿರಿವಂತಂಗೆ ಮೇಲೆವಿ[ಣಾಂ. ಬಿ]ರ್ದೊಲ್ಲದೊಡಂ ಕೂಡುಗುಂ ವಾತ್ಸಲ್ಯದಿನೆಂದೊಡೆ ಮತ್ತಾ ಜೈನನಲ್ಲಿ ಪುರುಳಿಟಿಸುವುದೆ (ಸಮುಶ. ೪-೩೩). **ಮೇಲೆಬೀಳ್** : ಮೇಲೆ ಬೀಳ್ವ ಕಠೋರಶಸ್ತ್ರವ್ರಜವ ನೂಕಿದನದ್ಭುವರಿಗೆಯುಲಿ (ಕುಭಾ.ಶ. ೨೦-೩). **ಮೇಲೆಬೀಳು** : ೧. ಮುಷಕಂ ಮೇಲೆಬಿದ್ದು ಕಾಡುವುವು ಮಾರ್ಜಾಲಮಂ (ಕೈಬಾ. ೦೩-೦೯). ೩. ಜಗಳ ತೆಗೆ : ಆ ದುಷ್ಟ ಮಾತು ಮಾತಿಗೂ ಮೇಲೆ ಬೀಳುತ್ತಾನೆ (ರೂಢಿ). ೪. ತಾನಾಗಿ ಮುಂದುವರಿ : ಮೇಲೆಬಿದ್ದ ಸೂಳೆ ಮೂರು ಕಾಸಿಗೂ ಬೇಡ (ಗಾದೆ) ; ಮೇಲೆಬಿದ್ದ ಸೂಳೆಗೆ ಹಾಗದ ಕಾಸು ಕೊಡುತ್ತೇನೆ ಅಂದ ಹಾಗೆ (ಗಾದೆ). **ಮೇಲೆಬೀಟು**: ೪. ಬರ್ಪೆ ನಾನೆಂಬುದು ಚಪಲತೆ ತಾಂ ಬರ್ಪುದೆಂದಂದು ಸೌಭಾಗ್ಯದ ಗರ್ವಂ ಮೇಲೆ ಬಿಟ್ಟಾನೆಳಸಿದಪೆನೆನಲ್ ಬಂಧಕೀಧಾರ್ಷ್ಟ್ಯಮಲ್ತೇ (ಕಾದಂಬ. ೪೦೬). 'ಮೇಲ್ವೀಟು' ಪರಾ.

**ಮೇಲೆಬಿದ್ದು ಸಾಯು** = (ಅಲಂ) ಹೆಚ್ಚು ಇಷ್ಟಪಡು,- ಬಯಸು; ಮುಗಿಬೀಳು : ಹುಡುಗರು . . . ಆ ಹೊಸ ಮಾಸ್ತರಂದರ ಮೇಲೆಬಿದ್ದು ಸಾಯುತಾವ (ಬೆಟ್ಟಹೂ. ೪೦). [ಮೇಲ್$_1$ + ಬೀಟು$_1$]

**ಮೇಲೇರು** (ಕ್ರಿ). ೧. ಮೇಲುಭಾಗಕ್ಕೆ ಹತ್ತು,-ಹೋಗು ; ಉಪರಿಭಾಗವನ್ನು ತಲುಪು : ರಭಸದಿಂದ ಅವನು ಮೇಲೇರಿ ಹೋದನು (ಇಕ್ಕ.ಶ. ೩೬೪). ೨. ಅಭಿವೃದ್ಧಿಯನ್ನು ಹೊಂದು; ಏಳಿಗೆಯನ್ನು ಪಡೆ : ಮನುಷ್ಯನು ಮೇಲೇರಿದಷ್ಟೂ ವಿನಯವಂತನಾಗಬೇಕು (ರೂಢಿ). [ಮೇಲು$_2$ (< ಮೇಲ್$_2$) + ಏರು$_1$ (< ಏಱ್$_1$)]

**ಮೇಲೇಳು** 'ಮೇಲೇಟು' ನೋ.

**ಮೇಲೇಟು**, ಮೇಲೇಳು (ಕ್ರಿ). ೧. ಮೇಲಕ್ಕೆ ಏಳು ; ಎದ್ದುನಿಲ್ಲು. ೨. ಮುತ್ತು ; ಕವಿ ; ಆಕ್ರಮಿಸು ; ದಾಳಿಮಾಡು : ಏರ್ದೆಯೊಳ್ ಕೋಪಾಗ್ನಿ ಕೈಗಣ್ಮೆ ಬಂದಿನಿತುಂ ರಾಜಕುಲಂ ಸಮಸ್ತಭರದಿಂ ಮೇಲೆಟ್ಟುದು (ಶಂಶಬಾ. ೩-೬೯); ದೂತನನಟ್ಟಿದೊಡಾತಂಗೆ ಕುಡಲೊಲ್ಲದಿರ್ದೊಡೆ ಮುಳಿದು ಮೇಲೆರ್ದು ಚತುರಂಗಬಲಂಬೆರಸು ಕಾದುವುದುಂ (ಚಾವುಂಪು. ೦೧೬). **ಮೇಲೇಳು** : ೧. ತಿಂಗಳಾರಕೆ ಮರಳಿ ಬಹೆನೆಂಬ ಭಾಷೆಯುಂ ಭಾವಿಸುತೆ, ಭಾಮಿನಿ ಸಮಾಧಾನಬುದ್ಧಿಯಿಂ ಮೇಲೇಳುತಲ್ಲಿಂ ನಡೆದು ಶಿವಾಯತನಕ್ಕೆ (ತತ್ತ್ವಗ. ೩೭-೦೩೩೩). ೩. ಹೊರಹೊಮ್ಮು ; ಹರಡು ;

ವ್ಯಾಪಿಸು : ಶೋಕಭೇರೀರವಂ . . . ಮೃದುವಾದ್ಯ ಸುಸ್ವನಂ ವೈದಿಕ ಪುರೋಹಿತರ ಮಂತ್ರಘೋಷಂಬೆರಸಿ ಮೇಲೆದ್ದುದೊಯ್ಯನೊಯ್ಯನೆ ಜನರ ರೋದನದ ಕೂಡೆ (ಜಕ್ಕಾಂಗ. ೬೬-೨೯೩೪). ೪. ಹುಟ್ಟಿಕೊಳ್ಳು : ಉದ್ಭವವಾಗು : ಈ ಕಾಲದಲ್ಲಿ ವೇದವಿಧಿಯನ್ನು ಸ್ಥಾಪಿಸಲು ಮೀಮಾಂಸಾಕಾರರೂ ಅವರ ದರ್ಶನವೂ ಮೇಲೆದ್ದವು (ಭಾರತ. ೧೩೮). ೫. ಎಚ್ಚೆತ್ತುಕೊಳ್ಳು ; ಜಾಗೃತವಾಗು : ಎಲ್ಲ ಮರೆತು ಮೇಲೆದ್ದಿದೆ ಭಾರತ ಬಿಡುಗಡೆ ಕಾಯ್ದಿವೆ ವೀರಪಡೆ (ನೆಲಮು. ೯೫-೨೦).
[ಮೇಲ್$_2$ + ಏೞ್$_1$]

**ಮೇಲೊಡ್ಡ** (ನಾ). ಮಿಗಿಲಾದ ಪಣ ; ಅತಿಶಯವಾದ ಒಡ್ಡು : ಕಬ್ಬಿನ ಹಣೆದವನಾಡುವರಲ್ಲದೆ ಕಾಜಾದ ಹಣೆದವನಾಡುವರೆ ಮೇಲೊಡ್ಡವಾಯಿತ್ತೆಂದು . . . ನೀನಿಕ್ಕಿದ ಜೂಜಿಂಗೆ ಹೊಯಿದು ಗೆದ್ದ ಸಿರಿಯಾಳ (ಬಸವ. ೬೬೯). [ಮೇಲ್$_1$ + ಒಡ್ಡ$_3$]

**ಮೇಲೋಗರ** (ನಾ). ೧. ಅನ್ನದ ಜೊತೆಗೆ ಬಡಿಸುವ ಸಾರು, ಹುಳಿ, ಕೂಟು ಮುಂತಾದ ವ್ಯಂಜನಪದಾರ್ಥ : ಗುರುವೆ ಬೋನ ಶಿಷ್ಯನೆ ಮೇಲೋಗರ ಲಿಂಗಕ್ಕೆ ಪದಾರ್ಥವರ್ಪಿತವಯ್ಯಾ (ಕನ್ನವ. ೪. ೩೯೨-೮೩೦); ಪಲವುಂ ತೆಱದ ಭಕ್ಷ್ಯಮುಂ ಪಾಯಸಂಗಳುಮಂ ಓಗರಮುಂ ಪರಿಪರಿಯ ಮೇಲೋಗರಮುಮಂ ಪಾನಪಳಿದ್ಯಮುಮಂ ಮಾಡಿಯಿರುತ್ತಿರಲ್ (ಧರ್ಮಾಮೃ. ೨-೯೬ ವ); ಓಗರವ ತಾ ತ್ರೋಯೆಮನಿಕ್ಕು ಹಸನಾಯ್ತು ಮೇಲೋಗರವ ಬಡಿಸು . . . ಎನುತುಮಾರೋಗಣೆಯನಾ ಹೊಟ್ಟೆಯೊಡೆವ ಮರ್ಯಾದೆಯೊಳಗುಂಡು ತೇಂಕುತ್ತಿರ್ದರು (ಸವ್ಯಸಾ. ೭-೨೩). ೨. ತರಕಾರಿ ; ಕಾಯಿಪಲ್ಲೆ : ಅಕ್ಕಿಗಳ ರಾಸಿ ಮೇಲೋಗರದ ಪರ್ವತಂ ಮಿಕ್ಕ ವಸ್ತುಗಳೆಣಿಸಲಳವಲ್ಲದುನ್ನತಂ (ಚೊಪ್ಪುರ. ೧೭೩-೩೦); ನಾರಿವಣದ ಕಾಯ ಪೇಱೊಂದಕ್ಕಂ ಹಾಗ ಕಾಯಿ ಮೇಲೋಗರದ ಬಂಡಿ ಒಂದಕ್ಕಂ ಹಾಗ (ಎಕ. V, ಬೇಲೂರು. ೭೫-೦೦೯; 1382); ಕೂಲಿಗೆ ನೀರೆನಟ್ಟುವ ಕೂಳನಿಕ್ಕುವ ಹಾಲು ಮೊಸರು ಪಲತೆಱದ ಮೇಲೋಗರವ ಮಾಱುವ ಹಸರಂಗಳ ಸಾಲೊಪ್ಪಿತು (ಶ್ರೀಕಾಂ. ೦೩-೦೦೮). [ಮೇಲ್$_2$ + ಓಗರ]

**ಮೇಲ್ಕಟ್ಟು** 'ಮೇಲ್ಗಟ್ಟು$_2$' ನೋ.

**ಮೇಲ್ಕಡೆ** 'ಮೇಲ್ಗಡೆ' ನೋ.

**ಮೇಲ್ಕೊಳ್** (ಕ್ರಿ). ೧. ಮೇಲುಭಾಗದಲ್ಲಿ ಹೊದೆದುಕೊಳ್ಳು,– ಧರಿಸು : ಗಂಧಿಲವಿಷಯದ ನಡುವೆ ತನ್ಮಹೀವಿಲಾಸಿನಿಯ ಮೇಲ್ಕೊಂಡ ದುಕೂಲಮುಮಂ . . . ಅನುಕರಿಸಿ (ಆದಿಪು. ೧-೭೨ ವ); ಮುಡಿವ ನೆವದಿಂದೆ ತನ್ನಯ ಮುಡಿಯುಂ ಮೇಲ್ಕೊಳ್ವ ನೆವದೆ ಮೊಲೆಯುಂ ಪೆಱರೊಳ್ ನುಡಿವ ನೆವದಿಂದೆ ಪಲ್ಗಳ ಬೆಡಂಗನೊರ್ವಳ್ ವಿಲಾಸದಿಂದೆ ಮೆಱೆದಳ್ (ಸುಕುಮಾ. ೧೧-೮); ವಸುಧಾಂಗನೆ ಮೇಲ್ಕೊಂಡಳೊ ಪೊಸಪಸುರ್ವಟ್ಟೆಯ ವಿಳಾಸದಿಂದೆಸೆವ ದುಕೂಲಸಿಚಯಕವೆನೆನೆ ತನ್ನದಿಯೆಸೆದುವದೊಂದುಭಯತಟವನಾಬ್ಜಾಂಬುಗಳಿಂ (ಜಗನ್ನಾ. ೬.೯). ೨. ಮೇಲಕ್ಕೆ ಎಳೆದುಕೊಳ್ಳು : ನೆಲೆವೊಲೆಯಿಂದಂ ಮೇಲುದು ತೊಲಗಲ್ ಹಾರಾಂಶುವಂ ಸಿಚಾಂಶುಕವೆಂದೆಂದಲಘುಕುಚೆ ಮೇಲ್ಕೊಳುತ್ತಾಕುಲತೆಯಿನೆಯ್ದೆಂದು ನೋಡಿದಳ್ ನೃಪವರನಂ (ಕಾದಂಪೂ. ೯೭೯). [ಮೇಲ್$_2$ + ಕೊಳ್$_1$]

**ಮೇಲ್ಗಂಬ** (ನಾ). ಕಂಬದ ಮೇಲುಭಾಗ,–ತುದಿ ; ತುದಿಗಂಬ : ಕಾಯ್ಪುರಿಯೊಳು ಕರ್ಬುನದ ಮೇಲ್ಗಂಬದಿ ಸಾಧನೆಗೆಯ್ದು ಪುಲ್ಸರದಿ ಐದಿದ ದ್ಯಾರಿ ತಾ ನಾಲುತೆಱದೆ ತಾನಾದುದು ಬಾದ ದೈತ್ಯರಿಗೆ (ಮೋಹತ. ೧೨-೩೯). [ಮೇಲ್$_1$ + ಕಂಬ$_1$ (<ಕಂಭ)]

**ಮೇಲ್ಗಟ್ಟು$_1$**, ಮೇಲುಗಟ್ಟು$_1$ (ಕ್ರಿ). ಎತ್ತಿಹಿಡಿ ; ಸಮರ್ಥಿಸು ; ಪುಷ್ಟೀಕರಿಸು ; ಬೆಂಬಲಿಸು : ಅವ್ವ ಅಕ್ಕನನ್ನೇ ಮೇಲ್ಗಟ್ಟಿಕೊಂಡಳು (ವೃಷ. ೧೯೦). **ಮೇಲುಗಟ್ಟು$_1$** : ನೀನಾದರೂ ನಿನ್ನ ಪ್ರಭುವನ್ನು ಮೇಲುಗಟ್ಟಿ ಯಾಕೆ ಮಾತಾಡಲಿಕ್ಕಿಲ್ಲ ? (ಕುಳಸಿ. ೩೦೯) ; ಮೊಮ್ಮಗನನ್ನು ಮೇಲುಗಟ್ಟಿಕೊಂಡು ರಾಮಜೀ ಕಾಕಾ ತನ್ನ ಯಜಮಾನರ ಬಗ್ಗೆ ಆಡಿದ ಮಾತು ಸೋನೂತಾಯಿಗೆ ಅರ್ಥಾತ್ ರುಚಿಸಲಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ (ದೀಶಹ. I, ೩೩). [ಮೇಲ್$_2$ + ಕಟ್ಟು$_1$]

**ಮೇಲ್ಗಟ್ಟು$_2$**, ಮೇಲುಕಟ್ಟು, ಮೇಲುಗಟ್ಟು$_2$, ಮೇಲ್ಕಟ್ಟು (ನಾ). ಸಿಂಹಾಸನ ಮಂಟಪ ಮೊದಲಾದುವುಗಳ ಮೇಲುಭಾಗದಲ್ಲಿ ಅಲಂಕಾರಕ್ಕಾಗಿ ಕಟ್ಟುವ ಬಟ್ಟೆ ; ವಿತಾನ : ಮೇಲ್ಗಟ್ಟಿನ ಪಸುರ್ವಟ್ಟೆಯ ಪೊಲ್ಗಳಿಗಳ್ಸಲೆಯೆ ಗಗನದೊಳ್ (ಮಲ್ಲಿಪು. ೨-೦೭); ಅಮರೆ ತಾವರೆಯ ನೂಲಿಂ ಕೀಲಿಸಿದೆಳವಾೞೆಯ ಸುೞಿಯೆಲೆಯ ತಳತಳಿಪ ಮೇಲ್ಗ[ಪಾಠಾಂ. ಲ್ಕ]ಟ್ಟಿನೊಳಂ (ಚಂದ್ರಪು. ೭-೯೫ ವ); ಕಾಮಾಸ್ತ್ರನಿಳಯದ ಬಹಳ ಪಚ್ಚೆಯ ಮಿಂಟೆ ಧಾಮದ ಮೇಲ್ಗಟ್ಟಿನಂತೆ ರಾಮಣೀಯತೆವೆತ್ತ ಚೆಂದಳಿರ್ ಮಿಡಿಯಿಂದೆ ಮಾಮರ ಮನಗೊಳಿಸಿದುವು (ಮೋಹತ. ೨೪-೪೪). **ಮೇಲುಕಟ್ಟು** : ಪಚ್ಚೆಯ ನೆಲಗಟ್ಟು ಕನಕದ ತೋರಣ ವಜ್ರದ ಕಂಬ ಪವಳದ ಚಪ್ಪರವಿಕ್ಕಿ ಮುತ್ತುಮಾಣಿಕದ ಮೇಲುಕಟ್ಟು ಕಟ್ಟಿ ಮದುವೆಯ ಮಾಡಿದರು (ಮಹಾದೇ. ೪. ೨೦-೫೦); ಮೇಲುಕಟ್ಟಿನ ಝಲ್ಲಿಗಳು ನೆಲಕಟ್ಟಿನ ನೀಲರತ್ನದೊಳು ಮಾರ್ಪೊಳೆಯೆ (ಭರತ. ೧೨-೧೭) ; ಮಹಾದ್ವಾರವು ತೋರಣದಿಂದ ಅಲಂಕೃತವಾಗಿತ್ತು; ಒಳಗೆ ಎಲ್ಲೆಡೆಯಲ್ಲಿಯೂ ಚಿತ್ರದ ಮೇಲುಕಟ್ಟುಗಳನ್ನು ಕಟ್ಟಿತ್ತು (ಪವಥಾ. ೫೦). **ಮೇಲುಗಟ್ಟು$_2$** : ತಳಿತ ಪಲ್ಲವಸತ್ತಿಗೆಯ ಪೊಂಗಳಸಗಳ ಪೊದಱಿದ್ದ ಝಲ್ಲರಿಗಳ ವಿಚಿತ್ರಾಂಬರದ ಮುತ್ತಿನ ಮೇಲುಗ[ಪಾಠಾಂ. ಕ]ಟ್ಟುಗಳ . . . ಲಹರಿಯಲಿ ರಂಜಿಸಿದುದ ನಪರತ (ತೊರವೆ. ೦-೭-೦೯); ದಿವಿಜಲೋಕದಲಾರು ಮೆಲ್ಲನೆ ತವಕದಲಿ ನೆರೆದಿರಲೊಡನೆ ಗಗನವು ವಿಚಿತ್ರಿತ ಮೇಲುಗಟ್ಟೆನಿಸಿತು ವಸುಂಧರೆಗೆ (ಶಾಳ್ವಭಾ. ೩೩-೦೭). **ಮೇಲ್ಕಟ್ಟು** : "ಉಲ್ಲೋಚಂ ಚಂದ್ರೋವಯುಂ ವಿತಾನಾ[ಪ್ಯಯ]ಮೆ(ನಲದು) ಮೇಲ್ಕಟ್ಟುಂ" (ವಸ್ತುಕೋ. ೪೯-೨೨); ಸಾಂದ ಸಾರಂಗಪಟ್ಟೆಯ ಮೇಲ್ಕಟ್ಟಿನಂಬರದೊಳ್ಕಟ್ಟಿದಳೆಂಬಂತೆ ಸಂಜೆ ಸಂಜಾತ ಸ್ವರಾಗಪಟಲಮುಂ ಪಸರಿಸೆ (ಕಾದಂಬ. ೩೭೫); ರಾತ್ರೀವಧು ತಾಂ ಕಟ್ಟಿದ ಬಹುರತ್ನದ ಮೇಲ್ಕಟ್ಟೆನಿಸಿದುದಂಬರಂ ಸುತಾರಾಗಣದಿಂ (ಗಿರಿಜಾ. ೯-೯೨); ಪವಳವಣೆಯ ಮೇಲ್ಕಟ್ಟಿನ ಸೊಬಗಿಂದ ಭುವನೇಶ್ವರಿಯೊಪ್ಪಿದುದು (ಕಂಪರಾ. ೭-೩೫). [ಮೇಲ್$_2$ + ಕಟ್ಟು$_2$]

**ಮೇಲ್ಗಡೆ**, ಮೇಲುಗಡೆ, ಮೇಲ್ಕಡೆ (ನಾ). ಮೇಲಿನ ಭಾಗ ; ಉಪರಿಭಾಗ : "ನಿಗಾಳಃ– ೧. ಗಳೋದ್ದೇಶೇ–ಕುದುರೆಗಳ ಕೊಗಿಗೆ ಹೆಸರು ಕುದುರೆಯ ಕೊರಳು ಮೇಲ್ಗಡೆಗೆ ಹೆಸರು" (ಸಿದ್ಧಾಂಶ. ೫೫೦). **ಮೇಲುಗಡೆ** : (ಕ). **ಮೇಲ್ಕಡೆ** : "ವಿತಾನಂ, ಉಲ್ಲೋಚಃ . . . ೨ ಮೇಲ್ಕಟ್ಟು – ವಸ್ತ್ರಾದಿನೀವಸ್ತ್ರ – ಮನೇ ಮೇಲ್ಕಡೆಗೆ ಕಟ್ಟುವ ಚಿತ್ರದ ಬಟ್ಟೆ" (ಸಿದ್ಧಾಂಶ. ೨೦೫). 'ಕೆಳಗಡೆ' ಪರಾ. [ಮೇಲ್$_1$ + ಕಡೆ$_3$]

**ಮೇಲ್ಗತೆ** (ನಾ). ಮುಂದಿನ ಕಥೆ, – ವೃತ್ತಾಂತ : ನಿನ್ನ ಮೆಲ್ನುಡಿಗಳ್ಗೆ ಕಿವಿಗುಡದವರಾರು ಮನ್ನಾಥ ಪೇಳು ಮೇಲ್ಗತೆಯ (ಮೋಹತ. ೬-೦); ಕೇಳು ಮೇಲ್ಗತೆಯ ದಂಬೋಳಿಗ್ಯೆಯನ ಪುರಿಗೋಳಿಯಿಂ (ಮುದ್ದಣ. IV, ೦೦೫೯ ತೋರಣಾಜ ಸಾಂಗತ್ಯ). [ಮೇಲ್$_1$ + ಕತೆ]

**ಮೇಲ್ಗಥೆ** (ನಾ). = ಮೇಲ್ಗತೆ : ಸತ್ಕಳಾಧರನ ಒಲವಾಂತು ಮೇಲ್ಗಥೆ ವೇಳು ಲಾಲಿಸುವೆ ಲೀಲೆ ಮಿಗಲು (ಪಪಮೋ. ೨-೨). [ಮೇಲ್$_1$ + ಕಥೆ]

**ಮೇಲ್ಗಾಣ್**, ಮೇಲುಗಾಣು (ಕ್ರಿ). ಉಚಿತತೆಯನ್ನು ತಿಳಿದುಕೊಳ್ಳು ; ಯೋಗ್ಯವಾದುದನ್ನು ಅರಿತುಕೊಳ್ಳು. **ಮೇಲುಗಾಣು** : ಭೂಪಾಲ ನಿನ್ನವರೆನ್ನ ಮಾತನು ಕೇಳಿ ಮನ್ನಿಸದೆ ಮೇಲುಗಾಣದೆ ನೀರು ಕುಡಿದು ವಿತಾಳಿಸಿದರು (ಕುಮ್ಮಾರ. ೨೩-೩೭).

ಮೇಲ್ಗಂಡುಗೆಯ್ = (ದೇವಸ್ಥಾನದ) ಮೇಲ್ವಿಚಾರಕನಾಗಿರು,–

ಸೂತ್ರಧಾರಿಯಾಗಿರು : ಸ್ವಸ್ತಿಶ್ರೀ ಸಕಲೇಸಿವಾದಿಗಳ ಪಾದಧೂಳಿ ಲೋಕೇಶ್ವರದ ಮೇಲ್ಗಣ್ಣಾಗೆಯ್ದೋನ್ ಆದಿತ್ಯ ಶ್ರೀಹಡದೇವಪುತ್ರಂ (ತಿಕ. X, ೦೬೭–೫ ; ೨೫ಯ ೬೪). [ಮೇಲ್$_1$ + ಕಾಣ್]

**ಮೇಲ್ಗಾಪು.** ಮೇಲುಗಾಹು (ನಾ). (ವ್ಯಕ್ತಿಗೆ ಅಪಾಯವಾಗದ ಹಾಗೆ ಅಥವಾ ಆ ವ್ಯಕ್ತಿಯು ತಪ್ಪಿಸಿಕೊಂಡು ಹೋಗದ ಹಾಗೆ ಮಾಡುವ) ಮೇಲಿನ ಕಾವಲು, – ಪಹರೆ : ತನ್ನಯ ಮೇಲ್ಗಾ[ಪಾಠಾಂ. ಮೆಯ್ಗಾ]ಪಿನ ಭಟರುನ್ನತವಿಕ್ರಾಂತನಿಳಬುರೆಯ್ದಿಂದಾಗಳ್ (ಶಬ್ದಾ.ಸ್ವ. ೩–೨೯) ; ತೆರಕಣಾಂಬಿಯ ಬೇಹಾರಿ, ರಣಧೀರನ ಮೇಲ್ಗಾಪಿಗೆ ಬಂದಿರುವ ವೀರ (ಪಟ್ಟಿ. ೭–೬). **ಮೇಲುಗಾಹು :** ಮೇಲುಗಾಹಿಗೆ ಜಟೆ ತ್ರಿಜಟೆಯರು . . . ಕಾಳರಕ್ಕಸಿಯರ ಸಮೂಹದ ಸೂಳು ಪ್ರಹರಿಗಳುಲುಹುಗಳ ಕರವಾಳು ಕೈದುಗಳಾಂತು ಕಾದಿಹರಯುತರನು ದಿನವ (ಉತ್ತ.ಕ. ೯೦–೨೨). [ಮೇಲ್$_1$ + ಕಾಪು]

**ಮೇಲ್ಗಾವಲು,** ಮೇಲುಗಾವಲ (ನಾ). ಮೇಲ್ವಿಚಾರಣೆ; ಉಸ್ತುವಾರಿ (೯). **ಮೇಲುಗಾವಲು :** ಭಕ್ಷಿ ಜಲಾಲುದ್ದೀನರೇ ಮೇಲುಗಾವಲನ್ನು ನೋಡಿಕೊಳ್ಳಬೇಕೆಂದು ಹುಕ್ಕುಂ ಆಯಿತು (ಚಾಲುಕ್. ೯೯).
[ಮೇಲ್$_1$ + ಕಾವಲು (< ಕಾವಲ್$_1$)]

**ಮೇಲ್ಗಾಳಿ** (ನಾ). ಆಕಾಶದ ಎತ್ತರದಲ್ಲಿ ಬೀಸುವ ಗಾಳಿ : ಸಲ್ಗೆಯೊಳಲ್ಲಿಯ ಕೋಡುಂಗಲ್ಗಳಿ ಪೇಚರತೆವಡೆದು ಪಾಱುವ ತೆಱದಿಂ ಮೇ[ಪಾಠಾಂ. ಮೆ]ಲ್ಗಾಳಿಯುಲಿಯೆ ಬಿಳಿಯ ಮುಗಿಲ್ಗಳ್ ಪಾಱುವುವು ಖಚರಗಿರಿ ವನತಟದೊಳ್ (ಅರ್ಜು. ೨–೭೩). [ಮೇಲ್$_2$ + ಗಾಳಿ$_1$]

**ಮೇಲ್ಗುಡಿ** (ನಾ). ಮೇಲಕ್ಕೆ ಎತ್ತಿ ಹಿಡಿದಿರುವ ಬಾವುಟ, –ಧ್ವಜ : ನವೀನಚೀನದಿಂ ಬಿತ್ತರಪೆತ್ತ ಮೇಲ್ಗುಡಿ ನಿವಿರ್ಚಿದ ಬಜ್ಜರಗೇಬಂ . . . ವಿರಾಜಿತಮಾಯ್ತು ವಿವಾಹಗೇಹದೊಳ್ (ರಾಜಶೇ. ೬–೨). 'ಮೇಲ್ಗುಡಿ ಗಟ್ಟು' ಪರಾ. [ಮೇಲ್$_2$ + ಗುಡಿ$_2$]

**ಮೇಲ್ಗುಡಿಗಟ್ಟು** (ಕ್ರಿ). (ಸೊಂಡಿಲನ್ನು) ಧ್ವಜದಂತೆ ಮೇಲೆತ್ತಿ ಹಿಡಿ : ನಂಬಿಯಣ್ಣನಲ್ಲಿಗೆ ಸೊಕ್ಕಿದಾನೆ ಮಿಕ್ಕು ಮೀಱಿ ಬಂದು ಮುಂದೆ ನಿಂದು . . . ಬಂಡಿಯಂ ಬಲವಂದು ಕಾಲ್ಗೆಱಗಿ ಮೇಲ್ಗುಡಿಗಟ್ಟಿ ಪೆಱಮೆಟ್ಟಿ ಸಱನೆ ತಿರುಗಲ್ (ನಂಬಿರ. ೨–೨೯). [ಮೇಲ್ಗುಡಿ + ಕಟ್ಟು$_1$]

**ಮೇಲ್ಗೆಯ್,** ಮೇಲುಗೆಯ್, ಮೇಲುಗೈ, ಮೇಲ್ಗೈ (ನಾ). ೧. ಮೇಲಕ್ಕೆ ಎತ್ತಿದ ಕೈ; ಮೇಲೆತ್ತಿ ಹಿಡಿದ ಹಸ್ತ : ಕೋಲ್ಗಱಿಯ ಲಾನೆಗಳ ಸುಂಡಿಲ್ಗಳುಂ . . . ಮೇಲ್ಗೆಯ್ಯ [ಪಾಠಾಂ. ಲ್ಗೈಯ] ರಥಿಕರ ಧನುರ್ದಂಡಮುಂ . . . ಸಾರ್ತೊಗ್ಗೆಂಡವೆಳ್ದುವು (ಶ್ರೀಖಾಭಾ. ೨೦–೦೯). **ಮೇಲುಗೆಯ್ :** ೧. ಕಾಳೆಗಕ್ಕನುವಾಗಿ ರಥ ತುರಗಾಳಿ ಕರಿ ಕಾಲಾಳು ದೊರೆಗಳ ಮೇಲುಗೆಯ[ಪಾಠಾಂ. ಗೈ] ಚಮರಿಗಳನೀಕ್ಷಿಸುತ್ತಿದ್ದುದುಭಯಬಲ (ಕುಮಾ.ಭಾ. ೨–೧). **ಮೇಲುಗೈ:** ೨. (ಅಲಂ) ಮಿಗಿಲು; ಹೆಚ್ಚುಗಾರಿಕೆ; ಹಿರಿಮೆ : ಬುದ್ಧಿಯ ಸೆಣಸಾಟ ಮೇಲುಗೈ ಆಗಿ ವಾಸ್ತವಿಕ ನಿಲುವಿನಿಂದ ದೂರಸರಿಯುವರು (ದ್ಯಾವಿವಿ. ೭೮); ಇವರಲ್ಲಿ ಆಕರ್ಷಣವೇ ಕ್ರಮೇಣ ಹೆಚ್ಚು ಹೆಚ್ಚಾಗಿ ಮೇಲುಗೈ ಪಡೆಯುತ್ತಿದೆ (ಕೂಹುಟ್ಟು. ೩೦) ; ಅಭ್ಯಾಸದಲ್ಲಿ ಯಾವಾಗಲೂ ಅವನದೇ ಮೇಲುಗೈ (ರಂಗರೂ. ೯೯). ೩. ಮಿಗಿಲಾದ ವ್ಯಕ್ತಿ : ಮೇಲುಗೈ ನೀನಾದೆ ಕುಸಿದರು ಪಾಂಡುನಂದನರು (ಕುಮಾ.ಸ. ೦೩–೫೦). **ಮೇಲ್ಗೈ :** ೨. ಮುಂದೆ ನನ್ನನ್ನು ಮೀರಿಸಿ ನನಗೆ ಮೇಲ್ಗೈಯಾದಾಳು (ವಚನ. ೧೯). [ಮೇಲ್$_2$ + ಕೆಯ್$_2$]

**ಮೇಲ್ಗೈ** 'ಮೇಲ್ಗೆಯ್' ನೋ.

**ಮೇಲ್ಗೊಳಗ** (ನಾ). ಗೇಣಿದಾರನು ಮಾಲೀಕನಿಗೆ ತನ್ನ ಗೇಣಿಯನ್ನು ಕೊಡುವಾಗ ಅದರ ಜೊತೆಗೆ ಗೌರವಕ್ಕೆಂದು ಉಚಿತವಾಗಿ ಕೊಳಗದಲ್ಲಿ ಅಳೆದು ಕೊಡುವ ಹೆಚ್ಚಿನ ಧಾನ್ಯ: ಗೇಣಿದಾರರು ಗೇಣಿಯನ್ನು ಕೊಡುವುದರ ಜೊತೆಗೆ ತರಕಾರಿ, ತರಪಡಿ, ತಳರಾಸಿ, ಮೇಲ್ಗೊಳಗ, ಲಾಭಸೆರೆ ಮುಂತಾದ ಮರ್ಯಾದೆಗಳನ್ನು ಭೂಮಾಲೀಕರಿಗೆ ಕೊಡಬೇಕಾಗಿತ್ತು (ಕಂಶಕಂ. ೧೦). 'ಮೇಲ್ಸುಂಕ' ಪರಾ. [ಮೇಲ್$_1$ + ಕೊಳಗ$_1$]

**ಮೇಲ್ಚಾವಣಿ** 'ಮೇಲ್ಛಾವಣಿ' ನೋ.

**ಮೇಲ್ಚೀಟು,** ಮೇಲುಚೀಟಿ (ನಾ). ಅಡವು, ಹಕ್ಕು ಮೊದಲಾದುವುಗಳಿಗೆ ಸಂಬಂಧಿಸಿದಂತೆ ಕೋರ್ಟಿನಲ್ಲಿ ವ್ಯವಹಾರನಡೆಸಲು ಒಬ್ಬನು ಮತ್ತೊಬ್ಬನಿಗೆ ಅಧಿಕಾರವನ್ನು ವಹಿಸಿ ಕೊಡುವ ಪತ್ರ, –ಅಧಿಕಾರ ಪತ್ರ: ನರಸಿಂಹಭಟ್ಟರು ತಮ್ಮ ಹೆಸರಲ್ಲಿರುವ ಸೆಟ್ಟರ ಆಸ್ತಿಯ ಅಡವಿನ ಮೇಲ್ಚೀಟನ್ನು ಕೃಷ್ಣಭಟ್ಟರಿಗಿಟ್ಟರು (ಮಣ್ಣ.ನಂ. ೬೨). **ಮೇಲುಚೀಟಿ :** ನಾಗರಾಜ ಕೊಡುವ ಹಣಕ್ಕೆ ಠೋಕರ ಕೊಟ್ಟಾಯಿತು . . . ಈಗ ಅದನ್ನು ಪೇಟೆಯ ಸಾಹುಕಾರರಿಗೆ ಮೇಲುಚೀಟಿಗೆ ಕೊಟ್ಟಿದ್ದಾನೆಂದೂ ಕೇಳಿದೆ (ಕುಂಗಡು. ೨೩೯). [ಮೇಲ್$_1$ + ಚೀಟು$_2$]

**ಮೇಲ್ಛಾವಣಿ,** ಮೇಲ್ಚಾವಣಿ (ನಾ). ಮನೆಯ ಮೇಲುಭಾಗದ ಸೂರು; ಮಾಡು : ಇದರ ಎತ್ತರ ಸಾಮಾನ್ಯವಾಗಿ ನೆಲದಿಂದ ಮೇಲ್ಛಾವಣಿಯ ವರೆಗೂ ಇರುತ್ತದೆ (೪೭ಕೋ. I. ೨೨೨); ಆಳವಾಗಿ ನೆಟ್ಟ ಸ್ತಂಭವು ಮನೆಯ ಮೇಲ್ಛಾವಣಿಯನ್ನು ಭದ್ರವಾಗಿ ಹಿಡಿದಿರುವಂತೆ ನೀನು (ದೇವಮಾನವಾದಿಗಳಿಗೆಲ್ಲ) ಅವಲಂಬನವನ್ನು ಕೊಟ್ಟು ನಿಲ್ಲಿಸಿದ್ದೀಯೆ (ಋಗ್ವೇ.ರ. ೦). **ಮೇಲ್ಚಾವಣಿ :** ಮೇಲ್ಚಾವಣಿಯ ಮೇಲೆ ಪಾರಿವಾಳ ಗೂಡು ಕಟ್ಟಿದೆ (ರೂಢಿ). [ಮೇಲ್$_1$ + ಛಾವಣಿ]

**ಮೇಲ್ತನಿಖೆ** (ನಾ). ಪುನಃ ಪರೀಕ್ಷಿಸುವುದು ; ಮತ್ತೊಮ್ಮೆ ಮಾಡುವ ವಿಚಾರಣೆ : ಮೇಲ್ಕಂಡ ತೀರ್ಪನ್ನು ರದ್ದುಗೊಳಿಸಬೇಕೆಂದೂ ಮೇಲ್ತನಿಖೆಗಾಗಿ ಈ ಮೊಕದ್ದಮೆಯನ್ನು ಅದೇ ಕೋರ್ಟಿನ ಮತ್ತೊಂದು ಶಾಖೆಗೆ ವರ್ಗಾಯಿಸಬೇಕೆಂದೂ ಮನವಿ ಮಾಡಿಕೊಳ್ಳುತ್ತೇನೆ (ಕೃನರು. ೨೦೩).
[ ಮೇಲ್$_2$ + ತನಿಖೆ (< ತನಕಿ) ]

**ಮೇಲ್ತರ** ಮೇಲುತರ (ನಾ). ೧. ಉತ್ತಮ ಮಟ್ಟ ; ಶ್ರೇಷ್ಠ ದರ್ಜೆ. ೨. ಜೀವವಿಕಾಸದ ಮೇಲಿನ ಮಟ್ಟ, –ಹೆಚ್ಚಿನ ಸ್ತರ : ಎಲ್ಲಕ್ಕಿಂತಲೂ ಉತ್ತಮವಾದುವು ಐದುಇಂದ್ರಿಯಗಳನ್ನು ಪಡೆದಿರುವ ಪಂಚೇಂದ್ರಿಯ ಜೀವಗಳು. ಇವಕ್ಕೆ ಮೇಲಿನ ನಾಲ್ಕು ಇಂದ್ರಿಯಗಳಲ್ಲದೆ ಶ್ರವಣೇಂದ್ರಿಯವೂ ಇದೆ. ಮೇಲ್ತರದ ಪ್ರಾಣಿಗಳೆಲ್ಲ ಈ ವರ್ಗಕ್ಕೆ ಸೇರಿವೆ (ತತ್ತ್ವಶಾ. ೦೯೬). **ಮೇಲುತರ:** ೧. ಮೇಲುತರದ ಪಟ್ಟೆ ವರಸೂಪು ಸಕಲಾತಿ ಜೂಲುಗಳಿಂದ ರಂಜಿಸುವ ಕಾಲುವೇಗದ ಕುನಿವಿಡಿದ ಕಿರಾತರು ಸಾಲಿಟ್ಟು ನಡೆದರೊಗ್ಗಿನಲಿ (ಮೋಹತ. ೧೯–೭೦). [ಮೇಲ್$_1$ + ತರ$_3$]

**ಮೇಲ್ತರಗತಿ** (ನಾ). = ಮೇಲ್ತರ.೧ : ೧೦ನೆಯ ಶತಮಾನದ ಶಾಸನ ಸಾಹಿತ್ಯವು ಹಿಂದಿನ ಶತಮಾನಗಳಿಗಿಂತ ಮೇಲ್ತರಗತಿಯದಾಗಿದೆ (ಶಾಹಿಸ ೯); ಮೇಲ್ತರಗತಿಯ ರಾಗಾಲಾಪವನ್ನು ತಾಳವಿಶಿಷ್ಟವಾಗಿ ಮಾಡಲು . . . ಹೊಸವಾದುದಿಯ ಸಾಹಿತ್ಯವನ್ನು ಕನ್ನಡಿಗರು ಪ್ರಚಾರದಲ್ಲಿ ತಂದರು (ಜಗದಾ. ೬೩). [ಮೇಲ್$_1$ + ತರಗತಿ]

**ಮೇಲ್ತುಟಿ** 'ಮೇಲ್ದುಟಿ' ನೋ.

**ಮೇಲ್ತೂಕ** (ನಾ). ವ್ಯಾಪಾರದಲ್ಲಿ ತೂಕಕ್ಕಿಂತ ಮತ್ತಿಷ್ಟು ಕೊಡುವ ಹೆಚ್ಚಿನ ಪದಾರ್ಥ ; ಕೊಸರು : "(ವ್ಯಾಪಾರ) ಕೆಲವು ಸರಕುಗಳ ಮಾರಾಟದಲ್ಲಿ ಕೊಂಡುಕೊಂಡ ಪ್ರತಿ ೧೦೪ ಪೌಂಡು ತೂಕಕ್ಕೆ ಕೊಸರಾಗಿ ಕೊಡುತ್ತಿದ್ದ ೪ ಪೌಂಡು ತೂಕ ; ಮೇಲ್ತೂಕ, ಕೊಸರು"(Tret. ೩೦೪೩).
[ಮೇಲ್$_1$ + ತೂಕ]

**ಮೇಲ್ತೆರಿಗೆ,** ಮೇಲುತೆರಿಗೆ (ನಾ). ಒಂದು ಗೊತ್ತಾದ ಮೊತ್ತವನ್ನು ಮೀರಿದ ಆದಾಯದ ಮೇಲೆ, ಸಾಧಾರಣ ಆದಾಯತೆರಿಗೆಯ ಜೊತೆಗೆ ಹಾಕುವ ಹೆಚ್ಚಿನ ತೆರಿಗೆ : "ಮೇಲ್ತೆರಿಗೆ, ಸೂಪರ್‌ಟ್ಯಾಕ್ಸ್"

(Super-tax. ಶಕ್ತಿ.ಶಿ. ೭೯). **ಮೇಲುತೆರಿಗೆ :** " (ಒಂದು ಗೊತ್ತಾದ ಮೊತ್ತಕ್ಕೆ ಮೇಲ್ಪಟ್ಟ ಆದಾಯದ ಮೇಲೆ, ಸಾಧಾರಣ ಆದಾಯ ತೆರಿಗೆಯ ಜೊತೆಗೆ ಹಾಕುವ) ಮೇಲುತೆರಿಗೆ " (Super-tax. ಇಂಕೋ).
[ಮೇಲ್$_1$ + ತೆರಿಗೆ (< ತೆಱಗೆ)]

**ಮೇಲ್ತೋರಿಕೆ** (ನಾ). ಹೊರನೋಟ : ಸ್ಥೂಲದೃಷ್ಟಿ : ಮಾನವ ಸಮಾಜದಲ್ಲಿ ಕಂಡುಬರುವ ಅಜ್ಞಾನ. ಅಸಮಗ್ರಜ್ಞಾನ. ಮೇಲ್ತೋರಿಕೆಗೆ ದುಷ್ಟ ಎಂದೆನಿಸತಕ್ಕ ಪ್ರವೃತ್ತಿಗಳು . . . ಪರಮಾತ್ಮನ ಲೀಲೆಯ ಅಭಿವ್ಯಂಜನೆಗಳೆಂದು ಭಾವಿಸಲ್ಪಟ್ಟಾಗ ಅವುಗಳ ಬಣ್ಣವೇ ಬದಲಾಯಿಸುತ್ತದೆ (ಶಕ್ತಿಶ್ರಾ. ೦೨೬). [ಮೇಲ್$_1$ + ತೋರಿಕೆ ( < ತೋಱಿಕೆ )]

**ಮೇಲ್ದಂಡೆ** (ನಾ). ಮೇಲುಭಾಗದ ತೀರ : ಕೃಷ್ಣಾನದಿಯ ಮೇಲ್ದಂಡೆಯ ಕಾಲುವೆಯಲ್ಲಿ ಈಗ ಹೆಚ್ಚಾಗಿ ನೀರು ಹರಿಯುತ್ತಿದೆ (ರೂಢಿ).
[ಮೇಲ್$_1$ + ದಂಡೆ$_2$]

**ಮೇಲ್ದರ್ಜೆ** (ನಾ). ಉತ್ತಮಮಟ್ಟ : ಶ್ರೇಷ್ಠ ದರ್ಜೆ : " ಧನಿಕರು ಮತ್ತು ವಿದ್ಯಾವಂತರು ; ಮೇಲ್ದರ್ಜೆಯವರು " (The classes. ಶಕ್ತಿಶಿ. ೦೬). [ಮೇಲ್$_1$ + ದರ್ಜೆ]

**ಮೇಲ್ದಾಯ.** ಮೇಲುದಾಯ (ನಾ). ೧. ಪಗಡೆಯಾಟದಲ್ಲಿ ಬೀಳುವ ಉತ್ತಮವಾದ ಗರ, – ಸಂಖ್ಯೆ : ಶಕುನಿಯೊಡನಂಧಕಾವನಿಪಕುಮಾರ [ನುಮಾ]ಡೆ ನೆತ್ತಮಂ ಧರ್ಮಜನಾ ಶಕುನಿಗೆ ಮೇಲ್ದಾಯಮನಱಿ ಕುಡುತ್ತಿರೆ (ಮಹಾನೇ. ೦೦-೯ ವ). ೨. ಚದುರಂಗದಾಟದ ಒಂದು ಉತ್ತಮವಾದ ನಡೆ : ಓಡಿಯಾನೆಗಳ ನಾಳೊತ್ತು ರಥಕೆ ಕೈದುಡುಕು ಮಂತ್ರಿಯ ಮೇಲಕೇಱು ಕಡುಗುದುರೆಯ ಸೊಕ್ಕ ಮುಱಿಯೆಂದು ಚದುರಂಗದಡಿಯ ಮೇಲ್ದಾಯ ಪೇಳ್ವವಳು (ಕಂಸವ. ೬-೧೨೦). **ಮೇಲುದಾಯ :** ೩. ಒಳ್ಳೆಯ ಯುಕ್ತಿ ; ಉತ್ತಮವಾದ ಹಂಚಿಕೆ : ಹೇಳರೇ ಭೀಷ್ಮಾದಿ ಹಿರಿಯರು ಮೇಲುದಾಯವ ಬಲ್ಲವರು ಹೆಬ್ಬಾಳುತನದಲಿ ಹಿಗ್ಗಿ ಕಿಂಡಿರೆ ಜಯದ ಜಾಱುಗಳ (ಕುವ್ಯಾಕ. ೦-೦). ೪. ಅತಿಶಯವಾದ ಶಕ್ತಿ, –ಸಾಮರ್ಥ್ಯ : ಲಲಿತ ಹೇಷಾಧ್ವನಿಯ ಹಯಮಂಡಲದ ಮೌಳಿಯ ಮೇಲುದಾಯದ ಉಳಿಯ ಚಿತ್ರಕೃತಿರಪದ . . . ರಥದೊಳಗೆ ನಿಂದಾ ಶಕ್ರಸಾರಥಿ ನುಡಿಸಿದನು ನರನ (ಕುವ್ಯಾಅ. ೭-೦೪).
[ಮೇಲ್$_1$ + ದಾಯ$_1$]

**ಮೇಲ್ದುಟಿ.** ಮೇಲುದುಟಿ. ಮೇಲ್ತುಟಿ (ನಾ). ಮೇಲಿನ ತುಟಿ, –ಓಷ್ಠ : ಮೇಲ್ದುಟಿಯೊಳ್ ಸುಳಿಯಶ್ವಕಾಕಲ್ಪಿರಲಾ ತುರಗಂ ತಾಂ ಕೊಲ್ವುವುದಾಳ್ದನ ತಾಯುಂ ಬಲ್ದಿಟವಿಂತಿದು (ಹಾಲಾಶ. ೪-೦೦-೯೧). **ಮೇಲುದುಟಿ :** (೪). **ಮೇಲ್ತುಟಿ :** Labrum ಮೇಲ್ತುಟಿ (ಕೀಟಶ. ೦೧).
[ಮೇಲ್$_1$ + ತುಟಿ]

**ಮೇಲ್ದುಡುಗೆ** (ನಾ). ದೇಹದ ಮೇಲುಭಾಗಕ್ಕೆ ತೊಡುವ ವಸ್ತ್ರ, ಆಭರಣ ಮುಂತಾದುವು : ತಕಾರದ ತೃತೀಯತ್ವಕ್ಕೆ – ಕಣ್ಗೆ ಬವು ; ಮೇಲ್ದುಡು [ಶಾಲಾಂ. ಡಿ]ಗೆ (ಶಮದ. ೬೩ ಸೂ.ಯೋ).
[ಮೇಲ್$_2$ + ತುಡುಗೆ (< ತೊಡುಗೆ)]

**ಮೇಲ್ದೆಸೆ** (ನಾ). ಮೇಲಿನ ದಿಶೆ ; ಊರ್ಧ್ವದಿಕ್ಕು : ಥಳಥಳಿಸಿ ಬೆಳಪೊಡಗಿ ಬೆಳ್ಳಿಯ ಬಳ್ಳಿಗಳ ಛಂದದಿ ಬೆಳೆದು ಮೇಲ್ದೆಸೆಗೆ ಪಸರಿಸಿ ಸಲೆ ಬೆಳಗುತಿರಲು (ಬಸಪು. ೩೪-೩). [ಮೇಲ್$_1$ + ದೆಸೆ$_2$]

**ಮೇಲ್ದೊಗಟೆ** (ನಾ). ಹೊರಭಾಗದ ತೊಗಟೆ, –ಸಿಪ್ಪೆ : ಜಾಗ್ರತೆಯಿಂದ ಮೇಲ್ದೊಗಟೆಗೆ ಚೂರಿಯಿಂದ ಕಚ್ಚು ಹಾಕುವರು (ಮುಂಬಯಿ. ೪-೩೪). [ಮೇಲ್$_1$ + ತೊಗಟೆ$_1$ (< ತೊಗಟು)]

**ಮೇಲ್ನಾಡು.** ಮೇಲುನಾಡು (ನಾ). ೧. ಎತ್ತರವಾದ ಪ್ರದೇಶದ ನಾಡು ; ಪ್ರಸ್ಥಭೂಮಿ : " ಮಲೆನಾಡು ; ಮೇಲ್ನಾಡು ; ಪ್ರಸ್ಥಭೂಮಿ " (Highlands. ಇಂಕೋ). ೨. ಮೇಲಿನ ನಾಡು ; ದೇವಲೋಕ ; ಸ್ವರ್ಗ : ನಡುನಾಡು ಮೇಲ್ನಾಡು ಕೀಳುನಾಡೆಂಬ ಮುಪ್ಪೊಡವಿಯೊಡೆಯನ ಹೆಮ್ಮಗಗೆ ತಡೆಯುಂಟೆ (ಭರತ. ೪೪-೬೬). **ಮೇಲುನಾಡು :** ೨. ನೋಡುತ ಸುಮ್ಮನಿಪ್ಪುದು ಲೇಸೆ ಬಾ ಮೇಲುನಾಡಿನರಸೆ ಸ್ವಾಮಿಗುಸುರು (ಭರತ. ೭೦-೩೬).
[ಮೇಲ್$_1$ + ನಾಡು]

**ಮೇಲ್ನೀರು** (ನಾ). ೧. ಪ್ರವಾಹದ ಮೇಲುಭಾಗದ ನೀರು : " ನೆಲ. ಮೊ.ಗಳ ಮೇಲ್ಮೈಯಲ್ಲಿ ಸೇರಿ ಹರಿದು ಹೋಗುವ ನೀರು : ಮೇಲ್ನೀರು" (Surface-water. ಇಂಕೋ) ; ನದಿಯ ಮೇಲ್ನೀರಿನಲ್ಲಿದ್ದ ದೋಣಿ ಪ್ರವಾಹದ ವೇಗದಿಂದ ಬಹುಬೇಗನೆ ದಡ ಸೇರಿತು (ಕುಪರು. ೩೩೯). ೨. ಸ್ನಾನಾನಂತರ ಅಥವಾ ಪಾತ್ರೆ, ಪರಡಿ, ಬಟ್ಟೆ ಇತ್ಯಾದಿಗಳನ್ನು ಸ್ವಚ್ಛಗೊಳಿಸಿದ ನಂತರ (ಮಡಿಯ ಕಾರಣಕ್ಕಾಗಿ) ಹಾಕಲಾಗುವ ನೀರು. [ಮೇಲ್$_1$ + ನೀರು$_1$ (< ನೀರ್)]

**ಮೇಲ್ನೆಲ,** ಮೇಲುನೆಲ (ನಾ). ೧. ಊರ್ಧ್ವಲೋಕ ; ಸ್ವರ್ಗಲೋಕ : ಮೇಲ್ನೆಲವನೀ ನೆಲಕೆ ಹೊಸೆದ ತೆರನಾಯ್ತು (ಕಾಂಚಿ. ೩೦-೨೬). **ಮೇಲುನೆಲ :** ೨. ಎತ್ತರವಾದ ಸ್ಥಳ, –ಪ್ರದೇಶ : ದಿನಕರನುದಯದಲಿ ಮುಂಗಾಳೆಗದ ಗಾಢಾಭಿಲಾಷರು ಬಂದು ಕಣನೊಳಗೆ ಮೇಲುನೆಲನಱಿದುಬಲಕುರುಭೂಪಾಲನವರೊಡ್ಡಿದರು (ಕುವ್ಯಾಭೀ. ೬-೦).
[ಮೇಲ್$_1$ + ನೆಲ]

**ಮೇಲ್ನೆಲೆ** (ನಾ). ೧. ಮೇಲಿನ ಮಹಡಿ, –ಅಂತಸ್ತು : ಪೊನ್ನ ಕರುಮಾಡದ ಮೇಲ್ನೆಲೆಯಲ್ಲಿ ಗಾಡಿಯಿಂಬೆನೆ ನೆರೆದೋಲಗಂ ನಲವು ಕೈಮಿಗೆ ತನ್ನನೆ ನೋಡುತಿರ್ಪನಂ (ಕಬ್ಬಿಗಕಾ. ೬೨) ; ಮೇಲ್ನೆಲೆಯ ಕನಕ ಪರ್ಯಂಕಪೀಠದೊಳ್ಗಾಡಿಯಿಂ ಕುಳ್ಳಿರ್ದು (ರಾಜಶೇ. ೬-೦೨೩ ವ). ೨. ಮೇಲಿನ ತುದಿ, –ಅಗ್ರಭಾಗ : ಗಿರಿಯನಡರ್ದು ಮೇಲ್ನೆಲೆಯನೆಯ್ದುವ ಭೂವರನುದಯಾದ್ರಿಯಗ್ರದೊಳು . . . ತರಣಿಯಂದದವೊಲೊಪ್ಪಿದನು (ಶ್ರೀಚಾಂ. ೪-೬೬). ೩. ಉತ್ತಮವಾದ ಮಟ್ಟ : ಶ್ರೇಷ್ಠವಾದ ಸ್ಥಿತಿ : ಹಾರೂನ್ ಮತ್ತು ಮಾಮೂನ್ ಅವರ ಆಳಿಕೆಯಲ್ಲಿ ಮುಸ್ಲಿಂ ಸಂಗೀತಕಲೆ ತನ್ನ ಮೇಲ್ನೆಲೆಯನ್ನು ಮುಟ್ಟಿತು (ಜಗ್ಗಂಸಂ. ೦೩೦).
[ಮೇಲ್$_1$ + ನೆಲೆ$_1$]

**ಮೇಲ್ನೋಟ,** ಮೇಲುನೋಟ (ನಾ). ೧. ಹೊರನೋಟ ; ಸ್ಥೂಲದೃಷ್ಟಿ : ಮೇಲ್ನೋಟಕ್ಕೆ ಪರಸ್ಪರ ವಿರುದ್ಧಗಳಾಗಿ ಕಾಣುವ ಈ ಎರಡು ದರ್ಶನಗಳನ್ನು ಸಮನ್ವಯಗೊಳಿಸಿ ಎರಡರ ಆತ್ಯಂತಿಕಗುರಿ ಒಂದೇ ಎಂಬುದನ್ನು . . . ಮನಗಾಣಬಹುದು (ಭಾರದ. ೦೨೬). ೨. (ಅಲಂ) ಮೇಲ್ವಿಚಾರಣೆ ; ಮೇಲ್ವನಿಜೆ ; ಉಸ್ತುವಾರಿ : ನನ್ನ ಮೇಲ್ನೋಟದಲ್ಲಿಯೇ ನಡೆಯುವ ಸಮ್ಮುಖದ ಚಾವಡಿಯಲ್ಲಿ ಕರಣಿಕನಾಗಿ ಸೇರಿಕೊಂಡಿರಬೇಕು (ಕುಂಗಳ. ೮). **ಮೇಲುನೋಟ :** ೧. ಮೇಲುನೋಟಕ್ಕೆ ನಿನ್ನ ಈ ತೀರ್ಮಾನ . . . ನಿರ್ದೋಷವಾಗಿ ಕಾಣುತ್ತೆ (ಹಿರಯೋ. ೪೬) ; ವಾಸ್ತವಿಕತೆಯ ಗುರಿ ಗ್ರಾಹ್ಯವೆಂದೇ ಮೇಲುನೋಟಕ್ಕೆ ತೋರುತ್ತದೆ (ಸವಾರಿಲೋ. ೦೦೨) ; ಇದು ನಾಟಕದ ಮೇಲುನೋಟದ ಮುಕ್ತಾಯದ ಸ್ವರೂಪ (ಬದ್ಧಶ್ರ. XXXIV. ೩೬೮). ೨. ಆಲಿಕಲುಗಳ ಕಡಿವಡುಕ್ಕಿನ ಚಾಲಣದ ಹಂಗೇಕೆ ನಿಮ್ಮಡಿ ಮೇಲುನೋಟವ ನೋಡೆ ರಥಪರಿಯಂತ ಕಾಳೆಗವೆ (ಕುವ್ಯಾದ್ರೋ. ೦೦-೩೦). ೩. ಶುಭ ; ಮಂಗಳ : ಕಾಲ ಕೈಗೂಡಿದರೆ ಬ್ರಾಹ್ಮರು ಲೋಲರೇ ದೊರಕುವರು ಪುಣ್ಯದಲೇಳಗೆಯ ಹರಿ ಮೇಲುನೋಟವ ನೋಡಿಸುವನೆಂದ (ಕಂಭಶ. ೨೬-೦೪). [ಮೇಲ್$_1$ + ನೋಟ]

**ಮೇಲ್ಪಂಕ್ತಿ,** ಮೇಲುಪಂಕ್ತಿ (ನಾ). ೧. (ಅನುಕರಿಸಲು ಯೋಗ್ಯವಾದ) ಉತ್ತಮವಾದ ಮಾದರಿ ; ಉಚಿತವಾದ ಆದರ್ಶ ; ಆ ರಚನೆಗಳೇ

ಅವರಿಗೆ ಮೇಲ್ಪಂಕ್ತಿ (ಭಾರತ. ೫೬೭) ; ಪಂಪನು ಒಂದು ಆಗಮಿಕಕಾವ್ಯವನ್ನೂ ಇನ್ನೊಂದು ಲೌಕಿಕಕಾವ್ಯವನ್ನೂ ಬರೆದು ಕವಿಕುಲಕ್ಕೇ ಮೇಲ್ಪಂಕ್ತಿಯಾದನು (ಸಾಹಿಸ. ೨೨). **ಮೇಲುಪಂಕ್ತಿ :** ೧. ನಿನ್ನ ಕೈಕಾಲ್ ಬೆರಳುಗಳ ಮಾಟವ ನೋಡಿ ಹೊಳೆಯುವುದು —ಕೈವಾಡದವರ ಕೈಚಳಕದ ಕುಸುರಿನ ಮೇಲುಪಂಕ್ತಿ (ಕಾವ್ಯಾರ. ೯೭-೦೫) ; ಇವು ಬಹುಮಟ್ಟಿಗೆ ಪಾಶ್ಚಾತ್ಯವಿಮರ್ಶೆ ಪ್ರಬಂಧಗಳ ಸತ್ವವನ್ನು ಹೀರಿ ಆ ಮೇಲುಪಂಕ್ತಿಯಲ್ಲಿ ಬಂದವು (ಬಂಕಿಮು. ೯. ಮುನ್ನುಡಿ). ೨. ಮೊದಲ ಸಾಲು ; ಮುಂದಿನ ಸಾಲು ; ಅಗ್ರಪಂಕ್ತಿ : ನೀವು ಬಂದೀ ಮೇಲುಪಂಕ್ತಿ[ಸಾಕಾಂ. ತಿ]ಯ ಠಾವಿನಲಿ ಕುಳ್ಳಿರೆ ಎನುತ . . . ವಿಂಗೆ ನಯಪ್ರೋವಿ ಮಾತಾಡಿಸುತ (ಬಸಪು. ೫೯-೯). [ಮೇಲ್$_1$ + ಪಂಕ್ತಿ]

**ಮೇಲ್ಪಂಗ್ತಿ** 'ಮೇಲ್ಪಂತಿ' ನೋ.

**ಮೇಲ್ಪಂತಿ,** ಮೇಲ್ಪಂಗ್ತಿ (ನಾ). = ಮೇಲ್ಪಂಕ್ತಿ ೧ : ಮದನು ತ್ರಿಜಗದ ಚೆಲ್ವಿಂಗಿದೆ ತಾಂ ಮೇಲ್ಪಂತಿಯೆಂದಳಿಕಫಲಕದೊಳುನ್ಮದದಿಂ ಬರೆದಂಜನವರ್ಣದ ಸಾಲೆನೆ ಕುಂತಳಾಳಿಯೊಪ್ಪಿದುವವಳಾ (ಉರ್ಕೃಟ. ೬-೧೦೨); ಇನ್ನಪ್ಪ ಸತಿಯರಿಗೆ ಮೇಲ್ಪಂತಿಯೆನಿಸೆ ಸಂಪನ್ನೆ ಪೆಸರು ಪಡೆದಿಹಳು (ಶ್ರೀಶಾಂ. ೨-೯). **ಮೇಲ್ಪಂಗ್ತಿ** : ಹಿಂದಿನವರ ಆದರ್ಶಗಳು ಬರುವ ಪೀಳಿಗೆಗೆ ಮೇಲ್ಪಂಗ್ತಿಯಾಗುತ್ತವೆ (ಶಿಕ್ಷರ. ೩೨೦). [ಮೇಲ್$_1$ + ಪಂತಿ]

**ಮೇಲ್ಪಹರಿ,** ಮೇಲ್ಪಾರಿ (ನಾ). (ಕೋಟೆಯ) ಮೇಲ್ವಿಚಾರಣೆಯ ಕಾವಲು : ಒಡನೊಡನೆ ಸುಳಿವ ಮೇಲ್ಪಹರಿಯಾಳ್ಗಳ್ ಚೀಱುತಿಹ ಕಹಳೆಗಳ್ . . . ಎಸೆದುದಾಗಳಾ ತ್ರಿಪುರದಾಳ್ವೇರಿಯೆಡೆಯೆಡೆಯೊಳತಿ ನಿಬಿಡವಾಗಿ (ತಂಪು. ೪೨-೧೧). **ಮೇಲ್ಪಾರಿ :** ಚೆಂಗಣಿಗಿಲ ದಿವ್ಯಪರಿಮಳ ಕೆಱಗುವ ಭೃಂಗವಿಂಡುಗಳ ಝೇಂಕಾರ ಅಂಗಜವನದುರ್ಗಕಿಟ್ಟ ಮೇಲ್ಪಾ [ಲ್ಪಾ]ರಿಯ ಪೊಂಗಿದಾಳ್ದನಿಗಳಂತಿಹುವು (ಕಂಪಾ. ೫-೧೦೨).
[ಮೇಲ್$_1$ + ಪಹರಿ]

**ಮೇಲ್ಪಾಟ** (ನಾ). ಒಂದು ಊರಿನ ಹೆಸರು: ಚೋಳ ಚೇರ ಪಾಣ್ಡ್ಯಾದೌ ನಿರ್ಜ್ಜಿತೇ ವಿಜಯಸ್ಕನ್ಧಾವರೇ ಮೇಲ್ಪಾಟ್ಯಾಂ ಸ್ಥಿರಾಸೀನೇ ಸತೇ (ಎಇಂ. ೦೯೩೫. ೪೦-೪೭ : 951). [ ಮೇಲ್$_1$ + < ಪಾಡಿ$_2$ ]

**ಮೇಲ್ಪಾಟು** 'ಮೇಲ್ಪಾಡು' ನೋ.

**ಮೇಲ್ಪಾಡು,** ಮೇಲ್ಪಾಟು (ನಾ). ಉತ್ತಮರೀತಿಯ ಸ್ಥಿತಿ ; ಪ್ರಗತಿ ; ಸುಧಾರಣೆ : ಹೊಸ ಬಂದರುಗಳನ್ನು ಕಟ್ಟಿ ಹಳೆಯ ಬಂದರುಗಳನ್ನು ಮೇಲ್ಪಾಡು ಮಾಡಿದರು (ಶಿಲ್ಪಶಾ. ೭೭) ; ಪರಿಹಾರದ್ರವ್ಯವನ್ನು ಕೊಡುವ ಘನವಾದ ಮೇಲ್ಪಾಡನ್ನುಂಟುಮಾಡಿದರು (ಶಾಗ್ಯಕಿ. ೨೩). **ಮೇಲ್ಪಾಟು:** ಸರ್ವತೋಮುಖವಾದ ಭಾರತೀಯಸಾಮಾಜಿಕಜೀವನದ ಮೇಲ್ಪಾಟುಗಳು ನಡೆದು . . . ಮಹಾತ್ಮಾಗಾಂಧಿಯವರು ಹೇಳಿರುವ ಭವಿಷ್ಯವಾಣಿಯು ದಿಟವಾಗಲೆಂಬುದೇ ದೇಶಭಕ್ತರೆಲ್ಲರ ಹಾರೈಕೆ (ಭಾರದ. ೩೯೩) ; ಆರ್ಥಿಕ ಸ್ಥಿತಿಯಲ್ಲಿ ಮೇಲ್ಪಾಟು ತಂದು . . . ನಾಡನ್ನು ಕಟ್ಟಬಯಸಿ ದುಡಿಯುವವರಿಗೆ ಮೊದಲು ಗ್ರಹಿಸಿಕೊಂಡಿರಬೇಕಾದ ಅಗತ್ಯದ ಆಧಾರಗಳೆಲ್ಲ (Data) ಇಲ್ಲಿ ಸಿಕ್ಕುತ್ತವೆ (೪೭ಶಾ. ೦೯೫). [ಮೇಲ್$_1$ + ಪಾಡು$_3$ ]

**ಮೇಲ್ಪಾಯ** (ನಾ). (ಮೇಲಿನ ಕಟ್ಟಡದ ಭದ್ರತೆಗಾಗಿ ಹಾಕುವ) ಅಡಿಪಾಯದ ಮೇಲಿನ ಮತ್ತು ಕಟ್ಟಬೇಕಾಗಿರುವ ಗೋಡೆಯ ಕೆಳಗಿನ ಭಾಗ ; ಅಡಿಪಾಯ ಮತ್ತು ಮೇಲಿನ ಗೋಡೆಯ ನಡುವಿನ ಭಾಗ: ನೆಲಮಟ್ಟದ ಕೆಳಗಿರುವ ಗೋಡೆಯ ಭಾಗವನ್ನು ಮೇಲ್ಪಾಯ (ಬೇಸ್‌ಮೆಂಟ್) ಎನ್ನುತ್ತಾರೆ (೪೭ಕೋ. I, ೨೦೮). 'ತಳಪಾಯ' ಹೋ.
[ ಮೇಲ್$_1$ + ಪಾಯ$_2$ ]

**ಮೇಲ್ಪಾರಿ** 'ಮೇಲ್ಪಹರಿ' ನೋ.

**ಮೇಲ್ಪಾಳ್** (ನಾ). ಒಂದು ಊರಿನ ಹೆಸರು : ಪೃಥಿವೀಕೊಙ್ಗಣಿಮುತ್ತರಸರನುಮತದೊಳು ಪಲ್ಲವೇಳಾರಸರ್ಪೊಯ್ದಾರ್ ಕೊಕಂದಿಯುಂ ಮಯಿಲುರಗಯುಂ ಮೇಲ್ಪಾಳುಂ ಜಾದಿಗಾಲು ಕೊಲಿಗನ್ನೆಱಕ್ಕಾಲು ಒನ್ದು ತೋಟ್ಟಮುಂ (ಎಇಂ. ೦೯೨೫, ೦೦೭-೦೯ : ೩ಶಯ ೫೫).
[ ಮೇಲ್$_1$ + ಪಾಳ್ ( < ಪಾಟು ) ]

**ಮೇಲ್ಪೊರೆ** (ನಾ). ಮೇಲ್ಭಾಗದ ಆವರಣ : ಭೂಮಿಯ ಮೇಲ್ಪೊರೆಯಲ್ಲಿ ಅತಿ ಹೇರಳವಾಗಿ ದೊರೆಯುವ ಮೂಲಧಾತು ಅಲ್ಯುಮಿನಿಯಂ (ಶಿಲ್ಪಶಾ. ೦೭೯). [ ಮೇಲ್$_1$ + ಪೊರೆ ]

**ಮೇಲ್ಪೊಟ್ಟು** (ನಾ). ಉತ್ಕೃಷ್ಟವಾದ ಮುಹೂರ್ತ: ಶುಭಸಮಯ : ಓಹೋ ಹರಿ ಗೆಲ್ದನೀ ಗಜಮನೆಂದಿಂದ್ರಾದಿಗಳ್ ಕೀರ್ತಿಸುತ್ತಿರೆ ಮೇಲ್ಪೊಟ್ಟಿನೊಳಂದು ತೋಱಿ ಮೆಱೆದಂ ಕೃಷ್ಣಂ ಬಲಾಟೋಪಮಂ (ಜಗಾ. ೬-೫೪). [ ಮೇಲ್$_1$ + ಪೊಟ್ಟು ]

**ಮೇಲ್ಪೋಗು.** ಮೇಲುಪೋಗು (ನಾ). ೧. ಏಳಿಗೆಯ ಅಳಿವು —ನಾಶ : ತಾಗಿ ಮುಱಿದನೆ ಭೀಮನೀ ಮೇಲ್ಪೋಗಿನಾಪವವೇನು ರಾಯನ ತಾಗುಥಪ್ಪೇನಾಯ್ತು ಸಂಜಯ ತಿಳಿಯಹೇಳೆಂದ (ಕುವ್ಯಾಗ. ೯-೨೦). **ಮೇಲುಪೋಗು :** ೧. ಕಂಗಜಾಗೋಲ ಮಂಚದ ಮಹಿಮನಿರವನು ಮೇಲುಪೋಗಿನ ಕಥೆಯನವಧಾನವಲಿ ಕೇಳೆಂದ (ಕುವ್ಯಾದ್ರೋ. ೧-೧). ೨. ಊರ್ಧ್ವಲೋಕಕ್ಕೆ ಹೋಗುವುದು ; ಸಾವು ; ಮರಣ : ಕಾಲವಶದಲಿ ಕೌಶಿಕನನಾ ಕಾಲದೂತರು ತಂದರಾತನ ಮೇಲುಪೋಗಿನ ಸುಕೃತದುಷ್ಕೃತವನು ವಿಚಾರಿಸಲು (ಕುವ್ಯಾಕ. ೦೭-೦೭). [ಮೇಲ್$_1$ + ಪೋಗು$_2$]

**ಮೇಲ್ಪೋಟಿ** (ನಾ). ಮೇಲಾಟ ; ಸ್ಪರ್ಧೆ ; ಪೈಪೋಟಿ : ಅವರ ಮೇಲ್ಪೋಟಿಯಲ್ಲಿ ಆತ್ಮಪ್ರಶಂಸೆಯೂ ಪರದೂಷಣೆಯೂ ಮಿತಿಯಿಲ್ಲದೆ ಹರಿದುಬರುತ್ತವೆ (ಸಾಹಿಕ. ೦೫). [ ಮೇಲ್$_1$ + ಪೋಟಿ$_1$ ]

**ಮೇಲ್ಪಂದಿ** (ನಾ). ಸೀರೆ (?) : ಅಂದವಾದಾ ಹಸುರು ಮೇಲ್ಪಂದಿಯ ನುಟ್ಟಳು ದೂತಿ ಕೆಂದಾವರೆ ಮಗ್ಗೆಯ ಕುಪ್ಪಸವ ತೊಟ್ಟಳು (ಶ್ರೀಕೃಶಾ. ೦೭).
[ ? ]

**ಮೇಲ್ಪಟ್ಟೆ,** ಮೇಲುಬಟ್ಟೆ (ನಾ). ೧. ಮೈಮೇಲೆ ಹೊದೆಯುವ ವಸ್ತ್ರ. —ಬಟ್ಟೆ; ಉತ್ತರೀಯ: ತನ್ನ ಮೇಲ್ಪಟ್ಟೆಯನ್ನು ನೀರಿನಲ್ಲಿ ನೆನಸಿಯೂ, ತಾವರೆಎಲೆಗಳಿಂದ ದೊನ್ನೆಗಳನ್ನು ಮಾಡಿಯೂ ತಣ್ಣೀರು ತೆಗೆದುಕೊಂಡು ಬಂದು ಕುಂತೀದೇವಿಗೂ ಸಹೋದರರಿಗೂ ಕೊಟ್ಟನು (ವ್ಯಾಸಭಾ. ೬೬). **ಮೇಲುಬಟ್ಟೆ :** ೨. ಉತ್ತಮವಾದ ಬಟ್ಟೆ ; ಶ್ರೇಷ್ಠವಾದ ವಸ್ತ್ರ : "ಸುಚೇಲಕಃ, ಪಟಃ — ೨ ಒಳ್ಳೆಸೀರೆ . . . ಮೇಲುಧೋತ್ರ, ಮೇಲುಬಟ್ಟೆ, ಉತ್ತಮ ವಸ್ತ್ರ" (ಸಿದ್ಧಾಂತಿ. ೨೦೪). [ ಮೇಲ್$_2$ + ಬಟ್ಟೆ$_2$ ]

**ಮೇಲ್ಭಾಗ,** ಮೇಲುಭಾಗ (ನಾ). ಎತ್ತರದ ಭಾಗ ; ಉಪರಿಭಾಗ : ಹುಬ್ಬುಗಳ ಮೇಲ್ಭಾಗದಲ್ಲಿ ಹಣೆ ಇರುತ್ತದೆ (ಮುಂಜಯ. ೪-೯೩). **ಮೇಲುಭಾಗ :** ಗಗನವೀತನ ನಾಭಿ ದಶದಿಕ್ಕುಗಳು ಕಿವಿ ಫಣಿಲೋಕ ವಿಮಳಾಂಘ್ರಿಗಳು ಧ್ರುವನಿಂ ಮೇಲುಭಾಗ ಪುರಾಂತಕನ ಮುಕುಟ (ಕುವ್ಯಾಸ. ೯-೨೩).
[ ಮೇಲ್$_2$ + ಭಾಗ ]

**ಮೇಲ್ಮಕ್ಕಿ,** ಮೇಲುಮಕ್ಕಿ (ನಾ). ಎತ್ತರದಲ್ಲಿರುವ ನೀರಾವರಿ ಪ್ರದೇಶ, —ಜಮೀನು : ತಮ್ಮ ಉಂಬಳಿಯ ಮೇಲ್ಮಕ್ಕಿಯ ಗದ್ದೆಯನು ತತ್ಕಾಲೋಚಿತ ಕ್ರಯವಾಗಿ . . . ಕೊಟ್ಟರು (ಎಕ. VI. [illegible] : 1233). **ಮೇಲುಮಕ್ಕಿ :** ಮೇಲುಮಕ್ಕಿಯ ಗಡಿಯ ತೋಟಗಟ್ಟು ಕಮ ೪೦೦ (ಸೌಇಇ. IX—i. ೯೫-೫೦; 1041) ; ಶ್ರೀರಾಮೇಶ್ವರದೇವರ್ಗೆ . . . ಬ್ರಹ್ಮಗಟ್ಟದ ಕೆಱೆಯ ಕೆಳಗಣ ಕೆಱನುಂ ಮೇಲುಮಕ್ಕಿಯುಂ ಸಲಗೆ (ಎಕ. VI. ಕಡೂರು. ೨-೦೮ ; ಸು. 1110). [ ಮೇಲ್$_1$ + ಮಕ್ಕಿ$_1$ ]

**ಮೇಲ್ಮಚ್ಚು,** ಮೇಲುಮಚ್ಚು (ನಾ). ಮೇಲಿನ ಉಪ್ಪರಿಗೆ, —ಮಾಳಿಗೆ: ಮಾಳಿಗೆಮನೆಯ ಮೇಲ್ಮಚ್ಚುಚಪ್ಪರದಲಿ . . . ಮುದ್ದುಹೆಣ್ಣುಗಳರಸ

ಭೂಪಾಲನ ನೋಡುತೊಪ್ಪಿದರು (ಕಂಪಾ. ೨೩-೦೯) ; ನಾನು ದಾನವರಿಗೆ . . . ಕೋಟೆಕೊತ್ತಲ ಮೇಲ್ಮಚ್ಚು ಗೋಪುರಗಳುಳ್ಳಂತಹ ಪಟ್ಟಣಗಳನ್ನೂ . . . ನಿರ್ಮಿಸಿದಂತಹವನು (ಕೃಪಾಶ. ೨) . ಮೇಲುಮುಚ್ಚು : ಪುರ ವೀಥಿಯೊಳ್ ಪರಿಚಿತ್ರದಿಂ ಮೆರೆವ ಧ್ವಜಕಲಶಗಳ್ ಮೇಲುಮುಚ್ಚುಗಳನು ನೋಡುತ . . . ಬರುತಿರ್ದ ರಾಯನು (ಕೌಗಂಧಿ. ೬೦-೩); ನಾರಿಯ ರೆಲ್ಲರು ಮೇಲುಮುಚ್ಚುಗಳ ಸೇರಿದರಾಕ್ಷಣದಲ್ಲಿ (ಕೌಗಂಕ. ೭-೨).

[ ಮೇಲ್$_1$ + ಮುಚ್ಚು$_4$ ]

**ಮೇಲ್ಮಟ್ಟ**. ಮೇಲುಮಟ್ಟ (ನಾ). ೧. ಮೇಲಿನ ಸ್ತರ : ಸಮುದ್ರದ ಮೇಲ್ಮಟ್ಟವು ಬಾಗಿರುವುದನ್ನು ತೋರಿಸುವ ಚಿತ್ರ (ಭೂವಿ. ೩). ೨. ಎತ್ತರದ ಮಟ್ಟ : ಹೆಚ್ಚಿನ ಮಟ್ಟ : ಮತ್ತಂ ಮೇಲ್ಮಟ್ಟ [ಶಾಕಾಂ. ಮೇಲುಮಟ್ಟ]ದಾ ಸರಮಂ ಕೇಳ್ದು ಆ ಪಡೆ ಪಯಣಮಸಂದುಂ ಮಾಣ್ಪುದುಂ (ಶಂಶಕಂ. ೦೨೭-೫). ೩. ಉತ್ತಮವಾದ ಸ್ಥಿತಿ : ಊರ್ಜಿತಾವಸ್ಥೆ : ನಮ್ಮ ದೇಶವನ್ನು ಮೇಲ್ಮಟ್ಟಕ್ಕೆ ತರುವುದು ಬೇಡವೆ ? (ಕ್ರಶಾಕ. ೯೯) ; ಅವರು ಅನುಭಾವಿಗಳಾಗುವ ಮೊದಲು ಅವರಿಗೆ ಕೆಲವು ಗುಣಗಳಿರಬೇಕು. ಅವರು ಹಲವು ಹಂತಗಳನ್ನು ಹತ್ತಿ ಈ ಮೇಲ್ಮಟ್ಟವನ್ನು ಮುಟ್ಟಬೇಕು (ಅಗದಾ. ೫). ೪. ಶ್ರೇಷ್ಠದರ್ಜೆ ; ಉತ್ತಮ ದರ್ಜೆ ; ಅವನ 'ಸುಂದರವಿಲಾಸ' . . . ಸಾಹಿತ್ಯದೃಷ್ಟಿಯಿಂದಲೂ ಮೇಲ್ಮಟ್ಟದ ಕಾವ್ಯ (ಶಾರದ. ೯೩೯). ಮೇಲುಮಟ್ಟ : ೫. ಮೇಲಿನ ಹಂತ ; ತುಟ್ಟ ತುದಿ : "೧. ಒಳಮಾಳಿಗೆ. ೨. ಮೇಲುಮಟ್ಟ, ಪರಮಾವಧಿ" (ceiling. ಪತ್ರಿಕೆ. ೦೪).
[ಮೇಲ್$_1$ + ಮಟ್ಟ$_1$]

**ಮೇಲ್ಮನವಿ** (ನಾ). ಪುನಃಪರಿಶೀಲನೆಗಾಗಿ (ಮೇಲಿನ ನ್ಯಾಯಾಲಯಕ್ಕೆ) ಕೊಡುವ ಅರ್ಜಿ, – ಅಪೀಲು : ಸೆಸೆಟ್ಟನಲ್ಲಿ ಮೇಲ್ಮನವಿ ತಿರಸ್ಕೃತವಾದರೆ ಚಕ್ರವರ್ತಿಗೆ ಕ್ಷಮಾಯಾಚನೆಯ ಅರ್ಜಿ ಸಲ್ಲಿಸಬೇಕೆಂದೂ ನೆಕ್ಲುದೋವ್ ನಿಶ್ಚಯಿಸಿಕೊಂಡಿದ್ದನು (ಪುನರು. ೨೬೦). [ಮೇಲ್$_1$ + ಮನವಿ]

**ಮೇಲ್ಮನೆ** (ನಾ). ೧. ಮೇಲಿನ ಮನೆ ; ಉಪ್ಪರಿಗೆ : ಮೇಲ್ಮಾಳಿಗೆ : ಅವನೀಶನಾ ನಳಿನಾಕ್ಷಿಯರು ಸಹವಾಗಿ ನೆಲೆಮಾಡಮೇಲಾ ಮೇಲ್ಮನೆಯೊಳು ಕುಳಿತು ಪೆಂಗಳಗಂಬುನಿಧಿಯ ತೋಜಿದನು (ಶರಶ. ೨೩-೯೨); ಯಾವಾಗಲೂ ಮೇಲ್ಮನೆಯಲ್ಲೇ ಮುಖ ಮರೆಸಿಕೊಂಡು ಇರತೊಡಗಿದರು (ಮರಳ. ೦೭೨). ೨. ರಾಜ್ಯದ ವಿಧಾನಪರಿಷತ್ತು ಅಥವಾ ಕೇಂದ್ರದ ರಾಜ್ಯಸಭೆ : ಈ ದಿನ ಮೇಲ್ಮನೆಯಲ್ಲಿ ಬಹುಮುಖ್ಯವಾದ ಮಸೂದೆ ಅಂಗೀಕಾರವಾಯಿತು (ರೂಢಿ). P ಇದು ಇಂಗ್ಲಿಷಿನ 'Upper house' ಎಂಬುದರ ಅನುವಾದ. [ಮೇಲ್$_1$ + ಮನೆ ]

**ಮೇಲ್ಮರ** (ನಾ). ಉತ್ತಮ ಜಾತಿಯ ಮರ : ಪರಭೃತ ಭೃಂಗ ಕೀರ ಕಳಹಂಸೆಗಳಲ್ಲದೆ ಕಾಕ ಘೂಕ ಭೀಕರಖಗಮಿಲ್ಲ ಮೇಲ್ಮರಗಳಲ್ಲದೆ ಕೀಟ್ಮರನಿಲ್ಲ (ಅರ್ಜನೇ. ೦-೩೮). [ಮೇಲ್$_1$ + ಮರ$_1$]

**ಮೇಲ್ಮಲೆಗೆಯ್** (ಕ್ರಿ). ೧. ತೋರಿಕೆಗಾಗಿ ಪ್ರತಿಭಟಿಸು; ಮನಃಪೂರ್ವಕವಲ್ಲದ ಕಾಳಗವನ್ನು ಮಾಡು : ಕುರುಪತಿಗಿಲ್ಲ ದ್ರೈಪಬಲಮಾಜಿಗೆ ಮೇಲ್ಮಲೆಗೆಯ್ವರಾಗಳುಂ ಗುರು ಗುರುಪುತ್ರ ಸಿಂಧುಸುತರ್ (ಪಂಪಭಾ. ೯-೭೧). ೨. ಬಾಹ್ಯದಲ್ಲಿ ವಿರೋಧಿಸು, – ಕೆರಳು : ಅಜೀಯದಂದದಿ ನುಜಿ ಸೆಜಿಗೆಯ್ದು ಪೆಜರ ಮಾರ್ಗದೊಳಿರ್ದಪಲ್ಲದೆ ತಜುಸಂದು ನೆಗಟರೆಂದು ಮೇಲ್ಮಲೆಗೆಯ್ದದೆ ಬಲ್ಮೊಗಂ ಮಾಡಿ ತನ್ನಳಿಯಂದಿರ ಮೊಗಮಂ ನೋಡಿ (ಸುಕುಸುಕಾ. ೨-೫೨ ವ). [ಮೇಲ್$_2$ + ಮಲೆ$_1$ + ಕೆಯ್$_1$]

**ಮೇಲ್ಮಾಳಿಗೆ**, ಮೇಲುಮಾಳಿಗೆ (ನಾ). ಮೇಲಿನ ಅಂತಸ್ತು, – ಮಹಡಿ ; ಮೇಲುಪ್ಪರಿಗೆ : (೬). ಮೇಲುಮಾಳಿಗೆ : (೬).

[ಮೇಲ್$_1$ + ಮಾಳಿಗೆ$_1$]

**ಮೇಲ್ಮಾಳಿಗೆಹುಲ್ಲು** (ನಾ). ಒಂದು ಬಗೆಯ ಹುಲ್ಲು : ಮೇಲ್ಮಾಳಿಗೆ ಹುಲ್ಲು, ಕೌಬಿನ ಹುಲ್ಲು (ವ್ಯಕಿಗ. ೨೦-೩೭೦).

[ಮೇಲ್ಮಾಳಿಗೆ$_1$ + ಹುಲ್ಲು (< ಪುಲ್)]

**ಮೇಲ್ಮಿತಿ** (ನಾ). ಅತಿ ಹೆಚ್ಚಿನ ಅಥವಾ ಪರಮಾವಧಿಯ ಒಂದು ಮಿತಿ, – ಎಲ್ಲೆ : ಅಂತಹ ರಾಷ್ಟ್ರಗಳಿಗೆ ನೀಡಬಹುದಾದ ಹಣದ ಮೊಬಲಗಿಗೆ ಒಂದು ಮೇಲ್ಮಿತಿಯನ್ನು ವಿಧಿಸಬೇಕಾಗಿ ಬರಬಹುದು (ಅಂಕಸಂ. ೦೩೦). [ಮೇಲ್$_1$ + ಮಿತಿ]

**ಮೇಲ್ಮುಚ್ಚಳ**, ಮೇಲುಮುಚುಳಿ, ಮೇಲುಮುಚ್ಚಳ (ನಾ). ೧. (ಮನೆಯ) ಮೇಲಿನ ಛಾವಣಿ ; ಸೂರು : "ವಲೀಕಂ, ನೀವ್ರಂ, ಪಟಲಪ್ರಾಂತಂ – ೩ ಪಪ್ಪಾರದ ಚೂರು, ಲೋವೆಚೂರು, ಮನೆಯ ಚುಂಚು, ಹೊದಿಕೆಚೂರು. ಮನೆಯ ಮೇಲ್ಮುಚ್ಚಳದ ಅಂಚು. ಇದನ್ನು ಸೂರೆಂತಲೂ ಅನ್ನುವರು" (ನಿಘಂಟು. ೦೦೩). ಮೇಲುಮುಚುಳಿ : ೧. × × × ರವನು ತಿದ್ದಿಸಿ ಮೇಲುಮುಚುಳಿಯನ್ನು ಮುಚಿಸಿದನು (ಎಕ. III. ಮಂಡ್ಯ. ೩೩-೬: 1221 ?). ಮೇಲುಮುಚ್ಚಳ : ೧. "ಪಟಲಂ$_1$ ಛದಿಃ – ೨ ಮನೆಯ ಮೇಲುಹೊದಿಕೆಯ ಪೆಸರು. ಮನೆಯ ಮೇಲುಮುಚ್ಚಳ" (ನಿಘಂಟು. ೦೦೩). ೨. ಭರಣಿ ಅಥವಾ ಸಂಪುಟದ ಮೇಲ್ಭಾಗವನ್ನು ಮುಚ್ಚುವ ಸಾಧನ ; ಭರಣಿಯ ಮೇಲಿನ ಮುಚ್ಚಳ : ಮೇಲೆ ಭೂಮಂಡಲಮುಸಂತರದ ಭರಣಿಗಳ ಮೇಲುಮುಚ್ಚಳ ಪಾಂಗಿನಿಂ ತೋರ್ಪುತಿಹುದು (ಚಿಬಕು. ೦೫-೯) ; ಒಂದು ಉಪಾಯವನ್ನು ನನ್ನ ಕೈ ಬಳಿಗೆ ಉರುಳಿಸಿದರು. ಮೇಲುಮುಚ್ಚಳವನ್ನು ತೆಗೆದರು (ಗಂಕ್ರ. ೬).

[ಮೇಲ್$_1$ + ಮುಚ್ಚಳ (< ಮುಚ್ಚಣ)]

**ಮೇಲ್ಮುದ್ದೆ**, ಮೇಲುಮುದ್ದೆ (ನಾ). ಮಾಳಿಗೆಯ ಮೇಲೆ ಹಾಕುವ ಕಲಸಿದ ಮಣ್ಣಿನ ಮೊತ್ತಿಗೆ, – ಮುದ್ದೆ : ಬೆಳವಲಿನಲ್ಲಿ ಮಳೆ ಕಡಿಮೆಯಾದ್ದರಿಂದ ಮೇಲ್ಮುದ್ದೆಯ ಮಾಳಿಗೆಯ ಮನೆಗಳೇ ವಿಶೇಷವಾಗಿರುವುವು (ಕರ್ನಾಟ. ೬). ಮೇಲುಮುದ್ದೆ : ಹಲಕೆಲವು ಮೇಲುಮುದ್ದೆಯ ಮಾಳಿಗೆಗಳನ್ನು ನೋಡಬಹುದು (ಕಥಾಗ. ೩). [ಮೇಲ್$_2$ + ಮುದ್ದೆ$_1$]

**ಮೇಲ್ಮುಸುಕು**, ಮೇಲುಮುಸುಕು, ಮೇಲ್ಮುಸುಗು (ನಾ). ೧. ಮೈ ಮೇಲೆ ಹೊದೆಯುವ ವಸ್ತ್ರ, – ಹೊದಿಕೆ; ಉತ್ತರೀಯ : "ಸ್ಥಗಳೆಂಬ ಪೊಂದು ಮೇಲ್ಮುಸುಕು" (ಕಬ್ಬಿಗ. ೨೦-೩೯೮). ೨. ಅವಕುಂಠನ, ಮುಖಕ್ಕೆ ಹಾಕಿಕೊಳ್ಳುವ ಮುಸುಕು : ಅಗಣಿತಮಾನೆ ಕುದುರೆಗಳ ಮೇಲೆ ಮೇಲ್ಮುಸುಕಿನಿಂ ಕೆಲತೆಲಬರು ಬಳಿಕ್ಕನಲಿತ್ತ . . . ಬಂದತ್ತು ವಾರಾಂಗನಾನಿವಹಂ (ಚಿಬಕು. ೯೭-೩೯). ಮೇಲುಮುಸುಕು : ೧. "ಪ್ರಾವಾರಃ, ಉತ್ತರಾಸಂಗಃ, ಬೃಹತಿಕಾ, ಸಂವ್ಯಾನಂ, ಉತ್ತರೀಯಂ–೫ ಉತ್ತರೀಯದ ಹೆಸರು. ಮೈಮೇಲೆ ಹೊದ್ದಿರುವ ವಸ್ತ್ರ . . . ಮೇಲುಹೊದಿಕೆ, ಮೇಲುಮುಸುಕು" (ನಿಘಂಟು. ೨೦೪) ; ಮೇಲುಮುಸುಕಿನ ಪೊತ್ತ ದುಗುಡದ . . . ನೃಪಾಲ ಹೊಕ್ಕನು ನಡುವಿರುಳು ನಿಜರಾಜ ಮಂದಿರವ (ಕುಭಾಸ. ೦೨-೦) : ಮೇಲುಮುಸುಕಿನ ಮಸದ ಮಜುಕದ ಜಾಳಿಸುವ ಕಂಬನಿಯ ಸುಯಿಲಿನ ಸೂಳುಗಳ ಸಂತಾಪದಲಿ ತಿರುಗಿದನು ಪಟ್ಟಣಕೆ (ತೊರಣಾ. ೨-೫-೦). ೨. ನಮ್ಮ ಪಟ್ಟಣದಲ್ಲಿರುವ ಕನ್ನೆಯರು ಮೇಲುಮುಸುಕಿಲ್ಲದೆ ಕೃಷ್ಣನನ್ನು ನೋಡುವುದಕ್ಕೆ ಹೋಗಲಿ (ಕೃಪಾಶ. ೦೪೪) ; ಎಲೆ ಮಗಳೆ, ಒಂದು ಮುಹೂರ್ತ ಲಜ್ಜೆಪಡದಿರು ; ನಿನ್ನ ಮೇಲುಮುಸುಕನ್ನು ತೆಗೆಯುವೆನು (ಶಾಕುಂತ. ೬೭-೭). ೩. (ಅಲಂ) ತೋರಿಕೆ ; ಠಕ್ಕು : ಕಾಲ ಪಡೆವ ಕಲಿಸಲೋಸುಗ ಕೋಲಗುರು ಜಾಜಿದನು ಶಲ್ಯನ ಮೇಲುಮುಸುಕನುಪಾಯದ್ದು ಬಿರುದೇನಾಯ್ತು ಗುರುಸುತನ (ಕುಭಾದ್ರೋ. ೭-೨೪). ಮೇಲ್ಮುಸುಗು : ೪. ಪುಸ್ತಕದ ಹೊರಭಾಗಕ್ಕೆ ಹಾಕುವ ಹೊದಿಕೆ ; ರಟ್ಟು : ಇದು ಪುಸ್ತಕದ ಮೇಲ್ಮುಸುಗು (ಸುಪಸಂ. ೪). [ಮೇಲ್$_2$ + ಮುಸುಕು$_2$ (<ಮುಸುಂಕು$_2$)]

**ಮೇಲ್ಮುಸುಗು** 'ಮೇಲ್ಮುಸುಕು' ನೋ.

**ಮೇಲ್ಮೊಳಿ** (ನಾ) ಮಲ್ಲಯುದ್ಧದ ಒಂದು ಪಟ್ಟು : ಕಳಗುವೋಲೆಡಬಲನ ತಿರುಹಿನ ಸುಳವುಗಳ ಕಳವುಗಳ ಮೇಲ್ಮೊಳಿ ಮೊಳಗುಗಳ ಮಂಡಿಗಳ . . . ಲಗ್ಗೆಗಳ ಬೊಬ್ಬೆಗಳೆಳೆಯೊಳವರಿರ್ವರಿಗೆ ಸಮಜೋಳಿಗಳದಾರೆಂದ (ಕೃಷ್ಣಾ. ಕಾ. ೨೧-೯). [ ? ]

**ಮೇಲ್ಮೆ** (ನಾ). ಉನ್ನತಿ ; ಶ್ರೇಷ್ಠತೆ ; ಹಿರಿಮೆ : ಇಲ್ಲಿಯವರೆಗೆ ಉಪಲಬ್ಧವಾಗಿರುವ ಗ್ರಂಥ ಮತ್ತು ಲೇಖನಸಂಪತ್ತನ್ನು ಸೂರೆಗೊಂಡಿರುವ ವಿಷಯವೈಪುಲ್ಯ ಈ ಗ್ರಂಥದ ಮೇಲ್ಮೆಗೆ ಕಾರಣವಾಗಿದೆ (ದ್ರಾವಿಡ. v. ಮುಮ್ಮುಖ) ; ಗುರುದೇವನ ಕಾವ್ಯಗಳಲ್ಲಿರುವ ಒಂದು ಹೆಚ್ಚಿನ ಮೇಲ್ಮೆ ಅವನ ನಾಟಕ, ಕಾದಂಬರಿ, ಕಥೆಗಳಲ್ಲಿ ಕಾಣಬರುವುದಿಲ್ಲವೆಂಬ ಮಾತು ನಿರ್ವಿವಾದ (ರವೀಂದ್ರ. ೬೦) ; ತಪಶ್ಚರ್ಯೆಯ ಮೇಲ್ಮೆ ವರ್ಣಿತವಾಗಿದೆ (ಕನ್ನಡ ಕಾವ್ಯ. ೭೬). [ಮೇಲ್$_1$ + — ಮೆ$_3$]

**ಮೇಲ್ಮೈ** (ನಾ). ಹೊರಭಾಗ ; ಮೇಲ್ಭಾಗ ; ಹೊರ ಆವರಣ : ಸೂರ್ಯನ ಮೇಲ್ಮೈ ಮಿಂಚುವ ಅನಿಲಹಬೆಗಳಿಂದ ರಚಿತವಾಗಿದೆ (ಆಕಾಶ. ೯) ; ಭೂಮಿಯು ಒಳ್ಳೆಯ ಉಷ್ಣವಾಹಕವಸ್ತುವಾಗಿಲ್ಲದಿರುವುದರಿಂದ, ಭೂಮಿಯ ಒಳಭಾಗದಿಂದ ಅದರ ಮೇಲ್ಮೈಗೆ ಬರುವ ಉಷ್ಣಪ್ರಸಾರವು ಸೂರ್ಯನಿಂದ ಬರುವುದಕ್ಕಿಂತಲೂ ೫,೦೦೦ ದಷ್ಟು ಕಡಿಮೆಯಾಗಿರುತ್ತದೆ (ಭೂಕುಟ್ಟು. ೮೭); ಕನ್ನಡಿಯಂತೆ ಸ್ವಚ್ಛವಾದ ನದಿಯ ಮೇಲ್ಮೈಯಲ್ಲಿ ಒಂದೊಂದು ಕೆಂಪುಮೋಡದ ಪ್ರತಿಬಿಂಬ (ಯೋಗಪು. ೭೯). [ ಮೇಲ್$_1$ + ಮೈ$_{01}$ (< ಮೆಯ್$_2$) ]

**ಮೇಲ್ಕಟ್ಟ** (ನಾ). ಮೇಲುಕಟ್ಟು; ವಿತಾನ : "ವಿಚಾರದೊಳು ಮೇಲ್ಕಟ್ಟದೊಳವಧಿಯೊಳು ಶೂನ್ಯದೊಳ್ಕುಳಿದೊಳು ವಿತಾನಮಕ್ಕುಂ" (ಬಸವ. ೦೧೩-೨೯). [ ಮೇಲ್$_1$ + ಪಟ್ಟ$_3$ ]

**ಮೇಲ್ವಟ್ಟ** (ನಾ). ಒಂದು ಸ್ಥಳದ ಹೆಸರು (?) : ಇನ್ನುದಯಾದಿತ್ಯ ದಣ್ಣಾಧಿಪತಿ ಬನವಾಸೆ ಪನ್ನಿಚ್ಛಾಸಿರಮುಮಂ . . . ಮೇಲ್ವಟ್ಟದ ವಡ್ಡರಾವುಳದ ಸುಂಕಮುಮಂ ಸುಖಸಂಕಥಾವಿನೋದದಿಂದಾಳ್ದು ರಾಜ್ಯಂಗೆಯ್ಯುತ್ತಮಿರೆ (ಎಕ. VIII, ಸೊರಬ. ೨೯೯-೦೮; 1074); ಶ್ರೀಮದ್ವಣ್ಣನಾಯಕಂ ಶ್ರೀರಿದರಯ್ಯಂಗಳುಂ ದಣ್ಣನಾಯಕಂ ಆಸಪಯ್ಯಂಗಳುಂ ಮೇಲ್ವಟ್ಟ ವಡ್ಡರಾವುಳವೆರಡುಂ ಬಿಲ್ಕೊಡೆಯ ಸುಂಕನಾಳುತ್ತಮಿರೆ (ಕೌ. XX, ೬೦-೯; 1088). 'ಕೀಳ್ವಟ್ಟ' ಪರಾ. [ಮೇಲ್$_1$+ಪಟ್ಟ$_1$./ ☞ ಇದು 'ಮೇಲ್ವಟ್ಟ' ಎಂಬುದರ ಅಪಲಿಖಿತವಿರಬಹುದು ]

**ಮೇಲ್ವಡೆ** (ಕ್ರಿ). ಶುಭವನ್ನು ಪಡೆ : ಮೇಲ್ವಡೆವೆನೆಂದು ಕುಂದಿಸಿ ಪೆರ್ಚಿಸಿ ಸನ್ನೆಗೆಯ್ಯುತ್ತುಂ (ರಾಜಶೇಖರ. ೩-೦೩೭). [ಮೇಲ್$_1$ + ಪಡೆ$_1$]

**ಮೇಲ್ವಣೆ** (ನಾ). ಮೇಲಿನ ದಂಡೆಯ ಕೃಷಿಭೂಮಿ : ನೊಸಪಳ್ಳ ಆಗ್ನೇಯಾಂ ದಿಶಿ ಗದಿಗನ ಮಲೆಯ ಪಡುವಣಭಾಗೆ ನಾಲೆಗೋಡಲಪ್ಪುಡಣಭಾಗೆ ದಕ್ಷಿಣಾಂದಿಶಿ ಕೊಡೆ ನಡಿಕಿನ ಮೇಲ್ವಣೆ ಮುನ್ನೆ ನಡೆದು ಎಳೆತು ಮಟ್ಟನ ಹೆಬ್ಬಟೆ ಮುನ್ದೆ . . . ಆ ಕಟಿಯ ತೆಂಕಣ ಕಡೆಗೋಡಿ ಏರಿಯಂ ಮೇಲೆ ಬನ್ದು (ಎಕ. XIV, ಎಳಂದೂರು. ೦೬೦-೦೦; ಸು. 12ನೆಯ ಶತ). [ ಮೇಲ್$_1$ + ಪಣೆ$_2$ ]

**ಮೇಲ್ವಣ್ಣ** (ನಾ). ಶ್ರೇಷ್ಠವಾದ ಬಣ್ಣ : ಮೇಲ್ವಣ್ಣಂ ಮೇಲ್ವಾತು, ಸೂಳ್ವಾತು (ಶಬ್ದಾನು. ೯೩ ವೃತ್ತಿ). [ ಮೇಲ್$_1$+ಬಣ್ಣ ]

**ಮೇಲ್ವರಿ** ಮೇಲುವರಿ$_1$ (ಕ್ರಿ). ೧. ತುಂಬಿ ಹೊರಸೂಸು,-ಪ್ರವಹಿಸು: ಹರುಷ ಮಿಗೆ ಶೈಲಾದಿ ಕರುಣರಸವೊಸರಿ ಮೇಲ್ವರಿವಂತೆ ನೋಡಿ (ಹಾಮಂತ. ೦-೬೦); ವೀರಭಕ್ತನ ಪದನಿಹಿತಿಗೆ ಶಿರೋರುಹ ಗಂಗಾಪಾರಿತುಳುಕಿಯುಪಾರಪಾದೋದಕವೆನಿಸಿ ಮೇಲ್ವರಿದು ಪೂರಿಸಲು (ಬಸವ.೦೬-೯೮); ಉಪ್ಪವಡವಂ ಪಾಡುವ ರಾಗಾಧರೆಯರ ರಾಗರಸಪೂರಂ ಮೇರೆದಪ್ಪಿ ಮೇಲ್ವರಿಯೆ (ರಾಜಶೇ. ೦೬-೯೩ ಪ). ೨. ಮೇಲೆಬೀಳು; ಎರಗು : ಪೊಸಪಾವಿನಂತೆ ಮೇಲ್ವರಿವರ್ ಕೆರಳ್ದ ತಗರಂತೆ ತಾಗುವರ್ (ಶಂಕ. ೯೬-೩೯); ಪುಲಿ ಗರ್ಜಿಸುತ ಬರಲ್ಪಿಳ್ಕೋಲದಳಿವನಿತಜಿಳೊಳಗೆ ಸೊಕ್ಕಾನೆ ಮೇಲ್ವರಿಯೆ (ರಾಜಶೇ. ೦೭-೭೦). **ಮೇಲುವರಿ$_1$** : ೨. ಕೊಬ್ಬಿ ಕೂಗುವ ಕುಹಕ ಸತ್ಯಭೆಗುಬ್ಬಿ ಸಂತಸಪಟ್ಟು ಕೇಳ್ವನೆ ಅಬ್ಬರಿಪ ತಲೆಗೊಡಹಿ ತುಡುಗುಣಿ ಮೇಲುವರಿವಂತೆ (ಜಾಗಡ. ೦-೩೯). ೩. ಅತಿಶಯವಾಗು; ವಿಜೃಂಭಿಸು: ಮೇಲುವರಿವ ಜಲ್ಲಿ ಪಚ್ಚೆಯ ಮೇಲ್ಕಟ್ಟು ಸಾಲುಗೊಂಡೆಸೆವ ಪೂಮಾಲೆ (ಶಂಕ. ೨೨-೬೨). ೪. ಮುಂದುವರಿ ; ಮುನ್ನುಗ್ಗು : ಅತಿಭೀತಿಯಿಂದನುಗೆಟ್ಟು ಚಿಂತೆಗೆಯುದೆ ಮಿತಿ ಮೀರಿ ಮೇಲುವರಿಯುದೆ . . . ಪತಿ ಸೇವೆಗೈದು ಬಾಳುವುದು (ಹರಿ. ೩-೩೦). [ ಮೇಲ್$_2$ + ಪರಿ$_2$ ]

**ಮೇಲ್ವಲಗೆ**, ಮೇಲುವಲಗೆ(ನಾ). ೧.(ಚಾವಣಿಗೆ ಸೇರಿಸಿದ ಹಾಗಿರುವ) ಮೇಲ್ಭಾಗದ ಹಲಗೆ : ಸುರುಚಿರ ರತ್ನದ ತೊಟ್ಟಿಲ ಪೂಜಿಸಿ ತರಳನ ತುಂಬಿ ಸದ್ವಿಧಿಯಿಂ ಪರಮಂದಿರದ ಮೇಲ್ವಲಗೆಯ ಕೊಂಡಿಗೆ ಸರಪಳಿಯನು ತೊಡಚಿದರ್ (ಪೋಕಕ. ೦೭-೯೯) ; ಕಡುಚೆಲ್ವ ಮೇಲ್ವಲಗೆ ನೆಲಗಟ್ಟು ಗೋಡೆಗಳ ಗಡಣಮಂ ಧವಳಿಸಲು ನೃಪಕೀರ್ತಿ ದಶದಿಕ್ಕಿನೆಡೆಗೆ ತೀವಿದ ತೆರದೊಳೆಸೆಯೆ (ಶಾಕಹಂ. ೩-೨೫). **ಮೇಲುವಲಗೆ** : ೧. ರನ್ನದ ತೊಲೆ ಪಚ್ಚೆಯ ಮೇಲುವಲಗೆ ರಂಜಿಸಿದುದು (ಶ್ರೀಕೃಷ್ಣ. ೩-೩೦). ೨. ಗುರಾಣಿಯ ಮೇಲುಭಾಗ ; ಹರಿಗೆಯ ಮೇಲುಭಾಗ : ಮೇಲುವಲಗೆಯಲೆಸೆದು ಹಾಯ್ದನು ಬಾಲಕನು ಘಾಯವನು ನಸುನಗುತ್ತೇಳಿಸುತ ದಂಡೆಯಲಿ ಕಳೆದನು ತಿವಿದನವನುರವ (ಕುಮಾರರಾಮ. ೬-೩೬). [ ಮೇಲ್$_1$ + ಪಲಗೆ ]

**ಮೇಲ್ವಾಯ್**, ಮೇಲುವಾಯ್ (ಕ್ರಿ). ೧. ಮೇಲೆ ಹಾಯ್ದು ಬರು,-ಬೀಸು : ಪಸೆಂಧಾರೆ ನಾಡೆಯುಂ ಕಣ್ಣಸದಳಮಾಯ್ತುಮರಕರವೆರೆಚ್ಚುತಮೆತ್ತಂ ಪೊಸಪೂವಿನ ಸರಿ ಪಿರಿದಾಯ್ತುಸದಳಮೆನಿಪೆಲರದೊಂದು ಮೇಲ್ವಾಯ್ದಾಗಳ್ (ಆದಿಪು. ೧೧-೨). ೨. ಮೇಲಕ್ಕೆ ಹಾರು,-ನೆಗೆ : ಸೀಯೆ ತಲೆ ಬೇಯೆ ಮೆಯ್ ಮೇಲ್ವಾಯೆ ಕರಂ ಪಸಿದ ಪುಲ್ಕರುಳ್ ಪಿಚಿತಿನಿಗಳ್ ಬೇಯುತ್ತುಮಿರ್ದ ಪೆಣನಂ ನಾಯುಗಿಮಂತುಗಿದು ತಿಂದು ಪೋರೊಂದೆಡೆಯೊಳ್ (ಕಾವ್ಯಸಾ. ೩೭೭ ಕಾವ್ಯಪ್ರ) ; ಮೆಲ್ಲಡೆದೋರ್ಪ ದ್ವನ್ನರಾಳಾವಳಿಯಿನೊಳಗೆ ಮೇಲ್ವಾಯ್ವ ಮತ್ಸ್ಯಂಗಳಿಂ ಪೆಂಪಿಡಿದೊಪ್ಪಿತ್ತಲ್ಲಿ ಫೇನಸ್ಮಿತೆಯೆನಿಸುವ ಪೊಚ್ಚಂ ಪೊದಳ್ದೊಪ್ಪದಿಂದಂ (ರಾಜಶೇ. ೬-೨೩). ೩. ಉದುರು ; ಚೆಲ್ಲು : ನಿಜಿಗನ ನಿಜದರ ಗೊಂಚಲ್ಗಳುಮಾತನ ಮೇಲ್ವಾಯೆ ರಾಗಿಸಿ ರೋಮಾಂಕುರಮೊಗೆದಂತೊಗೆದ ಕಳಿಕಾಂಕುರಂಗಳುಂ (ಶಂಕರ. ೨-೦೨ ಪ). ೪. ಮುನ್ನುಗ್ಗು ; ಧಾವಿಸು : ತಾನಾಬಿದೊಯ್ಯನೆ ಕಣ್ಬಲರ್ಮಲರೆ ನೃಪನಂ ಭೋಂಕಲ್ ಮೇಲ್ವಾಯ್ದು ತಳ್ತರದಪ್ಪಿದಳ್ (ಕಾದಂಬ. ೭೬೭) ; ಲಜ್ಜೆಗೆಟ್ಟ ಪೆಣ್ಗಳಂತೆ ಮೇಲ್ವಾಯ್ದು ಪೆರ್ಬುಲಿವಿಂಡಿಂ (ರಾಜಶೇ. ೬-೫೩). ೫. ಧಾಳಿಮಾಡು ; ಎರಗು; ಮೇಲೆಬೀಳು : "ಅವ್ವಳಿಸುವುದೆನಲ್ಕೆ ಮೇಲ್ವಾಯ್ದುದು" (ಶಬ್ದಮ. ೨೫೦) ; ಅಡವಿಯೊಳ್ ಕಳ್ಳರ್ ಬಟ್ಟೆಗಟ್ಟಿ ಮೇಲ್ವಾಯ್ದುದೊಡೆ (ಪದ್ಮಾ. ರಾ. ೭೬-೦೭); ವಿರಥರತಿರಥರೆರೆಬರ್ ಮೇಲ್ವಾಯ್ದು ರಥಿಗಳಂ ಸುರಿಗಿರಿದರ್(ಶಂಕರ. ೦೦-೬೬). ೬. ಸಿಟ್ಟುಗೊಳ್ಳು; ಕೋಪಗೊಳ್ಳು: (೯). **ಮೇಲುವಾಯ್**: ೪. ಹೇಳಲರಿಯೆನು ಹರುಷದುದಯವನಾಲಿ ಹೂಳಿದವಶ್ರುಜಲದಲಿ ಮೇಲುವಾಯ್ದಪ್ಪಿದನು ದೇವನ ಪಾದಪಂಕಜವ (ಕುಮಾರರಾಮ. ೦೩-೦). ೫. ಆಲಿಕಲುಗಳು ಸಿಡಿಲ ಮರಿಗಳ ಮೇಲುವಾಯ್ದವು ಗಡ (ಕುಮಾರವ. ೦೦-೨೭). [ ಮೇಲ್$_2$ + ಪಾಯ್$_1$ ]

**ಮೇಲ್ವಾಸು**, ಮೇಲುವಾಸು (ನಾ). ಹಾಸಿಗೆ, ಹಸೆಮಣೆ ಮುಂತಾದುವುಗಳ ಮೇಲೆ ಹಾಸುವ ಬಟ್ಟೆ : ಗಿಂಡಿ ಮಡಗ ಮೇಲ್ವಾಸು ಮಂಚಗಳ ಗಡಣವೆಯ್ದಿತು (ಕುಮಾರವ. ೨೭-೯೭) ; ಬಾಳೆಯ ಕಂಬ ತಳಿರುತೋರಣ

ಜಾಮೂರು ಮೇಲ್ವಾಸುಗಳಿಂದ ಆ ಭಾಗವೆಲ್ಲ ಅಲಂಕೃತವಾಗಿದ್ದಿತು (ಚಿಂ. ೧೭) ; ಹೊಸಬರಿಗಾದರೂ ಮದುವೆಯಾದ ಮೇಲಲ್ಲವೆ ಮೇಲ್ವಾಸು ? (ಶೀಲಾ. ೫೯). **ಮೇಲುವಾಸು** : ಈ ಎರಡೂ ಮನೆಗಳಿಗೆ ಮೇಲುವಾಸಿಲ್ಲಿ ? (ಶೀಲಾ. ೫೯). [ ಮೇಲ್$_2$ + ವಾಸು$_2$ ]

**ಮೇಲ್ವಿಚಾರಕ** (ನಾ). ಮೇಲುಸ್ತುವಾರಿ ಮಾಡುವವನು : ಜಮೀನಿನ ಮೇಲ್ವಿಚಾರಕ ವಾಸವಾಗಿದ್ದ ಕಟ್ಟಡ ಅಡುಗೆಮನೆ . . . ಕುಸಿದುಬೀಳುವ ಸ್ಥಿತಿಯಲ್ಲಿದ್ದುವು (ಕುಸು. ೨೮೩) ; ನೀವು ಒಳ್ಳೆಯ ಪುಸ್ತಕಾಲಯದ ಮೇಲ್ವಿಚಾರಕರಾಗಲು ಕಲಿಯಬೇಕು (ಶಾಲಿಸು. ೨೦೦).

[ ಮೇಲ್$_1$ + ವಿಚಾರಕ ]

**ಮೇಲ್ವಿಚಾರಕಿ** (ನಾ). ಮೇಲುಸ್ತುವಾರಿ ನೋಡಿಕೊಳ್ಳುವವಳು : ಕಟ್ಟು ಗರತಿಯರಾದ ನತದೃಷ್ಟೆಯರಿಗೊಂದು ಅನಾಥಾಶ್ರಮವಿದೆ. ಅಲ್ಲೆನ್ ಅದರ ಮೇಲ್ವಿಚಾರಕಿ (ಕುಸು. ೩೨೮). [ಮೇಲ್ವಿಚಾರಕ + —ಇ$_2$]

**ಮೇಲ್ವಿಚಾರಣೆ** (ನಾ). ಮೇಲ್ಮನಿಷೆ ; ಮೇಲುಸ್ತುವಾರಿ: ಕಾಳಿ ಕಷಾಯವನ್ನು ರಾಯರ ಮೇಲ್ವಿಚಾರಣೆಯಲ್ಲಿ ಕಲಕಿದೆ (ಗಾಯ. ೦೦೯) ; ನನಗೆ ಪ್ರಾಪ್ತವಯಸ್ಸು ಬರುವವರೆಗೂ ನನ್ನ ಮಾವನವರನ್ನು ಆ ಗ್ರಾಮದ ಮೇಲ್ವಿಚಾರಣೆಗೆ ನೇಮಿಸಿದರು (ಶ್ರೀಶಾಕ. ೯೯). [ಮೇಲ್$_1$ + ವಿಚಾರಣೆ]

**ಮೇಲ್ವೀಟ್** (ಕ್ರಿ). ಮೇಲೆ ಎರಗು ; ದಾಳಿ ಮಾಡು : ಬಡಿಯಲಿಱಿಯಲ್ ಪೊಯ್ಯಲ್ ಮೇಲ್ವೀಟ್ವ ರಾಕ್ಷಸತಂಡದಿಂ . . . ಇವು ಮೊದಲಾದ ನೇಕೋಪಸರ್ಗಂಗಳಂ ಮಾಡಿಯುಂ (ಧರ್ಮಾಮೃ. ೨-೨೩೦) ; ಮೇಲ್ವಿಟ್ಟು ತುಱುಗಳನ್ ತಱಿದನ್ (ಅಕ್ಕಿತಾ. ೩-೯೫). [ ಮೇಲ್$_2$ + ಬೀಟ್$_1$ ]

**ಮೇಲ್ವೊದಕೆ**, ಮೇಲುವೊದಕೆ, ಮೇಲುಹೊದಕೆ, ಮೇಲುಹೊದಿಕೆ, ಮೇಲ್ವೊದಿಕೆ (ನಾ). ೧. ಮನೆ,, ಚಪ್ಪರ ಮುಂತಾದುವುಗಳ ಮೇಲ್ಭಾಗಕ್ಕೆ ಹಾಕುವ ಹೊದಿಕೆ. — ಪ್ರಚ್ಛಾದನ : ಉಟ್ಟುಡಿಗೆ ಬಳಸಿದ ನೆರಕೆ ತೊಡೆಯೆ ಕಂಬವಳಮಟ್ಟು ಕಟ್ಟು ಸಡಿಲ್ಚಿ ಮೆಱೆವ ಮುಡಿ ಮೇಲ್ವೊದಕೆ . . . ಆಗಲ್ . . . ಅತನುವಱವಟ್ಟಿಗೆಯೊಯೆಂಬವೊಲ್ ಪ್ರಪಾಕಾಂತಾಜನಂ (ಶಬ್ದಮಾ. ೬-೦೦) ; ಚಂದನರಸಂಗಳಿಂ ತೊಯ್ದೆಳೆಯ ದವನದ ಮೇಲ್ವೊದಕೆಯಿಂದೊಳಗೆ ಬಾಳೆಲೆಯ ಪಲಗೆಗಳ ಪರಿಸರದೊಳೊಂದಿ ಸಂದುವಿಡದಂತೆ ತರಂಗೊಳಿಸಿ (ರಾಜಶೇ. ೦೦-೩೦ ಪ). ೨. ಮುಚ್ಚಲು ಬಳಸುವ ಸಾಧನ ; ಮುಸುಕು: 'ಮೇಲ್ವೊದಕೆದೆಗೆ' ಪರಾ. **ಮೇಲುವೊದಕೆ** : ೧. ಬಿಸುಜಂತೆ ಜವ್ವಳಿಗಂಭ ಲೇಸಾಯಿತ್ತು ಮನೆ ಲೇಸಾಯಿತ್ತು ಮೇಲುವೊದ[ಪಾಠಾಂ. ದಿ]ಕೆ (ಅವತಾ. ೨೯-೯೯) ; ಮೇಲುವೊದ [ಪಾಠಾಂ. ದಿ]ಕೆಯು ಕರ್ಪೂರದ ಹೊಂಬಾಳೆಗಳ ಮಲಯಜದ ಕಂಬದ ಸಾಲುಗಳಲೊಪ್ಪಿದುದು ಚಪ್ಪರವೆರಡು ಯೋಜನದ (ಕುಮಾ.ಭಾ. ೦೨-೦೦). **ಮೇಲುಹೊದಕೆ** : ೧. ಜಾಲಿ ಜೇನೊಡವಿಪ್ಪೆ ಓಪ್ಪಲ ಮಾಲೆಯಿವ ನೋಡಬಲೆ ಲತೆಗಳ ಮೇಲುಹೊದಕೆಯ ಬಂದಣಿಕೆಗಳ ಭಾರಿ ಮೊಲೆಗಳಲಿ (ಕೂರರಾ. ೩-೦-೨೮). **ಮೇಲುಹೊದಿಕೆ**: ೧. "ಪಟಲಂ, ಛದಿಃ — ೨ ಮನೆಯ ಮೇಲುಹೊದಿಕೆಯ ಪೆಸರು. ಮನೆಯ ಮೇಲು ಮುಚ್ಚಳ" (ಸಿದ್ಧಾಂತಿ. ೦೦೩). ೩. ಮೈಮೇಲೆ ಹೊದೆಯುವ ಬಟ್ಟೆ ; ಉತ್ತರೀಯ : ಪ್ರಾವಾರಃ, ಉತ್ತರಾಸಂಗಃ, ಬೃಹತಿಕಾ, ಸಂವ್ಯಾನಂ, ಉತ್ತರೀಯಂ — ೫ ಉತ್ತರೀಯದ ಹೆಸರು. ಮೈಮೇಲೆ ಹೊದ್ದಿರುವ ವಸ್ತ್ರ . . . ಮೇಲುಹೊದಿಕೆ, ಮೇಲುಮುಸುಕು" (ಸಿದ್ಧಾಂತಿ. ೨೦೯). **ಮೇಲ್ವೊದಿಕೆ** : ೩. ತಕ್ಕನಿಂ ಮಿಕ್ಕುಪೋದರ್ಪನ ರಕ್ಕಸನ ಸಮ್ಮದ ಮೇಲ್ವೊದಿಕೆಯೊಳಂ ಚೆಲ್ವನಾಂತು (ಕಬ್ಬಿಗ. ೦೬೭); ಲೇಸಿಗುಬ್ಬುತ ಮೇಲ್ವೊದಿಕೆಯಂ ಹಾಸಿಯಗಲಕೆ ಮಿಸುಪ ಪೊಂಗಳ ರಾಶಿಯಂ ತೆಗೆತೆಗೆದು ಭಕ್ತ ಮೊಟ್ಟೆಯಂ ಕಟ್ಟಿ (ಬಸವ. ೨೯-೦೨).

[ಮೇಲ್$_2$ + ಪೊದಕೆ$_1$ ]

**ಮೇಲ್ವೊದಕೆದೆಗೆ** (ಕ್ರಿ). ಮೇಲೆ ಹೊದಿಸಿದ ಮುಸುಕನ್ನು ತೆಗೆ; ಆಚ್ಛಾದನೆಯನ್ನು ಓಸರಿಸು : ಓಡಿರ್ಕೆ ಕಲ್ಪಾಂತವಹನಂ ಮೂಡಿ ಬರುತಿದೆ ಎನುತ ಕೋಪಿಸಿ ಜೂಳಿಸಿದ ಸಿದ್ಧಪ್ರಸಾದದ ಮೇಲ್ವೊ [ಪಾಠಾಂ. ಲ್ಹೊ]ದಕೆದೆಗೆದು (ಬಸವ. ೫೬-೩೦). [ ಮೇಲ್ವೊದಕೆ + ತೆಗೆ$_1$ ]

**ಮೇಲ್ವೊದಿಕೆ** 'ಮೇಲ್ವೊದಕೆ' ನೋ.

**ಮೇಲ್ಸಕ್ಕರೆ** (ನಾ). ೧. ಉತ್ತಮವಾದ ಸಕ್ಕರೆ. ೨. (ಅಲಂ) ಉಪ್ಪು. ಮೇಲ್ಸಕ್ಕರೆಯವರು = ಉಪ್ಪನ್ನು ತಯಾರಿಸುವ ಜಾತಿಯವರು; ಉಪ್ಪಾರರು: (ಎಪಿಗ್ರ. XXI, ೦). [ ಮೇಲ್$_1$ + ಸಕ್ಕರೆ ]

**ಮೇಲ್ಸೀಮೆ** (ನಾ). ಎತ್ತರದ ಭೂಮಿ ; ಘಟ್ಟದ ಪ್ರದೇಶ : (*).

[ ಮೇಲ್$_1$ + ಸೀಮೆ ]

**ಮೇಲ್ಸೆಱಗು**, ಮೇಲುಸೆಱಗು (ನಾ). ೧. ಸೀರೆಯ ಮೇಲ್ಭಾಗದ ಅಂಚು: ಕಂದನಂ ನೋಡುತ್ತ ಕೌಂಕುಳಿಯಿಂದವಪ್ಪುತ ತಾಯಿ ಮೇಲ್ಸೆಱಗಿಂದ ಪೊದಿಸುತ ತೆಱೆವುತಂ ಹೊದಿಸುತ್ತ ತೆಱೆವುತ್ತ . . . ಬಾಯ್ಬಿಟ್ಟೊಱಲುವಳು (ಬಸವ. ೦೫-೨೦). **ಮೇಲುಸೆಱಗು** : ೨. ಉತ್ತರೀಯದ ತುದಿ : ಸುಯಿಧಾನ ಸಮೆಯದೆ ಆರೋಗಣೆಯ ಮಾಡಿ ಉಂಡು ಬಾಯ್ದೊಳೆದರೆ ಸಂದೇಹವಾದುದೆಂದು ಮೇಲುಸೆಱಗಿನೊಳು ತೊಡೆದುಕೊಂಡ (ಸಿದ್ಧಪ. ೪. ೩೦೯-೦೦೩೬). [ಮೇಲ್$_1$ + ಸೆಱಗು (< ಸೆಱಂಗು) ]

**ಮೇಲ್ಶ್ವಾಸ** (ನಾ). ಮೇಲಿನ ಶ್ವಾಸ ; ಮೇಲುಸಿರು; ಉಚ್ಛ್ವಾಸ : ಮೇಲ್ಶ್ವಾಸ [ಪಾಠಾಂ. ಲ್ವಾಸ]ಮೆತ್ತ ಸೆಡೆದಳ್ಕಿ ಬಲಂ ಪಱೆವಡೆ ಜೊಮ್ಮನೆ ಜೋಲ್ದು೦ *ಕೆಱಕೆಂ*. ಪಾರ್ದರದೆ ತಡೆಯದೊರ್ಮೆಯೆ ಮುನಿಪಂ . . . ಓಮೆಂದೋಕರಿಸಿ ನರೇಶ್ವರನ ಮೇಲೆ ಕಾಱಿದನಾಗಳ್ (ಧರ್ಮಾಮೃ. ೪-೦೬೨).

[ಮೇಲ್$_1$ + ಶ್ವಾಸ]

**ಮೇವಳಿ** (ನಾ). ಮೇಯುವ ಸ್ಥಾನ, – ಎಡೆ : ಸೋವಳಿ ಮೇವಳಿ ಬಿಸುವಳಿಯಂ ಬಲಮಂ ಶಕುನಮನೊಳ್ಳಿತ್ತುಪಾಯಮಂ ಓಡಿವಂದೀತನೆವಂದಿ ಕುರುಡು ಕುಂಟೆಂದಲಸದಱಿದಿಂತು . . . ನಿಱಿಸುವೆಂ ಪಂದಿಯಂ ನೀಂ ಮೆಚ್ಚಲುಂ(ಕಂಕಣಾ. ೫-೯೬); ಪಟಿನವಿರೆಲ್ಲಂ ಮೆಯ್ಯಂ ಕಟ್ಟಿದುಂ (?) [ಪಾಠಾಂ. ತಟಿದುಂ] ಬೆಳ್ಳಿಗಗಳಾಗಿ ತಿಳಿದಿರ್ದುವು ಮೇ [ಪಾಠಾಂ. ಮೆಯ್] ವಟಿ[ ಳಿ ]ಗಳೊಳಾಡುತ್ತುಂ ಓಂಡಟಿಯದೆಯಾ ಬೆಳ್ಳಿಗಂಗಳುಂ ಪಂದಿಗಳುಂ (ಸೂಕ್ತಿಸು. ೩-೩೯). [ಮೇ$_1$ + – ವಳಿ$_3$]

**ಮೇವು** (ನಾ). (ಜಾನುವಾರುಗಳ) ಆಹಾರ; ದನಕರುಗಳಿಗೆ ಹಾಕುವ ಹುಲ್ಲು, ದಂಟು ಇತ್ಯಾದಿ : ತಿಳಿನೀರನೀಂಟಿ ನೆಳಲೊಳ್ ಪಟ್ಟಿರ್ದು ಬೆಂಡೇಳ್ವ ಲೋಳೆ ಹಿಂಡಿಲ್ಗಟ್ಟಿ ಮೇವಂ ಮಗುಳ್ಚಿ (೧೦೪. ೦-೦೨೬ ಪ); ಪಸುವಿಂಗೆ ಮೇವು ಶಿಶುವಿಂಗೆ ನವನೀತವಂ . . . ಬೆಸಗೊಂಬುದಕ್ಕಿದೇ ಕುಱುಹೆಂದು . . . ಮೆಱೆವ ಮಿಸುನಿಗಳ ಗಂಟೆಯಿಂದೆಸೆವ ಚಿಲುವಿಕೆಯನವನೀಶ ನೋಡುತ ಬಂದನು (ಹಸಾ. ೪-೪೦); ನಮ್ಮ ದನಕರುಗಳನ್ನು ಮೇವಿಗೆ ಬಿಟ್ಟಿದ್ದೆವು (ಅರ್ಥ. ೦೦).

**ಮೇವುವಿಂಡಚಿ** (ಉಕ)=ದನಕರುಗಳಿಗೆ ಹಾಕುವ ಆಹಾರ, ಹುಲ್ಲು ಮುಂತಾದುವು ಎಂಬ ಅರ್ಥವನ್ನು ಸೂಚಿಸುವ ಒಂದು ನುಡಿಗಟ್ಟು: ಮೇವುವಿಂಡಚಿ ಹೊಟ್ಟು ಹುಲ್ಲು ಯಾವುದೂ ಉಳಿಯಲಿಲ್ಲ (ಕಳಶಾ. ೫); ನನಗೂ ಮೇವುವಿಂಡಚಿ ಇಡಾಕ ತಾಂವ ಬೇಕಲ್ಲಾ (ಜಾನಪ. ೭).

[ಮೇ$_1$ + – ವು]

**ಮೇಷ** (ನಾ). ೧. ಕುರಿಜಾತಿಯಲ್ಲಿ ಗಂಡು; ಟಗರು : "ಅವಿಃ . . . ಮೇಷಃ, ಮೇಂಡಃ – ಈ ೮ ಕುಱಿ" (ಹಲಾಯು. ೯೭-೦೨೯); ಕರಿಮಹಿಷ ಮೇಷಮಲ್ಲಸ್ವರೂಪದಿಂ ತಮಗೆ ತಾಮೆ ಪೋಱೆ (ಅಜಿತ. ೫-೬೦); ಅಂಚೆಯ ನಜಂ ಗಜವಂ ಬಳಪ್ಪರಿ ಮೇಷಮಂ ಮಾರುತಬಂಧು . . . ವೃಷಭನಂ ಹರನೇಱೆ ನಭಕ್ಕೆ ಸಲ್ವುದುಂ (ಜಗನ್ನಾ. ೦-೩೬). ೨. ಒಂದು ನರಕದ

ಹೆಸರು : ನಾದಪ್ರವಾಹ ರುಕ್ಷಸುಪ್ರವಾಹ ಮೇಷವೆಂಬೈದು ಮಂತ್ರಿ ನರಕಂಗಳ ಮಧ್ಯದಲ್ಲಿ ಚಂಡವೆಂಬರಸುನರಕವಿಹುದು (ಬಿಜ್ಜಳ. ೧೫೨). ೩. [ಜ್ಯೋತಿ] ದ್ವಾದಶರಾಶಿಗಳಲ್ಲಿ ಮೊದಲನೆಯದು ; ಹನ್ನೆರಡು ರಾಶಿಗಳಲ್ಲಿ ಒಂದು : ಕನಕಂ ವೃಶ್ಚಿಕ ಮೇಷದೊಳ್ ನಿಲೆ ಚಮ್ರೂನಾಥಂ . . . ಎನಿಕ್ಕುಂ (ಜಾತಕ. ೧೭-೧೪); ಮೇಷ ವೃಷಭ . . . ಮೀನವೆಂಬ ಹನ್ನೆರಡು ರಾಶಿಗಳುಂ (ಬಿಜ್ಜಳ. ೨೦೦). 'ದ್ವಾದಶರಾಶಿ' ಪರಾ. ೧, ೩: ಸಿಂಗದ ಮುಂದಣ ಕನ್ನೆಯದೇಂ ಗಡ ಮೇಷಕ್ಕೆ ಸಾಟಿಯೆನಿಕುಮೇ (ಚಂದ್ರಶೇ. ೭-೨೫). ೪. ಒಂದು ಬಗೆಯ ಸಸ್ಯ. [ಸಂ.]

**ಮೇಷಕಂಬಲ**, ಮೇಷಕಂಬಳ (ನಾ). ಉಣ್ಣೆಯಿಂದ ತಯಾರಿಸಿದ ಕಂಬಳಿ; ಉಣ್ಣೆಯ ಕಂಬಳಿ. **ಮೇಷಕಂಬಳ** : "ಊರ್ಣಾಯು ಮೇಷ ಕಂಬಳಮಕ್ಕುಂ" (ವಸ್ತುಕೋ. ೭೬-೦೯). [ಸಂ.]

**ಮೇಷಕಂಬಳ** 'ಮೇಷಕಂಬಲ' ನೋ.

**ಮೇಷಜ** (ನಾ). [ಜ್ಯೋತಿ]ಮೇಷರಾಶಿಯಲ್ಲಿ ಹುಟ್ಟಿದವನು: ಚಲವಿತ್ತಂ . . . ಮಾನಾನ್ವಿತಂ ಮೇಷಜಂ (ಜಾತಕ. ೧೭-೧). [ಸಂ.]

**ಮೇಷಪಂಥ** (ನಾ). ಟಗರುಗಳನ್ನು ಹುರಿದುಂಬಿಸಿ ಹೋರಾಟ ಮಾಡಿಸುವ ಒಂದು ಬಗೆಯ ಪಂದ್ಯ. — ಜೂಜು, — ಸ್ಪರ್ಧೆ : ಸಂತಸದೊಳೊಂದು ದಿನ ದಂತಿ ಮಹಿಷವು ಮೇಷಪಂಥದಾ ಮಲ್ಲ ಚರಣಾಯುಧವು ಲಾವುಗೆಯು ಮುಂತಾದ ಯುದ್ಧಗಳ ನೋಡಿ (ಜೈಶರಾ.೯-೩೩). [ಸಂ.]

**ಮೇಷಮಾಸ** (ನಾ). [ಜ್ಯೋತಿ] ಸೂರ್ಯನು ಮೇಷರಾಶಿಯಲ್ಲಿ ಇರುವ ಒಂದು ತಿಂಗಳ ಅವಧಿ : ವಸಂತಕಾಲಾರಂಭದಿಂದ ನಡೆಯುವ ಒಂದು ತಿಂಗಳು — ಈಗಿನ ಮಾರ್ಚ್, ೨೧ ರಿಂದ ಏಪ್ರಿಲ್ ೨೧ — ಈಜಿಪ್ಟಿನ ಕುರಿಗಳು ಹೆಚ್ಚಾಗಿ ಮರಿಗಳನ್ನು ಹಾಕುವ ಕಾಲ. ಇದನ್ನು ಸೂಚಿಸುವುದಕ್ಕಾಗಿ ಆ ತಿಂಗಳನ್ನು ಮೇಷಮಾಸವೆಂದು ಕರೆದು ಆ ತಿಂಗಳಲ್ಲಿ ಸೂರ್ಯನು ತಾಳಿಯುವ ಖಗೋಳಪ್ರದೇಶವನ್ನು . . . ಮೇಷರಾಶಿ ಎಂದು ಕರೆದರು (ನಕ್ಷತ್ರ. ೯೯). [ಸಂ.]

**ಮೇಷಯುದ್ಧ** (ನಾ). =ಮೇಷಪಂಥ : ಬೆಸಸುವೊಡೇಳೇಳಲಿ ಸುಕುಮಾರ . . . ಮಲ್ಲಮೇಷಯುದ್ಧವ[ಪಾಠಾಂ. ಯಜ್ಞವ]ನೋಡೇಳಾ (ಹಕಾ. ೧೨-೩೦ ರಗಳೆ). [ಸಂ.]

**ಮೇಷಶೃಂಗಿ** (ನಾ). ಹೋತದ ಕೊಂಬಿನಂತೆ ಕಾಣುವ ಕಾಯಿಗಳನ್ನು ಬಿಡುವ ಒಂದು ಬಗೆಯ ಸಸ್ಯ : ಮೇಷಶೃಂಗಿಯ ಮರದ ತಿಗುಡು, ಕಂಬಲಿಯ ತಿಗಡೆ . . . ಇಷ್ಟು ಔಷಧಿ ಸಮನಾಗಿ ಕೂಡಿ, ಗ ೧೨ ತೂಕವನ್ನು ೧೪ ಸಲ ನೀರೊಳಗೆ ಹಾಕಿ . . . ಕೊಡುವುದು (ಬಿವೈ.ಬಿ. ೧೩೩). 'ಅಜಶೃಂಗಿ' ಹೋ. [ಸಂ. ಮೇಷಶೃಂಗೀ]

**ಮೇಷಸಂಕ್ರಮಣ** (ನಾ). [ಜ್ಯೋತಿ] ಸೂರ್ಯನು ಮೇಷರಾಶಿಯನ್ನು ಸೇರುವ ಕಾಲ : ಸೂರ್ಯನು ರೇವತೀತಾರೆಯನ್ನು ಸೇರಿದ ಕ್ಷಣವೇ ಮೇಷಸಂಕ್ರಮಣ (ನಕ್ಷತ್ರ. ೯೬). [ಸಂ.]

**ಮೇಷಿ** (ನಾ). ಹೆಣ್ಣುಕುರಿ. [ಸಂ. ಮೇಷೀ]

**ಮೇಷ್ಟರು** 'ಮಾಸ್ಟರು' ನೋ.

**ಮೇಷ್ಟ್ರು** 'ಮಾಸ್ಟರು' ನೋ.

**ಮೇಸ** (ನಾ). = ಮೇಷ ೧ : ಮೇಷ — ಮೇಸ ; ರೋಷ — ರೋಸ (ಶಮದ. ೨೩೩ ಪ್ರಯೋ). [< ಪ್ರಾ. ಮೇಸ./ಸಂ. ಮೇಷ]

**ಮೇಸು** 'ಮೇಯಿಸು' ನೋ.

**ಮೇಸ್ತ್ರಿ** (ನಾ). ಕೆಲಸಗಾರರ ಕೆಲಸದ ಮೇಲ್ವಿಚಾರಣೆ ಮಾಡುವವನು; ಕೆಲಸಗಾರರ ಮುಖಂಡ, – ಮುಖ್ಯಸ್ಥ : ಉಪಾಧ್ಯಾಯನು ಬೋಧಕನೂ ಅಲ್ಲ ಅಥವಾ ದುಡಿಸುವ ಮೇಸ್ತ್ರಿಯೂ ಅಲ್ಲ (ಶ್ರೀಯಾಡಿ. ೧೩೭) ; ಅನೇಕ ಮನೆಗಳನ್ನು ದಾಟಿ ಒಬ್ಬ ಬಂಗಾಲಿ ಮೇಸ್ತ್ರಿಯ ಮನೆಯನ್ನು ಹೊಕ್ಕರು (ಶಾಕಿ. ೬೬); ಅದು ಮೇಸ್ತ್ರಿ ಕಟ್ಟಿದ ಈ ಕಲ್ಲುಗೋಡೆಯಿಂದ ಸಿದ್ಧವಾದ್ದಲ್ಲ (ಹಿಂದಿ. I. ೨೨೩). [←ಪೋರ್ಚು. ಮೇಸ್ತರ್, ಮೇಸ್ತ್ರ./ಹಿಂ. ಮಿಸ್ತ್ರೀ, ಮಿಸ್ತರೀ = ಕೈಕೆಲಸಗಳಲ್ಲಿ ಕುಶಲನಾದವನು; ಚತುರ ಶಿಲ್ಪಕಾರ; ಮರಾ. ಮೇಸ್ತ್, ಮೇಸ್ತರೀ, ಮೇಸ್ತ್ರೀ]

**ಮೇಹ** (ನಾ). ೧. ಮೂತ್ರ. ೨. ಮೂತ್ರಸಂಬಂಧವಾದ ರೋಗ : ಸಕ್ಕರೆಖಾಯಿಲೆ. ೩. ಜನನೇಂದ್ರಿಯ ಸಂಬಂಧವಾದ ರೋಗ: ಗುಹ್ಯರೋಗ : "ಜ್ವರ ಕುಷ್ಠ ಭಗಂದರ ಮೇಹ ರಾಜಯಕ್ಷ್ಮಾದಿ ಭೇದಭಿನ್ನಂ ರೋಗಂ" (ವಸ್ತುಕೋ. ೭೨-೩೩). ೪. ಟಗರು; ಮೇಷ.[ಸಂ].

**ಮೇಹನ** (ನಾ). ೧. ಮೂತ್ರವಿಸರ್ಜನೆ. ೨. ಮೂತ್ರ. ೩. ಪುರುಷನ ಜನನೇಂದ್ರಿಯ; ಶಿಶ್ನ: "ಶಿಶ್ನಃ, ಶೇಫಃ, ಮೇಢ್ರಃ, ಲಿಂಗಂ, ಮೇಹನಂ, ಶೇಫಸ್ — ಈ ೬ ಶೇಫಂ" (ಹಲಾಯು. ೯೫-೩೬೦); ತಲೆ ಮೇಷಂ ವಕ್ತ್ರಮುಂ ಕಂಠಮುಮೆನಿಪೆರಡುಂ ಸ್ಥಾನಮುಕ್ಷಂ . . . ವೃಶ್ಚಿಕವಸತಿ ಗುದಂ ಮೇಹನಂ . . . ಮೀನೋದಯಂ ಬಾಲಮಕ್ಕುಂ (ಜಾತಕ. ೩-೩). ೪. ಕೂಟ ; ಸಂಭೋಗ. [ಸಂ.]

**ಮೇಹನತ್** 'ಮೆಹನತ್ತು' ನೋ.

**ಮೇಹನತ್ತು** 'ಮೆಹನತ್ತು' ನೋ.

**ಮೇಹನದ್ವಾರ** (ನಾ). ಮೂತ್ರದ್ವಾರ ; ಜನನೇಂದ್ರಿಯದ ನಾಳ : ಭಾರ್ಗವನು ನುಂಗಿದನು ರೋಷದಿ ಭರ್ಗನಾ ಸಮಯದಲಿ ಕವಿಯಾ ದುರ್ಗಿಯಧಿಪನ ಜಠರಮಧ್ಯದಿ ತೊಳಲಿ ಬಳಲಿ ನಿರ್ಗಮಿಸುವರೆ ಬೇಜ್‌ ಕಾಣದೆ ಮಾರ್ಗವನು ಪುರಹರನ ಗರ್ಭದೊಳೊರ್ಗುಡಿಸಿ ತನು ಮೇಹನ ದ್ವಾರದಲಿ ಪೊರಮಟ್ಟು (ತೊರ್ವೆರಾ. ೯-೪) ; ಮುದದಲತಿತೇಜಸ್ವಿಯನು ಮಾಡಿದನು ತನ್ನಯ ಮೇಹನದ್ವಾರದಲಿ ಸಂಜನಿಸಿದುದರಿಂದಾ ದೈತ್ಯ ಸಚಿವನನು (ತೊರ್ವೆರಾ. ೯-೬). [ಸಂ.]

**ಮೇಹರೋಗ** (ನಾ). = ಮೇಹ ೩: ಮೇಹರೋಗ, ಊರುಸ್ತಂಭ, ಕುಷ್ಠ . . . ನೇತ್ರರೋಗಗಳಿಂದ ಪೀಡಿತರಾದವರು, ಅತಿಸ್ನಿಗ್ಧರು-ಲಂಘನಚಿಕಿತ್ಸೆಗೆ ಅರ್ಹರು (ಕರ್ಣಾಟಕ. I. ೯೩೨). [ಸಂ.]

**ಮೇಹಬರ್ಬಾನಗಿ** 'ಮೆಹಬೊರ್ನಗಿ' ನೋ.

**ಮೇಹು** 'ಮೇವು' ನೋ.

**ಮೇಹುಗಾಡು** 'ಮೇವುಗಾಡು' ನೋ.

**ಮೇಹುಗಾಟ** (ನಾ). (ಆಲು) ಜಾನುವಾರುಗಳಂತೆ ಕಂದಮೂಲಾದಿಗಳನ್ನು ತಿನ್ನುವವನು: ಸಾಹಸಿಗಳಲ್ಲಿಲ್ಲ ಹರಿ ತುಟುಗಾಟಿ ಪಾಂಡವರೈವರಡವಿಯ ಮೇಹುಗಾಟಿರು ಬಂದ ಭೂಭುಜರೆಲ್ಲ ತಾ ನೆರವಿ (ಕುವ್ಯಾಭೀ. ೧-೧೧). [ ಮೇಹು (< ಮೇವು) + – ಕಾಟ ]

**ಮೇಹುಗೊಳ್** 'ಮೇವುಗೊಳ್' ನೋ.

**ಮೇಳ** 'ಮೇಲ' ನೋ.

**ಮೇಳಂಗೆಯ್** (ಕ್ರಿ). ಶ್ರುತಿಯನ್ನು ಮಾಡು; ಶ್ರುತಿ ಕೂಡಿಸು : ಚಿನ್ನಕಿನ್ನರಿಯುಂ ತೆಗೆದು ಮೇಳಂಗೆಯ್ದಾ [ಪಾಠಾಂ. ಗೈದಾ]ಳಾಪಿಸಿ (ರಾಜಶೇ. ೧-೧೩೫ ವ); ಮೇಳಂಗೆಯ್ದು[ಪಾಠಾಂ. ಗೈದು]ವಿರ್ಸುತ್ತ ಶ್ರುತಿಯುಂ ವೀಣೆಯುಂ ವಕ್ಷದೊಳ್ ಮೇಣ್ ತಾಳುತ್ತಂ (ರಾಜಶೇ. ೧೧-೯೭).

[ ಮೇಳ (=ಮೇಲ) + ಕೆಯ್, ]

**ಮೇಳಂಗೊಳ್**, ಮೇಳಗೊಳು, ಮೇಳಗೊಳ್ಳು (ಕ್ರಿ). ಸೇರಿಕೊಳ್ಳು; ಹೊಂದಿಕೊಳ್ಳು : ಓರೆಂಜಲ್ಗೊಳ್ವಂತಿಗೆ ಪಾರವ ಬಳರೊಡನೆ ಬೆರಸಿ ಮೇಳಂಗೊಂಡಂದಾರುಂ ಲಘುವಪ್ಪರ್ ಪ್ರಸ್ತಾರದೊಳವರ್ದಂಬ 'ಶಿಥಿಲ ಸಂಯೋಗದವೊಲ್ (ಛಂದೋಂ. ೨೩೯) ; ಮೇಳಂಗೊಂಡ ಕುಂಭಸ್ಥಲದ ಸಾಂದ್ರಸಿಂದೂರರೇಣುಪ್ರಸರೆಮುಂ (ಜಗಿ. ೬-೩೩ ವ). **ಮೇಳಗೊಳು** :

ಮೇಳಗೊಳುವುದವಸೊಳು ಪೇರೆ ಮಿಾಜದೆ (ಹರಿಚ. ೩–೪೪) ಮೇಳಗೊಳ್ಳು: ಅವರ ಶಾರೀರಿಕ ಮಾನಸಿಕ ಬಯಕೆಗಳೂ ಮೇಳಗೊಳ್ಳಬೇಕು (ಮಾಮಾಚ. ೧೦೭). [ ಮೇಳ (= ಮೇಲ) + ಕೊಳ್$_1$ ]

**ಮೇಳಂಬ** (ನಾ). ದುಂಬಿ ; ಭ್ರಮರ : "ಮೇಳಂಬ=ತುಂಬಿ" (ಕಮುದ. ಹಂ. ೨); "ಮಲ್ಲಿಗೆ ಪಜಿಮೆ . . . ಮೇಳಂಬವಲರುಣ ಬಂಡು ಣೆಯೆ ಚಿತ್ರವಿಹಗಮಕ್ಕುಂ" (ಕಾವ್ಯಕೈ. ೦೩); ಅಡಿಗಡಿಗೆ ಜಗ್ಗಿಪ ಮೇಳಂಬದ ಮೊರೆಯೆ ಗುಡುಗುವ ಬಲ್ದನಿಯಾಗೆ (ರಾಮಾಶ್ವ. ೩೪-೦೩).

[ ?./ ತೆಲು. ಮೊಗರಯು ]

**ಮೇಳಕ** ' ಮೇಲಕ ' ನೋ.

**ಮೇಳಕಟ್ಟು** ' ಮೇಳಗಟ್ಟು ' ನೋ.

**ಮೇಳಗಟ್ಟು**, ಮೇಳಕಟ್ಟು (ಕ್ರಿ). ೧. ಜೊತೆ ಸೇರು; ಸಹವಾಸ ಮಾಡು : ಉಡಾಳರ ಮೇಳಗಟ್ಟಿ ಇಸ್ಪೀಟು ಆಡುವುದರಲ್ಲಿ ವೇಳೆಗಳೆ ಯುತ್ತಾನೆ (ಗಂಮಾಯ. ೧೫೭). **ಮೇಳಕಟ್ಟು** : ೨. ಯಕ್ಷಗಾನ, ನೃತ್ಯ ಮುಂತಾದುವುಗಳ ಪ್ರಸಂಗವನ್ನು ಏರ್ಪಡಿಸು : ಇವತ್ತು ಪಕ್ಕದ ಊರಿನಲ್ಲಿ ಮೇಳಕಟ್ಟುತ್ತಾರಂತೆ (ರೂಢಿ). ೩. ವೀಣೆ ಮುಂತಾದ ವಾದ್ಯಗಳಲ್ಲಿ ಬೇರೆಬೇರೆ ಸ್ವರಸ್ಥಾನಗಳನ್ನು ನಿರ್ದೇಶಿಸುವ ಮೆಟ್ಟಿಲನ್ನು ಕಟ್ಟು.– ರಚಿಸು : ಅವರು ಹಳೆಯದಾಗಿದ್ದ ವೀಣೆಯನ್ನು ಮೇಳ ಕಟ್ಟಿ ಸರಿ ಮಾಡಿದರು (ರೂಢಿ). [ಮೇಳ (= ಮೇಲ) + ಕಟ್ಟು$_1$]

**ಮೇಳಗಾನ** (ನಾ). ೧. (ನಾಟ್ಯಕ್ಕೆ) ಹೊಂದಾಣಿಕೆಯಾಗುವ ಗಾಯನ : ಮೇಳಗಾನಧ್ಯಾನದಿನಿದನು ಕೇಳಿ ಸಿಕ್ಕದರಾರು (ಕೃಶುಂ. ೪-೭೦). ೨. ಸಾಮೂಹಿಕವಾಗಿ ಹಾಡುವುದು ; ಸಮೂಹಗಾಯನ : ಸಂಜೆಯ ವೇಳೆ ಮೇಳಗಾನ ನಡೆಸಬಹುದಿತ್ತು (ಕುನರು. ೩೦೨). [ಸಂ. ಮೇಲಗಾನ]

**ಮೇಳಗಾರ** ' ಮೇಳಗಾಱ ' ನೋ.

**ಮೇಳಗಾರ್ತಿ** (ನಾ). ಜೊತೆಗಾತಿ ; ಒಡನಾಡಿ : "ಸಬ್ಬವಕಾರ್ತಿಯೆ ಘಟಿಸಲನೆ ತಾಂ ಮೇಳಗಾರ್ತಿ[ಪಾಠಾಂ. ದಾಕಿ]ಯೆನಿಪಳ್" (ಕವಿಕಂ. ೧೭೦).

[ಮೇಳಗಾಱ + – ತಿ$_1$ (< – ಇತ್ತಿ)]

**ಮೇಳಗಾಳೆಗ** (ನಾ). ತೋರಿಕೆಯ ಹೋರಾಟ ; ಕ್ರೀಡಾಯುದ್ಧ : ಕಾದುವ ಮಾಟಕ್ಕೆಯಲ್ಲವಿದು ಕಮ್ಮನೆ ನಣ್ಪನೆ ಮೇಳಗಾಳೆಗಂಗಾದುವ ನಾಟಕ್ಕೆ (ಶಂರಶಾ. ೦೩-೪೩). ' ಮೇಲುಗಾಳೆಗ ' ನೋ.

[ಮೇಳ (= ಮೇಲ) + ಕಾಳೆಗ]

**ಮೇಳಗಾಱ**, ಮೇಳಗಾರ (ನಾ). ೧. ಜೊತೆಗಾರ ; ಒಡನಾಡಿ : ' ಮೇಳಗಾರ್ತಿ ' ಪರಾ. ೨. (ಹಿನ್ನೆಲೆಯಲ್ಲಿ) ವಾದ್ಯ ಬಾರಿಸುವವನು ಅಥವಾ ಗಾಯನ ಮಾಡುವವನು : ನೆಗಟ್ತೆಯ ಮಿಂಡರ ಮೇಳಗಾಱರಕ್ಕರಿಗರ ಸಂದ ಕಬ್ಬಿಗರ . . . ಬಾಜಿಪ ಬೀಣೆಗಾಱರಾಗರಮೆಸೆ ಪೆಂಪು ಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್ (ಕಬ್ಬಿಕಾ. ೪೨) ; ಭರತಜ್ಞ ಮೇಳಗಾಱರಿಗೆ ಭೂಷಣಗಳ ಸುರುಚಿರ ವಸನಕರ್ಪೂರದ ಪರಿಮಳ ವೆರೆದ ವೀಳಯಂಗಳನಿತ್ತಾಗ ನರಸರಾಜೇಂದ್ರು ಮನ್ನಿಸಿದ (ಕಂಪವಿ. ೬–೭೯). **ಮೇಳಗಾರ** : ೨.ಗುಡುಗಿನ ದನಿಯು ಕೇಳಿದ ಕೂಡಲೇ ಆ ಮೇಳಗಾರರು ತಮ್ಮ ವಾದ್ಯಗಳನ್ನು ಗಟ್ಟಿಯಾಗಿ ಬಾರಿಸಬೇಕೆಂದು ಅವನ ಅಪ್ಪಣೆ ಯಾಯಿತು (ಮಡಿಸ. ೩೪). [ಮೇಳ (= ಮೇಲ) + – ಕಾಱ]

**ಮೇಳಗೀತ** (ನಾ). ಸಾಮೂಹಿಕವಾಗಿ ಹಾಡುವ ಹಾಡು : ಇದರಲ್ಲಿ ಎರಡು ಪ್ರಕಾರಗಳಿವೆ: ಒಬ್ಬನೇ ಹಾಡುವಂತಹ ಏಕಗಾಯಕಗೀತ, ಮತ್ತು ಸಮೂಹದಲ್ಲಿ ಹಾಡುವ ಮೇಳಗೀತ (ಶಂಕಾ. ೨೦೯). P ಇದು ಇಂಗ್ಲಿಷಿನ ' Chorus ' ಎಂಬ ಶಬ್ದದ ಅನುವಾದರೂಪ.

[ಸಂ. ಮೇಲಗೀತ]

**ಮೇಳಗೀತೆ** (ನಾ). = ಮೇಳಗೀತ : ರಂಗವಾಚಿಗೆ ಹೀಗೆ ಒಯ್ಯಲ್ಪಟ್ಟ ಮೇಳದವರು . . . ಮುನ್ನೆಲೆಯ ಮೇಳರಂಗದಲ್ಲಿ ಬಂದಿದ್ದು ತಮ್ಮ ಮೇಳಗೀತೆಯನ್ನು ಹಾಡಿರಬಹುದು (ಏದ್ಯಕ್ರ. LVi, ನಾಟಕದ ಸಮಸ್ಯೆ).

[ಸಂ. ಮೇಲಗೀತಾ]

**ಮೇಳಗೂಡು** (ಕ್ರಿ). ಒಟ್ಟಿಗೆ ಸೇರು; ಒಟ್ಟುಗೂಡು : ಆ ತರೆಯ ಹಿಂದೆ ಮೇಳಗೂಡಿ ಚಿಕ್ಕೆಗಳೆಲ್ಲ ಸೌಂದರ್ಯಶಕ್ತಿಯನ್ನು ಕುರಿತು ಇಂತು ಪಾಡಿದುವು (ಕೃಶಾಕು. ೨-೭). [ಮೇಳ (= ಮೇಲ) + ಕೂಡು$_1$]

**ಮೇಳಗೊಳು** ' ಮೇಳಂಗೊಳ್ ' ನೋ.

**ಮೇಳಗೊಳ್ಳು** ' ಮೇಳಂಗೊಳ್ ' ನೋ.

**ಮೇಳಣೆ** (ನಾ). ಕೂಡುವಿಕೆ : ಸೇರುವಿಕೆ; ಹೊಂದಾಣಿಕೆ : "ಮೇಳಣೆ— ಮೇಲನ = ಕೂಡುವಿಕೆ, ಬೆರಕೆ" (ಶಬ್ದಕೋ. ೩೭). ' ಮೇಳಣೆವಡೆ ' ಪರಾ. [ಮೇಳ (= ಮೇಲ) + – ಅಣೆ$_4$]

**ಮೇಳಣೆವಡೆ** (ಕ್ರಿ). ಹೊಂದಿಕೊಳ್ಳು; ಸೇರಿಕೊಳ್ಳು : ಸುರವಾದಕರ ವಾದ್ಯಪ್ರಹರಣಪದ್ಧತಿಯೊಳ್ ಪವಣ್ವಡೆದ ತಾಳದೊಳ್ ಮೇಳಣೆ ವಡೆದು . . . ನಾನಾಪ್ರಬಂಧಾದಿ ನಿಬದ್ಧಗೀತಂಗಳ ಮಧುರಧ್ವಾನ ಮಾನಂದಮಂ ಪುಟ್ಟಿಸೆ (ಮಹಾಪೀ. ೦೪–೩೬ ವ). [ಮೇಳಣೆ + ಪಡೆ$_1$]

**ಮೇಳನ** ' ಮೇಲನ ' ನೋ.

**ಮೇಳಯ**, ಮೇಳವ, ಮೇಳೆಯ (ನಾ). ೧. ಕೂಟ ; ಸೇರಿಕೆ : ಹೊಂದಿಕೆ ; ಸಾಮರಸ್ಯ. ೨. ಗುಂಪು; ಸಮೂಹ : ಕೋಲ ಕೋಳಾಹಳಕೆ ತೇರಿನ ಗಾಲಿಗಳನೊಡ್ಡಿದರು ಹರಿಗೆಯ ಹೇಳಿದರು ಹಮ್ಮುಗೆಯ ಕೊಯ್ದೊಡ್ಡಿದರು ಜೋಂಜಿಗಳ ಮೇಳ[ಪಾಠಾಂ. ಳೆ]ಯವ ಮೋಹಿದರು (ಕುವ್ಯಾಕ. ೨೪-೦೪) ; ಕೋಳಿ ತಗರು ಕಾಡಕೋಣ ಕೂರಾನೆ ಮಾಸಾಳು ಮಲ್ಲರು ಮೊದಲಾದ ಮೇಳಯದಲ್ಲಿ[ಪಾಠಾಂ. ಮೇಳದಲ್ಲಿ, ಮೇಳಯದರ್ತಿ] ಗಾಳೆಗದೊಳಗಾ ನೃಪಬಾಲಕ ದಿನವ ನೂಕುವನು ( ಶ್ರೀಕಾಂ. ೨-೯೪ ). **ಮೇಳವ** : ೧. ಪಯದಳದ ಸುಭಟರ ಸಿಂಹಗರ್ಜನೆಯ ಮೇಳವದ ಲೆನ್ನಾಸೆಗಳ ಬಿರಹೇಳು (ಕುವ್ಯಾದ್ರೋ. ೪-೨೦) ; ಆಶೆ ಬೀತುದು ನಮಗೆ ರಾಜ್ಯಶ್ರೀಸತಿಯ ಮೇಳಣ ಮನಕ್ಕಭಿಲಾಷೆಯಾದುದು ಮುಕ್ತಿವನಿತೆಯ ಕೇಳಮೇಳವ (ತೊರರಾ. ೨–೦-೦೨). ೨. ಶಾಲಿಗೆಜಗಿದ ಗಿಳಿಯನಬಲೆಯ ರಾಶಿವರಲಿಂದಿಡಲು ತಪ್ಪಿ ವಿಶಾಲಪುಂಡ್ರೇಕ್ಷುಗಳ ಕೊಳೆ ಗಂಟೊಡೆದು ರಸವಿಳಿಯೆ ಮೇಳವದಿ ಪಥಿಕರ್ಕಳೆಂಟಿ (ಶೀವಂಶ. ೨-೦೦) ; ಮೇಳವದ ರೆಷೋಂಕೃತಿಯ . . . ಕೈರವಸಂಚಯದ ಸೌರಭ್ಯಪವನನಿನೆಸೆವುದಾ ಸರಸಿ (ತೊರರಾ. ೨–೪–೨೦). ೩. ಸಭೆ; ಸಮಿತಿ; ಗೋಷ್ಠಿ : ಅಂಧಾಸುರನ ರಾಜ್ಯದ ಮೇಳವನ[ವ]ನೀನೆಂಜೆ . . . ಏಳುವರೆಯೋಜನದಲೋಲಗಶಾಲೆ ತುಂಬಿತು ಸುಭಟಸಮುದಯದೋಳಿಯಲಿ ( ಸಂಭಪ. ೩–೯೮ ). ೪. ಗಾನ, ವಾದ್ಯಗಳಿಂದ ಕೂಡಿದ ನೃತ್ಯ : ಗೀತ ಜತಿಗಳ ಮೇಳವಕೆ ಕೆಲರೋತು ಕುಣಿವರು ಚಪ್ಪಳಿಕ್ಕಿ ಪುರಾತನರ ತತ್ತ್ವಾರ್ಥಮಂ ವಿಸ್ತರಿಸುವರು ಕೆಲವರು (ಬಸವು. ೪-೯) ; ಸರಸತರಸಂಗೀತನರ್ತನದ ಮೇಳವದ ನೆರೆ ನೆರೆದ ಚತುರಂಗದೊಡ್ಡುಗಳ ಸಂದಣಿಯ ದೊರೆದೊರೆಗಳೈತಂದರುತ್ಸವ ದೊಳರಸನಂ ಕಾಣಲಚ್ಯುತನ ಕೂಡೆ (ಜೈಬಿಶಾ. ೩೩-೨೭). **ಮೇಳೆಯ** : ೧. ನಿನ್ನಾಳ ಜಯಸಿರಿ ಸರ್ಪಬಾಣದ ಮೇಳೆಯದ ಸೀಮೆಯಲಿ ನಿಂದುದು (ಕುವ್ಯಾಕ. ೨೭–೧). ೨. ಒದವಿ ಪೊದಬ್ದ ಮೇಳೆಯದ ಕೇತನಮಾಳಿಕೆ ವೀರಲಕ್ಷ್ಮಿ ದೂರದ ಭಟರಂ ನಿಜೋಜ್ವಲ ಪಟಾಂಚಲದಿಂ ಕರೆವಂತುಟಾಗೆ (ಕುಕ್ಕು. ೨-೭೦) ; ಕೋಲಂಗಳನಾ ಹರಿಗೆ ಹಲಗೆಯ ಮೇಳೆ[ಪಾಠಾಂ. ಳೆ] ಯವನಾ ಮಡಿಯುಲುಗಿದೆಸುವಾಳನೊಂದಂಬಿನಲಿ ಸಂದಣಿಗೆಡಹಿದನು ಪಾರ್ಥ (ಕುವ್ಯಾಶ. ೨೦-೨೩) : ತಳಿಯ ಮೇಳೆಯದ ಸಂಚರಿಪ ಪತಾಕಾಕುಳ ದಿಂದುರುವೀರಲಕ್ಷ್ಮಿ ಕಲಿಗಳ ಕೈವೀಸಿ ಕರೆವಂತಿಹುವಲ್ಲಿ (ಶಂರಾಕಾಂ. ೪-೭೪):

[ < ಪ್ರಾ. ಮೇಲಯ, ಮೇಲವ. / ಸಂ. ಮೇಲಕ]

**ಮೇಳಯಿಸು** 'ಮೇಳಿಸು' ನೋ.

**ಮೇಳಯ್ಸು** 'ಮೇಳಿಸು' ನೋ.

**ಮೇಳರಂಗ** (ನಾ). (ಪುರಾತನ ಗ್ರೀಕ್‌ನಾಟಕಶಾಲೆಗಳಲ್ಲಿ ಬಳಕೆಯಿದ್ದ) ರಂಗದ ಮುಂಭಾಗದಲ್ಲಿ ಮೇಳದವರು ಹಾಡಲು ಮತ್ತು ಕುಣಿಯಲು ರಚಿಸುತ್ತಿದ್ದ ಅರ್ಧವೃತ್ತಾಕಾರವಾದ ವೇದಿಕೆ.— ಜಗಲಿ: ರಂಗದಾಚೆಗೆ ಹೀಗೆ ಒಯ್ಯಲ್ಪಟ್ಟ ಮೇಳದವರು ತಾತ್ಕಾಲಿಕವಾಗಿ ಒಂದೆಡೆಯಿದ್ದು ಅಥವಾ ಮುನ್ನಿಲೆಯ ಮೇಳರಂಗದಲ್ಲಿ ಬಂದಿದ್ದು, ಮೇಳಗೀತೆಯನ್ನು ಹಾಡಿರಬಹುದು (ಐದ್ಯಕ್ರ. ೬vi. ನಾಟಕದ ಸಮುಸ್ಯ) : (ಪುರಾತನ ಗ್ರೀಕ್‌ನಾಟಕಶಾಲೆಗಳಲ್ಲಿ ರಂಗದ ಮುಂಭಾಗದಲ್ಲಿ ಮೇಳದವರು ಹಾಡುತ್ತ ಕುಣಿಯುತ್ತಿದ್ದ ಅರ್ಧವೃತ್ತಾಕಾರದ) ಮೇಳರಂಗ (Orchestra. ೩೦೪೩). [ಸಂ. ಮೇಲರಂಗ]

**ಮೇಳವ** 'ಮೇಳಯ' ನೋ.

**ಮೇಳವಡೆ** (ಕ್ರಿ). ಜೊತೆ ಸೇರು; ಒಟ್ಟುಸೇರು : ತಾಳಧಾರಿಗ ನಟುವಿಗ ಗಾಯಕರು ನೆಱೆ ಮೇಳವಡೆದ ವಾದ್ಯದವರು ಸೂಳೆಯರುಗಳು ಸುವರ್ಮಾನಿಗಳ್ ಪಣ್ಯಲಜಾಲದೆ ವಣದರಾಕ್ಷಣದೆ (ಕಂಪಲಿ. ೨೬-೨೭).

[ಮೇಳ (= ಮೇಲ) + ಪಡೆ$_1$]

**ಮೇಳವಣೆ** (ನಾ). ೧. ಕೂಟ ; ಹೊಂದಿಕೆ ; ಸಾಮರಸ್ಯ : ಧರ್ಮದ ಮೇಳವಣೆಯಿಲ್ಲದೊಡೆ ಕೊಲುವಿರೆ ಪಾಲಕನ (ಐಶಾಗ. ೬-೨-೦) : ಮೇಳವಣೆಯಸು ನೆನದು ಲೋಕದಿ ಕೋಳುಹೋದನು ಹಿಂದೆ ತನಗಾಳಾಗಿ ಬಳಲಿದ ವಾನರರ ನೆನನೆನದು ಮರುಕೊಳಿಸಿ (ಮೂಲರಾ. ೬-೦). ೨. ಗುಂಪು; ನೆರವಿ : ಸಮೂಹ : ಗಾಳುಗಜಱನ ಕಹಳೆಗಳ ಕಳಕಳದ ಬೊಗ್ಗುಗಳ ಮೇಳವಣೆ ಭುಗಿಲಿಡಲು . . . ಎರಡುಬಲ ಹೊಯ್ದಾಡಿತೊಡಗಲಸಿ (ಕುವ್ಯಾಶಿ. ೬-೯). ೩.ಗಾನವಾದ್ಯಗಳಿಂದ ಕೂಡಿದ ನರ್ತನ : ತಾಳಧರರೊಂದಸೆಗೆ ಆವುಜಗರೊಂದಸೆಗೆ ಮೇಳವಣೆಯೊಂದಸೆಗೆ (ರಾಜೊಮ್ಮ. ೦೪೦-೨೯) ; ತಾಳಂ ನರ್ತನಮುಂ ಕರೆವುತ್ತಿರೆ ಮೇಳವಣೆಗೆ ಶಬ್ದಂ ಕೂಡುತ್ತಿರೆ (ಶೃಂಗಾರ. ಹ. ೯೬೬-೧೬) ; ಸೊಗಸಿನ ಮೇಳವಣೆಗಳ ಬೇಂಟೆಯಾಯಿತು ಮುಪ್ಪದಪುರಿಯೊಳಗೆ (ಸಂಕ್ರಕ. ೨೮-೨೨). 'ಮೇಳಣೆ' ಪರಾ.

[ಮೇಳವ (<ಮೇಳಯು) + —ಅಣೆ$_4$]

**ಮೇಳವಾಡು** (ಕ್ರಿ). ೧. ಜೊತೆ ಸೇರು ; ಒಡಗೂಡು : ಮಲ್ಲೀರಾಮೆಯುಂ ಮೇಳವಾಡಿ ವನೇಜಾತಿನಿಯುಂ ಎಡಂಬಿಸಿ ವಿನೋದಂಬೆತ್ತು ಬಂದೆತ್ತು . . . ಮಾರುತಂ (ಜಗಬಿ. ೦೬-೧೧೦) ; ಹೇಳುಹೇಳನ್ನೇನು ಮಾರಿಯ ಮೇಳವಾಡಿದನೇ ಜಯದ್ರಥನಾಳುತನವನು ಬವರದಲಿ ತನ್ನೊಡನೆ ತೋಱಿದನೆ (ಕುವ್ಯಾದ್ರೋ. ೬-೩೯). ೨. ವಿನೋದವಾಡು ; ಕ್ರೀಡಿಸು : ಕೂಡಲಸಂಗಮದೇವಾ ನಿಮ್ಮ ಹೇಳಿದ ಹೇಳಿಕೆಯಿಂದ ಪಿಂಬೇರ ಮ್ಯಾಲಿಗೆ ಮೇಳವಾಡುತ್ತಿದ್ದ ಕಾಣಾ ತ್ರೈಜಗವೊಳಗೆ (ಬಸವ. ೩೬೬).

[ಮೇಳ (=ಮೇಲ) + ಆಡು$_1$]

**ಮೇಳವಿಕೆ** (ನಾ). ಹೊಂದಾಣಿಕೆ ; ಸಂಯೋಜನೆ : ಪಾತ್ರಗಳ ದಿವ್ಯ ಮಾನವಅಂಶಗಳ ಮೇಳವಿಕೆಯಲ್ಲಿ ಹೊಂದಿಕೆ ಕಡಿಮೆಯಾಗಿದೆ (ಕಸಾಕ. ೦೬೯).

[ಮೇಳವ (< ಮೇಳಯು) + — ಇಕೆ]

**ಮೇಳವಿಡಿ** (ಕ್ರಿ). ಜೊತೆಯಲ್ಲಿ ಸೇರು ; ಹೊಂದಿಕೊಳ್ಳು : ನೀಲದ ತನುರಸದೊಳಗೊಂದು ಕಗ್ಗಳ ಮೇಳವಿಡಿದು ಕಳೆಗೊಂಡು ಶೂಲಿಯರ್ಧಾಂಗಿಪ್ಪೊಪ್ಪಿರ್ದಳು ನಿರ್ಮಲಕಾಳಿಕಾಂಬಿಕೆ ಸಲಹೆನ್ನ (ಅಭ್ಯಲಿ. ೦-೩).

[ಮೇಳ (=ಮೇಲ) + ಪಿಡಿ$_1$]

**ಮೇಳವಿಸು** 'ಮೇಳಿಸು' ನೋ.

**ಮೇಳವೆಣ್ಣು** (ನಾ). ಮೇಳದವಳು ; ನರ್ತಕಿ : ದೊರೆರಾಯನ ಸಾರಿಯ ಮೇಳವೆಣ್ಣುಗಳುಱೆ ನಾಲ್ಕುದೆಸೆಯ ದೇಸಗಳ ಬಿರುದಿನ ಗಣಿಕೆಯರ್ಪುರವರನಾರಿಯರಿರದೆ ಸಿಂಗರಿಸಿಯ್ಯೆದಿದರು (ಕಂಪಲಿ. ೨೦-೬೪).

[ಮೇಳ (=ಮೇಲ) + ಪೆಣ್ಣು (<ಪೆಣ್)]

**ಮೇಳಾಪ** 'ಮೇಲಾಪ' ನೋ.

**ಮೇಳಾಪಕ** 'ಮೇಲಾಪಕ' ನೋ.

**ಮೇಳಾಪಿಸು** 'ಮೇಲಾಪಿಸು' ನೋ.

**ಮೇಳಾವ** (ನಾ). ಕೂಟ ; ಸೇರಿಕೆ ; ಹೊಂದಿಕೆ : ಆವರಿಸಿದುದು ಮತ್ತೆ ಹೊಸಮೇಳಾವದಲಿ ಕುರುಸೇನೆ (ಕುವ್ಯಾಕ. ೦೯-೨೮).

[< ಪ್ರಾ. ಮೇಲಾವ./ಸಂ. ಮೇಲಾಪ]

**ಮೇಳಿ** 'ಮೇಂಟಿ' ನೋ.

**ಮೇಳಿಸು**, ಮೇಳಯಿಸು, ಮೇಳಯ್ಸು, ಮೇಳವಿಸು, ಮೇಳೈಸು (ಕ್ರಿ). ೧. ಸೇರು ; ಜೊತೆಯಾಗು : ಜೊತೆಗೂಡು : "ಮೇಳಿಸು – ಸಂಯೋಗೇ" (ಶಮದ ); ಪಾಂಡವರೊಳ್ ಸೀಂ ಮೇಳಿಸಿ ನಣ್ಪನೆ ಬಗೆದಿರ್ ಜೋಳದ ಪಾಟಿಯುಮನಿನಿಸು ಬಗೆಯಿಂ ನಿಮ್ಮೊಳ್ (ಪಂಭಾ. ೦೦-೦೩) : ನೆನೆಯಿಸಿದಳಬಳೆ ಮಧುಲಕ್ಷ್ಮಿ ಮೇಳಿಸಿರ್ದೆಳಲತೆಯಂ (ವರ್ಧಪು. ೩-೯೩) ; ಶ್ರೀಮದಮಳಮಹಿಮ ಕ್ಷೀರಾಂಬುಧಿಸೋಮನುದಗ್ರಬಲೋದ್ಭಟದೇವಂ ವಾಮೆಯೊಡನೆ ಮೇಳಿಸುತುರ್ವಿಯನುರ್ವಿಂ ಪಾಲಿಸುತಿರ್ದಂ (ಉದ್ಯಶಾ. ೨ ಸೂಕ್ತ). ೨. ಕೂಡು ; ಸಂಭೋಗಿಸು : ನಯದೊಳೆ ನೋಡಿ ನೋಟದೊಳೆ ಮೇಳಿಸಿ ಮೇಳದೊಳಪ್ಪುಕೆಯ್ದು (ಪಂಪಭಾ. ೯-೬೯) ; ಮಾಣಿಕದ ಕೆಂಪೊಳಪಂ ಬಿಸಿಲೆಂದು ನಟ್ಟಿರುಳ್ ಮೇಳಿಸುಗುಂ ರಥಾಂಗು (ಪಂಪಾಪು. ೦-೦೨೭). ೩. ಹತ್ತಿರ ಬರು ; ಸಮೀಪಿಸು : ರೂಕ್ಷಾಳಕಂಗಳನೋಸರಿಸುತ್ತುಂ ಮೆಲ್ಲನೆ ಮೇಳಿಸಿ ಕನ್ನೆಯಂ ನುಡಿವಳ್ (ಆದಿಪು. ೩-೩೦) : ಮೆಲ್ಲನೆ ಮೇಳಿಸಿ ಪರ್ಬವ ಅಲ್ಲಯಿಸುವ . . . ಮುನಿಯಲ್ಲಿ ಜಿನೋಕ್ತಿಯನೆ ಕೇಳಲಾಗದು ಚತುರಂ (ರಶರ್ಮಪ್ಪ. ೬-೨೦೨). ೪. ಕೂಡಿಸು ; ಸೇರಿಸು : ಹೊಂದಿಸು : ಅಳವಡಿಸು : ಕೆಂಗಱಿಯಂ ಸರಂಗಳೊಳ್ ಮೇಳಿಸಿ ಸುತ್ತುಮಿರ್ಪ ಶಬರರ್ಕಳಿನೊಪ್ಪಿದುದೊಂದು ಪಕ್ಕಣಂ (ಕಸುಪಾ. ೧೦-೦೯೮) ; ಕರ್ಮವು ಮೇಳಿಸಿದ ಬೇಳಂಬವಲ್ಲದೆ ಬೇಱೆ ಪೆಱತಲ್ಲ (ಸಾಕ್ಷ್ಯಾ. ೦೭-೩೪). ೫. ಆಕರ್ಷಿಸು ; ಸೆಳೆ : ಬಾಳ ದಿನೇಶಬಿಂಬದ ನೆಟಿಲ್ ಜಲದೊಳ್ ನೆಲಸಿತ್ತೊ ಮೇಣ್ ಫಣೀಂದ್ರಾಳಯದಿಂದಮುರ್ಚಿದ ಫಣಾಮಣಿಮಂಗಳಪತ್ಮಿಯೋ ಕರಂ ಮೇಳಿಸಿದಪ್ಪುದೆನ್ನಿರ್ದೆಯನೆಂದು ಬೊದಿಲ್ಲನೆ ಪಾಯ್ದು ನೀರೊಳಾ ಬಾಳನನಾದಮಾದರದೆ ಕಂಡೊಸೆದಂ ನಿಧಿಗಂಡನಂತೆವೋಲ್ (ಪಂಪಭಾ. ೦-೯೭). ೬. ಒಟ್ಟುಗೂಡು; ಗುಂಪುಸೇರು ; ಒಟ್ಟಾಗು : ತುಳದ ಲಯಮುಂ ನಿಱೆ ನೀಳಾಳಕ ಹಾರದ ಪೊದಟ್ಟ ಮುತ್ತುಂಬಿವು ಮುಮ್ಮೇಳಿಸಿ ಕೈಕೊಂಡುವು ಲಾಳಿತಾಳಕ ಕೈಕೊಂಡಳೆಂಬುದೊಂದಚ್ಚರಿಯೋ (ಆದಿಪು. ೯-೨೯) ; ಬಾಳನ ನಾಸಾಪುಟದೊಳ್ ಮೇಳಿಸೆ ದುಗ್ಧೋದಬಿಂದುಸಂದೋಹಂಗಳ್ (ಆದಿಪು. ೪-೬೩) ; ಜಸಮುಂ ತೊಡೆವಂತೆ ವೈಜಯಂತಿಗಳೆಡೆಪರಿಯದೆ ಮುಂದೆ ಮಿಳಿರ್ದು ಮೇಳಿಸಿ ತೋರ್ಕುಂ (ಕಾದಂಪೂ. ೩೩೭). ೭. ಒಟ್ಟುಗೂಡುವಂತೆ ಮಾಡು: ಒಟ್ಟುಗೂಡಿಸು : ಮೇಳಿಸಿ ಜೀವಾವಳಿಗಳ ತಾಳಿಸುವರನಚ್ಚಗೆಂಡದೊಳ್ ಕಾವಲಿಯೊಳ್ ತಾಳಿಸುವರ್ (ಸುಕುಮಾ. ೦೦-೯೭) ; ಅತಿಭೀಮರೆನಿಪ್ಪ ಸಮಸ್ತಮಲ್ಲರುಂ ಮೇಳಿಸಿ ಕೃಷ್ಣನು ಕೊಲಲೊಡರ್ಚಿದಂ (ನೇಮಿಪು. ೬-೦೩೨). ೮. (ಕೃತ್ರಿಮವಾಗಿ) ಪ್ರೀತಿ, ಸ್ನೇಹಗಳನ್ನು ವ್ಯಕ್ತಪಡಿಸು : ಅರಸನ ಮುಂದಲೆ ಮನದೊಳಗಿರೆ ಮೇಳಿಸಿಕೊಂಡು ಬಂದು ಪಾತಕಿ ಕೊಂದಳ್ ಗರದಿಂ ಗಂಡನನು (ಧುಕೋತ. ೩-೩೬); ೯. ಉಂಟಾಗು : ಒದಗು : ಸ್ಮರವಹ್ನಿಜ್ವಾಲೆ ಮೆಯ್ಯೊಂದೊಗದು ಪೊಗೆಯನುಳ್ಪೊತ್ತೆಯುಂ ಪುಷ್ಪಶಯ್ಯಾಂತರದೊಳ್ ಸುಯ್ವಂಕೆಸಾಲ್ ಮೇಳಿಸೆಯುಂ . . . ಕೋಮಲೆ ರಣರಣಕಾವಸ್ಥೆಯಿಂದಿರ್ದಳ್ (ಕುಸುಮಾ. ೦೩-೦೭೭) ; ದೇವಕಿಯು ಮನ

**ಮೇಳೆ$_2$** (ನಾ). ಮೆಳೆ ; ಪೊದರು : ಪಾರ್ತ್ಥದ ಮೇಳೆಯಲ್ಲಿ ನಿಜಂಗಲ್ಲು (ಎಪಿ. XV. ೬೯-೨೨; 1074). [ᵖ ಇದು 'ಮೆಳೆ' ಎಂಬುದರ ಅಪಲಿಖಿತ]

**ಮೇಳೆಯ** ' ಮೇಳಯ ' ನೋ.

**ಮೇಳೈಸು** ' ಮೇಳಿಸು ' ನೋ.

**ಮೇಟಿ$_1$** ' ಮೇಂಟಿ ' ನೋ.

**ಮೇಟಿ$_2$** (ನಾ). ಒಬ್ಬಾತನ ಹೆಸರು : ಕಕ್ಕರ ಮಡಲೂರೆಟಿದು ತೊಱು ಗೊಣ್ಕೊಡೆ ತಿಂಗಣಿಮಾರ ಶ್ರೀಮೇಟಿ ತಿಂಗಣಿಮೂರುಳ್ಳಗಿ ಪಲರನ್. . . ಎಱಿದು ಸಗಮೇಱಿದನ್ (ಎಕ. X. ಶಿಡ್ಲ. ೩೨-೪: ಸು. 870 ?). [ ? ]

**ಮೇಟಿವಾಡು** (ನಾ). ಒಂದು ಊರಿನ ಹೆಸರು : ಶ್ರೀಮತ್ಕಪ್ಪೆಯರೆಸರ × × × ಮಗನಣ್ಣಗ ರಟ್ಟಿಯ[ಣ್ಣ] × × × [ಸಂ] ಜೆಳಾ[ವ]ಡಿಚ ಮೇಟಿವಾಡುವಿ × × ಟ್ಟು (ಸೌಇಇ. XI–i. ೧೦-೧೫: 865). [ ? ]

**ಮೈ$_1$** ' ಮೆಯ್$_2$ ' ನೋ.

**ಮೈ$_2$** (ನಾ). ೧. ಕಪ್ಪು : ಕರಿದು : 'ಮೈಗುಂಜಿ' ಪರಾ. ೨. ಕಾಡಿಗೆ: 'ಮೈಗಣ್$_2$' ಪರಾ. [ದೇ. ತಮಿ. ಮಲ. ಮೈ; ತುಳು. ಮೈಯಿ]

**ಮೈಂದವಾಟಿ** ' ಮಯಿಂದವಾಳೆ ' ನೋ.

**ಮೈಕ** ' ಮಯುಕ ' ನೋ.

**ಮೈಕಟ್ಟು** ' ಮೈಗಟ್ಟು ' ನೋ.

**ಮೈಕದಿ** (ಕ್ರಿ). (ಕೆಲಸ, ಜವಾಬ್ದಾರಿ ಇತ್ಯಾದಿಗಳಿಂದ) ತಪ್ಪಿಸಿಕೊಳ್ಳು: ಮೈಗಳ್ಳನಾಗು : ವಸಂತನಿಗೆ ಆಶ್ಚರ್ಯ, ರಘುಪ್ತ ಹೀಗೇಕೆ ಮೈಕದಿಯ ತೊಡಗಿದ್ದಾನೆ, ಎಂದು (ಗಂಪತಾಮ. ೨೪೬).

[ ಮೈ$_1$ ( < ಮೆಯ್$_2$) + ಕದಿ$_1$ ]

**ಮೈಕಳೆ** (ಕ್ರಿ). ೧. ಗರ್ಭಸ್ರಾವವಾಗು : ಮೈ ಇಳಿ : ನಿನ್ನೆ ತಾನೇ ಮೈ ಕಳೆದ ಗೌರಿ. ನನ್ನ ಹಣೆಯಲ್ಲಿ ಬರೆದುದೇ ಹಾಗೆ ಎಂದು ಹೇಳಿ ತೆಪ್ಪಗಾಗು ವಷ್ಟು ಎದೆಗಾರ್ತಿಯಲ್ಲ (ಮುಂಗಾಮು. ೨೩). ೨. ಹೆರಿಗೆಯಾಗು : ಪ್ರಸವವಾಗು : ಇದೊಂದು ಸಾರಿಗೆ ಸುಲಭವಾಗಿ ಮೈಕಳೆದರೆ ಸಾಕು (ರತಿ). [ ಮೈ$_1$ ( < ಮೆಯ್$_2$ ) + ಕಳೆ$_1$ ]

**ಮೈಕಾಂತಿ** (ನಾ). ದೇಹದ ತೇಜಸ್ಸು. – ಪ್ರಕಾಶ, – ಶೋಭೆ : ಬಿಲು ರವದ ಮೊಳಗಿನಲಿ ಕೃಷ್ಣನ ಮೈಕಾಂತಿ ಮೇಘಾವಳಿಗಳಲಿ . . . ನಿಲುವ ಹಂಸವ್ಯೂಹವೆಲ್ಲಿಯುದೆಲೆ ಮಹೀಪತಿ (ಕುವ್ಯಾದ್ರೋ. ೩೦-೨೦).

[ ಮೈ$_1$ ( < ಮೆಯ್$_2$) + ಕಾಂತಿ ]

**ಮೈಕು** (ನಾ). ಧ್ವನಿವರ್ಧಕ ಯಂತ್ರ : ಮೈಕಿನ ಗಲಾಟೆಯೂ ಇರಲಿಲ್ಲ ? (ಬೀಸಿ. ೦೬): ಮೈಕಿನಲಿ ಕೊಕ್ಕೊಕ್ಕೋ ಕೂಗಿ. ತುರಾಯಿ ಕುಣಿಸಿ ಬೆಳ ಗಾಯಿತೆಂದು ಭ್ರಮಿಸಿದ್ದೇವೆ (ಶಿಂಪು. ೩೨-೦). [ᵖ ಇದು ಇಂಗ್ಲಿಷಿನ Microphone ಎಂಬ ಶಬ್ದದ ಸಂಕ್ಷಿಪ್ತರೂಪ]

**ಮೈಕುತ್ತಿ** (ನಾ). ಶರೀರವನ್ನು ಇರಿಯುವವನು : ಮಹಾಸಾಮಂತ ಬಿರುವರ ಜಟ್ಟಿ ಬಿರುದರ ಮೈಕುತ್ತಿ ಶ್ರೀಮಾತ್ ಬಿಜ್ಜ ಕೋಗಟ ಯಿಯಮ್ಮಾಟು (ಸೌಇಇ. IX–i. ೫೬–೬ ; 922).

[ ಮೈ$_1$ ( < ಮೆಯ್$_2$) + ಕುತ್ತು$_1$ + – ಇ$_3$ ]

**ಮೈಕೆಬೇರು** (ನಾ). ಔಷಧಕ್ಕೆ ಬಳಸುವ ಒಂದು ಬಗೆಯ ಮೂಲಿಕೆ : ಚಿಕ್ಕಮರುಳು. ಮೈಕೆಬೇರು, ಗಂಡರಸಿನವಲ್ಲಿ ನಿಂಬೆಕಾಯುಷ್ಟು ಕುಡಿಯೆ ಬಾಣಾಂತಿರೋಗ ಬಸುಱೇವಮ ಮಾಣ್ಗುಂ (ವಿವೈ. ೮೦).

[ ಮೈಕೆ$_1$ + ಬೇರು ( < ಬೇರ್$_1$) ]

**ಮೈಕೊಡವು** ' ಮೆಯ್ಗೊಡಪು ' ನೋ.

**ಮೈಕ್ರೋಸ್ಕೋಪ್** (ನಾ). [ವಿಜ್ಞಾ] ಬರಿಯ ಕಣ್ಣಿಗೆ ಕಾಣದ ವಿವರ ಗಳನ್ನು ಅಥವಾ ಆಕೃತಿಗಳನ್ನು ಲೆನ್ಸುಗಳ ಮೂಲಕ ವಿಸ್ತರಿಸಿ ತೋರುವ ಒಂದು ಸಲಕರಣೆ : ಸೂಕ್ಷ್ಮದರ್ಶಕ : ಇಂಥ ಕೆಲವು ಕನ್ನಡಿಗಳನ್ನು ಜತೆಗೊಳಿಸಿ. ಒಂದು ನಳಿಗೆಯಲ್ಲಿಟ್ಟು. 'ಮೈಕ್ರೋಸ್ಕೋಪ್' ಎಂಬ ಉಪಕರಣಗಳನ್ನು ಮಾಡುತ್ತಾರೆ (ಬಾಲಶ್ರ. II. ೯೩೮).

[ ←ಇಂ. Microscope ]

**ಮೈಗಂಡಿ** (ನಾ). (ಬಾಣ ಮುಂತಾದ ಶಸ್ತ್ರಗಳ ಆಘಾತದಿಂದ) ಶರೀರ ದಲ್ಲಿ ಉಂಟಾಗುವ ತೂತು,—ರಂಧ್ರ : ಅದ ಮೈಗಂಡಿಯೊಳು ರಕುತವ ಶೋಧಿಸುತ ಹಳದುಪ್ಪವನು ತೊಡೆದಾವರಿಸಿದುದು ವೈದ್ಯಸಂತತಿ ವೀರಭಟರುಗಳ (ಕುವ್ಯಾಭೀ. ೫-೪೦).

[ ಮೈ$_1$ ( < ಮೆಯ್$_2$) + ಕಂಡಿ$_1$ ]

**ಮೈಗಂದೆ** (ನಾ). ಮೈಮೇಲೆ ಏಳುವ (ನವೆಯನ್ನುಂಟುಮಾಡುವ) ಗುಳ್ಳೆ : ಶಿವಜ್ಞಾನೋದಯವಾದ ಲಿಂಗಾಂಗಿಗಳಿಗೆ ಎನ್ನ ನುಡಿ ಮೈಗಂದೆಯಂ [ಟೀಕಾ. ಮನದ ಗಂದೆಯು] ತುಱಿಸಿದಂತೆ ಹಾಲುಸಕ್ಕರೆಯ ನುಂಡಂತೆ ಸವಿದೋಱುತ್ತದೆ (ಶಸಪ. ೩೦-೨೩).

[ ಮೈ$_1$ ( < ಮೆಯ್$_2$) + ಗಂದೆ ]

**ಮೈಗಂಪು** ' ಮೆಯ್ಗಂಪು ' ನೋ.

**ಮೈಗಟ್ಟು, ಮೈಕಟ್ಟು** (ನಾ). ದೇಹದ ರಚನೆ ; ಅಂಗಸೌಷ್ಠವ : ಅವನು ಎಳೆಯ ವಯಸ್ಸಿನವನೆಂದು ಅವನ ಮೈಗಟ್ಟು ಸೂಚಿಸುತ್ತಿತ್ತು (ಪುಜಿಸ. ೬೦). **ಮೈಕಟ್ಟು** : ಮೈಕಟ್ಟು ತಂದೆಯಂತೆಯೇ ಇದ್ದರೂ ಮುಖ ದೊಡ್ಡಮ್ಮನ ಮುಖವನ್ನೇ ಹೋಲುತ್ತಿತ್ತು (ವಾತ್ಸ್ಯ. ೦೮): ಜನರೂ ಪುಷ್ಟಿಕರವಾಗಿ ಬೆಳೆದು ಬಲವಾದ ಮೈಕಟ್ಟುಳ್ಳವರಾಗಿಯೂ ಆರೋಗ್ಯ ವಂತರಾಗಿಯೂ ಇರುವರು (ಗ್ರಹವ. ೦).

[ ಮೈ$_1$ ( < ಮೆಯ್$_2$ ) + ಕಟ್ಟು$_2$ ]

**ಮೈಗಡ** (ನಾ). ಒತ್ತೆ, ಆಧಾರಗಳೇನೂ ಇಲ್ಲದೆ ವ್ಯಕ್ತಿಯ ಮೇಲಿನ ನಂಬಿಕೆಯ ಆಧಾರದ ಮೇಲೆ ಕೊಡುವ ಸಾಲ ; ಮೈಸಾಲ : " ಮೈಗಡ_ಕೈಗಡ " (ಶಾಪಕೋ. ೩೬).

[ ಮೈ$_1$ ( < ಮೆಯ್$_2$) + ಕಡ$_1$ ]

**ಮೈಗಣ್$_1$** ' ಮೆಯ್ಗಣ್ ' ನೋ.

**ಮೈಗಣ್$_2$** (ನಾ). ಕಾಡಿಗೆ ಹಚ್ಚಿದ ಕಣ್ಣು : ಓ ! ಎನ್ನ ಎಚ್ಚ ಮೈಗಣ್ಣ ಪೆಣ್ಣೆ ! (ರಾಮಾಶ್ವ. ೫೦-೦೦). [ ಮೈ$_2$ + ಕಣ್ ]

**ಮೈಗಣ್ಣ** ' ಮೆಯ್ಗಣ್ಣ ' ನೋ.

**ಮೈಗಣ್ಣು** ' ಮೆಯ್ಗಣ್ ' ನೋ.

**ಮೈಗತ್ತಲೆ** (ನಾ). ದೇಹದ ನೆರಳು : ಮುಳುಗಿಸಿದುದಾ ಏಳನ ಮೈಗತ್ತಲೆ ದಿವಾಕರಬಿಂಬವನು (ಕೊರಾ. ೩-೦-೮).

[ ಮೈ$_1$ ( < ಮೆಯ್$_2$) + ಕತ್ತಲೆ$_1$ ( < ಕಟ್ತಲೆ ) ]

**ಮೈಗಪ್ಪು** ' ಮೆಯ್ಗಪ್ಪು ' ನೋ.

**ಮೈಗರೆ** ' ಮೆಯ್ಗರೆ ' ನೋ.

**ಮೈಗರ್ಚು** ' ಮೆಯ್ಗರ್ಚು ' ನೋ.

**ಮೈಗಲಿ** ' ಮೆಯ್ಗಲಿ ' ನೋ.

**ಮೈಗಲಿತನ** ' ಮೆಯ್ಗಲಿತನ ' ನೋ.

**ಮೈಗಳ್ಳ** (ನಾ). ಕೆಲಸಮಾಡುವುದಕ್ಕೆ ತಪ್ಪಿಸಿಕೊಳ್ಳುವವನು ; ಸೋಮಾರಿ : ಕಳ್ಳ ಕೈಗಳ್ಳ ಮೈಗಳ್ಳನೊಮ್ಮೆ ತಾ ಕೊಳ್ಳಗಾಣುವನು (ಸರ್ವಜ್ಞ. ೦೦೬೬) : ಮೈಗಳ್ಳರಾಗಿ ದರಿದ್ರರಾಗಬಾರದು (ಕೃಷಿಶ್ರ. ೦೮) ; ಈ ಮೈಗಳ್ಳನಿಗೆ ತಪ್ಪಿಸಿಕೊಳ್ಳಲು ಒಂದು ನೆವ (ಹೊಸಕ್ಷ. ೩೦).

[ ಮೈ$_1$ ( < ಮೆಯ್$_2$ ) + ಕಳ್ಳ$_1$ ]

**ಮೈಗಳ್ಳತನ** (ನಾ). ಕೆಲಸ ಮಾಡುವುದಕ್ಕೆ ತಪ್ಪಿಸಿಕೊಳ್ಳುವಿಕೆ ; ಸೋಮಾರಿತನ : ಮೈಗಳ್ಳತನಕ್ಕೆ ಅಲ್ಲಿ ಆಶ್ರಯವಿಲ್ಲ ಎಂಬುದನ್ನು ಶರಣರು ಸಂತರು ಸ್ಪಷ್ಟಪಡಿಸಿದರು (ಶರಣಶ. ೩೬): ಅವುಗಳನ್ನು ಮೈಗಳ್

ತನವ ಪಂತಗಳನ್ನಾಗಿ ಮಾರ್ಪಡಿಸಿದ್ದೇವೆ (ಅಕನಾ. ೨೨೦).

[ ಮೈಗಳ್ಳ + — ತನ ]

**ಮೈಗಾ** (ಕ್ರಿ). ಮೈಗಾವಲಾಗಿರು; ಅಂಗರಕ್ಷಣೆ ಮಾಡು : ಆವ ಶರವಿದ್ದೀಗುವುದು ಮೈಗಾವನಸುರಾಂತಕನಲ್ಲೈ (ಕುಮಾರವ್ಯಾ. ೦೯–೪೯).

[ ಮೈ$_1$ ( < ಮೆಯ್$_2$ ) + ಕಾ$_1$ ]

**ಮೈಗಾಣ್** ' ಮೆಯ್ಗಾಣ್ ' ನೋ.

**ಮೈಗಾಣಿಸು** ' ಮೆಯ್ಗಾಣಿಸು ' ನೋ.

**ಮೈಗಾಪು** ' ಮೆಯ್ಗಾಪು ' ನೋ.

**ಮೈಗಾಯ** (ನಾ). ಶರೀರದ ಮೇಲೆ ಆದ ಗಾಯ : ಕಾಲೊಳು ಮೂಡಿದ ದಸಿಮುಳ್ಳುಗಳು ತಾಕಿ ಸೀಳಿದ ಮೈಗಾಯದಿಂದ ಜೋರಿ ಸುರಿವ ಬಿಸು ರಕ್ತದಿಂದಾ ಜನಜಾಲವೈದಿತು ದೆಸೆದೆಸೆಗೆ (ಕಂಶಪ. ೦೦–೫೦).

[ಮೈ$_1$ (< ಮೆಯ್$_2$) + ಗಾಯ]

**ಮೈಗಾವಲು** ' ಮೆಯ್ಗಾವಲು ' ನೋ.

**ಮೈಗಾವಲೂಳಿಗ** (ನಾ). ಅಂಗರಕ್ಷಣೆ ಮಾಡುವ ವೃತ್ತಿ.–ಉದ್ಯೋಗ : ಚಿನ್ನದ ಹರಡೆ . . . ಹೊನ್ನ ಭೂಷಣದ ಮೈಗಾವಲೂಳಿಗದರ ಸನ್ನಾಹ ವೈತಂದುದಾಗ (ಕಂಶಪ. ೨೪–೮೮).

[ಮೈಗಾವಲು (< ಮೆಯ್ಗಾವಲು) + ಊಳಿಗ (< ಊಟಿಗ)]

**ಮೈಗಾಹು** ' ಮೆಯ್ಗಾಪು ' ನೋ.

**ಮೈಗುಂಜಿ** (ನಾ). ಕಪ್ಪು ಚುಕ್ಕೆಯನ್ನು ಹೊಂದಿರುವ ಗುರುಗುಂಜಿ : ತಲೆಯ ನವಿರು, ಕೈಕಾಲುಗುರು, ಓಲಿ, ಮೈಗುಂಜೆಯಿವಂ ಧೂಪವಿಕ್ಕುವುದು (ಶಾಂಕ. ೦೨೯–೦೪). [ಮೈ$_2$ + ಗುಂಜಿ]

**ಮೈಗುಂದು** ' ಮೆಯ್ಗುಂದು ' ನೋ.

**ಮೈಗುಡು** ' ಮೈಯ್ಗೊಡು ' ನೋ.

**ಮೈಗುಣ** (ನಾ). ಶರೀರದ ಸ್ವಾಭಾವಿಕಸ್ಥಿತಿ : ದೇಹಪ್ರಕೃತಿ : ವ್ಯವಸ್ಥೆ, ರಚನೆ . . . (ಆರೋಗ್ಯ, ದಾರ್ಢ್ಯ, ಮೊ.ಗಳ ವಿಷಯದಲ್ಲಿ) ದೇಹಸ್ಥಿತಿ. ಪ್ರಕೃತಿ ; ದೇಹಪ್ರಕೃತಿ ; ಮೈಗುಣ (Constitution. ೩೦೪೩). [ಮೈ$_1$ ( < ಮೆಯ್$_2$ ) + ಗುಣ]

**ಮೈಗುತ್ತ** (ನಾ). ದೇಹದ ಅನಾರೋಗ್ಯ ; ರೋಗ : ಮೈಗುತ್ತದಿಂ ಬಾಡಿಹಂ (ವೈಸಂಪ. ೪–೪೨). [ಮೈ$_1$ (< ಮೆಯ್$_2$) + ಕುತ್ತ]

**ಮೈಗುಱುಹು** ' ಮೆಯ್ಗುಱುಹು ' ನೋ.

**ಮೈಗೂಡಿಸು** (ಕ್ರಿ). ೧. ಮೈತುಂಬಿಕೊಳ್ಳುವಂತೆ ಮಾಡು : ಶಕ್ತಿ ಹೆಚ್ಚುವಂತೆ ಮಾಡು : ನಿಶ್ಶಕ್ತವಾಗಿದ್ದ ನಿನ್ನ ದೇಹಕೋಸ್ಕರ ಸೀಸೆಗಟ್ಟಲೆ ಬಲವರ್ಧಕಗಳನ್ನು ತಂದು ಕುಡಿಸಿ ಮೈಗೂಡಿಸಿದೆ (ಚಿಕಾ. ೨೫೭). ೨. ತನ್ನದಾಗಿ ಮಾಡಿಕೊಳ್ಳು : ಹೊಂದಿಸಿಕೊಳ್ಳು : ಇವರು . . . ದ್ರಾವಿಡದೇಶದ ವಾಸ್ತುಶಿಲ್ಪಶೈಲಿಯನ್ನು ಮೈಗೂಡಿಸಿಕೊಂಡು ತಮ್ಮದೇ ಆದ ವಿಶಿಷ್ಟಶೈಲಿಯನ್ನು ಪ್ರತಿಪಾದಿಸಿದರು (ಹೊಸಂಪ. ೦೦೪); ಭಾರತೀಯ ವಿಚಾರ ಮತ್ತು ಸಂಸ್ಕೃತಿಗಳ ಸಾರವನ್ನು ರಜಪೂತಕಲೆ ಮೈಗೂಡಿಸಿಕೊಂಡಿತು (ಭಾರದ. ೫೨೯).

[ ಮೈಗೂಡು ( < ಮೆಯ್ಗೂಡು) + — ಇಸು$_3$) ]

**ಮೈಗೂಡು** ' ಮೆಯ್ಗೂಡು ' ನೋ.

**ಮೈಗೂಡಲು** ' ಮೆಯ್ಗೂಡಲ್ ' ನೋ.

**ಮೈಗೆಡು** ' ಮೆಯ್ಗೆಡು ' ನೋ.

**ಮೈಗೆಲಸ** ' ಮೆಯ್ಗೆಲಸ ' ನೋ.

**ಮೈಗೊಡಹು** ' ಮೆಯ್ಗೊಡಪು ' ನೋ.

**ಮೈಗೊಡು** ' ಮೆಯ್ಗೊಡು ' ನೋ.

**ಮೈಗೊಳ್** ' ಮೆಯ್ಗೊಳ್ ' ನೋ.

**ಮೈಗೊಳಿಸು** ' ಮೆಯ್ಗೊಳಿಸು ' ನೋ.

**ಮೈಗೊಳ್ಳು** ' ಮೆಯ್ಗೊಳ್ ' ನೋ.

**ಮೈಚಳಿ, ಮೈಛಳಿ** (ನಾ). (ಆಲಂ) ಸಂಕೋಚ : ದಾಕ್ಷಿಣ್ಯ: ಭಿಡೆ. **ಮೈಛಳಿ** : ಆಫೀಸಿನಲ್ಲಿ ಕೂಡ ಮೊದಲಿದ್ದ ಮೈಛಳಿ ಈಗ ಮಾಯವಾಗ ತೊಡಗಿತ್ತು (ಪಾಕ್ಸಲ್. ೦೮೪).

**ಮೈಚಳಿಬಿಡು, ಮೈಛಳಿಬಿಡು** = ಭಯ ಸಂಕೋಚಗಳನ್ನು ಬಿಡು : ನಿಸ್ಸಂಕೋಚವಾಗಿ ವ್ಯವಹರಿಸು : ಸುಶೀಲೆಯೂ ಆಕೆಯೊಡನೆ ಈಗ ಮೈಚಳಿಬಿಟ್ಟು ಮಾತನಾಡಿದಳು (ಸವಾಜ. ೪೮೭) ; ಉನ್ನೀಸಳು . . . ಮೈಚಳಿಬಿಟ್ಟು ಕುಳಿತಿದ್ದಾಳೆ (ಹೂರಜ. ೦೨); ಅಲ್ಲಿ ಮೈಚಳಿಬಿಟ್ಟು ಹಾಡಿದಂತೆ ಬೇರೆಲ್ಲಿಯೂ ನೀವು ಹಾಡಲಾರಿರಿ (ಗಾಕಶ. ೩೯) ; ಮೈಛಳಿಬಿಟ್ಟು ಮಾತನಾಡುವುದು ಮಾತ್ರ ನನ್ನಿಂದಾಗಲೇ ಇಲ್ಲ (ವೃಶಿ. ೫೮).

[ ಮೈ$_1$ ( < ಮೆಯ್$_2$ ) + ಚಳಿ$_2$]

**ಮೈಚಾಚು** ' ಮೆಯ್ಚಾಚು ' ನೋ.

**ಮೈಛಳಿ** ' ಮೈಚಳಿ ' ನೋ.

**ಮೈಜಂಗಳ** (ನಾ). ಮೈಯಿಂದ ಉಂಟಾಗುವ ಸ್ರಾವ.– ಸುರಿತ : ಹಿಂಗಿದಸುಖದ ದುಂದುಭಿಯ ಮೈಜಂಗಳದ ಜರಿದರುಣಜಲ ಮುನಿಯಂಗಲತೆಯಲಿ ಹಿಡಿಯೆ (ಕೊರಣ. ೪–೨–೩೮).

[ಮೈ$_1$ ( < ಮೆಯ್$_2$ ) + ಜಂಗಳ]

**ಮೈಜೋಡು** ' ಮೆಯ್ಜೋಡು ' ನೋ.

**ಮೈಝುಳ** ' ಮೆಯ್ಝುಳ ' ನೋ.

**ಮೈತ** (ನಾ). ತೀರಿಕೊಂಡವನು ; ಸತ್ತವನು : ಭೀಮರಾಯರು ಮೈತ ಆದದ್ದು ೧೩–೮–೧೯೮೮ ರೊಳಗ (ಗ್ರಾಪಜಹ. ೦೫೪); ಬಹಳ ಮಾಡಿ ಮೈತನು ನನ್ನ ಕಕ್ಕನೇ ಆಗಿರಬಹುದು (ಮುಪಶ. ೮೪).

[ ← ಅರ. ಮಯುತ್ ; ಮರಾ. ಮಯತ್, ಮೈಯತ್, ಮೈತ್. / ಸಂ. ಮೃತ]

**ಮೈತಳೆ** ' ಮೈದಳೆ ' ನೋ.

**ಮೈತಾಳು** ' ಮೈದಾಳು ' ನೋ.

**ಮೈತಿಮಿರ್, ಮೈದಿಗುರು** (ನಾ). ಮೈಗೆ ಲೇಪಿಸುವ ಸುಗಂಧ ವಸ್ತು.– ಪರಿಮಳದ್ರವ್ಯ : ಉಮೆಯು ಮೈತಿಮಿರ ಪುತ್ಥಳಿಯ ಮಾಡಿ ಜೀವನವಿತ್ತಳೆಂದುಸುರ್ವರು (ಪ್ರಶಠ. ೦–೩). **ಮೈದಿಗುರು** : ನಿಡಿಗಣ್ಣ ಬೆಳ್ವೊಗರು ಕಂತುವಿನ ಮೈದಿಗುರು . . . ಎನೆ ನಿವಾಸನಿಯರುಗಳೊಳ್ವರೆಯ ದೆಸಕದಿಂ ಬಂದರ್ (ಉದ್ಯದೇ. ೫–೨೪); ಗಿರಿಸುತೆಯ ಮೈದಿಗುರಿನಿಂದಾದ ನಂದನಂ ಹರನ ತಡೆಯಲ್ ಖಡ್ಗದಿಂದೆ ತಲೆಯರಿದು ನಭಕಟ್ಟು ಶಿವನೊಳ ಪೊಕ್ಕನು (ಚಂದ್ರ. ೨೮–೩೪). [ಮೈ$_1$ (< ಮೆಯ್$_2$) + ತಿಮಿರ್$_2$]

**ಮೈತಿಮಿರ** (ನಾ). ೧. ದೇಹದ ನವೆ.– ಕಡಿತ : ಮೈತಿಮಿರ, ಮದ, ಬಾಯಾರಿಕೆ, ಈ ಲಕ್ಷಣಂಗಳು ಕೃಷ್ಣಜಿಹ್ವಕವೆನಿಸಿಕೊಂಬ ಸನ್ನಿದೋಷ ಜ್ವರದಲ್ಲಿ ಉಂಟಾಗಿಹವು (ವೈದ್ಯಶಾ. I, ೦೦೩). ೨. (ಆಲಂ) ಕೊಬ್ಬು : ಪೊಗರು ; ಸೊಕ್ಕು : ಅವನಿಗೆ ಮೈತಿಮಿರ ಹೆಚ್ಚಾಗಿದೆ (ರೂಢಿ).

[ಮೈ$_1$ ( < ಮೆಯ್$_2$ ) + ತಿಮಿರ$_1$]

**ಮೈತ್ರ** (ಗು). ೧. ಮಿತ್ರನಿಗೆ ಸಂಬಂಧಿಸಿದ ; ಗೆಳೆಯನ. (ನಾ). ೨. ಗೆಳೆತನ : ಸ್ನೇಹ : "ಪ್ರೀತಿ ಸಖ್ಯಂ ಸ್ನೇಹಮೆನಲು ಮೈತ್ರಕ್ಕೆ ನಾಮಂ" (ಮಂಗರಾ. ೦೨೮–೮) ; ತ್ರಿನೇತ್ರನ ನೇತ್ರಮಂ ಶೋಧಿಸುವ ನಾಸಟದೆ ಮೈತ್ರದಿಂ ಕೈವೆರಳೊಳ್ (ಬಸವು. ೦೮–೫೯). ೩. ಗೆಳೆಯ ; ಸ್ನೇಹಿತ : ಕಾಂಬೆನೆಂದು ಬಂದ ಮೈತ್ರನನ್ನವಲಕ್ಕಿ ತಿಂದ ವದನ (ಕೀರ್ತನ. ೦೩೦–೩) ; ಚೈತ್ರದಲ್ಲಿ ಮೈತ್ರನಾದರೂ ಮೈತಗಲಿಸಕೂಡದು (ಗಾದೆ). ೪. [ಜೈನ] ಅರವತ್ತು ಮೂರು ಇಂದ್ರಕಗಳಲ್ಲಿ ಒಂದು :

೧. ಋತು ೨. ವಿಮಳಂ . . . ೩೦. ಮೈತ್ರಂ . . . ೬೩. ಸರ್ವಾರ್ಥಸಿದ್ಧಿ ಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್ (ತತ್ತ್ವಸ್ರ. ೨೦೩). [ಸಂ.]

**ಮೈತ್ರಾಯಣೀಯ** (ನಾ). ಶತೋಪನಿಷತ್ತುಗಳಲ್ಲಿ ಒಂದು : ಶ್ರೀರುದ್ರ ಬೃಹದಾರಣ್ಯಕ . . . ಮೈತ್ರಾಯಣೀಯ . . . ಮುಂಡಕವೆಂಬಿವು ಮೊದಲಾದವೇ ಶತೋಪನಿಷತ್ತುಗಳು (ಏಕೀ. ೩). [ಸಂ.]

**ಮೈತ್ರಾವರುಣ** (ಗು). ೧. ಮಿತ್ರ ಮತ್ತು ವರುಣದೇವತೆಗಳಿಗೆ ಸಂಬಂಧಿಸಿದ. (ನಾ). ೨. ವಾಲ್ಮೀಕಿಋಷಿ : " ಪ್ರಾಚೇತಸಃ ವಾಲ್ಮೀಕಿಃ, ಮೈತ್ರಾವರುಣಿಃ—(ಈ ೩) ವಾಲ್ಮೀಕಿ" (ಶಬ್ದಮ. ೬೮-೨೩೬). ೩. ಅಗಸ್ತ್ಯಋಷಿ. ೪. ವಸಿಷ್ಠಋಷಿ : ಅಗ್ನೀಂದ್ರ . . . ಮೈತ್ರಾವರುಣ . . . ವೇಷ್ಪರೆಂಬವರ್ಮೊದಲಾದ ಪದಿನೈದು ಋತ್ವಿಕ್ಕುಗಳೊಡಗೂಡಿ (ಏಕೀ. ೦೨೦). [ಸಂ.]

**ಮೈತ್ರಾವರುಣಿ** (ನಾ). ಅಗಸ್ತ್ಯಋಷಿ : ನಿರುಪಮಚರಿತ್ರದಿಂ ಮಿಕ್ಕರುಂಧತಿ ವಸಿಷ್ಠನಂಗನೆ ತಾಂ ಮೈತ್ರಾವರುಣಿಯಗಸ್ತ್ಯನ ಸಾಧ್ವಿ[ಯೆ ಪರ]ಲೋಪಾಮುದ್ರೆ ತನ್ನುನೀಶ್ವರರವಧುಗಳ್ (ವಸ್ತು.ಕೋ. ೦೪-೬೬) ; ಇರಲು ತಿಂಗಳ ಮೇಲೆ ಮೈತ್ರಾವರುಣಿಯನು ಬೀಳ್ಕೊಂಡು ಬರೆ (ಕೊರಟಾ. ೩-೩-೬೬) ; ಮೈತ್ರಾವರುಣಿ ಶಿಷ್ಯಂಗೂಡಿ ಬರುತುಮಿರ್ಪುದಂ ಕಟ್ಟದಿರೊಳ್ ಕಂಡು (ರಾಜಶೇಖ. ೧೦-೨೩). [ಸಂ.]

**ಮೈತ್ರಾಸನ** (ನಾ). [ರಾಜನೀ] ಮಿತ್ರನಾಗಿದ್ದೂ ಉದಾಸೀನನಾಗಿರುವ ಸ್ಥಿತಿ : ಮಿತ್ರಮಲ್ಲಿ ಕೆಲರಂ ಮೈತ್ರಾಸನವೃತ್ತಿಯೊಳ್ ನಿಜಿಸಿ ಕೆಲರನು ದ್ವಿತಾಪ್ರತಿಮಹಿತರ್ಮಾಡಿ ಕೆಲರನುಚ್ಚಾಟಿಸಿ ಸರ್ವಹರಣಂಗೆಯ್ದು (ಶಂಕಭಾ. ೬-೩೦ ವ). 'ಆಸನಸ್ಥಾನ' ಪರಾ. ಪ "ಇಲ್ಲಿ ' ಮೈತ್ರಾಸನವೃತ್ತಿ' ಎಂಬುದು 'ಮೈತ್ರಸೇವೃತ್ತಿ' ಎಂದಿರಬಹುದು" (ಶಂಕಶೇ. ೨೨೪). [ಸಂ.]

**ಮೈತ್ರಿ** (ನಾ). ಸ್ನೇಹ ; ಗೆಳೆತನ ; ಪ್ರೀತಿ : "ಸ್ನೇಹಮಜರ್ಯಂ ಸಖ್ಯಂ ಸೌಹಾರ್ದಂ ಪ್ರೀತಿ ಮೈತ್ರಿ . . . ಸೌಹೃದಮೆಂಬುದು" (ವಸ್ತು.ಕೋ. ೦೦೧-೪) ; ಅವಿನಯರೊಳ್ ಮೈತ್ರೀಪ್ರಮೋದಕಾರುಣ್ಯಮಾಧ್ಯಸ್ಥವೃತ್ತಿಯುಂ ಭಾವಿಸುತ್ತುಂ (ಸುಕುಮಾ. ೪-೨೧ ವ) ; ವಿಶ್ವದ ಮೈತ್ರಿಯಲಿ ಮನಸಂದು ಪಾತ್ರಾಪಾತ್ರವೆನ್ನದೆ ಬೆರಸಿ ಬದುಕುವುದಧಿಕಗುಣವೆಂದ (ಕುಮಾ.ಅ. ೪-೭). [ಸಂ. ಮೈತ್ರೀ]

**ಮೈತ್ರಿಣಿ** (ನಾ). ಗೆಳತಿ ; ಸ್ನೇಹಿತೆ : ನಾವು ಒಮ್ಮೆ ತಮ್ಮ ಮೈತ್ರಿಣಿಯೊಬ್ಬರನ್ನು ಕಾಣಲಿಕ್ಕೆಂದು ಹೋದಾಗ ಹತ್ತು ನಿಮಿಷ ಮೊದಲೇ ಹೋದುದಕ್ಕಾಗಿ ಅವರ ದ್ವಾರವನ್ನು ಹತ್ತು ನಿಮಿಷ ಕಾಯ್ದರಂತೆ ! (ಮುಂಗಾರು. ೩೪) ; ಅವೊತ್ತು ನಿಮ್ಮ ಮೈತ್ರಿಣೀ ನಿಮ್ಮನ್ನು ಕೂಗಿದಾಗಲೇ ಗೊತ್ತು (ಶ್ರೀ.ಶಿ. ೪೨೪). [← ಮರಾ. ಮೈತ್ರಿಣೀ, ಮೈತ್ರಿಣೀ, ಮೈತ್ರೀಣ]

**ಮೈತ್ರೇಯ** (ಗು). ೧. ಸ್ನೇಹಪೂರ್ಣವಾದ ; ಸ್ನೇಹದಿಂದ ಕೂಡಿದ. (ನಾ). ೨. ಒಬ್ಬ ಋಷಿಯ ಹೆಸರು. [ಸಂ.]

**ಮೈತ್ರ್ಯ** (ನಾ). ಸ್ನೇಹ ; ಗೆಳೆತನ : ಪ್ರವಹಿಸಲಿ ವಾತ್ಸಲ್ಯ ಮೈತ್ರ್ಯಗಳ ನೆನೆಕೆಯಿಂ ನೆನೆದೆನ್ನ ಮನವಾ ಕರುಣೆ ತವರಿನೆಡೆಗೆ (ಕುಕಿರ. ೨೦-೦೩). [ಸಂ.]

**ಮೈಥುನ** (ನಾ). ೧. ಸ್ತ್ರೀಪುರುಷರ ಕೂಟ ; ಸುರತ ; ಸಂಭೋಗ : "ನಿಧುವನ ರತ ಯಾಭಗ್ರಾಮ್ಯಧರ್ಮನಾಮಂ ವ್ಯವಾಯಮದು ಮೈಥುನಮುಂ" (ವಸ್ತು.ಕೋ. ೩೪-೦೨) ; ನೆಗಟ್ಬಾಹಾರಂ ಭಯಮೊಳ್ಪುಗೆಟ್ಟ ಮೈಥುನ ಪರಿಗ್ರಹಂಗಳ್ ಸಂಸಾರಿಗಳೊಳ್ ಸಾಮಾನ್ಯದಿನೆಯ್ದುಗುಂ (ಸುಕುಮಾ. ೬-೬) ; ಮೈಥುನದಲಾಚಾರದಲಿ ಬಳಸಂದು ಕೈತವದ ಉದ್ಯೋಗದಲಿ ದುರ್ನೀತಿಯಲಿ ಪರಸತಿಯರಲಿ ಸಂಪ್ರೀತಿ ಬಲಿವುದು ಬೆದಕ ಬೆದಕಲು (ಕುಮಾ.ಅ. ೪-೯೩). ೨. ಮದುವೆ ; ವಿವಾಹ. ೩. ಸಂಪರ್ಕ . [ಸಂ.]

**ಮೈದ** ' ಮೆಯ್ದುನ ' ನೋ.

**ಮೈದಡವು** ' ಮೆಯ್ದಡವು ' ನೋ.

**ಮೈದಡಹು** ' ಮೆಯ್ದಡವು ' ನೋ.

**ಮೈದಣಿ** (ಕ್ರಿ). ೧. ದೇಹವು ಆಯಾಸಗೊಳ್ಳು, — ಬಳಲು : ಮೈದಣಿಯೆ ರಿಪುಭಟನ ಹೊಯ್ಲಲಿ ಛಾಯಮನು ಪಡೆದು (ಕುಮಾ.ಅ. ೬-೯೦). ೨. ಶರೀರವು ತೃಪ್ತಿಗೊಳ್ಳು,— ಸಮಾಧಾನ ಹೊಂದು : ಅರುಣಾಬ್ಜಭಾಸುರ ಪದದ್ವಂದ್ವದಿದಿರಲ್ಲಿ ಸಾಷ್ಟಾಂಗಪ್ರಣಾಮಮಂ ಮೈದಣಿವಿನಂ ಎಱಗಿ . . . ಪಾಡಿದಂ ಭಕ್ತಿಯಿಂದಲಾ ನಂದಿಯಾಗ (ನಂದಿಶಾ. ೦೩-೩೪).

[ ಮೈ$_1$ (< ಮೆಯ್$_2$) + ದಣಿ$_1$ (< ತಣಿ$_1$) ]

**ಮೈದಳೆ, ಮೈತಳೆ** (ಕ್ರಿ). ಆಕಾರವನ್ನು ಹೊಂದು ; ಸಾಕಾರವಾಗು : ಪೆಳಱುವ ರೌದ್ರೋತ್ಕಟದ ಮೈದಳೆದು ಜವ್ವನದೊಡೆಗಳೋಯೆನೆ ಹೊಳೆವ ಪಲ್ಗಳ ಪತೆದಗುರುವಿಸಿ × × × ಶಾರ್ದೂಲ (ಶಾಳ್ವಭಾ. ೩-೩೦). **ಮೈತಳೆ** : ಮುಗ್ಧತೆ ಮೈತಳೆದಂತೆವ್ರೋಲಿರುವವರು ಪರಿಶುದ್ಧಚೇತನರವರು (೨:ಕಾಶ. ೩೬-೬೬) ; ಸ್ವಲ್ಪ ಸ್ವಲ್ಪವಾಗಿ ಮೈತಳೆದು . . . ಕಾಲಕ್ರಮದಲ್ಲಿ ಪೂರ್ಣತೆಯನ್ನು ಪಡೆದಿದೆ (ಕಾಕಗ. ೩೦). [ಮೈ$_1$ (< ಮೆಯ್$_2$) + ತಳೆ$_1$]

**ಮೈದಾ** (ನಾ). (ಪೂರಿ ಮುಂತಾದ ಖಾದ್ಯಗಳನ್ನು ತಯಾರಿಸಲು ಬಳಸುವ) ಒಂದು ಬಗೆಯ ನಯವಾದ ಹಿಟ್ಟು : ಮೈದಾಹಿಟ್ಟನ್ನು ಸ್ವಲ್ಪಸ್ವಲ್ಪವಾಗಿ ಸೇರಿಸಿ ಮಿಶ್ರಣವು ನಯವಾದ ಅಂಟಿನಂತಾಗುವಂತೆ ಕಲಸುವುದು (ಅಡುಗೆ. ೯೭). [← ಪಾರ. ಮೈದಹ್ ; ಹಿಂ. ಮರಾ. ಮೈದಾ]

**ಮೈದಾನ,ಮೈದಾನು** (ನಾ). ಸಮತಟ್ಟಾದ ವಿಸ್ತಾರವಾದ ಭೂಮಿ ; ಬಯಲು : ತಿಳಿವೆ ನಾನದನೆಲ್ಲಾ ಗದೆಗಳೊಳೊಲವೇ ಮೈದಾನದೊಳು ನಿಲುತೊಲಿವುದೆಂದನು ಭೀಮ ಕೌರವರೊಡನೆ ಗುರುದ್ರೋಣ (ಜಹಾ. ೯-೩೦) ; ಪಟ್ಟಣದ ಮಧ್ಯಭಾಗದಲ್ಲಿ ಹತ್ತು ಗಜ ವಿಸ್ತೀರ್ಣವುಳ್ಳ ಮೈದಾನವಿದೆ (ಕ್ರವಾ. II. ೦೩೩). **ಮೈದಾನು** : " ಮೈದಾನು = ಪಟಾಂಗಣ " (ಕಾನಕೋ. ೩೬) ; ಒಂದು ಕಡೆಯಲಿ – ನೆಲವು ಮೈದಾನುಭೂಮಿಯಂತೆ ಬಲುದೂರದ ತನಕ ಹರಡಿಕೊಂಡಿರುವುದು (ಕಾಂಕ್ರ. I. ೨೦).

[← ಪಾರ. ಅರ. ಹಿಂ. ಮರಾ. ಮೈದಾನ್]

**ಮೈದಾನು** ' ಮೈದಾನ ' ನೋ.

**ಮೈದಾಳು, ಮೈತಾಳು** (ಕ್ರಿ). ಆಕಾರವನ್ನು ಪಡೆ ; ಸಾಕಾರವಾಗು : ಶ್ರೀಗುರು ಕುವೆಂಪು ಅವರ ಕಣ್‌ಬೆಳಕಿನ ನಿರ್ದೇಶನದಲ್ಲಿ . . . ಮೈದಾಳಿದ್ದ ಸೌಂದರ್ಯಸಮೀಕ್ಷೆ ಎಂಬ ಈ ಒಂದು ಕೃತಿ (ಸೌಂದಸ. i. ಮೊದಲ ಮಾತು). **ಮೈತಾಳು** : ಉಳಿದ ತ್ರಿಷಷ್ಟಿಕಲೆಗಳೇ ಈ ತ್ರಿಷಷ್ಟಿಯಲ್ಲಿ ಮೈತಾಳಿದಂತಿವೆ (ಮುಂಗಾರು. ೪) ; ಯುಗಯುಗಕೂ ಉರುಳುತಿಹುದು ಜಗದ ರಥದ ಗಾಲಿ ಹಗಲು ಇರುಳು ಮರಳಿ ಮಸೆದು ಸಾಹಸ ಮೈತಾಳಿ (ಕಂಕಬು. ೨೪-೪). [ಮೈ$_1$ (< ಮೆಯ್$_2$) + ತಾಳು$_1$ (< ತಾಳ್$_1$)]

**ಮೈದಿಗುರು** ' ಮೈತಿಮಿರ್ ' ನೋ.

**ಮೈದಿಲು** ' ಮೇಲುದು ' ನೋ.

**ಮೈದುಂಬು** ' ಮೆಯ್ದುಂಬು ' ನೋ.

**ಮೈದುನ** ' ಮೆಯ್ದುನ ' ನೋ.

**ಮೈದುನತನ** ' ಮಯ್ದುನತನ ' ನೋ.

**ಮೈದೆಗಹು** (ನಾ). ಶರೀರದ ಸೊಬಗು.— ಆಕರ್ಷಣೆ : ಸೋಲವಂದು ಮೈದೆಗಹಿನೊಳ್ ಕಲಕಲಬರಂ ಮರುಳ್ಮಾಡುತೀಶ್ವರನಡಿಯಿಡುತಿರ್ದನು (ತಿಲಕ. ೦೯-೩೩). [ಮೈ$_1$ (< ಮೆಯ್$_2$) + ತೆಗಹು]

**ಮೈದೆಗೆ** ' ಮೆಯ್ದೆಗೆ ' ನೋ.

**ಮೈದೆರೆ** (ಕ್ರಿ). ಮೈಯನ್ನು ಒಡ್ಡು : ಶಕ್ತಿಕಂಡ ಶಿವನಂದನ ಶಿಖಿಸ್ಯಂದನ ಕರೆವೆ ವಾಹನವಾಗಲು ಅರ್ಪಿಸಿ ಅವನಲಿ ಮೈದೆರೆವೆ (ಅರಳು. ೪೦೩-೨).

[ಮೈ$_1$ (< ಮೆಯ್$_2$) + ತೆರೆ$_1$ (< ತೆಱೆ$_1$) ]

**ಮೈದೆಱ³** ' ಮೆಯಿದೆಱ³ ' ನೋ.

**ಮೈದೊಗಲ್** ' ಮೆಯ್ದೊಗಲ್ ' ನೋ.

**ಮೈದೊಡವು** ' ಮೆಯ್ದೊಡವು ' ನೋ.

**ಮೈದೊಡಿಗೆ** ' ಮೆಯ್ದೊಡಿಗೆ ' ನೋ.

**ಮೈದೊಡುಗೆ** ' ಮೆಯ್ದೊಡಿಗೆ ' ನೋ.

**ಮೈದೊಡೆ** (ಕ್ರಿ). ಮೈಯನ್ನು ತಡವು.– ನೇವರಿಸು : ಹಿಡಿದೆತ್ತಿ ಕುಳ್ಳಿರಿಸಿ ನೆಳಲೊಳಗೆ ಬೀಸಿ ಮೈದೊಡೆದು (ಸಿದ್ಧರಾ. ೨-೪೨).

[ಮೈ$_1$ (< ಮೆಯ್$_2$) + ತೊಡೆ$_1$]

**ಮೈದೊರೆ** (ಕ್ರಿ). ದೇಹವನ್ನು ತ್ಯಜಿಸು : ಶರೀರವನ್ನು ತ್ಯಾಗಮಾಡು: ಅವನು ಕೇವಲಿಯಾಗಿ ಮೈದೊರೆವವರೆಗಿನ ವಿಷಯಗಳನ್ನು ಚಿತ್ರಿಸುವ ಅಂಶವೇ ಕಡೆಯದು (ನಾತೋಶ. ೩೩೬).

[ ಮೈ$_1$ (< ಮೆಯ್$_2$) + ತೊರೆ$_1$ (< ತೊಱೆ$_1$) ]

**ಮೈದೊಳೆ** ' ಮೆಯ್ದೊಳೆ ' ನೋ.

**ಮೈದೋರು** ' ಮೆಯ್ದೋಱು ' ನೋ.

**ಮೈದೋಱಿಕೆ** (ನಾ). ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳುವಿಕೆ : ತೋಱುವೀ ಸಚರಾಚರದ ಮೈದೋಱಿಕೆಯ ಮಹಿಮನು ಕಣಾ (ಕೊರಾ. ೬-೩-೨೬).

[ಮೈದೋಱು (< ಮೆಯ್ದೋಱು) + – ಇಕೆ]

**ಮೈದೋಱು** ' ಮೆಯ್ದೋಱು ' ನೋ.

**ಮೈನ** (ನಾ). ಕಿತ್ತಳೆಯ ಬಣ್ಣ ಅಥವಾ ಹಳದಿಯ ಬಣ್ಣದ ಕೊಕ್ಕನ್ನುಳ್ಳ, ಗೊರವಂಕದ ಜಾತಿಗೆ ಸೇರಿದ ಒಂದು ಬಗೆಯ ಕಪ್ಪುಬಣ್ಣದ ಪಕ್ಷಿ : ಮೈನಂ ಎರಳೆ ನವಿಲ್ಗಾಗೆ ಪೆಟ್ಟೆ ಪೋದಗೆಕರಭಂ ಶಶತಮಿವು ಪೋಗೆ ಶಾರುಂಬರೆ ಪಡಕೆಯಂ ಮೂರೊಳೆದಳ್ಪುಮಚಳಿತವಚನ (ಲೀಲಾ. ೦೨-೦೬); ಮೈನಹಕ್ಕಿ ; ಗೊರವಂಕ (Mina. ೩೦೪೮).

[← ಹಿಂ. ಮರಾ. ಮೈನಾ./ಪ್ರಾ. ಮಯಣಾ./ಸಂ. ಮದನ]

**ಮೈನಂಬುಗೆ** (ನಾ). ಸಾಲ ಕೊಡುವಾಗ ಒತ್ತೆ, ಅಡವುಗಳಿಲ್ಲದೆ ವ್ಯಕ್ತಿಯ ನಂಬಿಕೆಯೇ ಆಧಾರವಾಗಿರುವಿಕೆ : ಮೈನಂಬಿಗೆಯ ಸಾಲಕ್ಕೆ ಬಡ್ಡಿ ಹೆಚ್ಚು ಪೂತ್ರಿಯಸಾಲಕ್ಕೆ ಕಡಿಮೆ (ಕಶಾಗ. ೨೮೪).

[ ಮೈ$_1$ (< ಮೆಯ್$_2$) + ನಂಬಿಗೆ (< ನಂಬುಗೆ) ]

**ಮೈನಡುಕ** ' ಮೆಯ್ನಡುಕ ' ನೋ.

**ಮೈನಡುಗು** ' ಮೈಯ್ನಡುಗು ' ನೋ.

**ಮೈನವಿರ್** ' ಮೆಯ್ನವಿರ್ ' ನೋ.

**ಮೈನವಿರು** ' ಮೆಯ್ನವಿರ್ ' ನೋ.

**ಮೈನವಿರೇಳು** (ಕ್ರಿ). ಮೈಮೇಲಿನ ಕೂದಲು ನೆಟ್ಟಗೆ ನಿಲ್ಲು ; ರೋಮಾಂಚ ವಾಗು : ಕಾಳಿಂಗವೂ ಅದೇ ವೇಗದಲ್ಲಿ ಓಡಿ ಬರುತ್ತಿತ್ತು. ನನಗೆ ಮೈನವಿರೆದ್ದಿತು (ಹಸುಹೊ. ೬೪): ಲಕ್ಷ್ಮಿಯು ಮಾಡಿದ ಕೆಲಸ ಕೇಳಿದಾಗ ಅವನಿಗೂ ಮೈನವಿರೆದ್ದಿತು (ಕುಸುಸಂ. ೧೬೦).

[ ಮೈನವಿರು (< ಮೆಯ್ನವಿರ್) + ಏಳು$_1$ (< ಏೞ್$_1$)]

**ಮೈನಾರು** ' ಮೆಯ್ನಱ³ ' ನೋ.

**ಮೈನಿಗ್ಗು** (ನಾ). (ಅಲಂ) ಮೈಮೇಲೆ ಧರಿಸಿರುವ ಆಭರಣಸಮೂಹ : ಚಕಚಕಿಸುವ ಮೈನಿಗ್ಗುಗಳಿಂ ದಿಕ್ಕುಗಳಂ ಬೆಳಗಿಸುವಳೋ ಅಂತಿರ್ಪ ಚಿತ್ರಿಣೀ ಜಾತಿ ವಿಹಾರಿಯನ್ನುಉತ್ತಮಳೆಂದು ಪೇಳುವರು (ಕಾಗಂ೨. ೪೯೯-೮೦).

[ಮೈ$_1$ (< ಮೆಯ್$_2$) + ನಿಗ್ಗು]

**ಮೈನಿಡಿ** (ಕ್ರಿ). ದೇಹವನ್ನು ನಿಮಿರಿಸು : ಎಲ್ಚಿತ್ತಾಯರು . . . ಮೈನಿಡಿದು ನಿಂತರು (ಶಗುಳ. ೭೩). [ಮೈ$_1$ (< ಮೆಯ್$_2$) + ನಿಡಿ$_0$]

**ಮೈನೀರು** 'ಮೆಯ್ನೀರ್' ನೋ.

**ಮೈನೀಳ** (ನಾ). ಆಕೃತಿಯು ದೀರ್ಘವಾಗಿ ಚಾಚಿರುವುದು : ನೀಲಗಿರಿ ಯಿಂಕ್ಕೆಲಕೆ ವಾರಿಧಿ ಮೇಲೆ ನಿಪ್ಪತ್ತಿಶೃಂಗವಿವು ಮೈನೀಳದಲಿ ಪೂರ್ವಾ ಪರದ ಜಲನಿಧಿಯ ಮುಟ್ಟಿಹವು (ಕುವ್ಯಾ. ೬-೪೬).

[ಮೈ$_1$ (< ಮೆಯ್$_2$) + ನೀಳ$_1$]

**ಮೈನುಸುಳು** (ನಾ). ಮೈ ತೂರಿಕೊಳ್ಳುವ ಅವಕಾಶ.–ಜಾಗ: ಎಡೆ: ಏನ ಹೇಳುವೆನರಸ ದಿವಿಜರ ಸೇನೆಯಲ್ಲಾ ಛತ್ರ ಚಮರ ವಿತಾನದಲಿ ನಭ ವಿಲ್ಲ ನೆಗಹಿದ ಸಬಳ ಶಲ್ಲೆಹಕೆ ಮೈನುಸುಳ ಕಾಣೆನು (ಕುವ್ಯಾ. ೦೪-೮).

[ ಮೈ$_1$ (< ಮೆಯ್$_2$) + ನುಸುಳು$_2$ (< ನುಸುಳ್$_2$) ]

**ಮೈನೆರೆ** ' ಮೆಯ್ನೆಱೆ³ ' ನೋ.

**ಮೈನೆಱೆ³** ' ಮೆಯ್ನೆಱೆ³ ' ನೋ.

**ಮೈನೋಟ** ' ಮೆಯ್ನೋಟ ' ನೋ.

**ಮೈನೋವು** (ನಾ). ದೇಹದ ನೋವು.– ಬಾಧೆ: ದಶಾನನನು ಮನಸಿಜನ ಶರಸಂಧಾನದೆಸುಗೆಯ ಮಸಿಯು ಮೈನೋವಿನಲಿ ಕಳವಳಿಸಿ (ತೊರಾ. ೩-೩-೩೦). [ಮೈ$_1$ (< ಮೆಯ್$_2$) + ನೋವು]

**ಮೈಪರಚು** (ಕ್ರಿ). ಮೈಯನ್ನು ಉಗುರಿನಿಂದ ಗೀರು.– ಕೆರೆ.

**ಮೈಪರಚಿಕೊಳ್ಳು** = (ಜುಗುಪ್ಸೆ, ಕೋಪ, ಬೇಜಾರು ಮೊದ ಲಾದ ಭಾವನೆಗಳಿಂದ) ಮೈಯನ್ನು ಗೀರಿಕೊಳ್ಳು : ನನ್ನ ಮೇಲೆ ಕೋಪ ಬಂದು ಮೈ ಪರಚಿಕೊಂಡುಬಿಡುವ ಹಾಗಾಗುತ್ತದೆ (ದೂಕಿಲ್ಲ. ೧೩೨) ; ನನ್ನ ವಿಷಯ ಹೇಳಿಕೊಳ್ಳುವ ಸಂಭ್ರಮದಲ್ಲಿ ಯಮುನೆಯ ಸಂಗೀತದ ವಿಷಯ ಯಾಕೆ ಹೇಳಿದನೋ ಎಂದು ನನಗೆ ಮೈಪರಚಿಕೊಳ್ಳುವ ಹಾಗಾಯಿತು (ಅಂಹೂ. ೭೩): ಕೈಲಾಗದವ ಮೈಪರಚಿಕೊಂಡ (ಗಾದೆ).

[ಮೈ$_1$ (< ಮೆಯ್$_2$) + ಪರಚು]

**ಮೈಪು** (ನಾ). ದೇಹವನ್ನು ಹೊಂದಿರುವ ಸ್ಥಿತಿ: ಐಪಡಗಿದಷ್ಟಾಂಗಯೋಗ ಶಿವಕಜ್ಜದಿಂ ಮೈಪಳಿವ ಪೂಗೋಲ ಮಥನಪ್ರಸಂಗದಿಂ ಸೈಪಡೆದ ಸದಮಲ ಜ್ಞಾನಪ್ರಮಥರೆಸೆಪರೇಂ ಪೊಗಳ್ದಪೆಂ ಶರಣರ (ಲಿಂಗಪು. ೩-೦೬).

[ಮೈ$_1$ (< ಮೆಯ್$_2$) + – ಪು$_2$]

**ಮೈಬಣ್ಣ** ' ಮೆಯ್ವಣ್ಣ ' ನೋ.

**ಮೈಬಲ** (ನಾ). ದೇಹದ ಬಲ : ಶಾರೀರಕ ಶಕ್ತಿ : ಉದ್ಯಮ ಸಾಹಸ ಬುದ್ಧಿ ಪರಾಕ್ರಮ ಧೈರ್ಯವು ಮತ್ತೆ ಮೈಬಲವು (ಇಂಶಾಶ. ೦೬೪-೮).

[ಮೈ$_1$ (< ಮೆಯ್$_2$) + ಬಲ$_3$]

**ಮೈಬಲ್ಮೆ** (ನಾ). ಶರೀರದ ಶಕ್ತಿ : ದೇಹದ ಸಾಮರ್ಥ್ಯ.–ಬಲ : ನನ್ನ ಮೈನವಿರನೊಂದಾದಡಂ ಕೀಳಲಾರದು ನಿಮ್ಮ ಮೈಬಲ್ಮೆ (ವಗಾ೪. ೭೦); ನೆಲದ ಸಿರಿ, ಬಿಲ್ಬಿಜ್ಜೆ, ಮೈಬಲ್ಮೆ, ರಣಕೀರ್ತಿ ಮೇಣ್ ಅರಸುಕುವರಿಯ ತನಂ ತೃಣವಾಗಿ ಋಣವಾಗಿ ಕಾಣಿಸಿದುವು (ಶ್ರೀರಾಂಗ. ೨೩-೬೪೧).

[ಮೈ$_1$ (< ಮೆಯ್$_2$) + ಬಲ್ಮೆ]

**ಮೈಬಳಲಿಕೆ** ' ಮೆಯ್ವಳಲ್ಕೆ ' ನೋ.

**ಮೈಬಳಸು** (ಕ್ರಿ). ಶರೀರವನ್ನು ಸುತ್ತಿಕೊಳ್ಳು: ದೇಹವನ್ನು ಆವರಿಸು : ಮಲೆತು ಧಾಳಾಧೂಳಿಯಲಿ ಬಲಸುಳಿ ಮಸಗಿಯೆನ್ನೊಬ್ಬನನು ಮೈಬಳಸಿ ಕಾದಿತು ವೀರಕರ್ಣನ ಕೂಡೆ ತಲೆಯೊತ್ತಿ (ಕುವ್ಯಾ. ೦೬-೨೬).

[ಮೈ$_1$ (< ಮೆಯ್$_2$) + ಬಳಸು$_1$]

**ಮೈಬಾಯು** (ಕ್ರಿ). (ಅಲಂ) ಉಬ್ಬು : ಹಿಗ್ಗು: ತೆರೆಯ ಮಱೆಯೊಳಿದ್ದ ನಮಿವಿನಮಿಗಳ ಪೆಂಡಿರು ಸಿಂಧು ಗಂಗಾಸತಿಯರು ಭರತೇಶ ತಂಗಿಯರೆನೆ ಕೇಳ್ದು ಚಿತ್ರದೊಳರಳಿ ಮೈಬಾತರಾ ಕ್ಷಣದೆ (ಭರತ. ೪೨-೦೨೯).

[ಮೈ$_1$ (< ಮೆಯ್$_2$) + ಬಾಯು (< ಬಾ$_1$)]

**ಮೈಬಾವು** (ನಾ). ಶರೀರದ ಊತ : ಅರಿದಾಳದ ಸುಟ್ಟು, ಸೈಂಧವ, ಗಂಜಿ, ಗಂಧಕ, ಇವು ಎಣ್ಣೆಯೊಳು ಪೂಸೆ ಮೈಬಾವು ಮಾಣ್ಗುಂ (ಶಿವ್ಯ. ೬೬). [ಮೈ$_1$ (<ಮೆಯ್$_2$) + ಬಾವು]

**ಮೈಬಿಡು** ' ಮೆಯ್ಬಿಡು ' ನೋ.

Δ **ಮೈಬಿಸುಪ್ಪು** ' ಮೆಯ್ಬಿಸುಪ್ಪು ' ನೋ.

**ಮೈಬೇನೆ** (ನಾ). ಶರೀರಕ್ಕೆ ಉಂಟಾಗುವ ಬೇನೆ; ಮೈನೋವು: ಕೆಮ್ಮು, ಮಂದಾಗ್ನಿ, ಮೂಲವ್ಯಾಧಿ, ಹೊಟ್ಟೆ ಮೈಬೇನೆಗಳೆಂಬಿವು ಪರಿಹಾರವಾಗುವುವು (ಜಿವ್ರ.ಶಿ. ೩೬). [ಮೈ$_{1}$ (<ಮೆಯ್$_{2}$) + ಬೇನೆ]

**ಮೈಭುಲ್ಲಣೆ** (ನಾ). (ಮನಸ್ಸಿನಲ್ಲಾದ ಸಂತೋಷ, ಸಂಭ್ರಮ, ಹೆಮ್ಮೆಗಳಿಂದ) ದೇಹವು ಬೀಗುವಿಕೆ: ಬಿಲ್ಲ ಕೊಪ್ಪಿನ ಮೇಲೆ ಚಾಚಿದ ಗಲ್ಲದುಪಹಾಸದ ನುಡಿಯ ಮೈಭುಲ್ಲಣೆಯ ರೋಮಾಂಚನದ . . . ನಗೆಯ ಚೌಪಟವಲ್ಲನಿದ್ದನು ರಿಪುಬಲವ ಲೆಕ್ಕಿಸದೆ (ಕುಮಾ.ವ್ಯಾ. ೦೭-೩೭). [ಮೈ$_{1}$ (<ಮೆಯ್$_{2}$) + ಭುಲ್ಲಣೆ (<ಬುಲ್ಲವಣೆ)]

**ಮೈಭೋಗ**, ಮಯಿಭೋಗ (ನಾ). ೧. ವಸ್ತ್ರ, ಭೂಷಣ ಇತ್ಯಾದಿಗಳಿಂದ ಶರೀರಕ್ಕೆ ಒದಗುವ ಸುಖ: ಉಡುಗೊಱೆಗಳ ವಸನದ ಮೈಭೋಗದ ಮಡಿಯ ನಾನಾದೊರೆಗಳಿಗೆ ಕೊಡುವ ಬಂಗಾರದ ಪೆಟ್ಟಿಗೆಗಳ ಬಲುಗಡಣ ಸಾಗಿದುದವರೊಡನೆ (ರಾಮಾ.ಶಿ. ೭-೦೪); ಪಟ್ಟೆಚೀನಾಂಬರಗಳನು ಸ್ಪರ್ಶನ ಮೈಭೋಗಕೆ ತಂದೀವ ಸೆಟ್ಟಿಗಳು (ಕಂಠಪ. ೨೩-೦೦೦). ೨. ದೇವರ ವಿಗ್ರಹಕ್ಕೆ ವಸ್ತ್ರ, ಭೂಷಣ ಇತ್ಯಾದಿಗಳನ್ನು ಅರ್ಪಿಸುವ ಸೇವೆ; ಅಂಗಭೋಗ: ಸೋಮಂಣವೊಡೆಯರ ಅಂಮ್ಮ ಸಾಯಂಮ್ಮನವರ ಮೈಭೋಗಕ್ಕೆ ಕೊಟ್ಟಹ ದಕ್ಷಿಣಾವಾರಣಾಸಿಯಾದ ಕಾವೇರಿಯ ದಕ್ಷಿಣಭಾಗದ . . . ಕೆರಿಯ ಸೀಮೆಯಲು (ಎಕ. XIV, ತಿರುಮ. ೨೨೨-೬; 1482). **ಮಯಿಭೋಗ:** ೨. ಮಯಿಭೋಗದ ಜವಳಿ ೧೦ಕ್ಕೆ ಗ ೧೫ (ಎಕ. VI (R), ಶ್ರೀರಂಗ. ೨೩೬-೦೦ : 1544). 'ಮೆಯ್ಭೋಗ' ಪರಾ. [ಮೈ$_{1}$ (<ಮೆಯ್$_{2}$) + ಭೋಗ]

**ಮೈಮ** (ನಾ). ಮಹಿಮಾಶಾಲಿ; ಮಹಾತ್ಮ: ಒಪ್ಪಿರ್ಪಾ ಮೈಮಂ ವಿಶ್ವನಾಥಂ (ಕುಸುಮಾ. ೦-೦); ಬಡವರೊಡವೆಗೆಂಡಂತೆ ಮೈಗಣ್ಣನ ಮಡದಿ ಘ್ಯಮನನೆತ್ತಿಕೊಂಡು (ಶೇಲಂ. ೨೨-೦೨೩). 'ಮಯ್ಮೆ$_{2}$' ಪರಾ. [<ಸಂ. ಮಹಿಮನ್]

**ಮೈಮಗುಚು** (ಕ್ರಿ). ದೇಹವನ್ನು ಹೊರಳಿಸು, –ತಿರುಗಿಸು : ಕೈ ಮಗುಚಿ ಶತ್ರುಘ್ನ ಬಾಣವ ಮೈಮಗುಚಿ ದಾನವನ ಮಾರ್ಗಣ ವೈಭವದ ನೆರೆ ಕೈಚಳಕವನು ಕಂಡು ಮೆರವುತಿರೆ (ತೊ.ರಾಮಾ. ೩-೪೨). [ಮೈ$_{1}$ (<ಮೆಯ್$_{2}$) + ಮಗುಚು (<ಮಗುಟ್ಚು)]

**ಮೈಮರವು**, ಮೈಮರೆವು (ನಾ). ೧. ಶರೀರದ ಮೇಲೆ ಎಚ್ಚರವಿಲ್ಲದಿರುವುದು; ಮೂರ್ಛೆ: ಮರವರಿಸಿ, ಕೊಡನ್ನಾಗಿಡ್ಡ . . . ಕಷಾಯ ವಿಕ್ಕಿ ಕೊಡಲು ಭಗ್ನನೇತ್ರಸನ್ನಿಯಿಂದುಂಟಾದ ಮೈಮರವು ಗುಣಮಾಗಿ ಜ್ಞಾನಮಕ್ಕುಂ (ಕಳವ್ರ. ೦೬೨). **ಮೈಮರೆವು:** ೨. ಲಕ್ಷ್ಯವಿಲ್ಲದಿರುವುದು; ಪರಿವೆಯಿಲ್ಲದಿರುವುದು: ಆ ನಿಮಿಷದಲ್ಲಿ ಏನೋ ಒಂದು ಬಗೆಯ ಮೈಮರವು. ಆ ಮೈಮರೆವಿನ ಶಾಂತಿಯಲ್ಲಿ ಒಂದೆರಡು ಅಲೆಗಳು ಮೆಲ್ಲನೆದ್ದು ಅಲುಕಿಸುತ್ತಿದ್ದುವು (ಅಲಕಾ. ೯೩). [ಮೈ$_{1}$ (<ಮೆಯ್$_{2}$) + ಮರವು (<ಮಱವು)]

**ಮೈಮರೆ$_{1}$** ' ಮೆಯ್ಮಱೆ 'ನೋ.

**ಮೈಮರೆ$_{2}$** ' ಮೈಮಱೆ$_{2}$ ' ನೋ.

**ಮೈಮರೆತ** (ನಾ). ತಲ್ಲೀನತೆ; ಪರವಶತೆ : ಅವನ್ನು ಮಾಡುವ ತನಕ ಅವರ ಮೈಮರೆತ ಹೋಗಲಿಲ್ಲ (ಹುಚ್ಚಿ. ೧೦೭) ; ನಾಟಕ ಬರೆಯುವಾಗ ಹಿಂದೆ ಎಂದೂ ಇಲ್ಲದ ಮೈಮರೆತ ನನ್ನ ಮೇಲಿತ್ತು (ಅಮೃ. ೯ ಹಿನ್ನುಡಿ). [ಮೈಮರೆ$_{1}$ (<ಮೆಯ್ಮಱೆ) + –ತ$_{2}$]

**ಮೈಮರೆವು** ' ಮೈಮರವು ' ನೋ.

**ಮೈಮರೆಹು** ' ಮೆಯ್ಮಱೆಪು ' ನೋ.

**ಮೈಮಸಕ** (ನಾ). ಶಾರೀರಿಕಬಲ, –ಸಾಮರ್ಥ್ಯ : ಆವ ಸಾಧನೆಯೋ ವಿಘಾತಿಯ ಲಾವಣೆಗೆಗದ್ರಿಗಳು ಬಿಱುದವು ಮೈವಳೆಯಲುಕ್ಕಿದುದು ಕಡುಹಿನ ಖತಿಯ ಮೈ [ಪಾಠಾಂ. ಕೈ]ಮಸಕ (ಕುಮಾ.ಕ. ೨-೦೦೧); ಉಸಿರಿಡುವ ಹೆಣವಾಗಿ ಬಾಳುವೆನೆ ? ಚಲದ ಮೈಮಸಕವಂ ಮೆರೆಯದೆಯೆ ಹಿಂದೆ ಜರುಗಿ ! (ಶಾರಂಗ. ೭-೨೪). [ಮೈ$_{1}$ (<ಮೆಯ್$_{2}$) + ಮಸಕ$_{1}$]

**ಮೈಮಱಸು** (ಕ್ರಿ). ಮೈಮರೆಯುವಂತೆ ಮಾಡು: ಆ ಮಹೀಪತಿಯುಂಗನೆಯನುದ್ದಾಮಬಲ ದಶಕಂಠ ಬನದಲಿ ಮೈಮಱ[ಪಾಠಾಂ. ಱೆ]ಸಿಕೊಂಡೊಯ್ದ ಗಡ (ತೊರಾ. ೫-೪-೦೭); ಮಾಯವನನುಗೊಳಿಸದೆ ಮೈಮಱಸದೆ . . . ಆಯಸದಿಂದಳವಳಿಯದೆ ಪತಿಯನುಪಾಯದಿಂದುಪಚರಿಸುವುದು (ಹರಿ. ೩-೯). [ಮೈಮಱೆ$_{1}$ (<ಮೆಯ್ಮಱೆ) + –ಸು$_{1}$]

**ಮೈಮಱುಕ** ' ಮೆಯ್ಮಱುಕ ' ನೋ.

**ಮೈಮಱುಗು** ' ಮೆಯ್ಮಱುಗು ' ನೋ.

**ಮೈಮಱೆ$_{1}$** ' ಮೆಯ್ಮಱೆ ' ನೋ.

**ಮೈಮಱೆ$_{2}$**, ಮೈಮರೆ$_{2}$ (ನಾ). ೧. ಉದಾಸೀನತೆ ; ಮೈಮರೆವು : ಸತಿಯ ಹೋಗಾಡಿದೆವು ಮಾನಸ್ಥಿತಿಗೆ ಮೈಮಱೆಯಾಯ್ತು ಬಂದೆವು ಗತಿವಿಡಿದು ದಶಶಿರನ ಮೇಲಣ ವೈರಬುದ್ಧಿಯಲಿ (ತೊರಾ. ೯-೦-೦೩). **ಮೈಮರೆ$_{2}$:** ೨. ದೇಹವನ್ನು ಮರೆ ಮಾಡುವ ಅಥವಾ ಮುಚ್ಚುವ ಸಾಧನ; ದೇಹರಕ್ಷಣೆಯನ್ನು ಮಾಡುವ ಕವಚ : ಇನ್ನು ಮೈಮರೆಯನ್ನು ಅಸೆಪಡುವುದು ನನಗೊಪ್ಪುವುದಿಲ್ಲ ಎಂದುಕೊಂಡು ಅದಟನಾದ ಆ ರಾಧೇಯನು ಕವಚವನ್ನು ತೊಡಲೇ ಇಲ್ಲ (ಕಾಮಧೇ. ೨೬). [ಮೈ$_{1}$ (<ಮೆಯ್$_{2}$) + ಮಱೆ$_{2}$]

**ಮೈಮಱೆಪು** ' ಮೆಯ್ಮಱೆಪು ' ನೋ.

**ಮೈಮಱೆಹು** ' ಮೆಯ್ಮಱೆಪು ' ನೋ.

**ಮೈಮಾಟ** (ನಾ). ದೇಹರಚನೆ ; ಮೈಕಟ್ಟು : ಮಗು ದೊಡ್ಡದಾದ ಹಾಗೆ ಬಿಂದಣ್ಣನ ಮೈಮಾಟವನ್ನೇ ಅನುಕರಿಸಿ ಬೆಳೆಯತೊಡಗಿದನು (ವ್ಯ.ಶಿ. ೦೯೯); ಅವಳು ಬುದ್ಧಿವಂತೆ, ಒಳ್ಳೆಯ ಮೈಮಾಟ (ಸ್ತ್ರೀ.ತಿ. ೯೯). [ಮೈ$_{1}$ (<ಮೆಯ್$_{2}$) + ಮಾಟ$_{1}$]

**ಮೈಮಿನುಗು** (ನಾ). (ಬಾಣದ) ಕಾಂತಿ, – ಹೊಳಪು : ದನುಜಹರಮಂತ್ರವನು ಮನದಲಿ ನೆನೆದು ಕೈನೀಡಿದನು. . . ಕನಕರಸರೇಖಾವಳಿಯ ಮೈಮಿನುಗುಗಳ ಹೊಂಗಱಿಯ ನಾರಾಯಣಮಹಾಶರಕೆ (ಕುಮಾ.ವ್ಯಾ. ೦೯-೦೪). [ ಮೈ$_{1}$ (< ಮೆಯ್$_{2}$) + ಮಿನುಗು$_{3}$ (<ಮಿನುಕು$_{3}$) ]

**ಮೈಮುಟ್ಟು** ' ಮೆಯ್ಮುಟ್ಟು ' ನೋ.

**ಮೈಮುದುಡು** (ಕ್ರಿ). ದೇಹವನ್ನು ಮುದುರಿಕೊಳ್ಳು; ಶರೀರವನ್ನು ಸಂಕುಚಿತಗೊಳಿಸು : ಪುಟ್ಟ ರಾಧಾ ಈಗಲೂ ತಾಯಿಯ ಜತೆಯಲ್ಲೇ ಮೈಮುದುಡಿಕೊಂಡು ಮಲಗುತ್ತಿದ್ದಳು (ರಂಗವ. ೨೭). [ ಮೈ$_{1}$ (< ಮೆಯ್$_{2}$) + ಮುದುಡು$_{1}$ (< ಮುದಿರ್) ]

**ಮೈಮುರಿ** ' ಮೆಯ್ಮುರಿ ' ನೋ.

**ಮೈಮುರುವು**, ಮೈಮುರುಹು (ನಾ). ದೇಹವನ್ನು ತಿರುಗಿಸುವಿಕೆ ; ಮೈಮುರಿಯುವಿಕೆ : ವಾಮಕರ ದಂಡೆಗಳ ದಂಡೆಯ ಮೈಮುರುವಿ [ಪಾಠಾಂ. ಹಿ]ನುಪ್ಪರದ ಮುಚ್ಚಿಯ . . . ತಪಕಿಗರು ತಿವಿದಾಡಿದರು ತೀವ್ರದಲಿ (ತೊರಾ. ೬-೦೭-೩೮). **ಮೈಮುರುಹು :** ಮೈಭಾರ, ದೈನ್ಯೋಕ್ತಿ, ಮೈಮುರುಹು . . . ದಾಹ ಇವು ರಸಗತಜ್ವರದಲ್ಲಿ ಉಂಟಾಗಿಹವು (ವೈದ್ಯಸಾ. I, ೪೪). [ ಮೈ$_{1}$ (< ಮೆಯ್$_{2}$) + ಮುರುವು$_{1}$ (< ಮುರಿವು) ]

**ಮೈಮುರುಹು** ' ಮೈಮುರುವು ' ನೋ.

**ಮೈಮೆ** ' ಮಯ್ಮೆ$_{1}$ ' ನೋ.

**ಮೈಮೆಗಾಱ** (ನಾ). ಮಹಿಮೆಯುಳ್ಳವನು; ಮಹಿಮಾವಂತ : ಆಃ ! ನೀನುಂ ಬಲ್ಮೈಮೆಗಾಱಂ (ರಾಜಶೇ. ೦೦೭-೨೭).
[ ಮೈಮೆ (< ಮಯ್ಮೆ$_1$) + — ಕಾಱ ]

**ಮೈಮೆಟ್ಟ** (ನಾ). ಒಂದು ಮನೆತನದ ಹೆಸರು (?) : ಇವರೊಳಗಾದ ಸಮಸ್ತಪ್ರಜೆಗಳು ಮೇಲಾಳಿಕೆ ಮೈಮೆಟ್ಟ ಬಲ್ಲೆಯ ಮೈಮೆಟ್ಟ ಕೇಶವ ಮೈಮೆಟ್ಟ ಹರಿಯಣ ಇಂತಿನಿಬರುಂ (ಎ.ಕ. ೦೬೨೯, ೧೫-೦೯; 1200).
[ ? ]

**ಮೈಮೆದಳೆ** (ಕ್ರಿ). ಘನತೆಯನ್ನು ಹೊಂದು ; ಗೌರವವನ್ನು ತಳೆ : ಅಶ್ವತ್ಥಾಮನಂ ಸಂಗ್ರಾಮದಾಂ ತೊಱೆದು ಪೋಪಂತು . . . ಕೈಮಿಕ್ಕು ಮೈಮೆದಳೆಯಲುಂ (ಶಗು. ೦೫-೫ ವ).
[ ಮೈಮೆ (< ಮಯ್ಮೆ$_1$) + ತಳೆ$_1$ ]

**ಮೈಮೆವಡೆ** (ಕ್ರಿ). ಮಹತ್ವವನ್ನು ಪಡೆ; ಘನತೆಯನ್ನು ಹೊಂದು : ಅಂತು ಮೈಮೆವಡೆದ ಗಿಟ್ಟದ ಮೇಲೆ ಕೈಯೆತ್ತಿ (ಶ್ರೀಕ. ೨೨೬) ; ಅಂತು ಮನೋನುರಾಗದಿಂ ಮೈಮೆವಡೆದು (ದಕಳು. ೨-೨ ವ); ಮೈಮೆವಡೆದ ಜಿನಸೇನಸ್ವಾಮಿಯ ನಿರ್ಮಲತರ ಪೂಜ್ಯಪದಸ್ವಾಮಿಯ ಪದಮಂ ನೆನೆದು (ಶಮು. ೦-೬). [ ಮೈಮೆ (< ಮಯ್ಮೆ$_1$) + ಪಡೆ$_1$ ]

**ಮೈಮೆವೆಱು** (ಕ್ರಿ). = ಮೈಮೆವಡೆ : ಮುಖರೋಗಮಾದವೊಲಿನಿತಾನುಂ ಬಸವಲ್ಲದುಸಿರ್ವರೆಂದುಂ ಪೊಸುರಿಯಿಂ ಮೈಮೆವೆತ್ತ ಮಾಯ್ದ ಮನುಷ್ಯರ್ (ಕಾದಂಪೂ. ೩೬೨) ; ಮೈಮೆವೆತ್ತೋಲಗದ ನಡುವೆಯಾರ ಮನೋಸರಿಸದೆ ಬಿಗಿದ ಪಾಸವಿದೆಂಬಂತೆ ನೀಳ್ದ ಕೆಂಜೆಡೆಗಳೊಳಂ (ಶ್ರೀಕ. ೦೬೭); ಮೈಮೆವೆತ್ತಸುಪಮಮೋಹಶ್ಶಲಪವಿ (ಕಬಕಂ. ೨-೬).
[ ಮೈಮೆ (< ಮಯ್ಮೆ$_1$) + ಪೆಱು$_1$ ]

**ಮೈಮೇಟ** ' ಮೆಯ್ಮೇಟ ' ನೋ.

**ಮೈಮೇಳ** ' ಮೆಯ್ಮೇಳ ' ನೋ.

**ಮೈಯಂತಿ**(ನಾ)·(ಕರಾ) ಒಂದು ಹೆಣ್ಣು ಭೂತ [— ತುಳು. ಮಯ್ಯಂತಿ]

**ಮೈಯರಿ** ' ಮೆಯ್ಯಱಿ ' ನೋ.

**ಮೈಯಲಸು** ' ಮೆಯ್ಯಲಸು ' ನೋ.

**ಮೈಯಾಟ** ' ಮೆಯ್ಯಾಟ ' ನೋ.

**ಮೈಯಾನ್** ' ಮೆಯ್ಯಾನ್ ' ನೋ.

**ಮೈಯಿಕ್ಕು** ' ಮೆಯ್ಯಿಕ್ಕು ' ನೋ.

**ಮೈಯಿಡು** ' ಮೆಯ್ಯಿಡು ' ನೋ.

**ಮೈಯಿಳಿ** (ಕ್ರಿ). ಗರ್ಭಸ್ರಾವವಾಗು : ನಾಗವಲ್ಲಿ . . . ಮೈಯಿಳಿದು ತೀರಿಕೊಂಡಳು (ಮುದುಕು. ೦೦೯).
[ ಮೈ$_1$ (< ಮೆಯ್$_2$) + ಇಳಿ$_1$ (<ಇೞಿ) ]

**ಮೈಯಿಳಿತ** (ನಾ). "ಗರ್ಭಪಾತ : ಗರ್ಭಸ್ರಾವ ಮಾಡಿಸುವುದು" (Abortion. ೩೦೯೬). [ ಮೈಯಿಳಿ + — ತ$_2$ ]

**ಮೈಯಿಾ** (ಕ್ರಿ). ದೇಹವನ್ನು ಒರಗಿಸು : ಮಾನಿನಿಯು ಮರಕೆ ಮೈಯಿತ್ತು ಕುಳ್ಳಿರ್ದಾಡುಂ (ಸವಪೂ. ೬-೯೨).
[ ಮೈ$_1$ (< ಮೆಯ್$_2$) + ಈ$_2$ ]

**ಮೈಯುಕ್ಕು** (ಕ್ರಿ). (ಸಂತೋಷದಿಂದ) ದೇಹವು ಉಬ್ಬು : ಕಱಿಕಂಠಂ ಬಂದನೆಂಬ ಭಾವಕ್ಕೆ ಮೈಯು[ಶಾಕಾ. ವು]ಕ್ಕಿ ನಿಂದ ನಂಬಿಯುಲ್ಲಿಗೆ ನಡೆತಂದು (ಸಂಶರ. ೦೬-೯೨).
[ ಮೈ$_1$ (<ಮೆಯ್$_2$) + ಉಕ್ಕು$_1$ (<ಉಕ್ಕ$_1$) ]

**ಮೈಯುಡುಗು** ' ಮೆಯ್ಯುಡುಗು ' ನೋ.

**ಮೈಯುಣ್**, ಮೈಯುಣ್ಣು (ಕ್ರಿ). (ಆಲಂ) ಅಭ್ಯಾಸವಾಗು ; ರೂಢಿಯಾಗು : ಸಂಯೋಗದ ಸುಖ ಮೈಯುಂಡವರಂಗೆ ಲೋಕದ ನಚ್ಚುಮೆಚ್ಚಿನ ಬಲೆದೊಡಕು ತಪ್ಪದು (ಮೋಕ್ಷಪ. ೨೬೭-೬೮). **ಮೈಯುಣ್ಣು** : ಪ್ರತ್ಯಕ್ಷದಲ್ಲಿ ಮೈಯುಂಡ ಅವಮಾನದ ಕಹಿಯನ್ನು ಕಲ್ಪನೆಯ ಲೋಕದಲ್ಲಿ ತನ್ಮಯನಾಗಿ ಮರೆತು ವಿಹರಿಸುತ್ತಾನೆ ಸಿದ್ಧಣ್ಣ (ಬಿತ್ತಾ. ೪೮); ಈ ಕೆಲಸ ನಮ್ಮ ವಂಶಗತವಷ್ಟೆ ಆದ್ದರಿಂದ ಮೈಯುಂಡಿದೆ (ಕರಂಶಿಂ. ೦೯೫). [ ಮೈ$_1$ (< ಮೆಯ್$_2$) + ಉಣ್ ]

**ಮೈಯುಣ್ಣು** ' ಮೈಯುಣ್ ' ನೋ.

**ಮೈಯುಬ್ಬು** ' ಮೆಯ್ಯುರ್ಬು ' ನೋ.

**ಮೈಯುರಿ** (ನಾ). ೧. ದೇಹದಲ್ಲಿ ಉಂಟಾಗುವ ತಾಪ,– ಉರಿ : ನಾಲ್ಕು ದಿನಗಳಿಂದ ನಾನು ಕಣ್ಣುರಿ, ಮೈಯುರಿಗಳಿಂದ ನರಳುತ್ತಿದ್ದೇನೆ (ರೂಢಿ). ೨. (ಆಲಂ) ಸಿಟ್ಟು; ಅಸಹನೆ : ಅವಳನ್ನು ಕಂಡರೆ ಇವನಿಗೆ ಎಲ್ಲಿಲ್ಲದ ಮೈಯುರಿ ಉಂಟಾಗುತ್ತದೆ (ರೂಢಿ).
[ ಮೈ$_1$ (< ಮೆಯ್$_2$) + ಉರಿ$_2$ ]

**ಮೈಯೊಡ್ಡು** ' ಮೆಯ್ಯೊಡ್ಡು ' ನೋ.

**ಮೈಯೊಲವು** ' ಮೆಯ್ಯೊಲಪು ' ನೋ.

**ಮೈರೇಖೆ** (ನಾ). ಮೈಮಾಟ ; ಶರೀರದ ರಚನೆ : ಬಲು ಸರಳವಾಗಿಯೂ ನೈಸರ್ಗಿಕವಾಗಿಯೂ ಜೀವಿಸುವುದರಿಂದ ಅವರ ಮೈರೇಖೆಯಲ್ಲಿ ಒಂದು ಸೊಬಗಿದೆ (ಶಾಂಕೃ. II, ೦೦೩೦).
[ ಮೈ$_1$ (< ಮೆಯ್$_2$) + ರೇಖೆ ]

**ಮೈರೇಯ** (ನಾ). ಒಂದು ಬಗೆಯ ಮಾದಕಪಾನೀಯ : "ಮಧು, ಆಸವಃ . . . ಮೈರೇಯಂ, ಕಾಪಿಶಾಯನಂ, ಮಾಧ್ವೀಕಂ, ಆಸವಃ, ಪರಿ(ಸ್ರು)ಶ್ರುತ್, ವಾರುಣೀ, ಮಧು – ಈ ೨೪ ಕಳ್ಳು" (ಶಬ್ದಮ. ೩೫-೦೬೫); ಮಾರಿ ಮೈರೇಯಮಂ ಓರಿ ಬಹುಮಾತ್ರ ಮಾಪವೇರಿ . . . ನತೆತಂದರು (ಶೀಕರಾ. ೦೯-೨೫). [ಸಂ.]

**ಮೈರೊಳೆ** (ನಾ). ಒಂದು ಬಗೆಯ ಸಸ್ಯ : ನವಿಲಾದಿ, ಮೈರೊಳೆ, ಭರಣಿಗೆ (ವೈಶಿ. ೬೬-೦೫೬೬). [ ? ]

**ಮೈರೋಚಿ** (ನಾ). ದೇಹದ ಕಾಂತಿ ; ಶರೀರದ ಹೊಳಪು : ಬೇಚರಿಯರು . . . ಬಂದು ಮೈರೋಚಿ ಬೆಳಗಿಂ ಕೋಂಟೆ ಸುತ್ತುವಳಯದಿ ಕುಳಿತ ತೆರದಿ ಪೊಂದೆನೆಗಳೆಸೆಯೆ (ಸವಪೂ. ೨-೨೫).
[ ಮೈ$_1$ (< ಮೆಯ್$_2$) + ರೋಚಿ ]

**ಮೈಲ** ' ಮೈಲಿ$_1$ ' ನೋ.

**ಮೈಲಗೆ** ' ಮೈಲಿಗೆ ' ನೋ.

**ಮೈಲಗೆವೆಳ್ದಿಂಗಳ್** (ನಾ). ವಿಕಾಸಲಳಿದ ಬೆಳುದಿಂಗಳು ; ಉಪಯೋಗ ಹೊಂದಿದ ಬೆಳುದಿಂಗಳು : ನಗರೀನಾಯಕನಾಯಿಕಾವದನವೃತದಿಂ ಸುತ್ತಿ ಸೊಪ್ಪಾದ ಮೈಲಗೆವೆಳ್ದಿಂಗಳ ಸೊಂಪಂ ಸೈರಿಸದವೊಲ್ ಭೋಂಕಲ್ ಮರಳ್ವಂತು (ಅನಂಪು. ೬-೬೦); ಇರುಳು ಚಕೋರಿಗಳೆಲ್ಲ ನೆರೆದು ಚಂದ್ರನುರದ ಸಾರವನೆಲ್ಲ ಕೊಳಲು ಹರುಷವಱಿತು ಮೈಲಗೆವೆಳ್ದಿಂಗಳೊಳ್ವಿರಸಿರ್ದನಸ್ಸಾದ್ರಿಯೇಱೆ (ಅನಂತ. ೦೦-೦೯೬).
[ ಮೈಲಗೆ (< ಮೈಲಿಗೆ) + ಬೆಳ್ದಿಂಗಳ್ ]

**ಮೈಲತುತ್ತ**, ಮಯಿಲತುತ್ತ, ಮೈಲುತುತ್ತ, ಮೈಲುತುತ್ತು, ಮೈಲುತುತ್ಥ (ನಾ). ತಾಮ್ರ ಮತ್ತು ಗಂಧಕಗಳ ಸಂಯೋಗದಿಂದಾಗುವ ಒಂದು ಬಗೆಯ ಖನಿಜಲವಣ : ಕ್ಷಾರ ವಿಷಘ್ನಾರ್ದೀ — ಕ್ಷಾರ ಮೈಲತುತ್ತ ಮೊದಲಾದವು (ಶಾಹಟಿ. ೨-೯-೬೦). **ಮಯಿಲತುತ್ತ** : ಇದಕ್ಕೆ ಬಹುಶಃ ಮಯಿಲತುತ್ತವನ್ನು (Copper sulphate) ಸ್ವಲ್ಪ ಬೆರಕೆ ಮಾಡುತ್ತಿದ್ದಿರಬಹುದು (ಕನ್ನಸಂ. ೪೯). **ಮೈಲುತುತ್ತ** : ಮೈಲುತುತ್ತದ ಒಂದು ಹರಳನ್ನು ಅದೇ ವಸ್ತುವಿನ ಪರ್ಯಾಪ್ತದ್ರಾವಣ (Saturated solution) ದಲ್ಲಿಟ್ಟರೆ, ಹರಳು ಕ್ರಮವಾಗಿ ದೊಡ್ಡದಾಗು

ತ್ರದೆ (ಜ್ಞಾಚಿತಾ. ೩). **ಮೈಲುತುತ್ತು** : ದೊಡ್ಡ ದೊಡ್ಡ ಟಾಂಕಿಗಳಲ್ಲಿ ಮೈಲುತುತ್ತಿನ (ಇದು ತಾಮ್ರದ ಒಂದು ಲವಣ) ಪಾನಕವನ್ನು ತುಂಬಿ ಅದಕ್ಕೆ ಸ್ವಲ್ಪ ಗಂಧಕದ ದ್ರಾವಕವನ್ನು ಹಾಕುವರು (ಶಾಂಕ್ರ. 11. ೮೯೯). **ಮೈಲುತುತ್ಥ** : "ದಾರ್ವಿಕಾ, ಕ್ವಾಥೋದ್ಭವಂ, ತುತ್ಥಂ, ರಸಾಂಜನಂ, ರಸಗರ್ಭಂ, ತಾರ್ಕ್ಷ್ಯಶೈಲಂ — ೬ ರಸಾಂಜನದ ಹೆಸರುಗಳು . . . ಮೈಲುತುತ್ಥದ ಹೆಸರುಗಳೆಂದು ಕೆಲವರನ್ನುವರು" (ಸಿದ್ಧಾಂತಿ. ೩೦೫); ರಸರತ್ನಸಮುಚ್ಚಯವು ಖನಿಜಪ್ರಪಂಚವನ್ನು ಹೀಗೆ ವರ್ಗೀಕರಣ ಮಾಡಿದೆ. ೧. ಅಷ್ಟರಸಗಳು . . . ಮೈಲುತುತ್ಥ (ಕಶ್ಯಪ್ರಾ. ೩೦೬).

[ < ಸಂ. ಮಯೂರತುತ್ಥ ]

**ಮೈಲರಾ** 'ಮೈಲಾರ$_2$' ನೋ.

**ಮೈಲವಣ, ಮೈಲವಣೆ** (ನಾ). ಮಲ್ಲಯುದ್ಧದ ಒಂದು ವರಸೆ : ಮೇಣದ ಪುತ್ಥಳಿಗಳೊ ಉಕ್ಕಿನ ಬಲು ಚೀಣವೊ ಸಿಡಿಲ ಕುಡುಹುಗಳೊ ತೂಣೆ ಮೈಲವಣೆ ತಿರುವು ಚದುರಿಂದ ಬಿನ್ನಾಣಿಗರೊದಗಿ ಹೆಣಗಿದರು (ಸೊಬಗಿನ. ೭-೪೩). **ಮೈಲಪಣೆ** : ಹೊಯ್ಲು ಹೊದರೆದ್ದವು ವಿಘಾತದ ಕಯ್ಯುಲಿಯ ಕಡುಘಾಯ ಘಾಯಕೆ ಮೈಲವಣೆ [ಪಾಠಾಂ. ಮೆಯ್ಲವಣೆ] ಲಂಬಿಸಿತು . . . ಮುಷ್ಟಾಮುಷ್ಟಿ ಗತಿಯ ದೃಢಾಯ್ಲರಪ್ಪಳಿಸಿದರು (ಕುಮಾ.ಗ. ೨-೦೦೯). [ ಮೈ$_1$ (< ಮೆಯ್$_2$) + ಲವಣಿ$_2$ ]

**ಮೈಲವಣೆ** 'ಮೈಲವಣ' ನೋ.

**ಮೈಲಾಗು** (ನಾ). ದೇಹದ ಚುರುಕುತನ,— ಚಳಕ : ತಾಗಿ ನೋಡಿ ನೊಮ್ಮನುತ ಮೈಲಾಗಿನಲಿ ಹೊಳೆಹೊಳೆದು ಕೈದುವ ತೂಗಿ ತುಡುಕಿ ದನರಸನನು ಬೊಬ್ಬಿಱಿದು ಕಲಿಭೀಮ (ಕುಮಾ.ಗ. ೬-೦೫) ; ಆದಿಜಿನನ ಕೈಲೇಸಿನಿಂದ ದೀಕ್ಷೆಯ ಕೊಂ[ಬೆ]ವೆನ್ನುತಾಗ ಮೈಲಾಗಿನಿಂದೆದ್ದರವರು (ಭರತ. ೬೫-೪೪). [ ಮೈ$_1$ (< ಮೆಯ್$_2$) + ಲಾಗು$_2$ ]

**ಮೈಲಾಪ** (ನಾ). [ಜೈನ] ಜೈನಮುನಿಗಳ ಒಂದು ಶಾಖೆ,— ಅನ್ವಯ : ವಿದಿತಾಶೇಷಶಾಸ್ತ್ರರುಮ್ ಮೈಲಾಪಾನ್ವಯಮ್ . . . ಅಪ್ಪ ದೇವಕೀರ್ತಿ ಪಂಡಿತದೇವರ ಕಾಲಮ್ ಕರ್ಚ್ಚಿ (ಇಎ. XVIII. ೩೦೦-೦೩; ಸು. 11ನೆಯ ಶತ).

[ ? ]

**ಮೈಲಾರ$_1$** (ನಾ). ೧. ಒಬ್ಬ ಕ್ಷುದ್ರದೇವತೆಯ ಹೆಸರು : ಪರಮೇಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮಸ ಇಯೆನಿಪ್ಪ ಕೋಟಿದೆಯ್ವಂಗಳ್ (ಸಮಯ. ೯-೧೨೯) ; ಮಾಂತಿಯ ಪೆಸರ್ ಮೈಲಾರಮೆಂಬಂತೆ ಪೊಲೆಯರಾಡಿನ ಪೆಸರ್ ಪಾಣಿಕದೇವಿಯೆಂಬಂತೆ (ಧರ್ಮಾಮೃ. ೬-೦೭೭) : ರಕ್ತಾಂಬು ಮಜ್ಜನಮಂ ಮಾಡಿಸಿ ಮಸ್ತಕಾಂಬುರುಹದಿಂದಂ ಪೂಜೆಗೆಯ್ವಂತೊಡಾತನ ಕೊರ್ವಾಳ್ಗರಪಾಳ್ದಲಂತು ಮರವಾಳ್ಪಾಟೂರ ಮೈಲಾರನಾ (ಅನಂತ. ೦೨-೨೭). ೨. ಮೈಲಾರಲಿಂಗನ ದೇವಾಲಯವಿರುವ ಬಳ್ಳಾರಿ ಜಿಲ್ಲೆಯ ಒಂದು ಊರಿನ ಹೆಸರು : ಒಡ್ಡಿದ ಶೂಲವ ಹಾಯ್ದು ಮೈಲಾರದ ದೊಡ್ಡಿಯ ದೇವರೆಂದವನ ಅಡ್ಡಕಿಲ್ಲದೆ ತರಿಸಿ ನಿನ್ನಯ ಕಾಲಿಗಡ್ಡಗೆಡಹುವೆನು (ಕುರಾನಾಂ. ೨೪-೩೭) ; ಕೊಂಕಣಾ ಸುತ್ತಿ ಮೈಲಾರಕ್ಕೆ ಹೋದ ಹಾಗೆ (ಗಾದೆ). [ದೇ.॥ ತಮಿ. ಮೈಲಾರು = ಒಬ್ಬ ಹೆಣ್ಣುದೇವತೆ : ತೆಲು. ಮೈಲಾರು. ಮಯಿಲಾರು ]

**ಮೈಲಾರ$_2$, ಮೈಲರಾ** (ನಾ). ನಾನಾ ವಿಧವಾದ ಬಣ್ಣಗಳಿಂದ ಕೂಡಿದ ಕಂಬಳಿ ; ಚಿತ್ರಕಂಬಲ : ಚಂದ್ರಾಪೀಡನು . . . ಸೂರ್ಯಪುಟದ ಸುಪ್ಪತ್ತಿಗೆಯಲ್ಲಿ ಒರಗಿನ ಮೇಲೆ ಒರಗಿಕೊಂಡು ಮೈಲಾರತೊಡೆಯ ಮೇಲೆ ಕಾಲ ನೀಡಿಕೊಂಡು . . . ಚಿಂತಿಸಿದನು (ಕಾದಂಬ. ೬೯). **ಮೈಲರಾ** : ಕಲಾಬತ್ತಿನ ಕೆಲಸದ ಆನೆಜೀನು ಮೈಲರಾ ಜಲ್ಲಿ ಆನೆ ಕಾಣಸಿರಿ ಕಲಾಬತ್ತು ಕೆಲಸದ್ದು (ಎಕ. XIV, ಪಂಜಿನ. ೨೯೩-ಪೂರಿ. ೦೪೩; 1847). [ ? ]

**ಮೈಲಿ$_1$, ಮಯ್ಲಿ, ಮೈಲ, ಮೈಲು$_1$, ಮೈಲೆ$_2$** (ನಾ). ೧. ಒಂದು ಬಗೆಯ ಸಾಂಕ್ರಾಮಿಕರೋಗ ; ಸಿಡುಬು : ಅವಳ ಮೈಮೇಲೆ ಕೆಂಪಕೆಂಪಗೆ ಏನೋ ಎದ್ದವು . . . ನೀವು ಅಂದುಬಿಟ್ಟರಿ ಮೈಲಿ ಎಂದು (ಇಕ್ಷು. ೪೩೪) ; ದನದ ಮೈಲಿಯನ್ನು ಜನರಲ್ಲಿ ಹಬ್ಬಿಸಿದರೆ ಸಿಡುಬಿನ ಗಂಡಾಂತರದಿಂದ ಅವರನ್ನು ಪಾರಾಗಿಸಬಹುದು (ಜೂನಿಸಾ. ೩) ; ಮುಖದ ಮೇಲಿರಡು ಮೈಲಿಯ ಕಲೆಗಳು (ಶ್ರೀಕಾಂತ. I, ೩). **ಮಯ್ಲಿ** : ೧. 'ಮಯ್ಲಿತೆಗೆ' ಪರಾ. **ಮೈಲ** : ೨. ಕಾಂತಿಹೀನತೆ : ಮಸುಕು ; ಮಬ್ಬು : ಕಣ್ಣುಗಳು ಖರಕಠಿನವಾಗಿ, ಧೂಸರಾಣ— ಮೈಲಾಗಿರುವಂಥಾವು (ಶಾಹವಿ. ೨-೩-೯೯ ಬ). ೩. (ಕೆಂಪು, ಬಿಳಿ, ಹಸಿರು, ಕಪ್ಪು ಇತ್ಯಾದಿಗಳ) ಮಿಶ್ರವರ್ಣ : 'ಮೈಲ್ಹೋರಿ' ಪರಾ. **ಮೈಲು$_2$** : ೪. ಕೊಳಕು ; ಕಶ್ಮಲ : ಇಲ್ಲಿ ಹುಟ್ಟುವ ಉಪ್ಪು ಬೆಳ್ಳಗಿರುತ್ತದೆ. ಅದರಲ್ಲಿ ಮೈಲು ಇರುವುದಿಲ್ಲ (ಕಥಾಗ. ೨೯). 'ಮೈಲುತೆಗೆ' ಪರಾ. **ಮೈಲೆ$_2$** : ೧. ಬೇಸಿಗೆಯಲ್ಲಿ ಮೈಲೆಯು ಪಿಡುಗು ವಾಡಿಕೆಯಾಗಿ ಬರುತ್ತದೆ (ಕಥಾಗ. ೪೦೫) ; ಕೆಲವು ವೇಳೆ ದೇಹದ ಮೇಲೆಲ್ಲಾ ಮೈಲೆಗಳೇಳುವುದುಂಟು (೪೦೭ಶೋ. ೦೦). 'ಮೈಲೆ ರೋಗ' ಪರಾ.

[ < ಪ್ರಾ. ಮಇಲ./ಸಂ. ಮಲ./ ಹಿಂ. ಮರಾ. ಮೈಲ್ ]

**ಮೈಲಿ$_2$** 'ಮೈಲು$_3$' ನೋ.

**ಮೈಲಿಕಲ್ಲು** 'ಮೈಲಿಗಲ್ಲು' ನೋ.

**ಮೈಲಿಕಾರಕೂನ** (ನಾ). ಸಿಡುಬನ್ನು ತಡೆಗಟ್ಟುವ ಚುಚ್ಚುಮದ್ದನ್ನು ಕೊಡುವವನು ; ದೇವಿ ಹಾಕುವವನು : ಮೈಲಿಕಾರಕೂನರ ಆಗಮನ ವಾಗುತ್ತದೆ (ಗ್ರಾಮಗು. ೪). [ ಮೈಲಿ$_1$ + ಕಾರಕೂನ ]

**ಮೈಲಿಗಲ್ಲು, ಮೈಲಿಕಲ್ಲು** (ನಾ). ೧. ಒಂದು ಊರಿನಿಂದ ಇನ್ನೊಂದು ಊರಿಗೆ ಇರುವ ದೂರದ ಅಂತರವನ್ನು ಸೂಚಿಸಲು ದಾರಿಯ ಪಕ್ಕದಲ್ಲಿ ನೆಟ್ಟಿರುವ ಕಲ್ಲು : ಮೈಲಿಗಲ್ಲಿನ ಮೇಲೆ ಸೂಚಿಸಿದ್ದ ಸಂಖ್ಯೆ ಹಳೆಯದಾಗಿ ಮಾಸಿ ಸ್ಪಷ್ಟವಾಗಿ ಕಾಣಲಿಲ್ಲ (ರೂಢಿ). ೨. (ಅಲಂ) ಮುಖ್ಯವಾದ ಘಟ್ಟ,— ಹಂತ,— ಮಜಲು : ದ್ರಾವಿಡಭಾಷಾಜ್ಞಾತಿಕೋಶ ಈ ಕ್ಷೇತ್ರದಲ್ಲಿ ಒಂದು ಮಹತ್ತರವಾದ ಮೈಲಿಗಲ್ಲು (ದ್ರಾವಿಡ. ೨ ಹಿನ್ನುಡಿ) ; ಈ ದಿಕ್ಕಿನಲ್ಲಿ ಮಾಡುತ್ತಿರುವ ಪ್ರಯಾಣದ ಮೊದಲ ಮೈಲಿಗಲ್ಲು. ವಿಶ್ವವಿದ್ಯಾನಿಲಯ ಪ್ರಕಟಿಸುತ್ತಿರುವ ಈ ಪಠ್ಯಪುಸ್ತಕಮಾಲೆ (ಗೃಹವಿ. iii, ಮುನ್ನುಡಿ). **ಮೈಲಿಕಲ್ಲು** : ೧. "ಮೈಲಿಕಲ್ಲಿಲ್ಲದ ಹಾದಿಯಲ್ಲಿ ನಡೆಯುವವರು ಮತಿಹೀನರು" ಎಂದು ನಾವೆಲ್ಲರೂ ತೀರ್ಮಾನಿಸಿದೆವು (ಮೈಲಿಮಾ. ೦೦). ೨. ಅಂದೇ ಪಾಕಿಸ್ತಾನದ ಬೇರು ಭಾರತಭೂಮಿಯಲ್ಲಿ ಊರಿತು. ಅದೊಂದು ಮೈಲಿಕಲ್ಲು (ಭಾರದ. ೪೦೯).

[ ಮೈಲಿ$_2$ (< ಮೈಲು$_3$) + ಕಲ್ಲು (< ಕಲ್$_3$) ]

**ಮೈಲಿಗೆ, ಮೈಲಗೆ** (ನಾ). ೧. ಮಲಿನತೆ ; ಅಪವಿತ್ರತೆ : ಸೂತ್ರಧಾರಿಯ ಮನದ ಮೈಲಿಗೆಯ ಕಳೆಯ ಬಂದನಯ್ಯ ಮಡಿವಾಳನು (ಬೂಸ್ವ.ಸಂ. ೦೭೭-೦೪) ; ಮತ್ಸರಮತಿಯ ಮೈಲಿಗೆ ಬಿದ್ದುದಾತ್ಮಜ್ಞಾನ ದೃಷ್ಟಿಯಲಿ . . . ಈತನ ತಪದ ತೇಜದ ಹೊಪಳಿ ಹೊಯ್ಲಿನಲಿ (ಕುಮಾ.ಅ. ಹಿಂ. ೬-೦೩) ; ಮಡಿಯು ನೀನೆ ಮೈಲಿಗೆ ನೀನೆ ಸುಡಲಿ ನಿನ್ನ ಮಡಿ ಬಿಕನಾಸಿ (ಪುರಂದ. ೦-೦೦೫ ಅನುಪಲ್ಲವಿ). ೨. ಕೊಳೆ ; ಹೊಲಸು : ಮೈಲಿಗೆಯ ಸೀರೆಯನ್ನುಟ್ಟು ತನು ಕಳೆತೆಗೆಯೆ ಕೈಗಲ್ಲದಲಿ ನಿಂದಿಹ ಸತಿಯನೀಕ್ಷಿಸಿದ (ವಳಕ. ೬-೨೪). ೩. ವಿಧವೆಯರು ಕೇಶಮುಂಡನ ಮಾಡಿಸಿಕೊಳ್ಳುವಿಕೆ,— ತಲೆಗೂದಲನ್ನು ತೆಗೆಸಿಕೊಳ್ಳುವಿಕೆ : ಹಾಂಗಾರ ನಮ್ಮ ಗಂಗತ್ತ್ಯಾ ತಿಂಗಳಿಗೊಮ್ಮೆ ಮೈಲಿಗ್ಯಾಗಲಿಕ್ಕಿಲ್ಲೇ ಬರ್ತ್ಯಾಳ ಕಾಣಸ್ತದವ್ವಾ (ಹೂಬಿ. ೪). ೪. ಸಿಡುಬು : 'ಮೈಲಿಗೆಗಣ್ಣು' ಪರಾ. ೫. ತೊಟ್ಟು ಬಿಚ್ಚಿದ ಬಟ್ಟೆ : ಉಟ್ಟು ಹೊಲಸಾದ ಬಟ್ಟೆ ;

ಮಲಿನವಸ್ತ್ರ: ಬಳಿಕವರ್ . . . ಉಟ್ಟು ಕಳೆದ ಮೈಲಿಗೆಗೆ ಸವಿದೊಗಡಿಸಿದ ಕೂಳ್ಗೆ ಕೈಯಾಂತವಂ ಬೇಡಿ ಸಂದೆಗವಿಲ್ಲ (ಪಶಾ. ೦-೨೯) ; ಕುದಿಸಿ ಉದಕದೊಳಲಂಬಿ ಬೀಸುತ್ತೊಗೆದು ಪರಡಿ ತಗೆತೆಗೆದು ಪುಳಿಗೆಯನೊವಗಿಪುದು ಮೈಲಿಗೆ [ಪಾಠಾಂ. ಮಯ್ಲಗೆ] ಮಡಗಳಹುದಕ್ಕಲಾ ಮುನಿದೆ (ಬಸಪು. ೩೬-೪೭). ಮೈಲಗೆ: ಉಟ್ಟ ಪುಟ್ಟಗೆಗಳವಂತೆ ಮೈಲ[ಪಾಠಾಂ. ಲಿ]ಗೆಗಳಪ್ಪುವು (ಅಶಪು. ೨-೩೦) ; ಪಾತಕಜೀವಂಗಳ್ ಎಳ್ಳನಂತೆ ಗಾಣಕ್ಕೆ ವಂದು . . . ಮೈಲಗೆಯುತೊಗೆಪಕ್ಕೆ ವಂದು (ಧರ್ಮನಾ. ೩-೭೭ ವ); ವಡಿವಳನ ಮುಂದಣ ಮಡಿಯುಮಂ ತನ್ನೊಡನೆಯ ಗೋವಳಿಗರುಟ್ಟ ಮೈಲಗೆಯುಮಂ ಮಧುಸೂದನಂ ಕಂಡು (ಅರ್ಜನೀ. ೯-೭೩ ವ). ೬. (ಸಿಡುಬಿನಿಂದಾದ) ಒಂದು ಬಗೆಯ ಕಣ್ಣಿನ ದೋಷ : ಅಲಿ ನೊಂದುದೊ ಕಣ್ಣ ಬೇನೆಯೊ ಮೈಲ[ಪಾಠಾಂ. ಲಿ]ಗೆಯೊ ಹೂ ಹುಟ್ಟಿದುದೊ (ಬಸಪು. ೦೮-೬೬).

**ಮೈಲಿಗೆ ಕಲಸು** = ಮಲಿನತೆಯನ್ನು ಬೆರಸು ; ಅಶುದ್ಧವಾಗು : ಹೊಸಾ ಕಲ್ಗಡಗೀ ಒಡೆದು ಹೋತು ಮೈಲಿಗಿ ಕಲಸಿವಕ್ಕ (ಹೊಸಂಶಾ. ೭೯). **ಮೈಲಿಗೆಯಾಗು**=ಮೈಲಿಗೆ ಕಲಸು : ದೊಡ್ಡವರ ಹೆಸರು ಹೇಳಬಾರದಂತೆ ಕಣೊ. ಅವರಿಗೆ ಮೈಲಿಗೆಯಾಗುತ್ತದಂತೆ (ಶಂಪ್ರಸ. ೩-೨೩).

[ಮೈಲಿ$_1$ + –ಗೆ]

**ಮೈಲಿಗೆಗಣ್ಣು** (ನಾ). ಸಿಡುಬು ಹತ್ತಿದ ಕಣ್ಣು : ಅಳಿಗಣ್ಣೊ ಪರೆಗಣ್ಣೊ ಪೊಸ ನೀಲಿಗಣ್ಣೊ ಮೈಲಿಗೆಗಣ್ಣೊ (ಕುಮಾಕೃ. ೯-೨೯೨).

[ಮೈಲಿಗೆ + ಕಣ್ಣು (<ಕಣ್)]

**ಮೈಲಿಗೆಸಂತೆ** (ನಾ). ಮೀನು, ಮಾಂಸಗಳನ್ನು ಮಾರಲಾಗುವ ಸಂತೆ: ಜೂದಿನ ಕಟ್ಟೆ ಮೈಲಿಗೆಸಂತೆಯಂಗಡಿಬೀದಿ ಚವುವಟ್ಟೆಗಳೊಳಗೆ ಬ್ರಾಮರನವರ ಕಾಣದೆ ಬಾದುರ ನೋಡಿ ಹೋದನೆಂದಜಿದರಲ್ಲಲ್ಲಿ (ಕುರಾಶಾಂ. ೦೯-೦೨೯). [←ತೆಲು. ಮೈಲಸಂತ]

**ಮೈಲಿತೆಗೆ**, ಮಯ್ಲಿತೆಗೆ, ಮೈಲುತೆಗೆ (ಕ್ರಿ). ೧. ಸಿಡುಬನ್ನು ತಡೆಗಟ್ಟಲು ದೇವಿ ಹಾಕು : ಹಳ್ಳಿಹಳ್ಳಿಗೆ ಹೋಗಿ ಮೈಲಿತೆಗೆಯಲಿಕ್ಕೆ ವ್ಯಾಕ್ಸಿನೇಟರರೆಂಬ ಅಧಿಕಾರಸ್ಥರು ಇರುವರು (ಕಾಶವಾ. ೬೯) ; ಮೈಲಿ ತೆಗೆಯುವ ಯುಕ್ತಿಯನ್ನು ಇಂಗ್ಲಂಡದೇಶದೊಳಗಿನ ಒಬ್ಬ ಬುದ್ಧಿವಂತನಾದ ಶಸ್ತ್ರವೈದ್ಯನು . . . ಮೊದಲು ಹುಡುಕಿ ತೆಗೆದನು (ಕುಂಬಿಯು. ೯-೨೦೬). **ಮಯ್ಲಿತೆಗೆ** : ೧. ತಮ್ಮ ಮಕ್ಕಳಿಗೆ ಮಯ್ಲಿ ತೆಗೆಯಗೊಡುವುದಿಲ್ಲ (ಕುಂಬಿಯು. ೯-೨೨೩). **ಮೈಲುತೆಗೆ** : ೨. ಶುದ್ಧಗೊಳಿಸು : ಶುಚಿ ಮಾಡು : ಪಿತ್ತಕೋಶದೊಳಗೆ ಸಬ್ಬುಕಾರದಂತೆ ಮೈಲುತೆಗೆಯುವ ಗುಣವಿರುತ್ತದೆ (ಮುಬಿಯು. ೬-೩೦೦). [ಮೈಲಿ$_1$ + ತೆಗ$_1$]

**ಮೈಲು$_1$** ‘ ಮಯ್ಲು ’ ನೋ.

**ಮೈಲು$_2$** ‘ ಮೈಲಿ$_1$ ’ ನೋ.

**ಮೈಲು$_3$**. ಮೈಲಿ$_2$ (ನಾ). ದೂರವನ್ನು ಅಳೆಯುವ ಒಂದು ಮಾನ ; ಎಂಟು ಫರ್ಲಾಂಗುಗಳಷ್ಟು ದೂರ : ಉದ್ದಳತೆ ಸುಮಾರು ೨೧೦ ಮೈಲು ; ಪರಮಾವಧಿ ಅಗಲಳತೆ ಸುಮಾರು ೧೬೭ ಮೈಲು (ಕಭಾಗ. ೦) ; ಈ ಬಿಸಿಲಲ್ಲಿ ಎರಡುಮೈಲು ನಡೆವರೆ ನಮಗೇ ಪ್ರಾಣಕ್ಕೆ ಬರುತ್ತದೆ (ಶಿಸುಶ. ೦೬೬) : ಶ್ರೀ ಗಣೇಶ ಹೆಗ್ಗಡೆಯವರು ನನಗಾಗಿಯೇ ಹತ್ತಿಪ್ಪತ್ತು ಮೈಲು ದೂರ ನಡೆದಾಡಿದುದೂ ಉಂಟು (ಯುಕ್ಷಬ. v, ಕುಮ್ಮ). ಮೈಲಿ$_2$ : "ಉದ್ದಳತೆಯ ಮಾನ: ಮೈಲಿ" (ಇಂಗ್ಲೆಂಡು ಮೊ.ದೇಶಗಳಲ್ಲಿ ಈಗ ೧,೭೬೦ ಗಜಗಳು)" (Mile. ೩೦೪೩) ; ಸುಮಾರು ಮೂವತ್ತು ಮೈಲಿಗಳಷ್ಟು ದೂರ ಶತ್ರುಸೀಮೆಯಲ್ಲಿ ನುಗ್ಗಿ ಹೋಗಿ ದಾರಿಯಲ್ಲಿ ಸಿಕ್ಕಿದ ದನಕರುಗಳನ್ನೂ . . . ಜಾನುವಾರುಗಳನ್ನೂ ಲೂಟಿ ಮಾಡಿದರು (ಕೃದೇಶ. ೨೩). [←ಇಂ. Mile]

**ಮೈಲುತುತ್ತ** ‘ ಮೈಲತ್ತುತ್ತ ’ ನೋ.

**ಮೈಲುತುತ್ತು** ‘ ಮೈಲತುತ್ತ ’ ನೋ.

**ಮೈಲುತುತ್ಥ** ‘ ಮೈಲತುತ್ತ ’ ನೋ.

**ಮೈಲುತೆಗೆ** ‘ ಮೈಲಿತೆಗೆ ’ ನೋ.

**ಮೈಲುವಾಹನ** (ನಾ). ನವಿಲನ್ನು ವಾಹನವನ್ನಾಗಿ ಉಳ್ಳವನು : ಷಣ್ಮುಖ.

**ಮೈಲುವಾಹನಪಿತ** = ಷಣ್ಮುಖನ ತಂದೆ ; ಶಿವ : ಕೈಲಾಸ ಎಂಬೋದು ಕಣ್ಣಲಿ ಕಾಣೆ ಮೈಲುವಾಹನಪಿತ ಎತ್ತ ಪೋದನೊ ಕಾಣೆ (ಪುರಂದ. ೩_೦೩-೦). [ಮೈಲು$_1$ (<ಮಯ್ಲು) + ವಾಹನ]

**ಮೈಲುಳಿ** (ನಾ). ಶರೀರದ ಚಟುವಟಿಕೆ ; ದೇಹದ ಲಾಘವ : ಇತ್ತಲೀ ಮಹದೇವಿ ಮಿಗೆ ಬಳೆವುತ್ತಲಿದ್ದಳು . . . ಉತ್ತಮದ ಮೈಲುಳಿಯ ಕಾಂತಿಯ ಮತ್ತಗಜಗಮನದ ವಿಳಾಸದ . . . ಜಾತಿಭಾವದಲಿ (ಶ್ರಶುಂ. ೦೦-೨) ; ಸುತ್ತಿದ ಉಡಿನೊರೆಯ ಕಟವಾಯ ಲೋಳೆಯ ನಿಮಿರ್ದ ಮೈಲುಳಿಯ . . . ರಥ ತುರಗ ಮಿಕ್ಕವು (ಕುವ್ಯಾದ್ರೋ. ೦೦-೨೪) ; ಪಯಪಾಡು ಮುರಿವು ಮೈಲುಳಿ ಲಾಗು ಲವಣಿ ಲಕ್ಷ್ಯಂಗಳಿಂ ಧುರದೊಳೇಟಿಂ ತೋಜಿ ಮಿಾಟಿಸುತ (ಶಬಿಕೃ. ೩೮-೩೯). [ಮೈ$_1$ (<ಮೆಯ್$_2$) + ಲುಳಿ$_1$]

**ಮೈಲೆ$_1$** ‘ ಮಯ್ಲು ’ ನೋ.

**ಮೈಲೆ$_2$** ‘ ಮೈಲಿ$_1$ ’ ನೋ.

**ಮೈಲೆರೋಗ** (ನಾ). ಸಿಡುಬಿನ ಬೇನೆ : ಈ ಎಲೆಯಂ ನೀರಲ್ಲಿ ಅರೆದು ಕುಡಿಯೆ ಮೈಲೆರೋಗ ಗುಣ (ಶವೈಶಿ. ೩).

[ಮೈಲೆ$_2$ (<ಮೈಲಿ$_1$) + ರೋಗ]

**ಮೈಲೋರಿ** (ನಾ). ಮಿಶ್ರವರ್ಣದ ಹೋರಿ : ಬೆಚ್ಚುವ ಬೆಳ್ಳಿ ಬೆದರಿಸುವ ಚೆಲುವ ಮೈಲೋರಿ ಘಟಸಗೆವ ಕೆಂದನು ಪಜಾವ ಕಾರಿ ಮೊದಲಾದವರೊಳು . . . ಪಲವುಪರಿಯೆತ್ತು ತೊಂಭತ್ತಾಱುಲಕ್ಷ ಮೇಳೈಸಿ ಓಡಿದುವು ಗೆಲ್ಲಕೆ (ಸಂಕಾರು. ೩೩-೭). [<ಮೈಲ + ಹೋರಿ (<ಪೋರಿ$_2$)]

**ಮೈವಚ್ಚಿ** ‘ ಮೆಯ್ವಚ್ಚ ’ ನೋ.

**ಮೈವಡೆ** ‘ ಮೆಯ್ವಡೆ ’ ನೋ.

**ಮೈವಣ್ಣು** (ನಾ). ದೇಹದ ಮೇಲಿನ ಬೆವರಿನಿಂದಾದ ಕೊಳೆ ; ಕಲ್ಮಷ : ಗಿರಿಜೆ ಮೈವಣ್ಣಿಂದಲೊರ್ವ ಸುತನಂ ಪಡೆದು ಬಾಗಿಲೊಳ್ ಕಾಪಿಟ್ಟಿರೆ (ಗುರುಚಾ. ೬-೩೦). ‘ಮೈತಿಮಿರ್’ ಪಠಾ.

[ಮೈ$_1$ (<ಮೆಯ್) + ಪಣ್ಣು (<ಪಣ್)]

**ಮೈವಶ** (ನಾ). ಅಧೀನತೆ : ವಶತೋಟಿ : ಮೈವಶವ ಮಾಡಿದರಲ್ಲೆ ಬಲುದೈವವನು ಕುರುಕುಲದ ಬೇರನು ಕೊಯ್ವನೀ ಹರಿ (ಕುವ್ಯಾ. ೬೦೩. ೦೭-೯೯) ; ಈ ಬಲದ ಮೈವಶವವರ ಕೈವಶವೇನು ಹೊಸತೆಂದ (ಕುವ್ಯಾದ್ರೋ. ೦೦-೨೦). [ಮೈ$_1$ (<ಮೆಯ್$_2$) + ವಶ$_2$]

**ಮೈವಸ** ‘ ಮೆಯ್ವಸ ’ ನೋ.

**ಮೈವಸೆ** ‘ ಮೆಯ್ವಸೆ ’ ನೋ.

**ಮೈವಳಯ** (ನಾ). ಹೊರವಳಯ ; ಆವರಣ : ಗಿರಿಯ ಮೈವಳಯದಲಿ ವಿದ್ಯಾಧರರು ಖೇಚರಗುಹ್ಯಕರು ಇಳಿವರಿವ ಜಡೆಗಳ ಘೋರತಪಸಿನ ಪೂರ್ವದೇಹಿಗಳು (ಅಂಶಾ. ೨-೯).

[ಮೈ$_1$ (<ಮೆಯ್$_2$) + ವಳಯ(=ವಲಯ)]

**ಮೈವಳಿ** ‘ ಮೆಯ್ವಳಿ ’ ನೋ.

**ಮೈವಳಿಸು** (ಕ್ರಿ). ಹೊಂದಿಸು ; ಜೋಡಿಸು ; ಅಳವಡಿಸು : ಹಿಳುಕ ಮಂತ್ರಿಸಿ ಬಿಲ್ಲೆದೆಗೆ ಮೈವಳಿಸಿವನಿತಕೆ ಶರ ಮುಖಾಗ್ನಿಯ ರಭಳದ ಸಗಳಕೆ ಧಾತುಗಿಡಿಸಿತು ಸಕಲಲೋಕಗಳ (ಉರಾ. ೦೩-೯೬).

[ಮೈವಳಿ (<ಮೆಯ್ವಳಿ) + –ಸು$_2$]

**ಮೈವಟಿ** 'ಮೆಯ್ವಟಿ' ನೋ.

**ಮೈವಿಡಿ** 'ಮೆಯ್ವಿಡಿ' ನೋ.

**ಮೈವಿಡು** 'ಮೆಯ್ವಿಡು' ನೋ.

**ಮೈವೆರ್ಚು** 'ಮೆಯ್ವೆರ್ಚು$_1$' ನೋ.

**ಮೈವೆರು** 'ಮೆಯ್ವೆಱು' ನೋ.

**ಮೈವೆರ್ಚು** 'ಮೆಯ್ವೆರ್ಚು$_1$' ನೋ.

**ಮೈವೆಳಗು** 'ಮೆಯ್ವೆಳಗು' ನೋ.

**ಮೈವೆಱು** 'ಮೆಯ್ವೆಱು' ನೋ.

**ಮೈವೇದನೆ** (ನಾ). ಶರೀರಕ್ಕೆ ಉಂಟಾಗುವ ನೋವು, – ಬೇನೆ ; ಮೈ ನೋವು : ಕೆಡೆದು ಮೈವೇದನೆಗೆ ನರಳುವ ನಿಡುಸರದ ಖಗ ಜಂಬುಕೌಘವ ನಿಡುವ ಕೈಗಲ್ಲುಗಳ ನೃಪತಿಯು ಕಂಡರಿವರೆಂದು (ಕುವ್ಯಾಗ. ೬-೫೬).
[ಮೈ$_1$ (<ಮೆಯ್$_2$) + ವೇದನೆ]

**ಮೈವೊಗರ್** 'ಮೆಯ್ವೊಗರ್' ನೋ.

**ಮೈವೊತ್ತುಗೊಡು** (ಕ್ರಿ). ಶರೀರವನ್ನು ಆಸರೆಯಾಗಿ ಕೊಡು : ಹತ್ತು ದೆಸೆಗಳು ವಿಮಲತೆಗೆ ಮೈವೊತ್ತುಗೊಟ್ಟವು ಸಕಲಜೀವರ ಚಿತ್ತ ನಿರ್ಮಳ ವಾಯ್ತು (ಸಿಹಾಗ. ೬-೨೦-೫೬). [ಮೈ$_1$ (<ಮೆಯ್$_2$) + ಒತ್ತುಗೊಡು]

**ಮೈವೊಯ್** (ಕ್ರಿ). ಶರೀರದ ಮೇಲೆ ಎರಗು : ಮೈವೊಡ್ಡಬಹುದು ಮೃತ್ಯುವಿನಿಜಿತಕ್ಕೆ ಮೈವೊಯ್ದು ಹರನಾರಿಗಣ್ಣೆ ಮೈವೊಡ್ಡಬಹುದು ಬಂಧಕಿ ಯರ ಕೂಟಕ್ಕೆ ಮೈವೊಡ್ಡುವುದಘಟಿತವು (ಶ್ರಶಂಕ. ೩-೬೨).
[ಮೈ$_1$ (<ಮೆಯ್$_2$) + ಪೊಯ್$_1$]

**ಮೈಸನ್ನೆ** 'ಮೆಯ್ಸನ್ನೆ' ನೋ.

**ಮೈಸರಸ** (ನಾ). (ಅಲಂ) ಮಲ್ಲಯುದ್ಧ ; ಗುದ್ದಾಟ : ಮೈದುನನ ಮೈಸರಸಕೀ ಹುಲುಗೈದು ಸಾಲದೆ ತಂಗಿ ದುಸ್ಸಳೆಯೈದೆತನ ಬಯಲಾಯ್ತು ನುತ ಬೆಂಬತ್ತಿದರು ಖಳನ (ಕುವ್ಯಾಕ. ೨೨-೨೫).
[ಮೈ$_1$(<ಮೆಯ್$_2$) + ಸರಸ]

**ಮೈಸಲ್** 'ಮೆಯ್ಸಲ್' ನೋ.

**ಮೈಸಲಿಗೆ** (ನಾ). ದೇಹದ ಸಂಗ, –ಸಹವಾಸ : ನೀನು ದೊಡ್ಡವಳಾದೆ ಮೈಸಲಿಗೆ ಬೆಳೆಸಿದೆ ಏಕಾಂತಕೆಳೆಸಿದೆ ಎಲೆ ಕೆಳದಿಯೆ (ಸಿಅಂಗೀ. ೯-೫೩).
[ಮೈ$_1$ (<ಮೆಯ್$_2$) + ಸಲಿಗೆ$_1$ (<ಸಲ್ಗೆ)]

**ಮೈಸಾರ್** 'ಮೆಯ್ಸಾರ್' ನೋ.

**ಮೈಸಾರ್ಚು** 'ಮೆಯ್ಸಾರ್ಚು' ನೋ.

**ಮೈಸಾಲ, ಮಯಿಸಾಲ** (ನಾ). ೧. ಒತ್ತೆ, ಆಧಾರಗಳೇನೂ ಇಲ್ಲದೆ ವ್ಯಕ್ತಿಯು ಮೇಲಿನ ನಂಬಿಕೆಯ ಆಧಾರದ ಮೇಲೆ ಕೊಡುವ ಸಾಲ : ಅಡವು ಮೈಸಾಲದ ಪತ್ರಗಳು . . . ಸಿಕ್ಕಿ ಇರಲಾಗಿ (ಎಕ. VI. ಕೊಪ್ಪ. ೩-೯; 1569). ೨. (ಅಲಂ) ಸೇಡು ; ಮಯ್ಯಿ : ಸೋಲವಿದು ಕಾಲಾಂತಕನ ಮೈಸಾಲ (ಕುವ್ಯಾಸ. ೦೩-೬೦); ಕಳಸೊಳಗೆ ಸರಳ ಮೊನೆ ಯಿಂದಲೊಂದಕೆ ನೂರ ಬೆಳಸಿ . . . ತಿದ್ದುವರು ಮೈಸಾಲವ (ತುರಂಗ. ೨೪-೦೭). **ಮಯಿಸಾಲ :** ೧. ಸಮುಸ್ತರಿಗೆ ಮಯಿಸಾಲವಾಗಿ ಕೊಟ್ಟ ದೊಡ್ಡ ವರಹ ಗ ೮೨ (ತಾಇಇ. IX–ii. ೪೭೦-೨೪; 1482). 'ಕೈಸಾಲ' ಪರಾ. [ಮೈ$_1$(<ಮೆಯ್$_2$) + ಸಾಲ]

**ಮೈಸಾಲಪತ್ರ** (ನಾ). ಆಧಾರ, ಭೋಗ್ಯಗಳೇನೂ ಇಲ್ಲದೆ ಬರೆದು ಕೊಡುವ ಸಾಲಪತ್ರ : ಸಾಹುಕಾರರು ದೀಡು, ಭೋಗ್ಯ, ಮೈಸಾಲ ಪತ್ರಗಳ ಮೇಲೆ ಸಾಲಕೊಡುವುದನ್ನು ಕಡಮೆಮಾಡಿದ್ದರು (ಗಂಗಾಳ. ೯೦); ಅಂಡಿಮ್ಯಾಂಡ್, 'ಮೈಸಾಲ 'ಪತ್ರ, ಹಣ ಸಂದ ರಸೀದಿ . . . ಶಿಥ ಲಾಗದ – ಇವನ್ನೆಲ್ಲ ಬರೆಯುವುದಕ್ಕೆ ಆಚಾರ್ರೇ ಗತಿ (ಪಸ್ನರು. ೦೮೦).
[ಮೈಸಾಲ + ಪತ್ರ]

**ಮೈಸಾಲೆ** (ನಾ). ಒಂದು ಬಗೆಯ ಸಸ್ಯ : "ಹರಿಯಾಗೆ, ಮಹೋದಲೆ, ಮೈಸಾಲೆ, ತಗಡಕ, ತಗಡರೆ, ಮಾಯಿಸಲೆ" (ಸಸ್ಯಶಿ. ೬೩); ತಗಡತಿ, ಹರಿಯಾಗೆ, ಮೈಸಾಲೆ (ವ್ಯಶಿಗ. ೫೦-೧೦೦೦). [ ? ]

**ಮೈಸಿ** (ನಾ). ಎಮ್ಮೆ ; ಮಹಿಷಿ : ಅತ್ಯಕ್ಕೆಕೃತ್ವಂ – ಮಹಿಷಿ – ವೈಷಮೆ ; ಮಹಿಷಿ – ಮೈಸಿ (ಶವುರ. ೨೬೩ ಶ್ರಯೋ); ಮಹಿಷಿ, ಮೈಸಿ ; ಪತ್ತನ, ಪಟ್ಟಣ (ಶಬ್ದಾಸಾ. ೦೭೦ ವ್ಯಾಖ್ಯಾ). [< ಸಂ. ಮಹಿಷೀ]

**ಮೈಸಿರಿ** 'ಮೆಯ್ಸಿರಿ' ನೋ.

**ಮೈಸುಖ** 'ಮೆಯ್ಸುಖ' ನೋ.

**ಮೈಸುಡು** 'ಮೆಯ್ಸುಡು' ನೋ.

**ಮೈಸುನಾಡು** 'ಮಯ್ಸೂನಾಡು' ನೋ.

**ಮೈಸೂರ್ಪಾಕ್** 'ಮೈಸೂರುಪಾಕು' ನೋ.

**ಮೈಸೂರು** 'ಮಯ್ಸೂರ್' ನೋ.

**ಮೈಸೂರುಪಾಕು, ಮೈಸೂರ್ಪಾಕ್** (ನಾ). ಕಡಲೆಹಿಟ್ಟು, ತುಪ್ಪ, ಸಕ್ಕರೆಗಳಿಂದ ತಯಾರಿಸುವ ಒಂದು ಬಗೆಯ ಸಿಹಿತಿಂಡಿ : ಮೈಸೂರುಪಾಕು : ಪದಾರ್ಥಗಳು : ಒಂದು ಕಪ್ಪು ಕಡಲೆಹಿಟ್ಟು; ೨ ಕಪ್ಪು ಸಕ್ಕರೆ . . . ೩ ಕಪ್ಪು ಡಾಲ್ಡ (ಅಡುಗೆ. ೦೦೦). **ಮೈಸೂರ್ ಪಾಕ್ :** ಮೈಸೂರ್ಪಾಕ್ ನಾಲ್ಕು ಪ್ಲೇಟು ಬಂತು (ಪಸ್ನರು. ೨೬೦).
[ಮೈಸೂರು$_0$ (p← ಸಂ. ಮಸೂರ) + ಪಾಕು$_0$ (p← ಸಂ. ಪಾಕ)]

**ಮೈಸೆ** (ನಾ). ಒಂದು ಊರಿನ ಹೆಸರು : ಭತ್ತಗಾವೆ ಹಾದಿಗಾಳ ಕಡ ಗೋಡ ಮೈಸೆ ಪನ್ನೆರಡುಮನೆಲಿವಯಲುಂ (ವ್ಯಅಲ. ೦೯೩೦, ೬೪-೦೦೪; 1053?). [ ? ]

**ಮೈಸೆಕೆ** (ನಾ). ಶರೀರದ ಕಾವು,– ಶಾಖ ; ಜ್ವರ : ಗೋಣೀಕಾಯಿ ಚುಜ್ಜಲಚೆಕ್ಕೆ ಇವುಗಳ ರಸವನ್ನು ತೆಗೆದು ಸಕ್ಕರೆ ಹಾಕಿ ಕುಡಿಯಲು ಮೈಸೆಕೆ ಬಿಡುವುದು (ಸಕಪ್ಪ. ಶಂ ೯೦೦). [ಮೈ$_1$ (<ಮೆಯ್$_2$) + ಸೆಕೆ]

**ಮೈಸೊಕ್ಕು** (ನಾ). ದೇಹದ ಕೊಬ್ಬಿನಿಂದುಂಟಾದ ಮದ,– ಗರ್ವ,– ಅಹಂಕಾರ : ತಮ್ಮ ಮೈಸೊಕ್ಕಿನ ಫಲವನ್ನು ಉಣ್ಣುತ್ತಾರೆ (ಹ್ಯಾಂಲಿ. ೦೬೬); ಇರಬೇಕು ಎಲ್ಲೊ ಯಾರಿಗೋ ಮೈಸೊಕ್ಕು (ಸಂಕಾಬು. ೦೪-೦೬).
[ಮೈ$_1$ (<ಮೆಯ್$_2$) + ಸೊಕ್ಕು$_3$ (<ಸೊರ್ಕು$_2$)]

**ಮೈಸೊಬಗು** 'ಮೆಯ್ಸೊಬಗು' ನೋ.

**ಮೈಸೋಂಕು** 'ಮೆಯ್ಸೋಂಕು$_1$' ನೋ.

**ಮೈಸೋಂಬತನ** (ನಾ). ಮೈಗಳ್ಳತನ ; ಸೋಮಾರಿತನ : ಕಾಯಕ ಕಾಜದ ಮೈಸೋಂಬತನದಿಂದ ಬೇಜಿಕೆ ಕೂಳ ಗಳಿಸಲಾಜದೆ ಹಸಿದಿಪ್ಪರಯ್ಯ (ವಚಅ. II. ೪೦೯). [ಮೈ$_1$(<ಮೆಯ್$_2$) + ಸೋಂಬತನ]

**ಮೈಸೋಂಕು** 'ಮೆಯ್ಸೋಂಕು' ನೋ.

**ಮೈಸೋಲು$_1$** (ಕ್ರಿ). ದೇಹವು ಆಯಾಸಗೊಳ್ಳು, – ದಣಿ, – ಬಳಲು : ದಯ ಬಾರದೆ ಈ ಎನ್ನ ದೀನದೆಸೆಯ ನೋಡಿ ? ಸಾಕಿನ್ನು, ಬೇಸತ್ತೆ ಮೈಸೋತೆ (ಅಂತರು. ೦೦).
[ಮೈ$_1$ (<ಮೆಯ್$_2$) + ಸೋಲು$_1$ (<ಸೋಲ್)]

**ಮೈಸೋಲು$_2$** (ನಾ). ದೇಹದ ಬಳಲಿಕೆ, – ಆಯಾಸ, – ದಣಿವು : ವಾತ, ಶ್ಲೇಷ್ಮ, ಮೈಸೋಲು, ಎದೆಸೋಲು, ಗುಲ್ಮ, ಸರ್ವವಾತ ಹರ (ಏಪ್ಪಶಿ. ೯೯).
[ಮೈ$_1$ (<ಮೆಯ್$_2$) + ಸೋಲು$_2$ (<ಸೋಲ$_1$)]

**ಮೈಹಸ** (ನಾ). ದೇಹದ ಕೆಚ್ಚು,– ಸಾಮರ್ಥ್ಯ (?) : ಬೆಸುವುದಂ ಪುದು ಚಾಚುವುದು ಜಾಳಿಸುವುದೊತ್ತಂಬರಿಸುವುದು ಕೈಹಸದ ಮೈಹಸ ದಬ್ಬರದ ಸಮರಂಗದುಬ್ಬರದ ರಸವನೇವೊಗಳುವೆನು (ಕೂರಾ. ೬-೦೩-೩೬). 'ಕೈಹಸ' ಪರಾ. [ಮೈ$_1$ (<ಮೆಯ್$_2$) + ಹಸ$_1$]

**ಮೈಹಳುವಾಯಿ** (ನಾ). ೧. ಮೈ ಹಗುರವಾಗಿರುವುದು; ದೇಹಲಾಘವ. ೨. ದೇಹದ ನಿತ್ರಾಣ,-ದೌರ್ಬಲ್ಯ: ಬಾಯ ಲೋಳೆಗಳಳಿಯೆ ಮೈಹಳುವಾಯಿ ಮಿಗೆ ತುದಿಮಿರವನೂಜಿ ನವಾಯ ಮಿಗಲು . . . ವಾನಾಯುಜದ ಸಾಲೆಸೆದುವು (ಶಬ್ದಾರ್ಥ. ೦೬-೯).

[ಮೈ$_1$ (<ಮೆಯ್$_2$) + ಹಳುವಾಯಿ]

**ಮೈಹಿರ** (ನಾ). ೧. ಸೂರ್ಯ: ಮೂಲೋಕದೆಡೆಯ ಮೇರುಸದನ ಮೈಹಿರನ ಘನತೇಜಃಪ್ರಭ ಮೋಕ್ಷಪ್ರದ ಪ್ರೌಲಿನಿಯುಕ್ತಸುಧಾಕರ ಮಂಗಲವರ್ಧನ ವರ್ಣಿತ ಸಮವರ್ತಿ ಸಲಹು ನಲಪಂ ಶ್ರೀಶಾಂತೇಶಂ (ಅಶ್ವ. ೧-೨೯). ೨. ಸೂರ್ಯನ ಕಾಂತಿ: ತಾಳ್ದತ್ತು ಮೈಹಿರವಂ ಕೇಳಿರಸಾರ್ಥವಿಶ್ರಮಿತ ನಾನಾದ್ಯೆವತಂ ರೈವತಂ (ಜಗ. ೦೬-೩೩).

[<ಸಂ. ಮಿಹಿರ]

**ಮೈಹುಳಿ** (ಕ್ರಿ). ೧. ದೇಹವು ಹುಳಿತು ಹೋಗು. ೨. (ಅಲಂ) ಬಹಳ ಘಾಯವಾಗು,-ಹುಣ್ಣಾಗು: ತೊಲಗು, ಇಲ್ಲವಾದಲೆ ಬೆತ್ತದಿಂದ ಮೈಹುಳಿಯುವಂತೆ ಥಳಿಸುವೆ (ಕೃಪಕಾ. ೯೯); ನೋಡುತ್ತೇನು ನಿಂತಿ, ಪೆದ್ದನಂತೆ! ಮೈಹುಳಿಯ ಜಡಿ, ಅಂದರೆ ಎಚ್ಚರಾಗುತ್ತಾನೆ (ಹುಚ್ಚಾಟ. ೬೦). [ಮೈ$_1$ (<ಮೆಯ್$_2$) + ಹುಳಿ$_1$ (<ಪುಳಿ)]

**ಮೈಹೊರೆ** (ಕ್ರಿ). ಶರೀರವನ್ನು ತಾಳು; ಮೈದಳೆ: ಅಲರುತಿದೆ ಮೂರುಲೋಕದ ಮೋಹ ಕರೆವಂತೆ ದುಗ್ಧಧವಳಮಮುಗ್ಧತೆಯೆ ಮೈಹೊರೆಯುವಂತೆ (ಅಶೀ. ೨೩-೯).

[ಮೈ$_1$ (<ಮೆಯ್$_2$) + ಹೊರೆ$_2$ (<ಪೊರೆ$_2$)]

**ಮೈಳಲದೇವಿ** (ನಾ). ಒಬ್ಬಾಕೆಯ ಹೆಸರು: ಜನಕನುಪ್ವೀಣಾತೆ ಪ್ರತ್ಯಕ್ಷಗೋಮಿನಿ ತಾಯಿ ಮೈಳಲದೇವಿ (ಶಾಇ. XX. ೩೦-೨೯; ೩೨. ೧೦೫ನೆಯ ೩೩). [ಮೈಳಲ್$_0$ (ಪ ← ತಮಿ. ತೆಲು. ಮೈಲಾರು= ಒಂದು ಕ್ಷುದ್ರ ದೇವತೆ) + ದೇವಿ]

**ಮೈಳಾಪತೀರ್ಥ** (ನಾ). ಒಂದು ಸ್ಥಳದ ಹೆಸರು: ಶ್ರೀಮನ್ಮೈಳಾಪ ತೀರ್ಥಸ್ಯ ಗಣೇಶಾರೇಯನಾಮನಿ ಬಭೂವೋಗ್ರತಪೋಯುಕ್ತಃ ಮುಳ್ಳ ಭಟ್ಟಾರಕೋ (ಶಾಇ. XX. ೦೪-೬: 876). [ಮೈಳಾಪ$_0$ + ತೀರ್ಥ]

**ಮೊಂಗರವಳ್ಳಿ** 'ಮಂಗುಬುವಳ್ಳಿ' ನೋ.

**ಮೊಂಗುರಿ** 'ಮುಂಗುರಿ' ನೋ.

**ಮೊಂಟು$_1$** (ಕ್ರಿ). ಶಿವಿ; ಚುಚ್ಚು (?): ತನ್ನ ಗಂಗವಮಂ ಕಡಿದು ಖಂಡಮಂ ತೆಗೆದು ಸೋದಿಸಿ ಕಿಚ್ಚೊಳಿಕ್ಕಿ ತಾಂ ಮಿಗೆ ಮೊಂಟಿ ಪೊರಳ್ಚಿ ಸುಂಟಿಗೆಯಿಂದೆ ಪಚಿಸಿ (ಶಬಮಂ. ೯-೨೨೩). [<ಮೊಟ್ಟು$_1$ ?]

**ಮೊಂಟು$_2$** 'ಮುಂಡು$_2$' ನೋ.

**ಮೊಂಡ** 'ಮುಂಡು$_2$' ನೋ.

**ಮೊಂಡಕ್ಕಿ** 'ಮಂಡಕ್ಕಿ' ನೋ.

**ಮೊಂಡಗತ್ತಿ**, ಮಂಡಕತ್ತಿ, ಮೋಂಡುಕತ್ತಿ (ನಾ). ಹರಿತವಾಗಿರದ ಖಡ್ಗ; ಮೊಂಡಾಗಿರುವ ಕತ್ತಿ: (೧). **ಮಂಡಕತ್ತಿ**: ಮುರುಕುಬಂದೂಕು ಮತ್ತು ಮಂಡಕತ್ತಿಗಳನ್ನೇ ಎತ್ತಿಕೊಂಡು . . . ಸಿದ್ಧರಾದರು (ಇಶ್ವ. ೦೬೯). **ಮೋಂಡುಕತ್ತಿ**: (ಕತ್ತಿ ವರಸೆಯಲ್ಲಿ ಉಪಯೋಗಿಸುವ ತುದಿಗೆ ಗುಂಡಿ ಹಾಕಿದ) ಮೊಂಡುಗತ್ತಿ (Foil. ೨೦೪೨).

[ಮೊಂಡ (<ಮುಂಡು$_2$) + ಕತ್ತಿ]

**ಮೊಂಡಗಳ್ಳಿ** 'ಮುಂಡಗಳ್ಳಿ' ನೋ.

**ಮೊಂಡತನ** 'ಮೊಂಡುತನ' ನೋ.

**ಮೊಂಡರಳು** 'ಮಂಡರಳು' ನೋ.

**ಮೊಂಡಾಟ** (ನಾ). ಹಟಮಾರಿತನ: ಪಟ್ಟುಹಿಡಿಯುವಿಕೆ; ಆಗ್ರಹ: ಈ ಮೊಂಡಾಟದಲ್ಲಿ ಯಾರೂ ಸೋಲುವಂತೆಯೂ ಇರಲಿಲ್ಲ, ಗೆಲ್ಲುವಂತೆಯೂ ಇರಲಿಲ್ಲ (ಅಬಜ. ೩೬); ದೀವಿಗೆಗಳಿಗೆ ಎಣ್ಣೆ ಬಿಡಿಸಿಕೊಂಡು ಮೊಂಡಾಟ ಮಾಡಿ ಕಾಸು 'ವಸೂಲು' ಮಾಡಿಕೊಂಡು ಮುಂದಿನ ಮನೆಗೆ ಹೋಗುವರು (ಸುವಸಂ. ೩೩): ಮಕ್ಕಳ ಸ್ವಾಭಾವಿಕಆಸಕ್ತಿಗಳಿಗೆ ಅಡ್ಡಿಬಂದು ಮೊಂಡಾಟ ಮಾಡುವುದು, ತುಂಟಾಟ ಮಾಡುವುದು ಮೊದಲಾದುವು ಆರಂಭವಾಗುತ್ತವೆ (ಶಿಕ್ಷಣ. ೬೩೬). [ಮೊಂಡ (<ಮುಂಡು$_2$) + ಆಟ]

**ಮೊಂಡಿ**, ಮಂಡ್ಕಿ, ಮೊಣ್ಣೆ (ನಾ). ೧. ಮೊಂಡುತನ ಮಾಡುವವಳು; ಹಟಮಾರಿ: ಆ ಮೊಂಡಿಯನ್ನು ಈ ಕೆಲಸಕ್ಕೆ ಒಪ್ಪಿಸುವಷ್ಟರಲ್ಲಿ ಸಾಕಾಗಿ ಹೋಯಿತು (ರೂಢಿ). **ಮಂಡ್ಕಿ**: ೧. ಅದ್ಕೇ ಹೇಳಾದು, ನೀನು 'ಮಂಡಿ' ಅಂತಾ (ಜುಲೆಮು. ೬೮೦). **ಮೊಣ್ಣೆ**: ೨. ಅಂಗಹೀನ ಳಾದವಳು; ಅಂಗವಿಕಲೆ: ಬಲಗೈಬೆರಳೊರ್ವನಿಗಿತ್ತ ಮೊಣ್ಣೆಯೆಂದು ಲಿದು ಭಂಗಿಸರೆ ಕಂಡವರು (ಕಂಪಾ. ೬-೦೬೪).

[ಮೋಂಡು (<ಮುಂಡು$_2$) + — ಇ$_2$]

**ಮೊಂಡು** 'ಮುಂಡು$_2$' ನೋ.

**ಮೊಂಡುಕತ್ತಿ** 'ಮೊಂಡಗತ್ತಿ' ನೋ.

**ಮೊಂಡುಗರೆ** (ಕ್ರಿ). ಮೊಂಡುತನಮಾಡು; ಪಟ್ಟುಹಿಡಿ; ಹಟ ಹಿಡಿ: ಪ್ರಮಿಲ ಎಳೆಯ ಮಗುವಿನಂತೆ ಮೊಂಡುಗರೆಯುತ್ತಾ . . . ಗೋಗರೆ ದಳು (ಮರೆ. ೦೩೯). [ಮೋಂಡು (<ಮುಂಡು$_2$) + ಕರೆ$_1$]

**ಮೊಂಡುಗಳ್ಳಿ** 'ಮುಂಡಗಳ್ಳಿ' ನೋ.

**ಮೊಂಡುತನ**, ಮೋಂಡತನ (ನಾ). ಹಟಮಾರಿತನ; ಹಿಡಿದ ಪಟ್ಟು ಬಿಡದಿರುವಿಕೆ; ಆಗ್ರಹ: ಗಂಡ ಮಾಡಿದ ಪ್ರಯತ್ನಗಳೆಲ್ಲ ಅವಳ ಮೊಂಡುತನದ ಕಲ್ಲುಗೋಡೆಗೆ ಬಡಿದು ನುಚ್ಚುನೂರಾದವು (ಕೃಪಮು. ೩೬೦). **ಮೋಂಡತನ**: ನಾವು ರಾಯರೆಂದು ಮೋಂಡತನದಿಂದ ಉಳಿತುಯಿರುವವು (ಶಾಗಂಧಿ. ೨೦೩-೦೦): ಆದಳು ಮೊದಲು ಬಹಿಷ್ಕೃತ ಹುಡುಗಿಯನ್ನು ಮನೆಯಲ್ಲಿಟ್ಟುಕೊಳ್ಳಲು ಸಿದ್ಧಳಾಗಿದ್ದಳು; ಗಂಡನ ಮೋಂಡತನದಿಂದ ಅದು ಸಾಧ್ಯವಾಗಲಿಲ್ಲ. ಅಷ್ಟೇ (ಏಂಕಿಮು. ೨೯೨); ಹಾಗೂ ಹೀಗೂ ಮೂರು ನಾಲ್ಕು ನಿಮಿಷ ಮೋಂಡತನದಿಂದ ಮಾತಾಡಿದ (ಕಂಬಿರು. ೩೯).

[ಮೋಂಡು (<ಮುಂಡು$_2$) + — ತನ]

**ಮೊಂಡುವಾದ** (ನಾ). ಹಟಹಿಡಿದು ಮಾಡುವ ವಾದ; ಹಟದಿಂದ ಕೂಡಿದ ಮಾತಿನ ಸರಣಿ: ಇದಕ್ಕೆ ನಾವು ಮೊಂಡುವಾದವೆಂದು ಹೇಳುತ್ತೇವೆ (ದುಃಖಿಷ್ಟ. ೦೦೩); ಫಾದರ್ ಕ್ರೊಸೆಟ್‌ನ ಮೊಂಡುವಾದವನ್ನು . . . ನಿಜವೆಂದು ಹೇಳಲು ಸಾಧ್ಯವಿಲ್ಲ (ಪ್ರಾಶಿಶಿ. ೨೬).

[ಮೊಂಡು (<ಮುಂಡು$_2$) + ವಾದ$_2$]

**ಮೊಂಬತ್ತಿ** 'ಮೋಂಬತ್ತಿ' ನೋ.

**ಮೊಕ** 'ಮೊಗ' ನೋ.

**ಮೊಕಚಿಟ್ಟು** (ನಾ). ಯಾವುದಾದರೊಂದು ಬಗೆಯ ಆಹಾರದ ಅತಿಸೇವನೆಯಿಂದ ಬಾಯಿರುಚಿ ಕೆಟ್ಟು ಜುಗುಪ್ಸೆಯುಂಟಾಗು ವುದು: ಮೊಕಚಿಟ್ಟುಯಾದೊಡ ಹುಳಿದಾಳಲುಗಳ ನಿಕರವ ಸವಿವರೇನಂಟಿ (ಪ್ರಾಪಶ. ೩೯-೦೨೬). 'ಮುಖಚಿಟ್ಟು' ಪಠಾ.

[ಮೊಕ (<ಮೊಗ) + ಚಿಟ್ಟು$_2$]

**ಮೊಕತ** 'ಮೊಬ್ತಾ' ನೋ.

**ಮೊಕದ್ದಮೆ**, ಮುಕದಮಿ, ಮೊಖದ್ದಮೆ (ನಾ). ಎರಡು ಪಕ್ಷಗಳ ನಡುವಿನ ಧನ, ಅಧಿಕಾರ ಇತ್ಯಾದಿಗಳಿಗೆ ಸಂಬಂಧಿಸಿದ ಯಾವು ದಾದರೂ ಜಗಳ ಅಥವಾ ಮತ್ತಾವುದಾದರೂ ಅಪರಾಧದ ವಿಷಯವಾಗಿ ನ್ಯಾಯಾಲಯದಲ್ಲಿ ಹೂಡುವ ವ್ಯಾಜ್ಯ,-ಖಟ್ಲೆ: ಇಡೀ ಮೊಕದ್ದಮೆಯೇ ಮುರಿದು ಬೀಳುವ ಪರಿಸ್ಥಿತಿ ಒದಗಿತ್ತು (ಆತ್ಮಾರ್ಥ. ೦೮೦); ದರಬಾರಿನಲ್ಲಿ ಮೊಕದ್ದಮೆಗಳಾವವೂ ವಿಚಾರಣೆಯಾಗ

ತಕ್ಕುದಲ್ಲ (ದೇವೀಭಾ. ೦೦೩). **ಮುಕದಮಿ :** ಮುಕದಮಿಯು ಕಾಗದ ತಕೊಂಡು ಓರ್ವ ಸ್ತ್ರೀಯು ಅವರ ಕಡೆಗೆ ಬಂದಳು (ಶ್ರೀಕೃಷ್ಣ. ೬೨). **ಮೊಖದ್ದಮೆ :** ದಸ್ತಾವೇಜು, ಮೊಖದ್ದಮೆ (ಛಾಶಾಶಾ. ೦೬೬).

**ಮೊಕದ್ದಮೆ ಹೂಡು, ಮೊಖದ್ದಮೆ ಹೂಡು** = ವ್ಯಾಜ್ಯವನ್ನು ನ್ಯಾಯಾಲಯದ ವಿಚಾರಣೆಗೆ ಒಳಪಡಿಸು.— ಕೋರ್ಟಿಗೆ ಹಾಕು : ಮುಂಬಯಿಯ ಆಸಾಮಿಯ ಮೇಲೂ ಮೊಕದ್ದಮೆ ಹೂಡಲಾಯಿತು (ನಾಕೋರ. ೦೯೩) ; ಚೌರ್ಯಗೋಪನಕ್ಕಾಗಿ ಅವಳ ಮೇಲೆ ಮೊಕದ್ದಮೆ ಹೂಡಲಾಗಿತ್ತು (ಕೃವರು. ೦೯೨) ; ಅಪರಾಧಕ್ಕಾಗಿ ಮೊಖದ್ದಮೆ ಹೂಡಿದರು (ತಂಪಕೋ. ೨೮೪). [ ← ಅರ. ಮುಕದ್ದಮಹ್, ಮುಕದ್ದಮಾ ; ಹಿಂ. ಮರಾ. ಮುಕದಮಾ, ಮುಕದ್ದಮಾ. ಮೊಕದಮಾ ]

**ಮೊಕರ** 'ಮೊಗ್ಗರ' ನೋ.

**ಮೊಕರಂಬ** 'ಮೊಗರಂಬ' ನೋ.

**ಮೊಕರಂಬೆ** 'ಮೊಗರಂಬ' ನೋ.

**ಮೊಕರರ** 'ಮೊಕರರು' ನೋ.

**ಮೊಕರರು**, ಮೊಕರರ, ಮೊಕರಾರು, ಮೊಕರೂರು (ನಾ). ೧. ನಿಶ್ಚಯ ; ನಿರ್ಧಾರ : ವೀರರಾಜೇಂದ್ರವಡೆಯರ ಹುಡುಕುವ ಬಗ್ಗೆ ಮೊಕರರು ಮಾಡಿ ಕಳುಹಿಸಿದ್ದರಿಂದ (ರಾಜೇಂದ್ರ. ೦೮). **ಮೊಕರರ :** ೧. ಐದು ಹಣ ಮೊಕರರ ಮಾಡಿ ಅಂಗಿರಸದವರಿಗೆ . . . ನೇಮಕಾ ಮಾಡಿ (ಮೈಆರ. ೦೯೨೯, ೯೪-೦೩ ; 1813). **ಮೊಕರಾರು :** ೧. ಇಲಾಖೆಯ ಸಿಬ್ಬಂದಿಗಳಲ್ಲಿ ಕಾಲಾನುಗುಣವಾಗಿಯೂ ಆಯಾ ಅಧಿಕಾರಿಗಳ ಮರ್ಯಾದೆಗನುಸಾರವಾಗಿಯೂ ಅವರವರಿಗೆ ತಲುಬು ಮೊಕರಾರಾಗುತ್ತಿತ್ತು (ಮುತಾವಂ. II. ೩೩). **ಮೊಕರೂರು :** ೨. ನೇಮಕ ಮಾಡುವಿಕೆ ; ನಿಯೋಜಿತಗೊಳಿಸುವುದು ; ನಿಯೋಜನೆ : ಹೈದರಸಾಬರು ದೈವಾಧೀನವಾದ್ದರಿಂದಾ ಆ ರಿಸಾಲೆ ಖಿಜಮತ್ತು ಶಾಬಾಸಾಬರು ಹೆಸ್ರಿಗೆ ಮೊಕರೂರಾಗಿಯಿರುತ್ತಾ ಇದ್ದರು (ಹೈದರ. ೨೩) ; ಭಪ್ಪನಾಯಕನ ಮಗನಿಗೆ ರಾಜ್ಯಾಧಿಕಾರಕ್ಕೆ ಮೊಕರೂರು ಮಾಡಬೇಕುಯೆಂಬುದಾಗಿ (ಕೆಳವಂ. ೩೨-೯). [ ← ಅರ. ಹಿಂ. ಮುಕರ್ರರ್ : ಮರಾ. ಮುಕರರ್, ಮುಕರ್ರ್, ಮುಕ್ರರ್ ]

**ಮೊಕರವಲೆ** (ನಾ). ಒಂದು ಬಗೆಯ ಬಲೆ : ಕರಿಯ ಜಮಿವಲೆ ಮುಸುಕುವಲೆ ಬಿತ್ತರದ ನೇಣ್ವಲೆ ಮೊಕರವಲೆ ಬೇಡರ ಸಿರದೊಳೊಪ್ಪಿದುದು (ಶಾಶ್ವತ. ೩-೦೯). [ ಮೊಕರ, + ಬಲೆ$_1$ ]

**ಮೊಕರಾರು** 'ಮೊಕರರು' ನೋ.

**ಮೊಕರೂರಾತಿ** (ನಾ). ನೇಮಕಾತಿ : ಗ್ರಾಮಮುನಸಿಫರ ಮೊಕರೂರಾತಿಗೆ ಕೊಡುವ ಹುಕುಮುಗಳೆಲ್ಲವೂ ಸರ್ಕಾರದವರ ಪುನರ್ವಿಮರ್ಶೆಗೆ ಒಳಪಟ್ಟಿರತಕ್ಕದ್ದು (ಗ್ರಾಮಶಿ. ೦೦). 'ಮಂಜೂರಾತಿ' ಹೋ. [ < ಮೊಕರೂರು ]

**ಮೊಕರೂರು** 'ಮೊಕರರು' ನೋ.

**ಮೊಕವಾಡ** 'ಮೊಗವಡ' ನೋ.

**ಮೊಕಸ್ತ** (ನಾ). ಮುಖ್ಯಸ್ಥ : ಯಿ ನಾಡುತಕ್ಕ ಮೊಕಸ್ತರೂ ಆದಿಯಾಗಿ (ಎಕ. IX, ಕೊಡಗು. ೨೯-೩ ; 1857). [ < ಮುಖ್ಯಸ್ಥ ]

**ಮೊಕಾಂ** 'ಮುಕ್ಕಾಂ' ನೋ.

**ಮೊಕಾಬಲಾ** 'ಮೊಕಾಬಿಲೆ' ನೋ.

**ಮೊಕಾಬಿಲೆ**, ಮಕಾಬಲಿ, ಮುಖಬಿಲೆ, ಮುಖಾಬಿಲೆ, ಮೊಕಾಬಲಾ, ಮೊಖಾಬಿಲೆ (ನಾ). ೧. ಎದುರು ; ಅಭಿಮುಖ ; ಸಮ್ಮುಖ : ಯಾವತ್ತು ಗೈರವಾಜಬೀ ಲೆಕ್ಕಾಚಾರ ಸಾಕ್ಷಿ ರುಜು ಮೊಕಾಬಿಲೆಯಿಂದ ಕೂಲಂಕಷ ದರಿಯಾಫ್ತು ಮಾಡಿ (ಮುಹಾವಂ. II, ೩೯). **ಮಕಾಬಲಿ :** ೨. ಎದುರೆದುರು ಮಾಡುವ ಕಲಹ : ಪ್ರತ್ಯಕ್ಷವಾಗಿ ಮಾಡುವ ಕಾಳಗ : ನಾವು ಸುಮ್ಮನ ಕೂತರೂ ಅವ ನಮಗ ಕಾಡತಾನ ಅಂದ ಮ್ಯಾಲ ಮಕಾಬಲಿ ಆಗೇಹೋಗಲಿ ನೋಡೋಣಾ (ಗಂಮಾಯು. ೨೨೬). **ಮುಖಬಿಲೆ :** ೩. ಭೇಟಿ ; ಸಂದರ್ಶನ : ತಕ್ಷಣವೇ ನನ್ನನ್ನು ಸಿನಿಮಾ ಮಾಲೀಕರ ಹತ್ತಿರ ಕರೆದುಕೊಂಡುಹೋಗಿ ಮುಖಬಿಲೆ ಮಾಡಿಸಿ ಮಧ್ಯಾಹ್ನದ ಮೋಟಾರಿಗೇ ಮೇಷ್ಟರು ಹಿಂತಿರುಗಿದರು (ದರ್ಶಕ್ರೀ. ೪೦). **ಮುಖಾಬಿಲೆ :** ೩. 'ಖಾತ' ಕಾಗೆಗೆ ಬಿತ್ತು ಎಂತಾದರೆ ಅವರವರ ಮುಖಾಬಿಲೆ ಮುಂದಿನ ಶ್ರಾದ್ಧಕ್ಕೇ ಸರಿ (ಹಹಸ. ೨). ೪. ಸಮ್ಮುಖದಲ್ಲಿ ಆಗುವ ತೀರ್ಮಾನ : ಈಗ ನಮ್ಮ ಲೆಕ್ಕದ ಮುಖಾಬಿಲೆಯಾಗಲಿ ! (ಖಾಲಕ್ರ. II, ೭೪೯). **ಮೊಕಾಬಲಾ :** ೩. ನಿಮಗೆ ಅವಳಿಗೆ ಮೊಕಾಬಲಾ ಮಾಡಿಸುವೆನು (ರಕ್ತಧ್ವ. ೨೦೪). **ಮೊಖಾಬಿಲೆ :** ೧. ಮೊಖಾಬಿಲೆಯಾಗಿ ಶಾನುಭೋಗರುಗಳು ಆ ರಸೀತಿಗಳಿಗೆ ಪಟೇಲನ ಜೊತೆಯಲ್ಲಿದ್ದು ರುಜುಮಾಡಬೇಕು (ಗ್ರಾಮಾಕ. ೬೮). ೩. ನೀವು ಒಪ್ಪಿದರೆ ಆತನನ್ನು ನಿಮಗೆ ಮೊಖಾಬಿಲೆ ಮಾಡಿಸುತ್ತೇನೆ (ರಷಿಶರಾಜ. ೦೩೭).

[ ← ಅರ. ಮುಕಾಬಲಹ್ ; ಹಿಂ. ಮುಕಾಬಲಾ : ಮರಾ. ಮುಕಾಬಲಾ, ಮುಕಾಬಿಲಾ, ಮೊಕಾಬಲಾ ]

**ಮೊಕ್ಕ**, ಮೊಕ್ಕೆ, ಮೋಕ$_1$ (ನಾ). ಒಂದು ಬಗೆಯ ಮರ : "ಮೋಕ್ಷ:– ಮೊಕ್ಕ" (ಒಕಧಿ. ೦೩೦) ; ಮೊಕ್ಕದ ಮರ, ಚಿತ್ರಮೂಲವ ಕಣಿಕೆ, ಕಳ್ಳಿ – ಇವಂ ಸಮೂಲಗಳಂ ತಂದು ಸರಿಗೂಡಿ ಸುಟ್ಟು (ವಿಶ್ವವಿ. ೪). **ಮೊಕ್ಕೆ :** "ಗೋಲೀಢಃ . . . ಮೋಕ್ಷಃ ಮುಷ್ಕಕಃ — ೬ ಮೊಕ್ಕೇ ಮರದ ಹೆಸರು" (ಸಿದ್ಧಾಂತ. ೧೨೦). **ಮೋಕ$_1$ :** ಮೋಕ – ಮಧ್ಯಮ ಆಕಾರದ್ದು, ಕಟ್ಟಿಗೆ ಬಿರುಸು (ಕಶಾಗ. ೪೭). [ದೇ.॥ ತೆಲು. ಮೊಕ್ಕ, ಮುಕ್ಕಿಡಿ ; ಕುಇ. ಮೊಕೊ. / ಸಂ. ಮೋಕ್ಷ ]

**ಮೊಕ್ಕನೆ** (ಅ). ಒಂದು ಅನುಕರಣಾವ್ಯಯ : ತಲೆಯುಂ ಮೊಕ್ಕನೆ ಪೋಗೆಜ್ಜಂ (ವಡ್ಡಾರಾ. ೬೨-೦೩) ; ಸಿಡಿದು ಸಾಸಿ ತಲೆಗಳ್ ಬಟ್ಟವು ಸಂಧಿಸಂಧಿಗಳ್ ಮೊಕ್ಕನೆ ಕೋಡವು (ವರ್ಧಮಾ. ೪-೬೨) ; ಮೇಘರಥನೆಯ್ದೆವಂದು ಮೊಕ್ಕನೆವೋಗಿ ನೆಲಕ್ಕೆ ಬಿಟ್ಟ ಬಿದಿರ ಪೊದಱುಮಂ . . . ಕಂಡು (ಶಾಂತೀ. ೧೦-೩೭ ವ). [ ಮೊಕ್ಕು$_2$ + – ಅನೆ$_1$ ]

**ಮೊಕ್ಕಳ**, ಮೊಗ್ಗಳ (ನಾ). ೧. ಹೆಚ್ಚಳ ; ಆಧಿಕ್ಯ ; ಅತಿಶಯ : ಮೇಗಾಳಿಕಿಗ್ಗಾಳಿಯ ಮೊಕ್ಕಳದ ತಿಳಿದು (ಸೌಂದರ. ೧೮-೪೩) ; ತನ್ನಂಗಿಯನುರುಮುದದಿಂ ಕಂಚುಕಿಯೊರ್ವಳ್ ತನ್ನ ಪರದಟನ ಪೊಂಪಂ ಸಿರಿಯುಗ್ಗಳವಂ ಸೊಬಗಿನ ಮೊಕ್ಕಳವಂ ವಿದಿತಾನ್ವಯಶುದ್ಧದ ಹೆಚ್ಚುಗೆಯಂ . . . ತೋರುತ್ತುಂ ಪೇಳುತ್ತುಂ ಮೆಲ್ಲನೆ ನಡೆಸಿದಳು (ಜಯಂಕಾ. ೩-೪೭). ೨. ಮೊತ್ತ ; ಗುಂಪು ; ಸಮೂಹ : "ಬಂಬಲ್ . . . ಮೊಕ್ಕಳಂ . . . ಗೊಂದಣೆ (ಉಂದಲ್) — ಈ ೪೦ ಸಮೂಹಂ" (ಕಕಶಾ. ೩೭-೨೨೨) ; ಎಲ್ಲಾ ಕಳೆಗಳ ಬರ್ದಿನ ಮೊಕ್ಕಳದಿಂ ನುಡಿವೆಣ್ಣಂ ಗೆಲ್ವಳಂ . . . ಅಳವೇ ಬಣ್ಣಿಪೊಡೆ (ಉದ್ಭಟ. ೨–೪೮) ; ತಿಳಿಗೊಳನುಂಟು ತಾವರೆಯುಂಟು . . . ಅಂಚೆ ಕೊಂಚೆಗಳೊಕ್ಕಲವರ್ಕ್ಕಿಗಳು ಮೊಕ್ಕಳವು (ನಾಗಕು. ೨೦–೩೪) ; ಅರಮಕ್ಕಳ ಮೊಕ್ಕಳಕಿಂತು ಪೆರ್ಗಳಂ (ಶಶಿವ. ೩-೭೦). ೩. ಬಾಧೆ : ತೊಂದರೆ ; ಪೀಡೆ. **ಮೊಗ್ಗಳ :** ೪. ಶೌರ್ಯ ; ಪರಾಕ್ರಮ : ಹೆಗ್ಗಡೆ ಬಲ್ಲಾಳರ್ಗಳ ಮೊಗ್ಗಳವಂ ಮುರಿದುಕೊಂಡು ತದ್ಭೂತಳಮಂ ಬಗ್ಗದ ಮನ್ನೆಯರದಟಂ ಮಗ್ಗಿಸಿ ತತ್ತದ್ಧರಿತ್ರಿಯಂ ವಶಗೈದಂ (ಕೆಳನೃ. ೩-೬೨).

**ಮೊಕ್ಕಳಕೊಳಗು ಮಾಡು** = ತೊಂದರೆಗೆ ಗುರಿಪಡಿಸು ; ಹಿಂಸೆಗೆ ಈಡು ಮಾಡು : ಸೊಕ್ಕಾನೆ ನಡೆವೆತ್ತ ಸೊಬಗಿಯರ್ . . . ಮದನನ ಮೊಕ್ಕಳಕೊಳಗು ಮಾಡಿದರು (ಪಾರ್ಶ್ವಚ. ೨೪-೦೬). **ಮೊಕ್ಕಳಕ್ಕಿಕ್ಕು** = ಮೊಕ್ಕಳಕೊಳಗು ಮಾಡು: ಎಮ್ಮಾ ಸಂಕೇತವೃತ್ತಾಂತಮಂ ದೇವಿ ತಿಳಿದು

ಬಂದುಲೀಯೆಯುಂ ಮೊಕ್ಕಳಕ್ಕಿಕ್ಕಿದಳ್ (ಚಿತ್ರಗೋ. ೯೭). **ಮೊಕ್ಕಳವನಿಕ್ಕು** = **ಮೊಕ್ಕಳಕೊಳಗುಮಾಡು** : ವಿಳಸದಧ್ವರದಕ್ಷಿಣೆಗೆ ಮೊ[ಶಾಕಾಂ. ಹೆ] ಕ್ಕಳವನಿಕ್ಕಿದನೊಬ್ಬ (ಕೊರಚಾ. ೩-೨-೨೯). [ದೇ.॥ ತೆಲು. ಮೊಕ್ಕರ, ಮೊಕ್ಕಲ]

**ಮೊಕ್ಕಳಂ** (ಅ). ಅತಿಶಯವಾಗಿ ; ವಿಶೇಷವಾಗಿ ; ಚೆನ್ನಾಗಿ ; ಕೊಲಲ್ಕೆ ಮೊಕ್ಕಳಂ ನೆಱಿದುವಱಿಂದೆ . . . ಪೋಲ್ಪುದು ಮಹಾನದಿ ರುಂದ್ರ ಫಣೀಂದ್ರರಾಜನಂ (ಕಾವ್ಯಸಾ. ೭೬೭ ಪೂಪ್ರಕ) ; ಮೊಕ್ಕಳಂ ಕವಿದುವುಗ್ರ ಲಯಾಗ್ನಿಗಳಂತೆ ಬೆಟ್ಟುಗಳ್ (ಶಂಖಶಾ. ೨-೭೭) : ಮಱಿಸಿಂಗನ ಬಾಲಕ್ಕೆ ಗಂಟೆಕ್ಕುವ, ಗಂಟಿಕ್ಕಿ ನಗುವ, ನಕ್ಕು ಮೊಕ್ಕಳಂ ನಲಿವ . . . ಚೆನ್ನರಾಮಂ ಮಾತೆಸೀತೆಯು ತೆರಮಸಕದ ಸಂತಸಗಡಲನಿರ್ಮಾಡಿಯುಬ್ಬಿಸಿದತ್ತು (ರಾಮಾಶ್ವ. ೦೫೦-೩).  [< ಮೊಕ್ಕಳ]

**ಮೊಕ್ಕಾಂ** ' ಮುಕ್ಕಾಂ ' ನೋ.

**ಮೊಕ್ಕಾಮ** ' ಮುಕ್ಕಾಂ ' ನೋ.

**ಮೊಕ್ಕಾಮು** ' ಮುಕ್ಕಾಂ ' ನೋ.

**ಮೊಕ್ಕು**₁ ' ಮೊಟ್ಟು₁ ' ನೋ.

**ಮೊಕ್ಕು**₂ (ನಾ). ಒಂದು ಅನುಕರಣ ಪದ : 'ಮೊಕ್ಕನೆ' ಪರಾ.

**ಮೊಕ್ಕುಮೊಕ್ಕು** (ದ್ವಿರುಕ್ತಿ) : ನಿಶಾತಶರಾಳಿಗಳಿಂದ್ಯೆ ಚಕ್ಕುಚಕ್ಕನೆ ಕೊಳೆ ಮೊಕ್ಕುಮೊಕ್ಕನೆ ಶಿರಂಗಳುರುಳ್ವುವು ವೈರಿಭೂಪರಾ (ಶಂಕರಾ. ೦೨-೦೦೯).

**ಮೊಕ್ಕೆ** ' ಮೊಕ್ಕ ' ನೋ.

**ಮೊಕ್ತ** ' ಮೊಖ್ತಾ ' ನೋ.

**ಮೊಕ್ತಾ** ' ಮೊಖ್ತಾ ' ನೋ.

**ಮೊಕ್ತಿಯಾರಿ** (ನಾ). ಮತ್ತೊಬ್ಬರು ಕೊಟ್ಟ ಸಂಪೂರ್ಣಅಧಿಕಾರ ; ಪ್ರತಿನಿಧಿತ್ವ : ಪ್ರಾತಿನಿಧ್ಯ : (?). [← ಪಾರ. ಹಿಂ. ಮುಖತಾರೀ, ಮುಖ್ತಾರೀ ; ಮರಾ. ಮುಖತ್ಯಾರೀ, ಮುಖ್ತಾರೀ]

**ಮೊಕ್ತೇಸರ್** ' ಮೊಖ್ತೇಸರ್ ' ನೋ.

**ಮೊಕ್ತೇಸರಿಕೆ** (ನಾ). ಮುಖ್ಯಾಧಿಕಾರಿಯ ಸ್ಥಾನ, – ಪದವಿ : ಹತ್ತು ವರುಷಗಳ ತನಕ ಈ ಮೊಕ್ತೇಸರಿಕೆಗೆ ನನ್ನ ಆಯ್ಕೆಯು ವರುಷಂಪ್ರತಿ ನೆರವೇರುತ್ತ ಬಂದಿತ್ತು (ಬಂಜನ್. ೦೯೫).

[ಮೊಕ್ತೇಸರ್ (< ಮೊಖ್ತೇಸರ್) + – ಇಕೆ]

**ಮೊಖದ್ದಮೆ** ' ಮೊಕದ್ದಮೆ ' ನೋ.

**ಮೊಖಮಂಟಪ** (ನಾ). ದೇವಾಲಯಗಳಲ್ಲಿ ನವರಂಗದ ಮುಂಭಾಗ ದಲ್ಲಿ ಇರುವ ಮಂಟಪ : ದೇವರ ಮೊಖಮಂಟಪ ತಗ್ಗಿದಲ್ಲಿ . . . ದುಗಂಮನು ಉನ್ನುತವಾಗಿ ಕಟಿಸ್ತ ಸೆವೆ (ಮೈಆ. ೦೯೩೯, ೫೯-೨; 1753). ' ಮೊಗಮಂಟಪ ' ಪರಾ.

[P ಇದು 'ಮುಖಮಂಟಪ' ಎಂಬುದರ ಅಪಲಿಖಿತವಿರಬಹುದು]

**ಮೊಖರಿ** (ಗು). ೧. ಅನುರಣನಗೊಳ್ಳುವ ; ಪ್ರತಿಧ್ವನಿಸುವ. (ನಾ). ೨. (ದೇವಾಲಯದಲ್ಲಿ) ಅನುರಣನಗೊಳ್ಳುವಂತೆ ಹಾಡನ್ನು ಹಾಡುವ ವ್ಯಕ್ತಿ : ಹಾಡುವ ಮೊಖರಿಗಂ ಬೀಹಳಯಿರ್ಪ್ಪರ್ಗಂ ಎರೆವತ್ತ ೧೬ (ಸೌಇಇ. XX. ೩೦೦-೭ ; 12ನೆಯ ಶತ) ; ಆ ನಾಯಕಂಗೆ ಗ ೬ ರಂಗ ಭೋಗದ ನಾಗವಾಸದ ಮೊಖರಿಗೆ ಗ ೩೦ (ಎಕ. III, ತಿರುಮ. ೧೦೦-೯೭ ; 1276). [< ಸಂ. ಮುಖರ]

**ಮೊಖರಿಗಾಳೆ** (ನಾ). (ಯಾವುದಾದರೂ ಉತ್ಸವದಲ್ಲಿ) ಅನುರಣನ ಗೊಳ್ಳುವಂತೆ ಊದುವ ಕಹಳೆ, – ಕಾಳೆ : ಮೊಖರಿಗಾಳೆಯು ವಾಸಿಕಾಱಿ ಬಸವ ಮಾಳಿಗೆಲ್ಲೆ ಕಸಪಸಿದ ಅ[ವು]ಜಗ ಬೀಚ ಇತಮಲ್ಲ ಇಂತಿವರು ಬಿಟ್ಟ (ಸೌಇಇ. XVIII, ೨೦೭-೫ ; 1227).

[ಮೊಖರಿ + ಕಾಳೆ (< ಕಹಳೆ)]

**ಮೊಖಾಂತರ** (ಅ). ಮುಖಾಂತರ ; ಮೂಲಕ: ಬಾಲೂರ ವೀರೈಯಗೌಡರ ಹೊಕಣದ ದೇವ ಪು × × × ಮೊಖಾಂತರ ಆತನ ಬವಸೆ ಸನ್ನಿಧಾನದಲು ಕರಿಸಿ ಕೇಳಿದಲ್ಲಿ (ಎಕ. VIII, ಸೊರಬ. ೨೬೬-೦೭ ; 1620). [< ಮುಖಾಂತರ]

**ಮೊಖಾಬಿಲೆ** ' ಮೊಕಾಬಿಲ ' ನೋ.

**ಮೊಖಾಮು** ' ಮುಕ್ಕಾಂ ' ನೋ.

**ಮೊಖಾಸ**, ಮುಖಾಸಿ. ಮುಖಾಸೆ. ಮೊಖಾಸಿ (ನಾ). ೧. ತಾನು ಮಾಡಿದ ಸೇವೆಗೆ ಪ್ರತಿಯಾಗಿ ರಾಜನಿಂದ ಪಡೆದ ಭೂಮಿ. ಗ್ರಾಮ ಇತ್ಯಾದಿ ; ಉಂಬಳಿ : **ಕೊಡುಗೆ** : ಚಿಂತಗೋಪಿನಾಯಕನು ಹಿರೆ ಮುರಾಳದ ಮೊಖಾಸವನ್ನು ಹೊಂದಿದ್ದನು (ಮೈಆ. ೦೯೩೦, ೨೯ ; ?). ೨. ಚೌಥಾಯಿಯಲ್ಲಿ ರಾಜನ ಪಾಲನ್ನು ಕೊಟ್ಟ ಮೇಲೆ ಉಳಿದ ಹಣ. **ಮುಖಾಸಿ** : ೧. ಪಟಣದ ಹೋಬಳೀಸೀಮೆ ವಿಚಾರದ ಚಾವಡಿವಳಿತದ ತುರುವೆಕೆರೆಸ್ಥಳದ ಮುಖಾಸಿ ಚಿಕ್ಕ ಡೊಂಕಿ ಹಳಿಗ್ರಾಮಕೆರೆ ೧ ಅಕೆ ೧ (ಎಕ. XIV. ನಂಜನ. ೨೯೮-೦೦ ; 1761) ; ತಳಕಾಡು ನಂಜರಾಜಯ್ಯನು ಪೂರ್ವದಲ್ಲಿ ವಿಠಣ್ಣನಿಗೆ ಮುಖಾಸಿಯಾಗಿ ಕೊಟ್ಟಿದ್ದ ಮದ್ದೂರು (ಮಹಾಪಂ. I. ೩೦). **ಮುಖಾಸೆ** : ೧. ಶ್ರೀವೀರಪ್ರತಾಪ ಕೃಷ್ಣರಾಯ ಮಹಾ ರಾಯರು ನಮಗೆ ಮುಖಾಸೆ ಕುದುರೆಗೆ ಪಾಲಿಸಿದ ಯಳಪೆಯ ಗ್ರಾಮದಲು ಬಂದಂಥಾ ಬ್ರಾ(ಂ)ಹ್ಮರಿಗೆ ದಿನವೊಂದಕ್ಕಂ ಹನ್ನೆರಡು[ಮಂ]ದಿ ಬ್ರಾ(ಂ)ಹ್ಮರಿಗೆ ಅ(ಂ)ನ್ನದಾನ ತಿಂಗಳುವೊಂದಕ್ಕೆ ಘಟ್ಟ ವರಹ ಗ ೩ ರ ಲೆಖದಲು . . . ಧಾರೆಯನೆರದು ಕೊಟ್ಟೆಲು (ಸೌಇಇ. IX-ii. ೫೨೮-೭ ; 1530). **ಮೊಖಾಸಿ** : ೧. ಭದ್ರಾಪುರದ ಹಳೆಮೊಖಾಸಿಯು ಆ ಗ್ರಾಮದ ಒಕ್ಕಲುಮಕ್ಕಳ ಕೈಯ ದಂಡವ ಕೊಂಡ ಸಂಮ[ಂ]ಧ ಯಲ್ಲಾ ಬಿಟ್ಟು ಹೋಗಿ ಊರು ಹಳಾಗಿಯಿರಲಾಗಿ (ಸೌಇಇ. XVIII, ೯೭೯-೪ ; 1643). ೨. ಉಂಬಳಿಯನ್ನು ಪಡೆದವನು ; ಇನಾಂದಾರ : ಆ ಗ್ರಾಮದ ಮೊಖಾಸಿ ಗಳು (ಇಆ. ೦೯೬೭, ರಾಣಿಬೆನ್ನೂರ್. ೨೪೮-೦ ; ?) : ಕೂಸನೂರ ಮೊಖಾಸಿ ಕೊಂಡಪ್ಪ (ಇಆ. ೦೯೬೭. ರಾಣಿಬೆನ್ನೂರ್. ೨೪೮-೩ ; ?).

[← ಅರ. ಮುಕಾಸಾ ; ಮರಾ. ಮೊಕಾಸ್, ಮೊಕಾಸಾ. ಮೊಕಾಸೀ. ಮೊಕಾಸೀ]

**ಮೊಖಾಸಿ** ' ಮೊಖಾಸ ' ನೋ.

**ಮೊಖಾಳ** ' ಮಕಾಳ ' ನೋ.

**ಮೊಖೂಫು** ' ಮೋಕೂಫ್ ' ನೋ.

**ಮೊಖ್ತ** ' ಮೊಖ್ತಾ ' ನೋ.

**ಮೊಖ್ತಾ**, ಮೊಕತ, ಮೊಕ್ತ, ಮೊಕ್ತಾ, ಮೊಖ್ತ (ಅ). ಎದುರಿನಲ್ಲಿ ; ಸನ್ನಿಧಿಯಲ್ಲಿ ; ಸಮಕ್ಷಮವಾಗಿ : ದರಶನಾ ತೆಗೆದುಕೊಂಡು ಖಾವಂದರು ಆಜ್ಞೆ ಮಾಡಿದ್ದು ಮೊಖ್ತಾ ವಿನಂತಿ ಮಾಡುತ್ತ (ಮದಕ. ೩-೦); ಪಂಚಾಯಿತರ ಮೊಖ್ತಾ ಮಹಜರು ಮಾಡಿಸಿ (ಗ್ರಾಮಪಕ. ೬೭) ; ನಮ್ಮ ಯಜಮಾನರೂ ದಿವಾನ್ ಸಾಹೇಬರನ್ನು ಮೊಖ್ತಾ ಕಂಡು ಹೇಳಿಕೊಂಡರು (ಇಬದು. ೯೦). **ಮೊಕತ** : ಮೊಕತ ಶಕ್ತಿಯ ಪರಿಯ ತೋರುವುದೀಗ (ಚಪಶಾ. ೦೨-೨೦). **ಮೊಕ್ತ** : ನಮ್ಮ ಮೊಕ್ತ ನೀನು ಬನ್ದು ನಮ್ಮ ಸ್ಥಳದಲ್ಲಿ ಅಱಿಕೆಮಾಡಿಕೊಂಡು (ಎಕ. XI. ಹಿರಿಯೂ. ೩೭-೦೯; 1533 ?). **ಮೊಕ್ತಾ** : ಅವರ ತಂದೆ ಎಷ್ಟೋ ಸಲ ಲಿಖಿತ ಮೂಲಕವಾಗಿಯೂ ಮತ್ತು ಮೊಕ್ತಾ ಮನೆಗೆ ವಾಪಸು ಕರಕೊಂಡು ಹೋಗಬೇಕೆಂದು ಪ್ರಾರ್ಥನೆ ಮಾಡಿದಾಗ್ಯೂ ನೀವು ಎಲ್ಲವನ್ನೂ ನಿರಾಕರಿಸಿದ್ದೂ ಸರಿಯಷ್ಟೆ ? (ಬಿಕಾಂಗಿ. ೦೯೬) ; ತಾನೇ ಮೊಕ್ತಾ ಕಂಡು ಮಾತನಾಡಿಯೂ ಹೆಣ್ಣು ನಿಶ್ಚಯಪಡಿಸಿಕೊಂಡು . . . ಕುರುಡುಮಗನಿಗೆ ಮದುವೆಮಾಡಿದನು (ಕಥಾಮಂ. IV. ೨೯). **ಮೊಖ್ತ** : ಏನಿದ್ದರೂ ಆಂಗ್ಲೇಯದಲ್ಲಿ ಮೊಖ್ತ ಹೇಳಬಹುದು (ದುಶಾಚಿ. ೦೦೬).

[< ಸಂ. ಮುಖತಸ್./ತುಳು. ಮೊಕತಾ]

**ಮೊಖ್ತಿಯಾರ್**, ಮುಖ್ತ್ಯಾರ್, ಮೊಖ್ತ್ಯಾರ (ನಾ). (ನ್ಯಾಯ ಸಂಬಂಧವಾದ ವ್ಯವಹಾರಗಳಲ್ಲಿ) ಮತ್ತೊಬ್ಬನಿಗಾಗಿ ಕಾರ್ಯ ನಿರ್ವಹಿಸಲು ನೇಮಕನಾದ ಅಧಿಕಾರಿ ; ಪ್ರತಿನಿಧಿ : ದಂಡಾಜ್ಞೆ ಅವರ ಕೈಸೇರುವ ತನಕ ಭೇಟಿಯ ಪರವಾನಿಗೆ ಮೊಖ್ತಿಯಾರ್ ಸಂಪೂರ್ಣ ಜವಾಬ್ದಾರನೆಂದೂ ದೌವಾರಿಕ ಸ್ಪಷ್ಟಪಡಿಸಿದನು (ಕೃಪರು. ೦೫೭). **ಮುಖ್ತ್ಯಾರ್** : (Attorney. ಶಾಂಶಿ. ೭). **ಮೊಖ್ತ್ಯಾರ** : ಮೊಗಲ ಚಕ್ರವರ್ತಿಗಳು . . . ಆ ಬಗ್ಗೆ ಮೊಖ್ತ್ಯಾರರನ್ನು ನಿಯಮಿಸಿದ್ದರು (ಹಿಂದುಇ. ೨೬೦). [← ಅರ. ಮುಖ್ತಾರ್; ಹಿಂ. ಮುಖತಾರ್, ಮುಖ್ತಾರ್; ಮರಾ. ಮುಖತ್ಯಾರ್, ಮುಖ್ತ್ಯಾರ್, ಮುಖ್ತಾರ್]

**ಮೊಖ್ತಿಯಾರ್‌ನಾಮ**, ಮುಖ್ತ್ಯಾರನಾಮೆ, ಮೊಖ್ತ್ಯಾರ್‌ನಾಮೆ (ನಾ). ಮತ್ತೊಬ್ಬನಿಗಾಗಿ ಕೆಲಸ ನಿರ್ವಹಿಸಲು ಕೊಟ್ಟ ಅಧಿಕಾರ; ವಕಾಲತ್ತು: (ಮೈಗೆಜೆ. IV, ೭೭೯). **ಮುಖ್ತ್ಯಾರನಾಮೆ** : (power of attorney. ಶಾಂಶಿ. ೭). **ಮೊಖ್ತ್ಯಾರ್‌ನಾಮೆ**: (Letter of administration. ಶಾಂಶಿ. ೩). [←ಅರ. ಪಾರ. ಮುಖತಾರ್‌ನಾಮಹ್; ಹಿಂ. ಮುಖತಾರ್‌ನಾಮಾ ; ಮರಾ. ಮುಖತ್ಯಾರ್‌ನಾಮಾ]

**ಮೊಖ್ತೇಸರ್**. ಮುಕ್ತೇಸರ, ಮೊಕ್ತೇಸರ್, ಮೊಖ್ತೇಸರ (ನಾ). ಮುಖ್ಯಾಧಿಕಾರಿ ; ಪ್ರಧಾನ ಅಧಿಕಾರಿ : ವಿದ್ಯಾಭ್ಯಾಸದ ಇಲಾಖೆಯ ಮೊಖ್ತೇಸರ್ ಅಧಿಕಾರಿಗಳಾಗಿದ್ದ . . . ಎಂ. ಶಾಮರಾವ್ ಎಂ. ಎ. ಯವರಿಗೆ ನನ್ನ ಕೃತಜ್ಞತೆಯನ್ನು ಇಲ್ಲಿ ನಮೂದಿಸದೆ ಬಿಟ್ಟಿಲ್ಲ (ಕಕ್ರಶಾ. ೭ ೨೦೬೪). **ಮುಕ್ತೇಸರ** : ಅದಳಿತೆಯನ್ನು ಸರ್ಕಾರ ವಹಿಸಿಕೊಂಡು ೧೮೩೮ರ ವರೆಗೆ ಇವರನ್ನೇ ಅದಳಿತೆ ಮುಕ್ತೇಸರರನ್ನಾಗಿ (Trustee) ಮಾಡಿತ್ತು (ಕುಕುವಾ. ೦೦೫). **ಮೊಕ್ತೇಸರ್**: 'ಮೊಕ್ತೇಸರಿಕೆ' ಪರಾ. **ಮೊಖ್ತೇಸರ**: ಗುಲೆಯು ಸರ್ ಮೊಖ್ತೇಸರನ ಹಾಗೆ ಅರಮನೆಯಲ್ಲಿ ಎಲ್ಲಿ ಬೇಕಾದರೂ ಅಲೆದುಕೊಂಡಿರಲಿ ಎಂದು ಅರಸನು ಬಿಟ್ಟಿದ್ದನು (ದೇಶಾಂಕ. ೩೭); ಕೋರ್ಟಿನಲ್ಲಿ ಮೊಖ್ತೇಸರರಾಗಿದ್ದ ಸೋಮೇಶ್ವರಐಯ್ಯರ್ ಮಾಧವರಾಯ, ಜವರೇಗೌಡರು ಇಬ್ಬರಿಗೂ ಬೇಕಾದವನಾಗಿದ್ದ (ಗೃಹಂ. ೨೨೩).
[←ಅರ. ಪಾರ. ಹಿಂ. ಮೊಖ್ತೇಸರ್]

**ಮೊಖ್ತೇಸರ** ' ಮೊಖ್ತೇಸರ್ ' ನೋ.

**ಮೊಖ್ತ್ಯಾರ್‌ನಾಮೆ** ' ಮೊಖ್ತಿಯಾರ್‌ನಾಮ ' ನೋ.

**ಮೊಖ್ತ್ಯಾರ** ' ಮೊಖ್ತಿಯಾರ್ ' ನೋ.

**ಮೊಗ**, ಮಕ, ಮುಕ, ಮೊಕ (ನಾ). ೧. ಮುಖ ; ಮೋರೆ : "ವದನ ಮಾನನಮಾಸ್ಯಂ . . . ವಕ್ತ್ರಂ ಮೊಗಕ್ಕೆ ನಾಮಂ" (ವಸ್ತುಕೋ. ೬೯-೦೫); ಮೊಗಮೆಂಬಂಬುಜದಲರು . . . ಎನೆ ಸುಯುಕ್ತರೂಪಕಮಕ್ಕುಂ (ಕಶಿಾ. ೩-೨೫) : ಮೊಗಮಂ ತಾವರೆ ಕಣ್ಣನುತ್ಪಳದಳಂ ಧಮ್ಮಿಲ್ಲಮಂ ಸೋಗೆ . . . ಆರಾಧಿಸಿ ಪೋಲ್ತುವು (ಅದಿಶೃ. ೬-೮೫); ಯಮರಾಜನ ಕುಮಾರನ ಮೊಗವ ನೋಡಿದನು (ಕುಮಾರವ್ಯಾ. ೮-೦೭). ೨. ಬಾಯಿ: ಮೊಗದೊಳ್ ವಾಗ್ವಧು ಸಂತತಮಗಲದೆ ನಿಲೆ . . . ತಪಮುಜ್ಜುಗಮೆಂತುಟೋ ಮೇಘಚಂದ್ರಮುನಿಪುಂಗವರಾ (ಸಷುಶ. ೦-೨೦) ; ತನ್ನ ಮೊಗದೊಳೊಂದಕ್ಕರಮಂ ಪೊಱಮಡಿಸಲಱಿಯದಜಿತಮನಱಿಯದರೊಳ್ ಪೆಱಿದ ಸಾಸಿಗಂದಿರುಂಟೇ (ಪುಲ್ಲಕೃ. ೦-೩೩); ವಿಮಾನಂಗಳ ಪೇರಣಿ ಪೋಲ್ತುಮು ತೆಱಿದ ಮೊಗದ ಪೇಱಗಳಿರವಂ (ಶಂಕ್ರ ಕೃ. ೬-೩೧). ೩. ದಿಕ್ಕು; ದೆಸೆ : ಪಡುವಮೊಗವಾಗಿ ರೋಮಂಗಡ ತಲೆಯಂ ಪೆಕ್ಕಲೊಡನೆ ಓರಿಯುಂ ಪೋದಂತೊಡನಾರು ನುಡಿವರುಮಿಲ್ಲ (ಸಷುಶ. ಅಪಬಂರ. I,೩೬೩-೯೭): ಶುಭದಿನದೊಳ್ಪೊಱಮಟ್ಟು ಪಡುವಮೊಗದೆ ಪಯಣಂಬೋಗಿ (ಶಂಹಂ. ೭-೭ ವ); ಎನಗಾವ ಮೊಗಮೊ! ಸುಡು ಸೀತೆಯಿಲ್ಲದೀ ನಾಡಂ! (ರಾಮಕಾಶ್ವ. ೯೭-೦೨). ೪. ಎದುರು ; ಸಮ್ಮುಖ : ಅವರಿರ್ವರುಮೆನ್ನ ಮೊಗದೊಳ್ ನಿಲ್ಲದೆ ಪೋದೊಡೆ (ಕಾವ್ಯಂಕ. ೦೮). ೫. (ಆಲಂ) (ಮುಖವನ್ನು ತೋರಿಸುವ) ಧೈರ್ಯ; ಆತ್ಮವಿಶ್ವಾಸ : ಅಂಧನರೇಂದ್ರನ ಮೊಗಮಂ ಗಾಂಧಾರಿಯ ಮೊಗಮನಾವ ಮೊಗದೊಳೆ ನೋೞ್ಪೆಂ (ಗದಾಯು. ೩-೭೦); ಆಗಳವರ್ ತಾಯ ಮೊಗಮನಾವ ಮೊಗದೊಳು ನೋಡುವವೆಂದು ನಾಣ್ಚಿ (ಸುಕುಮಾ. ೨-೩೨ ವ). ೬. ಮೊದಲು; ಆರಂಭ: 'ಮೊಗಗಳ್ತಲೆ' ಪರಾ. ೭. ಮುಂಭಾಗ; ಅಗ್ರಭಾಗ: 'ಮೊಗಸೂನಿಗೆ' ಪರಾ. **ಮಕ** : ೧. ನಾಯಿಲ್ಲಿ ಮಾತಾಡಿಸ್ತೀನಿ. ಅಲ್ಲಿ ನೀವು ಒಬ್ಬರೊಬ್ಬರ ಮಕ ನೋಡ್ತಾ ನಿಂತೀರಲ್ಲ? (ಕಮ್ಮಟಿ. ೬): ನಿಮ್ಮ ಮಕಾ ನೋಡಿದರ ಏನೋ ಚಿಂತಿ ಹಿಡಿದ್ಹಂಗ ಕಾಣತೇತಿ (ಗ್ರಾಪಣಯು. ೦೩೦). **ಮುಕ** : ೧. ಖಕಾರಕ್ಕೆ ಕಕಾರಂ . . . ಮುಖ–ಮುಕ. ಶಂಖ–ಸಂಕ (ಕಪಂದ. ೨೫೫ ಕೃಯೋ); ಯಾಕೆ ಗೌರಿ. ಬೆಳಗ್ನಿಂದ ಮುಕ ಗಡಿಗೆಗಾತ್ರ ಮಾಡ್ಕೊಂಡು ಕುಂತಿದೀಯ? (ಅವ್ವಾವ. ೯೦). ೬. 'ಕಾಮುರ್ಕ$_1$' ಪರಾ. **ಮೊಕ** : ೧. ನಾವು ಟೀಪುಸುಲ್ತಾನರಿಂದ ಸ್ನೇಹದ ಮೊಕ ತಿರಿಗಿಸಿ ಇಂಗ್ರೇಜ್‌ಸರಕಾರದ ದೋಸ್ತಿ ಮಾಡಿಗಿ (ರಾಕೇಂಶ್ರ. ೪೯); ಮೊಕಾ ನೋಡಿ ಮಾಣೀ ಹಾಕುತ್ತಾರೆ (ಹುಬ್ಬಿಹ. ೦೯೫); ಕೆಂಪಿ ಬಂದು ಮೊಕ ನೋಡಿದಳು (ಮಲ್ಲ. ೦೨). ೩. ಅಲ್ಲಿ ಮೂಡಣ ಮೊಕಿಂದಿಳಿದು ಬರಲು (ಎಕ. XII, ಕಕ್ಕಪಾ. ೯೨-೬೭; 1226).

**ಮುಕಾಡಿ**, **ಮಕಾಡೆ**, **ಮಖಾಡೆ** = ಮುಖಕೆಳಗಾಗಿ ; ಬೋರಲಾಗಿ: ಮಗು ಮಕಾಡಿ ಬಿತ್ತು (ರಂಶಿ); ಮಂಚದ ಹಾಸಿಗೆ ಹಂಚ್ಯಾಡಿ ಹೋಗಿತ್ತು ಮೈಚಾಚಿ ಮಕಾಡೆ ಮಲಗ್ಯಾಳೆ (ಗ್ರಾರಶ. ೨); ಅವನ ಮುತ್ತಾತ . . . ಹೂತಿಟ್ಟ ಗೊಂಬೆಗಳು 'ಥಕ್ಕಥೈ' ಎಂದು ಕುಣಿಯುವುದನ್ನು ನೋಡಿ ಅವನ್ನು ಎಕ್ಕಡದ ಕಾಲಿನಲ್ಲಿ ಒದ್ದು ಮಕಾಡೆ ಮಾಡಿ ಬರೋನಂತೆ (ನಮ್ಮೂರು. ೦೭೭); ಪಟ್ಟೆಮಂಚದ ಮೇಲೆ ಮಖಾಡೆ ಮಲಗ್ಯಾಳೆ (ಜಾಕಪ. ೦೭೫). **ಮುಖಾಡೆಯಾಗಿ**, **ಮುಖಾಡಿಯಾಗಿ**, **ಮೊಕಾಡೆಯಾಗಿ**, **ಮೊಕ್ಕಡೆಯಾಗಿ** = ಮುಖಕೆಳಗಾಗಿ; ಬೋರಲಾಗಿ: ಮುದುಕನು ಪುನಃ . . . ಕಣ್ಣುಮುಚ್ಚಿಕೊಂಡು ಮುಖಾಡೆಯಾಗಿ ಮಲಗಿಬಿಟ್ಟನು (ಶ್ರೀಕಥ. ೦೦೨); ಈ ಶಂಕೆಯಿಂದ ಅರ್ಧಕುಳಿತಿದ್ದ ನಾನು ಹಾಗೇ ಮುಖಾಡಿಯಾಗಿ ಕೆಳಕ್ಕೆ ಮಲಗಿದೆ (ಕಂಶಿ. ೦೭೭); ಮೊಕಾಡೆಯಾಗಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲ ಅಂದನಂತೆ (ಗಾದೆ); ಚಿಂತಾಕುಲನಾಗಿ ಮಂಚದ ಮೇಲೆ ಮೊಕ್ಕಡೆಯಾಗಿ ಮಲಗಲು (ಹುಬ್ಬಿಹ. ೭೩). **ಮೊಕ ಕಟ್ಟಿಕೊಳ್ಳು** = ವಿರೋಧ ಕಟ್ಟಿಕೊಳ್ಳು; ಮುಖ ಕೆಡಿಸಿಕೊಳ್ಳು: ಸಿನ್ನಂತವರ ಸಂಗಡ 'ಮೊಕ ಕಟ್ಟಿಕೊಂಡ' (ಶಿಲುಪು. ೦೭೦). **ಮೊಗಮಾಡು** = ಎದುರಿಗೆ ನಿಲ್ಲುವಂತೆ ಮಾಡು; ಎದುರಾಗಿಸು: ತೆಗೆದು ಹಿಮ್ಮೆಟ್ಟುವ ಬಲವ ನಿಲಿಸಿಕೊಂಡು ಮೊಗಮಾಡಿ ಮತ್ತೆ ಮೋಹರವ ಧಿಗಿಲನೆ ಬಂದಪ್ಪಲಾವನು (ಕುಮಾಶಾಂ. ೦೩-೯೨). [<ಸಂ. ಮುಖ./ ತಮಿ. ಮುಕ, ಮೊಕ್ಕು; ಮಲ. ಮುಕ; ತುಳು. ಮೊಗ, ಮುಗನು; ತೆಲು. ಮೊಗ್ಗ; ಕೋಲಾ. ನಾಯ್ಕಿ. ಮೊಕವ್; ಪರ್ಜಿ. ಮೊಕೊವ್]

**ಮೊಗಂ** 'ಮೋಘವ್' ನೋ.

**ಮೊಗಂಗಿಡಿಸು**, ಮೊಗಗೆಡಿಸು (ಕ್ರಿ). ೧. (ಆಲಂ) ಅವಮಾನಮಾಡು: ಪಡಿದಟವಾಂತು ಬಂದ ಸಿಂಗಳರಾಯನಂ ಮೊಗಂಗಿಡಿಸಿ ಜಸಂ ಬೆಸಂಬಡೆಯೆ ಬಲ್ಲಿಗನೀ ಪರಿ ಚಲ್ಲವಾಡಿದಂ (ತಕಶಿ. ೨-೬೮). **ಮೊಗಗೆಡಿಸು**: ೧. ಲೋಕದಲ್ಲಿ ಗುಣವಂತರ್ಗೆ ಯಾವನಾನೊರ್ವಂ ತಪ್ಪಿದೊಡೆ ಮೊಗಗೆಡಿಸುವುದು ಧರ್ಮವೇ (ಸಮ್ಯಕ್ತ್ವ. ೦೦-೩೪). ೨. ದಿಕ್ಕೆಡುವಂತೆ ಮಾಡು; ದಿಗ್ಭ್ರಮೆಗೊಳಿಸು : ಕರಿತುರಗ ಕಾಲಾಳ ಮೋಹರ ಮೊಗಗೆಡಿಸೆ ಲೋಕವನು (ಕುಮಾಶಾಂ. ೦೭-೦೦೭); ಸರಸಿಜೋದ್ಭವನ ಮೊಗಗೆಡಿಸಿ ಮಿಱಿದಳು (ಸರ್ವಜ್ಞ. ೦೭೫೦). [ಮೊಗ + ಕೆಡಿಸು (< ಕೆಡಿಸು$_1$)]

**ಮೊಗಂಗಿಡು** (ಕ್ರಿ). ೧. ಮುಖವು ವಿಕಾರವಾಗು; ಮುಖವು ಬಾಡು. ೨. (ಆಲಂ) ಆಹಾರ ಮುಂತಾದುವುಗಳ ಅತಿಸೇವನೆಯಿಂದ ಅಸಹ್ಯಪಡು : ಬರಿದೊಂದು ಮುಗುಳ ಕಂಪಿನೊಳೆ ಮೊಗಂಗಿಡುವುವು ತುಂಬಿಗಳ್ (ಶಂಶಬಾ. ೧-೫೬). [ಮೊಗ + ಕಿಡು (< ಕೆಡು$_1$)]

**ಮೊಗಂಗುಡು** ' ಮೊಗಂಗೊಡು ' ನೋ.

**ಮೊಗಂಗೊಡು**, ಮೊಗಂಗುಡು, ಮೊಗಗುಡು, ಮೊಗಗೊಡು (ಕ್ರಿ). ಮುಖವನ್ನು ತೋರಿಸು: ಎದುರಾಗು : ಹೊರೆಗಾಣದಿಹ ನೇಹಗಲ ಹದೆ ಮೊಗಂಗೊಡದ ಗರಿಸುತೆಯ ಬೆಂಗಡೆಗೆ ಸೊಪ್ಪುಳಾಗದ ತೆಱದೊಳಿರದೆ ಬಳಸಂದು (ತಂಪು. ೩೮-೧). **ಮೊಗಂಗುಡು** : ನುಡಿಯುದೆ ಕೆಮ್ಮನಿರ್ಪರ ಪಿದಾವುದು ಕಾರಣಮಾವುದೀ ಮೊಗಂಗುಡದಿರವು (ಶಂಶಬಾ. ೮-೭೬) : ಎಡೆಗುಡೆ ಸಾರ್ದು . . . ತಾಂ ಮೊಗಂಗುಡೆ ಪದವೆತ್ತು ಚುಂಬಿಸಿ (ಶಂದ್ರಶ. ೬-೮೨). **ಮೊಗಗುಡು** : ಬೊಮ್ಮರಸ :– (ಮೊಗಗುಡದೆ) ಇರಬೇಕು, ಇರಬೇಕು . . . ನನಗೆ ಸರಿಯಾಗಿ ಸೇಸಪಿಲ್ಲ (ಶಟ್ಕಿಅ. ೧೫-೯). **ಮೊಗಗೊಡು** : ತವಕದನುವಱಿದಪ್ಪಿ ಮೊಗಗೊಡೆ ಪವಣಱಿದು ಚುಂಬಿಸುತೆ ಇಂದುಟಿ ಸುಧೆಯನೊಸೆದೀಂಟೆ (ಸಾಳ್ವಭಾ. ೪-೧೧).
[ಮೊಗ + ಕೊಡು$_1$]

**ಮೊಗಂಚಿತ** (ನಾ). ಮುಖದಲ್ಲಿರುವುದು : ಪಂಚಲಪನಪಂಚಪಂಚಾಕ್ಷರಗಳೆ ಮೊಗಂಚಿತವಾಗಿರಲಪಕೆ ನಾಂ ಚೆಲ್ವ ಕಾಣ್ಕೆಯೆಂದುಂ ಚಮೂಪನ ಶಿರಕಾಂತಿಗಂ ಪಡಿಯುಪ್ಪೆನೆಂದು (ಭೃರಪೇ. ೧-೨೬೪).
[< ಸಂ. ಮುಖಾಂಚಿತ]

**ಮೊಗಂದಿರಿ** (ಕ್ರಿ). ಮುಖವನ್ನು ತಿರುಗಿಸು ; ವಿಮುಖವಾಗು : ಉಱಿದರಸುಮಕ್ಕಳೆಲ್ಲಂ ಕರ್ಣ ಶಲ್ಯರ್ ಮೊಗಂದಿರಿದುದಂ ಕಂಡು ಮಾನಂಗೆಟ್ಟು (ಪಂಶಬಾ. ೩-೭೦ ವ) ; ಮಾರ್ಮಲೆದಿಸಲ್ಕೆ ಮೊಗಂದಿರಿದಂದಪಂದಿರುಂ ತುಱುಗಿರೆ ಬೆನ್ನೊಳಂಬುಗಳುಮಂಬನೆ ಕಾಱುತುಮೋಡೆ ಭೀತಿಯಿಂ (ಶೇಬಪು. ೧೨-೨೬೧). [ಮೊಗ + ತಿರಿ$_1$]

**ಮೊಗಂದಿರಿಪು**, ಮೊಗಂದಿರುಪು, ಮೊಗಂದಿರುವು, ಮೊಗಂದಿರುಹು, ಮೊಗದಿರುಹು (ಕ್ರಿ). ೧. = ಮೊಗಂದಿರಿ : ಅಂತತಿಪಿಪಿತಕಿಶೋರಕೇಸರಿಯಂತೆ ಪರಾಕ್ರಮೈಕಸಹಾಯನಾಗಿ ಮದಾಂಧಗಂಧಸಿಂಧುರಘಟೆಯಂ ಮೇಗಣ ನಿಷಾದಿಯೋಧಾಗ್ರಗಣ್ಯರುಮಂ ಮೊಗಂದಿರದೆ ಮೊಗಂದಿರಿಸು[ಪ್ಪು]ವ ಬೆಸದೊಳ್ ತೊಡರ್ದು (ಶಾಂತಿಪು. ೪-೨೧ ವ) ; ಬಲ್ದಿಗೆಯುಂ ಕಂಡಂತೆ ಮೊಗಂದಿರಿಪುತ್ತುಂ (ರಪಾರ್ಣವ್ಯ. ೪-೭೭). **ಮೊಗಂದಿರುಪು** : ೧. ಜವನಧಿಕಾರಂ ಮಿಱುವ ಜವಕೆ ಮೊಗಂದಿರುಪೆ ಕೊಲ್ವ ಮುಱಿಯರಿ ನೆಲಕಿತ್ತುವನೋದು ಗದೆಯೊಳೆಸಲ್ (ಜಗವಿ. ೯-೫೫). **ಮೊಗಂದಿರುವು** : ೧. ಸಂಪಗೆಯು ಕಂಪಿಂಗೆ ಕಂಪಿಸಿ ಮಲ್ಲಿಗೆಗೊಂಡೊಲ್ಲದೆ ಮೊಗಂದಿರುವಿ ಪರಿತಂದು ಸಾದರದಿಂ ಪೂದೋಂಟದ ಪ್ರಸೂನಕುಲ ಮನಂಡಲೆದು ಬಂಡುಣ್ಬಲ್ಲಿ (ಗಂಕ. ೨-೭೦ ವ). **ಮೊಗಂದಿರುಹು** : ೨. ಮುಖವನ್ನು ಹೊರಳಿಸು: ಅಭಿಮುಖವಾಗು : ರಾಜಕಾರ್ಯಮಂ ಬೆಸವೇಳ್ವುದೆನುತೆ ಭೀಮನ ಕಡೆಗೆ ಮೊಗಂದಿರುಹಿದರಸಂಗೆ ನಳಿನಾಕ್ಷನಿಂತೆಂದನು (ಕೃಷಿಬಾ. ೨-೫೩). **ಮೊಗದಿರುಹು** : ೧. ಮಳೆಗೆ ಮೊಗದಿರುಹುವುದೆ ಬಡಬಾನಳನು (ಕುಮಾರವ್ಯಾ. ೫-೫೬) ; ಹೊಂದಿಕೆಯು ಹೊಲಬಲ್ಲವೀ ನುಡಿಯೆಂದು ಸತಿ ಮೊಗದಿರುಹಲೊಡನಿಂತೆಂದನಾ ಹನುಮಂತ (ತೊರರಾ. ೫-೩-೭೫). [ಮೊಗ + ತಿರಿಪು$_1$]

**ಮೊಗಂದಿರುಪು** ' ಮೊಗಂದಿರಿಪು ' ನೋ.

**ಮೊಗಂದಿರುವು** ' ಮೊಗಂದಿರಿಪು ' ನೋ.

**ಮೊಗಂದಿರುಹು** ' ಮೊಗಂದಿರಿಪು ' ನೋ.

**ಮೊಗಂದೋಱು**, ಮೊಗದೋರು, ಮೊಗದೋಱು$_1$ (ಕ್ರಿ). ಮುಖವನ್ನು ತೋರಿಸು: ಕಾಣಿಸಿಕೊಳ್ಳು; ಗೋಚರಿಸು; ಪ್ರತ್ಯಕ್ಷವಾಗು : ಏನಸ್ಸಂತಾನಮೆಂಟುಂ ಕಿಡೆ ನಿಜಗುಣಮೆಂಟುಂ ಮೊಗಂದೋಱೆ (ಶಂರಾಪಾ. ೧-೨) ; ಶರತ್ಕಾಲಮತಿಕ್ರಮಿಸಿ ಮೇಲೆತ್ತಿ ಬಂದು ಮೊಗಂದೋಱಿ ವರ್ಷಾಕಾಲಮಂ ಪಲಾಯನಮನೆಯ್ದಿಸುವುದುಂ (ಶಾರಶು. ೪-೬೪ ವ). **ಮೊಗದೋರು** : ಬಾಲಭಾಸ್ಕರನು ಮೊಗದೋರೆ ಸರಸಿಜಮರಳ್ದುಮಾನಂದಿಪಂತೆ (ನವಮೋ. ೧೩-೨೨) ; ಆಗ ಹೋದವ ತಿರುಗಿ ಈಗ ಮೊಗದೋರಿಪನು (ಏಸೇಗೀ. ೨೬-೧೩) ; ಹತ್ತೂರ ಕೊಡತಿನಿ ಮೊಗದೋರು (ಲೋಕಗೀ. ೨೩೧). **ಮೊಗದೋಱು$_1$** : ಬಾ ಮಗನೆ ಮೊಗದೋಱೆನುತ ಹಲುಬಿದನು ಕಲಿಪಾರ್ಥ (ಕುಮಾರವ್ಯಾ. ೮ ಸೂಚನೆ) ; ಕಾನನದೊಳಗೆ ನಂಬಿದ ನಾರಿಯನು ಬಿಸುಡುವರೆ ತನಗಿನ್ನಾರು ಗತಿ ಮೊಗದೋಱೆನುತ ಹಲುಬಿದಳು (ಪೞಕ. ೫-೨೨). [ಮೊಗ + ತೋಱು]

**ಮೊಗಂನೋಡು** (ಕ್ರಿ). (ವಸ್ತುವಿನ ಬೆಲೆ ಇತ್ಯಾದಿಗಳ ಕಡೆ) ಗಮನಿಸು: ಲಕ್ಷಿಸು : ಬಣ್ಣವಣ್ಣಗೆಯ ಜವಳಿಗಳನೆ ಮೊಗಂನೋಡದೆ ಸೂಸಿದಾಗಳ್ (ಆದಿಪು. ೪-೩೪ ವ). [ಮೊಗ + ನೋಡು]

**ಮೊಗಂಬಡೆ** (ಕ್ರಿ). ೧. ರೂಪು ತಳೆ ; ಆಕಾರ ತಾಳು; ಮೂರ್ತಿವತ್ತಾಗು : ತುಂಬಿ ತುಳ್ಕುವ ಮೊಗದ ಮೊಗಂಬಡೆದ ಸೊಬಗು ಪದ್ಮಸದ್ಮನ ಮೊಗಸಿರಿಯನೆಡವುತೆಡಂ ಮಾಡೆ (ರಾಪಾಶ. ೧೩೯-೧೧). ೨. ನಯವಾದ ಮಾತುಗಳಿಂದ ಮನವೊಲಿಸು; ಸರಸಸಲ್ಲಾಪವಾಡು ; ಅನುನಯಿಸು : " ಮೊಗಂಬಡೆ–ಅನುನಯನೇ " (ಶಮಂಧಾ. ವ) ; ಕಲಭಾಷಿತಸುಧಾಜಲದಿಂ ಸರಸ್ವತಿಯು ಕಲಾವಲೇಪಮುಂ ಕರ್ಚೆ ಕಳೆವಂತೆ ಮೊಗಂಬಡೆದು (ಶಂರಾಪಾ. ೩-೯ ವ). [ಮೊಗ + ಪಡೆ$_1$]

**ಮೊಗಂಬುಗಿಸು** (ಕ್ರಿ). ಮುಖಾಮುಖಿಯಾಗಿಸು: ಸಮ್ಮುಖವಾಗಿಸು : ಅಂತಾ ದಂತಿಘಟೆಗಳನಾರೋಹಕರ್ ತೋಱಿ ಕೊಟ್ಟೊಂದೊಂದರ್ಕೆ ಮೊಗಂಬುಗಿಸಿದಾಗಳ್ (ಶಂಶಬಾ. ೧೧-೯೩ ವ).
[ಮೊಗಂಬುಗು (< ಮೊಗಂಬೊಗು) + – ಇಸು$_3$]

**ಮೊಗಂಬುಗು** ' ಮೊಗಂಬೊಗು ' ನೋ.

**ಮೊಗಂಬುಗುತರ್** (ಕ್ರಿ). ಮುಖಾಮುಖಿಯಾಗಿ ತಾಗು: ಎದುರಿಸು : ಅಗದೊಳಗಂ ಮೊಗಂಬುಗುವವೋಲ್ಮದದಾನೆಗಳಾನೆಯೊಳ್ಮೊಗಂಬುಗುತರೆ (ಶಂರಾಪಾ. ೧೩-೮೧). [ಮೊಗ + ಪುಗುತರ್ (< ಪೊಗುತರ್)]

**ಮೊಗಂಬೊಗು**, ಮೊಗಂಬುಗು (ಕ್ರಿ). ೧. ಮುಖಾಮುಖಿಯಾಗಿ ಮೇಲೆ ಬೀಳು : ಮೊಗಂಬೊಕ್ಕದು ಭೀಮಂ ದೇವ ದುಶ್ಶಾಸನರುಧಿರಮುಮಂ ಪೀರ್ದ ತಾಣಂ (ಗದಾಯು. ೫-೨); ಪತ್ತುವ ಲಗ್ಗೆಗೆ ಮಾರಿಯೊಳ್ ಮೊಗಂಬೊಕ್ಕವೊಲಾಗೆ ಬೆರ್ಚಿದನವಂ (ಶಂದ್ರಶ. ೫-೮೧). **ಮೊಗಂಬುಗು** : ೧. ದಿಗಿಭಂ ದಿಗಿಭಕ್ಕೆ ಮೊಗಂಬುಗುವಂತಿರೆ ಸಂಚಿಪಾರದಿಂ ಧನದೀದಂ ಮಿಗಿಲುದ್ದಾನಿಯ ದಾನಂ (ಶಾಂತಿಪು. ೧-೩೧) ; ಅಗದೊಳಗಂ ಮೊಗಂಬುಗುವವೋಲ್ಮದದಾನೆಗಳಾನೆಯೊಳ್ಮೊಗಂಬುಗುತರೆ (ಶಂರಾಪಾ. ೧೩-೮೧). ೨. ಮುಖವನ್ನು ಮುತ್ತು,—ಕವಿ : ನಗೆಮೊಗಮಂ ಪೊದಳ್ದಲರ್ದ ತಾವರೆಯೆಂಬ ವಿಮೋಹದಿಂ ಮೊಗಂಬುಗಲೊಡಂ (ಶಂಶಬಾ. ೫-೧೧). ೩. ಎದುರಿಗೆ ಕಾಣಿಸಿಕೊಳ್ಳು : ದೆಸೆದೆಸೆಯೊಳಂ ತಳವೆಳಗಾಗಿ ಪರಿತಂದು ನಾಣ್ಚೆ ಮೊಗಂಬುಗದೋರೊರ್ವರ ಪೆಱಗಡಂಗಿ ಗೆಂಟೆನೊಳೆ ಮೆಲ್ಲಮೆಲ್ಲನೆಱಗುವ ರಾಜಪುತ್ರಸಹಸ್ರಂಗಳ ಮೊಗಮಂ ನೋಡಿ (ಕಾದಂಬ. ೪೩೬). [ಮೊಗ + ಪೊಗು]

**ಮೊಗಂಮುರಿ**, ಮೊಗಮುರಿ (ಕ್ರಿ). ೧. (ನೋವು, ಬೇಸರ, ಜುಗುಪ್ಸೆಗಳಿಂದ) ಮುಖವನ್ನು ವಿಕಾರ ಮಾಡು : ಅಣಂ ಮೊಗಂಮುರಿಯ ಪಳ್ಕದೆ ಬೇಸಗೆಗಳೊಳ್ ಮೊಗಂಗಳಂ ಬಿನ್ನಗೆ ಮಾಡದಿರ್ದರಳವಚ್ಚರಿಯಾಗೆ ಕೆಲರ್ ಮಹಾರಥರ್ (ಶಂಶಬಾ. ೧೧-೩) ; ಚಿಂತಿಸುತ್ತವಿರಾವೆ ಮೊಗಂ

ಮುರಿದೀವ . . . ಗುಣಂ ಗುಣದಂಕಕಾರ್ತಿಯಾ (ಅಜಿ. ೦೨-೦೭); ಇಂತಪ್ಪವಮಾನಮಾಮುದೆಂದು ಮೊಗಂಮುರಿಯೆಯುಂ (ಜಗಬಿ. ೦೪-೭೭ ವ); ಅಮಂಗಳವನೀಕ್ಷಿಸಿದಂತೆ ಮೊಗಂಮುರಿದು ಮಾತು ನಿಲ್ಲಿಸಿದರ್ (ಶ್ರೀರಾಪಟ್ಟ. ೨೦-೫೪೨). ೨. ಮುಖವನ್ನು ಬೇರೆಕಡೆಗೆ ತಿರುಗಿಸು; ಪರಾಙ್ಮುಖನಾಗು; ವಿಮುಖನಾಗು : ಮದ್ರರಾಜನಳಿಯನ ಪರಾಕ್ರಮಕ್ಕೊಸೆದು ಮೊಗಂಮುರಿಯದೆ ಪೆಱತುಂ ರಥ[ಮಂ ಕರಿಸಿ ಕನಲ್ದಡರ್ದು ಕದನಕಾಗಳೆ ನೆಱೆದಂ] (ಪಂಪಭಾ. ೧೧-೧೧೭). **ಮೊಗಮುರಿ :** ೨. ಸುಯೋಧನನ ಮೊಗಮುರಿಯಲೆಚ್ಚು . . . ಪಾರ್ಥನು ಮತ್ತೆ ಸೈವರಿದು (ಕುವ್ಯಾ.ಭ. ೦೯-೨೭). [ಮೊಗ + ಮುರಿ$_1$]

**ಮೊಗಂಸಾರ್ಚು** (ಕ್ರಿ). ಮುಖವನ್ನು ಹತ್ತಿರ ತರು : ಮೊಗಂಸಾರ್ಚಿ ನಾನಾರಸಂ ಕಣ್ಗೊಳಿಪನ್ನಂ ಮೂರ್ತಿನಾರಾಯಣನ್ನ ವನನವಳ್ ಮೆಚ್ಚಿ ನೋಡುತ್ತಮಿರ್ದಳ್ (ಕಾದಂಬ. ೦೭೭). [ಮೊಗ + ಸಾರ್ಚು$_1$]

**ಮೊಗಗತ್ತಲೆ** ' ಮೊಗಗಳ್ತಲೆ ' ನೋ.

**ಮೊಗಗನ್ನಡಿ** (ನಾ). (ಆನೆ, ಕುದುರೆಗಳಿಗೆ) ಮುಖದ ಮೇಲೆ ತೊಡಿಸುವ, ಕನ್ನಡಿಗಳನ್ನು ಅಳವಡಿಸಿರುವ ಒಂದು ಬಗೆಯ ಅಲಂಕಾರ ಸಾಧನ : ಮಿಸುನಿಯ ನಿಗಳದ ಮೊಗಗನ್ನಡಿ ಕಾಂತಿವಿಸರದ ಚಿನ್ನ ಹಕ್ಕರಿಕೆ ಪೊಸಮುಕಟ್ಟಿನ ಝಲ್ಲಿಗಳಿಂದ ರಾಜಿಸುವ ದಿವ್ಯಾಶ್ವವೈದಿದುವು (ಸಂಪಬಿ. ೨೪-೯೦). [ಮೊಗ + ಕನ್ನಡಿ$_1$]

**ಮೊಗಗಳ್ತಲೆ,** ಮೊಗಗತ್ತಲೆ (ನಾ). ಕತ್ತಲೆಯ ಮೊದಲು ; ರಾತ್ರಿಯ ಆರಂಭ ; ಪ್ರದೋಷಸಮಯ : ಪಗಲಾಣ್ಮನೆಯ್ದದನಸ್ತಗಿರಿಯ ಬಂದು ಮೊಗಗಳ್ತಲೆ ಮೊಗದೋಱೆ (ಕುಮಾರಾಂ. ೩೫-೭೯). **ಮೊಗಗತ್ತಲೆ :** ಮೊಗಗತ್ತಲೆಯೊಳಿಂದುವಿನುದಯರಾಗ ಸೊಗಸಿದುದಿಂದ್ರ ದಿಕ್ಕಸೊಳು (ಶ್ರೀಕಾಂ. ೬-೦೭) ; ಆಮೇಲೆ ಮೊಗಗತ್ತಲೆಯಾಗಲಾಗಿ ಕಾದಂಬರಿ ಉಪ್ಪರಿಗೆಯಿಂದಿಳಿದಳು (ವತಕಾ. ೭೦).

[ ಮೊಗ + ಕಳ್ತಲೆ (< ಕಟ್ತಲೆ) ]

**ಮೊಗಗುಡು** ' ಮೊಗಂಗೊಡು ' ನೋ.

**ಮೊಗಗೆಡಿಸು** ' ಮೊಗಂಗಿಡಿಸು ' ನೋ.

**ಮೊಗಗೊಡು** ' ಮೊಗಂಗೊಡು ' ನೋ.

**ಮೊಗಚು** ' ಮುಗುಟ್ಟು ' ನೋ.

**ಮೊಗಡು** (ನಾ). ಎತ್ತರವಾದ ಪ್ರದೇಶ ; ದಿಣ್ಣೆ : ಊರ ಮುಂದಣ ಬಸವನ ಗುಡಿಗೆ ಮೂಡಲ ಮೊಗಡಿನಲ್ಲು ಮೂಡಮುಖವಾಗಿ (ಎಕ. III. ತಿರುಮ. ೬೪-೦೦೬೪ ; 1748). 'ಮುಗುಟ್$_2$', 'ಮೋಟೆ' ಪರಾ.

[ ದೇ.॥ ತಮಿ. ಮುಕಟು ; ಮಲ. ಮುಗಡು ; ತೆಲು. ಮೊಗಡು ]

**ಮೊಗತುತಿ** (ನಾ). ಎದುರಿಗೇ (ಅಕಾರಣವಾಗಿ) ಹೊಗಳುವುದು : ಮುಖಸ್ತುತಿ : ಅರಸಂಗೆ ಧನಿಕರಿಗೆ ಮೊಗತುತಿಯೆ ರಸವು (ಕರುಶ್ಯಾ. ೦೨-೦೪) ; ನಿಷ್ಠುರವಾದಿ ಹೇಗೆ ತಾನೇ ಮೊಗತುತಿ ಮಾಡಬಹುದು (ಶೂಬಿಶಾ. ೬೨). [ಮೊಗ + ತುತಿ]

**ಮೊಗದಿರುಹು** ' ಮೊಗಂದಿರಿಪು ' ನೋ.

**ಮೊಗದುಂಸಕ್ಕರೆ** ' ಮುಗದುಮ್ಮಿಸಕ್ಕರೆ ' ನೋ.

**ಮೊಗದುಗುಲ** (ನಾ). ಮುಖದ ಮೇಲಿನ ಮುಸುಕು : ಅವಗುಂಠನ : ತಣ್ಣಗಿರಗ ಮೊಗದುಗುಲ ಕೈಟಿಡಿ ಡವಕೆ ಬೀಣೆ . . . ಕರ್ಪೂರದ ನಾಳಿಗಳ ಪಿಡಿದೊಡನೆ ನಡೆವರೊಲಿದು (ಶಬ್ದಶಾ. ೯-೭). [ಮೊಗ + ದುಗುಲ$_1$]

**ಮೊಗದುಮ್ಮಾನ** (ನಾ). ಮುಖದಲ್ಲಿ ಎದ್ದು ಕಾಣುವ ಚಿಂತೆ. – ಮುಗುಡ : ಏನು ಹೇಳುವೆನವರ ರಣಸುಮ್ಮಾನವನು ನಮ್ಮವರ ಮೊಗದುಮ್ಮಾನವನು (ಕುವ್ಯಾದ್ರೋ. ೦೫-೫೨). [ಮೊಗ + ದುಮ್ಮಾನ]

**ಮೊಗದೆಗೆ** (ಕ್ರಿ). ಬೇರೆಯ ಕಡೆಗೆ ಮುಖಮಾಡು.—ಮುಖವನ್ನು ತಿರುಗಿಸು : ಹೆಣ್ಣು ಕೊಡೆಂದು ನಮ್ಮಯ ತಂಗಿಬಿಂದಟ್ಟುವುದುಚಿತವಹುದು ಎಂದು ಮೊಗದೆಗೆಯಲ್ಕವರು (ಸಾಳ್ವಭಾ. ೪೦-೦೦). [ಮೊಗ + ತೆಗೆ$_1$]

**ಮೊಗದೆರೆ** (ನಾ). ಮುಖದ ಮೇಲಿನ ಮುಸುಕು : ಅವಗುಂಠನ : ಎಳೆವೇಡಿರತ್ತತ್ತು ಮೊಗದೆರೆಯ ಕೀಳ್ವರ್ (ಜಾರಸಿ. ೨೦-೫).

[ಮೊಗ + ತೆರೆ$_4$]

**ಮೊಗದೆಱೆ** (ಕ್ರಿ). ಬಾಯಿ ತೆಗೆ ; ಬಾಯಿಬಿಡು : ಮೊಗದೆಱೆದ ಹುತವಹನ [ಜಾತಿಂ. ಹೊಗೆದೆಗೆದ ಹೆಬ್ಬುಲಿಯ]ವೊಲು ಝಗಝಗಿಪ ತೇಜದ . . . ಜವಗಿವರುಗಳ ಲೆಕ್ಕಿಸವದಟನು (ತೊರವೆ. ೬-೯-೭).

[ಮೊಗ + ತೆಱೆ$_1$]

**ಮೊಗದೊಳೆ** (ಕ್ರಿ). ನೀರಿನಿಂದ ಮುಖದ ಮಲಿನತೆಯನ್ನು ತೊಳೆ ; ಮುಖಮಾರ್ಜನ ಮಾಡು : ಮುನ್ನೀಸಜಿ ಕಾಣುತ ಮೊಗದೊಳೆದು (ಶ್ರೀಶಂತ. ೦-೯೭) ; ನಿದ್ರೆಯಂ ತ್ಯಜಿಸಿ ಮೊಗದೊಳೆದು ಮುಕ್ಕುಳಿಸಿ ಕರ್ಪೂರವೀಳೆಯಂಗೊಂಡು (ಕೈವಿಭಾ. ೪೦-೯೨). [ಮೊಗ + ತೊಳೆ$_1$]

**ಮೊಗದೋರು** ' ಮೊಗಂದೋಱು ' ನೋ.

**ಮೊಗದೋಱು$_1$** ' ಮೊಗಂದೋಱು ' ನೋ.

**ಮೊಗದೋಱು$_2$** (ನಾ). ಮುಖದಲ್ಲಿ (ಗಾಯದಿಂದ) ಉಂಟಾದ ತೂತು. – ಡೊಗರು : ಮೊಗದೋಱುಗಳ ಪೂರಾಯಘಾಯದ ತಾಱು ಥಟ್ಟಿನ ಹೆಣನ ಮೆದೆ ಹೇರಾಳ ರಂಜಿಸಿತು (ಕುವ್ಯಾದ್ರೋ. ೦೦-೬).

[ ಮೊಗ + ದೋಱು (< ಡೊಂಗಱು) ]

**ಮೊಗನಹಱುವೆ** (ನಾ). ಒಂದು ಬಗೆಯ ಔಷಧೀಸಸ್ಯ : ನಾಂಗಲಿಕ. ಮೊಗನಹಱುವೆ . . . ಕಲಸಿ ಗುದದಲ್ಲಿ ಪೂಸೆ ಎಲ್ಲಾ ಮೂಲವ್ಯಾಧಿ ಕೆಡುಗುಂ (ವೈದ್ಯಶಿ. ೦೭೭). [ ? + ಹಱುವೆ (< ಹಱುಹೆ) ]

**ಮೊಗನಾಯಕ** (ನಾ). ಸೈನ್ಯದ ಅಗ್ರನಾಯಕ ; ಸೇನಾಪತಿ : ಮರುತಸುತ . . . ಮುರಿದು ಮೊಗನಾಯಕರ ಹರಣಮಂ ಕೊಂಡು . . . ಕುಪ್ಪಳಿಸಿ ಕುಣಿದಾಡಿದಂ (ತುರಂಗ. ೬೭-೦೨). [ಮೊಗ + ನಾಯಕ]

**ಮೊಗನೆಗಹು** (ಕ್ರಿ). ಮುಖವನ್ನು ಮೇಲಕ್ಕೆತ್ತು : ಮೊಗನೆಗಹಿ ಭೀಮನ ದಿಸೆಯನಾಲಿಪುದು . . . ಬಲುಕಣಿಯ ಹಿಡಿಹಿಂಗೆ ಬಾಗಿಸು ತಿರ್ದುದಾ ದಂತಿ (ಕುವ್ಯಾದ್ರೋ. ೩-೩೭).

[ ಮೊಗ + ನೆಗಹು$_1$ (< ನೆಗಪು$_1$) ]

**ಮೊಗಪಟ** (ನಾ). ಹಡಗಿನ ಮುಂಭಾಗದ ಹಾಯಿಯ ಬಟ್ಟೆ : ಹಾಯಿಪಟ : "(ಹಡಗಿನ) ಮುನ್‌ಕೂವೆಯ ಮೇಲಿನ ಮುಖ್ಯಪಟ: ಮೊಗಪಟ: ಮುಂಪಟ" (Foresail, ಇಂಕನ). [ಮೊಗ + ಪಟ]

**ಮೊಗಪಾವಡ** ' ಮೊಗಪಾವುಡ ' ನೋ.

**ಮೊಗಪು,** ಮೋಪು$_3$ (ನಾ). ೧. ಮುಂಭಾಗ ; ತುದಿ ; ಮುಖ : ಕಾಳಿಯ ಮೊಗಪಿನಲ್ಲಿ ಒಂದು ಜೀಱುಂಡೆ ಹುಟ್ಟಿ ಅದು ಆರ ಮಾತನೂ ಕೇಳಲೀಸದು (ನಳಚ. ಕ. II. ೬೫೭-೩೩); ಹೊಂಗರಡಿಗೆಗಡೆದು ಕಮರ್ಣಿಯ ಬರುಡೆಯ ಬಿಗಿದಿಟ್ಟನೆಂಬಂತೆ ಬಲ್ಮೊಲೆಯೆರಡಱ ಮೊಗಪು ತೋಱಿದುವು (ಮೋಹತ. ೨೩-೨೩). **ಮೋಪು$_3$ :** ೨. ಸರ, ಡಾಬು ಮುಂತಾದುವುಗಳಲ್ಲಿರುವ ಚೌಕಾಕೃತಿಯ ಬಿಲ್ಲೆ : ಈಗಿನ ಕಾಲದಲ್ಲಿ ಮೋಪು ಇರುವ ಸರಗಳನ್ನು ಹೆಚ್ಚಾಗಿ ಯಾರೂ ಹಾಕುವುದಿಲ್ಲ (ಕೂಡಿ).

[ದೇ.॥ ತಮಿ. ಮಲ. ಮುಕಪ್ಪು ; ತುಳು. ತೆಲು. ಮೊಗಪು]

**ಮೊಗಪೆ** (ನಾ). ೧. (ದ್ರವಪದಾರ್ಥಗಳನ್ನು ಮೊಗೆಯಲು ಬಳಸುವ) ಸಣ್ಣ ಪಾತ್ರೆ : ಮೊಗೆ : ಪ್ರತಿದಿನಕ್ಕೊಂದು ಮಲ್ಲಲ ಕೂಟುಮನೊಂದು ಮೊಗಪೆ ನೀರುಮಂ ನೆಲಮನೆಯೊಳಗಣ್ಗೆ ನೀಡಿದೊಡ ನಿಬರುಂ ಪಚ್ಚುಗೊಂಡುಣ್ಬರ್ (ವಡ್ಡಾರಾ. ೦೬೨-೦೦) : ಈ ಖಳಸಂಸ್ಕೃತಿ [illegible] ಮೊಗಪೆಯಾಗದೆ ತಾಳ್ದಪ

ವರ್ಗಮಾರ್ಗಮಂ (ಆದಿಪು. ೩-೭೦) ; ಕುಂಬಾರನ ಚಕ್ರದಂತೆ ಮುಕ್ಕಳಿಟ್ಟ ಬವರಿಯಂತೆ ಬೂಟಣದ ಮೊಗಪೆಯಂತೆ (ಧರ್ಮಾಮೃ. ೯-೨೩). ೨. ಒಂದು ಊರಿನ ಹೆಸರು : ಬೂತರಸ ತೊಱೆಕಾರಟ್ಟಿಯಂ ಪದಿಯಳೆಯು ನೆಲೆಗೂಱು ಮೊಗಪೆ ಅಳಿಯುಂವು ಬಿಟ್ಟ (ಎಕ. IV, ಗುಂಡ್ಲುಪೇ. ೯೪-೩ :890). [< ಮೊಗ್ಗೆ$_2$]

**ಮೊಗಬೀಣೆ,** ಮೊಗವೀಣೆ (ನಾ). ಬಾಯಿಂದ ಊದುವ (ಕೊಳಲಿನಂತಹ) ಒಂದು ಬಗೆಯ ವಾದ್ಯ ; ಮುಖವೀಣೆ : ದೀಹಪಕ್ಕಿಗಳಿಂಚರದ ಕೊಳಲ್. ಮೊಗಬೀಣೆಗಳಿಂದರೆವಱದೂರ್ವಂದಿಗಳ್ ಚೀಱುವ ದನಿಯ ಬಾರುಗುಗಳಿಂ (ಶಶಪಂ. ೬-೩). **ಮೊಗವೀಣೆ :** ವೇಣುವ ನುಡಿಯಿಸುತ ಕಿನ್ನರಿಯ ಕೌಶಲವಿಡಿದು ನಾದಿಸುತಸವ ಮೊಗವೀಣೆಯನು ಕೇಳಿಸುತ . . . ಸತಿಯರೆಯ್ದಿದರು (ಕನಕ್ಕು. ೦೩-೫೯). [< ಸಂ. ಮುಖವೀಣಾ]

**ಮೊಗಬೀರಚೆಟ್ಟು** (ನಾ). ಒಂದು ಬಗೆಯ ಸಸ್ಯ : ಗಂಡುಬೀರನ ಗಿಡ. ಗಂಡುಕರೀತುಂಬೆ, ಮೊಗಬೀರಚೆಟ್ಟು (ವ್ಯಾಶಿಗ. ೭-೧೦೭). [ ← ತೆಲು. ಮೊಗಬೀರಚೆಟ್ಟು ]

**ಮೊಗಮಂಟಪ** (ನಾ). ದೇವಾಲಯ, ಅರಮನೆ ಮುಂತಾದುವುಗಳ ಮುಂಭಾಗದಲ್ಲಿರುವ ಮಂಟಪ ,– ಹಜಾರ ; ಮುಖಮಂಟಪ : ಮಣಿಸತ್ತಿಗೆಯ ಮೊಗಮಂಟಪದ ಬಣ್ಣವಟ್ಟಿಗೆಯ . . . ಮದನಗೃಹ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡಮಾಗಿ ರಂಜಿಸುಂ (ರಾಮಾಶ್ವ. ೩೪-೨೪). [ < ಸಂ. ಮುಖಮಂಡಪ]

**ಮೊಗಮಜ್ಜನ** (ನಾ). ನೀರಿನಿಂದ ಮುಖವನ್ನು ತೊಳೆಯುವುದು ; ಮುಖಮಾರ್ಜನ : ಮೊಗಮಜ್ಜನಮಂ ನೆಱೆ ಮಾಡಿ ದೇವಿಯರ್ ನಡೆಗೊಳಲಿರ್ದಪರ್ ಮನೆಗೆ (ಕಾದಂಪೂ. ೭೭೨); ಪಗಲಾಣ್ಮನ ಕಾಂತಿ ಪಸರಿಸಲಿರ್ದರು ಮೊಗಮಜ್ಜನವ ಮಾಡಿದರು (ಪೋಹಶ. ೩೦-೩). [ < ಸಂ. ಮುಖಮಾರ್ಜನ]

**ಮೊಗಮರಸು** (ಕ್ರಿ). ಮುಖವನ್ನು ಮರೆಮಾಡಿಕೊಳ್ಳು; ಮುಖವನ್ನು ಮುಚ್ಚಿಕೊಳ್ಳು : ಚಿತೆಯಿಂದಿನನಂದು ಮುಂಗಿಲ ಮುಸುಕಂ ತೊಟ್ಟು ಮೊಗಮರಸೆ (ಗೊಲ್ಲಕಾ. ೧-೦೨). [ಮೊಗ + ಮರಸು$_1$ (< ಮಱೆಯಿಸು)]

**ಮೊಗಮರೆ** (ನಾ). ಗುರುತು ಸಿಕ್ಕದಂತೆ ಮುಖವನ್ನು ಮರೆಸುವ ಸಾಧನ : ಏನೋ ಒಂದು ಧೂರ್ತತ್ರಯ ಮೊಗಮರೆಯ ಗುರುತೋ (ಕಾದಘು. ೩). [ಮೊಗ + ಮರೆ$_2$ ( <ಮಱೆ$_2$ ) ]

**ಮೊಗಮಿಕ್ಕು,** ಮೊಗವಿಕ್ಕು (ಕ್ರಿ). ೧. ಎದುರಾಗು; ಅಭಿಮುಖವಾಗು: ರಾಘವನ ಜನ್ನದ ಬಣ್ಣಗುದುರೆ ತೆಂಕಲ್ಗೆ ಮೊಗಮಿಕ್ಕಿ ನಡೆಯುತು ಮಿರ್ಪುದುಂ (ರಾಮಾಶ್ವ. ೯೩-೦೯). ೨. ಎದುರುಬೀಳು ; ಎದುರಿಸು : ಪ್ರತಿಭಟಿಸು : ಅಂತು ದಂತಿಘಟೆ ದಂತಿಘಟೆಯೊಳಾಂತು ಮೊಗಮಿಕ್ಕೆಯುಂ (ಶಂರಾಮಾ. ೦೩-೭೭ ವ). ೩. ಮುಖವಿಡು; ಮುಖಹಾಕು : ನಗೆ ಮೊಗದೊಳ್ ತೆಱಂಬೊಳೆದು ನುಣ್ಣುಟಿಯೊಳ್ ಮೊಗಮಿಕ್ಕಿ . . . ಕಾಲುಗುರ್ಗಳೊಳ್ಪಿದೆ ಮಾರ್ಪೊಳೆದು (ಕಬ್ಬಿಕಾ. ೩೩೦); ಪುತ್ಥಿನೆಡೆಯೊಳ್ ಮೊಗಮಿಕ್ಕು ತಿಱುಂಪೆಗೆಂದು ಮತ್ತೆಡೆವಿಡದೂದುತಿರ್ಪನವುದೊಂದು ಮಹೋರಗಮಾನನಾಗ್ರಮಂ ಪಿಡಿವಡರ್ದಲ್ಲಿ ನೇಲುತಿರೆ ಸುಂಡಿಲವ್ವೋಲ್ . . . ಪಸೆದತ್ತು ಬಳ್ಳಿರಡಿ ಕಾನನದೊಳ್ ಕರಿಪೋತದಂತೆವೋಲ್ (ರಾಚಕೇ. ೩-೭೯). ೪. ತೊಡಗು: ಎಡೆಯಱಿದು ತೊಳಗುಪಂತ್ರಿರೆ ಸಿ[ಸ]ಡಿಲ್ಪು ಪೊ[ಪೋ]ಯ್ತುಟ್ಟುದಾಗಳಂಗಜಕಲೆಯೊಳ್ ನಡೆ ಮೊಗಮಿಕ್ಕಿ ಲಯಂಗಿಡದೊಡನುಲಿದುವು ಬೆರಲ ಕೊರಲ ನಾಲಗೆಯುಲಿಗಳ್ (ಕಾವ್ಯಸಾ. ೬೩೯ ಸೂಪ್ರಕ). **ಮೊಗವಿಕ್ಕು:** ೫. ಮುಖವನ್ನು ತಿರುಗಿಸು,–ಹೊರಳಿಸು: ಮೊಗವಿಕ್ಕಿ ದತ್ತಲು ಮೊಱೆವ ಹೆಣಮಯಮೇನಸುಸುರುವೆನು (ಕುಮಾವ್ಯಾದ್ರೋ. ೦೭-೨೭); ಕೈ ಮಾಡಿದತ್ತಲು ಕರುಳ ಮಯ ಮೊಗವಿಕ್ಕಿದತ್ತಲು ಮೊಱೆವ ಹೆಣನ ಮಯ (ಶಿವಂತ. ೪-೯೪). [ ಮೊಗ + ಇಕ್ಕು]

**ಮೊಗಮಿಡು.** ಮೊಗವಿಡು (ಕ್ರಿ). = ಮೊಗಮಿಕ್ಕು ೩: ಕುರಂಗಸಂಕುಳ ಭಿಲ್ಲರ ಬಿಲ್ಲ ಮೇಲೆ ಮೊಗವಿಟ್ಟು . . . ನೋಡುತಿರ್ಪುವು ನಗೇಂದ್ರ ಮುನೀಂದ್ರರ ಶಾಂತಮೂರ್ತಿಯಂ (ಗಿರಿ. ೦-೭೯); ಗರುಡೋದ್ಗಾರದ ಪಚ್ಚೆಯಕಿರಣದೊಳಿವುಲ್ಲ ಶಂಕೆಯಿಂ ಸ್ಫಟಿಕಾಂಶೂತ್ಕರದೊಳ್ ಜಳಶಂಕೆಯಿನಾದರದಿಂ ಮೊಗಮಿಡುವವಲ್ಲಿ ಮೃಗಶಾಬಂಗಳ್ (ಜಾರತ. ೧-೦೬೦); ಅಧರದಿನಿದಂ ಬೆರಸುವಂತೆ ಮೊಗವಿಟ್ಟು ಪೊಂಬಟ್ಟಲೊಳ್ಸವಿದು ಮಿಕ್ಕ ಮಧುವಂ (ಕೃಬಿಕಾ. ೦೩-೪೩). **ಮೊಗವಿಡು:** ಅಧ್ವಶ್ರಮದ ಘಗೆ ಪರಿಹರಿಸೆ ನೀರೊಳು ಹೊಗಿಸಿದನು ಹರಿ ಹಯಚತುಷ್ಟಯವ ಸರಸಿಯಲಿ ಮೊಗವಿಟ್ಟು ಮೊಗೆದವು ವರಜಲವನು (ಕುಮಾವ್ಯಾದ್ರೋ. ೦೦-೩೪); ಅಂಬುರುಹಾನನದೊಳ್ಮೊಗವಿಟ್ಟತಿಘರದಿ ನವೀನಲತಾಂಗಮನವರ್ದಪ್ಪಿ (ಜಯಕಾ. ೪-೪೨); ನೀಱಿನ ಮೊಗದೊಳು ಮೊಗವಿಟ್ಟು ಮಂಡಾಡಿ (ಕಂಸವ. ೯-೦೦೯). [ಮೊಗ + ಇಡು$_1$]

**ಮೊಗಮಿಱಿ** (ಕ್ರಿ). ಮುಖವನ್ನು ತಿವಿ,–ಚುಚ್ಚು: ಸೊಪ್ಪು ಸೊವಡಾಗದೆ ಸಟಿಸಟ್ಟಿಪ್ಪದೆ ಮೊಗಮಿಱಿದು ಕಾರ್ದು ಚಪ್ಪಲರ್ಪನೆಗಂ ಸಿಪ್ಪಿಟ್ಟು ಕೆದು ಕೊಂಡುವು ಸಪ್ಪದಮುಪ್ಪಳದಿನೊಱೆವ ನಱುವಂಡುಗಳಂ (ಲೀಲಾವ. ೯-೮೭). [ಮೊಗ + ಇಱಿ$_1$]

**ಮೊಗಮೀ** (ಕ್ರಿ). ಮುಖವನ್ನು ತಿರುಗಿಸು ; ಅಭಿಮುಖವಾಗು ದಶರಥನೃಪಂ ಮುನೀಶ್ವರರಿರ್ದಾ ದೆಸೆಗೆ ಮೊಗಮಿತ್ತು ತನ್ನಿರ್ದ ಸಿಂಹವಿಷ್ಟರದಿನೆಟ್ಟು ವಿನಮಿತನಾದಂ (ಶಂರಾಮಾ. ೬-೨೭). [ಮೊಗ + ಈ$_2$]

**ಮೊಗಮೀಸೆ** (ನಾ). (ಹೊಸಹರೆಯದ ಗುರುತಾಗಿ) ಮುಖದ ಮೇಲೆ ಮೂಡುವ ಮೀಸೆ : ಮೊಗಮೀಸೆ ಜಾರದಿರ್ದಂ ಸೊಗಯಿಪ ತನ್ಮಾನಿಕುಮಾರವದನಾಬ್ಜಂ ದಿಟ್ಟಿಗೆ ಚೆಲ್ವುವೆತ್ತು ಮಱಿದುಂಬಿಗಳೆಱಗದ ಕನಕಮಲವಂ ನೆನೆಯಿಸುಗುಂ (ಕಾದಂಪೂ. ೭೩೪). [ಮೊಗ + ಮೀಸೆ]

**ಮೊಗಮುಟ್ಟು** (ನಾ). (ಆನೆ, ಕುದುರೆ ಮುಂತಾದುವುಗಳ) ಮುಖಕ್ಕೆ ತೊಡಿಸುವ ಒಂದು ಬಗೆಯ ಅಲಂಕಾರಸಾಧನ: ಮೊಗಮುಟ್ಟನಾಂತ ಮೊಗವಾಗಿರೆ ತಾರ್ಕ್ಷ್ಯನನೇಱುವಂ ಕದಕ್ಕದಿಸೆ ನಿರರ್ಗಳಂ ಪೊಳೆದು ಪಾಱುವಿನಂ ವಸುದೇವವಲ್ಲಭಂ (?) (ಅರ್ಜನೇ. ೪-೦೩೯); ಮಿಸುನಿಯ ಟಂಕೆ ಸೇರಿದ ಮೊಗಮುಟ್ಟಿನ ಮಿಸಿಕಿಯನಾ ಪಾಹಕರು ಒಸೆದು ಸೇರಿಸಿದರು . . . ಆ ಜಾತಿತುರಗಕೆ (ಕುರಾಕಾಂ. ೯-೮೭) ; ಮೊಗಮುಟ್ಟು ಮುಂತಾದ ಸಂಜೋಗಕಕ್ಕಿರ್ದ ಕೆಗೆಗಳೊಳೆಡೆವಿಡದೆ ಕೀಲಿಸಿದ ಮುಕ್ಕಣ್ಣ ರುದ್ರಾಕ್ಷೆಯಿಂ . . . ರಾಜಾಶ್ವಪಾಶೀತಿಸಾಹಸ್ರವಿಕ್ಕಿಲದ ಹೇಷಾರವಂಗಳಿಂದಂದು ಗಗನಕ್ಕೆ ಕಾಲಿಡುತಿರ್ದಪು (ಜೇರವ. ೦೦-೪೩). [ಮೊಗ + ಮುಟ್ಟು$_2$. / ತೆಲು. ಮೊಗಮುಟ್ಟು]

**ಮೊಗಮುರಿ** ' ಮೊಗಂಮುರಿ ' ನೋ.

**ಮೊಗಮೋಟ** (ನಾ). (ಆಲಂ) ಭಂಗಿತನಾದವನು ; ಅವಮಾನಗೊಂಡವನು : ಮರುಳಾಗಿ ಮಂದಮತಿಯಾಗಿ . . . ಮೊಗಮೋಟ [ಪಾಠಾಂ. ಮಟ್ಟ]ನಾಗಿ ಎಂದುವರೆ ಕಾಡಿದಪೆ ತಂದೆ (ಸೋಮಶ. ೩-೭೭). [ಮೊಗ + ಮೋಟ$_2$]

**ಮೊಗರಂಬ,** ಮುಖರಂಬ, ಮೊಕರಂಬ, ಮೊಕರಂಬೆ (ನಾ). ಆನೆ, ಕುದುರೆ ಮುಂತಾದುವುಗಳ ಮುಖಕ್ಕೆ ಹಾಕುವ ಒಂದು ಬಗೆಯ ಅಲಂಕಾರದ ಸಾಧನ : ಭಾಳದ ಚಂದ್ರದ ಚಿತ್ರದ ಮೊಗರಂಬದ ಕೈದಾಳಿನ ಕಾಲ್ಗಾಪಿಂ ಹಡಿಯಂ ಪಣ್ಣಿದ ಕರಿಘಟೆ ನೆರೆದುವು ಬಲದೊಳಗೆ (ವೀರೇಶ. ೨-೨೮); ರನ್ನದ ಮೊಗರಂಬಂ ಪಡೆಯನ್ನೆಟ್ಟನೆ ಪೊಲೆ (ಧರ್ಮನಾ. ೪-೦೯); ಇಳುಹಿದನು ಬಲುಗುಳವ ಬಿಂಡಿಸಿ ಕಳಚಿದನು ಮೊಗರಂಬವನು

(ಶಬ್ದಮಣಿ. ೩-೫೨); ಮೊಗರಂಬ ಲೋಹಪಕ್ಕರಿಕೆಯು ಹಯಗಳು . . . ಬಂದುವು (ನಾಗಕು. ೦೬-೬೮). **ಮುಖರಂಬ:** ಬಂದ ಬೇಗದಿ ಹರನ ವಾಹನ ಬಸವಣ್ಣ ಚಿನ್ನದ ಹಕ್ಕರಿಕೆಯು ಮುಖರಂಬವು . . . ಸರಗೆಜ್ಜೆ ಉಲಿಯುಲು ಚೆನ್ನಮಾದೇಶಸೋಲಗಕೆ (ಮಹದೇಶ್ವಾಂ. ೨-೦೪೩). **ಮೊಕರಂಬ :** ರಂಗಾನ ತೇಜೀಗೆ ಹೊಂಬಾಳೆವಲ್ಯಾಣ ದುಂಡುಮಲ್ಲೀಗೆ ಮೊಕರಂಬ (ಹಳ್ಳಿಹು. ೩೨): ಮಾನವ . . . ಮೊಕರಂಬಗಳನ್ನು ಹಾಕಿ ಹೋರಿಗಳ ಬೆಡಗನ್ನು ನೋಡು ತ್ತಾನೆ (ಕರಿಕೋ. I. ೬೨೩). **ಮೊಕರಂಬೆ :** ಸಾವಿರ ಎತ್ತಿನ ಮುಂದೆ ಹೋಗೋದು ನಮ್ಮೆತ್ತು ಪಾದಕ್ಕೆ ಜಂಗು ಮೊಕರಂಬೆ (ಹಳ್ಳಿಹಾ. ೩೪); ಗಾಣಿಗರ ಕುಂಟೆತ್ತಿಗೆ ಯಾಕೆ ಮೊಕರಂಬೆ (ಜಾನಪ. ೧೩). [?]

**ಮೊಗರಸ** (ನಾ). ಮುಖದ ಕಾಂತಿ. — ತೇಜಸ್ಸು : ಘುಗುಘುಗನುರ್ಚಿ ಪಾಯ್ದು ಸಲೆ ದೇಹರಸಂ ಬಿಡುತೋಡಿತೆಲ್ಲಿಯುಂ ಮೊಗರಸಮೋಡಿತಿಲ್ಲ (ಸುಕುಮಾ. ೦೨-೪೦) ; ವೀರರಸ ಬಿಡದೊಸರ್ವ ಮೊಗರಸದ ಸ್ಮರವಿಕಾರದ ಮನವ ನೋಟದ ಗರುವಿಕೆಯುಲೀ ಮಾತ ನುಡಿವನು (ತೊರವೆ. ೩-೯-೩೭); ಬಿಡದೆಸೆದವು ವೀರಭಟರ ತಲೆಗಳಾ ಎಡೆಯೊಳು ಮೊಗರಸದಿಂದ (ಭರತೇಶಾಂ. ೩೭-೬೦). [< ಸಂ. ಮುಖರಸ]

**ಮೊಗರಾಗ** (ನಾ). ಮುಖದ ಬಣ್ಣ,— ರಂಗು : ವನಜಮುಖಿ ಬರಿದಾ ಮನುರಾಗದಿಂದಡಿಗಡಿಗೆ ಸೊಗಯಿಸಿದಳಾಗ ಮೊಗರಾಗದಿಂ (ಅಂಕ್ಷ. ೭-೨೭ ಠಗಳ) ; ಬೇಗಂ ಜಿನಚಂದ್ರನ ಮೊಗರಾಗಂ ಬೇಸಗೆಯ ಬಿಸಿಲೊಳಟಿದ ಹರಿದ್ರಾರಾಗದ ತೆಜದಿಂ ಕಂದಿ ಕುಂದಿದಾಗಳ್ (ಶಾಂತಿಪು. ೭-೯೦) ; ಗತದೋಷಗೆ ಕೃತದೋಷಗೆ ಹಿತಹಿತವಮಟ್ಟಿಲ್ಲಿ ಸರಿಯೆ ಮೊಗರಾಗಂ ಭೂಪತಿಗೇತನೆ ಪಾಲ್ ದೋಷೋದ್ಧತರಂ ಕೊಲ್ವಲ್ಲಿ ತನ್ನ ಮಯ್ಗಂದಿ ದುದೇ (ಕಾವ್ಯಸಾ. ೯೨೧). [<ಸಂ. ಮುಖರಾಗ]

**ಮೊಗರಾಗಂಗಿಡು** (ಕ್ರಿ). ಮುಖದ ಬಣ್ಣವು ಕೆಡು,— ಕಾಂತಿಹೀನ ವಾಗು : ಘನಸಮಯಮಂತಿಕ್ರಮಿಸೆ . . . ಗಿರಿಮಲ್ಲಿಗೆ ಬೀತು ಬಿನ್ನ ನಾಗೆಯುಂ ಕಡವು ಮೊಗರಾಗಂಗಿಡೆಯುಂ (ಶಂರಾಪು. ೭-೦೭೩ ವ).
[ಮೊಗರಾಗ + ಕಿಡು (< ಕಡು$_1$)]

**ಮೊಗರು$_1$** (ನಾ). ೧. ಎಳೆಗಾಯಿ ; ಮಿಡಿ ; ಹೀಚು : ಕಲ್ಪಲತೆಯ ದಾಂಗುಡಿಯು ಮೊಗರಂತೆಸೆವ ನಾಸಾವಂಶಮುಮಂ (ಚಳವಂ. ೬೮-೦೯) : ತಳಿರಿಂದ ಮೊಗರಿಂದ ಕಾಯಿ ಪಣ್ಣಿಂದ ಚೆಲುವೆಸೆವ ಪುಷ್ಪಗಂಧದ ಪರಿಮಳ ಗಳಿಂದ ಪುಷ್ಪದಿಂದಲಿ ಶಿವನ ಪೂಜಿಸುವ ನಾರಿ (ಶರೀ. ೨-೦೬). (ಗು). ೨. ಎಳೆಯದಾದ : ಹೀಚಾದ : ಆ ಹುಡುಗಿ ಎಳೆಮೊಗರು ಬದನೇಕಾಯಿ ಕೊಂಡುಕೊಳ್ಳುತ್ತ ಇದ್ದಳು (ಹೊಸತ್ತು. ೦೭೩). [ದೇ.॥ ತುಳು. ಮುಗುರು]

**ಮೊಗರು$_2$** (ನಾ). ಒಂದು ಬಗೆಯ ಭೂಮಿ (?) : ಬಿಜಮೊಗರಿಂ ವೂ ೩೧ ಕಾಗ ೧೮೨ (ಕ್ಕೌಇ. ೧೯೨೯, ಉಡುಬಿ. ೯೯೭-೨೩; 1310); ಭೂಮಿ ಯಲ್ಲಿ ನೀರು ಜಾಸ್ತಿ ನಿಂತ ಮೊಗರುಭೂಮಿ (ಕೃಷಿಕಾ. ೧೨೭).
[?·/ ತುಳು. ಮೊಗರ್=ಮರಳನಿಂದ ಕೂಡಿದ]

**ಮೊಗಲ, ಮೊಘಲ್** (ನಾ). ೧. ಒಂದು ಜನಾಂಗದ ಹೆಸರು : ಮಧ್ಯ ಏಷ್ಯಾದಿಂದ ಭಾರತಕ್ಕೆ ಬಂದು ನೆಲಸಿದ ಒಂದು ಮುಸಲ್ಮಾನ್ ಪಂಗಡ : ಕಾಂಭೋಜ ಕೊಂಕಣ ಮೊಗಲ ದ್ರಾವಿಡ ಗೌಡ ಗುರ್ಜರ . . . ಮಹಾರಾಷ್ಟ್ರಗಳ ನೃಪರೇಳ್ತಂದರು (ಮರೀಪು. ೪-೦೪) : ಈ ಕುಪಟೂರ ಸೀಮೆಗೆ ಮೊಗಲರ ಬಗೆ ಹಣ (ಎಕ. VIII, ಸೊರಬ. ೨೭೭-೦೪ ; 1629 ?); ಅರಬರು, ಬೆಲುಚಿಯರು, ಚೀನೀಯರು, ಮೊಗಲರು (ತುಳುನಾ. ೦೭೪). **ಮೊಘಲ್:** (ಗು). ೨. ಮೊಗಲರಿಗೆ ಸಂಬಂಧಿಸಿದ: ಮೊಘಲ್‌ವಾಸ್ತು ಶಿಲ್ಪವು ಭಾರತೀಯವಾಸ್ತುಶಿಲ್ಪದಲ್ಲಿ ಮುಖ್ಯವಾದದ್ದು (ಭಾರತ. ೩೦೬)
[←ಪಾರ. ಮುಘೋಲ್; ಹಿಂ. ಮುಗಲ್; ಮರಾ. ಮೊಗಲ್. ಮೊಂಗಲ್]

**ಮೊಗಲಾಯ್,** ಮೊಗಲಾಯಿ (ಗು). ೧. ಹಳೆಯ ಹೈದರಾಬಾದಿಗೆ ಸೇರಿದ. ೨. ಬಹಳ ಹಳೆಯದಾದ. (ನಾ). ೩. ಮೊಗಲರಿಗೆ ಸಂಬಂಧ ಪಟ್ಟದ್ದು : ಮೊಗಲಾಯ್‌ಸಾಮ್ರಾಜ್ಯದ ಪತನಕ್ಕೆ ಅವರ ದರ್ಪ ಕಾರಣ ವೆನ್ನುತ್ತಾರೆ (ರಜ೦). **ಮೊಗಲಾಯಿ :** ೩. ಆ ಕಾಲದಲ್ಲಿ ಮೊಗಲಾಯಿ ಚಕ್ರವರ್ತಿಯ ಪ್ರಭುತ್ವವು ಹಿಂದುಸ್ಥಾನದ ಅನೇಕ ಪ್ರದೇಶಗಳಲ್ಲಿ ಹಬ್ಬಿದ್ದಿತು (ಹಿಂಕಿರು. ೪೩).

**ಮೊಗಲಾಯ್‌ದೌಲತ್ತು** = (ಆಲಂ) ಸರ್ವಾಧಿಕಾರದ ದರ್ಪ.— ಠೀವಿ : ಆಕೆಯ ಮೇಲೆ ಮೊಗಲಾಯ್‌ದೌಲತ್ತು ನಡೆಸಿದೆಯಲ್ಲ ! (ಮುಹಾಗ. ೬೭).

[← ಹಿಂ. ಮುಗಲಈ. ಮುಗಲಾಈ ; ಮರಾ. ಮೋಗಲಾಈ ]

**ಮೊಗಲಾಯಿ** 'ಮೊಗಲಾಯ್' ನೋ.

**ಮೊಗಲಿಂಗಮರ** (ನಾ). ಒಂದು ಬಗೆಯ ಸಸ್ಯ : ಮೊಗಲಿಂಗಮರ. ಕಲ್ಗೊಂಟೆ. ಕಲಗಂಟೆ, ಗಂಟೆ (ವೃಕ್ಷನಿ. ೬೬-೦೩೯೭).
[ಮೊಗಲಿಂಗ? + ಮರ$_1$./ತೆಲು. ಮೊಗಲಿಂಗ]

**ಮೊಗಲೂರ್** (ನಾ). ಒಂದು ಊರಿನ ಹೆಸರು : P ಮುತ್ತಗಿ ಅಥವಾ ಮುಳ್ತಗಿ ಎಂಬ ಗ್ರಾಮವಿರುವ ಈಗಿನ ಬಳ್ಳಾರಿಜಿಲ್ಲೆ : ಮೊಗಲೂರ್ವಿಷಯೇ ಕಿಬಿಪಾಸಾಣನಾಮಧೇಯಗ್ರಾಮಸ್ಯ ಪೂರ್ವ್ವದಿಗ್ಭಾಗೆ ಮುಟ್ಟಗಿನಾಮಧೇಯ ಪ[ಲ್ಲೀ]ಮ್ಮಟಿಮ್ಯಾಪಸಹಿತಾಂ . . . ಸರ್ವ್ವಪರಿಹೃತಪರಿಹಾರಂಸಂಪ್ರ[ದತ್ತ][ವಾನ್] (ಎಇ. VIII. ೦೪೬-೭; ೯ನೆಯ ೬೪). [ ? + ಊರ್ ]

**ಮೊಗವಚ್ಚ** (ನಾ). ಮುಖದಲ್ಲಿ ಧರಿಸುವ ಓಲೆ, ಮೂಗುಬಟ್ಟು ಮುಂತಾದ ಒಡವೆ : ನಿಜದಿಗ್ವಿಜಯೋದ್ಗತಿವಿಕ್ರಮಪ್ರಭಾವಂ ತನಗಿಂಪು ಸೊಂಪೆಸೆವ ಸಿಂದುರದಂಗಮಂದಾಗೆ ನೋಡ ಭೂಕಾಂತೆಗೆ ಮೆಚ್ಚುವೆತ್ತ ಮೊಗವಚ್ಚಮನಾಗಿಸಿದಾ ಚಳುಕ್ಯರೋಳ್ (ಕ್ಕೌಇ. XVIII, ೨೯೭-೧೨;1188); ನಾಗಾರಿ ಧಮ್ಮಿಲ್ಲ ನಾಗಾರಿ ಮೊಗವಚ್ಚ . . . ನಾಗಾರಿ ಪಗೆಯಂತಿರೊಪ್ಪೆ ಕುಚಕುಟ್ಮಳಂ . . . ನಾಗಮೋಹಿನಿಯೆಸೆದಳು (ಲಿಂಗಲೀ. ೨೩-೩೬).
[ ಮೊಗ + ವಚ್ಚ$_2$ ]

**ಮೊಗವಟ್ಟ** (ನಾ). ಆನೆ, ಕುದುರೆ ಮುಂತಾದ ಪ್ರಾಣಿಗಳ ಮುಖಕ್ಕೆ ಹಾಕುವ ಒಂದು ಬಗೆಯ ಅಲಂಕಾರಸಾಧನ : "ಮೊಗವಡಮಶ್ವೇಭಂಗಳ ಮೊಗವಟ್ಟಂ" (ಕನಾರ್ಣ. ೩೯). 'ಮುಖಪಟ್ಟ' . 'ಮೊಗವಡ' ಪರಾ. [ < ಸಂ. ಮುಖಪಟ್ಟ ]

**ಮೊಗವಟ್ಟವ** (ನಾ). ಸಮ್ಮುಖ; ಎದುರು : ಶ್ರೀಪೃಥುವಿಗಂಗನ ಸೂಳೆ ಬೀರಕ್ಕನ ಮಗಂ ಎಜೆಕಳಿಂಗಂ ಪೃಥುವಿಗಂಗ ಮೊಗವಟ್ಟವದೊಳೆ ತಲೆಗಳಿಯಿಸಿ ಸತ್ತಂ (ಮೈಆರ್. ೦೯೪೪, ೦೦-೨ ; ಸು. ೯ನೆಯ ಶತ).
[ ಮೊಗ + ? ]

**ಮೊಗವಡ,** ಮುಕಾಡು, ಮುಖವಾಡ, ಮುಖಾಡ. ಮೊಕವಾಡ. ಮೊಗವಾಡ, ಮೊಗಾರ (ನಾ). ೧. ಮೇಲುಮುಸುಕು; ಅವಗುಂಠನ: ಮೊಗವಡಂಗವಿದಿರ್ದ ಕೂಸು ಭಟ್ಟವಿತ್ರಂಗೆ ಕುಡಿವೆಂದು ಕೀಜು ಚಿಲಾತ ಪುತ್ರಂ ಬೇಡಿದೊಡಂ ಕುಡದಿರ್ದೊಡೆ (ವಡ್ಡಾರಾ. ೦೭೭-೩). ೨. ಆನೆ. ಕುದುರೆ. ಎತ್ತು ಮೊದಲಾದುವುಗಳ ಮುಖಕ್ಕೆ ಹಾಕುವ ಒಂದು ಬಗೆಯ ಅಲಂಕಾರಸಾಧನ: ಇಕ್ಕಿದ ಲೋಹವಕ್ಕರಿಕೆಗಳುಮುರ್ಚಿದ ಮೊಗವಡಂಗಳುಂ . . . ಬೆರಸೆಱಂಕೆವೆರಸಿದ ಕುಲಗಿರಿಗಳೆ ತಳರ್ವಂತೆ ತಳರ್ವ ಮದಾಂಧಗಂಧಸಿಂಧುರಂಗಳುಮಂ (ಶಂಕಭಾ. ೦೦-೩೦ ವ): ಮದನಮದ ಗಜಕ್ಕೆ ಓಡಿದ ಮೊಗವಡಮೆನಿಸಿ (ವರ್ಧಕ. ೭-೦೨ ವ); ಪೊರ್ಕುಳ ಗಂಟೆಯ ಮೋಹಿಸುವ ಮೊಗವಡದ ರೂಹಿಸುವ ನೊಸಲ ಕನ್ನಡಿಯ ಕಡುಚೆಲ್ವ ಕೊಡಂಕೆಯ ಲಂಬಿಸುವ ಚಮರದ ಚಾರುತರಭೂಷಣಂ ಭೀಷಣವಾಗೆ

(ಗಂಳ. ೬–೫೫ ವ). ೩. (ಅಲಂ) ಮುಖಭಾವ; ಮುಖಮುದ್ರೆ: ಭೂಪಾಲಕನ ಮೊಗವಡದ ದುಗುಡವನುಗಿವೆ ನಾನೆಂದ (ಕುವ್ಯಾಕ. ೨೦–೨). **ಮಕಾಡು:** ೪. ಪ್ರಾಣಿಗಳ ಬಾಯಿಗೆ ಕಟ್ಟುವ (ಹಗ್ಗದ) ಕುಕ್ಕೆ : ಒಂದು ಗಟ್ಟಿಯಾದ ಮಕಾಡು ಕೊಡುವೆ; ಬಿಗಿದುಕೊಂಡು ಹೋಗು (ಪೊಂಮು. ೩೨). **ಮುಖವಾಡ :** ೩. ಸಮಾಧಾನದ ಮುಖವಾಡವನ್ನು ತಾಳಿ ಕುಳಿತಿದ್ದಳು ಶಾಂತಲೆ (ಶಾಂತಲಾ. ೨೬೬). ೫. ಮುಖಕ್ಕೆ ಹಾಕಿಕೊಳ್ಳುವ ಬೇರೆ ವ್ಯಕ್ತಿ, ಪ್ರಾಣಿ ಇತ್ಯಾದಿಗಳ (ಕೃತಕವಾದ) ಮುಖಾಕೃತಿ : ಈ ಭೂತಾರಾಧನೆಯಲ್ಲಿ ಹಂದಿಯ ಮುಖವಾಡವನ್ನು ಅದರ ಪಾತ್ರಿಯು ಧರಿಸಿ ಕುಣಿಯುವುದು ವಾಡಿಕೆಯಾಗಿದೆ (ಜಾನಗೀ. ೬೦); ಕಂಡೆ ನನ್ನ ಅಂತರ್ಯಾದಮರಪುರುಷನನು ತೆರೆಯಲಿಹನ ಮನದ ಮುಖವಾಡ ತೊಟ್ಟುಕೊಂಡ ಭದ್ರಾಕಾರ ಘನನ (ಅರಳು. ೦೬೯–೨); ಎಲ್ಲರೂ ಸೀನುಗಳ ಬೊಬ್ಬೆಯನ್ನೇ ಎಬ್ಬಿಸಿದ್ದರೂ ನಾನು ಮಾತ್ರ ಶೀತನಿರೋಧಕ ಮುಖವಾಡವನ್ನು ಧರಿಸಿದಂತೆ ಪ್ರಶಾಂತನಾಗಿದ್ದೆ (ಪಂಬಿರು. ೩೬).. ೬. (ದೇವರಿಗೆ ತೊಡಿಸುವ) ಚಿನ್ನ, ಬೆಳ್ಳಿ ಮುಂತಾದ ಲೋಹಗಳಿಂದ ತಯಾರಿಸಿದ ಮುಖದ ಆಕೃತಿ : ಇಂದೂ ಮಾನ್ವಿಯಲ್ಲಿ. . . ಅವರು ಸಾಮಾನ್ಯವಾಗಿ ಕೂಡುತ್ತಿದ್ದ ಸ್ಥಳ ಮತ್ತು ನಿರ್ಯಾಣ ಹೊಂದಿದ ಕಾಲದಲ್ಲಿ ಒರಗಿಕೊಂಡು ಕುಳಿತಿದ್ದ ಕಂಬಕ್ಕೇ ಮುಖವಾಡವನ್ನಿಟ್ಟು ಪೂಜಿಸುವ ಸಂಪ್ರದಾಯವನ್ನು ನೋಡಬಹುದು (ಜಗದಾ. ೦೩೬) ; ಮಾರುತಿಯ ಮುಖಕ್ಕೆ ಬೆಳ್ಳಿಯ ಮುಖವಾಡದ ಗಂಭೀರತೆ ಭವ್ಯತೆಯನ್ನೇ ತಂದುಕೊಟ್ಟಿತ್ತು (ಹಬ್ಬಬ. ೫). ೭. (ಅಲಂ) ಸೋಗು; ನಟನೆ : ದೇಶಸೇವೆ ನಿಖಿಲನಂತಹ ಉದಾತ್ತರಿಂದ ಆಗುತ್ತದೆಯೋ ? ಅಥವಾ ದೇಶಸೇವೆಯ ಮುಖವಾಡವನ್ನು ಧರಿಸಿದ ಸಂದೀಪನಿಂದಲೋ ? (ರವರ್ಣಕಾ. ೩೩) ; ಸಭ್ಯತೆ ಒಂದು ಸಾಮಾಜಿಕ ಮುಖವಾಡ (ವಾತ್ಸರ್. ೨೯೦). **ಮುಖಾಡ :** ೫. ಹೊಗರೊಗುವ ಬಚ್ಚಳೆಯ ನಂದಿಯ ಮೊಗದ ಮಾಳ್ಕೆಯೊಳಿಹ ಮುಖಾಡವ ನಗುತ ಶಂಕರದಾಸಿಮಯ್ಯನ ಮುಖಕೆ ಸೇರಿಸಿದ (ಶಂಕದಾ. ೬–೫). **ಮೊಕವಾಡ :** (೧). **ಮೊಗವಾಡ :** ೧. ಒಜತೆಯಗ್ಗಣಿಯನತಿಭಕ್ತಿಯ ಕರದೊಳು ಚಿಚ್ಚರದೆ ಮೊಗವಾಡದಾ ಕೇಶಿರಾಜಯ್ಯಂಗೆ ತರಿಸುತಿರೆ (ಶಾಸೋಕ. ೩–೨೫). ೫. ನಿಮ್ಮ ಶರಣರ ಸಂಗದಿಂದೆ ಎನ್ನ ನಂದಿಯ ಮೊಗವಾಡ ನೊಸಲಕಣ್ಣಂಬ ಅಹಂಕಾರವ ಮುಂದುಗೊಂಡಿದ್ದೆನಯ್ಯ (ಶೂನ್ಯಸಂ. ೩೬೫–೧೬೬) ; ಆನೆಯ ಮೊಗವಾಡವ ಧರಿಸಿದವನೇ (ಗಣೇಶ. ೦–೦೧). ೮. ಮುಖಮಂಟಪ ; ಮೊಗಸಾಲೆ : ಕಿಱುವಱಿಯನೆಱಂಕೆಯೊಳ್ ಪುದುಗಿಗೂಡಿನ ಮೊಗವಾಡದೊಳಿರೆಯಿರೆ . . . ಜೋಡಿಗನ ಬರವನೆ ಪಾರ್ವ ಪಣ್ಬಕ್ಕಿಗಳ ತಂಡದಿಂದೆಯುಂ (ರಾಮಾಶ್ವ. ೪–೦); "ಉದಿರ್ದ ಪೂವುಡಿ ಬನರಾಣಿಯ ಮೊಗವಾಡದ ಪಳಿಕಿನ ಪೊಸಂತಿಲೊಳ್ ಬರೆದ ರಂಗವಲ್ಲಿ"ಯಂತಿದ್ದಿತು (ಹಸುಹೊ. ೨೩೪); ಮಂದಾಕಿನಿ ಉಪ್ಪರಿಗೆಯ ಮೊಗವಾಡದಿಂದ ಕೂಗಿ ಕೇಳಿದಳು (ಇಶ್ಯಕ. ೨೩೦). **ಮೊಗಾರ :** ೮. ಕರೆಯದೆ ಕಾಡಿ ಕಂಟಿಸುವ ಕೂಂಟಣಿಯುಂ ನೊಣಗಜ್ಜಿ ತಿಂಗೆ . . . ಕಾಳಿ ಕೊಳ್ಗಱಿಯುಮಂ ಮುಱಿದಿಕ್ಕಿಗೆ ಮಾರಿ ಭೈರವಂ ಹರಮಗೆ ಮೇಳೆಯುಂ ಮುಱಿಗೆ ಮಾಳಬೆಗಿಂಪು ಮೊಗಾರಮೆತ್ತುವಂ (ರೀಲಾವ. ೨–೦೦೬; ಸೂಕ್ತಿಸು. ೮–೩೬೯ ನೋ). 'ಮುಖಾರ' ಪರಾ. [< ಸಂ. ಮುಖಪಟ್ಟ./ತಮಿ. ಮುಕಪಟ್ಟಂ, ಮುಕ್ಕಾಟು ; ಮಲ. ಮುಕಪಟ್ಟಂ, ಮುಕ್ಕಾಡು ; ತೆಲು. ಮೊಗವಡ, ಮೊಗವಾಡ, ಮೊಗವಾಳ. / ಮರಾ. ಮುಖವಟ, ಮುಖವಟಾ, ಮುಖವಟೀ, ಮುಖೋಟಾ]

**ಮೊಗವಡಂಗಳೆ** (ಕ್ರಿ). ಆನೆ, ಕುದುರೆ ಮುಂತಾದುವುಗಳ ಮುಖಕ್ಕೆ ಹಾಕಿರುವ ಅಲಂಕಾರಸಾಧನವನ್ನು ಕಳಚು, –ತೆಗೆ : ಅಗಳಾಕೆಯು ಮೇಲುದೋಸರಿಸೆ ಮೊಗವಡಂಗಳೆದ ಮದಸಮಾತಂಗಕುಂಭಯುಗಳದಂತಿರ್ದ ನೆಲೆಮೊಲೆಯುಂ ಕಂಡು (ಅಸಂಕ. ೬–೯ ವ): ಪರಿಚಾರಕಿಯರ್ ಬರುತಿರ್ದರೊಡ್ಡಿಸುತ್ತವರನೆ ಕಯ್ಯದಿಂ ಮೊಗವಡಂಗಳೆವಂಗಜಕುಂಭಿಯೆಂಬಿನಂ (ಪಾರ್ಶ್ವಕ. ೬–೯೪). [ ಮೊಗವಡ + ಕಳೆ$_1$ ]

**ಮೊಗವಡದೆಱೆ**[3] (ಕ್ರಿ). ಮುಖದ ತೆರೆಯನ್ನು ಸರಿಸು ; ಮೇಲುಮುಸುಕನ್ನು ತೆಗೆ : ಮಾರಿ ಮೊಗವಡದೆಱೆವವೊಲು ಜಜಾಹ್ಲರಮಾಸಾಳುಗಳು ನಿಜದಾತಾರನವಸರಕೊದಗಿ ಹಣವಿನ ಋಣನ ನೀಗಿದರು (ಕುವ್ಯಾದ್ರೋ. ೦–೫೦). [ ಮೊಗವಡ + ತೆಱೆ$^3_1$ ]

**ಮೊಗವರಿಕೆ** 'ಮೊಗವಱಿಕೆ' ನೋ.

**ಮೊಗವರಿಗೆ** (ನಾ). (ಆನೆಗಳ) ಮುಖಕ್ಕೆ ಹಾಕುವ ಗುರಾಣಿಯಾಕಾರದ ರಕ್ಷಣೆಯ ಸಾಧನ : ಗುಳ ಬಿಗಿದ ಜೆಂಚಿಯಂ ಮೊಗವರಿಗೆ ಕವಳಿಕೆಯಗಳೆ ನಿಂದ ಸಬಳಿಗರು ಜೋದಸಂಕುಳ . . . ವೀರಡಾಡೆಗಳುವೆರಸಿ ನಿಂದವು ಕರಿಗಳು (ಕೋಮುಕ. ೫–೩೦) ; ಕರಿಗಳ ಕೊರಳ ಮುಱಿಯೆಸು ಪೋರಣದ ಮೊಗವರಿಗೆಗಳ ಖಂಡಿಸುವ . . . ಜೋದರ ಧುರಚಮತ್ಕೃತಿ ಬೆಡಗನಿತ್ತುದು ದೇವಸಂತತಿಗೆ (ಕುವ್ಯಾಶೀ. ೪–೮೬). [ ಮೊಗ + ಪರಿಗೆ ]

**ಮೊಗವಱಿಕೆ**, ಮೊಗವರಿಕೆ (ನಾ). ಮುಖಪರಿಚಯ ; ಗುರುತು : "ಪರಿಚಯಂ ಸಂಸ್ತವಮೆನಲ್ಕೆ ಮೊಗವಱಿಕೆ [ಶಾಶಾಂ. ತ]" (ಮಂಗರಾ. ೦೩೪–೩೨). **ಮೊಗವರಿಕೆ :** ಈ ಮುಖದ ಮೊಗವರಿಕೆಯು ನನಗಿಲ್ಲದಿದ್ದಿರಬಹುದು (ಮಂತ್ರಕ. ೯೦–೦೫). [ ಮೊಗ + ಅಱಿಕೆ ]

**ಮೊಗವಱಿತ** (ನಾ). = ಮೊಗವಱಿಕೆ: "ಸಂಸ್ತವಃ, ಪರಿಚಯಃ– ಈ ೨ ಮೊಗವಱಿತಂ" (ಹಲಾಯು. ೦೨೬–೮೮); ಮದುವೆಯ ತುಪ್ಪಮಂ ಬಡಿಸಿ ಮೊಗವಱಿತವಂ [ಶಾಶಾಂ. ಮುಖದಱಿತವಂ, ಮುಖವನಱಿತವ] ಮಾಡಿಕೊಂಬೆನು (ಕೋಮುಕ. ೩–೩೯). [ ಮೊಗ + ಅಱಿತ ]

**ಮೊಗವಾಡ** 'ಮೊಗವಡ' ನೋ.

**ಮೊಗವಾಡನಾಟಕ** (ನಾ). ಮುಖವಾಡವನ್ನು ಹಾಕಿಕೊಂಡು ಆಡುವ ನಾಟಕ: "(ಕಲಾವಿನೋದಿಗಳು ಮೊಗವಾಡ ಧರಿಸಿ ಆದಿಯಲ್ಲಿ ಮೂಕನಾಟಕವಾಗಿ ಆಡುತ್ತಿದ್ದ, ಅನಂತರ ಸಂವಾದ, ಸಂಭಾಷಣೆ, ಸಂಗೀತ, ಮೊ.ನ್ನೊಳಕೊಂಡಿದ್ದ) ನಾಟಕವಿನೋದ ; ಮೊಗವಾಡನಾಟಕ" (Masque. ೩೦೪೩). [ ಮೊಗವಾಡ ( < ಮೊಗವಡ ) + ನಾಟಕ ]

**ಮೊಗವಾವುಡ**, ಮೊಗಪಾವಡ (ನಾ). ೧. ಮುಖದ ಮೇಲೆ ಹಾಕಿಕೊಳ್ಳುವ ಮುಸುಕು ; ಅವಗುಂಠನ : ಸಂಜಳಿಗೆಯು ಸಂಚಿ ಮೊಗವಾವುಡರನ್ನಗಂಬಳಿ ಹೊನ್ನ ಹಾವುಗೆಯು ಹೊಂಬಣ್ಣ ಮೆಯ್ಯ ಮಾನಿನಿಯರಾ ಕುವರಿಯ ಬೆಂಬಳಿವಿಡಿದೆಯ್ದಿದರು (ಮೋಹತ. ೨೪–೬). ೨. ಮುಖವನ್ನು ಒರೆಸಿಕೊಳ್ಳುವ ಬಟ್ಟೆ: ಬಿಡದೆ ಚುಂಬಿಸಿದಧರವನು ತೊಡೆದಲ್ಲದೆ ಯೋಗ್ಯವಲ್ಲೆಂದು ಮೊಗವಾವುಡವಿಡಿದಿರ್ದಳೊತ್ತಿನಲಿ (ಮೋಹತ. ೪–೬). **ಮೊಗಪಾವಡ :** ೧. ಮುನ್ನೆ ಶಿವಮುಗ್ಧ ದೇವರೆಂದುಂ ನಾಡೆ ಮೊಗಪಾವಡವ ಮಾಡಿಕೊಂಡಿರ್ದದೊರ್ಪಿ ನೆಲದೊಳ್ಬೀಳೆ ತನ್ನ ಮುಖಪದ್ಮವನದಂ ಭವಿ ಕಂಡನೆಂದಸುವ ಬಿಟ್ಟು (ಶಾಸೋಕ. ೦೦–೪೬).

[ ಮೊಗ + ಪಾವುಡ$_1$ ]

**ಮೊಗವಾಸ** (ನಾ). ಬಾಯಿಯನ್ನು ಸುವಾಸನೆಗೊಳಿಸಲು ಬಳಸುವ ಒಂದು ಬಗೆಯ ಸುಗಂಧದ್ರವ್ಯ ; ಮುಖವಾಸ: ಸುಖಿಸುವರೊಂದು ತಿಂಗಳುತ್ತಮ ಸುಗಂಧಾನುಲೇಪನದಿಂದೆ ಮೊಗವಾಸದಮಲತಾಂಬೂಲದಿಂ ಮಧುರ ಮಧುಪಾನದಿಂದೆಸೆವ ಸಂಯೋಗದಿಂದೆ (ಕೈವಲ್ಯ. ೦೫–೪೪).

[ < ಸಂ. ಮುಖವಾಸ ]

**ಮೊಗವಾಳೆ** (ನಾ). ೧. ಒಂದು ಬಗೆಯ ಬಾಳೆ : ಕಳೆದುರುಳಿದ ಗಜದಂತೆ ಕೈಕಾಲ್ಪಾಲಗಳಿನಾ ನೆಲನೊಪ್ಪಿದುದು ಕಳಲೆ ಕದಳಿ ಮೊಗವಾಳೆ ಬಲ್ಗಸಿಕಲ ಹಳುವ ಕುಮ್ಮರಿಗಡಿದಂತೆ (ನೇಮಿಸಂ. ೨೬–೬೦). ೨. ಪರಿಮಳದಿಂದ

ಕೂಡಿದ ಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ (?) : ಸುರಗಿ ಮೊಗವಾಳೆ ಬಂದುಗೆ ಪರಿಪರಿಯ ಸುಗಂಧಕುಸುಮ ವಳಕುಳವಿರ್ಕುಂ (ಶಬ್ದಾರ. ೬-೪೭). [ ಮೊಗ₂ + ಬಾಳೆ₁ (< ಬಾಟಿ¹) ]

**ಮೊಗವಿಕ್ಕು** ' ಮೊಗಮಿಕ್ಕು ' ನೋ.

**ಮೊಗವಿಡು** ' ಮೊಗಮಿಡು ' ನೋ.

**ಮೊಗವೀಣೆ** ' ಮೊಗಬೀಣೆ ' ನೋ.

**ಮೊಗವೀರ** ' ಮೊಗೇರ ' ನೋ.

**ಮೊಗವೂಱು** (ಕ್ರಿ). ಮುಖವನ್ನು ಊರು.—ತಿವಿ.– ಚುಚ್ಚು : ತೋರಿದು ವಾದ ಮಲ್ಲಿಗೆಯ ಮೊಗ್ಗೆಗಳೊಳ್ ಮೊಗವೂಱಿ ಬಿದ್ದು ಭೋರ್ಭೋರೆನೆ ಪಾಯ್ದು . . . ಕಾಱ ಕಡಲಿಟ್ಟುವು ಮತ್ತಮಧುವ್ರತಾಳಿಗಳ್ (ಲೀಲಾವ. ೯-೦೦೬). [ ಮೊಗ + ಊಱು₁ ]

**ಮೊಗವೆಱು ?** (ಕ್ರಿ). ಕಾಣಿಸಿಕೊಳ್ಳು (?) : ಅಗಣಿತ ಬುದ್ಬುದ ತೆರೆ ನೊರೆ ಸುಳಿ ನಾಭಿ ಮೊಗವೆತ್ತು ಜಂತು ಮೇಲಕ್ಕೆ ನೆಗೆವ ನೀರ್ವನಿಗಳು ಮುತ್ತಿನಂದದಿ ಕಣ್ಗೆ ಸೊಗಯಿಸಿತಾ ಪುಣ್ಯಗಂಗೆ (ಮೋಹತ. ೭-೩೩). [ ಮೊಗ + ಪೆಱು₁ ? ]

**ಮೊಗಶಾಲೆ** ' ಮೊಗಸಾಲೆ ' ನೋ.

**ಮೊಗಸಂದಿಸು** (ಕ್ರಿ). ಅಭಿಮುಖವಾಗು ; ಎದುರಾಗು: ಮೊಗಸಂದಿಸಿದವರಂಗಭವಗ್ರಹವಡರ್ದಂದದಿ ನೋಡಿದರು . . . ಪೂರ್ಣೇಂದುವದನೆ ನಟಿತರ್ಪಾಗಳ್ (ಜಯಿಸಾ. ೩-೩೩). [ ಮೊಗ + ಸಂದಿಸು ]

**ಮೊಗಸನ್ನೆ** (ನಾ). ಮುಖಭಾವದಿಂದ ತಿಳಿಸುವ ಸೂಚನೆ ; ಮುಖದ ಮೂಲಕ ಮಾಡುವ ಸಂಜ್ಞೆ : ಬಂದ ನೃಪಾಲಕರ ಮೊಗಸನ್ನೆಯೊಳು ಕಳುಹಿದನು ಮನೆಗಳಿಗೆ (ಕುಮಾ. ೬-೦); ಅರಸ ನಿನ್ನನುಮತವೆಯೆನೆ ನುಡಿಯದೆ ಭರತೇಶ ಮೊಗಸನ್ನೆಗೊಟ್ಟ (ಭರತ. ೩೯-೪೦) ; ಅಸುರಪರ್ದ ನನುಜೆ ಮೊಗಸನ್ನೆಯುಲಿ ಬೀಳ್ಕೊಳುತ (ಕೋಗಿಯು. ೦೩-೬೩). [ ಮೊಗ + ಸನ್ನೆ₂ ]

**ಮೊಗಸಾಲೆ**, ಮುಖಸಾಲೆ, ಮೊಗಶಾಲೆ (ನಾ). ದೇವಸ್ಥಾನ, ಅರಮನೆ, ಭವನ ಇತ್ಯಾದಿಗಳ ಮುಂಭಾಗದ ಹಜಾರ ; ಪಡಸಾಲೆ ; ಮುಖಮಂಟಪ : " ಪ್ರಘಣಃ, ಪ್ರಘಾಣಃ, ಅಳಿಂದಕಃ – ಈ ೩ ಮೊಗಸಾಲೆ " (ಶಬ್ದಮ. ೩೦-೧೪೪); ಸಪ್ತತಾಳೋತ್ತುಂಗರಮ್ಯಹರ್ಮ್ಯದರಡನೆಯ ಮೊಗಸಾಲೆಯೊಳಿಟ್ಟ ಪೊನ್ನ ಪಡಿಗಂಗಳೊಳಂ (ಶಂಕರ. ೪-೪೩ ಪ); ರಾಜಧಾನಿ ಬನವಾಸಪುರದ ಜಯಂತೀ ಮಧುಕೇಶ್ವರದ ಮೊಗಸಾಲೆಯುಮಂ (ಶಾಸ. XI-i. ೦೦೩-೨೫ ; 11ನೆಯ ಶ) : ನೆರೆಮನೆಯ ಮೊಗಸಾಲೆಯನ್ನು ಪ್ರವೇಶಿಸಿದನು (ಪುನರು. ೩). **ಮುಖಸಾಲೆ** : ಮುಂದಣ ಸೋಭನ × ಮಂತಮಂ ಪುರಮಂ ಮುಖಸಾಲೆಮಾಡಮಂ ಮಾಡಿಸಿ ಚಕ್ರಿಯೊಳ್ಪಡೆದು ಶಾಸನಮಂ (ಶಾಸ. XI-i. ೬೪-೦೪; 1028). **ಮೊಗಶಾಲೆ** : ಬಂದನು ಮೊಗಶಾಲೆಗೆ ಕೋಪಾಟೋಪದಿಂದ ಮೆಯ್ಮುಱಿದು ಕಂಪಿಲನು (ಕುಮಾರಾಮ. ೩೪-೦೫೫); ಭದ್ರಮಂಟಪದ ಮುಂದಣ ಮುತ್ತಿನ ಮೊಗಶಾ[ಪಾಠಾಂ. ಸಾ]ಲೆಯೊಳ್ . . . ಓಲಗಂಗೊಟ್ಟು (ರಾಜಶೇ. ೦೩-೬೦ ಪ); ಆಕೆ ನೇರವಾಗಿ ಮೊಗಶಾಲೆಗೆ ಬಂದಳು (ಬರಹಾ. ೦೭). [< ಸಂ. ಮುಖಶಾಲಾ./ತುಳು. ಮೊಕಸಾಲೆ, ಮೊಗಸಲೆ, ಮೊಗಸಾಲೆ; ತೆಲು. ಮೊಗಸಾಲ, ಮೊಗಸಲ]

**ಮೊಗಸಿಂಡರಿಸು** (ಕ್ರಿ). ತಿರಸ್ಕಾರ, ಜುಗುಪ್ಸೆ, ಕೋಪ ಮೊದಲಾದ ಭಾವಗಳನ್ನು ವ್ಯಕ್ತಪಡಿಸಲು ಮುಖವನ್ನು ಗಂಟುಹಾಕಿಕೊಳ್ಳು : "ಮೊಗಸಿಂಡರಿಸು —ಮೋರೆಯ ಗಂಟಿಕ್ಕು" (ಪಾರಿಭಾ. ೩೭). [ಮೊಗ + ಸಿಂಡರಿಸು]

**ಮೊಗಸಿರಿ**, ಮುಖಸಿರಿ (ನಾ). ೧. ಮುಖದ ಚೆಲುವು. ..ತೇಜಸ್ಸು,– ಕಾಂತಿ : ಕೋಡಗದ ಮೊಗಸಿರಿಗೆ ಕಾವಲಿಯೋಡು ಕನ್ನಡಿಯಾಯ್ತು (ಕುಮಾ. ೯-೦೩); ಬಿಂಬಾಧರದ ಕೆಂಬೆಳಗಿನೊಡನೆ ಸುಲಿಪಲ್ಲ ನುಣ್ಬೆಳಗು ಮೊಗಸಿರಿಯ ಮೆಯ್ಸಿರಿಯುಂ ಪಸರಿಸೆ (ರಾಜಶೇ. ೦-೦೩೫ ಪ). **ಮುಖಸಿರಿ** : ೨. ಮುಖಭಾವ; ಮುಖಮುದ್ರೆ : ತಿರಿವ ಗೊರವಾಗಿ ಕಂಡಕಂಡವರೆಲ್ಲ ನಗುತಿರೆ ಮುಂಡೆಯುರ ಮುಖಸಿರಿಯ ತಾಳಿದುಕೊಂಡು ಬಂದುದು ಭಂಗವಲ್ಲವೆ ಪತಿಯೆ ಬಿಡು ಸತಿಯ (ಕೌಶಿರಾ. ೩೬-೦೪). ೩. (ಕರಾ) ವಿಗ್ರಹಗಳಿಗೆ ತೊಡಿಸುವ ಚಿನ್ನ ಅಥವಾ ಬೆಳ್ಳಿಯ ಮುಖವಾಡ. [< ಸಂ. ಮುಖಶ್ರೀ]

**ಮೊಗಸು₁**, ಮೊಗೆಸು (ಕ್ರಿ). ೧. ತೊಡಗು ; ಉಪಕ್ರಮಿಸು ; ಆರಂಭಿಸು : "ಮೊಗಸು–ಉದ್ಯೋಗಾರಂಭೇ" (ಶಮಾ) ; ಮನೆಗೆಲಸಕ್ಕೆ ಸಯ್ತು ಮೊಗಸಲ್ಕಣಮಾಱದೆ ನೋಡಿ ಹೂಂಕೃತಧ್ವನಿ ಮಿಗಲಿತ್ತಲಾಗುಳಿಸಿ (ಸಮಶ. ೯-೦೦೯); ಮಂತ್ರಿಪುತ್ರರುಮಂ ಕೂಡಿಕೊಂಡು ನವಕ್ರೀಡೆಗೆ ವಿನೋದಜಳಕೇಳಿಗಳಂ ಮೊಗಸಲೊಡನೆ (ಅರ್ಜನೇ. ೪-೦೩೨ಪ); ಪೊಗಸಿನೊಳ್ ಮೊಗಸಿ ಬೈಗುವರೆಗಂ ಬೇಟೆವೆಸದಿನಸುವರೆಯಾಗಿ (ತಂತ್ರವು. ೯-೪ ಪ). ೨. ಎದುರಿಸು; ಪ್ರತಿಭಟಿಸು; ಹೋರಾಡು : ಕಾಲನಕವಿಗೆ ಮೊಗಸಿನಿಂದ ಕಪಾಲಿಗಿಮ್ಮಿಗಿಲೆನಬಹುದು (ತೊರರಾ. ೩-೨೦-೬೦); ಇವನ ಭೇದಿಪೊಡವನೆಡೆ ಗಾಣಿಸವನ ತಾನಿವನು ಭೇದಿಪೊಡೆಡೆಯಿಲ್ಲ ಅವಿರಳದಂತೆ ಮೊಗಸಿ ಬಾಣ ಬಾಣಗಳ್ ತಮೆಯುರುಳಿದವಂತರದಲಿ (ವರ್ಧಕ. ೭-೦೪); ತುಡುಕು ಮೊಗಸಡಗು ಮುರಕಡರೊಡರ್ಚು(ಕೃಷಿಸಾ. ೨೮-೪೫).೩.ಸುತ್ತುವರಿ; ಆಕ್ರಮಿಸು; ಆವರಿಸು : ಕಳ್ಳ ಗಂಧಕ್ಕೆ ಮೊಗಸಿದ ನೊಣಂಗಳೆಲ್ಲಂ ಸಾವುದಂ ಕಂಡು (ಧರ್ಮಾಮ್ರ. ೦೨-೦೯೬). ೪. ಧಾಳಿಮಾಡು; ಎರಗು : ಲತಾಂಗಿಯರ ಸುಯ್ಯ ಕಂಪಿಂಗಳಿಗಳ್ ಮೊಗಸಿ ಮುಸುಱಿದುವು (ಅನಂತ. ೦೦-೭೦); ತಳರ್ದು ಕುರುಕ್ಷೇತ್ರಕ್ಕೆ ಮೊಗಸಿಪಾಗಳ್ (ಶಂಕರ. ೦೦-೨೭ ಪ); ಗಿಳಿವಿಂಡ್ಗ ಗಿಡಿಗನು ಮೊಗಸಿದಂತೆ (ಲಕ್ಷ್ಮೀಶಾ. ೭-೩-೩). ೫. ಇಚ್ಛಿಸು; ಬಯಸು; ಅಪೇಕ್ಷಿಸು : ವಸುಷೇಣಂ ಲಗ್ಗೆಮಾಡಲ್ಮೊಗಸಿ ಪೊಗಿಸಿ ದುರ್ಗಕ್ಕಿಭವ್ರಾತಮಂ (ಅನಂಪು. ೦೨-೨೦); ವಿಮಲಾಂಗಿಯುನ್ನತದ ರೂಪನೀಕ್ಷಿಸಿ ಮೊಗಸಿ (ಪಾಕೋಕ್ತಿ. ೦೦-೩೦); ನೀರ್ವಕ್ಕಿಗಳ್ ಜಳಕೇಳಿಗೆ ಮೊಗಸಿದುವು (ರಾಮಾಶ್ವ. ೩೦-೨೪). ೬. (ಪ್ರಯಾಣಕ್ಕೆ) ಹೊರಡು; ಸಾಗು: ಅಟ್ಟಿಱಿ ನೊಳಯೋಧ್ಯೆಗೆ ಮೊಗಸಿದ್ದನಜಿಕೆಯ ಪಱಿ ಪಲವುಮೆಸೆಯೆ ಭರತಮಹೀಶಂ (ಅಂಕು. ೦೪-೨); ಕಳದ ಪೆಣನೊಟ್ಟಲಲಿ ಮೊಗಸುವೊಡಳುಕಿಹರು (ಕುಮಾವೀ. ೩-೦). ೭. ಮೂಡಿಸು; ಪ್ರಕಟಿಸು : ಸೊಕ್ಕುಜವ್ವನೆ ತರುಣವರ ಹಾಸವುಂ ಮೊಗಸೆ ಕೆಂಬಲ್ಲಿನುರು ರಶ್ಮಿ ಪರಹಿಕೊಂಡುದು (ಪರಶು. ೭-೨೩). **ಮೊಗೆಸು** : ೮. ತುಂಬಿ ಹೊರಸೂಸುವಂತೆ ಮಾಡು : ಹಾಲುಹೊಳೆ ಮೊಗೆಸಿದನು (ಪಪವಾ. 1,೪೬೦). ೯. (?): ಯಿದಕೆ ಆವವ ಅಳುಪಿದವರಿಗೆ ವಾರಣಾಸಿ ಆ ಗಂಗೆಯ ತಡಿಯಲಿ ಯೇಳುನೂರು[ಕ]ಪಿಲೆ ತಂಮ ತಂದೆ ತಾಯಿಯನು ಕೊಂದವರು ಮೊಗೆಸುಗೆ (ಎಕ. VIII (R), ಹಾಸನ. ೦೨೫-೨೦ ; 1458).

**ಮೊಗಮೊಗಸು** (ದ್ವಿರುಕ್ತಿ) : ಮೊಗಮೊಗಸಿ ಮುಂಬರಿವ ಕುದುರೆ ಸಾರಥಿಗಳಂ. . . ತಱಿವವನ ಬಿಲ್ಲನಿಕ್ಕಡಿಗೈದು ಬೊಬ್ಬಿಱಿದು (ಕೃಷ್ಣಾ. ೦೨-೨೨). [ಮೊಗ್₁ + — ಸು₁./ತಮಿ. ಮುಯಲ್; ತೆಲು. ಮೊಗಿಯು]

**ಮೊಗಸು₂** (ನಾ). ೧. ತೊಡಗುವಿಕೆ; ಪ್ರಾರಂಭಿಸುವಿಕೆ : ಮೊಗಸಂ ಮೆಲ್ಲನೆ ಪರಿಪೂರ್ಣತೆಗೊಳ್ದೇರುವಾರ್ಪನವರ ತನಿವ ಗೆಲ್ಲವ ಕವಿ ನಿರವಿಪಂ (ಸಂಗತ. ೦೩-೮). ೨. ಬಯಕೆ; ಅಪೇಕ್ಷೆ: "ಬಾಕುಳಿ, ಮೊಗಸು, ಪಸಂ, ಇಚ್ಛೆ – ಈ ೪ ಇಚ್ಛೆ" (ಶಬ್ದಮ. ೩೭-೨೩೩); "ಇಚ್ಛೆಯು ಮೊಗ[ಪಾಠಾಂ. ಮುಗು]ಸೆಂದೆನಿಕ್ಕು" (ಅಭ್ಯಕ್ಕ. ೬೨); ಜೊಬ್ಬುಲನ್ನೀಯೆ ಸನ್ನಿಹಿಸಿದ ಶಾಪೊಗ್ರಗಸಂ (ಗಿರಿಜಾಂ. ೨೭-೦೪). [< ಮೊಗಸು₁./ ತುಳು. ಮೊಗಸ್]

**ಮೊಗಸುತ್ತು** (ನಾ). ೧. ತಲೆಗೆ ಸುತ್ತುವ ವಸ್ತ್ರ: ಪಾಗು : ಅಂತು ಬಂದು ಮೊಗಸಾಲೆಯೊಳ್ಮೆಯ್ಯಿಕ್ಕಿ ಮೊಗಸುತ್ತಿನ ಮುಗುಲದ ಬಿನ್ನಪದ ಸೆಜಗನಧರಪಲ್ಲವಕ್ಕೆ ತೆಗೆದು . . . ಉದಯಸುಂದರಕುಮಾರನರಮನೆಯ ಬಾಗಿಲೊಳ್ಬಂದು ನಿಂದಿರ್ದಪನೆಂದು ಬಿನ್ನಪಿಸೆ (ಕಂರಾವೂ. ೨-೨೪). ೨. ದಿಗ್ಭ್ರಮೆ: ಕಕ್ಕಾಬಿಕ್ಕಿ: ಗೊಂದಲ : ಅವರು ಮೊಗಸುತ್ತಿನ ನಿರಾಶೆಯ ದುರ್ಮನದಿಂದ ಅವುದಾದರೂ ಅನಾಹುತಕ್ಕೆರಗಿ ದಾರಿಗಿಡದಂತೆ ನೀನು ನೋಡಿಕೊಳ್ಳುತ್ತಿರಬೇಕು (ಬಟ್ಟೆ. ೩೯-೨೨). 'ಮುಖಸುತ್ತು' ಪರಾ. [ಮೊಗ + ಸುತ್ತು$_2$]

**ಮೊಗಸೂನಿಗೆ** (ನಾ). (ರಥದ) ಮುಂಭಾಗದಲ್ಲಿ ಸಿಕ್ಕಿಸಿರುವ ಕಠಾರಿ : ಜೋರಿಸುವ ಮೊಗಸೂನಿ[ಪಾಠಾಂ. ರಿ]ಗೆಯ ಕೊಲ್ಲಾರಿಗಳ ಶರಬಂಡಿಗಳ ಹೋದೇರು ಕವಿದವು (ಕುವ್ಯಾ.ಶ. ೨-೪೪).

[ಮೊಗ + ಸೂನಿಗೆ (< ಸೂಲಿಗೆ)]

**ಮೊಗಳು. ಮುಗುಟು** (ನಾ). ೧. ಎಳನೀರಿನ ಮೇಲುಭಾಗದ (ಕೆತ್ತಿ ತೆಗೆಯುವ) ಸಿಪ್ಪೆಯ ಭಾಗ : ಎಳನೀರ ಕುಯಿದಿಳುವಿ ತಣ್ಣಸವಾದ ತಾಣದೊಳಗಿರಿಸಿ ಮಜ್ಜಂದಿನ ಮೊಗಳ ಕಳೆದು ನಿಂಬೆಯ ಹಣ್ಣಿನ ಹೊಸ ಹುಳಿಯ ಹಿಳಿದು (ಸೂಶಾ. ೨-೩೦); ಎಳನೀರಂ ಮೊಗಳ ತೆಗೆದು ಅದರಲ್ಲಿ ೧ರತೂಕ ಅಳಲೆಕಾಯ ಚೂರ್ಣವ ಹಾಕಿ ತಕ್ಷಣವೆ ಕುಡಿಯಲು ರಕ್ತಾತಿಸಾರಂ ಕೆಡುಗುಂ (ಸಳವೈ. ೩೦೦); ಹನ್ನೆರಡು ಎಳನೀರುಗಳನ್ನು ಕಿತ್ತು, ಕೆತ್ತಿ ಮೊಗಳು ತೆಗೆದುಕೊಟ್ಟನು (ತೆಂಗಾಳ್ವ. ೩೦೯). ಮುಗುಟು : ೨. (ಕರಾ) ತೆಂಗಿನಕಾಯಿಯ ತೊಟ್ಟು. ೩. (ಕರಾ) ಗಡ್ಡೆಗಳ ಮೊಳಕೆ.

[ದೇ.॥ ತಮಿ. ಮುಕಿಟು; ತುಳು. ಮುಗಡ್, ಮುಗಡ, ಮುಗಡೆ]

**ಮೊಗಾರ** 'ಮೊಗವಡ' ನೋ.

**ಮೊಗುಂ** 'ಮೋಘವು' ನೋ.

**ಮೊಗುಚು** 'ಮಗುಚು' ನೋ.

**ಮೊಗೆ$_1$** (ಕ್ರಿ). ೧. ದ್ರವಪದಾರ್ಥವನ್ನು ಬೊಗಸೆ ಅಥವಾ ಪಾತ್ರೆಯ ಮೂಲಕ ತೋಡು, – ತುಂಬಿಕೊಳ್ಳು : "ಮೊಗೆ – ಜಲಾಕರ್ಷಣೇ, ಘೂಭೇದೇ ಚ, ಘಟಭೇದೇ ಚ" (ಕವಿಧಾ); ಮಹಾಂಬುಧಿಯೆ ಗೆತ್ತು ಮುಗಿಲ್ಪಡುಗಿ ನೀರ ಮೊಗೆವವೊಲ್ . . . ನೀರಾಡುತ್ತಿರ್ದುವು ಸುತ್ತಮಲ್ಲಿ ವನಕರಿನಿವಹಂ (ಆದಿಪು. ೦೦೬); ಬೆಲಗಸೆ ಕೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು . . . ಬಗೆದುದಂದು ಜನಂಘ ನಚಂದ್ರಿಕಾಂಬುವಂ (ಅಜಿತ. ೬-೧೩); ತಲೆಗಳ ಬಟ್ಟಲಿಂ ಮೊಗೆದು ನೆತ್ತರಸಾಗಳೆ ಈಂಟಿಯಾಂಟಿ . . . ಕೈಪಚಿಯೊಳಾಡುವ ರಕ್ಕಸಿಯರ್ಕಳೊಪ್ಪಿದರ್ (ಕಬ್ಬಿಗ. ೨೬೩); ಜಲವನಂಜುಳಿಯಿಂದ ಮೊಗೆದೀಂಟಲು (ಕುವ್ಯಾ.ಅ. ೨೩-೦೬). ೨. ಬಾಚು ; ಗೋರು : ಸಹಕಾರದಾಡಿಮಫಲವ್ರಾತಂಗಳಿಂದಾಗಳುಂ ತನಿಗಂಪು ಮೊಗೆದತ್ತಿ (ಅರ್ಧನೇ. ೨-೭೦) ; ಸಿಂಹಪೀಠದ ಸಿಂಗರದ ಶಿಶುವ ಮೊಗೆದಪ್ಪಿ ತೆಗೆದಪ್ಪಿ (ಗಿರಿಜಾ. ೩-೦೦೯ ವ); ಸೂಸುವ ಮಿದುಳ ಮೊಗೆದೆಣ್ದೆಸೆಗೆ ಸಾಲಿಡುವ ಅಪಗನಾಯಿದು ಕೆದಟಿ ರಕುತವ ತುಡುಕಿ ಚೆಲ್ಲುವ ಕರಿಯ ಬರಿಕೈ ಬಿಡಿಸಿದವು ಹುಟ್ಟಾಗಿ ಯಮರಾಜನ ಪರಿಗ್ರಹಕೆ (ಕುವ್ಯಾ.ಭೀ. ೪-೦೨). ೩. ಕುಡಿ: ಈಂಟು : ಅಮೃತವೃಷ್ಟಿಗಳಂ ಕಟಿವಂತು ಪೇಟ್ಟಿ ತಿರ್ದಿದ ಕೃತಿಯುಂ ಬುಧರ್ ಕಿವಿಗಳಂ ಮೊಗೆವರ್ (ಚಮಿದ. ೦-೩೪); ಸರಸಿಯಲಿ ಮೊಗವಿಟ್ಟು ಮೊಗೆದವು ಪರಜಲವನೆರಡಳ್ಕಿ ಹಿಗ್ಗಲು (ಕುವ್ಯಾ.ದ್ರೋ. ೦೦-೩೪). ೪. ಹೊರಹೊಮ್ಮಿಸು; ಹೊರಹಾಕು : ತರುಣಿ ವೀಣೆಯ ಮಿಡಿವಳು . . . ಮಧುರಗೀತದ ನುಡಿಯೊಳು ತನ್ನೆದೆಯ ಭಾವವ ಮೊಗೆವಳು (ಚಿತ್ರಾಂಗ. ೩೨-೬): ಪ್ರತಿಕ್ಷಣಕ್ಕೂ ಮಾಡಿದ ಪಾಪವೆಲ್ಲ ಇತಿಹಾಸವಾಗಿ ಅವಳ ದುಃಖವನ್ನು ಮೊಗೆಯುತ್ತಿತ್ತು (ಗ್ರಾಮಾಯ. ೨೩೪). ೫. (ತುಂಬಿ) ಹೊರಸೂಸು : ತುಳುಕು : ಸುರರಳ್ಕಿ ದಿಗಿಭಂಗಳ್ ಬಳ್ಕೆ . . . ಬೆಟ್ಟುಗಳ್ ಜರಿಯೆ ಕಡಲ್ ಮೊಗೆಯೆ ಔತ್ಪಾತಕವೊಗೆಯೆ ಸಬ್ಬಸಬ್ಬರಂ ಕಡಿದಾಯ್ತು (ರಾಮಾಶ್ವ. ೦೩೦-೨೭); ಇವಳ ರಸದೆದೆಯ ಮುನ್ನೀರು ಮೊಗೆದೆದ್ದು ನೊರೆಯ ಚಿಮ್ಮಿತ್ತು (ಸತಾ. I. ೪೩೪). ೬. ಎರೆ; ಸುರಿ : ತರಕಾರಿ ಗಿಡಗಳಿಗೆ ಏತದ ನೀರು ಮೊಗೆಯಲು . . . ಉದಾಸೀನಪಟ್ಟುದಿಲ್ಲ (ಕ್ರಾಂತಿಸು. ೩). ೭. ಧಾಳಿಯಿಡು ; ಅಕ್ರಮಿಸು : ಏನ ಹೇಳುವೆನವನು ನೃಪ ತವಸೂನುವಿನ. ಮೋಹರದೊಳಳ್ಳಿಜಿವಾನೆಗಳನುಪ್ಪರಿಸಿ ಗಗನವ ಮೊಗೆವ ಕುದುರೆಗಳ (ಕುವ್ಯಾ.ದ್ರೋ. ೪-೨೦) ; ಹಾಯಿತುರಿ ಹೊದಜಿದ್ದು ಕೊಡಲಿಯ ಬಾಯ ಧಾರೆಯುಲಬಿಳಜಗ ಜರಿದಾಯೆನಲು ಸೀವರಿಸಿ ಶಿಖಿ ಬೊಗೆದುದು ಮರುತ್ಪಥವ (ತೊರವೆ. ೦-೦೭-೦೦). ೮. (ಅಲಂ) ಸೆರೆ ಹಿಡಿ : ಉತ್ತರಗೋಗ್ರಹಂ ಪಿರಿದುಮಾಗ್ರಹವುಂ ಮನದೊಳ್ ತಗುಳ್ದೆ . . . ಬಂದು ಮುತ್ತಿ ಮೊಗೆದಂ ವಿಭು ಗೋಕುಲವುಂ ವಿರಾಟನಾ (ಪಂಪಭಾ. ೮-೯೨). ೯. ನುಂಗು : ಕಬಳಿಸು : ಅಡವಿಯುಂ ಮೊಗೆದು ಸುಡುವಗ್ನಿಗಾವೋಸನದ ಗೊಡವೆಯೇವುದು (ಹರಿಶ್ಚ. ೬-೪೩); ಭುಗಿಲು ಭುಗಿ ಭುಗಿ . . . ಎಂದೊಗೆದು ವಳ್ಳುರಿಯುಗಳಲಿಂಬರಕುಗಿದು ಜಿಗಿದುದು ಮತ್ತೆ ಹರಿದುದು ಲೋಕ ಬೆದಜ್ತಿರೆ ಮೊಗೆದು ಮುಕ್ಕಿತು ಕೊರಳ ಕಡಿಯಲು ನೆಗೆದು ಹಾಜೀತು ರುಂಡ ಶೋಣಿತವೊಗುತ (ಕೌಶಿರಾ. ೩೭-೭೪).

**ಮೊಗೆಮೊಗೆ** (ದ್ವಿರುಕ್ತಿ) : ಮೊಗೆಮೊಗೆದು ನೆತ್ತರಂ ಪವನಸುತಂ ನೆತ್ತಿಯೊಳೆಜಿದೆಜಿದಿನಿಸಜಿಯೊತ್ತಿ . . . ಕೇಶಮನೆತ್ತಂ ಪಸರಿಸಿದಂ (ಪಂಪಭಾ. ೧೨-೦೩೩); ಶಂಭುಯೋಗಸುಖಾಮೃತವನೆಯ್ದೆ ಮೊಗೆಮೊಗೆದು ಹೀರ್ದು (ಶವ್ಯಾ. ೨-೭೮); ಒಡೆದು ಬೊಮ್ಮನಜಾಂಡವೊಂದೆಡೆ ಕಡಲ ಮೊಗೆಮೊಗೆದಲ್ಲಿ ತುಂಬುದೆ (ಕೌಶಿರಾ. ೦೫-೪೩).

[ದೇ.॥ ತಮಿ. ಮುಕ; ತುಳು. ಮುಗವು. ಮೊಗವು; ಕೋತ. ಮುವ್]

**ಮೊಗೆ$_2$. ಮುಗೆ$_1$. ಮೊಘೆ** (ನಾ). (ನೀರು ಮುಂತಾದ ದ್ರವಪದಾರ್ಥವನ್ನು ತುಂಬಿಕೊಳ್ಳಲು ಬಳಸುವ) ಮಣ್ಣಿನ ಪಾತ್ರೆ : ಎಮ್ಮಾಕೆಯ ಕೈಯ ಮೊಗೆಯು ನೀರಿನಲ್ಲಿ ನಾಮುವ ತೇಯಲಾಗಿ ನಾಮವುಳಿದು ನೀರಳಿಯಿತ್ತು (ಸಳವ. ೪. II. ೨೦೬-೩೩೦); ಒಂದು ಮೊಗೆಯಕ್ಕಿಗಚ್ಚೊಂದು ಮೊಗೆ ಮಜ್ಜಿಗೆಯನೊಂದಾಗಿ ಬೆರಸಿ (ಸೂಶಾ. ೨-೪೯); ಪೊಸಮೊಗೆಯೊಳಂ ಸುಣ್ಣ ತುಂಬಿರಿಸಿರೆ (ಗುರುಚಾ. ೦೩-೭೩). ಮುಗೆ$_1$ : ಇಪ್ಪತ್ತು ಮುಗೆ ನೀರು ಹೊಯ್ದು (ಸಳವೈ. ೨೨೩). ಮೊಘೆ : ಅರವಟ್ಟಿಗೆಗೆ ಗುಡಾಣ ಬಿಂದಿಗೆ ಕರಗ ಮೊಘೆಗಳ ಕ್ರಯಕ್ಕೆ (ಶಾಇಪ್ರ. IX-i. ೪೩೭-೨೪; 1412).

[< ಮೊಗೆ$_1$. /ತಮಿ. ಮುಕ್ಕೈ; ತುಳು. ಮುಗಯಿ. ಮುಗೆ. ಮುಗ್ಯೆ]

**ಮೊಗೆ$_3$** (ನಾ). ಒಂದು ಬಗೆಯ ಭೂಮಿ; ಹಳದಿಬಣ್ಣದಿಂದ ಕೂಡಿದ ಫಲವತ್ತಾದ ಭೂಮಿ : ಸರ್ವನಮಸ್ಯ ಮೊಗೆ ಮತ್ತರಾಜಕಂ (ಶಾಇಪ್ರ. XI-ii. ೦೦೯-೩೨; 948); ದೇವರ್ಗ್ಗೆ ಬಿಟ್ಟ ಬೆದ್ದಲು ಮೊಗೆ ಮತ್ತ ೭ (ಶಾಇಪ್ರ. IX-i. ೯೭-೦೩; 1050 ?); ಶ್ರೀಮಾನ್ಯವಾಗಿ ಬಿಟ್ಟ ಕೆಯಿ ಹಗರೆಯಿಂ ಪಡುವಲು ಮೊಗೆ ಮತ್ತರು ೪ (ಶಾಇಪ್ರ. IX-i, ೩೦೭-೩೭; 1223). 'ಮೊಗರು$_2$' ಪರಾ. [ ? ]

**ಮೊಗೆತರ್** (ಕ್ರಿ). ತುಂಬಿಕೊಂಡು ತರು : ಛಂದೋಂಬುರಾಶಿಯೊಳ್ ಮೊಗೆತಂದವನಾತ್ಮೀಯಸತಿಗೆ ನಾಕಿಗನುಸಿರ್ದಂ (ಛಂದೋಂಬು. ೧-೩೦).

[ಮೊಗೆ$_1$ + ತರ್]

**ಮೊಗೆಬಲೆ** 'ಮೊಗೆವಲೆ' ನೋ.

**ಮೊಗೆವಲೆ. ಮೊಗೆಬಲೆ** (ನಾ). ಮೀನನ್ನು ಹಿಡಿಯಲು ಬೆಸ್ತರು ಉಪಯೋಗಿಸುವ ಒಂದು ಬಗೆಯ ಬಲೆ : ಆವ ಹಂಜರಕೂಳಿ ಮೊಗ[ಗೆ]ವಲೆ ಯಾವ ಗಾಣವು ಬೀಸುವಲೆಯುಜಿ ತೀವಿದುದಕದ ಮಡುವೆಯಿದು ಸಂಗ್ರಾಮಭೂಮಿ ಟಿಣಾ (ಕುವ್ಯಾ.ಕ. ೨೨-೨೬). ಮೊಗೆಬಲೆ : "ದೊಡ್ಡ

ಬಲೆಯಲ್ಲಿ ಮೀನು ಹೆಚ್ಚಾಗಿ, ಆ ಬಲೆಯನ್ನು ದಡಕ್ಕೆ ಎಳೆಯಲಾಗದೆ ಹೋದಾಗ, ಕೆಲವು ಮೀನುಗಳನ್ನು ತೆಗೆದುಬಿಡುವುದಕ್ಕಾಗಿ ಅದರೊಳಕ್ಕೆ ಹಾಕುವ ಬೇರೆ ಸಣ್ಣ ಬಲೆ: ಮೊಗೆಬಲೆ" (spiller. ೩೦೪೬).

[ಮೊಗೆ$_1$ + ಬಲೆ$_1$]

**ಮೊಗೆವಾಲು** (ನಾ). ಮಡಕೆಯ ತುಂಬ ಇರುವ ಹಾಲು : ಶುನಕಿ ಮೊಗೆವಾಲಂ ಕುಡಿದು ಪೋಗೆ (ಬಸವ. ೦-೨೦).

[ಮೊಗೆ$_2$ + ಪಾಲು$_1$ (< ಪಾಲ್$_1$)]

**ಮೊಗೆಸು** 'ಮೊಗಸು$_1$' ನೋ.

**ಮೊಗೇರ,** ಮೊಗವೀರ (ನಾ). (ಕರಾ) ಮೀನುಹಿಡಿಯುವವನು ; ಬೆಸ್ತ ; ಮೀನುಗಾರ : ಘಡ ಮೊಗೇರರ ಮಗನೆ (ಕುಮುದಾ. ೩೭) ; ಎಲೆ ಮೊಗೇರನ ಮಗನೆ ಗಳಹದಿರು (ಕರ್ಣಾಕಾ. ೭) : ಕನ್ನಡ – ತುಳು ನಾಡುಗಳಲ್ಲಿ ಸ್ವಭಾವತಃ ಅತಿಶೂರರೂ ಧರ್ಮಶ್ರದ್ಧಾಳುಗಳೂ ಆದ ಮೊಗೇರರೆಂಬ ಅಂಬಿಗರಿರುತ್ತಾರೆ (ಕನ್ನ೩. ೯೩). **ಮೊಗವೀರ** : ಕಡಲಲ್ಲಿ ತಮ್ಮ ಭಾಗ್ಯವನ್ನು ಅರಸಲು ಹೋದ ಮೊಗವೀರರ ದೋಣಿಗಳು ಪುಟ್ಟ ಬಾತುಕೋಳಿಗಳಂತೆ ಕಾಣುತ್ತಿದ್ದುವು (ಕಪತ್ತ. ೭-೩೩) ; ತರುವಾಯ ಮೊಗವೀರ ಹುಡುಗಿಯರನ್ನು ಬ್ರಾಹ್ಮಣಕನ್ಯೆಯರನ್ನಾಗಿ ಪರಿವರ್ತಿಸಿ . . . ಮದುವೆ ಮಾಡಿಕೊಂಡರು (ದೀಪಹಂ. ೪೯). [← ತುಳು. ಮೊಗೇರೆ]

**ಮೊಗೇರತಿ** (ನಾ). ಬೆಸ್ತರವಳು ; ಮೀನುಗಾತಿ : ಯಾರೋ ತನ್ನೀತೆಯೇ ತಡ ಮಾಡಿ ಹೊರಟ ಮೊಗೇರತಿ ಇರಬೇಕು (ಹೊಸಕ್ಷ. ೩೦).

[ಮೊಗೇರ + – ತಿ$_1$ (< – ಇತ್ತಿ)]

**ಮೊಗ್ಗಂಬ** (ನಾ). ಮೊಗ್ಗುಗಳನ್ನೇ ತನ್ನ ಬಾಣಗಳಾಗಿ ಉಳ್ಳವನು ; ಮನ್ಮಥ : (ಕತುಶ. ೬. II. ೯೩).

[ಮೊಗ್ಗು$_3$ (< ಮೊಗ್ಗೆ) + ಅಂಬು$_2$ + – ಅ$_7$]

**ಮೊಗ್ಗರ,** ಮೊಕರ (ನಾ). ೧. ಮೊತ್ತ ; ರಾಶಿ : "ಮೊತ್ತಮೊಬ್ಬುಳಿಯು ಮೊಗ್ಗರಂ" (ಕವಿಕಂ. ೦೦೭) ; ಅಬಲೆಯ ಕಣ್ಣ ಬೆಳಗಿಂಗೆ ಬೆದಱಿ ಕಟ್ಟಿಲೆಯ ಮೊಗ್ಗರಂ ಮುಗುಳ್ದು ಮೂದಲಿಸಿ ಕವಿವಂತೆ (ಅರ್ಜನೀ. ೪-೩೦ ವ) ; ಕೋರಕದ ಕುಟ್ಮಲದ ಮೊಗ್ಗೆಯ ಮೊಗ್ಗರ ಗಳನಾಯ್ದು ಕೊಯ್ದು (ಅನಂತ. ೭-೧೪ ವ). ೨. ಗುಂಪು ; ತಂಡ ; ಸಮೂಹ : ಕರಿಗಳ ಮೊಗ್ಗರವ ಮೆದೆಗೆಡಹಿದನು (ಕುವ್ಯಾಶೀ. ೬-೪೭) : ಹೆಗ್ಗರಡಿಯ ಹಿಂಡಿದೆ ಕಾಳ್ಕೋಣನ ಮೊಗ್ಗರವಿದೆ (ಕುಮಾರಾಂ. ೨೭-೭೦) ; ಮಗ್ಗಿಯನು ಗುಣಿಸುವ ಮೊಗ್ಗರದ ಜೋಯಿಸರು ಅಗ್ಗವನು ಮಳೆಯನಱಿಯರು (ಸರ್ವಜ್ಞ. ೦೭೦೪). ೩. ದಂಡು ; ಸೈನ್ಯ : ಬಲ : "ಮೊಗ್ಗರಮೆನೆ ಬಲಂ" (ಶಾರಶಿ. ೦೭) ; ಬಿಲ್ಲನೀಟ್ಟುಕೊಂಡೆತ್ತುತೆ ಮೊಗ್ಗರಂ ಕೆಡೆವಿನಂ ಬಿಡದೆಚ್ಚು (ಚಂದ್ರಶೃ. ೩-೦೦೦) : ಮೊಗ್ಗರವ ಕೆದಱಿದರು ಹೊಯ್ದರೆ ನುಗ್ಗಿದರು (ಕುವ್ಯಾಶೀ. ೪-೯) ; ಲಗ್ಗೆ ಮಸಗಿತು ಕೂಡೆ ರಕ್ಕಸ ಮೊಗ್ಗರದ ಮುಂಬಿನಲಿ (ತೊರರಾ. ೭-೨೦-೩೦). **ಮೊಕರ** : ೪. (ಸೈನಿಕರ) ಪಂಕ್ತಿ ; ಸಾಲು : ಎಚ್ಚಿದಿಸ್ವರು ಸರಮೊಕರಮನೊಡೆದೊಡಪ್ಪಡೆತ್ತದು ಪುಣಿ ಸೂರ್ಪ್ಪನಲ ನೆಲ್ಲುಪಾಣ್ಣೆಯುವಳೆವದು (ವ್ಯಾಅಂ. ೦೯೩೦, ೩೭-೭ ; ಸಂ. ಕನ್ನಡು ೩೩). [ದೇ.॥ ತೆಲು. ಮೊಗ್ಗರ, ಮೊಗರ]

**ಮೊಗ್ಗರಂಬಾಯ್,** ಮೊಗ್ಗರವಾಯ್ (ಕ್ರಿ). ಒಟ್ಟಾಗಿ ನುಗ್ಗು : ಗುಂಪಾಗಿ ಮೇಲೆ ಬೀಳು : ಮುಂ ಗುಡಿಗೆದಱಿ ಮೊಗ್ಗರಂಬಾ[ಶಾಕಾಂ. ಬೊ. ವಾ. ಬ]ಯ್ದು (ಪಂಬಿಶ. ೦೯-೩೩). **ಮೊಗ್ಗರವಾಯ್** : ಮಾರಿ ಕನಲ್ದು ಸಂಗರಕೆ ಮೊಗ್ಗರವಾಯ್ದುವೊಲ್ (ದಶಕು. ೭-೭೩) ; ಉಲಿದು ಘೂರ್ಮಿಸಿ ಕೆರಳಿ ಮೊಗ್ಗರವಾಯ್ದುದೆ ಬಱಿದೆ (ಶ್ರಕುಂೀ. ೦೩-೦೦).

[ಮೊಗ್ಗರ + ಪಾಯ್$_1$]

**ಮೊಗ್ಗರಂಬೊಯ್** (ಕ್ರಿ). ಗುಂಪಾಗಿ ನುಗ್ಗಿ ಹೊಡೆ, – ಧಾಳಿಮಾಡು : ಮುಸಗಿ ಬೊಬ್ಬಿಟ್ಟು ದೆಸೆಗೆಸೆಗೆ ಪರಿದು ಮೂದಲಿಸಿ ಮುಂಗುಡಿಗೆದಱಿ ಮೊಗ್ಗರಂಬೊಯ್ದು (ಗಂಶ. ೭-೭೭ ವ). [ಮೊಗ್ಗರ + ಪೊಯ್$_1$]

**ಮೊಗ್ಗರಣೆ** (ನಾ). ಒಂದು ಬಗೆಯ ಆಯುಧ : ಗದೆ ಚಂದ್ರಹಾಸ ವಿಚಂಡಿ ಮೊಗ್ಗರಣೆ ಕೃಪಾಣ ದಂಡರತ್ನಾಯುಧಾವಳಿಗಳಿದ್ದುವು ಸರ್ಪಮಂಡಲವೆನೆ ಭುಗಿಲಿಡುತ (ಭರತ. ೨೦-೦೩೩). [ ? ]

**ಮೊಗ್ಗರವಾಯ್** 'ಮೊಗ್ಗರಂಬಾಯ್' ನೋ.

**ಮೊಗ್ಗರಿಸು** (ಕ್ರಿ). ಒಟ್ಟಾಗು ; ಸೇರು ; ಗುಂಪುಗೂಡು : ಬಗ್ಗಿಸಿ ಮೊಗ್ಗರಿಸುತ್ತೊಗ್ಗುಗೆಡದೆ ನಡೆಗೋಂಟೆಯಂತೆ ನೆಲೆವೆರ್ಚಿ ನಿಂದು (ಗಂಶ. ೭-೩೩ ವ); ಆರ್ವ ಪೋರ್ವ ಮೊಗ್ಗರಿಪ ತೊಡಂಕುವಗ್ಗಲಿಪ ಬನ್ನಣಮೊಪ್ಪೆ ಕಡಂಗಿ ಕಾದಿದರು (ರಾಜಶೇ. ೭-೭೩) : ಮೊಗ್ಗರಿಸಿ ಮೊರೆ ಮುಗಿಲೆ! ಮಿನುಗು ಮೊನೆಮಿಂಚೀ ! (ಗೀಪಿಂ. ೪೬-೨).

[ಮೊಗ್ಗರ + – ಇಸು$_3$]

**ಮೊಗ್ಗಳ** 'ಮೊಕ್ಕಳ' ನೋ.

**ಮೊಗ್ಗಿಸು$_1$** 'ಮೊಟ್ಟಿಗ್ಗಿಸು' ನೋ.

**ಮೊಗ್ಗಿಸು$_2$** (ಕ್ರಿ). ಬಗುಳು : ಗಗನದೊಳಗೆ ಹುಣ್ಣಿಮೆ ಹೋದ ಮುಱುದಿನ ಪಗಲೆಸೆದಿರಲಾತನೊಡಲ ಮೃಗ ಮೊಲಗಂಡು ಮೊಗ್ಗಿಸು ವೊಂದಂದದಿ ಮೊಗವೆತ್ತಿ ಗಳಹುತೆಯ್ದಿದುವು (ಮೋಹತ. ೦೯-೦೩).

[ಮೊಗ್ಗು$_?$ + – ಇಸು$_3$]

**ಮೊಗ್ಗು$_1$** 'ಮೊಬ್ಗು$_1$' ನೋ.

**ಮೊಗ್ಗು$_2$** 'ಮೊಬ್ಗು$_2$' ನೋ.

**ಮೊಗ್ಗು$_3$** 'ಮೊಗ್ಗೆ' ನೋ.

**ಮೊಗ್ಗೆ,** ಮುಗ್ಗು$_2$, ಮುಗ್ಗೆ$_1$, ಮೊಗ್ಗು$_3$ (ನಾ). ೧. ಪೂರ್ತಿಯಾಗಿ ಅರಳದೆ ಇರುವ ಹೂವು ; ಮುಗುಳು ; ಕುಟ್ಮಲ : "ಸಜ್ಜುಕಮುಂ ಮುಗುಳು ಮೊಗ್ಗೆ ಕುಟ್ಮಳಮದು ತಾ" (ಕವಿಕಂ. ೭೪); ಜಳಜದ ಮೊಗ್ಗೆಯಂತೆ ಮುಗುಳಂತೆ . . . ಕೆಂಪನಾಳ್ದ ಕೋಮಳಶುಕಶಾಬಕ ಪ್ರಕರಮುಂ ತೆಗೆದುಂ ದಯಗೆಟ್ಟು ಲುಬ್ಧಕಂ (ಕಾದಂಪೂ. ೦೭೯) : ಪೊಕ್ಕತ್ತು ತುಂಡಾಗ್ರದಿಂದೊಡೆದಂಭೋಜದ ಮೊಗ್ಗೆಯಂ ಮಧುಕರಂ (ಅರ್ಜನೀ. ೨-೩೭) : ಕುಸುಮದ ಮೊಗ್ಗೆಯಲಿ ರಚಿಸಿದರು ಸಿರಿಮುಡಿಯ (ಕುವ್ಯಾಆ. ೯-೨) ; ಮಲ್ಲಿಗೆಯ ಮೊಗ್ಗೆಗಳನಮಲೋತ್ಪಲಕುಂದಪ್ರಸವದೂರ್ವ . . . ಸಲ್ಲಲಿತ ಪುಷ್ಪಂಗಳಲಿ ಭೂವಲ್ಲಭನು ಪೂಜಿಸಿದನು ಜಗದೇಕವಲ್ಲಭನ (ಸಭಾಗ. ೩-೩-೦೨). **ಮುಗ್ಗು$_2$** : ೧. ಅವು ತದ್ದಶನನಿಕರಮಲ್ಲೆಳೆ ಮೊಲ್ಲೆ ಮುಗ್ಗಲ್ಲ (ಶರತು. ೯-೭) ; ಮಾವನ ಮಗಾ ಮುಗ್ಗಾಗಿ ಬಾರೊ, ತುರುಬೀಗೆ (ಹುಬ್ಬಹ. ೮೭). **ಮುಗ್ಗೆ$_1$** : ೧. ಚೆಲ್ಲಿದುವು ಸಹದೇವ ಶಿರದಲಿ ಮಲ್ಲಿಗೆಯ ಮು[ಶಾಕಾಂ. ಮೊ]ಗ್ಗೆಗಳು (ಕುವ್ಯಾಸ. ೯-೬೩). ೨. (ಬಟ್ಟೆಯ ಮೇಲೆ ಮೂಡಿಸಿದ) ಮೊಗ್ಗಿನಾಕಾರದ ಚಿತ್ರ,— ಮಾದರಿ : ಕೆಂದಾವರೆಮುಗ್ಗೆಯ ಕುಪ್ಪಸವ ತೊಟ್ಟಳು (ಶ್ರೀಕೃಶಾ. ೦೭). **ಮೊಗ್ಗು$_3$** : ೧. ನನೆ ಮೊಗ್ಗು ಅರಳು ಮೊದಲಾದವರಲ್ಲಿಯು ಗಂಧವ ನಱಿವುದು (ಆಧವ. ೩-೦೨) ; ಗಿಡದ ಕೈಮುಗಿಹ ಮೊಗ್ಗಾಗಿ ಮೈದೋರು ತಿದೆ (ಅಶೀೇ. ೨೨-೨) ; ಅಜ್ಞನ ಬುದ್ಧಿ ಮೊಗ್ಗಿನ ಹಾಗೆ, ಪ್ರಾಜ್ಞನ ಬುದ್ಧಿ ಫಲದ ಹಾಗೆ (ಗಾದೆ).

[ದೇ.॥ ತಮಿ. ಮುಕ್ಕೈ, ಮೊಕ್ಕು ; ಮಲ. ಮೊಟ್ಟು ; ತುಳು. ಮುಗ್ಗೆ, ಮೊಗ್ಗೆ ; ಕೊಡ. ಮೊಗ್ಗ್ ; ತೆಲು. ಮೊಗ್ಗ, ಮೊಗಡ; ಕುಇ. ಮೊಕೊ]

**ಮೊಗ್ಗೆಗೋಲ** (ನಾ). ಹೂವಿನ ಮುಗುಳುಗಳನ್ನೇ ಬಾಣವಾಗಿ ಉಳ್ಳವನು ; ಪುಷ್ಪಾಸ್ತ್ರ ; ಮನ್ಮಥ : ಅಗ್ಗದ ದೊರೆಯ ಕೆಳೆಯನೆಂಬ ಗರ್ವವೋ ಮೊಗ್ಗೆಗೋಲನ ಸಭೆಗಿನಿಸು ತಗ್ಗಿ ಬಾ (ಭರತ. ೪೭-೭೦).

[ಮೊಗ್ಗೆ + ಕೋಲ್$_1$ + – ಅ$_7$]

**ಮೊಗ್ಗೊಡೆ** (ಕ್ರಿ). ಮೊಗ್ಗು ಅರಳು ; ಹೂವಾಗು : ಜಲಜಾಪ್ತಮಂಡಲಂ ಕಡುರೈಯ್ಯಮಪ್ಪಾಗೊಪ್ಪಿಡುತ್ತ ಚಿತ್ತರದೊಳೆಡೆನೊಡೆಯಲ್ ಚಕೋರಿ ಸುಖವಡೆಯಲು ರಥಾಂಗ ಮೊಗ್ಗೊಡೆಯಲಾ ಮಲ್ಲಿಗೆಗಳು (ಸಂಬಿಷಾ. ೨೨-೯೭). [ ಮೊಗ್ಗು$_3$ ( <ಮೊಗ್ಗೆ ) + ಒಡೆ$_1$ ]

**ಮೊಘಲ್** 'ಮೊಗಲ' ನೋ.

**ಮೊಘೆ** 'ಮೊಗ್ಗೆ' ನೋ.

**ಮೊಚ್ಚಿಗ**, ಮುಚ್ಚಿಗ$_2$ (ನಾ). ಚಪ್ಪಲಿಯನ್ನು ಹೊಲಿಯುವವನು ; ಮೋಚಿ : ದೊರೆಗಳ ಮನೆಮೆಚ್ಚಿನ ಮೊಚ್ಚಿಗ [ಶಾಶಾಂ. ಮುಚ್ಚಿಗ] ರಿಪುರೋಂದೆಸೆಯು (ಅಬ್ಬಿಲಿ. ೩-೯೦). **ಮುಚ್ಚಿಗ$_2$** : ಎಲುವ ನಾಯಿಗ ಹೊಲೆಯಗಂ ಮಾಂಸವನು ಮು[ಶಾಶಾಂ. ಮ]ಚ್ಚಿಗಗೆ ಬಳಿಕ ತೊಪಲೆಂಬಂತೆ (ಬಸಪು. ೨೦-೪೪) ; ಗಾಣಿಗರ್ ಚಿಪ್ಪಿಗರ್ ಮುಚ್ಚಿಗರ್ . . . ಜೂಜು ಗಾಜರ್ ಮುಖ್ಯರೊಡಗಿ ಬರುತಿರ್ದರು(ಜಿಬಿಪು. ೯೭-೯೦) ; ಮುಚ್ಚಿಗರ ಕೇರಿಯಲ್ಲಿ ಬಹಳ ಜನಗಳು ಉಳಿದಿರಲಿಲ್ಲ (ಕೀಕ್ಷ್ರ. ೧೯೩).

[ ಮೊಚ್ಚಿ (<ಮೊಚ್ಚೆಯು) + -ಇಗ ]

**ಮೊಚ್ಚಿ** 'ಮೊಚ್ಚೆಯು' ನೋ.

**ಮೊಚ್ಚಿಗಾರ** 'ಮೊಚ್ಚಿಗಾಜಿ' ನೋ.

**ಮೊಚ್ಚಿಗಾಜಿ**, ಮೊಚ್ಚಿಗಾರ (ನಾ). ಜೋಡುಗಳನ್ನು ಹೊಲಿಯುವವನು : ಮೋಚಿ : ಮೊಚ್ಚಿಗಾಜಿ ಸಕಲಾತ್ಯೇನು ಜಲ್ಲ (ಕೆರಂರ. ೨-೩೭-೯). **ಮೊಚ್ಚಿಗಾರ** : ಎಣ್ಣೆ ಹಂಚುವವರು ಮೊಚ್ಚಿಗಾರರು, ಕೊರವರು, ಮಾದಿಗರೇ ಮೊದಲಾದ ಜಾತಿಯ ಹೆಂಗಸರ ಮೈಸೋಕು ವುದೆಂದು ಅಜಿ ದೂರದಿಂದ ಎಣ್ಣೆ ಕೊಡುತ್ತಿದ್ದರು (ಜಿಶಿಂರ. I, ೪೯) : ಇವನು ಮೊಚ್ಚಿಗಾರನ ಮಗನೆಂದು ಹೇಳುತ್ತಾರೆ (ಜಂಗ್ಯ. ೨೦).

[ ಮೊಚ್ಚಿ (<ಮೊಚ್ಚೆಯು) + -ಕಾಜಿ ]

**ಮೊಚ್ಚೆಯು**, ಮುಚ್ಚೆ$_3$, ಮೊಚ್ಚೆ, ಮೋಜ, ಮೋಜಾ, ಮೋಜು$_1$ (ನಾ). ೧. ಮುಂಭಾಗದಲ್ಲಿ ಒಳಮುಖಕ್ಕೆ ಬಾಗಿರುವ, ಅಲಂಕಾರ ಯುಕ್ತವಾದ ಒಂದು ಬಗೆಯ ಮೆಟ್ಟು, — ಪಾದರಕ್ಷೆ, — ಜೋಡು : ಚಿನ್ನದ ಸವಂಗಮಪೂರ್ವದ ಮೊಚ್ಚೆಯುಂ ಪವಣ್ಬಡೆದ ಸುವರ್ಣಪಾರಿವದ ಕುಪ್ಪಸಮೊಪ್ಪೆ ಬೆಡಂಗನಾಳ್ದು (ಶಂಶಪಾ. ೯-೦೦೩) : ಗುಡಿ ನೇಣ್ ಕಂಟಣೆ ಗೋಣಿ ದಂಡಿಗೆ ಸವಂಗಂ ಮೊಚ್ಚೆಯುಂ ಹಲ್ಲಣಂ . . . ಎಂಬಿವಿನಿತುಂ ದಂಡಿಂಗೆ ಸಾಮಗ್ರಿಗಳ್ (ಶಾಕ್ತಿಸು. ೦೮-೨೩) ; ಶಿರದೊಳಾಂತರು ಮೊಚ್ಚೆಯುವನಾ ಚರಣದಲಿ ಸೀಸಕವ . . . ಬತ್ತಳಿಕೆಯನು ಬಲುದಿರುವಿನಲಿ ಮೋಹಿದರು (ಕುವ್ಯಾದ್ರೋ. ೮-೯೬). **ಮುಚ್ಚೆ$_3$** : ೧. ನಿಚ್ಚಳಗೆಲಸ ರೇಶಿಮೆಚಿತ್ರಗೆಲಸದ ಹೆಚ್ಚಿನ ಜರತಾರ ಕೆಲಸ ಮೆಚ್ಚುವಂದದಿ ಮುಚ್ಚೆ ತರತರ ಮಾಡುವ ಮುಚ್ಚಿಗಾಜಿರ ಕೇರಿಯೆಸೆಯೆ (ಅಬ್ಬಲಿ. ೩-೯೦) ; ಬಾಗಿಲ ಬಳಿಯಲ್ಲಿ ವಿಜಾಪುರದ ಮುಚ್ಚೆಯು ಜೋಡುಗಳು (ಕಿತುಗು. ೩೦) ; ಮಾದಿಗರಿಂದ ಮುಚ್ಚೆಯನ್ನು, ಪುರೋಹಿತರಿಂದ ಮಂತ್ರವನ್ನೂ . . . ಪಡೆಯಬೇಕಾಗುತ್ತದೆ (ವಿಶಪಾದ. ೦೦೪). **ಮೊಚ್ಚೆ** : ೧. ಕಿಚ್ಚಿಂಗೆ ತಣಿವಿಲ್ಲ ಮೊಚ್ಚೆಗೆ ಹೊಲೆಯಿಲ್ಲ (ಸರ್ವಜ್ಞ. ೯೯೪) ; ಮದುವೆಯಲ್ಲಿ ವರನಿಗೆ ಕೊಡುವುದು ಕಾಲ್ಮರೆಯಲ್ಲ ; ಮೊಚ್ಚೆ (ಕರ್ನಾಳೂ. ೧೯೭) ; ಕಾಲಲ್ಲಿ ಪುಣಿಯ ಮೊಚ್ಚೆಗಳಿದ್ದು ಕೈಯಲ್ಲಿ ಬೆತ್ತದ ಛಡಿಯಿತ್ತು (ದೇವಿಶ. ೮). **ಮೋಜ** : ೧. "ಹರಡಿನ ಮೇಲಕ್ಕೆ ಒಂದು ಪಾದವನ್ನೆಲ್ಲಾ ಮುಚ್ಚುವ, ಪೂರ್ತಿಯಾಗಿ ಅಥವಾ ಬಹುಭಾಗ ಚರ್ಮದಿಂದ ಮಾಡಿದ, ಪಾದರಕ್ಷೆ ; ಮೋಜ ; ಬೂಟು" (Boot. ೨೦೪೩) ; ಅವರು ಹೊಸ ಚಕ್ಕಳದ ಮೋಜಗಳನ್ನು ಹಾಕಿಕೊಂಡು (ಬಾಳಶ. ೭). **ಮೋಜಾ** : ೧. ಕಾಲಿಗೆ ಬೆಲೆಯುಳ್ಳ ಮೋಜಾ ಧರಿಸಿ ಸುಬ್ಬಣ್ಣನವರು ಸಭೆಗೆ ದಯಮಾಡಿಸುತ್ತಿದ್ದುದೇ ಒಂದು ವೈಖರಿ (ಸಂಗೀಕಂ. ೨೬೩). **ಮೋಜು$_1$** : ೨. ಪಾದತಳದಿಂದ ಹಿಡಿದು ಮಂಡಿಯವರೆಗೂ ಬರುವಂತಹ, ಚಿನ್ನದ ಗಿಲೀಟು ಹಾಗೂ ಸರಿಗೆಗಳಿಂದ ಕೂಡಿದ ಒಂದು ಬಗೆಯ ಕಾಲುಚೀಲ : ಮಂಡಿಯವರೆಗೆ ಬರುವಂಥ ಬಹು ಲಕ್ಷಣವಾದ ಮೋಜುಗಳನ್ನು ಹಾಕಿಕೊಳ್ಳುತ್ತಾರೆ. ಈ ಮೋಜುಗಳಿಗೆ ಚಿನ್ನದ ಗಿಲೀಟು ಮತ್ತು ಸರಿಗೆ ಹಾಕಿರುತ್ತಾರೆ (ಕ್ರಜಾಇ. II, ೨೬೬).

[ < ಪ್ರಾ. ಮೋಚಅ. / ಸಂ. ಮೋಚಕ. / ಪಾರ. ಮೂಜಾ, ಮೋಜಹ್ ; ಹಿಂ. ಮೋಜಾ ; ಮರಾ. ಮೋಚಾ. ಮೋಜಾ ]

**ಮೊಟಕಿಸು** (ಕ್ರಿ). ೧. ಕುಗ್ಗಿಸು ; ಕಡಮೆಮಾಡು : ನನ್ನ ಪ್ರಶ್ನಾವಳಿಯನ್ನು ಇಲ್ಲಿಗೆ ಮೊಟಕಿಸಿದೆ (ಹಸುಹೂ. ೨೬೯). ೨. ಬಗ್ಗಿಸು ; ಬಾಗಿಸು: ಆತ ಕಾಲು ಮೊಟಕಿಸಿಕೊಂಡು, ಮೇಲಕ್ಕೆದ್ದು ನಿಂತ (ಕುಬಿಕೂ. ೭೮).

[ ಮೊಟಕು$_2$ + -ಇಸು$_3$ ]

**ಮೊಟಕು$_1$**, ಮಟಕು$_1$ (ಕ್ರಿ). ತಲೆಯನ್ನು ಮುಷ್ಟಿಯಿಂದ ಗುದ್ದು, — ತಿವಿ : ಮೊಟ್ಟು : ಪಾಠದ ಕಡೆಗೆ ನಿಗವಿಲ್ಲದೆ ಕಿಟಕಿಯಾಚೆಗೆ ನೋಡುತ್ತಿದ್ದ ಹುಡುಗನ ತಲೆಗೆ ಮಾಸ್ತರು ಮೊಟಕಿದರು (ರೂಢಿ). **ಮಟಕು$_1$** : ಲೆಕ್ಕ ಸರಿಯಾಗಿ ಮಾಡಲಿಲ್ಲವೆಂದು ಅವನು ತಂಗಿಯ ತಲೆಗೆ ಮಟಕಿದ (ರೂಢಿ).

[ < ಮೊಟ್ಟು$_1$ ]

**ಮೊಟಕು$_2$**, ಮಟಕು$_2$ (ನಾ). ೧. ಮೋಂಡಾದುದು ; ಮೋಟು ; ಚಿಕ್ಕದು : (ಕ). (ಗು). ೨. ಮೊಂಡಾದ ; ಮೋಟಾದ ; ಚಿಕ್ಕದಾದ : ಮೊಟಕು ಮೂಗು, ಅಗಲ ಬಾಯಿ (ಶ್ರೀರಾಕ. ೭೭). **ಮಟಕು$_2$** : ೩. ಹ್ರಸ್ವವಾದುದು ; ದೀರ್ಘವಲ್ಲದುದು.

ಮಟಕುಮಟಕಾಗಿ = ಹ್ರಸ್ವವಾಗಿ ; ದೀರ್ಘವಾಗಿಲ್ಲದೆ : ಯಾವ ಅಶ್ವಗಳು ಮಟಕುಮಟಕಾಗಿ ಸೂಕ್ಷ್ಮವಾಗಿ ಗದ್ಗದವಾಗಿ . . . ವರಾಹ ಉಷ್ಟ್ರ ಮೊದಲಾದ್ದಕ್ಕೆ ಸಮಾನವಾಗಿಯಿರುವ ಧ್ವನಿಯುಳ್ಳವೊ ಆ ಕುದುರೆಗಳು ಶುಭಕರಗಳಲ್ಲ (ಶಾಗಿಂ೦. ೩೦೩-೦). **ಮೊಟಕಾಗು** = ಕುಗ್ಗು ; ಕಡಮೆಯಾಗು ; ಚಿಕ್ಕದಾಗು : ಮಾನನಷ್ಟದ ಆಪಾದನೆಯಿಂದ ಪತ್ರಿಕಾ ಸ್ವಾತಂತ್ರ್ಯ ಮೊಟಕಾಗುವಂತಿತ್ತು (ಕೂಶರು. ೩೬೩) ; 'ಮತ್ತೆ ಭೆಟ್ಟಿಯಾಗೋಣ' ಎಂದಿಷ್ಟೇ ಮೊಟಕಾಗಿ ನುಡಿದು . . . ಮುಖವನ್ನು ಹೊರಳಿಸಿದಳು (ಹೂಸಕ್ಕಿ. ೦೯೯). **ಮೊಟಕುಮಾಡು** = ಕುಗ್ಗಿಸು ; ಕಡಮೆ ಮಾಡು : ತಮ್ಮ ಅತ್ಯಂತದ ದರ್ಪವನ್ನು ಮೊಟಕುಮಾಡಿದರು (ಶದ್ವಸ. ೦೭) ; ಪಕ್ಕಿಗಳು ಚಿಲಿಪಿಲಿಯನ್ನು ಮೊಟಕುಮಾಡಿ . . . ಕಾಳಿತವು (ಹಸುಹೂ.೩೦೦): ಅವರ ಆಸೆಗಳನ್ನು ಮೊಟಕು ಮಾಡಬಾರದು (ಕಿಶ್ವರ. ೦೯೪).

[ < ಮಟ್ಟು$_1$ / ನಾಯ್ಕು. ಮೊಟ್ಟ್ಕ್ ]

**ಮೊಟಲೆ** (ನಾ). ಒಂದು ಬಗೆಯ ಸಸ್ಯ : ವನಸಂಪಿಗೆ, ಮೊಟಲೆ, ಕಿರಿಮೊಟಲೆ . . . ಲತೆಗಳಿಂದಲು (ಕ್ಯವಾಸ. ೩೦). [ ? ]

**ಮೊಟವಣ** (ನಾ). ಒಂದು ಬಗೆಯ ತೆರಿಗೆ : ತೆರುವ ಸಿದ್ಧಾಯ ಗ ೨೩೨ ಪ ೮ ಹೊದಕೆ ಗ ೨೦ ತೂಕದ ಕುನ್ದ ಮೊಟವಣ ಗ ೩ ನೆಲೆಯ ಕಾಣಿಕೆ ಗ ೧ (ಎಕ. XV, ಬೇಲೂರು. ೨೯೮-೩೦; 1278). [ ? + ಪಣ$_3$ ]

**ಮೊಟ್ಟ** 'ಮಟ್ಟ$_1$' ನೋ.

**ಮೊಟ್ಟನೆ** (ಅ). ಒಂದು ಅನುಕರಣಾವ್ಯಯ : ಮೊಟ್ಟನೆ ಮುಜೀದಲುಗಳುಂ ಸಿಡಿಲ್ದು ಪಾಱುವ ಸಿರ್ಗುಗಳುಂ . . . ಮಹಾಭಯಂಕರವಾಗೆ (ಮಹಾನೇ. ೦೩-೩೪ ವ). [ ಮೊಟ್ಟ$_2$ + -ಅನೆ$_1$ ]

**ಮೊಟ್ಟಟಿ** 'ಮಟ್ಟಟಿ' ನೋ.

**ಮೊಟ್ಟಿತ** (ನಾ). [ನಾಟ್ಯ] ಆಯತ, ಅವಹಿತ್ಥ, ಅಶ್ವಕ್ರಾಂತ, ಗತಾಗತ, ವಲಿತ, ಮೊಟ್ಟಿತ, ವಿನಿವರ್ತಿತಗಳೆಂಬ ಏಳು ಬಗೆಯ ಸ್ತ್ರೀಸ್ಥಾನಕಗಳಲ್ಲಿ ಒಂದು; P "ಒಂದು ಕಾಲನ್ನು ಸ್ವಭಾವವಾಗಿರಿಸಿ ಇನ್ನೊಂದು ಕಾಲನ್ನು ಅರ್ಧ ಕುಂಚಿತ ಮಾಡಿ, ಮುಂದುಗಡೆ

ಕೈಗಳನ್ನು ಮೇಲಕ್ಕೆತ್ತುವುದು : ಕಾಪಟಾವಸ್ಥೆಯನ್ನು ತೋರಿಸು ವಾಗ ಇದನ್ನು ವಿನಿಯೋಗಿಸಬೇಕು " (ಭಾಸ್ಕರಂ. ಗದ್ಯಾನುವಾದ. ೩೬೯) : ಒಂದು ಪದಂ ಸಮದಿಂ ಮತ್ತೊಂದು ಪದಂ ಕುಂಚಿತಾರ್ಥತಲದಿಂ ಮತ್ತಂ ಮುಂದಿರೆ ಕೈಗಳ್ ನಲವಿಂ ಚಂದದೆ ಮೇಲಕ್ಕೆ ನೆಗೆಯೆ ಮೊಟ್ಟಿತ ಮೆನಿಕುಂ (ಭಾಸ್ಕರಂ. ೬-೩೦). [ < ಸಂ. ಮೋಟಿತ ]

**ಮೊಟ್ಟು₁** ' ಮೊತ್ತ₁ ' ನೋ.

**ಮೊಟ್ಟು₂** (ನಾ). ಮುಷ್ಟಿಯಿಂದ ಕೊಡುವ ಹೊಡೆತ, – ಏಟು : ಕಾದಾಟದಲ್ಲಿ ಅವನಿಗೆ ನಾಲ್ಕು ಮೊಟ್ಟು ಬಿತ್ತು (ರೂಢಿ). [< ಮೊಟ್ಟು₁]

**ಮೊಟ್ಟು₃** ' ಮಟ್ಟಿ₂ ' ನೋ.

**ಮೊಟ್ಟೆ₁** ' ಮಟ್ಟೆ₁ ' ನೋ.

**ಮೊಟ್ಟೆ₂** (ನಾ). ತತ್ತಿ ; ಅಂಡ : " ಪೇಶೀ, ಕೋಶಃ. ಅಂಡಂ – ಈ ೩ ಮೊಟ್ಟೆ " (ಹಲಾಯು. ೪೦-೬೭) ; ಮೊಟ್ಟೆಗಳನು ಮಾಜುವ ಬೇಹಾರಿಗಳಿ ಟ್ಟಣಿಸುತಲೈದಿದರು (ಕಂಸವ. ೧೧-೪೦) ; ಹಕ್ಕಿಯ ಗೂಡಿನ ಮುತ್ತಿನ ಮೊಟ್ಟೆಯೋ (ಅನಕೇ. ೩೦-೩) ; ಕೇಡುಗಾಲಕ್ಕೆ ನಾಯಿಮರಿ ಮೊಟ್ಟೆ ಇಕ್ಕಿತು (ಗಾದೆ). [ದೇ.॥ ತಮಿ. ಮುಟ್ಟೈ ; ಮಲ. ಮುಟ್ಟ, ಮೊಟ್ಟ : ಕೊಡ. ಮುಟ್ಟೆ ; ಕೋತ. ಮೊಟ್ : ತುಳು. ಮೊಟ್ಟೆ]

**ಮೊಟ್ಟೆ₃** ' ಮೂಡೆ ' ನೋ.

**ಮೊಟ್ಟೆ₄** ' ಮಟ್ಟೆ₁ ' ನೋ.

**ಮೊಟ್ಟೆ₅** (ನಾ). (ಎತ್ತುಗಳನ್ನು ಹೂಡಿ) ಬಾವಿಯಿಂದ ನೀರನ್ನು ಎತ್ತಲು ಬಳಸುವ ಒಂದು ಸಾಧನ, –ಚರ್ಮದ ಚೀಲ; ಕಪಿಲೆ : " ಸಮ್ಮುದ ತಿತ್ತಿಯಂಡಂಗಳೊಳ್ಮೊಟ್ಟೆ " (ಶಬ್ದಮಂ. ೯೦); ಹಳ್ಳದ ನೀರು, ಹೊಳೆಯ ನೀರು, ಭಾವಿಯ ಮೊಟ್ಟೆಯ ನೀರು (ಕೃಷಿಶ್ರ. ೩೪); ಮೊಟ್ಟೆಯ ಹಗ್ಗವನ್ನೆಳೆದುಕೊಂಡು ಮುಂದೆ ಹೋಗುವುದು. . . ಮತ್ತೆ ನಿಧಾನವಾಗಿ ಹಿಂದೆ ಹಿಂದೆ ಬರುವುದು (ನ್ಯಾಕಂತ್ರ. ೬೪).

**ಮೊಟ್ಟೆಹೊಡೆ** = ಕಪಿಲೆಯ ಮೂಲಕ ಬಾವಿಯ ನೀರನ್ನೆತ್ತು; **ಕಪಿಲೆಹೊಡೆ** : ಆಮೇಲೆ ಹತ್ತಿರದಲ್ಲಿರುವ ಒರತೆ, ಹಳ್ಳಗಳೊಳಗಿಂದ ಮೊಟ್ಟೆಹೊಡೆದು ನೀರು ಕೊಡುವರು (ಮುಂಬಯಿ. ೩-೨೦೩); ಕಟ್ಟು ಬೇಲಿಯ ಭದ್ರ ಮೊಟ್ಟೆಹೊಡೆ ದಿನದಿನವು (ನಂಮು. ೨೨-೨೦); ಮೊಟ್ಟೆ ಹೊಡೆಯುವ ಸಪ್ಪಳ. . . ಪಾರ್ಶ್ವಸಂಗೀತವಾದಂತಿತ್ತು (ಸ್ವಕ್ಷರ. ೦೨೭).
[← ಮರಾ. ಮೋಟ್]

**ಮೊಟ್ಟೆಕಟ್ಟು** ' ಮೂಡೆಗಟ್ಟು₁ ' ನೋ.

**ಮೊಟ್ಟೆಕಾಱ, ಮೊಟ್ಟೆಗಾರ** (ನಾ). ಗಂಟು, ಮೂಟೆ ಹೊರುವವನು : ಮೊಟ್ಟೆಕಾಱರು ತಂದು ಮಾಱಿದ ಭತ್ತಧಾನ್ಯವೊಳಗಾಗಿ ಹೊಂಗೆ ಮಾನ ವೊಂದು (ಶಾ. II, ೨೦-೨೨; 1147). **ಮೊಟ್ಟೆಗಾರ** : ಬೀದಿಯ ಮೊಟ್ಟೆ ಗಾರರು, ಕೂಲಿಯ ಆಳುಗಳು ಕೂಡ ನಿಶ್ಚಿಂತೆಯಿಂದ ಓಡಾಡುತ್ತಾರೆ (ಇಕ್ಷ್ವ. ೨೬೩). [ಮೊಟ್ಟೆ₃ (< ಮೂಡೆ) + – ಕಾಱ]

**ಮೊಟ್ಟೆಕೋಳಿ** (ನಾ). ಮೊಟ್ಟೆ ಇಡುವ ಕೋಳಿ ; ಗಬ್ಬದ ಕೋಳಿ : ಸಾಯಂಕಾಲ ಮೊಟ್ಟೆಕೋಳಿ ಕೊಯ್ಯಿಸಿ, ಹಸುವಿನ ತುಪ್ಪ ಹಾಕಿ ಅಡುಗೆ ಮಾಡಿಸಿ, ಕಟ್ರೆ ಆಗುವಂತೆ ತಿನ್ನಿಸಿದರು (ನಪ್ಪೂರು. ೨೭); ನೀನು ಹೊಟ್ಟೆ ಕಿಚ್ಚಿನ ಮೊಟ್ಟೆಕೋಳಿಯಾಗಿದ್ದೆ (ಹಾಪುತ. ೪).
[ಮೊಟ್ಟೆ₂ + ಕೋಳಿ₁ (<ಕೋೞ್₁)]

**ಮೊಟ್ಟೆಗಟ್ಟು** ' ಮೂಡೆಗಟ್ಟು₁ ' ನೋ.

**ಮೊಟ್ಟೆಗಾರ** ' ಮೊಟ್ಟೆಕಾಱ ' ನೋ.

**ಮೊಟ್ಟೆಗೂಳ್** (ನಾ). ಪೊಟ್ಟಣ ಕಟ್ಟಿದ ಆಹಾರ ; ಬುತ್ತಿ : ಕಾಡ ಮುಳು ನಟ್ಟು ಕುಂಟುವ ಪದಂ ಬೆನ್ನ ಬಿಗುಹಳಿದೆಲ್ವ ಮೊಟ್ಟೆಗೂಳೆಡಹಿ ಕೆಡೆದೊಡದ ಮೊಳಕಾಲ್ ತೀಕುವಳ್ಳೆಗಳುವೆರಸೊಱಲುತ ಕಟ್ಟೋಡುತಿರಲು (ಪಚಶಾ. ೬-೧೭). [ಮೊಟ್ಟೆ₃ (< ಮೂಡೆ) + ಕೂಳ್ (<ಕೂೞ್₁)]

**ಮೊಟ್ಟೆರು** (ನಾ). ಪೆಟ್ಟು ಬಿದ್ದಾಗ ರಕ್ತ ಸುರಿಯದೆ ಉಂಟಾಗುವ ಊತ : ಮಾರೋಗೇಟು : ಕೈಗೆ ಬರಿಯ ಮೊಟ್ಟೇರಾಯಿತು, ರಕ್ತ ಹೊರ ಬರಲಿಲ್ಲ (ರೂಢಿ). [ಮೊಟ್ಟು₁ (< ಮೊತ್ತು) + ಏರು₀ (< ಎಱ್₄)]

**ಮೊಡಕು** ' ಮುಡುಕು₂ ' ನೋ.

**ಮೊಡಗು** ' ಮಡಗು ' ನೋ.

**ಮೊಡಮೆ** ' ಮೊಡವಿ ' ನೋ.

**ಮೊಡವಿ**, ಮಡಿಮೆ, ಮಡುವೆ, ಮೊಡಮೆ, ಮೊಡವು, ಮೊಡವೆ (ನಾ). ಪ್ರಾಯಕ್ಕೆ ಬಂದಾಗ ಮುಖದ ಮೇಲೆ ಏಳುವ ಬೊಕ್ಕೆ ; ಹರೆಯದ ಬೊಕ್ಕೆ : ಕೌಂಕುಳನೆತ್ತಿ ಕಂಪನಾರಯ್ವುತುಮೊತ್ತುತುಂ ಮೊಡವಿಯಂ ಮೊಗಮಂ ಮೃಗನೇತ್ರೆ ದರ್ಪಣಕ್ಕುಯ್ಯುದುಂ (ಲೀಲಾವ. ೬-೩೦) ; ಮೊಡವಿ ಮೂಡಿದ ಮೊಗಂ ಸೊಗಡುಗಂಪೊಗೆದ ಮೈ (ಕೃಖಿಭಾ. ೦೮-೨೩) ; ಮೊತವಿಗಳಂತೆ ಮೂಡೆ ಪೊಸ ಮೊಗ್ಗೆಗಳಾ ಮಧುದೂತಿಯಲ್ಲಿ (ರಾಜಶೇ. ೯-೧೩). **ಮಡಿಮೆ** : ಅಪಚೂರ್ಣಗಳನ್ನು ಉಜ್ಜುವುದರಿಂದ . . . ಮಡಿಮೆ, ಬಂಗು ಮುಂತಾದುವು ಉಂಟಾಗುವುದಿಲ್ಲ (ಕವಿಕಶೋ. I. ೩೭). **ಮಡುವೆ** : ಪ್ರಾಯ ಬಂದ ಗಿಡಕ್ಕೆ ಮಡುವೆಗಳೆದ್ದ ಹಾಗೆ ಮಲ್ಲಿಗೆ ಮೊಗ್ಗುಗಳು ಗಿಡದಲ್ಲಿ ಮೂಡಿದ್ದವು (ಅವತಂ. ೬) ; ಮುಖದ ಮೇಲೆಲ್ಲಾ ಮಡುವೆಗಳು ಹರಡಿಕೊಂಡಿದ್ದವು (ಕಂಕಣ. ೦೪೬); ಮುಖದ ಮೇಲಿನದೊಂದು ಮಡುವೆಯನ್ನು ಮುರಿಮಾಡಿಕೊಳ್ಳುತ್ತಿದ್ದನು (ನಾಲ್ಕುಮ. ೬೬). **ಮೊಡಮೆ** : ಯಾವ ಮದ್ದು ಹಾಕಿದರೂ ಮುಖದ ಮೇಲಿನ ಮೊಡಮೆ ಕಡಿಮೆಯಾಗಲೇ ಇಲ್ಲ (ರೂಢಿ). **ಮೊಡವು** : ಸಿರಿಸ ಬೀಜವಂ ಗೋಮೂತ್ರದಲ್ಲರೆದು ಪೂಸೆ ಮೊಡವು ಮಾಣ್ಗುಂ (ಖಿಶ್ಮಿ. ೬೩). **ಮೊಡವೆ** : ನನೆಗಳಿಂಚಿನಂ ಮುದ್ದುವೊಗದಿ ಮೊಡವೆ ತೋಱಿ (ನಾಗಕು. ೩-೨). [ ದೇ.॥ ಮಲ. ಮುತುಕ್ಕು; ತೆಲು. ಮೊಟಿಮ ]

**ಮೊಡವು** ' ಮೊಡವಿ ' ನೋ.

**ಮೊಡವೆ** ' ಮೊಡವಿ ' ನೋ.

**ಮೊಡೆ** (ನಾ). ದುರ್ನಾತ : ಕೊಳಕುನಾತ : ' ಮೊಡೆನಾತ ' ಪರಾ.
[ ದೇ.॥ ತಮಿ. ಮುಟ್ಟೈ ; ಮಲ. ಮುಡ, ಮುಡಯು ]

**ಮೊಡೆನಾತ** (ನಾ). ಕೆಟ್ಟವಾಸನೆ ; ದುರ್ಗಂಧ : ಪೆಣಮೆಂಬ ಪೆಸರಾಗಿ . . . ಮೊಡೆನಾತಕಡೆಯಾಗಿ (ಶಿವಸಂ. ೦೬೪-೩೨). [ಮೊಡೆ + ನಾತ]

**ಮೊಡೆನಾಱು** (ಕ್ರಿ). ಕೆಟ್ಟ ವಾಸನೆ ಬರು ; ದುರ್ಗಂಧ ಬೀರು : ರಸದ ಬಾವಿಯಂ ಮೊಡೆನಾರ್ಪುದಂ ಕಂಡು (ವಡ್ಡಾರಾ. ೦೬೭-೬); ನಾಲ್ಕು ತಿಂಗಳ ಕೂಸಂ ಪಿಂಗಳಾಕ್ಷಿ ಎಂಬ ದೇವತೆ ಪಿಡಿದೊಡೆ ಆಗುಳಿಸುಗುಂ ಬಾಯಾ ಱುಗುಂ ಮೈ ಮೊಡೆನಾಱುಗುಂ (ಬಾಲಗ್ರ. ೦೨೬-೭). [ಮೊಡೆ + ನಾಱು₁]

**ಮೊಡೆವೆಣ** (ನಾ). ಕೊಳೆತ ವಾಸನೆ ಬರುತ್ತಿರುವ ಹೆಣ : ಬುಡಬುಡಿಸು ವೆಟಿಸಲಿ ದುರ್ವರ್ಣದೊತನೆ ಸೂಸುವ ಬಸೆಯ ನಾಱುವ ಮೊಡೆವೆಣನ . . . ಕಂಡು (ಕೂರಂರಾ. ೩-೯-೪). [ ಮೊಡೆ + ಪೆಣ ]

**ಮೊಣ** ' ಮೊಟ ' ನೋ.

**ಮೊಣಕಾಲ್** ' ಮೊಟಕಾಲ್ ' ನೋ.

**ಮೊಣಕಾಲು** ' ಮೊಟಕಾಲ್ ' ನೋ.

**ಮೊಣಕೆಯ್** ' ಮೊಟಕೆಯ್ ' ನೋ.

**ಮೊಣಕೈ** ' ಮೊಟಕೆಯ್ ' ನೋ.

**ಮೊಣಗಂಟು** (ನಾ). ಕಾಲಿನ ನಡುಗಂಟು ; ಮಂಡಿ : ಜಗಿತದಲ್ಲೂ ಪಾದಗಳು ಸಮೀಪ ಬಂದು ಮೊಣಗಂಟುಗಳು ಅಗಲಿಸಿ ಕಾಲು ಮಡಿಕೆ ಗೊಳ್ಳಬಹುದು (ಯುಕ್ಷಾ. ೦೨೬); ಮೊಣಗಂಟಿಗೆ ನಿರಿಗೆ ಬರುವ ಕರಿಯ ಸೀರೆ ಯನ್ನು ಧರಿಸಿ (ಒಂಟಿದ. ೩೩). [ ಮೊಣ (< ಮೊಟ) + ಗಂಟು₁ ]

**ಮೊಣಸಂದು** ' ಮೊಳಸಂದು ' ನೋ.

**ಮೊಣ್ಣ** ' ಮುಂಡ್ಮು$_2$ ' ನೋ.

**ಮೊಣ್ಣಮಂಡಲ** (ನಾ). ಒಂದು ಬಗೆಯ ಮಂಡಲದ ಹಾವು : ಮೊಸಳೆಯ ಹಿಡಿದ ಮೊಣ್ಣ (ಮಣ್ಣ ?) ಮಂಡಲದ ವಿಷ ಹತ್ತಿ ಜಗವೆಲ್ಲಾ ಮುಸಳಿಸಿ ಮುಚಿ೦ದೊಜಗಿದುದ ಕಂಡೆನಯ್ಯಾ (ಸಿದ್ಧರ. ೧೨೪-೩೭೩).

[ ಮೊಣ್ಣ$_?$ + ಮಂಡಲ ]

**ಮೊಣ್ಣೆ** ' ಮೋಂಡಿ ' ನೋ.

**ಮೊಣ್ಣು** ' ಮುಂಡ್ಮು$_2$ ' ನೋ.

**ಮೊತ್ತ** (ನಾ). ೧. ರಾಶಿ ; ಒಟ್ಟಿಲು : " ಮೊತ್ತಮೊಬ್ಬಳಿಯು ಮೊಗ್ಗರಂ" (ಕವಿಕಾ. ೦೦೭); ಮೊತ್ತದ ಮಾಮರನುಲಿಯಿತ್ತ ಕಂಡೆ (ಅವಕಂ. ೯೯-೪೩೯): ತಂತಮ್ಮ ಬೇರ್ಗಳ ಮೊತ್ತಕ್ಕಮೃತಾಂಬುಪೂರಮಂ ನೊಡರ್ಚುರ್ತತ್ತಿರ್ಪುದೆಂಬಂತೆ. . .ಒಪ್ಪಿರ್ಪುವಿಮ್ಮಾವುಗಳ್ (ಕುಸುಮಾ. ೧-೯೩); ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೊರವಂ. ೩-೦-೨೭). ೨. ಕೂಡಿದುದು ; ಒಟ್ಟಾದುದು : ವ್ಯಕ್ತಿತ್ವದಲ್ಲಿ. . . ಅಂಗರಚನೆ; ಅಂಗವ್ಯಾಪಾರ, ಮಾನಸಿಕಸ್ವರೂಪ ಇತ್ಯಾದಿಗಳೆಲ್ಲವೂ ಸೇರಿವೆ. ಆದರೂ ವ್ಯಕ್ತಿತ್ವ ಇವುಗಳ ಮೊತ್ತವೆಂದು ಭಾವಿಸಬೇಕು (ಶಿಕ್ಷರ. ೭೨೪); ಊರ ಜನರು ತಮ್ಮಿಬ್ಬರ ಬಗ್ಗೆ ತೋರುತ್ತಿದ್ದ ಅನಾದರದ ಬಗ್ಗೆ ತೀವ್ರವಾದ ತಿರಸ್ಕಾರ. ನೋವು ಆ ಮಾತುಗಳಲ್ಲಿ ಮೊತ್ತವಾಗಿ ಮೂಡಿದ್ದುವು (ಅಬೋರ೦. ೭೩). ೩. ಸಮೂಹ ; ತಂಡ : "ವೃಂದಂ, ನಿಕುರುಂಬಂ, ಕದಂಬಂ_ಈ ೩ ಮೊತ್ತದ ಪೆಸರು" (ನಾಚರಾ. ೦೦೩); ಕೋಣೆಯು ಗಂಗನ ಮೊತ್ತಮೆಲ್ಲಮಂ ಬೆಪಱುವಿನಂ ತೆರಳ್ಚಿ (ಎಕ. II, ೦೩೯-೦೦; 940); ಪತ್ತೆಸಾರ್ದ ಮರುಳ ಮೊತ್ತಮಂ ಬುಸ್ಸೆಂದು ಬೆದಱಿಸುವ ಪಾವಿನ ತೊಡವುಗಳೊಳಂ (ಕಬ್ಬಿಗ. ೦೬೭); ಮುನಿಗಳ ಮೊತ್ತದಲಿ ಹರಿಕಥೆಯ ಕೇಳುತ್ತ ಪರಮಹರುಷದಲಿ . . . ವತ್ಸರ ಹತ್ತ ನೂಕಿದಳು (ಸಂಭಶ. ೦೬-೩೩). ೪. ಒಟ್ಟು ಹಣ ; ಮೊಬಲಗು : ಅರಮನೆಯರ [ಮೊತ್ತವನೂ] ತಪ್ಪದೆ ತೆಱುವೆಉ (ಕಾಇಇ. IX-ii, ೪೩೩-೪೯; 1408); ನಾಲ್ಕೈದರಷ್ಟು ಮೊತ್ತಕ್ಕೆ ಅವನ್ನು ತರಾಜು ಮಾಡಿ (ಕೃಮಹ. ೦೨೨).

**ಮೊತ್ತಮೊತ್ತ** (ದ್ವಿರುಕ್ತಿ) : ಬಂದು ಪೋಪರು ಮೊತ್ತಮೊತ್ತದೆ (ಗಿರವಿಂ. ೩೪-೩). [ ದೇ.II ತಮಿ. ಮಲ. ತೆಲು. ಮೊತ್ತ ]

**ಮೊತ್ತಂಗಟ್ಟು**, ಮೊತ್ತಗಟ್ಟು (ಕ್ರಿ). ೧. ಒಟ್ಟಾಗು; ಗುಂಪಾಗು : ನವಿಮರ್ಗಡಿಸುಗಂಪ ಘ್ರಾಣಿಸುವ ಷಟ್ಚರಣಾಳಿ ಪಾರ್ದಂತರಾಳದೊಳು ಸುತ್ತ ಮೊತ್ತಂಗಟ್ಟಿಯುಗಲದಿರ್ದು (ನವಮೋ. ೨೪-೯೩). ೨. ಒಟ್ಟುಗೂಡಿಸು; ಸಂಗ್ರಹಿಸು; ಸೇರಿಸು : ಅಮೃತಪಯೋಧಿಯಂ ಮೊಗೆದು ಮೊತ್ತಂಗಟ್ಟಿ ತಂದೊತ್ತರಿಸಿ ನೀಡುವುದಂ (ಮಹಾಸೇ. ೮-೦೨೩ ವ). **ಮೊತ್ತಗಟ್ಟು**: ೧. ಮೊತ್ತಗಟ್ಟಿದ ರಥದ ಮುಱಿದನು ಮೂಱುಸಾವಿರದ (ಕೌರಾ. ೩೭-೨೬); ರೋಲಂಬನಿಚಯ ಜೇಂಕರಿಸುತ್ತಲಾವರಿಸೆ. . .ಪಾರ್ದು ಗಂಟೊಡೆಯದೆ ಮೊತ್ತಗಟ್ಟಿ ಮೇಲೆ ಮೆರೆದವು (ನವಮೋ. ೦೦-೭೪).

[ ಮೊತ್ತ + ಕಟ್ಟು$_1$ ]

**ಮೊತ್ತಂಗೊಳ್** (ಕ್ರಿ). = ಮೊತ್ತಂಗಟ್ಟು ೧ : ಬ್ರಹ್ಮರ್ಷಿಗಳುಂ ದೇವರ್ಷಿಗಳುಂ ವಿಪ್ರೋತ್ತಮರುಂ . . . ಮೊತ್ತಂಗೊಂಡು ಸಾರ್ತಂದು ಧರ್ಮರಾಯನಂ ಕಂಡು (ಭಾರತಂ. ೦-೨). [ ಮೊತ್ತ + ಕೊಳ್$_1$ ]

**ಮೊತ್ತಂಬೆಱು** (ಕ್ರಿ). = ಮೊತ್ತಂಗಟ್ಟು ೧ : ನಲಿದೇಳ್ತರುತಿರೆ ಶರಣಸಮೂಹಂ ಮುತ್ತಿನ ಸತ್ತಿಗ ಮೊತ್ತಂ[ಪಾಠಾಂ. ಪೊತ್ತಂ]ಬೆತ್ತಿರೆ (ಪ್ರಕವಿ. ೩-೨೨ ರಗಳೆ). [ ಮೊತ್ತ + ಪೆಱು$_1$ ]

**ಮೊತ್ತಕಾಱ** (ನಾ). ಗುಂಪಿನ ಮುಖ್ಯಸ್ಥ,—ನಾಯಕ : ಮತ್ತಂ ಪನ್ನಪಣದ ದಾಸಿಸೆಟ್ಟಿಯುಂ ನಗರಮುಂ ಮೊತ್ತಕಾಱ ರೇವಿಸೆಟ್ಟಿಯುಂ. . . ಈ ಧರ್ಮ್ಮಕ್ಕನುಕೂಲರಾಗಿ (ಕಾಇಇ. XVIII, ೭೬-೨೪; 1072); ದೇವರುಪಹಾರಕ್ಕೆ ಮೊತ್ತಕಾಱ ಬಮ್ಮಣಂ ಮುಖ್ಯವಾಗಿ (ಕಾಇಇ. XI-ii, ೦೩೨-೪೦; 1103); ಕೆಱೆಯ ಸತೆಯ ಮಹದೇವ ಗ ೧ ಮೊತ್ತಕಾಱ ಸಾಕಿ ಪ ೫ (ಎಕ. XV, ಅರಸೀ. ೨೦೬-೮; 1221).

[ ಮೊತ್ತ + —ಕಾಱ. / ತೆಲು. ಮೊತ್ತಗಾಡು ]

**ಮೊತ್ತಗಟ್ಟು** ' ಮೊತ್ತಂಗಟ್ಟು ' ನೋ.

**ಮೊತ್ತಗೊಳಿಸು** (ಕ್ರಿ). ಒಟ್ಟಿಗೆ ಸೇರಿಸು ; ಕಲೆಹಾಕು : ತನ್ನ ನಿಳಯಕ್ಕೆ ತಂದು ಮೊತ್ತಗೊಳಿಸಲು ಮುನ್ನ ಕೈಕೊಂಡುಹೋದುದಿಪ್ಪತ್ತು ಬಳಿಕುಂಬ ಹೊತ್ತಿಂಗೆ ಹರಿತಂದುದೈವತ್ತಾಗೆ (ಸೋವಾಚ. ೨-೯೩).

[ಮೊತ್ತ + ಕೊಳ್$_1$ + — ಇಸು$_3$]

**ಮೊತ್ತಮೊದಲ್** ' ಮೊದಲ್$_1$ ' ಪರಾ.

**ಮೊತ್ತಮೊದಲಿಗ** ' ಮೊದಲ್$_1$ ' ಪರಾ.

**ಮೊತ್ತಮೊದಲು** ' ಮೊದಲ್$_1$ ' ಪರಾ.

**ಮೊತ್ತವೆತ್ತಿಸು** (ಕ್ರಿ). ಒಟ್ಟಾಗಿ ಮೇಲಕ್ಕೆ ಹಿಡಿ ; ಗುಂಪಾಗಿ ಎತ್ತಿ ಹಿಡಿ : ಪಲತೆಱದ ಸತ್ತಿಗೆಯನಭಪಂಗೆ ಮೊತ್ತವೆತ್ತಿಸಿ (ಸಾಳ್ವಭಾ. ೩೩-೩೭).

[ಮೊತ್ತ + ಎತ್ತಿಸು]

**ಮೊತ್ತವೆಱು** (ಕ್ರಿ). ಒಟ್ಟಾಗು ; ಗುಂಪಾಗು : ಎತ್ತಿ ಚೆಲ್ಲಿದ ಮಳಲು ಬೀಳದ ಮೊತ್ತವೆತ್ತಿಟ್ಟಡವಿಯಲಿ ನಯವೆತ್ತು ಬೆಳೆದಿಟ್ಟಯ ಮರಂಗಳು ಫಲಿದು ಫಲವಾಗಿ . . . ಪೊಳೆಯಲು (ಬಸವ. ೭೨-೬). [ಮೊತ್ತ + ಪೆಱು$_1$]

**ಮೊತ್ತವೇಂಟೆ** (ನಾ). ಗುಂಪಾಗಿ ಆಡುವ ಬೇಟೆ : ಪೆರ್ಮರೆಯ ಬೇಂಟೆ ವಿಹಂಗದ ಮೊತ್ತವೇಂಟೆ . . . ಸಿಂಹಶರಭಂಗಳ ಬೇಂಟೆಗಳಾದಿಯಾದ ಭೀಕರಮೃಗಸಂಘಸಂತನಸಮುನ್ನೃತು ಪರ್ವಿದರಣ್ಯಮಧ್ಯದೊಳ್ (ಗಿರಿಕ. ೦-೮೦). [ಮೊತ್ತ + ಬೇಂಟೆ]

**ಮೊತ್ತು**, ಮುಟ್ಟು$_1$, ಮೊಟ್ಟು$_1$ (ಕ್ರಿ). ೧. ಹೊಡೆ : ಮೋದು : ಒತ್ತುತೆ ಘೊತ್ತುವ ತೆಱದಿಂದತ್ತಿತ್ತಲ್ ಮಿಡುಕಬಾರದವಗುದ್ದತೆಯಿಂ (ಧರ್ಮಾವು. ೬-೯೦). **ಮುಟ್ಟು$_1$** : ೨. ತಲೆಯನ್ನು ಮುಷ್ಟಿಯಿಂದ ಗುದ್ದು,— ತಿವಿ : ಮುಟ್ಟಾರಭ್ಯವಾಗಿ ಮಂದನಾಗಿದ್ದವಗೆ ಮುಟ್ಟದಲ್ಲದೆ ಬುದ್ಧಿ ಬರುವದೆಂತೊ (ಎಂಪಕ. ೦೪೪-೦). **ಮೊಟ್ಟು$_1$** : ೨. ಘಾತಿಸಿದನೋರೋರ್ವರಿಂದಿಟ್ಟು ಗುದ್ದಿ ತಿವಿದಾ ತಳದೊಳೆರಹಿದಂ ಮೊಟ್ಟಿಗ್ರಮಸ್ತಕವ ಭೂತಸತ್ವೋಪೇತನಟ್ಟುಳಿಗೆ ಬಳಲಿ (ಜವವು. ೯-೦೬); ಹೇಳದೆ ಹೋದರೆ ತಲೆಯ ಮೇಲೆ ಮೊಟ್ಟಿ ಬೆನ್ನಿನ ಮೇಲೆ ಧಪ್ಪೆಂದು ಗುದ್ದುತ್ತಿದ್ದರು (ಸಾಹೇಬ್. ೬೯); ತಲೇ ಮೇಲೆ ಮೊಟ್ಟದಿದ್ದರೆ ಇವರಿಗೆ ಭಯ ಇಲ್ಲ (ಶಕರಾ. ೦೮೮). ' ಮೋದು$_1$ ' ಪರಾ.

[ದೇ.II ತಮಿ. ಮುಟ್ಟು, ಮೊತ್ತು ; ಮಲ. ಮುಟ್ಟು ; ಕೊಡ. ಪರ್ಜಿ. ಮುಟ್ಟ್ ; ತೆಲು. ಮೊಟ್ಟು, ಮೊತ್ತು]

**ಮೊದಭಾಗೆ** (ನಾ). ಒಂದು ಊರಿನ ಹೆಸರು : ಬೆಳ್ಗಱಿಯೊಡೆಯರುಂ ಮೊದಭಾಗೆವಿಟ್ಟಿದಿಪ್ಪರುಂ . . . ಸಾಕ್ಷಿಯಾಗೆ ಕೊಟ್ಟತ್ತು (ಎಕ. XII, ಗುಬ್ಬಿ. ೬೦-೯೮; 812). [ ? ]

**ಮೊದಯರ್ಸ** (ನಾ). ಒಬ್ಬಾತನ ಹೆಸರು : ಪೆರಮೆಣ್ಣ ಮಗಂ ಮೊದಯರ್ಸನೆಮಲದ ತೊರೆಗೊಳಂಳ್ಳಱಿದು ಸ್ವರ್ಗಾಲ (ಎಕ. X, ಶಂತಾಮ. ೦೦೯-೧೨; ಸು. 1000). [ ? + <ಅರಸ$_1$]

**ಮೊದಲ್$_1$**, ಮುದಲ್, ಮುದ್ದಲು, ಮೊದಲು$_1$ (ನಾ). ೧. ಆರಂಭ; ಆದಿ ; ಪ್ರಥಮ: ಮೊದಲಿನನಿತ್ತೋರಾನಿತ್ತನ್ತೆ ಬಿಟ್ಟ (ಎಕ. VI, ಕೊಪ್ಪ. ೩೮-೭ ; ಸು.675 ?); ಇನಿಯವು ಮೊದಲೊಳ್ ಸಂಜೆನ ಪನಿವೊಲ್ ಬಱಿಕೆಯ್ದೆ ಮುಳಿದು ಕೊಂದಿಕ್ಕುವುವು (ಆದಿಪು. ೦೪-೧೨೩); ವಿಸ್ತಾರದ ಜೈನಧರ್ಮದ ಮೊದಲ್ ಪರಮೇಶ್ವರರೆಂಬಿನಂ ಸದಾಚಾರಸಮೇತರಾದ

ರೆಮಾಗೀಗೆ ಶಿವಾಸ್ಪದ ಮುಖ್ಯಸೌಖ್ಯಮಂ (ಶಾಂತಿಪು. ೧-೩); ಅಭಿಮಾನದ ಜನ್ಮಭೂಮಿ ಮಾನ್ಯನದ ಮೊದಲ್ (ಸೌಇಇ. XI-i; ೬೫-೩೯; 1028). ೨. ಪಕ್ಕ ; ಬದಿ ; ಪಾರ್ಶ್ವ : ರಾಮೇಶ್ವರ ಎಮ್ಬ ತೀರ್ತ್ಥದಾ ಮೊದಲೊಳ್ ಮೆಪ್ಪಿಕ್ಕಿ ಪೊರದ ಪನ್ನಿಗಳನಿಱಿಯಲ್ ಬನ್ದಲ್ಲೀ(ಲ್ಲಿ) (ಎಇ. XXX. III, ೩೩೦-೯; 804). ೩. ಬೇರು ; ಬುಡ ; ಮೂಲ : ಮೊದಲಿಂ ತಗುಳ್ದು ತುದಿವರಂ . . . ಇದಱ ವಿಧಿಯಿಂತುಟು ಮಂತ್ರಪೂರ್ವಕಂ ನೆಗೞ್ವುದು (ಅಂಶು. ೦೫-೦೬) ; ಮಣಿದೀಪದ ಸರಮೊಪ್ಪಿದುದುಂದು ಪಾದಪೀಠದ ಮೊದಲೊಳ್ (ಅಜಪು. ೬-೫); ಎಕ್ಕೆಯ ಮಾದಲಿಂಗಳ ಮೊದಲ್ಗಳ ನೊಂದೊಂದಱೊಳ್ . . . ಪಲ್ಲಟಿಸಿ (ಖಮರ. ೦೬-೦೬೦). ೪. ಆಧಾರ ; ಆಶ್ರಯ : 'ಮೊದಲ್ಗೆಡಿಸು' ಪರಾ. ೫. ತುದಿ ; ಅಗ್ರಭಾಗ : ಕಱೆಯಲರಾದ ಸಂಪಗೆಯ ಬಣ್ಣದವೋಲೆ ಬೆಳರ್ತ ಬಣ್ಣದೊಳ್ ಗಱಯಿಸೆ ಕೆಂಪು ಕಣ್ಗಳ ಮೊದಲ್ಗಳೊಳೊಯ್ಯನೆ ತೋ[ಱ³] ಬಾಡಿ ಪಾಡಱದು ಬಱಲ್ದು . . . ತಾಮೆ ಕನ್ನಡಿಸಿದಪ್ಪುವು ಕನ್ನೆಯ ಕನ್ನೆವೇಟಮಂ (ಶಃಶಪ. ೪-೬೦) ; ಮನಮಿರೆ ಪುರ್ವಿನ ಮೊದಲೊಳ್ . . . ಯೋಗೀಂದ್ರನಾತ್ಮಚಿಂತೆಯೊಳಿರ್ದಂ (ಅಪಂಪು. ೯-೧೦೪). ೬. ಮುಖ್ಯವಾದುದು ; ಪ್ರಧಾನವಾದುದು ; ಶ್ರೇಷ್ಠವಾದುದು: ಅದೆ ಕಂದರ್ಪಂಗೆ ದೋರ್ದರ್ಪದ ಮೊದಲ್ (ಅಜಿಪು. ೨-೪೬) ; ಬಳೆಯೇ ಸರ್ವವಿಭೂಷಣಕ್ಕೆ ಮೊದಲ್ಕೆ (ಸೂರ್ವಶ. ೧೪). ೭. ಮೂಲಧನ ; ಬಂಡವಾಳ ; ಅಸಲು : ಇನ್ನಿನಿತುಮಂ ಮೊದಲಂ ಕಿಡಲೀಯದೆ ವೃದ್ಧಿಯೊಳೆ ಧರ್ಮ್ಮಮಂ ತಮ್ಮ ಸನ್ತತಿಯವರ್ನ್ನಡೆಯಿಸುವರ್ (ಸೌಇಇ. XI-i, ೬೪-೩೦ : 1028) : ಒಂದು ಪಣವಿನ ಮೊದಲ್ಗೊಂಡಂದಿನ ದಿನದೊಳೆ ಸಹಸ್ರಪಣಮಂ ಪಡೆವಂ (ಶಬಸಂ. ೨೦೫-೪೮) ; ಆಚನ್ದ್ರಾರ್ಕತಾರಂಬರಂ ಸಲುವನ್ನಾಗಿ ಹಣವೊಂದಱ ಮೊದಲಿಂಗೆ ಎಂಟು ಹಣವಂ ತೆತ್ತು (ಎಕ. II, ೩೩೩-೦೬ ; 1206?). ಮುದಲ್ : ೭. ಒಪಾನೂಟ್ಟುವೊದು ಮುದಲ್ಗೂರ್ಕಂಡುಗ ಭಕ್ತ ಪೊಲಿಯೆ ಕೊಂಡುಟ್ಟುವೊದು(ಎಕ. X' ಕೋಲಾರ. ೬-೮ ; 753). ಮುದ್ದಲು : ೭. ಮುದ್ದಲು ಇಮ್ಮಡಿಸಿದರೆ ಬಡ್ಡಿಯು ಬೆಳೆಯುವಂತಿದ್ದಿಲ್ಲ . . . ಇಂಥ ಮುದ್ದಲು ಆರೇಳು ಪಟ್ಟು ಹೆಚ್ಚಾದರೆ ಬಡ್ಡಿಯು ಬೆಳೆಯುವಂತಿದ್ದಿಲ್ಲ (ಶ್ರೀಹಿಂ. ೯೦). ಮೊದಲು₁ : ೧. ಮಡಕೆಯ ಮಾಡುವರೆ ಮಣ್ಣೇ ಮೊದಲು (ಬಸವ. ೬೦) ; ಮೊದಲಲಿದ್ದುದು ಜೀವಕಳೆ ಹೃದಯದಲಿ (ಕುವ್ಯಾಕ. ೧-೪) ; ಮೊದಲ ಬೊಬ್ಬೆಗೆ ಬಿಸಜಸಂಭವ ಬೆದಱಿ ಬಿದ್ದನು (ತೊರರಾ. ೪-೦೨-೨೮). ೩. ತುದಿ ಮೊದಲಿಲ್ಲದೆ ಪರದಿಂಪ ನೊಂದೆ (ಪುರಾದ. ೨-೩೫-೧) ; ನಿಡುದೋಳುಗಳ ಮೊದಲೊಳು ಮಗಮಗಿಸಿದುದದೊಂದು ಪೊಸಗಂಪು (ಸಾಳ್ವಭಾ. ೩-೩). ೫. ಸುರಗಿರಿಯ ಮೊದಲಲ್ಲಿ ಕೀಲಕಗಿರಿಯು (ಕುವ್ಯಾಅ. ೭-೩೬). ೭. ಮೊದಲಿಗೆ ಮೋಸವಾದಲ್ಲಿ ಲಾಭವನಱಸಿದರುಂಟೆ (ಮೋಸವಚ. ೪೫-೦೯೭). 'ಮೊದಲುಗೆಡು' ಪರಾ.

ಮುಮ್ಮೊದಲ್, ಮೊಮ್ಮೊದಲು = ಪ್ರಪ್ರಥಮವಾಗಿ : ತಪ್ಪದೇನ್ ಬಂದಪುದು ಎಂಬುದನ್ ನಿರ್ಣ್ಯಸೆ ನಾನೆ ಮುಮ್ಮೊದಲ್ ಕಲಿಸಿದೆನ್ (ಬಧ್ವಕೃ. ೨೬-೫೫೦) ; ಮಹಾಭಾರತ ಮೊಮ್ಮೊದಲು ಇಲ್ಲಿ ನಡೆವ ಮಹಾ ಯುದ್ಧದ ಕಥೆ (ಶಾರದ. ೦೩೪). ಮೊಟ್ಟಮೊದಲಿಗ, ಮೊತ್ತಮೊದಲಿಗ = ಆರಂಭಿಗ ; ಆದಿಪುರುಷ : ಪಂಚಮಹಾಪಾತಕಕ್ಕೆ ಮೊಟ್ಟಮೊದಲಿಗರೆಂಬಂತೆ (ವಾಗೀಶ. ದೇ. ೨೬೬-೨) ; ಶ್ರೀಗಂ ವಿಜಯಕ್ಕಂ ಮೊತ್ತಮೊದಲಿಗನಾಗಿಯೆ ಸಮಸ್ತರಾಜಕಮನೆಱಗಿಸಿ (ಶಾಂತಿಪು. ೫-೬೩ ವ) ; ರವಿನಂದನ ನನ್ನಿ ಚಾಗಮಣ್ಮೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾದೈ (ಗದಾಯು. ೫-೦೬) ; ಮತ್ತೊರ್ವಂ ಖೇಚರಭೂಚರಪತಿಪ್ರತಾನದ ಮೊತ್ತಮೊದಲಿಗಂ ಮುಂಗೆಯ್ಮ ಕಂಕಣಮಂ ತಿರಿಂಪಿ (ಅಪಂಪು. ೦೩-೯೬ ವ). ಮೊಟ್ಟಮೊದಲು ಮೊತ್ತಮೊದಲ್, ಮೊತ್ತಮೊದಲು, ಮೊದಮೊದಲು = ತೀರ ಮೊದಲು ; ಪ್ರಪ್ರಥಮ : ಮೊಟ್ಟಮೊದಲು ಜನರಿಗೆ ಧಾತುಗಳು ಹ್ಯಾಗೆ ಗೊತ್ತಾದವು (ಮುಂಬಯಿ. ೪-೯೦) ; ಸಿದ್ಧರಾಮ ಮೊಟ್ಟಮೊದಲಿನ ಮಾತು ಆಡಿದನು (ಸಿದ್ಧಪು. ೩-೬೮) ; ನಿರಂತರಂ ಸುಖವ್ಯಾಪ್ತಿಗೆ ನೀನೆ ಮೊತ್ತಮೊದಲಾಗರಿಕೇಸರಿ ಲೋಕಮುಳ್ಳನಂ (ಪಂಪಭಾ. ೦-೦೪೯) ; ಸಿದ್ಧಮಾತೃಕಾಪದವಿಗೆ ತಾನೆ ಮೊತ್ತಮೊದಲಾದುದು (ಅಜಪು. ೧-೨) ; ಸುದತಿಯ ತೊಳಗುವ ತೋಳ ಮೊದಲ್ಗಳ್ ಮದನವಿಲಾಸದ ಮೊತ್ತಮೊದಲ್ಗಳ್ (ಸುಕುಮಾ. ೫-೫೦) ; ಈ ಬಗೆಯ ಆನಂದವನ್ನು ಪಡೆಯುತ್ತಿರುವುದು ನನ್ನ ಜೀವಮಾನದಲ್ಲಿಯೇ ಮೊತ್ತಮೊದಲನೆಯ ಸಲ (ಕ್ರಾಂತಿ. ೦೯) ; ಹಿಂದಿನ ಕಾಲದಲ್ಲಿ ಮೊದಮೊದಲು ಅವರು ಈ ಗ್ರಹನಕ್ಷತ್ರಗಳನ್ನು ಬರೀ ಕಣ್ಣಿನಿಂದ ನೋಡುತ್ತಿದ್ದರು (ಅಕಾಶ. ೫) ; ಮೊದಮೊದಲಿನ ವಿಗ್ರಹಗಳ ಅಳತೆಗೆ 'ಅಂಗುಲ'ವನ್ನೂ . . . ಮೂಲಪ್ರಮಾಣವಾಗಿಟ್ಟುಕೊಂಡು ವ್ಯವಹರಿಸುತ್ತಿದ್ದರು (ಶಾರದ. ೫೦೭). ಮೊದಲ ಬಾಡ = ಮುಖ್ಯಪಟ್ಟಣ ; ರಾಜಧಾನಿ : ಪರ್ವ್ವನಿಮಿತ್ತದಿಂದಲಂದೆಸಾಸಿರದ ಮೊದಲ ಬಾಡಮಲಂ[ದಾ]ಪುರದ [ಸ್ವಯಂ]ಭು (ಎಇ. XXVIII, ೩೫-೩೫ ; 1082). ಮೊದಲಾಗಿ, ಮೊದಲಾಗೆ = ೧. ಮುಂತಾಗಿ ; ಇತ್ಯಾದಿಯಾಗಿ : ಸ್ಥೂಲಭದ್ರಾಚಾರ್ಯರ್ ಮೊದಲಾಗಿ ಕೆಲಂಬರ್ . . . ಅರ್ಧಗಪ್ಪಡವ ಶೀರ್ಷಮಂ ನೆಗೞ್ದಿದರ್ (ವಡ್ಡಾರಾ. ೯೩-೧) ; ರುದ್ರಭಟೋಪಾಧ್ಯಾಯರುಮಿಶ್ವರದಣ್ಡನಾಯಕರ್ಮೊದಲಾಗಿ (ಸೌಇಇ. XX, ೪೬-೩೦; 1072); ನಾಡೆ ರುಚಿವೆರಸಿದ ಲಡ್ಡುಗೆ ಚಕ್ಕುಲಿ ಗಾರಿಗೆ ಪೂರಿಗೆ ಮೊದಲಾಗಿರ್ದ ಭಕ್ಷ್ಯಮನಾಗಳ್ ಆಜ್ಯಯುತ ಮಪ್ಪುವಂ ಮೆಲ್ದು (ಧರ್ಮಾಮೃ. ೦-೦೪೭) ; ಲಕ್ಕಣಂ ಮೊದಲಾಗೆ ಸೂರ್ವರ್ ಮಕ್ಕಳುಮಂ ಮುಂತಿರಿಸಿ (ಪಂಪಭಾ. ೯-೨೮ ವ) ; ಮರೀಚಿಯುಂ ಮೊದಲಾಗೆ ನಾಲ್ಸಾಸಿರ್ವರರಸುಮಕ್ಕಳ್ ಪೋಗಲೊಲ್ಲದೆ (ಪಾಪುಂಪು. ೩೮). ೨. ಪ್ರಾರಂಭಿಸಿ ; ಮೊದಲ್ಗೊಂಡು : ಪೆಂಡಿರೆಂಬರೊಳ್ ಕೂಡುವ ನಲ್ಲೆನಿಂದು ಮೊದಲಾಗಿರೆ ನಿಕ್ಕುವಂ (ಪಂಪಭಾ. ೦-೬೩) ; ನಾಳೆ ಮೊದಲಾಗ ಜರ್ಜನನ ನಾವ್ ಕಾಳೆಗಕೆ ಬರಲೀಯೆವು (ಕುವ್ಯಾದ್ರೋ. ೨-೫); ಚಿಕ್ಕಂದು ಮೊದಲಾಗೆ ನೀನಲ್ಲದೂರ್ವರ ಲೆಕ್ಕಿಸಿದೆವಳು ತಾನಲ್ಲ (ಕಂಸವ. ೨-೧೦೫). ಮೊದಲಾಗು = ಆರಂಭವಾಗು: ಮರ ಗಿಡಂ ಬಾನ್ನೆಲಂ ತೂನೆದಾಡಿ ನಡುಗಿದುವು ಮೊದಲಾಯ್ತು ಮಳೆಗೆ (ಕಾಂಚಾರ. ೪೫-೬೦) ; ಕುಣಿತ ಮೊದಲಾಯಿತು! (ಸವಿ. ೩). ಮೊದಲಾದ = ಮುಂತಾದ ; ಇತ್ಯಾದಿಯಾದ : ಹರಿ ಬ್ರಹ್ಮಾದಿಗಳು ಮೊದಲಾದ ತೆತ್ತೀಸಾದಿದೇವರ್ಕಳು ಉಘೆ ಉಘೆ ಎನುತಿರಲು (ಬಸವ. ೮೪೪); ಸಹದೇವ ನಕುಳರ ತಿವಿದು ಧೃಷ್ಟದ್ಯುಮ್ನ ಮೊದಲಾದಗಣಿತರ ಗೆಲಿದ (ಕುವ್ಯಾದ್ರೋ. ೫-೬೫); ಹಳ್ಳಿ ಓರಿಯೂರು ಪುರಗಳು ಮೊದಲಾದ ಪ್ರತ್ಯೇಕಗ್ರಾಮಗಳಂದ (ಎಕ. XIV. ಗುಂಡ್ಲುಪೇ. ೯-೧೧; 1520).

[ದೇ.# ತಮಿ. ಮುತಲ್ ; ಮಲ. ಮುದಲ್ ; ತುಳು. ಮುದೆಲು ; ತೆಲು. ಮೊದಲು]

ಮೊದಲ್₂, ಮೊದಲು₂ (ಅ). ೧. ಪ್ರಾರಂಭ ಮಾಡಿ ; ಮೊದಲ್ಗೊಂಡು : ಆ ಅಂದಮನಿಂದುಮೊದಲ್ ಪತ್ತುವಿಟ್ಟು ನಡೆವೆನೆಂಬುದುಂ (ಪಂಚತಂ. ೦೩೫-೦೪). ಮೊದಲು₂: ೧. ಇಂದುಮೊದಲಿಕ್ಕೆಯಿಂ ತಾಪತ್ರಯಂ ಪಿಂಗಿದವೆನಲು ಮಳೆತ್ರಯುವಡಂಗಿದವು (ಸಿದ್ಧರಾ. ೦-೪೯); ಇಳೆ ಮೊದಲು ಹದಿನಾಲ್ಕು ಲೋಕದ ಬಳೆಯಿಕೆವರಿಂದಾಯ್ತು (ಸಂಭಶ. ೫-೩೮) ; ನಿನ್ನೆ ಮೊದಲು ನಿನ್ನಾಣೆ ನಿನ್ನನು ಕಾಣದನ್ನಪಾನಂಗಳಳಿಯದೆ ಬನ್ನದೊಳಾಳಿದೆ (ಕಂಸವ. ೨-೦೦೪). ೨. ಮುಂಚೆ ; ಹಿಂದೆ ; ಪೂರ್ವದಲ್ಲಿ : ಪುಣ್ಯಪಾಪಂಗಳನಱಿಯದ ಮೊದಲು ಅನೇಕ ಭವಂಗಳಲ್ಲಿ ಬಂದೆನಯ್ಯಾ (ಮಹಾದೇ. ಬ. ೦೫-೦೯). [< ಮೊದಲ್₁]

**ಮೊದಲಗಿತ್ತಿ**, ಮದಲಗಿತ್ತಿ (ನಾ). ಮದುವಣಗಿತ್ತಿ; ಮದುಮಗಳು; ನವವಧು : ಮೊದಲದಿನದ ಮೊದಲಗಿತ್ತಿಗೆ ಮೂನ್ನೂರು ಮುತ್ತಿನ ಸರ ಮಾಲೆ (ತುಂಗಳ. ೦೦೦); ಮೂರು ಮಕ್ಕಳ ತಾಯಿ ಮೊದಲಗಿತ್ತಿಯಂತೆ ಕುಣಿಯಲು ಹೇಗೆ ಸಾಧ್ಯವಾದೀತು (ಮಕ್ಕಪು. ೯೩); ಭೂಮಿತಾಯಿಯಂತೆ ನೀನು ಒಬ್ಬ ಚಿರಂತನ ಮೊದಲಗಿತ್ತಿ (ಗಾಳಿ. ೦೮೩). **ಮದಲಗಿತ್ತಿ :** ಸೌಂದರದ ಮೇರುವಿಂತೊಳಗೆ ಮದಲಗಿತ್ತಿಯ ಮದಕರಿಯ ಕೊಂದು (ಶಿರಾಗೋ. ೦೦-೪೦) ; ಆಗ ಆ ಮದಲಗಿತ್ತಿಯು ಮನೆಯ ಗೋದಿಯಲ್ಲಿ (ಕಥಾಮಂ. IV. ೦೬). [< ಮದುವಳಗ + - ಇತ್ತಿ]

**ಮೊದಲಚ್ಚು** (ನಾ). ಮೂಲಆಕೃತಿ; ಮೂಲರೂಪ : ಆ ಮೂರ್ತಿಗಳೆಲ್ಲ ಮೊದಲಚ್ಚು, ನಾವು ಪಡಿಯಚ್ಚು (ಸಾಹಿಶಿ. ೩೫). [ಮೊದಲ್$_1$ + ಅಚ್ಚು$_3$]

**ಮೊದಲಾಣ್ಮ** (ನಾ). ಮೊದಲನೆಯ ಗಂಡ : ಮೊದಲಾಣ್ಮನೊಲ್ಲೆಂದೊರ್ವ ಬಲವಂತನಂ ಬಯಸಿ ಬಾಳ್ವೊಗಲ್ ಬಡಿವ ಗಂಡಂ ದೊರೆಕಿದಂತೆ (ತೆಂಕಿ. ೩೬-೭). [ಮೊದಲ್$_1$ + ಆಣ್ಮ (< ಆಳ್ಮ)]

**ಮೊದಲಾಳಿ** (ನಾ). ಮುಖಂಡ ; ನಾಯಕ; ಪ್ರಧಾನವ್ಯಕ್ತಿ : ಇರುತಿರೆ ಸಾಂಬಳ್ಳಿಯ ಮೊದಲಾಳಿಯ ಹಿರಿಯ ತನುಜ ಪಟ್ಟದಯ್ಯ ಪಿರಿದು ಗರ್ವಿಸಿ . . . ಧುರವನೆಸಗಿದ (ಕಂಸಂ. ೦೭-೨). [← ತಮಿ. ಮುತಲಾಳಿ]

**ಮೊದಲಿ**, ಮುದಲಿ (ನಾ). ೧. ಮೊದಲಿಗ ; ಪ್ರಮುಖನಾದವನು : ಕಸವನು ಗುಡಿಸುತ ಕಸವೇ ಆಗಿ, ಕಸಕೂ ಕಡಮೆ ಅಧಮರ ಮೊದಲಿ (ಸುಕೀತ. ೨). **ಮುದಲಿ :** ೨. ತಮಿಳು ಭಾಷೆಯನ್ನಾಡುವ ಒಂದು ಜನಾಂಗ ಮತ್ತು ಆ ವರ್ಗಕ್ಕೆ ಸೇರಿದ ಜನರ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ : ಯಾವ ತಪ್ಪಿಗಾಗಿ ನಮ್ಮ ಪ್ರತಾಪಮುದಲಿಯನ್ನು ಬಂಧಿಸಬೇಕೆಂದು ಹೇಳುವಿರಿ ? (ಶ್ರೀಕಾಶ. ೩೭). 'ಮುದಲಿಯಾರ್' ಪರಾ. [ದೇ.॥ ತಮಿ. ಮುತಲಿ; ತೆಲು. ಮೊದಲಿ]

**ಮೊದಲಿಕ್ಕು** (ಕ್ರಿ). ಪ್ರಾರಂಭಿಸು ; ತೊಡಗು : ಭಯಮಂ ಚಿತ್ತಕ್ಕೊದವಿಸಿ ಬಲಗಣ್ಕೆತ್ತಲ್ಕೊದಲಿಕ್ಕಿತು (ಕಾದಂಪೂ. ೬೬೮); ನೆರೆವೆಂಡಿರ ಸುಖಗೋಷ್ಠಿಗಳ್ ನಾರಿಯರೊಳ್ ಮೊದಲಿಕ್ಕುಗುಂ (ರಾಮಾಶ್ವ. ೦೭-೨೮). [ಮೊದಲ್$_1$ + ಇಕ್ಕು]

**ಮೊದಲಿಗ** (ನಾ). ಪ್ರಥಮಸ್ಥಾನದಲ್ಲಿರುವವನು : ಪ್ರಮುಖನಾದವನು : ಚಾಳುಕ್ಯಾರ್ಜುನಂ ಚಲಕೆ ಮೊದಲಿಗಮ್ (ಎಕ. XIV. ಮೈ ಸೂರು. ೦೨೭-೯; 900); ಕಡುಪೆಂಪಿನ ಪೂಜೆಗೆ ನೀವು ಮೊದಲಿಗರಾದಿರ್ (ಶಂಕಶಾ. ೬-೦೨); ಹದುಳವಿಡುವವರಿಲ್ಲ ಸೇನೆಯ ಮೊದಲಿಗರು (ಕುವ್ಯಾ.ರಾ. ೯-೨೭); ವಿಜ್ಞಾನವನ್ನು ಬೆಳೆಸಿದವರಲ್ಲಿ ಗ್ರೀಕರು ಮೊದಲಿಗರು (ಜುಶ್ಯಾರ. ೬ ಬೀಳ೯). [ಮೊದಲ್$_1$ + - ಇಗ]

**ಮೊದಲಿಡು** (ಕ್ರಿ). = ಮೊದಲಿಕ್ಕು : ಮೊದಲಿಟ್ಟಂ ಕೊಲಲೆಂದು ಕೌರವರು (ಕಂಶಭಾ. ೦೦-೦೦); ಮಾಗಿ ಬರಲ್ ಮೊದಲಿಟ್ಟಿತು (ಜಿಶಂ. ೦೯-೬); ಸಂಭ್ರಮಂ ಮೊದಲಿಡು[ಶಾಕಾಂ. ಪೊದವಿಸು]ತಿರ್ದುದಾ ನೃಪನ ದೇಶದೊಳಂ ತಿರುನಾವಲೂರೊಳಂ (ಶಂಶರ. ೫ ಸಿಕಿಸನ). [ಮೊದಲ್$_1$+ ಇಡು$_1$]

**ಮೊದಲಿಯಾರ್**, ಮುದಲಿಯಾರ್, ಮುದ್ಲಿಯಾರ್ (ನಾ). = ಮೊದಲಿ ೨. P ಕನ್ನಡನಾಡಿನಲ್ಲಿ ಈ ಶಬ್ದರೂಪವೇ ಹೆಚ್ಚು ಪ್ರಚಾರದಲ್ಲಿದೆ. **ಮುದಲಿಯಾರ್ :** ಇವರ ಮುಖಲಕ್ಷಣಗಳು ಮುದಲಿಯಾರರಂತೆ ಇರುತ್ತವೆ (ಕೆಂಗಿ. ೦೦೦); ತೊಂಡಮಂಡಲ ಮುದಲಿಯಾರರ ವಂಶದಲ್ಲಿ ನಾನು ಜನಿಸಿದೆ (ಶ್ರೀಕಾಶ. ೦). **ಮುದ್ಲಿಯಾರ್ :** ವಿಜಾಪುರಜಿಲ್ಲೆಯ ಮುದ್ಲಿಯಾರರು ವ್ಯಾಪಾರದ ಹೊರ್ತು ಬೇರೆ ಹೋರೆಯನ್ನು ಬಹುತರ ಮಾಡುವುದಿಲ್ಲ (ಕಶಾಗ. ೯೦). [ದೇ.॥ ತಮಿ. ಮಲ. ಮುತಲಿಯಾರ್ ; ತೆಲು. ಮೊದಲಾರಿ]

**ಮೊದಲಿಸು** (ಕ್ರಿ). = ಮೊದಲಿಕ್ಕು : ರಾಜುವೇ ಯಾವುದಾದರೂ ವಿಷಯವನ್ನೆತ್ತಿಕೊಂಡು ಮಾತಿಗೆ ಮೊದಲಿಸುವನು (ಜೀವಪ. ೨೦); ನನಗೆ ಫಿಲಾಸಫಿ ಕಂಡರೆ ಆಗುವುದಿಲ್ಲ. ನೀವು ಅದನ್ನೇ ಹೆಚ್ಚಾಗಿ ಓದಲು ಮೊದಲಿಸಿದರೆ ಮುಂದೆ ನಿಮ್ಮನ್ನು ಕಂಡರೂ ಆಗದೇ ಹೋದೀತು (ದೂರಕ. ೩೬). [ಮೊದಲು$_1$ (< ಮೊದಲ್$_1$) + - ಇಸು$_3$]

**ಮೊದಲು$_1$** 'ಮೊದಲ್$_1$' ನೋ.

**ಮೊದಲು$_2$** 'ಮೊದಲ್$_2$' ನೋ.

**ಮೊದಲುಗಣ್** (ನಾ). ಕಣ್ಣಿನ ಬುಡ ; ಮೂಗಿನ ಮೇಲ್ಬುದಿಯ ಕಣ್ಣಿನ ಭಾಗ : ಅಕ್ಷಿಮೂಲಂ ಪೂರ್ವನೇತ್ರಮೆನೆ ಮೊದಲು [ಶಾಕಾಂ. ಲ] ಗಣ್" (ಮಂಗರಾ. ೯೯-೩). [ಮೊದಲು$_1$ (< ಮೊದಲ್$_1$) + ಕಣ್]

**ಮೊದಲುಗೆಡು** 'ಮೊದಲ್ಗೆಡು' ನೋ.

**ಮೊದಲುಗೊಂಬು** (ನಾ). ಆನೆಯ ಕೋರೆಹಲ್ಲುಗಳ ಬುಡ; ದಂತಮೂಲ : " ಕರ್ಶಿರಂ, ದಂತಮೂಲಂ ಈ ೨ ಮೊದಲುಗೊಂಬು " (ಕರಾಮು. ೩೭-೭೦). [ಮೊದಲು$_1$ (< ಮೊದಲ್$_1$) + ಕೊಂಬು$_1$]

**ಮೊದಲುಗೊಳ್** 'ಮೊದಲ್ಗೊಳ್' ನೋ.

**ಮೊದಲುಜುಬು** (ನಾ). ಆರಂಭದ ರಭಸ,-ಆವೇಗ : ಕಾರ್ಪಟಿಯ ಬಿಜುಗಾಳಿ ಮೊದಲುಜುಬು ಸಯ್ತು (ಅಕ್ಕಾ. ೦೦-೨೨೫). [ಮೊದಲ್$_1$ + ಉಜುಬು$_0$ (< ಉಜುಂಬು$_2$)]

**ಮೊದಲೇರಿ**, ಮೊದಲೇಱಿ (ನಾ). ಕೆರೆಯ ಕೋಡಿಯಿಂದ ಹರಿಯುವ ನೀರಿನ ಮೊದಲ ಪರಿಸರ, -ಭಾಗ : ಮೊದಲೇರಿಯೊಳ್ಗಾಯಿರ ಬಳ್ಳಿಯ ತೋಣ್ಣಮುಂ ಅಯ್ಯತ್ತೆಣ್ಬ ಗ್ರಹಾರಮುಮಜೆಯ ಸ್ಸರ್ಬಬಾದ ಪರಿಹಾರನ್ ದೇವಭೋಗಂ ಮಾಡಿಕೊಟ್ಟರ್(ಎಕ.XI.ಹೊಳಲ್ಕೆ.೨೩-೨೦;968); ಅಂಕಲಗೆಱೆಯ ತುಂಬಿನ ಮೊದಲೇರಿಯ ಕೆಳಗೆ ದೇವಗ್ಗೆ ಕೊಟ್ಟ ಗದ್ದೆ ಕಮ್ಮ ೫೦ (ಸೌಇಇ. XX. ೯೯-೯೨; 1123); ಹಿರಿಯ ಕೆಱೆಯ ಹಿಂದಣ ಮೊದಲೇರಿ ಅಡಕೆದೋಟ . . . ಮೇರೆಯಾಗಿ (ಎಕ. VI. ಕಡೂರು. ೦೨೯-೯೭; 1272 ?). **ಮೊದಲೇಱಿ :** ಮೊದಲೇಱಿಯೊಳ್ ಇರ್ಪಂಡುಗ ವೆದೆಗಟ್ಟಿ . . . ಅಯ್ಯೂಱು ಬಳ್ಳಿಯತೋಣ್ಣ ಅಲಕೆಱೆ ಇವನಾವನೊರ್ವ್ವ ನಡೆಯಿಸಿದನಾತನದೆ ಧರ್ಮ (ಎಕ. XI. ದಾವಣ. ೦೭-೦೩; 889). [ಮೊದಲ್$_1$ + ಏರಿ$_1$]

**ಮೊದಲೇಱಿ** 'ಮೊದಲೇರಿ' ನೋ.

**ಮೊದಲ್ಗಾಲ್** (ನಾ). ಕೆರೆಯ ತೂಬಿನಿಂದ ಹೊರಟ ಕಾಲುವೆಯ ಪ್ರಾರಂಭದ ಭಾಗ : ಆ ಸಿರಿಪೊಳಲ ಕೆರೆಯ ಕೆಳಗೆ ಮೊದಲ್ಗಾಲ ಗದ್ದೆಯ ಹಂನೆರಡು ಖಂಡುಗದ ಬಯಲು (ಎಕ. XI. ಜಳ್ಳ. ೨೦-೨೨ ; 1087). [ಮೊದಲ್$_1$ + ಕಾಲ್$_2$]

**ಮೊದಲ್ಗಿಡು** 'ಮೊದಲ್ಗೆಡು' ನೋ.

**ಮೊದಲ್ಗೆಡಿಸು** (ಕ್ರಿ). ಆಧಾರವಿಲ್ಲದಂತೆ ಮಾಡು ; ನಾಶಗೊಳಿಸು : ನೀಱಿರ ಸೊಬಗಂ ಮೊದಲ್ಗೆಡಿಸಿ ತೋಳ ಮೊದಲ್ಗನೆಪೂವನೆತ್ತುವಂತಿರೆ ನನೆಯಂಬುಗಳ್ಗೆ ಬೆರಲೆತ್ತುವರಲ್ಲಿಯ ಮಾಲೆಗಾರ್ತಿಯರ್ (ಮಲ್ಲಿಕಾ. ೨-೩೯). [ಮೊದಲ್ಗೆಡು + - ಇಸು$_3$]

**ಮೊದಲ್ಗೆಡು**, ಮೊದಲುಗೆಡು, ಮೊದಲ್ಗಿಡು (ಕ್ರಿ). ೧. ಬೇರುಸಹಿತ ನಾಶವಾಗು ; ನಿರ್ಮೂಲವಾಗು ; ಸಂಪೂರ್ಣವಾಗಿ ಅಳಿಸಿಹೋಗು: ವಿಂಧ್ಯವಿತಾನಪ್ರಾಂತದೊಳ್ ತಿಱಿನೆ ತಿರುಗಿ ಮೊದಲ್ಗೆಟ್ಟು ಬೆಬಳ್ದು (ರಜ್ವಾತ. ೦೯). ೨.(ವ್ಯಾಪಾರದಲ್ಲಿ) ಮೂಲಧನವನ್ನು ಕಳೆದುಕೊಳ್ಳು; ನಷ್ಟ ಹೊಂದು : ಮೊದಲ್ಗೆಟ್ಟ ಪರದನಂತೆ ಘಳಿಗೆಗೊಂದಂ ನೆನೆಯದೆ (ರವಾರ್ಜುನ. ೦೯-೬೯). **ಮೊದಲುಗೆಡು :** ೨. ಮೊದಲುಗೆಟ್ಟು ಲಾಭವ ನಚಿಸುವ ಪರಿ ಇನ್ನೆಂತೋ (ಮೋಳಶಾ. ೬೯-೨೬೦); ಮೊದಲುಗೆಡವ

ಹರಡೆನಗಾದುದಮ್ಮ ಮೊದಲುಗೆಡದ ಹರವು (ಶಿವಗೀ. ೬೪-೪೦೨).
**ಮೊದಲ್ಗಿಡು** : ೧. ಕ್ಷಿತಿಯೊಳಗುಳ್ಳ ಭೂಭುಜರ ಬಿತ್ತು ಮೊದಲ್ಗಿಡೆ ಮುನ್ನಮೇಕವಿಂಶತಿ ಪರಿಸಂಖ್ಯೆಯಿಂ ತವಿಸಿ (ಶಂಕಭಾ. ೨-೯೫); ಮತಿಯುಂ ಮೊದಲ್ಗಿಡಲೀಯದೆ ಮದನವಿಕಾರಮನೊದವಲೀಯದೆ (ರಾಜಾವ. ೪-೬೬ ವ); ಎಣಿಗದ ಶಿರಭೂರುಹಮನೆಯ್ದೆ ಮೊದಲ್ಗಿಡೆ ಕೀಳ್ವ . . . ಎಣಿಗದರಂ ತಡಂಗಿಡಿಪ ನಮ್ಮರನುರ್ವಿಪ ರಾಜಲೀಲೆ ಕಣ್ಗೆಟೆದುದು (ಪುಷ್ಪಕೃ. ೧೩-೬).

[ ಮೊದಲ್$_1$ + ಕೆಡು$_1$ ]

**ಮೊದಲ್ಗೆಯ್** (ಕ್ರಿ). ಆರಂಭಿಸು; ಮೊದಲು ಮಾಡು; ಉಪಕ್ರಮಿಸು: ಅರಣ್ಯಕನಿಂತು ಕತೆಗೆ ಮೊದಲ್ಗೆಯ್ದಂ (ರಾಮಾಶ್ವ. ೧೧೯-೬).

[ ಮೊದಲ್$_1$ + ಕೆಯ್$_1$ ]

**ಮೊದಲ್ಗೊಳ್**, ಮೊದಲುಗೊಳ್, ಮೊದಲ್ಗೊಳು (ಕ್ರಿ). ೧. ಆರಂಭವಾಗು; ಮೊದಲಾಗು : ಪುಟ್ಟಿದಂದು ಮೊದಲ್ಗೊಂಡಗಲದ ಚಂದ್ರಾಪೀಡನನಗಲ್ದಿರಲ್ನೀನದೆಂತು ಪೇಟ್ಟಗೆಡಂದಪೆ (ಕಾದಂಬ. ೪೭೦); ಅವಳ ಮೆಲ್ಲಡಿ ಮೊದಲ್ಗೊಂಡು ಮೆಲ್ಲಮೆಲ್ಲನೆ ಮೇಗಪರ್ದ ನೀಳ್ದ ಕಣ್ಗಳುಂ ಸೆಳೆನಡುವಿನಲ್ಲಾಟಮಂ ಕಂಡು ಪೊಱಮಾಱಂದೇಱಲಾರ್ತುವಿಲ್ಲ (ಕಬ್ಬಿಗ. ೬೮). ೨. ಬಂಡವಾಳವನ್ನು ಪಡೆದುಕೊಳ್ಳು; ಮೂಲಧನವನ್ನು ತೆಗೆದುಕೊಳ್ಳು : ಕನಕರಾಶಿಯುಂ ಬಸನಕ್ಕೆ ತವಿಸಿ ಬಿಯಂ ನಡೆಯದಿರೆ . . . ಸೋದರಮಾವಂ ಭದ್ರಮಿತ್ರನಲ್ಲಿ ಮೊದಲ್ಗೊಂಡು ಸ್ಥಳಯಾತ್ರೆಗೆ ಪೋಗಿ ಸಂಖ್ಯಾತೀತಸಾರಧನಮಂ ಪಡೆದು ಬರ್ಪೆಡೆಯೊಳ್ (ಶಾಂತಿಪು. ೯-೯೦ ವ). **ಮೊದಲುಗೊಳ್** : ೧. ಈ ಹೊತ್ತು ಮೊದಲುಗೊಂಡು ಯುದ್ಧವಿಲ್ಲದ ರೀತಿಗೆ ಮಾಡುತಲಿರ್ಪೆನೆ (ಕೃಪಾಶೀ. ೯೯) ; ಪ್ರಕಾಂಡಃ . . . ಬೇರು ಮೊದಲುಗೊಂಡು ರೆಂಬೆಗಳವರೆಗೂ ಗಿಡದ ಮಧ್ಯಭಾಗದ ಹೆಸರುಗಳು (ಸಿದ್ಧಾಂತ. ೧೦೨). **ಮೊದಲ್ಗೊಳು**: ೧. 'ಮೊದಲ್ಗೊಳುಹ' ಪರಾ. [ ಮೊದಲ್$_1$ + ಕೊಳ್$_1$ ]

**ಮೊದಲ್ಗೊಳು** 'ಮೊದಲ್ಗೊಳ್' ನೋ.

**ಮೊದಲ್ಗೊಳುಹ** (ನಾ). ಆರಂಭ ; ಪ್ರಾರಂಭ : "ಉಪಜ್ಞಃ, ಉಪಕ್ರಮಃ, ಆರಂಭಃ— ಈ ೩ ಮೊದಲ್ಗೊಳುಹ" (ಹಲಾಯು. ೦೦೬-೨೨).

[ಮೊದಲ್ಗೊಳು (< ಮೊದಲ್ಗೊಳ್) + — ಹ$_2$ ( < —ಪ$_2$ )]

**ಮೊದಳೆ**, ಮೊಸಳೆ (ನಾ). ಒಂದು ಬಗೆಯ ಜಲಚರಪ್ರಾಣಿ; ನಕ್ರ : 'ಮೊದಳೆಮಡು' ಪರಾ. **ಮೊಸಳೆ** : "ಕುಂಭೀರಃ, ನಕ್ರಃ – ಈ ೨ ಮೊಸಳೆ" (ಹಲಾಯು. ೦೦೮-೩೪); ಮೀನುಂ ಮೊಸಳೆಯುಂ ನೆಗಬುಮಾಮೆಯುಂ . . . ಮೊದಲಾಗೊಡೆಯ ಜಲಚರಂಗಳುಂ (ಪಂಪಾರಾ. ೯೬-೬); ಮೊಸಳೆಯುಂ ಓಡಿಪಂತಿರೆ ನೀರೊಳೆತ್ತಿ ಭೀಮಸನತಿಗರ್ವದಿಂ ಓಡಿಪಿ (ಶಂಕಭಾ. ೧-೨೬); ಆ ಪಣ್ಗಳಂ ಕ್ರಕಚನೆಂಬುದೊಂದು ಮೊಸಳೆ ಪ್ರತಿದಿನಮೊಲ್ದು ಮೆಲ್ದು (ಶಬರಂ. ೨೬೬-೨೦); ಉಷ್ಣಪ್ರದೇಶಗಳೊಳಗಿನ ನದಿಗಳಲ್ಲಿಯೂ ಸರೋವರಗಳಲ್ಲಿಯೂ ಮೊಸಳೆಗಳುಂಟು (ಮುಂಬಯು. ೪-೨೬).

**ಮೊಸಳೆಕಣ್ಣೀರು** = (ಆಲಂ) ಮೋಸಗೊಳಿಸಲು ಸುರಿಸುವ ಕಂಬನಿ ; ಕಪಟದ ಕಣ್ಣೀರು : ಅವರ ಆಶ್ವಾಸನೆಗಳೆಲ್ಲ ಸುಳ್ಳೇ ಸುಳ್ಳು! ಅದು ದೊಡ್ಡವರ ಮೊಸಳೆಕಣ್ಣೀರು ! (ಕೃಲಾಳ. ೭೪). **ಮೊಸಳೆತುಪ್ಪ** = (ಔಷಧಿಯಂತೆ ಬಳಸುವ) ಮೊಸಳೆಯ ಕೊಬ್ಬು : ಉಳುಕಿದಾಗ ಮೊಸಳೆತುಪ್ಪ ಸವರಿ ತಿಕ್ಕುತ್ತಾರೆ (ರೂಢಿ).

[ದೇ.॥ ತಮಿ. ಮುತಲೈ, ಮುತಳೈ, ಮುಚಲಿ ; ಮಲ. ಮುತಲ ; ತುಳು. ಮುದಲೆ, ಮುದಳೆ, ಮೊಸಳೆ ; **ಕೊಡ.** ಮೊಸಲೆ ; ತೆಲು. ಮೊದಲಿ, ಮೊಸಡಿ, ಮೊಸಲಿ ; **ಕೋತ.** ಮೊಚಳ್ ; **ಕೋಲಾ.** ಮೊಸೆಲಿ; ಪರ್ಜಿ. ಮೋಚ. /ಸಂ. ಮುಸಲೀ]

**ಮೊದಳೆಮಡು**, ಮೊಸಳೆಮಡು (ನಾ). ೧. ಮೊಸಳೆಗಳು ವಾಸಮಾಡುವ ನದಿ. ಹೊಳೆ ಮುಂತಾದುವುಗಳ ಆಳವಾದ ಭಾಗ : ತೆನ್ನಾಯ್ತಲೆಮೊಱಡೆ ಬೆದಿಕೆರೆವ ಮೊದಳೆಮಡುವೆ ಪಡುವಾಯ್ವೆಳ್ಗೊಳ ಕಾಲುವೆಪದುಂ ಒಳಗಾಗಿ (ಮೈಸೂ. ೦೯೨೬, ೦೦೮-೯೭ ; ೪ನೆಯ ೫೫). **ಮೊಸಳೆಮಡು** : ೧. ಅದು ಮೊಸಳೆಮಡುವಾದುದರಿಂದ ಅಲ್ಲಿ ಈಜಲು ಹೋಗಬಾರದೆಂದು ಎಚ್ಚರಿಕೆ ನೀಡಿದ್ದಾರೆ (ರೂಢಿ). ೨. ಒಂದು ಸ್ಥಳದ ಹೆಸರು : ಶ್ರೀಮತ್ಸ್ಗುರುದೇವಕರ್ಣೇಶ್ವರಿಯುಮ್ಮಜೆಜೆಳಗಣಮೊಸಳೆ ಮಡುವನಾಳುತ್ತಮಿರ್ದು (ಕರ್ನಾ. IX-i, ೯೦-೦೦; 1036).

[ಮೊದಳೆ + ಮಡು$_2$]

**ಮೊದಿರಕಣ್ಣೆ** (ನಾ). ಒಂದು ಬಗೆಯ ಸಸ್ಯ : ಮುಳ್ಳುಅಂಕೋಲೆ, ಮೊದಿರಕಣ್ಣೆಗಿಡ (ಮೈಶಿಗ. ೪೪-೮೬೬). [ ? ]

**ಮೊದೀಖಾನೆ** 'ಮೋದೀಖಾನೆ' ನೋ.

**ಮೊದೆ** (ನಾ). ೧. ಒಂದು ಬಗೆಯ ಹುಲ್ಲು; ಮುಂಜ; ನೊದೆಹುಲ್ಲು : "ಶರಃ, ಮುಂಜಃ—ಇವೆರಡುಂ ಮೊದೆ" (ಹಲಾಯು. ೩೨-೩೮) ; ಮದನಂ ಬೆಳ್ಮುಗುಳಂಬಿನಿಂದಿಸೆ ಜಗಿಲ್ತಿರ್ದಂಬುಗಳ್ ಚಿತ್ತದೊಳ್ ಮೊದೆಯಂ ಬೈತವೊಲಾಗೆ (ಕಾವ್ಯಸಾ. ೩೪೮ ಕೂಪ್ರ೪) : ಅಬಳಾಸ್ತನಜಳದೊಳ್ ಮೊ(ಮು)ದೆಯ ಬೂದಿಯಂ ಕಲಸಿ . . . ಬಚಿಕ್ಕದನೆಚ್ಚಗೆ ಕಣ್ಣ ಬೇನೆ ಮಾಣ್ಗುಂ (ಲೋಕೋಪ. ೯-೬೯) ; ಕಳ್ವೆವಬ್ಬೆ ಮೊದೆ ಬೆಳೆದಿದ್ದ ತವರೇ ಮೇರೆಯಾಗಿ (ಎಕ. III, ಶ್ರೀರಂಗ. ೦೩೩-೪೯; 1458). ೨. (?) : ತಟಿ ಕಾಡ ಪೆಜ್ಜೆಡಿಯ ಮೊದೆಯ ಕಲಾಪಕದ ಗುರವಡಿಗಳ್ (ಎಕ. II, ೩೩-೩; ಸಂ. 700).

[ದೇ.॥ ತೆಲು. ಮೊದಯು; **ಕೊಡ.** ಮೊದೆ = ಹುಲ್ಲುಗಿಡದ ಪೊದರು]

**ಮೊದೆಕರನಿ** (ನಾ). (?) : ಕೌಣ್ಡಿನ್ಯ ಸಗೋತ್ರಾಯ . . . ದೇವಶರ್ಮಣೇ ಮೊದೆಕರನಿನಾಮಹಲವು ರಾಜಮಾನೇನ ವಿಂಶತಿನಿವರ್ತನವು ಕೇದಾರಂ ದ[ತ್ತ]ವಾನ್ (ಎಇ. VI, ೦೪-೧೦; ಸಂ. 400). 'ಮೆದಕಟಿನಿ' ಪರಾ. [?]

**ಮೊದ್ದ** (ನಾ). ತಿಳಿವಳಿಕೆಯಿಲ್ಲದವನು ; ದಡ್ಡ; ಪೆದ್ದ : ಇವನು ತುಂಬಾ ಮೊದ್ದ (ರೂಢಿ). [ಮೊದ್ದು + — ಅ$_6$]

**ಮೊದ್ದಿ** (ನಾ). ತಿಳಿಗೇಡಿ ಹೆಣ್ಣು ; ಮಂದಬುದ್ಧಿಯವಳು ; ದಡ್ಡಿ: ಈ ಮೊದ್ದಿ ಏನು ಹೇಳಿಕೊಟ್ಟರೂ ಕಲಿಯುವ ಹಾಗಿಲ್ಲ (ರೂಢಿ).

[ ಮೊದ್ದು + — ಇ$_2$ ]

**ಮೊದ್ದು** (ನಾ). ೧. ತಿಳಿಗೇಡಿವ್ಯಕ್ತಿ; ಮಂದಬುದ್ಧಿಯ ವ್ಯಕ್ತಿ : ನಿನಗೇನೂ ತಿಳಿಯದು, ನೀನೊಂದು ಮೊದ್ದು (ತ್ಯಾಗಜು. ೨೬); ಪಾಪ ! ಅವನು ಮೊದ್ದು (ಬಿಡಿಮೂ. ೦೩೦); ನಮ್ಮ ಹುಡುಗನು ಮೊದ್ದು (ಉಡುಗೊ. ೪೦). (ಗು). ೨. ತಿಳಿಗೇಡಿಯಾದ ; ದಡ್ಡನಾದ : ಹಿಂದೆ ಅವನು ಎಷ್ಟು ಚುರುಕು ವಿದ್ಯಾರ್ಥಿಯಾಗಿದ್ದನೋ ಈಗ ಅಷ್ಟೇ ಮೊದ್ದುಹುಡುಗನಾಗಿದ್ದಾನೆ (ದೂರಕ. ೨೬೦); ಎಷ್ಟು ಹೇಳಿದರೂ ನಿನ್ನ ಮೊದ್ದುಬುದ್ಧಿ ಎಲ್ಲಿ ನೆಟ್ಟಗಾದೀತು? (ನವ್ಯಕೃ. ೮); ಗೊಂಬೆಯಂತಿರುವ ಮೊದ್ದು ಹುಡುಗಿಯನ್ನು ಕೈಹಿಡಿದು ಬರುವ ಭಾಗ್ಯವಾದರೂ ಏನು ? (ಕೀಮೋಚ. ೦೦೦).

**ಮೊದ್ದುಮಣಿ** = (ಹಿರಿಯರ ಮುದ್ದು ಹೆಚ್ಚಾಗಿ) ದಡ್ಡನಾದವನು ; ಅವಿವೇಕಿ ; ತಿಳಿಗೇಡಿ : ಅಮ್ಮನಿಗೆ ಮಾತ್ರ ಬೇಕಾಗಿದ್ದ ಮೊದ್ದುಮಣಿ ನಾನಾಗಿದ್ದೆ (ಕದ್ಯಕ. ೨೧೬).

[ ದೇ.॥ ತಮಿ. ಮೊತ್ತು: ತೆಲು. ಮೊದ್ದು ]

**ಮೊದ್ದುಗಳಹು** (ಕ್ರಿ). ಪೆದ್ದುಪೆದ್ದಾಗಿ ಹರಟು ; ತಿಳಿಗೇಡಿಯಾಗಿ ಮಾತಾಡು : ನೀ ಮೊದ್ದುಗಳಹುವುದನರಿತಿದ್ದೆನೇ (ಮುರುಪಾ. ೦೦೨-೪೯೬).

[ ಮೊದ್ದು + ಗಳಹು (< ಗಱಪು) ]

**ಮೊನಗು** ' ಮಿನುಕು₂ ' ನೋ.

**ಮೊನಚು** (ನಾ). ೧. ಚೂಪಾಗಿರುವಿಕೆ : ಹರಿತವಾಗಿರುವಿಕೆ : ಮೊನಚುಳ್ಳ ಕತ್ತಿಯನ್ನು ಹಿಡಿದು . . . ಮೆರೆಯಲು (ಕೃಪಾಶೀ. ೦೨೩); ಇರ್ಕಡೆಯೊಳು ಸೂಜಿ ಮೊನಚಾದುದಾದರೆ ಹೊಲಿಯಬಹುದೇನನು ನೀನು (ಇಂಚಾಶ. ೭೩-೬೩). (ಗು). ೨. ಚೂಪಾದ; ಹರಿತವಾದ: ನಡನಡುಗಿ ಮುಂದಕಡಿಯಿಡುತಿರಲು ಮತ್ತೆ ತಲೆಯೆತ್ತಿ ಕಾಲ್ಗಡಿವಪುದು ಮೊನಚು ಮುಳ್ಳು ! (ಕವಿಕಾ. ೩೭-೨). [ಮೊನೆ + —ಚು₂]

**ಮೊನಚುಗಣ್ಣು** (ನಾ.) ಹರಿತವಾದ ನೋಟ ; ತೀಕ್ಷ್ಣವಾದ ದೃಷ್ಟಿ : ಮೊನಚುಗಣ್ಣುಗಳನ್ನು ಮಾಡಿಕೊಂಡು, ಜಾತಕವನ್ನೆ ನೋಡಿದರು (ತಗುಕ. ೭೭). [ಮೊನಚು + ಕಣ್ಣು (< ಕಣ್)]

**ಮೊನಚುಗೊಳಿಸು** (ಕ್ರಿ). ಚೂಪಾಗುವಂತೆ ಮಾಡು ; ಹರಿತ ಮಾಡು : ಕಲ್ಲುಮುಳ್ಳುಗಳನು ಮೊನಚುಗೊಳಿಸುವರಾರು (ಇಂಚಾಶ. ೬೦-೧೨). [ಮೊನಚು + ಕೊಳ್₁ + — ಇಸು₃]

**ಮೊನಚುಗೊಳ್ಳು** (ಕ್ರಿ). ಹರಿತಗೊಳ್ಳು ; ತೀವ್ರವಾಗು ; ತೀಕ್ಷ್ಣವಾಗು : ಹೇಗೆ ಮೂಡಿ ಬರವಣಿಗೆಗಿಳಿಯುವಷ್ಟು ಮೊನಚುಗೊಂಡಿತೋ ಕಾಣೆ (ರಾಪೂನ. ೦೩). [ಮೊನಚು + ಕೊಳ್ಳು₁ (< ಕೊಳ್₁)]

**ಮೊನಸು** (ಕ್ರಿ). ೧. ಮೂಡು ; ಅಂಕುರಿಸು : ಮೊನಸಿದ ಮೆಯ್ಯ್ನವಿರಿಂದಾನನಾಬ್ಜವಿಕಸನವಿಶೇಷದಿಂದ . . . ಪೇಟ್ಬಳ್ಳು (ಲೀಲಾವ. ೦೦-೬೦); ನನೆಯುಂ ಪೆತ್ತುದು ಮಾಧವಿ ಮೊನ[ಪಾಠಾಂ. ನೆ]ಸಿದುವಂಕುರಿಪ ತೃಣ ವಿಮ್ರಾವ್ರುಗಳೊಳ್ (ಗಂಕ. ೭-೩೭) ; ತುಱುಬುಂ ತಿದುರ್ನತ್ತುಂ ಮೊನಸಿದ ಪಳಿತಮನೆ ಕಂಡು (ಪುಣ್ಯಾಸ್ರ. ೦೧-೧೦). ೨. ಮೊಳಕೆ ಏಳು : ಪದಿನಾಲ್ಕು ದಿನಕೆ ನೆತ್ತರ ಘಟ್ಟಿಯೆನಿಪಮಂ ಪಡೆದು ಮೊಳೆ ಮೊನಸಿದಿಪ್ಪತ್ತೈದು ದಿನದಂ (ಸಾಪಂಕ. ೪-೩೦). [ಮೊನೆ + — ಸು₂]

**ಮೊನೆ** (ನಾ). ೧. ತುದಿ ; ಕೊನೆ : ಸೈನ್ಯಮೆಲ್ಲಮುಂಬಿನ ಮೊನೆಯೊಳ್ ಪಡಲ್ವಡೆ (ಶಃಶಬಾ. ೩-೦೦೯) : ಎಸಟಿ ಮೊನೆ ಕೂರಿತಡಿಗೆಂಬ ಸಂಕೆಯಿಂ ಮೆಟ್ಟದಂತೆ ಮುಟ್ಟದೆ ಕುಣಿವಾಗಮೆಂಬ ರಂಗದೊಳ್ (ಶಾಂತಿಪು. ೦೦-೦೭); ಮೊದಲೊಳ್ ಮುಳ್ಳಿನ ಮೊನೆಗಳ್ ಮೃದುವಪ್ಪುವು (ಧರ್ಮಾಮೃ. ೬-೦೦೭). ೨. ಹರಿತವಾದುದು ; ಚೂಪಾದ ತುದಿಯುಳ್ಳದು : ಮೊನೆ ತಪ್ಪಿದ ಬಳಿಕ ಅಲಗೇನ ಮಾಡುವುದು (ಬಸವ. ೬೬೯) : ಗಗನಧ್ವನಿಯೊಳಾದುದು ವಾರ್ತೆ ಚಿತ್ರಕೆ ಮೊನೆಯು ಸರಳಿನೆ (ಕುಮಾದ್ರೋ. ೯-೭) : ಹುಲಿಯ . . . ಮೊನೆಯಾದ ಕೋರೆಹಲ್ಲುಗಳೂ ಬಲು ಭಯಂಕರವಾಗಿ ತೋರುವುವು (ಮುಂಬಿಜು. ೪-೩೩). ೩. ಮುಳ್ಳು : ತಾ ನಡೆಯಲಿಱಿಯದೆ ಮೊನೆಯ ಮೆಟ್ಟಿ ಬಯ್ಯುವನಂತೆ (ಮೋಳಿಪೂ. ೩೩-೦೩೭). ೪. ಆಯುಧಗಳ ಹರಿತವಾದ ಬಾಯಿ ; ಧಾರೆ ; ಅಲುಗು : ದುಶ್ಶಾಸನನ ಮಗನಿದಿರಾಗಿ ಬಿಡುಗದ ಮೊನೆಯ ಚೂರಿಸಿ . . . ಅರ್ಜುನಕುಮಾರನ ಕರೆದು ಹಳಚಿದನು (ಕುಮಾದ್ರೋ. ೬-೩೭). ೫. ತೀಕ್ಷ್ಣತೆ ; ಚುರುಕು : ಅವಳ ಆಸೆಗಳು ಹೆಚ್ಚು ಮೊನೆಯಾದುವು (ಮುಃನವಾ. ೯೭) ; ಆಕೆಯ ಮಾತಿನಲ್ಲಿ ಮೊನೆ ಇರುತ್ತಿತ್ತು (ಗಂಪೂಜು. ೦೦) ; ಭಕ್ತಿಭಾವಕೊಂದು ಮೊನೆಯನಿಟ್ಟನು (ಕವಿಕಾ. ೪೩-೦೭). ೬. ಶೌರ್ಯ ; ಕೆಚ್ಚು ; ಕಲಿತನ : ' ಮೊನೆದೋಱು ' ಪರಾ. ೭. (ಸೈನ್ಯದ) ಮುಂಭಾಗ ; ಅಗ್ರಭಾಗ: ತನೊಡ್ಡಿದ ಮಕರವ್ಯೂಹದ ಮೊನೆಯೊಳ್ ಸುತ್ತಿಱಿದೆತ್ತಿದ ಪೊನ್ನಪಟಿಯಿಗೆಗಳಂ (ಶಂಶಬಾ. ೦೦-೩೨ ವ). ೮. ದಳ ; ಬಲ ; ಪಡೆ : ಇತ್ತ ತ್ರಿಪೃಷ್ಟನುಂ ವಿಜಯನುಮರ್ಕಕೀರ್ತಿಯುಂ ಜ್ವಳನಜಟಿಯುಂ ಸರಿಸಿ ಸಮಕಟ್ಟಿ ಮೂಱು ಮೊನೆಯಾಗೊಡ್ಡಿ (ಶಾಂತಿಪು. ೩-೩೦ ವ) ; ವಿಶ್ವಾವಸು ಮಹಾರಾಜನುಂ ರುಗ್ಮಿಣಕುಮಾರನುಮೊಂದು ಮೊನೆಯಾಗಿ ಬಂದೊಡ್ಡಿದರ್ (ಬಿಂಶಂ. ೭-೩೬ ವ) ; ಈತನಳವಿಯ ಕೆಡಿಸಿ ತಲೆಯೆತ್ತಿದರು ಭೂಪನ ಮೊನೆಯ ನಾಯಕರು (ಕುಮಾದ್ರೋ. ೬-೩೯). ೯. ಜಗಳ ; ಕಲಹ : ಮುಳಿಸು ಬೇಸಱು ಮೋಡಿಯಲಸಿಕೆ ಮೊನೆ ಮನದಳಲಂಜಿಕೆ ದುಗುಡದೊಳು ತಿಳಿತಿಳಿದಿನಿಯನಿಂಗಿತಭೇದಂಗಳನಳುಕಿಯಳುಕಿ ಅನುಸರಿಸು (ಹದಿಬ. ೩-೩೯). ೧೦. ಕಾಳಗ ; ಯುದ್ಧ : " ಮೊನೆ=ಕಾಳಗಂ " (ಶಮದ. ಶಂ. ೨) ; ಕಲಿಯೆನೆ ನೆಗಟ್ದಳ್ ಕಸವರಗಲಿಯೆನೆ ಗುಣದಂಕಕಾರ್ತಿ ಮೊನೆಯೊಳ್ ಮನೆಯೊಳ್ (ಅಜಕ್ಕ. ೦-೬೩); ಮೊನೆಯೊಳು ಮತ್ಕರವಿಳ್ಗಂ ಮನೆಯೊಳು ಮನುಮಂತ್ರಸಿದ್ಧಿ ಸಂಕಟದೊಳು ಮತ್ತನುವೆನಿಪ ಪತಿಹಿತಂ (ಸೌಇಇ. IX-i, ೩೯೩-೦೦ ; 1226) ; ನಿನ್ನಾಳ್ದನೆಮ್ಮಂ ಮೊನೆಯೊಳ್ಬಂದಾಂತು ಕೈಮಾಡಿದೊಡೆ (ಅಸಂಪು. ೦೩-೩೦). ೧೧. ಶಕ್ತಿ : ಬಲ : ' ಮೊನೆಮುಱಿ ' ಪರಾ. ೧೨. (ಆಲಂ) ಅಡ್ಡಿ ; ವಿರೋಧ: ' ಮೊನೆದೋಱು ' ಪರಾ. (ಗು). ೧೩. ಚೂಪಾದ : ಹರಿತವಾದ : ತೀಕ್ಷ್ಣವಾದ : ' ಮೊನೆಗಣೆ ' ಪರಾ.

**ಮೊನೆಮಸೆ** = ತೀಕ್ಷ್ಣವಾಗು: ಅಧಿಕವಾಗು; ಹೆಚ್ಚಾಗು: ಮೊನೆ ಮಸೆವಕ್ಕಱು ಬಾಯ್ದೆಱೆಗೆಡೆವಿಡದೆಡೆಯಾಡುವ ನಱುದಂಬುಲ . . . ನೆಱೆ ಸೊಗಯಿಸಿದುವು ನವಸುರತಕ್ರೀಡೆಯೊಳಾ ದಂಪತಿಗೆ (ಜಯುಕಾ. ೯-೩೩). **ಮೊನೆಮಾಡು** = ೧. ಚೂಪಾಗಿ ಮಾಡು : ಹರಿತಗೊಳಿಸು : ಮೊನೆಮಾಡಿದ ಪೆನ್ಸಿಲ್‌ನಿಂದ ರೇಖಾಚಿತ್ರ ಬಿಡಿಸಬೇಕು (ರೂಢಿ). ೨. ಏಕಾಗ್ರಗೊಳಿಸು : ಮನಸ್ಸನ್ನು ಒಂದಂಶದ ಮೇಲೆ ಮೊನೆಮಾಡಿದರೆ ವಿಷಯ ಚೆನ್ನಾಗಿ ಗೊತ್ತಾಗುತ್ತದೆ (ಶಿಕ್ಷದ. ೪೭೩). **ಮೊನೆಮುಟ್ಟೆಗಂಡ** = ಯುದ್ಧಕ್ಕೆ ನಿಂತರೆ ಸೋಲದ ವೀರ.— ಪರಾಕ್ರಮಿ ; ಒಂದು ಬಿರುದು : ಕವಿಜನವಿನುತಂ ಮೊನೆಮುಟ್ಟೆಗಣ್ಡನಾಹವಸೌಣ್ಡ (ಎಕ. II. ೦೩೪-೭೭ ; 982) ; ಮೊನೆಮುಟ್ಟೆಗಣ್ಡಂ ಶ್ರೀಮನ್ಮಹಾಮಣ್ಡಳೇಶ್ವರಂ (ಸೌಇಇ. IX-i, ೨೯೭-೦೦ ; 1200 ?).

[ದೇ.II ತಮಿ. ಮುನೈ ; ಮಲ. ಮುನ ; ತುಳು. ಮುನೆ, ಮೊಣೆ. ಮೊನೆ ; ಕೊಡ. ಮೊನೆ ; ತೆಲು. ಪರ್ಜಿ. ಮೊನ ]

**ಮೊನೆಕಟ್ಟು** (ನಾ). ಆಯುಧಗಳ ತುದಿಯು ನಿಷ್ಪ್ರಯೋಜಕವಾಗುವಂತೆ ಮಾಡುವ ಒಂದು ಬಗೆಯ ತಂತ್ರವಿದ್ಯೆ: ಮಂತ್ರ. ತಂತ್ರ . . . ದಾರೆಕಟ್ಟು. ಮೊನೆಕಟ್ಟೆಂಬ ಕುವಿದ್ಯದಿಂ ಗೆಲುವೆನು (ಭೈರಕೂ. I. ೩೭೭). [ ಮೊನೆ + ಕಟ್ಟು₂ ]

**ಮೊನೆಕಾಱ** ' ಮೊನೆಗಾಱ ' ನೋ.

**ಮೊನೆಗಣೆ** (ನಾ). ಹರಿತವಾದ ಬಾಣ : ಆತನ ನನೆಯಂಬಿನ ಮೊನೆಗಣೆಗಳೆಂಬಿನಂ ಮೆಯ್ನವಿರ್ನೆಸೆದುವು (ಕಾದಂಬು. ೭೭೯); ಕೈಚಳಕದಲಿ ಮುಸುಕಿದನು ಮೊನೆಗಣೆಯಿಂದ ರಿಪುಭಟನ (ಕುಮಾಕ. ೪-೦೨); ತಿರುವಿಗೆ ತೊಡಿಸಿ ಸೆಳೆದನು ಮೊನೆಗಣೆಯನು (ಐಭಾಗ. ೪-೨೩-೭). [ಮೊನೆ + ಕಣೆ₁]

**ಮೊನೆಗಯ್ಯಿ** (ನಾ). ಕತ್ತಿವರಸೆಯ ಒಂದು ಪಟ್ಟು : ಇಬ್ಬರಿಂದ ಗತಿಮಧ್ಯದಲ್ಲಿ ಇಬ್ಬರ ಹಸ್ತಗಳಿಂದ ಅನ್ಯೋನ್ಯವಾಗಿ ತಾಗುವದು ಆವದು ಅದು ಮೊನೆಗಯ್ಯಿಯೆಂದು ಸಮ್ಮತವು (ಐದ್ಗಟೀ. ೪-೪೭). [ ಮೊನೆ + ಕಯ್ಯಿ (<ಕಯ್₂) ]

**ಮೊನೆಗಲ್ಲು** (ನಾ). ಚೂಪಾದ ಕಲ್ಲು ; ಮೊನಚಾಗಿರುವ ಕಲ್ಲು : ಮೊನೆಗಲ್ಲು ಗುಂಡುಗಲ್ಲುಗಳರೆಗಲ್ಲುಗಳ್ . . . ವನಮಾರ್ಗವ ತುಂಬಿಹುವು (ಕಂನವಿ. ೦೯-೪೪). [ ಮೊನೆ + ಕಲ್ಲು (<ಕಲ್₃)]

**ಮೊನೆಗಾಣಿಸು** (ಕ್ರಿ). ೧. ಆಯುಧದ ತುದಿ ಕಾಣುವಂತೆ ಹಿಡಿದುಕೊಳ್ಳು : ಹೊಂಗತಾರಿಯ ಕೋಲುವಿಡಿದು . . . ಮುಂಗೈದಂಡೆಗೊಡುತಂ ಜಾಳಿಬಿಡಿಯಿಡುತ ರಂಗಿಸುತ ಮೊನೆಗಾಣಿಸುತ್ತಂ (ದಸಕ. ೨೭-೦೨). ೨. ಆಯುಧದ ತುದಿ ಕಾಣಿಸಿಕೊಳ್ಳು; ಅಲಗು ಕಾಣಿಸಿಕೊಳ್ಳು. —ಮೂಡು : ನೀನಡವೃದೀ ಶೂಲಮನೆನಲ್ಲಿತ್ತದೊಸಗ

ಯಿಂದೇಜಲಾತನ ಶಿರದೊಳ್ದದಱ ಮೊನೆಗಾಣಿಸಲ್ಬಡ್ಡಗೊಳದೆ ಎಸೆದಿರಲ್ (ಶಾಸೋತ್ಪ. ೭-೬೨). [ ಮೊನೆ + ಕಾಣಿಸು ]

**ಮೊನೆಗಾತಿ** (ನಾ). ೧. ಜಗಳವಾಡುವ ಸ್ವಭಾವದವಳು: ಜಗಳಗಂಟಿ: ಮುನಿದು ಮೂದಲಿಸಿ ಮೋಡಿಯೊಳಿದ್ದು ಮೂರ್ಖಿಪ ಮೊನೆಗಾತಿಯಿ ಕೃತಿಗೇಳೆ ಇನಿಯನ ಮೊಗವ ನೋಡದ ಮುನ್ನ ಮೋಹಿಸಿ ಮನಗರಗುವಳು (ಹರಿಭ. ೧-೩೩). ೨. ಸರಸದಿಂದ ಜಗಳವನ್ನಾಡುವವಳು; ಪ್ರೇಮ ಕಲಹವನ್ನಾಡುವವಳು : ತನಗೆಱಗಿದ ಪೆಣ್ಣ ನೋಡಿ ಮೊನೆಗಾತಿ ಬಲುಮೋಡಿಗಾತಿ ಮುಱುಗಾತಿ ಮಮ್ಮಾಯೆಂದ (ಭರತ. ೯-೧೭೭).
[ಮೊನೆ + — ಕಾತಿ$_{5}$]

**ಮೊನೆಗಾಯ** (ನಾ). ಆಯುಧಗಳ ಚೂಪಾದ ತುದಿಯಿಂದ ಉಂಟಾದ ಗಾಯ ; ಶಸ್ತ್ರಾಘಾತ : ಅರಿಗಳ ಕೆಯ್ಯ ಕೂರಸಿಧಾರೆ ಮೊನೆಗಾಯ ಶರೀರದೊಳಗೆ ಸಂಧಿಸಲು (ಮೋಹತ. ೩೩-೩೯). [ಮೊನೆ + ಗಾಯ]

**ಮೊನೆಗಾರ** ' ಮೊನೆಗಾಱ ' ನೋ.

**ಮೊನೆಗಾರತನ** ' ಮೊನೆಗಾಱತನ ' ನೋ.

**ಮೊನೆಗಾರು** (ನಾ). ಲೋಹದ ತಂತಿಯನ್ನು ಪಣಿಡಲು ಉಪಯೋಗಿಸುವ ಒಂದು ಬಗೆಯ ಚಿಮುಟ : (+). [ ? ]

**ಮೊನೆಗಾಲ್**, ಮೊನೆಗಾಲು (ನಾ). ೧. [ನಾಟ್ಯ] ಒಂದು ಬಗೆಯ ಪಾದವಿನ್ಯಾಸ : ಚಿಂದು ಜಕ್ಕಡಿ ಕೋಲಚಾರಿಗಳ್ ಮೊನೆಗಾಲ್ ಕಳಾಸ ಕೈಮುಟಿ ತಿವುಡೆ ಮುಡುಹುಮುಳ್ಳನಿತು ಭೇದಂಗಳಿಂ ನರ್ತಿಸುವ ನೃತ್ಯದಬಲಾಜನಂ ಕಣ್ಗೆಸೆದುದು (ಕಿರಾತ. ೨-೨೯). **ಮೊನೆಗಾಲು**: ೨. ಕತ್ತಿವರಸೆಯಲ್ಲಿನ ಒಂದು ಪಟ್ಟು : ಸಮಪಾದದಿಂದ ನಿಂತು ತುದಿಗಾಲ್ಗಳಿಂದ ಭೂಮಿಯನ್ನು ಮುಟ್ಟಬೇಕು . . . ಅದರ ಹೆಸರು ಮೊನೆಗಾಲು ಯೆಂಬುದು (ಖಡ್ಗಬೀ. ೪-೪೩). [ಮೊನೆ + ಕಾಲ್$_{1}$]

**ಮೊನೆಗಾಲು** ' ಮೊನೆಗಾಲ್ ' ನೋ.

**ಮೊನೆಗಾಱ**, ಮೊನೆಕಾಱ, ಮೊನೆಗಾರ (ನಾ). ೧. ಯುದ್ಧಮಾಡುವವನು : ಯೋಧ ; ವೀರ : ಅರಸಿಯರನಣುಗರಂ ಬೆಟ್ಟರುಮಂ ಮೊನೆ [ಪಾಠಾಂ. ಪೊಣೆ] ಗಾಱರಂ ಪ್ರಗೀತರನಿಂಬಾಗಿರೆ ಚೌಪಳಿಗೆಗಳೊಳ್ ಕುಳ್ಳಿರಿಸಿದರ್ (ಶಂಕಶಾ. ೨-೬೭) ; ಮೊನೆಗಾಱ ನೀನೋ ನಮ್ಮರಸನೊ (ಭರತ. ೩೮-೭೬) ; ಆತನ ದಾಯಿಗ ಮೊನೆಗಾಱ ಸೋಮಪ್ರಭನು (ನಾಗಕು. ೦೯-೦೩) ; ಪಗೆಗಾಱರ ಮೊನೆಗಾಱರ ಬೀರ ! (ರಾಮಾಶ್ವ. ೬೦-೩). **ಮೊನೆಕಾಱ** : ೧. ದಿಂಡುಕಾಱಂ, ಬಿಲ್ಲಾಱಂ, ಮೊನೆಕಾಱಂ (ಭಾಷಾಭೂ. ೧೭೦ ಉದಾ). **ಮೊನೆಗಾರ** : ೧. ಪ್ರತಿಜ್ಞೆಯಂ ಮಾಡಿದ ಮೊನೆಗಾರನು ಯಿ ಆಯುಧವನೆತ್ತಲಾರನೇ (ಸೌಗಂಧಿ. ೨೩೩-೮) ; ಮೊನೆಗಾರರು ಅರಿಬಲದ ಮೊನೆ ಮುರಿವರು (ಕಂಠೀ. ೦೨೯). ೨. ಮೈಸೂರು ಅರಸರಿಗಿದ್ದ ಒಂದು ಬಿರುದು : ಜನಪ ಮೊನೆಗಾರನೆಂಬ ಬಿರುದಂ ಪಡೆದಂ (ಮರಾಠ. ೦-೯೦) ; ' ಮೊನೆಗಾರ ' ಎಂಬ ಬಿರುದೂ ಶ್ರೀಮನ್ಮಹೀಶೂರ ಮಹಾರಾಜವಂಶವನ್ನು ಸಿಕ್ಕಿ ಒಂದು ಕೃತಾರ್ಥವಾಯಿತು (ಬಿರುಗಂ. ೩೨-೨೦).
[ಮೊನೆ + — ಕಾಱ]

**ಮೊನೆಗಾಱತನ**, ಮೊನೆಗಾರತನ (ನಾ). ಯುದ್ಧಕೌಶಲ : ಎಟ್ಟಿರಂಬೆಟ್ಟ ಶಕ್ತಿಯನೆ ಕೊತ್ತಳಮುಮಂ . . . ಮೊನೆಗಾಱತನಮನೆ ಮುಗಿಲಟ್ಟಳೆಗಳುಮಂ ಗೆಯ್ದು ಕಾದುತ್ತೆ (ಶಕಪಂ. ೩೯-೯). **ಮೊನೆಗಾರತನ** : ಕೋಟೆಗಳಂ ನೋಟದಿಂದಲೆ ಮಿಾಟುವ ಮೊನೆಗಾರತನದಿಂ (ಸೌಗಂಧಿ. ೦೫೦-೦). [ಮೊನೆಗಾಱ + — ತನ]

**ಮೊನೆಗಾಱಿಕೆ** (ನಾ). ಜಗಳ ; ಕಲಹ : ಸರಸಮೋಹಕೆ ಮೊನೆಗಾಱಿಕೆ ಸಲ್ಲದೆಂದೊರೆದು ನಿಲಿಸಿದನಾ ವಿಟನು (ಭರತ. ೩೬-೦೫).
[ಮೊನೆಗಾಱ + — ಇಕೆ]

**ಮೊನೆಗುತ್ತು** (ನಾ). = ಮೊನೆಗಾಯ : ಪಿರಿದು ಮೊನೆಗುತ್ತಿನಲಿ ನೆತ್ತರು ಸುರಿದುದಡಹೊಯ್ಲಿನಲಿ ಖಂಡದ ಹೊರಳಿ ತಳಿತುದು (ಕುಮಾವ್ಯಾ.ಕರ್ಣ. ೬-೦೭).
[ಮೊನೆ + ಕುತ್ತು$_{2}$]

**ಮೊನೆಗೂಡು** (ಕ್ರಿ). ತುದಿಯನ್ನು ಮುಟ್ಟು: ಹೂಂಗಳಸ ಮಿರುಗುವಷೆ ಮೊನೆಗೂಡುವಾಗಸದ . . . ಮಂದಿರದಿ ಸಂಘಟಿಸಿತಷ್ಟಧಾಭಿನ್ನಮಾದೀಶ್ವರ ಪ್ರಕೃತಿರೂಪಂ (ಮಲಿದೇ. ೩೮-೧). [ಮೊನೆ + ಕೂಡು$_{1}$]

**ಮೊನೆಗೈ** (ಕ್ರಿ). ಹರಿತಗೊಳಿಸು ; ಚೂಪುಮಾಡು : ಮಾರನಂಬಿನ ಮೊನೆಯ ಮಗುಳೆ ಮೊನೆಗೈಯುತಿಪ ವಾರನಾರೀವಾರ (ವಂಕಾರಾ. ೦-೭-೨೯). [ ಮೊನೆ + ಕೈ$_{1}$ (<ಕೆಯ್$_{1}$) ]

**ಮೊನೆಗೊಡು** (ಕ್ರಿ). (ಮುಖಾಮುಖಿಯಾಗಿ) ಯುದ್ಧಕ್ಕೆ ತೊಡಗು ; ಹೋರಾಡು : ನಿಟ್ಟಿಸಿ ಹಣುಗಿ ಮೊನೆಗೊಡೆ ದಂಡೆಯೊಳು ಖಣಿಖಿಣಿಲು ರವವೆಸೆಯಲ್ಕೆ ಕಾದಿತು ಸುರಗಿಯತಿಬಲರು (ಕುಮಾವ್ಯಾ.ಕರ್ಣ. ೯-೨೩) ; ನುಗ್ಗಿಸಲೆಡೆಗುಡದೆ ನಿಂದು ಮೊನೆಗೊಡಿರನುಮಿ ಹಿಗ್ಗಿ ಪೆಜಿಸಾರದಿರಿ (ಹರಿಶ್ಚ.ರ. ೩-೩೯). [ಮೊನೆ + ಕೊಡು$_{1}$]

**ಮೊನೆಗೊಳ್ಳು** (ಕ್ರಿ). ತೀಕ್ಷ್ಣತೆಯನ್ನು ತಳೆ : ತೀವ್ರವಾಗು : ಅಪಿತ ಸಂತತಿಜಾಲ ಮೊನೆಗೊಂಡು ಮುಸುಕಿರಲು ಮಹಿಯ ಮಂಗಳವೆಳಸಿ ಮರುಗುವಾತ್ಮವನು (ವಿಸೀಗೀ. ೦೭-೯).
[ಮೊನೆ + ಕೊಳ್ಳು$_{1}$ (<ಕೊಳ್$_{1}$)]

**ಮೊನೆಗೋಲು** (ನಾ). (ಅಂಕುಶದಂತೆ) ಚೂಪಾದ ತುದಿಯುಳ್ಳ ಕೋಲು : "(ದನಗಳನ್ನು ಚುರುಕುಮಾಡುವ) ಮೊನೆಯುಳ್ಳ ಕೋಲು ; ಮೊನೆಗೋಲು, ಚುಚ್ಚುಗೋಲು" (Goad. ೨೦೪೩).
[ ಮೊನೆ + ಕೋಲು$_{1}$ (< ಕೋಲ್$_{1}$) ]

**ಮೊನೆದಿವಿಗುಳು** (ನಾ). ಚೂಪಾದ ಆಯುಧದ ತಿವಿತ,–ಇರಿತ : ಮೇಲ್ಕೇಳ್ವೊಯಿಲ್ಮೊನೆದಿವಿಗುಳಿಂದೆ ಮೆಯ್ಗಳ ತುಂಡುಗಳ್ ಬೀಳೆ (ಕಿರಾತ. ೧೮-೩೦). [ಮೊನೆ + ತಿವಿಗುಳು]

**ಮೊನೆದುಱುಗಲ್** (ನಾ). ಚೂಪಾದ ಮೊನೆಗಳ ಗುಂಪು : ಪಲಸಿನ ಪಣ್ಣನನುಕರಿಪ ಮೊನೆದುಱುಗಲ ವಜ್ರದ ಶಿಲೆಯೊಳಪ್ಪಳಿಸಿ (ವರ್ಧತ್ರಿ. ೦೦-೦೫ ವ). [ಮೊನೆ + ತುಱುಗಲ್ (<ತುಱುಂಗಲ್)]

**ಮೊನೆದೋಱ್** ' ಮೊನೆದೋಱು ' ನೋ.

**ಮೊನೆದೋಱು**, ಮೊನೆದೋಱ್ (ಕ್ರಿ). ೧. ಆಯುಧದ ಚೂಪಾದ ತುದಿಯನ್ನು ತೋರಿಸು : ಉಱುಬಿವರೆ ವಡವಾನಲನ ಮುಖದಿರವು ಮೊನೆದೋಱಿದರೆ ಭುಜಗನ ಬಿಱುಬು (ಕುಮಾವ್ಯಾ.ಆ. ೪-೩೪). ೨. ಮೊಳಕೆದೋರು ; ಕಾಣಿಸಿಕೊಳ್ಳು : ಅಂತು ಬೆಡಂಗಸಾಂತ ಕಳಿಕಾನಿವಹಂ ಮೊನೆದೋಱದನ್ನಂ . . . ತಲೆದೋಱಿದತ್ತು ವಾಸಂತಿ (ಜಗನ. ೦೪-೨೦). ೩. ಶೌರ್ಯವನ್ನು ತೋರು : ಬಲವೆರಸಿ ತಾನೊಡ್ಡಿ ನಿಲಲೀ ಇಳೆಯ ನಡುಗಿಸಿ ಸಮರಭೇರಿಯು ಮೊಳಗೆ ಯಾದವಬಲವು ಮೊನೆದೋಱಿದುದು ಚೂಣಿಯಲಿ (ಸಾಳ್ವಭಾ. ೦೯-೦೨) ; ಮೊನೆದೋಱ ಹೆಣ್ಣ ಭೋಗಿಸುವುದು ಸೊಗಸಲ್ಲ ವಿನಯದೊಲುಮೆ ಸೊಗಸು (ಭರತ. ೦೦-೦೭). ೪. (ಆಲಂ) ಅಡ್ಡಿಯನ್ನುಂಟು ಮಾಡು ; ವಿರೋಧವನ್ನು ವ್ಯಕ್ತಪಡಿಸು : ಯತಿಗಳಿಗೆ ಮೊನೆದೋಱಿ ತಣಿಸದು [ಪಾಠಾಂ. ಜಿದನಾಸನು] ವ್ರತಿಗಳಿಗೆ ಬೀಱುತ ಸಮಾಧಿಸ್ಥಿತರ ಮುಱಿಗಿನ ಮೇಲಡಾಯುಧಧಾರೆಗಳನೆಳೆದು . . . ನಡೆದುದು ಯುವತಿಜನಕಟಕ (ಕುಮಾವ್ಯಾ.ಆ. ೦೩-೩೭) ; ಕೇಳ್ದು ಮಾನಿನಿ ನನೆಗೋಲನರ್ಧಾಂಗನೆಗೆ ಮೊನೆದೋಱಿ ಮೃದುವಾಕ್ಯದಿಂದಡಿಗೆಯು ಮನೆಗೆಲಸಕೆ ಸಾರ್ಚಿದಳು (ಮೋಹತ. ೦೦-೯೦). **ಮೊನೆದೋಱ್** : ೫. ಜಗಳವನ್ನು ಆರಂಭಿಸು : ಮೊನೆದೋರ್ಪರ್ಕಲಸಾರ್ವರುಮ್ಮಳಿಪರ್ (ಶಕಪಂ. ೭-೯೭). [ಮೊನೆ + ತೋಱು]

**ಮೊನೆನಗೆ** (ನಾ). ಮುಗುಳುನಗೆ ; ಮಂದಹಾಸ : ಮೊನನಗೆಯ ಸಿರಿ ಮೊಗದ ನೆಗಳ್ದ ಜನದಭಯಪಸ್ತಾಂಬುಜದ ಹರಿ ವಿನುತಸಿಂಹಾಸನವ ನಿಳಿದಾ ಧುರಕೆ ಹೊಱಮಟ (ಕುಮಾ.ಸ. ೦೦-೬೦); ಮೊನೆನಗೆಯಿಂದ ಆಡಿದ ಮಂದಿಮಾತನು ಮನ್ನಿಸಿ (ಕುಶು. ೦೯-೨೦). [ಮೊನೆ + ನಗೆ]

**ಮೊನೆನೋಟ** (ನಾ). ಕಡೆಗಣ್ಣಿನ ನೋಟ; ಕುಡಿನೋಟ : ಅಪಾಂಗ ದೃಷ್ಟಿ : ಮೊನೆನೋಟದಿಂ ಚುಚ್ಚಿ ಬೆಳ್ಳಿ ನೋಡುವಳೊವನೆ (ಕಾಂಚರ. ೪೨-೩೪). [ಮೊನೆ + ನೋಟ]

**ಮೊನೆಪಾಡು** (ನಾ). ಕಾಳಗದ ಸ್ಥಿತಿ,-ಇರವು : ಅನುವರದೊಳಗೆಚ್ಚಱಲಿ ಬಾನ ಮುಲುಕರ ಮೊನೆಪಾಡ ಮುಱುಬೆಬ್ಬಿಸೆಂದ (ಕಂಸವಿ. ೦೯-೩೮). [ಮೊನೆ + ಪಾಡು₃]

**ಮೊನೆಮುಗುಚು** (ಕ್ರಿ). (ಖಡ್ಗದ) ತುದಿಯನ್ನು ಒರೆಯೊಳಗೆ ನೂಕು: ಮಿಗಿದ ಗಂಡುಡಿಗೆಯಲಿ ಹೊನ್ನಾಯುಗದ ಹೊಳೆವ ಕಠಾರಿಯನು ಮೊನೆ ಮುಗುಚಿ . . . ಆಹವಕ್ಕನುವಾದನಭಿಮನ್ಯು (ಕುಮಾ.ದ್ರೋ. ೪-೯೯). [ಮೊನೆ + ಮುಗುಚು (< ಮುಗುಚ್ಚು)]

**ಮೊನೆಮಲ್ಲಿಗೆ** (ನಾ). ಚೂಪಾದ ತುದಿಯುಳ್ಳ ಒಂದು ಬಗೆಯ ಮಲ್ಲಿಗೆ ಮತ್ತು ಅದರ ಗಿಡ ; ಸೂಜಿಮಲ್ಲಿಗೆ : ಎಳನನೆ ತೀವಿ ತೋರ್ಪ ಮೊನೆಮಲ್ಲಿಗೆ ತಾವರೆ ತೀವಿ ತೋರ್ಪ ತಂಗೊಳಂ (ರಾಜಶೇ. ೨-೩೭). [ಮೊನೆ + ಮಲ್ಲಿಗೆ]

**ಮೊನೆಮಾತು** 'ಮೊನೆವಾತು' ನೋ.

**ಮೊನೆಮಿಂಚು** (ನಾ). (ಕಣ್ಣನ್ನು ಕೋರೈಸುವ) ತೀಕ್ಷ್ಣವಾದ ಮಿಂಚು: ಮೊಗ್ಗರಿಸಿ ಮೊರೆ ಮುಗಿಲೆ! ಮಿನುಗು ಮೊನೆಮಿಂಚೇ ! (ಗೀತಾಂ. ೪೬-೨). [ಮೊನೆ + ಮಿಂಚು₂]

**ಮೊನೆಮುಗುಳು** (ನಾ). ಚೂಪಾದ ತುದಿಯುಳ್ಳ ಮೊಗ್ಗು : ಮೊನೆ ಮುಗುಳ ಶಸ್ತ್ರಂಗಳಂ ಪಾಯ್ದು ಮಾಮಿಡಿಯ ಜೊಂಪದ ವಜ್ರಮುಷ್ಟಿಯಂ ಜಡಿದು (ಶೈಶಿಕಾ. ೩-೩೨). [ಮೊನೆ + ಮುಗುಳು₂ (<ಮುಗುಳ್₂)]

**ಮೊನೆಮುಳ್ಳು** (ನಾ). ಚೂಪಾದ ಮುಳ್ಳು : ಸಲೆ ಪಜ್ಜೆಯನಿಡೆ ನಾಂಟುವ ಮೊನೆಮುಳ್ಳಿನಿಂದೊಳುಗಾಡೆಸೆದುದೇನೆಂಬೆ (ಕಂಸವಿ. ೦೬-೯೭). [ಮೊನೆ + ಮುಳ್ಳು (<ಮುಳ್₂)]

**ಮೊನೆಮುಱಿ** (ಕ್ರಿ). ಶಕ್ತಿಗುಂದಿಸು ; ನಿರ್ವೀರ್ಯಗೊಳಿಸು : ಚನರಾಯಪಟ್ಟಣದ ಭಟರು ಬರುತಿಹ ಘನವಾದ ತುರುಕರ ಬಲವ ಮೊನೆಮುಱಿದು . . . ಮನಹರುಷದೊಳ್ಳೈದಿದರು (ಕಂಸವಿ. ೦೩-೬೦). [ಮೊನೆ + ಮುಱಿ₁]

**ಮೊನೆಮೊಳೆ** (ನಾ). ಚೂಪಾದ ತುದಿ ; ಹರಿತವಾದ ಕೊನೆ : ಹೊನ್ನಿನ ಹೊಳೆವ ಕಠಾರಿಯ ಮೊನೆಮೊಳೆ ಬೆನ್ನೊಳು ತಲೆದೋಱಿಸಲು (ವೀರಭಶ. ೦೨-೩೮). [ಮೊನೆ + ಮೊಳೆ₂]

**ಮೊನೆಯಂಬು** (ನಾ). ಹರಿತವಾದ ಬಾಣ ; ಕೂರ್ಗಣೆ : ಕಾಸಿದ ಮೊನೆಯಂಬುಳ್ಳವನ[ವ]ಱಂ ಮುಯ್ಯನನೇಕಶರಸಂಘಾತಂಗಳಂದಮೆಚ್ಚೊಡೆ (ವಚ್ಚಾರಾ. ೦೭೩-೦೫) ; ವಿದ್ವಿಷ್ಟವಿದ್ರಾವಣನ ಮೊನೆಯಂಬಿನಂಬೇಱಿಂಗಳ್ಕಿ ಹತವಿಹಿತಕೋಳಾಹಳರಾಗಿ (ಶಂಕಶಾ. ೩-೬೬ ವ) ; ಅದೇನನುಕರಿಸಿದುದೊ ಮನ್ಮಥನ ನನೆಯ ಮೊನೆಯಂಬದೆಂಬ ಮಾತವರ್ಮಿನೆಗಂ (ಸುಕುಮಾ. ೦೦-೨೦) ; ಪೋದಪುದಸುವೀಗಳೆ ಮದನನಸುವ ಪೊಸಕೆಂದಳಿರ್ಗಳ ಕೆಂಗಱಿಯ ನನೆಯ ಮೊನೆಯಂಬುಗಳಿಂ (ಜಗವಿ. ೦೦-೦೮). [ಮೊನೆ + ಅಂಬು₂]

**ಮೊನೆಯಲಗು** (ನಾ). ೧. (ಆಯುಧ, ಬಾಣ ಇತ್ಯಾದಿಗಳ) ಹರಿತವಾದ ಅಲಗು ; ಚೂಪಾದ ತುದಿ : ಮೊನೆಯಲಗಿನಂಬುಗಳ ಬಿಱುಸರಿಗನಿಬರಂಗವ ತೆತ್ತು ವಾತಾಯನಿತವಿಗ್ರಹವಾಯ್ತು ನಿಗ್ರಹವತಿ ಮಹಾರಥರು (ಕುಮಾ.ದ್ರೋ. ೦೨-೨೨). ೨. ಹರಿತವಾದ ಬಾಣ ; ಕೂರ್ಗಣೆ : ಮದನನ ಮೊನೆಯಲಗಿನಲಿ ಬಳಲ್ವ ಸತಿಯನು ಕಂಡು (ಪಶಶ. ೨-೨೯). [ಮೊನೆ + ಅಲಗು₂]

**ಮೊನೆಯಾಳ್**, – **ಮೊನೆಯಾಳು** (ನಾ). ಯುದ್ಧ ಮಾಡುವವನು ; ಯೋಧ ; ಸೈನಿಕ : ಕುಸುಮಾಸ್ತ್ರ ತನ್ನಯ ಮೊನೆಯಾಳ್ಗಳಿದಿರಲಿ ಮಿಸುಗುವರಿಲ್ಲೆಂದು ನಗುತ (ಕಂಸವಿ. ೭-೯೩). **ಮೊನೆಯಾಳು** : ಸಾಹಸಿಕರಳುಕಿದರು ಕೌರವಮೋಹರದ ಮೊನೆಯಾಳುಗಳು (ಕುಮಾ.ದ್ರೋ. ೦೬-೪೭) ; ಸೇವಕ ವಜೀರ ಮೊನೆಯಾಳು ಮಾಡಿಸ್ತ ಸ್ತಂಭ ಘಂಟೆ (ಎಕ. XV, ಅರಶ. ೦೩೭-೩ ; 1559) ; ಕೋಪದಲಿ ಜನನಾಥ ಕಂಠೀರವೇಂದ್ರನ ದಳಪತಿ ಮೊನೆಯಾಳು ಸಹಿತುಱುಬಿದನು (ಕಂಸವಿ. ೦೮-೦೦೨). [ಮೊನೆ + ಆಳ್₃]

**ಮೊನೆಯಾಳು** 'ಮೊನೆಯಾಳ್' ನೋ.

**ಮೊನೆಯಿಟ್ಟಿ**, **ಮೊನೆಯಿಟಿ** (ನಾ). ಚೂಪಾದ ಈಟಿ ; ಹರಿತವಾದ ಭರ್ಜಿ : ಜಕ್ಕಿಯನಾಯಕಂ ಮೊನೆಯಿಟ್ಟಿಗೊಂಡ ನಾಯಕರ ಮೇಲೆ ವಾಯಲು ತಳಿಯ ಮುಱಿವಿಡಿದು (ಮೈಅಂ. ೦೯೪೦೭ ೪೨-೦ ; 13ನೆಯ ಶತ). **ಮೊನೆಯಿಟಿ** : ಕುಣಿಕುಣಿದು ಮಣಿದು ಮೊನೆಯಿಟಿಗಳ ಸಾರ್ಚುತ್ತೆ (ಸಪವೋ. ೨೩-೩೬). [ಮೊನೆ + ಇಟ್ಟಿ₂]

**ಮೊನೆಯಿಡು** (ಕ್ರಿ). ಚೂಪಾದ ತುದಿಯಿಂದ ತಿವಿ. — ಚುಚ್ಚು : ಒರ್ವೆಯೆ ಮುಟ್ಟೆವಂದುದು ಬೆಱೀಟುತ್ತುಂ ಮಹೀರಂಗವಂ ಕಲೆದುರ್ಬೇಟಿಸುತಂಗವಂ ಮೊನೆಯಿಡುತ್ತುಂ ಶೃಂಗವಂ ಪುಂಗವಂ (ಜಗವಿ. ೩-೩೭). [ಮೊನೆ + ಇಡು₁]

**ಮೊನೆಯಿ** (ಕ್ರಿ). ತೀಕ್ಷ್ಣತೆಯನ್ನು ನೀಡು ; ಮೊನೆಗೊಳಿಸು : ಸುಭ್ರೂ ಕಟಾಕ್ಷಕ್ಕೆ ಮೊನೆಯಿವ ಬಲವೇ (ಮಲಿದೇ. ೨೩-೪). [ಮೊನೆ + ಈ₂]

**ಮೊನೆಯಿಟಿ** 'ಮೊನೆಯಿಟ್ಟಿ' ನೋ.

**ಮೊನೆಯೇಡು** (ನಾ). ಅದೇ ತಾನೆ ಕಳೆದುಹೋದ ಕಾಲ ; ಭೂತಕಾಲ: ಸವಸಂದ ಕಾಲವಾಚಕವಿವು ನಾಡಿದು ನಾಳೆ ನಿನ್ನೆ ಮೊನ್ನೆಗಳೆಂದಂ ವಿವರಿಪುವೀವಱು ಮೊನೆಯೇಡವು ಕೀಚಿದ್ಭೂತಭೂತಕಾಲದ್ವಯದೊಳ್ (ಶಮದ. ೩೨೨) ; ಮೊನೆಯೇಡಿನ ನೆರೆವಾಳ್ವೆದಿನಿವಂ ಕವಿ ಬಸುಟು ಲೋಕಮಂತಿರಲ್ವೇಳ್ಕುಂ (ಶಂಸಶ. ೮-೦). 'ಇಯಾಂಡು', 'ಯಾಂಡು' ಪರಾ. [ಮೊನ್ನೆ + ಏಡು₁]

**ಮೊನೆಯೇಱು** (ಕ್ರಿ). ಕಾಳಗಕ್ಕೆ ತೊಡಗು : ಕೈದು ಮೊನೆಯೇಱುವುದಕ್ಕೆ ಮೊದಲೇ ಕಟ್ಟಬಲ್ಲಡೆ ಕೈದೇನ ಮಾಡುವುದು (ಸರ್ವವ. ೪೨-೨೦೭). [ಮೊನೆ + ಏಱು₁ (< ಏಱ್₁)]

**ಮೊನೆವಲ್ಲು** (ನಾ). ಚೂಪಾದ ಹಲ್ಲು ; ಮೊನಚಾದ ಹಲ್ಲು : ಕುಲಿಶದ ಪಂತಿವಲ್ಲ ಕಂಗೊಳಿಪ ಮೊನೆವಲ್ಲುಗಳ ನಾರಿಯರ್ ಶೃಂಗಾರಹಾರಿಯರ್ ಬರುತಿರ್ದರು (ಶಬಶು. ೩೭-೯೩) ; ಸೊಗಯಿಸುವ ಗೋಣ್ಮೊಳಗಿನಿಂಚರಂಗಳನೆಸಗಿ ಮೊನೆವಲ್ಲ ಕರ್ದುಕನುಗುರೊತ್ತುಗಳನು . . . ಕೈಗೊಳಿಸಿ (ಶೈಶಿಕಾ. ೦೦-೨೨). [ಮೊನೆ + ಪಲ್ಲು (< ಪಲ್)]

**ಮೊನೆವಾತು**, **ಮೊನೆಮಾತು** (ನಾ). ತೀಕ್ಷ್ಣವಾದ ನುಡಿ: ಚುಚ್ಚು ಮಾತು; ವ್ಯಂಗ್ಯೋಕ್ತಿ : ಮೊನೆವಾತಿನೊಳಿಂತು ಜಡಿದು ನುಡಿದಳ್ (ನೀಶಗೋ. ೨೭-೪೭) ; ಮುನಿದಿನಿಯನ ಕಡುಮೊನೆವಾತಿಗೆ ನೊಂದು ಕನಲದೆ (ಶಂಶಂ. ೩-೨೩). **ಮೊನೆಮಾತು** : ಆ ಮೊನೆಮಾತುಗಳಿಂದ ತಂದೆಯ ಬಗ್ಗೆ ಜುಗುಪ್ಸೆಯುಂಟಾಯಿತು (ಶ್ರೀತಿಂ. ೦೭). [ಮೊನೆ + ಮಾತು₁]

**ಮೊನೆವೆಳಗು** (ನಾ). ತೀಕ್ಷ್ಣವಾದ ಬೆಳಕು : ಜಾರುಗೆನ್ನೆಯ ಕಡೆಗೆ ಸುಳಿವಾಸೆದಿಟ್ಟಗಳ ದಟ್ಟಸುತ ಓಲೆಮಣಿ ಮೊನೆವೆಳಗನೆಸೆಯೆ (ಮಲಿದೇ. ೩೦-೨). [ಮೊನೆ + ಬೆಳಗು₂ (< ಬೆಳಕು₂)]

**ಮೊನೆಸರಳು** (ನಾ). = ಮೊನೆಗಣೆ : ಮೊನೆಸರಳು ಮಾನ್ಯರನರಿವವೇ ನೀವೇಕೆ ರಣವೇಕೆ (ಕುಮ್ಯಾ.ಕ. ೪-೩೦). [ಮೊನೆ + ಸರಳು$_1$ (< ಸರಲ್)]

**ಮೊನೆಸುರಗಿ** (ನಾ). ಹರಿತವಾದ ಕಠಾರಿ ; ಚೂಪಾದ ಕಿರುಗತ್ತಿ : ಕೂರಂಬಿನಲಿ ಮೊನೆಸುರಗಿಯನು ಖಂಡಿಸಿದನು (ಕುಮ್ಯಾದ್ರೋ. ಸಂ. ೨೬೮-೨೦). [ಮೊನೆ + ಸುರಗಿ$_2$ (< ಸುರಿಗೆ$_2$)]

**ಮೊನೆಹಾರೆ** (ನಾ). ಚೂಪಾದ ತುದಿಯುಳ್ಳ ಹಾರೆ : ಗುದ್ದಲಿ ಮೊನೆ ಹಾರೆಗಳ್ ಪಿಡಿದ ಕರದ ಕುಡುಗೋಲು . . . ಸಹ ಬಹ ಕಾಮಾಟದ ಬಿಡುಮಂದಿಗೆ ಲೆಕ್ಕವಿಲ್ಲ (ಕಂಸಪ. ೦೦-೪೦). [ಮೊನೆ + ಹಾರೆ (< ಪಾರೆ$_1$)]

**ಮೊನ್ನೆ$_1$** (ನಾ). ನಿನ್ನೆಯ ಹಿಂದಿನ ದಿನ : ವನಜಮುಖಿ ಕೇಳ ನೀಂ ಮೊನ್ನಿನ ಶೂನ್ಯವಚನಮಂ ನುಡಿಯದೆ ನೆಟ್ಟನೆ ಬರ್ಪುದು (ಧರ್ಮಾಮೃ. ೫-೨೨೬); ಸವಸಂದ ಕಾಲವಾಚಕಮಿವು ನಾಡಿದು ನಾಳೆ ನಿನ್ನೆ ಮೊನ್ನೆಗಳ್ (ಶಮದ. ೩೨೨); ನಿನ್ನವೊಲು ಸಿದ್ಧಾರ್ಥನೆಂಬವ ಮೊನ್ನೆ ಬಂದನು (ಸಾಳ್ವಭಾ. ೦೭-೪೮). [ದೇ.॥ ತಮಿ. ಮುನ್ನಾನಾಳ್, ಮುನ್ನೈನಾಳ್; ಮಲ. ಮುನಿನಾನ್ನು; ತುಳು. ಮೊರಣೆ, ಮೊರಾನಿ; ತೆಲು. ಮೊನ್ನ]

**ಮೊನ್ನೆ$_2$** (ಅ). ಇತ್ತೀಚೆಗೆ ; ಕೆಲ ಸಮಯದ ಹಿಂದೆ : ಮೊನ್ನೆ ಮದಿವ್ಯಾದೆನ್ನೆ ಕಟಿವಿದೊಂದೆರಡಮ್ಮೆ (ಪುರಂದ. ೨-೬೩-೫); ಬಲರಾಮನ್ ಮೊನ್ನೆ ಮಾಡುಗುಂ ಬಲಿವಧಮಂ (ಕಬ್ಬಿ.ಕು. ೪೬೩ ಕೃದೊಃ); ಮೊನ್ನೆ ತದಡಿಯಿಂದ ಮಗಳೂ ಬಂದಾಳಂತಲ್ಲ (ಮೂರಂಬಾ. ೦೪೨).

**ಮೊನ್ನೆಮೊನ್ನೆ** (ದ್ವಿರುಕ್ತಿ) : ಮೊನ್ನೆಮೊನ್ನೆ ತನಕ ಸಕ್ಕರೆ ಮುಕ್ತ ಮಾರ್ಕೆಟ್‌ನಲ್ಲಿ ಸಿಗುತ್ತಿತ್ತು (ರೂಢಿ). [< ಮೊನ್ನೆ$_1$]

**ಮೊಬಲಗು** (ನಾ). ಹಲವು ಅಂಶಗಳನ್ನು ಕೂಡಿದಾಗ ಬರುವ ಒಟ್ಟು ಹಣ ; ರಕಮು : ಅವರು ಸಂದಾಯ ಮಾಡಬೇಕಾದ ಮೊಬಲಗನ್ನು ಪಾವತಿ ಮಾಡುವವರೆಗೂ ಸೆರೆಯಲ್ಲಿಟ್ಟು ಅವರಿಗೆ ಎದುರುಕಕ್ಷಿಗಾರರಿಂದ . . . ಭತ್ಯ ಕೊಡಿಸುತ್ತಿದ್ದರು (ಮಹಾಪಂ. II. ೪೬) : ಅವರಿಗೆ ಸಲ್ಲಬೇಕಾಗಿದ್ದ ಬಾಕಿಯ ಮೊಬಲಗನ್ನು ಒಟ್ಟಿಗೆ ಸಲ್ಲಿಸತಕ್ಕುದು (ಜಗಸಂ. ೨೦). [ ← ಅರ. ಮುಬ್ಲಘ : ಹಿಂ. ಮುಬಲಗ್ ; ಮರಾ. ಮುಬಲಕ, ಮುಬ್ಲಗ ]

**ಮೊಬ್ಬು** ' ಮರ್ಬು$_2$ ' ನೋ.

**ಮೊಮುಜಾಮೆ** (ನಾ). ಎಣ್ಣೆ, ಮೇಣ ಮುಂತಾದುವುಗಳಿಂದ ಪರಿಷ್ಕರಿಸಿ ಒದ್ದೆಯಾಗದಂತೆ ತಯಾರಿಸಿದ ಬಟ್ಟೆ ; ಮೇಣಗಪ್ಪಟ.: ಚಮೋಜೋಡಿ ೨ ಬಂರಕೀಕಾರ್ವ ೧ ಮೊಮುಜಾಮೆದು ೧ ಸಪ (ಎಕ. XIV, ನಂಜಪ. ೨೬೯-೬ಪದು ೪೦೦; 1847). [ ←ಹಿಂ. ಮರಾ. ಮೋಮ್‌ಜಾಮಾ ]

**ಮೊಮ್ಮ** ' ಮರ್ಮ$_1$ ' ನೋ.

**ಮೊಮ್ಮಕ್ಕಳು** ' ಮೊಮ್ಮಗು ' ಪರಾ.

**ಮೊಮ್ಮಗ**, ಮಮ್ಮಗ (ನಾ). ಮಗನ ಅಥವಾ ಮಗಳ ಮಗ ; ಪೌತ್ರ : ನಿಮ್ಮ ಮಗಳುಂ ನಿಮ್ಮ ಮೊಮ್ಮಗನುಂ ಪಿಂದೆ ಬರ್ಪುದು (ಪುಣ್ಯಾಸ್ರ. ೩-೨೩ ವ); ಗೌಡರ ಮೊಂಮ್ಮಗ ಮಲ್ಲಿಗೌಡರಿಗೆ (ಎಕ. VIII. ಸಾಗರ. ೩-೬ ; 1460 ?) ; ಬೆಸಗೊಂಡಳಂಗನೆ ಪೊಡೆಯಲರನ ಮೊಮ್ಮಗನ (ಪೋಶಕ. ೩೦-೦೭) ; ಮೊಮ್ಮಗನನ್ನು ನೋಡಬೇಕೆಂಬ ಹಂಬಲ (ಕಕಶು. ೮). **ಮಮ್ಮಗ** : ಅವರಿಗೆ ಮಮ್ಮಗನನ್ನು ಕಂಡರೆ ತುಂಬ ಪ್ರೀತಿ (ರೂಢಿ). [ ಮೊಮ್ಮ (< ಮರ್ಮ$_1$) + ಮಗ ]

**ಮೊಮ್ಮಗಳು**, ಮಮ್ಮಗಳು (ನಾ). ಮಗನ ಅಥವಾ ಮಗಳ ಮಗಳು; ಪೌತ್ರಿ : ಒಳಕಿನಲ್ಲಿ ತಾಯಿ ಹುಟ್ಟಿದಳು ಮಧ್ಯದಲ್ಲಿ ಮಗಳು ಹುಟ್ಟಿದಳು ಮೊನೆಯಲ್ಲಿ ಮೊಮ್ಮಗಳು ಹುಟ್ಟಿ ಹೆತ್ತೆಯ ಕಿಂದು ತಾಯಿಗೆ ಎಸರನೆತ್ತುತ್ತೈದಾಳೆ (ಕಕಪ. ೪. I. ೦೪೦-೦೩೫) ; ನಂಮ ಮೊಂಮಗಳು ಹೊಂನ್ನಮ ಸೆಟ್ಟಿತಿಗೆ (ಸೌಇಂ. ೦೪೩೦, ಕುಂದಾಪುರ. ೫೬೩-೮ ; 1498). **ಮಮ್ಮಗಳು** : ಮಮ್ಮಗಳ ಸಂಗಡ ಜಗಳವಾಡುತ್ತಿದ್ದ ಅಜ್ಜಿಯೂ ಸಮಾಚಾರವನ್ನು ಕೇಳಿದೊಡನೆ . . . ಮಮ್ಮಗಳ ಕೈಯನ್ನು ಹಿಡಿದುಕೊಂಡು ಕೊಳದ ವರೆಗೆ ಬಂದಳು (ದೇವೀತ. ೦೬೬). [ ಮೊಮ್ಮಗ + – ಅಳ್$_5$ ]

**ಮೊಮ್ಮಗು**, ಮಮ್ಮಗು (ನಾ). ಮಗನ ಅಥವಾ ಮಗಳ ಮಗು : ನಾಳೆ ನಮ್ಮ ಮೊಮ್ಮಗುವಿನ ಹುಟ್ಟುಹಬ್ಬ (ರೂಢಿ). **ಮಮ್ಮಗು** : ಅವರ ಮಮ್ಮಗು ಮುದ್ದಾಗಿದೆ (ರೂಢಿ).

**ಮೊಮ್ಮಕ್ಕಳು**, ಮಮ್ಮಕ್ಕಳು (ಬಹುವ) : ಎಂತು ಕಾದುವೆ ನೆನ್ನಯ ಮಕ್ಕಳೊಳುಮೆನ್ನ ಮೊಮ್ಮಕ್ಕಳೊಳಂ (ಕಂಕಭಾ. ೦೦-೦೨) ; ಬೈಚಪೆಗ್ಗಡೆಯ ಮೊಮ್ಮಕ್ಕಳು (ಜೊಂಕಶಾ. ೦೬೩೩, ಹಾವೇರಿ.೦೭೦-೭ ; 1334); ನಾಗಮಯ್ಯನ ಮೊಮ್ಮಕ್ಕಳು ನನಗೂ ಮೊಮ್ಮಕ್ಕಳೇ ! (ದಾಪಶಂ. ೩೩) ; ಯಿಾ ಧರ್ಮ್ಮವನಿವರ ಮಕ್ಕಳ ಮ(ಂ)ಮ್ಮಕ್ಕಳು ಥನಕವಾಚಂದ್ರಾರ್ಕ್ಕ ತಾರಂಬರಂ ಸಲಿಸುವರು (ಸೌಇಇ. IX-i, ೨೭೬-೫೦ ; 1183) ; ಆದಿತ್ಯದೇವಗಳ ಮಮ್ಮಕ್ಕಳು ದೇವಯ್ಯ ಓದಪಪೋಬಯರಪ್ಪರು . . . ಮಾಡಿದ ವಿವರ (ಎಕ. XII. ಚಾಪುಗ. ೬೯-೬೪ ; 1447). [ < ಮೊಮ್ಮಗ ]

**ಮೊಮ್ಮು** ' ಮಮ್ಮು ' ನೋ.

**ಮೊರ** ' ಮೊಱ ' ನೋ.

**ಮೊರಂಟೆ** (ನಾ). ಒಂದು ಬಗೆಯ ಮೀನು : ಚಕ್ರಕ್ಕೆ ಮೊರಂಟೆಯಾದರೆ ಆರು, ಬೈಗೆಯಾದರೆ ನಾಲ್ಕು (ಹೊಸಕ್ಷ. ೪೯). [ ← ತುಳು. ಮೊರಂಟೆ ]

**ಮೊರಗಿವಿ** ' ಮೊಱಗಿವಿ ' ನೋ.

**ಮೊರಗುಟ್ಟು** (ಕ್ರಿ). ಮೊರೆ ; ಅಬ್ಬರಿಸು ; ಆರ್ಭಟಿಸು : (*). [ ಮೊರೆ$_2$ ( < ಮೊಱೆ$_1$) + ಕುಟ್ಟು$_1$ ]

**ಮೊರಟ** ' ಮುರುಡ$_1$ ' ನೋ.

**ಮೊರಟ$_1$** ' ಮೊರಡು$_2$ ' ನೋ.

**ಮೊರಟ$_2$** ' ಮೊರಟೆ ' ನೋ.

**ಮೊರಟು** (ನಾ). ಮುರುಟಿದುದು ; ಸುರುಟಿದುದು : ಅವರ ಆದರ್ಶ ಆಕಾಂಕ್ಷೆಗಳು ಸ್ವಲ್ಪ ದೂರ ಬೆಳೆದು ಮೊರಟಾಗಿ ನಿಂತುಬಿಡುತ್ತವೆ (ಲಂಕಪ. ೦೩೦). [< ಮುರುಂಟು$_2$]

**ಮೊರಟುತನ** ' ಮೊರಡುತನ ' ನೋ.

**ಮೊರಟೆ**, ಮೊರಟ$_2$ (ನಾ). ಒಂದು ಬಗೆಯ ಸಸ್ಯ ; ಪ್ರಿಯಾಲ : ಈ ಮೊದಲು ತಂದ ಪತ್ರ ಪುಷ್ಪ ಉಪಕವೆ ದೇವರೋ ಈ ಹರಡಿಕೊಂಡಿರುವ ಸೊರಟೆ ಮೊರಟೆಗಳೆ ದೇವರೋ (ಪಕಸಂ. ೦೯೩-೩೮). **ಮೊರಟ$_2$** : "ರಾಜಾದನಂ, ಪ್ರಿಯಾಲಃ, ಸನ್ನದ್ರುಃ, ಧನುಃಪಟಃ — ೪ . . . ಮೊರಟೀಗಿಡ" (ಸಿದ್ಧಾಂತ. ೦೨೦). ' ಮೊರಲೆ ' ಹೋ. [←ತೆಲು. ಮೋರಟಿ. /ಸಂ. ಮೋರಟ=ಕುರುಟಗೆ ಸಸ್ಯ]

**ಮೊರದ** ' ಮುರುಡ$_1$ ' ನೋ.

**ಮೊರಡಿ$_1$** ' ಮೊರಡು$_2$ ' ನೋ.

**ಮೊರಡಿ$_2$**, ಮುರಡಿ$_2$ (ನಾ). ೧. ಒಂದು ಬಗೆಯ ಮರ : "ಮೊರಡಿ ಯೆಂದೆನೆ ಕುಜವಿಶೇಷದಭಿಧಾನ" (ಕಶಾ. ೯೩); ಕಗ್ಗಲೀ ಉತ್ತರಾಣೀ ಚೆಳ್ಳೆ ಮೊರಡೀ ಗುಳ್ಳಾ ಹೇರುಳೆ ಪಾಲುಳ್ಳ ಮರಗಳಲ್ಲಿ ದಂತಕಾಷ್ಠವಂ ಗ್ರಹಿಸಿ (ಉಾಶೀಮ. ೦೬೪-೪). ೨. ಒಂದು ಬಗೆಯ ಸಸ್ಯ ಮತ್ತು ಅದರ ಎಲೆ : ಕರಿಯನು ಸೇವಿಪ ಸಿಂಹಕೆ ಮೊರಡಿಯ ಸೇವಿಪ ಮೊಲಂ ವಲಂ ಪಾಸಟಿಯೋ (ವೃಕಶ. ೩-೩೭). **ಮುರಡಿ$_2$** : " ಎಮ್ಮೆಮುರಂಕಲುಗಿಡ, ಮುರಡಗಿಡ, ಮೊರವೆ, ಶಾರಪಪ್ಪು (ವೃಶಿಗಿ. ೦೪-೨೬೦). [ ? ]

**ಮೊರಡಿದಾಮರೆ** (ನಾ). ಗುಡ್ಡದ ಮೇಲೆ ಬೆಳೆಯುವ ತಾವರೆ ; ಬೆಟ್ಟದಾವರೆ : ತರಣ ತೆರಳಲಾ ಕಡಗೆಯುಲರ್ವೊಗದಿರಿವ ಮೊರಡಿದಾಮರೆಯ

ಬನಂಬೋಲ್. . . ಅರವುಗನೇಕಡೆಗೆಯ್ದಲ್ಕಾ ಕಡೆಗೆ. . . ನಾರಿಯರೂಪ್ಪ ವಡೆವರು (ಜಯಸಾ. ೦೦-೩೬). [ಮೊರಡಿ₁ (<ಮೊರಡು₂) + ತಾವರೆ]

**ಮೊರಡು₁** 'ಮುರುಡು₃'ನೋ.

**ಮೊರಡು₂**, ಮಂಟೆ, ಮಡ್ಡಿ₃, ಮರಡಿ, ಮೊರಟೆ₁, ಮೊರಡಿ₁, ಮೊರಡೆ, ಮೊಱಡಿ (ನಾ). ದಿಣ್ಣೆ; ತೆವರು; ಗುಡ್ಡ: ಎಱಗುವ ಮಱಿ ಕದಡಿ ಬರ್ಪ ತೊಱೆ ಬೆಟ್ಟು ತವರ್ ಮೊರಡುಪಜಲಧಿಗಳೆನೆ ಜನ ವಱಿಯಱಿಯೆ ದಲುದ್ದಬಿದ್ದವಾಯ್ತುವನಿತಳಂ (ಆದಿಪು. ೬-೬೨); ದರಿಯುಂ ಮಂ ಕುಮ್ಮರಿಯುಮಂ ಮೊರಡುಮಂ ಕೊರಡುಮಂ . . . ಕಳೆದುಪೋಗಿ (ಲೀಲಾವ.೬-೦೬ ವ); ಚತುಸ್ಸೀಮೆಗಳೊಳಗಾದ ಮೊರಡು ಸಹ ಕಟ್ಟಿದ ಗುತ್ತಗೆ ಖರ (ಎಕ. VIII, ಸಾಗರ. ೬೦-೩೦; 1472). **ಮಂಟೆ**: ಮಂಟೆಯಲ್ಲಿ ಮನೆ ಮಾಡಿದ ನಮ್ಮ ಶಿವ (ಕೃಕಂ ತ. ೦-೦೬೭-೨). **ಮಡ್ಡಿ₃**: ಮಾದಿಗರ ಮಡ್ಡಿಯ ಮೇಲಿದ್ದ ಹತ್ತಿಪ್ಪತ್ತು ಗುಡಿಸಲು (ಪುಟ್ಟಪ್ಪ. ೩); ದಿನ್ನಿ ಮಡ್ಡಿ ಗುಡ್ಡ ಆದರ್ಯಾವ ಅದನ ತಾ ಕಂಡು ನೊಂದಾಳೊ (ಸತೀಗೀ. ೦೦೦-೦೬). **ಮರಡಿ**: ಕೂಚಣ್ಣನ ಮರಡಿಯ ದೇವಪ್ಪನವರ ಕೈಯಲು ತತ್ಕಾಲೋಚಿತಕ್ರಯದ್ರವ್ಯವನು . . . ಕೊಟ್ಟು (ಎಕ. V (R), ತರುವು. ೨೩-೩೦೬; 1290): ಮೂಡಲು ಬಡಗಲು ಬ್ಯಾಚನ ಮರಡಿ (ಎಕ. X (S), ಮುಳಬಾ. ೦೯೬-೦೦; 1498); ಆ ಮರಡಿಯ ಸುತ್ತಮುತ್ತಲಿನ ಗಿಡಗಂಟಿಗಳನ್ನೂ ಮುಳ್ಳುಕಲ್ಲುಗಳನ್ನೂ ನೋಡಿದರೆ, ಇಲ್ಲಿ ಮನುಷ್ಯರು ಇರಬಹುದೆಂದು ಯಾರಿಗೂ ತೋರುವ ಹಾಗಿದ್ದಿಲ್ಲ (ಧಾರ್ಮಿಕ. ೨೨೭). **ಮೊರಟೆ₁**: ಯಿಾ ಕೆರೆಗೆ ದಕ್ಷಿಣಪಾರ್ಶ್ವದಲ್ಲಿ ಕೊತ್ತಿಗನ ಮೊರಟೆಯ ಪಡುವಚಾರಿಕಿಬ್ಬೆಯಲ್ಲಿ ದಕ್ಷಿಣಮುಖವಾಗಿ ಸಟ್ಟ ಕಲ್ಲು (ಎಕ. III, ಶ್ರೀರಂಗ. ೦೯.೦೩೨; 1686). **ಮೊರಡಿ₁**: ಮೂಳೆಯ ಮೊರಡಿಗಳನೇಱಿ ನೋಡಿಯುಂ . . .ದುರ್ಯೋಧನನನಱಸಿ ಕಾಣದೆ ವಿಸ್ಮಯಂಬಟ್ಟು (ಗದಾಯು. ೬-೨೬ ವ); ದೇಹವಿುದಂ ನೆಟ್ಟನೆ ಪೊತ್ತು ಸುಖಮನಱಸುವ ಮನುಜಂ ಮೊರಡಿಯೊಳೆ ಮಾದು ಪಟಮನಱಸದಿರಂ (ಡಿ.ಕೋಶ. ೦-೩೦); ಸರ ವೃಕೋದರ ನಕುಲ ಮೊದಲು ಮರು ಕುತೂಹಲವಿ[ದಿ]ವರ ಸುತ್ತಣ ಮೊರಡಿಗಳ ಮೇಲಿದ್ದು ನೋಡಿದರೀ ಮಹಾಹವವ (ಕುಮ್ಮಾಲ. ೦೯-೩೭); ಮಲೆನಾಡ ಭಾಗದಲ್ಲಿ ಮೊರಡಿ, ಕೆಂಪುನೆಲ ಬಹಳ (ಮುಂಬಯಿ.೩-೦೯೬). **ಮೊರಡೆ**: ಮೊರಡೆಯ ಮೇಲಾಗಲಿ ಗುಡ್ಡದ ಮೇಲಾಗಲಿ ಹುಲ್ಲು ತಿಂದು ಉಲ್ಲಾಸದಿಂದ ಜಿಗಿದಾಡುವ ಕುರಿ ಮರಿಗಳನ್ನು ನೋಡುತ್ತೇವೆ (ಮುಂಬಯಿ. ೬. ೩-೯೦). **ಮೊಱಡಿ**: ಪೂರ್ಬ್ಬಸ್ಯಂದಿಸಿ ಕೆಂಜೆಗೆ ಮೊಱಡಿವ (ಎಕ. I, ೧-೨೨; 466 ಕ್ರಿಶ); ಪೂರ್ವ್ವಸ್ಯಾಂದಿಶಿ ನೊಲಿ ಬೆಳದಾ ಬೆಳ್ಗಲ್ಮೊಱಡಿ (ಎಕ. VII (R), ನಾಗಮಂ. ೦೯೯-೬೦; 776); ಮೊಱಡಿಯ ಮೇಲೆ ಮಾಮುಖಮಾದವೊಲಾದುದು (ಎಕ. VI, ಕಂರ್ಣ. ೯೩-೬೨; 1196). 'ಮೊರಬು' ಪರಾ.

**ಮೊರಡಿಯಣುಗಿ** = ಪರ್ವತರಾಜನ ಮಗಳು; ಗಿರಿಜೆ: ವೃಷಭನಂ ಮೊರಡಿಯಣುಗಿ ನಾಲ್ಕೊಗನಂ ನುಡಿವಣ್ಣಂಬುರುಹೋದರನಂ ಸವಿಗಡಲ ಕುವರಿ . . . ಕಯ್ವಿಡಿವಂದದಿ (ಜಯಸಾ. ೨-೦೦).

**ಮೊರಡುಕಲ್ಲು** 'ಮುರುಡುಗಲ್ಲು' ನೋ.

**ಮೊರಡುಗೋಡು** (ನಾ). ಗುಡ್ಡದ ಶಿಖರ,- ಕೋಡುಗಲ್ಲು: ಹೊತ್ತರೆಯ ಬೆಟ್ಟನೆತ್ತಿಯ ಕಲ್ಲರೆಯ ಮೊರಡುಗೋಡಂತೆ ಭೀಮಾತನು (ಶ್ರೀಣಾಮಾ. ೬೯೨-೦೩). [ಮೊರಡು₂ + ಕೋಡು₅]

**ಮೊರಡುತನ**, ಮೊರಟುತನ (ನಾ). ನಯವಿಲ್ಲದಿರುವಿಕೆ; ಒರಟುತನ: ಅಜ್ಞತೆ ಅನನುಭವ ಮೊರಡುತನಗಳು ಸೇರಿದರೆ ಅನಾಹುತವಾಗುತ್ತದೆ (೦ಂಕಿಮ. ೩೩೪). **ಮೊರಟುತನ**: ಪತಿಯ ಮೇಲೆ ಹರಿದ ನನ್ನ ಪ್ರೇಮವು ಅವರ ಮೊರಟುತನದಿಂದ ಮತ್ತೆ ನನ್ನ ಹೃದಯದೊಳಗೇ ಹುದುಗಿ ಹೋಯಿತು (ಶಶಿ. ೩೬). [ಮೊರಡು₁ (< ಮುರುಡು₃) + - ತನ]

**ಮೊರಡುಬೀಳು** (ಕ್ರಿ). (ಅಲಂ) ಜಡ್ಡುಗಟ್ಟು; ಜಡವಾಗು: ಹತ್ತುದಿವಸ ಒಂದೇ ತೆರನಾಗಿದ್ದು ಬಿಡಿ, ಮೊರಡುಬೀಳುತ್ತೆ ಮನಸ್ಸು (ಕಂಗೂಲಿ. ೭೬). [ಮೊರಡು₁ (<ಮುರುಡು₃) + ಬೀಳು₁(<ಬೀೞ್₁)]

**ಮೊರಡೆ** 'ಮೊರಡು₂' ನೋ.

**ಮೊರಬಿಡು** (ಕ್ರಿ). (?): ಪಾರ್ವನ ಮಣ್ಣಲ್ಲಿ ಕೊಡಿತೆ ಕಾಯ ಬಿಟ್ಟಣ್ಣುಂ ಅರಸಣ್ಣಂ ಅಯ್ದೊನ್ದಿ ಒತ್ತೆಮಣ್ಣತ್ತು ಪಾದಂತೆತ್ತುನ್ಮೊರಬಿಟ್ಟಂ ಪರಿಯಾರವಾನ್ಕೆಡಿಸಿದೊನ್ಪಞ್ಚಮಹಾಪಾತಕನಕ್ಕೆ (ಎಕ. XIV, ತಿರುಮ. ೨೫೩-೬; 800). [?]

**ಮೊರಬು** (ನಾ). ೧. ಕಲ್ಲು: "ಶರ್ಕರಿಲಃ, ಶಾರ್ಕರಃ – ಈ ೨ ಮೊರಬುನುಳ್ಳ ಭೂಮಿಯ ಪೆಸರು" (ಹಾಹಂಶಾ. ೦೦೨). ೨. ರತ್ನದ ಒಂದು ದೋಷ (?): ಅಕ್ಕರಿಂ ಧರಿಸಿದವರಿಗೆ ಫಲವ ಪೇಳುವೆ ಕರ್ಕರಕೆ ಛಿನ್ನಪೆಂದೊಡದು ಪುಟ್ಟಿದುದೆಂದು ಅಕ್ಷದ ಮೊರಬು ಉಳಿಯಾಣಸಸುನಗಳೆಂದು ಪುಟದೋಷಮೆಂದಿರ್ಪುದು (ರತ್ನಶಾ. ೯-೩).

[ದೇ.॥ ತಮಿ. ಮುರಪ್ಪು; ತುಳು. ವೊರ, ಮುರ=ಕಲ್ಲುಕಲ್ಲಾದ; ತೆಲು. ಮೊರಪ=ಕಲ್ಲುಗಳಿಂದ ಕೂಡಿದ]

**ಮೊರಬ್ಬ** 'ಮುರಬ್ಬ' ನೋ.

**ಮೊರಲೆ** (ನಾ). ಒಂದು ಬಗೆಯ ಸಸ್ಯ; ಪ್ರಿಯಾಲ: "ರಾಜಾದನಃ, ಪ್ರಿಯಾಳಃ, ಸನ್ನಕದ್ರುಃ, ಧನುಃಪಟಃ_ಈ ೪ ಮೊರಲೆ" (ಹಾಹಂಶಾ. ೦೦೭); "ಪಟಃ–ಮೊರಲೆ" (ಓಹಂ. ೯೦). 'ಮೊರಟೆ' ಹೋ. [ದೇ.॥ ಮಲ. ಮುಱಳ್, ಮುರಳ್; ತೆಲು. ಮೊರಲಿ, ಮೊರಳಿ, ಮೋರಲಿ]

**ಮೊರವು** 'ಮೊಱವು' ನೋ.

**ಮೊರವೆ** (ನಾ). ಒಂದು ಬಗೆಯ ಸಸ್ಯ: ಎಮ್ಮೆಮುರುಕಲುಗಿಡ, ಮುರಡಿಗಿಡ, ಮೊರವೆ, ಶಾರಪಪ್ಪು (ವೃಕ್ಷಶಾ. ೦೯-೨೬೦). [?]

**ಮೊರಸು₁** (ಕ್ರಿ). ಆರ್ಭಟಿಸುವಂತೆ ಮಾಡು; ಗರ್ಜಿಸುವಂತೆ ಮಾಡು: ಮಿಂಚಿನ ಮರಿ ಮುಂಚಿ ಮೊರಸೆ ಹೃದಯಶಿಖಿಯ ಹೊನ್ನ, ಗುಡುಗಿನ ಮಗು ಮುಡುಗಿ ಮೊರಸೆ ಕಿನ್ನರಿಗಿರಿಯನ್ನ (ಗಳಿಂ. ೯೪-೦೦).

[ಮೊರೆ₂ (<ಮೊಱೆ₁) + -ಇಸು₃]

**ಮೊರಸು₂** (ನಾ). ಒಂದು ಪ್ರದೇಶದ ಹೆಸರು: ಶ್ರೀಪೆರ್ಮ್ಮಾನಡಿ ಪ್ರಿಥಿವೀರಾಜ್ಯಂಗೆಯೆ ನೊಣಂಬಶಿವಮಾರಂ ಮೊರಸುನಾಡನಾಳುತ್ತಿರೆ (ಎಕ. IX, ದೇವನಹ. ೯೦-೪; 820); ಮಣಲಿನಾಡ ಮೊರಸು ಹಂನೆರಡು ನೆಕ್ಕುನಾಡ ಬೆಡಗೆಱ (ಎಕ. V, ಬೇಲೂರು. ೬೦-೨೩೯; 1117); ಪುಂಗನೂರ್ ಮಾಗಡಿ ಬೆಂಗಳೂರ್ ಮೊದಲಾದ ಮೊರಸುನಾಡ ಮೋಹರದೊಳ್ (ಶಿವಮಂ. ೨೨-೪). [?]

**ಮೊರಹ** (ನಾ). ಸದ್ದು; ಧ್ವನಿ: "ಗಾವರಮೆಂದೆನೆ ಮೊರಹವೆನಿಪ್ಪರ್ಥಮಪ್ಪುದು" (ಕಕುಹಿ. ೩೩). [ಮೊರೆ₁ + - ಹ₂ (< - ಪ್ಪ)]

**ಮೊರಹತ್ತು** (ಕ್ರಿ). (?): ಹೆರಳೆಯ ಹಣ್ಣಿನ ಕುಸುರಿಯ ತೆಗೆದು ಮೊರಹತ್ತಿ ಕೊಚ್ಚಿದ ರಾಗಿಹಿಟ್ಟನೂ ಕಲಸಿ ಉಂಡೆಮಾಡಿ ಮೆಲ್ಲಲು ಅಜೀರ್ಣಂ ಮಾಣ್ಗುಂ (ಸಕವೈ. ೩೬೩). [?]

**ಮೊರಹು** (ನಾ). ದುಂಬಿಯ ಧ್ವನಿ; ಝೇಂಕಾರ: ಅಳಿಕುಳದ ಮೊರಹು ನಿಂತಿತು (ಜಕಪು. ೦೦-೪೭); ಅಳಿಗಳ ಮೊರಹಿನಾ ಕೋಲಾಹಲಕೆ ಮುಡಿಯಸಲುಗಿದೊಡೆ ಮೊಳಗವರ್ದ ಕಾಲಮೇಘಂ ತೋಱುತಿದೆ (ಶಬ್ದರಾ. ೬-೯೩). [ಮೊರೆ₁ + - ಹು₂ (< -ಪ್ಪು₂)]

**ಮೊರೆ₁** (ಕ್ರಿ). ೧. ದುಂಬಿಯಂತೆ ಧ್ವನಿಮಾಡು,-ಝೇಂಕರಿಸು: "ಮೊರೆ (ಮುರೆ) — ಭ್ರಮರಾದಿನಿನದೇ, ಕಿನ್ನರಿಕ್ರಿಯಾಯಾಂ" (ಕಮಥಾ); ತೊಳಪೆಳವೆಱಿಯುಂ ಮೊರೆವಳಿಕುಳಂಗಳುಂ ಮೆಲ್ಲನೆಸೆವ ಮಳಯಾನಿಳನುಂ ಮುಳಿಸಂ ಕಟಲ್ಚಿ ಕಳೆದುವು (ಕಬರಾ. ೨-೬೦); ಮದಗಜ

ಗಂಡಸ್ಥಳಂಗಳೊಳೆಱಗಿ ಮೊರೆವ ತುಂಬಿಯ ಬಂಬಲ್ಗಳೆ ವಿಮುಖೀಭೂತಂಗಳಾದುವು (ಶಂಪಭಾ. ೪-೯೯ಪ) ; ಬಂದನುಂದು ನಗೆಗೊಂಬುಗಳಿಂ ಮೊರೆದೇಟ್ವ ಭೃಂಗಝಂಕಾರಮೆ ಮಾಟ್ಪುದಾರ ಬಗೆಗಂ ಮದನೋತ್ಸವ ಹರ್ಷಭಾರಮಂ (ಶಂಣಾವಿಜ. ೦-೦೦೬). **೨.** ಸಣ್ಣದನಿಯಲ್ಲಿ ಶಬ್ದ ಮಾಡು ; ಕಿರುಗುಟ್ಟು : ಕುರುಬಲಕ್ಕಿ ಮಿಟ್ಟು ಪಲ್ಮೊರೆವಂತೆ ಮೊರೆದು ಪರಿವ ತನ್ನ ಕಿಸುಪೊನ್ನ ರಥಮುಂ ಭಯಂಕರಾಕಾರಮಾಗೆ (ಶಂಪಭಾ. ೧೦-೯೭ ಪ); ತರತರದಿಂ ತೆರಳೆ ರಸಂ . . . ಮೊರೆವುವು ಗಾಣಂಗಳಿಕ್ಷುವಾಟಾಂತರದೊಳ್ (ಶುಕುವಿಜ. ೯-೫೭); ಕೊರೆದುಂ ಸುಯ್ದುಂ ಸೀಂತುಂ ಮೊರೆದುಂ ನಿದ್ರೆಯನೆ ಕೆಡಿಪ ಮುದು ಪೊರಸಂ ಪುತ್ತ್ರರಿಡಿಲ್ಲದೊಲ್ಲೆನೆಂದೊಡೆ (ರಘಾರ್ಣವು. ೨-೫೪); ಮೊರೆವ ಸಮ್ಮಾವುಗೆಯು ಮುಱುಕದಿಂ ತೆಗೆದುಟ್ಟ ಪರಮಗೂಲದ ಮುಂಜೆಱಗಿನಿಂ . . . ಸಿಂಗರಕ್ಕಿಟ್ಟ ತಿಟ್ಟಮೊಯಿದೆನಿಸಿ (ಶಬ್ದರಾ. ೫-೪೨). **೩.** ವಾದ್ಯದಂತೆ ಶಬ್ದಮಾಡು,– ಧ್ವನಿಸು : ಮೊರೆವ ಪಟಹ ಮೃದಂಗ ಘನಜರ್ಝರಿತ ವಹ ನಿಸ್ಸಾಳಚಯದಬ್ಬರಣೆ ಗಬ್ಬರಿಸಿದುದು ಕಮಲಭವಾಂಡಖರ್ಪರವ (ಕುಮಾರರಾ. ೪-೨೯); ತಮ್ಮಟೆಗಳು ಕಿವಿಚಿಟ್ಟಾಗುವಂತೆ ಮೊರೆದವು (ಶಾಂತಲಾ. ೦೪೪). 'ಮೊಱೆ$^3_1$' ಪರ್ಯಾ.

[ದೇ.॥ ತಮಿ. ಮುರಱು ; ಮಲ. ಮೊರವ್ಪು ; ತುಳು. ಮುರೆಸು, ಮೊರೆಸು ; ಕೊಡ. ಮೊರಪ್ ; ತೆಲು. ಮೊರೆಯು ; ಕೋಲಾ. ನಾಯ್ಕಿ. ಮೊರಪ್ : ಪರ್ಜಿ. ಮುರ್ ; ಕುರುಖ್. ಮುರ್‌ನಾ ; ಮಾಲ್ತೊ. ಮುರೆ]

**ಮೊರೆ$_2$** 'ಮೊಱೆ$^3_1$' ನೋ.

**ಮೊರೆ$_3$** (ನಾ). ದುಂಬಿಯ ಧ್ವನಿ : ಝೇಂಕಾರ : 'ಪರಮೆಮೊರೆ' ಪರ್ಯಾ. [<ಮೊರೆ$_1$./ತುಳು. ಮುರಿಯು]

**ಮೊರೆ$_4$** 'ಮೊಱೆ$^3_2$' ನೋ.

**ಮೊರೆ$_5$** 'ಮಱೆ$^3_2$' ನೋ.

**ಮೊರೆ$_6$**(ನಾ). (?) : ಅಶ್ವರತ್ನದ ಆಭರಣದ ಲೆಕ್ಕ . . . ೨ ಸಿಂಹ ೧೬ ಮೊರೆ ೧೦ ಕಟಕಟೆತುಂಡು (ಎಕ. XIV, ಸಂಚಪ. ೨೯೩–ನೆಯ ಕಲಂ; 1847). [ ? ]

**ಮೊರೆಗೇಳು** 'ಮೊಱೆ$^3$ಗೇಳು' ನೋ.

**ಮೊರೆಜ್ವರ** (ನಾ). ಬಿಟ್ಟು ಬಿಟ್ಟು ಬರುವ ಒಂದು ಬಗೆಯ ಜ್ವರ : ಜವುಗುಪ್ರದೇಶವಾಸಿಗಳಲ್ಲಿ ಕಂಡುಬರುವ, ಮೊರೆಜ್ವರವೂ ಗುಲ್ಮ ಶೋಫೆಯೂ ಲಕ್ಷಣಗಳಾಗುಳ್ಳ ಒಂದು ರೋಗಸ್ಥಿತಿ (Impaludism. ಇಂಕನ). [ಮೊರೆ$_4$ (<ಮೊಱೆ$^3_2$) + ಜ್ವರ]

**ಮೊರೆತ$_1$** (ನಾ). ಝೇಂಕಾರ : ಸೊಳ್ಳೆಗಳು ಮುತ್ತಿಗೆ ಹಾಕಿ ಝೇಂಕಾರ ಮಾಡುತ್ತಿರುತ್ತವೆ : ಅವುಗಳ ಮೊರೆತವೇ ಮಲಗಿದವನಿಗೆ ಜೋಗುಳವಾಗ ಬೇಕು (ನಂಟರು. ೪೩). [ಮೊರೆ$_1$ + — ತ$_2$]

**ಮೊರೆತ$_2$** (ನಾ). ಅಬ್ಬರ ; ಆರ್ಭಟ : ಕಾವ್ಯದಲ್ಲಿರಬೇಕಾದ ಗುಣವಿಶೇಷಗಳೂ ಭಾವಾವೇಶದ ಮೊರೆತಗಳೂ . . . ಬಸವಣ್ಣನವರ ವಚನಗಳಿಗೆ ವಿಾಸಲು (ಭಾವಗೀ. ೦೬೭); ಸಮುದ್ರದ ಮೊರೆತ ಮನೆಯವರೆಗೂ ಕೇಳಿಸುತ್ತಿತ್ತು (ರೂಢಿ). [ಮೊರೆ$_2$ (<ಮೊಱೆ$^3_1$) + — ತ$_2$]

**ಮೊರೆಪ** (ನಾ). =ಮೊರೆತ$_1$ : ಅಲರ್ವಂಡನುಂಡು ಸೊಕ್ಕಿ ಮೊರೆವ ಮೊರೆಪದಿಂ ತುಂಬಿಗಳುಂ ಪಲ್ಪಱೆಗುಟ್ಟಿದಪುವೆಂಬಂತೆಯುಂ (ಕಾದಂಸಾ. ೨೦೯); ತುಂಬಿಗಳ ಪಲ್ಮೊರೆಪದಿಂ . . . ಮೆಱೆದುದಾ ವನಂ (ಶಬ್ದರಾ. ೬-೨೫). [ಮೊರೆ$_1$ + – ಪ$_2$]

**ಮೊರೆಯಿಡು** 'ಮೊಱೆ$^3$ಯಿಡು' ನೋ.

**ಮೊರೆಹೊಗು** 'ಮಱೆ$^3$ವೊಗು' ನೋ.

**ಮೊರೆಹೋಗು** 'ಮಱೆವೋಗು' ನೋ.

**ಮೊರೈಡಿವಾಡಿ** (ನಾ). ಒಂದು ಊರಿನ ಹೆಸರು : ಪೂಲಿಕೆಱೆ ಕಾಪವರ್ ಕಣ್ ಮೊರೈಡಿವಾಡಿ ಕೊಪುರಮಂಗಲಕೆಱೆಪಳ್ಳಿವರ್ (ಪ್ರಶಂ. ೧೯೨೪. ೪೦-೦೨೦; 799). [? + ಪಾಡಿ$_2$]

**ಮೊರೊಪ್ಪೂರ್** (ನಾ). ಒಂದು ಊರಿನ ಹೆಸರು : ಗಂಗಱುಸಾಸಿರ ಮುಮ ಆಳೆ ಮೊರೊಪ್ಪೂರಾ ಗವುಣ್ಡನ್ ಅಱಕೆಱೆ ಹುಯ್ಯ(ಲ್ಕೊ)ಳು ಸತ್ತನ್ (ಪ್ರಶಂ. ೦೯೨೬, ೯೦-೩; 10ನೆಯ ಶತ). [ ? + ಊರ್]

**ಮೊರ್ಕು** 'ಮುಱುಕು$_1$' ನೋ.

**ಮೊಲ** (ನಾ). ಉದ್ದಕಿವಿಗಳು, ಮೊಂಡುಬಾಲ ಹಾಗೂ ಸೀಳಿದ ತುಟಿಯೂ ಉಳ್ಳ ಒಂದು ಬಗೆಯ ಸಸ್ಯಾಹಾರಿ ಪ್ರಾಣಿ ; ಶಶ : "ಮೊಲಂ ಶಶಮೆನಿಕ್ಕುಂ" (ಮಂಗರಾ. ೪೬-೮); ಒಂದು ಮೊಲಂ ಕಿಚ್ಚಿನಿಂದಂ ಬೆಂದುರಿಯ ಬಣ್ಣವಾಗಿ ಪರಿತಂದು ತನ್ನ ಕಾಲ ಕೆಳಗೆ ಪೊಕ್ಕೊಡೆ (ವಡ್ಡಾರಾ. ೦೫೭–೩); ಆ ಪಡೆಯೊಳ್ ಗಂಡನುಮಾ ಮೊಲಂ ದ್ರುಪದನುಂ ಪೇರೊಟ್ಟೆಯಾ ಮತ್ಸ್ಯನುಂ (ಶಂಪಭಾ. ೦೨-೪); ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಲಿವರಯ್ಯ (ಬಸವ. ೦೫೯); ಮೊಲನ ಬಲೆಯಲಿ ವನದ ಮದಕರಿ ಸಿಲುಕಲರಿವುದೆ (ಕುಮಾರರಾ. ೦೦–೩); ಆ ಕಾಡಿನಲ್ಲಿದ್ದ ಮೊಲಗಳೆಲ್ಲಾ ತಂಪಾಗಿದ್ದ ಈ ಸ್ಥಳಕ್ಕೆ ಬಂದು ಸೇರಿಕೊಂಡವು (ಪಂಚತಂ. II, ೨೨).

**ಮೊಲದ ಕೋಡು** = (ಅಲಂ) ಪಡೆಯಲು ಅಸಾಧ್ಯವಾದುದು; ಅಸಂಭವವಾದುದು : ಮುದಿಗೂನಿ ಮಂಥರೆಗೆ ಮೊಲದ ಕೋಡಾದುದು ಸೊಗಂ (ಶ್ರೀರಾಮಾ. ೨೪-೭೯೨).

[ದೇ.॥ ತಮಿ. ಮುಯಲ್, ಮುಂಚಲ್ : ಮಲ. ಮುಯಲ್ ; ತುಳು. ಮೊಲ ; ಕೊಡ. ಮೊಸ ; ಗೊಂಡಿ. ಮಲೋಲ್, ಮೊಲೊರ್ ; ಕೊಂಡ. ಮೊರೊಲ್ ; ಕುವಿ. ಪ್ರಾಲೂ ; ಕುರುಖ್. ಮುನ್ಯಾ ; ಬ್ರಾಹುಈ. ಮುರೂ]

**ಮೊಲಕಿವಿ** 'ಮೊಲಗಿವಿ' ನೋ.

**ಮೊಲಗತ್ತಲೆ** 'ಮೊಲಗಟ್ಟಿಲೆ' ನೋ.

**ಮೊಲಗರ್ತಲೆ** 'ಮೊಲಗಟ್ಟಿಲೆ' ನೋ.

**ಮೊಲಗಳೆಯ** (ನಾ). ಮೊಲದ ಗುರುತುಳ್ಳವನು ; ಶಶಾಂಕ ; ಚಂದ್ರ : ಒಂದು ಕಂತುಕವ ತಳೆದ ಕಾಂತೆಯ ಕರತಳ ಕಣ್ಗೆ ಕಡುರಮ್ಯಮಾಯ್ತು ಮೊಲಗಳೆಯನನಮರ್ದಪ್ಪಿದ ತಾವರೆಯಲರ ಚೆಲ್ವಿಕೆಯನೇಳಿಸುತ (ಕುರಾಸಾಂ. ೩೨–೪). [ಮೊಲ + ಕಳೆ$_6$ ( = ಕಲೆ$_3$) + – ಅ$_7$]

**ಮೊಲಗಳ್ತಲೆ** 'ಮೊಲಗಟ್ಟಿಲೆ' ನೋ.

**ಮೊಲಗಟ್ಟಿಲೆ, ಮೊಲಗತ್ತಲೆ, ಮೊಲಗರ್ತಲೆ, ಮೊಲಗಳ್ತಲೆ** (ನಾ). ೧. ದಟ್ಟವಾದ ಕತ್ತಲೆ ; ಗಾಢಾಂಧಕಾರ : ಕಣ್ಪೊಲದೊಳಮಿರುಳೊಳ್ ಮೊಲಗಟ್ಟಿಲೆ ಚಂದ್ರದ್ಯುತಿಗೆ ಕಾಳತಾಳೀವನದೊಳ್ (ಶಾಂತಿಪು. ೫-೦೦೩) ; ಮೊಲಗಟ್ಟಿಲೆಯುಂ ಕಾಮಿಗೆ ಪುಟ್ಟಿಸುವ ಮೊಲಂ ಕಾಮಗ್ರಹದಾಲಮೆನಿಸಿ ತಿಂದುಕಳಂಕಂ (ಮಲ್ಲಿಪು. ೬–೬೭) ; ಲಲಿತ ಹರಿನೀಲಹರ್ಮ್ಯಾವಲಿಶಿಖರೋಚ್ಚಳಿತರುಚಿಗಳಿರುಳೊದವಿ ಸಭಸ್ಥಲದೊಳೊಡರ್ಚುವುದಿಂದುವ ಮೊಲಕ್ಕೆ ಕಟ್ಟಲೆಯಿದೆನಿಪ ಮೊಲಗಟ್ಟಲೆಯುಂ (ಚಂದ್ರಪ್ರ. ೦೨-೬೭). **೨.** (ಅಲಂ) ಅಜ್ಞಾನ ; ಮೌಢ್ಯ : ಅಱಸಂ ತಗುಳ್ವೆನೆಂತಾಗಿಯುಮೆಂಬ ನಿನ್ನ ಮೊಲಗಟ್ಟಲೆಗಾಂ ಬೆಱಗಾದೆಂ (ಅಂಪು. ೩–೬೩). **ಮೊಲಗತ್ತಲೆ** : ೧. ಜಲಜಲಿಸುವ ಬೆಳ್ದಿಂಗಳ್ ತೊಲಗಲೊಡಂ ಮುಂದುಗೆಟ್ಟು ಶಶಿಮಂಡಲದೊಳ್ ಮೊಲನೆಡಪೆ ಹರಿಣನಡಿಗೆಡೆ ಮೊಲಗತ್ತಲೆಯಾಯ್ತು ಯಾಮಿನೀವಿರಸನದೊಳ್ (ಅನಂಪು. ೬-೭೪). **ಮೊಲಗರ್ತಲೆ** : ೧. ನಾಣ ಪುತ್ತು ಮೊಲಗರ್ತ್ತಲೆಯಾ ವಟವಿಪ್ಪ್ರ ಭಂಗಿ (ಸೌಇಇ. XVIII, ೨೯೭-೦೬; 1188). **೨.** ಚದುರೆಕ್ಕಸೆಕ್ಕಮಱೆತಂ ಮೊಲಗರ್ತ್ತಲೆಯಾಗಿ ಪತ್ರ್ತಿಪೀಗಡಿನವರಂ

ಪಳಂಚಲೆವುದುದ್ಧಗುಣಂ ರವಿದಣ್ಣನಾಥನಂ(ನ) (ಎಪಿ. XII, ೨೬೦-೦೯೩; 1077). **ಮೊಲಗಳ್ತಲೆ** : ೨. ದುರಭಿಪ್ರಾಯದ ಮೊಲಗಳ್ತಲೆಯಿಂದಜನಂ ಭಾವಿಸದಾ ಜೀವಂ ಆಯುಂ ತವೆ ತೀರ್ದರ್ (ಶಬರಿ. ೦೦-೨೦); ಆರಮನೆಗೆ ಪ್ರಜಾಲೋಕಕ್ಕೆ . . . ಮೊಲಗಳ್ತಲೆಯನ್ನು ಕವಿಯಿಸಿ (ಮುಂತ್ರಶ. ೦೩೯-೨೯). [ ಮೊಲ, + ಕಟ್ಟಲೆ ]

**ಮೊಲಗಿವಿ**, ಮೊಲಕಿವಿ (ನಾ). ಮೊಲದ ಕಿವಿಯ ಆಕಾರದ ಎಲೆಗಳುಳ್ಳ ಒಂದು ಬಗೆಯ ಔಷಧೀಸಸ್ಯ : ವಿನುತಂ ಪೆರ್ಗುರುಟಿಗೆಯೆಂಬಿನ ಮೊಲಗಿವಿಯೆಂಬಿವಲ್ತೆ ಸಸ್ಯದೊಳ್ ಹಿತಂ (ಖವುಶ. ೭-೩೭). **ಮೊಲಕಿವಿ** : "ಶಶಕರ್ಣೀ—ಮೊಲಕಿವಿಗಿಡು" (೬ಶಂ. ೦೩೯); ಮೊಲಕಿವಿಗೆಡ್ಡೆಯಂ ನೀರಿಂದ ಅರೆದು ಪಾನ, ಲೇಪನಂಗಳ ಮಾಡಿಸಲು ಮೊಲದ ವಿಷ ಪರಿಹರವಹುದು (ವೈದ್ಯಸಾ. 11, ೨೦೯). [ ಮೊಲ + ಕಿವಿ$_2$ ]

**ಮೊಲಗಿವಿಗ** (ನಾ). = ಮೊಲಗಿವಿ : ಮೊಲಗಿವಿಗನ ಗೆಡ್ಡೆಯುಮಂ ಜಲದಿಂದರೆದದಱ ಪಾನ ಲೇಪಾದಿಗಳಿಂ ತೊಲಗುಗುಮಾಗಳೆ ತನುವಿಂ ಮೊಲನ ವಿಷಂ (ಖವುತ. ೦೩-೭೯). [ < ಮೊಲಗಿವಿ ]

**ಮೊಲನಾಗರ** 'ಮಲರೋಗ' ನೋ.

**ಮೊಲನಾಗರು** 'ಮಲರೋಗ' ನೋ.

**ಮೊಲಪಡಿ** (ನಾ). ಒಂದು ಸ್ಥಳದ ಹೆಸರು : ದಕ್ಷಿಣಂ ನೋಡಿ ವಟವೃಕ್ಷಮೆ ಮೊಲಪಡಿವ(ಯ) ವಟವೃಕ್ಷಮೆ ಕಡಸಿಗೆಮೊಱಡಿಯ (ಇಸಿ. VIII, ೨೦೪-೩೯; 10ನೆಯ ಶತ). [ ? ]

**ಮೊಲೆ$_1$** (ನಾ). ಹೆಂಗಸು ಅಥವಾ ಸಸ್ತನಿಪ್ರಾಣಿಯು ತನ್ನ ಮಗು ಅಥವಾ ಮರಿಗೆ ಹಾಲೂಡಿಸಲು ಉಪಯೋಗಿಸುವ ಅಂಗ; ಸ್ತನ : "ವಕ್ಷೋಜ ಕುಚ ಸ್ತನಮುಪಲಕ್ಷಿಸೆ ಮೊಲೆ" (ಪಸ್ತುಕೋ. ೬೮-೪) : ಮೊಲೆ ಪೊಣರ್ವೆಟ್ಟು ರೋಮಲತೆ ಬಟ್ಟೆ . . . ಮನ್ಮಥಾಸಿಳಶಿಖಿ ಬೇಗೆಯಾಗೆ ಮದನಾಟವಿಯಂತೆವೊಲೊಪ್ಪಿ ತೋಱಿದಳ್ (ಕಾವ್ಯಸಾ. ೬೦೨. ಕೂದ್ರಳ) ; ಗಿರಿಸುತೆಯ ಮೊಲೆಗಳಳ್ಳೇಱಿಂ ನೀರೇಱಿಸುತಿರೆ (ಕಂಶಶಾ. ೦೨-೦೩೯) ; ಮೊಲೆ ಮೂಡಿ ಬಂದರೆ ಹೆಣ್ಣೆಂಬರು (ದೇದಾವ. ೬೩-೦೩೩).

**ಮೊಲೆಬಿಡಿಸು** = ಮಗುವಿಗೆ ಎದೆಹಾಲು ಕೊಡುವುದನ್ನು ನಿಲ್ಲಿಸು : ಅನೇಕ ಮಕ್ಕಳು ಮೊಲೆಬಿಡಿಸುವ ಸಮಯದಲ್ಲಿ ಚಂಡಿಮಾಡುತ್ತವೆ (ರೂಢಿ). **ಮೊಲೆಬೀಳು** = ಸ್ತನಗಳು ಜೋತುಬೀಳು: ಇದರಲ್ಲಿ . . . ಕೈಗಡಿಕೆಯರು ಮೊಲೆಬಿದ್ದವರು ಮುದುಗುಂಟಣಿಗಳು (ಕೂರಣ. ೩-೨-೩೯). [ದೇ. ॥ ತಮಿ. ಮುಲ್ಲೈ; ಮಲ. ಮುಲ; ತುಳು. ಮಿರೆ; ಕೊಡ. ಮೊಲೆ; ಕೋತ. ಮೊಲ್ ]

**ಮೊಲೆ$_2$** (ನಾ). ಒಂದು ಬಗೆಯ ಸಸ್ಯ : "ಬಾಲಪುಷ್ಪಿಕಾ — ಮೊಲೆ, ರಸಾಂಜನ" (೬ಶಂ. ೦೦೮). [ ?./ತೆಲು. ಮೊಗಲಿ, ಮೊಗಿಲಿ ]

**ಮೊಲೆಕಟ್ಟು** 'ಮೊಲೆಗಟ್ಟು' ನೋ.

**ಮೊಲೆಕುಡಿ** (ಕ್ರಿ). ಎದೆಹಾಲನ್ನು ಕುಡಿ ; ಸ್ತನ್ಯಪಾನ ಮಾಡು : ಮೊಲೆಕುಡಿಯುವದನ್ನು ಬಿಡುವಷ್ಟೇ ವಯಸ್ಸುಳ್ಳ ಅವಳಿಮಕ್ಕಳನ್ನು . . . ವಾಲ್ಮೀಕಿಮುನಿಗಳಿಗೆ ತಂದುಕೊಟ್ಟಳು (ಉರಾತ. ೯೦). [ ಮೊಲೆ$_1$ + ಕುಡಿ$_1$ ]

**ಮೊಲೆಕುಡಿಸು** (ಕ್ರಿ). ಎದೆಯ ಹಾಲನ್ನು ಕುಡಿಸು ; ಸ್ತನ್ಯಪಾನ ಮಾಡಿಸು : ತಾಯಿ ನಿನಗೆ ಮೊಲೆಕುಡಿಸುತ್ತಿದ್ದಳು (ಮುಂಬಯಿ. ೦-೨೯). [ ಮೊಲೆಕುಡಿ + – ಇಸು$_3$ ]

**ಮೊಲೆಕೂಸು** 'ಮೊಲೆಗೂಸು' ನೋ.

**ಮೊಲೆಕೊಡು** 'ಮೊಲೆಗೊಡು' ನೋ.

**ಮೊಲೆಗಟ್ಟು**, ಮೊಲೆಕಟ್ಟು (ನಾ). ಹೆಂಗಸರು ಧರಿಸುವ ಒಳಕುಪ್ಪಸ : ಬೆಲೆಯಿಲ್ಲದ ಮುತ್ತುರತ್ನಂಗಳಡಸಿದ ಮೊಲೆಗಟ್ಟು ಕಾಸೆ ಕಾಲ್ಗೆಸೆವ ಸಲೆ ಶುದ್ಧ ಗೀತಚಾರಿಗೆ ಬಲುಬಿರುದಾಂತ ಕಲೆಯ ನರ್ತಕಿಯರೊಪ್ಪಿದರು (ಬೋಹಶ. ೨೦-೦೭); ಕಾಲ ಕುಪ್ಪಸ ಕಸೆ ಮೊಲೆಗಟ್ಟು ಜಡೆ ರತ್ನಕೀಲಣೆಗೆಲಸದೊಡ್ಯಾಣ (ಶರಶ. ೩೦-೮೦). **ಮೊಲೆಕಟ್ಟು** : ಜಡೆ ಕಾಲ್ಕುಪ್ಪಸ ಮೊಲೆ ಕಟ್ಟು . . . ಬೇಡೆಯಮೆಸೆಯುಲಸುರನ ಮುಂಗಡೆಯೊಳಿಯ್ದಿದರಂಗನೆಯರು (ಕುರಾಸಾಂ. ೦೮-೦೭); ಮೈದಿಲ ಸೆಱಗಿನ ಮೊಲೆಕಟ್ಟು ದುಗುಲದೊಳ್ಳಿದಿವ ನಿಱಿಗಾಸೆಯಿಂದ ಐದುಬನ ಮನದಾಸೆಗಳಂದದೊಳ್ಳೆದಿದರ್ಜಲಕೇಳಿಗಾಗ (ಕಂಸಪ. ೨೩-೦೦೮). [ಮೊಲೆ$_1$ + ಕಟ್ಟು$_2$]

**ಮೊಲೆಗುಡಿ** (ನಾ). ಎದೆಯ ತುದಿ ; ಕುಚಾಗ್ರ : ಮೊಲೆಗುಡಿಯೊಡನೆ ಕಕ್ಷಪುಟವಸಿತವಾಗೆ (ಸಿದ್ಧರಾ. ೦-೩೨). [ಮೊಲೆ$_1$ + ಕುಡಿ$_2$]

**ಮೊಲೆಗುಡು** 'ಮೊಲೆಗೊಡು' ನೋ.

**ಮೊಲೆಗೂಸು**, ಮೊಲೆಕೂಸು (ನಾ). ಎದೆಹಾಲು ಕುಡಿಯುವ ಮಗು ; ಹಸುಗೂಸು ; ಹಸುಳೆ : ಆ ಬಡಹೆಂಗಸು ಮೊಲೆಗೂಸನ್ನೂ ಬಿಟ್ಟು ಕೆಲಸಕ್ಕೆ ಬಂದಿದ್ದಾಳೆ (ರೂಢಿ). **ಮೊಲೆಕೂಸು** : ಮೊಲೆಕೂಸು ಮೊದಲು ಮಾಡಿಕೊಂಡು ಹೆಂಗಸರೂ ಹುಡುಗರೂ . . . . ನೋಡಿಯೇ ನೋಡಿದರು (ಬಿಟ್ಟಿಹೊ. ೩). [ಮೊಲೆ$_1$ + ಕೂಸು]

**ಮೊಲೆಗೆಲ** (ನಾ). ಎದೆಯ ಪಕ್ಕ ; ಸ್ತನಪಾರ್ಶ್ವ : ಕಸ್ತೂರಿಯಿಂದೆನ್ನಯ ಮೊಲೆಗೆಲದೊಳ್ ಪತ್ರಭಂಗಂಗಳಂ ಚಿತ್ರಿಸುವಂ (ಕಾದಂಬ. ೩೦೩); ಮೊಲೆಗೆಲದೊಳ್ ಕಸ್ತೂರಿಕಾಪತ್ರಭಂಗಮಂ ಚಿತ್ರಿಸಿಯುಂ (ಚಂದ್ರಕೃ. ೬-೬೩ ವ): ನೋಡಿದಳ್ ಕುಮರಿ ತನ್ನಯ ಮೊಲೆಗೆಲದಲ್ಲಿ ಮೂಡಿರ್ದ ಮೋಹನಗೆಱೆಯ (ಮೋಹಶ. ೨೩-೦೦). [ಮೊಲೆ$_1$ + ಕೆಲ$_1$]

**ಮೊಲೆಗೊಟ್ಟು** (ನಾ). = ಮೊಲೆಗುಡಿ: ಬೆಳರ ಮೊಗಂ ಮೊಲೆಗೊಟ್ಟನೊಳಿಸಿದಿರೆ ಕರ್ಪು . . . ಬೆಳದುದೆ(ದು) ಗರ್ಭಂ (ಕಇ. 1, ೨೩-೩೦ ; 1186). [ಮೊಲೆ$_1$ + ಕೊಟ್ಟು$_1$]

**ಮೊಲೆಗೊಡು**, ಮೊಲೆಕೊಡು, ಮೊಲೆಗುಡು (ಕ್ರಿ). ಎದೆಹಾಲನ್ನು ಕುಡಿಸು; ಸ್ತನ್ಯಪಾನ ಮಾಡಿಸು : ಇವನು ಗಡ ಚಿಕ್ಕಂದು ಮೊಲೆಗೊಟ್ಟವಳ ಹಿಂಡಿದ (ಕುವ್ಯಾಕ. ೦೦-೦೩); ದಾದಿಯರಬಲಂಗೆ ಮೊಲೆಗೊಟ್ಟು (ಮೋಹಶ. ೦೭-೨೯). **ಮೊಲೆಕೊಡು** : ದಿಟ್ಟ ಶ್ರೀಪುರಂದರವಿಠಲಗೆ ಮೊಲೆಕೊಡು ಬಾರೆ ಗೋಪಮ್ಮ (ಪುರಂದ. ೨-೦೭೯-೬). **ಮೊಲೆಗುಡು** : ಪಾರ್ಥನನೆತ್ತಿ ಮೊಲೆಗುಡುತುತನುನಯದಿ (ಕಂಶಶ. ೦೩-೮೭) ; ಚಂದ್ರಸುರಧೇನು ಕೂರ್ತು ಚಕೋರಪತ್ಸಗೆ ಮೊಲೆಗುಡಲು (ಮೋಹಶ. ೦೭-೩೩). [ಮೊಲೆ$_1$ + ಕೊಡು$_1$]

**ಮೊಲೆಗೊಳಿಸು** (ಕ್ರಿ). =ಮೊಲೆಗೊಡು: ಮೇಲುವ ಕೆಲಕಡೆಗೆ ಮಱಿಮಾಡಿ ಮುದ್ದಿಸಿ ಮೊಲೆಗೊಳಿಸಿ ತೂಪಿಱಿದು (ಕೂರಣ. ೬-೯೩-೨೮); ಮಾಯೆಯನೆ ಮೊಲೆಗೊಳಿಸಿ ಹಾಲ್ಗುಡಿಸಿ. ಈ ತಾಯಿ ಗಾಯತ್ರಿಮಂತ್ರಕ್ಕೆ ಭಾಷ್ಯ ಬರೆದವಳು (ಅರಳು. ೨೯-೯). [ಮೊಲೆ$_1$ + ಕೊಳ್$_1$ + – ಇಸು$_3$]

**ಮೊಲೆತುದಿ** 'ಮೊಲೆದುದಿ' ನೋ.

**ಮೊಲೆತೊಟ್ಟು** 'ಮೊಲೆದೊಟ್ಟು' ನೋ.

**ಮೊಲೆತೊರೆ** (ಕ್ರಿ). ಸ್ತನದಲ್ಲಿ ಹಾಲು ಚಿಮ್ಮಿಬರು : ತಾಯ್ಗಳುಮ್ಮಳಿಸಲಾಗದು ಕಱುಗಳಂ ಬಿಡಿರ ಬೇಗ ಮೊಲೆತೊರೆದು ಮಱುಗುವವು ಕಱುವಂ ಬಿಡಿರೆ (ಬಸರ. ೯-೦೦೭); ಅಳುವ ಕಂದನ ದನಿಯ ಕೇಳುತ ಮೊಲೆತೊರೆಯೆ (ಕಾಳ್ಗಾ. ೩-೦೩). [ಮೊಲೆ$_1$ + ತೊರೆ$_2$]

**ಮೊಲೆದಾಣ** (ನಾ). = ಮೊಲೆಗೆಲ : ನಿನ್ನೆಡೆಯೊಳಗೆಲ್ಲನಿತೂಣೆಯವಿಡಿದ ಕಾರ್ಯಗಳ ಕಾಣಿಸಿಕೊಂಡನಾದೊಡೆ ಕೇಳು ಮುಡಿ ಮೊಲೆದಾಣವ ನಿನಗಿತ್ತಲ್ಲ (ಕಂಸಪ. ೬-೦೬೮). [ಮೊಲೆ$_1$ + ತಾಣ]

**ಮೊಲೆದುದಿ**, ಮೊಲೆತುದಿ (ನಾ). = ಮೊಲೆಗುಡಿ : ತನ್ನೆಡಗೈಯ ಕೊನೆವೆರಳಿಂ ಬಲದ ಮೊಲೆದುದಿಯನುಂಕಿ ಕಡೆಗಣ್ಣಲಿ ಮೊಗವನಿರೆ ನೋಡ

. . . ನಲಿವ ಕಂದನನೆಂದು ಪಡೆದವೆನೋ (ಸಾಳ್ವಭಾ. ೩-೦೩) : ಲಲನೆ. . . ಮೊಲೆದುದಿಯೊಳಗಿಜಿದವನೆದೆಧೈರ್ಯವ ತೊಲಗಿಸುತಿರ್ದಳೇನೆಂಬೆ (ಕಂಶವಿ. ೬-೮೬). **ಮೊಲೆತುದಿ :** (೪). [ಮೊಲೆ$_1$ + ತುದಿ]

**ಮೊಲೆದೊಟ್ಟು**, ಮೊಲೆತೊಟ್ಟು (ನಾ). = ಮೊಲೆಗುಡಿ : ಆ ಮಗುವಿನ ಬಾಯೊಳು ಮೊಲೆದೊಟ್ಟು ಕಿತ್ತುಹೋಹಂದದಿ ತುಯ್ದು (ನೇಬಿಸಂ. ೦೩-೬೬); ತೊರೆದ ಸುಗ್ಗೂಲೆಯನೀಂಟುತೆ ಪೆಸರ್ಗಾಯದ ಬೆರಲೊಳು ಮೊಲೆದೊಟ್ಟ ಪಿಡಿದು ಮುರಳ್ದುಣೆ (ಪೋಹತ. ೦೭-೬೬). **ಮೊಲೆತೊಟ್ಟು :** ಮಗು ಮೊಲೆಯುಣ್ಣುವಾಗ ಮೊಲೆತೊಟ್ಟಿನ ರಕ್ಷಣೆಗಾಗಿ ಹಾಕುವ ಕಾಪು (Nipple. ೩೦೪೮). [ಮೊಲೆ$_1$ + ತೊಟ್ಟು$_1$]

**ಮೊಲೆನಾಗ** ' ಮಲರೋಗ ' ನೋ.

**ಮೊಲೆನಾಗರ** ' ಮಲರೋಗ ' ನೋ.

**ಮೊಲೆನಾಗರು** ' ಮಲರೋಗ ' ನೋ.

**ಮೊಲೆನೀರು**, ಮಲನೀರು, ಮಲ್ನೀರು (ನಾ). ಮದುವೆಯ ದಿನವಂದು ವಧು ಮತ್ತು ವರ — ಇವರಿಗೆ ಬೇರೆಬೇರೆಯಾಗಿ, ಅವರವರ ತಾಯಿ, ಅಕ್ಕ, ತಂಗಿ ಮೊದಲಾದ ಸುಮಂಗಲಿಯರೊಂದಿಗೆ ಚಪ್ಪರದಲ್ಲಿ ಕೂರಿಸಿ, ಅರಿಶಿನ ಬೆರಸಿದ ನೀರಿನಲ್ಲಿ ಮಾಡಿಸುವ ಮಂಗಳಸ್ನಾನ : ಮೊಲೆನೀರ ಮಿಂದವರೆಲ್ಲರೂ ಹೆಂಡತಿಯ ರಾಗಬಲ್ಲರೆ (ಅವಶಂ. ೨೪೬-೧೦೨೪); ಜಲದುಡಿಕೆಯ ತುಂಬಿ ಮೊಲೆನೀರ ಮಿಾವವರೆಲ್ಲರು ಅಮಲನ ಗುಣನೇಮವ ಮಾತಾಡಲೇಕೆ (ಕೋಲಶಾಂ. ೦೬-೨); ಮಗನ ಮದುವೆಯೊಳು ಮೊಲೆನೀರಿನೊಳು ಮೆಟ್ಟ ಮಿಗೆ ಹರುಷದಿ ಮಿಾಯಬೇಕು (ನೇಬಿಸಂ. ೦೯-೨೦೦); ಸುದತಿ ಮೊಲೆನೀರ ಮಿಾವಳು ಮಗನ ಮದುವೆಯಲಿ (ಸಾಳ್ವಭಾ. ೨೭-೪). **ಮಲನೀರು :** (ಎಕಪ್ಟ. VIII. ೪). **ಮಲ್ನೀರು :** ಆ ಅಲೆಗುರುಳಿನ ರಾಶಿಯನ್ನು ಆ 'ಮಲ್ನೀರಿ'ನ ದಿನವೇ ನೋಡಿ ಅನಂದಪಟ್ಟಿರಲಿಲ್ಲವೆ? (ಬಾಳಹೂ. ೯೬). [ಮೊಲೆ$_1$ + ನೀರು$_1$ (<ನೀರ್). P ಈ ಶಬ್ದಕ್ಕೆ ಸಂಬಂಧಿಸಿದಂತೆ ತಮಿಳು, ಮಲಯಾಳಂ, ತೆಲುಗು ಭಾಷೆಗಳಲ್ಲಿ ಜ್ಞಾತಿಶಬ್ದಗಳಿಲ್ಲ. ಆದರೆ ತಮಿಳಿನ 'ಮಣ್ಣುನೀರ್' (= ಸ್ನಾನಯೋಗ್ಯವಾದ ನೀರು), 'ಮಣ್ಣುಱು' (= ಸ್ನಾನ ಮಾಡಿಸು) ಎಂಬ ಶಬ್ದಗಳನ್ನು ಇದರೊಂದಿಗೆ ಹೋಲಿಸಬಹುದು]

**ಮೊಲೆಬರ್**, ಮೊಲೆಬರು (ಕ್ರಿ). ಸ್ತನಗಳು ಮೂಡು : ರಜನಿ ಕೃತಾಂಜಲಿ ಕಳವಿಗೆ ಬಜೆ ಗಂಧಕ ಪೂಪಮೆಂಜಿಮ ತಪೆ ತಿಲತೈಲಜಳ್ಳಾನಿತ ಘೃತದಿಂದುಬುಜಾಕ್ಷಿಯರ್ಗೆಜಿಯೆ ನಸ್ಯಮಂ ಮೊಲೆಬರ್ಕುಂ (ಲೋಕೋಪ. ೯-೦೭೦). **ಮೊಲೆಬರು :** ಗಜಪಿಪ್ಪಲಿಯನು ಅರಗು, ಬಜೆ ಸಹ ಮೊಸರು ಎಣ್ಣೆಯಲ್ಲಿ ಪೂಸಲು ಮೊಲೆಬರುವುದು (ವೈಸಿ. ೦೦೭).

[ಮೊಲೆ$_1$ + ಬರ್ (<ವರ್)]

**ಮೊಲೆಬರು** ' ಮೊಲೆಬರ್ ' ನೋ.

**ಮೊಲೆಬಾವು** (ನಾ). ಮೊಲೆಹಾಲು ಹೆಚ್ಚಾಗಿ, ಮೊಲೆಯು ಬಿರುಸಾಗಿ ಊದಿಕೊಳ್ಳುವ ಒಂದು ಬಗೆಯ ಬಾಣಂತಿರೋಗ : ಮಗುವಿಗೆ ಹಾಲು ಕೊಡುವುದರಿಂದ ಅಥವಾ ಹಿಂಡಿ ತೆಗೆಯುವುದರಿಂದ ಮೊಲೆಬಾವನ್ನು ಶಮನವಾಡಬಹುದು (ಕೂಂ). [ಮೊಲೆ$_1$ + ಬಾವು]

**ಮೊಲೆಮರಿ** (ನಾ). ತಾಯಿಯ ಹಾಲುಕುಡಿಯುವ ಮರಿ; ಎಳೆಯ ಮರಿ : ಈದಿಹ ಕೇಸರಿಯಾ ಹಲ ಮೊಲೆಮರಿಯಾ ಎಳೆತರುತವನಾಂ ಪಳಗಿಸುವೆ! (ಹಪ್ಪರ. ೦-೨). [ಮೊಲೆ$_1$ + ಮರಿ (< ಮಱಿ)]

**ಮೊಲೆಯುಣ್**, ಮೊಲೆಯುಣು, ಮೊಲೆಯುಣ್ಣು (ಕ್ರಿ). ಎದೆ ಹಾಲನ್ನು ಕುಡಿ ; ಸ್ತನ್ಯಪಾನ ಮಾಡು : ಬೆಸಕಯ್ವ ಪೆಂಡಿರ ಮೊಲೆಗಳಂ ಸೀರೆಯಿಂ ಕಟ್ಟಿಸಿ ಕೂಸುಗಳಂ ಮೊಲೆಯುಣಲೀಯದೆ ಬೆಸಕೆಯ್ಸುಗುಂ (ವಡ್ಡಾರಾ. ೦೭೦–೦೨); ಮೊಲೆಯುಂಬ ಭಾವ ತಪ್ಪಿ ಅಪ್ಪಿದವರ ತಲೆಯ ಕೊಂಬ ಕೂಡಲ ಸಂಗಮದೇವ (ಬಸವ. ೬೪೦); ಸಿಂಗದ ಮೊಲೆಯುಂಬ ಮಜಿಯಾನೆ . . . ಮುಂಗುಲಿಯೊಡನಾಡುವೆಳ ನಾಗನ ಕಂಡಂಗಜ ವಿಸ್ಮಿತನಾದ (ಪೋಹತ. ೬-೫೩). **ಮೊಲೆಯುಣು :** ಬಿನದದಿಂ ಮೊಲೆಯುಣುವ ತಾಯಾನನವ ಕಿಗ್ಗಣ್ಣಿಂದ ನೋಡುತ (ಸಾಳ್ವಭಾ. ೨೭-೪೭). **ಮೊಲೆಯುಣ್ಣು :** ಘನನಿತ್ಯತೃಪ್ತನಂ ಮೊಲೆಯುಣ್ಣನೆಂದು . . . ಅಳುವರಾ ಮಾತೆಪಿತರು (ಸಿದ್ಧರಾ. ೨-೦೦).

[ಮೊಲೆ$_1$ + ಉಣ್]

**ಮೊಲೆಯುಣಿಸು** (ಕ್ರಿ). ಮಗುವಿಗೆ ಎದೆಹಾಲು ಕುಡಿಸು. — ಸ್ತನ್ಯಪಾನ ಮಾಡಿಸು : ಒಮ್ಮೆ ಕಳುಹಿ ಕೊಡು; ಮುರಳುವೆನು ಮೊಲೆಯುಣಿಸಿ ಕಿರುಬಾಲನಾಣೆ (ಕುವ್ಯ. ೩೩-೯); ಮೊಲೆಯುಣಿಸಿದ ನಂತರ ಈ ಭಾಗವನ್ನು ಚೊಕ್ಕಟವಾಗಿ ತೊಳೆದು ಒರಸಲು ಅಸಡ್ಡೆ ಮಾಡಿದುದರಿಂದ ಹೀಗಾಗುವುದು (ಮಸಿಮ. ೭೬). [ಮೊಲೆ$_1$ + ಉಣಿಸು$_1$]

**ಮೊಲೆಯುಣು** ' ಮೊಲೆಯುಣ್ ' ನೋ.

**ಮೊಲೆಯುಣ್ಣು** ' ಮೊಲೆಯುಣ್ ' ನೋ.

**ಮೊಲೆಯೂಡು** (ಕ್ರಿ). = ಮೊಲೆಯುಣಿಸು : ಸುಕೌಸಳಸ್ವಾಮಿಯಂ ಮೊಲೆಯೂಡುವ ದಾದಿ ಸುಬ್ರತೆಯೆಂಬೊಳ್ (ವಡ್ಡಾರಾ. ೪೩.-೦೨); ಆ ಗೃಹಸ್ಥನ ಹೆಂಡತಿ ಸೆಜಿಂಗನಿಕ್ಕಿಕೊಂಡು ಮಗಂಗೆ ಮೊಲೆಯೂಡುವುದುಂ ಕಂಡು (ಶಂಕಶಂ. ೨೫೯-೩); ಈ ಮನೋಹರಕ್ರೀಡನನೆತ್ತಿಕೊಂಡು ಮೊಲೆಯೂಡಿದ . . . ಈ ಭುವತ್ಸತಿ ಯಶೋದೆ ಕುಲಕ್ಕೆ ಯಶೋದೆಯಲ್ಲಳೆ (ಜಗಂ. ೫-೬೪). [ಮೊಲೆ$_1$ + ಊಡು$_1$]

**ಮೊಲೆವಾಲ್**, ಮೊಲೆವಾಲು, ಮೊಲೆಹಾಲು (ನಾ). ಮಾನವಸ್ತ್ರೀ ಮತ್ತು ಸಸ್ತನಿಸ್ತ್ರೀಪ್ರಾಣಿಗಳ ಎದೆಯಲ್ಲಿ ಉತ್ಪತ್ತಿಯಾಗುವ ಹಾಲು ; ಎದೆಹಾಲು ; ಸ್ತನ್ಯ : ಮದಂ ಮದಮುನಾಳ್ದವಿವೇಕತೆಯಿಂದಮಲ್ತೆ ತೊಟ್ಟಿನ ಮೊಲೆವಾಲನುಂಡ ಗುಣಮಿಂತಿವನಾರ್ ಕಿಡಿಪರ್ ನರೇಂದ್ರರೊಳ್ (ಶಂಪಬಾ. ೦೨-೬೩); ಉಂಡ ಮೊಲೆವಾಲ ಪವಣಂ ಕೊಂಡು ಬಿಸುಟ್ಟೊಡಲ ಪವಣನಿದು ಪವಣೆಂದು (ಸುಕುಮಾ. ೬-೯) ; ಪಾದವೆ ತೊಟ್ಟಲ್ ರೇಣುವೆ ಬಾಯ್ದೀಣ್ಣೆ ಸವಿರುಚಿಯೆ ಮೊಲೆವಾಲ್ (ಚಾರ. ೬-೬). **ಮೊಲೆವಾಲು :** ಕಜುಪನಗಲಿಸಿ ತಾಯ ಮಜುಗಿಸಿ ಮೊಲೆವಾಲ ಕಜೆದುಣ ಬೇಡವೊ (ಬಸವ. ೯೯೯) ; ನಿಮ್ಮುವ್ವೆಯಾ ಮೊಲೆವಾಲ ಬಲುಹಿನಲಿ ರಾಯನೀ ಕ್ಷತ್ರಿಯನು (ಕುವ್ಯಾಕ. ೦-೩೩); ಹಸಿದತ್ತು ಮೊಲೆವಾಲಿಂಗೆ ಮೊಗಸುವಡಿದು ವಿಚಿತ್ರವಲ (ಕೂರಾ. ೦-೮-೬೪). **ಮೊಲೆಹಾಲು :** ಅಂಕೋಲೆಯ ಬೇರಂ ಮೊಲೆಹಾಲಲ್ಲಿ ತೇದು ಹಚ್ಚಲು ಕಣ್ಣುಹೂವು ಪೋಣ್ಗುಂ (ವೈಸಿ. ೦) ; ಸಾರಗದ ಕೊಂಬನ್ನು ಮೊಲೆಹಾಲಿನಲ್ಲಿ ತೇದು ಕದಡಿ ಸೇವಿಸಿದರೆ ದಾಹಜ್ವರ ಗುಣಮಕ್ಕುಂ (ಸಕಪ್ಪ. ೭೩). [ಮೊಲೆ$_1$ + ಪಾಲ್$_1$]

**ಮೊಲೆವಾಲು** ' ಮೊಲೆವಾಲ್ ' ನೋ.

**ಮೊಲೆವಿಡಿ** (ನಾ). ಮೊಲೆತೊಟ್ಟು ಒಳಗೆ ಸೇರಿಕೊಳ್ಳುವ ಒಂದು ಬಗೆಯ ಸ್ತನರೋಗ : ಕೊಗ್ಗಿಯಂ ತಂದು . . . ಇಕ್ಕಿ ಹಿಮ್ಮಡಗಲು ಮೊಲೆವಿಡಿ ಮಾಣ್ಗುಂ (ವೈಸಿ. ೦೯೯). [ಮೊಲೆ$_1$ + ಪಿಡಿ$_2$ ?]

**ಮೊಲೆವೆಱು** (ಕ್ರಿ). ಮೊಲೆಯನ್ನು ಹೊಂದಿರು ; ಹೆಣ್ಣುತನವನ್ನು ಪಡೆದಿರು ; ಹೆಣ್ಣಾಗಿರು : ನಿನ್ನಂ ಪೆತ್ತಳ್ ಮೊಲೆವೆತ್ತಳೆ ವೀರಜನನಿ ಪೆಸರಂ ಪೆತ್ತಳ್ (ಗದಾಯು. ೯-೩೩). [ಮೊಲೆ$_1$ + ಪೆಱು$_1$]

**ಮೊಲೆವೊಱು** (ಕ್ರಿ). = ಮೊಲೆವೆಱು : ಮೊಲೆವೊತ್ತ ತೈಲಜನನಿಯ ಕೆಲದೊಳ್ ರಂಜಿಪರೆ ಮಿಾಸೆವೊತ್ತಣ್ಣಂಗಳ್ (ಅಕ್ಷ. ೦-೬೫); ತೆಂಗಿನಕಾಯ ತೋರದ ಮೊಲೆವೊತ್ತ ಲತಾಂಗಿಯ ಬಂದುಗೆವಾಯ ರಂಗಿನ ಚೆಂದುಟಿ (ಪೋಹತ. ೦-೩೭). [ಮೊಲೆ$_1$ + ಪೊಱು]

**ಮೋಲೆಹಾಲು** 'ಮೋಲೆವಾಲ್' ನೋ.

**ಮೊಲ್ಲಾಗರ** 'ಮಲರೋಗ' ನೋ.

**ಮೊಲ್ಲೆ**, ಮಲ್ಲೆ (ನಾ). ಮಲ್ಲಿಗೆಯ ಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು: "ವಾಸಂತ್ಯಾ ಕುಂದಃ — ಈ ೨ ಮೊಲ್ಲೆ" (ನಾತಶಾ. ೧೧೬); ಫುಲ್ಲಶರಂಗಿಸುವೆಡೆಗಿದೆ ನಲ್ಲಂಬುಗಳೆನಿಸಿ ತುಱುಗಿ ಮಲರ್ದಲರ್ದೆಸೆವೀ ಮೊಲ್ಲೆಯುಮೊಲಿಸಿದ ನಲ್ಲರ ಲಲ್ಲೆಯುಮಾರಾರ ಮನಮುಮಂ ಸೋಲಿಸದೇ (ಆದಿಪು. ೧೧-೧೦೦); ಸರಸಿರುಹಂ ಸುರಗಿ ಮೊಲ್ಲೆ ಪೊಸಸಂಪಗೆಯಾ ಅರಲಿಂ . . . ಜಿನೇಶ್ವರನ ಪಾದಮಂ ಪೂಜಿಸಿದಂ (ರವರ್ಣಾಪ್ಯ. ೫-೩೭); ಇರವಂತಿಯ ಕಂಪು ಮೊಲ್ಲೆಯೊಂದುರವಣೆಗೆಂಪು ಮಲ್ಲಿಗೆಯ ಕಂಪು (ಗಂಳ. ೨-೭೦). **ಮಲ್ಲೆ**: ಪರಿಮಳವಾಂತ ಮಲ್ಲೆಯ ಮುಗುಳ್ಗಳೊಪ್ಪಿದುವು (ಕಂಸಪಿ. ೫-೯೬).

[ದೇ. ತಮಿ. ಮುಲ್ಲೈ; ಮಲ. ಮುಲ್ಲ; ತೆಲು. ಮೊಲ್ಲ]

**ಮೊಲ್ಲೆಗ** (ನಾ). ದಿಕ್ಕಿಲ್ಲದವನು; ನಿರ್ಗತಿಕ: ಮಲ್ಲಿಗೆಯ ಹೇಳವಧಿಯಂ ನಿಮ್ಮಲ್ಲಿಗೆಯ್ಮುಂದಿದ್ದೆನಲ್ಲಾ ಮೊಲ್ಲೆಯೇ ಹೇಳಿವಕೆ ಮೊಲ್ಲೆಗನಾದನೇಗುವೆನು (ಶಶಿ. ೯೫-೪೦). [ಮೊಲ್ಲೆ + -ಗ$_2$]

**ಮೊಲ್ಲೆಯ** (ನಾ). (?): "ಮೊಲ್ಲೆಯಂ ನಿಷ್ಪೂರವು" (ಕಶರ. ೦೨೯).

[ ? ]

**ಮೊಸರ್**, ಮೊಸರು, ಮೋರ್ (ನಾ). ನಸುಬಿಸಿಯಾದ ಹಾಲಿಗೆ ಹೆಪ್ಪುಹಾಕಿದ ನಂತರ ಉಂಟಾಗುವ ಗಟ್ಟಿಗೊಂಡ ಪದಾರ್ಥ; ದಧಿ: ನೆಲ್ಲುಂ ಮೊಸರುಂಗುಡಿದಂತಲ್ಲದೆ ತಲ್ಲಣಿಸಲಸದಿದು ಮೃದುಪದವಂ (ಕಬಿಂ. ೨-೪); ಪೆಸರ್ ನಿನಗೆ ಕೇಳ್ ಮೊಸರ್ (ಆದಿಪು. ೩-೭೦); ಹೆಪ್ಪಿಟ್ಟೊಡೆ ಪಾಲ್ ಮೊಸರಾಗಿಪ್ಪಂತಿರೆ ನಿರ್ಗಳಾಗಲರಿಗುಮೆ (ರವರ್ಣಾಪ್ಯ. ೧೦-೦೮೭). **ಮೊಸರು**: ಚಂದದೋಗರದೊಳಗೆ ಚಂದ್ರಿಕೆಯ ಹೊಸ ಹಳುಕಿನಂದದೆಪ್ಪೆಯ ಮೊಸರು. . . ಎಲ್ಲವನಿರಿಸಿ ಕಟ್ಟಿಕೊಟ್ಟಳು (ಸಿದ್ಧರಾ. ೨-೩೩); ಮೊಸರ ಮಾಜಲು ಪೋದರೆ ನಿನ್ನಯ ಕಂದ ಹೆಸರೇನೆಂದಲೆ ಕೇಳಿದ (ಕುರಂಡ. ೦-೯೦-೨): ಯಾವಾಗಲೂ ಮಜ್ಜಿಗೆ ಅಥವಾ ಮೊಸರು ಸೇವಿಸಲು ಮರೆಯದಿರಿ (ಆರುಶಾ. ೬೯); ಒಲ್ಲದ ಗುಡನಿಗೆ ಮೊಸರಲ್ಲಿ ಕಲ್ಲು (ಗಾದೆ). **ಮೋರ್**: ಸಾರತರೋಕ್ತಿಗೆ ನೆಲ್ಲುಂ ಮೋರುಂಗೋದಂತೆ ಸೇರಿ ಕಲ್ಪಾರ್ಪರವರ್ಗೋರೆ ನಿಬಂಧನಟೀಕಾಕಾರಂಗಲ್ಲದೆ ಪೆಜಂಗೆ ಕೋ[ಳ್ಪೋ]ದಪುದೇ (ಶಬ್ದಮಣಿ. ೦೦-೦೮೨). [ದೇ. ತಮಿ. ಮುಚರ್, ಮೋರ್; ಮಲ. ತೊದ. ಮೋರ್; ತುಳು. ಮೊಸರು; ಕೊಡ. ಮೋರೀ; ಕೋತ. ಮೊಚ್]

**ಮೊಸರಣ್ಕೆ** (ನಾ). (ಶುಭಕಾರ್ಯದಲ್ಲಿ ಬಳಸುವ ಮಂಗಳದ್ರವ್ಯಗಳಲ್ಲೊಂದಾದ) ಮೊಸರಿನ ಲೇಪನ: ರನ್ನದ ಕನ್ನಡಿವೆರಸು ಸರ್ವಧಾನ್ಯದ ನಡುವಿರೆ ಮೊಸರಣ್ಕೆವೆರಸಿದೆಳದಳಿರ್ಗಳಸಂ (ಆದಿಪು. ೪-೩೩): ಸಿರಿಗನ್ನಡಿ ಮೊಸರಣ್ಕೆವೆರಸಿದೆಳದಳಿರ್ಗಳಸಂಗಳ ಲೀಲೆವೆರಸಿ ದಂಪತಿಯಂ ಪೋ ಬರವೇಟಿಂಬ ತೆಱದಿಂ ಸೊಗಯಿಸಿದುದು (ಸುಕುಮಾ. ೦೦-೭೭ ರಗಳೆ); ಸರ್ವಧಾನ್ಯಂ ಮೊಸರಣ್ಕೆ ಕಱುಂಕೆ . . . ಕಣ್ಗೊಳಿಸುತಿರ್ದುವು (ಕೃಷ್ಣಪು. ೪-೭೯).

[ಮೊಸರ್ + ಅಣ್ಕೆ]

**ಮೊಸರನ್ನ** (ನಾ). ೧. ಮೊಸರಿನಲ್ಲಿ ಕಲಸಿದ ಅನ್ನ: ಸುನಂದ ಬರೀ ಮೊಸರನ್ನ ತಿಂದು ಹೊರಗೋಡಿ ಬಂದಿದ್ದಳು (ದೂಬೆಟ್ಟ. ೬); ಕತ್ತೆ ಮೊಸರನ್ನದ ರುಚಿ ಬಲ್ಲುದೆ? (ಗಾದೆ). ೨. ಮೊಸರಿಗೆ ಉಪ್ಪು, ಹಸಿ ಮೆಣಸು, ಒಗ್ಗರಣೆ ಮುಂತಾದುವನ್ನು ಹಾಕಿ ಕಲಸಿದ ಅನ್ನ: ಪ್ರಯಾಣಕಾಲದಲ್ಲಿ ತಿನ್ನಲು ಮೊಸರನ್ನ ಮತ್ತು ಪುಳಿಯೋಗರೆಯನ್ನು ಮಾಡಿಕೊಂಡು ಬಂದಿದ್ದೇನೆ (ರೂಢಿ).

[ಮೊಸರು (< ಮೊಸರ್) + ಅನ್ನ$_3$]

**ಮೊಸರವಲಕ್ಕಿ** (ನಾ). ಹಸಿಮೆಣಸಿನಕಾಯಿ, ಕೊತ್ತಂಬರಿಸೊಪ್ಪು, ಉಪ್ಪು ಮತ್ತು ಒಗ್ಗರಣೆಯೊಂದಿಗೆ ಮೊಸರಿನಲ್ಲಿ ಕಲಸಿದ ಅವಲಕ್ಕಿ: ಅಡಕೆಹಾಳೆಯ ಪೊಟ್ಟಣಗಳಿಂದ ಮೊಸರವಲಕ್ಕಿ . . . ಮೊದಲಾದ ತಿಂಡಿಗಳನ್ನು ರಾಮಚಂದ್ರನಿಗೆ ಕೊಟ್ಟರು (ಕಳಹು. ೫).

[ಮೊಸರು (< ಮೊಸರ್) + ಅವಲಕ್ಕಿ]

**ಮೊಸರು** 'ಮೊಸರ್' ನೋ.

**ಮೊಸರುತನ** (ನಾ). ಹಾಲು ಹೆಪ್ಪಾಗುವಿಕೆ, ಗಟ್ಟಿಯಾಗುವಿಕೆ: ಹುಳುಕುರೆಯ ಚೂರ್ಣವನು ನೀರಿಲ್ಲದೆ ಕಡೆದ ಮಜ್ಜಿಗೆಯುಲ್ಲಿ . . . ಇಕ್ಕಿ . . . ನೆನೆದ ಮಳಲಿನಲ್ಲಿ ಹೂಳುವುದು . . . ಹೊತ್ತಿನಿಂದ ಮೊಸರುತನವನೆಯ್ದುವುದು (ಲೀವತಿಸ. ೭). [ಮೊಸರು (< ಮೊಸರ್) + — ತನ]

**ಮೊಸರುಭೋಜನ** (ನಾ). = ಮೊಸರನ್ನ ೧: ರಾಮೇಶ್ವರಲಿಂಗ × × ಉದಯದ ಕಾಲದಲ್ಲಿ ಮೊಸರುಭೋಜನದ ನೈವೇದ್ಯ . . . ಕೊಟ್ಟ ಮಾನ್ಯ (ಎಕ. XI. ಹೊಳಲ್ಕೆ. ೭೩-೦೦; 1518).

[ಮೊಸರು (< ಮೊಸರ್) + ಭೋಜನ]

**ಮೊಸರುವಡೆ**, ಮೊಸರೊಡೆ (ನಾ). ಮೊಸರಿನಲ್ಲಿ ನೆನಸಿದ ವಡೆ; ತೈರುವಡೆ: ಮಧ್ಯಾಹ್ನದ ತಿಂಡಿಗೆ ಮೊಸರುವಡೆ, ಜಾಮೂನು ಮಾಡಿದ್ದ (ರೂಢಿ). **ಮೊಸರೊಡೆ**: ತಿಳಿದುಪ್ಪದಿಂದ ಬೆಂದೊಡೆಯ . . . ಮೊಸರಿನೊಳಗಿಕ್ಕಿ ಮೊಸರೊಡೆಯೆಂಬ ಹೆಸರಾಯ್ತು (ಸೂಶಾ. ೦-೭೦); ಶಿವಪೂವೇಟಿಯಲ್ಲಿ ಮೊಸರೊಡೆ ಕೊಂಡು ಹೊಟ್ಟೆತುಂಬ ತಿಂದ (ಕುಂಜಿಂ. ೭೩).

[ಮೊಸರು (< ಮೊಸರ್) + ವಡೆ]

**ಮೊಸರೊಡೆ** 'ಮೊಸರುವಡೆ' ನೋ.

**ಮೊಸರೋಗರ** (ನಾ). = ಮೊಸರನ್ನ ೧: ಪಸಿವನ್ನೆ . . . ಮೊಸರೋಗರವೆ ಸಾಲ್ವುದೆಮ್ಮ ದೇವಂಗೆ (ಬಸರ. ೭-೦೩೪); ಒಬಳ ಅಕಿ ಮೊಸರೋಗರ (ಕಾಇ. IX-i. ೭೭೬-೯; 1276). [ಮೊಸರ್ + ಓಗರ]

**ಮೊಸಗರ್ಗೂಟ್** (ನಾ). = ಮೊಸರನ್ನ ೧: ಮೊಸಗರ್ಗೂಟಂ ವಿಧಿಯಿಂದೆ ಸೂಸೆ ಭರದಿಂ ಬೀಟ್ಟಾಲಿಕಲ್ಲಂ ನಿವಾರಿಸುಗುಂ (ಲೋಕೋಪ. ೬-೦೦).

[ಮೊಸರ್ + ಕೂಟ್$_1$]

**ಮೊಸವೊಟ್ಟು** (ನಾ). ಮೊಸರಿನ ಹನಿ: ದೂರ್ವೆಯಿಂದಮೆ ಮೊಸವೊಟ್ಟನಿಟ್ಟು (ಶಾರ್ಙ್ಗಿಕೃ. ೩-೦೯). [ಮೊಸರ್ + ಬೊಟ್ಟು$_2$]

**ಮೊಸಳೆ** 'ಮೊಸಳೆ' ನೋ.

**ಮೊಸಳೆಮಡು** 'ಮೊದಳೆಮಡು' ನೋ.

**ಮೊಸಳೆಯರಸ** (ನಾ). ಒಬ್ಬಾತನ ಹೆಸರು: ಜಗಳೆ[ಪು]ಗದ ಮೊಸಳೆಯರಸರ ಪ × × × (ಕಾಇ. IX-i. ೩೦-೫; 966). [ಮೊಸಳೆ$_1$ + ಅರಸ$_1$]

**ಮೊಹತರ್ಫ** (ನಾ). ಅಂಗಡಿ, ಎಣ್ಣೆಗಿರಣಿ, ಮಗ್ಗ, ಮನೆ ಮುಂತಾದುವುಗಳ ಮೇಲೆ ಹಾಕುವ ಒಂದು ಬಗೆಯ ತೆರಿಗೆ; (ಕೃಸ್ಕೆಗ. II. ೫೫೭); (ಮೈಗೆಜ. IV. ೭೭೯).

[← ಪಾರ. ಮುಹತರಿಫಾ; ಮರಾ. ಮೋಹತರಫಾ, ಮೋಹತರ್ಫಾ]

**ಮೊಹಬತ್** 'ಮೊಹಬತ್ತು' ನೋ.

**ಮೊಹಬತ್ತು**, ಮೊಹಬತ್ (ನಾ). ಪ್ರೀತಿ; ಅಕ್ಕರೆ: ಮೊಹಬತ್ತಿನಿಂದ ಬರದು ಇದ್ದ ಕಾಗದ ಬಂದು ತಲಪಿ ಬಂದ ವಿವರ ಖುಷಿಯಿಂದಾ ತಿಳಿದು ಬಂದು (ರಾಜೇಂದ್ರ. ೦೪೪). **ಮೊಹಬತ್**: ಶಾವೂ ನನ್ನನ್ನು ಒಂದು ವಸ್ತಾ ಅಂತ ಮೊಹಬತ್‌ನಿಂದ ಕಾಪಾಡಿದ್ರಿ (ಮುಲ್ಲಾ. ೨೩೭).

[← ಅರ. ಹಿಂ. ಮುಹಬ್ಬತ್; ಮರಾ. ಮೋಹಬತ್]

**ಮೊಹರ** 'ಮೊಹರು' ನೋ.

**ಮೊಹರಂ**, ಮುಹರ್ರಮ್ (ನಾ). ಮಹಮ್ಮದೀಯ ವರ್ಷದ ಮೊದಲನೆಯ ತಿಂಗಳು ಮತ್ತು ಹಸನ್, ಹುಸೇನ್ ಎಂಬಿಬ್ಬರು ನಾಯಕರ ಸಾವಿನ ಪವಿತ್ರ ಸಂದರ್ಭದ ನೆನಪಿನಲ್ಲಿ, ಆ

ತಿಂಗಳಿನಲ್ಲಿ ಆಚರಿಸುವ ಹಬ್ಬ: ಆಲಾಬಿಹಬ್ಬ; ಬಾಬಯ್ಯನ ಹಬ್ಬ : ಒಂದು ಮಸೀದಿ ಇದೆ. ಹಾಗಿದ್ದ ಮೇಲೆ 'ಮೊಹರಂ' ಇರಬೇಡವೆ ? (ಶಾರುದಾ. ೯೦). **ಮುಹರ್ರಮ್** : 'ಮುಹರ್ರಮ್' ಎಂಬುದು ಮುಸ್ಲಿಂ ವರ್ಷದ ಮೊದಲನೇ ತಿಂಗಳಿನ ಹೆಸರು. ಅರಬ್ಬೀ ಭಾಷೆಯಲ್ಲಿ 'ಮುಹರ್ರಮ್' ಎಂದರೆ 'ಪವಿತ್ರ' ಎಂದು ಅರ್ಥವಾಗುತ್ತದೆ (ರಾಪುರಾ. ೯೨). [← ಅರ. ಹಿಂ. ಮುಹರ್ರಮ್; ಮರಾ. ಮೋಹರಮ್]

**ಮೊಹರಿ₁** ' ಮೌರಿ₁' ನೋ.

**ಮೊಹರಿ₂** ' ಮೊಹರು' ನೋ.

**ಮೊಹರಿ₃** ' ಮೋರಿ₂' ನೋ.

**ಮೊಹರು**, ಮೊಹರ, ಮೊಹರ್ರಿ₂, ಮೊಹರೆ, ಮೋಹರ್₂, ಮೋಹರ್ರಿ₂ (ನಾ). ೧. ಒಂದು ಬಗೆಯ ಚಿನ್ನದ ನಾಣ್ಯ : ಪಾಂಡವರಿಗೆ . . . ದಿವ್ಯಭೂಷಣಗಳನ್ನೂ ಒಂದೊಂದು ಲಕ್ಷ ಮೊಹರುಗಳನ್ನೂ ಒಬ್ಬೊಬ್ಬರಿಗೂ ಪ್ರೀತಿಪೂರ್ವಕವಾಗಿ ಕೊಟ್ಟನು (ಕೃವಾಕ. ೩೩೩); ಇತರ ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು. ಯಾವವೆಂದರೆ :– ೧ ಗಬರು . . . ೧ ಮೊಹರು, ೧ ಪುತಲಿ (ಐತ್ರಪಾ. ೦೦೪). ೨. ದಾಖಲೆ, ಪತ್ರ ಮುಂತಾದುವುಗಳ ಮೇಲೆ ಮುದ್ರಿಸಲು ಬಳಸುವ ಯಾವುದಾದರೂ ಲಾಂಛನವಿರುವ ಸಾಧನ, ಉಂಗುರ ಮುಂತಾದುವು ಮತ್ತು ಅವುಗಳಿಂದ ಒತ್ತುವ ಮುದ್ರೆ; ಉಂಡಿಗೆ ; ಶಿಕ್ಕಾ : ದಸಕತು ಮೊಹರು ಶ್ರೀಚಾಮರಾಜವಡೇರ ತನುಜ ಕೃಷ್ಣರಾಜವಡೇರು ಯೆಂಬುದಾಗಿ (ಎಕ. VI. ಕೊಪ್ಪ. ೪೬. ೩೭; 1811); ಬರೆದು ವಿಸ್ತರ ಪತ್ರಮಂ . . . ದುರುಳಂ ಮಡಿಚಿಕ್ಕಿ ಮುದ್ರೆಗೆಯ್ದುಂ ಮೊಹರಿಂ (ಶಂಪ್ರಶ್ಯ. ೦೩-೦೦೨); ಇವರ ತಾಮ್ರಪಟ್ಟಿಕೆಗಳ ಮೊಹರುಗಳ ಮೇಲೆ ಸಿಂಹಲಾಂಛನ ವಿರುತ್ತದೆ (ಕರ್ನಾಆ. ೬). **ಮೊಹರ** : ೧. ರಾಧೆಯು ಚಿನ್ನದ ಮೊಹರವನ್ನು ಫಕೀರನ ಕೈಗೆ ಕೊಡುವುದಕ್ಕೆ ಹೋದಳು (ದೌಲತ್. ೩); ರಾಜ ಒಡೆಯನು ಒಂದು ಮೊಹರವನ್ನು ತೆಗೆದು ಅಂಬಿಗನ ಕೈಗಿಟ್ಟು (ಶ್ರೀರಾಯ. ೯೩). ೨. ಕರಾರುನಾಮಾ ದಸ್ಕತು ಮೊಹರದಿಂದ ಬರೆದಲ್ಲಿ (ರಾಕೇಂದ್ರ. ೬); ರಾಕ್ಷಸನ ಮುದ್ರೆಯುಂಗುರದಲ್ಲಿ ಮೊಹರಮಂ ಮಾಡಿಸಿ ಕಳಿಸುವೆನು (ಕಗದ್ಯ. II. ೬). **ಮೊಹರ್ರಿ₂** : ೧. ತಿಂಗಳ ಬಡ್ಡಿ ಎಂಬುದಾಗಿ ಹದಿನೈದುರೂಪಾಯಿ ಮೊಹರಿಯನ್ನು ಕೊಟ್ಟು (ಕಥಾಮಂ. IV. ೪); ವಾಗೀಶನವರು ಕೊಡುವ ಮೊಹರೀ ಚಿಟ್ಟಿಯಿಲ್ಲದೇ ಮಾರುತ್ತದೆ (ಪುರಾಂ. ೦೬೨). **ಮೊಹರೆ** : ೧. ಸಹಸ್ರಚಿನ್ನದ ಮೊಹರೆಗಳನ್ನು ಕೊಡುವುದಾಗಿ ಡಂಗೂರ ಹೊಡೆಸಿದನು (ಶ್ರೀರಾಯ. ೦೩೨). **ಮೋಹರ್₂** : ೧. ಹನ್ನೆರಡುಲಕ್ಷ ಮೋಹರವನ್ನು ಭದ್ರಭಟಾದಿಸೇನಾನಾಯಕರಿಗೆ ಕೊಡುವಂತೆ . . . . ಹುಂಡೀಕಾಗದಮಂ ಬರೆಸಿ (ಮುದ್ರಾಮಂ. ೨೯೦). ೨. ಸಿದ್ಧಾರ್ಥಕನು ಆ ಕಾಗದದಲ್ಲಿ ಒತ್ತಿರುವ ಮೋಹರದ ಪ್ರಕಾರ ಸುವರ್ಣಾದಿಂ ಮುದ್ರೆಯ ಮಾಡಿಸಿ (ಮುದ್ರಾಮಂ. ೨೯೩). **ಮೋಹರ್ರಿ₂** : ೧. ಬೊಕ್ಕಸಗಳು ಹಣಗಳು ವರಹಗಳು ಮೋಹರಿಗಳು ನವರತ್ನಗಳು (ಶಿವರ. ೦೦೩-೪).

**ಮೊಹರುಮಾಡು**, **ಮೋಹರುಮಾಡು** = ಲಕೋಟೆ, ಭರಣಿ, ಬಾಗಿಲು ಮುಂತಾದುವನ್ನು ತೆರೆದು ನೋಡದಂತೆ ಅರಗು ಅಂಟಿಸಿ ಅದರ ಮೇಲೆ ಮುದ್ರಿಕೆಯನ್ನು ಒತ್ತು : ಬರೆದಂಥ ಕಾಗದವ ಮೊಹರುಮಾಡ್ಯಾರೆ (ಪಾಶರ. ೦೬೬) : ಬರೆದು ಮೊಹರುಮಾಡಿ ಕುಮುದಿನಿಯ ಕೈಲಿ ಕೊಟ್ಟುಹೋಗುತ್ತೇನೆ (ಬಂಕಿಮ. ೦೨೨); ಈ ಮುಂಜೂಷಮಂ ಮೋಹರುಮಾಡು (ಮುದ್ರಾಮಂ. ೩೦೭).

[← ಪಾರ. ಮುಹರ್; ಹಿಂ. ಮೋಹರ್ ; ಮರಾ. ಮೋಹರ್, ಮೋಹೋರ್]

**ಮೊಹರೆ** ' ಮೊಹರು ' ನೋ.

**ಮೊಹರೆಯಕೊಳ** (ನಾ). ಒಂದು ಕೊಳದ ಹೆಸರು : ಉತ್ತರಸ್ಯಾನ್ದಿಶಿ ರಜಪನ್ತ ಅನ್ತೆ ಬನ್ದು ಮೊಹರೆಯಕೊಳ (ಎಕ. XVI. ತಿಕಟೂ. ೦೪೦-೭೦ ; 900). [ಮೊಹರೆ, + ಕೊಳ್ಳ]

**ಮೊಹರ್ಚು** ' ಮೋರ್ಚೆ ' ನೋ.

**ಮೊಹರ್ಚೆ** ' ಮೋರ್ಚೆ ' ನೋ.

**ಮೊಹಲ್ಲ** ' ಮೊಹಲ್ಲಾ ' ನೋ.

**ಮೊಹಲ್ಲಾ**, ಮೊಹಲ್ಲ, ಮೊಹಲ್ಲೆ (ನಾ). ಊರಿನ ಒಂದು ಭಾಗ : ಬಡಾವಣೆ ; ಹರಹು : ಪಟ್ಟಣವನ್ನು ಮೊಹಲ್ಲಾಗಳಾಗಿ ಭಾಗಮಾಡಿ . . . ಅಧಿಕಾರಿಯನ್ನು ನೇಮಿಸಿದ್ದರು (ಇತ್ಯಾಂಸಂ. ೯೦); ನರಸಿಂಹರಾಯ ಠೋರಿಯನೂ ಕೂಡ ದಾಕ್ಷಿಣೀಯರ ಮೊಹಲ್ಲಾದಲ್ಲಿ ಒಂದು ಅಖಾಡವನ್ನು ತೆರೆದನು (ಘರಾಜ. ೧೬೦). **ಮೊಹಲ್ಲ** : ಒಂದೊಂದು ಜಾತಿಗೂ ಪ್ರತ್ಯೇಕ ಅಗ್ರಹಾರಗಳೂ ಮೊಹಲ್ಲಗಳೂ ಏರ್ಪಟ್ಟಿರುವುದನ್ನು ಇಂದಿಗೂ ನೋಡಬಹುದು (ಶಿಕ್ಷದ. ೬೨). **ಮೊಹಲ್ಲೆ** : ನಮ್ಮ ಮೊಹಲ್ಲೆಯಲ್ಲಿ ಒಂದು ಕಡೆ ಇವತ್ತು ಆಟವಾಡುತ್ತಾರೆ ಎಂತ ಕೇಳಿದೆ (ಕಮಕ. ೦೭೦).

[← ಅರ. ಮಹಲ್ಲಾ; ಹಿಂ. ಮುಹಲ್ಲಾ; ಮರಾ. ಮೊಹಲ್ಲಾ]

**ಮೊಹಲ್ಲೆ** ' ಮೊಹಲ್ಲಾ ' ನೋ.

**ಮೊಹಸಲೆ**, ಮೋಹಸಲೆ (ನಾ). ಒಬ್ಬ ವ್ಯಕ್ತಿಯು ತಪ್ಪಿಸಿಕೊಂಡು ಹೋಗದಂತೆ ಹಾಕುವ ನಿರ್ಬಂಧ ಅಥವಾ ಒಬ್ಬ ವ್ಯಕ್ತಿಯು ಕೊಡಬೇಕಾದ ಹಣದ ವಸೂಲಿಗಾಗಿ ಅವನ ಮೇಲೆ ವಿಧಿಸಲಾಗುವ ನಿರ್ಬಂಧ : (೬). **ಮೋಹಸಲೆ** : ಸಾಗುವಳಿ ಸಪ ಮಾಡತಕ್ಕದ್ದಕ್ಕೆ ಶೇಕದಾರ ಗೌಡ ಶ್ಯಾನುಭೋಗರಿಗೆ ಸಹ ಮೋಹಸಲೆ ಮಾಡಿ (ಮಹಾಮಂ. II. ೬೪). ' ಮಹಸೂಲು ' ಪರಾ.

[ ← ಅರ. ಮುಹಸ್ಸಿಲ್ = ಕಂದಾಯ ವಸೂಲುಮಾಡುವವನು ; ಹಿಂ. ಮುಹಸಿಲ್ = ಕಂದಾಯ ವಸೂಲುಮಾಡುವವನು]

**ಮೊಹಿಮ್ಮು**, ಮೋಹಿಂ, ಮೋಹಿಮು, ಮೋಹೀಮ್ (ನಾ). ದಾಳಿ ; ಮುತ್ತಿಗೆ ; ಆಕ್ರಮಣ : ತರುವಾಯ ಯಿಾ ಮೊಹಿಮ್ಮು ಮೂರುವರುಷ ಪಟ್ಣದ ಖಜಾನೆಹಣವೆಲ್ಲಾ ವೆಚ್ಚವಾಗಿ (ಕೃದರ. ೩೩). **ಮೋಹಿಂ** : ಹನುಮಂತರಾವ್‌ರಣಸವರೆ ಎಂಬ ಒಬ್ಬ ಸವಾರನು . . . ಅನೇಕ ಮೋಹಿಂಗಳ ಸಂಗಡ ಹೋಗಿ ಒಂದೊಂದರಲ್ಲಿಯೂ ಖಾಡಾಖಾಡಿ ಲಡಾಯಿ ಮಾಡಿ . . . ತುಕಡಿದಾರ ಪದವಿಗೆ ಬಂದಿದ್ದನು (ಮುಸುಗ. ೦೩); ಈ ಜನರು ಈ ಬಗೆಯಾದ ಮೋಹಿಂ ಹೊರಡುವುದಕ್ಕೆ ಕೆಲವು ದಿವಸ ಮುಂಚೆ ಇನ್ನೊಂದು ಕೆಲಸವನ್ನು ಮಾಡುತ್ತಿದ್ದರು (ವಾಮುರಾ. ೯೬). **ಮೋಹಿಮು** : ಮೂರುಮಂದಿ ಪಾದುಷಹರ ಸೈನ್ಯವೂ ಕರ್ನಾಟಕರಾಜ್ಯದ ಮೇಲೆ ಮೋಹಿಮು ಹೊರಡಲಿರುವ ಸಮಾಚಾರವನ್ನು . . . ಬರೆಸಿ ಕಳುಹಿಸಿದನು (ಐನ್ಯರು. ೬). **ಮೋಹೀಮ್** : ಜ್ಯೇಷ್ಠಮಾಸದಲ್ಲಿ ಮೋಹೀಮ್ ಹೊರಡುವ ವೇಳೆಯಲ್ಲಿ ಶ್ರೀರಂಗಪಟ್ಟಣದಲ್ಲಿ ಗಣನೆಮಾಡಿದ ಒಟ್ಟು ಫೌಜಿನ ಜನಗಳು ೨,೨೬,೦೦೦ ಕ್ಕೆ ವಿವರ (ಮಹಾಮಂ. I. ೨೨೬).

[← ಅರ. ಹಿಂ. ಮುಹಿಮ್; ಮರಾ. ಮೋಹಿಮ್, ಮೋಹೀಮ್]

**ಮೊಳ** ' ಮೊಟಿ ' ನೋ.

**ಮೊಳಕಯ್** ' ಮೊಟಿಕೆಯ್ ' ನೋ.

**ಮೊಳಕಾಲ್** ' ಮೊಟಿಕಾಲ್ ' ನೋ.

**ಮೊಳಕಾಲು** ' ಮೊಟಿಕಾಲ್ ' ನೋ.

**ಮೊಳಕೆ** (ನಾ). ೧. ಬೀಜದಿಂದ ಹೊರಬರುವ ಗಿಡದ ಮೊದಲನೆಯ ಸುಳಿ ; ಅಂಕುರ : ಕುಡಿ : "ಮೊಳಕೆಯೆನಲ್ಕಂಕುರ" (ಶಾರಶ. ೩೭) ; ಪಾಂಚಾಲಕನ ಭೀತಿಯ ಮೊಳಕೆಯುರಿದುದು (ಕುವ್ಯಾಆ. ೦೬-೪) ;

ಮೊಳಕೆ ಮೂಡದ ಬೀಜ, ಜ್ವಾಲೆ ವಿಾರಿದ ತೇಜ (ಅರಳು. ೦೬೨-೦೦). ೨. (ಆಲಂ) ಪ್ರಾರಂಭ : ಕ್ರಾಂತಿಯ ಮೊಳಕೆಯು ತುಳಿಯಲೇಬೇಕು (ಕರಿತೋ. ೦೫-೯).

**ಮೊಳಕೆಕಟ್ಟಿದ ಕಾಳು** = ಹೆಸರು ಮುಂತಾದ ಕಾಳುಗಳನ್ನು ನೆನೆಸಿ, ನಂತರ ಬಟ್ಟೆಯಲ್ಲಿ ಕಟ್ಟಿ ಮೊಳಕೆ ಬರಿಸಿರುವ ಕಾಳು : ಮೊಳಕೆಕಟ್ಟಿದ ಕಾಳಿನಲ್ಲಿ ಮಾಡಿದ ಪದಾರ್ಥಗಳು ದೇಹಕ್ಕೆ ಪುಷ್ಟಿಕರ (ಕೂಂ).

[ಮೊಳೆ$_1$ + — ಕೆ./ ತುಳು. ಮೊಳಿಕೆ ; ತೆಲು. ಮೊಲಕ, ಮೊಲ್ಕ, ಮೊಕ್ಕ]

**ಮೊಳಕೆಗಾಣು** (ಕ್ರಿ). ಅಂಕುರಿಸು ; ಕುಡಿಯೊಡೆ : ಅಜ್ಜ ಬಿತ್ತಿದ ಬೀಜ ಮೊಳಕೆಗಂಡಿವೆ ಈಗ (ನಂವು. ೨೨-೦೫). [ಮೊಳಕೆ + ಕಾಣು (< ಕಾಣ್)]

**ಮೊಳಕ್ಕೈ** 'ಮೊಟಕೆಯ್' ನೋ.

**ಮೊಳಗಾಡು** (ಕ್ರಿ). ಧ್ವನಿಯು ಹೊಮ್ಮು : ದೇವಕುವರಂ ಮುರಳಿ ಬಹನೆಂಬ ಗೆಲುವಿಂದ ದೇವದೂತರೆ ಬಾರಿಸುವರೊ ಮಂಗಲವಾದ್ಯವೆನಲು ಮುಂಬಕ್ಕಿಗಳ ಮೇಳವಂ ಮೊಳಗಾಡೆ (ಗೂರ್ತ್ನಾಥಾ. ೦-೯).

[ಮೊಳಗು$_2$ (< ಮೊಟಗು$_2$) + ಆಡು$_1$]

**ಮೊಳಗಿಸು** 'ಮೊಟಗಿಸು' ನೋ.

**ಮೊಳಗು$_1$** 'ಮೊಟಗು$_1$' ನೋ.

**ಮೊಳಗು$_2$** 'ಮೊಟಗು$_2$' ನೋ.

**ಮೊಳಗು$_3$** 'ಮೊಟಗು$_3$' ನೋ.

**ಮೊಳವು** (ನಾ). ಒಂದು ಬಗೆಯ ಬೆಲೆಬಾಳುವ ಹರಳು (?) : ಮಾರಿದಡಂ ಹೊಂಗೆ ಹಾಗ ಮೊಳವಿನ ಕಲ್ಲಿಗೆ ವೀಸವೊಂದು ಉಪ್ಪಿನ ಹಡಗೆಗೆ ಪೊಂಸುಸವುಪ್ಪು (ಶಾಇ. XV, ೨೦೦-೯೬ ; 1196). [?]

**ಮೊಳಸಂದು, ಮೊಣಸಂದು** (ನಾ). ಮೊಳಕೈ : ಅಗಲವಾದ ಬಿಳಿಚು ಹಣೆಯ ಮನುಷ್ಯನೊಬ್ಬ ಮಂಡಿಯ ಮೇಲೆ ಮೊಳಸಂದೂರಿಕೊಂಡು ಕುಳಿತಿದ್ದನು (ಶುಪರು. ೨೩೦). **ಮೊಣಸಂದು** : ಎಡಗೈ ಮೇಲೆ ಬಲದೋಳ ಮೊಣಸಂದನ್ನೂರಿಕೊಂಡು, ಬಲಗೈ ಮೇಲೆ ಕೆನ್ನೆಯೊರಗಿಸಿ ಕೊಂಡು ಮುಂದುಕಿ ಅವನೆದುರಿಗೆ ನಿಂತುಕೊಂಡಳು (ಶುಪರು. ೨೬೩)

[ಮೊಳ (< ಮೊಟ) + ಸಂದು$_2$]

**ಮೊಳಸು$_1$** (ನಾ). ೧. ಮೊಳಕೆಯೊಡೆಯುವಿಕೆ; ಅಂಕುರಿಸುವಿಕೆ : (೬). ೨. ಗಂಟಲಿನಲ್ಲಿ ಏಳುವ, ಮುಳ್ಳಿನಂತೆ ಚೂಪಾಗಿರುವ ಗುಳ್ಳೆ : ಅಂತಕಗಾಯ್ತುಪಥ್ಯವು ಅರಗಲಾಜದೆ ಮೃತ್ಯುದೇವಿಗೆ ಮೊಳಸುಗಳು ಪೊಳೆಯೆ . . . ಅಡಗುಬೋನದಿ ಮರುಳುಪಡೆಗಳು ಉಂದು ಹರಸಿದ ವಂದು ರಾಘವನ (ಕೌಶಲ. ೨೨-೯೯). [ಮೊಳೆ$_1$ + — ಸು$_3$]

**ಮೊಳಸು$_2$** (ನಾ). ೧. ಒಂದು ಬಗೆಯ ವಾದ್ಯ (?) : ಪಟಿವದ ತಿವಳಿಯ ಜಾಂಕದ ಮೊಳಸಿನ ಜೇಕಿರದ ಸಿವಿಜಿ ಸಿಪ್ಪಿನ ಲಯದಿಂದೆ ಬಲದೆ ಕುಣಿವರ್ ಕೆಲಬರ್ (ಅಜಿತ. ೫-೩೦). ೨. ಮಲ್ಲ ಯುದ್ಧದ ಒಂದು ಚಲನೆ (?) : ಮೇಲ್ಮುಳಿ ಮೊಳಸು [ಪಾಶಾಂ. ಗು, ಹು]ಗಳ ಮಂಡಿಗಳ . . . ಜೊಬ್ಬೆಗಳೆಳೆಯೊಳವರಿವರ್ಗಿಗೆ ಸಮಜೋಳಿ ಗಳದುರೆಂದ (ಕೃಪಾ.ಕಾ. ೨೦-೬). [ ? ]

**ಮೊಳಿಯನೂರ್** (ನಾ). ಒಂದು ಸ್ಥಳದ ಹೆಸರು : ಮೊಳಿಯನೂರ ದೇವಯ್ಯನುಂ ಪಂಪಯ್ಯನುಂ . . . ಧರ್ಮ್ಮರಾಶಿಭಟಾರರ ಕಾಲಂ ಕರ್ಚ್ಚಿ ಕೊಟ್ಟ ಸ್ಥಿತಿ ಯಾವುದೆನ್ಲೊಡೆ (ಎಕ. XI, ಚಿತ್ರದು. ೭೭-೨೦ ; 937).

[ ? + ಊರ್]

**ಮೊಳೆ$_1$** (ಕ್ರಿ). ೧. ಚಿಗುರು ; ಕೊನರು ; ಅಂಕುರಿಸು : ಮೊಳೆ— ಪ್ರರೋಹಕ್ರಿಯಾಯಾಂ (ಅಂಕುರಿಸು), ಅಂಕುರೇ ಚ" (ಶಮದಾ) ; ಪೊಸತೆ ಮೊಳೆತ ಧಾನ್ಯಂಗಳನಾ ಧರಣೀಶಂ ಕೆವಜಿಸಿದಂ (ಆದಿಪು. ೦೫-೭) ; ಬೀಜವಿಲ್ಲದೆ ಮೊಳೆತ ಸಸಿಯನಾವಂ ಬಲ್ಲಂ (ಸಿದ್ಧರಾ. ೦-೯೭) ; ಹುರಿದು ಬಿತ್ತಿದ ಬೀಜ ಮೊಳೆವುದೆ (ಶರತ. ೨-೩೩). ೨. (ಉಗುರು, ಕೂದಲು ಮುಂತಾದುವು) ಮೂಡು; ಹುಟ್ಟು; ಕಾಣಿಸಿಕೊಳ್ಳು : ಪೊಳೆವಿಂದುಗಳ್ಕೆ ಬೆಂಗುಡೆ ಮೊಳೆದುವು ಬೆನ್ನಿಂದಮೆರ್ದೆಗೆ ಕದಿರ್ದುಟಿಗಳ್ ತೊಳಗಿದುವು ಮದನಶಿಖಿವಿಹ್ವಳಹೃದಯವ್ಯಸ್ತಹಸ್ತನಖದೀಧಿತಿಗಳ್ (ಆದಂಪು. ೯೦೭); ಸತ್ಯಹರಿಶ್ಚಂದ್ರರಾಯನ ವಾಕ್ಯದೊಳು ಹುಸಿಗಳು ಮೊಳೆಯವು (ಹತಕಾ. ೨-೧೯); ಬೆಸಡು ಮೊಳೆತುದು ಭೀಷ್ಮ ವಿದುರಾದಿಗಳ ಮನದಲಿ (ಸಂಭಶ. ೦೮-೫೯); ಅವನಿಗೆ ಮಿಾಸೆ ಕೂಡ ಮೊಳೆತಿಲ್ಲ (ಅಂಶೂ. ೨೦).

[ದೇ.II ತಮಿ. ಮುಳೈ; ಮಲ. ಮುಳ; ತುಳು. ಮುಳಿ, ಮುಳೆ, ಮೊಳಿ, ಮೊಳೆ; ತೆಲು. ಮೊಲಚು, ಮೊಲುಚು, ಮೊಲ್ಚು]

**ಮೊಳೆ$_2$** (ನಾ). ೧. ಕುಡಿ: ಮೊಳಕೆ : "ಅಗೆಯೆಂದುಂ ಮೊಳೆಯೆಂದುಂ ಅಂಕುರಂ" (ಶಶಸಾ. ೫೫-೦೯೫); ಶುದ್ಧಗರ್ಭಗೃಹದೊಳ್ ತೇಜೋನಿಲಯಂ ಬೆಳಗಿದನಜೀವಿನ ಬೆಳಗಿನ ಮೊಳೆ ಮೊಳೆತು ಬೆಳೆವುದೊಂದಚ್ಚರಿಯೆ? (ಆದಿಪು. ೭-೩೩); ವಿರಕ್ತಿ ಬೀಡಾಗಿ ಭಕ್ತಿ ಮೊಳೆಯಾಗಿ . . . ನಿಮ್ಮ ಭಕ್ತನ ಮನೆಯಂಗಳ ವಾರಣಾಸಿಯಿಂದಧಿಕ ನೋಡಾ (ಬಸವರೇ. ಶಿ. ೭೦-೦೭೩); ಬಿಲ್ಲಿನಿ ಮೊಳಗು ಕೆನ್ನೀರ್ಜಲ ಪೆಣ ಬಿತ್ತು ನೆಣ ಮೊಳೆಯಾಗೆ ರಣಭೂಮಿ. . : ಮೊಟಿತಿದುದು (ಕುರಾಶಾಂ. ೦೨-೭೩); ಬೆಳೆಯ ಗುಣ ಮೊಳೆಯಲ್ಲಿ ಕಾಣುವುದು (ಪಾನಸಾ. ೩೯). ೨. ಮೂಲವ್ಯಾಧಿಯಲ್ಲಿ ಗುದಪ್ರದೇಶದಲ್ಲಿ ಮೊಳಕೆಯಾಕಾರದಲ್ಲಿ ಕಾಣಿಸಿಕೊಳ್ಳುವ ದುರ್ಮಾಂಸ : ಚಿತ್ರಕಮಂ ಗೋಜಲದೊಳ್ ಕುಡಿದಳೆಗೂಟುವೆ ಕೆಲವು ದಿವಸಕ್ಕೆ ಕಡುಗುಮರುಸೆಯ ಮೊಳೆಗಳ್ (ರೋಕರೋಶ. ೯-೦೯೩); ಮೂಲವ್ಯಾಧಿಗೆ:—ಭೂಚಕ್ಕಗೆಡ್ಡೆ . . . ಹೊಗೆಯನ್ನು ಆಸನಕ್ಕೆ ಹಿಡಿದರೆ ಮೊಳೆ ಕರಗಿ ಹೋಗುವುದು (ಬಿವೈಶಿ. ೦೭೭). ೩. ಮೊಡವೆ ಮೊದಲಾದ ಗುಳ್ಳೆಗಳ ತುದಿ : ಮೊಡವೆಯ ಮೊಳೆಯನೊತ್ತುತ ಕಕ್ಷಸೊನೆಬಿಮರ್ವಡಿವ ಸೊಗದ ವಾಸಿಸುತ . . . ಪುಷ್ಟಿಣಿಯರೊಪ್ಪಿದರು (ಮೋಪತ. ೧೬-೫೨). ೪. (ಪಟ ಮುಂತಾದುವುಗಳನ್ನು ನೇತುಹಾಕಲು ಬಳಸುವ) ಒಂದು ತುದಿ ಅಗಲವಾಗಿಯೂ ಮತ್ತೊಂದು ತುದಿ ಚೂಪಾಗಿಯೂ ಇರುವ ಲೋಹದ ಉಪಕರಣ; ಆಣಿ : ನಡುವಮೊಳೆಯುಂ (ಸವುಪ. ೦೨-೫೪); ಬೆಟ್ಟದ ಬೆಳ್ಳಿಯ ಮೊಳೆಗಳೆನಲು ತೊಳಗಿ ಬೆಳಗಿದುವು ತಾರಗೆಗಳ್ (ಜಗಂ. ೦೭-೯೯); ಮಿಳಿ ನೊಗನು ಕೀಲಚ್ಚು ಕೂಬರ ಬಳೆ ಮೊಳೆಯನಾರ್ಯದು ಹರೆಯಸು ಬಳಿದು ಹೂಡಿದರು (ಕೊರಂಶಾ. ೫-೭-೫). ೫. ಗಾಡಿಯ ಚಕ್ರಕ್ಕೆ ಸಿಕ್ಕಿಸುವ ಗೂಟ; ಕಡಾಣಿ : ಹರಿಯ ಗಾಲಿಯ ನಾಭಿ ಮೂಜುಕ್ತಿರಿಯ ಚಾತುರ್ಮಾಸಗಳು. . . ವಿದ್ವತ್ಸರವು ವತ್ಸರವೆನಿಪ ಮೊಳೆಯಾಯ್ತು (ಕುವ್ಯಾಕ. ೭-೭೩). ೬. ನಾಣ್ಯ ಮುಂತಾದ ಲೋಹವಸ್ತುಗಳ ಮೇಲೆ ಅಕ್ಷರಗಳನ್ನು ಕೊರೆಯುವ ಚೂಪಾದ ಸಾಧನ : ಪೃಥ್ವಿಯೊಂಬುದು ಕರ್ತಾರನ ಕಮ್ಮಟ ಅಚ್ಚಿನ ಮೊಳೆ ಬಾಣಸದ ಮನೆ (ಅವಶಂ. ೨೨೯-೦೦೦೫); ಚಿನ್ನಗೆಯ್ಯದ ನವಿರಂಗಳುಂ ಕೂಡಿ ಅಚ್ಚಿನ ಮೊಳೆಯಲ್ಲಿ ಕೊಟ್ಟ ದಳಕ್ಕೆ ವೀಸ ೨ ಕಾಣ ೨ (ಎಇ. XIV, ೨೭೩-೫೦; 1173). ೭. ಮುದ್ರಣ ಕಾರ್ಯದಲ್ಲಿ ಉಪಯೋಗಿಸುವ ಅಕ್ಷರಗಳ ಗುರುತಿರುವ ಸಾಧನ; ಟೈಪು : ಮುದ್ರಣಾಕ್ಷರಯೋಜಕನು ಮೊದಲು. . . ಅಕ್ಷರದ ಮೊಳೆಗಳು ಯಾವ ಯಾವ ಅಂಕಣಗಳಲ್ಲಿವೆ ಎಂಬುದನ್ನು ಮನದಟ್ಟು ಮಾಡಿಕೊಳ್ಳಬೇಕು (ಮುದ್ರಕ. ೨೩). ೮. (ಅಲಂ) ಅಭಿವ್ಯಕ್ತಿ; ತೋರಿಕೆ : ಕೊಡುಪಬಿದು ವರವಲ್ಲದಿದ್ದರೆ ನುಡಿಗೆ ಮೊಳೆ ಹೊಮ್ಮುವರೆ ನಿಮ್ಮಯ ತೊಡಕನೊಲುವವನಲ್ಲ (ಕುವ್ಯಾಕೃ. ೦-೯೦).

[< ಮೊಳೆ$_1$./ ತಮಿ. ಮುಳೈ; ಮಲ. ಮುಳ; ತುಳು. ಮುಳೆ, ಮೊಳೆ; ತೆಲು. ಮೊಲ. ಮೊಲಚು]

**ಮೊಳೆಗತ್ತಿ** (ನಾ). ಮೊಳೆಯಾಕಾರದ ಒಂದು ಬಗೆಯ ಖಡ್ಗ : ಮೊಳೆಗತ್ತಿ ಕೋಲ್ಗತ್ತಿ ಕೊಂಕಣ ಬಿಡೆಗತ್ತಿ ಸೆಳೆಗತ್ತಿ (ರೇವಾಂಕು. ೪-೨೦೦). [ಮೊಳೆ$_2$ + ಕತ್ತಿ]

**ಮೊಳೆಗದ** (ನಾ). ಲೋಹದ ಚೂಪುಗೂಟಗಳನ್ನು ಅಳವಡಿಸಿರುವ ಕದ ; ಗುಬ್ಬಿಕದ : ಕಾರ್ಯಕುಶಲದಿಂ ಕೋಟೆ ಕೊತ್ತಳ . . . ದಿಡ್ಡಿ ಮೊಳೆಗದಂಗಳ್ನಿರ್ಮಿತಮಾಗಲೊಡನೆ (ಹಾಲಾಸ್ಯ. ೦-೯-೬೩ ವ). [ಮೊಳೆ$_2$ + ಕದ (<ಕದವು$_1$)]

**ಮೊಳೆಗಱಿಕೆ** (ನಾ). ಆಗ ತಾನೆ ಮೂಡುತ್ತಿರುವ ಹುಲ್ಲು; ಎಳೆ ಕರಿಕೆ: ಸುಳಿವಾಳೆಲೆಯ ಬಣ್ಣ ಮೊಳೆಗಱಿಕೆವಣ್ಣ ಪೊಂಬಣ್ಣ ಮೆಯ್ಯಬಲೆಯರ್ ಸುಳಿಯೆ (ವಡ್ಡು. ೩೭-೯೭). [ಮೊಳೆ$_2$ + ಕಱಿಕೆ$_1$ (< ಕಱುಂಕೆ)]

**ಮೊಳೆಗಾಣಿಸು** (ಕ್ರಿ). (ಆಲಂ) ವ್ಯಕ್ತಪಡಿಸು ; ಪ್ರಕಟಿಸು : ಕೆಳದಿಯರ ನುಡಿಗೆ ನಸುನಗುತೆ ನಿಜಭಾವಮಂ ಮೊಳೆಗಾಣಿಸದೆ ಪುಸಿಗೆ ಸರಸವಾಡುತೆ . . . ತಿರುಗಿದಳ್ಬನದಿಂದೆ ಮನೆಗೆ ಚಂಪಕಮಾಲಿನಿ (ಶೃಂಖಾ. ೩೦-೩೩). [ಮೊಳೆ$_2$ + ಕಾಣಿಸು]

**ಮೊಳೆಗೊಂಬು** (ನಾ). ಆಗ ತಾನೆ ಹೊಮ್ಮಿದ ಕೊಂಬೆ ; ಎಳೆಯ ರೆಂಬೆ : ಸುರಕುಜದ ಮೊಳೆಗೊಂಬುಗಳಗೆ ಚಿಂತಾರತ್ನಪರಿಖಚಿತವಾದ ಮಿಸುನಿಯ ಕಟ್ಟನಿಡುವೊಂದು ಪರಿಯಿಂದ ರಂಗುವಡೆದಿರ್ದ ಮಾಣಿಕ ದುಂಗುರಂಗಳಂ ಬೆರಲೊಳಿಟ್ಟು (ಸೌಂದರ್ಯ. ೯-೨೯). [ಮೊಳೆ$_1$ + ಕೊಂಬು$_1$]

**ಮೊಳೆಗೊಳ್ಳು** (ಕ್ರಿ). ನಿಮಿರು ; ನೆಟ್ಟಗಾಗು : ಮೋಹದಿನಿಯರ ಮೆಯ್ಯ ಸೋಂಕಿನಿಂ ಮೊಳೆಗೊಂಡ ಪುಳಕಾಳಿ (ಮಲ್ಲಾ೦. ೯-೦೨). [ಮೊಳೆ$_2$ + ಕೊಳ್ಳು$_1$ (< ಕೊಳ್$_1$)]

**ಮೊಳೆಗೋಲು** (ನಾ). ಚಾವಟಿ ; ಸೆಳೆಗೋಲು (?) : ಮಣಿರಥಂಗಳನು ಶೃಂಗರಿಸಿ ದಿವ್ಯಾಶ್ವಂಗಳನು ಪೂಡಿ ಮೊಳೆಗೋಲನಾಂತು ವಾಗೆಯ ಪಿಡಿದು (ಪಪುಮೋ. ೩೦-೬). [ಮೊಳೆ$_?$ + ಕೋಲು$_1$ (< ಕೋಲ್$_1$)]

**ಮೊಳೆಜವ್ವನ** (ನಾ). ಅಂಕುರಿಸುತ್ತಿರುವ ಪ್ರಾಯ ; ಎಳೆಪ್ರಾಯ : ಗೊಜ್ಜಿಗೆಗೆಳಜವ್ವನಂ, ಮಲ್ಲಿಗೆಗೆ ಮೊಳೆಜವ್ವನಂ, ಸುರಯಿಗೆ ನೆರೆಜವ್ವನಂ . . . ಒದವಿತ್ತು (ರಾಶಾಶ್ಚ. ೦೦೯-೮೯). [ಮೊಳೆ$_1$ + ಜವ್ವನ]

**ಮೊಳೆದೊಡಕು** (ನಾ). ಒಂದು ಬಗೆಯ ಬಾಣ : ಒಸಕು ಕವಲಂಬು ಬೋಳೆವಿದಿರಲೆ ಮಿಟ್ಟೆಯೂ ಮೊಳೆದೊಡಕು ನಾರಾಚ ಕಣೆಗೆಲೆತೆ ಸಿಲುಕುಬಳೆ . . . ಸಪೆವಾಯುಸೆಂಬ ನಾನಾಸರಳನು ಸೆಳೆದು (ಕೋಮುಕ. ೩-೨೭). [ ? ]

**ಮೊಳೆದೋರು** 'ಮೊಳೆದೋಱು' ನೋ.

**ಮೊಳೆದೋಱಿಸು** (ಕ್ರಿ). (ಆಲಂ) ವ್ಯಕ್ತಪಡಿಸು ; ತೋರಿಸು : ಮುನ್ನೊಂದು ಹಳಿಯಾನೆಯ ಮೆಟ್ಟಿ ಸೀಳಿ ತೊಳೆಯದೆ ತೊವಲ ವಸ್ತ್ರವನುಟ್ಟು ಧೈರ್ಯವ ಮೊಳೆದೋಱಿಸು (ಮೋಹತ. ೩೯-೩೦). [ಮೊಳೆದೋಱು + — ಇಸು$_3$]

**ಮೊಳೆದೋಱು, ಮೊಳೆದೋರು** (ಕ್ರಿ). ೧. ಮೊಳಕೆಯೊಡೆ ; ಅಂಕುರಿಸು : ಸಂಗದಿಂದಲ್ಲದೆ ಬೀಜ ಮೊಳೆದೋಱದು (ಮುಪಾದೇ. ೨. ೬೯-೦೭೨) ; ಮೊಳೆದೋಱ್ ಮುಗ್ಗದ ಮುನ್ನ . . . ಬಳಸುವುದಖಿಳವಸ್ತುವನು (ಹರಿಶ. ೬-೦೩). ೨. ಕಾಣಿಸಿಕೊಳ್ಳು ; ಮೂಡು ; ತೋರು : ಆದಿ ಅನಾದಿ ಇಲ್ಲದಂದು ನಾದ ಬಿಂದು ಕಳೆ ಮೊಳೆದೋಱದಂದು . . . ಸೌರಾಷ್ಟ್ರಸೋಮೇಶ್ವರಲಿಂಗವದೆ ಕಂಡಾ (ಆದಯ. ೦-೨) ; ಮೊಳೆದೋಱುತ ಪುಟ್ಟುತಿಹೆಳಿಮಿಸೆಗಳ ಕಟ್ಟೆಚಿಕವ ಚೆಲುವಸ ಕಂಡು ಮೈ ಜುಮ್ಮುದಟ್ಟಿತು (ಕಂಪಶಿ. ೯-೦೦೩). **ಮೊಳೆದೋರು** : ೨. ಹೊಸಗನಸನು ಮೊಳೆದೋರುತ್ತ ಪಾವನಪವನನು ಬರುತಿಹನು (ಚಾಂಕಣ. ೨೩-೦೬). [ಮೊಳೆ$_2$ + ತೋಱು]

**ಮೊಳೆನಗೆ** (ನಾ). ಮುಗುಳುನಗೆ ; ಮಂದಹಾಸ : ಮೊಳೆನಗೆಯಿಂದ ಹರಸಿದಳವನಿಜೇಶ್ವರನ (ಕೂರಣಾ. ೨-೩-೯೩); ಸಖಿ . . . ಮೊಳೆನಗೆ ಮಿನುಗೆ ಹಾಸ್ಯವ ನುಡಿದಾಕೆಯ ತಲೆಗುತ್ತಿಸಿದಳು (ಕಂಪಶಿ. ೭-೦೩೦) ; ಕುಡಿನೋಟ ಬೀರುತ ಮೊಳೆನಗೆ ತೋರುತ ಬಳಿನಿಂದು ಮನಸೆಳೆದವಳು (ಇಂಹಾಕ. ೦೭೬-೨೭). [ಮೊಳೆ$_1$ + ನಗೆ]

**ಮೊಳೆನುಡಿ** (ನಾ). ಚಮತ್ಕಾರದ ಮಾತು ; ಹದಿರು : ಸ್ಮೇರಾಸ್ಯಂ ಮೊಳೆನುಡಿ ಗತಸೌರಂಭಂ ಸುರತಸಂಭ್ರಮಂ ಜಾರೆಯರಾ (ಗಿರಿಕ. ೯-೬೯). [ಮೊಳೆ$_?$ + ನುಡಿ$_2$]

**ಮೊಳೆಮೊಲೆ** (ನಾ). ಆಗ ತಾನೆ ಮೂಡುತ್ತಿರುವ ಸ್ತನ : ಮೊಳೆ ಮೊಲೆಯರು . . . ಸಳಿಸಮೊಗ್ಗೆಯ ಮೊಲೆಯವರು (ಅಂಜತ. ೩-೦೦೫) ; ಮೊಳೆಮೊಲೆಯೊಳೆಸೆವ ಸಸಿವದನದೊಳ್ . . . ಒಪ್ಪಿರ್ದರೆಳವೆಣ್ಗಳ್ (ಕೃಪಾಪಾ. ೭-೨೭). [ಮೊಳೆ$_1$ + ಮೊಲೆ$_1$]

**ಮೊಳೆಯಲ್ಲ** (ನಾ). ಎಳೆಯ ಶುಂಠಿ : ಮೊಳೆಯಲ್ಲಮನುಪ್ಪಿನೊಳಂ ಪುಳಿಯೊಳಮಲೆದಿಟ್ಟು (ಲೋಕೋಪ. ೬-೦೬); ಮೆಣಸು ಮಾಗುಳವೇರ್ಮೊಳೆಯಲ್ಲವೇಲೆ . . . ಆದಿಮಾದುಪ್ಪಿನ ಕಾಯ್ಗಳಂ ಮಗಮಗಿಪ್ಪುವನಿಕ್ಕಿದ ಸಬ್ಬಪತ್ರದೊಳ್ (ಲೀಲಾವ. ೩-೭೩). [ಮೊಳೆ$_2$ + ಅಲ್ಲ$_1$]

**ಮೊಳೆಯಿಸು, ಮೊಳೆಸು** (ಕ್ರಿ). ೧. ಕುಡಿಯಿಡುವಂತೆ ಮಾಡು ; ಅಂಕುರಿಸುವಂತೆ ಮಾಡು. ೨. ಉಂಟುಮಾಡು ; ಹುಟ್ಟಿಸು : ಆಲೋಚನೆಯೊಂದನ್ನು ಮೊಳೆಯಿಸಿದನು (ಕಥೆ. ೯೭). **ಮೊಳೆಸು** : ೧. ಕ್ಲೇಶಬೀಜವ ಬಿತ್ತಿ ಮೊಳೆಸಿದ ಘಾಸಿಯಾಗದ ಕಪಿಗಳಿಲ್ಲವನಿಪನ ಪಡೆಯೊಳಗೆ (ತೊರವೆ. ೨೬-೭೨) ; ನೀರು ಬಿದ್ದು ಹದವಾದ ನೆಲವು ತನ್ನಲ್ಲಿ ಬಿದ್ದ ಬೀಜವನ್ನು ಮೊಳೆಸುವಂತೆ ಕರ್ಮವು ಮನುಷ್ಯನ ಪುನರ್ಜನ್ಮವು ಮೊಳೆಯುವಂತೆ ಮಾಡುತ್ತದೆ (ಪತಥ. ೩೩೨). [ಮೊಳೆ$_1$ + — ಇಸು$_3$]

**ಮೊಳೆರೋಗ** (ನಾ). ಗುದಪ್ರದೇಶದಲ್ಲಿ ಮೊಳಕೆಯಾಕಾರದ ದುರ್ಮಾಂಸ ಬೆಳೆಯುವ ರೋಗ ; ಮೂಲವ್ಯಾಧಿ : ಮೂಲವ್ಯಾಧಿ_ಮೊಳೆರೋಗ_ಇದರಲ್ಲಿ ಎರಡು ವಿಧಗಳುಂಟು (ಬಿಶಿ. ೯೦). [ಮೊಳೆ$_2$ + ರೋಗ]

**ಮೊಳೆವಣೆ** (ನಾ). ಆನೆಯ ಹಣೆಗೆ ತೊಡಿಸುವ ಒಂದು ಬಗೆಯ ಅಲಂಕಾರಸಾಧನ : ಆರೆಗಟ್ಟಿಗೆ ಮೊಳೆವಣೆ ಕೂರಂಕುಶ ಸೇರಿ ಬಾಜಿಸುವ ಡೌಡೆಗಳ ಕೂರಾನೆಗಳನೇಱಿ ಮಾವಟಿಗರು ಬಂದರು (ಕುಂಚಾಂ. ೦೦-೨೭). [ಮೊಳೆ$_2$ + ಪಣೆ$_1$]

**ಮೊಳೆವರೆಯ** (ನಾ). = ಮೊಳೆಜವ್ವನ : ನನ್ನ ಮಗಳಿಗೆ ಮೊಳೆವರೆಯದಲಿ ವಿಧವತೆಯನಿತ್ತವನು ಭೂಮಿಯಲಿ ಉಳಿಯಬಲ್ಲನೆ (ಸಾಳ್ವಭಾ. ೨೩-೦೬). [ಮೊಳೆ$_1$ + ಪರೆಯ$_2$ (<ಪರಯ)]

**ಮೊಳೆವಲ್, ಮೊಳೆವಲ್ಲು** (ನಾ). ಆಗ ತಾನೆ ಹುಟ್ಟುತ್ತಿರುವ ಹಲ್ಲು ; ಪನೆ : ಎಳೆಯನ ಪುಟ್ಟಬಾಯೊಳು ಮೆಲ್ಲಮೆಲ್ಲನೆ ಮೊಳೆವಲ್ಗಳೊಡೆದು ಮೂಡಿದವು (ಮೋಹತ. ೦೭-೭೦) ; ಮೊಳೆವಲ್ಲುಗುಱ ಜೊಲ್ಲುದಟ್ಟಿತಡಿ ತೊದಲನುಡಿ (ಕೃಪಾಪಾ. ೨೬-೦೬) ; ಮೊಳೆವಲ್ ಶೋಭಿಸೆ ನಿರ್ನಿಮಿತ್ತಹಸಿತಂ ಚೆಲ್ವಾಗೆ (ಶಾಕುಂತ. ೦೦೩-೦೯೦). **ಮೊಳೆವಲ್ಲು** : ಜೀವಂಧರಂ . . . ಕೆಂಬಾಯ ಮೊಳೆವಲ್ಲು ಮಿಸುಗೆ ನಗುವ ತೊದಲಿಂಬು ವಡೆಯಲೊಪ್ಪಿದನು (ಜೀವಂಸಾಂ. ೭-೯) ; ಚೆನ್ನಬಸವ . . . ಮೊಳೆವಲ್ಲು ಜೊಲ್ಲುಂ ಪೊಳೆಯೆ ನಸುನಗುತ್ತುಂ ಬಾಲಲೀಲೆಯುಂ ತೋಱಿಸಿದನು (ವಡ್ಡು. ೩-೪೦). [ಮೊಳೆ$_1$ + ಪಲ್]

**ಮೊಳೆವಲ್ಲು** 'ಮೊಳೆವಲ್' ನೋ.

**ಮೊಳೆವಿತ್ತು** (ನಾ). ಮೊಳಕೆಯೊಡೆದ ಬೀಜ : ಮೊನ್ನೆ ಬಿತ್ತಿರ್ದ ಮೊಳೆವಿತ್ತನೆತ್ತಿಯ ತಂದು ಪನ್ನಗಾಭರಣನ ಮಸಿವನಾಱಿಸುವುದು (ಇಳೆಕ. ದೀ. ೩೩-೨೦). [ಮೊಳೆ$_1$ + ಬಿತ್ತು$_2$ (<ಬಿಱ್ತು)]

**ಮೊಳೆವುಲ್** (ನಾ). ಆಗ ತಾನೇ ಚಿಗುರಿದ ಹುಲ್ಲು ; ಎಳೆಯ ಹುಲ್ಲು: ಮೊಳೆವುಲ್ಗಳಿನೀ ಧರಣೀವಿಭಾಗಮೊಪ್ಪಿರೆ (ಶಂಶಪ್ರಾ. ೭-೨೩) ; ಜಳದ ಗ್ರೀಷ್ಮಹಿಮಂಗಳಿಲ್ಲ ಮೊಳೆವುಲ್ಗಾಲ್ಕಂಗುಳಂಗಳ್ವರಂ ಬಳೆಗುಂ (ಶಾಂತಿಪು. ೬-೧೦೨) : ಮೃಗಸಂತತಿ ಗಹ್ವರದಿಂ ಪೊಱಮಟ್ಟು ಮೇಯುತಿವೆ ಮೊಳೆವುಲ್ಲಂ (ಗಿಂಕ. ೯-೬೩). [ ಮೊಳೆ$_1$ + ಪುಲ್ ]

**ಮೊಳೆವೊಯ್** (ಕ್ರಿ). ಮೊಳಕೆಯಾಗು ; ಅಂಕುರಿಸು : ಮೊಳೆವೊಯ್ದು [ಪಾಠಾಂ. ಕೊನೆವಾಯ್ದು] ಕಂಗಳಪಟ್ಟು ಬೆಳೆದೆಳೆಯ ದರ್ಭೆಯಂ ಕಂಡು (ಹರಿಶ. ೦೨-೮). [ ಮೊಳೆ$_2$ + ಪೊಯ್$_2$ ]

**ಮೊಳೆವೋಗು** (ಕ್ರಿ). ೧. ಚಿಗುರುಬಿಡು : ಕೊನರು ; ಕುಡಿಯಿಡು : ದಾಂಗುಡಿಯಿಟ್ಟುದಿಂಗಡಲ ಬೆಳ್ಪು ಕರಂ ಮೊಳೆವೋದುದಿಂದುಕಾಂತಂಗಳ ಬೆಳ್ಪು ಮೂಡಿದುದು ನೆಯ್ದಿಲ ಬೆಳ್ಪು (ಲೀಲಾವ. ೨-೨೦) ; ಕಂದಿದುಪಂ ಮೊಳೆವೋದುದನೆಂದುಂ ಕಟ್ಟಲ್ಕೆವೇಡ ಖಾಜಾದಿಗಳಂ (ಅಕ್ಷರಾ. ೭-೩೮) ; ಮೊಳೆವೋದತ್ತಬ್ಜಕಂದಂ ಕೊಳದೊಳೆ (ರಾಜಶೇ. ೬-೨). ೨. ಮೂಡು : ಹುಟ್ಟು ; ಹೊಮ್ಮು : ಆ ದೇವಿಯ ಜಾತ್ರೆಗೆ ಮೊಳೆವೋದಳವೆಱೆ . . . ಕೈವೋದಸುಕೆ ಕೋಕಿಲಧ್ವನಿ ಮೂವಲೆಯುಲಿಯಾಗೆ ಬಂದುದಂದು ಬಸಂತಂ (ಯಶೋಚ. ೦-೩೬). [ ಮೊಳೆ$_2$ + ಪೋಗು$_1$ ( < ಪೋ$_1$ ) ]

**ಮೊಳೆಸು** ' ಮೊಳೆಯಿಸು ' ನೋ.

**ಮೊಳೇಟಿಬ್ಬೂರ್** (ನಾ). ಒಂದು ಊರಿನ ಹೆಸರು : ಶ್ರೀ × × ತ್ರೈವರ್ಮನಡಿಗಳು × × ಮೊಳೇಟಿಬ್ಬೂರ ಮಹಾ × × ನಕ್ಕೆ ಬಿಟ್ಟ ಸ್ಥಿತಿ (ಎಕ. IV (R), ಶಾವುರಾ. ೪೦೮-೫ ; ಸು. ೭ ನೆಯ ಶತ). [ ? + ಊರ್]

**ಮೊಳ್ಗು** ' ಮೊಟ್ಗು$_1$ ' ನೋ.

**ಮೊಳ್ಳೆ** (ನಾ). ೧. ಉಬ್ಬಿಕೊಂಡುದು : ಹೀಗಲ್ಲದೆ ಮೊಳ್ಳೆಯಾಗಿ ದಪ್ಪನಾಗಿ ಕೀವು ರಕ್ತ ಉಳ್ಳದಾಗಿಯಿದ್ದರೆ ಅರಿಷ್ಟ (ಶಾಗಂಧಿ. ೬೫೦-೦೪). ೨. ಉಬ್ಬಿದ ಹೊಕ್ಕುಳು,— ನಾಭಿ : (ಶ). [ ? ]

**ಮೊಱ**. ಮಱ$_2$, ಮಱ, ಮೊರ (ನಾ). (ಮುಖ್ಯವಾಗಿ) ಕಾಳನ್ನು ಕೇರಿ, ಕೊಚ್ಚಿ ಹಸನುಮಾಡಲು ಬಳಸುವ ಬಿದಿರಿನ ಸಾಧನ ; ಶೂರ್ಪ: ಮೂಱು ಮೊಱ [ಪಾಠಾಂ. ಕಂಚು] ತೀವಿದಮೇಧ್ಯಮಂ ಭಕ್ಷಣಂಗೆಯ್ಸಿ (ಶಾಪುಂಶ. ೦೫೬) ; ಮಱುಗೋಲೊಳ್ ಪಾಯ್ವಂತಿರೆ ತೊಱೆಯಂ ಮೊಱದಿಂದೆ ಪಾಮುಲೇಂ ಬಂದಪುದೇ (ಸಮಶ. ೦೫-೩೦) ; ಮುತ್ತನೊಗು ವರೆ ಮೊಱನ ತೌಡಿಗೆ (ಕಾಶಿರಾ. ೨೩-೩೦). **ಮಱ$_2$** : ಭಂಗಾರಿಯು . . . ಜೋಳವನ್ನು ಮಱದಲ್ಲಿ ಹಾಕಿಕೊಂಡು . . . ಬೀಸುತ್ತಿದ್ದಳು (ತಂತ್ರಶಾ. ೦). **ಮಱ** : ಸುರಿದು ನೆನೆಗಡಲೆಗಳ ರಾಶಿಯ ಮಱನ ಬಿಚ್ಚೋಲೆಗಳ ಬಣ್ಣದ ಹೊಸ್ತ ನೂಲುಗಳ ಗಿರಿಗಳೇ ಫಲವಾದುವಾಸ್ಪರ ಕರಿಯ ನೋಂಪಿಯ ದಾನಕೆ (ಸಂಶಶ. ೨೦-೨೦). **ಮೊರ** : ಜಾಣರಂಗ್ಯಗೆ ಕೊಳಲಾದೆ ಸಿರಿಬಿದಿರೆ ಮುತ್ತು ಕೇರೋಕೆ ಮೊರನಾದೆ (ಜಗ್ಗಾಬಾ. ೦೪) ; ಇಲಿಗಳು . . . ಹತ್ತು ಇಪ್ಪತ್ತು ಮೊರಗಳ ತುಂಬ ಬೀಳಲು ಪ್ರಾರಂಭವಾಯಿತು (ಶಿವರಾ. ೦೯).

[ ದೇ.॥ ತಮಿ. ಮಲ. ಮುಱಮ್ : ಕೊಡ. ಮೊರ ; ತೆಲು. ಮೊರೀಟೆ ; ಕೋತ. ಮೊರ್ರ್ ; ತೊದ. ಮುರ್ರ್ ]

**ಮೊಱಕು$_1$** ' ಮುಱುಕು$_1$ ' ನೋ.

**ಮೊಱಕು$_2$** ' ಮುಱುಕು$_2$ ' ನೋ.

**ಮೊಱಗಿವಿ**. ಮೊರಗಿವಿ (ನಾ). ಮೊರದಂತೆ ಅಗಲವಾದ ಕಿವಿ : ಕವಿಮಧುರನ ಮಾತುಗಳೇಂ ಸವಿಯೋ . . . ತನ್ನಯ ಮೊಱಗಿವಿಯಿಂ ಮೊಗೆಮೊಗೆದು ಸುಮುಖನಾಸ್ವಾದಿಸುವಂ (ಕರ್ಣಾಪಾ. ೦-೭೪) ; ಕಾಂತೆಯರ ಮೊಗದಲಿ ಮೀಸೆ ಸುಂಡಿಲನಾ ಮೊಱಗಿವಿಯ ಪೆರ್ವೊಲೆಯ ಬೆನ್ನಲಿ ಪಿರಚಿಸಲು ಗಂಡರು ಟಿಱುಗಗೊಳೆ (ಶಾಳ್ವಭಾ. ೩೦-೩೭). **ಮೊರಗಿವಿ** : ಮೊರಗಿವಿಗಳಂ ಬೀಸಿ, ಘೀಳಿಟ್ಟೊಡನೆ ಮುನ್ನುರ್ಗಿ ಹೋರಾಡಲನುವಾದುದಾ ಹೋರಿಹೇರಾನೆ (ಶ್ರೀರಾಮಾ. ೪೫೮-೩೫೮). [ಮೊಱ + ಕಿವಿ$_2$]

**ಮೊಱಡಿ** ' ಮೊರಡು$_2$ ' ನೋ.

**ಮೊಱವು**, ಮೊರವು (ನಾ). ೧. ಸಮುದ್ರ ಮುಂತಾದುವುಗಳ ಅಬ್ಬರ,— ಮೊರೆತ : ಮೊಱವುದೋಱದೆ ತೆರೆಮಸಗದಿಳೆಗೆ ಕ್ಷೀರಶರಧಿಯೆ ಕವಿತಂದುದು (ನಾಗಕು. ೩೦-೭೮). **ಮೊರವು** : ೨. ದೊಡ್ಡಧ್ವನಿ ; ಆರ್ಭಟೆ : ಮೆರಸಿ ನಂದೀಧ್ವಜವ ಕರಡಿಯ ಮೊರವಿನೊಳಗೀ ಲಿಂಗವೀರರ ನೆರವಿಯೊಳಗೆ (ಬಿಜ್ಜ.ಪು. ೯೨-೫); ಮುಂದಡಿಯ ಬಿಟ್ಟು ಮೊರವಂ ಬಿಟ್ಟು ಮಧ್ಯದೊಳ್ನಿಂದಿರ್ಪ ಬಾಣಮಂ ಕಂಡು (ವಂಶಾರಾ. ೫-೦೭-೩೩).

[ಮೊಱೆ$_1$ + — ವು]

**ಮೊಱಹಾರ** (ನಾ). (?) : ಮೊ[ಪಾಠಾಂ. ತೊ]ಱಹಾರ ನೀಡಿದಡೆ ತೆಱಹಾರ ಕೈಕೊಳ್ಳುತ್ತೈದಾನೆ (ಬಸವ. ೪. ೫೫೮-೦೩೪೦). [ ? ]

**ಮೊಱಹು** ' ಮೊಱೆಪು ' ನೋ.

**ಮೊಱಹುಗುಂದು** (ಕ್ರಿ). ಆರ್ಭಟವು ಕುಗ್ಗು ; ಅಬ್ಬರವು ಕಡಮೆಯಾಗು : ಖಗಸೇನೆ ಮೊಱಹುಗುಂದಿದ ಕಡಲಂತೆ ಮೋನದೊಳು ಬಂದಿರದಿಳಿದುದು ಹಜಾರದೊಳು (ನಾಗಕು. ೨೦-೮).

[ಮೊಱಹು (<ಮೊಱೆಪು) + ಕುಂದು$_1$]

**ಮೊಱುಕ** (ನಾ). ಒಂದು ಜನಾಂಗದ ಹೆಸರು ( ? ) : ಶ್ರೀಮಾಸೂಲಿಮಯ್ಯ ಪೃಥಿವೀರಾಜ್ಯಂಗೆಯ್ಯೆ ಬಲ್ಲದ ಪಱುವ ಮೊಱುಕರ್ಕೊಳೆ ಬೆಣ್ಣರ ಮಾಕ ಕಾದಿ ಇಕ್ಕಿಸಿ ಸತ್ತು ಸರ್ಗ್ಗಸ್ತನಾದಂ (ಎಕ. X (ಸ), ಮುಳಬಾ. ೩೦೭-೨; 950). [ ? ]

**ಮೊಱೆ$_1$**, ಮೊರೆ$_2$ (ಕ್ರಿ). ೧. ಸಮುದ್ರ, ಸಿಂಹ ಮೊದಲಾದುವು ಆರ್ಭಟಿಸು.— ಗರ್ಜಿಸು,— ಅಬ್ಬರಿಸು : ಬೇತಾಳಂಗಳ್ ಮೊಱೆವುತೆಱೆವ ಬಾಯ್ಗಳನಾ ಪಾತಾಳಬಿಲಂಗಳವೋಲ್ . . . ಕುಣಿಯೆ ಭಯಮಯನಾದೆಂ (ಕಲಾ. ೩-೦೯೪); ಆ ಗುಹೆಯನಾಂ ಪುಗಲೊಡನೊಂದು ರೂಪು ಮೊಱೆದು ಪರಿತಂದು ಮೇಲ್ವಾಯಲೊಡಂ (ಸಂಶಶಂ. ೨೮೪-೦): ಸಿಡಿಲು ಮೊಱೆವರೆ ಸರ್ಪಸಂಚುವುವಡಗುವವೆ ಗರುಡನು (ಕುಮಾರ್ರದ್ರೂ. ೦೫-೬೬) ; ಈಶ್ವರಸಖಿನೂರ್ಗಂ ದಾಳಿಯನಿರದೆಯ್ದುವ ತೆಱಿಮೊಳಬ್ಬಿ ಮೊಱೆದುದು ಪೆಂಪಿಂ (ಹರ್ಷ್ಮರ. ೦-೩೯) ; ೨. ಬುಸ್ಸೆನ್ನು ; ಬುಸುಗುಡು : ಅದಂ ಹರಿವ ನೀರ್ ಮೊಱೆವ ಹಾವುರಿವ ಕಿಚ್ಚಿನ ಹೊರೆಯೊಳಿರಿಸಲು (ಭಾವಶು. ೬-೦). ೩. ಸಂಕಟದಿಂದ ಕೂಗಿಕೊಳ್ಳು ; ಚೀರು ; ಆರ್ತನಾದಮಾಡು : ಅರಸ . . . ಮೊಗವಿಕ್ಕಿದತ್ತಲು ಮೊಱೆವ ಪೆಣನ ಮಯ (ಜೀವಂಶ. ೪-೯೪); ತೊರೆಯುತ ಮೊಱೆಯುತ ಸುರಿಯುತ ರಕ್ತವ ಕರಚರಣಗಳಾಡಿಸುತ ಅರಿಪೆಣಗಳು . . . ಒಪ್ಪಿದುವು (ಕಂಪಾ. ೦೫ ೬೦): ಹುಲಿಯ ಬಾಯಲಿ ಸಿಕ್ಕ ಹುಲ್ಲೆಯುಂದದಿ ಮೊಱೆವೆ (ಸರ್ವಜ್ಞ. ೦೦೩). ೪. ಕೆರಳು ; ವ್ಯಗ್ರವಾಗು : ಇಳಾಮಂಡಲದ ರಾಯರು . . . ಇವನೊಳಗೆ ಮಾತೇಕೆನುತ ಮಿಗೆ ಮೊಱೆದಿದ್ದರಲ್ಲಲ್ಲಿ (ಶೂರಾ. ೦-೦೫-೨೯). **ಮೊರೆ$_2$** : ೧. ಮೊರೆದು ನೊರೆಗರೆದು ಮಿರುಮಿರುಗಿ ಶಿಲೆಯಿಂ ಶಿಲೆಗೆ ಜಿಮ್ಮಿ ನೆಗೆಯುವ ತೊರೆಯ ಲೀಲೆಯ ಮನೋಹರತೆ (ಶತ್ರುಂಗ. ೨೯-೮೦೩). ೩. ತೆತ್ತ ಹಣ. ಸತ್ತ ಹೆಣ ಹೋಯ್ತೆಂದು ಮೊರೆಯದಿರು ! (ಚಂಡಕ. ೫-೦೬). [ದೇ.॥ ತುಳು. ಮೊರೆಮುನಿ ; ತೆಲು. ಮೊಱುಗು. ಮೊಱುವು ; ಕೋತ. ಮುರ್ಗ್, ಮೊರ್ಗ್]

**ಮೊಱೆ$_2$**, ಮೊರೆ$_4$ (ನಾ). ೧. ಗೋಳಾಟ : ಆರ್ತಧ್ವನಿ ; ಹುಯ್ಯಲು : ಏಕನ್ನ ಮೊಱೆಯ ಕೇಳೆ ನೋಡೆಯೆನ್ನ ದುಃಖಿವ ಚನ್ನಮಲ್ಲಿಕಾರ್ಜುನಯ್ಯ (ಮಹಾದೇ. ವ. ೩೮-೮೦); ಮೊಱೆಯ ಬಾಯ್ಗಳ . . . ತರದ ಬೈಗಳ ಒಳಕಳವ ಕೇಳದನು ಕಲಿಪಾರ್ಥ (ಸಂಭಶ. ೩೬-೨); ತರಳನ

ಮೊಱೆ ಕೇಳಿ ತ್ವರಿತದಿಂದಲಿ ಬಂದು ದುರುಳನ ಕರುಳ ತನ್ನ ಕೊರಳಲ್ಲಿ ಧರಿಸಿದ (ತುರಂಪ. ೩-೪-೧). ೨. ದೂರು ; ಅಹವಾಲು : ಮೊಱೆಯ ವಿಚಾರಿಸದೆ ಮುಖಮಜ್ಜನವ ಮಾಡದಿರು (ಕಂಕಪಾ. ೧೩-೫). ೩. ರೀತಿ ; ಪರಿಪಾಟಿ ; ಕ್ರಮ : ತಾಂ ಜಾತಿಯೊಳ್ ಪಶುಪಪ್ಪುದಱಿಂ ಮೊಱೆಯಂ ಧರ್ಮಮುಮನಱಿಯದಾ ಮೂಢಂ (ಶುಕಸಂ. ೯೨-೧೩); ಮೊಱೆಯಱಿನೆಂಬಿವನೇನೆಂದಱಿಯೆಂ (ಧರ್ಮಾಮೃ. ೨-೧೫೩). ೪. ಕಟ್ಟುಪಾಡು; ಎಲ್ಲೆ; ಮಿತಿ : ಮೊಱೆಯಂ ಮೀಱುವ ಮಾತು . . . ಅಳುಂಬಂ ಕೂಟದೊಳ್ ಸಲ್ಲರಾ (ಚಂದ್ರಪು. ೬-೭೮) ; ಮೊಱೆಯನುಳಿದ ಮೆಲ್ನುಡಿ ಮೊನೆಮುಸಿಪೆಕ್ಕಱು . . . ಸೊಗಯಿಸಿದುವು ನವಸುರತಕ್ರೀಡೆಯೊಳಾ ದಂಪತಿಗೆ (ಜಯಸೇ. ೮-೫೫). ೫. (ರಕ್ತಸಂಬಂಧ ಅಥವಾ ವಿವಾಹದಿಂದ ಉಂಟಾದ) ನಂಟಸ್ತಿಕೆ; ಸಂಬಂಧ; ವಾವೆ : ಇದನಾವ ನಾನುನ್ನತ್ತಂ ಗೆಯ್ದೊಂ ಪೆಣ್ಣರ ಪಸುಪಾರ್ವರ ಊರೞಿವಿನ ಮೊಱೆ ಯೞಿದ ಕೃತಘ್ನ (ಶಾಇ. IX-ii, ೭೦೭-೭; ಸು. ೩ನೆಯ ಶಕ ?) ; ನಾಣ್ಗೆಡೆ ಗುಡದಿರ್ಪುದೊಂದು ನುಡಿಗಳ್ ಮೊಱೆಯಂ ಮಱೆಯಿಪ್ಪುದೊಂದು ಕಳ್ಗುಡಿದವರಂದಮಿಂತು ಸಿರಿ ಸ್ವಾರ್ತರೆ ಸಾರ್ವುದು (ಚಂಶಪ್ರಾ. ೨-೪೯) ; ಕಡುನೀಱಿಯರು ಮುಂದೆ ನಿಲೆ ಮೊಱೆಧರ್ಮವ ಬಿಡುವರು ಮೋಹಿಜನಗಳು (ಕುಮಾರಾಂ. ೨೭-೯೦): ಅವ ಮನೆ ಅವ ಮೊಱೆ ಎನಗೆ (ಅಕ್ಕವ. ೨೦-೪೩೨). ೬. ಒಳ್ಳೆಯ ನಡತೆ; ಶೀಲ : ಮೊಱೆಯಿಲ್ಲದಳಂಗುಲಿನಿಯಂ . . . ವಯೋಧಿಕೆಯುಮಾಗದು ಕೂಡಲ್ (ಮಂದಪಿ. ೯-೩). ೭. (ರಕ್ತ ಸಂಬಂಧದಿಂದ ಅಥವಾ ವಿವಾಹದಿಂದಾದ) ನಂಟ; ಬಂಧು : ನೀನಲ್ಲದೆನಗುಱಿದ ಪುರುಷರ್ ಮೊಱೆಯಲ್ಲರ್ (ಪದ್ಮರಾ. ೦೭೩-೮); ಪನ್ನಗಭೂಷಣರಲ್ಲದ ಗಂಡರು ಇನ್ನೆನಗಾಗದ ಮೊಱೆ ನೋಡವ್ವಾ (ಬಸವ. ೫೦೪); ಮೊಱೆಯೆಂಬುದು ನಂಟರೊಳ್ (ಅಭಿಕಾ. ೨೫). ಮೊರೆ₄ : ೧. ಮಾನವ ನೆದೆಗೆ ಧೀರತೆಯ ಕಿಡಿಗರೆದು ಸಾಹಸಕ್ಕೆಳೆದೊಯ್ವ ಕರೆ ನಿನ್ನ ಮೊರೆ, ನಿರಂತರ ಚೇತನದ ಜಲಧಿ! (ಶತ್ರಾಂಗ. ೭೫-೦೭೭೦) ; ಮೊರೆಯು ಕೇಳಿಸದು (ಚಿತ್ರಾಂಗ. ೭೪-೮). ೨. ಬಡವನ ಮೊರೆ ಕೇಳಿಕೊಂಡು . . . ತಕ್ಕ ಉಪಾಯವನ್ನು ಹೇಳುವಿರೆಂದು ನಂಬಿದ್ದೇನೆ (ಮುಂಬಯಿ. ೪-೦೦೩); ಈಗಲಾದರೂ ನಮ್ಮ ಮೊರೆಯು ಕೇಳಿತೆ ? (ದೀಕ್ಷು. ೩೦). ೫. ಚಿಕ್ಕಮಾವಾಱಿಯವರ, ಮೊರೆಯ ಈ ನಮ್ಮ ತಮ್ಮಾಱಿಯವರನ್ನು — ನಮ್ಮನ್ನೂ ಏಕವಚನದ ಅತಿಪರಿಚಯದಿಂದ ಎಳೆದಾಡುತ್ತಿರುವುದರ ಅರ್ಥ . . . ನಿಳ್ಳಯವಿಲ್ಲ! (ಚಿಟ್ಟಿಂ. ೨೩-೦೪). ೭. ಮಲೆತ ಯುವನರುರ್ಕ್ಕ ಮುರಿಯೆ ತಾನೆ ಪೋದ ನಮ್ಮ ದೊರೆ, ಸಾಸಿರ ಸತ್ರುಪರ ಮೊರೆ (ಶಾರಸಿ. ೦-೦೦).

ಮೊಱೆಮುಟ್ಟು=ರೀತಿ; ಕ್ರಮ : ಬಹುಶಾಸ್ತ್ರಪ್ರಜ್ಞನಪ್ಪ ಮಹಾಕವಿಯಂ ಕಂಡೊಡೆ ದಗ್ಧವಾಣಿಯನವನಿಂದಿಂತಾರ್ಪ ಹಾಸ್ಯೋಕ್ತಿಯಿಂ ಕವಿಗಳ್ ವರ್ತಿಪರಲ್ಲದಾವ ಮೊಱೆಮುಟ್ಟಿಂದಂತವರ್ ವರ್ತಿಪರ್ (ಸೂಕ್ತಿಸು. ೦-೩೭). [<ಮೊಱೆ₁./ತಮಿ. ಮುಱೈ, ಮುಱೈಮೈ; ಮಲ. ಮುಱ, ಮುಱಮ ; ತುಳು. ಕೊಡ. ಮೊರೆ ; ತೆಲು. ಮೊಱ, ಮೊಱ್ಱ, ಮೊರ, ಮೊರ್ರ ; ಕೋತ. ಮೊರ್; ತೊದ. ಮುಱ್ ; ಕೊಂಡ. ಮುರ್]

**ಮೊಱೆ₃** 'ಮುಱೆ₂' ನೋ.

**ಮೊಱೆಕಾಱ** (ನಾ). ಮೊರೆಯಿಡುವವನು ; ಆರ್ತನಾದ ಮಾಡುವವನು : ಕರೆದು ತಂದರು ಕವಿದ ಗಾವಳಿಯ ಗಜಬಜದ ಮೊಱೆಕಾಱರಂ ಮೊಱೆಗೆ ಗುಱಿಯಾದ ಪಾತಕನನು (ಚಿಕ್ಕರಾ. ೬-೭).

[ಮೊಱೆ₂+ — ಕಾಱ]

**ಮೊಱೆಗಿಡಿಸು** (ಕ್ರಿ). ಸಂಬಂಧವನ್ನು ಕಡಿದುಹಾಕು; ವಾವೆ ತಪ್ಪಿಸು : ಮೊಱೆಗಿಡಿಸಿ ಕೂಡುವುದು ಕುಲದಱಿತವಂನೆಟ್ಟಿಟ್ಟು ನೆರಪುವುದು . . . ಕಾಮನ ಕೆಯ್ಪಂ (ಚಂತೀಶ್ವ. ೬-೭೧).

[ಮೊಱೆಗಿಡು (< ಮೊಱೆಗೆಡು) + — ಇಸು₃]

**ಮೊಱೆಗಿಡು** 'ಮೊಱೆಗೆಡು' ನೋ.

**ಮೊಱೆಗೆಡು, ಮೊಱೆಗಿಡು** (ಕ್ರಿ). ೧. ಕ್ರಮತಪ್ಪು; ರೀತಿಗೆಡು : ತನಗಣಂ ನಾಣ್ ಮುನ್ನಮಿಲ್ಲೆಂಬುದಂ ಮೊಱೆಗೆಟ್ಟುರ್ಚಿಪ ಲಿಂಗದಿಂ . . . ಅಱಿದು (ಕಶಿ. I, ೧೩ ಶ್ರೀ ಬೋಕ್ಕಶೂದಾಮಹಿಶೋತ್ರ). ೨. ಕಟ್ಟುಪಾಡಿಲ್ಲದಿರು ; ಸ್ವೇಚ್ಛೆಯಿಂದ ಕೂಡಿರು: ಪೊಱಲವರೆಲ್ಲಂ . . . ನಿನ್ನ ಮೊಱೆಗೆಟ್ಟ ನಡವಳಿಯ[ನಾಕ್ಷೇಪಿಸೆ] (ಅರ್ಜವ. ೫-೭ ವ); ಮೊಱೆಗೆಟ್ಟು ಮಾತನಾಡುವರು ಪಾಡುವರು (ಮೋಹತ. ೦೮-೯೩). ೩. ನೀತಿತಪ್ಪು; ಶಿಷ್ಟಾಚಾರವಿಲ್ಲದಾಗು : ಎಮ್ಮ ತಂಗಿಯರ್ಕೈವರು ಮೊಱೆಗೆಟ್ಟು ಹೆಂಡಿರಾದರೆನಗೆ (ಅವಶಂ. ೨೦೦-೯೪೩) ; ಅತ್ತೆಯನಳಿಯ ಮದುವೆಯಾಗಿ ಅವರಿಬ್ಬರ ಸಂಗದಿಂದ ಹುಟ್ಟಿತ್ತೊಂದು ಮಗು ಮೊಱೆಗೆಟ್ಟು ತಂದೆ ಮಗಳ ಮದುವೆಯಾಗಿ ತ್ರಿಪುರದ ಮಧ್ಯದೊಳಗೆ ಕ್ರೀಗಳ್ ದೇಗುಲ ಸಿಂದಿತ್ತು (ಸಕಪ. ೪. III, ೦೯೦-೩೫೮). ೪. ನಡತೆಯು ಹಾಳಾಗು ; ಶೀಲವಿಲ್ಲದಿರು : ಅರಸಿಯಂ ಮೊಱೆಗೊ[ಗೆ]ಟ್ಟ ಪೆಣ್ಣಾಪವಗಮಿರವೆ . . . ಪೋಲಿಪರ್ (ಶಾಕ್ಯಪಾ. ೨೪-೦೩). ಮೊಱೆಗಿಡು: ೫. ಸಂಬಂಧವು ಕಡಿದುಹೋಗು : 'ಮೊಱೆಗಿಡಿಸು' ಪರಾ. [ಮೊಱೆ₂ + ಕೆಡು₁]

**ಮೊಱೆಗೆಯ್** (ಕ್ರಿ). ಚೀರು : ಆರ್ತನಾದ ಮಾಡು : ತಬ್ಬಿಬ್ಬುಗೊಂಡು ಮೊಱೆಗೆಯ್ವರಿಂ ಸುಯ್ವರಿಂ . . . ಮೇಟಲದ್ಭುತಮಾದುದು (ಚಂಶೃ. ೪೭-೨೦). [ಮೊಱೆ₂ + ಕೆಯ್₁]

**ಮೊಱೆಗೇಡಿ** (ನಾ). ಸಂಬಂಧವನ್ನು ಹಾಳುಮಾಡಿದವನು : ಮದನಾರಿ ಯರ್ಧದ ನಾರಿ ಹರಿ ತಾ ಹೇರುರದ ತಂಗಸುಱೆ ಬೊಮ್ಮನು ಮಗಳ ಮೊಱೆಗೇಡಿ (ಕುಮ್ಮಾರ. ೦೩-೩೭). [ಮೊಱೆ₂ + ಕೇಡಿ₁]

**ಮೊಱೆಗೇಳು**. ಮೊರೆಗೇಳು (ಕ್ರಿ). ಆರ್ತನಾದವನ್ನು ಕೇಳು ; ಗೋಳಾಟವನ್ನು ಆಲಿಸು : ಗಜರಾಜನ ಮೊಱೆಗೇಳಿ ನರಹರಿ . . . ಸಿರಿ ಸಹ ನಡೆತಂದ (ಕಂಪಂ. ೨೩-೫೦) ; ಮೊಱೆಯಿಸುಮ್ಮೆ ನಾಗಪತಿಶಯನ ರಕ್ಷಿಸೆ ಲೋಗರ ಮೊಱೆಗೇಳಲಿತ್ತಿಯುಭಯದ ಕರವಂ (ಪಸ್ತವಂ. ೩-೦೯). ಮೊರೆಗೇಳು : ಪುರಜನರಿಟ್ಟ ಮೊರೆಗೇಳದಲೆ ಗುಣಗಳನೊಟ್ಟಗಿರಿಸಿದ ರಾಘು ಗುಣವತಿಯುಂಗಶೀಮೆಯಲಿ (ಬಿಹ್ಮಕು. ೪-೩).

[ ಮೊಱೆ₂ + ಕೇಳು (< ಕೇಳ್) ]

**ಮೊಱೆಗೊಡು** (ಕ್ರಿ). = ಮೊಱೆಗೆಯ್ : ಹಾದಿಯ ಬೆಳ್ಳನ ಕಳ್ಳರು ತಾಕದಡೆ ಇನ್ನಾರಿಗೆ ಮೊಱೆಗೊಡುವ (ಸಕಪ. ೪. II, ೨೯೩-೦೨).

[ಮೊಱೆ₂ + ಕೊಡು₁]

**ಮೊಱೆಗೊಳ್** (ಕ್ರಿ). ನೀತಿಮಾರ್ಗವನ್ನು ಹಿಡಿ : ಲಾವಣ್ಯಸಂಪನ್ನೆಯಪ್ಪ ಕನ್ನೆಯಂ ತನಗಾಟಿಸಿ ಬಂದೊಡವೊಲ್ಲದೆ ಮೊಱೆಗೊಂಡು ಕಟ್ಟಿದ (ಸುಕುಮಾ. ೭-೨೭ ವ). [ಮೊಱೆ₂ + ಕೊಳ್₁]

**ಮೊಱೆದಪ್ಪು** (ಕ್ರಿ). ನೀತಿಗೆಡು : ವಾರಿಜನೇತ್ರೆಯರಿಗೆ ಮೊಱೆದಪ್ಪದ ವೀರರುಂಟೇ ಲೋಕದೊಳಗೆ (ಕುಮಾರಾಂ. ೨೭-೧೦೫). [ಮೊಱೆ₂ + ತಪ್ಪು₁]

**ಮೊಱೆಪಾರ್** (ಕ್ರಿ). ಆಶ್ರಯವನ್ನು ನಿರೀಕ್ಷಿಸು ; ರಕ್ಷಣೆಯನ್ನು ಬಯಸು : ನಾನ್, ಇನ್ನೇಕೆ ದೇವರನ್ ಮೊಱೆಪಾರವೇಳ್ಕುಮೀ (ಅಂತಿಗೊ. ೪೦-೮೫೩). [ಮೊಱೆ₃ (< ಮುಱೆ₂) + ಪಾರ್₁]

**ಮೊಱೆವು, ಮೊಱೆಹು** (ನಾ). ೧. ಸಮುದ್ರ, ನದಿ ಮುಂತಾದುವುಗಳ ಮೊರೆತ. — ಅಬ್ಬರ: ನರೆ ನೊರೆ ತೆರೆ ತೆರೆ ಮೊಱೆವು ಕಮ್ಮಾಗೆ ಜಜ್ಜರಿತ ಪಲ್ಗಳ್ ತಡಿವರಸ ಜರೆ ನದಿ ಪರಿಯಲು (ಶರಕ. ೭-೫೮). ಮೊಱೆಹು : ೧. ಇಂತಪ್ಪ ಶರಧಿಯ ಸಂಭ್ರಮದ ಮೊಱೆಹಿನಲ್ಲಿ ಶಂಭುವೇ ನಿನ್ನನೊಡಗೂಡಿದೆನಯ್ಯ (ಸವಕಪ. ೦೯೨-೬೦೮). ೨. ದೊಡ್ಡಧ್ವನಿ :

ಆರ್ಭಟ : ಸುರಬಲದ ನಿಸ್ಸಾಳಕೋಟಿಯ ಮೊಱಹು ಮೊಳಗಿತು (ಶಬ್ದಮ. ೭-೦೯) ; ತಂಬಟದ ಮೊಱಹು ಕೋಟಾಕೋಟಿ ಪಟಲಪೂರ್ಣ ದಶದಿಕ್ಕುಭರಿತದಿ ಘರ್ಮಿಸಲಾಯ್ತು (ಭರತ. ೯೦-೯) ; ಮೃಗಗಳ ಮೊಱಹು ಮುಸುಕಲು (ಅಶ್ವ. ೯೬-೩). ೩. (ಅಲಂ) ಸಿಟ್ಟು : "ಕೋಪ" (ತತುಚಿ. ೪ I, ೭೨) : ಸಿಡಿಲುಗಳ ಗರ್ಜನೆಯ ಗಗನವ ತುಡುಕುವಾಗುಳಿಕೆಗಳ ಮೊಱಹಿನ ಮಿಡುಕುಗಳ ನಾಯ್ ನೂಕಿದವು ಹಾಸದ ವಿಳಾಸದಲಿ (ಶಬ್ದಮ. ೦೩-೨೦). [ಮೊಱೆ$_1$ + — ಪು$_2$ . / ತಮಿ. ಮುಱೈಪ್ಪು, ಮುಱೈಪ್ಪು : ತೆಲು. ಮುರಿಪಮು, ಮುರಿಪೆಮು]

**ಮೊಱೆಮುಗಿಲು** (ನಾ). ಗರ್ಜಿಸುವ ಮೇಘ ; ಗುಡುಗುವ ಮೋಡ : ಮೊಱೆಮುಗಿಲ ಮದವಂದದಲಿ ಮೊಳಗುವ ವಾದ್ಯರಭಸದಲಿ . . . ಮೋಹರ ತೆಗೆದುದೀಚೆಯಲಿ (ಶಬ್ದಮ. ೦-೭).

[ಮೊಱೆ$_1$ + ಮುಗಿಲು (< ಮುಗಿಲ್) ]

**ಮೊಱೆಯಟ್ಟು** (ಕ್ರಿ). ೧. ಕಟ್ಟುಪಾಡುಯಿಲ್ಲದಾಗಿಸು : ಧರ್ಮವನ್ನು ನಾಶಮಾಡು : ಮೊಱೆಯಟ್ಟುವ ಮದ್ಯಪಾನಮನಱಿಸೆಂದುಂ ಮಧುಪನೀಂಟೆ (ಧರ್ಮಾ. ೦೦-೨೦). ೨. ನೀತಿಮಾರ್ಗವನ್ನು ಬಿಡು; ಶಿಷ್ಟಾಚಾರವಿಲ್ಲದಾಗು : ಅರಸಂ ತನ್ನ ಮಗಳಂ ತಾನೆ ಕೊಂಡು ಮೊಱೆಯಟ್ಟಿದಂ (ವಡ್ಡಾರಾ. ೦೦೮-೨೫). [ಮೊಱೆ$_2$ + ಅಟ್ಟು$_1$]

**ಮೊಱೆಯಿಕ್ಕು** (ಕ್ರಿ). ಆರ್ತನಾದ ಮಾಡು : ಮೊಱೆಯಿಕ್ಕುತಿರ್ದನೋಹಿಲ ದೇವಂ (ಅದ್ಭುತ. ೧೨-೫೯). [ಮೊಱೆ$_2$ + ಇಕ್ಕು]

**ಮೊಱೆಯಿಡಿಸು** (ಕ್ರಿ). ಸಂಕಟದಿಂದ ಕೂಗಿಕೊಳ್ಳುವಂತೆ ಮಾಡು ; ಗೋಳುಗುಟ್ಟಿಸು : ಮೊಱೆಯಿಡಿಸಿತಿಂತಿವರನೆನ್ನ ಮಹಿಮೆಯ ಭಕ್ತಿ (ತೊರ. ರಾ. ೨೦-೦೬) ; ಓರಿದು ಮಾರ್ಜಲಗೂಡಿ ಬಂದು . . . ಮೊಱೆಯಿಡಿಸಿದ ವೈರಿಭಟರ (ಕಂಪಾ. ೩-೫೭). [ಮೊಱೆಯಿಡು + — ಇಸು$_3$]

**ಮೊಱೆಯಿಡು**, ಮೊರೆಯಿಡು (ಕ್ರಿ). ೧. ಆರ್ತನಾದ ಮಾಡು ; ಗೋಳಾಡು; ಆಕ್ರಂದಿಸು : ರೌದ್ರಶರದ ದೋಣಿಗೆ ಕಯ್ಯಂ ನೀಡಿದಾಗಳ್ . . . ಸುರರ್ ಮೊಱೆಯಿಟ್ಟರ್ (ಕಂದಾ. ೧೩-೦೯೨); ಉಱೆ ಕಾವ ಸೂರ್ಯರಶ್ಮಿಗೆ ಮೊಱೆಯಿಡಲೆಂದೆತ್ತಿ ಪಿಡಿದ ತೊವಲೆಂಬಿನೆಗಂ ತುಱುಗಿರ್ದ ವರಗೊಂಬಂ ಮುಱಿದು ನೆಟಲಾಡಿಕೊಂಡು ನಡೆವರ್ ಪಥಿಕರ್ (ಜಗಿ. ೦೭-೭೦); ಅರಸಿಯರು ಸಚಿವರು ಕುಮಾರರು ಮೊಱೆಯಿಡಲು ಫಲುಗುಣನ ಬಡಿಸಿದ ಪರಿಯ . . . ಮಱೆಪರೆ (ಶಬ್ದಮ. ೯-೯); ದೂರದಿ ನಿಂತು ಮೊಱೆಯಿಟ್ಟು ಕೂಗಲು ಚೋರಗೆ ದಯವು ಪುಟ್ಟಿತೆ (ಪುರಂದ. ೦-೦೫೭-೦). ೨. ದೂರು ; ಅಹವಾಲು ಹೇಳು : ಕಳವಳಿಸಿದುದು ಮೊಱೆಯಿಟ್ಟು ದಘವನ ಮುಂದೆ ಭುವನಜನ (ಶಬ್ದಮ. ೭-೯೩). ೩. ಬೇಡಿಕೊಳ್ಳು ; ಪ್ರಾರ್ಥಿಸು : ಕಚ್ಚದಿರಿಮೆಂದು ಭಯದಿಂ ನಿಚ್ಚಂ ಮೊಱೆಯಿಟ್ಟು ಪುತ್ರನರ್ಚಿಸುತಿರೆಯುಂ (ಕಮಚ. ೯-೮೦). **ಮೊರೆಯಿಡು** : ೧. ಪಟ್ಟಣದ ಬಾಗಿಲೊಳ್ ಕುಳಿತು ಮೊರೆಯಿಡುವ ಪರಿಯೇನು (ಸೌಗಂಧಿ. ೯೫೭-೦೭) ; ನೀನು ಅರಸಾಗಿ ನಮ್ಮನ್ನೂ ರಕ್ಷಿಸೆಂದು ಮೊರೆಯಿಟ್ಟರು (ಕೃವಾಣ. ೨೩೩) ; 'ಯಾಕೆ ಈ ದಾಸ್ಯ?' ಎಂದು ಒಮ್ಮೊಮ್ಮೆ ಹೃದಯ ಮೊರೆಯಿಡುತ್ತಿತ್ತು (ಕಮಚ. ೨೦೦). ೩. ದೇವರು ದಯಪಾಲಿಸುತ್ತಾನೆ, ಆದುದರಿಂದ ಅವನಿಗೆ ಮೊರೆಯಿಡು (ಕುಂಬಾರ. ೯-೦೯೦). [ಮೊಱೆ$_2$ + ಇಡು$_1$]

**ಮೊಱೆಯೊಗು** ' ಮಱೆವೊಗು ' ನೋ.

**ಮೊಱೆಯೋಗು** ' ಮಱೆವೋಗು ' ನೋ.

**ಮೊಱೆವುಗು** ' ಮಱೆವೊಗು ' ನೋ.

**ಮೊಱೆವೆಱು** (ಕ್ರಿ). ತಕ್ಕುದಾಗಿರು ; ಹೊಂದಾಣಿಕೆಯಿಂದಿರು (?) : ಮೊಱೆವೆತ್ತ ಲಲ್ಲೆವಾತುಗಳಪ್ಪುಗೆಯಿಂದೆ ನೆಱೆ ಮಾರ್ಭಿತೆಯನೆಯ್ದಿದರು (ವೋಚಕ. ೩೨-೦೬). [ಮೊಱೆ$_2$ + ಪೆಱು$_1$]

**ಮೊಱೆವೇಳ್** (ಕ್ರಿ). ಆರ್ತನಾದ ಮಾಡು ; ಮೊರೆಯಿಡು : ಮೊಱೆವೇಳ್ವ ದೂತರಂ ಗರ್ಜಿಸುತೆ . . . ಭರತಂ ನುಡಿದನು (ಕೃಖಂಡ. ೨೦-೬).

[ಮೊಱೆ$_2$ + ಪೇಳ್ (< ಪೇೞ್)]

**ಮೊಱೆವೇೞ್** (ಕ್ರಿ). ಸಹಾಯವನ್ನು ಕೇಳು; ಆಶ್ರಯವನ್ನು ಬೇಡು: ಮಹಾಪದ್ಮನೃಪನುಂ ಬಲಕ್ಷಾಮುಂ ಮಾಮುಂ ನಿಮಗೆ ಮೊಱೆವೇೞ್ದಟ್ಟಿದ [ನಿದ]ಂ (ಕುಕ್ಕು. ೭-೬೦). [ಮೊಱೆ$_3$ (< ಮಱೆ$_2$) + ಪೇೞ್]

**ಮೊಱೆಸರ** (ನಾ). ಆರ್ತನಾದ; ಚೀರಾಟ : ಅಕ್ಕಟಕ್ಕಟದೇನೊ ಮೊಱೆಸರ ತಮ್ಮನೊಂದೊಕ್ಕಲೊಳಗೆ ಕೇಳಲಾಯ್ತು (ಧರ್ಮಕ. ೯-೩೦).

[ಮೊಱೆ$_2$ + ಸರ$_1$]

**ಮೊಱೆಹೊಗು** ' ಮಱೆವೊಗು ' ನೋ.

**ಮೊಟ**, ಮೊಣ, ಮೊಳ (ನಾ). ೧. ಮೊಳಕೈಯಿಂದ ಹಸ್ತದ ತುದಿಯವರೆಗಿನ ಅಳತೆ ; ಎರಡು ಗೇಣು ; ಅರತ್ನಿ : "ಅರತ್ನಿನಾಮಂ ಸಕನಿಷ್ಠಕಂ ಮೊಟಂ" (ಪಸ್ತುಕೋ. ೬೯-೦೯) ; ಏೞ್ ಧನು ಮೂಱು ಮೊಟನಿಂ ಪೇೞ್ ಪಡಂಗುಲಮೆ ಮೊದಲ ನಾರಕರೊಡಲುಂತೇಱುವರಂ ತದ್ವಿಗುಣಮೆ ಸೂೞೊಳ್ ನಾರಕರ ಕಠಿನದೇಹೋತ್ಸೇಧಂ (ಆದಿಪು. ೫-೯೨) ; ಮೊಟ ಮೂಱಳತೆಯ ತನುರುಚಿ ಕಂಪಿನ ಪೊಳಪಿನ ಕೌಮುದಿಯನೇಂ ಕಡಲ್ವಿರಿಯಿಂಪುದೋ (ಅನಂತ. ೯-೯೬). **ಮೊಣ** : ೨. ಮೊಳಕೈ ಹಾಗೂ ಮೊಳಕಾಲುಗಳಲ್ಲಿರುವ ಮೂಲೆಯ ಸಂದು : "ಮೊಣ (ಮೊಳ), ಜಾನು, ಮೊಣಗಂಟು" (ಸಿಂಕೋ. ೯೯೨). 'ಮೊಣಗಂಟು' ಪರಾ. **ಮೊಳ** : ೧. ಮತ್ಸ್ಯದೇವರ ಹವಣಸಾರೆಣಿಸುವರು . . . ಅವನಿಪತಿ ಕೇಳ್ ವೇದವಾಕ್ಯಕೆ ಹತ್ತುಮೊಳ ಮಿಗಿಲು (ಸಂಧಿಕ. ೯-೨೭) ; ಕಪಿಯ ಬಾಲವು . . . ಮುಂದೆ ಗೇಣರೆಗೇಣು ಮೊಳ ತೋಳನಿತು ಬೆಳೆವುತಿರೆ (ತೊರರಾ. ೦೨-೯) ; ಮೊಳನನಿಕ್ಕಲು ಸೊಂಡಿಲಂ ಗುಹಂ (ಅನಂತ. ೨-೭-೦) ; ಧರ್ಮಕ್ಕೆ ದಟ್ಟಿ ಕೊಟ್ಟರೆ ಒತ್ತಲಿಗೆ ಹೋಗಿ ಮೊಳ ಹಾಕಿದ (ಗಾದೆ).

[ದೇ.॥ ತಮಿ. ಮಲ. ಮುಟಮ್ ; ತುಳು. ಮೊಳ, ಮೊರ, ಮುರ ; ಕೊಡ. ಮೊಳ ; ತೆಲು. ಕೋಲಾ. ಪರ್ಜಿ. ಮೂರ]

**ಮೊಟಂಗಾಲ್** ' ಮೊಟಕಾಲ್ ' ನೋ.

**ಮೊಟಂಗು$_1$** ' ಮೊಟಗು$_1$' ನೋ.

**ಮೊಟಂಗು$_2$** ' ಮೊಟಗು$_2$' ನೋ.

**ಮೊಟಕಯ್** ' ಮೊಟಕೆಯ್ ' ನೋ.

**ಮೊಟಕಲಿಸು** (ಕ್ರಿ). (?) : ಪಾಯ್ದಂಬಸಂಬಟ್ಟುವವೊಲ್ ಪುಂಖಾನುಪುಂಖಂ ಮೊಟಕಲಿಸೆ ಮನೋವೇಗದಿಂ ಬೇಗಮೆಚ್ಚಂ (ಅರ್ಜವೀ. ೩-೪೧) ; ಮುರಿದಂಗಂ ನೀಳ್ದ ಗಾತ್ರಂ ಮೊಟಕಲಿಸಿ ಕರಂ ದಂಡೆಯಂ ನೀಡಿದಂದು (ಅರ್ಜವೀ. ೭-೭೫). [? + — ಇಸು$_3$]

**ಮೊಟಕಾಲ್**, ಮಣಕಾಲು, ಮಣಿಕಾಲ್, ಮಣಿಕಾಲು, ಮೊಣಕಾಲ್, ಮೊಣಕಾಲು, ಮೊಳಕಾಲ್, ಮೊಳಕಾಲು, ಮೊಟಂಗಾಲ್ (ನಾ). ಕಾಲು ಮತ್ತು ತೊಡೆ ಸೇರುವ ಭಾಗ ; ಮೊಳಸಂದು ; ಜಾನು : ನರಿಗಳ್ ಬಂದು . . . ಎರಡುಂ ಕಾಲ್ಗಳಂ ಮೊಟಕಾಲ್ವರೆಗಮೊಂದು ದಿವಸಂ ತಿಂದತ್ತು (ವಡ್ಡಾರಾ. ೨೯-೦೩) ; ಅಂತು ಬಿಟ್ಟು ಸುಲಿದ ಮೊಟಕಾಲ್ಗಳುಂ . . . ಉಡಿದ ಕೈಗಳುಮಾಗಿ ಬೆರಸಬುತ್ತುಂ ಬಂದು (ಕಂಪಾ. ೨-೩೦ ವ) ; ಸಾವಂಗೆ ಸಮುದ್ರಂ ಮೊಟಕಾಲುದ್ದಂ (ಕಂಪಾ. ೬೯-೯). **ಮಣಕಾಲು** : "ಜಂಘಾ_ಮಣಕಾಲು" (ಕರ್ಣಾ. ೦೦-೨೭). **ಮಣಿಕಾಲ್** : ನೋಡಿ ಗುಱಿಯುಂ ಮಣಿಕಾಲ್ ಮಣಿಯೆ ಭುಜವೊಗೆಯೆ . . . ಧನುರ್ಧರರ್ಕಳದಟಂದೆಚ್ಚರ್ (ರಾಜಶೇ. ೭-೯೩) ; ಎಳ್ಳರದ ಕುರುಳ್ಗಳಂ ಪರೆಪಿ ಜಲ್ಲಿವಿಗಕ್ಕೆ ವರಾಹಯೂಥಮೇಳ್ತರೆ ಮಣಿಕಾಲ್ಗಳಂ ಮಡಿದು ತೋಱದರೊಯ್ಯನೆ ಸನ್ನೆವೇಂಟೆಯೊಳ್ (ಕಬಿಕಂ. ೩-೯೭). **ಮಣಿಕಾಲು** :

ಮಣಿಕಾಲು ಈಡಿಗ ಕಣಕಾಲು ಸವ್ಯಗಾಜಿ . . . ಅಂಗಾಲು ಶುದ್ಧವಾದಿಗ ಕಾಣಿರೋ (ಸರ್ವ. ೦೬೨-೭೭೭). **ಮೊಣಕಾಲ್:** ಸಿರಿ ಬರೆ ಮೊಣಕಾಲನಾಂಪ ಗಾಂಪರುಮೊಳರೇ (ಧರ್ಮಾಮೃ. ೧೦-೦೭); ಬಟ್ಟಲು ಕಟಲ್ದ ಮೊಣಕಾಲ್ಗಳುಂ ಮೊಟ್ಟನೆ ಮುಱಿದ ನಿಟ್ಟೆಲುಗಳುಂ . . . ಮಹಾಭಯಂಕರಮಾಗೆ (ಮಹಾಪು. ೦೨-೫೯ ಪ). **ಮೊಣಕಾಲು:** "ಜಾನುಃ, ಊರುಪರ್ವಃ, ಅಷ್ಠೀವಂತಃ — ಈ ೩ ಮೊಣಕಾಲು" (ಶಾಶರಾ. ೦೨೦): ಮೊಣಕಾಲೊಳಸಂಮಗಳು ಬಾತುಕೊಂಡು . . . ಕ್ರೋಷ್ಟುಶೀರ್ಷವೆನಿಸಿಕೊಂಬುದು (ವೈದ್ಯಸಾ. I, ೪೦೭); ಕಣಕಾಲ ಕುಣಿಸುವಳು ಮೊಣಕಾಲ ಮಣಿಸುವಳು (ಸರ್ವಜ್ಞ. ೦೬೪೫); ತಲೆ ಇರುವಾಗ ಮೊಣಕಾಲಿಗೆ ಪಟ್ಟ ದೊರೆಯಲಾರದು (ಕಂಬಹು. ೦). **ಮೊಳಕಾಲ್:** ಪಱಿದ ಮೂಳೆಯುಂ ಮೊಳಕಾಲುಂ ಕಾರ್ವ್ವ (ಎಕ. VIII, ಸಾಗರ. ೦೦೬-೦೯; 1042); ಕಣಕಾಲ್ ಮೊಳಕಾಲ್ಮುಖಂ ಘುಜೆಂ (ಎಕ. VIII, ಸೊರಬ. ೦೭೫-೧೨ : 1156); ಮೊಳಕಾಲ್ಗಳಲಿ ಘಾಯುವ ನೋಡಿರ್ದ್ದ ನೀವು (ಸಂಕೇಶ. ೧೭-೭). **ಮೊಳಕಾಲು:** "ಜಾನುಃ, ಊರುಪರ್ವನ್, ಅಷ್ಠೀವತ್ — ೩ ಮೊಳಕಾಲಿನ ಹೆಸರುಗಳು" (ಸಿದ್ಧಾಂತ. ೦೯೦); ಬೊಬ್ಬಿಱಿದು ಮೊಳಕಾಲನೂಱಿದರು (ಕುಮಾರಭಿ. ೪-೦೨); ರಕ್ಕಸರಾಯನೆತ್ತಿದನೊಡನೆ ಬೊಬ್ಬಿಱಿದವುಕಿದನು ಮೊಳಕಾಲಲಾ ಧನುವ (ಕೊರಬಾ. ೧-೦೫-೨೦). **ಮೊಟಂಗಾಲ್:** ಪನಿತು ಮೊಟಂಗಾಲೊಳ್ ಕಾಲ್ವರಿವ ನೊರೆಯ . . . ಕಾರೊಡಲ ಪೇರಾನೆಗಳ (ರಾಮಾಶ್ವ. ೯೯-೪).

[ದೇ.॥ ತಮಿ. ಮಲ. ಮುಟಙ್ಙಾಲ್; ತುಳು. ಮೊರಂಪು, ಮೊಲಂಕು : ತೆಲು. ಮೋಕಾಲು ; ಕುರುಖ್. ಮುಕಾ ; ಮಲ್ತೊ. ಮುಕೆ ]

**ಮೊಟಿಕೆಯ್**, ಮೊಣಕೆಯ್, ಮೊಣಕ್ಕೈ, ಮೊಳಕಯ್, ಮೊಳಕ್ಕೈ, ಮೊಟಿಕಯ್, ಮೊಟಕ್ಕೈ (ನಾ). ಕೈಯ ನಡುಗಂಟು ; ಕಣಕ್ಕೈ ಮತ್ತು ತೋಳುಗಳ ನಡುವಿನ ಭಾಗ: "ಕಫೋಣಿಃ, ಕೂರ್ಪರಃ_ ಈ ೨ ಮೊ(ಟ)ಣಕಯ್" (ಶಬ್ದಮ. ೬೬-೭೭೯); "ಮೊಟಕೆಯ್ಯ ಕೆಟಭಾಗವು ಪ್ರಕೋಷ್ಠ, ಮುಂಗೆಯ್" (ಶಾಶರ್ಮ. ೪). **ಮೊಣಕೆಯ್:** "ಪ್ರಕಾಂಡ ಮೆಂಬುದು ಮೊ(ಟ)ಣಕೆಯ್ಯಿಂದ ಮೇಗಣ ಭಾಗೆ" (ಶಬ್ದಮ. ೬೬-೭೭೯). **ಮೊಣಕ್ಕೈ:** ತೋಳುಗಳನ್ನು ಮೊಣಕ್ಕೈಯವರೆಗೆ ಮಡಿಸಿಕೊಂಡಿದ್ದರಿಂದ ಹೊರದೋರುವ . . . ರೋಮತುಂಬಿದ ಕಪ್ಪುಕೈಗಳು (ಅಕೋರೀ. ೦೩೦). **ಮೊಳಕಯ್:** ಚಂದನಕ್ಕುಮ್ಮಳಿಸಲೇಕೆ ನೀನೆಲೆ ಮಗನೆ ಚಂದನಂ ನಿನ್ನ ಮೊಳಕಯ್ಯೊಳದೆ ಎಲೆ ಮಗನೆ (೭೦೮. ದೇ. ೪೯೦-೭). **ಮೊಳಕ್ಕೈ:** ಮೊಳಕ್ಕೈ ಮುಂಗೈಗಳನಾಡಿಸುತಂ (ಶೃಂಗಾರ. ಹ. ೪೭೨-೨೯); ತೊಡೆಗಳಂ ಮೊಳಕ್ಕೈಯೊಳೂಱುತೆ (ಬಸವ. ೪-೧೨); ಮೊಳಕ್ಕೈಯೊಳಗೆ ಯಿಱುಕಿದ್ದರಡು ಹಸ್ತಂಗಳಲ್ಲಿ ಚಾಪದ ತಿರುವನೇಱಿಸಿ ಶರವ ತೊಡಚಿವನು (ಸಂಕೇಶ. ೦೬-೨೭); ನಿನ್ನ ಮೊಳಕ್ಕೈಯಲ್ಲೇನು ಗಾಯ ಶಾರದ ? (ತ್ರಿಶ್ಲ. ೩೪). **ಮೊಟಿಕಯ್:** ಒಳಕಯ್, ಮೊಟಕಯ್, ಪೊಱಕಯ್ (ಕಮ್ಮಪು. ೦೦೦ ಪ್ರಯೋ). **ಮೊಟಕ್ಕೈ:** "ಕಫೋಣಿ, ಕೂರ್ಪರಃ — ಈ ೨ ಮೊಟಕ್ಕೈ" (ಶಾಶರಾ. ೦೨೦); ಮೊಟಕ್ಕೈಯಂ ಕೊಂತದಿಂ ಕುತ್ತಿ (ಧರ್ಮಾಮೃ. ೭-೨೦೫). [ದೇ.॥ ತಮಿ. ಮಲ. ಮುಟಙ್ಕೈ ; ತುಳು. ಮೊರಂಗೆ ; ಕೊಡ. ಮೊಳಕಯ್ : ತೆಲು. ಮೋಚೆಯ್ಯಿ]

**ಮೊಟಕ್ಕೈ** 'ಮೊಟಿಕೆಯ್' ನೋ.

**ಮೊಟಗಿಸು**, ಮೊಳಗಿಸು (ಕ್ರಿ). ಧ್ವನಿಯುಂಟಾಗುವಂತೆ ಮಾಡು ; ಶಬ್ದಮಾಡಿಸು : ಸುಘುಷಂ . . . ಮಿಕ್ಕಿನ ಸೇನೆ ನಡೆದು ಜಪಣಂತು ರಣದುಂದುಭಿಯಂ ಮೊಟಗಿಸಿದಂ (ರಾಮಾಶ್ವ. ೯೭-೨೬). **ಮೊಳಗಿಸು:** ಜನವಱಿಯ ಹಱಿಯ ಮೊಳಗಿಸುತ (ಹಕಾ. ೦೦-೭೭).

[ ಮೊಟಗು₁ + — ಇಸು₃ ]

**ಮೊಟಗು₁**, ಮೊಳಗು₁, ಮೊಟಂಗು₁ (ಕ್ರಿ). ೧. (ವಾದ್ಯಗಳು) ಧ್ವನಿಮಾಡು ; ಶಬ್ದಮಾಡು : "ಮೊಟಗು — ವಾದನಕ್ರಿಯಾಯಾಂ ಸ್ತನಿತೇ ಚ (ಗುಡುಗು), ವೃಕ್ಷಭೇದೇ ಚ" (ಕಮಧಾ) : ಆಗಳ್ ಕುಂಭಸಂಭವನುಲಿವ ಜನರ ಕಳಕಳರವಮುಮಂ ಮೊಟಗುವ ಪಱೆಗಳುಮಂ ಬಾರಿಸಿ (ಹಂಕಥಾ. ೨-೭೪ ಪ); ಮೊಟಗುವ ಪಱೆಯುಮನಾನೆಯ ಪಟಿಯಿಗೆಯುಮನಾಂತ ಬಲಮುಮಂ ಕಂಡು (ಎಕ. XV, ಅರಸೀ. ೨೩೭-೯ ; 971). ೨. (ಮೋಡಗಳು ಒಂದಕ್ಕೊಂದು ತಗುಲಿ) ಗುಡುಗುಡು ಎಂಬ ಶಬ್ದವುಂಟಾಗು ; ಗುಡುಗು : ಕೆಳದುರ್ಗ ವಿಳಯಕಾಳಮೇಘದಂತೆ ಮೊಟಗಿ ಮಹಾಪ್ರಳಯಭೈರವನಂತೆ ಮಸಗಿ (ಹುಕಥಾ. ೦೦-೪೦ ಪ); ಉರಿದುದು ನಭಂ ನೆಲಂ ಮೊಟಗಿದುದು (ಶಾಂತಿಪು. ೩-೦೦೩); ನೆಲಂ ಮೊಟಗಿದ್ದಂತಪ್ಪದೋದು ಭಯಂಕರಧ್ವಾನಮಾಗಲ್ (ಹಂಕಥಾ. ೪೦-೧೦). ೩. ಆರ್ಭಟಿಸು ; ಗರ್ಜಿಸು : ದೆಸೆಗಳ್ಗ ಕೆಮ್ಮನೆ ಮೊಟಗುವಿರೇಂ ಮೊಟಗಿದಂತೆ ಕೊಳ್ಳುವೆ ಮಟಿಗಳ್ (ಶಬ್ದಸಾ. ೪೩೭ ಸೂತ್ರ೪). **ಮೊಳಗು₁:** ೧. ರಾಯರಥಿಕರು ಚಟುಳಚರಣಚಡಾಯುವಾನಿತರಿಳಿದುದಾ ಖಳರಾಯ ದುರ್ಗವ ಮೊಳಗುವಗಣಿತವಾದ್ಯಘೋಷದಲಿ (ಕೊರಬಾ. ೬-೦೬-೪); ಸನ್ನಾಹಭೇರಿಗಳ್ಮೊಳಗಲು ಖಾನ ಬಪ್ಪನ್ನತಗಳನೇವೇಳ್ವೆ (ಕಂಪಶಾ. ೦೦-೦೬): ಮಂಗಳವಾದ್ಯಗಳು ಮೊಳಗಿದವು (ಆಕಾಶಕ. ೦೯೦). ೨. ಹಲಬಾರಿ ಕೇಳಿಹೆನು; ಮೋಡಗಳ ಮಧ್ಯದಿಂ ಮೊಳಗಿ ಮೂರ್ದನಿಗುಡುವ ನಿನ್ನ ದನಿಯ (ಶಿಸೀಗೀ. ೨೨-೦೦). ೪. ಶಬ್ದಮಾಡಿಸು; ಮೊಳಗಿಸು: ನಳಿನನಾಭನು ಪಾಂಚಜನ್ಯವ ಮೊಳಗಿದನು (ಕುಮಾರವ್ಯಾ. ೬-೪೦). ೫. ಮೆರೆ; ವಿಜೃಂಭಿಸು: ಹಳೆವಿದಿರ ಮೆಳೆಯಲಿ ಮೊಳಗಿಮಱಿಯಾವೊಲುರುಹಿದನು ದ್ರೋಣ (ಕುಮಾರವ್ಯಾ. ೦೭-೨೫); ವೈರಿಸೇನೆಯ ಕುತ್ತಿ ತೇಗುವ ಮನದ ಮಾರುತಿ ಮೊಳಗಿದನು ಮುಂದೆ (ಕುಮಾಕ. ೦೨-೨೦). **ಮೊಟಂಗು₁ :** ೧. ಊರೇ ಮೊಟಂಗದೇ ಗೋಳಾಟವಿಟ್ಟು! (ಅಕ್ಕಶಾ. ೩೪-೭೭೩).

[ದೇ.॥ ತಮಿ. ಮುಟಙ್ಙು; ಮುಟಕ್ಕು ; ಮಲ. ಮುಟಙ್ಙು, ಮುಟಕ್ಕು : ತೆಲು. ಮ್ರೋಗು, ಮ್ರೋಯು, ಮ್ರೋವು]

**ಮೊಟಗು₂**, ಮೊಳಗು₂, ಮೊಟಂಗು₂ (ನಾ). ೧. (ವಾದ್ಯದ) ಧ್ವನಿ; ಸದ್ದು; ಘೋಷ : "ಮೊಟಗು = ಮುಗಿಲ ದನಿ, ಒಂದು ಮರದ ಪೆಸರ್, ವಾದನವಿಧಿ, ವಾದ್ಯಂ" (ಕಮಧ. ಶಾ. ೦). ೨. (ಮೋಡಗಳ ಘರ್ಷಣೆಯಿಂದುಂಟಾಗುವ) ಗುಡುಗುಡು ಎಂಬ ಶಬ್ದ: "ಮೊಟಗೆಂದು ಸಿಡಿಲ್" (ಕರ್ಣಾಟ. ೩೦); ವಿಳಯಕಾಳಾಂಬುದದಂತೆ ಮೊಟಗುಮಂ ಸಿಡಿಲ ಬಳಗಮನೊಳಕೊಂಡ. . . ಮುಗಿಲ್ಗಳಂ ಬೆಸಸಿದಾಗಳ್ (ಹಂಕಥಾ. ೫-೯೫ ಪ); ಕಾರ ಮೊಟಗಂ ಕೇಳ್ದ ನವಿಲಂತೆ ನಲಿದು (ಅರ್ಜುನೀ. ೦-೭೯ ಪ) ; ಗುಡುಗುಡಿಪ ಮೊಟಗಂ ಕಡುಕಾಯ್ಪೇಱಿದ ಸಿಂಗದ ದನಿಗೆತ್ತು (ರಾಮಾಶ್ವ. ೩-೦೬). **ಮೊಳಗು₂:** ೧. ಬಹುವಿಧದ ವಾದ್ಯದ ಮೊಳಗುಗಳ ತುದಿ ತುಡುಕಿತಾ ಬ್ರಹ್ಮಾಂಡಮಂಡಲವ (ಕುಮಾಕ. ೨-೪೦); ಪನ್ನೆರಡು ಭೇರಿಗಳ ಕಟ್ಟಿದರಾಗಳೆ ಜಗವೆಲ್ಲ ಮೊಳಗಿನ ಮೊಟ್ಟೆಯ ಕಟ್ಟಿದಂತಾಯ್ತು (ಶರಶ. ೨೩-೩); ಒದಗಿರ್ಪ ಪರೆ ಕೊಂಬು ಮುರಿಕೊಂಬುಗಳ ಮೊಳಗು (ಕಾಂಪರ. ೧೪೭-೩೦೬). ೨. ಆಕಾಶವೆ ವಿದ್ಯುಲ್ಲತೆಯ ಘರ್ಜನೆಯ ಮೊಳಗಿನಂತೆ (ಬೋಳವಮ. ೦೦-೪೦) : ಘಳಘಡಘುಡಿಲೆಂದು ಮೊಳಗು ಮೊಳಗಿತು (೧೨೪. ೯-೪೦) ; ಮೊಳಗಂ ಕೇಳ್ದರಸಂಚಿಯ ತೆಱದಿ ಅವರಿಸಿದವಸ್ಥೆ ಯೊಳಿರದೆಯ್ತಂದು (ಜಯಕಾ. ೨-೪೨). **ಮೊಟಂಗು₂ :** ೩. ಅಬ್ಬರ ; ಆರ್ಭಟ : ಓವೋ. ಕನ್ನಡದ ನಾಡೇ, ಮುನ್ನೀರ್ ಮೊಟಂಗು ಕರೆನಾಡೇ (ಅಕ್ಕಶಾ. ೦೭-೩೫೨). [<ಮೊಟಗು₁. /ತಮಿ. ಮುಟಕ್ಕು. ಮುಟಕ್ಕಮ್; ಮಲ. ಮುಟಕ್ಕಮ್; ತೆಲು. ಮ್ರೋಗುಡು. ಮ್ರೋತ]

**ಮೊಟಗು₃**, ಮೊಳಗು₃ (ನಾ). ಒಂದು ಬಗೆಯ ಮರ: "ಮೊಟಗೆಬರೀ ವಾದ್ಯಮುವನಿಜಭೇದದಲ್ಲಿಯುಂ ಗುಡುಗಿನೊಳ್ ಮೊಟಗೆನಿಕ್ಕುಂ"

(ಸಂಜೀವ. ೩) ; ಮೊಟಗಿನ ಕಾಯ್ ನೆಲ್ಲಿಯ ಕಾಯ್ ಉಟಿವೆಯ ಕಾಯ್ ಬೇಚಿವೇಚಿ ಸವಿವಡೆದಿರವೇ (ಶಶಿಸಂ. ೯೬೩). **ಮೊಳಗು₃** : ಮುತ್ತಿ ಮೊಳಗರನೆಲ್ಲಿ ಮಾದಲ . . . ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೊರಂರ. ೩-೦-೨೬) ; ತಮಾಲಂ ಮೊಳಗಾಚಿ ನೆಲ್ಲಿ ನೇಜಿಲ್ ತರುಕು ವನಿಗಳೊಪ್ಪಿರ್ಕುವಿಮಾ ಕಾಡೊಳೆತ್ತಂ (ಶಂಶಂ. ೩-೩೨).

[ದೇ.॥ ತೆಲು. ಮೊಲುಗು, ಮೊಲ್ಗು, ಮೋಲುಗು, ಮೋಲ್ಗು]

**ಮೊಟಗುಗೇಳ್** (ಕ್ರಿ). ಗುಡುಗಿನ ಧ್ವನಿಯನ್ನು ಕೇಳು; ಮೇಘಧ್ವನಿಯನ್ನು ಆಲಿಸು : ಮೃಗಾಳಿ ಭೋಂಕನೆ ಮಟಿಗಾಲದೊಳ್ ಮೊಟಗುಗೇಳ್ದು . . . ರಾಮನ ಘನಚಾಪವಂಡರವಮಂ ನೆನೆದು . . . ಮೇಘಗೊಳಲೊಲ್ಲವು (ಕಾದಂಘ. ೦೦೦). [ಮೊಟಗು₂ + ಕೇಳ್]

**ಮೊಟವೆಟಿಯಾರ್ಮ** (ನಾ). ಒಬ್ಬಾತನ ಹೆಸರು : ಚೋಟಿಗ ಮೊಟವೆಟಿಯಾರ್ಮ್ಮಜ್ಜಿ ಕಿಚಿಗೊಡಗೆಯ ರಾಜಮಾನಂ ಮೂರುಗಂಡುಗ ಗಟ್ಟಿ . . . ಸಲ್ವುದು (ಎಕ. XII, ಮಧ್ಯಗಿ. ೦೦೩-೦೪; ಸು. ೯೦೦ ?). [ ? ]

**ಮೊಟ್ಗಿಸು**, ಮುಗ್ಗಿಸು, ಮೊಗ್ಗಿಸು₁ (ಕ್ರಿ). ೧. ತಗ್ಗಿಸು ; ಶಮನಗೊಳಿಸು ; ಕುಗ್ಗಿಸು : ಹಮಲಾಳಾಜಳಮುಂ ಮದೇಭಮದ ಮೂತ್ರಾಸಾರಮುಂ ರೇಣುಸಂಚಯಮುಮಂ ಮೊಟ್ಗಿ [ಶಾಕಾಂ. ತಗ್ಗಿ]ಸಿ (ಪುಷ್ಪ.ಕ. ೩-೯೫). **ಮುಗ್ಗಿಸು** : ೨. ನಮಸ್ಕರಿಸು ; ಬಾಗು : ಉಲ್ಲಾಸದಿಂ ನಡೆತಂದು ತಮ್ಮಣ್ಣನಾ ಮೆಲ್ಲಡಿಯೊಳು ಮುಗ್ಗಿಸಿದನು (ಕೃಷ್ಣಜ. ೨-೨೩). ೩. ಮುಗ್ಗರಿಸು ; ಎಡವು : ಘೆಗ್ಗಳಿಪ ನೀರಾಜನ ಪ್ರಭೆ ಕುಗ್ಗಿ ಮಸುಳಿಸಿತೋ ಮಾಜಿಘು ನೀ ಮುಗ್ಗಿಸಿದೊ ಏಕಾರತಿಯನಯ್ಯಂಗೆ ಕೊಡುವಾಗ (ಬಸವ. ೯೬-೦೩). ೪. ನಾಶಮಾಡು ; ಧ್ವಂಸಗೊಳಿಸು : ನೀನಿಟ್ಟ ಸೂತ್ರದಿಂ ಚಲಿಪವು ಕೈಕಾಲುಗಳು ನೀನೆ ಮುಗ್ಗಿಸಲು ಮುಗ್ಗುವ ದೇಹದವನು (ಕುಶಂಡ. ೨-೯೯-೦). ಚಿಂತಿಸಬೇಡ ತಾಯಿ ನಾ ಮುಗ್ಗಿಸುವೆ ಸವತಿಮಕ್ಕಳನೆಲ್ಲ ನುಂಗಿ ನಾ ಬಗ್ಗಿಸುವೆನಪ್ಪ ಸಂಶಯ ಬೇಡ (ಕುರಂಗ. ೩-೩೨); ಟೊಪ್ಪಿಗೆಯ ಉದ್ಯೋಗವನ್ನು ಮುಗ್ಗಿಸಿ ಕೆಲಸಿಗನ ಕೈಮೇಲಾಯಿತೆಂದು ನಾನು ಹೇಳುವುದಿಲ್ಲ (ಗಾಳಿಕ. ೦೩೩). ೫. ವಶಪಡಿಸಿಕೊಳ್ಳು ; ಅಧೀನಗೊಳಿಸು : ಸುಗ್ಗಿಯ ಸೂಳೆಯರಿಹರಲ್ಲಿ ನೋಟದಿಂ ಮುಗ್ಗಿಸಿಕೊಳುತ ಮುನಿಗಳ (ಶಂರಾಶಾಂ. ೯-೦೦೩). **ಮೊಗ್ಗಿಸು₁** : ೬. ಬಾಗಿಸು ; ಬಗ್ಗಿಸು : ಕೂರ್ಗಣೆಗಳಂ ತೆಗೆದು ಧನುವಿಗಂ ಮೊಗ್ಗಿಸುತ ಕರ್ಣಪೂರಂತೆಳೆದು ತಾಳಿಕೋಳಲೆಂದೆನುತ ತೆಗೆದೆಚ್ಚನು (ಕುರಂಗ. ೩೨-೮೩). 'ಮುಟ್ಗಿಸು' ಪಠಾ. [ಮೊಟ್ಗು₁ + — ಇಸು₃]

**ಮೊಟ್ಗು₁**, ಮುಗ್ಗು₁, ಮುಗ್ಗು, ಮುಳ್ಗು, ಮುಟ್ಗು₂, ಮೊಕ್ಕು₁, ಮೊಗ್ಗು₁, ಮೊಳ್ಗು (ಕ್ರಿ). ೧. ಬಾಗು ; ಮಣಿ ; ಬಗ್ಗು : ಕನಕಶಾಂತಿಮುನೀಂದ್ರಕೇವಳಿಗಳ ಪೊಜಿಅಡಿಗಳೊಳಂ ಮಣಿಮಯ ಮಕುಟಮಲೆಯೆ ಮೊಟ್ಗಿ ಪೊಡೆವಟ್ಟು (ಶಾಂತಿಪು. ೯-೨೩ ವ) ; ಪೋಗಿ ತನ್ನ ಹೀಂದ್ರೋಪಕಂಠದೊಳ್ಮೊಟ್ಗಿ ಪೊಡೆವಟ್ಟು (ಸುಕುಮಾ. ೯-೩೬ ವ) ; ಮೇಗಣಧಿಕ್ಕಾರಕೆಂತಪ್ಪ ರೌದ್ರಮುಂ ಶಕ್ತಿಯುಂ ಮೊಟ್ಗುವುದು (ಅಕ್ಕಶಾ. ೨೬-೩೩೦). ೨. ನಮಸ್ಕಾರ ಮಾಡು ; ವಂದಿಸು ; ಎರಗು : "ಮೊಟ್ಗು-ನಮನೇ" (ಶಬ್ದಾ) ; ನಿಜಾನುಜನ್ಮನ ಕಳೇವರದ ಕಾಲ ಮೊದಲೊಳ್ ಮೊಟ್ಗಿ (ವರ್ಧಪು. ೯-೬೦ ವ) ; ಪಿರಿಯರ್ಗೆ ಮೊಟ್ಗು ಜನಮಂ ಕೈಕೊಳ್ (ಶಶಿ. ೩-೦೨೦). ೩. ಕುಗ್ಗು ; ಅಡಗು ; ಕುಸಿ : ಪವನಾತ್ಮಜಂ ಗದೆಯಿನೆಲ್ವಡಗಾಗಿರೆ ಪೋದೆ ಮೊಟ್ಗಿ ಬಿಟ್ಟುವು ಮದವಾರಣಂಗಳ್ (ಶಂಕರ. ೦೩-೩೩) ; ಆ ಸಂಗ್ರಾಮದೊಳ್ ತನ್ನನುಜ ತನುಜ ಜಾಮಾತೃವರ್ಗಂ ಪತಲ್ಪಟ್ಟಂತಾಗಳ್ ಮೊಟ್ಗಿ ತಟ್ಗಿಪ್ಪುದುಮಂ (ಶಾಂತಿಪು. ೩-೩೬). **ಮುಗ್ಗು₁** : ೧. ಗುರುಪಾದಾಂ[ಬುರುಹಕ್ಕೆ] ಮುಗ್ಗಿ ಪೊಡೆವಟ್ಟು (ಗದಾಯು. ೮-೩೩). ೨. ಭೂಪರೆಲ್ಲರು ಭಯಭಕ್ತಿಯಿಂ ನೇಮಿಯ ಶ್ರೀಪಾದಕೆ ಮುಗ್ಗುತಿರಲು (ನೇಮಿಸಂ. ೩೨-೨) ; ಪರಿವರ್ತಕೀರ್ತ್ಯಾದಿ ರಾಜರು ಕಣ್ಣೀರು ಸುರಿವುತ ಮುಂದಡ್ಡಗಟ್ಟಿ ಚರಣಾಬ್ಜದೊಳು ಮುಗ್ಗಿ ಕೆಡೆವರು (ಭರತ. ೬೬-೬೬). ೩. ರಿಪುಭಟನ ಮೊಮ್ಮುಗ್ಗಿ ಧರಧುರಕೆ ಕಲಿ ಸಾತ್ಯಕಿಯ ತರಹರಣೆ ತಗ್ಗಿತು ಮಹಿಮೆ ಮುಗ್ಗಿತು (ಕುಮಾ.ದ್ರೋ. ೦೯-೦೦). ೪. ಎಡವು ; ಮುಗ್ಗರಿಸು : "ಮುಗ್ಗು — ಜೀರ್ಣಾವಗಂಧೇ, ಗತಿಭಂಗೇ ಚ (ಮುಗ್ಗರಿಸು)" (ಶಮಿಪಾ) ; ಮುಂದೆ ಮುಗ್ಗುತ್ತೆಡಬಲದೊಳಗಾಂ ಬೀಟುತುಂ ಪಕ್ಕಗೂಡಾಗೋಜಗುತ್ತಂ ಪೋಗಿ (ಕಾದಂಘ. ೦೯೦) ; ಕರ್ಣನ ಕುದುರೆಗಳು ಮುಗ್ಗಿದವು (ಕುಮಾ.ಕ. ೬-೨೬). ೫. ಕೆಡು ; ನಾಶವಾಗು : ಹಿಗ್ಗುವೆ ಯಾಕೋ . . . ಮುಗ್ಗುವ ಕುಗ್ಗುವ ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ (ಪುರಂಡ. ೦-೦೨೨ ಅಮಲ್ಪ್ರತಿ) ; ಪಡೆ ಕಡಲೊಳದ್ದಿ ಜೀಮೂತಾದಿಗಳ್ ನೀರ ಕುಡಿಕುಡಿದು ಮುಗ್ಗಿತೇಪೊಗಳ್ವೆಂ (ಸಿಂಗಿರಾ. ೩-೨೦). ೬. ಕವಿ ; ಮೇಲೆ ಬೀಳು ; ಆವರಿಸು : ಮುಗ್ಗಿ ಬೀಳುವ ಪಾಯದಳವನು ಸುಗ್ಗುನುಸಿ ಮಾಡಿದನು (ಕುಮಾ.ಶ. ೬-೯೬); ಲಗ್ಗೆಯೊಡೆದು ದಾನೆಯ ಮೋಹರ ಮೇಲೆ ಮುಗ್ಗುವ ಕುದುರೆಯ ಪೌಜು ಒಗ್ಗೊಡೆಯಿತು (ಕುರಾಶಾಂ. ೦೩-೦೨೩) ; ಸಲೆ ಮುಗ್ಗಿದರ್ಮುಗಿಲ ಮೊಗ್ಗರದಂತೆ (ಕೃಪಿಕ. ೬-೩೨). ೭. ಜಗಳವಾಡು ; ಕಾದಾಡು : ಮುಳಿದವರೊಳು ಮೊಗವಂಟ ಮುಗ್ಗದೆಯಾಡಿ ಪಳಿಪವರೊಳು ಪೋರುಗೊಳದೆ . . . ಒಳುಮೆಂಡಿರೊಳ್ಪುವಡೆವುದು (ಹರಿ. ೯-೯೦). ೮. ಕೊನೆಗಾಣು ; ಮುಗಿ ; ನಿಲ್ಲು : ಈ ವೃಷಕೇತುವಿನಲ್ಲಿಯೆ ನನ್ನ ಸಂತತಿ ಇಂದಿಗೆ ಮುಗ್ಗಿ ಹೋಯಿತು (ಬದುಕಿ. ೦೦೩). **ಮುಗ್ಗು** : ೧. ಕಡುವಿರಿಯವು ಪೊಜಿಗಳನೆಡೆಮಾಡಗದೆ ಮೇಲೊಟ್ಟಿ ಮತ್ತೆ ಮೆಲ್ಪರಮುಮನಾಗಡೆ ಕಟ್ಟಿ ಕುಸಿದು ಕುಸಿದಡಿ ವಿಜ್ಞುಕದೆ ಸುಗಿದಗಿದು ಮುಗ್ಗಿ ತರ್ಗುವ ಪದದೊಳ್ (ಸುಕುಮಾ. ೩-೦೪). **ಮುಳ್ಗು** : ೩. ಜವದೊಳಿಜಿದಾಡಿದರ್ ಮುಳ್ಗಿದರ್ ತಳ್ಗಿದರ್ ಸಂಗರಾವೇಶದಿಂದೆ (ಜಿವಪು. ೨೬-೦೬); ಇರದಿಜಿಯೆ ಕಣ್ಗೆಟ್ಟು ತಳ್ಗುವರ್ ಮುಳ್ಗುವರ್ (ಜಿವಪು. ೨೮-೨೬). ೪. ಜನ್ನಗುದುರೆ . . . ಪೊದರಂ ಪಾಯ್ದು ಮುಳ್ಗಿ ನಡೆಗೆಟ್ಟು ತಡೆವಟ್ಟು ಕೊಟಗಂ ಪಟಗದ ನೆರೆಯ ಮಜಿಯಜಿಯೊಳ್ ತಾಂಟಿದತ್ತು (ರಾಮಾಶ್ವ. ೦೩೩-೨೩); ಮುಳ್ಗಿ ಕೆಡೆದುದು ಭದ್ರಹಸ್ತಿಯು ಖಿಳ್ಗಮೊರ್ವನ ಕರದಿ ಬರ್ಮದು (ನಾಗಚ. ೦೬-೩೯). **ಮುಟ್ಗು₂** : ೨. ಆಕೆ ವಿನಮದಿಂ ತನ್ನ ಪದಾಬ್ಜದ ಮೇಲೆ ಮುಟ್ಗಲೊದವಿದ ಪದಪೊ ತೆನೆದೆತ್ತಿ ನೃಪಸುತಂ ಮನ್ನಿಸಿದಂ (ಕಾದಂಶಾ. ೦೦೬); ಎಡ್ಡೆ ಮಂದು ಕಾಲ ಮೇಲೆ ಮುಟ್ಗಿದ ವಿನಯಾಭರಾಮನಂ ತೆಗೆದು ತಟ್ಟಿಸಿ (ಕಾದಂಶಾ. ೨೬೩). ೩. "ಮುಟ್ಗು – ಪತನೇ" (ಶಮಿಪಾ). **ಮೊಕ್ಕು₁** : ೨. ಮೊಕ್ಕಿದೆನು ಒಡತಿಯರೇ (ಸವತಿ. ೦೨); ಅನೇಕ ದೇವರಿಗೆ ಮೊಕ್ಕಿದಳು (ಪನ್ನಕೊ. ೨೩). **ಮೊಗ್ಗು₁** : ೩. ಅಳ್ಕಾಡಿದನಿಂದ್ರಂ ಮೊಗ್ಗಿದಂ ಪಾವಕನದಿಜಿದನುಗ್ರಾಂತಕಂ (ಎಕ. VII, ಶಿಕಾ. ೦೭೦-೮; 1066). ೫. ನಿನ್ನ ಸೂತ್ರವು ತಪ್ಪಿದರೆ ಮೊ[ಶಾಕಾಂ. ಮು]ಗ್ಗುವವು ಹೂಹೆಗಳು (ಹಂಸಾ. ೬೮). ೬. ಭೂಸುರವ್ಯದವೈರಿಯು ಪರಶುರಾಮನ ಚಿದವಜಿಯದೆ ಬಂದು ಹಳಚಿದನಾ ಪತಂಗಗಳ ಗೊಂದಣಮದುರಿಯೊಳಗೆ ಮೊಗ್ಗುವ ಚಂದದಲಿ (ಸಂಭಶ. ೨೬-೬೩). ೯. ಬಾಡು ; ಒಣಗು : ಮಾಯದ ಪುಷ್ಪಗಳು ಮೊಗ್ಗಿ ಕಂದಿದವು (ಸುವಶಂ. ೨೨). **ಮೊಳ್ಗು** : ೧. ಒಂಟಿಸಲಗ . . . ಸೊಂಡಿಲನೆತ್ತಿ ಮೊಳ್ಗಿ ಮುಂಗಾಲ ಮೊಣಕಾಲ ಮೇಲೆ ಕುಳಿತುಕೊಳ್ಳುತ್ತದೆ (ಸವತಿ. ೦೭೬). ೨. ಸತ್ಯೇಂದ್ರಚೋಳೇಂದ್ರಸತ್ತ್ವದ ಪದ್ಮಕ್ಕೆ . . . ಮೊಳ್ಗಿದಂ (ರಾಜಶೇ. ೯-೦೦೩); ನಾರಾಯಣನ ಪದಕೆ ಮೊಳ್ಗುವೆನೀಗಳ್ (ವಿಷ್ಣುಪು. ೦-೨-೦೫೩). ೬. ಅರಿಭಟರ ಮಿಗೆ ಬೀಳಲಿಜಿಯೆಂಬ ಖಾನರಬ್ಬರವಾಗ ಗಗನಮಂಡಲವ ಮೊಳ್ಗಿದುದು (ಕಂಶವಿ. ೦-೯೯). 'ಮುಟ್ಗು' ಪಠಾ.

[ದೇ.॥ ತುಲು. ಮೊಕ್ಕು, ಮೊಕ್ಕು, ಮೊಗ್ಗು, ಮೊಗ್ಗು ; ನಾಯ್ಕಿ. ಮೊಕ್ಕ್ ; ಪರ್ಜಿ. ಮೊರ್ಕ್ : ಗದಬ. ಮುಂಲ್ಕ್ ; ಕುಇ. ಮ್ರೊಂಗ ; ಮಾಲ್ತೊ. ಮುರ್ಗ್ಗೆ]

**ಮೊಟ್ಟು₂**, **ಮೊಗ್ಗು₂** (ನಾ). ೧. ನಮಸ್ಕಾರ ; ವಂದನೆ : " ತುಟಿಲಿ ಬಗು ಮೊಟ್ಟು ಮಣಿ ಕುಂಬಿ ಪೊಡವಡಿಕೆಯು ನಮಸ್ಕಾರಕೆ ತವೆ ಸಂದ ನಾಮ " (ಶಬ್ದಮಂ. ೩೩). ೨. ಅಧೀನ ; ವಶ : ' ಮೊಟ್ಟಿಸು ' ಪರಾ. ಮೊಗ್ಗು₂ : ೧. " ಮೊಗ್ಗ[ಪಾಠಾಂ. ಟ್ಟ] ತುಟಿಬಿಗ್ಗೆಯ್ಮೆನ್ನಲ್ ಬಿಡದುದುವೆ ವಂದನಾರ್ಥದಿ ತೊಡರ್ಗುಂ" (ಕಬಿಕಾ. ೦೮೯). ೨. " ಮೊಗ್ಗನೆ ವಶದೊಳ್ (ಕರ್ಣಾಪ. ೯೭); "ಮೊಗ್ಗನೆ ವಶವೆಂದು" (ಚತುಂ. ೯೭). ೩. ಕೊಳ್ಳಿ ; ಸೂರೆ: "ಮೊಗ್ಗನೆ ತಾಂ ಸೂಱೆಯೆಂಬ ತೆಱನದು" (ಚತುಂ. ೭೫೦); ಗೆಲ್ದು ಜಯವಗ್ಗದ ಸುಗ್ಗಿಯ ಮೊಟ್ಟೆಂದೆಂದು ಬಂದಿರದೆ ಪೊಣರ್ಚಿ (ಪುಷ್ಪದ. ೦-೦೨). ೪. ಸುಲಭಸಾಧ್ಯವಾದುದು : ಆ ಬೇಳುನುಡಿಗೇಳ್ದು ಕೆಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ (ಶಂಶಖಾ. ೬-೨೪); ನರೇಂದ್ರಸೇನ ಮುನೀಂದ್ರಂಗೇಕಾಕ್ಷರಂ ಪೆಜಿರಿಗಿವು ಮೊಗ್ಗೇ (ಎಕ. XVI. ೩೩-೨೩ ; 1053); ನೀನಲ್ಲದಂಗನೆಗೆ ಕಾಣ್ಬುದು ಮೊಗ್ಗೇ (ಪುಷ್ಪದ. ೯-೦೦೦). ೫. ಸಾಮರ್ಥ್ಯ ; ಶಕ್ತಿ : ಗುಗ್ಗುರಿಯಂ ತಿಂಬ ಮೊಗ್ಗು ಸುಣ್ಣದೊಳುಂಟೇ (ರವರ್ಣಶು. ೭-೦೭೦); ಅತ್ತಲಿತ್ತಲು ಹರನ ಬಿಟ್ಟವ ಕಿತ್ತ ಮೊಗ್ಗಲ್ಲ (ಕೌತರಾ. ೨೦-೯೩). ೬. (?): ಬಗ್ಗಿಸಿದವೊ ಕೋಗಿಲೆಗಳ್ ಮೊಗ್ಗಪ್ಪ ವಿಯೋಗಿಯಂ ಪುಗಲ್ ಪುಗಲೆನುತಂ (ಕಾವ್ಯಾವ. ೯೬೨). [< ಮೊಟ್ಟು₁]

**ಮೋಂಕು** ' ಮೋಕು ' ನೋ.

**ಮೋಂಬತ್ತಿ**, **ಮೊಂಬತ್ತಿ** (ನಾ). ಮೇಣದಿಂದ ತಯಾರಿಸಿದ ಬತ್ತಿ ; ಮೇಣದ ಬತ್ತಿ : ಸಮಯಕ್ಕೆ ಅಂತ ಮೋಂಬತ್ತಿ. ಬೆಂಕಿಪೊಟ್ಟಣ ಎರಡನ್ನೂ ಇರಿಸಿರುವರು (ತಂಗೂಂ. ೦೯೦); ಬಾಗಿಲಿಗೆದುರಾಗಿ ಮೋಂಬತ್ತಿ ಅಂಟಿಕೊಂಡಿದ್ದ ಕಪ್ಪುಬಣ್ಣದ ವಿಗ್ರಹವೊಂದನ್ನು ತೂಗುಹಾಕಿತ್ತು (ಭಸಮು. ೦೯೦). **ಮೊಂಬತ್ತಿ** : ಹಳೆಯ ಲಾಂದ್ರಗಳನ್ನೂ ಮೊಂಬತ್ತಿಗಳನ್ನೂ ಹಣತೆಗಳನ್ನೂ ಹುಡುಕಿ . . . ಇಟ್ಟಿದ್ದಾಯಿತು (ಮಹಾಗ. ೨೨೩). [← ಹಿಂ. ಮರಾ. ಮೋಮ್‌ಬತ್ತೀ]

**ಮೋಂಬತ್ತಿಬೀಜ** (ನಾ). ಒಂದು ಬಗೆಯ ಸಸ್ಯ : ಹಿಂಡಿ. ಮೋಂಬತ್ತಿ ಬೀಜ (ವೃಕೊಶ. ೪೦-೬೦೪). [ಮೋಂಬತ್ತಿ + ಬೀಜ]

**ಮೋಕ₁** ' ಮೊಕ್ಕ ' ನೋ.

**ಮೋಕ₂** (ನಾ). ೧. ಯಾವುದಾದರೂ ಪ್ರಾಣಿಯ ಕಳಚಿದ ಚರ್ಮ. ೨. ಚತುಷ್ಪಾದಪ್ರಾಣಿ. ೩. ವಿದ್ಯಾರ್ಥಿ. [ಸಂ.]

**ಮೋಕಳೀಕ**, **ಮೋಕಳೀಕು** (ನಾ). ೧. ಬಂಧನವಿಲ್ಲದಿರುವುದು ; ಸ್ವತಂತ್ರವಾದುದು : ತೆರಪಾದುದು : ನಿನಗ ಎರಡ ದಾರಿ ಮೋಕಳೀಕ ಅವ (ಬೀಕಪು. ೦೩೨). ೨. ಸ್ವತಂತ್ರನಾದವನು : ಅಪರಿವರ ಪುಣ್ಯದಿಂದ ಮೋಕಳೀಕ ಆಗೀನಿ (ಗ್ರಾಕಥಾಯು. ೪೯೩); ಗೌಡರು . . . ನಿರಾಯಾಸವಾಗಿ, ನಿಃಶಂಕವಾಗಿ ಅಲೆದಾಡಲು ಮೋಕಳೀಕರಾದರು (ಬೀಕಪ. II. ೪೩). ೩. ವಿವಾಹವಿಚ್ಛೇದನ ; ಸೋಡಚೀಟಿ : ನಮ್ಮ ಅಂತೂನಕಿಂತ ಎರಡ ವರ್ಷ ದೊಡ್ಡಾಕಿ. ಮೋಕಳೀಕ ಹ್ಯಾಂಗ ಮಾಡಿರ ? (ಚಿಕರ್ಗ. ೦೯೩). **ಮೋಕಳೀಕು** : ೪. ಹಕ್ಕು ; ಸ್ವಾಮ್ಯ : ಮಾಲ ಕೊಡುವ ಮೋಕಳೀಕು ನಮಗೆ ಕೊಟ್ಟಿದ್ದಾದರೆ ವಿಕ್ರಿ ಮಾಡುವದಕ್ಕೆ ಅಡಚಣೆ ಬೀಳಲಿಕ್ಕಿಲ್ಲ (ಮುಂಬಮ್ಯಾ. ೩೩). [← ಮರಾ. ಮೋಕಳೀಕ್]

**ಮೋಕಳೀಕು** ' ಮೋಕಳೀಕ ' ನೋ.

**ಮೋಕು**, **ಮೋಂಕು**(ನಾ). ತುದಿ; ಅಗ್ರಭಾಗ; ಮೇಲುಭಾಗ: ಮುಂಡದ ಮೋ[ಪಾಠಾಂ. ಮೂ]ಕಿನಲಿ ಬಗಿದೊಗುವ ನೆತ್ತರು ನಾಕವನು ನಾದಿತ್ತನಲು ಸವಚಿವನು ಪರಬಲವ (ಕುಮಾವ್ಯಾ. ವಾ ೬-೯೩); ಒಮ್ದಂತೂ ಸುಯ್ಯನೆ ಒಂದು ಮೋಕಿಗೆ ಅಪ್ಪಳಿಸಿ ಪುಟಿದು ಬೀಳುತ್ತಿತ್ತು (ಮುಂಗಾಕಿ. ೬೦); ಅವಳು ಮುಂದಿದ್ದ ಹೊರಸಿನ ಕಾಲಿನ ಮೋಕಿಗೆ ರಪರಪನೆ ಜೋರಾಗಿ ಹಣೆ ಹಾಯಿಸಿ ಅಳತೊಡಗಿದಳು (ಅಗಳ. ೬೨). **ಮೋಂಕು** : ಅಲ್ಲಿಂ ಮುಂದೆ ಕೆಂದರಿಯ ಮೋಂಕಿನೊಳ್ ನಟ್ಟ ಕಲ್ಲ್ (ಎಕ. XIII. ೪೦-೪೨; 1204). [ ದೇ.॥ ತೊದ. ಮುಕ್, ಮೊಕ್ ; ಕೊಂಡ. ಮುಸ್ಕು]

**ಮೋಕೂಫ್**, **ಮಾವಕುಫ್**, **ಮುಕೋಪು**, **ಮೊಖೂಫು**, **ಮೋಖೂಫ್**, **ಮೌಕೂಫ್** (ನಾ). ೧. ತೆಗೆದುಹಾಕುವಿಕೆ ; ವಜಾ ; ರದ್ದು : ಅವರ ಕಡೆಯ ಜನಗಳ ಅಧಿಕಾರವನ್ನು ತೆಗೆದು, ಪ್ರಧಾನರೆಂಬ ಹೆಸರನ್ನು ತಪ್ಪಿಸಿ ಆ ಅಧಿಕಾರವನ್ನು ಮೋಕೂಫ್ ಮಾಡಿಸಿದರು (ಮಹಾಕಹ. I. ೨೨೪). **ಮಾವಕುಫ್**: ೧. ನಾಲ್ಕು ಹಣ ಅಡಾಯ್ಯಾಲೆಯನ್ನು ಚತ್ರದ ತಸದೀಕಿನ ಐವಜಿನಲ್ಲಿ ಶ್ರೀಮಂತಕ್ಕೆ ಸಲ್ಲುತಾಯಿದದನ್ನು ಮಾವಕುಫ್ ಮಾಡ್ಸಿ (ಮೈಕಂ. ೦೯೩೬-೨೬-೯; 1830). **ಮುಕೋಪು**: ೨. (ಕೋರ್ಟು, ಕಚೇರಿ ಮುಂತಾದುವನ್ನು) ಮುಚ್ಚಿರುವುದು ; ಬಂದುಗೊಳಿಸಿರುವುದು ; ಸ್ಥಗಿತಗೊಳಿಸಿರುವುದು : ರಜಾಸಮಯವಾದುದರಿಂದ ಕೋರ್ಟು ಮುಕೋಪು ಆಗಿ ಜಡ್ಜಳರ ಆಪ್ತರಲ್ಲಿ ಒಬ್ಬರಾದ ವಕೀಲ ನಾಗಪ್ಪಯ್ಯನವರೂ ಅಲ್ಲಿಗೆ ಚಿತ್ತೈಸಿದ್ದರು (ಮರಮ. ೦೯೭). **ಮೊಖೂಫು** : ೧. ಹೆಚ್ಚಿಗೆ ಹಣ ಬೇಕಾದರೆ ಕೊಡುವೆವೆಂದು ಹೇಳಿ ಪಾರ್ಲಿಮೆಂಟನ್ನು ಮೊಖೂಫು ಮಾಡಿದರು (ಇಂಗ್ಲಇ. ೦೩೭). **ಮೋಖೂಫ್**: ೧. ಕುದುರೆರಿಜಿಮೆಂಟನ್ನು ಮೋಖೂಫ್ ಮಾಡಿ . . . ದಾಖಲೆಗಳನ್ನು ನೋಡಬೇಕೆಂಬ ಅಭಿಪ್ರಾಯದಿಂದ ಜಪ್ತಿಮಾಡಿದರು (ಮಹಾಕಂ. II. ೧೦೦). **ಮೌಕೂಫ್** : ೧. ಗ್ರಾಮದ ಅಥವಾ ಗ್ರಾಮಗಳ ಭಾಗಗಳಲ್ಲಿನ ಯಾವುದಾದರೂ ಗ್ರಾಮ ನೌಕರಿಯು ಮೌಕೂಫ್ ಆಗತಕ್ಕದ್ದು (ಗ್ರಾಮಾಕ. ೮೭).

[←ಅರ. ಮಾವಕುಫ್. ಮೌಕೂಫ್ ; ಹಿಂ. ಮೌಕೂಫ್; ಮರಾ. ಮೋಕೂಫ್. ಮೋಕೂಬ್. ಮೋಹಕೂಬ್./ತುಳು. ಮುಕೂಬ್]

**ಮೋಕ್ಕಕ** (ನಾ). ಒಂದು ಬಗೆಯ ಸಸ್ಯ : " ಮೋಕ್ಕಕಃ – ಮೊಟಗಿನ ಮರ " (೬೩೦. ೦೩೦). [ ? ]

**ಮೋಕ್ಷ** (ನಾ). ೧. ಬಿಟ್ಟುಕೊಡುವುದು. ೨. (ಬಂಧನ, ದಾಸ್ಯ ಮುಂತಾದುವುಗಳಿಂದಾಗುವ) ಬಿಡುಗಡೆ ; ವಿಮೋಚನೆ : ನಿನ್ನ ಬಂಧನಮೋಕ್ಷಮಂ ಮಾಡಿ ರಾಜ್ಯಮಂ ಪೊಗಿಸಿ ಮುನ್ನಿನ ಪರಿಯಲಿರಿಸುವೆಂ (ಪಶಾ. ೦೩-೦೬). ೩. ಬಿಚ್ಚುವುದು ; ಕಳಚುವುದು. ೪. (ಬಾಣದ) ಎಸೆತ. ೫. ಋಣದ ನಿವಾರಣೆ, —ಪರಿಹಾರ. ೬. ಮನುಷ್ಯನ ಚತುರ್ವಿಧಪುರುಷಾರ್ಥಗಳಲ್ಲಿ ಕೊನೆಯದು; ಆತ್ಮವು ಜನನಮರಣಗಳಿಂದ ದೂರವಾಗುವುದು ; ಮುಕ್ತಿ : " ಅಪವರ್ಗಂ . . . ಮೋಕ್ಷಂ . . . ನಿರಾಮಯಂ ನಿರ್ವಾಣಂ " (ಪಟ್ಟಕೋ. ೨೦–೦೯); ಮೋಕ್ಷ ಪ್ರಾಸಾದಾಧಿರೋಹಣನಿಶ್ರೇಣೀಭೂತ ಕ್ಷಪಕಶ್ರೇಣಿಪ್ರಾಯೋಗ್ಯಾಧಃಪ್ರವೃತ್ತಿಕರಣ ಪರಿಣತಿನಪೂರ್ವಕರಣಕ್ಷಪಕ ಪೃಥಮಶುಕ್ಲಧ್ಯಾನಪರಿಣತನಾಗಿರ್ದು (ಆದಿಪು. ೦೦-೦೪ ವ); ಕ್ರಮದಿಂ ಪೂಜಿಸುವಂ ಶತಕ್ರತುವೆ . . . ಪೂಜಾಲಭ್ಯಮುಕ್ಷಣಮೋಕ್ಷಮೆ (ಧರ್ಮಾ. ೦೦—೩೭); ಧರ್ಮಅರ್ಥಕಾಮಮೋಕ್ಷವೆಂಬ ಚತುರ್ವಿಧ ಫಲ ಪದಂಗಳ ಸಾನೊಲ್ಲೆನಯ್ಯಾ (ಅಲಂದೇ. ೦೩೦-೨೨). ೭. ಸುರಿಸುವುದು ; ಹರಿಸುವುದು : ಕಾಮುಗ್ರಹಗೃಹೀತಯಾಗಿರೆ . . . ವ್ಯಾಮೋಹ ಗದ್ಗದಾಶ್ರುಮೋಕ್ಷಮೂರ್ಛಾದಿ ನಾನಾವಿಕಾರಂಗಳನೊಡನೊಡನೆ ತೋಱುವುದುಂ (ಶಂಶಖಾ. ೯–೩೯ ವ). ೮. ತ್ಯಾಗ ; ವಿಸರ್ಜನೆ : ಘಟೋತ್ಕಚ ವಧೆ ದ್ರೋಣಚಾಪಮೋಕ್ಷಂ ದ್ರೋಣವಧೆ . . . ಪೆಱವುಮುಪಾಖ್ಯಾನ ಕಥೆಗಳೊಳೊಂದುಂ ಕುಂದಲೀಯದೆ ಪೇಳ್ದಿಂ (ಶಂಶಖಾ. ೦೪–೩೨ ವ). ೯. ಒಂದು ಬಗೆಯ ಮರ ; ಪಾಟಲಿ : " ಮೋಕ್ಕದ ಮರ – ಗೋಲೀಥ.

ರಘಾಟಲ, ಘಂಟಾ, ಪಾಟಲಿ, ಮೋಕ್ಷ, ಮುಷ್ಕಕ" (ನಾಶಾ. ೯). ೧೦. ಒಂದು ಬಗೆಯ ಸಸ್ಯ : ಜಟಾಮಾಂಸಿ : "ಮೋಕ್ಷಾ — ಜಟಾಮಾಂಸಿ" (೬ಕಾ. ೦೩೦). ೧೧. ನಿಧನ ; ಸಾವು ; ಮರಣ. ೧೨. [ಜ್ಯೋತಿ] ಸೂರ್ಯ ಅಥವಾ ಚಂದ್ರಗ್ರಹಣಕಾಲದಲ್ಲಿ ಗ್ರಹಣದ ನಂತರ ಉಂಟಾಗುವ ಬಿಡುಗಡೆ : ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು ಇನ್ನೆಂದಿಗೆ ಮೋಕ್ಷವಹುದೋ ಕೂಡಲಸಂಗಮದೇವಾ (ಬಸವ. ೯). ೧೩. [ತತ್ತ್ವಶಾ] ಎಂಟು ಬಗೆಯ ಅವಸ್ಥೆಗಳಲ್ಲಿ ಒಂದು : ಸೃಷ್ಟಿಪ್ರಕರಣದಲ್ಲಿ ಪ್ರವೃತ್ತವಾದ ವೇದವಾಕ್ಯಗಳ ದೃಷ್ಟಿಯಿಂದ ಪ್ರಪಂಚವಸ್ತುಗಳಿಗೆ ಒಟ್ಟಿನಲ್ಲಿ ಸಂಭವಿಸುವ ಅವಸ್ಥೆಗಳು ಎಂಟು—ಉತ್ಪತ್ತಿ ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷ ಎಂದು (ಶಾಕತ್ತ. ೪೮೭). ೧೪. [ಜೈನ] ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ ಮತ್ತು ಮೋಕ್ಷ ಎಂಬ ಏಳು ತತ್ತ್ವಗಳಲ್ಲಿ ಒಂದು ; ಬಂಧನಕ್ಕೆ ಕಾರಣವಾದ ಸರ್ವಕರ್ಮಗಳಿಂದಲೂ ಬಿಡುಗಡೆ ಹೊಂದಿ ಆತ್ಮದ ಶುದ್ಧಸ್ವಭಾವವನ್ನು ಗಳಿಸಿಕೊಳ್ಳುವಿಕೆ : ಜೀವಾಜೀವಾಸ್ರವ ಬಂಧಸಂವರನಿರ್ಜರಾಮೋಕ್ಷ ಭೇದದಿಂ ಸಪ್ತವಿಧಂ. . . ಮೂಲೋತ್ತರಾದಿಭೇದಭಿನ್ನಕರ್ಮಪ್ರಕೃತಿಗಳ ನಿರ್ಮೂಳೋಚ್ಛಿತ್ತಿ ಮೋಕ್ಷಮೆಂಬುದು (ಆದಿಪು. ೦೦—೬೩ ವ); ಆತ್ಮನ ಧಿಮಲಾಚಿತ್ಯ ಸ್ವಾಭಾವಿಕ ಜ್ಞಾನಾದಿ ಗುಣಗಣಾವ್ಯಾಬಾಧಸುಖಸಂಯುಕ್ತಾತ್ಯಂತಿಕಾವಸ್ಥಾಂತರಂ ಮೋಕ್ಷಂ (ತತ್ತ್ವಸೂ. ೨). ೧೫. ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸಂವರ, ನಿರ್ಜರ, ಬಂಧ ಮತ್ತು ಮೋಕ್ಷಗಳೆಂಬ ಒಂಬತ್ತು ತತ್ತ್ವಗಳಲ್ಲಿ ಒಂದು ; ನವಪದಾರ್ಥಗಳಲ್ಲಿ ಒಂದು : ಜೀವಾಜೀವಪುಣ್ಯಪಾಪಾಸ್ರವಸಂವರ ನಿರ್ಜರಬಂಧಮೋಕ್ಷಮೆಂದಿಂತು ನವಪದಾರ್ಥಂಗಳುಂ ಪಂಚಾಸ್ತಿಕಾಯಷಡ್ದ್ರವ್ಯಂಗಳುಮೆಂಬಿವಱೊಳ್ಪುದ ಮಾನುಮಱಿತಮುಂ . . . ಗುಣಾಂಗಳುಮನಱಿದು (ವಡ್ಡಾರಾ. ೬-೦೮). [ಸಂ.]

**ಮೋಕ್ಷಕ** (ನಾ). ೧. ಬಿಡುಗಡೆ ಮಾಡುವುದು. ೨. ಮುಕ್ತಿ; ವಿಮೋಚನೆ. ೩. ವಿಮೋಚನೆ ಮಾಡುವವನು ; ಮುಕ್ತಿಯನ್ನು ಕೊಡುವವನು. [ಸಂ.]

**ಮೋಕ್ಷಕಾಲ** (ನಾ). ಗ್ರಹಣವು ಬಿಡುವ ಸಮಯ : ಖಗೋಳಶಾಸ್ತ್ರಜ್ಞರು . . . ಗ್ರಹಣಗಳ ಸ್ಪರ್ಶ ಮತ್ತು ಮೋಕ್ಷಕಾಲಗಳು, ಮಧ್ಯಗ್ರಹಣಕಾಲ ಮುಂತಾದ ಎಲ್ಲ ವಿವರಗಳನ್ನು ಕೊಡುತ್ತಾರೆ (ಕವಿಕೋ. VI, ೭೮೯). [ಸಂ.]

**ಮೋಕ್ಷಗತಿ** (ನಾ). ಬಿಡುಗಡೆ ; ಮುಕ್ತಿ : ವೀತರಾಗತ್ವಮಂಬುರುಹ ಶ್ರೇಣಿಗುದಾತ್ತ ಮೋಕ್ಷಗತಿ ಪೌಷ್ಕರ್ಕ್ಯದುದಾದಂ ದಿಗಂಬರಸಾಂಗತ್ಯತಪಃ ಪ್ರಭಾವಮೆನಸುಂ ಮೆಯ್ವೆತ್ತೊ ಡೇನಾಗದೋ (ಧರ್ಮಾ. ೬-೩೩). [ಸಂ.]

**ಮೋಕ್ಷಗಾಮಿ** (ನಾ). ಕೈವಲ್ಯಕ್ಕೆ ಹೋಗುವವನು ; ಮುಕ್ತಿಯೋಗ್ಯನಾದವನು : ಸಗರಸುತರೆಲ್ಲರುಂ ಮೋಕ್ಷಗಾಮಿಗಳ್ (ಅಜಿತ. ೦೨-೨೯) ; ಭೂಮಿಯೊಳಾಕಾಶವನು ತಂದು ಹೂಳಿದಂತೀ ಮೆಯ್ಯೊಳಾತ್ಮತುಂಬಿಹುದು ಭೂಮಿಗಚ್ಚರಿಯಲ್ಲವೆಂದರಾ ಮೋಕ್ಷಗಾಮಿಗಳಧ್ಯಾತ್ಮವಱಿದು (ಭರತೇ. ೭೪-೭೭). [ಸಂ. ಮೋಕ್ಷಗಾಮಿನ್]

**ಮೋಕ್ಷಣ** (ನಾ). ೧. ಬಿಡುಗಡೆ ಮಾಡುವುದು ; ವಿಮೋಚನೆಗೊಳಿಸುವುದು. ೨. (ಬಾಣವನ್ನು) ಎಸೆಯುವುದು. ೩. [ನಾಟ್ಯ] ಇಪ್ಪತ್ತು ಬಗೆಯ ಕರಕರ್ಮಭೇದಗಳಲ್ಲಿ ಒಂದು : ಧೂನನ, ಶ್ಲೇಷ, ವಿಶ್ಲೇಷ, ಕ್ಷೇಪ, ರಕ್ಷಣ, ಮೋಕ್ಷಣ . . . ತರ್ಜನ ಈ ಇಪ್ಪತ್ತು ಕರಕರ್ಮಭೇದಂಗಳ್ (ಲಾಸ್ಯರಂ. ೪-೧೩ ವ). [ಸಂ.]

**ಮೋಕ್ಷದಾಯಕ** (ನಾ). ೧. ಕೈವಲ್ಯವನ್ನು ಕೊಡುವಿಕೆ. ೨. ಕೈವಲ್ಯವನ್ನು ಕೊಡುವವನು : ಪರಮಾತ್ಮ. [ಸಂ.]

**ಮೋಕ್ಷದಾಯಕಿ** (ನಾ). ಮುಕ್ತಿಯನ್ನು ಕೊಡುವ ದೇವತೆ : ಮೋಕ್ಷದಾಯಕಿ ಸಕಲಮಂತ್ರನಾಯಕಿ ಮಾಯೆ ಸಾಕ್ಷಾಜ್ಜಗನ್ಮಾತೆ (ಕೃಬಾಭಾ. ೦೩-೨೩). [ಮೋಕ್ಷದಾಯಕ + – ಇ₂]

**ಮೋಕ್ಷಪದ** (ನಾ). ೧. ಕೈವಲ್ಯದ ಪದವಿ ; ಮುಕ್ತಿ : ಸತತಮೋಕ್ಷಪದೇಚ್ಛುಮಹಾತಪಸ್ವಿ . . . ಸೈದ್ಧಾಂತಿಕಚಕ್ರವರ್ತಿ ಮುನಿಚಂದ್ರಮುನೀಂದ್ರನೆ ವಂದ್ಯನುರ್ವಿಯೊಳ್ (ಶಂಪ್ರಕು. ೦-೨೭). ೨. ಮುಕ್ತಿದಾಯಕನಾದವನು : ಮೋಕ್ಷಪದರ್ ಸದೇಷ್ಟುಗಳಕ್ಷಯಮುನಿಗಳ ಸುವಾಕ್ಯದೊಳಮೆಣಿಸಲ್ ಪ್ರತ್ಯಕ್ಷಪ್ರಮಾಣವಚನಮುನಕ್ಷಮು ಮೂಢಾತ್ಮನೀನದಂ ತಿಳಿದಿರ್ಪ್ಯ (ಯಶೋದಹ. ೧೧-೬೮). [ಸಂ.]

**ಮೋಖೂಫ್** 'ಮೋಕೂಫ್' ನೋ.

**ಮೋಗ** (ನಾ). (?) : ಬಾಗಿಸೆ ಶಿರವ ಕೂರ್ಮಗಳ ಗ್ರೀವ ಮೇಗಾಲುಗಳ ಸೊಗಸುಗಳ ನವ್ಯಮೋಗದಂತಹ ಹರಡುಗಳ ಬಂದು (ಕುಶೇಲೋ. ೩೯-೪). [ಸಂ.]

**ಮೋಗವ್** 'ಮೋಘವು' ನೋ.

**ಮೋಗುಮ** 'ಮೋಘವ್' ನೋ.

**ಮೋಘ** (ಗು). ೧. ಇಲ್ಲದಿರುವ ; ವಿಹೀನವಾದ. ೨. ಬಿಟ್ಟ ; ತ್ಯಜಿಸಿದ. ೩. ವ್ಯರ್ಥವಾದ ; ಫಲವಿಲ್ಲದ : ಮಚ್ಚರಮುಂ ಮೋಘಮೊಡಂಬಡುಂ ಕಲುಷಮುಂ ಮುಸ್ನುಳ್ಪುದು (ಶಂಶಭಾ. ೭-೩೩). ೪. ಉದ್ದೇಶರಹಿತವಾದ ; ಗುರಿಯಿಲ್ಲದ. (ನಾ). ೫. ವ್ಯರ್ಥವಾದುದು ; ನಿಷ್ಪ್ರಯೋಜಕವಾದುದು : "ವೃಥೆ ಮೋಘಂ" (ಶಸ್ತ್ರಕೋ. ೦೦೨-೦೦); ಮೋಘಮನಖಿಲಪರಿಗ್ರಹದಾಘಮನೀ ಕೈಕೆ ಬೇಡೆ ಧರೆಯುಂ ತೃಣದಿಂ ಲಾಘವಮೆನೆ ಬಗೆದೀಗುಂ ರಾಘವನೌದಾರ್ಯತುಂಗನೀಯದುದುಂಟೇ (ಶಂರಾಮಾ. ೬-೦೦೯); ಲೋಕ ಶಾಶ್ವತ, ಇದೇ ಸತ್ಯ, ಮಿಕ್ಕುದು ಮೋಘ (ಬುದ್ಧಶ. ೧೭). [ಸಂ.]

**ಮೋಘತೆ** (ನಾ). ಅಪ್ರಯೋಜಕವಾದುದು ; ನಿರರ್ಥಕವಾದುದು : "ಮೋಘತೆ ತಾಂ ವೈಯರ್ಥಂ" (ವಸ್ತುಕೋ. ೦೦೩-೨೯). [ಸಂ. ಮೋಘತಾ]

**ಮೋಘವ್**, ಮಗುಂ, ಮೊಗಂ, ಮೊಗುಂ, ಮೋಗವ್, ಮೋಗುಮ, ಮೋಘಮ (ಗು). ೧. ಅನಿಶ್ಚಿತವಾದ ; ಅಸ್ಪಷ್ಟವಾದ ; ನಿರ್ದಿಷ್ಟವಲ್ಲದ : ಕೊಟ್ಟ ಮನೀಗೆ ಹೋಗ್ತೀನಿ ಅಂಬೋ ಮೋಘವ್ ಮಾತು ಏನುಪಯೋಗ ? (ಭಾಗ್ಯಶ್ರೀ. ೯); ಕೇಶವರಾಯ ಮೋಘವ್ ಮಾತಾಡಿ ಕೈಬಿಟ್ಟ (ಗ್ರಾಮಾಯ. ೧೦೭). **ಮಗುಂ** : (ನಾ). ೨. ಅಸ್ಪಷ್ಟ; ಅನಿಶ್ಚಯ : ಆಫೀಸಿನಲ್ಲಿ ಇರುವ ಇತರರಿಗೆ ವಿಷಯ ತಿಳಿಯದಂತೆ ಮಗುಂ ಆಗಿ ಉತ್ತರ ಕೊಡುವುದು ಮತ್ತೂ ಕಷ್ಟ (ಅಳಿಮ. ೦೦೯). **ಮೊಗಂ** : ೨. ಸುಂಕೆ ಅಲ್ಲಮಾತಂತ ಅಂಗೆಲ್ಲ ಮೊಗಂ ಆಗಂದ್ರೆ ನಡೀತದ ರತ್ನ ? (ಕರಾರ. ೧೭೨). **ಮೊಗುಂ** : ೧. ಉಭಯತ್ರರಿಗೂ ಅನುಕೂಲವಾಗುವಂತೆ ಮೊಗುಂ ಕರಾರು ಮಾಡಿಸಿದೆ (ಕಂಪ. ೩೨೪); ಮಹಲಿಂಗಯ್ಯ ಮೊಗುಮ್ಮಾಗಿ. . . ಅಂಗಲಾಚಿದ (ಮಾಮುಷ. ೩೦). **ಮೋಗವ್** : ೧. ಹೊಸ ಎಸ್. ಈ. ಯ ನೇಮಣೂಕೀ ಆಜ್ಞೆಗಳು ಹಿಂಬಾಲಿಸಲಿವೆ ಎಂಬ ಮೋಗವ್ ವಾಕ್ಯವಿತ್ತು (ದೀಶಹ. II, ೩೭೪). ೨. ಅರ್ಜಿ ಒಳಗ ಎಲ್ಲಾ ಮೋಗವ್‌ನ ಅವ (ದೀಶಹ. II, ೩೨೦); ಹಿಂಗ ಮೋಗವ್ ಬ್ಯಾಡಪ. ಬಿಡಬಿಡಿಸಿ ಹೇಳನ್ನು ಮಾರಾಜರಿಗೆ (ವಾರಾಂ. ೮೭). **ಮೋಗುಮ** : ೧. ಖರೀದಿ ಬರಿಯುವಾಗ್ಯೆ ಉತ್ತಮ, ಮಧ್ಯಮ, ಸುಮಾರ ಈ ಪ್ರಕಾರದ ಮೋಗುಮ ವರ್ಣನೆಯು ಬರಿಯದೆ, ಯಾವ ಪ್ರಕಾರದ ಮಾಲು ಬೇಕಾಗುತ್ತದೆಯೋ ಅದರ ಅಜಮಾಸದಿಂದ ಭಾವವು ಸಹಾ ಬರಿಯಬೇಕು (ಮುಂಬಿವ್ಯಾ. ೩೮). **ಮೋಘಮ** : ೧. ಏನೋ ವಿಚಾರಿಸಿದಂತೆ ಮಾಡಿ . . . ಮೋಘಮ

ಮಾತಾಡಿ ಬಿಟ್ಟ (ಗ್ರಾಮಾಯ. ೨೬೯). [ ← ಅರ. ಮುಗ್ಹವ್ ; ಹಿಂ. ಮುಗ್ಧಮ್; ಮರಾ. ಮೋಘಮ್, ಮೋಹಗಮ್ ]

**ಮೋಘವು** ' ಮೋಘವ್ ' ನೋ.

**ಮೋಘೆ** (ನಾ). ೧. ಒಂದು ಬಗೆಯ ಸಸ್ಯ; ಪಾದರಿಗಿಡ. ೨. ಕ್ರಿಮಿ ನಾಶಕಬೀಜವನ್ನು ಹೊಂದಿರುವ ಒಂದು ಬಗೆಯ ಸಸ್ಯ ; "ವಾಯಿ ವಿಡಂಗ" (ಗಂಗಾಮ. ೬). [ಸಂ. ಮೋಘಾ]

**ಮೋಚ** (ನಾ). ೧. ಮರದ ತೊಗಟೆಯಿಂದ ಸುರಿಯುವ ರಸ; ಹಗಿನ. ೨. ಬಾಳೆಯ ಗಿಡ ಮತ್ತು ಅದರ ಹಣ್ಣು; ಕದಳಿ : "ಕದಳೀರಂಭಾಫಿಖ್ಯಮಂತದಕ್ಕುಂ ಮೋಚಂ" (ಶಬ್ದಮಣಿ. ೩೪-೬); ಉಂನತಚಂಪಕಚೋಚಮೋಚಪಾಟಳಪನಸಾಂಬ್ರ ಪೂಗವನನಾಗಲತಾಳಿಯಿಂ ... ಒಪ್ಪುವುದು (ಶಾಸನ. IX–1, ೦೦೬-೨೩; 1057); ಮಣಿಕನಕರಜತಪಾತ್ರಂಗಳೊಳ್ ... ದ್ರಾಕ್ಷಾಚೋಚಮೋಚಾದಿ ಫಳಕುಳಂಗಳುಂ ಸೊಗಯಿಪುವು (ಚಂದ್ರಪ್ರ. ೬-೩೪ ವ). ೩. ಒಂದು ಬಗೆಯ ಮರ ಮತ್ತು ಅದರ ಕಾಯಿ ; ನುಗ್ಗೆ : ಪೊಸತವರೆ ತೊಂಡೆ ಪಡಲಂ ಮೋಚಂ ಕೂಗರಿ ಬದನೆಯೆನಿಪ ಪೋಲೋಗರಮಂ ಪಲವನಿಕ್ಕಿದರ್ ಶಶಿಮುಖಿಯರ್ (ತ್ರಿಷಷ್ಟಿ. ೦೦-೩೨). ೪. ಬೂರುಗದ ಮರ; ಶಾಲ್ಮಲಿವೃಕ್ಷ: "ಸ್ಥಿರಜೀವಿ ಮೋಚ ಶಾಲ್ಮಲಿಯೆಲವಕ್ಕು" (ಶಬ್ದಮಣಿ. ೩೬-೦೭). [ಸಂ.]

**ಮೋಚಕ** (ನಾ). ೧. ಬಿಡುಗಡೆ ಮಾಡುವುದು ; ವಿಮೋಚನೆ ಮಾಡುವುದು. ೨. ಬಿಡುಗಡೆ ; ಮುಕ್ತಿ : ಬಲುಕರ್ಮಬಂಧಗಳು ಮೋಚಕವಾಗುವರಿ (ಶಿವಾಕ್ಷ. ೦೪-೩). ೩. ಮುಕ್ತಿದಾಯಕವಾದುದು : ಆಸಕ್ತಿಯಿಂದ ಮಾಡಿದ್ದು ಹೇಯ, ಬಂಧಕ, ಕಹಿ ; ಅನಾಸಕ್ತಿಯಿಂದ ಮಾಡಿದ್ದು ಶ್ರೇಯ, ಮೋಚಕ, ಸಿಹಿ (ಅಂತರಾ. ೦೨). ೪. (ಐಹಿಕ ಬಂಧನದಿಂದ) ಬಿಡುಗಡೆ ಹೊಂದಿದವನು ; ಮುಕ್ತ : ತ್ರಿವಿಧ ತಾಪಗಳಿಂದ ತಪಿಸುತ್ತ ಮೋಚಕರಾಗಲು ಯಾಚಕರಾಗಿ ಬಂದ ಜನಕೋಟಿಯನ್ನು ನೋಡಿ ಅನಂತ ಅಚ್ಚರಿಗೊಂಡ (ಜೀವಾಪ. ೦೦೩). ೫. ವಿರಕ್ತ; ಯತಿ. ೬. ಅನಾಸಕ್ತಿ; ವೈರಾಗ್ಯ. ೭. ಬಾಳೆಯ ಗಿಡ ಮತ್ತು ಅದರ ಹಣ್ಣು; ಕದಳಿ : "ಮೋಚಕಂ – ಬಾಟೆಯ ಹಣ್ಣು" (೬ಶಧ. ೦೩೦); ಮೋಚಕಂ ಬಳುಕಿದುವು ನುಣ್ದೊಡೆಗೆ (ವಂಕಾರಾ. ೩-೯-೩). ೮. ನುಗ್ಗೆಯ ಮರ ಮತ್ತು ಅದರ ಕಾಯಿ : "ಶೋಭಾಂಜನಃ, ಶಿಗ್ರುಃ, ತೀಕ್ಷ್ಣಗಂಧಕಃ, ಅಕ್ಷೀಬಃ, ಮೋಚಕಃ – ಇ ನುಗ್ಗೆಮರದ ಹೆಸರು" (ಸಿದ್ಧಾಂತಿ. ೦೦೬). ೯. ಶಾಲ್ಮಲಿ ; ಬೂರುಗದ ಮರ. ೧೦. ಮರ; ವೃಕ್ಷ : ಬಾಟೆಯೊಳು ನುಗ್ಗೆಯೊಳು ಭೂರುಹದೊಳು ಸ್ಥಿರಾಯುವಿನೊಳು ವಿರಾಗದೊಳು ಮುಕ್ತಿಯೊಳು ಮೋಚಕಾಖ್ಯಂ" (ಶಬ್ದಮಣಿ. ೦೪೯-೪೭). [ಸಂ.]

**ಮೋಚಕರಿ** (ನಾ). ಒಂದು ಬಗೆಯ ಸಸ್ಯ : "ಮೋಚಕರೀ – ಮಾದವೃಕ್ಷ (ಮಾಚಡ ವೃಕ್ಷ)" (೬ಶಧ. ೦೩೦). [ ? ]

**ಮೋಚಜ** (ನಾ). ಬೂರುಗದ ಮೇಣ : ಎಲವದ ಹಗಿನು : "ಮೋಚಜಃ – ಎಲವದ ಹಗಿನು" (೬ಶಧ. ೦೩೦). [ಸಂ.]

**ಮೋಚನ** (ನಾ). ೧. ಬಂಧನದಿಂದ ಬಿಡುಗಡೆ ಮಾಡುವುದು,— ಬಿಡಿಸುವುದು. ೨. ಬಿಡುಗಡೆ ; ವಿಮೋಚನೆ ; ಮುಕ್ತಿ : ಎಲ್ಲಿ ಚೇತನವೆಸುವುದಲ್ಲಿಯೆ ಪ್ರಾಣಪದವೆಲ್ಲಿ ಪ್ರಾಣಂ ಬಲಿವುದಲ್ಲಿಯೆ ಮೋಚನಂ (ಅಂಗಪ್ರ. ೦೩-೨೯). ೩. ಬಿಡಿಸುವಿಕೆ ; ಕಳೆಯುವಿಕೆ ; ನಿವಾರಣೆ. ೪. ನಿವಾರಣೆ ಮಾಡುವವನು : ನಿರ್ಭರಾಶಾಪಾಶಮೋಚನ ಕರ್ಮ ಕರ್ಮಠನು (ಬಸವ. ೩೩-೩); ಶೋಕಮೋಚನನೆಂದು ವೇದಗಳೂ ಕೂಡ ಆತನ ಯಶಸ್ಸಿನ ಗಾಯನ ಮಾಡುವವು (ತುಳಸೀ. ೦೭). ೫. ಎಸೆಯುವುದು. ೬. ಗರ್ವ. ೭. ಮೋಸ ; ವಂಚನೆ. [ಸಂ.]

**ಮೋಚನಿರ್ಯಾಸ** (ನಾ). = ಮೋಚಜ : "ಮೋಚನಿರ್ಯಾಸಃ– ಎಲವದ ಹಗಿನು" (೬ಶಧ. ೦೩೦). [ಸಂ.]

**ಮೋಚಶ್ರಾವ** (ನಾ). = ಮೋಚಜ : "ಮೋಚಶ್ರಾವಃ, ಮೋಚಸಾರಃ – ಈಯೆರಡುಂ ಎಲವದ ಹಗಿನು" (೬ಶಧ. ೦೩೦). [ಸಂ.]

**ಮೋಚಸಾರ** (ನಾ). = ಮೋಚಜ : "ಮೋಚಶ್ರಾವಃ, ಮೋಚಸಾರಃ – ಈಯೆರಡುಂ ಎಲವದ ಹಗಿನು "(೬ಶಧ. ೦೩೦). [ಸಂ.]

**ಮೋಚಾಶ್ರು** (ನಾ). = ಮೋಚಜ : "ಮೋಚಾಶ್ರುಃ – ಎಲವದ ಹಗಿನು" (೬ಶಧ. ೦೩೦). [ ಸಂ. ]

**ಮೋಚಿ**$_1$ (ನಾ). ಬಾಳೆ; ಕದಳಿ : "ಮೋಚೀ–ಬಾಟೆ" (೬ಶಧ. ೦೩೦). [ ಸಂ. ಮೋಚೀ ]

**ಮೋಚಿ**$_2$ (ನಾ). ಚಪ್ಪಲಿ ಮುಂತಾದ ಚರ್ಮದ ಕೆಲಸ ಮಾಡುವವನು; ಚಮ್ಮಾರ : ಜೋಡನು ಹೊಲಿಯಲು ಬಾರದ ಪಂಡಿತ ಮೋಚಿಯು ತಾನಲ್ಲ (ಅರಳೋ. ೨೫).

[ ← ಹಿಂ. ಮರಾ. ಮೋಚೀ; ಬಂಗಾಲಿ. ಮುಚಿ. / ಸಂ. ಮೋಚಕ ]

**ಮೋಚಿಕೆ** (ನಾ). ಕತ್ತರಿಸಿರುವ ಸ್ಥಿತಿ : ಇತ್ತ ಮೂಗಿನ ಮೋಚಿಕೆಯ ಭಟ ಖತಿಯ ಭರದಲಿ ಬಂದನಾಹವಕೆ (ಕೊರಚಾ. ೬-೨೮-೪).

[ ಮೋಚು$_1$ + – ಇಕೆ ]

**ಮೋಚಿಗ** (ನಾ). ಮೊಚ್ಚೆಯನ್ನು ಹೊಲಿಯುವವನು : ಕವಲೆಯಮ ನಳದೋಂ [ಮೋ]ಚಿಗನುಂ . . . ಧರ್ಮ್ಮವಂ ಬಿಟ್ಟೋನ್ (ಇಂ. ೦೯೪೭, ಶಾಸನ. ೨೦೭–೦೦; 781).

[ ? ಇದು ' ಮೊಚ್ಚಿಗ ' ಎಂಬುದರ ಅಪಲಿಖಿತವಿರಬಹುದು ]

**ಮೋಚು**$_1$, **ಮೋಸು**$_1$ (ಕ್ರಿ). ೧. ಕತ್ತರಿಸು ; ತುಂಡುಮಾಡು : 'ಮೋಚಿಕೆ' ಪರಾ. ೨. ವೈಧವ್ಯಸೂಚಕವಾಗಿ ತಲೆಯನ್ನು ಬೋಳಿಸಿಕೊಳ್ಳು : "ಮೋಚು—ವೈಧವ್ಯೇ" (ಕಮಾಲ) ; ಈಚಲಮರ ಹೀನ ನೀಚರ ನೆರೆ ಹೀನ ಮೋಚಿದ ಹೆಣ್ಣು ತರ ಹೀನ (ಸರ್ವಜ್ಞ. ೦೭೩೭). ೩. ವೈಧವ್ಯಸೂಚಕವಾಗಿ ತಲೆಯಮೇಲೆ ಸೆರಗು ಹಾಕಿಕೊಳ್ಳು— ಮುಸುಕು ಹಾಕಿಕೊಳ್ಳು: (೬). ೪. (ಅಲಂ) ಹಾಳುಮಾಡು ; ನಾಶಗೊಳಿಸು : ನಾಚಿ ಪುಷ್ಕರ ಸಿಂಹಪೀಠವ ಮೋಚಿದವನಂ ತಿಳಿದು ನಿಳಯಕೆ ಕೋಚಿಯಿಂದೈದಿದನು ನಳನೃಪ ನಿಜನಿಕೇತನಕೆ (ಅಂಬಿಗಾ. ೯೬-೭೪). **ಮೋಸು**$_1$ : ೪. ಮಾತ್ಸರ್ಯಪುರವರಾಧೀಶನತಿಕೋಪಮಾನುಷನಾಗಿ ಜಂಗಮನ ಮೋಸಿ ಬಾ ಕದ್ದೊಯ್ದು ಚರಚೋರ ಕಳವುರವ . . . ಎನುತಲಿ ಯತಿಯ ರೋಷದಿಂ ಕಿಡಿಕಿಡಿಯನುಗುಳುತಿರೆ (ಕೋರಜಾ. ೩-೨).

ಮೋಚಿಕೊಳ್ಳು = ವೈಧವ್ಯಸೂಚಕವಾಗಿ ತಲೆಯನ್ನು ಮುಂಡನ ಮಾಡಿಸಿಕೊಳ್ಳು : ನಿನ್ನ ಅಪ್ಪ ಅಂತೀಯಲ್ಲ, ಅವರು ಸತ್ತಾಗ ನಾನು ಮೋಚಿಕೊಂಡೆ (ಸಣ್ಣಕ. ೯-೩೭).. ' ಲೋಚು ' ಪರಾ.

[ ದೇ.॥ ತೆಲು. ಮೋಯು ]

**ಮೋಚು**$_2$ (ನಾ). ಬೋಳಿಸುವಿಕೆ ; ಮುಂಡನ : ಒಡಾಂತು ಕಯ್ಯಲ್ಲಿ ಮೋಚಾಂತು ತಲೆಯಲ್ಲಿ . . . ಪರಿಜು ಸೊಡರಂತವಂ ಬಿಕ್ಕ ನಿಕ್ಕುವಮಲ್ತು (ಶಾಸಂದ. ೭-೪೮). [ < ಮೋಚು$_1$ ]

**ಮೋಚೆ** (ನಾ). ೧. ಬಾಳೆ ; ಕದಳಿ : "ರಂಭಾ, ಕದಳೀ, ಮೋಚಾ— ಈ ೩ ಬಾಟೆ" (ಹಲಾಯು. ೩೨-೩೯). ೨. ಹತ್ತಿಯ ಗಿಡ. ೩. ನೀಲಿ ಗಿಡ : "ಮೋಚಾ—ಬಾಟೆ, ನೀಲಿ, ಎಲವ, ತದುಕು" (೬ಶಧ. ೦೩೦). ೪. ಶಾಲ್ಮಲಿ ವೃಕ್ಷ; ಬೂರುಗದ ಮರ: "ಪಿಚ್ಛಿಲಾ, ಪೂರಣೀ, ಮೋಚಾ, ಚಿರಾಯುಃ, ಶಾಲ್ಮಲಿಃ —ಇ ಬೂರುಗದ ಗಿಡ" (ಸಿದ್ಧಾಂತಿ. ೦೨೨).

[ ಸಂ. ಮೋಚಾ ]

**ಮೋಜ** ' ಮೊಚ್ಚೆಯ ' ನೋ.

**ಮೋಜಣಿ** (ನಾ). ಭೂಮಿಯನ್ನು ಅಳತೆ ಮಾಡುವಿಕೆ ; ಭೂಮಿಯ ಮಾಪನ : ಮೋಜಣೀ ಎಂಬುವದು ಅಳತೆಯನ್ನೂ ಮೋಜಣೀದಾರ್ ಎಂಬುವದು ಅಳತೆ ಮಾಡುವವನನ್ನೂ ತಿಳಿಸುವದು (ಭೂಮಿಅ. ೧) ; ನೆಲವನ್ನೆಲ್ಲ ಅಳೆದು ವಿಂಗಡಿಸಿ ಕಂದಾಯ ಗೊತ್ತುಮಾಡುವ ' ಮೋಜಣಿಯವರ' ಕಾರ್ಯರೀತಿಯನ್ನು ಇದು ವಿಮರ್ಶಿಸುತ್ತದೆ (ಪಾಕದ. ೦೩೩).

[ ←ಮರಾ. ಮೋಜಣೀ ]

**ಮೋಜಣಿದಾರ** ' ಮೋಜಣೀದಾರ ' ನೋ.

**ಮೋಜಣೀಖಾತೆ** (ನಾ). ಭೂಮಿಯ ಅಳತೆ, ಪರಿಶೀಲನೆ ಮೊದಲಾದ ಕಾರ್ಯವನ್ನು ಮಾಡುವ ಇಲಾಖೆ : ಮೋಜಣೀಖಾತೆಯಲ್ಲಿ ಅವನಿಗೊಂದು ಕೆಲಸವಿತ್ತು (ರಂಗಲೋ. ೯೯). [ ಮೋಜಣಿ + ಖಾತೆ$_2$ ]

**ಮೋಜಣೀದಾರ**, ಮೋಜಣಿದಾರ, ಮೋಜಿನಿದಾರ, ಮೋಜಿನೀದಾರ (ನಾ). ಭೂಮಿಯನ್ನು ಅಳತೆ ಮಾಡುವವನು : ಕೆಲವು ವೇಳೆ ಮೋಜಣೀದಾರನು ಅಳತೆಯ ಕೆಲಸದಲ್ಲಿರುವಾಗ ನಿಶಾನಿ ಹಿಡಿಯುವವನು ನಿಶಾನಿ ಕೆಳಗಿಟ್ಟು ನಿದ್ದೆ ಮಾಡುವುದುಂಟು (ಭೂಮಿಅ. ೦೫). **ಮೋಜಣಿದಾರ** : "ಮೋಜಣಿದಾರ, ಪೈಮಾಷಿದಾರ" (Surveyor. ೩೦೪೩). **ಮೋಜಿನಿದಾರ** : ಮೋಜಿನಿದಾರನ ದಿಗ್ದರ್ಶಕ (Compass. ಪಾಂಡಿ. ೦೮). **ಮೋಜಿನೀದಾರ**: ತಮ್ಮ ಜಮೀನನ್ನು ಪಕ್ಕದ ಜಮೀನಿನವನು ಒತ್ತುವರಿ ಮಾಡಿಕೊಂಡಿದ್ದಾನೆಂದು ಮೋಜಿನೀದಾರರನ್ನು ಕರೆಸಿ, ಅಳತೆ ಮಾಡಿಸಿ, ಸರಿಯಾದ ಸ್ಥಳಕ್ಕೆ ಬಾಂದುಕಲ್ಲು ನೆಡಿಸಿದ್ದವನು (ಆಪಾಮ. ೫೩).

[← ಮರಾ. ಮೋಜಣೀದಾರ್]

**ಮೋಜನ** (ನಾ). ವಿಮೋಚನೆ : ಬಿಡುಗಡೆ : "ಮೋಜನ.—ಮೋಚನ = ಬಿಡುಗಡ" (ಶಬ್ದಕೋ. ೩೭) ; ಮೋಚನ, ಮೋಜನ (ಶಬ್ದಸು. ೧೪೩ ತ್ರಯೋ). [ <ಸಂ. ಮೋಚನ]

**ಮೋಜನಿ** (ನಾ). ಮಾವಿನ ಮರ : "ಮೋಜನೀ—ಮಾವು" (ಚಿತಂ. ೦೩೦).

[ ? ]

**ಮೋಜಾ** ' ಮೊಚ್ಚೆಯ ' ನೋ.

**ಮೋಜಿನಿದಾರ** ' ಮೋಜಣೀದಾರ ' ನೋ.

**ಮೋಜಿನೀದಾರ** ' ಮೋಜಣೀದಾರ ' ನೋ.

**ಮೋಜು$_1$** ' ಮೊಚ್ಚೆಯ ' ನೋ.

**ಮೋಜು$_2$**, ಮೌಜು (ನಾ). ೧. ವಿನೋದ; ತಮಾಷೆ : ಈ ಸನ್ನಿವೇಶವು ಬಲು ಮೋಜಿನದಾಗಿದೆ (ಸಾಹಿಸ. ೦೪೯) ; ಫಕೀರನೊಬ್ಬನು ಬಂದು ಅಪುಲನಿಗೆ ಮೋಜಿನ ಕತೆಗಳನ್ನು ಹೇಳುತ್ತಾನೆ (ಧರ್ಮಸಾ. ೩೪) ; ಆಗಾಗ ಮೋಜಿಗೆಂದು ಮುಕ್ಕಾ ಹಣ್ಣುಗಳನ್ನು ತನ್ನ ತುಟಿಗಳ ಮಧ್ಯೆ ಇರಿಸಿಕೊಳ್ಳುವಳು (ಅತ್ರಮ. ೩೩). ೨. ವಿಲಾಸ : ಮನೋರಂಜನೆ ; ಸುಖಭೋಗ : ಗಾಜು ನೋಟಕೆ ಲೇಸು ಮೋಜು ಇರುಳಲಿ ಲೇಸು (ನವಗ್ರ. ೦೦೩೫) ; ಕೆಲವೊಂದು ಸಲ ಮೋಜಿಗಾಗಿ ಕುದುರೆಸವಾರಿ ಮಾಡುತ್ತಿದ್ದುದುಂಟು (ಸಸ್ಯಕ. ೯೪). ೩. ಮೋಕೆ ; ಮಜ : ನಮ್ಮ ಕ್ರಿಶ್ಚನ್ನರಿಗೆ ಸ್ವಲ್ಪಿಲ್ಲ ಸ್ವಲ್ಪ ಮೋಜಿದೆ ಜೀವನದಲ್ಲಿ-ನಿಮಗೆ? (ಹೊಸಕ್ಷ. ೧೩೪); ಗೊಂಬೇ ಮದಿವಿ ಮಾಡಿ ಮಾಡಿ ಸಾಕಾಯ್ತು. ಬೋಡಿ-ಅವರೊಳಗೆ ಮೋಜೇ ಇಲ್ಲ (ಮುಕ್ತಶ. ೩೦). ೪. ಸಂತೋಷ ; ಆನಂದ : "ತುಷ್ಟಿ = ಮೋಜು" (ಗಾಕಕ್ಕ. ೫೭). ೫. ಸಂಭ್ರಮ ; ಸಡಗರ : ಗೌಜಲಹಕ್ಕಿಯ ಕಾಳಗವನು ಬಲು ಮೋಜಿನಿಂದಲಿ ಮಾಡಿಸುವರು (ಕಂಪಲಿ. ೭-೦೪) ; ರಾಜರಾಜರು . . . ಮೋಜನಿಂ ಮುಂದೆ ಹಿಂದೆ ಮಸಗಿ ಬರುತಿರಲು (ಸೌಗಂಧಿ. ೧೩೨-೨) ; ಇಬ್ಬರೂ ಮೋಜಿನಿಂದ ಜಾತ್ರೆ ಮಾಡಿ ತೃಪ್ತಿ ಹೊಂದುತ್ತಾರೆ (ಶಬ್ದಸಾ. ೦೦೭). ೬. ಸೊಗಸು ; ಅಂದ : ಮುಂಗಾರುಮಳೆಯ ಮೋಜನ್ನು ದಿಟ್ಟಿಸುತ್ತ . . . ಕುಳಿತುಕೊಂಡಿದ್ದೆ (ನಾಕೋಲೀ ೯). **ಮೌಜು** : ೧. ಮಾಯೆಯನು ಮೀರಿದತ್ತಿ ಮೌಜಲಿ (ಕಂಠ. ೦೦). ೩. ಗೆಳೆಯರೂ ಬಂದುದರಿಂದ ಅವನಿಗೆ ಒಳ್ಳೇ ಮೌಜಿನಿಂದ ಕಾಲ ಕಳೆಯಲಿಕ್ಕೆ ಅನುಕೂಲವಾಗಿತ್ತು (ಅವಳ. ೪). ೭. ಲಹರಿ ; ಗುಂಗು : ನಾನೀಗ ಒಳ್ಳೆಯ ಮೌಜಿನಲ್ಲಿದ್ದೇನೆ ! (ಅಕಗಿ. ೧೩೦). ೮. ಉತ್ಸವ ; ಸಮಾರಂಭ : ಜಾತ್ರೆ ಮೌಜುಗಳಲ್ಲಿ . . . ಭಾಗವಹಿಸಿ ಜನತೆಯನು ಭಕ್ತಿರಸದತ್ತ ಆಕರ್ಷಿಸುತ್ತಿದ್ದರು (ಕಂಠ. ೫೭).

**ಮೋಜಿನ ವೇಷ** = ಮನೋರಂಜನೆಗಾಗಿ ಧರಿಸುವ ವಿಚಿತ್ರವೇಷ : ಮೋಜಿನ ವೇಷ ಹಾಕಿದವರಿಗೆ . . . ಬಹುಮಾನಗಳನ್ನು ಹಂಚಿದರು (ಕಕಥ. ೩-೪೦). **ಮೋಜಿನಾಟ**=ತಮಾಷೆಯ ಪ್ರಸಂಗ : ಅವರಿಗೆ ಮೆವರಿಕೆಯೆಲ್ಲ ಹೋಗಿ ಇದೊಂದು ಮೋಜಿನಾಟವೆಂದು ಕಾಣತೊಡಗಿತ್ತು (ಮುಂಗಾಮು. ೫). [←ಅರ. ಹಿಂ. ಮರಾ. ಮೌಜ್]

**ಮೋಜುಗಾರ** ' ಮೋಜುಗಾಬಿ ' ನೋ.

**ಮೋಜುಗಾರಿಕೆ** (ನಾ). ವಿಲಾಸ ; ಸುಖೋಪಭೋಗ : ಆ ಹಣ ಮ್ಯಾನೇಜರನ ಮೋಜುಗಾರಿಕೆಗೆ ದುರ್ವ್ಯಯವಾಗಿತ್ತು (ಬದುಕ್ಕೆ. ೪೩) ; ನಿನ್ನ ಕಕ್ಷಿಗಾರಳ ಮೋಜುಗಾರಿಕೆಯ ರಭಸದಿಂದ ಪತಿಯ ಪ್ರಾಣವನ್ನು ಹೋಗರಾಡಿಸಿಕೊಂಡಳೆಂದು ಹೇಳವಲ್ಲೆಯಾ ? (ವಾಗ್ಗೇಡಿ. ೨೨೦).

[ಮೋಜುಗಾರ (<ಮೋಜುಗಾಬಿ) + – ಇಕೆ]

**ಮೋಜುಗಾಬಿ**, ಮೋಜುಗಾರ (ನಾ). ೧. ವಿಲಾಸಿ ; ರಸಿಕ : ಗುರುಭಕ್ತಿಯೆಂಬೋದೆ ಕೊಳವಿಮಾಕಾರ ಸಿರಿನಾರಾಯಣನೆಂಬೊ ನೀರ ಅಪನಜೀತು ತುಂಬಿಕೊಳ್ಳೊ ಎಲ ಮೋಜುಗಾಬಿ (ಶರಂದ. ೩-೯೭-೨). **ಮೋಜುಗಾರ** : ೧. ರಾಜಬೀದಿಗಳಲ್ಲಿ ತೆರಳುವ ಮೋಜುಗಾರರ ಬಿಳಿಯ ಬಟ್ಟೆಗಳೊಳ್ ಮೋಕಳಿಗಳನಿಟ್ಟಂತೆ (ಸೌಗಂಧಿ. ೦೮೫-೦೨). ೨. ತಮಾಷೆ ಮಾಡುವವನು ; ಹಾಸ್ಯಗಾರ : ಒಳ್ಳೆಯ ಮೋಜುಗಾರರು ! ಉಬ್ಬಿದ ಲಂಗಗಳನ್ನು ತೊಟ್ಟು ಮೋಳದವರು (ಮರೆಪಾ. ೭೪).

[ಮೋಜು$_2$ + — ಕಾಬಿ]

**ಮೋಟ$_1$** (ನಾ). ದಡ್ಡತನ ; ಅಜ್ಞಾನ : 'ಮೋಟವಾದ' ಪರಾ.

[ದೇ.॥ ತಮಿ. ಮೋಟು ; ತೆಲು. ಮೋಟ ; ಬ್ರಾಹುಈ. ಮೋಟ್ = ತಿಳಿಗೇಡಿಯಾದ]

**ಮೋಟ$_2$** (ನಾ). ೧. ಕೈ, ಕಾಲು ಮುಂತಾದ ಅವಯವಗಳಿಲ್ಲದವನು ; ಅಂಗಹೀನ : ಕೈಯಿಲ್ಲದ ಮೋಟನೆಂತು ಕಾಲಿಲ್ಲದ ಪೆಚನೆಂತು ಶುಭಕಾರ್ಯಕ್ಕಂ ರಾಜಸಭೆಗಂ . . . ಒಳ್ಪಂಗಂ ಸಲ್ಲಂ (ಧರ್ಮಾಮೃ. ೯-೩) ; ಖೊಳನಂ ಮೂಳನಂ ಮೋಟನಂ ಮುಕ್ಕನಂ . . . ಬೇಳಿ ಬೆಳೆಯಿತ್ತೊಡವನಂ ಕಾಮನೆಂಬ ದುಶ್ಶೀಲೆಯರು ಕಣ್ಗೆಸೆದರು (ಹಕಶಾ. ೪-೪೪) ; ಮೋಟಂಗೆ ಕೈಗಳು ಮೊಳೆತವಂಗುಳಿಸಹಿತವಾ ದಸರಯ್ಯನ ಭಾವದಲಿ (ಬಸತ್ಥ. ೩೮ ಸೂಚಕ) ; ಲೀಲೆಯಿಂ ಬಸವನಾ ಮೋಟಂಗೆ ಕೊಡನೆ ಕೈಕಾಲ (ತಂಥ. ೫೭-೮೨). (ಗು). ೨. ಕೈಕಾಲಿಲ್ಲದ ; ಅಂಗಹೀನನಾದ : ಮೋಟ ಗಂಡನ ಮೂಕೊಜಿತೆ ಹೆಂಡತಿ ಬೇಟವ ಮಾಡಿದಂತಾಯಿತ್ತು ಕಾಣಾ (ವತಸಂ. ೩೦೩-೭೦). ೩. ಬೋಳಾದ ; ಬರಿದಾದ : ಸಾಕ್ಷಾತ ವಡಬಾಗ್ನಿಯೆ ವಿಗ್ರಹವೆನಿಸಿ ತಪವಂ ಮಾಳ್ಪುದೊಯೆಂಬ ಹಾಗೆಯು ಮೋಟ ಮರದಂತೆ ಕವಲದೆಯಿಪ್ಪಂಥಾ (ಕಾಶೀಮ. ೦೭-೪). ೪. ಚಿಕ್ಕದಾದ ; ಗಿಡ್ಡ : ' ಮೋಟಗೆಯ್ ' ಪರಾ.

[ < ಮೋಟು + – ಅ$_7$. / ತಮಿ. ಮೊಣ್ಟ ; ತೆಲು. ಮೊಂಡಿ, ಮೊಂಡೆಮು ; ಕೋತ. ಮೊಂಡ್ಯ : ತೊದ. ಮುಡ್ಯ]

**ಮೋಟ$_3$** (ನಾ). ಒಂದು ಬಗೆಯ ಸಸ್ಯ: "ವಿಪ್ರಾ—ಮೋಟ, ಬೋಟತಟಿ" (ಚಿತಂ. ೦೫೨). [ಸಂ. ಮೋಟಾ]

**ಮೋಟಕೆಯ್** ' ಮೋಟಗೆಯ್ ' ನೋ.

**ಮೋಟಗಯ್ಯಿ** 'ಮೋಟಗೆಯ್' ನೋ.

**ಮೋಟಗೆಯ್, ಮೋಟಕೆಯ್, ಮೋಟಗಯ್ಯಿ** (ನಾ). ಪೂರ್ಣವಾಗಿ ಬೆಳೆಯದೆ ಗಿಡ್ಡಾಗಿರುವ ಕೈ ; ಮೊಂಡುಕೈ : ಹೋಗಿ ದಸರಯ್ಯಗಳ ಮಂಡೆಯನೀಗ ನಿನ್ನಯ ಮೋಟಗೆಯ್ಯಲಿ [ಪಾಠಾಂ. ಕೈಯಲಿ] ಬೇಗದಲಿ ತಿವಿ (ಬಸವ. ೩೭–೦೭). **ಮೋಟಕೆಯ್ :** ಭಂಡನೀತನು ಕಪಟವೇಷದ ತೊಂಡು ಕಾಣನು ಮೋಟಕೆಯ್ [ಪಾಠಾಂ. ಕೈ] ಗಳ ಮುಂಡನೆನ್ನದೆ ತನ್ನ ಭಾವಕೆ ಜಂಗಮಾಕೃತಿಯ ಕಂಡು (ಬಸವ. ೩೭–೨೩). **ಮೋಟಗಯ್ಯಿ :** ಅಂಗ ಜೋದ್ರೇಕದಿಂದವಗಡಿಸಿ ಮೋಟನೊಡನಿರಲವಂ ಕಳ್ಗುಡಿದು ತಿವಿಯೆ ತನ್ನಯ ಮೋಟಗಯ್ಯಿಂದೆ (ಕೊಟ್ಟೂರು. ೪–೨೭). [ಮೋಟ₂ + ಕೆಯ್₂]

**ಮೋಟನ** (ನಾ). ೧. ನಾಶಮಾಡುವುದು. ೨. [ನಾಟ್ಯ] ಇಪ್ಪತ್ತು ಬಗೆಯ ಕರಕರ್ಮಭೇದಗಳಲ್ಲಿ ಒಂದು : ಧೂನನ, ಶ್ಲೇಷ . . . ಮೋಟನ, ವಿಸರ್ಜನ, ಆಹ್ವಾನ, ತರ್ಜನ–ಈ ಇಪ್ಪತ್ತು ಕರಕರ್ಮಭೇದಂಗಳ್ (ಶಾನ್ತರಂ. ೪–೦೩ ವ). [ಸಂ.]

**ಮೋಟರು** 'ಮೋಟಾರು' ನೋ.

**ಮೋಟವಾದ** (ನಾ). ಅಜ್ಞಾನದಿಂದ ಕೂಡಿದ ಚರ್ಚೆ : ಹುರುಳಿಲ್ಲದ ಮಾತು : ಪೂರ್ವಕರ್ಮಶುಭಾಶುಭವೆನಿಪ್ಪ ಮೋಟವಾದಂ ಸಲ್ಲದು (ಬಸವ. ೩೪–೦೭). [ಮೋಟ₁ + ವಾದ₂]

**ಮೋಟಾರ್** 'ಮೋಟಾರು' ನೋ.

**ಮೋಟಾರು, ಮೋಟರು, ಮೋಟಾರ್** (ನಾ). ೧. ಯಾಂತ್ರಿಕ ಚಲನೆಯನ್ನು ಉತ್ಪಾದಿಸುವ ಯಂತ್ರ ; ಚಾಲಕಯಂತ್ರ : ಈ ಮುದ್ದಲೆಯನ್ನೂ ಸ್ಪರ್ಶಕಾರಿಯನ್ನೂ (ಕಾಂಟೆಕ್ಟ್ ಮೇಕರ್) ಒಂದು ಸಣ್ಣ ಸಮಕಾಲಿಕ ಮೋಟಾರು ಓಡಿಸುತ್ತದೆ (ಕಲಿಕೆ. I, ೩೩೪). ೨. ಚಾಲಕ ಯಂತ್ರದಿಂದ ನಡೆಯುವ ಕಾರು, ಬಸ್ಸು ಮುಂತಾದ ವಾಹನ : ಈ ಕೋಲಾಹಲವನ್ನು ಕೇಳಿ ಮೋಟಾರಿನೊಳಗಿನ ಜನರು ಸುತ್ತಲಿನ ಪರದೆ ಎತ್ತಿ ಹೊರಗಿನವರನ್ನು ನೋಡುತ್ತಲಿದ್ದಾರೆ (ಕೃಷ್ಣ. ೩೩) ; ಅವನು ಕೋಪದಿಂದ ಎಸೆದ ಆಟದ ಮೋಟಾರು ತಳಮೇಲಾಗಿ ಬಿದ್ದು ಕಾಲಿಗೆ ಸಿಕ್ಕುತ್ತದೆ (ಅಲಿಪು. ೩೪). **ಮೋಟರು :** ೨. ನಮ್ಮ ದೇಶದಲ್ಲಿ ನೂರಾರು ಮೋಟರುಗಳು ಬಳಕೆಯಲ್ಲಿವೆ (ಪಾಂಶ್ರ. I, ೪೦೩) ; ಉಳಿದ ಪಯಣಿಗರಿಗೆ ಮೋಟರು, ಟಾಂಗ ಮೊದಲಾದ ವಾಹನಸೌಕರ್ಯಗಳು ಸಿಗುತ್ತವೆ (ಅಳಿ. ೨). **ಮೋಟಾರ್ :** ೨. ಬೈಸಿಕಲುಗಳ್ ಮೋಟಾರ್ಗಳಿಷ್ಟು . . . ಮೊತ್ತಮನಿವಂ ಬಣ್ಣಿಪ್ಪನಂ ಕಾಣೆನಾ (ಮೈಸೂರು. ೩–೦೦೭). [← ಇಂ. Motor ]

**ಮೋಟಾಳು** (ನಾ). ಕುಳ್ಳ ; ಗಿಡ್ಡ : ಆಟಾಳಿಗೊಂದು ಮೋಟಾಳೇ ? (ಗಾದೆ). [ ಮೋಟು + ಆಳು₃ ( < ಆಳ್₃ ) ]

**ಮೋಟಿ** (ನಾ). ೧. ಮುಂಗೈ ಇಲ್ಲದವಳು. ೨. ಕುಳ್ಳಗಿರುವವಳು: (ಆ). [ ಮೋಟ₂ + — ಇ₂. / ತುಳು. ಮೋಟಿ, ಮೋಂಟಿ ]

**ಮೋಟು** (ನಾ). ೧. ತುದಿ ಮುರಿದುದು : ಮೊನಚಾಗಿಲ್ಲದುದು : ಮೊಂಡು : ಹಾರೆ ಮೋಟು, ಗುದ್ದಲಿ ಬೊಪ್ಪು, ಗೈಯುವವನಿಗೆ ಒಕ್ಕೈ (ಗಾದೆ). ೨. ತುಂಡಾದ ಕೈ ; ಮೊಂಡುಕೈ : ಕೇಶವನ ಬೇಟವಳಿವಾಸುರದ ಮೋಟುಳಿನು ವ್ಯಾಸನಚ್ಯುತ ತೃಣವಿದೇವುದೆಂದು ಹೇಸಿಯುಪನಂಬಿಸುಟುಯಿಸಾಲಂಘ್ರಿಪಿಡಿದುಳಿದ ಪ್ರೋಸಿಯಂ ಕಾಳಕಾಯಿಂಡದಲ್ಲಿ (ಶಾವಂಶ. ೨–೩೦) ; ದಂಡಿಸರದ ವಸಂತದೋಕುಳಿಯಂಡೆಯೆನೆ ಮೋಟಿರಡಬಲಿ ತೋಜಿಮಂದುವರುಣಜಲೌಘ ಹೊಜೆದುದು ದಿಕ್ತಟಾವಳಿಯ (ಕೊರಟಾ. ೭–೨೬–೪೯). ೩. ಕೊಂಬೆ, ರೆಂಬೆಗಳಿಲ್ಲದ ಮರದ ಭಾಗ ; ಬೊಡ್ಡೆ: "ಸ್ಥಾಣುಃ, ಧ್ರುವಃ, ಶಂಕುಃ – ಈ ೩ ಮೋಟಿನ ಹೆಸರು" (ಸಿದ್ಧಾಂತ. ೦೦೦). ೪. ಕೊಯ್ಲಾದ ಮೇಲೆ ಉಳಿಯುವ ಪೈರು : ಕೂಳೆ : ಹೋದ ಮೋಟು ಕಾಣದು, ಹೋದ ಹೆಜ್ಜೆ ಕಾಣದು (ಗಾದೆ). ೫. ಊನ; ನ್ಯೂನತೆ : ನಮಗೆ ಅನುಕೂಲವಾಗಿದ್ದರೆ . . . ಬೇಕಾದದ್ದು ಮಾಡುತ್ತಿದ್ದೆವು ಎಂಬ ಅಹಂಭಾವಕ್ಕೆ ಒಳಗಾಗಿ ನಮ್ಮ ಮೋಟು ಮೇಲೆ ಮಾಡಲಿಕ್ಕೆ ಹವಣಿಸುವೆವು (ಕುಟುಂಬ. ೨೪). (ಗು). ೬. ಕುಳ್ಳಾದ ; ಗಿಡ್ಡವಾದ : ಮೋಟುಗೋಡೆಯನ್ನು ಹಾರುವುದು ಇವನೊಬ್ಬನಿಗೇ ಸಾಧ್ಯ ! (ಜಾಗೀ. ೩೬) ; ಮೋಟುಗೋಡೆಯ ಮೇಲೆ ಕುಳಿತು ತಲೆ ಕೊಂಕಿಸಿ ನಗು ಬೀರುತ್ತಿರುವಾಗ ಶೇಖರ ಒಂದು ಫೋಟೋ ತೆಗೆದ (ದೂಪಟ್ಟ. ೩೭). [ದೇ.॥ ತಮಿ. ಮೊಟ್ಟೈ, ಮೊಣ್ಣೈ ; ಮಲ. ಮೊಟ್ಟ ; ತುಳು. ಮೋಂಟು, ಮೋಂಟ್, ಮೋಂಟ ; ಕೊಡ. ಮೋಟ್; ತೆಲು. ಮೋಟು, ಮೋಡು]

**ಮೋಟುಕೈ** 'ಮೋಟುಗೆಯ್' ನೋ.

**ಮೋಟುಗೆಯ್, ಮೋಟುಕೈ** (ನಾ). ೧. ಕತ್ತರಿಸಿದ ಕೈ; ತುಂಡುಗೈ : (ಆ). **ಮೋಟುಕೈ :** ೨. ಗಿಡ್ಡವಾಗಿರುವ ಕೈ : ಮೋಟುಕೈಗಳನ್ನು ತಿರುವುತ್ತ, ಕಂಬಗಳಂತಿದ್ದ ಆ ಕಾಲುಗಳಿಗೆ ಕಿರುಗೆಜ್ಜೆಗಳ ಸರಗಳನ್ನು ಕಟ್ಟಿಕೊಂಡು ನಾಟ್ಯರಂಗವೇರಿದ ಗಣಪತಿ (ಶಾಂತಲಾ. ೨೩೪).
[ಮೋಟು + ಕೆಯ್₂]

**ಮೋಟೆ** (ನಾ). ದಿಣ್ಣೆ : ಗುಡ್ಡ : ಗದ್ದೆಗೆ ಸೀಮೆ ಯಾವುದೆನೆ . . . ಬಡಗಣದ ಮೋಟೆಯ ದಣ್ಣೆಯ ಸಸಿನಕ್ಕೆ ನಟ್ಟ ಕಲ್ಲು (ಶಾಸನ. XI–ii, ೧೭೭–೮೯; 1125); ಭಾಗಮಂಡಲದ ಕೋಟೆಗೆ ಹೋಗಿ, ಮುತ್ತಿಗೆ ಹಾಕಿ, ಸುಂಬಾರತ್ತು ಎಂಬ ಮೋಟೆಯಲ್ಲಿ ಫಿರಂಗಿ ಮಡಗಿ . . . ಕೋಟೆಗೆ ಇಡುತ್ತಿದ್ದರು (ರಾಜೇಂದ್ರ. ೪೯). 'ಮುಂಗುಳಿ₂', 'ಮೊಗಡು' ಪರಾ.
[ದೇ.॥ ತಮಿ. ಮೋಟು]

**ಮೋಟ್ಟಾಯಿತ** (ನಾ). [ಕಾವ್ಯಮೀ] ಹತ್ತುವಿಧವಾದ ಶೃಂಗಾರ ಚೇಷ್ಟೆಗಳಲ್ಲಿ ಒಂದು ; P ಪ್ರಿಯಕರನ ವಾರ್ತೆಯನ್ನು ಕೇಳಿದಾಗ ಇಲ್ಲವೆ ಆತನನ್ನು ನೆನೆದಾಗ ಸ್ತ್ರೀಯ ಸ್ವಾಭಾವಿಕವಾದ ಅಂಗಚೇಷ್ಟೆಗಳ ಮೂಲಕ ಸೂಚಿತವಾಗುವ ಪ್ರೀತಿಯ ಅಭಿವ್ಯಕ್ತಿ : ಬಿಬ್ಬೋಕ ಮೋಟ್ಟಾಯಿತ . . . ಕುಟ್ಟಿಮಗಳೆಂಬ ದಶವಿಧಕೇಳೀಭಾವಂಗಳುಳ್ಳ ವಿಲಾಸಿನಿಯರಿಂ (ಅಜಿತ. ೨೨೯). [ಸಂ.]

**ಮೋಡ₁** (ನಾ). ೧. ಮುಗಿಲು ; ಮೇಘ : "ನೀರ್ದೇಮುಗಿಲ್ ಮೋಡ ಮೇಘದ ನಾಮ" (ಕಬ್ಬಿಗ. ೦೩); ತೊಲಗದ ಮೋಡಮೊಡಿದುದು . . . ಶರತ್ಪ್ರಥಮಪ್ರವೇಶದೊಳ್ (ಜಗ. ೪–೩೭); ಮೋಡವ ಗೆಲ್ದ ಚಂಪಕರನಂತೆ . . . ಮನೋಹರಾಕೃತಿಯೊಳಿರ್ದನತಿದ್ಯುತಿಯಿಂದಿಳಾಧಿಪಂ (ಪಳತಂ. ೭೨೭); ಆಕಾಶದಲ್ಲಿ ಮೋಡಗಳು ಮುಚ್ಚಿಕೊಳ್ಳುತ್ತಿದ್ದುವು (ರಾಬಿ. ೨೩). ೨. ಮೋಡ ಕವಿದ ವಾತಾವರಣ ; ಮಬ್ಬು : "ದುರ್ದಿನಪಭೃತಿವಿರಮೆನೆ ಮೋಡಮೆಂದೆನಿಸಿಕ್ಕು" (ಮಂಗರಾ. ೦೩–೪). ೩. (ಆಲಂ) ಚಿಂತೆಯ ನೆರಳು : ಅವನ ಮೊಗದಲ್ಲಿ ಕಿರು ಮೋಡ ಸುಳಿಯಿತು (ಹಾಹುತ. ೭೩). ೪. ಅಜ್ಞಾನ ; ಮೌಢ್ಯ: ಮೋಡಮಟಿಯೆ ತೀವಿದ ಕಳೆಗಳಿಂ ಬೆಳಗುವ ಚಂದ್ರಮನಂತೆ ಮೋಡ ಮಟಿಯೆ ತೀವಿದ ಕಳೆಗಳಿಂ ಬೆಳಗಿದರ್ ಯಮಳರ್ (ರಾಮಾಶ್ವ. ೦೩೦–೦೬).

**ಮೋಡ ಕವಿ** = ೧. ಮುಗಿಲು ಮುಚ್ಚಿಕೊಂಡು ಮಬ್ಬಾಗು : ದೂರ ಪಶ್ಚಿಮದಿಗಂತದತ್ತ ಮೋಡ ಕವಿದು ಮಿಂಚುತ್ತಿತ್ತು (ಮರಳು. ೪೭೭). ೨. (ಆಲಂ) ಚಿಂತೆ ಆವರಿಸು : ಮೋಡ ಕವಿದಾ ಮೊಗದಿ ನಿನ್ನ ದೆಸೆಯಿಂದಂ ಮೂಡಿತೇ ಅರೆಗಳಿಗೆಯಾದೊಡಾನಂದಂ ? (ಕುಪು. ೩೭–೨). **ಮೋಡಮುಚ್ಚಿಕೊಳ್ಳು** = ಮೋಡಕವಿ ೧ : ಒಂದೇ ಒಂದು ಕ್ಷಣದಲ್ಲಿ ಮೋಡಮುಚ್ಚಿಕೊಂಡು ಮಳೆ ಬರುವ ಹಾಗಾಯಿತು (ಕಥಾ). **ಮೋಡ ಹಾಕಿಕೊಳು** = ಮೋಡ ಕವಿ ೧ : ಮೋಡ

ಹಾಕಿಕೊಂಡಿದೆ. ಹೊರಗೆ ಹೊರಡಬೇಡ (ರುಖ). **ಮೋಡ ಹಾಕು** = ಮೋಡ ಕವಿ ೧ : ಮೋಡ ಹಾಕಿದರೆ ಶೀತ, ನೆಗಡಿ (ರಂಗನಾ. ೯೩).

[ದೇ.॥ ತಮಿ. ಮೋಟಮ್, ಮೂಟಮ್, ಮೂಟ್ಟಮ್ ; ಮಲ. ಮೂಟಲ್ ; ತುಳು. ಮೂಡ, ಮೋಡ, ಮೋಡು ; ಕೊಡ. ಮೋಡ ; ತೆಲು. ಮೋಡಮು ; ಕುಇ. ಮುಡಂಗಿ]

**ಮೋಡ₂** (ನಾ). ಹೆಡ್ಡ ; ತಿಳಿಗೇಡಿ ; ಮೂಢ : "ಗಾಂಪನೊಳು ಮೋಘದೊಳು ಮೋಡಪದ" (ಕಬ್ಬಿಕುಂ. ೯೬) ; ಊಕಾರಕ್ಕೆ ಓತ್ವಂ–ಕೂಟ –ಕೋಡು. ಮೂಢ–ಮೋಡ (ಶಮದ. ೨೬೦ ಪ್ರಯೋ) ; ಈ ರೀತಿ ನಮ್ಮ ಜನಗಳು ಮೋಡರು ಎನ್ನುತ್ತಿದ್ದರು. ಇದೇನೋ ನಿಜ. ಇದಕ್ಕೆಲ್ಲ ಅವಿದ್ಯೆಯೇ ಮೂಲಕಾರಣ (ಹುಬ್ಬಹ. ೬೦). [<ಸಂ. ಮೂಢ. / ತಮಿ. ಮೋಟನ್ ; ತೆಲು. ಮೋಡಿ ; ತುಳು. ಮೋಡ]

**ಮೋಡಂಗಪ್ಪು** (ನಾ). ಮೋಡ ಕವಿಯುವುದರಿಂದ ಉಂಟಾಗುವ ಮಬ್ಬು : ಶರದಾಗಮನಕೆಂತು ಮೋಡಂಗಪ್ಪು ತೊಲಗಿದಪುದಂತೆ ಮೂಡಿದುದು ರಾಮನ ಮನಕೆ ನಿಶ್ಶಂಕೆ (ಶ್ರೀರಾಮಾ. ೩೪೬-೨೩೬).

[ಮೋಡ$_1$ + ಕಪ್ಪು$_4$ (<ಕರ್ಪು$_1$)]

**ಮೋಡಕಾ** (ನಾ). ಹಳೆಯ ವಸ್ತು, –ಪದಾರ್ಥ.

**ಮೋಡಕಾ ಅಂಗಡಿ** = ಹಳೆಯ ಸಾಮಾನುಗಳನ್ನು ಮಾರುವ ಅಂಗಡಿ ; ಗುಜರಿ : ಒಂದು ಮೋಡಕಾ ಅಂಗಡಿಯ ಒಂದು ಮೂಲೆಯಲ್ಲಿ ತೂಗಾಡುತ್ತಿದ್ದ ಮೂಲಚಿತ್ರವು ನನ್ನ ದೃಷ್ಟಿಯನ್ನು ಆಕರ್ಷಿಸಿತು (ಹೇಮಂತ. ೯೦೦) ; ಅವನ ಮೋಡಕಾ ಅಂಗಡಿಯ ಮುಂದಿದ್ದ ಒಂದು ಪೆಟ್ಟಿಗೆಯ ಮೇಲೆ ಕುಳಿತುಕೊಂಡ (ಎಡಹ. ೬೮). [←ಮರಾ. ಮೋಡಕಾ]

**ಮೋಡಗತ್ತಲೆ** (ನಾ). = ಮೋಡಂಗಪ್ಪು : ದಳವೇಟೆತೊತ್ತರಿಸಿ ಮೋಡಗತ್ತಲೆ ಗಾಳಿ ಹನಿ ಮೊಳಗು ಸಹಿತ (ಸಿದ್ಧರಾ. ೬-೩೬) ; ಕಾಡು ಗತ್ತಲೆಗೆ ಮೋಡಗತ್ತಲೆಯೂ ಸೇರಿ ಮುಸಿಮುದ್ದೆಯಾಗಿ ಅಳಿಸಿ ಹೋಗಿಹುದೆಲ್ಲ (ಕಂದ್ರಹ. ೦೦೦). [ಮೋಡ$_1$ + ಕತ್ತಲೆ$_1$ (<ಕಟ್ಟಲೆ)]

**ಮೋಡಾಮೋಡಿ** (ನಾ). ೧. ಸೊಗಸಾದ ರೀತಿ,—ಶೈಲಿ ; ಅಂದವಾದ ವೈಖರಿ : ಕೆಲಕೆಲಬರು ಮೋಡಾಮೋಡಿಗಳು ಕೆಲಕೆಲಬರು ಗುಂಥಾಗುಂಥಿಗಳಂ ಕೆಲಕೆಲಬರು ಧಾರಾಪಂಚಕಮಂ ಮುಂದೆಯೆ ತೋರುತ್ತುಂ ಜಲಧಿತರಂಗದ ತೆಱದಿಂದಾ ಹಯಬಲವಿಘಟಂಗಳ್ ಕಾಲ್ಗಾಪಿನೊಳಿಕ್ಕೆಲದೊಳ್ಮತಿಶಯಮಾಗಿರೆ ನಡೆದವು ಹಿಂದೆಮುಂದೆ ಸಂದಣಿಸಿ (ಕುಮುದಾ. ೯-೨೮) ; ಡಾಬುಗಳ ಘಾಯದ ಕಳವುಗಳ ಕೈಮೆಗಳ ಮೋಡಾಮೋಡಿಯುಬ್ಬಣದ ಲಲಿತಚಿತ್ರದ ಚದುರಭಟರವ್ವಳಿಸಿ ಹೊಯ್ದಾಡಿವರು (ಕುವ್ಯಾದ್ರೋ. ೦೪-೬) ; ಆಗಲಂಬರ ಧರಣತಳಮೆಲ್ಲ ತುಂಬಿ ಐರೆ ಚೈತ್ರನುಱೆ ಸ್ಮರಗೆ ಪೇಳಿದ ತನ್ನ ಬಲದ ವೈಭವದ ಮೋಡಾಮೋಡಿಯಂ ಗಾಡಿಯಂ (ಕಕುಷ. ೩-೯-೬). ೨. ಚಾತುರ್ಯ; ಕೈಚಳಕ : ಲಾಳಿಯಲೊಯ್ಯಾರದಲಿ ಮೋಡಾಮೋಡಿಯಂದದಲಿ . . . ಶಸ್ತ್ರಾವಳಿಯ ಸಾಂಗೋಪಾಂಗಶ್ರಮವನು ತೋಱಿದನು ಪಾರ್ಥ (ಕುವ್ಯಾಆ. ೬-೪೦) ; ಹೊಗೆಮುದ್ದೆ ಹೆಬ್ಬಾಳುಗಳ ನಗಮೊಗವ ಮೋಡಾಮೋಡಿಯಲಿ ಕೈಮಗುಚಿ ಕಳೆದನು ನಿಮಿಷದಲಿ ಹೇರಾಳ ರಾಶಿಗಳ (ಕುವ್ಯಾದ್ರೋ. ೦೬-೩) ; ಬೆರಸಿ ಥಾಳಾಧೂಳಿಯಲಿ ಮೊಪ್ಪರಿಸಿ ಖಾಡಾಖಾಡಿಯಲಿ ಮೋಹರಿಸಿ ಮೋಡಾಮೋಡಿಯಲಿ ಮುಟ್ಟಿ ಪ್ರಹಾರದಲಿ . . . ಕಾದಿತು ಸೇನೆ ಸೇನೆಯಲಿ (ತೊರರಾ. ೬-೩೬-೩). ೩. ಬೆಡಗು ; ಬಿನ್ನಾಣ ; ವಿಲಾಸ : ಪರಿಮಿತದ ಮೋಡಾಮೋಡಿಯನುಭವದೊಳ್ ವಲ್ಲಭನ ಮನಂ ಪಲ್ಲಟಿಸುವ ಕಾಲಮನಱಿದು (ಗಂಗ. ೨-೦೦೩ ಪ) ; ಸುಳಿದುದು ಸವಿಹಾರಣಾ ಮಹಾದ್ರಿಯಲಿ . . . ಮೊಱೆದೊಗುವ ಮಱಿದುಂಬಿಗಳ ಮೋಹರದ ಮೋಡಾಮೋಡಿಯಲಿ ಡಾವರಿಸಿ ತ್ರೈದಿಂದ್ರಿಯದಲೊಂದಿರೆ ಸಕಲಮುನಿಜನವ (ಕುವ್ಯಾಆ. ೦೦-೩). ೪. ಮೆರೆತ ; ಪ್ರದರ್ಶನ : ಅಖಿಳ ಪೃಥ್ವೀಶ್ವರರ ಬಹಳಾಸ್ಥಾನದಲಿ ಮೋಪರಿಸಿದರು ಮೋಹನದ ಮೋಡಾಮೋಡಿಯಬಲೆಯರು (ಕುವ್ಯಾಆ. ೦೩-೪೪) ; ಭರಿತಾಧಿದೇವತೆಯಂತೆ ನಿಂದಳಾ ತಾಣದೊಳಗಾ ದಿವ್ಯವನಿತೆ ಮೋಹನದ ಮೋಡಾಮೋಡಿ ಮೋಹರಿಸಿ ನಿಂದಂದದಿಂ (ಗೌಂಡಪು. ೬-೯). ೫. ರಭಸ ; ವೇಗ : ಕವಿದುವಿದು ಗಱಿಗಟ್ಟಿ ಕಾಪವನಿವಹ ಮೋಡಾಮೋಡಿಯಲಿ ರಣದವಕಿ ಕರ್ಣದ್ರೋಹಿಯಾವೆಡೆ ತೋಱು ತೋಱೆನುತ (ಕುವ್ಯಾಕ. ೦೩-೯). ೬. [ಸಂಗೀತ] ಒಂದು ರಾಗದ ಹೆಸರು : ಶ್ರೀಯು ಮೋಡಾಮೋಡಿ ಸರಸೋಪಾಯ ಸದುಪಾಯಂ ಮೆಱೆಯೆ . . . ಧರೆಯೊಳಿವು ಮೊದಲಾಗಿ ಸೊಗಸುವ ಒರಿಯ ರಾಗಂಗಳು (ಬಸಪು. ೦೯-೦೩).

[< ಮೋಡಿ$_1$./ತಮಿ. ಮೋಟಾಮೋಟಿ ; ತೆಲು. ಮೋಡಾಮೋಡಿ]

**ಮೋಡಿ₁** (ನಾ). ೧. (ನಡೆ, ನುಡಿ ಇತ್ಯಾದಿಗಳ) ರೀತಿ ; ವೈಖರಿ ; ಶೈಲಿ ; ವರಸೆ : ನೋಡಿದನು ಕುರುರಾಯನಲಿ ಹೊಯ್ದಾಡಿ ಬರಬೇಕೆಂಬ ಭೀಮನ ಮೋಡಿಯನು ನೃಪನಱಿದು ಸಂತೈಸಿದನು ಸಾಮದಲಿ (ಕುವ್ಯಾಆ. ೦೬-೩೦) ; ನಮ್ಮ ನಗರವನೊರೆಸಿ ಮೋದುವ ಮೋಡಿ ಮೋಱೆಯೊಳವನಲದೆಯೆಂದ (ತೊರರಾ. ೬-೬-೩) ; ಪರಿಚರರೋಡಿವರು ದೆಸೆದೆಸೆಗೆ ದೈತ್ಯನ ಮೋಡಿಯೆಂತುಟೊ (ಅನಂರಾ. ೦-೩-೬೩). ೨. ಸ್ಥಿತಿ ; ವೃತ್ತಿ : ಪ್ರಿಯೆಯ ಮುಖವೆನ್ನೊಳಗೆ, ನಿನ್ನೊಳಗೆ ಚಂದಿರನು, ನವಿಬ್ಬರಾ ಮೋಡಿಯನಿತು ಸಮವು (ಶ್ಯಾಮರೋ. ೯೬). ೩. ಠೀವಿ ; ಗಾಂಭೀರ್ಯ; ಗತ್ತು : ಮೇಳವದ ಮೋಡಿ [ಪಾಠಾಂ. ರೂಢಿ, ವೇಢ]ಯಲಿ ರಥದುಮ್ಮಳಿಸಿತು (ಕುವ್ಯಾಕ. ೩-೬೩) ; ಹನುಮನ ಮೊಗದ ಮೋಡಿಯ ಧೂರ್ತವಚನದ ಬಗೆಯ ಭಂಗಿಯನಾ ಪ್ರಹಸ್ತ ವಿವೇಕದಿಂದಱಿದು . . . ಇವನ ನುಡಿಸಿದು ನೋಡಬೇಕೆಂದ (ತೊರರಾ. ೫-೭-೨೩); ಮೋಡಿಯೊಳೂಱಿ ನಿಂದಡಿಯೊಳಿರ್ದಲಕಂ ಮುಱಿಗೊಂಬ ಮುದ್ದುಮೆಯ್ . . . ಕಳೆಗುಮೆಲ್ಲರ ದೃಷ್ಟಿ ಮನಶ್ಶ್ರಮಂಗಳಂ (ಶಕಬ. ೪-೦೩೭) ; ನಿಲುವಿನ ಮೋಡಿಯಲ್ಲಿ ಉಡುಗೆಯ ಗಾಡಿಯಲ್ಲಿ . . . ವಿಲಾಸದ ಒಳ್ಪು ಸೇರಿಕೊಂಡಿತು (೭ದ್ಉ. ೪೩). ೪. ಬಿಗುಮಾನ ; ಗರ್ವ : ಮುನಿವುದೆತ್ತಣದಿನ್ನು ಮೋಡಿಯೆತ್ತಣದು ಮನವ ಬೈತಿಟ್ಟು ಮಾರ್ಪಲೆವುದೆತ್ತಣದು (ಗೀತಗೋ. ೩೦) ಏನೆಂದಱಿಯದೆಳವೆಯೊಳಿನಿಯಳಭಿಮಾನಗೊಂಡಿರೆ ಮಚ್ಚರಿಸದೆ ಮೋನದೊಳಿರದೆ ಮೋಡಿಯ ಕಾಣಿಸದೆ ಸನ್ಮಾನದಿ ಮನಗರಗಿಪುದು (ಹರಿಚ. ೩-೦೩) ; ಪೆಣ್ಮಕ್ಕಳುಂ ಠಕ್ಕಿನಿಂದೊಲ್ಮೆಗರೊಳ್ ಮುನಿವರ್ ಮೋಡಿಯೊಳ್ ಪರ್ರೇಡಿಪರ್ (ಶಕಬ. ೩-೯೭). ೫. ಬಿಂಕ ; ಬಿನ್ನಾಣ ; ಬೆಡಗು ; ಹಿರಿಯಳಿರ್ದಂತವಳಿಗಿಷ್ಟೇಕುರವಣಿಯು ಯಾ ಗಾಡಿ ಮೋಡಿಯು (ಪಾಗಪ. ೪-೦೭) ; ಕಱುನಗೆಯ ಮೋಡಿಯೊಳೊರ್ವ, ತಾಂ ಬಟಲ್ದಂ–ನಲ್ಲ ! ಬಟಲ್ದೆಯ ! ಕುಳ್ಳಿರ ಎಂದು ಪಾಸಱೆಯಂ ತೋಱಿ ತಾನುಮೊತ್ತಿನೊಳ್ ದುಂಡಿಸಿ (ರಾಜಶ್ಯ. ೪೩-೨೩). ೬. ಸೊಗಸು ; ಅಂದ : ಅಗಪುಮೋಡಿ [ಪಾಠಾಂ. ರೆ]ಯ ಹೊಗಱ ಹೊಸಜವ್ವನದ ಭಟನಿಕರ ಜಗವರಸರಾಮಂಗೆ ಕೈಗಳ ಮುಗಿಮುಗಿದು ಕೆಲಸಾರುತಿರ್ದುದು (ತೊರರಾ. ೪-೬-೨); ಆಗಮವಧ್ಯಾತ್ಮವಳವಟ್ಟು ಶೃಂಗಾರತ್ಯಾಗಭೋಗದ ಮೋಡಿ ಮೆಱೆಯೆ . . . ಸೊಲ್ಲಿಸುವೆನಾಲಿಸಿರೋ (ಭರತ. ೦-೦೪) ; ಮೋಡಿಯನೇವೇಟ್ಟಿನೀ ಮನೋಮೋಹಕನಾ (ಶಸ್ತಪಂ. ೯-೩೪). ೭. ಆಕರ್ಷಣೆ ; ಸೆಳೆತ : ವಿನೋದದಾಗರಂ ಮೋಡಿಯ ಮಂಟಪಂ (ಹಸ್ತಿಮ. ೦-೨೪) : ಈ ನರ್ತಿಯಾ ಗಾಡಿ ಯಾ ಮೋಡಿ . . . ಅರಿಗಳವಡದು (ಪಂಚಾರಾ. ೫-೯-೦೦) ; ಇವಳ ಮುಖದಲ್ಲಿ ಇನ್ನೂ ಆ ಮೋಡಿಯಿತ್ತು (ರಂಗಪಾ. ೪೭). ೮. ವೈಶಿಷ್ಟ್ಯ ; ವಿಶೇಷತೆ : ಅರಲಂಬಗರಸನಿಮ್ಮಡಿ ಚೆಲ್ವನವನ್ಯದು ಸರಲನಾಂತೊಡೆ ಹತ್ತು ಸರಲಾ ದೊರೆ ಒಡಿವುದು ಮೋಡಿಯೆನೆ ಕರಗಳ ಹತ್ತು ಬೆರಳೆಸೆದುವು ಸರಲದೊಳು (ಭರತ. ೬-೩೮). ೯. ಕೈಚಳಕ :

ಚಾಕಚಕ್ಯತೆ : ಚಾತುರ್ಯ : ಅಡಲೇನದನಿಂದ್ರಜಿತುವಿನ ಮೋಡಿ ಬೇಜ್ಓಸರಿಸಿ ದಿನದಿನಕೋಡಿ ಹಿಂಗಿದ ಜಯುವಧುವ ತಿರುಹಿದನು ನಿಮಿಷದಲಿ (ತೊರಾ. ೬-೩೩-೯೮) ; ಘನಸಂಚುಗಾತ್ರ ಮೋಡಿಯಲಿ ವಲ್ಲಕಿಗಳಿಂ ಬಿಸದಮೆಸೆ ಬಾಜಿಸುವ ವೈಣಿಕೋತ್ತಮರುಗಳ ಮನೆಗಳಿಂ. . . ಕಾಣುತಚ್ಚರಿಗೊಂಡನು (ವಂಶಾರಾ. ೩-೩-೨೬) ; ರೂಢಿಸಿದ ಭಟನೆಂಬುದಂ ಬಲ್ಲೆ ಕರ್ಣ ಕೇಳ್ ಮೋಡಿ ಬೆರಗಾಗಿಹುದು ಪವನಜಂಗಿಂದು ನೀ ನೋಡಲವೊ (ತುರಂಗ. ೬೩-೮). ೧೦. (ಯಕ್ಷಿಣಿಗಾರನು ಯಾವು ದಾದರೂ ವಸ್ತುವನ್ನು ಮಂತ್ರಪೂರ್ವಕವಾಗಿ ನೆಲದಲ್ಲಿ ಹೂಳಿ ಅದನ್ನು ತನ್ನ ಪ್ರತಿಸ್ಪರ್ಧಿಯು ತನ್ನ ಮಂತ್ರಬಲದಿಂದ ತೆಗೆಯಲು ಹೇಳುವ) ಯಕ್ಷಿಣಿ ; ಇಂದ್ರಜಾಲ ; ಮಾಟ : ಪರದೆ ಬಿದ್ದ ಮೇಲೂ ಕೆಲವು ಕ್ಷಣಗಳು ನಾಟಕಮಂದಿರ ಮೋಡಿಯಲ್ಲಿದ್ದಂತೆ ಮೌನ ವಾಗಿತ್ತು (ರಂಗಪಾ. ೦೬೬) ; ಮೋಡಿಗೆ ಸಿಕ್ಕಿದಂತೆ ಅವಳ ದೃಷ್ಟಿ ಅಲ್ಲೇ ನೆಲಸಿತು (ರೂಪಸ. ೩೩೦). ೧೧. ಮಾಯೆ ; ಗಾರುಡಿ : ಮತ್ಸ್ಯ ನೃಪ ನಗುತ . . . ನಿಮ್ಮಯ ಮೃದುವಚನ ಬಲು ಮೋಡಿ ಗಾಡಿಕೆಗಾರಿ ಸರಿಯೆಂದ (ಕುಮಾವ್ಯಾ. ೬೦೩: ೯-೩೨) ; ಈವರೆಗೂ ಬಾಡಿ ಬತ್ತಿದಂತಿದ್ದ ನೀನು ಅದಾವ ಮೋಡಿಯಿಂದ ಅರಳುಮಲ್ಲಿಗೆಯಾದಿ ? (ಕೀಪೋಥ. ೧೬). ೧೨. ಮಂತ್ರ ; ತಂತ್ರ : ತಮ್ಮ ಮಾತು ಕೇಳದರೆ, ನಮ್ಮ ಮೋಡಿಯನ್ನು ನಮ್ಮ ಮೇಲೆ ತಿರುಗಿಸುತ್ತಿರುವಂತಿದೆ (ಚಿಕಂಬ. ೪) ; ವಿಠಲರಾಯರು ಈ ಎದುರುಮೋಡಿ ಎದುರಿಸಲೇಬೇಕಾಯ್ತು (ವೃದ್ಧಶಿ. ೨೩). ೧೩. ಮೋಸ ; ವಂಚನೆ : ಕೃತಕಮಾರ್ಗದ ಮೋಡಿಯಲಿ ಪರಿಚಿತನು ನೀನಲ್ಲಕ್ಷವಿಮಲಕ್ರತುವಿಧಾನವನಕ್ಷದೀಕ್ಷಿತರಜಾವರಿದನೆಂದ (ಕುಮಾವ್ಯಾಸ. ೬೦೨. ೦೯-೬೬). ೧೪. ಹಠ ; ಮೊಂಡಾಟ : ನನಗೆ ಆಣತಿ ನೀಡಿ ಎಂದಂದೆ ಬೇಡಿದೆನು ಬೇಡವೆಂದರು, ಮೋಡಿ ಬೇಡೆಂದು ಬೇಡಿದರು (ಯುಕೋಥ. ೪). ೧೫. (ಬಣ್ಣದ) ಛಾಯೆ,— ಪ್ರಭಾವ,—ಛಾಪು : ಎಳೆಹರೆಯದ ಹುಡುಗಿ ಆಕೆ. ತುಸುಕೆಂಪು ಮೋಡಿಯ ಮೇಲಿದ್ದಳು (ತಮಸಿ. ೨೯೬) ; ಎಳೆಬಿಸಿಲು ಶಿವಮೊಗ್ಗದ ಮೇಲೆ ಸುವರ್ಣಾಲಂಕಾರದ ಮೋಡಿಯನ್ನು ಹರಡಿತ್ತು (ಮಹಾಗ. ೨೬೩). ೧೬. ಕುದುರೆಸವಾರಿಯಲ್ಲಿ ಒಂದು ಬಗೆ : ದಾಟು ದೀಟು ಹೊಳಹು ಹೊಮ್ಮಚ್ಚುವಡೆ ಮೋಡಿ . . . ವರತರಹಮೆಂಬ ನವ[ಪಾಠಾಂ. ನವೀನ]ಗತಿಗಳೊಳು ತನ್ನ ಮನಮೆ ಹಯದ ತನುಗತಿಗಳಾದಂತೆ ವಾಹಕವಿನ್ಯಾಣಂಗಳಂ ತೋರುತ (ಪುಶಾಸ್ತ್ರ. ೭-೩೦ ವ). ೧೭. ವೇಗದ ಬರವಣಿಗೆಗಾಗಿ ಅಕ್ಷರಗಳನ್ನು ಮೊಟಕು ಮಾಡಿ ಬರೆಯುವ ಲಿಪಿವಿನ್ಯಾಸ ; ಅಕ್ಷರಗಳನ್ನು ಒಂದಕ್ಕೊಂದು ಸೇರಿಸಿ ಬರೆಯುವ ಬರವಣಿಗೆ : ನೋಡಿದು ತಮ್ಮ ತಂದೆಯ ಸ್ವಹಸ್ತದ ಮೋಡಿಯ ಬರೆದ ಬರಹನು (ಕಂಪ್ರಶಾ. ೩-೩೦) ; ಉರ್ದುಮೋಡಿ ಬಳಕೆಯ ಮಟ್ಟಿಗೆ ರೂಢಿಯಿಂದ ಕಲಿತರು (ಕರೀಥ. ೩೬) ; ನಾನು ಆ ಪ್ರಕಾರ ಬರೆದು ಕೊಟ್ಟೆ. ಅದರ ಕೆಳಗೆ ಅವರು ಮೋಡಿಯಲ್ಲಿ ಸಹಿ ಹಾಕಿ . . . ಹೇಳಿದರು (ಪಾಕೂಲಿ. ೩೮). ೧೮. ಹಸನು ಮಾಡಿದ ಅಡಕೆ ಯಲ್ಲಿ ಒಂದು ಬಗೆ : ಬಹಳ ಎಳೆಯದ ಅಡಕೆಗಳನ್ನು ಸಣ್ಣಾಗಿ ಕೊರೆದು ಚೂರುಮಾಡಿ ಕುದಿಸುತ್ತಾರೆ. ಅದರಲ್ಲಿ ಚತುರ್ಭಾಗ ಕೊರಪ, ಲವಂಗ ಚೂರು. ಮೋಡಿ. ಅಣ್ಣಾವಾರ, ದೇಶಾವಾರ ಎಂದು ಬೇರೆಬೇರೆ ರಾಶಿಗಳನ್ನು ಮಾಡುತ್ತಾರೆ (ಕೃಷಿಶ್ರ. ೦೩೨). ೧೯. [ಸಂಗೀತ] ಮದ್ದಳೆಯನ್ನು ಬಾರಿಸುವ ಒಂದು ಬಗೆಯ ವೈಖರಿ,—ಗತ್ತು : ಆ ಸಮಯದೊಳ್ ಮದ್ದಳಿಗಂ ಮದ್ದಳೆಯಂ . . . ಲಾಗು ಮೋಡಿ ಚಮತ್ಕಾರ ತುಡುಕು ರಿಗ್ಗವಣೆ ಪಹರಣೆಗಳೆಂಬ ನಾನಾಶಬ್ದಂಗಳಂ ಬಾಜಿಸೆ (ಧರ್ಮಶ. ೨-೨೩ ವ) ; ಬಾಜಿಸಿದನೊರ್ವನಮರ ಮದ್ದಳೆಯ ಲೀಲೆಯೊಳು ತುಡುಕುಪಹರಣೆ ರಿಗ್ಗವಣೆ ಮೋಡಿಗಳನು ನುಡಿಸೆ (ಗೋವಿಂದಿ. ೬-೦೬).

**ಮೋಡಿತೆಗೆ** = (ಮಾಟದ ಪ್ರಭಾವವನ್ನು ಕಡಿಮೆ ಮಾಡಿ) ಮಾಟ ಮಾಡಿ ಹೂಳಿದ ವಸ್ತುವನ್ನು ಹೊರಗೆ ತೆಗೆ : (೯). **ಮೋಡಿ ಮಾಡು** = ೧. ಮಾಟ ಮಾಡು; ಇಂದ್ರಜಾಲ ಮಾಡು : ಹಳ್ಳಿಗಳಲ್ಲೆಲ್ಲ ಮೋಡಿ ಮಾಡುತ್ತಾರಂತೆ. ಅದರಲ್ಲಿ ನಿಮಗೆ ವಿಶ್ವಾಸ ವಿದೆಯೇ ? (ನವಪ. ೬೦); ಯಾವ ಮೋಡಿ ಮಾಡಿ ಸುಬ್ರಾಯರನ್ನು ಒಳಗೆ ಹಾಕಿಕೊಂಡನೋ ಏನೋ ? (ಪಾಳ್ಯ. ೦೦೦); ಹಾವಾಡಿಗ ಮೋಡಿ ಮಾಡ್ದಂಗೆ ಮಾಡಿಬಿಟ್ಟು ಈಗ ಹಿಂಗಂತೀಯಾ ? (ಶೀಮಕ. ೬೦೯). ೨. ಮಂತ್ರಮುಗ್ಧನನ್ನಾಗಿ ಮಾಡು ; ಸೆಳೆ : ಈ ಕುಣಿತಗಳಂತೂ ಜನತೆಗೆ ಮೋಡಿ ಮಾಡಿಯೇ ಬಿಡುವುವು (ಕನ್ನಜಾ. ೩೯). **ಮೋಡಿ ಹಾಕು** = ೧. ಮಂತ್ರಪೂರ್ವಕವಾಗಿ ಯಾವುದಾದರೂ ವಸ್ತುವನ್ನು ನೆಲದಲ್ಲಿ ಹೂಳು : (೯). ೨. ಮಾಟ ಮಾಡು ; ಮಂತ್ರದ ಪ್ರಭಾವಕ್ಕೆ ಒಳಪಡಿಸು : ಮೋಡಿ ಹಾಕಿದಂತಾಗಿ ಅವನನ್ನೇ ದಿಟ್ಟಿಸಿ ನೋಡು ವಂತಾಗುತ್ತಿತ್ತು (ಅಂಹೂ. ೦೦೬); ಜನರೆಲ್ಲರೂ ಮೋಡಿ ಹಾಕಿದ್ದಂತೆ ಎವೆಯಿಕ್ಕದೆ ಸಂಗೀತ ಕೇಳುತ್ತ ತಲ್ಲೀನರಾದರು (ಸಂಗೀತ. ೬೨). ೩. ಮಂತ್ರಮುಗ್ಧನನ್ನಾಗಿ ಮಾಡು ; ಸೆಳೆ ; ಮೋಡಿ ಮಾಡು : ಡಾ. ನರೋತ್ತಮರು ಮೋಡಿ ಹಾಕುವಂತಹ ಭಾಷಣಕಾರರು (ದೂರಸ. ೩೦೬); ಎರಡು ದಿನದಲ್ಲಿ ಅಂಥೋಣಿ ಸುಬ್ಬುವಿಗೆ ನಿಜವಾಗಿಯೂ 'ಮೋಡಿ' ಹಾಕಿದ್ದ (ಶೀಮಕ. ೨೯); ನಿಮಗೆ ಮೋಡಿ ಹಾಕೋ ವಿದ್ಯೆ ಬರಬಹುದು (ರೂಪಶ್ಯ. ೯೩).

**[ದೇ.॥ ತಮಿ. ಮೋಟಿ ; ಮಲ. ತುಳು. ತೆಲು. ಮೋಡ. / ಹಿಂ. ಮರಾ. ಮೋಡೀ]**

**ಮೋಡಿ$_2$** (ನಾ). ಒಂದು ಬಗೆಯ ಮೂಲಿಕೆ: ಹಿಪ್ಪಲೀಮೂಲ : "ಮೋಡಿ _ ಶಿರ, ಹಿಪ್ಪಲೀಬೇರು" (ಗಂಗಾಟ. ೯); ಗಂಟು ಭಾರಂಗಿ, ಹಿಪ್ಪಲಿಮೂಲ (ಮೋಡಿ), ಚವ್ಯ, ಬೆಳ್ಳುಳ್ಳಿ, ಅಗರಧೂಮ ಇವುಗಳನ್ನು ನಾಲ್ಕು ನಾಲ್ಕು ತೂಕ ಚೂರ್ಣಮಂ ಮಾಡಿ (ಸಳವ್ಯ. ೬೩); ಕಾಡುಮೆಣಸಿನ ಬಳ್ಳಿಯ ಬೇರು ಮತ್ತು ಮೋಡಿಕಡ್ಡಿಗಳು ಗುಣದಲ್ಲಿ ಮೆಣಸಿನಂತೆ (ಅಷ್ಟಾಂಗ. ೦೫೬-೦೬೩ ಅರ್ಥ). **[ ದೇ.॥ ತಮಿ. ಮೋಟಿ ]**

**ಮೋಡಿ$_3$** (ನಾ). ಬುದ್ಧಿಯಿಲ್ಲದವಳು ; ದಡ್ಡಿ : ಅಕಲಂಕಕುಲದೊಳ ವತರಿಸಿ ನಿಯಮಾಚಾರ ಸುಕುಮಾರತೆಯನರಿತಳಲ್ಲದೀ ಪ್ರಾಕೃತರ ಪಾಸಟಿಯ ಮೇಢಿ[ಮೋಡಿ]ಯಲ್ಲ (ವಂಶಾರಾ. ೨-೦೦-೮). 'ಮೋಡೆ' ಪರಾ. [ ಮೋಡ$_2$ + – ಇ$_2$ ]

**ಮೋಡಿಕಾರ** ' ಮೋಡಿಗಾರ ' ನೋ.

**ಮೋಡಿಕಾರ್ತಿ** (ನಾ). ಗಾರುಡಿ ಮಾಡುವವಳು ; ಮಾಟಗಾತಿ : ನೀನಾರು ? ನೀನು ಮೋಡಿಕಾರ್ತಿಯೋ ? (ಪುಾಂಶೀ. ೩೮).

[ಮೋಡಿಕಾರ (< ಮೋಡಗಾರ) + –ತಿ$_1$ (< –ಇತ್ತಿ) ]

**ಮೋಡಿಗಾರ, ಮೋಡಿಕಾರ** (ನಾ). (ಹಣದ ಸಂಪಾದನೆಗಾಗಿ) ಇಂದ್ರ ಜಾಲ ಮಾಡುವವನು; ಯಕ್ಷಿಣಿ ಮಾಡುವವನು; ಮಾಟಗಾರ : ನಾಡು ಓಡುವಾಗ ಮೋಡಿಗಾರ ಬಂದ (ಗಾದೆ). **ಮೋಡಿಕಾರ:** ನರಿಯೇ ಮಂತ್ರಸಿದ್ಧಿ, ಮೋಡಿಕಾರನೇ ತತ್ವಜ್ಞಾನಿ, ತೇಪೆ ಅನುಕರಣಗಳೇ ಕಲೆ ಇರುವ ದೇಶಕ್ಕಾಗಿ ಕನಿಕರ ಪಡಿ (ಕೃಪಾಕೋ. ೦೦); ನಿಜವಿದ್ದುದನ್ನು ಸುಳ್ಳು, ಸುಳ್ಳಿದ್ದುದನ್ನೂ ನಿಜವೆಂಬ ಮಾಟ ಮಾಡಿ ತೋರಿಸುವ ಬಾಯ್ಬಡಿಕ ಮೋಡಿಕಾರರ ಕುಲ, ಯಾವ ಕುಲ ? (ಯುಕ್ಷಶ್ರ. ೦೩೯).

[ ಮೋಡಿ$_1$ + –ಕಾರ$_1$ (< –ಕಾಜ) ]

**ಮೋಡಿಗೊಳ್, ಮೋಡಿಗೊಳು** ( ಕ್ರಿ ). ೧. ಅಂದವಾಗು ; ಚೆಲುವಾಗು : ಮೋಡಿಗೊಂಡಿರ್ಪ ನಾಸಂ ತೊಳಪ ಮುಖವಿಕಾಸಂ

ತುಂಬಿಸಿಬಿಂ ಕಣ್ಗೆ ಲೇಸಂ (ಶಶಿ. ೩-೯೭). ಮೋಡಿಗೊಳು : ೨. ಹಠ ಮಾಡು; ಮೊಂಡಾಟ ಮಾಡು : ಕೋಪವೆಸಗದೆ ಮೂಗುವಡದೆ ಮೋಡಿಗೊಳದೆ ಲೋಗರೆಂಚಿತಮೆನಲೊಯ್ಯನೊಯ್ಯನೆಯುಸುವಾಗಿ ನುಡಿವುದವರೊಡನೆ (ಹರಿ. ೪-೦೦). [ಮೋಡಿ₁ + ಕೊಳ್₁]

**ಮೋಡಿಗೊಳು** ' ಮೋಡಿಗೊಳ್ ' ನೋ.

**ಮೋಡಿಸು** (ಕ್ರಿ). ಆಕರ್ಷಿಸು ; ಸೆಳೆ ; ಮೋಡಿ ಮಾಡು : ಸ್ಮರನಿನ್ನಾನಿಲ್ಲದಂದೀ ಜನಮನೆಱಗಿಸಲ್ಕೋಡಿಸಲ್ ಮೋಡಿಸಲ್ ಮಚ್ಚರದಿಂಪಲ್ಲಾಡಿಸಲ್ . . . ಅದೇನೊರ್ವನೆ ನೆಱೆವನೆ ಪೇಟೆಂದು ಲೋಕಕ್ಕೆ ಪೇಟ್ಟಂತಿರೆ ಬಂದರ್ ಬಿಂಕದಿಂ ಸಂಕಿಸದೆ ಸಕಲವಿದ್ಯಾಧರಸ್ತ್ರೀಸಮೂಹಂ (ರರ್ತಾಪ್ಯು. ೬-೨೦೩). [ಮೋಡಿ₁ + — ಇಸು₃]

**ಮೋಡೆ** (ನಾ). ಬುದ್ಧಿ ಇಲ್ಲದವಳು ; ಮೂಢೆ : ಆನೇಂ ಮೋಡೆಯೆ ! ಪೋ ! ತನ್ನಾಣೆ, ಕಣ್ಣಾಣೆ, ಕೇಳ್ವೆಂ (ರಾಮಾಶ್ವ. ೦೦೬-೦೪). ' ಮೋಡಿ₃' ಪರಾ. [ಮೋಡ₂ + — ಎ₂]

**ಮೋಣ** (ನಾ). ಒಣಗಿದ ಹಣ್ಣು. [ಸಂ.]

**ಮೋತಾದಾರ** (ನಾ). ಕುದುರೆಗಳ ಆರೈಕೆ ಮಾಡುವವನು ; ಕುದುರೆಗಳ ಮೇಲ್ವಿಚಾರಕ ; ಕಾಸ್ತಾರ : (✝).
[←ಮರಾ. ಮೋತಾದ್ದಾರ್, ಮೋತದ್ದಾರ್]

**ಮೋತಿ** ' ಮೂತಿ' ನೋ.

**ಮೋತಿಖಾನೆ** ' ಮೋದೀಖಾನೆ' ನೋ.

**ಮೋತಿಬಿಂದು** (ನಾ). ಕಣ್ಣಿನ ಗುಡ್ಡೆಯ ಮೇಲೆ ಬಿಳಿಯ ಚುಕ್ಕೆ ಅಥವಾ ಹೂ ಕಾಣಿಸಿಕೊಳ್ಳುವ ಒಂದು ಬಗೆಯ ಕಣ್ಣಿನ ರೋಗ : ದಿನಪತ್ರಿಕೆಗಳಲ್ಲಿ ಹೊರಬೀಳುವ ಗುಣಕಾರಿಗಳಲ್ಲದ "ಮೋತಿಬಿಂದುನಾಶಕ" ತೊಟ್ಟುಗಳನ್ನು ಉಪಯೋಗಿಸಲು ತವಕ ಪಡುವುದು ಸಹಜವೇ ಸರಿ (ಶಿಮ್ಯದ್ಯ. ೦೭೦). [←ಮರಾ. ಮೋತಿಬಿಂದು, ಮೋತಿಬಿಂಬ, ಮೋತ್ಯಬಿಂದು, ಮೋತ್ಯಬಿಂಬ ; ಹಿಂ. ಮೋತಿಯಾಬಿಂದ್]

**ಮೋತೀಖಾನೆ** ' ಮೋದೀಖಾನೆ ' ನೋ.

**ಮೋತೀಚೂರು** (ನಾ). ೧. ದುಂಡಾದ ಸಣ್ಣ ಸಣ್ಣ ಕಾಳುಗಳಿಂದ ಕೂಡಿದ ಬೂಂದಿಯ ಲಾಡು ; ಗುಂಜಾಲಾಡು : ಮಾಮಾನೀಪ್ರಸ್ತಕ್ಕೇನು ಒಂದು ಮೋತೀಚೂರು, ಇಲ್ಲಾ ಮಂಡಿಗೆ ಮಾಡ್ಸಿ ಬಿಡೂಣು (ತಿತುಗು. ೩೪) ; ಹೆಣ್ಣಿನ ಕಡೆಯವರು ದಿಬ್ಬಣದ ಆಸೆಗೆ ತುಪ್ಪ ಮೋತೀಚೂರನ್ನು ತಿನ್ನಿಸಬೇಕೆಂಬ ಹವಣಿಕೆಯಲ್ಲಿದ್ದರು (ಶಿಬಿಶಾ. ೭) ; ಉತ್ತರಾದಿ ಮಠದ ಮೋತೀಚೂರಿನ ಸಮಾರಂಭಕ್ಕೆ . . . ಊಟಕ್ಕೆ ಹೋದ ಬ್ರಾಹ್ಮಣರುಂಟು (ಯುಕ್ತಿಶ್ರ. ೦೭೭). ೨. ದೋತ್ರದ ಅಲಂಕಾರಯುಕ್ತವಾದ ಜರಿ ಅಂಚು : (✝). [←ಹಿಂ. ಮರಾ. ಮೋತೀಚೂರ್]

**ಮೋತೆ** (ನಾ). ೧. ಬಾಳೆಯ ಗೊನೆಯ ತುದಿಯಲ್ಲಿ ಇರುವ ದೊಡ್ಡ ಆಕಾರದ ಹೂವು : ಬಹುಮೂತ್ರಕ್ಕೆ ಪಥ್ಯಾಪಥ್ಯಂಗಳು— ಹಳೆಅಕ್ಕಿಅನ್ನ, ಗೋಧಿ . . . ಬಾಳೆಯ ಮೋತೆ, ಕಾರೆಸೊಪ್ಪು (ಸಶವೈ. ೪೦೦) ; ಬಾಳೆಯ ಮೋತೆಯ ಗಾತ್ರದ ಕಿವಿಗಳ ಮೃಗವಿದಗೋ ಗುಡ್ಡೆಯ ಕಣ್ಣುಗಳ (ಶಾಕುಗೀ. ೪೪೭). ೨. (ಕೇದಗೆ ಮುಂತಾದುವುಗಳ) ತೆನೆ ; ತೊಡೆ ; ಗುಚ್ಛ : ಚೂಡಾಲಾ, ಚಕ್ರಲಾ, ಉಚ್ಚಟಾ—ಇ ಮೂರು ಗಡ್ಡೆವಳಗೆ ಅನೇಕ ಮೋತೆಗಳುಳ್ಳ ಗಂಟುಮುಸ್ತೆಗಳು (ಸಿದ್ಧೌಷಧಿ. ೦೪೯) ಅಗಿದು ಪಣ್ಗಳನಡಸಿ ತೋರುವ ಮುಗುಳು ಮೋತೆಯ ಮುರಿವು ಕೆದರು ! ಹಗರಣದ ಕಪಿಮೃಗವ ನೋಡುವ ತರುಶಿಖಾಗ್ರದಲಿ (ಕುಂದಕಾ. ೩-೨೮) ; ದಾರಿಯಲ್ಲಿ ಒಬ್ಬ ಗೌಡ ನಾಲ್ಕು ಮೋತೆ ತಾಳೇಹೂವನ್ನೂ . . . ಇಟ್ಟುಕೊಂಡು ಯಾರಾದರೂ ಕೊಂಡುಕೊಳ್ಳುತ್ತಾರೆಯೋ—ಎಂದು ಕಾದು ಕೊಂಡಿದ್ದನು (ಶಿಬಿದು. ೦೧). [ದೇ. ? ತಮಿ. ಮೋತ್ತೈ ]

**ಮೋದ₁** (ನಾ). ೧. ಸಂತೋಷ : ಹಿಗ್ಗು ; ಆನಂದ : ಇಹಗೆ ಮಾಡುವೆನಾವರದೊಳೆಂದೆನುತ ಮನದೊಳು ಮೋದವೆ [ರುಕ್ಮಾಂ. ವ]ಯ್ದಲು (ಜಸವು. ೩೭-೦೭) ; ಮೋದದಿಂದ ವಿದುರನ ಮನೆಗಯ್ದಿ ಆದರದ ಪಾಲ ಕುಡಿದುಳಿದುದ ನೀ ಮೇದಿನಿಗೀಸಿದೆಲ್ಲಿ ಕಲಿತ್ಯೋ ರಂಗ (ಪುರಂದ. ೪-೦೩೭-೯) ; ಲಕ್ಷ್ಮಣಂ ಲಜ್ಜಾವಿಷಾದಮಂ ತುಳಿದಿಕ್ಕಿ, ಮೋದದಿಂ ಕಣ್ಣಾದನತ್ತಣ್ಗೆ (ಶ್ರೀರಾಮಾ. ೦೩೯-೨೦೩). ೨. ಸುಗಂಧ ; ಸುವಾಸನೆ : ' ಮೋದೋಪಚಾರ ' ಪರಾ. ೩. ಮಾವು : " ಮೋದಾಖ್ಯಃ — ಮಾವು " (೬ಕರ. ೦೩೦); ಬಾಳೆ ಕಾಬಾಳೆ ಮೋದ ಸಕ್ಕರೆಮಾವು ನೇರಿಲವಣ್ಗಳ ಯಾವವರಿತ್ತರಾಳ್ದನಿಗೆ (ಮೋಹತ. ೦೯-೩೩). ೪. ತೆಂಗು : " ಮೋದಃ — ತೆಂಗು " (೬ಕಧ. ೧೩೦). ೫. [ಜೈನ] ಐವತ್ತೂರು ಗರ್ಭಾನ್ವಯಕ್ರಿಯೆಗಳಲ್ಲಿ ಐದನೆಯದು ; P " ೯ನೇ ತಿಂಗಳ ಗರ್ಭವತಿಗೆ ಪೂರ್ವವತು ಮಂಗಳಸ್ನಾನಾದಿಗಳಂ ಬೆಳಯಿಸಿ ಅಲಂಕಾರವಂ ಮಾಡಿ ಹಸೆಯ ಮೇಲೆ ಕುಳ್ಳಿರಿಸಿ ಪತಿಯ ಹಸ್ತದಿಂ ರಕ್ಷಾಯಂತ್ರಮಂ ಕಟ್ಟಿಸುವದೇ ಮೋದವೆಂಬ ಐದನೇ ಕರ್ಮವು " (ಪುರುಷ. ೧೯೯) : ಆದಾನ ಪ್ರೀತಿ ಸುಪ್ರೀತಿ ಧೃತಿ ಮೋದ . . . ಎಂಬಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೦೩-೦೩ ವ); ಆಧಾನಮುಂ ಪ್ರೀತಿಯುಂ ಸುಪ್ರೀತಿಯುಂ ಧೃತಿಯುಂ ಮೋದಮುಂ . . . ಎಂದಾದಾನಾದಿನಿರ್ವಾಣಪರ್ಯಂತಮಪ್ಪಯ್ವತ್ತುಮೂಱುಂಗರ್ಭಾನ್ವಯಕ್ರಿಯೆಯೊಳ್ (ಶಾಪುಂಪು. ೨೦೨). ' ದೀಕ್ಷೆ ' ಪರಾ. [ಸಂ.]

**ಮೋದ₂** (ನಾ). ಅಜವಾನ ; ಅಜಮೋದ ; ಓಮು : " ಮೋದ — ಅಜಮೋದ " (೬ಕರ. ೦೩೦); ಒಂದು ಬೆಸೂಗೆಯಲ್ಲಿ ಕಾದ ಹಂಚನಿರಿಸಿ ಅಡಕೆಯಷ್ಟು ಮೋದವನಿಕ್ಕಿ ಮೇಲೊಂದು ಲೋಟ ಮುಚ್ಚಿ . . . ಏಲಕ್ಕಿಯ ಚೂರ್ಣವ ತಳಿದಲ್ಲಾಡಿಸುವುದು (ಶೀಮುಸಶ. ೩೦). ' ಮೋದೆ ' ಪರಾ. [ಸಂ. ಮೋದಾ]

**ಮೋದಂಡ** (ನಾ). ೧. ಅನಿಶ್ಚಿತತೆ ; ಸಂದೇಹ : (✝). ೨. ಸುಮ್ಮನಿರುವುದು ; ಮೌನ (?) : ಇಕ್ಷ್ವಾಕುಕುಲಮೌಳಿಮಣಿಗೆಯ್ದ ಪ್ರಾರ್ಥನೆಗೆ ಸಾಗರನು ಕಿವಿಗೊಡದೆ ಮೋದಂಡವಾಗಿರಲು ದಾಶರಥಿ ಇವನ ಅಭಿನಯಕೆ ತಗುವಂದದಲಿ (ಪವರಾ. ೨-೭೪). [←ತುಳು. ಮೋದಂಡ]

**ಮೋದಂಬೆಱು** (ಕ್ರಿ). ಹರ್ಷವನ್ನು ಹೊಂದು ; ಸಂತೋಷವನ್ನು ತಾಳು : ಶಶಿಶೇಖರಂ ಗುರುವಿರೂಪಾಕ್ಷಂ ಭವಾನೀಪ್ರಿಯಂ ಮೋದಂಬೆತ್ತಿರೆ ತಾಳ್ದು ರಂಜಿಪುದು ಪಂಪಾಕ್ಷೇತ್ರಂ (ಉದ್ಭಟ. ೩-೭೩).
[ಮೋದ₁ + ಪೆಱು₁]

**ಮೋದಕ₁** (ಗು). ೧. ಸಂತೋಷವನ್ನುಂಟುಮಾಡುವ ; ಉಲ್ಲಾಸಕರವಾದ ; ಆನಂದದಾಯಕವಾದ : ಧರಣೀಭಾರಮನಾಂ ಬಿಸುಟೆಪ್ಪುಡದು ಚಿಃ ಲೋಕಕ್ಕೆ ಖಾತ್ಪಾಸಮಿಾಕರಣಂ ಭಾಶಿಕಮೋದಕವ್ಯತಿಕರಂ ತಾನೆಂಬುದಂ ಮಾಡವೇ (ಆದಿಪು. ೪-೮೧). (ನಾ). ೨. ಒಂದು ಬಗೆಯ ಸಿಹಿಯಾದ ಖಾದ್ಯ ; ಕಡುಬು : ಓರೊ ರ್ವರೊಳ್ ವಿಷಯುಮಿಶ್ರ ಮೋದಕಾದಿ ಖಾದ್ಯಪ್ರವೇಶಮಂ ಮಾಡುತ್ತಮಿರ್ಪುದಂ ಕಂಡು (ಪುಣ್ಯಾಶ್ರ. ೩-೦೩೪ ವ); ಮೋದಕ ನೈವೇದ್ಯವನಣಗ್ಗೆಯ ನೆಪವೇನಂ ಪೇಳಲಿ ನಾನರಿಯೆ (ಗಣೇಶ. ೩-೩೩); ಮನಸ್ಸಿನಲ್ಲಿ ಮೋದಕವನ್ನು ತಿಂದರೆ ಹಸಿವೆಯು ಶಾಂತವಾಗಲಾರದು (ತುಳಸೀ. ೭೩). [ಸಂ.]

**ಮೋದಕ₂** (ನಾ). ಅಜಮೋದ ; ಓಮು : ಮೋದಕದಿಂ ಮಧುಪೀಲಿಯ ಬೂದಿ ಕಣಾಚೂರ್ಣಮೆಂಬಿವಂ ತಿನೆ ರುಜೆಯಿಂದಾದಿಕರ್ಣುಂ . . . ಕಂಠರೋಗಮುಂ ಪ್ರಶಮಿಸುಗುಂ (ಲೋಕೋಪ. ೯-೩೨).
[<ಮೋದ₂]

**ಮೋದಗೆ** (ನಾ). ಮೋದಕ ; ಕಡುಬು : ಆಕೆಗೆ ಗರ್ಭಮಾಗಿ ಮೋದಗೆ [ಪಾಠಾಂ. ಮೊಜಗೆ, ಮೊದಜಗೆ]ಯ ಮೇಗೆ ಬಯಕೆಯಾದೊಡೆ (ವಡ್ಡಾರಾ. ೧೮-೦೯). [<ಸಂ. ಮೋದಕ]

**ಮೋದನ** (ನಾ). ೧. ಸಂತೋಷ ; ಹರ್ಷ : "ಮುತ್, ಮುದಂ, ಪ್ರಮೋದಂ, ಮೋದನಂ, ಮುದಿತತ್ವಂ . . . ಪ್ರಮೋದ್ಯಂ ಈ ೧೨ ನಲಿವು" (ಅಭಿಕ. ೮೩) ; ಪ್ರಮೋ [ಪಾಠಾಂ. ಪ್ರೋ]ದನವಿಲ್ಲದುದು ಪುಸಿಯಂಜದೆ ಪಣಮಂ ನೆಪ ಕೊಳಲಜುಯೊದು ಸುತ್ತಗೆ ಕಲಿಸಿದರೊರ್ವಳ್ (ಶ್ರೀಕೃಷ್ಣ. ೨೯-೦೧೯). ೨. ಸಂತೋಷಗೊಳಿಸುವುದು ; ಆನಂದವನ್ನುಂಟು ಮಾಡುವುದು. ೩. ಸಂತೋಷಗೊಳಿಸುವವನು ; ಆನಂದವನ್ನುಂಟು ಮಾಡುವವನು : ಯಾದವಯಿನ ಯಾಶಯುಕ್ತಿದಯುಧಪವೋದನ . . . ದಯೆದೋಱು (ಕಸಸಾಂ. ೭೭-೯೯). [ಸಂ.]

**ಮೋದನೀಯ** (ಗು). ೧. ಸಂತೋಷಿಸಬೇಕಾದ. ೨. ಸಂತೋಷವನ್ನುಂಟುಮಾಡುವ. (ನಾ). ೩. ಮಲ್ಲಿಗೆ : "ಮೋದನೀಯ – ಮಲ್ಲಿಗೆ" (೬ಕಂ. ೦೩೦). [ಸಂ.]

**ಮೋದವಿ** (ನಾ). ಒಂದು ಬಗೆಯ ಸಸ್ಯ : "ಮೋದವೀ – ಮಲ್ಲಿಗೆ, ಸೇವಂತಿಗೆ, ಮೊಸ್ಸಾಮರ". (೬ಕಂ. ೦೩೦). [ ? ]

**ಮೋದಿ** (ಗು). ೧. ಸಂತೋಷಪಡಿಸುವ. ೨. ಮಿಶ್ರಮಾಡುವ. (ನಾ). ೩. ನಲಿವನ್ನು ನೀಡುವವನು ; ಸಂತೋಷಗೊಳಿಸುವವನು: ಎನ್ನ ಪಾಲಿಸಿದಂದದಿ ಸಕಲಪ್ರಾಪ್ತನ್ನರ ಸಲಹೊ ಮೋದಿ (ಜಗದಾ. ೦೬೨). ೪. [ಸಂಗೀತ] ಒಂದು ರಾಗದ ಹೆಸರು : ಕೌಶಿಕಿ . . . ಮೋದಿ . . . ಶಯಸೋದರಿಯೆಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದವು (ಏಪೇಸ. ೨೩೩). [ಸಂ. ಮೋದಿನ್]

**ಮೋದಿಕೆ** (ನಾ). ಹೊಡೆಯುವಿಕೆ ; ತಾಡನ : ಮೋದಿಕೆಗಳ್, ಮೋದುಗಳ್ (ಶಬ್ದಾ.ಸೂ. ೩೬೯ ವೃತ್ತಿ). [ಮೋದು₁ + – ಇಕೆ]

**ಮೋದಿಖಾನೆ** 'ಮೋದೀಖಾನೆ' ನೋ.

**ಮೋದಿತ** (ಗು). ೧. ಸಂತೋಷಗೊಂಡ ; ಆನಂದಿತನಾದ : ಮೋದುವಲರಲ್ ಸೋಮವಾರಮುದಾದಿಯಾಡೊಂಭತ್ತುದಿವಸಂ ಮೋದಿತೋತ್ಸುಕ ಭಕ್ತಿ [ಪಾಠಾಂ. ವೇದಿತೋತ್ಸುಖವೃತ್ತಿ]ಯಿಂ ಸಲೆ ನೋಂತು (ಜಿಸಪು. ೨-೩೦). (ನಾ). ೨. ಸಂತೋಷ ; ಆನಂದ. [ಸಂ.]

**ಮೋದಿನಿ** (ನಾ). ಒಂದು ಬಗೆಯ ಸಸ್ಯ ; ಅಜಮೋದ : "ಮೋದಿನೀ – ಅಜಮೋದ, ಮದ್ಯ, ಉಗುನಿ, ಹಿಟ್ಟಳಿಕ" (೬ಕಂ. ೦೩೦). [ಸಂ. ಮೋದಿನೀ]

**ಮೋದಿರ, ಮೋಯಿರ** (ನಾ). ಉಂಗುರ : ಮೋದಿರ ನಿನಗೆಲ್ಲಿ ಸಿಕ್ಕಿತು ? (೧೦೪. ೨೩೪). 'ಪೊನ್ಮೋದಿರ' ಪರಾ. **ಮೋಯಿರ** : 'ಮೋಯಿರ ಮುಹೂರ್ತ' ಪರಾ. [ದೇ.॥ ತಮಿ. ಮೋತಿರ ; ಮಲ. ಮೋದಿರ; ಕೊಡ. ಮೋದ್'ರ./ಸಂ. ಮುದ್ರಾ]

**ಮೋದಿಸು₁** (ಕ್ರಿ). ೧. ಹೊಡೆಯುವಂತೆ ಮಾಡು ; ಬಡಿಯಿಸು : ಒರ್ವರಿಂದಮೊರ್ವರನಜುಯಟ್ಟ ಮೋದಿಸುತಮಿಾ ತೆಱದಿಂ ನಗುತಿರ್ಪ ನಾವಗಂ (ಧರ್ಮಾಮೃ. ೨-೯೨). ೨. ಹೊಡೆ ; ಕುಟ್ಟು : ಪುಡಿಸೆಲದಿ ಪೊರಳುವ ಮೋದಿಸುವ ತಲೆಗಳನು ಕಗ್ಗಲ್ಲುಗಳಿಗೆ . . . ಭರತಭಾರ್ಯೆಯರಾ ದಿನದ ದುಃಖವನು ಪೇಳುವೆಡೆನ್ನಳವೆ (ತಿಮ್ಮಪ್ರಿ. ೩-೩೭). [ಮೋದು₁ + – ಇಸು₃]

**ಮೋದಿಸು₂** (ಕ್ರಿ). ೧. ಸಂತೋಷಪಡಿಸು ; ಆನಂದಗೊಳಿಸು : ಆದಿಯುಖದಿಂದಲಱದು ದ್ರವ್ಯಮಂ ರೂಪು ಮೋದಿಸುವ ಗಂಧರಸವಾಸ್ಪರ್ಶ ಶಬ್ದ ಲಿಂಗಾದರ ತೃಪ್ತಿಯಾಯಾಱು ರೂಪಾದಿ ಸದ್ರವ್ಯಂಗಳು (ಏಕೋತ್ತ. ೬-೦೬-೦೬) ; ಗುಂಡಯ್ಯನೆದೆಯೊಳಗೆ ಮೋದಿಸಲು ಕುಣಿವೆ ತಲೆದೂಗಿ (ಕಬ್ಬಿಗಾ. ೩೦೦). ೨. ಆನಂದವನ್ನು ಹೊಂದು : ಉಲ್ಲಾಸವನ್ನು ತಳೆ : ಬಸವಂತಿಯ ಮಾತು ನಗೆಯ ಮುಕರಂದವನ್ನು ಮೂಸಿ, ಮೋದಿಸಿಯೇ ಬಂದಂತಿತ್ತು (ದೀಕಕ. II, ೦೭೦). [ಮೋದ₁ + – ಇಸು₃]

**ಮೋದೀಖಾನೆ, ಮೊದೀಖಾನೆ, ಮೋತಿಖಾನೆ, ಮೋತೀಖಾನೆ, ಮೋದಿಖಾನೆ** (ನಾ). ಸೈನಿಕರಿಗೆ ಒದಗಿಸುವ ಆಹಾರ ಸಾಮಗ್ರಿ ಮುಂತಾದುವುಗಳನ್ನು ಸಂಗ್ರಹಿಸಿಡುವ ಸ್ಥಳ,– ಉಗ್ರಾಣ; ಗೋದಾಮು; ೪ ಅಠಾರಖಾನೆಗಳಲ್ಲಿ ಒಂದು : ಅಕ್ಕಿಯನ್ನು ಕೂಡಿಗೆ ಮಾಡಿಸಿ, ಕಿಗ್ಗಟ್ಟ ನಾಡ ಮೋದೀಖಾನೆಯಲ್ಲಿ ಜೋಪಾನದಿಂದ ಮಡಗಿ . . . ಅಕ್ಕಿ ಕೇಳಿದರೆ ಅಳೆದು ಕೊಡುವಂತೆ ತಾಕೀದಿ ಮಾಡಿದ್ದೇವೆ (ರಾಕೇಂಪತ್ರ. ೬೬): ಹಜೂರು ಮೋದೀಖಾನೆ ಸಾವಕಾರ ಬೆಟ್ಟದ ಪುರದ ಮೇಗಳ ಮನೆ ಲಿಂಗಣ್ಣನ ಮಗ (ಎಕ. XIV, ಕೃಆಸೂ. ೦೪೩-೩; 1867); ಕಚೇರಿಗಳು ೧. ದಿವಾನ್ ಕಚೇರಿ . . . ೧೦. ಮೋದೀಖಾನೆ, ೧೧. ಕಂದಾಚಾರ ಕಚೇರಿ (ಮಕಾಪು. II, ೫೬). **ಮೊದೀಖಾನೆ** : ಅರಮನೆ ಶಿರಸ್ತೆದಾರ ಹಿರಣ್ಣಯ್ಯನ ಮಗ ಮೊದೀಖಾನೆ ಶಿರಸ್ತೆದಾರ ನರಸೈಯ್ಯನು (ಎಕ. XIV, ಪಾಂಪ್ರ. ೦೩೪-೬; 1865). **ಮೋತಿಖಾನೆ** : ಮೋತಿಖಾನೆ ಬಕ್ಷಿ ದೊಡಬಳಾಪುರದ ದೇಶಕುಲಕರಣಿ ನರಸಿಂಗರಾಯನ ಶೇವೆ (ಎಕ. V (R). ಚನ್ನರಾಯ. ೬೫-೦; 1925ರ ಕಠ). **ಮೋತೀಖಾನೆ** : ರಾಜ್ಯಪ್ರಾಪ್ತಿಯಾದೊಡನೆ ಈ ಯುವಕರಾಜನು ಮೋತೀಖಾನೆಯ ಅಕ್ಕಿ ಬೇಳೆಗಳ ಲೆಖ್ಖಾಚಾರಕ್ಕೆ ಹೊರಟನು (ಕಥಾ. ೬೦೦). **ಮೋದಿಖಾನೆ** : ಮೋದಿಖಾನೆ ಶಿರಸ್ತೆದಾರ ಸುಬ್ಬೆಯನ ಸೇವಾರ್ಥ (ಎಕ. IV (R), ಪಾಂಡವಾ. ೯೭-೨; ?). 'ಅಠಾರಖಾನೆ' ಪರಾ. [←ಹಿಂ. ಮರಾ. ಮೋದೀಖಾನಾ]

**ಮೋದು₁** (ಕ್ರಿ). ೧. ಹೊಡೆ; ಬಡಿ ; ಅಪ್ಪಳಿಸು : "ಮೋದು–ತಾಡನೇ" (ಕಮಾ); ಮೋದಿದ ನೀಲಸರೋಜಮಾಲೆಯಿಂದುದಿರ್ದು ಪದಂಗದೊಳ್ ತೊಡರ್ದು ತೋರ್ಪ ದಳಂಗಳೊ ಪೇಱಪಾಪುದೆಂಬುದನೆನೆ ಕಾದಿ ಮೋದಿದವಿನಾಣಮದಿಲ್ಲಿ ದಳಿಲ್ಲ ನಲ್ಲಳಾ (ಆದಿಪು. ೯-೧೦); ಅಸಿತೇಂದೀವರಲೋಲಲೋಚನೆಯನಂದಂತಾ ಸಭಾಮಧ್ಯದೊಳ್ ಪಸುವಂ ಮೋದುವವೋಲೆ ಮೋದೆಯುಂ (ಕಂಕಲಾ. ೭-೩೬); ಕೆಲಂ ತೆಗಳ್ದಿಯ ಹ್ಯ ಕರಂ ತೆಗಳ್ದಯೆಂದೆನೆ ಪುತ್ರಿಯನಟ್ಟ ಮೋದಿದಳ್ (೧೦೪. ೯-೦೩೩). ೨. ಹೊಡೆದುಕೊಳ್ಳು; ಬಡಿದುಕೊಳ್ಳು : ಇಱಿವ ಟಿಣಿಲ್ ತರಳ್ದೊಱಿವ ಕಣ್ಣನಿ ಮಾಣದೆ ಮೋದೆ ಶೋಕವಟ್ಟಱಿದಪೊಲಿರ್ದ ಬಾಸುಱಿನೊಳಟ್ದು ಕಸಲ್ದು ಬಟಲ್ದು ಜೋಲ್ದ ಮೆಯ್ (ಕಂಕಲಾ. ೦೯-೩); ಜನಕಜೆ ಬಸಿಱಂ ಮೋದಿ ಪುಯ್ಯಲ್ಚೆ ಕೇಳ್ದು ನಾಮುಕ್ಕಾನೆಯ್ದಿದೆಂ (ಕಂಕಲಾಪು. ೦೦-೩೬); ಆರ್ಕಾವರಾರ್ಶರಣೆಂದಾ ಕಳಕಂಠನಾದೆ ಬಸಿಱಂ ಬಾರೇಱ್ದಿನಂ ಮೋದಿದಳ್ (ಅಸಂಪ್ರ. ೦೦-೯೬). ೩. ಎರಗು ; ಮೇಲೆ ಬೀಳು : ಹರಿಣಮೈರಿಗಳು ಮೃಗವ ಹರಿದಟ್ಟಿ ಓಡಿದಡಸಿ ಮೋದಿ ಮುಱಿಯದೆ ನಿಂದು ಮಡಿವಟ್ಟ ಕಾರಣವನಱಿಪ ಬೇಕೆಂದೆಯ್ದಿ (ಹಕಾ. ೩-೩೩); ಮೊಳಗಿ ಮೋದುವ ಸಿಡಿಲ್ಗಳಂಬಿನ ಮೊನೆಯೊಳುದಿಸಿದುದೊ (ಕುಮಾರಾಮ. ೯-೦೯). ೪. ಮುಟ್ಟು; ತಗಲು : ಸೋಕು : ಫಲವ್ರಾತದಿಂ ನೆಲನಂ ಮೋದುವ ಮಾತುಳುಂಗಮೆಸಗುಂ ವಿದ್ಯಾಧರೋದ್ಯಾನದೊಳ್ (ಆದಿಪು. ೦-೬೭) ; ಕದಪಂ ಮೋದುವ ಕುಂಡಲದ್ವಿತಯಮುಂ ಚೆಲ್ವಾಗೆ (ಜಗಪು. ೩-೦೬); ನೆಲನಂ ಸಲೆ ಮೋದುತಿರ್ಪ ಪೀವರಫಲಮಾತುಳುಂಗತತಿ ಸಂತತಮೊಪ್ಪುವುದಾ ವನಾಂತದೊಳ್ (ಶಾಂತಿಪು. ೨-೩೬); ಬೆನ್ನಂ ಮೋದೆ ಕೇಶಾಳಿ ಗಂಡಮನೋರಂತಿರೆ ಪೊಯ್ಕೆ ಕುಂಡಲಯುಗಂ (ಕಾವ್ಯಸಾ. ೬೫೭). ೫. ಒದೆ; ಪಾದದಿಂದ ಪ್ರಹಾರ ಮಾಡು : ಪಾರ್ವನ ಕಾಲ್ ಮೋದೆ ನಚುತಲೆಯುಲಿರ್ಪುದುಮಾದುದು ನಿಮಗೆಂದು ನುಡಿದು ಕಾಯ್ಪಿನೊಳೊದೆದಂ (ಕಂಕಲಾ. ೨-೬೪); ಅನಾಥೆಯುಂ ಮೋದಿದ ಕಾಲ್ಗಳನಾವ ಜನ್ಮ ಜನ್ಮಂಗಳೊಳಗಾಗಿಯುಮಕ್ಕೆ ಮುಂದೆ ಕೇಳ್ದಿನ್ನದಿರಂ

(ಸುಕುಮಾ. ೩-೪). ೬. ಜಜ್ಜು ; ಕುಟ್ಟು; (ಮುಷ್ಟಿಯಿಂದ) ಗುದ್ದು: ಎಲುವ ಮುರಿ ಮೂಳೆಯುಂ ಮೋದು ಬಿಸಿನೆತ್ತರಂ ಕುಡಿಯೆನುತ್ತ ನಾಲ್ದೆಸೆಗಳಿಂದುಲಿದೆಸುತ (ಹರಿಶ. ೬-೦೪); ಒದೆದು ಕೆಲವನು ಮುಷ್ಟಿಯಲಿ ಮೋದಿದನು ಕೆಲವನು (ಕುಮಾವ್ಯಾ. ದ್ರೋ. ೨-೬೦); ಅಬ್ಬರಿಸಿ ಖಳ ಮೋದಿದನು ಮುರಹರನ ವಕ್ಷಸ್ಥಳವ ಮುಷ್ಟಿಯಲಿ (ಕಿಭಾಗ. ೩-೬-೨೦). ೭. ಸದೆಬಡಿ ; ಅಜಿಗಿಜಿಯಾಗುವಂತೆ ಮಾಡು : ರಿಪುರಾಜರಂ ಮೋದಿ ಮುರಿದು ಮೆಲಲೆಂದು ದುರ್ಗ ಬಾಯ್ದೆರೆದೆಸೆವ ದಂತವೋ ತಿಳಿಯಲರಿದೆನಲ್ . . . ರನ್ನದ ತೆನೆಯ ತೆಕ್ಕೆ ಮಿಕ್ಕೊಪ್ಪಿದವು ಮೋಘಮಂಡಲವ ಬಗಿದು (ಹರಿಶ. ೦-೩೮); ಅಕಟ ಹಂಸೆಯ ಮರಿಯ ಮೋದುವ ಬಕನ ತೆಗೆಸೈ (ಕುಮಾವ್ಯಾ. ಸ. ೧೪-೦೨೩) ; ವಿಜಾರಿದ ಜಕ್ಕವಕ್ಕಿಯನ ಮೇರೆಯಿಲ್ಲದ ಬಲವಾರಿಧಿಯನು ಮೋದಿದಾರಂಭಟೆಯನೇವೇಳ್ವೆ (ಕಂಸವ. ೩-೬೪). ೮. ನಾಶಮಾಡು ; ಇಲ್ಲವಾಗಿಸು : ಲಕ್ಷ್ಮಣನೆಕ್ಕತುಳದಲಿ ಬಂದನಾ ಲಯಕಾಲದಲಿ ಜಗವ ಮುಕ್ಕಿ ಮೋದುವ ಮದನಹರನವೊಲ್ (ತೊರರಾ. ೨-೩-೦೦) ; ವೇದಮಂತ್ರವ ಹೇಳಿ ಕಾದ ತುಪ್ಪದಿ ತೊಳೆಯೆ ಹಾದರದ ಪಾಪ ಹೋಯ್ತೆಂಬ ಹಾರುವನ ಮೋದದೆ ವಿಧಿಯು (ಸರ್ವಜ್ಞ. ೯೩೨); ಶ್ರೀದಿವ್ಯಾಪಾಂಗಂಗಳಿನಾ ದಿನದೊಳ್ ಕಲ್ತ ಪೊಳಬ ನೊವವಿಂ ತನುಸಂ ಮೋದಿ ನಿಗಮಂಗಳಂ ತಂದಾದಿಯ ಮಿನಾಳ್ದಸಕ್ಕೆ ನರಪತಿಗನಿಶಂ (ಶಕವಿ. ೨-೦). ೯. ಮುಕ್ಕು ; ಕಬಳಿಸು : ಪೇದಬಾಹ್ಯರ ಪ್ರತ್ಯಕ್ಷದೇವತೆ ಮುರಿದು ಮೋದದೆ ಬಿಡುವಳೇ (ಕುಮಾವ್ಯಾ. ೪-೦೦೦) ; ನಮ್ಮ ನಗರವನೊರೆಸಿ ಮೋದುವ ಮೋಡಿ ಮೋಜಿಯೊಳಪನಲದೆ (ತೊರರಾ. ೬-೬-೩); ಪಾತಕರನಂತಕ ಮುರಿದು ಮೋದುವನೆಂದು ವೇದಂ ಘೂರ್ಮಿಸುತ್ತಿಹುದು (ಕಂಕರಾ. ೩-೧೦); ಹಣ್ಣುಗಳನ್ನು ಮೋದಿದನು . . . ಚಕ್ಕುಲಿಗಳನ್ನು ಕಟಕಿಸಿದನು (ಶೀತಿಶಂ. II. ೦೬). ೧೦. ಸವಿ ; ಆಸ್ವಾದಿಸು ; ತಿನ್ನು : ಓದದ ಬಾಯಮೃತಾನ್ನವ ಮೋದದ ಬಾಯ್ . . . ತಾಂ ಮೇದಿನಿಯೊಳ್ ಬಿಲದ ಬಾಯಿ (ಶೀತಿಶಾ. ೨೦). ೧೧. (ಅಲು) ಹಿಡಿದುಕೊಳ್ಳು ; ಮೆಟ್ಟಿಕೊಳ್ಳು : ಕಾದುಕೊಂಡಿರ್ದ ದಂದುಗ ಮದುವೆಗೈತಂದು ಮೋದಿತೇಂ ನಿನ್ನ ಬಾಳ್ವೆಯನೆನ್ನ ಮಗಳ (ಕಾಲಚರ. ೦೬೬-೩೯೬). ೧೨. [ಗಣಿತ] ಗುಣಾಕಾರ ಮಾಡು ; ಗುಣಿಸು : ಬಡಿ, ಮೋದು, ಒತ್ತು . . . ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೦೦). [ದೇ.॥ ತಮಿ. ಮೋತು; ಮಲ. ಮೋದು : ತೆಲು. ಮೋಂದು]

**ಮೋದು₂** (ನಾ). ೧. ಏಟು ; ಹೊಡೆತ : ಒದುಗಳ್, ಮೋದುಗಳ್, ತಿರ್ದುಗಳ್ (ಶಬ್ದಾನು. ೩೪೪ ಪ್ರಯೋ). 'ಮೋದುವೆಱು' ನೋ. ೨. ಹೊಡೆತದಿಂದ ಉಂಟಾದ ಬಾವು; ಪೆಟ್ಟಿನಿಂದಾದ ಬಾಸುಂಡೆ : 'ಮೋದುಗಟ್ಟು' ನೋ. ೩. ಒಂದು ಬಗೆಯ ಗುಹ್ಯರೋಗ : (೪)
[< ಮೋದು₁./ ತಮಿ. ಮೋತು; ತೆಲು. ಮೋಂದು, ಮೋಂದ]

**ಮೋದುಗಟ್ಟು** (ಕ್ರಿ). ಪೆಟ್ಟಿನಿಂದ ಗಂಟುಕಟ್ಟು; ಹೊಡೆತದಿಂದ ಬಾಸುಂಡೆಯೇಳು : (೪). [ಮೋದು₂ + ಕಟ್ಟು₁]

**ಮೋದುವೆಱು** (ಕ್ರಿ). ಏಟು ತಿನ್ನು ; ಹೊಡೆತವನ್ನು ಪಡೆ : ಏಕಾಂತ ದೊಳ್ ನೂಪುರರವವಿಳಸದ್ವಾಮಪಾದಪ್ರಹಾರಕ್ಕದಟಿಂಗೊಳ್ ಪಕ್ಕಾಗಿ ಗೋತ್ರಸ್ಖಲನೆ ನೆಗಟಿ ಪೂಮಾಲೆಯಿಂ ಮೋದುವೆತ್ತಂ (ಅದಿಪು. ೪-೪).
[ಮೋದು₂ + ಪೆಱು₁]

**ಮೋದೆ** (ನಾ). ಅಜಮೋದ ; ಅಜವಾನ ; ಓಮು : (೪).
[ಸಂ. ಮೋದಾ]

**ಮೋದೋಪಚಾರ** (ನಾ). ಬಾಣಂತಿ ಹಾಗೂ ಎಳೆಯ ಮಕ್ಕಳಿಗೆ ಸ್ನಾನಾನಂತರ ಸುವಾಸನಾಯುಕ್ತವಾದ ಧೂಪದಿಂದ ಮಾಡುವ ಉಪಚಾರ : ಆ ಶಿಶುವಿಗೆ ಸಾದರದಿ ಪ್ರಕಾ[ಕ್ಷಾ]ಲನಂಗೈದುವೊಲಿದು ಕೊಂಡೊಯ್ದು ತಜ್ಜನನಿವತ್ತಿಸಲಿ ಮಲಗಿಸಿ ಪುಷ್ಪ ಮೋದೋಪಚಾರವು ಮಾಡುತಿರಲು (ನವಮೋ. ೦೦-೨೦). [ಸಂ.]

**ಮೋನ** (ನಾ). ೧. ಮಾತನಾಡದಿರುವಿಕೆ ; ಮೌನ : ಗುರುಚರಣಂ ಗಳ್ಗೆರಗದೆ ಪರಕೆಯನಾದರದಿನಾಂತುಕೊಳ್ಳದೆ ಮೋನಂಬೆರಸಿರ್ಪುದು ನಿನಗುಚಿತಮೆ (ಗದಾಯು. ೩-೬೦) ; ಸೊಬಗಿಯ ಗಾಂಪಿನಂತೆ ನುಡಿಜಾಣನ ಮೋನದಂತೆ (ಧರ್ಮಾಮೃ. ೬-೯೪); ಮೋನವಿತ್ತಲು ರಭಸವತ್ತಲು ಹಾನಿಯಿತ್ತಲು ವೃದ್ಧಿಯತ್ತಲು (ಕುಮಾವ್ಯಾ. ದ್ರೋ. ೪-೦) ; ಶಿಶಿರಕಾಲದ ಕೋಗಿಲೆಯವೊಲು ಉಸುರದತಿಮೋನದಲಿ ಜೀವಂಜಸೆಯಿರಲು (ಶಾಸ್ತ್ರಭಾ. ೨೦-೦೩). ೨. ಮಾತನಾಡದಿರುವ ನಿಯಮ ; ಮೌನವ್ರತ : ಮನಸಿಜರಾ × × × ಗನಾ ಅಪಸಿ ಬೇನೆವೆತ್ತಿ ಮೋನವಮುಜ್ಜವಿಸುವಲ್ಲಿ ಕೊಟ್ಟದು (ಎಕ. II. ೩೫-೫, ಸಂ. 800). ೩. [ಕಾವ್ಯಶಾ] ವಿರಹದ ಹತ್ತು ಅವಸ್ಥೆಗಳಲ್ಲಿ ಎಂಟನೆಯದು : ಎಱಗಿ ನೋಡುವುದೊಂದಱಲಿ . . . ಎಂಟಱಲಿ ಮೋನಂ ಬಱತುಸುರುವೊಂಬತ್ತಱಲಿ ಮೋಹ್ ಹತ್ತಱಲಿ ಮರಣ ಇವು ದಶಾವಸ್ಥೆಗಳೆನಲು ಹೇಳ್ವವು ವಿರಹಿಜನರ್ಗೆ (ವಿಶಕು. ೩೫-೩೨).
P ಕೆಲವು ಗ್ರಂಥಗಳಲ್ಲಿ ಮಾತ್ರ ದಶಾವಸ್ಥೆಗಳಲ್ಲಿ ಮೌನದ ಉಲ್ಲೇಖವಿದೆ. [< ಪ್ರಾ. ಮೋಣ./ಸಂ. ಮೌನ]

**ಮೋನಂಗೆಡು** (ಕ್ರಿ). ಮೌನವು ಭಂಗವಾಗು : ಕೇಳಣ್ಣ ಕಿವಿಯ ಕೊಪ್ಪಂ ನೀಂ ಕೊಳ್ವೊಡೆ ನೋಯದಂತೆ ತೆಗೆಯೆಂದೊಡೆ ಮೋನಂಗೆಟ್ಟಳಿವಳ ನೋಲ್ಪವಳೆಂದೆಂ (ಧರ್ಮಾಶ. ೯-೨೦). [ಮೋನ + ಕೆಡು₁]

**ಮೋನಂಗೊಳ್**, ಮೋನಗೊಳ್, ಮೋನಗೊಳ್ಳು (ಕ್ರಿ). ೧. ಸುಮ್ಮನಿರು ; ಮೌನವಾಗಿರು : ಭಟ್ಟಾರರುಂ ಮೋನಂಗೊಂಡು ನುಡಿಯದೆ ಕಪ್ಪಗಿರ್ದೊಡೆ (ವಡ್ಡಾರಾ. ೬೯-೧೦) ; ದಿವ್ಯನಿನಾದಮನಾಲಿಸಿಯುಂ ಮಿಡುಕದುಸಿರದೆ ನುಡಿಯದೆ ಮೋನಂಗೊಂಡಿನಿಸಿರ್ದಧಿಪತಿಗೆ ನಿಚ್ಚಂ [ಮೆಚ್ಚಂ] ಪಡೆದು (ಶಾಂತಿಪು. ೦೦-೮೭) ; ಆನೇನಂ ಪೇಱಿಲ್ದೊಡಂ ನೀಂ ಮೋನಂಗೊಂಡಿರ್ದಪೆ (ಕಂಜಕಂ. ೦೨೦-೨೨). ೨. ಮೌನವಾಗಿರುವುದನ್ನು ಆಚರಣೆಯಲ್ಲಿ ತರು ; ಮೌನವ್ರತವನ್ನು ಪಾಲಿಸು : ಮೌನಾನುಷ್ಠಾನವನ್ನು ಮಾಡು : ನಿಮ್ಮಡಿ ನೀಮಾ ಚಾತುರ್ಮಾಸವಿಲ್ಲಿರ್ಪನ್ನೆಗಂ ಸ್ವಾಧ್ಯಾಯಾಧ್ಯಯನಾನುಷ್ಠಾನನಿಯಮದಿಂ ಮೋನಂಗೊಂಡಿರ್ಪುದು (ಸುಕುಮಾ. ೧೧-೩೬ ವ) ; ನಿಶ್ಚಲಮತಿಯಿಂ ಮೋನಂಗೊಂಡು ಪಂಚ ನಮಸ್ಕಾರಮಂ ಜಪಿಸುತ್ತುಮುಸಿರದಿರ್ಪುದುಂ (ಧರ್ಮಾಮೃ. ೩-೯೪).
**ಮೋನಗೊಳ್** : ೧. ಚಿತ್ತದನುರಾಗವಿಲ್ಲದೆ ಮೋನಂಗೊಂಡಿರುಳ ಬಳಸಿ ಗೊಳಗಾಗಿರ್ದ ನರಸಿರುಹದಂತೆ . . . ತಾಪಪಡೆದು (ಹರಿಶ. ಕಂ. ೨೦೯).
**ಮೋನಗೊಳ್ಳು** : ೧. ಜಯಂತನು ಮೋನಗೊಂಡು ಆಕೆಯ ಬೆನ್ನು ಹತ್ತಿ ನಡೆದನು (ಜಯಂತ. ೫೭). [ಮೋನ + ಕೊಳ್₁]

**ಮೋನಗೊಳ್** 'ಮೋನಂಗೊಳ್' ನೋ.

**ಮೋನಗೊಳ್ಳು** 'ಮೋನಂಗೊಳ್' ನೋ.

**ಮೋನದಳೆ** (ಕ್ರಿ). = ಮೋನಂಗೊಳ್ ೨ : ಚಳಿಗಾಳಿ ಮಳೆ ಬಿಸಿಲಿನ ಱಯದಚಲತ್ವದಿಂ ಮೋನದಳೆದು ಅನುದಿನ ತಪಂಗೈವ ಮುನಿವರ್ಗವೆನೆ (ನಂದಿಪೂ. ೩-೨೦). [ಮೋನ + ತಳೆ₁]

**ಮೋನಾನುಷ್ಠಾನ**, ಮೋನಾನುಷ್ಠಾಣ, ಮೋನಾನುಷ್ಠಾನ (ನಾ). ಮೌನವಾಗಿರುವುದನ್ನು ಪಾಲಿಸುವಿಕೆ ; ಮೌನವ್ರತದ ಆಚರಣೆ : ಧ್ಯಾನಧಾರಣ ಮೋನಾನುಷ್ಠಾನ ಜಪಸಮಾಧಿಶೀಲಸಂಪನ್ನರಪ್ಪ . . . ಸಾಸಿರದ ಮೂಱೂರ್ವ್ವರೆಂತೆನೆ (ಎಕ. VII, ಶಿಕಾಂ. ೦೬-೦೬ ; ೱ೧೬೬). **ಮೋನಾನುಷ್ಠಾಣ** : ಧ್ಯಾನಧಾರಣ ಮೋನಾನುಷ್ಠಾಣ ಸಮಾಧಿ ಸಮ್ಪನ್ನರಪ್ಪ ಶಕ್ತಿಪರ್ವಿಯ ಲೋಕಾಭರಣಪಣ್ಡಿತರ [ಕಾ] ಲಂ ಕರ್ಚ

(ಸೌತ್ಇ.XX. ೩೮-೨೮ ; 1058). **ಮೋನಾನುಷ್ಠಾನ** : ಧ್ಯಾನಧಾರಣ ಮೋನಾನುಷ್ಠಾನ ಜಪಸಮಾಧಿಶೀಳಸಂಪನ್ನರ್ (ಸೌತ್ಇ. XX. ೯೬-೦೭ ; 1072) ; ಮೋನಾನುಷ್ಠಾನ ಜಪಸಮಾಧಿ ಶೀಲಗುಣ ಸಂಪನ್ನರ್ (ಕೆತ್ಆ. ೦೩-೪-೦೦೩ ; 1093). [< ಸಂ. ಮೌನಾನುಷ್ಠಾನ]

**ಮೋನಾನುಷ್ಠಾಣ** ' ಮೋನಾನುಷ್ಠಾನ ' ನೋ.

**ಮೋನಾನುಷ್ಠಾನ** ' ಮೋನಾನುಷ್ಠಾನ ' ನೋ.

**ಮೋನಿ** (ನಾ). ೧. ಮಾತನಾಡದಿರುವವನು : ಮೌನವಾಗಿರುವವನು : ಆಂ ಪೇಟದಿರ್ದೊಡೆ ಮಹಾಕಷ್ಟಮಕ್ಕುಂ ಸೆಟ್ಟಿಯ ಭಕ್ತಿಯುಂ ಕಿಡುಗು ಮೆಂಬ ನೆವದಿಂ ಮೋನಿಯಾಗಿ (ಧರ್ಮಾಮೃ. ೬-೫೬). ೨. ಮೌನವ್ರತವನ್ನು ಪಾಲಿಸುತ್ತಿರುವ ಮುನಿ,—ತಪಸ್ವಿ : ಪೇನಿಗಳಂ ಪೊಗೞದಿರ್. . . ವಸುಮತಿಯೊಳ್ ದಾನಿಗಳನೂನಮಿಲ್ಲದ ಮೋನಿಗಳಂ ಪೋಗಿ ಪೊಗೞ ಕಲ್ಲಂಗೆಱೆಯೊಳ್ (ಎಕ. V. ಬೇಲೂರು. ೦೨೩-೨೯; 952); ಜಯಪಾಲನ ಅಸತ್ಯಸಂಗತಿಗಳಿಗೆ ಜಯಂತನು ಮೋನಿಯಾಗಿ ಅನುಮೋದಿಸಿದುದು ಉಪ ಕಾರವೆನಿಸಿ ಹೇಳುವುದನ್ನು ಕಡಿಮೆ ಮಾಡಿದನು (ಜಯಂತ. ೧೦೮).

[<ಪ್ರಾ. ಮೋಣಿ. / ಸಂ. ಮೌನಿನ್]

**ಮೋನಿಗುರವ** (ನಾ). = ಮೋನಿ ೨ : ಶ್ರೀಅಗೞಿಯ ಮೋನಿಗುರವರ ಶಿಷ್ಯ ಕೊಟ್ಟುರದ ಗುಣಸೇನಗುರವರ್ನ್ನೋನ್ತು ಮುಡಿಪ್ಪಿದಾರ್ (ಎಕ. II. ೮-೦ ; ಸು. 700) [< ಮೋನಿಗೊರವ]

**ಮೋನಿಗುರವಡಿ** (ನಾ). = ಮೋನಿ ೨ : ಅದೆಯೞೆನಾಡ ಚಿತ್ತೂರ ಮೋನಿಗುರವಡಿಗಳ ಶಿಷಿತ್ತಿಯರ್ ನಾಗಮತಿಗನ್ತಿಯರ್ . . . ಮುಡಿಪ್ಪಿ ದರ್ (ಎಕ. II. ೨೦-೦; ಸು. 700). [ಮೋನಿ + ಗುರವಡಿ]

**ಮೋನಿಗೊರವ** (ನಾ). = ಮೋನಿ ೨ : ವೈಶಾಖಮಾಸದ ಪೌರ್ಣ್ಣಮಾಸೆ ಯನೆಟ್ಟುಣಾಸೆಯು ನಾಲ್ಕುದಿವ್ಸಮ್ಮೆಹಾಜನಮುಂ ಮೋನಿಗೊರವರುಂ . . . ಕೊಟ್ಟರ್ (ಕತ. I. ೧೩-೮; 805). [ಮೋನಿ + ಗೊರವ]

**ಮೋನಿಭಟಾರ** (ನಾ). = ಮೋನಿ ೨ : ಇನ್ತು ಕೆಲ್ಲಙ್ಗೆಱೆಯುಮ್ಬಲ ಪ್ಪೊಗೞ್ ಮೋನಿಭಟಾರರೆನುತ್ತು ಲೋಕಮೆಲ್ಲಮಜ್ಗಿಡೆಗೊಣ್ಡುಗೊಣ್ಡು ಕೊನೆದಪ್ಪುದು (ಎಕ. V. ಬೇಲೂರು. ೦೨೩-೩೬; 952). [ಮೋನಿ + ಭಟಾರ]

**ಮೋಪಱ್** (ಕ್ರಿ). ಬಯಕೆಯನ್ನು ಅರಿ,– ತಿಳಿ : ಪ್ರಸಾದಮುಂ ಮುಕ್ಕುಳಿಸಿ ಕುಕ್ಷಿಯುಂ ಅಕ್ಕುಳಿಸಿ ಕಣ್ಣೀಜೂದುದೇದು ಮೋಪಱಿದು ತೂಪಿಱಿದು ತೊಡೆಗಳಂ ತಟ್ಟಿ (ಕೃಷ್ಣರಾಜಾಂ. ೬-೨). [ಮೋಪು$_3$ + ಅಱಿ]

**ಮೋಪು$_1$** (ನಾ). ೧. (ಕಟ್ಟಡಗಳ ಕಂಬ, ಬಾಗಿಲು ಮೊದಲಾದುವು ಗಳಿಗೆ ಬಳಸುವ) ಮರದ ದಿಮ್ಮಿ,–ತೊಲೆ ; ಮುಂಡಿಗೆ ; ನಾಟಾ : ಎರಡು ತಿಂಗಳು ಪರಿಯಂತವೀ ರೀತಿಯೊಳ್ಮರ ಮೋಪುಗಳ ತರಿಸಿದನು (ಗೋವ:ಲೀ. ೦೬-೬೬); ಮೋಪು. ಅಣಲೆ, ಸೀಗೆ_ಎಂದು ಯಾವತ್ತು ಸಾಮಾನು ಸರಂಜಾಮು ಅವರ ಮೂಲಕವಾಗಿ ಸಾಗಿ ಸರಿಯಬೇಕು (ಹಹಕ. ೦೮); ಬೆಟ್ಟದ ತುದಿಯಿಂದ ಬುಡದ ತನಕ ಮತ್ತಿ, ಜಂಬೆ, ನಂದಿ ಮೊದಲಾದ ಮೋಪಿಗೆ ಬರುವ ಮರಗಳಿವೆ (ಕುಂತಳಾ. ೦೦೫). ೨. ಒಳ್ಳೆಯ ಅಂಗಸೌಷ್ಠವ : ರೂಪು ತಲೆದೂಗಿಸಿತು ಸತಿಯರ ಮೋಪು ಕೊಂಡಾಡಿಸಿತು ಮದನನ ಚಾಪಕಂಬೇರಿಸಿತು (ಅಂಬಿಕಾ. ೩೯-೭೬); ಆದರೂ ಕೆಂಪಿ ಒಳ್ಳೆ ಮೋಪಾದ ಹೆಂಗಸು : ಕಾವೇರಿತೀರದ ಹೆಣ್ಣುಗಳನ್ನು ನೋಡಿದ್ದವರಿಗೇ ಆ ಮೋಪು ಅನ್ನುವುದರ ಅರ್ಥವಾಗುವುದು (ಮಲ್ಲಿ. ೯). ೩. ಭಾರ ; ಹೊರೆ : (*). ೪. ಹೊರೆಯ ಒಜ್ಜೆ,–ತೂಕ : (*). ೫. ಏಟಿನ ಅಥವಾ ಗಾಯದ ತೀವ್ರತೆ,– ತೀಕ್ಷ್ಣತೆ : (*). ೬. ಹಿಡಿತದ ಬಿಗಿ : (*). ೭. ಅನುಕೂಲವಾದ ಅವಕಾಶ,– ಆಸ್ಪದ ; ಸಕಾಲ : (*).

[ದೇ.॥ ತುಳು. ಮೋಪು, ಮೂಪು; ತೆಲು. ಮೋಪು; ಕೊಡಗು. ಮೋಪ್]

**ಮೋಪು$_2$** ' ಮೊಗಪು$_1$ ' ನೋ.

**ಮೋಪು$_3$** (ನಾ). ೧. ಆಸೆ; ಬಯಕೆ; ಬೇಟ : ಮತ್ತೊರ್ವ ಬೇಟಕಾರ್ತಿ ತಾಯ ಕಣ್ಣಂ ಬಂಚಿಸಿ . ತನ್ನ ಮೋಪಿನಾ [ಶಾಕುಂ. ಹಿಪಾ]ಕೆಯ ಮನೆಗೆ ಪೋಪ ಬೇಟದಾಣ್ಮನಂ ಪಿಡಿದು (ಶಂಕರಾ. ೯-೬೮ ವ); " ಪ್ರೇಮ, ಪ್ರೀತಿ " (ಶಂಕರೀ. ೦೭೩). ೨. ಶ್ರದ್ಧೆ ; ಆಸಕ್ತಿ : ಅಂತು ಮುಳಿಸಿನ ಮೋಪಿನ ಗಂಡಮಚ್ಚರದ ಮೆಚ್ಚುವಣಗೆಯಂಕಕಾಱರೆಕ್ಕತುಳಕ್ಕೆಕ್ಕೆಯಿಂ. . . ಕಾದೆ (ಶಂಕರಾ. ೦೨-೭೬ ವ); ಈ ಪರಿಯ ಗಮಕದಿಂ ಕಾರ್ತವೀರ್ಯಾರ್ಜುನಂ ಮೋಪಿನಿಂದರ್ಚಿಸಿದ ಹಯವು ನಡೆಯಲ್ಕೆ (ಜರಕು. ೯-೨೬).

[ದೇ.॥ ತಮಿ. ಮೋಪ್ಪು]

**ಮೋಪುಗಾರಿಕೆ** (ನಾ). ಮರದ ದಿಮ್ಮಿಗಳನ್ನು ಕೊಯ್ಯುವ ಉದ್ಯಮ : ಸ್ವೀಡನಿನ ಮಧ್ಯಭಾಗವು ತುಂಬಾ ಕಾಡುಗಳಿಂದ ತುಂಬಿದೆ. ಆದರಿಂದ ದೇಶವು ಮೋಪುಗಾರಿಕೆಗೆ (Lumber Industry) ಹೆಸರುಗೊಂಡಿದೆ (ಜಾಲಕ್ರ. III. ೧೩೨೭).

[ಮೋಪು$_1$ +— ಗಾರ (<– ಕಾಱ) +– ಇಕೆ]

**ಮೋಬದಲಿ** ' ಮುಬಾದಲೆ ' ನೋ.

**ಮೋಬೆದ** (ನಾ). (ಪಾರಸಿಗಳ) ಧರ್ಮಾಧಿಕಾರಿ; ಪುರೋಹಿತ : ದಾದಾಭಾಯಿಯು ತನ್ನ ಆರಂಭಸಂಸ್ಕಾರವನ್ನು ಹೊಂದುವವರೆಗೆ ಅವನ ತಂದೆ ಬದುಕಿದ್ದಲ್ಲಿ ಮೋಬೆದನಾಗಿ ತನ್ನ ಜನದ ಮತಧರ್ಮಕಾರ್ಯಗಳಲ್ಲಿ ತೊಡಗುವಂತೆ ಅವನನ್ನು ಪ್ರಾಯಶಃ ಒತ್ತಾಯಪಡಿಸುತ್ತಿದ್ದನು (ದಾದಾನ. ೩). [← ಪಾರ. ಮೂಬಿದ್, ಮೂಬದ್, ಮೂಬಿಜ್, ಮೂಬಜ್, ಮೌಬದ್, ಮೌಬಜ್]

**ಮೋಯಿರ** ' ಮೋದಿರ ' ನೋ.

**ಮೋಯಿರಮುಹೂರ್ತ** (ನಾ). ಮದುವೆಯ ನಿಶ್ಚಿತಾರ್ಥದ ಸಂಕೇತ ವಾಗಿ ವರನು ವಧುವಿಗೆ ಉಂಗುರವನ್ನು ತೊಡಿಸುವ ಮುಹೂರ್ತ : ಅವರು ಮಾತಾಡಿ ಮೋಯಿರಮುಹೂರ್ತದ ದಿನವನ್ನು ನಿಶ್ಚಯಿಸಿಕೊಂಡು ಬಂದರು (ವಕರಾ. II. ೦೦೩೨). ' ಉಂಗುರವುಡಿಕೆ ' ಪರಾ.

[ಮೋಯಿರ (< ಮೋದಿರ) + ಮುಹೂರ್ತ]

**ಮೋರ್** ' ಮೊಸರ್ ' ನೋ.

**ಮೋರ** (ನಾ). ನವಿಲು; ಮಯೂರ : " ಮೋರವೆಂದುಂ ಸೋಗೆಯೆಂದುಂ ನವಿಲ್ " (ಕಕಸಾ. ೩೦-೯೬); ಮದನನ ಮುಂಗಡೆ ಮೋರ ಹೆಗ್ಗಾಳೆ ಸಾಱಿದುದು (ಮೋಹತ. ೬-೦೫); ವರಬರ್ಹಂಗಳಿನೊಲ್ದು ಬೀಸುವುದು ಮೋರಂ ಹೋಬುಸಪ್ರಾರ್ಚಿಯುಂ (ಚಂದ್ರಶ್ರು. ೧-೧೨೭); ಉಜ್ವಳತರದ ನೃತ್ಯ ಮಾಡುತ್ತಿದ್ದುದೊಂದು ಮೋರಂ ಸುತಸಂದಾಳುತೆ (ಸಿದ್ಧೇಶ್ವ. ೦೭-೨೬).

.[< ಸಂ. ಮಯೂರ./ಪ್ರಾ. ಮೋರ್./ಹಿಂ. ಮರಾ. ಮೋರ್]

**ಮೋರಚೂತ** (ನಾ). ಒಂದು ಬಗೆಯ ಖನಿಜಲವಣ; ಮೈಲುತುತ್ತ : " ಮಯೂರಕ – ಮೋರಚೂತ " (ಗಂಗಾಮ. ೨೫೦).

[← ಮರಾ. ಮೋರಚೂತ್, ಮೋರಚೂದ್]

**ಮೋರಟ** (ನಾ). ೧. ಕಬ್ಬಿನ ಬೇರು : " ಮೋರಟಂ, ಐಕ್ಷವಮೂಲಂ– ಕಬ್ಬಿನ ಬೇರುಗಳಿಗೆ ಪೆಸರು" (ನಿಘಂಟು. ೩೦೭). ೨. ಒಂದು ಬಗೆಯ ಮರ : ಪೆಗ್ಗೋಳಿಯಾಲವು ಬೆಳಲು ಮೋರಟ. . . ಹಾದರಿಯ ಮರ ಮೊದಲಾದವೃಕ್ಷಹವು (ಸಾಳ್ವಭಾ. ೫-೩). ೩. ಒಂದು ಬಗೆಯ ಸಸ್ಯ; ಕುರಟಗೆ : " ಮೋರಟ–ಕುರುಟಿಗೆ, ಸಿಗುಡಿತೆ " (೬ಕಂ. ೦೩೦). ೪. ಅಂಕೋಲೆಯ ಹೂವು. ೫. ಕರು ಹಾಕಿದ ಏಳುದಿನಗಳ ನಂತರದ ಹಸುವಿನ ಹಾಲು. [ಸಂ.]

**ಮೋರಟೆ** (ನಾ). ೧. = ಮೋರಟ ೧ : " ಮೋರಟಾ_ಕಬ್ಬಿನ ಬೇರು " (೬ಕಂ. ೦೩೦). ೨. ಒಂದು ಬಗೆಯ ಸಸ್ಯ: ಕುರಟಗೆ : " ಮೂರ್ವಾ,

ದೇವೀ. ಮಧುರಸಾ, ಮೋರಟಾ. . . ಪೀಲುಪರ್ಣೀ–೧೦ ಹೆಗ್ಗುರುಟಕೆಯು ಹೆಸರುಗಳು" (ಸಿದ್ಧಾ.ಔ. ೦೩೦). [ ಸಂ. ಮೋರಟ ]

**ಮೋರಟಿಕ್ಕೆಯ** (ನಾ). ನವಿಲಿನ ಗುರುತು ಇರುವ ಬಾವುಟ; ಮಯೂರಧ್ವಜ : ಮುಱಿದುದು ಬಾಣನ ಮೋರಟಿಕ್ಕೆಯ ಮತ್ತೆ ಮುಱಿದುವು ಹಲವು ಹರ್ಮ್ಯಗಳು (ಪೋಹಶ. ೩೬–೩೬).

[ ಮೋರ + ಟಿಕ್ಕೆಯ (< ಟಕ್ಕೆಯ) ]

**ಮೋರಿ₁** ' ಮೌರಿ ' ನೋ.

**ಮೋರಿ₂**, ಮೊಹರಿ₃ (ನಾ). ೧. (ಸಾಮಾನ್ಯವಾಗಿ ಕೊಳಕು ಅಥವಾ ಮೈಲಿಗೆ) ನೀರು ಹರಿಯಲು ಮಾಡಿರುವ ಸಣ್ಣ ಕಾಲುವೆ; ಚರಂಡಿ; ಗಟಾರ : ನರನರದ ಮೋರಿಯಲಿ ಇಲಿ ಹೆಗ್ಗಣದ ಮೇಳ (ಕಂಕೆಮ. ೩–೦೨); ಎಡಬಲದ ಮೋರಿಗಳಲ್ಲಿ ಮಳೆಯ ನೀರು ಹರಿಯುತ್ತಿತ್ತು (ಕಶಥ. ೯–೦೭); ನಿಮ್ಮ ನಾಲಿಗೆಗೆ ಗುರುತು ಸಿಕ್ಕರ ತಿನ್ನರಿ. ಇಲ್ಲಾದಿರ ಬಚ್ಚಲ ಮೋರಿ ಐತೆಲ್ಲಾ (ಬಾಬಂ. ೩೬). ೨. ರಸ್ತೆಯ ಕೆಳಗೆ, ರಸ್ತೆಗಡ್ಡವಾಗಿ ನೀರನ್ನು ಸಾಗಿಸುವ ಕಾಲುವೆ : ಒಂದೆ ಕಮಾನಿನ ಚಿಕ್ಕ ಸೇತುವೆಗಳಿಗೆ "ಮೋರಿ" (Culvert) ಎನ್ನುವ ರೂಢಿಯಿದೆ (ಬಾಂಕೃ. I, ೨೬೬). **ಮೊಹರಿ₃** : ೧. ನಾಲಾಗಳ ಬಚ್ಚಲು ಮೊಹರಿ ಹಳ್ಳಕಟ್ಟೆಗಳು ಮುಂತಾದವುಗಳ ಸ್ವಾಧೀನಗಾರರು (ಗ್ರಾಮಾಶ. ೦೦೬); ಊರಿಗೆ ಅಗತ್ಯವಾದ ರಸ್ತೆ, ಚರಂಡಿ, ಕಲ್‌ವರ್ಟುಗಳು, ಮೊಹರಿ, ಭಾವಿ ಮುಂತಾದ ಕಾಂಗಾರಿಗಳಿಗೆ ಸರ್ಕಾರ. . . ವೆಚ್ಚವನ್ನು ವಹಿಸಿಕೊಳ್ಳುತ್ತ (ಪಮ್ಮಶ್ಮ. ೯೩) ; ನನ್ನೂರಿಗೆ ಈಗ ಜಲ್ಲಿಕಲ್ಲಿನ, ಚರಂಡಿ ಮೊಹರಿಗಳ ರಸ್ತೆ ಆಗಿದೆ (ಪಮ್ಮರು. ೩೦೩). ೨. ದಾರಿಯಲ್ಲಿದ್ದ ಒಂದು ಮೊಹರಿಯ ಮೇಲೆ ಕೂತುಕೊಂಡು ಅಳುತ್ತಿದ್ದನು (ಕಂಕಶ. ೨೦೨).

[← ಹಿಂ. ಮೋರೀ; ಮರಾ. ಘೋರೀ, ಮೋಹರೀ]

**ಮೋರಿಯ** ' ಮೋರ್ಯ ' ನೋ.

**ಮೋರು** (ಕ್ರಿ). ಹೀರು ; ಸುರಿದುಕೊಳ್ಳು : ರಾಮಪ್ಪ. . . ಕಳ್ಳು ಮೋರುವುದಕ್ಕೆ ಆರಂಭಿಸಿ, ಅದರಲ್ಲೆ ಸುಖದ ಪರಾಕಾಷ್ಠೆಯನ್ನು ಕಾಣ ತೊಡಗಿದ (ಒಬ್ಬ ಉ. ೦೦೩). [ ? ]

**ಮೋರುಂಡೆ** (ನಾ). (ಮೊಸರನ್ನು ಪಯೋಗಿಸಿ ತಯಾರಿಸುವ) ಒಂದು ಬಗೆಯ ಉಂಡೆ,– ಭಕ್ಷ್ಯ : ನಱುಗಂಪೊಪ್ಪುವ ಮೋರುಂಡೆ ಮನ ಕೊಪ್ಪಿಸಿದುವು ಮಧುರರಸದ ಸುಧೆಯಂ ಬುಧರೊಳ್ (ಪಶಶಂ. ೯೯೩) ; ಪೂರಿಗೆ ಮಂಡಿಗೆ. . .ಮೋರುಂಡೆಗಳೆಂಬಿವನಾ ನಾರೀತತಿ ಮುನಿಜನಕ್ಕೆ ಬಡಿಸಿದುದಾಗಳ್ (ಕ್ರಿಕೃಶಿ. ೦೦–೩೯); ಬಿಳಿಯ ಬೆಲ್ಲವು ಮೋರುಂಡೆ ಎಳ್ಳುಂಡೆಯು (ಶ್ರಾಶಕ. ೩೬–೦೦೩) ; ಮೂಱು ಮೋರುಂಡೆಯಿಂ ಚರುವನಿಡುವುದು (ಸೋಂಬಿಕ. ೨೬–೦೦).

[ ಮೋರ್ (< ಮೊಸರ್) + ಉಂಡೆ./ತೆಲು. ಮೋರುಂಡ./ಪ್ರಾ. ಮೋರಂಡ = ಕರಿದ ಕಡುಬು, ಕರಿಗಡುಬು ]

**ಮೋರೆ** ' ಮೋಱೆ³ ' ನೋ.

**ಮೋರ್ಚಂಗ್**, ಮೋರ್ಸಿಂಗ್ (ನಾ). (ತಾಳವನ್ನು ಸೂಚಿಸುವ) ಒಂದು ಬಗೆಯ ಲೋಹದ ಮುಖವಾದ್ಯ : ಚಂದದಿಂ ಮುಖವೀಣೆ ಮೋರ್ಚಂಗ್ ಪಿಟೀಲುಗಳ ಪೀಠಿ ಸುಡಿ ಪಿಮ್ಮೇಳದವರೊಡನೆಯೊಲಪಿಸಿಂ ನಿಂದು ಕುಣಿಯುತ್ತಿರುವ ವಾರಕಾಂತವೃಂದವಂ ನೋಡು ರಮಣಿ ನೀನು (ಅಶಚರಿ. ೨೬–೩೦); ಚಂದದಿಂ ಮುಖವೀಣೆ ಮೋರ್ಚಂಗ್ಪಿಟೀಲುಗಳ (ಪಶಚರಿ. ೩–೩೦). **ಮೋರ್ಸಿಂಗ್** : ಅಲಗನುಳ್ಳ ಕಂಚಿನ ವಾದ್ಯವೊಂದು. ಬಾಯಲ್ಲಿಟ್ಟು, ಅಲಗಿನ ತಾಡನದಿಂದ ಲಯವಾದ್ಯವಾಗಿ, ಉಪಯೋಗದಲ್ಲಿದೆ. ಇದಕ್ಕೆ ' ಮೋರ್ಸಿಂಗ್ ' ಎಂದು ಹೆಸರು (ಕಂಗೀಕೋ. ೦೨೨).

[ ← ಹಿಂ. ಮೋರ್‌ಚಂಗ್, ಮುರ್‌ಚಂಗ್; ಮರಾ. ಮೋರ್‌ಚಂಗ್, ಮೋರ್‌ಶಿಂಗ್ ]

**ಮೋರ್ಚಾಲ್** (ನಾ). (ದೇವರು, ದೊರೆಗಳು ಮತ್ತು ಪೂಜ್ಯರಾದವರ ಬಳಿ ಗೌರವದ ಚಿಹ್ನೆಯಾಗಿ ಹಿಡಿಯಲಾಗುವ) ನವಿಲುಗರಿಗಳಿಂದ ಮಾಡಿದ ಚಾಮರ : ರಥೋತ್ಸವ ಮುಂತಾದ ಉತ್ಸವಗಳಿಗೆ ಕಲಾಬತ್ತು ಪಲ್ಲಕ್ಕಿ, ಛತ್ರಿ, ಚೌರಿ, ಸೂರಿಪಾನಿ, ಮೋರ್ಚಾಲ್ . . . ಚಂದ್ರಮಂಡಲ ಮುಂತಾದ ನಾನಾವಿಧಗಳಾದ ವಾಹನಗಳನ್ನು ಒಪ್ಪಿಸಿದರು (ಮಹಾಪಂ. II, ೦೨೯) ; ರಾಜಬಿರುದುಗಳು— ನವಪತ್, ಮೋರ್ಚಾಲ್, ಸೂರ್ಯಪಾನ, ಮಕರತೋರಣ, ಹಗಲು ದೀವಟಿಗೆ, ಧವಳಶಂಖ (ಗುಡದ. ೦೦).

[ ← ಹಿಂ. ಮೋರ್‌ಛಲ್; ಮರಾ. ಮೋರ್‌ಚಲ್, ಮೋರ್‌ಛೇಲ್ ]

**ಮೋರ್ಚೆ**, ಮೊಹರ್ಚು, ಮೊಹರ್ಚೆ (ನಾ). ೧. ಕೋಟೆಯ ಬತೇರಿಯ ಮೇಲೆ ತುಪಾಕಿಯನ್ನು ಇರಿಸುವ ಜಗಲಿ : ಇಂಗ್ರೇಜ ಬಹಾದ್ದರವರ ಫೌಜಿನವರು ಮುಂತಾಗಿ ಬತ್ತೇರಿಗಳ ಮೋರ್ಚೆ ಮೇಲೆ ಯೇರಿಸಿ ಇದ್ದ ಪಿರಂಗಿಗಳನ್ನು ಇಳಿಸಿದರು (ರಾಕಂಚ್ರ. ೯೯). ೨. ಲಗ್ಗೆ; ಧಾಳಿ; ಮುತ್ತಿಗೆ : ಅತ್ಯಲಾಗಿ ಟೀಪುಸುಲ್ತಾನರು ಮಹಾಕೋಪದಿಂದ ತಮ್ಮ ಯಾವತ್ತು ಫೌಜು ತೆಗದುಕೊಂಡು ಹೋಗಿ, ಬೆಟ್ಟಕೋಟೆಗೆ ಮೋರ್ಚೆಗಳ ಹಾಕಿ, ಲಡಾಯಿ ಮಾಡಿ . . . ಪಟ್ಟಣದ ಕಡೆ ಹೊರಟರು (ರಾಕಂಚ್ರ.೬೩) ; ಕರ್ನಾಡ ಕಚೇರಿಯ ಮೇಲೆ ನಮ್ಮ ಮೊದಲನೆಯ ' ಮೋರ್ಚೆ ' ಹೋಯಿತು (ಕ್ರತಿಸ. ೬೦). **ಮೊಹರ್ಚು** : ೩. ಸೈನಿಕರು ನಿಲ್ಲುವ ಕೋಟೆಯ ಆಯಕಟ್ಟಿನ ಸ್ಥಳ : ನೂರಾರು ಜನ ಹೊರ ಹೊರಟು ಮೊಹರ್ಚು ಮ್ಯಾಲೆ ಬಿದ್ದು ಜನರ ಗಾಶಿಮಾಡುವುದನ್ನು ಶಾಬಾಸ್ಸಾಬರು ಕಂಡು (ಹೈದರ. ೨೩). **ಮೊಹರ್ಚೆ** : ೧. ಅಗಸನ ಕಲ್ಲು ದಿಣ್ಣೆ . . . ರಂಗಯ್ಯನ ಬಾಗಿಲು ಎದುರಿಗೆ, ಬುದ್ಧಿವಂತನ ಮರಡಿ ಬಳಿಯಲ್ಲಿ ಈ ಕಡೆಗಳಲ್ಲಿ ಮೊಹರ್ಚೆ ಕಟ್ಟಿಸಿ ಫಿರಂಗಿಗಳನ್ನು ಹೂಡಿಸ ತಕ್ಕದ್ದು (ಐತ್ರಶಾ. ೬೨).

[←ಹಿಂ. ಮೋರ್ಚಾ ; ಮರಾ. ಮೋರ್ಚಾ, ಮೋರಚಾ, ಮೋರಚಾಲ್, ಮೋರ್ಚಾಲ್ ; ಪಾರ. ಮೋರ್ಚಾಲ್ ]

**ಮೋರ್ಚೆಕಟ್ಟು** (ಕ್ರಿ). ಮುತ್ತಿಗೆ ಹಾಕು ; ದಾಳಿಮಾಡು ; ಲಗ್ಗೆ ಹಾಕು : ಬಹದ್ದರ್‌ಹೈದರಲ್ಲೀಖಾನನು ಸತ್ಯಮಂಗಲದ ಕೋಟೆಗೆ ಮೋರ್ಚೆಕಟ್ಟಿ ತೋಪುಗಳನ್ನು ಹೊಡೆಸಿ . . . ಶ್ರೀರಂಗಪಟ್ಟಣಕ್ಕೆ ಬಂದು ಸೇರಿದನು (ಮಹಾಪಂ. I, ೦೬೩).

[ ಮೋರ್ಚೆ + ಕಟ್ಟು₁ ]

**ಮೋರ್ತಬ್ಬ** (ನಾ). ಮುದ್ರೆ ; ಠಸ್ಸೆ : ' ಶಿಕ್ಕಾಮೋರ್ತಬ್ಬ ' ಪರಾ.

[ ← ಮರಾ. ಮೋರ್ತಬ್, ಮೋರತಬ ]

**ಮೋರ್ಯ**, ಮೋರಿಯ (ನಾ). ಒಂದು ವಂಶದ ಹೆಸರು : ಅಲ್ಲಿಂದಂ ತೆಂಕಲು ಮೋರ್ಯ್ಯರ್ ವಾಳಸಮೂಹಂ ಅಲ್ಲಿಂದ ತೆಂಕಲು ಬೆದಿರೂರ(ರ) ತೊಱೆ³ (ಮೈಕಂ. ೦೬೨೩, ೦೦೩–೯೦ ; ೯೨೬). **ಮೋರಿಯ** : ಸರವಿಯ ಕೆಯ್ಗೆ ಪಣಮಾಱು ಮೋರಿಯರ ಕೆಯ್ಗೆ ಪಣಂ ಮೂಱು ಕಱಿಯೆತ್ತಿಂಗೆ ಗರುಡನ ಕಂಭದಿಂ ಮೂಡಲ್ ಮನೆಯೊನ್ನು (ಕೌಶಿ. XVIII, ೦೦೦–೯೮ ; 1115). [ < ಪ್ರಾ. ಮೋರಿಯ = ಒಂದು ಕ್ಷತ್ರಿಯ ವಂಶ./ಸಂ. ಮೋರೀ = ಒಂದು ವಂಶದ ಹೆಸರು./ತಮಿ. ಮೋರಿಯ = ಮೌರ್ಯ]

**ಮೋರ್ಸಿಂಗ್** ' ಮೋರ್ಚಂಗ್ ' ನೋ.

**ಮೋಲು** (ನಾ). ಬೆಲೆ ; ಕಿಮ್ಮತ್ತು ; ಮೌಲ್ಯ : ಏನು ನಿಮ್ಮ ಮೋಲು—ಲೋಕದಾಗ ? ನಾವು — ಮರತೇವದನ: ಹ್ಯಾಂಗೆ ? (ಕೃಶ್ಯಾಕು. ೯೦–೦೦). [← ಮರಾ. ಹಿಂ. ಮೋಲ್. /ಸಂ. ಮೌಲ್ಯ ]

**ಮೋವೆ** (ನಾ). ಅಗ್ರಭಾಗ ; ಮುಂಭಾಗ : ಅರಸ ಕೇಳಾಕ್ಷಣಕೆ ಸುಳಿವಳು ಸರಸಿರುಹಮುಖಿಯೊಬ್ಬಳಾ ಮೋಹರದ ಮೋವೆಯ ಮುಂದೆ ಮುಗಿಲ ಮಿಂಚಿನಂದದಲಿ (ಐರಾವ.೬-೯-೦೦). [ ← ತೆಲು. ಮೋವಿ ]

**ಮೋಷ** (ನಾ). ೧. ಕಳ್ಳತನ ; ಕಳವು. ೨. ಕೊಳ್ಳೆ ; ಸುಲಿಗೆ ; ಲೂಟಿ : ಅಸತ್ಯಮೋಷವಾಗ್ಯೋಗರಾಶಿಸಾಧಿಕಂ ದ್ವೀಂದ್ರಿಯಪರ್ಯಾಪ್ತಕಂಗಳ್ ಅಸಂಖ್ಯಾತಭಾಗಂ (ತತ್ತ್ವಸೂ. ೨೩). [ಸಂ.]

**ಮೋಷಕ** (ನಾ). ಕಳ್ಳ : "ಚೋರಃ, ಐಕಾಗಾರಿಕಃ, ಸ್ತೇನಃ, ದಸ್ಯುಃ, ತಸ್ಕರಃ, ಮೋಷಕಃ . . . ಮಲಿಮ್ಲುಚಃ – ೧೦ ಕಳ್ಳನ ಪೆಸರುಗಳು" (ಸಿದ್ಧಾಂತ. ೩೦೪). [ಸಂ.]

**ಮೋಷ್ಟಿಕ** (ನಾ). ದಾನವಾಗಿ ಪಡೆದ ಮುಷ್ಟಿಧಾನ್ಯದಿಂದ ಜೀವನ ನಡೆಸುವವನು (?) : ತಿರುನಾರಾಯಣಪುರಮುಖ್ಯವಾದ ಸಕಳಾಚಾರ್ಯ್ಯರೂ ಸಕಳಸಮಯಿಗಳೂ ಸಕಳಸಾತ್ವಿಕರೂ ಮೋಷ್ಟಿಕರು . . . ಹದಿನೆಣ್ಟುನಾಡ ಶ್ರೀವೈಷ್ಣವರ ಕೈಯ್ಯಲು ಮಹಾರಾಯನು ಜೈನರ ಕೈವಿಡಿದು ಕೊಟ್ಟು (ಎಕ. II, ೩೪೪-೧೨ ; 1363). [ ? ]

**ಮೋಸ** (ನಾ). ೧. ಕಪಟ ; ವಂಚನೆ : ದುಷ್ಟ ಮೋಸದೊಳಿರ್ದನೆಂಬರು (ಕೌಶಿಕ. ೧೯-೩೯) ; ಮರುಗಿವನು ಮನದೊಳಗೆ ಮೋಸದ ಮರೆಯ ರಕ್ಕಸಗದನಕೆ (ತೊರವೆ. ೭-೩೭-೪) ; ಇಂತಾ ಮೋಸ ಎಲ್ಲಿ ಕಲಿತಿರಿ? (ರಾಯಭಾ. ೬೨). ೨. ಅಪಾಯ ; ಆಪತ್ತು ; ಗಂಡಾಂತರ : ದೇಶಾಧಿಪ ಕೃಷ್ಣರಾಯಂಗೆ ಖಳರಿಂದ ಮೋಸವ ಬರಗುಡನೆಂದು ಶೇಷ ಮಂಡಳಿಸಿ ಪಂದದಿ ವಜ್ರದಾಳ್ವೇರಿ ಲೇಸಾದುದು (ಮೋಹತ. ೩-೬) ; ಇವರುತಲ್ಲು ಮಹೀಶೂರವರದಟವು ಬೇಟೆ ವಿರಾಜಿ ಪೋಪುದು ಮೋಸಂ (ಶಿಕಾ. ೨-೦೦೦) ; ಅವರ ಮಂತ್ರಬಲ ಸಾಲದಿದ್ದರೆ ಮಂತ್ರವಾದಿಗೆ ಮೋಸ (ಸರಕ. ೬೩). ೩. ತಪ್ಪು ; ಅಪರಾಧ : (*). ೪. ನಷ್ಟ ; ಹಾನಿ : (*).

**ಮೋಸ ಮಾಡು**=ವಂಚಿಸು ; ಮೋಸಗೊಳಿಸು : ನನಗೆ ಅವರು ಮೋಸಮಾಡಬಹುದು (ಅಶಾ. ೩೩) ; ಇವರು ಮೂವ್ವರೂ ಸೇರಿ ನಿನಗೆ ಮೋಸಮಾಡಲು ಹೊಂಚುಹಾಕುತ್ತಿದ್ದಾರೆ (ಕೊಕರು. ೫೬). **ಮೋಸವಾಗು**=ವಂಚನೆಯಾಗು : ವ್ಯಾಪಾರದ ವಹಿವಾಟಿನಲ್ಲಿ ಅವನಿಗೆ ಜೊತೆಗಾರನಿಂದ ಮೋಸವಾಗಿದೆ (ರೂಢಿ). **ಮೋಸಹೋಗು**=ವಂಚನೆಗೆ ಗುರಿಯಾಗು ; ಠಕ್ಕಿಗೆ ಒಳಗಾಗು : ಮೋಸಹೋಗುವನಲ್ಲಯ್ಯ . . . ನಮ್ಮ ವಾಸುದೇವ ತಿಮ್ಮಯ್ಯ (ಪುರಂದ. ೦-೩೭-೦೦) ; ದ್ರೋಣನು ನಿನ್ನ ಮಾತಿನಿಂದ ಮೋಸಹೋದನು (ಶೀತಿಶಂ. IV, ೩೨).

[<ಪ್ರಾ. ಮೋಸ./ ಸಂ. ಮೋಷ]

**ಮೋಸಂಬಿ** 'ಮೂಸಂಬಿ' ನೋ.

**ಮೋಸಕಾಜಿ** 'ಮೋಸಗಾರ' ನೋ.

**ಮೋಸಕೂಪ** (ನಾ). ಕೃತಕವಾಗಿ ನಿರ್ಮಿಸಿದ ಬಾವಿ : ನಂಜಿನ ಮಡುಹು ಹೆಬ್ಬುಲಿ ಕರಗಸಂಗಳು ಅಡಿಯನೂರಿದರೊಡನೆ ನುಂಗುವ ಮೋಸಕೂಪಗಳು (ಕೌಶಿಕ. ೦೭-೪೦). [ಮೋಸ + ಕೂಪ$_2$]

**ಮೋಸಗಾತಿ** (ನಾ). ವಂಚನೆ ಮಾಡುವವಳು ; ಮೋಸಗೊಳಿಸುವವಳು ; ವಂಚಕಿ : ಅರಸನು ಅತಿವ್ಯಗ್ರನಾಗಿ ಮೈಮರೆತು ಬಾಯಿಗೆ ಬಂದಂತೆಲ್ಲ ಮಗಳನ್ನು ಬಯ್ದು ಮೋಸಗಾತಿಯೆಂದೂ . . . ದೂಷಿಸಿದನು (ಕಚಕ. ೩೨). [ಮೋಸ + – ಕಾತಿ$_5$]

**ಮೋಸಗಾರ**, ಮೋಸಕಾಜಿ (ನಾ). ವಂಚನೆ ಮಾಡುವವನು ; ಮೋಸಗೊಳಿಸುವವನು : ಕಪಟಿ : "ಠಕ್ಕ, ಬೊಂದುಕ, ಚಲ್ಲವತ್ತ, ನಂಬಿಸಿ ಕಿಂಬವ, ಮೋಸಗಾರ, ಕಾಕ, ದುರುಳ" (ಕಂಪುಹು. ೬೪) ; ಅವರು ತುಂಬಾ ಮೋಸಗಾರರೆಂದು ತಿಳಿಯತಕ್ಕದ್ದು (ಮುಂಬಯಿ. ೪-೦೦೩). **ಮೋಸಕಾಜಿ** : ಆಟಕಾಜಿಂ, ಮೋಸಕಾಜಿಂ (ಕಬ್ಬಿಗ. ೪೨೩ ಕ್ರಿಯೋ).

[ ಮೋಸ + –ಗಾರ (< –ಕಾಜಿ) ]

**ಮೋಸಗಾರಿಕೆ** (ನಾ). ವಂಚನೆ ; ಕಪಟ ; ಠಕ್ಕು : ಇವರ ಮೋಸಗಾರಿಕೆ ನಮ್ಮ ಬಳಿ ನಡೆಯುವಂತಿಲ್ಲ (ಕುಸರು. ೨೯೩) ; ಈ ಪ್ರಕರಣದಲ್ಲಿ ಮೋಸಗಾರಿಕೆಯು ತುಂಬಿ ತುಳುಕುವಂತೆ ತೋರುವುದು (ಸ್ವಾಲಾಪ. ೦೭೪).

[ಮೋಸಗಾರ + – ಇಕೆ]

**ಮೋಸಗಾರ್ತಿ** (ನಾ). = ಮೋಸಗಾತಿ : (*).

[ ಮೋಸಗಾರ + – ತಿ$_1$ (< – ಇತ್ತಿ) ]

**ಮೋಸಗೊಳಿಸು** (ಕ್ರಿ). ವಂಚನೆ ಮಾಡು ; ಠಕ್ಕಿಸು : ಧೂರ್ತರು ತರತರದ ಹಂಚಿಕೆಗಳಿಂದ ಜನರನ್ನು ಮೋಸಗೊಳಿಸಲಿಕ್ಕೆ ಹವಣಿಸುತ್ತಾರೆ (ಮುಂಬಯಿ. ೪-೦೯) ; ಜನ ನಮ್ಮನ್ನು ಮೋಸಗೊಳಿಸಲು ಬಂದರೆ ನಾವು ಸತ್ಯವನ್ನೇ ನುಡಿಯುತಕ್ಕದ್ದು (ಠಮರ್ಕಾ. ೦೪೬). [ಮೋಸಗೊಳು + – ಇಸು$_3$]

**ಮೋಸಗೊಳು**, ಮೋಸಗೊಳ್ಳು (ಕ್ರಿ). ವಂಚನೆಗೆ ಒಳಗಾಗು; ಕಪಟಕ್ಕೆ ಗುರಿಯಾಗು : 'ಮೋಸಗೊಳಿಸು' ಪರಾ. **ಮೋಸಗೊಳ್ಳು** : ಬಹಳ ಸ್ನೇಹವಿರುವ ವ್ಯಕ್ತಿಯಿಂದಲೇ ಅವರು ಮೋಸಗೊಂಡರು (ರೂಢಿ).

[ ಮೋಸ + ಕೊಳು (< ಕೊಳ್$_1$) ]

**ಮೋಸಗೊಳ್ಳು** 'ಮೋಸಗೊಳು' ನೋ.

**ಮೋಸನಿಗೆ** (ನಾ). ಜಾರೆ ; ವೇಶ್ಯೆ ; ಸೂಳೆ (?) : ಮೋಸನಿಗೆಯರೊಳ್ಪರಿದಪ್ಪರ್ಥವ್ಯಯಮಿಲ್ಲದೆ ತನ್ನಿಚ್ಛೆ ಸಲ್ವುದೆಂಬುದು ತಾತ್ಪರ್ಯಂ (ಶೀತಿವಾ. ೨೭-೪೦). [ ? ]

**ಮೋಸಮ್** 'ಮೋಸಮು' ನೋ.

**ಮೋಸಮು**, ಮೋಸಮ್, ಮೋಸಮ್ಮು, ಮೋಸುಂ (ನಾ). ೧. ಅನುಕೂಲವಾದ ಕಾಲ ; ಸಕಾಲ : "ಮೋಸಮು—ಯೋಗ್ಯಸಮಯ (ಶಾಸಕೋ. ೩೩). **ಮೋಸಮ್** : ೨. ಋತು ; ಕಾಲ : ಏನು ಮನೆ ತುಂಬ ಮಾಡಿಟ್ಟಿರುವ ಧನಕನಕವೋ? ಬರಲು'ಪ್ರತಿ 'ಮೇ'ದ ಮೋಸಮ್? (ಜಂತವ. ೭೯-೦೦). **ಮೋಸಮ್ಮು** : ೧. ಆಟದ ಮೋಸಮ್ಮು ಇಲ್ಲದಾಗ ಊರಾಗ ಮುಕ್ಕಾಮು ಇರತಿತ್ತಿರಿ (ದೀಶಹ. II, ೩೯೭). **ಮೋಸುಂ** : 'ಅವಲ್‌ಮೋಸುಂ' ಪರಾ.

[ ← ಅರ. ಮೌಸಿಮ್ ; ಹಿಂ. ಮೌಸಮ್, ಮೌಸಿಮ್ ; ಮರಾ. ಮೋಸಮ್ ]

**ಮೋಸಮ್ಮು** 'ಮೋಸಮು' ನೋ.

**ಮೋಸವಡೆ** (ಕ್ರಿ). ಮೋಸಗೊಳ್ಳು ; ವಂಚನೆಗೊಳಗಾಗು : ವ್ಯಾಸನಂದನನಿರ್ದ ಬಳಿಗೆ ರಂಭಾನಾರಿ ಮೋಸವಡೆದು ನಡೆತಂದು ಪೂಸರ ನಾಗಮುಕವನ ಕರೆದು ಪರಿಹಾಸಕಕೊಳಗಾದಳವಳು (ಳಂಸವಿ. ೯-೦೪೪).

[ಮೋಸ + ಪಡೆ$_1$]

**ಮೋಸು$_1$** 'ಮೋಚು$_1$' ನೋ.

**ಮೋಸು$_2$** (ನಾ). ೧. ಕುಡಿ; ಚಿಗುರು ; ಮೊಳಕೆ : ಎನಿತೇ ಬೀತರು ಈ ಎಡೆ ಮತ್ತೂ ತಲೆಯಿಡುವುದು ಬಯಕೆಯ ಮೋಸು (ಪಪರಾ. ೫-೩೦) ; ಕಲ್ಲುಗೋಡೆಯ ಮೇಲೆ ಸರಿವ ತುಂತುರು ಬಳ್ಳಿ, ಬೆಳ್ಳಿಯೆಲೆ, ಬೆಳ್ಳಿಮೋಸು (ಶಿಲಾಂ. ೭೦-೦೨) ; ಈ ಜಾತಿಯ ಗಿಡಗಳು ಕಾಂಡವಿಲ್ಲದ, ಒಂದೇ ಸಸ್ಯದಿಂದ ಮೋಸುಗಳು ಹೊರಬಂದು ಗುಂಪಾಗಿ ಬೆಳೆಯುವ, ಸಕ್ಯೂಲೆಂಟ್ ಸಸ್ಯಗಳು (ಕಪಕೋ. I, ೬೭೭). ೨. ಮೂಲ ; ಉಗಮಸ್ಥಾನ : ಕರೆಕರೆಯ ಮೋಸು ಸಂತಾಪದೊಬ್ಬುಳಿ . . . ಲಘುತ್ವದ ಗೆರಸೆಯಿಾ ದೇಹವು (ಕೃಕವ. ೧-೦೬-೦೦). [ ? ]

**ಮೋಸುಂ** 'ಮೋಸಮು' ನೋ.

**ಮೋಹ$_1$** (ನಾ). ೧. ಎಚ್ಚರತಪ್ಪುವಿಕೆ ; ಜ್ಞಾನಹೋಗುವಿಕೆ ; ಮೂರ್ಛೆ : "ಮೂರ್ಛಾ, ಕಶ್ಮಲಂ, ಮೋಹಃ– ೩ ಮೈಮರೆಯುವಿಕೆ,

ಮೂರ್ಛೆ " (ಸಿದ್ಧಾಂತಿ. ೨೭೦). ೨. ಭ್ರಾಂತಿ; ಭ್ರಮೆ : ವೈದೇಹೀ ವೈದೇಹಿಯೆಂದು ಪುದಿದಿರೆ ಮನಮುಂ ಮೋಹತಮುಂ ದೀಪಂ ವಾತಾಹತಿಯಿಂ ನಂದುವಂತೆ ಮೂರ್ಛೆಗೆ ಸಂದಂ (ಪಂಪಾರಾ. ೯-೦೦೬) ; ಜಂತ್ರಬಿಡುಗಕೆ ಹರನು ತಂತ್ರಚಕ್ರಕೆ ಹರಿಯು ಮಂತ್ರಮೋಹಕ್ಕೆ ಬೊಮ್ಮನು ಜಗದಿ ಸ್ವತಂತ್ರನಾರುಂಟು (ಸರ್ವಜ್ಞ. ೨೦೦) ; ಇಂಥ ಹಲವು ಬಗೆಯ ಮೋಹ ಮೋಸಗಳಿಗೆ ಒಳಗಾಗಿ, ಅವನು ಅಲ್ಲಿ ಇರುವ ತನಕ ತುಂಬ ಅವಮಾನಪಟ್ಟು ಹೊರಟನು (ವಚಭಾ. ೮೭). ೩. ದಿಕ್ಕುತೋಚದಿರುವಿಕೆ ; ದಿಗ್ಭ್ರಮೆ; ಕಕ್ಕಾಬಿಕ್ಕಿ. ೪. ಮೂರ್ಖತನ; ಅವಿವೇಕ. ೫. ತಪ್ಪು ; ದೋಷ. ೬. ಅಭಿಮಾನ; ಪ್ರೀತಿ; ವಿಶ್ವಾಸ : " ಕೂರ್ಮೆಯೆನಲ್ ಮೋಹ " (ತತ್ವಾ.೯೦); ಈಕೆ ಸಾಮಾನ್ಯವನಿತೆಯಲ್ಲಿವಳ್ ಗಂಧರ್ವವನಿತೆಯೆನ್ನೊಳಾದ ಮಚ್ಚುಂ ಮೋಹಮುಂ ಕಾರಣಮಾಗಿರ್ಪಳ್ (ಪಂಪಭಾ. ೬-೭೩ ವ) ; ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ (ಬಸವ. ೦೩) ; ಚಿಕ್ಕಮಾದಣ್ಣಗಳ ಮಹದೇವಿಯರ ಮೋಹದ ಕಂದನೋಯೆನುತ ಹಾಡುವನು (ಬಸವ. ೪೭-೩೮). ೭. ಮರುಳುಗೊಳಿಸುವಿಕೆ; ಆಕರ್ಷಣೆ; ಸೆಳೆತ : ಭವದೀಯ ರೂಪಲಂಪಟ ವಿಟರಂ ಮರುಳ್ಗೊಳಿಸಿತುತ್ಕಟಮೋಹತ್ರಮಾಪಟಂ ಪಟಂ (ಆದಿಪು. ೩-೯೦) ; ಮೋಹದಿಂದಾ ಮೂರ್ಛೆಯೋಗರು ಮೋಹದಿಂದಾ ಮರಣವಯಿದರು ಮೋಹದಿಂದಾರ್ಕೆಡರು (ಸಾಳ್ವಭಾ. ೩-೫೬) ; ಹಳ್ಳಿಯ ಹೆಂಗಸು ನನಗೆ ಜಿಹಾಸೆ ಹುಟ್ಟಿಸಲಿಲ್ಲ, ಅಯ್ಯರ ಹೆಂಡತಿ ಮೋಹವನ್ನೂ ಹುಟ್ಟಿಸಲಿಲ್ಲ (ರಾಮಾತ. ೦೦೩). ೮. ಮರೆತು ಹೋಗುವಿಕೆ; ಮರವು : ರಾಹು ತೊರೆದೊಡನೆ ಶಶಿಯುಂ ರೋಹಿಣಿ ಬಳಿವೊರ್ದವಂತೆ ನೆನಪಿಂದಿರದಾ ಮೋಹತಮಮಂ ಳಿಯೆ ಸುಕೃತದೆ ನೀಹಾರಕರಾಸ್ಯೆ ಸೇರ್ದೆಯೆನ್ನಯ ಬಳಿಯಂ (ರಾಶಾಂತ. ೦೮೩). ೯. (ಶತ್ರುವನ್ನು ದಿಗ್ಭ್ರಮೆಗೊಳಿಸಲು ಮಾಡುವ) ಇಂದ್ರಜಾಲ ; ಯಕ್ಷಿಣಿ. ೧೦. [ವೇದಾಂತ] ಅರಿಷಡ್ವರ್ಗಗಳಲ್ಲಿ ಒಂದು ; ಸತ್ಯವನ್ನು ತಿಳಿಯಲು ಅಡ್ಡಿ ಬರುವ ಮನಸ್ಸಿನ ಭ್ರಾಂತಿ; ಅಜ್ಞಾನ : ಮಾಯೆ : ಅವಿದ್ಯೆ : ಇನ್ನಿಂದ್ರಿಯಶಕ್ತಿಯುಂ ಜರೆ ಘರಂಗೆಯ್ದಿದ್ದು ಬೆನ್ನಟ್ಟಿ ಬಿಸ್ಸುಟಿವಿಲ್ಲಿಚ್ಚೆಯ ಮುಚ್ಚು ಮೋಹ ಧನಮುಂ ಮುಂದಿಟ್ಟು ದಲ್ ತೃಷ್ಣೆ ಲಂಪಟೆ ಬೆನ್ನಿಂ ಬಿಡದೊಲ್ಲೆಮೊಲ್ಲೆ ಮೆನೆಯುಂ ದೂದಟ್ಟ ದುರ್ಬುದ್ಧಿಯುಂ (ಶಾಂತಿಪು. ೭-೭೭) ; ಮೋಹ ಮನೊಕ್ಕು ಗೆಲ್ದು . . . ತಾಳ್ದಿ ಮಹಾವ್ರತಂಗಳಂ (ಜೀವಸಂ. ೦೫೯-೨೦). ೧೧. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು ; ಮೈಮರೆಯುವಿಕೆ ; ಪರವಶತೆ : ಮತಿ ಲಜ್ಜೆ . . . ಮೋಹ . . . ಅಪಸ್ಮಾರವೆಂಬ ಮೂವತ್ತುಮೂಱು ಸಂಚಾರೀಭಾವಂಗಳಂ ಪರಿವರ್ಧಿಸಿ (ಬಿವೇಕ. ೦೬೦) ; " ಚಿತ್ತಮೂಢತ್ವಂ ಮೋಹಂ ". ಎಂದರೆ, ಎಚ್ಚರತಪ್ಪುವುದು; ಇದು ಸುಖದ ಘಳಿಗೆಯಲ್ಲೂ ಉಂಟಾಗಬಹುದು (ಕಾರಂಬಾ. ೩೯೭). ೧೨. [ತತ್ತ್ವಶಾ] ಅಜ್ಞಾನದ ಐದು ಬಗೆಗಳಲ್ಲಿ ಒಂದು : ಮತ್ತಂ ತಮಸ್ಸು ಮಾಯೆ ಮೋಹ ಅವಿದ್ಯೆ ಅನ್ಯತಾತ್ಪರ್ಯೆಯೆಂಬವೇ ಮಾಯಾಪಂಚಕಂಗಳವಱಲ್ಲಿ . . . ಆ ತೋಱಿದ ಜಗತ್ತಿನಲ್ಲಿ ಶುಕ್ತಿರಜತಾದಿ ವಿಪರೀತಜ್ಞಾನಮಂ ಪುಟ್ಟಿಪುದಱಿಂ ಮೋಹವೆನಿಸುವುದು (ಬಿವೇಕ. ೩೦) ; ಪ್ರಾಣಗಳಲ್ಲಿ . . . ಪರಮಾತ್ಮನು ಇದ್ದು ತಾಮಸರ ಶಬ್ದಾದಿ ಮಾತ್ರಾಗುಣಗಳಿಗೆ ವಿಷಯೀಭೂತವಾದ ತಾಮಿಸ್ರ ಅಂಧತಾಮಿಸ್ರ ಮಹಾಮೋಹ ಮೋಹ ತಮಸ್ ಎಂಬ ಅಜ್ಞಾನವೃತ್ತಿಗಳಲ್ಲಿ ಪ್ರೇರಿಸುವನು (ಹಸಾರ. ೬-೦೨ ಟೀಕು) ; ಅಜ್ಞಾನವು ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ ಎಂದು ಐದು ವಿಧ . . . ಮತ್ತೊಂದು ಪದಾರ್ಥವನ್ನು ತನ್ನದೆಂದು ತಿಳಿಯುವುದೇ ಮೋಹ (ಧಾತತ್ತ್ವ. ೩೨೮). ೧೩. [ದ್ವೈತ] ಜೀವನಿಗಿರುವ ಐದು ಬಗೆಯ ಅವಸ್ಥೆಗಳಲ್ಲಿ ಒಂದು : ಸಾಮಾನ್ಯವಾಗಿ ಜೀವಾತ್ಮರಿಗೆ ಜಾಗ್ರತೆ, ಸ್ವಪ್ನ, ಸುಷುಪ್ತಿ, ಮೋಹ, ತುರೀಯ ಎಂದು ಐದು ಅವಸ್ಥೆಗಳು ಇರುವುವು (ಹಿಂದಾಸ. ೨೮೮).

**ಮೋಹಪಡು** = ಮರುಳಾಗು ; ಮನ ಸೋಲು : ಸಕಲರೂ ಮೋಹಪಟ್ಟರು (ಅರ್ಜವಾ. ೩) ; ಶ್ರೀಪಾದಂಗಳವರು ನಿನ್ನ ಮೇಲೆ ಮೋಹಪಟ್ಟಿರುವರೆಂಬ ತಾತ್ಪರ್ಯ ನಿನಗೆ ಸೂಚಿಸಿದೆ (ವಾಗ್ವಿಲಾ. ೦೪). **ಮೋಹ ಸಲ್** = ಬಯಕೆಯನ್ನು ಹೊಂದು ; ಅಪೇಕ್ಷೆ ಪಡು : ದೇವಾರಕ್ಕೆ ಕೊಟ್ಟ ಕೆಯ್ಗೆ ಅವುತಪೂರ್ಗಂ ಕಾಲಾನ್ತರದೊಳ್ ಮೋಹಸನ್ದೊಂ ಪಞ್ಚಮಹಾಪಾತಕನಕ್ಕುಂ (ಎಕ. VII, ಶಿಕಾಂ. ೨೦೯-೩೦; 918). [ಸಂ.]

**ಮೋಹ$_2$** (ನಾ). ಒಂದು ಬಗೆಯ ಮರ ; ಹಿಪ್ಪೆ ; ಮಧೂಕ : ಇಪ್ಪೆ(ಮೋಹ) . . . ಇದರ ಕಟ್ಟಿಗೆಯು ತಾಳಿಕೆಯುಳ್ಳದ್ದು (ಕಹಾಗ. ೩೭) ; ಮೋಹದ ಬೀಜಾ, (ಇಪ್ಪಿ ಬೀಜಾ) ಬಣ್ಣದಲ್ಲಿ ಕೆಂಪಾಗಿದ್ದು ಎಣ್ಣೆ ಉಳ್ಳದ್ದಿರತಕ್ಕದ್ದು (ಮುಂಬಿಷ್ಣಾ. ೫೭). [← ಮರಾ. ಮೋಹ. ಮೋಹೋ./ಪ್ರಾ. ಮಹು, ಮಹುಅ./ಸಂ. ಮಧುಕ]

**ಮೋಹಕ** (ಗು). ೧. ದಿಗ್ಭ್ರಮೆಗೊಳಿಸುವ ; ತಬ್ಬಿಬ್ಬುಮಾಡುವ. ೨. ಮರುಳುಗೊಳಿಸುವ ; ಮನೋಹರವಾದ ; ಅಂದವಾದ : ಶ್ರೀಕೃಷ್ಣಪರಮಾತ್ಮನು ಬಲಶಾಲಿ ಮತ್ತು ಮೋಹಕರೂಪುಳ್ಳವನು (ಹೇಮಂತ. ೦೦೨). (ನಾ). ೩. ಭ್ರಮೆ ; ಭ್ರಾಂತಿ : ಅಕ್ಕಿತೇ ದುಷ್ಕೀರ್ತಿ ತಮ್ಮನನಿಕ್ಕಿದೆನಲಾ ರಣಕೆ ಮಾಯೆಯ ಠಕ್ಕನಬಲೆಯ ಮೋಹಕದಲೆಂದರಸನಳವಳಿದ (ಕುಮಾರಾ. ೬-೪೭-೨೮) ; ಇನಿತೆಲ್ಲ ಮಾಯ ಮೋಹಕವೆಂಬ ಶರಧಿಯೊಳು ಅನುದಿನವು ಮುಳುಗಿ (ಪುರಂದ. ೧-೨೨೨-೩). ೪. ಆಕರ್ಷಿಸುವಂಥದು ; ಅಂದವಾದುದು : ಅವಳ ನಿಡಿದಾದ ಮೂಗೂ ಮಣಿದ ಹುಬ್ಬುಗಳೂ ದುಂಡುಮುಖವೂ ಒಳ್ಳೇ ಮೋಹಕವಾಗಿ ಕಂಡವು (ಮಾದಿಮ. ೦೦೭). [ಸಂ.]

**ಮೋಹಗೊಳಿಸು** (ಕ್ರಿ). ಮರುಳುಗೊಳಿಸು; ಮನಸ್ಸನ್ನು ಆಕರ್ಷಿಸು : ಭಾವಕ-ಮೋಹಗೊಳಿಸುವದಕ್ಕಾಗಿ ತೋರಿಸುವ ಹಸ್ತದ ಅಭಿನಯ (ಗಂಗಾಪು. ೨೪೨). [ಮೋಹ$_1$ + ಕೊಳ್$_1$ + - ಇಸು$_3$]

**ಮೋಹಗೊಳ್ಳು** (ಕ್ರಿ). ಮರುಳಾಗು ; ಆಕರ್ಷಣೆಗೆ ಒಳಗಾಗು : ಸರಿಯಾದ ಕಾಗುಣಿತ ವ್ಯಾಕರಣಾಂಶಗಳು ಇದ್ದಾಗ ಮೋಹಗೊಂಡು ಹೆಚ್ಚು ಅಂಕಗಳನ್ನು ಕೊಟ್ಟುಬಿಡಬಹುದು (ಶಿಕ್ಷಣ. ೩೪೫).

[ಮೋಹ$_1$ + ಕೊಳ್ಳು$_{v1}$ (< ಕೊಳ್$_1$)]

**ಮೋಹತಮಾಮ** (ನಾ). ಪರೀಕ್ಷಾಧಿಕಾರಿ : ಹೈದರಾಬಾದಿನಲ್ಲಿ ಕರೋಡಗಿರಿಯ ಮೋಹತಮಾಮರಾದ ಸುಬ್ಬರಾಯರು ನಮ್ಮ ತಂದೆಯವರ ಬಾಲ್ಯಸ್ನೇಹಿತರು (ಹೋರಾಟ. ೨೨೭). [←ಅರ. ಹಿಂ. ಮುಹತಮಿಮ್]

**ಮೋಹನ** (ಗು). ೧. ಮೂರ್ಛೆಗೊಳಿಸುವ ; ಜ್ಞಾನ ತಪ್ಪಿಸುವ. ೨. ತಬ್ಬಿಬ್ಬುಗೊಳಿಸುವ ; ಭ್ರಾಂತಿಗೊಳಿಸುವ ; ಭ್ರಮೆ ಹಿಡಿಸುವ : ಅದಾವ ಮೋಹನವಶ್ಯವಿದ್ಯೆಯ ಕಲಿತೆಯೋ ದಿಟಕೆ (ತ್ರಿಭುವ. ೫-೩೯). ೩. ಮರುಳುಗೊಳಿಸುವ ; ಆಕರ್ಷಿಸುವ : ಮೋಹನ ಮೊಲೆ ಮುದ್ದುಮೊಗದ ಭಾವಕಿಯರ ಲಲ್ಲೆನುಡಿಯೆಂಬ ನಯಗತ್ತಿ ಎಲ್ಲರ ಹೃದಯವ ಕೊಚ್ಚುತ್ತಿದೆ ನೋಡಾ (ವಚಸಂ. ೬೪-೯೦); ತ್ರಿಭುವನಮೋಹನ ದೀಪಪ್ರಭೆ . . . ಪುಟ್ಟಿದಳೆಸೆವ ಶಶಿಪ್ರಭೆ (ಚಂದ್ರಪ್ರ. ೬-೦೨); ಯಾವ ಮೋಹನ ಮುರಲಿ ಕರೆಯಿತು ದೂರತೀರಕೆ ನಿನ್ನನು ? (ಭಾವಗೀ. ೩೪೨). (ನಾ). ೪. ಮೂರ್ಛೆ ; ಮೈಮರೆವು : ತೇಟ್ಟ(ರುಗ)ಜ್ವರದಿಂದಂ ಮಿಡಿವಂದು ಲೋಳೆ ಮಱುಕಂ ಶೋಕಂ ಬೆಮರ್ ಮೋಹನಂ . . . ತದುಗ್ರಜಾತಿವಿಷದಿಂ ಮರ್ತ್ಯರ್ಕಳೊಳ್ ತೋಱುಗುಂ (ಲೋಕೋಪ. ೦೦-೨೩). ೫. ಭ್ರಾಂತಿ : ಭ್ರಮೆ : 'ಚಿತ್ತಮೋಹನ' ಪರಾ. ೬. ಆಕರ್ಷಣೆ ; ಸೆಳೆತ : ಬಂದ ಬಸಂತದ ಕಮ್ಮನಪ್ಪಲರ್ ತಾಂ ಗುರುವಾಗೆ

ಕಲ್ಪುದೊ ವಿಳಾಸವತೀನಯನತ್ರಿಭಾಗದೊಳ್ ಸಂಗಳಿಸಿತ್ತೊ, ಮೋಹನ, ಮನಗ್ನಳ ನಿನ್ನಯ ವಾಕ್ಯಗುಂಭನಂ (ಚಂದ್ರಶೃ. ೧-೩೯); ಪನ್ನೀರು ಕರ್ಪೂರ ವೀಳೆಯ ಮೋಹನದನುಲೇಪನಾದಿ ವಸ್ತುಗಳ ಪನಿತೆಯು ಮುಡಿಮೊಲೆಯೆಡೆ ಬಾಯಿ ಕೊರಳಿಗಂದಸುಗೋಳಿಸಿದನೇವೇಳ್ವೆ (ಕಂಪವಿ. ೧೦-೩೯). ೭. ಸೌಂದರ್ಯ; ಮನೋಹರತೆ; ಚೆಲುವು: ಕಜ್ಜಸಗೆಯ ಕದಪುಗಳ ಕುಂಡಲದ ಚೆಲ್ವಿನಿಂ ಮೆಚ್ಚಿಸ ಸದ್ವದನನಂ ಮೋಹನದ ಸದನನಂ . . . ಕಂಡನವನೀಪಾಲನು (ಕೈವಲ್ಯ. ೨-೯೯); ತರುಣಿ ಮೋಹನದರಗಿಣಿ ಸೌಂದರ್ಯದ ಸರಣಿಯೊಪ್ಪಿದಳಾ ವೇಳೆ (ಕಂಪವಿ. ೯-೭೬). ೮. ಮನೋಹರವಾದ ರೂಪುಳ್ಳವನು; ಕೃಷ್ಣ: ಕೊಳಲ ದನಿಯೊಡನೆಗೋ ಬಂದ ಮೋಹನ ಬಾಲಕೃಷ್ಣ ರಾಧೆಯ ಹೃದಯನಂದನಕ್ಕೆ (ಚಂದಮ. ೩೭-೩); ಶ್ರೀ ಕೃಷ್ಣಪರಮಾತ್ಮನು ಬಲಶಾಲಿ ಮತ್ತು ಮೋಹಕರೂಪುಳ್ಳವನು. ಅವನಿಗೆ ಮೋಹನನೆಂದೂ ಕರೆಯುತ್ತಾರೆ (ಹೇಮಂತ. ೦೦೨). ೯. ಸಂಭೋಗ; ಸುರತ: "ಸಂವೇಶನಂ . . . ಸುರತಂ, ಮೋಹನಂ—ಈ ೭ ಸುರತಂ (ಹಲಾಯು. ೯೩-೪೦೩); ಸಿರಿಗಂಧದೆಣ್ಣೆಗೆ ಪನ್ನೀರ್ಗೆ ಬೆರೆದು ಬಯಸುತವ ಬಿರ್ವರೆಸೆದರಾಗ ಸ್ಮರಮೋಹನದ ಸೊಕ್ಕೇರಿ (ಕಂಪವಿ. ೧೦-೩೨); ಮೋಹನ ವೆಂಬುದು ಮದನಯುದ್ಧವೆಂಬುದು ಸುರತಕ್ಕೆ ಪೆಸರು (ಶಾಪುಸಾ. ೨೯೦). ೧೦. ಮಂತ್ರಬಲದಿಂದ ಮೋಹಗೊಳ್ಳುವಂತೆ ಮಾಡುವ ತಂತ್ರ; ಮಾಟ; ಇಂದ್ರಜಾಲ: ಶತ್ರುಗಳ ಮೇಲೆ ಜಯ ಗಳಿಸುವುದಕ್ಕೆ ಅಭಿಚಾರಿಕಕರ್ಮಗಳೂ ಉಂಟು. ಮಾರಣ, ವಶೀಕರಣ, ಮೋಹನ, ಸ್ತಂಭನ, ಉಚ್ಚಾಟನ ಇತ್ಯಾದಿ (ಭಾರಕ.೨೮). ೧೧. ಮನ್ಮಥನ ಐದು ಬಾಣಗಳಲ್ಲಿ ಒಂದು: ಉನ್ಮದನ ಮದನ ಮೋಹನ ಸಂತಾಪನ ವಶೀಕರಣವೆಂಬ ಪಂಚಬಾಣಪ್ರತಾಪಪ್ರವೀಣರಿಂ (ವಿವೇಕ. ೦೯೯). 'ಮೋಹನಬಾಣ', 'ಮೋಹನಶರ' ಪರಾ. ೧೨. ಒಂದು ಬಗೆಯ ಸಸ್ಯ; ದತ್ತೂರಿ ಗಿಡ: "ಮೋಹನಃ_ಉಮ್ಮತ್ತ, ನೀರುಳ್ಳಿ, ಬೇಳ" (ಔಷಧಿ. ೦೩೦). ೧೩. [ಸಂಗೀತ] ಒಂದು ರಾಗದ ಹೆಸರು: ಪರಮಲಲಿತಕುರಂಜಿ ಮಂಗಳ ಸರಸತರ ಮೋಹನದ ರಾಗಂಗಳಲಿ ಪಾಡಿದರು (ಯಾದವ. ೦೦-೪೪); ಮೋಹನಾ ನಂದಭೈರವಿ . . . ಮೋಹ ಸರ್ವಸ್ವಗಳ ರಾಗಾಬ್ಧಿಯೋ ಬ್ರಹ್ಮಗಾ ಪಿಸದರೊಳಗೆ ನೀಂ (ಮಂಕಳಿ. ೯೩೨); ಮೋಹನ – ಈ ರಾಗದ ಜನಕರಾಗದ ವಿಷಯದಲ್ಲಿ ಮತಭೇದವುಂಟು (ಸಂಗೀತಂ. ೦೪೦). [ಸಂ.]

**ಮೋಹನಗಾರ** (ನಾ). ಮರುಳುಗೊಳಿಸುವವನು; ಆಕರ್ಷಿಸುವವನು; ಚೆಲುವ: ಮೂಲೋಕಮೋಹನಗಾರನತುಳಿತಪುಷ್ಪಗೋಲನಪ್ರತಿಮ ಸತ್ಪುತ್ರ (ನವಮೋ. ೦೩-೨೮). [ಮೋಹನ + –ಗಾರ (< –ಕಾರ)]

**ಮೋಹನಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು: ಸೌರಾಷ್ಟ್ರ ಗೌಳ . . . ಮೋಹನಗೌಳವೆಂಬಷ್ಟಗೌಳಂಗಳೀ ಸಾಳಗದ ಮಿತ್ರರಾಗಂಗಳು (ವಿವೇಕ. ೦೯೯). [ಸಂ. ಮೋಹನಗೌಲ]

**ಮೋಹನಚೂರ್ಣ** (ನಾ). ಮರುಳುಗೊಳಿಸುವ ಪುಡಿ; ಮೆಚ್ಚು ಮದ್ದು; ಮಂಕುಬೂದಿ: ಹುಬ್ಬಳ್ಳಿಯ ರಂಗಭೂಮಿಯ ಮೇಲೆ ಬಾಲಗಂಧರ್ವನು ಮೋಹನಚೂರ್ಣವನ್ನು ಎಸೆಯುತ್ತಿರುವ ಕಾಲದಲ್ಲಿಯ ವೆಂಕಣ್ಣನ ಸರಸಸಂಭ್ರಮದಿಂದ ಆರಂಭವಾಗುವ ಕಥೆ (ಶಾಸಪಶ. ೦೩೯); ಆ ರೂಪು . . . ನಾಗಶ್ರೀಯ ಎಚ್ಚರದ ಕಣ್ಣಿಗೆ ಮೋಹನಚೂರ್ಣ ವನ್ನೆರಚಿತು (ನಾಗಶ. ೯೦). [ಸಂ.]

**ಮೋಹನಬಾಣ** (ನಾ). ಮನ್ಮಥನ ಪಂಚಬಾಣಗಳಲ್ಲಿ ಒಂದು: ಮೋಹನಬಾಣಮುಚ್ಚಿದೊಡೆ ಮನ್ಮಥಕಂಪನಮಾದುದೆಂಬಿನಂ ಸಾಹಸಿಕರ್ ಕುಮಾರವರರಾಕೆಯ ಚೆಲ್ವನೀಕ್ಷಿಸುತ್ತುಮಿರ್ದು . . . ತಲೆದೂಗುತಿರ್ದರ್ (ನಾರಶ. ೦೦-೯೯). [ಸಂ.]

**ಮೋಹನಮಾಲೆ** (ನಾ). ಚಿನ್ನದ ಗುಂಡುಗಳಿಂದ ಮಾಡಿದ, ಆಕರ್ಷಣೀಯವಾದ ಹಾರ: ಬಿಲ್ಲೆ ಮೋಹನಮಾಲೆ . . . ಮೊದಲಾದ ಪೊಸಮಿಸುನಿದೊಡವುಗಳಿಂ ತೊಂಡಿಲ್ಗಳಿಂದಲಂಕೃತೆಯಾದ . . . ಕನ್ನೆಯಂ (ಹಾಲಾಸ್ಯ. ೪-೯-೬೪ ವ); ಕಂಠಭೂಷಣಗಳು–ತಾಳಿ, ಚಂದ್ರಹಾರ, ಮೋಹನಮಾಲೆ . . . ಮಾವಿನಕಾಯಿ ಸರ, ಮಲ್ಲಿಗೆ ಮೊಗ್ಗಿನ ಮಾಲೆ, ಪದಕ ಇತ್ಯಾದಿ (ಕವಿಕೋ. I, ೬೨೦); ಅಳಿಯಂದಿರಿಬ್ಬರಿಗೂ ಚಿನ್ನದ ಗಡಿಯಾಳ, ಮೋಹನಮಾಲೆಗಳನ್ನು ಕೊಟ್ಟರು (ಶ್ರೀಪುತ್ರ. ೨೩೩).
[ಸಂ. ಮೋಹನ ಮಾಲಾ. / ಹಿಂ. ಮೋಹನ್‌ಮಾಲಾ; ಮರಾ. ಮೋಹನ್‌ಮಾಳ]

**ಮೋಹನವಡೆ** (ಕ್ರಿ). ಚೆಲುವನ್ನು ಪಡೆ; ಸುಂದರವಾಗು: ಮೋಹನ ವಡೆದ ಪದಕ ಪೈಕಣೆಯ ಕಡುಸೊಬಗಿನ ಬಲ್ಪೇಟದ ಸುಕುಮಾರ ನಡೆದನು ಸಪಿರ ಮೇಳದಲಿ (ಕಂಪವಿ. ೧೦-೨೦). [ಮೋಹನ + ಪಡೆ$_1$]

**ಮೋಹನಶರ** (ನಾ). = ಮೋಹನಬಾಣ: ಕಾಮಂ ಹೂಡಿದನುಣ್ಮೈನುತ್ತೆ ಮೋಹನಶರಮಂ (ಗಿರಿಜಾ. ೬-೨೯). [ಸಂ.]

**ಮೋಹನಶಾಸ್ತ್ರ** (ನಾ). ಅವಿದ್ಯೆಯನ್ನುಂಟುಮಾಡುವ ಶಾಸ್ತ್ರ; ಅಜ್ಞಾನವನ್ನುಂಟುಮಾಡುವ ಶಾಸ್ತ್ರ: ಮಾಯಿಗಳ ಗೆಲಿದು ಮೋಹನಶಾಸ್ತ್ರಬಲೆಯನರಿದು . . . ವಿಷ್ಣು ಪರದೈವವೆಂದಚ್ಚುಹಿದಾ ಅಲವಬೋಧರ ಭಜಿಸಿರೈ (ಹರಿಕಥಾ. ೧೩. ೦-೪೭-೩). [ಸಂ.]

**ಮೋಹನಾಂಗ** (ನಾ). ಮರುಳುಗೊಳಿಸುವ ರೂಪವುಳ್ಳವನು; ಸುಂದರ; ಚೆಲುವ: ಇದು ಏನಂಗ ಮೋಹನಾಂಗ ಮದನಜನಕ ತೊರವೆಯ ನರಸಿಂಹ (ಹರಿಕಥಾ. ೦-೯೯ ಕಲ್ಲವಿ); ಸಂತೋಷದೊಳು ಮೋಹಿಸುತೆನ್ನನೊಡಗೂಡೊ ಕಂತುಸನ್ನಿಭ ಮೋಹನಾಂಗ (ಕಂಪವಿ. ೯-೧೯೦); ನೀ ತಾಯಿಯೆನಲೊ ನೀ ಮಾಯಿಯೆನಲೊ ಮೋಹಿನಿಯ ಮೋಹನಾಂಗ? (ಸೂರ್ಯಶಾ. ೭೬-೯). [ಸಂ.]

**ಮೋಹನಾಂಗಿ** (ನಾ). ಮರುಳುಗೊಳಿಸುವ ರೂಪುವುಳ್ಳವಳು; ಚೆಲುವೆ: ಅನಿಮಿಷಪತಿಸುತ ನರಲೋಕದ ಭೋಗದನುವನೀಕ್ಷಿಸಬೇಕೆನುತ ಜನಿಸಿದ ನರರೂಪಿನೊಳಗೆಂಬೊಲು ತನ್ನ ಮನಕೆ ತೋರ್ಪುದೆ ಮೋಹನಾಂಗಿ (ಕಂಪವಿ. ೯-೦೩೦); ಬೇರೆ ಯಾವ ಮಾರ್ಗವಿದೆ ಮೋಹನಾಂಗಿ? (ಪಾಪುಣ್ಯ. ೨೬೦). [ಮೋಹನಾಂಗ + –ಇ$_2$]

**ಮೋಹನಾಸ್ತ್ರ** (ನಾ). ಪ್ರಜ್ಞೆ ತಪ್ಪಿಸುವ ಅಸ್ತ್ರ. [ಸಂ.]

**ಮೋಹನಿ** (ನಾ). ಒಂದು ಬಗೆಯ ಸಸ್ಯ: "ಮೋಹನೀ — ಚಿಬ್ಬಸಲೆ" (ಔಷಧಿ. ೦೩೦). [ಸಂ. ಮೋಹನೀ ?]

**ಮೋಹನಿದ್ರೆ** (ನಾ). ಕೃತಕವಾಗಿ ಉಂಟುಮಾಡುವ ನಿದ್ದೆ; ಮಾಯಾ ನಿದ್ರೆ: ಭಟರ್ ಕಾಪುಳಿದು ಮೋಹನಿದ್ರೆಗೆ ಸಂದರೆಂಬರ್! (ಶ್ರೀರಾಮಪ. ೩೨೩-೬೯). [ಸಂ. ಮೋಹನಿದ್ರಾ]

**ಮೋಹನೀಯ** (ಗು). ೧. ಭ್ರಮೆಗೊಳಿಸುವ; ಕಕ್ಕಾಬಿಕ್ಕಿಮಾಡುವ. (ನಾ) ೨. ಅಜ್ಞಾನ; ಮಾಯೆ: ಬಗೆಗಿಡಿಸೆ ಮೋಹನೀಯಂ ನಗಧರ ಶವಧಾರಿಯಾಗೆ ಷಣ್ಮಾಸಮಂದೇಂ ನೆಗಬ್ದುದೊ ಸಲೆ ಬಲದೇವನ ಪೆಗಲ ಪೆಣಂ ಕುಂದದೆಂಬ ನಾಣ್ನುಡಿ ಜಗದೊಳ್ (ಸಂರಾಪಶಾ. ೦೭-೩೩). ೩. [ಜೈನ] ಆತ್ಮನನ್ನು ಬಂಧಿಸುವ ಎಂಟು ಮೂಲಕರ್ಮಗಳಲ್ಲಿ ಒಂದು: ಮುಕ್ತಿಪ್ರತ್ಯೆಂಟುತೆಜದ ಮೋಹನೀಯವೆಂಬ ಕರ್ಮದ ಕೇಡಿನಿಂ ಅನಂತಸುಖಿಗಳಾದರ್ (ವಡ್ಡಾರಾ.೦೩೪-೨೩); ಪಂಚೇಂದ್ರಿಯಂಗಳ್ . . . ಮೂಲಪ್ರಕೃತಿಭೇದದಿಂದೆಂಟುತೆಱನಕ್ಕುಂ ಅವಾವುವೆನೆ ಜ್ಞಾನಾವರಣೀಯಂ ದರ್ಶನಾವರಣೀಯಂ ವೇದನೀಯಂ ಮೋಹನೀಯಂ ಆಯುಷ್ಯಂ ನಾಮಗೋತ್ರಮಂತರಾಯಮಂ (ಜಾಂತಿಪು. ೦೨-೦೦ ವ); ದರ್ಶನ ಮೋಹನೀಯಮುಮಂ ಚಾರಿತ್ರಮೋಹನೀಯಮುಮಂ ಎಂದು ಮೋಹನೀಯಂ ದ್ವಿವಿಧಮಕ್ಕುಂ (ಶಬ್ದಶಾ. ೭೯). [ಸಂ.]

**ಮೋಹನೀಯಕರ್ಮ** (ನಾ). = ಮೋಹನೀಯ ೩ : ಬಟಿಯಂ ಮೋಹನೀಯಕರ್ಮೋಪಶಮದೊಳ್ ವಿಶುದ್ಧ್ಯತಿಶಯವಿಶೇಷದಿನುಪಶಮ ಶ್ರೇಣ್ಯಾರೋಹಣಂಗೆಯ್ದು (ಆದಿಪು. ೬-೩೩ ವ) : ಅಂತತಿವ್ಯಾಮೋಹದಿಂ ಬಂದು ಸಕಲಲೋಕಾಧಿಪರಿಂ ಪರಿವೃತರಾಗಿರ್ದ ಸಕಲಭೂಷಣಕೇವಲಿಗಳ ಸಭೆಯನೆಯ್ದಲೊಡಂ ರಾಮನ ಮೋಹನೀಯಕರ್ಮಮುಪಶಮಕ್ಕೆ ಸಲ್ವು ದುಂ (ರಾಮಾಪು. ೧೬-೩೫ ವ) ; ಜೀವನ ಸಮ್ಯಕ್ತ್ವವನ್ನೂ ಚಾರಿತ್ರಗುಣ ವನ್ನೂ ಘಾತಿಸಿ ಜೀವನಿಗೆ ಆ ತತ್ತ್ವಗಳಲ್ಲಿ ಶ್ರದ್ಧೆಯನ್ನೂ ಲೋಭವನ್ನೂ ಉಂಟುಮಾಡುವುದು ಮೋಹನೀಯಕರ್ಮವು (ಕೈಪಥ. ೩).

[ ಸಂ. ಮೋಹನೀಯಕರ್ಮನ್ ]

**ಮೋಹನೆ** (ನಾ). ಮೋಹಕವಾಗಿರುವವಳು ; ಮರುಳುಗೊಳಿಸುವ ರೂಪವನ್ನು ಹೊಂದಿರುವವಳು ; ಸುಂದರಿ : ಬಾ ಬಾ ಮೋಹನೆ ಬೇಗ . . . ನಸುನಗುವ ಹುಸಿಮುಳಿವ ಬಿಸಮಂದದ ಸುಂದರಿ ನೀ ಬೇಗ ಬಾ (ಗಹೇಶ. ೩೩-೦). [ ಸಂ. ಮೋಹನಾ ]

**ಮೋಹಪರವಶ** (ನಾ). ವ್ಯಾಮೋಹವನ್ನು ಹೊಂದಿದವನು ; ಮರುಳಾದವನು : ಆತನು . . . ಈ ಹುಡುಗಿಯನ್ನು ಕಂಡು ಅವಳ ರೂಪಲಾವಣ್ಯಾದಿಗಳಿಗೆ ಆಶ್ಚರ್ಯಪಟ್ಟು ಮೋಹಪರವಶನಾದನು (ಕವಿಕ. ೯). [ಸಂ.]

**ಮೋಹಪಾಶ** (ನಾ). ಲೌಕಿಕ ವಿಷಯಗಳ ಬಂಧನ.– ಸೆಳೆತ; ಮಾಯಾಜಾಲ : ಅಪಗತದುರಿತಂ ತನ್ಮೋಹಪಾಶಮಂ ಪಱಿದ ತೆಱದೆ ತಲೆಯಂ ಪಱಿದಂ (ಶಾಂತಿಪು. ೯-೬೫) ; ದೇಹಸಂಬಂಧಿಗಳಾದವರ್ಕೈವರು ಮೋಹ ಪಾಶದಿ ಕಟ್ಟಿ ಬಗಿದಿಹರ್ಕೈ (ಪುರಂದ. ದಾ. ೨-೧೨-೧). [ಸಂ.]

**ಮೋಹಭಾವ** (ನಾ). ಪ್ರೀತಿಯ ಭಾವನೆ ; ಅಕ್ಕರೆಯ ಭಾವನೆ : ಎನ್ನ ಮೇಲಣ ಮೋಹಭಾವದೊಳೆನ್ನುವು ಸಲಹಲ್ಕೆ ಬಂದಿರೊ (ಬಸವು. ೦೮-೦೩) ; ಅವುಬ್ಬರಲ್ಲಿ ಪರಸ್ಪರ ಮೋಹಭಾವಗಳ ಐಕ್ಯತೆ ಒಡನೆ ಉಂಟಾಯಿತು (ವಾಗ್ದೇಬಿ. ೮೯). [ಸಂ.]

**ಮೋಹರ**$_1$ (ನಾ). ೧. ಸೈನ್ಯ; ದಂಡು; ಪಡೆ; ದಳ : "ಮೋಹರಮೆನೆ ನೃಪಸೈನ್ಯಂ" (ಕಾರಣ. ೩೦); ಅರಗಿಳಿವಿಂಡು ಪಾರುವದ ಮೋಹರವಾಱಿವಿಂಡು ಬಿಲ್ಲುಬೀರರ ಪಡೆ (ಕಬ್ಬಿಗಕಾ. ೨೨೦) ; ಕಲಿ ರಾಧೇಯನೀ ವಜ್ರಾಂಗಿಯಲ್ಲಾ ನಮ್ಮ ಮೋಹರಕೆ (ಕುಮಾವ್ಯಾ. ೧-೨೩) ; ಕರಡಿಯ ಮೋಹರವ ಜಾಂಬವರು ತೋಱಿದರ್ಕೈದು ನಿರ್ಬುದವ (ತೊರರಾ. ೪-೬-೨೨). ೨. ಯುದ್ಧ; ಕದನ : ರಕ್ಕಸನಾಥ ಬೈವುದ ಕೇಳಿ ನೀಲನು ನಡೆದ ಮೋಹರಕೆ (ಕೌರಾ. ೩೪-೦೨) ; ಅಳಿಯನೀ ಮೋಹರದೊಳಲ್ಲದೆ ಫಲುಗುಣನ ಮಗನ ವನು ಬಲುಗೈಯುಳುಹಬಾರದು (ಕುಮಾವ್ಯಾದ್ರೋ. ೪-೨೮). ೩. (ಕಾಳಗದ) ಕಣ : (ರಣ)ರಂಗ : ಕಲಿಗೆ ಕಾಳಗದ ಮೋಹರದಂತೆ ಭಕ್ತಿಯ ಛಲಿಗೆ ಮುಕ್ತಿಯ ಬೀಡಿನಂತೆ . . . ಕಂಗೊಳಿಸುವುದು ಗೌರನ ಕಾವ್ಯ (ಮೋಹಪು. ೩-೨). ೪. ಗುಂಪು; ಸಮೂಹ : "ಒಡ್ಡನೆ ಮೋಹರಂ" (ಕರ್ನಾಟ. ೧೮); ಮಂಜಿನ ಮೋಹರ ರವಿಯ ಕಿರಣದ ಕೆಡಿಸಲಾಪುದೆ (ಕನ್ನಡ.ಕ. ೪೩೬-೯೨೯); ಗಗನದ ಮುಗಿಲ ಮೋಹರವ ದಾಳಿಯಲಿಯಱಿಯಟ್ಟಿ ಸುಂಟರುಗಾಳಿ ಯುರವಣೆ ನಿಂದವೊಲು (ಕುಮಾವ್ಯಾದ್ರೋ. ೬-೬೦); ಮಂತ್ರದಂತಿಗಳೊಗ್ಗು ವಿಡಿದು ಬಂದವು . . . ಕಾರ್ಮುಗಿಲ ಮೋಹರದಂದದಿಂ (ಸೌಂದರ. ೦೮-೦೩). [ದೇ.॥ ತೆಲು. ಮೋಹರ]

**ಮೋಹರ**$_2$ 'ಮೊಹರು' ನೋ.

**ಮೋಹರ**$_3$ (ನಾ). [ಸಂಗೀತ] ಮದ್ದಳೆಯನ್ನು ಬಾರಿಸುವ ಒಂದು ಬಗೆಯ ಗತ್ತು : ಬೊಟ್ಟು ಮೋಹರ ಅರಿದೆಂಬಿವಂತದಿರಾ ಎಂಬ ಕೂಱು ತಪ್ಪದೆ ಶುದ್ಧಭಾರಿ ಠವಣೆಯೆಂಬ ಮದ್ದಳೆಗಳಂ ಬಾರಿಸುವ ಮದ್ದಳೆ ಕಾಱರಿಂ (ದಶಾವ. ೨-೧೦ ವ); ಪಿರಿದು ಬಾರಿಸಿ ತೋಱಿದರು ಮೋಹರ ಗಳನು ಮರ್ದಳೆಯವರು (ಕುಕವಾ. ೨-೬೫). [ ? ]

**ಮೋಹರಂಬಡೆ** (ಕ್ರಿ). ಗುಂಪುಗೂಡು ; ಹಿಂಡುಗಟ್ಟು : ಅಂತೊಯ್ಯನೆ ಮುಂದೆ ಮೋಹರಂಬಡೆದು ತಳರ್ವ ಪುಸಿವಡೆಯಲ್ಲಿ (ಕಬ್ಬಿಗಕಾ. ೨೦೨).

[ಮೋಹರ$_1$ + ಪಡೆ$_1$]

**ಮೋಹರಂಬೆಱು** (ಕ್ರಿ). = ಮೋಹರಂಬಡೆ : ಸುರವ್ಯೂಹಮಂಬರದಲ್ಲಿ ಹೂಮಳೆಗಳಂ ಹಿಡಿದು ಮೋಹರಂಬೆತ್ತು ನೋಡುತ್ತಿರಲು (ಹಹಕಾ. ೦೩-೦೩). [ಮೋಹರ$_1$ + ಪೆಱು$_1$]

**ಮೋಹರದೆಗೆ** (ಕ್ರಿ). ೧. ಸೈನ್ಯವನ್ನು ಒಡ್ಡು, — ಸಜ್ಜುಗೊಳಿಸು; ಯುದ್ಧಕ್ಕೆ ತೊಡಗು : ಧರ್ಮಜನೆಲ್ಲಿ ಮೋಹರದೆಗೆವನತ್ತಲೆ ರಥವ ಹರಿಸೆಂದ (ಕುಮಾವ್ಯಾದ್ರೋ. ೨-೩೦). ೨. ಗುಂಪುಗೂಡು; ಸಂದಣಿಸು: ಜಗದ ನಿಡುನಿದ್ರೆಯಲಿ ಮೋಹರದೆಗೆದ ಮುಗಿಲೋ . . . ಕೈಕಾಲ್ ಮೂಡಿತೋ ನಭಕೆ (ಕುಮಾವ್ಯಾದ್ರೋ. ೩-೯); ಜಗದ ವಿಲಯದ ಮುಗಿಲ ಮೋಹರದೆಗೆವ ವೊಲು ನಭವ್ಯದೆ ಶಾಖಾಮೃಗದ ಮಯಮಾಯ್ತು ಣಾಗ ಕೇಳುಬ್ಬರದ ಕಪಿಬಲವ (ತೊರರಾ. ೬-೬-೧೪). [ಮೋಹರ$_1$ + ತೆಗೆ$_1$]

**ಮೋಹರಮಲ್ಲ** (ನಾ). ಯುದ್ಧದಲ್ಲಿ ಶೂರನಾದವನು : ಕಲಿ : ಶಬ್ದ ಭಾರದ್ವಾಜನಿರ್ದಾನೆಪೊಳಲೊಡೆಯನೆಸೆವ ಮೋಹರಮಲ್ಲ ಕೃಷ್ಣಮನ್ಮಥ ಶೋಭೆಯಿಂದೆಮಗಳ ಲಲಿತ ಸೈನಿಕಮಲ್ಲ ಭೀಮವಿಜಯಾಸ್ಪದಂದಳೆದು . . . ಕಣ್ಗೆ ಮಂಗಳಮನಾಗಿಸಿದುದಾ ಗೋತ್ರಂ (ಶಂದಮಾ. ೨-೪೦).

[ಮೋಹರ$_1$ + ಮಲ್ಲ]

**ಮೋಹರಸ** (ನಾ). ೧. ಅನುರಾಗ ; ಪ್ರೀತಿ : ಕೌತುಕಮೇಂ ಪೆಂಡಿರೊಳಂ ಭೀತಿರಸಂ ಮೋಹರಸಮನೊತ್ತರಿಸುಗುಮೇ (ಜಗದ. ೩-೨೫). ೨. ಮದನ ಜಲ ; ಮದನದ್ರವ : ನಿಟ್ಟಿಸಿ ನೋಡಿದ ಪುರುಷಗೆ ಮೈ ಜುಮ್ಮುದಟ್ಟಿ ರೋಮಾಂಚನವೆಸಗಿ ಕಟ್ಟಿಱಕದೆ ಮೋಹರಸವುಬ್ಬಿ ನೆಱೆ ಪೊಱಮಟ್ಟು ಸೂಸುವುದಂಗದಿಂದ (ಕಂನವಿ. ೦೦-೦೪). [ಸಂ.]

**ಮೋಹರಿ**$_1$ 'ಮೌರಿ' ನೋ.

**ಮೋಹರಿ**$_2$ 'ಮೊಹರು' ನೋ.

**ಮೋಹರಿಸು, ಮೋಹಳಿಸು** (ಕ್ರಿ). ೧. ಮುತ್ತಿಗೆ ಹಾಕು ; ಧಾಳಿ ಮಾಡು : ಮೋಹರಿಸಿದುದಾದೀಶನ ಚತುರಂಗವಾಹಿನಿಯುತಿರೋಷದಲಿ (ತ್ರಿಶುಕಾಂ. ೦೮-೨೦೪) ; ತುಱುಗಿ ಗಂಧೋತ್ಕಟನ ನಿಜಮಂದಿರದ ದಳ ಮೋಹರಿಸೆ (ಜೀವಂತ. ೦೧-೪) ; ಸೈಂಧವ ಬಿಲುದುಡುಕೆ ಮೋಹರಿಸಿದರು ಭೂರಿಶ್ರವಾದಿಗಳು (ಕುಮಾವ್ಯಾದ್ರೋ. ೪-೦೯). ೨. ಎದುರಿಸು : ಪ್ರತಿ ಭಟಿಸು : ಇದುವೆ ನೀಂ ಮೋಹರಿಸಿ [ಪಾಠಾಂ. ಮೋಹಿಸಿ] ನಿಂದುದಕಿದು ಬಳಿಕೊಂದುತ್ತರ ಮಗುಳ್ದುದಕಿದು ನಿನಗೆ ಕೊಳ್ಳೆಂದು ಮೂದಲಿಸುತ ರಘುಜನೆಚ್ಚಂ (ಕುಮುರಾ. ೨-೫೫) ; ಶಕುನಿ ಮೋಹರಿಸಿದನು ಸಮಸಪ್ತಕರು ಬೇಱೊಡ್ಡಿದರು (ಕುಮಾವ್ಯಾಶ. ೨-೯). ೩. ಮುತ್ತು ; ಆವರಿಸು ; ಕವಿ : ಸತ್ಯಲೋಕದ ಧಾಮವನು ಮೋಹರಿಸಿ ಮುಚ್ಚಿತು ತಮಸಿನೊಡ್ಡವಣೆ (ಸಂಭಕ. ೪-೦೨) ; ಪರಿದು ಕಾರ್ಮುಗಿಲು ಚಂದ್ರಗೆ ಕವಿದಂತೆ ಮೋಹರಿಸುವುದೊಡನಂಧಕಾರ (ಶಶಿ. ೦೮-೩೦) ; ಬಗೆಬಗೆಯ ಮುಗುಳು ಗೊಂಚಲಿನ ಹೂಜಲ್ಲಿಗಳ ಕಣಗೊಟ್ಟು ಮನವ ಮೋಹರಿಸುತ್ತಿದೆ (ಪಕ್ಕ. ೪೩-೦೪). ೪. (ಸೈನ್ಯವು) ಸಜ್ಜಾಗು ; ಅಣಿಯಾಗು : ಕಾಲಾಳು ಮುಂಕೊಳಿಸಿ ಅರಸನನುಜರುಸಹಿತ ಕೃಷ್ಣನ ಬೆರಳ ಸನ್ನೆಯೊಳೈದೆ ಬಡೆ ಮೋಹರಿಸಿ ನಿಂದುದು (ಕುಮಾವ್ಯಾದ್ರೋ. ೪-೨೨) ; ಮೋಹರಿಸಿ ಕಳದೊಳಗೆ ನಿಲೆ ಕಱುಗಾಹಿಯೆಳೆಗೊರಳನು ಮುಱಿಯ ಬಿಸುಟಾ ಹಡೆದ ತಾಯ್ಗಾವೆ ಶೋಕವನೆಂದ ಚಾಣೂರ (ಕಾಳಿಂಗ. ೨೨-೩೦) ; ಸರಕಾರದ ಪಡೆಯವರೂ ಸತ್ಯಾಗ್ರಹಿಗಳೂ . . . ಎದುರಾಗಿ ಮೋಹರಿಸಿ ನಿಂತರು (ಕರಪೀ. ೦೮). ೫. ಯುದ್ಧಕ್ಕೆ ಸೈನ್ಯದ ವ್ಯೂಹವನ್ನು ರಚನೆಮಾಡು : ಸಾಹಸ ಪನಱಿವೆನಾಹವವನೊಡ್ಡುವೆ ತನಗೆ ಮೋಹರಿಪೆ[ಪಾಠಾಂ. ಸೆ] ಶಿವ [ಪಾಠಾಂ.

ಮೋಹರಿಸುವೆಸು] ಸದಾಚಾರ ವ್ಯೂಹದ ತನಗೆ (ದೀಕ್ಷಾಬೋ. ೨೦-೩೭೦) ; ತನ್ನ ಸಚಿವನೊಳು ಬಲವಂ ನೆರಪಿ ಮೋಹರಿಪ್ಪುದೆಂದು ಬೆಸನನು ಕೊಡಲು (ಸೌಂದಪು. ೬-೩೪). ೬. ಸಜ್ಜುಗೊಳಿಸು ; ಅಣಿಮಾಡು : ಸಿದ್ಧಪಡಿಸು : ತಂದು ಮಣಿಮಯಸಾರಿವಲಗೆಯನಂದು ಮೋಹರಿಸಿದರು ಜೂಜಿಂಗೆ (ಕುವ್ಯಾಸ. ೧೭-೯೪). ೭. ಗುಂಪುಗೂಡು ; ಸಂದಣಿಸು ; ಒಟ್ಟಾಗು : ತರಣಿ ಶಶಿ ರುದ್ರಾದಿಗಳು ಮೋಹರಿಸಿದರು ಮುಂಗುಡಿಯಲಿಂದ್ರನ (ಸಂಭಶ. ೩೭-೩೬) ; ಧರಣಿಪನ ಕೈಸನ್ನೆಯಲಿ ಮೋಹರಿಸಿ ನಡೆದುದು ಸೇನೆ (ತೊರರಾ. ೯-೩-೨) ; ಮೋಹರಿಸಿ ಬಂದು ಮುತ್ತಿಗೆಯನಿಕ್ಕಿಕೊಂಡಿರ್ಪೆಳವಿಸಿಲ್ಗೆಳಿಸಲು . . . ಪೊನ್ನ ಕೋಂಟೆಗಳ ಕಾಂತಿಗಳ್ಗೆದೆ ಮುಸುಕಿಕೊಂಡೆಸೆದಿರ್ದುವು (ಕೈಬಿಶಾ. ೧೭-೭) ; ಸಿಡಿಲ ಪಡೆಯಂತೆ ಮೋಹರಿಸಿ ಶರವರ್ಷಮಂ ಕಱೆವುತ್ತೆ ನಿಜಬಲಂಬೆರಸು ಕಡಂಗಿ ಕವಿಯಲೊಡನೆ (ರಾಜಶೇ. ೭-೦೦೦ ವ). ೮. ಹೆಚ್ಚಾಗು : ಅಧಿಕವಾಗು : ಜಿಷ್ಣೆ ನಲಿದಾಡೆ ಸುಖಂ ಸುಳಿದಾಡೆ ಲೀಲೆ ಮೋಹರಿಸೆ ಗಳಂ ಚಮತ್ಕರಿಸೆ . . . ಕೂಡಿದರ್ (ಗಿರಕ. ೩-೨೮); ಮೋಹನಂ ಮೋಹರಿಸೆ ಗಾಡಿ ಪರಿದಾಡೆ ಪೊಸ ದೇಶಿ ಸೂಸೆ . . . ಪಡೆದು ಕೃತಿಯಂ ಶಿವಾರ್ಪಿತವನೆಸಗುವ ನಿನ್ನ ಸೈಪಿಂಗೆ ಸಾಟಿಯುಂಟೇ (ಶದ್ಮರಾ. ೦-೩೦) ; ಮೋಹರಿಸಿದ ಮಮತೆಯೊಳೆಯ್ತರುತತಿ ಹಾಹಾಕ್ರಂದನಮಂ ಮಿಗೆ ಮಾಡುತ್ತ (ಜಯುಕಾ. ೯-೨೮). ೯. ಗುರುತಿಸು ; ಕಾಣಿಸು : ಶ್ರೀಹರಿಯಣುಗಿನಣುಗನತಿಮುದದಿಂ ತನ್ನೆಳವರೆಯಮೊಳು ಮೋಹರಿಸಿದ ಮೂರೇಪೆಯ ತೆಱನೆಸಲಾ ಹೆಣ್ಗಳ ರನ್ನೆಗೆ . . . ರಾಜಿಸಿದುವು ತಿವಳಿಗಳು (ಜಯುಕಾ. ೩-೩೫). ೧೦. ಸೇರು : ಜೊತೆಗೂಡು : ಏಕೆ ನಿಮಗೀ ಚಿಂತೆಯಿಂದೆರಡೌಕಿದವು ದುಷ್ಕಾರ್ಯಸಂಧಿ ವಿವೇಕನಿಕರದಲೊರೆದು ಮೋಹರಿಸೊಂದು ಬಾಹೆಯಲಿ (ಕುವ್ಯಾಸ. ೦೨-೭೦); ನಳಭೂವರನು ನಿಜಸತಿಸಹಿತ ಹೊಕ್ಕನು ನಿಷಧಪಟ್ಟಣವ ಮೊಱೆವ ಶಂಖ ಮೃದಂಗ ಭೇರಿಗಳುಬ್ಬಿ ಧಂಧಣಿರೆನಲು ಮೋಹರಿಸಲಾ ನಿಸ್ಸಾಳತತಿ ಘನವಾದ್ಯ ಘೋಷಿಸಲು (ವಳಕ. ೩-೭೩). ೧೧. ಒಟ್ಟುಗೂಡಿಸು; ಸೇರಿಸು: ಸರಸಿಜಾಯತದಂಡವನು ಮೋಹರಿಸಿ ಮುಂಚುವ ಪರಿಮಳವನಂದರಸಿ ಬೀಱುತ ಬಂದು ಹೊಕ್ಕಳು ರಾಜಮಂದಿರವ (ಕುವ್ಯಾವಿ.೦-೨೮). ೧೨. ತುಂಬಿಕೊಂಡಿರು ; ತುಂಬಿರು : ಮೋಹರಿಸಿ ಪೊದಟ್ಟ ಪೊಚ್ಚಪೊಸಜೇನ್ಗೊಡಸಂ ಪಿಟಿವಂದು ಸೋರ್ವ ಜೇಂಜರಿ . . . ದೊರೆವಡದೀ ಕುಮಾರ ಚಿಕದೇವನ ತಾಸದ ಪೋಡಶಾಂಶಮಂ (ಚಕಪ. ೯-೦೦೭). ಮೋಹಳಿಸು : ೧೧. ಲಳಿಯ ಲಹರಿಯ ಲಗ್ಗೆಗಳ ಮೋಹಳಿಸಿ ಬಬುರ್ಘೋಂಕಾರರವದಿಂದುಲಿವವನು ಕಲಿಕರ್ಣನು (ಕುವ್ಯಾವಿ. ೬-೩೭). P ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ.

[ಮೋಹರ$_1$ + —ಇಸು$_3$./ತೆಲು. ಮೋಹರಿಂಚು. ಮೊಹರಿಂಚು]

**ಮೋಹಲತೆ** (ನಾ). (ವಶೀಕರಣದ ಮದ್ದಿಗೆ ಬಳಸುವ) ಒಂದು ಬಗೆಯ ಬಳ್ಳಿ : ಮೋಹಲತೆಯುಂ ಧೂಮಕುಣಿಕೆಯುಂ ಗಿರಿಕರ್ಣಿಕೆಯುಂ ರುದಂತಿಯುಂ ಚಾರಿಕೆಯುಂ ಅಧೋಪುಷ್ಪಿ ಎಂದೀ ಸಪ್ತಸೀಗೆಬೀಜಮಂ . . . ಕೂಡಿ ತಿಲಕವನಿಡಲು ತ್ರೈಲೋಕ್ಯವಶಮಪ್ಪುದು (ಕಾಮಶಾ. ೨೬೨).

[ಸಂ. ಮೋಹಲತಾ]

**ಮೋಹವೆಚ್ಚು** (ಕ್ರಿ). ಪ್ರೀತಿಯು ಹೆಚ್ಚಾಗು; ಅನುರಾಗವು ಅಧಿಕವಾಗು: ಒಚ್ಚೇರೆಗ್ಗೆಯೊಳು ನೀರ ಮೊಗೆದು ಮೋಹವೆಚ್ಚಿ ರಂಗನ ಮೇಲಿಡಲು (ಕಂಸವ. ೨೪-೦೨೨). [ ಮೋಹ$_1$ + ಪೆಚ್ಚು$_{b1}$ (<ಪೆರ್ಚು$_1$) ]

**ಮೋಹವೆಣ್** (ನಾ). ೧. ಮರುಳುಗೊಳಿಸುವ ಹೆಣ್ಣು; ಆಕರ್ಷಿಸುವ ಹೆಂಗಸು. ೨. ಜಾರೆ ; ವೇಶ್ಯೆ.

**ಮೋಹವೆಂಗಳು** (ಬಹುವ): ಮುದದಿಂದ ರಾಜಿಸುತಿಹ ಮೋಹವೆಂಗಳ ಸದನಪಂಕ್ತಿಯ ಲೋವೆಯೊಳಗೆ ಮದನವಿಲಾಸವ ತೋರ್ಪ ಪುತ್ತಳಿಗೊಪ್ಪುದುಮತಿಚೆಲುವಿಕೆಯಿಂದ (ಕಂಸವ. ೭-೯೯). [ಮೋಹ$_1$ + ಪೆಣ್]

**ಮೋಹಶಾಸ್ತ್ರ** (ನಾ). ಅವಿದ್ಯೆಯನ್ನುಂಟುಮಾಡುವ ಶಾಸ್ತ್ರ ; ಅಜ್ಞಾನವನ್ನುಂಟುಮಾಡುವ ಶಾಸ್ತ್ರ: ಅವು ತಾಮಸಂಗಳುಂ ಮೋಹಶಾಸ್ತ್ರಂಗಳುಂ ಅಸಾಕ್ಷಿಕಂಗಳುಮಾಗಲಾಗಿ ಪ್ರಮಾಣಂಗಳಾಗಲರಿಯವು (ಶಾಭಾವಿ. ೯೯). [ಸಂ.]

**ಮೋಹಸಲೆ** 'ಮೊಹಸಲೆ'. ನೋ.

**ಮೋಹಳ** (ನಾ). ಕತ್ತಿಯ ಹಿಡಿ ; ಕಠಾರಿಯ ಹಿಡಿಕೆ : "ಪಾಳ ಪರಂಜುಪೆನಲು ಮೋಹಳಮುಕ್ಕು" (ಮಂಗರಾ. ೬೬-೩೭) : ಖಡ್ಗದ ಮೋಹಳ [ಪಾಠಾಂ. ರ]ಕೆ ಕೈದುಡುಕಿ . . . ತ್ರಿಪುರಾಂತಕಾ ಎನಲು (ಬಸಪು. ೨೬-೩೪); ಕಠಾರಿಯ ಮೋಹಳದ ಮೇಲಿಟ್ಟ ಗಲ್ಲದ . . . ಘನಶೋಕವಹ್ನಿಯ ಮೋಹುಗಾಡಿನ ಮನದ ಕೌರವನಿತ್ತನೋಲಗವ (ಕುವ್ಯಾಗದಾ. ೦-೦೨) ; ಹೊನ್ನ ಮೋಹಳದ ಕಠಾರಿ ಕತ್ತರಿಬೊಟ್ಟು ಚಿನ್ನದ ಕಯ್ಯಂಬು ಮೆಱೆಯೆ (ಕುರಾಸಾಂ. ೪೦-೯೭). [←ತೆಲು. ಮೋಹಣ]

**ಮೋಹಳಿಸು** 'ಮೋಹರಿಸು' ನೋ.

**ಮೋಹಾಂಧ** (ನಾ). ವ್ಯಾಮೋಹದಿಂದ ಕುರುಡಾದವನು ; ಮುಂದುಗಾಣದವನು: ಕಪಟಪ್ರಪಂಚಜಾಳಾವೃತನೆನಧಿಕಮೋಹಾಂಧನೆಂ (ಸುಕುಮಾ. ೩-೯೪); ಮಂತ್ರಿಪುತ್ರಮೋಹಾಂಧನಾಗಿ ಕುಬನಿಗರೆಯತೊಡಗಿದ (ಅಕ್ರಮ. ೬೦). [ಸಂ.]

**ಮೋಹಾತುರ** (ನಾ). ವ್ಯಾಮೋಹದಿಂದ ತವಕಿಸುವ ವ್ಯಕ್ತಿ: ಸುವಿವೇಕಮುಂಟೆ ಮೋಹಾತುರರೊಳ್ (ಮಲ್ಲಿಕಾ. ೩-೦೮೪). [ಸಂ.]

**ಮೋಹಾಪೋಹ** (ನಾ). [ಕಾವ್ಯಮೀ] ಅಪಹ್ನುತಿಅಲಂಕಾರದ ಒಂದು ಪ್ರಭೇದ ; P ಮೋಹಪರವಶತೆಯಿಂದಾಗಿ ವಸ್ತುವಿನಲ್ಲಿರುವ ಗುಣಗಳನ್ನು ಅಲ್ಲಗಳೆದು ಬೇರೆ ಗುಣಗಳನ್ನು ಆರೋಪಿಸಿ ವರ್ಣಿಸುವುದು : ಅಮೃತಮಯುಕಿರಣನೆಂಬುದುಮಮರೆದು ಶಿಶಿರಾಂಶುವೆಂಬುದುಂ ಶಶಿಗೆಂದುಂ ಸಮನಿಸಿ ವಿಷಕಿರಣನುಮನಲಮರೀಚಿಯುಮೆಂದೆನಲ್ಕೆ ಮೋಹಾಪೋಹಂ (ಕಾರಾ. ೩-೦೮೩). [ಸಂ.]

**ಮೋಹಾಲಸ್ಯ** (ನಾ). ಎಚ್ಚರ ತಪ್ಪುವುದರಿಂದುಂಟಾಗುವ ಜಡತೆ : ನಿದ್ರಾಲಸ್ಯ ಹೆಚ್ಚಾಗಿರುತ್ತದೆ. ಕೆಲವುವೇಳೆ ಮೋಹಾಲಸ್ಯವುಂಟಾಗುತ್ತದೆ (ಕಲಕೋ. ೭೫). [ಸಂ.]

**ಮೋಹಿ** (ಗು). ೧. ತಬ್ಬಿಬ್ಬುಗೊಳಿಸುವ ; ದಿಗ್ಭ್ರಮೆ ಹಿಡಿಸುವ. ೨. ಮರುಳುಗೊಳಿಸುವ. ೩. ಮೋಹಕವಾದ; ಆಕರ್ಷಕವಾದ; ಸುಂದರವಾದ : 'ಮೋಹಿವೆಣ್' ಪರಾ. (ನಾ). ೪. ಅಂದ ; ಮನೋಹರತೆ. ೫. ಮೋಹಕ್ಕೊಳಗಾದವನು ; ಮೋಹಪರವಶನಾದವನು : ಮೋಹಿಯಲ್ಲದನ ನೋಡದಿರು ಮೋಹವ ಬಲ್ಲವನೆಲ್ಲವ ಬಲ್ಲನೆಂದಾ ಪಾದಿಯೊಳಗಾಡುತಿಪರು (ಭರತ. ೯೭-೨೯). [ಸಂ. ಮೋಹಿನ್]

**ಮೋಹಿಂ** 'ಮೊಹಿಮ್ಮು' ನೋ.

**ಮೋಹಿಚಕ** (ನಾ). ಒಂದು ಬಗೆಯ ಸಸ್ಯ; ಕಿಂಶುಕ : "ಮೋಹಿಚಕ [ಪಾಠಾಂ. ಹೀಚಕ, ಹಿತಚಕ]ಮಾ ತ್ರಿಪತ್ರಕಂ ಕಿಂಶುಕಾಖ್ಯಂ" (ಮಂಗರಾ. ೩೭-೨೦). [ ? ]

**ಮೋಹಿತ** (ಗು). ೧. ತಬ್ಬಿಬ್ಬಾದ ; ಭ್ರಮೆಗೊಂಡ. ೨. ಮರುಳಾದ; ಆಕರ್ಷಣೆಗೊಂಡ. (ನಾ). ೩. ಮರುಳಾದವನು ; ಆಕರ್ಷಣೆಗೊಂಡವನು ; ಮೋಹಗೊಂಡವನು : ಆನು ಘಳಿಸಿದ ಒಮ್ಮನಕ್ಕೆ ಅಗಲದೆ ಮೋಹಿತನಾದ (ಬಸವ. ೯೦೪); ಅಂಗರಕ್ಷೆಯ ಮಾಡಿ ಮೋಹಿತನಲ್ಲ ಮಜಗಕೆ . . . ಪರತರವಸ್ತು ನೋಡೀತ (ಕುವ್ಯಾಅ. ೯-೭೦); ದಾರುವನದಲ್ಲಿ ಮೋಹಿನಿ ನಾರಾಯಣಿ ಸುಳಿಯಲೊಡಂ ಮೋಹಿತರಾದರ್ ಧೀರಯತಿರಾಜರ್ (ಹರಿಶ್ಚಂ. ೩-೨೭). [ಸಂ.]

**ಮೋಹಿನಿ** (ನಾ). ೧. ಮೋಹಕವಾದ ರೂಪವುಳ್ಳವಳು ; ಚೆಲುವೆ : ಮೋಹಿನಿಯರ ಮೋಹಪಾಶ ಹೊಂಬಣ್ಣದ ರಾಹುಗಳೆಸೆ ವೈರಿಶಶಿಗೆ ರೂಪಿಸಿ ಶೃಂಗಾರವೀರದೊಳಿಷ್ಟಾನುಬಾಹುಗಳೆಸೆದುವಾ ಸ್ವಪನ (ಶರತ. ೬-೩೬); ತನ್ನ ಮನಸ್ಸನ್ನು ಮರುಳುಮಾಡಿರುವ ಮೋಹಿನಿಯ ಕೈ ಹಿಡಿಯುವ ಹಾಗಿಲ್ಲ ! (ಜೂಹಿಮಾ. ೦೯೫); ನೀ ತಾಯಿಯೆನಲೊ ನೀ ಮಾಯಿಯೆನಲೊ ಮೋಹಿನಿಯ ಮೋಹನಾಂಗ ? (ಕೂರ್ಮಶಾ. ೩೭-೯). ೨. ಒಬ್ಬ ಅಪ್ಸರೆಯ ಹೆಸರು : ಧರೆಯ ನಾರೀಜನರ ಚೆಲ್ವಿಕೆಯ ತೆಗೆದು ನೆಱೆ ಸರಸಿಜಭವ ನಿರ್ಮಿಸಿದ ತರಳಾಕ್ಷಿ ಮೋಹಿನಿ ಯೆಂಬ ಚೆಲೆವೆಣ್ಣಿನ ಚರಣದುಂಗುಟಕೆಣೆಯಹಳೆ (ಕಂಸವ. ೧೧-೦೬). ೩. ಸಮುದ್ರಮಥನದ ನಂತರ, ಅಮೃತವನ್ನು ಹಂಚುವ ಕಾಲದಲ್ಲಿ ರಾಕ್ಷಸರನ್ನು ವಂಚಿಸಲು ವಿಷ್ಣುವು ಧರಿಸಿದ ಸ್ತ್ರೀರೂಪ : ಮೋಹಿನಿ . . . ೪ ಚಾಮುಂಡಿ ೫ ಯಿಂದ್ರಾಣೀ (ಎ೯. v (R), ತಿರುವ. ೨೬೬-೨; ೧೯ನೆಯ ಶತ). ೪. ಸುಂದರಸ್ತ್ರೀಯ ರೂಪವನ್ನು ಧರಿಸುವ ಒಂದು ದುಷ್ಟಶಕ್ತಿ; ಹೆಣ್ಣುಪಿಶಾಚಿ : ಹೊನ್ನೆಮರದಲ್ಲಿ ಜೊಬ್ಬರ್ಯ . . . ತೆಂಕಿನ ಪಾವಟಿಗೆಯ ಎಡದ ನೆಲ್ಲಿಮರದಲ್ಲಿ ಮೋಹಿನಿದೆವ್ವ . . . ಇವುಗಳೆಲ್ಲಾ ಕೊಳದ ಸುತ್ತಲಿನ ಮರಗಳಲ್ಲಿವೆ (ಕನ್ನಸ. ೨೭). ೫. ಆಕರ್ಷಿಸುವವಳು; ವಶೀಕರಣ ಮಾಡುವವಳು : ಈಗಿನ ಹುಡುಗಿಯರೇನು, ಮಾಯಾವಿನಿಯರು, ಮೋಹಿನಿಯರು (ಸುಬ್ಬಿಮ್ಮ. ೦೨). ೬. ಒಂದು ಬಗೆಯ ಯಕ್ಷಿಣಿ, ಇಂದ್ರಜಾಲ : ಮಣ್ಣಿನ ಮನೆಯ ಕಟ್ಟಿ ಮಾಯಾಮೋಹಿನಿಯೆಂಬ ಮಹೇಂದ್ರಜಾಲದೊಳಗಾಗಿ (ಮಹಾದೇ. ೩. ೦೬೩-೩೦೨). ೭. ಮೂರ್ಛೆಬರಿಸುವ ಒಂದು ವಿದ್ಯೆ : ಜೃಂಭಿನಿ ಸ್ತಂಭಿನಿ ಮೋಹಿನಿ ಸರ್ಷಪ ತಾಳೋದ್ಘಾಟಿನಿ ವಿದ್ಯಾಮಂತ್ರಚೂರ್ಣ ಯೋಗಘುಟಿಕಾಂಜನ ಮೆಂದಿವು ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳಾದಮಾನುಂ ಕುಶಲ ನಂತಪ್ಪ ಕಳ್ಳಂ (ವಡ್ಡಾರಾ. ೦೨೨-೦೬). ೮. ಒಂದು ಬಗೆಯ ಸಸ್ಯ : "ಮೋಹಿನೀ—ಮೂರುಸಿಲೆಯುಮ್ಮತ್ತ, ಎಲಚಿ, ಆಲದೆಲೆ" (೬ಶಂ. ೦೬೦). [ಸಂ. ಮೋಹಿನೀ]

**ಮೋಹಿನಿಆಟ್ಟಂ** (ನಾ). (ಕೇರಳದಲ್ಲಿ ಪ್ರಚಾರದಲ್ಲಿರುವ) ಒಂದು ಬಗೆಯ ನಾಟ್ಯಪ್ರಭೇದ : ಕಥಕ್ಕಳಿಯಲ್ಲದೆ, ಕೇರಳದಲ್ಲಿ ಓಟ್ಟಂ ತುಳ್ಳಾಳ್, ಮೋಹಿನಿಆಟ್ಟಂ ಮುಂತಾದ ನಾಟ್ಯಪ್ರಭೇದಗಳು ಇವೆ (ಭಾರತ. ೩೬೬) ; ಕಥಕಳಿಯ ಜೊತೆಗೆ ಕೇರಳದಲ್ಲಿ ಮೋಹಿನಿಆಟ್ಟಂ ಎಂಬ ಕಲೆಯೂ ಪ್ರಚಾರದಲ್ಲಿದೆ (ಅಭಾಷ್ಯ. ೦೬) ; ಮೋಹಿನಿಆಟ್ಟಂ ಕೂಡಾ ಕೊಂಚಮಟ್ಟಿಗೆ ಶಾಸ್ತ್ರೀಯನೃತ್ಯವೆನಿಸಿದ್ದು ಪೂರ್ಣ ಜಾನಪದನೃತ್ಯವಲ್ಲ (ಭಾರತಿ. ೦೨೯). ' ಕಥಕ್ಕಳಿ ' ಪರಾ. [← ಮಲ. ಮೋಹಿನೀಯಾಟ್ಟಮ್]

**ಮೋಹಿನೀಗಜ** (ನಾ). ಶ್ರೀಶೈಲದಲ್ಲಿರುವ ಒಂದು ಕಲ್ಲಿನ ಆನೆ ; P "ಶ್ರೀಶೈಲದ ಬಿಲ್ವವನಕ್ಕೆ ಸೇರಿದ ಕಲ್ಲಾನೆ. ಅದರ ಮೇಲೆ ಸಾಧಕನು ಹತ್ತಿದರೆ ಅದು ಎತ್ತರಕ್ಕೆ ಎದ್ದು ನೆಲಕ್ಕೆ ಕುಗ್ಗಿ ಸಾಧಕನು ಬೀಳುವ ಹಾಗೆ ಮೈಕೊಡವಿ ಮೊರಳಿ ಹಾರಿ ಚಕ್ರವಂತೆ ಗಿರ್ರನೆ ತಿರುಗಿ ಘೀಳಿಟ್ಟು ಬೆದರಿಸುತ್ತದೆ. ಇದಕ್ಕೆಲ್ಲ ಸಾಧಕನು ಹೆದರದಿದ್ದರೆ ಆಗ ಅದು ಮೆಚ್ಚಿ ಇಷ್ಟಸಿದ್ಧಿಯನ್ನು ಕೊಡುತ್ತದೆ" (ಸಿದ್ಧರಾ. ಟಿಪ್ಪಣಿ. ೦೬೬) : ಮೋಹಿನೀಗಜವನಡರುತ್ತಾ ಕುಮಾರಧಾರೆಯ ನಾನುತ . . . ನಡೆದು ಭಾಪು ಸಿದ್ಧಕುಲಪತಿಯೆಂದು ಭೈರವಂ ಕೈ ಮುಗಿದವನು (ಸಿದ್ಧರಾ. ೩-೮) ; ಮೋಹಿನೀಗಜವನಡರ್ದಿಳಿದು (ರೇವಣ. ೦೦೯-೨೨) ; ಅಲ್ಲಿಯುಜ್ಜ್ವಲವೆಸಿಪ ಕಲ್ಲಾನೆ ಮೋಹಿನೀಗಜವೆಂಬ ಪೆಸರಿಂದ ಮೆಸೆದಿರ್ಪುದದು . . . ಇಷ್ಟಸಿದ್ಧಿಯನೀವುದಾ ಮೋಹಿನೀಗಜಂ ಬಿಲ್ವವನದೆ (ಶಾಕೋಪ. ೩-೩೬). [ಸಂ.]

**ಮೋಹಿಮು** ' ಮೋಹಿಮ್ಮು ' ನೋ.

**ಮೋಹಿವೆಣ್, ಮೋಹಿವೆಣ್ಣು** (ನಾ). ೧. ಮೋಹಕವಾದ ರೂಪವುಳ್ಳವಳು ; ಚೆಲುವೆ : ಮೋಹ ರಾಗ ದ್ವೇಷ ಹಾಸ್ಯ . . . ಮೋಹಿವೆಣ್ಣಾಸೆಯಿಂತೀರೇಳ ಬಿಡಬೇಕು (ಶರತ. ೩೦-೮೦). ಮೋಹಿವೆಣ್ಣು : ೧. ಮುಡಿಯ ಕಟ್ಟುವರು ದಿವ್ಯಾಂಗಕಾಭರಣವ ತೊಡಿಸುವ ಮೋಹಿವೆಣ್ಣುಗಳು ಬಿಡದಾಗ ಪರಿಮಳವನು ತೀಂರುವ ಹೆಂಗಳೊಡನೈತಂದರರ್ತಿಯಲಿ (ಕಂಸವ. ೯-೭೯). ೨. ಮರುಳಾದವಳು ; ಮೋಹಕ್ಕೆ ಸಿಲುಕಿದವಳು : ಕಡುಕೂರ್ತ ನಲ್ಲರ . . . ಬಿಗಿಯಪ್ಪಿಕೊಳ್ಳದೆ ಬಿಡುವರೆ ಮೋಹಿವೆಣ್ಣುಗಳು (ಸುರಾಸಾಂ. ೩೨-೩).

ಮೋಹಿವೆಂಗಳು (ಬಹುವ) : ನಿಟ್ಟಿಪ ಮೋಹಿವೆಂಗಳ ದಿಟ್ಟಿ ಕವಿಗೆ ತೊಟ್ಟನೆ ತಾಕದಂದದಲಿ ಇಟ್ಟ ಕಸ್ತೂರಿರೇಖೆಯೊಲೆಸೆವನ್ನ ಬವರಿಯ ಸೃಷ್ಟೀಶ ನಾಲೆನಗುಸಿರೆ (ಕಂಸವ. ೨೫-೪೮). [ಮೋಹಿ + ಪೆಣ್]

**ಮೋಹಿವೆಣ್ಣು** ' ಮೋಹಿವೆಣ್ ' ನೋ.

**ಮೋಹಿಸು₁** (ಕ್ರಿ). ೧. ಮೋಹೆಯುವಂತೆ ಮಾಡು ; ಬಡಿಯುವಂತೆ ಮಾಡು ; ಅಪ್ಪಳಿಸುವಂತೆ ಮಾಡು : ಆತನ ನಿವಾಸದೊಳು ಬಿಟ್ಟವಂ ಕೈಯಿಕ್ಕಿ ಸೆಳೆದು ವಾರಾಸಿಗಡುಕುವ ಕರಿಗಳುಂಟವಂ ತಂದೀ ಕದಕ್ಕೆ ಮೋಹಿಪೆ ವೆಂದರು (ಸೋಮಶ. v-೩೩). ೨. ಒಂದರೊಡನೊಂದು ಬಡಿದಾಡು ; ತಾಕಲಾಡು : ಅಲಗಲಗು ಮೋಹಿಸಿದಲ್ಲದೆ ಕಲಿತನದ ಕಾಣಬಾರದು (ರಿಸವ. ೬೬೭). ೩. ಮೇಲೆಬೀಳು ; ಮೇಲೆ ಎರಗು : ಅಡಸಿ ಬಾಚಿದ ಶೂಲಿಗೆಯ ರಥಗತಣೆಯಲಿ ಕರಿಘಟೆಗೆ ಜೋದರು ಕಡಿದು ನೂಕಿದರಮಮ ತೇಜಿಯ ನಿಲಿಸಿ ಮೋಹಿಸಿದ (ಕುಮ್ಮಾರದ್ರೋ. ಶಂ. ೨೬೩-೨). ೪. ಅಡ್ಡಗಟ್ಟಿ ನಿಲ್ಲು ; ಪ್ರತಿಭಟಿಸು : ಆ ಹಿರಣ್ಯಕನಸಮದೈತ್ಯ ಕದಂಬದಲಿ ರೂಹಿಸಿದ ನರಕೇಸರಿಯ ರೌದ್ರಾಟೋಪದಂದದಲಿ ಮಸಗಿ ಮಾರ್ಬಲದಿದಿರಿನಲಿ ಮೋಹಿಸಿದನೈ (ತೊರವೆ. ೩-೬-೬). ೫. ತಿವಿ ; ಚುಚ್ಚು ; ಇರಿ : ಮಸೆದ ಕೂರಲಗು ಸಹಸ್ರ ಮೋಹಿಸುವಂತೆ ರಸಘುಟಿಕೆ ಯೊಂದೆ ಮೊನೆಮೊನೆಗೆ ಬಂದಾನುವಂತೆ (ಕನ್ನಡ. ಕ. ೬೦೩-೦೩೯೫); ಬಂದು ಸಾಷ್ಟಾಂಗಪ್ರಣಾಮದಿಂ ವಂದಿಸುತ್ತಿರೆ . . . ತನ್ನ ಕರವಾಳ ಮುಂದೆ ಕೊರಳಿಗೆ ಮೋಹಿಸಲು (ಬಸವ. ೨೬-೪೦); ಒಸರಿಸಿ ಕರವನವನಿಯೊಳ್ಪರ್ದಿ ಮಿಂಡೆಯುವನಾಸುರದಿ ಜಡಿದು ಹೆಡತಲೆಗೆ ಮೋಹಿಸುತ್ತಿಯಾ ಸುಭಟ ನಾರ್ದಾ ಸುಕುಮಾರಂಗೆ ಬಿನ್ನೈಸುತಿರ್ದನೇಂ ಬಣ್ಣಿಸುವೆನು (ಭಾವಶಂ. ೯-೨೨); ಪೇರುರಕೆ ಮೊನೆಗಣೆಗಳಂ ಮೋಹಿಸಿದನು (ಕೈವಲ್ಯಶಾ. ೦೨-೯೯). ೬. ಚುಚ್ಚಿಕೊಳ್ಳು ; ತಿವಿದುಕೊಳ್ಳು : ಈ ಶರೀರತ್ಯಾಗವೇ ಕೃತದೋಷ ಹರವೆನುತಗಿದು ಸುರಗಿಯನಾ ಸುವಿಂತ್ರಾಸೂನು ಮಿಗೆ ಮೋಹಿಸಿದ ನಾದರದಲಿ (ತೊರವೆ. ೩-೩-೨೩). ೭. ಇಡು ; ಇರಿಸು ; ಹೊಂದಿಸು : ಉರುತರ ರುದ್ರಾಕ್ಷಿಗೆ ಇನಿತು ಫಲಂ . . . ಕರ್ಣದೊಳಿರಿಸಲು ದಶಕೋಟಿ ಫಲಂ ಮೋಹಿಸೆ ಗ್ರೀವಕೆ ಶತಕೋಟಿಫಲಂ (ದೀಕ್ಷಾಬೋ. ೩೦-೨೨೬); ನಿಱಿ ಯುಡಿಗೆಯಲಿ ಮಲ್ಲಗುಂಟಿನ ಸೆಱಗ ಮೋಹಿಸಿ ಬೆರಳ ದರ್ಭೆಯ ಹಱಿದು ಬಿಸುಟನು . . . ಕಲಿದ್ರೋಣ (ಕುಮ್ಮಾರದ್ರೋ. ೯-೦೩). ೮. (ಆಲಂ) ನಾಶಮಾಡು ; ಹಾಳುಮಾಡು : ಬಲು ಮಗಧಯವನೇಶ್ವರರ ಬಲ ಜಲಧಿಯನು ಬಹಳಾಸ್ತ್ರವಡವಾನಲನ ಮುಖದಲಿ ಮೋಹಿಸಿದನು (ಜೈಮಿ. ೩-೨-೩೨). [ಮೋಪು₁ + — ಇಸು₁]

**ಮೋಹಿಸು₂** (ಕ್ರಿ). ೧. ಮೈಮರೆ; ಎಚ್ಚರ ತಪ್ಪು : ಜೋಲ್ದುಂ ನೆಱಲ್ದುಂ ಸಮಾಕುಲಿತರ್ ಮೋಹಿಸಿ ಮುಚ್ಛೆವೋಗೆ (ಶಾಂತಿಪು. ೭-೯೬) ; ಆ ಮಾತಂ ಕೇಳ್ದ ನಭಪ್ರವಜ್ರಾಭಿಘಾತಮಾದಂತೆ ಸಭಾಜನಮೆಲ್ಲಂ ಮೋಹಿಸೆ (ಆದಿಪು. ೦೦-೩೩) ; ಮೆಯ್ಯ್ ರೆಪ್ಪೋಪಿಸುವೊಡೆ ಬಾತೊಡೆ ಮಿಗೆ ಮೋಹಿಸುವೊಡೆ ರಾಸ್ನಾದಿತೋಯಮಱ ಕುಡೆ ತೀರ್ಗುಂ (ಲೋಕೋಪ. ೯-೨೩೯). ೨. ಎಚ್ಚರ ತಪ್ಪುವಂತೆ ಮಾಡು ; ಪ್ರಜ್ಞೆ ತಪ್ಪಿಸು : ಮುಸುಂಕಿದರೆ ಮಂತ್ರಾಸ್ತ್ರದಲಿ

ಮೋಹಿಸಿದ (ಕುಮ್ಯಾಕ. ೨೦-೩೪). ೩. ಮಾಯೆಗೆ ಸಿಲುಕು ; ಭ್ರಾಂತನಾಗು : ಬಗೆಯದೆ ತಡೆಯದೆ ಸುಟ್ಟಿಯದೆ ಮೋಹಿಸದೆ ಎಲ್ಲಾ ವಸ್ತುಗಳನೊಪ್ಪೆರ್ದಲಜುವ ಕಾಣ್ಬನಂತಜ್ಞಾನಮುಮನಂತದರ್ಶನಮುಮ ನೊಡೆಯರಾದರ್ (ವಡ್ಡಾರಾ. ೦೩೪-೨೦): ಬೇಡಿಂತೀ ವಿಷಾದಂ ನಿರಸ್ತವಿದೇಕಂ ಜೊಲಿದೇಕೆ ಮೋಹಿಸಿದಪ್ಪೆ ನೀಂ (ಆದಿಪು. ೦೬-೩೯); ಮನೋಹರ ಯವ್ವನಮದು ಮುಪ್ಪಿಂಗುರು ಕಾರಣಮೆಂದು ಬಲ್ಲೊಡಂ ಮೋಹಿಸುವರ್ (ಪಾರ್ಶ್ವ. ೩-೪೨). ೪. ಭ್ರಮೆಗೊಳಿಸು; ಭ್ರಾಂತಿಯನ್ನುಂಟುಮಾಡು: ಮೋಹಿಸಿತು ಘುಳುಘುಳುನಿನಾದ ವರಾಹನಿಸ್ವನದಂತೆ ಮುನಿಯೆಂಬೂಹೆ ಕೊಳ್ಳದೆ ಕೊಂಡು ಹರಿದುದು ಚಿತ್ರವಧುಪಥಕೆ (ತೊರಣಾ. ೨-೩-೧೧). ೫. ಪ್ರೀತಿಸು ; ಒಲುಮೆಯನ್ನು ತೋರು : ಮೋಹಿಸಿ ಮುದ್ದಿಸಿ ಮರುಳಾದೆನವ್ವ (ಮಹಾದೇ. ೭. ೯೩-೯೯); ನೀ ಮೋಹಿಸಿದೆ ನಿನ್ನಲ್ಲಿ ತಪ್ಪಿಲ್ಲ ಕೇಳಬಲೆ (ಕಂಸವ. ೯-೦೩೪); ಇನಿಯನ ಮೊಗವ ನೋಡದೆ ಮುನ್ನ ಮೋಹಿಸಿ ಮನಗರಗುವಳು (ಹದಿಬ. ೦-೩೩). ೬. ಇಷ್ಟಪಡು; ಬಯಸು: ವಿಷವ ಮೋಹಿಸುವಂತೆ ಬಡುವುದೀತಂಗೆ (ಕೃಷ್ಣಾ. ೩೦-೨೬). ೭. ಆಕರ್ಷಿಸು ; ಮೋಹಗೊಳಿಸು ; ಮರುಳುಮಾಡು : ಶುಚಿಯೀ ನಿರೀಕ್ಷಿಸಿದವರ್ನ್ನಿರ್ಜ್ಜಟಿಗಳ್ ಚೆಲ್ವನೇ ಹರನು ಮೋಹಿಸಲೆಂತುಮಪ್ಪರ್ನ ಧಿಕಂ ಶ್ರೀವಿಷ್ಣುಭೂಪಾಳಕಂ (ಎಕ. V, ಹಾಸನ. ೩೩-೦೩ : 1170) : ಬಗೆ ಬಗೆ ಆಟಗಳಿಲ್ಲಿ ಕಲಿತೆಯ್ಯ ಜಗವ ಮೋಹಿಪನೆ (ಪುರಂದ. ೦-೯೬ ಪಲ್ಲವಿ); ಪುಷ್ಪಾಂಜಲಿಗೆವರ್ದು ಮೋಹಿಸಿ ನಿಂದು . . . ನರ್ತನಮಂ ಬಿತ್ತರಿಪ ರಂಭಾದಿ ದಿವ್ಯನರ್ತಕಿಯರಿಂ (ಶಬಶಂ. ೧-೬೯ ವ). ೮. ಆಕರ್ಷಿತನಾಗು ; ಮರುಳಾಗು ; ಮನಸೋಲು : ಮುಂದೆ ಮೋಹಿಸಿ ನೆರೆದ ಭಕ್ತರ ಸಂದಣಿಗಳಾಘೆ ವಿನಲು (ಶ್ರೀಶೂರೀ. ೨೩-೬೦) ; ಮಾತನಜಿಯದ ಬಾಲ ನಿಮ್ಮನು ಕಂಡು ಸೋತು ಮೋಹಿಸಬಲ್ಲನೆ (ಪುರಂದ. ೩-೦೯೩-೨). ೯. ಕ್ರಗೊಳಿಸು : ರಂಜಿಸು ; ಶೋಭಿಸು : ಪೂರ್ಕ್ಕುಳ ಗಂಟಿಯ ಮೋಹಿಸುವ ಮೊಗವಡವ . . . ಚಾರುತರಭೂಷಣಂ ಭೀಷಣಮಾಗೆ (೧೦ಕ. ೬-೩೩ ವ); ಕಾಮಂ ಕಿಜುಸೂಜಿಗೆ ಸೇರಿಸಿದ ಪೊಸ ಮುತ್ತುಗಳೋ ಎಂಬಂದದೊಳಾ ಅಸಿಯಳ ಮೆಯ್ಯೊಗ್ಗದಲ ಮೊದಲೊಳ್ಮೋಹಿಸಿದುವು ಸಣ್ಣ ಬೆಮರ ಬಿಂದುಗಳರಮುಗನಂ ಕಾಣಂತವೆ (ಜಿತಾ. ೪-೦೬); ಹೊಂಬಣ್ಣ ಮೈಗೆ ಮೋಹಿಸುವ ಕಾಗಿನ ದಟ್ಟಿ . . . ಮುಂಜಾಯ ಕರ್ಪೂರ ವೀಳೆಯದಿಂದ ಕಣ್ಗಂಬಾದನಾ ಗಾಡಿಕಾಟಿ (ಶರತ. ೦-೩೩).

[ಮೋಹ₁ + — ಇಸು₃]

**ಮೋಹೋಪಮ್** ' ಮೊಹಿಮ್ಮು ' ನೋ.

**ಮೋಹು₁** (ಕ್ರಿ). ೧. ಗುರಿಯಿಡು ; ಈಡನ್ನು ಇಡು : ಖಡ್ಗವ ಸೆಳೆದು ಜಡಿದು ನೋಡಿ ಹೆಡತಲೆಗೆ ಮೋಹಿ ಕಯ್ಯೆತ್ತಿ ಕಂಧರ ಹಜಿಯಲನುವಾದೆನು (ಹಕೀಅ. ೦೩-೦೨); ಹೆಡತಲೆಗೆ ಮೋಹಿದ ಕೃತಾಂತನ ಖಡುಗವನು ಕಂಗಾಣ ದೇತಕೆ ... ಬಜಿದೆ ಕೆಡುವರಜ್ಞಾನದಲಿ (ಚಿಕಾಗ. ೨-೦-೬). ೨. (ತಲೆಯಿಂದ ತಲೆಯನ್ನು) ತಾಟಿಸು ; ಡಿಕ್ಕಿ ಹೊಡೆ : ಎನ್ನ ತಲೆಯಲಿ ತನ್ನ ತಲೆ ಮೋಹಿ ನಸುನಗುವನು (ಬಸಪು. ೪೭-೩೦). ೩. ಮುಷ್ಟಿಯಿಂದ ಹೊಡೆ; ಗುದ್ದು : ಮೊಗಕೆ ಮೋಹುತಲೆದೆಯಲೂಜುವ ವಿಗಡಬಲದಲಿ ಮಸಗಿ ಸೂಳಗರಿರದೆ ಕಾದಿದರು (ತಿಮ್ಮಅ. ೬-೪೮). ೪. ಎರಗು ; ಮೇಲೆ ಬೀಳು : ಕನಲಿದಡೆ ಕಲ್ಪಾಂತರುದ್ರನ ಮೊನೆಗೆ ಮೋಹುವ ಮೋಹಿ ದೇತಕನನು ನಿತಾಂತಭುಜಪ್ರತಾಪದಲಸುವನಸಬಡಿವ ಘನಪರಾಕ್ರಮ ಚಕ್ರಿಗಳ . . . ತೋಜುವರು (ತೊರಣಾ. ೪-೬-೦೭); ಒಂದು ಕಡೆಯೊಳಿಭತತಿ ಮೋಹಿ ಒಂದು ದಿಕ್ಕಿನೊಳತಿರಥರೊತ್ತಿ ಸಾಹಸದಿಂದವನಿದಿರಾಗಿ ಕವಿದರು (ತ್ರಿಶುತ. ೦೮-೩೪); ಸಂದಣಿಸಿ ನಾಯಕರ ದಳ ನಡೆಯೆ . . . ದಂತಿಗಳ ವೃಂದಗಳು ಮೋಹಿದುವು (ತುರಂಗ. ೩೨-೨). ೫. ಚುಚ್ಚು ; ತಿವಿ : ರಜನಿಯೆಂಬ ಮದೋತ್ಕಟದ ದಿಗ್ಗಜದ ಕುಂಭಸ್ಥಳಕೆ ಮೋಹಿದ ಪಿಜಿತ ಬಲನಂಕುಶದ ತಲೆಮಾಣಿಕವಿದೆಂಬಂತೆ ಗಜಗಲಿಸಿತಿನಬಿಂಬ (ತೊರಣಾ. ೦-೦೪-೨). ೬. ಚುಚ್ಚಿಕೊಳ್ಳು ; ನಾಟಿಕೊಳ್ಳು : ಬೆನ್ನಲಿ ಮೋಹಿದಲಗಿನ ಹೇರುರದ ಕಂಪನದ ಕಂಗಜಿಯ . . . ಹಾಹೆಯವೊಲೆಸೆದಿರ್ದನಾಹವ ರಂಗಮಧ್ಯದಲಿ (ತೊರಣಾ. ೪-೪-೩೨). ೭. (ಬಾಗಿಲು ಮುಂತಾದುವನ್ನು) ರಭಸದಿಂದ ಮುಚ್ಚು : ಬಾಗಿಲ ಕದವನುಜಿ ಮೋಹಿ ಬೀಯಗವಿಕ್ಕಿ ಅನಿಬರು ಗಹಗಹಿಸಿ ನಗುತ (ಬಸಪು. ೪೩-೪೬). ೮. ಮೃದುವಾಗಿ ಒತ್ತು,— ಅದುಮು : ವೈದ್ಯನು ತನ್ನ ಎಡದ ಕೈಯಲ್ಲಿ ರೋಗಿಯ ಬಲದ ಕೈಯ ಹೆಬ್ಬೆಟ್ಟಿನ ಮೂಲದಲ್ಲಿ ಮೂರು ಬೆರಳನ್ನೂ ಅಂಕುಶಾಕಾರವಾಗಿ ಒತ್ತಿ ಹಿಡಿದು ಆ ಮೂರು ಬೆರಳ ತುದಿಗಳಿಂದ ಮೋಹಿ ನೋಡಲಾಗಿ ಸಣ್ಣನಾಗಿ ಆಡುವ ನಾಡಿಯು . . . ಮನಸ್ಸಿಗೆ ತಿಳಿವುದು (ಸಕವೈ. ೦೧). ೯. ಜೋಡಿಸು ; ಹೂಡು : ಶಿರದೊಳಾಂತರು ಮೊಚ್ಚೆಯವನು . . . ಸುರಗಿಗಳನೀಡಾಡಿ ತಿರುಹಿದರೊರೆಗಳನು ಬತ್ತಳಿಕೆಯನು ಬಿಲುದಿರುವಿನಲಿ ಮೋಹಿದರು (ಕುಮ್ಯಾದ್ರೋ. ೮-೪೬). ೧೦. ವ್ಯೂಹವನ್ನು ರಚಿಸು : ವ್ಯೂಹರಚನೆ ಮಾಡು : ಗರುಡನಾಕಾರದಲಿ ಬಲವನು ಸರಿಸ ಮಿಗೆ ಮೋಹಿದನು (ಕುಮ್ಯಾದ್ರೋ. ೨-೨೦). ೧೧. ಇಡು ; ಇರಿಸು : ಈ ಹರಣವಿನ್ನೇಕೆನುತ ಕಾಳಾಹಿಯಾ ಬಾಯೊಳಗೆ ಕೈಯನು ಮೋಹಿ ವಿಷಮುಷ್ಟಿಗದಿನ್ನುಳಿವಳು ತನ್ನ ಕಾರೊಡಲ (ಸಾಳ್ವಭಾ. ೩-೩೬). ೧೨. ಬಳಿ ; ಲೇಪಿಸು : ಬಾಲಕರಲೇ ಖಡ್ಗಧಾರೆಯ ಮೇಲೆ ಮೋಹಿದ ಮಧುವ ಸವಿಯಲಿ ನಾಲಗೆಯಲಿವರೊಲ್ಲರೆಂದನು ನಗುತ ಕಲಿದ್ರೋಣ (ಕುಮ್ಯಾದ್ರೋ. ೦೮-೩೨). ೧೩. ಒಡ್ಡು ; ಚಾಚು ; ನೀಡು : ಬೀದಿಗಳೊಳಗೆ ಬರೆಬರೆ ಮುಂದೆ ಮೋಹಿದ ತಳಿಗೆ ದಂಬುಲ ವೀರಸೇಸೆಯ . . . ಮನ್ನಿಸಿಕೊಳುತ ಪಾಳೆಯದಿಂದ ಹೊಜಮಟ (ಕುಮ್ಯಾಕ. ೦೯-೦೪). ೧೪. (ಗೌರವಸೂಚಕವಾಗಿ) ಬೀಸು; ಗಾಳಿಹಾಕು : ಸೀಗುರಿ ಮೊಗವ ಮೋಹಿಪವು . . . ಚೌರಿಗಳ ಡೊಂಕಣಿ ತುಜುಗಿದವು ಮೌಳಿಗಳ ಮಸ್ತಕದವರು ನೆಲನುಗ್ಗಡಿಸಲೈತಂದ (ಕುಮ್ಯಾದ್ರೋ. ೮-೩೩). ೧೫. ಆವರಿಸು ; ವ್ಯಾಪಿಸು : ಚಡ್ಡಣೆಯ ಚಪಳಕ್ರೋಧಶಿಖಿ ಮೋಹಿದುದು ಮೋಜೆಯಲಿ (ಕುಮ್ಯಾಕ. ೨೦-೯). 'ಮೋದು₁' ಪರಾ.

**ಮೋಹು₂** (ಕ್ರಿ). ೧. ಸಿಲುಕು ; ಒಳಗಾಗು : ಹಾಹ ಮಾನಿನಿಯೆನುತ ಭೀತಿಗೆ ಮೋಹಿ ಮೌಳಿಯನಣೆದು ಗೇಹದ ದೇಹಳಿಯಲಪ್ಪಳಿಸಿ ಬಿದ್ದನು ರಾಮ ಮೂರ್ಜೆಯಲಿ (ತೊರಣಾ. ೩-೧೧-೦೮). ೨. ಒಲಿ ; ಅನುಗ್ರಹಿಸು: ಬೇಹ ವರವನು ಬೇಡಿಕೊಳ್ಳೆನಲೆಜಗಿ ಕೈಮುಗಿದು ದೇಹಿಯೆಂದೆನು ನಾಗಪಾಶವ ಮೋಹಿ ಕೊಡು ಕೋದಂಡ ಕವಚವ ದ್ರೋಹಿಕಪಿಗಳ ಪಡೆಯ ಗೆಲಲಿನ್ನುಳಿದವರ ಬೇಡ (ಕೌಶಿಕಾ. ೦೯-೩೮). [< ಮೋಹ₁ ?]

**ಮೋಹೋಪಮಿತ** (ನಾ). [ಕಾವ್ಯಮಿ] ಉಪಮಾಲಂಕಾರದ ಒಂದು ಪ್ರಭೇದ ; P ಎರಡು ವಸ್ತುಗಳಲ್ಲಿರುವ ಹೋಲಿಕೆಯು ಒಂದು ಮತ್ತೊಂದೆಯೆ ಎಂಬ ಭ್ರಮೆಯನ್ನು ಉಂಟುಮಾಡುತ್ತದೆ ಎಂದು ವರ್ಣಿಸುವುದು : ಕಮಳವಿಮೋಹದಿನೀ ನಿನ್ನ ಮೊಗಕ್ಕೆಜಗುವುದು ತ್ರೊಜಿವುದಾ ಸರಸಿಜಮಂ ಭ್ರಮರಂ ವದನಮಿದಲ್ತೆಂದು ಮೋಹದಿಂದೆಂಬುದಿದುವೆ ಮೋಹೋಪಮಿತಂ (ಕವಿರಾ. ೩-೩೯). [ಸಂ.]

**ಮೋಳ₁** ' ಮೂಳ₁ ' ನೋ.

**ಮೋಳ₂** (ನಾ). (?) : ಅರಮನೆಯರ [ಮೊತ್ತವನೂ] ತಪ್ಪದೆ ತೆಱುವೆಉ ಅರಮನೆಇಂದ ಬಾಣಧಾನ್ಯ ಯೆತ್ತು ತುಪ್ಪ ಸಬರ ಮಾಟ್ಟದಳ ಮೋಳ ಮುಂತಾದ ಮೆಚ್ಚ ವಿರಾಡವನು ಕುಳ ಸರದಿಯಲಿ ತೆಱುವೆಉ (ಸೌಇಇ. IX-ii. ೪೩೩-೩೦ : 1408). [ ? ]

**ಮೋಳಬೆಕ್ಕು** ' ಮೂಳಬೆಕ್ಕು ' ನೋ.

**ಮೋಳಿಗೆ** (ನಾ). ೧. ಸೌದೆಯ ಕಟ್ಟು : ಕಟ್ಟಿಗೆಯ ಹೊರೆ : ಅಷ್ಟಮದ ವೆಂಬ ಬಳ್ಳಿಯ ಸೀಳ ಏಳು ಕಟ್ಟಿನ ಮೋಳಿಗೆಯನೆ ಹೊತ್ತು ನಡೆದನಯ್ಯಾ (ಶಪ್ನವ. ೪. ೦೦೯-೨೬೬) : ತಾಳಕಾಯ ಮೋಳಿಗೆಯೊಂದದ ಮುರುಡ ನಷ್ಟವಕ್ರಂ (ಯಕೋತ. ೨-೪೦) ; ಮಾರಯ್ಯ ಮನೆಗೆ ಬಂದು ಮೋಳಿಗೆ ಯನ್ನು ಬಾಗಿಲ ಮುಂದಿಳುಹಿದ (ಮೋಳವಿಚ. ೭೦ ಶ್ರಸ್ತಾವನೆ). ೨. ಕಟ್ಟು ; ಹೊರೆ : ಪೂಗೊಂಚಲಂ ಮುಱಿದು ಮೋಳಿಗೆಗಳಂ ಬಿಗಿದು ತುಱುಗಿ ಕೇದಗೆಪೂವಸವಱಿ ನಡುವಂ ಬಿಗಿದು . . . ಬಂದರತಿವೇಗದಿಂ (೦೫ರಾವ. ೦೦-೧೦) ; ಹಸಿಯ ಮುತ್ತುಗಳ ಮೂಡೆ ಮೋಳಿಗೆಯ ದಂತಂ ಕಯ್ಯ ಮೊಲ . . . ಹೆಬ್ಬುಲಿಯ ಬಂಡಿಗಳನೇಱಿದ ಕೋಣವೆರಸಿ ತಿರುಗಿದ ಬೇಡರಂ ಕಂಡು ಬೆಱಗಾದನು (ಸೋಮಶ. ೩-೦೮).

**ಮೋಳಿಗೆಯ ಕಾಯಕ** = ಕಟ್ಟಿಗೆಯ ಹೊರೆಗಳನ್ನು ಮಾರುವ ವೃತ್ತಿ ; ಸೌದೆಯ ಹೊರೆಯನ್ನು ಮಾರುವ ಕಾಯಕ : ಸತಿಪತಿ ಗಳೀರ್ವರು ಕಲ್ಯಾಣಕ್ಕೆ ಬಂದು ಮೋಳಿಗೆಯ ಕಾಯಕವಂ ಮಾಡಿಕೊಂಡು ಜಂಗಮಾರ್ಚನೆಯ ಮಾಡುತ್ತಿರೆ (ಕೂಸ್ಕಸಂ. ೨೩೩-೧೨).

[< ಸಂ. ಮೌಲಿಕಾ./ಮರಾ. ಮೋಳೀ = ಕಟ್ಟಿಗೆಯ ಹೊರೆ ; ಮೋಳವಿಕ್ಯಾ, ಮೋಳಕ್ಯಾ = ಕಟ್ಟಿಗೆ ಮಾರುವವನು]

**ಮೋಳಿಡು** (ಕ್ರಿ). "ಉದ್ದಕ್ಕೆ ಒಂದೇ ಸಮನೆ ಕೂಗು" (ಮಂಕುಳ. ೪೦೮) : ಕತ್ತಲೆಯೊಳೇನನೋ ಕಂಡು ಬೆದರಿದ ನಾಯಿ . . . ಕತ್ತೆತ್ತಿ ಮೋಳಿಡುತ ಬೊಗಳಿ ಹಾರಾಡುವುದು (ಮಂಕುಳ. ೪೮೪). 'ಊಳಿಡು' ಪರಾ. [ ? + ಇಡು$_1$]

**ಮೋಳೆ$_1$** (ನಾ). ೧. ಬತ್ತದ ಗದ್ದೆಯ ಬದುವಿನಲ್ಲಿ ಅಥವಾ ಕೆರೆಯ ಒಡ್ಡುಗಳಲ್ಲಿ (ಏಡಿ ಮುಂತಾದುವುಗಳು) ಮಾಡುವ ತೂತು,—ರಂಧ್ರ,—ಸೀಳು ; "ಬತ್ತದ ಗದ್ದೆಯಲ್ಲಿಯ ನೀರಿನ ಒಡಕು" (ಜಾನಕೋ. ೩೮) : ಮೋಳೆಯಿಂ ಕೆರೆ ಕೆಡುಗು ಆಳು ಇಲ್ಲದನ ಹೊಲ ಕೆಡುಗು (ಸರ್ವಜ್ಞ. ೦೯೩೩) ; ಕೆರೆಯು ತುಂಬುತ್ತದೆ ನೀರು ನಿಲ್ಲುವುದಿಲ್ಲ, ಮೋಳೆಯು ಗೊತ್ತಾಗುವುದಿಲ್ಲ (ಹುಬ್ಬಿಹ. ೦೮೮). ೨. ಹಳ್ಳ : ಎರಸುಂ ಮುತ್ತುಮೊಂದಿವಲ್ಲಿ ಪಡುವಲ್ ಮೂಗಯ್ಕಿರಲ್ ತೋಡಲೊಪ್ಪುರುಷಂ ಪೋಪುದು ಮೋಳೆಯಕ್ಕುಂ (ಚಿಕ್ಕಿಷು. ೦೦-೭). [ದೇ.॥ ತಮಿ. ಮೋೞೈ]

**ಮೋಳೆ$_2$** 'ಮಾಳ$_2$' ನೋ.

**ಮೋಳೆಯೋಗು** (ಕ್ರಿ). ತೂತಾಗು ; ರಂಧ್ರವಾಗು : ಮೋಳೆಯೋಗುತ್ತಿರ್ದೊಡೇರಿ ಬಿರಿದಿರ್ದೊಡನುಕೂಲಬದ್ದೋಪಲಂಗಳ್ ಸಡಿಲ್ದಿರ್ದೊಡೆ. . . ಅಂಭೋವಾಟಮಾ ಪ್ರಸರಮುಮುದಕಸೂತ್ರಕ್ಕೆ ಹರಿಯಾದೊಡೆ (ಶಬ್ದರಾ. ೬-೪೦). [ಮೋಳೆ$_1$ + ಪೋಗು$_1$ (< ಪೋ$_1$)]

**ಮೋಱೆ**, ಮೋರೆ (ನಾ). ೧. ಮುಖ ; ಆನನ : "ವದನಂ ಮುಖಂ . . . ಆಸ್ಯಂ ಮೋಱೆ" (ಮಂಗರಾ. ೯೩-೮); ಕೊರಲಂ ಕುಸಿಯುತ್ತುಮುತ್ತರಿಸಿದ ಕುದುರೆಯಂತೆ ಮೋಱೆಯುಂ ನೆಗಪುತ್ತುಂ (ಧರ್ಮಾಮೃ. ೩-೦೩೬) ; ಹಸ್ತಿನಪುರಿಗೆ ಧಾಳಿಯನಿಡುವೆನವರರ ಮೋಱೆಗಳ ತಿವಿದು (ಕುಮಾವ್ಯಾ. ೦-೦೩). **ಮೋರೆ** : ೧. ಮಹಿಳೆಯ ಸುತ್ತರೆಂದು ನಂಬುವನಾ ಮೋರೆಯನುಗುಳೆೀನ (ಕರಾವ. ೦೪-೬೦೪); ನರಿಯ ಮೋರೆಯ ನೋಡಿ ಪರಿತೋಷದಲಿ ನಡೆಯುತಿರೆ (ಸುರಾಮ. ೨-೦೩) : ತೆಂಗಿನಕಾಯ ತಿಳಿನೀರ ತಕೊಂಡು ಬಂಗಾರಮೋರೆ ತೊಳೆದೇನು (ಜಾಪಗೀ. ೨೦೪). ೨. ಸಮ್ಮುಖ; ಮುಂಭಾಗ ; ಇದಿರು : ಕೋತಿಯ ಮೋರೆಯಲಿ ನಿಲಲಂಜಿ ಮೋಸದಿ ಕೊಂದ ಭಟನೆಂದ (ಕೋಗಯು. ೨೨-೩೬).

**ಮೋರೆಗೆ ಮಂಗಳಾರತಿಯಾಗು** = ಮುಖಕ್ಕೆ ಮಂಗಳಾರತಿಯಾಗು; ಅವಮಾನವಾಗು; ಮುಖಭಂಗವಾಗು : ಹೀಗೆ ಮೋರೆಗೆ ಮಂಗಳಾರತಿಯಾಗಿ ಹಿಂದಿರುಗಿದ ತನ್ನ ಪರಿವಾರವನ್ನು ಕಂಡು (ಕೆಂಪಹು. ೧೨೩).

**ಮೋರೆ ತಪ್ಪಿಸು** = ಮುಖ ತಪ್ಪಿಸು; ಮರೆಯಾಗು : ಅವರ ಮೋರೆ ತಪ್ಪಿಸಬೇಕೆಂದು ಮೌನವ್ರತವು ಚಡಪಡಿಸತೊಡಗಿತು (ಕವಕ. ೦೦೨).

**ಮೋರೆ ಮಾರುದ್ದವಾಗು** = (ಕೋಪ, ಬೇಸರ ಇತ್ಯಾದಿಗಳನ್ನು ಸೂಚಿಸಲು) ನೀಳಮುಖವಾಗು : 'ಅವನ ಮೋರೆ ಕೋಡಾಗಿದೆ ; ಅವನ ಮೋರೆ ಮಾರುದ್ದವಾಗಿದೆ' ಎಂಬ ಮಾತು ನಮ್ಮಿತ್ತಣ ಕನ್ನಡದಲ್ಲಿ ರೂಢವಾಗಿದೆ (ನಾಡೋಜ. ೪೩). **ಮೋಱೆಯಂ ಮುರಿ, ಮೋರೆಮುರಿ, ಮೋಱೆಯ ಮುರಿ** = ೧. ಮುಖವನ್ನು ತಿರುಗಿಸು,—ಹೊರಳಿಸು : ಒತ್ತರಿಸುತಂ ಮೋಱೆಯಂ ಮುರಿವುತ್ತ ನಕ್ಕುತ. . . ಚವುಡರಾಯನ ಹತ್ತಿರಕೆ ಬಂದೀಕ್ಷಿಸುತ (ಬಸವು. ೩೨-೨೮). ೨. (ಬೇಸರ, ತಿರಸ್ಕಾರ ಇತ್ಯಾದಿಗಳನ್ನು ಸೂಚಿಸುವಂತೆ) ಮುಖವನ್ನು ಗಂಟುಹಾಕಿಕೊಳ್ಳು; ಮುಖವನ್ನು ಸಿಂಡರಿಸು : ಕಕ್ಕ ಮೋರೆಮುರಿದು ಉತ್ತರವಿತ್ತಳು (ಶ್ರೀಮಾಶ್ರ. ೨೨). ೩. ಪರಾಙ್ಮುಖವಾಗು; ವಿಮುಖವಾಗು : ಗುರು ಪಿತಾಮಹರಿಂದ ಮೋಱೆಯ ಮುರಿದ ವಿಜಯವಧೂಕಟಾಕ್ಷವ ತಿರುಹಿ ಹಾಯ್ಕುವ ಗಂಡನಾವನು ನೀವು ತಪ್ಪಿದಡೆ (ಕುಮಾವ್ಯಾ. ೪. ೩-೩೩).

[ದೇ.॥ ತಮಿ. ಮೋೞೈ, ಮೋರೈ; ಮಲ. ಮೋರ್; ತುಳು. ಮೋರೆ, ಮೋನೆ; ತೆಲು. ಮೋರ]

**ಮೌಂಜ** (ಗು). ಮುಂಜಹುಲ್ಲಿನಿಂದ ಮಾಡಿದ ; ನೊದೆಹುಲ್ಲಿನಿಂದ ತಯಾರಿಸಿದ. [ಸಂ.]

**ಮೌಂಜಿ** (ನಾ). ಮುಂಜಹುಲ್ಲಿನಿಂದ ಮಾಡಿದ ದಾರ,—ಹುರಿ ; P ಬ್ರಹ್ಮಚಾರಿಯು ಧರಿಸುವ ಮುಂಜಹುಲ್ಲಿನ ದಾರದ ಉಡಿದಾರ, —ಕಟಿಸೂತ್ರ : ಜಿನರೂಪಮಂ ಬಿಸುಟ್ಟು ಮೌಂಜಿವಲ್ಕಲಕೌಪೀನದಂಡಧರನಾಗಿ ಪರಿವ್ರಾಜಕವೇಷಮಂ ಕೆಯ್ಕೊಂಡು (ಪೂರ್ವಪು. ೬-೧೦ ವ) ; ಪೋತಿನ ಗಂಟಲಂ ಬಿಗಿವಂತಿರ್ದ ಮೌಂಜಿಯಂ ಪಱಿದು ಬಿಸುಟು (ಬಸರ. ೨-೪೩) ; ಹಣೆಗೆ ಗೋಪೀಚಂದನವನ್ನಿಟ್ಟು ನಡುವಿಗೆ ಮೌಂಜಿಯನ್ನು ಕಟ್ಟಿ . . . ಶ್ರೀನಿವಾಸ ಶ್ರೋತ್ರಿ ಎಂಬ ತನ್ನ ಅಭಿಧಾನದೊಡನೆ ಪ್ರವರವನ್ನು ಹೇಳಿದ (ಮಂಕವ್ಯ. ೩೨೦). [ಸಂ. ಮೌಂಜೀ]

**ಮೌಂಜೀಧಾರಣ** (ನಾ). ಮುಂಜದ ಹುರಿಯ ಕಟಿಸೂತ್ರವನ್ನು ಕಟ್ಟುವ ಸಂಸ್ಕಾರ ,— ವಿಧಿ : ಮಹಿಳೆಯರಿಗೆ ಮೌಂಜೀಧಾರಣ ಮತ್ತು ಉಪನಯನಸಂಸ್ಕಾರಗಳು ನಡೆಯುತ್ತಿದ್ದುವು (ಶಾರಿವ. ೩೯೦). [ಸಂ.]

**ಮೌಂಜೀಬಂಧ** (ನಾ). = ಮೌಂಜೀಧಾರಣ : ವಟುವಿಗೆ ಮೌಂಜೀಬಂಧ, ಯಜ್ಞೋಪವೀತಧಾರಣ, ಬ್ರಹ್ಮೋಪದೇಶಗಳು ನಡೆದವು (ಶಾಂಕರಾ. ೩೬). [ಸಂ.]

**ಮೌಂಜೀಬಂಧನ** (ನಾ). = ಮೌಂಜೀಧಾರಣ : ಯಥಾವಿಧಿಯಾಗಿ ಅತಿ ವಿಜೃಂಭಣೆಯಿಂದ ಮೌಂಜೀಬಂಧನವನ್ನು ಮಾಡಿದನು (ಕೃವಸು. ೨೩೮); ದ್ವಿಜರ ಮುಖ್ಯಸಂಸ್ಕಾರವಾದ ಮೌಂಜೀಬಂಧನವೂ ಅವರಲ್ಲಿ ಶಾಸ್ತ್ರೋಕ್ತ ನಡೆದ ಹಾಗಾಯಿತು (ಮೂಧವ. II, ೨೩). [ಸಂ.]

**ಮೌಕೂಫ್** 'ಮೋಕೂಫ್' ನೋ.

**ಮೌಕ್ತಿಕ** (ನಾ). ನವರತ್ನಗಳಲ್ಲಿ ಒಂದು ; ಮುಕ್ತಾಫಲ ; ಮುತ್ತು : "ಮುಕ್ತಾ, ಮೌಕ್ತಿಕಂ, ಶೌಕ್ತಿಕೇಯಂ — ಈ ೩ ಮುತ್ತು" (ಹಲಾಯು. ೦೦೯-೪೦) : ಜಗವಿಂದು ಮೌಕ್ತಿಕದಿಂದಂ ತೆಗೆದುದೊ ದಂತದೊಳೆ ಸಮೆದುದೊ ಪಾಲ್ಗಡಲಿಂದೊಗೆದುದೊ ಪೇೞೆಂಬಿನೆಗಂ ಸೊಗಯಿಸಿದುದು ಸಾಂದ್ರಚಂದ್ರಿಕಾವಿಸ್ತಾರಂ (ಕಾದಂಬ. ೦೪೩) ; ರತ್ನ ಮೌಕ್ತಿಕದಚ್ಚು ಕೂಡಲಸಂಗಮದೇವಾ ನಿಮ್ಮ ಶರಣರು (ಬಸವ. ೪೦೦) ; ಹಾರ ಹಱಿದುದು ಕರ್ಣಪೂರದ ಚಾರುಮೌಕ್ತಿಕನಿಕರ ಸಿಡಿದವು (ಕುಮಾವ್ಯಾ. ಗ. ೬-೫೨).

[ಸಂ.]

**ಮೌಕ್ತಿಕಕ್ಷಾರ** (ನಾ). ಮುತ್ತಿನ ಬೂದಿ ; ಮೌಕ್ತಿಕದ ಭಸ್ಮ (?) : ೨೦೦ ಭಾಗ ಸಿಂದೂರ ೧೦೦ ಭಾಗ ಮೌಕ್ತಿಕಕ್ಷಾರ (ಕುಂಬಯು. ೯-೩೯). [ಸಂ.]

**ಮೌಕ್ತಿಕಶಿಲಾಲಿಂಗ** (ನಾ). (ಮುತ್ತಿನ ಬಣ್ಣದ) ಚಂದ್ರಕಾಂತಶಿಲೆಯಿಂದ ನಿರ್ಮಿಸಿದ ಲಿಂಗ : ನಿರ್ಮಲದಿವ್ಯಮೌಕ್ತಿಕಶಿಲಾಲಿಂಗಂ ಚತುರ್ವಕ್ತ್ರಸುಂದರಮಲ್ಲಿರ್ದುದು ರತ್ನಪೀಠಘಟಿತಂ ದೇದೀಪ್ಯಮಾನಪ್ರದಂ (ಪ್ರಾದಂಪು. ೬೩೭). [ಸಂ.]

**ಮೌಖರ್ಯ** (ನಾ). ೧. ಬಹಳ ಮಾತನ್ನಾಡುವಿಕೆ ; ವಾಚಾಳತ್ವ. ೨. [ಜೈನ] ಐದು ಬಗೆಯ ಅನರ್ಥದಂಡವಿರತಿವ್ರತಾತಿಚಾರಗಳಲ್ಲಿ ಒಂದು : ಪುದಿದ ಸಮೀಕ್ಷಾಧಿಕರಣಮುದಯಿಪ ಕಂದರ್ಪಮಂತೆ ಕೌತ್ಕುಚ್ಯಂ ಪೆರ್ಚಿದ ಮೌಖರ್ಯಮನರ್ಥಕ್ಯದೊಳ್ ವ್ಯತಿಕ್ರಮಮತಿಪ್ರಸಾ[ಧ]ನ ಸಹಿತಂ (ಸುಕುಮಚ. ೬-೨೦) ; ಮೌಖರ್ಯ — ಧಾರ್ಷ್ಟ್ಯದಿಂ ಬಹುವಕ್ರಪ್ರಲಾಪಮಂ ಮಾಟ್ಟ ಮೌಖರ್ಯಮುಂ (ಶಶ್ವಶ್ರ. ೨೬೩). [ಸಂ.]

**ಮೌಖಿಕ** (ಗು). ಮಾತಿನ ; ವಾಚಿಕವಾದ : 'ಮೌಖಿಕಪರೀಕ್ಷೆ' ಪರಾ. [ಸಂ.]

**ಮೌಖಿಕಪರೀಕ್ಷೆ** (ನಾ). ಮಾತಿನ ಮೂಲಕ ನಡೆಸುವ ಪರೀಕ್ಷೆ ; ವಾಚಿಕಪರೀಕ್ಷೆ : ತೋಂಡಿಪರೀಕ್ಷೆ : ಬರೆಯತೊಡಗಿದರೆ ಶಬ್ದಗಳೇ ಹೊರಡವು — ಮೌಖಿಕಪರೀಕ್ಷೆಯಲ್ಲಿ ಪರೀಕ್ಷಕರೆದುರಿಗೆ ಬಾಯಿಯಿಂದ ಶ್ವಾಸ ಕೂಡಾ ಹೊರಡದಿರುವಂತೆ ! (ರೂಶಸಂ. ೯೦). [ಸಂ. ಮೌಖಿಕಪರೀಕ್ಷಾ]

**ಮೌಗ್ಧ್ಯ** (ನಾ). ೧. ಏನೂ ಅರಿಯದಿರುವಿಕೆ ; ಮುಗ್ಧತನ : ಶಬರಬಾಲಕಿಯರ್ ವಿಧುಬಿಂಬದಲ್ಲಿ ತಮ್ಮಾನನಮಂ ನಿರೀಕ್ಷಿಸಿ ಮದಾಂಬು ಲಲಾಮಮನುಯ್ದು ಬಿಂಬಮಧ್ಯಾನನದಲ್ಲಿ ಬಿತ್ತರಿಸೆ ಮೌಗ್ಧ್ಯದೊಳಾಯ್ತು ತದಂಕಮೆಂಬೆಂ (ಕಂಪ್ರಕು. ೧೦-೩೨). ೨. ಲಾವಣ್ಯ ; ಸೊಬಗು. [ಸಂ.]

**ಮೌಜು** 'ಮೋಜು₂' ನೋ.

**ಮೌಜೆ, ಮವುಜೆ** (ನಾ). ಸಣ್ಣಹಳ್ಳಿ ; ಸಣ್ಣಗ್ರಾಮ ; ಕಸಬಾ : ನನ್ನ ಅಣ್ಣಂದಿರಾದ ಸದರಿ ರಾಘವೇಂದ್ರವಾಮನಬಿಂದಗೋಳ ಅವರೇ ನಮ್ಮ ಬಿಂದಗೋಳ ಮೌಜೆಯಲ್ಲಿ ಇರುವ ಏಕತ್ರ ಆಸ್ತಿಯ ವಹಿವಾಟು ಮಾಡುತ್ತ ಬಂದಿರುತ್ತಾರೆ (ಗಂಪಊಯ. ೨೦೦). **ಮವುಜೆ** : ಶ್ರೀಕೃಷ್ಣಾನಂದಸ್ವಾಮಿಗಳವರಿಗೆ ಮವುಜೆ ಮಜಕೂರಿನಲ್ಲೂ ಪ್ರಾಕುರೇಪೆ ಭೂಮಿವೃತ್ತಾರಯಿದ್ದದ್ದು . . . ಹಾಲಿಯನಾಮತ್ತಿಯಲ್ಲು ಜಾರಿಯಿರುವುದು (ವ್ಯಾಆಂ. ೧೯೩೯, ೩೨-೬; 1812). [←ಅರ. ಮೌಝಾ ; ಹಿಂ. ಮೌಜಾ ; ಮರಾ. ಮೌಜಾ, ಮೌಜೇ]

**ಮೌಢ್ಯ** (ನಾ). ದಡ್ಡತನ ; ಮೂಢತನ : ಅಹಿಮಕರಕುಲಿ ತನ್ನ ಮೌಢ್ಯದಿ ಬಹಳಶೋಕದಲಿರಲು (ಕೌಶಿಂಪ. ೦-೩೨) ; ಓದಿರುವಾತಗೆ ಮೌಢ್ಯವೆಂಬುದಿಲ್ಲ (ಇಂಶಾಶ. ೬೦-೯೦); ತನ್ನ ಜಾಡ್ಯ ಮೌಢ್ಯದೊಳಗೆ ಸಾಧಿಸಿಹುದು —ಗೊತ್ತು ನನಗೆ (ಪಾಂದೇ. ೯೦-೩). [ಸಂ.]

**ಮೌದ್ಗ** (ನಾ). ಹೆಸರುಕಾಳನ್ನು ಬೆಳೆಯುವ ಹೊಲ : ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗ[ಪಾಠಾಂ. ದ್ಯಂ] ಮಾಷ್ಕಂ ಶಾಲೇಯಂ ವ್ರೈಹೇಯಂ (ಕಂಪ್ರಕು. ೦-೯೦). [ಸಂ.]

**ಮೌದ್ಗೀನ** (ನಾ). = ಮೌದ್ಗ : "ಪೆಸರ ಕೆಯ್ ಮೌದ್ಗೀನಮೆಂಬುದು" (ಶಲಾಯು. ೨೭-೬); ಏನೆಸೆವುವೊ . . . ತೈಳೀನದ ಮಾಷೀಣದ ಮೌದ್ಗೀನದ ಬಹುಸಾರಸಸ್ಯಸಕಳಫಳಂಗಳ್ (ಕೃಷ್ಣಕು. ೨-೦೨). [ಸಂ.]

**ಮೌನ** (ನಾ). ೧. ಮಾತನ್ನಾಡದಿರುವಿಕೆ ; ಸುಮ್ಮನಿರುವುದು: ಮೌನಂ ಸರ್ವಾರ್ಥಸಾಧನಂ (ಗದಾಯು. ೩-೩೬ ಪ); ಮೌ[ಪಾಠಾಂ. ಮೋ]ನದಲುಂಬುದು ಆಚಾರವಲ್ಲ ಲಿಂಗಾರ್ಪಿತವ ಮಾಡಿದ ಬಳಿಕ ತುತ್ತಿಗೊಮ್ಮೆ ಶಿವಶರಣೆನ್ನುತ್ತಿರಬೇಕು (ಬಸವ. ೭೬೭); ಬಯಕೆಯೊಳು ಬಱಮುಂಮಂ ಮೌನದೊಳು ನುಡಿಯುಮಂ . . . ಬೈತಿಡುತೆ (ತಿರುಶ. ದೀ. ೭-೯); ಮುಖಸರಸಿರುಹ ಬಾಡಿದವು ಮುಸುಕಿತು ಮೌನಮಯಜಲಧಿ (ಕುವ್ಯಾಸ. ೦೯-೩೦). ೨. ಮಾತನ್ನಾಡದೆ ಇರುವ ಸಮಯ : 'ಮೌನವ್ರತ' ಪರಾ. ೩. ಸದ್ದಿಲ್ಲದೆ ಇರುವುದು ; ನೀರವತೆ : ಸುತ್ತಲು ಮೌನ ! ಶ್ಮಶಾನ ಮೌನ ! (ಪಾಂಶಶ. ೬೬-೨೦). ೪. [ಕಾಮಶಾ] ವಿರಹದ ಹತ್ತು ಅವಸ್ಥೆಗಳಲ್ಲಿ ಒಂದು : ಅಭಿಲಾಷೆ ಚಿಂತೆ ಸಂಸ್ಮೃತಿ ವಿಧುಗುಣನುತಿ ಸಂತಾಪನ ಕ್ರಿಯಾದ್ವೇಷ ವಿಕಳ ಮೌನ ಮೂರ್ಛೆ ಮರಣಮೆಂಬ ದಶಾವಸ್ಥಾದಿ ವಿಚಾರಪರರಿಂ (ಏವೇಶ. ೦೬೯). [ಸಂ.]

**ಮೌನಂಗೊಳ್, ಮೌನಗೊಳ್** (ಕ್ರಿ). ೧. ಮಾತನ್ನಾಡದಿರು; ಸುಮ್ಮನಿರು : ಮಱುಮಾತುಗುಡಲಱಿಯದೆ ಧರ್ಮಪುತ್ರಂ ಮೌನಂಗೊಂಡುಸಿರದಿರೆ (ಕಂಶಭಾ. ೬-೨೯ ವ). **ಮೌನಗೊಳ್** : ೧. ಏನೂ ಅಱಿಯೆನೆಂದು ಮೌ[ಪಾಠಾಂ. ಮೋ]ನಗೊಂಡಿರಬೇಡ (ಬಸವ. ೧೬೬); ಬಂದಿಹ ಮಹಂತರು ಮೌನಗೊಂಡಿದ್ದಿಹರು (ಬಸಕು. ೩೭-೯). ೨. ಸದ್ದು ಮಾಡದಿರು : ಮೌನಗೊಂಡುವು ಭೇರಿನಿಸ್ಸಳವೇನ ಹೇಳುವೆ ದನುಜರುಬ್ಬಟೆ ಹಾನಿಯಾದುದು (ಕೌಶಿರಾ. ೨೦-೩೩). [ಮೌನ + ಕೊಳ್₁]

**ಮೌನಕಲಹ** (ನಾ). ಮಾತಿಲ್ಲದ ಜಗಳ ; ಮೌನವಾದ ಕಲಹ : ತಮ್ಮ ಈ ಕೆಲದಿನಗಳ ಮೌನಕಲಹವನ್ನು ಇಂದು ಬಗೆಹರಿಸಿಬಿಡಲೇಬೇಕು (೨ಶ್ಯಶ. ೨೭೨). [ಸಂ.]

**ಮೌನಗೊಳ್** 'ಮೌನಂಗೊಳ್' ನೋ.

**ಮೌನಮುದ್ರೆ** (ನಾ). ಸುಮ್ಮನೆ ಇರುವುದು : ಏನು ಸಿದ್ಧಿಯಿದಕ್ಕೆ ಮೋಹಿದ ಮೌನಮುದ್ರೆಯ ಬಿಸುಟು ಹೇಳು (ಕುವ್ಯಾಶ. ೨೦-೨೭); ಇನ್ನು ನಮಗೆ ಗುಡಗಜ್ಜನ ಬಾಧೆ ತಪ್ಪದು ಎಂದು ಹೇಳಿ ಮೌನಮುದ್ರೆಯನ್ನು ತಾಳಿದರು (ಮುಹಸ. ೩೬). [ಸಂ. ಮೌನಮುದ್ರಾ]

**ಮೌನವಡು** (ಕ್ರಿ). ಮಾತನ್ನಾಡದಿರು; ಸುಮ್ಮನಿರು : ಗಾನವಿದ್ಯಾಲೋಲರಾವದು ನೀನೆ ಗುರು ಮೂಲೋಕಕೆನ್ನುತ ಮೌನವಟ್ಟುದು ಸರ್ವನೃಪಜನ (ಪಾಗಶ. ೦೨-೬೩). [ಮೌನ + ಪಡು₁]

**ಮೌನವ್ರತ** (ನಾ). ಮಾತನ್ನಾಡದೆ ಇರುವ ವ್ರತ; ಮೌನದ ಆಚರಣೆ : ಇತ್ತ ವೃಷಭನಾಥನುಂ ಮೌನವ್ರತದಿಂ ಯೋಗಯೋಗ್ಯಪ್ರದೇಶದೊಳು ಅವಹಿತಧ್ಯಾನನಾಗಿ ವಿಹಾರಿಸಿ (ಪಾಪುಂಕು. ೯೦); ಮೌನವ್ರತಕ್ಕೆ ದೀಕ್ಷಿತರಾಗಿ ಮೌನರಂಗದಲಿ ಇಳಿದಿಹರು (ಪುಂಶ್ಯಕಂ. ೯೯-೦೨). [ಸಂ.]

**ಮೌನಾಧ್ಯಯನವೃತ್ತಿ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು; ಉಪವಾಸಾನಂತರದ ಪಾರಣೆಯ ಸಮಯದಲ್ಲಿ ವಾಙ್ನಿಯಮವನ್ನು ತಾಳುವುದು ಹಾಗೂ ಶಾಸ್ತ್ರಾಭ್ಯಾಸವನ್ನು ಮೌನವಾಗಿ ಮಾಡುವುದು : ಮೌನಾಧ್ಯಯನವೃತ್ತಿಯುಂ ತೀರ್ಥಕರತ್ವಭಾವನೆಯುಂ . . . ಅಪ್ಪುಯ್ವತ್ತುಮೂಱುಗರ್ಭಾನ್ವಯಕ್ರಿಯೆಯೊಳು (ಪಾಪುಂಪು. ೨೦೨). [ಸಂ.]

**ಮೌನಿ** (ನಾ). ೧. ಮಾತನ್ನಾಡದೆ ಸುಮ್ಮನಿರುವವನು : ಮೌನಿಯಾದನು ರಾಮ (ಶ್ರೀರಾಪಚ. ೦೩೯-೨೦೯); ಮೌನಿಯಾದವನಿಗೆ ಕಲಹವೆಂಬುವುದಿಲ್ಲ (ಇಂಶಾಶ. ೬೦-೯೦); ಹಾಗೆ ನೋಡಿದರೆ ರಾಯರು ದೊಡ್ಡಮೌನಿ ! (ಕಂಬಿಪು. ೧೨೦). ೨. ಮುನಿ ; ತಪಸ್ವಿ ; ಋಷಿ : ಮಾನಿಗಳು ಮೌನಿಗಳು ಸ್ವಚ್ಛ ಶಿವಾನುಭಾವೇಚ್ಛಾತ್ಮಸುಖಿಗಳು (ಬಸಪು. ೬-೧೭).
[ಸಂ. ಮೌನಿನ್]

**ಮೌರಜಿಕ** (ನಾ). ಮದ್ದಲೆಯನ್ನು ಬಾರಿಸುವವನು : "ಮಾರ್ದಂಗಿಕಃ, ಮೌರಜಿಕಃ – ೨ ಮದ್ದಲೆ ಬಡಿಯುವವನ ಪೆಸರು, ಮದ್ದಳಿಗ" (ಸಿದ್ಧಾಂಶ. ೩೦೦). [ಸಂ.]

**ಮೌರಜಿಗ** (ನಾ). = ಮೌರಜಿಕ : "ಮೌರಜಿಗ – ಮೌರಜಿಕ=ತಮಟೆ ಬಾರಿಸುವವ" (ಕದ್ಯಕೋ. ೩೭) ; ಸುರಪುರದ ಮೌರಜಿಗನಾವೆಡೆ ಕುರುಬಲದ

ಗಜಬಜದ ಗರುವನ ತೋಟಿಸುತ ತೋರ್ಪನು ಕಲಿಪಾರ್ಥ (ಕುವ್ಯಾ.ಶ. ೨೦-೨೫). [< ಸಂ. ಮೌರಜಿಕ]

**ಮೌರವಪಾಶ** (ನಾ). ಮುರು ಎಂಬ ಕಬ್ಬಿಣದಿಂದ ಮಾಡುವ ಒಂದು ಬಗೆಯ ಸರಪಣಿ; ಸಂಕೋಲೆ : ಖಚರಕಿನ್ನರವಿದ್ಯಾಧರರಂ ಕಡುಖಂಡ ಮಾಗೆ ಕತ್ತರಿಸಿ ಕೊಲ್ವ ಮೌರವಪಾಶಮಿರ್ಪುದು (ಜಗ. ೧೦-೮೯ ವ); ನರಸೇನೆಗರಿಪು ಲಂಕಾಪುರದ ಬಹಿರ್ಜಲಧಿ ದಾಂಟಲಿಂತಿದು ದೇವಾಸುರರ್ಗ ಮರಿದೆನಿಸಿ ನರಕನ ಪುರಮಂ ಬಳಸಿರ್ದುದೊಂದು ಮೌರವಪಾಶಂ (ಜಗ. ೦೨-೩). [< ಸಂ. ಮೌರ್ವಪಾಶ]

**ಮೌರಿ₁**. ಮವುರಿ, ಮುಹುರಿ, ಮೂವುರಿ, ಮುಹರಿ, ಮುಹುರಿ, ಮೊಹರಿ₁, ಮೋರಿ₁, ಮೋಹರಿ₁, ಮೌವರಿ (ನಾ). ಒಂದು ಬಗೆಯ ಊದುವ ವಾದ್ಯ : ವೇಣು ವೀಣೆ ಮೌರಿ ವಾದ್ಯಂಗಳಲ್ಲಿ ವಾಯು ಅಂಗುಲಿಯ ಭೇದದಿಂದ ರಚನೆಗಳ ತೋರುವಂತೆ (ಶ್ರೀಕೋಗ. ೪. ೫೦೩-೯೯) ; ಕಂಬಿಡುವ ಕೊಂಬುಗಳ ರಣದಿತ್ತಿರಿಯ ಮೌರಿ ಹಲಹಲವು ರೀತಿರೀತಿಯ ಚಿನ್ನದಾ ತಂಬಟದ ನಾನಾವಿಧದ . . . ನಿಸ್ಸಾಳಕುಳವಳ್ಳಿಟ್ಟಿದುದು (ಸೋಮಕ. ೩-೯೨); ತಿತ್ತಿರಿ ಮೌರಿ ತಾಳ ದಂಡಿಗೆ ಮದ್ದಲೆ ಉತ್ತಮದ ಶಂಖಶ್ಸುನಾದಗಳಿಂದ . . . ಕುಣಿಸುವರು (ಕುರಂದ. ೪-೦೩೬-೨).

**ಮವುರಿ** : (ಕ). **ಮುಹುರಿ** : ಕೊಳಲು ಮುಹುರಿ ರಣಮವುರಿ ದವಳಸಂಕ (ದೇವಾಂಶ. ೩-೨೦೦). **ಮೂವುರಿ** : ಬಾಯಿಂದೆ ಕೊಂಬು ಮೂವುರಿ ಕಹಳೆಗಳನೂದಿ ಬಾಯಿಂದೆ ಕರಡೆಯಂ ಬಾರಿಸುತೆ ಕೊಳಲೂದಿ (ಕಣ್ವ.ರ. ದೇ. ೦೩೯-೩). P ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪವಿರಬಹುದು. **ಮುಹರಿ** : ಮುಹರಿಯ ಮಧುರತೆಯಿಂ ಬೀಣೆಯ ಬಹುಲಿಕೆಯುಂ ಎಸೆಯೆ (ವರ್ಧಕ. ೯-೯೩ ವ). **ಮುಹುರಿ** : ವೇಣು ಮುಹುರಿಗಳಲ್ಲಿ ಮೂವತ್ತೆರಡುರಾಗಮಿಶ್ರಂಗಳ ಅಜವತ್ತುನಾಲ್ಕುಬಲ್ಲಿ ಕೂಡಿ ನುಡಿವುದು ಒಂದೋ ಎರಡೋ (ವೋಳಸೂ. ೦೨೭-೯೯೩) ; ಮುಹುರಿಶೃಂಗವಂಶ ಕಹಳಾಶಂಖಿಪಾವಪ್ರಭೃತಿಸುಷಿರವಾದ್ಯಚಯಮಂ . . . ತಾಳಾನುಗತಮಾಗಿ ಬಾಜಿಸುತೆ ತತ್‌ಕುಶಲಗತಿಯಿಂ (ಶಿವ್ಲಾ. ೩-೩೩); ಭೇರಿ ನಿಸ್ಸಾಳಗಳು ಮಾಣದತಿಸ್ವರಗಯ್ಯು ಮುಹುರಿ ವೀರಣವಾದ್ಯ ವಿದ್ವಜ್ಜನಾನಿಕರವು . . . ಎಸಕದಿಂ ರಾಜಿಸಲು (ಶ್ರೀಕುಶ. ೯-೩೩).

**ಮೊಹರಿ₁** : ಹೊನ್ನಿನ ಕಹಳೆಗಳಂ ಪೊಸಸರನ್ನದ ವಾಸಂಗಳಂ ಸುಶಂಖಂಗಳುಮಂ ಚೆನ್ನಿನ ಮೊಹರಿ[ಪಾಠಾಂ. ಮೌರಿ]ಗಳಂ ಸುರಕ್ಷೆಯರೊರ್ವೊರ್ವರರೂದಿದರ್ ಕಡುನಲವಿಂ (ಶಾರಶ. ೬-೯೦) ; ಕಿವಿಗೆ ಇಂಪಾದ ಮೊಹರಿ ಶ್ರುತಿಗಳ ನಾದವೂ ಕೇಳಿ ಬಂತು (ಕಂಗಾಳ್ಕ. ೩೦೭). **ಮೋರಿ₁** : ಮದುವೆಯ ನಾಲ್ಕುದಿನ, ಮೋರಿ ಹಿಡಿದ ಕೊರಗನಿಗೇನೆ ಅವನ ವಾದ್ಯ ಕೇಳಿಸಿತೋ ಇಲ್ಲವೋ (ಮುಕಮ. ೨); ಶಿವಗುಡಿಯಲ್ಲಿ ಮೋರಿ ಬಾರಿಸುತ್ತಿದ್ದೆ (ಕವ್ಯಸ. ೦೯೧). **ಮೋಹರಿ₁** : ಅಲರ್ವಿಂಡಿಗೆಜಿಗಿ ಲ್ಯೋಂಕರಿಪಳಿ ಶಿಶುಗಳ್ನೊಲೆವ ನೈದಿಲ ನಿಡಿದಂಟು ಜಲದೇವಿಯರಂಗಜವೀರರವನೋದು ತೊಳೆವ ಮೋಹರಿಯಂತಾಯ್ತು (ಶ್ರೀಪಾಠ. ೦೨-೨೩) ; ನೀರದಗಳಂತೆ ನಭದೊಳುಲಿದವಾಗ ಕಹಳಾಳಿಗಳು ಮೋಹರಿಗಳು (ಮಲ್ಲಾಂ. ೬-೩೭).

**ಮೌವರಿ** : ಪಟಹ ಭೇರಿ . . . ಕಹಳೆ ಡಿಂಡಿಮುರವದಿ ಸಂಘಟಿಸಿದುಬಿ ಚೀರಣದ ಬೊಂಬುಳಿ ಡೋಳು ಮೌವರಿಯ ಪಟುತರ ಧ್ವನಿ ತೀವಿದುದು ದಿಕ್ತಟಗಳನು (ಸನತ್ಕು. ೦೨-೬೪). [ ದೇ.॥ ತೆಲು. ಮೌರಿ, ಮವುರಿ ]

**ಮೌರಿ₂** (ನಾ). [ಸಂಗೀತ] ಒಂದು ರಾಗದ ಹೆಸರು : ಮೋದದಿಂದ ಗಾಯಕರು ಮೌರಿ ಪಾಡಲು (ವಾಣೀಕ. ೧೦-೬). [< ಸಂ. ಮಾಹುರೀ]

**ಮೌರ್ಖ್ಯ** (ನಾ). ದಡ್ಡತನ ; ಅವಿವೇಕ ; ಮೂರ್ಖತನ : ಕ್ಷಿತಿಯೊಳೀ ದೇಹಿಗಳು ಪಶುಗಳಂದದಿ ತಿಳಿಯದತಿಶಯದ ಸುಖಗಳನು ಹಾರೈಪರನುದಿನದಿ ಮೌರ್ಖ್ಯದಿಂದೀ ಪುಸಿಯನು (ವಂಕಾರಾ. ೨-೯-೨೨). [ಸಂ.]

**ಮೌರ್ವ** (ಗು). ೧. ಮುರು ಎಂಬ ಕಬ್ಬಿಣದಿಂದ ಮಾಡಿದ. (ನಾ). ೨. ಕೆಂದುಬಣ್ಣದ ಕುದುರೆ : "ತುರಗವರ್ಣಂ . . . ಮಾಸರವಾಗೆ ಮೌರ್ವನಕ್ಕು" (ಮಂಗರಾ. ೬೦-೦೯). [ಸಂ.]

**ಮೌರ್ವಿ** (ನಾ). ಬಿಲ್ಲಿನ ಹೆದೆ ; ನಾರಿ ; ಸಿಂಜಿನಿ : "ಮೌರ್ವೀ, ಜ್ಯಾ, ಶಿಂಜಿನೀ, ಗುಣಃ, ಜೀವಾ — ಈ ೫ ಬಿಲ್ಲ ತಿರು" (ಹಲಾಯು. ೭೬-೨೦೦) ; ಲಲಿತಭ್ರೂಕಾರ್ಮುಕಂ ಕೇಕರರುಚಿ ನನೆಗೋಲ್ ಕುಂತಳಂ ಮೌರ್ವಿ ಮಂಜೀರಲಸದ್ಧ್ವಾನಂ ಧನುಷ್ಪಂಕ್ತಿಕೃತಮೆನೆ . . . ಎಸೆಗುಂ ವಾರನಾರೀಕದಂಬಂ (ಜಗ. ೨-೩೩) ; ಧನುವಿಗೆ ಮೌರ್ವಿಯ ತೊಡಿಸಿ ಗುಣಿಯನೆಚ್ಚ ಘನವಾಹಿಯುನಿಗೆ ಸೂಡೆಂದು ತನುಜೆಯ ಕೈಯುಲಿ ಮಂದಾರಮಾಲೆಯ ಘನತರರಾಗದಿಂದಿತ್ತು (ಶೀವಂಸಾಂ. ೦೭-೪೩). [ಸಂ. ಮೌರ್ವೀ]

**ಮೌರ್ವೀನಾದ** (ನಾ). ಬಿಲ್ಲಿನ ಹೆದೆಯ ಠೇಂಕಾರ ; ಜ್ಯಾನಾದ : ಸಂಸ್ಫಾಳಿತೋದ್ವೃತ ಚಪಳಚಾಪಕರಾಳಮೌರ್ವೀನಾದಭೀಷಣನಾದನಾ ಭೀಮ (ಕುವ್ಯಾ.ಶ. ೦೨-೦೩). [ಸಂ.]

**ಮೌಲ** (ಗು). ೧. ಬಹಳ ಹಿಂದಿನ ; ಪ್ರಾಚೀನವಾದ. ೨. ಮುಖ್ಯವಾದ ; ಮೂಲಭೂತವಾದ. (ನಾ). ೩. ಗೃಹ, ಕ್ಷೇತ್ರ ಮುಂತಾದುವುಗಳ ಹಿಂದಿನ ಸ್ಥಿತಿಗತಿಗಳನ್ನು ತಿಳಿದು ವಂಶಪರಂಪರೆಯಾಗಿ ಅಧಿಕಾರ ನಿರ್ವಹಿಸುವ ಮಂತ್ರಿ ಮೊದಲಾದ ರಾಜಸೇವಕ : ಮೌ[ಲ]ಭೃ[ತ್ಯ]ಸುಹೃತ್ ಶ್ರೇಣಿಮಿತ್ರಾಟವಿಕತಂತ್ರಂಗಳ್ ಪಣ್ಣದ ಜಂತ್ರಂಗಳಂತೆ ಕಟಕುಟುಮಾದುವು (ಶಂಕರಾ. ೦೩-೨೦ ವ). [ ಸಂ. ]

**ಮೌಲಬಲ** (ನಾ). ಪ್ರಧಾನವಾದ ಸೈನ್ಯ ; ಮೂಲಬಲ : ನಿಜರೂಥವ್ಯಾಳಶುಂಡಾಲವುಂ ಬಳಸಿ ನಿಂದ ಮೌಲ[ಪಾಠಾಂ. ೪]ಬಲಮನರನಲೆಗೆ ನೂಂಕಲ್‌ವೇಟ್ಟು (ಚಂದ್ರಪ್ರ. ೧೦-೯೯ ವ). [ಸಂ.]

**ಮೌಲಿ**, **ಮೌಳಿ** (ನಾ). ೧. ತುದಿ ; ಶಿಖರ ; ಅಗ್ರಭಾಗ : ಫಣಿ ಗರುಡ ಗಜ ಮಕರ . . . ಚಿಹ್ನಂಗಳ್ ಯಥಾಕ್ರಮದಿಂ ತನ್ಮೌಲಿಗಳೊಳ ಪ್ಪುವು (ಶಬ್ದ.ಶ್ರ. ೧೮೭). ೨. ತಲೆ : 'ಚಂದ್ರಮೌಲಿ' ಪರಾ. ೩. ಕಿರೀಟ ; ಮಕುಟ : ಆ ಸತ್ಯೇಂದ್ರಚೋಳೇಂದ್ರಸತ್ವದಪದ್ಮಕ್ಕೆ ಮರಂದಮಂ ಪಡೆದು ಮೌಲಿದ್ಯೋತಿಯಿಂ ಪೊಳ್ಗದಂ (ರಾಜಶೇ. ೪-೦೦೩). ೪. ಜಡೆ ; ಮುಡಿ. **ಮೌಳಿ** : ೨. "ಮುಂಡಃ, ಉತ್ತಮಾಂಗಃ, ಮಸ್ತಕಃ, ಮೌಳೀ, ಶಿರಃ, ಶೀರ್ಷಃ, ಮೂರ್ಧಾ, — ಈ ೮ ಮಂಡೆ" (ಹಲಾಯು. ೬೩-೩೭೩). ೩. "ಮೌಳಿಗೆನಲ್ ಮಕುಟ [ಪಾಠಾಂ. ಮುಕುರ, ಮಕುರ]" (ರಾಶಂ. ೭) ; ಮೋಟನ ಮೌಳಿ ಮಾಣಿಕಜಡಿಯ ಶೃಂಗಾರ ಬೇಟ ಕುರುಡಂಗೆ ನಗೆಗೆಡೆಯಾಯಿತ್ತು (ಬಸವ. ೩೩೦). ೫. (ಅಲಂ) ಮುಂದಾಳು ; ನಾಯಕ : ಓಲಗದೊಳರ್ದಖಿಳಮೂರ್ಖರ ಮೌಳಿಯನು ಕಂಡಮಧಿಸು ಸಿರಿಲೋಲ ಬಿಜಯಂಗೈಯಲವಸರವುಂಟೆ ಹೇಳೆನಲು (ಕುವ್ಯಾ.ಅ. ೪-೨೭). ೬. ಮುಖದ ಸೌಂದರ್ಯ (?) : ಎಣಿದಳೋ ಸುರರಿಂಗೆ ಸತಿ ಕೈದೊಜಿದಳೋ ದನುಜರಿಗೆ ಮೌಳಿಯ ಬೇಜಿದಳೋ ಅಸುರರಿಗೆ ಸುರರಿಗೆ ಸುರದಳೋ ಸುಧೆಯ . . . ಎನೆ ಮುನಿನಿಕರ ಸಲಹಿದಳು ಸುರಕುಲವ (ಐಭಾಗ. ೬-೯-೩೨). [ಸಂ.]

**ಮೌಲಿಕ** (ಗು). ೧. ಮೂಲರೂಪದ ; ಮೂಲಭೂತವಾದ : ಗೀತಾರಹಸ್ಯದಲ್ಲಿ ವ್ಯಕ್ತವಾದ ಟಿಳಕರ ಮೌಲಿಕ (original) ವಿಚಾರಗಳನ್ನು ಸ್ಪಷ್ಟಪಡಿಸುವುದು ಕ್ರಮಪ್ರಾಪ್ತ (ರರ್ವಗಾ. ೦೯೯) ; ಅವು ಮೌಲಿಕ ಬಾಲಬೋಧಪದ್ಧತಿಯವಾಗಿದ್ದು ಗೀತೆಯ ತತ್ವಜ್ಞಾನ ಹೇಳುವಂಥವಾಗಿರುವುದನ್ನು ಕಂಡು ಮತ್ತೊಂದು ಬಗೆಯ ಕೌತುಕವೆನ್ನಿಸುವುದು (ಸ್ಮ್ರ.ಚಿತ್ರ. ೧). (ನಾ). ೨. ಪ್ರಾಚೀನವಾದುದು ; ಮೂಲಭೂತವಾದುದು. ೩. ಮುಖ್ಯವಾದುದು ; ಮಹತ್ವವಾದುದು : ಈ ಪುಸ್ತಕವು ಸ್ವತಂತ್ರವೆ ?

ಮೌಲಿಕವೆ ? (ಮೂಚಿರ. ೫) ; ಈ ಪಂಥದಲ್ಲಿ ಐವರ ಅಧಿಕಾರವು ಮೌಲಿಕವಾಗಿದೆ (ಮಹಾಹಿ. ೦೦) ; ಮೌಲಿಕವಾಗಿ ನೋಡಿದರೆ ಸಾಹಿತ್ಯವೆಂಬುದೂ ಒಂದು ಮೌಲ್ಯವೇ (ಪಂಶಪ್ರ. ೧೦. ಹಿಮ್ಮುಖ). ೪. ಒಂದು ಬಗೆಯ ತೆರಿಗೆ: ತ್ರಿಭೋಗಾಭ್ಯಂತರವಮಷ್ಟಭೋಗತೇಜಃಸ್ವಾಮ್ಯಯುಕ್ತ (ಕ್ತಂ) ಶುಲ್ಕ ದಂಡ ಸಾದಕಾರುಕಕರಮೌಲಿಕಾರ್ಹಣಾದಿ ಸಕಲದ್ರವ್ಯಾಪಾರ್ಜನೋಪೇತಂ (ಇಆ. IV, ೨೭೭–೩೮ ; 1253). [ಸಂ.]

**ಮೌಲಿಕತೆ** (ನಾ). ಬಹಳ ಹಿಂದಿನಿಂದಲೂ ಉಳಿದುಬಂದಿರುವ ಗುಣ, – ಸ್ವಭಾವ : ಈಗ ಅವರ ಮೌಲಿಕತೆ ತಿಳಿದು ಬಂತು (ಸ್ವಪ್ನಶಿ. ೯೮).
[ ಸಂ. ಮೌಲೀಕತಾ ]

**ಮೌಲ್ಯ** (ನಾ). ೧. ಬೆಲೆ ; ದರ ; ಧಾರಣೆ : “ವೃತ್ತಿಕ್ಲಪ್ತಂ ಭೃತಿ ವೇತನಂ ಮೌಲ್ಯಮೆನೆ ಪೊತ್ತ ಬೆಲೆ” (ಪಂಗರಾ. ೦೦೨–೨) ; ಎರಡು ತರ ಮೌಲ್ಯಂಗಳೆಲ್ಲಕಂ ಲೋಕದಲಿ ಪರಮಾರ್ಥಕೊಂದು, ಸಾಂಪ್ರತದರ್ಥಕೊಂದು (ಮುಂಕುಶ. ೭೭೩). ೨. ಉಪಯುಕ್ತವಾದುದು ; ಬೆಲೆಯುಳ್ಳುದು : ಅನಘರತಾಲ್ಯವಕ್ಷಯವಮೌಲ್ಯ [ಪಾಕಾಂ. ಮೂಲ್ಯ]ವಭವ ಸ್ಥೌಲ್ಯವಹ ಕೈವಲ್ಯಮೀ ನಿರ್ಮಾಲ್ಯಂ (ಬಸಪು. ೪೩–೭೭). ೩. ಜೀವನದಲ್ಲಿ ಬೆಲೆಯುಳ್ಳದ್ದೆಂದು ಭಾವಿಸುವ ಅಂಶ ; ಆದರ್ಶ : ಜೀವನದ ಮೂಲಭೂತಕ್ರಿಯೆಗಳ ಗುರಿಯಾಗಿ ನಿಂತು ಜೈವಿಕ ಚಟುವಟಿಕೆಗಳಿಗೆ ಮಾರ್ಗದರ್ಶನ ಮಾಡುವ ಆದರ್ಶಗಳಿಗೆ ಮೌಲ್ಯಗಳೆನ್ನಬಹುದು (ಪಂಶಪ್ರ. ೮ ಹಿಮ್ಮುಖ); ನವ್ಯಕಾವ್ಯದಲ್ಲಿ ಈ ವ್ಯಕ್ತ್ಯತೀತಮೌಲ್ಯಗಳಿಗೇ ಪ್ರಧಾನತೆಯುಂಟಾಗುವುದೆಂದು ತೋರುತ್ತದೆ (ಪವ್ಯಕಾ. ೪೯). [ಸಂ.]

**ಮೌಲ್ಯಧನ** (ನಾ). ಒಂದು ವಸ್ತುವನ್ನು ಮಾರಿದಾಗ ಅದರ ಬೆಲೆಯಾಗಿ ಬರುವ ಹಣ ; ಬೆಲೆಯ ಹಣ : ಈ ಆಭರಣಂಗಳಂ . . . ಕ್ರಯಕ್ಕೆ ಹೊಂದಿಸಿ ಅದರ ಮೌಲ್ಯಧನವನ್ನು ನೀವೇ ಯಾಗಾರ್ಥವಾಗಿ ತೆಗೆದುಕೊಳ್ಳುವರಾಗಿ (ಮುದ್ರಾಮಂ. ೨೯೭). [ಸಂ.]

**ಮೌಲ್ಯನಿರ್ಣಯ** (ನಾ). ಯಾವುದಾದರೊಂದು ವಸ್ತು, ಕಲಾಕೃತಿ ಇತ್ಯಾದಿಗಳ ಬೆಲೆ ಅಥವಾ ಉಪಯುಕ್ತತೆಯನ್ನು ನಿಗದಿಪಡಿಸುವುದು, — ಗೊತ್ತುಮಾಡುವುದು : ಸಾಹಿತ್ಯದ ಮೌಲ್ಯನಿರ್ಣಯದ ಸಮಸ್ಯೆಯೊಡನೆ ಸ್ವತಃ ಸಂಬಂಧಿಸಿದಂತೆ, ಆಚರಣೆಯ ತತ್ತ್ವವೊಂದು ಪ್ರಾರಂಭದಲ್ಲಿ ನಮಗೆ ಇದ್ದೇ ಇದೆ (ಸಾಹಿಶ್ರ. ೩೦೭). [ಸಂ.]

**ಮೌಲ್ಯಮಾಪನ** (ನಾ). ಯಾವುದಾದರೊಂದು ವಸ್ತು, ಕಲಾಕೃತಿ, ಗ್ರಂಥ, ಲೇಖನ ಇತ್ಯಾದಿಗಳ ಬೆಲೆಯನ್ನು ಅಳೆಯುವಿಕೆ, — ಅರ್ಹತೆಯನ್ನು ಗುರುತಿಸುವಿಕೆ, — ಯೋಗ್ಯತೆಯನ್ನು ನಿರ್ಣಯಮಾಡುವಿಕೆ : ನರನಾರಿವೃಂದವು . . . ತಮ್ಮ ಆತ್ಮಪರಿತೋಷದಿಂದ ಪ್ರಯೋಗದ ಸಿದ್ಧಿಯ ಮೌಲ್ಯಮಾಪನವನ್ನು ಮಾಡಬೇಕು (ಶ್ರೀಬಂಧ. ೩೪) : ಸಾಹಿತ್ಯದ ಮೌಲ್ಯಮಾಪನವನ್ನು . . . ವಿವೇಚಿಸುವುದು ನಮಗೀಗ ಉಳಿದಿದೆ (ಸಾಹಿಶ್ರ. ೨೯೮). [ಸಂ.]

**ಮೌಲ್ವಿ** (ನಾ). ಮುಸಲ್ಮಾನರ ಧರ್ಮಗುರು : ಅವನ ಬೋಧನೆಯನ್ನನುಸರಿಸಿ ಮೌಲ್ವಿಗಳೂ ಉಲಮಾಗಳೂ ದೇಶದೇಶಗಳಿಗೂ ಹೋಗಿ . . . ಗ್ರಂಥರಚನೆ ಮಾಡಿ (ಕೃಗಂಶಿ. ೦೬೫) ; ಅಲ್ಲಿಯ ಮೌಲ್ವಿಯೇ ಅವನಿಗೆ ಒಂದು ಕಂಬಳಿಯನ್ನು ಕೊಟ್ಟಿದ್ದರು (ದೂರಪ. ೦೨೮) ; ದೊಡ್ಡ ದೊಡ್ಡ ಅಧಿಕಾರಿಗಳೂ, ಮೌಲ್ವಿಗಳೂ . . . ರಾಜಾಗಮನಕ್ಕೆ ಪೂರ್ವಭಾವಿಯಾಗಿ ಸಿದ್ಧರಾಗಿ ಕಾದಿದ್ದರು (ಕಠಾ. ೫೪೧).
[ ←ಅರ. ಮವ್‌ಲ್ವೀ: ಪಾರ. ಮರಾ. ಹಿಂ. ಮೌಲವೀ ]

**ಮೌವರಿ** ‘ ಮೌರಿ~1~ ’ ನೋ.

**ಮೌಸಿ** ‘ ಮಾವಶಿ ’ ನೋ.

**ಮೌಸೂಫ** (ಗು). ೧. ಮೇಲೆ ಹೇಳಿದ ; ಹಿಂದೆ ಹೇಳಿರುವ. (ನಾ). ೨. (ಹಿಂದೆ) ಸೂಚಿಸಲಾದ ವ್ಯಕ್ತಿ : ನಿಮ್ಮ ಋಣಾನುಬಂಧ ಪೂರ್ವದಿಂದ ಸರಿಯಾಗಿ ನಡೆದು ಬರುತಿರಲಿಕ್ಕೆ ನಿಮ್ಮಿಂದಾ ಇಂಥಾದ್ದು ಬರಲಿಕ್ಕೆ ಇಲ್ಲ, ಸಾಹೇಬ ಮೌಸೂಫರಿಗೆ ಬಿಟ್ಟು ಕಳುಹಿಸುವಂತೆ ಮಾಡಿಸಬೇಕು (ಐತ್ರಪಾ. ೭೮). [← ಅರ. ಮವ್‌ಸೂಫ್; ಹಿಂ. ಮೌಸೂಫ್; ಮರಾ. ಮೌಸುಫ್, ಮೌಸೂಫ್]

**ಮೌಹಳಿಗ** (ನಾ). ಒಂದು ಬಗೆಯ ಕುದುರೆ : ಜನ್ನನಂ ನೀಲನನಳಗನಂ ತನ್ನ ಕತ್ತಳ ಮೌಹಳಿಗನಂ ತನ್ನ . . . ವಾಹಕರಿರಾ ನೀವು (ಜಸಕೃ. ೬೦–೪೦).
[ ? ]

**ಮೌಹೂರ್ತ** (ನಾ). ಮುಹೂರ್ತಜ್ಞಾನವನ್ನು ಬಲ್ಲವನು; ಜೋಯಿಸ: “ಸಾಂವತ್ಸರಃ . . . ಮೌಹೂರ್ತಃ, ಜ್ಞಾನಿನ್, ಕಾರ್ತಾಂತಿಕಃ – ೮ ಜ್ಯೋತಿಷ್ಯನ ಹೆಸರುಗಳು, ಜೋಯಿಸನು” (ಸಿದ್ಧಾಂಶಿ. ೨೩೮). [ಸಂ.]

**ಮೌಹೂರ್ತಿಕ** (ಗು). ೧. ಕ್ಷಣಿಕವಾದ ; ಕ್ಷಣದ. ೨. ಮುಹೂರ್ತಕ್ಕೆ ಸಂಬಂಧಿಸಿದ, – ಸೇರಿದ. (ನಾ). ೩. = ಮೌಹೂರ್ತ : “ಸಾಂವತ್ಸರಃ, ಜ್ಯೋತಿಷಿಕಃ, ಜ್ಞಾನೀ, ಮೌಹೂರ್ತಿಕಃ . . . ಗಣಕಃ – ಈ ೮ ಜೋಯಿಸಿಗಂ” (ಹಲಾಯು. ೬೭–೨೪೯); ಆತ್ಮೀಯಪುತ್ರೀವಿವಾಹೋತ್ಸವಕ್ಕೆ ಮೌಹೂರ್ತಿಕರಂ ಕರೆದು ದಿವಸಮಂ ಬೆಸಗೊಳ್ವುದುಂ (ಶಿಂಪು. ೪–೩೦ ವ) ; ನೆಟಿಯೆ ಕಯ್ಗೆಯ್ದು ವಧೂವರರಂ ಮೌಹೂರ್ತಿಕ ನಿರೂಪಿತ ಶುಭಮುಹೂರ್ತದೊಳ್ . . . ಪಾಣಿಗ್ರಹಣಾಂಗೆಯ್ಸಿದಾಗಳ್ (ಗಿರಿಜಾ. ೧೦–೧೦೦ ವ). [ಸಂ.]

**ಮೌಳಿ** ‘ ಮೌಲಿ ’ ನೋ.

**ಮೌಳಿಕಾಱ** (ನಾ). (ಆಲಂ) ನಾಯಕ; ಮುಖಂಡ: ‘ ಮೌಳಿಕಾಱತನ ’ ಪರಾ. [ಮೌಳಿ (=ಮೌಲಿ) + – ಕಾಱ]

**ಮೌಳಿಕಾಱತನ** (ನಾ). (ಆಲಂ) ನಾಯಕನಾಗಿರುವಿಕೆ ; ಮುಖಂಡನಾಗಿರುವಿಕೆ : ಮೌಳಿಕಾಱತನದಿಂದೊಮ್ಮೊಮ್ಮೆ ತನ್ನ ಭುಜಾದಂಡಮಂ ತಿರುಗಿ ನೋಡುತುಂ (ಪಂಭಾರ. ೪–೯೭). [ಮೌಳಿಕಾಱ + – ತನ]

**ಮೌಳಿಮಣಿ** (ನಾ). ಕಿರೀಟದ ರತ್ನ ; ಮಕುಟ ಮಣಿ : ಪ್ರಥಿತಪೃಥಿವೀಪಾಲೌಘಾನಮ್ರಮೌಳಿಮಣಿ ಪ್ರಭಾಗ್ರಥಿತಪದಪೀಠಾಗ್ರಂ ಕೇಯೂರವಂ ತಳೆವಂದದಿಂ ಪೃಥುಳಭುಜದಿಂ ಪೃಥ್ವೀಶಂ ತಾಳ್ದಿದಂ ನೆಲನೆಲ್ಲಮಂ (ಕಾದಂಪೂ. ೦೭) ; ಯಾದವಮಹೀಭುಜಮೌಳಿಮಣಿಬ್ರಜಪ್ರಭಾಲಿಂಗಿತಪಾದಪೀಠಂ (ಕಾಇಆ. XX, ೯೭–೭ ; 1074) ; ಓಲಗಿಸುವುದು ಮಿತ್ರರಾಯರ ಮೌಳಿಮಣಿ ಪಾಂಡುವಿನ ಚರಣನಖಾಳಿಯನು ಸೆಣಸುವ ಮಹೀಶ್ವರ ಮೌಳಿಮಣಿಕಿರಣ ಓಲಗಿಸಿತು ಪ್ರಣಯದಮರೀ ಬಾಲೆಯರ ಪದನಖವನು (ಕುಮ್ಯಾಆ. ೪–೭). [ಸಂ. ಮೌಲಿಮಣಿ]

**ಮ್ಯಾಚು** (ನಾ). ೧. ಸರಿಹೊಂದುವುದು ; ಜೋಡಿ : ಇದಕ್ಕೆ ಮ್ಯಾಚು ಆಗೋ ಬ್ಲೌಸುಪೀಸು ತಂದುಕೊಡಿ (ಅಮ್ಮಾಪ. ೬೦). ೨. (ಆಟಗಾರರು) ಪರಸ್ಪರ ಪ್ರತಿಸ್ಪರ್ಧಿಗಳಾಗಿ ನಿಂತು ಆಡುವ ಆಟ ; ಪಂದ್ಯ : ಅಂದು ಅವರ ಶಾಲೆಯಲ್ಲಿ ಹಾಕಿ ‘ಹಾಕಿ’ ಮ್ಯಾಚು ಬೇರೆ ಇತ್ತಂತೆ (ಚಂದುಬಿ. ೦೩) ; ಅದು ಹೋಗಲಿ ಬಿಡು. ಮ್ಯಾಚಿನಲ್ಲಿ ಏನಾಯಿತು ? (ಪುಜಾಗ. ೦೭). [←ಇಂ. Match]

**ಮ್ಯಾಜಿಸ್ಟ್ರೇಟ್** (ನಾ). ರಾಜ್ಯಸಂಸ್ಥಿತಿಶಾಖೆಯ ದಂಡಾಧಿಕಾರಿ : ನ್ಯಾಯಾಧಿಪತಿ ; ನ್ಯಾಯಾಧಿಕಾರಿ : ಪೋಲಿಸ್ ಮತ್ತು ಮ್ಯಾಜಿಸ್ಟ್ರೇಟ್ ಆಡಳಿತಗಳು (ಗ್ರಾಮಾಳ. ೪೫) ; ನಿಮ್ಮ ರೆಸಿಡೆಂಟ್ ಮ್ಯಾಜಿಸ್ಟ್ರೇಟರು ಕೂಡ (ಪುಂಶ್ಯಾರಿ. ೭೭). [←ಇಂ. Magistrate]

**ಮ್ಯಾಣ** ‘ ಮಯಣ ’ ನೋ.

**ಮ್ಯಾಣಗಪ್ಪಟ** ‘ ಮೇಣಗಪ್ಪಡ ’ ನೋ.

**ಮ್ಯಾನಾ** ‘ ಮೇನಾ ’ ನೋ.

**ಮ್ಯಾನೇಜರಿಕೆ** (ನಾ). ವ್ಯವಸ್ಥಾಪಕನ ಅಧಿಕಾರ, –ಹುದ್ದೆ : ಅವನ ಮ್ಯಾನೇಜರಿಕೆಯನ್ನು ನೋಡಿ ನನಗೂ ಆಶ್ಚರ್ಯವೆನ್ನಿಸಿತು (ರಂಗರೋ. ೧೯೯). [ಮ್ಯಾನೇಜರು + –ಇಕೆ]

**ಮ್ಯಾನೇಜರು** (ನಾ). (ವ್ಯಾಪಾರ, ಸಂಸ್ಥೆ ಮೊದಲಾದವುಗಳ) ಕಾರ್ಯನಿರ್ವಾಹಕ ; ವ್ಯವಸ್ಥಾಪಕ : ಅವನಿಗೆ ಬುದ್ಧಿ ಹೇಳಬಾರದೆ ಎಂದೆ. ಮ್ಯಾನೇಜರವರು ಒಳಕ್ಕೆ ಧಾವಿಸಿದರು (ನಾಡಿಗೇ. ೨೦೦). [←ಇಂ. Manager]

**ಮ್ಯುಜಿಯಂ** 'ಮ್ಯೂಸಿಯಂ' ನೋ.

**ಮ್ಯುಝಿಯಮ್ಮು** 'ಮ್ಯೂಸಿಯಂ' ನೋ.

**ಮ್ಯೂಸಿಯಂ**, ಮ್ಯುಜಿಯಂ, ಮ್ಯುಝಿಯಮ್ಮು (ನಾ). ಪುರಾತನ ಅವಶೇಷಗಳನ್ನು ಸಂಗ್ರಹಿಸಿ ಪ್ರದರ್ಶಿಸುವ ಮಂದಿರ ; ವಸ್ತು ಸಂಗ್ರಹಾಲಯ : ವಸ್ತುಸಂಗ್ರಹಾಲಯಗಳು (ಮ್ಯೂಸಿಯಂ) ಜನತೆಯ ಶಿಕ್ಷಣಕ್ಕೆ ನೆರವಾಗುತ್ತವೆ (ಶಿಕ್ಷಣ. ೫೮). **ಮ್ಯುಜಿಯಂ** : ಅಲ್ಲಿಯೇ ಸಮೀಪದಲ್ಲಿದ್ದ . . . 'ಮ್ಯುಜಿಯಮ್' ಬಳಿ ಬಂದ (ಎಡಹ. ೭೮). **ಮ್ಯುಝಿಯಮ್ಮು** : ವಿಜಾಪುರ ಮ್ಯುಝಿಯಮ್ಮಿನಲ್ಲಿರುವ ವಿಕ್ರಮನ ಕಾಲದ ಒಂದು ಮಹಾಶಾಸನವನ್ನೋದಿ (ಶಾಹಿಸಂ. ೭). [← ಇಂ. Museum]

**ಮ್ರಿತ್ತು** 'ಮಿಟ್ಟು' ನೋ.

**ಮ್ಲಾನ** (ಗು). ೧. ಮುದುಡಿದ ; ಬಾಡಿದ ; ಮಸುಕಾದ : ಮ್ಲಾನ ಮುಖಚಂದ್ರಂ ನರೇಂದ್ರನವಳೆಡೆಗೋಡಿದನ್ (ಶ್ರೀರಾಮಪ. ೭೭-೭೭೨). ೨. ದಣಿದ ; ಬಳಲಿದ ; ಜಡವಾದ : ಮ್ಲಾನ, ಶೂನ್ಯ . . . ಋಜು ದಿಗಂತದಿ ಗಗನಕೆದುರು ನಿಂತಿದೆ ತರು (ಅಶೀ. ೦೪-೦). ೩. ದುಃಖದಿಂದ ಕೂಡಿದ ; ಜುಗುಪ್ಸೆಗೊಂಡ. ೪. ಕೊಳಕಾದ : ಹೊಲಸಾದ ; ಮಾಸಿದ. ೫. ಕಪ್ಪಾದ ; ಕಪ್ಪುಬಣ್ಣದಿಂದ ಕೂಡಿದ. (ನಾ). ೬. ಬಾಡಿದುದು ; ಕಳೆಗುಂದಿದುದು : ವಿರಹಪರವಶಾಂಗಂ ತ್ಯಕ್ತ ಜಾಯಾನುಷಂಗಂ . . . ದರವಿಚಳದಪಾಂಗಂ ಮ್ಲಾನಮಾಯ್ತಾ ರಥಾಂಗಂ (ಚಂದ್ರಶೇ. ೬-೫). ೭. ಕೊಳಕಾದುದು : ಮಾಸಿದುದು ; ಮಲಿನವಾದುದು : "ಕಿಲ್ಬಿಷಂ, ಮಲಿನಂ, ಮ್ಲಾನಂ, ಮಲೀಮಸಂ— ಈ ೪ ಮಾಸಿದುದು" (ಕರ್ಣಾಟ. ೦೨೦-೯೨). ೮. ಹೀನವಾದುದು ; ಕೀಳಾದುದು : ಅವರ ಸಾಹಸ ಎಷ್ಟು ಮ್ಲಾನವಾದ್ದು (ಶಿವಂದ. 1, ೭೦). [ಸಂ.]

**ಮ್ಲಾನತೆ** (ನಾ). ೧. ಕಾಂತಿಹೀನತೆ : ಮಾನವಕನ್ಯೆಯಂ ಬಯಸಿ ನಂಮನ ನಿನ್ನ ಮನಕ್ಕೆ ಚಿಂತೆಯಂ ಮ್ಲಾನತೆಯಂ ಮುಖಕ್ಕೆ ತರವೇಟ್ಟುದೆ (ಶಂರಾಮಾ. ೯-೯೮). ೨. ದಣಿವು; ಬಳಲಿಕೆ : ಮಾಸ್ಟೆನಿಕೋವನ ಮುಖ ಚರ್ಯೆಯಲ್ಲಿ ನಿರುತ್ಸಾಹ ಮ್ಲಾನತೆಗಳು ತಲೆದೋರಿದುವು (ಕವಸು. ೨೫೦). ೩. ದುಃಖ : ಒರಿದುಂ ಬಿದಿ ನಿಜಜನ್ಮಾಕರಮೆನಿಸುವ ಪದ್ಮಜಾತಿಗಂ ಮ್ಲಾನತೆಯಂ ದೊರೆಕೊಳಿಸಿದನೆನೆ ಮತ್ತಿತರರೊಳದಂ ಮಾಟ್ಪ ಕೃಪೆ ಬಿಪುಳಪ್ಪುದಲ್ತೇ (ಚಂದ್ರಶೇ. ೮-೦೯). [ಸಂ. ಮ್ಲಾನತಾ]

**ಮ್ಲಾನೆ** (ನಾ). ಕಳೆಗುಂದಿದವಳು ; ಸೊರಗಿದವಳು : ಕುಡಿ ಮುರುಟಿ, ಸೊರಗುವಾ ಲತೆಯವೋಲ್ ಮ್ಲಾನೆಯುಂ . . . ಕೌಸಲ್ಯೆಯಂ ಕಂಡನ್ (ಶ್ರೀರಾಮಪ. ೧೦೫-೧೦೭). [ಸಂ. ಮ್ಲಾನಾ]

**ಮ್ಲೇಂಛ** (ನಾ). ಸುಸಂಸ್ಕೃತನಲ್ಲದವನು ; ಅನಾಗರಿಕ ; ಅನಾರ್ಯ ದೇಶದವನು ; ಯವನ : "ಮ್ಲೇಂಛ–ಮ್ಲೇಚ್ಛ, ಕಿರಾತ, ಅನಾರ್ಯ" (ತದ್ಭಕೋ. ೬೭); ರಾಧಕ್ಕನು. . . ಈ ಮ್ಲೇಂಛನ ಮನೆಯಲ್ಲಿ ವಾಸವಾಗಿದ್ದಳು (ಚಿದಂತ. ೪೭೭) ; ಸಾಲ್ವದೊರೆ ಒಬ್ಬ ಮ್ಲೇಂಛ ಎಂದಿದೆಯೇ ಹೊರತು, ರಾಕ್ಷಸ ಎಂದಿಲ್ಲ (ಸ್ವಕ್ಯಹೊ. ೩೦೦). [< ಸಂ. ಮ್ಲೇಚ್ಛ]

**ಮ್ಲೇಂಛಖಂಡ** (ನಾ). ಐವತ್ತಾರು ದೇಶಗಳಲ್ಲಿ ಒಂದು; ಅನಾರ್ಯರು ವಾಸಿಸುತ್ತಿದ್ದ ದೇಶ ; ಯವನದೇಶ : ದಕ್ಷಿಣಭರತದ ನರರಂ ವಿದ್ಯಾಧರರನಡಿಗೆಱಗಿಸಿ ಬಟೆಯುಂ ಮ್ಲೇಂಛಖಂಡಮಂ ಬಾಯ್ಕೊಳಿಸಿ ಚಕ್ರ ಪೂಜೆಗೆಯ್ದು (ಆಪು. ೯-೩೪ ವ). [< ಸಂ. ಮ್ಲೇಚ್ಛಖಂಡ]

**ಮ್ಲೇಚ್ಛ** (ನಾ). ೧. = ಮ್ಲೇಂಛಖಂಡ : ಮತ್ತಮಾ ಭಾರತವರ್ಷದಲ್ಲಿಯೇ ಅಂಗ. . . ಮ್ಲೇಚ್ಛ [ಪಾಠಾಂ. ಮ್ಲೇಂಛ] ದ್ರಾವಿಡ ಕರ್ನಾಟಕ ಮೊದಲೈವತ್ತಾಱು ದೇಶಂಗಳಕ್ಕುಂ (ವಿವೇಕ. ೦೯೫). ೨. ಅನಾರ್ಯ ದೇಶದವನು; ಯವನ : ಮ್ಲೇಚ್ಛರೆಂದರೆ ನಿಮಗೆ ಬಹಳ ಅಸಹ್ಯ (ಭಾರತ. ೩೯). ೩. ಕೆಟ್ಟವನು; ನೀಚ : ವಣಿಕೇನೆಂದು ಪೊಗಟಲಱಿಯಂ ಮ್ಲೇಚ್ಛಂ (ಜನಾಕ. ೭). ೪. ಕೀಳುಜಾತಿಯವನು : "ಕಿರಾತಃ, ಶಬರಃ, ಮ್ಲೇಚ್ಛಃ – . . . ಈ ೮ ಬೇಡಮೊದಲಾಗುಳ್ಳಂತ್ಯಜಾತಿಗಳ್" (ಕರ್ಣಾಟ. ೯೬-೯೯೫): ಆ ಪಕ್ಕಿಯಂ ಕ್ರೂರರುಂ ಮ್ಲೇಚ್ಛರುಮಪ್ಪ ಬೇಡರ್ ಕೊಂದು ಪೋದರ್ (ಶಂಕರ. ೦೨೦-೦೦). [ಸಂ.]

**ಮ್ಲೇಚ್ಛಖಂಡ** (ನಾ). = ಮ್ಲೇಂಛಖಂಡ : ತೆಱೆವ ತೆಱನಿಂತುಟೆಂತೀ ತೆಱದಿಂದೆ ತಮಿಸ್ರಗುಹೆಯ ವಜ್ರದ ಪಡಿಯಂ ತೆಱೆದದಱ ಬೆಂಕೆ ಪೋಪಿನ ಮೆಱಗಿಸು ನೀಂ ಮ್ಲೇಚ್ಛಖಂಡಮಂ ಪಡುವಣದಂ (ಆಪು. ೦೩-೩೩); ಮೂಡಣ ಮ್ಲೇಚ್ಛಖಂಡಮಂ ದಂಡನಾಯಕಂ ಬಾಯ್ಕೊಳಿಸಿ (ಶಾಂತಿಪು. ೦೦-೭೭ ವ). [ಸಂ.]

**ಮ್ಲೇಚ್ಛದೇಶ** (ನಾ). = ಮ್ಲೇಂಛಖಂಡ : "ಮ್ಲೇಚ್ಛದೇಶಃ. . . ಭಾರತವರುಷದ ತುದಿಯಲ್ಲಿರುವ ಕಾಮರೂಪಾದಿ ದೇಶದ ಹೆಸರು. ಅಂದರೆ ಅರಬ್ಬಿಸ್ತಾನ್. . . ಮುಂತಾದ ಸಮುದ್ರ ಬೆಟ್ಟ ಇವುಗಳ ಹೊರಗಿನ ದೇಶಗಳು" (ಸಿದ್ಧಾಂತಿ. ೯೪). [ಸಂ.]

**ಮ್ಲೇಚ್ಛಭಾಷೆ** (ನಾ). ಮ್ಲೇಚ್ಛದೇಶದವರ ಭಾಷೆ ; ಅನಾರ್ಯರ ಭಾಷೆ. [ಸಂ. ಮ್ಲೇಚ್ಛಭಾಷಾ]

**ಮ್ಲೇಚ್ಛಮುಖ** (ನಾ). ಕೆಂಪುಬಣ್ಣದ ಒಂದು ಬಗೆಯ ಲೋಹ ; ತಾಮ್ರ: "ತಾಮ್ರಕಂ, ಶುಲ್ಬಂ, ಮ್ಲೇಚ್ಛಮುಖಂ . . . ತಾಮ್ರದ ಪೆಸರುಗಳು" (ಸಿದ್ಧಾಂತಿ. ೩೦೯). [ಸಂ.]

**ಮ್ಲೇಚ್ಛರಾಜ** (ನಾ). ಅನಾರ್ಯದೇಶದ ರಾಜ; ವಿದೇಶದ ರಾಜ; ಯವನ ರಾಜ : ವಸ್ತುವಾಹನಪುರಸ್ಸರಂ ಮ್ಲೇಚ್ಛರಾಜರಂ ಲಲಾಟ ಘೃಷ್ಟಭೂತಳರಂ ಮಾಡಿ (ಆಪು. ೦೩-೯೦ ವ); ಮೂಡಣ ಮ್ಲೇಚ್ಛಖಂಡಮಂ ದಂಡನಾಯಕಂ ಬಾಯ್ಕೊಳಿಸಿ ತಂದಾ ಮ್ಲೇಚ್ಛರಾಜರಂ ಕಾಣಿಸಿಯುಂ (ಶಾಂತಿಪು. ೦೦-೭೭ ವ). [ಸಂ. ಮ್ಲೇಚ್ಛರಾಜನ್]

*

**ಯ** (ನಾ). ೧. ಕನ್ನಡವರ್ಣಮಾಲೆಯಲ್ಲಿ ನಲವತ್ತಾರನೆಯ ಅಕ್ಷರ. ೨. [ಛಂದ] ಅಕ್ಷರಗಣಗಳಲ್ಲಿ ಒಂದು ; ಆದಿಯಲ್ಲಿ ಒಂದು ಲಘು, ಮುಂದೆ ಎರಡು ಗುರುಗಳಿರುವ ಗಣ ; ಯಗಣ ( – –) : "ಮಯರಸತಜಭನಂ ಲಗವೆನಿಪ್ಪಕ್ಷರಂ ಗಣಾಕ್ಷರಂಗಳಕ್ಕುಂ" (ಛಂಗಣಿ. ೧೧೬-೧೯). ೩. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : "ನಿರುತದಿಂ ಕಟಪಯಮೊನಲ್ಕೊಂದು" (ಛಂಗಣಿ. ೧೧೯-೧೦).

**ಯಂತರ** 'ಜಂತ್ರ' ನೋ.

**ಯಂತೃ** (ಗು). ೧. ನಿಗ್ರಹಿಸುವ ; ನಿಯಂತ್ರಿಸುವ. ೨. ನಡೆಸಿಕೊಂಡು ಹೋಗುವ ; ಮಾರ್ಗದರ್ಶಕವಾದ. (ನಾ). ೩. ನಿಯಂತ್ರಿಸುವವನು ; ನಿಯಾಮಕ. ೪. ಬಂಡಿಹೊಡೆಯುವವನು ; ಸಾರಥಿ : "ರಥಚೋದಕನಕ್ಕುಂ ಸಾರಥಿ ಸೂತಂ ಕ್ಷತ್ತೃ ಯಂತೃ ಸವ್ಯೇಷ್ಠ[ಕನುಂ]" (ಅಸ. ಕೋ. ೬೬-೩೦). ೫. ಆನೆಸವಾರಿ ಮಾಡುವವನು ; ಆನೆಸವಾರ. [ಸಂ.]

**ಯಂತ್ರ** (ನಾ). ೧. ಏನನ್ನಾದರೂ ಕಟ್ಟುವ, ಹಿಡಿಯುವ ಹಾಗೂ ನಿಯಂತ್ರಿಸುವ ಸಾಧನ, – ಉಪಕರಣ : 'ಯಂತ್ರಪ್ರಯೋಗ' ಪರಾ. ೨. (ಗಾಲಿ, ಕೀಲುಗಳ ಜೋಡಣೆಯಿಂದ) ಕೆಲಸ ಮಾಡಲು ಸಹಾಯಕವಾಗುವ ಉಪಕರಣ,—ಸಾಧನ; ಇಂಜಿನ್ನು : ಉಗಿಯಿಂದ . . . ಯಂತ್ರಗಳು ನಡೆಯುತ್ತವೆ (ಮುಂಬಯಿ ೯೯-೯೯). ೩. ತಾಂತ್ರಿಕಪೂಜೆಗಾಗಿ, ಕೆಲವು ಮಂತ್ರಾಕ್ಷರಗಳೊಂದಿಗೆ ಸಾಮಾನ್ಯವಾಗಿ ತಾಮ್ರದ ತಗಡಿನ ಮೇಲೆ ಬರೆದಿಡುವ ಆಕೃತಿ ; ಶ್ರೀಚಕ್ರ : ಯಂತ್ರಂಗಳುಮಮಿತಮಹಾಮಂತ್ರಂಗಳುಮನುಪಮಾನೆ ಮೆನಿಸಿದ ಪಲವುಂ ತಂತ್ರಗಳುಮೇಂ ಕಾವುವೆ ಸಂತ್ರಾಸಕರೋಗ್ರ ಮೃತ್ಯು ರಾಜನ ಬರವಂ (ಜೀವಸಂ. ೩೦-೩) ; ಯಂತ್ರದ ತಾಯಿತಿಗಳಂ ಮಡಗಿ (ಸೌಗಂಧಿ. ೧೬೬-೧೧) ; 'ಚಿತಿ' ಎಂದರೆ ಯಜ್ಞವೇದಿಕೆ ಕುಂಡ. ಇವು ಅನುಭಾವಪೂರ್ಣವಾದ ರೇಖಾಕೃತಿಗಳಿಂದ ರಚಿತವಾಗಿ ಕ್ರಮೇಣ ಚಕ್ರ, ಯಂತ್ರ ಎಂಬ ರೂಪಗಳಾದುವು (ಸೌಂದರ್ಯ. ೦೨೦). ೪. ರೋಗ ನಿವಾರಣೆ ಅಥವಾ ಭೂತಪಿಶಾಚಿಗಳ ಬಾಧೆ, ಅಂಜಿಕೆ ಮುಂತಾದುವುಗಳ ಪರಿಹಾರಕ್ಕೆಂದು ಕಟ್ಟುವ ತಾಯಿತಿ : ತುರುಕಾರ ಗಾಳಿ ಹಿಡಿದದೆ ನಿನಗೆ. ಭಾರಿ ಯಂತ್ರವ ಕಟ್ಟಿಸಲುಬೇಕು (ಹೆಣ್ಣಾ. ೯೨).

**ಯಂತ್ರಕಟ್ಟು** = ತಾಯಿತಿಯನ್ನು ಕಟ್ಟು : ಬಾಲಗ್ರಹವೆಂದು ಮಗುವಿಗೆ ಯಂತ್ರಕಟ್ಟಿದ್ದಾರೆ (ರೂಢಿ). [ಸಂ.]

**ಯಂತ್ರಕರ್ಮಿ** (ನಾ). ಯಂತ್ರದಿಂದ ಕೆಲಸಮಾಡುವವನು ; ಯಂತ್ರದ ಕೆಲಸ ಬಲ್ಲವನು ; ಯಂತ್ರಕಾರ : "ಯಂತ್ರಶಿಲ್ಪಿ, ಯಂತ್ರಕರ್ಮಿ, ಯಂತ್ರಿಗ" (Mechanic. ಇಂಕ).

[ಸಂ. ಯಂತ್ರಕರ್ಮಿನ್]

**ಯಂತ್ರಕಲೆ** (ನಾ). ಯಂತ್ರಗಳನ್ನು ನಡೆಸುವ ವಿದ್ಯೆ, – ಜಾಣ್ಮೆ : (+). [ಸಂ. ಯಂತ್ರಕಲಾ]

**ಯಂತ್ರಕಾರ** (ನಾ). = ಯಂತ್ರಕರ್ಮಿ : ಆಯುಧಂಗಳಂ ಧರಿಸಿದ ವಡ್ಡರು ಯಂತ್ರಕಾರರು . . . ಗಾರೆಕೆಲಸದವರು ವೃಕ್ಷಗಳಂ ಕಡಿಯುವರು ಭಾವಿಗಳಂ ತೆಗೆಯುವರು (ಸೌಗಂಧಿ. ೦೩೩-೦೩). [ಸಂ.]

**ಯಂತ್ರಚಾಲಕ** (ನಾ). ಯಂತ್ರನಡಸುವವನು : ಯಂತ್ರಚಾಲಕನು ಯಂತ್ರದ ಕೈಮಣೆಯ ಮುಂದೆ ಕುಳಿತು ಬೇಕಾದ ಅಕ್ಷರದ ಗುಂಡಿಯನ್ನು ಬೆರಳಿನಿಂದ ತುಸು ಒತ್ತುವನು (ಮುದ್ರಕ. ೯೯). [ಸಂ.]

**ಯಂತ್ರಚಾಲಿತ** (ನಾ). ಯಂತ್ರದಿಂದ ನಡೆಯುವಂತಹುದು ; ಯಂತ್ರ ಸಹಾಯದಿಂದ ಕೆಲಸಮಾಡುವಂತಹುದು : ಯಂತ್ರಚಾಲಿತವಾದ ಕೈಗಾರಿಕೆಗಳಲ್ಲಿ ಹೇಗೆ ದೊಡ್ಡ ಪ್ರಮಾಣದಲ್ಲಿ ಕಾರ್ಯವ್ಯವಸ್ಥೆ ಮಾಡಬಹುದೋ ಹಾಗೆ ಮಾಡಲು ಸಾಧ್ಯವಾಗದು (ಹಣಶ್ರ. ೦೩೩). [ಸಂ.]

**ಯಂತ್ರಣ** (ನಾ). ಹತೋಟಿ ; ಅಂಕೆ ; ನಿಗ್ರಹ. [ಸಂ.]

**ಯಂತ್ರಧಾರಾಗಾರ** (ನಾ). ನೀರನ್ನು ಮಳೆಯಂತೆ ಧಾರಾಕಾರವಾಗಿ ಸಿಂಪಡಿಸುವ ಯಂತ್ರವನ್ನು ಅಳವಡಿಸಿದ ಸ್ನಾನಗೃಹ : ಸುಖದ ದೋಣಿ ಸುಖದ ದೀರ್ಘಿಕೆ ಸುಖದ ಕೊಳಂ ಸುಖದ ಯಂತ್ರಧಾರಾಗಾರಂ (ಶ್ರೀಶದಾ. ೬೬). [ಸಂ.]

**ಯಂತ್ರಧಾರಾಗೃಹ** (ನಾ). = ಯಂತ್ರಧಾರಾಗಾರ : ಮತ್ತಮಾ ರಾಜಭವನಂ . . . ಅನಿಯಂತ್ರ ಯಂತ್ರಧಾರಾಗೃಹಂಗಳಿಂ ಸವರ್ಷಾಸಮಯದಂತೆಯುಂ . . . ಎಸೆವುದು (ಚಂದ್ರಪ್ರ. ೧೧-೭೯ ವ). [ಸಂ.]

**ಯಂತ್ರನಾಗರಿಕತೆ** (ನಾ). ಮಾನವಶಕ್ತಿಯನ್ನು ಬಿಟ್ಟು ಯಂತ್ರಗಳಿಗೆ ಪ್ರಾಧಾನ್ಯನೀಡುವ ವಿಧಾನದ ನಾಗರಿಕಜೀವನ : ಯಂತ್ರನಾಗರಿಕತೆಯ ವಿಜ್ಞಾನಬುದ್ಧಿ ತಾನಲ್ಲಿ ಪಡೆದಿತ್ತು ಪರಮಸಿದ್ಧಿ (ಕೋಗಿಲೆ. ೨-೨೯). [ಸಂ. ಯಂತ್ರನಾಗರಿಕತಾ]

**ಯಂತ್ರಪ್ರಯೋಗ** (ನಾ). ಯಂತ್ರಗಳನ್ನು ನಡೆಸುವಿಕೆ : ಸ್ಮರಮಂತ್ರಂ ಬಹುಭಾಷಾಪರಿಚಿತಿ ಯಂತ್ರಪ್ರಯೋಗಮಖಿಲವ್ಯೂಹೋತ್ಕರಮೆಂಬಿನಿತ ಜೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪದ. ೯-೩೦). 'ಚೌಷಷ್ಟಿಕಲೆ' ಪರಾ. [ಸಂ.]

**ಯಂತ್ರಮುಕ್ತ** (ನಾ). ಯಾಂತ್ರಿಕಸಾಧನದ ಸಹಾಯದಿಂದ ಪ್ರಯೋಗಿಸುವ ಬಿಲ್ಲು ಮೊದಲಾದ ಆಯುಧ, –ಅಸ್ತ್ರ : "ಆ ಕಯ್ದು ಮುಕ್ತಾಮುಕ್ತಂ, ಅಮುಕ್ತಂ, ಕರಮುಕ್ತಂ, ಯಂತ್ರಮುಕ್ತಮೆಂ(ದು) ಬುದು ನಾಲ್ಕು ತೆಱನಕ್ಕುಂ . . . ಅಂಬು ಮೊದಲಾದುದು ಯಂತ್ರಮುಕ್ತಮೆಂಬುದು" (ಪಂಪಾಯು. ೬೬-೩೦೯) ; ಅಗ್ನಿಪುರಾಣವು ಆಯುಧಗಳನ್ನು ಅಸ್ತ್ರ ಮತ್ತು ಶಸ್ತ್ರಗಳೆಂದು ಎರಡುಭಾಗಗಳಾಗಿ ವಿಂಗಡಿಸುತ್ತದೆ. ಇವುಗಳಲ್ಲಿ ಮೊದಲನೆಯದನ್ನು (೧) ಯಂತ್ರಮುಕ್ತ, (೨) ಪಾಣಿಮುಕ್ತ, (೩) ಮಂತ್ರಮುಕ್ತ, (೪) ಮುಕ್ತಸಂಧಾರಿತ (ಬಿಟ್ಟು ಹಿಂದಕ್ಕೆ ಪಡೆದದ್ದು) ಎಂದು ನಾಲ್ಕಾಗಿ ವಿಭಾಗಿಸುತ್ತದೆ (ಕಶಾಂ. ೨೬೨). [ಸಂ.]

**ಯಂತ್ರಯುಗ** (ನಾ). ಯಂತ್ರನಾಗರಿಕತೆಯ ಅಭಿವೃದ್ಧಿಯ ಕಾಲ ; P ಇಂಗ್ಲೆಂಡಿನಲ್ಲಿ Industrial revolution ಎಂಬ ಹೆಸರಿನ ಕ್ರಾಂತಿ ನಡೆದ ಕಾಲದ ಪರಿಣಾಮವಾಗಿ ಈ ಶಬ್ದ ಪ್ರಯೋಗವಾಗುತ್ತಿದೆ : ಹದಿನೆಂಟನೆಯ ಶತಮಾನದಲ್ಲಿ ಯೂರೋಪಿನಲ್ಲಿ . . . ಯಂತ್ರಯುಗವು ಹುಟ್ಟಿ ಸಕಲಆರ್ಥಿಕಉದ್ಯೋಗಗಳೂ ಯಂತ್ರೋಪಕರಣಗಳ ದ್ವಾರಾ ನಡೆಯಲಾರಂಭಿಸಿತು (ಭಾರದ. ೩೩೬). [ಸಂ.]

**ಯಂತ್ರವಾಹಕ** (ನಾ). ೧. ಯಂತ್ರವನ್ನು ನಡೆಸುವವನು ; ಯಂತ್ರಚಾಲಕ. ೨. (ಆಲಂ) ಸೂತ್ರಧಾರ : ನೆಲದ ಬೊಂಬೆಯ ಮಾಡಿ ಜಲದ ಬಣ್ಣವನುಡಿಸಿ . . . ಆಡಿಸುವ ಯಂತ್ರವಾಹಕನಾರೋ (ಅಪಕಾ. ೩-೧೬) ; ಯಂತ್ರವಾಹಕ ನೀನೆ ಒಳಗಿದ್ದು ಎನ್ನ ಸ್ವತಂತ್ರನೆಂದೆನಿಸಿ ಕೊಲಿಸುವರೆ

ಹೇಳೊ (ಶರಂವ. ೨-೯೯-೩) ; ಚಿಂತೆ ಮಾಡಿದರೆಯೆನ್ನಾಣೆ ತಾಯೆ ಯಂತ್ರ ವಾಹಕ ಶಿವನಾಣೆ (ಶಿಶಸಾಂ. ೬-೯೭). [ಸಂ.]

**ಯಂತ್ರಶಾಸ್ತ್ರ** (ನಾ). ೧. ಯಂತ್ರಗಳ ರಚನೆ, ಕಾರ್ಯ ಮೊದಲಾದುವುಗಳನ್ನು ವಿವರಿಸುವ ಶಾಸ್ತ್ರ : ಯಂತ್ರಶಾಸ್ತ್ರದ (Theoretical Mechanics) ಪ್ರತಿಪಾದಕರಲ್ಲಿ ಮೊದಲಿಗನು ಅರ್ಕೈಟಸ್ (ಶಿಲ್ಪಶಾ. ೯೭). ೨. (ಹವನ, ಹೋಮಾದಿ ಕರ್ಮಗಳಿಗಾಗಿ) ಶ್ರೀಚಕ್ರ ಮುಂತಾದ ಯಂತ್ರಗಳನ್ನು ರಚಿಸುವ ಶಾಸ್ತ್ರ : ಯಂತ್ರಶಾಸ್ತ್ರಜಾಲಲೋಲರಾಗಮಜ್ಞರುಲ್ಲಸತ್ತಂತ್ರಸಾರಸಾರ್ವಭೌಮರ್ . . . ಮಂತ್ರಶೂರರೊಪ್ಪಿದರ್ ತದೀಯ ಯಾಗಶಾಲೆಯೊಳ್ (ಉದ್ಭಟ. ೪-೩೨). [ಸಂ.]

**ಯಂತ್ರಶಿಲ್ಪ** (ನಾ). ಯಂತ್ರಗಳನ್ನು ರಚಿಸುವಿಕೆ : "ಯಂತ್ರಶಿಲ್ಪಿತನ, ಯಂತ್ರಶಿಲ್ಪ" (Engineering. ೩೦೪೩). [ಸಂ.]

**ಯಂತ್ರಶಿಲ್ಪಜ್ಞ** (ನಾ). ಯಂತ್ರಗಳನ್ನು ರಚಿಸುವವನು ; ಯಂತ್ರಶಿಲ್ಪವನ್ನು ಬಲ್ಲವನು ; ಎಂಜಿನಿಯರು : ಅನೇಕ ಪೋರ್ಚುಗೀಸ್ ಯಂತ್ರಶಿಲ್ಪಜ್ಞರಿಗೆ ಉದ್ಯೋಗಗಳನ್ನು ಕಲ್ಪಿಸಿ, ಅವರ ಸಹಾಯದಿಂದ ಭವ್ಯವಾದ ದೇವಸ್ಥಾನಗಳನ್ನೂ ಕಟ್ಟಡಗಳನ್ನೂ ನಿರ್ಮಿಸಿದನು (ಕೃದೇವ. ೦೯). [ಸಂ.]

**ಯಂತ್ರಶಿಲ್ಪಿ** (ನಾ). ೧. =ಯಂತ್ರಶಿಲ್ಪಜ್ಞ : "ಎಂಜಿನ್ನುಗಳನ್ನು ರಚಿಸುವವನು : ಯಂತ್ರಶಿಲ್ಪಿ" (Engineer. ೩೦೪೩); ಯಂತ್ರಶಿಲ್ಪಿಯು ಉದ್ದೇಶಿಸಿದ ಎಂಜಿನ್ ಕೆಲಸ ಮಾಡಬೇಕು (ಶಿಲ್ಪಶಾ. ೯೦). ೨. ಯಂತ್ರವನ್ನು ನಡೆಸುವವನು ; ಯಂತ್ರಚಾಲಕ : "ಯಂತ್ರಮಾಡುವವನು ; ಯಂತ್ರಶಿಲ್ಪಿ ; ಯಂತ್ರ ನಡಸುವವನು" (Machinist. ೩೦೪೨). [ಸಂ. ಯಂತ್ರಶಿಲ್ಪಿನ್]

**ಯಂತ್ರಾಗಾರ** (ನಾ). ಯಂತ್ರವಿರುವ ಸ್ಥಳ ; ಕಾರ್ಖಾನೆ : ಈ ಕಡೆ ಬನ್ನಿರಿ ಕಾವಲುಗಾರ ಬಿಡುವನು.ಒಳಗಡೆ ಯಂತ್ರಾಗಾರ (ಕಪಕು. ೪-೦೦೯). [ಸಂ.]

**ಯಂತ್ರಾಪೀಡೆ** (ನಾ). ಸೆಳವು ರೋಗ ; ಎಳವು : ನೆಲಗುಮ್ಮುಡಿಬೇರ್ತಂದು ಒಣಗಿಸಿ ಚೂರ್ಣವ ಮಾಡಿ ವಸ್ತ್ರಗಾಳಿತ ಮಾಡಿ . . . ಅಡಿಗೆ ಮಾಡಿಕೊಡುವುದು. ಯಂತ್ರಾಪೀಡೆ ಮಾಣ್ಗುಂ (ವಿವೈವಿ. ೦೭೦). [ಸಂ. ಯಂತ್ರಾಪೀಡ]

**ಯಂತ್ರೋದ್ಧರಣ** (ನಾ). ಯಂತ್ರವನ್ನು ಬರೆಯುವುದು ; ಯಂತ್ರರಚನೆ : ಅಲ್ಲಿಂ ಪೊಱಗೆ ಹ್ರೀಂಕಾರದಿಂ ತ್ರಿಧಾವೇಷ್ಟನಂ ಮಾಳ್ಪುದು ಇದು ಯಂತ್ರೋದ್ಧರಣಕ್ರಮಂ (ಕ್ರಶಿಕ್ಷಾ. ೦೦-೦೨). [ಸಂ.]

**ಯಂತ್ರೋನ್ಮುಕ್ತ** (ನಾ). = ಯಂತ್ರಮುಕ್ತ : "ಶಕ್ತಿ ಮೊದಲಾಗೆ ಪಾಣಿವಿಮುಕ್ತಂ . . . ಯಂತ್ರೋನ್ಮುಕ್ತಂ ಶರಾದಿ" (ವಸ್ತುಕೋ. ೯೪-೦೪). [ಸಂ.]

**ಯಂತ್ರೋಪಕರಣ** (ನಾ). ಯಂತ್ರಸಾಮಗ್ರಿ ; ಯಂತ್ರದಿಂದ ಮಾಡಿದ ಉಪಕರಣ,—ಸಾಧನ : ನಾವು ಈಗ ಇಲ್ಲಿ ಇವರ ವಿಕಸಿತ ಭಿನ್ನಭಿನ್ನ ಅವಸ್ಥಾವಿಶೇಷಗಳನ್ನು ಯಂತ್ರೋಪಕರಣಗಳ ಮೂಲಕ ನೋಡಲು ಸಾಧ್ಯ (ಜೀವಾತ್ಮ. ೦೭೦); ವಿಜ್ಞಾನಿಗಳು ಈ ಕೆಲಸ ಸಾಧಿಸುವುದಕ್ಕೆ ಗಡಿಯಾರದ ಚಲನೆಯಂಥ ಯಂತ್ರೋಪಕರಣ (Clockwise Mechanisms) ಮಾಡಿಕೊಂಡಿದ್ದಾರೆ (ಅಣುಶ. ೭). [ಸಂ.]

**ಯಃಕಶ್ಚಿತ್** (ಗು). ತೀರಕ್ಷುಲ್ಲಕವಾದ ; ಗಣನೆಗೆ ಬಾರದ ; ಸಾಮಾನ್ಯವಾದ : ಅಂತಹ ಬ್ರಹ್ಮಜ್ಞಾನಿಯಿಂದು ಪುತ್ರಶೋಕದಿಂದ ಹತನಾಗಿ ಯಃಕಶ್ಚಿತ್ ಪಾಮರನಂತೆ ಆತ್ಮಹತ್ಯವನ್ನು ಮಾಡಿಕೊಳ್ಳಲು ಯತ್ನಿಸುತ್ತಿರುವನು (ಮಹಾಶ. ೦೨೦); ನಾಟಕ ನೋಡಲು ಯಃಕಶ್ಚಿತ್ ಸಿಪಾಯಿಯ ಅಪ್ಪಣೆಯೆ ! (ಶಾಪೂರಿ. ೦೭೨). [ಸಂ.]

**ಯಃಕಶ್ಚಿತ** (ನಾ). ೧. ತೀರಕ್ಷುಲ್ಲಕನಾದವನು : ಗಣನೆಗೆ ಬಾರದ ವ್ಯಕ್ತಿ : ಕ್ಷುದ್ರವ್ಯಕ್ತಿ : ಯಃಕಶ್ಚಿತನಾದ ಈ ರಾಜಕಿಶೋರನು ಜೀವದಿಂದಿರುವುದನ್ನು ನಾನು ನೋಡುತ್ತಿರುವೆನು (ತುಳಸೀ. ೯೭). ೨. ತೀರ ಅಲ್ಪವಾದುದು : ಯಃಕಶ್ಚಿತ ಈ ಇಪ್ಪತ್ತು ರೂಪಾಯಿಗಾಗಿ ಇಷ್ಟು ಶ್ರಮಪಟ್ಟು ದುಡಿಯುವುದೇಕೆ ? (ಬಾಗಿಪ. ೨೪). [<ಸಂ. ಯಃಕಶ್ಚಿತ್]

**ಯಃಖ್ತ್ಯಾರಿ** (ನಾ). ಅಧಿಕಾರಿ : ಯಃಖ್ತ್ಯಾರಿಯ ಪ್ರದೇಶವೂ ಸಹ ಒಂದು ಗ್ರಾಮದ ಭಾಗವಾಗಿರುವ ಸಂದರ್ಭದಲ್ಲಿ, ಬಾಕಿ ವಿಷಯದಲ್ಲಿ ಅರ್ಹತೆ ಇದ್ದರೆ, ಪಟೇಲನನ್ನು . . . ಕೋರ್ಟಿನ ಚಾರ್ಜಿಗೆ ನೇಮಿಸತಕ್ಕದ್ದು (ಗ್ರಾಪಟಾಕ. ೦೦). [←ಅರ. ಹಿಂ. ಇಖ್ತಿಯಾರ್ = ಅಧಿಕಾರ]

**ಯಕಾರ** (ನಾ). ಯ ಎಂಬ ಅಕ್ಷರ : ಯಕಾರಕ್ಕೆ – ಕೆಯ್, ಮೆಯ್, ನೆಯ್ (ಶಮದ. ೪೯ ಕ್ರಯೋ). [ಸಂ.]

**ಯಕೃತ್ತು** (ನಾ). ಪಿತ್ತಜನಕಾಂಗ ; ಪಿತ್ತಕೋಶ ; ಈರಿ : "ಯಕೃತ್ ಎಂಬುದು ಕರ್ಗಡ ? [ಕಾಳಿಜ]" (ಹಲಾಯು. ೦೦೪-೦೩); ಆ ನಾಳವು ಯಕೃತ್ತಿ (Liver)ಗೆ ಹೋಗಿ ತನ್ನ ಸಕ್ಕರೆಯ ಭಾಗವನ್ನು ಒಪ್ಪಿಸಿ, ಮುಂದೆ ಸಾಗುವುದು (ಜಾಂಕ್ರ. I, ೩೦೭) : ಶಾರೀರಿಕಶಿಕ್ಷಣದ ಹೊಸ ಪದ್ಧತಿಯಂತೆ ಈ ಆಟದಿಂದ ಹೆಣ್ಣುಮಕ್ಕಳಿಗೆ, ಕಿಪ್ಪೊಟ್ಟೆ, ಯಕೃತ್ತು, ಬೆನ್ನುಹುರಿ ಮೊದಲಾದ ಅಂಗಗಳಿಗೆ ಸಾಕಷ್ಟು ವ್ಯಾಯಾಮ ದೊರೆಯುವುದು (ಆಟ. ೩೯). [ಸಂ. ಯಕೃತ್]

**ಯಕ್ಷ** (ನಾ). ೧. ದೇವತೆಗಳಲ್ಲಿ ಒಂದು ವರ್ಗ : "ಕಿನ್ನರರು ಗಂಧರ್ವರಪ್ಸರರು ವಿದ್ಯಾಧರರುನ್ನಿಶಾಟರು ಪಿಶಾಚರು ಗುಹ್ಯಕರು ಸಿದ್ಧರುಂ . . . ಯಕ್ಷರು ಭೂತನಾಮಿಗಳು ದೇವಯೋನಿಗಳೆನಿಕ್ಕುಂ" (ಶಬ್ದಮ. ೦೭-೦೭); ಅಷ್ಟಮೂರ್ತಿಗಳಷ್ಟವಸುಗಳು ನವಬ್ರಹ್ಮರು ಸುರರು ಮುನಿವರರು ಖೇಚರರು ಯಕ್ಷರು . . . ಎಯ್ದೆ ನೆರೆಯಿತು ತಮ್ಮ ಪರಿವಾರಸಹಿತಲಾಗ (ಕದಕಾ. ೧೪-೦) : ಒಬ್ಬ ಯಕ್ಷ ತನ್ನೊಡೆಯನಿಂದ ನಲ್ಲೆಯನು ಅಗಲಿಬೆಂದು . . . ವಸತಿನಿಂದನೋ ರಾಮಗಿರಿಯ ಪುಣ್ಯಾಶ್ರಮಂಗಳಲ್ಲಿ (ಮೇಘದೂ. ೦-೦). ೨. ಆ ವರ್ಗದ ಅಧಿಪತಿ ; ಕುಬೇರ : "ಧನಪತಿ ಯಕ್ಷಂ . . . ಕುಬೇರನಳಕಾದಿ ನಾಯಕಂ ಗುಹ್ಯಕೇಶ್ವರಂ ವೈಶ್ರವಣಂ" (ವಸ್ತುಕೋ. ೬-೯೭). ೩. ಪಿಶಾಚಿ ; ಭೂತ : 'ಯಕ್ಷಗ್ರಹ' ನೋಡಿ. ೪. [ಜೈನ] ವ್ಯಂತರ ದೇವತೆಗಳ ಒಂದು ವರ್ಗ : ಆನೀ ವಟವೃಕ್ಷನಿವಾಸಿಯೆನ್ ಮನೋಹರನೆಂಬ ಯಕ್ಷನೆನ್ (ವಡ್ಡಾರಾ. ೩೭-೦೭); ಕಲ್ಪಪಾದಪದ ತಣ್ಣೆಲಲ್ಲಿ ವಸಂತಲಕ್ಷ್ಮಿವೋಲ್ ನೆಲಸಿದ ಯಕ್ಷಿ ಯಕ್ಷರೆಮಗೀಗೊಲವಿಂದೆ ದಯಾವಲೋಕಮಂ (ಅರ್ಥಸೇ. ೦-೯). ೫. ಇಪ್ಪತ್ತುನಾಲ್ಕು ಜಿನತೀರ್ಥಂಕರರಲ್ಲಿ ಪ್ರತಿಯೊಬ್ಬ ತೀರ್ಥಂಕರನ ಬಳಿಯಲ್ಲಿಯೂ ಇರುವ ಒಬ್ಬೊಬ್ಬ ಶಾಸನದೇವತೆ. [ಸಂ.]

**ಯಕ್ಷಕರ್ದಮ** (ನಾ). ಕರ್ಪೂರ, ಅಗರು, ಕಸ್ತೂರಿ, ತಕ್ಕೋಲ ಮೊದಲಾದ ಸುಗಂಧದ್ರವ್ಯಗಳನ್ನು ಸಮಪ್ರಮಾಣದಲ್ಲಿ ಬೆರಸಿ ತಯಾರಿಸುವ ಒಂದು ಬಗೆಯ ಸುಗಂಧಲೇಪ : "ಅಗುರು ಹಿಮಂ ತಕ್ಕೋಲಂ ಮೃಗಮದಮಿವು ಕೂಡೆ ಯಕ್ಷಕರ್ದಮಮಕ್ಕುಂ" (ವಸ್ತುಕೋ. ೭೭-೦೨) ; ಯಕ್ಷಕರ್ದಮದ ಕೆಯ್ಗಟ್ಟಿಯೊಳ್ ಕೆಯ್ಯಂ ತಿಮಿರ್ದು ತಂಬುಲವಂ ಕೊಂಡು (ಶಂಕಪು. ೩-೭೯ ವ) ; ರಾವುತರಿಗಾರೋಹಕರಿಗೆ ಭಟಾವಳಿಗೆ ರಥಿಕರಿಗೆ ಚೆಲ್ಲಿದನಾ ವಿವಿಧಸೌಗಂಧಭಾವಿತಯಕ್ಷಕರ್ದಮವ (ಕುವ್ಯಾಕ. ೬-೨೦). [ಸಂ.]

**ಯಕ್ಷಗಾನ** (ನಾ). ೧. ಒಂದು ಬಗೆಯ ಜಾನಪದ ನೃತ್ಯನಾಟಕ : ಯಕ್ಷಗಾನದಲ್ಲಿ ಬಹು ಹೆಚ್ಚಿನ ಸೌಂದರ್ಯಸಿದ್ಧಿಯನ್ನು ಹೊಂದಿದ ಭಾಗವೆಂದರೆ, ಅದರ ವೇಷಭೂಷಣಗಳು (ಯಕ್ಷಬ. ೦೩೩); ಆಗಾಗ ಯಕ್ಷಗಾನ

ಕಲಿಯ ಕುರುಹಾದ ತಾಳಮದ್ದಳೆ ಅದೇ ಶಾಲೆಯಲ್ಲಿ ಜರುಗುತ್ತಿತ್ತು (ಕುರುಜಾ. ೭೩). ೨. (ಯಕ್ಷಗಾನಪ್ರಬಂಧಕ್ಕೆ ಸಂಬಂಧಿಸಿದ) ಒಂದು ಬಗೆಯ ಗಾಯನಪದ್ಧತಿ : 'ಯಕ್ಷಗಾನ' ಎಂದರೆ ಅದೊಂದು ದೇಶೀಯವಾದ ಗಾನಪದ್ಧತಿ ಎಂಬುದು ಗೊತ್ತಾಗುತ್ತಿದೆ (ಶಾರ್ತಿಸು. ೨೯); ಯಕ್ಷಗಾನವೆಂಬುದು ಅಭ್ಯಾಸ, ಪರಿಶ್ರಮಗಳಿಂದ ಬೆಳೆಯಿಸಿಕೊಂಡು ಬಂದ ದೇಶೀಯ ಗೀತಮಾರ್ಗ (ಯಕ್ಷಬ. ೭೫). [ಸಂ.]

**ಯಕ್ಷಗ್ರಹ** (ನಾ). ೧. ಪಿಶಾಚಬಾಧೆ ; ದೆವ್ವ ಹಿಡಿದುಕೊಳ್ಳುವಿಕೆ : ನಾನಾಶಸ್ತ್ರಧಾರಣೆ ಮಾಡುವುದರಿಂದ . . . ದೇವಗ್ರಹ, ಗಂಧರ್ವಗ್ರಹ, ಯಕ್ಷಗ್ರಹ ಮುಂತಾದ ದುಷ್ಟಗ್ರಹಂಗಳನ್ನೂ ಶತ್ರುಗಳಿಂದುಂಟಾಗುವ ಹಾನಿಯನ್ನೂ ಕೆಡಿಸುವುದು (ಸಕವ್ಯ. ೫೬). ೨. ಪಿಶಾಚಿ : ಸತ್ಯೇಂದ್ರ ಚೋಳನ ಮಹಾಬಲಂ . . . ಯಕ್ಷಗ್ರಹದ ಗಡಣದಂತೆ . . . ಸೀಳಿ ದಿಗ್ಬಲಿಯ ಕೊಡುತಿರ್ದುದರಿಸೇನೆಯ (ಶಾವಶಂ. ೫-೨೦). [ಸಂ.]

**ಯಕ್ಷತರು** (ನಾ). ಒಂದು ಬಗೆಯ ಮರ ; ಆಲ : "ಯಕ್ಷತರುಃ, ಯಕ್ಷವಾಸಃ – ಈ ಯೆರಡುಂ ಆಲ" (೬ಕಂ. ೧೩೦). [ಸಂ.]

**ಯಕ್ಷಧೂಪ** (ನಾ). ಸುವಾಸನೆಯ ದ್ರವ್ಯ, —ಧೂಪ : "ಮಗಮಗಿಸುವ ಸಜ್ಜರಸಂ ಪೊಗಟ್ತಿವೆತ್ತಿರ್ದ ಯಕ್ಷಧೂಪಮದಕ್ಕುಂ" (ವಸು ೯ಸೀ. ೭೭-೦೨). [ಸಂ.]

**ಯಕ್ಷಪತಿ** (ನಾ). ಯಕ್ಷರ ಅಧಿಪತಿ ; ಕುಬೇರ : ಅಲ್ಲಿ ನಮ್ಮ ಮನೆ ಯಕ್ಷಪತಿಯ ಮನೆಯುತ್ತರಕ್ಕೆ ಇಹುದು (ಮೇಘದೂ. ೨೦-೦೨). [ಸಂ.]

**ಯಕ್ಷಪತಿಸಖ** (ನಾ). ಕುಬೇರನ ಸ್ನೇಹಿತ ; ಶಿವ : ಯಕ್ಷಪತಿಸಖ ಸಹಸ್ರಾಕ್ಷಮುಖಪೀಯೂಷಭಕ್ಷಾಳಿ ನತಪದಯುಗ . . . ರಕ್ಷಿಪುದು ಸಂಗಮೇಶ (ಶ್ರೀಶಶ. ೦೯-೦). [ಸಂ.]

**ಯಕ್ಷಪ್ರಶ್ನೆ** (ನಾ). ೧. ಮಹಾಭಾರತಕಥಾಪ್ರಸಂಗದಲ್ಲಿ ಯಕ್ಷರೂಪಿಯಾದ ಯಮಧರ್ಮರಾಯನು ಯುಧಿಷ್ಠಿರನಿಗೆ ಕೇಳಿದ ಪ್ರಶ್ನೆ : ಮಹಾಭಾರತಾಂತರ್ಗತ ಯಕ್ಷಪ್ರಶ್ನೆಯು ಪ್ರಸ್ತುತಕತೆಯಲ್ಲಿಯೂ ಮಹಾತ್ಮಾಜಿಯವರ ಈ ಮಾತಿನ ಅನುಭವವು ಬರುತ್ತದೆ (ಯಕ್ಷಪ್ರ. ೦). ೨. (ಆಲಂ) ಉತ್ತರಿಸಲು ಕಠಿನವಾದರೂ ಉತ್ತರಿಸಲೇಬೇಕಾದ ಮಹತ್ತ್ವದ ಪ್ರಶ್ನೆ, — ಸಮಸ್ಯೆ : ಎಂದೆಂದಿಗೂ ಇಹುದು ಯಕ್ಷಪ್ರಶ್ನೆ (೪ಟ್ಕೀಂ. ೫೯-೩) ; ಈ ಎರಡು ಪ್ರಶ್ನೆಗಳೂ ಇಂದಿಗೂ ಸರಿಯಾಗಿ ಬಿಡಿಸಲಾಗದ ಯಕ್ಷಪ್ರಶ್ನೆಗಳಾಗಿವೆ (ದ್ರಾ೭೭. ೨೨). [ಸಂ. ಯಕ್ಷಪ್ರಶ್ನ]

**ಯಕ್ಷರಾತ್ರಿ** (ನಾ). ದೀಪಾವಳಿಯ ಹಬ್ಬ : ಈ 'ಯಕ್ಷರಾತ್ರಿ' ಅಥವಾ 'ದೀಪಾವಳಿ' ಹಬ್ಬದ ರಾತ್ರಿಯಲ್ಲೇ ನಮ್ಮ ಯಕ್ಷಗಾನಮೇಳದವರು ತಮ್ಮ ಮೊತ್ತಮೊದಲಿನ ಸೇವೆಯಾಟವನ್ನಾಡುವುದು (ಶಾರ್ತಿಸು. ೨೭). [ಸಂ.]

**ಯಕ್ಷಲೋಕ** (ನಾ). ೧. ದೇವಲೋಕ. ೨. ಮಾಯಾಲೋಕ. [ಸಂ.]

**ಯಕ್ಷವಾಸ** (ನಾ). = ಯಕ್ಷತರು : "ಯಕ್ಷತರುಃ, ಯಕ್ಷವಾಸಃ — ಈ ಯೆರಡುಂ ಆಲ" (೬ಕಧ. ೧೩೦). [< ಸಂ. ಯಕ್ಷಾವಾಸ]

**ಯಕ್ಷಸಂಪ್ರದಾಯ** (ನಾ). ಭಾರತೀಯ ಚಿತ್ರಕಲೆಯ ಮೂರು ಸಂಪ್ರದಾಯಗಳಲ್ಲಿ ಒಂದು : ಯಕ್ಷಸಂಪ್ರದಾಯ ಮೂರನೇ ಶತಮಾನದಲ್ಲಿ . . . ರೂಢಿಯಲ್ಲಿತ್ತೆಂದೂ ಆತ ಹೇಳಿದ್ದಾನೆ (ಶಾರದ. ೫೨೩). 'ದೇವಸಂಪ್ರದಾಯ', 'ನಾಗಸಂಪ್ರದಾಯ' ಪರಾ. [ಸಂ.]

**ಯಕ್ಷಸತ್ತ್ವ** (ನಾ). [ಕಾಮಶಾ] ನಾಯಿಕಾಭೇದದಿಂದ ಸ್ತ್ರೀಯರಲ್ಲಿರುವ ಹನ್ನೆರಡು ಬಗೆಯ ಮನೋಧರ್ಮಗಳಲ್ಲಿ ಒಂದು : ಸುರತಕೆ ನಲಿವ ಸಿಂಗರಕೆ ಸೇರುವ ಸುರೆಗೆ ಹರುಷಿಸುವ ವನಜಲಕ್ರೀಡೆಗೊಲಿವ ಸರಸಕ್ಕೆ ಸಲುವ ಸೌಂದರಕೆ ಲಜ್ಜೆಗೆ ನಿಜಾಕರಮೆನಿಪವಳೆ ಯಕ್ಷಸ[ಶಿಂಶಾಂ. ತ]ತ್ತ್ವದವಳು (ಚಿಪಪ. ೫-೨೭); ಲಜ್ಜೆಗೆಟ್ಟವಳು ಉದ್ಯಾನ ವನಕ್ರೀಡೆ ಮದ್ಯಪಾನಾದಿಗಳಲ್ಲಿ ಇಚ್ಛೆ ಸುರತಸಿದ್ಧಿಗೆ ಸಂತೋಷಪಡುವವಳು ಇವಳು ಯಕ್ಷಸತ್ತ್ವದ ಸ್ತ್ರೀಯು (ಕಾಮಶಾ. ೨೦೫). 'ದ್ವಾದಶಸತ್ತ್ವ' ಪರಾ. [ಸಂ.]

**ಯಕ್ಷಾಂದೋಳ** (ನಾ). ಒಂದು ಬಗೆಯ ನೃತ್ಯ : ಅಮರೇಂದ್ರಂ ಕುಡೆ ದಂಡಭ್ರಮರಿಯನುದ್ದಂಡಬಾಹುದಂಡಂಗಳೊಳಿರ್ದಮರಿಯರೇಂ ಯಕ್ಷಾಂದೋಳಮನಾಡುವ ಮಾಟಕ್ಕೆಯಿಂ ಮನಂಗೊಳಿಸಿದರೋ (ಪುಲ್ಲಕ. ೦೩-೯೭) ; ಈ ಯಕ್ಷರೆಂಬ ದೇಶೀಯರು ಆಡುತ್ತಿದ್ದ ಬಗೆಬಗೆಯ ಆಟಗಳಲ್ಲಿ "ಯಕ್ಷಾಂದೋಳ" ಅಲ್ಲವೆ "ಚಪ್ಪರಮಂಚ"ದ ಆಟವೂ ಒಂದಾಗಿರಬೇಕು. ಇತ್ತಣ ಯಕ್ಷಗಾನದ ಆಟವೆಂದರೆ ಪೌರಾಣಿಕಕಾವ್ಯಗಳನ್ನು ಆಡಿ ತೋರಿಸುವ ದೃಶ್ಯವಾಗಿಯೂ ಪರಿಣಮಿಸಿದ ಮೇಲೆ, ಆ ಯಕ್ಷಾಂದೋಳವು ನಿತ್ಯವೆನ್ನಿಸಿದ 'ಸಭಾಲಕ್ಷಣ' ಅಥವಾ ಪ್ರಸ್ತಾವನೆಯ ಭಾಗಕ್ಕೆ ಸೇರಿರಬೇಕು (ಶಾರ್ತಿಸು. ೩೩). 'ಜಕ್ಕಂದೊಟಿ' ಪರಾ. [ ಸಂ. ಯಕ್ಷಾಂದೋಲ ]

**ಯಕ್ಷಾಂಶಕೆ** (ನಾ). [ಕಾಮಶಾ] ಯಕ್ಷಸತ್ತ್ವದ ಸ್ತ್ರೀ : ಶೃಂಗಾರಾನ್ವಿತೆ ಲುಬ್ಧೆ . . . ಸೊಬಗಿಂಗಾಗರಮಾದತಳಿಗೆ ಯಕ್ಷಾಂಶಕೆಯುಂ (ಮದತಿ. ೩-೩). [ ಸಂ. ಯಕ್ಷಾಂಶಕಾ ]

**ಯಕ್ಷಿ** (ನಾ). ೧. ಯಕ್ಷಲೋಕದ ಹೆಣ್ಣು ; ಯಕ್ಷಸ್ತ್ರೀ. ೨. ಯಕ್ಷನ ಹೆಂಡತಿ : ಅಲಕೆಯಲ್ಲಿ ಕೈಲಾಸದೆಡೆಗೆ ತಾ ಮಹಿಸಿ ಸಖನ ಚಿಂತೆ ಸಾಕ್ಷಿಯಾಗಿ ಆ ಯಕ್ಷಿ ತಪಿಸುತಿರೆ ಅಂತರಾತ್ಮಸಂತೆ (ಮೇಘದೂ. ೦೨ ೭೯೬೪). ೩. ಕುಬೇರನ ಹೆಂಡತಿ. ೪. ಮಾಟಗಾತಿ ; ಮಾಯಾವಿನಿ : ಕಾಂಕ್ಷೆಗಳ ಬೋಧಿಸುವ ಬಂಧು ಸಖಿರುಪಕಾರ ಯಕ್ಷಿಯರು ಮ್ಯಾಕಬೆತನಿಗೆಸಗಿದುಪದೇಶ (ಹುಂಕುಳ. ೦೭೫). ೫. [ಜೈನ] ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಪ್ರತಿಯೊಬ್ಬ ತೀರ್ಥಂಕರನ ಬಳಿಯಲ್ಲಿಯೂ ಇರುವ ಶಾಸನದೇವತೆ : ಯಕ್ಷಿ ಬರೆ ಕಂಡು ತಾಂ ಪ್ರತ್ಯಕ್ಷಂ ಕರೆದೆನ್ನನಿತ್ತಳೀ ಪುತ್ರನಂ (ಪೇಬಾಪು. ೬-೮೦) ; ಮಾಕಾಳಿ ಯಕ್ಷಿ ನವೀನಾಭರಣಾಂಗೆ ಮತ್ಕೃತಿಗೆ ಮಾಟಸ್ಕೋರಂತೆ ನಿರ್ವಿಘ್ನಮಂ (ಪುಶ್ಕು. ೦-೦೦) ; ಕರ್ನಾಟಕದಲ್ಲಿ ಪದ್ಮಾವತಿ ಮತ್ತು ಜ್ವಾಲಾಮಾಲಿನಿ ಎಂಬ ಯಕ್ಷಿಯರಿಗೆ ವಿಶೇಷಗೌರವ ಸಂದಿದೆ (ಕಶಾಕ. ೦೦೦). [ ಸಂ. ಯಕ್ಷೀ ]

**ಯಕ್ಷಿಣಿ** (ನಾ). ೧. = ಯಕ್ಷಿ ೧. ೨. = ಯಕ್ಷಿ ೩. ೩. ದುರ್ಗಾದೇವತೆಯ ಊಳಿಗದಲ್ಲಿರುವ, ದುಷ್ಟಪ್ರಕೃತಿಯ ಒಂದು ಕ್ಷುದ್ರದೇವತೆ. ೪. ಮಾಟಗಾತಿ ; ಮಾಯಾವಿನಿ : "ಯಕ್ಷಿಣೀ = ಗಾರುಡಿಗಿತ್ತಿ" (ಶಾಶಕ. ೨೭೨) ; ಯಾರು ಎಂದು ಹುಡುಕಬೇಕಾದುದೇ ಇಲ್ಲ. ಯಕ್ಷಿಣಿ ಹತ್ತಿರವೇ ಇದ್ದಾಳೆ (ಸುಬ್ಬ. ೦೨) ; ನಿಮ್ಮ ತಂದೆ ಆರ್ಯಕನು . . . ಕಾಡಿನ ಯಕ್ಷಿಣಿಯ ಜೊತೆಯಲ್ಲಿ, ತನಗೆ ಜಯವಾಗಲೆಂದು ಮಾಟ ಕಟ್ಟಿ ನಡೆಯಿಸಿದನಂತೆ (ಆರ್ಯಕ. ೫೬). ೫. (ಹೆಣ್ಣು) ಪಿಶಾಚಿ ; ಜಕಣಿ : ಮಂತ್ರವಾದವನ್ನು ಅಪರ ಜನರೂ ಮಾಡುತ್ತಾರೆ. ಅದು ಮೈಮೇಲೆ ಬರುವ ಯಕ್ಷಿಣಿಗೆ, ಮೈಮೇಲೆ ಬರುವ ಕಾಯಿಲೆಗಳಿಗೇ ಹೊರತು, ಕಲ್ಕುಡನಂತಹ ಮಲೆಯ ದೇವತೆಗಳಿಗಲ್ಲ (ಕುಡಿಕೂ. ೦೫೩). ೬. ಮಾಟಗಾರಿಕೆ ; ಮಾಯಾವಿದ್ಯೆ ; ಇಂದ್ರಜಾಲ : ಅದು ನನ್ನ ಯಕ್ಷಿಣಿ ಸಿಂಹವಿಕ್ರಮ ! ಅದು ನನಗೆ ಮೂರಾವರ್ತಿ ಕಣ್ಣಿಗೆ ಬಿದ್ದಿದೆ (ಆರ್ಯಕ. ೦೦೯). 'ಯಕ್ಷಿಣಿವಿದ್ಯೆ' ಪರಾ. ೭. ಯಕ್ಷಗಾನದಲ್ಲಿ ಬರುವ ಸ್ತ್ರೀವೇಷ : ಇಲ್ಲಿ ಸ್ತ್ರೀವೇಷಕ್ಕೆ "ಯಕ್ಷಿಣಿ" ಎಂಬ ಹೆಸರು ವಾಡಿಕೆಯಲ್ಲಿ ಬಂದಿರುವುದು ಒಂದು ಗಮನೀಯ ವಿಷಯ ! (ಯಕ್ಷಗಾ. ೨೦). [ ಸಂ. ಯಕ್ಷಿಣೀ ]

**ಯಕ್ಷಿಣಿಗಾರ** (ನಾ). ಮಾಟಗಾರ ; ಐಂದ್ರಜಾಲಿಕ : ಶಾಲೆಗೆ ಒಬ್ಬ ಯಕ್ಷಿಣಿಗಾರ ಬಂದು ಇಂದ್ರಜಾಲವಿದ್ಯೆ ಪ್ರದರ್ಶಿಸಿ ಹುಡುಗರನ್ನು ನಲಿಸಿದನು (ದೂಂ). [ ಯಕ್ಷಿಣಿ + - ಗಾರ ( < – ಕಾಜ ) ]

**ಯಕ್ಷಿಣಿವಿದ್ಯ** (ನಾ).= ಯಕ್ಷಿಣಿ ೬ : ಅವರವರ ಮನದಲಿ ದಾನವರುಹಿದ ಕಲಿತ ಯಕ್ಷಿಣಿವಿದ್ಯದಲಿ ಬಸವ (ಬಸ್ತ್ರ. ೪೩-೨೮). [<ಸಂ. ಯಕ್ಷಿಣೀವಿದ್ಯ]

**ಯಕ್ಷಿಣಿವಿದ್ಯೆ** (ನಾ). = ಯಕ್ಷಿಣಿ ೬ : ಏನು ಯಕ್ಷಿಣಿವಿದ್ಯೆ ಮಾಡಿದಳೋ . . . ಗಿರಕ್ಕನೆ ಅವಳ ಕಡೆ ತಿರುಗಿಬಿಟ್ಟೆ (ಮಹಾಗ. ೧೯೬) ; 'ಯಕ್ಷಿಣಿವಿದ್ಯೆ' ಐಂದ್ರಜಾಲಕ್ಕೆ, ವಶೀಕರಣಕ್ಕೆ ಹೇಳುವಂಥ ಮಾತೂ ಆಗಿದೆ (ಯಕ್ಷಬ. ೮).
[< ಸಂ. ಯಕ್ಷಿಣೀವಿದ್ಯಾ ]

**ಯಕ್ಷ್ಮ** (ನಾ). ಶ್ವಾಸಕೋಶದ ಕ್ಷಯ ; ಕ್ಷಯರೋಗ : ಆ ಗೆಡ್ಡೆಯಂ ನೀರಲ್ಲರೆದು ಕುಡಿಯೆ ಯಕ್ಷ್ಮ, ಕ್ಷಯರೋಗ ತೀರ್ಗುಂ (ವಿವ್ಯ. ೯೫).
[ಸಂ.]

**ಯಕ್ಷ್ಮರೋಗ** (ನಾ). ೧. = ಯಕ್ಷ್ಮ. ೨. (ಅಲಂ) ಮಾನಸಿಕವಾದ ನೋವು : ಸುದತಿಯೆ ಬಿಡದೆಲ್ಲವ ಪೇಳ್ವುದು ಹೃದಯದೊಳಿರ್ಪ ಯಕ್ಷ್ಮರೋಗದ ಪರಿಯಂ (ಧ್ವನ್ಯಾಲೋ. ೦೭೦). [ಸಂ.]

**ಯಗಣ** (ನಾ). [ಛಂದ] ಆದಿಯಲ್ಲಿ ಒಂದು ಲಘು ಮುಂದೆ ಎರಡು ಗುರುಗಳುಳ್ಳ ಒಂದು ಅಕ್ಷರಗಣ (⏑ — —) : ಮಗಣಂ ಭೂಮಿಯೆನಿಕ್ಕುಂ ಯಗಣಂ ಜಲ ರಗಣಮಗ್ನಿ ಸಗಣಂ ವಾತಂ (ಛಂದೋಂಬು. ೦-೩೭ ಅವ).
[ಸಂ.]

**ಯಚ್ಚಾವತ್ತು** (ನಾ). ಎಲ್ಲವೂ ಒಳಗೊಂಡುದು; ಸಮಗ್ರವಾದುದು : ಯಚ್ಚಾವತ್ತು ಜಗತ್ತು ನೆಚ್ಚಿನ ಮೆಚ್ಚು. ಇದರ ಮೈಮೆಯನ್ನು ನೆಚ್ಚಿಗೆ ಮೆಚ್ಚಿದವನೇ ಬಲ್ಲನು (ವಿಚಾರಮಂ. ೬೪). [P ಸಂಸ್ಕೃತದಲ್ಲಿ ಇವು 'ಯತ್' 'ಚ ಯಾವತ್' ಎಂದು ಎರಡು ಭಿನ್ನಶಬ್ದಗಳು]

**ಯಜನ** (ನಾ). ೧. ಯಜ್ಞ; ಯಾಗ. ೨. ಯಾಗಮಾಡುವಿಕೆ : ಅಂತು ಭವಿಷ್ಯದ್ದ್ವಿಜನ್ಮವರ್ಣಕಧ್ಯಯನಾಧ್ಯಾಪನ ದಾನ ಪ್ರತಿಗ್ರಹ ಯಜನ ಯಾಜನ ವಿಶಿಷ್ಟವೃತ್ತಿಯುಮಂ. . . ನಿಜಾಸಿ (ಆದಿಪು. ೯-೬೩ ವ); ಯಜ[ನಯಾ]ಜನಾಧ್ಯಯನಾಧ್ಯಾಪನ ದಾನ ಪ್ರತಿಗ್ರಹಷಟ್ಕರ್ಮನಿರತರುಂ (ಸೌಇಇ. V. ೮೯೮-೨೩; 1097); ಯಜನಾಧ್ಯಯನಂ ದಾನಂ ನಿಜಮಾಗಿರೆ ನೃಪವಣಿಕ್ಕುಲಕ್ಕಂ ಸಲ್ವುಂ (ಪಸ್ತುಕೋ. ೬೩-೭೦). ೩. ಪೂಜೆ; ಅರ್ಚನೆ : ಶಿವಸ್ತುತಿ ಪೂರ್ಣಕರ್ಣನೀಶ್ವರಯಜನಾನುರಕ್ತಂ (ರಾಜಶೇ. ೩-೨). [ಸಂ.]

**ಯಜನಾಧಿಕಾರಿ** (ನಾ). ೧. ಯಜ್ಞಮಾಡುವ ಅಧಿಕಾರವುಳ್ಳವನು : ಶಾಖಾ, ಸೂತ್ರ, ಗೋತ್ರ ಪರಂಪರೆಯಲ್ಲಿ ಸ್ವಾರ್ಥ ಮತ್ತು ಪರಾರ್ಥ ಯಜನಾಧಿಕಾರಿಗಳು ಮುಖ್ಯಾಧಿಕಾರಿಗಳು (ಶಾರದ. ೭೩). ೨. ದೇವಪೂಜೆಯ ಅಧಿಕಾರವುಳ್ಳವನು : ಪರಾರ್ಥ ಯಜನಾಧಿಕಾರಿಯಾದ ಅರ್ಚಕನು ಸ್ವಾರ್ಥವನ್ನು ಬದಿಗೊತ್ತಿ. . . ಶ್ರದ್ಧಾಭಕ್ತಿಯಿಂದ ದೇವರನ್ನು ಅರ್ಚಿಸುವಾತನು ತನ್ಮಯತ್ವವನ್ನು ಪಡೆಯುವನು (ಶಾರದ. ೭೮).
[ಸಂ. ಯಜನಾಧಿಕಾರಿನ್]

**ಯಜಮಾನ** (ನಾ). ೧. ಯಾಗಗಳನ್ನು ಮಾಡುವವನು; ಯಜ್ಞಕರ್ತೃ : "ಯಷ್ಟಾ. ಯಜಮಾನಃ . . . ಯಾಸುತೀಕೃ—ಈ ೯ ಯಾಗ ಮಾಡುವಾತಂ" (ಹಲಾಯು. ೭೯-೨೭೭); ಧರ್ಮಪುತ್ರಂ ಸಪತ್ನಿ ಯಜಮಾನನಾಗಿರ್ದಾಗಳ್ (ಶಂಶಭಾ. ೬-೩೩ ವ); ಯಜಮಾನನು ಹೊಗೆಯಿಂದ ಕಣ್ಣುಗಳನ್ನು ತೆರೆಯದಿದ್ದರೂ ಆತನ ಕೈಯಿಂದ ಆಹುತಿಯು ದೈವಯೋಗದಿಂದ ಅಗ್ನಿಯಲ್ಲೇ ಬಿದ್ದಿತು (ಶಾಕುಂತ. ೪೮-೨೯); ವಿಶ್ವಜಿದ್ಯಾಗದಲ್ಲಿ ಯಜಮಾನನು ತನ್ನ ಸಕಲಸಂಪತ್ತನ್ನೂ ದಕ್ಷಿಣೆಯಾಗಿ ಕೊಡಬೇಕೆಂದು ನಿಯಮವಿದೆಯಂತೆ (ಚಕಂಬಾ. ೦೭೦). ೨. ಅರ್ಚಕ; ಪೂಜಾರಿ : "ಯಟ್, ಯಾಟ್. . . ಯಜಮಾನಃ, ಯಕ್ತಾ, ಯಾಯಜೂಕಃ—ಈ ೭ ಪೂಜಿಸುಪಂ" (ಕಾಶಕ್ಕ. ೦೭೦); ಎಲೈ ಅಗ್ನಿಯೆ. . . ನೀನು ಸಕಲಕ್ಕೂ ಪೋಷಕನಾಗಿದ್ದು ನಿನ್ನನ್ನು ಪಚರಿಸುವ ಯಜಮಾನನನ್ನು ಮನಃಪೂರ್ವಕವಾಗಿ ಕಾಪಾಡುತ್ತೀಯೆ (ಪುಣ್ಯರ. ೨೯). ೩. (ಸಂಸಾರದ ಅಥವಾ ಸಮಾಜದ) ಮುಖ್ಯಸ್ಥ,–ಒಡೆಯ : ಒಡಂಬಟ್ಟು ಯೆಮ್ಮ ಯಜಮಾನಜ್ಗಿ ಧಾರಾಪೂರ್ವ್ವಕಂ ಮಾಡಿಕೊಟ್ಟೆಉ (ಎಕ. XII. ತಿಪಟೂ. ೯-೯ ; 1267); ಯಜಮಾನನಿಲ್ಲದ ಗೃಹವು ನಮಗಸ್ವಾಮ್ಯ (ಕೊರಡಾ. ೩-೯-೨೦); ದೇಶದ ಶೆಟ್ಟರು–ಯಜಮಾನರು–ವೀರಶೈವಾನುಯಾಯಿ ೧೮ ಪಣಗಳ ಮುಖಂಡರು (ಕರಸಾ. ೨೯-೬); ಊರ ಗೌಡ ಸೇನಬೋವ ಸೆಟ್ಟಿ ಯಜಮಾನ ಕಂದಾಚಾರದವರೂ ಎಲ್ಲಾರೂ . . . ಎಲ್ಲಾವನ್ನೂ ಸೆಳೆದು ಅರಮನೆಗೆ ಸೇರಿಸಿಕೊಂಡು ಬಿಡುತ್ತಾರೆ (ಪಟ್ಟೆಂ. ೦೫೩-೦೩); ಹಿರಿಮಲೆಯ ಯಜಮಾನ ಪೂಜಾರಿಯ ಕೈಗೆ ಸಿಂಗಾರ ಹೂವು ಹಾಕಿದ (ಕುಮಕೂ. ೦೯೭). ೪. ಧಣಿ ; ಮಾಲೀಕ : ಆಳು ಯಜಮಾನನು ಹೇಳಿದ ಕೆಲಸ ಮಾಡುತ್ತಾನೆ (ಧರ್ಮಸಾ. ೦೦೭); ಅವನು ವ್ಯವಸ್ಥಾಪಕನಾಗಿರುವ ಹೊಟೇಲಿಗೆ ಇದಿರಾಗಿ ವಿದ್ಯಾವಂತನಾದ ಒಬ್ಬನ ಹೊಟೇಲೊಂದಿತ್ತೆಂದು ಹೇಳಿತಷ್ಟೆ. ಅಲ್ಲಿನ ಯಜಮಾನನ ಕಿವಿಗೆ ರಾಮನ ವಿಚಾರಗಳು ತಿಳಿಯಬಂದುವು (ಮರಮ. ೫೨೨). ೫. ಗಂಡ ; ಪತಿ : ನಿಮ್ಮ ಯಜಮಾನ್ರು ಇದ್ದಿದ್ರು ಇಂಥಾದೆಲ್ಲ ಸಹನ ಆಗತಿತ್ತೇ ಅವರಿಗೆ ? (ಗಂಗಾಸಾ. ೦೦೩); ಇಲ್ಲಿ ನಿನ್ನ ಯಜಮಾನ ನಿಂತಾನಲ್ಲ ಅವನು ಹೇಳಲಿ (ರಂಗರೊ. ೩೯). ೬. ವಯಸ್ಸಾದ ವ್ಯಕ್ತಿ ; ಹಿರಿಯವನು. [ಸಂ.]

**ಯಜಮಾನಗಿತ್ತಿ** (ನಾ). ೧. ಒಡತಿ ; ಯಜಮಾನಿತಿ : ಎಲ್ಲರೂ ಹಸಿದಿರಲು ಸಾಧ್ಯವಿಲ್ಲವಾದ್ದರಿಂದ ಮನೆಯ ಯಜಮಾನಗಿತ್ತಿ ಹಸಿದುಕೊಂಡಿದ್ದು, ಬಾಳೆಯಹಣ್ಣನ್ನು ಸುಲಿದು ಅಭಿಷೇಕಕ್ಕಾಗಿಯೇ ತಂದ ಹೊಸ ಮಡಕೆಗೆ ಹಾಕಿ ಅದಕ್ಕೆ ಜೇನುತುಪ್ಪ ಬೆಲ್ಲ ಏಲಕ್ಕಿ ಇವನ್ನು ಸೇರಿಸುತ್ತಾಳೆ. (ಪನ್ನೂರು. ೪೨). ೨. ಹೆಂಡತಿ ; ಪತ್ನಿ : (ಕ). [ಯಜಮಾನ + — ಗಿತ್ತಿ]

**ಯಜಮಾನತನ** (ನಾ). ಯಜಮಾನನ ಪದವಿ ; ಯಜಮಾನಿಕೆ : ಯಜಮಾನತನದ ಅಹಂಕಾರ ನಾನೊಲ್ಲೆ (ಕವಕ. ೨೦-೦).
[ಯಜಮಾನ + — ತನ]

**ಯಜಮಾನತಿ** 'ಯಜಮಾನಿತಿ' ನೋ.

**ಯಜಮಾನಪಟ್ಟ** (ನಾ). ಹಿರಿತನದ ಅಧಿಕಾರ : ಆನಂದದಿನಾ ಸುಕುಮಾರಗೆ ಯಜಮಾನಪಟ್ಟವ ಕಟ್ಟಿದನು (ಶ್ರೀಪಾಲ. ೦೯-೫೩). [ಸಂ.]

**ಯಜಮಾನಿ** (ನಾ). ೧. ಹೆಂಡತಿ ; ಪತ್ನಿ : ನಿಮ್ಮ ಯಜಮಾನಿ, ಕುಂಬಳೇ ಸೀಮೆಯವರೋ ವಿಟ್ಲ ಸೀಮೆಯವರೋ ಎಂದ ಹಾಗಿದೆ (ಪಟ್ಟಕೇ. ೦೫೮). ೨. ಒಡತಿ ; ಸ್ವಾಮಿನಿ : ನೀನು ಮನೆಯ ಯಜಮಾನಿ ಎಂಬುದು ಗೊತ್ತಿದೆ ನನಗೆ (ಮರಮ. ೩೨೦). [ಸಂ. ಯಜಮಾನೀ]

**ಯಜಮಾನಿಕೆ** (ನಾ). ೧. ಯಜಮಾನನ ಪದವಿ,–ಸ್ಥಾನಮಾನ : ಶೀನಪ್ಪಯ್ಯನಿಗೆ ತಾನು ಯಜಮಾನಿಕೆಯ ಪಟ್ಟ ಸಲಿಸಿದರೂ ತಮ್ಮ ಈ ಹೊರೆಯನ್ನು ತಾವೇ ಹೊರುವುದು ತೀರ ಅವಶ್ಯವಾಗಿತ್ತು (ಮರಮ. ೯೦). ೨. ಒಡೆತನ ; ಅಧಿಕಾರ ; ಸ್ವಾಮ್ಯ : ಲೋಕಯನು ತಂನ ಯಜಮಾನಿಕೆ ಉತ್ತಿ ಬಗ್ಗೆ ಉತ್ತಾರವಾದ ಸ್ವಾಸ್ತಿಯವಳಗೆ ಉತ್ತಾರ ಕೊಟ್ಟದು (ಎಕ. VII, ತಿಪಮೊ. ೨೯-೦೫; 1712); ನಮ್ಮೂರಿನಲ್ಲಿ ಮೂರು ಅಂತಸ್ತಿನ ಜನರಿದ್ದರೆಂದು ಧಾರಾಳವಾಗಿ ಹೇಳಬಹುದು. ಒಂದು ಯಜಮಾನಿಕೆ, ಎರಡನೇದು ಆಳುತನ, ಮೂರನೇದು ಇವರಿಬ್ಬರ ದಳ್ಳಾಳಿತನ (ಹುಟ್ಟಿಹ. ೭೫). [ಯಜಮಾನ + — ಇಕೆ]

**ಯಜಮಾನಿತಿ, ಯಜಮಾನತಿ** (ನಾ). ಒಡತಿ ; ಅಧಿಕಾರಿಣಿ ; ಸ್ವಾಮಿನಿ: ತಾನೇ ಯಜಮಾನಿತಿಯೆಂಬಷ್ಟು ಬಿಂಕದಿಂದ ಮಗು ರಾಗವಾಗಿ ಹೇಳಿತು (ವಾತ್ಸಲ್ಯ. ೭೩). **ಯಜಮಾನತಿ :** ಈ ವಾಡೇದ ಯಜಮಾನತಿ ಆಗಾಕ ಲಾಯಖ ಇದ್ದೀ ನೋಡು (ಗ್ರಾಮಾಯ. ೦೭); ಯಜಮಾನತಿಯು . . . ಮನೆಗೆ ಬರುತ್ತಿದ್ದರು (ಹುಟ್ಟಿಹ. ೯).
[ಯಜಮಾನ + — ಇತಿ$_1$ (<— ಇತ್ತಿ)]

**ಯಜಿಸು** (ಕ್ರಿ). ೧. ಯಾಗಮಾಡು : ಯಾಗದಿಂದ (ದೇವತೆಗಳನ್ನು) ತೃಪ್ತಿಪಡಿಸು : ಹಲವು ಯಜ್ಞಂಗಳಲಿ ಯಜಿಸಿವನಲಘುಮತಿ ಯಜ್ಞಾಧಿಪತಿಯನು (ಜಿಕಾಗ. ೩-೩-೩); ಯಜಿಸಲು ಯೋಗ್ಯರಲ್ಲದಿರ್ಪ ಶೂದ್ರ ವ್ರಾತ್ಯಪತಿತಾದಿಗಳ್ಗೆ ಪೌರೋಹಿತ್ಯಮನೆಸಗಿ ಜನ್ಮಂಗಳನಾಚರಿಪುದುಂ (ಕಾಕಶಾಂ. ೨೪೭). ೨. ಪೂಜೆಮಾಡು ; ಅರ್ಚಿಸು : ನಮಿಸಿ ಮುಂಗಡೆ ನಿಂದನಂತವಿಧದಿಂ ಯಜಿಸಿ (ಪದ್ಮರಾ. ೧೦-೨೦೬) ; ಸ್ಮರಿಸುತ್ತೀಕ್ಷಿಸುತೀಳಿಸುತ್ತೆ ಯಜಿಸುತ್ತಾನಂದದಿಂ . . . ಆ ನಿಷ್ಠೆ ತಾನೀಗಳೇ ಪರೆ ಪಶ್ಯಂತಿ ಸುಮಧ್ಯೆ ವೈಖರಿಯೆನಲ್ಕೋರ್ಕುಂ (ಶಶಕ. ೦೭೬-೯೩) ; ಕಲ್ಕೀಶ್ವರನ ಕಾಶಿಯೊಳ್ ಕೇಶವಂ ಶುದ್ಧಮಾನಸನಾಗಿ ಯಜಿಸಿದಂ (ಸಿದ್ಧೇಶ. ೭-೭೩).

[ಯಜನ + _ ಇಸು]

**ಯಜುರಂಗ** (ನಾ). ಯಜುರ್ವೇದದ ಭಾಗ,—ಅಂಗ : ಸಲೆ ಯಜುರಂಗ ದಿಂದಭಿನಯಂಗಳನುನ್ನತ ಋಙ್ನಿಕಾಯದಿಂ ನೆಲೆವಡೆದಿರ್ಪ ಶಬ್ದತತಿಯಂ ನೆಟ್ಟಿ ಸಾಮದೆ ಗೀತಸಾರಮಂ ಸುಲಲಿತಮಿಪ್ಪಥರ್ವಣದಿನಗ್ಗದ ಷಡ್ರಸ ದೇಳ್ಗೆಯೆಲ್ಲಮಂ ಗೆಲ್ದೊಲವಿಂದೆ ಕೂಡಿ ಮಿಗೆ ಪುಟ್ಟಿಸಿದಂ ಬಿದಿ ನಾಟ್ಯ ವೇದಮಂ (ಚಾಸ್ಕರಂ. ೮-೯). [ಸಂ.]

**ಯಜುರ್ವೇದ** (ನಾ). ವೇದಗಳಲ್ಲಿ ಎರಡನೆಯದು ; ಯಜ್ಞಕ್ಕೆ ಸಂಬಂಧಪಟ್ಟ ಗದ್ಯಭಾಗಗಳನ್ನೊಳಗೊಂಡು, ತೈತ್ತಿರೀಯ ಹಾಗೂ ವಾಜಸನೇಯಿ ಎಂಬ ಎರಡು ಶಾಖೆಗಳನ್ನುಳ್ಳ ವೇದ : ಋಗ್ವೇದ ಯಜುರ್ವೇದ ಸಾಮ ಅಥರ್ವಣ ಅಘುಳಿಸುವ ವೇದಘೋಷಗಳು (ಪುರಂದ. ೪-೦-೩); ವೇದವು ಋಗ್ವೇದ, ಯಜುರ್ವೇದ, ಸಾಮವೇದವೆಂದು ಮೂರುವಿಧ (ಹಿಂದಶಾ. ೦೩೭). [ಸಂ.]

**ಯಜುಸ್ಸು** (ನಾ). ೧. ಯಜ್ಞಕಾಲದಲ್ಲಿ ಪಠಿಸುವ ಮಂತ್ರ : ಕೃಷ್ಣ ಯಜುರ್ವೇದದಲ್ಲಿ ಮಂತ್ರಗಳು, ಯಜುಸ್ಸು (ಅಂದರೆ, ಯಜ್ಞದಲ್ಲಿ ಹವಿಸ್ಸನ್ನು ಕೊಡುವಾಗ ಉಚ್ಚರಿಸುವ ಗದ್ಯವಾಕ್ಯಗಳು) — ಇವುಗಳ ಜೊತೆಯಲ್ಲೇ ಯಾಗದ ಒಂದೊಂದು ಕ್ರಿಯೆಯ ಅರ್ಥವನ್ನೂ ಸಾರ್ಥಕ್ಯ ವನ್ನೂ ಹೇಳಿದೆ (ಕಾರಿದ. ೩೦). ೨. ಯಜ್ಞದಲ್ಲಿ ಹೇಳುವ ಸ್ತೋತ್ರ, ಪ್ರಾರ್ಥನೆ, ಮಂತ್ರ ಮೊದಲಾದುವನ್ನೊಳಗೊಂಡ ಗ್ರಂಥ ; ಯಜುರ್ವೇದ ಪಾಠ. ೩. ಯಜುರ್ವೇದ : ವೇದಂ ಛಂದಂ ಶ್ರುತಿ ತದ್ಭೇದಂ ಸಾಮರ್ಗ್ಯಜುಸ್ಸುಯಂ ತ್ರಯಿಯೆನಿಕುಂ (ವಸ್ತುಕೋ. ೩-೦೨).

[ಸಂ. ಯಜುಸ್]

**ಯಜ್ಞ** (ನಾ). ೧. ಯಜನ ; ಯಾಗ : "[ಕ್ರತು] ಯಾಗಮಧ್ವರಂ ಸಪ್ತ ತಂತು ಸತ್ರಂ ಮಖಂ ಸವಂ ಯಜ್ಞಂ" (ವಸ್ತುಕೋ. ೩೯-೯೦) ; ಖಟ್ವಾಂಗ ನೆಂಬರಸನ ಯಜ್ಞದೊಳಾತನ ತಂದ ಘೃತಸಮುದ್ರಮಂ ಕುಡಿದೊಡಾದ ರೋಗವಿಂದು ಪೋದುದು (ಶಂಕರಶಾ. ೩-೦೦೯ ಪ) ; ಯಜ್ಞದ ನೆನವು ಭಾರವಣೆಯಲಿ ಬಿದ್ದುದು ಧರ್ಮನಂದನನ (ಕುಮಾವ್ಯಾ. ೦-೯೩) ; ನನ್ನ ಸಂಶಯ ಯಜ್ಞವನ್ನೇ ಕುರಿತದ್ದಾದುದರಿಂದ ಅದಿಲ್ಲಿಯೇ ಪರಿಹಾರವಾಗ ಬೇಕು (ಬಿಕಂಶಾ. ೦೬೯). ೨. ದೇವಪೂಜೆ ; ಭಗವದರ್ಚನೆ : "ಇಷ್ಟಂ, ಇಷ್ಟಿಃ . . . ಯಜ್ಞಃ, ಯಾಗಃ . . . ಯಾಜ್ಯಂ ಈ ೧೨ ದೇವಪೂಜೆ" (ಶಾಕಕ್ಕ. ೦೭೦) ; ಯಜ್ಞವೆಂದರೆ ಭಗವದರ್ಚನೆ ಮತ್ತು ಅರ್ಪಣ—ಸಾಧು ಸಂತರ ಸೇವೆ (ಶಕ ೬. ೯೭).

ಯಜ್ಞಮಾಡು = ೧. ಯಾಗಮಾಡು : ನಾನು ಈ ಯಜ್ಞ ಮಾಡುತ್ತಿರುವುದು ದೇವತೆಗಳಿಗೆ ಪ್ರಿಯವಾಗಿಲ್ಲವೇ ? . (ಬಿಕಂಶಾ. ೦೬೩); ನಾವು ಎಂದರೆ ಸರಸ್ವತೀತೀರದಲ್ಲಿರುವ ಋಷಿಗಳೆಲ್ಲರೂ ಸೇರಿ ವಿಶ್ವಶಾಂತಿಗೆಂದು ಯಜ್ಞ ಮಾಡುತ್ತಿದ್ದೆವು (ಮಹಾಭಾ. ೨೯೯). ೨. ಕೊಲ್ಲು ; ವಧಿಸು : (೬). ೩. ಚೆನ್ನಾಗಿ ಥಳಿಸು ; ಹೊಡೆ : (೬). [ಸಂ.]

**ಯಜ್ಞಕಂಕಣ** (ನಾ). ಯಜ್ಞಕ್ಕೆ ದೀಕ್ಷಿತನಾಗಿರುವ ಸಂಕೇತವಾಗಿ ಯಜಮಾನನು ಮುಂಗೈಗೆ ಕಟ್ಟಿಕೊಳ್ಳುವ ಮಂತ್ರಪೂತವಾದ ದಾರ, —ಸೂತ್ರ. [ಸಂ.]

**ಯಜ್ಞಕುಂಡ** (ನಾ). ಯಜ್ಞದಲ್ಲಿ ಅಗ್ನಿಪ್ರತಿಷ್ಠಾಪನೆಗಾಗಿಯೂ ಆಹುತಿಯನ್ನು ಕೊಡುವುದಕ್ಕಾಗಿಯೂ ನಿರ್ಮಿಸಿದ ವೇದಿಕೆಯಲ್ಲಿಯ ಹಳ್ಳ,—ಕೊಂಡ : ಮೇಲಣಂತರ್ವೇದಿಗಳ ಮಾಸಿಪಾಳಿ ಮಂತ್ರಾಹುತಿಗೆ ಕವಿವುರಿನಾಲಗೆಯ ಲಾವಣಿಗೆ ತಳಿತುದು ಯಜ್ಞಕುಂಡದಲಿ (ಕುಮಾವ್ಯಾ. ೦೦-೦); ಪೂರ್ಣಾಹುತಿಯ ಸಮನಂತರದಲಾ ವಿಶ್ರುತಸುತೇಜೋಮೂರ್ತಿ ಹೊಳೆ ದುದು ಯಜ್ಞಕುಂಡದಲಿ (ತೊರದಾ. ೦-೭೩೯) : ಮಖಶಾಲೆಯಂ ರಚಿಸಿ, ಯಜ್ಞಕುಂಡಂಗೈದು ವಿಶ್ವಶಕ್ತಿಸ್ವರೂಪಿಯಂಗ್ನಿಯಂ ಭಜಿಸು ನೀಂ (ಶ್ರೀರಾಮ. ೦೦-೨೩೯). [ಸಂ.]

**ಯಜ್ಞತುರಗ** (ನಾ). ಯಜ್ಞದ ಕುದುರೆ : ರಾಮಸೊರ್ವನೇ ವೀರನಾತನ ಯಜ್ಞತುರಗವಿದು (ಕೈಮಿಭಾ. ೨೦-೭). [ಸಂ.]

**ಯಜ್ಞದೀಕ್ಷಿತ** (ನಾ). ಯಜ್ಞಕ್ಕೆ ಸಿದ್ಧನಾದವನು ; ಯಾಗ ಮಾಡಲು ಅಧಿಕಾರವನ್ನು ಹೊಂದಿರುವವನು : ಯಮನಂದನನು . . . ಮಾಜಿದಿನ ಯಜ್ಞದೀಕ್ಷಿತನಾದನೊಲವಿನಲಿ(ಕುಮಾವ್ಯಾ. ೭-೨೭); ಅಸುರರು ಪಶುಗಳಾದರು ಯಜ್ಞದೀಕ್ಷಿತನಾದನಾ ಹನುಮ (ತೊರದಾ. ೩-೮-೯); ಯಜ್ಞದೀಕ್ಷಿತನಾದ ವಾಜಶ್ರವಸ . . . ತಾನು ಮಾಡಬೇಕಾದ ಕಾರ್ಯಗಳನ್ನು ಮಾಡು ತ್ತಿದ್ದಾನೆ (ಬಿಕಂಶಾ. ೦೬೪). [ಸಂ.]

**ಯಜ್ಞದೀಕ್ಷೆ** (ನಾ). ೧. ಯಜ್ಞಮಾಡುವುದಕ್ಕೆ ಮುಂಚೆ ಯಜಮಾನ ನಿಗೆ ಅಧಿಕಾರವನ್ನು ಕೊಡುವುದು: ಯಜ್ಞದೀಕ್ಷೆಯನ್ನು ವಹಿಸುವ ದಿನದ ದೀಕ್ಷಾಯಣೀಯೇಷ್ಟಿಯಾಯಿತು (ಮಹಾಭಾ. ೦೦೪). ೨. ಯಜ್ಞವನ್ನು ಕೈಕೊಳ್ಳುವಿಕೆ. — ನಡಸುವಿಕೆ. [ಸಂ. ಯಜ್ಞದೀಕ್ಷಾ]

**ಯಜ್ಞದ್ರವ್ಯ** (ನಾ). ಯಜ್ಞಕ್ಕೆ ಬೇಕಾಗುವ ಸಾಧನ,—ಸಾಮಗ್ರಿ : ಯಜ್ಞದ್ರವ್ಯಂಗಳೆಲ್ಲಮಂ ನೆರಪಿ (ಶಂಕಶಾ. ೩-೩೩ ಪ); ಯಜ್ಞದ್ರವ್ಯೋತ್ಕರಮಂ . . . ರಕ್ಷಿಪಂ ಧನುವಿನಾದಿಮದ್ರೇಕ್ಕಾಣಂ (ಪಾಶಹಿ. ೦೯-೨೩).

[ಸಂ.]

**ಯಜ್ಞಪತ್ನಿ** (ನಾ). ಯಜ್ಞಕಾರ್ಯದಲ್ಲಿ ಗಂಡನ ಜೊತೆಗೆ ಭಾಗವಹಿಸಲು ಅಧಿಕಾರವುಳ್ಳ ಹೆಂಡತಿ : ಸಕಲ ಸೌಖ್ಯ ಸೌಭಾಗ್ಯಗಳನ್ನೂ ಪಡೆದು ಯಜ್ಞಪತ್ನಿಯೂ ಪ್ರತಾಚಾರಿಣಿಯೂ ಆಗು! (ಪತಕಾ. ೩೦).

[ ಸಂ. ಯಜ್ಞಪತ್ನೀ ]

**ಯಜ್ಞಪಶು** (ನಾ). ೧. ಯಜ್ಞದಲ್ಲಿ ಬಲಿಕೊಡುವ ಮೇಕೆ, ಕುದುರೆ ಮೊದಲಾದ ಪ್ರಾಣಿ ; ಬಲಿಪಶು : ಯಜ್ಞಪಶುಬಂಧನಕ್ಕೆಂದು ಸ್ಥಾಪಿತವಾದ . . . ಯೂಪಸ್ತಂಭದ ಬಳಿ ತನ್ನ ಮಗ ನಿಂತುದನ್ನು ನೋಡುತ್ತಿದ್ದ ಹಾಗೇ . . . ಚೀರಿ ಹೇಳಬೇಕೆನಿಸಿತು (ಬಿಕಂಶಾ. ೦೬೩). ೨. (ಅಲಂ) ಮೋಸಕ್ಕೆ ಬಲಿಯಾಗುವವನು. [ಸಂ.]

**ಯಜ್ಞಪುರುಷ** (ನಾ). ೧. ವಿಷ್ಣು. ೨. ಅಗ್ನಿ : ಯಜ್ಞಸ್ಥಧಿಪತಿಯಾತ ನೀತನು ಯಜ್ಞಪುರುಷನು ಸ್ರುಕ್ಸ್ರುವಾದೀ ಯಜ್ಞಸಾಧನನೀತನೀತನು ಮಂತ್ರಕಾಲಾತ್ಮ (ಕುಮಾವ್ಯಾ. ೯-೦೩); ಹರನ ಸ್ಮರಿಸಿ, ಅಗ್ನಿಗೊಂಡವ ಬೀಳುತ್ತಿರಲು, ಯಜ್ಞಪುರುಷ ಮೆಚ್ಚಿ ಪ್ರಸನ್ನನಾಗಿ ಕಾಳಿದಾಸನ ಪ್ರಾಣವಂ ಕೊಟ್ಟು ಯಜ್ಞಪುರುಷನದೃಶ್ಯನಾಗಲು (ಭೈರಸೊ. ೧. ೩೦೫).

[ಸಂ.]

**ಯಜ್ಞರಕ್ಷಣೆ** (ನಾ). ಯಜ್ಞವು ಸುಸೂತ್ರವಾಗಿ ನಡೆಯುವಂತೆ ಕಾಪಾಡುವುದು : ರಾಕ್ಷ . . . ನು ಕೊಡು . . . ಯಜ್ಞರಕ್ಷಣೆಗೆ (ತೊರದಾ. ೦-೯-೨೭). [ಯಜ್ಞರಕ್ಷಣ ]

**ಯಜ್ಞರಿಪು** (ನಾ). ೧. ಯ . . . ಕಾರ್ಯಗಳಿಗೆ ವಿರೋಧಿಯಾದವನು; ರಾಕ್ಷಸ : ತತ್ತಿಗಃ . . . ೨ ಯಜ್ಞರಿಪುಗಳ ಮೃತ್ಯುವಜಿಯಾ

(ಕುಮ್ಯಾಸ. ೦೦-೩೦). ೨. ಧರ್ಮಬಾಹಿರನಾದವನು ; ಅಧರ್ಮಿ : ಯಜ್ಞರಿಪುಗಳು ನಿಪುಣರಿಗೆ) ವರಯಾಜ್ಞಿಕರಿಗಾಚಾರಹೀನರು (ಕುಮ್ಯಾಸ. ೦೦-೩೨). [ಸಂ.]

**ಯಜ್ಞವಾಟ** (ನಾ). ಯಜ್ಞಕಾರ್ಯಕ್ಕಾಗಿ ನಿರ್ಮಿಸಿದ ಚಪ್ಪರ; ಯಾಗಶಾಲೆ : ಧೃತರಾಷ್ಟ್ರ ಬಾಹ್ಲಿಕ ವರಬೃಹದ್ರಥ ಸೋಮದತ್ತರು ಪರಮಪೂಜ್ಯರು ಮಾನನೀಯರು ಯಜ್ಞವಾಟದಲಿ (ಕುಮ್ಯಾಸ. ೬-೦೪); ನೃಪಕುಲದ ಪುಣ್ಯಮುನಿಗಳ ಯಜ್ಞವಾಟಪತಿಕೌತುಕದ ಮಾಳ್ಕೆಯಂ ಕಂಡು ನಲಿದಾಡಿತು ಜನಂ (ಕೈಪುರಾ. ೩೪-೦೦). [ಸಂ.]

**ಯಜ್ಞವಿದ್ಯೆ** (ನಾ). ಯಜ್ಞಕಾರ್ಯಗಳ ಜ್ಞಾನ ; ಯಜ್ಞತಂತ್ರ ಜ್ಞಾನ : ಚಾರುತರ ಯಜ್ಞವಿದ್ಯಾಪಾರಗರ ರವಂಗಳಿಂ . . . ನೆಗಟ್ದು ದಾಹುತಿಧೂಮಂ (ಕಂಕವಾ. ೬-೩೪). [ ಸಂ. ಯಜ್ಞವಿದ್ಯಾ ]

**ಯಜ್ಞವೇದಿ** (ನಾ). ಯಜ್ಞದ ಜಗಲಿ, ವೇದಿಕೆ; ಯಜ್ಞಕುಂಡವಿರುವ ಭಾಗ : ಎತ್ತರಪ್ರದೇಶದಲ್ಲಿ ಯಜ್ಞವೇದಿಯನ್ನು ನಿರ್ಮಿಸಿ . . . ಸುಖಾಸನಗಳನ್ನೂ ಹಾಕಲಾಗಿತ್ತು (ಶಾಂತಲಾ. ೦೭). 'ಯಜ್ಞವೇದೀಸಂಭವೆ' ಪರಾ. [ಸಂ.]

**ಯಜ್ಞವೇದೀಸಂಭವೆ** (ನಾ). ಯಜ್ಞಕುಂಡದಲ್ಲಿ ಹುಟ್ಟಿದವಳು; ದ್ರೌಪದಿ : ಯಜ್ಞವೇದೀಸಂಭವೆಯುಂ ಯಾಜ್ಞಸೇನಿಯುಂ . . . ಎನಿಸಿದ ಪಾಂಚಾಲರಾಜತನೂಜೆ ಪವಮಾನತನೂಜನಲ್ಲಿಗೆ ವಂದು (ಗದಾಯು. ೦-೩೩ ವ). [ ಸಂ. ಯಜ್ಞವೇದೀಸಂಭವಾ ]

**ಯಜ್ಞವೈರಿ** (ನಾ). ೧. ಯಜ್ಞಕ್ಕೆ ಶತ್ರುವಾದವನು. ೨. ದಕ್ಷ ಯಜ್ಞವನ್ನು ನಾಶಮಾಡಿದವನು ; ವೀರಭದ್ರ : ವಿಘ್ನರಾಜ ವಿನಾಯಕನೆ . . . ಯಜ್ಞವೈರಿಯ ಪಿತನ [ಶಾಕಾಂ. ಶತನತಪಾದ] ಸುತ ನಿನ್ನ ಪೊಗಳಲ್ಕಭಿಜ್ಞರಲ್ಲದೆ ಎನ್ನ ಜಡಮತಿಗಗೋಚರವು (ಶ್ರೀಕಂಠ. ೧-೩). [ಸಂ. ಯಜ್ಞವೈರಿನ್]

**ಯಜ್ಞಶಾಲೆ** (ನಾ). = ಯಜ್ಞವಾಟ : ರಾಜರುಷಿ ಜನಕನನು ಕಾಶೀ ರಾಜನನು . . . ಯಜ್ಞಶಾಲೆಯುಲಿ ಆ ಜನೇಶ್ವರ ನಿಲಿಸಿ ಮುದದಲಿ ಪೂಜಿಸಿದನವರುಗಳ (ತೊರರಾ. ೧-೭-೩೪). [ಸಂ. ಯಜ್ಞಶಾಲಾ]

**ಯಜ್ಞಸಾಧನ** (ನಾ). ೧. ಯಾಗವನ್ನು ನೆರವೇರಿಸುವಿಕೆ. ೨. = ಯಜ್ಞದ್ರವ್ಯ : ಗಂಧ ಪುಷ್ಪ ಆಜ್ಯಪಾತ್ರಾದಿ ಯಜ್ಞಸಾಧನಂಗಳಂ ಸಂಗ್ರಹಿಸಿ (ವಿವೇಕ. ೦೨೦). [ಸಂ.]

**ಯಜ್ಞಸೂತ್ರ** (ನಾ). ಜನಿವಾರ ; ಯಜ್ಞೋಪವೀತ : ಬಲದ ಕೆಯ್ಯ ನೆಗಹಿ ಇಕ್ಕಲು ಪಟ್ಟಂತಹ ಯಜ್ಞಸೂತ್ರವು — ಉಪವೀತ (ನಾತರಾ. ೬). [ಸಂ.]

**ಯಜ್ಞಾಂಗ** (ನಾ). ೧. ಯಜ್ಞದ ಭಾಗ. ೨. = ಯಜ್ಞದ್ರವ್ಯ. ೩. ಅತ್ತಿ, ಕಗ್ಗಲಿ ಇತ್ಯಾದಿ ಮರಗಳ ಸಮಿತ್ತು. [ಸಂ.]

**ಯಜ್ಞಾರಿ** (ನಾ). ೧. ದಕ್ಷಯಜ್ಞದ ಶತ್ರು ; ವೀರಭದ್ರ. ೨. ಶಿವ. [ಸಂ.]

**ಯಜ್ಞಾಶ್ವ** (ನಾ). = ಯಜ್ಞತುರಗ : ನಮ್ಮ ತಂದೆ . . . ಆ ಯಜ್ಞ ನಡೆಯಬಾರದೆಂಬ ದುರುದ್ದೇಶದಿಂದ ಯಜ್ಞಾಶ್ವವನ್ನು ಅಪಹರಿಸಿಬಿಟ್ಟನು (ವತಖಾ. ೮೩). [ಸಂ.]

**ಯಜ್ಞಿಕ** (ನಾ). ಒಂದು ಬಗೆಯ ಮರ ; ಪಲಾಶ : "ಯಜ್ಞಿಕಃ — ಮುತ್ತುಗ, ಕಗ್ಗಲಿ" (೬ಕಂ. ೦೩೦). [ಸಂ.]

**ಯಜ್ಞೀಯ** (ಗು). ೧. ಯಜ್ಞಕ್ಕೆ ಸಂಬಂಧಿಸಿದ. ೨. ಯಜ್ಞ ಕ್ಕೆಂದು ತಂದ ; ಯಜ್ಞದಲ್ಲಿ ಬಲಿ ಕೊಡಬೇಕಾದ : ನಾನೂ 'ಹಪ್ಪಕ್ಕೆ ತಂದ ಹರಕೆಯ ಕುರಿ'ಯೇನೂ ಅಲ್ಲ ; ಯಜ್ಞೀಯ ಪಶುವೆ (ನಾಶಿಶಿ. ೨೩). ೩. ಯಜ್ಞಕ್ಕೆ ಯೋಗ್ಯವಾದ.— ಪವಿತ್ರವಾದ. (ನಾ). ೪. ಯಜ್ಞಕ್ಕೆ ಬೇಕಾದುದು ; ಅತ್ತಿ, ದರ್ಭೆ ಮೊದಲಾದ ವಸ್ತು : "ಯಜ್ಞೀಯಃ–ಅತ್ತಿ, ದರ್ಭೆ" (೬ಕಂ. ೦೩೦). [ಸಂ.]

**ಯಜ್ಞೇಶ್ವರ** (ನಾ). ೧. ವಿಷ್ಣು : ಹರಿ. ೨. ಇಂದ್ರ. ೩. ಅಗ್ನಿ : ಯಜ್ಞೇಶ್ವರನು ಬಹುಭಯದಿಂದ ಪ್ಪುಡಿದಿದ್ದ ಹೂವು ಕೂಡ ಬಾಡದ ಹಾಗೆ ಸೀತೆಯನ್ನು ತಂದು ರಾಮನಿಗೆ ಒಪ್ಪಿಸಿದನು (೬೮ತಿಶಂ. IX. ೦೨) ; ಯಜ್ಞೇಶ್ವರನ ಜ್ವಾಲಾಕಲಾಪಗಳು ಏಳೇಳುತ್ತಿವೆ (ಪುಕಾಅ. ೦೦೪). [ಸಂ.]

**ಯಜ್ಞೋತ್ಸಾರ** (ನಾ). ಯಜ್ಞದ ಕಾರ್ಯ : "ದೈನ್ಯದಲ್ಲಿ ಯಜ್ಞೋ ತ್ಸಾರದಲಿ ಕೋಪದಲಿ ಮನ್ನಿಪೇದೆಂಬುದು" (ಕುಂಗರಾ. ೧೯೩-೨೦). [ಸಂ.]

**ಯಜ್ಞೋಪಕರಣ** (ನಾ). = ಯಜ್ಞದ್ರವ್ಯ : ನಿರತಿಶಯ ಯಜ್ಞೋಪ ಕರಣದ ಪರಿಪರಿಯ ಸಂಭಾರಚಯ ಗೋಚರಿಸಿದುದು ವರಗುರು ವಸಿಷ್ಠ ಮುನೀಂದ್ರನಾಜ್ಞೆಯಲಿ (ತೊರರಾ. ೧-೭-೬). [ಸಂ.]

**ಯಜ್ಞೋಪವೀತ** (ನಾ). ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯವರ್ಗದ ಪುರುಷರು ಉಪನಯನದ ಸಮಯದಿಂದ ಎಡಭುಜದ ಮೇಲೆ ಮತ್ತು ಬಲಭುಜದ ಕೆಳಗೆ ಬರುವಂತೆ ಮಂತ್ರಪೂರ್ವಕವಾಗಿ ಧರಿಸುವ, ಮೂರು ಎಳೆಗಳಿಂದ ಕೂಡಿದ ಸೂತ್ರ ; ಜನಿವಾರ : ಅವರವರ ನೆರೆಗಳೊಳ್ ಬ್ರಹ್ಮಸೂತ್ರಾಭಿಧಾನ ಯಜ್ಞೋಪವೀತದಿಂ ಪವಿತ್ರಗಾತ್ರರ್ಮಾಡಿ (ಆದಿಪು. ೦೩-೦೦ ವ) ; ವರಕಾಂಚನಮಯದ ಯಜ್ಞೋಪವೀತವನಿಳುಹಿದನು ದ್ರೋಣ (ಕುಮ್ಯಾದ್ರೋ. ೯-೦೪). [ಸಂ.]

**ಯಜ್ಯ** (ಗು). ೧. ಪೂಜೆಗೆ ತಕ್ಕ ; ಪೂಜ್ಯವಾದ. (ನಾ). ೨. ಯಜ್ಞ. ೩. ದೇವಪೂಜೆ : "ಇಷ್ಟಂ, ಇಷ್ಟಿಃ . . . ಯಜ್ಯಂ, ಯಾಜ್ಯಂ—ಈ ೧೦ ದೇವಪೂಜೆ" (ಅಭಿಕ್ಕ. ೦೩೦). [ಸಂ.]

**ಯಜ್ವ** (ನಾ). ವೇದೋಕ್ತವಾದ ವಿಧಾನದಲ್ಲಿ ಯಜ್ಞ ಮಾಡುವವನು ; ಯಜ್ಞಕರ್ತ : "ಯಾಜಮಾನಸಿಜ್ಯಾಗಮಪ್ರತಿ ಯಜ್ವನಾ ದೀಕ್ಷಿತ ನೆನಿಕ್ಕು" (ಶಬ್ದಮ. ೬೭-೦೪). [ಸಂ. ಯಜ್ವನ್]

**ಯಡಾನಿಬಳ್ಳಿ** (ನಾ). ಒಂದು ಬಗೆಯ ಬಳ್ಳಿ : "ಧಗಡೀಬಳ್ಳಿ . . . ಯಡಾನಿಬಳ್ಳಿ, ಸುಗಡಿಬಳ್ಳಿ" (ಸಸ್ಯಕೋ. ೩೭); ಧಗಡಿಬಳ್ಳಿ, ದುಸಂಬಳ್ಳಿ, ಅಡಂಬುಬಳ್ಳಿ, ಯಡಾನಿಬಳ್ಳಿ (ವೃಕ್ಷಶಿ. ೨೩-೪೨೪). [ಯಡಾನ್ನಿ + ಬಳ್ಳಿ]

**ಯಣ್‌ಸಂಧಿ** (ನಾ). [ವ್ಯಾಕ] ಸಂಸ್ಕೃತದ ಸ್ವರಸಂಧಿಗಳಲ್ಲೊಂದು : ಇ ಈ, ಉ ಊ, ಋ ೠಕಾರಗಳಲ್ಲೊಂದರ ಮುಂದೆ ಅದಕ್ಕೆ ಸವರ್ಣ ವಲ್ಲದ ಸ್ವರವಿದ್ದರೆ ಇ ಈ ಕಾರಗಳಿಗೆ ಯಕಾರವೂ, ಉ ಊ ಕಾರಗಳಿಗೆ ವಕಾರವೂ, ಋ ೠಕಾರಗಳಿಗೆ ರೇಫವೂ (= ರ್) ಆದೇಶವಾಗಿ ಬರು ತ್ತವೆ. ಇವಕ್ಕೆ ಯಣ್‌ಸಂಧಿಯೆಂದು ಹೆಸರು (ಹಳ್ವಮ. ೦೬೨). [ಸಂ.]

**ಯತ** (ಗು). ೧. ಎತ್ತಿಹಿಡಿದ ; ಮೇಲಕ್ಕೆ ಎತ್ತಿದ : (೬). ೨. ಚಾಚಿದ; ನೀಡಿದ : (೬). ೩. ಹತೋಟಿಗೊಳಿಸಿದ ; ನಿಗ್ರಹಿಸಿದ. ೪. ಸೀಮಿತವಾದ. ೫. ಸೌಮ್ಯವಾದ : 'ಯತಯಾತಪ್ರೌಢಿ' ಪರಾ. (ನಾ). ೬. ಓಡುವಿಕೆ ; ಓಟ : "ಓಡುವುದು ಯತವೆಂಬುದು" (ಕರಾಯು. ೩೭-೩೬). ೭. ಮಾವುತನು ಕಾಲಿನಿಂದ ತಿವಿದು ಆನೆಯನ್ನು ಚೋದಿಸುವಿಕೆ : "ಯತಪಂಕ್ತಿಕರ್ಮ" (ಪಟ್ಟಕೋ. ೬೬-೩೭). [ಸಂ.]

**ಯತನ** (ನಾ). ಪ್ರಯತ್ನ; ಸಾಧನೆ : ಯತ್ನ, ಯತನ (ಕಪ್ಪ್ರಮ. ೦೪೭ ಕ್ರಯೋ); ಯತನ ಕರ್ತವ್ಯವದು ನಮಗೆ ವಿದ್ಯಾಭ್ಯಾಸ ಹಿತಪರಿಜ್ಞಾನ ಯತ್ನಾನುಭವ ಫಲಿತ ಸತತಯತ್ನದಿನಾತ್ಮಶಕ್ತಿ ಪರಿವರ್ಧಿಪುದು ಯತನ ಜೀವನಶಿಕ್ಷೆ (ಮಂಕುತಿ. ೯೩೭). [ಸಂ.]

**ಯತನಗೈ** (ಕ್ರಿ). ಪ್ರಯತ್ನಮಾಡು; ಬ್ರಹ್ಮಾದಿಗಳ್ ಯತನಗೈಯಲು ಲಭ್ಯವಹುದೆ. (ಕೃಷ್ಣಗೋ. ೨-೦೦೭). [ಯತನ + ಗೈ (< ಕೆಯ್$_1$)]

**ಯತಯಾತಪ್ರೌಢಿ** (ನಾ). ಸೌಮ್ಯವಾದ ಅಂಕುಶಪ್ರಹಾರದಿಂದ (ಆನೆಯನ್ನು) ನಡೆಯಿಸುವ ಕೌಶಲ : ಯತಯಾತಪ್ರೌಢಿಯಿಂ ಮಿಂಚಿನ

ಮೊಗವಡಮಂ ಬೀಸೆ ಕೊರೆಂಕುಶಂ ಪ್ರೇರಿತಮತ್ತೇಭಕ್ಕೆ . . . ವಿಶ್ರುತ ಪುಣ್ಯಂ ಪುಣ್ಯಪುಂಜಾಕರಮೆನಿಸಿದ ಭೂತಾದ್ರಿಯಂ ಮುಟ್ಟೆವಂದಂ (ಅಪಂಪು. ೩-೫೩). [ಸಂ.]

**ಯತಾರಾಜಿ** (ನಾ). ಆಕ್ಷೇಪ; ಆರೋಪ: ನಮ್ಮ ಮೇಲೆ ಚಾಡಿ ಹೇಳಿದವನ ಮೇಲೆ ಯತಾರಾಜಿ ಹಾಕಲಾದೀತು (ರಾಚೆಚರಿತ್ರೆ. ೦೯೯). [← ಅರ. ಹಿಂ. ಏತರಾಜ್]

**ಯತಿ** (ನಾ). ೧. ಹತೋಟಿ; ನಿಗ್ರಹ; ನಿಯಮನ. ೨. ಇಂದ್ರಿಯ ನಿಗ್ರಹವನ್ನು ಮಾಡಿದವನು; ಮುನಿ; ಯೋಗಿ: ಕೈವಲ್ಯಲಕ್ಷ್ಮಿಯಂ ಯತಿ ಪಡೆದಂ (ಆದಿಪು. ೧೧-೧೫); ಯತಿಗಳಿಂದಿರಿ ನೀವು ರೋಷಚ್ಯುತರಲೇ ಬಳಿಕೇನು (ಕುಮಾ.ಭಾ. ೬-೨೦); ಯತಿಗೇಕೆ ಕೋಪ ದುರ್ಮತಿಗೇಕೆ ಪರತತ್ವ (ಸರ್ವಜ್ಞ. ೯೯೨). ೩. [ಛಂದ] ಪದ್ಯಗಳನ್ನು ಓದುವಾಗ ಅರ್ಥವು ಕೆಡದ ಹಾಗೆ ಕೊಂಚ ನಿಲ್ಲಬೇಕಾದ ನಿಯತಸ್ಥಾನ; ಪದ್ಯದ ಪಾದಗಳಲ್ಲಿಯ ವಿರಾಮಸ್ಥಾನ; ಉಸಿರ್ದಾಣ: ಯತಿಯೆಂಬುದುಸಿರ್ವ ತಾಣಂ ಕೃತಾಸ್ಪದಂ ವೃತ್ತಜಾತಿ ಪದಪದ್ಧತಿಯೊಳ್ (ಛಂದೋಂ. ೦-೬೦); ದೋಸಮನೆ ಗುಣದವೋಲುದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್ ದೇಸಿಯನೆ ನಿಜಿಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ (ಛಂದೋ. ೧-೬೩). ೪. [ಸಂಗೀತ] "ತಾಳಕ್ಕೆ ಬರುವ ಅಂಗಗಳನ್ನೂ ಅವುಗಳ ನಿರ್ದಿಷ್ಟ ಓಟಕ್ರಮವನ್ನೂ ಸ್ವರ ಸಾಹಿತ್ಯಗಳು ಅನುಸರಿಸುವ ರೀತಿಗೆ ಯತಿ ಎಂದು ಹೆಸರು" (ಸಂಗೀತಸಂ. ೫೭); ಕೃತಿಯ ಒಂದು ಪಾದ ಯಾವ ಅಕ್ಷರದಿಂದ ಪ್ರಾರಂಭಿಸುವುದೋ ಕೆಲವು ಅಕ್ಷರಕಾಲ ವಿರಾಮ ಬಂದು, ನಂತರ ಅದೇ ಪಾದದ ಉತ್ತರಾರ್ಧ ಅದೇ ಅಕ್ಷರದಿಂದ ಪ್ರಾರಂಭಿಸುತ್ತದೆ. ಇದಕ್ಕೂ ಯತಿ ಎಂದು ಹೆಸರು (ಸಂಗೀತಸಂ. ೯೩). ೫. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ: (+). ೬. (?): ಯತಿಯರಡರ ಪೋಲ್ವ ಸ್ಥೂಲವು ತೂಕ ತಂಡುಲಕೆ ಸರಿಯೆನಿಸಿರೆ ಕ್ರಯವ ಪೇಳ್ವುದು ನಾಲ್ಕು ಮಾಡಿಯಂದು (ಚಕ್ರಾಂ. ೯-೦೭). [ಸಂ.]

**ಯತಿಗಣ** (ನಾ). ೧. ಮುನಿಗಳ ಸಮೂಹ. ೨. [ಛಂದ] ಯತಿಸ್ಥಾನ ಮತ್ತು ಗಣ. ೧, ೨: ಛಂದೋನಿಬಂಧನದಂತೆ ಯತಿಗಣಮುಂ. . . ಯಾಪ್ಯಾದಿಶೆಯಂತೆ ಧರ್ಮಪ್ರಭಾವವಿಭಾವಿತಮುಮೆಂಬ ಮಹನೀಯ ಮಹಿಮೆಯಂ ತಳೆದು . . . ಇರ್ಪುದಾ ಪುರಂ (ಧ.ಕೃ.ಪು. ೯-೩೦ ವ). [ಸಂ.]

**ಯತಿಭಂಗ** (ನಾ). [ಛಂದ] ಯತಿಯು ಇಂತಹ ಕಡೆ ಇರಬೇಕೆಂಬ ನಿಯಮವನ್ನು ಮೀರುವುದು; ಯತಿಯನ್ನು ಬಿಟ್ಟುಬಿಡುವುದು: ತಡತಡಿಸಿ ಯತಿಯನಿಂತಿರೆ ತೊಡರ್ಚಿ ಕೆಡೆ ಪೇಟಿಕ್ಕೊಡಕ್ಕುಮದು ಯತಿಭಂಗಂ (ಛಂದೋ. ೦-೬೩). [ಸಂ.]

**ಯತಿಭ್ರಷ್ಟ** (ನಾ). = ಯತಿಭಂಗ: ಖಂಡಿತ ವ್ಯಸ್ತಸಂಬಂಧ. . . ಯತಿಭ್ರಷ್ಟ ದುಷ್ಟ ಅಸತ್ಕ್ರಿಯೆಂಬೆಂಟು ವಾಕ್ಯದೋಷಮಿಲ್ಲದೆ (ಶಿವೇಶ. ೦೫೦). [ಸಂ.]

**ಯತಿರಾಜ** (ನಾ). ೧. ಮುನಿಗಳಲ್ಲಿ ಮಿಗಿಲಾದವನು: ಯತಿರಾಜ ಗಣಾಗ್ರಣಿ. . . ಜಿನಚಂದ್ರಮುನೀಂದ್ರಂ (ಶಾಂತಿಪು. ೦-೨೬); ಯತಿರಾಜಾಸ್ಯಪಯೋಜದಿಂದೊಗೆವ ಭಾಸ್ವದ್ದಿವ್ಯ ಮಂತ್ರಾವಳೀರುತಿಗಂ ದಕ್ಷಿಣದಿಂದೆ ಮಾರುತಸಖಂ ಪ್ರತ್ಯಕ್ಷಮಾಕಾರಮಾಂತು. . . ಸರ್ವಾರ್ಯ ಹುತಿಯಂ ಕೈಕೊಳುತಿರ್ದಂ (ಕುಸುಮ. ೯-೦೩೩). ೨. ರಾಮಾನುಜಾಚಾರ್ಯರು, ರಾಘವೇಂದ್ರ ಸ್ವಾಮಿಗಳು ಮುಂತಾದವರ ಗೌರವ ಸೂಚಕವಾದ ಹೆಸರು: ಶೇಷನೀ ಧರೆಯೊಳಗುದಿಸಿ ಮಾನುಷ ದಿವ್ಯ ವೇಷದಿಂ ಯತಿರಾಜನೆನಿಸಿ (ಕೃ.ಸ.ಗ. ೮-೯); ಯತಿರಾಜಾ . . . ಬೃಂದಾವನದಲ್ಲಿ ನೀನಿದ್ದು, ಭಕ್ತಜನರ ಸಕಲ ಕೋರಿಕೆಗಳನ್ನು ಸಲ್ಲಿಸಿ ಕೀರ್ತಿವಂತನಾಗು (ಕಥಾ. ೩೩೬). [ಸಂ. ಯತಿರಾಜನ್]

**ಯತಿವಿಲಂಘನ** (ನಾ). =ಯತಿಭಂಗ: ಗಮಕಸಮಾಸದಿಂ ಜಟಕುಳಕ್ಷಳದಿಂ . . . ಯತಿವಿಲಂಘನದಿಂದಿರದಲ್ತೆ ಕನ್ನಡಂ (ಕವಿರಾ. ೩. ೩೯೨). [ಸಂ.]

**ಯತುನ, ಜತನ, ಜತ್ನ**[1]**, ಜತ್ನನ** (ನಾ). ೧. =ಯತನ: ಕಡುಯತುನದಿನಲ್ಲಿ ತಾಪಸರ್ ಸಂತಪಿಪರ್ (ಶಾಕಂರ. ೦-೦೬). **ಜತನ**: ೧. ಕ್ರಕಚ–ಕರಗಸ, ಯತ್ನ–ಜತನ (ಶಬ್ದಮ. ೨೩೪ ಪ್ರಯೋ); ಬಲ್ಪಿಗೆಯೊಳ್ ಜತನದಿಂ ಬಿಜ್ಜೆಯೊಳ್ ಪಜ್ಜೆಯಿಡುತಿರ್ದಂ (ಅದ್ಭುತ. ೨೭-೩). ೨. ಎಚ್ಚರಿಕೆ; ಜೋಪಾನ; ಜೋಕೆ: ಇಳೆಯನೀರಡಿ ಮಾಡಿದ ಪಾದ ಜತನ ಬಾಯೊಳೆಯ ಪರಿಸಿದಂಘ್ರಿ ಜತನ (ಪೋಹಕ. ೦೯-೦೯); ಸುರತ್ರಯದ ಕೋಂಟೆಗಾವಲ ಪಟುಭಟರ್ಜತನವೆಂದು ನೇಮಿಸಿ ತಾರಕಾಕ್ಷನರಮನೆ ಪೊಕ್ಕನಾಕ್ಷಣದೊಳು (ಚಂಪು. ೯೩-೯); ಎಣಿಕೆ ಬೇಡಿದಕನ್ನು ವೀರ ವೃಷಕೇತು ಫಲುಗುಣರ ದೇಹಂಗಳತಿ ಜತನವೆಂದಾಪ್ತರ್ಗೆ ರಣದ ಸುಯ್ದಾನವಂ ಪೇಳ್ದು (ಜೈಮಿಭಾ. ೨೯-೨೯). **ಜತ್ನ**[1]: ೧. ಮೊತ್ತಮೊದಲಿಗನುಮದುವ್ವೊನೊರ್ವಂ ತನ್ನ ಜತ್ತಮ[ಮಿ]ಲ್ಲದೊಲ್ದೋವಳ ವೃತ್ತಕಮನಿಂತೆಂದು (ಶಾಂತಿಪು. ೬-೯೯). ೨. ನಿತ್ಯಭಕ್ತಿಯಿಲ್ಲದವನು ಹತ್ತಿರಿ ಪದಾರ್ಥವೆಲ್ಲ ಜತ್ನಾಗಿರಿಸಿಕೊಂಡು ಸುತ್ತ ಸಮರ್ಪಣೆಯೆಂದು ಇತ್ತು ನಲಿದಾಡಿದರೆ ಉತ್ತಮ ಶ್ಲೋಕನು ಒಪ್ಪ (ಮೋಕ್ಷಾಂ. ೦೦೦-೩). **ಜತ್ನನ**: ೨. ಎಡವಿ ಕಂಡ್ಯಾ ಸ್ವಾಮಿ ಜತ್ನನ ಕಲ್ಲುಯಿಕೊ ಯೆನುತ ಕೆಡಗು ಕುಣಿಯದೆ ಯೆಚ್ಚರೆಂದೇ (ಜ್ಞಾ.ಕಸಿಂ. ೨೦-೨೬).

**ಜತನ ಮಾಡು** = ಭದ್ರಪಡಿಸು; ಜೋಕೆಯಾಗಿರಿಸು: ಸೂರಿಣ ಸಹ ಯಾಕಿ ತೂಬನೂ ಜತನ ಮಾಡಿ (ಲೋಕಶಾ. ೦೯೩೪. ಕ್ರೂಗಸೂರು. ೦೫೬-೬; 1419); ಅಮಾನಿ ದವಸವನ್ನು ಜತನ ಮಾಡಿ ಲಾಭ ಬರುವಂತೆ ವಿಕ್ರಯಿಸುವುದು (ಮಹಾಪಂ. II. ೫೬); ಹಸ್ತಪತ್ರಗಳನ್ನು ಕಲೆ ಹಾಕಿ ಬಂಗಾರದಂತೆ ಜತನ ಮಾಡುತ್ತಾನೆ (ಗಾಳಿ. ೭೩). [< ಸಂ. ಯತ್ನ / ಪ್ರಾ. ಜತ್ತ]

**ಯತ್ಕಿಂಚಿತ್ತು** (ನಾ). ಅಷ್ಟಿಷ್ಟು; ತೀರ ಸ್ವಲ್ಪವಾದುದು. [ಸಂಸ್ಕೃತದಲ್ಲಿ ಇದು 'ಯತ್', 'ಕಿಂಚಿತ್' ಎಂದು ಎರಡು ಭಿನ್ನಪದಗಳು]

**ಯತ್ನ** (ನಾ). ೧. ಪ್ರಯತ್ನ; ಎತ್ತುಗಡೆ; ಸಾಧನೆ: ಮರಳಿ ಯತ್ನವ ಮಾಡು . . . ತೊರೆಯದಿರು ಬೊಡಲು ಕೈಗೂಡದಿರಲು (ಕಂಪು. ೩); ಯತ್ನ ಪ್ರತಿಯತ್ನಗಳು ಒಂದಕ್ಕೊಂದು ಸಮನಾಗಿ ಮತ್ತು ವಿರುದ್ಧವಾಗಿ ಇರುವುವು (ಭೌತಶಾ. ೬೯). ೨. ಕಷ್ಟ; ಶ್ರಮ: ನುಡಿವಳು ಯತ್ನದೆ ನಡೆವಳು ಯತ್ನದೆ ಗರ್ಭಭರಾಲಸೆ (ಇಂಶಾಕ. ೦೬೮-೨೯). ೩. [ಕಾವ್ಯಮೀ] ನಾಯಕನ ಕಾರ್ಯದೃಷ್ಟಿಯಿಂದ ನಾಟಕದ ವಸ್ತುವಿನಲ್ಲಿರುವ ಆರಂಭ, ಯತ್ನ, ಪ್ರಾಪ್ತ್ಯಾಶೆ, ನಿಯತಾಪ್ತಿ ಮತ್ತು ಫಲಾಗಮ ಎಂಬ ಐದು ಸ್ಥಿತಿಗಳಲ್ಲೊಂದು: ಯತ್ನ–ಅಡ್ಡಿ ಬರಲು, ಅದನ್ನು ನಿವಾರಣೆ ಮಾಡಿಕೊಂಡು ಕಾರ್ಯಸಾಧನೆಗಾಗಿ ಅವರು ಮಾಡುವ ಪ್ರಯತ್ನ (ಸಂಪಾಟಿ. ೦೬). ೪. ವೇಗ; ಶೀಘ್ರತೆ: (+). ೫. ಸಹಾಯ: "ಉಪಕಾರ ಶೀಘ್ರಬೋಸಾದಿತ ಬುದ್ಧಿಯುಜ್ಜುಗದೊ ಳೊಪ್ಪುವದಾವಗ ಯತ್ನವಾಚಕಂ" (ಐಾಪಾರ. ೦೯೯). ೬. ಎಚ್ಚರಿಕೆ: ಜಾಗ್ರತೆ: 'ಯತ್ನಂಗೆಯ್' ಪರಾ.

**ಯತ್ನ ಮಾಡು** = ಪ್ರಯತ್ನಿಸು: ಕೈಲಾದ ಮಟ್ಟಿಗೆ ನಿಮ್ಮ ಸಿಟ್ಟು ನುಂಗುವುದಕ್ಕೆ ಯಾವಾಗಲೂ ಯತ್ನಮಾಡಿರಿ (ಜುಂಟು. ೯-೦೬); ಭಗೀರಥ ಯತ್ನ ಮಾಡಿ ಭಾಗೀರಥಿ ತಂದ, ಸಗರರವ ಯತ್ನ ಮಾಡಿ ನಗಕಳಕೊಂಡ (ಗಾದೆ). [ಸಂ.]

**ಯತ್ನಂಗೆಯ್** (ಕ್ರಿ). ಎಚ್ಚರಿಕೆ ವಹಿಸು; ಜಾಗ್ರತೆಯಿಂದಿರು: ಯತ್ನಂಗೆಯ್ಯದ ಮುನಿಪರ ಪತ್ನಿಯರುಂ ಕಾಮಕೃತಕ[ರಾ]ದರಯತ್ನಂ [ಪಾಠಾಂ. ಕಾಮಕೃತಕಕಂದರಯತ್ನಂ] ಯತ್ನಂಗೆಯ್ಯದ ವನಿತಾಪರತ್ನಮುಮಾ ಕಾಮಕೃತದೆ ಕೇಡೊದಮಿಸುಗುಂ (ಜಬಿತ. ೦-೭೦). [ಯತ್ನ + ಕೆಯ್[1]]

**ಯತ್ನಶೀಲ** (ನಾ). ಶ್ರಮಿಸುವ ಸ್ವಭಾವದವನು ; ಪ್ರಯತ್ನ ಮಾಡುವ ಸ್ವಭಾವದವನು : ಅರ್ಜುನನು ಗುರುಸೇವೆಯಲ್ಲಿಯೂ, ಅಸ್ತ್ರಾಭ್ಯಾಸದಲ್ಲಿಯೂ ತುಂಬ ಯತ್ನಶೀಲನಾಗಿದ್ದುಕೊಂಡು ದ್ರೋಣನಿಗೆ ಪ್ರೀತಿಪಾತ್ರನಾದನು (ವತಕಾ. ೧೯). [ಸಂ.]

**ಯತ್ನಿಸು, ಯತ್ನೈಸು** (ಕ್ರಿ). ಸಾಧನೆ ಮಾಡು ; ಪ್ರಯತ್ನ ಮಾಡು ; ಸಾಧಿಸು : ಪಿರಿದುಂ ನೀನೊಲವಿಂದೆ ಯತ್ನಿಸಿದೊಡಂ ಕಾದಂಬರೀದೇವಿಯಾಚರಣೋಪಾಸನಸೌಖ್ಯಮಾದೊಡೆನಗಾದತ್ತಿಲ್ಲಮಿಾ ಪುಟ್ಟಿನೊಳ್ (ಕಾದಂಬ. ೩೬೬) ; ಈ ಪ್ರತ್ನೆಯನ್ನು ಅಗಸನ ಮೇಲೆ ಎಸೆದು ಅವನನ್ನು ಅಪ್ರತಿಭಗೊಳಿಸಲು ನಾನು ಯತ್ನಿಸಿದ್ದೇನೆ (ದೀಕಪ್ನ. ៤೪). **ಯತ್ನೈಸು** : ಬಿಜ್ಜಳನು . . . ಅವನನ್ನು ಹಿಡಿಯಬೇಕೆಂದು ಯತ್ನೈಸಿದನು (ಕಭಾಗ. ೯೨) ; ಆಕಾಂಕ್ಷೆಯು ನಿಮ್ಮ ಮನಸ್ಸಿನಲ್ಲಿ ಮೆಲ್ಲಮೆಲ್ಲಗೆ ಬೆಳೆಯುವಂತೆ ಯತ್ನೈಸಿದೆವು (ಮುಂಬಯಿ. ೬-೪). [ಯತ್ನ + — ಇಸು₃]

**ಯತ್ನೀಕರಿಸು** (ಕ್ರಿ). = ಯತ್ನಿಸು.: ಅವರಷ್ಟೂ ಅರಿಸಿನವಸ್ತ್ರವಂ ಧರಿಸಿ ಅಗ್ನಿಗೆ ಬೀಳುವುದಕ್ಕೆ ಯತ್ನೀಕರಿಸಿ ಇರುವುದ ಕಂಡು . . . ನನಗೇನೂ ತೋಗದೆ ವೃಥಾ ಬಂದೆ (ಐತ್ರೀಸ. ៤೭) ; ಪುಣ್ಯಕೋಟಿ ಎಂಬ ಪಶುವನು ತಾನು ತಿಂದೇನೆಂದು ಹುಲಿಯು . . . ಅಡ್ಡಗಟ್ಟಿ ತಿನ್ನ ಯತ್ನೀಕರಿಸಿತು (ಗೋಹಾಡು. ೧೨-೩೬). [ಯತ್ನೀಕರಣ₀ + — ಇಸು₃]

**ಯತ್ನೈಸು** ' ಯತ್ನಿಸು ' ನೋ.

**ಯತ್ವ** (ನಾ). =ಯಕಾರತ್ವ : ಅದಂತ ಪ್ರಕೃತಿಗಳ್ಗೆಸು ಪ್ರತ್ಯಯಮಿಂತಿದಿರಾಗೆ ಯತ್ವಮನುಕೃತಿಪದಕಂ ಮುಂದನುಕೃತಿಸ್ವರಂ ನಿಲೆ ಯತ್ವಂ (ಶಮದ. ೩೪). [ಸಂ.]

**ಯಥಾಕಾಮಿ** (ಗು). ೧. ಮನಸ್ಸಿಗೆ ಬಂದಂತೆ ನಡೆಯುವ ; ಸ್ವೈರವರ್ತನೆಯುಳ್ಳ (ನಾ). ೨. ಮನಸ್ಸಿಗೆ ಬಂದಂತೆ ವರ್ತಿಸುವವನು ; ಸ್ವೈರಾಚಾರಿ : "ಯಥಾಕಾಮಿೀ, ಸ್ವರುಚಿಃ, ಸ್ವಚ್ಛಂದಃ, ನಿರವಗ್ರಹಃ —ಈ ೪ ತನ್ನಿಚ್ಛೆಕಾಱಂ" (ಶಬ್ದಮ. ៤೨-೨೨೪). [ಸಂ. ಯಥಾಕಾಮಿನ್]

**ಯಥಾಕಾಲ** (ನಾ). ಸೂಕ್ತವಾದ ಸಮಯ ; ತಕ್ಕ ಸಮಯ : ಯಥಾಕಾಲಾನುಭವನ ತಪೋನಿಮಿತ್ತಮಾಗಿ ಸವಿಪಾಕಾವಿಪಾಕರೂಪದಿಂ ಪೂರ್ವಾರ್ಜಿತಕರ್ಮನಿರ್ಜರಣಂ ನಿರ್ಜರೆಯೆಂಬುದು (ಅಂಶ. ೧೦-೬೩ ವ) ; ಅತ್ತೆ ಸೊಸೆಯರು ಕಾಡಿಗೆ ಹೋಗಿ ತಪೋನಿರತರಾಗಿದ್ದು ಯಥಾಕಾಲದಲ್ಲಿ ದೇಹವನ್ನು ಬಿಟ್ಟರು (ವತಕಾ. ೦೬). [ಸಂ.]

**ಯಥಾಕ್ರಮ₁** (ನಾ). ೧. ಸರಿಯಾದ ರೀತಿ ; ಯೋಗ್ಯವಾದ ಕ್ರಮ : ಘೋರ್ಗರೆಯುತ್ತಿರ್ದವನೇಕ . . . ಘಂಟಾರುತಿಗಳ್ ಯಥಾಕ್ರಮದಿಂ (ಧತ್ತ. ೦೦-೦೩). ೨. = ಯಥಾಸಂಖ್ಯಾಲಂಕಾರ : ತರದಿಂದೊಂದಿರೆ ನಿರ್ದೇಶಸ್ಥಿತಿಯಿಂದು ಪೇಟ್ದುದು ಯಥಾಕ್ರಮಂ (ಕಾವ್ಯಾವ. ៦೧೬). [ <ಯಥಾಕ್ರಮ₂ ]

**ಯಥಾಕ್ರಮ₂** (ಅ). ಸರಿಯಾಗಿ; ಯೋಗ್ಯವಾಗಿ : ನಾನಾ ಜನಪದಂಗಳಂ ಯಥಾಕ್ರಮೋಕ್ತಕ್ರಮದಿಂ ವಿಹಾರಿಸುತ್ತಂ (ಶುಕುಮಾ. ೪-೨ ವ). [ಸಂ.]

**ಯಥಾಖ್ಯಾತ** (ಗು). ೧. ಮೊದಲು ತಿಳಿಸಿದಂತಿರುವ ; ಪೂರ್ವದಲ್ಲಿ ತಿಳಿಸಿದ ಮೇರೆಗೆ ಇರುವ. ೨. [ಜೈನ] ಎಲ್ಲ ಮೋಹನೀಯ ಕರ್ಮಗಳ ಉಪಶಮ ಅಥವಾ ಕ್ಷಯದಿಂದ ಆತ್ಮನು ತನ್ನ ಮೊದಲಿನ ಸ್ವಾಭಾವಿಕ ಅವಸ್ಥೆಯನ್ನು ಹೊಂದಿರುವ ಸ್ಥಿತಿಯ.—ಅವಸ್ಥೆಯ : ಯಥಾಖ್ಯಾತಚಾರಿತ್ರ' ಪರಾ. [ P ಸಂಸ್ಕೃತದಲ್ಲಿ ಇದು ಅವ್ಯಯ ]

**ಯಥಾಖ್ಯಾತಚರಿತ** (ನಾ). [ಜೈನ] ಆಗಮಗಳಲ್ಲಿ ಹೇಳಿದ ಅನುಷ್ಠಾನದಂತೆ ಕಷಾಯಗಳನ್ನೆಲ್ಲ ಕಳೆದುಕೊಂಡು ಆತ್ಮನ ಸ್ವಾಭಾವಿಕ ಸ್ವರೂಪವನ್ನು ಹೊಂದಿದವನು ; ಪರಿಪೂರ್ಣಮೆನಿಸೆ ಗುಣಪರಿಕರಂ ಯಥಾಖ್ಯಾತಚರಿತನಾಗಿ ಜಿನಂ ಮುಕ್ತಿರಮಾಕಚಗ್ರಹಸ್ತನಪರಿರಂಭಾರಂಭಕೇಳಿಗುತ್ಸುಕನಾದಂ (ಶಂಖಮಾ. ೧೬ ೮೦). [ ಸಂ. ]

**ಯಥಾಖ್ಯಾತಚಾರಿತ್ರ** (ನಾ). ೧. [ಜೈನ] ಏಳು ಬಗೆಯ ಸಂಯಮಗಳಲ್ಲಿ ಒಂದು ; ಎಲ್ಲ ಮೋಹನೀಯಕರ್ಮಗಳನ್ನು ಕಳೆದುಕೊಂಡು ಆತ್ಮನು ಸ್ವಾಭಾವಿಕ ಅವಸ್ಥೆಯನ್ನು ಪಡೆದುಕೊಳ್ಳುವಿಕೆ ; ವೀತರಾಗಭಾವ : ನಿರವಶೇಷ ಮೋಹೋಪಶಮೋದ್ಭೂತ ಯಥಾಖ್ಯಾತಚಾರಿತ್ರಸಂಪನ್ನನಂತರ್ಮುಹೂರ್ತದಿಂ ಸ್ವಸ್ಥಾನಸ್ಥಿತನಾಗಿ (ಅಂಶ. ៦-៤៤ ವ) ; ಸಾಮಾಯಿಕಚ್ಛೇದೋಪ ಸ್ಥಾಪನಾಪರಿಹಾರವಿಶುದ್ಧಿಸೂಕ್ಷ್ಮಸಾಂಪರಾಯ ಯಥಾಖ್ಯಾತಚಾರಿತ್ರ ದೇಶ ಸಂಯಮ ಅಸಂಯಮ ವಿಕಲ್ಪದಿಂ ಸಂಯಮಂ ಸಪ್ತವಿಧಂ (ಕತ್ತ್ರ. ೦೬). ೨. ಸಮ್ಯಕ್ಚಾರಿತ್ರದ ಐದು ಭೇದಗಳಲ್ಲಿ ಒಂದು : ಸಾಮಾಯಿಕಚ್ಛೇದೋಪಸ್ಥಾಪನಾಪರಿಹಾರಶುದ್ಧಿ ಸೂಕ್ಷ್ಮಸಾಂಪರಾಯ ಯಥಾಖ್ಯಾತಚಾರಿತ್ರಭೇದದಿಂ ಪಂಚವಿಧಮೆಂದು ಹೇಯೋಪಾದೇಯ ತತ್ವಮನಱಿ (ಅಂಶ. ೦೦-៦೦ ವ). [ಸಂ.]

**ಯಥಾಗತಿ** (ಅ). ಸಂಪ್ರದಾಯದಂತೆ ; ಯಥಾಪ್ರಕಾರವಾಗಿ : ಮೊದಲಿನಂತೆ. [ ಸಂ. ]

**ಯಥಾಗಮ** (ಅ). ಆಗಮದಲ್ಲಿ ಹೇಳಿರುವಂತೆ ; ಸಂಪ್ರದಾಯಕ್ಕೆ ಅನುಸಾರವಾಗಿ; ಶಾಸ್ತ್ರೋಕ್ತವಾಗಿ : ಅಂತಾ ಯತಿತಿಲಕಂ ಭೀತಿಯೊಳ್ ಪ್ರಾಯೋಪಗಮನಂಗೆಯ್ವುದುಂ ಯಥಾಗಮಾರ್ಥದ್ರವ್ಯಂಗಳನನುಕ್ರಮದಿಂದಱವಾಜ್ಞಾನಿಚಯಮುಮಂ . . . ಬೇಱವೇಱ ಹೃದ್ಗತಂಮಾಡಿ ಧರ್ಮಧ್ಯಾನಮಯನಾದಂ (ಶಾಂತಿಪು. ೯-೦೦೬ ವ). [<ಸಂ. ಯಥಾಗಮಂ]

**ಯಥಾಜಾತ** (ನಾ). ಹುಟ್ಟಿದಾಗ ಇದ್ದಂತೆಯೇ ಇರುವವನು ; ಬುದ್ಧಿಯಲ್ಲಿ ಬೆಳವಣಿಗೆಯಿಲ್ಲದವನು ; ಮೂರ್ಖ : "ಅಜ್ಞಃ, ಮೂಢಃ, ಯಥಾಜಾತಃ, ಮೂರ್ಖಃ, ವೈಧೇಯಃ, ಬಾಲಿಶಾಃ — ೬ ತಿಳುವಳಿಕೆಯಿಲ್ಲದವನ ಹೆಸರುಗಳು" (ಸಿದ್ಧಾಂತ. ៤៤೬). [ ಸಂ. ]

**ಯಥಾತಥ** (ಗು). ೧. ಸತ್ಯವಾದ : ಸರಿಯಾದ. (ನಾ). ೨. ಸತ್ಯವಾದುದು ; ದಿಟ : "ಯಥಾರ್ಥಂ, ಯಥಾತಥಂ —೨ ಸತ್ಯವು, ದಿಟ" (ಸಿದ್ಧಾಂತ. ೪೩೬). [ಸಂ.]

**ಯಥಾತ್ಮಿಕ** (ಗು). ಸ್ವಾಭಾವಿಕವಾದ ; ಸಹಜವಾದ : ಸಾಮಾನ್ಯ 'ಸ್ತ್ರೀವೇಷ'ಗಳು ಯಥಾತ್ಮಿಕಉಡುಗೆಯಲ್ಲಿ ರಂಗಸ್ಥಳದಲ್ಲಿ ಆದಾಗಲೇ ಮೆರೆದಾಡತೊಡಗಿದ್ದುವು (ಹುಕ್ಕಿ. ೨೩). [ < ಸಂ. ಯಾಥಾತ್ಮಿಕ ]

**ಯಥಾಪ್ರಕಾರ** (ಅ). ಎಂದಿನಂತೆ ; ಮೊದಲಿನಂತೆ : ಅಕ್ಕಮಹಾದೇವಿಯನ್ನು ಕುರಿತ ಗ್ರಂಥಗಳಲ್ಲಿ ಯಥಾಪ್ರಕಾರ ಹರಿಹರನ ಗ್ರಂಥವೇ ಮೊದಲನೆಯದು (ಕೂಪ್ಪಳು. ೯೮). [ಸಂ.]

**ಯಥಾಪ್ರತಿ** (ನಾ). ಮೂಲಪ್ರತಿಗೆ ಅನುಸಾರವಾದ ಪ್ರತಿ: ಸರಿಯಾದ ನಕಲು. [P ಸಂಸ್ಕೃತದಲ್ಲಿ ಇದು ಅವ್ಯಯ]

**ಯಥಾಪ್ರಯೋಗ** (ನಾ). ೧. ಪ್ರಯೋಗಕ್ಕೆ ಅನುಸಾರವಾದುದು : ದ್ವಿತ್ವಂ ಬೆರಸಿದ ಚತ್ವಂ ಖತ್ವಂ ಯಥಾಪ್ರಯೋಗದಿನಕ್ಕುಂ (ಶಮದ. ೨೬೨). ೨. ಸಂಪ್ರದಾಯ; ರೂಢಿ : (*).

[ P ಸಂಸ್ಕೃತದಲ್ಲಿ 'ಯಥಾಪ್ರಯೋಗಂ' ಎಂಬುದು ಅವ್ಯಯ ]

**ಯಥಾಭೂತ** (ನಾ). ನಡೆದ ಘಟನೆಗಳಿಗೆ ಅನುಸಾರವಾದುದು; ಯಥಾರ್ಥವಾದುದು ; ನಿಜಸ್ಥಿತಿ ; ಸತ್ಯ : ಸಮಾಹಿತನಾದವನು ಯಥಾಭೂತವನ್ನು ತಿಳಿಯುವನು (ಬುದ್ಧಕ. ಖಂಡ. ೫೦); ಇದನ್ನು ಯಥಾಭೂತವಾಗಿ ತಿಳಿದಾಗ ನಿರ್ವಾಣವು ಪರಮಸುಖವು (ಧಾರದ. ೨೦೦).

[ P ಸಂಸ್ಕೃತದಲ್ಲಿ ಇದು ಅವ್ಯಯ ]

**ಯಥಾಮತಿ** (ಅ). ಬುದ್ಧಿಗೆ ನಿಲುಕುವಷ್ಟು ಮಟ್ಟಿಗೆ; ತಿಳಿಯುವುದಕ್ಕೆ ಎಷ್ಟು ಸಾಧ್ಯವೊ ಅಷ್ಟರವರೆಗೆ : ವೇದಗಳು ಕೂಡ ಯಥಾಮತಿ

ಅನುಮಾನ ಮಾಡಿ ಆತನನ್ನು ಕುರಿತು ಪ್ರತಿಪಾದಿಸುವವು (ಕುಲಗೋ. ೩೩). [ಸಂ.]

**ಯಥಾಯಥ** (ನಾ). ೧. ಸ್ವಾಭಾವಿಕವಾದುದು ; ಸಹಜವಾದುದು ; ನೈಸರ್ಗಿಕವಾದುದು : ಪ್ರಾಣವಾಯುವಿನ ನೈಸರ್ಗಿಕಗತಿಯನ್ನು ಯಥಾಯಥವಾಗಿ ನಡೆಯಲು ಬಿಡದೆ ನಿರುದ್ಧಮಾಡಿ ವ್ಯವಸ್ಥಿತರೂಪದಲ್ಲಿ ವಿನಿಮಯ ಮಾಡುವುದು ಪ್ರಾಣಾಯಾಮದ ಅರ್ಥವು (ಆರ್ಯರ. ೧೬೯); ಯಾವ ಕಲೆಯೇ ಆಗಲಿ ಪ್ರಕೃತಿಯ ಯಥಾಯಥವಾದ ಅನುಕರಣವಲ್ಲ (ಶಿಂರ. II. ೨೬೭). ೨. ಯೋಗ್ಯಸ್ಥಿತಿಯನ್ನು ಹೊಂದಿದವನು; ತಕ್ಕ ಅವಸ್ಥೆಗೆ ಮುಟ್ಟಿದವನು : ಮಾತಾಪಿತೃಗಳೂ. . .ಆಶ್ರಿತ ಪರಿಚಿತರೂ ಎಲ್ಲರೂ ಯಥಾಯಥರಾಗುವರು (ಆರ್ಯರ. ೩೯). [ < ಯಥಾಯಥಂ ]

**ಯಥಾಯಥಂ** (ಅ). ೧. ಸರಿಯಾದ ರೀತಿಯಲ್ಲಿ; ಸಮರ್ಪಕವಾಗಿ. ೨. ಆಯಾ ವಸ್ತು, ಅಥವಾ ವ್ಯಕ್ತಿ ತನಗೆ ಯೋಗ್ಯವಾದ ಸ್ಥಾನದಲ್ಲಿರುವಂತೆ ; ವ್ಯವಸ್ಥಿತವಾಗಿ. ೩. ಕ್ರಮಕ್ರಮವಾಗಿ ; ಒಂದೊಂದಾಗಿ. ೪. ಅಸ್ತವ್ಯಸ್ತವಾಗಿ ; ಯದ್ವಾತದ್ವಾ : ಆತನ ಭಂಡಮಂಡಲಿಯೊಳ್ ಕೆಲರೋಡಿಯುಂ ಕೆಲರಬ್ಬಿತರೊಳ್ ಕೂಡಿಯುಂ ಇಂತೆಲ್ಲಂ ಯಥಾಯಥಮಾಗೆ (ಕುಕತಂ. ೨೯-೦). [ಸಂ.]

**ಯಥಾಯೋಗ್ಯ** (ಗು). ೧. ಯೋಗ್ಯತೆಗೆ ಸರಿಯಾದ; ಸಮರ್ಪಕವಾದ. ೨. ಸತ್ಯವಾದ ; ಯಥಾರ್ಥವಾದ : ಸಿಕ್ಕಿರುವ ಯಥಾಯೋಗ್ಯ ಸಂಗತಿಗಳು ಇಲ್ಲೇ ಬರೆದಿದ್ದೇವೆ (ಮುಂಬಪ್ರಾ. ೭ ಕ್ರಸ್ತಾ ಪಠಿ). [ಸಂ.]

**ಯಥಾರೀತಿ** (ಅ). ಸಂಪ್ರದಾಯದಂತೆ ; ವಾಡಿಕೆಯ ಮೇರೆಗೆ ; ಪದ್ಧತಿಯ ಪ್ರಕಾರವಾಗಿ : ಆಮೇಲೆ ಯಥಾರೀತಿ ಇಬ್ಬರೂ ಚಿಹಾಪಾನಕ್ಕಾರಂಭಿಸಿದರು (ಅಕ್ಕಕಂ. ೨). [ಸಂ.]

**ಯಥಾರೂಪ** (ಗು). ೧. ರೂಪಕ್ಕೆ ಅನುಸಾರವಾದ,–ಅನುಗುಣವಾದ. ೨. ಯೋಗ್ಯವಾದ ; ತಕ್ಕ ; ಸರಿಯಾದ : ಇದಿರ್ವಂದು ಯಥಾರೂಪಪ್ರತಿಪತ್ತಿಯಿಂದಮರಪರಿಷನ್ಮಧ್ಯದೊಳಮರೇಂದ್ರನಸಿಜಿಸಿ (ಶಾಂತಿಪು. ೬-೩೦ ವ). [P ಸಂಸ್ಕೃತದಲ್ಲಿ 'ಯಥಾರೂಪಂ' ಎಂಬುದು ಅವ್ಯಯ]

**ಯಥಾರ್ಥ** (ಗು). ೧. ಸತ್ಯವಾದ ; ವಸ್ತುಸ್ಥಿತಿಗೆ ಅನುಸಾರವಾದ; ದಿಟವಾದ. (ನಾ). ೨. ಸತ್ಯ; ನಿಜಸ್ಥಿತಿ : ಒಳ್ಳೆಯ ಫಲವು ಪ್ರಾಪ್ತವಾಗುವ ಹಾಗಿದ್ದರೆ ಆಗ ಅಪ್ರಿಯವಾದ ಯಥಾರ್ಥವನ್ನೂ ಪ್ರಿಯವಾದ ಅಯಥಾರ್ಥವನ್ನೂ ನುಡಿಯಬಹುದು (ಆರ್ಯರ. ೫೨); ವಸ್ತು ಹೇಗಿದೆಯೋ ಹಾಗೆಯೇ ತಿಳಿಸುವ ಜ್ಞಾನ ಯಥಾರ್ಥ (ಶಾಕಶ್ಯ. ೯೯); ಸಾಂಖ್ಯರು ಸರ್ವಜ್ಞಾನವನ್ನು ಸತ್ಯ, ಯಥಾರ್ಥ ಎನ್ನುತ್ತಾರೆ (ಹಿಂದತಾ. ೫೦). ೩. ಅನ್ವರ್ಥಕವಾದುದು ; ಅನುಗುಣವಾದುದು : ಅನ್ನದಾನಿ ಎಂಬ ಹೆಸರು ಅವರಿಗೆ ಯಥಾರ್ಥವಾಗಿದೆ. ಅವರ ಅನ್ನದಾನ ನಿರಂತರವಾಗಿ ನಡೆಯುತ್ತಿದೆ (ಲೂಪಿ). [ಸಂ.]

**ಯಥಾರ್ಥಂ** (ಅ). ಯೋಗ್ಯವಾಗಿ ; ಸರಿಯಾಗಿ ; ತಕ್ಕ ರೀತಿಯಲ್ಲಿ : ಜಯ ಜೀವಾಧಿಪ ನಂದನಂದ ಸುಚಿರಂ ವರ್ಧಸ್ವ ವರ್ಧಸ್ವಯೆಂದು ಯಥಾರ್ಥಂ ಸ್ತುತಿಗೆಯ್ದು (ಶಾಂತಿಪು. ೧೧-೧೧). [ಸಂ.]

**ಯಥಾರ್ಥಕಂ** (ಅ). ಅದೇ ಅರ್ಥದಲ್ಲಿ ; ಸಮಾನಾರ್ಥಕವಾಗಿ : "ಪ್ಲವಂಗಮುಶಬು ನಾಳೀಜಂಘಾಖ್ಯೆಯೊಳಂ ಶಾಲೂರದೊಳಂ ಯಥಾರ್ಥಕಂ ವರ್ತಿಸುಗುಂ" (ವಸ್ತುಕೋ. ೦೪೦-೬೭). [ಸಂ.]

**ಯಥಾರ್ಥಜ್ಞ** (ನಾ). ಸತ್ಯವನ್ನು ತಿಳಿದವನು : ಪ್ರಿಯಮಪ್ರಿಯ ಮೆಂಬಿರಡಟ ವಿಯೋಗ ಸಂಯೋಗವೆಂಬಿವೆಲ್ಲ ಜನಕ್ಕಾರಯೆ ಸಾಧಾರಣ ಮೆಂದಲ್ತೆ ಯಥಾರ್ಥಜ್ಞರ್ ಬಿಸುಟ್ಟರಟಲೊಸಗೆಗಳಂ (ಕಂದ್ರಪು. ೫-೩೨). [ಸಂ.]

**ಯಥಾರ್ಥಜ್ಞಾನ** (ನಾ). ವಸ್ತುಸ್ಥಿತಿಯ ಸರಿಯಾದ ತಿಳಿವಳಿಕೆ ; ಸತ್ಯದ ಅರಿವು : ಪರಬ್ರಹ್ಮನ ಯಥಾರ್ಥಜ್ಞಾನವು ಲಭಿಸಿದೊಡನೆಯೆ. . . ಸತ್ಯವನ್ನೂ ಸಾಕ್ಷಾತ್ಕಾರ ಮಾಡಿಕೊಳ್ಳುತ್ತೇನೆ (ಮುಕ್ತಾರ. ೩೬೦); ಯಥಾರ್ಥಜ್ಞಾನ :–ವಸ್ತುವು ಇರುವ ರೀತಿಯಲ್ಲಿ ಅದನ್ನು ಗ್ರಹಿಸುವ ಜ್ಞಾನ. ಇದಕ್ಕೆ ಪ್ರಮಾ, ಪ್ರಮಾಣಜ್ಞಾನ ಮುಂತಾದುವು ಪರ್ಯಾಯಗಳು (ಶಾಕಶ್ಯ. ೦೭೩). [ಸಂ.]

**ಯಥಾರ್ಥತ್ವ** (ನಾ). ೧. ನಿಜ; ಸತ್ಯ. ೨. ಯೋಗ್ಯವಾಗಿರುವಿಕೆ ; ಸಮರ್ಪಕತೆ ; ಸರಿಯಾಗಿರುವಿಕೆ. [ಸಂ.]

**ಯಥಾರ್ಥವರ್ಣ** (ನಾ). ೧. ನಿಜವಾದ ಬಣ್ಣವುಳ್ಳುದು : (?). ೨. ಬೇಹುಗಾರ : " ಯಥಾರ್ಥವರ್ಣಃ, ಮಂತ್ರಜ್ಞಃ ಸ್ಪಶಃ, ಹೇರಿಕಃ – ಈ ೪ ಹೇರಿಗಂ " (ಪಲಾಯು. ೭೦-೨೭೦). [ಸಂ.]

**ಯಥಾರ್ಥವಾದಿ** (ನಾ). ದಿಟವನ್ನು ನುಡಿಯುವವನು ; ಸತ್ಯವಾದಿ : ನಾನು ಕಳ್ಳನೇನೋ ನಿಜ, ಆದರೆ ಯಥಾರ್ಥವಾದಿ. ಈ ಮಂತ್ರಿಯು ಕಳ್ಳತನವನ್ನು ಮಾಡಿ ಸುಳ್ಳು ಹೇಳುತ್ತಾನೆ (ಕೀತಿತಂ. V. ೯). [ಸಂ. ಯಥಾರ್ಥವಾದಿನ್]

**ಯಥಾರ್ಥಾನುಭವ** (ನಾ). ವಸ್ತುಸ್ಥಿತಿಯ ಸರಿಯಾದ ತಿಳಿವು : ಸತ್ಯವಾದ ಅನುಭವ: ಅನುಭವದಲ್ಲಿ ಎರಡು ವಿಧ : ಯಥಾರ್ಥಾನುಭವ, ಅಯಥಾರ್ಥಾನುಭವ ಎಂದು. ಮೊದಲನೆಯದಕ್ಕೆ ಪ್ರಮೆ ಎಂದೂ ಎರಡನೆಯದಕ್ಕೆ ಭ್ರಮೆ ಎಂದೂ ಹೆಸರು (ಹಿಂದತಾ. ೦೩೨). [ಸಂ.]

**ಯಥಾರ್ಥಾನುವೃತ್ತಿ** (ನಾ). ಈ ಮೊದಲು ಹೇಳಿದ ಕ್ರಮಕ್ಕೆ ಅನುಗುಣವಾದುದು : ಸಮಮೆಂಬುದು ಬಂಧದೊಳವಿಷಮಂ ಮೃದುಸ್ಫುಟವಿಮಿಶ್ರವಿನ್ಯಾಸಪದಕ್ರಮದಿಂ ಮಾಳ್ಪುದು ತೇಜಂ ಬಂಧಮುಂ ಯಥಾರ್ಥಾನುವೃತ್ತಿಯಿಂ ವರ್ತಿಸುಗುಂ (ಕಾವ್ಯಾವ. ೫೦೦). [ಸಂ.]

**ಯಥಾರ್ಹ** (ಗು). ಯೋಗ್ಯತೆಗೆ ಸರಿಯಾದ ; ಯಥಾಯೋಗ್ಯವಾದ : ಇದಿರ್ವಂದು ಪ್ರಜಾಪತಿಮಹೀಪಾಲನಂ ಜ್ವಳನಜಟಿಮಹಾರಾಜಂ ಯಥಾರ್ಹ ಪ್ರತಿಪತ್ತಿಯಿಂ ಕಂಡು (ಶಾಂತಿಪು. ೫-೩೭ ವ). [ಸಂ.]

**ಯಥಾರ್ಹವರ್ಣ** (ನಾ). = ಯಥಾರ್ಥವರ್ಣ ೨ : " ಯಥಾರ್ಹವರ್ಣಃ . . . ಗೂಢಪುರುಷಃ– ೭ ಬಾತಮಿದಾರನ ಹೆಸರುಗಳು : ಗೂಢಚಾರನು–ವೇಷಧಾರಿಯಾಗಿ ಕಪಟದಿಂದ ತನ್ನನ್ನು ತಿಳಿಯಪಡಿಸದೆ ಹೊಂಚಿ ವಿಷಯವನ್ನು ತಿಳಿದು ತಂದರಿಕೆ ಮಾಡುವ ದೂತನು " (ಸಿದ್ಧಾಂತಿ. ೨೩೬). [ಸಂ.]

**ಯಥಾವಕಾಶ** (ಅ). ಸಂದರ್ಭಾನುಸಾರವಾಗಿ; ಸಮಯಾನುಸಾರವಾಗಿ; ಕಾಲಾವಕಾಶ ದೊರೆತಾಗ : ಪೃಥ್ವಿ, ಅಪ್, ತೇಜ, ವಾಯು, ಆಕಾಶ–ಐದರಾವರಣದಲಿ ತೋರಣವ ಕಟ್ಟಿ ತೂಗಿರಲು ಮಾನವ ಯಥಾವಕಾಶ (ಪಂಪಯ. ೦೫-೨೬). [ಸಂ.]

**ಯಥಾವತ್ತು** (ಅ). ೧. ಸರಿಯಾಗಿ ; ನಿಷ್ಕೃಷ್ಟವಾಗಿ. ೨. ರೂಢಿಯಂತೆ ; ಯಥಾಪ್ರಕಾರ. ೩. ಯೋಗ್ಯವಾಗಿ ; ತಕ್ಕಂತೆ.

**ಯಥಾವತ್ತಾಗಿ** = ರೂಢಿಯಂತೆ : ಯಥಾವತ್ತಾಗಿ ಶಾಸ್ತ್ರಿಗಳು ಉಪಹಾರಕ್ಕೆ ಕೊಡುವ ಮೊದಲು ಚೆನ್ನಾಗಿ ಒಂದು ಸೇರೆ ಉಪ್ಪಿಟ್ಟು ತಂದು ಹೊರಗಡೆ ಇರುವ ನಾರಾಯಣನಿಗೆ ಹಾಕಿದರು (ರಂಪಿವಾ. ೨೫). **ಯಥಾವತ್ತಾದ** = ವಸ್ತುಸ್ಥಿತಿಗೆ ಸರಿಯಾದ : ಸಂದ್ವಿಗಾರನು ಕಲ್ಪನೆಗೆ ಕೈಯಿಕ್ಕದೆ ಘಟನೆಗಳ ಯಥಾವತ್ತಾದ ಚಿತ್ರವನ್ನು ಕೊಡತಕ್ಕುದು (ಲೂಪಿ). [ಸಂ. ಯಥಾವತ್]

**ಯಥಾವಿಧಿ** (ನಾ). ನಿಯಮಾನುಸಾರವಾದುದು ; ಕ್ರಮಾನುಗತವಾದುದು : ಕ್ಷಯವೃದ್ಧಿಸ್ಥಾನವಿಧಿತ್ರಯಂಗಳೊಳ್ ಕ್ಷಯಮನಹಿತರೊಳ್ ಶೇಷವಿಧಿದ್ವಯಮಂ ತನ್ನೊಳ್ ನಿಜಿಸುವುದು ಯಥಾವಿಧಿಯಿಂದ ದಯಮುಂ ಜಯಮುಮಂ (ಶಾಂತಿಪು. ೨-೯೯); ಮೊದಲು ಪ್ರಾಣದೇ

ಸಾಕ್ಷಾತ್ಕರಿಸಿಕೊಂಡು. ಆತನಪ್ಪಣೆಯಿಂದ ಪಂಚಕವನ್ನು ಕಂಡು ಅವರನ್ನು ಯಥಾವಿಧಿಯಾಗಿ . . . ಅರ್ಚಿಸಿದರು (ಜುಹಾಶ. ೨೬೬).

[p ಸಂಸ್ಕೃತದಲ್ಲಿ ಇದು ಅವ್ಯಯ]

**ಯಥಾಶಕ್ತಿ** (ನಾ). ಸಾಧ್ಯವಾದಷ್ಟು ; ಎಷ್ಟನ್ನು ಮಾಡಬಹುದೊ ಅಷ್ಟು : ಸಾಮರ್ಥ್ಯವಿರುವಷ್ಟು : ಅರ್ಹತ್‌ಪ್ರತಿಮೆಗಳ ನಿಜಾಸಿ ಯಥಾಶಕ್ತಿಸ್ನಪನಪೂಜಾಪುರಸ್ಸರಂ . . . ಅರ್ಚಿಸಿ (ಆದಿಪು. ೦೩-೦೬ ವ) ; ಜಂಗಮಾರಾಧನೆಗಳಂ ಭಯಭಕ್ತಿಯಲಿ ಮಾಡೆನೆ ಯಥಾಶಕ್ತಿಯಲಿ (ಬಸಪು. ೯೩-೦೪); ಯಥಾಶಕ್ತಿಯರಿತು ಮಿತವಾಗಿ . . . ಭೋಜನ ಮಾಡುವಂಥಾವನೇ ಬುದ್ಧಿವಂತನು (ಸಕವ್ಯ. ೩೦).

[p ಸಂಸ್ಕೃತದಲ್ಲಿ ಇದು ಅವ್ಯಯ]

**ಯಥಾಸಂಖ್ಯ** (ಗು). ೧. ಅನುಕ್ರಮವಾದ : ಸಂಖ್ಯಾನುಗತವಾದ. (ನಾ). ೨. = ಯಥಾಸಂಖ್ಯಾಲಂಕಾರ : ಕ್ರಮದೊಳ್ ಪೇಳ್ದ ವಸ್ತುಗಳ್ಗೆಯುದೇ ಕ್ರಮದೊಳನ್ವಯಮಂ ಪೇಳ್ಪುದು ಯಥಾಸಂಖ್ಯ ಮೆನಿಪುದು (ಅಕ್ರತಿ. ೯೬). [ಸಂ.]

**ಯಥಾಸಂಖ್ಯಾಲಂಕಾರ** (ನಾ). [ಕಾವ್ಯಮೀ] ಸಂಖ್ಯಾಕ್ರಮವನ್ನು ಅನುಸರಿಸಿರುವ ಅನ್ವಯಕ್ರಮದ ಅಲಂಕಾರ ; ಎರಡು ವಿಚಾರಗಳ ಪರಸ್ಪರ ಅನ್ವಯದಲ್ಲಿ ಮೊದಲನೆಯ ವಿಚಾರದ ಸಂಖ್ಯೆಯನ್ನು ಎರಡನೆಯ ವಿಚಾರದ ಸಂಖ್ಯೆಗೆ ಹೊಂದಿಸಿರುವ ಅಲಂಕಾರ: ಕ್ರಮದಿಂದಲಿ ಪೇಳುವಂತಹ ಅರ್ಥಕ್ಕೆ ಕ್ರಮದಿಂದನ್ವಯವಿಟ್ಟು ಪೇಳಲು ಯಥಾಸಂಖ್ಯಾಲಂಕಾರವೆನಿಸುವದು (ಕುವಲ. ೯೯.೦ ಟೀಕು) ; ಸಂಖ್ಯಾಕ್ರಮವನ್ನು ಅನುಸರಿಸಿರುವ ಕ್ರಮವೇ ಯಥಾಸಂಖ್ಯಾಲಂಕಾರ. ಉದಾ:— ಕಳಕಂಠಂಗಳ ಬಗ್ಗಣೆ ಗಿಳಿಗಳ ಚಪ್ಪರಣೆಯಳಿಗಳಿಂಚರಮೆಸೆಗುಂ ತಳಿರ್ಗಳ್ ತನಿವಣ್ಗಳ್ ಸುಮಕುಳಂಗಳಡಿಕಿಜಿದ ಚೂತಶಾಖಾಂತರದೊಳ್ (ಶೃಬಿಧ. ೨೮೬). [ಸಂ.]

**ಯಥಾಸಂಖ್ಯೆ** (ನಾ). = ಯಥಾಸಂಖ್ಯಾಲಂಕಾರ : ಕ್ರಮದಿಂದಲಿ ಯಾಂತ್ರಾರ್ಥಕೆ ಪೇಳಲ್ಕನ್ವಯಕ್ರಮದಿಂದಲಿದು ಯಥಾಸಂಖ್ಯಾ ಕ್ರಮ ವಿಲ್ಲದೆ ಶತ್ರುಮಿತ್ರದುಃಖವು ಪರಾಕ್ರಮದಿಂ ಗೆಲು ರಂಜಿಸು ಭಂಜಿಸು ೯. (ಕುವಲ. ೯೯-೦). [ಸಂ. ಯಥಾಸಂಖ್ಯ]

**ಯಥಾಸಂಭವ** (ನಾ). ೧. ಒದಗಿ ಬಂದುದು : ಸಂದರ್ಭಾನುಸಾರವಾಗಿ ಬಂದುದು : ಇದನು ಕಾಂಚನಪಾತ್ರಜಲವೇದಿಯು ವರಾಸನವೆಂದು ಕೈಕೊಂಬುದು ಯಥಾಸಂಭವದಲೆಂದನು ಧರ್ಮನಂದನನು (ಕುವ್ಯಾಶ. ೪-೦೦). ೨. ಸಂದರ್ಭಕ್ಕೆ ಹೊಂದಿಕೊಂಡುದು ; ಆಯಾ ಪರಿಸ್ಥಿತಿಗೆ ಯೋಗ್ಯವಾದುದು : ಈ ಪೇಟ್ಟ ವಿಭಕ್ತಿಗಳ್ ಯಥಾಸಂಭವದಿನಂತು ದೊಡಂ ಪಲ್ಲಟಿವುವು (ಶಮತ. ೦೩೪ ವೃತ್ತಿ). [ಸಂ.]

**ಯಥಾಸ್ಥಾನ** (ನಾ). ೧. ಯೋಗ್ಯವಾದ ಸ್ಥಳ ; ಸರಿಯಾದ ಜಾಗ. ೨. ಮೊದಲು ಇದ್ದ ಜಾಗ ; ವಾಡಿಕೆಯ ಸ್ಥಾನ: ನಿಮ್ಮ ಪೆಟ್ಟುವನು ಪೇಕ್ಷಿಸಿದೊಡೆನ್ನ ದೋಷಂ ಪುನರ್ದಶನಂ ಯಥಾಸ್ಥಾನಕ್ಕೆ ಬಿಜಯಂಗೆಯ್ಯಿಂ (ಶಾಂತಿಪು. ೪.೦೦೧ ವ). [ಸಂ.]

**ಯಥಾಸ್ಥಿತ** (ಗು). ೧. ಯಥಾರ್ಥವಾದ ; ವಸ್ತುಸ್ಥಿತಿಗೆ ಅನುಗುಣವಾದ. ೨. ಸಂದರ್ಭಾನುಸಾರವಾದ : ಕಾಲೋಚಿತವಾದ ; ಯೋಗ್ಯವಾದ . ೩. ಮೊದಲಿದ್ದಂತೆಯೆ ಇರುವ : ಯಥಾಪೂರ್ವವಾದ : (+). [ಸಂ.]

**ಯಥಾಸ್ಥಿತಿ** (ನಾ). ಮೊದಲು ಇದ್ದ ಸ್ಥಿತಿ ; ಪೂರ್ವದಲ್ಲಿದ್ದ ಅವಸ್ಥೆ : ಮಹಲಿಂಗಯ್ಯನಿಗೆ ಮತ್ತೆ ಯಥಾಸ್ಥಿತಿಗೆ ಪ್ರಸಂಗ ಬಂದು ನಿಂತಿದ್ದಕ್ಕೆ ಏನೂ ತೋಚದಾಯಿತು (ಮಾಮಹ. ೫೬). [p ಸಂಸ್ಕೃತದಲ್ಲಿ ಇದು ಅವ್ಯಯ]

**ಯಥೇಚ್ಛ** (ನಾ). ೧. ಮನಸ್ಸಿಗೆ ಬಂದಷ್ಟು : ಬೇಕಾದಷ್ಟು ; ಇಚ್ಛಿಸಿದಷ್ಟು. ೨. ವಿಪುಲವಾದುದು ; ಅಧಿಕ ಪ್ರಮಾಣ : ದ್ರುಪದನಿಗೆ ಯಥೇಚ್ಛವಾಗಿ ಹಣ ಕೊಟ್ಟು ಅವನೂ ಅವನ ಮಕ್ಕಳೂ ಮಂತ್ರಿಗಳೂ ಯುಧಿಷ್ಠಿರನನ್ನು ಕೈಬಿಡುವಂತೆ ಮಾಡಬಹುದು (ಪತಭಾ. ೬೨) : ಎಳೆಯ ಮಕ್ಕಳ ಆಟಪಾಟಗಳನ್ನು ನೋಡುವ . . . ಸೌಲಭ್ಯ ಶಿಕ್ಷಕರಿಗೆ ಯಥೇಚ್ಛವಾಗಿರುತ್ತದೆ (ಶಿಕ್ಷರ. ೬೭೮). ೩. ತನ್ನ ಇಚ್ಛೆ.— ಅಪೇಕ್ಷೆ : ಚಂಡಕೌಶಿಕನು . . . ಪಾರ್ಥ್ಯಾಟ್ನಿಕವನ್ನು ಮಾಡಬೇಕೆಂದು ಯಥೇಚ್ಛವಾಗಿ ಹೋದನು (ಕೃವಾಸ. ೫೦). [ಸಂ.]

**ಯಥೇಚ್ಛೆ** (ನಾ). ಯೋಗ್ಯವಾದ ಅಪೇಕ್ಷೆ. [ಸಂ. ಯಥೇಚ್ಛ]

**ಯಥೇಪ್ಸಿತ** (ಗು). ೧. ಅಪೇಕ್ಷಿಸಿದ ರೀತಿಯಲ್ಲಿರುವ : ಇಚ್ಛಾನುಗುಣವಾದ : ನಿರೀಕ್ಷೆಗೆ ಸರಿಯಾದ. ೨. ಹೇರಳವಾದ : ಅಧಿಕವಾದ : ಹಿಂದೆಯಾತಂಗೆ ಬಸುರು ತುಂಬ ಕೂಳನಿಕ್ಕಿದುದಿಲ್ಲ . . . ಇಂದೀತಂಗೆ ಯಥೇಪ್ಸಿತಭೋಜನಮನಿಕ್ಕುವೆನು (ಲಾತಾಶ. ೮೨). [ಸಂ.]

**ಯಥೇಷ್ಟ** (ನಾ). ೧. ಮನಸ್ಸಿಗೆ ಬಂದುದು : ಸ್ವೇಚ್ಛೆ ; ಸ್ವೈರವೃತ್ತಿ : "ವಿಸಟಂಬರಿದಾಡುವೆನೆ ಯಥೇಷ್ಟಾಚಾರವು" (ಕಬ್ಬಮಂ. ೩೮). ೨. ಬೇಕಾದಷ್ಟು ; ಹೇರಳವಾದುದು : ವಿಪುಲವಾದುದು : ಗಳಸುವ ಚಿಂತೆಯಿಲ್ಲ, ತಂದೆಯ ಆಸ್ತಿ ಯಥೇಷ್ಟವಾಗಿದೆ (ಕುಲಿಂ. ೮೨) : ಸೌಂದರ್ಯವರ್ಣನಕ್ಕೆ . . . ಶಬ್ದಸಾಮಗ್ರಿಯೂ ಪಾಕಸಂಧಾನಗಳೂ ಯಥೇಷ್ಟವಾಗಿ ಬಂದವು (ಕಾಶೀ. ೨೨೯). [ಸಂ.]

**ಯಥೇಷ್ಟಂ** (ಅ). ಇಚ್ಛಾನುಸಾರವಾಗಿ : ಇಷ್ಟಬಂದ ರೀತಿಯಲ್ಲಿ : ಅಜನೆಯ ವಿಭಕ್ತಿಯೊಳೆಲ್ಲಮುಚ್ಚಾರಣೆ ಯಥೇಷ್ಟಮುಮಾದೆಡೆಗಳೊಳಂ (ಶಬ್ದಾ. ೨-೦೮) ; ಕಷ್ಟಕ್ರಿಯೆಗಳೊಳೋದಿ ಯಥೇಷ್ಟಂ ನಲಿದಾಡಿ ಸಾಧುವೇಷದನಿವರ್ಗಳ್ ಶಿಷ್ಯರೊಳೆ ಬನ್ದ ಮಿಥ್ಯಾದೃಷ್ಟಿಗಳ್ (ಸಮಸ. ೦೪-೭೦). [ಸಂ.]

**ಯಥೋಕ್ತ** (ಗು). ೧. ಹಿಂದೆ ಹೇಳಿದ : ಪೂರ್ವೋಕ್ತವಾದ : ಯಥಾವಿಧಿಯಾದ : ಸೂಕ್ಷ್ಮಸಾಂಪರಾಯ ಗುಣಸ್ಥಾನಕ್ಷಪಕಂ ಯಥೋಕ್ತಪರಿಣಾಮದಿಂ ಸೂಕ್ಷ್ಮಲೋಭಮಂ ನೆಱೆಯೆ ಪಡೆಪಡಿಸಿ (ಸುಕುಮಾ. ೮-೬೨ ವ). (ನಾ). ೨. ಹೇಳಿದಷ್ಟು : ಹೇಳಿರುವಷ್ಟು ; ಉಕ್ತವಾಗಿರುವಷ್ಟು : ಗ್ರಹಮೇಟಿಯುಂ ಜನನೋದಯಗೃಹಮುಂ ಬಲಯುಕ್ತಮೆನೆ ಪರಸ್ಪರ ಪೀಡಾರಹಿತ ಸ್ವಗೃಹಸ್ಥಂ ಸನ್ನ್ಯಹಮೆನೆ ಐರವಾಯುಮಂ ಯಥೋಕ್ತಂ ಕುಡುಂಗುಂ (ಜಾತಿ. ೬-೯). [ಸಂ.]

**ಯಥೋಚಿತ** (ಗು). ಯೋಗ್ಯವಾದ : ಅನುಗುಣವಾದ : ಅರಸು . . . ಸಪರಿವಾರಂಬೆರಸು ಬಂದರ್ಚಿಸಿ ಯಥೋಚಿತ ಸ್ಥಾನದೋಳಿರ್ದಂ (ವಡ್ಡಾರಾ. ೩೩-೨೦) ; ಯಥೋಚಿತ ಸಂಭಾವನೆಯಿಂ ರಾಜನ್ಯಕಮಂ ಬೀಡಿಂಗೆ ವಿಸರ್ಜಿಸಿ (ಶಾಂತಿಪು. ೦೧-೯೩ ವ).

ಯಥೋಚಿತವಾಗಿ = ಯೋಗ್ಯವಾಗಿ ; ತಕ್ಕಂತೆ : ಇಂದ್ರನು ಬ್ರಹ್ಮದೇವನಿಗೆ ಯಥೋಚಿತವಾಗಿ ಸಮರ್ಚನವನ್ನು ಒಪ್ಪಿಸಿ . . . ಹೊರಟನು (ಪಡಿಶ. ೧೧. ೦೩೬೬). [ಸಂ.]

**ಯಥೋದಿತ** (ನಾ). ದಡ್ಡ : ತಿಳಿಗೇಡಿ : "ವೈಧೇಯಃ . . ಯಥೋದಿತಃ. ಮೂಢಃ . . . ಮಾತ್ಸರಾಸಿತ:- ಈ ೧೧ ಅಜ್ಞನ ಪದಂ" (ಶಬ್ದಾಮ. ೩೬-೦೮೦). [ಸಂ.]

**ಯಥೋದ್ಗತ** (ಗು). ೧. ಹುಟ್ಟಿದಾಗ ಇದ್ದ ಹಾಗೆಯೇ ಇರುವ; ತಿಳಿವಳಿಕೆ ಇಲ್ಲದ (ನಾ). ೨. ದಡ್ಡ ; ಅಜ್ಞ ; ಮೂರ್ಖ : "ಬಾಲಿಶನಜ್ಞಂ ಮೂರ್ಖಂ ಬಾಲಂ ಮೂಢಂ ಜಡಂ ಯಥೋದ್ಗತನೆನೆಯುಂ" (ಪಸ್ಲುಕಾ. ೯೯-೭). [ಸಂ.]

**ಯಥೋದ್ದಿಷ್ಟ** (ಗು). ಯಾವುದನ್ನು ಸೂಚಿಸಿ ಅಥವಾ ತೋರಿಸಿ ಕೊಡಲಾಯಿತೋ ಅಂತಹ : ನಿರ್ದೇಶಿಸಲ್ಪಟ್ಟ : ಗಗನಚರಾಧೀಶನಂ

ಯತಿ ಪರಸಿ ಯಥೋದ್ದಿಷ್ಟಪಿಷ್ಟರದೊಳ್ ಕುಳ್ಳಿರ್ದರ್ (ಶಾಂತಿಪು. ೨-೨೦ ವ).
[ಸಂ.]

**ಯಥೋಪದಿಷ್ಟ** (ಗು). = ಯಥೋದ್ದಿಷ್ಟ : ಮಹೀತಳಾಶ್ಲಿಷ್ಟ ಲಲಾಟಪಟ್ಟನೆಱಗಿ ಪೊಡವಟ್ಟು ಯಥೋಪದಿಷ್ಟಾಸನದೊಳ್ ಕುಳ್ಳಿರ್ದರ್ (ಶಾಂತಿಪು. ೩-೪೦ ವ). [ಸಂ.]

**ಯದು** (ನಾ). ೧. ಯಯಾತಿ ಮತ್ತು ದೇವಯಾನಿಯರ ಹಿರಿಯ ಮಗನೂ ಕೃಷ್ಣನ ವಂಶದ ಪೂರ್ವಜನೂ ಆದ ಒಬ್ಬ ದೊರೆ. ೨. ಯದುವಂಶದಲ್ಲಿ ಹುಟ್ಟಿದವನು ; ಯಾದವ : ಯದು ನಾಶಕ್ಷಮಪುತ್ರನು ಪಡೆವೆಂ (ಜಗಬ. ೬-೧೭); ಯದುಗಳು ಗೋವಳರು ದನ ಗಾರರೆಂಬ ಬಗ್ಗೆ ಭಿನ್ನಾಭಿಪ್ರಾಯವೇ ಇಲ್ಲ (ಕರ್ನಾಪೂ. ೪೩). ೩. ಯಮುನಾ ನದಿಯ ಪಶ್ಚಿಮದಲ್ಲಿದ್ದ ಒಂದು ದೇಶ; ಯಾದವರ ದೇಶ. [ಸಂ.]

**ಯದುಕುಲ**, ಯದುಕುಳ (ನಾ). ೧. ಯದುವಿನ ವಂಶ ; ಯಾದವ ವಂಶ : ಯದುಕುಲಜಲನಿಧಿಯೊಳ್ ಪುಟ್ಟಿದೆಯಮರ್ದಿಂ ನಂಜು ಮೊದನೆ ಪುಟ್ಟುವವೋಲ್ (ಗದಾಯು. ೭-೩೩). ೨. ಯದುವಂಶದವರು; ಯಾದವರು: ಯದುಕುಲದುರ್ಜಯನಪ್ಪಂತದೊಂದು ವರಮಂ ತ್ರಿನೇತ್ರ ರೂಪದೆ ತಾನಿತ್ತುದನಜನಿದು (ಜಗಬ. ೬-೪೦) ; ಯದುಕುಲಸಹಿತ ದೇವ ಮುಕುಂದ ಬಿಜಯಂಗೈದು ಹೊಕ್ಕನು ದ್ವಾರಕಾಪುರವ (ಕುವ್ಯಾಉ. ೧-೦೪). ೩. ಮೈಸೂರಿನ ಅರಸರ ವಂಶ : ಯದುಕುಲದ ಕಾಮಧಾ ಶಕ್ತಿಗಳ ದಿವ್ಯಪ್ರಸಾದಕ್ಕೆ (ಹೊಂಗಳು. ೩೨-೦೬). **ಯದುಕುಳ** : ೪. ಹೊಯ್ಸಳ ವಂಶ : ಯದುಕುಳಕುಳಾದ್ರಿಶಿಖರದೊಳುದಯಿಸಿದಂ . . . ವಿನಯಾದಿತ್ಯ (ಎಕ. V, ಕನ್ನರಾ. ೦೪೯-೪; 1124). [ಸಂ.]

**ಯದುಕುಲಕಾಂಭೋಜಿ** (ನಾ). [ಸಂಗೀತ] ಒಂದು ಮೇಳ ರಾಗದ ಹೆಸರು : ಯದುಕುಲ ಕಾಂಭೋಜಿ :— ಈ ರಾಗದ ನಿಜನಾಮ 'ಎರುಕಲ ಕಾಂಭೋಜಿ'; ಎರುಕಲ ಜಾತಿಯ ಅಂಬಿಗರ ದೋಣಿ ಹಾಡುಗಳ ಧಾಟಿ ಯಿಂದ ಈ ರಾಗ ರೂಪುಗೊಂಡಿತೆಂದು ತಿಳಿದುಬಂದಿದೆ (ಸಂಗೀತಂ. ೧೪೩).
[ಸಂ. ಯದುಕುಲಕಾಂಭೋಜೀ]

**ಯದುಕುಲನಂದನ** (ನಾ). ಯಾದವ ವಂಶಕ್ಕೆ ಸಂತೋಷವನ್ನುಂಟು ಮಾಡುವವನು : ಕೃಷ್ಣ : ಯಾದವ ಸಿ[illegible] ಬಾ ಯದುಕುಲನಂದನ ಮಾಧವ ಮಧುಸೂದನ ನೀ ಬಾರೊ (ಪುರಂದ. ೦-೦೩ ಶಲ್ಲಾ). [ಸಂ.]

**ಯದುಕುಳ** ' ಯದುಕುಲ ' ನೋ.

**ಯದುಕುಳತಿಳಕ** (ನಾ). ೧. ಯಾದವ ವಂಶಕ್ಕೆ ಭೂಷಣಪ್ರಾಯ ನಾದವನು. ೨. ಹೊಯ್ಸಳವಂಶದಲ್ಲಿ ಶ್ರೇಷ್ಠನಾದವನು : ಯದುಕುಳತಿಳಕಂ ವೀರ ವಿಷ್ಣುಕ್ಷಿತೀಶಂ (ಎಕ. V, ಕನ್ನರಾ. ೦೪೯-೦೦ ; 1124). [ಸಂ. ಯದುಕುಲತಿಲಕ]

**ಯದುವಂಶ** (ನಾ). ೧.=ಯದುಕುಲ ೧ : ಯದುವಂಶಶ್ರೀಲಲಾಮಂ ರಿಪುಗಿರಿಕುಳಿಶಂ . . . ಅರಮನೆಯಂ ತೋರಣಾದ್ಯುನ್ನತಶೋಭಾಸ್ಪದಮಂ ಪೊಕ್ಕಂ ನೃಪೇಂದ್ರಂ (ವೇಟಿಪು. ೭-೨೦೩). ೨. ಯದುಕುಲದಲ್ಲಿ ಹುಟ್ಟಿ ದವನು ; ಕೃಷ್ಣ : ಪಗೆಗೆ ವಧಮಂ ಯದುವಂಶಂ [ಶಾಂತಂ. ಶ್ಯಂ] ಪೆಜಿತಂಪಾಯಂಬಂ ಚಿಂತಿಸಿನಂ (ಜಗಬ. ೬-೪೦). ೩. ಮೈಸೂರಿನ ಅರಸರ ವಂಶ: ಯದುವಂಶಂ ಪಿರಿದಾಯ್ತು . . . ಮಹೀಶೂರಣ್ಮಾರೀ ಚಕ್ರಮಂ ಪದಪಿಂ ಪಾಲಿಪ ಕಾಲಿಮಾಗಳೊದವಿತ್ತು (ಜಕಬ. ೩-೦೨೮). [ಸಂ.]

**ಯದೃಚ್ಛೆ** (ನಾ). ೧. ತನ್ನ ಅಪೇಕ್ಷಾನುಸಾರವಾಗಿ ನಡೆದುಕೊಳ್ಳುವಿಕೆ; ಸ್ವೇಚ್ಛಾವರ್ತನೆ : ಸ್ವಚ್ಛಂದ ವರ್ತನೆ : ''ಸ್ವಚ್ಛಂದ ನಿರ್ನಿಮಿತ್ತಂ ಯದೃಚ್ಛೆಯಮ ತನ್ನಿಚ್ಛೆ'' (ಪಂಗರಾ. ೦೪೩-೩೦) ೨. ಆಕಸ್ಮಿಕ: ಅನಿರೀಕ್ಷಿತ ವಾದ ಘಟನೆ : ''ತಾಂ ನಿರ್ಹೇತುಕಮಕ್ಕುಂ ಯದೃಚ್ಛೆ'' (ವಸ್ತುಕೋ. ೦೦೩-೨೭); ಯದೃಚ್ಛಾ ಲಾಭದಿಂದ ಸಂತುಷ್ಟನಾಗಿದ್ದ ವಾಜಶ್ರವಸ. ಈಗ ತನ್ನ ವಿದ್ಯೆಯಿಂದ ಧನಸಂಗ್ರಹವಾದೀತೇ . . . ಎಂದು ದಾರಿ ಕಾಯ ತೊಡಗಿದ (ಪಿಕಂಬಾ. ೭೯); ಆ ವಿಶ್ವರೂಪಸಂದರ್ಶನದಿ ಹೊಂದಿಹುವು ಜೀವ ನಿರ್ಜೀವಗಳು, ಕ್ರಮ ಯದೃಚ್ಛೆಗಳು (ಪಂಕಾಕ. ೩೨೨). ೩. [ವ್ಯಾಕ] ನಿರ್ದಿಷ್ಟವಾದ ಅರ್ಥವಾಗಲಿ, ನಿಷ್ಪತ್ತಿಯಾಗಲಿ ಇಲ್ಲದ ನಾಮಪದ: (ಕ). [ಸಂ. ಯದೃಚ್ಛಾ]

**ಯದ್ಭವಿಷ್ಯ** (ನಾ). ದೈವದಲ್ಲಿ ಇದ್ದಂತಾಗಲಿ ಎಂದು ನಂಬುವವನು : ದೈವವಾದಿ: ''ಯದ್ಭವಿಷ್ಯಃ ದೈವಪರಃ_ಈ ೨ ದೈವಂಬೋಜೀಸಿರ್ಪವಂ'' (ಹರಿಚರಿ. ೭೨-೨೨೨). [ಸಂ.]

**ಯದ್ಯಪಿ** (ಅ). ಆದರೂ ಕೂಡ ; ಆದಾಗ್ಯೂ : ನಾನು ನಾಸ್ತಿಕನೆಂದೇ ಇಟ್ಟುಕೊಳ್ಳಿ. ಯದ್ಯಪಿ ತಂದೆ ತಾಯಿಗಳ ಮೇಲೆ ನನಗೆ ಭಕ್ತಿಯಿದೆ (ರಸಿಕ). [P ಸಂಸ್ಕೃತದಲ್ಲಿ ಇದು 'ಯದಿ', 'ಅಪಿ' ಎಂದು ಎರಡು ಭಿನ್ನಪದಗಳು]

**ಯದ್ವಾತದ್ವಾ** (ಅ). ಅವ್ಯವಸ್ಥಿತವಾಗಿ ; ಸಿಕ್ಕಾಪಟ್ಟೆ ; ಯಾವ ಒಂದು ಕ್ರಮವೂ ಇಲ್ಲದೆ : ಹೀಗೆ ಯದ್ವಾತದ್ವಾ ಗಳಹುವುದು ನಿನ್ನ ಸ್ವಭಾವವೇ ಆಗಿದೆ (ಅಕ್ರಮ. ೯೧) ; ಈಚೆಗಂತೂ ಉಕ್ಕಿನ ಕಂಬಿಗಳ ಬೆಲೆಯೂ ಯದ್ವಾತದ್ವಾ ಏರಿಹೋಗಿದೆ (ಶಿಲ್ಪಾ. ೨೯೩). [P ಸಂಸ್ಕೃತದಲ್ಲಿ ಇದು 'ಯದ್ ವಾ', ''ತದ್ ವಾ'' ಎಂಬ ಎರಡು ಭಿನ್ನಪದಗಳು]

**ಯಮ** (ನಾ). ೧. ತಡೆದಿರುವಿಕೆ ; ಹತೋಟಿ ; ನಿಗ್ರಹ. ೨. ಇಂದ್ರಿಯನಿಗ್ರಹ ; ಆತ್ಮಸಂಯಮನ : ಇದು ಧರ್ಮಶಾಸ್ತ್ರಸಂಜನಿತ ರಹಸ್ಯವೋ ಯಮವೋ ಪಟ್ಟು (ಶಾದಂಪೂ. ೪೯೭); ಯೋಗಮಾರ್ಗದಲೀ ತನುವು ಮೊದಲಾದಿಂದ್ರಿಯಂಗಳ ಘನವಿರತಿಯದೆ ಯಮವೆನಿಪುದು (ಗಗಶಾ. ೨೨-೩೯). ೩. ಪಿತೃಲೋಕಾಧಿಪತಿಯೂ ದಕ್ಷಿಣದಿಕ್ಕಿನ ಅಧಿಪತಿಯೂ ಆದ ದೇವತೆ ; ಮೃತ್ಯುದೇವತೆ : ''ಪ್ರೇತಪತಿ ಸಮವರ್ತಿ ಮೃತ್ಯು ಕಾಳಿಂದಿಸಹಜಾತಂ ಯಮಂ ಧರ್ಮನಂತಕಂ . . . ಕೃತಾಂತನಕ್ಕುಂ'' (ಪಂಗರಾ. ೦೩-೦೦) : ಅಮರಾಧಿರಾಜ ಹುತವಹ ಯಮ . . . ಯಕ್ಷೇಶಾನಕ್ರಮದಿನವರೆಣ್ಬರಂತುತ್ತಮನಯ್ ನೀಂ ನವಮಲೋಕಪಾಳನೆ ಅವರೊಳ್ (ಕಬರಾ. ೩-೯೭) ; ಯಮಜರಾ ನಳಮೋನಧಿಕಮೊ (ಮಲ್ಲಿಪು. ೦೩-೦೦೦) ; ಈ ಪ್ರಾಣಿಗಳನ್ನೆಲ್ಲ ಒಂದು ನಿಯಮದ ಕಟ್ಟಿನಲ್ಲಿ ಇಟ್ಟಿದ್ದೀಯೆ . . . ಆದ್ದರಿಂದಲೇ ನಿನಗೆ 'ಯಮ' ನೆಂದು ಹೆಸರು (ವಚಶಾ. ೧೭೨). ೪. ಶನಿಗ್ರಹ : ಯಮ ದನುಜೇಂದ್ರ ವಂದ್ಯರಹಿತಂ ರವಿಮಂಡಲದೊಳ್ ಗ್ರಹಗಳನ್ನಮಿಸಿದೊಡೆ . . . ತವರ್ಧಮಾನ [ಟೀಕಾ] . . . ಕುಡುಮಾಯಿಮಿನೊಳ್ (ಜಾತಕ. ೬-೪). ೫. ಜೊತೆ ; ಜೋಡಿ. ೬. ನಿತ್ಯವೂ ಮಾಡಬೇಕಾದ ಧಾರ್ಮಿಕ ಕ್ರಿಯೆ ; ನಿತ್ಯಕರ್ಮ : ''ನಿತ್ಯಕರ್ಮಮದು ಯಮಮಕ್ಕುಂ'' (ವಸ್ತುಕೋ. ೩೮-೩೭). ೭. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಯಮ ನಯನ. . .ಕಿವಿಗಳೆರಡಱ ನಾಮಂ (ವ್ಯವಹಾ. ೬-೨). ೮. [ಯೋಗ] ಅಷ್ಟಾಂಗಯೋಗದ ಎಂಟು ಅಂಗಗಳಲ್ಲಿ ಮೊದಲನೆ ಯದು ; ಹಿಂಸೆ, ಅಸತ್ಯ, ಕಳವು, ದುರಾಚಾರ, ಪರಿಗ್ರಹ ಈ ಐದನ್ನು ಬಿಡುವುದು : ''ಯಮ ನಿಯಮಾದಿ ನಿಜಯೋಗಮಕ್ಕು'' (ಪಂಗರಾ. ೭೭-೧೨) ; ಯಮ ನಿಯಮ ಸ್ವಾಧ್ಯಾಯಕ್ರಮದಿಂದ ನೆಗಟಿಸ್ಕೊಡಲ್ಲದಾಗದು (ಜಪಾಕ. ೨೭) ; ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾನ ಜಪ ಸಮಾಧಿಶೀಳಸಂಪನ್ನರ್ . . . ಶ್ರೀಮದಯ್ಯಗಳ್ (ಶಾಇ. XX, ೯೭-೦೭ ; 1072) ; ಯಮನಿಯಮಾ ಸನಾದಿ ವಿವಿಧಕ್ರಮದಿಂ ಗಿರಿತಳ್ಪದೊಳ್ ಮನೋರಮಣಿಯಂತು ತಪಶ್ಚರಣಮಂ ತಳೆದು (ದಶಕು. ೩-೭೦). ೯. (ಆಲು) ಅಧಿಕ ವಾದುದು ; ಹೆಚ್ಚಾದುದು : 'ಯಮಭಾರ' ಪರಾ.

ಯಮನವರು = ಯಮಧರ್ಮರಾಯನ ಭಟರು ; ಯಮದೂತರು : ಸಾಯಲಾಜಿನು ಎನಲು ಕುಸುರಿದಟಿಯದೆ ಬಿಡರು ಯಮನವರು (ಪುರಂದ. ೨-೬೦-೩). [ಸಂ.]

**ಯಮಕ** (ನಾ). ೧. ನಿಗ್ರಹ ; ತಡೆ ; ಹತೋಟಿ. ೨. ಧಾರ್ಮಿಕ ಕರ್ತವ್ಯ ; ನಿತ್ಯಕರ್ಮ. ೩. ಅವಳಿ ; ಯಮಳ. ೪. ಜೊತೆ ; ಜೋಡಿ : 'ಯಮಕಗಿರಿ' ಪರಾ. ೫. ಇಮ್ಮಡಿ ; ಎರಡು ಪಟ್ಟು. ೬. ಎಣ್ಣೆ ಮತ್ತು ತುಪ್ಪದ ಮಿಶ್ರಣ : ಈ ಘೃತ ತೈಲಗಳ ಸಂಯೋಗಕ್ಕೆ ಯಮಕವೆಂದು ವೈದ್ಯಶಾಸ್ತ್ರದಲ್ಲಿ ಹೆಸರಿದೆ (ಶೀಮುಸೂ. ೩-೦೦ ೬೨೪). ೭. ಗದಾಯುದ್ಧದ ವರಸೆಗಳಲ್ಲಿ ಒಂದು ; ಒಂದು ಗತಿ ವಿಶೇಷ : ಭೀಮನು ಅದನ್ನು ಅರ್ಥಮಾಡಿಕೊಂಡು, ಮಂಡಲಗಳು, ಯಮಕಗಳು, ಗೋಮೂತ್ರಿಕೆ ಮುಂತಾದ ಚಿತ್ರವಿಚಿತ್ರವಾದ ಗತಿಗಳಲ್ಲಿ ಓಡಾಡುತ್ತ ಎದುರಾಳಿಯನ್ನು ಬುದ್ಧಿಭ್ರಮೆಗೊಳಿಸುವುದಕ್ಕೆ ಪ್ರಯತ್ನಪಟ್ಟನು (ವಕಭಾ. ೪೦೭). ೮. [ಕಾವ್ಯಮೀ] ಶಬ್ದಾಲಂಕಾರಗಳಲ್ಲಿ ಒಂದು ಪ್ರಭೇದ ; "ಮೂರು ಅಥವಾ ಅದಕ್ಕಿಂತ ಹೆಚ್ಚಿನ ಅಕ್ಷರಗಳುಳ್ಳ ಪದವೋ ಪದಭಾಗವೋ ಒಂದು ಪದ್ಯದ ಆದಿ, ಮಧ್ಯ, ಅಂತ್ಯ ಈ ಸ್ಥಾನಗಳಲ್ಲಿ ನಿಯತವಾಗಿ ಪುನಃಪುನಃ ಬಂದರೆ ಅದಕ್ಕೆ ಯಮಕವೆಂದು ಹೆಸರು" (ಕೈದಿ. ೨೫೪) : ಯಮಕಂ [ಪ]ದಾ ಪಾದಾರ್ಥ ಸಮಶ್ಲೋಕ[ಸು]ಗೋಚರಂ ಪ್ರಮಿತಾದ್ಯಂತದೂಷ್ಕೋಪಕ್ರಮಾನೇಕ ಪ್ರಕಲ್ಪಿತಂ (ಕವಿರಾ. ೨-೦೨೪) ; ಯಮಕದ ಗಮಕದ ಬಿನ್ನಣ ಮುಮರ್ಥಿನೆಗಂ ತತ್ತ್ವಮುಂ ಕವಿತ್ವಮುಮೆತ್ತಂ ಸಮಸಂದಿರೆ ಪೇಟ್ಕ್ರೀಜಿಗೆ ಸಮನಿಲ್ಲ ಧನಂಜಯಂಗೆ ಕವಿತಾಗಮಿಕರ್ (ಸುಕುಮಾ. ೦-೩೬) ; ಇವು. . . ಪ್ರಾಸದೆಡೆಗೆ ಸಲ್ಲವು ಯಮಕವ್ಯಪಹೃತಿಗಾಗವು (ಶಮದ. ೦೯). [ಸಂ.]

**ಯಮಕಗಿರಿ** (ನಾ). ಜೋಡು ಬೆಟ್ಟ: ಇರ್ಕೆಲದೊಳ್ . . . ಎರಡೆರಡುಂ ಯಮಕಗಿರಿಗಳಪ್ಪುವು (ತತ್ತ್ವಕೃ. ೦೫೩). [ಸಂ.]

**ಯಮಕಿಂಕರ** (ನಾ). ಯಮನ ಆಳು ; ಯಮದೂತ : ಸಿರಿ ಬ್ರಹ್ಮಾದಿಗಳೊಡೆಯನು ಪರಿಯಿರಲಾಗಿ ಹಿರಿಯನೊಡೆಯನೆಂದು ಕಲ್ಪಿಸುತ ಸರತೊಟ್ಟಲೇಟಿಸಿ ಪೆಸರಿಟ್ಟು ಕರೆವೆ ನಿಸ್ಸವರೆ ಯಮಕಿಂಕರರ ಕೇಳಿ ಮೂಳಿ (ಪುರಂದ. ೪-೫೦-೯). [ಸಂ.]

**ಯಮಕು** (ನಾ). ಜಂಬ ; ಠೀವಿ ; ದಿಮಾಕು : ಶಾಂತರಾಜನು ನಮ್ಮ ನಾಗಿದ್ದರೂ ಯಮಕಿನಿಂದ ನುಡಿದನು (ಯದುಂಗ. ೬೨) ; ಹೌದ ಹುಡುಗೀ! ಏನು ಯಮಕು ಅಂದೀ ! ಕಾರಿನೊಳಗಿಂದ ಇಳಿಯೋದೂ ಒಂದು ಸೊಬಗು (ಬಾಂತಹು. ೫). [ ? ]

**ಯಮಗಂಡಕಾಲ** (ನಾ). [ಜ್ಯೋತಿ](ಪ್ರಾಣಾಪಾಯವನ್ನು ಸೂಚಿಸುವ) ಅಶುಭಕಾಲ : ಯಮಗಂಡಕಾಲದಲ್ಲಿ ಪ್ರಯಾಣ ಹೊರಟಿದ್ದಕ್ಕೆ ಸರಿಯಾಗಿ ಆ ಗುಂಪು ಅಪಘಾತಕ್ಕೀಡಾಯಿತು (ರೂಢಿ). [ಸಂ.]

**ಯಮಗೊಲೆ** (ನಾ). (ಅಲಂ) ನರಕಯಾತನೆ ; ಭೀಕರವಾದ ಹಿಂಸೆ : ಬೇಡಿಕೊಂಬುವೆ ನಿನ್ನಾ . . . ಕೆಂಗೊಂಡದೊಳು ಹುರಿವ ಯಮಗೊಲೆಗಳುಕಿ ಸಾಯಲಾಜಿದಲೆ (ಕೃಕಪ. ೦-೦೧-೯). [ಯಮ + ಕೊಲೆ]

**ಯಮಜ** (ನಾ). ೧. ಅವಳಿ. ೨. ಯಮಧರ್ಮರಾಯನ ಮಗ ; ಯುಧಿಷ್ಠಿರ : ಯಮಜನೊಳ್ ಪುದುವಾಟಿ ೦ (ಗದಾಯು. ೪-೧೧). [ಸಂ.]

**ಯಮತಾತ** (ನಾ). ಯಮನ ತಂದೆ ; ಸೂರ್ಯ : ಪೂತಾತ್ಮ ಮುನಿ ಹೃದಯವನಜಾತ ಯಮತಾತ . . . ಸಂಗಮೇಶ್ವರ ಓತು ರಕ್ಷಿಸೆನ್ನಂ (ಶ್ರೀಶರಾ. ೯-೧).  [ಸಂ.]

**ಯಮದಂಡ** (ನಾ). ೧. ಯಮನ ಆಯುಧ, – ಗದೆ : ಮತ್ತೇಭವಧ ಪ್ರಚಂಡ ಯಮದಂಡವದೇಂ ಮೂಣ್ಪುದೆ ಪಿಪೀಲಿಕಾವಧವಿಧಿಯಂ (ಜಗಧ. ೨-೩೪) ; ಯಮದಂಡಾ [ಕಾಠಾಂ. ತಾ]ಶನಿಪಾತದೊಂದು ಸಮಿಯಂ ಶ್ರೀಸಿಂಹಸೇನಪ್ರತಾಪಮನುಗ್ರಾಜಿಯೊಳುಂಡು ಕೇಡು ಬಟಿಯುಂ ಪ್ರಾಣೈಕಮಾತ್ರಾಪ್ರಾಣಿಪಮಹಾಲಾಭದಿಂ . . . ಬಾ ಬ್ಬ ೦ ಳೆ ಯೊ ಳ್ ವೀರಾರಿಭೂಪಾಲಕರ್ (ಅನಂಪು. ೨-೮) ; ಯಮದಂಡವಮಂ ಪೋಲ್ವ ಗದೆಯಂ ಕೊಂಡು ಮತ್ತೆ ಮಾರುತಸುತಂ ಮೇಲ್ವಾಯ್ದು ಬರಲ್ (ಕೃಪರಾ. ೬-೯೯). ೨. ಯಮನು ಕೊಡುವ ಶಿಕ್ಷೆ ; ಸಾವು : ಕಂಡು ಲಿಂಗವನು ಪೂಜಿಸದವಗೆ ಯಮದಂಡ ಕಾಣಯ್ಯ (ಸವಗ್ರ. ೦೫೯). [ಸಂ.]

**ಯಮದಶಮ** (ನಾ). [ಯೋಗ] ಅಷ್ಟಾಂಗಯೋಗಗಳಲ್ಲಿ ಮೊದಲನೆಯದಾದ ಯಮದ ಹತ್ತು ಪ್ರಕಾರಗಳು ; ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಕ್ಷಮೆ, ಧೃತಿ, ದಯೆ, ಆರ್ಜವ, ಮಿತಾಹಾರ ಮತ್ತು ಶೌಚ : ವಿಸ್ತರಿಸುವೆವು ಯಮದಶಮಗಳ ಮತ್ತೆ ತಿಳಿಯಲಹಿಂಸೆ ಸತ್ಯಾಸ್ತೇಯದಾ ಬಳಿಕ ತನಯ ತಿಳಿಯಾ ಬ್ರಹ್ಮಚರ್ಯವು ಕ್ಷಮೆಯು ಧೃತಿ ದಯೆ ಆರ್ಜವವು ಅನುದಿನದಿ ಮಿತಭೋಜನವು ಶೌಚಾದಿಗಳು ಯಮವಹವು (ಗಗತಾ. ೦೦-೬೬). [ಸಂ.]

**ಯಮದೂತ** (ನಾ). ೧. ಮೃತ್ಯುದೇವತೆಯ ಆಜ್ಞಾನುಸಾರವಾಗಿ ಜೀವಗಳನ್ನು ಯಮನ ಆಸ್ಥಾನಕ್ಕೆ ಎಳೆದೊಯ್ಯುವ ದೂತ ; ಯಮದೇವನ ಆಳು : ಕಣೆಗಳ್ ನೆಜಿನಂ ಬಿತೆ ನಟ್ಟು ಸುಭಟರಸುವಂ ನಡೆಯಿಸಿದುವು ಯಮಪುರಕ್ಕೆ ಯಮದೂತರವೋಲ್ (ಶಂಠಪುಮ. ೦೩-೯೨); ಲಿಂಗವ ಪೂಜಿಯ ಮಾಡಿ ಜಂಗಮವ ಕಂಡುದಾಸೀನವ ಮಾಡಿದರೆ . . . ಲೋಕದ ಕರ್ಮಿಗಳಿಗೆ ಮಾಡಿದ ಯಮದೂತರ ದಂಡವೆಂಬುದು (ಬಸವ. ೪೨೩) ; ಯಮದೂತರು ಬಂದು ಎಳೆದಾಗ . . . ಪುರಂದರವಿಠಲನ್ನ ನಾಮವು ಕಾಲವಾಗೋ ಸಮಯಕ್ಕೆ ಬರುವುದೇನಯ್ಯ (ಪುರಂದ. ೦-೦೫೫-೩). ೨. (ಅಲಂ) ಸ್ಥೂಲವಾಗಿಯೂ ಒರಟಾಗಿಯೂ ಇರುವ ವ್ಯಕ್ತಿ ; ದಾಂಡಿಗ. [ಸಂ.]

**ಯಮದ್ವಿತೀಯೆ** (ನಾ). ಕಾರ್ತಿಕ ಶುದ್ಧ ಬಿದಿಗೆಯಂದು ಸೋದರಿಯರು ಅಣ್ಣತಮ್ಮಂದಿರನ್ನು ಬರಮಾಡಿಕೊಂಡು ಸತ್ಕರಿಸುವ ಹಬ್ಬ; ಭಾವಬಿದಿಗೆ : ಯಮಧರ್ಮ ತನ್ನ ಸೋದರಿಯಾದ ಯಮಿ ಅಥವಾ ಯಮುನೆಯ ಮನೆಗೆ ಈ ದ್ವಿತೀಯೆಯ ದಿವಸ ಬಂದಿದ್ದ . . . ಈ ಕಥಾ ಸಂಬಂಧದಿಂದ ಇದು ಯಮದ್ವಿತೀಯೆಯಾಗಿದೆ (ಶಾಹಬ್ಬ. ೦೫೦). 'ಭಾವಬಿದಿಗೆ' ನೋ. [ಸಂ. ಯಮದ್ವಿತೀಯಾ]

**ಯಮಧರ್ಮ** (ನಾ). = ಯಮ ೩ : ಜರುಗಿದ ಪಾಪಂಗಳೆಲ್ಲ ಅನ್ಯ ನರರೇನ ಬಲ್ಲರು ಯಮಧರ್ಮ ಬಲ್ಲ (ಪುರಂದ. ರಾ. ೨-೨೩-೩) ; ಯಮಧರ್ಮ ನಮ್ಮಂಥವರಿಗೆ, ನಿನ್ನ ಹಾಗೆ ಪ್ರಾಯದ ಹುಡುಗರಿಗೆ ಅಲ್ಲ (ಮರಪು. ೩೨೦). [ಸಂ.]

**ಯಮಧರ್ಮರಾಯ** (ನಾ). = ಯಮ ೩ : ಸುಮ್ಮನೆ ಕಾಲವ ಕಳೆವರೆ ಯಮಧರ್ಮರಾಯನ ದೂತರೆಳೆಯರೆ (ಪುರಂದ. ರಾ. ೨-೬ ಪಲ್ಲವಿ) ; ಯಮಧರ್ಮರಾಯನ ರಾಜಧಾನಿಯಾದ ಸಂಯಮನೀನಗರದಲ್ಲಿಂದ ಏನೋ ಒಂದು ಬಗೆಯ ಅಪೂರ್ವಉತ್ಸಾಹ (ಬಿಶಂಬಾ. ೦೬೩). [ಸಂ.]

**ಯಮನ** (ನಾ). ಹತೋಟಿ ; ನಿಗ್ರಹ. [ಸಂ.]

**ಯಮನಂದನ** (ನಾ). = ಯಮಜ ೨ : ಅನ್ನೆಗಮತ್ತ ಯಮನಂದನಂ ಮೂವರ್ ತಮ್ಮಂದಿರ ಬರವಂ ಕಾಣದೆ ಭಗ್ನಮನನಾಗಿ (ಶಂಪಭಾ. ೮-೯೦ ವ); ಯಮನಂದನನಾದಿಗಳಳಲಿ ನುಡಿದರು ದೈತ್ಯಜಯಸಂಶಯದ ಭೇದದಲಿ (ಕುಮ್ವಾಠ. ೦೦-೨೦). [ಸಂ.]

**ಯಮನಗರಿ** (ನಾ). ಯಮನ ಪಟ್ಟಣ ; ಯಮಪುರ : ಮಾನವೇಂದ್ರನು ಮಡಿದೊಡಾತನನೂನಲಕ್ಷ್ಮಿಯಲಕ್ಷ್ಮಿಯಾಯಿತ್ತಾ ನಗರಿಯಾ ಯಮನಗರಿಯೊಲಾಯ್ತು (ಬಿಕಪು. ೬೦-೩೬). [ಸಂ. ಯಮನಗರೀ]

**ಯಮುನಿ** (ನಾ). ಒಂದು ಬಗೆಯ ಸಸ್ಯ : ''ಗಣಿಗಣಿಕೆ ಯಮುನಿ [ಶಾಕಂ. ವರುಣ]ಯಕ್ಕು'' (ಪಂಗರಾ. ೪೨-೩೭).

[< ಸಂ. ಯಮಾನೀ = ಅಜವಾನ ]

**ಯಮನಿಕೇತನ** (ನಾ). ಯಮನ ನಿವಾಸ ; ಯಮಲೋಕ : ಈತನಂ ಯಮನಿಕೇತನಕ್ಕಟ್ಟುವುದೆ ನಯಂ (ಪಂಪಶಂ. ೨೪೪-೯). [ಸಂ.]

**ಯಮಪಾಕುಳ** (ನಾ). (ಅಲಂ) ಅತ್ಯಂತ ಹೇಸಿಗೆಯಾದುದು : ಬಸವನ ಹೆಸರ ಬಸದಿಯಂ ಕಟ್ಟಿಸಿ ತನ್ನ ಪಾತ್ರಕವ ಕಳೆದುಕೊಂಬವನ ದೇವರೆಂದು ಬೊಗಳುವ ನಾಯಿ ಬಾಯಿ ಯಮಪಾಕುಳ ತಪ್ಪದು (ಅಪುಂ. ೧೩೯-೭೩೦); ನಿಮಗೆ ಕಿರುಕುಳದೈವಂಗಳ ಸಮವೆಂದು ಬಗುಳುವನ ಬಾಯಿ ಯಮ ಪಾಕುಳ ತಪ್ಪದು (ಗಣಭಾ. ೬೯-೦). [ಯಮ + ಪಾಕುಳ]

**ಯಮಪಾಶ** (ನಾ). ಯಮನ ಹಗ್ಗ,— ಉರುಳು : ಯಮಪಾಶಂ ಪಗೆವಂಗೆ ಕಲ್ಪಲತೆ ಕೈಯಾಂತಂಗೆನಲ್ ಚಂಡವಿಕ್ರಮಮುಂ ಚಾಗದ ಪೆರ್ಮೆಯುಂ ಮೆಱೆಯುದನ್ಯಸ್ತ್ರೀ ಕಚಾಕರ್ಷಣ ಕ್ರಮಸಂಭೋಗ ವಿಳಾಸಮುಂ ಮೆಱೆವ ಬಾಹಾಸಂಗದಿಂ ಪಿಂಗದಿರ್ಕುಮೆ ವೀರಾಂಗನೆ (ಶಂಖಪು. ೧೨-೬೦) ; ಯಮಪಾಶದಿಂದ ತಪ್ಪಿಸಿಕೊಂಡವನು ಅಮರನಾಗುವನು (ಮಹಾಭಾ. ೯೫).

[ಸಂ.]

**ಯಮಪುತ್ರ** (ನಾ). = ಯಮಜ ೨ : ದೊರೆ ಯಮಪುತ್ರನಿರ್ದಿರವು ವಾಯುಜನಿರ್ದಿರವು . . . ಪುತ್ತ್ರನಿವಾಸದೊಳಿಲ್ಲಮಂತೆ ಮೆಯ್ಗರೆದಿರೆ (ಗದಾಯು. ೩-೩೦). [ಸಂ.]

**ಯಮಪುರ** (ನಾ). ಯಮನ ಪಟ್ಟಣ ; ಸಂಯಮನೀನಗರ : ಈ ದೊರೆಯಱಮಗನಂ ಮೃಷವಾದಂ ನೋಡೆಂದು ಧರ್ಮನಂ ಮೂದಲಿಸಲ್ ಪೋದಂ ಪುತ್ರನನಱಸಲ್ಪೋದನೆ ಯಮಪುರಕೆ ಮುಕ್ತಬಾಣಂ ದ್ರೋಣಂ (ಗದಾಯು. ೩-೨೫) ; ಮುಂದಣಸುರರು ಹಾದಿಯನು ಸವೆದರು ಯಮ ಪುರದತ್ತ ಪಯಣಕ್ಕೆ (ಕೌಶಿರಾ. ೨೦-೧೭). [ಸಂ.]

**ಯಮಬಲ** (ನಾ). ಅಧಿಕವಾದ ಶಕ್ತಿಯುಳ್ಳವನು ; ಮಹಾಬಲಶಾಲಿ : ಯಮಬಲನಪ್ಪ ಬಲಂ ... .ರಣೋದ್ಯಮನಾದಂ ಭುಜಬಲವದ್ದವಿತಾರಿಗೆ ಮಾರಿಜಾಕ್ಷನಭಿಮುಖನಾದಂ (ಶಾಂತೀಶ್ವ. ೯-೯೩). [ಸಂ.]

**ಯಮಬಾಧೆ** (ನಾ). ೧. ನರಕದಲ್ಲಿ ಯಮನು ಕೊಡುವ ಹಿಂಸೆ. ೨. (ಅಲಂ) ತೀವ್ರವಾದ ಹಿಂಸೆ. [ಸಂ. ಯಮಬಾಧಾ]

**ಯಮಭಾರ** (ನಾ). (ಅಲಂ) ಅತ್ಯಂತ ಭಾರವಾದುದು : ಆಯಾಸದಿಂದ ಯಮಭಾರವಾಗಿತ್ತು ಮೈ (ತಗಂ:ರ. ೬೨) ; ಎರಡು ಪಾಲಿನ ಹಸಿ ಮಿಾನು, ಯಮಭಾರ (ಹೊಸಕ್ಷಿ. ೫೦). [ಸಂ.]

**ಯಮಮಾಯೆ** (ನಾ). ಒಂದು ನರಕದ ಹೆಸರು: ಯಮಾನುಗ . . . ಅಚಿರಂತನವೆಂಬೈದು ಮಂತ್ರಿನರಕಂಗಳಿಂ ಸಂಪನ್ನಮಾಗಿ ಯಮಮಾಯೆ ಯೆಂ[ಶಾತಂ. ಮಾಯಾಖ್ಯವೆಂ]ಬರಸುನರಕವಿಹುದು (ವಿವೇಕ. ೧೫೩).

[ಸಂ. ಯಮಮಾಯಾ]

**ಯಮಯಾತನೆ** (ನಾ). ೧. = ಯಮಬಾಧೆ ೧. ೨.(ಅಲಂ) ತೀವ್ರವಾದ ಹಿಂಸೆ : ಕಡುಕಷ್ಟ : ಸೋಮ . . . ಯಮಯಾತನೆಯನ್ನು ಹಲ್ಲುಕಚ್ಚಿ ಸಹಿಸಿಕೊಂಡು ಮೇಲೆದ್ದು ಕಾಲ ಮೇಲೆ ನಿಲ್ಲಲು ಮಹಾಸಾಹಸ ಮಾಡಿದನು (ಕಾನೂರು. ೪೨೩). [ಸಂ. ಯಮಯಾತನಾ]

**ಯಮರಾಜ** (ನಾ). = ಯಮ ೩ : ಯಮರಾಜನದ್ಭುತತೇಜನಂ ಸರೋಜಾನನೆ ಜಾನದಿ ಬರಿಸೆ (ಶಂಶಭಾ. ೦-೦೦೯) ; ಯಮರಾಜಂ ತಂದೆ ಭೋಜಪ್ರಭವೆ ತನಗೆ ತಾಯ್ ಮಯ್ದುನಂ ವಾಸುದೇವಂ (ಗದಾಯು. ೩-೧೮). [ಸಂ. ಯಮರಾಜನ್]

**ಯಮಲ**, **ಯಮಳ** (ನಾ). ೧. ಜೊತೆ: ಜೋಡಿ: 'ಯಮಲಮರ್ದಲ' ಪದಾ. ೨. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ. **ಯಮಳ** : ೧. " ಯಮಳಂ=ಜೋಡು " (ರಾಜಶ್ವ. ೦೪೪). ೨. ಯಮಳಾಂಘ್ರಿ ದ್ವಿಯಕ್ಷಿ ಪಕ್ಷ ನೇತ್ರಂ . . . ಎರಡಜ ನಾಮಂ (ವ್ಯವಹಾ. ೯-೨). ೩. ಒಂದೇ ಹೆರಿಗೆಯಲ್ಲಿ ಹುಟ್ಟಿದ ಎರಡು ಮಕ್ಕಳು ; ಅವಳಿಜವಳಿ : ಬಿಸಜಾತಪ್ರಿಯ ಮಂತ್ರಿಗಳ್ ಬಳಯಾತ್ರರ್ ಮಧ್ಯಂಗಳೊಳ್ ನಿಂದೊಡಿಂದು ಸುತಂ ವೀಕ್ಷಿಸೆ ಕೂಡುಗುಂ ಯಮಳಪುಂಜನ್ಮಂ ಬಟಿಕ್ಕಲ್ಲಿ ಸೋಮು ಸಿತ್ತಾರರ್ ನಿಲೆ ಚಾಂದ್ರಿ ನೋಡೆ ಯಮಳಸ್ತ್ರೀಜನ್ಮಂ (ಜಾತಕ. ೩-೦೩) ; ಧರಿಸಿದಳು ದಿತಿ ಗರ್ಭವನು . . . ಕಾಲಾಂತರಕೆ ಪಡೆದಳು ಯಮಳರನು (ಸಿಭಾಗ. ೩-೮-೦). ೪. ಅವಳಿಮಕ್ಕಳಾದ ನಕುಲ ಮತ್ತು ಸಹದೇವ : ಅಡವಿಯ ಕಾಯಂ ಪಣ್ಣುಮನುದಿರ್ಚಿ ತಿಂದಗಲದೆ ನಿಂದೀ ಯಮಳರಾವ ತೆಱದಿಂ ನೋಯಿಸರಯ್ ನಿನ್ನ ನನ್ನಿಕಾಱನ ಮನಮಂ (ಶಂಶಭಾ. ೭-೪೮) : ಮಧ್ಯಮುದ ಪಾಂಡವನೈತರುತ . . . ಸರಸಿಯ ತೀರದಲಿ ಕೀಲಿಸಿದ ಮಗ್ಗುಲಲಿ ಯಮಳರೊಱಗಿರೆ ಕಂಡು ಮನದಲಿ ತಮವ ಹಿಡಿದನು (ಕುಮಾರ. ೨೩-೨೩). ೫. ಅವಳಿ ಮಕ್ಕಳಾದ ಲವ ಮತ್ತು ಕುಶ : ಜಾನಕಿಯ ಶುಶ್ರೂಷೆಯೊಳ್ನಿಂದು ಋಷಿಯ ಚಿತ್ತಕ್ಕೆ ಬಂದು ಯಮಳರಿರೆ ಕಂಡು ಸಂಪ್ರೀತಿಯಿಂ ತಾಪಸೋತ್ತಮನಿತ್ತನಿಷುಚಾಪಚರ್ಮಖಡ್ಗಂಗಳಂ (ಜೈಮಿಭಾ. ೨೦-೦). ೬. ಅಶ್ವಿನೀದೇವತೆಗಳು : ಎಲೈ ಯಮಳರೆ, ತಾವು ಹೇಳಿರುವ ವಿಧಾನವನ್ನು ಮಾಡುವುದು ತಮ್ಮಿಂದಲೇ ಸಾಧ್ಯ (ಮಹಾಭಾ. ೯೫). [ಸಂ.]

**ಯಮಲಮರ್ದಲ**, **ಯಮಳಮರ್ದಳ** (ನಾ). ಜೋಡಿಮದ್ದಳೆ ; ಮದ್ದಳೆಗಳ ಜೊತೆ : (೬). **ಯಮಳಮರ್ದಳ** : ಯಮಳಮರ್ದಳ — ಜವಳಿಮದ್ದಳೆ (ಕಮದ. ೨೪೨ ಶ್ಲೋ). [ಸಂ.]

**ಯಮಲಿ** (ನಾ). ಬಟ್ಟೆಯ ಎರಡು ತುಂಡುಗಳಿಂದ ರಚಿಸಿದ ಪೋಷಾಕು,—ಉಡುಪು. [ಸಂ. ಯಮಲೀ]

**ಯಮಲೋಕ** (ನಾ). ಯಮಧರ್ಮರಾಯನ ಲೋಕ : ನಾನು ಯಜ್ಞ ಬಲಿಯಾಗಿ ಯಮಲೋಕಕ್ಕೆ ಬಂದಿದ್ದೇನೆ (ಬಿಶಂಬಾ. ೧೯೦). [ಸಂ.]

**ಯಮಸಮಾಧಿ** (ನಾ). [ಯೋಗ] ಇಂದ್ರಿಯನಿಗ್ರಹದಿಂದ ಕೂಡಿದ ಸಮಾಧಿ : ಯಮಸಮಭೀಕರಂ ಯಮಸಮಾಧಿಯಿನೀಶ್ವರನಿಂ ವರಂ ವರಂ ಸಮನಿಪ ಬಾಣನೀ ಸುರರ್ಗೆ ಹೃದ್ಗತಬಾಣನೆ ಬಲ್ಲಿಂ (ಜಗಚಿ. ೧-೬೨).

[ಸಂ.]

**ಯಮಸುತ** (ನಾ). = ಯಮಜ ೨ : ಯಮಸುತನಣ್ಮ ಸತ್ತೆಯೆನುತುಂ ನಿಶಿತಾಸ್ತ್ರಮನುರ್ಚಿಕೊಂಡು ಪಕ್ಷಮನಿರದೆಚ್ಚೊಡೆ (ಶಂಶಭಾ. ೧೨-೦೧೭) ; ಯಮಸುತನಿಂಬುಕೆಯ್ವನೆಮಗಿನ್ನುಮೊಡಂಬಡು ಕಂದ ಸಂಧಿಯಂ ಸಮ ಗೊಳಿಸಲ್ಕೆ ಸಂಜಯನನಟ್ಟುವೆ (ಗದಾಯು. ೩-೮೫) ; ಯಮಸುತನ ರಾಣಿಗಕ್ಷಯವಸನವನಿತ್ತೆ (ಕಪಳ. ೦೩೬-೩). [ಸಂ.]

**ಯಮಹರ** (ನಾ). ಯಮನನ್ನು ಜಯಿಸಿದವನು ; ಶಿವ : ಅಸಮನೇತ್ರನು ಯಮಹರನು ಮೃತ್ಯುಭಯಹರನು (ಬಸವ. ೪೬-೩೩). [ಸಂ.]

**ಯಮಳ** 'ಯಮಲ' ನೋ.

**ಯಮಳಕಂಟಕ** (ನಾ). ಒಂದು ಬಗೆಯ ಸಸ್ಯ : " ಯಮಳಕಂಟಕಃ— ಮುಂಡಗಳ್ಳಿ " (ಓತಂ. ೧೩೨). [ ? ]

**ಯಮಳಮರ್ದಳ** ' ಯಮಲಮರ್ದಲ ' ನೋ.

**ಯಮಳಿ** (ನಾ). (ವಾಂತಿಯೊಡನೆ ಬರುವ) ಒಂದು ಬಗೆಯ ಬಿಕ್ಕಳು : ಆಹಾರವ ತೆಗೆದುಕೊಳ್ಳುವಲ್ಲಿ ವಮನಾಕಾರವಾಗಿ ಆಗುವ ಬಿಕ್ಕಳು ಯಮಳಿ ಎನಿಸಿಕೊಳ್ಳುವುದು (ಸಕವೈ. ೨೪೦). [ಸಂ. ಯಮಲಾ]

**ಯಮಾನುಗ** (ನಾ). ಒಂದು ನರಕದ ಹೆಸರು : ಯಮಾನುಗ . . . ತೀವ್ರ ಅಚಿರಂತನವೆಂಬೈದು ಮಂತ್ರಿನರಕಂಗಳಿಂ ಸಂಪನ್ನಮಾಗಿ ಮಾಯಾಖ್ಯ ವೆಂಬರಸುನರಕವಿಹುದು (ವಿವೇಕ. ೧೫೩). [ಸಂ.]

**ಯಮಾನುಜೆ** (ನಾ). ಯಮುನಾ ನದಿಯ ಹೆಸರು : "ಯಮಾನುಜೆಯೆನಲು ಯಮುನೆಯುಕ್ಕುಂ" (ಮಂಗರಾ. ೧೨೨-೧೧).
[ಸಂ. ಯಮಾನುಜಾ]

**ಯಮಾಸೆ** (ನಾ). ಯಮನ ದಿಕ್ಕು; ದಕ್ಷಿಣದಿಕ್ಕು : ಅಮರಾಸೆಯುನಜಹರಿ ಧನು ಯಮಾಸೆಯುಂ ವೃಷಭ ಕನ್ಯಕಾಮಕರಂ . . . ಆಳ್ಗಂ (ಜಾತಕ. ೧-೨೯). [ಯಮ + ಆಸೆ₁]

**ಯಮಿ₁** (ನಾ). ಇಂದ್ರಿಯನಿಗ್ರಹ ಮಾಡಿದವನು; ಸಂಯಮಿ ; ತಪಸ್ವಿ: ಯಮಿಗಳುಮಂ ಮೋಹಿಪ ವಿಷ್ಣುಮಾಯೆ ಮೋಹಿಸದೆ ಗೋಪರಂ (ಜಗ. ೩-೬೩) ; ಯಮಿಗಳ್ ವಿಶಾಖದತ್ತಪ್ರಮುಖರ್ . . . ತೆಂಕಗಿನರ್ (ವರ್ಧಮಾ. ೧೬-೮೮) ; ಯಮಿಗಳ ಅಂಗಳಕಸಮಂ ಸಮಯಂದಪ್ಪದೆ ತೊಡೆವುವು ಚಮರೀಮೃಗಂ (ಮಲ್ಲಿನಾ. ೩ ೯೯). [ಸಂ. ಯಮಿನ್]

**ಯಮಿ₂** (ನಾ). ಯಮುನಾ ನದಿ. [ಸಂ. ಯಮೀ]

**ಯಮುನಾನದಿ** (ನಾ). ೧. ಭಾರತದ ಪವಿತ್ರವಾದ ಒಂದು ನದಿಯ ಹೆಸರು : ಯಮುನಾನದೀತರಂಗಮಸಮಂಕಿ ವನಲತೆಯ ಮನೆಗಳಂ ಸೋಂಕಿ ವನ ಭ್ರಮಣಪರಿಶ್ರಮಮಂ ಮುನ್ನಮೆ ಕಳೆದುದು ಬಂದದೋದು ಮಂದಶ್ವಸನಂ (ಕಂಕಣಾ. ೩-೩೩) ; ಯಮುನಾನದಿಯೊಳ್ಪಾರ್ವಳೆವಮೃತಾಂಶು ಮರೀಚಿಜಾಳಮೆಂಬಿನೆಗಂ ತದ್ರಮಣಿಯ ಕಚಮಂ ಪಿಕ್ಕಿದಳಮಳಿನ ನಖನಿಕರದಿಂ ವಧೂಮಣಿಯೊರ್ವಳ್ (ಉದ್ಭಟ. ೮-೨೩). ೨. ಈಡಾ ಎಂಬ ನಾಡಿಯ ಹೆಸರು ; ಚಂದ್ರನಾಡಿ : ವಾಮಭಾಗದ ಈಡಾನಾಡಿಯೇ ಚಂದ್ರನಾಡಿಯೆಂದು ಯಮುನಾನದಿ [ಶಾಕಾಂ. ಯಮುನ ನಾಡಿ] ಎಂದು ಪೇಳಲ್ಪಡುವುದು (ಅಷ್ಟಾಂಗ. ೨೨೮-೩೮). [ಸಂ. ಯಮುನಾನದೀ]

**ಯಮುನೆ** (ನಾ). ೧. = ಯಮುನಾನದಿ ೧ : "ಕಾಳಿಂದಿ ದಿನಕರಾತ್ಮಜೆ ಯಮಾನುಜೆಯೆನಲು ಯಮುನೆಯುಕ್ಕುಂ" (ಮಂಗರಾ. ೧೨೨-೧೧) ; ಯಮುನೆಯ ಮಧ್ಯದಲಿ . . . ಸರಸತಿಯ ಸಂಗಮದಲಿ ಮೆರೆಯುವ ತ್ರಿವೇಣಿಯೆನಿಸುವ ತೀರದಲ್ಲಿ ವಟತರುಛಾಯೆಯಲ್ಲಿಹುದು ದೇವಋಷಿ ಮೌನಿಗಣ (ತುರಂಗ: ರಾ. ೩-೯೯-೩). ೨. = ಯಮುನಾನದಿ ೨ : ಈಡೆಯೆ ಯಮುನೆ ಪಿಂಗಳೆಯೆ ಗಂಗೆಯು (ಶೈವ. ೯-೯-೧). ೩. ದುರ್ಗೆಯ ಒಂದು ಹೆಸರು. [ಸಂ. ಯಮುನಾ]

**ಯಮೆ** (ನಾ). ಒಂದು ಬಗೆಯ ಬಳ್ಳಿ : "ಅಶ್ಮಪಿಟ—ಕೊಸರಿ, ಯಮೆ" (ವೈನಿ. ೩). [ ? ]

**ಯಯು** (ನಾ). ೧. ಕುದುರೆ : "ಅರ್ವಾ . . . ತುರಂಗಃ. ಯಯುಃ, ಘೋಟಕಃ, ಹಯಃ, ವಾಹಃ — ಈ ೧೪ ಕುದುರೆ" (ಹಲಾಯು. ೬೨-೨೬೨). ೨. ಅಶ್ವಮೇಧಯಾಗಕ್ಕೆ ಅರ್ಹವಾದ ಕುದುರೆ ; ಯಜ್ಞಾಶ್ವ : "ಯಯುವೆಂಬುದಶ್ವಮೇಧದ ಹಯಮುಂ ಸಾಮಾನ್ಯ ಹಯಮುಮಕ್ಕುಂ" (ಶಬ್ದಮಣಿ. ೧೯೦-೧೩೧). [ಸಂ.]

**ಯಲ್ಲಕ** (ನಾ). ಆತುರ ; ಕಾತರ ; ಉತ್ಕಂಠೆ : ಯಲ್ಲಕಂ ಜಗುಳಲ್ಕೆ ಮಾರಿಕೆಯೆಬ್ಬು ಪೇಣ್ಕಶಿಲೇಬೆಯಂ ಮೆಲ್ಲಸಂಚಿತ ಲಜ್ಜೆಯಿಂ ನಡೆನೋಡಲ್ (ಉದ್ಭಟ. ೭-೭೩). [< ಸಂ. ಆಯಲ್ಲಕ]

**ಯವ** (ನಾ). ೧. ಒಂದು ಬಗೆಯ ಗೋದಿ ; ಜವೆಗೋದಿ : ಮೃಣಾಳನಾಳದೆನಿಲ್ ಸಮೆದ ಸರಿಗೆಗಂಕಣಂಗಳುಮಂ ಯವಕಳಿಕೆಗಳೊಳ್ ಸಮೆದ ಕಟಿಸೂತ್ರಮುಮಂ . . . ತೊಟ್ಟು (ಕಂಕಣಾ. ೩-೬ ಪ). ೨. ಉದ್ದವನ್ನು ಅಳೆಯುವ ಒಂದು ಪ್ರಮಾಣ : ಅಂಗುಲದ ಎಂಟನೆಯ ಒಂದು ಭಾಗ : ಯೂಕಮೆಂಟಾಗಲೊಂದು ಯವವೆನಿಸುವುದು. ಆ ಯವವೆಂಟಾಗಲೊಂದುತ್ತಮ ಮಾನಾಂಗುಳಮೆನಿಸುವುದು (ಶಿವೇಶ. ೩೨೦) : ಎಂಟು ಜೂಗಳಿಂದ ಒಂದು ಯವ (ಯವ— ಮಧ್ಯ) ಎಂಟು ಯವಗಳಿಂದ ಒಂದು ಅಂಗುಲವಾಗುತ್ತದೆ (ಶ್ರೀಪಶ. ೩೦೮). ೩. ಒಂದು ದೇಶದ ಹೆಸರು : ಲಾಳ ಚೋಳ ವರಾಳ ಯವ ಬಂಗಾಳ . . . ವಿದರ್ಭಧರಣೀಪಾಲತತಿ ಸಂದಣಿಸಿಮುದು ಸಾಕೇತನಗರಿಯಲಿ (ಕೂರರಾ. ೧-೭ ೧೮). ೪. [ಭೌತಪ] ಮಧ್ಯದಲ್ಲಿ ಬಾಗುಳ್ಳ ಗಾಜಿನ ಬಿಲ್ಲೆ ; ಅಂತರ್ವಕ್ರ, ಬಹಿರ್ವಕ್ರ ಅಥವಾ ಪೀನಮಧ್ಯವಾದ ಗಾಜು ; ಲೆನ್ಸು : ಗಾಜಿನ ಕೆಲಸ ಮಾಡುವವರು ಯವಗಳನ್ನು (lenses) ಜೋಡಿಸಿ, ಪದಾರ್ಥಗಳು ದೊಡ್ಡದಾಗಿ ಕಾಣುವ ಒಂದು ಉಪಾಯವನ್ನರಿತರು (ಗಡತ. ೧೦೨). ೫. [ಸಾಮುದ್ರಿ] ಅಂಗೈ ಮೇಲೆ ಜವೆಗೋದಿಯಾಕಾರದಲ್ಲಿ ಇರುವ ಸುದೈವಸೂಚಕವಾದ ಚಿಹ್ನೆ. ೬. [ಜ್ಯೋತಿ] "ಆಕೃತಿಯೋಗಗಳಲ್ಲಿ ಒಂದು [ಲಗ್ನ ಮತ್ತು ಏಳನೆಯ ಸ್ಥಾನಗಳಲ್ಲಿ ಪಾಪಗ್ರಹಗಳೂ ನಾಲ್ಕು ಮತ್ತು ಹತ್ತನೆಯ ಸ್ಥಾನಗಳಲ್ಲಿ ಶುಭಗ್ರಹಗಳೂ ಇರುವುದು]" (ಜಾತಕ. ಕಂ. ೩-೩೯೯) : ಉದಯದೊಳಸ್ತದೊಳ್ ನಿಲೆ ಶುಭಗ್ರಹಮಂಗ್ರಗಣಂ ಚತುರ್ಥಕರ್ಮದೊಳಿರೆ ವಜ್ರಯೋಗಮದು ತದ್ವಿಪರೀತತೆಯಿಂ ಯವಂ (ಜಾತಕ. ೧೩-೭). 'ಯವಯೋಗ' ಪರಾ. [ಸಂ.]

**ಯವಕ** (ನಾ). ೧. = ಯವ ೧ : (*). ೨. (ಜವೆಗೋದಿಯ ಬೂದಿಯಿಂದ ಸಿದ್ಧಪಡಿಸುವ) ಒಂದು ಬಗೆಯ ಔಷಧಿದ್ರವ್ಯ : ಪೆಟ್ಲುಪ್ಪು : "ಯವಜಃ, ಯವಕಃ, ಯವಾಹ್ವ ... ಈ ಮೂರುಂ ಯವಕ್ಷಾರ" (ವೈನಿ. ೧೩೦). [ಸಂ.]

**ಯವಕಾರ** (ನಾ). ಒಂದು ಬಗೆಯ ಸಸ್ಯ (?) : "ಕಾಸಹಾ – ತಾಳೀಸಪತ್ರ, ಯವಕಾರ, ಎಲಹುರಿ" (ವೈನಿ. ೨೯). [ ? ]

**ಯವಕೆ** (ನಾ). = ಯವ ೧ : "ಯವ್ಯಂ, ಯವಕ್ಯಂ, ಷಷ್ಟಿಕ್ಯಂ– ಇನ್ನು ಕ್ರಮವಾಗಿ . . . ಯಾವ ಭೂಮಿ ಯವೆಗಳು, ಯವಕೆಗಳು, ಷಷ್ಟಿಕೆಗಳು ಬೆಳೆಯುವ ಕ್ಷೇತ್ರವಾಗಿದೆಯೋ ಅದರ ಪೆಸರುಗಳು" (ಸಿದ್ಧಾಂತ. ೨೭೩).
[ಸಂ. ಯವಕ]

**ಯವಕ್ಷಾರ** (ನಾ). (ಜವೆಗೋದಿಯ ಬೂದಿಯಿಂದ ಸಿದ್ಧಪಡಿಸುವ) ಒಂದು ಬಗೆಯ ಔಷಧಿದ್ರವ್ಯ; ಪೆಟ್ಲುಪ್ಪು : "ಯವಭಸ್ಮೋದ್ಭವಂ.. ಯವಕ್ಷಾರ" (ವೈನಿ. ೧೩೦) ; ಹಿಪ್ಪಲ್ಯಾದಿಗಣದ ಕಷಾಯವನ್ನು ಯವಕ್ಷಾರ ಬೆರಸಿ ಸೇವಿಸೆ ಶ್ಲೇಷ್ಮಜ್ವರ ಪರಿಹಾರವಾಗುವುದು (ಕಲ್ಯಾ. ೯೯). [ಸಂ.]

**ಯವಜ** (ನಾ). = ಯವಕ್ಷಾರ : "ಯವಜಃ, ಯವಕಃ, ಯವಾಹ್ವ... ಈ ಮೂರುಂ ಯವಕ್ಷಾರ" (ವೈನಿ. ೧೩೦). [ಸಂ.]

**ಯವನ** (ನಾ). ೧. ವೇಗ; ಶೀಘ್ರತೆ. ೨. ವೇಗವಾಗಿ ಓಡುವ ಕುದುರೆ. ೩. ವಿದೇಶೀಯನಾದ ವ್ಯಕ್ತಿ ; ಪರಂಗಿಯವನು : "ಯವನಃ = ಪರಂಗಿ" (ಕಾಲ್ಯ. ೧೬೩). ೪. ಗ್ರೀಸ್ ದೇಶದವನು ; ಗ್ರೀಕ : ಇದರಲ್ಲಿ ಯವನರು, ಕಾಂಭೋಜರು, ಪಲ್ಲವರು . . . ಆಂಧ್ರರ (X ೪೮) ಹೆಸರು ಬರುವುದರಿಂದ ಇದು ಕ್ರಿ. ಪೂ. ೩ನೆಯ ಶತಮಾನದ ಒಂದೆ ರಚಿತವಾಗಿರಬೇಕೆಂದು . . . ಅಭಿಪ್ರಾಯಪಡುತ್ತಾನೆ (ಪ್ರಾರರ. ೩೨). ೫. ತುರುಕ ; ಮುಸಲ್ಮಾನ : "ತುರುಕಂ ತುರುಷ್ಕಂ ಯವನ [ಶಾಕಾಂ. ಯಾವ]ನೆನೆ ಜೋನೆಗಂ" (ಮಂಗರಾ. ೧೧೨ ೭) ; ಈ ವೀರ ಯುವಕನನ್ನು ಯವನ ಯುದ್ಧಕ್ಕೆ ಕರೆದುಕೊಂಡು ಹೋಗುವೆನು (ಕೋಹಿಮಾ. ೧೧). ೬. ಒಂದು ಬಗೆಯ ಧೂಪದ್ರವ್ಯ : "ಯವನಃ– ಸಜ್ಜರಸ, ಓವ" (ವೈನಿ. ೧೩೦). ೭. (ಅಲಂ) ಅಧರ್ಮಿ: ಕ್ರಿಯೆಯಿಲ್ಲದ ಪ್ರಸಾದಿ ಯವನ (ಶೂನ್ಯ. ೯. ೧೧೩-೨೩೭). [ಸಂ.]

**ಯವನಕ** (ನಾ). ವಿದೇಶೀಯನಾದ ವ್ಯಕ್ತಿ ; ಯವನ: ಸಾಗಲವೆಂಬ ಹೆಸರಿನ ಯವನಕರ ನಗರವುಂಟು (ಬುದ್ಧಶ. ಬುದ್ಧಂ. ೧೭). [ಸಂ.]

**ಯವನಾನಿ** (ನಾ). ೧. ಯವನರ ಲಿಪಿ. ೨. ಪರಂಗಿ ಹೆಂಗಸು ; ಯವನ ಸ್ತ್ರೀ : "ಯವನಾನೀ = ಪರಂಗಿತಿ" (ಕಾಲ್ಯ. ೧೬೩).
[ಸಂ. ಯವನಾನೀ]

**ಯವನಾಲ**, ಯವನಾಳ (ನಾ). ೧. ಒಂದು ಬಗೆಯ ತೃಣಧಾನ್ಯ : (?). ೨. ಜೋಳ. **ಯವನಾಳ** : ೨. "ಯವನಾಳವಮಾ ಕಳಿಕವೆನೆ ಜೋಳಮಕ್ಕುಂ" (ಮಂಗರಾ. ೧೧೧-೩). [ಸಂ.]

**ಯವನಾಳ** 'ಯವನಾಲ' ನೋ.

**ಯವನಿ** (ನಾ). ೧. ಯವನರ ಹೆಂಗಸು : ಯವನೀಮುಖಾಬ್ಜಮಧುಪಾಟಪಮಂ ಸೇನಾನಿ ಕಳೆದಂ (ಶಾಂತಿ. ೧೧-೨೨) ; ರಘುರದರ್ಘುಲ್ಲರಿಯು ಜವನಿಕೆಯೊಂತು ನರ್ತಿಸುವ ಯವನಾಯುವನಿಯು ಕರದ ಪೊಂಜುರಿಗೆಯಂತೆ ಸುಮನೋಜ್ಞಪರಾಮುದಾ . . . ಮುಂಗಾರ್ ಮೊದಲ್ (ಶ್ರೀರಾಮ. ೩೯೦-೩೬). ೨. ಪರದೆ ; ಜವನಿಕೆ ; ತೆರೆ. [ಸಂ. ಯವನೀ]

**ಯವನಿಕೆ** (ನಾ). ೧. = ಯವನಿ ೧. ೨. ಪರದೆ ; ತೆರೆ ; ಜವನಿಕೆ : "ಅಪಟೀ . . . ಯವನಿಕಾ. ತಿರಸ್ಕರಿಣೀ– ಈ (೫) ತೆರೆ" (ಹಲಾಯು. ೩೨-೧೩೯) ; ನವಮೇಘಧ್ವನಿ ಪುಷ್ಕರಧ್ವನಿ ಲಸತ್ತಾರಾಳಿ ಪುಷ್ಪೋಪಹಾರವಿಲಾಸಂ ರುಚಿರಾಂಬುದಂ ಯವನಿಕಾವಿನ್ಯಾಸಂ (ಅರ್ಹ. ೬-೭೨) ; ಗಗನಗಂಗಾತಟೋದ್ಯತ್ತ್ರವಾಳೀವನಪೋ ವಿಪ್ರುಸ್ಪಟೀಕರ್ಬುರಯ[ಶಾಕಾಂ. ಜ]ವನಿಕೆಯೋ . . . ಎನೆ ನೆಗದುವಳಿರ್ಸ್ಯಾಪುಳಂ ಮೇಘಪಾಳಂ (ಚಂದ್ರ. ೯-೩೦). [ಸಂ. ಯವನಿಕಾ]

**ಯವಫಲ** (ನಾ). ೧. ಬಿದಿರು : "ವಂಶಃ . . . ಯವಫಲಃ, ವೇಣುಃ, ಮಸ್ಕರಃ. ತೇಜನಃ—೧೦ ಬಿದುರು ಹೆಸರುಗಳು" (ಸಿದ್ಧಾಂತಿ. ೧೯೯). ೨. ಕೊಡಸಿಗೆ ; ಕುಟಜ ವೃಕ್ಷ. ೩. ಪ್ಲಕ್ಷವೃಕ್ಷ. ೪. ಈರುಳ್ಳಿ. [ಸಂ.]

**ಯವಯೋಗ** (ನಾ). [ಜ್ಯೋತಿ] "ಲಗ್ನ ಮತ್ತು ಸಪ್ತಮ ಸ್ಥಾನಗಳಲ್ಲಿ ಪಾಪಗ್ರಹಗಳೂ ಚತುರ್ಥ ಮತ್ತು ದಶಮ ಸ್ಥಾನಗಳಲ್ಲಿ ಶುಭಗ್ರಹಗಳೂ ಇದ್ದರೆ ಯವಯೋಗ" (ಜಾತಕ. ೧೪-೬ ಅವ). 'ಯವಯೋಗಜ' ಪರಾ. [ಸಂ.]

**ಯವಯೋಗಜ** (ನಾ). [ಜ್ಯೋತಿ] ಯವಯೋಗದಲ್ಲಿ ಹುಟ್ಟಿದವನು : ಮನುಜಂ . . . ಯವಯೋಗಜಂ ಶಿಶುತೆಯೊಳ್ ವೃದ್ಧತ್ವದೊಳ್ ದುಃಖಭಾಜನನಕ್ಕುಂ (ಜಾತಕ. ೧೪-೧೬). [ಸಂ.]

**ಯವಸ** (ನಾ). ಮೇವು ; ಹುಲ್ಲು : "ಘಾಸಃ, ಯವಸಃ–ಈ ೨ ದಮಸಂ" (ಹಲಾಯು. ೩೨-೩೬) ; ವನದಲಿ ಪುಲಿಯಿರಲು ಗೋಧನ ಕುಲಕೆ ಯವಸಾಂಬುಗೋಚರವೆ (ಕುಮಾರ. ೩-೯). [ಸಂ.]

**ಯವಹಿತ್ರ** (ನಾ). ಒಂದು ಬಗೆಯ ಔಷಧೀದ್ರವ್ಯ : ಯವಹಿತ್ರ. ಚಿಕರ್ಮದ ಈ ಎರಡನ್ನು ಜೇನುತುಪ್ಪದಲ್ಲಿ ಹಚ್ಚಲು ಇರುಳುಗಣ್ಣು ಮಾಣ್ಗುಂ (ಅಶ್ವ. ೬೩). [ ? ]

**ಯವಾಗು** (ನಾ). ಬಾರ್ಲಿ ಮುಂತಾದ ಧಾನ್ಯದ ಅಥವಾ ಅನ್ನದ ಗಂಜಿ : "ಗಂಜಿ ಯವಾಗು" (ಚಸ್ತುಕೋ. ೯೨-೯) ; "ಯವಾಗುವೆನೆ ಗಂಜಿ" (ಮಂಗರಾ. ೬೩-೧). [ಸಂ. ಯವಾಗೂ]

**ಯವಾಗ್ರಜ** (ನಾ). = ಯವಕ್ಷಾರ : "ಯವಕ್ಷಾರಃ, ಯವಾಗ್ರಜಃ, ಪಾಕ್ಯಃ – ೩ ಯವಕ್ಷಾರದ ಪೆಸರುಗಳು" (ಸಿದ್ಧಾಂತಿ. ೩೧೬). [ಸಂ.]

**ಯವಾನಿ** (ನಾ). ೧. ಅಜವಾನ ; ಓಮ : "ಜೋಪಾರನಾಮುಂ ಯವಾನಿಯೆನಲ್" (ಮಂಗರಾ. ೯೦-೩೯) ; "ಯವಾನೀ–ಓವ. ರಸದಾಳಿ. ಅಜಮೋದ" (೬ಕಂ. ೧೩೦). ೨. ತುರುಕರ ಹೆಣ್ಣು ; ಯವನ ಸ್ತ್ರೀ : "ಯವಾನೀ–ತುರುಕಿತಿ" (ಶಾಕಕ್ಕ. ೧೬೩). [ಸಂ. ಯವಾನೀ]

**ಯವಾನಿಕೆ** (ನಾ). = ಯವಾನಿ ೧ : "ಅಜಮೋದಾ, ಉಗ್ರಗಂಧಾ, ಬ್ರಹ್ಮದರ್ಭಾ, ಯವಾನಿಕಾ–೪ ಅಜಮೋದದ ಹೆಸರುಗಳು. ಓಮು ಕಾಳು" (ಸಿದ್ಧಾಂತಿ. ೧೯೩). [ಸಂ. ಯವಾನಿಕಾ]

**ಯವಾಸ** (ನಾ). ೧. ಒಂದು ಬಗೆಯ ಸಸ್ಯ : ನಸುಗುನ್ನಿ ; "ಯಾಸಃ, ಯವಾಸಃ . . . ದುರಾಲಭಾ – ೧೨ ತೀಟಕಸಂಧಿ ಹೆಸರುಗಳು" (ಸಿದ್ಧಾಂತಿ. ೧೩೩). ೨. ಒಂದು ಬಗೆಯ ಖದಿರವೃಕ್ಷ. ೩. ಬೇವಿನ ಮರ : "ಯವಾಸಃ – ಬೇವು" (೬ಕಂ. ೧೩೦). [ಸಂ.]

**ಯವಿಷ್ಠ** (ನಾ). (ಅಣ್ಣತಮ್ಮಂದಿರಲ್ಲಿ) ಎಲ್ಲರಿಗಿಂತ ಕಿರಿಯವನು : ಕಿರಿಯ ಸಹೋದರ. [ಸಂ.]

**ಯವೀಯಾಂಸ** (ನಾ). = ಯವಿಷ್ಠ : ಯವೀಯಸ್–ಯವೀಯಾಂಸನು. ಯವೀಯಸ್ಸು. ಯವೀಯನು (ಹೊಸಗ. ೧೧೬). [< ಸಂ. ಯವೀಯಸ್]

**ಯವೆ**[1] (ನಾ). ಜವೆಗೋದಿಯನ್ನು ಬೆಳೆಯುವ ಭೂಮಿ : "ಜವೆಯ ಕೆಯ್ ಯವೆಯಕ್ಕು" (ಮಂಗರಾ. ೨೮-೩). [< ಸಂ. ಯವ್ಯ]

**ಯವೆ**[2] (ನಾ). ೧. ಒಂದು ಬಗೆಯ ಗೋದಿ ; ಜವೆಗೋದಿ : "ಯವೆಯೆನಲು ಜವೆ" (ಮಂಗರಾ. ೧೧೨-೩) ; ಅಕಳಗೆಮ್ಮೆಯಂ ಯ [ಶಾಕಾಂ. ಜ]ವೆಗೆ ಗೋದುವೆಯುಂ ತುರಗಕ್ಕೆ ಕತ್ತೆಯುಂ . . . ಪ್ರತಿ ಮಾಡಿದನೋರ್ವ ಜೇಯನೆಂದೇಕೆಂಪೊ ಮೂಢರೊಳ್ತರ್ (ಸಮಯ. ೧೧ ೧೨೦) ; ಯ[ಶಾಕಾಂ. ಜ]ವೆ ದಿವ್ಯೌಷಧಿ ಪಾರಿಜಾತಕುಸುಮಂ ಸಿದ್ಧಾರ್ಥವಾದಾರ್ಕಕ್ಷತಂ . . . ಎಂಬಿವಜಿಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುದು (ಜಗ. ೧೧-೯೬) ; ಯವೆಯನ್ನು ಚಳಿಸಿ ಅಕ್ಕಿ ಮಾಡಿ ಕುದುರೆಗೆ ತಿನ್ನಿಸುವುದು (ಅಶ್ವಶಾ. ೩೨-೧). ೨. ಉದ್ದವನ್ನು ಅಳೆಯುವ ಒಂದು ಪ್ರಮಾಣ; ಅಂಗುಲದ ಎಂಟನೆಯ ಒಂದು ಭಾಗ : ಮೂಜಿುತಿಲಕೊಂದು ಯವೆ . . . ಆ ಯವೆ ಮೂಱ ಸೇರಿಸೆ ತದಂಗುಲವ ನಾಲ್ಕು ಕೂಡಲು ಮುಷ್ಟಿ (ಶಾಸ್ತ್ರ. ೩೨-೯); ಆ ಯೂಕವೆಂಟಾದರೆ ಒಂದು ಯವೆಯೆನಿಸಿಕೊಂಬುದು (ಜಕಶಾ. ೬೮-೯). ೩. ಒಂದು (ಗೋದಿ ಕಾಳಿನಷ್ಟು) ತೂಕದ ಪ್ರಮಾಣ : ಯವೆ ನಾಲ್ಕು ಐದಾರು ಸವನಿಸಿದ ಗಾತ್ರದಿಂದವ ತವಕ ತೂಕ ತಂಡಿಲ ಪ್ರಮಾಣದೊಳಿರಲು ತವೆ ಮೌಲ್ಯ ಪನ್ನೆರಡು ಪದಿನಾರು ವಿಂಶತಿಯೊಳನುವರಿಸಿ ಪೇಳ್ವುದದನು (ರತ್ನಶಾ. ೩-೧೬). [ಸಂ. ಯವ]

**ಯವ್ಯ** (ಗು). ೧. ಜವೆಗೋದಿಯನ್ನು ಬೆಳೆಯಲು ಯೋಗ್ಯವಾದ.– ಹಿತವಾದ. ೨. ಜವೆಗೋದಿಯನ್ನು ಬಿತ್ತಿದ. (ನಾ). ೩. ಜವೆಗೋದಿಯನ್ನು ಬೆಳೆಯುವ ಭೂಮಿ : "ಜವೆಯ ಕೆಯ್ ಯವ್ಯವೆಂಬುದು" (ಹಲಾಯು. ೨೬-೬); ಲೀಲೆಯಿನಪಱ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗಂ ಮಾಷ್ಯಂ ಶಾಲೇಯಂ ವ್ರೈಹೇಯಂ ತೈಲೀನಂ ಕೌದ್ರವೀಣಮೌಮ್ಯಂ ಯವ್ಯಂ (ಚಂದ್ರ. ೧-೯೧). [ಸಂ.]

**ಯವ್ವನ** (ನಾ). ಹರಯ ; ಪ್ರಾಯ ; ತಾರುಣ್ಯ : ನಿಮ್ಮ ರೂಪುಯವ್ವನಮುಂ ಲಾವಣ್ಯಮುಮಂ ಕಂಡು (ಚಾವುಂ. ೬೬-೧೧); ಆ ಯವ್ವನದೊಳವರ ಚರಿತಂ ಕರಂ ಪೊಸತು (ಅನುಭ. ದೀ. ೯-೩). 'ಜವ್ವನ' ಪರಾ. [ < ಸಂ. ಯೌವನ]

**ಯವ್ವನಶಾಲಿ** (ನಾ). ತರುಣ ; ಯುವಕ : ದೊಡ್ಡವಂಶದಲ್ಲಿ ಹುಟ್ಟಿ ಯವ್ವನಶಾಲಿಗಳಾಗಿರುವರನೇಕರು . . . ಅಮಿತವ್ಯಯ ಮಾಡಿ ದುಷ್ಕೃತ್ಯಕ್ಕೀಡಾಗುವರಲ್ಲವೇ ? (ಕಬೀ. I. ೨). [ < ಸಂ. ಯೌವನಶಾಲಿನ್]

**ಯವ್ವನಿಗ** 'ಜವ್ವನಿಗ' ನೋ.

**ಯವ್ವನಿಗತನ** (ನಾ). ಹರಯ ; ತಾರುಣ್ಯ : ಯವ್ವನಿಗತನದಲ್ಲಿಯೇ ಆ ಜಾತಿಗೆ ರಾಸಭವೆಂದೇ ಅಭಿಧಾನವಹುದು (ಮಂಕ್ರಿ. ೧೧-೬).
[ಯವ್ವನಿಗ (< ಜವ್ವನಿಗ) + – ತನ]

**ಯವ್ವನೆ** 'ಜವ್ವನೆ' ನೋ.

**ಯಶ** (ನಾ). ೧. ಖ್ಯಾತಿ ; ಕೀರ್ತಿ : ಪೊಟಲೊಳ್ ನೆಗಟ್ಟ ಪಂಡಿತರ್ಕಳೊಡನೆ ವಾದಂಗೆಯ್ದು ಗೆಲ್ದು ದಶದಿಶೆಗಳೊಳೆಲ್ಲಂ ತನ್ನ ಪಾಂಡಿತ್ಯದ ಯಶಮಂ ಪಸರಿಸಿ (ವಡ್ಡಾರಾ. ೬೯-೨೦): ಕಾರ್ಯಕ್ಕೆ ಯಶವು

ದೊರೆತಾಗ ಸಂತೋಷಸಾಗರದಲ್ಲಿ ಮಿಾಯುವುದು . . . ಮಂಕು ಮಾನವ ಬುದ್ಧಿ (ವರ್ಮಸಾ. ೦೦೬). ೨. ಗೆಲವು : ವಿಜಯ : ' ಯಶಂಬಡೆ ' ಪರಾ. [ಸಂ. ಯಶಸ್]

**ಯಶಂಬಡೆ** (ಕ್ರಿ). ಗೆಲವನ್ನು ಗಳಿಸು ; ವಿಜಯಿಯಾಗು : ಒಡನೆಯುವ ರೊಂದೆ ಮಾರ್ಬಲವಿಡೆದುಡಗದೆ ಪೊಗಟೆ ತಾಗಿ ತಳ್ಳಿಟಾದು ಯಶಂ ಬಡೆದಂ ಗೊಗ್ಗಿ (ಎಕ. XI, ಹಳ್ಳಿ. ೬-೩ : ಶು. 925). [ಯಶ + ಪಡೆ]

**ಯಶಃಪಟಹ** (ನಾ). ಒಂದು ಬಗೆಯ ವಾದ್ಯ ; ಢಕ್ಕೆ : ಮದನಯಶಃ ಪಟಹಧ್ವನಿ ಪುದಿಯೆ ವಿಯಚ್ಚರನ ಕರ್ಣಮುಂ ಹೃದಯಕ್ಕೆಯ್ದುದುದಿಲ್ಲ ದಿವ್ಯವಚನಂ (ಶಂರಾನಾ. ೬-೯೯). ' ಯಶೋದುಂದುಭಿ ' ಹೋ. [ಸಂ.]

**ಯಶಃಪಿಂಡ** (ನಾ). ೧. ಕೀರ್ತಿಯ ಸಮೂಹ. ೨. ಅತಿಶಯವಾದ ಕೀರ್ತಿಯನ್ನು ಪಡೆದವನು : ವಿಪುಳಯಶಃಪಿಂಡಂ ಪುಣ್ಯಪುಂಜಮಾ ಕ್ಷತ್ರಧಾಮಧಾಮಂ ತಾನಾ ನೃಪಸುತಂ (ಅರಿಶು. ೮-೪೪). [ಸಂ.]

**ಯಶಸ್ಕರ** (ಗು). ೧. ಕೀರ್ತಿಯನ್ನು ತರುವಂತಹ ; ಶ್ರೇಯಸ್ಕರವಾದ. (ನಾ). ೨. ಶ್ರೇಯಸ್ಕರವಾದುದು : ಅಪವಾದವೆನಿಪುದು ಕಡುತಾಪ ವಾದರು ಅದು ನಮಗತಿ ಯಶಸ್ಕರವು (ಇಂಶಾಕ. ೨೨೩-೦೩). [ಸಂ.]

**ಯಶಸ್ಕೀರ್ತಿ** (ನಾ). [ಜೈನ] ಎಪ್ಪತ್ತೆರಡು ನಾಮಪ್ರಕೃತಿಗಳಲ್ಲಿ ಒಂದು; ಜೀವನಿಗೆ ಲೋಕದಲ್ಲಿ ಕೀರ್ತಿ ಹಬ್ಬುವಂತೆ ಮಾಡುವ ಪ್ರಕೃತಿ : ಅನ್ಯತರ ವೇದನೀಯ . . . ಬಾದರಯಶಸ್ಕೀರ್ತಿರುಚ್ಚೈರ್ಗೋತ್ರ ತೀರ್ಥಕರ ನಾಮಂಗಳೆಂಬ ಪದಿಮೂಜುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಅರಿಶು. ೦೬-೯೯ ವ) ; ವೇದನೀಯ . . . ಯಶಸ್ಕೀರ್ತ್ಯಯಶಸ್ಕೀರ್ತಿ ನಿರ್ಮಾಣ ನೀಚೈರ್ಗೋತ್ರಂಗಳೆಂಬೆಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ (ಶಂರಾಪಪ. ೦೬-೮೦ ವ). [ಸಂ.]

**ಯಶಸ್ತಂಭ** (ನಾ). ಗೆಲುವಿನ ಸ್ಮಾರಕವಾಗಿ ನಿಲ್ಲಿಸುವ ಕಂಬ ; ವಿಜಯಸ್ತಂಭ : ನೀಮುಂ . . . ಇಲ್ಲಿಯೆ ಬೀಡುವಿಟ್ಟು ನಿಜಸಿಸಲ್ವೆಟ್ಟುಂ ಯಶಸ್ತಂಭಮಂ (ಧಕ್ಷ್ಮಿ. ೬-೦೬). [ಸಂ.]

**ಯಶಸ್ವಿ** (ಗು). ೧. ಶ್ರೇಯಸ್ಸನ್ನು ಪಡೆದ ; ಹೆಸರುವಾಸಿಯಾದ. ೨. ಅತ್ಯುತ್ತಮವಾದ. (ನಾ). ೩. ಗೆಲುವನ್ನು ಪಡೆದುದು ; ಜಯಪ್ರದವಾದುದು : ನಮ್ಮ ಚಲಚಿತ್ರಗಳಲ್ಲಿ ಹತ್ತು ಹದಿನೈದಕ್ಕೆ ಕಡಿಮೆ ಹಾಡುಗಳಿಲ್ಲದಿದ್ದಲ್ಲಿ ಅವು ಯಶಸ್ವಿಯಾಗಲು ಸಾಧ್ಯವೇ ಇಲ್ಲ (ಶಾರದ. ೩೩೩). [ಸಂ. ಯಶಸ್ವಿನ್]

**ಯಶಸ್ಸು** (ನಾ). ಕೀರ್ತಿ ; ಖ್ಯಾತಿ : ಯಶಃ ಯಶಸ್ಸು ; ತೇಜ, ತೇಜಸ್ಸು ; ವಯ, ವಯಸ್ಸು (ಕಮಪ. ೮೬ ಸೃಯೋ) ; ಕವಿಗಳು ಬೆಳಗಿದ ರಾಜರ ಯಶಸ್ಸು ಸ್ಥಿರವಾಗಿರುತ್ತದೆ (ಶಾರದ. ೪೪೩). [ಸಂ. ಯಶಸ್]

**ಯಶೋದುಂದುಭಿ** (ನಾ). ಯಶಸ್ಸನ್ನು ಸಾರುವ ವಾದ್ಯ ; ವಿಜಯ ದುಂದುಭಿ : ಪ್ರಕಟ ಯಶೋದುಂದುಭಿ ಸಿಂಹಾಸನಸುರದುಂದುಭಿ ಪತಿಚರಣಕಮಳಭೃಂಗಂ ಪಂಪಂ (ಅರಿಶು. ೦-೭೩). [ಸಂ.]

**ಯಶೋದೆ** (ನಾ). ೧. ಯಶಸ್ಸನ್ನು ಕೊಡುವವಳು. ೨. ಕೃಷ್ಣನ ಸಾಕುತಾಯಿ ; ನಂದಗೋಪನ ಹೆಂಡತಿ: ಮತ್ತೊಂದು ಸಮಯದೊಳ್ ಪಾಲ್ಗುಡಿಯಲೊಲ್ಲದಾಟಗುಟ್ಟುವ ದಾಮೋದರನಂ ಯಶೋದೆ ಕಂಡು (ಜಗಿ. ೩-೩೦ ವ) ; ಯಶೋದೆ ನಿನ್ನ ಕಂದಗೆ ವಿಶ್ವರೂಪವೆ (ಪುರಂದ. ೪-೦೦೮ ೫೭೬). ೧, ೨ : ಅಬ್ಧಿಶಯನಂ ಗಡ ನಂದನನೀ ಮನೋಹರ ಕ್ರೀಡನನೆತ್ತಿಕೊಂಡು ಮೊಲೆಯೂಡಿದ . . . ಭವತ್ಸತಿ ಯಶೋದೆ ಕ್ರುಲಕ್ಕೆ ಯಶೋದೆಯಲ್ಲಳೇ (ಜಗಿ. ೩-೯೯), [ಸಂ. ಯಶೋದಾ]

**ಯಶೋಧನ** (ನಾ). ಕೀರ್ತಿಯೇ ಧನವಾಗಿರುವವನು ; ಮಹಾಖ್ಯಾತಿ ವಂತ : ಬಜುವನನಾಜಿಶ್ರಾಂತನಂ ಯಶೋಧನನಿಜಿಯುಂ (ಶಾಂತಿಪು. ೪-೩೦). [ಸಂ.]

**ಯಶೋಧರ** (ನಾ). ೧. ಕೀರ್ತಿಯನ್ನು ಹೊಂದಿದುದು. ೨. [ಜೈನ] ಅರುವತ್ತುಮೂರು ಇಂದ್ರಕಗಳಲ್ಲಿ ಒಂದು : ೧. ಋತು. ೨. ವಿಮಳಂ . . . ೫೬. ಯಶೋಧರಂ . . . ಅಜವತ್ತಮೂಜು ಇಂದ್ರಕಂಗಳ ಪೆಸರ್ಗಳ್ (ಕಕ್ಕಶ್ರೀ. ೨೦೩). [ಸಂ.]

**ಯಶೋಧಿಕ** (ನಾ). ಅಧಿಕವಾದ ಖ್ಯಾತಿಯನ್ನು ಪಡೆದವನು : ಕುಲಜ ನೀತನೆ ಪಂಡಿತನೀತನುಜ್ವಲಯಶೋಧಿಕನೀತನೆ (ಶಬರಾ. ೧-೦೭೬). [ಸಂ.]

**ಯಶೋನಿಧಿ** (ನಾ). ಕೀರ್ತಿಗೆ ನೆಲೆಯಾದವನು : ಮಲ್ಲಪಾರ್ಯನು ಮುದಾತ್ತಯಶೋನಿಧಿಪುನ್ನಮಾರ್ಯನುಂ ಸವಿ ತಪದಂತು ಪೇಟಿಸಿದರ್ (ಶಾಂತಿಪು. ೦-೫೩) ; ಆ ಯಶೋನಿಧಿಗೆ ವಲ್ಲಭೆಯಾದಳ್ ವಾಯುವೇಗೆ (ವರ್ಧಪು. ೩-೦೩). [ಸಂ.]

**ಯಶೋನಿಳಯ** (ನಾ). ಯಶೋನಿಧಿ : ಪ್ರಕಟ ಯಶೋನಿಳಯರ್ ತಾರ್ಕಿಕಚೂಡಾಮಣಿಗಳ್ . . . ಅಕಳಂಕದೇವರ್ (ಸುಕುಮಚ. ೧-೩೪). [ಸಂ. ಯಶೋನಿಲಯ]

**ಯಶೋಭಾಗಿ** (ನಾ). ಕೀರ್ತಿಯುಳ್ಳವನು : ಕಾದಿ ರಾಜಸುತರೊಳ್ . . . ಏಂ ಭೀಷ್ಮಂ ಯಶೋಭಾಗಿಯೋ (ಶಂಕರಾ. ೦-೬೪). [ಸಂ. ಯಶೋಭಾಗಿನ್]

**ಯಶೋರ್ಥಿ** (ನಾ). ಶ್ರೇಯಸ್ಸನ್ನು ಬಯಸುವವನು : ಧರ್ಮ ಪುತ್ರನಪ್ಪ ಯುಧಿಷ್ಠಿರಂ ಧರ್ಮಾರ್ಥಿಯುಂ ಯಶೋರ್ಥಿಯುಮಾಗಿ ರಾಜ ಸೂಯಯಾಗಂ ಮಾಡಲುದ್ಯೋಗಂಗೆಯ್ದು (ಶಂಕಕಂ. ೨೩೩-೨೦). [ಸಂ. ಯಶೋರ್ಥಿನ್]

**ಯಶೋವಂತ** (ನಾ). ಕೀರ್ತಿಶಾಲಿಯಾದವನು : ಯಶೋವಂತನಾಗು, ಅಪ್ರತಿಮ ವೀರನಾಗು, ಮಹಾತ್ಯಾಗಿಯಾಗು (ಶಾಂಕಲ. ೪೪). [ಸಂ. ಯಶೋವತ್]

**ಯಶೋವತಿ** (ನಾ). ಖ್ಯಾತಿಯಿಂದ ಕೂಡಿದುದು ; ಕೀರ್ತಿಯಿಂದ ಕೂಡಿದುದು : ದ್ವಾರವತಿಯು ಯಶೋವತಿಯಾದ ಮಹಾಪಟ್ಟಣ ವಾಯಿತು (ಶಾಂಕಲ. ೦೨೦). [ಸಂ. ಯಶೋವತೀ]

**ಯಷ್ಟಿ** (ನಾ). ೧. ಕೋಲು ; ಬಡಿಗೆ : ತ್ರಿಶೂಲಂ ಕೊಡೆಯ ಕಾವಾಗೆ ಖಟ್ವಾಂಗಂ ಯಷ್ಟಿಯಾಗೆ . . . ಮಹಾವೃದ್ಧನಾಗಿ (ಶಂಶರ. ೬-೦೭ ವ) ; ದರ್ಪದಿಂ ಮುಂದುಗಾಣದ ಗಾಂಪರೆನಿಪರ್ ಪಳಿವರೆಂದು ಸಮ್ಯಕ್‌ಕಾವ್ಯಮಂ ರಚಿಸಿದರ್ಪರೇ ದಿವ್ಯಮಂತ್ರಂ ಕೆರ್ವು ಯಷ್ಟಿ ವಾಗ್ಗ್ರಂಥನಂಗಳ್ ತಮಗಿರೆ (ಶಶ್ಮರಾ. ೦-೩೪). ' ಅಂಧಯಷ್ಟಿ ' ಪರಾ. ೨. ಕಂಬ ; ಸ್ತಂಭ. ೩. ಗದೆ : ''ಯಷ್ಟಿಃ, ಪಟ್ಟಿಶಃ . . . ಗದಾದಂಡಃ, ಚಕ್ರಂ—ಇವು ಮೊದಲಾಗುಳ್ಳುವು ಕೆಯ್ದುಗಳ ಭೇದಂಗಳ್'' (ಹರಿಚಯು. ೭೬-೩೨೨) ; ಕುಮಾರನಂ ಯಷ್ಟಿ ಮುಷ್ಟಿ ಪ್ರಹಾರಾದಿಗಳಿಂ ಗೆಲ್ದಿರ್ದೊನನೆತ್ತಿಕೊಂಡು (ಪಣ್ಣಾ ರಾ. ೩೩-೩೬). ೪. ಬಾವುಟದ ಕಂಬ ; ಧ್ವಜಸ್ತಂಭ. ೫. ಕಾಂಡ ; ದಂಟು. ೬. ಮರದ ಕೊಂಬೆ,—ರೆಂಬೆ. ೭. ಕತ್ತಿಯ ಓಡಿ. ೮. ದಾರ ; ಎಳೆ. ೯. ಮರಣ ಹೊಂದಿದವರ ಜ್ಞಾಪಕಾರ್ಥವಾಗಿ ನಿಲ್ಲಿಸುವ ಸ್ಮಾರಕಸ್ತಂಭ. ೧೦. ಮುತ್ತು ಮೊದ ಲಾದುವುಗಳ ಸರ,—ಹಾರ : " ದೇವಚ್ಛಂದಂ ಯಷ್ಟಿ ಶತಾವಚ್ಛಿನ್ನಂ " (ವಸ್ತುಕೋ. ೭೩-೩) ; ಕೈವಲ್ಯಬೋಧರಮಾ ಮೌಕ್ತಿಕಹಾರಯಷ್ಟಿ . . . ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯವಸ್ಥಲೀರಂಗದೊಳ್ (ಶಂರಾಕು. ೦-೬). ೧೧. ದೇವಪೂಜೆ ; ದೇವತಾರ್ಚನೆ : '' ಇಷ್ಟಿಃ, ಯಷ್ಟಿಃ . . . ಯಾಜ್ಯಂ — ಈ ೧೦ ದೇವರ ಪೂಜೆ'' (ಶಾಶಕ್ಕ. ೦೬೦). ೧೨. ತೆಳು ವಾದುದು ; ತೆಳ್ಳಗೆ ಇರುವುದು : 'ಅಂಗಯಷ್ಟಿ' ಪರಾ. ೧೩. ಒಂದು ಬಗೆಯ ಔಷಧೀಸಸ್ಯ ; ಅತಿಮಧುರ : " ಯಷ್ಟಿಃ — ಯಷ್ಟಿಮಧುಕ" (೬ಶಧಿ. ೦೩೦). [ಸಂ.]

**ಯಷ್ಟಿಕೆ** (ನಾ). ೧. ಕೋಲು ; ಬಡಿಗೆ. ೨. (ಒಂದೆಳೆಯ) ಮುತ್ತಿನ ಹಾರ : ' ಏಕಯಷ್ಟಿಕೆ ' ಪರಾ. [ಸಂ. ಯಷ್ಟಿಕಾ]

**ಯಷ್ಟಿಮಧು** (ನಾ). ಒಂದು ಬಗೆಯ ಔಷಧೀಸಸ್ಯ. [ಸಂ.]

**ಯಷ್ಟಿಮಧುಕ** (ನಾ). = ಯಷ್ಟಿಮಧು : "ಮಧೂಕಯಷ್ಟಿಃ, ಮಧುಯಷ್ಟಿಕಾ – ಈ ಯೆರಡುಂ ಯಷ್ಟಿಮಧುಕ" (ಓಷ. ೧೨೦); ದ್ರಾಕ್ಷೆ ಮಧು ಖಂಡಶರ್ಕರೆ ಗೋಕ್ಷೀರಂ ಯಷ್ಟಿಮಧುಕಮಿವು ಪಿತ್ತಹರಂ (ಅಶ್ವಶಾ. ೭–೯೩). [ಸಂ. ಯಷ್ಟಿಮಧುಕಾ]

**ಯಷ್ಟ್ಟ** (ನಾ). ಯಾಗ ಮಾಡುವವನು ; ಯಜ್ಞಕರ್ತ. [ಸಂ.]

**ಯಸ** (ನಾ). ಒಳ್ಳೆಯ ಹೆಸರು ; ಕೀರ್ತಿ : ಯಸಕ್ಕನಲ್ಲಾತಂ (ಶಾಶಾ. XI-i, ೪೩–೯ ; 970). 'ಜಸ₁' ಪರಾ. [< ಸಂ. ಯಶಸ್]

**ಯಹೂದ್ಯ**, ಯೆಹೂದಿ, ಯೆಹೂದ್ಯ (ನಾ). ಪ್ಯಾಲಸ್ಟೈನ್ ಅಥವಾ ಇಸ್ರೈಲ್ ದೇಶದಲ್ಲಿ ವಾಸಿಸುವ ಒಂದು ಕುಲದ ಹೆಸರು ಮತ್ತು ಆ ಕುಲಕ್ಕೆ ಸೇರಿದ ವ್ಯಕ್ತಿ : ಪಶ್ಚಿಮದಲ್ಲಿ ಸುಮಾರು ಒಂದು ಲಕ್ಷ ಪಾರಿಸೀ ಜನರೂ ಕೆಲವುಂದಿ ಜೂಜನರೂ (ಯಹೂದ್ಯರೂ) ವಾಸವಾಗಿದ್ದಾರೆ (ಭೂಗೋಳ. ೭೦) ; ಮತ್ತೊಬ್ಬ ಯಹೂದ್ಯ ಕುಟುಂಬಕ್ಕೆ ಸೇರಿದವನು (ಕೃಪರು. ೨೩). **ಯೆಹೂದಿ:** ಯುನಾನಿಯರ ಮೂಗು ಒಂದು ತೆರನಾಗಿದ್ದಲ್ಲಿ ರೋಮನರ, ಯೆಹೂದಿಯರ, ಸೀಗ್ರೋಗಳ ಮೂಗುಗಳು ಬೇರೆಬೇರೆ ಯಾಗಿರುತ್ತವೆ (ಜೀವಶಾ. ೨೨೦). **ಯೆಹೂದ್ಯ :** ಇದೊ ಯೆಹೂದ್ಯರೆ ಇವನೊಳೇನುಮಪರಾಧಮಂ ಕಾಣೆ (ಗಿರಿರೂ. ೩–೦೩೩) ; ಯೆಹೂದ್ಯರು, ಮುಸಲ್ಮಾನರು ಮತ್ತು ಕ್ರೈಸ್ತರು ಇವರ ವಿನಾ ಉಳಿದ ಎಲ್ಲಾ ಜನಾಂಗ ದವರಲ್ಲಿ ಈ ಸಿದ್ಧಾಂತ ಪ್ರಚಾರದಲ್ಲಿತ್ತು (ಜೀವಶಾ. ೦೬೪).
[←ಹೀಬ್ರು. ಯಹೂದೀ ; ಲ್ಯಾಟಿನ್. ಇಯುಡ್ಯುಸ್./ಇಂ. Jew]

**ಯಾ₁** ' ಯಾವುದು ' ಪರಾ.

**ಯಾ₂** (ಅ). ಅಥವಾ ; ಇಲ್ಲವೆ : ಅಂಥ ಪಾವತಿ ಯಾ ಸಮಾಧಾನವು ಗ್ರಾಮ ಮುನಸಿಫರಿಂದ . . ನಮೂದು ಮಾಡಲ್ಪಡಬೇಕು (ಗ್ರಾಪಂಚಾ. ೩೪).
[←ಪಾರ. ಹಿಂ. ಮರಾ. ಯಾ]

**ಯಾಂಡು** (ನಾ). ವರ್ಷ ; ಸಂವತ್ಸರ : ಶ್ರೀರಾಜೇನ್ದ್ರಚೋಳದೇವರ್ಗೆ ಯಾಣ್ಡು ೧೯ ಆವುದಾ ಸಕವರಿಷ ೯೫೩ನೆಯ . . . ಬ್ರಿಹಸ್ಪತಿವಾರದನ್ದು (ವ್ಯೆಲಿ. ೦೯೯೦, ೭೩–೬; 1030); ಶ್ರೀ ರಾಜೇನ್ದ್ರಚೋಳದೇವರ್ಗೆ ಯಾಣ್ಡು ಇಪ್ಪತ್ತ ನಾಲ್ಕಾವುದು (ಎಕ.X, ಕೋಲಾರ,೦೪–೩; 1035). 'ಇಯಾಂಡು', ' ಎಡು ', ' ಮೊನೆಯೇಡು ' ಪರಾ.
[ದೇ.॥ ತಮಿ. ಯಾಣ್ಡು ; ಮಲ. ಆಣ್ಡು ; ತೆಲು. ಏಡು]

**ಯಾಂತ್ರಿಕ** (ಗು). ೧. ಯಂತ್ರಕ್ಕೆ ಸಂಬಂಧಿಸಿದ. ೨. ಯಂತ್ರದಿಂದ ತಯಾರಾದ ; ಯಂತ್ರಸಿದ್ಧವಾದ. (ನಾ). ೩. (ಭೂತ, ಪಿಶಾಚಿಗಳ ಪೀಡಾ ಪರಿಹಾರಕ್ಕಾಗಿ) ಯಂತ್ರ ಬರೆದು ಕಟ್ಟುವವನು : ಯಾಂತ್ರಿಕನ ಯಂತ್ರ ಮಂತ್ರ ಸಂಬಂಧದಿಂದ ಪಿಶಾಚಗ್ರಸ್ತನ ಪಿಶಾಚಿಯು ಪಲಾಯನ ಮಪ್ಪ ತೆಱನಂತೆ (ಶಬ್ದಪ. ೪. ೦೯–೪೦). ೪. (ಆಲಂ) ಯಂತ್ರದಂತೆ ಕೆಲಸ ಮಾಡುವಿಕೆ ; ಯಾವ ವಿವೇಚನೆಯೂ ಇಲ್ಲದಿರುವಿಕೆ : ವಹೌಧ್ಯ ರೀತಿಯಲ್ಲಿ ಯಾಂತ್ರಿಕವಾಗಿ ನಡೆಯುವುದು ಶ್ರೀಕೃಷ್ಣನ ಯೋಗಮತವಲ್ಲ (ಭಾರರ. ೦೦೯). [ಸಂ.]

**ಯಾಕೂತ** (ನಾ). ೧. ಕೆಂಬಣ್ಣದ ರತ್ನ ; ಮಾಣಿಕ್ಯ ; ಪದ್ಮರಾಗ. ೨. ಬೂದಿ ಬಣ್ಣದ ರತ್ನ : ಯಾಕೂತವೂ ಅಪೂರ್ಣ ಸ್ಫಟಿಕರೂಪವಾದ ಸಾಧಾರಣ ಖನಿಜವು ; ಇದಕ್ಕೆ ಬೂದಿ ಬಣ್ಣವಿರುವುದು (ಮುಂಬಯಿ. ೬–೯೬). ೩. ನೀಲವರ್ಣದ ಹರಳು : ಇದರೊಳಗೆ (Quartz) ನೀಲವರ್ಣವು ಮಿಶ್ರವಾಗಿದ್ದರೆ ಯಾಕೂತವೆನ್ನುವರು (ಮುಂಬಯಿ. ೬–೨೩೯).
[←ಅರ. ಹಿಂ. ಮರಾ. ಯಾಕೂತ್ ; ಪಾರ, ಯಾಖೂತ್]

**ಯಾಕೆ** ' ಏನ್₁ ' ಪರಾ.

**ಯಾಗ** (ನಾ). ೧. ಯಜ್ಞ ; ಕ್ರತು : ದಿವಿಜಾವಗೆ ನೋಡೆ ಕೂಡೆ ಕರ್ಪಡರ್ದಣಿಯಾದುದಾ ಯಮುನೆಗಗ್ಗದ ಯಾಗದ ಧೂಮದೇಟಿಗೆಯೊಳ್ (ಶಂಕಥಾ. ೬–೩೬) ; ವಿಗಡ ಯಾಗಕೆ ಸಕಲ ರಾಯರು ಹಗೆ (ಕುವ್ಯಾಸ. ೨–೩೪). ೨. ದೇವಪೂಜೆ ; ಭಗವದರ್ಚನೆ : "ಯಜ್ಞಃ, ಯಾಗಃ . . . ಯಾಜ್ಯಂ, ಈ ೧೦ ದೇವಪೂಜೆ" (ಅಶಕ್ಷ. ೦೬೪). [ಸಂ.]

**ಯಾಗಕುಂಡ** (ನಾ). ಹೋಮಕ್ಕಾಗಿ ರಚಿಸುವ ಅಗ್ನಿಯ ಕುಂಡ ; ಅಗ್ನಿಕುಂಡ ; ಯಜ್ಞಕುಂಡ : ಯಾಗಕುಂಡವನು ಬೇಗನೆ ಮಾಡಿ (ಕೋಗಿಲೆ. ೨೨–೪). [ಸಂ.]

**ಯಾಗಗೆಯ್** (ಕ್ರಿ). ಯಜ್ಞವನ್ನು ಮಾಡು : ಯಾಗಗೆಯ್ವಂ ಸ್ಥಪತಿ ಯಕ್ಕು (ವಂಗರಾ. ೭೭–೦೪). [ಯಾಗ + ಕೆಯ್₁]

**ಯಾಗದೀಕ್ಷೆ** (ನಾ). ಯಜ್ಞ ಮಾಡುವುದಕ್ಕೆ ಮುಂಚೆ ಯಜಮಾನನಿಗೆ ಅಧಿಕಾರವನ್ನು ಕೊಡುವುದು ; ಯಜ್ಞದೀಕ್ಷೆ : ಯಾಗದೀಕ್ಷೆಯು ನೃಪಂ ಮಂತ್ರವಾರಿಸ್ನಾತನಾಗಿ ಬಳಿಕ . . . ಹಯಮಂ ತೆರಿಸಿ (ಜೈಮಿಭಾ. ೩೪–೦೨). [ಸಂ. ಯಾಗದೀಕ್ಷಾ]

**ಯಾಗದ್ವೇಷಿ** (ನಾ). ಯಜ್ಞಕ್ಕೆ ವೈರಿಯಾದವನು ; ಯಜ್ಞವಿರೋಧಿ ಯಾದವನು: ಈಸು ಘನವೇ ಕೃಷ್ಣ ಯಾಗದ್ವೇಷಿಗಳು ಪಿರಿದಾಗಲಿವಗಿನ್ನೈ ಸಲೇ ವರರಾಜಸೂಯಾಧ್ವರಕೆ ಸಂನ್ಯಾಸ (ಕುವ್ಯಾಸ. ೨–೨೩).
[ಸಂ. ಯಾಗದ್ವೇಷಿನ್]

**ಯಾಗಧ್ವಂಸಕ** (ನಾ). ಯಜ್ಞವನ್ನು ಹಾಳುಮಾಡುವವನು : ರಾಕ್ಷಸ ಇವ ನಿಸ್ಸಂಶಯನು ವಿಜಯವಲಿ ಯಾಗಧ್ವಂಸಕನ ನೆಱೆ ಮುರಿವುಪಾಯವ ಕಾಣೆ ನಾನು (ಕುವ್ಯಾಸ. ೨–೨೪). [ಸಂ.]

**ಯಾಗಪ್ಪ** (ನಾ). ಕಲ್ಲನ್ನು ಸೀಳಲು ಉಪಯೋಗಿಸುವ ಉಳಿ : (ಕ).
[ ? ]

**ಯಾಗಮಂಟಪ** (ನಾ). ಯಜ್ಞಕಾರ್ಯಕ್ಕಾಗಿ ನಿರ್ಮಿಸಿದ ಚಪ್ಪರ : ಇಂದ್ರಪ್ರಸ್ಥಕ್ಕೆ ಉತ್ತರದಿಗ್ಭಾಗದೊಳ್ . . . ಯಾಗಮಂಟಪಮಂ ಸಮೆದು (ಶಂಕಥಾ. ೬–೩೩ ವ). [< ಸಂ. ಯಾಗಮಂಡಪ]

**ಯಾಗರಕ್ಷೆ** (ನಾ). ಯಜ್ಞಕಾರ್ಯವು ಸುಸೂತ್ರವಾಗಿ ನಡೆಯುವಂತೆ ಕಾಪಾಡುವುದು ; ಯಜ್ಞರಕ್ಷಣೆ : ವರಮುನೀಂದ್ರರ ಯಾಗರಕ್ಷೆ ಬಲವಳಿಯುತಿದೆ (ಹತರಾ. ೯–೦೦). [ಸಂ. ಯಾಗರಕ್ಷಾ]

**ಯಾಗವ್ರತ** (ನಾ). ಯಜ್ಞದ ಆಚರಣೆ ; ಯಾಗಕರ್ಮ : ಅಘಪ ಯಾಗವ್ರತಕೆ ಭಂಗವ ತಹುದೆ ಜೀಯ (ಕುವ್ಯಾಸ. ೨–೨೬). [ಸಂ.]

**ಯಾಗಶಾಲೆ** (ನಾ). ಯಜ್ಞಕಾರ್ಯ ನಡೆಯಲು ನಿರ್ಮಿಸುವ ಚಪ್ಪರ; ಯಜ್ಞಶಾಲೆ : ಪುರೋಹಿತಾನುಮತದಿಂ ನಾಲ್ಗಾವುದದಳತೆಯೊಳ್ ಯಾಗಶಾಲೆಯುಮಂ ನೇರ್ಪಡಿಸಿ . . . ಯಾಗಂಗಳಂ ನೆರೆಯಿಸುತಿರ್ದರ್ (ರಾಮಾಶ್ವ. ೧೬–೪). [ಸಂ. ಯಾಗಶಾಲಾ]

**ಯಾಚಕ** (ನಾ). ೧. ಬೇಡುವವನು ; ಪ್ರಾರ್ಥಿಸುವವನು : ಯಾಚಕ ವಾಚಕ . . . ಸಮಸ್ತಜನಕ್ಕಂ ಬೇಡಿದುದಂ ಕೊಟ್ಟು (ಸುಕುಮಾ. ೬–೨೩ ವ); ರತುನಭಂಡಾರವನು ತೆಗೆತೆಗಸಿ ಮನದಣಿಯೆ ಯಾಚಕರಿಗಿತ್ತುದನೆನಗೆ ಬಣ್ಣಿಸಲಳವೆ (ಕುವ್ಯಾಶ. ೬–೧೮). ೨. ತಿರುಕ ; ಭಿಕ್ಷುಕ : ಯಾಚಕ ನಡಿಸೆಂದು ಕನವರಿಸಿ ಯಾಚಿಸಲು ನಾಚಿಕೊಂಡಂತೆ (ಸರ್ವಜ್ಞ. ೩೪೭). [ಸಂ.]

**ಯಾಚಕತ್ವ** (ನಾ). ಬೇಡುವಿಕೆ ; ಯಾಚನೆ : ಸ್ಥಲಜ್ಞಾನ ಯಾಚಕತ್ವವು ಸ್ಥಲಭರಿತನ ಮುಟ್ಟಬಲ್ಲುದೆ (ಪೋಶವಾ. ೯–೩೨). [ಸಂ.]

**ಯಾಚನಕ**(ನಾ). =ಯಾಚಕ ೧ : " ವನೀಪಕಃ, ಯಾಚನಕಃ, ಮಾರ್ಗಣಃ, ಯಾಚಕಃ, ಅರ್ಥೀ – ೫ ಕೇಳುವವನ ಹೆಸರು : ಬೇಡುವವನು " (ಅಭಿಧಾ. ೩೩೬). [ಸಂ.]

**ಯಾಚನೆ** (ನಾ). ಬೇಡುವಿಕೆ ; ಬೇಡಿಕೆ ; ಪ್ರಾರ್ಥನೆ : "ಅಧ್ಯೇಷಣಾ, ಏಷಣಾ, ಯಾಞ್ಞಾ, ಯಾಚನಾ, ಪ್ರಾರ್ಥನಾ, ಅರ್ಥನಾ—ಈ ೬ ಬೇಡುಹ" (ಶಬ್ದಮ. ೩೯-೨೦೩); ಪ್ರಯತ್ನದಿಂ ಯಾಚನೆಯಂ ಮಾಡಿ ಭಕ್ತಿಯಿಂದ ಬ್ರಾಹ್ಮಣರಿಗೆ ದಾನವ ಕೊಡು (ಕಣುಪ. ೬೬-೦೩). [ಸಂ. ಯಾಚನಾ]

**ಯಾಚಿತ** (ಗು). ೧. ಬೇಡಿದ ; ಕೇಳಿಕೊಂಡ ; ಪ್ರಾರ್ಥಿಸಿದ. (ನಾ). ೨. ಬೇಡಿ ಪಡೆದುದು ; ಭಿಕ್ಷೆ : ಮೃತಮೆನೆ ಪಡೆಗುಂ ತಾಂ ಯಾಚಿತಮುಂ ಮತ್ತಮೃತಶಬ್ದಮುಂ ಪಡೆಗುಮಯಾಚಿತಮುಂ (ವಸ್ತುಕೋ. ೦೩೯-೦೦೯). ೩. ತಿರುಪೆ ; ಭಿಕ್ಷಾವೃತ್ತಿ. [ಸಂ.]

**ಯಾಚಿತಕ** (ನಾ). ಬೇಡಿ ಸಂಪಾದಿಸಿದುದು ; ಕೇಳಿ ಪಡೆದುದು : "ಯಾಚಿತಕಂ, ಯಾಂಚಯಾ ಆಪ್ತಂ—೨ ಕೇಳುವುದರಿಂದ ಹೊಂದಲ್ಪಟ್ಟದ್ದು, ಎರವು ತಂದದ್ದಕ್ಕೂ ಹೆಸರು" (ಸಿದ್ಧಾಂತಿ. ೨೬೪). [ಸಂ.]

**ಯಾಚಿಸು** (ಕ್ರಿ). ಬೇಡಿಕೊಳ್ಳು ; ಯಾಚನೆ ಮಾಡು : ಅಲಸದೆ ಯಾಚಿಪುದಕ್ಕಂ . . . ಅರ್ಹರ್ ಪಾರ್ವರ್ (ಸಮಾಜ. ೧೦-೬೪); ನರರುಮಂ ಯಾಚಿಸದ ಭಾಷೆಯಿತರಜನಕೆ ಕೈಮುಗಿಯದದು ನಿಬ್ಬರದ ಭಾಷೆ (ಬಸವ. ೩-೬) ; ಯಾಚಿಸಿದನಂಗವಂ ಸುತನನಾಳುಹೇಂದೆಸಗೆ ಸೂಚಿಸಿದನೀ ದ್ವಿಜಂ (ಕೈಬಿಳಾ. ೨೩-೪೪). [(ಸಂ. ಯಾಚನ) + — ಇಸು]

**ಯಾಜ** (ನಾ). ಯಜ್ಞ ಮಾಡುವವನು : ದ್ರೋಣಭಯದಲಿ ಸಕಲ ವಿಪ್ರಶ್ರೇಣಿಯಿರೆ ಯಾಜೋಪಯಾಜರು ಪ್ರಾಣನಿಸ್ಪೃಹರಾಗಿ ಮಾಡಿಸಿದರು ಮಹಾಕ್ರತುವ (ಜೈಮಿ. ೭-೭೦). [ಸಂ.]

**ಯಾಜಕ** (ನಾ). ೧. ಯಜ್ಞವನ್ನು ಮಾಡುವವನು : ಯಾಗಕರ್ತ. ೨. ಯಜ್ಞವನ್ನು ಮಾಡಿಸುವವನು ; ಯಜ್ಞಪುರೋಹಿತ ; ಋತ್ವಿಕ್ಕು : ಯಾಜಕಂ ತಾನಪ್ಪೆನಧ್ವರಕೆ (ಕೈಬಿಳಾ. ೩-೩೩); ಈರೆಣ್ಬರ್ ಯಾಜಕರೋರೊಂದು ದೆಸೆಯೊಳ್ ಸಾಮಗಾನಮಂ ಪಾಡುತಂ (ರಾಮಾಶ್ವ. ೦೬೬-೪). ೩. ಧರ್ಮಗುರು ; ಪೂಜಾರಿ : ನಿನ್ನ ಜನಪದವೆ ನಿನ್ನ ಯಾಜಕರೆನಗೆ ನಿನ್ನನೊಪ್ಪಿಸುವಂತೆ ನೀನೇನ ಗೆಯ್ದೆ ? (ಗೊರೂರು. ೩-೦೨೩). [ಸಂ.]

**ಯಾಜನ** (ನಾ). ೧. ಯಜ್ಞವನ್ನು ಮಾಡಿಸುವಿಕೆ ; ಯಜ್ಞಕಾರ್ಯಕ್ಕೆ ತೊಡಗಿಸುವಿಕೆ ; ಬ್ರಾಹ್ಮಣನು ಆಚರಿಸಬೇಕಾದ ಷಟ್ಕರ್ಮಗಳಲ್ಲಿ ಒಂದು : ಭವಿಷ್ಯದ್ವಿಜನ್ಮವರ್ಣಕಧ್ಯಯನಾಧ್ಯಾಪನ ದಾನಪ್ರತಿಗ್ರಹ ಯಜನ ಯಾಜನ ಷಿಶಿಷ್ಟವೃತ್ತಿಯುಮಂ . . . ನಿಜಿಸಿ (ಆದಿಪು. ೬-೭೩ ವ) ; ಯಜ[ನಯಾ]ಜನಾಧ್ಯಯನಾಧ್ಯಾಪನ ದಾನ ಪ್ರತಿಗ್ರಹ ಷಟ್ಕರ್ಮನಿರತರುಂ . . . ಅಪ್ಪ ಶ್ರೀಮನ್ಮಹಾಗ್ರಹಾರಂ ಪೂಲಿಯೂರಡೆಯ ಪ್ರಮುಖಸಾಸಿರ್ವರ್ಮಹಾಜನಂಗಳ ದಿಬ್ಯಶ್ರೀಪಾದಂಗಳನಾರಾಧಿಸಿ (ಶಾಸನ. V, ೬೪೬-೨೩ : 1097). ೨. ಅರ್ಚನೆ ; ದೇವಪೂಜೆ : " ಇಷ್ಟಂ . . . ಯಾಜನಂ . . . ಯಾಜ್ಯಂ—ಈ ೧೦ ದೇವಪೂಜೆ " (ಶಾಶಬ್ದ. ೧೬೦). [ಸಂ.]

**ಯಾಜಮಾನ್ಯ** (ನಾ). ೧. ಯಜ್ಞಕರ್ತನಾಗಿರುವಿಕೆ : ಹುದಿದ ನವನೀತಾನುಲೇಪದ ಹೊದೆದ ಕೃಷ್ಣಾಜಿನದ ಹಸ್ತಾಗ್ರದಲೆಸೆವ ಸಾರಂಗಶೃಂಗದ ಯಾಜಮಾನ್ಯದಲಿ . . . ಅಂತರ್ವೇದಿಗೈತಂದನು ಮಹಿಪಾಲ (ಜೈಮಿ. ೬-೨೮); ಯಾಜಮಾನ್ಯದೊಳೆಸೆವ ಭೂಪಾಲನಂ ಕಂಡು ವಾಜಿಗಳನೊಪ್ಪಿಸಿ ಪದಾಂಬುಜಕೆ ಪೊಡಮಟ್ಟೊಡೆ (ಕೈಬಿಳಾ. ೩೩-೨೯). ೨. ಒಡೆತನ ; ಯಜಮಾನಿಕೆ : ರಾಮಾಯಣದ ಕಾಲದಲ್ಲಿದ್ದ ರಾಜ್ಯಗಳೆಲ್ಲ ತಂದೆಯ ಯಾಜಮಾನ್ಯವನ್ನುಳ್ಳ ಕುಟುಂಬದ ಮಾದರಿಯಲ್ಲಿ ಇದ್ದಂಥವು (ಭಾರತ. ೬೫) ; ಈ ಮನೆಯ ಸ್ವಾಮಿತ್ವ, ಯಾಜಮಾನ್ಯವೆಲ್ಲ ತನ್ನ ಪಾಲಿನದು (ಪಾತ್ರ. ೩೦೬); ತಾಯಿ ರೋಗದಿಂದ ಹಾಸಿಗೆ ಹತ್ತಿ ಮಲಗಿದ್ದಳು ; ಆದ್ದರಿಂದ ಅವಳದೇ ಯಾಜಮಾನ್ಯ (ಬಾಳು. ೧೮೦). [ಸಂ.]

**ಯಾಜಿ** (ನಾ). ೧. ಯಾಗ ಮಾಡಿಸುವವನು ; ಯಜ್ಞ ಪುರೋಹಿತ : ಅರಿದ ಯಾಜಿಗೆ ಬಾಹ್ಯಯಜ್ಞದಲೇಸು ಫಲ (ಗಗತಾ. ೦೬-೪೦); ನಾನು ನಿನ್ನನ್ನಿಲ್ಲಿಗೆ ಕರೆತಂದುದು ಮುಖ್ಯವಾಗಿ ಇದು ಯಾಜಿಗಳ ಸ್ಥಳವೆಂದು (ದೇವಮೂ. ೦೩೪). ೨. ಪೂಜಿಸುವವನು ; ಅರ್ಚಕ : " ಯಟ್, ಯಾಟ್, ಯಾಜೀ . . . ಯಾಯಜೂಕಃ — ಈ ೭ ಪೂಜಿಸುವಂ " (ಶಾಶಬ್ದ. ೦೬೦). ೩. ಯಜ್ಞ ; ಯಾಗ. ೪. = ಯಾಜಕ ೧. 'ಸೋಮಯಾಜಿ' ಹೋ. [ಸಂ.]

**ಯಾಜ್ಞ** (ಗು). ಯಜ್ಞಕ್ಕೆ ಸಂಬಂಧಿಸಿದ : ಯಜ್ಞದ ಕಾರ್ಯಕ್ಕೆ ಸಂಬಂಧಪಟ್ಟ. [ಸಂ.]

**ಯಾಜ್ಞವಲ್ಕ್ಯಸ್ಮೃತಿ** (ನಾ). ಪ್ರಸಿದ್ಧವಾದ ಹತ್ತೊಂಬತ್ತು ಸ್ಮೃತಿಗಳಲ್ಲಿ ಒಂದು ; ಯಾಜ್ಞವಲ್ಕ್ಯ ಎಂಬ ಮುನಿಯಿಂದ ರಚಿತವಾದ ಸ್ಮೃತಿ : ಯಾಜ್ಞವಲ್ಕ್ಯಸ್ಮೃತಿಯು ವಿಷ್ಣುಸ್ಮೃತಿಗಿಂತ ಹಿಂದಿನದಲ್ಲ (ಭಾರತ. ೩೦). [ಸಂ.]

**ಯಾಜ್ಞಸೇನಿ** (ನಾ). ಯಜ್ಞಸೇನನೆಂಬ ನಾಮಾಂತರವನ್ನು ಹೊಂದಿದ್ದ ದ್ರುಪದರಾಜನ ಮಗಳು ; ದ್ರೌಪದಿ : ಯಜ್ಞವೇದೀಸಂಭವೆಯುಂ ಯಾಜ್ಞಸೇನಿಯುಂ . . . ಎನಿಸಿದ ಪಾಂಚಾಲರಾಜತನೂಜೆ ಪವಮಾನತನೂಜನಲ್ಲಿಗೆ ವಂದು . . . ನೊಂದು ನುಡಿಯೆ (ಗದಾಯು. ೦-೩೩ ವ).
[ಸಂ. ಯಾಜ್ಞಸೇನೀ]

**ಯಾಜ್ಞಿಕ** (ಗು). ೧. ಯಜ್ಞಕ್ಕೆ ಸಂಬಂಧಪಟ್ಟ. (ನಾ). ೨. ಯಜ್ಞಕರ್ತ ; ಯಾಜಕ : ಯಜ್ಞರಿಪುಗಳು ನಿಪುಣರಿಗೆ ವರಯಾಜ್ಞಿಕರಿಗಾಚಾರಹೀನರು (ಜೈಮಿ. ೧೦-೩೨). ೩. ಯಜ್ಞ ಮಾಡಿಸುವವನು ; ಯಜ್ಞಪುರೋಹಿತ. ೪. (ಯಜ್ಞಕಾರ್ಯದಲ್ಲಿ ಉಪಯೋಗಿಸಲಾಗುವ) ಅರಳಿ, ಮುತ್ತುಗ ಮೊದಲಾದ ಮರ : "ಯಾಜ್ಞಿಕಃ— ಅರಳಿ, ಮುತ್ತುಗ" (ಚಿತ್ರಂ. ೦೩೨). [ಸಂ.]

**ಯಾಜ್ಞೀಯ** (ಗು). ಯಜ್ಞಕ್ಕೆ ಸಂಬಂಧಿಸಿದ ; ಯಜ್ಞಕ್ಕೆ ಸೇರಿದ : ಇದೀಗಳ್ ಸಮಯಂ ಯಾಜ್ಞೀಯಾಶ್ವಮಂ ಪೂಜಿಸಲ್ಕೆ (ರಾಮಾಶ್ವ. ೦೭-೪).
[ಸಂ.]

**ಯಾಜ್ಯ** (ಗು). ೧. ಯಜ್ಞಕ್ಕೆ ಸಂಬಂಧಿಸಿದ. (ನಾ). ೨. ಯಾಗ ಮಾಡಲು ಅರ್ಹನಾದವನು ; ಯಜ್ಞಕರ್ತ ! ಯಾಜ್ಯ ಯಾಜನಕೆ ಪರಿಸುವೊಡಂಗಿರಸನ ಸುತಂ ಪೂಜ್ಯನೆವಿಪ್ರಾ ಕುಲದವರ್ಗೆ (ಕೈಬಿಳಾ. ೩-೨೪). ೩. ಇನ್ನೊಬ್ಬರಿಗಾಗಿ ಯಜ್ಞಮಾಡುವವನು. ೪. ಅರ್ಚನೆ ; ದೇವಪೂಜೆ : "ಇಷ್ಟಂ, ಇಷ್ಟಿಃ . . . ಯಾಜ್ಯಂ—ಈ ೧೦ ದೇವಪೂಜೆ (ಶಾಶಬ್ದ. ೦೬೦). [ಸಂ.]

**ಯಾಣ** (ನಾ). ಯಾನ ; ಸಂಚಾರ : ಜಗಪ್ರವಾಸದ ಖಗಪ್ರಯಾಣ ಗುಹ್ಯಾತ್ ಗುಹ್ಯತರಂ ಈ ಯಾಣ (ಅರಳು. ೪೪೭-೦೩).
[ < ಪ್ರಾ. ಯಾಣ./ಸಂ. ಯಾನ]

**ಯಾತ$_1$** ' ಏತ$_1$ ' ನೋ.

**ಯಾತ$_2$** (ಗು). ೧. ನಡೆದ ; ಮುಂದೆ ಚಲಿಸಿದ. (ನಾ). ೨. ಹೋಗುವಿಕೆ ; ಹೋಗುವುದು ; ಗಮನ : ' ಯಾತಾಯಾತ ' ಪರಾ. ೩. ಅಂಕುಶಪ್ರಯೋಗದಿಂದ ಆನೆಯನ್ನು ಮುಂದಕ್ಕೆ ನಡೆಸುವುದು : "ಅಂಕುಶ(ವಾ)ಚಾರಣಮಂ ಯಾತಮೆಂಬುದು" (ಶಬ್ದಮ. ೩೬-೩೯). ೪. ಕಾಲಾಳು : ಪದಾತಿ : "ಯಾತಂ ಪದಾತಿಕಂ ಪಾಯದಳ ಪತ್ತಿ ಪಾದಾತಂ ಪದಾಜಯ ಪದಿಕನೆನೆ ಕಾಲಾಳ್" (ಮಂಗರಾ. ೬೩-೨೬).
[ಸಂ.]

**ಯಾತಕೆ** ' ಏನ್$_1$ ' ಪರಾ.

**ಯಾತಕ್ಕೆ** ' ಏನ್$_1$ ' ಪರಾ.

**ಯಾತನ** (ನಾ). ತೀವ್ರವಾದ ಹಿಂಸೆ; ಯಾತನೆ: "ಆ ಯಾತನಂ ಕಾರಣಂ ದಂಡಣೆ(ನೆ)ಯೆನಿಕ್ಕು" (ಮಂಗರಾ. ೧೦೭-೧); ಪುಣ್ಯದ ಹಾದಿಗಳ ಬಿಟ್ಟು ಅಂತಕನ್ನ ಯಾತನದಿ ನೀ ಕಷ್ಟಪಟ್ಟು (ಭುರಂದ. ೩-೧೪-೩).
[ಸಂ. ಯಾತನಾ]

**ಯಾತನೆ** (ನಾ). ತೀವ್ರವಾದ ಹಿಂಸೆ,–ಬಾಧೆ: ಉತ್ಕಟವಾದ ದುಃಖ: "ಯಾತನೆ ಗುರುವೇದನೆ" (ವಸ್ತುಕೋ. ೨೦-೧೧); ನಮ್ಮ ಎರಡು ಕಣ್ಣುಗಳಲ್ಲಿ ಯಾವುದನ್ನು ಚುಚ್ಚಿದರೆ ತಾನೆ ಯಾತನೆಯಾಗುವು ದಿಲ್ಲ? (ಕೀಕಿಕಂ. X. ೧೮); ಅವಳು ಅನುಭವಿಸಿದ ಮಾನಸಿಕಯಾತನೆ ಯನ್ನು ಮರೆಮಾಚಲೂ ಸಹ ಪ್ರಯತ್ನಿಸಲಿಲ್ಲ (ಶಾಪಟ. ೦೦೯).
[ಸಂ. ಯಾತನಾ]

**ಯಾತನೆಗೊಳ್** (ಕ್ರಿ). ತೀವ್ರವಾದ ಬಾಧೆಗೊಳಗಾಗು,— ವೇದನೆ ಯನ್ನು ಅನುಭವಿಸು: ಮನೆಯೊಂದುಂ ಮಕ್ಕಳಿಂದುಂ . . . ತಾಪ ತ್ರಯದೊಳ್ ಕುದಿದೆಂ ಬತ್ತಿದೆಂ ಬಾಡಿದೆಂ ಯಾತನೆಗೊಂಡೆಂ ದೇವ (ರತ್ನಾಕ. ೨೨). [ಯಾತನೆ + ಕೊಳ್$_1$]

**ಯಾತಯಾಮ** (ಗು). ೧. ಒಂದು ರಾತ್ರಿಯಷ್ಟು ಹಳೆಯದಾದ: ತಂಗುಳಾದ. ೨. ಹಳಸಿದ; ಕೆಟ್ಟುಹೋದ; ನಿಷ್ಪ್ರಯೋಜಕ ವಾದ. ೩. ವಯಸ್ಸಾದ; ಜೀರ್ಣವಾದ; ಶಿಥಿಲವಾದ. (ನಾ). ೪. ಹಳಸಿಹೋದುದು: "ಯಾತಯಾಮಂ — ಹಳಸಿ ಹೋದದ್ದು, ಅನುಭವಿಸಿಯಾದ್ದು; ತಿಂದು ಜೀರ್ಣಿಸಿಹೋದದ್ದು" (ಸಿದ್ಧಾಂಕಿ. ೪೦೮). ೫. ಮುದುಕ: ವೃದ್ಧ: "ಯಾತಯಾಮಂ ವೃದ್ಧಂ ಸ್ಥವಿರಂ ತಾಂ" (ವಸ್ತುಕೋ. ೩೭-೨೭). [ಸಂ.]

**ಯಾತವ್ಯ** (ನಾ). ಯುದ್ಧದಲ್ಲಿ ಎದುರಿಸಲು ಯೋಗ್ಯನಾದವನು; ಶತ್ರು: ಆತನಿನ್ನೆವರೆಗಂ (ವ್ಯಾನರು) ಯಾತವ್ಯರುಮಾಜ್ಞಾವಿಧಾನ ಸ್ಥಾನರುಮಪ್ಪ ನಮ್ಮೊಳಾದುದು ನಯೋಪಾಯಂ ವ್ಯವಹಾರಸಮಾನನು ಮಮಾನನುಮಲ್ಲದಿರ್ಪನಿಗಳಲ್ಲಿಗೇ ವಿಧೇಯಂ ಮಾಟ್ಟುದೆಂದು . . . ನುಡಿದು (ಶಾಂತಿಪು. ೨-೩೫ ವ). [ಸಂ.]

**ಯಾತಾಯಾತ** (ನಾ). ಹೋಗುವುದು ಮತ್ತು ಬರುವುದು: ಸಂಚಾರ: ಓಡಾಟ: ಯಾತಾಯಾತ ಮಾಡುವುದನ್ನು ಚೆನ್ನಾಗಿ ಬಲ್ಲೆನು. ಎಲ್ಲಿಗೆ ಹೋಗೆಂದರೆ ಅಲ್ಲಿಗೆ ಹೋಗಬಲ್ಲೆನು (ದೀಪಿಕಾ. ೩೦); ಊರ ದಾರಿಗಳಲ್ಲಿ ಯಾತಾಯಾತ ಒಂದು ಬಗೆಯಾಗಿ ನಿಂತೇ ಹೋಗಿದೆ (ಇಕ್ಕ. ೪). [ಸಂ.]

**ಯಾತು** (ನಾ). ೧. ದಾರಿಗ; ಪ್ರಯಾಣಿಕ. ೨. ರಾಕ್ಷಸ. ೩. ಪಿಶಾಚಿ. ೪. ಮಾಟ; ಮಾಯಾವಿದ್ಯೆ. ೫. ನೈಋತ್ಯ ದಿಕ್ಕಿನ ಅಧಿಪತಿ; ನಿಋತಿ: "ಯಾತು, ಯಾತುಧಾನಃ, ಕ್ರವ್ಯಾತ್, ರಾಕ್ಷಸಃ, ರಕ್ಷಸ್ . . . ಕೈಕಸೇಯಃ — ಈ ೯ ನೈಋತಿಯ ಪೆಸರ್" (ಹಲಾಯು. ೦೩-೭೩). [ಸಂ.]

**ಯಾತುಧಾನ** (ನಾ). ೧. = ಯಾತು ೨: "ರಕ್ಷಃ ಕೋಣಪ ನೈಋತ ರಾಕ್ಷಸಪುಣ್ಯಜನ ಯಾತುಧಾನ ಕ್ರವ್ಯಾದ ಕ್ಷಣದಾಚರರೆಂದು ಸದ್ಯಕಾರ್ಥಂಗಳ್ ನಿಶಾಟ ಪರ್ಯಾಯಂಗಳ್" (ವಸ್ತುಕೋ. ೯-೪೨). ೨. = ಯಾತು ೩. ೩. = ಯಾತು ೫: "ಯಾತು, ಯಾತುಧಾನಃ, ಕ್ರವ್ಯಾತ್, ರಾಕ್ಷಸಃ, ರಕ್ಷಸ್ . . . ಕೈಕಸೇಯಃ — ಈ ೯ ನೈಋತಿಯ ಪೆಸರ್" (ಹಲಾಯು. ೦೩-೭೩); ಯಾತುಧಾನ ಕುಬೇರ ಕಿನ್ನರ ಮಾತೃಗಣ ಕರ್ಣನಲಿ ಸುಮ ನೋಜಾತ ಚಿತ್ರರಥಾದಿ ಗಂಧರ್ವರು ವಿಪಕ್ಷದಲಿ ಭೂತಗಮೀಚಿಯಲಿ . . . ನಾರದಾದಿ ಮಹಾತಪಸ್ವಿಗಳತ್ತಲಾಯಿತು (ಕುಮ್ಯಾಕ. ೨೨-೮). [ಸಂ.]

**ಯಾತೃ** (ನಾ). ೧. = ಯಾತು ೧. ೨. ರಥವನ್ನು ನಡೆಸುವವನು; ಸಾರಥಿ. ೩. ನೆಗಣ್ಣಿ; ಓರಗಿತ್ತಿ: "ಯಾ(ತಾ)ತೃವೆಂಬುದು ನಗೆವೆಣ್ಣು" (ಹಲಾಯು. ೬೪-೩೫೪). [ಸಂ.]

**ಯಾತ್ಯ** (ಗು). ೧. ಚಿತ್ರಹಿಂಸೆಗೆ ಗುರಿಯಾಗುವ: ನರಕಯಾತನೆಗೆ ಗುರಿಯಾಗುವ. (ನಾ). ೨. ನರಕಯಾತನೆಗೆ ಈಡಾದ ಜೀವ: ಪ್ರೇತ: "ನಾರಕಾಃ, ಪ್ರೇತಾಃ, ಯಾತ್ಯಾಃ, ಅತಿವಾಹಿಕಾಃ — ಈ ೪ ನಾರಕರ್" (ಹಲಾಯು. ೦೦೩-೩). [ಸಂ.]

**ಯಾತ್ರಾದಾನ** (ನಾ). ೧. (ರಾಜನು ತನ್ನ) ಪ್ರಯಾಣದ ಆರಂಭ ಕಾಲದಲ್ಲಿ ಮಾಡುವ (ನವಧಾನ್ಯಗಳ) ದಾನ: ಧರ್ಮರಾಯನು ಬ್ರಾಹ್ಮಣೋತ್ತಮರಿಗೆ ಅನೇಕ ಧನಗಳನ್ನು ಯಾತ್ರಾದಾನವಾಗಿ ಕೊಟ್ಟು . . . ಹಸ್ತಿನಾಪುರಕ್ಕೆ ಹೊರಟನು (ಕೃವಾಸ. ೦೨೭). ೨. ರಥೋತ್ಸವದ ಆರಂಭದಲ್ಲಿ ಪೂಜಾರಿಯು ಕೊಡುವ ದಾನ: (೬). [ಸಂ.]

**ಯಾತ್ರಾರ್ಥಿ** (ನಾ). ತೀರ್ಥಕ್ಷೇತ್ರಗಳ ದರ್ಶನಾರ್ಥವಾಗಿ ಹೊರಟ ವನು; ಯಾತ್ರಿಕ: ಅನಂತರ ಕೃಷ್ಣದೇವರಾಯನು ವಾನಪ್ರಸ್ಥಾಶ್ರಮ ಸ್ವೀಕಾರ ಮಾಡಿದವನಂತೆ ಯಾತ್ರಾರ್ಥಿಯಾದನು (ಕಥಟ. ೧೧೦).
[ಸಂ. ಯಾತ್ರಾರ್ಥಿನ್]

**ಯಾತ್ರಾಸ್ಥಳ** (ನಾ). ಪುಣ್ಯಕ್ಷೇತ್ರ; ಪವಿತ್ರಸ್ಥಳ: ತೀರ್ಥಕ್ಷೇತ್ರ: ಯಾತ್ರಾಸ್ಥಳಗಳಿಗೆ ಜನರು ಹೋಗಿ ಬರುವುದು ಹೆಚ್ಚಾಗಿರುವುದರಿಂದ ಅಲ್ಲಿಗೆ ರಸ್ತೆಗಳನ್ನು ಸಾಮಾನ್ಯವಾಗಿ ಹಾಕಿರುವರು (ಭೂವಿವ. ೩೧).
[ಸಂ. ಯಾತ್ರಾಸ್ಥಲ]

**ಯಾತ್ರಿಕ** (ನಾ). ೧. ಯಾತ್ರೆ ಮಾಡುವವನು; ದಾರಿಕಾರ; ಪ್ರವಾಸಿ: ಯಾತ್ರಿಕರು ಮೈಸೂರು ತುಂಬುವ ಕಾಲ ತಪ್ಪಿದರೆ, ಅಲ್ಲಿ ಹೆಚ್ಚಿಗೆ ವ್ಯಾಪಾರವಿಲ್ಲ (ಮರಮ. ೩೨೩). ೨. = ಯಾತ್ರಾರ್ಥಿ: ಮೂವರು ಯಾತ್ರಿಕರೂ ಒಬ್ಬರ ಮುಖವನ್ನೊಬ್ಬರು ನೋಡತೊಡಗಿದರು (ಶ್ರೀರಾಯು. ೩). [ಸಂ.]

**ಯಾತ್ರೆ** (ನಾ). ೧. ಪಯಣ; ಪ್ರಯಾಣ: "ಯಾತ್ರೆ ಪ್ರಸ್ಥಾನಮೆನೆ ಪಯಣಮದು" (ಮಂಗರಾ. ೪೫-೨೭); ಮಂದಹಾಸದಲಸುರರಿಪು ನಗುತ್ತೆಂದ ನೆಲ್ಲಿಗೆ ಯಾತ್ರೆ ಕೋಪಿಸುವಂದವಾರೊಡನೆನಲು (ಜಭಾಗ. ೧೧-೭೨-೩೧); ಅಜ್ಜನ ಮನೆಯು ಯಾತ್ರೆಯು ಇದಕ್ಕೆ ಅನುಕೂಲವಾಯಿತು (ಮರಮ. ೨೬೭). ೨. ಪುಣ್ಯಕ್ಷೇತ್ರಗಳ ದರ್ಶನಾರ್ಥವಾಗಿ ಮಾಡುವ ಪ್ರಯಾಣ: ಇಂದು ನಾಳೆಯೆನುತ್ತ ಯಾತ್ರೆಗೆ ಬಂದವರ ಬೀಳ್ಕೊಡದೆ ಪರಮಾನಂದವನು ನಿತ್ಯಾತ್ಮ ಕೃಷ್ಣನು ಸಲಿಸಿದನು ಜಗಕೆ (ಜಭಾಗ. ೧೧-೭೩-೪೫); ಯಾತ್ರೆಗೆ ಬರುವವರನ್ನು ಬೇಡವೆಂದಾರೆ? (ಶ್ರೀರಾಯು. ೨೦೮). 'ಕಾಶೀಯಾತ್ರೆ', 'ತೀರ್ಥಯಾತ್ರೆ' ಪರಾ. ೩. ಯುದ್ಧಕ್ಕಾಗಿ ಸೈನ್ಯ ಹೊರಡುವುದು; ಕಾಳಗ ಅಥವಾ ಧಾಳಿಗಾಗಿ ಶಿಸ್ತಿನಿಂದ ಹೊರಡುವ ದಂಡಯಾತ್ರೆ: ಪ್ರಸ್ಥಾನ: "ಯಾತ್ರಾ, ವ್ರಜ್ಯಾ, ಅಭಿನಿರ್ಯಾಣಂ, ಪ್ರಸ್ಥಾನಂ, ಗಮನಂ, ಗಮಃ — ೬ ಜಯಾರ್ಥವಾಗಿ ಹೊರಟ ಅರಸಿನ ಪ್ರಯಾಣಕ್ಕೆ ಹೆಸರುಗಳು" (ಸಿದ್ಧಾಂಕಿ. ೨೭೭). ೩. (ಯಾವುದಾದರೂ ದೇವತೆಗೆ ವರ್ಷಕ್ಕೊಂದು ಸಲದಂತೆ ನಿಯತಕಾಲದಲ್ಲಿ ನಡೆಸುವ ತೇರಿನ) ಉತ್ಸವ; ಜಾತ್ರೆ. ೪. ಮೆರವಣಿಗೆ: ವಾದಿತ್ರಾರಾವಂ ವಂದಿವೃಂದಧ್ವನಿ ಜಯಜಯಕೋಲಾಹಲಂ ಮಂಗಲಾಲಂಕಾರಂ ಯಾತ್ರೋತ್ಸವ ಪ್ರಸ್ತುತಮೆನೆ ತಳರ್ದಂ ರಾಗದಿಂ ರಾಜರಾಜಂ (ಅದಿಪು. ೦೩-೪೩); ಉಣ್ಮದತ್ತು ಪೊಟಿಲೊಳ್ . . . ಬಂಧುರಂ ಮಂದನಾ ಯಾತ್ರೋತ್ಸಾಹನಿವೇದಕಂ ಕನಕಕೋಣಾಘಾತಭೇರೀರವಂ (ಶಂಕ್ರಪು. ೨-೦೦೯). ೫. ಅನುಸರಣೆ; ಹಿಂಬಾಲಿಸುವುದು: "ಅನುಸರಿಸುವಲ್ಲಿಯುಂ ಯಾತ್ರಾ ಎಂಬುದು" (ಹಲಾಯು. ೦೩೭-೩೨). ೬. ಜೀವನಾಧಾರ; ಜೀವನೋಪಾಯ. ೭. ಪದ್ಧತಿ; ಸಂಪ್ರದಾಯ; ರೂಢಿ.
[ಸಂ. ಯಾತ್ರಾ]

**ಯಾಥಾತ್ಮ್ಯ** (ನಾ). ನಿಜಸ್ಥಿತಿ; ಸ್ವಭಾವ: ಸಂಶಯವಿಪರ್ಯಯಸಾವ ದ್ಯಾನಧ್ಯವಸಾಯ ಸ್ವಭಾವರಹಿತಮಾಗಿ ಜೀವಾದಿಪದಾರ್ಥಯಾಥಾತ್ಮ್ಯ

ವಗಮುಂ ಸಮ್ಯಗ್ಜ್ಞಾನಂ (ಆದಿಪು. ೧೦-೬೬ ವ). [ಸಂ.]

**ಯಾಥಾರ್ಥ್ಯ** (ನಾ). ವಸ್ತುಸ್ಥಿತಿ ; ನಿಜಸ್ಥಿತಿ : ಯಾಥಾರ್ಥ್ಯವೆಂಬ ಪ್ರಾಮಾಣ್ಯವು ಸ್ವತಃಗ್ರಾಹ್ಯ (ಹಿಂದಶಾ. ೧೭೭). [ಸೆರಿ.]

**ಯಾದ₁** (ನಾ). (ಮರವನ್ನು ಹತ್ತುವ) ಒಂದು ಬಗೆಯ ಇಲಿ : ಎಳನೀರುಗಳನ್ನೆಲ್ಲಾ ಯಾದ ಕುಡಿದು ಉದುರಿಸಿದ್ದುವು (ಪಮ್ಮರು. ೨೭೦).

**ಯಾದ₂** (ನಾ). ಕ್ರೂರವಾದ ಜಲಚರಪ್ರಾಣಿ : "ಅಂಭಶ್ಚರೋಗ್ರಸತ್ವಂ ಯಾದಂ" (ಪತ್ತುಕೋ. ೨೨-೪). [< ಸಂ. ಯಾದಸ್]

**ಯಾದ₃** (ನಾ). ನೆನಪು ; ಸ್ಮರಣೆ ; ಜ್ಞಾಪಕ : ತರ್ಕಾ ಮತ್ತ ಯಾದ ಹಚ್ಚಿ ಶೋಧ ಮಾಡಿ ಕೇಳತೀನಿ ಒಂದ ಸೋಕಾ (ಕುಣ್ಣುಹ. ೪೨); ಒಂಧಿಷ್ಟು ಯಾದ ಇರಲಿ ಅವರ ಅನ್ನದ್ದು (ರಿಪಹ. II, ೪೨೨).

[← ಪಾರ. ಹಿಂ. ಮರಾ. ಯಾದ್]

**ಯಾದಃಪತಿ** (ನಾ). ೧. ಸಮುದ್ರ; ಕಡಲು : "ಸಮುದ್ರಃ, ಅಬ್ಧಿಃ . . . ಯಾದಃಪತಿಃ, ಅಪಾಂಪತಿಃ — ೧೫ ಸಮುದ್ರದ ಹೆಸರುಗಳು, ಅಂದರೆ ಕಡಲು" (ಸಿದ್ಧಾಂತಿ. ೭೭). ೨. ಪಶ್ಚಿಮದಿಕ್ಪಾಲಕ : ವರುಣ : ದಂತವಕ್ತ್ರಂ . . . ವನಮಾಲಾಸ್ಪದನೆಂದು ಯಾದಃಪತಿಯನದಿರ್ಪಿಯುಂ ಅದ್ರಿಧರನೆಂದು ಪವಮಾನನನವಮಾನಿಸಿಯುಂ (ಜಗಪಿ. ೬-೫೭ ವ). [ಸಂ.]

**ಯಾದಗಾರಿ** (ನಾ). ನೆನಪು ; ಸ್ಮೃತಿ : ಈ ಮಿತ್ರತ್ವ ಶಾಶ್ವತವಾಗಿ ನಡೆದು ಬರುವುದಕ್ಕೆ ಯಾದಗಾರಿ ಗುರ್ತು ದೋಸ್ತಿಮಾರ್ಗದಿಂದ ಕೇಳುತ್ತೇವೆ (ರಾಜೇಂದ್ರ. ೬೮). [← ಪಾರ. ಹಿಂ. ಮರಾ. ಯಾದ್‌ಗಾರೀ]

**ಯಾದವ** (ಗು). ೧. ಯದುವಿನಿಂದ ಬಂದ ; ಯದುಕುಲಕ್ಕೆ ಸೇರಿದ : ಯಾದವವಂಶದೊಳ್ ನೆಗಟ್ದ ಚಕ್ರಧರಂಗೆ ಮುರಾಂತಕಂಗೆ . . . ಸೇಸೆಯನಿಕ್ಕಿದರ್ (ಬಂಪಹ. ೦೨-೭೨). (ನಾ). ೨. ಯದುವಂಶಕ್ಕೆ ಸೇರಿದವನು : ಧನ್ಯರೆಮ್ಮ ಪೊಲದಾರ್ ಮುನ್ನಾದವರ್ ಯಾದವರ್ (ಜಗಪಿ. ೩-೫) ; ಯಾದವರು ಕೌರವರೊಳುಂಟೇ ಭೇದ (ಕುವ್ಯಾಉ. ೦-೨೭). ೩. ಕೃಷ್ಣ : ಯಾದವ ನೀ ಬಾ ಯದುಕುಲನಂದನ (ಪುರಂದ. ೦-೦೩ ಪಲ್ಲ). ೪. ಹೊಯ್ಸಳವಂಶ ಮತ್ತು ಆ ವಂಶಕ್ಕೆ ಸೇರಿದವನು : ಸಳನೆಂಬ ಯಾದವಂ ಪೊಯ್ಸಳನಾದಂ (ಎಕ. V, ಅರಸೀ. ೦೨೭-೦೦ ; 1185). 'ಯಾದವಕುಳ' ಪರಾ. ೫. ಸೇವುಣವಂಶದವನು : ಈ ಪ್ರಕಾರ ಯಾದವ ಅರಸರು ಕರ್ನಾಟಕದ ಉತ್ತರಭಾಗವನ್ನು ಕ್ರಿ.ಶ. ೧೩೧೧ನೇ ವರ್ಷದವರೆಗೆ ಆಳಿದರು (ಕಭಾಗ. ೩೩೦).

ಯಾದವರಬಿಯ = ಯಾದವರ ಒಡೆಯ ; ಕೃಷ್ಣ : ಅವಧಾನ ಜೀಯ ನಮ್ಮಾ ಪೊಳಲ ಪೊರೆಗೆ ಯಾದವರಜಿಯನಿದೆ ಬಂದನು (ಕೃಬಾಭಾ. ೨-೪೭). [ಸಂ.]

**ಯಾದವಕಲಹ** (ನಾ). ೧. ಯಾದವರಲ್ಲಿಯೇ ಉಂಟಾದ ಜಗಳ, ಹೊಡೆದಾಟ. ೨. (ಅಲಂ) ಅಂತಃಕಲಹ ; ಒಳಜಗಳ : ಈ ಯಾದವ ಕಲಹದಿಂದ ಅವರೆಲ್ಲರೂ ಹತರಾದರು (ಮಹಿಸ. ೬೫). [ಸಂ.]

**ಯಾದವಕುಲ, ಯಾದವಕುಳ** (ನಾ). ೧. ಯಾದವರ ವಂಶ ; ಯದುಕುಲ. ೨. = ಯಾದವ ೩ : ಯಾದವಕುಲನಿಸೆ ತಿಂತಿಣಿಯಾದವನೀಪಾಲಕುಲದ ಹಯಸಂತತಿಯುಂ ಸಾದಿಗಳುಂ ರಣರಾದ್ರಿರಸಾದಿಗಳಂ ತುಱುಗಿ ನಟ್ಟುವಸ್ತ್ರಾವಳಿಗಳ್ (ಜಗಪಿ. ೪-೫೪). **ಯಾದವಕುಳ** : ೩. = ಯಾದವ ೪ : ದ್ವಾರಾವತೀಪುರವರೇಶ್ವರಂ ಯಾದವಕುಳಾಂಬರದ್ಯುಮಣಿ . . . ವೀರ ವಿಷ್ಣುವರ್ಧನದೇವಂ (ಎಕ. V, ಚನ್ನರಾ. ೦೪೬-೨ ; 1126). [ಸಂ.]

**ಯಾದವಕುಳ** 'ಯಾದವಕುಲ' ನೋ.

**ಯಾದವಿ₁** (ಗು). ೧. ಯಾದವರಿಗೆ ಸಂಬಂಧಿಸಿದ. (ನಾ). ೨. (ಅಲಂ) ಅಂತಃಕಲಹ : ಒಳಜಗಳ : ಅದೊಂದು ಯಾದವಿಯ ಪರಿಣಾಮ ಬಿಟ್ಟೆನ್ (ಪುರಪ. ೩೭). [< ಸಂ. ಯಾದವೀಯ]

**ಯಾದವಿ₂** (ನಾ). ೧. ಯದುವಂಶಕ್ಕೆ ಸೇರಿದವಳು. ೨. ವಸುದೇವನ ಸಹೋದರಿಯೂ ಶಿಶುಪಾಲನ ತಾಯಿಯೂ ಆದ ಸಾತ್ವತಿ : ದಿಗಿಲ್ತು – ದುಃಖಿಗಳಿಂದ ಯಾದವಿಯು ಕೃಷ್ಣನಿರದ ವರವನ್ನು ಕೇಳಿದಳು (ಬಜಶಾ. ೬೪). ೩. ದುರ್ಗೆ; ಪಾರ್ವತಿ. ೪. ಕುಂತಿ. [ಸಂ. ಯಾದವೀ]

**ಯಾದವೀಕಲಹ** (ನಾ). (ಅಲಂ) ಒಳಜಗಳ ; ಅಂತಃಕಲಹ : ಹನ್ನೊಂದನೆಯ ಶತಮಾನದಿಂದಾಚೆ . . . ಯಾದವೀಕಲಹಗಳು ಎದ್ದು, ದೇಶ ನಾನಾ ರಾಜರ ಕೈಸೇರಿತು (ಶಾರದ. ೩೪೭). [ಸಂ.]

**ಯಾದಸ** (ನಾ). ೧. = ಯಾದ₂ : ಉಪಧಿಯೊಳ್ಮಣುಗಲೋರಂತೆ ಯಾದಸಗಳುಂಡು ಸುಖಿಸಲಿ (ವಂಕಾರಾ. ೩-೫-೧೫). ೨. ನೀರು ; ಜಲ. [ಸಂ. ಯಾದಸ್]

**ಯಾದಸಾಂನಾಥ** (ನಾ). ಜಲಚರಗಳ ಅಧಿಪತಿ; ವರುಣ. [ಸಂ.]

**ಯಾದಸಾಂಪತಿ** (ನಾ). = ಯಾದಸಾಂನಾಥ : "ಪ್ರಚೇತಾ, ವರುಣಃ, ಪಾಶೀ, ಯಾದಸಾಂಪತಿಃ, ಅಪ್ಪತಿಃ – ೫ ವರುಣನ ಹೆಸರುಗಳು" (ಸಿದ್ಧಾಂತಿ. ೨೪). [ಸಂ.]

**ಯಾದಾಸ್ತ** 'ಯಾದಾಸ್ತು' ನೋ.

**ಯಾದಾಸ್ತು, ಯಾದಾಸ್ತ** (ನಾ). ೧. ನೆನಪಿಗೆ ಬರಲು ಸಹಾಯಕವಾದ ಟಿಪ್ಪಣಿಕಾಗದ, ಸೂಚನಾಪತ್ರ ; ಜ್ಞಾಪಕಪತ್ರ : ಮುತ್ತುಭಟ್ಟನ ಕೈಯಲ್ಲಿ ಒಂದು ಯಾದಾಸ್ತು ಬರಕೊಟ್ಟು ಕಳುಹಿದಲ್ಲಿ (ರಾಜೇಂದ್ರ. ೫೪) ; ಒಂದು ಯಾದಾಸ್ತು ತೋರಿಸಿದರು. ಅದು ಸಭೆಯ ನೋಟೀಸು (ಕರವೀ. ೦೦೫). ೨. "ಸರಿಸಮಾನರಾದ ಅಧಿಕಾರಿಗಳಿಗೆ ಬರೆಯುವ ಸರ್ಕಾರಿ ಒಕ್ಕಣೆ" (ಪಮ್ಮರು. ೩೫೩ ಟಿಪ್ಪಣಿ) : ಇತ್ತಿಲ್ಲೇ ಅಂತ ಬರೆಯಬೇಕಾದಲ್ಲಿ ಯಾದಾಸ್ತು ಅಂತ ಬರೆಯುತ್ತಿದ್ದರು (ಪಮ್ಮರು. ೦೫೩). **ಯಾದಾಸ್ತ** : ೧. ಶ್ರೀ ಪರಕಾಲಸ್ವಾಮಿಗಳವರ ಮಠಕ್ಕೆ ಸಾಗ್ಸಿಕೊಂಡು ಬರುವ ಅಕ್ಕಿ ಗೋಣಿಗೆ ಮಠದ ಪಾರಪತ್ಯಗಾರ ಯಾದಾಸ್ತ ಮೇರೆಗೆ . . . ಸುಂಕದ ಬಗ್ಗೆ ತಡಿಯದೆ ಬಿಡುವುದು (ಮೈಆ. ೦೯೩೮, ೨೦-೩ ; 1810).

[← ಪಾರ. ಹಿಂ. ಯಾದ್‌ದಾಶ್ತ್; ಮರಾ. ಯಾದ್‌ದಾಸ್ತ್]

**ಯಾದಿ** (ನಾ). ನೆನಪಿಗಾಗಿ ಬರೆದಿಟ್ಟುಕೊಂಡ ವಸ್ತುಗಳು, ವ್ಯಕ್ತಿಗಳ ಹೆಸರು ಮೊದಲಾದುವುಗಳ ಪಟ್ಟಿ : ಒಂದೇ ಸಾರಿಗೆ ಎಲ್ಲ ಸಾಮಾನುಗಳನ್ನು ತಂದುಬಿಡಬೇಕೆಂದು ಎಲ್ಲದರ ಯಾದಿ ಮಾಡಿಕೊಳ್ಳುತ್ತೇನೆ (ಸಂಬಿಗ. ೩); ಹೊಸಪುಸ್ತಕಗಳ ಯಾದಿಯನ್ನು . . ನಿನಗೆ ತರಿಸಿಕೊಡುತ್ತೇನೆ (ಸಮಃಕ. ೩೦೩) ; ನಾನು ಈಗಾಗಲೇ ಈ ಹಳ್ಳಿಯಲ್ಲಿ ಹೊಲವಿಲ್ಲದ ಜನರ ಯಾದಿಯನ್ನು ಸಿದ್ಧಪಡಿಸಿದ್ದೇನೆ (ಮಣ್ಣಮ. ೩೪೬). [← ಮರಾ. ಯಾದೀ]

**ಯಾದೃಚ್ಛಿಕ** (ಗು). ೧. ಸ್ವಚ್ಛಂದವಾದ ; ನಿಯಮಕ್ಕೆ ಒಳಪಡದ : ಒಂದು ಪರಿಮಾಣದ ಅಳತೆಯನ್ನು ಹತ್ತಾರು ಸಾರಿ ಮಾಡಿದಾಗ ಅದರ ಲೋಪ ಪ್ರತಿಸಾರಿಯೂ ಒಂದೊಂದು ಬೆಲೆಯುಳ್ಳದ್ದಾದರೆ ಅದನ್ನು ಯಾದೃಚ್ಛಿಕಲೋಪವೆನ್ನುತ್ತಾರೆ (ಕಬಿಕೋ. I, ೩೯೦). ೨. ಅನಿರೀಕ್ಷಿತವಾದ; ಆಕಸ್ಮಿಕವಾದ : ಕೇವಲ ಬಾಹ್ಯಸುಖಗಳಲ್ಲಿ ಆಸಕ್ತನಾಗಿರುವವನು ಕರ್ಮಪರಿಪಾಕದಿಂದಲೋ, ಯಾದೃಚ್ಛಿಕ ಸುಕೃತದಿಂದಲೋ ಅಧ್ಯಾತ್ಮ ವಿಷಯವನ್ನು ಅರಿಯುವನು (ಶಾರದ. ೨೭೫). [ಸಂ.]

**ಯಾದೃಚ್ಛಿಕಂ** (ಅ). ಮನ ಬಂದಂತೆ ; ಸ್ವಚ್ಛಂದವಾಗಿ ; ಬೇಕಾದ ಹಾಗೆ : ಪದ್ಮಣಾರ್ಯಂ . . . ಶಿವೈಕ್ಯಪ್ರಕರಸಹಿತನಾಗಿ ಲಿಂಗಾರ್ಚನಮನಾ ಕೆಱೆಯೊಳುರುತರಾನಂದದಿಂ ಯಾದೃಚ್ಛಿಕಂ ರಚಿಸಿ ಹರ್ಷದಿಂ ಬಂದು ನಿಂದು (ಪದ್ಮರಾ. ೬-೯೩). [ಸಂ.]

**ಯಾದೃಚ್ಛಿಕವಾದ** (ನಾ). ಕಾರ್ಯಕಾರಣಭಾವವನ್ನು ಒಪ್ಪದೆ, ಎಲ್ಲವೂ ತನ್ನಿಂದ ತಾನೆ ಆಗುವುದೆಂದು ಹೇಳುವವರ ವಾದ ; ಸ್ವಭಾವವಾದ ; ನಿರಪೇಕ್ಷವಾದ : ಒಬ್ಬ ಪುರುಷನ ಬುದ್ಧಿಪೂರ್ವಕ

ಇಚ್ಛಾಸಂಕಲ್ಪ ಪ್ರಯತ್ನಗಳಿಂದ ಈ ಪರಿಣಾಮಪರಂಪರೆ ಉಂಟಾಗುವ ಹಾಗೆ ಕಂಡುಬರುವುದಿಲ್ಲ. ಇದಕ್ಕೆ ನಿಯತವಾದ ನಿಯಾಮಕವಿಲ್ಲದಿರುವುದರಿಂದ ಇದೇ ಯಾದೃಚ್ಛಿಕವಾದವು (ಹಿಂದಸಾ. ೧೩). [ಸಂ.]

**ಯಾದೃಶ** (ಗು). ಯಾವುದರಂತಹ ; ಯಾವ ಬಗೆಯ ;. ಯಾವ ರೀತಿಯ. [ಸಂ.]

**ಯಾದೋಜಾತಿ** (ನಾ). (ಉಗ್ರವಾದ) ಜಲಚರಗಳ ವರ್ಗ : ಹೇಳಲಾರಳವು ಗುರುಕಥನವಿಳೆಯುಂ ಬಳಸಿ ವೇಳಾತಟಂಗಳಿಂ . . . ಕರಿ ಮಕರ ನೀರಾನೆ ಯಾದೋಜಾತಿ ಜಾಳವಿದ್ರುಮರತ್ನಬುದ್ಬುದಾಫೇನಂಗಳೋಳಿಯಿಂದೆಸೆವ ನೀರಾಕರಂ ಭೂಮಂಡಲಕ್ಕೆ ಪರಿವೇಷದಂತೆ (ಸಿದ್ಧರಾ. ೧-೦೩). [ಸಂ.]

**ಯಾದೋನಾಥ** (ನಾ). = ಯಾದಸಾಂನಾಥ : " ವರುಣಂ ಪಶ್ಚಿಮದಿಕ್ಪತಿ ಶರನಿಧಿಪತಿ ಪಾಶಪಾಣಿ ಯಾದೋನಾಥಂ " (ವಸ್ತುಕೋ. ೬-೯೩). [ಸಂ.]

**ಯಾನ** (ನಾ). ೧. ಹೋಗುವಿಕೆ ; ಚಲನೆ ; ಸಂಚಾರ : ಹಕ್ಕಿಗೊದಗಿತು ಮತ್ತೆ ಬಾನಯಾನ (ಭಾವಗೀ. ೧೦೦). ೨. ಪಯಣ ; ಪ್ರವಾಸ : ಯಾನಶ್ರಮಹರವಾಗೆನಿತಾನುಂ ವಿಜಯಾರ್ಧಶೈಲಸಾನುಸ್ಥಳದೊಳ್ ತಾನಿರ್ದಂ ವಜ್ರಾಯುಧಭೂನಾಥಂ ಸೇನೆವೆರಸು ಕೆಲವಾನು ದಿನಂ (ಶಾಂತೀಶ್ವ. ೧೨-೦೬). ೩. ನಡೆ ; ನಡಗೆ : ಯಾನಸೌಷ್ಠವದೊಲವಿಂ ನೆಲನುಗ್ಗಡಿಪಂತೆ ಮುಂದೆ ಸಂಧಿಸಿದುದು ನೂಪುರಸ್ವನಸಮಾಹೃತಗೇಹಮರಾಳಮಂಡಲಂ (ಚಂದ್ರಪ್ರ. ೦೦-೯) ; ಕಳರವಮಂ ಪಿಕಾಂಗನೆಗೆ ಮಂಜು ಮೃದೂಕ್ತಿಗಳಂ ಪೊದಳ್ದ ಪೆಣ್ಗಿಳಿಗೆ ನವೀನಯಾನಮನನೂನಮರಾಳಿಗೆ ಶಿಕ್ಷೆಗೆಯ್ಯಲೋಪಳಿ ನಡೆ ನಂದನಕ್ಕೆ (ರಾಜಶೇ. ೧೦-೦೦). ೪. ಪಲ್ಲಕ್ಕಿ ; ಮೇನೆ : ಮೀನು ಹಿಡಿಯುವವನು . . . ರಥದ ಮೇಲಾಗಲಿ ಯಾನದ ಮೇಲಾಗಲಿ ಹೋಗುವುದನ್ನು ನೀವು . . . ಕಂಡಿರುವಿರ ? (ಬುದ್ಧಕ. ೦೬೨). ೫. ರಥ ಮೊದಲಾದ ಯಾವುದಾದರೂ ವಾಹನ : " ಯಾನಂ, ಯುಗ್ಯಂ, ಪತ್ರಂ, ಧೋರಣಂ – ೪ ಸರ್ವಂ ವಾಹನಂ. ನಾನಾ ಬಗೆಯಾದ ಸಕಲ ವಾಹನಗಳಿಗೂ ಹೆಸರುಗಳು" (ಸಿದ್ಧಾಂತ. ೨೩೪). ' ಯಾನಶಾಲೆ ' ಪರಾ. ೬. ವಾಹಕ ; ಮಾಧ್ಯಮ : ಪರಮಾನುಭವಗಳುಲಿಯನುಭವಿಗಳೊಳಕಿವಿಗೆ ಒರಟು ಯಾನವೊ ಭಾಷೆ (ಮಂಕುತಿ. ೬೩). ೭. ಕಾಲುವೆ ; ನಾಲೆ : " ಯಾನಂ, ಸಾರಿಣೀ – ಈ ೨ ಹರಿಕೇಣಿ" (ಹಲಾಯು. ೦೩೦-೬೩). ೮. ಮಾರ್ಗ ; ದಾರಿ : ' ಯಾನಯುಗಳ ' ಪರಾ. ೯. [ರಾಜನೀ] ರಾಜನ ಷಡ್ಗುಣಗಳಲ್ಲಿ ಒಂದು ; ವೈರಿಗಳ ಮೇಲೆ ಏರಿ ಹೋಗುವುದು ; ಯುದ್ಧಕ್ಕೆ ಹೊರಡುವುದು : ಕಿಕ್ಕಿರಿಗಿಚಿದ ಧವಳಚ್ಛತ್ರಂಗಳೊಳ್ ತಳ್ತೊಪ್ಪುದ್ದು ಯಾನವಿಮಾನಂಗಳೊಳ್ ಪಾಯ್ವಾಯ್ದು ತಟ್ಟಿಕ್ಕುವ ಧವಳಚಮರರುಹಂಗಳ ಮುಂದೆ ಪೊಳೆವ ದುಗ್ಧಾಬ್ಧಿ ಫೇನಪಿಂಡಪಾಂಡುರಂಗಳಪ್ಪೊಪ್ಪುರಂಗಳೊಳಂ . . . ಪರಭಾಗಮುಡೆದು (ಶಾಂತಿಪು. ೦೦-೨೦ ವ); ಯಾನಲೀಲೆಯುಮಂ ನೋಟ್ಟ ವಿಯಚ್ಚರರ್ಗೆ ತೆಚಿಪರಿಮಾಡಿತ್ತು ಕಣ್ಣಾರ್ವಿನಂ (ಪುಷ್ಪದಂ. ೩-೯೩). ' ಷಾಡ್ಗುಣ್ಯ' ಪರಾ. ೧೦. [ಬೌದ್ಧ] ಜ್ಞಾನದ ಅರಿವನ್ನು ಉಂಟುಮಾಡುವ ಕ್ರಮ ; ನಿರ್ವಾಣಪ್ರಾಪ್ತಿಯ ಮಾರ್ಗ : ' ಮಹಾಯಾನ ', ' ಹೀನಯಾನ ' ಪರಾ. [ಸಂ.]

**ಯಾನನಾಗ** (ನಾ). ಸವಾರಿಯ ಆನೆ ; ಪ್ರಯಾಣಕ್ಕೆ ಬಳಸುವ ಆನೆ : ದಿಗ್ವಿಜಯಕ್ಕೆ ಜನೇಂದ್ರಚಂದ್ರದೇವಂ ಪೂಜಿಮಟ್ಟನೇಜಿ ಜಯಮಂ ಜಯಪರ್ವತಯಾನನಾಗಮಂ (ಶಾಂತಿಪು. ೦೦-೦೪೪). [ಸಂ.]

**ಯಾನಪಾತ್ರ** (ನಾ). ದೋಣಿ ; ನಾವೆ : ಪರಿವೃತನ್ಸಪತಂಗದೇವಮಾರ್ಗಾಂತರಗತಬೋಧವಿಶೇಷಯಾನಪಾತ್ರಂ ಪರಮಗುಣಪರೀತ ಕಾವ್ಯರತ್ನಾಕರದುರುಪಾರಮನೆಯ್ದುಗುಂ ಮಹಾತ್ಮಂ (ಕವಿರಾ. ೩-೨೩೦) ; ದ್ರೋಣಿ ಯಾನಪಾತ್ರಾದಿಗಳೊಳ್ ಜಲದುರ್ಗೋತ್ತರಣಮುಮನುಪದೇಶಂಗೆಯ್ದು (ಆದಿಪು. ೬-೬೨ ವ). [ಸಂ.]

**ಯಾನಯುಗಳ** (ನಾ). [ವೇದಾಂತ] ಪರಲೋಕಕ್ಕೆ ಹೋಗುವ ಎರಡು ಮಾರ್ಗ ; ಬ್ರಹ್ಮಲೋಕವನ್ನು ಸೇರುವ ಎರಡು ಮಾರ್ಗ : ದೇವಯಾನ ಮತ್ತು ಪಿತೃಯಾನ : ಯಾನಯುಗಳದ ಜನನಮಾರ್ಗವಿಧಾನ ನಿರ್ಣಯವರುಹಿದನು (ಗಗತಾ. ೮ ಸೂಚನೆ). [ಸಂ. ಯಾನಯುಗಲ]

**ಯಾನಶಾಲೆ** (ನಾ). ರಥ ಮೊದಲಾದ ವಾಹನಗಳನ್ನು ಇಟ್ಟಿರುವ ಸ್ಥಳ ; ವಾಹನಶಾಲೆ : ಯಾನಶಾಲೆಗೆ ನಡೆದನೇರಿದನು ಧನದನಿಂ ಗೆಲ್ದು ತಂದಾ ಕಾಮಗಮನದ ವಿಮಾನವನು (ಶ್ರೀರಾಮಪ. ೨೦೬-೦೩೬). [ಸಂ. ಯಾನಶಾಲಾ]

**ಯಾನಹಸ್ತಿ** (ನಾ). = ಯಾನನಾಗ : ವಿಜಯಾರ್ಧಪರ್ವತಮೆಂಬ ಯಾನ[ಪಾಠಾಂ. ಗ]ಹಸ್ತಿಯುಂ ಪವನಂಜಯಮೆಂಬ ತುರಗರತ್ನಮುಂ (ಆದಿಪು. ೦೩-೩ ವ). [ಸಂ. ಯಾನಹಸ್ತಿನ್]

**ಯಾನೆ** (ಅ). ಎಂದರೆ ; ಅರ್ಥಾತ್ ; ಅಂದರೆ : ' ಮದ್ದು' ಯಾನ 'ಮಾಧವ' ಶಾಲೆಯ ಹೇಳಿಯನ್ನು . . . ವ್ಯಯಿಸಿದವನಲ್ಲ (ಶಾರುದಾ. ೩೩); ಹೆಂಡತಿಯ ತಾಯಿಯ ಸಹೋದರ ಯಾನೆ ಹೆಂಡತಿಯ ಸೋದರಮಾವನು ಸಾಧುವಾದ ಪ್ರಾಣಿಯೆಂದು ಲೋಕದ ಜನರ ನಂಬಿಕೆ (ಹಿಸಿರೆವಾ. ೩೭).
[ ← ಅರ. ಯಅನೀ ; ಹಿಂ. ಮರಾ. ಯಾನೇ. ಯಾನೀ ]

**ಯಾಪನ** (ನಾ). ೧. (ಸಮಯವನ್ನು) ಕಳೆಯುವುದು, — ನವೆಸುವುದು ; ಕಾಲಕ್ಷೇಪ. ೨. ತಡ ; ವಿಳಂಬ ; ನಿಧಾನ ಮಾಡುವಿಕೆ. ೩. ಜೀವನೋಪಾಯ ; ಜೀವನಾಧಾರ. ೪. ನಡೆ ; ನಡಗೆ : "ಯಾನಂ. ಯಾಪನಂ, ಯಾಪನೀಯಂ, ಯಾತ್ರಾ — ಈ ೪ ನಡೆ" (ಕಾಳಿಕ್ಕ. ೦೬೩). [ಸಂ.]

**ಯಾಪನೀಯ** (ನಾ). ೧. ನಡೆ ; ನಡಗೆ : " ಯಾನಂ. ಯಾಪನಂ, ಯಾಪನೀಯಂ, ಯಾತ್ರಾ — ಈ ೪ ನಡೆ " (ಕಾಶಿಕ್ಕ. ೦೬೩). ೨. [ಜೈನ] ಜೈನರಲ್ಲಿ ಒಂದು ಪಂಗಡ : ಜೈನರಲ್ಲಿ ಯಾಪನೀಯ, ನಿರ್ಗ್ರಂಥ, ಕೂರ್ಚಕ, ಶ್ವೇತಪಟ. ಆಹರಿಷ್ಟ ಸಂಘಗಳೆಂಬ ಪಂಗಡಗಳಿದ್ದುವು (ಕರ್ನಾಟ. ೪೦); ಉತ್ತರ ಕರ್ಣಾಟಕದಲ್ಲಿ ಯಾಪನೀಯದ ಅನೇಕ ಕೇಂದ್ರಗಳು . . . ನವಲ್‌ಗುಂದ ಮುಂತಾದ ಕಡೆ ಇದ್ದುವು (ಕಣಾಟ. ೭೩). ' ಯಾಪನೀಯ ಸಂಘ ' ಪರಾ. [ಸಂ.]

**ಯಾಪನೀಯಸಂಘ** (ನಾ). [ಜೈನ] ದಿಗಂಬರ ಮತ್ತು ಶ್ವೇತಾಂಬರ ಪಂಗಡಗಳ ಮಿಶ್ರಣವೆನಿಸುವ ಸಂಘ ; ೭ ಕಲ್ಯಾಣವೆಂಬ ನಗರದಲ್ಲಿ ವಿಕ್ರಮನ ಮರಣಾನಂತರ ೯೦೫ನೇ ವರ್ಷ ಕಳೆದಾಗ (ಇಲ್ಲಿ ಕಾಲದ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಕೆಲವರು ೨೦೫ ವರ್ಷಗಳೆನ್ನುತ್ತಾರೆ) ಶ್ರೀಕಲಶ ಎಂಬ ಹೆಸರಿನ ಶ್ವೇತಾಂಬರಸಂಪ್ರದಾಯದ ಸಾಧು ಈ ಸಂಘವನ್ನು ಸ್ಥಾಪಿಸಿದನು. ಇದು ದಿಗಂಬರ ಮತ್ತು ಶ್ವೇತಾಂಬರ ಸಂಘಗಳೆರಡರ ತತ್ತ್ವವನ್ನೂ ಒಪ್ಪುತ್ತದೆ. ಇದರಲ್ಲಿ ಗುರುಗಳ ಪರಂಪರೆ ದೊರೆತಿಲ್ಲ : ನುತ ಯಾಪನೀಯಸಂಘ[ಪ್ರ]ತೀತ ಕಣ್ಡೂಗರ್ಣಾಬ್ಧಿ ಚಂದ್ರಮರೆಂದೀ ಕ್ಷಿತಿವಳಿಯಂ ಪೊಗಳ್ದನಮುನ್ನತಿವೆತ್ತಮರ್ಗನಿ ದೇವದಿವ್ಯಮುನೀಂದ್ರರ್ (ಶಾಇ. XX. ೦೬-೩೦; ೪೮೦) ; ಯಾಪನೀಯ ಸಂಘಕ್ಕೆ ಕಾರಣಕರ್ತನಾದವನು ಉತ್ತರಭಾರತದ ಶ್ವೇತಾಂಬರಸಂಪ್ರದಾಯದ ವ್ಯಕ್ತಿ (ಕಣಾಟ. ೭೬). [ಸಂ.]

**ಯಾಪೆ** (ನಾ). (ಕರಾ) ಬಿದಿರಿನಿಂದ ಹೆಣೆಯುವ ಒಂದು ಬಗೆಯ ಚಾಪೆ : ಬೇಸಾಯಗಾರರ ಗಮನವೆಲ್ಲ . . . ಹಳ್ಳಕ್ಕೆ ಯಾಪೆ ಕಟ್ಟುವುದು, ಹತ್ತು ಮೀನು ಕಡಿಯುವುದು ಮೊದಲಾದ ಮೀನುಬೇಟೆಯ ಮೃಗಯಾವ್ಯಸನದಲ್ಲಿಯೂ ಆಸಕ್ತವಾಗಿತ್ತು (ಮಲೆಮ. ೬೨೬). [ ? ]

**ಯಾಪ್ಯ** (ಗು). ೧. (ಕಾಲದಂತೆ) ಕಳೆಯಬೇಕಾದ; ಸವೆಸಬೇಕಾದ :(*). ೨. ನಿವಾರಿಸಬೇಕಾದ ; ಹೊರತಳ್ಳಬೇಕಾದ ; ಬಿಡಬೇಕಾದ. ೩. ಕ್ಷುದ್ರವಾದ ; ಕುತ್ಸಿತವಾದ : "ಕುತ್ಸಿತಂ ಕುಪೂಯಂ ಯಾಪ್ಯಂ" (ವಸ್ತುಕೋ. ೦೦೬-೩೯). (ನಾ). ೪. ತಂದೆಯ ಹಿರಿಯ ಸಹೋದರ. ೫. ಗುಣಪಡಿಸಲು ಸಾಧ್ಯವಾಗದ, ಆದರೆ ಚಿಕಿತ್ಸೆಯ ಮೂಲಕ ನಿಯಂತ್ರಿಸಬಹುದಾದ ರೋಗ : ಅವುದಾದರೊಂದು ವ್ಯಾಧಿಯು ಔಷಧ ಸೇವನೆ ಪರಿಯಂತರ ಹೆಚ್ಚದೆ, ತಗ್ಗದೆ ಇದ್ದು, ಆ ಔಷಧವನ್ನು ಬಿಟ್ಟು ಬಳಿಕ ಎಂದಿನ ಮರ್ಯಾದೆಯಲ್ಲಿ ಯಾವಾಗ ಹೆಚ್ಚುತಲಿದ್ದಿತೋ ಆ ರೋಗವೂ ದೋಷಾಂತರದೊಡನೆ ಕೂಡಿರುವ ರೋಗವೂ ಯಾಪ್ಯಸಾಧ್ಯಗಳೆಂದರಿವುದು (ಕಳಸ್ಯ. ೨೨). [ಸಂ.]

**ಯಾಪ್ಯಯಾನ** (ನಾ). ಪಲ್ಲಕ್ಕಿ ; ಮೇನೆ : ಪರಿಚಾರವ್ಯಾಪಾರನಿರತರ್ . . . ಯಾಪ್ಯಯಾನಮನವಟಯಿಸಿದಾಗಳ್ (ವರ್ಧಮಾ. ೦೩-೯ ವ). [ಸಂ.]

**ಯಾಪ್ಯಯಾನಕ** (ನಾ). = ಯಾಪ್ಯಯಾನ : "ಯಾಪ್ಯಯಾನಕಮುದು ಶಿಬಿಕಾಖ್ಯಾನಂ" (ವಸ್ತುಕೋ. ೬೬-೪೦). [ಸಂ.]

**ಯಾಭ** (ನಾ). ರತಿಕ್ರೀಡೆ ; ಸಂಭೋಗ : "ನಿಧುವನ ರತ ಯಾಭ ಗ್ರಾಮ್ಯಧರ್ಮನಾಮಂ ವ್ಯವಾಯಮುದು ಮೈಥುನಮುಂ" (ವಸ್ತುಕೋ. ೩೪-೦೨). [ಸಂ.]

**ಯಾಮ** (ನಾ). ೧. ಹತೋಟಿ ; ನಿಯಮನ ; ನಿಗ್ರಹ. ೨. ದಿನದ ಎಂಟನೆಯ ಒಂದು ಭಾಗ ; ಮೂರು ಗಂಟೆಯ ಕಾಲ ; ಪ್ರಹರ ; ಜಾವ : "ಯಾಮಃ, ಪ್ರಹರಃ — ೨ ಜಾವದ ಹೆಸರುಗಳು. ಅಂದರೆ ಅಹೋರಾತ್ರದ ೬೦ ಘಳಿಗೆಗಳ ೮ ನೇ ಭಾಗವಾದ ೭ ಘಳಿಗೆಯುಳ್ಳ ಝಾಮ, ಪೊತ್ತು" (ಸಿದ್ಧಾಂತಿ. ೩೬) ; ಎರಡನೆಯ ಯಾಮ ಆರಂಭವಾಗುತ್ತಿದೆ. ನನಗೆ ವಿಶ್ರಮಿಸಿಕೊಳ್ಳಲು ಸಾಧ್ಯವಿಲ್ಲ (ಅಗ್ನಿಹ. ೨೭) ; ಯಾಮವು ಕಳೆದರೂ ಬರಲಿಲ್ಲವಾತನು ದೂತಿಯೆ ಹೋಗೋಣ, ಏಳು (ಇಂಕಾಕ. ೦೬೭-೨೨). ೩. ಚಲನೆ ; ಮಾರ್ಗಕ್ರಮಣ : ಯಾಮದ್ವಿಪೇಂದ್ರ ಪ್ರಕಾನ ಕಟೋನ್ಮುಕ್ತಮದೌಘಕರ್ದಮಿತಕಾಂತಂ ರಾಜಗೇಹಾಜಿರಂ (ಶಂಪ್ರಪು. ೦-೦೫೦).

**ಯಾಮಪೂಜೆ** = ಸಾಯಂಕಾಲದ ಸಮಯದಲ್ಲಿ ಮಾಡುವ ಪೂಜೆ ; ಪ್ರದೋಷ ಪೂಜೆ. [ಸಂ.]

**ಯಾಮತೂರ್ಯ** (ನಾ). (ರಾತ್ರಿಕಾಲದಲ್ಲಿ) ಒಂದೊಂದು ಜಾವ ಕಳೆದಂತೆ ಅದನ್ನು ಸೂಚಿಸಲು ಬಾರಿಸುವ ಗಂಟೆ, ತಮಟೆ ಮೊದಲಾದ ವಾದ್ಯ : ರವಜಿತಯಾಮತೂರ್ಯರವವಿಶ್ರಸನಬ್ಧಿಯಿ ನಿದ್ರೆಯು ತ್ತಲುಪ್ಪವಡಿಸುವಂತು ಮಾಟ್ಪುದು (ಶಾಂತಿಪು. ೩-೦೩೩). [ಸಂ.]

**ಯಾಮತ್ರಯ** (ನಾ). ಮೂರು ಪ್ರಹರಗಳು: ಏರ್ಮೆ ಯಾಮಿನೀಯಾಮತ್ರಯಸಮಯದೊಳ್ . . . ಗುಹೆಯಿಂ ಪೊಱಮಟ್ಟಂ (ಕಾದಂಬು. ೩೫೯); ಒಂದು ದಿವಸಂ ಯಾಮತ್ರಯ ವಿರಾಮಸಮಯದೊಳ್ ತಾಂಬೂಲ ಕರಂಕವಾಹಿಕಾದ್ವಿತೀಯನುತ್ತುಂಗಸೌಧ ಶಿಖರನಿರ್ಯೂಹಪರ್ಯಂಕದೊಳ್ ಕುಳ್ಳಿರ್ದ (ಶಂಪ್ರಪು. ೨-೨೬ ವ). [ಸಂ.]

**ಯಾಮಳ** (ನಾ). ಜೋಡಿ ; ಜೊತೆ : "ಯುಗಳಂ ಯುಗ್ಮಂ . . . ಯಾಮಳಂ ದ್ವಯಂ ದ್ವಿತಯಂ" (ವಸ್ತುಕೋ. ೦೦೪-೩೩) ; ಭೀಮಬಲದೊಡನೆ ರಾಮನ ಅಭಿಮನಿಯಮವಿರೆ ಯಾಮಳವರುಗಳವ (ಮಂಕಳಕ. ೪೩೩). [ಸಂ. ಯಾಮಲ]

**ಯಾಮಿ** (ನಾ). ೧. ಒಡಹುಟ್ಟಿದವಳು ; ಸೋದರಿ. ೨. ಇರುಳು ; ರಾತ್ರಿ. ೩. ಮಗನ ಹೆಂಡತಿ ; ಸೊಸೆ. [ಸಂ.]

**ಯಾಮಿಕ** (ನಾ). ರಾತ್ರಿಯ ಕಾವಲುಗಾರ ; ಪಹರೆಯವನು ; ಪ್ರಹರಿ: ಯಾಮಿಕನಂತಾರೋಪಿತಚಾಪನಾಗಿ ಕುಸುಮಚಾಪನಂತಃಪುರಮಂ ಪೊಕ್ಕು ತೊಳಲೆಯುಂ (ಕಾದಂಪೂ. ೩೦೩) ; ಗುಣಾಕರನುತ ಕಕ್ಕಯಂ ನಿನಗೆ ಯಾಮಿಕನಲ್ತೆ ಮನೋಜಭಂಜನಾ (ವೃಷಾ. ೬-೪೨). [ಸಂ.]

**ಯಾಮಿಕವೃತ್ತಿ** (ನಾ). ಪಹರೆಯ ಕಾಯಕ ; ಪ್ರಹರಿಯ ಕೆಲಸ : ಸದಭಿದ್ಯೋತಕನೊಳ್ ಪ್ರದೀಪಕರಣಂ ತಾನೇವುದುದ್ಬೋಧತಾಸ್ಪದನೊಳ್ ಯಾಮಿಕವೃತ್ತಿಯೇವುದು ವಿಶುದ್ಧಾಕಾರನೊಳ್ ಸಜ್ಜನಮೇವುದು (ಶಂಪ್ರಪು. ೦೨-೨೦೩). [ಸಂ.]

**ಯಾಮಿನಿ** (ನಾ). ೧. ಇರುಳು ; ರಾತ್ರಿ : "ಇರುಳ್ ತಾಂ ತ್ರಿಯಾಮೆ ಯಾಮಿನಿಯುಕ್ಷ್ಮಂ" (ವಸ್ತುಕೋ. ೦೫-೩) ; ಯಾಮಿನಿಯ ಬೆನ್ನನೆ ಪೋಪ ದುಕೂಲಚೇಲದಂಚಳಮೆನೆ ಪೋಯ್ತು ಚಂದ್ರಿಕೆ (ಜಗಧ. ೦೩-೦೩೩) ; ಸಿವಿಗೆ ಬಂದೆಸೆದಿರ್ದುದು . . . ಯಾಮಿನಿಯಂತೆ ಚಂದ್ರರುಚಿರಾಜಿತವಕ್ಷಯ ಮೂರ್ತಿಯಂತೆ ಮುಕ್ತಾಮಯಭಾಸಿ (ಧನ್ಯಪು. ೦೩-೬೩). ೨. ಅರಿಸಿನ : "ಯಾಮಿನೀ = ಅರಿಸಿನ" (೬ಶಧ. ೦೩೨). [ಸಂ. ಯಾಮಿನೀ]

**ಯಾಮಿನಿವಿಹಾರ** (ನಾ). (ಬೆಳದಿಂಗಳಿರುವ) ರಾತ್ರಿಯಲ್ಲಿ ಮಾಡುವ ವಿಹಾರ ; ಚಂದ್ರಿಕಾವಿಹಾರ : ಅನಿರುದ್ಧನೊಲಿದತಿಶಯದಿ ಸಖರೊಡನೆ ಯಾಮಿನಿವಿಹಾರಗೈವುತಲಿ . . . ಸಂತಸದಿ ಗೃಹಕೆ ಬಂದ (ನವಮೋ. ೦೬ ಸೂಚನೆ). [ಸಂ. ಯಾಮಿನೀವಿಹಾರ]

**ಯಾಮಿನೀಪತಿ** (ನಾ). ರಾತ್ರಿಯ ಒಡೆಯ ; ಚಂದ್ರ. [ಸಂ.]

**ಯಾಮಿನೀವಿಯೋಗ** (ನಾ). ರಾತ್ರಿಯು ಕಳೆದುಹೋಗುವಿಕೆ ; ನಿಶಾಂತ:[ಪ್ರವ್ರ]ಜ್ಯಾಶ್ರಮಗರೂರ್ವರಾಸ್ಯತಿಲಕಂ ಯಾಮಿನೀವಿಯೋಗಮಂ ನಿರ್ವರ್ತಿಸಿ ರಾಜಮಂದಿರಕ್ಕೆ ವಂದು ಪಾರಣಾವಿಧಿಯೊಳಮೃತಾಹಾರ ಮನಾರೋಗಿಸಿ (ಶಾಂತಿಪು. ೯-೯೯ ವ). [ಸಂ.]

**ಯಾಮಿನೀವಿರಾಮ** (ನಾ). ರಾತ್ರಿಯ ಮುಕ್ತಾಯ : ಬೆಳಗು : ಮಱುದಿವಸಂ ಯಾಮಿನೀವಿರಾಮಮುಮಪ್ಪುದುಂ ಪ್ರಯಾಣಭೇರಿಯಂ ಪೊಯ್ಸಿದಾಗಳ್ (ಶಂಕಕಂ. ೦೨೬-೦೪). [ಸಂ.]

**ಯಾಮಿರ** (ನಾ). ಚಂದ್ರ. [ಸಂ.]

**ಯಾಮುನ** (ಗು). ೧. ಯಮುನಾನದಿಗೆ ಸಂಬಂಧಪಟ್ಟ; ಯಮುನಾನದಿಯಿಂದ ಬಂದ. (ನಾ). ೨. ಒಂದು ಬಗೆಯ ನೇತ್ರಾಂಜನ; ಸೌವೀರಾಂಜನ : "ಸ್ರೋತೋಂಜನಂ, ಸೌವೀರಂ, ಕಾಪೋತಾಂಜನಂ, ಯಾಮುನಂ – ೪ ಸೌವೀರಾಂಜನದ ಹೆಸರುಗಳು" (ಸಿದ್ಧಾಂತಿ. ೩೦೩); "ಯಾಮುನಂ – ನೀಲಾಂಜನ" (೬ಶಧ. ೦೩೨). [ಸಂ.]

**ಯಾಮುನಕ** (ನಾ). ಒಂದು ಬಗೆಯ ಖನಿಜಲವಣ ; ಮೈಲುತುತ್ತ; ಮಯೂರತುತ್ಥ : "ಯಾಮುನಕಂ – ಸ್ರೋತೋಂಜನ, ಮಯೂರ ತುತ್ಥ" (೬ಶಧ. ೦೩೨). [ಸಂ.]

**ಯಾಮ್ಯ** (ಗು). ೧. ಯಮನಿಗೆ ಸಂಬಂಧಿಸಿದ. ೨. ದಕ್ಷಿಣ ದಿಕ್ಕಿನ; ದಕ್ಷಿಣಕ್ಕೆ ಇರುವ. (ನಾ). ೩. ಯಮನ ಸೇವಕ ; ಯಮದೂತ : ಗಮ್ಯಯಲ್ಲದ ಸತಿಯನಾವನು ಗಮ್ಯನಲ್ಲದ ವರನನಾವಳು ರಮ್ಯವಾತದಲಿ ಗಮಿಸುವರು ರಮಿಸುವರು ಪೋಣವರ ಯಾಮ್ಯರುಭಯವ ಕಾದ ಲೋಹದ ಶರ್ಮಿಯನು ತೋಳುಗಳಲಪ್ಪಿಸಿ ಕರ್ಮ ಸವೆವನ್ನವರ ಬಿಡಲೀಸರು ದುರಾತ್ಮಕರ (ಶಿಭಾಗ. ೩-೦೦-೨೬). ೪. ಚಂದನ; ಶ್ರೀಗಂಧ. [ಸಂ.]

**ಯಾಮ್ಯದಿಶೆ** (ನಾ). ದಕ್ಷಿಣ ದಿಕ್ಕು : ತಳರ್ದು ಬಂದೀ ದ್ವಿತೀಯದ್ವೀಪದ ಯಾಮ್ಯದಿಶೆಯೊಳೆಸೆವಿಷುಕಾಧಾರಿಣೀಧರದ ಮೂಡಣ ಭರತದೊಳ್ (ಶಂಪ್ರಪು. ೪-೭೯ ವ); ಯಾಮ್ಯದಿಶೆಯಂತೆ ಧರ್ಮಪ್ರಭಾವವಿಭಾವಿತ ಮುಮೆಂಬ ಮಹನೀಯಮಹಿಮೆಯಂ ತಳೆದು (ಧನ್ಯಪು. ೯-೩೦ ವ). [ಸಂ. ಯಾಮ್ಯದಿಶಾ]

**ಯಾಮ್ಯದ್ರುಮ** (ನಾ). ಎಲವದ ಮರ : "ಯಾಮ್ಯದ್ರುಮಃ – ಎಲವ" (೬ಶಧ. ೦೩೨). [ಸಂ.]

**ಯಾಮ್ಯಾಸ್ತ್ರ** (ನಾ). ಯಮನೇ ಅಧಿಷ್ಠಾನದೇವತೆಯಾಗಿರುವ ಬಾಣ ; ಯಮಾಸ್ತ್ರ : ದಿವಿಜರಿಪು ಯಾಮ್ಯಾಸ್ತ್ರದಿಂದಿಸೆ ಭುವನ ತುಂಬಿತು ಜವನ ಜಂಗುಳಿ (ಕಾಲಿಂ. ೪೦-೫೪). [ಸಂ. ]

**ಯಾಮ್ಯೆ** (ನಾ). ೧. = ಯಾಮ್ಯದಿಶೆ : "ಯಾಮ್ಯಾ, ದಕ್ಷಿಣಾ, ಅವಾಚೀ —ಈ ಮೂರು ತೆಂಕಣ ದೆಸೆ" (ಕಲಾಯು. ೧೭-೧೦೦). ೨. ರಾತ್ರಿ. [ ಸಂ. ಯಾಮ್ಯಾ]

**ಯಾಯ** (ನಾ). ಮುತ್ತುಗ ; ಪಲಾಶ : "ಯಾಯಃ – ಮುತ್ತುಗ" (೭ಕಂ. ೦೩೨). [ ? ]

**ಯಾಯಜೂಕ** (ಗು). ೧. ಮೇಲಿಂದ ಮೇಲೆ ಯಜ್ಞಮಾಡುವ. (ನಾ). ೨. ಮೇಲಿಂದ ಮೇಲೆ ಯಜ್ಞಮಾಡುವವನು: ಸತತವಾಗಿ ಯಜ್ಞಮಾಡುವವನು : "ಯಾಯಜೂಕಃ, ಇಜ್ಯಾಶೀಲಃ—ಆಗಾಗ್ಯೆ ಯಜ್ಞಗಳನ್ನು ಮಾಡುತ್ತಲೇಯಿರುವ ಸ್ವಭಾವವುಳ್ಳವನ ಹೆಸರು" (ಸಿದ್ಧಾಂತಿ. ೨೦೪): ಅಂತಃಪುರಾಂಗನೆಯರಮಿತಪ್ರಜೆಪರಿವಾರಸಂತರು ಯಾಯ ಜೂಕಾದಿಗಳ್ ಪರಮಪ್ರಿಯಮಾಂತು ಮುಂದ್ಯೆವಲೆಂದತಿಹರುಷಗೊಳು ತೈದಲು (ವಂಕಾಂ. ೨-೨೭-೩೦). ೩. ಪೂಜಕ; ಅರ್ಚಕ: "ಯಟ್, ಯಾಟ್ . . . ಯಾಯಜೂಕಃ—ಈ ೭ ಪೂಜಿಸುವಾತಂ" (ಕಾಕಳ್. ೦೭೦). [ಸಂ.]

**ಯಾಯವಾರ** (ನಾ). ೧. ತಿರುಪೆ ; ಭಿಕ್ಷೆ : ಬುಧವಾರವಾದರೆ ಯಾಯ ವಾರ ಇಕ್ಕಬಾರದೇ ? (ಗಾದೆ). ೨. ಭಿಕ್ಷಾವೃತ್ತಿ : ಯಾಯವಾರದಿ ಮನ್ನಿಸುತದೊಬ್ಬತಿಥಿಗಿಕ್ಕುತಲೇಕಭುಕ್ತದಲಿ ತನ್ನ ಪರಮಾಪಾಸನಾಗ್ನಿಯ ಭಿನ್ನವಿಲ್ಲದೆ ಬೇಳಿ ರಾತ್ರಿಯ ಕನ್ನೆಯಲಿ ವಿಜಿತೇಂದ್ರಿಯಂಗಿದು ಬದುಕು ಲೋಕದಲಿ (ಕುವ್ಯಾಲ. ಶಂ. ೩೪೦); ಯಾಯವಾರವ ಮಾಡಿ ವಿಪ್ರರಿಗೆ ಮೃಷ್ಟಾನ್ನ ಪ್ರೀಯದಲಿ ತಾನೊಂದು ಕೊಡದ ಲೋಭಿ . . . ಗಾಯನವ ಮಾಡಲವ ಹರಿದಾಸನೇ (ಜಗದಾ. ೫೭). [ <ಸಂ. ಯಾಯಾವರ ]

**ಯಾಯಾವರ** (ಗು). ೧. ಅಲೆಮಾರಿಯಾದ ; ಎಲ್ಲಿ ಬೇಕೆಂದರಲ್ಲಿ ತಿರುಗಾಡುವ ; ನೆಲೆಯಿಲ್ಲದ. (ನಾ). ೨. ಧಾನ್ಯದ ಭಿಕ್ಷೆ ; ಕೋರಾನ್ನ : "ಯಾಯಾವರಃ—ಕೋರಾನ್ನಂ [ನ್ನಂ]" (ಕಾಕಳ್. ೦೭೩) ; ಯಾಯಾವರಂ ತಕ್ಕುದ ತಂದು ಜಡೆಯ ಶಂಕರಂಗಿತ್ತು ಪ್ರಸಾದಮಂ ಕೊಂಡು ಸುಖದೊಳಿರ್ಪುದು (ಶಂವಾರ. ಹ. ೯-೦೭). ೩. ಅಲೆಮಾರಿಯಾದ ಸಂತ. ೪. ಬ್ರಾಹ್ಮಣರಲ್ಲಿ ಒಂದು ಪಂಗಡದ ಹೆಸರು : ಗೌತಮ ಗೋತ್ರದ ಯಜುಶಾಖೆಯ ಯಾಯಾವರ ಗೌರಿದೇವಭಟ್ಟರ ಮಕ್ಕಳು ಮಲ್ಲಿಭಟ್ಟರಿಗೆ ವೃತ್ತಿ ೪ (ಸೌಇಇ. IX–ii, ೪೯೪-೫೫ ; 1511). [ಸಂ.]

**ಯಾಯಿ** (ಗು). ೧. ಹೋಗುವ ; ಸಂಚರಿಸುವ. (ನಾ). ೨. ಸಂಚಾರ ಮಾಡುವವನು ; ಪ್ರಯಾಣ ಮಾಡುವವನು : ವಿಪರೀತ ದೆಸೆ ಬುಧ ಶುಕ್ರ ರಾಹುಗಳ ಯಾಯಿಗಳಿಗಪಜಯ ನಿವಾಸಸ್ಥಾಯಿಗೊಳ್ಳಿತು (ಕುವ್ಯಾಲ. ೨೨-೪). [ಸಂ. ಯಾಯಿನ್]

**ಯಾರಿ** (ನಾ). (?) : ವಾರಿಜಗಂಧಿ ನಿನ್ನಯ ಕಾಂತ ತಿರುಗದ ದಾರಿಯ ಹೋದಾತ ಬಹನೆ ಯಾ[ ಪಾಠಾಂ. ಭೂ]ರಿಯ ಮಾಡದೆ ಮನೆವಾರತೆಯ ವಿಚಾರಿಪುದೆಂದರಾಳಿಯರು (ಮೋಹತ. ೯-೦೬). ; "ತಿರುಗುವ ಬುಗುರಿ" (ಮೋಹತ. ೩೨೮). [ ? ]

**ಯಾರು** ' ಯಾವುದು ' ನೋ.

**ಯಾಲಕ್ಕಿ** ' ಏಲಕ್ಕಿ' ನೋ.

**ಯಾಲಕ್ಕಿಬಾಳೆ** (ನಾ). ಬಾಳೆಯಲ್ಲಿ ಒಂದು ಬಗೆ : ಹೊಂಬಾಳೆ ಯಾಲಕ್ಕಿ ಬಾಳೆ . . . ಮೊದಲಾದ ರಸ್ಯಸುಖಾರ್ಹ ಸಾರ್ವರ್ತುಕವಾದ ಫಲಂಗಳುಳ್ಳ ತರುನಿಕರಂಗಳುಂ (ಏವೇಳ. ೨೨೭). [<ಏಲಕ್ಕಿಬಾಳೆ]

**ಯಾಲಪದ** (ನಾ). ಒಂದು ಬಗೆಯ ದೇಶೀಯ ಗೀತೆ,–ಪದ್ಯ : ಯಕ್ಷಗಾನಗ್ರಂಥಗಳಲ್ಲಿ ಯಾಲಪದವೆಂಬುದೊಂದು ಸಿಕ್ಕುತ್ತದೆ (ಕೃಪಾ. ೦೩೪) ; ಯಾಲಪದವು ತ್ಯಾಗವಾನಗಳು ಅಂಶಗಣಾನ್ವಯವಾದ ಉತ್ಸಾಹ ಲಯದಲ್ಲಿವೆ (ಛಂದೋಂಬು. ೨೫೭ ೩೨೮) : 'ರುದ್ರಗಣಗಳಿಂದ' 'ಯಾಲಪದ' ರಚನೆಯಾಗುತ್ತದೆ. ಇದರಲ್ಲಿ ಒಂದು ಉಪಪಾದವೂ ಆ ಉಪಪಾದಕ್ಕೆ ಏಕಾಕ್ಷರಿಯ ಅನುಪಾದವೂ ಇರುತ್ತದೆ (ಶಂಕೋಛ. ೦೩೦). [<ಏಲಾಪದ]

**ಯಾವ₁** ' ಯಾವುದು ' ನೋ.

**ಯಾವ₂** (ಗು). ೧. ಜವೆಗೋದಿಗೆ ಸಂಬಂಧಿಸಿದ ; ಯವದಿಂದ ಮಾಡಿದ,–ತಯಾರಿಸಿದ. (ನಾ). ೨. ಜವೆಗೋದಿಯಿಂದ ತಯಾರಿಸಿದ ಆಹಾರ. ೩. ರಾಳ ; ಅರಗು : "ಅಲತಗೆ ಜತು ಲಾಕ್ಷಾದ್ರವ ಮಲಕ್ತಕಂ ಯಾವಮಿವು ಸಮಾನಾರ್ಥಂ" (ವಸ್ತುಕೋ. ೭೭-೦೩). [ಸಂ.]

**ಯಾವಕ** (ನಾ). ೧. ಜವೆಗೋದಿಯಿಂದ ತಯಾರಿಸಿದ ಆಹಾರ: ಜವೆಗೋದಿಯ ಗಂಜಿ. ೨. ಅರ್ಧಬೇಯಿಸಿದ ಜವೆಗೋದಿ : "ಅರ್ಧ ಬೇಯಿಸಿದ ಕಾಳು, ಗುಗ್ಗರಿ" (ಗಂಗಾಮು. ೨೬೭). ೩. ಒಂದು ಬಗೆಯ ದ್ವಿದಳಧಾನ್ಯ ; ಅಲಸಂದೆ : "ಯಾವಕಃ, ಯಾವಕಃ ಕುಲ್ಮಾಷಃ, ೩ ಅಲಸಂದಿಗೇ ಕಾಳು, ಕಾಡುಉದ್ದಿಗೂ ಹೆಸರು" (ಸಿದ್ಧಾಂತಿ. ೨೭೯). ೪. ಅರಗು ; ಅಲತಗೆ : "ಜತು, ಯಾವಕಃ, ಲಾಕ್ಷಾ — ಈ ೩ ಅರಗು" (ಕಲಾಯು. ೯೦-೯೦೦). ' ಯಾವಕದ್ರವ ' ನೋ. [ಸಂ].

**ಯಾವಕಕೃಚ್ಛ್ರ** (ನಾ). ಒಂದು ಬಗೆಯ ಕೃಚ್ಛ್ರವ್ರತ ; ಶುಕ್ಲ ಪಕ್ಷದಲ್ಲಿ ಆಹಾರವನ್ನು ಕ್ರಮಕ್ರಮವಾಗಿ ಹೆಚ್ಚಿಸಿಕೊಂಡು, ಕೃಷ್ಣ ಪಕ್ಷದಲ್ಲಿ ಆಹಾರವನ್ನು ಕ್ರಮಕ್ರಮವಾಗಿ ಕಡಿಮೆಮಾಡಿಕೊಳ್ಳುವ ವ್ರತ : ದೇವಕೃಚ್ಛ್ರ, ಯಾವಕಕೃಚ್ಛ್ರಾದಿ ಕೃಚ್ಛ್ರಂಗಳಂ ಪಕ್ಷಮಾಸಾದಿಕಂಗಳಲ್ಲಿ ಅನ್ನಮಂ ಪೆರ್ಚಿಸಿ ತಗ್ಗಿಸಿಕೊಂಬುದು (ಏವೇಳ. ೦೨೨). ' ಚಾಂದ್ರಾಯಣ' ನೋ. [ಸಂ.]

**ಯಾವಕದ್ರವ** (ನಾ). ಅರಗಿನ ರಸ ; ಅಲತಗೆ : ಮೃದುಪಾದತಳಂಗಳನೂಡಿ ಯಾವಕದ್ರವದಿಂದಲಿ ಪ್ರತಿದಿನಮಾ ದೇವಿ ವಿಳೇಪಿತಕರ್ಮವ ನೊರ್ವಳಮರವಧು ಕೆಯ್ಕೊಂಡಳ್ (ಶಾಂತಿಪು. ೯-೦೯೪) ; ಯಾವಕದ್ರವದಿಂ ಪದತಳಮಂ ಲೇಸೆನಿಸಿದಂ (ಶಂದ್ರಪ. ೬-೬೩ ವ). [ಸಂ.]

**ಯಾವಕರಸ** (ನಾ). = ಯಾವಕದ್ರವ : ಜನಜನನಿಯ ಪದಸೇವೆಗೆ ಘನ ಸಂಧ್ಯಾರಾಗಲಕ್ಷ್ಮಿಯುಂ ತಂದೀಗಳ್ ದಿನಲಕ್ಷ್ಮಿ ಸಮರ್ಪಿಸಿದಪಳೆನಿಸಿದಳಡಿಯೂಡುವವೂಳ್ ಯಾವಕರಸದಿಂ (ಧಕ್ಕೃಪು. ೯-೭೩). [ಸಂ.]

**ಯಾವಜ್ಜೀವ₁** (ನಾ). ಜೀವನದ ಪೂರ್ಣಕಾಲ ; ಇಡಿಯ ಜೀವಮಾನ : ಹಿಂಸಾಧರ್ಮವೃತ್ತಿಯಲಿ ನಡೆದು ಯಾವಜ್ಜೀವದಲಿ ಗತಿವಡೆದರುಂಟೆಲೆ ಪಾರ್ಥ (ಕುವ್ಯಾಕ. ೦೭-೦೩). [< ಯಾವಜ್ಜೀವ₂]

**ಯಾವಜ್ಜೀವ₂** (ಅ). ಜೀವಮಾನಪರ್ಯಂತ ; ಜೀವನಾಂತ್ಯದವರೆಗೂ : ಯಾವಜ್ಜೀವವೂ ಸತ್ಯೋಪಾಸಕರಾಗಿ . . . ಆ ಮಹಾ ಶಾಸ್ತ್ರಜ್ಞರ ಅಕ್ಷಯಪ್ರತಿಷ್ಠೆಯನ್ನು ಕೊಂಡಾಡೋಣ (ಕೊಶಿಂಭರ. ೬); ತಂದೆಯ ರಾಜ್ಯವನ್ನಪಹರಿಸಿ ತಾವು ತಂತಮ್ಮ ಪತಿಗಳೊಡನೆ ಯಾವಜ್ಜೀವವೂ ನಿರಾತಂಕವಾಗಿ ಸುಖವನ್ನನುಭವಿಸಬೇಕೆಂಬ ದುರುದ್ದೇಶದಿಂದಲೇ ಈ ಮಾತನ್ನಾಡಿದರು (ಕಿಂಕ. ೨೩). [ಸಂ.]

**ಯಾವತ್ತು₁** ' ಏವೊಟ್ಟು ' ನೋ.

**ಯಾವತ್ತು₂** (ನಾ). ಎಲ್ಲ ; ಸಮಸ್ತವಾದುದು : ಯಾವತ್ತು [ಪಾಠಾಂ. ಯಾವಂತಿ]ಗಣಿತಭಾಸ್ಕರ ಪಾವನ ಮುನಿಚಂದ್ರನುದಯಮುಮಳಿನಗುಣಸದ್ಭಾವದಿಗಂಬರಕುಳಮಂ ಭಾವಿಸೆ ಬೆಳಗುವುದು ಯುಕ್ತಮುವನೀವ್ಯಕ್ತಂ (ಪಾರ್ಶ್ವಪು. ೦-೨೬); ಸೋತರು . . . ಗಜಘಟೆಗಳಂ ರಥ ಹಯ ಪದಾತಿ ಯಾವತ್ತು ಭಂಡಾರವಂ (ಕುಲಂಗ. ೨೪-೪೨); ಚಂದಾಸಾಹೇಬರ ಫೌಜು ಯಾವತ್ತು ಮುಳುಗಿಸಿದರು (ರಾಜೇಂದ್ರ. ೦೫).

**ಯಾವತ್ತರು** = ಎಲ್ಲರು ; ಸಮಸ್ತರು : ಮರುದಿನ ಆ ಊರ

ಜಾತ್ರೆ ಆಗುತ್ತಿತ್ತು; ನೋಡಲಿಕ್ಕೆ ಯಾವತ್ತರೂ ಹೋದರು (ಮುಂಬಯಿ. ೨-೩೦); ನಾನು, ದೇವತೆಗಳು, ಮನುಷ್ಯರು ಮುಂತಾದ ಯಾವತ್ತರಿಗೂ ಕೂಡ್ರುತಕ್ಕ ಸ್ಥಳಸಿದ್ಧತೆಗಳನ್ನು ಮಾಡಿದೆನು (ಉಪಾಕ. ೧೬೩); ನಾನೊಬ್ಬಳೇ ಅಲ್ಲ, ಯಾವತ್ತರೂ ನಿನ್ನ ಗುಣವನ್ನು ಹೊಗಳುತ್ತಾರೆ (ಮೋಹಿನೀ. ೨). **ಯಾವತ್ತುಗಳ್** = ಎಲ್ಲವೂ: ಹಸ್ತಿರಥತುರಗ ಭಂಡಾರಗಳನೆಲ್ಲ ಯಾವತ್ತುಗಳ್ಕೆಕೊಂಡು (ತುರಂಗ. ೩೨-೦೬); ಧರಣಿ ಯಾವತ್ತುಗಳ್ನಮಗಾದ ರಾಜ್ಯವಂ ಬಿಟ್ಟು ಇನ್ನೆತ್ತಣದು ಸ್ವರ್ಗಸುಖ (ತುರಂಗ. ೯೨-೯).

[ಸಂ. ಯಾವತ್]

**ಯಾವತ್ತೂ** ' ಏವೊಟ್ಟಿಂ ' ನೋ.

**ಯಾವನ** (ನಾ). ೧. ಯವನದೇಶದವನು ; ಯವನ ; ಮ್ಲೇಚ್ಛ : ಉದಯಿಸಿದಂ ಪ್ರತಾಪನಿಧಿ ಬಿಜ್ಜಲದೇವಧರಾಧಿನಾಥನಿತ್ತುದಯಿಸೆ ಯಾವನೋದ್ಧತವಧೂತತಿಗುತ್ಕಳಿಕಾಪ್ರಪಂಚಂ (ಎಕ. XI, ದಾವಣ. ೯೨-೨೩; ಶು. 1162); ನಿತ್ಯನೈಮಿತ್ತಿಕಾವ್ರಾತಂಗಳಂ ಪಳಿದು ಯಾವನಾನ್ನಗಳುಂಡು ಲೋಕನಿಂದಿತನಾದರೂ . . . ಎಲ್ಲಮಂ ಬೀತು ಪೋಗುವಡೆ ಪ್ರಾಯಶ್ಚಿತ್ತ ಹರಿನಾಮಖ್ಯಾತನೆಂದರುಪುವುದು ಶ್ರುತಿಗಳನವರತ (ವೆಂಕಾರಾ. ೯-೦೨-೯). ೨. ಒಂದು ಬಗೆಯ ಧೂಪದ್ರವ್ಯ : '' ಯಾವನಃ— ಕುಂದುರುಷ್ಕ, ತದುಕಿನ ಧೂಪ '' (ಒಷಧಿ. ೦೩೨). [ಸಂ.]

**ಯಾವನಾಳ** (ನಾ). ಒಂದು ಬಗೆಯ ಧಾನ್ಯ : ಯವನಾಲ : "ಯಾವನಾಳಃ = ಜೋಳಂ" (ಶಾಕಕ್ಕ. ೦೬೩); ಅಂತು ಕೊಂಡ ಪದವಟಿ ಗಳೊಳ್ ಕಳಮಷಷ್ಟಿಕಾವ್ರೀಹಿಯುವಯಾವನಾಳ . . . ವಿವಿಧ ಧಾನ್ಯ ಭೇದಂಗಳುಂ (ಅಂಶು. ೭-೭೨ ವ) ; ಷುಜುದಿನ ಯಾವನಾಳದ ಪುಡಿಯ ಕದಡನು ಕುಡಿಯಲೊಲ್ಲದೆ ಕಿಡಹಿ ಕಳೆದನು ಯಾಳಿಯಾಡುತವಳುತ ಹೋರುತಿರೆ (ಸಂಶಕ. ೦೭-೯೩). [ಸಂ. ಯಾವನಾಲ]

**ಯಾವನಿ** (ಗು). ೧. ಯವನರಿಗೆ ಸಂಬಂಧಿಸಿದ ; ಯವನ ದೇಶೀಯ ವಾದ. (ನಾ). ೨. ಯವನಜನದ ಭಾಷೆ, ಲಿಪಿ ಇತ್ಯಾದಿ: " ಯಾವನೀ = ಪರಂಗಿ ಲಿಪಿ " (ಶಾಕಕ್ಕ. ೦೬೩). [ಸಂ. ಯಾವನೀ]

**ಯಾವನು** ' ಯಾವುದು ' ಪರಾ.

**ಯಾವರು** ' ಯಾವುದು ' ಪರಾ.

**ಯಾವಸ** (ನಾ). ಪುಲ್ಲಿನ ರಾಶಿ : ಖಡ್ಗಾಯುಧಂ ಯಾವಸಂ ಪೆರ್ಚಲ್ಕೀ ಯದೆ ಕಿಟ್ಟಿಡಲ್ (ಶಸ್ತ್ರಶಂ. ೨೩). [ ಸಂ. ]

**ಯಾವಳು** ' ಯಾವುದು ' ಪರಾ.

**ಯಾವಾಕೆ** ' ಯಾವುದು ' ಪರಾ.

**ಯಾವಾಗ** (ಅ). ಯಾವ ಸಮಯದಲ್ಲಿ ; ಯಾವ ಹೊತ್ತಿಗೆ ; ಎಂದು : ನಿನ್ನ ನಾಟಕ ಯಾವಾಗಪ್ಪ ರಾಜಾ (ಪಟಿಶಾ. ೦೬).

**ಯಾವಾಗಾದರೂ** = ಯಾವ ಸಮಯದಲ್ಲಾದರೂ ; ಯಾವಾಗ ಲಾದರೂ : (ಕ). **ಯಾವಾಗಿನಂತೆ** = ಎಂದಿನಂತೆ : ರೂಢಿ ಯಂತೆ : (ಕ). [ಯಾವ$_1$ (< ಯಾವುದು) + ಆಗ$_1$ (< ಆಗಡು)]

**ಯಾವಾಗಲು**, ಯಾವಾಗಲೂ (ಅ). ಸದಾಕಾಲ ; ಎಲ್ಲಾ ಕಾಲ ನಲ್ಲಿಯೂ ; ಒಂದೇ ಸಮನೆ ; ನಿರಂತರವಾಗಿ : ಯಾವಾಗಲು ಹೇಳಬಾರದೆ ವಾಸುದೇವನೆ ಕೈಬಿಡಬೇಡವೆಂದೆನುತಲಿ (ಪುರಂದ. ೨-೦೩೯ ಪಲ್ಲವಿ).

**ಯಾವಾಗಲೂ** : ಯಾವಾಗಲೂ ಬೆಳುದಿಂಗಳಿನಿಂದ ತುಂಬಿದ ಪಿಸುನಗೆಯ, ಮೆಲುಮಾತಿನ, ಒಲವಿನ ನೋಟಗಳಿಂದ ತುಂಬಿದ್ದ ದಾಂಪತ್ಯಜೀವನ (ರೂಪಿಟ್ಟ. ೨೦).

**ಯಾವಾಗಲಾದರೂ** = ಯಾವಾಗ ಬೇಕೋ ಆಗ : ಯಾವಾಗ ಲಾದರೂ ಬರಲಿ ನಾನು ಎದ್ದು ಬಾಗಿಲು ತೆಗೀತೀನಿ (ರೂಪಿಟ್ಟ. ೦೯).

[ < ಏಗಳ್ ]

**ಯಾವಾಗಲೂ** ' ಯಾವಾಗಲು ' ನೋ.

**ಯಾವಾತ** ' ಯಾವುದು ' ಪರಾ.

**ಯಾವುದು** (ಸ). ರೂಪಗಳು (ಪುಂ. ಏಕ) ಯಾವನು, ಯಾವಾತ ; (ಸ್ತ್ರೀ. ಏಕ) ಯಾವಳು, ಯಾವಾಕೆ ; (ಬಹುವ) ಯಾರು, ಯಾವರು, (ವಿಶೇ) ಯಾವ$_1$, ಯಾ$_1$ : ೧. ಎಂತಹುದು, ಎಲ್ಲಿ ಯದು, ಏನು ಎಂಬರ್ಥದಲ್ಲಿ ಬಳಕೆಯಾಗುವ ಪ್ರಶ್ನಾರ್ಥಕ ಸರ್ವನಾಮ : ದಾರಿ ಯಾವುದಯ್ಯ ವೈಕುಂಠಕೆ ಹಾದಿ ತೋಜಿಸಯ್ಯ (ಪುರಂದ. ೨-೦೩೬ ಪಲ್ಲವಿ) ; ಯಾವುದೊ ಆಸಲಿನ ಯಾವುದೊ ಬಡ್ಡಿದರದ ರಾಷುಗಳನ್ನು ಹಿಂಜಿ ತೆಗೆದು . . . ಆನೇಕರಿಗೆ ತಿಳಿಸಿಕೊಟ್ಟು ದಣಿದಿದ್ದೇನೆ (ಗಾಳಿಪ. ೦೯೬). ೨. ಸಂಬಂಧಾರ್ಥಕ ಸರ್ವನಾಮ : ಯಾವುದು ನಿನಗೆ ಒಪ್ಪಿಗೆಯೋ ಅದನ್ನು ತೆಗೆದುಕೊಂಡು ಹೋಗು (ಪುಣ್ಯಪು. ೩೦) ; ಈ ಜೀವವನ್ನು ಯಾವುದು ನಿರ್ಮಿಸಿತೋ, ಸ್ವಪ್ನಶೀಲತೆಯನ್ನೂ ಅದೇ ಸೃಜಿಸಿತು (ದೇಶಪ್ಪ. ೯). ' ದಾವುದು ' ಪರಾ.

**ಯಾವನು** : ಯಾವನೋ ಒಬ್ಬನು ಆ ದೇಶಕ್ಕೆ ಎಮ್ಮೆ ಕೋಣಗಳನ್ನು ಒಯ್ದನೆಂದು ಹೇಳುತ್ತಾರೆ (ಮುಂಬಯಿ. ೩-೨೯). **ಯಾವಾತ** : ಯಾವಾತನಾದರೂ ಸರಿ, ಕೊಡುವಾತನಾದರೆ ಸಾಕು (ರೂಢಿ). **ಯಾವಳು**: (ಕ). **ಯಾವಾಕೆ** : (ಕ). **ಯಾರು** : ಯಾರಿಗೆ ಯಾರುಂಟು ಎರವಿನ ಸಂಸಾರ ನೀರ ಮೇಲಿಣ ಗುಳ್ಳೆ ನಿಜವಲ್ಲ (ಪುರಂದ. ೯-೬೩ ಪಲ್ಲವಿ); ಈ ಸುದ್ದಿಯನ್ನು ಯಾರು ಹೇಳಿದರು (ಪುಣ್ಯಪು. ೦೬೩) ; ಯಾರದೋ ರೊಕ್ಕ ಯಲ್ಲಮ್ಮನ ಜಾತ್ರೆ (ಗಾದೆ). **ಯಾವರು** : ವರ್ಣಧರ್ಮಂಗಳಂ ಯಾವರು ತ್ಯಜಿಸುತ್ತಾರೋ ಅವರು ಪಾಷಂಡಿಯೆನಿಸಿಕೊಂಬರು (ಶುಕಸ. ೨೬೦). **ಯಾವ$_1$**: ಯಾವ ಕರ್ಮವೋ ಇದು ಯಾವ ಪುಣ್ಯವೋ (ಪುರಂದ. ೩-೨೬ ಪಲ್ಲವಿ) ; ಆತ್ಮ ಯಾವ ಕುಲ ಜೀವ ಯಾವ ಕುಲ (ಕನಕ. ೭೭-೩). **ಯಾ$_1$** : ಯಾ ಆಸೆ ಜೇವಾಳದಿ ಉಳಿದು . . . ಮೂಡಿ ಬಂದಿತಿಲ್ಲಿ (ಅರಳು. ೦೩೨-೦).

**ಯಾವ ಗಿಡದ ತೊಪ್ಪಲು** = (ಅಲಂ) ಯಾವ ಬೆಲೆಯೂ ಇಲ್ಲದಂತಹ ಸರಕು, – ಪದಾರ್ಥ : ಕೊತವಾಲ ಸಾಹೇಬರು ಯಾವ ಗಿಡದ ತೊಪ್ಪಲು ? ನಾನು ಮನಸ್ಸು ಮಾಡಿದರೆ ಓಡಿಸಿ ಬಿಡುವೆ (ಕೊತವಾ. ೩೮). **ಯಾವಲ್ಲಿ** = ಯಾವ ಸ್ಥಳದಲ್ಲಿ ; ಎಲ್ಲಿ : ಇಂಥ ವಸ್ತು ಯಾವಲ್ಲಿ ಸಿಕ್ಕುತ್ತದೆ ? (ರೂಢಿ). **ಯಾವುದೊಂದು** = ಏನೊಂದು ; ಯಾವು ದಾದರೂ ಒಂದು : ಯಾವುದೊಂದು ಕೆಲಸ ಮಾಡುವುದು ಎಲ್ಲರಿಂದ ಆಗದೆ ಹೋದಾಗ್ಯೂ, ಅದನ್ನು ಕೆಡಿಸುವುದು ಎಲ್ಲರ ಕೈಯಲ್ಲಿಯೂ ಉಂಟು (ಮುಂಬಯಿ. ೯-೩೭). [< ಆವುದು]

**ಯಾಷ್ಟೀಕ** (ನಾ). ದೊಣ್ಣೆಯನ್ನು ಹಿಡಿದಿರುವ ಸೈನಿಕ, – ಯೋಧ : "ಯಾಷ್ಟೀಕಃ, ಪಾರಶ್ವಧಿಕಃ _ ಈ ೨ನ್ನು ಕ್ರಮದಿಂದ, ಯಷ್ಟಿಸ್ವಧಿತಿ ಹೇತಿಕೌ _ ದೊಣ್ಣೆಯೂ ಗಂಡಕೊಡಲಿಯೂ ಆಯುಧವಾಗಿ ಉಳ್ಳವರ ಹೆಸರುಗಳು'' (ಸಿದ್ಧಾಂತಿ. ೨೩೭). [ಸಂ.]

**ಯಾಸ** (ನಾ). ೧. ಪ್ರಯತ್ನ. ೨. ಒಂದು ಬಗೆಯ ಸಸ್ಯ; ಬಳ್ಳಿ ದುರುಚಿ : ''ಯಾಸಃ, ಯವಾಸಃ . . . ದುರಾಲಭಾ – ೧೨ ತೀಟಕಸಂಧಿ ಹೆಸರುಗಳು. ನಸುಗುನ್ನೇ ಹೆಸರುಗಳು. ತುರುಚೀಬಳ್ಳಿ, ಬಳ್ಳಿದುರಿಚಿ'' (ಸಿದ್ಧಾಂತಿ. ೦೨೩). ೩. ಕೊತ್ತುಂಬರಿ : '' ಯಾಸಃ—ಬಳ್ಳಿದುಜುಚಿ, ಕುಸ್ತುಂಬರಿ'' (ಒಷಧಿ. ೦೩೨). [ಸಂ.]

**ಯಾಸಿ** ' ಯಾಸೆ ' ನೋ.

**ಯಾಸೆ**, ಯಾಸಿ (ನಾ). ಡೊಂಕಾದುದು : ಓರೆಯಾದುದು ; ಸೊಟ್ಟಗಾ ದುದು; ನೇರವಲ್ಲದುದು : (ತೋಳದ) ಕಣ್ಣುಗಳು ಯಾಸೆಯಾಗಿ ಗುಡ್ಡೆ ಗಳು ಹಚ್ಚಗೆ ಹೊಳೆಯುತ್ತವೆ (ಮುಂಬಯಿ. ೩-೯೩). **ಯಾಸಿ** : ಗೇಣು ಒಂದೂವರೆಗೇಣಿಗೊಂದು ಗೂಟಗಳನ್ನಾಗಲಿ, ಮೊಳೆಗಳನ್ನಾಗಲಿ ಕವಲಿನ

ಹಾಗೆ ಯಾಸಿಯ ಮೇಲೆ ಹೊಡೆದು ಆ ಹಳ್ಳದಲ್ಲಿ ನಡಿಸುವದು (ಕೃಷಿಶ್ರ. ೪೦).
[< ಏಸೆ?]

**ಯಾಹೊತ್ತು** (ಅ). ಎಲ್ಲ ಕಾಲವಲ್ಲಿಯೂ ; ಸದಾಕಾಲವೂ : ಕಂಡೆ ನನ್ನ ಅಂತರ್ಯದಮರಪುರುಷನನು ತೆರೆಯುಲಿಹನ . . . ಮೃತ್ಯುಲೋಕವನು ಅಮೃತನಂತೆ ಯಾಹೊತ್ತು ಕಾಣುವವನ (ಅರಳು. ೦೭೯-೩).
[< ಏವೊಟ್ತುಂ]

**ಯಾಳ್** ' ಯಾಟ್ಟು ' ನೋ.

**ಯಾಳ್‌ಪಾಣ** (ನಾ). 'ಯಾಳ್' ಎಂಬ ವಾದ್ಯದೊಡನೆ ಹಾಡುವವನು: ಯಾಳ್ ಎಂಬ ಒಂದು ವಿಧವಾದ ತಂತ್ರೀವಾದ್ಯದ ಶ್ರುತಿಯೊಡನೆ . . . ಶಿವಶರಣರ ಗೀತಗಳನ್ನು ಹಾಡುತ್ತಿದ್ದವರಿಗೆ 'ಯಾಳ್‌ಪಾಣರ್' ಎಂದು ಹೆಸರು (ಶಿವಶಂ. ೦೪ ಟಿ೬೪). [← ತಮಿ. ಯಾಟ್ಟುಪ್ಪಾಣರ್]

**ಯಾಳ** ' ಯಾಟ್ಟು ' ನೋ.

**ಯಾಳಿ** (ನಾ). ಸಿಂಹದ ಮುಖ, ಆನೆಯ ಕೋರೆ ಹಾಗೂ ಸೊಂಡಿಲು ಇರುವ ಒಂದು ಬಗೆಯ ಕಾಲ್ಪನಿಕ ಪ್ರಾಣಿ : ಆ ಬಳದ ಸಿಂಹನ ತಲೆಯನ್ನು ಮೆಟ್ಟಿ, ಮೇಲಣ ಯಾಳಿಯನ್ನು ನೆಮ್ಮಿ, ಸಜ್ಜಿಗೆ ಆರೋಹಣ ಮಾಡು (ಶಿಲ್ಪಶಾ. ೦೦೯-೦೦) ; ಕೆಳಭಾಗದಲ್ಲಿ ಯಾಳಿಗಳು, ಸಿಂಹಗಳು ಮತ್ತು ಆನೆಗಳು ಕೆತ್ತಲ್ಪಟ್ಟಿವೆ (ಪ್ರವಾಸ್ತು. ೮೨).
[ದೇ. ಹ ತಮಿ. ಯಾಳಿ; ಮಲ. ಯಾಟ್ಟಿ]

**ಯಾಟ್ಟು, ಯಾಳ್, ಯಾಳ** (ನಾ). ಒಂದು ಬಗೆಯ ತಂತೀವಾದ್ಯ: ಕೊಟಲಿನಿಪ್ರು ಯಾಟ್ಟನಿದೆಂಬರ್ ತಮ್ಮಕ್ಕಳ ತೊದಳ್ನುಡಿಯ ಕೇಳದವರ್ (ಕುರಳ್. ೦-೭-೬). **ಯಾಳ್** : ಯಾಳ್ ಎಂಬ ಒಂದು ವಿಧವಾದ ತಂತ್ರೀ ವಾದ್ಯದ ಶ್ರುತಿಯೊಡನೆ . . . ಶಿವಶರಣರ ಗೀತಗಳನ್ನು ಹಾಡುತ್ತಿದ್ದವರಿಗೆ 'ಯಾಳ್‌ಪಾಣರ್' ಎಂದು ಹೆಸರು (ಶಿವಶಂ. ೦೪ ಟಿ೬೪). **ಯಾಳ** : ಯಾಳದ ಜತಿ, ಏಳೆಯ ಗತಿ ಏಳೇಳೇಳೆಂದು ಏಬ್ಬಿಸಿ, ಪುಬ್ಬನು ಚೆದರಿಸಿ ಬಾಳ್ ಬಾಳ್‌ಬಾಳೆಂದು ತಂತಿಯು ತಾಳಕೆ ಮಿಡಿದಿರೆ, ಎಲ್ಲಾಯಿತು ಒಂದು (ಗಂಗಾಶ. ೦೦೭-೦೦). [← ತಮಿ. ಯಾಟ್ಟು]

**ಯುಸಗ** (ನಾ). ಒಂದು ಬಗೆಯ ಸಸ್ಯ : ಇಬ್ಬನೆ, ಪರಲೆ, ಇಟ್ಟೇವು, ಯುಸಗ, ಮದರಾಸ್‌ಮಲ್ಲಿಗೆ (ಪ್ರಪಿಗ. ೨೩-೪೦೪). ' ಇಚಕ ' ಪರಾ.
[ ? ]

**ಯುಂಜಾನ** (ಗು). ೧. ಜೋಡಿಸುವ; ಕೂಡಿಸುವ. ೨. ಸರಿಯಾದ; ಯೋಗ್ಯವಾದ. ೩. ಯಶಸ್ವಿಯಾದ ; ಏಳಿಗೆಯನ್ನು ಹೊಂದಿದ. (ನಾ). ೪. ಮೋಕ್ಷಪ್ರಾಪ್ತಿಗಾಗಿ ಯೋಗಸಾಧನೆಯಲ್ಲಿರುವ ಬ್ರಾಹ್ಮಣ : ಯುಂಜಾನರ ಹೃದಯಸ್ಥಿತ ಮಂಜುಳದೀಪಪಮಾರ್ಗ ಬೆಳಗಿನೊಳನಿಶಂ ರಂಜಿಪ ಗಿರಿಪುತ್ರಿಗೆ ನೀರಾಂಜನಮಂ ಬೆಳಗಿದಂ ಧರಿತ್ರೀಪಾಲಂ (ಅದ್ಭುತ. ೩-೧೨೩) ; ಯೋಗಿಗಳಲ್ಲಿ ಯುಕ್ತ, ಯುಂಜಾನ ಎಂದು ಎರಡು ವಿಧ. ಯುಕ್ತನು ಸರ್ವದಾ ಸರ್ವಜ್ಞನು. ಯುಂಜಾನನು ಬೇಕಾದಾಗ ಧ್ಯಾನದಿಂದ ಸರ್ವಜ್ಞನಾಗುವನು (ಹಿಂದಶಾ. ೦೪೦). ೫. ಬ್ರಾಹ್ಮಣ.
[ಸಂ.]

**ಯುಕುತ** (ಗು). ೧. ಯೋಗ್ಯವಾದ ; ಉಚಿತವಾದ. (ನಾ). ೨. ಯೋಗ್ಯವಾದುದು ; ಸಮರ್ಪಕವಾದುದು ; ತಕ್ಕುದು : ಯುಕುತವಾಗಲಯುಕುತವಾಗಲಿ ಪರರು ಪಚನಿಸಲು ಸಕಲವೂ ಹರಿಮಾಯೆಯೆಂದೀ ಮುಕುತನಹನು (ಹಿಭಾಗ. ೦೦-೦೮-೨೩). [< ಸಂ. ಯುಕ್ತ]

**ಯುಕುತಿ, ಜುಕುತಿ, ಜುಕ್ತಿ, ಜುಗುತಿ, ಜುತ್ತಿ** (ನಾ). ೧. ಮಾರ್ಗ: ಪದ್ಧತಿ : ರೀತಿ ; ಕ್ರಮ : ಭಕ್ತಿರತಿಯ ವಿಕಳತೆಯ ಯುಕುತಿ[ಪಾಠಾಂ. ಯುಕ್ತಿ]ಯನೇನ ಬೆಸಗೊಂಬಿರಯ್ಯಾ (ಬಸವ. ೫೦೬) ; ಅಜೀಥಾಸ್ಯವ ಬೆಳೆವ ಯುಕುತಿಯ ಯುಕುತಿಗೋಸಿದನಾದಿಶಿವನನವರತ ಜನಗಳಿಗೆ (ಬಜ್ಞಶು. ೦೦-೪೨) ; ಮುಂದೆ ಬದುಕುವ ನಿನ್ನ ಯುಕುತಿಯನಿಂದು ತೋರೆಂದೆನುತಲಾರ್ಭಟದಿಂದ ಕೈವಿಡಿದೆಳೆದನಾ ಧನಪತಿಯ ದಶಮುಖನು (ಅನಂರಾ. ೦-೯-೨೦). ೨. ಹಂಚಿಕೆ ; ಯೋಜನೆ ; ಉಪಾಯ : ಯುಕುತಿಯನ್ನಿದಕಿಲ್ಲ ಪಾರ್ಥನ ಶಕುತಿ ಘನವು (ಕುಮಾದ್ರೋ. ೮-೬೦). ೩. ಆಚಾರ ; ವರ್ತನೆ : ಸಕಲಕರಣಂಗಳನು ಬಕುತಿಯ ಜ್ವಾಲೆಯಲ್ಲಿ ಸುಟ್ಟು ಯುಕುತಿಯ ವಿಭೂತಿಯ ಧರಿಸಲು ಮುಕುತಿಯುಹುದಕೆ ಸಂದೇಹವಿಲ್ಲ (ಸಿದ್ಧೇವ. ೬೩-೦೯೬) ; ಭಕುತರ ಬಿನ್ನಪಗೇಳಿಯಾ ಮುನಿಪತಿ ಸಕಲಾಗಮದ ತೊಜಿಯೊಳು ಯುಕುತಿಸ್ವಯುತ ಭವ್ಯರ ಮುಳುಗಿಸಿದನು (ಶಿವಚಾಂ. ೨೦-೦). **ಜುಕುತಿ** : ೧. ಕಕಾರಕ್ಕೆ ತಕಾರಂ—ಯುಕ್ತಿ–ಜುತ್ತಿ, ಜುಗುತಿ, ಜುಕುತಿ (ಶಮದ. ೨೬೪ ಪ್ರಯೋ). **ಜುಕ್ತಿ**: ೧. "ಜುಕ್ತಿ ಯುಕ್ತಿ" (ಕಣಾಶಬ್ದ. ೬೫). **ಜುಗುತಿ** : ೧. ಕಕಾರಕ್ಕೆ ತಕಾರಂ —ಯುಕ್ತಿ–ಜುತ್ತಿ, ಜುಗುತಿ, ಜುಕುತಿ (ಶಮದ. ೨೬೪ ಪ್ರಯೋ). **ಜುತ್ತಿ** : ೧. "ಜುತ್ತಿಯೆಂದು ಯುಕ್ತಿ" (ಕಕಶಾ. ೬೯-೫೬೫) ; " ಜುತ್ತಿಯೆ ತಾಂ ಯುಕ್ತಿಯುಕ್ಕು" (ಕಬಕಂ. ೨೨೯).
[< ಸಂ. ಯುಕ್ತಿ./ಪ್ರಾ. ಜುತ್ತಿ]

**ಯುಕುತಿವಿದ** (ನಾ). ಯುಕ್ತಿಯನ್ನು ಬಲ್ಲವನು ; ಸಂಧಾನಚತುರ . ಯುಕುತಿವಿದರುಗಳಾಗಿ ವಿದ್ಯಾಧಿಕರೆನಿಸಿ . . . ಪರಪುರುಷಾರ್ಥಿಗಳು ವೈದಿಕರಲೇ ವಿದ್ವಾಂಸರೆನಿಸುವರು (ಕುಮಾಆ. ೩-೮೫) ; ಸಕಲಾಗಮ ಬುಧಜನರು ಯುಕುತಿವಿದರು ಕವಿಗಳು ಕಾವ್ಯನಿಪುಣರಿಂದಕಲಂಕಸಭೆಯೊಪ್ಪುತಿಹುದು (ಅನಂತ. ೬-೦೩). [<ಸಂ. ಯುಕ್ತಿವಿದ್]

**ಯುಕ್ತ** (ಗು). ೧. ಜೋಡಿಸಿದ ; ಸೇರಿಸಿದ; ಕೂಡಿಸಿದ. ೨. ಹೊಂದಿದ; ಪಡೆದ. ೩. ಸರಿಯಾದ ; ಯೋಗ್ಯವಾದ ; ತಕ್ಕುದಾದ : ಹಿಮಚೂಳಂ . . . ದೀಕ್ಷೆಯಂ ಕೆಯ್ಕೊಂಡು ಯುಕ್ತಾಚರಣದಿನಂತ್ಯದೊಳ್ ಸಮಾಧಿವಡೆದು ಮುಡುಪಿ ಶತಾರಕಲ್ಪದೊಳ್ ಸಾಮಾನಿಕದೇವನಾದೊಂ (ಶಾಂತಿಪು. ೯-೨೩ ವ). ೪. ಮಗ್ನವಾದ ; ಆಸಕ್ತವಾದ. ೫. ತರ್ಕದಿಂದ ನಿಷ್ಪನ್ನವಾದ.–ಸಿದ್ಧವಾದ. (ನಾ). ೬. ಯೋಗ್ಯವಾದುದು: ವಿಯದಾಶಾವಧಿಯಾಗಿ ಪೆರ್ಚಿ ಬೆಳೆದಿರ್ದ ಮತ್ತಿಯಂ ಕೃಷ್ಣನಟ್ಟಿಯ ಕೂಸಾಟದೆ ಕಿಟ್ಟಿ ಮಾನುಷಚರಿತ್ರಂ ನೋಟ್ಟಿ ಗೋಪಾಲರೊಳ್ ಭಯಮಂ ಮಾಡದೆ ಮುದ್ದಿದೆಂಬದಟಿದೇಂತಾಯ್ತು ಯುಕ್ತಂ (ಜಗಧ. ೩-೩೪) ; ನಿನಗೆ ಅಗತ್ಯವಾಗಿ ಹೇಳತಕ್ಕದ್ದೆ ಯುಕ್ತವು (ಅರ್ಥಶಾ. ೮೬). ೭. ಯೋಗ್ಯನಾದವನು; ಉತ್ತಮನಾದವನು : ನಿಮ್ಮ ಶರಣರ ಮುಂದೆ ನಾನೇತರ ಯುಕ್ತನಯ್ಯಾ (ಬಸವ. ೩೩೩). ೮. ತ್ರಿಕಾಲಜ್ಞನಾದ ಯೋಗಿ : ನೆನಹು ನಿಲಿಸುವನವನೆ ಯುಕ್ತನು ನೆನಹಲಾರ್ಜಿಸಲವನೆ ಶಕ್ತನು (ಗಗಶಾ. ೦೪-೩೭) ; ಯುಕ್ತನು ಸರ್ವದಾ ಸರ್ವಜ್ಞನು ಯುಂಜಾನನು ಬೇಕಾದಾಗ ಧ್ಯಾನದಿಂದ ಸರ್ವಜ್ಞನಾಗುವನು (ಹಿಂದಶಾ. ೦೪೦). ೯. [ಕಾವ್ಯಮೀ] ಅರ್ಥಾಂತರನ್ಯಾಸಾಲಂಕಾರದ ಹತ್ತು ಪ್ರಭೇದಗಳಲ್ಲಿ ಒಂದು : ಉರುಪಿತ್ತಶೋಕಪಲ್ಲವವಿರಚಿತಶಯನೀಯ ಮೆನ್ನ ಮೆಯ್ಯಂ ಪೀನಂ ಸ್ಫುರದನಲಪ್ರತಿನಿಧಿ ತತ್‌ಸ್ವರೂಪಗುಣಮಕ್ಕು ಮೆಂಬುದೇಮಂ ಯುಕ್ತಂ (ಕವಿರಾ. ೩-೩೭). ' ಯುಕ್ತಾರ್ಥ ' ಪರಾ. ೧೦. [ಗಣಿತ] ಕೂಡುವುದು ; ಸಂಕಲನ : ಯುತಂ, ಯುಕ್ತಂ, ಮಿಶ್ರಂ . . . ಬತಂ ಇಂತಿನಿತುಂ ಕೂಡೋದಕ್ಕೆ ಹೆಸರು (ವ್ಯವಹಾ. ೦೦-೦೨ ವ). [ಸಂ.]

**ಯುಕ್ತಗೈ** (ಕ್ರಿ). ಕೂಡಿಕೊಳ್ಳು ; ಹೊಂದಿಕೊಳ್ಳು : ಉಕ್ತದಿಂ ಧರೆಯೊಳಿಪ ಜೀವಿಗಳು ಜಲವಲ್ಲಿ ಯುಕ್ತಗೈವವನು ಜಲಪೂರ್ವದಿಂ ನುಡಿವುದು (ಮಂಗರಾ. ೦೨೨-೯). [ ಯುಕ್ತ + $ಕೈ_1$ (< $ಕೆಯ್_1$) ]

**ಯುಕ್ತ್ಯಯಾರಿಕೆ** (ನಾ). ಅಧಿಕಾರ ; ಬಲ : ಮೇಲೆ ಬರದು ಇರುವ ಮಾರ್ಗ ಬಿಟ್ಟು ತಮ್ಮ ತಮ್ಮ ಯುಕ್ತ್ಯಯಾರಿಕೆಯಿಂದ ಮನಸು ಬಂದಂತೆ

ಸಿವಾಕ್ಷರಾವುತನ ಕೆರೆಯಿಂದಾ ಮಾಡುವದು (ರಾಕೇಂದ್ರ. ೨೩೯)
[ < ಯುಕ್ತಾರಿ + —ಕ]

**ಯುಕ್ತರಸೆ** (ನಾ). ಒಂದು ಬಗೆಯ ಸಸ್ಯ : ರಾಸ್ನೆ : "ಏಲಾಪರ್ಣೀ. ಸುವಹಾ, ರಾಸ್ನಾ, ಯುಕ್ತರಸಾ — ೪ ಸಣ್ಣದುಂಪರಾಸ್ನೆ, ರಾಸ್ನೆ" (ಸಿದ್ಧಾಂತಿ. ೦೯೯). [ಸಂ. ಯುಕ್ತರಸಾ]

**ಯುಕ್ತರೂಪಕ** (ನಾ). [ಕಾವ್ಯಮೀ] ರೂಪಕಾಲಂಕಾರದಲ್ಲಿ ಒಂದು ಪ್ರಭೇದ ; ಸಮುಚಿತವಾದ ರೂಪಕ : ಮೊಗಮೆಂಬಂಬುಜದಲರಾ ನಗೆಯೆಂಬ ವಿಕಾಸಮೊಪ್ಪುವದಱೊಳ್ ಸುಟ್ಟಿಗಂ ಮಿಗೆ ಕಣ್ಗಳೆಂಬ ತುಂಬಿಗಳೊಗೆದೊಸಗೆಯಿನೆನೆ ಸುಯುಕ್ತರೂಪಕಮಕ್ಕುಂ (ಯುಕ್ತರೂಪಕಂ) (ಕವಿರಾ. ೩-೨೫). P ಪ್ರಯೋಗದಲ್ಲಿ 'ಸುಯುಕ್ತರೂಪಕ' ಎಂದಿದ್ದು 'ಸು' ಎನ್ನುವುದು ಛಂದಸ್ಸಿಗಾಗಿ ಸೇರಿದೆ. [ಸಂ.]

**ಯುಕ್ತಾಯುಕ್ತ** (ಗು). ೧. ಯೋಗ್ಯವಾದ ಮತ್ತು ಅಯೋಗ್ಯವಾದ. (ನಾ). ೨. ಯೋಗ್ಯವಾದುದು ಮತ್ತು ಅಯೋಗ್ಯವಾದುದು : ಬೋಳನೂ ಯುಕ್ತಾಯುಕ್ತವನ್ನು ಮರೆತು ಮಾತಾಡಿದ ಹುಚ್ಚಾಟವನ್ನು ನೋಡದೆ . . . ಹೊರಟುಹೋದನು (ಕಾಂಚನ. ೦೦ ಕಥಾಸಾರ). ೩. [ಕಾವ್ಯಮೀ] ಅರ್ಥಾಂತರನ್ಯಾಸಾಲಂಕಾರದ ಪ್ರಭೇದಗಳಲ್ಲಿ ಒಂದು : ಹರಿಣಧರಂ ಸೊಗಯಿಸಿದಂತಿರೆ ಕುಸುಮಿತ ಚೂತವಿತತಿ ಸೊಗಯಿಸಿತೆನಸುಂ ಸುರಭಿಸುಮನಸ್ಸಿದೋಷಾಕರವಿಲಸಿತಮಪ್ಪುದಿಂತು ಯುಕ್ತಾಯುಕ್ತಂ (ಕವಿರಾ. ೩-೩೩). [ಸಂ.]

**ಯುಕ್ತಾರ್ಥ** (ಗು). ೧. ತರ್ಕಬದ್ಧವಾದ ಅರ್ಥವುಳ್ಳ; ಸುಸಂಗತವಾದ. (ನಾ). ೨. ಸುಸಂಗತವಾದ ಅರ್ಥ,-ಅಭಿಪ್ರಾಯ. ೩. [ಕಾವ್ಯಮೀ] ಅರ್ಥಾಂತರನ್ಯಾಸಾಲಂಕಾರದ ಒಂದು ಪ್ರಭೇದ : ಸಕಲವ್ಯಾಪಿ ವಿಶೇಷಪ್ರಕಾಶಕಂ ಯುಕ್ತಕಾರಿ ಯುಕ್ತಾಯುಕ್ತಂ . . . ವಿಪರ್ಯಯಂ ಯುಕ್ತಾರ್ಥಂ (ಕವಿರಾ. ೩-೨೯). 'ಯುಕ್ತ' ನೋಡಿ. [ಸಂ.]

**ಯುಕ್ತಿ** (ನಾ). ೧. ಜೋಡಣೆ ; ಸೇರಿಕೆ. ೨. ಎತ್ತು, ಕುದುರೆ ಮೊದಲಾದುವುಗಳನ್ನು ಹೂಡುವಿಕೆ. ೩. ಸಾಧನೆ ; ಆಚರಣೆ ; ಅನುಸರಣೆ : ಈಸು ವಿಧದೊಳಗೆ ಅಂಗವಿಲ್ಲ ಮೇಲೆ ಸತ್ಪುರುಷರ ಸಂಗವಿಲ್ಲ ಯುಕ್ತಿಯಿಲ್ಲ ಎನಗೆ ಭಕ್ತಿಯೆಂತಹುದಯ್ಯಾ (ಬಸವ. ೩೩೮) ; ಸಮಗ್ರ ಸಮನ್ವಯ ಸಿದ್ಧಾಂತದ ಪೂರ್ಣದರ್ಶನ . . . ಬುದ್ಧಿ ಆತ್ಮಶುದ್ಧಿಯಾಗಿ ಭಾವ ಅನುಭಾವವಾಗಿ, ಯುಕ್ತಿ ಈಶ್ವರಭಕ್ತಿಯಾಗಿ ಪಲ್ಲವಿಸಿದ ಯೌಗಿಕಜ್ಞಾನಿಗೆ ಮಾತ್ರ ಸಾಧ್ಯ (ಶಾರದ. ೦೦೦). ೪. ಯೋಜನೆ ; ಹಂಚಿಕೆ : ಉಪಾಯ : ಹಿಂದೆ ನಾನಾಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿಯಿಲ್ಲ (ಬಸವ. ೮೭) ; ಭಕ್ತಿಯಭಿಮಾನಿಗಳು ಭಕ್ತನೊಡನೊಡನೆ ಕೊರಗುತ್ತ ನಡೆದು ಬರುತಮಿರೆ ಯುಕ್ತಿ ಹೊದ್ದದ ಶಿವಸ್ನೇಹಿಗಳ್ಬರುತಮಿರೆ (ಶಿರುರ. ದೇ. ೦೪-೧೨); ಹೋಕಾಯಂತ್ರದ ಯುಕ್ತಿಯನ್ನು ಇಟಲೀದೇಶದಲ್ಲಿ ಫ್ಲೇಯೋಜೀಯೋ ಎಂಬ ಮನುಷ್ಯನು ತೆಗೆದನೆಂದು ಬಹುಜನರು ಹೇಳುತ್ತಾರೆ (ಮುಂಬಯಿ. ೫-೨೩೨). ೫. ಕುತಂತ್ರ ; ಕಪಟಯೋಜನೆ. ೬. ಕೌಶಲ ; ನೈಪುಣ್ಯ : ಛಂದಸ್ಸು ಲಕ್ಷಣಮಲಂಕಾರಭಾವರಸಮೊಂದಿ ಕಳವೆತ್ತ ಸತ್ಕೃತಿ ಚಮತ್ಕೃತಿ ಯುಕ್ತಿಯೊಂ[ದಾಕಾಂ. ಕ್ರಮೋಂ]ದುಮಿಲ್ಲದ ಕಾವ್ಯಮಶ್ರಾವ್ಯಮಹುದು (ಕೃಮಿಕಾ. ೦-೬). ೭. ಮರ್ಮ; ರಹಸ್ಯ; ಗುಟ್ಟು. ೮. ತರ್ಕ : ವಾದ : ದೇಹಕ್ಕೆ ಅತಿರಿಕ್ತವಾದ ಆತ್ಮವೆಂಬುದೊಂದಿದೆ ಎಂಬ ವಿಷಯವನ್ನು ಯುಕ್ತಿಗಳಿಂದಲೂ ಅನುಭವದಿಂದಲೂ . . . ಸಿದ್ಧಪಡಿಸಿರುತ್ತಾರೆ (ಜೀವಾತ್ಮ. II. ಮುನ್ನುಡಿ). ೯. [ಕಾವ್ಯಮೀ] ಕಥಾವಸ್ತುವಿನಲ್ಲಿರುವ ಘಟನೆಗಳ ಅನುಕ್ರಮ. ೧೦. ಉದ್ದೇಶವನ್ನು ಸೂಚ್ಯವಾಗಿ ಅಥವಾ ಸಾಂಕೇತಿಕವಾಗಿ ವ್ಯಕ್ತಪಡಿಸುವುದು. ೧೧. ತನ್ನ ರಹಸ್ಯವನ್ನು ಮರೆಮಾಡಿ ಇತರರಿಗೆ ಮೋಸಮಾಡುವ ಉಪಾಯವನ್ನು ಕೈಕೊಳ್ಳುವಿಕೆ : ತನ್ನ ಬಗೆಯಂ ಪೆಱರ್ ತಿಳಿಯದಂತೆ ವಂಚಿಸುವುದರ್ಕೊಂದು ಕಜ್ಜಮನೆಸಗುವುದು ಯುಕ್ತಿಯೆನಿಪುದು : ಎಂತೆನೆ - ತಱಿಸಂದಪ್ರತಿಮಭಟರ್ ತಱಬುವಿನಂ ಪರಿವ ಕಳದೊಳದರ್ವಾಂ ಮುಱಿದುದು ಕಳದಿಯ ದಟಮಿಱಿಯಿಱಿ ಯೆಂದೊದಱುತ್ತೆ ತಮ್ಮವರನೇ ತಱಿದಂ (ಅಕೃತಿ. ೩-೦೬೦) ; ತನ್ನಯ ಮರ್ಮವ ಮರೆಮಾಡಲ್ ಕ್ರಿಯದಿಂ ಪರರಿಂಗೆ ಇನ್ನು ವಂಚನೆ ಮಾಡೆ ಯುಕ್ತಿ (ಕಾವಂ. ೦೬೦-೦). [ಸಂ.]

**ಯುಕ್ತಿಗೆಡು** (ಕ್ರಿ). ಆಚಾರ ತಪ್ಪು,-ಕೆಡು : ಸುಪಥಮಂತ್ರದುಪದೇಶವ ಕಲಿತು ಯುಕ್ತಿಗೆಟ್ಟು ನಡೆವಿರಯ್ಯಾ ತತ್ತ್ವಮಸಿಯೆಂಬುದನಱಿದು ಕತ್ತಲೆದೊಡೆವಿರಯ್ಯಾ (ಬಸವ. ೯೦). [ಯುಕ್ತಿ + ಕೆಡು$_1$].

**ಯುಕ್ತಿಬಲ** (ನಾ). ಸಾಧನೆಯಿಂದ ಪಡೆದುಕೊಂಡ ಬಲ,- ಶಕ್ತಿ : ಬಲವು ಮೂರು ವಿಧವಾಗಿರುವುದು, ಎಂತೆಂದೊಡೆ – ಆ ಕಾಯಬಲವು ಸಹಜವೆಂದೂ, ಕಾಲಜವೆಂದೂ, ಯುಕ್ತಿಕೃತವೆಂದೂ ಮೂರು ತೆರನಾಗಿರುವುದು . . . ರಸಾಯನಾದ್ಯೌಷಧಗಳಿಂದಾದ ಬಲವು ಯುಕ್ತಿಬಲವೆನಿಸಿಕೊಂಬುದು (ಸಕವೈ. ೦೯). [ಸಂ.]

**ಯುಕ್ತಿವಂತ** (ನಾ). ಉಪಾಯಕುಶಲನಾದ ವ್ಯಕ್ತಿ; ಚುರುಕಾದ ಬುದ್ಧಿಯುಳ್ಳವನು : ಆ ಹುಡುಗರಿಗೆಲ್ಲ ಸೀತಾರಾಮು ಎಂಬ ಹುಡುಗನು ಮುಖಂಡ . . . ಬಹಳ ಯುಕ್ತಿವಂತ (ಕಳಹು. ೭). [ಸಂ. ಯುಕ್ತಿವತ್]

**ಯುಕ್ತಿವಾದ** (ನಾ). ದೃಷ್ಟಪ್ರಮಾಣವನ್ನು ಆಧರಿಸಿದ ವಾದ ; ಬೌದ್ಧಿಕವಾದ ; ವೈಚಾರಿಕವಾದ : ಯುಕ್ತಿವಾದದ ಪ್ರಬಲತೆಯಿಂದ ನಾಸ್ತಿಕವಾದಿಗಳು ವೇದಗಳನ್ನೂ, ವೇದಪ್ರಾಮಾಣ್ಯವನ್ನೂ ನಿರಾಕರಿಸಿದ್ದರು. ಅಂತಹ ಯುಕ್ತಿವಾದದ ಬಲದಿಂದಲೇ ವೇದಪ್ರಾಮಾಣ್ಯವನ್ನು ಆಸ್ತಿಕರು ನಿರೂಪಿಸತೊಡಗಿದರು (ಶಾರದ. ೦೨೦) ; ರಾಘಪ್ಪನ ಯುಕ್ತಿವಾದವೂ ಸರಿಯಾದದ್ದೇ. ಕೆಲಸದಲ್ಲಿ ಘಟ್ಟಗಳಿವೆ. ಆಯಾ ಘಟ್ಟಕ್ಕೆ ತಕ್ಕಂತೆ ಆಯಾ ಜನರನ್ನು ಉಪಯೋಗಿಸಬೇಕು (ಗಂಡುಗಾಡು. ೨೩೦). [ಸಂ.]

**ಯುಕ್ತಿಶಾಲಿ** (ನಾ). = ಯುಕ್ತಿವಂತ. [ಸಂ. ಯುಕ್ತಿಶಾಲಿನ್]

**ಯುಕ್ತಿಸು** (ಕ್ರಿ). ವಿಚಾರಿಸು ; ಯೋಚಿಸು : ಮುಕ್ತಿಗರಸಂ ನಾನೆ ಬಸವಂ ಭಕ್ತಿಗರಸಂ ತಾನೆ . . . ಅನಚಲಲಿಂಗಂ ಯುಕ್ತಿಸಲು ಸಚರಾಚರದ ಚರಲಿಂಗವೀ ಬಸವ (ಬಸಪು. ೧೦-೯೨) ; ಯುಕ್ತಿಸಲು ಮುನಿಸಿನ ನೆವದ ಕಲುಷೋಕ್ತಿಯುಂ ನಿನಗುಂಟು (ಬಸಪು. ೯೭-೩೬). [ಯುಕ್ತಿ + — ಸು$_2$]

**ಯುಕ್ತ್ಯಲಂಕಾರ** (ನಾ). = ಯುಕ್ತಿ ೧೧ : ಕ್ರಿಯೆಯಿಂ ಸ್ವಜಮರ್ಮಮಂ ಮರೆಗೆಯ್ದು ಪರವಂಚನೆಯಂ ನೆಗಳ್ವುದು ಯುಕ್ತ್ಯಲಂಕಾರಂ (ಶಬ್ದ. ೨-೨೯೯ ವ). [ಸಂ.]

**ಯುಗ** (ನಾ). ೧. ನೇಗಿಲಿನ ಅಥವಾ ಬಂಡಿಯ ನೊಗ : "ನೊಗನೆಂಬುದು ಯುಗನಾಮಂ" (ಪಸ್ತು ಕೋ. ೬೭-೨೯); ಆ ದಿವ್ಯರಥದ ಸಮೀಪಕ್ಕೆ ವಂದು . . . ಇಚ್ಛಾಮಾತ್ರವ್ಯವಸ್ಥಿತಸಮಸ್ತಯುಗನದಱ ಯುಗಶೋಭೆಯುಮಂ . . . ನಿಜಾಗ್ರಜಂಗೆ ತೋಱಿ ನಾಡೆಯುಂ ಮೆಚ್ಚಿ ಬಿಚ್ಚಳಿಸಿ (ಜಗನ. ೬-೭೫ ವ). ೨. ಬಂಡಿಯ ಮೂಕಿ : ಈಸು. ೩. ಜೊತೆ ; ಜೋಡಿ : "ದ್ವಂದ್ವಮುಭಯಂ ದ್ವಯಂ ಯುಗ್ಮ ಯಮಳಂ ಯುಗಂ ದ್ವೈತಮೆನಲು ಬೆರಡಕ್ಕೆ ಪೆಸರಕ್ಕು" (ಶಬ್ದಮಣಿ. ೧೨೯-೧೨); ಮತ್ಸ್ಯನೆಂಬ ಪರದಂಗೆ ಜೈನೆಯೆಂಬಳ್ ಕುಲಮಾನಿನಿ ತದ್ಯುಗಕ್ಕೆ ಪೆಸರಿಂದೆ ನಂದನುಂ ಭದ್ರನುಮೀ ತನೂಭವರಿರ್ವರ್ (ಸುಕುಮಾ. ೭-೩೦); ಪೂಜಿಸಿದಂ . . . ಜಿನಮುನಿಪದಾಂಬುಜಯುಗಂಗಳಂ (ಧರ್ಮಾ. ೯-೫). ೪. ಐದುವರ್ಷಗಳ ಅವಧಿ : ಅಯ್ದು ವರ್ಷದೊಳೆ ಯುಗಂ ಎರಡುಯುಗಂ ದಶವರ್ಷಂ (ಕಂಠಾಮಾ. ೦-೫೨). ೫. ವಿಶ್ವದ ದೀರ್ಘವಾದ ಕಾಲಖಂಡ ; P ಕೃತ,

ತ್ರೇತಾ, ದ್ವಾಪರ ಮತ್ತು ಕಲಿಯೆಂಬ ನಾಲ್ಕು ಯುಗಗಳು : ಇಂತೀ ಯುಗದೊಳ್ಳೇಗಳುಂ ನಾರಾಯಣನೆಂ ನೀನುದಾತ್ತನಾರಾಯಣನೈ (ಶಂಶಛಾ. ೪-೪೩); ಪರರ ಗುಣಾಗಮವ ಪತಿಕರಿಸಿ ನುಡಿವವನೀಗಳಿನ ಯುಗದಾತನೇ (ಸುಮ್ಮ ಬ್ರ್ಯಾ. ೦-೩೬) ; ಒಂದರೆಗಳಿಗೆಯುನೊಂದು ಬರಿಸದಂತೊಂದು ಜಾವವ ಯುಗದಂತೆ ಒಂದಿರುಳನು ಕಲ್ಪಕಾಲವಂತೆಣಿಪಳು (ಹರಿಶ. ೭-೨೭). ೭. ದೀರ್ಘವಾದ ಕಾಲ ; ದೀರ್ಘಕಾಲಾವಧಿ : ಕ್ಷಣವೊಂದು ಯುಗವಾಗಿ ತೃಣಕಿಂತ ಕಡೆಯಾಗಿ ಎಣಿಸಲಾಜದ ಭವದಿ ನೊಂದೆ ನಾನು (ಕುಂದ. ೦-೯೩-೨); ಕಾಲುಗಳಿಗೆ ಯುಗವಾಗೆ ಕಳೆದು ನಿನ್ನ ಮೇಲಣಾಸೆಯಲಿ ತಾನಿಹೆನು (ಕಂಪಶ. ೦೦-೩೩). ೭. ನಾಲ್ಕು ಮೊಳದ ಅಳತೆ ; ಮಾರು: ಯುಗಮಾತ್ರಕ್ಷೇತ್ರಮಂ ಕಣ್ಬರಿಕಿಸೆ ನಡೆದೀರ್ಯಾವಿಶುದ್ಧಿಕ್ರಮಂ ಕೈಮಿಗೆ . . . ಗೃಹದ್ವಾರದೇಶಕ್ಕೆ ವಂದಂ (ಪುಣ್ಯಶ್ರ. ೧೩-೦೯೭); ಆರ್ಯನುತಂ ಕಣ್ಗಳ್ ತಾತ್ಪರ್ಯದೆ ಯುಗಮಾತ್ರಧಾತ್ರಿಯಂ ಪರಿಕಿಸೆ ಮುಂದೀರ್ಯಾವಿಶುದ್ಧಿ ಸಮನಿಸೆ ಚರ್ಯೆಗೆ ನಡೆತಂದಂ (ಕೃಷ್ಣಶು. ೦೩-೦೦೭). ೮. ಕುಂಡೆ ; ಪೃಷ್ಠ : "ಕಟಿಸಾನು ಪ್ರೋಥಂ ಯುಗಂ ಕುಂಡೆಯಕ್ಕುಂ" (ಮಂಗರಾ. ೯೮-೦೭). 'ಯುಗಸಂಧಿ' ಪರಾ. ೯. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : "ಧರಣಿ ಶಶಿಯೆನಲೊಂದು ಕರ ನೇತ್ರಮೆನಲೆರಡು ಪುರವಹ್ನಿತ್ರಯ ಮೂಜು ಶ್ರುತಿ ಯುಗಾಂಬುಧಿ ನಾಲ್ಕು" (ಮಂಗರಾ. ೦೦೩-೬). ೧೦. [ಜ್ಯೋತಿ] "ಸಂಖ್ಯಾಯೋಗಗಳಲ್ಲಿ ಒಂದು [ಏಳು ಗ್ರಹಗಳೂ ಎರಡು ರಾಶಿಗಳಲ್ಲಿರುವುದು]" (ಜಾತಕ. ಶಂ. ೩-೩೯೪) : ಐದೆ ಸಪ್ತಗ್ರಹವೊಂದೆ ರಾಶಿಯೊಳೆ ಯೋಗಂ ಗೋಳನಾಮಂ ಯುಗಂ ಐದೆ ಗೇಹದ್ವಯದೊಳ್ (ಜಾತಕ. ೦೩-೫). 'ಯುಗಯೋಗ' ಪರಾ.

**ಯುಗಯುಗ, ಯುಗಜುಗ** (ದ್ವಿರುಕ್ತಿ) : ಯುಗಯುಗಕೂ ಉರುಳುತಿಹುದು ಜಗದ ರಥದ ಗಾಲಿ (ಶಂಮು. ೨೪-೧); ಯುಗಜುಗಂಗಳೆಲ್ಲದಂದು ಊರ್ಧ್ವಮುಖನೆಂಬ ಗಣೇಶ್ವರನು (ಅವತಂ. ೨-೭); ಯುಗಜುಗದ ಪರಿಪಾಕದಿಂದ ಬರಲಿರುವಂಥ ಸ್ನೇಹಸಾರದ ಹದವನರಿವೆನೇ ? (ಉಯ್ಯಾರಿ. ೨೬-೪). [ಸಂ.]

**ಯುಗಂಧರ** (ನಾ). ಬಂಡಿಯ ಈಸು ; ಮೂಕಿ : "ಕೂಬರಂ, ಯುಗಂಧರಂ – ಈ ೨ ಈಸು" (ಹಲಾಯು. ೭೩-೨೯೩); "ಯುಗಂಧರೋದ್ದೇಶದಲ್ಲಿ ಕೂಬರಮಕ್ಕುಂ" (ಶಬ್ದಕೋ. ೬೭-೨೯). [ಸಂ.]

**ಯುಗಕೀಲಕ** (ನಾ). ನೊಗದ ರಂಧ್ರದಲ್ಲಿ ಸೇರಿರುವ ಗೂಟ : "ಶಮ್ಯಾ, ಯುಗಕೀಲಕಃ – ಈ ೨ ಕಳಿಯಡಕು" (ಹಲಾಯು. ೯೨-೪೨೦). [ಸಂ.]

**ಯುಗದ್ವಯ** (ನಾ). ಎರಡು ಜೊತೆ ; ನಾಲ್ಕು : 'ಯುಗದ್ವಯವದನ' ಪರಾ. [ಸಂ.]

**ಯುಗದ್ವಯವದನ** (ನಾ). ನಾಲ್ಕು ಮುಖಗಳುಳ್ಳವನು; ಚತುರ್ಮುಖ; ಬ್ರಹ್ಮ : ಗಡಗಡನೆ ನಡುಗುತ ಯುಗದ್ವಯವದನ ಕೈಮುಗಿದೆನ್ನ ಬರಿಸಿದ ಹದನದೇನೆನೆ (ಕೂರಂಗ. ೭-೨೭-೪೩). [ಸಂ.]

**ಯುಗಧರ್ಮ** (ನಾ). ೧. ಆಯಾ ಕಾಲಮಾನದ ಸ್ವಭಾವ : ಕಲ್ಮಷದ ಯುಗಧರ್ಮವೆಯ್ದೆ ಪೊರ್ದದು ತನಗೆ (ಶಂಬರ. ೯-೪). ೨. ಆಯಾ ಕಾಲಮಾನಕ್ಕೆ ಹೊಂದಿಕೊಳ್ಳುವ ನಡವಳಿಕೆ,–ಆಚಾರ,–ನಿಯಮ: ಯುಗಧರ್ಮವೆಂದರೆ ಆಯಾ ಯುಗಗಳ ಸಮಯ ಸಂದರ್ಭಾನುಸಾರವಾಗಿ ನಡೆಯಬೇಕೆಂದು ಉಕ್ತವಾದ ನಿಯಮಗಳು (ಆಯುರ್ಧ. ೦೦). [ಸಂ.]

**ಯುಗನಾಯಕ** (ನಾ). ಯುಗದ ಮುಂದಾಳು ; ಯುಗದ ಜನರಲ್ಲಿ ಶ್ರೇಷ್ಠನಾದವನು : ಯುಗನಾಯಕನೆನೆ ನಿಜಪದಯುಗನಮಿತಸುರೇಂದ್ರನೆನೆ ಯುಗಂಧರದೇವಂ ನೆಗಟ್ದಪನೀಗಳ್ (ಆದಿಪು. ೩-೮೦). [ಸಂ.]

**ಯುಗಪತ್ತು** (ಅ). ಒಮ್ಮೆಲೆ ; ಏಕಕಾಲದಲ್ಲಿ : "ಒಡನಲ್ಬುದೇಕಕಾಲಂ ಯುಗಪತ್" (ಶಬ್ದಕೋ. ೦೬-೦೬) ; ಯುಗಪದ್ವಾದಿತ ದೇವದುಂದುಭಿಗಳಿಂದಾಬ್ಧಿಯೆಬ್ದ ಶಬ್ದಾತ್ಮಕಂ ಜಗಂ (ಆದಿಪು. ೧೦-೨೦); ಯುಗಪತ್ಕರ್ಮವಿಧಾನದಿಂ ಯುಗಪದುತ್ತಾನಾಂಗ ಸಂಸ್ಥಾನದಿಂ ಯುಗಪದ್ವಿಭ್ರಮವೇಗದಿಂ ಯುಗಪದಭ್ಯಾಯಾತಚಾತುರ್ಯದಿಂ ಯುಗಪದ್ಬಂಡ ಖಣಿಲ್ಖಣಿಲ್ ಕ್ವಣಿತದಿಂ ಕೋಲಾಟದೊಳ್ ಕೃಷ್ಣನಂ ಬಗೆಗೊಂಡರ್ ಸಮಸತ್ತ್ವವಿಭ್ರಮಣಿಯರ್ ಶ್ರೀರೂಪೆಯರ್ ಗೋಪಿಯರ್ (ಜಗನ್ನಾ. ೫-೦೩) ; ಪರಮಹಂಸನ ದೀಕ್ಷೆ ತಾಳಿದ ವರಮಹಾರಘುರಾಯನೊಂದೆಡೆ ಪರಮಪಕ್ಷತೆಯಿಂದ ಪ್ರಜೆಗಳ ಪೊರೆವ ರಾಘವನು . . . ಧರೆಯ ಮೇಲವತರಿಸಿ ಯುಗಪತ್ತಿರದೆ ಬಂದಿಹ ಧರ್ಮಕರ್ಮಗಳಂತೆ ತೋರಿವರು (ರಘುವಂ. ೭೬-೦೭). [ಸಂ. ಯುಗಪದ್]

**ಯುಗಪತ್ರಕ** (ನಾ). ಕೆಂಗಾಂಚಾಳದ ಗಿಡ ; ಕೋವಿದಾರಸಸ್ಯ: "ಕೋವಿದಾರಃ, ಚಮರಿಕಃ, ಕುದ್ದಾಲಃ, ಯುಗಪತ್ರಕಃ– ೪ ಕೆಂಪು ಕಾಂಚವಾಳದ ಗಿಡ, ಕೆಂಗಾಂಚಾಳ ಹುವ್ವಿನ ಗಿಡ" (ಸಿದ್ಧಾಂತಿ. ೦೦೭). [ಸಂ.]

**ಯುಗಪದುಕ್ತಿ** (ನಾ). ಎಲ್ಲರನ್ನೂ ಕುರಿತು ನುಡಿಯುವುದು.– ಒಳಗೊಂಡು ಹೇಳುವುದು : ಪುರುಷತ್ರಯಮುಂ ಸ್ವಾರ್ಥೋಚ್ಚರಿತಂಗಳ್ ಯುಗಪದುಕ್ತಿಗುತ್ತಮಪುರುಷಂ ಪರಮದನುಟಿದಿರೆ ಮಧ್ಯಮಪುರುಷಂ ಕ್ರಮಗಣನಮಿರೆಯುಮೊಲ್ಪಿಂತಿರೆಯುಂ (ಶಮದ. ೨೨೩). [ಸಂ.]

**ಯುಗಪರಿವರ್ತನ** (ನಾ). ಒಂದು ಯುಗದ ನಂತರ ಮತ್ತೊಂದು ಯುಗವು ಬರುವುದು : ಯುಗಪರಿವರ್ತನಕ್ಕೆ ಪೊಜಗೆಂಬ ಸುಖಕ್ಕೆ ನಿವಾಸಮೆಂಬ ಶೋಭೆಗೆ ಮೊದಲೆಂಬ . . . ಕಥಾಕಥನಂ ವಿದೇಹದೊಳ್ (ಮಲ್ಲಿಶ. ೨-೫). [ಸಂ.]

**ಯುಗಪಾರ್ಶ್ವಗ** (ನಾ). ನೊಗಕ್ಕೆ ಹೂಡುವ ಎತ್ತಿನ ಪಕ್ಕದಲ್ಲಿ ಕಟ್ಟುವ ಮತ್ತೊಂದು ಎತ್ತು : "ಪ್ರಷ್ಠವಾಟ್, ಯುಗಪಾರ್ಶ್ವಗಃ – ೨ ಉಕ್ಕಗೆ ತಿದ್ದಲೆಂದು ನೊಗವನ್ನು ಹೊತ್ತು ಸೆಳೆಯುವ ಎತ್ತಿನ ಕೆಲದಲ್ಲಿ ಕಟ್ಟಲ್ಪಟ್ಟ ಎತ್ತು, ತಿದ್ದಲ್ಪಡುತ್ತಾಯಿರುವ ಎತ್ತು" (ಸಿದ್ಧಾಂತಿ. ೨೯೩). [ಸಂ.]

**ಯುಗಪುರುಷ** (ನಾ). ಒಂದು ಕಾಲದ ಅತ್ಯಂತ ಸತ್ತ್ವಶಾಲಿಯಾದ ವ್ಯಕ್ತಿ : ಒಂದು ಹೊಸಯುಗವನ್ನೇ ಆರಂಭಿಸುವ ಮಹಾವ್ಯಕ್ತಿ: ಇದು ಗಾಂಧೀಯುಗ ; ಮಹಾತ್ಮಾಗಾಂಧಿಯವರು ಯುಗಪುರುಷರು (ತ್ರಿಯಾತ್ರೆ. ೦); ಯುಗಪುರುಷರ ಜಗುಲಿಗಿರಿಸಿ ಕೈಯ ತೊಳೆದುಕೊಂಡೆವು (ನಂಮು. ೨೪-೨೦). [ಸಂ.]

**ಯುಗಪ್ರವರ್ತಕ** (ನಾ). ೧. ಯುಗಗಳನ್ನು ಉಂಟುಮಾಡುವವನು : ಯುಗಾದಿಕೃತು ತಾ ಯುಗಪ್ರವರ್ತಕನೆನಿಸಿ ಧರ್ಮಪ್ರಘಟಕನು ತಾನಾಗಿ ಭಕುತರಿಗೀವ ಸಂಪದವ (ಹರಿಕ. ೭-೦೫). ೨. ಒಂದು ಕಾಲಮಾನದ ಜನಜೀವನಕ್ಕೆ ಸಂಪೂರ್ಣ ಹೊಸದಾದ ರೂಪವನ್ನು ತಂದು ಕೊಡುವವನು ; ಯುಗಪುರುಷ : ಕ್ರಾಂತಿಗೆ ಮೂಲ, ಆದರ್ಶಸಾಹಿತ್ಯ. ಯುಗಪ್ರವರ್ತಕರನೇಕರು ಇದನ್ನು ತೀರ ಹತ್ತಿರಕ್ಕೆ ಜಗ್ಗಿ "ಸಹೋದರ" ಭಾವವನ್ನು ಹುಟ್ಟಿಸಿದರು (ಕ್ರಾಂತಿ. ೧). [ಸಂ.]

**ಯುಗಯೋಗ** (ನಾ). = ಯುಗ ೧೦ : ಏಳು ಗ್ರಹಗಳೂ . . . ಎರಡು ರಾಶಿಗಳಲ್ಲಿದ್ದರೆ ಯುಗಯೋಗ (ಜಾತಕ. ೦-೫ ಅಡಿ). 'ಯುಗಯೋಗಜಾತ' ಪರಾ. [ಸಂ.]

**ಯುಗಯೋಗಜಾತ** (ನಾ). [ಜ್ಯೋತಿ] ಯುಗಯೋಗದಲ್ಲಿ ಹುಟ್ಟಿದವನು : ಯುಗಯೋಗಜಾತನಧನಂ ಪಾಷಂಡಿ (ಜಾತಕ. ೦೩-೦೫). [ಸಂ.]

**ಯುಗಲ, ಯುಗಳ** (ನಾ). ೧. ಜೊತೆ ; ಜೋಡಿ : ಮುಗಿಲ ಯುಗಲದಂತೆ ಬಂದು ಸೇರಿ ಸಾರಿ ಅಗಲದೆ . . . ಬಾಳಬೇಕು, ಬೆಳೆಯಬೇಕು, ಸಖ್ಯ ಕ್ಷಣಿಕವೆನಿಸದೆ ! (ಶಾರಂಗ. ೨೪-೦೭) ; ಕೋಗಿಲೆಯು ಏಕಾಕಿನಿ ! ತನ್ನ ಯೋಗೀಶ್ವರನು ಬಾರದೆ ಯುಗಲವರಿಯದ ಯೋಗಿನಿ !

(ಕಂಕವ. ೧೯-೦೬). **ಯುಗಳ** : ೧. " ಯುಗಂ, ಯುಗ ೦. ಯುಗಳಂ . . . ಈ ೮ ಅಪುಳ್" (ಹಲಾಯು. ೦೦೬-೦೫). ೨. ಅವಳಿ ಮಕ್ಕಳು ; **ಅವಳಿ ಜವಳಿ** : ಯುಗಳಂಗಳ್ಪುಟ್ಟಿ ಸೀಂತಾಗುಳಿಸಿ ಪಿತೃಯುಗಂ ಸತ್ತು ಸಗ್ಗಂಗಳೊಳ್ ಪುಟ್ಟುಗುಂ (ಕಂರಾವಪ. ೦-೭೭). ೩. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಪದ ಯುಗಳಂ . . . ಎರಡಟಿ ನಾಮಂ (ವ್ಯವಹಾ. ೯-೨). [ಸಂ.]

**ಯುಗಶಕ್ತಿ** (ನಾ). ಒಂದು ಯುಗದ ಚೈತನ್ಯ,—ಸತ್ತ್ವ : ಜನಮನವೇ ಯುಗಶಕ್ತಿಯಲ್ತೆ? ತಾನಾ ಶಕ್ತಿ ಮೂರ್ತಿಗೊಳೆ ನಾಮದನ್ನುಪ ತಾರವೆಂದು ಪೂಜಿಪೆವಲ್ತೆ (ಶ್ರೀರಾವಪ. ೦೦-೨೯೪). [ಸಂ.]

**ಯುಗಸಂಧಿ** (ನಾ). ಗುದಸ್ಥಾನ ; ಪೃಷ್ಠ : ರೋಹಿಣೀಸಂಧಿಯ ಕಳಗಿರೆ ಕಾ(ಸೂ)ಸುಳ ಪೆಸರದಕೆಂಬರಪಾನದ ನಡುವೆಯದಕೆ ಯುಗಸಂಧಿಯುಮಂ (ಅಶ್ವಶಾ. ೯-೩೨). [ಸಂ.]

**ಯುಗಳ** ' ಯುಗಲ '. ನೋ.

**ಯುಗಳಜಿಹ್ವಗ** (ನಾ). ೧. ಎರಡು ನಾಲಗೆಗಳುಳ್ಳುದು ; ಹಾವು. ೨. ಎರಡು ನಾಲಗೆಯ ವ್ಯಕ್ತಿ ; ಮಾತಿಗೆ ತಪ್ಪುವವನು. ೧, ೨ : ಬಗೆದಿಳೆಯ ಪೋಗಿಯಹಿಪತಿಯ ಪೊರ್ದಲುಮವನು ಯುಗಳಜಿಹ್ವ(ಹ್ವ)ಗನೆಂದು ಜರಿದಿರದೆ ಸ್ವರ್ಗಕ್ಕೆ ನೆಗೆದು ಪೊಕ್ಕುದಾಕ್ಷಿಸಿಯಗ್ನಿಮುಖರೆನುತಮದನುಳಿದು ಹುಡುಕುತ್ತಲಿ (ಶವಮೋ. ೨೦-೮).

[< ಸಂ. ಯುಗಲಜಿಹ್ವಕ]

**ಯುಗಳತೆ** (ನಾ). ಜೋಡಿಯಾಗಿರುವಿಕೆ ; ಎರಡಾಗಿ ಕೂಡಿರುವುದು : ಅಮರಯಿರೆನೆವುಗಳಕ್ಕುಂ ಕ್ರಮದೇಕಾನೇಕವಚನದೊಳ್ ಪ್ರತ್ಯೇಕಂ ಸಮನಿಸೆ ಯುಗಳತೆಯಾಖ್ಯಾತಮಾರ್ಗದೊಳ್ ನೆಲಸಿ ನೀದ ಪುರುಷತ್ರಯಕಂ (ಶಮದ. ೨೦೬). [ಸಂ. ಯುಗಲತಾ]

**ಯುಗಳರಸನ** (ನಾ). = ಯುಗಳಜಿಹ್ವಗ ೧ : ಕುಂಜರಕೃತ್ತಿವಸನ ಯುಗಳರಸನ ರಂಜಿಪ ಕಂಕಣ ಮಂಜುಳ ರಿಪುಪುರಭಂಜನ ನಿತ್ಯನಿರಂಜನ (ಉದ್ಭಟದೇ. ೭-೨೨). [ಸಂ. ಯುಗಲರಸನ]

**ಯುಗಳಾರ್ಥ** (ನಾ). ೧. ಎರಡು ಅರ್ಥಗಳು. ೨. ಎರಡು ಎಂಬ ಅರ್ಥ ; ಜೊತೆ ಎಂಬ ಅರ್ಥ : ಯುಗಳಾರ್ಥದ ಬಹುವಚನಕ್ಕೊಗೆ ತಂದಾವಿಷ್ಟಲಿಂಗದೆಡೆಗೇಕತ್ವಂ ನೆಗಟ್ಟುಂ (ಶಮದ.೦೯೪).[ಸಂ.ಯುಗಲಾರ್ಥ]

**ಯುಗಳೋಚ್ಚರಣ** (ನಾ). ಎರಡು ಸಲ ಉಚ್ಚರಿಸುವುದು,—ಹೇಳುವುದು ; ದ್ವಿರುಕ್ತಿ : ದೂರಾಭೀಕ್ಷಣವೀಪ್ಸೋದಾರಾನುಕೃತಿಕ್ರಿಯಾಸಮಭಿಹಾರ ಸಮೀಪೋರುತರ ಚಾಪಳಾದಿಗೆ ಸಾರಂ ಬುಧರಿಂ ಪದಕ್ಕೆ ಯುಗಳೋಚ್ಚರಣಾ (ಶಮದ. ೦೯೫). [ಸಂ. ಯುಗಲೋಚ್ಚರಣ]

**ಯುಗಾಂತ** (ನಾ). ೧. ಯುಗವು ಮುಗಿಯುವ ಕಾಲ. ೨. ಪ್ರಳಯಕಾಲ; ಜಗತ್ತಿನ ನಾಶ: ''ಸಂವರ್ತಃ, ಪರಿವರ್ತಃ, ಕ್ಷಯಃ, ಯುಗಾಂತಃ . . . ಮಹಾಪ್ರಳಯಃ—ಈ ೯ ಪ್ರಳಯಕಾಲಂ " (ಹಲಾಯು. ೨೦-೦೦೭); ಮಹೇಶ್ವರಭೈರವಾಡಂಬರಮುಮಂ ಯುಗಾಂತಕಾಲಾಂತಕನ ಮಸಕಮುಮಂ ತನ್ನೊಳಳವಡಿಸಿಕೊಂಡು (ಕಂಶಶಾ. ೧೦-೦೦೫ ವ); ಪುರುಷರು ಇಲ್ಲದಿರುವ ಬೇರೊಂದು ಬ್ರಹ್ಮಸೃಷ್ಟಿಯೊ . . . ಸ್ತ್ರೀಮಯವಾದ ಯುಗಾಂತವೊ ! (ಪಕಶಾ. ೯೮). [ಸಂ.]

**ಯುಗಾಂತರ** (ನಾ). ೧. ಇನ್ನೊಂದು ಯುಗ ; ಬೇರೆ ಯುಗ. ೨. ಬಹಳ ಕಾಲ ; ದೀರ್ಘವಾದ ಕಾಲ ; ಅನೇಕ ವರ್ಷಗಳು : ಮರಣವು ಈಗಲೆ ಬರಲಿ, ಅಥವಾ ಯುಗಾಂತರದಲ್ಲಿಯೆ ಬರಲಿ ಧೀರರಾದವರು ನ್ಯಾಯಮಾರ್ಗದಲ್ಲಿಟ್ಟ ಹೆಜ್ಜೆಯನ್ನು ಎಂದಿಗೂ ಚಲಿಸುವುದಿಲ್ಲ (ಶಿಶಿಶಂ. XI, ೪). [ಸಂ.]

**ಯುಗಾದಿ** (ನಾ). ೧. ಯುಗದ ಆರಂಭ : ಈ ಪುರುಷನಲ್ಲಾ ಯುಗಾದಿ ಮಹಾಪುರುಷರಿಗೆ ಮೊದಲ ಪುರುಷನು (ಬಸಪು. ೫-೬೨). ೨. ವರ್ಷದ ಮೊದಲನೆಯ ದಿನ ಮತ್ತು ಆ ದಿನ ಆಚರಿಸುವ ಹಬ್ಬ; ಚೈತ್ರಶುದ್ಧ ಪ್ರತಿಪದೆ : ದೀವಳಿಗೆ ಯುಗಾದಿ ಹಬ್ಬಗಾಣಿಕೆ ಗ ೨ (ಎಕ. VIII. ತೀರ್ಥಹ. ೯೫-೭೪; 1709) ; ಆ ಯುಗಾದಿಯಲಿ ನೀನೆನ್ನ ದರ್ಪಣವೆ — ಈ ಯುಗಾದಿಯಲಿ ನೀನೆಲ್ಲಿ ? ನಾನೆಲ್ಲಿ ? (ಗರಿಪಂ. ೫೭-೦೬); ಯುಗಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ (ಗಂ. ೦೦೭-೦).' ಉಗಾದಿ' ಪರಾ.

[ಸಂ. ಯುಗಾದಿ, ಯುಗಾದ್ಯಾ]

**ಯುಗಾವಸಾನ** (ನಾ). = ಯುಗಾಂತ ೨ : ಯುಗಾವಸಾನಮಹಾಂಭೋಧಿವೇಲಾಕಲ್ಲೋಲವಿಲಾಸಮುಲ್ಲಾಸಪ್ರತಿಭಾಸಮುಮಂ ಕೆಟ್ಟ ಡಿಸಿದ ವಿದ್ಯಾಧರರಾಜನ ಸಭಾಮಂಡಳಂ ಕ್ಷೋಭಕ್ಕೊಡರ್ಚಿದಾ ಪ್ರಸ್ತಾವದೊಳ್ (ಶಾಂತಿಪು. ೪-೬೬ ವ). [ಸಂ.]

**ಯುಗ್ಮ** (ನಾ). ೧. ಜೊತೆ : ಜೋಡಿ : "ಯುಗ್ಮಂ, ಯುಗಂ, ಯುಗಳಂ . . . ಯಮಳಂ — ಈ ೮ ಅಪುಳ್ " (ಹಲಾಯು. ೦೦೭-೦೫) : ಶ್ರೀಭದ್ರಬಾಹುಚಂದ್ರಗುಪ್ತಮುನೀಂದ್ರಯುಗ್ಮದಿನೊಪ್ಪೆ ವಲ್ . . . ಶಾನ್ತಿಸೇನಮುನೀಶನಾಕ್ಕಿಪ ವೆಳ್ಗೊಳ ಅದ್ರಿ ಮೇಲಶನಾದಿ ವಿಟ್ಟು ಪುನರ್ಭವಕ್ಕೆಟೆ ಆಗಿ × × (ಎಕ. II, ೩೦-೧ ; ಶು. 650); ಇಂತೀ ಯುಗ್ಮಮುಂ ಅನಂತವಾರಂ ಪೋದೊಡೆ ಏಕವಾರಂ ಗೃಹೀತಗ್ರಹಣಾ ಅಕ್ಕುಂ (ಕತ್ರ್ಯಕ್ರಿ. ೮೬). ೨. ಗಂಡಹೆಂಡತಿಯರು; ದಂಪತಿ : ಕೂರ್ಮೆ ತಳ್ತಿರವಿಂ ಮಚ್ಚುಗೆವೆತ್ತ ಪತ್ತುಗೆಯಿಂತಾ ನಾಲ್ವರಂದಿರ್ವರಿರ್ವರೆ ಯುಗ್ಮದ್ವಯಮಾದರ್ (ಶಾಂತಿಪು. ೬-೦೨೩). ೩. ನೊಗ : ಧರೆ ತೇರ್ದ್ದಿಕ್ಕುಂಭಿ ಯುಗ್ಮಂ ರವಿ ಶಶಿಗಳಯುಂ ಗಾಲಿಗಳ್ ಮೇರು ಬಿಲ್ . . . ಆ ವಾಯು ಪೀಳ್ಕೆಗೆ ರುದ್ರಂ ಸುರಸೈನ್ಯಂ ಕೂಡೆ ಸುಟ್ಟಂ ತ್ರಿಪುರಮನಳವಿಂದಂದು (ಎಕ. V, ಅರಸೀ. ೦೨೭-೨೩ ; 1185). [ಸಂ.]

**ಯುಗ್ಮಪದಕರಣ** (ನಾ). [ಕಾಮಶಾ] ಸುರತದಲ್ಲಿ ಒಂದು ಬಂಧ : ಮತ್ತಂ ಕುಳ್ಳಿರ್ದವಳು ಒಂದು ಕಾಲಂ ಮಡಿದು ಇರಲಾಗಿ ಪುರುಷನವಳಿರ್ದ ಮೊಗವಾಗಿ ತನ್ನ ಕಾಲನವಳು ನೀಡಿದ ಕಾಲ ಕೆಳಗೆ ನೀಡಿ ಮಡಕಾಲಂ ಅಡ್ಡಕಾಲೊಡನೆ ಎತ್ತಿ ಓರೊರ್ವರನಪ್ಪುತು ಕೂಡಿದೊಡೆ ಯುಗ್ಮಪದಕರಣಾ (ಕಮಶಾ. ೨೩೭). [ಸಂ.]

**ಯುಗ್ಮಾದ್ರಿ** (ನಾ). ಒಂದು ನರಕದ ಹೆಸರು : ಲಾಕ್ಷಾಪ್ರಲೇಪ ಮಾಂಸಾದ ನಿರುಚ್ಛ್ವಾಸ ಸನಿಚ್ಛ್ವಾಸ ಯುಗ್ಮಾದ್ರಿ ಶಾಲ್ಮಲಿ ಲೋಹಪ್ರದೀಪ ಕ್ಷುತ್ತಿಪಾಸಕ ಕ್ರಿಮಿಕುಲಂಗಳೆಂಬವೇ ರಾಜನರಕಂಗಳು (ಬವೀಕ. ೦೫೦).

[ಸಂ.]

**ಯುಗ್ಯ** (ಗು). ೧. ನೊಗಕ್ಕೆ ಹೂಡಲು ತಕ್ಕುದಾದ. (ನಾ). ೨. ರಥಕ್ಕೆ ಹೂಡುವ ಕುದುರೆ : " ವಾಹನಂ, ಧೋರಣಂ, ಯುಗ್ಯಂ, ಯಾನಂ, ಪತ್ರಂ— ಈ ೫ ರಥವ ಹೂಡುವ ಕುದಿರೆ '' (ಹಲಾಯು. ೬೪-೨೯೫). ೩. ವಾಹನ : " ವಾಹನಮಾವುದಾದೊಡಂ ಪತ್ರಯುಗ್ಯಧೋರಣನಾಮಂ '' (ವಸ್ತುಕೋ. ೫೮-೪೦). [ಸಂ.]

**ಯುಜ್ಯ** (ಗು). ೧. ಜೋಡಿಸಿದ ; ಸೇರಿಸಿದ. ೨. ತಕ್ಕ ; ಯೋಗ್ಯವಾದ. ೩. ಸಂಬಂಧಪಟ್ಟ ; ಸಂಬಂಧವುಳ್ಳ. (ನಾ). ೪. ಹೊಂದಿಕೆ ; ಸಂಬಂಧ. [ಸಂ.]

**ಯುತ** (ಗು). ೧. ಹೊಂದಿಸಿದ ; ಸಂಧಿಸಿದ : ಜೋಡಿಸಿದ. ೨. ಸಹಿತವಾದ ; ಒಳಗೊಂಡ : ಭೋಂಕನೆ ರಥದಿಂದಮಿಂದಿಳಿದು ಬಂದನುಪೇಂದ್ರಯುತಂ ರಘೂದ್ವಹಂ (ಕಂರಾವಪ. ೦೬-೨೦); ಯುತಕಮಳಂ ಗತಕಮಳಂ ಭೃತಕುರವಂ ಮುಕ್ತಕುರವಂ . . . ಚಿತ್ರತರಂ ನೋಡುವ ನರಂಗೆ ಖಾತಮಖಾತಂ (ಕಂದ್ರಪು. ೧೫-೩೦). (ನಾ). ೩. ಹೊಂದಿಸಿದುದು ; ಜೋಡಿಸಿದುದು : "ಯುತಮನ್ವಿತಂ ಸಂಹಿತಂ ಸಮನ್ವಿತಂ"

(ವ್ಯಂಗಣಾ. ೦೩೦-೦೮). ೪. [ಗಣಿತ] ಕೂಡುವಿಕೆ ; ಸಂಕಲನ : "ಯುತಂ. ಯುಕ್ತಂ . . . ಇಂತಿನಿತುಂ ಕೂಡೊದಕ್ಕೆ ಹೆಸರು" (ವ್ಯವಹಾ. ೦೦೨೦೨ ವ). [ಸಂ.]

**ಯುತಕ** (ನಾ). ೧. ಜೋಡಿ ; ಜೊತೆ. ೨. ಜೋಡಣೆ; ಹೊಂದಿಕೆ. ೩. ಮೈತ್ರಿ ; ಸ್ನೇಹ. ೪. ಹೆಂಗಸರ ಉಡುಗೆಗಳಲ್ಲಿ ಒಂದು ಪ್ರಕಾರ. [ಸಂ.]

**ಯುತಿ** (ನಾ). ೧. ಕೂಡಿರುವಿಕೆ ; ಸೇರಿಕೊಂಡಿರುವಿಕೆ. ೨. ಹೊಂದಿಕೆ; ಜೋಡಣೆ : ಶ್ರುತಿಮತಿಗಳನ್ಯೋನ್ಯಪರಿಪೂರಕಂಗಳ್ ಯುತಿಯೊಳವು ಸೇರಿರಲು ಸತ್ಯದರ್ಶನ ನಿನಗೆ (ಮಂಕುತಿ. ೩೩೨). [ಸಂ.]

**ಯುದ್ಧ** (ನಾ). ಕದನ ; ಸಮರ : ಮಾನಸಸರೋವರದೊಳ್ ಸಿತಯಕ್ಷನಂ ಯುದ್ಧದೊಳಾವೊಂ ಗೆಲ್ದೊಂ (ಪಂಪ.ಭಾ. ೬೦-೨೩) ; ನಿಚ್ಚಂ ಧರಾಧೀಶರಂ ಪಡಲಿಟ್ಟಂತಿರೆ . ಮಾಟ್ಪಿನೋವದೆ ಪಯೀಂಭಾಸಿರ್ವರಂ ಯುದ್ಧದೊಳ್ (ಶಂಶಖಾ. ೦೦-೨೩). [ಸಂ.]

**ಯುದ್ಧಂಗೆಯ್** (ಕ್ರಿ). ಕಾಳಗ ಮಾಡು : ವೃದ್ಧನಪ್ಪ ಸುಂದರನೊಳ್ ಯುದ್ಧಂಗೆಯ್ದು (ಪಂಪ.ರಾ. ೩೬-೦೪) ; ಪದಘಾತಕ್ಕೆ ಧರಾತಳಂ ಕುಸಿಯೆ . . . ಯುದ್ಧಂಗೆಯ್ದರೀಶಾರ್ಜುನರ್ (ಶಬಶಂ. ೪-೬೮).

[ಯುದ್ಧ + ಕೆಯ್$_1$]

**ಯುದ್ಧಭೂಮಿ** (ನಾ). ಕಾಳಗದ ಕಣ ; ರಣರಂಗ : ಗಂಗರಾಜರೊಡನೆ . . . ಕೇತಮಲ್ಲ ನಾಯಕರುಗಳು ಯುದ್ಧಭೂಮಿಗೆ ಹೊರಡಲನುವಾದರು (ಶಾಂತಶಾ. ೦೪೭). [ಸಂ.]

**ಯುದ್ಧರಂಗ** (ನಾ). = ಯುದ್ಧಭೂಮಿ : ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ (ಜಗಬ. ೦-೩) ; ರಾತ್ರಿ ಯುದ್ಧರಂಗದಲ್ಲಿಯೇ ಕಳೆಯಿತು (ಪಬಶಾ. ೨೦೨). [ಸಂ.]

**ಯುದ್ಧವಿರಾಮ** (ನಾ). ಯುದ್ಧವನ್ನು ನಿಲ್ಲಿಸುವಿಕೆ ; ಕದನವಿರಾಮ : "ಯುದ್ಧವಿರಾಮ. ಕದನವಿರಾಮ" (Cease fire. ಶಕ್ತಿ.ಶಿ. ೦೩). [ಸಂ.]

**ಯುದ್ಧವೀರ್ಯ** (ನಾ). ೧. ಕಾಳಗದಲ್ಲಿ ತೋರುವ ಪರಾಕ್ರಮ ; ಸಮರಶೌರ್ಯ. ೨. [ಜೈನ] ಕದನದಲ್ಲಿ ಗೆಲ್ಲುವ ಒಂದು ಬಗೆಯ ವಿದ್ಯೆ : ಅಮಿತತೇಜಂ ಶ್ರೀವಿಜಯಂಗೆ ಯುದ್ಧವೀರ್ಯಮುಂ ಪ್ರಹರಣಾವರಣಮುಂ ಬಂಧಮೋಚನಮೆಂಬ ಮೂಱುವಿದ್ಯೆಗಳಂ ಕೊಟ್ಟು (ಶಾಪುಂಶು. ೦೪೦). [ಸಂ.]

**ಯುದ್ಧಸನ್ನದ್ಧ** (ನಾ). ಕಾಳಗಕ್ಕೆ ಸಿದ್ಧನಾದವನು : ಚಕ್ರವರ್ತಿ ಯುದ್ಧಸನ್ನದ್ಧನಾಗಿ ಸಮಸ್ತಸಾಮಗ್ರೀಸಹಿತಂ ಶಿಬಿರದಿಂ ಪೊಱಮಟ್ಟೊಡದಂ (ಶಾಂತಿಪು. ೩-೩೦ ವ). [ಸಂ.]

**ಯುದ್ಧಾಜಿರ** (ನಾ). = ಯುದ್ಧಭೂಮಿ : ನವಘಟೀಯಂತ್ರದಿಂ ವಿಷ್ಣುಯುದ್ಧಾಜಿರವಾಹಿವೈರಿರಕ್ತಾಂಬುವನೆ ನಿಜಯಶೋವಲ್ಲಿಗೆತ್ತುತ್ತು ವಿರ್ಪಂ (ಎಕ. V. ಹಾಸನ. ೦೩೦-೦೨; 1147). [ಸಂ.]

**ಯುಧಿಷ್ಠಿರ** (ನಾ). ೧. ಯುದ್ಧದಲ್ಲಿ ಸ್ಥಿರವಾಗಿರುವವನು,—ಅಚಲನಾಗಿರುವವನು. ೨. ಪಾಂಡವರಲ್ಲಿ ಹಿರಿಯವನಾದ ಧರ್ಮಪುತ್ರನ ಹೆಸರು ; ಧರ್ಮರಾಯ : ಯುಧಿಷ್ಠಿರಂ ಶಲ್ಯನ ಮೊನೆಗೆ ನೆಱೆದು ನಿಂದು ಕಯ್ವೊಸುವಾ ಪ್ರಸ್ತಾವದೊಳ್ (ಶಂಶಖಾ. ೦೦-೩೯ ವ) ; ಯುಧಿಷ್ಠಿರರಾಯವಳ ಮುಂಕೊಳಿಸಿ ಹೊಕ್ಕುದು ಜಯದ ಸುಮ್ಮಾನದ ಸಭಾಡದಲಿ (ಕುಮಾ.ದ್ರೋ. ೦-೪೯). [ಸಂ.]

**ಯುನಾನಿ** (ಗು). ೧. ಯವನದೇಶಕ್ಕೆ ಸಂಬಂಧಿಸಿದ ; ಗ್ರೀಸ್ ದೇಶದ : ಕ್ಷತ್ರಿಯಕುಲಸ್ಥರು . . . ಯುನಾನೀ (ಯವನ_ಗ್ರೀಕ) ದಳಗಳನ್ನು ಓಡಿಸಿ ಅವರ ಅಧಿಕಾರಿಗಳನ್ನು ಹಿಡಿದು ಧ್ವಂಸ ಮಾಡಿಬಿಟ್ಟರು (ಶಾಂತಕ್ರ. ೦೩೦). (ನಾ). ೨. ಗ್ರೀಸ್‌ದೇಶದವನು ; ಯವನ : ಯುನಾನಿಯರ ಮೂಗು ಒಂದು ತೆರನಾಗಿದ್ದರೆ ರೋಮನರ, ಯೆಹೂದಿಯರ, ನೀಗ್ರೋಗಳ ಮೂಗುಗಳು ಬೇರೆ ಬೇರೆಯಾಗಿರುತ್ತವೆ (ಕೀವಾಶ್ಚ. ೦೨೨). ೩. ಒಂದು ಬಗೆಯ ವೈದ್ಯಪದ್ಧತಿ ; ಮಹಮದೀಯರಿಂದ ಬಂದ ವೈದ್ಯವಿದ್ಯೆ : ಅಲೋಪತಿ . . . ಹೋಮಿಯೋಪತಿ . . . ಯುನಾನಿ (ಬಳಕಶ. ೩೦).

[ ← ಪಾರ. ಹಿಂ. ಯೂನಾನೀ; ಮರಾ. ಯುನಾನೀ ]

**ಯುಯು** (ನಾ). ಕುದುರೆ; 'ಯಯು' ಪಠಾ. [ಸಂ.]

**ಯುಯುತ್ಸು** (ಗು). ೧. ಯುದ್ಧ ಮಾಡುವ ಅಪೇಕ್ಷೆಯುಳ್ಳ; ಕದನೋತ್ಸಾಹಿಯಾದ. (ನಾ). ೨. ಕಾಳಗ ಮಾಡಲು ಬಯಸುವವನು ; ಯೋಧ : ಹೋರಾಟದ ಕಥೆಗಳು ಯುಯುತ್ಸು ಹಾಗು ಸ್ವಪ್ರತಿಷ್ಠೆಯ ಪ್ರವೃತ್ತಿಗಳಿಗೆ ಆಕರ್ಷಕವೆನಿಸುತ್ತವೆ (ಕಥಕ. ೯೭). ೩. ಧೃತರಾಷ್ಟ್ರನ ದಾಸೀಪುತ್ರ ; ಕೌರವರಲ್ಲಿ ಒಬ್ಬ : ನೃಪಂ ದಯೆಯಿಂದಮಾ ಯುಯುತ್ಸುವನೊಡಗೋಡು ಬಂದಂ (ಶಂಶಖಾ. ೦೦-೩೩); ತಿಳಿದು ತನ್ನೊಳು ಭೀಮಸೇನನ ಬಲುಗದಾಘಾತದಲಿ ಕುರುಕುಲವಳವುದೆಂದು ಯುಯುತ್ಸು ರಥದಿಂದಿಳಿದು ನಡೆತಂದ (ಕುಮಾ.ಭೀ. ೨-೩೬). [ಸಂ.]

**ಯುವ** (ಗು). ೧. ಎಳೆವಯಸ್ಸಿನ ; ಹರಯದ : ಯೂಥಪತಿ ಪೊಱಗಾದ ಕರಿಕಲಭಸ್ಥಿತಿಯಿಂದಂ . . . ರಾಜಹಂಸಂ ಪೊಱಗಾದ ಯುವರಾಜಹಂಸಪ್ರಕಾರದಿಂದಂ ಬಂದು ಪತಿವಿಯೋಗದಿಂ ನಿಜಜನನಿಯುರನೆ ಪೋಲ್ತು (ಶಾಂತಿಪು. ೦-೯೩ ವ). ೨. ಬಲಶಾಲಿಯಾದ ; ಶಕ್ತಿವಂತನಾದ. (ನಾ). ೩. ಹರಯದವನು ; ತರುಣ ; ಯುವಕ : ಯುವಸಂಘಾತಮದೊಂದು ತೋಳ್ದೞಗಲೊಳ್ ಮತ್ತೊಂದು ತೋಲ್ಲೋಳಿಯೊಳ್ ಯುವತೀವ್ರಾತಂ . . . ನರ್ತಿಸೆ (ಅಂಪು. ೭-೦೨೬); ಕರಿಮಧ್ಯ ಕರಭಗಮನದ . . . ಜರ್ಜರಜಠರಲಂಬಿತಪಯೋಧರ ಶಿತವೇಣಿಯರನೂನ ಯುವರಂ ಕರೆವರ್ (ಹರಿಶ್ಚ.ಕ. ೨-೯೬). ೪. ಅರುವತ್ತು ವರುಷ ಪ್ರಾಯದ ಆನೆ : ಉದೀತಜವನಂ ಯುವನಂ . . . ತರಿಸಿ ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇವಂ ಪೊಱಮಟ್ಟನೇಱಿ ಜಯಮಂ ಜಯಪರ್ವತಯಾನನಾಗಮಂ (ಶಾಂತಿಪು. ೦೦-೦೪೪). ೫. ಅರುವತ್ತು ಸಂವತ್ಸರಗಳಲ್ಲಿ ಒಂಬತ್ತನೆಯ ಸಂವತ್ಸರ : ಮತ್ತಮಾ ವರ್ಷವೇ ಪ್ರಭವ . . . ಯುವ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ಬಶಳೆ. ೨೬೩). [ ಸಂ. ಯುವನ್ ]

**ಯುವಕ** (ನಾ). ತರುಣ ; ಯೌವನಸ್ಥ : ಭಯಭೀತಿಯಿಲ್ಲದ ಯುವಕ ಪಡೆಯು ಎತ್ತೆತ್ತಲೂ ತಲೆಯೆತ್ತಲಾರಂಭಿಸಿದೆ (ಕ್ರಮಿಂಧ. ೨೮). [ ಸಂ. ]

**ಯುವಜನ** (ನಾ). ತರುಣಜನ ; ಹರಯದ ಜನ : ಸುಮಾಶರನಾದರೊ ಯುವಜನರನು ಪರಿಪರಿಯೊಳು ಪೀಡಿಸುತಿಹನು (ಇಂತಾಶ. ೦೬೪-೬೦). [ಸಂ.]

**ಯುವತಿ** (ನಾ). ೧. ಹರಯದವಳು ; ತರುಣಿ ; ಯೌವನಸ್ಥೆ : ಯುವತಿಯ ನಗೆಮೊಗಮಂ ಮಿಗುಗುಗುವೆ [ಪಾಠಾಂ. ಮಿಸುಗುವ] ಭಾವಿಸೆ ದರ್ಪಣೇಂದು ಜಳಜಂಗಳ್ ಸೋಲವನಾಂತುವು ಗಡ ಮುನ್ನಮಱಪಯುವ ಮೊಂದೊಂದಱೊಡನೆ ತಮ್ಮೊಂದೊಂದುಂ (ಶಿಶಿಸ್ಕೃತಿ. ೩-೪೪). ೨. ಹೆಂಗಸು ; ಸ್ತ್ರೀ : ಯುವತಿ ಪ್ರಸೂತಿಕಾಲಂ ಸವನಿಸೆ . . . ಅವಳೆರಡು ಮೂಱು ನಾಲ್ಕಯ್ದುವರಂ ಸಂಭವಿಸೆ ತತ್ಕಾಲಂ ಕ್ಷಯಮಕ್ಕುಂ (ಲೋಕೋಪ. ೪-೬೬) ; ಒಪ್ಪುವ ಪತಿಯ ಹಾನಿವೃದ್ಧಿಯೆ ಯುವತಿಯರೊಳಮಕ್ಕುಮೆಂಬುದದು ತಕ್ಕುದೆ ದಲ್ (ಶಾಕ್ಕಿಶು. ೬-೦೦೬). [ಸಂ.]

**ಯುವರಾಜ** (ನಾ). ಮುಂದೆ ಪಟ್ಟಕ್ಕೆ ಬರತಕ್ಕವನೆಂದು ನಿಯುಕ್ತನಾದವನು ; ಪಟ್ಟದ ರಾಜಕುಮಾರ ; ರಾಜನ ಉತ್ತರಾಧಿಕಾರಿ : ಯುವ

ರಾಜಂ ಭಟಾರರಂ ವಂದಿಸಿ ಪೋದಂ (ವಡ್ಡಾರಾ. ೮೨-೦೯) ; ಅತ್ತ ರಾಜಾಧಿರಾಜನುಮಿತ್ತ ಯುವರಾಜನುಂ ನಿಂದಾಗಳ್ (ಆದಿಪು. ೧೪-೪೫ ವ) ; ಬೀಸುವ ಧವಳಚಾಮರಂಗಳ್ ಯುವರಾಜನ ಕೆಲದೊಳೆಸೆದುವತಿಲಲಿತಂಗಳ್ (ಕುಸುಪು. ೩-೦೭). [ಸಂ.]

**ಯುವರಾಜಕ್ರಿಯೆ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು ; ಸಕಾಲದಲ್ಲಿ ತಂದೆಯಿಂದ ಯುವರಾಜಪಟ್ಟವನ್ನು ಪಡೆದು ರಾಜ್ಯಕ್ಕೆ ಉತ್ತರಾಧಿಕಾರಿಯಾಗುವುದು ; ಯೌವರಾಜ್ಯ : ಕುಮಾರಕಾಲದೊಳ್ ಯುವರಾಜ್ಯಾಭಿಷೇಕಮಂ ಪಡೆವುದು ಯುವರಾಜಕ್ರಿಯೆ (ಚಾಪುಂಪು. ೨೦೯). ' ದೀಕ್ಷೆ ' ಪರಾ. [ಸಂ. ಯುವರಾಜಕ್ರಿಯಾ]

**ಯುವರಾಜತೆ** (ನಾ). ಯುವರಾಜನ ಪದವಿ.–ಅಧಿಕಾರ : ಕ್ಷತ್ರಿಯೋತ್ತಮನಂದು . . . ಅಪರಾಜಿತಕುಮಾರಂಗೆ ಭುಜಬಲಗೆ ಸಂದ ಯುವರಾಜತೆಯ ಕೊಟ್ಟೊಲವಿಂದ ಮದನಗೆ ಪಟ್ಟಗಟ್ಟುವ ಚಂದದಿಂ ಕಟ್ಟಿದನು ಕೊರಲಲಿ ಕಂಠಮಾಲೆಯನು (ಶಾಶ್ವಚಾ. ೪-೦೨). [ಸಂ. ಯುವರಾಜತಾ]

**ಯುವರಾಜಪಟ್ಟ** (ನಾ). ೧. = ಯುವರಾಜತೆ : ಕಿಡಿಯಾತನಪ್ಪ ಭಾನುವೇಗಂಗೆ ಯುವರಾಜಪಟ್ಟಮಂ ಕಟ್ಟಿ (ವಡ್ಡಾರಾ. ೩೦-೦೫) ; ಪಟ್ಟವದು ಹಿರಿಯರಸನದು ಯುವರಾಜಪಟ್ಟವೆ ಹರಿತನೂಜನೊಳಾಯ್ತು (ಕುಮಾ.ಗ. ೦೩-೭). ೨. ಯುವರಾಜಪದವಿಯ ಚಿಹ್ನೆಯಾದ, ಹಣೆಗೆ ಧರಿಸುವ ಒಂದು ಅಲಂಕಾರ : ಅಂಗದಗೆ ನೊಸಲಲಿ ಧರಿಸುವುದು ಯುವರಾಜಪಟ್ಟವನು (ತೊರರಾ. ೪-೩-೨೭). [ಸಂ.]

**ಯುವರಾಣಿ** (ನಾ). ಯುವರಾಜನ ಹೆಂಡತಿ : ಅಷ್ಟರಲ್ಲಿ ಯುವರಾಣಿಗೆ ಎಚ್ಚರವಾಗುತ್ತದೆ (ಸ್ವರ್ಣ. ೭). [<ಸಂ. ಯುವರಾಜ್ಞೀ]

**ಯುವಾಧಿಪ** (ನಾ). = ಯುವರಾಜ : ಬಿಲ್ಲ ಬಿನ್ನಣಮನಾ ರಣದೊಳ್ ಮೆರೆದು ಯುವಾಧಿಪಂ (ಕಂಪ್ರಪು. ೬-೩೭). [ಸಂ.]

**ಯುವಾನ** (ನಾ). ತರುಣ ; ಯುವಕ : ಈ ಯುವಾನರನವದ್ಯವಿದ್ಯರಾವಮ್ನಾಯಶುದ್ಧರವದಾತಕೀರ್ತಿಗಳ್ (ಕಾವ್ಯಾವ. ೦೫೪); ಶ್ವಾನ, ಯುವಾನ, ಅಧ್ವಾನ . . . ಹನುಮಂತ–ಇವು ಮೊದಲಾದುವು (ಶಮದ. ೬೭ ಪ್ರಯೋ). [<ಸಂ. ಯುವನ್]

**ಯುಷ್ಮತ್ಕಟಾಕ್ಷ** (ನಾ). ನಿಮ್ಮ ಕುಡಿನೋಟ ; ನಿಮ್ಮ ಕಡೆಗಣ್ಣೋಟ : ಭವಹರಣ ಯುಷ್ಮತ್ಕಟಾಕ್ಷದಿ ಕಿವುಡನಾದೊಡೆ ಸಕಳಶಬ್ದಶ್ರೋತ್ರನಾಗಿರನೆ (ಐಶಪು. ೪೭-೩೯). [ಸಂ.]

**ಯುಷ್ಮತ್ಕಲೆ** (ನಾ). ನಿಮ್ಮ ಅಂಶ : ಎಲೆ ಮಹಾಯಾದೇವಿ ಲೋಕತ್ರಯ ಜನನಿ ಮದಾಜ್ಞಾ ಸಮುತ್ಪನ್ನೆ ಯುಷ್ಮತ್ಕಲೆ . . . . ಪುಟ್ಟುಗೆ ಭಗವತಿಯುಂ ಚಂಡಿಯುಂ ದುರ್ಗಿಯುಂ ವೀರಲುಲಾಯಧ್ವಂಸಿಯುಂ ಕನ್ನೆಯುಮೆನಿಸುಗೆ (ಜಗಪ. ೨-೩೬). [ಸಂ. ಯುಷ್ಮತ್ಕಲಾ]

**ಯುಷ್ಮದ್ಗುಣ** (ನಾ). ನಿಮ್ಮ ಗುಣ : ಯುಷ್ಮದ್ಗುಣ, ಅಸ್ಮದ್ಧಿತ್ರ, ಭವದ್ರಾಜ್ಯ (ಶಮದ. ೬೦ ಪ್ರಯೋ). [ಸಂ.]

**ಯೂಕ** (ನಾ). ೧. (ಕೊಳಕಾದ ಬಟ್ಟೆಗಳಲ್ಲಿ ಹುಟ್ಟಿಕೊಳ್ಳುವ) ಒಂದು ಬಗೆಯ ಕ್ರಿಮಿ ; ಕೂರೆ ; ಹೇನು : ಕುಂಥು ಘುಣ ಮತ್ಕುಣ ದಂಶ ಮಶಕ ಲಿಕ್ಷಾ ಯೂಕ ಪಿಪೀಲಿಕಾದೇಹಿಕಂ . . . ಕ್ರಿಮಿಕೀಟಕಾದಿ ತ್ರೀಂದ್ರಿಯಂಗಳ್ (ಕಶ್ಯಪ್ರ. ೪೪) ; ಜನಿಸುಗುಂ ಕ್ರಿಮಿ ಕೀಟಕಂ ಪತಂಗಂ ಯೂಕವನುಗುಣಂ ಸ್ವೇದದಿಂ (ಅಶಾಂಂ. ೩೯-೨೭). ೨. ದೂರವನ್ನು ಅಳೆಯುವ ಒಂದು ಅತಿಸೂಕ್ಷ್ಮವಾದ ಪ್ರಮಾಣ : ಲವವೆಂಟಾಗ ಲೊಂದು ಯೂಕವೆನಿಸುವುದು (ಬಿವೀಕ. ೩೨೦) ; ವಾಲಾಗ್ರವೆಂಟಾದರೆ ಒಂದು ಲಿಕ್ಷವೆನಿಸಿ ಕೊಂಬುದು ಆ ಲಿಕ್ಷವೆಂಟಾದರೆ ಒಂದು ಯೂಕವೆನಿಸಿ ಕೊಂಬುದು (ವಶವಿ. ೩೬-೪). [ಸಂ.]

**ಯೂಕೆ** (ನಾ). ೧. = ಯೂಕ ೧ : ಯೂಕಾಭೀತಿಯಿಂದಂಬರಂ ಪರಿಹರ್ತವ್ಯಮೆ ಮೇಣಜೀರ್ಣಭಯದಿಂ ಪ್ರಾಜ್ಯಾಜ್ಯಮೇಂ ತ್ಯಾಜ್ಯಮೇ (ಕಂಪ್ರಪು. ೦-೪೩). ೨. = ಯೂಕ ೨ : ಲಿಕ್ಷಾ ಯೂಕೆ ಯವೆಯುಮಂಗುಲಮಕ್ಕುಂ (ಪ್ರಾಶಾ. ೩-೨೭). [ಸಂ. ಯೂಕಾ]

**ಯೂಥ** (ನಾ). (ಸಾಮಾನ್ಯವಾಗಿ ಪ್ರಾಣಿಗಳ) ಗುಂಪು ; ಹಿಂಡು : ರಥಯೂಥಧ್ವಜಶಸ್ತ್ರ ಶಂಖಪಟದೊಳ್ . . . ಕುಳಶೈಳದಂತೆ ಕರಿಗಳ್ ಬೀೞ್ವಂದುವುಗ್ರಾಜಿಯೊಳ್ (ಪಂಪಭಾ. ೦೦-೬೭) ; ಬಗೆವುಗೆ ಸಲಿಲಕ್ರೀಡಾವಗಾಹರುಚಿ ಯೂಥಪತಿಸಮನ್ವಿತಯೂಥಂ ಸೊಗಯಿಪ ಕಾವರೆಗೊಳನಂ ಪುಗುವಂತಿರೆ ಚಕ್ರವರ್ತಿ ನಿಜಮಂದಿರಮಂ . . . ಪೊಕ್ಕು (ಶಾಂತಿಪು. ೦೦-೮೩). [ಸಂ.]

**ಯೂಥನಾಥ** (ನಾ). ೧. ಸಮೂಹದ ಮುಂದಾಳು ; ಗುಂಪಿನ ನಾಯಕ. ೨. (ಆನೆ ಮೊದಲಾದುವುಗಳ) ಹಿಂಡಿನ ಒಡೆಯ ; ಸಲಗ : ಪಂಚತ್ವಮಯ್ದಲಾ ಯೂಥನಾಥಗೆ ಮಹಾಕಾಂತಾರವಲ್ಲದೇಂ ಕಿವಿಯ ಕಟ್ಟಿಯೆ ? (ವೈಶಾಪ. ೭೭-೩೬೪). [ಸಂ.]

**ಯೂಥಪ** (ನಾ). = ಯೂಥನಾಥ ೨ : ನಡುವಗಲಲ್ಲಿ ತಾಂ ನಡಪಿದಂತಿಗಳಂ ರವಿತಪ್ತಯೂಥಪಂ ಬಿಡದತಿಶೀತಲಸ್ಥಲವ ಸೇವಿಸುವಂತೆವೊಲ್ (ಚಾಕುಂತ. ೬೨-೦೦೩). [ಸಂ.]

**ಯೂಥಪತಿ** (ನಾ). = ಯೂಥನಾಥ ೨ : ಮನುಮಾರ್ಗನಿಪುಣನೆನಿಸಿದ ನಿನಗಾಮಿ ರಾಜಮಾರ್ಗಮಂ ತೋಱಿ ಜಗಜ್ಜನಕೆ ನಗೆಯಲ್ತೆ ಕಳಭಂ ವನಪಥಮಂ ಯೂಥಪತಿಗೆ ತೋರ್ಪಂತಕ್ಕುಂ (ಆದಿಪು. ೬-೧೨) ; ಜಲಕೇಳೀಲೋಲನೆನಿಸಿದ ಯೂಥಪತಿ ಕರೇಣು ಯೂಥಂಬೆರಸು ಬರ್ಪಂತೆ ಬಂದು (ಕುಸುಪು. ೯-೮೮ ವ). [ಸಂ.]

**ಯೂಥಿ** (ನಾ). ಒಂದು ಬಗೆಯ ಮಲ್ಲಿಗೆ : ಕಂಗೊಳಿಸಿದುದುಳ್ಳಲರ್ಗಿಸುವ ಯೂಥಿಯ ಮಲ್ಲಿಯ ಕರ್ಣಿಕಾರದಾ (ಪ್ರಶಪ. ೪-೪೩). [ಸಂ. ಯೂಥೀ]

**ಯೂಥಿಕೆ** (ನಾ). ೧. ಒಂದು ಬಗೆಯ ಮಲ್ಲಿಗೆ. ೨. ಸೇವಂತಿಗೆ : " ಮಾಗಧೀ, ಗಣಿಕಾ, ಯೂಥಿಕಾ, ಅಂಬಷ್ಠಾ – ೪ ಕಾಡುಮಲ್ಲಿಗೆಯಲ್ಲಿ ಒಂದು ಬಗೆ ಗಿಡ ; ಇದಕ್ಕೆ ಶಾವಂತಿಗೆ ಗಿಡವೆಂದು ಕೆಲವರರ್ಥ ಹೇಳುವರು" (ಸಿದ್ಧಾಂತಿ. ೦೬೮). [ಸಂ. ಯೂಥಿಕಾ]

**ಯೂಧ** (ನಾ). ಗುಂಪು; ಸಮೂಹ : ಆ ಯೂಧಕ್ಕೆಲ್ಲಮಧಿಪತಿಯಾಗಿ (ವಡ್ಡಾರಾ. ೩೭-೨೦) ; ಮುತ್ತಿನ ಲೋಭದೆ ಕೊಲ್ವರೆತ್ತಲುಂ ಮೃಗಪತಿ ಯೂಧಮಂ ಪಲಬರಾ ಬನದೊಳ್ ಶಬರಾಧಿನಾಯಕರ್ (ಕಾದಂಪೂ. ೪೪). [p ಸಂಸ್ಕೃತಕೋಶಗಳಲ್ಲಿ ಈ ರೂಪ ಸಿಗುವುದಿಲ್ಲ. 'ಯೂಥ'ಕ್ಕೆ ಅನುರೂಪವಾಗಿ ಈ ಶಬ್ದ ಬಳಕೆಯಾಗಿದೆ]

**ಯೂಧಿಕೆ** (ನಾ). ಸೇವಂತಿಗೆ: " ಮಾಗಧೀ, ಯೂಧಿಕಾ– ಈ ೨ ಸೇವಂತಿಗೆ" (ಶರಣು. ೩೪-೩೨). [p ಸಂಸ್ಕೃತಕೋಶಗಳಲ್ಲಿ ಈ ರೂಪ ಸಿಗುವುದಿಲ್ಲ. ' ಯೂಥಿಕೆ'ಗೆ ಅನುರೂಪವಾಗಿ ಈ ಶಬ್ದ ಬಳಕೆಯಾಗಿದೆ]

**ಯೂನ** (ನಾ). ತರುಣ ; ಯುವಕ : ಸ್ಮರನೆನುತ ಮತ್ತಕಾಶಿನಿಯರುಂ ಸುಕುಮಾರಶರನೆನುತ ಯೂನರುಂ ಖರತರಾನಲನೆನುತಮರಿನಿಚಯಂ . . . ಪೊಗಳುತಮಿರ್ದರೀ (ಪಂಪಾರಾ. ೬-೩೬-೫೦). [ಸಂ. ಯೂನ = ಕಟ್ಟುವ ಹಗ್ಗ,–ಹುರಿ]

**ಯೂಪ** (ನಾ). ೧. ಯಜ್ಞಪಶುವನ್ನು ಕಟ್ಟುವ (ಸಾಮಾನ್ಯವಾಗಿ ಖದಿರವೃಕ್ಷ ಅಥವಾ ಬಿದಿರಿನಿಂದ ಮಾಡಿದ) ಕಂಬ : ಮನಮಾರಾಧಿತ ಹೋಮಭೂಮಿ ಪಶುಗಳ್ ಕಾಮಾತುರರ್ ಬಂಧಮಾವನಿತಂ ಸ್ಥಾಪಿತಯೂಪಕೋಟಿ ಬಳವತ್ಕಾಮಾಗ್ನಿ ಹೋಮಾಗ್ನಿ . . . ಇಂತಾಗೆ ತಾನಿನಿತುಂ ಕಾಮನ ಬೇಳ್ವೆನೆಂದು ಸುಗಿದರ್ ತನ್ವಂಗಿ ಬೆಳ್ದಿಂಗಳೊಳ್

(ಶಂಶಭಾ. ೪-೩೯) ; ಯೂಪಮಯುವಾಯ್ತು ಧರೆಯೆಲ್ಲಮುಂ ವರಜಾತ ರೂಪಮಯಮಾಯ್ತು ಮನೆಯೆಲ್ಲಮುಂ ದಾಶರಥಿ ರಾಜ್ಯಮಂ ಪಾಲಿಸೆ (ತೈರಾಶು. ೦೬-೧೨). ೨. ಗೆಲ್ಲಗಂಬ ; ಜಯಸ್ತಂಭ. ೩. [ಜ್ಯೋತಿ] ಆಕೃತಿಯೋಗಗಳಲ್ಲಿ ಒಂದು ; ಜನನಕಾಲದಲ್ಲಿ ಎಲ್ಲ ಗ್ರಹಗಳೂ ಲಗ್ನದಿಂದ ನಾಲ್ಕು ಸ್ಥಾನಗಳೊಳಗೆ ಇರುವ ಯೋಗ : ಉದಯದಿ ನೆಯ್ದು ತುರ್ಯಭವನಂಬರೆಗಂ ಐರೆ ಯೂಪಂ (ಜಾತತಿ. ೦೩-೭). [ಸಂ.]

**ಯೂಪಕಂಭ** (ನಾ). = ಯೂಪ ೧ : ಅರೆಯಟ್ಟಿ ಭೂತ್ತಂಗಳ ವರ ಸತಿ ಪುತ್ರರಂ ಸೆಜೆಗಳಂ ಪಿಡಿವುತ್ತ ಯೂಪಕಂಭಂಗಳಂ ಮುಟ್ಟಿದಿಟ್ಟು . . . ನಾಲ್ದೆಸೆಯಲ್ಲಿ ಪರಿಪರಿದು ಕೋಳಾಹಳಂಗೆಯ್ದುವು (ಪೀಕೃಕು. ೨-೪-೩೦).

[ < ಸಂ. ಯೂಪಸ್ತಂಭ ]

**ಯೂಪಸ್ತಂಭ** (ನಾ). = ಯೂಪ ೧ : ಯಾಗನಿಮಿತ್ತಂ ಯೂಪಸ್ತಂಭಂಗಳೊಳ್ ಕಟ್ಟಿ ಪಸುಗಳಂ ಗೋಳಿಡೆ ಕೊಂದು ಬೇಳ್ವುದು ಕಂಡು ಕೊಂಡಂಗಳನೊಡೆದು ಶಾಲೆಗಳಂ ಕೆಡಪಿ ಯೂಪಸ್ತಂಭಂಗಳಂ ಕಡಿದು (ಶಂರಾಪು. ೦೦-೦೮೩ ವ) ; ಶುನಶ್ಶೇಫನಿಗೆ ತನ್ನನ್ನು ಯೂಪಸ್ತಂಭಕ್ಕೆ ಕಟ್ಟಿದಾಗ ಈ ಮಂತ್ರವನ್ನು ಹೇಳಲು ದೇವತೆಗಳೆಲ್ಲ ಪ್ರತ್ಯಕ್ಷರಾಗಿ . . . ಅವನ ಪ್ರಾಣವನ್ನುಳಿಸಿದರು (ಪೀಶಿಪಂ. XIV, ೦೩). [ಸಂ.]

**ಯೂಷ** (ನಾ). ೧. (ಮಾಂಸದ) ಸಾರು. ೨. ಧಾನ್ಯಗಳನ್ನು ಕುದಿಸಿ ತೆಗೆದ ನೀರು,–ಕಟ್ಟು. ೩. ಕೆಂಡದ ಮೇಲೆ ಸುಡುವ ಹಾಲುಗಾಳಿನ ತೆನೆ ; ಬೆಳಸಿ; ಸಿಹಿತೆನೆ : '' ಯೂಷಯೆಂಬುದು ಸೀತೆನೆ '' (ಕಲಾಯು. ೯೭-೪೩೦). [ಸಂ.]

**ಯೆನ್ನು** (ನಾ). (?) : ಕಾಟಿಯ ಹಂನೆರಡು ಯೆಂನು ಆ ಹನ್ನೆರಡು ಯನ್ನಿನ ಬೆಂಬಳಿಯಲಿ (ಕಾಇಎ. ೧೯೨೯, ಕಾರಕಲ್. ೩೨೫-೦೩ ; 1346).

[ ? ]

**ಯೆಹೂದಿ** ' ಯಹೂದ್ಯ' ನೋ.

**ಯೆಹೂದ್ಯ** 'ಯಹೂದ್ಯ' ನೋ.

**ಯೋಕ್ತೃ** (ನಾ). ಬಂಡಿ ಹೊಡೆಯುವವನು ; ಸಾರಥಿ. [ಸಂ.]

**ಯೋಕ್ತ್ರ** (ನಾ). ಹಗ್ಗ ; ಕಣ್ಣಿ : '' ಯೋಕ್ತ್ರಂ ಕಣ್ಣಿ ಹಗ್ಗಮಾ ಬಂಧಮುಕ್ಕುಂ " (ಮಂಗರಾ. ೦೦೯-೨). [ಸಂ.]

**ಯೋಕ್ತ್ರಕ** (ನಾ). ಕಟ್ಟುವ ಸಾಧನ ; ಹಗ್ಗ. [ಸಂ.]

**ಯೋಕ್ತ್ರಿಕೆ** (ನಾ). ಒಂದು ಬಗೆಯ ಕಂಠಾಭರಣ : ಜೋಲೆ ಮುತ್ತಿನ ಸರಂ ತೊನೆಯೆ ಯೋಕ್ತ್ರಿಕೆಯಾಗಲೆಸೆವಳಾ ಮಾಡವೆಡೆಯಿಂದವಳ್ ಬಾಗುತ್ತೆ ಸ್ತೈವಳಿಯೆ ಸಗ್ಗದ ವಿಮಾನದಿಂ ಬಿಳ್ದಿರ್ಪ ನಲ್ಲನಂ ನೋಡುತ್ತ ಮಿರ್ಪಚ್ಚರಸಿಯಂತೆ (ಕಾವಂದ. ೭-೩). [ಸಂ. ಯೋಕ್ತ್ರಿಕಾ]

**ಯೋಗ** (ನಾ). ೧. ಜೋಡಿಸುವಿಕೆ ; ಹೊಂದಿಸುವಿಕೆ. ೨. ನೊಗ ಹೇರುವಿಕೆ,– ಕಟ್ಟುವಿಕೆ. ೩. ಕೂಟ ; ಸಂಗ ; ಸಂಬಂಧ : ಅಪ್ಪುವಿನ ಯೋಗದ ಕಾಷ್ಠ ಹೊತ್ತುವಲ್ಲಿ ಮೊತ್ತನೆ ತವುದ ಧೂಮು ಶುಷ್ಕದ ಅಪ್ಪುವಿನ ಗುಣ (ಪೋಲಪಾ. ೭-೨೪). ೪. ಬೆರಕೆ ; ಮಿಶ್ರಣ : ಯೋಗಗಳಲ್ಲಿ ದ್ರವ್ಯಗಳ ಪ್ರಮಾಣಗಳನ್ನು ಹೇಳಿರದಿದ್ದರೆ ಅವನ್ನು ಸಮತೂಕದಲ್ಲಿ ಹಾಕಬೇಕು (ಸಕವೈ. XII, ಕೃತ್ಯಾವನ). ೫. ವ್ಯವಸ್ಥೆ ; ಏರ್ಪಾಟು. ೬. ಯುದ್ಧವ್ಯೂಹ ಮೊದಲಾದುವುಗಳ ರಚನೆ. ೭. ರೀತಿ ; ವಿಧಾನ. ೮. ಉಪಾಯ ; ಯೋಜನೆ ; ಹಂಚಿಕೆ : ಯೋಗವೆಂದರೆ ಉಪಾಯ, ಮಾರ್ಗವೆಂದರ್ಥ (ಹಿಂದಶಾ. ೨೩೭). ೯. ನೊಗ. ೧೦. ಕಾರ್ಯ : ಉದ್ಯೋಗ. ೧೧. ಕಾರ್ಯನಿರ್ವಹಣೆ : ಕರ್ಮಕೌಶಲ್ಯವೇ ಯೋಗ (ಶಾರದ. ೦೦೬). ೧೨. ಯುಕ್ತತೆ ; ಔಚಿತ್ಯ. ೧೩. ಧನ, ಭೂಮಿ ಇತ್ಯಾದಿ ಸಂಪತ್ತಿನ ಪ್ರಾಪ್ತಿ. ೧೪. ಶುಭವಾದ ಗ್ರಹಯೋಗದಿಂದ ಒದಗುವ ಒಳ್ಳೆಯ ಅದೃಷ್ಟ ; ಸುದೈವ : ಭಾಗ್ಯ : ಇಲ್ಲಿಯವರೆಗೂ ಯೋಗ ಕೂಡಿಬಂದಿರಲಿಲ್ಲ (ತಿಕಾ. ೦೪೦) ; ನಿಮ್ಮ ಜೊತೆ . . . ಸುಖಪಡುವ ಯೋಗ ಅವಳ ಹಣೆಯಲ್ಲಿ ದೇವರು ಬರೆಯಲಿಲ್ಲ (ದೇವಹೊ. ೬೬) ; ಯೋಗವಿದ್ದಷ್ಟು ಭೋಗಿಸಿಯಾನು (ಗಾದ). 'ಯೋಗತೆ' ಪರಾ. ೧೫. ಅವಕಾಶ ; ಸಂದರ್ಭ. ೧೬. ಮೋಸ ; ತಂತ್ರ. ೧೭. ದೇಹ ; ಶರೀರ. ೧೮. ಔಷಧಿ. ೧೯. ಗೂಢಚಾರ : ' ಯೋಗಪುರುಷ ' ಪರಾ. ೨೦. ಒಳ್ಳೆಯ ಗುಣ ; ಸದ್ಗುಣ : " ಸದ್ಗತಿ ಕಾಯ ಕೂಟ ದಿನ ಮೌಷಧಿ ವೇಷ ಜನಂ ಜಪಾರ್ಚನಂ ಸದ್ಗುಣಮಿಂತು ಯೋಗಮೆನಿಕುಂ " (ಶಾನಾರ. ೦೦೪). ೨೧. ಮಂತ್ರ ; ಮಾಟ ; ಮಾಯೆ : 'ಯೋಗಚೂರ್ಣ', 'ಯೋಗದಂಡ' ಪರಾ. ೨೨. ಷಡ್ದರ್ಶನಗಳಲ್ಲಿ ಒಂದು ; ಪಾತಂಜಲಯೋಗ : ವೈಶೇಷಿಕ, ನೈಯಾಯಿಕ, ಸಾಂಖ್ಯ, ಯೋಗ, ಜೈಮಿನೀಯ, ಔಪನಿಷದಗಳೆಂಬ ಆರು ಆಸ್ತಿಕದರ್ಶನಗಳು (ಶಾರದ. ೨೨೯). ೨೩. ಮನಸ್ಸು ಹಾಗು ಇಂದ್ರಿಯಗಳನ್ನು ನಿಗ್ರಹಿಸಿ ಏಕಚಿತ್ತದಿಂದ ಧ್ಯಾನಮಾಡುವಿಕೆ ; ಚಿತ್ತವೃತ್ತಿನಿರೋಧ : ಪರಹಿತರೆಂದುದಾತ್ತಯಶರೆಂದು ಜಿತೇಂದ್ರಿಯರೆಂದು ಯೋಗಪಂಕರುಹದಿನೇಶರೆಂದು. . .ಕೂರ್ತು ಮಲಯಾಳತಪೋನಿಧಿ ದೇವಸಿಂಗಿಜೀಯರ ಪದಯುಗ್ಮಮಂ ಪಡೆದು ಕಟ್ಟಿದ ರತ್ಥಿರಯೆ ಪುಣ್ಯಮೂರ್ತಿಗಳ್ ( ಕಾಇಇ. XX, ೪೯-೫೭ : 1076 ? ) ; ಯಾವುದನ್ನು ಪತಂಜಲಿದೇವನು ' ಚಿತ್ತವೃತ್ತಿನಿರೋಧ ' ವೆಂದು ಹೇಳಿದ್ದಾನೋ ಆ ಯೋಗ ಪ್ರಸಕ್ತವಲ್ಲ (ಬಂಕಿಮ. ೪೩೦). ೨೪. [ವೇದಾಂತ] ಜೀವಾತ್ಮವು ಪರಮಾತ್ಮನೊಡನೆ ಐಕ್ಯಹೊಂದುವುದು ; ಮುಕ್ತಿ ; ಸಾಯುಜ್ಯ : ಜೀವಾತ್ಮ–ಪರಮಾತ್ಮರ ಸಂಯೋಗವೇ ಯೋಗವೆಂದೂ . . . ನಿರೂಪಿಸಿರುವರು (ಹಿಂದಶಾ. ೯೨). ೨೫. [ವ್ಯಾಕ] ಪದಗಳ ಮೂಲಾರ್ಥ ; ವ್ಯುತ್ಪತ್ತಿಮೂಲಕವಾದ ಅರ್ಥ : ಪದಗಳ ವಿಭಾಗವನ್ನು ಯೋಗ, ರೂಢ, ಯೋಗರೂಢ ಮೊದಲಾದ ಭೇದಗಳಿಂದ ವಿಭಾಗ ಮಾಡುವರು. ಯೋಗವೆಂದರೆ ಅವಯವಶಕ್ತಿ. ಪದದಲ್ಲಿರುವ ಅಂಶಗಳ ಅರ್ಥ ಮೂಲಕ ಒಂದರ್ಥವನ್ನು ಕೊಡುವ ಪದವು ಯೋಗಪದ (ಹಿಂದಶಾ. ೦೪೭) ; ಅವಯವಾರ್ಥದಿಂದ ತಿಳಿಯುವರ್ಥವು ಯೋಗ (ಹತಪುಗ. ೦೩೦). ೨೬. [ಶೈವ] ಆಗಮದ ನಾಲ್ಕು ಭಾಗಗಳಲ್ಲಿ ಒಂದು : ಶೈವಾಗಮಗಳೆಲ್ಲವೂ ಜ್ಞಾನ, ಯೋಗ, ಕ್ರಿಯಾ, ಚರ್ಯ ಎಂಬ ನಾಲ್ಕು ವಿಷಯಗಳನ್ನು ವಿವರಿಸತಕ್ಕವುಗಳಾಗಿವೆ (ಶಾರದ. ೨೦೦). 'ಯೋಗಪಾದ', 'ಯೋಗಮಾರ್ಗ' ಪರಾ. ೨೭. [ಜೈನ] ಬಾಹ್ಯಪ್ರಪಂಚದೊಡನೆ ಉಂಟಾಗುವ ಸಂಬಂಧ : ಮನ, ವಚನ, ಕಾಯಗಳ ಚಂಚಲತೆಗೆ ಯೋಗವೆನ್ನುವರು (ಕೈಪಹ. ೨೯೦) ; ಯೋಗವೆಂಬ ಐದನೆಯದು ಪ್ರಕೃತಿ ಪ್ರದೇಶಬಂಧಗಳಿಗೆ ಹೇತು (ಹಿಂದಶಾ. ೯೯). ೨೮. [ಜ್ಯೋತಿ] ಜನ್ಮಕಾಲದಲ್ಲಿ ಶುಭಾಶುಭಫಲಗಳನ್ನು ಸೂಚಿಸುವ ಗ್ರಹಗಳ ಸ್ಥಿತಿ,– ಗೊತ್ತಾದ ಗ್ರಹಸನ್ನಿವೇಶ : ನೋಡೆ ವಿಷ್ಕಂಭಾದಿ ಯೋಗಮುಕ್ಕು (ಮಂಗರಾ. ೨೦-೯). ೨೯. [ಗಣಿತ] ಸಂಖ್ಯೆಗಳನ್ನು ಕೂಡುವುದು ; ಸಂಕಲನ : "ಯೋಗಂ ಬೆರಸು . . . ಬಿತಂ ಇಂತಿನಿತು ಕೂಡೂದಕ್ಕೆ ಪೆಸರು" (ವ್ಯವಹಾ. ೧೦-೦೨ ವ); "ಯೋಗಂ ಧ್ಯಾನೋಪಯೋಗಮುಂ ಸಂಗತಿಯುಂ" (ಪಸ್ತುಕೋ. ೦೨೭-೩೦) ; " ತನುವಿನೊಳು ದ್ರವ್ಯದೊಳು ಮುಕ್ತಿಯೊಳು ಸುಗತಿಯೊಳ್ ನೆನೆವ ಸುಧ್ಯಾನದೊಳು ವೇಷದೊಳು ಕೂಟದೊಳು ದಿನದೊಳೌಷಧಿಗಳೊಳು ಯೋಗಮೆನಿಸಿಕ್ಕು " (ಮಂಗರಾ. ೧೩೦-೩೦). [ಸಂ.]

**ಯೋಗಂಗೊಳ್** (ಕ್ರಿ). ಧ್ಯಾನಾಸಕ್ತನಾಗು : ಯಶೋಭದ್ರಸ್ವಾಮಿಗಳೆಂಬ ಪರಮಾವಧಿಜ್ಞಾನಿಗಳ್ . . . ಯೋಗಂಗೊಂಡಿರ್ಪುದುಂ (ಸುಕುಮಾ. ೦೧-೩೭ ವ). [ ಯೋಗ + ಕೊಳ್$_1$ ]

**ಯೋಗಕ್ಷೇಮ** (ನಾ). ೧. ಧನ, ಆಸ್ತಿ, ರಾಜ್ಯ ಮೊದಲಾದುವುಗಳ ಸಂಪಾದನೆ ಹಾಗೂ ಅವುಗಳ ರಕ್ಷಣೆ : ಯೋಗಕ್ಷೇಮಾಧೀನಮಪ್ಪ ನೀತಿಶಾಸ್ತ್ರಮುಮಂ . . . ವೆಜಿವುಂ ವಿದ್ಯಾಕಳಾಪಮುಮಂ ತ್ರಿದಶವರ್ಗಕ್ಕುಪದೇಶಂಗೆಯ್ಯುತುಂ (ಶಾಂತಿಪು. ೦೦-೯೦ ವ). ೨. ನೆಮ್ಮದಿ ; ಸೌಖ್ಯ ; ಕಲ್ಯಾಣ : ಮಕ್ಕಳು ಸಾಸಿಗರು ನೀವಟೀಯೆ ಕಳುಹಿಸು ಬೇಸಜವು ಭಯಬೇಡ ಯೋಗಕ್ಷೇಮಕಾವೆಂದ (ಕೌಶಿರಾ. ೦-೯೦); ಅಕ್ಕನಾವವಳಿಗೆ ತಂಗಿಯು ಯೋಗಕ್ಷೇಮವೇ ಮೊದಲು (ಶಾಂತಲಾ. ೯೪). 'ಪಾಮಕ್ಷೇಮ' ಪರಾ. [ಸಂ.]

**ಯೋಗಚೂರ್ಣ** (ನಾ). ಮಂತ್ರಿಸಿದ ಪುಡಿ ; ಮಂತ್ರಶಕ್ತಿಯಿಂದೊಡಗೂಡಿದ ಪುಡಿ : ಯೋಗಚೂರ್ಣ ಯೋಗಪ್ರವೃತ್ತಿಯಿಂ ಕರಾಗ್ರದಲ್ಲಿ ತಾಳ್ದಾಗಳಂತೆ ಬಂದು ವಿತ್ತಮುಳ್ಳಾಲಯಂಗಳಂ ರಾಗಿಸುತ್ತೆ ಸಾರ್ದು ಸೊಪ್ಪುಳಾಲಿಸುತ್ತೆ ನೋಡಿ ಸಂಯೋಗಿಸುತ್ತೆ ತಕ್ಕುದೆಲ್ಲಮಂ ಕಡಂಗಿ ಜಾಣ್ಮೆಯಿಂ (ವ್ಯಕವಿ. ೨೦-೭) ; ಆ ವೈದ್ಯನು ಯೋಗಚೂರ್ಣವನ್ನು ಬೆರಸಿ ಚಂದ್ರಗುಪ್ತನಿಗೆ ಔಷಧಿ ಮಾಡಿಕೊಟ್ಟನು (ರಾಕ್ಷಸಮು. ೩೩). 'ಚೂರ್ಣಯೋಗ' ಪರಾ. [ಸಂ.]

**ಯೋಗಜ** (ಗು). ೧. ಯೋಗ ಅಥವಾ ಧ್ಯಾನದಿಂದ ಉಂಟಾದ. (ನಾ). ೨. [ಶೈವ] ಇಪ್ಪತ್ತೆಂಟು ಶಿವಾಗಮಗಳಲ್ಲಿ ಒಂದು : ಕಾಮಿಕ, ಯೋಗಜ, ಅಚಿಂತ್ಯ . . . ಕಿರಣ, ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಶಾರತ. ೬೨). [ಸಂ.]

**ಯೋಗಜಲಕ್ಷಣೆ** (ನಾ). [ತರ್ಕಶಾ] ಅಲೌಕಿಕ ಪ್ರತ್ಯಕ್ಷದ ಜ್ಞಾನಲಕ್ಷಣೆ, ಸಾಮಾನ್ಯಲಕ್ಷಣೆ ಮತ್ತು ಯೋಗಜಲಕ್ಷಣೆ ಎಂಬ ಮೂರು ಸಂಬಂಧಗಳಲ್ಲಿ ಒಂದು ; ಯೋಗಾಭ್ಯಾಸದಿಂದ ಬರುವ ಶಕ್ತಿ : ಯೋಗಜಲಕ್ಷಣೆಯೆಂದರೆ ಯೋಗಾಭ್ಯಾಸಸಾಮರ್ಥ್ಯದಿಂದ ಬಂದ ಶಕ್ತಿವಿಶೇಷ (ಹಿಂದಶಾ. ೦೯೦). 'ಜ್ಞಾನಲಕ್ಷಣೆ' ಪರಾ.
[ ಸಂ. ಯೋಗಜಲಕ್ಷಣಾ ]

**ಯೋಗತೆ** (ನಾ). ಅದೃಷ್ಟ ; ಭಾಗ್ಯ : 'ಯೋಗತೆವಡೆ' ಪರಾ.
[ ಸಂ. ಯೋಗತಾ ]

**ಯೋಗತೆವಡೆ** (ಕ್ರಿ). ಭಾಗ್ಯವಂತನಾಗು; ಅದೃಷ್ಟವಂತನಾಗು: ಭಾಗೀರಥಿ ನಿನ್ನ ಸೋಂಕಿನ ತಂಗಾಳಿ ತಾಗಿದ ಸಕಲಜಂತುಗಳು ಯೋಗತೆವಡೆದು ಸ್ವರ್ಗದ ಸೌಖ್ಯಂಗಳ ಭೋಗಿಸುತಿಹರು ಸಂತಸದಿ (ಮೋಹತ. ೬-೯೨).
[ ಯೋಗತೆ + ಪಡೆ$_1$ ]

**ಯೋಗತ್ಯಾಗಕ್ರಿಯೆ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು ; ಜನರ ಅನುಗ್ರಹಕ್ಕಾಗಿ ಮಾಡುತ್ತಿದ್ದ ತೀರ್ಥಾಟನೆಯನ್ನು, ಸಮವಸರಣವನ್ನು ತ್ಯಜಿಸುವುದು : ಸಮವಸರಣಮಂ ವಿಸರ್ಜಿಸಿ ವಿಹಾರಾದಿಗಳಂ ಮಾಣ್ಬುದು ಯೋಗತ್ಯಾಗಕ್ರಿಯೆ (ಶಾಪುಂಪು. ೨೨೦). 'ದೀಕ್ಷೆ' ಪರಾ. [ ಸಂ. ಯೋಗತ್ಯಾಗಕ್ರಿಯಾ ]

**ಯೋಗತ್ರಯ** (ನಾ). ೧. ಜ್ಞಾನಯೋಗ, ಕರ್ಮಯೋಗ ಮತ್ತು ಭಕ್ತಿಯೋಗಗಳೆಂಬ ಮುಕ್ತಿಸಾಧಕವಾದ ಮೂರು ಮಾರ್ಗಗಳು : ಶ್ರೀಕೃಷ್ಣ . . . ಅರ್ಜುನನಿಗೆ ಯೋಗತ್ರಯಗಳನ್ನು ಬೋಧಿಸಿದ ಅನಾಸಕ್ತನಾದ ಮಹಾಯೋಗಿಯೂ ಹೌದು (ಶಾರದ. ೯೭೨). ೨. [ಜೈನ] ಭಾವಾಸ್ರವವನ್ನುಂಟು ಮಾಡುವ ಮನ, ವಚನ ಮತ್ತು ಕಾಯ ಎಂಬ ಮೂರು ಪ್ರವೃತ್ತಿಗಳು : ಗತಗೌರವತ್ರಯಂ ನಿರ್ಜಿತದಂಡತ್ರಯನಪೇತಶಲ್ಯತ್ರಯನಪ್ರತಿಹತಯೋಗತ್ರಯಂ (ಧಕ್ಷಪು. ೦೯-೦೩). [ಸಂ.]

**ಯೋಗದಂಡ** (ನಾ). ೧. ಮಂತ್ರದ ಕೋಲು ; ಮಾಯಾದಂಡ : ಪಾಲಿಸೆನುತವೆ ಕಪಿಗಳಿಬಿಗಲು ಕೇಳಿ ವಾರ್ತೆಯನಾ ಸ್ವಯಂಪ್ರಭೆ ಬೀಳುಗೊಟ್ಟಳು ಯೋಗದಂಡದಿ ಬಾಗಿಲನು ತೋಱಿ (ಕೌಶಿರಾ. ೯-೩೬). ೨. ಯೋಗಿಗಳು ಉಪಯೋಗಿಸುವ ಕೋಲು,– ದಂಡ : ಭೂತಹಿತಮೆಂತೆಂಬ ಕಂತೆಯ ಪ್ರೀತಿಯಿಂ ಪೊದೆದನಿಶಮೇಕಾಗ್ರಾತಿಶಯನಿಜಜ್ಞಪ್ತಿ ಪೆಸರಿನ ಯೋಗದಂಡವನು ಚಾತುರಿಯದಿಂ ಪಿಡಿವುತ (ಗಗಶಾ. ೦೬-೨೦). [ಸಂ.]

**ಯೋಗದರ್ಶನ** (ನಾ). ಷಡ್ದರ್ಶನಗಳಲ್ಲಿ ಒಂದು ; ಪಾತಂಜಲ ದರ್ಶನ: ಯೋಗದರ್ಶನಕ್ಕೆ ಪತಂಜಲಿಮಹರ್ಷಿಗಳು ಸೂತ್ರಕಾರರಾದುದರಿಂದ ಪಾತಂಜಲದರ್ಶನವೆಂದು ಪ್ರಸಿದ್ಧಿ ಬಂದಿದೆ (ಹಿಂದಶಾ. ೯೨) ; ಯೋಗದರ್ಶನಕ್ಕೆ ಸೇಶ್ವರಸಾಂಖ್ಯವೆಂದು ವ್ಯವಹಾರವಿದೆ (ಭಾರದ. ೦೫೦). [ಸಂ.]

**ಯೋಗದೃಷ್ಟಿ** (ನಾ). ಧ್ಯಾನದ ಮೂಲಕವಾಗಿ ಬರುವ ಅಲೌಕಿಕಜ್ಞಾನ; ಪಾರಮಾರ್ಥಿಕ ದೃಷ್ಟಿ : ಅವನ ಸ್ಥೈರ್ಯಸ್ವಾಲಿತ್ಯಕ್ಕೆ ಹೇತುವಾದ ಉಪಯೋಗದೃಷ್ಟಿಯನ್ನು ಶ್ರೀಕೃಷ್ಣನು ಹೋಗಲಾಡಿಸಿ, ಅವನಿಗೆ ಯೋಗದೃಷ್ಟಿಯನ್ನು ಅನುಗ್ರಹಿಸುತ್ತಾನೆ (ಶಾರದ. ೦೦೬). [ಸಂ.]

**ಯೋಗನಾಥ** (ನಾ). ೧. ಶಿವ. ೨. ವಿಷ್ಣು : ಮಗನನೆತ್ತಿಕೊಂಡು ವಸುದೇವನೆಂತಾಸುಮಾ ರಾಕ್ಷಸರಕ್ಷಿತಪ್ರಸೂತಿಕಾನಿಳಯದಿಂ ತಳರ್ದು ನಡೆವಾಗಳಾ ಯೋಗನಾಥಂ ಪುರಜನಂ ಮೆಯ್ಯಱಿಯದಂತು ನಿದ್ರೆಯಂ ಕವಿಸೆ (ಜಗಚಿ. ೩-೮ ವ). [ಸಂ.]

**ಯೋಗನಿದ್ರೆ** (ನಾ). ೧. ಧ್ಯಾನಯೋಗದಿಂದ ಬರುವ ನಿದ್ರಾವಸ್ಥೆ ; ಧ್ಯಾನಾಸಕ್ತಿಯಲ್ಲಿ ಎಚ್ಚರ ಹಾಗೂ ನಿದ್ದೆಯ ಎರಡರ ನಡುವಿನ ಸ್ಥಿತಿ ; ಹೊರಜಗತ್ತು ಕಣ್ಮರೆಯಾಗಿ ಸ್ಮರಣಮಾತ್ರವಾಗಿ ಗೋಚರವಾಗುತ್ತಿರುವ ಧ್ಯಾನಸ್ಥಿತಿ : ನಿದ್ರೆ ತಿಳಿಯದೆ ತೊಳಲುವತಿಜಡನಿದ್ರೆ ಮುಸುಕಿದವರ್ಗೆ ಸತತಂ ನಿದ್ರೆಯಲ್ಲದೆ ಯೋಗನಿದ್ರೆಯದೆಂತು ದೊರಕುವುದು (ಬಸಪು. ೩೫-೯) ; ರಾಘವನು ಪ್ರೆಮಾಜಿದ ಲಕ್ಷ್ಮಣ ಯೋಗನಿದ್ರೆಯ ತಾಳ್ದ (ಕೌಶಿರಾ. ೨೬-೭೩). ೨. ವಿಶ್ವದ ಪ್ರಳಯ ಹಾಗು ಉತ್ಪತ್ತಿಗಳ ಮಧ್ಯದಲ್ಲಿ ಬ್ರಹ್ಮನಿಗೆ ಬರುವ ದೀರ್ಘಕಾಲದ ನಿದ್ರೆ. ೩. ಯುಗಾಂತ್ಯಕಾಲದಲ್ಲಿ ವಿಷ್ಣುವಿಗೆ ಬರುವ ನಿದ್ರೆ : (೧). ೪. ಇತರರನ್ನು ತನ್ನ ಪ್ರಭಾವದ ಪರಿಧಿಗೆ ತಂದು ಅಧೀನಪಡಿಸಿಕೊಳ್ಳುವುದರ ಮೂಲಕ ಬರಿಸುವ ನಿದ್ರೆ ; ವಶ್ಯಸುಪ್ತಿ : ಚಂದ್ರಶೇಖರನು . . . ಅವಳ ಮುಖದ ಮೇಲೆ ಕೈಯಾಡಿಸಿ ಅವಳಿಗೆ ಯೋಗನಿದ್ರೆ ಬರಿಸಿದನು (ಬಂಕಿಮು. ೦೯೯). [ಸಂ. ಯೋಗನಿದ್ರಾ]

**ಯೋಗನಿಯೋಗ** (ನಾ). ಯೋಗದಲ್ಲಿ ತೊಡಗಿರುವಿಕೆ ; ಧ್ಯಾನತತ್ಪರತೆ : ಸ್ಫಟಿಕಮಯಶಿಲಾತಳದೊಳ್ ಯೋಗನಿಯೋಗದಿಂದಮಿರ್ದರ್ ಮುನೀಂದ್ರರೊರ್ವರ್ (ಸುಕುಮಾ. ೩-೮). [ಸಂ.]

**ಯೋಗನಿರೋಧ** (ನಾ). [ಜೈನ] ಕರ್ಮಗಳ ಆಸ್ರವವನ್ನುಂಟು ಮಾಡತಕ್ಕ ಕಾಯ, ವಾಕ್ಕು ಮತ್ತು ಮನಸ್ಸುಗಳ ಚಂಚಲತೆಯನ್ನು ತಡೆಗಟ್ಟುವಿಕೆ,–ನಿಗ್ರಹ : ವೃಷಭನಾಥನುಂ ... ಯೋಗಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ (ಆದಿಪು. ೦೬-೯೦ ವ); ಆದಿದೇವನುಂ ಪದಿನಾಲ್ಕುದಿವಸಂ ಯೋಗನಿರೋಧಂಗೆಯ್ದು . . . ತ್ರೈಲೋಕ್ಯಚೂಡಾಮಣಿಯುಮಾಗಿರ್ದಂ (ಶಾಪುಂಪು. ೯೪). [ಸಂ.]

**ಯೋಗನಿರ್ವಾಣಸಂಪ್ರಾಪ್ತಿ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು : ಯೋಗನಿರ್ವಾಣಸಂಪ್ರಾಪ್ತಿ ಯೋಗನಿರ್ವಾಣಸಾಧನ . . . ನಿರ್ವೃತಿಯೆಂಬಯ್ವತ್ತುಮೂಱು . . . ಗರ್ಭಾನ್ವಯಕ್ರಿಯೆಗಳಂ (ಆದಿಪು. ೦೩-೦೫ ವ). [ಸಂ.]

**ಯೋಗನಿರ್ವಾಣಸಾಧನ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು : ಯೋಗನಿರ್ವಾಣಸಂಪ್ರಾಪ್ತಿ ಯೋಗನಿರ್ವಾಣಸಾಧನ . . . ನಿರ್ವೃತಿಯೆಂಬಯ್ವತ್ತುಮೂಱು . . .

ಗರ್ಭಾನ್ವಯಕ್ರಿಯೆಗಳಿಂ (ಆದಿಪು. ೦೩-೦೩ ವ) . 'ದೀಕ್ಷೆ' ಪರಾ. [ಸಂ.]

**ಯೋಗಪಟ** (ನಾ). ಧ್ಯಾನಕಾಲದಲ್ಲಿ ಯೋಗಿಯು ಬೆನ್ನು ಮತ್ತು ಮೊಳಕಾಲುಗಳ ಸುತ್ತ ಕಟ್ಟಿದಂತೆ ಸುತ್ತಿಕೊಳ್ಳುವ ವಸ್ತ್ರ : "ಯೋಗಪ[ಪಾಠಾಂ. ವ]ಟ ವ್ಯಾಪಿಯುಕ್ಕು" (ಮಂಗರಾ. ೭೬-೯). [ಸಂ.]

**ಯೋಗಪಟ್ಟ** (ನಾ). =ಯೋಗಪಟ : ಯೋಗಪಟ್ಟವನ್ನು ಮೊಣಕಾಲುಗಳ ಮೇಲೆ ಕಟ್ಟಿ ಪದ್ಮಪೀಠದ ಮೇಲೆ...ಕುಳಿತಿರುವವನು (ಹೊಯ್ಸಳ. ೯೩). [ಸಂ.]

**ಯೋಗಪಟ್ಟಿಕೆ** (ನಾ). = ಯೋಗಪಟ : "ಜೋಗವಟ್ಟಿಯೆಂದು ಯೋಗ ಪಟ್ಟಿಕೆ" (ಕಶಸಾ. ೭೯-೯೭೯). [ಸಂ. ಯೋಗಪಟ್ಟಿಕಾ]

**ಯೋಗಪಟ್ಟಿಗೆ** ' ಯೋಗವಟ್ಟಿಗೆ ' ನೋ.

**ಯೋಗಪಾದ** (ನಾ). [ಶೈವ] ಆಗಮದ ಕ್ರಿಯಾಪಾದ, ಚರ್ಯಾ ಪಾದ, ಯೋಗಪಾದ ಮತ್ತು ಜ್ಞಾನಪಾದಗಳೆಂಬ ನಾಲ್ಕು ಭಾಗ ಗಳಲ್ಲಿ ಒಂದು ; ಮೋಕ್ಷಸಾಧನೆಯ ಮಾರ್ಗವನ್ನು ವಿವರಿಸುವ ಭಾಗ : ಸಕಲಾಗಮಂಗಳಲ್ಲಿಯೂ ಕ್ರಿಯಾಪಾದ ಚರ್ಯಾಪಾದ ಯೋಗ ಪಾದ ಜ್ಞಾನಪಾದಮೆಂಬ ನಾಲ್ಕು ಪಾದಂಗಳು (ಏಪೇಶ. ೭೭) ; ಯೋಗ ಪಾದವು ಮೋಕ್ಷವನ್ನು ಸಾಧಿಸುವ ಅಭ್ಯಾಸಗಳನ್ನು ತೋರಿಸುತ್ತದೆ (ಶಾರದ. ೨೦೦). [ಸಂ.]

**ಯೋಗಪಾದುಕ** (ನಾ). ಯೋಗಿಗಳು ಮೆಟ್ಟುವ ಹಾವುಗೆ : "ಜೋಗ ಪಾವುಗೆಯುಮೆನೆ ಯೋಗಪಾದುಕಂ " (ಶಬ್ದಕೈ. ೩೨). [ಸಂ.]

**ಯೋಗಪಾದುಕೆ** (ನಾ). ೧. = ಯೋಗಪಾದುಕ : " ಯೋಗಪಾದುಕಾ —ಜೋಗಪಾವುಗೆ " (ಶಮಂದ. ೨೧೩ ಕೃದೋ). ೨. ಧರಿಸಿದವನನ್ನು ಅವನ ಇಚ್ಛೆ ಬಂದಲ್ಲಿಗೆ ಕೊಂಡೊಯ್ಯಬಲ್ಲ ಮಾಯಾಶಕ್ತಿಯುಳ್ಳ ಪಾದ ರಕ್ಷೆ : ಮಾಟದ ಹಾವುಗೆ. [ಸಂ. ಯೋಗಪಾದುಕಾ]

**ಯೋಗಪೀಠ** (ನಾ). ೧. ಯೋಗಸಾಧನೆಯಲ್ಲಿ ಕುಳಿತುಕೊಳ್ಳುವ ಒಂದು ರೀತಿ ; ಒಂದು ಬಗೆಯ ಯೋಗಾಸನ : ಯೋಗಪೀಠಂಗಳವು ಪದಿನೆಂಟಾಗಿ ವಾಸಿಗೆ ಪರುಷಪರುಷಕೆ ಹೋಗಿ ವಂದಿಸಿ ಕಪ್ಪವಂ ತಪೆ ತೆತ್ತು ಬದುಕುವವು (ಪಶಪ. ೨೩-೨೦). ೨. ಶಿವಲಿಂಗದ ಪೀಠಗಳಲ್ಲಿ ಒಂದು ಬಗೆ : ಶಿವಾರ್ಚನೆಗುಪಯುಕ್ತವಾಗಿ ಅನಂತಪೀಠ ಕಮಠ ಪೀಠ ಶೇಷಪೀಠ ಸಿಂಹಪೀಠ ಪದ್ಮಪೀಠ ವಿಮಲಪೀಠ ಭದ್ರಪೀಠ ಯೋಗಪೀಠ ಪ್ರಣವಪೀಠಗಳ ಭಾವನೆಯಿಂದುಪಕಲ್ಪಿತವಾದ ದಿವ್ಯಮಂಟಪ ಮಧ್ಯಗತಸಿಂಹಾಸನಕ್ಕೆ (ಏಪೇಶ. ೦೦೦). [ಸಂ.]

**ಯೋಗಪುರುಷ** (ನಾ). ೧. ಅದೃಷ್ಟಶಾಲಿ ; ಭಾಗ್ಯವಂತ : ನಿಜಕ್ಕೂ ಅವನ ರಾಜಕಳೆ ಯೋಗಪುರುಷನೆಂದೇ ಸಾರುತ್ತೆ (ಹೇಮಂಶ.೦೩). ೨. ಗೂಢಚಾರ. [ಸಂ.]

**ಯೋಗಮಾರ್ಗ** (ನಾ). ೧. ಧ್ಯಾನಮಾರ್ಗ : ತಪೋಮಾರ್ಗ : ಧರೆ ಯೊಳಗೆ ರವಿಮಂಡಲವನೊದೆದುರವಣಿಸಿ ಹಾಯ್ವರು ತಾವಿಬ್ಬರು ಕಣಾ ಸನ್ಯಾಸಿಯಾಗಿಯೆ ಯೋಗಮಾರ್ಗದಲಿ ಹರಣವನು ಬಿಟ್ಟವರುಗಳು ಸಂಗರ ದೊಳಭಿಮುಖರಾಗಿ ಮರಣಾಂತರವನೆಯ್ದುವರವರು (ಕುವ್ಯಾ. ಉ. ೩-೦೯). ೨. [ಶೈವ] ಶೈವಸಿದ್ಧಾಂತದ ನಾಲ್ಕು ಮಾರ್ಗಗಳಲ್ಲಿ ಒಂದು : ದಕ್ಷಿಣದೇಶದ ಶೈವಸಿದ್ಧಾಂತಗಳಲ್ಲಿ ಚರ್ಯಾಮಾರ್ಗ, ಕ್ರಿಯಾಮಾರ್ಗ, ಯೋಗಮಾರ್ಗ, ಜ್ಞಾನಮಾರ್ಗಗಳೆಂಬ ನಾಲ್ಕು ಅಂತಸ್ತಿನ ಸಾಧನಗಳಿವೆ . . . ಯೋಗಮಾರ್ಗದಲ್ಲಿ (ಸಖ್ಯಮಾರ್ಗ) ಪ್ರಾಣಾಯಾಮದ ಮೂಲಕ ದೇಹದಲ್ಲಿರುವ ಷಟ್ಚಕ್ರಗಳಲ್ಲಿ ವಾಯುವನ್ನು ನಿಲ್ಲಿಸಿ ನಿಷ್ಕಲಮೂರ್ತಿ ಯನ್ನು ಆರಾಧಿಸುವುದರ ಮೂಲಕ ಶಿವಸ್ವರೂಪವಾದ ಸ್ವರೂಪ ಮುಕ್ತಿ ಯನ್ನು ಪಡೆಯುವನು (ಶಾರದ. ೨೦೭). [ಸಂ.]

**ಯೋಗರೂಢ** (ನಾ). [ವ್ಯಾಕ] ಯೋಗ, ರೂಢ ಮತ್ತು ಯೋಗರೂಢ ವೆಂಬ ಪದಪ್ರಕಾರಗಳಲ್ಲಿ ಒಂದು ; ರೂಢಿಯಿಂದ ನಿರ್ಧಾರಗೊಂಡ ವಾಚ್ಯಾರ್ಥ ; ಶಬ್ದಶಕ್ತಿ ; ವಾಚಕತ್ವ ಶಕ್ತಿ : ಅವಯವಾರ್ಥವಿದ್ದರೂ ಸಮುದಾಯದಿಂದ ಒಂದು ಅರ್ಥವನ್ನೇ ರೂಢವಾಗಿ ಹೇಳಿದರೆ ಅದು ಯೋಗರೂಢವು. ಪಂಕಜವು, ನೀರಜವು ; ಇಲ್ಲಿ ನೀರಲ್ಲಿಯೂ ಕೆಸರಲ್ಲಿಯೂ ನೈದಿಲೆ ಕಪ್ಪೆ ಮೊದಲಾದುವು ಎಲ್ಲಾ ಅವಯವಾರ್ಥದಿಂದ ಹೇಳಲ್ಪಟ್ಟರೂ ಸಮುದಾಯವು ತಾವರೆಯಲ್ಲೇ ರೂಢವಾದ್ದರಿಂದ ಇದು ಯೋಗರೂಢವು (ಹೊಸಗ. ೧೪೦). [ಸಂ.]

**ಯೋಗರೂಢಿ** (ನಾ). = ಯೋಗರೂಢ : ಶಾಸ್ತ್ರಕಲ್ಪಿತವಾದ ಅವ ಯವಾರ್ಥದಿಂದ ಸಹಿತವಾದ ವಿಶೇಷ್ಯಭೂತವಾದ ಅರ್ಥದಿಂದ ನಿರೂಪಿತ ವಾದಶಕ್ತಿಗೆ ಯೋಗರೂಢಿ ಎಂದು ಹೆಸರು (ಛಾಕಕ್ತ. ೭೯೭). [ಸಂ.]

**ಯೋಗವಂಟಿಗೆ** ' ಯೋಗವಟ್ಟಿಗೆ ' ನೋ.

**ಯೋಗವಂತ** (ನಾ). ೧. ಧ್ಯಾನಯೋಗದಲ್ಲಿ ತೊಡಗಿದವನು : ಯೋಗವಂತರಿಗೆ ಹೃದಯದಲ್ಲಿ ಬ್ರಹ್ಮಭಾವನೆಯು ಗೃಹಸ್ಥರಿಗೆ . ವೇದಾರ್ಥ ಯನವು ವೇದಾಂತಾರ್ಥದ ವಿಚಾರವು (ಅರ್ಕವಪ. ೯೩). ೨. ಸುದೈವಿ ; ಅದೃಷ್ಟಶಾಲಿ : (*). [ಸಂ. ಯೋಗವತ್]

**ಯೋಗವಟ್ಟಿಗೆ**, ಯೋಗಪಟ್ಟಿಗೆ, ಯೋಗವಂಟಿಗೆ (ನಾ). = ಯೋಗ ಪಟ್ಟಿಕೆ : ಕಾಯುವೆ ಕಡವಸವಾಗಿ ಮನವೆ ಯೋಗವಟ್ಟಗೆಯಾಗಿ ಇಂದ್ರಿಯ ವಿಸಂಚಿನಿಂದಾಮುಪಮೆಯಯ್ಯ (ಅವಕಂ. ೦೧೦-೯೬೩); ಯೋಗವಟ್ಟಗೆಯ ಪಿರ ಸಡಿಲಿಸಿ ಧಿಗಿಲನೆದ್ದನು . . . ದಕ್ಷಾಧ್ವರಧ್ವಂಸಿ (ಶಿಭಾಗ. ೪-೩-೩೫).

**ಯೋಗಪಟ್ಟಿಗೆ :** ವರದ ಶ್ರೀಕಂಠಬ್ರುತಿಪರಿಕ್ಕಿದರ್ ಶಾಂತಿ[ಜಿ]ನ ಗ್ರಿಹಾಚ್ಯಾರ್ಯ್ಯಗ್ಗೊಪ್ಪಿರೆ ಯೋಗಪಟ್ಟಿಗೆಯನಾದರದಿಂದಂ ವಜ್ರಪಂಜರ ಮನಿಕ್ಕುವವೊಲು (ಎಕ. VIII, ಸೊರಬ. ೨೬-೩೭; 1208 ?). **ಯೋಗವಂಟಿಗೆ :** ಕುಂಚಿಯ ಕಂಥಿಯು ಕೈಯ ಲಾಗಲು ಸುಚಿಯ ಆವುಗೆ ಯೋಗವಂಟಿಗೆ ವಚನದಲಿ ಬಿಜ್ಜಳ ಹರಸಿ ವಿಭೂತಿಯನು ಇಟ್ಟು ವಿಚಿತ್ರದಿಂದಲಿ ಸಿದ್ಧ ಬಂದನು (ರೇವಶಾ. ೭-೦೪). ' ಜೋಗವಟ್ಟಿಗೆ ' ಪರಾ. [< ಸಂ. ಯೋಗಪಟ್ಟಿಕಾ]

**ಯೋಗವರ್ತನ** (ನಾ). ೧. ತಪಸ್ಸನ್ನು ಆಚರಿಸುವಿಕೆ ; ತಪಶ್ಚರಣ. ೨. [ಜೈನ] ಮನಸ್ಸು, ಕಾಯ, ವಾಕ್ಕುಗಳ ಮೂಲಕವಾಗಿ ಕರ್ಮಾಸ್ರವವಾಗುವ ಸಂದರ್ಭ, – ಸಂಬಂಧ. ೧, ೨ : ನಿರಂಜನ ರಾಗಿದರ್ಮಮಶೇಷಲೋಕನಿಹಿತಾರ್ಥಗ್ರಾಹಿಗಳ್ ಯೋಗವರ್ತನಮೊಂದುಂ ತಮಗೆಂದುಮಿಲ್ಲೆನಿಸಿಯುಂ ಸಿದ್ಧರ್ಕಳ್ (ಪುಕ್ರಪು. ೦-೨). [ಸಂ.]

**ಯೋಗವಾವುಗೆ** (ನಾ). = ಯೋಗಪಾದುಕ : " ಯೋಗವಾವುಗೆ [ಪಾಠಾಂ. ಜೋಗಪಾವುಗೆ] ಯುಮೆನೆ ಯೋಗಪಾದುಕಂ" (ಶಬ್ದಕೈ. ೩೨); ಅದ್ವೈತವೆ ಯೋಗವಟ್ಟಗೆ ಅಗಮ್ಯವೆ ಯೋಗವಾವುಗೆ (ಅವಕಂ. ೯೩-೩೬೪). [< ಸಂ. ಯೋಗಪಾದುಕಾ]

**ಯೋಗವಾಹ** (ನಾ). [ವ್ಯಾಕ] ಇನ್ನೊಂದು ವರ್ಣದ ಸಹಾಯದಿಂದ ಮಾತ್ರ ಉಚ್ಚಾರಣೆಯನ್ನು ಪಡೆಯುವ ಸಂಜ್ಞೆ,– ವರ್ಣ ; ಅನುಸ್ವಾರ, ವಿಸರ್ಗ, ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯ (ಂ, ಃ, ×ಕ, ೦೦ಪ) ಎಂಬ ಈ ನಾಲ್ಕು ಸಂಜ್ಞೆಗಳಿಗೆ ಇರುವ ಹೆಸರು : ಸಮಸಂದಿರ್ದ ×ಕ ಮುಮಂ ೦೦ಪಮುಮೊಂದಿದ ಬಿಂದುವುಂ ವಿಸರ್ಗಮುಮೆಂದಕ್ಕುಮಿವೆಯ್ದೆ ಯೋಗವಾಹಂ ಕ್ರಮದಿಂ ಕಪಯುಗಳ ಮಿವಜಿಹೊಳನುಬಂಧಂಗಳ್ (ಶಮಂದ. ೦೭). [ಸಂ.]

**ಯೋಗವಿಜ್ಞಾನ** (ನಾ). = ಯೋಗದರ್ಶನ : ಬ್ರಹ್ಮಸತ್ತೆಯನಾವ ಪರ ಬ್ರಹ್ಮಸತ್ತೆಯಿಂ ಮಾತ್ರಮೆಯೆ ದರ್ಶಿಸುತಿದಂ ಮಿಥ್ಯೆಯೆಂಬುದೇಂ ಪೂರ್ಣಸತ್ಯಮೆ ? ಯೋಗವಿಜ್ಞಾನಮೊಪ್ಪದು ಕಣಾ! (ಶ್ರೀರಾಮಪ. ೩-೭೦). [ಸಂ.]

**ಯೋಗವಿಡಿಸು** (ಕ್ರಿ). [ಜೈನ] ಕರ್ಮಗಳ ಆಸ್ರವ ಸಂಬಂಧವನ್ನು ನಿಲ್ಲಿಸು,— ಬಿಡಿಸು: ಸುಕುಮಾರನ ಮೋಹಬಂಧದ ಬಳ್ಳಿವಳ್ಳಿಯ ತೊಡರ್ಪಂ ಪಱಿಪಡೆ ಬಿಡಿಸುವಂತೆ ಯೋಗವಿಡಿಸಿ . . . ತ್ರಿಲೋಕ ಪ್ರಜ್ಞಪ್ತಿಯಂ ಪರಿವಡಿಗೆಯ್ವಾಗಳ್ (ಸುಕುಮಾ. ೦೦-೩೮.ವ).
[ಯೋಗ + ಬಿಡಿಸು]

**ಯೋಗಶಾಸ್ತ್ರ** (ನಾ). = ಯೋಗದರ್ಶನ: ಭರತಸುತಂ ಮರೀಚಿಪರಿಗೃಹೀತಪರಿವ್ರಾಜಕವೇಷಂ . . . ಕಾಪಿಲಸಿದ್ಧಾಂತಮುಮಂ ಯೋಗಶಾಸ್ತ್ರಮುಮಂ ತೋಱಿ ಲೋಕಮಂ ಸಮ್ಯಗ್ಜ್ಞಾನಪರಾಙ್ಮುಖಂ ಮಾಡಿದಂ (ಆದಿಪು. ೯-೯೩ ವ). [ಸಂ.]

**ಯೋಗಸನ್ಮಾಹ** (ನಾ). [ಜೈನ] ಐವತ್ತು ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು ; ಕೇವಲಜ್ಞಾನವನ್ನು ಹೊಂದಿದ ಬಳಿಕ ಪಡೆಯುವ ಪೂಜೆ,— ಉತ್ಸವ : ನಾಮಕರ್ಮ . . . ಯೋಗಸನ್ಮಾ [ಹಂ. ಮ್ಮ] ಹಾರ್ಹಂತ್ಯವಿಹಾರ ಯೋಗತ್ಯಾಗನಿವೃತ್ತಿಯೆಂಬಿಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೦೩-೦೫ ವ). 'ದೀಕ್ಷೆ' ಪರಾ. [ಸಂ.]

**ಯೋಗಸಮಾಧಾನ** (ನಾ). = ಯೋಗನಿದ್ರೆ ೧ : ಶ್ರೀನನ್ದಿಪಣ್ಡಿತದೇವರ್ . . . ಯೋಗಸಮಾಧಾನಾಧೀನಚಿತ್ತರಾಗಿ [ಶ] [ಮಿತ] ಪರಿತ್ಯಾಗದಿನಮರಲೋಕಾವಲೋಕನಕೌತುಕದಿಂ ದೇವಲೋಕಕ್ಕೆ ವಿಜಯಂಗೆಯ್ದರ್ (ಎಪಿಕ. XX, ೫೨-೩೭ ; 1077). [ಸಂ.]

**ಯೋಗಸಮಾಧಿ** (ನಾ). = ಯೋಗನಿದ್ರೆ ೧ : ಕೆಡಿಸುವ ನಿದ್ರೆಯನೆ ಯೋಗಸಮಾಧಿಯ ಮಾಡಿ ಜಗವ ಗೆದ್ದ ಶರಣರ ಬುದ್ಧಿಹೀನರೆತ್ತ ಬಲ್ಲರೊ (ಲಿಂಗವ. ೨೨-೯೯). [ಸಂ.]

**ಯೋಗಸಿದ್ಧಿ** (ನಾ). ಅಷ್ಟಾಂಗಯೋಗದಿಂದ ಕ್ರಮಕ್ರಮವಾಗಿ ಇಷ್ಟಾರ್ಥಗಳನ್ನು ಪಡೆದುಕೊಳ್ಳುವಿಕೆ ; ಯೋಗದಲ್ಲಿ ಪರಿಣತಿ : ಕಾಯ ದಿಗ್ಬಂಧ ಪ್ರಣಾಮ ವಿಧೇಯವರ್ತನೆ ಯೋಗಸಿದ್ಧಿನಿಕಾಯ ನಾಲ್ಕಱ ಇಂದ್ರಿಯಸ್ಥಿತಿಗತಿಯನಾರೈದು ಆಯುವನು ವಿವರಿಸುತ ಮೇಲಣ ಬೀಯವಿದು ತನಗೆಂಬುದನು ನಿರ್ಣಯದಲಿ ನಿಶ್ಚಯಿಸಬೇಹುದು (ಶಬ್ದಾಲಂ. ೯-೩೫). [ಸಂ.]

**ಯೋಗಾಂಗ** (ನಾ). ೧. ಪತಂಜಲಯೋಗಸಿದ್ಧಾಂತದಲ್ಲಿ ವಿವರಿಸಿದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬ ಎಂಟು ಅಂಗಗಳು : ಯಾವ ವಯಸ್ಸಿನಲ್ಲಾದರೂ ಎಂತಹ ಸ್ಥಿತಿಯಲ್ಲಿಯೂ ಯೋಗಾಂಗಗಳ ಅಭ್ಯಾಸವನ್ನು ಮಾಡಬಹುದು (ಭಾರದ. ೦೫೯). ೨. [ವೀಶೈ] ಅಂಗಸ್ಥಲದ ಯೋಗ, ಭೋಗ ಮತ್ತು ತ್ಯಾಗ ಎಂಬ ಮೂರು ಪ್ರಕಾರಗಳಲ್ಲಿ ಒಂದು : ಸರ್ವವನಱಿದು ತ್ಯಾಗಾಂಗನಾಗಿ ಭೋಗಾಂಗನಾಗಿ ಯೋಗಾಂಗನಾಗಿ ತಾಮಸ ನಿರಸನವೆಂಬ ಭೂತ ಭವಿಷ್ಯ ವರ್ತಮಾನಕ್ಕೆ ಹೊಱಗಾಗಿ ನಿಂದ ನಿಜತತ್ತ್ವದಂಗಕ್ಕೆ ಬೇಱೆ ಮಂಗಲೋತ್ತರವನಱಿಸಲಿಲ್ಲ (ಮೋಳಿವಾ. ೯೭-೦೯೦) ; ಯೋಗಾಂಗವು ಶರಣ, ಐಕ್ಯನೆಂದೂ, ಭೋಗಾಂಗವು ಪ್ರಾಣಲಿಂಗಿ ಪ್ರಸಾದಿಯೆಂದೂ ತ್ಯಾಗಾಂಗವು ಮಹೇಶಭಕ್ತನೆಂದೂ ಒಂದೊಂದರಲ್ಲಿ ಎರಡು ತೆರನಾಗುವುದು (ಶಿವಾನು. ೯೯ ಅಡಿ). [ಸಂ.]

**ಯೋಗಾಕ್ಷರ** (ನಾ). [ವ್ಯಾಕ] ಎರಡು ಅಥವಾ ಹೆಚ್ಚು ವ್ಯಂಜನಗಳು ಕೂಡಿದ ಅಕ್ಷರ : ಒತ್ತಕ್ಷರ ; ಸಂಯುಕ್ತಾಕ್ಷರ : ಬೆರಸಿರೆ ಮುಂದಂ ಯೋಗಾಕ್ಷರಂಗಳೇಕಸರಂಗಳಿಂ ಸುಪ್ರಾಸಂ (ಛಂದೋಂಬು. ೦-೯೭ ಅಡಿಟಿ). [ಸಂ.]

**ಯೋಗಾಕ್ಷಿ** (ನಾ). ಜ್ಞಾನದೃಷ್ಟಿ : ಅಂತರ್ದೃಷ್ಟಿ : ಯೋಗಾಕ್ಷಿಯಿಂದೆ ಕಂಡು ಮನೋಗೃಹದೊಳ್ ನಿಲಿಸಿ ಭಾವಕುಸುಮೋತ್ಕರದಿಂ ಯೋಗಿಗಳರ್ಚಿಪ ನಿನ್ನನದೇಗಾಣ್ಬೆವಬಲೆಯರಾವದೆಂತರ್ಚಿಪೆವೋ (ಜಗವ. ೩-೦೦೮).
[ಸಂ.]

**ಯೋಗಾಚಾರ** (ನಾ). ೧. ಯಮ ನಿಯಮಾದಿಗಳ ಅನುಷ್ಠಾನ ; ಯೋಗಾಭ್ಯಾಸ. ೨. ವಿಜ್ಞಾನವಾದವನ್ನು ಪುರಸ್ಕರಿಸುವ ಬೌದ್ಧ ಮತ ಮತ್ತು ಅದರ ಅನುಯಾಯಿ : ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕಮತ ವಿತಥಾಭಿಧಾಯಿಗಳ್ . . . ಆತ್ಮನಿರಾಕರಣಮನೆ ನುಡಿದು ಮಾಣೆ (ಆದಿಪು. ೨-೭ ವ); ಬಾಹ್ಯಾರ್ಥಾಕಾರಸಹಿತವಾದ ಬುದ್ಧಿ ಎಂಬ ವಸ್ತುವೇ ಯೋಗಾಚಾರರಿಗೆ ಸಮ್ಮತ (ಭಾರದ. ೨೦೯) : ಯೋಗಾಚಾರರು . . . ಬಾಹ್ಯವಸ್ತುಗಳೆಲ್ಲವನ್ನೂ ವಿಜ್ಞಾನವೆಂಬ ಮನಸ್ಸಿನಲ್ಲಿ ಸೇರಿಸಿ ಮನೋನಿಯಮನದಿಂದ ವೈರಾಗ್ಯೋಪದೇಶದಲ್ಲಿರುವರು (ಹಿಂದಸಾ. ೨೯). [ಸಂ.]

**ಯೋಗಾಭ್ಯಾಸ** (ನಾ). ಯೋಗಶಾಸ್ತ್ರವನ್ನು ಅಭ್ಯಾಸ ಮಾಡುವುದು ; ಅಷ್ಟಾಂಗಯೋಗದ ಅನುಷ್ಠಾನ : ಉಪವಾಸ ಮಿತಾಹಾರಾದಿಗಳಿಂದ ಯೋಗಾಭ್ಯಾಸಕ್ಕೆ ವಿರೋಧವಿಲ್ಲದಂತೆ ಶರೀರವನ್ನು ಆರೋಗ್ಯವಾಗಿಟ್ಟುಕೊಳ್ಳತಕ್ಕದ್ದು (ಹಿಂದಸಾ. ೯೯). [ಸಂ.]

**ಯೋಗಾಯೋಗ** (ನಾ). ಅದೃಷ್ಟವು ಕೂಡಿಬರುವುದು ; ದೈವಯೋಗ ; ಅನಿರೀಕ್ಷಿತವಾಗಿ ಒದಗುವ ಘಟನೆ : ನಿಮ್ಮಂತವರ ಸಹವಾಸವೇ ಒಂದು ಯೋಗಾಯೋಗ (ಹೊಸಕ್ಷಿ. ೩೭) ; ಅದೊಂದು ಯೋಗಾಯೋಗದ ಮಾತು (ಮೂಱರುದಾ. ೨೩೭) ; ಯೋಗಾಯೋಗದಿಂದ ಗಿರಿದಾಸರು ಮಗನ ಸಾಲೆಯ ಚೀಲವಿರುವ ಸ್ಥಳಕ್ಕೆ ಹೋದರು (ಕಂಬಹು. ೯೨). [ಸಂ.]

**ಯೋಗಾರೂಢ** (ನಾ). ಧ್ಯಾನದಲ್ಲಿ ಮಗ್ನನಾದವನು : ಯೋಗಸಮಾಧಿಯನ್ನು ಪಡೆದವನು : ಭೂರಿಶ್ರವಕ್ಷಿತಿಪ . . . ಪದ್ಮಾಸನವವನುಕೊಳಿಸಿ ಯೋಗಾರೂಢನಾದನು ವರಸಮಾಧಿಯಲಿ (ಕುಮಾ.ದ್ರೋ. ೦೯-೨೦) ; ಯೋಗಾರೂಢನಾಗಿದ್ದ ಆವನ ಬಾಯಿಂದ ಬೆಳ್ಳಗೆ ಸಾವಿರ ಹೆಡೆಯಿದ್ದ ಒಂದು ಸರ್ಪವು ಹೊರಟು ಸಮುದ್ರವನ್ನು ಹೊಕ್ಕಿತು (ವಃಪಾ. ೩೮೦). [ಸಂ.]

**ಯೋಗಾವತಿ** (ನಾ). [ಸಂಗೀತ] ಒಂದು ಮೇಳರಾಗದ ಹೆಸರು : ಶ್ರೀರಾಗದೊಳ್ ನಟನಾರಾಯಣಿ ಯೋಗಾವತಿಯಾಗಿರ್ಕುಂ ಘಂಟಾರಾಗಂ ನಾದವತಿಯಾಗಿರ್ಪುದು (ಪದ್ಮಾರ. ೨-೯೦ ವ). [ < ಸಂ. ಯೋಗವತಿ]

**ಯೋಗಾಸನ** (ನಾ). [ಯೋಗ] ಯೋಗಾಭ್ಯಾಸವನ್ನು ಮಾಡುವಾಗ ಕುಳಿತುಕೊಳ್ಳುವ ಒಂದು ವಿಶೇಷ ಭಂಗಿ : ಯೋಗಾಸನ :— ಚಕ್ರಮಟ್ಟೆ ಹಾಕಿ ಕುಳಿತು, ಹಸ್ತಗಳನ್ನು ತೊಡೆಯ ಮೇಲೆ ಇಟ್ಟಿರುವಂತೆ ರಚಿತವಾದರೆ ಈ ಹೆಸರು (ಭಾರದ. ೫೦೫) ; ಕೊಂಡುಗ್ರರೂಪವ. ಬಳಿಕೀ ಯೋಗಾಸನದೊಳಗದ ಶಮಿಸುವ ಭಾಸುರ ನರಸಿಂಹನೆಮಗೆ ಮಂಗಳನಕ್ಕೆ (ಮರಳಕೆ. ೫೯-೦೭). [ಸಂ.]

**ಯೋಗಿ** (ನಾ). ೧. ಚಿತ್ತವೃತ್ತಿ ನಿರೋಧ ಮಾಡುವವನು : ಯತಿ ; ತಪಸ್ವಿ : "ಯತಿ ಸಂಯಮಿ ಋಷಿ . . . ಯೋಗಿ ತಾಪಸನಾತಂ" (ದಸ್ತುಕೋ. ೫೭-೩೩); ಯೋಗಿಗೆ ಯೋಗಿಣಿಯಾಯಿತ್ತು ಮಾಯೆ (ಮಹಾದೇ. ಐ. ೦೬-೨೭); ಸಂಸೃತಿ ಫಲವತಿಯಾಗಿರೆಯುಂ ಯೋಗಿಗುತ್ಸವಂ ಪುಟ್ಟಿದವೋಲ್ (ಜಗವ. ೨-೫೩); ಕಾವಿಯ ಹೊದೆದು ಹೋದಾತ ಯೋಗಿಯೆನಬೇಡ ಇಂದ್ರಿಯವ ಕಾದಾತ ಯೋಗಿ (ಸರ್ವಜ್ಞ. ೯೯೯). ೨. ಶೈವಭಕ್ತನಾಗಿದ್ದು ಭಿಕ್ಷಾವೃತ್ತಿಯಿಂದ ಜೀವಿಸುವವನು ; ಜೋಗಿ : (೯). ೩. ಯೋಗಸಿದ್ಧಾಂತವನ್ನು ಅನುಸರಿಸುವವನು. ೪. ಮಂತ್ರಗಾರ; ಮಾಟಗಾರ ; ಐಂದ್ರಜಾಲಿಕ. [ಸಂ. ಯೋಗಿನ್]

**ಯೋಗಿಣಿ** (ನಾ). ೧. ಮಾಟಗಾತಿ ; ಮಾಯಾವಿನಿ. ೨. ದುರ್ಗಾದೇವತೆಯ (ಅಥವಾ ಶಿವನ) ಸೇವೆಗೆ ಇರುವ ಎಂಟು ಜನ

ಶಕ್ತಿಯರು, – ಅಷ್ಟಶಕ್ತಿ ದೇವತೆಗಳು : ಭೋಗಕ್ಕೆ ಭೂಬಲಂ ದಿಗ್ವಿಜಯೋದ್ಯೋಗಕ್ಕೆ ಯೋಗಿಣೀಬಲಂ ಭಂಡಾರದ ಭಾಗ್ಯಪೊೞಲಗದ ಮಯಿಸಿರಿದಶಕ್ಕೆ ದೀಕ್ಷಾಗುರು ರಾಜ್ಯಕ್ಕೆ ರಕ್ಷಾಮಣಿಯೆನಿಸಿದ ಪ್ರಧಾನ ಚೂಡಾಮಣಿಗಳ್ (ಶಾಇಇ. XX, ೨೦೨-೧೦; 1244). ೩. ಯೋಗಾಭ್ಯಾಸ ಮಾಡುವವಳು ; ತಪಸ್ವಿನಿ ; ಯೋಗಿಗೆ ಯೋಗಿಣಿಯಾಯಿತ್ತು ಮಾಯೆ (ಮಹಾದೇ. ಐ. ೧೮-೨೭) ; ಸ್ಪರ್ಶಮಣಿಯ ಸ್ಪರ್ಶದಿಂದ ಯೋಗಿಣಿಯು ಗೃಹಿಣಿಯಾದಳು (ಕಥಾಕಂ. ೯೩). ' ಜೋಗಿಣಿ ' ಪರಾ.

[< ಸಂ. ಯೋಗಿನೀ]

**ಯೋಗಿತ** (ಗು). ೧. ಮಂತ್ರಮುಗ್ಧವಾದ ; ಮಾಟಕ್ಕೆ ಒಳಗಾದ. ೨. ಮರುಳು ಹಿಡಿದ ; ಹುಚ್ಚು ಹಿಡಿದ ; ಬುದ್ಧಿಭ್ರಂಶವಾದ. [ಸಂ.]

**ಯೋಗಿನಿ** (ನಾ). ೧. = ಯೋಗಿಣಿ ೨ : ಅಷ್ಟಯೋಗಿನಿಯರಣಿಮಾದಿಗಳ್ . . . ಸೃಷ್ಟಿಯ ಸಮಸ್ತಾಭಿಮಾನ ದೇವತೆಯರಿರ್ವರು ದೇವಿಯುಂ ಸೇವಿಸಿ (ಶ್ರೀಬಾ. ೧೫-೨೦). ೨. ಅರುವತ್ತು ನಾಲ್ಕು ಜನ ಉಗ್ರದೇವತೆಗಳು: ರಕ್ತಜಳಾಸವಮತ್ತಯೋಗಿನೀವ್ರಾತಪರೀತ ಭೂತ ಸದನಂ ಕದನಂ ಕದನತ್ರಿಣೇತ್ರನಾ (ಪಂಪಭಾ. ೧೪-೩) ; ಅಷ್ಟದಿಕ್ಪಾಲರ್ಗೆ ಪೂಜೆಯಂ ಮಾಡಿ ಚೌಷಷ್ಟಿಯೋಗಿನಿಯರ್ಗೆ ಬಲಿಗೊಟ್ಟು . . . ಹೃಷ್ಟತೆಯೊಳರ್ಥಮಂ ಸಾಗಿಸಿದನಿಭಪುರಿಗೆ (ಜೈಮಿಭಾ. ೫-೭೨). ೩. = ಯೋಗಿಣಿ ೩: ಸಮರತ್ರಸೌಖ್ಯದೊಳ್ ಸತಿ ದಿಗಂಬರವೇಷಮನಾಂತು . . . ತನ್ಮನೋಹೃನ್ನಿಧಾನಮನುಪಾರ್ಜಿಪ ಯೋಗಿನಿಯಂತಿರೊಪ್ಪಿದಳ್ (ಕಾವ್ಯಸಾ. ೭೭೫ ಕೂರ್ದ್ರಕ).

[ಸಂ. ಯೋಗಿನೀ]

**ಯೋಗಿಪ್ರತ್ಯಕ್ಷ** (ನಾ). ಯೋಗಿಗಳಿಗೆ ಮಾತ್ರ ಕಾಣುವಂತಹುದು : ಯೋಗದೃಷ್ಟಿಗೆ ಗೋಚರವಾದುದು : ಪ್ರತ್ಯಕ್ಷವು ಲೌಕಿಕ, ದಿವ್ಯವೆಂದು ಎರಡು ಪ್ರಕಾರ . . . ದಿವ್ಯವು ಭಗವದನುಗ್ರಹದಿಂದ ಬರತಕ್ಕ ಯೋಗಿಪ್ರತ್ಯಕ್ಷ (ಹಿಂದಸಾ. ೨೪೦). [ಸಂ.]

**ಯೋಗಿಸು** (ಕ್ರಿ). ಅನುಷ್ಠಾನ ಮಾಡು : ತೂಗಿ ನಿಮ್ಮಾತ್ಮಸಾಕ್ಷಿಯೊಳೇನು ವ್ರತವೆಂದು ಯೋಗಿಸಿದಿರೆ ಸತಿಯರಿರಾ (ಶರಷ. ೪-೪೦). [ಯೋಗ + – ಇಸು₃]

**ಯೋಗೀಶ್ವರ** (ನಾ). ಯೋಗಿಗಳಲ್ಲಿ ಶ್ರೇಷ್ಠನಾದವನು : ಯೋಗೀಶ್ವರರ ತತ್ತ್ವವಿಚಾರ ಮಂತ್ರಿಜನಕ್ಕೆ ಬುದ್ಧಿಗುಣ . . . ಕಾವ್ಯಕೆ ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ (ಕುವ್ಯಾಆ. ೦-೧೯). [ಸಂ.]

**ಯೋಗು** (ನಾ). ತಪಸ್ಸು; ಧ್ಯಾನ : ಯೋಗಿನ ದಿವಸಂ ಸಾರ್ಚಿದುದಾಗಿ . . . ಈಗಳ್ ಬೇಗಂ ಚಾತುರ್ಮಾಸದ ಯೋಗಂ ಕೈಕೊಂಡಂ (ಸುಕುಮಾ. ೧೦-೩೮). ' ಜೋಗು₃ ' ಪರಾ. [< ಸಂ. ಯೋಗ]

**ಯೋಗೇಶ್ವರ** (ನಾ). ೧. ಯೋಗವಿದ್ಯೆಗೆ ಪ್ರಭುವಾದವನು : ಯೋಗೇಶ್ವರ ಹರಿ ಒಳಗಿದ್ದು ನುಡಿದ ಹೀಗೆ ಹಾಗೆ ಎನ್ನ ಸಲ್ಲ (ಪಿದಾಕೃ. ೪೪-೫). ೨. ಶಿವ. [ಸಂ.]

**ಯೋಗೇಷ್ಟ** (ನಾ). ೧. ತವರ. ೨. ಸೀಸ : "ನಾಗಂ, ಸೀಸಕಂ, ಯೋಗೇಷ್ಟಂ, ವಪ್ರಂ – ೪ ಸೀಸದ ಹೆಸರುಗಳು" (ಸಿದ್ಧಾಂತಿ. ೩೦೭). [ಸಂ.]

**ಯೋಗ್ಯ** (ಗು). ೧. ನೊಗಕ್ಕೆ ಹೂಡಲು ತಕ್ಕುದಾದ. ೨. ಯೋಗಾಭ್ಯಾಸಕ್ಕೆ ತಕ್ಕ,—ಅರ್ಹವಾದ. ೩. ಒಪ್ಪುವ ; ಸರಿಹೋಗುವ : ಸಮರ್ಪಕವಾದ. ೪. ತಕ್ಕ; ಅರ್ಹ; ಉಚಿತವಾದ : ವಿಷ್ಣುವು ಈ ಮಹಾತ್ಮರನ್ನು ಕಂಡ ಕೂಡಲೇ ಎದ್ದು ಯೋಗ್ಯವಾದ ಪೀಠದಲ್ಲಿ ಕುಳ್ಳಿರಿಸಿದನು (ಶೀತಿಶಂ. IV, ೦೨). ೫. ಉಪಯುಕ್ತವಾದ : ಪ್ರಯೋಜನವುಳ್ಳ. (ನಾ). ೬. ಯೋಗ್ಯತೆ ; ಅರ್ಹತೆ : ನಿನ್ನ ಭಕ್ತರ ಯೋಗ್ಯವ ನೀನೆ ಬಲ್ಲೆ (ಏಕಾಷ. ೯೭-೭). ೭. ಸರಿಯಾದುದು ; ತಕ್ಕುದು : ಅರ್ಹವಾದುದು : ಇದು ಯೋಗ್ಯಮಯೋಗ್ಯಮಿದೆನ್ನದೆ ವಿಷಯದಲಂಪು ನಿಮಿರೆ ಗತಿ ಹಾಸಗಮಟ್ಟದೆ ನಡೆವ ಕಾತರಂಗಾಗದು ಸಕಳತ್ಯಾಗಸಾಧಕಂ ಜೈನಮತಂ (ವರ್ಧಕ. ೦೦-೭೨). ೮. ಅರ್ಹನಾದ ವ್ಯಕ್ತಿ ; ಯೋಗ್ಯತೆಯುಳ್ಳವನು : ನಿಮ್ಮನೋದಿಸಿ ಯೋಗ್ಯರಂ ಮಾಡುವಂತಿರೆ ನಿರೂಪಿಸಿ ಕಲ್ಪಿಸಿಯೋಲೆಯಂ ಬರೆಯಿಸಿ ನಿಮ್ಮ ಕಯ್ಯೊಳ ಟ್ಟಿದಪೆಂ (ವಡ್ಡಾರಾ. ೩-೫) ; ಬಸವನೆಂಬ ಗಣೇಶ್ವರನ ಮಾಡಿ . . . ನಿಮ್ಮೊಕ್ಕುದ ಮಿಕ್ಕುದಕ್ಕೆ ಯೋಗ್ಯನಾಗಲೆಂದಿರಿಸಿಕೊಂಡಿರ್ದಿರಯ್ಯಾ (ಬಸವ. ೪). ೯. ಚಂದನ ; ಶ್ರೀಗಂಧ. ೧೦. ಒಂದು ಬಗೆಯ ಔಷಧಿದ್ರವ್ಯ : "ಯೋಗ್ಯಂ, ಋದ್ಧಿಃ, ಸಿದ್ಧಿಃ, ಲಕ್ಷ್ಮೀ – ೪ ಋದ್ಧಿಯೆಂಬುವ ಗಂಧಿಕದ್ರವ್ಯದ ಹೆಸರುಗಳು" (ಸಿದ್ಧಾಂತಿ. ೦೩೭). [ಸಂ.]

**ಯೋಗ್ಯತಾಪತ್ರ** (ನಾ). ೧. ಪರೀಕ್ಷೆಯಲ್ಲಿ ನಿರೀಕ್ಷಿತ ಮಟ್ಟವನ್ನು ಮುಟ್ಟಿದವರಿಗೆ ಕೊಡುವ ಅರ್ಹತೆಯ ಪತ್ರ : ತೇರ್ಗಡೆಯಾದ ವಿಷಯದಲ್ಲೇ ಯೋಗ್ಯತಾಪತ್ರ . . . ತರಬೇಕು (ಶಿಕ್ಷದ. ೩೭೮). ೨. "(ಒಬ್ಬನ ಶೀಲ, ನಡತೆ, ಯೋಗ್ಯತೆ—ಇವನ್ನು ಕುರಿತು ಕೊಟ್ಟ) ಯೋಗ್ಯತಾ ಪತ್ರ, ಪ್ರಮಾಣ ಪತ್ರ" (Testimonial.ಇಂಕಿ). [ಸಂ.]

**ಯೋಗ್ಯತಿಕೆ** (ನಾ). ಅರ್ಹತೆ ; ಯೋಗ್ಯತೆ : ಯೋಗ್ಯರಲ್ಲದರಾರು ಮುಕುತಿಗೆ . . . ಯೋಗ್ಯತಿಕೆ ಸಶ್ರುದ್ಧೆಯೊಂದೇ ಯೋಗ್ಯತಿಕೆ ನೆಟ್ಟನೆ ನಂಬಲ್ಲಡೆ (ಸಿಶಾಗ. ೭-೩-೪೮). [ಯೋಗ್ಯತೆ + – ಇಕೆ]

**ಯೋಗ್ಯತೆ** (ನಾ). ೧. ಅರ್ಹತೆ ; ದಕ್ಷತೆ : ಗುರು ಮೊದಲು ಶಿಷ್ಯರ ಯೋಗ್ಯತೆಯನರಿದು . . . ಬೋಧಿಸಿ ರಕ್ಷಿಸುವನು (ಗಗಶಾ. ೦೩-೦೩). ೨. ಸಮರ್ಪಕವಾಗಿರುವಿಕೆ ; ಸಮುಚಿತತೆ. ೩. (ಆಲಂ) ಗೌರವ ; ಅಂತಸ್ತು ; ಘನತೆ : ಕೈಕೆಳಗಿನವರ ಕೂಡ ನಯದಿಂದ ನಡೆದರೆ ತಮ್ಮ ಯೋಗ್ಯತೆಯು ಕಡಿಮೆಯಾಗುವುದೆಂದು ಕೆಲವರು ತಿಳಿಯುವರು (ಮುಂಬಿಯು. ೪-೭೩). ೪. [ತರ್ಕಶಾ] ಪದಗಳ ಅರ್ಥಗಳಲ್ಲಿ ವಿರೋಧವಿಲ್ಲದಿರುವಿಕೆ : ಅರ್ಥಗಳಿಗೆ ಪರಸ್ಪರಾನ್ವಯಕ್ಕೆ ವಿರೋಧವಿಲ್ಲದಿರುವುದು ಯೋಗ್ಯತೆ (ಹಿಂದಸಾ. ೦೪೫) ; ಯೋಗ್ಯತೆಯೆಂದರೆ ವಾಕ್ಯದಲ್ಲಿ ಸೇರುವ ಪದಗಳ ಅರ್ಥಗಳು ಒಂದರೊಡನೊಂದು ವಿರೋಧವಿಲ್ಲದೆ ಹೊಂದಿಕೊಂಡಿರುವುದು (ಭಾರಪಿಾ. ೨೫೦). [ಸಂ. ಯೋಗ್ಯತಾ]

**ಯೋಗ್ಯಾರಥ** (ನಾ). ಸೈನ್ಯದಲ್ಲಿ ಅಭ್ಯಾಸಕ್ಕಾಗಿ ಬಳಸುವ ರಥ. [ಸಂ.]

**ಯೋಗ್ಯೆ** (ನಾ). ೧. ಅಭ್ಯಾಸ; ಆಚರಣೆ. ೨. ಸೈನಿಕ ವ್ಯಾಯಾಮ; ಕವಾಯತು. ೩. ತಕ್ಕವಳು ; ಅರ್ಹತೆಯುಳ್ಳವಳು : (ಶ).

[ಸಂ. ಯೋಗ್ಯಾ]

**ಯೋಚಕ** (ನಾ). ಯೋಚನೆ ಮಾಡುವವನು ; ಆಲೋಚಿಸುವವನು ; ವಿಚಾರ ಮಾಡುವವನು : "ಜೀಹಕಃ, ಜೀಹಮಾನಃ, ಈ ೨ ಯೋಚಕಂ" (ಕಾಶಕೃ. ೦೨೪) ; ಆ ಕೊಲೆಗಾರನ ಹೃದಯದ ಮಸೀಮಯ ಭೀಷಣತೆಯಿಂದ ಯೋಚಕರ ಹೃತ್ಪಿಂಡವು ನಡುಗಿ ಹೋಗುತ್ತಿತ್ತು ! (ಅಂಡಕ. ೨೦). [ < ಯೋಚನ ? ]

**ಯೋಚನ** (ನಾ). ೧. ವಿಚಾರ ; ಆಲೋಚನೆ. ೨. ದುಃಖದ ವಿಚಾರ; ಚಿಂತೆ : (ಶ). 'ಆಲೋಚನ', 'ಯೋಚಿಸು' ಪರಾ.

[< ಸಂ. ಯೋಜನ ?. / ತಮಿ. ಯೋಚನಮ್ ; ತೆಲು. ಯೋಚನ]

**ಯೋಚನಾಪರ** (ಗು). ಆಲೋಚನೆಯಲ್ಲಿ ತೊಡಗಿದ ; ಚಿಂತಾಪರವಾದ : ರಾಯರು . . . ಒಂದೆರಡು ಕ್ಷಣ ಯೋಚನಾಪರದೃಷ್ಟಿಯಿಂದ ನೋಡುತ್ತಾರೆ (ವೀರಯೋ. ೩೪). [P ಇದು ' ಆಲೋಚನಾಪರ ' ಎಂಬ ಶಬ್ದದ ರೂಪಸಾದೃಶ್ಯದಿಂದ ನಿರ್ಮಿತವಾದ ಪದ]

**ಯೋಚನಾಶಕ್ತಿ** (ನಾ). ಆಲೋಚಿಸುವ ಶಕ್ತಿ ; ವಿಚಾರಶಕ್ತಿ : ಯೋಚನಾಶಕ್ತಿ, ಒಂದು ವಿಧದ ಜೀವಶಕ್ತಿ (ವಿಕಲು. ೨೩೪).

[P ಇದು ' ಆಲೋಚನಾಶಕ್ತಿ ' ಎಂಬ ಶಬ್ದದ ರೂಪಸಾದೃಶ್ಯದಿಂದ ನಿರ್ಮಿತವಾದ ಪದ]

**ಯೋಚನೆ** (ನಾ). ೧. ಆಲೋಚನೆ ; ವಿಚಾರ ; ಎಣಿಕೆ : ಈ ಯೋಚನೆಗಳ ತುಯ್ಲಾಟದೊಡನೆ . . . ಹೊಸನಗರ ತಲುಪಿದ್ದನು (ಬಾಳ್ವೆ. ೦೧೯). ೨. ಯೋಚಿಸುವಿಕೆ ; ಚಿಂತನೆ : ಏಕಾಂತ ಕೆಲರೊಳು ಯೋಚನೆ ಕೆಲರೊಳು ಮೂಕತೆ ಕೆಲರೊಳೊಂದೆರಡು ವಾಕು ಕೆಲರೊಳಿರೆ . . . ಭೂಕಾಂತ ನುಡಿದನು (ಭರತ. ೯-೬೭) ; ಮೈತಳೆದ ಕರುಣೆ ಮೈಮರೆತು ಕುಳಿತಿದೆ ನೋಡು ಯೋಚನೆಯ ಯೋಜನೆಯ ಕುರಿತು ಬೆರೆತು (ಉಯ್ಯಾಲೆ. ೪೪-೨). ೩. ಚಿಂತೆ ; ಕಳವಳ : ಪ್ರಾಚೀನಕರ್ಮವು ಬಿಡಲರಿಯದು ಯೋಚನೆಯ ಮಾಡಿ ನೀ ಬಳಲಬೇಡ (ಪುರಂದ. ೪-೦೭ ಪಲ್ಲವಿ) ; ಬಡ್ಡಿಗೆ ಯಾತಕೆ ಬದುಕಿನ ಯೋಚನೆ ? (ಗಾದೆ). 'ಆಲೋಚನೆ' ಪರಾ.

[<ಯೋಚನ./ತಮಿ. ಯೋಚನೈ ; ತುಳು. ಯೋಚನೆ]

**ಯೋಚನೆಗೈ** (ಕ್ರಿ). ಆಲೋಚಿಸು ; ಯೋಚಿಸು : ಎಂತು ನಾವಿಲ್ಲಿಂದ ಪೊರಡುವ ಯತ್ನವೆಂದಂತದ ಯೋಚನೆಗೈದು . . . ವಿಪ್ರರು ಕಪಟದ ಗೋವ ನಿರ್ಮಿಸಿದರು ಕ್ಷಣದೆ (ಕಂಸವಿ. ೩-೦೩).

[ಯೋಚನೆ + ಗೈ (<ಕೆಯ್[1])]

**ಯೋಚಿಸು** (ಕ್ರಿ). ೧. ವಿಚಾರ ಮಾಡು ; ಆಲೋಚಿಸು ; ಆಲೋಚನೆ ಮಾಡು : ಕಡುಗೂರ್ಮೆ ಕೂರ್ತವೋಲ್ವೀರಮನಾಕೆಗಳ್ಗೆ ಪಡೆದೊರ್ಬರ ನೊರ್ಬರು ಗೆಲ್ವ ಭೇದಮುಂ ಪಾರಿಜವಕ್ತ್ರ ಯೋಚಿಸುವವಂ ಚದುರಂ (ಮದಕ. ೦೦-೬೨) ; ಈ ಲಿಪಿಗಳಂ ತಿಳಿದು ಯೋಚಿಸಿ ಹೇಳುವೊಡೆ . . . ಮಾನವರಿಗರಿದು (ಕಸಪು. ೩-೩೩) ; ಯೋಚಿಸಿ ಮಾತಾಡು ಪರಹಿತಕಾಗಿ ದಧೀಚಿ ತನ್ನೊಡಲ ಮಾಂಸವನು . . . ಸುರಪಂಗೆ ಕುಡನೆ (ಬೋಹಕ. ೩-೩೨). ೨. ಭಾವಿಸು ; ಎಣಿಸು ; ತಿಳಿದುಕೊಳ್ಳು : ಮಹೇಶ್ವರಂ ಮಿಗೆ ಯೋಚಿಸುತ್ತಿರ್ದನೆನ್ನ ಪಣೆಯಿಂದಾದ ರುದ್ರನೇ ತನ್ನಯ ಸ್ವರೂಪ ಮೆಂದು (ಕಾಶಿ. ೧೩-೬).

[ಯೋಚನ + _ ಇಸು[1]]

**ಯೋಜಕ** (ನಾ). ೧. ಹೊಂದಿಸುವಂತಹುದು ; ಹೊಂದುವುದಕ್ಕೆ ಕಾರಣವಾದುದು : ಸಕಲಮಹೀಚರಖೇಚರನಿಕಾಯ ಸೇವ್ಯತೆಗೆ ವೃದ್ಧ ಸೇವಿತ್ವಮೆ ಯೋಜಕವಾದುದು (ಶಾಂತಿಪು. ೨-೪೯). ೨. ಹೊಂದಿಸುವವನು ; ಯೋಜನೆ ಮಾಡುವವನು ; ವ್ಯವಸ್ಥಾಪಕ : ನಮ್ಮ ದೇಶದಲ್ಲಿ ಒಳ್ಳೆಯ ಯೋಜಕರ ಸಂಖ್ಯೆ ವಿರಳ (ರೂಢಿ). ೩. ಅಗ್ನಿ. [ಸಂ.]

**ಯೋಜನ** (ನಾ). ೧. ಹೊಂದಿಸುವುದು ; ಕೂಡಿಸುವುದು ; ಅಳವಡಿಸುವುದು. ೨. ಏರ್ಪಾಡು ; ವ್ಯವಸ್ಥೆ : ಮೂರು ಭಾಗಗಳ ಯೋಜನ ಮಾಡಿರುತ್ತದೆ (ಮುಂಬಿವ್ಯಾ. ೪ ಶ್ರಿಶಾ.ಪರಿ). ೩. ದೂರದ ಅಳತೆಯ ಒಂದು ಪ್ರಮಾಣ ; ಎರಡು ಗಾವುದ ; ನಾಲ್ಕು ಹರದಾರಿ : "ದಂಡಮೆರಡು ಸಾವಿರಮಾಗೆ ಕ್ರೋಶಮಕ್ಕುವು ನಾಲ್ಕುವರಲು ಯೋಜನಮಕ್ಕು" (ಮಂಗರಾ. ೯೬-೦೦) ; ಅಲ್ಲಿ ಖರಭಾಗಂ ಪದಿನಾರುಸಾಸಿರಯೋಜನಂ (ಸಂಚಾರ. ೦೦-೧೦ ವ) ; ಒಂದು ಯೋಜನವರೆಗೆ ತಿರುಗಿತು ಒಂದಕಪಿತನ ತೇರು ತಾನೆಸಲೊಂದು ಬಿಲ್ಲಂತರಕೆ ತೊಲಗಿತು ನಮ್ಮರಥ (ಕುಮ್ಯಾಳ. ೨೩-೨೦) ; ಕ್ರೋಶವೆರಡಾಗಲೊಂದು ಗವ್ಯೂತಿ . . . ಗವ್ಯೂತಿಯೆರಡಾಗಲೊಂದು ಯೋಜನವೆನಿಸುವುದು (ಏಕೀ. ೨೩೦). ೪. ಮನಸ್ಸಿನ ಏಕಾಗ್ರತೆ ; ಧ್ಯಾನ ; ಚಿತ್ತವೃತ್ತಿನಿರೋಧ. [ಸಂ.]

**ಯೋಜನಗಂಧಿ** (ನಾ). ಒಂದು ಯೋಜನದ ವರೆಗೆ ಸುತ್ತಲೂ ಹರಡಬಲ್ಲಂತಹ ಸುವಾಸನೆಯನ್ನುಳ್ಳವಳು ; ಪ ವ್ಯಾಸಮಹರ್ಷಿಯ ತಾಯಿಯಾದ ಸತ್ಯವತಿ : ಬಳಿಕ ಯೋಜನಗಂಧಿಯಲ್ಲಿಂದೀವಸನಪ್ರಕ್ಯಾಮನುರುಪಿಂಗಳಜಟಾಬದ್ಧ ವೇದವ್ಯಾಸಮುನಿರಾಯ (ಕುಮ್ಯಾಳ. ೨-೨೩).

[<ಸಂ. ಯೋಜನಗಂಧಾ]

**ಯೋಜನಗಂಧಿತ್ವ** (ನಾ). ಸುತ್ತಲೂ ಒಂದು ಯೋಜನದವರೆಗೆ ಹರಡುವಂತಹ ಶರೀರಸುಗಂಧವನ್ನು ಹೊಂದಿರುವಿಕೆ : ಮುನೀಂದ್ರನಾಕೆಯೊಡಲೀ ದುರ್ಗಂಧಮೋಪಂತೆ ಯೋಜನಗಂಧಿತ್ವಮನಿತ್ತು . . . ಕೂಡುವೆಡೆಯೊಳ್ ಜ್ಞಾನಸ್ವರೂಪಂ ಮಹಾಮುನಿಪಂ ಪುಟ್ಟಿದಂ (ಕಂಪಭಾ. ೦-೬೯). [ಸಂ.]

**ಯೋಜನವಲ್ಲಿ** (ನಾ). ಒಂದು ಬಗೆಯ ಸಸ್ಯ ; ಮಂಜಿಷ್ಠೆ : "ಮಂಜಿಷ್ಠಾ. ವಿಕಸಾ . . . ಭಾಂಡೀ, ಯೋಜನವಲ್ಲೀ – ೯ ಮಂಜಿಷ್ಠೇ ಹೆಸರುಗಳು" (ಸಿದ್ಧಾಂತಿ. ೦೩೨). [ಸಂ. ಯೋಜನವಲ್ಲೀ]

**ಯೋಜನೆ** (ನಾ). ೧. ವ್ಯವಸ್ಥಿತವಾಗಿ ಮಾಡಬೇಕಾದ ಕಾರ್ಯಗಳ ರೂಪರೇಷೆ ವಿಧಾನಗಳನ್ನು ಮುಂಚಿತವಾಗಿ ರೂಪಿಸಿಕೊಳ್ಳುವುದು, ಏರ್ಪಾಟು ; ವ್ಯವಸ್ಥೆ. ೨. ವ್ಯವಸ್ಥಿತವಾಗಿ ನಿರೂಪಿಸಿಕೊಂಡ ಕಾರ್ಯಕ್ರಮ : ಹಾರ್ವರ್ಡ್ . . . ತನ್ನ ಯೋಜನೆಗಳನ್ನು ಕಾರ್ಯಗತ ಮಾಡಲು ಉದ್ಯುಕ್ತನಾದನು (ಸಸ್ಯ. ೩೩) ; ಇತ್ತೀಚೆಗೆ ಗ್ರಾಮಗಳ ಉದ್ಧಾರಕ್ಕಾಗಿ ಹಲವಾರು ಯೋಜನೆಗಳು ಪ್ರಚಾರಕ್ಕೆ ಬರುತ್ತಿವೆ (ವ್ಯವಪು. ೬೩); ಯೋಚಿಸಿ ಯೋಜನೆಯೊಂದನು ಹೊಂದಿಸು ಅದರಂತೆ ಬಾಳನು ನಡಸು (ಇಂಚಾಕ. ೦೦೬-೬೦). ೩. [ವ್ಯಾಕ] ನಿಯಮದಂತೆ ಪದ, ಅರ್ಥ ಮೊದಲಾದುವುಗಳನ್ನು ಹೊಂದಿಸುವಿಕೆ.

[ಸಂ. ಯೋಜನಾ]

**ಯೋಜಿತ** (ಗು). ೧. ಕೂಡಿಸಿದ ; ಹೊಂದಿಸಿದ. ೨. ಉಪಯೋಗಿಸಿದ ; ಬಳಸಿದ. ೩. ಕೊರತೆಯಾಗಿದ್ದುದನ್ನು ಭರ್ತಿ ಮಾಡಿದ ; ಹೊಸದಾಗಿ ಒದಗಿಸಿದ. [ಸಂ.]

**ಯೋಜಿಸು** (ಕ್ರಿ). ೧. ಹೂಡು: ಸಂಧ್ಯಾರಾಗವುಳ್ಳ ರಶ್ಮಿಗಳು ಅವರ ರಥಕ್ಕೆ ಯೋಜಿಸಲ್ಪಡುತ್ತವೆ (ಹುಕ್ಕಾರ. ೦೧೦). ೨. ಹೊಂದಿಸು; ಅಳವಡಿಸು ; ಕೂಡಿಸು : ಲೋಕಮಂ ಧರ್ಮಪಥಪ್ರಸ್ಥಾನದೊಳ್ ಯೋಜಿಸಿ (ಕಂರಾಪಾ. ೦-೨೮) ; ಸಮ್ಯಗಂಬುದರರ್ಥಂ ಪ್ರಶಂಸೆಯೊಳ್ವರ್ತಿಸುವುದಱಿಂ ಸಮ್ಯಗ್ದರ್ಶನಂ ಸಮ್ಯಗ್ಜ್ಞಾನಂ ಸಮ್ಯಕ್ಚಾರಿತ್ರಮೆಂದು ಅದು ಬೇಱೆಬೇಱೆ ಯೋಜಿಸೆ ಪಡುಗುಂ (ಶಬ್ದಸ್ಮೃ.೩). ೩. ಧರಿಸುವಂತೆ ಮಾಡು ; ಧಾರಣ ಮಾಡಿಸು: ಜನನಾಥಂ . . . ರಾಜ್ಯಮುಂ ನಂದನನೊಳ್ ಶ್ರೀಕಾಂತನೊಳ್ ಯೋಜಿಸಿ ತಳರ್ದು ತಪೋಲಕ್ಷ್ಮಿಯಂ ತಾಳ್ದಿದಂ (ಶಂತ್ರಪು. ೯-೬೦) ; ಮತ್ತೊರ್ವಳ್ . . . ಪಯೋಧರತಟದೊಳ್ ಸೊಗಯಿಪ ನಕ್ಷತ್ರಮಾಲೆಯಂ ಯೋಜಿಸಿದಳ್ (ಪುಷ್ಪಪು. ೯-೬೬). ೪. ನಿಯಮಿಸು ; ನೇಮಕಮಾಡು ; ನಿಯೋಜಿಸು: ಅಂ ಪರೀಕ್ಷಿಸಿ ನಿನ್ನಂ ... ಈ ರಾಜ್ಯಭಾರಕ್ಕೆ ಯೋಜಿಸಿದೆಂ (ಕಾದಂಬ. ೩೦೮); ಕನಕ ಮೊದಲಹ ಪಲವು ದೇವತೆಯರನು . . . ಹಲವು ಸೇವೆಗೆ ಯೋಜಿಸಲು ನೆರೆತಂದುದೋರಂತೆ (ಶಾಲ್ಯಶಾ. ೩೨-೦೩). ೫. ಉಪಯೋಗಿಸು ; ಬಳಸು : ಕ್ರಮದಿಂ ಷಾಡ್ಗುಣ್ಯಮಂ ಯೋಜಿಸುವುದೆ ಸುನಯಂ ಪ್ರಾಪ್ತಕಾಲಾನುರೂಪಂ (ಕಂಶತಂ. ೨೦೯-೯); ಪಡುಗೇರಿಯ ಮನೆಯುಮಂ ಧರ್ಮದೊಳ್ ಯೋಜಿಸುವಂ × × × (ಸೌಇಇ. XI-i. ೭೩-೩೬; 1040). ೬. ತೊಡಗಿಸು ; ಪ್ರವೃತ್ತಗೊಳಿಸು : ಜನನೀಸ್ತನ್ಯಾಮೃತಸೇವನೆ ಮಾಣ್ದು ಬಟ್ಟಕ್ಕಮುಖಿಳವಿದ್ಯಾಮೃತಸೇವನೆಯೊಳೆ ಯೋಜಿಪುದುಚಿತಂ ತನಯನಂ (ಕಂಪ್ರಭು. ೯-೩). ೭. ಸಮ್ಮತಿಸು ; ಒಪ್ಪಿಗೆ ಕೊಡು ; ಅನುಮತಿಸು : "ಯೋಜಿಸು_ಅನುಮತೇ"(ಶಮಣಿ).

[ಯೋಜನ + — ಇಸು[1]]

**ಯೋತ್ರ** (ನಾ). = ಯೋಕ್ತ್ರ : "ಯೋತ್ರಮುದಾಬಂಧ ಯೋಕ್ತ್ರ ರಶ್ಮಿಸಮಾಖ್ಯಂ" (ಶಬ್ದಕೋ. ೬೩-೬೯). [ಸಂ.]

**ಯೋದ್ಧ** (ನಾ). ಯುದ್ಧ ಮಾಡುವವನು ; ಯೋಧ ; ಸೈನಿಕ : ನಿಂತಿಹರು ಕಾಣಲ್ಲಿ ದೀರ್ಘಾಸಿ ಕಟಬದ್ಧಸನ್ನದ್ಧ ಯೋದ್ಧರುಂ (ಶ್ರೀರಾಮಪಾ. ೬೦-೦೬೦).

[< ಸಂ. ಯೋದ್ಧೃ]

**ಯೋದ್ಧೃ** (ನಾ). = ಯೋದ್ಧ. [ಸಂ.]

**ಯೋಧ** (ನಾ). = ಯೋದ್ಧ : ಅತನ ಮುಂಗೆಯ್ ಧಾತ್ರಿಪಾಪನನ ಯೋಧನಿಂ ಚಕ್ರಪಾಣಿಯಿಂ ಖಂಡಿಸೆಪಟ್ಟುದಾಗಿ ನೆಲದೊಳ್ ಬಿರ್ದುದಂ ಪರ್ದು ಕಂಡು (ವಡ್ಡಾರಾ. ೧೯೮-೯); ಯುದ್ಧವೊಂದೇ ಯೋಧನಾದ ಕ್ಷತ್ರಿಯನಿಗೆ ವಿಧ್ಯುಕ್ತಧರ್ಮವೂ ಕರ್ಮವೂ ಆಗಲಿ (ಭಾರತ. ೧೦೭). [ಸಂ.]

**ಯೋಧನ** (ನಾ). ಕಾಳಗ ; ಸಮರ ; ಯುದ್ಧ : ವಾಸಿಗೆಟ್ಟ ಯೋಧನದೆ ದೈತ್ಯರೊಡನೆ . . . ಗಾಂಧರ್ವಸಮುದಾಯಮೇ ಸುರುಳಿತೆನೆ ಲೆಕ್ಕಿಸಲ್ವೇಳ್ಕು (ವೆಂಕಾರಾ. ೬-೦೭-೪೦). [ಸಂ.]

**ಯೋನ** (ನಾ). ಯವನ ; ಗ್ರೀಸ್‌ದೇಶದವನು : ನಾವೆಗಳನು ಮೂಕಿನೂಕಿ, ಯೋನರಿಂದ ಮುರಿದರು (ಕಾರಸಿ. ೨೧-೬). [ < ಸಂ. ಯವನ ]

**ಯೋನಿ** (ನಾ). ೧. ಸ್ತ್ರೀಯ ಜನನಾಂಗ ; ಭಗ : "ಭಗಃ, ಯೋನಿಃ, ಉಪಸ್ಥಃ, ವರಾಂಗಂ, ಸ್ಮರಮಂದಿರಂ—ಈ ೫ ಉಪಸ್ಥಂ" (ಹಲಾಯು. ೮೫-೩೬೦) ; ರುದ್ರನಾವ ಯೋನಿಯಲ್ಲಿ ಬಂದನೆಂದು ನೀವು ಹೇಳರೋ (ಬಸವ. ೪೫) ; ಬಂದ ಯೋನಿಯೆಂಬುದನರಿಯದೆ ಉಂಡ ಮೊಲೆಯೆಂಬುದನರಿಯದೆ ಕಾಮವಿಕಾರ ತಲೆಗೇರಿ ವಿಷಯಾತುರನಾಗಿ . . . ಆತ್ಮ ಕೆಟ್ಟು ನಷ್ಟವಾಗಿ ಹೋಯಿತು (ಅಖಂಡೇ. ೦೦-೭). ೨. ಗರ್ಭಕೋಶ ; ಗರ್ಭಾಶಯ : ನೆಲಸದ ಯೋನಿ ಮುಟ್ಟದೆಡೆ ಕಾಣದ ಕಾಲಪುತತ್ವದೊಳ್ ಮನಂ ನಿಲಿಸದ ಭಾವಮುಟ್ಟಿಸದ ಪುದ್ಗಳಮಿಲ್ಲೆನೆ ಕರ್ಮಬಂಧದಿಂ . . . ಭವಾಂಬುನಿಧಿಯೊಳ್ ತಿರಿತಪ್ಪವು ಜೀವರಾಶಿಗಳ್ (ಸುಕುಮಾ. ೫-೩೨). ೩. ಜನ್ಮ ; ಹುಟ್ಟು : ಹಿಂದೆ ನಾನಾ ಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ (ಬಸವ. ೦೭) ; ಜೀವದೊಳಗುಂಟೆಂದರೆ ನಾನಾ ಯೋನಿಯುಪನಲ್ಲ (ಪೋಳ್ವಭಾ. ೩-೮) ; ಹುಟ್ಟಿದ ಯೋನಿಗಳಿಲ್ಲ ಮೆಟ್ಟಿದ ಭೂಮಿಗಳಿಲ್ಲ (ಶಿವಶ. ೦೬೨-೦). ೪. ಜನ್ಮಸ್ಥಾನ ; ಉತ್ಪತ್ತಿಸ್ಥಾನ. ೫. ವಂಶ ; ಜಾತಿ. ೬. [ವೇದಾಂತ] ಮೂಲಕಾರಣ; ಹೇತು : ಋಗ್ವೇದವೇ ಮುಂತಾದ ಮಹಾ ಶಾಸ್ತ್ರಕ್ಕೆ 'ಯೋನಿ' ಅಂದರೆ ಕಾರಣವಾಗಿರುವದು (ಬೃಹ್ಮಭಾ. ೨೭). ೭. [ಜೈನ] ಜನ್ಮ ಅಥವಾ ಉತ್ಪತ್ತಿಗೆ ಆಧಾರವಾದುದು: ಜೀವಸಮಾಸದಲ್ಲಿ . . . (೧) ಸ್ಥಾನ (ಏಕೇಂದ್ರಿಯ ಮೊದಲಾದ ಜಾತಿಭೇದ), (೨) ಯೋನಿ (ಕಂದ, ಮೂಲ, ತತ್ತಿ, ಗರ್ಭ, ರಸ, ಬೆವರು ಇತ್ಯಾದಿ ಉತ್ಪತ್ತಿಯ ಆಧಾರಗಳು), (೩) ದೇಹಾವಗಾಹನ (ಶರೀರದ ಆಕಾರ), (೪) ಕುಲ . . . ಈ ಕಾರಣಗಳಿಂದಲೂ ಉತ್ತರೋತ್ತರಭಾಗಗಳು ಅಸಂಖ್ಯಾತವಾಗಿವೆ (ಕೈವಶ. ೩೦೦). [ಸಂ.]

**ಯೋನಿಜ** (ನಾ). ಗರ್ಭಕೋಶದಿಂದ ಹುಟ್ಟುವ ಜೀವ : ಇವರೆಲ್ಲರು ಯೋನಿಜರೆಂಬುದ ತ್ರೈಜಗ ಬಲ್ಲುದು (ಬಸವ. ೫೪೭) ; ಜನಿಸದಯೋನಿಜಂಗಂ ಪಿರಿದು ಜನನಂಗಳಲಿ ಜನಿಸುವ ಯೋನಿಜರು ಸರಿಯೇ (ಬಸವ. ೫೪-೨೭) ; ಶರೀರವು ಯೋನಿಜ ಮತ್ತು ಅಯೋನಿಜ ಎಂದು ಎರಡು ವಿಧ (ಭಾತತ್ತ್ವ. ೨೯೦). [ಸಂ.]

**ಯೋನಿದೋಷ** (ನಾ). ಸ್ತ್ರೀಯ ಜನನಾಂಗಕ್ಕೆ ಸಂಬಂಧಿಸಿದ ವ್ಯಾಧಿ : ನೈದಿಲಗೆಡ್ಡೆ, ಅರಿವಳ, ಹಿಪ್ಪಲಿ ಇವ ಸಣ್ಣನಾಗಿ ಅರೆದು ಯೋನಿಯೊಳೊತ್ತೆ ಯೋನಿದೋಷ ಮಾಣ್ಗುಂ (ವೈದ್ಯಶಿ. ೮೨). [ಸಂ.]

**ಯೋನಿನೆತ್ತರು** (ನಾ). ಯೋನಿಯಿಂದ ಅತಿಯಾಗಿ ರಕ್ತಸ್ರಾವವಾಗುವ ಒಂದು ಬಗೆಯ ರೋಗ : ಯೋನಿನೆತ್ತರಿಗೆ :— ಮೊಸರು, ಹಾಲು, ಎಳ್ಳೆಣ್ಣೆ, ಹಾಲು ಈ ಎರಡನ್ನೂ ಸಮಮಂ × × × ಹಾಕಿ ಓಗೆ ಮೂಱುದಿನ ಕುಡಿಸಿದರೆ ನೆತ್ತರು ನಿಲ್ಲುವುದು (ವೈದ್ಯಶಿ. ೦೭೪).
[ಯೋನಿ + ನೆತ್ತರು (<ನೆತ್ತರ್)]

**ಯೋನಿಮುದ್ರೆ** (ನಾ). ಶಕ್ತಿಪೂಜೆಯ ಸಂದರ್ಭದಲ್ಲಿ ಮಾಡುವ ವಿವಿಧ ಕರನ್ಯಾಸಗಳಲ್ಲಿ ಒಂದು.– ಒಂದು ಬಗೆಯ ಹಸ್ತ ಮುದ್ರೆ : ಅಸ್ತ್ರಮುದ್ರೆ, ಚಕ್ರಮುದ್ರೆ . . . ಯೋನಿಮುದ್ರೆ . . . ಸಂಹಾರಮುದ್ರೆಯೆಂಬ ಸಕಲ ಮುದ್ರಾಲಕ್ಷಣವನರಿದಾಯಾ ಕ್ರಿಯೆಗಳಲ್ಲಿ ಪ್ರಯೋಗಿಸಿ (ಏಕೋಶ. ೪೩). [ಸಂ. ಯೋನಿಮುದ್ರಾ]

**ಯೋನಿರಕ್ತ** (ನಾ). = ಯೋನಿನೆತ್ತರು : ಎಮ್ಮೆಯ ಹಾಲನು ಚೆನ್ನಾಗಿ ಕಾಸಿ ಸಕ್ಕರೆ ಜೇನುತುಪ್ಪವೆರಸಿ ಕುಡಿಯೆ ಯೋನಿರಕ್ತಂ ಪರಿಹರದಪುದು (ಸಕವ್ಯ. ೦೯೫). [ಸಂ.]

**ಯೋನಿಶೂಲೆ** (ನಾ). ಯೋನಿಯಲ್ಲಿ ಉಂಟಾಗುವ ನೋವು : ನೋವುನಾಶನ ಇಂಗು ೧ ತೂಕ ಅರೆದು ಆಡಿನ ಹಾಲಲ್ಲಿ ಕಲಸಿ ೨೨ ದಿನ ಕೊಳ್ಳಲು ಯೋನಿಶೂಲೆ ಗುಣ (ವೈದ್ಯಶಿ. ೦೦೪) ; ನೇರಳೆಚಕ್ಕೆನಾರು, ಬೋರೆಚಕ್ಕೆನಾರು . . . ಬೆಣ್ಣೆ ಮೊಸರನ್ನು ಹಾಕಿ ಕಲಸಿ ಕುಡಿಯಲು ಯೋನಿರಕ್ತ, ಯೋನಿಶೂಲೆಗಳು ನಿಲ್ಲುವುವು (ಸಕವ್ಯ. ೪೩೦). [ಸಂ. ಯೋನಿಶೂಲ]

**ಯೋಷಿಜ್ಜನ** (ನಾ). ಹೆಂಗಸರು; ಸ್ತ್ರೀವರ್ಗ : ದ್ವೇಷಂ ವಿರಹಿಗಳೊಳ್ ಪರಿತೋಷಂ ಮಧುಮತದೊಳಗೆ ಬಂದರ್ ಕೆಲರುಂ ಯೋಷಿಜ್ಜನಂ (ಶಾಂತಿಪು. ೮-೨೩) ; ಜಗಜ್ಜನೈಕವಿಭುವಂ ಯೋಷಿಜ್ಜನಂ ಪಜ್ಜನಂಬುಗಿಸಿತ್ತು (ಜಗು. ೦೦-೧೦೦). [ಸಂ.]

**ಯೋಷಿತೆ** (ನಾ). ೧. ಹೆಂಗಸು ; ಸ್ತ್ರೀ : ನೆರೆದ ಯೋಷಿತೆಯರತಿ ಯೋಚಿಸಿದರು (ತಂಕವ. ೦೦-೧೭). ೨. ಹೆಂಡತಿ ; ಪತ್ನಿ. 'ಗುರು ಯೋಷಿತೆ' ಪರಾ. [ ಸಂ. ಯೋಷಿತಾ ]

**ಯೋಷಿತ್ತು** (ನಾ). = ಯೋಷಿತೆ ೧ : "ವನಿತೆ ವಧು ನಾರಿ ಸೀಮಂತಿನಿ ಯೋಷಿದ್ಭಾಮೆ ಕೇವಳಂ ಸ್ತ್ರೀನಾಮಂ" (ವಸ್ತುಕೋ. ೫೨-೧).
[ ಸಂ. ಯೋಷಿತ್ ]

**ಯೋಷೆ** (ನಾ). = ಯೋಷಿತೆ ೧ : ನಯವಿನಯಮೊಯ್ಯಾರ ಸಂಸ್ಕೃತಿಗಳೊಂದಾಗಿ ಮೆಯ್ವೆತ್ತವೋಲ್ ಬಂದಳಾ ವಿಯಚ್ಚರಯೋಷೆ (ಶ್ರೀರಾಮಾ. ೨೦೫-೩೦೨). [ ಸಂ. ಯೋಷಾ ]

**ಯೌಕ್ತಿಕ** (ಗು). ೧. ಯುಕ್ತಿಯಿಂದ ಕೂಡಿದ ; ತರ್ಕಸಮ್ಮತವಾದ. ೨. ಯೋಗ್ಯವಾದ ; ಅರ್ಹವಾದ. (ನಾ). ೩. ಶತ್ರುಗಳನ್ನು ಭೇದಿಸುವ ಐದುಸಾಧನಗಳಲ್ಲಿ ಒಂದು ; ಯುಕ್ತಿ ; ಉಪಾಯ; ತಂತ್ರ : ಮಾಂತ್ರಿಕ ದೈವಿಕ ನೈಸರ್ಗಿಕ ಯೌಕ್ತಿಕ ವಾಸ್ತವಿಕವೆಂಬ ಪಂಚಭೇದಸಾಧನಂಗಳಿಂದಲುಂ ಪರಭಯಂಕರ ವೇಷಭಾಷಾಕಾರಂಗಳುಳ್ಳ ಘನದೇವರ್ಕಳಿರ್ಕುಂ (ಏಕೋಶ. ೨೬೩). ೪. ತರ್ಕವನ್ನೇ ಅವಲಂಬಿಸುವವನು; ತಾರ್ಕಿಕ : ತಾರ್ಕಿಕರಿಗೆ ಯೌಕ್ತಿಕರೆಂದು ವ್ಯವಹಾರವಿರುವುದು (ಹಿಂದಶಾ. ೦೦೪). ೫. ಅರಸನ ಬಳಿ ಇರುವ ಸರ್ಮಸಚಿವ. [ಸಂ.]

**ಯೌಗಿಕ** (ಗು). ೧. ಉಪಯುಕ್ತವಾದ ; ಪ್ರಯೋಜನವುಳ್ಳ. ೨. ಯೋಗ್ಯವಾದ ; ತಕ್ಕ. ೩. ರೂಢವಾದ ; ಸಾಂಪ್ರದಾಯಿಕವಾದ. ೪. ಯೋಗಕ್ಕೆ ಸಂಬಂಧಿಸಿದ. (ನಾ). ೫. [ವ್ಯಾಕ] ಅವಯವಾರ್ಥವನ್ನುಳ್ಳ ಪದ ; ವ್ಯುತ್ಪತ್ತಿಯನ್ನು ಹೊಂದಿಕೊಳ್ಳುವ ಪದ. ೬. ರಾಸಾಯನಿಕ ಮಿಶ್ರಣ : (೬). [ಸಂ.]

**ಯೌಗಿಕಿ** (ನಾ). [ಕಾವ್ಯಮೀ] ಶಬ್ದಗುಣಗಳಲ್ಲಿ ಒಂದು; ಅವಯವಾರ್ಥವನ್ನುಳ್ಳ ಪದ : ಅಗ್ನಿಪುರಾಣದಲ್ಲಿ . . . ಶ್ಲೇಷ, ಲಾಲಿತ್ಯ, ಗಾಂಭೀರ್ಯ, ಸೌಕುಮಾರ್ಯ, ಉದಾರತಾ, ರೂಢಿ, ಯೌಗಿಕೀ – ಇವು ಏಳೂ 'ಶಬ್ದಗುಣ'ಗಳೆಂದೂ ಮಾಧುರ್ಯ . . . ಸಾಮಯಿಕತಾ ಇವು ಆರೂ 'ಅರ್ಥಗುಣ'ಗಳೆಂದೂ . . . ಹೇಳಿದೆ (ಕೃಬಿಶ. ೨೩೨ ೮೩೬).
[ ಸಂ. ಯೌಗಿಕೀ ]

**ಯೌತಕ** (ನಾ). ಮಗಳು ಮತ್ತು ಅಳಿಯನಿಗೆ ಮದುವೆಯ ಕಾಲದಲ್ಲಿ ಕೊಡುವ ಬಳುವಳಿ.– ಉಡುಗೊರೆ : "ಯೌತಕಂ . . . ಮದುವೆ ಮುಂತಾದುವುಗಳಲ್ಲಿ ಮಗಳಿಗೂ ಅಳಿಯನಿಗೂ ಕೊಡತಕ್ಕ ಬಹುಮಾನಕ್ಕೆ ಹೆಸರು" (ಶಿಲ್ಪಾಂಶ. ೨೪೩). [ಸಂ.]

**ಯೌತವ** (ನಾ). ಒಂದು ಅಳತೆ – ಮಾನ. [ಸಂ.]

**ಯೌವತ** (ನಾ). ೧. ತರುಣಿಯರ ಗುಂಪು ; ಯುವತಿಯರ ಸಮೂಹ : "ಯೌವತಮದು ಯುವತಿಜನರ ಸಂಘಾತಂ" (ನಸ್ತು.ಕೋ. ೧೦೩-೩೨); ಇದು ಪಿರಿದುಂ ವಸಂತಸಖಿ ಯೌವತರತ್ನನಿಧಾನವಂತದಲ್ಲಿದು . . . ರತಿನಾಥಕಲ್ಪಲತಿಕಾಪ್ರಕರೈಕಕೃತಾಳವಾಳಂ (ಕಂದ್ರಕೃ. ೬-೦೨೭). ೨. ಯುವತಿಯ ಗುಣಧರ್ಮ; ಯುವತಿಯಾಗಿರುವಿಕೆ. [ಸಂ.]

**ಯೌವನ** (ನಾ). ೧. ಹರಯ ; ತಾರುಣ್ಯ ; ಆ ಕನ್ನೆಗೆ ಯೌವನಂ ನೆಱೆದಂದು ಮದುವೆಯಾದೊಡೆ (ಶಬ್ದಾ.ರಾ. ೦೩-೨೭); ಯೌವನವನ ವಸಂತಲಕ್ಷ್ಮಿ ಸೌಭಾಗ್ಯನಿಧಾನದೀಪವರ್ತ್ತಿ . . . ಶ್ರೀಮತ್ತ್ರಿಭುವನರಸಿ ಕಂಚಲಮಹಾದೇವಿಯರ್ (ಶಾಇ.XX. ೯೬-೦೩; 1072); ಭವದ ಬಳಸುವ ತನುವಿನಲಿ ಕೌಮಾರ ಯೌವನ ವಾರ್ಧಿಕಂಗಳಲಿ ತನು ವಿಕಾರಿಸುವದು (ಕುವ್ಯಾ.ಆ. ೩-೯೯); ಚಿಂತೆಯೇ ಮುಪ್ಪು,ಸಂತೋಷವೇ ಯೌವನ (ಗಾದೆ). ೨. ತಾರುಣ್ಯವನ್ನು ಉಳ್ಳವನು; ಯೌವನವನ್ನು ಹೊಂದಿದವನು: ಸುಕುಮಾರಸ್ವಾಮಿಯುಂ ಯೌವನನಾಗಿ ಅತ್ಯಂತ ರೂಪಲಾವಣ್ಯ ಸೌಭಾಗ್ಯಕಾಂತಿಯಿಂದಂ ಕೂಡಿದೊಂ (ವಡ್ಡಾ.ರಾ. ೨೩-೦೦); ಬಳಿಕ ಯೌವನ ನಾಗಿ ಪರಮಂಡಲಕೆ ನಡೆದನು (ಕುವ್ಯಾ.ದ್ರೋ. ೬-೩೦). [ಸಂ.]

**ಯೌವನಗಾರ್ತಿ** (ನಾ). ಜವ್ವನೆ ; ತರುಣಿ ; ಯುವತಿ : ಅತ್ಯಂತ ರೂಪ ಯೌವನಗಾರ್ತಿಯರು . . . ಸತ್ಯಭಾಮೆಯನು ಸಾರಿದರು (ಪೋಹಕ. ೦೯-೩೨). [ಯೌವನ + — ಕಾಱ + — ತಿ$_1$ (< — ಇತ್ತಿ)]

**ಯೌವನಮದ** (ನಾ). ಹರಯದ ಸೊಕ್ಕು : ಯೌವನಮದದಿಂದಲೂ ಅಸಹನೆಯಿಂದಲೂ ಮೌಢ್ಯದಿಂದಲೂ ತುಂಬಿರುವ ಅವರಿಗೆ ವಿವೇಕವನ್ನು ಹೇಳಿದರೆ ಅದು ಅವರ ಮನಸ್ಸಿಗೆ ಇಳಿಯುವುದಿಲ್ಲ. (ವಕಥಾ. ೩೫೦). [ಸಂ.]

**ಯೌವನಸ್ಥ** (ನಾ). ಯುವಕ ; ತರುಣ : ಯೌವನಸ್ಥನಾದ ಮಾಧವನು . . . ತಂದೆಗೆ ಬಲವಾದ ಎರಡು ಪೆಟ್ಟುಗಳನ್ನು ಕೊಟ್ಟನು (ಶಿಕಶಂ. X. ೨೩). [ಸಂ.]

**ಯೌವನಾವಸ್ಥೆ** (ನಾ). ತಾರುಣ್ಯ ; ಯುವಾವಸ್ಥೆ : (?). [ಸಂ. ಯೌವನಾವಸ್ಥಾ]

**ಯೌವನೆ** (ನಾ). ಯುವತಿ : ತರುಣಿ : ವಯಸವಿಭೇದದಿಂ ಬಾಲೆ ಯೌವನೆ ಪ್ರೌಢೆ ಲೌಲ್ಯೆಯೆಂದಿಂತು ಧರಿತ್ರಿಯೊಳಪ್ಪರ್ ನಾಲ್ವರ್ಕಾಂತೆ ಯರ್ (ಮದತಿ. ೬-೧). [ಯೌವನ + — ಎ$_2$]

**ಯೌವನೋದಯ** (ನಾ). ಹರಯದ ಆರಂಭ ; ತಾರುಣ್ಯದ ಪ್ರಾರಂಭ : ವಿಜೃಂಭಿಸಿದುದು ಯೌವ[ಶಾಶಾಂ. ಯುವ್ವ]ನೋದಯವಿಲಾಸ ಮನುಕ್ರಮದಿಂ ಮದಂಗದೊಳ್ (ಕಾದಂಪೂ. ೬೦೯) ; ಆ ವಧು ಯೌವನೋದಯ ರಸಾಯನಸಿದ್ಧಿ ಮನೋವಿಮೋಹ ಸಂಭಾವನವಿದ್ಯೆ . . . ಎನಿಪ್ಪಳೆದೇಂ ಸುರೂಪೆಯೋ (ಕಂಪ್ರಪು. ೩-೨೬). [ಸಂ.]

**ಯೌವರಾಜ್ಯ** (ನಾ). ೧. ಯುವರಾಜನ ಪದವಿ, – ಅಧಿಕಾರ : ಮೊದಲೊಳ್ ತಾಂ ಯೌವರಾಜ್ಯಂ ಬಱಿಕೆ ನಡುವೆ ಸಂದಾಧಿರಾಜ್ಯಂ ಬಱಿಕ್ಕಂ ತುದಿಯೊಳ್ ಕೈವಲ್ಯಸೌಖ್ಯಪ್ರದಮೆನಿಪ ತಪೋರಾಜ್ಯಮೆಂದಿಂತು ಮಿಾಯಿಂದದೆ ಸೇವ್ಯಂಗಳ್ ಮದೀಯಾನ್ವಯನೃಪರ್ಗೆ (ಕಂದ್ರಕೃ. ೨-೩೦). ೨. [ಜೈನ] ಐವತ್ತು ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು : ಯೌವರಾಜ್ಯ . . . ನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೦೩-೦೩ ವ). [ಸಂ.]

**ಯೌವರಾಜ್ಯಪದ** (ನಾ). ಯುವರಾಜನ ಪದವಿ, — ಅಧಿಕಾರ : ಅನಂತವೀರ್ಯನಪಾರಬಲಂ ಯೌವರಾಜ್ಯಪದದೊಳ್ ನಿಂದು (ಶಾಂತಿಪು. ೨-೧). [ಸಂ.]

**ಯೌವರಾಜ್ಯಾಭಿಷೇಕ** (ನಾ). ಯುವರಾಜಪದವಿಯನ್ನು ಕೊಡುವಾಗ ಮಾಡುವ ಅಭಿಷೇಕ : ಶುಭದಿನದೊಳಿಳಾಧೀಶ್ವರಂ ಮಾಡೆ ತೂರ್ಯ ಸ್ವರದೊಳ್ ತಳ್ತೊಪ್ಪಿದುದೇಂ ಶೋಭಿಸಿದುದೊ ಪಿರಿದುಂ ಯೌವರಾಜ್ಯಾಭಿ ಷೇಕಂ (ಕಂದ್ರಕೃ. ೨-೬೪) ; ಕೃಪರವಿಷ್ಣುವಿಗೇ ಯೌವರಾಜ್ಯಾಭಿಷೇಕವನ್ನು ಮಾಡಿದರಾಯಿತು (ಶಾಂಕಶಾ. ೨೯). [ಸಂ.]

*

# ರ

**ರ₁** (ನಾ). ಕನ್ನಡವರ್ಣಮಾಲೆಯ ನಲವತ್ತೇಳನೆಯ ಅಕ್ಷರ : ರಕಾರ ; ರೇಫ : ಅವರ್ಗೀಯ : ಯ ರ ಲ ವ ಶ ಷ ಸ ಹ ಳ ಱ ೞ (ಶಬ್ದ. ೩).

**ರ₂** (ನಾ). ೧. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ :"ಖಕರ ಮದೆರಡಕ್ಕು" (ಷುಂಗಣಿ. ೦೦೪-೦೦). ೨. [ಛಂದ] ಆದಿ ಮತ್ತು ಅಂತ್ಯಗಳಲ್ಲಿ ಎರಡು ಗುರುಗಳೂ ಮಧ್ಯೆ ಒಂದು ಲಘುವೂ ಉಳ್ಳ ಒಂದು ಗಣದ ಹೆಸರು ; ರಗಣ (–⏑–) : ಮಲ್ಲಿಕಾಯುತ ಮಾಲೆಯಪ್ಪುದು ರಂ ಸಜಂಜಭರಂ ಬರಲ್ (ಛಂದ. ೯೬). [ಸಂ.]

**ರಂಕ** (ಗು). ೧. ಆತ್ಯಾಸೆಯಿಂದ ಕೂಡಿದ ; ಲೋಭಿಯಾದ. (ನಾ). ೨. ನಿರ್ಗತಿಕ ; ಭಿಕ್ಷುಕ ; ತಿರುಕ : ಅಂಕೆಯಿಲ್ಲದ ರಾಜ್ಯವನು ನಿಶ್ಶಂಕೆಯಿಂದಾಳುವ ನೃಪಾಲಗೆ ಮಂಕುಹಿಡಿಯಲು ತನ್ನನೇ ತಾ ರಂಕನೆಂಬಂತೆ (ಅದ್ಭುತ. ೩-೦೬) ; ರಾಜ ರಂಕನಾಗುವುದು ಕಾಲಗತಿಯ ಪರಿಣಾಮ (ಹಂಪ. ೦೯೩) ; ರಾಜನಿಂದ ರಂಕನವರೆಗೂ ಅವನಿಗೆಲ್ಲರೂ ಒಂದೇ (ಪಾರಿಗೆ. ೩೯). [ಸಂ.]

**ರಂಕರಾಟಣ** (ನಾ). (ಜಾತ್ರೆ, ಪರಿಸೆ ಮೊದಲಾದುವುಗಳಲ್ಲಿ) ಮಕ್ಕಳನ್ನು ಕೂರಿಸಿ ತಿರುಗಿಸುವ ಗಿರಗಿಟ್ಲೆ : "ಮರದ ಕುದುರೆಗಳು. ತೊಟ್ಟಿಲುಗಳು ಮೊ. ಗಳುಳ್ಳ ತಿರುಗುಯಂತ್ರ ; ರಂಕರಾಟಣ" (Merry-Go-round. ೨೦೪೬). [←ತೆಲು. ರಂಕುಲರಾಟ್ನ]

**ರಂಕು** (ನಾ). ಮೈಮೇಲೆ ಕಪ್ಪುಪುಚ್ಚೆಗಳಿರುವ ಒಂದು ಬಗೆಯ ಜಿಂಕೆ : "ಆ ರಂಕು ನ್ಯಂಕುವೆನೆ ಮರೆಗೆ ಪೆಸರಕ್ಕು" (ಬ:ಂಗಣಿ. ೯೬-೦೦) ; ಮೆಲ್ಲನಿಬಿದತ್ತು ವಿಯತ್ತಳಮಧ್ಯಭಾಗದಿಂ ಪರಿಣತ ರಂಕುರೋಮತತಿಪಾಂಡುರಮೆಂದು ಶಶಾಂಕಮಂಡಲಂ (ಕಾದಂಬ. ೦೩೬). [ಸಂ.]

**ರಂಕೆ** 'ಬಿನೌಂಕು' ನೋ.

**ರಂಗ** (ನಾ). ೧. ಬಣ್ಣ : ವರ್ಣ. ೨. ಬಣ್ಣದ ಪುಡಿ : ಜೀನಸಗಳು . . . ೬೫, ರಂಗ, ಸರ್ವಜಾತಿಯದು (ಮುಂಬ್ರಾ. ೦೩೦). ೩. ಬಣ್ಣದ ಪುಡಿಯಿಂದ ರಚಿಸುವ ಹಸೆ, ಚಿತ್ರ ಮೊದಲಾದುವು : ನಡುಬೀದಿಯೊಳಂ ಪಸುಗಳ್ಪಡುವೆಡೆಯೊಳಮೂರ ಪಿರಿಯ ಚೌವಟ್ಟದೊಳಂ ತೊಡೆದು ಬರೆದಲ್ಲಿ ರಂಗಮಸುಡಿಗೆಗಳಂ ಸುರಿದು ಸೂಸಿ ಕಡುವಮೂರ್ಧರ್ (ಸವು. ೯-೦೩೦). ೪. ನಾಟಕ, ಮೇಳ ಮೊದಲಾದುವುಗಳನ್ನು ಆಡುವ ಸ್ಥಳ : ವೇದಿಕೆ : "ಆಡುವ ಠಾವು ರಂಗಮೆಂಬುದು" (ಹಲಾಯು. ೦೬-೯೬) ; ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ (ಆದಿಪು. ೬-೦೨೬) ; ನನಗೆ ನನ್ನೋರಗೆಯವರಿಗೆ . . . ಉಡಿಗೆ ತೊಡಿಗೆಯನಣಿಮಾಡಿ ರಂಗಕೆ ಬಿಟ್ಟರು ಬಣ್ಣವ ಬಳಸಿ (ಸಂತಾಕ. ೦೦-೯೩). 'ರಂಗಪೂಜೆ' ಪರಾ. ೫. ಸಭೆ ಸೇರುವ ಸ್ಥಳ : ಸಭಾಮಂದಿರ. ೬. ನಾಟಕ ಮೊದಲಾದುವನ್ನು ನೋಡಲು ಸೇರಿರುವ ಜನಸಮೂಹ : ಪ್ರೇಕ್ಷಕವರ್ಗ. ೭. ಯುದ್ಧಭೂಮಿ : ಕಳ : ರೋಷದಿಂ ಘೀಂಕರಿಸಿ ರಂಗಮಂ ಪೊಕ್ಕು ಮದದ್ವಿಪಂ ಬೆರ್ಚಿ ನಿಂದುದು ಘಕ್ಕನೆಯ (ಶ್ರೀರಾಮ. ೯೩೬ ೩೫). 'ರಣರಂಗ' ಪರಾ. ೮. ನೃತ್ಯ ; ನರ್ತನ. ೯. ಹಿಗ್ಗು ; ಸಂತೋಷ. ೧೦. ತವರ : " ತ್ರಪು. ಪಿಚ್ಚಟಂ, ರಂಗಂ. ಮಗಂ — ೪ ತವರದ ಹೆಸರುಗಳು " (ಸಿದ್ಧಾಂ. ೩೦೬). ೧೧. ಕೃಷ್ಣ : P ಈ ಅರ್ಥವು ಸಂಸ್ಕೃತ ಕೋಶಗಳಲ್ಲಿಲ್ಲ : ರಂಗ ಬಾರೋ ಕೃಷ್ಣ ಬಾರೋ ಮಂಗಳಾತ್ಮಕ ಮನಸಿಜನಯ್ಯನೆ . . . ಬಾರೋ (ಪುರಂದ. ೩-೭೬ ಪಲ್ಲವಿ) ; ರಂಗ ನಿನ್ನಯ ರಂಗುವಡೆದ ಜಂಘೆಯ ಜೆಲ್ವ ಮುಂಗುಡಿವರಿದು ಮುದದೊಳು ಹಿಂಗದೆ . . . ಹೃದಯಾಂಗಣದೊಳಿರುತಿರ್ಕೆ (ಕಕಾಂ. ೦-೩). ೧೨. ಹೊಳಪು ; ಪ್ರಕಾಶ : 'ಪಿಂಡರಂಗ' ಪರಾ.

ರಂಗಕುಣಿ = ನರ್ತನ ಮಾಡು ; ನಾಟ್ಯವಾಡು : ಅವರೂ . . . ತಮಟೇ ಸದ್ದಿಗೆ ಸರಿಯಾಗಿ ಪಾದವಿನ್ಯಾಸ ಮಾಡುತ್ತಾ ರಂಗಕುಣಿಯುವರು (ಹುಟ್ಟಿ. ೨೧). **ರಂಗದ ಕುಣಿತ** = ಸುಗ್ಗಿಯಲ್ಲಿ ನಡೆಯುವ ಒಂದು ಬಗೆಯ ಕುಣಿತ : 'ರಂಗದ ಕುಣಿತ' ಮಂಡ್ಯ ಜಿಲ್ಲೆಯಲ್ಲಿ ವಿಶೇಷವಾಗಿಯೂ . . . ಕಂಡುಬರುತ್ತದೆ (ಕಜಕ. ೦೩೨). [ಸಂ.]

**ರಂಗಂಬೊಗು** (ಕ್ರಿ). ನೃತ್ಯ, ನಾಟಕ ಮೊದಲಾದುವುಗಳನ್ನು ಪ್ರದರ್ಶಿಸಲು ರಂಗಸ್ಥಳಕ್ಕೆ ಬರು : ಮಂಗಲಾಲಂಕಾರಾಲಂಕೃತನಾಗಿ ನಾಟ್ಯವಿದ್ಯಾಚಾರ್ಯನಂ ಪೋಲ್ತು ರಂಗಂಬೊಕ್ಕು ಲೋಕಾಕಾರಮನಭಿನಯಿಪಾಕಾರಂ ನೆಗಟಿ[3] (ಆದಿಪು. ೬-೦೦೩ ವ) ; ನಿನ್ನ ರಂಗಂಬೊಕ್ಕು ಚಿತ್ರವೆನೆ ನರ್ತಿಸಿದ ಕನ್ನೆ ನಿನ್ನಯ ಕುವರಿಯೇ (ಶಾಂತಪು. ೯-೭೧).

[ರಂಗ + ಪೊಗು]

**ರಂಗಕಾಟಿ** 'ರಂಗಗಾಟಿ' ನೋ.

**ರಂಗಗಾಜಿ**, ರಂಗಕಾಟಿ (ನಾ). ಬಟ್ಟೆಗಳನ್ನು ಶುಭ್ರಮಾಡುವವನು : ಅಗಸ ; ರಜಕ : ಬಲ್ಲಿದನು ನೀ ರಂಗಗಾಜಿರಿಗೆಲ್ಲರಿಗೆ ಲೇಸಾಯಿತು ಕೊಡು ನಿನಗುಳ್ಳ ವಸನದಲುತ್ತಮವನೆಮಗೆಂದನಸುರಾರಿ (ವಿರಾಟ. ೦೦-೩೭-೨).

**ರಂಗಕಾಟಿ** : ವನಮಾಳಿ ಮಾಳಾಪ್ರಪಂಚಂ ಬೇಡ ಬಿಡುಬಿಡೆಂದು ರಣರಂಗಾರ್ಥಿಯಾಗಿ ರಂಗಕಾಟಿನ ಕಯ್ಯ ಸೀರೆಯಂ ಸೆಳೆಯಲ್ (ಅರ್ಜುನ. ೯-೭೭ ವ) ; ಇರದೆಯ್ದಿ ರಂಗಕಾಟಿನೊಳುರವಣೆಯಿಂ ಕೊಂಡ ಮೌಲ್ಯಮೆನಿಸಿದ ನೀಲಾಂಬರಮಂ ರಾಮಂಗಿತ್ತಸೆದಿರೆ ಕೃಷ್ಣನನರ್ಘ್ಯಪೀತವಸನಮನುಟ್ಟಂ (ಜಗನ್ನಾ. ೬-೯).

[ರಂಗ₁ + — ಕಾಟಿ / ಸಂ. ರಂಗಕಾರ = ಬಣ್ಣಗಾರ, ಚಿತ್ರಗಾರ]

**ರಂಗಗೀತೆ** (ನಾ). ನಾಟಕರಂಗದ ಮೇಲೆ ಹಾಡುವ (ವಿಶಿಷ್ಟವಾದ ಮಟ್ಟುಗಳನ್ನೊಳಗೊಂಡ) ಹಾಡು : ಹಳೆಯ ರಂಗಭೂಮಿಯ ನಟರಲ್ಲಿ ಕೆಲವರು ಇಂದೂ ಆ ಕಾಲದ ರಂಗಗೀತೆಗಳನ್ನು ಸುಶ್ರಾವ್ಯವಾಗಿ ಹಾಡುತ್ತಾರೆ (ರೂಢ). [ಸಂ. ರಂಗಗೀತಾ]

**ರಂಗತಂತ್ರ** (ನಾ). ನಾಟಕರಂಗದ ಮೇಲೆ ಬಳಸುವ ವಿಶಿಷ್ಟವಾದ ತಂತ್ರ. —ವಿಧಾನ : ಶುದ್ಧಸಾಂಪ್ರದಾಯಿಕ ರಂಗತಂತ್ರಗಳ ಬಳಕೆ ಅನಿವಾರ್ಯವೆಂದು ಒಪ್ಪಬೇಕಾಗಬಹುದು (ಕಾಚಿತ್ರ. ೨೦೦). [ಸಂ.]

**ರಂಗತಾಲೀಮು** (ನಾ). ನಾಟಕಪ್ರದರ್ಶನಕ್ಕಾಗಿ ಮಾಡುವ ಪೂರ್ವಸಿದ್ಧತೆ : ನಾಟಕದ ಅಭ್ಯಾಸ : ನಾಟಕೀಯವಾಕ್ಯಗಳ ಹಾಗು ಪದಪುಂಜಗಳ 'ರಂಗತಾಲೀಮು' ಕಿಟ್ಟಿಯ ಮನಸ್ಸಿನಲ್ಲಿ ನಡೆದಿರುತ್ತಿತ್ತು (ಗಂಪಮಾ. ೦೨೦) ; ಯಾವ ಮಾತನ್ನು ಹೇಗೆ ಆಡಬೇಕೆಂಬ ರಂಗತಾಲೀಮನ್ನು ಅವರು ಆಗಲೇ ಮಾಡಿಕೊಂಡಿದ್ದರು (ಮುಕ್ತಿ. ೩೦೨).

[ರಂಗ + ತಾಲೀಮು]

**ರಂಗಪಂಚಮಿ** (ನಾ). ಫಾಲ್ಗುಣ ಕೃಷ್ಣಪಂಚಮಿಯ ದಿನ ಮತ್ತು ಅಂದಿನ ಓಕುಳಿಯ ಎರಚಾಟ : ಓಕಳಿಯಾಡುವ ಜೀಕಳಿಯಂತೆ. ಹಗಲು ಹನ್ನೆರಡು ತಿಂಗಳೂ ರಂಗಪಂಚಮಿಯನ್ನು ನೆರವೇರಿಸುವವರಂತೆ. ಬಿಚ್ಚಿ

ಒಟ್ಟಿ ಎಲೆಗಳನ್ನು . . . ಉಗಿದು ಪಿಚಿಪಿಚಿ ಉಗುಳುವ . . . ಬಗ್ಗೆ ನಾನಿಲ್ಲಿ ಬರೆಯಲು ಬಯಸುವದಿಲ್ಲ (ಸಿಂಹಶ. ೦೩೯).
[←ಮರಾ. ರಂಗಪಂಚಮಿ]

**ರಂಗಪರಿಕರ** (ನಾ). ನಾಟಕಕ್ಕೆ ಬೇಕಾಗುವ ಬಣ್ಣ, ಭೂಷಣ, ಪರದೆ, ದೀಪ ಮೊದಲಾದ ಸಾಧನ : ಸಂಪೂರ್ಣ ರಂಗಪರಿಕರವುಳ್ಳ ಬಯಲಾಟದ ಸಂಪ್ರದಾಯ ಒಂದಾದರೆ ಅದಿಲ್ಲದಂಥ ತಾಳಮದ್ದಲೆಯ ರೂಪ ಎರಡನೆಯದು (ಯಕ್ಷದ. ೦೪೩). [ಸಂ.]

**ರಂಗಪೀಠ** (ನಾ). ನೃತ್ಯ, ನಾಟಕ ಮುಂತಾದುವನ್ನು ಅಭಿನಯಿಸುವ ಸ್ಥಳ.— ವೇದಿಕೆ : (ಈ ಎರಡು ಬಾಗಿಲುಗಳ ನಡುವೆ ರಂಗಶೀರ್ಷ ನೇಪಥ್ಯಗಳಿಗೆ ಮಧ್ಯೆ 'ಜವನಿಕೆ' ಅಥವಾ ತೆರೆ ಇರುತ್ತಿತ್ತು). ಈ ಭಾಗದ ಮುಂದೆ ಇರುವ . . . ಭಾಗವು "ರಂಗಪೀಠ" ವೆನ್ನಿಸಿಕೊಳ್ಳುತ್ತದೆ (ಸಂಪಾಟ. ೨೩). [ಸಂ.]

**ರಂಗಪೂಜೆ** (ನಾ). ೧. ನಾಟಕ, ನೃತ್ಯ ಮೊದಲಾದುವುಗಳನ್ನು ಪ್ರಾರಂಭಿಸುವುದಕ್ಕೆ ಮುಂಚೆ ರಂಗಕ್ಕೆ ಮಾಡುವ ಪೂಜೆ ; ರಂಗದೇವತಾಪೂಜೆ : ನಾಟಕ ಆರಂಭವಾಗುವುದಕ್ಕೆ ಮುಂಚೆ ರಂಗಪೂಜೆ ಮಾಡುವುದು ವಾಡಿಕೆ (ರೂಢಿ). ೨. ದೇವರ ಉತ್ಸವಮೂರ್ತಿಯನ್ನು ಕೂರಿಸಿ ಮಾಡುವ ಪೂಜೆ : ಪಡುವಕೇರಿಯ ಮಹಾದೇವರ ಸಂನಿಧಿಯಲಿ ಮಾಡಿದ ಧರ್ಮದ ವಿವರ ರುದ್ರಪೂಜೆಯಿಬ್ಬರು ದೀವಳಿಗೆಯ ಹಬ್ಬದಲಿ ರಂಗಪೂಜೆ ೧ (ಸೌಇಇ. IX-ii, ೪೪೬-೦೦ ; 1442) ; ಕಾರ್ತಿಕ ಶುಧ ೧೧ ದಿನ ದೇವಿ ಬಿಜಯಂ ಮಾಡಿದಾಗ ರಂಗಪೂಜೆಗೆ ಲ್ ೨. (ವ್ಯಆಂ. ೦೯೩೪. ೦೪-೦೫ ; 1516) ; ಸೋಣೆತಿಂಗಳಿನ ರಂಗಪೂಜೆಯಲ್ಲಿ ಒಂಭು ದಿನದ ಹೂವಿನ ಪೂಜೆ ಹೆಗಡೆಯದು (ದೇವಹೂ. ೦೪೦). [ಸಂ. ರಂಗಪೂಜಾ]

**ರಂಗಭೂಮಿ** (ನಾ). ೧. ನಾಟಕ, ನೃತ್ಯ ಮೊದಲಾದುವುಗಳನ್ನು ಅಭಿನಯಿಸಿ ತೋರಿಸುವ ಸ್ಥಳ ; ರಂಗಸ್ಥಳ : ಪಾಂಡುಕಶಿಲಾತಳಮೆ ರಂಗಭೂಮಿಯಾಗೆ . . . ನಿಳಿಂಪಭಾರತೀಕರೆ ನಟ್ಟುವರಾಗೆ (ಶಾಂತಿಪು. ೦೦-೭೦ ವ) ; ರಂಗಭೂಮಿ ಎಂಬ ಕಲ್ಪನೆಯಲ್ಲಿ ನೃತ್ಯ, ಸಂಗೀತ, ನಟನೆ ಇವುಗಳಿಂದ ಮನೋರಂಜನೆ ಎಂಬ ಮಾತು ಅಡಕವಾಗಿದೆಯಷ್ಟೆ ? (ಕಾರಿದ. ೩೭೬). ೨. (ಯಾವುದಾದರೂ ಕಾರ್ಯವನ್ನು ನೆರವೇರಿಸುವ) ವೇದಿಕೆ ; ಜಗಲಿ : ರತ್ನದಿಂ ಬೆರಸಿದ ಬಣ್ಣದೊಳ್ ಮೆಚ್ಚೆಯೆ ಕಟ್ಟಿಸಿ ಘಟ್ಟಿಸಿ ರಂಗಭೂಮಿಯಂ (ಶಂಕಶಾ. ೩-೪೦). ೩. ಯುದ್ಧಭೂಮಿ ; ಕಳ : ಗಂಗಾಕುಮಾರನ ಕಳಶಜನ ರಾಧಾತನೂಜನ ರಂಗಭೂಮಿಯಿದು (ಕುವ್ಯಾಕ. ೩-೨೭). [ಸಂ.]

**ರಂಗಭೂಮಿಕೆ** (ನಾ). = ರಂಗಭೂಮಿ ೧ : ಕೆದಱಿದ ಪುಷ್ಪಾವಳಿ ರಂಗದೊಳೆ ಸಮಬಡೆಯೆ ರಂಗಭೂಮಿಕೆ ಪೂತೊಪ್ಪಿದಪುದು (ಶಾಂತಿಪು. ೭೦-೩೨). [ಸಂ. ರಂಗಭೂಮಿಕಾ]

**ರಂಗಭೋಗ** (ನಾ). ದೇವರ ವಿಗ್ರಹದ ಎದುರಿನಲ್ಲಿ ನೃತ್ಯ, ಸಂಗೀತ ಮೊದಲಾದುವುಗಳ ಮೂಲಕ ಸಲ್ಲಿಸುವ ಸೇವೆ, –ಉಪಚಾರ : ಸಂಕ್ರಾಂತಿನಿಮಿತ್ತವಾಗೆ ದೇವರಂಗಭೋಗಕ್ಕಂ ರಂಗಭೋಗಕ್ಕಂ . . . ಕುಟುಮಡುವುವಂ . . . ಕೊಟ್ಟರ್ (ಕಇಅ. ೨೨-೭-೩೨ : 1083) ; ಮಾಣಿಕೇಶ್ವರದೇವರ ನಿತ್ಯಪೂಜೆ ಪಂಚಪರ್ಬ್ಬ ಅಙ್ಗಭೋಗ ರಙ್ಗಭೋಗ ಖಣ್ಡಸ್ಫುಟಿತಜೀರ್ಣ್ಣೋಧಾರಕಂ . . . ಬಿಟ್ಟ ದತ್ತಿ (ಎಕ. XII ತಿಪಟೂ. ೧೨೩-೪೫ ; 1286). 'ಅಂಗಭೋಗ' ಪರಾ. [ಸಂ.]

**ರಂಗಮಂಟಪ** (ನಾ). ೧. = ರಂಗಭೂಮಿ ೧ : ರಂಗಮಂಟಪ, ಸಭಾಗೃಹ, ನೇಪಥ್ಯಸಂಬಂಧವಾದ ಎಲ್ಲ ವಿಷಯಗಳಲ್ಲೂ ಆಗಿನ ದಿವಸಗಳಲ್ಲಿ ಪಕ್ವವಾದ ಅಭಿಪ್ರಾಯಗಳಿದ್ದಂತೆ ಕಾಣುವುದು (ಬಾಲಶ್ರೀ. III, ೦೨೯) ; ಶಾಲೆಯ ಬಾಗಿಲಿಗೂ ರಂಗಮಂಟಪಕ್ಕೂ ತಳಿರುತೋರಣಗಳನ್ನು ಕಟ್ಟಿದರು (ಳಕಥ. ೩-೪೦). ೨. = ರಂಗಭೂಮಿ ೨ : ತಿರುವೆಂಗಳನಾಥಗೆ ಕಟಿಸಿದ ರಂಗಮಂಟಪ (ವ್ಯಆಂ. ೦೯೩೯, ೯-೦೦ ; 1465).
[ರಂಗ + ಮಂಟಪ]

**ರಂಗಮಂಡಪ** (ನಾ). = ರಂಗಭೂಮಿ ೧ : ವಿಮಾನ, ಅರ್ಧಮಂಡಪ, ಮಂಡಪ ಮತ್ತು ತೆರೆದಿರುವ ರಂಗಮಂಡಪಗಳು ಮೊದಲು ಕಂಡು ಬರುತ್ತವೆ (ಹೊಯ್ಸಳವಾ. ೦೦). [ಸಂ.]

**ರಂಗಮಹಲು** (ನಾ). ಭೋಗವಿಲಾಸವನ್ನು ನಡೆಸುವ ಸ್ಥಳ : ವಿಲಾಸಮಂದಿರ : ಅವನು ಅಲ್ಲಿಂದ ಜಾಗ್ರತೆಯಾಗಿ ಹಿಂದಿರುಗಿ ರಂಗಮಹಲಿನಲ್ಲಿ ರಾಣಿಯ ಬಳಿಗೆ ಬಂದನು (ಝಾಂಶಿ. ೭೦).
[ ← ಪಾರ. ಮರಾ. ರಂಗಮಹಾಲ್; ಹಿಂ. ರಂಗಮಹಲ್ ]

**ರಂಗವಲಿ**, ರಂಗವಾಲಿ, ರಂಗವಾಲೆ, ರಂಗಾವಲಿ, ರಂಗೋಲಿ, ರಂಗೋಲೆ (ನಾ). ನೆಲದ ಮೇಲೆ ಬರೆಯುವ ಹಸೆ ಮುಂತಾದ ಅಲಂಕಾರ ಮತ್ತು ಅದಕ್ಕೆ ಬಳಸುವ ಅಕ್ಕಿಹಿಟ್ಟು, ಬಿಳಿಯ ಕಲ್ಲಿನ ಪುಡಿ, ಬಣ್ಣದ ಪುಡಿ ಮೊದಲಾದುವು : "ಪೂವಲಿಯೆನುತುಂ ಧರೆಯೊಳ್ ಭಾವಿಸೆ ತಾಂ ರಂಗವಲಿಗೆ ನಾಮಂ" (ಳಂಳಂ. ೦೭೭) ; ಕಸ್ತೂರಿಯ ಸಗಣನೀರ್ ಬಿಡುಮುತ್ತಿನ ರಂಗವಲಿ ಮಿಳಿರ್ವ ದುಗುಲದ ಗುಡಿ . . . ಮನೆಗಳೊಳೆಲ್ಲಂ (ಶಂಕಥಾ. ೩-೨) ; ಮೆಱೆವ ರಂಗವಲಿ ದಿವ್ಯಪರಿಮಳವೆರೆದಿಹ ಪನ್ನೀರ ಚಳೆಯ (ಳಂಪದ. ೨೨-೭೫). **ರಂಗವಾಲಿ** : "ಗೃಹಲಕ್ಷಣ ಮೆನಿಪ್ಪ ಬಂಧುಂ ರಂಗವಾಲಿಯಕ್ಕು" (ಮಂಗರಾ. ೭೦-೦೪) ; ಕುಂಕುಮದ ಕಾರಣೆಯಿಂ ಕರ್ಪೂರದ ರಂಗವಾಲಿಯಿಂ . . . ಅಲಂಕರಿಸಿದ ಮಕರಧ್ವಜ ಮಂಟಪವು (ನಂಬಿರ. ೦೦-೩೯) ; ಗಂಧಗಜದಾನಜಲಂಗಳಿನಾದ ಪಂಕದೊಳ್ ವೇಗಿಗಳಪ್ಪ ವಾಜಿಗಳ ಫೇನಲವಂಗಳವಲ್ಲಿಗಿಲ್ಲಿಗಿಂಬಾಗಿಯೆ ಬೀಱೆ ಪೋಲ್ತುದದು ಪದಕದೊಳಿಕ್ಕಿದ ರಂಗವಾಲಿಯಂ (ಶಾರಪು. ೮-೦೪೯). **ರಂಗವಾಲೆ** : ರಂಗವಾಲೆ ಎಂದರಂಗವಿಸದಯ್ಯಾ ಎನ್ನ ಮನವು (ಬಸಹೆ. ೦೦೭-೩೩೨) ; ರಂಗವಾಲೆ ಹಿಟ್ಟಿನಾರತಿಗೆ ವೋಲಗ ನಾಲ್ಕಕ್ಕಂ ಗದ್ಯಾಣಂ ಹದಿನಾಱು (ಎಕ. III. ತಿರುಮ. ೯೭-೬೩ ; 1276) ; ಮಠಗಳಲಿಕ್ಕುತಿಹ ರಂಗವಾಲೆಯು ಸಾಸಿದೇವಿಯರ್ಬಂದರಾನಂದದಿಂದ (ಮದೇಪು. ೨೯-೨೩). **ರಂಗಾವಲಿ** : ಲಲಿತಮೌಕ್ತಿಕಮಣಿಗಣಶ್ರೀಕಲಿತರಂಗಾವಲಿಯ ತೊಳಗುವ ಜಾಗದೋಳಿಗಳ (ಕಚತ. ೪-೦೦೩). **ರಂಗೋಲಿ** : ಚಿನ್ನದ ನೇಸರುಕೋಲ್ಗದಿರಿಂ ಚೆಂಬಿಸಿಲಿನ ರಂಗೋಲಿಯನೆಸದಿತ್ತು (ಕಾಕೆ. ೨೭-೭) ; ಗೊಂಬೆಯಾಟ, ಹಾಡುವುದು, ಕಥೆ ಹೇಳುವುದು–ಕೇಳುವುದು ಮತ್ತು ರಂಗೋಲಿ ಹಾಕುವುದು–ಇವೇ ಆ ನಾದಗಳು (ಸ್ತ್ರೀತಿ. ೮೦). **ರಂಗೋಲೆ** : ಅಂಗಳದೊಳಗೆ ರಂಗೋಲೆ ಹಾಕುವಾಗ ಶೃಂಗಾರದಂಗದ . . . ಹೆಂಗಳ ವ್ರತವನು ಭಂಗಮಾಡಿದ ಶ್ರೀರಂಗನೆಂಬವನು (ಪುರಂದ. ೦-೭೩-೨) ; ಅಂಗಳ ತುಂಬಾ ಅವಳು ಬಗೆಬಗೆಯ ರಂಗೋಲೆಗಳನ್ನು ಬಳೆದಿದ್ದಳು (ಹಾಕುತ. ೬೬).

ರಂಗವಾಲೆಯ ನಿಯೋಗ=ರಂಗೋಲೆಯನ್ನು ಹಾಕಲು ನೇಮಿಸಿದ ಸೇವಕವರ್ಗ : ಪಾಯಸ ಪಕ್ವಾನ್ನದಡಿಗೆಗೂಡಿದ ರಂಗವಾಲೆಯ ನಿಯೋಗಕ್ಕೆ ಜೀವಿತಗದ್ಯಾಣವೆರಡು (ಎಕ. XII, ಶಿಕಪಾ. ೨-೨೦ ; 1261).
[ < ಸಂ. ರಂಗವಲ್ಲೀ. / ತಮಿ. ರಙ್ಗವಲ್ಲಿ ; ತೆಲು. ರಂಗವಲ್ಲಿ. / ಮರಾ. ರಾಂಗವಳೀ, ರಾಂಗೋಳೀ ]

**ರಂಗವಲ್ಲಿ** (ನಾ). = ರಂಗವಲಿ : ಅರಸರಾ ಬರ್ಪ ಬಟ್ಟೆಯೊಳೆಲ್ಲಂ ಪಂಚರತ್ನಂಗಳಿಂ ರಂಗವಲ್ಲಿಯನಿಕ್ಕಿ ನೇತ್ರವಟ್ಟು ದುಕೂಲ ಚೀನಾದಿ ದಿವ್ಯವಸ್ತ್ರಂಗಳಂ ಪಾಸಿ (ವಡ್ಡಾರಾ. ೨೭-೨) ; ತಟ್ಟು ಕಟ್ಟಿದ ಗುಡಿ ರಂಗವಲ್ಲಿಗಳೆದಾಂಗುಡಿಯಂತಿರೆ . . . ಪೊಕ್ಕನಂದು ನಿಜಮಂದಿರಮಂ ಪರಸೈನ್ಯಭೈರವಂ (ಶಂಕಥಾ. ೩-೦೦೩) : ಬೀದಿಗಳಂ ಗಂಧೋದಕದಿಂ ಸಾರಣೆಗೆಯ್ದು ರಂಗವಲ್ಲಿಗಳನಿಟ್ಟು (ಅದ್ಭುತ. ೦೦-೨೩). [ ಸಂ. ರಂಗವಲ್ಲೀ ]

**ರಂಗವಳಿ** (ನಾ). (?) : "ರಂಗವಳಿಗಳೆನೆ ಬಿರಿದುಮುಡಂಗಾಯ್ತುರೆಸಲ್ಕ ಡಂಗಕಾಜಿರೊಳಪ್ಪರ್" (ಕಣಾಕಿ. ೨೪). [ ? ]

**ರಂಗವಾಲಿ** 'ರಂಗವಲಿ' ನೋ.

**ರಂಗವಾಲೆ** 'ರಂಗವಲಿ' ನೋ.

**ರಂಗಶಿಲ್ಪಿ** (ನಾ). ನಾಟಕರಂಗವನ್ನು ಸಜ್ಜುಗೊಳಿಸುವವನು,– ಸಿದ್ಧಗೊಳಿಸುವವನು : ಬಹಿರಂಗಪ್ರದರ್ಶನ ಮತ್ತು ನಟರುಗಳಿಲ್ಲದಿದ್ದರೂ ರುದ್ರಪ್ರಭಾವವು ಸಾಧ್ಯ. ಅದೂ ಅಲ್ಲದೆ, ದೃಶ್ಯದ ರಚನೆಯು ಕವಿಗಿಂತಲೂ ಹೆಚ್ಚಾಗಿ ರಂಗಶಿಲ್ಪಿಯ ಕೆಲಸ (ಅಂಕಾ. ೬೮). [ ಸಂ. ರಂಗಶಿಲ್ಪಿನ್ ]

**ರಂಗಶೀರ್ಷ** (ನಾ). ಪ್ರಾಚೀನ ರಂಗಸ್ಥಳದಲ್ಲಿ ನಟರು ಅಭಿನಯಿಸಲು ಉಪಯೋಗಿಸುತ್ತಿದ್ದ ವೇದಿಕೆ : "ನಾಟ್ಯರಂಗ" : ಇದರಲ್ಲಿ ೮ × ೩೨ ಹಸ್ತಗಳ ಅಳತೆಯಲ್ಲಿ ಎರಡು ಭಾಗಗಳಿದ್ದು ಹಿಂದಿನ ಭಾಗವು ಜಗಲಿಯ ಹಾಗೆ ಸುಮಾರು ಒಂದು ಮೊಳ ಎತ್ತರವಾಗಿರುತ್ತದೆ; ಇದಕ್ಕೆ "ರಂಗಶೀರ್ಷ" ವೆಂದು ಹೆಸರು (ಸಂನಾಟ. ೨೩). [ಸಂ.]

**ರಂಗಸಜ್ಜಿಕೆ** (ನಾ). ೧. ನಾಟಕದ ಅಭ್ಯಾಸ ; ರಂಗತಾಲೀಮು : ಗೋಖಲೆಯವರು . . . ಏಕಾಂತಸ್ಥಳದಲ್ಲಿ ತಮ್ಮ ಭಾಷಣಗಳ ಸಾಭಿನಯವಾದ 'ರಂಗಸಜ್ಜಿಕೆ' ಮಾಡುತ್ತಿದ್ದರಂತೆ (ಕಥೆ. ೬೩). ೨. = ರಂಗಪರಿಕರ : ಈಚೆಗೆ ನಾಟಕಗಳ ರಂಗಸಜ್ಜಿಕೆ ತುಂಬಾ ಅಚ್ಚುಕಟ್ಟಾಗಿರುತ್ತದೆ (ರೂಢಿ). [ ರಂಗ + ಸಜ್ಜಿಕೆ₁ ]

**ರಂಗಸಾಮಗ್ರಿ** (ನಾ). = ರಂಗಪರಿಕರ : ಇದರಲ್ಲಿ ಪರದೆಗಳು, ವೇಷಭೂಷಣಗಳೇ ಮೊದಲಾದ ರಂಗಸಾಮಗ್ರಿ, ದೃಶ್ಯೋಪಕರಣಗಳೆಲ್ಲವೂ ಸೇರಿವೆ (ಅಂಕಾ. ೬೪ ಅಡಿ). [ಸಂ.]

**ರಂಗಸಾಲೆ** (ನಾ). ನಾಟಕರಂಗ ; ನಾಟ್ಯವೇದಿಕೆ : ನಾನು ಬಡವಿ ಆತ ಬಡವ . . . ಹತ್ತಿರಿರಲಿ ದೂರವಿರಲಿ ಅವನೆ ರಂಗಸಾಲೆ (ನಾದರೀ. ೩೯–೬). [ ರಂಗ + ಸಾಲೆ₄ ]

**ರಂಗಸಿದ್ಧತೆ** (ನಾ). ನೃತ್ಯ, ನಾಟಕ ಮುಂತಾದುವಕ್ಕೆ ಅಗತ್ಯವಾದ ಪರಿಕರಗಳನ್ನು ಸಿದ್ಧಪಡಿಸುವುದು : ದೇವತೆಗಳು ಏನೋ ಒಂದು ಮಹತ್ಕಾರ್ಯಕ್ಕೆ ರಂಗಸಿದ್ಧತೆ ಮಾಡುತ್ತಿರುವಂತಿದೆ (ಬೆಳಂಬಾ. ೬). [ಸಂ. ರಂಗಸಿದ್ಧತಾ ]

**ರಂಗಸ್ಥಲ**, ರಂಗಸ್ಥಳ (ನಾ). ೧. = ರಂಗಭೂಮಿ ೧ : ನಟರಿಗಾಗಿ ಒಂದು ಎತ್ತರದ ರಂಗಸ್ಥಲ. ಶ್ರೋತೃಗಳಿಗಾಗಿ ನೆಲ (ಭಾರಜ. ೩೭೩). **ರಂಗಸ್ಥಳ** : ೧. ರಂಗಸ್ಥಳದ ಮೇಲೆ ದೊಡ್ಡದೊಂದು ರತ್ನಗಂಬಳಿ ಹಾಸಿತ್ತು (ಹಾಲಿಮ. ೧೨೦). ೨. ವೇದಿಕೆ, ಜಗಲಿ: ಮೂಡುವನು ರವಿ . . . ಮೂಡಣ ರಂಗಸ್ಥಳದಲಿ ನೆತ್ತರು ಮಾಡುವನು (ಕಂಕ. ೩-೦). [ಸಂ.]

**ರಂಗಸ್ಥಳ** 'ರಂಗಸ್ಥಲ' ನೋ.

**ರಂಗಳಿಸು** (ಕ್ರಿ). ೧. ನೀರು, ಹಾಲು, ಜೇನುತುಪ್ಪ ಮೊದಲಾದುವುಗಳಲ್ಲಿ ಔಷಧಿಯ ಪುಡಿಯನ್ನು ಕದಡು : ಇವುಗಳ ಅರೆದು ಹಾಲಿನಿಂದ ರಂಗಳಿಸಿ . . . ಬೆಳಗ್ಗೆ ತೆಗೆದುಕೊಳ್ಳುವದು (ಕಾಪುಣಾ. ೨೬೬) ; ಆ ಹಾಲಿಗೆ ಈ ಪುಡಿಯನ್ನು ಸೇರಿಸಿ ರಂಗಳಿಸಿ ಕೈಯಲ್ಲೆತ್ತಿಕೊಂಡಳು (ಕುಸುಮ. ೨೯೬). ೨. ಅಂಗೈಯಲ್ಲಿ ಯಾವುದಾದರೊ ಸಣ್ಣ ವಸ್ತುವನ್ನು ಇಟ್ಟು ಹೊಳಪು ಬರುವಂತೆ ಬೆರಳುಗಳಿಂದ ತಿಕ್ಕು : (ಜ). ೩. (ಆಲಂ) ನಾಶಮಾಡು : ಕಂಗಳಲಿ ಕಿಡಿಸೂಸಿ ಕರಿಬಳ ಮುಂಗಡೆಯ ಶಿವಭಟರ ಗಬೆಯಿಂದ ರಂಗಳಿಸಿ ಸಂಗರದೊಳೆರಗುತ . . . ಐತರೆ (ಅಂದಕಾ. ೨೯–೨೦). [ ? + — ಇಸು₁ /ತೆಲು. ರಂಗಲಿಂಚು, ರಂಗರಿಂಚು ]

**ರಂಗಾಜೀವ** (ನಾ). ೧. ಬಣ್ಣದ ವೃತ್ತಿಯಿಂದ ಜೀವಿಸುವವನು ; ಬಣ್ಣಗಾರ ; ಚಿತ್ರಕಾರ : "ರಂಗಾಜೀವಃ, ಚಿತ್ರಕೃತ್ — ಈ ೨ ವ್ಯಾಖ್ಯೆಗಾಬಂ [ಬಣ್ಣಗಾಬಂ, ಚಿತ್ರಕಾರಂ]" (ಹಲಾಯು. ೯೬–೪೩೬). ೨. ರಂಗಭೂಮಿಯ ಮೇಲೆ ನಟನೆಮಾಡಿ ಜೀವಿಸುವವನು : ನಟ. [ಸಂ.]

**ರಂಗಾಣೆ** (ನಾ). ಚಿಕ್ಕಮಕ್ಕಳ ಒಂದು ಬಗೆಯ ಆಟಿಕೆ ; ಗಿಲಿಕೆ : ಆಳು ಮಗುವಿನ ಬೆಳ್ಳಿಯ ರಂಗಾಣೆಯನ್ನು ಕೈಯಲ್ಲಿ ಹಿಡಿದುಕೊಂಡು ಇಂದಕ್ಕನ ಬಳಿ ಬಂದ (ಸಂಕಕ್ರ. ೧೨೬). [← ತುಳು. ರಂಗಾನಿ, ರಂಗಣೆ]

**ರಂಗಾರಿ**, ರಂಗಾರೆ (ನಾ). ಬಣ್ಣದ ಕೆಲಸ ಮಾಡುವವನು; ಬಣ್ಣಗಾರ : ನಾನಾಬಗೆಯ ಕೈಷಾರಿ ಶಿಲ್ಪಿಗರು ರಂಗಾರಿ ಚಿತ್ರಿಗರು (ಕರಾಮಾ. ೨೬–೯೬) : ರಂಗಾರಿಗಳು ಮುಂಡಾಸ, ಶಲ್ಲೆ, ಘಡಿಕೆ ಮುಂತಾದ ಬಿಳಿವಸ್ತ್ರಕ್ಕೆ ಬಣ್ಣ ಕೊಡುವರು (ಕಸಾಗ. ೦೫೩). **ರಂಗಾರೆ** : ರಂಗುಹಾಕುವವನು ; ಬಣ್ಣಗಾರ ; ರಂಗಾರೆ (Dyer. ೩೦೪೩). [ ← ಹಿಂ. ರಂಗಾರಾ ; ಮರಾ. ರಂಗಾರೀ. /ಸಂ. ರಂಗಕಾರ ]

**ರಂಗಾರೆ** 'ರಂಗಾರಿ' ನೋ.

**ರಂಗಾವಲಿ** 'ರಂಗವಲಿ' ನೋ.

**ರಂಗಿಗ** (ನಾ). ಬಣ್ಣಗಾರ : ಸ್ಫಟಿಕದ ಘಟದೊಳಗಿದ್ದ ಬಹುರಂಗಿಗರಂತೆ ಎನ್ನಂಗವುಯ ನೀನಾಗಿ ಹಿಂಗಲೇಕೆ (ಮೋಲಮಾ. ೧೯–೩೨). [ರಂಗು + — ಇಗ]

**ರಂಗಿಣೆ** (ನಾ). ೧. ಒಂದು ಬಗೆಯ ಗಿಡ; ನೀಲಿಗಿಡ : "ನೀಲಿ ರಂಗಿಣ ಯಕೆಸ್ಕ" (ಮಂಗರಾ. ೪೯–೨೯). ೨. ಒಂದು ಬಗೆಯ ಮುಳ್ಳುಗಿಡ; "ಮಹಾಶತಾವರೀ" (ಶಂಬತ. ೨೩೪). [ಸಂ. ರಂಗಿಣೀ]

**ರಂಗಿಸು** (ಕ್ರಿ). ೧. ಬಣ್ಣಕೊಡು : ರಂಗುಗೊಳಿಸು : ಏಕಾವಳಿಯ ಮುತ್ತಿನೊಳುವೆಳಗು ಬೆಳುದಿಂಗಳ ರಂಗಿಸಲು ಶೃಂಗಾರನಿಧಿ ಸೌಂದರೇಂದ್ರಂ . . . ನಡೆತಂದನು (ಸೌಂದಪು. ೮–೯೩). ೨. ಕೆಂಪುಬಣ್ಣದಿಂದ ಕೂಡಿರು; ಕೆಂಪಾಗಿರು : ತೆಂಗಿನಕಾಯ ತೋರದ ಮೊಲೆವೊತ್ತ ಲತಾಂಗಿಯ ಬಂದುಗೆವಾಯ ರಂಗಿಪ ಚೆಂದುಟಿಯಿನಿದೆನೆ ಮೋಹತರಂಗಿಣೆವೇಳ್ವ (ಮೋಹತ. ೦–೩೬). ೩. ಹೊಳೆ ; ಪ್ರಕಾಶಿಸು : ರಂಗಿಸುವನರ್ಘ್ಯರತ್ನದ ಮಾವುಗೆಯ ತೊಟ್ಟು (ರಂಗಕ. ೩೬–೨೩). ೪. ಉತ್ಸಾಹಗೊಳ್ಳು; ಉಬ್ಬು: ರಂಗಿಸಿದಂ, ರಾಗಿಸಿದಂ, ಭೋಗಿಸಿದಂ (ಕಮಿತ. ೬೪ ಪ್ರಯೋ) : ರಂಗಿಸುತ ಮೊನೆಗಾಣಿಸುತ್ತಂ ಸಂಗಡಿಗರಂ ಹಿಂಗಿಸುತ ತನ್ನಂಗಮಂ ತಾನೇಜಲಿಳಿಯಲು ನೋಡುತಾಡುತ್ತ (ಬಸಪು. ೨೬–೦೨). ೫. ಉದ್ವೇಗಗೊಳ್ಳು : (ಜ). ೬. ಕರಗು; ದ್ರವಿಸು : ತಿಂಗಳ ಬೆಳಗು ಸೋಂಕಲು ಕೂಡೆ ಶಶಿಕಾಂತ ರಂಗಿಸುವಂತೆಮ್ಮ ನೃಪನ ಕಂಗಳ ಪ್ರಭೆ ತಾಗಲೊಡನೆ ಕಾಂತೆಯರಂತರಂಗ ಪೊಸರುವುದು (ಲಲತ. ೬–೯೬). [ರಂಗು + — ಇಸು₁]

**ರಂಗು** (ನಾ). ೧. ಬಣ್ಣ; ವರ್ಣ : "ರಂಗು — ರಂಗ = ಬಣ್ಣ" (ಕಪ್ಪಕೋ. ೩೬) ; ನಸುಬಿರಿದ ಕುಸುಮಕೆ ಸುಗಂಧ ರನ್ನಕೆ ರಂಗು ದೊರಕೊಂಡ ಮಾಳ್ಕೆಯಿಂ ಪಸರಿಸಿದುದೆಳೆವಣ್ಣನ (ಸೌಂದಪು. ೬–೨) ; ಪೊಂಗೆ ಪೊಸಮಿಸುಗು ರನ್ನಕೆ ರಂಗು ಸುಧಾರುಚಿಗೆ ಜೊನ್ನಮುಮಿನಾಭಾವಂ ಸಂಗಳಿಸಿ ಮಿಸುಪ ತೆಜದಿಂ ಕಂಗೊಳಿಪುದು ಭಕ್ತಿ (ವೃತಾ. ೩–೬೯) ; ಗುಲಾಬಿಯ ರಂಗು ಮೂಡುವೆಣ್ಣಿನ ಕೆನ್ನೆಗಳಲರಳಿ ಕೇಪೇರೆ (ಚಿತ್ರಾಂಗ. ೩೬–೦೩೪೦). ೨. ಕೆಂಪುಬಣ್ಣ: 'ರಂಗುದುಟಿ' ಪರಾ. ೩. ಶೋಭೆ ; ಕಾಂತಿ ; ಕಳೆ : "ಒಚಿಪಿನೊಳ್ ಕಾಂತಿಯೊಳ್ ರಮ್ಯದೊಳ್ ರಂಗೆನಿಕು" (ಶಬ್ದಮ. ೬೪). 'ರಂಗುಮಾಣಿಕ', 'ರಂಗುಮಡೆ' ಪರಾ. ೪. ಆವೇಶ ; ಉದ್ರೇಕ ; ಆವೇಗ : ಒಗ್ಗಾಲಿಯು . . . ರಂಗಿನಲ್ಲಿ ಮಾತಾಡುತ್ತಿದ್ದ (ಕಂಬಹು. ೦೯). ೫. ಸಡಗರ ; ಉತ್ಸಾಹ : ತುಂಗಘೂಣಿಶಿಖಿರಂಗಳಲಿ ದಿವಿಜಾಂಗನಾಜನ ಹೇಮಕೃತಪೀಠಂಗಳಲಿ ಕುಳ್ಳಿರ್ದು ನವರಸಮೊಗಲು ವೀಣೆಗಳಾ ರಂಗುರಕ್ತಿಗಳಿಂದ ಬಾಜಿಪ ಸಿಂಗರದ ಶಿಲೆ ಕರಗಿ ವಿವಿಧ ಮಖಿಂಗಳಲಿ ರ್ಝರಿಯಾಗಿ ಸರಿವುತಲಿರ್ಪವೆಲ್ಲೆಡೆಯು (ಅಶಂಚ. ೦–೨–೯).

'ರಂಗುಗೊಳಿಸು' ಪರಾ. ೬. (ನಾಟಕ, ಗಾಯನ, ನೃತ್ಯ ಮೊದಲಾದುವುಗಳಂಥ) ಮನರಂಜನೆಯ ಒಂದು ಪ್ರಕಾರ : ರಾಜರು ಸಂಗೀತ, ಸಾಹಿತ್ಯ, ನಾಚು, ರಂಗು ಮುಂತಾದುವುಗಳಲ್ಲಿಯೇ ಆಸಕ್ತರಾಗಿದ್ದರು (೭ಪೆಳ. ೩೩) ; ದಿನಂಪ್ರತಿ ನಾಚು, ರಂಗು . . . ಅನೇಕ ಸಮಾರಂಭಗಳು ನಡೆದೇ ಇದ್ದವು (ಹುಂಜಾಳ. ೦೪೦). ೭. ಲಾವಣಿಯಲ್ಲಿ ಒಂದು ಬಗೆ : 'ರಂಗು' ಎಂದು ಹೆಸರಾದ ಶೃಂಗಾರಪದಗಳು ಇನ್ನೊಂದು ಜಾತಿ :—ಲಾವಣಿಗಳಲ್ಲೆಲ್ಲ ಇದೇ ಬಹಳ ಸ್ವಾರಸ್ಯವಾದುದು . . . ಈ ರಂಗುಲಾವಣಿಗಳು ಬಹುಶಃ ತಮಿಳಿನ ಕಡೆಯಿಂದ ಬಂದವುಗಳ ಸಂತಾನವಿರಬಹುದು (ಕರ್ನಾಟಸಂ. ೪೪).

**ರಂಗಾಗು**=೧. ಬಣ್ಣವೇರು; ಕಾಂತಿಯಿಂದ ಕೂಡು : ಕಣಿಯುವ ಕಣ್ಣು ನೋಟ, ಯಾವಾಗಲೂ ರಂಗಾಗಿರುತ್ತಿದ್ದ ಆ ತುಟಿ ಎಲ್ಲಾ – ಅವನ . . . ಉತ್ತರವನ್ನು ನಿರೀಕ್ಷಿಸಿಯೇ ಇರುತ್ತವೆ (ಪತಿತಾ. II. ೯೦೯). ೨. ಉತ್ಸಾಹಪಡು : ಕವಿಯು ವಿಷಯವಾಗಿ ಅವಳು ರಂಗಾಗಿ ಮಾತನಾಡುತ್ತಿದ್ದಳು (ಅಂಕೂ. ೦೬೪). ರಂಗಿನ ನುಡಿ = (ಅಲಂ) ಬಣ್ಣದ ಮಾತು ; ಬಿನ್ನಾಣದ ನುಡಿ : ನೀನು ಹನುಮಣ್ಣನ ರಂಗಿನ ನುಡಿಗಳಿಗೆ ಮನಸೋತು ನಿನ್ನ ಆತ್ಮವನ್ನು ಅವನಿಗೆ ಮಾರಿಕೊಂಡೆ (ಜಾಹುಕ್. ೨೪).

[← ಪಾರ. ಹಿಂ. ಮರಾ. ರಂಗ್./ಸಂ. ರಂಗ]

**ರಂಗುಗೊಳಿಸು** (ಕ್ರಿ). ಉತ್ತೇಜನ ನೀಡು; ಹುರುಪುಗೊಳಿಸು : ಕೆಲಬರ ನೆಪದಿಂ ಕೆಲವರಂ ಚತುರಂಗದಾಟದೊಳ್ ರಂಗುಗೊಳಿಸಿ (ಶ್ರೀಗಂ. ೬-೦). [ರಂಗು + ಕೊಳ್₁ + – ಇಸು]

**ರಂಗುದುಟಿ** (ನಾ). ಕೆಂಪುಬಣ್ಣದ ತುಟಿ ; ಚೆಂದುಟಿ : ರಂಗುದುಟಿ ಸೆಳ್ಳುಗುರು ಬಳಲ್ನುಡಿ ನಾಡೆ ನಳಿತೋಳು (ಚಿತ್ರವಿಂ. ೦೦೪); ಪೋಗೊಡ ಮೊಲೆಗಳ ನೋಡುವನಪ್ಪವ ರಂಗುದುಟಿಯು ಕಚ್ಚಿ ಪೀರ್ವ (ಶರಕ. ೪೦-೬೯); ರತ್ನದಂತೆ ಬೆಳಗುವ ರಂಗುದುಟಿಯು . . . ರವಿಕೋಟಿಪ್ರಭೆಯಂತೆ ರಾಜಿಸುವ ರಾಜಾಧಿರಾಜ ನಮ್ಮ ಅಖಂಡೇಶ್ವರನು (ಅಖಂಡೇ. ೨೬೨-೨೩).

[ರಂಗು + ತುಟಿ]

**ರಂಗುಬಾಟಿ** (ನಾ). ಕೆಂಪುಬಣ್ಣದ ಬಾಳೆ ; ಚಂದ್ರಬಾಳೆ : ಪಣ್ಣಪೊಂಬಾಟಿಯ ಚೆಂಬಾಟಿಯ ರಂಗುಬಾಟಿಯ ತೋಟಂ (ಚಾಮಾಕೃ. ೦೦೦-೨೪).

[ರಂಗು + ಬಾಟಿ]

**ರಂಗುಮಾಣಿಕ** (ನಾ). ಪ್ರಕಾಶಮಾನವಾದ ಕೆಂಪುಹರಳು, — ಮಾಣಿಕ್ಯ : ಮಂಗಳಂ ಜಯಮಂಗಳಂ . . . ಗಂಗೆಯು ಪಡೆದ ಶ್ರೀರಂಗನಿಗೆ ರಂಗುಮಾಣಿಕದುಂಗುರದವಗೆ (ಪುರಂದ. ೪-೨೦೪-೨); ಗಗನಮಣಿ ಪಶ್ಚಿಮಾಂಗನೆಯ ಚೈತಲೆಯ ರಂಗುಮಾಣಿಕದಂತೆ ಕಣ್ಗೆ ಕಾಣಿಸುತಿರ್ದುದಸ್ತಗಿರಿಮಸ್ತಕದೊಳು (ಕೈಖಿಲಾ. ೬-೪೩).

**ರಂಗುಮಾಣಿಕದಂಬುಲ** = ಮಾಣಿಕ್ಯದಂತೆ ಕೆಂಪಾದ ತಂಬುಲ : ಚುಂಬನಗೊಟ್ಟು ಚುಂಬಿಸಿ ರಂಗುಮಾಣಿಕದಂಬುಲವಿತ್ತು ಮುದ್ದಿಸಿದ (ನೋಕಥ. ೪೩-೯೯).

[ರಂಗು + ಮಾಣಿಕ]

**ರಂಗುವಡೆ** (ಕ್ರಿ). ಕಾಂತಿಯನ್ನು ಹೊಂದು ; ಬಣ್ಣವೇರು : ಸಡಗರಿಸಿದರು ಬಾಣಜೆಯ ಹರ್ಮ್ಯಾದಿ ರಂಗುವಡೆದ ಮಾಣಿಕ್ಯಮೆಯ್ವೆಳಗು ಸೊಡರಿನೇಳ್ಗೆಯ ಹೊನ್ನ ಕಳಸಂಗಳಾಕಾಶದೆಡೆಯಲ್ಲಿ ಜಗಜಗಿಪಂತೆ (ನೋಕಥ. ೪೦-೭); ರಂಗುವಡೆದ ಪವಳದ ತೋರಣದ ಕಾಂತಿ ಕಂಗೊಳಿಸುವುವು ಬೀದಿಯಲಿ (ಕಂಪವಿ. ೨೦-೦೭).

[ರಂಗು + ಪಡೆ₁]

**ರಂಗುಪಾಲ** (ನಾ). ಒಂದು ಬಗೆಯ ಗಿಡ; ಅರುಟಾಳ : "ಅರಿಷ್ಟ:, ಫೇನಿಲ: – ೨ ರಂಗುವಾಲದ ಗಿಡ" (ಸಿದ್ಧಾಂತಿ. ೦೦೪). [ ? ]

**ರಂಗುವಿಡಿ** (ಕ್ರಿ). ಕೆಂಪುಬಣ್ಣವನ್ನು ಹೊಂದು ; ಕೆಂಪಾಗು : ಶೃಂಗಾರಶಾಲಿಯ ಕೋಮಲಗರ್ಭದ ರಂಗುವಿಡಿದ ಮೊತ್ತದಂತೆ ಜಂಘೆಗಳಿಂದ ರಾಜಿಸುವನಾಶೀತನ ಸಂಗಕೆಳಸಿತೆನ್ನ ಮನವು (ಕಂಪವಿ. ೪-೦೦೬).

[ರಂಗು + ಪಿಡಿ₁]

**ರಂಗುವೆಱು** (ಕ್ರಿ). ಕಾಂತಿಯನ್ನು ಪಡೆ ; ಶೋಭಿಸು : ರಂಗ ನಿನ್ನಯ ಪೊಡೆ ಕಣ್ಣಳ ಮಂಗಳ ಸಿಂಗಾರ ತ್ರಿಜಗತ್ತಿಂಗೆ ರಂಗುವೆತ್ತಾಳ್ವನೆಯೆನಲದು ಏನ್ನಂತರಂಗದೊಳಾವಗಮಿರ್ಕೆ (ಕಕಸಾಂ. ೨-೬). [ರಂಗು + ಪೆಱು₁]

**ರಂಗೇರು** (ಕ್ರಿ). ೧. ಬಣ್ಣವೇರು ; ರಂಗಾಗು : ಇಗೊ ಸಂಜೆ, ಸಖಿ, ಚೆಂಬೊಗರಿಂ ರಂಗೇರಿಹ ಜಲದಾಬ್ಜಮುಖಿ . . . ಶಿಶುಚಂದ್ರನ ನಗೆ ನಗುವಳು (ಗತಿಕ. ೩೦-೨); ಅವನಿಗೆ ಇದ್ದಕ್ಕಿದ್ದಂತೆ ಮುಖ ರಂಗೇರಿತು (ಅಂಕೂ. ೬೯). ೨. ಕಳೆಗಟ್ಟು; ರಂಜಿಸು : ಹೆಚ್ಚು ಜನ ಇದ್ದಷ್ಟೂ ಆಟ ರಂಗೇರುತ್ತದೆ (ಕಂಕೋ. I, ೭೦೪).

[ರಂಗು + ಏರು₁ (< ಏಱು₁)]

**ರಂಗೋಲಿ** 'ರಂಗವಲಿ' ನೋ.

**ರಂಗೋಳಿ** 'ರಂಗವಲಿ' ನೋ.

**ರಂಚೆ** 'ಚಂಚೆ' ನೋ.

**ರಂಚೆಗಾಣು** (ಕ್ರಿ). (?) : ಪಂಚವಿಂಶತಿತತ್ವರೂಪದ ಸಂಚವಜಾಯದೆ ನೀತಿವುಖದಲಿ ರಂಚೆ [ಪಾಠಾಂ. ದಿಂ ಅಂಚೆ]ಗಾಣದೆ ಸಗುಣಮಯ ನೀಹಾರದಲಿ ಮುಳುಗಿ ಮಿಂಚುವೆಳಗಿನ ಬಳಕೆಯಲಿ ಮನಮಂಚಿ ಮೈಗೊಂಡಳಲು ಪಾತುಪಾವಂಚಕರು ನೀವ್ ಪಶುಗಳೆಂದರೆ ಬೇದವೇಕೆ (ಕುವ್ಯಾಳ. ೬-೨೭).

[ ರಂಚೆ₁ + ಕಾಣು (< ಕಾಣ್) ]

**ರಂಜ, ರಂಜಿ, ರೆಂಜೆ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು ; ಪಗಡೆ : ಶಶಿಮುಖಿಯೋರ್ವಳು ರಂಜದೆಡೆಗೆ ಎಯ್ದಿ ಕುಸುಮರಂಜಿನಿಯೆಂದೆಂಬ ಪೊಸರಾಗವ ಪಾಡೆ (ಜ್ಞಾನಕ. ೨೩-೯೭) ; ಗರುಡಾಚಾರ್ಯನಲ್ಲಿ ರಂಜ, ದಾಸಾಚಾರ್ಯನಲ್ಲಿ ಮಂದಾರ; ದುರ್ಗಾಭಟ್ಟನಲ್ಲಿ ಶಂಖಪುಷ್ಪ, ಬಿಲ್ವಪತ್ರೆ (ಸಂಸ್ಕಾರ. ೦೭). ರಂಜಿ : ಕುರವಕ ಬೇಲರ ಟಾಳ ಸಿರಿಸ ರಂಜಿಯ ಗೋಳಿ ಲೊದ್ದೆಸೆಲುಕವಾದಿ ಮೆರೆವ ಕಮ್ಮರವನು ಕಂಡ (ಜ್ಞಾಪಕ. ೦೦-೦೪). ರೆಂಜೆ : ಬೊಗಸೆ ಬೊಗಸೆ ರೆಂಜೆ ಮತ್ತು ಸುರಗಿಯನ್ನು ಇಲ್ಲಿ ಸಂಗ್ರಹಿಸುವುದು ಸಾಧ್ಯವೇ ? (ವಾತ್ಸಲ್ಯ. ೪).

[ದೇ. ॥ ತುಳು. ರಂಜ, ರೆಂಜಿ, ರೆಂಜಿ. ರೆಂಜೆಯ]

**ರಂಜಕ₁** (ಗು). ೧. ಬಣ್ಣಹಾಕಿದ. ೨. ಸಂತೋಷಗೊಳಿಸುವ. ೩. ಚೆಲುವಾದ ; ಮನೋಹರವಾದ. (ನಾ). ೪. ಅಂದ ; ಶೋಭೆ : ಮಾಯದ ಬೊಂಬೆಯ ಮಾಡಿ ಕಂಗಳಿಗೆ ಕಾಮನ ಬಾಣವ ಹೂಡಿ ನಡೆ ನುಡಿಯೊಳಗೆ ರಂಜಕದ ತೊಡಿಗೆಯನೆ ತೊಡಿಸಿ . . . ಸಂದೇಹದಲ್ಲಿ ಸತ್ತು ಹುಟ್ಟುವ ಈ ಭವಬಂಧನಗಳತ್ತ ಬಲ್ಲರೋ ಈ ಶರಣರ ನೆಲೆಯ (ಏಂಗಪ. ೪. ೩೬-೩೩). ೫. ಆಕರ್ಷಕವಾದುದು ; ಮನೋಹರವಾದುದು : ಜೀವನ — ನಿಸರ್ಗಗಳಲ್ಲಿಯ ಮನೋಧರ್ಮ. . .ಇವುಗಳೊಳಹೊಕ್ಕು ನೋಡುವ ರಂಜಕವೂ ರಮ್ಯವೂ ಆದ ಪ್ರಯತ್ನ ಮೊದಲಾಯಿತು (ಪತ್ರಿಕಾ. ೦೦೭). ೬. ಸಂತೋಷವನ್ನುಂಟುಮಾಡುವಂತಹುದು ; ಆನಂದಗೊಳಿಸುವಂತಹುದು ; ನಾಲ್ಕುಖನಿಯುಮುಂ ಸಕಲಪರಿಃಪಹವೇನೆ ರಂಜಕಮಾದುವು (ಅಕತ್ರಿ. ೩-೯) ; ಏನು ಮಾಡಲಯ್ಯ . . . ರಮ್ಯಣೀರ ರಂಜಕದ ನುಡಿಯನ್ನು ಕೇಳಿ . . . ತೋಷಿಸುವ ಕರ್ಣೇಂದ್ರಿಯಕೆ (ಕಪಕ. ೫೪-೪) ; ಅಂಜದಿರು ಗಂಧರ್ವ ತಮ್ಮಾದು ರಂಜಕದ ಮಾತಲ್ಲ ನಿನ್ನನು ಭಂಜಿಸಲು ಬಂದವನನಟ್ಟುವೆ ನಿನ್ನ ರಕ್ಷಿಸುವೆ (ಕೋಗಹು. ೦೦-೯೭). ೭. ಮನವೊಲಿಸುವಂತೆ ಮಾತನ್ನಾಡುವವನು ; ರಂಜಿಸುವವನು : ಮುನ್ನಿನ ಪುರಾತನರ ನೆನೆದು ಧನ್ಯನಾದಹನೆಂಬ ಮಾತಿನ ರಂಜಕರನೇನೆಂಬೆ (ಬಸವ. ೬೩೪) : ರಂಜಕರು ಪಾಂಡವರು ನಿನ್ನನು ಭಂಜಿಸುವರಾವ್ಯಂಗದಲಿ (ಕುವ್ಯಾಳ. ೬-೩೨). ೮. ಒಂದು ಬಗೆಯ ಗಂಧ ; ರಕ್ತಚಂದನ. [ಸಂ.]

ರಂಜಕ₂ (ನಾ). (ಸಿಡಿಮದ್ದು, ಬೆಂಕಿಕಡ್ಡಿ ಮುಂತಾದುವನ್ನು ತಯಾರಿಸಲು ಬಳಸುವ) ಒಂದು ಬಗೆಯ ಅಲೋಹಮೂಲಧಾತು : ಮತ್ತೊಂದು ಕೋವಿ ರಂಜಕ ಮಾತ್ರ ಹತ್ತಿ . . . ಆ ರಂಜಕದ ಕಿಡಿ ಹಾರಿ ಸುಟ್ಟಿತು (ರಾಜೇಂದ್ರ. ೨೬೬) ; ಸಾರಜನಕ, ಗಂಧಕ, ರಂಜಕ . . . ಕಬ್ಬಿಣ ಮೊದಲಾದ ನಿರವಯವವಸ್ತುಗಳು ಸಸ್ಯಗಳ ಆಹಾರದ ಘಟಕವಸ್ತುಗಳು (ಪ್ರಾಣಿಶಾ. ೬) ; ರಂಜಕದ ಅಭಾವದಿಂದ ಮೂಳೆರೋಗವಾದ ಪಕ್ಕಿರೋಗ ಸಂಭವಿಸುವುದು (ಗೃಹವಿ. ೨೦). [← ಪಾರ. ಹಿಂ. ಮರಾ. ರಂಜಕ]

ರಂಜಕಿ (ನಾ). [ಸಂಗೀತ] ಮಧ್ಯಮಸ್ವರದಿಂದ ಹುಟ್ಟುವ ನಾಲ್ಕು ಶ್ರುತಿಗಳಲ್ಲಿ ಒಂದು : ರಂಜಕಿ ಪೂರ್ಣೆ ಅಲಂಕಾರಿಣಿ ವಾಂತೆಯೆಂಬ ನಾಲ್ಕು ಶ್ರುತಿಗಳೇ ಮಧ್ಯಮಸ್ವರದಿಂ ಪುಟ್ಟಿದವು (ಶಿವೇಕ. ೨೩೨). [ಸಂ. ರಂಜಕೀ]

ರಂಜಣಿಗೆ, ರಂಜಳಿಗೆ (ನಾ). ೧. (ಪನ್ನೀರು, ಗಂಧ ಮುಂತಾದುವುಗಳನ್ನು ತುಂಬಿಡುವ) ದೊಡ್ಡ ಪಾತ್ರೆ ; ಕೊಪ್ಪರಿಗೆ : ಚಂದನವಾರಿಪೂರಮಪ್ಪ ರಜತದ ರಂಜಣಿಗೆಗಳಿಂ . . . ಕಣ್ಗೊಳಿಸಿ (ಉಸುಪತಿ. ೩-೦೨೭ ಪ) ; ಲಲಿತಮಣಿರಂಜಣಿಗೆಯೊಳಗುಜ್ಜ್ವಳಿಪ ಸಾದುಜವಾದಿ ಕರ್ದಮ ಬಳಸಿತನಲಿನ್ನುಳಿದುವನು ವರ್ಣಿಸುವನಾರು (ಜಗದೇಕ. ೬-೨೯) ; ಸದ್ಯೋಘೃತದ ರಂಜಣಿಗೆಗಳ ಸಾಲಿಳಿಹಿದವು ಪಾನರಸಾಯನಾದಿಗಳ ಝುಗ ಝುಗಿವ ಹೊಂಗೊಪ್ಪರಿಗೆಗಳ ಬಗೆ ವಿರಾಜಿಸಿತು (ಕೊರಟಾ. ೬-೩೩-೩೩). ೨. ದವಸಧಾನ್ಯಗಳನ್ನು ತುಂಬುವ ಗುಡಾಣ : ಒಂದು ರಂಜಣಿಗೆ, ಅವರಲ್ಲಿ ಮನೆಯ ನಗನಾಣ್ಯಗಳನ್ನು ಇಡಲಾಗಿತ್ತು (ಸ್ವ. ಶಿಶಿ. ೨೨೬). ೩. ವನಕರುಗಳ ಪಟ್ಟಿ; ಕೊಟ್ಟಿಗೆ: ಈ ಹುಲ್ಲನ್ನು ರಾತ್ರಿ ಹಾಸಿಕೊಂಡು ವನದ ರಂಜಳಿಗೆಯೊಳಗೆ ಬಿದ್ದುಕೊಳ್ಳುತಿದ್ದೆವು (ಮಾಮಟಾ. ೦೬೩):ಬರೀ ಪ್ಯೆಯಲ್ಲಿ ಎಂದಿನ ರಂಜಳಿಗೆಯಲ್ಲಿ ಕೂತುಕೊಂಡೆವು (ಮಾಮಟಾ. ೦೬೪). [<ಪ್ರಾ. ರಂಜಣ./ಮರಾ. ರಾಂಜಣೀ, ರಾಂಝಣೀ]

ರಂಜನ (ನಾ). ೧. ಬಣ್ಣಹಾಕುವಿಕೆ. ೨. ಬಣ್ಣ; ವರ್ಣ. ೩. ಸಂತೋಷವನ್ನುಂಟು ಮಾಡುವಂತಹುದು. ೪. ಸಂತೋಷ ; ಆನಂದ. ೫. ಕೆಂಪುಚಂದನ : "ಶಿಲಪರ್ಣೀ, ಪತ್ರಾಂಗಂ, ರಂಜನಂ, ರಕ್ತಚಂದನಂ, ಕುಚಂದನಂ – ಇ ಕೆಂಪುಬಣ್ಣದ ಚಂದನವೃಕ್ಷದ ಪೆಸರುಗಳು" (ಸಿದ್ಧಾಂತಿ. ೨೦೮). [ಸಂ.]

ರಂಜನಿ (ನಾ). ೧. ಒಂದು ಬಗೆಯ ಗಿಡ ; ನೀಲಿಗಿಡ. ೨. ಅರಿಸಿನ. ೩. [ಸಂಗೀತ] ಒಂದು ರಾಗದ ಹೆಸರು: ರಂಜನಿ–ಚಕ್ರವಾಕ ಮೇಳಕರ್ತ ಧರ್ಮಾವತಿಯಲ್ಲಿ ಜನ್ಯ (ಸಂಗೀತಂ. ೨೩೭). [ಸಂ. ರಂಜನೀ]

ರಂಜನೆ (ನಾ). ೧. ಬಣ್ಣ ; ವರ್ಣ. ೨. ಮೆರುಗು ; ಕಾಂತಿ . 'ರಂಜನೆಗೈ' ಪರಾ. ೩. ಅಲಂಕಾರ ; ಶೋಭೆ : ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದಟ ಗಂಜಳ ಬಿಡದಣ್ಣಾ (ಬಸವ. ೯೩). 'ರಂಜನೆವಡೆ' ಪರಾ. ೪. ಉಲ್ಲಾಸ ; ಸಂತೋಷ: ಆ ಮಾತು ಆ ಕಥೆ ಆ ನಗೆ ಆ ಬಗೆ ಮೆಚ್ಚುವೊಲೊರೆವ ಕೌಶಲವು ರಂಜನೆಯಾಯಿತು ಸುತ್ತಣ ಜನರಿಗೆ (ಇಂದ್ರಕು. ೦೦-೩೬). [ಸಂ. ರಂಜನ]

ರಂಜನೆಗೈ (ಕ್ರಿ). ಬಣ್ಣಹಾಕು : ಮುನ್ನುಳ್ಳ ಮಣಿಪುಂಜಮಂ ರಂಜನೆಗೈದು ತರವಟಿಂದು ಸರಂಗೊಳಿಸಿ ನವೀನಕಂಠಾಭರಣವೆನಿಸುವಂತೆ (ಶಬ್ದಾ. ೨). [ರಂಜನೆ + ಗೈ (<ಕೆಯ್₁)]

ರಂಜನೆವಡೆ (ಕ್ರಿ). ಶೋಭೆಯನ್ನು ಪಡೆ ; ಚೆಲುವಾಗು : ಭರತಮಿಳಿತದಿಂದಾ ನೀರ ಭಂಡಾರವು ಪಿರಿದು ರಂಜನೆವಡೆದಿತ್ತು (ಶ್ರೀಶಾಂ. ೦-೨೯). [ರಂಜನೆ + ಪಡೆ₁]

ರಂಜಳಿಗೆ 'ರಂಜಣಿಗೆ' ನೋ.

ರಂಜಾನ್ 'ರಮಜಾನು' ನೋ.

ರಂಜಿ 'ರಂಜ' ನೋ.

ರಂಜಿಕೆ 'ಬಂಜಿಕೆ₂' ನೋ.

ರಂಜಿತ (ಗು). ೧. ಬಣ್ಣ ಹಾಕಿರುವ. ೨. ಸಂತೋಷಪಡಿಸುವ ; ಆನಂದವನ್ನುಂಟುಮಾಡುವ : ರಂಜಿತಮಧುಮಧುಕರಚಯಮಂ ಜಿತ ನಾನಾಪ್ರಸೂನಚಯ(ಮಂ). . . ಕೊಯ್ದಳ್ (ಕ್ಷತ್ರ. ೬-೬೩). ೩. ಸಂತೋಷಗೊಂಡ. (ನಾ). ೪. ಚೆಲುವಾದುದು; ಮನೋಹರವಾದುದು. [ಸಂ.]

ರಂಜಿಸು (ಕ್ರಿ). ೧. ಹೊಳೆ ; ಪ್ರಕಾಶಿಸು : ಅರ್ಥಾಭಾಸದಿನಕ್ಷರಸಾರ್ಥಮನುಚ್ಚರಿಸೆ . . . ರಂಜಿಸದ ಪಳಿಕು ಮಣಿಯವೊಲಿರದೇ (ಜಗಮಿ. ೦-೦೪) ; ಚಕ್ರವಾಕದ ತಗಹು ಕಟ್ಟುದು ಹೇಳಿಸಲು ರಂಜಿಸಿತು ದೀಪಾಳಿ (ಕುಮಾರರಾಮ. ೦೩-೫೪). ೨. ಶೋಭಿಸು ; ಮನೋಹರವಾಗು : "ರಂಜಿಸು–ಶೋಭಾಯಾಂ, ರಾಗೇ ಚ (ಬಣ್ಣಹಾಕು)" (ಕದಾಮಾ) ; ಅವುದು ಚೆಲ್ವುವೆತ್ತು ರಂಜಿಸುಗುಮದರ್ಕದಂ ಸಮುಚಿ . . . ಭೋಗಿಸಿದಂ ಗುಣಾರ್ಣವಂ (ಪಂಪಭಾ. ೦೪-೩೬) ; ಆತನ ಕಯ್ಯೊಳ್ ರಂಜಿಪಕ್ಷಾವಳಿ ನಡುಗಿದುದು (ಶಾಂತಿಪು. ೭೩೬); ನವಾಕಾಶಸ್ಫಟಿಕದ ಪಾವುಗೆಯಂ ಮೆಟ್ಟುತ್ತೆಚಿಯಿನ ಸಜ್ಜೆಭವನೆಗೆ ಬರ್ಪ ಸುದತೀಮಣಿ ರಂಜಿಸಿದಳ್ (ಜಯನೃ. ೨-೫೦). ೩. ಉದ್ರೇಕಗೊಳಿಸು; ರಾಗಾವೇಶಗೊಳ್ಳುವಂತೆ ಮಾಡು : ಒಸಗೆಗಮುತ್ಸಾಹಕ್ಕಂ ಸಸಿಯುದಯಂ ರಂಜಿಪಂತೆ ಕಳ್ಳಂಗಂ . . . ಆ ತೆಜದಿಂ ರಂಜಿಸ ಲಕ್ಕುಮೆ (ರಸರತ್ನ. ೪-೨೯) ; ಉತ್ತಮರತಿಸಾಮ್ರಾಜ್ಯವ ಹರುಷದ ಮೊತ್ತದೆ ರಂಜಿಸಿ ಬೇಗ (ಕಂಪಸಿ. ೦೦-೩೦). ೪. ಸಂತೋಷಗೊಳಿಸು ; ಹಿಗ್ಗುವಂತೆ ಮಾಡು : ವಿನಯಂ ಸಹಜಂ ಕೃತ್ರಿಮವೆನಿಸಿದವು ಇವೆರಡುಂ ನಿನಗೊಳವಾರಾರ ಮನಮುಮಂ ರಂಜಿಸವೇ (ಅಂಧ್ರ. ೦೪-೬೩); ಸೊಕ್ಕಾನೆ ಕಂದುರೆಯ ವೈಹಾಳಿಯಂಕಣದಿಕ್ಕೆ ಕಣ್ಣನಕೆ ರಂಜಿಸಿತು (ಕೋಟಕ. ೨-೩೩) ; ಸಜ್ಜಾತಿಸತಿಯರಿನಿಯರ ಸನ್ನಿಧಿಯೊಳು ಲಜ್ಜೆವೆರೆಸಿ ರಂಜಿಪುದು (ಪಂಬಿ. ೩-೩೯). ೫. ಬೆಳಗಿಸು ; ಪ್ರಕಾಶಗೊಳ್ಳುವಂತೆ ಮಾಡು : ಸಕಿವನಾಪತ್ತುಗಳನಂತೆ ಲೀಡಿಸುವನಾಶಾಪಾಶವಂ ಛೇದಿಸುವೆನೂರ್ಜಿತಭಕ್ತಿಯಂ ರಂಜಿಸುವನನವರತ (ಬಸವ. ೩೬-೩೯). [ರಂಜನ + – ಇಸು]

ರಂಜು (ನಾ). ಧೂಳು ; ರಜ : 'ಕಾಲುರಂಜು' ಪರಾ. [<ರಜ₁]

ರಂಜೆ 'ಬಂಜೆ' ನೋ.

ರಂಟೆ 'ರೆಂಟೆ₁' ನೋ.

ರಂಡೆ (ನಾ). ೧. ಗಂಡನನ್ನು ಕಳೆದುಕೊಂಡಿರುವವಳು : ವಿಧವೆ : ಸುರಲೋಕವೆ ಪಾಳಾದ್ಯೆ ಸರಸ್ವತೀದೇವಿ ರಂಡೆಯಾದೌ (ಶಾರಂಭ. ೯೦೦); ಜೋಯಿಸನ ಮಗಳ್ ಪಸೆಯ ಮೇಲೆ ರಂಡೆಯಾನಳ್ (ಧರ್ಮಾಮೃ. ೦೩-೩೬); ಅನ್ಯಕಾರಿ ಅತ್ತೆ ಗನ್ನಘಾತಕಿ ರಂಡೆ ಅತ್ತಿಗೆಯು ಎನ್ನ ಗೋಳು ತಾನೆ ವಾಹವೆಂದಿಗಹುದೊ (ಪುರಂದ. ೨-೬೮-೩). ೨. ಹಾದರ ಮಾಡುವವಳು ; ಸೂಳೆ ; ಜಾರೆ : ರಂಡೆಯೊಳಂ ಧೃಷ್ಟೆಯೊಳಂ . . . ನೆರೆದೊಡಟಾಗು ಮಾಯುಂ ಶ್ರೀಯುಂ (ಪಂಚತಂ. ೯-೪); ರಂಡೆ ರಜಕಾಂಗನೆ . . . ವೇರಡಗಿತ್ತಿಯರಿಬ ಪೆಂಡಿರ ನೆರೆಗೊಂಡೊಡಂದಚಿಗೆ ಸಜ್ಜನವೆಂಡಿತಿ ಕೆಟ್ಟಳೆಂಬುದಂ (ಹೊಸ್ತ ಸು. ೬-೦೦೭); ರಂಡೆಯಾಸೆಗೆ ರವಣಿಯುಂದವ ಕೆಡಿಸಿದಂತಾಯ್ತು (ಕೌಶಲಾ. ೩೯-೩೦). ೩. ಒಂದು ಬಯ್ಗುಳು : "ನಾನು ರಂಡೆಯೋ ? ನೀನು ರಂಡೆ" ಎಂದು ಗದರಿಸಿ, ಬಾಗಿಲು ಮುಚ್ಚಿ ಒಳಗೆ ಮಲಗಿಕೊಂಡಳು (ಹಳ್ಳಿಹಾ. ೦೦೪). ೪. ಒಂದು ಬಗೆಯ ಔಷಧೀಸಸ್ಯ. [ಸಂ. ರಂಡಾ]

ರಂಡೆತನ (ನಾ). ವಿಧವೆಯಾಗಿರುವಿಕೆ ; ವೈಧವ್ಯ : ದಾಯಬಿಡದಟ್ಟಿಮೆಟ್ಟಿಡಿವ ಡಂಬಿವ ರಂಡೆತನಕ್ಕೆ ಪೂಣ್ದಭಿಪ್ರಾಯಮೆ . . . ಸಿಂಹನಂದಿಗಮನಿಂದಿತಗಂ (ಶಾಂತಿಪು. ೬-೯೯); ಮುಂದಿನ ವರ್ಷದಿಂದ ಅತ್ತೆಯ ರಂಡೆತನವನ್ನೂ ನೋಡತೊಡಗಿದರು (ಮರಳಿ. ೯೦). [ರಂಡೆ + – ತನ]

**ರಂಡೆಹುಣ್ಣಿವೆ** (ನಾ). ಮಾರ್ಗಶೀರ್ಷಮಾಸದ ಹುಣ್ಣಿಮೆ ; P ಕಾರ್ತವೀರ್ಯನು ಜಮದಗ್ನಿಯಿಂದ ಕಾಮಧೇನುವನ್ನು ವಶಪಡಿಸಿಕೊಳ್ಳಲು ಪ್ರಯತ್ನಪಟ್ಟು ಜಮದಗ್ನಿಯು ಮೂರ್ಛೆ ಹೋಗುವಂತೆ ಆಘಾತಗೊಳಿಸಿದನು. ಆಗ ರೇಣುಕೆಯು ವೈಧವ್ಯದ ಹೆದರಿಕೆಯಿಂದ ಗೋಳಾಡಿದಳು. ಇದು ಮಾರ್ಗಶೀರ್ಷಮಾಸದ ಹುಣ್ಣಿಮೆಯಂದು ನಡೆದುದೆಂಬ ನಂಬಿಕೆಯಿದೆ : ಮಾರ್ಗಶೀರ್ಷಪೂರ್ಣಿಮೆಗೆ ರಂಡೆಹುಣ್ಣಿವೆಯೆನ್ನುವರು. ಈ ಜಾತ್ರೆಯಲ್ಲಿ ದೇವತೆಯ ಕೈಯೊಳಗಿನ ಬಳೆಗಳನ್ನು ಒಡೆದು ರಂಡೆತನ ಬಂದಂತೆ ತೋರಿಸುವರು (ಕರ್ನಾಗ. ೫೦೭) ; ರೇಣುಕಾ ಭಕ್ತರು ಆ ದಿನವನ್ನು ರಂಡೆಹುಣ್ಣಿವೆ ಎಂದು ಹೇಳುತ್ತಾರೆ (ಜಾಹಬ್ಬ. ೬೦).
[ ರಂಡೆ + ಹುಣ್ಣಿವೆ (< ಹುಣ್ಣಿಮೆ) ]

**ರಂಡೋಲು** ' ರಮಡೋಲು ' ನೋ.

**ರಂಢೋಲು** ' ರಮಡೋಲು ' ನೋ.

**ರಂದಣ**, ಲಂದಣ (ನಾ). ಅಡುಗೆಯ ಕೆಲಸ ; ಅಡುಗೆಮಾಡುವಿಕೆ : ' ರಂದಣಿಗ ' ಪರಾ. **ಲಂದಣ** : ' ಲಂದಣಿಗ ' ಪರಾ.
[ < ಸಂ. ರಂಧನ ]

**ರಂದಣಗಿತ್ತಿ**, ಲಂದಣಗಿತ್ತಿ (ನಾ). ಅಡುಗೆ ಮಾಡುವವಳು : ಅನುಶ್ರುತವ ಮಾಡಿಹನೆಂದು ಉಪ್ಪರಗುಡಿಯನೆತ್ತಿ ಮಾಡುವ ಭಕ್ತನ ಮನೆ ಅಟ್ಟೆಕ್ಕುವ ರಂದಣ [ಪಾಠಾಂ. ಲಂದಣ, ಅಂದಣ]ಗಿತ್ತಿಯು ಮನೆ (ತಪ್ಪವ. ೪. ೩೩೪-೬೦೪). ' ಅಂದಣಗಿತ್ತಿ ' ಪರಾ. **ಲಂದಣಗಿತ್ತಿ** : ಅನವರತ ಮಾಡಿಹನೆಂದು ಉಪ್ಪರಗುಡಿಯ ಕಟ್ಟಿ ಮಾಡುವ ಭಕ್ತನ ಮನೆಯುದು ಲಂ[ಪಾಠಾಂ. ಅಂ]ದಣಗಿತ್ತಿಯು ಮನೆ (ಬಸವ. ೨೨೬) ; ಲಂದಣ [ಪಾಠಾಂ. ಳ] ಗಿತ್ತಿಯಂತೆ ಬಂದ ನಿಂದ ಭಕ್ತರಲ್ಲಿ ಹೊಸತನದಂದವ ಹೇಳಿ (ಸಶವ.೪. II, ೪೨೦-೦೨೦೧).
[ರಂದಣಿಗ + — ಇತ್ತಿ]

**ರಂದಣಿಗ**, ಲಂದಣಿಗ (ನಾ). ಅಡುಗೆಯ ಕೆಲಸವನ್ನು ಮಾಡುವವನು ; ಬಾಣಸಿಗ : ' ರಂದಣಗಿತ್ತಿ ' ಪರಾ. **ಲಂದಣಿಗ** : ಭಕ್ತರೆಲ್ಲರೂ ಲಂ[ಪಾಠಾಂ. ಅಂ]ದಣಿಗರಾಗಿ ಹೋಯಿತ್ತು ಜಂಗಮವೆಲ್ಲವು ಉಪಜೀವಿಗಳಾಗಿ ಹೋಯಿತ್ತು (ಅವತಂ. ೦೦೬-೪೬೦) ; ತತ್ಪುರದೊಳಿರ್ದ ವಿಶಾಖನಂದಿ ಪಸಿವಂ ನಂದಿಸಲೆಂದು ಲಂದಣಿಗರ ಮಂದಿರಕ್ಕೆ ಪೋಪಮಂ ಮುಂದೆ ಸಂದಣಿಸಿ ನಿಂದ ನೆರವಿಯುಂ ಭೋಂಕೆನೆ ಕಂಡು (ಶರ್ಗಪು. ೩-೦೨ ವ).
[ರಂದಣ + — ಇಗ]

**ರಂದಿ**, ರಂದೆ (ನಾ). ೧. (ಉಕ) ಅಸ್ತವ್ಯಸ್ತವಾಗಿ ಹರಡಿದ ವಸ್ತು ; ಕಸ : ಒಲೆಯ ಮುಂದೆ ರಂದಿ ಹರಡಿತ್ತು (ಸ್ಕೃತಿಶ. ೨೬೬) : ಸಿಗರೇಟಿನ ಬೂದಿ . . . ತುಂಡು, ಟೇಬಲ್ಲಿನ ಆಸುಪಾಸು ರಂದಿ ಹರವಿದ್ದವು (ಬೀಕಶ. II, ೨೯೬). ೨. ಗೊಂದಲ ; ಗಲಾಟೆ : ಮಾತುಮಾತಿಗೆ ಸಿಟ್ಟು ಸೆಡವು, ರಂದಿ, ರಸಕಸಿ (ಹೊಸಕ್ಷ. ೦೯೬) ; ಇಷ್ಟೆಲ್ಲ ರಂದಿಯಾದರೂ ಆಗುವ ಕಾರಣವಿರಲಿಲ್ಲ (ಮುಗಿಶು. ೧೦೬). **ರಂದೆ** : ೨. ನಮ್ಮ ಖಾನಾವಳಿಗೆ ಪ್ರವಾಸಿಗರ ರಂದೆ ಇಲ್ಲ (ರಕ್ತರ್ತ. ೬೦) [← ಮರಾ. ರೇಂದ, ರೇಂದಾ]

**ರಂದು** (ನಾ). ಒಡಕು ; ನ್ಯೂನತೆ ; ದೋಷ : ಸೋಕವರುಗಳು ಬಿರಬೇಕು ಪನ್ನೆರಡುವರುಷ ವನವಾಸಂಗಳ ಪೊಂದೊಂದು ವರುಷ ಮಜ್ಞಾತವಾಸಬಿದರೊಳಗೆ ರಂದು ಕಂಡರೆ ಮರಳಿಬರಬೇಕು ಮತ್ತೆ ನಾ ಹಿಂದೆ ಪೇಳಿರ್ದ ಮರಿಯಾದೆಯೊಳ್ (ತುರಂಗ. ೨೫-೪೪).
[ < ಪ್ರಾ. ರಂಧ. / ಸಂ. ರಂಧ್ರ]

**ರಂದೆ** ' ರಂದಿ ' ನೋ.

**ರಂಧ್ರ** (ನಾ). ೧. ಕಂಡಿ ; ತೂತು : "ನಿಮ್ನಂ . . . ರಂಧ್ರಂ ರೋಕಃ . . . ಈ ೧೫ ಕುಳಿ" (ಹಲಾಯು. ೦೦೩-೨) ; ಗೋಡೆಗೆ ತಗಲು ಹಾಕಿರುವ ಪಟಗಳ ಅಂಚಿನಲ್ಲಿ ಅಲ್ಲಿಯ ಸಣ್ಣ ರಂಧ್ರಗಳ ಸುತ್ತಮುತ್ತ . . . ತಗಣೆಗಳ ಬೀಡು (ಹಂಬಿಶು. ೪೬). ೨. ಸೀಳು ; ಬಿರುಕು : (೪). ೩. ಮನುಷ್ಯನ ಶರೀರದಲ್ಲಿರುವ ಬಾಯಿ, ಮೂಗು, ಕಿವಿ ಮೊದಲಾದ ಒಂಬತ್ತು ತೂತು ; ನವದ್ವಾರ: ಪ್ರಚುರಂ ಪತ್ರೊಳಗಾಗೆ ರಂಧ್ರವನೆ ಕೈಗೊಂಡೆಂಟನೀಗಳ ಬಿಟ್ಟು (ಸೋಮೇಶ. ೦೦೦). ೪. ತಪ್ಪು ; ನ್ಯೂನತೆ ; ದೋಷ : ' ರಂಧ್ರಾನ್ವೇಷಣ ' ಪರಾ. ೫. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : ಭಾವ ರಂಧ್ರನಂದಪದಾರ್ಥಂ . . . ನವಮವೊಂಭತ್ತೆನಿಕ್ಕುಂ (ಸ್ವಪಜಾ. ೪-೪). ೬. [ಜ್ಯೋತಿ] ಎಂಟನೆಯ ರಾಶಿ ; ವೃಶ್ಚಿಕರಾಶಿ : ರಂಧ್ರಗತಿಯಾದಿತ್ಯರೊಂದಾಗಿ ಅರ್ಥಿಸುತ ಅಂದಿನ ತಿಥಿಯನೊಡಗೂಡೆ ನಕ್ಷತ್ರ ಮುಂದೆ ಬಂದಕ್ಕು (ಸರ್ವಜ್ಞ. ೧೫೬೬).
[ಸಂ.]

**ರಂಧ್ರಪಾತ್ರೆ** (ನಾ). ೧. (ದೇವತಾವಿಗ್ರಹಗಳಿಗೆ ಅಭಿಷೇಕಮಾಡಲು ಬಳಸುವ) ತೂತಿರುವ ಪಾತ್ರೆ ; ಧಾರಾಪಾತ್ರೆ. ೨. ತೂತುಮಾಡಿದ ಪಾತ್ರೆಯನ್ನು ನೀರಿನಲ್ಲಿ ಇಟ್ಟು, ಅದು ತುಂಬಿಕೊಳ್ಳುವಷ್ಟು ಕಾಲವನ್ನು ನೋಡಿ, ಸಮಯವನ್ನು ಅಳೆಯುತ್ತಿದ್ದ ಪಾತ್ರೆ ; ಗಳಿಗೆ ಬಟ್ಟಲು : ಆಗ ಅರ್ಧರಾತ್ರಿ ಕಳೆದು ಒಂದು ಜಾವಕಾಲವಾಗಿತ್ತು. ಕಾತರರಾಗಿದ್ದ ಜನಗಳ ದೃಷ್ಟಿ ಈಗ ರಂಧ್ರಪಾತ್ರೆಯ ಮೇಲೆ ಬಿದ್ದಿತು (ಶಾಂತಲಾ. ೨೫೬).
[ಸಂ. ರಂಧ್ರಪಾತ್ರ]

**ರಂಧ್ರಾನ್ವೇಷಣ** (ನಾ). ಮತ್ತೊಬ್ಬರ ತಪ್ಪನ್ನು ಹುಡುಕುವಿಕೆ ; ದೋಷಾನ್ವೇಷಣೆ : ಕೃತಿಗಳನ್ನು . . . ತುಂಡುತುಂಡಾಗಿ ಕತ್ತರಿಸಿ, ರಂಧ್ರಾನ್ವೇಷಣ ಅಥವಾ ರಂಧ್ರೀಕರಣ ಮಾಡಲು ಸ್ವಭಾವತಃ ಪ್ರವೃತ್ತಿ ಉಂಟಾಗಿಲ್ಲ (ಶಿಬಿಂರ. II, ೦೬). [ಸಂ.]

**ರಂಧ್ರಾನ್ವೇಷಿ** (ಗು). ೧. ತಪ್ಪನ್ನು ಹುಡುಕುವ : ತಪ್ಪುಹಿಡಿಯುವ ; ಹುಳುಕು ಹುಡುಕುವ ; ದೋಷದೃಷ್ಟಿಯ ; ರಂಧ್ರಾನ್ವೇಷಿ (Censorious. ಇಂಕಿಶ). (ನಾ). ೨. ತಪ್ಪು ಹುಡುಕುವವನು : ರಂಧ್ರಾನ್ವೇಷಿಗಳ ಸ್ನೇಹ ಅಪಾಯಕಾರಿಯಾದುದು (ಕಿಶ). [ಸಂ. ರಂಧ್ರಾನ್ವೇಷಿನ್]

**ರಂಧ್ರಿ** (ನಾ). (ಹಿಟ್ಟು, ತರಿ ಮುಂತಾದುವನ್ನು ಶೋಧಿಸಲು ಬಳಸುವ) ಸಣ್ಣತೂತುಗಳಿರುವ ಒಂದು ಬಗೆಯ ಸಾಧನ ; ಜರಡಿ ; ಒಂದರಿ : "ಚಾಳನಿ ರಂಧ್ರಿ ಸಾರಣಿಗೆ" (ಹಲಾಯು. ೬೨-೨೦). [ಸಂ. ರಂಧ್ರಿನ್]

**ರಂಧ್ರಿಸು** (ಕ್ರಿ). ತೂತು ಕೊರೆ ; ಛಿದ್ರಿಸು : ಹೂಸಿ ಹುತ್ತಿನ ಮಣ್ಣ ರಂಧ್ರಿಸಿ ಕಾಸಿದವು ಫಣಿಕುಲವ. ಮೇಣ್ಕೊಳ್ಳಸದಲಿ ಡಾವರಿಸಿದವು ಕಿಡಿ ಧೂತಧೂಮದಲಿ (ಕುಮಾರ. ೨೦-೬೦). [ರಂಧ್ರ + — ಇಸು$_3$]

**ರಂಧ್ರೀಕರಣ** (ನಾ). = ರಂಧ್ರಾನ್ವೇಷಣ ; ಕೃತಿಗಳನ್ನು . . . ತುಂಡು ತುಂಡಾಗಿ ಕತ್ತರಿಸಿ, ರಂಧ್ರಾನ್ವೇಷಣ ಅಥವಾ ರಂಧ್ರೀಕರಣ ಮಾಡಲು ಸ್ವಭಾವತಃ ಪ್ರವೃತ್ತಿ ಉಂಟಾಗಿಲ್ಲ (ಶಿಬಿಂರ. II, ೦೬). [ಸಂ.]

**ರಂಪ$_1$** (ನಾ). ೧. ಚರ್ಮ ಮೊದಲಾದುವನ್ನು ಕತ್ತರಿಸುವ ಸಾಧನ : ಘೋರರಂಪಗಳಿಂದ ಮನುಜರನ್ನು ವೀರರು ಕಡಿದು ಹಾಕಿದರು (ಸಾಪಂಗ. ೩೬). ' ರಂಪಿಗೆ ' ಪರಾ. ೨. ಗರಗಸ : ಗರಗಸ, ರಂಪ (Saw. ಇಂಕಿಶ). [ದೇ.II ತಮಿ. ಇರುಮ್ಬು ; ತೆಲು. ಉಂಪ ; ಪರ್ಜಿ. ರಂಪ]

**ರಂಪ$_2$**, ರಂಪು (ನಾ). ಗದ್ದಲ ; ರಗಳೆ ; ಹಗರಣ : ಕಾರ್ತವೀರ್ಯಾರ್ಜುನನೆಂಬವಂ ರಂಪದಿಂ ನೀರ್ತರುಬಿ ಬಿಡುತಲ್ಲಿ ನಾರಿಯರ ಲಂಪಟದಿ ಕ್ರೀಡಿಸುತ್ತಿರ್ದಪಂ (ಕರಕು. ೦೩-೩೩) ; ನೀವು ಹಾದಿ — ಬೀದಿ ರಂಪ ಎಬ್ಬಿಸಬೇಡಿ (ಗಂಗಾವ. ೪೬). **ರಂಪು** : ಆ ಆಯೋಗ್ಯನ ಬಳಿ ನಾನು ಹೆಣ್ಣು ಕೇಳಲು ಹೋಗುವುದಿಲ್ಲವೆಂದು ಮೊದಲು ಗುಂಡೂರಾಯರು ರಂಪು ಮಾಡಿದ್ದರು (ಮಹಿಳಾವ. ೩೫); ಅವಳ ಜತೆಗೆ ಲಲಿತೆಯದೂ ರಂಪು. ನನಗೆ ಉಭಯಸಂಕಟ (ಕಾದಂಬಾಂ. ೨೪೫). ' ರಂಪಾಟ ' ಪರಾ.
[ದೇ.II ಕೊಡ. ರಂಪ ; ತೆಲು. ರೇಪು. ಉಂಪು ; ಕೋಲಾ. ರಾಪಂ]

**ರಂಪಣಿ₁** (ನಾ). = ರಂಪ₂ : ಹರಕಂತ್ರರ ಮಾತೃಭಾಷೆ ಕನ್ನಡವಾದರೆ, ಗಾಬೀತರ ಭಾಷೆ ಮರಾಠಿ. ಈ ಎರಡು ಪಾಡಿಗಳಲ್ಲಿ ಎಷ್ಟೋ ರಂಪಣಿಗಳು ನಡೆಯುತ್ತಿದ್ದವು (ಹಾಸಳ. ೭). [< ರಂಪ₂]

**ರಂಪಣಿ₂** (ನಾ). (ಕರಾ) ದೊಡ್ಡ ಬಲೆ : ಈ ಹೊತ್ತು ರಂಪಣಿ ಹಾಕಿದ್ದರೆ ಬಂಗಡೆ ರಾಶಿಗಟ್ಟಲೆ ಬೀಳಬಹುದಿತ್ತು (ಮೂರುದಾ. ೬೫) ; ಬಂಗ್ಡೆ, ಕಾಣೆ ಇವತ್ತು ಇಲ್ಲ. . . ನಿನ್ನೆಯ ರಂಪಣಿಗೆ ಬೀಳಲಿಲ್ಲ (ಹೊಸಕ್ಕಿ. ೪೯).
[ ← ತುಳು. ರಂಪೊಣಿ ]

**ರಂಪಾಟ**, ರಂಬಾಟ, ರಂಭಾಟ (ನಾ). = ರಂಪ₂ : ಯಾಕೆ ಗಂಗವ್ವ ಇಷ್ಟು ರಂಪಾಟ (ಮುಳ್ಳಹಾ. ೦೩೪) ; ಈ ವಿಚಾರವು ನಮ್ಮ ಭಂಡವಾಳದ ಮಾಲಕರಿಗೆ ತಿಳಿದುಹೋದರೆ ಬಹಳ ರಂಪಾಟವಾದೀತು (ಕೃರಾಳ. ೭೩). **ರಂಬಾಟ** : ತಾಯಿಯ ರಂಬಾಟಕ್ಕೆ ಹಾಗೂ ಗೆಳೆಯರ ಸಲಹೆಗೆ ಸೋತು ಹಸೆಯ ಮೇಲೆ ಕುಳಿತಿದ್ದನು (ಸಮುಪ್ಪೀ. ೦೬೦) ; ಬಾಯಿಗೆ ಬಂದ ಹಾಗೆ ಬೈದು ಬಹಳ ರಂಬಾಟ ಮಾಡಿದ್ದರು (ಮುಂಜಬು. ೪-೦೬೦). **ರಂಭಾಟ** : ಓರಿಯ ಹೆಂಡತಿ ಲಕ್ಷ್ಮಿಬಾಯಿ ಅತ್ತು ರಂಭಾಟ ಮಾಡಿದ್ದರೂ ಮದುವೆ ನಡೆದೇ ಹೋಯಿತು (ಗ್ರಾಮಾಹಿ. ೦೩೪) ; ಸುಮಿತ್ರೆ. . . ಬೆಳಗ್ಗೆ ಎಣ್ಣೆ ನೀರು ಹಾಕಿಕೊಳ್ಳುವಾಗ ರಂಭಾಟ ಹೂಡಿದಳು (ಏಣ್ಕಾರಿ. ೪೯).
[ ರಂಪ₂ + ಆಟ./ ತುಳು. ರಂಭಾಟ ]

**ರಂಪಿಗೆ** (ನಾ). ಚರ್ಮವನ್ನು ಕತ್ತರಿಸುವ ಸಾಧನ : ಶಿವನು. . . ಉಳಿ ರಂಪಿಗೆ ಚರ್ಮಗಳಂ ಪೊತ್ತುಕೊಂಡು ಮನೆಗೆ ಬರಲು (ಭೈರಸೂ. I. ೩೬೩); ಪಾದರಕ್ಷೆಯನ್ನು ಹೊಲಿಯುತ್ತಲಿದ್ದ ಶಿವಗಂಗೆಗೆ ಒಮ್ಮಿಂದೊಮ್ಮೆಲೆ ಜ್ವರ ವೇರಿತು. ರಂಪಿಗೆ, ಉಳಿ, ದಾರ ಮೊದಲಾದ ಸಾಮಾನುಗಳನ್ನೆಲ್ಲ ಡಬ್ಬಕ್ಕೆ ತುಂಬಿ. . . ದೇಹವನ್ನೊರಗಿಸಿದಳು (ನೀಪಮು. ೪೩).
[ ರಂಪ₁ + — ಇಗ್ಗೆ./ ತುಳು. ರಂಪಿ ; ತೆಲು. ರಂಪಿಯ, ರಂಪೆ./ ಹಿಂ. ರಾಂಪೀ; ಮರಾ. ರಾಂಪಾ, ರಾಂಪೀ ]

**ರಂಪಿಣಿ** (ನಾ). = ರಂಪಿಗೆ : " ರಂಪಿಣಿ= ಚರ್ಮಪ್ರಭೇದಿಕೆ ; ಚರ್ಮವನ್ನು ಕತ್ತರಿಸುವ ಕತ್ತಿ " (ಶ್ರಕ್ಕ). [ < ರಂಪ₁ ]

**ರಂಪು** ' ರಂಪ₂ ' ನೋ.

**ರಂಬಾಟ** ' ರಂಪಾಟ ' ನೋ.

**ರಂಬಾಲೂಟಿ**, ರಂಭಾಲೂಟಿ (ನಾ). = ರಂಪ₂ : ಇಜಾವುತ ಜವಂಗಳ ರಂಬಾರೂಟಿಯ ಹರಿದಾಡುತ ಕೊಲ್ಲುವರು (ಜ್ಞಾನಪ. ೦೩-೯೭). **ರಂಭಾಲೂಟಿ** : ಒಂದೇ ಕೋವಣ ಧರಿಸಿ ಹೆಗಲಿಗೆ ಒಂದೇ ಅರಿವೆ ಹಾಕಿಕೊಂಡು ಎಷ್ಟೆಲ್ಲ ರಂಭಾಲೂಟಿ ಮಾಡಿ ಓಡಿದ್ದಾರೆ (ಕೃಷಾಂಕ. ೨೬).
[ದೇ.॥ ತುಳು. ರಂಬಾರೂಟಿ, ರಂಭಾರೂಟಿ, ರಂಬಾರೊಟಿ ; ತೆಲು. ರಂಬಾರೂಲ್ಲು ]

**ರಂಬಿಸು** ' ರಮಿಸು ' ನೋ.

**ರಂಬೆ** (ನಾ). ೧. ಒಬ್ಬ ಅಪ್ಸರಸ್ತ್ರೀ ; ರಂಭೆ : "ರಂಬೆ — ರಂಭಾ= ಒಬ್ಬಳು ದೇವಸ್ತ್ರೀ " (ಕರ್ಣಕೋ. ೩೭). ೨. ಸುಂದರಿ ; ಚೆಲುವೆ : ತಿಂಗಳಿಗೆ ನೂರು ಮದುವೆಯು(ಯೂ)ಗಲೆಂದು ರಂಬೆ ತಕ್ಕೊಳ್ಳೆ ಕಳಸವ (ನಾಜಪ. ೦೦೯). [ < ಸಂ. ರಂಭಾ]

**ರಂಭ₁** (ನಾ). ಬಾಳೆ ; ಕದಳಿ : ಊರುದಂಡಂ ರಂಭಗಳ ಸೊಬಗನೀಳ ಸುತಿರೆ (ಚಿಶರ. ೦-೦೦೭). [ ಸಂ. ರಂಭಾ]

**ರಂಭ₂** (ನಾ). (?) : ಎನ್ನ ಮಾತು ನಿಮಗೆ ಅನ್ಯವೆ ರಂಭದ ಸಂಚಾರ ರಂಭಕ್ಕೆ ಕೇಡು ಕುರುಂಬದ ಸಂಚಾರ ರಂಭದ ಕೇಡು (ಸಳವ. II. ೪೨೦-೩೩). [ ? ]

**ರಂಭಣ** (ನಾ). ೧. ದನದ ಕೂಗು. ೨. ಅಪ್ಪುಗೆ ; ಆಲಿಂಗನ : ಕುಂಭಕರ್ಣಾನನೆಬ್ಬಿಸುವ ಸೌರಂಭವನು ಸಲೆ ನೋಡಲೆಂದಾ ಜಂಭಭೇದಿ ದಿಶಾಂಗನಾಸುರತೋಪಚಾರಕದ ರಂಭಣದ ರಮಣೀಯತರದೋಸ್ತಂಭ ಗಳನಗಲಿಸುತ ತಿಮಿರ ವಿಜೃಂಭಣನು ಆವರ್ದನಂಜರವ (ತೊರರಾ. ೭-೨೭-೦೯) ; ನಾನಾಪ್ರಕಾರದಿಂದೀಕ್ಷಿಸುತ್ತಿರುತಿರ್ದರೇನೆಂಬೆ ಕಣ್ಗಳಿರ ಪೊಳೆಗಳ್ಚಟುಭಟರ ಸೇನೆಯಂ ಪರಿವೇಷ್ಟಿಸೊಪ್ಪಿರ್ದವಗಲದೊಳ್ ಸೌರಂಭರಂಭಣದೊಳು (ವಂಕಾರಾ. ೦-೭-೦೪). P ಇಲ್ಲಿ ಕವಿಗಳು ಸಂಸ್ಕೃತದ ' ಪರಿರಂಭಣ ' ಎಂಬ ಶಬ್ದದ ಅರ್ಥವನ್ನು ಈ ಶಬ್ದಕ್ಕೂ ಸ್ವೀಕರಿಸಿರುವಂತಿದೆ. [ಸಂ.]

**ರಂಭಾಟ** ' ರಂಪಾಟ ' ನೋ.

**ರಂಭಾಲೂಟಿ** ' ರಂಬಾರೂಟಿ ' ನೋ.

**ರಂಭಾಶೂಲ್ಯಕ** (ನಾ). ಬಾಳೆಕಾಯಿಯನ್ನು ಬೆಂಕಿಯಲ್ಲಿ ಸುಟ್ಟು ತಯಾರಿಸುವ ಒಂದು ಬಗೆಯ ಖಾದ್ಯ : ಮಿಗಿಲಾಗಿ ಬಲಿದ ಬಾಳೆಯ ಕಾಯ ಸಿಪ್ಪೆಯಂ ತೆಗೆದು . . . ಕರ್ಬೊನ್ನ ಸಲಗೆಯೊಳು ಕಂಪೊಗೆವಂತೆ ಕೆಂಡದೊಳು ತಿರಿತಿರಿಹಿ ಕಾಸಿ . . . ಹುದಿಪ್ಪೊಣಾಸನಿಕ್ಕಲವು ತಾನೆ ರಂಭಾ ಶೂಲ್ಯಕಂ (ಸೂಶಾ. ೪-೬೭). [ಸಂ.]

**ರಂಭಾಸ್ತಂಭ** (ನಾ). ಬಾಳೆಯ ಗಿಡದ ಕಾಂಡ,– ಬುಡ : ಕದಳೀಸ್ತಂಭ: ರಂಭಾಸ್ತಂಭೋಪಮಾನೋರುಯುಗಳೆಯರ್ ಶಾತಕುಂಭರಂಭಾವನಂ ಗಳುಮಂ . . . ತೋಟಲ್ವಲ್ಲಿ (ಆದಿಪು. ೦೦-೯೩ ವ); ತೊಡೆಗಳ್ ರಂಭಾಸ್ತಂಭದ ಗೆತ್ತಗಳ್ (ಕಮದ. ೯೩ ಶ್ರಯೋ). [ಸಂ.]

**ರಂಭೆ** (ನಾ). ೧. ಒಂದು ಬಗೆಯ ಗಿಡ ; ಬಾಳೆಯ ಗಿಡ : ಕದಳಿ : " ರಂಭಾ, ಕದಳೀ, ಮೋಚಾ _ ಈ ೩ ಬಾಳೆ³ " (ಪಠಾಯು. ೩೨-೩೬) ; ಸಹಕಾರ ರಂಭೆ ದಾಡಿಮಫಲಂ (ಶ್ರಶುಶ್ರು. ೩-೨೦). ೨. ದೇವಲೋಕದ ಒಬ್ಬ ಸ್ತ್ರೀ,– ಅಪ್ಸರೆ : " ಘೃತಾಚೀ, ಮೇನಕಾ, ರಂಭಾ, ಊರ್ವಶೀ . . . ಅಚ್ಚರಸಿಯರ್" (ಪಠಾಯು. ೦೩-೬೬) ; ರಂಭೆ ರಂಗಂಬೊಕ್ಕಳ್ (೦ಣಾಪ. ೪-೦೦೭) ; ಹೇಷಿತಘೋಷಣಶ್ರವಣಮಾತ್ರವಿತ್ರಾಸನ ರಚಿತ ಜಂಭಾರಿ ದೇಹಪರಿರಂಭರಂಭಾತಿಪೋತ್ತಮೋರ್ವಶೀಸುಕೇಶಿಯೆಂಬ ಕೇಶಿಯುಮಂ. . . ಕರೆದು (ಜಗಪ. ೩-೨೨ ವ). ೩. ಸುಂದರಿ ; ಚೆಲುವೆ : ಈಗ ಊರಿಗೆಲ್ಲ ತಾನೇ ರಂಭೆಯೆಂದು ಮೆರೆದಾಡುತ್ತಿದ್ದಾಳೆಂತಲ್ಲ (ಮೂರುದಾ. ೧೬೦). ೪. ವೇಶ್ಯೆ ; ಸೂಳೆ. [ಸಂ. ರಂಭಾ]

**ರಂಭೋರು** (ನಾ). ೧. ಬಾಳೆಯ ದಿಂಡಿನಂತೆ ನುಣುಪು ಹಾಗೂ ದುಂಡಗಿರುವ ತೊಡೆ; ಸುಂದರವಾದ ತೊಡೆ : ಅಬ್ಜಗಂಧಮಿಭಕುಂಭ ಶ್ರೋಣಿ ರಂಭೋರು ಕಂತುನಿಷಂಗೋಪಮಜಂಘೆ (ಮರು. ೨-೦) ; ಆ ತರುಣಿ . . . ರಂಭೋರುವಿಭವಾನ್ವಿತೆಯಾಗಿಯುಂ (ರಾಜಶೇ. ೭-೬೦ ವ). ೨. ಬಾಳೆಯ ದಿಂಡಿನಂಥ ತೊಡೆಯುಳ್ಳವಳು : ರಂಭೋರು ಜಗದ್ವಿ ಜಯಾರಂಭಿ ಮನೋಭವಕರೇಣುವಂತೊರ್ವಳ್ ಕಿಬ್ಬಂಭೋಜದಲರ್ಗಳಂ ಕುಚಕುಂಭಂಗಳೊಳೊಟ್ಟಿಕೊಳ್ವಳೇನೊಪ್ಪಿದಳೋ (೦೯ಣಾಪ. ೦೩-೦೨೭). [ಸಂ.]

**ರಂಹ** (ನಾ). ರಭಸ ; ವೇಗ : ಝಂಝಾನಿಲನು ಪ್ರಚಂಡರಂಹದಿಂದ ಮೇಘಪಟಲವನ್ನು ಓಡಿಸಿ (ಶ್ರೀರಾಕ. ೩೯). [ಸಂ. ರಂಹಸ್]

**ರಕಂ**, ರಕಮು, ರಖಂ (ನಾ). ೧. ಧನ ; ಹಣ : ಅವನ ಪತ್ತೆಯನ್ನು ಹಚ್ಚಿದವರಿಗೆ ಕೆಲ ರಕಂನ್ನು ಕೊಡುವದಾಗಿಯೂ ಜಾಹೀರಪಡಿಸಲಾಗಿತ್ತು (ಸಮುತ . ೬೩). ೨. ರೀತಿ; ಬಗೆ : ಮೂವತ್ತು ವರುಷ ಆಗಿಹೋಯಿತು . . . ಆದರೂ ಇನ್ನೂ ಇದರ ರಕಂ ಸರಿಯಾಗಿ ಅರ್ಥವಾಗಿಲ್ಲ ನನಗೆ (ಸಾಹೇಬ. ೦೭೯). **ರಕಮು** : ೧. ರಕಮು ಸಹಿತ ಲೆಕ್ಕದ ಹೊಣೆಯನ್ನು ಅರ್ಧಾಂಗಿನಿಗೆ ಒಪ್ಪಿಸಿದವನು ತನ್ನ ಪರಮವಿಶ್ವಾಸವನ್ನು ವ್ಯಕ್ತಪಡಿಸುತ್ತಾನೆ (ಗಾಳಿ. ೦೯೨) ; ಭಾರಿ ರಕಮಿನ ವ್ಯವಹಾರಗಳಿಗೂ ಒಂದು ಮಿತಿಯನ್ನುವು ದಿರುವುದಿಲ್ಲ (ಶಕ್ತಿಗೋ. ೨೦). **ರಖಂ** : ೧. ಅವರಿಗೆ ರಖಂ ಬರೆಯದ

ಚೆಕ್ಕನ್ನು ಕೊಡುವ ಯೋಜನೆಯು ಅದಾಗಿತ್ತು (ಬೆಂಕನ್. ೦೯೯). ೨. ರಾಜಕೀಯ ಒರಟು ಕೆಲಸ. ಅದಕ್ಕೆ ಬೇಕಾದದ್ದು ಮೊದಲನೆಯ ರಕಂ ಬುದ್ಧಿಶಕ್ತಿಯಲ್ಲ (ಅಕ್ಕ್ಶಾ. ೩೨೧). ೩. ಒಟ್ಟು : ಸಗಟು : ಆದರೆ "ರಕಂ" ವ್ಯಾಪಾರವಾಗುವಾಗಲೂ, ಎರಡು ದೂರದ ಊರಿನ ವ್ಯಾಪಾರಿಗಳೊಡನೆ ವ್ಯಾಪಾರ ನಡೆಯುವಾಗಲೂ ಹೀಗೆ ನಡೆಯಲು ಸಾಧ್ಯವಿಲ್ಲ (ಶಾಂಕೃ. II. ೯೯೩). [←ಅರ. ರಕ್ಮ್ : ಹಿಂ. ರಕಮ್ ; ಮರಾ. ರಕಮ್, ರಕ್ಕಮ್]

**ರಕಂವಾರು** (ಅ). ವಸ್ತುಗಳ ಬೆಲೆ ಮತ್ತು ದರ್ಜೆಯನ್ನು ಅನುಸರಿಸಿ : ಅಂಗಡಿಯಲ್ಲಿ ಬಟ್ಟೆಯನ್ನು ರಕಂವಾರು ಜೋಡಿಸಿದ್ದಾರೆ (ಕೂ೩).
[ ← ಅರ. ಹಿಂ. ಮರಾ. ರಕಮ್‌ವಾರ್]

**ರಕಮು** ' ರಕಂ ' ನೋ.

**ರಕಾಬು** ' ರಿಕಾಬು ' ನೋ.

**ರಕಾರ** (ನಾ). ' ರ ' ಎಂಬ ಅಕ್ಷರ : ಹಳಗನ್ನಡಪದಗಳಲ್ಲಿ ರಕಾರ ಬಂದರೇ ಒಂದರ್ಥ, ಱಕಾರ ಬಂದರೇ ಮತ್ತೊಂದು ಅರ್ಥ (ದ್ರಾವಿ. ೩೩೦). [ಸಂ.]

**ರಕುತ**, ರಗುತ (ನಾ). ನೆತ್ತರು ; ರಕ್ತ : ರಕುತದ ಕಡಲೊಳರೆಜೀವದ ಭಟರು ಬಾಯ್ಬಿಡುತ ತೇಕಾಡಿದರು (ಕುವ್ಯಾದ್ರೋ. ೫-೧೧); ಸೊಕ್ಕಿದ ಕುಂಭಾಂಡ ರಣದೊಳು ರಕುತವ ಕಕ್ಕಿದ (ಮೋಹಕ. ೪೦-೬೨). **ರಗುತ:** "ಕನ್ನೀರು ರಗುತ ನೆತ್ತರು ಶೋಣಿತಂ" (ಕಬ್ಬಮಂ. ೪೩): ರಗುತಗಳ ತೋಳದಂಬನುಗಿದೇಱುಗಳಲಾಪಥಿಯ ಬಗೆಗೊಳಿಸಿ (ಕೊರರಾ. ೬-೪೩-೦೪).
[< ಸಂ. ರಕ್ತ]

**ರಕುತಗುಡುಹಿ** (ನಾ). ರಕ್ತವನ್ನು ಕುಡಿಯುವವನು ; ರಾಕ್ಷಸ : ಕೂಡಿದ ಕಡುಹುಕಾಱರ ರಕುತಗುಡುಹಿಗಳೊಡಲ ತುಂಬಿದು ತುದಿವೆರಳಲುಬ್ಬಿಱಿದನಾ ಹನುಮ (ಕೊರರಾ. ೫-೫-೨೩).
[ರಕುತ + ಕುಡುಹಿ (< ಕುಡಿಹಿ)]

**ರಕುತಜಿಗುಟಳ** (ನಾ). ರಕ್ತವನ್ನು ಚಿಮ್ಮುವ ಘಟೀಯಂತ್ರ : ಗುರುಸುತ ತುಳುಕಿದನು ಫಲುಗುಣನ ಮೈಯಲಿ ರಕುತಜಿಗುಟಳವ (ಕುವ್ಯಾಕ. ೦೪-೦೯).
[ರಕುತ + ಜಿಗುಟಳ (<ಜಿಗುಟು)]

**ರಕುತಿ** (ನಾ). ಒಲವು : ಪ್ರೀತಿ ; ರಕ್ತಿ : ತನುದಂಡಣೆಗೈದು ರಕುತಿಯುಂಟೇನಬಲೆ (ವಂಕಾರಾ. ೫-೪-೦೫). [< ಸಂ. ರಕ್ತಿ]

**ರಕ್ಕಸ**, ರಾಕಾಸ (ನಾ). ೧. ಅಸುರ ; ರಾಕ್ಷಸ : "ಚುಕ್ಕಿಗುವರರು ರಕ್ಕಸರು ಮುಬ್ಬಿಗರುಮೆನಲ್ಕೆ ಅಸುರಾಭಿಧಾನದೊಳ್" (ಕಬ್ಬಮಂ. ೦೦); ಪೊಟಲಿಂ ಬಂಡಿಯನಟ್ಟಿಕೊಂಡು ರಕ್ಕಸನಿರ್ದೆಡೆಗೆಯ್ತಂದು (ಕಂಕಥಾ. ೩-೨೬ ವ). ೨. ಕ್ರೂರಿ ; ಹಿಂಸಕ : ' ರಕ್ಕಸಿ ' ಪರಾ. ೩. (ಅಲಂ) ದೊಡ್ಡದು ; ಭಾರಿಯಾದುದು : ' ರಕ್ಕಸವಕ್ಕಿ ', ' ರಕ್ಕಸವಲಗೆ ' ಪರಾ. **ರಾಕಾಸ** : ೧. ಮಾತಳಸಮೇತದಿಂ ರಾಕಾಸರಿಹ ಪಟ್ಟಣವ ಪೊಗಲ್ಕೆ (ರಕ್ಷ್ಯಶಾ. ೩-೮-೦೮).

**ರಕ್ಕಸರೋಜ** = ರಾಕ್ಷಸರ ಗುರು ; ಶುಕ್ರಾಚಾರ್ಯ : "ರಕ್ಕಸರೋಜ ಚುಕ್ಕಿಯೆನಲು ಸಂಗಳಿಕುಮಸುರಗುರುವಿನೊಳು" (ಕಬ್ಬಮಂ. ೦೮).
[< ಪ್ರಾ. ರಕ್ಖಸ. / ಸಂ. ರಾಕ್ಷಸ]

**ರಕ್ಕಸುಕಲೆ** (ನಾ). ರಕ್ಷಣೆಗಾಗಿ ಕಟ್ಟುವ ಕಾಪು : ಎರಡುಪದಂಗಳಪಭ್ರಂಶಕ್ಕೆ . . . ರಕ್ಷಾಶೃಂಖಲ – ರಕ್ಕಸಂಕಲೆ (ಶಮದ. ೨೮೮ ವೃತ್ತಿ).
[< ಸಂ. ರಕ್ಷಾಶೃಂಖಲ]

**ರಕ್ಕಸಗಂಡಪೆಂಡ್ಯ** (ನಾ). ರಾಕ್ಷಸರನ್ನು ಸೋಲಿಸಿದ ವೀರನೆಂಬ ಬಿರುದನ್ನು ಸೂಚಿಸುವ, ಕಾಲಿಗೆ ತೊಡಿಸುವ ಒಂದು ಬಗೆಯ ಬಳೆ: ಚರಣಯುಗಳದ ಸರಪಣಿಯ ನೂಪುರದ ರಕ್ಕಸಗಂಡಪೆಂಡ್ಯದ ಬೆರಳ ಮುದ್ರಿಕೆ . . . ಸೇರೆಸಿ ಲಕ್ಷ್ಮೀರಮಣನೋಲಗಗೊಡುತರ್ಪುತಿರ್ದ (ಅನಂರಾ. ೦-೩-೩೬). [ರಕ್ಕಸ + ಗಂಡ$_1$ + ಪೆಂಡ್ಯ (< ಪೆಂಡೆಯ)]

**ರಕ್ಕಸಜೂಜು** (ನಾ). ರಾಕ್ಷಸರಿಗೆ ಭಯವನ್ನುಂಟುಮಾಡುವವನು : ದೈತ್ಯಮರ್ದನನ ದಾನವಾರಿಯ ರಕ್ಕಸಜೂಜಿನ ಪಚ್ಚೆಯ ಪರಿಗೆಯ ಪಸರದ . . . ಹರಿಗೆಕಾಱರ ಪರಿವೀಥಿಯೊಳಂ (೧೦ಕ. ೩-೫೫ ವ).
[ರಕ್ಕಸ + ಜೂಜು$_2$]

**ರಕ್ಕಸದಲ್ಲಣ** (ನಾ). ರಾಕ್ಷಸರನ್ನು ತಲ್ಲಣಗೊಳಿಸುವವನು : ರಂಗನ ನೋಡಿರೆ . . . ರಕ್ಕಸದಲ್ಲಣ ರಾವಣಾಂತಕನ (ತುರಂದ. ೪-೪೮-೨).
[ರಕ್ಕಸ + ತಲ್ಲಣ (< ತಲ್ಲಟ)]

**ರಕ್ಕಸದಿಂಡೆಯ** (ನಾ). ರಾಕ್ಷಸರಲ್ಲಿ ಶೂರನಾದವನು : ದೈತ್ಯವೀರ : ದಿಂಡುಗೆಡೆದುದು ನೆಲಕೆ ರಕ್ಕಸದಿಂಡೆಯನ ರೌಕುಳದ ರಕುತದ ಮುಂದ (ಕೊರರಾ. ೧-೦೨-೦೮). [ರಕ್ಕಸ + ದಿಂಡೆಯ]

**ರಕ್ಕಸನೂರ್** (ನಾ). ಒಂದು ಊರಿನ ಹೆಸರು : ಮುಬ್ಬ ರಕ್ಕಸನೂರು ಕೊಳ್ವಲ್ಲಿ ಪಾರ್ವರೊದೊಳ್ ಸತ್ತಾನ್ (ಎ್ಯಆಂ. ೦೯೧೬, ೦೦-೩ : ೭ನೆಯ ೫೫).
[ರಕ್ಕಸ + ಊರ್]

**ರಕ್ಕಸಪಾರ್ವ** (ನಾ). ಬ್ರಾಹ್ಮಣವರ್ಗದ ರಾಕ್ಷಸ ; ಬ್ರಹ್ಮರಾಕ್ಷಸ : ಪಿಶಾಚಾನಿವಹಮನಡಗುಣಿಮೆಂದು ನವಮೇದಮಂ ಪೇಟ್ವರಲ್ಲಿ ರಕ್ಕಸಪಾರ್ವರ್ (ಗದಾಯು. ೪-೩೯); ಪೊಲಸಂ ಪಸುತಿರ್ಪ ನಿಶಾಚರರ್ಕಳಂ ಗ್ರಾಸಮನುಣ್ಬುದೆಂದೊಡಣಮೋಳಿಯ ರಕ್ಕಸಪಾರ್ವರಿರ್ದುದೊಂದಾಸೆಗೆ (ಕಾವ್ಯಸಾ. ೫೩೫). [ರಕ್ಕಸ + ಪಾರ್ವ]

**ರಕ್ಕಸಬಣಗು** (ನಾ). ಕ್ಷುದ್ರರಾಕ್ಷಸ : ಕೆಣಕಿದರಲಾ ರಣದ ರಕ್ಕಸಬಣಗುಗಳು (ಕುವ್ಯಾದ್ರೋ. ೦೫-೬೦). [ರಕ್ಕಸ + ಬಣಗು$_2$]

**ರಕ್ಕಸಬೇರ** ' ರಕ್ಕಸವೇರ ' ನೋ.

**ರಕ್ಕಸರಾಯ** (ನಾ). ರಾಕ್ಷಸರ ರಾಜ,–ಒಡೆಯ : ರಕ್ಕಸರಾಯ ಕರೆಸಲು ನಾಗಕಂಕಣನೈತಂದ (ಮೋಹಕ. ೩೫-೫೬). [ರಕ್ಕಸ + ರಾಯ]

**ರಕ್ಕಸವಕ್ಕಿ** (ನಾ). ದೈತ್ಯಾಕಾರದ ಪಕ್ಷಿ ; ರಣಹದ್ದು : ಕುಡಿದವರು ಕಾಂಬುವನು ಮರದುದಿಗಡರಿ ರಕ್ಕಸವಕ್ಕಿಗಳು (ಕೊರರಾ. ೬-೧೯-೩೯).
[ ರಕ್ಕಸ + ಪಕ್ಕಿ ]

**ರಕ್ಕಸವಗೆ** (ನಾ). ೧. ರಾಕ್ಷಸರ ದ್ವೇಷ,– ಶತ್ರುತ್ವ: 'ರಕ್ಕಸವಗೆಯ' ಪರಾ. ೨. ರಾಕ್ಷಸರ ಶತ್ರು : ಅಸುರಾರಿ ; ವಿಷ್ಣು : ಮೊಕ್ಕಳಂ ಸೃಷ್ಟಿ ಸ್ಥಿತಿ ಪ್ರಹೃತಿಗೆಯ್ವವಂ ರಕ್ಕಸವಗೆಯನಾಳ್ವವಂ ಸರ್ವಜಂತುಸಂಘಕ್ಕೆ ಮೋಕ್ಷವನೀವವಂ ಸರ್ವಪತಿ ಸರ್ವಶಕ್ತನಾಂ (ಕದ್ಯರಾ. ೦೦-೨೪); ರಕ್ಕಸವಗೆ ಖಗರಾಜಂಗೆ ಪೇಳ್ದ . . . ನೀ ತಳರೆಂದು (ಮೋಹಕ. ೪೨-೬). [ರಕ್ಕಸ+ಪಗೆ$_2$]

**ರಕ್ಕಸವಗೆಯ** (ನಾ). = ರಕ್ಕಸವಗೆ ೨ : "ರಕ್ಕಸವಗೆಯನೆಯ್ದೆ ನಾಲ್ದೋಳನೆನೆ . . . ಉಪೇಂದ್ರ" (ಕಬ್ಬಮಂ. ೬). [ರಕ್ಕಸವಗೆ + –ಅ$_7$]

**ರಕ್ಕಸವಡೆ** (ನಾ). ರಾಕ್ಷಸರ ಸೈನ್ಯ ; ಅಸುರದಳ : ಮೂಜಯೋಜನದಳವಿಯ ಸಭಾಮಂಟಪಮನೊಂದುಲಕ್ಕ ರಕ್ಕಸವಡೆಯಿಂ ಪೊತ್ತು ತರಿಸಿ (ಕಂಕಥಾ. ೬-೨ ವ); ಬಂದಿದೆ ದನಿಗ ರಕ್ಕಸವಡೆ ಬಾಗಿಲೊಳ್ ನಿಂದಿದೆ ಘುಡಘುಡಿಸುತ್ತೆ (ಮೋಹಕ. ೩೩-೪೦). [ರಕ್ಕಸ + ಪಡೆ$_2$]

**ರಕ್ಕಸವಲಗೆ** (ನಾ). ದೊಡ್ಡ ಗುರಾಣಿ : ಕಳಿಲಿ ರಣದಲಿ ಕೆಡೆದ ರಕ್ಕಸವಲಗೆಯಿರಲದ ಕೊಂಡು ಮುಂಗೈಗೊಳಿಸಿ ಯಜ್ಞದ ವೀರಭದ್ರನ ರಣಕೆ ಗುರುವಾದ (ಕೊರರಾ. ೩-೬-೪೦). [ರಕ್ಕಸ + ಪಲಗೆ]

**ರಕ್ಕಸವೇರ**, ರಕ್ಕಸಬೇರ (ನಾ). = ರಕ್ಕಸವಗೆ ೨ : "ಅರಲ್ಗೊಡೆಯಂ . . . ರಕ್ಕಸವೇ [ಪಾಠಾಂ. ಬೇ] ರಂ, ತಾವರೆಗಣ್ಣಂ . . . ಕಾವನಯ್ಯಂ– ಈ ೧೨ ವಿಷ್ಣುಗೆ ಪೆಸರ್" (ಕಕಸಾ. ೦-೯). **ರಕ್ಕಸಬೇರ** : "ರಕ್ಕಸಬೇರಂ ತಾವರೆಗಣ್ಣಂ ಕಾವನೈಯನಾಂ . . . ಹರಿಯೆಂದು" (ಕಾಕಂ. ೨೪). [ರಕ್ಕಸ + ಬೇರ$_1$]

**ರಕ್ಕಸಿ**, ರಾಕಾಸಿ (ನಾ). ೧. ರಾಕ್ಷಸರ ಹೆಣ್ಣು ; ಅಸುರಸ್ತ್ರೀ ; ದೈತ್ಯೆ : ರಕ್ಕಸಿಯರ ಕಂಡ ಕುಂಬಳದ ಮಾಟಕ್ಕೆವೊಲಾಗಿರೆ ಮಾಡದಿರ್ಪರೇ (ಶಂಕಥಾ. ೯-೪೬); . ರಕ್ಕಸಿಯುಂ ಮಾನಿಸಂ ಸಿಂಹಮನಾನೆ ಲೋಗರಂ ಶಿಶು . . . ಪೊರ್ದದಂತೆ (ಧರ್ಮಾಮೃ. ೩-೦೨೩); ಹೆದಜದಿರು ಚಿತ್ತದಲಿ ಬಾಣ ಹದೆಗೊಳಿಸು ರಕ್ಕಸಿಯು ಹರಣವನೊದೆದು ಹಾಯ್ಕು (ತೊರವ. ೧-೦೦-೫). ೨. ಕ್ರೂರ ಸ್ತ್ರೀ : ನಿನ್ನನಿಂತು ಮಗುಟ್ದುಂ ಮಗುಟ್ದುಂ ಕೊಲವೇಟ್ಪುದೆಂದು ವೇಟಿನ್ನನಿದಿಂತು ಪುಟ್ಟಿಸಿದನೇ ವಿಧಿ ರಕ್ಕಸಿಯುಂ ಮನಃಪ್ರಿಯ್ದಾ (ಕಾದಂಬ. ೬೩೦); ತಾಯಿ ರಕ್ಕಸಿಯಾದಂತೆ ಕಾಯಮವಿಕಾರವು (ಮಹಾದೇ. ದ. ೬೪-೦೫೭). ೩. ಒಂದು ಬಗೆಯ ಸಸ್ಯ : "ಛಿನ್ನರೋಹ – ಕೆಂಪಿನ ಬಳ್ಳಿ, ರಕ್ಕಸಿ " (೬೩೦. ೫೯). ೪. (ಅಲಂ) ದೊಡ್ಡದು : 'ರಕ್ಕಸಿದಬ್ಬೆ' ಪರಾ. **ರಾಕಾಸಿ** : ೨. ಪಂಚಪಾತಕನಾ ಕೈಯಲ್ಲಿ ಹಿಡಿದೂ ಈ ರಾಕಾಸಿ ಮನೆಗೇ ಸೊಸೆಯಾದೆ (ಹುಟ್ಟಿಹ. ೯೯); ತವರಿಗೆ ಯಾಕ್ಬಂದೆ ತಂಗ್ಯಮ್ಮ ರಾಕಾಸಿ ಅವಳೆ ಮನೆಯಲ್ಲಿ (ಹಳ್ಳಿ ಶ. ೦೧೩).
[ < ಪ್ರಾ. ರಕ್ಖಸೀ. / ಸಂ. ರಾಕ್ಷಸೀ ]

**ರಕ್ಕಸಿದಬ್ಬೆ** (ನಾ). ಒಂದು ಬಗೆಯ ದೊಡ್ಡ ಜಾತಿಯ ಹುಲ್ಲು : ನಾಲೆಗರುಗ ರಕ್ಕಸಿದಬ್ಬೆ ಕಾರೆ ಕಱಂಕೆ (ಶ್ರೀಪಾಂ. ೭-೦೩).
[ ರಕ್ಕಸಿ + ದಬ್ಬೆ₂ (< ದರ್ಭೆ ) ]

**ರಕ್ಕಿಸು**, ರಖಿಸು (ಕ್ರಿ). ಕಾಪಾಡು ; ರಕ್ಷಿಸು : ಬಿಸುಗೊರಲ ರಕ್ಕಿಸು ಪೂಗುವರತತ್ತ್ರಿಯಂ (ಚಿಕೋಪು. ೩-೩). **ರಖಿಸು** : ಅಪನೊರ್ವ ಸ್ವಧರ್ಮವೆನ್ನದೆ ರಖಿಸಿದ ಪುಣ್ಯಮಾತಂಗೆ (ವ್ಯಚಂ. ೦೯೩೦, ೭೬-೯೬; 1080).
[ ರಕ್ಕೆ + — ಇಸು₃ ]

**ರಕ್ಕೆ** (ನಾ). ೧. ರಕ್ಷಿಸುವುದು ; ಕಾಪಾಡುವುದು ; ಪಾಲನೆ : "ರಕ್ಕೆ ರಕ್ಷೆ" (ಕರ್ಣಾಶಿ. ೭೨); ಒಮ್ಮರ್ತ್ಯತ್ಕರ್ಕೆಯು ಉಂನಿವ[ಱ]ರಕ್ಕೆಗೆ (ವ್ಯಚಂ. ೦೯೧೦, ೨೯-೪ ; ಹ. 797); ಹುತವಹಂ ಶಿಸಿಗೆಱಿ ರಕ್ಕೆಯಕ್ಕೆ . . . ಎಂದು ಕಣ್ಣೀರಿಡುವುದುಂ (ರಾಜಶೇಕ. ೬೩-೦೦). ೨. ಕಾಪು ; ರಕ್ಷಣೆ : ನುಡಿದನೆ ಕಾವುದನೇ ಎರ್ದೆಗಿಡದಿರು ಜಪಿನಿಟ್ಟ ರಕ್ಕೆ ನಿನಗೆ (ಕಾವ್ಯಾವ. ೯೯). ೩. ಭೂತ, ಗ್ರಹಪಿಶಾಚಾದಿಗಳ ಶಂಕೆ ತಟ್ಟದಿರಲೆಂದು ಧರಿಸುವ ಯಂತ್ರ, ಭಸ್ಮ, ಅಂಜನ ಮುಂತಾದುವು : ಮಣಿಕಿಂಕಿಣಿ ಗೆಜ್ಜೆ ರಕ್ಕೆ ಕುಂಡಲಯುಗ ಮುತ್ತು ಕಾಲ್ಗಡಗ ವಿನೆಸೆದಿರ್ದುದೊ ಬಾಲಮ್ರೋಡನು (ಅಪ್ರೂ. ೩-೬೨); ಪಿಡಿದಶೋಕೆಯ ಬಿಲ್ಲು ಚೆಂದಳಿರುಡಿಗೆ ಕೆಂಗಱಿಗೋಲು ಹೊದೆಯೆಳೆಮಿಡಿಯ ರಕ್ಕೆಗಳರಳ ಕಂಕಣ ಜಿಡೆಯ (ಶಾಲ್ಯಥಾ. ೩-೯); ರಕ್ಕೆಯುಂ ಪಣೆಗಿಟ್ಟು ತೂಪಿಜೀಯ (ಕಂಠ. ೩-೨೬). [< ಸಂ. ರಕ್ಷಾ ]

**ರಕ್ಕೆಗಟ್ಟು** (ಕ್ರಿ). ರಕ್ಷಾಯಂತ್ರವನ್ನು ಕಟ್ಟು : ಪದಪಿಂ ಪ್ರಭುಸೂನುಗೆ ತಾನೆ ರಕ್ಕೆಗಟ್ಟುವ ತೆಱದಿಂದೆ ಕಟ್ಟಿದನಿಳಾಪತಿ ತನ್ನಧಿರಾಜಪಟ್ಟಮಂ (ಶಂದ್ರಕೃ. ೬-೦೦೨).
[ ರಕ್ಕೆ + ಕಟ್ಟು₁ ]

**ರಕ್ಕೆಯಾಳ್** (ನಾ). ರಕ್ಷಣೆ ನೀಡುವವನು : ಕಾವಲುಗಾರ : ಜನವ ಬಾಗಿಲಂ ಬೇಗದಿಂ ಪೊಕ್ಕು ರಕ್ಕೆಯಾಳ್ಗಳಂ ಲೆಕ್ಕಿಸಿ ನೋಡಿ (ವರ್ಧಕೃ. ೨-೩೬ ಪ).
[ ರಕ್ಕೆ + ಆಳ್₃ ]

**ರಕ್ಕೆವಣಿ** (ನಾ). ರಕ್ಷೆಗಾಗಿ ಕಟ್ಟುವ ಮಣಿ ; ರಕ್ಷಾಮಣಿ : ರೋಚನದಿಂ ರಂಜಿಪ ನೂಲ ರಕ್ಕೆವಣಿಗಳ್ಪೆಲ್ವಾಗೆ (ಕಾದಂಪೂ. ೩೩೩); ರಕ್ಕೆವಣಿ ಪುಲಿಯುಗುರ್ ಗೆಜ್ಜೆ . . . ಪರಿಪರಿಯ ಬಾಲದೊಡಿಗೆಗಳನಾಂತು (ಕಬಿಪ್ರ. ೫-೩೬).
[ ರಕ್ಕೆ + ಮಣಿ₃ ]

**ರಕ್ಕೆವೊಟ್ಟು** (ನಾ). ಭೂತ, ಪಿಶಾಚಾದಿಗಳಿಂದ ಉಂಟಾಗುವ ತೊಂದರೆಗಳಿಂದ ರಕ್ಷಿಸುವುದಕ್ಕಾಗಿ ಇಡುವ ಬೊಟ್ಟು ; ದೃಷ್ಟಿ ಬೊಟ್ಟು : ತದಂಘ್ರಿಯ ರೇಣುವಕ್ಕ ಜಂಬೊರೆಯುದ ರಕ್ಕೆವೊಟ್ಟೆನಿಸಿರಲ್ಕೆ (ಶಶಕು. ೩-೯೬); ಲೋಕಲೋಚನಪರಿಪಾತದೋಷಪರಕಾರಣದಿಂದವಳಿಟ್ಟ ರಕ್ಕೆವೊಟ್ಟೆನೆ ನಸುಗರ್ವು ಕಣ್ಗೊಳಿಸಿದತ್ತು ಕುಚಂಗಳ ಚೂಚುಕಂಗಳೊಳ್ (ಶಾಂತೀಶ. ೯-೨೬). [ ರಕ್ಕೆ + ಬೊಟ್ಟು₂ (< ಬಟ್ಟು) ]

**ರಕ್ತ** (ಗು). ೧. ಬಣ್ಣ ಹಾಕಿದ ; ಬಣ್ಣ ಬಳಿದ. ೨. ಕೆಂಪುಬಣ್ಣದಿಂದ ಕೂಡಿದ ; ಕೆಂಪಾದ : ವನಕರಿಕುಂಭಪಾಟನ ಪಟಿಷ್ಠ ಕಠೋರ ನಖಪ್ರಹಾರಭೇದನ ಗಳಿತಾ[ಸ್ರ] ರಕ್ತನವಮೌಕ್ತಿಕ ಪಂಕ್ತಿವಿಳಾಸ ಭಾಸುರಾನನನೆನೆ (ಶಂಕಥಾ. ೦೩-೩೦). ೩. ಅಕ್ಕರೆಯ ; ಪ್ರೀತಿಯ. (ನಾ). ೪. ಕೆಂಪು ; ಕೆಂಪುಬಣ್ಣ : "ಅರುಣಃ, ಶೋಣಃ, ರಕ್ತಃ . . . ಲೋಹಿತಃ — ಈ ೭ ಕೆಂಪು" (ಹಲಾಯು. ೦೨೦-೯೬); ಸುರಗಿಪ್ರಸೂನಮಂ ಕೊಂಡು ಧೃತರಕ್ತಕರವೀರನೇಟ್ಟ್ರಂದು (ಕಾವಶಂ. ೪-೦೭). ೫. ಅನುರಾಗ ; ಪ್ರೀತಿ : "ಅನುರಾಗದೊಳು ಕೆಂಪಿನೊಳು ಕುಂಕುಮದೊಳು ರುಧಿರದೊಳು ರಕ್ತಂ" (ಮಂಗರಾ. ೦೩೦-೫೪). ೬. ಅನುರಾಗವುಳ್ಳ ವ್ಯಕ್ತಿ ; ಅನುರಕ್ತ : ಕೇವೇಱ್ ನೃಪಾಂಶುರಕ್ತಂ ಭಗಣಂ ತತ್ಸೀಕರಂಬೊಲ್ ಮೆಱೆಯೆ (ರಾಜಶೇ. ೬-೨೬). ೭. ಜೀವಿಗಳ ದೇಹದಲ್ಲಿ ಇರುವ ಜೀವದಾಯಕವಾದ ಕೆಂಪುಬಣ್ಣದ ದ್ರವ ; ನೆತ್ತರು ; ರುಧಿರ : "ಕ್ಷತಜಂ . . . ಶೋಣಿತಂ, ರಕ್ತಂ— ಈ ೭ ನೆತ್ತರು" (ಹಲಾಯು. ೦೦೪-೦೦) : ಖಳದುಃಶ್ಶಾಸನವಕ್ಷಸ್ಥತೋಚ್ಚಲತ್ಕ್ರೃಷ್ಣರಕ್ತಜಲದಿಂ ಕೋಪಾನಳನಂ ಮನ್ನಿಸದಿಸ್ಸಂಗಳಗಳತ ಸರೋಪ ನಿರ್ಪ ತೆಱದಿಂದಿರ್ದ್ಧ (ಗದಾಯು. ೧.೫೭); ಆರುಕೋಶಗಳು ಯಾವುವೆಂದರೆ—ಪಿತೃಶರೀರದಿಂದ ಬರುವ ಅಸ್ಥಿ ಸ್ನಾಯು ಮಜ್ಜ, ಮಾತೃಶರೀರದಿಂದ ಬರುವ ರೋಮ ಮಾಂಸ ರಕ್ತ (ಹಂದಶಾ. ೫೯). ೮. ಕೆಂಪು ಬಣ್ಣದ ಚಂದನ : '' ತ್ರಿಚಂದನಂ — ರಕ್ತ, ಪೀತ, ಸಿತಚಂದನ'' (೬೩೦. ೭೦). ೯. ಕುಂಕುಮಕೇಸರಿ : "ಕಾಶ್ಮೀರಾರುಣಮೋಹರಕ್ತಮಿವು ರಕ್ತಾಖ್ಯಂ " (ಶಾಪಾರ. ೦೨೭). ೧೦. ಕುಸುಂಬೆ ಗಿಡ ಮತ್ತು ಅದರ ಹೂವು. ೧೧. ಅಗ್ನಿಯ ಏಳು ನಾಲಗೆಗಳಲ್ಲಿ ಒಂದು. ೧೨. ತಾಮ್ರ. ೧೩. ಮುಟ್ಟು ; ರಜಸ್ಸು.

ರಕ್ತದ ಒತ್ತಡ = (ಶರೀರದ) ರಕ್ತದ ಏರಿಳಿತ : ವಯಸ್ಸಾದವರು ರಕ್ತದ ಒತ್ತಡವನ್ನು ಆಗಿಂದಾಗ್ಗೆ ಪರೀಕ್ಷೆ ಮಾಡಿಸಿಕೊಳ್ಳುವುದು ಒಳ್ಳೆಯದು (ರೂಂ). ರಕ್ತ ಹೀರು= ೧. ರಕ್ತವನ್ನು ಕುಡಿ; ನೆತ್ತರನ್ನು ಹೀರು: ಕಚ್ಚಿದ ತಗಣೆ ಕಣ್ಣಿಗೆ ಬೀಳುತ್ತದೆಯೆ ? ಅದು ನಿಮ್ಮ ಉಪಾಧಿನ ಹೊರಗಿನಿಂದಲೇ ರಕ್ತಹೀರಬಲ್ಲದು (ಪಂಟಿರು. ೯೬). ೨. (ಅಲಂ) ತೊಂದರೆ ಕೊಡು ; ಕಾಡು : ಬಾಕಿ ಬರಲಿಲ್ಲವೆಂದು ಅವರು ರಕ್ತಹೀರುತ್ತಾ ಇದ್ದಾರೆ (ರೂಂ). [ಸಂ.]

**ರಕ್ತಕ** (ಗು). ೧. ಕೆಂಪಾದ. ೨. ಮೋಹಗೊಂಡ. (ನಾ). ೩. ಕೆಂಪು ಬಣ್ಣ. ೪. ಕೆಂಪುಬಟ್ಟೆ. ೫. ಒಂದು ಬಗೆಯ ಮರ. [ಸಂ.]

**ರಕ್ತಕಂಬಲ**, ರಕ್ತಕಂಬಳ (ನಾ). ಕೆಂಪುಬಣ್ಣದ ಕಂಬಳಿ: ಪಾಂಡುಕಪಾಂಡುಕಂಬಲ ರಕ್ತಕಂಬಲಾ [ತಾತಂ. ೯ಾ]ತಿರಕ್ತಕಂಬಲ . . . ಸಿಂಹಾಸನಾಲಂಕೃತಮುಮಾಗಿ (ಅಂಪು. ೧-೯೯ ಪ). **ರಕ್ತಕಂಬಳ**: ರಕ್ತಕಂಬಳಮೆನಿದನೆಲ್ಲಿ ಪಡೆದೆ (ತಾಪುಂಕು. ೭೩). [ಸಂ.]

**ರಕ್ತಕಂಬಳ** ' ರಕ್ತಕಂಬಲ ' ನೋ.

**ರಕ್ತಕಟ್ಟು** (ನಾ). ದನಗಳಿಗೆ ಬರುವ ಒಂದು ಬಗೆಯ ರೋಗ ; ಆಮಶಂಕೆ : (ಎಸವ್ಯ. XV. ೯೦). [ರಕ್ತ + ಕಟ್ಟು₂].

**ರಕ್ತಕಣ** (ನಾ). ರಕ್ತದ ಸೂಕ್ಷ್ಮಾಂಗ: ಕಾಯಿಲೆಯು ಹೆಚ್ಚಾದಾಗ ರಕ್ತಕಣಗಳು ವೇಗವಾಗಿ ಕಳೆಮಟ್ಟಕ್ಕಿಳಿಯುತ್ತವೆ (ಕಿಂಠೋ. ೦೬); ರಕ್ತಕಣಗಳೂ ಜೀವಧಾತುಗಳೂ ಕುಣಿಯೆ ಕೊಡುತ ಹೊಳಲು! (ಕೃಷ್ಣಾಕು. ೨೭-೦೩). [ಸಂ.]

**ರಕ್ತಕರ್ದಮ** (ನಾ). ಕೆಂಪುಬಣ್ಣದ ಸುಗಂಧಯುಕ್ತ ಕಲ್ಕ, ಮಂದವಾದ ದ್ರವ; ಪೀನಸ್ತು ರಕ್ತಕರ್ದಮನೂನ ಸುಗಂಧಾಧಿಕಾರಮರ್ದನಕುಶಲಂ

ಕಾನಿಂಗಿತಜ್ಞನುಂ ವಿಜ್ಞಾನಮಿತ್ರಂ ಶಾಬಿ ಪೀಠವರ್ಧನನೆನಿಕುಂ (ಮುದ್ರಾ. ೧೦-೪೦). ' ಯಕ್ಷಕರ್ದಮ ' ಪರಾ. [ಸಂ.]

**ರಕ್ತಕಾಸ** (ನಾ). ಕೆಮ್ಮಿದಾಗ ರಕ್ತ ಬೀಳುವ ಒಂದು ಬಗೆಯ ರೋಗ : ತಡಕಲು ಬೇರನ್ನು ಗೋಮೂತ್ರದಲ್ಲರೆದು ಕುಡಿಯಲು ರಕ್ತಕಾಸ ನಿಲ್ಲುವುದು (ಸಕವೈ. ಕಾ. ೪೩೩). [ಸಂ.]

**ರಕ್ತಕೃಚ್ಛ್ರ** (ನಾ). (ಮೂತ್ರದಲ್ಲಿ ರಕ್ತಬೀಳುವ) ಒಂದು ಬಗೆಯ ರೋಗ : ರಕ್ತಕೃಚ್ಛ್ರಕ್ಕೆ : – ಮಡುಪಾಗಲಗೆಡ್ಡೆ ಇದಂ ಅರೆದು ಮೊಸರುನೀರಲ್ಲಿ ಕದಡಿ ಸಕ್ಕರೆ ಸಹ ಕೊಳ್ಳಲು, ರಕ್ತಕೃಚ್ಛ್ರಹರ (ಏವೈ ೩. ೦೯೯). [ಸಂ.]

**ರಕ್ತಕೊಡಗೆ**, ರಕ್ತಕೊಡಿಗೆ, ರಕ್ತಗೊಡಿಗೆ (ನಾ). ನಾಡಿಗಾಗಿ ಅಥವಾ ಅರಸನಿಗಾಗಿ ಪ್ರಾಣ ತೆತ್ತ ವೀರನ ಕುಟುಂಬದವರಿಗೆ ಕೊಡುವ ದಾನ, – ಉಂಬಳಿ : ನೆತ್ತರಕೊಡಿಗೆ : ಭಟ್ಟಮಾನ್ಯ ಉಂಬಳಿ ರಕ್ತಕೊಡಗೆ ಮುಂತಾದುವೇನೂ ಹೆಚ್ಚು ಕಡಮೆಯಾಗದಂತೆಯೂ . . . ಕರಣಿಕರು ವಿಚ್ಛಿತ್ತಿಸಬೇಕು (ಚರಿಸಂ. ೩೭-೨೨). **ರಕ್ತಕೊಡಿಗೆ** : ಹರತಿ ಬೋತಿ ಚನ್ನನು ಹರತಿ ಮುತ್ತಿಗೆಯಲು ವೂ × × ಹೊರಟು ತಲೆಮೇಲೆ ಬಿದ್ದು ಜಗಳದಲಿ ಮೃತವಾಗಲಾಗಿ ಕೊಟ ರಕ್ತಕೊಡಿಗೆ ಮಾನ್ಯದ ಹೊಲವನ್ನು . . . ಅನುಭವಿಸಿಕೊಂಬುದು (ಎಕ. XI. ಹಿಂಯೂ. ೦೯-೦೪; 1705); ಯುದ್ಧದಲ್ಲಿ ತೀರಿಹೋದ ಜನಗಳ ಹೆಂಡಿರು ಮಕ್ಕಳಿಗೆ ರಕ್ತ ಕೊಡಿಗೆ ಎಂಬದಾಗಿ ಭೂಮಿಯನ್ನು ಕೊಟ್ಟು (ಮಹಾಪು. I. ೦೯೨). **ರಕ್ತಗೊಡಿಗೆ** : ಆಯ ಗಉಡರು ಆವನ ಕೆಸಿದೋಜನು ಮಗನಿಗೆ ರಕ್ತ ಗೊಡಿಗೆ ಮನ್ನ (ಎಕ. X (8). ಶಿತ್ರಿ. ೦೨೦-೩; 15ನೆಯ ಶ).

[ರಕ್ತ + ಕೊಡಗೆ (< ಕೊಡಂಗೆಯ್$_2$)]

**ರಕ್ತಕೊಡಿಗೆ** 'ರಕ್ತಕೊಡಗೆ' ನೋ.

**ರಕ್ತಕೋಷ್ಠ** (ನಾ). ಒಂದು ಬಗೆಯ ಮರ : ''ರಕ್ತನೇತ್ರಃ – ರಕ್ತಕೋಷ್ಠ, ಪತಂಗ'' (೬ಕಂ. ೦೩೪). [ಸಂ.]

**ರಕ್ತಕ್ಷಯ** (ನಾ). ದೇಹದಲ್ಲಿ ರಕ್ತವು ಕಡಮೆಯಾಗುತ್ತಾ ಹೋಗುವ ಒಂದು ಬಗೆಯ ರೋಗ : ಬಿಳಿಚುರೋಗ : ಕೆಲವು ಜಾತಿಯ ಅಣಬೆಗಳಲ್ಲಿ ಫೋಲಿಕ್ ಆಮ್ಲ ಹೆಚ್ಚಾಗಿರುವುದೆಂದು ತಿಳಿದುಬಂದಿದೆ. ಈ ಆಮ್ಲವನ್ನು ರಕ್ತಕ್ಷಯದಿಂದ ನರಳುವ ರೋಗಿಗಳಿಗೆ ಕೊಡುತ್ತಾರೆ (ಕವಿಕೋ. I. ೨೨೩) ; ರಾಘಪ್ಪನ ಹೆಂಡತಿ ಬಹಳದಿನಗಳಿಂದ ರಕ್ತಕ್ಷಯ ದಿಂದ ಬಳಲುತ್ತಿರುವಳು (ಗುಪ್ತಚ. ೪೩). [ ಸಂ. ]

**ರಕ್ತಗತ** (ಗು). ೧. ರಕ್ತದಲ್ಲಿ ಹೊಕ್ಕ, – ಸೇರಿದ. ೨. ಬಹುಕಾಲ ದಿಂದ ಇರುವ : ತಾವರೆಬೇರು, ರಂಜಿಕೆ . . . ಇವು ಸಮಭಾಗ ಕಷಾಯವಿಕ್ಕಿ ಸೇವಿಸೆ, ರಕ್ತಗತಜ್ವರ ಗುಣವಹುದು (ಸಕವೈ. ೦೦೭). (ನಾ). ೩. ರಕ್ತದಲ್ಲಿ ಸೇರಿರುವುದು. ೪. (ಅಲಂ) ಹುಟ್ಟಿನಿಂದ ಬಂದುದು ; ವಂಶಪಾರಂಪರ್ಯವಾದುದು.

**ರಕ್ತಗತವಾಗು** = ೧. ರಕ್ತದಲ್ಲಿ ಸೇರು : ಖರ್ಜೂರದಲ್ಲಿರುವ ಸಕ್ಕರೆಗೆ ಬಹುಬೇಗನೆ ರಕ್ತಗತವಾಗುವ ಗುಣವಿದೆ (ಆಹಾರ. ೭೯) ; ಮಾಂಸವು . . . ರಕ್ತಗತವಾದ ಮೇಲೆ, ಇವನ್ನು ದೇಹವು ಶಕ್ತಿ ಉತ್ಪತ್ತಿಗೆ ಉಪಯೋಗಿಸಿಕೊಳ್ಳುವುದು (ಗೃಹಶಾ. ೧೪). ೨. ಬಹಳ ಕಾಲದಿಂದ ಇರು ; ವಂಶಾನುಗತವಾಗಿರು : ಸಹನೆ ಶ್ರದ್ಧೆ ತನ್ನ ಹಿರಿಯರಿಂದ ಪಡೆದ ಪ್ರಸಾದಗುಣ. ಈ ಸಂಸ್ಕಾರ ಅವಳಂತಹ ಹೆಣ್ಣಿಗೆ ರಕ್ತಗತವಾದವು (ಹೊಸಕ ೨೦). [ಸಂ.]

**ರಕ್ತಗುಂಜಿ** (ನಾ). ಕೆಂಪುಬಣ್ಣದ ಗುಲಗಂಜಿ : "ರಕ್ತಗುಂಜೀ .. ಅರಗು. ಮಂಜಿಷ್ಠ. ರಕ್ತಗುಂಜಿ" (೬ಕಂ. ೦೩೩). [ < ಸಂ. ರಕ್ತಗುಂಜಾ ]

**ರಕ್ತಗೊಡಿಗೆ** ' ರಕ್ತಕೊಡಗೆ' ನೋ.

**ರಕ್ತಗ್ರಹಣಿ** (ನಾ). ಗ್ರಹಣಿರೋಗದಲ್ಲಿ ಒಂದು ಬಗೆ : ರಕ್ತಬೇಧಿ : ಅತ್ತಿತಿಗುಡು, ಕೊಡಸಿಗೆತಿಗುಡು . . . ಚೂರ್ಣಂ ಮಾಡಿ . . . ತುಪ್ಪದಲ್ಲಿ ಕಲಸಿ ಕೊಳ್ಳಲು ರಕ್ತಗ್ರಹಣಿ ಮಾಣ್ಗುಂ (ಸಕವೈ. ೩೪೯). [ಸಂ.]

**ರಕ್ತಚಂಚು** (ನಾ). ೧. ಕೆಂಪುಬಣ್ಣದ ಕೊಕ್ಕು. ೨. ಕೆಂಪುಬಣ್ಣದ ಕೊಕ್ಕಿರುವ ಪಕ್ಷಿ ; ಗಿಳಿ : ಪಿಂಗಳವಾದ ನೆಲ್ಲ ತೆನೆಯುಂ ನಸುಗರ್ಚಿದ ರಕ್ತಚಂಚು ಪಕ್ಷಂಗಳ ಹಾಡ್ವಲಚ್ಛವಿ ಮನಂಗೊಳೆ ಪಾಱುವ ಕೀರಮಾಲೆ . . . ರಂಜಿಕುಂ (ಜಗಪು. ೪-೬೬). [ಸಂ.]

**ರಕ್ತಚಂದನ** (ನಾ). ಚಂದನದಲ್ಲಿ ಒಂದು ಬಗೆ ; ಕೆಂಪು ಶ್ರೀಗಂಧ : "ಕರತಳ — ರಕ್ತಚಂದನ" (೬ಕಥ. ೨೦) ; ಶಾರಿಬಾದಿಗಣ : — ಸೊಗದೆ ಬೇರು . . . ಇಪ್ಪೆ ಹೂವು, ಶ್ರೀಗಂಧ, ರಕ್ತಚಂದನ, ಅತಿಮಧುರ (ಸಕವೈ. ೮೦ ೪೦೬). [ಸಂ.]

**ರಕ್ತಚಲನೆ** (ನಾ). (ದೇಹದಲ್ಲಿ) ರಕ್ತವು ಹರಿಯುವಿಕೆ ; ರಕ್ತಸಂಚಾರ : ವಿಟಮಿನ್‌ಗಳು ದೇಹದ ಬೆಳವಣಿಗೆಗೆ ರಕ್ತಚಲನೆ, ಪಚನಕಾರ್ಯ ಇತ್ಯಾದಿ ಕೆಲಸಗಳು ಸುಗಮವಾಗಿ ವ್ಯವಸ್ಥಿತವಾಗಿ ನಡೆಯುವಂತೆ ಸಹಾಯಕ ವಾಗುವುವು (ಗೃಹಶಾ. ೭). [ ಸಂ. ರಕ್ತಚಲನ ]

**ರಕ್ತಚ್ಛದ** (ನಾ). ಕೆಂಪುರೆಕ್ಕೆಗಳುಳ್ಳ ಒಂದು ಬಗೆಯ ಹಕ್ಕಿ : "ರಕ್ತಚ್ಛದಂ ಪಿಕ್ಕುಳಿಕೆ" (ಮಂಗರಾ. ೩೨-೯). [ಸಂ.]

**ರಕ್ತಜಿಹ್ವಕ** (ನಾ). ನಾಲಗೆಯು ಕೆಂಪುಬಣ್ಣಕ್ಕೆ ತಿರುಗುವ ಒಂದು ಬಗೆಯ ರೋಗ : ನಾಲಗೆ ರಕ್ತವರ್ಣವಾಗಿ ಒಣಗಿ ಮುಳ್ಳುಮುಳ್ಳಾಗಿ ರ್ಪುದು . . . ರಕ್ತಜಿಹ್ವಕಮೆನ್ನಿದೋಷಮೆಂದರಿವುದು (ಸಕವೈ. ೦೭೦). [ಸಂ.]

**ರಕ್ತತುಂಡ** (ನಾ). = ರಕ್ತಚಂಚು ೨ : ಪಸರಿಸಿ ಶಾಖಾಭುಜದೊಳ್ ಮಿಸುಗುವ ನಖಪದಮನಧರಪಲ್ಲವಮಂ ಖಂಡಿಸಿ ರಕ್ತತುಂಡನೇಂ ಪುಟ್ಟಿಸಿದುದೊ ಸಹಕಾರಲತಿಕೆಗಂಗಜಶರಮಂ (ಮಲ್ಲಿಪು. ೩-೩೪). [ಸಂ.]

**ರಕ್ತತ್ವ** (ನಾ). ೧. ಕೆಂಪುಬಣ್ಣ : ಸುದತಿಯ ಚಳನತಳಕ್ಕತಿಮೃದುತ್ವ ರಕ್ತತ್ವ ಮುಚಿತಮೆಂಸೆ ಸೊಗಯಿಸುಗುಂ (ಚಂದ್ರಪ್ರ. ೦೦-೦೦೪). ೨. ಅನುರಾಗ ; ಪ್ರೀತಿ. ೧, ೨ : ಅನುಂ ಪ್ರತೀಚೀಸಮಾಗಮಸಂತುಷ್ಟನೆನಪ್ಪೆನೆಂದು ದಿನಪಂ ರಕ್ತತ್ವದಿಂ ಪೋಗೆ ರಾಗಮೆ ತತ್ಕಂಕುಮರಾಗಮಾದುದಪರಾಲಂ ಕಾರವಿಸ್ತಾರದೊಳ್ (ಶಾಂತಿಪು. ೯-೩೦). [ಸಂ.]

**ರಕ್ತದಾಹ** (ನಾ). (ಕೊಲೆ, ಯುದ್ಧ ಮುಂತಾದ ಸಂದರ್ಭಗಳಲ್ಲಿ ಜನರ) ರಕ್ತವನ್ನು ಚೆಲ್ಲುವ ಬಯಕೆ : ರಕ್ತದಾಹಕ್ಕೆ ಮಾಡಿದ ಕೃತ್ಯ ಅಂತಾನೂ ಹೇಳೋ ಹಾಗಿಲ್ಲ (ಹೀರಹೊ. ೦೦). [ಸಂ.]

**ರಕ್ತದೇಶಿ** (ನಾ). [ಸಂಗೀತ] ಒಂದು ರಾಗದ ಹೆಸರು : ಗುಂಡಾಕ್ರೀ ರಕ್ತದೇಶಿ ಲಲಿತಾ . . . ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹರಿಶ್ಚ. ೨-೪೦). [ ? ]

**ರಕ್ತಧಾತು** (ನಾ). ೧. ಕೆಂಪುಬಣ್ಣದ ಕಲ್ಲು ; ಕಾವಿ. ೨. ರಕ್ತದ ಮೂಲಅಂಶ : ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು . . . ಶುಕ್ಲಧಾತು ಎಂದು ಏಳು ತರನಾಗಿವೆ (ಸಕವೈ. ೯೬). ೩. ತಾಮ್ರ. [ಸಂ.]

**ರಕ್ತಧಾರೆ** (ನಾ). ನೆತ್ತರ ಪ್ರವಾಹ, – ಹೊನಲು : ಪಾಂಚಿ ಮುನ್ನವೆ ಸಚಿವಾಶ್ವಪ್ಪೈದೆ ಕೊಳಗಿಂ ತಲೆ ಬಿಂಬಿಸಿ ಪಾಚಿ ಮೆಟ್ಟಿತಂದವಿರಳರಕ್ತಧಾರೆ ಪೊಜಿಸೂಸಿರೆ ಬಾಲನ ಕಂಠನಾಳಮಂ (ರಾಜಶೇ. ೦೩. ೯೬). [ಸಂ. ರಕ್ತಧಾರಾ]

**ರಕ್ತನಾಳ** (ನಾ). ದೇಹದಲ್ಲಿ ರಕ್ತ ಚಲಿಸುವ ನಾಳ; ನರ ; ಸಿರೆ : ರಕ್ತದ ಒತ್ತಡವನ್ನು ಮತ್ತೆ ಏರಿಸಲು ಇದನ್ನು ನಿಧಾನವಾಗಿ ರಕ್ತನಾಳದ ಮೂಲಕ ಕೊಡಬಹುದು (ಕವಿಕೋ. I. ೨೨೩). [ಸಂ. ರಕ್ತನಾಲ]

**ರಕ್ತನೀರು** (ನಾ). ಕೆಂಪುಬಣ್ಣದ ನೀರು : ಓಕುಳಿ : ಆರತಿಯಿಂ ರಕ್ತನೀರಿಂದ ಕುಸುಮೋಪಹಾರದಿಂ . . . ಮಂಗಲನಾ ನಾರಿ ಸತ್ಕರಿಸಿ ದಳಂದು (ಕುಣಾಕಾಂ. ೦೩-೦೬೩). [ರಕ್ತ + ನೀರು$_1$ (< ನೀರ್)]

**ರಕ್ತಪ** (ನಾ). ರಕ್ತವನ್ನು ಕುಡಿಯುವವನು; ರಾಕ್ಷಸ. [ಸಂ.]

**ರಕ್ತಪದಿ** (ನಾ). ಒಂದು ಬಗೆಯ ಸಸ್ಯ ; ಶೀಘ್ರಿ : "ಹತ್ತಿಪದಿ ಮುರುಟುಪಂ ರಕ್ತಪದಿ ಶೀಘ್ರಿ" (ಶಬ್ದಮಣಿ. ೯೩-೯೩). [ಸಂ. ರಕ್ತಪದೀ]

**ರಕ್ತಪರಿಚಲನೆ** (ನಾ). = ರಕ್ತಚಲನೆ : ರಕ್ತಪರಿಚಲನೆ (ರಕ್ತಕೋಶದಿಂದ ಅಪಧಮನಿಗಳಲ್ಲಿ ಹೊರಟು ಮರಳಿ ಅಭಿಧಮನಿಗಳ ಮೂಲಕ ರಕ್ತಕೋಶವನ್ನು ಸೇರುವುದು) (circulation. ಜಂಕಶ); ಕೀಟಗಳಲ್ಲಿ ರಕ್ತಪರಿಚಲನೆ ಪ್ರಧಾನಪ್ರಾಣಿಗಳಂತಲ್ಲದೆ, ಮುಖ್ಯವಾಗಿ, ಅಂಗಾಂಗಗಳ ರಾಸಾಯನಿಕ ಬದಲಾವಣೆಗಳ ಮಾಧ್ಯಮ (ಕೀಟಶ. ೩೦). [ಸಂ. ರಕ್ತಪರಿಚಲನ]

**ರಕ್ತಪಾತ** (ನಾ). (ಅಲಂ) ಸಾಮೂಹಿಕವಾದ ಕೊಲೆ : ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ರಕ್ತಪಾತವಾದೀತು (ಪ್ರಾಶಿ. ೬೪). [ಸಂ.]

**ರಕ್ತಪಾನ** (ನಾ). ರಕ್ತವನ್ನು ಕುಡಿಯುವಿಕೆ : ರಣದೊಳಭಿಲಾಷೆಯಿಂ ಪೈಶಾಚರಂತೆ ಹೇಸದೆ ರಕ್ತಪಾನಮಂ ಮಾಡಿಯೊಡಲ ಪೋಷಿಸಿದೆ (ಕೈ ಐಶಾ. ೨-೩೦). [ಸಂ.]

**ರಕ್ತಪಾಯಿ** (ನಾ). ೧. ರಕ್ತವನ್ನು ಕುಡಿಯುವವನು ; ರಾಕ್ಷಸ. ೨. ತಿಗಣೆ. [ಸಂ. ರಕ್ತಪಾಯಿನ್]

**ರಕ್ತಪಿಂಡಾಲ** (ನಾ). ಒಂದು ಬಗೆಯ ಔಷಧೀಸಸ್ಯ : "ಅಲುಃ — ರಕ್ತಪಿಂಡಾಲು" (ಓಕಧ. ೦೦). [< ಸಂ. ರಕ್ತಪಿಂಡಾಲು]

**ರಕ್ತಪಿಂಡಾಲು** (ನಾ). = ರಕ್ತಪಿಂಡಾಲ : "ಪತ್ರಾಲುಃ — ರಕ್ತಪಿಂಡಾಲು" (ಓಕಧ. ೪೦). [ಸಂ.]

**ರಕ್ತಪಿತ್ತ** (ನಾ), ಒಂದು ಬಗೆಯ ರೋಗ; ಪಿತ್ತವಿಕಾರದಿಂದ ಉಂಟಾಗುವ ರಕ್ತಪರಿಚಲನೆಯ ಏರುಪೇರು : ನೆಲ್ಲಿಚೆಟ್ಟಿನ ಚೂರ್ಣವ ಮಾಡಿ ಸಕ್ಕರೆಯ ಬೆರಸಿ, ತುಪ್ಪವ ಕಲಸಿ ಮೆಲ್ಲಲು ರಕ್ತಪಿತ್ತ ಹರ (ಶಿವ್ಯಶಿ. ೦೦); ನಾಡಿಯು . . . ಹಲ್ಲಿಯ ಹಾಗೆ ಆಡಿದರೆ ರಕ್ತಪಿತ್ತವೆಂಬುವ ಹಾಗೂ . . . ತಿಳಿವುದು (ಸಳವ್ಯ. ೦೨). [ಸಂ.]

**ರಕ್ತಪಿಪಾಸಿ** (ನಾ). ರಕ್ತವನ್ನು ಕುಡಿಯುವ ದಾಹವುಳ್ಳವನು ; ಪೋಲೀಸರ ದೃಷ್ಟಿಯಲ್ಲಿ ಈತ ರಕ್ತಪಿಪಾಸಿ ದೈತ್ಯ (ಅಶ್ವರ್ಶ. ೩೩). [ಸಂ. ರಕ್ತಪಿಪಾಸಿನ್]

**ರಕ್ತಪಿಪಾಸೆ** (ನಾ). = ರಕ್ತದಾಹ. [ಸಂ. ರಕ್ತಪಿಪಾಸಾ]

**ರಕ್ತಪುಚ್ಛ** (ನಾ). ಕೆಂಪುಬಣ್ಣದ ಕೊಂಡಿಯಿರುವ ಒಂದು ಬಗೆಯ ಚೇಳು; ಕೆಂಚೇಳು : ಕುಂದುರುಜ, ರಕ್ತಪುಚ್ಛ, ಎಮ್ಮೆಚೇಳು, ಶುಕ್ಲಕೀಟ ಎಂದು ಚೇಳುಗಳು ನಾಲ್ಕು ತೆರ (ವೈಶ್ವಶಾ. II, ೪೦). [ಸಂ.]

**ರಕ್ತಪುನರ್ನವ** (ನಾ). ಕೆಂಪು ಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ : ಅಡಕುಪುಟ್ಟನ ಗಿಡ, ಬಸವಡಿಕೆ, ಸನಾದಿಕಾ, ಗೊನೆಜಾಲಿ, ರಕ್ತಪುನರ್ನವ (ವ್ಯಶಿ. ೦೩-೨೩೦). [ಸಂ. ರಕ್ತಪುನರ್ನವಾ]

**ರಕ್ತಪುರ** (ನಾ). ಒಂದು ಊರಿನ ಹೆಸರು ; P ಈಗಿನ ವಿಜಾಪುರ ಜಿಲ್ಲೆಯ ಪಟ್ಟದಕಲ್ಲು. ಇದು 'ಕಿಸುವೊಳಲ್' ಎಂಬುದರ ಸಂಸ್ಕೃತೀಕರಣ : ರಕ್ತಪುರಮಧಿವಸತಿ ವಿಜಯಸ್ಕನ್ಧಾವರೇ (ಎಇ. IX. ೨೦೪-೩೩; 750). [ಸಂ.]

**ರಕ್ತಪುಷ್ಪ** (ನಾ). ೧. ಕೆಂಪುಹೂವು : ರಕ್ತಪುಷ್ಪವು ಗಂಧಭೂಷಣರಕ್ತಕರಮಾತ್ರೇ (ದೇಶೀಮ. ೩೪೪). ೨. ಕೆಂಪುಹೂವುಗಳನ್ನು ಬಿಡುವ ಮುತ್ತುಗ ಮೊದಲಾದ ಮರಗಳು. [ಸಂ.]

**ರಕ್ತಪೈತ್ಯ** (ನಾ). = ರಕ್ತಪಿತ್ತ : ದಾಹ, ಮೂರ್ಛೆ, ಭ್ರಮೆ, ರಕ್ತಪೈತ್ಯ ಮುಂತಾದ ಸಕಲರೋಗಗಳೂ ತತ್‌ಕ್ಷಣವೇ ನಾಶವಾಗುವುವು (ಸಳವ್ಯ. ೯೩). [ರಕ್ತ + ಪೈತ್ಯ]

**ರಕ್ತಪ್ರಕೋಪ** (ನಾ). = ರಕ್ತಪಿತ್ತ : ರಕ್ತಪ್ರಕೋಪಕ್ಕೆ :— ಪಥ್ಯ ರಾಜಾನ್ನ, ಹೆಸರು, ತೊಗರಿ ಇಷ್ಟು ಪಥ್ಯ (ಶಿವ್ಯಶಿ. ೦೪೦). [ಸಂ.]

**ರಕ್ತಪ್ರಮೇಹ** (ನಾ). ಮೂತ್ರದಲ್ಲಿ ರಕ್ತವು ಹೋಗುವ ಒಂದು ಬಗೆಯ ರೋಗ : ರಕ್ತಪ್ರಮೇಹ . . . ಕಲ್ಲುದೀಳುವುದು ಇವಕ್ಕೆಲ್ಲಾ ಅಮರದ ಬಳ್ಳಿಯಲ್ಲಿ ೨೧ದಿನ ಕೊಡುವುದು (ಶಿವ್ಯಶಿ. ೪೨). [ಸಂ.]

**ರಕ್ತಪ್ರಸೂನ** (ನಾ). = ರಕ್ತಪುಷ್ಪ ೧ : ಮೊದಲೊಳ್ ಮುಳ್ ಮೇಗೆ ವಿಚಿತ್ರದಳತ ರಕ್ತಪ್ರಸೂನಮೆಂಬಿನಿತಜಿಹೊಳಗಿದ್ದು ಶಾಲ್ಮಲಿವನರುಹಮಾವುದುತರಂ ನಿನಗವಿುದಿರವಾದಿಗಮಧಿಪಾ (ಶಾಂತಿಪು. ೬-೦೩೨). [ಸಂ.]

**ರಕ್ತಬೀಜ** (ನಾ). ೧. ದಾಳಿಂಬೆ ಗಿಡ. ೨. ಒಬ್ಬ ರಾಕ್ಷಸನ ಹೆಸರು : ಕುಸುರಿದರಿವುದು ರಕ್ತಬೀಜನಂ (ಅಂಬಿಕಾ. ೪೦-೪೮). [ಸಂ.]

**ರಕ್ತಬೋಳ** (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಅದರ ಅಂಟು : ಬಾಣಂತಿಬೋಳ, ರಕ್ತಬೋಳ . . . ತಗೆದುಕೊಳ್ಳಲು ಕ್ಷಯ, ಪಾಂಡು, ಕಾಮಾಲೆ, ಪೈತ್ಯರೋಗ ಸಹ ಗುಣಮಕ್ಕುಂ (ಸಳವ್ಯ. ೨೩೨); ಒಂದು ಚೂರು ಡಿಕ್ಕಿಮಾಲೆ ಮತ್ತು ರಕ್ತಬೋಳ (ಯಾವುದಾದರೊಂದು ಸಾಕು) ವನ್ನು ನೀರಲ್ಲಿ ತೇದು . . . ಕೆಳತೊಟ್ಟಿಗೆ ತೆಳುವಾಗಿ ಹಚ್ಚುವುದು (ಮನಶು. ೬). [ರಕ್ತ + ಬೋಳ₃ ( < ಬೋಟ₃ )]

**ರಕ್ತಭೇದಿ** (ನಾ). ಮಲದಲ್ಲಿ ರಕ್ತ ಹೋಗುವ ಒಂದು ಬಗೆಯ ರೋಗ : ಆಡುಸೋಗೆ . . . ಎಲೆಗಳ ರಸವನ್ನು ಅಮಶಂಕೆ ರಕ್ತಭೇದಿಗಳಿಗೆ ಔಷಧವಾಗಿ ಉಪಯೋಗಿಸುವರು (ಸಂಕೋ. I, ೩೨೯). [ಸಂ.]

**ರಕ್ತಮಂಡಲ** (ನಾ). ೧. ರಕ್ತಮಾಲಿನ್ಯದಿಂದ ಚರ್ಮದ ಮೇಲೆ ತೋರುವ ಕೆಂಪು ಕಲೆ, –ಚುಕ್ಕೆ : ಪಿಸ್ಕ, ಕಳ್ಳಿಯ ಹಾಲನ್ನರೆದು ಪಂಚಲವಣಂ ಬೆರಸಿ, ಅದನ್ನು ಆಡು, ಹಸು, ಕತ್ತೆ, ಕುದುರೆ ಇವುಗಳ ಮೂತ್ರದೊಳು ಹಾಕಿ ಎಣ್ಣೆಯನ್ನೆರೆದು ತೈಲವನಟ್ಟು ಪೂಸಿದರೆ ರಕ್ತಮಂಡಲ, ಕುಷ್ಠ . . . ಇವೆಲ್ಲವನ್ನೂ ಕೆಡಿಸುಗುಂ (ಶಿವ್ಯಶಿ. ೦೩೯). ೨. ಮೈಮೇಲೆ ಕೆಂಪುಮಚ್ಚೆಗಳಿರುವ ಒಂದು ಬಗೆಯ ಹಾವು. [ಸಂ.]

**ರಕ್ತಮುಖ** (ನಾ). (ಕೋಪದಿಂದ) ಕೆಂಪಾದ ಮುಖವುಳ್ಳವನು : ಹೊರಳಿದನು ಹುಬ್ಬೇರಿಸಿ ವಧಿಮುಖ ರಕ್ತಮುಖನಾಗಿ (ಭೀಶಿರಾ. ೩೨-೩೮). [ಸಂ.]

**ರಕ್ತಮೂತ್ರ** (ನಾ). ಮೂತ್ರದಲ್ಲಿ ನೆತ್ತರು ಬೀಳುವ ಒಂದು ಬಗೆಯ ರೋಗ : ಆಲದ ಬಿಳಲು, ಅದರ ಮುಗುಳು ಎರಡನ್ನೂ ಮಜ್ಜಿಗೆಯಲ್ಲಿ ಅರೆದು . . . ತುಪ್ಪ ಸಹ ಮೂರು ದಿವಸ ಉಣ್ಣಲು ರಕ್ತಮೂತ್ರರೋಗ ಗುಣ (ಶಿವ್ಯಶಿ. ೦೦೯). [ಸಂ.]

**ರಕ್ತಮೂಲವ್ಯಾಧಿ** (ನಾ). ಮಲದಲ್ಲಿ ರಕ್ತ ಹೋಗುವ ಮೂಲವ್ಯಾಧಿ ರೋಗ : ಬೋಳ, ನಾಗಕೇಸರ, ಖಂಡಸಕ್ಕರೆ ಇವಂ ಏಳುದಿನ ಗಟ್ಟಿ ಬೆಣ್ಣೆಯಲ್ಲಿ ಮೆಲೆ ರಕ್ತಮೂಲವ್ಯಾಧಿ ಪರಿಹಾರಂ (ಶಿವ್ಯಶಿ. ೬೨). [ಸಂ.]

**ರಕ್ತಮೇಹ** (ನಾ). = ರಕ್ತಮೂತ್ರ : ಉಪ್ಪುಂ ಕರ್ವಿನ ರಸಮುಂ ಪಿಪ್ಪಲಿಯುಂ ಘೃತಮುಮೆಳ್ಳುಮಿನಿತುಮನೋರಂತಪ್ಪಿನಮಾ[ಮೂ]ತುಗೆ ಸ್ಥಾಲಿಯೊಳ್ ತಪ್ಪಿಲ್ಲದೆ ಪಯಕ್ಕೆ ರಕ್ತಮೇಹಂ ಕಿಡುಗುಂ (ಅಶ್ವಶಾ. ೦೦-೨೩); ಶುಕ್ಲವೂ ರಕ್ತವೂ ಮೂತ್ರವೂ ಮೂರೂಕೂಡಿ ಬೀಳುವುದು. ಈ ಲಕ್ಷಣಗಳುಳ್ಳುದೆ ಕ್ರಮದಿಂದ ರಕ್ತಮೇಹ, ಶುಕ್ಲಮೇಹವೆಂದರಿವುದು (ಸಳವ್ಯ. ೩೭೦). [ಸಂ.]

**ರಕ್ತಮೇಹನೆ** (ನಾ). = ರಕ್ತಮೂತ್ರ : ಎ(ಯ)ಲವ[ದ]ಗೊಟ್ಟೆಯಷ್ಟಿಮಧುಕಂ ಮಧು ಮಂಜಿಟೆ ತುಪ್ಪಮಿಂತಿವಂ ಕಲಸಿ ಹಯಕ್ಕೆ ಕೊಟ್ಟು ಬಟಿಕ . . . ರಕ್ತಮೇಹನ ಪರಂ ತುರಗಕ್ಕೆ (ಅಶ್ವಶಾ. ೦೦-೨೪). [ಸಂ.]

**ರಕ್ತಮೋಕ್ಷ** (ನಾ). (ಜಿಗಣೆಯಿಂದ ರಕ್ತವನ್ನು ಹೀರಿಸಿ ಮಾನವರ ಶರೀರದಿಂದ) ರಕ್ತವನ್ನು ತೆಗೆಯುವುದು : (ಶೋಧನವು) ನಿರೂಹಣ-

ವಮನ. ವಿರೇಚ, ನಸ್ಯ, ರಕ್ತಮೋಕ್ಷಂಗಳೆಂದೈದು ತೆರನಾಗಿರುವುದು (ಕಳವೈ. ೧೮). [ಸಂ.]

**ರಕ್ತವಮನ** (ನಾ). ರಕ್ತವನ್ನು ಕಕ್ಕುವಿಕೆ ; ನೆತ್ತರನ್ನು ಕಾರುವುದು : ರಕ್ತವಮನಕ್ಕೆ :–ಮರಗಡ್ಡೆಸೊಪ್ಪು, ಮರಹತ್ತಿಸೊಪ್ಪು. ಈ ಎರಡನ್ನೂ ಸಮಾನವಾಗಿ ತೆಗೆದುಕೊಂಡು ತುಳಸಿ . . . ಮೂಜುದಿನ ತೆಗೆದುಕೊಳ್ಳಿ ನಿಲ್ಲುವುದು (ವಿವೈವಿ. ೭೦). [ಸಂ.]

**ರಕ್ತವಾತ** (ನಾ). ಒಂದು ಬಗೆಯ ವಾತರೋಗ : ಏಲಕ್ಕಿ ನಾಗಕೇಸರಿ ಲವಂಗಚಕ್ಕೆ . . . ಸೇವಿಸೆ . . . ರಕ್ತವಾತ, ಕ್ಷಯರೋಗ . . . ಸಪ ಗುಣವಾಗುವುದು (ಕಳವೈ. ೮೪). [ಸಂ.]

**ರಕ್ತಶಾಲಿ, ರಕ್ತಶಾಳಿ** (ನಾ). ಕೆಂಪುಜಾತಿಯ ಬತ್ತ ; ಕೆಂಬೂತಿ : "ಕೆಂಪುಭತ್ತ, ಕೆಂಬೂತಿಭತ್ತ" (ಅಸಂನಾ). **ರಕ್ತಶಾಳಿ** : "ರಕ್ತ ಶಾಳಿಃ, ಮಹಾಶಾಳಿಃ, ಕಳಮಃ — ಇವು ಮೊದಲಾಗುಳ್ಳುವು ಕಳಮೆಯ ಭೇದಂ" (ಹಲಾಯು. ೯೩-೯೨೭). [ಸಂ.]

**ರಕ್ತಶಾಳಿ** 'ರಕ್ತಶಾಲಿ' ನೋ.

**ರಕ್ತಶೂಲೆ** (ನಾ). ಹೆಣ್ಣರೋಗದಲ್ಲಿ ಒಂದು ಬಗೆ : ಯೋನಿಯಿಂದ ರಕ್ತ ಸುರಿಯುವುದು : ತ್ರಿಕಟುಕ, ಭಾರಂಗಿ, ಬೆಲ್ಲಪತ್ರದ ತಿರುಳು, ಇವಂ ಸಮಾನಂಗೊಂಡು ಅರೆದು ತುಪ್ಪದಿಂದ ಕಲಸಿ ಕುಡಿಯೆ ರಕ್ತಶೂಲೆ ಕೆಟ್ಟು ಗರ್ಭಮಕ್ಕುಂ (ವಿವೈವಿ. ೧೦೭). [ಸಂ. ರಕ್ತಶೂಲಾ]

**ರಕ್ತಶೋಷಣ** (ನಾ). ರಕ್ತವು ಹೋಗುವುದು : ರಕ್ತಶೋಷಣದಿಂದಾದ ಮೂತ್ರಕೃಚ್ಛ್ರದಲ್ಲಿ ರಕ್ತವೇ ಬೀಳುವುದು (ಕಳವೈ. ೩೭೦). [ಸಂ.]

**ರಕ್ತಸಂಬಂಧ** (ನಾ). ಅಣ್ಣತಮ್ಮಂದಿರು, ದಾಯಾದಿಗಳು ಮೊದಲಾದವರಲ್ಲಿರುವ ಬಾಂಧವ್ಯ ; ಜ್ಞಾತಿಸಂಬಂಧ : ಪ್ರತ್ಯಕ್ಷ ರಕ್ತಸಂಬಂಧವುಳ್ಳವರನ್ನು ನಂಟರ ಪಟ್ಟಿಯಿಂದ ತೆಗೆದುಹಾಕಬೇಕು (ಪಂಟರು. ೫) ; ರಕ್ತಸಂಬಂಧ, ಎಷ್ಟು ಆದರೂ ಜೀವ ಹೆಂಗ ನಿಲ್ಲಬೇಕು ನೋಡಿರಿ ! (ಗಂಪಯಾಯ. ೦೦೩). [ಸಂ.]

**ರಕ್ತಸಂಬಂಧಿ** (ನಾ). ರಕ್ತ ಸಂಬಂಧವುಳ್ಳ ವ್ಯಕ್ತಿ ; ಜ್ಞಾತಿ : ನಾನೇನು ರಕ್ತಸಂಬಂಧಿಯೆ ? . . . ಎಲ್ಲಿಂದಲೊ ಬಂದವಳು (ವಾತ್ಸಲ್ಯ. ೧೫೨). [ಸಂ. ರಕ್ತಸಂಬಂಧಿನ್]

**ರಕ್ತಸಿಂಹಾಣ** (ನಾ). ಸಿಂಬಳದೊಂದಿಗೆ ರಕ್ತ ಬೀಳುವ ಒಂದು ಬಗೆಯ ರೋಗ : ಕುರು ಮೂಡಿದಂತೆ ಗಂಟುಗಳಿರೆ ನಾಸಿಕದೊಳಗೆ ರಕ್ತಸಿಂಹಾಣ[ಮು]ಂ ನೀರ್ಪರಿಯಲ್ಪಡೆಯದೆ ಕೀತೊಡೆ ತುರಗಕ್ಕದು ಮರಣಚಿಹ್ನಂ (ಅಶ್ವಶಾ. ೦೦–೫೫). [ಸಂ.]

**ರಕ್ತಸಿರೆ** (ನಾ). ಕಣ್ಣಿನಲ್ಲಿ ರಕ್ತನಾಳಗಳು ಕೆಂಪಾಗುವ ಒಂದು ಬಗೆಯ ರೋಗ : ರಕ್ತಸಿರೆ ಹರಡಿದರೆ ಎಸಗದ ಸೊಪ್ಪಿನ ರಸದಿಂ ಜೀರಿಗೆ, ಸಾರಂಗದ ಕೊಂಬು ಅರೆದು ಪಾವಡೆಯೊಳಗಿಕ್ಕಿ ಕಣ್ಣಿಗೆ ಹಿಂಡಲು ಸೆರೆ ಹರ (ವಿವೈವಿ. ೦೯೭). [ ರಕ್ತ + ಸಿರೆ$_1$ (< ಸೆರೆ$_4$) ]

**ರಕ್ತಸೇಕ** (ನಾ). ರಕ್ತವು ಸುರಿಯುವುದು ; ರಕ್ತದ ಸೇಚನ : ತೋರಣಕನನ್ತುಕುರಂ ದೊರೆಯಾಗಿ ತೋಜಿದತ್ತಾತನೊಳಾಂತು ಪುಣ್ಬಡೆದ ಖೇಚರಸೇನೆಯ ರಕ್ತಸೇಕದಿಂ (ಚಂದ್ರಪು. ೬-೩೭). [ಸಂ.]

**ರಕ್ತಸ್ರಾವ** (ನಾ). ರಕ್ತ ಸುರಿಯುವಿಕೆ ; ನೆತ್ತರು ಸೋರುವುದು : ರಕ್ತಸ್ರಾವವಾಗುವುದನ್ನು ಮತ್ತು ಕರುಳು ಶೂತುಬೀಳುವುದನ್ನು ತಪ್ಪಿಸಬೇಕು (ಕಂಠರೋ. ೫೦) ; ದೇಹವು ಗಾಯಗೊಂಡು ರಕ್ತಸ್ರಾವವಾದಾಗ ಆ ರಕ್ತವು ಹೆಪ್ಪುಕಟ್ಟುವುದಕ್ಕೆ ಕ್ಯಾಲ್ಸಿಯಂ ಅತ್ಯಾವಶ್ಯಕ (ನ್ಯಹವಿ. ೦೯). [ಸಂ.]

**ರಕ್ತಾಂಗ** (ನಾ). ೧. ತಿಗುಣೆ. ೨. ಒಂದು ಬಗೆಯ ಸಸ್ಯ ; ಕಾಂಪಿಲ್ಲ. ೩. ಹವಳ. ೪. ಕುಂಕುಮಕೇಸರಿ. ೫. [ಜ್ಯೋತಿ]ಮಂಗಳಗ್ರಹ. [ಸಂ.]

**ರಕ್ತಾಂಗಿ** (ನಾ). ಒಂದು ಬಗೆಯ ಸಸ್ಯ : ಮಂಜಿಷ್ಠೆ : "ಪತ್ರಿ ರಕ್ತಾಂಗಿ ಮಂಜಟಿಯು ಮಂಜಿಷ್ಠೆ" (ಮಂಗರಾ. ೯೨-೩೮). [ಸಂ. ರಕ್ತಾಂಗೀ]

**ರಕ್ತಾಂಬರ** (ನಾ). ೧. ಕೆಂಪುಬಣ್ಣದ ಬಟ್ಟೆ : ಅವನಿ ರಕ್ತಾಂಬರ ವಸುಟ್ಟಂತೆಸೆದುದೊಗುನೆತ್ತರಿನ ಹೂರಪಲಿ (ತೊರರಾ. ೬-೯೦-೨೭). ೨. ರಕ್ತದಲ್ಲಿ ನೆನಸಿದ ಬಟ್ಟೆ : ಘಾಯವನು ಪಡೆದು ಹಾಯ್ದ ಕರುಳಿನ ಮಿದುಳ ಜೋರಿನ ತೊಯ್ದ ರಕ್ತಾಂಬರದಿ ತಾನಿರಲೈದಿ ಕುರುಪತಿ ಕಂಡನಾದರೆ ಧನ್ಯ ತಾನು (ಕುವ್ಯಾಶ. ೮-೯೦). [ಸಂ.]

**ರಕ್ತಾಂಬು** (ನಾ). ಕಣ್ಣೀರು ; ನೆತ್ತರು : ಪುಷ್ಪಚಾಪಾಸ್ತ್ರಟಂಕಾರರವೋದ್ಭಿನ್ನಪ್ರವಾಂಥಪ್ರಕರಹೃದಯರಕ್ತಾಂಬುಗಳ್ ಕೂಡೆ ಮಾರ್ಗಾಂತರದೊಳ್ ಸೂಸುತ್ತಿರಲ್ ಬಂದುದು . . . ವಸಂತಂ (ಕಾದಂಪೂ. ೭೨೦) ; ಸುರಿಪ ರಕ್ತಾಂಬುಗಳಲಂಬಿನಲುರವಣಿಪ ಬಿಜುಗಾಳಿ ಸೂಸಿತು ಸುರರ ಮೈಗಳಲಿ (ತೊರರಾ. ೬-೯೦-೨೭). [ಸಂ.]

**ರಕ್ತಾಕ್ಷ** (ಗು). ೧. ಕೆಂಪುಕಣ್ಣುಳ್ಳ. ೨. ಭೀಕರವಾದ. (ನಾ). ೩. ಕೋಣ : "ಮಹಿಷಂ. . . ರಕ್ತಾಕ್ಷನ[ಪಾಠಾಂ. ಕ್ಷಿಯ]ಬ್ಬಾರಿ ಕೋಣನಕ್ಕು" (ಮಂಗರಾ. ೯೮–೦೦). ೪. ಪಾರಿವಾಳ. ೫. ಸಾರಸಪಕ್ಷಿ. ೬. ಚಕೋರಪಕ್ಷಿ. [ಸಂ.]

**ರಕ್ತಾಕ್ಷಿ** (ನಾ). ೧. ಕೆಂಪುಬಣ್ಣದ ಕಣ್ಣುಳ್ಳದ್ದು : ಕೋಣ : "ಮಹಿಷಂ . . . ರಕ್ತಾಕ್ಷಿಯ [ಪಾಠಾಂ. ಕ್ಷನ]ಬ್ಬಾರಿ ಲೋಣನಕ್ಕು" (ಮಂಗರಾ. ೯೮–೦೦); ಶಾರ್ದೂಲ ರಕ್ತಾಕ್ಷಿ ಮುಂಗುರಿ ಮುಂತಾದ ಮೃಗಂಗಳಬ್ಬರವಂ ಕಂಡಾಗ ಪೋಪರ್ಗೆ ಭೀಕರವಂ ಮಾಡುತ . . . ಕಣ್ಗೊಪ್ಪಗುಂ (ವಸ್ವಶಾ. ೨–೮೪). ೨. ಅರುವತ್ತು ಸಂವತ್ಸರಗಳಲ್ಲಿ ಐವತ್ತೆಂಟನೆಯದು : ಪ್ರಭವ. . . ರಕ್ತಾಕ್ಷಿ. . . ಅಕ್ಷಯನೊಂದಜುವತ್ತು ತೆಜನಾಗಿಹುದು (೭ವೇಶ. ೩೨೦). [ ಸಂ. ರಕ್ತಾಕ್ಷೀ ]

**ರಕ್ತಾಣು** (ನಾ). ರಕ್ತದಲ್ಲಿರುವ ಸೂಕ್ಷ್ಮಾಂಶ.—ಅಣು ; ರಕ್ತಕಣ : ಒಂದು ಘನ ಇಂಚಿಗೆ ಸಾಧಾರಣ ೧೫೦ ಮಿಲಿಯದಷ್ಟು ರಕ್ತಾಣು (Red Corpuscles) ಗಳಿವೆ (ಜಾಲಕ್ರ. I, ೩೦೯). [ಸಂ.]

**ರಕ್ತಾತಿಸಾರ** (ನಾ). = ರಕ್ತಭೇದಿ : ಮಡುವಾಗಲದ ಗೆಡ್ಡೆಯಂ. . . ದಾಳಿಂಬವಲ್ಲೂ, ಅಲ್ಲ ಹಾಲಲ್ಲೂ ಕುಡಿಯೆ ರಕ್ತಾತಿಸಾರ ತೀರ್ಗುಂ (ವಿವೈವಿ. ೯೫). [ಸಂ.]

**ರಕ್ತಾಭಿಸರಣ** (ನಾ). = ರಕ್ತಚಲನೆ : ನಿರ್ಗಂಧವಾಯುವುಳ್ಳ ಆಹಾರವು ಕಡಿಮೆಯಾದರೆ, ರಕ್ತಾಭಿಸರಣ, ಶ್ವಾಸೋಚ್ಛ್ವಾಸ, ಅನ್ನಪಚನ. . . ಉಂಟಾಗುತ್ತದೆ (ಶುಬುಖಯ. ೫-೧೭೨). [ಸಂ.]

**ರಕ್ತಾರ್ಜುನ** (ನಾ). ಕೆಂಪು ಮತ್ತಿಯ ಮರ : "ನದೀಸರ್ಜಃ. . . ಅರ್ಜುನಃ—೫ ತೋರಮತ್ತಿಗಿಡ, ಕೆಂಪುಮತ್ತೀಗಿಡ, ರಕ್ತಾರ್ಜುನವೃಕ್ಷ". (ನಿಘಂ೬. ೦೨೨). [ಸಂ.]

**ರಕ್ತಾರ್ಶ** (ನಾ). ಒಂದು ಬಗೆಯ ಮೂಲವ್ಯಾಧಿ : ನೆಲದಾಳುಗೆಡ್ಡೆ, ಒಂದೆಲೆಹೊನ್ನೆ — ಇವಂ ಸಮಾಂಶವಾಗಿ ಅರೆದು . . . ತುಪ್ಪದಲ್ಲಿ ಕಲಸಿ ಕೊಡಲು ರಕ್ತಪಿತ್ತ, ರಕ್ತಾತಿಸಾರ, ಯೋನಿದೋಷ, ಬಿಳಿಸೀರೆ, ರಕ್ತಾರ್ಶ—ಇವೆಲ್ಲ ಪರಿಹಾರಮಕ್ಕುಂ (ಕಳವೈ. ೦೮೯). [ ಸಂ. ರಕ್ತಾರ್ಶಸ್ ]

**ರಕ್ತಾಶೋಕ** (ನಾ). ಕೆಂಪುಬಣ್ಣದ ಅಶೋಕವೃಕ್ಷ : ಭವ್ಯಹೃತ್ಕಮಳಕ್ಕಂ ಮುಂಪಮಂ ಜಪಾಪ್ರಸವರಕ್ತಾಶೋಕಬಂಧೂಕಶೋಣಮಣಿಜ್ಯೋತಿಗಳ ಕೈಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ (ಆದಿಪು. ೦೭ ೩). [ಸಂ.]

**ರಕ್ತಿ** (ನಾ). ಒಲವು : ಆಸಕ್ತಿ ; ಪ್ರೀತಿ : ಪಿರಿದುಂ ರಕ್ತಿ ವಿರಕ್ತಿಗಳುಂ ಬಂಧುರಭೋಗಂ ಯೋಗಮುಮಿಹಪರಮುದ್ಧುರಸಂಸಾರಂ ನಿಸ್ಸಂಸಾರಂ ಜೂದುಂ ಪೂಜೆಯುದು (ಉದ್ಭಟ. ೩-೭೮) ; ಕೇಳಲ್ಕೆಂದೈತರೆ ವಿಟಮೃಗಂ ಬಾಜಿಸುತ್ತಿರ್ದಳೋರ್ವಳ್ ಕೇಳಾವಲ್ಯಾದ್ಯಬಳವಿಲಸದ್ರಾಗಮಂ ರಕ್ತಿಯಿಂದಂ

(ರಾಜಶೇ. ೧೦-೯೩); ತಂತ್ರೀವಾದ್ಯದ ರಕ್ತಿ ಪಣ್ಯಾದಿಳೆಯೊಳ್ (ಶಶಿಪ. ೪-೧೦೨). [ಸಂ.]

**ರಕ್ತಿಮೆ** (ನಾ). ಕೆಂಪುಬಣ್ಣ; ಅರುಣರಾಗ: ಸೌಂದರಿಯಧರದ ರಕ್ತಿಮೆಯನು ಕಂಡು ಚಂದವಿಲ್ಲೆನ್ನ ಮೈಬಣ್ಣ (ಚಿತ್ರಾಪತ. ೨-೧೪).
[ಸಂ. ರಕ್ತಿಮನ್]

**ರಕ್ತೆ** (ನಾ). ೧. ಅರಗು. ೨. ಗುಲಗಂಜಿ. ೩. ಪ್ರೀತಿಯುಳ್ಳವಳು; ಅನುರಕ್ತೆ: ರಕ್ತೆಯುಸುರಕ್ತೆಯುತಿರಕ್ತೆಯೆಂದಿಂತು ಮೂಜಾತಿಜದಿಂ ಬೇಟವಮಕ್ಕುಂ (ಮದನ. ೧೦-೨೬). [ಸಂ. ರಕ್ತಾ]

**ರಕ್ತೋತ್ಪಲ, ರಕ್ತೋತ್ಪಳ** (ನಾ). ಕೆಂದಾವರೆ: ಕೆಂಪುಬಣ್ಣದ ಕಮಲ: ಎಳೆಯ ರವಿರಶ್ಮಿಗಳು ರಕ್ತೋತ್ಪಲದೊಳಗೆ ಹೊಳೆವಂತೆ ಹೊನ್ನರೆ ಬೀಡುಸಿಳುಕನೆ ಕಾಣಲಾದುದು ಭಟನ ಕಾಯನಾಳ್ (ಉಪ್ಕಾರ್ತ. ೩-೩೦). ರಕ್ತೋತ್ಪಳ: "ಬೆಂಗಲವೆಯೆಂಮದನೆಲ್ ಸಲೆ ರಕ್ತೋತ್ಪಳ ಮಾಕ್ಕುಂ" (ಶಬ್ದ. ...). [ಸಂ.]

**ರಕ್ತೋತ್ಪಳ** 'ರಕ್ತೋತ್ಪಲ' ನೋ.

**ರಕ್ಷ** (ನಾ). ೧. ಕಾಪಾಡುವಿಕೆ. ೨. ಕಾಪಾಡುವವನು; ರಕ್ಷಕ: ರಕ್ಷರಾನ್ನೀಕನಿಯೊಳನೆ ಅಧ್ಯಕ್ಷ (ಜಗನ್ನಾಥ. ೬೩-೧೨). [ಸಂ.]

**ರಕ್ಷಕ** (ಗು). ೧. ಪೋಷಿಸುವ; ಪಾಲಿಸುವ: ಹಣ್ಣು, ತರಕಾರಿ ಮತ್ತು ಹಾಲು ಸಹ ರಕ್ಷಕಆಹಾರಗಳೆಂದು ಕರೆಯಲ್ಪಡುವುವು (ಗೃಹಪ. ೮). (ನಾ). ೨. ಕಾಪಾಡುವವನು; ರಕ್ಷಿಸುವವನು: ಇನಜಂ ಮೇಷದೊಳೊಂದಿದಂದು ... ನಿರ್ಲಜ್ಜಕಂ ರಕ್ಷಕಂ (ಜಾತಕ. ೧೭-೬೨); ಜನಕಂ ರಕ್ಷಕನಂತೆನನಾದಿಮಧ್ಯಾಂತ ನಿನಗದಾವನಿಪ್ಪಂಗಂ ಜನಕಂ ರಕ್ಷಕನೆಂತಕ ನೆನಸಿದೆ ಪೊಗಟ್ಟುರಳವೆ ನಿನ್ನ ಮಹತ್ವಂ (ಜಗ. ೩-೯೭). [ಸಂ.]

**ರಕ್ಷಣ** (ನಾ). ೧. ಕಾಪಾಡುವುದು: 'ರಕ್ಷಣು' ಪರಾ. ೨. [ನಾಟ್ಯ] ಒಂದು ಬಗೆಯ ಕರವಿನ್ಯಾಸ: ಧೂನನ ... ರಕ್ಷಣ ... ಈ ಇಪ್ಪತ್ತು ಕರಕರ್ಮಭೇದಂಗಳ್ (ಶಾಸ್ತ್ರರಂ. ೪-೧೦). [ಸಂ.]

**ರಕ್ಷಣಾಖಾತೆ** (ನಾ). (ದೇಶವನ್ನೂ ಜನರನ್ನೂ) ರಕ್ಷಿಸುವ ಸೈನ್ಯ, ಪೋಲೀಸು ಮೊದಲಾದ ಇಲಾಖೆ: ಬೊಳನು ರಕ್ಷಣಾಖಾತೆಯವರಲ್ಲಿಗೆ (ಪೋಲೀಸ್) ಮೊರೆಯೋಲೆ ಕೊಟ್ಟು ... ಮೊರೆಯಿಟ್ಟನು (ಕಾಂಡಾಶ. ೧೦ ಕತಾಸಚ). [(ಸಂ. ರಕ್ಷಣಾ) + ಖಾತೆ]

**ರಕ್ಷಣಾದಳ** (ನಾ). ಕಾವಲುಪಡೆ: ಆತನು ರಕ್ಷಣಾದಳವನ್ನು ಸೇವಿ ... ಹಣ ಪೋಲುಮಾಡಿದ ಪರಿಣಾಮವಾಗಿ ತಾನು ಮೂಲನಿಧಿಗೂ ಕೈಹಾಕಬೇಕಾಗಿ ಬಂದಾಗ ತಾಯಿಗೆ ಸ್ವಲ್ಪವೂ ವ್ಯಥೆಯಾಗಲಿಲ್ಲ (ಕೃಪಸು. ೬೦). [ಸಂ. ರಕ್ಷಣಾದಲ]

**ರಕ್ಷಣಾವ್ಯವಸ್ಥೆ** (ನಾ). ರಕ್ಷಣೆಗಾಗಿ ಮಾಡುವ ಏರ್ಪಾಡು, ವ್ಯವಸ್ಥೆ: ಆ ಕಾಲದಲ್ಲಿ ಈಗಿನಂತೆ ದೇಶದ ನಾನಾಭಾಗಗಳಲ್ಲಿ ಆಡಳಿತವರ್ಗದಿಂದ ನಿಯಮಿತವಾದ ರಕ್ಷಣಾವ್ಯವಸ್ಥೆಯಿರಲಿಲ್ಲ (ಕರಾಶ. ೨೧೭).
[ಸಂ. ರಕ್ಷಣಾವ್ಯವಸ್ಥಾ]

**ರಕ್ಷಣೀಯ** (ಗು). ೧. ಕಾಪಾಡಬೇಕಾದ; ರಕ್ಷಿಸಬೇಕಾದ: ಸೀತೆಯ ರಕ್ಷಣೀಯ ರೂಪ, ತ್ಯಾಗ, ಪಾತಿವ್ರತ್ಯಗಳು ಭಾರತೀಯ ಸಾಮಾಜಿಕ ಹಾಗು ಕೌಟುಂಬಿಕ ಜೀವನದ ಅನೇಕಸಮಸ್ಯೆಗಳನ್ನು ಬಿಡಿಸಲು ಕಾರಣವಾಗಿವೆ (ಕರ್ಣಾಶ. ೮). (ನಾ). ೨. ಕಾಪಾಡಲು ಅರ್ಹನಾದ ವ್ಯಕ್ತಿ: ಕೊಲುವುದೊ ವಧ್ಯನೆ ನಿನ್ನಂ ಸಲಹುವುದೋ ರಕ್ಷಣೀಯನಾದಾ ದ್ವಿಜನಂ (ಶಾಕುಂತ. ೯೬-೧೩೯). [ಸಂ.]

**ರಕ್ಷಣೆ** (ನಾ). ೧. ಕಾಪಾಡುವಿಕೆ; ಸಂರಕ್ಷಿಸುವಿಕೆ: ದೇಶದ ವ್ಯವಸಾಯಕ್ಕೆ ಅನೇಕ ಬಗೆಯ ರಕ್ಷಣೆಯನ್ನೂ ಪ್ರೋತ್ಸಾಹವನ್ನೂ ಕೊಡುತ್ತಾರೆ (ಹಣಶ. ೦೩೨): ಒಂದೊಂದು ಗ್ರಾಮದಲ್ಲೂ ಅದರ ರಕ್ಷಣೆಗಾಗಿ ಆ ಊರಿನ ಒಂದು ವೀರರ ತಂಡವೇ ಸಿದ್ಧವಾಗಿರುತಿತ್ತು (ಕರಾಶ. ೨೧೭). ೨. ಕಾವಲು; ಕಾಯುವಿಕೆ. [ಸಂ. ರಕ್ಷಣಾ]

**ರಕ್ಷಣೋಪಾಯ** (ನಾ). ಕಾಪಾಡುವ ಮಾರ್ಗ: "ರಕ್ಷಣೋಪಾಯ. ಸಂರಕ್ಷಣೆ" (Safe-Guard. ಇಕ್ನಿ. ೬೨). [ಸಂ.]

**ರಕ್ಷಸ್ಸು** (ನಾ). ೧. ಕಾಪಾಡುವಂಥದು; ರಿಜರ್ವ್‌ಬ್ಯಾಂಕು ಹಣದ ಪೇಟಿಯ ರಕ್ಷಸ್ಸು, ಅಲ್ಲಿಯ ಪರಮಾಧಿಕಾರಿ (ಹಣಶ. ೩೦೨). ೨. ರಾಕ್ಷಸ: ಮದನವಿಲಾಸದಿಂ ಸಂಚರಿಸುತಿರ್ಪ ವಿದ್ಯಾಧರ ... ರಕ್ಷಸ್ಸು ... ದೇವಯೋನಿವಿಶೇಷಂಗಳು (ಪಂಪ. ೩೦೩). [ಸಂ. ರಕ್ಷಸ್]

**ರಕ್ಷಾಂಕಿತ** (ಗು). ವಿಭೂತಿಯನ್ನು ಲೇಪಿಸಿಕೊಂಡ; ಭಸ್ಮಲೇಪಿತವಾದ: ರಕ್ಷಾಂಕಿತತನು ಮೆಲ್ಲನೆ ವೃಕ್ಷಂಗಳ ಕೆಳಗೆ ಪೋಗಿ ನಿಂದಿರ್ದಾಗಳ್ ಭಿಕ್ಷಾಂ ದೇಹಿಯೆನಲ್ಕೆ (ಗಾದಂಪೂ. ೬೪೪). [ಸಂ.]

**ರಕ್ಷಾಂಜನ** (ನಾ). ರಕ್ಷೆಗಾಗಿ ಇಡುವ ಕಾಡಿಗೆ ಬೊಟ್ಟು: ತತ್ಕಾಮಿನೀಪುಣ್ಯದೇವತೆ ಕಣ್ಣೀಜಲ ದೋಷವುಂ ಪುಗಿ ಪರೆ ಪಲೆಂದಂದಿಟ್ಟ ರಕ್ಷಾಂಜನಾಕೃತಿಯಿಂ ಪೀನಪಯೋಧರಾನನಮಪೇಂ ಕರ್ಬೊಂಗದಿರ್ಪಾದುವೋ (ಮಲ್ಲಿಕ. ೪-೯೬). [ಸಂ.]

**ರಕ್ಷಾಕವಚ** (ನಾ). ೧. (ಯುದ್ಧದಲ್ಲಿ) ದೇಹದ ರಕ್ಷಣೆಗಾಗಿ ತೊಟ್ಟುಕೊಳ್ಳುವ ಉಕ್ಕಿನ ಅಂಗಿ: ರಕ್ಷಾಕವಚವನ್ನು ಅಳವಡಿಸು (Armour, ಇಂಕಶ). ೨. ಪುಸ್ತಕಗಳ ಮೇಲೆ ಹಾಕುವ ಕಾಗದದ ಅಥವಾ ಬಟ್ಟೆಯ ಹೊದಿಕೆ; ರಟ್ಟು: ಕವಿತಾಸ್ರೋತದ ತಿ ಮನೋಹರ ಅಲೆಗಳ ಸಮ್ಮಿಲನವೇ ಆ ಕವನಸಂಕಲನ ... ಎಂದುಕೊಂಡು ಸಂತಸದಿಂದ ರಕ್ಷಾಕವಚವನ್ನು ತೆಗೆದ (೭೪೫. ೩೩); ಜಿರಲೆಗಳು ... ಪುಸ್ತಕಗಳ ತೊಗಲಿನ ರಕ್ಷಾಕವಚವನ್ನು ಕೂಡ ತಿನನುತ್ತದೆ (ಅತ್ರುಶಾ. ೯೯). [ಸಂ.]

**ರಕ್ಷಾಪತ್ರ** (ನಾ). = ರಕ್ಷಾಕವಚ ೨: ಪುಸ್ತಕದ ರಕ್ಷಾಪತ್ರದ ಮೇಲೆ ಸುಂದರವಾದ ಚಿತ್ರವಿದೆ (೮೬೩). [ಸಂ.]

**ರಕ್ಷಾಬಂಧ** (ನಾ). ಯಜ್ಞಕಾರ್ಯ, ಮದುವೆ, ಉಪನಯನ ಮುಂತಾದ ಸಂದರ್ಭಗಳಲ್ಲಿ ದುಷ್ಟಶಕ್ತಿನಿವಾರಣೆಗಾಗಿ ಕರ್ತನು ರಕ್ಷಣೆಗಾಗಿ ಕೈಗೆ ಕಟ್ಟಿಕೊಳ್ಳುವ ಬಂಧ; ಕಾಪು. [ಸಂ.]

**ರಕ್ಷಾಬಂಧನ** (ನಾ). ೧. ದುಷ್ಟಶಕ್ತಿಗಳ ಬಾಧೆ ತಟ್ಟದಂತಿರಲು ಧರಿಸುವ (ತಾಯಿತ ಮುಂತಾದ) ಸಂರಕ್ಷಣೆಯ ಸಾಧನ: ಯುದ್ಧೋತ್ಸಾಹದಿಂದ ಹೊರಡುವ ಇಂದ್ರನಿಗೆ ಶಚೀದೇವಿ ರಕ್ಷಾಬಂಧನ ಎಂದು ಮುಂಗೈಕಟ್ಟನ್ನು ಕಟ್ಟುತ್ತಿದ್ದಳಂತೆ (ಶಾಹಬ್ಬ. ೦೦೭). ೨. ಶ್ರಾವಣಪೂರ್ಣಿಮೆಯಂದು ಒಡಹುಟ್ಟಿದವಳು ತನ್ನ ಒಡಹುಟ್ಟಿದವನ ಬಲಗೈಗೆ ಕಟ್ಟುವ ರಕ್ಷೆಯ ದಾರ ಮತ್ತು ಅಂದು ಆಚರಿಸುವ ಹಬ್ಬ; ರಾಖಿ: ಶ್ರಾವಣಹುಣ್ಣಿಮೆಯ ದಿನ ನಡೆಯುವ ರಕ್ಷಾಬಂಧನ ಪದ್ಧತಿ ಸಂರಕ್ಷಣೆಯ ಬದಲು ಆತ್ಮಸಂರಕ್ಷಣೆಯ ಸಾಧನವಾಗಿದೆ (ಶಾಹಬ್ಬ. ೦೦೭); ಈ ಹಬ್ಬದಲ್ಲಿ ತಂಗಿಯು ಅಣ್ಣನಿಗೆ ರಕ್ಷಾಬಂಧನಸ್ಯೆಯುವಳು (ಕೃಪಶ. ೫೭೦). [ಸಂ.]

**ರಕ್ಷಾಮಣಿ** (ನಾ). ೧. ದುಷ್ಟಶಕ್ತಿಗಳ ಬಾಧೆ ತಟ್ಟದಂತಿರಲು ಧರಿಸುವ ಸಂರಕ್ಷಣೆಯ ಸಾಧನ, – ಮಣಿ: ರಕ್ಷಾಮಣಿ ಮೊದಲಾದುವನ್ನು ಮಕ್ಕಳಿಗೋ ಬಂಧುಬಾಂಧವರಿಗೋ ಕೊಡುವ ಇಡುವ ಪದ್ಧತಿ ಎಂದಿನಿಂದಲೂ ಇದೆ (ಶಾಹಬ್ಬ. ೦೦೭). ೨. ಕಾಪಾಡುವ ವ್ಯಕ್ತಿ; ರಕ್ಷಿಸುವ ವ್ಯಕ್ತಿ: ಶ್ರೀಜೈನಧರ್ಮೋನ್ನತಿಯ ಮಹಿಮೆಯುಂ ಭಕ್ತಿಯುಂ ಕಾವ ರಕ್ಷಾಮಣಿಯುಂ ... ಶ್ರೀದಾನಚಿಂತಾಮಣಿಯ (ಅಜಿತ. ೦೨-೦೪). [ಸಂ.]

**ರಕ್ಷಾಮರಿ** (ನಾ). ಕಾಪಾಡುವ ದೇವತೆ; ಅಂಗರಕ್ಷಕಿಯಾದ ದೇವತೆ: ಎಳೆಮಿಂಚುಂ ಸಿಡಿಲುಂ ಬಂದೆಳಸಿದ ಘನಮಾಳೆ ರಂಜಿಪಂಜಿಪ ತೆಣನಂ

ಲಳಿತೆಯ ರಕ್ಷಾವಳಿಯರ್ ತಳೆದರ್ ಭೂಷಣದ ಬಾಳ ಪೊಳೆಪುಗಳಿಂದಂ (ಪುಷ್ಪಪು. ೯-೬೯). [ಸಂ. ರಕ್ಷಾವಳೀ]

**ರಕ್ಷಾಯಂತ್ರ** (ನಾ). = ರಕ್ಷಾಬಂಧನ ೧ : ರಕ್ಷಾಯಂತ್ರವು ಈತನ ಮುಂಗೈಯಲ್ಲಿ ಕಾಣುವುದಿಲ್ಲ ! (ಕಾಕೆಂಠ. ೧೦೭-೨೦). [ಸಂ.]

**ರಕ್ಷಾವಿಧಿ** (ನಾ). ರಕ್ಷಣೆಯುಂಟಾಗಲೆಂದು ಮಾಡುವ ಧಾರ್ಮಿಕ ಸಂಸ್ಕಾರ, – ವಿಧಿ : ವಿವಿಧ ರಕ್ಷಾವಿಧಿಯಂ ವತ್ಸಂಗೆ ನೆಗಟ್ದು . . . ನಂದನಿರ್ದಂ ಸುಖದಿಂ (ಜಗ. ೩-೨೭). [ಸಂ.]

**ರಕ್ಷಿತ** (ಗು). ೧. ಕಾಪಾಡಿದ; ಪಾಲಿಸಿದ. (ನಾ). ೨. ಕಾಪಾಡಿದುದು: "ರಕ್ಷಿತಮವಿತಂ" (ಚನ್ನಕೋ. ೦೦೫-೯೭). [ಸಂ.]

**ರಕ್ಷಿವರ್ಗ** (ನಾ). ೧. ಮೈಗಾವಲಿನ ಪಡೆ ; ಅಂಗರಕ್ಷಕರ ಸೈನ್ಯ. ೨. ಸೇನೆಯ ಮುಖಂಡ ; ಸೇನಾಪತಿ : "ರಕ್ಷಿವರ್ಗಃ . . . ವಾಹಿನೀಪತಿಃ — ಈ ೪ ದಂಡನಾಯಕಂ" (ಹಲಾಯು. ೭೦-೨೭೯). [ಸಂ.]

**ರಕ್ಷಿಸು** (ಕ್ರಿ). ಕಾಪಾಡು ; ಕಾಯು ; ಪಾಲಿಸು : "ರಕ್ಷಿಸು — ಪಾಲನೇ" (ಕವು೦ಧಾ) ; ಮಹಾಯಕ್ಷನಾದರದಿಂ ರಕ್ಷಿಸುತಿರ್ಕುಪಾಸಕಗಣ ಶ್ರೀಸೇವ್ಯರಂ ಭವ್ಯರಂ (ಅಜಿಪು. ೦-೦೫) ; ಅಭಿಮಾನದ ಪೆರ್ಚಂ ರಕ್ಷಿಸಲುಂ ಕಾರ್ಯಮಂ ಸಾಧಿಸಲುಂ . . . ಸತ್ಪುರುಷರ್ ಅರಸನನಾಶ್ರಯಿಸಿರ್ಪರ್ (ಕಂಕಕಂ. ೦೬೩-೦೬) : ಶರೀರವನ್ನು ರೋಗರುಜನಗಳಿಂದ ರಕ್ಷಿಸುವುದು — ಇದು ಮುಖ್ಯವಾಗಿ ಜೀವಾತುಗಳ ಕೆಲಸ (ಅಡುಗೆ. ೫೭).
[ ರಕ್ಷಣ + – ಇಸು$_3$ ]

**ರಕ್ಷಿಸುವಣ** (ನಾ). ಕಾಪಾಡುವುದು ; ರಕ್ಷಿಸುವಿಕೆ : ಸ್ವಾಮಿರಕ್ಷಾ-ಆಳ್ದನ ರಕ್ಷಿಸುವ [ಪಾಠಾಂ. ಹ]ಣಮುಂ (ಬಿಕಿವಾ. ೦೭-೬).
[ ರಕ್ಷಿಸು + –ಅಣ ]

**ರಕ್ಷೆ** (ನಾ). ೧. ಕಾಪು ; ರಕ್ಷಣೆ : ಜಗತ್ತ್ರಯರಕ್ಷಾಪ್ರಿಯನಪ್ಪ ಕೃಷ್ಣನ ಚರಿತ್ರಂ ಭೀತಿಯಂ ಮಾಟ್ಕುಮೋ (ಜಗ. ೩-೩೯) ; ನೀಂ ಪೂಜೆಗೈದಿರ್ಪ ದೇವಾನುದೇವತೆಗಳೆಲ್ಲರೂ ನಿನಗಕ್ಕೆ ರಕ್ಷೆ ! (ಶ್ರೀರಾಮ. ೬೫-೦೯೪). ೨. (ಗ್ರಹಾದಿಗಳ ಭೀತಿಯನ್ನು ತಡೆಗಟ್ಟಲು ಕಟ್ಟುವ) ತಾಯಿತ, ಯಂತ್ರ ಮೊದಲಾದುವು: ಧರಣಿಪತಿ ತಗೆದೀಕೆಯನು ಕುಳ್ಳಿರಿಸಿ ತನ್ನಯ ತೊಡೆಯ ಮೇಲಾದರಿಸಿ ಮಂತ್ರಿಸಿ ನೀರ ತಳಿದನು ರಕ್ಷೆಗಳ ರಚಿಸಿ (ಕುವ್ಯಾಕ. ೯-೨೮) ; ಶಾಂತಿಯ ಬದುಕಿಗೆ ಕಟ್ಟಿದ ರಕ್ಷೆ (ಕವಿಕೋ. ೦೫-೦೫). ೩. (ಹವನ ಹೋಮಾದಿಗಳಲ್ಲಿ . ಪವಿತ್ರವೆಂದು ಹಣೆಯಲ್ಲಿ ಧರಿಸುವ ಹವಿಸ್ಸಿನ) ಭಸ್ಮ: "ಭೂತಿಃ . . . ರಕ್ಷಾ — ಈ ೫ ಬೂದಿ" (ಹಲಾಯು. ೦೩-೬೯). ೪. ಬಳೆಯ ಚೂರು ಇತ್ಯಾದಿಗಳಿಂದ ಹಾಕುವ ಬರೆ; ಚಿಟಿಕೆ : ಈ ಸನ್ನಿಪಾತಕ್ಕೆ ಸಂದುಸಂದಿಗೆ ವಾತಹರವಾದ ತೈಲಂಗಳನಿಕ್ಕಿಸಿ ಅಲ್ಲಲ್ಲಿಗೆ ನರಭೇದಗಳನರಿದು ರಕ್ಷೆಯ ಹಾಕಿಸಿ (ಸಕಲ. ೦೫೦). [ ಸಂ. ರಕ್ಷಾ ]

**ರಕ್ಷೆಗಟ್ಟು** (ಕ್ರಿ). ಯಂತ್ರ, ತಾಯಿತ ಮೊದಲಾದುವನ್ನು ಕಟ್ಟು : ಪದಪಿಂ ಪ್ರಭುಸಖನಂಗೆ ತಾನೆ ರಕ್ಷೆ[ಪಾಠಾಂ. ಕೈ]ಗಟ್ಟುವ ತೆಜದಿಂದೆ ಕಟ್ಟಿದ ನಿಳಾಪತಿ ತನ್ನಧಿರಾಜಪಟ್ಟಮಂ (ಚಂದ್ರಪು. ೬-೦೦೨) ; ಮುಂಡಿಯ ಭಾರಗಳ ನಾರಿಯರ ಕಂಬುಗ್ರೀವ ಬಿಡದಾನಲಾಜವೆಂದೆನುತ ಕುಡುವಿಲ್ಲ ರಕ್ಷೆಗಟ್ಟಿದ ಮಂತ್ರಿಲೇಖನದಡಹೆನೆ ಪುಸ್ತಿಯೊಪ್ಪಿದುವು (ಕಂಕಲಿ. ೨೪-೩೨).
[ ರಕ್ಷೆ + ಕಟ್ಟು$_1$ ]

**ರಕ್ಷೆಬೊಟ್ಟು** (ನಾ). ಅನಿಷ್ಟನಿವಾರಣೆಗಾಗಿ ಹಣೆಯ ಮೇಲೆ ಇಡುವ ಬೊಟ್ಟು : (*). [ ರಕ್ಷೆ + ಬೊಟ್ಟು$_2$ ( < ಬಟ್ಟು ) ]

**ರಕ್ಷೆಯಿಕ್ಕು** (ಕ್ರಿ). = ರಕ್ಷೆಗಟ್ಟು : ಅಶ್ವಯುಜಶುದ್ಧಬದಿಗೆಯೊಳ ಶ್ವಾನೀಕಕ್ಕೆ ರಕ್ಷೆಯಿಕ್ಕುವುದು ಧರಾಧೀಶ್ವರಂ (ಅಶ್ವಶಾ. ೬-೨).
[ ರಕ್ಷೆ + ಇಕ್ಕು ]

**ರಕ್ಷೆಯಿಡು** (ಕ್ರಿ). ರಕ್ಷೆಬೊಟ್ಟನ್ನು ಇಡು : ಪಕ್ಷಿವಾಹನದೇವ ಅಂಜಿದಂಜಿದನೆಂದು ರಕ್ಷೆಯಿಡುವ ಪುಣ್ಯವೆಲ್ಲಿ ಪಡೆದಳೊ (ಪುರಂದ. ೪-೦೦೩-೦) ; ಹೆಣ್ಣುಮಕ್ಕಳಿಗೆ ಯಾರೊಬ್ಬರ ಕೆಟ್ಟಕಣ್ಣು ತಾಗದಿರಲೆಂದು ರಕ್ಷೆಯಿಟ್ಟರು (ಕಾಂಕಲಾ. ೭೦). [ ರಕ್ಷೆ + ಇಡು$_1$ ]

**ರಕ್ಷೆವೆರು** (ಕ್ರಿ). ರಕ್ಷಣೆಯನ್ನು ಹೊಂದು : ದಾದಿಯೊರ್ವಳ ಅಕ್ಕರೆಯ ಸಾಹಸದಿ ರಕ್ಷೆವೆತ್ತು . . . ಕಡೆಗೆ ಕುಂತಳನಗರವೀಥಿಯಲಿ ಮುಗಿಯುವುದೆ ಅವನ ಬಾಳ್ ? (ಚಂದ್ರಸ. ೨-೦೫). [ರಕ್ಷೆ + ಪೆರು$_1$ (< ಪೆಱು$_1$)]

**ರಕ್ಷೋಗಣ** (ನಾ). ರಾಕ್ಷಸರ ಸಮೂಹ : ಲೀಲೆ ಮಿಗೆ ರಮಿಸುತಿಹ ಯಕ್ಷಕಿನ್ನರಕಿಂಪುರುಷಗರುಡಗಂಧರ್ವರಕ್ಷೋಗಣಂಗಳಿಂದೆ . . . ಅಚಲೇಂದ್ರ ಮೆಸೆದಿರ್ದುದು (ಕೃಷಿಲಾ. ೦೦-೪). [ಸಂ.]

**ರಕ್ಷೋಗಾಂಧಾರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಗಾಂಧಾರಿ ರಕ್ಷೋ[ಪಾಠಾಂ. ರಕ್ಷ]ಗಾಂಧಾರಿ . . . ಕೌಶಿಕೆಯೆಂಬ ಹತ್ತೇ ಮಧ್ಯಮಗ್ರಾಮದಿಂದಾದ ರಾಗಂಗಳು (ಶಿವೇಕ. ೦೯೭). [ ಸಂ. ? ]

**ರಕ್ಷೋಗುರು** (ನಾ). ೧. ರಾಕ್ಷಸರ ಗುರು ; ಶುಕ್ರಾಚಾರ್ಯ. ೨. [ಜ್ಯೋತಿ] ಶುಕ್ರಗ್ರಹ : ಹರಿಜನ್ಮಮಾಗೆ ಮಂದಂ ಬೆರಸಿನನಿರೆ ನಿಧನದೊಳ್ ನಿರೀಕ್ಷಿಸೆ ರಕ್ಷೋಗುರು ಲಗ್ನದಿನಷ್ಟಮಮಂದಿರಕ್ಕಜಾಳಿಯನೆ ತತ್ಪ್ರಮಾಣಕ್ಕೆ ಲಯಂ (ಜಾತಕ. ೬-೩೭). [ಸಂ.]

**ರಕ್ಷೋಘ್ನ** (ಗು). ರಾಕ್ಷಸರನ್ನು ಕೊಲ್ಲುವ ; ಅಸುರರನ್ನು ನಾಶ ಮಾಡುವ : ಉಪಚರಿಸಿ ರಕ್ಷೋಘ್ನಸೂಕ್ತದ ಜಪವ ಮಾಡಿಸಿ ವಚನ ಮಾತ್ರದ ರಪಣದಲಿ ರಚಿಸಿದನು ಗೋಧನಭೂಮಿದಾನವನು (ಕುವ್ಯಾಕ. ೯-೨೯) ; ಅರ್ಜುನಂ ನಗುತೆ ರಕ್ಷೋಘ್ನಬಾಣವನೆ ಪೂಡಿ ಬೇಗದಿಂದಿಸಲು (ಕೃಷಿಲಾ. ೦೭-೩೯); ಯಾಗಶಾಲೆಯೊಳೆಣ್ದೆಸೆಯೊಳಂ ಬಾಗಿಲೊಳೋರಿರ್ವರ್ ಮುನಿಗಳ್ ರಕ್ಷೋಘ್ನಸೂಕ್ತಮಂ ಪಠಿಸುತ್ತೆ ಕಾವಲಿರೆಸೆದರ್ (ರಾಮಾಶ್ವ. ೦೭೭-೩). [ಸಂ.]

**ರಖಂ** 'ರಕಂ' ನೋ.

**ರಖಂವ್ಯಾಪಾರ** (ನಾ). ಒಟ್ಟುಗಟ್ಟಳೆ ವ್ಯವಹಾರ; ಸಗಟುವ್ಯಾಪಾರ : ನಾರಾಯಣ ರಖಂವ್ಯಾಪಾರ ಮಾಡುವುದಕ್ಕಾಗಿ ಸಾಟಿ ಮಾಡುತ್ತಿರುವಾಗ ಕೇಶವ ಚಿಲ್ಲರೆವ್ಯಾಪಾರವನ್ನು ದೊಡ್ಡದಾಗಿ ಮಾಡುವ ಹಂಚಿಕೆ ಹೂಡುವನು (ರಾಚಂದ್ರ. ೯). [ರಖಂ (< ರಕಂ) + ವ್ಯಾಪಾರ]

**ರಖಾವು** (ನಾ). ೧. ಕಾಪಾಡುವುದು ; ರಕ್ಷಿಸುವುದು. ೨. ಉಪಪತ್ನಿಯನ್ನು ಇಟ್ಟುಕೊಳ್ಳುವುದು : ಚಿಕ್ಕಬಾಬುಗಳಿಗೆ ಇರೋದು ಆಕೆ ಒಬ್ಬಳೇ. ರಖಾವು ಹೆಂಗಸು (ಶಾಹೇಬ್. ೩೭೨).
[←ಹಿಂ. ರಖಾವ್]

**ರಖಾವುದಾರ** (ನಾ). ಉಪಪತ್ನಿಯನ್ನು ಇಟ್ಟುಕೊಂಡಿರುವವನು.
**ರಖಾವುದಾರಳು** = ಇಟ್ಟುಕೊಂಡಿರುವವಳು; ಉಪಪತ್ನಿ : ಅವನ ಹೆಂಡತಿಗೆ ಅವನ ರಖಾವುದಾರಳು ಅಗಸಗಿತ್ತಿಯ ದೆಸೆಯಿಂದ ಅವನಲ್ಲಿ ದ್ವೇಷವಿದ್ದರೂ ಪ್ರಾಣಭಯದಿಂದ ಅನಾಥಳಾಗಿದ್ದಾಳೆ (ಕಂಪ. ೦೯೩).
[ರಖಾವು + – ದಾರ$_4$]

**ರಖಿಸು** 'ರಕ್ಕಿಸು' ನೋ.

**ರಖೇಲಿ** (ನಾ). ಉಪಭೋಗಿಸುವ ಹೆಣ್ಣು; ಉಪಪತ್ನಿ : ಬಸವಂತಿ ಶ್ಯಾಮರಾಯನ ಕೇವಲ ರಖೇಲಿ . . . ಅಲಗರ್ಜಿ ಜಾತಿಯ ಹೆಣ್ಣಲ್ಲವೆಂದು ಖಾತ್ರೀಯಾಯಿತು (ದೀಕಥ. II, ೦೭೭). [← ಹಿಂ. ಮರಾ. ರಖೇಲೀ]

**ರಖೋಲೆ** (ನಾ). ಕಾವಲು; ರಕ್ಷಣೆ: ರಾಮಣ್ಣನನ್ನು ಇಲ್ಲಿಯ ರಖೋಲೆಗೆ ಹೇಳಿದ್ದೇನೆ. ಬರುತ್ತೇನೆ ಎಂದಿದ್ದಾನೆ (ಶಿವಾಉ. ೨೩೨); ಅಗೋ ಅಲ್ಲಿ ತೋಟ. ಇಂದಿನಿಂದ ಅದರ ರಖೋಲೆ ನಿನಗೆ ಸೇರಿದ್ದು (ಕರಂಬ. ೦೨).
[←ಹಿಂ. ರಖವಾಲೀ]

**ರಗಟೆ** (ನಾ). ೧. ಹರಿದ ಬಟ್ಟೆ; ಜೀರ್ಣವಸ್ತ್ರ; ಚಿಂದಿ : ಅಘದ ಬೀಡು ಮುಕುತಿಗೇಡು ಜನಿಸಿ ಕೆಡುವ ತನುವ ರಗಟೆಗಿಂತ ಕಡೆಯ ಕಾಂಬುದೆಂದಿ ಗವ್ವದೊ (ಸುಸಾಕ. ೬೨-೨). ೨. ಜೀರ್ಣವಾದ ಬಟ್ಟೆಗಳನ್ನು ಸೇರಿಸಿ ಹೊಲಿದ ಹೊದಿಕೆ ; ಕವುದಿ : ಕ್ಷುತ್ತಿಂಗೆ ಭಿಕ್ಷ ಶೀತಕ್ಕೆ ರಗಟೆ ಮಾತಿಂಗೆ ಮಂತ್ರ (ಅವಶಂ. ೨೦೫-೯೨೪) : ಪ್ರಾಣಲಿಂಗದಲ್ಲಿ ಪರಿಣಾಮಿಯಾಗಿ ಕ್ಷುತ್ತಿಂಗೆ ಭಿಕ್ಷೆ ಶೀತಕ್ಕೆ ರಗಟೆಯಾಗಿ ಮೋಕ್ಷಗಾಮಿಯಾಗಿಪ್ಪುದೇ ಮಧ್ಯ (ಶಿಪಪ. ೦೦-೭) ; ಬಾವಿಯಲ್ಲಿ ಸೀರೆ ರಗಟೆ ಕವದಿ ಮೊದಲಾದ ಮಲಿನ ವಸ್ತ್ರಗಳನ್ನು ತೊಳೆಯಲಾಗದು (ಕೃಶಿಕ್ರ. ೦೭೫).

[← ಮರಾ. ರಕಟೀ, ರಗಟಾ, ರಗಟೀ]

**ರಗಡ** ' ಲಗಡು ' ನೋ.

**ರಗಡು** (ನಾ). (ಉಕ) ಹೆಚ್ಚು; ತುಂಬ : ನೀ ನೋಡಿದಾಗ್ಗೂ ಈಗ್ಗೂ ರಗಡ ಫರಕ ಆಗೇದ (ಗಂಪತಾಯಿ. ೦೨) ; ನೀನೂ ರಗಡು ಸಹಾಯಾ ಮಾಡಿದೀ. ಆದರೂ ಪೂರಾ ಸಾಧಿಸಲಿಲ್ಲ (ತಿತುಗು. ೭೩).

**ರಗಡಾಗು** = (ಕ್ರಿಮಾವ) ಬಹಳವಾಗು ; ಹೆಚ್ಚಾಗು : ಅವರ ಚಕ್ರವ್ಯೂಹದಿಂದ ಪಾರಾಗಬೇಕಾದರೆ ಆವನಿಗೆ ರಗಡಾಯಿತು (ಅಷ್ಟ. ೨೫); ಮಳೆಯಾಗ ಗುಡ್ಡದಿಂದ ಬರಬೇಕಾದ್ರ ರಗಡಾಗಿ ಹೋತು (ನಡೆದಾ. II, ೦೦೩೦).　[← ಅರ. ರೆಫದ್; ಹಿಂ. ಮರಾ. ರಗಡ್]

**ರಗಣ** (ನಾ). [ಛಂದ] ಎರಡು ಗುರುಗಳ ಮಧ್ಯೆ ಲಘುವುಳ್ಳ ಅಕ್ಷರ ಗಣ (– ◡ –) : ಮಗಣಂ ಭೂಮಿಯೆನಿಕ್ಕುಂ ಯಗಣಂ ಜಲ ರಗಣಮಗ್ನಿ ಸಗಣಂ ವಾತಂ (ಛಂದೋಂಬು. ೦-೩೯ ಅಖ). [ಸಂ.]

**ರಗಣಲಿಪಿ** (ನಾ). ಒಂದು ಬಗೆಯ ಲಿಪಿ : ಪ್ರಬಂಧಲಿಪಿ ರಗಣಲಿಪಿ ಶೈಲಲಿಪಿ . . . ಯೀ ಅಗಣಿತ ಲಿಪಿಗಳ ನೋಡಲಬೀಸುದೆ (ಭಾಸ್ಕರ. ೭೭-೬).

[ರಗಣ₁ + ಲಿಪಿ]

**ರಗಳು** (ಕ್ರಿ). ಕೋಪದಿಂದ ಹರಟು ; ಗಳಹು : ಬಾಯಲ್ಲಿ ಬೇಕಾದಷ್ಟು ರಗಳಿಕೊ ; ಕೈಯಲ್ಲಿ ಮಾತ್ರ ಮುಟ್ಟಬೇಡ ! (ಚಟ್ಟಂ. ೯೦-೨೦).

[← ತೆಲು. ರಗುಲು = ಕೋಪಗೊಳ್ಳು]

**ರಗಳೆ, ರಘಟೆ** (ನಾ). ೧. ಗದ್ದಲ ; ಗೊಂದಲ : ಯಾವ ವಿಧವಾದ ರಗಳೆ ರಾದ್ಧಾಂತಗಳೂ ನಡೆಯುತ್ತಿರಲಿಲ್ಲ (ಕರಾಸಾ. ೩೨) ; ಮದುವೆ ಯಾದ ಬಳಿಕ ಒಂದು ರಗಳೆಯುಂಟಾಯಿತು (ದೇಬಶ್. ೪). ೨. ಕರೆಕರೆ; ಉಪದ್ರವ ; ಪೀಡೆ : ಆ ರಗಳೆಯನ್ನೆಲ್ಲಾ ಯೋಚಿಸಿಕೊಂಡರೆ ಹೋಗುವುದು ಬೇಡವೆನ್ನಿಸುತ್ತದೆ (ವತಶಾ. ೦೩೯) ; ಒಮ್ಮೆ ಇಲ್ಲಿಂದ ಹೊರಬಿದ್ದರೆ ಮತ್ತೆ ಅವಳ ರಗಳೆ ಇಲ್ಲವಲ್ಲ (ದೀಪದ. ೦೦೮). ೩. ಬೇಸರ ತರುವ ದೀರ್ಘವಾದ ಮಾತುಕತೆ ; ತಲೆಚಿಟ್ಟು ಹಿಡಿಯುವ ದೀರ್ಘ ಚರ್ಚೆ : ಮಂತ್ರವಾದಿಯ ಕುತಂತ್ರದ ರಗಳೆಗೆ ಜೋರಾಗಿ ರೇಗಿದನು (ಪಷ್ಕರ್ಧ. ೮೫) ; ಮುಗಿಯದೇ ನಿನ್ನ ರಗಳೆ (ಕಂಡಮ. ೦೦-೦೫). ೪. ಬಗೆಹರಿಯದುದು ; ಕೊನೆಗಾಣದುದು : ಈ ರಗಳೆಗೆ ಕೊನೆಯೇ ಇಲ್ಲ (ರೂಢಿ). ೫. (ಮಗುವಿನ) ಚಂಡಿ ; ರಂಪ : ಮಗುವಿನ ರಗಳೆ ಇನ್ನೂ ನಿಂತಿಲ್ಲ (ರೂಢಿ). ೬. [ಛಂದ] ಒಂದು ಬಗೆಯ ಮಾತ್ರಾಗಣದ ಛಂದ ; "ಸಮಾನವಾದ ಮಾತ್ರಾಗಣಗಳುಳ್ಳ ಬಹು ಪಾದಗಳಿಂದ ಕೂಡಿದ ವೃತ್ತವು ರಗಳೆಯೆನಿಸುವುದು" (ಕೈಬಿ. ೯೭) : ರಗಳೆಯ ಲಕ್ಷಣಮಂ ಕಂದಪದ್ಯದಿಂ ಪೇಟ್ವೆಂ (ಛಂದೋಂಬು. ೩-೨೨೨) ; ಹರಿಯರಸನೆಂಬಾತ ಶಿವಕವೀಶ್ವರನು ಗಡ . . . ಪರಿರಚಿಸುತಿಹ ಕಬ್ಬ ರಗಳೆಗಳೆಗಳು ಗಡ (ರಾಶಿಕ. ೦೪-೨೭) ; ಗಿರಿಜಾಕಲ್ಯಾಣವನ್ನು ಆತನು ರಚಿಸದೆ ಹೋಗಿದ್ದರೂ ರಗಳೆಗಳಿರುವ ತನಕ ಆತನ ಮಹಿಮೆಯಲ್ಲಿ ಲವ ಲೇಶವೂ ಕಡಿಮೆಯಾಗುತ್ತಿರಲಿಲ್ಲ (ಅಪುಕ. ೨). **ರಘಟೆ** : ೬. ಮಾಲಾ ವೃತ್ತದಂಡಕ[ಂಗಳುಂ] ರಘಟೆ (ರಗಳೆ) ಮಾತ್ರಾರ್ಯ – ತ್ರಿಪದಿ, (ಛಂದೋಂಬು. ೩. ೦-೭೭ ಪ); ರಘಟೆಗಳ (ತೆಲುಗು–ರಗಡ) ಪ್ರಭೇದಗಳನ್ನು ತಿಳಿಸುವ. . . ಎರಡು ಪದ್ಯಗಳು (ಕೈಬಿ. ೦೩೬).

[?./ ಹಿಂ. ರಗಡ./ತೆಲು. ರಗಡ]

**ರಗುತ** ' ರಕುತ ' ನೋ.

**ರಗ್ಗು** (ನಾ). ಉಣ್ಣೆಯಿಂದ ನೆಯ್ದುಮಾಡಿದ ದಪ್ಪಹೊದಿಕೆ ; ನಯಗಂಬಳಿ : ನಾನು ರಗ್ಗನ್ನು ಮುಖದ ಮೇಲೆಳೆದು ಬಿದ್ದುಕೊಂಡೆ (ಬಂಗಾರ. ೫೭) ; ನೆಲಕ್ಕೆ ಚಾಪೆ ಅಥವಾ ಸಾಧ್ಯವಾದರೆ ರಗ್ಗುಗಳನ್ನು ಹಾಸ ಬೇಕು (ಗೃಹಪ. ೭೭).　[← ಇಂ. Rug]

**ರಘಟಾಪ್ರಬಂಧ** (ನಾ). = ರಗಳೆ ೬ ; ಮಹಾಪುರಾತನರ ಸತ್ಕಥೆಗಳಂ ರಘಟಾಪ್ರಬಂಧದಿಂ ಪೊಗಳುತ್ತಿರ್ಪ (ರಾಶಿಕ. ೦೪-೦೩೨).

[<ರಘಟೆ + ಪ್ರಬಂಧ]

**ರಘಟಾಬಂಧ** (ನಾ). = ರಗಳೆ ೬ : ಗುಣಾಗ್ರಣಿಯ ಮತದಿಂದೆ ತಾಳದ ಗಣನೆಗೊಡಂಬಟ್ಟೊಡದುವೆ ರಘಟಾಬಂಧಂ (ಛಂದೋಂಬು. ೩-೨೨೨).

[<ರಘಟೆ + ಬಂಧ]

**ರಘಟೆ** ' ರಗಳೆ ' ನೋ.

**ರಚನ** (ನಾ). ೧. ನಿರ್ಮಾಣ ; ಸೃಷ್ಟಿ : ' ರಚನಕಾರ ' ಪರಾ. ೨. ಆಕರ್ಷಕವಾದುದು : ಎನ್ನ ಕಣ್ಮನದ ಪುಣ್ಯಾದಿ ಶಕ್ತಿಯೆ ಕೇಳೆನ್ನ ಸವಿವಚನ ನಿನ್ನ ಕಿವಿಗತಿರಚನವಪ್ಪ ಮೇಲ್ಗಥೆಯನುಸುರ್ವೆ (ಪಪಪೋ. ೦೨-೪). ೩. ಅಣಿ; ಸಜ್ಜು. ೪. ಸಿದ್ಧಿ; ಸಾಧನೆ: 'ರಚನಂಗೆಯ್' ಪರಾ.[ಸಂ.]

**ರಚನಂಗೆಯ್** (ಕ್ರಿ). ೧. ನಿರ್ಮಿಸು ; ಸೃಷ್ಟಿಸು. ೨. ಸಾಧಿಸು ; ಸಿದ್ಧಿ ಯನ್ನು ಹೊಂದು: ರಚನಂಗೆಯ್ಯದೆ ಧರ್ಮಕೀರ್ತಿಯೆರಡಂ ಸದ್ವರ್ಮಮಂ ಪಾಪದಾ ನಿಚಯುಕ್ಕಿಕ್ಕದೆ . . . ಮಾದಿಪಾ ವಚನಬ್ರಹ್ಮದೆ ಮುಕ್ತಿಯೇ (ಸೋಮೇಶ. ೪೪).　[ರಚನ + ಕೆಯ್₁]

**ರಚನಕಾರ** (ನಾ). ಕಾವ್ಯ ಮುಂತಾದುವನ್ನು ರಚಿಸುವವನು ; ಕೃತಿ ಕರ್ತ : ತ್ಯಾಗರಾಜರ ಅನಂತರದ ಶ್ರೇಷ್ಠರಚನಕಾರ – ಸಂಗೀತಗಾರ ರಲ್ಲಿ ಮಹಾವೈದ್ಯನಾಥಅಯ್ಯರವರದು ಬಹಳ ಉಚ್ಚವಾದ, ಗೌರವಾನ್ವಿತ ವಾದ ಸ್ಥಾನ (ಸಂಗೀತ. ೨). [ಸಂ.]

**ರಚನೆ** (ನಾ). ೧. ನಿರ್ಮಾಣ ; ಸೃಷ್ಟಿ : ಅಚ್ಯುತನುವಿನೊಳಗಾದ ಜಗದ ರಚನೆ ಆರಿಂದ ಜನಿಸಿತ್ತು (ಅನುಪ. ೩೦೦). ೨. ಕಾವ್ಯ, ಚಿತ್ರ ಮೊದಲಾದುವನ್ನು ಬರೆಯುವುದು, — ಸೃಷ್ಟಿಸುವುದು : "ಶಂಥನಂ, ಗ್ರಂಥನಂ, ಗುಂಫಃ, ಸಂದರ್ಭಃ, ರಚನಾ__ಈ ೫ ರಚನೆ" (ಹಲಾಯು. ೦೨೦-೪೫): ಒಂದು ನಾದವೇ ಗಾಯಕನ ಗಾಯನದ ರಚನೆಲೀ ಚಂದಚಂದದ ರಾಗಮೆನಿಪಂತೆ (ನಗಶಾ. ೦೪-೭). ೩. ಬರೆದ ಕಾವ್ಯ, ಕೃತಿ, ಗ್ರಂಥ ಮುಂತಾದುವು : ಅವನು ಮಾಡಿದ ರಚನೆಯನ್ನು ಬಾಯಿಂದಾಗಲಿ, ವಾದನಗಳ ಮೇಲಾಗಲಿ ಹಾಡಿ ತೋರಿಸಬಲ್ಲವನು ಗಾಯಕ (ಬಾಂಕ್ರ. II, ೦೨೯೦). ೪. ಕ್ರಮ ; ರೀತಿ. [ಸಂ. ರಚನಾ]

**ರಚನೆವಂತ** (ನಾ). ನಿರ್ಮಾಣ ಮಾಡುವವನು : ಕಟ್ಟುವವನು; ಕರ್ತೃ: ಭಜನೆವಂತರೆಲ್ಲರು ಪುರಾಣದ ಪುಣ್ಯವಂತರು ಶಾಸ್ತ್ರದ ಸನ್ನಿಹಿತರು ವಚನದ ರಚನೆವಂತರು (ಪೋಕಪು. ೦೦೭-೪೨೭). [ರಚನೆ + — ವಂತ]

**ರಚಯಿತ** (ನಾ). = ರಚನೆವಂತ : ಇಂಥ ಹಾಡುಗಳನ್ನು ಅವುಗಳ ರಚಯಿತರು ಬರೆದಿರಿಸಲಿಲ್ಲ (ಶಾಪಗೀ. ೯); ಸಂಗೀತವು ಎರಡು ಮುಖ್ಯ ವ್ಯಕ್ತಿಗಳನ್ನು ಹೊಂದಿಕೊಂಡಿದೆ. ಮೊದಲನೆಯದು ಸಂಗೀತ ರಚಯಿತ ನನ್ನು (ಬಾಂಕ್ರ. II, ೦೦೯೦). [ಸಂ. ರಚಯಿತೃ]

**ರಚಯಿತಾರ** (ನಾ). = ರಚನೆವಂತ : ಈ ಕವಿತೆಯ ತಿಬೇಟಭಾಷೆಯ ಅನುವಾದದಲ್ಲಿ ರಚಯಿತಾರನ ಹೆಸರು ' ಅಮೋಘೋದಯ ' ಎಂದಿದೆ (ಕನಾಕ. ೦೭). [ಸಂ. ರಚಯಿತೃ]

**ರಚಯಿಸು** ' ರಚಿಸು ' ನೋ.

**ರಚಿತ** (ಗು). ೧. ಉಂಟಾದ ; ಒದಗಿದ : ರಜತಗಿರಿಶಿಖರದೊಳ್ ಮದನಾರಿಯುಂ ಗೌರಿಯುಮುಚಿತಲೀಲಾರಚಿತಸುಖಸಂಕಥಾಪ್ರಿಯಕೌತುಕ ದೊಳಿರಲು (ಶಕ. ೦-೩೨). ೨. ಸಿದ್ಧಪಡಿಸಿದ ; ಅಣಿಗೊಳಿಸಿದ : ರಚಿತರುಚಿನಿಚಿತಶುಚಿಸಾಜ್ಯಭೋಜ್ಯಾಳಿಯಿಂ . . . ಪೂಜಿಸಿದಂ (ರಾಜಶೇ. ೦೬-೫೦ ರಗಳೆ). ೩. ಮಾಡಿದ. ೪. ಬರೆದ ; ರಚಿಸಿದ. (ನಾ). ೫. ಸೃಷ್ಟಿಯಾದುದು ; ನಿರ್ಮಿತವಾದುದು : ರಚಿತಂ ನಯುಂಗ ಸಪ್ತ ಸಪ್ತಾರ್ಚಿಯಿಂ ದಂಡಕಂ (ಛಂದೋಂಬು. ೩-೨೨೩). [ಸಂ.]

**ರಚಿಸು**, ರಚಯಿಸು (ಕ್ರಿ). ೧. ನಿರ್ಮಿಸು · ಕಟ್ಟು: ನವರತ್ನಮಯ ಶಿವಭವನಮಂ ರಚಿಸಿ (ಶಕ. ೫೩-೨೪); ಬಿಳಿಯ ಚೌರಿಯ ಮೇಲುಗಟ್ಟಿನ ಹೊಳಹು ಮಿಗೆ ರಚಿಸಿದರು ಸತಿಯ ವಿವಾಹಮಂಟಪವ (ವಳೆ. ೩-೬). ೨. ಮಾಡು : ವಿಧ್ಯುಕ್ತಮಾಗಿ ರಚಿಸಿರ್ದ ಜಪಮಾಲೆಯಂ ಮಧ್ಯಮಾ ನಾಮಿಕಾಂಗುಷ್ಠದಿಂ ಗ್ರಹಿಸಿ . . . ಜಾನಿಸುತೆ (ಕಠ್ಯರಾ. ೬-೨೪) : ಭಕ್ತಿ ಶುಕ್ತಿಯಲಿ ಮುತ್ತುಗಳ ರಚಿಸಿ ಕೋದಿಹೆ ವರಣಮಾಲೆಯಂ (ಕಾಪ್ರಾಂಗ. ೩೬-೦೦೦೪). ೩. ಅಣಿಮಾಡು ; ಸಜ್ಜುಗೊಳಿಸು : ನೆರೆದರವನೀ ನಿರ್ಜರರು ಕೇಸರಿಯ ಪೀಠವ ರಚಿಸಿ ವೈದಿಕಪರಿಣತರ ಮತದಿಂದ ವಿಸ್ತರಿಸಿದರು ಮಂಗಳವ (ಕುಮಾರಾ. ೦-೩೦). ೪. ನೆರವೇರಿಸು ; ಜರುಗಿಸು : ತನ್ಮನಿವನುಪನಯನಾದಿ ಕರ್ಮವ ರಚಿಸಿ (ಕೊರಟಾ. ೦-೩-೦೦); ಪನ್ನೆರಡನೆಯ ದಿವಸ ನಾಮಕರಣವ ಚೆನ್ನಾಗಿ ರಚಿಸಲು ದ್ವಿಜರ . . . ಕರಸಿ (ಕಂಠಾ. ೪-೬೪). ೫. (ಕಾವ್ಯ, ಚಿತ್ರ ಮೊದಲಾದುವುಗಳನ್ನು) ಬರೆ ; ಸೃಷ್ಟಿಮಾಡು : ಅಸದೃಶಮಿವೆನಿಸಿ ಲೋಕಕ್ಕೆಸೆಯೆ ಮನೋವಚನಕಾಯ ಮಳಮಂ ಕಳೆಯಲ್ಕೆ ಸಮರ್ಥವೆನಿಪುವಂತೆ ರಚಿಸಿದರ್ಕೇವಳಮ ಪೂಜ್ಯಪಾದ ಮುನೀಂದ್ರರ್ (ಕಮಶ. ೦-೮) ; ಕಟ್ಟಿದರೋದುಗಬ್ಬವ ಹಾಡುಗಬ್ಬವ ಕಬ್ಬದೊಳೊರೆವರಿವೆರಡು ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇಕಬ್ಬ ಹೇಳೆಲೆ ಸರಸ್ವತಿಯೆ (ಶಠಶ. ೦-೩); ಇವರು ರಚಿಸುವ ಕಾವ್ಯವು ಒಬ್ಬ ಮನುಷ್ಯನು ರಚಿಸಿದ್ದೆಂದು ಮನಸ್ಸಿಗೆ ತೋರುವುದಿಲ್ಲ (ಕಾಶಗೀ. ೩). **ರಚಯಿಸು** : ೫. ಪುರಾಣಮಾರ್ಗಪದಪದ್ಧತಿಬಂಧುರಬಂಧಮೆಂಬಿನಂ ರಚಯಿಸಿ (ಛಂದೋಂಬು. ೦-೬). ೬. ತಿದ್ದು ; ರೇಖಿಸು : ಮಂಗಮಗಿಸುತಿಹ ಪರಿಮಳದ ಪನ್ನೀರಿನಿಂ ಮಜ್ಜನಂಬುಗಿಸಿ ವರದುಕೂಲಮನುಡಿಸಿ ಪಣೆಯೊಳಗೆ ಮೃಗಮದಲಲಾಮಮಂ ರಚಯಿ [ಪಾಠಾಂ. ವಿರಚಿ] ಸಿದರು (ಕಂಪು. ೩೬-೮). [ರಚನೆ + –ಇಸು$_3$]

**ರಚ್ಚ** ' ರಚ್ಚೆ$_2$ ' ನೋ.

**ರಚ್ಚಿಸು** (ಕ್ರಿ). ಗುಂಪಾಗು ; ಒಟ್ಟಿಗೆ ಸೇರು; ಒಟ್ಟುಗೂಡು : ಪಾರಿವಾಳವು ಹೆಚ್ಚಿನಾ ಗೌಜೇನ ಹಕ್ಕಿಯು ಕಚ್ಚಿ ಆಡುವ ಸಿಪಲೆ ಹಕ್ಕಿಯು ರಚ್ಚಿಸಿ ಮೆರೆವವರಣ್ಯದಿ (ಗೋಹಾಡು. ೩-೦೩). [ರಚ್ಚೆ$_2$ + –ಇಸು$_3$]

**ರಚ್ಚು** ' ಉಚ್ಚೆ ' ನೋ.

**ರಚ್ಚುಳಿ** (ನಾ). ಅತಿಶಯ ; ಆಧಿಕ್ಯ (?) : ಪಚ್ಚೆಗುಳ ಗಂಟಾಳಿ ರಾಸಿಯ ನಿಚ್ಚಳಿಪ ಕಡಿಯಣದ ಕವಚದ ಪಚ್ಚಡಿಯ ರಚ್ಚುಳಿಯೊಳೊಪ್ಪಿದುದೊಡನೆ ರಣಭೂಮಿ (ಅಂಬಾ. ೦೬-೫೪); ಎಲವೋ ಚಚ್ಚರವು ಲೇಸಾಯ್ತು ತಾಂ ಘಡ ವಿರುಪಲೋಚನನ ಅಚ್ಚರಿಯ ಮಗನೆಂದು ಸ್ಮರಿಸಿ ಹೆಚ್ಚಿತಹುದೈ ಶೌರ್ಯ ನಮ್ಮಯ ರಚ್ಚುಳಿಯ ಬಳಿಕಿನ್ನು ನೋಡೆನುತೆಚ್ಚ ಮತ್ಸರಿಸಿ (ಅಂಬಾ. ೨೮-೩೦). [ ? ]

**ರಚ್ಚೆ$_1$** ' ಉಚ್ಚೆ ' ನೋ.

**ರಚ್ಚೆ$_2$**, ರಚ್ಚ (ನಾ). ೧. ಕಟ್ಟೆ; ವೇದಿಕೆ; ಜಗಲಿ : ಮಲ್ಲಿಗೌಡನ ತಾಯ ಹೆಸರಿನಲ್ಲಿ ಮಂಟಪವ ಕಟ್ಟಿಸಿದಳೆತ್ತರದ ರಚ್ಚೆಯಿಕ್ಕಿ (ಗೌಪುಳ್ಳ. ೨೬). ೨. ಚಾವಡಿ ; ಪಂಚಾಯಿತಿ ಸಭೆ : ದೇವರೊಳು ವಿಗ್ರಹವನು ಮಾಡಿ ರಚ್ಚೆಗೆ ತಪ್ಪಡಾವು ಬಲ್ಲಿದರೆ (ಶೌಂದಕ. ೫-೪). ೩. ಪ್ರತಿಪಾದನೆ ; ವಿವರಣೆ ; ನಿರೂಪಣೆ : ಬೀದಿಯಲ್ಲಿ ನಿಂದು ನುಡಿವ ಅನುಭಾವದ ರಚ್ಚೆ ನಗೆಗೆಡೆ ನೋಡಯ್ಯಾ (ಶಪ್ರಕ. ೪. ೫೬೫-೦೨೩೬). ೪. ಮುಚ್ಚುಮರೆ ಯಿಲ್ಲದ ಸ್ಥಿತಿ ; ಬಹಿರಂಗ : ರಚ್ಚೆಯ ನೆರವಿಗೆ ನಾಣುನುಡಿಯಿಲ್ಲದಿಹುದೆ ಅದಜಿಂತೆ ಎನಬಹುದೆ ಸಜ್ಜನಸ್ತ್ರೀಯ (ಬಸವ. ೬೨೫); ದನಿಗೆಯ್ಯೆ ಕೋಗಿಲೆ ಯುಲಿದು ಲಜ್ಜೆಯಂ ಕಡಿಸಿ ರಚ್ಚೆಗೆ ತಂದವನ್ಯಾಯವಿನ್ನುಳಿದ ನರರೊಳಾವಂ ಹಿತವನು (ಹಕಾ. ೪-೩೦) ; ಮಾತಾಪಿತರ ಹಾದರವನು ರಚ್ಚೆಯೊಳು ಪೇಳ್ವಾತ ಸತ್ಪುತ್ರನಪ್ಪನೇ (ಗುರುಚಾ. ೪-೩೦). ೫. ಗುಂಪು ; ಸಮೂಹ : ' ರಚ್ಚಿಸು ' ಪರಾ. ರಚ್ಚ : ೫. ತೇರ್ಬೀದಿ ನಂಜನಗೂಡು ನಂಜುಂಡಗೆ ರಾಗದಿಂದ ಕೋಲು ಕೊಡಿ ರಚ್ಚದಿಂದ ಕೋಲು ಕೊಡಿ ಬಾಗಿ ಬಾಗಿ ಕೋಲು ಕೊಡಿ (ಹಳ್ಳಿಹಾ. ೨೦-೨).

**ರಚ್ಚೆಕಚ್ಚು** = ಚರ್ಚಾಗೋಷ್ಠಿ ; ವಾದಭೂಮಿ (?) : ಭೂಲೋಕದಲ್ಲಿ ಹುಟ್ಟಿದ ಮನುಜರು ಶಿವಲಾಂಛನವ ಧರಿಸಿದವರಿಗೆಲ್ಲಕ್ಕು ಶಿವತತ್ತ್ವ ಉಂಟೇ ? ಇವರ ಕೂಡೆ ರಚ್ಚೆಕಚ್ಚಿನಲ್ಲಿ ಮಾವವಾಡಲಾರದೆ ಕರಣಂಗಳ ಚಲನತ್ವವಿಲ್ಲದ ಶರಣನು ಮರ್ತ್ಯದ ಉಪಾಧಿ ಜಂಗಮಕ್ಕೆ ವಿಲಕ್ಷಣನು (ಪೋಳಮಾ. ೦೮೬-೬೦೩ ಅರ್ಥ). **ರಚ್ಚೆಗೆ ತರು** = ಬಯಲಿಗೆ ತರು ; ಬಹಿರಂಗಪಡಿಸು : ಕೋದಂಡಮಾ ತೆಗೆದಾರ್ಪಿಂ ಮುಚ್ಚಿದಿಕ್ಕೆ ಗಾಢಗುಣದಿಂದಂ ತೋಳ್ಗಳಂ ಕಟ್ಟಿ ರಚ್ಚೆಗೆ ತಂದು (ರಘುಗಾ. ೧-೫) ; ನೀನೇಕಾಂತದಲ್ಲಿ ಗಿಳಿಯೊಳಾಡಿದುದನು ಎಲ್ಲರ ಮುಂದೆ ರಚ್ಚೆಗೆ ತಂದು (ಶಠಶ. ೬-೦೬). **ರಚ್ಚೆಗೆ ಬೀಳ್** = ಬಯಲಾಗು ; ಬಹಿರಂಗವಾಗು : ತನ್ನ ಮರುಳಂ ಮುಚ್ಚಿ ನುಡಿದೊಡಂ ರಚ್ಚೆಗೆ ಬಿರ್ದೆಂಪರಸನು ಕೂಲಾದಿಗಳೊಳ್ ನುಡಿಯುತ್ತುಂ ನಡೆಯೆ (ಅವಂಕ. ೮-೦೦ ವ).
[ ದೇ.॥ ತೆಲು. ರಚ್ಚ ]

**ರಚ್ಚೆ$_3$** (ನಾ). [ಸಂಗೀತ] ಒಂದು ಬಗೆಯ ತಾಳ : ಪಡಿಮಳೆಯ ರಚ್ಚೆ ಮುಂತಾದ ದೇಶಿಯಲೆ ತಾಳಂಗಳಂ ಬಿತ್ತರಿಸಿ ಬಿನ್ನಣದಲಿ (ಶೌಂದಕ. ೮-೫) ; ಎಕ್ಕಸರ ರಚ್ಚೆ ಉತ್ತರಪಾಣಿ ಪಂಚಪಾಣಿ (ಬಿವೇಳ. ೦೪೨); ಎಕ್ಕತಾಳ ರೂಪಕ ರಚ್ಚೆಯೆಂಬೀ ಕ್ರಮಗಳು ಏಳುವಿಧವು (ಶರ್ಗಶೌ. ೬-೫೬). [ ? ]

**ರಚ್ಚೆಕಟ್ಟೆ** (ನಾ). ಪಂಚಾಯತಿ ಕಟ್ಟೆ; ಚಾವಡಿ : ಪಟೇಲನ ಮನೆಯ ಮುಂದಿನ ರಚ್ಚೆಕಟ್ಟೆಯ ಮೇಲೆ . . . ಗಣ್ಯವ್ಯಕ್ತಿಗಳು ಸಭೆ ಸೇರಿದ್ದರು (ಊರುಳ. ೪೬). [ರಚ್ಚೆ$_2$ + ಕಟ್ಟೆ$_1$]

**ರಜ$_1$** (ನಾ). ೧. ಸಣ್ಣಹುಡಿ ; ಧೂಳು : "ಚೂರ್ಣಂ ಧೂಳಿ ಪಾಂಸು ರೇಣು ಕ್ಷೋದಮಾ ರಜಂ ಸಣ್ಣಹುಡಿ" (ಶುಂಗರಾ. ೮೪-೨೩); ಸಮರರಸ ಪ್ರಿಯರೊಳ್ ಸತ್ವಮುಮಿಳೆಯೊಳ್ ರಜಮುಮೊದವೆ ರಣಗಟ್ಟಲೆಯೊಳ್ ತಮಮುಂ ಮಿಗೆ ಸತ್ತ್ವರಜಸ್ತಮಂಗಳುಂ ಕಾಣಲಾದುವೆರಡುಂ ಪಡೆಯೊಳ್ (ಕಂಕರಾ. ೦೦-೬೪) ; ಅತಿಬಹುಳರಜದೊಳ್ ಪೊರೆದ ಪೊನಲ್ಗಳಂತೆ (ಕಾದಂಪೂ. ೪೪೮). ೨. ಹೂವಿನಲ್ಲಿರುವ ಪುಡಿ ; ಪರಾಗ : " ಪರಾಗಮೆನೆ ರಜಮಕ್ಕುಂ " (ಮಂಗರಾ. ೩೩-೬); ಕನಕಾಂಭೋಜರಜಂ ನಿಜಾಂಗರುಚಿಯಂ . . . ಕೈಕೊಳ್ವಿನಂ (ಆದಿಪು. ೦-೬೨): ದರವಿಕಸಿತಮಂ ರಜದೊಳ್ ಪೊರೆದಾತ್ಮಜಮುಖಸರೋಜಮಂ ಮೋಹರಸಂ ತೆರೆಮಸಗೆ (ಮಲ್ಲಿಪು. ೩-೦೨೦). ೩. ಕಸ : ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ (ಬಸವ. ೪೬). ೪. ಕಳಂಕ ; ದೋಷ : ಕಲೆಯಿಲ್ಲದ ಮಹಾಕ್ಕಿದಂತೆ ರಜ[ಪಾಠಾಂ. ಜರ]ವಿಲ್ಲದ ರತ್ನದಂತೆ (ಪೋಳಮಾ. ೦೦೦-೪೩೮). ೫. ಕೆಂಪುಬಣ್ಣ ; ಕೆಂಬಣ್ಣ : ಲಲನೆ ಮೂಗಿನೊಳುಸುರನಳ್ಳಿಯೊಳು ಹೊಯ್ಲನುಗುರೊಳು ರಜವನೆದೆಯೊಳಲ್ಲಾಟವಂ . . . ಆರಯ್ದು ಕಾಣದೆ ನೊಂದಳು (ಹಕಾ. ೦೨-೨೬). ೬. ಮುಟ್ಟು ; ರಜಸ್ಸು : " ಆರ್ತವಮುದು

ರಜಮೆಂದುಂ ಪುಷ್ಪಮೆಂದುಮವಿಭೇದ[ದಿಂದೆ ಪೇೞಲ್ಪ]ಡುಗುಂ" (ಚನ್ನಕೋ. ೩೪-೦೩). 'ರಜೋದರ್ಶನ' ಪರಾ. ೭. ಕತ್ತಲೆ ; ತಮಸ್ಸು ; ಅಂಧಕಾರ : ಗೂಗೆವೊಂಗುವೊಂಗದೆ ರಜದಿಂ (ಶಾಂತಿಪು. ೨-೩೩). ೮. ಸತ್ತ್ವ, ರಜ ಮತ್ತು ತಮವೆಂಬ ಮೂರು ಮೂಲ ಗುಣಗಳಲ್ಲಿ ಎರಡನೆಯದು ; ರಜೋಗುಣ : ಹಿರಣ್ಯಗರ್ಭನೆಂದೆನಿಸಿಯುದಾರನೆಂಬ ರಜಮೊಂದಿಯೆ ಸತ್ತ್ವನಿಧಾನನೆಂಬ . . . ಚತುರ್ಮುಖನೀಗೆ ರಾಗಮಂ (ಜಗು. ೦-೨). ೯. ಕುಂಕುಮಕೇಸರಿ. [ಸಂ. ರಜಸ್]

**ರಜ₃** 'ರಜಾ' ನೋ.

**ರಜಂಬೊರೆ** (ಕ್ರಿ). ೧. ಹುಡಿಯಿಂದ ಕೂಡಿರು : ಪರಿಜನಮನಿತುಂ ತುರಿಪದೆ ಪರಿತಂದಿನ್ನೇವೆಂದು ಕಪ್ಪುರದ ರಜಂಬೊರೆದ ಕರಕಾಂಬುಮಂ ತಳೆದು (ಅಂಪು. ೪-೦೩೭). ೨. ಹೂವಿನ ಪರಾಗದಿಂದ ಕೂಡಿರು : ಪರಮಜಿನಜನನಿಗೊರ್ವಳ್ ಸುರಪಥು ಕೊಡೆವಿಡಿದು ನಳಿನಿಯೊಡವೆಳೆದು ರಜಂಬೊರೆದು ಕೊಡೆಯೆಲೆಯ ಕಟಿಗಿರ್ದ ರಾಜಹಂಸಿಯ ವಿಳಾಸಮಂ ನೆನೆಯಿಸಿದಳ್ (ಶಾಂತಿಪು. ೯-೦೭೯). ೩. ರಜೋಗುಣವನ್ನು ಉಂಟು ಮಾಡು ; ರಾಜಸಗುಣವನ್ನು ಆರೋಪಿಸು. ೧, ೩ : ಇರದೊಯ್ವುದು ತನ್ನಿಚ್ಚೆಗೆ ಪರಯೌವನದಂದು ಪುರುಷನಂ ಪ್ರಕೃತಿ ರಜಂಬೊರೆದು ತಿರುಪುತ್ತೆ ಸುಟ್ಟುರೆ ತೆರಳ್ಚಿ ತಟಗೆಳೆಯುನುಯ್ವ ತೆಱದಿಂದೆತ್ತಂ (ಕಾದಂಪೂ. ೩೩೩). [ರಜ₁ + ಪೊರ್ೆ]

**ರಜಕ** (ನಾ). ಬಟ್ಟೆಗಳನ್ನು ಮಡಿ ಮಾಡುವವನು; ಅಗಸ ; ಮಡಿವಾಳ: "ನಿರ್ಣೇಜಕಃ, ರಜಕಃ – ಈ ೨ ಅಗಸಂ" (ಹಲಾಯು. ೯೭-೪೩೯) ; ಒಗೆದೊಗೆದು ಮುರಿದು ಜಗುನೆಯೊಳಗಲೊಗೆದುಂ ಪಿಂಡುತಿರ್ಪ ರಜಕನನೀ ಸೀರೆಗಳನುಡಲೀವುದೆಮಗೆನೆ ಜಗಳಂ ಜಕ್ಕುಲಿಸಿದಂತೆ ನಕ್ಕಂ ರಜಕಂ (ಅರ್ಧನೇ. ೬-೭೭); ಚದುರಕಶ್ಯಪ ಕಾರುಕಂ ನಾರದಂ ರಜಕ ವ್ಯಾಸ ಕಬ್ಬಿಲತಿಯಣುಗಂ (ಬಸವಪು. ೯-೭೨); ನಮ್ಮ ರಜಕಶಿಖಾಮಣಿ ಖಾದಿ ತೊಟ್ಟುಕೊಳ್ಳದಿದ್ದರೂ ಪಕ್ಕಾ ಸ್ವದೇಶಿ (ದೇಶಪ್ರ. ೩೦). [ಸಂ.]

**ರಜಕಿ** (ನಾ). ೧. ಮಡಿವಾಳನ ಹೆಂಡತಿ. ೨. ಅಗಸಗಿತ್ತಿ. ೩. ಮುಟ್ಟಾದ ಮೂರನೆಯ ದಿನದ ಹೆಂಗಸು. [ಸಂ. ರಜಕೀ]

**ರಜಕೀಶೋಕ** (ನಾ). (?) : ಕೇಳು ರಜಕೀಶೋಕದೊಲು ಮನ ಹೇಳ ಹೇಳಲು ದೊಡ್ಡಿತಾಗಿಯೆ ಭಾಳನೇತ್ರಾದಿಗಳನೇಡಿಸಿ ಕಾಡಿತೆಂದೆನಲು (ಸರ್ವಜ್ಞ. ೭-೨೦). [ಸಂ.]

**ರಜತ** (ಗು). ೧. ಬೆಳ್ಳಗಿರುವ ; ಬಿಳುಪಾದ. ೨. ಬೆಳ್ಳಿಯಿಂದ ಮಾಡಿದ : ಮಣಿಕನಕರಜತವಸ್ತುಗಳನಿತ್ತು (ಶಂಕರಶಾ. ೪-೪೦ ರಗಳೆ). (ನಾ). ೩. ಬಿಳಿಬಣ್ಣದ ಒಂದು ಲೋಹ ; ಬೆಳ್ಳಿ : "ರಜತಂ, ಕಳಧೌತಂ, ರೂಪ್ಯಂ, ತಾರಂ – ಈ ೪ ಬೆಳ್ಳಿ" (ಹಲಾಯು. ೨೬-೧೯). ೪. ಮುತ್ತಿನ ಹಾರ : "ಮುತ್ತಿನ ಹಾರದಲ್ಲಿಯುಂ ರಜತಮೆಂಬುದು" (ಹಲಾಯು. ೦೩೦-೩). ೫. ಚಿನ್ನ ; ಸುವರ್ಣ. ೬. ಆನೆಯ ದಂತ. ೭. ರಕ್ತ. ೮. [ಗಣಿತ] ಕಳೆಯುವುದು ; ವ್ಯವಕಲನ : ರಜತಂ, ರಜಿತಂ, ಉವಿತಂ . . . ಕಳೆ ಇಂತಿನಿತುಂ ಕಳೆವುದಕ್ಕೆ ಪೆಸರು (ವ್ಯವಹಾ. ೦೦). [ಸಂ.]

**ರಜತಗಿರಿ** (ನಾ). ಬೆಳ್ಳಿಯ ಬೆಟ್ಟ ; ಕೈಲಾಸಪರ್ವತ : ರಜತಗಿರಿ ನಿಜ ಖಗೇಶಾತ್ಮಜೆಯ ವಿವಾಹಕ್ಕೆ ಕಟಿಪಿದುದು ನಿಬ್ಬಣಮಂ ನಿಜಕಾಂತಿಸಂತತಿಯನೆನೆ ವಿಜೃಂಭಿಸಿತ್ತಮಳಕೌಮುದೀವಿಸ್ತಾರಂ (ಪರ್ಶ್ವಪು. ೭-೪೪); ದಯಾಂಬುಧಿ ರಜತಗಿರಿವೊಕ್ಕು ಗಿರಿಜೆಯೊಡಗೂಡಿ ಸುಖದಿಂದಿರ್ದನು (ಶಿವಪು. ೪೭-೪). [ಸಂ.]

**ರಜತಪರದೆ** (ನಾ). ಸಿನಿಮಾಮಂದಿರಗಳಲ್ಲಿ ಚಲನಚಿತ್ರಗಳನ್ನು ಪ್ರದರ್ಶಿಸುವ ಬಿಳಿಯ ತೆರೆ : ಕೆಲವರು ತಮ್ಮ ನಚ್ಚಿನ ನಟನನ್ನು ರಜತಪರದೆಯ ಮೇಲೆ ಕಂಡು ಸಂತೋಷದಿಂದ ಚಪ್ಪಾಳೆ ತಟ್ಟಿದರು (ರೂಢಿ). [ರಜತ + ಪರದೆ]

**ರಜತಪರ್ವತ** (ನಾ). = ರಜತಗಿರಿ : ಕನಕದಿವ್ಯವಿಮಾನಪಂಕ್ತಿಗಳನುನಯದಿ ಬಂದೀಶ್ವರೇಶ್ವರ ಘನರಜತಪರ್ವತಕೆ ಕೊಂಡೊಯ್ವವು ವಿಳಾಸದಲಿ (ಬಸವಪು. ೩೪-೦೯). [ಸಂ.]

**ರಜತಪಾತ್ರ** (ನಾ). ಬೆಳ್ಳಿಯ ಪಾತ್ರೆ : ಪರಶುರಾಮನ ಬರವಂ ಗಾಂಗೇಯಂ ಕೇಳ್ದಿದಿರ್ವಂದು ಕನಕರಜತಪಾತ್ರಂಗಳೊಳರ್ಘ್ಯಮಂ ಕೊಟ್ಟು ಪೊಡಮಟ್ಟು (ಶಂಕರಶಾ. ೦-೭೭ ವ). [ಸಂ.]

**ರಜತಪಾತ್ರೆ** (ನಾ). = ರಜತಪಾತ್ರ : ಅನೇಕ ರಜತಪಾತ್ರೆಗಳ ಸಮರ್ಪಣೆಯೂ ಆಯಿತು (ಸಸ್ಯಕೆ. ೪೦). [ಸಂ. ರಜತಪಾತ್ರ]

**ರಜತಪೀಠ** (ನಾ). ಬೆಳ್ಳಿಯ ಆಸನ : ದೇವರನ್ನು ರಜತಪೀಠದಲ್ಲಿ ಇರಿಸಿ ಆರತಿ ಬೆಳಗಿದರು (ರೂಢಿ). [ಸಂ.]

**ರಜತಮಹೋತ್ಸವ** (ನಾ). (ಸಂಘ, ಸಂಸ್ಥೆಗಳಿಗೆ) ಇಪ್ಪತ್ತೈದು ವರ್ಷಗಳು ತುಂಬಿದಾಗ ಆಚರಿಸುವ ಉತ್ಸವ–ಸಮಾರಂಭ : ಬೆಳ್ಳಿಹಬ್ಬ : ೧೯೧೭ರಲ್ಲಿ ಚಿಕಾಗೋ ವಿಶ್ವವಿದ್ಯಾಲಯದ ರಜತ ಮಹೋತ್ಸವವು ನಡೆದಾಗ . . . ಒಂದು ಉದ್ಗ್ರಂಥವನ್ನು . . . ಸಮರ್ಪಿಸಿದರು (ಸಸ್ಯಕೆ. ೪೦). [ಸಂ.]

**ರಜತಮಾಲಿಕೆ** (ನಾ). ಬೆಳ್ಳಿಯ ಸರ : ರಜತಮಾಲಿಕೆಯ ಗುಣ-ಮನೋಹರವಾದ ಬಿಳುಪಾದ ಬೆಳ್ಳಿಯಿಂದ ಮಾಡಲ್ಪಟ್ಟ ಸರಗಳನ್ನು ಧರಿಸಿದ್ದಲ್ಲಿ . . . ಸಕಲಪಾಪಸಮೂಹಂಗಳಂ ನಾಶಮಾಡುವುದು (ಸಕಲ್ಯ. ೩೬). [ಸಂ. ರಜತಮಾಲಿಕಾ]

**ರಜತಶಾಸನ** (ನಾ). ಬೆಳ್ಳಿಯ ಫಲಕದ ಮೇಲೆ ಕೆತ್ತಿರುವ ಶಾಸನ : ಓಜೆಗೊಳೆ ರಜತಶಾಸನ ರಾಜಪ್ಪತ್ರಕದೊಳೆಸೆಯೆ ಬರೆಯಿಸುವಂತಾ ರಾಜತಶೈಲೇಂದ್ರದೊಳೆ ಮಹಾಜಿನಚಂದ್ರಂ ಪ್ರಶಸ್ತಿಯಂ ಬರೆಯಿಸಿದಂ (ಶಾಂತಿಪು. ೪-೩೯). [ಸಂ.]

**ರಜತಾದ್ರಿ** (ನಾ). = ರಜತಗಿರಿ : "ಪಿಂಜರಿವೆಟ್ಟು . . . ರಜತಾದ್ರಿಗೆಸೆವ ನಾಮವಾದಕ್ಕುಂ" (ಕವಿಕಂ. ೪೬); ರಜತಾದ್ರಿಮುದ್ರಿತಮಹೀತಳಮಂ ಬೆಸಕೆಯ್ಸಿ (ಆದಿಪು. ೦೪-೭೦); ಹಿಮಾಲಯದೊಳೆಸೆವ ರಜತಾದ್ರಿಯೊಳ್ ತೇಜೋಮಯಂ ಸದಾಶಿವನಪ್ಪನು (ಕೈವಲ್ಯ. ೩-೩೩). [ಸಂ.]

**ರಜತೋತ್ಸವ** (ನಾ). = ರಜತಮಹೋತ್ಸವ : ಶಾಲೆಯ ವಾರ್ಷಿಕೋತ್ಸವ, ರಜತೋತ್ಸವ . . . ಮುಂತಾದ ಸ್ಮಾರಕಗಳನ್ನು ಆಚರಿಸುವುದು (ಶಿಕ್ಷಣ. ೬೨೦). [ಸಂ.]

**ರಜನ** (ನಾ). ೧. ಬಣ್ಣ; ರಂಗು. ೨. ಬಣ್ಣ ಬಳಿಯುವುದು ; ರಂಗು ಹಾಕುವುದು. ೩. ಕದಿರು; ಕಿರಣ. ೪. ಕುಸುಂಬೆ ಹೂವು. [ಸಂ.]

**ರಜನಿ** (ನಾ). ೧. ಇರುಳು ; ರಾತ್ರಿ : "ತಮಿಸ್ರಾ . . . ರಜನೀ, ಯಾಮಿನೀ . . . ರಾತ್ರಿಃ – ಈ ೧೯ ಇರುಳಿನ ಪೆಸರ್" (ಹಲಾಯು. ೦೮-೧೦೭); ರಜನಿಗಳ್ಕೆಂದವಬಿಂಬವ್ರಜದಿಂ ಜ್ಯೋತ್ಸ್ನಾಪ್ರವಾಹಮಂ ಪಸರಿಪವೋಲ್ ರಜತಕಲಶಂಗಳಿಂ ಮಳಯಜಜಳಮಂ ಸುರಿದರಸಿತನಳಿನೇಕ್ಷಣೆಯರ್ (ಕಾದಂಪೂ. ೭೪); ರಜನಿಗಾ ಚಂದ್ರಂ ಮಹಾಭೂಷಣಂ (ಸೋಮೇಶ. ೩). ೨. ದುರ್ಗೆಯ ಹೆಸರುಗಳಲ್ಲಿ ಒಂದು. ೩. ಅರಿಸಿನ : "ಅರಸಿನಂ ಸಿತಂ ಹರಿದ್ರೆ ರಜನಿಯೆನಿಕ್ಕು" (ಮಂಗರಾ. ೩೪-೨೬); ಕ್ರಿಮಿಯಿಂ ನೆಲ್ಲಿಯುಮಂ ದಂತಿಯುಮಂ ರಜನಿಯುಮನರೆದು ಪೂಸಿದೊಡೆ . . . ಭಗಂಧರಂ ಪ್ರಶಮಿಸುಗುಂ (ಲೋಕೋಪ. ೪-೦೩೯); ರಜನಿ ಬರಿವದಣೆ ಕಟುಕವ್ರಜಮಿಸಿತುಮಂ . . . ಕುಡೆ . . . ಸಿಂ(ಘಾ)ಣ ಹರಂ (ಅಶ್ವಶಾ. ೦೦-೩೦). ೪. ಅರಗು. ೫. (ಆಲಂ) ಅಜ್ಞಾನ ; ಮಾಯೆ : ಗಜಬಜಿಸುವ ಪಂಚಭೂತಗಳ ರಜನಿಗೆ ಸಿಲ್ಕದೆ (ಕವಳ-ಘಾ. ೦೨೭-೦). [ಸಂ.]

**ರಜನಿಕರ** (ನಾ). ೧. ಚಂದ್ರ: "ವಿಧು ಚಂದ್ರಂ ರಜನಿಕರಂ . . . ತಾರಾಧೀಶಂ" (ವಸ್ತುಕೋ. ೧೨-೬೭) ; ಅಭಿನವೋದಯರಾಗರಂಜಿತನಪ್ಪ ರಜನಿಕರನಂ ನೋಡಲೊಡಂ (ಕಾದಂಪೂ. ೬೬೦). ೨. ಕರ್ಪೂರ. ೩. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ; ಏಕ: "ರಜನಿಕರಂ . . . ಬಾವದಿ ನಾಮಂ" (ವ್ಯವಹಾ. ೯-೦) [ಸಂ.]

**ರಜನಿಚರ** (ನಾ). ೧. ರಾತ್ರಿಯಲ್ಲಿ ಸಂಚರಿಸುವವನು. ೨. ರಾಕ್ಷಸ. ೩. ಕಳ್ಳ. ೪. ಚಂದ್ರ. ೫. ರಾತ್ರಿಯಲ್ಲಿ ಗಸ್ತು ತಿರುಗುವವನು. [ಸಂ.]

**ರಜನಿಚರಾಂಗನೆ** (ನಾ). ೧. ರಾತ್ರಿಯಲ್ಲಿ ಸಂಚರಿಸುವವಳು. ೨. ರಾಕ್ಷಸಿ: ತುಂಗಬಲ ಸೌಮಿತ್ರಿಯಿಂದುಚಿತ ಭಂಗಬಟ್ಟ ಮಹೋಗ್ರರಜನಿ ಚರಾಂಗನೆಯ ದೂಟಿನಲಿ ಖರನೈತಂದನಾಹವಕೆ (ತೊರರಾ. ೩-೫ ಸೂಚನೆ). [ಸಂ. ರಜನಿಚರಾಂಗನಾ]

**ರಜನೀಗಂಧ** (ನಾ). ರಾತ್ರಿಯಲ್ಲಿ ಸುಗಂಧ ಬೀರುವ ಹೂವುಗಳನ್ನು ಬಿಡುವ ಒಂದು ಬಗೆಯ ಬಳ್ಳಿ; ರಾತ್ರಿರಾಣಿ : ಬಂಗಲೆಯ ಆವರಣ ದೊಳಗಿನ ರಜನೀಗಂಧದ ಅರಳಿದ ಹೂಗಳು ತಮ್ಮ ಮಾದಕಸುಗಂಧವನ್ನು ಸುತ್ತಮುತ್ತಲೆಲ್ಲ ಪರಡಿದ್ದವು (ಮ್ಯಜಂ. ೧೦೯). [ಸಂ.]

**ರಜನೀಚರ** (ನಾ). ೧. ರಾತ್ರಿಯಲ್ಲಿ ಸಂಚರಿಸುವವನು. ೨. ಚಂದ್ರ. ೩. ರಾಕ್ಷಸ ; ಅಸುರ : ರಜನೀಚರರ ಥಟ್ಟಣೆ ಧಾತುಗೆಡಿಸಿತು ದಿಟ್ಟರುಬ್ಬಟೆಯ (ತೊವ್ಯಾದ್ರೋ. ೦೫-೨೩). ೪. ಕಳ್ಳ; ತಸ್ಕರ. ೫. ರಾತ್ರಿ ಪಹರೆಯವನು: ಕರಸಿ ರಜನೀಚರನ ಆ ತೆರನರುಹಿ ತಿಳಿಯೆನಲು (ಬಿಜ್ಞಾ. ೦೩-೦೭). ೬. ರಾತ್ರಿಯಲ್ಲಿ ಸಂಚರಿಸುವ ಗೂಬೆ ಅಥವಾ ಬಾವಲಿ. [ಸಂ.]

**ರಜನೀಚರಿ** (ನಾ). ೧. ರಾತ್ರಿಯಲ್ಲಿ ಸಂಚರಿಸುವವಳು. ೨. ರಾಕ್ಷಸಿ : ರಜನೀಚರಿಯರ್ಕಳ ವಿಂಕ್ಕ ಪೆಕ್ಕಣಂ ಬಳ್ಳುವ ಸಾಹಣಂ ತಲೆಯ ಪೂಂಜಿಗೆ ಕುಂದವು ತತ್ಪ್ರದೇಶದೊಳ್ (ಕಾವ್ಯಸಾ. ೫೩೦ ಕೂದ್ರ೪). [ಸಂ. ರಜನೀಚರಿ]

**ರಜನೀಚಾರಿ** (ನಾ). ೧. ರಾತ್ರಿಯಲ್ಲಿ ಸಂಚರಿಸುವವನು. ೨. ಚಂದ್ರ. ೧, ೨ : ದೋಷಾಕರಾಹ್ವಾನಮಿಾ ರಜನೀಚಾರಿಗೆ ಸಲ್ಲದೇ ಕುವಲಯಾಪ್ತಂ ರಾಜನೇನಲ್ಲವೇ (ರಾಜಶೇ. ೧೦-೭೪). ೩. ರಾಕ್ಷಸ : ತೀರಿತಂದಿನ ರಜನಿ ರಜನೀಚಾರಿಯಾಯುವಿನಂತೆ (ತೊರರಾ. ೬-೯-೩೨). [ಸಂ. ರಜನೀಚಾರಿನ್]

**ರಜನೀಮುಖ** (ನಾ). ರಾತ್ರಿಯ ಪ್ರಾರಂಭ; ಸಂಜೆ : ಶಶಿಮುಖಿಯ ಮಾಯೆಯ ಬಳಸಿ ರಜನೀಮುಖದೊಳಗೆ ತಂದಧಮರಕ್ಕಸನಿವರೊಳಿಪ್ಪರು (ತೊರರಾ. ೬-೧೧-೩೨); ಭೂಮಂಡಿದ ಮನೆಮನೆಯೊಳ್ ಸೊಡರುಮೆಸೆದುವು . . . ರಜನೀಮುಖಮೆಡ್ಡವಾದುದು (ರಾಮಾಶ್ವ. ೨೩-೨). [ಸಂ.]

**ರಜನೀರಜ** (ನಾ). ಅರಿಸಿನದ ಪುಡಿ : ಪೆರ್ದೊರೆಗಳೊಳ್. . . ನೀರಾಟ ಮನಾಡಿ ಪೋದ ವಾರನಾರಿಯರ ಪೊಂಜಳೆಮೆಯ್ಯೊಳ್ ರಂಜಿಸಿರ್ದ ರಜನೀ ರಜಂಗಳಿಂ ಕದಡೆಳ್ದು ಪರಿದಪುದು (ರಾಜಶೇ. ೧೨-೬೯ ವ). [ಸಂ.]

**ರಜನೀವಲ್ಲಭ** (ನಾ). ಇರುಳಿನ ಒಡೆಯ ; ಚಂದ್ರ.

**ರಜನೀವಲ್ಲಭ ವಾರ** = ರಾತ್ರಿಯ ಒಡೆಯನಾದ ಚಂದ್ರನ ದಿನ; ಸೋಮವಾರ : ಮಾರ್ಗಶಿರಶುದ್ಧೈಕಾದಶೀವಾಸರಂ ರಜನೀವಲ್ಲಭವಾರ ಮಶ್ವಿನಿನಿಶಾನಾಥಾಂಶಕಂ ಕೂಡೆ . . . ಪುಟ್ಟಿದಳ್. . . ಅತ್ರಿಮಪ್ಪೆ (ಅಜಪು. ೦೨-೫೨). [ಸಂ.]

**ರಜನೀಶ** (ನಾ). = ರಜನೀವಲ್ಲಭ : ವಿಯೋಗಿ ರಜನೀಶ ಮರೀಚಿಯ ನೊಲ್ಲದಿರ್ದೊಡೇನಾದುದು (ತ್ರಿಪು. ೦-೨೦); ರಜನೀಶಂಗಬ್ಜನೀಕಾಂತ ನಿಂ ತೆಱಪಂ ಮಾಡು (ಶಬಶಂ. ೦-೮೩). [ಸಂ.]

**ರಜಪಂತ** (ನಾ). ರಾಜಬೀದಿ ; ರಾಜಮಾರ್ಗ : ಉತ್ತರಸ್ಯನ್ದಿಶಿ ರಜಪನ್ತ ಅನ್ತೆ ಬಂದು ಮೊಹರೆಯ ಕೊಳ ಅನ್ತೆ ಬಂದು ಕೊಟ್ಟಿಲೆಪಳ್ಳದ ಅಲಕೆಬಾಕೆಯ (ಎಕ. XVI, ತಿಕಟಿ. ೦೯೦-೭೦ ; ಸಂ. ೨ನೆಯ ಶಕ).
[? ಇದು 'ರಾಜಪಂಥ' ಎಂಬುದರ ಅಪಲಿಖಿತವಿರಬಹುದು]

**ರಜಪುತ, ರಜಪೂತ** (ನಾ). ಒಂದು ಕ್ಷತ್ರಿಯ ವಂಶ ಮತ್ತು ಅದಕ್ಕೆ ಸೇರಿದ ವ್ಯಕ್ತಿ : ರಜಪುತರಲ್ಲಿಯೂ ಗುಜರಾಥೀಜನರಲ್ಲಿಯೂ ಅವು ತಿನ್ನುವ ಚಟ ಹೆಚ್ಚು (ಮುಂಬಯಿ. ೪-೪೦). **ರಜಪೂತ** : ರಜಪೂತ ಕೃಷ್ಣಕೀರ್ತಿಯನೊಮ್ಮೆ ಕಣ್ದಣಿಯೆ ನೋಡುತ್ತ (ಕೃಶ್ಯಾಕು. ೪-೪).
[ < ಸಂ. ರಾಜಪುತ್ರ ]

**ರಜಪುಷ್ಪ** (ನಾ). ಒಂದು ಬಗೆಯ ಸಸ್ಯ : ಆವರಿಕೆ : "ರಜಪುಷ್ಪ ಆವರವೆನಲ್ಕಾವರೆಯೆನಿಕ್ಕು" (ಮಂಗರಾ. ೪೦-೩೦). [< ಸಂ. ರಾಜಪುಷ್ಪ]

**ರಜಪೂತ** 'ರಜಪುತ' ನೋ.

**ರಜಪೊರಿಗೆ** (ನಾ). ಧೂಳನ್ನು ಉಡುಗುವ ಸಾಧನ ; ಕಸಪೊರಕೆ : ಆನೆ ಮೊಜಿದಾಕಾರವೆಂದ ಕಿವಿಯ ಮುಟ್ಟಿದಾತ ಆನೆ ರಜಪೊರಿಗೆ [ಪಾಠಾಂ. ಬರಿಗೆ, ಪುಡಿಗೆ] ಯಾಕಾರವೆಂದ ಬಾಲವ ಮುಟ್ಟಿದಾತ (ಶಿವವ. ೪೫-೪೦).
[ರಜ$_1$ + ಪೊರಿಗೆ$_0$(< ಪೊರಕೆ)]

**ರಜಬ** 'ರಜಬು' ನೋ.

**ರಜಬು, ರಜಬ** (ನಾ). ಮಹಮ್ಮದೀಯ ವರ್ಷದ ಏಳನೆಯ ತಿಂಗಳು : ರಜಬು ತಿಂಗಳು ೯ನೇ ತಾರೀಕು (ರಾತೇಂದ್ರ. ೦೫೬). **ರಜಬ** : ಈ ಯುದ್ಧವು ರಜಬ ತಿಂಗಳಲ್ಲಾಯಿತು (ಹಮಾಶ. ೨೨).
[ ← ಅರ. ಪಾರ. ಮರಾ. ರಜಬ್ ]

**ರಜಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮಂತ್‌ಗಂಗಿಗವುಣ್ಡನ ಮಗ ರಜಯ್ಯ ತುಱುವನಿಕ್ಕಿಸಿ ಸತ್ತಂ (ಎಕ. XIV, ನಾಗಮಂ. ೦೩೯-೫ ; 950).
[ ? + ಅಯ್ಯ$_1$ ]

**ರಜರೂಪಿ** (ನಾ). (ಅಲಂ) ಸೂಕ್ಷ್ಮರೂಪದಲ್ಲಿರುವವನು : ರಜರೂಪಿ ಭಗವಂತನೆಂದಿಗೈತಹನೆಂದೆ ಅವನೆಯ ಗತಿ ನನಗೆಂದೆ (ಇಂಶಾಶ. ೦೦೩-೬೬).
[ ಸಂ. ರಜರೂಪಿನ್ ]

**ರಜಸ್ವರ** (ನಾ). ಹೂವಿನ ಹುಡಿ ; ಪರಾಗ : ಸಮಿಾರನುದಾರಕವೆಂಬ ಕೇತಕೀಪ್ರಸರರಜಸ್ವರಪ್ರಕಟಪಾಂಸುಳಮಾದುದು ಮೇಘಕಾಲದೊಳ್ (ಶಂಶಭಾ. ೭-೨೨). [ < ಸಂ. ರಜಸ್ವಲ ]

**ರಜಸ್ವಲೆ** (ನಾ). ಮುಟ್ಟಾದ ಹೆಂಗಸು; ಬಹಿಷ್ಠೆ: "ಅವೀ, ಉದಕ್ಯಾ, ರಜಸ್ವಲಾ, ಆತ್ರೇಯಿಕಾ, ಪುಷ್ಪವತೀ—ಈ ೫ ಮುಟ್ಟುವೆಗಂಡವಳ್" (ಹಲಾಯು. ೬೦-೩೩೪) ; ರಜಸ್ವಲೆಯಾಗಿರ್ದಂ ಮುಟ್ಟಲಾಗದೆನೆಯುಂ. . . ಮುಡಿಯುಂ ಪಿಡಿದು (ಶಂಶಭಾ. ೭-೪ ವ) ; ಸೈರಿಸಿದರೇ ಪಾಂಡುಸುತ ರಂಭೋರುಹಾಕ್ಷಿ ರಜಸ್ವಲೆಯ ಸುಲಿಸೀರೆಯಲಿ (ಕುವ್ಯಾಗ. ೦೦-೪).
[ ಸಂ. ರಜಸ್ವಲಾ ]

**ರಜಸ್ಸು** (ನಾ). ೧. ಧೂಳು ; ಹುಡಿ. ೨. ಸತ್ವ, ರಜ ಮತ್ತು ತಮಗಳೆಂಬ ಮೂರು ಗುಣಗಳಲ್ಲಿ ಒಂದು ; ರಜೋಗುಣ. ೧, ೨ : ಕೆಸರ್ೞೊಳ್ ಪುಟ್ಟಿದುದುಂತುಮಲ್ಲದೆ ರಜಸ್ಸಂಲೀಢಮೊಂದುಂ ಜಡಾವಸಥಂ (ಜಗಪು. ೦-೬). [ಸಂ. ರಜಸ್]

**ರಜಾ, ರಜ$_2$, ರಜೆ** (ನಾ). ೧. ಶಾಲೆ, ಕಾಲೇಜು, ಕಚೇರಿ ಮೊದಲಾದವು ಗಳಿಗೆ ಕೊಡುವ ಬಿಡುವು ; ಸೂಟಿ : ಶಾಲೆಯ ವಿದ್ಯಾರ್ಥಿ ರಜಾದಿನ ಗಳಲ್ಲಿ ಮಾಡಬೇಕಾದ ಕೆಲಸ ; ರಜಾಕಾಲದ ಕೆಲಸ (Holiday-Task. ಇಂಕೋ). ೨. ನೌಕರನು ಮೇಲಧಿಕಾರಿಯ ಅನುಮತಿಯಿಂದ ಪಡೆಯುವ ಬಿಡುವು : ರಜಾದ ಮೇಲೆ ಹೋಗುವ ಕಾಲ ವಿನಹಾ ಮತ್ತ್ಯಾರನ್ನು ಬದಲಿಯಾಗಿ ಇಡಕೂಡದು (ಗ್ರಾಮಾಕ. ೫). **ರಜ$_2$** : ೧. ಅಕ್ಕಾ ! ನಾಳೆ ದೀಪಾವಳೀ ಹಬ್ಬವಂತಲ್ಲೇ ! ನಮಗೆ ರಜ ಬಿಟ್ಟು ಬಿಟ್ಟಿದ್ದಾರೆ (ವೊಗ್ಸು. ೫೩). ೨. ರಂಗಣ್ಣ ಎರಡು ತಿಂಗಳು ಕಾಲ ರಜ

ತೆಗೆದುಕೊಂಡು ಬೆಂಗಳೂರಿಗೆ ಬಂದು ವಾಸಮಾಡುತ್ತಿದ್ದನು (ರಂಗಳ. ೦); ಸರಕಾರದವರು . . . ಅವರಿಗೆ ಹೆಚ್ಚಿನ ರಜವನ್ನು ಮಂಜೂರುಮಾಡಿ ಬೇಕಾದ ಅನುಕೂಲತೆಗಳನ್ನು ಮುಂದುವರೆಸಿಕೊಟ್ಟರು (ಸಸ್ಯಳ. ೦೦೨). **ರಜೆ** : ೧. ಅಂದು ಕ್ರಿಶ್ಚಿಯನ್ನರ ಯಾವುದೋ ಹಬ್ಬಕ್ಕಾಗಿ ರಜೆಯಿತ್ತು (ಧಾರಡಿ. ೪) ; ನಿನ್ನೆಯಿಂದ ದುರ್ಗಾಪೂಜೆಯ ರಜೆ ಆರಂಭವಾಗಿದೆ (ಳಾ೦ಹಿಂ. ೦). ೨. ಅವನು ಒಂದು ವರ್ಷದ ರಜೆಯನ್ನು ಕೇಳಿದನು (ಸ್ವೂ೦ಐ. ೨೬) ; ನಾನು ಕಳೆದ ತಿಂಗಳಿನಲ್ಲಿ ಮೂರು ದಿನ ರಜೆಗೆ ಬರೆದಿದ್ದೆ (ಮಗಮಾಂ. ೬೦).

**ರಜದ ಊಳಿಗ**=ರಜ ಪಡೆದುಕೊಂಡ ದಿನಗಳಿಗೆ ಬದಲಾಗಿ ಕೆಲಸ ಮಾಡುವುದು : ಅರಮನೆಯಲ್ಲಿ ಸಮುಖದೊಳು ನಿತ್ಯಕಟ್ಟಳೆಯಲ್ಲಿ ನಡೆಯುವ ಊಳಿಗಗಳು – ಸಂಚಿಯ ಊಳಿಗ . . . ಅವಸರದ ಊಳಿಗ, ರಜದ ಊಳಿಗ (ಮುಹಾಪಂ. I. ೪೩). [←ಅರ. ಹಿಂ. ಮರಾ. ರಜಾ]

**ರಜಾಕಾರ** (ನಾ). ಭಾರತಕ್ಕೆ ಸ್ವಾತಂತ್ರ್ಯ ಬಂದ ತರುಣದಲ್ಲಿ ಹೈದರಾಬಾದಿನಲ್ಲಿ ಸ್ಥಾಪಿತವಾಗಿದ್ದ, ಒಂದು ರಾಷ್ಟ್ರವಿರೋಧಿ ಮುಸ್ಲಿಂ ದಳ : ಆಗಲೇ ರಜಾಕಾರರ ಚಟುವಟಿಕೆಗಳು ತೆರೆಯ ಹಿಂದೆ ಏಳಹತ್ತಿದ್ದವು (ಶೀಲಾವ. ೬೦) : ಈ ರಜಾಕಾರರಂತಹ ಮಕ್ಕಳ ಕಾಟಕ್ಕೆ ಅದಾವ ಗಿಡ ಬದುಕಲು ಸಾಧ್ಯ ? (ಹುಚ್ಚುಹು. ೭೨). [←ಹಿಂ. ರಜಾಕಾರ್]

**ರಜಾಮಂದಿ**, ರಜಾವಂದಿ (ನಾ). ಸಮ್ಮತಿ ; ಒಪ್ಪಿಗೆ : 'ಸುಮಾರಾಗಿ ಊಟ ಅಥವಾ ತಿಂಡಿಯ ಹೊತ್ತಿಗೆ ಜಗಳ ಬರುವದು ವಾಡಿಕೆ. ಊಟ ಅಥವಾ ತಿಂಡಿ ತಯಾರಾಗಿ ಬಾಯಿಗೆ ಸಿದ್ಧವಾಯಿತೊ, ಕೂಡಲೇ ರಜಾಮಂದಿ ' (ಳಕಗಾ. ೦). **ರಜಾವಂದಿ** : ರಾಜರು . . . ತಮ್ಮ ಹೆಸರು ಸಹಿ ಹಾಕಿ, ರಜಾವಂದಿಯಿಂದ ಕೊಡದೆ (ರಾಕೇಂದ್ರ. ೦೯).

[←ಪಾರ. ಹಿಂ ರಜಾಮಂದೀ ; ಮರಾ. ರಜಾಮಂದೀ, ರಜಾವಂದೀ, ರಜಾವಂಶೀ]

**ರಜಾಯಿ** (ನಾ). ೧. ತೆಳ್ಳಗಿರುವ ಹಾಸುಗೆ ; ಲೇಪು : ಮೆತ್ತನೆಯ ಪದಾರ್ಥವನ್ನಿಟ್ಟು ಅಡ್ಡ ಹೊಲಿಗೆ ಹಾಕಿ ಮಾಡಿದ ಹಾಸಿಗೆ, ಮೆತ್ತೆ ; ರಜಾಯಿ (Quilt. ಇಂಳಖ) ; ಶಿವಮೊಗ್ಗೆಯಲ್ಲಿ ಚಳಿ ಹೆಚ್ಚೆಂದು . . . ರಗ್ಗುಗಳನ್ನೂ, ರಜಾಯಿಗಳನ್ನೂ, ರುಮಾಲುಗಳನ್ನೂ ಕಡ ತಂದವರೆಷ್ಟೊ (ಳಹುತ್ರ. ೩೦). ೨. ಅರಳೆ ತುಂಬಿ ಮಾಡಿದ ತೆಳುವಾದ ಹೊದಿಕೆ : ಹುಡುಗಿಗೆ ರಜಾಯಿಯೊಂದನ್ನು ಹೊದಿಸಿದಳು (ಶಕಶ. ೨೦).

[←ಪಾರ. ಹಿಂ. ರಜಾಈ ; ಮರಾ. ರಜಾಈ, ರಜಈ]

**ರಜಾವಂದಿ** ' ರಜಾಮಂದಿ ' ನೋ.

**ರಜೆ** ' ರಜಾ ' ನೋ.

**ರಜೋಗುಣ** (ನಾ). ರಾಜಸ, ತಾಮಸ ಮತ್ತು ಸಾತ್ತ್ವಿಕಗಳೆಂಬ ಮೂರುಗುಣಗಳಲ್ಲಿ ಒಂದು ; ಕಾಮಕ್ರೋಧಗಳಿಂದ ಕೂಡಿರುವ ಸ್ವಭಾವ ; ರಾಜಸಗುಣ : ಘನರಜೋಗುಣದಲ್ಲಿ ಚತುರಾನನ ತಮೋಗುಣದಲ್ಲಿ ಶಂಕರನೆನಿಸಿ (ಕುವ್ಯಾಸ. ೪-೩) ; ರಜೋಗುಣಭರಿತಂ . . . ಲಂಕಾನಾಥಂ (ತೊರರಾ. ೬-೭-೦). [ಸಂ.]

**ರಜೋಗ್ರಹ** (ನಾ). ಬುಧ, ಶುಕ್ರ ಮುಂತಾದ ರಾಜಸಗುಣವುಳ್ಳ ಗ್ರಹ : ಶಶಾಂಕಜನುಂ ಭಾರ್ಗವನುಂ ರಜೋಗ್ರಹಂ ಭಾನವನುಂ ಮಾಹೇಯನುಂ ತಪೋಗ್ರಹಮೆನಿಪರ್ (ಜಾತಿ. ೪-೦). [ಸಂ.]

**ರಜೋದರ್ಶನ** (ನಾ). (ಮೊದಲನೆಯ ಬಾರಿಗೆ) ಮುಟ್ಟಾಗುವಿಕೆ ; ರಜಸ್ವಲೆಯಾಗುವಿಕೆ. [ಸಂ.]

**ರಜೋವಿಕೃತಿ** (ನಾ). ೧. ಧೂಳು ತುಂಬಿರುವುದು. ೨. ಹೂವಿನ ಧೂಳು ಏಳುವುದು ; ಪರಾಗ ಉಂಟಾಗುವುದು. ೩. ರಜೋಗುಣದಿಂದ ಉಂಟಾಗುವ ಮನೋವಿಕಾರ. ೨, ೩ : ರಜೋವಿಕೃತಿಜಾತಿಸಂಕರಂ . . . ಇಲ್ಲ ಬಸದೊಳಲ್ಲದೆ ಜನದೊಳ್ (ಧರ್ಮಾ. ೨-೨೬). ೪. ಮುಟ್ಟಾಗುವುದು. ೧, ೪ : ಉಪಶಾಂತರಜೋವಿಕೃತಿಯಿನುಪಾತ್ತಕಾಳಿಮಪಯೋಧರಾಸ್ಯತೆಯಿಂ ಮತ್ತುಪಚಿತ ಜಡವೃತ್ತಿಯಿನೆಯ್ದೆ ಪೋಲ್ತು ದಭ್ರಾಗಮುಂ ಸಗರ್ಭಾಂಗನೆಯಂ (ಕಂಪ್ರಶು. ೪-೪೩). [ಸಂ.]

**ರಜ್ಜು** (ನಾ). ೧. ಹಗ್ಗ ; ಪಾಶ : "ಶುಲ್ಬಾ, ರಜ್ಜುಃ, ವಟಾರಃ, ವಟಃ, ತಂತ್ರೀಗುಣಃ – ಈ ೫ ನೇಣ್" (ಶಬ್ದಾಯು. ೯೬-೪೪೩) ; ಅತಿಚಪಳಮೆನಿಪ್ಪಿಂದ್ರಿಯತತಿಯಂ ತೆಗೆದೊಳಗೆ ಪಿಡಿದು ಕಟ್ಟಿದ ರಜ್ಜುಪ್ರತತಿಯಿದೆಂಬಿನೆಗಂ ಯತಿಪತಿಗೆಸೆದುವು ಕೊರಳೊಳಮರ್ದ ಸರೆಗಳ ತುಂಬಾಗಲ್ (ಶಾಂತೀಪು. ೨೩೯) ; ಅಗ್ನಿ ರಜ್ಜುವಿನಿಂದ ಕಟ್ಟುವಡೆವುದೆ (ವಚನಂ. ೪೭೯-೦೯೩); ಪ್ರಭುಗಳು . . . ಕುದುರೆಗಳ ಕಡಿವಾಣದ ರಜ್ಜುಗಳನ್ನು ಕೈಗೆ ತೆಗೆದುಕೊಂಡರು (ಶಾಂತಲಾ. ೩೨೦). ೨. ಜಡೆ ; ಹೆರಳು. ೩. ಬೆನ್ನುಮೂಳೆಯಿಂದ ಹೊರಡುವ ಸ್ನಾಯು. ೪. [ಜೈನ] ಲೋಕಾಕಾರ ವರ್ಣನೆಯಲ್ಲಿ ಬರುವ ಉದ್ದಳತೆಯ ಒಂದು ಪ್ರಮಾಣ ; ಎಂಟುಹಸ್ತಗಳಷ್ಟು ಪ್ರಮಾಣ : ಏಕರಜ್ಜುಪ್ರಮಾಣಂ ತಿರ್ಯಗ್ಲೋಕಂ (ಅಂಶು. ೦-೪೯) ; ರಜ್ಜುಗಳೇಳು ಕೆಳಗೆ . . . ನಿರ್ಜರನಿಳಯದಗ್ರದೊಳೊಂದು ಪದಿನಾಲ್ಕು ರಜ್ಜುದ್ದ ಲೋಕವೊಪ್ಪುವುದು (ಅನಂತ. ೦-೩೦) ; ತ್ರಿಲೋಕವು ಆದಿಯಿಂದ ತುದಿಯವರೆಗೆ ದಕ್ಷಿಣೋತ್ತರ ೧೪ ರಜ್ಜು ಉದ್ದವಾಗಿದೆ (ಕೈವರ. ೩೩). ೫. ರೇಖಾಗಣಿತ: ರಜ್ಜು (= ಹಗ್ಗ) ಎಂಬುದು ರೇಖಾಗಣಿತಕ್ಕೆ ಪ್ರಾಚೀನ ನಾಮಧೇಯ (ಗಣಿತ. ೨೦೨). ೬. [ಜ್ಯೋತಿ] ಆಶ್ರಯಯೋಗಗಳಲ್ಲಿ ಒಂದು ; ಏಳುಗ್ರಹಗಳೂ ಚರರಾಶಿಗಳಲ್ಲಿರುವುದು : ಚರರಾಶಿಯೊಳೇಳುಗ್ರಹಮಿರೆ ಯೋಗಂ ರಜ್ಜುವೆನಿಸುಗುಂ (ಜಾತಿ. ೦೩-೧); "ಚರರಾಶಿ (ಮೇಷ ಕರ್ಕಟಕ ತುಲಾ ಮಕರ)ಗಳಲ್ಲಿ ಏಳುಗ್ರಹಗಳೂ ಇದ್ದರೆ ರಜ್ಜುಯೋಗ" (ಜಾತಿ. ೦೩-೧ ಟೀಕೆ).

**ರಜ್ಜುಸರ್ಪನ್ಯಾಯ** = ಲೌಕಿಕನ್ಯಾಯಗಳಲ್ಲಿ ಒಂದು ; ಹಗ್ಗವನ್ನು ಹಾವೆಂದು ತಿಳಿಯುವುದು : ಆ ಮನವೆಂಬ ಕರಣದಲಿ ರಜ್ಜುಸರ್ಪನ್ಯಾಯ ಸ್ಥಾಣುಚೋರನ್ಯಾಯದಂತೆ ತಾನು ಪರವಸ್ತುಸ್ವರೂಪನು (ಳರಹ. ೩೯). [ಸಂ.]

**ರಟನ** (ನಾ). ಕೂಗುವಿಕೆ ; ಅಬ್ಬರ : ನಿಬಿಡತರ, ಪಟುರಟನದೊಡನೆ ಘುಡಿಘುಡಿಪ ಸುಭಟಪಟಲಕಳಕಳಂ . . . ಅಳುರ್ಕೆಗೊಳೆ (ರಾಶಶೀ. ೬-೦೦ ವ). [ಸಂ.]

**ರಟಿಸು** (ಕ್ರಿ). ಕೂಗಿ ಹೇಳು : ಉದ್ಘೋಷಿಸು : ಕನ್ನಡ ಹುರುಮುಂಜಿ ಸೊರಟ ಗುಜ್ಜರಾದಿ ನಾಡಿನೊಳು ರಟಿಸುತನಂತವೀರ್ಯಸ್ವಾಮಿಯುರು ಗಂಧಕುಟಿ ಬಂದುದು (ಭರತ. ೩೯-೭). [ರಟನ + – ಇಸು$_3$]

**ರಟ್ಟ**, ಱಟ್ಟ (ನಾ). ೧. ಹಿಂದೆ ಕರ್ನಾಟಕದಲ್ಲಿ ಸಾಮಂತರಾಗಿದ್ದ ಒಂದು ಅರಸುಮನೆತನದ ಹೆಸರು : ಧರಣಿಗೆ ಸೆಗಟ್ಟರ್ ರಟ್ಟರಾಜ್ಯದೊಳ್ ಮುನ್ನೆ ಪಂಪನುಂ ಪೊನ್ನಿಗನುಂ (ಅಜಪು. ೦೨-೪೦) ; ರಣರಂಗಭೀಷಣಂ ರಟ್ಟವಂಶೋದ್ಭವಂ ಸೆನ್ದ್ರಾರ ಲಾ[ಂ]ಛನಂ ಬರುದರ ಸಿಂಗಂ . . . ಶ್ರೀಮನ್ಮಹಾಸಾಮನ್ತಸೇಜಿಯಮ್ಮಂ (ಶಾಸನ. XI-i, ೭೪-೯; 1041). ೨. ಒಬ್ಬಾತನ ಹೆಸರು : ಪೊಸವೂರ ಜೇದಮ್ಮನುಂ ಕನ್ನರನುಂ ಕಳ್ಳವೃಣಾಸೆಯ ರಟ್ಟನು (ಎಕ. XI, ಚಿತ್ರದು. ೭೪-೨೬ ; 968). **ಱಟ್ಟ** : ೧. ಱ[ಟ್ಟ]ರ ಪಟ್ಟಜಿನಾಲಯಕಟ್ಟಳೆವಾದಯ್ವತ್ತೊಕ್ಕಲನುಮತದಿಂದಂ ಕೊಟ್ಟರ್ ಜಿನೇಂದ್ರಪೂಜೆಗೆ (ಶಾಸನ. XX. ೦೯-೨; 980) ; ಅವಿಹತವೇಗಂ . . . ಅಂಬರಕ್ಕೆ ನಿಳ್ಕುವ ಜಯಕೇತು ಸಂದೆಯದೆ ದಂದುಗಮಂ ಕಿಡಿಸಿತ್ತು ಮುಂದಣೋಡುವ ರಿಪುದಂತಿಗಂ ಪೆಱಗಣಟ್ಟುವ ಱಟ್ಟರ ಮೇರುದಂತಿಗಂ (ಕಾವ್ಯಾವ. ೬೨೦). ೩. ' ಱಟ್ಟಮತ ' ಎಂಬ ಕಾವ್ಯವನ್ನು ಬರೆದ ಒಬ್ಬ ಕನ್ನಡಕವಿಯ ಹೆಸರು : ಗುರುವೀರೇಟುಂ ಮಾಸಮುಮಿರೆ ಪ್ರಾಜಾಪತ್ಯಂ

ದೈವಮದಟಿ ಪೆಸರ್ಂತಿರೆ . . . ಜಟ್ಟಿನಾ ಮಂತ್ರದಿಂದಂ (ಅಭಿಪು. ೧೨-೧೬೫).

**ರಟ್ಟಕಂದರ್ಪ** = ರಟ್ಟವಂಶದವರಲ್ಲಿ ಮನ್ಮಥನಂತಿರುವವನು : ಒಂದು ಬಿರುದು : ಪೊಱಗೊಳಗೆಡದೊಳಂ ಬಲದೊಳಂ ಕಡುಗಡುಪಿನ್ನೆ ಬರ್ಪ್ಪ ವಳಯನ್ನವಪ್ಪದೆ ಚಾರಿಸುಪ್ಪೋಜಿಯಂ ರಟ್ಟಕನ್ದರ್ಪನಪ್ಪಾವಂ ಬಲ್ಲಂ (ಎಕ. II, ೧೩೩-೯೫ ; 982). **ರಟ್ಟಘರಟ್ಟ** = (ಅಲಂ) ರಟ್ಟರನ್ನು ನಾಶಮಾಡಿದವನು ; ಒಂದು ಬಿರುದು : ರಟ್ಟರಾಜ್ಯದರಸುಗಳು ಮುಂ ಬಿಟ್ಟು ತಱಿದೊಟ್ಟಿ ರಟ್ಟಘರಟ್ಟಂ ಚಾಳುಕ್ಯರಾಜ್ಯಪಟ್ಟದನಾತಂ (ಎಕ. V, ೧೫-೧೨ ; 1019). **ರಟ್ಟಮಾರ್ತಂಡ** = ರಟ್ಟರಲ್ಲಿ ಸೂರ್ಯನಂತಿರುವವನು ; ಒಂದು ಬಿರುದು : ರಟ್ಟಮಾರ್ತಣ್ಡಂ . . . ಶ್ರೀಮನ್ಮಹಾಸಾಮನ್ತನೆಱಿಯಮ್ಮಂ (ಸೌಇಇ. XI–i, ೭೯-೯ ; 1041). **ಱಟ್ಟವೆಡಂಗ** = ಚೆಲುವನಾದ ರಟ್ಟ ; ರಟ್ಟಕವಿಯ ಒಂದು ಬಿರುದು : ಮನಸಿಜಸನ್ನಿಭನೆನಿಸಿದ ವಿನಯಗುಣೋತ್ತುಂಗನೆನಿಪ ಱಟ್ಟವೆಡಂಗಂ (ಅಭಿಪು. ೧-೨೩). P ಈ ಶಬ್ದದಲ್ಲಿರುವ 'ಱ' ಕಾರದ ಅಸ್ತಿತ್ವ ವಿಚಾರಣೀಯವಾದುದರಿಂದ ಕಾವ್ಯಪ್ರಯೋಗಗಳನ್ನು ದೊರಕಿದ ರೂಪದಲ್ಲಿಯೇ ಕೊಡಲಾಗಿದೆ . [< ಸಂ. ರಾಷ್ಟ್ರಕೂಟ]

**ರಟ್ಟಕುಳ, ಱಟ್ಟಕುಲ, ಱಟ್ಟಕುಳ** (ನಾ). ಒಂದು ವಂಶದ ಹೆಸರು ; ರಾಷ್ಟ್ರಕೂಟವಂಶ : ರಟ್ಟಕುಳಾನ್ವಯನೃಪರುಂ ಪಟ್ಟದ ತವಮ್ಮನೆಗಳೆನಿಪ ಗಾವುಂಡುಗಳುಂ ಬಿಟ್ಟಜ್ಜ್ನನೇಂದ್ರಪೂಜೆಗೆ (ಸೌಇಇ. XX, ೧೬-೧; 980). **ಱಟ್ಟಕುಲ** : ಱಟ್ಟಕುಲಾಗ್ರಣಿ ಧರಣೀಪಟ್ಟಂ ನಿಜನೊಸಲೊಳೆಸೆಯೆ (ಕೊಲ್ಹಾಶಾ. ೨೨-೨೫ : 1209). **ಱಟ್ಟಕುಳ** : ಱಟ್ಟಕುಳಭೂಷಣಂ ಸಿಂಧೂರಲಾಂಛನಂ (ಕೊಲ್ಹಾಶಾ. ೨೩-೦೦; ?). [ರಟ್ಟ + ಕುಳ$_5$ (= ಕುಲ)]

**ರಟ್ಟಗಡ** (ನಾ). ಒಂದು ಊರಿನ ಹೆಸರು : ಪಣರವಾಡಿಯ ರಟ್ಟಗಡ ಸಣ್ಣಪಯ್ಯನ ಮಗ ಅಸಗಯ್ಯ (ಎಕ. V, ಚನ್ನರಾ. ೨೬೭-೧೨; 971).

[ರಟ್ಟ + ಗಡ$_3$]

**ರಟ್ಟಪಳ್ಳಿ** (ನಾ). ಒಂದು ಊರಿನ ಹೆಸರು ; P ಈಗಿನ ಧಾರವಾಡ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ರಟ್ಟಿಹಳ್ಳಿ : ಬನವಾಸಿನಾಡಂ ಛಲದಙ್ಕರಾಮನ್ ಸಾಸ್ತ್ರರನಾಳೆ ರಟ್ಟಪಳ್ಳಿಯ ಪೊಲಗನು × × × (ಎಕ. VII, ಹೊನ್ನಾ. ೨೩-೩; 934). [ರಟ್ಟ + ಪಳ್ಳಿ$_1$]

**ರಟ್ಟಪಾಡಿ** ' ರಟ್ಟವಾಡಿ ' ನೋ.

**ರಟ್ಟವಾಡಿ, ರಟ್ಟಪಾಡಿ** (ನಾ). ರಾಷ್ಟ್ರಕೂಟರು ಆಳುತ್ತಿದ್ದ ಪ್ರದೇಶ ; ರಾಷ್ಟ್ರಕೂಟರ ನಾಡು : ಪನ್ನಿರುವರುಂ ರಟ್ಟವಾಡಿ ಮೇಗೆ ದಣ್ಡುವೋದಲ್ಲಿ (ಎಕ. XII, ಮದ್ಧಗಿ. ೯೨-೨ ; ಸು. 750). **ರಟ್ಟಪಾಡಿ** : ಪೊಗಟಿಸ್ವಡುಪಡಿಯ ರಟ್ಟಪಾಡಿಯೇೞ[ಱ] ಲಕ್ಕಮುಂ (ಎಕ. VII (R), ಶಿಂಡ್ಯ. ೩೩-೩೫ ; 1021) ; ಅವರು ಆಳಿದ ನಾಡಿಗೆ ರಟ್ಟಪಾಡಿಯೆಂದು ಹೆಸರು (ಶಾಇಶ್ರ. ೨೯೭). [ರಟ್ಟ + ಪಾಡಿ$_2$]

**ರಟ್ಟಿಕ್ಕು** (ಕ್ರಿ). ಕೂಗು ; ಕಿರುಚು : ಕೊಡುಕೊಡೀಕ್ಷಣ ಸಲ್ಲದೊಡೆ ನಾ ನುಡಿದ ಶಪಥವನಾಂತೊಪ್ಪದೆ ಬಿಡೆನೆನುತ್ತೋರಂತೆ ಶಿವಘೋಷೆನುತ ರಟ್ಟಿಕ್ಕೆ (ಬಸಪು. ೨೭-೬೯). [< ರಟನ + ಇಕ್ಕು]

**ರಟ್ಟು$_1$** (ನಾ). ೧. ಎರಡೆಳೆಗಳನ್ನು ಜೊತೆಯಾಗಿ ಹಾಕಿಕೊಂಡು ನೆಯ್ದ ದಪ್ಪಬಟ್ಟೆ : ಒರಟುಬಟ್ಟೆ : (*). ೨. ಪುಸ್ತಕಕ್ಕೆ ಹಾಕುವ ದಪ್ಪಬಟ್ಟೆ ಅಥವಾ ದಪ್ಪಕಾಗದದ ಮೇಲುಹೊದಿಕೆ ; ಬೈಂಡು : ಕಡತವನ್ನು . . . ಮಡಿಸಿ ಎರಡುಕಡೆಗಳಿಗೂ ರಟ್ಟನ್ನು ಹಾಕಿ ಕಟ್ಟುತ್ತಿದ್ದರು (ಕನ್ನಸಂ. ೯೦). ೩. ಪುಸ್ತಕವು ಕೊಳೆಯಾಗದಂತಿರಲು ಮೇಲೆ ಹಾಕುವ ಕಾಗದದ ಹೊದಿಕೆ : ಪುಸ್ತಕಕ್ಕೆ ದಪ್ಪಕಾಗದದಿಂದ ರಟ್ಟು ಹಾಕಿದರೆ ಚೆನ್ನಾಗಿ ಬಾಳಿಕೆ ಬರುತ್ತದೆ (ರೂಢಿ).

[ದೇ. II ತೆಲು. ರಟ್ಟ, ರಟ್ಟು]

**ರಟ್ಟು$_2$** (ನಾ). ಯಾವುದಾದರೂ ವಿಷಯವನ್ನು ಬಹಿರಂಗ ಪಡಿಸುವಿಕೆ, — ಹೊರಗೆಡಹುವಿಕೆ, –ಪ್ರಕಟಿಸುವಿಕೆ : ಮರುಳೆ ರಟ್ಟಾದ ಹಾದರಗಿತ್ತಿ . . . ರೋಗಿಯೆಂಬರ ಕೂಡೆ ರತಿಗೆಯ್ಯದವನೆ ಚದುರು (ಜನಪ. ೧೨-೦೬); ರಟ್ಟುಮಾಡುವದಾಯತವಲ್ಲ ಹೇಳ್ಕೊಂಡಂಬಟ್ಟುದೆ ಸ್ಮರಕುಮಾರನಿಗೆ (ಮೋಹತ. ೩೬-೩೫) ; ಸಾಕುಮಾಡಿರವ್ವ . . . ಭ್ರಷ್ಟಮಾತುಗಳನೆಷ್ಟೋ ಕಲ್ಪಿಸಿ ಪಟ್ಟುಪಟ್ಟಿಗೆ ರಟ್ಟುಮಾಡುವುದ (ಪುರಂದ. ದಾ. ೪-೭೬-೦) ; ಸಂಸಾರ ಗುಟ್ಟು, ರೋಗ ರಟ್ಟು (ಗಾದೆ). [ದೇ. II ತೆಲು. ರಟ್ಟು]

**ರಟ್ಟುಕಟ್ಟು$_1$** (ಕ್ರಿ). ಪುಸ್ತಕ ಮೊದಲಾದುವುಗಳಿಗೆ ಹೊದಿಕೆಯನ್ನು ಹಾಕು ; ರಟ್ಟುಹಾಕು : ನನ್ನಲ್ಲಿ ಗ್ರಂಥದ ರಟ್ಟುಕಟ್ಟಿದ ಪ್ರತಿಗಳಿಲ್ಲ. ನಿಮಗೆ ಬೇಕಾದರೆ ಬಿಡಿಪುಸ್ತಕವನ್ನು ಕೊಡುತ್ತೇನೆ (ಕನ್ನಸಂ. VI, ೮೦೯).

[ ರಟ್ಟು$_1$ + ಕಟ್ಟು$_1$ ]

**ರಟ್ಟುಕಟ್ಟು$_2$** (ನಾ). ಪುಸ್ತಕಗಳ ಹೊದಿಕೆ, –ಕವಚ : ಹೊಸ ಗ್ರಂಥಗಳು ಭಂಡಾರವನ್ನು ಸೇರಿದೊಡನೆಯೆ ಅವುಗಳ ರಟ್ಟುಕಟ್ಟು, ಅಚ್ಚು . . . ಸರಿಯಾಗಿವೆಯೋ ಎಂದು ಪರೀಕ್ಷಿಸಬೇಕು (ಗ್ರಂಥಾಲ. ೦೯).

[ರಟ್ಟು$_1$ + ಕಟ್ಟು$_2$]

**ರಟ್ಟೆ** 'ಱಟ್ಟೆ' ನೋ.

**ರಟ್ಟೆಗೆಡಹು** (ಕ್ರಿ). ತೋಳನ್ನು ಕಡಿದು ಬೀಳಿಸು, – ಕತ್ತರಿಸಿ ಹಾಕು : ಅರಿಮನೊಗ್ಗರಿಯ ರಟ್ಟೆಗೆಡಹಿ ರಣರಂಗವೀರನು ಜಗಜಟ್ಟಿ ನಟ್ಟಾಳು ರಾಜರಿಗೆ (ಸೌಂದಕಾ. ೯-೪೭). [ರಟ್ಟೆ (<ಱಟ್ಟೆ) + ಕೆಡಹು (<ಕೆಡಪು)]

**ರಟ್ಟೆಪಲ್ಲವಿ** (ನಾ). [ಸಂಗೀತ] ಜೊತೆಪಲ್ಲವಿ ; ಜೋಡಿಪಲ್ಲವಿ : ರಟ್ಟೆಪಲ್ಲವಿ ಎಂಬುದು ನಿಜವಾಗಿ ಎರಡು ಬೇರೆ ಬೇರೆ ಪಲ್ಲವಿಗಳು. ಆದರೆ ಎರಡನ್ನೂ ಮಾಧುರ್ಯದಿಂದ ಒಂದುಗೂಡಿಸಿ ಒಂದೇ ಪಲ್ಲವಿಯೆನ್ನುವಂತೆ ಹೆಣೆದುದು (ಸಂಗೀತ. ೩೯). [ರಟ್ಟೆ$_0$ (P←ತಮಿ. ಇರಟ್ಟೈ=ಜೊತೆ; ತೆಲು. ರೆಟ್ಟ=ಜೊತೆ) + ಪಲ್ಲವಿ]

**ರಡ್ಡಿ** ' ರೆಡ್ಡಿ ' ನೋ.

**ರಣ$_1$** ' ಬ್ರಣ ' ನೋ.

**ರಣ$_2$** (ನಾ). ೧. ಕಾಳಗ; ಯುದ್ಧ : "ಸಂಗ್ರಾಮಃ . . . ರಣಂ . . . ವಿಗ್ರಹಃ — ಈ ೩೫ ಕಾಳೆಗಂ" (ಹಲಾಯು. ೭೫-೩೦೦); ವಿಶ್ವರೂಪಮನಾಂ ತೋಱಿದೆನಿಂ ಕಡಂಗಿ ರಣದೊಳ್ ನೀಂ ತೋಱು ನಿನ್ನಾಪ್ಪುಮಂ (ಪಂಪಭಾ. ೯-೮೯); ರಣದೊಳ್ ಮಾಱಾಂತ ಚೂಡಾಮಣಿಗೆ ಮಣಿಯ ದುರ್ವೃತ್ತನಂ ಗೆಲ್ದ ವಿದ್ಯಾಮಣಿ (ಅಜಪು. ೧೨-೧೫). ೨. ಯುದ್ಧರಂಗ; ಸಮರಭೂಮಿ ; ಕಳ : ರಣಮಂ ಪೂಜಿಸವೇಡ್ದು (ಅನಂಪು. ೦೯-೨೩); ಉರೆ ಮಹಾರಥಸಮರಥಾದಿಗಳುರುಳೆ ರಣದೊಳಗೆ (ಗಗಪ. ೦೯-೪೩); ನಾನಾತುಮುಲಭಾವಘರ್ಷಣೆಗೆ ರಣವಾದ ರಾವಣಂ (ಶ್ರೀರಾಮಾ. ೩೨೫-೦೭೭). ೩. ಸಂತೋಷ ; ಆನಂದ. ೪. ಶಬ್ದ; ಧ್ವನಿ . ೫. ಉಗ್ರವಾದುದು : 'ರಣಗುಟ್ಟು', 'ರಣಬಿಸಿಲು' ಪರಾ. ೬. ದೊಡ್ಡದು; ಗಾತ್ರವಾದುದು : ' ರಣಹದ್ದು ' ಪರಾ. ೭. ದೆವ್ವ; ಭೂತ : ಅಂದಿನ ಮಲೆನಾಡಿನಲ್ಲಿ ಭೂತ, ಪ್ರೇತ, ಪಿಶಾಚಿ, ಪಂಜರವಳ್ಳಿ, ರಣ, ಮಾರಿ . . . ಕಲ್ಲುಕುಟಿಗ ಮುಂತಾದ ಹಲವು ಹೆಸರಿನ ಹಲವು ಜಾತಿಯ ದೆವ್ವಗಳಿದ್ದುವು (ಶೂಶಕಂ. ೨). ' ರಣಹೊಡೆ ' ಪರಾ. [ಸಂ.]

**ರಣ$_3$** (ನಾ). ಹಡಗಿನ ಒಂದು ಭಾಗ : ಅಂತು ಸಮುದ್ರಂ ಬಹಿತ್ರಂ ಬೆದಱುವಂದು ಪಿಟ್ಟನೆ ಪಿಱಿದು ಕಲ್ಲಿಯುಂ ಕವಿಯುವಾಗೆ ನಿರ್ಜೀವನು ಮೆದರ್ದು ಪೋಗೆ ಕೂಪಕಂಭಂ ಮುಱಿಯೆ ಬಂಧಂ ಬಿರಿಯೆ ರಣಂ ಮುಱಿಯೆ ಕೀಲ್ ಕಳಿಲೆ (ವಡ್ಡಾರಾ. ೮-೦೯ ವ). [ ? ]

**ರಣಕಂಬ** (ನಾ). (ಜಾತ್ರೆ ಮೊದಲಾದ ಸಂದರ್ಭಗಳಲ್ಲಿ) ಕುರಿ, ಕೋಣ ಇತ್ಯಾದಿಗಳನ್ನು ಬಲಿಕೊಡುವ ಸ್ಥಳದಲ್ಲಿ ನಿಲ್ಲಿಸುವ ಕಂಬ ;

ವಧಸ್ತಂಭ : ಕೋಣವನ್ನು . . . ಸಂಭ್ರಮದಲ್ಲಿ ಕರೆತಂದು. ಗುಡಿಯ ಮುಂದೆ ಇದ್ದ ರಣಕಂಬಕ್ಕೆ ಅದನ್ನು ಕಟ್ಟಿದ್ದ (ಜಾರುಕ. ೬).

[ ರಣ$_2$ + ಕಂಬ$_1$ (< ಕಂಭ) ]

**ರಣಕಣ** 'ರಣಕಳ' ನೋ.

**ರಣಕಬಳ** (ನಾ). ಯುದ್ಧಸಮಯದಲ್ಲಿ ಅಗತ್ಯವಾಗುವ ಆಹಾರ : ರಣಕಬಳ ರಕ್ಕಮುರ್ವಗಳ್ಪುದಿದ ಭರಣಿಗಳ (ರಾಜಶೇ. ೬–೧೧ ವ). [ಸಂ.]

**ರಣಕರ್ಕಶ** (ನಾ). ಯುದ್ಧದಲ್ಲಿ ಗೆಲ್ಲಲು ಕಠಿಣನಾದವನು : ರಣಕರ್ಕಶನಸುರಕುಲಾಗ್ರಣಿ ವಿರಥಂ ಮಾಡಿ ವೀರನಂ . . . ಪಿಡಿದಂ (ಶಂರಾಮಾ. ೦೪–೦೯೬). [ಸಂ.]

**ರಣಕಲಿ** (ನಾ). ಕಾಳಗದಲ್ಲಿ ಶೌರ್ಯದಿಂದ ಹೋರಾಡುವವನು ; ಯುದ್ಧವೀರ : ಮಡಿದುದೌ ನಿನ್ನ ರಣಕಲಿಕುಮಾರನ ಕೈಲಿ ಕದನಮುಖದಲಿ ಫಲ್ಗುಣನ ಸೇನೆಯುಲಿ ಜನಂ ವಿಪುಲಸಂಖ್ಯೆಯಲಿ (ಚತ್ರಾಂಗ. ೬೪–೨೨೮೬). [ಸಂ.]

**ರಣಕಹಳೆ** 'ರಣಗಹಳೆ' ನೋ.

**ರಣಕಳ**, ರಣಕಣ (ನಾ). ರಣರಂಗ ; ಯುದ್ಧಭೂಮಿ : ಮಾಯೆಯಿಂದ . . . ಭೀಷ್ಮರು ರಣಕಳದಲ್ಲಿ ಎಲ್ಲಿ ನೋಡಿದರೂ ಕಾಣಲ್ಪಟ್ಟರು (ವ್ಯಾಸಭಾ. ೩೩೫). **ರಣಕಣ** : ಊರೂರೆ ರಣಕಣವು ತಾಂಡವವು ಗೊಂದಣವು (ಸೂರ್ಯಶಾ. ೬೪–೯). [ರಣ$_2$ + ಕಳ$_3$]

**ರಣಕಾಳಿ** (ನಾ). ಯುದ್ಧದೇವತೆ ; ರಣಚಂಡಿ ; ದುರ್ಗೆ : ರಣಕಾಳಿ ರುಂಡಮುಂಡಗಳ ಚೆಂಡಾಟವಾಡಿದಳಲ್ಲಿ (ಚತ್ರಾಂಗ. ೬೨–೨೨೫೯); ಕರೆಯುತ್ತಿಹಳದೊ ರಣಕಾಳಿ (ಕೋಗಿಲೆ. ೩೩–೬). [ಸಂ. ರಣಕಾಲೀ]

**ರಣಕೋಲಾಹಲ** (ನಾ). ಯುದ್ಧರಂಗದಲ್ಲಿ ಗದ್ದಲವನ್ನು ಉಂಟುಮಾಡುವಂಥದು : ರಣಕೋಲಾಹಲನಂ ಕರ್ಣಾಟರದನಂ ನೀಲಾಚಲಸ್ಪರ್ಧಿಯಂ . . . ದ್ವಿಪೇಂದ್ರಮಂ ತನ್ನಿ (ವೃಷಭ. ೪೦–೯೨). [ಸಂ.]

**ರಣಖೇಡ** (ನಾ). ಯುದ್ಧಕ್ಕೆ ಹೆದರುವವನು ; ರಣಹೇಡಿ : ಓಡಿ ನಾಚಿಸುವವರು ನಿಲ್ಲಿ ರಣಖೇಡರೀಗಳೆ ಮರಳಿ (ಕುವ್ಯಾಕ. ೯–೩೦).

[ರಣ$_2$ + ಖೇಡ]

**ರಣಗಬ್ಬ** (ನಾ). ಕಾಳಗ ಮಾಡಬೇಕೆಂಬ ಸೊಕ್ಕುಳ್ಳವನು : ಬೊಬ್ಬಿಡುವ ರಣಭೂತಗಳ ಕಂಡುಬ್ಬಿ ಬಹಳಾನಂದದಲಿ ರಣಗಬ್ಬ ಮೆರೆದ. ನೃಸಿಂಹನಾಹವರಂಗಮಧ್ಯದಲಿ (ಕೃಷ್ಣಕ. ೦೫–೫೫). [ರಣ$_2$ + ಗಬ್ಬ$_1$]

**ರಣಗಲಿ** (ನಾ). = ರಣಕಲಿ : ರಣಗಲಿಯೆ ಚಿತ್ತೈಸು (ಕೊರಟಾ. ೬–೦೯–೩).

[< ರಣಕಲಿ]

**ರಣಗಹಳೆ**, ರಣಕಹಳೆ, ರಣಗಾಳೆ (ನಾ). ೧. (ಅಲಂ) ದೊಡ್ಡಧ್ವನಿ; ಅಬ್ಬರ ; ಆರ್ಭಟ : ಐತಾಳರ ಗಂಟಲ ರಣಗಹಳೆ ಕೇಳಿ ದಬಕ್ಕನೆ ಎಚ್ಚರವಾಯಿತು (ಮರಮ. ೬೯). **ರಣಕಹಳೆ** : ೨. ಯುದ್ಧಪ್ರಾರಂಭದಲ್ಲಿ ಊದುವ ಕಹಳೆ : ಸೌಮಿತ್ರಿ ರವಿಯುದಯದೃಶ್ಯಮಂ ನಿಟ್ಟಿಸುತ್ತಿರೆ, ಕೇಳ್ದುದೊಂದದ್ಭುತಂ ರಣಕಹಳೆ (ಶ್ರೀರಾಮಾ. ೩೦೨–೪೦). **ರಣಗಾಳೆ** : ೨. ರಣದಲ್ಲಿ ಮನದಲ್ಲಿ ಬೀಸುವುದು ಬಿರುಗಾಳಿ ರಣದಲ್ಲಿ ಕಿವಿಯಲ್ಲಿ ಕೂಗುವುದು ರಣಗಾಳೆ (ಕೃಷ್ಣಕು. ೫–೦೦). [ರಣ$_2$ + ಕಹಳೆ]

**ರಣಗಳ್ಳ** (ನಾ). ಕಾಳಗದಿಂದ ಓಡಿಹೋಗುವವನು ; ರಣಹೇಡಿ : ಜಳ್ಳು ರಕ್ಕಸನವನನೀ ಹೆಂಗಳ್ಳನನು ಸಂತಾಪಿಸುವ ರಣಗಳ್ಳನನು ಗತಿಗೇಡುಗನನೀ ದ್ರೋಹಿರಕ್ಕಸನ . . . ಹೊಳ್ಳುವಾಯಿಸಬೂದುವೆನು (ಕೊರಟಾ. ೫. ೬–೩೬).

[ರಣ$_2$ + ಕಳ್ಳ$_1$]

**ರಣಗತ್ತಲೆ** (ನಾ). ಯುದ್ಧರಂಗದಲ್ಲಿ ಧೂಳು, ಬಾಣಸಮುದಾಯ, ಧ್ವಜ ಮೊದಲಾದುವುಗಳಿಂದ ಉಂಟಾಗುವ ಕತ್ತಲೆ : ರಣಗತ್ತಲೆಯೊಳ್ ತಮಮುಂ ಮಿಗೆ (ಶಂಕಭಾ. ೧೦–೬೯) ; ರಣಗತ್ತಲೆ ಕೈಮಿಗೆ ಬಿಲ್ಲಣ ಕಡುಕೆಯ್ದುಭಯಬಲದೊಳಂಬಿಕ್ಕುವುದುಂ (ಶಂರಾಮಾ. ೦೪–೩೯).

[ ರಣ$_2$ + ಕತ್ತಲೆ ]

**ರಣಗಾಳೆ** 'ರಣಗಹಳೆ' ನೋ.

**ರಣಗೀತೆ** (ನಾ). ಯುದ್ಧವನ್ನು ಕುರಿತಂತೆ ರಚಿಸಿದ, ವೀರಾವೇಶವನ್ನುಂಟುಮಾಡುವ ಹಾಡು : ರಣಪ್ರಣಯದ ಉತ್ಸಾಹವನ್ನು ಸೂಚಿಸುವ ರಣಗೀತೆಯೊಡನೆ ಕುಣಿತ ಆರಂಭವಾಯಿತು (ಸವತಿ. ೩) ; ಒಂದು ರಾಷ್ಟ್ರವನ್ನು ಯುದ್ಧೋನ್ಮುಖವಾಗಿ ಮಾಡುವಾಗ ಹಾಡುವ ರಣಗೀತೆಗಳು. . .ಉತ್ಸಾಹವನ್ನು ತುಂಬಿರುವುದೂ ಉಂಟು (ಸೌಂದರ್ಯ.೬೪).

[ಸಂ. ರಣಗೀತಾ]

**ರಣಗುಟ್ಟು** (ಕ್ರಿ). ೧. ತೀಕ್ಷ್ಣವಾಗು ; ಉಗ್ರವಾಗು : ತಲೆಯ ಮೇಲೆ ಬಿಸಿಲಂತು ರಣಗುಟ್ಟುತ್ತಿರುತ್ತದೆ (ಮುಂಬಯು. ೫–೦೯೫). ೨. (ಅಲಂ) ಶೂನ್ಯವಾಗು ; ಭಣಗುಡು : ರಾಜಮಾರ್ಗ . . . ಜನರಹಿತವಾಗಿ ಸ್ಮಶಾನದಂತೆ ರಣಗುಟ್ಟುತ್ತಲಿವೆ (ಕುಬ್ಜದ್ವ. ೩) ; ತೆರವಾಗಿ ರಣಗುಟ್ಟುವ ಈ ಎನ್ನ ಹೃದಯಮಂದಿರವನ್ನು ಇನ್ಮುಕರಿಂದ ತುಂಬಲಿ (ಅಂಕರಾ. ೯).

[ರಣ$_2$ + ಕುಟ್ಟು$_1$]

**ರಣಗುಡು** (ಕ್ರಿ). ೧. = ರಣಗುಟ್ಟು ೧ : ಹೊರಗಡೆ ಮಧ್ಯಾಹ್ನದ ಉರಿಬಿಸಿಲು ರಣಗುಡುತ್ತಿತ್ತು (ಕಮನೆ. ೦೬೦) ; ಬಿಸಿಲೇನೋ ಇನ್ನೂ ರಣಗುಡುತ್ತಲೆ ಇತ್ತು (ಕೃಣಸ. ೫). ೨. ಅಧಿಕವಾಗು; ತೀವ್ರವಾಗು : ರಣಗುಡುವ ಸಾಮೂಹಿಕ ಅಳಲಿನೊಂದಿಗೆ ತಿಮ್ಮಯ್ಯನವರ ಅಂತ್ಯವಿಧಿ ಕೊನೆಗೊಂಡಿತು (ಕಾಗೆಕ. ೨೦). ೩. = ರಣಗುಟ್ಟು ೨ : ಪಸಿರುಹಣೆಯಂತೆ ಬಿಕೋ ಎನ್ನುವ ಅಂಗಳ ಏನನ್ನೊ ಕಳೆದುಕೊಂಡಂತೆ ರಣಗುಡುತ್ತದೆ (ಗಾಳಿ. ೧೦೦). [ರಣ + ಕುಡು$_1$ (< ಕೊಡು$_1$)]

**ರಣಗೇಡಿ** (ನಾ). = ರಣಖೇಡ : ಹರಿಬದಾಹವವೆಂಬರಾವೆಡೆ ಹರೆದರೇ ರಣಗೇಡಿಗಳು ನುಡಿಯುರಿಯ ಹೊಱುವುದು ಛಾಯವತಿಶೀತಳ ಮಹಾದೇವ (ಕುವ್ಯಾಭೀ. ೮–೪೫). [ ರಣ$_2$ + ಕೇಡಿ$_1$ ]

**ರಣಚಂಡಿ** (ನಾ). = ರಣಕಾಳಿ : ಆಕೆಯು . . . ಹಟಯೋಗಿನಿಯಾಗಿ, ರಣಚಂಡಿಯಾಗಿ, ಕಾಣಿಸುತ್ತಾಳೆ (ಭಾರತ. ೪೯೫) ; ರಣಚಂಡಿ ಕತ್ತಿ ಕಡಿಯಮ, ಯುದ್ಧ ನುಡಲರಿದು ನಿನ್ನ ನೆನಪಿನ ಕವನ ಜೀವಂತದಾಖಲೆಯು (ನಲಮು. ೯೨–೬). [ ಸಂ. ರಣಚಂಡೀ ]

**ರಣಚೌಪಟ** (ನಾ). ಯುದ್ಧರಂಗದಲ್ಲಿ ಏಕಾಂಗಿಯಾಗಿ ಹೋರಾಡುವವನು ; ಚೌಪಟಮಲ್ಲ ; ಮಹಾವೀರ : ರಣಚೌಪಟ ಚತುರ್ಬಲದೊಳಗೆ ಪೊಕ್ಕನು (ಕುವ್ಯಾದ್ರೋ. ೫–೬೦). [ರಣ$_2$ + ಚೌಪಟ (< ಚೌವಟ್ಟ)]

**ರಣಜವೊಟಲ್** (ನಾ). ಒಂದು ಊರಿನ ಹೆಸರು : ರಣಜವೊಟಲ ಬಯಲ × × × ರ. . . ದೇವಭೋಗವ್ಮಾಡಿಕೊಟ್ಟಂ (ಎಕ. XI, ಹೊಳಲ್ಕೆ. ೨೩–೪೦ ; ೯೬೪). [ ರಣಜ$_7$ + ಪೊಟಲ್ ]

**ರಣಜೆಟ್ಟಿಗ** (ನಾ). ಕಾಳಗದಲ್ಲಿ ಮಲ್ಲನಂತೆ ಇರುವವನು : ಗೋದಾಮೆಯಂತೆ ಬಗೆದ ಬಣ್ಣಮಷ್ಟ ರಣಜೆಟ್ಟಿಗರಿಂ. . . ಅತಿಭಯಂಕರಾಕಾರಮಪ್ಪುದು (ಕಾವ್ಯಸಾ. ೫೨೯ ಸೂತ್ರ೪). [ರಣ$_2$ + ಜೆಟ್ಟಿಗ (< ಜಟ್ಟಿಗ$_1$)]

**ರಣಜೇಯ** (ನಾ). ಕಾಳಗದಲ್ಲಿ ಸೋಲಿಸಬೇಕಾದವನು : ಜಡಮತಿಯತಿಪತೋಪಾಯಮ ಸಂಧೇಯನಲ್ತುವಂ ರಣಜೇಯಂ (ರಾಜಶೇ. ೬–೧೨೦). [ಸಂ.]

**ರಣಡೊಂಬಿಗ** (ನಾ). ಕಾಳಗದಲ್ಲಿ ಆಡಂಬರವನ್ನು ತೋರಿಸುವವನು ; ಯುದ್ಧದಲ್ಲಿ ವಿಜೃಂಭಿಸುವವನು : ಅಂಬುಜಾಕ್ಷನ ಸರಿಸದಲಿ ರಣಡೊಂಬಿಗನ ಕಂಡಮಮ ವಿಲಯಾಡಂಬದಾಟೋಪದಲಿ ಕಿಡಿಗೆದರಿದವನು ಕಲಿನೀಲ (ಕೊರಟಾ. ೬–೦೯–೫೦). [ರಣ$_2$ + ಡೊಂಬಿಗ$_2$]

**ರಣತೂರ್ಯ** (ನಾ). = ರಣಗಹಳೆ ೨ : ಒಂದೆಡೆ ವಲ್ಲಭೆಯುಂ ಮತ್ತೊಂದೆಡೆ ರಣತೂರ್ಯಘೋಷಮುಂ ಬೀರುತಿರಲ್ (ಧ್ವನ್ಯಾಲೋ. ೦೬೯). [ಸಂ.]

**ರಣದವಕ** (ನಾ). ಕಾಳಗ ಮಾಡಬೇಕೆಂಬ ಆತುರ ; ಯುದ್ಧಾಪೇಕ್ಷೆ : ಅನುಸಾಲ್ವಕನ ಸೇನೆಯೊಮ್ಮೊಗದೊಳಿರೆಯುಗಿವ ಘಳಿಕಬ್ಬೆಬಂತೆ ರಣದವಕ ಮೊಗದೊದಗಿತಂಬುಧಿಯ ತೆರೆಯಂತೆ (ಜೈ.ಎಬಾ. ೦೨-೦೩). [ರಣ್$_2$ + ತವಕ$_1$]

**ರಣದವಕಿ** (ನಾ). ಕಾಳಗ ಮಾಡಬೇಕೆಂಬ ಆತುರವುಳ್ಳವನು : ರಣದವಕಿ ಕರ್ಣದ್ರೋಹಿ ಯಾವೆಡೆ ತೋಱುತೋಱು (ಕುವ್ಯಾ.ಕ. ೦೩-೯). [ರಣ್$_2$ + ತವಕಿ]

**ರಣದವಕಿಗ** (ನಾ). = ರಣದವಕಿ : ತ್ರೈಭುವನ ಕಂಟಕನುತಿರ್ದನ್ವೆ ರಣದವಕಿಗರ ಪಕ್ಕಡದ ಬೆಬ್ಬಾಳೆದ ಸುಹಾಸುವಕೆ (ಕೊರಲ. ೯-೩-೧೨). [ರಣ್$_2$ + ತವಕಿಗ]

**ರಣದಿಟ್ಟ** (ನಾ). ಕಾಳಗದಲ್ಲಿ ದಿಟ್ಟನಾಗಿ ನಿಂತವನು : ಪಾರ್ಥಿವಜಾತಿಯಲ್ಲಿ ರಣದಿಟ್ಟರುಂಟೇ ನಿಮ್ಮ ಹೋಲಿಸಲು (ಕುವ್ಯಾ.ದ್ರೋ. ೯-೦೦). [ರಣ್$_2$ + ದಿಟ್ಟ$_1$]

**ರಣದೀಕ್ಷಿತ** (ನಾ). ಯುದ್ಧಮಾಡಲು ಸಂಕಲ್ಪಮಾಡಿದವನು : ಭಾಪಿ ಸಂಗ್ರಾಮಚರ್ಮಾವಚನಂಗಳನನ್ವಯಾಗತರುಂ ರಣದೀಕ್ಷಿತರುಮಪ್ಪ ವೀರ ಸಾಮಂತರೊಳ್ ಓರಿದು ಬೇಗಂ ನುಡಿಯುತ್ತುಮಿರ್ದು (ಕಂಪ್ರ.ಕ. ೦೦-೫೯ ವ). [ಸಂ.]

**ರಣದೀಕ್ಷೆ** (ನಾ). ಕಾಳಗವನ್ನು ಮಾಡಬೇಕೆಂಬ ಸಂಕಲ್ಪ : ರಣದೀಕ್ಷೆಯನು ಕೈಕೊಂಡಮರರಿಪು . . . ಐಱಿದನು ಮಣಿರಥವ (ಕೊರಲ. ೬-೯೬-೩೦). [ಸಂ. ರಣದೀಕ್ಷಾ]

**ರಣದುರುಳತ್ವ** (ನಾ). ಯುದ್ಧದಲ್ಲಿ ಸೋಸಾಡುವ ಗುಣ : ತರಳನೆಂದಾನು ಕೈಗಾಮಬಿಟ್ಟಡೆ ರಣದುರುಳತ್ವ ನಿನಗೆ ಸಿದ್ಧಿಪುದೇ (ಮೋಹಕ. ೯೩-೩೦). [ರಣ್$_2$ + ದುರುಳತ್ವ]

**ರಣದೋಹಳ** (ನಾ). ಯುದ್ಧಮಾಡುವ ಆಸೆಯುಳ್ಳವನು : ರಣದೋಹಳನೆನಿಪ ಕೇಶವಾದಿತ್ಯಂಗಂ ಪ್ರಣುತೇಶಂ ಜನಿಯಿಸಿದಂ (ಕಾಇ. XX, ೦೦೫-೩೦; 1146); ವಜ್ರವಹ್ನಿಯಂ ತಳಮೊಳಗಿರ್ದಿಲಾಗೆ ಪೊಸದಿಕ್ಕುವ ಸಿಂಗದ ಕೇಸರಂಗಳಂ ಸೆಳೆವಳವಂ ಸಮಂತು ತಳೆವಂ ರಣದೋಹಳನಾ ಕುಮಾರಕಂ (ಕಂಪ್ರ.ಕ. ೬-೨೯). [ಸಂ. ರಣದೋಹಲ]

**ರಣಧಾರಿ** (ನಾ). ಒಬ್ಬಾತನ ಹೆಸರು : ರಣಧಾರಿ ಲಿಖಿತ (ಎಇ. IX. ೨೨-೦೯ ; ೫ವಯ ೫೫). [?]

**ರಣಧೀರ** (ನಾ). = ರಣದಿಟ್ಟ : "ತೋರಹತ್ತನೆನೆ ತಾಂ ರಣಧೀರಂ" (ಛಾರಂ. ೩೯) ; ರಣಧೀರಂ ಸಾರ್ವಭೌಮಂ ನಿಷಧಪತಿ (ನಳಕಂ. ೦೯೯). [ಸಂ.]

**ರಣಪಟಹ** (ನಾ). ಯುದ್ಧದಲ್ಲಿ ಬಾರಿಸುವ ತಮಟೆ,–ಹಲಗೆ : ರಣಪಟಹ ರವಂ ದಿಗ್ವಾರಣ ಕರ್ಣಾಘೂರ್ಣಮಂ ಪಳಂಚಲೆಯೆ (ಕಂಗಾವಾ. ೦೦-೫೦). [ಸಂ.]

**ರಣಪದ್ದು** ' ರಣಪರ್ದು ' ನೋ.

**ರಣಪರ್ದು**, ರಣಪದ್ದು, ರಣಹದ್ದು (ನಾ). (ಹೆಣಗಳನ್ನು ತಿನ್ನುವ) ಒಂದು ಬಗೆಯ ದೊಡ್ಡ ಹದ್ದು : "ಕಂಕಃ — ರಣಪರ್ದು" (ಅಕಳ. ೯೦). **ರಣಪದ್ದು** : ಶರಘಾತರುಂಡ ರಣಪದ್ದು ಬಾವುಲಿ ಪಂಗ ಗರುಡ ಮೊದಲಾದ ಪರಿಪರಿಯಿಂದೊದರ್ವ ಭೀಕರಪತುಳ ಖಗ ಮೃಗದ ನೆರವಿ (ಪಪಮೋ. ೮-೦೦). **ರಣಹದ್ದು** : ರಣಹದ್ದುಗಳು ಹಾರಾಡಿ ಮನದಲ್ಲಿ ಭೀತಿಯನ್ನು ಮೂಡಿಸಿದವು (ಬೂ). [ರಣ್$_2$ + ಪರ್ದು]

**ರಣಪಲಾಯನ** (ನಾ). ಕಾಳಗದಿಂದ ತಪ್ಪಿಸಿಕೊಂಡು ಓಡುವುದು ; ಯುದ್ಧದಿಂದ ಹಿಂದೆಗೆಯುವುದು : ಅಸುವ ತಡೆವರೆ ರಣಪಲಾಯನವೆಸವುದೇ ಕ್ಷತ್ರಿಯರಿಗತಿಸಾಹಸಿಕನಾದಡೆ ನಿಲ್ಲು (ಕುವ್ಯಾ.ಶ. ೩-೫೬). [ಸಂ.]

**ರಣಪಾರಗಾವುಂಡ** (ನಾ). ಒಬ್ಬಾತನ ಹೆಸರು : ರಣಪಾರಗಾವುಣ್ಡರುಂ ಅನ್ತಮಾಸಲ ಉತ್ತಮಗಾವುಣ್ಡರುಂ (ಎಕ. II. ೩೫-೯ ; ಶ. 800). [ರಣಪಾರ ? + ಗಾವುಂಡ]

**ರಣಬಲಿ** (ನಾ). ಯುದ್ಧಕ್ಕೆ ನೀಡುವ ಆಹುತಿ : ಪೆತ್ತ ನಿನ್ನನದೇಕೆ ರಣಬಲಿಗಿತ್ತನೇ ದುರ್ಯೋಧನನು (ತಿಮ್ಮ.ಸ್ತ್ರೀ. ೩-೯೦). [ಸಂ.]

**ರಣಬಾಲಕ** (ನಾ). ಕಾಳಗದ ಅನುಭವವಿಲ್ಲದವನು ; ಯುದ್ಧನಿಪುಣನಲ್ಲದವನು : ರಣಬಾಲರಾ ಸಮಸ್ತಭೂಪಾಲಕಬಾಲಕರ್ ಕದನಕೇಳಿಗೆ ಮುಚ್ಚಗದಿಂದೊಡರ್ಚಿದರ್ (ಕಂಗಾವಾ. ೩-೯೭) ; ರಣಬಾಲ [ಶಾಕಾ. ೪]ಕನಪ್ಪೆ ನೀಂ ರಣಪರಿಣತವಯಸನಪ್ಪನವನೀಪತಿ ನೀಂ (ಶಾಕ್ಯಕು. ೨-೭೭). [ಸಂ.]

**ರಣಬಿನ್ನಾಣಿಗ** (ನಾ). ಕಾಳಗದಲ್ಲಿ ನಿಪುಣನಾದವನು : ರಣಬಿನ್ನಾಣಿಗರು ಜವಗುಂದಿ ಭಂಗದ ಕಾಣಲಾಱದೆ ಧರ್ಮಸುತ ಭೀಮಂಗೆ ತೋಱಿಸಿದ (ಕುವ್ಯಾ.ವಿ. ಸಿಂಇ. ೫-೬೫). [ರಣ್$_2$ + ಬಿನ್ನಾಣಿಗ]

**ರಣಬಿಸಿಲು** (ನಾ). ಉಗ್ರವಾದ ಬಿಸಿಲು ; ಉರಿಯುವ ಬಿಸಿಲು : ಇಂಥ ರಣಬಿಸಿಲಿನಲ್ಲಿ ಸುಂದರಮ್ಮ ತನ್ನ ಮನೆಯ ಬಾಗಿಲು ತೆರೆದಿಟ್ಟೇ ಮಲಗಿದ್ದಳು (ಹಳ್ಳಿಹಾ. ೦) ; ಈ ರಣಬಿಸಿಲಿಗೇ ಹೊರಡಬೇಕೆ ? (ಮರಮ. ೭೦). [ರಣ್$_2$ + ಬಿಸಿಲು (< ಬಿಸಿಲ್)]

**ರಣಭೀತಿ** (ನಾ). ಕಾಳಗದ ಭಯ ; ಯುದ್ಧದ ಅಂಜಿಕೆ : ಅಂತಃಪುರದೊಳಲ್ಲಿಂದಲ್ಲಿ ಹರೆದುದು ಕೂಡೆ ರಣಭೀತಿ (ಕುವ್ಯಾ.ಗ. ೪-೦೦). [ಸಂ.]

**ರಣಭೂತ** (ನಾ). ಯುದ್ಧರಂಗದಲ್ಲಿರುವ ಪಿಶಾಚಿ : ಬಸಿವಾಯ ರಕುತದ ಲೋಡಿದವು ರಣಭೂತ ದೆಸೆದೆಸೆಗೆ (ಕುವ್ಯಾ.ದ್ರೋ. ೦-೨೦). [ಸಂ.]

**ರಣಭೂಮಿ** (ನಾ). ಯುದ್ಧಭೂಮಿ ; ರಣರಂಗ : ಪಾರ್ಥನ ತಲೆಯ ನಾಕ್ಷಣಕೆ ತಂದುದು ಸುದರ್ಶನಂ ಮಣಿಪುರದ ರಣಭೂಮಿಗೆ (ಜೈ.ಎಬಾ. ೨೯-೭೪) ; ಈತನು . . . ರಣಭೂಮಿಯಲ್ಲಿ ಚಂಡಿಕಾದೇವಿಯನ್ನು ಆರಾಧಿಸಿದನೆಂದು . . . ತಿಳಿದುಬರುತ್ತದೆ (ಸೊಳಂಬ. ೨೪). [ಸಂ.]

**ರಣಭೇತಾಳ** (ನಾ). = ರಣಭೂತ : ಮೈ ನಿಮ್ಮಂತಹ ರಣಭೇತಾಳಗಳಿಗೆ ಮಾರಲು . . . ನಮ್ಮ ಗಂಡಸರು ಇನ್ನೂ ನಪುಂಸಕರಾಗಲಿಲ್ಲ ಗೊತ್ತಾಯ್ತು ? (ಹೊಸಕ್ಷಿ. ೫೦). [ರಣ್$_2$ + ಭೇತಾಳ$_0$ (< ಬೇತಾಳ)]

**ರಣಭೇರಿ** (ನಾ). ೧. ಯುದ್ಧದಲ್ಲಿ ಬಾರಿಸುವ ನಗಾರಿ,– ಭೇರಿ : ಉತ್ಸಾಹ ರಣಭೇರಿಗಳು ಮೊಳಗಿದವಸುರಸೇನೆಯಲಿ (ಕೊರಲ. ೬-೩೭-೦೭) ; ಕಡಿದ ಮರದಿಂದ ರಣಭೇರಿಗಳನ್ನು ತಯಾರಿಸುತ್ತಿದ್ದರು (ಹಸುಹೊ. ೯೭). ೨. ಒಂದು ಬಗೆಯ ಸಸ್ಯ : ಕಾಡುತುಂಬೇಗಿಡ, ರಣಭೇರಿ (ವೃಕ್ಷಶಿ. ೫೦-೯೯೦). [ಸಂ.]

**ರಣಭೈರವ** (ನಾ). ಕಾಳಗದಲ್ಲಿ ಭೈರವನಂತೆ ಇರುವವನು ; ಮಹಾ ಪರಾಕ್ರಮಿ : ಬವರ ಬಲಿದುದು ಬಳಿಕ ರಣಭೈರವರಘುಕ್ಷಿತಿಪತಿಗೆ (ಕೊರಲ. ೬-೦೫-೩೦). [ಸಂ.]

**ರಣಮಂಡಲ**, ರಣಮಂಡಳ (ನಾ). ೧. ಕಾಳಗಮಾಡುವ ಸ್ಥಳ ; ಯುದ್ಧರಂಗ: ರಣಮಂಡಲಕೆ ನಡೆತಂದಳಾ ಕಾಂತೆ (ಕೊರಲ. ೬-೫೦-೮೭) ; ಮಿಱುಪ ಬಿಂಕದಿಂದಿಱಿವ ಕಲಿತನಕೆ ರಣಮಂಡಲಂ ಸಾಕೋಚಮೆನೆ ಬಂದು . . . ನಿಂದಾದುರ್ದಾ ಸೇನೆ (ಜೈ.ಎಬಾ. ೦೨-೯). **ರಣಮಂಡಳ** : ೨. ರಾಜವಂಶದವರಿಗೆ ವಿದ್ಯೆಯನ್ನು ಕಲಿಸುವ ಸ್ಥಳ : ಅರಮನೆಗಿಂಬು ಪೆತ್ತ ರಣಮಂಡಳಮಾ ರಣಮಂಡಳಕ್ಕೆ ಬಿತ್ತರಿಸಿದ ಬೀದಿ (ಅವಂತು. ೧೦-೧೩). [ಸಂ.]

**ರಣಮಂಡಳ** ' ರಣಮಂಡಲ ' ನೋ.

**ರಣಮನ್ನೆಯ** (ನಾ). (?) : ಸುಂಕ ಸಾ[ಕ್ಷ]ವೀ ರಣಮಂನೆಯ ಮೊದಲಾದ ಸರ್ವಬಾಧೆ ಪರಿಹಾರ (ಕಇ. IV, ೫೯-೯೯; 1245). [ರಣ್$_2$ + ಮನ್ನೆಯ$_1$]

**ರಣಮರಣ** (ನಾ). ಯುದ್ಧರಂಗದಲ್ಲಿ ಸಾಯುವುದು ; ವೀರೋಚಿತವಾದ ಸಾವು : ಕೆಲ[ಬರ್ದೇ]ಟಿ ಸಂದಿಱಿವ ತಮ್ಮೇಱಿಂಗೆ ಪೂಣ್ಬು ಜಾಱಿಯುಂ ಕೆಲಬರ್ ತಮ್ಮ ರಣಮರಣಮಂ ನಿಶ್ಚಯಿಸಿ ವೀರಸಂನ್ಯಾಸಕ್ಕೊಡರ್ಚೆ ನಿಲೆಯುಂ (ವರ್ಧಮಾ. ೯-೩೯ ವ). [ಸಂ.]

**ರಣಮುವ್ವರಿ** ' ರಣಮೌವರಿ ' ನೋ.

**ರಣಮುಖ** (ನಾ). ಮುಂಚೂಣಿ; ಸೇನಾಮುಖ : ರಘುಪತಿಯ ಕೈಯಲಿ ರಣಮುಖದಲುಪಹತಿ ನಿನಗೆ ಬರಲಿ (ತೊರರಾ. ೧-೬-೪೦).

**ರಣಮುಖದುಟ್ಟ** = ಯುದ್ಧರಂಗದಲ್ಲಿ ದುಷ್ಟನಾದವನು; ಒಂದು ಬಿರುದು : ರಣಮುಖದುಟ್ಟನಾ ಮಗನ್ ಕರಪುರನ್ ಬಸ್ದು ಬಲ್ಲದಾ ತುಱುಗೊಳೆ (ಎಕ. X, ಮುಳಬಾ. ೯೨-೩; ಸು. 780?). [ಸಂ.]

**ರಣಮೂಢ** (ನಾ). ಯುದ್ಧಚಾತುರ್ಯವನ್ನು ತಿಳಿಯದವನು : ಏಲವೆಲವೊ ಮಾರುತಿಯುಳ್ಳಿಗಿಷ್ಟದ ಹರಿವಳಿಯು ರಣಮೂಢ ಸಿಲುಕಿದೆಲಾ (ಶುಪ್ಯಾಕೃಸ್ರ್ಯಾ. ೦೩-೪೦). [ಸಂ.]

**ರಣಮೂರ್ಖಿ** (ನಾ). ಒಂದು ರಾಜವಂಶದ ಹೆಸರು : ರಣಮೂರ್ಖಿನೃಪಾಮ್ನಾಯದೊಳಾಯವ ಮೆಯ್ಗಲಿ ಬಾಯಿಕನೆಂಬ ನೆಗೞ್ತೆಯುಂ ಪ್ರಕಟಿಸಿದನ್ ( ಎಕ. II, ೦೩೯-೨ ; ಸು. 950 ) ; ರಿಪುಬಳಕ್ರಿತಾನ್ತಂ ರಣಮೂ[ರ್ಖಿ] ವಂಶೋದ್ಭವಂ ಸಿಂಗನ ಬಂಟಂ ಶ್ರೀಮದಾಯ್ತುವರ್ಮ್ಮರಸಂ (ಕ್ತಇ. XI-i, ೬೨-೩ ; 1024).

**ರಣಮೂರ್ಖಿಕೇಸರಿ**=ರಣಮೂರ್ಖಿವಂಶದವರಲ್ಲಿ ಸಿಂಹದಂತಿರುವವನು ; ಒಂದು ಬಿರುದು : ಶ್ರೀಕಾನ್ತಾಕಾನ್ತಂ . . . ರಣಮೂರ್ಖ್ಖಿಕೇಸರಿ ಕವನಾದಿತ್ಯಂ (ಕ್ತಇ. XI-i, ೨೨-೬ ; 897). **ರಣಮೂರ್ಖಿಧವಳ** = ರಣಮೂರ್ಖಿ ವಂಶದವರಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ಶ್ರೀಕಾನ್ತಾಕಾನ್ತಂ ರಣಮೂರ್ಖ್ಖಿಧ[ವ]ಳಂ (ಕ್ತಇ. XI-i, ೨೨-೬ ; 897). [ಸಂ.]

**ರಣಮೌವರಿ**, ರಣಮುವ್ವರಿ (ನಾ). ಒಂದು ಬಗೆಯ ರಣವಾದ್ಯ : ಕೊಂಬು ರಣಮೌವರಿ ಮೃದಂಗವು ಭೇರಿ ಕಹಳಾರವದ ರಭಸದಲಿ ಬಿರಿಯಲಬುಜಭವಾಂಡ (ತೊರರಾ. ೬-೨೬-೨೬). **ರಣಮುವ್ವರಿ** : ದಿಗ್ಭಾಮಿನಿಯ ಕರ್ಣಮಂ ಕಿವುಡುದೋರುತಿವೆ ರಣಮುವ್ವರಿ (ಕುರಂಗ. ೬೯-೨).

[ರಣ$_2$ + ಮೌವರಿ (< ಮೌರಿ$_1$)]

**ರಣರಂಗ** (ನಾ). ಯುದ್ಧಮಾಡುವ ಸ್ಥಳ ; ಯುದ್ಧಭೂಮಿ ; ಕಳ : ಕಡಿದಾಡಲ್ ರಣರಂಗದೊಳ್ . . . ಪಡೆದಪ್ಪಲ್ಲದೆ ಬರ್ಪುದೇ (ಸೋಮೇಶ. ೨೯) ; ಶ್ರೀಕೃಷ್ಣನು ಅವನನ್ನು ರಣರಂಗದಲ್ಲಿ ತಂದು ನಿಲ್ಲಿಸಿದನು (ಧರ್ಮಶಾ. ೦೦೯).

**ರಣರಂಗಧೀರ** = ಯುದ್ಧಭೂಮಿಯಲ್ಲಿ ವೀರನಾದವನು : ಹಾ ಮಗನೆ ರಣರಂಗಧೀರನೆ ಹಾ ಮದೀಯ ಕುಮಾರ ವೀರನೆ ಬಾ ಮಗನೆ (ಶುಪ್ಯಾಕೃಸ್ರ್ಯಾ. ೮ ಸಂತಪ). **ರಣರಂಗನೀಱ, ರಣರಂಗನೀರ** = ರಣರಂಗಕ್ಕೆ ಶೋಭೆ ತರುವವನು ; ಒಂದು ಬಿರುದು : ರಣರಂಗನೀಱ ಪುಸಿವರ ಬಾಯಂ ಸುಡುವ ಪಿಸುಣರ ನೇಲ್ವ (ಎಕ. VII, ಶಿಕಾ. ೩-೨೩ ; 1061) ; ಸರ್ವ್ವಸ್ವಸೂಱೆಕಾಱ ರಣರಂಗನೀರ ದಾಯಿಗ ಬೇಣ್ಟೆಕಾಱ (ಎಕ. VI, ಕಡೂರು. ೩೩-೯೯ ; 1336). **ರಣರಂಗಭೀಮ** = ಯುದ್ಧರಂಗದಲ್ಲಿ ಭಯಂಕರನಾಗಿರುವವನು ; ಒಂದು ಬಿರುದು : ಚಲದಂಕರಾಮ ರಣರಂಗಭೀಮ ಕದನಪ್ರಚಂಡ (ಎಕ. II, ೩೩೦-೨೯; 1181). **ರಣರಂಗಭೈರವ** = ಕಾಳೆಗದಲ್ಲಿ ಭೈರವನಂತಿರುವವನು ; ಒಂದು ಬಿರುದು : ರಣರಂಗಭೈರವನುಭಯಬಳಸಂಘಟಕೀರ್ತಿಪ್ರತಾಪಂ (ಕ್ತಇ. XX. ೪೬-೩೮ ; 1072). **ರಣರಂಗಸಿಂಗ** = ಯುದ್ಧದಲ್ಲಿ ಸಿಂಹದಂತೆ ಇರುವವನು ; ಮಹಾಶೂರ : ರಣರಂಗಸಿಂಗವಿಜಯಿಾ (ಎಕ. II, ೩೯೮-೦೩ ; 10ನೆಯ ೪೪). **ರಣರಂಗಸಿಂಹ** = ರಣರಂಗಸಿಂಗ : ಅತಿಪ್ರಬಲರಣರಾಮನುಮೆನಿಸಿದ ರಣರಂಗಸಿಂಹನಿಂ (ಗದಾಯು. ೨-೭ ವ) [ಸಂ.]

**ರಣರಂಪ**, ರಣಾರಂಪ, ರಾಣಾರಂಪು (ನಾ). ದೊಡ್ಡಗಲಾಟೆ : ಗದ್ದಲ ; ಕೋಲಾಹಲ : ಅವಳಿಗೆ ಸರಿಯಾಗಿ ನಡಕೊಂಡೆನೋ, ತಲೆ ಬೋಳಿಸಿಹೋಗುತ್ತೆ. ಇಲ್ಲವೋ ರಣರಂಪವಾಗುತ್ತೆ (ಶಶಾಂ. ೪೪); ಏನಪ್ಪಾ, ಇದೆಲ್ಲಾ ರಣರಂಪ (ಕಂಚಕಂ. ೦೪೨). **ರಣಾರಂಪ** : ಇವೊತ್ತೆ ಆಗಬೇಕಾಗಿತ್ತೆ ಈ ರಣಾರಂಪ ? (ಕುಂಗಳ. ೦೩೪). **ರಾಣಾರಂಪು** : ಹಣ ಕೊಡೋದಿಲ್ಲಾಂತ ನೀನು ರಾಣಾರಂಪು ಮಾಡಿದೆ (ಸುಪಸಂ. ೬೦).

[ರಣ$_2$ + ರಂಪ$_2$]

**ರಣರಣ** (ಅ). ಅತಿಯಾದ ತಾಪ ಅಥವಾ ತೀಕ್ಷ್ಣತೆಯನ್ನು ಸೂಚಿಸುವ ಒಂದು ಅನುಕರಣಾವ್ಯಯ : ಹೊರಗೆ ಬಿಸಿಲು ರಣರಣ ಉರಿಯುತ್ತಿತ್ತು (ಶಮಸ. ೯೩).

**ರಣರಣಕ** (ನಾ). ಅತಿಯಾದ ಕಾತರ ; ಉತ್ಕಂಠೆ : "ಉತ್ಕಳಿಕೆ ರಣರಣಕಮಾಯಲ್ಲಕಂ ವಿರಹಮುತ್ಕಂಠೆ . . . ಎನಲಾತುರಂ" (ಮಂಗರಾ. ೦೩೨-೨೯) ; ತರಳಾಕ್ಷಿಯನಾ ಕಾದಂಬರಿಯಂ ರಣರಣಕವಿಕಲಹೃದಯದಿನೋರಂತಿರೆ ಚಿಂತಿಸುತ್ತಮಿರ್ದು (ಕಾದಂಕಾ. ೦೬೩). [ಸಂ.]

**ರಣರಣಿಕೆ** (ನಾ). = ರಣರಣಕ : ನಿನ್ನ ಜಗಜಟ್ಟಿತನವನ್ನು ಎಕ್ಕತುಳದಿಂದ ಸವಿಗೊಳ್ಳಬೇಕೆಂಬ ರಣರಣಿಕೆಯು ನನ್ನನ್ನೀ ವೀರತಾಣ್ಡವದಿಂದಾಡಿಸುತ್ತಿದೆ (ಮಂಕೃಕ. ೬೩-೦೩). [< ರಣರಣಕ]

**ರಣರಭಸ** (ನಾ). ೧. ಯುದ್ಧವನ್ನು ಮಾಡಬೇಕೆಂಬ ಆವೇಶ : ' ರಣರಭಸಿಗ ' ಪರಾ. ೨. ಯುದ್ಧದ ಬಿರುಸು, –ಜೋರು : ರಣರಭಸೋತ್ಕಟಂ ಧರೆ ಪೆಡಂ ಮಗುಳ್ವಂತೆ (ಕಸಂಪು. ೦೦-೬೯) ; ಕಲಹದುಬ್ಬರದ ರಣರಭಸ ಹುಟ್ಟಿಸಿತಜಾಂಡದ ಹಣೆಗೆ ಬೇನೆಯನು (ತೊರರಾ. ೬-೦೩-೩೩). [ಸಂ.]

**ರಣರಭಸಿಗ** (ನಾ). ಯುದ್ಧದಲ್ಲಿ ಆವೇಶವುಳ್ಳವನು : ಅಬ್ಬರಿಸಿದವು ರಣದ ಚೂಣಿಯಲುಬ್ಬುವಱೆ ಶತಕೋಟಿಸಂಖ್ಯೆಯಲಬ್ಬರಿಸ ರಣರಭಸಿಗರ ಮುಖಸನ್ನಿವೇಶದಲಿ (ತೊರರಾ. ೬-೦೯-೦೯). [ರಣರಭಸ + – ಇಗ]

**ರಣರಸ** (ನಾ). ೧. ಯುದ್ಧೋತ್ಸಾಹ : ರಣರಸಮುಣ್ಮಿದತ್ತು ಕದಪಿಂ ರಣರಾಗಮೆ ಸೂಸಿದತ್ತು ವೀಕ್ಷಣದಿನೆನಲ್ ರಣಪ್ರತಿಪದಿಂ ಉದಪಿಂದೊಗೆತರ್ಪ ಘರ್ಮವಾಃಕಣತತಿ (ಜಗಂ. ೦೩-೬೨). ೨. ಯುದ್ಧದ ಸ್ವಾರಸ್ಯ : ಕುರುಡಂಗೆ ರಣರಸವ ಬಿತ್ತರಿಸುವವನು (ಶುಪ್ಯಾಗ. ೩-೩). [ಸಂ.]

**ರಣರಸಿಕ** (ನಾ). ಯುದ್ಧದಲ್ಲಿ ಉತ್ಸಾಹವುಳ್ಳವನು : ವಿಭೀಷಣಂ ರಣರಸಿಕನಾಗಿ ಪೊಕ್ಕುದುಂ (ಕಂರಾಮಾ. ೦೩-೦೯೬ ವ) ; ರಣರಸಿಕರಬ್ಬಾಡಿದರು ನೆಱೆ ಮೆಚ್ಚಲು ಸುರವ್ರಾತ (ತೊರರಾ. ೬-೨೩-೦೯). [ಸಂ.]

**ರಣರಹಸ್ಯ** (ನಾ). ಯುದ್ಧದ ಒಳಗುಟ್ಟು, – ಮರ್ಮ : ರಣರಹಸ್ಯಜ್ಞಾನಿಗಳು ಮಿಗೆ ಮಣಿವರಿಂದ್ರಿಯವಶಕೆ (ಶುಪ್ಯಾಶೀ. ೬-೦೦); ನಿಶಾಚರರು . . . ರಣರಹಸ್ಯದ ರಸಿಕತನದುಬ್ಬಣವ ವಿದ್ಯಾಪ್ರೌಢಿಯಲಿ . . . ಹೊಯ್ದಾಡಿದರು (ತೊರರಾ. ೬-೩೦-೨೦). [ಸಂ.]

**ರಣರಾಗ** (ನಾ). ಕಾದಾಡಬೇಕೆಂಬ ಆಸಕ್ತಿ : ರಣರಸಮುಣ್ಮಿದತ್ತು ಕದಪಿಂ ರಣರಾಗಮೆ ಸೂಸಿದತ್ತು ವೀಕ್ಷಣದಿಂ (ಜಗಂ. ೦೩-೬೨). [ಸಂ.]

**ರಣರಾಮ** (ನಾ). ಯುದ್ಧದಲ್ಲಿ ಆಸಕ್ತಿಯುಳ್ಳವನು ; ಯುದ್ಧಾಸಕ್ತ : ಅತಿಪ್ರಬಲರಣರಾಮನುಮೆನಿಸಿದ ರಣರಂಗಸಿಂಹನಿಂ (ಗದಾಯು. ೨-೭ ವ). [ಸಂ.]

**ರಣಲಂಪಟ** (ನಾ). ಯುದ್ಧದಲ್ಲಿ ಅತ್ಯಾಸಕ್ತಿಯುಳ್ಳವನು : ಅಧಟನೋ ರಣಲಂಪಟನೋ ಜನಾರ್ದನಂ (ಕಂರಾಮಾ. ೦೦-೬೨) ; ರಣಲಂಪಟನು ನಡೆಸಿದ ತೇರ ಸೂಠಿಯಲಿ (ಕೌರಾ. ೩೩-೬). [ಸಂ.]

**ರಣವರೆ** ' ರಣವಟಿ³ ' ನೋ.

**ರಣವಸುಧೆ** (ನಾ). = ರಣಭೂಮಿ : ಕಾಕಪಕ್ಷವಿಸರದ ತಣ್ಪಿಂದಸುರಗಣ ಮಿರ್ಕುಮಿಱ ರಣವಸುಧೆಯೊಳೆಂದವರರೊಸಗೆವಟಿ³ ಪಾಜಿಪಿನಂ (ಜಗನಾ. ೩-೬೬). [ಸಂ. ರಣವಸುಧಾ]

**ರಣವಟಿ³**, ರಣವರೆ (ನಾ). ಯುದ್ಧದಲ್ಲಿ ಬಾರಿಸುವ ಹರೆ.–ತಮ್ಮಟೆ : ನಿಡುಗರುಳುಗಳ ತೋರಣಗಟ್ಟಿ ರಣವಟಿಗಳ ನಿನಾದದಲಿ . . . ಬೀಯಗರು ತಮ್ಮೊಳಗಾಗಿ ಕೊಡಗೂಸುಗಳ ಮದುವೆಯ ಮಾಡುತಿರ್ಪರದೊಂದು ತಾಣದಲಿ (ತೊರವೆ. ೬-೩೬-೯೧). **ರಣವರೆ** : ಆಲಿಸಿದನು . . . ಅಖಿಳ ದಾವ್ವದಿ ಘೀಳಿಡುವ ರಥಪಗಳ ರಣವರೆ ಭೇರಿ ಶಂಖಗಳ (ಕೋಗದು. ೨೦-೩). [ರಣ್ಣ₂ + ಪಟಿ³₁]

**ರಣವಾಜಿ** (ನಾ). ಯುದ್ಧದ ಕುದುರೆ; ಯುದ್ಧಾಶ್ವ : ಎತ್ತ ದುವ್ವಾಳಿ ಸುಪಡಾಳಿಗಳತ್ತಲಾನೆಯು ಘಟ್ಟು ಕಾಲಾಳೊತ್ತರಿಸ ರಣವಾಜಿ (ಕುಮ್ಯಾ.ಶಿ. ೩-೦೦) ; ಅವನ ದೇಶದ ತೀರದಲ್ಲಿ ಕಾಣಿಸಿಕೊಂಡ ನಾವಿಕರನ್ನೆಲ್ಲಾ ಅವನು ಕೊಂದು, ಅವರ ವಸ್ತ್ರಾಸವನ್ನು ತನ್ನ ರಣವಾಜಿಗಳಿಗೆ ಕೊಡುತ್ತಿದ್ದನು (ಮುಡಿಸ. ೯೬). [ಸಂ. ರಣವಾಜಿನ್]

**ರಣವಾತು** (ನಾ). ಯುದ್ಧದಲ್ಲಿ ಉಭಯಪಕ್ಷದವರೂ ಪರಸ್ಪರ ಮೂದಲಿಸುತ್ತ ಆಡುವ ಮಾತು ; ಕಟಕಿ : ಮನದಲಂಕುರವಾಗಿ ಕಡೆಗಣ್ಣಿನಲಿ ಪಲ್ಲವವಾಗಿ ರಣವಾತಿನಲಿ ಹೂತುದು ಕರ್ಣ ಪಾರ್ಥರ ರೋಷವಾಯ ಚೂತ (ಕುಮ್ಯಾ.ಕ. ೨೩-೦೦). [ರಣ್ಣ₂ + ಮಾತು₁]

**ರಣವಾದಸಿದ್ಧಿ** (ನಾ). ಯುದ್ಧದಲ್ಲಿ ಗಳಿಸಬೇಕಾದ ಜಯ : ಎಮಗಿನ್ನೇನು ಗತಿ ರಣವಾದಸಿದ್ಧಿಯದೆಂತು ಜಯಸಂಪಾದಕರು ನಮಗಾರು (ಕುಮ್ಯಾ.ಶ. ೨-೩೩). [ಸಂ.]

**ರಣವಾದ್ಯ** (ನಾ). ಯುದ್ಧದಲ್ಲಿ ಬಾಜಿಸುವ ವಾದ್ಯ ; ಸಮರವಾದ್ಯ : ನಳಿನಜಾಂಡದ ನೆತ್ತಿ ಬಿರಿಯಲು ಮೊಳಗಿದವು ರಣವಾದ್ಯತತಿ (ತೊರವೆ. ೬-೦೩-೦೫). [ಸಂ.]

**ರಣವಿಜಯ** (ನಾ). ಯುದ್ಧದಲ್ಲಿ ಪಡೆದ ಅತಿಶಯವಾದ ಗೆಲುವು : ಹರಸಿ ಕುಟಿಗಳನಿಕ್ಕಿದಡೆ ಗೋಚರಿಸದೇ ರಣವಿಜಯಸಿಧಿ ಪರಹರ ಎನುತ ಕರಗಿದನು ಕಡುಕರುಣದಲಿ ಬಲರಾಮ (ಕುಮ್ಯಾ.ಗ. ೬-೩). [ಸಂ.]

**ರಣವಿಶಾರದ** (ನಾ). ಯುದ್ಧದಲ್ಲಿ ನಿಪುಣನಾದವನು : ರಣವಿಶಾರದ ರಥಿರರೇ ನೀವಣಕವೇತಕೆ ರಾಜಗುರುಗಳು ಸೆಣಸುವರೆ (ಕುಮ್ಯಾ.ಶ. ೩-೯). [ಸಂ.]

**ರಣವೀರ** (ನಾ). ಯುದ್ಧ ಮಾಡುವುದರಲ್ಲಿ ಶೂರನಾದವನು : ರಣವೀರಂ ಶುಂಭನಿಂ ಜಂಭನೆ (ಜಗನಾ. ೦೫-೯೨). [ಸಂ.]

**ರಣವೀರ್ಯ** (ನಾ). ಹೋರಾಡುವುದರಲ್ಲಿರುವ ಶಕ್ತಿ ; ಯುದ್ಧ ಸಾಮರ್ಥ್ಯ : ನಿನ್ನ ರಣವೀರ್ಯವನ್ನೂ ದಾನಶೌರ್ಯವನ್ನೂ ನಾನು ಬಲ್ಲೆ (ವಕಥಾ. ೨೬೮). [ಸಂ.]

**ರಣವೀಳಯ** (ನಾ). ಯುದ್ಧಪ್ರಾರಂಭಕ್ಕೆ ಮೊದಲು ಯೋಧರಿಗೆ ಕೊಡುವ ತಾಂಬೂಲ : ಇಯಚ್ಚಿಣರಿಗೆ ರಣವೀಳಯವನ್ನು ಕೊಡುತ್ತೇನೆ (ಬೌಂಶ. ೦೦೯). [ರಣ್ಣ₂ + ವೀಳಯ (< ವೀಳೆಯ)]

**ರಣವೈದ್ಯ** (ನಾ). ಉಗ್ರವಾಗಿ ಚಿಕಿತ್ಸೆ ಮಾಡುವವನು : ಆ ರಣವೈದ್ಯನ ಹತ್ತಿರ ಚಿಕಿತ್ಸೆ ಮಾಡಿಸಿಕೊಂಡ ಮೇಲೆ ರೋಗ ಹೆಚ್ಚಾಯಿತು (ರೂಶಿ). [ಸಂ.]

**ರಣವ್ಯಸನಿ** (ನಾ). ಯುದ್ಧದಲ್ಲಿ ಅತ್ಯಾಸಕ್ತಿ ಇರುವವನು : ಅಸುರ ಪಡೆಯನನಿಲತನೂಜಂ ಸವ್ಯಾಪಸವ್ಯಮೆಚ್ಚು ರಣವ್ಯಸನಿ ಪಿಶಾಚಪಡೆಗೆ ಬಾಣಾಸುಗೆಯ್ದಂ (ಶಂಖಾಮಾ. ೦೩-೦೩೦). [ಸಂ. ರಣವ್ಯಸನಿನ್]

**ರಣವ್ರಣಿತ** (ನಾ). ಯುದ್ಧದಲ್ಲಿ ಗಾಯಗಳನ್ನು ಹೊಂದಿರುವುದು : ಅಂತು ಮಾಡಿಸಿ ಬಟಿಯಂ ದುಸ್ಸಹರಣವ್ರಣಿತವಾದ ಸೇನೆಯಂ ಸನ್ಮಾನವಾಹನಪುರಸ್ಸರಂ ಬೀಡಿಂಗೆ ಕಟಿಪ್ಪತ್ತಿರ್ಪನ್ನೆಗಂ (ಕಂಪ್ರಕ. ೦೦–೦೦೬ ವ). [ಸಂ.]

**ರಣಶಾಕಿನಿ** (ನಾ). ಯುದ್ಧರಂಗದಲ್ಲಿ ಓಡಾಡುವ ಕ್ಷುದ್ರದೇವತೆ : ರಣಶಾಕಿನಿಯುರಜಪಟ್ಟಿಗೆಯು ರಕ್ತದಿ ತಣಿದು ಹರಸುತಿರೆ (ಕಶಿಂಭ. ೩೨-೨೩). [ < ಸಂ. ರಣಶಾಕಿನೀ ]

**ರಣಶೂರ** (ನಾ). = ರಣವೀರ : ರಣಶೂರರಲ್ಲಿಯು ವಿಭೋಗಿಗಳಲ್ಲಿಯು ಚಾಗಿವ್ಯಂದವಲ್ಲಿಯು ಏನೆ ಸಾರಮೆಂಬಿನೆಗಮಾ ಮಹಿ ಪೋಲ್ವುದು ಭೋಗ ಭೂಮಿಯಂ (ಧುಕ್ಕಕೃ. ೯-೦೬). [ಸಂ.]

**ರಣಸನ್ನಿ** (ನಾ). ತೀವ್ರವಾಗಿರುವ ಸನ್ನಿರೋಗ : ಗೋಪಾಲನಿಗೆ ರಣಸನ್ನಿಯಾಗಿ ನಾಲಿಗೆ ಒಳಕ್ಕೆ ಸೇದಿಕೊಂಡು ಹೋಯಿತು (ಮಾತುಗಾ. ೦೦೯). [ರಣ್ಣ₂ + ಸನ್ನಿ]

**ರಣಸಾಗರ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ರಣಸಾಗರನಾಶಂ(ಸಂ)ಕಟದುಳ್ (ಎಕ. IX. ೦೬-೦; ೫ನೆಯ ೫೪). [ ? ]

**ರಣಸುಮ್ಮಾನ** (ನಾ). ಯುದ್ಧದ ಉತ್ಸಾಹ,— ಸಂಭ್ರಮ : ಏನ ಹೇಳುವೆನವರ ರಣಸುಮ್ಮಾನವನು (ಕುಮ್ಯಾದ್ರೋ. ೦೫-೫೨) ; ಬೋಳವಿಸಿದನು ಸಕಲಸಮರಭಟಾಳಿಗಳ . . . ರಣಸುಮ್ಮಾನ [ಪಾಠಾಂ. ಸನ್ಮಾನ, ಸನ್ನಾಹ] ದುಬ್ಬಿನಲಿ (ತೊರವೆ. ೬-೨೦-೨೬). [ರಣ್ಣ₂ + ಸುಮ್ಮಾನ]

**ರಣಸ್ಥಾನ** (ನಾ). = ರಣರಂಗ : ರಣಸ್ಥಾನದೊಳೆನ್ನೆರಟ್ಟುಡಿವೆನೇ (ಶಂಕಥಾ. ೦೩-೯೦). [ಸಂ.]

**ರಣಹಂಬಲು** (ನಾ). ಯುದ್ಧಮಾಡಬೇಕೆಂಬ ಅಸಕ್ತಿ : ಮರುಳಂತೆ ದುರ್ವಾಸ ಮಥಿಗಂಡು ರಣಹಂಬಲಿಂ ಮರೆದು . . . ರಣಾಂಕಣದೊಳು (ತುರಂಗ. ೫೨-೨೨). [ ರಣ್ಣ₂ + ಹಂಬಲು(<ಪಂಬಲ್) ]

**ರಣಹಕ್ಕಲು** (ನಾ). ೧. ರಣಭೂಮಿ ; ಯುದ್ಧರಂಗ : ನಾವೆ ರಣಹಕ್ಕಲೋಳ್ ನಿನ್ನ ಜಯಸಿರ್ದುದುಂಟಾದರೆಮಗಕ್ಕು ಗಜಪುರದ ಸಿರಿ (ತುರಂಗ. ೬೫-೨೦). ೨. ಯುದ್ಧಾನಂತರ ಯುದ್ಧರಂಗದಲ್ಲಿ ಅಳಿದುಳಿದುದು : ತನ್ನಕ್ಕಳಂ ಸಾಲುಸಾಲ್ಗೊಂಡು ಬಿದ್ದಿರ್ದ ರಣಹಕ್ಕಲಂ ನೋಡಿ ಕಂಬನಿಮಾಡಿ (ತುರಂಗ. ೫೦-೫೦). [ ರಣ್ಣ₂ + ಹಕ್ಕಲು (<ಹಕ್ಕಲ್) ]

**ರಣಹದ್ದು** ' ರಣಪದ್ದು ' ನೋ.

**ರಣಹೂಣಿಗ** (ನಾ). ಯುದ್ಧಮಾಡಬೇಕೆಂಬ ಛಲವುಳ್ಳವನು : ರಣಹೂಣಿಗರು ನಿಲಿ ಭೀಮ ಪಾರ್ಥರ ಕಾಣಬಹುದೋ ಕರೆಯೆನುತ ಗರ್ಜಿಸಿದನಾಚಾರ್ಯ (ಕುಮ್ಯಾದ್ರೋ. ೦೬-೨೨). [ ರಣ್ಣ₂ + ಹೂಣಿಗ (< ಪೂಣಿಗ) ]

**ರಣಹೇಡಿ** (ನಾ). ಯುದ್ಧಕ್ಕೆ ಹೆದರುವವನು ; ಕಾಳಗಕ್ಕೆ ಅಂಜಿ ಓಡಿ ಹೋಗುವವನು : ದೌರ್ಜನ್ಯದೊಡನೆ ಹೆಚ್ಚಾಗಿ ಪರಾಕ್ರಮವಿರುವುದು. ನಿನ್ನಲ್ಲಿ ಅದೂ ಇಲ್ಲ ; ನೀನು ರಣಹೇಡಿ (ಗುರುಜ. ೯೯) ; ರಣಹೇಡಿ ಮನ ಹೇಡಿಗಳ ಕುಲದಿ ಜನಿಸಿದೆನು ಋಣಪಾಶ ಹರಿಯಲೆಂದು ! (ಕೃಶಾಕು. ೫–೧೦). [ ರಣ್ಣ₂ + ಹೇಡಿ (< ಪೇಡಿ₁) ]

**ರಣಹೇಡಿಗ** (ನಾ). = ರಣಹೇಡಿ : ಬೇದ ಬದುಕಿದು ಸುಡಲಿ ರಣಹೇಡಿಗನು ನೀನು (ಕಶಿಂಭ. ೩೬-೦). [ರಣ್ಣ₂ + ಹೇಡಿಗ]

**ರಣಹೊಡೆ** (ಕ್ರಿ). ದೆವ್ವ, ಗ್ರಹ ಮೊದಲಾದುವು ಮೆಟ್ಟಿಕೊಳ್ಳು ; ಗರ ಬಡಿ : ಹಗಲು ಹೊತ್ತೇ ರಣಹೊಡೆದು ಮಣ್ಣುಮುಕ್ಕಬೇಕಾದೀತು (ಶಲುಮ. ೯೯); ಹೊಟ್ಟೆಕಿಚ್ಚಿನ ಪಾಪಕ್ಕೆ ಆ ಹೆಗ್ಗಡ್ತೀಗೆ ರಣಹೊಡೀತು ! (ಮರಿಮ. ೬೦). [ರಣ್ಣ₂ + ಹೊಡೆ₁ (<ಪೊಡೆ₁) ]

**ರಣಾಂಗಣ** (ನಾ). ಯುದ್ಧಭೂಮಿ ; ಸಮರಾಂಗಣ : ನಾಳೆಯಿ ರಣಾಂಗಣದೊಳ್ ನಡೆ ನೋಡುವಿರ್ ಮರುಳ್ಪಡೆಯೊಡಗೂಡೆ ತಾಂಡವಮು

ನಾಡುವ ರಾವಣನಟ್ಟೆಯಾಟವಮಂ (ಶಂರಾಮ. ೧೦-೨೩೩).

**ರಣಾಂಗಣಧುರೀಣ** =ಯುದ್ಧರಂಗದಲ್ಲಿ ಧೀರನಾದವನು ; ಒಂದು ಬಿರುದು : ಶಸ್ತ್ರಶಾಸ್ತ್ರಾದಿ ಸತ್ಕಳಾಪಪ್ರವೀಣ ರಣಾಂಗಣಧುರೀಣ . . . ಅನೂನದಾನರವಿನಂದನ (ಕ್ರೀ. XI-ii, ೧೦೯-೩೬; ಶಾ. ೨೪8).

[ರಣ₂ + ಅಂಗಣ]

**ರಣಾಗಮಹೀನ** (ನಾ). ಯುದ್ಧನೀತಿಯಲ್ಲಿ ತಿಳಿವಳಿಕೆಯಿಲ್ಲದವನು : ಎನೆಲವೊ ರಾವಣ ರಣಾಗಮಹೀನನೇ ನೀನು (ತೊರರಾ. ೬-೪೪-೩). [ಸಂ.]

**ರಣಾಗ್ರ** (ನಾ). ಯುದ್ಧರಂಗದ ಮುಂಚೂಣಿ, — ಮುಂಭಾಗ : ಸೌಮಿತ್ರಿಯುಂ ರಾಮನುಂ ವಿರಥಮಾಡಿ ರಣಾಗ್ರದೊಳ್ ಪಿಡಿದು ತಂದಾಂ ಕೊಟ್ಟಪೆಂ ಸೀತೆಯಂ (ಶಂರಾಮ. ೦೯-೦೦೯) ; ಸಿಂಧಸೆಳೆಗಳು ನಟ್ಟಡವಿ ಪವಡಿಸಿದ ತೆಜನಾದುದು ರಣಾಗ್ರದಲಿ (ಕುವ್ಯಾ.ಅ. ೬-೩೪). [ಸಂ.]

**ರಣಾಜಿರ** (ನಾ). = ರಣರಂಗ : ರಣಶ್ರೀ ರಣಾಜಿರದೊಳ್ ಮಾಣದೆ ಪೊರ್ಮಮಂತೆ ಬೆಸಸಿಂ (ಶಂಶಾ. ೦೫-೯). [ಸಂ.]

**ರಣಾಜಿರಂಗ** (ನಾ).=ರಣಾಂಗಣ : ಆ ಸೈನ್ಯಮುದ್ಯಾನದಂತೆ ಮಹಾಗಜಾತಿಶೋಭಿತಮುಂ ರಣಾಜಿರಂಗದಂತೆ ಮನೋಗಮನವಾಜಿರಂಜಿತಮುಂ . . . ಎನಿಸಿ (ರಾಜಶೇ. ೬-೦೭ ವ). [ಸಂ.]

**ರಣಾನಕ** (ನಾ).=ರಣವಟಿಗೆ : ಅಕಾಲ ಘನಗರ್ಜನೆಯಂತೆ ಸಮಸ್ತದಿಕ್ಕಟಂ ಪಿಡುಗುವಿನಂ ರಣಾನಕರವಂಗಳಸುಂಗೊಳೆ ಪರ್ವಿ (ಶಂಶಾ. ೦೩-೩೩) ; ಭೇರಿ ಪಟಹ ಮೃದಂಗ ತಂಬಟವೀ ರಣಾನಕಮುಖ್ಯನಾನಾವೀರವಟಿಗೆಗಳ ರಭಸದಲಿ ರಂಜಿಸಿದುದಾ ದುರ್ಗ (ತೊರರಾ. ೬-೭-೦೩). [ಸಂ.]

**ರಣಾನುರಾಗ** (ನಾ).=ರಣಹಂಬಲು : ವಿದ್ಯಾಧರರು ಮುಂದೆ ನಡೆವ ನಳನ ಪಡೆಗೆ ರಣಾನುರಾಗದಿನಡ್ಡಂಬಂದು ನಿಲ್ವುದುಂ (ಶಂರಾಮ. ೧೨-೩೬ ವ) ; ಆ ನಿರಂತರಸರಳ ಸಾರವ ಸೋನೆ ಸದೆದುದು ಧರ್ಮಸುತನ ರಣಾನುರಾಗವ ತೂಳೆದುದು (ಕುವ್ಯಾ.ಕ. ೩-೪೩). [ಸಂ.]

**ರಣಾರಂಪ** ' ರಣರಂಪ ' ನೋ.

**ರಣಾರಣಿ** (ಗು). ಅತಿಭಯಂಕರವಾದ : ರಣಾರಣಿ ಯುದ್ಧಮಾಡುತ್ತೇನೆ (ಬಿಂಕ್. ೩೯೬). ' ಹಣಾಹಣಿ ' ಹೋ. [< ರಣ₂]

**ರಣಾವನಿ** (ನಾ).=ರಣಭೂಮಿ : ರಕ್ತವಾರಿ ಬೆದೆಗೂಡಿಸೆ ಸಾಲಿಡೆ ಪರ್ವೆಣಂ ರಣಾವನಿತಲವಿರ್ದುದಂಕುರಿತಮಾದವೊಲ್ (ಶಂರಾಮ. ೦೩-೯೯); ಪಾತಾಳ ದುತ್ತಮಸುವಸ್ತುಸಹಿತಂತರಿಸದ್ವಿದಿಂ ಫಲುಗುಣಂ ಮಡಿದಿಹ ರಣಾವನಿಗೆ ಸಂಭ್ರಮದೊಳು (ಕೃಬಿಭಾ. ೨೯-೯೦). [ಸಂ.]

**ರಣಿಗ** (ನಾ). ಯುದ್ಧಮಾಡುವವನು : ಎತ್ತಿ ಬಂದರಿಯ ಬಲವನೋರ್ವನೆ ಪೊಕ್ಕು ಕತ್ತರಿಸುವೆನು ಶಿರಗಳ ಇತ್ತ ಪಾಲಿಸು ತಾಲಿಯನೆಂದು ರಣಿಗರ ಮುತ್ತ ನಂಜನು ಬಿನ್ನವಿಸೆ (ಕ್ರಾ.ಪಶ. ೦೩-೯). [ರಣ₂ + - ಇಗ]

**ರಣಿತ** (ಗು). ೧. ಶಬ್ದಮಾಡುವ; ಧ್ವನಿಮಾಡುವ : ಮೃದುಪದಂಗಳೊಳ್ ಕಳರವರಣಿತಮಣಿನೂಪುರಂಗಳಂ ತುಡಿಸಿ (ಅದಿಪು. ೬-೦೦೬ ವ). (ನಾ). ೨. ಧ್ವನಿ ; ಶಬ್ದ : ನೂಪುರರಣಿತಕ್ಕಳಸಿ ಬರ್ಪಂಚೆವಿಂಡಿನಿಂಚರ ದೊಳಂ (ಕಾದಂಪೂ. ೬೭); ಪಾವ್ಕದ ರಣಿತವದ್ರಿಯನೊದೆದುದು (ಕುವ್ಯಾ.ಗ. ೧-೬). [ಸಂ.]

**ರಣೋರ್ವಿ** (ನಾ). ರಣಭೂಮಿ ; ಕಳ : ಅಪಾರತೂರ್ಯಮುಂ ಪೊಯಿಸಿ ಪಡೆಗಳೆರಡುಂ ರಣೋರ್ವಿಯಿಂದಂ ತಂತಮ್ಮ ಪುರಕ್ಕೆ ಪೋದುವು (ಶಂರಾಮ. ೧೩-೧೦೦). [ಸಂ. ರಣೋರ್ವೀ]

**ರತ** (ಗು). ೧. ಆಸಕ್ತ ; ಮಗ್ನ : ದ್ವಿಟ್ಟುರಧ್ವಂಸರತಕ್ರೋಧಂ . . . ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿನೇತ್ರಂ (ಜಗಂ. ೧-೩) ೨. ಸಂತೋಷಗೊಂಡ ; ತೃಪ್ತಿಗೊಂಡ. ೩. ಪ್ರೀತಿಸಿದ ; ಪ್ರೇಮಿಸಿದ. (ನಾ). ೪. ತತ್ಪರತೆ ; ಧ್ಯಾನ : ಸತತ ಈತನೆ ಮುಖ್ಯಗುರುವೆಂದು ಶಿಳಿದು ಅವನ ರತದಲ್ಲಿ ಇಪ್ಪಗೆ ವಜ್ರಪಂಜರ ಬರಣ (ಐಾಳ್ವ. ೫೬-೩). ೫. ಹರ್ಷ ; ಸಂತೋಷ. ೬. ಸುರತ ; ಕೂಟ : "ರತಂ ಮೈಥುನಂ ಯಾಭವೆನೆ ಕೂಟಮಾದು" (ಮಂಗರಾ. ೯೬-೦೩) ; ನೆನೆದು ಮೊದಲಾದ ರತವನುವನೊಡ ಲೊಳ್ ಪುಳಕವನೆ ತಾಳ್ದ ತನ್ನಂಕದಚಲಸುತೆಯ ಮನವನಟಿದಪ್ಪಿ (ಜಪಪ. ೯-೬೩). [ಸಂ.]

**ರತಕೂಜಿತ** (ನಾ). ಸುರತಧ್ವನಿ ; ಸೀತ್ಕಾರ. [ಸಂ.]

**ರತಕೇಳಿ** (ನಾ). ಸಂಭೋಗ ; ರತಿಕ್ರೀಡೆ : ರತಕೇಳಿರಾಗವನಿಶಂ ಸ್ತ್ರೀಪುಂ ವೃಜಕ್ಕೆಲ್ಲಂ (ಜಗಂ. ೨-೩). [ಸಂ.]

**ರತಕ್ರೀಡೆ** (ನಾ). = ರತಕೇಳಿ : ತನುಪ್ರತ್ಯಂಕತೆ . . . ಮಯ್ದಾರದೊಳ್ಬಿಂಬಿಪಂ ದಿವಿಜಂ ಶ್ರೀಪ್ರಭೆಗಿತ್ತನಾಕೆ ದಿವಿಜಂಗಿತ್ತಳ್ ರತಿಕ್ರೀಡೆಯೊಳ್ (ಚಾಂತಿಪು. ೬-೩೭). [ಸಂ. ರತಕ್ರೀಡಾ]

**ರತಖಿನ್ನ** (ಗು). ಸುರತದಿಂದ ಬಳಲಿದ ; ಸಂಭೋಗದಿಂದ ಆಯಾಸಗೊಂಡ : ರತಖಿನ್ನಕಿನ್ನರೀಸನ್ನುತೆಯುಂ ತಣ್ಣಲೆದು ಕಳೆದು ಸುಯ್ಯಿಂ ಸುರಭೀಕೃತಮಾಗುತ್ತುಂ ಪ್ರತ್ಯುಪಕೃತಿವಡೆವುದು ತದುಪವನದ ಪಾವನ ಪವನಂ (ಶಂಪ್ರಕೃ. ೦೦-೪೨). [ಸಂ.]

**ರತಜಲ** (ನಾ). ಸಂಭೋಗದ್ರವ ; ಕಾಮಜಲ : ರತಿಸಮಯದೊಳೆ . . . ಶಂಖರವದ ಮಿಂತವೆನಿಸಲುಂಬಲ್ಪರತಜಲದ ಕೆಂಪನುಡುಪತಿಚದುರಿನವಳೆ ಶಂಖಿಣಿ (ಜಸವ. ೨-೦೩). [ಸಂ.]

**ರತದೀಪಿಕೆ** (ನಾ). ರತಿಕಾಲದಲ್ಲಿ ಹತ್ತಿಸಿಟ್ಟ ಸಣ್ಣ ದೀಪ : ನಾಣ್ಚಿ ತಲೆಯಂ ತೆಗೆವಂತಿರೆ ಪಾತ್ರಮಧ್ಯದೊಳ್ ತೆಗೆದುಡುಗಿರ್ದುವೊಳ್ಬುಡ್ಡಿಗಳಂ ರತದೀಪಿಕೆಗಳ್ ನಿಶಾಂತದೊಳ್ (ಲೀಲಾವ. ೩-೦೮). [ಸಂ. ರತದೀಪಿಕಾ]

**ರತನಿ** (ನಾ). ಮೊಳಕೈಯಿಂದ ಮುಚ್ಚಿದ ಅಂಗೈವರೆಗಿನ ಒಂದು ಅಳತೆ : ಏಳೋ ಎಂಟೋ ರತನಿಗಳ ಪ್ರಮಾಣದ ಸಲಗವು ಅಲ್ಲಿಗೆ ಬರುವುದು (ಐಂದ್ರ.ಕ. ೬೩). [ < ಸಂ. ರತ್ನಿ ]

**ರತಲು** ' ರಾತಲು ' ನೋ.

**ರತಾಂತ** (ನಾ). ಸುರತದ ಅಂತ್ಯ ; ಸಂಭೋಗದ ಕೊನೆ : ಮನದಜಪಂ ಕಟಲ್ಪುವ ರತಾಂತ ಸುಯೋಪಯದಿಂದೆ ನಿದ್ರೆಯಂ ನೆನೆಯದೆ ಪೋದುವಂತವರ್ಗೆ ಚಿತ್ರಜ ಕೇಳಿಗಳಿಂದೆ ಪೊಳ್ತುಗಳ್ (ಶಂಪ್ರಕೃ. ೬-೬೩) ; ಸಲಿಲಕೇಳಿಯುಮಂ ಸಪಿಲಾಟದೇಳ್ಗೆಯುಂ ತಳೆದಭಿಸಾರಿಕಾನಿಕರಮೊಪ್ಪಿದುದಾತ್ತರತಾಂತಲೀಲೆಯೊಳ್ (ಗಿಂಕ. ೯-೩೩). [ಸಂ.]

**ರತಾಂಬು** (ನಾ).= ರತಜಲ : ನೆರೆಯಲ್ಕೆ ಪಟ್ಟೆಯೊಳ್ ಕೊಡನೊಡೆದಂತೆ ಗುಳ್ಳಿಸಿಬಿಗಂ ಸತಿಯರ್ಗೆ ರತಾಂಬು ಮರ್ಮದೊಳ್ (ಮನ್ಮಥ. ೩-೦೬). [ಸಂ.]

**ರತಾರ್ತ** (ನಾ). ರತಿಕ್ರೀಡೆಯ ಬಯಕೆಯುಳ್ಳ ವ್ಯಕ್ತಿ : ಎಳಲತೆವನೆಯೆನಿತೆನಿತುಂ . . . ಕೃತಕಾಚಳಮೆನಿತನಿತುಂ ರತಾರ್ತರೆಳಸಿರೆ ರಮ್ಯಂ (ಪುಷ್ಪಕ. ೨-೯೦). [ಸಂ.]

**ರತಾರ್ಥಿನಿ** (ನಾ). ಸಂಭೋಗದ ಬಯಕೆಯುಳ್ಳವಳು : "ವೃಷಸ್ಯಂತೀ, ರತಾರ್ಥಿನೀ — ಈ ೨ ಸುರತವಡಿಕೆಯವಳ್" (ಶಠಾಭಿ. ೮೦-೩೩೦).

[ಸಂ. ರತಾರ್ಥಿನೀ]

**ರತಿ₁** (ನಾ). ೧. ಸಂತೋಷ ; ಆನಂದ ; ಹರ್ಷ. ೨. ಪ್ರೀತಿ ; ಒಲವು ; ಆಸಕ್ತಿ : ಸಲ್ಲಲಿತರತಿಯಲ್ಲಿ ನಿಮ್ಮಯ ಪಲ್ಲಡಿಗಳಂ ಪೂಜಿಸುವ ಸಂಫುಲ್ಲಭಕ್ತಿಯನಿತ್ತು ಪರಿಪಾಲಿಸಿದೆ (ಬಸಪು. ೩೦-೬೨). ೩. ಹಂಬಲು ; ವ್ಯಾಮೋಹ : ನಿಮ್ಮ ನೋಡಿ ನೋಡಿ ಮನದಲ್ಲಿ ರತಿ ಹುಟ್ಟಿ ನಿಮಿರ್ದವೆನ್ನ ಕಳೆಗಳು (ಬಸವ. ೪೯೦) : ಕೃತರಾಪಾನ್ವಿತನಾ ಹಿಮಾಂಶು ಗುರುವಿಂ ಗೋತ್ರಾಳಿಯನ್ನಾಂಗನಾರತಿಯಿಂ ಕೀಚಕನಂ ಬಕಾರಿ ಮುಜಿದಂ (ಸೋಮೇಶ. ೩೯). ೪. ಬಯಕೆ ; ಆಸೆ ; ಇಚ್ಛೆ : ಅನುದಿನಂ ಬಿಪ್ಪ

ತೆಜಿದಿಂ ಪುಷ್ಪದ ರತಿಯುಲಾ ಸಿದ್ಧಕುಲತಿಲಕನೆಯ್ದುಂದು (ಸಿದ್ಧರಾ. ೪-೬೬). ೫. ಕೂಟ ; ಸುರತ ; ಸಂಭೋಗ : "ಸಂವೇಶನಂ . . . ರತಿಃ ಸುರತಂ ಮೋಹನಂ — ಈ ೭ ಸುರತಂ" (ಕಲಾಯು. ೯೩-೧೦೩) ; ಇಲ್ಲಿ ಮನುಜಸ್ತ್ರೀಯು ಮೇಳನವಲ್ಲಿ ಸುರನಾರಿಯರ ರತಿ (ಕಂವ್ಯಾಗ. ೦-೨೦) ; ಸುಳಿಗಾಳಿ ನಿಲೆ ತೆರೆ ನಿಲುವಂತೆ ರತಿಯಾಟ ನಿಲೆ ನಿಂದುದೊಡನೆ ಮೈಯಾಟ (ಶತ. ೪೦-೯೨). ೬. ಮನ್ಮಥನ ಹೆಂಡತಿ : "ಇಚ್ಛೆ ಗಾರ್ತಿಯೆಂದು ರತಿ" (ಕಲಾ. ೪೬-೦೪) ; ಸ್ಮರನ ಪೊಗೆಯುಂದೆ ಪುದಿದಿರ್ದ ರತಿಯುಪೋಲ್ಕಾಂತೆ ಕರಮೆ ಕಣ್ಗೆಸೆದಿರ್ದಳ್ (ಕಾದಂಪೂ. ೪೩). ೭. ಚಂದ್ರನ ಹದಿನಾರು ಕಳೆಗಳಲ್ಲಿ ಆರನೆಯುದು : "ಅಮೃತಾ . . . ರತಿ . . . ಕಾಮದಾಯಿನಿಯೆಂಬ ಪೋಡಶಕಲಾಭರಿತನಾಗಿ (ವಿವೇಕ. ೨೦೬). ೮. [ಕಾವ್ಯವಿಸಾ] ಸ್ಥಾಯಿಭಾವಗಳಲ್ಲಿ ಒಂದು ; "ರತಿಯೆಂದರೆ ಸ್ತ್ರೀ ಪುರುಷರಿಗೆ ಪರಸ್ಪರವಾಗಿರತಕ್ಕ ಪ್ರೀತಿ" (ಶಾರದಾ. ೩೪೪) : "ರತಿಃ ಹಾಸಃ . . . ಶಮಃ — ಈ ೯ ಸ್ಥಾಯಿಭಾವಂಗಳ್" (ಕಲಾಯು. ೦೬-೯೦); ರತಿ ಹಾಸ . . . ರಮೆಯೆಂಬ ಕ್ರಮದಿಂ ಶೃಂಗಾರಾದಿ ನವರಸಕ್ಕೆ ಬೀಜ ಭೂತಾತಂಗಳಾದ ಸ್ಥಾಯಿಭಾವಂಗಳೇ ದಕ್ಷಿಣಾದಿನಾಯಕಪ್ರವಯದಲ್ಲಿ ಸ್ಥಾಯಿಯಾಗಿರ್ಪ (ವಿವೇಕ. ೨೨೭) ; ಮುಗಿಲ ಮಾರಿಗೆ ರಾಗರತಿಯು ಸಂಜ ಪರಿತ್ತ (ನಂ. ೬೯-೦). ೯. [ಛಂದ] ಅಂಶಗಣವಲ್ಲಿ ಒಂದು ; ಬ್ರಹ್ಮಗಣ : ಜಯಕೀರ್ತಿಯು 'ಬ್ರಹ್ಮ' 'ವಿಷ್ಣು' 'ರುದ್ರ' ಗಣಗಳ ಬದಲಾಗಿ 'ರತಿ' 'ಮದನ' 'ಶರ' ಗಣಗಳ ಹೆಸರಿನಲ್ಲಿ ಲಕ್ಷಣ ಹೇಳಿದ್ದಾನೆ (ಛಂದೋಅ. ೦೩೨). [ಸಂ.]

**ರತಿ₂** (ನಾ). ೧. ರತ್ನಗಳನ್ನು ತೂಗಲು ಬಳಸುವ ಗುಲಗಂಜಿ ಮತ್ತು ಅದರ ತೂಕ : ಹವಳಕ್ಕೆ ಕಣಜ ಮುತ್ತಿಗೆ ಚವೂ ಪಚ್ಚೆಗೆ ರತಿ ವಜ್ರಕ್ಕೆ ಮಂಜಾಡಿ . . . ಯಿವು ತೂಗಿ ಮಾರುವಂತ ವಿವರಗಳು (ಶಾಸ್ತ್ರ. ೭೬-೧). ೨. ಹೊಳಪು ; ಕಾಂತಿ ; ಪ್ರಕಾಶ : ರತ್ನದ ಶಿಲೆಯೊಡೆದು ಪುಡಿಯಾದಲ್ಲಿ ರತಿಯಲ್ಲಿ ಅಡಗಿತ್ತೆಂಬುವನಜೀದಲ್ಲಿ ಪ್ರಾಣಲಿಂಗಿಯೆ ಪ್ರಾಣಲಿಂಗ ಸ್ಥಲ (ಮೋಳಿಮಾ. ೧೯೩-೩೪೬) ; ರತಿಯುಂದ ರತ್ನ ಗತಿಯುಂದ ವಾದ್ಯ (ಸಿವಿವ-೪. ೯,೩೪೩-೬೬) ; ರತಿಯೆಂಬುದೆ ಪ್ರಾಣ ಘಟವೆಂಬುದೆ ಕಲ್ಲು (ಸಿವಿವ-೪. ೭,೪೦೨-೯೪). ೩. (ಆಲಂ) ಸ್ವಲ್ಪ ; ಕೊಂಚ : ನನಗೆ ರತಿ ಮಾತ್ರವೂ ದುಃಖವಾಗುವುದಿಲ್ಲ (ತುಳಸೀ. ೦೨೩).

[← ಹಿಂ. ರತ್ತೀ./ಮರಾ. ರತಿ, ರತೀ./ಸಂ. ರಕ್ತಿಕಾ]

**ರತಿಕಲೆ, ರತಿಕಳೆ** (ನಾ). ಕಾಮಕಲೆ ; ಶೃಂಗಾರಕಲೆ : ರತಿಕಲಾ ಸುಪ್ರೌಢೆಯಲ್ಲದ ಸತಿಗೆ ರೂಪಿದ್ದೇನು (ಕೋಲಾ. ೬-೧೩-೦೬). **ರತಿಕಳೆ** : ನಲ್ಲರೊಡನೊಂದಿ ಮಾಜಿದಿರೆ ರತಿಕಳಾಕೇಳಿಯಿಂದಂ . . . ಅಬಲೆಯರು ಕಣ್ಗೆಸೆದರು (ಹಕಾ. ೪-೩೬). [ಸಂ. ರತಿಕಲಾ]

**ರತಿಕಳೆ** 'ರತಿಕಲೆ' ನೋ.

**ರತಿಕಾಂತ** (ನಾ). ರತಿಯು ಗಂಡ ; ಮನ್ಮಥ : ರತಿಕಾಂತನಸಿಯ ನುಣ್ಬೊಗರತಿಕಾಂತದ್ಯುತಿಯನಾಂತು ಚೆಲ್ವಿಸೊಳಧಿಕಂ ಲತೆಯ ಮೊದಲ್ಗೆನೆ ರತಲೋಲತೆಯುನಿನಂಗೀವುವವಳ ತೋಳ ಮೊದಲ್ಗಳ್ (ಜಗ. ೧೧-೩೦).

[ಸಂ.]

**ರತಿಕಾತಿ** (ನಾ). ಪ್ರೀತಿಯನ್ನುಂಟುಮಾಡುವವಳು : ಆ ರತಿಕಾತಿ ಯುವಳ ಲೋಚನವೆಂಬಾಜಿಡಿವಜೀಗಳೆಯ್ದುಂದು ನೀಜನ ನಿಜವದನಾಂಬುಜ ದೊಳು ಕಾಲೂಜಿ ನಿಂದುವು (ಶೃಶಂಜ. ೩-೬೮). [ರತಿ₁ + – ಕಾತ್ತಿ₅]

**ರತಿಕೇಳಿ** (ನಾ). = ರತಕೇಳಿ : ತೋಳ ಮೊದಲು ಪೊಕ್ಕುಳ ಮೊದಲು ಸ್ಥೂಲಜಘನವಿವು ಪೇಳುವುದೇನ್ ರತಿಕೇಳಿಯೊಳಗೆ ಚುಂಬಿಪ ತಾಣಂ (ಜವವ. ೭-೨೩). [ಸಂ. ರತಿಕೇಲಿ]

**ರತಿಕ್ರೀಡೆ** (ನಾ). = ರತಕೇಳಿ : ತದ್ವನವಾಲೆ ರತಿಕ್ರೀಡೆಗೆ ಮನೋಜ್ಞ ಮನುಕೂಲಮುಚಿತಂ (ಪುಶ್ಯಶ್ರ. ೩-೩೪) ; ರತಿಕ್ರೀಡೆ ಎರಡು ಪ್ರಕಾರ. ಬಾಹ್ಯರತಿ ಅಭ್ಯಂತರ ರತಿ ಎಂದು (ಕಾಮಶಾ. ೨೨೦). [ಸಂ. ರತಿಕ್ರೀಡಾ]

**ರತಿಗಲೆ** (ನಾ). ರತಿಕ್ರೀಡೆಯಲ್ಲಿ ಉಂಟಾದ ನಖಕ್ಷತ ಮುಂತಾದ ಗುರುತು : ತನ್ನ ಮೈಯೊಳಪ ರತಿಗಲೆಯ ಬಿಡವೆಲ್ಲವನು ತೋಜಿ ಸ್ವಪ್ನದಿರವಂ ಪೇಳೆ (ಪ್ರಭುರಾ. ೦೦-೪೪). [ರತಿ₁ + ಕಲೆ₂]

**ರತಿಗಾರ** (ನಾ). ಪ್ರೀತಿಸುವವನು ; ಪ್ರಿಯ ; ನಲ್ಲ : ನನ್ನ ಗಂಧದ ರತಿಗಾರ ರುಮ್ಮಾಲೆಲ್ಲ ಪರಿಮಳ, ರಾಯ ಯಾವಾಗ ಬರುತ್ತೀರಿ ? (ಜಗ್ಲಾ. ೩೪). [ರತಿ₁ + – ಗಾರ (< – ಕಾಜ)]

**ರತಿಗೃಹ** (ನಾ). ೧. ವಿಲಾಸಗೃಹ. ೨. ಸೂಳೆಯ ಮನೆ. ೩. ಯೋನಿ. [ಸಂ.]

**ರತಿಗೆಡು** (ಕ್ರಿ). ಆಸಕ್ತಿಯನ್ನು ಕಳೆದುಕೊಳ್ಳು ; ನಿಷ್ಠೆಯಿಲ್ಲವಾಗು : ವ್ರತವ ಮಾಡಿಕೊಂಡಲ್ಲಿ ರತಿಗೆಡದೆ ಕ್ಷೇತ್ರವಾಸಂಗಳಲ್ಲಿ ಜೇಡದೆ (ತರವ. ೦೬೬-೯೮೩) ; ಧೃತಿಬಿಡದೆ ರತಿಗೆಡದೆ ಭಕ್ತಿಸ್ಥಿತಿಯ ಮಾಜಿದೆ . . . ಸಂಪ್ರತಿಬಲಿದ ಸದ್ವ್ರತಿಯ ಸಮತೆಗೆ ಪುರಜನಂ ವಿಸ್ಮಯವಿದನು ತಿರಲು (ಬಸಪು. ೫೬-೩೦). [ರತಿ₁ + ಕಡು₁]

**ರತಿಗೆಯ್, ರತಿಗೈ** (ಕ್ರಿ). ಸಂಭೋಗಿಸು ; ರತಿಕ್ರೀಡೆಯಾಡು : ಸೊಗಸಿವಡೆ ರತಿಗೆಯ್ದು ಸೊಕ್ಕಿದವಗಲದೊಳಪೊಕ್ಕು (ಬಸಪು. ೪೨-೦೩) ; ಶ್ಲಥೆ ಘನಂ ರತಿಗೆಯ್ಯಲತ್ಯುಚ್ಚ ರತ್ರಮೆನಿಸಾವುದು (ಜವವ. ೪-೩೪). **ರತಿಗೈ** : ಓರಂತೆ ವಿಟನೊಳು ಮಗ್ಗುಲ ರತಿಗೈವ ವಾರಾಂಗನೆಯರೊಪ್ಪಿದರು (ಕಂವಿ. ೬-೦೨೦). [ರತಿ₁ + ಕೆಯ್₁]

**ರತಿಗೇಹ** (ನಾ). ೧. ವಿಲಾಸಗೃಹ. ೨. ಸೂಳೆಯ ಮನೆ ; ವೇಶ್ಯಾಗೃಹ : ರತಿಗೇಹಂ ಹಾಸುಮಂಚಂ . . . ಮಾಟ್ಕುಂ ವಿಟರ್ಗಭಿಮತಮಂ ಕಾಮಸಾಮ್ರಾಜ್ಯದೊಳ್ಪಂ (ಸೂಕ್ತಿಸು. ೦೪-೨) ; ಮಿಂಚುವ ರನ್ನಗನ್ನಡಿ ವಿಲೇಪನ ಚಂದನವಾರಿ ಗಿಂಡಿ ಲಾಮಂಚದ ವೀಜನಂ ಪಲಸರಂ ಪಡಿಗಂ ರತಿ ಗೇಹಮೊಪ್ಪಗುಂ (ಮನ್ಮವಿ. ೦೦-೩). ೩. ಯೋನಿ. [ಸಂ.]

**ರತಿಗೈ** 'ರತಿಗೆಯ್' ನೋ.

**ರತಿಗೊಡು** (ಕ್ರಿ). = ರತಿಗೆಯ್ : ಪಿಡಿದೆರಡುಕೈಯೊಳಾ ತೊಡೆಯೆರಡ ನೊತ್ತಿ ರತಿಗೊಡಲದೇ ವೇಷ್ಟಿತಕರಣಂ (ಜವವ. ೯-೧೬).

[ರತಿ₁ + ಕೊಡು₁]

**ರತಿತಂತ್ರ** (ನಾ). = ರತಿಕಲೆ : ಚಂಚಲನೇತ್ರ ಚತುರೆ ರತಿತಂತ್ರಕುಶಲೆ [ಜಾಣಾಂ. ದೇಳ್ಗೆ]ನಿಪುಣೆ . . . ಮೊಗಿನಾದ ಹೆಣ್ಣು (ಜವವ. ೬-೫೪).

[ಸಂ.]

**ರತಿಪ** (ನಾ). ರತಿಯ ಗಂಡ ; ಮನ್ಮಥ : ಓರಂತೆ ರತಿಪನೆಸುವ ನಿಶಾತ ಮಾರ್ಗಣಹತಿಗೆ ಗುಜೀಯಾದೆನಾ (ಬಸಪು. ೪೦-೭). [ಸಂ.]

**ರತಿಪತಿ** (ನಾ). = ರತಿಪ : ರತಿಪತಿಗೆ ಮೂಲೋಕವಾಪರಿಸುವ ರೂಪ್ಪು . . . ಕೊಟ್ಟ ಗುರುಮೂರ್ತಿ (ಹಕಾ. ೦-೧). [ಸಂ.]

**ರತಿಬಂಧ** (ನಾ). ೧. = ರತಿಕಲೆ : ಕ್ರೀಡಾಬಂಧ ರತಿಬಂಧಾದಿಗಳಿಂ ಸಂಗೀತಸಾಹಿತ್ಯಾದಿ ವಿದ್ಯಾಗೋಷ್ಠಿಗಳಿರೆ ಮಲ್ಲಯುದ್ಧಾದಿ ಲೀಲಾಯುದ್ಧಾದಿ ವಿಹಾರಗಳಿಂ (ವಿವೇಕ. ೨೦೩). ೨. ಸಂಭೋಗವಲ್ಲಿ ಅನ್ಯೋನ್ಯ ಉಪಲಗ್ನದ ಬೇರೆ ಬೇರೆ ವಿಧ ; ಚಿತ್ರರತಿಗಳಲ್ಲಿ ಒಂದು ಪ್ರಕಾರ. [ಸಂ.]

**ರತಿಯೆಜೆಯ** (ನಾ). = ರತಿಪ : ಆ ರತಿಯೆಜೆಯಂ ಪೂಜಿಪ ಕೆಂಗಲ್ಗರುವಿನ ತೆಜನೆಸೆ ಯುವತಿ ಕಲಾವತಿ ಸಿರಿಯಿಂದಾ ಲಕ್ಷ್ಮಿಗೆ ಸವತಿ (ಜಯಕಾ. ೨-೪೬). [ರತಿ₁ + ಎಜೆಯ]

**ರತಿರಮಣ** (ನಾ). = ರತಿಪ : ಅತಿನಿಬಿಡಂಗಳ್ . . . ರತಿರಮಣಕುಂಭಿಕುಂಭಾಕೃತಿಗಳ್ ಕಳಶೋಪಮಂಗಳವಳ ಕುಚಂಗಳ್ (ಗರಾಯು. ೬-೩೬) ; ರತಿರಮಣನತಿಮೋದದಿಂದಮ್ಮ ಸೆಂಪಗಲದಿರ್ಕ (ಜವವ. ೨-೧). [ಸಂ.]

**ರತಿರಸ** (ನಾ). ಕಾಮಾಸಕ್ತಿ : ನರಪಮುಖವಿಧುಬಿಂಬಂ ಸತಿಯ ಮನಃಕುಮುದವನುರು ರತಿರಸಮಂ ಬಿಡದಲರ್ಚಿಸಿತ್ತು ನಿತಾಂತಂ (ಶಾಂತಿ. ೬-೮೨) ; ರತಿರಸದಿಂ ಸೊರ್ಕಿ ನಿಮಾಳಿತಲೋಚನಪಕ್ಷ್ಮದಿಂ ತೊದಳ್ನುಡಿಯಿಂ ಸೂಯತಘರ್ಮಾಂಬುಗಳಿಂ ಮೂರ್ಛತೆಯಿಂ ತಾಳ್ದೊಪ್ಪುತಿರ್ದರಾ ದಂಪತಿ (ತ್ರಿಷ್ಟಿ. ೮೭-೧೨೮). [ಸಂ.]

**ರತಿರಹಸ್ಯ** (ನಾ). ಕಾಮದ ಗುಟ್ಟು ; ಶೃಂಗಾರ ರಹಸ್ಯ : ಸ್ಮರರಾಗೋದ್ರೇಕಂ ವೀತರಾಗನಿರ್ದೆಡೆಯೊಳೇಕೆ ಪುಟ್ಟುಗುಮೆನೆ ತತ್ಪರತೆಯಿನಂತರ್ವರ್ತಿ‍ಯೊಳರಸನಪೇಕ್ಷಿಸನೆ ರತಿರಹಸ್ಯೋತ್ಸವಮಂ (ಕುಸ್ಸು. ೯-೦೦೯). [ಸಂ.]

**ರತಿರಾಗ** (ನಾ). = ರತಿರಸ : ಪೂಗಿಯ ದಿವಸಂ ಘನರತಿರಾಗವನುತ್ಸವದಿ ಮಾಡುಗೆ (ಮದನ. ೩-೪); ರತಿರಾಗಾಮೃತವಾರ್ಧಿಯೊಳತನುಕ್ರೀಡಾನಿಮಗ್ನೆಯಾದಂತೆ (ಕುಸ್ಸು. ೩-೦೦೯). [ಸಂ.]

**ರತಿರಾಗಂಬೆಱು** (ಕ್ರಿ). ಕಾಮಾಸಕ್ತಿಯನ್ನು ಹೊಂದು ; ಕಾಮಾತುರದಿಂದ ಕೂಡಿರು : ರತಿರಾಗಂಬೆತ್ತು ಕಾಂತಂ ತೆಗೆದು ಬಿಗಿದು ತಳ್ಕೈಸೆ (ರಾಜಶೇ. ೮-೯೪). [ ರತಿರಾಗ + ಪೆಱು$_1$ ]

**ರತಿರಾಗಿ** (ನಾ). ಸಂಭೋಗದಲ್ಲಿ ಆಸಕ್ತಿಯುಳ್ಳವನು ; ಸುರತಾಸಕ್ತಿಯಿರುವವನು : ಉಜ್ವಲಯಶಂ ರತಿರಾಗಿ ಕಳಾವಿಭೂಷಣಂ. . . ಶುಚಿಯೆಂದೆನಿಪಂದದಿಂ ನಾಗರೀಕನಂ (ಮಲ್ಲಿ. ೦೦-೩). [ಸಂ. ರತಿರಾಗಿನ್]

**ರತಿವೆಱು** (ಕ್ರಿ). ಸಂತೋಷವನ್ನು ಹೊಂದು : ಆನಂದಪಡು : ನರ್ತನದ ಸತಿಯರೇಳ್ತಂದು. . . ತಾಳಮಾರ್ದಳೆಯುಪಾಂಗಂ ವೀಣೆಯು ಮುಖ್ಯಂಗಳನು ನುಡಿಸುತೇ ಜತೆಗೂಡಿ ಗಾನಸಂಗೀತಚಯದಿಂದೊಲಿದು ರತಿವೆತ್ತು ಭೂಪಾಳಿಯುಂ ಪಾಡೆ (ಪಂಪಭಾ. ೦೪-೩೦).
[ ರತಿ$_1$ + ಪೆಱು$_1$ (< ಪೆಱು$_1$) ]

**ರತಿಶಾಸ್ತ್ರ** (ನಾ). ಕಾಮಶಾಸ್ತ್ರ : ಲೀಲೆಯಿಂ ರತಿಶಾಸ್ತ್ರಮೂಲವಱಿದು (ಜಪ. ೯-೨೨). [ಸಂ.]

**ರತಿಶ್ರಾಂತಿ** (ನಾ). ಸಂಭೋಗದಿಂದ ಉಂಟಾದ ಆಯಾಸ,- ದಣಿವು : ರತಿಶ್ರಾಂತಿನಿರ್ಯಲ್ಲಳನಾಸಿಶ್ವಾಸಪುಷ್ಪಪ್ರಸರದಗುರುಸೌರಭ್ಯಸಂದೋಹಭಾರಾಕಳಿತಂ. . . ಗಂಧವಾಹಂ (ಚಂದ್ರಪ್ರ. ೬-೪೩). [ಸಂ.]

**ರತಿಸು$_1$** (ಕ್ರಿ). ೧. ಗಮನಿಸು ; ಲಕ್ಷ್ಯವಿಡು : ನಿರ್ಮಳಮತಿಯನಂಗೀಕರಿಸಿ ಲಕ್ಷ್ಯವ ರತಿಸುತಿಹುದಾವಾಗಲು (ಸದ್ಗುರು. ೨-೩). ೨. ಕೂಡು : ಭೋಗಿಸು : ಗೋತ್ರದೊಳ್ಪುಟ್ಟಿರ್ದ ಸತಿಗಳ ನೇತ್ರದಿಂ ನೋಡ್ಯಪರರತಿಸುವ ಮನುಜಮಾತ್ರನು ಮೂತ್ರರೋಗದಿ ಬಳಲಿ ಸಾಯುವನು (ಶಾಪಂಗ. ೨೦) ; ಇಂದೀವರಾಂಬಕ ನಿಂದಿಸದೆಮ್ಮಾನು ಮಂದಹಾಸದಿ ನೀನು ಹೊಂದಿ ರತಿಸಿಂದು (ಹಮತ. ೩೪). [ರತ + — ಇಸು$_3$]

**ರತಿಸು$_2$** (ಕ್ರಿ). ಮಾಡು ; ರಚಿಸು : ಮತ್ತೆ ಬಂದೊಮ್ಮೆ ಪೂಜೆಯ ರಚಿಸಿರ್ಪ ಸಾಕಿಂದಿಗೆ (ಶರಶ. ೬೨-೬೪). [ <ರಚಿಸು$_1$]

**ರತಿಸುಖ** (ನಾ). ಸಂಭೋಗದ ಆನಂದ ; ಕೂಟದ ಸುಖ : ವಧುವುಂ ತಾನುಂ ರತಿಸುಖ ಮಧುಸೇವಾಸುತ್ತರತ್ತ ಮೆಯ್ಮಱೆದಿರ್ದರ್ (ಚಂರಾಪಶ. ೧೩-೩೬) ; ತನ್ನಾಶ್ರಯದ ರತಿಸುಖವನು ತಾನುಂಬ ಊಟವನು ಬೇಱೆ ಮಕ್ಕೊಬ್ಬರ ಕೈಯಲ್ಲಿ ಮಾಡಿಸಬಹುದೆ (ಬಸವ. ೦೬೩). [ಸಂ.]

**ರತಿಸುಖವಡೆ** (ಕ್ರಿ). ಸಂಭೋಗಸುಖವನ್ನು ಪಡೆ ; ಸುರತದ ಆನಂದವನ್ನು ಹೊಂದು : ಒಂದಿನ ಪರಮಸುಂದರಿಯೆನ್ನ ಕನಸಿನೊಳ್ ಸಂದಿಸಿ ರತಿಸುಖವಡೆದು ಅಂದಿನಿಂದವಳ ಕಾಣದೆ ವಿರಹವನಾಂತು ಕಂದಿದೆ (ಪೋಹಕ. ೩೦-೦೬). [ರತಿಸುಖ + ಪಡೆ$_1$]

**ರತಿಸೌಖ್ಯ** (ನಾ). = ರತಿಸುಖ : ಚುಂಬಿಸಿ ತೋಳ ಮೊದಲೊಳುಗುರ್ಗಳ ನೆಲೆಯಿ ಮೃದುಮಪ್ಪ ರತಿಸೌಖ್ಯಮಂ ಪಡೆವರು (ಜಪ. ೯-೩೪). [ಸಂ.]

**ರತಿಸ್ರುತೆ** (ನಾ). = ರತಜಲ : ಇದನು ಬೆರಳ್ಗಳ ಕಂಡು ಗೋಕುಲಗುಡಿಸೆ ದ್ರವಿಷಳು ಮದನದ್ವಾರದ ಕಳೆಯು ಪದುಮದ ತೆರನು ರತಿಸ್ರುತೆಯೆಂಬ ಪೆಸರದಕೆ (ಕೆಕ್ರಾಕೆ. ೦೦-೬೩). [ಸಂ. ರತಿಸ್ರುತ]

**ರತಿಹೀನ** (ನಾ). ರತಿಶಕ್ತಿಯಿಲ್ಲದವನು ; ನಪುಂಸಕ : ರತಿಹೀನಂ ಪೆಟಿಪಂ ಕುಬ್ಜಂ ಮತಿವಂತಂ . . . ಸತಿಯಂ ಕಾಯುಲ್ಕಿತಿಪ್ಪಂ (ಮದನ. ೬-೩೪). [ಸಂ.]

**ರತೀಧವ** (ನಾ). = ರತಿಪ : ಆಧಾರಗೆಯ್ದು ಕುಳ್ಳಿರಗೊಟ್ಟು ಕೇಳ್ದ ರತೀಧವ ಬಂದ ಸುದ್ದಿಯನು (ಪೋಹಕ. ೩-೪೪). [ಸಂ.]

**ರತೀಶ** (ನಾ). = ರತಿಪ : ಘನವಿಮಳವ್ರತೀಂದ್ರರ ತಪೋವಿಪಿನಂ ಬಯಲಪ್ಪಿನಂ ರತೀಶನ ಚತುರಂಗಸೇನೆ ನಡೆದತ್ತು ಧರಿತ್ರಿಗೆ ಚಿತ್ರಮಪ್ಪಿನಂ (ಗಿಂಶ. ೬-೭) ; ರತೀಶನ ತಂದೆಯುಂ ಬಿದಿ ರವಿ ಶಿಖಿಗಳಂ ಭಜಿಸಿ ಕರ್ಮಕ್ಕೆ ತಂದೆ ನಿನ್ನೊಡಲಂ (ಬಸವ. ೩-೬೦). [ಸಂ.]

**ರತುನ**, ರನ್ನ (ನಾ). ೧. ವಜ್ರ, ಮಾಣಿಕ್ಯ ಮುಂತಾದ ಬಹುಬೆಲೆಯುಳ್ಳ ಹರಳು,- ಮಣಿ : ಪಂಚರತುನದೊಳೆ ನೆಱೆದ ಪಸರದಿಂ ತೋರಣಂಗಳೊಳ್ ತೊಡರ್ದ ತಿಸರದಿಂ (ಚಂಪಶಾ. ೩-೨೨ ರಗಳೆ) ; ಕನಕಶಿಲೆ ಎನಿಸುವ ಪಾಷಾಣದಲ್ಲಿ ರತುನ ಪುಟ್ಟಲು (ಪೋಳಿಪಶ. ೨೬೩-೦೪) ; ಜಲಧಿತಲದ ರತುನದಂತೆ . . . ಹೊಳೆಹೊಳೆವುದು ಚಿತ್ರವು (ಬಸಿಗೀ. ೦೩-೮).
ರನ್ನ : ೧. ಚಿಂಬೊನ್ನ ಪಟ್ಟವಣೆ ರನ್ನದ ಕನ್ನಡಿ (ಅಧಿಪು. ೪-೩೩) ; ಸಾಣೆಯ ಮೇಲೆ ರನ್ನಗಳಿಟ್ಟು ಮಸೆದೊಪ್ಪಗಾಣಿಸಿ ಕುಡುವ ತೇಟಿಗರು (ಪೋಹಕ. ೩-೨೭). ೨. ಕೆಂಪುಹರಳು ; ಮಾಣಿಕ್ಯ : "ಕೆಂಬರಲು ರನ್ನಕಿಸುಗಲ್ಲೆಂಬಿವು ರತ್ನಾಭಿಧಾನಂ" (ಕಂಕಂ. ೩೩). ೩. ಶ್ರೇಷ್ಠವಾದುದು : 'ರನ್ನೆ' ಪರಾ. ೪. 'ಗದಾಯುದ್ಧ' ಮತ್ತು 'ಅಜಿತನಾಥಪುರಾಣ' ಮುಂತಾದುವುಗಳನ್ನು ರಚಿಸಿದ ಕನ್ನಡದ ಒಬ್ಬ ಪ್ರಸಿದ್ಧಕವಿಯ ಹೆಸರು : ಕವಿಚಕ್ರವರ್ತಿವೆಸರೇಂ ರನ್ನಂಗೆ ಮೆಯ್ವೆತ್ತುದೋ (ಅಜಿಪು.೦-೮೩) ; ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ (ಗದಾಯು. ೧-೪೪). [<ಸಂ. ರತ್ನ]

**ರತುನದಾಲಿ**, ರನ್ನದಾಳಿ (ನಾ). ರತ್ನವನ್ನು ಕುಂದಣಿಸಿದ ತಾಳಿ: ನೇವಳದ ನಾಯಕಿಗೆ ರತುನದಾಲಿ [ಪಾಠಾಂ. ರತ್ನದಾಳಿ, ರನ್ನದಾಳಿ]ಯ ರಾಜಹಂಸೆಗೆ ಮಾಗಾಯ್ಗಳ ಮುಗ್ಧೆಗೆ . . . ನಿಯಾಮಿಸಿ (ಗಿಂಶ. ೩-೯೦ ಪ).
**ರನ್ನದಾಳಿ** : ನೇಸಱ ಬಿಂಬಂ . . . ವಿಯತ್ತ್ರೀಬಾ ಸತಿಯ ರನ್ನದಾಳಿಯ ಮೈಸಿರಿಯನೆ ಪೋಲ್ತು ಮಾಗಿಯೊಳ್ ಶೋಭಿಸುಗುಂ (ಉತ್ಪಟಿ. ೪-೨೩) ; ನುಣ್ಗೊರಳ್ಗೆ ರನ್ನದಾಳಿಯನಾಳಿಸಿಯುಂ . . . ಪಸದನಂಗೊಳಿಸಲ್ (ಪ್ರಕಪ. ೩-೦೩ ಪ). [ರತುನ + ತಾಲಿ$_1$]

**ರತೆ** (ನಾ). ಸಂಭೋಗದಲ್ಲಿ ತೊಡಗಿರುವವಳು : " ರತೆಯೆನಲು ಸುರತೆಯಕ್ಕುಂ " (ಮಂಗರಾ. ೬೯-೨). [ಸಂ. ರತಾ]

**ರತೋತ್ಕಂಠೆ** (ನಾ). ಸಂಭೋಗದಲ್ಲಿ ಉತ್ಸುಕತೆಯುಳ್ಳವಳು : ಕಾಮಾತುರೆ : ಕೋಮಲೆಯುಂ ಕೋಟಿಚಟೂಕ್ತಿಯಿಂದೊಸೆಯಿಸುತ್ತಿರ್ದಂ ರತೋತ್ಕಂಠೆಯುಂ (ಚಂದ್ರಪ್ರ. ೬-೩೩). [ಸಂ. ರತೋತ್ಕಂಠಾ]

**ರತೋತ್ಸವ** (ನಾ). ಸಂಭೋಗದ ಸಂಭ್ರಮ : ವಿಕ್ಕಮಂಡನಂ ಯುವತಿಜನಕ್ಕದೇವುದೊ ರತೋತ್ಸವಚಿಹ್ನಮೆ ದಿವ್ಯಮಂಡನಂ (ಶಗಪ. ೦೪-೦೦೦) ; ಅನವರತಂ ರತೋತ್ಸವದೊಳುಣ್ಮುವ ಘರ್ಮಜಲಂಗಳಿಂದೆ ಮಜ್ಜನಮನತಿಪ್ರಿಯಾಧರಸುಧಾರಸಸೇವನೆಯಿಂದಮೂಟಮಂ... ನೆಸೆಯದೆ ಪೋದುವಂತವರ್ಗೆ ಚಿತ್ರಜಕೇಳಿಗಳಿಂದೆ ಪೊಱ್ತುಗಳ್ (ಚಂದ್ರಪ್ರ. ೬-೮೩) [ಸಂ.]

**ರತ್ತ** (ನಾ). ಒಬ್ಬಾತನ ಹೆಸರು: ಶ್ರೀರತ್ತ (ಎಕ. II. ೪೦೯. 800). [?]

**ರತ್ನೂಡಿ** (ನಾ). ಹಪ್ಪಳ ಮೊದಲಾದುವುಗಳನ್ನು ಲಟ್ಟಿಸುವ ಸಾಧನ ; ಲಟ್ಟಣಿಗೆ : ಹಪ್ಪಳ ಲಟ್ಟಿಸಬೇಕು. ರತ್ನೂಡಿ ಎಲ್ಲಿ ? (ಆಡು). [ ? ]

**ರತ್ನ** (ನಾ). ೧. ವಜ್ರ, ಮಾಣಿಕ್ಯ, ಮರಕತ ಮುಂತಾದ ಬಹು ಬೆಲೆಯುಳ್ಳ ಮಣಿ ; ಅನರ್ಘ್ಯವಾದ ಹರಳು : ವಾರಿಧಿ ಮೈದೆಗೆದರೆ. ರತ್ನಂಗಳು ಕಾಣಬಹುದು (ರಸಶ. ೬೬೦); ಕೆಲವು ಅಮೂಲ್ಯವಾದ ಹರಳು ಕಲ್ಲುಗಳು ಕಣಿಗಳಲ್ಲಿ ದೊರೆಯುತ್ತವೆ. ಅವುಗಳಿಗೆ ರತ್ನಗಳು ಎನ್ನುತ್ತಾರೆ (ಶುಂಬಾಯು. ೯-೦೬೯). ೨. ಕೆಂಪುಹರಳು ; ಮಾಣಿಕ್ಯ : ಕೆಂಬರಲು ರನ್ನ ಸಂಗಲ್ಲೆಂಬಿವು ರತ್ನಾಭಿಧಾನಂ " (ಶಬಶಂ. ៥೩). ೩. ಅತ್ಯುತ್ತಮವಾದುದು ; ಶ್ರೇಷ್ಠವಾದುದು ; ಅಮೂಲ್ಯವಾದುದು : "ಮಣಿಯುಂ ರತ್ನತ್ರಯುಂ ಭಾಸುರತರಮಿವು ರತ್ನಾಷ್ಟಯಂ " (ಶಾಪಾರ. ೦೫೩). ೪. ಸಮಾಸಗಳ ಕೊನೆಯಲ್ಲಿ ಶ್ರೇಷ್ಠ, ಪ್ರಮುಖ ಎಂಬರ್ಥವನ್ನು ಕೊಡುವ ಒಂದು ಪದ ; ಉದಾ : ನಾಯಕರತ್ನ, ಸ್ತ್ರೀರತ್ನ. ೫. ಕನ್ನಡದ ಒಬ್ಬ ಪ್ರಸಿದ್ಧ ಕವಿ; ರನ್ನ : ಶ್ರೀ ಕವಿರತ್ನ (ಎಕ. II. ೪೦; ಶು. ೨೨೦೪); ವಾಗ್ದೇವಿಯ ಭಂಡಾರದ ಮುದ್ರೆಯನೊಡೆದು ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ (ಗದಾಯು. ೦-೩೯) ; ನಯದಿಂ ಪಂಪನೊಲಿಲ್ದು ನಿರ್ಮಿಸಿದ ಪೊನ್ನಂ ಪ್ರೀತಿಯಿಂ ಪೇಳ್ದು ಭಕ್ತಿಯಿನಾ ರತ್ನಕವೀಶ್ವರಂ ಸಮೆದ ತತ್ಕಾವ್ಯತ್ರಯಕ್ಕಂ ಜಗತ್ತ್ರಯಮುಂ ಮುಂ ಬೆಲೆಯಾಗಿ ಪೋಯ್ತು (ಶಂಪ್ರಕೃ. ೦.೬೬). ೬. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : ರಸ ನಾಟ್ಯಂಗಂ ಗ್ರಹಣಾ ಪುಸತುಂ ನಿಧಿ ರತ್ನ ನವಮುಮೊಂಭತ್ತೆನಿಕುಂ (ಪ್ರಶಹಾ. ೯-೯). [ಸಂ.]

**ರತ್ನಕಂಕಣ** (ನಾ). ರತ್ನಖಚಿತವಾದ ಬಳೆ, –ಕಡಗ : ದೇವಿಯ ವಿಗ್ರಹಕ್ಕೆ ಭಕ್ತರೊಬ್ಬರು ರತ್ನಕಂಕಣವನ್ನು ಅರ್ಪಿಸಿದ್ದಾರೆ (ರೂಢಿ). ೨. [ಸಾಮುದ್ರಿ] ಹಸ್ತದಲ್ಲಿರುವ ಒಂದು ರೇಖೆಯ ಹೆಸರು : ಮಣಿಬಂಧದಲ್ಲಿ ರೇಖೆಯಿರಲು ರತ್ನಕಂಕಣವೆಂದು ನಾರದಾದಿ ಋಷಿಗಳು ಹೇಳುವರು (ಸಾಮುಶಾ. ೬೩-೨). [ಸಂ.]

**ರತ್ನಕಂಬಲ, ರತ್ನಕಂಬಳ** (ನಾ). ಬೆಲೆಬಾಳುವ ಕಂಬಳ ; ಅಮೂಲ್ಯವಾದ ಕಂಬಳಿ : ತನ್ನ ಬೆಳಗೆ ಬೆಳಗಾರ್ಗಿದ ರತ್ನಕಂಬಲಮನಾ ಧರಿತ್ರೀವಲ್ಲಭಂ ಮುಹುರ್ಮುಹುರಾಲೋಕನಕುತೂಹಳಚಿತ್ತನಾಗಿ ವಿಸ್ಮಯಂಬಟ್ಟು . . . ನುಡಿದಂ (ಸುಕುಮಾ. ೦೦-೦೦೫ ವ). **ರತ್ನಕಂಬಳ** : ನಿನ್ನ ರತ್ನಕಂಬಳಮಂ ಪೊದೆದು ಮನೆಗೆ ವಂದೊಡೆ (ವಡ್ಡಾರಾ. ೩೯-೭); ಬಿಳಿದಾದ ರತ್ನಕಂಬಳದಿಂದೆಯುಂ . . . ಪರಿಶೋಭಿತವಾಗಿ (ಭಾರತಾಂ. ೩೭-೨೬೩). [ಸಂ.]

**ರತ್ನಕಂಬಳ** ' ರತ್ನಕಂಬಲ ' ನೋ.

**ರತ್ನಕಂಬಳಿ** ' ರತ್ನಗಂಬಳಿ ' ನೋ.

**ರತ್ನಕನ್ನಡಿ** (ನಾ). ರತ್ನಖಚಿತವಾದ ಕನ್ನಡಿ : ಒಂದುದಿನಂ ರತ್ನಕನ್ನಡಿಯೊಳ್ ಮೊಗಮಂ ನೋಡುವಾಗಳ್ (ಧರ್ಮಾಪು. ೩೬).

[ ರತ್ನ + ಕನ್ನಡಿ$_1$ ]

**ರತ್ನಕರ್ಮ** (ನಾ). ರತ್ನಗಳನ್ನು ಕುಂದಣಿಸುವ ಕೆಲಸ : ಶಿಲಾಕರ್ಮ ರತ್ನಕರ್ಮ ಕಾಷ್ಠಕರ್ಮ ಚಿತ್ರಕರ್ಮ ಪತ್ರಕರ್ಮ ಪ್ರತಿಮಾಲಕ್ಷಣ ಸಮಸ್ತಹಸ್ತಕುಶಲತೆಯುಳ್ಳ ವಿಶ್ವಕರ್ಮನಿರ್ಮಿತಂ (ಎಕ. IV(R), ಕೃಷ್ಣರಾ. ೬೬-೧೦; 1116). [ ಸಂ. ರತ್ನಕರ್ಮನ್ ]

**ರತ್ನಕುಂಡಲ** (ನಾ). ರತ್ನದ ಕರ್ಣಾಭರಣ ; ಮಣಿಕುಂಡಲ : ಇವು ರತ್ನಕುಂಡಲಂ ಜಿತರವಿಮಂಡಳಮಿವು ತುದಳ್ಕೆ ಯೋಗ್ಯಮೆ ನಿನಗೆ (ಅಂಪು. ೦೨-೦೦೭). [ಸಂ.]

**ರತ್ನಗಂಧಿ** (ನಾ). ಕೆಂಪು ಮತ್ತು ಹಳದಿಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ : ಲಕ್ಷ್ಮಿ . . . ರತ್ನಗಂಧಿಗಿಡದ ಬುಡದಲ್ಲಿ ಉಚ್ಚೆ ಹೊಯ್ದು ಬಿಟ್ಟಿದ್ದಾಳೆ ! (ಕಾಪೂರು. ೪೪೯) ; ಛತ್ರಿಯ ಹಾಗೆ ಹರಡಿಕೊಂಡಿರುವ ಛತ್ರಿಮರದ ಕೆಂಪುಬಣ್ಣದ ಹೂ. ಪಟ್ಟಣಗಳಲ್ಲಿ ರತ್ನಗಂಧಿಯೂ ಎನ್ನುವುದು ಇದನ್ನೇ (ಕೋಕಿಲ. ೬೮).

[ ಸಂ. ರತ್ನಗಂಧೀ ]

**ರತ್ನಗಂಬಳಿ, ರತ್ನಕಂಬಳಿ** (ನಾ). = ರತ್ನಕಂಬಲ : ಒರ್ವಂ ರ್ಘುರ್ಘುವೇಗ ನಮೂಲ್ಯಮಪ್ಪ ರತ್ನಗಂಬಳಿಯಂ ಕೊಂಡು ಬಂದು (ಸುಕುಮಾ. ೦೦-೦೦೪ ವ); ಚಿನ್ನದ ಕಾಲ ಬೆಳ್ಳಿಯ ಕಾಲ ಮಂಚ ಸುವರ್ಣವಡ್ಡಣ ಸುಪ್ಪತಿಗೆ ರನ್ನವಿಟ್ಟರ ರತ್ನಗಂಬಳಿ ತಲೆಗಿಂಬ ಹೊನ್ನಾಂಬರನಿತ್ತ ಮಗಗೆ (ಪೋಹಕ. ೦೫-೦೭); ರತ್ನಗಂಬಳಿಗುಣ – ನಾನಾವರ್ಣದಿಂದ ವಿಚಿತ್ರವಾಗಿಯೂ, ಶೀತಪರವಾಗಿಯೂ ಕಂಬಳ ಶ್ರೇಷ್ಠವಾಗಿಯೂ ಇರುವುದು (ಸಕಪ್ಪ. ೬೭). **ರತ್ನಕಂಬಳಿ** : ರತ್ನಕಂಬಳಿಯಂ ಪರಿಚಾರಕಿಯರ ಕಯ್ಯೊಳಿಟ್ಟದಾಗಳ್ (ಸುಕುಮಾ. ೦೦-೦೦೮ ವ); ರತ್ನಕಂಬಳಿಗಳನ್ನು ಹಾಸುವ ಹಾಗೆ ಭೃತ್ಯರಿಗಾಜ್ಞಾಪಿಸಿ (ಕೃಚಾಕಾ. ೦೪೩). [ರತ್ನ + ಕಂಬಳಿ]

**ರತ್ನಗರ್ಭ** (ನಾ). ೧. ರತ್ನಗಳನ್ನು ತನ್ನ ಬಸಿರಿನಲ್ಲಿ ಹೊಂದಿರುವುದು : ಧರೆ ರತ್ನಗರ್ಭಮಾದುದು ಸುರರೆಲ್ಲಂ ಹರ್ಷಗರ್ಭರಾದರ್ (ಅಂಪು. ೭-೨೬). ೨. ತನ್ನ ಒಡಲಲ್ಲಿ ರತ್ನಗಳನ್ನುಳ್ಳುದು ; ಸಮುದ್ರ : ದಡದಲ್ಲಿ ಕೂತು ಮೀನವೇಷವೆಣಿಸುವವನಿಗೆ ರತ್ನಗರ್ಭದ ಮಹತ್ವ ತಿಳಿಯಲು ಹೇಗೆ ಸಾಧ್ಯ (ಜೀವಾಕ್ಯ. ೭). ೩. ಕುಬೇರ. [ಸಂ.]

**ರತ್ನಗರ್ಭೆ** (ನಾ). ಹೊಟ್ಟೆಯಲ್ಲಿ ರತ್ನಗಳನ್ನು ಹೊಂದಿರುವವಳು; ಭೂಮಿ ; ವಸುಂಧರೆ : "ಭೂಃ . . . ರತ್ನಗರ್ಭಾ, ವಸುಂಧರಾ, ಧರಾ, ಆಧಾರಾ – ಈ ೩೭ ಭೂಮಿಯ ಪೆಸರ್" (ಹಲಾಯು. ೨೬-೦): ಈ ರತ್ನಗರ್ಭೆಯೊಳ್ ಸೀತಾರತ್ನಂ ಜನಿಸಿದ ಬಗೆಯಿಂತೆಂದುಮುಸಿರ್ವೆಂ (ಅದ್ಭುತ. ೩-೩೦). [ಸಂ. ರತ್ನಗರ್ಭಾ]

**ರತ್ನತ್ರಯ** (ನಾ). ೧. [ಜೈನ] ಮೋಕ್ಷವನ್ನು ಪಡೆಯಲು ಸಾಧನವಾದ ಸಮ್ಯಕ್ ದೃಷ್ಟಿ, ಸಮ್ಯಕ್ ಜ್ಞಾನ ಮತ್ತು ಸಮ್ಯಕ್ಚಾರಿತ್ರ ಎಂಬ ಮೂರು ತತ್ತ್ವಗಳು : ನಾಗಶ್ರೀಯುಂ ಭುಕ್ತಪ್ರತ್ಯಾಖ್ಯಾನವಿಧಿಯಿಂ ರತ್ನತ್ರಯಮುಮಂ ಸಾಧಿಸಿ ದೇವನಾಗಿ ಪುಟ್ಟಿದೊಳ್ (ವಡ್ಡಾರಾ. ೨೦-೨೦) ; ಸಮ್ಯಗ್ದರ್ಶನ, ಸಮ್ಯಕ್ಜ್ಞಾನ, ಸಮ್ಯಕ್ಚಾರಿತ್ರವೆಂಬ ರತ್ನತ್ರಯವು ಮೋಕ್ಷಮಾರ್ಗವು (ಹಿಂದಗಾ. ೮೭). ೨. [ಬೌದ್ಧ] ಬುದ್ಧ, ಧರ್ಮ ಮತ್ತು ಸಂಘ ಎಂಬ ಮೂರು ಅಂಗಗಳು : ಅವನು ರತ್ನತ್ರಯಗಳಿಗೆ ಶರಣು ಬಂದದ್ದರಿಂದ, ಮುಂದೆ ಅವನಿಗೆ ಒದಗಬೇಕಾಗಿದ್ದ ಅವೀಚೀನರಕ ಸದ್ಯಕ್ಕೆ ತಪ್ಪಿತು (ಕಥಾಮು. ೪೦). ೩. ಕನ್ನಡದಲ್ಲಿ ಪ್ರಸಿದ್ಧರಾದ ಪಂಪ, ಪೊನ್ನ, ರನ್ನರೆಂಬ ಮೂರು ಜನ ಜೈನ ಕವಿಶ್ರೇಷ್ಠರು : ಕವಿಜನರೊಳ್ ರತ್ನತ್ರಯ ಪವಿತ್ರಮೆನೆ ನೆಗಳ್ದ ಪಂಪನುಂ ಪೊನ್ನಿಗನುಂ ಕವಿರತ್ನನುಮಿಾ ಮೂವರ್ ಕವಿಗಳ್ ಜಿನಸಮಯದೀಪಕರ್ (ಅಜಿತ. ೦೨-೩೯) ; ರತ್ನತ್ರಯರಲ್ಲಿ ಪೊನ್ನನು ಎರಡನೆಯವನು (ಕಸಾಶ. ೦೦೦). [ಸಂ.]

**ರತ್ನದರ್ಪಣ** (ನಾ). = ರತ್ನಕನ್ನಡಿ : ಆ ಕಪಪುಗಳ ಕಾಂತಿಯು ರತ್ನದರ್ಪಣಕಾಂತಿಯನ್ನು ಮಿಾರಿಸುತ್ತಿದ್ದಲ್ಲ! (ಶಾಂತ್ರಿ. ೨೭) [ಸಂ.]

**ರತ್ನಧೇನುದಾನ** (ನಾ). ಷೋಡಶಮಹಾದಾನಗಳಲ್ಲಿ ಒಂದು ; ರತ್ನಖಚಿತವಾದ ಹಸುವಿನ ವಿಗ್ರಹವನ್ನು ದಾನಮಾಡುವುದು : (೧) ತುಲಾಪುರುಷದಾನ . . . (೧೫) ರತ್ನಧೇನುದಾನ, (೧೬) ಮಹಾಭೂತಘಟದಾನ ; ಈ ಮೇರೆಗೆ ಷೋಡಶಮಹಾದಾನಗಳನ್ನು . . . ಮಾಡಿ (ಮಹಾಸಂ. I. ೦೦೨). [ಸಂ.]

**ರತ್ನಪಟ್ಟ** (ನಾ). ೧. ಅಧಿಕಾರಸೂಚಕವಾಗಿ ಹಣೆಗೆ ಕಟ್ಟುವ ರತ್ನಖಚಿತವಾದ ಚಿನ್ನದ ಪಟ್ಟಿ : ವರಧರ್ಮ ಕುಮಾರಕನಂ ಕರೆಯಿಸಿ ರಾಜ್ಯಾಭಿಷೇಚನಂಗೆಯ್ದು ಜಗದ್ಗುರು ಕಟ್ಟಿ ರತ್ನಪಟ್ಟಮನಿರದಿತ್ತಂ ತನ್ನ ಸರಳ ರಾಜ್ಯಶ್ರೀಯುಂ (ಶಾರಪು. ೦೬-೫೪). ೨. [ಶಿಲ್ಪಶಾ] ರಾಜರೂ ದೇವತೆ

ಗಳೂ ಧರಿಸುವ ಶಿರೋವೇಷ್ಟನಗಳಲ್ಲಿ ಒಂದು ಬಗೆ ; ಈ ಶಿರೋವೇಷ್ಟನಗಳಲ್ಲಿ ಜಟಾ,ಮೌಳಿ ಮುಂತಾದ ಹನ್ನೆರಡು ವಿಧಾನಗಳನ್ನು ಅನುಸರಿಸುತ್ತಾರೆ. ಇವುಗಳಲ್ಲಿ 'ಪಟ್ಟ' ಎಂಬುದು ಕೊನೆಯದು : ಇವುಗಳಲ್ಲಿ ಪಟ್ಟವೆಂಬುದು ಪತ್ರಪಟ್ಟ, ರತ್ನಪಟ್ಟ, ಪುಷ್ಪಪಟ್ಟ ಎಂದು ಮೂರು ಬಗೆಯಾಗಿದೆ (ಶಂಕವಿ. ೦). [ಸಂ.]

**ರತ್ನಪಡಿ** (ನಾ). ೧. ರತ್ನಗಳನ್ನು ಕುಂದಣಿಸಿದುದು : 'ರತ್ನಪಡಿನಗ' ಪರಾ. ೨. ರತ್ನಗಳನ್ನು ತೂಕ ಮಾಡಿ ಬೆಲೆಕಟ್ಟುವುದು. ೩. ರತ್ನಗಳನ್ನು ಮೆಟ್ಟಿರುವ ಒಡವೆ ಮುಂತಾದುವು : ಪಾಂಡವರು ತಮಗೆ ಹಂಚಿಕೆಯಲ್ಲಿ ಬಂದ ಒಡವೆಯಲ್ಲಿ ಚಿನ್ನ, ಬೆಳ್ಳಿ, ರತ್ನಪಡಿ ಮೊದಲಾದ ವಸ್ತುಗಳನ್ನು ಕೈಗೊಂಡು . . . ಹೋಗಿ (ಕೃವಾಅ. ೮೭) ; ರತ್ನಪಡಿಯ ಆಭರಣಗಳೂ . . . ದೊರೆತಿವೆ (ಭಾರಪ. ೩೭೯). [ರತ್ನ + ಪಡಿ$_1$? ]

**ರತ್ನಪಡಿನಗ** (ನಾ). ರತ್ನಗಳನ್ನು ಕುಂದಣಿಸಿರುವ ಒಡವೆ : ದೊಡ್ಡ ಮುತ್ತಿನ ಮೂಗುತಿ ಮುಂತಾದ ರತ್ನಪಡಿನಗಗಳನ್ನು ಅಲಮೇಲಮ್ಮನವರು ಕೊಟ್ಟು (ಮೈವಾಸ್ತು. ೦೨೬) : ದೇವರ ಉತ್ಸವಕಾಲದಲ್ಲಿ ಅಲಮೇಲಮ್ಮನವರು ತಮ್ಮ ರತ್ನಪಡಿನಗಗಳನ್ನು ಕೊಡುತ್ತಿದ್ದರು (೭ದಕ. ೨೯).

[ ರತ್ನಪಡಿ + ನಗ$_1$ ]

**ರತ್ನಪಡಿವರ್ತಕ** (ನಾ). ರತ್ನಾಭರಣಗಳ ವ್ಯಾಪಾರಿ : ಈ ಪಟ್ಟಣದಲ್ಲಿ ವಿಷ್ಣುದಾಸನೆಂಬ ರತ್ನಪಡಿವರ್ತಕನಿದ್ದಾನೆ (ರಾಕ್ಷಮು. ೯೪).

[ ರತ್ನಪಡಿ + ವರ್ತಕ ]

**ರತ್ನಪಡಿವ್ಯಾಪಾರ** (ನಾ). ರತ್ನದ ಆಭರಣಗಳನ್ನು ಮಾರುವುದು ; ರತ್ನಖಚಿತವಾದ ಒಡವೆಗಳ ಮಾರಾಟ : ಅವರ ವಂಶದವರು ತಲತಲಾಂತರದಿಂದ ರತ್ನಪಡಿವ್ಯಾಪಾರ ಮಾಡುತ್ತಿದ್ದಾರೆ (ರಾತಿ).

[ ರತ್ನಪಡಿ + ವ್ಯಾಪಾರ ]

**ರತ್ನಪಡಿವ್ಯಾಪಾರಿ** (ನಾ). = ರತ್ನಪಡಿವರ್ತಕ : ಮುತ್ತಿನ ಗಲ್ಲಿ ರತ್ನಪಡಿವ್ಯಾಪಾರಿ ವರದಪ್ಪನಾಯಕನಿಗೆ ಅಪರೂಪಕ್ಕೊಂದು ಪುತ್ರರತ್ನ ಜನಿಸಿದೆ (ಹೇಮಕೂ. ೭) ; ರಾಜರ ಮೇಲೆ ರಾಜರು ರತ್ನಪಡಿವ್ಯಾಪಾರಿಗಳಾದ ವೈಶ್ಯರಂತೆ ಬಗೆಬಗೆಯ ರತ್ನಗಳನ್ನು ತಂದು ತಂದು ಕಾಣಿಕೆ ಒಪ್ಪಿಸಿದರು (ವನಭಾ. ೯೭). [ ರತ್ನಪಡಿ + ವ್ಯಾಪಾರಿ ]

**ರತ್ನಪಡಿಸಿಕೆ** (ನಾ). ಒಂದು ಬಗೆಯ ರತ್ನದ ಆಭರಣ (?) : ಚಾಮರಗಳು ಅಂದಿಗೆಗಳು ರತ್ನಪಡಿಸಿಕೆ ಮೊದಲಾದ ಭೂಷಣಗಳಿಂದ ಭೂಷಿತವಾದ ವೃಷಭವಾಗಿ (ಶಿವಶ. ೨೦೩-೦೪). [ < ರತ್ನಪಡಿ ]

**ರತ್ನಪರೀಕ್ಷಕ** (ನಾ). ರತ್ನಗಳ ಗುಣದೋಷಗಳನ್ನು ಕಂಡುಹಿಡಿಯುವವನು : " ಬಗೆಯ ಮಾಣಿಕಚಟ್ಟನೆಂಬ ರತ್ನಪರೀಕ್ಷಕಗೆ . . . " (ಅಪ್ಪಕೃ. ೩೪) ; ರತ್ನಪರೀಕ್ಷಕ ತಾಂ ಕೃತಿರತ್ನಪರೀಕ್ಷಕನೆನೆಂದು ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇಟಿರ್ ಪರೀಕ್ಷಿಪಂಗೆಂಟಿರ್ದಯೇ (ಗದಾಯು. ೦-೪೪). [ಸಂ.]

**ರತ್ನಪರೀಕ್ಷೆ** (ನಾ). ಚೌಷಷ್ಟಿಕಲೆಗಳಲ್ಲಿ ಒಂದು ; ರತ್ನಗಳ ಗುಣಾವಗುಣಗಳನ್ನು ಕಂಡುಹಿಡಿಯುವ ವಿದ್ಯೆ : ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕಾಯುರ್ವೇದ ಧನುರ್ವೇದ ಹಸ್ತ್ಯಶ್ವತಂತ್ರ ರತ್ನಪರೀಕ್ಷೆಗಳುಮಂ . . . ಉಪದೇಶಂಗೆಯ್ದಂ (ಆದಿಪು. ೬-೩೦ ವ) ; ರತ್ನಪರೀಕ್ಷೆ, ಅಶ್ವಪರೀಕ್ಷೆ . . . ವೈದ್ಯ ಮೊದಲಾದ ಅರವತ್ತುನಾಲ್ಕುಕಲೆಗಳಿಗೂ ಆಗಮಶಾಸ್ತ್ರವು ಆಶ್ರಯವಾಗಿದೆ (ಶಾಂಠ. ೭೦). [ ಸಂ. ರತ್ನಪರೀಕ್ಷಾ ]

**ರತ್ನಪ್ರಭೆ** (ನಾ). ೧. ಮಣಿಯ ಕಾಂತಿ, —ಪ್ರಕಾಶ. ೨. ಭೂಮಿ. ೩. [ಜೈನ]ಒಂದು ನರಕದ ಹೆಸರು : ನೀಂ ನಿಜಾಯುರವಸಾನದೊಳ್ ರತ್ನಪ್ರಭೆಯೆಂಬ ಮೊದಲ ನರಕದ ಪಡಿಮೂಜುಮಿಂದ್ರಕಂಗಳೊಳಗೆ . . . ಪುಟ್ಟಿದೈ (ಶಾಂತಿಪು. ೭-೮೩ ವ). : ಅಧೋಲೋಕದಲ್ಲಿ (೧) ರತ್ನಪ್ರಭೆ . . . (೭) ಮಹಾತಮಃಪ್ರಭೆ ಎಂದು ಏಳು ನರಕಗಳು ಇರುತ್ತವೆ (ಜೈನಧ. ೪೪೭).

[ ಸಂ. ರತ್ನಪ್ರಭಾ ]

**ರತ್ನಮತಲ್ಲಿಕೆ** (ನಾ). ರತ್ನಗಳಲ್ಲಿ ಶ್ರೇಷ್ಠವಾದುದು : ನಿಲ್ಲೆನುತ ನಿಲಿ ನಾಕ್ಷೈದಿದನುಲ್ಲಸಿತತಚ್ಚೂಡರತ್ನಮತಲ್ಲಿಕಾಗ್ರಹಣೈಕತತ್ಪರನಾಗಿ ಬೆಂಬಿಡದೆ (ವಿಶಾಗ. ೧೦-೨೯-೩೮). [ ಸಂ. ರತ್ನಮತಲ್ಲಿಕಾ ]

**ರತ್ನಮಾಲೆ** (ನಾ). ರತ್ನಗಳಿಂದ ಕೂಡಿದ ಸರ ; ಮಣಿಮಾಲೆ.

[ ಸಂ. ರತ್ನಮಾಲಾ ]

**ರತ್ನಮುದ್ರಿಕೆ** (ನಾ). ರತ್ನಖಚಿತವಾದ ಉಂಗುರ : ತನ್ನ ಬೆರಲೊಳಿರ್ದನರ್ಘ್ಯಮಪ್ಪ ರತ್ನಮುದ್ರಿಕೆಯಂ ಪಿಡಿದಿರಿಮೊಂದು ಕೊಟ್ಟಂ (ಸುಕುಮಾ. ೩-೩ ವ) ; ಸರಳವಾದ ಬೆರಳುಗಳಲ್ಲಿ ರತ್ನಮುದ್ರಿಕೆಯು ಕಂಗೊಳಿಸುತ್ತದೆ (ಮುಂಜಾಕ. ೨೦). [ ಸಂ. ರತ್ನಮುದ್ರಿಕಾ ]

**ರತ್ನಾವುಡ** (ನಾ). ರತ್ನಗಳನ್ನು ಅಳವಡಿಸಿದ ಬಟ್ಟೆ : ಸಿಂಗಾಡಿಗಳ ಸರಳ ಹೊದೆಯ ಮೊಗರಂಬುಗಳ ಪೊಂಗೆಜ್ಜೆಗಳ ರತ್ನಾವುಡದ . . . ರಾಪುತರ್ ನಡೆಗೊಂಡರು (ಚೆಬಸ. ೪೦-೫೦). [ರತ್ನ + ಪಾವುಡ$_1$ ]

**ರತ್ನಶಿಲೆ** (ನಾ). ರತ್ನದ (ದೊಡ್ಡ) ಹರಳು : " ರತ್ನಶಿಲೆಯೆನಲ್ ಮಣಿಶಿಲೆಯು " (ಮಂಗರಾ. ೩೦-೭) ; ಚಿಮ್ಮಿದುದು ಜೊಂಕೆಮಾರಿಯೊಂದು . . . ತಿರಿಕವಣೆಯಿಂ ಪಳಂಚುವ ರತ್ನಶಿಲೆಯಂತೆ (ಚತ್ರಾಂಗ. ೩-೭೯).

[ ಸಂ. ರತ್ನಶಿಲಾ ]

**ರತ್ನಸಂಬಳಿಗೆ** (ನಾ). ರತ್ನಖಚಿತವಾದ ಕರಂಡಕ : ಧವಳಸರೋಜಾಕ್ಷ ತಾನಲ್ಲದನ್ಯರೊಳ್ ಜವಳಾಗದಂತೆ ವ್ಯಸಿಕದ ಕವಳವ ಕುಡುವಂತೆ ರತ್ನಸಂಬಳಿಗೆದಾಳ್ದವಳರ್ವಳತಿಸಮ್ಮದದಿ (ಮೋಹತ. ೪-೭).

[ ರತ್ನ + ಸಂಬಳಿಗೆ ]

**ರತ್ನಸಾನು** (ನಾ). ಮೇರುಪರ್ವತ : " ಮೇರುಃ . . . ರತ್ನಸಾನುಃ, ಸುರಾಲಯಃ — ಇ ಮೇರುಪರ್ವತದ ಹೆಸರುಗಳು " (ಸಿದ್ಧಾಂತಿ. ೨೨).

[ಸಂ.]

**ರತ್ನಾಂಗುಳೀಯ** (ನಾ). = ರತ್ನಮುದ್ರಿಕೆ : ಸುಬಳಮಹೀನಾಥನ ಕಯ್ಯ ಬೆರಲ ರತ್ನಾಂಗುಳೀಯಮುಮಂ ಮಜಿಮೆಯೊಳತ್ತ ಬಿಸುಟ್ಟು (ಸುಕುಮಾ. ೩-೦೨). [ ಸಂ. ರತ್ನಾಂಗುಲೀಯ ]

**ರತ್ನಾಂಜುಳಿ** (ನಾ). ಒಂದು ಬೊಗಸೆ ತುಂಬುವಷ್ಟು ರತ್ನ : ನೆತ್ತರ್ ವೆರಸಿ ಪರೆದ ಮುತ್ತುಗಳು ತನ್ನ ಬರವಿಂಗೆ ವನದೇವತೆಯಿಟ್ಟ ರತ್ನಾಂಜುಳಿಗಳಂತಿರೆ ಕಂಡು ಕಂಡು ಹಾರೈಸುತ್ತಂ (ಕಂಬರ. ೦೬-೨೩).

[<ಸಂ. ರತ್ನಾಂಜಲಿ]

**ರತ್ನಾಕರ** (ನಾ). ರತ್ನಗಳಿಗೆ ಆಶ್ರಯವಾದುದು ; ಸಮುದ್ರ : " ರತ್ನಾಕರಃ . . . ಸಮುದ್ರಃ — ಈ ೧೨ ಸಮುದ್ರಂ " (ಹಲಾಯು. ೦೦೭-೩೦) ; ಈ ರತ್ನಾಕರದೊಳ್ ಪುತ್ರಿಕೆಯೆನೆ ಬಟ್ದಳಿಂತು ಬಾಬ್ದುದೆ ಚೋದ್ಯಂ (ಕವಿರಾ. ೨ ೩೭) ; ಜಗತೀಪಲಯುದಮಲಸೌಭಾಗ್ಯರತ್ನಾಕರಂ ಪೆರ್ಚಿಸಿಂ ಮೇರೆವರಿಯೆ (ಜೈಮಿಭಾ. ೦-೧). [ಸಂ.]

**ರತ್ನಾತಪ** (ನಾ). ೧. ರತ್ನದ ಕಾಂತಿ ; ರತ್ನಪ್ರಭೆ. ೨. ರತ್ನಕಾಂತಿಯಿಂದ ಶೋಭಿಸುವಂಥದು : ಮಣಿಪ್ರಭಾಪ್ರೇಂಖಿತ ರಥ್ಯಾಮಂಡನಮಂ ಕಂಡಂ ಶ್ರೀಮಂಟಪಮಂ ವಿಚಿತ್ರರತ್ನಾತಪಮಂ (ಕಾದಂಪೂ. ೦೧೦೨).

[ಸಂ.]

**ರತ್ನಾರತಿ** (ನಾ). ತಟ್ಟೆಯಲ್ಲಿ ರತ್ನಗಳನ್ನು ತುಂಬಿ ಮಾಡುವ ಆರತಿ : ತುಳುಕಿದವು ರತ್ನಾರತಿಯ ಬೆಳಕುಗಳು (ಕುಮಾರರಾ. ಸಂ೩. ಪಂ. ೨೯೭) ; ಪಸುಗರ್ಪಳ ಹರಿವಾಣಗಳೊಳು ತುಂಬಿ ರಂಜಿಸುವ ರತ್ನಾರತಿವೆಳಗ ನಿಸರಿ ಪಟ್ಟಾವಳಿ ಚಿತ್ರವಸ್ತ್ರವ ನಿವಳಿಸಿದರಚ್ಯುತನಂಘ್ರಿಗಳಲಿ (ಮೋಹತ. ೪೨-೨೭).

[ ರತ್ನ + ಆರತಿ$_1$ ]

**ರತ್ನಾವಳಿ** (ನಾ). ೧. ಮುತ್ತಿನ ಹಾರ. ೨. ಶ್ರೀ ಹರ್ಷಕವಿಯು ರಚಿಸಿದ ಒಂದು ಪ್ರಸಿದ್ಧ ಸಂಸ್ಕೃತನಾಟಕ. ೩. [ಜೈನ] ಮೂವತ್ತು ಉಪವಾಸಗಳು ಮತ್ತು ಹತ್ತು ಪಾರಣೆಗಳನ್ನೊಳಗೊಂಡ ಒಂದು ವ್ರತ : ಪದ್ಮಾವತಿ ಎಂಬ ಕಂತಿಯರ ಬಳಿಯೊಳ್ ರತ್ನಾವಳಿಯೆಂಬ ವ್ರತವಂ ಮಾಡಿ ಆಯುರಂತ್ಯದೊಳ್ ತನುವಂ ತ್ಯಜಿಸಿ (ಧರ್ಮಾ. ೬-೪೦). [ಸಂ. ರತ್ನಾವಲೀ]

**ರತ್ನಾವಳಿತಪ** (ನಾ). = ರತ್ನಾವಳಿ ೩ : ಪ್ರಭಾವತಿಯುಂ ಪದ್ಮಾವತ್ಯಾರ್ಯಿಕಾ ಪಾದಮೂಲದೊಳ್ ಪಾಲಿಸಿದ ರತ್ನಾವಳಿತಪದೊಳಚ್ಯುತ ಕಲ್ಪದೊಳ್ ಪ್ರತೀಂದ್ರಪದವಿಯಂ ಪಡೆದಳ್ (ಆದಿಪು. ೩-೩೬ ವ) ; ಪ್ರಭಾವತಿಯುಂ . . . ರತ್ನಾವಳಿತಪದೊಳ್ನೆಗಟ್ದು ಅಚ್ಯುತಕಲ್ಪದೊಳು ಪ್ರತೀಂದ್ರನಾದೋಂ (ಶಾಂಪು. ೨೦). [< ಸಂ. ರತ್ನಾವಲೀತಪ]

**ರತ್ನಿ** (ನಾ). ಉದ್ದವನ್ನು ಅಳೆಯುವ ಒಂದು ಮಾನ ; ಮೊಳಕೈಯ ತುದಿಯಿಂದ ಮುಚ್ಚಿದ ಅಂಗೈವರೆಗಿನ ಅಳತೆ : "ಒಡಿಕೆಬ್ಬಿದ ಮೊಟನಂ ರತ್ನಿಯೆಂಬುದು" (ಶಬ್ದಮ. ೬೬-೩೬೩); ದ್ವಾವಿಂಶತಿಸಾಗರೋಪಮಾಯುಷ್ಯನುಂ ತ್ರಿರತ್ನಿಪ್ರಮಾಣೋತ್ಸೇಧನುಂ . . . ಆಗಿ (ಶಾಂಪುರಾ. ೩೬೩); ಅಲ್ಲಿಯ ದಿವಿಜರೆಲ್ಲಂ ಪಂಚರತ್ನಿಪ್ರಮಾಣರುಂ . . . ಅಪ್ಸರ್ (ಸುಕುಮಾ. ೦೦-೬೩ ವ). 'ಅರತ್ನಿ' ಹೋ. [ಸಂ.]

**ರತ್ಯಂಗ** (ನಾ). ಜನನೇಂದ್ರಿಯ ; ಗುಹ್ಯಾಂಗ. [ಸಂ.]

**ರತ್ಯಕ್ಷಿತಿ** (ನಾ). ಒಂದು ಸಂವತ್ಸರದ ಹೆಸರು; ರಕ್ತಾಕ್ಷಿ : ರತ್ಯಕ್ಷಿತಿಯಮ್ಮ ಪರಿಷಾ ಪ್ರವರ್ತಿಸೆ (ಕಶಾಶಾ. XX, ೦೩-೪; 904). [P ಇದು 'ರಕ್ತಾಕ್ಷಿ' ಎಂಬುದರ ಅಪಲಿಖಿತ]

**ರಥ** (ನಾ). ೧. ಬಂಡಿ ; ವಾಹನ : "ಅನಃ, ಶತಾಂಗಃ, ಶಕಟಃ . . . ಕೂಬರೀ – ಈ ೯ ರಥಂ" (ಹಲಾಯು. ೬೩-೨೯೦). ೨. ಉತ್ಸವದಲ್ಲಿ ದೇವತಾವಿಗ್ರಹವನ್ನು ಕೂರಿಸಿ ಮೆರವಣಿಗೆ ಮಾಡುವ ಬಂಡಿ ; ತೇರು : ರಥ ಎಳೆದು ಪುಣ್ಯ ಪಡೆಯಲಿಕ್ಕೆ ಜನರು ಏಳುವುದು ಬೀಳುವುದನ್ನು ಕೂಡ ಲಕ್ಷಿಸದೆ . . . ರಥದ ಕಡೆಗೆ ಧಾವಿಸಿದರು (ಹೊಸಕ್ಕ. ೨೦೬) ; ಈ ತೊಟ್ಟಿಲಿನ ಭಾರ ತಡೆಯಲಿಕ್ಕೆ ಕೋಟೇಶ್ವರದ ರಥದ ಮಿಣಿಯೇ ಬೇಕು (ಮರಮ. ೧೨೦). 'ರಥೋತ್ಸವ' ಪರಾ. ೩. ಒಂದು ಬಗೆಯ ಯುದ್ಧಸಾಧನ ; ಚತುರಂಗಸೈನ್ಯದಲ್ಲಿ ಒಂದು: ಪೊಸಮುಸೆಯುಂಬುಗಳ್ ದೆಸೆಗಳಂ ಮುಸುಳ್ಚನ್ನೆಗಮೆಯ್ದೆ ಪಾಯೆ ಪಾಯಿಸುವ ರಥಂಗಳ್ (ಶಂಕರಾ. ೦೦-೬೩) ; ರಥಮಿಲ್ಲದೆಯುಂ ಜಂಘಾಬಳದಿಂದೆ . . . ಪೃಥಿವೀಪತಿ ತಾನೆ ಕಾದಲುದ್ಯತನಾದಂ (ಗದಾಯು. ೭-೬೬) ; ರಥ ಮುಚ್ಚಿದುವೈನೂಱು ತತ್ಪ್ರರಥಿಗಳಳಿದುದು ನೂಱು (ಕುವ್ಯಾಗ. ೦-೦೩). ೪. ಒಡಲು ; ದೇಹ. ೫. ದೇಹದ ಒಂದು ಅಂಗ, – ಭಾಗ. ೬. ಆನಂದ ; ಸಂತೋಷ. ೭. [ಕಾವ್ಯಮೀ] ಚಿತ್ರಕಾವ್ಯಬಂಧಗಳಲ್ಲಿ ಒಂದು ; ರಥದ ಆಕಾರದಲ್ಲಿ ಬರೆಯುವ ಒಂದು ಪದ್ಯಬಂಧ: ಶರಶೂಲಚಾಪಚಕ್ರಾಸಿರೂಪವಿಭ್ರ ರಥ ತುರಂಗಪದಗತಪಾತಂ ಮುರಜಂ ಗೋಮೂತ್ರಿಕೆ ಪುಷ್ಕರಮರ್ಧಭ್ರಮಣ ಸರ್ವತೋಭದ್ರಂಗಳ್ (ಕಾವ್ಯಾವ. ೩೬೯). ೮. [ವಾಸ್ತು] ಶಿಲ್ಪದಲ್ಲಿ ಒಂದು ಬಗೆ ; ರಥದ ಆಕಾರದಲ್ಲಿ ಕಟ್ಟಿದ ಒಂದು ಕಟ್ಟಡ : ಒಂದೇ ಬಂಡೆಯಲ್ಲಿ ಕೊರೆದ ದೇವಾಲಯಗಳು. ಇವುಗಳನ್ನು 'ರಥ'ವೆಂದು ಕರೆಯುವುದುಂಟು (ಭಾರದ. ೯೬೬). ೯. [ಗಣಿತ] ಇಪ್ಪತ್ತೊಂಬತ್ತು ಅಂಕಿಗಳಿರುವ ಒಂದು ದೊಡ್ಡ ಸಂಖ್ಯೆ : ಏಕ್ಕಂ, ದಾಹಂ . . . ರಥ, ಮಹಾರಥ . . . ಪರಿಮಿತ, ಮಹಾಪರಿಮಿತ ಈ ೪೦ ಸ್ಥಾನದ ಉಗ್ಗಡಣೆ (ಪ್ರವಕಾ. ೮-೨೬). [ಸಂ.]

**ರಥಂತರ** (ನಾ). ಶಿವನನ್ನು ಸ್ತೋತ್ರ ಮಾಡುವ ಸಾಮವೇದದ ಒಂದು ಭಾಗ : ಚತುರ್ಮುಖದಿಂ ರುದ್ರಸೂಕ್ತ ರಥಂತರಾದಿ ಮಂತ್ರವನೋದುವಬ್ಜಭವನಿಂ. . . ಪೆಂಪನಾಳ್ದ (ಶಂಕರಾ. ೦-೬೯ ವ) ; ಆತನು ನಸುನಕ್ಕು, ರಥಂತರಸಾಮವನ್ನು ಹಾಡುತ್ತಾನೆ (ವಚಿದಾ. II, ೦೧೬೦). [ಸಂ.]

**ರಥಕಟ್ಯೆ** (ನಾ). ರಥಗಳ ಸಮೂಹ : "ರಥ[ಸಮುದಾಯಂ] ರಥ್ಯಾರಥಕಟ್ಯಾಭಿಖ್ಯೆಮೆಂದು ತಜ್ಞಸಲ್ಲಿಖಿಂ" (ವಸ್ತುಕೋ. ೯೭-೪೦). [ಸಂ. ರಥಕಟ್ಯಾ]

**ರಥಕಡ್ಯ** (ನಾ). = ರಥಕಟ್ಯೆ: "ರಥ್ಯಾ, ರಥಕಡ್ಯಾ– ೨ ರಥವ್ರಜಿ. ರಥಸಮೂಹಕ್ಕೆ ಹೆಸರುಗಳು" (ಸಿದ್ಧಾಂತಿ. ೨೩೩) ; ವಾಜಿವರ್ಗವ ಪರ್ವಿಂ ರಥಕಡ್ಯದೊಡ್ಡಣದಿನೊಳ್ವಾಳೋಳಿಯಿಂ . . . ಸೇನಾಚಕ್ರಮೇನೊಪ್ಪಿತೋ (ಕೃಷ್ಣಕ. ೦೪-೯೩); ಬಂದನು . . . ನೃಪನು ಮುಂದಿ ಕುದುರೆ ಗಜ ರಥಕಡ್ಯಗಳ ಸಂದಣಿಯೊಳು ಸೊಬಗಿಂದ (ಗೋಮಟೇ. ೦೦-೦೩). [ಸಂ. ರಥಕಡ್ಯಾ]

**ರಥಕಲ್ಪ** (ನಾ). ರಥವನ್ನು ನಡೆಸುವ ಸಾಮರ್ಥ್ಯ : ರಥಕಲ್ಪಮೆಂಬುದು ಶಲ್ಯಂಗೊಡವುಟ್ಟಿದುದು (ಶಂಕರಾ. ೦೨-೦೦೩ ವ). [ಸಂ.]

**ರಥಕಾರ** (ನಾ). ೧. ರಥವನ್ನು ಮಾಡುವವನು ; ಬಡಗಿ : "ತ್ವಷ್ಟಾ. . . ರಥಕಾರಃ, ವರ್ಧಕೀ – ಈ ೫ ಬಡಗಿ" (ಹಲಾಯು. ೯೬-೯೩೩). ೨. ರಥವನ್ನು ನಡೆಸುವವನು; ಸಾರಥಿ : ನಡೆಸುವ ರಥಕಾರ ಪೋಗಲಾ ರಥ ವಾಯೆಡೆಯೊಳು ನಿಲುವಂತೆ (ಶಂಕ್ರಸಾಂ. ೨೨-೦೨). [ಸಂ.]

**ರಥಗುಪ್ತಿ** (ನಾ). ಯುದ್ಧಸಮಯದಲ್ಲಿ ಸಂಘಟನೆಯಿಂದ ತಪ್ಪಿಸಿಕೊಳ್ಳಲು ರಥದ ಸುತ್ತಲೂ ರಚಿಸುವ ಲೋಹ ಅಥವಾ ಮರದ ಕಟಕಟೆ : "ರಥಗುಪ್ತಿ, ವರೂಥ ಎಂದು ಥೂಳುಮಾಟಿ, ಕಂಬುಗೆ ಎಂದೂ ಎಂಬರು" (ನಾಚರಾ. ೬). [ಸಂ.]

**ರಥಗೋಪ** (ನಾ). – ರಥಗುಪ್ತಿ : "ಕಟ್ಟುವಂಜರಂ ರಥಗೋಪಮಕ್ಕು" (ಮಂಗರಾ. ೬೪-೨೩). [ಸಂ.]

**ರಥಗೋಪನ** (ನಾ). = ರಥಗುಪ್ತಿ : "ವರೂಥಃ ರಥಗೋಪನಂ–ಈ ೨ ರಥದ ಕಟ್ಟುವಂಜರ" (ಹಲಾಯು. ೬೯-೨೯೩). [ಸಂ.]

**ರಥಚಕ್ರ** (ನಾ). ೧. ರಥದ ಚಕ್ರ ; ಬಂಡಿಯ ಗಾಲಿ : ಧನಾದಿ ಸಂಪತ್ತುಗಳು ರಥಚಕ್ರವಂತೆ ಒಂದೆಡೆ ಸ್ಥಿರವಾಗಿ ನಿಲ್ಲದೆ ಒಬ್ಬನಿಂದ ಮತ್ತೊಬ್ಬನಿಗೆ ಹೋಗಿ ಸೇರುತ್ತದೆ (ಜುಕ್ಕಾರ. ೩೦೬). ೨. [ನಾಟ್ಯ] ಒಂದು ಬಗೆಯ ಭೌಮಚಾರಿ ; P "ಚತುರಸ್ರಸ್ಥಾನಕದಿಂದ . . . ನಿಂತುಕೊಂಡು ಮುಂದಕ್ಕೂ ಹಿಂದಕ್ಕೂ ಚಲಿಸುವುದು"(ಲಾಸ್ಯರಂ. ೩೨೦ ಗದ್ಯಸಂವಾದ) : ಎಸೆವ ರಥಚಕ್ರಮೊಳ್ಪಿಂ ಮಿಸುಪ ಪರಾವೃತ್ತತಲಮುಮಂ ನೂಪುರಮುಮಂ ಸಸಿಮುಖಿ ತಿರ್ಯಙ್ಮುಖಮುಮಂ ಪಸರಿಸುವ ಮರುಳಮೆಂಬ್ದ ಕರಿಹಸ್ತಾಖ್ಯಂ (ಲಾಸ್ಯರಂ. ೬-೮). [ಸಂ.]

**ರಥಚರಣ** (ನಾ). ೧. ರಥದ ಗಾಲಿ. ೨. ಚಕ್ರಾಯುಧ : 'ರಥಚರಣಪಾಣಿ' ಪರಾ. ೩. ಚಕ್ರವಾಕ ಪಕ್ಷಿ ; ರಥಾಂಗ : ಸುರಪತಿಯ ಬೆಳ್ಗೊಡೆಯ ರಥಚರಣದ . . . ಪೆಸರ ಖಗಕುಳಂ ಕರಮೆಸೆಗುಂ (ರಾಜಶೇ. ೫-೬೦). [ಸಂ.]

**ರಥಚರಣಪಾಣಿ** (ನಾ). ಚಕ್ರಾಯುಧವನ್ನು ಹಿಡಿದಿರುವವನು ; ವಿಷ್ಣು : ರಥಚರಣಪಾಣಿ ಬಲಮುಂ ಮಥಿಯಿಸೆ ಜಂಭಾರಿಗಾಯ್ತು ಗೀರ್ವಾಣಪತಿ (ಜಗಪ.೦೩-೮೦). [ಸಂ.]

**ರಥಚೋದಕ** (ನಾ). ರಥವನ್ನು ನಡೆಸುವವನು ; ಸಾರಥಿ : "ರಥಚೋದಕನಕ್ಕುಂ ಸಾರಥಿ" (ವಸ್ತುಕೋ. ೯೭-೪೦) ; ರಥಂಗಳೊಂದೆಸೆಯೊಳುರುಳ್ದು ಕೆಡೆದುವು ನೋಡಾ ರಥಚೋದಕರೊಂದೆಸೆಯೊಳ್ ಪೃಥಾಸುತ ಪ್ರಥಿತಪೃಥುಗದಾಪ್ರಹರಣೆಯಿಂ (ಗದಾಯು. ೩-೬). [ಸಂ.]

**ರಥದ್ರು** (ನಾ). ಒಂದು ಬಗೆಯ ಮರ ; ಹುಲಿಗಿಲು ; ಹೊಂಗೆ : "ತಿನಿಶಃ, ಸ್ಯಂದನಃ, ನೇಮಿಃ, ರಥದ್ರುಃ . . . ಚಿತ್ರಕೃತ್ –೭ ಹುಲಿಗಿಲ ಮರದ ಪೆಸರುಗಳು" (ಸಿದ್ಧಾಂತಿ. ೦೦೬). [ಸಂ.]

**ರಥದ್ರುಮ** (ನಾ). = ರಥದ್ರು : "ತಿನಿಶಂ ನೇಮಿ ತಾಂ ರಥದ್ರುಮ ಪಕ್ಕುಂ" (ಅಭಿ.ಕೋ. ೩೩-೧೩). [ಸಂ.]

**ರಥನೇಮಿ** (ನಾ). ರಥದ ಚಕ್ರದ ಹೊರಸುತ್ತು : ಉಲಿಯುವ ರಥನೇಮಿಗಳುಂ (ಜಾತಿಸಂ. ೦೦೨-೦೭೩). [ಸಂ.]

**ರಥಬೀದಿ** (ನಾ). ದೇವರ ವಿಗ್ರಹವಿರುವ ರಥವನ್ನು ಮೆರವಣಿಗೆಯಲ್ಲಿ ಕೊಂಡೊಯ್ಯುವ ದೊಡ್ಡ ರಸ್ತೆ ; ತೇರುಬೀದಿ : ಗುಡಿಯ ಮುಂದೆಯೇ ರಥಬೀದಿ (ದೇವಶಿ. ೪೯). [ಸಂ.]

**ರಥಯುದ್ಧ** (ನಾ). ಉಭಯಪಕ್ಷದವರೂ ರಥದಲ್ಲಿದ್ದುಕೊಂಡು ಮಾಡುವ ಕಾಳಗ : ನಿಮ್ಮಲ್ಲಿ ಯಾರಾದರೂ ನನ್ನೊಡನೆ ನೆಲದ ಮೇಲೆ ನಿಂತು ಗದಾಯುದ್ಧ ಮಾಡಲಿ . . . ರಥಯುದ್ಧಗಳು ಹಿಂದೆ ಎಷ್ಟೋ ಆದುವಲ್ಲ ! (ಕಥಾ. ೩೦೭). [ಸಂ.]

**ರಥರೇಣು** (ನಾ). ಕ್ಷೇತ್ರಪ್ರಮಾಣದಲ್ಲಿ ಒಂದು ಅಳತೆ : ಎಂಟು ತ್ರುಟಿ ರೇಣುಗಳಿಂದ ಒಂದು ತ್ರಸರೇಣು, ಎಂಟು ತ್ರಸರೇಣುಗಳಿಂದ ಒಂದು ರಥರೇಣು (ಕೃಷಿ. ೩೦೭). [ಸಂ.]

**ರಥವಂಗಡ** (ನಾ). ರಥಗಳ ಸಮೂಹ : ಬಿಡದೆ ನೂಱೆಂಭತ್ತು ಪರಿಯಂತರದಿ ಸಾರಥಿಸಹಿತ ರಥವಂಗಡವ ವಿಂಗಡಿಸಿದನು ಸಂಗರರಂಗ ಮಧ್ಯದಲಿ (ಕೊರಾ. ೩-೬-೪೬). [ರಥ + ವಂಗಡ]

**ರಥಪಕ್ಕಿ** (ನಾ). ಚಕ್ರವಾಕಪಕ್ಷಿ : ಬಿಸರುಹ ರಥಪಕ್ಕಿ ತಸ್ಕರ ಜಾರರ್ಗೆ ಬಿಸವಾದುದು ಶಶಿಕಿರಣ (ಕೋಟಿಶ. ೦೬-೩೨). [ರಥ + ಪಕ್ಕಿ]

**ರಥವಾಜಿ** (ನಾ). ರಥಕ್ಕೆ ಹೂಡುವ ಕುದುರೆ ; ತೇರಿನ ಅಶ್ವ : ರಥವಾಜಿಗಳೊಂದೆಸೆಯೊಳ್ ರಥಂಗಳೊಂದೆಸೆಯೊಳುರುಳ್ದು ಕೆಡೆದುವು (ಗದಾಯು. ೬-೬) ; ಆನೆಗಳಜಿಸಿ ಕೆಡೆದವು ಮುಗ್ಗಿದವು ರಥವಾಜಿಗಳು (ಕುಮಾ.ಕ. ೧೬-೨). [ಸಂ. ರಥವಾಜಿನ್]

**ರಥವಾಹಕ** (ನಾ). ರಥವನ್ನು ಎಳೆಯುವಂಥದು ; ಕುದುರೆ : " ರಥದೊಳ್ ಪೂಡುವ ಹಯಮದು ರಥವಾಹಕ ರಥ್ಯ ನಾಮಧೇಯಂ" (ಅಭಿ.ಕೋ. ೬೬-೨೬). [ಸಂ.]

**ರಥಶಾಲೆ** (ನಾ). ರಥವನ್ನು ನಿಲ್ಲಿಸುವ ಶಾಲೆ ; ತೇರುಮನೆ. [ಸಂ. ರಥಶಾಲಾ]

**ರಥಸಪ್ತಮಿ** (ನಾ). ಮಾಘಶುದ್ಧಸಪ್ತಮಿ ಮತ್ತು ಆ ದಿನದಂದು ಮಾಡುವ ಸೂರ್ಯಪೂಜೆ : ರಥಸಪ್ತಮಿಯ ಮಹತ್ತ್ವವನ್ನು ಶ್ರೀಕೃಷ್ಣ ಧರ್ಮರಾಜನಿಗೆ ಹೇಳಿದಂತೆ ಪೌರಾಣಿಕ ಕಥೆಯಿದೆ (ಭಾಹಬ್ಬ. ೨೬೦). [ಸಂ. ರಥಸಪ್ತಮೀ]

**ರಥಹಯ** (ನಾ). = ರಥವಾಜಿ : "ವಾಹನಂ ಧೋರಣಂ ರಥಹಯಂ" (ಮಂಗರಾ. ೬೩-೨೩) ; ರಥಹಯಮಂ ನಾಲ್ಕುಂಬಿರಿ ರಥಮಂ ಮೂಱಸ್ತ್ರದಿಂದೆರಬ್ಬಿಣೆಯುಂ ಸಾರಥಿಯಂ ಕೆಡೆಯಲ್ಕೆಚ್ಚಂ (ಆಗಿ. ೭-೯೦). [ಸಂ.]

**ರಥಾಂಗ** (ನಾ). ೧. ರಥದ ಯಾವುದಾದರೂ ಒಂದು ಭಾಗ. ೨. ರಥದ ಚಕ್ರ ; ಬಂಡಿಯ ಗಾಲಿ : "ಚಕ್ರಂ, ರಥಾಂಗಂ – ಈ ೨ ಗಾಲಿ" (ಹಲಾಯು. ೬೩-೨೯೩). ೩. ಚಕ್ರಾಯುಧ : ಸದಾ ಹರಿಕರಭಾಸುರಮಾಗಿ ಚಕ್ರಮೆನಿಸಿದ ಸರಸರಥಾಂಗಂ ಪ್ರಸನ್ನಮಕ್ಕೆ (ಶಿಷ್ಟಕೃ. ೦-೦-೨೦೦) ; ರಥಾಂಗ ಪ್ರಭಾವದಿಂ ಬಾಯಂಗಿನಿಸುಂ ತೊಡರ್ ತೋರ್ದುದಿಲ್ಲಂ (ಅದ್ಯುಕ. ೦೪-೦೭). 'ರಥಾಂಗಧರ ' ಪದಾ. ೪. ಚಕ್ರವಾಕ ; ಜಕ್ಕವಕ್ಕಿ : "ಕೋಕಃ, ಚಕ್ರಃ, ಚಕ್ರವಾಕಃ, ರಥಾಂಗಃ — ಈ ೪ ಜಕ್ಕವಕ್ಕಿ" (ಹಲಾಯು. ೪೦-೯೦); ಒಡೆ ತಮೋಬಳಂ . . . ರಥಾಂಗಯುಗಂಗಳ್ ಕೂಡೆ ಬಗೆ ಕೂಡೆ ನೇಸಱ್ ಮೂಡಿದುದು (ಶಂಕಪಾ. ೩-೨೭). ೫. ಕುಂಬಾರನ ತಿಗುರಿ. [ಸಂ.]

**ರಥಾಂಗಧರ** (ನಾ). ೧. ಚಕ್ರವನ್ನು ಧರಿಸಿರುವವನು ; ಚಕ್ರಪಾಣಿ ; ವಿಷ್ಣು : ನಿಜರಥಮಂ ರಥಾಂಗಧರನಂ ಮುನ್ನಮೋಜೆಯ್ದೆಟ್ಟು ಮೂಱು ಸೂಟಿಸ್ ಬಲವಂದು ಪೊಡಮಟ್ಟು ರಥಮನೇಱ (ಶಂಕಪಾ. ೦೦-೦೩೨ ವ). ೨. [ಜೈನ] ವಾಸುದೇವ : ಅಜಿತಸೇನ ರಥಾಂಗಧರಂ ಸಮಸ್ತಭೂಜನದ ಮನಕ್ಕೆ ತನ್ನೊಳನುರಾಗಮನಾವಗೆಮುಂಟುಮಾಡುವಂ (ಚಂದ್ರಪು. ೬-೩೬). [ಸಂ.]

**ರಥಾಂಗಪಾಣಿ** (ನಾ). ೧. = ರಥಾಂಗಧರ ೧ : "ವಿಷ್ಣುಃ . . . ರಥಾಂಗಪಾಣಿಃ . . . ಗದಾಧರಃ — ಈ ೪೫ ನಾರಾಯಣನ ಪೆಸರ್" (ಹಲಾಯು. ೫-೨೩). ೨. = ರಥಾಂಗಧರ ೨ : ಪಂಚಮರಥಾಂಗಪಾಣಿಗೆ ಪಂಚಮುಕಲ್ಪ ಪ್ರಧಾನರಮೃತಾಯತಮಾದಿಂಚರದಿಂ ಬಿನ್ನವಿಸಿದರ್ (ಶಾಂತಿಪು. ೦೦-೯೩). [ಸಂ.]

**ರಥಾರೂಢ** (ನಾ). ರಥವನ್ನು ಏರಿದವನು: ಚಂಡನುದ್ದಂಡಕೋದಂಡಮಂ ಜೇವೊಡೆಗೆಯ್ದು . . . ಕೆಯ್ವಾಸಿ ರಥಾರೂಢನಾಗಿ . . . ಮುಂದಕ್ಕೆ ಸಾಗಿದಾಗಳ್ (ಜಗನ್ನಾಥ. ೩-೪೨ ವ) ; ಬಾದಂ ರಥಾರೂಢನಾಗಿ . . . ರಘುನಂದನಂ (ಕೃಪಾಭಾ. ೨೦-೨೩). [ಸಂ.]

**ರಥಾರೋಹಣ** (ನಾ). ೧. ರಥವನ್ನು ಹತ್ತುವಿಕೆ : ರಥಾರೋಹಣ ಮಾಡಿದ್ದಲ್ಲಿ ಜನಗಳಿಗೆ ಮಹಾಮಂಗಳಕರವಾಗಿ . . . ಪಿತ್ತಕಾರಣವಾಗಿ ಅಗ್ನಿಯನ್ನುಂಟುಮಾಡಿ ದೇಹಧರ್ಮಗಳಿಗೂ, ಅಸ್ಥಿಗಳಿಗೂ ದುಃಖವನ್ನುಂಟುಮಾಡುವುದು (ಸಶಪ್ತ. ೫೪). ೨. ಚೌಷಷ್ಟಿಕಲೆಗಳಲ್ಲಿ ಒಂದು; ರಥಕಲ್ಪ: ಶಕುನಜ್ಞಾನಂ ರಥಾರೋಹಣಂ ಸ್ಮರಮಂತ್ರಂ . . . ಎಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಗೌಶಲಮಂ (ಕುಶ್ಕೃ. ೪-೫೯). [ಸಂ.]

**ರಥಾರೋಹಣಂಗೈ** (ಕ್ರಿ). ರಥವನ್ನು ಹತ್ತು,-ಏರು : ತಾಮ್ರಧ್ವಜಂ ಕನಲ್ದುವನಿಯಂ ಸೇರಿ ಬಾಣತ್ರಯದೊಳಾತನಂ ಘಾತಿಸಿ ರಥಾರೋಹಣಂಗೈದನು (ಕೃಪಾಭಾ. ೨೫-೨೯). [ರಥಾರೋಹಣ + ಕೈ$_{1}$ (< ಕೆಯ್$_{1}$)]

**ರಥಾವರ್ತ** (ನಾ). [ಜೈನ] ವಿದ್ಯಾಧರರು ಮಾಡುವ ಒಂದು ಬಗೆಯ ಜಿನಪೂಜೆ : ವಿದ್ಯಾಧರರ್ಮಾಡುವ ರಥಾವರ್ತಮೆಂಬ ಪೂಜೆಯುಂ ಮಹಾಮಂಡಳೇಶ್ವರರ್ಮಾಡುವಿಂದ್ರಕೇತುವೆಂಬ ಪೂಜೆಯುಂ (ಸುಕುಮಾ. ೬-೨೫ ವ). [ಸಂ.]

**ರಥಿ** (ನಾ). ೧. ರಥವನ್ನು ಹತ್ತುವವನು : "ರಥೀ, ಸ್ಯಂದನಾರೋಹಃ – ಈ ೨ ರಥವನೇಱುವಾತಂ" (ಹಲಾಯು. ೬೫-೨೩೬). ೨. ರಥದಲ್ಲಿ ಕುಳಿತು ಯುದ್ಧಮಾಡುವವನು : ರಥಿಗಳನಗ್ರಸ್ಥಿತಸಾರಥಿಗಳನಿಸೆ ಸೀರಪಾಣಿ ಸಲೆ ರಥದ ಮನೋರಥದೊಡನೆ ಮಡಿದರ್ . . . ಅರ್ಧರಥರ್ಕಳ್ (ಶಾಂತಿಪು. ೫-೦೨); ಬವರವೆಲ್ಲಿ ? ಏಕೆ ತಡವು ? ರಥಿಯದಾರು ಅರಿವುದು ! (ಗಂ. ೯೩-೦೦). ೩. ರಥವನ್ನು ಹೊಂದಿರುವವನು. [ಸಂ. ರಥಿನ್]

**ರಥಿಕ** (ನಾ). ೧. = ರಥಿ ೨ : ''ಕಾಳೆಗದ ಬಂಡಿಯಂ ಹತ್ತಿ ಹೋಹಂ ರಥಿಕಂ'' (ಮಂಗರಾ. ೬೩-೨೬); ಗಜಾರೋಹಕರ ರಥಿಕಾವಳಿಯಬಲವರವ ರಂಗದಲಿ ಸಂಚರಣೆಯೊಪ್ಪಿದವು (ಕುಮಾರಾ. ೦೦-೦೩). ೨. = ರಥಿ ೩. [ಸಂ.]

**ರಥಿನಿ** (ನಾ). ರಥಗಳ ಸಮೂಹ : ರಥಯಾನಪಾತ್ರದಿಂ ಪರರಥ [ಶಾಶಾಂ. ಧ]ನೀಜಳನಿಧಿಯ ಪಾರಮಂ ಸಲ್ವ . . . ಅತಿರಥಮಥನಂ ಕರ್ಣಧಾರನಲ್ಲನೆ ಕರ್ಣಂ (ಶಂಕಪಾ. ೦೨-೫೦); ಬಂದುದು ರಥ್ಯಮಾತ್ರ ರಥಿನೀನೈಪಥ್ಯಶೋಭಾವಹಂ (ಚಂದ್ರಪು. ೦೦-೨೦). [ಸಂ. ರಥಿನೀ]

**ರಥಿನೀನಾಥ** (ನಾ). ರಥಸೈನ್ಯದ ಒಡೆಯ: ಎಣ್ಬರುಂ ದಿಗಧಿಪರ್ ತಂತಮ್ಮೊಳುಳೊಳ್ಪನೊಲ್ದೀಯುತ್ತಿರ್ಕೆ ಕುಮಾರಲಕ್ಷ್ಮರಥಿನೀನಾಥಂಗತಿಪ್ರೀತಿಯಿಂ (ಜಾಶಾಸಂ. ೨೪೦ ; 1230 ; ಎಕ. V, ಬೇಲೂರು. ೦೦೨-೫ ; 1220 ನೋ). [ಸಂ.]

**ರಥೋತ್ಸವ** (ನಾ). ರಥದಲ್ಲಿ ದೇವರನ್ನು ಕೂಡಿಸಿ ಮಾಡುವ ಉತ್ಸವ.-ಸಮಾರಂಭ : ನಿತ್ಯೋತ್ಸವ ಮೊದಲಾಗಿ ರಥೋತ್ಸವ

ಪರ್ಯಂತವಾದ ವಿಶೇಷೋತ್ಸವಾಚರಣೆಗಳಿಂದ ಪಂಡಿತರಿಗೂ-ಪಾಮರರಿಗೂ . . . ಬೋಧಕವಾಗಿಯೂ ಇದೆ (ಶಾಕತ. ೯೨); ರೈತ . . . ಜಾತ್ರೆ ತೇರು ರಥೋತ್ಸವ ಭಂಡಿಹಬ್ಬ ಇವುಗಳಲ್ಲೆಲ್ಲ ಭಾಗಿಯಾಗಿ ತನ್ನ ಆತ್ಮದ ಹಸಿವನ್ನು ಸ್ವಲ್ಪವಾದರೂ ಅಡಗಿಸಿಕೊಳ್ಳಲು ಪ್ರಯತ್ನಪಡುತ್ತಾನೆ (ಹೇಮಾಕೀ. ೨೬). [ಸಂ.]

**ರಥೋದ್ಧತ** (ನಾ). [ಛಂದ] ಪ್ರತಿಸಾಲಿನಲ್ಲಿಯೂ ಹನ್ನೊಂದು ಅಕ್ಷರಗಳಿರುವ ತ್ರಿಷ್ಟುಪ್ಪು ಛಂದಸ್ಸಿನ ಒಂದು ವೃತ್ತ : ಮಾರುತೇಷ್ಟದಿವಿಜಾಗ್ನಿಯುಂ ಲಗಂ ಸಾರೆಯಾಗೆ ರಸದಲ್ಲಿ ವಿಶ್ರಮಂ ದೂರಮಲ್ಲದಿರೆ ಕೇಳ್ರಥೋದ್ಧತೋದಾರನಾಮಮೆಸೆಗುಂ (ಛಂದೋಂಬು. ೨-೦೦೬); ರಂನರಂಲಗ ವಿರಲ್ ರಥೋದ್ಧತಂ (ಕಬಿ. ೮೦). [ಸಂ. ರಥೋದ್ಧತಾ]

**ರಥ್ಯ** (ನಾ). ರಥಕ್ಕೆ ಹೂಡುವ ಕುದುರೆ : ''ರಥದೊಳ್ ಪೂಡುವ ಹಯಮಂ ರಥವಾಹಕ ರಥ್ಯ ನಾಮಧೇಯಂ'' (ವಸ್ತುಕೋ. ೬೬-೨೬). [ಸಂ.]

**ರಥ್ಯೆ** (ನಾ). ೧. ರಥಗಳು ಓಡಾಡುವ ದೊಡ್ಡ ಬೀದಿ ; ರಾಜಮಾರ್ಗ : ''ಪ್ರತೋಲೀ, ವಿಶಿಖಾ ರಥ್ಯಾ-ಈ ೩ ಬೀದಿ'' (ಹಲಾಯು. ೪೮-೦೩೪) ; ಗಿರಿಶಿಖರಂಗಳೊಳ್ತೊಳಿದು ಸೌಧಗೃಹಂಗಳೊಳೊಂದಿ ರಥ್ಯೆಯೊಳ್ತಿರಿದು . . . ಪರ್ವಿದುವಿಂದುಮರೀಚಿಮಾಲೆಗಳ್ (ಆದಿಪು. ೪೨೧). ೨. ರಥಗಳ ಸಮೂಹ. [ಸಂ. ರಥ್ಯಾ]

**ರದ** (ನಾ). ೧. ಹರಿಯುವಿಕೆ ; ಸೀಳುವಿಕೆ. ೨. ಹಲ್ಲು; ದಂತ: ''ದಶನಃ, ದ್ವಿಜಃ, ದಂತಃ, ರದಃ, ರದನಃ- ಈ ೫ ಪಲ್ (ಹಲ್ಲು)'' (ಹಲಾಯು. ೬೬-೩೬೩); ಕಳಧೌತಚ್ಛವಿ ಕುಂದಕುಟ್ಮಲರದಂ ಬಾಲಪ್ರವಾಳೋಷ್ಠಂ . . ತಳೆದಂ ಸಾಶ್ಚರ್ಯಸೌಂದರ್ಯಮಂ (ಸಂಕ್ರಾಪು. ೪-೬). ೩. ಆನೆಯ ದಂತ,—ಕೋರೆ. [ಸಂ.]

**ರದಕ್ಷತ** (ನಾ). [ಕಾಮಶಾ] ಪ್ರಣಯಪರವಶರಾದ ಸ್ತ್ರೀಪುರುಷರು ರತಿಕ್ರೀಡೆಯ ಸಮಯದಲ್ಲಿ ಪರಸ್ಪರರ ಶರೀರಗಳಲ್ಲಿ ಮಾಡುವ ಹಲ್ಲಿನ ಕಚ್ಚು; ದಂತಕ್ಷತ : ತರದೆ ಬೆಸ್ನೊಳು ಪಯೋಧರದೊಳೆ ರದಕ್ಷತಂ ನೆರೆದಿರೆ ವರಾಹಚರ್ವಿತಂ (ಜಗನ್ನಾ. ೬-೩೩); ಉರೋಜಮಂಡಲದ ನಖಕ್ಷತಕ್ಕಧರದೊಳ್ತಲೆದೋರ್ಪ ರದಕ್ಷತಕ್ಕುರಸ್ಥಲದ ರಸಾರ್ದ್ರಕುಂಕುಮಮು ನಂಕಿಸಿ ಜಾಣ್ಮೆಗೆ ಪಾಣ್ಬೆಯೆಯ್ದಿದಳ್ (ರಾಜಶೇ. ೦೨-೬). [ಸಂ.]

**ರದಗಜ** (ನಾ). ಕೋರೆಹಲ್ಲಿರುವ ಆನೆ : ಬೆಣ್ಣಗಳುವುದನೂರೊಳಗೆ ನೆಟ್ ಮಣ್ಣ ಮೆಪ್ಪುದ ರದಗಜಂಗಳ ಬಣ್ಣಗೆಯ ಚಿತ್ರವನು . . . ಕಂಡೆನು (ಶಿಖಾಗ. ೦೦-೩೨-೨೩). [ಸಂ.]

**ರದಚ್ಛದ** (ನಾ). ತುಟಿ ; ಅಧರ : ನಿರ್ಗಳಿತಸರಾಗಭಾವಮೆನಿಸಿತ್ತು ರದಚ್ಛದಮಿಾಗಳಿಂದುಮಂಡಳಲಲಿತಾಸ್ಯ (ಸಂಕ್ರಾಪು. ೬-೬೬) ; ದಡದಡಿಸಿತ್ತು ನುಣ್ಗೊಡೆ ರದಚ್ಛದಮಿರ್ಪುಡುಗಿತ್ತು . . . ಮೃಗಾಯತಾಕ್ಷಿಯಾ (ರಾಜಶೇ. ೬-೬೨). [ಸಂ.]

**ರದನ** (ನಾ). ೧. ಹಲ್ಲು : ದಂತ : "ದಶನಃ, ದ್ವಿಜಃ, ದಂತಃ, ರದಃ, ರದನಃ—ಈ ೫ ಪಲ್ (ಹಲ್ಲು)" (ಹಲಾಯು. ೬೬-೩೬೩) ; ಸುರಕರಿಗೆ ಮೊಗಂ ಮೂವತ್ತೆರಡಾದುವೆ ಬೇಟ್ವೇಟ್ ಮೊಗದೊಳಗೆಂಟೆಂಟು ರದನ ಮೊಪ್ಪುಗುಂ (ಅಜಿತಪು. ೪-೨೦) ; ಪರಿವಡೆದ ರತ್ನದರ್ಪಣದಂತೆ ವರವದನ ವಜ್ರಮಣಿಯಂತೆ ರದನ (ಶಾಂತಿಪು. ೪-೫). ೨. ಆನೆಯ ಕೋರೆ ; ಗಜದಂತ : " ವಿಷಾಣಃ, (ದಶನಃ) ರದನಃ – ಈ ೨ ಕೊಂಬು " (ಹಲಾಯು. ೩೪-೬೪) ; ಕದಳಿಯ ಮೂಲದೊಳಿದು ಗಜಮದಮಂ . . . ಅವಜ ಫಲಂ ರದನಿರದನದಾಕೃತಿಯಕ್ಕುಂ (ಲೋಕೋಪಕಾ. ೬-೨೯). [ಸಂ.]

**ರದನಚ್ಛದ** (ನಾ). = ರದಚ್ಛದ : " ಓಷ್ಠಮಧರ ರದನಚ್ಛದಂ ಪೇಟ್ ತುಟಿಯಕ್ಕು" (ವಸ್ತುಕೋ. ೬೪-೪) ; ನಾಸಾಗ್ರದ ಮುತ್ತಿನ ಮಣಿ ರದನಚ್ಛದ ದೀಧಿತಿ ಪುದಿಯೆ ಕೆಂಪನಾಳ್ದಪೊಲೆಸೆಗುಂ (ರಾಜಶೇ. ೦೨-೭೯). [ಸಂ.]

**ರದನಿ** (ನಾ). ಕೋರೆಗಳನ್ನುಳ್ಳುದು ; ಆನೆ ; ದಂತಿ : "ದ್ವಿರದಂ . . . ಅನೇಕಪಂ ರದನಿ . . . ಸಿಂಧುರಂ" (ವಸ್ತುಕೋ. ೬೬-೩೦) ; ಮದನಮದ ರದನಿಯಂತಿರೆ . . . ಬಂದಾಪ (ಸುಕುಮಾ. ೯-೦೦೬) ; ರದನಿಗಳ ರೌದ್ರಾಹವಕೆ ಕೋವಿದನಲೇ ಕೊಳ್ಳೆನುತ ಕರಿಗಳ ಕೆಜಟಿದನು (ಕುಮಾರ. ೧-೬೦).

[ ಸಂ. ರದನಿನ್]

**ರದನರಿಪು** (ನಾ). ಆನೆಯ ಶತ್ರು ; ಸಿಂಹ : ಕರ್ಕ ವೃಷ್ಟಂ ರದನರಿಪುವೆರಂ ಕನ್ಯಕಾರಾಶಿಪಾರ್ಶ್ವಂ (ಜಾತಕ. ೫-೩). [ಸಂ.]

**ರದಬದಲಿ** (ನಾ). ಮಧ್ಯಸ್ಥಿಕೆ : ಮದುವೆಯ ಮಾತಿಗೆ ಪುಟ ಸಿಗುವುದರೊಳಗಾಗಿಯೇ ಸೀನಣ್ಣನ 'ರದಬದಲಿ'ಯಿಂದ ಮೆಡಿಕಲ್‌ಕಾಲೇಜ್ ಸೇರಲು ಅರ್ಜಿಮಾಡಿಬಿಟ್ಟೆ (ದೀಕಪ. ೦೦).

[ ←ಮರಾ. ರದಬದಲ್, ರದಬದಲೀ ]

**ರದಿ** (ನಾ). =ರದನಿ : "ಮಾತಂಗಃ . . . ರದೀ, ಸಾಮೋದ್ಭವಃ, ಸಿಂಧುರಃ — ಈ ೧೪ ಆನೆಯ ಪೆಸರ್ " (ಹಲಾಯು. ೩೬-೬೦). [ಸಂ. ರದಿನ್]

**ರದ್ದತಿ, ರದ್ದಿಯಾತಿ** (ನಾ). ವಜಾಮಾಡುವುದು ; ರದ್ದುಗೊಳಿಸುವುದು : " ರದ್ದುಮಾಡುವುದು ; ರದ್ದು ; ರದ್ದತಿ " (Abolition- ಪತ್ರಿ. ೦). **ರದ್ದಿಯಾತಿ** : ಇನಾಂ ರದ್ದಿಯಾತಿ ಕಾನೂನಿನ ದೆಸೆಯಿಂದ ಆತನ ಬಹುಭಾಗದ ಭೂಮಿ ರೈತರಿಗೆ ಹೋಗಬೇಕಾಗಿತ್ತು (ಸಂಕಲ. ೦೪೦); ಹಿಡುವಳಿ ರದ್ದಿಯಾತಿಯ ೧೯೪೯ನೆಯ ಇಸವಿಯ ಅಧಿನಿಯಮ (ಶಾಶಾಪ. ೩೦೬). [ < ರದ್ದು$_2$ ]

**ರದ್ದಿ** (ಗು). ೧. ಕೆಲಸಕ್ಕೆ ಬಾರದ ; ನಿರುಪಯುಕ್ತವಾದ : ಅಟ್ಟದ ಮೇಲೆ ರದ್ದಿ ಸಾಮಾನುಗಳ ರಾಶಿಯಲ್ಲಿ ಬಿದ್ದಿರುವ ಕೊಡೆಗಳ ನೆನಪು ಏಕಾಏಕಿ ಬರುತ್ತದೆ (ಶ್ರೀಹಾರ. ೦೫) ; ರದ್ದಿಕಾಗದ ಕೊಳ್ಳುವವ ನಿಮ್ಮ ಪುಸ್ತಕಗಳನ್ನು ಕೊಂಡ (ಪುಗಳ. ೦೦೮). (ನಾ). ೨. ಕೆಲಸಕ್ಕೆ ಬಾರದ ವಸ್ತು : ಅವನ ಕೊಠಡಿಯಲ್ಲಿ ಬರೀ ರದ್ದಿ ತುಂಬಿದೆ (ರೂಢಿ). ೩. ನಿರುಪಯುಕ್ತವಾದ ಕಾಗದ : ರದ್ದಿ ಆಯುವ ಹುಡುಗರಿಗಾಗಿ ಬದುಕಲು ಉಪಯೋಗವಾಗುವಂಥ ತರಬೇತಿಶಾಲೆಯೊಂದನ್ನು ಈಚೆಗೆ ತೆಗೆದಿದ್ದಾರೆ (ರೂಢಿ).

[ ←ಹಿಂ. ಮರಾ. ರದ್ದೀ ]

**ರದ್ದಿಯಾತಿ** 'ರದ್ದತಿ' ನೋ.

**ರದ್ದು$_1$** (ನಾ). ಆರ್ಭಟ ; ಗದ್ದಲ ; ಕೋಲಾಹಲ : ರದ್ದಿಲಿ ನಾದದ ಘರ್ಜನೆ ಮೊರೆಯೆ (ಪದ್ಮಾವ. ೦೩೮-೦೩) ; ಬದ್ಧಪುರುಷರ್ಪವ ಪೊತ್ತು ರೋದಿಸುತ ಬಹುರದ್ದಿನಿಂ ಪೋಗುತಿರೆ (ಕೋರಬಿ. ೫-೪೦).

[ ←ತೆಲು. ರದ್ದು, ರದ್ದಿ ]

**ರದ್ದು$_2$** (ನಾ). ತೆಗೆದುಹಾಕುವಿಕೆ ; ವಜಾಮಾಡುವಿಕೆ : ಇದೆಲ್ಲಾ ವಿವಾಹ ರದ್ದು ನೋಟೀಸು ಕೊಟ್ಟಿದ್ದರ ಹೊಟ್ಟೆಉರಿ ! (ಪಟ. ೬೦).

**ರದ್ದಾಗಿಸು** = ತೆಗೆದುಹಾಕುವಂತೆ ಮಾಡು ; ವಜಾಮಾಡು : ಆತನು ಕೂಡಲೆ ಅವನ್ನು ರದ್ದಾಗಿಸಿ . . . ಎಚ್ಚರಿಸಿದನು (ಗೂಲ್ವೆಪಾ. ೦೬ ಟಿಪ್ಪಣಿ). **ರದ್ದಾಗು** = ಇಲ್ಲವಾಗು ; ವಜಾ ಆಗು : ಭಗವದಿಚ್ಛೆಯಿದ್ದರೆ ಶಿಕ್ಷೆ ರದ್ದಾಗುತ್ತದೆ (ಪುಪರು. ೨೫೬). **ರದ್ದು ಮಾಡು** = ತೆಗೆದುಹಾಕು ; ವಜಾಮಾಡು : ಆ ಪಾಠಶಾಲೆಯನ್ನು ರದ್ದುಮಾಡಿ ಆ ಮೇಷ್ಟರನ್ನು ಇಲ್ಲಿಗೆ ಕಳಿಸಿಕೊಟ್ಟರೆ ಸಾಕು (ರಂಗಳ. ೦೦೩) ; ಅವರ ಇಷ್ಟದಂತೆಯೇ ಅಂದಿನ ಕಚೇರಿಯನ್ನು ರದ್ದುಮಾಡಲಾಯಿತು (ಸಂಗೀತ. ೨೩).

[← ಅರ. ಹಿಂ. ರದ್ದ್ ; ಮರಾ. ರದ್, ರದ್ದ್]

**ರದ್ದುಗೊಳಿಸು** (ಕ್ರಿ). ತೆಗೆದುಹಾಕು ; ವಜಾಮಾಡು : ಭೋಜನಕೂಟದ ಕಾರ್ಯಕ್ರಮವನ್ನು ರದ್ದುಗೊಳಿಸಲಾಗುವುದಿಲ್ಲವೇ (ಅಕ್ರಮ. ೯೫); ದಂಡನೆಯ ಆಜ್ಞೆಯನ್ನು ರದ್ದುಗೊಳಿಸುವಂತೆ ಕೇಳಿಕೊಂಡರು (ರಾಜಪ. ೩೬).

[ರದ್ದು$_2$ + ಕೊಳ್$_1$ + — ಇಸು$_3$]

**ರದ್ದುಪಡಿಸು** (ಕ್ರಿ). = ರದ್ದುಗೊಳಿಸು : ಕೋರ್ಟಿನವರು ಡಿಸ್‌ಮಿಸ್ ಮಾಡಿರುವುದನ್ನು ರದ್ದುಪಡಿಸಿ ಹುಕುಂ ಮಾಡತಕ್ಕದ್ದು (ಗ್ರಾ.ಪಾಠ. ೨೬) ; ಖಾಸಗಿ ಒಡೆತನವನ್ನು ಪೂರ್ತಿಯಾಗಿ ರದ್ದುಪಡಿಸುವುದಕ್ಕೆ ಒಪ್ಪುವದಿಲ್ಲ (ಪಾಪಾಠ. ೦೯೩). [ರದ್ದು$_2$ + ಪಡಿಸು]

**ರನ್ನ** 'ರತುನ' ನೋ.

**ರನ್ನಕನ್ನಡಿ** 'ರನ್ನಗನ್ನಡಿ' ನೋ.

**ರನ್ನಕುಂಡಲ** 'ರನ್ನಗುಂಡಲ' ನೋ.

**ರನ್ನಗಂಬಳಿ** (ನಾ). = ರತ್ನಕಂಬಲ : ರತ್ನಕಂಬಳ - ರನ್ನಗಂಬಳಿ (ಕಪಾತ. ೨೧೩ ಕ್ರಿಯೋ) ; ಜಡೆಮುಡಿಯನಳವಡಿಸಿ ತೋಜುವ ವೃಷಡನ ಸಜ್ಜೆ ಸಿತಾಂಬರದ ಚೆಲುವುಡಿಗೆ ಹೊದೆದಿಪ ರನ್ನ[ಪಾಠಾಂ. ರತ್ನ]ಗಂಬಳಿ ತಾಪ್ರು ಕುಂಡಲವು (ಬಸವು. ೩-೨೬); ಸಂಬಳಿಗೆಯು ಸಂಚಿ ಮೊಗವಾವುದ ರನ್ನಗಂಬಳಿ ಹೊನ್ನ ಹಾವುಗೆಯು (ವೀಣಶಕ. ೨೯-೬). [ ರನ್ನ (< ರತುನ) + ಕಂಬಳಿ ]

**ರನ್ನಗಟ್ಟೆ** (ನಾ). ರತ್ನದಿಂದ ಮಾಡಿದ ಪಾತಿ,– ಮಡಿ : ವನದೊಳಿಸೆವ ವೃಕ್ಷವೃಕ್ಷಮೂಲಗಳೊಳು ಘನತರ ರನ್ನಗಟ್ಟೆಗಳು (ಅಂಶಕ. ೨-೩೬).
[ ರನ್ನ (< ರತುನ) + ಕಟ್ಟೆ$_1$ ]

**ರನ್ನಗಡಗ** (ನಾ). ರತ್ನಖಚಿತವಾದ ಬಳೆ : ಇಂತಪ್ಪ ಸಲ್ಲಕ್ಷೆಯಂ ಬಿತ್ತರಿಸಿ ದೊಡೆ ಅರಮನೆಯೊಳ್ ರನ್ನಗಡಗಮುಂ ಪೊನ್ನ ಕಂಠಿಕೆಯುಂ ಮೆಚ್ಚನೀವರ್ (ರಾಮಾಶ್ವ. ೩-೦೩). [ ರನ್ನ (< ರತುನ)+ಕಡಗ$_1$ ]

**ರನ್ನಗಣಿ** (ನಾ). ರತ್ನಗಳು ದೊರೆಯುವ ಸ್ಥಳ ; ರತ್ನದ ಗಣಿ : ಬೆಟ್ಟು ರನ್ನಗಣಿಯಿಂ ಕಾಡಾನೆಯಿಂ ಕಾಡು. . . ಒಪ್ಪೆ (ಮಲ್ಲಿಪು. ೨-೦೩); ಲೋಕನಾಥನ ಪುತ್ರ ಭರತೇಶ ರತ್ನಶಲಾಕೆಯಾ ರನ್ನಗಣಿಯೊಳು ಈ ಕುಮಾರ ರತ್ನಗಳು ಜನಿಸಿವೆ (ಭರತ. ೬೭-೨೩).
[ ರನ್ನ (< ರತುನ) + ಗಣಿ$_2$ (<ಕಣಿ$_0$) ]

**ರನ್ನಗನ್ನಡಿ, ರನ್ನಕನ್ನಡಿ** (ನಾ). ರತ್ನಖಚಿತವಾದ ಕನ್ನಡಿ : ರಂಜಿಪ ರನ್ನಗನ್ನಡಿ ರನ್ನವೆಸದ ಕಾಳಾಂಜಿ ಕರ್ಪೂರಕರಂಡ ಮುಂಜುಳಗಂಧೋದಕ ಪಿಡಿದವರ್ಗಳು ಕಂಜಾಕ್ಷಿಯರೊಡನೆಯ್ದಿದರು (ವೀಣಶಕ. ೨೯-೦೦) ; ರನ್ನಗನ್ನಡಿಯಲ್ಲಿ ತನ್ನ ಪಡಿನೆಳಲೊಗೆಯೆ (ಚತ್ರಾಂಗ. ೦೯-೩೦೭). **ರನ್ನಕನ್ನಡಿ** : ಶಶಿ ರವಿಗಳಂ ರನ್ನಕನ್ನಡಿಗಳೆಂದು ನಿಟ್ಟಿಸುವ . . . ವಿಷಮಪ್ರವುಘೆಗಣವೈದುತಿರ್ದುದು (ಚೆನ್ನ. ೯೦-೯೯).
[ ರನ್ನ (< ರತುನ) + ಕನ್ನಡಿ$_1$ ]

**ರನ್ನಗರು** (ನಾ). ರತ್ನದ ಗೊಂಬೆ: ರನ್ನಗರುವಿನಂತೆಸೆದಳಾ ತರುಣಿ (ಶ್ರೀಪಾಲ. ೪-೬೨) ; ಉನ್ನತವಹ ಸುರದಂಪತಿಗಳ ಬಲುರನ್ನಗರುಗಳಿಂದೆಸೆ ದುದು[ಪಾಠಾಂ. ರನ್ನೆಯರಿಂದತಿ ಮಿಗಲು] (ರಾಮಾಪ. ೯-೭).
[ ರನ್ನ (<ರತುನ) + ಕರು$_2$ ]

**ರನ್ನಗುಂಡಲ, ರನ್ನಕುಂಡಲ** (ನಾ). ರತ್ನದ ಕರ್ಣಾಭರಣ : ಜಯಸಿರಿಗೆ ಇಕ್ಕುವ ರನ್ನಗುಂಡಲದಂತೆ ಸಿಂಗಾಡಿಯುಕ್ಕಿಜಿಳೊಳಿಸೆದುದೇನೆಂಬೆ (ಕಂಪಣ. ೨೨-೦೦). **ರನ್ನಕುಂಡಲ** : ಕಿವುಡುತನ ತಪ್ಪಿತೇ ರನ್ನಕುಂಡಲ ದಿಂದ ? (ಮಂಕುಶ. ೬೩೨). [ ರನ್ನ (< ರತುನ) + ಕುಂಡಲ]

**ರನ್ನಗೊಂಡೆಯ** (ನಾ). ರತ್ನಖಚಿತವಾದ ಕುಚ್ಚು : ಕಂಡ ಕಡೆಗೆ ರನ್ನ ಗೊಂಡೆಯ ಮಾಣಿಕಪೆಂಡೆಯುಗಳ ಕೆದಜಿದರು (ಭರತ. ೭೭-೦೦೯).
[ರನ್ನ (<ರತುನ) + ಗೊಂಡೆಯ]

**ರನ್ನಜಗಲಿ** (ನಾ). = ರನ್ನಗಟ್ಟೆ : ಪ್ರಕಟತರ ತರುಲತೆಗಳಂ ರನ್ನಜಗಲಿ ರಮ್ಯಕುಸರಸಿಕೃತಕಾದ್ರಿಗಳ್ ತರತರದೊಳಿರಲ್ಕಕಳಂಕಕೇಳೀವನಂ ಮೆಱೆದುದು (ಚಿಖಪು. ೩-೩೦). [ರನ್ನ (<ರತುನ) + ಜಗಲಿ]

**ರನ್ನದಂಬಿಗೆ** (ನಾ). ರತ್ನಖಚಿತವಾದ ಚೆಂಬು : ನೆಱೆ ರನ್ನದಂಬಿಗೆ ಯೊಳು ದಿವ್ಯಜಲವನು ತರುಣಿಯೊರ್ವಳು ಸೂಸಲು (ಕಂಪಣ. ೨೨-೩೩).
[ರನ್ನ (<ರತುನ) + ತಂಬಿಗೆ (<ತಂಬುಗೆ)]

**ರನ್ನದಪ್ಪಲು** (ನಾ). ತಪ್ಪಲಲ್ಲಿ ರತ್ನಗಳನ್ನು ಹೊಂದಿರುವ ಪರ್ವತ ; ಮೇರು : "ಪೊಂಬೆಟ್ಟು ರನ್ನದಪ್ಪಲು ಸುರಗಿರಿ" (ಶಬ್ದಮಂ. ೦೦).
[ರನ್ನ (<ರತುನ) + ತಪ್ಪಲು$_1$ (<ತಪ್ಪಲ್)]

**ರನ್ನದಲೆಗ** (ನಾ). ರತ್ನವನ್ನು ಹೆಡೆಯಲ್ಲಿ ಉಳ್ಳುದು ; ಸರ್ಪ. **ರನ್ನದಲೆಗರ ಹಚ್ಚವಿಟ್ಟಯ್ಯ** = ಸರ್ಪವನ್ನು ಧರಿಸಿಕೊಂಡಿರು ವವನು ; ನಾಗಭೂಷಣ ; ಶಿವ : ದೈನ್ಯವಾನುತ ಸ್ತೋತ್ರವಂ ಮಾಡೆ ರನ್ನದಲೆಗರ ಹಚ್ಚವಿಟ್ಟಯ್ಯ ನಗುತ ಬೋಧಿಸುತಲಿಂತೆಂದನು (ಶ್ರೀಕುಪು. ೪-೩೮). [ರನ್ನ (<ರತುನ) + ತಲೆ$_1$ + – ಗ$_2$]

**ರನ್ನದಾಳಿ** 'ರತುನದಾಲಿ' ನೋ.

**ರನ್ನದುಟಿ** (ನಾ). ಮಾಣಿಕ್ಯದ ಬಣ್ಣದ ತುಟಿ ; ಕೆಂದುಟಿ: ಆಲವಣ್ಣುಟಿಯ ಚೆಂದುಟಿಯ ಪೊಸಪವಳದುಟಿಯೊಳು ರನ್ನದುಟಿ ರಂಗುದುಟಿಗಳವರು . . . ಬರುತಿರ್ದರು (ಚೆನ್ನ. ೩೭-೪೩).
[ರನ್ನ (<ರತುನ) + ತುಟಿ]

**ರನ್ನದೆನೆ** (ನಾ). ರತ್ನಖಚಿತವಾದ ಕೋಟೆಯ ಮೇಲುಭಾಗ ; ಮಣಿ ಖಚಿತವಾದ ಬುರುಜು : ಗಗನಗತಿಶ್ರಮಮಂ ನೆಟ್ಟಗೆ ಕಳೆವರ್ ಖಚರ ರಜಿ ರನ್ನ[ದೆ]ನೆಗಳೋಳಿಗಳೊಳ್ (ಕುಸುಮಾ. ೨-೭೭) ; ಪೊಂಗೋಟೆ ಮೇಗಣ ರನ್ನದೆನೆಯ ಕಾಂತಿಯೊಳಿವಿಸಿಲಾಗಿದ್ದುದೈದಿದರವರು (ಭರತ. ೦೯-೦೦೭). [ ರನ್ನ ( < ರತುನ ) + ತೆನೆ$_1$ ]

**ರನ್ನದೊಟ್ಟಿಲ್, ರನ್ನದೊಟ್ಟಿಲು** (ನಾ). ರತ್ನಖಚಿತವಾದ ತೊಟ್ಟಿಲು; ಮಣಿಮಯವಾದ ತೊಟ್ಟಿಲು : ಗಿರಿಸುತೆಯನತಿಸ್ಫುಟಮಣಿಗಣಪ್ರಭಾ ಸಂಪುಟಮೆನಿಸುವ ರನ್ನದೊಟ್ಟಿಲೊಳಗಿರಿಸುತ್ತುಂ (ಗಿರಿಜಾ. ೩-೬೬). **ರನ್ನದೊಟ್ಟಿಲು** : ತರುಣನ ರನ್ನದೊಟ್ಟಿಲೊಳಿಟ್ಟು ಹರುಷದಿ ತರಳೆ ಯರುಗಳು ಪಾಡಿದರು (ಶ್ರೀಪಾಲ. ೨-೯೦).
[ ರನ್ನ ( < ರತುನ ) + ತೊಟ್ಟಿಲ್$_1$ ]

**ರನ್ನದೊಟ್ಟಿಲು** 'ರನ್ನದೊಟ್ಟಿಲ್' ನೋ.

**ರನ್ನದೊಡವು** (ನಾ). ರತ್ನಖಚಿತವಾದ ಒಡವೆ,– ಆಭರಣ : ಪರಿಪರಿಯ ರನ್ನದೊಡವಿನ ಬೆರಕೆಯು ಬೆಳಗಡರೆ (ಕನ್ನಿಕಾ. ೦೩೬) ; ರನ್ನ ದೊಡವನಿಟ್ಟು ರಮಣಿಯ ಕಣ್ಬೆಳಗುನ್ನತವಾಯ್ತು ಬೀದಿಯಲಿ (ಮೋಹತ. ೦೬-೩೩). [ ರನ್ನ ( < ರತುನ ) + ತೊಡವು ]

**ರನ್ನದೋರಣ** (ನಾ). ರತ್ನಖಚಿತವಾದ ತೋರಣ ; ಮಣಿಮಯ ವಾದ ತೋರಣ : ವರಕೇರಿ ತರತರದಲಿ ಬೆಡಗಿಂದ ಕರುಮಾಡ ರನ್ನದೋರಣವ ಸುಕಲಶದಿ ಪರಮವಿಭವವ ತಾಳ್ದಿಹುದು (ಪರ್ವಕ. ೦-೯೧); ಹೊನ್ನ ಬಾಗಿಲುಗಳ ರನ್ನದೋರಣಗಳ ಪನ್ನೀರುಸಾದಿನಿಂದೆಸೆವಾ ಕನ್ನಡಿನೆಲ ದರಮನೆಯೊಳು ಪೊಕ್ಕು (ಭರತ. ೩-೬೬).
[ ರನ್ನ ( < ರತುನ ) + ತೋರಣ ]

**ರನ್ನಪುತ್ಥಳಿ** (ನಾ). ರತ್ನಖಚಿತವಾದ ಗೊಂಬೆ,— ವಿಗ್ರಹ : ರನ್ನ ಪುತ್ಥಳಿಗಳು ಜೀವಪಡೆದು ರತಿಬಿನ್ನಣದೊಳು ಕೂಡುವಂತೆ ಚೆನ್ನೆಚೆನ್ನರು ನೆರೆದರು (ಭರತ. ೪೦-೦೩೦). [ ರನ್ನ ( < ರತುನ ) + ಪುತ್ಥಳಿ ]

**ರನ್ನವಚ್ಚ** (ನಾ). ರತ್ನದ ಆಭರಣ ; ರತ್ನಖಚಿತವಾದ ಒಡವೆ : ಮಹೀಪಾಲಕಾಗ್ರಣಿ ರನ್ನವಚ್ಚಮನಾಂತು . . . ವಿವಾಹಮಂದಿರಕುಲ್ಲಸ ಲ್ಲೀಲೆ ಪೆರ್ಚೆ ತೆರಳ್ದು (ಉದ್ಭಟ. ೮-೩೨) ; ಪಜ್ಜಳಿಸುವ ರನ್ನವಚ್ಚಂ . . . ತನಗೊಪ್ಪಿರೆ ಬಂದಳದೊಂದು ಲೀಲೆಯಿಂ (ರಾಜಶೇ. ೦೨-೬೨) ; ಆ ಕಾಂತೆಯರ್ . . . ನಿಚ್ಚದಲ್ಲವ ರನ್ನವಚ್ಚಮಂ ತೆಗೆದಿಟ್ಟು . . . ಜಲಕೇಳಿಗೆ ಮೇಳವಿಸಿದರ್ (ರಾಮಾಶ್ವ. ೦೨೩-೦೦).
[ ರನ್ನ ( < ರತುನ ) + ವಚ್ಚ$_2$]

**ರನ್ನವಜ್ಜೆ** (ನಾ). ಮಾಣಿಕ್ಯದಂತೆ ಕೆಂಪಾದ ಪಾದ: ತಾವರೆವಜ್ಜೆಗಳ ತಳತಳಿಸುವ ರನ್ನವಜ್ಜೆಗಳ ಸಳಿನನೇತ್ರೆಯರೊಡನೆಳ್ದರಲವಳೆಂದು ನೆಲೆವಾಡ ದೆಡೆಗೈದಿದಳು (ಶಾಂತೀಶಾಂ. ೨೦-೯೩). [ರತ್ನ (<ರತುನ) + ವಜ್ಜೆ]

**ರನ್ನವಟ್ಟಗೆ** (ನಾ). ರತ್ನಖಚಿತವಾದ ಡಾಬು,— ಸೊಂಟಪಟ್ಟಿ: ಸುರಹೊನ್ನೆಯ ರನ್ನವಟ್ಟಗೆಯಿಂ ರಕ್ತಾಶೋಕರಚಿತ ರತ್ನಕಟಕದಿಂ . . . ಅಲಂಕರಿಸಿ (ಶಾಂತಿಂಪು. ೬೫೪) ; ಕುಮುದಂಗಳಿಂ ನೆಗೆವ ಜಂಘಾಕಾಂಡದಿಂ ರನ್ನವಟ್ಟಗೆಯಿಂ . . . ಬಗೆಯಿಂ ಬಲ್ಸೆಟಿಗೆಯ್ದ ಪುತ್ರಳಿಗಳಿಂ (ಎಕ. XI, ದಾವಣ. ೨೩-೭೭ ; 1224). [ರನ್ನ (< ರತುನ) + ಪಟ್ಟಗೆ]

**ರನ್ನವಟ್ಟೆ** (ನಾ). = ರನ್ನವಟ್ಟಗೆ : ವೀರಘಂಟೆಯ ಹೊನ್ನ ಗುಬ್ಬಿಯ ರನ್ನವಟ್ಟೆಯ ಬೆನ್ನ ಚಮ್ಮಟಿಗೆಯ ಬಿಳಿಯ ಚವರದ . . . ಬಿರುದಿನ ಹರಿಗೆಕಾಱರ ಪರಿವೀಥಿಯೊಳಂ (ಗಿಂಕ. ೬-೩೩ ವ) : ವೀರಸಿರಿಯುಪ್ಪಿದ ತೋಳ್ಸುತ್ತಿನಿಪ ರನ್ನವಟ್ಟೆಯ ರುಕ್ಮಿಂಜದ ಮಂಜರಿಪೊಲ್ ರಂಜಿಸಿದುದು ಪೊನ್ನಾಯುಗದ ಪೊನ್ನ ಬಜ್ಜರಿ ಕಟಿಯೊಳ್ (ಅಸಂಕು. ೬-೫೦).

[ರನ್ನ (< ರತುನ) + ಪಟ್ಟೆ₃]

**ರನ್ನವಡಲಿಗೆ** (ನಾ). ರತ್ನಖಚಿತವಾದ ಹರಿವಾಣ: ಆ ಬಾಣವನು ಅಂದು ಪೂಜಿಸಿ ರನ್ನವಡಲಿಗೆಯೊಳಗಿಟ್ಟು ಬಂದನು ಚಕ್ರಿಯಿದ್ದೆಡೆಗೆ (ಶ್ರೀಶಾಂ. ೦೩-೦೨೬).

[ರನ್ನ (< ರತುನ) + ಪಡಲಿಗೆ (<ಪಡಲಗೆ)]

**ರನ್ನವಣಿ** (ನಾ). ರತ್ನದ ಹರಳು : "ರನ್ನವಣಿ — ರನ್ನಮಣಿ= ರತ್ನದ ಹರಳು" (ಶಬ್ದಮಣಿ. ೩೭) ; ರತ್ನಮಣಿ — ರನ್ನವಣಿ (ಕಪಾದ. ೨೯೨ ಪ್ರಹೋ). [ರನ್ನ (< ರತುನ) + ಮಣಿ₃]

**ರನ್ನವರದ** (ನಾ). ರತ್ನದ ವ್ಯಾಪಾರಿ; ರತ್ನಪಡಿವರ್ತಕ : ಬೆಲೆವಣ ಗಾಗರಮನೆ ತೋರ್ಪ ರನ್ನವರದವರಂಗಡಿಯಿಂ . . . ಪುರಂ ಕಣ್ಗಿಂಬಾದುದು (ಅಭಿಪುರ. ೦೦೩-೯). [ರನ್ನ (< ರತುನ) + ಪರದ₁]

**ರನ್ನವರಲ್** (ನಾ). ಕೆಂಪುಹರಳು ; ಮಾಣಿಕ್ಯ: "ಕೆಂಬರಲೆಂದು ರನ್ನವರ ಲೆಂದೆನಲ್ ಕಿಸುಗಲ್ಲು" (ಶಬ್ದಮಂ. ೬೮). [ರನ್ನ (<ರತುನ) + ಪರಲ್]

**ರನ್ನವಲ್ಲಕ್ಕಿ** (ನಾ). ರತ್ನಖಚಿತವಾದ ಪಲ್ಲಕ್ಕಿ : ಮುತ್ತಿನ ಸತ್ತಿಗೆ ಮುತ್ತಿನ ಹಗ್ಗಾಳೆ ಮುತ್ತು ಕೆತ್ತಿಸಿದುತ್ತಮರನ್ನವಲ್ಲಕ್ಕಿಯನಿತ್ತನವಳಿ ಗಸುರೇಂದ್ರ (ಶಾಂತೀಶಾಂ. ೪೦-೪೦).

[ರನ್ನ (<ರತುನ) + ಪಲ್ಲಕ್ಕಿ₁ (<ಪಲ್ಲಂಗ)]

**ರನ್ನವಲ್ಲಣ** (ನಾ). ರತ್ನಖಚಿತವಾದ ಜೀನು : ಸುರಧನು ರನ್ನವಲ್ಲಣದ ಮಾಳ್ಕೆಯೊಳೊಪ್ಪಿರೆ ಬಳ್ಳಿಮಿಂಚು ವಿಸ್ಫುರಿತ ಖಲೀನದಂತಿರೆ ಘನಧ್ವನಿ ಹೇಷಿತಮಾಗೆ . . . ತೋಱಿ ನೀಲತುರಗಂ (ಕಬಕಂ. ೨-೩೬).

[ರನ್ನ (< ರತುನ) + ಪಲ್ಲಣ]

**ರನ್ನವಸರ** (ನಾ). ರತ್ನವ್ಯಾಪಾರಿಗಳ ಅಂಗಡಿಸಾಲು: ರತ್ನವ್ಯಾಪಾರಿಗಳ ಬೀದಿ : ಪೆಂಪಿನಿಂದೆರವನೆಯುಬ್ಬ ರನ್ನವಸರಂ ಗೆಲೆವಂದುದು ರೋಹ ಣಾದ್ರಿಯಂ (ಶಂರಾಪಾ. ೦-೦೨೦); ದಾಳಿಂಬದ ಮರಗಳ್ ರನ್ನವಸರದಂತೆಸೆ ದಿರ್ಕುಂ (ಶಬ್ದಶಾ. ೦೦೪) ; ಸ್ಮರಮಣಿಗಾಱ ಮಾಱುವ ರನ್ನವಸರದಂತುಱಿ ಮುಱಿದಿರುಂಗನೆಯರು (ಶಂಪಾ. ೬-೯೬). [ರನ್ನ (< ರತುನ) + ಪಸರ]

**ರನ್ನವಸಿಱ್** (ನಾ). ೧. ರತ್ನಗಳನ್ನು ಹೊಂದಿರುವ ಗರ್ಭ. ೨. ರತ್ನಗಳನ್ನು ಹೊಂದಿರುವ ಬಸಿರುಳ್ಳುದು : ಭೂಮಿ : ರನ್ನ ವಸಿರ್ಪಲವೊಗವೇಳ್ನಾಲಗೆಯನ್ನಿಲ್ಲದೆ ನಡವ ನೆರಲ್ಸರಿವುಮ್ಮನ್ನೀರ್ಗಂದಂ ಬಸುಗದಿರನೊಡಲ್ಪಡಿದವನೆಂಬೆಂಬು ನಿನ್ನಯ ಪರಿಪಾಂತು (ಅಭ್ಯರೇ. ೦-೬೨).

**ರನ್ನವಸಿಱಿಲ್** — ರತ್ನವನ್ನು ಬಸಿರಿನಲ್ಲಿ ಹೊಂದಿರುವವಳು: ಭೂಮಿ ; ರತ್ನಗರ್ಭೆ : "ಎಳೆ . . . ರನ್ನವಸಿಱಿಲ್ ಭೂಮಿ" (ಶಶಾ. ೩೩-೨೦೦). [ರನ್ನ (< ರತುನ) + ಬಸಿಱ್]

**ರನ್ನವಾಟ** (ನಾ). ರತ್ನಖಚಿತವಾದ ಗೃಹ, — ಭವನ : ಎಡೆಬಿಡದಿನ್ನು ಘೋಷಿಪ ವಿಬುಧ ಭೂಸುರ ರನ್ನವಾಟಗಳೆಸೆದವು (ಚಿತ್ರಪು. ೨೨-೨೯).

[ರನ್ನ (<ರತುನ) + ವಾಟ]

**ರನ್ನವಾವುಗೆ** (ನಾ). ರತ್ನಖಚಿತವಾದ ಪಾದುಕೆ : "ರನ್ನವಾವುಗೆ ಯೆಂದುಂದಾದುದು ರತ್ನಪಾದುಕೆ" (ಕಬಿಕಂ. ೦೩೨) ; ಪುರಾಂತಕಂ ಮುಂಬರಿದು ಕೆಯ್ಯುಗ್ಗಡೆ ವೃಷಭೇಂದ್ರನಿಂದವತರಿಸಿ ಕುಬೇರಂ ಸಾರ್ಚಿದ ರನ್ನವಾವುಗೆಯಂ ಮೆಟ್ಟಿ (ಕಬಕಂ. ೩-೩೭ ವ) ; ಮುತ್ತಿನ ಸರವನ್ನ ರನ್ನವಾವುಗೆಗಳ ಸುತ್ತ ಲಂಬಣಮಾದುದಿಂದು (ಹರಿಬಿ. ೦-೯೨).

[ರನ್ನ (< ರತುನ) + ಪಾವುಗೆ]

**ರನ್ನವಾಸಱ್** (ನಾ). ರತ್ನದ ಹಾಸುಗಲ್ಲು : ಕಂಡರವರು . . . ರನ್ನವಾಸಱ ಗಳಿಂದೆ ಶಶಿಕಾಂತಶಿಲೆಗಳ ಕಂದರಂಗಳಿಂದತಿಮನೋಹರವಾದ ಗಿರಿ ಯೊಂದನು (ತ್ರಯಿಭಾ. ೬-೦೩). [ರನ್ನ (< ರತುನ) + ಪಾಸಱ್]

**ರನ್ನವಿಟ್ಟರ** (ನಾ). ರತ್ನ ಖಚಿತವಾದ ಆಸನ ; ಮಣಿಪೀಠ : ಚಿನ್ನದ ಕಾಲ ಬೆಳ್ಳಿಯ ಕಾಲ ಮಂಚ ಸುವರ್ಣದಡ್ಡಣಿ ಸುಪ್ಪತಿಗೆ ರನ್ನವಿಟ್ಟರ ರತ್ನಗಂಬಳಿ . . . ಇತ್ತ ಮಗಗೆ (ವೋಚಕ. ೦೩-೦೭).

[ರನ್ನ (< ರತುನ) + ವಿಟ್ಟರ]

**ರನ್ನವೆಸ** (ನಾ). ರತ್ನವನ್ನು ಕುಂದಣಿಸುವಿಕೆ : ತನ್ನೊಲವಿಂ ತತ್ಪುತ್ರ ಕಳತ್ರಕೆ ರನ್ನವೆಸದ ಬಹುವಿಧ ಭೂಷಣಮಂ ಮನ್ನಿಸಿ ಕೊಟ್ಟಾ ದೇವನಮರ ಲೋಕಕ್ಕೆಯ್ದಿದಂ (ಜಯುಕಾ. ೬-೬೨); ರನ್ನವೆಸದ ಕಾಳಾಂಜಿ ಕರ್ಪೂರಕರಂಡ ಮುಂಜಳಗಂಭೋದಕವಿಡಿವವರ್ಗಳೆ ಕಂಜಾಕ್ಷಿಯರೊಡನೆಯ್ದಿದರು (ಪೋಚಕ. ೨೪-೦೦). [ರನ್ನ (< ರತುನ) + ಬೆಸ₁]

**ರನ್ನವೆಳಗು** (ನಾ). ರತ್ನದ ಹೊಳಪು,— ಕಾಂತಿ : ಹೊನ್ನ ಹಾವುಗೆಯ ರನ್ನವೆಳಗಂ ಕೀಳ್ಮಾಡಿ ನಕ್ಷತ್ರಮಾಲೆಯಂತೆ ನುಣ್ಬೆಳಗನೀಂಬ ಪದನಖಪ್ರಭೆ ಪೂವಲಿಗೆದಱಿ (ಗಿಂಕ. ೩-೭೭ ವ) ; ಒಳಗಣ ರನ್ನವೆಳಗಲ್ಲದಿವು ತೊಡರ್ದಿಪ್ಪ ಕೆಂಪವಳಮಲ್ಲಿವು ಪಯೋನಿಧಿಯ ಕೆನೆಯೊಪ್ಪಮಲ್ಲದೆ ನೀರ್ಮೊಗೆಯಲೀವ ಮೇಘಂಗಳಲ್ಲೆನಿಸಿದುವು ಕಡಲೊಳು (ತ್ರಯಿಭಾ. ೬-೬).

[ರನ್ನ (< ರತುನ) + ಬೆಳಗು₂]

**ರನ್ನಸರ** (ನಾ). ರತ್ನದ ಹಾರ ; ಮಣಿಮಾಲೆ : ಪೊಸಲತೆಯಕ್ಕುಮಲ್ಲ ಲತೆಗೆತ್ತಣದೀ ಸವಿಪಾತು ನೀಟ್ದ ರನ್ನಸರಮದಕ್ಕುಮಲ್ಲ ಸರಕೆತ್ತಣದೀ ನವಘರ್ಮಬಿಂದುಗಳ್ (ಅಧ್ಯಪ. ೬-೪೦). [ರನ್ನ (<ರತುನ) + ಸರ₃]

**ರನ್ನು** (ನಾ). (ಕ್ರಿಕೆಟ್ ದಾಂಡುಗಾರರು ಗುರಿಗೋಲುಗಳ ಮಧ್ಯೆ ಪರಸ್ಪರ ಓಡಿ ಮಾಡುವ) ಗೆಲ್ಲಂಕದ ಓಟ: ಒಂದು ಗಂಟೆಯಲ್ಲಿ ಒಂದುನೂರೈವತ್ತಕ್ಕೆ ಮೇಲ್ಪಟ್ಟು ರನ್ನುಗಳನ್ನು ಹೊಡೆದರು (ನಾಡಿಗೇ. ೦೫೦). [← ಇಂ. Run]

**ರನ್ನೆ** (ನಾ). ಶ್ರೇಷ್ಠಳಾದವಳು : ಆ ಹೆಣ್ಗಳ ರನ್ನೆಗೆ ಪಲ್ಲವಕವ್ಯೂಹದರ್ದೆ ಯನಿಳ್ಕೆಳಗೊಂಡತಿ ರಾಜಿಸಿದವು ತಿವಳಿಗಳು (ಜಯುಕಾ. ೩-೩೩); ಕಲಕೀರ ವಾಣಿಯರ್ಕಾಳಾಹಿವೇಣಿಯರ್ . . . ಕಳೆದುಳಿದ ರನ್ನೆಯರ್ (ತ್ರಯಿಭಾ. ೩೦-೩). [ರನ್ನ (< ರತುನ) + -ಎ₂]

**ರಪಣ, ರವಣ₁** (ನಾ). ೧. ಆಸ್ತಿ; ಐಶ್ವರ್ಯ : ಮಾಣಿಸಿದೊಡೆ ಮಾಣದೆ ರ[ಪಣ. ವ]ಪಣಮಂ ತೋಱಿಯುಮೊತ್ತಿಯನುಗ್ಗಡಿಸಿಯುಮಾಡಿಮೆನೆ (ಚಂಕಭಾ. ೬-೩ ವ); ಕೆಱಿಯಂ ಕಂಡು ಕಟವೆಯಂ ಬಿತ್ತುವಂತೆ ರಪಣಮಂ ಕಂಡು ಕಡನಂ ಕುಡುವಂತೆ (ಧರ್ಮಾಮೃ. ೦೪-೦೬೦). ೨. ಹಣ ; ಧನ : ವಚನಮಾತ್ರದ ರಪಣವಲಿ ರಚಿಸಿದನು ಗೋಧನಭೂಮಿದಾನವನು (ಕುಮಾರ. ೪-೨೪); ಗುಪಿತದಿಂ ರಪಣಮಿತ್ತೈದೆಂದು ಬೈದಂದು ಪೆರ್ಗಹಳೆ ಭೋರ್ಗರೆದವು (ಶಶಕು. ೦೦-೦೨); ಸಾಲ ತೀರಿಸಲು ಅವನ ಬಳಿ ರಪಣವೂ ಇಲ್ಲದ್ದರಿಂದ, ಅವನ ಹೆಂಡತಿ ಮಕ್ಕಳನ್ನೂ ಆಸ್ತಿಪಾಸ್ತಿಗಳನ್ನೂ ಮಾರಿ ಸಾಲ

ತೀರಿಸಬೇಕೆಂದು ಸಾಲಿಗ ಆಜ್ಞೆ ಮಾಡಿದನು (ಕೃಷು. ೩೯೦). ೩. ರಕ್ಷಿಸುವ ಸಾಧನ; ಸಹಾಯಸಾಮಗ್ರಿ : ರಪಣವೇಕೆಲೆ ಹೂಡೆ ಭಟರಿಂಗೆ ವಿಪುಳ ಸಂಗ್ರಾಮದಲಿ ಭುಜವೇ ರಪಣವಲ್ಲೆ (ಕಿರಾಗ. ೧೦-೪೯-೩೨); ರಪಣಗಳೇ ಕೆಲೆ ಹೂಡೆ ಭುಜರಪಣವು ಭಟಗಾಜ್ಜಿಗಿಹೆ (ಜಾರಜಾ. ೫೪). **ರಪಣ**, : ೨. ರಪಣಮಾದ ಜೂದುಗಾಜಿನಂತೆ ಮಗುಟ್ಟುಮಗುಟ್ಟುಮಭ್ಯಾಸ ವಶದಿನಿನಿಯಳ ಕೂಟಮನೆ ಬಯಸಿ (ಶಠಕೃ. ೬-೪೩). ೪. ಜೂಜಿನಲ್ಲಿ ಒಡ್ಡುವ ಹಣ ; ಪಣ : ನೋಡುವವರೆಡಗಣ್ಣ ಡಾಳದೊಳ್ ಹಾಸಗೆವಾಯೆ ಮನಂ ವಿಟರ್ಗೆ ಹೋದುವು ರಪಣಂ ಗುಣಕ್ಕವಳ ಜವ್ವನನೆತ್ತದೊಳಾರೊ ಸೋಲದರ್ (ಸೂಕ್ತಿಸು. ೬-೪೯೦) ; ಮಜುಜಜಂ ಕುಡಿವೆಟ್ಟುದಾಂ ರಪಣಮಂ ಬೆಟ್ಟಿಂತುಟಂ ತಂದೆನೆಂದೆಚಿಪಲ್ಕೆ (ಶಶಿಚ. ೭.೩೪) ; ನಿನಗೆ ಹರಿಬದೊಳೊಂದು ಮುಟ್ಟಿಗೆ ರಪಣವುಂಟೇ ಹಾಯ್ಕಿ ನಿಮ್ಮಾಟವನು ನೋಡುವೆನು (ಕುಮಾ.ಳ. ೨೪-೯೬). [p ಇದು ಸಂಸ್ಕೃತದ 'ರೈ' ಮತ್ತು 'ಪಣ' ಎಂಬ ಎರಡು ಶಬ್ದಗಳು ಸೇರಿ ಆದ ಕೂಡುನುಡಿ ಇರಬಹುದು]

**ರಪರಪನೆ** ' ಜಪಜಪನೆ' ನೋ.

**ರಪಾಟ, ರಪಾಟಿ, ರಪಾಟೆ** (ನಾ). (ಉಕ) ವೇಗವಾದ ಓಟ ; ದೌಡು : ಎಲ್ಲಿಯೂ ಅವನ ಹೆಸರು ಕಾಣದಾಗಿತ್ತು. ಕೂಡಲೇ ಮೋರೆ ಬಾಗಿಸಿ ಕೋಡು ಸೈಕಲ್ಲು ತೆಗೆದುಕೊಂಡವನೇ 'ರಪಾಟ' ಹೊಡೆದನು (ಬೀಳಕ. ೫೬). **ರಪಾಟಿ** : ಮೂವರೂ ರಪಾಟಿ ಓಡಲಾರಂಭಿಸಿದರು (ಹೂಬಿ. ೨) ; ಒಂದು ಕಲ್ಲು ತೆಗೆದುಕೊಂಡು ಒಗೆ. ತಾನೇ ರಪಾಟಿ ಓಡುವುದು (ಕೊಂಬು. ೪). **ರಪಾಟೆ** : ಇಂದು ಬೇಟೆ. ನಾಳೆ ಕುದುರೆಯ ರಪಾಟೆ (ಕ್ರೀಸುಶ. ೬೩). [← ಹಿಂ. ರಪಟ್, ರಪಟ್ಟಾ; ಮರಾ. ರಪಾಟಾ]

**ರಪಾಟಿ** ' ರಪಾಟ ' ನೋ.

**ರಪಾಟೆ** ' ರಪಾಟ ' ನೋ.

**ರಪ್ಪಿಸು** (ಕ್ರಿ). (?) : ಜ್ಞಪ್ತಿಯಿಂ ರಾಗಾತಿರೇಕವಿಜ್ಞಾನದಿಂ ರಪ್ಪಿಸುವ ಸಿದ್ಧಾಂತವೇದಾಂತಮಂ ಜಜಿದು ಗುಪ್ತಕೋಟಿವಿಶೇಷಮಂತ್ರ ಬೀಜಾಕ್ಷರದಿ ಲುಪ್ತನೆಯಿದಂ ತನ್ನವಂ (ಅಂಗಪು. ೩೩-೩೦). [ ? + — ಇಸು]

**ರಪ್ಪನೆ** (ಅ). ' ರಪ್ ' ಎಂಬ ಶಬ್ದದೊಡನೆ : ಭಾರಿತರು ಧರೆಗೆ ಮೂಲ ಕಳೆದುರುಳ್ವಂತೆ ರಪ್ಪನೆ ಬೀಳಲು (ಐಜಾ. ೧೪-೦೫).

[ರಪ್, + — ಅನೆ,]

**ರಪ್ಪು**, (ನಾ). ಹರಿದು ತೂತುಬಿದ್ದಿರುವ ಬಟ್ಟೆಗಳನ್ನು ದಾರದಿಂದ ಹೆಣೆದು ಜೋಡಿಸುವುದು : ಹಳತಾಗಿ ಚಿಂದಿಯಾಗುವೆನೆಂಬ ಬಟ್ಟೆಯನು ರಪ್ಪಿನಲಿ ತೇಪೆಯಲಿ ಸರಿಮಾಡಲಾಗುವುದೆ? (ಪಪಾ. ೪-೦೩).

**ರಪ್ಪುಮಾಡು** = "(ಉಣ್ಣೆ, ವೊ. ದ) ಹೆಣಿಗೆಯಲ್ಲಿ ಬಿದ್ದಿರುವ ಕಂಡಿಯನ್ನು ಸೂಜಿಯಿಂದ ಬೇರೆ ಎಳೆಹಾಕಿ ಮುಚ್ಚು ; ರಪ್ಪುಮಾಡು : ಎಳೆತುಂಬು" (Darn. ೨೦೪೩). **ರಪ್ಪುಹಾಕು** = ರಪ್ಪುಮಾಡು ; ಹೋಗುವಾಗ ತೊಟ್ಟುಕೊಂಡಿದ್ದ ಬಟ್ಟೆ ಬದಲಾಯಿಸಿ, ದಿನದ ರಪ್ಪು ಹಾಕಿದ ಮೂರುಮೊಳದ ಶೀರೆಯ ತುಂಡನ್ನು ಉಟ್ಟು (ಕೀಸೋಕ. ೦೩).

[← ಅರ. ಹಿಂ. ಮರಾ. ರಫೂ; ಪಾರ. ರಫ್ ]

**ರಪ್ಪೆ** ' ಚಿಪ್ಪೆ ' ನೋ.

**ರಫ್ತು**, (ನಾ). ೧. ವ್ಯಾಪಾರಕ್ಕಾಗಿ ಸರಕನ್ನು ವಿದೇಶಕ್ಕೆ ಕಳುಹಿಸುವುದು ; ನಿರ್ಯಾತ : ಹತ್ತಿಯಲ್ಲಿ ಬಹುಭಾಗ ಇಂಗ್ಲೆಂಡ್, ಜಪಾನ್ . . . ಮುಂತಾದ ದೇಶಗಳಿಗೆ ರಫ್ತಾಗುವುದು (ಹಾಶ್ರ. ೯). ೨. ವ್ಯಾಪಾರಕ್ಕಾಗಿ ದೇಶದಿಂದ ಹೊರಕ್ಕೆ ಕಳಿಸುವ ಸರಕು.

**ರಫ್ತುಮಾಡು** = ಸರಕನ್ನು ದೇಶದಿಂದ ಹೊರಕ್ಕೆ ಕಳಿಸು ; ನಿರ್ಯಾತ ಮಾಡು : ಈ ನೀಲಿಯನ್ನು . . . ನಮ್ಮ ದೇಶಗಳಿಗೆ ರಫ್ತು ಮಾಡುತ್ತಾರೆ (ಕ್ರ ಬಾ ೩. II, ೫೪). [←ಪಾರ. ಹಿಂ. ಮರಾ. ರಫ್ತ್]

**ರಫ್ತುವ್ಯಾಪಾರ** (ನಾ). ವಿದೇಶಗಳಿಗೆ ವಸ್ತುಗಳನ್ನು ಕಳಿಸಿ ಮಾಡುವ ವ್ಯಾಪಾರ ; ನಿರ್ಯಾತವ್ಯಾಪಾರ : ರಫ್ತುವ್ಯಾಪಾರದಿಂದ ದೇಶದೊಳಕ್ಕೆ ಹೆಚ್ಚು ನಿವ್ವಳಹಣ ಬರುವುದು (ಹಾಶ್ರ. ೦೫೬).

[ ರಫ್ತು + ವ್ಯಾಪಾರ ]

**ರಫ್ತುಸುಂಕ** (ನಾ). ವಿದೇಶಗಳಿಗೆ ಕಳಿಸುವ ವಸ್ತುಗಳ ಮೇಲೆ ಹಾಕುವ ಸುಂಕ : "ರಫ್ತುಸುಂಕ : (ಸು)ನಿರ್ಯಾತಶುಲ್ಕ" (Export duty. ಶಶ್ರಿ. ೩೭). [ ರಫ್ತು + ಸುಂಕ, ]

**ರಬಟಿ** (ನಾ). (ಉಕ) ಅನಾವಶ್ಯಕವಾದ ಆಯಾಸ; ವ್ಯರ್ಥವಾದ ದಣಿವು : ಈಗ ಮಲಗು ಹೋಗು. ಒಂದು ಕಾಸು. ಇದೆಲ್ಲ ರಬಟೆ ತೊಗೊಂಡು ನೀನೇನು ಮಾಡೀ ! (ದಾಕೂಟಿ. ೮೩) ; ಇಷ್ಟು ಮಾತ್ರ ಹೇಳಬಲ್ಲೆ. ಈ ಅಡಿಗ ನಿನ್ನದು ಅಲ್ಲಾ ಅಂತ. ನಿನ್ನ ರಬಟಿ ನಾಲ್ಕುಮರುಷ ನನಗ ಗೊತ್ತಿಲ್ಲ ? (ಕಕೃ. ೫೩). [ ← ಹಿಂ. ರಬಡ್; ಮರಾ. ರಾಬಡ್]

**ರಬಟೆ** (ನಾ). ಅಂಟಂಟಾಗುವಂತೆ ಅರೆದುಮಾಡಿದ ಲೇಪನದ್ರವ್ಯ; ಕಲ್ಕ : ಶುಂಠೀರಬಟೆಯನ್ನು ಮಾಡಿ ಅದನ್ನು ಬೆಚ್ಚಗೆ ಮಾಡಿಕೊಂಡು ಕೋಣೆಗೆ ನಡೆದಳು (ಶುಕ್ರ. ೮೭).

[ ← ಹಿಂ. ಮರಾ. ರಬಡೀ, ರಾಬಡೀ = ಗಟ್ಟಿಗೊಳಿಸಿದ ಹಾಲು]

**ರಬಾಬು, ರವಾಬು** (ನಾ). ಒಂದು ಬಗೆಯ ತಂತೀವಾದ್ಯ : ವೀಣಾ ರಬಾಬು ಸಾರಂಗಿ ಜಾಣರು ನುಡಿಸುವ ತಂಬುರ ಸ್ವರಗೇಳುತಾನಂದದಿ ಬಂದರೊಸೆದು (ಗೊಸು. ೬-೦೦೬). **ರವಾಬು** : ರವಾಬು ಕಿನ್ನರಿ . . . ಕಾಲಕೀಯೆಂಬ ಮೂವತ್ತುಮೂರು ತಂತೀವಾದ್ಯಂಗಳ್ (ಶಿವೇಶ. ೨೪೩).

[ ← ಅರ. ಹಿಂ. ಮರಾ. ರಬಾಬ್ ]

**ರಬ್ಬರು** (ನಾ). ೧. ಒಂದು ಬಗೆಯ ಮರ : ಮೊದಲು ರಬ್ಬರಿನ ಬೆಳೆಯುವಿಕೆಯು ದಕ್ಷಿಣ ಅಮೇರಿಕದ ಎಮೆಜಾನ್ ಕಾಡುಗಳಲ್ಲಿತ್ತು (ಬಾಂಶ್ರ. I, ೪೪). ೨. ರಬ್ಬರು ಮರದಿಂದ ಸುರಿಯುವ ರಸ ಮತ್ತು ಅದರಿಂದ ತಯಾರಿಸುವ ವಸ್ತು : ಈ ಮರಗಳಿಂದ ರಬ್ಬರನ್ನು ಸಂಗ್ರಹಿಸಿದರಾಯಿತು (ಬಾಂಶ್ರ. I. ೦೪೩); ರಬ್ಬರಿನ ಚೆಂಡುಗಳು . . . ಇನ್ನೂ ಏನೇನೊ ಸಾಮಾನುಗಳಿದ್ದವು (ಸ್ವರ್ಗಸಾ. ೯೦).

[ ← ಇಂ. Rubber ]

**ರಬ್ಬಳಿಕೆ** ' ರಬ್ಬಳಿಗೆ ' ನೋ.

**ರಬ್ಬಳಿಗೆ, ರಬ್ಬಳಿಕೆ** (ನಾ). ಜೋಳದಿಂದ ಮಾಡಿದ ಗಂಜಿ.–ಅಂಬಲಿ : ಎಮ್ಮ ಮನೆಯಲ್ಲಿ ಶಿವಪೂಜೆಗೆಯ್ದು ಮಾಡಿದ ರಬ್ಬಳಿಗೆಯನುಣಲೆಮ್ಮಂ (ಬಾಳಿಕ. ೦೦-೩೩). **ರಬ್ಬಳಿಕೆ** : "ರಬ್ಬಳಿಕೆ = ದಸಾಳಗಂಜಿ" (ಪಾಶಕೋ. ೩೯). [ ? ]

**ರಬ್ಬಳೆ** (ನಾ). ಕೊಚ್ಚೆ; ರಾಡಿ : ರಬ್ಬಳೆಯ ನೀರುಮಂ ಶುಭ್ರಮೆಸಗಲು (ಕ್ರೀಣಾಕ. ೪-೩೩). [ ← ಮರಾ. ರಬಡಾ ]

**ರಬ್ಬು** ' ಜಬ್ಬು ' ನೋ.

**ರಬ್ಬುದೋರು** (ಕ್ರಿ). ಆಡಂಬರವನ್ನು ತೋರಿಸು; ವೈಭವದಿಂದ ಮೆರೆ : ಹಬ್ಬಿತು ಗಗನ ಕೆಂಧೂಳು ಮುಸುಕಿ ಬಹ ಹಬ್ಬಿಸಿಗಳು ಪರಂಗಿಗಳೂ ರಬ್ಬುದೋರುತ ಅರಬ್ಬೆಗಳು ಭೂತಗಳಂತೆ ಗರ್ಭನಿರ್ಭೇದ ನೋಡುವರೇ (ಸಾಂದಾ. ೩-೦೦).

[ ರಬ್ಬು (< ಜಬ್ಬು) + ತೋರು (< ತೋಱು) ]

**ರಭಸ** (ನಾ). ೧. ವೇಗ; ಜೋರು : ಕಲ್ಪಾಂತಶರಧಿಯ ರಭಸವಲ್ಲಿಯೆ ಕೇಳಲಾದುದು (ಕುಮಾವ್ಯಾ. ೨-೦೦) ; ಹೊಡವ ರಭಸದಲದ್ದಿಹೋಯಿತು ವಾದ್ಯನಿರ್ಘೋಷ (ಕುಶಿಂ. ೩೩-೨೨) ; ಗಂಗಾನದಿ . . . ಭೂಮಿಗೆ ರಭಸದಿಂದ ಇಳಿದು (ಪಪಂ. ೬). ೨. ಅರ್ಭಟ ; ಬೊಬ್ಬೆ : ಚೀಱದನು ಗಿರಿಗಳ ಬಿಸುಗೆ ಬಿಡೆ ನಡುವಿರುಳು ಕೋಳಾಹಳಿಸಿತು ರಭಸ (ಕುಮಾವ್ಯಾ.ಸ.೨-೯೩);

ಕರತರದ ಕೇರಿಗಳ ಭೂರಿಗಳ ಭೇರಿಗಳ ರಭಸದಿಂ ಪುರವೆಸೆದುದು (ಕಬಕ. ೫-೫). ೩. ಕೋಪ ; ಆಕ್ರೋಶ : ಅವನು ರಭಸದಿಂದ ಮಾತನಾಡಿದನು (ರೂ). [ಸಂ.]

**ರಮ** (ನಾ). ೧. ಸಂತೋಷ : ಆನಂದ. ೨. ಹಿತಕರವಾದುದು ; ಸಂತೋಷದಾಯಕವಾದುದು : "ರಮಂ ರಮಣ್ಯಂ ರಮ್ಯರುಚಿರಂ ಪ್ರವೇಶಮೆನೆ ಸೌಮ್ಯಕ್ಕೆ ನಾಮಮಕ್ಕುಂ" (ಶಂಗರಾ. ೦೨೬-೨). ೩. ಹಿತವನ್ನುಂಟುಮಾಡುವವನು ; ಇನಿಯ; ನಲ್ಲ : ಅಜಾಂಡಮಂ ಪುದಿದು ಬರ್ಪ ದಶಾಸ್ಯನ ವಹ್ನಿಬಾಣಮಂ ಜಯರಮಣೀರಮಂ ತವಿಸಿದಂ ಹರಿ ವಾರುಣದಿವ್ಯಬಾಣದಿಂ (ಕಂರಾಚ. ೦೯-೦೬೦). ೪. ಗಂಡ; ಪತಿ. ೫. ಕಾಮ ; ಮನ್ಮಥ. [ಸಂ.]

**ರಮಜಾನ್** 'ರಮಜಾನು' ನೋ.

**ರಮಜಾನು**, ರಂಜಾನ್, ರಮಜಾನ್, ರಮ್ಜಾನು (ನಾ). ಅರಬ್ಬೀ ವರ್ಷದ ಒಂಬತ್ತನೆಯ ತಿಂಗಳು ಮತ್ತು ಆ ತಿಂಗಳಿನಲ್ಲಿ ಮುಸಲ್ಮಾನರು ಆಚರಿಸುವ ಉಪವಾಸದ ಹಬ್ಬ : ನಂದನಸಂವತ್ಸರದ ರಮಜಾನು ತಿಙ್ಗಳು (ಎಕ. IX. ಆನೇಕ. ೨-೦ ; 1652 ?). **ರಂಜಾನ್** : ರಂಜಾನ್‌ತಿಂಗಳನ್ನು ಉಪವಾಸದ ಹಬ್ಬವೆಂದು ಕರೆಯುತ್ತಾರೆ (ರೂ). **ರಮಜಾನ್** : ರಮಜಾನ್‌ತಿಂಗಳು ಪೂರಾ ಮುಸಲ್ಮಾನರಿಗೆ ಉಪವಾಸ ವ್ರತದ ಸಮಯ (ಕಾಶ್ಯ. ೦೯೯). **ರಮ್ಜಾನು** : ರಮ್ಜಾನು ತಿಂಗಳು (ರಾಜೇಂದ್ರ. ೬೬). [← ಅರ. ರಮಜ಼ಾನ್, ರಮದ್ಹಾನ್ ; ಪಾರ. ಹಿಂ. ಮರಾ. ರಮ್‌ಜಾನ್]

**ರಮಡೋಲು** ರಂಡೋಲು, ರಂಢೋಲು (ನಾ). ೧. ಒಂದು ಬಗೆಯ ದೊಡ್ಡ ಚರ್ಮವಾದ್ಯ (+) **ರಂಡೋಲು** : ೧. (ಎಕಮ್ಯ. XVII. ೨೫). ೨. (ಆಲಂ) ದೊಡ್ಡದು ; ದಪ್ಪವಾದುದು : ತೆರೆದ ಕದ ತೋರಿಸಿತು ಎನ್ನ ಹರೆಯದ ಹೀರಬಂದಿರುವ ಕ್ರೂರಿಯನು— ಹೊಟ್ಟೆಯದು ರಂಡೋಲು, ಮೂಗು ತೆಂಗಿನಕಾಯಿ (ವಪ್ಪರ. ೫): ರಂಢೋಲು ೧. ಬಾಣ ಬಿರುಸು ರಂಢೋಲು ವಾದ್ಯ ! (ಕುಟ್ಟಿಹ. ೦೦). [← ಮರಾ. ರಮಢೋಲ್]

**ರಮಣ** (ನಾ). ೧. ಹಿತವನ್ನು ಉಂಟುಮಾಡುವಂತಹುದು ; ಆನಂದ ದಾಯಕವಾದುದು : "ರಮಣಾರ್ಥಂ ರಮಣೀಯಂ ರಾಮಣೀಯಕಂ" (ಕಕಶಾ. ೦೦೬) ; ಸುಮತಿಗಳು ಪರಮೇಶನೆಂದಡೆ ರಮಣದಿಂ ಪರಮಾತ್ಮ ನೆಂದಡೆ ವಿಮಳತ ಪರಬ್ರಹ್ಮವೆಂದಡೆ ಹರನ ನಾಮವಿವು (ಬಸವ. ೫೫-೩೯). ೨. ವಿಲಾಸ ; ಲೀಲೆ ; ಕ್ರೀಡೆ : ಪರಿಧಾವನ್ನಕ್ರಚಕ್ರಕ್ರಮಣ ರಮಣ ಸಂಜಾತಕಲ್ಲೋಳಮಾಲಾಸ್ಫುರದುದ್ಧತಿಸೀಕರೌಘಸ್ಥಗಿತಗಗನದಿಗ್ಮಂಡಳಂ . . . ಶೋಭಿಕಂ . . . ರೌದ್ರಂ ಸಮುದ್ರಂ (ಎಕ. XI. ದಾವಣ. ೯೭-೯ ; 1164); ರಮಣ ನಿಟ್ಟಿಸಿ ಮುಗ್ಧೆ ಬಾರೆನುತ ಕುಸ್ತರಿಸಿ ರಮಣಮಂ ತೀರ್ಚಿ ಬೆಟ್ಟಂ ಪರಿದು ಸಂತೈಸಿ ರಮಣನಿರ್ವೆತಗೆ ಕಳುಹಿದ (ನಂಕಚ. ೫-೨-೯೨). ೩. ನಲ್ಲ ; ಪ್ರಿಯ : ಪ್ರಮದವನದವರ್ಮಾದ್ಯೌವನೋದ್ಯಾನರಮಣೀರಮಣರಣಿ[ತ] ಗೋಷ್ಠೀಬಂಧಸಂಧಿಪ್ರಬಂಧಾ (ಕಬಿರಾ. ೩-೨೦೨). ೪. ಗಂಡ ; ಪತಿ : "ಕಾಂತಃ . . . ರಮಣಃ, ಪ್ರಾಣನಾಥಃ, ಅನುಕಃ— ಈ ೧೪ ಗಂಡಂ" (ಕಹಾಮು. ೬೨-೬೯೩) ; ರಮಣನಿರೆ ಪಾಣ್ಬನೊಳ್ಪತಿ ರಮಿಯಿಸಿದವಳುಂ ವೃಥಾಸುವಾದದೆ ಫಳಮೇಂ ಕಮಳಿನಿ ದಿನಪತಿಗಲ್ಲದೆ ಸಮನಿಸಿ ದೋಷಾಕರಂಗೆ ಮೊಗಮಿತ್ರಪಳೇ (ಅಪಂಪು. ೦೦-೯೦). ೫. ಕಾಮ; ಮನ್ಮಥ. ೬. ಕತ್ತೆ. [ಸಂ.]

**ರಮಣಿ** (ನಾ). ೧. ಸುಂದರಳಾದ ತರುಣಿ : ರಮಣಿಯ ಮುಖಕ್ಕೆ ಮಣಿಮುಕುರಮನೊಪ್ಪಿರೆ ತೋರ್ಪ ದಿವಿಜವಧು ಸಮ್ಮುಖದೊಳು ಹಿಮ ಕಿರಣಂಗಂ ರವಿಗಂ ಸಮನಿಸಿ ಪೂರ್ಣವೆಯ ಸಂಜೆವೆಣ್ಣಿರ ಪೋಲ್ತಳ್ (ಅಜಿತಪು. ೦೯-೨೬೯). ೨. ಹೆಂಡತಿ ; ಪತ್ನಿ. ೩. ಹೆಂಗಸು ; ಸ್ತ್ರೀ : "ರಾಮಾ . . . ರಮಣೀ . . . ಯುವತಿಃ— ಈ ೨೮ ಸ್ತ್ರೀಯರ್" (ಕಹಾಮು. ೭೯-೬೦೯); ಅರ ಸಿತೇಂದುಗಳಿತಿಬಳರಾಗಿ ಸಮದೊಳರೆ ರಮಣಿ ಪುಟ್ಟುಗುಂ (ಜಾತಕ. ೩-೮೨) ; ೪. ನಲ್ಲೆ ; ಪ್ರಿಯೆ : "ವಲ್ಲಭನು ತನ್ನಲ್ಲಿ ರಮಿಸಲಿಚ್ಛೆಯುಳ್ಳವಳು ರಮಣಿಯೆನಿಸುಗು" (ಜಾತಿ. ೦೦೩) ; ರಂಡೆಯಾಸೆಗೆ ರಮಣಿಯಂದವ ಕೆಡಿಸಿದಂತಾಯ್ತು (ಕೌಶಿಕ. ೫೯-೫೦). [ಸಂ. ರಮಣೀ]

**ರಮಣೀಯ** (ಗು). ೧. ಆನಂದವನ್ನುಂಟುಮಾಡುವ ; ಆಹ್ಲಾದಕರ ವಾದ : ಬಾಸಣಿಸುತಿರ್ಪುದು ಸಾರ್ಥತೆಯಂ ನಿಜಾಬ್ಜೆಯೊಳ್ ನೆರೆವ ಸುಗಂಧಿಮಂಡಳಮಿಳಾರಮಣೀರಮಣೀಯಕುಂಡಲಂ (ಚಂದ್ರಪ್ರ. ೩-೮೬) ; ರಮಣೀಯತರದಸ್ತಂಭಗಳನಗಲಿಸುತ ತಿಮಿರವಿಜೃಂಭಣನು ಮಣಿಮಯ ರಥದಿಂದದರ್ಶನಂಬರವ (ಕೊರಚ. ೩-೨೬-೦೪) ೨. ಚೆಲುವಾದ ; ಮನೋಹರವಾದ ಚಿತ್ರದಲಿ ಚಿತ್ರಿಸುತ್ತಾ ಭಾವನರಮಣೀಯ ರಮಣಿಯಂ ಹೋಲಿಸಿದನಲ್ಲಿ (ಚನ್ನಾಂಗ. ೭೯-೨೦೦೬). (ನಾ). ೩. ಆನಂದ ದಾಯಕವಾದುದು. ೪. ಮನೋಹರವಾದುದು : ಆ ಜಲಪಾತದ ದೃಶ್ಯ ರಮಣೀಯವಾಗಿದೆ (ರೂ). [ಸಂ.]

**ರಮಣೀಯತೆ** (ನಾ). ೧. ಅಂದ ; ಮನೋಹರತೆ : ಅಂತತಿರಮಣೀಯತೆಯನೊಳಕೊಂಡುಬೆಳಜನಮನೋರಂಜನವಾದ ಬೀದಿಗಳೊಳ್ (ಶಗು. ೨-೨೪ ವ). ೨. ಆನಂದವನ್ನುಂಟುಮಾಡುವಂತಹುದು: ಸುಖ ಕೊಡತಕ್ಕ ಅಂಶವು ಒಂದು ಇದೆ. ಇದನ್ನು ರಮಣೀಯತೆ ಎಂದು ಕರೆಯಬಹುದು (ಕೃಬಿ. ೦೬೪). [ಸಂ. ರಮಣೀಯತಾ]

**ರಮಣ್ಯ** (ಗು). ೧. ಸುಂದರವಾದ ; ರಮಣೀಯವಾದ. (ನಾ). ೨. =ರಮ ೧ : "ರಮಂ ರಮಣ್ಯಂ ರಮ್ಯರುಚಿರಂ ಪ್ರವೇಶಮನೆ ಸೌಮ್ಯಕ್ಕೆ ನಾಮಮಕ್ಕುಂ" (ಶಂಗರಾ. ೦೨೬-೨). [ಸಂ.]

**ರಮಲ** (ನಾ). ಕವಡೆ ಹಾಕಿ ಶುಭಾಶುಭಗಳನ್ನು ಹೇಳುವ ಫಲ ; ಜ್ಯೋತಿಷ : ಕನಸು, ಜ್ಯೋತಿಷ್ಯ, ಶಕುನ, ಮುಹೂರ್ತ, ರಮಲ, ದೈವಭಕ್ತಿ ಇತ್ಯಾದಿಗಳು ಒಂದೇ ಮೂಢಭ್ರಾಂತಿಮಾಲೆಯೊಳಗಿನ ಮಣಿಗಳು (ಶಿಕಾಪು. ೬೦). [←ಅರ. ಹಿಂ. ಮರಾ. ರಮಲ್]

**ರಮಲಜ್ಞ** (ನಾ). ರಮಲಶಾಸ್ತ್ರವನ್ನು ತಿಳಿದವನು : ರಮಲಜ್ಞನ ಕಡೆ ವಿಚಾರಣೆ ಆಯ್ತು (ಕವಕ. ೫೩). [ರಮಲ + ಜ್ಞ]

**ರಮಾಧವ** (ನಾ). ೧. ಲಕ್ಷ್ಮೀಪತಿ ; ವಿಷ್ಣು : ಶಿವನಂತೆ ಗಂಗಾಹಿಮ ಕರಾವಹಂ ರಮಾಧವನಂತೆ ಗೋತ್ರೈಕಪಾಲಕಂ (ಕೈಬಿಚಾ. ೬-೫). ೨. [ಜೈನ] ವಾಸುದೇವ : ಅಗಲ್ದು ಪೋದನಧರಾಜಸಿಳಾತಿಳಕಂ ರಮಾಧವಂ (ಧರ್ಮಪ. ೦೩-೯೩). [ಸಂ.]

**ರಮಾರಮಣ** (ನಾ). = ರಮಾಧವ ೧ : ಮಾರಮಣ ಭೂರಮಣ ಪುರಂದರವಿಟ್ಠಲ ಸಾರ್ವಭೌಮ ರಮಾರಮಣ (ಪುರಂದ. ದಾ. ೨-೯೮-೬) ; ರಮಾರಮಣನಾಗಿ ಪ್ರಕಟಿತದ ಧರ್ಮಸಂತತಿಗಳಂ ಪಾಲಿಸುವ ಸುಕುಮಾರ ಮೂರ್ತಿಯಂ . . . ಎನಗೆ ತೋಱಿದುದಿಲ್ಲ (ಕೃಬಿಚಾ. ೩೨-೩೯). [ಸಂ.]

**ರಮಾರಮಿ** (ಗು). ೧. ಎದ್ದು ಕಾಣುವ : ಡಿಕಾವಾದ, ರಮಾರಮಿರಂಗಿನ. ಹೊಸದಾಗಿ ಬಣ್ಣಬಳಿದ (Smart. ೨೦೪೩). (ನಾ). ೨. ಜಮೆ ಮತ್ತು ಖರ್ಚು ಸಮಾನವಾಗಿರುವುದು ; ನಷ್ಟವಾಗದಿರುವುದು. ೩. ಎಲ್ಲಾ ವಿಧದಲ್ಲಿಯೂ ಒಂದೇ ಸಮನಾಗಿರುವುದು ; ಸಮತೆ [← ಮರಾ. ರಮಾರಮ, ರಮಾರಮಿ]

**ರಮಾವಲ್ಲಭ** (ನಾ). = ರಮಾಧವ ೧ : ಆ ವಿನುತಚಟ್ಟ ಸೆಟ್ಟಿ ರಮಾವಲ್ಲಭನಂ ವಧುವರಸಮ್ವೆವೆರಸು ಸದ್ಭಾವದೆ ಪೂಜಿಸಿ (ಕಲ್ಯಾಣ. ೯-೨೬; 1147). [ಸಂ.]

**ರಮಿತ** (ಗು). ಆನಂದಗೊಳಿಸಲ್ಪಟ್ಟ ; ಹರ್ಷವನ್ನು ತಂದ : ಎಲ್ಲರುಂ ಕಾಂತಾರಮಿತಭೋಗಸಂಪದರ್ಕುಜರೆನಿಸರವನಿಳೆಯೊಳು (ಪ್ರಭುಶಾ. ೨-೧೧). [ಸಂ.]

**ರಮಿಯಿಸು** ' ರಮಿಸು ' ನೋ.

**ರಮಿಸು**, ರಂಬಿಸು, ರಮಿಯಿಸು, ರಮ್ಮಿಸು (ಕ್ರಿ). ೧. ಆನಂದಪಡು ; ಸುಖಿಸು : ಮೆರೆದುದು ವಿಷಯಮಧ್ಯ ರಾಜಧಾನಿ ಅಯೋಧ್ಯೆ, ರಮಿಸು ವಿಂದ್ರಿಯಸುಖದ ನಡುವಣಾತ್ಮಾನಂದದಂತೆ (ಶ್ರೀರಾಪಟ್ಟ. ೬-೧೫೮) ; ಮೇರಿಯ ಪ್ರೇಮಸರೋವರದಲ್ಲಿ ರಮಿಸುವ ನಾರಾಯಣಶಾಸ್ತ್ರರಿಗೆ ಹೊರಪ್ರಪಂಚದ ಅರಿವಿದೆಯೋ ? (ಶಾವೇಂ. ೬) ; ಇವನಲ್ಲಿ ಯೋಗಿಗಳು (ಆನಂದಿಸುವರು) ರಮಿಸುವರಾದುದರಿಂದ 'ರಾಮ' ಎಂಬ ಶಬ್ದವು ಬಂದಿದೆ (ಶಾರದ. ೯೯). ೨. ಪ್ರೀತಿಯಿಂದ ಸಮಾಧಾನಮಾಡು ; ಸಂತೈಸು : ಒಡಲುರಿಗೆ ಮೊರೆಯಿಡುವ ಕಡಲಸು ಕಡುಪಿನೊಳು ಮುದ್ದಾಡಿ ರಮಿಸುವೆ (ಗಂ. ೫-೧೯) ; ಅವಳೊಪ್ಪದಿರಲು ಗಂಡು ಅನೇಕ ರೀತಿಯಿಂದ ರಮಿಸಿ ಸಮಾಧಾನ ಹೇಳುತ್ತದೆ (ಕನ್ನಜಾ. ೧೧೮) ; ಅವನನ್ನು ರಮಿಸಬೇಕಾದರೆ ನರಹರಿಗೆ ಸಾಕುಬೇಕಾಯಿತು (ಸಮುಕೀ. ೧೯೪) ; ಮಗನನ್ನು ಮುದ್ದಿಸಿ, ರಮಿಸಿ ಪೆಪ್ಪರ್‌ಮೆಂಟು ತಂದುಕೊಡುವುದಾಗಿ ಹೇಳಿ . . . ಹೊರಟ (ರಂಶಿಟ್ಟ. ೧೬೦). ೩. ಸಂಭೋಗಿಸು ; ಕ್ರೀಡಿಸು " ರಮಿಸು-- ಕ್ರೀಡಾಯಾಂ " (ಶಮಧಾ) ; ಮಿಕ್ಕ ಹೊಲತಿಯರು ನೀವೆನೆ ನಿಮ್ಮ ಜವ್ವನದ ಸೊಕ್ಕು ರೂಪಿನ ಗಾಡಿ ಜಾಣತನದೊಪ್ಪವೇತಕ್ಕೆ ಯೋಗ್ಯಂ ರಮಿಸಿದವರುಂಟೆ ಶಿವಶಿವ (ಹಕಾ. ೬-೧೮) ; ಪುರುಷನೊಬ್ಬನಿರಲ್ಕೆ ಕಾಮಾತುರವಡಿಸಿ ನಿನ್ನಂ ರಮಿಸುವುದು ನೀತಿಯಲ್ಲೆನಗೆ (ಬಸವ. ೯೨-೩೨). ೪. ಆಸೆಪಡು ; ಕಾಮಿಸು : ಉದಿರ್ದಂಗದ ಬಾಪನ್ನವುಡಿಯ ಸೊಗ ಸೊವಮೆ ರಮಿಸಿದಾ ನವಸೌಗಂಧಕೆ ಪದೆದೆಱಗುವ ಪೊಸಪಱಮೆಗಳ ಪಸುಳೆಯಿಂಚರಬೊಪ್ಪಿದುವು (ಜಯುಕಾ. ೪-೪). ೫. ಆನಂದವನ್ನುಂಟುಮಾಡು; ಸಂತೋಷಗೊಳಿಸು : ಬಿಲ್ಗೋಲಾಂತು ನಿಂದುದು ಬೇಡವೆಣ್ಗಳು ಕಣ್ಗೆ ರಮಿಸೆ (ಶೋಹಕ. ೧೯-೬೦). **ರಂಬಿಸು** : ೨. ನಮ್ಮ ರಂಗ ಆಡಿದ ನೋಕುಳಿಯ ರಂಬಿಸಿ ಕರೆದು ಚುಂಬಿಸಿ ಒಗೆದನು ರಂಭೇರಿ ಗೋಕುಳಿಯ (ಕುರ್ಕಂದ. ೫-೦೨೯ ಅಮಕಲ್ಲಬಿ) ; ವನದೇವಿ ಮೆಲ್ಲಡಿಯಿಡುತ ತಾ ಬಂದು ಗಲ್ಲವ ಪಿಡಿದು ತೊಡೆಯೊಳಿಟ್ಟು ರಂಬಿಸಿ ಬಲ್ಲಿದನಾಗೆಂದು ಹರಸಿ (ಕಂದ್ರಹಾ. ೧-೫೮) ; ನಂಬಿಸಿ ರಂಬಿಸಿ ಚುಂಬಿಸಿ ಎದೆಗೊಂಬಿ ಬಿಂಬೀಸಿ ಎದೆಯೊಳಗ ಅಂಧಾಂಗ (ಕಬೀಗೀ. ೫೧-೫) ; ಬಗೆಬಗೆಯಾಗಿ ರಂಬಿಸಿದೆ. ತಿಂಡಿ ಕೊಡುವೆನೆಂದು ಆಶ ಹಚ್ಚಿದೆ (ಶಂಮುಖಿ. ೧೯). ೪. ಸಂಘೋಶಂಕರ ಎಂದು ರಂಬಿಸಿ ಕರೆವೆ (ಕಹಾಗೀ. ೪೨೨). **ರಮಿಯಿಸು** : ೧. ಸಮುದಿತಸಮಸ್ತ ಲೋಕಂ ರಮಿಯಿಸುವ ವನಾಂತಮಂತದುದ್ಯಾನವನಂ (ವಸ್ತುಕೋ. ೩೨-೧೩). ೩. ಅಲ್ಲಿಯ ತೊಡರ್ದಲ್ಲಿಯೆ ನಿಂದಲ್ಲಿಯೆ ರಮಿಯಿಸಿದಳಾಕೆ ಮರು[ದಾ]ತ್ಮಜನೊಳ್ (ಶಂಕಶಾ. ೩-೧೯) ; ಕನಕಮೂಲಮುಂ ಕೊಂಡು ಕಟ್ಟಿ ಕಟಿಯೊಳ್ ಪುರುಷಂ ರಮಿಯಿಸಿದಂದಾಕೆಗೆ ಗರ್ಭವಾಗದು (ಲೋಕೋಪ. ೯-೦೬೦). **ರಮ್ಮಿಸು** : ೧. ರಮ್ಮೆಯರೊಡಗೂಡಿ ರಮ್ಮಿಸುವ ಶ್ರೀಕೃಷ್ಣ (ಲಕ್ಷ್ಮೀಶೋ. ೬೦). ೨. ನಿಮ್ಮ ಹಾಗೆ ವಿದ್ಯಾರ್ಥಿಗಳ ಗದ್ದ ತುಟಿ ಹಿಡಿದು ರಮ್ಮಿಸುತ್ತಿರಲಿಲ್ಲ (ರಂಗರೋ. ೧೨೫). [ರಮ + —ಇಸು₃]

**ರಮೆ** (ನಾ). ೧. ಪತ್ನಿ ; ಹೆಂಡತಿ. ೨. ಲಕ್ಷ್ಮಿ : " ಇಂಗಡಲಣುಗಿ ರಮೆಯೆನಿಕ್ಕುಂ " (ಶಕುಬಿ. ೧೧೩) ; ಇದನು ಕೇಳುವ ಸಜ್ಜನಂಗಳ ಸದನದಲಿ ರಮೆ ನೆಲಸುವಳು (ಕೌಶರಾ. ೨-೬೪). ೩. ಸಿರಿ ; ಸಂಪತ್ತು. ೪. ಶೋಭೆ : ತೇಜಸ್ಸು. ೫. ಸಂಭೋಗ ; ಕೂಟ : " ಕೂಡೆ ಭೋಗಿಪಲ್ಲಿ ರಮಾಭಿಧಾನಮಕ್ಕುಂ " (ಮಂಗರಾ. ೦೫೬-೬೪). ೬. ಹೆಣ್ಣು ; ಸ್ತ್ರೀ : " ಸ್ತ್ರೀಯುಂ ಸಂಭೋಗಮುಂ ಗೋಪಿನಿಯಿನಿತು ರಮಾವಾಚಕಂ " (ಶಾಶಾರ. ೧೪೦). [ಸಂ. ರಮಾ]

**ರಮ್ಮ** (ಗು). ೧. ಚೆಲುವಾದ ; ಸುಂದರವಾದ. (ನಾ). ೨. ಅಂದವಾದುದು ; ಮನೋಹರವಾದುದು : ' ರಮ್ಮಿಡು ' ಪರಾ. [<ಪ್ರಾ. ರಮ್ಮ./ಸಂ. ರಮ್ಯ]

**ರಮ್ಮಜಾನು** ' ರಮಜಾನು ' ನೋ.

**ರಮ್ಮಿ** (ನಾ). ಇಸ್ಪೇಟು ಆಟದಲ್ಲಿ ಒಂದು ಬಗೆ : ಕೆಲಹೊತ್ತು ರಮ್ಮಿಯಾದರೂ ಆಡೋಣ (ಆಶೋರೀ. ೧೨೮). [←ಇಂ. Rummy]

**ರಮ್ಮಿಡು** (ಕ್ರಿ). ಚೆಲುವಾಗು ; ಶೋಭಿಸು : ಹಮ್ಮಿನಿಂ ರಮ್ಮಿಡುವ ಮಕುಟವ ಚಿಮ್ಮಿದವು ಮುಮ್ಮುಖದಿ ಕವಚವ ನೆಮ್ಮಿದವು ದುಮ್ಮೆಸ್ಗಿ ಮಹಿಷಾಸುರನ ಶರಜಾಲ (ಶಂಬಕಾ. ೨೩-೨೩). [ರಮ್ಮ + ಇಡು₁]

**ರಮ್ಮಿಸು** ' ರಮಿಸು ' ನೋ.

**ರಮ್ಮೆ** (ನಾ). ೧. = ರಮೆ ೨ : ಒಮ್ಮಾನದಿಂದ ನೋಡೆನೆಂಬ ಭರದಿಂದ ರಮ್ಮೆ ಮುಖವ ತಗ್ಗಿಸಿ ನಾಚಿದಳು (ಪ್ರಾರಿಕೀ. ೧೫೮-೬). ೨. ಸುಂದರಳಾದ ಸ್ತ್ರೀ—ತರುಣಿ : ರಮ್ಮೆಯರೊಡಗೂಡಿ ರಮ್ಮಿಸುವ ಶ್ರೀಕೃಷ್ಣ (ಲಕ್ಷ್ಮೀಶೋ. ೬೦).

ರಮ್ಮೆಯರಸ = ಲಕ್ಷ್ಮೀಪತಿ ; ವಿಷ್ಣು : ತಿಮ್ಮಯ್ಯಾ ನಿನ್ನ ಪಾದವ ನಮ್ಮೈಸಿದೆನೊ ನಾನು ಸುಮ್ಮನಿರದಿರು ರಮ್ಮೆಯರಸಾ. (ತೀರ್ಥಪು. ೧೯೮) ; ಪರಮ್ಮಪುರುಷ ಪುರುಷೇಶ್ವರ ರಮ್ಮೆಯರಸ ರಾಗಾದಿ ದೂರಾ (ಪೋಕ್ಷರೀ. ೨೬-೨). [ < ರಮೆ ]

**ರಮ್ಯ** (ಗು). ೧. ಚೆಲುವಾದ ; ಸುಂದರವಾದ : ಅಕ್ಷಯಕೀರ್ತಿ . . . ರಮ್ಯಸುರಲೋಕಸುಕಕ್ಕೆ ಭಾಗಿ (ಎಕ. II, ೨೧-೪; ಸು. 700); ವಸಂತನವೊಲ್ ಕರಮೆಸೆದಂ ರಮ್ಯಗಾತ್ರನಾ ಮುನಿಪುತ್ರಂ (ಶಾರಂಪು. ೬೨೬). ೨. ಸಂತೋಷದಾಯಕವಾದ. (ನಾ). ೩. ಚೆಲುವಾದುದು ; ಸುಂದರವಾದುದು : " ರಮಂ ರಮಣ್ಯಂ ರಮ್ಯ ರುಚಿರಂ ಪ್ರವೇಕಮೆನೆ ಸೌಮ್ಯಕ್ಕೆ ನಾಮಮಕ್ಕುಂ " (ಮಂಗರಾ. ೦೨೬-೨). [ಸಂ.]

**ರಮ್ಯಂಬಡೆ**, ರಮ್ಯವಡೆ (ಕ್ರಿ). ಚೆಲುವಾಗು ; ಸುಂದರವಾಗು : ಒಂದಾತ್ರಮಪಟದ ಸುರುಳ್ದೆಗೆಯುತ ಮುಖವಸ್ತ್ರವನು ಕಳೆಯಲ್ ಕುವರನ ಚೆಲ್ವಂ ಚಿತ್ರದ ನಳಿನವಿಲೋಚನೆ ನೋಡುವೆನೆನುತಂ ಗಳಲನೆ ಮುಸುಕಂ ತೆಗೆದಂದದಿನತಿರಮ್ಯಂಬಡೆಯಿತ್ತು (ಜಯುಕಾ. ೩-೬) : **ರಮ್ಯವಡೆ** : ನಡಗರದೊಳು ಬಂದು ಕಂಡನು ಬಹು ರಮ್ಯವಡೆದಿರ್ದ ಭಾಗೀರಥಿಯ (ಶೋಹಕ. ೬-೩೦). [ ರಮ್ಯ + ಪಡೆ₁ ]

**ರಮ್ಯತೆ** (ನಾ). ಚೆಲುವು ; ಸೌಂದರ್ಯ : ಹಳ್ಳಿಯ ಜೀವನದ ರಮ್ಯತೆ— ವಿಷಮತೆಗಳು . . . ವ್ಯಕ್ತವಾಗಿವೆ (ಸಮುಕೀ. ೮ ಪೀಠಿ). [ ಸಂ. ರಮ್ಯತಾ ]

**ರಮ್ಯತೆವಡೆ** (ಕ್ರಿ). ಚೆಲುವಾಗು ; ಶೋಭಿಸು : ಎಡಬಲದಲಿ ಸತ್ಯಭಾಮೆ ರುಕ್ಮಿಣಿಯ ಹೊಂದೊಡವಿನ ರತ್ನದೀಪ್ತಿಗಳ ಪಡೆದ ತಾಯೆಂಬಂತೆ ಕೌಸ್ತುಭ ರಮ್ಯತೆವಡೆದುದು ಹರಿಯುರಸ್ಥಳದಿ (ಶೋಹಕ. ೦೫-೧೧). [ ರಮ್ಯತೆ + ಪಡೆ₁ ]

**ರಮ್ಯತ್ವ** (ನಾ). = ರಮ್ಯತೆ : " ರಾಮಣೀಯಕಂ ರಮ್ಯತ್ವಂ " (ವಸ್ತುಕೋ. ೦೦೬-೩೦). [ ಸಂ.]

**ರಮ್ಯವಡೆ** ' ರಮ್ಯಂಬಡೆ ' ನೋ.

**ರಯ್**₁ (ನಾ). ವೇಗವನ್ನು ಸೂಚಿಸುವ ಒಂದು ಅನುಕರಣ ಶಬ್ದ : ' ರಯ್ಯನೆ ' ಪರಾ.

**ರಯ್**₂ (ನಾ). ಸಂಪತ್ತು ; ಸಮೃದ್ಧಿ : ರಯ್‌ಗೆ ಕರೆದೊಯ್, ಓ ಅಗ್ನಿ ! (ಶ್ರೀರಾಪಟ್ಟ. ೯೨೬-೧). [<ಸಂ. ರೈ ]

**ರಯು** (ನಾ). ೧. ವೇಗ ; ರಭಸ : " ರಯುಂ ಜವಂ . . . ವಾಜ ಮೆನಲೋಟಮಕ್ಕು " (ಮಂಗರಾ. ೬೦-೨) ; ಜಲಪ್ಲಾವಿಳ ವಿಲೋಳ

ವೀಚೀರಯಪ್ರದಾರಿತ್ರಕುಳಾಚಲೋದಧಿಪರೀತಮಾಗಿರ್ದ ಜಂಬೂದ್ವೀಪದೊಳ್ (ಕಾಶಿ. ೦-೫೦ ಪ). ೨. ನೀರಿನ ಹರಿವು ; ಪ್ರವಾಹ : " ಓಘಃ. ಪ್ರವಾಹಃ . . . ರಯಃ — ಈ ೬ ತೊಱೆಯ ಹರಿಹಂ " (ಹಲಾಯು. ೦೦೦-೯೬) ; ಹರನಂತೆ ಧನದಸಖ ನವರತ್ನದಂತೆ ಗುಣವಿರಚಿತೆ . . . ಸದ್ವರುಷಯುತು ನಿಮ್ನಗಾರಯದಂತೆ ರಚಿತಾನುಕೂಲೆ (ಕಬಿ. ೦೦-೩೬). [ಸಂ.]

**ರಯುಗ** (ನಾ). ವೇಗವಾಗಿ ಚಲಿಸುವುದು ; ಗಾಳಿ ; ಮಾರುತ. **ರಯುಗಸಖನೇತ್ರ** = ವಾಯುವಿನ ಮಿತ್ರನಾದ ಅಗ್ನಿಯನ್ನು ಕಣ್ಣಿನಲ್ಲಿ ಹೊಂದಿರುವವನು ; ಶಿವ : ರಯುಗಸಖನೇತ್ರನಂ ಪಂಚಶರದಿಂದೆಚ್ಚ ಮಯಣರಾಜನ ಸುಪ್ರತೀಕವೇ ದಿಗ್ಗಜ (ಶೃಂಖು. ೩-೦೦೩). [ಸಂ.]

**ರಯುಗಮನೆ** (ನಾ). ಚುರುಕಾದ ನಡಗೆಯುಳ್ಳವಳು : ಸತಿತಳು ಭೃತ್ಯಭಕ್ತೆಗೆ ರಯುಗಮನೆ (ಅಗ್ನಿಪು. ೬೦). [ ಸಂ. ರಯುಗಮನಾ ]

**ರಯಪತಿ** (ನಾ). ಗಾಳಿಯ ಅಧಿದೇವತೆ ; ಮಾರುತ : ರಯಪತಿಯುಂ ಧನಪತಿಯುಂ ಪಶುಪತಿಯುಮೆಂಬಿದಿಗಾಪತಿಗಳ್ . . . ಇರ್ದರ್ (ಕಶ್ಯಪ. ೦೦-೬೦). ' ರಯುಗ ' ಪರಾ. [ಸಂ.]

**ರಯಿ** (ನಾ). ಸಂಪತ್ತು ; ಐಶ್ವರ್ಯ : " ರಯಿ (ರಮ್ಯ ) — ರೈ = ಸಂಪತ್ತು " (ಕನ್ನಕೋ. ೩೬). [ ಸಂ. ]

**ರಯಿಸು, ರೈಸು** (ಕ್ರಿ). ಶೋಭಿಸು ; ರಂಜಿಸು : ಮತಂಗನೊಲವಿಂದೆ ಬಾಜಿಸುವ ಘನಮೃದುತರ ಮೃದಂಗಗತಿ ರಯಿಸಲು (ಸೌಂದಪು. ೦-೯೦). **ರೈಸು :** ನಾಗ ಇಲ್ಲದ ಮನೆ ರೈಸುವುದೇ ಇಲ್ಲ (ಹಸಿ. ೦೦); ಮಕ್ಕಳು ಮನೆಯಲ್ಲಿ ಆಚೀಚೆ ಓಡಾಡದೆ ಹೋದರೆ ಏನೂ ರೈಸುವುದಿಲ್ಲ (ಮರಕು. ೦೦೬). [< ರಮ್ಯ$_8$ +— ಇಸು$_3$]

**ರಯೆ** (ನಾ). = ರಯ ೧ : ಕರಿಯಂ ಪಿರಿಯ ಕುದುರೆಯಂ ತೇರ್ವೆಸಿರಿಯಂ ಪದಚರರಯೆಯುಂ ಕೊಂಡ . . . ಗಣವರಿಯರನಾಂ ತುತಿಪೆಂ (ಉದ್ಭರೇ. ೦-೦೯). [ಸಂ. ರಯ]

**ರಮ್ಯ** (ಗು). ೧. ಚೆಲುವಾದ ; ಸುಂದರವಾದ : ಉಲಿವ ಕಾಲುಂಗುರವನಾ ರಮ್ಯಪಿಲ್ಲಿ ಮುಂಟಿಗೆ ಕಿಱಿಯ ಪಿಲ್ಲಿಗಳನಾ ರಮಣಿಗೊಲ್ದಲಂಕರಿಸಿ (ಪದ್ಮರಾ. ೩-೯೩). (ನಾ). ೨. ಅಂದವಾದುದು ; ಮನೋಹರವಾದುದು : ಇವರಂದಂ ಬಿಸವಂದಂ . . . ಇವಱೊಳ್ ನಾಟಕಶಾಲೆ ರಮ್ಯಂ (ಶಂಖಶಾ. ೬-೩); ಜಸವಡೆದಂದು ಶ್ರೀರಂಗಪಟ್ಟಣ ಭಾಗ್ಯದೆಸಕದೊಳತಿರಮ್ಯವಾಗಿ (ಶಂಕರ. ೩-೨). ' ರಮ್ಯಂಬಡೆ ' ಪರಾ. [< ಸಂ. ರಮ್ಯ]

**ರಮ್ಯಂಬಡೆ. ರಮ್ಯವಡೆ** (ಕ್ರಿ). ಚೆಲುವಾಗು ; ಸೊಗಸಾಗು : ನವರತ್ನ ರಂಜಿತಮಾಗಿ ರವಿಮಂಡಲಮಂ ಮುಂದಾಡುವ ಸುವರ್ಣಕಳಶ ದರ್ಪಣಂಗಳಿಂ ರಮ್ಯಂಬಡೆದು (ಗಿರಿ. ೦೦-೨೯ ಪ). **ರಮ್ಯವಡೆ :** ಕಡೆಯಾಣಿ ಚಿನ್ನದ ಪ್ರತಿಮೆಗೆ ಹುಳಿಯನು ತೊಡೆದೊಪ್ಪವಿಕ್ಕಿದಂದದಲಿ . . . ರಮ್ಯವಡೆದಿರ್ದಳೀನ ಬಣ್ಣಿಸುವೆ (ವೀರಶೈ. ೦೬-೨೦). [ರಮ್ಯ + ಪಡೆ$_1$]

**ರಮ್ಯನೆ** (ಅ). ವೇಗವಾಗಿ ; ಜೋರಾಗಿ : ನಸುನಗೆ ದಶನಪ್ರಭೆಯಿಂದ ಕೂಡಲು ದೆಸೆ ಧವಳಿಸುವಪೊಲೊಪ್ಪು ರಮ್ಯನಾ ವೀಳಯಕೆ ನೀಡಿದಪ ಕಯ್ಯ (ಚಾಂದ. ೪೯೨); ಕಾನನಕರಿಯಂತೆ ಬಂದುದೆಲರೊಯ್ಯನೆ ರಮ್ಯನೆ ಪಾರಿದೇರಿದಂ (ಅರ್ಗಪಿ. ೩-೯೮); ರಮ್ಯನೆ ಬರ್ಪ ಪಗೆಯ ಪೊಸಕಣೆಗಳಂ ಪಿಂಡಿಸಿ (ರಾಜಶೇ. ೯೩-೩). [ರಯ್$_1$ +— ಅನೆ$_1$]

**ರಮ್ಯಪ** (ನಾ). ಒಬ್ಬಾತನ ಹೆಸರು : ಇದಕ್ಕೆ ಸಕ್ಕಿ ಮುಂದಿರೆ ಬೂವಯ್ಯ ಬೆಳ್ಳನ ಕರಕುಡಿ ಬಾರದರೆಜೆಯಮ್ಮ ಕೆದಟೆಯ ರಮ್ಯಪ (ಎಕ. IV. ಹುಣಸೂ. ೯೨-೦೨ ; ೪೨೦). [ರಮ್ಯ$_8$ + ಅಪ (< ಅಪ್ಪ$_1$)]

**ರಮ್ಯರಲ್** (ನಾ). ಸುಂದರವಾದ ಹೂವು ; ಸೊಗಸಾದ ಪುಷ್ಪ : ಕೆಯ್ಯದ ಮುಗಿದಿರೆ ಪೂಜಿಸಿ ರಮ್ಯರಲಂ ಕೊಟ್ಟಸಭವನಂಬಾರಮಣಂ (ಜಿನಾಕ್ಷ. ೨-೦೯). [ ರಮ್ಯ + ಅರಲ್$_2$ ( < ಅಲರ್$_2$ ) ]

**ರಮ್ಯವಡೆ** ' ರಮ್ಯಂಬಡೆ ' ನೋ.

**ರಲ್ಲಕ** (ನಾ). ೧. ಉಣ್ಣೆಯಿಂದ ತಯಾರಾದುದು ; ಕಂಬಳಿ : "ಆವಿಕಃ, ಔರಭ್ರಃ, ರಲ್ಲಕಃ, ಊರ್ಣಾಯುಃ. ಕಂಬಳಃ— ಈ ೫ ಕಂಬಳಿ" (ಹಲಾಯು. ೯೦-೩೯೬). ೨. ರೆಪ್ಪೆಯ ಕೂದಲು ; ಎವೆಗೂದಲು. ೩. ಒಂದು ಬಗೆಯ ಜಿಂಕೆ. [ಸಂ.]

**ರವ** (ನಾ). ಧ್ವನಿ ; ಶಬ್ದ : " ಘೋಷಮಾ ಶಬ್ದವಾ ರವಂ " (ಶಬ್ದಗಣ. ೯-೩೦) ; ಚಾರುತರಯಜ್ಞವಿದ್ಯಾಪಾರಗರ ರವಂಗಳಂ . . . ನೆಗಬ್ದುದಾಹುತಿಧೂಮಂ (ಶಂಖಶಾ. ೬-೩೯) ; ವಿಮೋಹಮೃಗಮಂ ಮಿಥ್ಯಾಕಂದರದೊಳ್ ಬೆದಱಿಟ್ಟುವ ದುಂದುಭಿರವದಂತಿರೊಗೆಯೆ ಗಂಭೀರರವಂ (ಧರ್ಮಾ. ೯-೨೨). [ಸಂ.]

**ರವಂಗುಡು** (ಕ್ರಿ). ಧ್ವನಿಮಾಡು ; ಶಬ್ದಮಾಡು : ಕಲರುತಿಕಿಂಕಿಣೀಕಲಿತಕಾಂಚಿ ರವಂಗುಡೆ . . . ನೀಱೆ ಬಿಡದೇಱಿದ್ದಳೊಯ್ಯನೆ ರಮ್ಯಹರ್ಮ್ಯಮಂ (ರಾಜಶೇ. ೭-೦೬). [ರವ + ಕುಡು$_1$ (<ಕೊಡು$_1$)]

**ರವಕುಳ, ರೌಕುಳ** (ನಾ). ೧. ಹಾಹಾಕಾರ ; ಆಕ್ರಂದನ ; ಬೊಬ್ಬೆ : ರವಕುಳವ ನಾನೇನ ಹೇಳುವೆನವನಿಪತಿಯಾ ಕರ್ಣ ಮೊದಲಾದವರ ರಾಣೀವಾಸ ಬಹಳಾಕ್ರಂದನಧ್ವನಿಯ (ಕುಮಾವ. ೧-೬). **ರೌಕುಳ : ೨.** ಅವ್ಯವಸ್ಥೆ : ಚೆಲ್ಲಾಪಿಲ್ಲಿ: ಬಲುಸಿರಿಯ ನಾರಾಚಜಾಳದ ಮಳೆಯು ನೆತ್ತರ ಪೊನಲುಗಳ ರೌಕುಳದ ಮಳೆಗಾಲದಲಿ ಹುಟ್ಟಿತು ಭಟರ ಶೌರ್ಯಶಿಖಿ (ಕುಮಾದ್ರೋ. ೦೩-೨೯) ; ದಿಂಡುಗೆಡೆದುದು ನೆಲಕೆ ರಕ್ಕಸದಿಂಡೆಯನ ರೌಕುಳದ ರಕುತದ ಮುಂಡ (ತೊರರಾ. ೦-೧೦-೧೮). ೩. ಅತಿಶಯ ; ಆಧಿಕ್ಯ : ಜೋಲ್ವ ಖಂಡಗಳ ಮುಂಡಗಳ ಮುರಿಮೂಳೆವಿಂಡುಗಳ ಪೊಸಬಗೆಯ ಜೊಂಡುಗಳ ರೌಕುಳಂ ಕಂಗೆಸೆದುದು (ಕಬಿ. ೨೬-೦೯). [←ಮರಾ. ರವಖಿಳ್]

**ರವಕೆ** ' ಱವಿಕೆ ' ನೋ.

**ರವಣ$_1$** ' ರಪಣ ' ನೋ.

**ರವಣ$_2$** (ಗು). ೧. ಅಳುವ ; ರೋದಿಸುವ. ೨. ಹಾಸ್ಯಕರವಾದ ; ವಿನೋದಕರವಾದ. ೩. ಚಂಚಲವಾದ; ಅಸ್ಥಿರವಾದ. ೪. ಸುಡುವ; ಚುರುಕಾದ. (ನಾ). ೫. ಕೋಗಿಲೆ. ೬. ಒಂಟೆ : "ದಾಸೇರಕಃ . . . ಮಯಃ, ರವಣಃ, ಕರಭಃ, ಶೃಂಖಳಕಃ—ಈ ೭ ಒಟ್ಟೆ"(ಹಲಾಯು. ೯೬-೦೨೩). [ಸಂ.]

**ರವಣೆ** ' ರವಳಿ ' ನೋ.

**ರವಣೆ** (ನಾ). ಧ್ವನಿ ; ನಾದ : ವಿವಿಧವೀಣಾವಾದ್ಯಕೋಮಲರವದ ಮಧುರಮೃದಂಗತತಿಗಳ ರವಣೆಗಳ . . . ಮೇಳವು ಮುತ್ತಿ ಮುಸುಕಿತು (ಕುಮಾಆ. ೦೨-೦೯) ; ಮೇಲುವಾದ್ಯದ ರವಣೆ ನಿಂದತ್ತು (ರಾಜಮಂ. ೨-೪-೯೩). [ಸಂ. ರವಣ]

**ರವದಿ** ' ರವದೆ ' ನೋ.

**ರವದೆ, ರವದಿ** (ನಾ). (ಉಕ) ಜೋಳ ಮುಂತಾದುವುಗಳ ಒಣಗಿದ ಗರಿ ; ಸೊಪ್ಪೆ : ಬರುಗಾಳಿಗೆ ಸಿಕ್ಕಿದ ರವದೆಯು ಮೇಲಕ್ಕೆ ಹಾರುವಂತೆ (ಶ್ರೀರಾಪ. ೩೦) ; ಗಾಳಿಗೆ ಹೊಲದಲ್ಲಿಯ ರವದೆ ಸಪ್ಪಳ ಮಾಡಿತು (ಕಡುಗೋ. ೩೬). **ರವದಿ :** ಅವನಿಯೊಳು ಭಿಕ್ಷುಕಂ ರವದಿಗಿಂ ಬಲು ಹಗುರು (ಜುಲ್ಲಿಶ. ೯-೩) ; ರವದಿಯನ್ನೆತ್ತಿ ತಿಟಿಹಚ್ಚು ಕೂದಿದನು ನಾ (ಹರೀಗೀ. ೬೬-೦೩); ದುರ್ಧರಪರಿಸ್ಥಿತಿಗೆ ಸಿಕ್ಕ ರವದಿಯಂತ್ರ ಹಾರಾಡುವುದು ಜಯಂತನ ಸ್ಥಿತಿಯಾಗಿದೆ (ಜಯಂತ. ೨೫೯). [ ? ]

**ರವದೋಱು** (ಕ್ರಿ). ಧ್ವನಿ ಮಾಡು : ಹೇಳು : ದಿವಿಜರಾಜಸನ್ನಿಭಯಾಪ ರಾಜನೆಯ್ದುಂದನವಧಾನ ಸ್ವಾಮಿ ಪರಾಕು . . . ಎಂದು ರವದೋಱಿದರು ವೇತ್ರಧರರು (ಶಶಕ. ೩೮-೩೦). [ರವ + ತೋಱು]

**ರವನಿಸು** (ಕ್ರಿ). (ಜರಡಿಯಂತೆ) ತೂತಾಗು : ರಂಧ್ರಗಳಿಂದ ತುಂಬು : ದಿವಿಜರಿಪುಗಳ ಬಾಣವೃಷ್ಟಿಗೆ ದಿವಿಜನಿಕರವುಪಾಸ್ಯತತಿಯಲಿ ರವನಿಸಿತು ರವಿಮಧ್ಯ (ತಭಾಗ. ೬-೧೦-೧೮).

[ರವನ್ಸ (?← ಮರಾ. ರವಳ) + — ಇಸು]

**ರವರವ** (ಗು). ಭಯಂಕರವಾದ ; ಘೋರವಾದ : ಈ ಧರ್ಮ್ಮವ ತೊಡದವ ರವರವನರಕದ ಕಡಲೊಳ್ ಕೆಡದವ (ಎಕ. VII, ಶಿಮೊ. ೬೮-೨೪; ೧೩೨೦). [< ಪ್ರಾ. ರಉರವ. / ಸಂ. ರೌರವ]

**ರವಸ** (ನಾ). ಆರ್ಭಟ : ರಭಸ: ಹೊಯಿಂದ ಭೇರಿಯ ನಾದ ಸಾಗಿತ್ತಲ್ಲಿಗೆ ಅದನಾರು ಬಲ್ಲರು ಮೇಧಿ ರವಸವ (ಬಸವಪು. ೨೬೦-೪೦೩). ಭರ ಧನುವ ಠೇಂಕರಿಸಿ ರವಸದಿ ದ್ರುಹಿಣಮಂಡಲವನು ದಿಕ್ತಟವನಳ್ಳಿರಿಯ ಪೂಡಿದರು ರಥವೆರಡ ಯುಕ್ತಿಯಿಂ ಗರುಡ ಹನುಮಂತರಂ ಸಿಂಧಕವನೆತ್ತಿದರು ಜೋಡಿಸಿದರೇರಿದರು ರಥವ ಪರಿಸಿವರಿವರು ಖಾಂಡವನಕ (ಸುರಂಗ. ೦೬-೨೯).

[< ಸಂ. ರಭಸ]

**ರವಸಂಗತಿ** (ನಾ). [ಸಂಗೀತ] ಸಪ್ತಸ್ವರಗಳ ಸಪ್ತಅವಸ್ಥೆಗಳಲ್ಲಿ ಒಂದು : ಷಡ್ಗಮಪಧನಿಯೆಂಬ ಸಪ್ತಸ್ವರಪ್ರಕೃತಿಗಳಿಂ ಅಂಕುರಸ್ಥಾಯಿ . . . ರವಸಂಗತಿ . . . ಮುಕ್ತಾಯಗಳೆಂಬ ಸಪ್ತಾವಸ್ಥೆಗಳಲ್ಲಿಯುಂ (ಶಿತತ್ವ. ೨೬೩). [ಸಂ.]

**ರವಳಿ**, ರವಣೆ (ನಾ). ೧.(ವಾದ್ಯ ಮುಂತಾದುವುಗಳ) ಧ್ವನಿ; ಘೋಷ; ಶಬ್ದ : ಪೊಯ್ಲ್ಮಿಕ್ಕವದ್ದಳೆಯ ದನಿಯುಂ ಉದ್ದುವ ಜುಂಜಿಯ ರವಮುಂ ಬಾರಿಪ ಜಂಕರಮುಂ ರವಳಿಯುಂ ನೆರವೆ (ಅರ್ಜಸೀ. ೮-೭೫ ವ); ಆ ಪ್ರಹಸ್ತನು . . . ಎಱಗಿದನು ರವಿತನುಜ ಪ್ರಭಂಜನಸೂನುಪ್ರಮುಖ್ಯಮಹಾಪ್ರಚಂಡರ ಬಳಗಳಲಿ ಬಲುರವದ ರವಳಿಯಲಿ (ತೊರಾ. ೬-೦೯-೪೩) ; ಕೋಟಿ ಖುರಪುಟ ರವಳಿಯಾಟ ಕೇಳುತಿದೆ (ದ್ರೌಕಿಗಾ. ೬೯-೧೯). ೨. ಒಂದು ಬಗೆಯ ರಣವಾದ್ಯ : ನರಪಾ ಬಹುಬಲಸಹಿತಲಾದೈತರಲು ರಭಸದ ರವಳಿಯಲಿ ಮಿಗೆಯುರವಣಿಸಿ ಹಯ ಸೇರಿತಂದು ತ್ರಿಗರ್ತದೇಶವನು (ತಿಮ್ಮ. ೩-೬೨) ; ಯುದ್ಧಶಿಬಿರಗಳಲ್ಲಿ ರವಳಿ ಎಂಬ ವಾದ್ಯವನ್ನು ಘೋಷಿಸುತ್ತಿದ್ದರು (ಕವಾ. ೨೬೯). ರವಣೆ : ೧. ಭೋರೆಂಬ ನಿಸ್ಸಾಳ ರವಣೆಯಿಂ (ಶಶಸ. ೨೬-೨೩). ೩. ಅಬ್ಬರ ; ಠೀವಿ : ಪ್ರತಿಶರಂಗಳು ಮಿಗೆ ಪೂಡಿ ರವಣೆಯೊಳ್ ರಾಮನೊಡನೀತೆಂದಳು (ಶಶಸ. ೫೦-೦).

**ರವಳಿಘೋಷಿಸು** — ರವಳಿ ಎಂಬ ರಣವಾದ್ಯವನ್ನು ಮೊಳಗಿಸಿ ಯುದ್ಧಕ್ಕೆ ಸೂಚನೆಯನ್ನು ಕೊಡು : ಆಗಳೆರಡುಂ ಬೀಡುಗಳೊಳಂ ಭೋರೆಂದಾರ್ದು ರವಳಿಘೋಷಿಸಿ ಕೊಳ್ವೀಸಿದಾಗಳ್ (ಶಂಶಭಾ. ೦೦-೩೩ ವ); ಸುಭಟಾಲಾಪಮನಾಲಿಸುವ ರವಳಿಘೋಷಿಸುವ ದೇದುಗದಿನಂದಿನಿರುಳಂ ಕಳೆಯೆ (ಶಂಶಪು. ೦೩-೦೦ ವ) ; ದಳ್ಳಿಸಿದತ್ತೊ ವೀರರಸವಾರಿಧಿ ವಾತ ಮಹಾಪ್ರಘಾತದಿಂ ನಿಲ್ಲದೆನುಚ್ಚನಿಂ ರವಳಿಘೋಷಿಸೆ ಭೈರವಮಾದುದಾ ರಣಂ (ಶೀಬಪು. ೦೦-೦೨೩). [< ಸಂ. ರವಣ/. ತೆಲು. ರವಳಿ, ರವಲಿ, ರವಾಳಿ]

**ರವಳಿಗೆ** (ನಾ). ಬಿದಿರಿನಿಂದ ಮಾಡಿದ ಬುಟ್ಟಿ : "ವಿದಲ— ರವಳಿಗೆ" (ಗಂಗಾಮು. ೨೮೯). [?./ಮರಾ, ರವಳೀ, ರೋವಳೀ]

**ರವಾನಿಸು** (ಕ್ರಿ) (ಮುಖ್ಯವಾಗಿ ಸರಕನ್ನು) ಸಾಗಿಸು ; ಕಳಿಸು : ಮಿಕ್ಕಿದ ಸರಕುಗಳನ್ನು ನಾವು ಇತರ ಕೇಂದ್ರಗಳಿಗೆ ರವಾನಿಸುತ್ತೇವೆ (ಶಾಂಡು. ೦೦೦) ; ಫಾರಮುಗಳು ತಯಾರ್ಮಾಡಿ ರವಾನಿಸಬೇಕು (ಗ್ರಾಮಕ. ೫) ; ಈತ ತನ್ನ ದಿವ್ಯಪ್ರೇಮಕ್ಕೆ ಕಟ್ಟುಬಿದ್ದು, ತಾನು ಕೈಹಿಡಿದ ವಳನ್ನು ಊರಿಗೆ ರವಾನಿಸಿದ (ಜೋಶಕ. ೦೫). [ರವಾನೆ + — ಇಸು]

**ರವಾನೆ** (ನಾ). ೧. (ವಸ್ತು ಮುಂತಾದುವನ್ನು) ಕಳುಹಿಸುವಿಕೆ : ಸಾಗಣೆ : ಮುಂದಕೆ ರವಾನೆ ಮಾಡಿ ಕಳುಹಿಸಿ ಕೊಡಲುಳವರು (ಪ್ರಿಂಆ. ೨೯೩೨. ೦೯-೨೬ ; ೧೭೦೬ ?) ; ಕಿಲ್ಲೇಕ ಹೋಗಿ ಬಿದ್ದರೆಂದರೆ ಸ್ವಾಧೀನಕ ಬರೋದಿಲ್ಲವೆಂದು ತಾಕೀದು ಮಾಡಿ ಆ ಕ್ಷಣವೇ ರವಾನೆ ಮಾಡಿದರು (ಮುಡಶ. ೬೨-೦೦) ; ಪ್ರಾಣಗಳ ರವಾನೆಗಾಗಿಯೇ . . . ಬೇರೊಂದು ಬಂಡಿಯನ್ನು ಲಗತ್ತಿಸಬೇಕು (ಹಸುಹೊ. ೨೨೬). ೨. ಅಪ್ಪಣೆಚೀಟಿ : ರಹದಾರಿ : (?).

**ರವಾನೆ ಆಗು, ರವಾನೆಯಾಗು** = (ವಸ್ತು ಮುಂತಾದುವು) ಕಳುಹಿಸಲ್ಪಡು: ಸಾಗಣೆಯಾಗು: ದೊಡ್ಡಮನುಷ್ಯರಿಗೆಲ್ಲರಿಗೂ ಅಚ್ಚು ಹಾಕಿದ ಲಗ್ನಪತ್ರಿಕೆಗಳು ಕ್ರಮವಾಗಿ ರವಾನೆ ಆದುವು (ಮುಹಾಶಂ. II. ೦೬೩) ; ಪ್ರಪಂಚದ ಎಲ್ಲ ಭಾಗಗಳಿಗೂ ಚಿನ್ನ ಮತ್ತು ಸಂಬಾರದ ವಸ್ತುಗಳು ರವಾನೆಯಾಗುತ್ತವೆ (ಕೃಪಾ. II, ೦೯).

[← ಪಾರ. ರವಾನಹ್ ; ಹಿಂ.. ಮರಾ. ರವಾನಾ ]

**ರವಾನೆದಾರ** (ನಾ). ಸರಕುಗಳನ್ನು ಕಳುಹಿಸುವವನು ; ಸಾಗಣೆದಾರ: ಸರಕನ್ನು ರವಾನಿಸುವವನು ; ರವಾನೆದಾರ (Consignor. ೩೮೯೦).

[ ರವಾನೆ + — ದಾರ್ ]

**ರವಾಬು** 'ರಬಾಬು' ನೋ.

**ರವಾಳವಳ** (ನಾ). ಅಕ್ಕಸಾಲಿಗ (?) : ವಂಶಿಗಂಗೆ ಮತ್ತರುಂ ೧೨ ರವಾಳವಳ ಸಿಂಗಯ್ಯಂಗೆ ಮತ್ತರುಂ ೧೫ ಬರಿಯ ರವಾಳ[ವಳ](ಎಕ. XV. ೯೨-೨೦; ೧೦೬೪). [?./ಮರಾ. ರವಾಲೆ = ಅಕ್ಕಸಾಲಿಗನ ಒಂದು ಉಪಕರಣ ]

**ರವಿ** (ನಾ) ೧. ನೇಸರು ; ಸೂರ್ಯ : "ಆದಿತ್ಯಃ . . . ರವಿಃ, ಮಿಹಿರಃ . . . ತ್ರಯೀತನುಃ—ಈ ೪೭ ಆದಿತ್ಯನ ಪೆಸರ್" (ಹಲಾಯು. ೭-೬೩) ; ರವಿಕಿರಣಾಳಿಗಳ್ ಧ್ವಜಪಟಾಳಿಯ ತಿಂತಿಣಿಯಿಂದಮುರ್ಚಲಾಱವೆ ರವಿವಾಜಿಗಳ್ ನೆಗೆದ ಪಾಂಸುಗಳಿಂ ದೆಸೆಗೆಟ್ಟು ಪೋಗಲಾಱವೆ ರವಿಬಿಂಬ ಮಂದೆಸೆಯಲಾಱದೆ ಪೆಂಪಿನ ತಿಣ್ಣನಾಂತ ಕೌರವಬಳದಂತು ಮೇರೆ ಪವಣ್ (ಶಂಶಭಾ. ೦೨-೩೦) ; ರವಿಯಾಕಾಶಕೆ ಭೂಷಣಂ ರಜನಿಗಾ ಚಂದ್ರಂ ಮಹಾಭೂಷಣಂ (ತೋಮಳ. ೩) ; ರವಿ ಕಾಣದ್ದನ್ನು ಕವಿ ಕಂಡ (ಗಾದೆ). ೨. ಪರ್ವತ ; ಬೆಟ್ಟ : "ಗಿರಿಯೊಳರ್ಕನೊಳು ಪ್ರೋಕ್ತದಿಂ ರವಿ" (ಮಂಗರಾ. ೦೪೪-೨೩). ೩. ಎಕ್ಕದ ಗಿಡ : 'ರವಿದುಗ್ಧ' ಪದಾ. ೪. ಒಂದು ಬಗೆಯ ದಿವ್ಯ,—ಉಗ್ರಪರೀಕ್ಷೆ (?) : ಕೊಪ ರವಿ ತಂಡುಲವಗ್ನಿ ತಪ್ತಮಾಷಂ ಜಲವಿಷದೆಳಸಪ್ತದಿವ್ಯಮುಂ ವರ್ತಿಸುಗುಂ (ಸೌಇಇ. IX-i. ೧೩೩-೬೪; 1083) ; 'ಕೊಪ' (ಬಹುಶಃ 'ಕೋಶ' ವಿರಬೇಕು). ರವಿ, ತಂಡುಲ. ಅಗ್ನಿ, ತಪ್ತಮಾಷ, ಜಲ, ವಿಷ—ಇವೇ ಆ ಸಪ್ತದಿವ್ಯಗಳು (ಕವಾ. ೩೯೭). 'ದಿಬ್ಬ' ಪದಾ. ೫. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ : "ರವಿಯೆನಲು ಹನ್ನೆರಡು" (ಮಂಗರಾ. ೦೦೪-೮) ; ಪುರನಯನ ರವಿ ರಂಧ್ರಯುಗವ ಗೆಲಿದಾ ಮಹಿಮ (ಪ್ರಿಶಾ. ೦೩-೦). ೬. [ಛಂದ]ಎರಡು ಲಘುಗಳ ಮಧ್ಯೆ ಒಂದು ಗುರುವು ಇರುವ ಒಂದು ಗಣದ ಹೆಸರು ; ಜಗಣ (⏑ – ⏑) : "ಗುರು ಮಧ್ಯದೊಳ್ ತೋಱೆ ರವಿಯಕ್ಕು" (ಮಂಗರಾ. ೦೦೭-೨೦) ; ಧರಣಿ ಜಲಾಗ್ನಿ ಮರುದ್ವ್ಯೋಮ ರವಿ ಶಶಾಂಕೇಂದ್ರನಿಲಯಮಿವು ಗಣದ ಪೆಸರ್ (ಛಂದೋಂಬು. ೦-೩೭). ೭. ಸಂಪತ್ತು ; ಐಶ್ವರ್ಯ (?) : ಕೂರ್ತು ಭೂವನಿತೆಗಿನ ಕುಲದ ನೃಪನೊಸಗೆಗಟ್ಟಿಸಿದ ಜೀವನಿಧಿವಸನದೊಡನೆಸೆವ ರವಿಯುಂಗುರವೊ . . . ವಿಚಾರಿಸೆ ಬೆತಂಗಮದರ್ದು ಕಣ್ಗೆಡ್ಡಮಾಯ್ತಾವರಿಸೆ ತೇಜವಗ್ಗದ ಮೇರು (ಕಾದಂ. ೦-೨೪). [ಸಂ.]

**ರವಿಕಯ್ಯ** (ನಾ). ಒಬ್ಬಾತನ ಹೆಸರು: ಸೂರ್ಯ್ಯಗ್ರಹಣದನ್ದು ಶ್ರೀಪುರದು ರವಿಕಯ್ಯ ಮೊದಲಾಗಿ ಯಿಟ್ಟೂರ್ವ್ವ(ರ್ವ್ವ)ರುಂ ಮಹಾಜನದ ಕಾಲಂ

ಕಟ್ಟಿ (ಇಳ. XII, ೨೦೯-೨೦; 814). [ಈದು ಸಂಸ್ಕೃತದ 'ರವಿಕಾರ್ಯ' ಶಬ್ದದಿಂದ ಬಂದಿರಬಹುದು]

**ರವಿಕರಡಾಣ ?** (ನಾ). (?) : ಪುಷ್ಪ ಮೊದಲಾದ ನಂದನವನ ತೋಟಕೆ ಸಮರ್ಪಿಸಿದ ಹೊಲ ಗದೆ ತೋಟ ರವಿಕರಡಾಣ ಕಲ್ಲಸ್ಥಳ (ಎಕ. IX (s), ನೆಂಮಂ. ೩೦-೬; 1532). [ ? ]

**ರವಿಕಳಂಬ** (ನಾ). ಸೂರ್ಯನು ಅಭಿಮಾನಿದೇವತೆಯಾಗಿರುವ ಒಂದು ಬಗೆಯ ಬಾಣ, – ಮಂತ್ರಾಸ್ತ್ರ : ಫಲುಗುಣಂ ತಿಮಿರನಾಯಕವನು ಸೆಳೆದಂ ಮರಾಳಧ್ವಜನ ಸುತಂ ತಗೆದನುಜ್ಜ್ವಲರವಿಕಳಂಬಮಂ (ಕೃಮಿಭಾ. ೦೩-೦೫). [ಸಂ. ರವಿಕಲಂಬ]

**ರವಿಕಾಂತ** (ನಾ). ಬಿಸಿಲಿಗೆ ಕಿಡಿ ಸೂಸುವುದೆಂದು ನಂಬಲಾದ ಒಂದು ಬಗೆಯ ಶಿಲೆ ; ಸೂರ್ಯಕಾಂತ : ''ಬಿಸುಗಲ್ಲೆನೆ ರವಿಕಾಂತಂ'' (ಕಕಮ. ೦೦೦): ಇಂತಿಂತು ಮೆಚಿಯುತಿರ್ಪುವನಂತಂ ಘನತೇಜದಿಂದೆ . . . ರವಿಕಾಂತಮುಮುಸ್ಕಾಂತಮಿಂದುಕಾಂತಂ ನಗದೊಳ್ (ಗಂಕ. ೦-೩೬); ಪರತೇಜಂ ತಗುಳ್ದೊಡೆ ಸಲೆ ತೋರ್ಪರದಂ ತಾಂ ಸ್ಪರ್ಶಾನುಕೂಲ ರವಿಕಾಂತಂಬೊಲ್ (ಶಾಕುಂತ. ೨೩-೯೨). [ಸಂ.]

**ರವಿಕಾಂತೋಪಲ** (ನಾ). = ರವಿಕಾಂತ : ರವಿರಶ್ಮಿಗಳಿಂ ಪುಟ್ಟಿಸಿ ರವಿಕಾಂತೋಪಲಕೃಶಾನುವಂ ಕೋಟ್ಟಿಗವಂ ದಿವಸದವಸಾನಸಮಯದೊಳವನಂಜಿಸುವೊಂದುಪಾಯಮುಂ ಪ್ರಜೆಗಿತ್ತಂ (ಶಂಕಾಮ. ೦-೬೩). [ಸಂ.]

**ರವಿಕಾಳಿ** (ನಾ). ಒಬ್ಬಾತನ ಹೆಸರು: ಮಾಡಿಸಿದೊಂ ರವಿಕಾಳಿ ಜಸಸೆ ಮಣಿನಾಗಂ (ಎಇ. XIII, ೦೮೯-೬; 888). [ ? ]

**ರವಿಕೆ** ' ಬವಿಕೆ ' ನೋ.

**ರವಿಚಂದ್ರಯ್ಯ** (ನಾ). ಒಬ್ಬಾತನ ಹೆಸರು: ರವಿಚನ್ದ್ರಯ್ಯನೆಲ್ಲಜವಳ್ಳಿಯೊಳ್ಮಸವದಿತ್ಯರ್ಕ್ಕಳಂ ಪ್ರತಿಷ್ಠೆಗೆಯ್ದಂ (ಎಕ. VIII, ತೀರ್ಥಹ. ೨೭-೯; ೯೭೦). [ರವಿ + ಚಂದ್ರ$_2$ + ಅಯ್ಯ$_{61}$]

**ರವಿಜ** (ನಾ). ೧. ಸೂರ್ಯನ ಮಗ. ೨. ಕರ್ಣ: ''ರವಿಜನೆನೆ ಕರ್ಣಂ'' (ಮಂಗರಾ. ೬೫-೨) ; ರವಿಜ ಗುರುಸುತ ಶಲ್ಯ ಕಲಶೋದ್ಭವರು . . . ಅವನಿಪಾಲನ ಕಂಪರು (ಕುಮ್ಮಾಭೀ.೦-೨). ೩. ಸುಗ್ರೀವ: ತ್ರಿದಶರಾರಿತು ರವಿಜನಭಟನು ಹೊಗಳಿತುಭುಜಬಲ (ತೊರಾ. ೩೬-೨೯). ೪. ಶನಿ : ರವಿಜನನುಕ್ರಮದೆ ಗುಣಿತೇಷ್ಟವಾರದಿಂ . . . ಸವನಿಸುಗುಂ ಸಂದ ಗು(ಕು)ಳಿಕನುದಯಂ ನಿರುತಂ (ಲೋಕೋಪ. ೦-೨೮) ; ರವಿಜಂ [ಪಾಠಾಂ. ಇನಜಂ] ವೃಶ್ಚಿಕಸಂಸ್ಥನಾಗೆ ಚಪಲಾಂಗಂ ನಿರ್ದಯಂ (ಜಾತಕ. ೦೬-೩೩). ೫. ವಾಲಿ. ೬. ಯಮ. [ಸಂ.]

**ರವಿದುಗ್ಧ** (ನಾ). ಎಕ್ಕದ ಗಿಡದ ಹಾಲು : ರವಿದುಗ್ಧಂ ಪಾಂವದೆಚ್ಚ ವುದುರದ ವಿಷ್ಣಿ ತಗರ ಕೋಡಿನ ಮಷಿಯೆಂಬವನೊರಸಿ ಕಾಸಿ ನೀರೂಡುವುದುಟ್ಟಿಯುಂ ತೈಲತಕ್ರದೊಳ್ ಪವಿಯುಕ್ಕುಂ '(ಲೋಕೋಪ. ೫-೯೦). [ಸಂ.]

**ರವಿನಂದನ** (ನಾ). ೧. ಸೂರ್ಯನ ಮಗ. ೨. ಯಮ : ಧನಪತಿಯ ಸಿರಿ . . . ರವಿನಂದನನ ನಡವಳಿ ಧರೆಯ ಸ್ಥೈರಣೆಯಿನಿತು ದಶರಥ ಸಾರ್ವಭೌಮಂಗಲ್ಲದಿಲ್ಲ (ತೊರರಾ. ೦-೩-೨೬). ೩. ಸುಗ್ರೀವ. ೪. ಕರ್ಣ: ರವಿನಂದನನು ಗೆಲಿದನು ಧರ್ಮನಂದನನ (ಕುಮ್ಮಾಕ. ೦೦ ಸೂಚನೆ). [ಸಂ.]

**ರವಿಪತ್ರ** (ನಾ). ಒಂದು ಬಗೆಯ ಸಸ್ಯ ; ಎಕ್ಕದ ಗಿಡ: '' ರುದ್ರಾ– ರುದ್ರಜಡೆ. ರವಿಪತ್ರ, ಕಾಡ ಪಾಗಲ'' (ಒಷಂ. ೦೩೯). [ಸಂ.]

**ರವಿಪ್ರಭೆ** (ನಾ). [ಛಂದ] ಒಂದು ಅರ್ಧಸಮವೃತ್ತದ ಹೆಸರು: ಅಮರಸರೋರುಹಮಿತ್ರಗಣಂ ಶರಸಂಖ್ಯೆಯ ಮುಂದೆ ಲ ಗಂ ಸೋಮಗಣಂಗಳೆ ನಾಲ್ಕೆಡೆಯೊಳ್ ಬರೆ . . . ನಾಮಮಿದಕ್ಕೆ ರವಿಪ್ರಭೆ (ಛಂದೋಂಬು. ೪-೩-೨೩೬). [ಸಂ. ರವಿಪ್ರಭಾ]

**ರವಿಬಿಂಬ** (ನಾ). ಸೂರ್ಯನ ಬಿಂಬ ; ಇನಮಂಡಲ : ರವಿಬಿಂಬದ್ಯುತಿಮೂರ್ತಿವೆತ್ತ ತೆಜದಿಂ ತೇಜೋಮಯಂ ... ಯುವರಾಜಂ (ನಳಕಂ. ೨೬೦). [ಸಂ.]

**ರವಿಭಕ್ತ** (ನಾ). ಒಂದು ಬಗೆಯ ಔಷಧೀಸಸ್ಯ : ಇಂಗುಪಟಲಂ ರವಿಭಕ್ತಸಪೂರ್ವಚಿತ್ರಕಂ ಜೀರಗೆಯುಪ್ಪು ಬೋಟತರವಿಂಗುಳಮಾಗುಳಚ (ಬ)ಂಗಳಂ ಯವಕ್ಷಾರಸಮೇತಮಿಕ್ಕುವುದು ವಾಜಿಗೆ ಸರ್ವರುಜಾಪಹಾರಕಂ (ಅಶ್ವಶಾ. ೭-೩೦). [ ? ]

**ರವಿಮಂಡಲ,** ರವಿಮಂಡಳ (ನಾ). = ರವಿಬಿಂಬ : ರವಿಮಂಡಲಂ ಪ್ರತೀಚೀಯುವತೀಕರ್ಣಾವತಂಸರಕ್ತೋತ್ಪಲದಂತೆಪೊಲಿರೆ (ಕಾದಂಪೂ. ೫೦೦) ; ಪುಂಡರೀಕಾಕ್ಷನ ಉತ್ತಮಾಂಗದಲಿ ರವಿಮಂಡಲಗಳ ಪ್ರಭೆಯ ಮಸಳಿಸುತಿರೆ ಮುಕುಟ (ಭರಂದ. ಭಾ. ೯-೨೦-೨). **ರವಿಮಂಡಳ :** ರವಿಮಂಡಳಮುವನೀತಳಕವತರಿಸಿತ್ತೆಂಬ ತೆಜದಿನಂಬರದಿಂದಂ ನವರತ್ನಖಚಿತಮೆಂದೆನಿಸುವ ದಿವ್ಯವಿಮಾನವಿಂದಡೆ ಬಂದುದು (ತ್ರಿಷ. ೭-೦೦೬). [ಸಂ.]

**ರವಿಮಂಡಳ** ' ರವಿಮಂಡಲ ' ನೋ.

**ರವಿಮಾರ್ಗಣ** (ನಾ). = ರವಿಕಳಂಬ : ಸೆಳೆದು ಮೂಡಿಗೆಯಿಂದ ರವಿಕುಲತಿಲಕ ಹೂಡಿದನುಷ್ಣಕಿರಣಾಕಲಿತರವಿಮಾರ್ಗಣವ (ತೊರರಾ. ೬-೫೦-೨೦). [ಸಂ.]

**ರವಿವಾರ** (ನಾ). ಆದಿತ್ಯವಾರ; ಭಾನುವಾರ: ರವಿವಾರಮಾದಿಯಾಗಿಯ್ದೆ ವಿಶಾಖಿಪ್ರಮುಖಿತಾರೆಗಳ್ ನಾಲ್ಕುಂ ಸಂಘವಿಸಿದೊಡುತ್ಪಾತಂ ಮೃತ್ಯುವಧೆಯುಮಂವ್ಯತಾಖ್ಯಮೆಂಬಿವಕ್ಕುಂ ಯೋಗಂ (ಲೋಕೋಪ.೦-೦೬). [ಸಂ.]

**ರವಿಸಿದ್ಧಾಂತ** (ನಾ). [ಜ್ಯೋತಿ] ಸೌರಗಣನೆಯ ಮೂಲಕ ಗುಣಿಸಿ ಹೇಳುವ ಜ್ಯೋತಿಷ್ಯ ; ಸೂರ್ಯಸಿದ್ಧಾಂತ : ರವಿಸಿದ್ಧಾಂತಪಾಠಕ ರಷ್ಟಭಾಷಾಕವಿಗಮಕಿಗಳು ತಾರ್ಕಿಕರು ವಿವಿಧವಿದ್ವತ್ಸಭೆ ನೆರೆದುದು (ಮೋಹತ. ೩-೯೦). [ಸಂ.]

**ರವಿಸು** (ಕ್ರಿ). ಧ್ವನಿಮಾಡು : ದನಿಗೈವ ಪಾರಿವಂತಿರೆ ರವಿಸುವರ್ಕಂಠದೊಳ್ (ಕೃಮಿಭಾ. ೦೫-೯೬). [ರವ + – ಇಸು$_3$]

**ರವಿಸುತ** (ನಾ). ೧. ಸೂರ್ಯನ ಮಗ. ೨. ಕರ್ಣ : ಮುಳಿದಿರ್ಪೆಯೊ ಮೇಣ್ ಮಜುಮಾತುಗುಡದೆ ರವಿಸುತ ಮಜುಸುಂದಿರ್ದಪೆಯೊ (ಗದಾಯು. ೫-೦೫) ; ರವಿಸುತನೊಂದು ನನ್ನಿ ಪವಮಾನಸತನೂಜನದೊಂದು ಬಲ್ಪು (ಎಕ. IV, ನಾಗಮಂ. ೯೭-೩೩ : 1199) ; ನೀಲಧ್ವಜನನುಜಿ ಘಾತಿಸಿ ರವಿಸುತನ ಸೂನುವಂ ಪರಿಭವಿಸಿ (ಕೃಮಿಭಾ. ೦೯-೫). ೩. ಸುಗ್ರೀವ : ರವಿಸುತಂ ನಮ್ಮರೆಯಂನಟ್ಟಿದನ್ ರವಿಕುಲದ ನಿಮ್ಮ ಕೆಳೆಯಂ ಬಯಸಿ ಬೇಡಿ! (ತ್ರೀರಾಪ. ೨೪೯-೦೦೯). ೪. ಶನಿ. ೫. ಯಮ. [ಸಂ.]

**ರವಿಸುತೆ** (ನಾ). ಸೂರ್ಯನ ಮಗಳು ; . ಯಮುನೆ : ವರದಾಸಿಂಧು ಸರಸ್ವತೀರವಿಸುತಾಗೋದಾವರೀ . . . ಗಂಗಾಸಲಿಲಂಗಳಂ ಹಿಮಕರಸ್ವಚ್ಛಂಗಳಂ ತಂದರ್ (ಶಂಕಕಂ. ೨೨೩-೦೩). [ಸಂ. ರವಿಸುತಾ]

**ರವೆ** (ನಾ). ೧. ಗೋಧಿ, ಅಕ್ಕಿ ಮೊದಲಾದುವುಗಳ ಸಣ್ಣ ನುಚ್ಚು.– ತರಿ ; ಸೋಜಿ : ತುಪ್ಪದೊಳು ಹುರಿದು ಪಲತೆಜನಾಗಿ ಮಾಡಿಕೊಂಡ ದಚಿಂಬವಕೆ ಒಡೆಯ ರವೆಸಕ್ಕರೆಯನಿಕ್ಕುವುದು (ಸೂಪಶಾ. ೬-೦೫) ; ಸೇವಗೆಯ ಪಾಯ್ಸಕ್ಕೆ ಬೆಲ್ಲ ಮಾಡಿ ಒಕ್ಕೆ ರವೆ ಸ ೩ ಗೆ (ಪಾ.೧ಐ೦. ೦೯೩೯. ೦೩-೫; 1516). ೨. ಯಾವುದಾದರೂ ವಸ್ತುವಿನ ಸಣ್ಣ ಭಾಗ ; ಪುಡಿ ; ಚೂರು ; ಕಣ : ಪುಡಿಗತ್ತುರಿಯ ರವದ ರವೆ (ರೀವಡ. ೩-೨೬). ೩. ಬಂದೂಕಿಗೆ ಹಾಕುವ ಚರೆ : ಒಂದು ರವೆಯೂ ಇಲ್ಲದೆ ಹೋಯಿತೆ ? ರವೆ ಇರುವ ತೋಟಯನ್ನು ಕೊಡಲೆ ? (ದೀಪಿತಾ. ೬೦) ; ರವೆ, ಗುಂಡು ಹಾಕ್ಕೊಂಡು ಬಂದು ಅವರನ್ನು ಮೊನಿ ಮಾಡಾಕೆ ನಂಗೇನು ಹುಚ್ಚೇ ? (ಮರಿವ. ೫೬೭).

ರವೆಯಷ್ಟು = ಕೊಂಚ : ತೀರ ಅಲ್ಪ : ನಿನ್ನ ವಿಷಯದಲ್ಲಿ ನನಗೆ ರವೆಯಷ್ಟಾದರೂ ಅನುಮಾನವಿಲ್ಲ (ರಾಜಾ. ೧೪) ; ತಮ್ಮದೇ ಆಳ್ವಿಕೆ ಇಲ್ಲಿ ನೆಲಸಬೇಕು ಎಂಬ ಆಕಾಂಕ್ಷೆ ಪ್ರಭುಗಳವರಿಗೆ ರವೆಯಷ್ಟಾದರೂ ಇಲ್ಲ (ಸರಪ. ೬೯). [ದೇ.॥ ತಮಿ. ಇರವೈ ; ತುಳು. ರವೆ ; ತೆಲು. ರವ, ರವ್ವ./ ಹಿಂ. ಮರಾ. ರವಾ./ಪ್ರಾ. ರಯ./ಸಂ. ರಜಸ್]

**ರವೆಗಾಲು** (ನಾ). ಕುದುರೆಯ ಒಂದು ಬಗೆಯ ನಡಗೆ : ಮಡದ ಸನ್ನೆಗೆ ಕುಣಿದು ರವೆಗಾಲಿಡುತ [ಜಾಣಂ. ತಿರುಗಿತತಿವೇಗದಲಿ] ಜೋಡಣೆಯಿಂದ ಹಯವಡಿಗಡಿಗೆ ಚಿಮ್ಮಿತು ವಾಯುವೇಗದೊಳು (ನಳಚ. ೬-೫) ; ಉತ್ತಮ ವಾಜಿಯನು ತೊಲಗು ವೇಢೆಯ ರವೆಗಾಲು ಬಂಬೇರಿಯೊಳ್ಳಲಿದೇಜಿ ಮೆಜಿಯುತರ್ತಿಯಲಿ (ಕಂಸವ. ೨೨-೯೯).

[← ತೆಲು. ರವಗಾಲು, ರವಾಲು]

**ರವೆಯ** (ನಾ). ನವರತ್ನಗಳಲ್ಲಿ ಒಂದು ; ವಜ್ರ : ಆ ನವರತ್ನದ ರವೆಯದ ಬಂದಿ ವಿರಾಜಿಸುತಿರ್ಪುವಲ್ಲಿ ಗಿರಿಜೆಯ ತೋಳೊಳ್ (ಗಿರಿಕ. ೩-೬೩); ರವೆಯದ ತೋಳ ಬಂದಿಯ ಕೊರಳ ತ್ರಿಸರದ ಬೆರಳ ಮುದ್ರಿಕೆಯ . . . ಷಹೋಜನ ಸಂದಣಿಸಿತಲ್ಲಿ (ಕುಮ್ಮಾರ ೦೩-೬೨); ರಸುಮಿಪ ರವೆಮದ ಕಂಕಣ ವಂಗಜವೆಸರಂ . . . . ತಳೆದು ವಿರಾಜಿಸಿದ್ದುವು ಸುಕುಮಾರಿ ಸುಲೋಚನೆಗೆ (ಜಯನೃ. ೫-೨೩).

[< ರವೆ]

**ರವೆಯಿಡ್ಲಿ** (ನಾ). ರವೆಯಿಂದ ಮಾಡಿದ ಇಡ್ಲಿ : ಬೆಳಗ್ಗೆ ತಿಂಡಿಗೆ ರವೆಯಿಡ್ಲಿ ಮಾಡಿದ್ದೆ (ರೂಢಿ). [ರವೆ + ಇಡ್ಲಿ ( < ಇಡ್ಡಲಿ ) ]

**ರವೆವುಂಡೆ** (ನಾ). ರವೆ ಮತ್ತು ಸಕ್ಕರೆಗಳಿಂದ ತಯಾರಿಸಿದ ಉಂಡೆ : ಏನು ಕೊಡಲಿ ಸಾರ್ . . . ಬೇಸನ್‌ಲಾಡು, ರವೆವುಂಡೆ (ವಿಹಾರ. ೪೬).

[ರವೆ + ಉಂಡೆ]

**ರಶನ** (ನಾ). ೧. ನಡುವಿಗೆ ಧರಿಸುವ ಪಟ್ಟಿ; ಡಾಬು : ದಿವಿಜಸ್ತ್ರೀ ಜಘನಾಭಿರಾಮರಶನಂ ಪ್ರೇಮಾಂಗನಾಪಾಂಗಕೈರವಚಂದ್ರಂ (ಸುಕುಮಾ. ೯-೩೫) ; ಕಟಿವಲಯದಿಂದ್ರಧನು ರಶನದಿಂದೆಸೆವಂತೆ, ರವಣೀಯ ರತ್ನಮಯ ಕಾಂಚನದ ಕಾಂಚಿಯಂ ತೊಟ್ಟು (ಹತ್ತಾಂಗ. ೦೯-೫೦೫). ೨. ಲಗಾಮು ; ಕಡಿವಾಣ. [ಸಂ. ರಶನಾ]

**ರಶೀತಿ, ರಶೀದಿ, ರಸೀತಿ, ರಸೀದಿ** (ನಾ). (ಹಣ ಮೊದಲಾದುವು) ತಲು ಪಿದುದಕ್ಕಾಗಿ ಕೊಡುವ ಚೀಟಿ ; ಪಾವತಿಪತ್ರ; ಸಲ್ಲಿಕೆಚೀಟಿ : ಹಣ ತಲುಪಿದುದಕ್ಕೆ ವಿತಾರದ ಒಪ್ಪಿಯಿಂದ ರಶೀತಿ ಬಂದಿರಲಿಲ್ಲ (ರಂಗಕ. ೩೬); ರುಜುಹಾಕುವುದಕ್ಕೂ ಕೊಟ್ಟ ಕಂದಾಯದ ರಶೀತಿ ನೋಡುವುದಕ್ಕೂ ಬಂದರೆ ಸಾಕು (ಹುಟ್ಟಿಕ. ೭). **ರಶೀದಿ** : ಸರಕಾರಕ್ಕೆ ತೆಗೆದುಕೊಂಡು ರಶೀದಿಕೊಡುವ ಹಾಗು (ಮೈಶಾಂ. ೦೯೩೯, ೯೨-೦೦೫ ; 1826) ; ಅದನ್ನು ತೆಗೆದುಕೊಂಡು ರಶೀದಿ ಕೊಟ್ಟು (ಹಾಕಿಂಪ್ರ. ೩೬). **ರಸೀತಿ** : ಒಂದು ತುಂಡು ಚೀಟಿಯನ್ನು ರಸೀತಿಯಾಗಿ ಕೊಟ್ಟರೂ ಸಾಕು (ಪಹಿಗರ. ೭೯); ನೀವು ರೈತರಿಂದ ಕಂದಾಯ ತಕೊಂಡ್ರೂನೂ ರಸೀತಿ ಕೊಡದೆ . . . ಡಬ್ಬಲ್ ಕಂದಾಯ ವಸೂಲಿ ಮಾಡ್ತಿಲ್ಲವಾ ? (ನಮ್ಮೂ. ೦೫). **ರಸೀದಿ** : ಪಾವತಿಯಾದ ಕೂಡಲೆ ಗ್ರಾಮ ಕೋರ್ಟಿನವರು ಅದಕ್ಕೆ ರಸೀದಿಯನ್ನು ಕೊಡತಕ್ಕದ್ದು (ಗ್ರಾಪಂಚ. ೩೯); ಮನೆಯ ಕರಣಿಕನು ರಸೀದಿಯನ್ನು ತಯಾರಿಸುತ್ತಿದ್ದನು (ಅರ್ಶ್ವಶಿ. ೩೭).

[ ←ಪಾರ. ಹಿಂ. ಮರಾ. ರಸೀದ್. / ಇಂ. Receipt]

**ರಶೀದಿ** ' ರಶೀತಿ ' ನೋ.

**ರಶ್ಮಿ** (ನಾ). ೧. ಕದಿರು; ಕಿರಣ : '' ರೋಚಿಃ . . . ರಶ್ಮಿಃ . . . ಗಭಃ– ಈ ೩೨ ರಶ್ಮಿಗಳ ಪೆಸರ್" (ಹಲಾಯು. ೭-೩೬). ೨. ಕಾಂತಿ ; ಪ್ರಭೆ : ಫಣೀಂದ್ರಾಳಿಯದಿಂದಮುಂಚಿದ ಫಣಾಮಣಿಮಂಗಳರಶ್ಮಿಯೋ (ಕಂಹರಾ. ೦-೯೩). ೩. ಕಡಿವಾಣ; ಲಗಾಮು : "ವಲ್ಗಾ, ರಶ್ಮಿಃ, ಕುಶಾ– ಈ ೩ ವಾಗೆ" (ಹಲಾಯು. ೩೩-೨೬೬). ೪. ಹಗ್ಗ; ಪಾಶ; ಕಣ್ಣಿ : " ಯೋಕ್ತ್ರಂ, ರಶ್ಮಿಃ, ಆಬಂಧಃ – ಈ ೩ ಹಗ್ಗಂ " (ಹಲಾಯು. ೯೪-೬೨೦). ೫. ರೆಪ್ಪೆಯ ಕೂದಲು; ಎವೆಗೂದಲು. ೬. ಚಿವಿಗೋಲು; ಅಂಕುಶ. ೭. ಚಬುಕ ; ಚಾಟಿ. [ಸಂ.]

**ರಶ್ಮಿಕಲಾಪ** (ನಾ). ಒಂದು ಬಗೆಯ ಹಾರ ; ಐವತ್ತುನಾಲ್ಕು ಎಳೆ ಗಳುಳ್ಳ ಮುತ್ತಿನ ಹಾರ : ವಿಜಯಚ್ಛಂದಹಾರದೇವಚ್ಛಂದಾರ್ಧಹಾರ ರಶ್ಮಿಕಲಾಪಗುಚ್ಛನಕ್ಷತ್ರಮಾಲಾರ್ಧಗುಚ್ಛ . . . ಎಂಬ ಪನ್ನೊಂದು ನಾನಾರತ್ನಸುವರ್ಣಪದಕವಿರಚನಾದಿಭೇದದಿಂ (ಅಂಕ್ತು. ೯-೩೯ ವ). [ಸಂ.]

**ರಶ್ಮಿಶಿಕ್ಷ** (ನಾ). ಸೂರ್ಯನ ಕಿರಣಗಳು ಇರುವಾಗ ಮಾಡುವ (ಖಡ್ಗ ಮುಂತಾದ ಯಾವುದಾದರೂ) ಸಾಧನೆಯ ಮುಕ್ತಾಯಕಾಲದ ಶಿಕ್ಷಣ,– ಅಭ್ಯಾಸ : ಸಾಯಂಕಾಲದಲ್ಲಿ ಆರುಘಳಿಗೆ ಉಳ್ಳಂಥಾ ಕಾಲವು ಸಾಧನೆಗೋಸ್ಕರ ನಿರ್ಮಾಣವ ಮಾಡಲ್ಪಟ್ಟಿತು. ಸಾಧನೆಯ ಬಿಡುವ ಕಾಲವು ಸೂರ್ಯಕಿರಣ ಉಳ್ಳಂಥಾದು ರಶ್ಮಿಶಿಕ್ಷ ಯೆಂಬುದು (ಖಡ್ಗಶಿ. ೫-೫೨). [ಸಂ. ರಶ್ಮಿಶಿಕ್ಷಾ]

**ರಸ** (ನಾ). ೧. ಗಿಡ, ಮರ, ಕಬ್ಬು ಮುಂತಾದುವುಗಳ ದ್ರವ : ಕಬ್ಬಿನ ರಸವೆಟ್ಟಿ ಪಾಗದ ಪೊಸರ್ (ಕೃಕ್ಷಕ್ಕು. ೨-೯೦); ರಸವಟಿತ ದಂಟು ಗಳ ಹಸು ಮೇಯಲೊಲ್ಲದು (ಸರ್ವಜ್ಞ. ೦೭೯೯). ೨. ಹೂವು, ಕಾಯಿ, ಹಣ್ಣು ಮುಂತಾದುವುಗಳಲ್ಲಿರುವ ಸಾರ : ದಳಿತ ಜಂಬೂಪಕ್ವಫಲರಸ ಲುಳಿತಸವಮ ಕರದಮಧುರೋರ್ಝರನಿಪಾತದಲಿ . . . ಎಸೆದುದು ಗಜ ಪುರೋದ್ಯಾನ (ಕುಮ್ಮಾರ. ೬-೨೭); ಮಾವಿನ ತನಿವಣ್ಣು ರಸದಂತೆ . . . ಮಂಗರಸನೊಪ್ಪುವ ವಾಕ್ಯಗುಂಫನಂ ಭಾವಿಸಿದೊಡೆ (ಸಮ್ಯಗ್. ೦-೦೦). ೩. ದ್ರವರೂಪವಾದ ಪದಾರ್ಥ : ನಾವು ತಿನ್ನುವ ಅನ್ನದ ರಸದಿಂದ ಮಾಂಸ ಹುಟ್ಟುತ್ತದೆ (ಋಬಂಶರು. ೯-೩೨). ೪. ನೀರು ; ಜಲ : ರಸರಸದ ಬಾವಿ ಮನೆಮನೆಗೆ ಬೇಡಿ (ಕಂಸಶಾ. ೪-೧೧ ಬಗೆ); ಪೊಸಕಲಶಮಾ ಯತಿಯ ಕರದಲಿರಲದ ಕೊಂಡು ರಸಭರಣಗೈದು ಪಿಡಿದೈದಿದಂ (ವಂಕಾರಾ. ೨-೨೩-೪೦). ೫. ಗಾಯದಿಂದ ಸುರಿಯುವ ಕೀವು ; ರಸಿಕೆ : (ಉಗುರು ಸುತ್ತಿಗೆ) ಪೊಲಿಸಿನ ಪುಡಿಯೊಳಗೆರ್ವೆಯ ತಿಳಿವಾಲಂ ಕಲಸಿ ಬಾದು ಕಟ್ಟುಗೆ ಬೆರಳಂ ಚಳಿಸಿದ ರಸದಿಂಬುಣ್ಣಳ ನಿಲಿಸದಿರದು (ಗೋವೈದ್ಯ. ೯-೦೬೯). ೬. ಹಾಲು, ತುಪ್ಪ, ಎಣ್ಣೆ ಮೊದಲಾದ ದ್ರವಪದಾರ್ಥ: 'ರಸಧಾನ್ಯ' ಪರಾ. ೭. ಅಮೃತ ; ಸುಧೆ : ಕೂಡಲ ಸಂಗನ ಶರಣರು ರಸದ ಪಾರುಧಿಗಳು ಎಂತಿರ್ದರೇನಯ್ಯಾ (ಬಸವ. ೭೯೦). ೮. ದೇಹದಲ್ಲಿ ರುವ ಸಪ್ತಧಾತುಗಳಲ್ಲಿ ಒಂದು ; ವೀರ್ಯ ; ರೇತಸ್ಸು. ೯. ವಿಷ ; ನಂಜು: "ಬ್ರಹ್ಮಪುತ್ರಃ . . . ರಸಃ . . . ವಿಷಂ –ಈ ೯ ವಿಷಂ" (ಹಲಾಯು. ೦೦೬-೨೪). 'ರಸದಾನ' ಪರಾ. ೧೦. ಪಾದರಸ; ಪಾರದ : "ಪಾದರಂ ಚಪಲಮೆನೆ ರಸಮೆನಿಕ್ಕು" (ಪಂಗಣ. ೯೭-೦೫) ; ಸಂಸಪ್ತಕನಿಕುರುಂಬ ದೊಳಗೊರ್ವರುಮಂ ಕಿಜುವೀಟಲೀಯದೆ ರಸಮಂ ಕೊಲ್ವಂತೆಂತಾನುಂ ಕೊಂದು (ಗಂಕಥಾ. ೧೨-೦೨೦ ವ) ; ಉರಿಗೆ ರಸ ನಿಂದಾಗವೆ ರಸಸಿದ್ಧಿ ಎಂಬೆ (ವಚನಪ. ೦೯-೬೬); ರಸಮಂ ನೀರೆ ಗೆತ್ತು ಮೊಗೆಯಲೆನ್ನ ಕರಯುಗಂಗಳ್ ಕೊಟಿತಟಿದು ಬೀಟಲಿರ್ದುವು (ವೀರಶಿಕ್ಷ. ೪-೯೦ ವ). ೧೧. ರಾಳ ; ಹಗಿನು. ೧೨. ಚಿನ್ನ ಮೊದಲಾದ ಲೋಹ. ೧೩. ರುಚಿ ; ಸವಿ ; ಸ್ವಾದು : ಕಯ್ಪುಯಿಣ್ಬರಂ ರಸಮೆ ಬಾರಿಕುಂ (ಶಾಂತಿಪು. ೬-೭೭) ; ರಸಮಂ ನಾಲಗೆ ಕವಿತಾರಸಮಂ ಕವಿ . . . ಅಜಿವನು (ಪಂಪಭಾ. ೦-೨೪). ೧೪. ಆನಂದ ; ಸಂತೋಷ ; ಹರ್ಷ : ರಸದ ತೊಜಿ ಪರಿದುದಮರ್ದಿನ ಪೊಸಸೋನೆಯ ಸುರಿದುದೆಂಬಿನಂ ಪೇಟ್ಟೊರ್ವಳ್ ಮಸುಪಸೆಯೆ ಪಾಡಿದಳ್ (ಸುಕುಮಾ. ೦೦-೨೩) ; ರಸದ ಮಟಿ ಕಜಿದಪುದು ಸಾತಿಸದಿಂ ಮಾಣದೆ ರಸಾಯನದ ಕೂಪದೊಳೆಂಬೆಸಕದಿನುದಳಮೆಸವುದು ರಸಗೀತಂ (ರಜಕಾವ್ಯ. ೪-೦೬೭). ೧೫. ಸಿಹಿ, ಹುಳಿ, ತೊಗರು,

ಕಹಿ ಮೊದಲಾದ ರುಚಿ : ರಸ—ತಿಕ್ತಕಟುಕಷಾಯಾಮ್ಲ ಮಧುರಾಭಿಧಾನರಸಪಂಚಕಮುಂ (ಕಲ್ಯಾ. ೨೯೩). 'ಷಡ್ರಸ' ನೋ. ೧೬. [ವೈಶೇ] ನಲವತ್ತುವಿಧವಾದ ಗುಣಗಳಲ್ಲಿ ಒಂದು : ರೂಪ, ರಸ, ಗಂಧ, ಸ್ಪರ್ಶ . . . ಸೌಭಾಗ್ಯವೆಂದು, ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಒಂದಣ. ೨೬೩). ೧೭. [ಕಾವ್ಯಮೀ] ಭಾವ, ವಿಭಾವ, ಸಂಚಾರಿಭಾವಗಳ ಸಂಯೋಗದಿಂದ ಆಗುವ ಆನಂದಾತ್ಮಕವಾದ ಚಿತ್ತವೃತ್ತಿ : ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ ಮತ್ತು ಶಾಂತ ಎಂಬ ಒಂಬತ್ತು ರಸಗಳು: ನವವಿಧರಸಂಗಳಂ ಮನಕೆ ಮರೆ ನಿರೂಪಿಸುವ ವಚನರಚನೆ ರಸವದ್ವಿಧಾಲಂಕಾರಂ ಕುಱಿತು ವಿಕಲ್ಪಿಸಿ ತೋರ್ಪೆಂ (ಕವಿರಾ. ೩-೧೬೬) ; ರಸಮಿಲ್ಲದ ಕಾವ್ಯಂ ನೀರಸಂ (ರಸರ. ೦-೪) ; ವಿಸ್ಮಯವೇ ಪ್ರಧಾನವಾಗಿ ಮಿಕ್ಕ ಚಿತ್ತವೃತ್ತಿಗಳು ಅಪ್ರಧಾನವಾದಾಗ ಅದೇ ರಸವೆನ್ನಬಹುದು (ಭಾರತೀ. ೪೦೩). ೧೮. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ: ರಸ ನಾಟ್ಯಾಂಗಂ ಗ್ರಹಣಂ ಪೊಸತು ನಿಧಿ ರತ್ನ ನವಮುಪೊಂಭತ್ತನಿಕುಂ (ವೃತಹಾ. ೯-೯). ೧೯. ಆರು ಎಂಬ ಸಂಖ್ಯೆಯ ಸಂಕೇತ : "ಋತುರಸವಿರಮು ದಾಚಿಯ" (ಶಂಗರಾ. ೦೦೩-೮) ; ಖರ . . . ರಸ . . . ೬ಕ್ಕೆ ಪೆಸರು (ವೃತಹಾ. ೦೦). [ಸಂ.]

**ರಸಋದ್ಧಿ** (ನಾ). [ಜೈನ] ತಪಸ್ಸಿನ ಸಾಧನೆಯಿಂದ ದೊರಕುವ ಒಂದು ಬಗೆಯ ಸಿದ್ಧಿ : ಆಸ್ಯವಿಷತ್ವಂ ದೃಷ್ಟಿವಿಷತ್ವಂ ಕ್ಷೀರಾಸ್ರವತ್ವಂ ಮಧ್ವಾಸ್ರವತ್ವಂ ಸರ್ಪಿರಾಸ್ರವತ್ವಮಮೃತಾಸ್ರವತ್ವಮೆಂದನೇಕಪ್ರಕಾರಮಪ್ಪಕಾರಮಾದ ರಸಋದ್ಧಿಯೊಳಂ . . . ನೆಱೆದು (ಶಂದ್ರಪ್ರ. ೦೪-೩೦ ಪ). [ಸಂ.]

**ರಸಋಷಿ** (ನಾ). ರಸಾನಂದವನ್ನು ಉಂಟುಮಾಡುವ ಋಷಿ ; ಕವಿ ; ಪರಮಾನಂದವನ್ನು ನೀಡುವ ದ್ರಷ್ಟಾರ : ಪರೀಫರು . . . ತನ್ನ ಪಾಲಿನ ಕರ್ಮಫಲಗಳನ್ನು ಮುಚ್ಚದೆ ಮಾಜದೆ ಆಡಿ ಮಾಡಿ ಬೋಧಿಸುತ್ತಿದ್ದ ಒಬ್ಬ ರಸಋಷಿಯಾಗಿದ್ದರು (ಕಂಠ. ೬೨ ಕವಿಕಾವ್ಯಸಂಕಲು) ; ರಸಋಷಿಗೆರಗುವೆನವರೆನ್ನನು ಕರುಣಿಸುತಿಹುದೆನ್ನ ಸ್ಮೃಪು(ಇಂಕಾಪ. ೪-೬). [ಸಂ.]

**ರಸಂಗೊಳ್** (ಕ್ರಿ). ದ್ರವವನ್ನು ಪಡೆ : ಪುಂಡ್ರೇಕ್ಷುದಂಡಂಗಳಂ ಕಡಿಕಡಿದು ಯಂತ್ರಪೀಡನೆಯಿಂ ರಸಂಗೊಳ್ವ ತೆಱನುಮನಱಿಯೆ ಪೇೞ್ದು (ಆದಿಪು. ೬-೭೭ ಪ). [ರಸ + ಕೊಳ್$_1$]

**ರಸಂದೆಗೆ** (ಕ್ರಿ). ನೀರು ಇಂಗಿ ಹೋಗು ; ಒಣಗು : ಸುಳಿವಾಗುಲಿಕೆಗಳ ರಸಂದೆಗೆದ ಜಿಹ್ವೆಯ ಚರ್ಮವನಿಗಳುದಿಸಿದ ವದನದ . . . ಬಗಿದ ಬೆಱಗಿನ ಚಿಂತೆಗಾಗರಂ ತಾನಾಗಿ (ಶಬ್ದ. ೭-೨೪). [ರಸ + ತೆಗೆ$_1$]

**ರಸಂಬಡೆ** (ಕ್ರಿ). ನವರಸಗಳನ್ನು ಸೃಷ್ಟಿಸು, — ಚಿತ್ರಿಸು : ಸುಗತಿಗಳಂ ಸೂಸುವ ಮದ್ದಳೆಗರಿಂ ರೂಪುರೇಖೆ ರಸಂಬಡೆವ ನರ್ತನನಾಯಕಿಯರಿಂ (ಗಿರಿ. ೨-೦೦೩ ಪ). [ರಸ + ಪಡೆ$_1$]

**ರಸಂಬೋಗು** (ಕ್ರಿ). ರಸವಿಲ್ಲದಂತಾಗು ; ಒಣಗು : ರಸಂಬೋದ ಕಬ್ಬಿನಂತೆ ಪೇಡಿಯಪ್ಪರಸಿನ ಮಾತಿನಂತೆ (ಧರ್ಮಾಮೃ. ೯-೨೩).

[ರಸ + ಪೋಗು$_1$ (< ಪೋ$_1$)]

**ರಸಕವಳ** (ನಾ). ರುಚಿಕರವಾದ ಭೋಜನ ; ಸವಿಯಾದ ಊಟ : ಗುರುಗಳ ಮನೆಯಲ್ಲಿ ಎರಡು ಹೊತ್ತೂ ರಸಕವಳ ಬಿದ್ದುಹೋಗುತ್ತಿತ್ತು (ರಾಗಿ. ೬೩) ; ಪೋಟು ಮಾಡಿದರೆ ರಸಕವಳ ತಪ್ಪದು ನಮಗೆ (ಅರಕು. ೩೨-೦). [ಸಂ. ರಸಕವಲ]

**ರಸಕಸಿ, ರಸಕಸೆ, ರಸಖಿಸಿ, ರಸಗಸಿ** (ನಾ). ೧. ತಿಕ್ಕಾಟ ; ಮನಸ್ತಾಪ : ನಾರಾಯಣ ನಿನ್ನ ನಾಮದ ಸ್ಮರಣೆಯ ಸಾರಾಮೃತವೆನ್ನ ನಾಲಿಗ್ಗೆ ಬರಲಿ . . . ರಸಕಸಿ ಇರಲಿ ಹರುಷಿರಲಿ (ಪುರಂದ. ೦-೬೩-೨) ; ಅಸವಸವು ಬೇಡ, ರಸಕಸಿಯುಂ ಬೇಡ. ಹೊಸ ರಸಿಕವೃತ್ತಿ ಬೇಕು (ಕೃಯಾ. ೬೩-೦೩) ; ಮಾತುಮಾತಿಗೆ ಸಿಟ್ಟು. ಸೆಡವು, ರಂದಿ, ರಸಕಸಿ (ಹೊಸ್ಬೆ. ೦೯೬). **ರಸಕಸೆ** : ೨. ಜಗಳ ; ಕಲಹ : ರಸಕಸೆಯನ್ನು ಮಾಡಬೇಡ ಸೋನಾ (ಕಪಲ. ೦೩೭). **ರಸಖಿಸಿ** : ೨. ಯಾಕ ಹುಡಿಗಿ. ಅತ್ತೀಜೋಡಿ ರಸಖಿಸಿ ಮಾಡತೀಯಂತಲ್ಲಾ (ಗಂಪಶಾಯ. ೦೩೪). **ರಸಗಸಿ** : ೨. ಹೀಂಗ ಮಾತಮಾತಿಗೆ ರಸಗಸಿ ಮಾಡೋದೊಂದು ಕೆಟ್ಟಚಾಳೀನ ಅದ ಆಕೀಗೆ (ಚಾಂದಾಯ. ೮). [← ಮರಾ. ರಸಕಸ್, ರಸಘುಸ್]

**ರಸಕಸೆ** 'ರಸಕಸಿ' ನೋ.

**ರಸಕಾವ್ಯ** (ನಾ). ನವರಸಭರಿತವಾದ ಕಾವ್ಯ : ಭರತಂ ಮಹಾತ್ಮನೆಸೆದನು . . . ರಸಕಾವ್ಯ ಸತ್ಕಲಾಭ್ಯಾಸದಧ್ಯಾತ್ಮದಲಿ (ಕ್ರೀಡಾಮ. ೨೬-೬೯೬). [ಸಂ.]

**ರಸಕೂಪ** (ನಾ). ಪಾದರಸದ ಬಾವಿ : ಇದು ಚಿತ್ರಂ ರಸಕೂಪದೊಳ್ ಪದೆಪಿನಿಂದಾಂ ಬಂದು ಪೊಕ್ಕಿರ್ಪುದೆತ್ತ . . . ಏರಿಗೊಂದಾಪತ್ತು ಪೆತ್ತಿರ್ಪುದೆತ್ತ (ಲೀಲಾಕ್ಷ. ೪-೯೧). [ಸಂ.]

**ರಸಖಿಸಿ** 'ರಸಕಸಿ' ನೋ.

**ರಸಗಂದಾಯ** (ನಾ). ರುಚಿಕರವಾದ ಪದಾರ್ಥಗಳ ಮೂಲಕ ಕೊಡುವ ಕಂದಾಯ; ತೆರಿಗೆ: ದಾಳಿಂಬಫಲಸಿಮ್ಮಾಮರನೇಱಲ್ ಮೊದಲಾದ ಫಳಕುಳಂಗಳಂ ಸೊಬಗುವಡೆದ ಸುರಪಂ ಕೈಗೆಯ್ದ ಕಾಮಧೇನು ಕಲ್ಪವೃಕ್ಷಂಗಳಿತ್ತ ಪಾಲ್ದುಪ್ಪ ಸಕ್ಕರೆಗಳ್ ಮೊದಲಾದ ರಸಗಂದಾಯಂಗಳಿಂ . . . ಉದ್ವಾಹ ಮಂದಿರಂ ಮೆಱೆದುದು (ಹಾಲಾಕ್ಷ. ೦-೬-೨೭ ಪ). [ರಸ + ಕಂದಾಯ]

**ರಸಗತಜ್ವರ** (ನಾ). ದೇಹದ ದ್ರವರೂಪವಾದ ಧಾತುವಿನಲ್ಲಿ ಸೇರುವ ಜ್ವರ : ಬಹಳ ವಾತ ಶ್ಲೇಷ್ಮ ಉಂಟಾಗಿ, ಮೈಯಲ್ಲಿ ಭಾರ ಕಾಣಿಸಿ ದೇಹದಲ್ಲಿ ಉರಿದೋರಿ, ದೈನ್ಯವಾದ ಮಾತುಗಳುಂಟಾಗಿ, ಆಕಳಿಸುತ್ತ, ಬಾಯಿಯಲ್ಲಿ ಅರೋಚಕ ಪುಟ್ಟಿ, ವಾಂತಿಯಾಗುತ್ತ, ದಾಹವುಂಟಾಗಿರುವುದೇ ರಸಗತಜ್ವರವೆನಿಸಿಕೊಂಬುದು (ಸಕಪ್ರ. ೯೯). [ಸಂ.]

**ರಸಗತ್ತಲೆ** 'ರಸಗೆಳ್ತಲೆ' ನೋ.

**ರಸಗಬ್ಬ** (ನಾ). = ರಸಕಾವ್ಯ : ಇಂಚರದಿ ಸಂಗೀತರಸದಲಿ ಮಿಂಚು ಕವಿಗಳ ಪಲವು ರಸಗಬ್ಬವನು ಗಮಕದಲಿ ಉಂಚದಲಿ ಮೆಱೆದೋದಿ (ಸಾಳ್ವಭಾ. ೩೨-೨೯); 'ಕಾಲೂರ ಚೆಲುವೆ' . . . ಪೋಲೀಸರು ಲಂಚಗುಳಿತನದಿಂದ ಮಾಡುವ ಅನ್ಯಾಯ ಇತ್ಯಾದಿಗಳನ್ನು ರಮ್ಯವಾಗಿ ಚಿತ್ರಿಸುವ ರಸಗಬ್ಬ (ಕಾಲೂರ. ೦೦ ಪರಿ). [ರಸ + ಕಬ್ಬ$_1$]

**ರಸಗರ್ಭ** (ನಾ). ೧. ಕಾಡಿಗೆ ; ರಸಾಂಜನ : "ದಾರ್ವಿಕಾ, ಕ್ವಾಥೋದ್ಭವಂ, ತುತ್ಥಂ, ರಸಾಂಜನಂ, ರಸಗರ್ಭಂ, ತಾರ್ಕ್ಷ್ಯಶೈಲಂ — ೬ ರಸಾಂಜನದ ಹೆಸರುಗಳು" (ಸಿದ್ಧಾಂತಿ. ೩೦೩). ೨. ಕೇಸರಿಬಣ್ಣದ ಪುಡಿ; ಸಿಂದೂರ. [ಸಂ.]

**ರಸಗವಳ** (ನಾ). = ರಸಕವಳ : ಶೃಂಗಾರ ಕರುಣ ವೀರರಸಗಳ ಸಂದರ್ಭೋಚಿತವಾಗಿ ಒಸರಿ ರಸಿಕರಿಗೆ ರಸಗವಳವಾಗಿದೆ (ಕಾಲೂರ.೦೦ ಪರಿ).

[< ರಸಕವಳ]

**ರಸಗಸಿ** 'ರಸಕಸಿ' ನೋ.

**ರಸಗೀತ** (ನಾ). ರಸಭರಿತವಾದ ಹಾಡು ; ಇಂಪಾದ ಗೀತೆ : ರಸಗೀತಕ್ಕೆಡೆಗೊಟ್ಟು ತಾಳಲಯದೊಳ್ ನೇರ್ಪಟ್ಟು . . . ಬಾಜಿಸುತ್ತುಂ (ಸುಲ್ಲಪು. ೦೨-೭೬). [ಸಂ.]

**ರಸಗುಂಡು** (ನಾ). ಪಾದರಸವನ್ನು ಬಳಿದ, ಹೊಳೆಯುವ ಬಣ್ಣಬಣ್ಣದ ಗೋಳಾಕಾರದ ಗಾಜಿನ ಗುಂಡು ; ಗುಳಾಪು : ಮದುವೆಯ ಚಪ್ಪರಕ್ಕೆ ರಸಗುಂಡುಗಳನ್ನು ಕಟ್ಟಿ ಚೆನ್ನಾಗಿ ಅಲಂಕರಿಸಿದ್ದರು (ರೂಢಿ). [ರಸ + ಗುಂಡು]

**ರಸಗುಲ್ಲ** 'ರಸಗುಲ್ಲಾ' ನೋ.

**ರಸಗುಲ್ಲಾ**, ರಸಗುಲ್ಲ (ನಾ). ಹಾಲನ್ನು ಒಡೆಸಿ ಅದರ ಗರಣೆಯಿಂದ ಮಾಡುವ ಒಂದು ಬಗೆಯ ಸಿಹಿತಿಂಡಿ : ಕಲಕತ್ತೆಯಿಂದ ಒಂದು ಪಾತ್ರೆಯಲ್ಲಿ ಉತ್ತಮ ರಸಗುಲ್ಲಾ ತಂದಿದ್ದೆ (ಶ್ರೀರಾಂಕ. ೩೩); ಜನಪ್ರಿಯವಾದ ಮಿಠಾಯಿಯೆಂದರೆ 'ರಸಗುಲ್ಲಾ'. ಅದನ್ನು ಮೊದಲು ತಯಾರಿಸಿದವಳು ಒಬ್ಬ ಸೂಳೆಯಂತೆ (ಅವ್ಯರಾ. ೦). **ರಸಗುಲ್ಲ** : ರಸಗುಲ್ಲ, ಮಸಾಲೆದೋಸೆ ಮಾಡಿದ್ದೀನಿ (ಬೂಕ).

[← ಹಿಂ. ರಸಗುಲ್ಲಾ; ಮರಾ. ರಸಗುಲ್ಲಾ, ರಸಗೋಲ್ಲಾ ]

**ರಸಗೆಡು** (ಕ್ರಿ). ಸಾರವಿಲ್ಲದಾಗು ; ನಿಸ್ಸತ್ತ್ವವಾಗು : ರಸಗೆಟ್ಟು ಹೋದ ವನಿತೆಯು ಹೋಹಾತ ಪಶುವಿನಾದತ್ತ (ಸರ್ವಜ್ಞ. ೦೭೯೯).

[ ರಸ + ಕೆಡು$_1$ ]

**ರಸಗೆಯ್**, ರಸಗೈ (ಕ್ರಿ). ೧. ದ್ರವವನ್ನಾಗಿ ಮಾಡು; ಕರಗಿಸು : ಕುಂದಣವನು ರಸಗೆಯ್ದೊಡಾಕ್ಷಣ ಕರುವಿಂದ ಬೇರ್ಪಡಿಸಿ ಪುತ್ಥಳಿಯ ತಂದಡರ್ಚಿದರು (ಸೋಮಶ. ೨೭–೫೮). **ರಸಗೈ** : ೨. ಸತ್ತ್ವವುಳ್ಳುದನ್ನಾಗಿ ಮಾಡು : ಬಗೆಬಗೆಯಾಟಿಕೆಗಳನು ಮಣ್ಣೊಳು ಮರದೊಳು ತಂದೆ ನಿರ್ಮಿಸುವರು ಕಸವನು ರಸಗೈವವರು (ಜಂತಾಶ. ೦೦–೩೭).

[ ರಸ + ಕೆಯ್$_1$ ]

**ರಸಗೇಯ** (ನಾ). = ರಸಗೀತ: ರಸಗೇಯಂ ನಲಿವೆರ್ಚಿದೆಂತೆ ವಿತತಾತೋದ್ಯಸ್ವನಂ ಸೂಸದೇಕೆ (ಮಲ್ಲಿಪು. ೯–೯); ರಸಗೇಯಂ ಭಾವನೃತ್ಯಂ ವಡೆಯೆ (ಚಾರ್ಯಕಥೆ. ೫–೧೦೦). [ಸಂ.]

ರಸಗೈ 'ರಸಗೆಯ್' ನೋ.

**ರಸಗೋಲ್** (ನಾ). ಸಿಹಿಯಾದ ದ್ರವವನ್ನುಳ್ಳುದು; ಕಬ್ಬು: ಕುಸುಮಾಸ್ತ್ರನೊಂದು ಕಬ್ಬಿನ ಬಿಲ್ಲಿನಿಂ ಲೋಕವಿಸರವಂ ಕೊಂದು ಕೂಗುತಲಿಹನು . . . ರಸಗೋಲ್ಗಳಿನ್ನು ವೆಗ್ಗಳಮಿರಲು ಮಾರ ಗರ್ವಿಸೆಂತೊಂತು ಮಾಳ್ಪನೊ (ಪಚಪೂ. ೯–೨೯). [ರಸ + ಕೋಲ್$_1$]

**ರಸಗ್ರಹಣ** (ನಾ). ಕಾವ್ಯ, ನೃತ್ಯ ಮೊದಲಾದ ಕಲೆಗಳ ಸ್ವಾರಸ್ಯವನ್ನು ಗ್ರಹಿಸುವಿಕೆ : ಅರ್ಥವನ್ನು ವಿವರವಿವರವಾಗಿ ತಿಳಿದುಕೊಂಡು ರಸಗ್ರಹಣ ಮಾಡುವವರಿಗೆ ಇಂಥ ಕವನಗಳನ್ನು ಓದಿದಾಗ ಒಮ್ಮೆಲೆ ಅರ್ಥವಾಗುವುದಿಲ್ಲ (ಕಮ್ಯಕ. ೯೫). [ಸಂ.]

**ರಸಘಳಿಗೆ** (ನಾ). ಅತ್ಯಂತ ಆನಂದದ ಕಾಲ ; ಸಂತೋಷದ ಗಳಿಗೆ : ಮಕ್ಕಳ ಹಿಂದೆ ಮುದುಕರೂ ಹೊರಡುವ ರಸಘಳಿಗೆ ಅದು (ಆಕಸೀ. I, ೬೧೯). [ರಸ + ಘಳಿಗೆ$_1$ (< ಗಳಿಗೆ)]

**ರಸಘುಟಿಕೆ** (ನಾ). ಪಾದರಸದಿಂದ ಮಾಡಿದ ಗುಳಿಗೆ, — ಮಾತ್ರೆ: ಮಂತ್ರ ತಂತ್ರ ಯಂತ್ರ ಬೇಳುವ ತಿಲಕ ತಿಗುರು ರಸಘ[ಘು]ಟಿಕೆ . . . ಮೊನೆಕಟ್ಟೆಂಬ ಕುವಿದ್ಯದಿಂ ಗೆಲುವೆನು (ಶೃರಸೂ. I, ೩೬೬).

[ಸಂ. ರಸಘುಟಿಕಾ]

**ರಸಚಿತ್ರ** (ನಾ). ೧. ದ್ರವರೂಪವಾದ ಬಣ್ಣಗಳಿಂದ ಬರೆದ ಚಿತ್ರ: ಚಿತ್ರಚಿತ್ರಾರ್ಧಚಿತ್ರಾಭಾಸವೆಂಬ ಮೂಱುಂ ಪ್ರಕಾರಮುಮಂ ರಸಚಿತ್ರ ಧೂಳೀಚಿತ್ರದೋಜೆಯುಮಂ . . . ಪರಿಭಾವಿಸಿ ನೋಡಿ (ಮಲ್ಲಿಪು. ೫–೯೨) ; ನಡೆಮಂತೆ ನುಡಿವ ಪುತ್ರಿಕೆ ಮಿಡುಕುವ ರಸಚಿತ್ರದೆಸೆವ ಪೆಣ್ಣಂ ಬೊಳ್ಪಂ ಪಡೆದಳ್ (ಚಂದ್ರಪ್ರ. ೫–೭೭೬); ರಸಚಿತ್ರಂ ರತ್ನಭೂಷಾವಳಿ ಮೃದುವಸನಶ್ರೇಣಿ ಮುಕ್ತಾತಪತ್ರಪ್ರಸರಂ (ಚಾಶಕೀ. ೯–೯೦). ೨. ಕಾವ್ಯದಲ್ಲಿ ಆನಂದವನ್ನುಂಟುಮಾಡುವ ಸನ್ನಿವೇಶ ; ಸ್ವಾರಸ್ಯಕರವಾದ ಪ್ರಸಂಗ. [ಸಂ.]

**ರಸಜ** (ನಾ). ೧. ಸಕ್ಕರೆ. ೨. ಕಾಕಂಬಿ. ೩. ರಕ್ತ. [ಸಂ.]

**ರಸಜೀವನ** (ನಾ). ಸಾರವತ್ತಾದ ಬಾಳು ; ಸೊಗಸಾದ ಜೀವನ : ರಸಜೀವನಕೆ ಮಿಗಿಲ್ ತಪಮಿಹುದೆ? (ಶ್ರೀರಾಮಾ. ೩೨–೧೨೭). [ಸಂ.]

**ರಸಜ್ಞ** (ನಾ). ೧. ಸ್ವಾರಸ್ಯವನ್ನು ಬಲ್ಲವನು : ಭೋಗಂಗಳ್ . . . ಮನೋರಾಗಮನೊದವಿಸದವು ಹೃದ್ರೋಗಮನೊದವಿಸೆ ರಸಜ್ಞನನುಭವಿಸುಗುಮೇ (ಅಜಿತ. ೩–೭೦); ಶ್ರೀಮದುಮಾಮಧುರಾಧರಸೋಮಕಳಾರಸರಸಜ್ಞರಸನಂ (ಜಾಶಕೀ. ೫–೦). ೨. ಶೃಂಗಾರ, ಹಾಸ್ಯ ಮೊದಲಾದ ಕಾವ್ಯರಸಗಳನ್ನು ಬಲ್ಲವನು: ಒದವಿರ್ದ ಚಿತ್ರದಿಂ ತೋರ್ಪುದು ಭಾವಂ ಭಾವದಿಂದೆ ರಸಮುಬ್ಬಿಸುಗುಂ ವದನಮದಂ ಪ್ರಕಟಿಪುದಾ ವದನದೆ ರಸಮಿಂತಿದೆಂದು ತಿಳಿಗೆ ರಸಜ್ಞರ್ (ರಸರ. ೦–೩). ೩. ರಸವಿದ್ಯೆಗಳನ್ನು ಬಲ್ಲವನು ; ರಸವಾದಿ. [ಸಂ.]

**ರಸಜ್ಞತೆ** (ನಾ). ೧. ರಸಾನುಭವವನ್ನು ತಿಳಿಯುವ ಶಕ್ತಿ; ಆನಂದವನ್ನು ಅರಿಯುವ ಚೈತನ್ಯ. ೨. ಕಾವ್ಯಶಕ್ತಿ. ೩. ರಸವಾದಜ್ಞಾನ. ೪. ರುಚಿಭೇದಜ್ಞಾನ. ೫. ತಾರತಮ್ಯಜ್ಞಾನ. [ಸಂ. ರಸಜ್ಞತಾ]

**ರಸಜ್ಞಾನಿ** (ನಾ). ರಸವಿದ್ಯೆಯನ್ನು ಬಲ್ಲವನು ; ರಸವಾದಿ: ಇನನುತ್ತರಾಯಣದೊಳನುದಿನಂ ರಸಜ್ಞಾನಿ ನೀರನೊಸೆವಂತೊಸೆದಂ (ಜಾಶಕೀ. ೦೦–೨೫). [ಸಂ. ರಸಜ್ಞಾನಿನ್]

**ರಸಜ್ಞೆ** (ನಾ). ೧. ರಸಗಳನ್ನು ಅರಿಯುವ ಇಂದ್ರಿಯ ; ನಾಲಗೆ: "ರಸಜ್ಞಾ, ರಸನಾ, ಜಿಹ್ವಾ—ಈ ೩ ನಾಲಗೆ" (ಹಲಾಯು. ೬೩–೩೩೭). ೨. ರಸವನ್ನು ಬಲ್ಲವಳು ; ರಸಿಕಳು. [ಸಂ. ರಸಜ್ಞಾ]

**ರಸತಂತ್ರ** (ನಾ). ಕೀಳುಲೋಹಗಳನ್ನು ಚಿನ್ನವಾಗಿಸುವ ಕಲೆ; ರಸವಿದ್ಯೆ : ಮಾಟಮಂತ್ರವಿದ್ಯೆಯ ಒಂದು ಭಾಗ ರಸತಂತ್ರ (ಕ್ರಜಾ. I, ೩೫೯). [ಸಂ.]

**ರಸತಪಸ್ಯ** (ನಾ). ರಸಾನುಭವಕ್ಕಾಗಿ ಮುಡಿಪಿಟ್ಟ ತಪಸ್ಸು : ವೃದ್ಧಿಯಾಗಿರಲಿ ಬಾಳ್ವೆ, ಜಯಿಸುಗೆ ರಸತಪಸ್ಯ ; ದೊರೆಕೊಳ್ಳುಗೆ ಚಿರಶಾಂತಿ (ಶ್ರೀರಾಮಾ. ೩–೦೫೯). [ಸಂ. ರಸತಪಸ್ಯಾ]

**ರಸತವರ** (ನಾ). ಪಾದರಸ : (ದರ್ಪಣದ ಗಾಜಿಗೆ) ರಸತವರವನ್ನು ಲೇಪಿಸು (Quicksilver. ೩೦೯೩). [ರಸ + ತವರ]

**ರಸತ್ತಾರುಗ ?** (ನಾ). (?) : ತೊತ್ತಬಿಡುಬೀವ ಮದೇಭಂಗಳುಮಂ ಮದೇಭಂಗಳನಾದರ್ ಬಿಟ್ಟುಕ್ಕುವ ನಿಷಾದಿಗ[ಳಟ]ುಮಿ ಪೊರಜೆವಿಡಿದು ಕೊರಲ ಬಳೆಗಳೊಳ್ ಕ್ಷಾಲ್ಗೋದು ಪರಿಯಿಸುವ ರಸತ್ತಾರುಗರುಮಂ[ಪಾಠಾಂ. ಪರಿಯಿಸುವವರಸತ್ತಾರು ಗುರುಮಂ, ಪರಿಣಿಸುವಾರಸತ್ತಾರು ಗುರುಮಂ] ಆ ರಸತ್ತಾರುಗರಿಡುಮಿಟ್ಟಯ ಪಿಡಿಕುತ್ತಿನ ಕಕ್ಕಡೆಯು ಕೋಳ್ಗೆ ಮರಪಟಲಂ ಪಾಯ್ದು ಕೆಡೆದಂ (ಕಂಕಥಾ. ೧೨–೬೦ ವ) ; "ರಸತ್ತಾರುಗರುಮಂ — ಆನೆಯ ಮೇಲೆ ಕುಳಿತು ಯುದ್ಧಮಾಡುವವರನ್ನು (?)" (ಕಂಕಸೂ. ೯೩೬).

[ ? ]

**ರಸತ್ವ** (ನಾ). ರಸಾನುಭವವುಂಟಾಗುವ ಅವಸ್ಥೆ : ಭಾವ ರಸತ್ವಕ್ಕೆ ಏರುವುದು ಎಂದರೆ ಪ್ರಾಣಮಯ ಮನೋಮಯಕ್ಕೇರುವುದು ಎಂದು ಅರ್ಥ (ಸಾಂಪ್ರಕ. ೦೯). [ಸಂ.]

**ರಸದಂಬುಲ** (ನಾ). ರಸಭರಿತವಾದ ತಾಂಬೂಲ : ಪೊಳೆವ ಕೆಂದಳ್ಳಿಗೆ ರಸದಂಬುಲವ ಮೆಲ್ಲಗೆ ಸಾರ್ಚಿ (ಸೋಮಶ. ೦೩–೫೯); ಬಿಂಬಾಧರದ ಸವಿಯ ತೋರಿ ನೆಜ್ ರಸದಂಬುಲಗುಟುಕಿತ್ತು ಕೂಟೊ (ಸಂಪಟ. ೯–೦೫೯).

[ರಸ + ತಂಬುಲ]

**ರಸದರ್ಶನ** (ನಾ). ರಸವನ್ನು ಕಾಣುವುದು, – ಅರಿಯುವುದು : ನವನವೋನ್ಮೇಷಿತಂ ನಿತ್ಯಚಿರನೂತನಂ ರಸದರ್ಶನಾಸ್ವಾದನಂಗೈವ ಸಹಜಕವಿ (ಶ್ರೀರಾಮಾ. ೫೭–೦೦೦). [ಸಂ.]

**ರಸದಾಡಿಮ** (ನಾ). ಸಾರವತ್ತಾದ ದಾಳಿಂಬೆ : ರಸದಾಡಿಮದ ಬಿತ್ತುಮಂ ಪೊಸಮುತ್ತುಮಂ ಮುಕ್ಕುಳಿಸಿದಂತಪ್ಪ ವಿಬುಧವನಜವನಕಳಹಂಸನ ದಂತಪಂಕ್ತಿಗಳಮೃತಕಿರಣನ ಕಾಂತಿಗಳನಿಳಿಸುವಂತಾದುವು (ಕಂಕಥಾ. ೨–೩೯ ವ). [ಸಂ.]

**ರಸದಾನ** (ನಾ). ೧. ದ್ರವವನ್ನು ಕೊಡುವಿಕೆ : (೬). ೨. ವಿಷಹಾಕುವುದು; ವಿಷಪ್ರಯೋಗ : ಪುರುಷವಂ ಸಮುಕಟ್ಟುವವುಪ್ಪೊಡೆ ಪೊಕ್ಕಿಱಿಯಲಣ್ಮುವರಿಲ್ಲ ರಸದಾನಾದಿಗಳೊಳ್ ಛದ್ರಿಸುವವುಪ್ಪೊಡವರಾಪ್ತವಂತರುಂ ಬುದ್ಧಿವಂತರುಮಪ್ಪ ನೆಗಟ್ಟರ್ (ಪಂಪಭಾ. ೬-೬೭ ವ). ೩. ಆನಂದವನ್ನು ನೀಡುವುದು ; ರಸಾನುಭವವನ್ನು ಕೊಡುವುದು : ಕವಿಸೃಷ್ಟಿಯ ಈ ಸ್ಥಾನ. ಈ ಪಾನ 'ಪಕ್ಷಿಕಾಶಿ 'ಯ ರಸದಾನವಾಗಿದೆ (ಪಾಸಮ. ೦೦೦). [ಸಂ.]

**ರಸದಾಳಿ**, ರಸದಾಳೆ, ರಸ್ತಾಳೆ (ನಾ). ೧. ಒಂದು ಬಗೆಯ ಶ್ರೇಷ್ಠ ಜಾತಿಯ ಕಬ್ಬು : ರಸವತ್ತಾದ ಕಬ್ಬು : ರಸದಾಳಿ ದಾಳಿಂಬಂಗಳಂ ತವೆ ಬಾಲದಿಂದಲಿ ಕಿತ್ತೊರಸಿ ಹುಡಿಹುಡಿ ಮಾಡಿದನು ಹನುಮ (ಕೌರಾ. ೦೦-೨೦); ರಸದಾಳಿಯಂತೆ ರಮಣಿಯರ ಚೆಂದುಟಿಯಂತೆ . . . ಅತಿರುಚಿಯ ಪಡೆದುದತಿರಸಿಕನತಿನಿಪುಣ ಮಂಗರಸನೊಪ್ಪುವ ವಾಕ್ಯಗುಂಫನ ಭಾವಿಸಿದೊಡೆ (ಸಮ್ಯಕ್. ೦-೦೦) ; ಕಬ್ಬಿನ ಜಾತಿಗಳಲ್ಲಿ – ರಸದಾಳಿ, ರಾಮಗಬ್ಬು, ಕರಿಗಬ್ಬು . . . ಎಂದು ಅನೇಕವುಂಟು (ಪಂಜಾಬಿಯ. ೩-೨೦೦). ೨. ಒಂದು ಬಗೆಯ ಶ್ರೇಷ್ಠ ಜಾತಿಯ ಬಾಳೆ : ನಂಜನಗೂಡಿನಲ್ಲಿ ರಸದಾಳಿಯನ್ನು ಹೆಚ್ಚಾಗಿ ಬೆಳೆಯುತ್ತಾರೆ (ಕಂಠ). **ರಸದಾಳೆ** : ೧. 'ರಸದಾಳಿಕಬ್ಬು ' ಪರಾ. **ರಸ್ತಾಳೆ** : ೧. ಬಾಳೆ ರಸ್ತಾಳೆ ದಾಳಿಂಬಂ ಮೊದಲಾದ ಫಲತರುಗಳಿಂ . . . ಬೆಳಗುವ ಧರ್ಮತೋಟಂ (ಪಾಸಗ. ೪೪). [ದೇ. ಹೋ. ತೆಲು. ರಸದಾಳಿ, ರಸದಾಡಿ]

**ರಸದಾಳಿಂಬ** (ನಾ). = ರಸದಾಡಿಮ : ರಸದಾಳಿಂಬದ ಬೀಜಮುಂ ಕರ್ಪುರಲಾ ಸಾರಂ ಕರಂ ಸೃಕ್ಕದೊಳ್ ಬಸಿಯಲ್ (ಅದ್ಭುಟ. ೯-೨೬); ಫಲಭರದ ರಸದಾಳಿಂಬ ಖರ್ಜೂರಾಮ್ರ . . . ಮಧೂಕತರುನಿಕುರುಂಬಕದ ಸುರನಂದನ (ಶೋರಚಾ. ೦-೩-೪೦). [ರಸ + ದಾಳಿಂಬ]

**ರಸದಾಳಿಕಬ್ಬು** 'ರಸದಾಳಿಗರ್ವು ' ನೋ.

**ರಸದಾಳಿಗಬ್ಬು** 'ರಸದಾಳಿಗರ್ವು ' ನೋ.

**ರಸದಾ ಗರ್ವು**, ರಸದಾಳಿಕಬ್ಬು, ರಸದಾಳಿಗಬ್ಬು, ರಸದಾಳಿಕಬ್ಬು (ನಾ). = ರಸದಾಳಿ ೧ : ಇಕ್ಕೆಲದೊಳು ಕೊರ್ವಿ ನಳನಳಿಸಿ ನೀಳ್ದು ಬೆಳೆದ ರಸದಾಳಿಗರ್ವುಗಳ್ (ಕೃಷಿಣ. ೩-೩). **ರಸದಾಳಿಕಬ್ಬು** : ರಸದಾಳಿ ಕಬ್ಬಿನೊಳು ಹಿಂದುಮುಂದನೆ ತೆಗೆದು ಮಿಸುಪ ಮರಗಬ್ಬು ಕಳಿಯ ಮರಗಬ್ಬಿನೊಳೊಸರ್ವ ರಸಮಂ ಓಳಿದು (ಸೂಕಶಾ. ೨-೪೦) ; ರಸದಾಳಿ [ಪಾಠಾಂ. ಳೆ]ಕಬ್ಬು ಮೆಲಲೆಂದು ಹೋದರೆ ವಿಷವಾಗಿ ತೋಱುತಿದೆ ಪ್ರಾರಬ್ಧಬಲದಿಂದ (ಪುರಂದ. ೨-೬೯-೩). **ರಸದಾಳಿಗಬ್ಬು** : ಚೆಂದಂಗಿನೆಳಗಾಯೊಡೆದು ಕೈಯೊರೆಸಿಪೊಸರ್ವ ಪೊನಲಿಂ ಕಡುವೆಳೆದ ರಸದಾಳಿಗಬ್ಬುಗಳು (ಶಾಕ್ಯಭಾ. ೦-೬೦) ; ರಸದಾಳಿಗಬ್ಬಿನ ರಸದೊಳಾ ನೃಪತಿ ಮಿಾಯಿಸುವಂದ ಮೆಚ್ಚಿಸುವಾ ಜನಪಾ (ಶರಕ. ೦೬-೭೬). **ರಸದಾಳಿಕಬ್ಬು** : ಆಲದ ಬೀಳು ಎಲಚಿ ಚಿಗುರು . . . ರಸದಾಳಿಕಬ್ಬು, ಇಪ್ಪೆಹೂವು ಇವುಗಳ ಕಷಾಯವಿಕ್ಕಿ ಸಕ್ಕರೆಗೂಡಿ ಸೇವಿಸೆ ದಾಹಜ್ವರ ಗುಣಮಕ್ಕುಂ (ಸಕಲ್ಪ. ೬೭). [ರಸದಾಳಿ + ಕರ್ವು$_1$]

**ರಸದಾಳಿವಿಲ್ಲ** (ನಾ). ರಸದಾಳಿಯ ಕಬ್ಬಿನ ಬಿಲ್ಲನ್ನು ಹಿಡಿದಿರುವವನು ; ಮನ್ಮಥ : ನಲ್ಲ ಕೊ ನಾಗರೀಕನೆ ಕೊಳ್ಳೊ ರಸದಾಳಿವಿಲ್ಲನ ರೂಪ ಕೊಳ್ಳಲಪ್ಪೋ (ಪೋಷಕ. ೦೯-೯೬). [ರಸದಾಳಿವಿಲ್ಲು + – ಅ$_7$]

**ರಸದಾಳಿವಿಲ್ಲು** (ನಾ). ಮನ್ಮಥನ ಕಬ್ಬಿನ ಬಿಲ್ಲು : ಕಿವಿವರಂ ತೆಗೆದು ಸಮ್ಮೋಹದಿಂದೆಸುವ ರಸದಾಳಿವಿಲ್ಲೋ ಎಸಲ್ಕಾಗಳೆರಿಪೆಚ್ಚೆಯೊಗೆದುದು (ಶಬ್ದಾಣ. ೬-೭೩). [ರಸದಾಳಿ + ಬಿಲ್ಲು$_1$ (<ಬಿಲ್$_2$)]

**ರಸದಾಳೆ** 'ರಸದಾಳಿ ' ನೋ.

**ರಸದಾಳಿಕಬ್ಬು** 'ರಸದಾಳಿಗರ್ವು ' ನೋ.

**ರಸದು**, ರಸ್ತು (ನಾ). ಸೈನ್ಯಕ್ಕೆ ಸರಬರಾಜುಮಾಡುವ ಆಹಾರಧಾನ್ಯ : ಯೆರಡು ಕೋಟೆಗೆ ಇರುವ ರಸದು ತೆಗೆದುಕೊಂಡು ಹೊರಟು ಬಂದು ರಸ್ತು ಸಾಮಾನು ಸಾಗಿಸಿಕೊಂಡು (ರಾಕೇಂದ್ರ. ೨೫). **ರಸ್ತು** : ರಾಜೇಶ್ರೀ ದೊರೆಗಳ ರಸ್ತಿನ ಹುಣವನುಯೆತ್ತಿ (ಎಕ. XI, ಪೊಳಕಾ. ೨೫-೪೭ ; 1665) ; ಜಕೀರಿ ರಸ್ತು ಮುಸ್ತೈದೆಗಳೊಳಪೊಗದಂತು ಕಂಡಿಕಣಿವೆ ಪಥಂಗಳಂ ಕಟ್ಟಿ (ಕೆಳದಿನೃ. ೫-೪೪). [←ಪಾರ. ಹಿಂ. ಮರಾ. ರಸದ್]

**ರಸದುಂಬು** (ಕ್ರಿ). ರಸಭರಿತವಾಗಿರು : ಅವಳ ರಸದುಂಬಿದ ಚೆಂದುಟಿಗಳಿಗೆ ನನ್ನ ಒರಟುತುಟಿಗಳನ್ನು ತಗಲಿಸಿದೆ (ಹಾಡುಹು. ೦೦೬). [ರಸ + ತುಂಬು$_1$]

**ರಸದೃಷ್ಟಿ** (ನಾ). ಕವಿಯ ಸ್ವಾರಸ್ಯವಾದ ರೀತಿ,– ದೃಷ್ಟಿ : ಕೆಲ ಆಧ್ಯಾತ್ಮಿಕ ಸತ್ಯಗಳನ್ನು ರಸದೃಷ್ಟಿಯಿಂದ ಸೂಚಿಸುವ ವ್ಯಂಜಕತೆ (ಪದ್ಮಕಾ. ೦೦೬). [ಸಂ.]

**ರಸದೋಷ** (ನಾ). ೧. ಹೊಟ್ಟೆಯಲ್ಲಿ ನೀರು ತುಂಬಿಕೊಳ್ಳುವ ಒಂದು ಬಗೆಯ ರೋಗ : ಪವನಜಾಡು ಮುನ್ನ ಹೇಮಂತವ ಪಿಂಡಮನಿಕ್ಕಿ ಗರ್ಭಂಗನಿಕ್ಕಿಗೆ ಬಟ್ಟೆಯಂ ತ್ರಿದಿಸಂ ತಾಂ ಲೇಪಂಗೆಯ್ಯೆದೊಡುಟ್ಟಿಯದೆ ಕಿಡುಗುಮನಿತಱೊಳ್ ರಸದೋಷಂ (ಅಶ್ವಶಾ. ೦೩-೨೯). ೨. [ಕಾವ್ಯಮಿಾ] ಕಾವ್ಯದೋಷಗಳಲ್ಲಿ ಒಂದು ; ರಸದಲ್ಲಿ ಉಂಟಾಗುವ ದೋಷ : 'ದೋಷ' ಗಳನ್ನು (೧) ಪದದೋಷ, (೨) ಅರ್ಥದೋಷ, (೩) ರಸದೋಷ ಎಂದು ಮೂರು ಭಾಗ ಮಾಡಬಹುದು (ಕೈಪಿಡಿ. ೨೨೬). [ಸಂ.]

**ರಸದ್ರವ್ಯ** (ನಾ). ರುಚಿಕರವಾದ ಪದಾರ್ಥ : ಸಹಪಂಕ್ತಿಯಲ್ಲಿ . . . ರಸದ್ರವ್ಯವ ಎಸಕದಿಂದ ಇಕ್ಕಿದಡೆ (ಸಕಲ. I. ೪೭೦-೨೦) ; ವರ ಸುಹಸ್ತದಿ ಪಾಕಗೈದ ರಸದ್ರವ್ಯಮಂ ನಿರುತನಾಂ ನಿತ್ಯ ಭುಂಜಿಪೆ (ಸವಮೋ. ೯-೬೪). [ಸಂ.]

**ರಸಧರ್ಮ** (ನಾ). ರಸಾನುಭವವನ್ನು ಉಂಟುಮಾಡುವ ಗುಣ : ಇದನ್ನು ಮಮ್ಮಟ ಮುಂತಾದ ನವೀನಾಲಂಕಾರಿಕರು ಗ್ರಹಿಸಿ ಗುಣಗಳು 'ರಸಧರ್ಮ ' ಗಳೆಂದು ನಿಷ್ಕರ್ಷಿಸಿದ್ದಾರೆ (ಕೈಪಿಡಿ. ೦೭೩). [ಸಂ.]

**ರಸಧಾತು** (ನಾ). ೧. ಪಾದರಸ ; ಪಾರಜ. ೨. ದೇಹದಲ್ಲಿರುವ ಸಪ್ತಧಾತುಗಳಲ್ಲೊಂದು : ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು . . . ಎಂದು ಏಳು ತೆರನಾಗಿವೆ (ಸಕಲ್ಪ. ೯೬). [ಸಂ.]

**ರಸಧಾನ್ಯ** (ನಾ). ದ್ರವಾಂಶವಿರುವ ಎಳ್ಳು, ಕಡಲೆಕಾಯಿಬೀಜ ಮುಂತಾದುವು : ಬಿಂಡುಗದ ಮೂಗಳದ ಹೊಲದಲಿ ಹುಟ್ಟಿದಂತ್ಹಾ ರಸಧಾನ್ಯ ಜೋಳ ನೆಲು ಮುಂತಾದ ಧಾನ್ಯ (ಕೌಇಇ. IX-ii, ೬೪೯-೦೪; 1652). [ಸಂ.]

**ರಸಧಾರೆ** (ನಾ). (ಹಣ್ಣಿನಲ್ಲಿರುವ) ದ್ರವದ ಧಾರೆ : ತನಿವಣ್ಣಂ . . . ಚಂಚುಪುಟದಿಂದಂ ಮೆಚ್ಚಿಸಿಂ ಸೀಳ್ದು ಸೀಯೆನೆ ಸೋರ್ವ ರಸಧಾರೆಯುಂ ಸವಿದು (ಕಬಿಕಂ. ೨-೪೪). [ಸಂ. ರಸಧಾರಾ]

**ರಸಧಿ** (ನಾ). ಕಡಲು ; ಜಲಧಿ ; ಸುಖದುಃಖಜನ್ಮಮೃತ್ಯುಗಳೆಲ್ಲಮೊಂದಾಗಿ ಮುಳುಗಿರ್ಪಪೊಂದಸಂತಾನುಂದರಸಧಿಯುಲಿ (ಚಿತ್ರಾಂಗ. ೪೦-೦೦೨). [ಸಂ.]

**ರಸಧ್ವನಿ** (ನಾ). [ಕಾವ್ಯಮಿಾ] ಐದು ವಿಧವಾದ ಧ್ವನಿಗಳಲ್ಲಿ ಒಂದು ; ರಸಾನುಭೂತಿಯನ್ನುಂಟುಮಾಡುವ ಧ್ವನಿ : ರಸಗಂಗಾಧರಕಾರನು : "ಹೀಗೆ ಐದು ವಿಧವಾದ 'ಧ್ವನಿ ' ಯಲ್ಲಿ 'ರಸಧ್ವನಿ ' ಗೆ ಪರಮರಮಣೀಯತೆ " ಎಂದು ಹೇಳಿದ್ದಾನೆ (ಕೈಪಿಡಿ. ೦೬೪); ವಸ್ತುಧ್ವನಿ ಅಲಂಕಾರ ಧ್ವನಿಗಳೆರಡೂ ಪರ್ಯಂತದಲ್ಲಿ ರಸಧ್ವನಿಗೆ ಪೋಷಕವಾಗಬಹುದು (ಕಾರಬಾ. ೩೦೩). [ಸಂ.]

**ರಸನ** (ನಾ). ೧. ರುಚಿ ನೋಡುವಿಕೆ ; ಆಸ್ವಾದನೆ. ೨. ರುಚಿಯನ್ನು ನೋಡುವ ಅಂಗ ; ನಾಲಗೆ : ಸ್ಪರ್ಶನ ರಸನ ಘ್ರಾಣ ಚಕ್ಷು ಶ್ರೋತ್ರೇಂದ್ರಿಯಂಗಳ್ (ಸುಕುಮಾ. ೬-೭ ವ) ; ರಸನದಿ ಕೇಳ್ವ ಕಾಂಬ ಆಜುವ ಆಘ್ರಾಣ

ಸುವ ಆಸ್ವಾದಿಸುವ (ತುರಂದ. ರಾ. ೩-೧೯೦-೨). ೩. ಕೂಗುವಿಕೆ; ಅಬ್ಬರ. [ಸಂ.]

**ರಸನಗೆ** (ನಾ). ಸ್ವಾರಸ್ಯವಾದ ನಗು : ರಸನಗೆಯೆಳೆನಗೆಯೆಂಬವೆಂತಿಹು ವೆಂಪ್ರು ನಸುನಗುತವಳು ಪಾಡಿದಳು (ಶರಶ. ೧೦-೩೦). [ರಸ + ನಗೆ]

**ರಸನತ್ವ** (ನಾ). ರುಚಿಯನ್ನು ಕಂಡುಹಿಡಿಯುವ ಶಕ್ತಿ : ಅವರ ಹೊಟ್ಟೆಹಸಿವಿನ ತೀವ್ರತೆಯಲ್ಲಿ ನಾಲಗೆಯ ರಸನತ್ವ ಮಂಕುಬಡಿದು ಹೋಗಿದ್ದಿರಬೇಕು (ಹಸುಹೊ. ೩೩೯). [ಸಂ.]

**ರಸನಾಂಚಲ** (ನಾ). ನಾಲಗೆಯ ತುದಿ ; ಜಿಹ್ವಾಗ್ರ : ತೊಳಗುವ ರನ್ನದೊಟ್ಟಿಲೊಳ್ ಪಟ್ಟಿರಿಸುತ್ತೆ ಕುಮಾರನಂ ಮುಂದಂದಳೆದಳವೆಣ್ಗಳೊಲ್ದು ರಸನಾಂಚಲದೊಳ್ದನಿದೋಱು . . . ಜೋಯೆನುತೊಪ್ಪೆ ತೂಗಿದರ್ (ರಾಜಶೇ. ೯-೬೦). [ಸಂ.]

**ರಸನಾಗ್ರ** (ನಾ). = ರಸನಾಂಚಲ : ದ್ವಿಪಾರಿಗುಣ್ಮುವ ರಸನಾಗ್ರದಂ ಪುಲಿಗೆ ಕೈಯೆರಡಂ ನಿಮಿರ್ದೆತ್ತಿ ಪಂಥಿಗೊಪ್ಪುವ ಮೊಳಕೈಯ ತೋರ್ಪರ ರೆಬರ್ ಬಿಯದರ್ ಸಲೆ ಸನ್ನೆವೇಂಟೆಯೊಳ್ (ರಾಜಶೇ. ೫-೯೫). [ಸಂ.]

**ರಸನಾಮಕರ್ಮ** (ನಾ). [ಜೈನ] ತೊಂಬತ್ತುಮೂರು ಬಗೆಯ ನಾಮಕರ್ಮಗಳಲ್ಲಿ ಒಂದು ; ಸಿಹಿ, ಕಹಿ, ಕಾರ, ಒಗರು ಮತ್ತು ಹುಳಿ ಎಂಬ ಪ್ರಕೃತಿಗಳು : ರಸನಾಮಕರ್ಮಂ ಪಂಚವಿಧಮಕ್ಕುಂ ತಿಕ್ತಕಟುಕ ಕಷಾಯಾಂಬ್ಲಮಧುರನಾಮಕರ್ಮಂ (ಗೊಮ್ಮಕಾ. ೯-೧೧). [ಸಂ.]

**ರಸನಾಲಂಪಟ** (ನಾ). ಜಿಹ್ವಾಚಾಪಲ್ಯವುಳ್ಳವನು : ರಸನಾಲಂಪಟ ನಾಜ್ಯವಾಂಛಿತನಸಂತುಷ್ಟಂ ಸದಾಸರ್ವಭಕ್ಷ ಸಮಸ್ತಾಟವಿಭುಂಜಿತ್ತೋಗ್ರ ನೆನಿಪೀ ದಾವಾಗ್ನಿಯಂ ಕಾಲ್ಗಳಿಂ ಪೊಸೆದಂ (ಸೂಕ್ತಿಸು. ೧೧-೦೬೫). [ಸಂ.]

**ರಸನಿಮಿಷ** (ನಾ). ಅತ್ಯಂತ ಸಂತೋಷದ ಕಾಲ; ರಸವತ್ತಾದ ಗಳಿಗೆ: ತನ್ನ ಜೀವನದ ಅತ್ಯುತ್ತಮ ರಸನಿಮಿಷಗಳಲ್ಲಿ ತಾನು ಬಾಳುತ್ತಿದ್ದಂತೆ ಅವನಿಗೆ ಅನುಭವವಾಯಿತು (ಕೃಸರು. ೨೯೭). [ಸಂ.]

**ರಸನಿರೂಪಣೆ** (ನಾ). ರಸದ ಅಭಿವ್ಯಕ್ತಿ : ರಸನಿರೂಪಣೆಯಲ್ಲಿ ವಾಲ್ಮೀಕಿಯ ಶಕ್ತಿ ಅದ್ಭುತವಾದುದು (ಬಾರಶ. ೯೨). [ಸಂ. ರಸನಿರೂಪಣ]

**ರಸನಿರ್ಮಿತಿ** (ನಾ). = ರಸನಿರೂಪಣೆ : ರಸನಿರ್ಮಿತಿಯಲ್ಲಿ ಕವಯಿತ್ರಿಯ ವ್ಯಕ್ತಿತ್ವಕ್ಕನುಗುಣವಾಗಿ ಅಲ್ಲಲ್ಲಿ ಭೇದಗಳು ಕಂಡು ಬರುತ್ತವೆ (ಕರ್ಣಾಕ. ೩೩೯). [ಸಂ.]

**ರಸನಿಷ್ಪತ್ತಿ** (ನಾ). ರಸಾನುಭವವು ಉಂಟಾಗುವಿಕೆ ; ಕಾವ್ಯಾನಂದದ ಉತ್ಪತ್ತಿ : ವಿಭಾವಗಳು, ಅನುಭಾವಗಳು, ಸಂಚಾರಿ(ಭಾವ)ಗಳು ಇವುಗಳ ಸಂಯೋಗದಿಂದ ರಸನಿಷ್ಪತ್ತಿಯಾಗುವುದು (ಬಾರಶಿಖ. ೩೫೫). [ಸಂ.]

**ರಸನೆ** (ನಾ). ೧. ನಾಲಗೆ ; ಜಿಹ್ವೆ : "ರಸಜ್ಞಾ, ರಸನಾ, ಜಿಹ್ವಾ – ಈ ೩ ನಾಲಗೆ" (ಹಲಾಯು. ೬೭-೩೭೭) ; ರಸನಾಶಂಪಾಶತಂ ಸಂಚಳಿಸೆ ಪುದಿಯೆ ಫೂತ್ಕಾರವಾತಾಂತಮಂ ದಳ್ಳಿಸೆ ವಹ್ನಿಜ್ವಾಲೆ (ಶಂಠಾವಿಪ. ೫-೭೯). ೨. ಉಡೆನೂಲು ; ಮೇಖಲೆ : "ರಸನೆ ಮೇಖಲೆ ಕಾಂಚಿ ಸಪ್ತಕಿ ಕಳಾಪಿ ಸಾರಸಮೆನಲುಡಿದಾರಮಕ್ಕು" (ಮಂಗರಾ. ೦೦೦-೩೦) ; ದಿನಲಕ್ಷ್ಮೀ ರಸನೈಕಮಧ್ಯಮಣಿಯಾದಂ ಭಾಸ್ಕರಂ (ಶಾರಂಪೂ. ೬೨೯). [ಸಂ. ರಸನಾ]

**ರಸನೇಂದ್ರಿಯ** (ನಾ). ರುಚಿಯನ್ನು ಗ್ರಹಿಸುವ ಅಂಗ ; ನಾಲಗೆ : ರಸನೇಂದ್ರಿಯವಶದಿಂ ಸೈರಿಸಲಾಱದೆ ಗಾಳದೆರೆಗೆ ಪಾಯ್ದು ಬೀವುವು ಮೀನ ಸಮಾಯಮೆಂದೊಡಕ್ಕಟ ವಸುಮತಿಯೊಳ್ ಜಿಹ್ವೆ ಕಿಡಿಸದಾರಂ ಪದಪಿಂ (ಧರ್ಮಾಮೃ. ೫-೨೫) ; ರಸನೇಂದ್ರಿಯವಿಷಯದಿಂದೆ ಮತ್ಸ್ಯ ಕೆಡುವುದು ಬಾಲಗಾಜನ ಬಲೆಯಲ್ಲಿ (ಅಜಂಚೇ. ೭-೯). [ಸಂ.]

**ರಸಪಂಚಕ**(ನಾ)೧. ಹಾಲು, ತುಪ್ಪ, ಜೇನು, ತೈಲ ಮತ್ತು ಮದ್ಯ ಎಂಬ ಐದು ಬಗೆಯ ರಸಗಳು : ನವರಸದೊಳ್ ಘೃತಾದಿ ರಸಪಂಚಕದೊಳ್ . . . ರಸಾಖ್ಯ ಸಂತತಂ (ಜಾವಾರ. ೯೯). ೨. [ಜೈನ] ಮಧುರ, ಆಮ್ಲ, ಕಟು, ಕಷಾಯ ಮತ್ತು ತಿಕ್ತ ಎಂಬ ಐದು ರಸನಾಮ ಪ್ರಕೃತಿ : ಪೂರ್ವಶರೀರಬಂಧನಸಂಘಾತವರ್ಣರಸಪಂಚಕಸಂಸ್ಥಾನಸಂಹನನ ಪಂಚಷಟ್ಕಾಂಗೋಪಾಂಗದ್ವಿಕಂ (ಅಜಿತ. ೧೬-೯೯ ವ). 'ಪಂಚರಸ' ಪರಾ. [ಸಂ.]

**ರಸಪರವಶತೆ** (ನಾ). ಆನಂದದಲ್ಲಿ ಮುಳುಗುವಿಕೆ,– ತಲ್ಲೀನಗೊಳ್ಳುವಿಕೆ: ಮಾಯಾಮುರಳಿಯಿಂದ ಹೊರಹೊಮ್ಮುತ್ತಿದ್ದ ನಾದಮಾಧುರ್ಯವು . . . ಮನಮೋಹಕವೂ ಆಗಿತ್ತು. ಅದರ ರಸಪರವಶತೆಯು ದೈವೀಕವಾಗಿತ್ತು (ಸಂಗೀತ. ೯೬) ; ಮೂಲಸೌಂದರ್ಯವೇನಿದ್ದರೂ . . . ರಸಪರವಶತೆಗೆ ಸಂದ ಚಿತ್ತಕ್ಕೆ ವೇದ್ಯವಾಗುವ ಒಂದು ಅತೀಂದ್ರಿಯವಾದ ಆಧ್ಯಾತ್ಮಿಕಸತ್ಯ (ಸೌಂದಶ. ೩೬). [ಸಂ. ರಸಪರವಶತಾ]

**ರಸಪರಿತ್ಯಾಗ** (ನಾ). [ಜೈನ] ಆರು ಪ್ರಕಾರದ ಬಾಹ್ಯತಪಗಳಲ್ಲಿ ಒಂದು ; ತುಪ್ಪ, ಹಾಲು, ಎಣ್ಣೆ, ಬೆಲ್ಲ, ಸಕ್ಕರೆ, ಉಪ್ಪು ಮೊದಲಾದ ರಸಪದಾರ್ಥಗಳನ್ನು ಸೇವಿಸದೆ ಇರುವ ವ್ರತ : ಕ್ಷೀರ ದಧಿ ಘೃತ ಲವಣ ತೈಲಾದಿ ರಸಂಗಳಂ ಪರಿತ್ಯಾಗಂಗೆಯ್ವ ರಸಪರಿತ್ಯಾಗಂ ಎಂಬ ನಾಲ್ಕನೆಯ ತಪದೊಳಂ . . . ನೆಱೆದು (ಅಜಿತ. ೬-೩೦ ವ) ; ಕರಮೆ ಮುನಿ ದುಗ್ಧ ದಧ್ಯಾದಿ ರಸಂಗಳನೆಯ್ದೆ ತೊಱೆದು . . . ನಾಲ್ಕನೆಯ ರಸಪರಿತ್ಯಾಗವೆಂಬ ತಪಮಂ ತಳೆದಂ (ಚಂದ್ರಪ್ರ. ೧೧-೧೧). [ಸಂ.]

**ರಸಪಾಕ** (ನಾ). ರುಚಿಯಾದ ಅಡುಗೆ ; ಸವಿಯಾದ ಪಾಕ : ಕೂಗರಿ ಬದನೆ ಮೊದಲಾದ ಕಾಯ್ಗಳ ರಸಂಗಳ ತೆಗೆದು . . . ಪರಿಮಳಗೊಳಿಸಲದು ಪಾರ್ವತೀಮತದ ರಸಪಾಕ (ಸೂಶಾ. ೫-೪೧) : ನಗುವೊಂದು ರಸಪಾಕವಳುವೊಂದು ರಸಪಾಕ . . . ಬಗೆದೆರಡನುಂ ಭುಜಿಸು (ಮಂಕುತಿ. ೪೩೯). [ಸಂ.]

**ರಸಪುರಿ** (ನಾ). ಒಂದು ಬಗೆಯ ಮಾವು : ಮಾವಿನ ಹಣ್ಣುಗಳಲ್ಲಿ ರಸಪುರಿ, ಬಾದಾಮಿ ಮುಂತಾದ ಅನೇಕ ಜಾತಿಗಳಿವೆ (ಕಪ್ರ). 'ತೋತಾಪುರಿ' ಪರಾ. [ ರಸ + ಪುರಿ, ]

**ರಸಪ್ರಕ್ರಿಯೆ** (ನಾ). = ರಸನಿಷ್ಪತ್ತಿ : ಇವರಲ್ಲಿ ಮುಖ್ಯವಾಗಿ ರಸಪ್ರಕ್ರಿಯೆ ಪ್ರತಿಪಾದಿತವಾಗಿದೆ (ಕೃಷಿಎ. ೦೬೬). [ಸಂ. ರಸಪ್ರಕ್ರಿಯಾ]

**ರಸಫಲ** (ನಾ). ೧. ರಸ ತುಂಬಿರುವ ಹಣ್ಣು ; ಸಾರವತ್ತಾದ ಫಲ : ರಸಫಲ ಪಾಕಾದಿಗಳನೂ ಸರ್ವದ್ರವ್ಯಗಳನೂ ಷಡುರುಚಿ ಭಿನ್ನರುಚಿ ಮೂವತ್ತಾಱನಱಿದು ಜಿಹ್ವೆಯ ಕೈಯಲೂ ಲಿಂಗಜಿಹ್ವೆಗೆ ಅರ್ಪಿಸಲು ರಸಪ್ರಸಾದ (ಊಶಿ. ೪. ೦೦೬-೦೮೭). ೨. ತೆಂಗು. [ಸಂ.]

**ರಸಬಾಳೆ** ' ರಸವಾಟಿ ' ನೋ.

**ರಸಬೀಜ** (ನಾ). ಒಂದು ಬಗೆಯ ಸಸ್ಯ : ತಪಸಿ, ಕಾಲಾದ್ರಿ, ರಸಬೀಜ (ವೃಶಿಗಿ. ೩೪-೬೭೯). [ಸಂ.]

**ರಸಬುರುಡೆ** (ನಾ). = ರಸಗುಂಡು : ನೆಲಕ್ಕೆಲ್ಲಾ ಅಮೃತಶಿಲೆಯು ಹಾಸಲ್ಪಟ್ಟಿದೆ. ಮೇಲುಗಡೆ ಕಂದೀಲುಗಳು ರಸಬುರುಡೆಗಳೂ . . . ಅಲಂಕರಿಸಲ್ಪಟ್ಟಿದೆ (ಶ್ರೀಚಾಯು. ೦೩೬). [ ರಸ + ಬುರುಡೆ ]

**ರಸಭಂಗ** (ನಾ). ರಸಾನುಭವಕ್ಕೆ ಉಂಟಾಗುವ ಅಡ್ಡಿ : ರಸಭಂಗ ಭಯದಿನಿಂದ್ರಂ ಪೊಸತೊಂದಾ ದೊರೆಯ ಪಾತ್ರಮಂ ತಂದನುಸಂಧಿಸುವುದಂ (ಅಜಿತ. ೯-೮೨) ; ಆ ವೇಳೆಯಲ್ಲಿ ಪಾಲೀಕಾರನೊಬ್ಬನು ಬಂದು . . . ರಸಭಂಗ ಮಾಡಿದನು (ರಂಗರೋ. ೭೭). [ಸಂ.]

**ರಸಭರಿತ** (ಗು)೧. ರುಚಿಕಟ್ಟಾದ ; ಸಾರವತ್ತಾದ : ರಸಭರಿತ ಖರ್ಜೂರ ಫಲ ಸಂಪ್ರಸರಭಿತ್ರುವನೆಸಗಿಯುಪವನವೆಸೆದುದೈ (ಕುವ್ಯಾಉ. ೭-೨೯) ; ರಸಭರಿತ ಖರ್ಜೂರ ಕುಜು ಮೆಲ್ಲಬಲ್ಲುದೆ (ತುರಂದ. ೫-೦೯-೧). (ನಾ). ೨. ಸಾರವತ್ತಾದುದು. ೩. ಶೃಂಗಾರಾದಿ ನವರಸಗಳಿಂದ

ತುಂಬಿದುದು. ೨. ೩ : ರಸಭರಿತವಾಗಿ ಸತ್ಯವಿಕಾವ್ಯಬಂಧದಂತೆ ಸಮಸ್ತಫಲಪೂರ್ಣವಾಗಿ ಸುಕೃತಾತ್ಮನಂತೆ ಪರದನಂತೊಪ್ಪುಗುಂ ಶಾಲಿಯ ವನಂ (ಶಬ್ದಾ. ೬-೦೩). [ಸಂ.]

**ರಸಭಸ್ಮ** (ನಾ). ಒಂದು ಬಗೆಯ ಔಷಧೀಭಸ್ಮ ; ಪಾದರಸದ ಬೂದಿ : ರಸವಂ ತೊಳೆದು ಶುದ್ಧಿಯಂ ಮಾಡಿ ಗಂಧಕದ ಚೂರ್ಣದಲ್ಲಿ ಜಳಕಮಾಡಿ, ಇಟ್ಟಿಗೆಯ ಸಂಪುಟವ ಮಾಡಿ, ಕುಳಿ ತೋಡಿ, ವಾಲುಕಾಯಂತ್ರದಲ್ಲಿ ಬೆರಣಿಯ ಕುಳಿಯಲ್ಲಿ ೪ ಜಾವ ಪುಟವಿಕ್ಕೆ ರಸಭಸ್ಮವಹುದು (ಏವೈಶಿ. ೯೩). [ಸಂ.]

**ರಸಭಾವ** (ನಾ). ೧. ನೀರು ಇರುವಿಕೆ ; ದ್ರವದ ಅಸ್ತಿತ್ವ. ೨. ರಸಾನುಭವವನ್ನುಂಟುಮಾಡುವ ಚಿತ್ತವೃತ್ತಿ : ಮೃದುಪದಗತಿಯಿಂ ರಸಭಾವದ ಪೆರ್ಚಿಂ ಪಣ್ಯವನಿತೆಯೊಳ್ ಕೃತಿಸೌಂದರ್ಯದ ಚಾತುರ್ಯದ ಕಣಿಯೆನೆ ವಿದಗ್ಧಬುಧಜನದ ಮನವನಲೆಯಲೆವೇಡಾ (ಆದಿಪು. ೦-೦೩). ೧, ೨ : ಜಗದೇಕಜೀವನಸ್ಥಿತಿಯಿನ್ನತಿಪ್ರಸಾದಗುಣದಿಂ ರಸಭಾವವಿಲಾಸದಿಂ . . . ಸರಸ್ವತಿ ದಯೆಗೆಯ್ಗೆ (ಶಾಂತಿಪು. ೨). [ಸಂ.]

**ರಸಭೋಜ್ಯ** (ನಾ). ದ್ರವರೂಪದ ಆಹಾರ (?) : ರಸಭೋಜ್ಯದೊಳಂ ಮರಣಮುಮಂ ಸಂಪಾದಿಸುಗುಂ ವಾಜಿಗಳ್ಗೆ ಷಡ್ವಿಂಶತಿಯೊಳ್ (ಅಶ್ವಶಾ. ೩_೬೨). [ಸಂ.]

**ರಸಮಗ್ನ** (ನಾ). ಆನಂದದಲ್ಲಿ ಲೀನನಾದವನು : ಚತುರಕವಿ ಪೇಟ್ ರಸವತ್ಕೃತಿಯಂ ರಸಮಗ್ನನಾಗಿ ದುರ್ಜನನುಮದಂ ಸ್ತುತಿಯಿಸವೇಟ್ಟುದು (ಪಂಪಭಾ. ೦-೨೯). [ಸಂ.]

**ರಸಮಗ್ನತೆ** (ನಾ). ಆನಂದದಲ್ಲಿ ತಲ್ಲೀನವಾಗುವಿಕೆ : ಘನಾಗಮ ಲಕ್ಷ್ಮಿ ಕೇತಕೀಧವಳಕಟಾಕ್ಷೆ ಕಂಡು ರಸಮಗ್ನತೆಯಿಂ ಪುಳಕಾಂಕುರಂಗಳತ್ಯವಿರಳಮಾಗೆ ಕೊಟ್ಟಳೆಚಿರಪ್ರಭೆಯೆಂಬ ಸುವರ್ಣಮಾಲೆಯಂ (ಪಂಪಭಾ. ೯-೯೭).

[ ಸಂ. ರಸಮಗ್ನತಾ ]

**ರಸಮಟ್ಟ** (ನಾ). ವಸ್ತುಗಳ ಮಟ್ಟವನ್ನು ಕಂಡುಹಿಡಿಯಲು ಉಪಯೋಗಿಸುವ, ಪಾದರಸವನ್ನು ತುಂಬಿ ಮಾಡಿದ ಒಂದು ಸಾಧನ : ವಸ್ತುಗಳು ಸಮತಲವಾಗಿವೆಯೆ ಇಲ್ಲವೆ ಎಂಬುದನ್ನು ಪರೀಕ್ಷಿಸಲು ಉಪಯೋಗಿಸುವ ಒಂದು ಸಲಕರಣೆ ; ಮಟ್ಟಕೋಲು ; ಮೂಲೆಮಟ್ಟ ; (ರಸ)ಮಟ್ಟ (Level· ಇಂಕಪ). [ ರಸ + ಮಟ್ಟ$_1$ ]

**ರಸಮಾರ್ಗ** (ನಾ). ಶೃಂಗಾರಾದಿ ನವರಸಗಳನ್ನು ನಿರೂಪಿಸುವ ಕ್ರಮ, ರೀತಿ : ವೀರಾದ್ಭುತಕರುಣಾಶೃಂಗಾರಭಯಾನಕ ಸರೌದ್ರಬೀಭತ್ಸಮಹಾಸಾರತರಹಾಸ್ಯಶಾಂತಾಧಾರನವವಿಧವಿಕಲ್ಪಮಾ ರಸಮಾರ್ಗಂ (ಕವಿರಾ. ೩-೦೮೩). [ಸಂ.]

**ರಸಮೂಲಿಕೆ** (ನಾ). ಒಂದು ಬಗೆಯ ಸಸ್ಯ : "ರೋಮಕಂದಃ — ರೋಮಕಂದರ ; ರಸಮೂಲಿಕೆ " (ಕಿಶಂ. ೦೪೦). [ ಸಂ. ರಸಮೂಲಿಕಾ ]

**ರಸಮೆಟ್ಟು** (ಕ್ರಿ). ರಸವು ತುಂಬಿರು ; ಸಾರದಿಂದ ಕೂಡಿರು : ಹಸನಾದ ಹಣ್ಣೀ ಮೊಸಳೆತೋಟಕ್ ಬಾರೆ ರಸಮೆಟ್ಟಿದೆಲೆಯ ಕೊಯಿಸೇನು (ಹಳ್ಳಿಯ. ೩೭). [ ರಸ + ಮೆಟ್ಟು$_1$ ]

**ರಸಯಿಸು** (ಕ್ರಿ). ( ? ) : ರಸಯಿಸಿರ್ದ ತುರಂಗಮುಮಂ ನೀರೂಡವ ಹರ್ನಿಶಮುಮಂ ಪ್ರಯೋಗಿಸುಗೆ ತಪ್ಪದೆ ಜಾವದೊಳ್ವರ್ಪತ್ತಯ್ದು ಹರೀತಕಿಯಾಗೆ ಸಂಧಿಸಿ (ಅಶ್ವಶಾ. ೯-೨೩೭). " ವಾಯುಕೊಳ್ " (ಅಶ್ವಶಾ. ಪ್ರ). [ ? ]

**ರಸಯೋನಿ** (ನಾ). ಬಿಳುಗಾರ ; ಟಂಕಣ. [ಸಂ.]

**ರಸರಸಾಯನ** (ನಾ). ಅತಿರುಚಿಯಾದ ರಸಾಯನ : ನಾಗಕನ್ನೆಯರುಂ ತಾನುಂ ಮನಂಬುಗಿಸುವಂತೆ ಮಜ್ಜನಂಬುಗಿಸಿ ರಸರಸಾಯನಂಗಳನೂಡುವಂತೆ ದಿವ್ಯಾಹಾರಂಗಳನೂಡಿ (ಶಂಕರಾ. ೪-೦೬ ವ) ; ದಿನದಿನದೊಳಿತ್ತಲು ರಸರಸಾಯನಮಂ ಬಸವನರನುನೆಯೊಳನುಭವಿಸಿ(ಬಸವ. ೩೦-೩) ; ತನಿವಣ್ಗಳ ರಸರಸಾಯನ . . . ಪಾಲ್ಮೊಸರ್ಗಳಿವು ಬಗೆಗೊಳಿಸಿ(ಕೃಷ್ಣರಾ. ೬-೪೪). [ಸಂ.]

**ರಸರ್ಧಿ** (ನಾ). = ರಸಋದ್ಧಿ : ಆಸ್ಯವಿಷರುಂ ದೃಷ್ಟಿವಿಷರುಂ ಕ್ಷೀರಸ್ರಾವಿಗಳುಂ ಮಧುಸ್ರಾವಿಗಳುಂ ಸರ್ಪಿಃಸ್ರಾವಿಗಳುಂ ಅಮೃತಸ್ರಾವಿಗಳುಂ ಎಂದು ರಸರ್ಧಿಪ್ರಾಪ್ತಾಚಾರ್ಯರ್ ಆಚರಿತರು (ತತ್ತ್ವಸೂ. ೦೬೪). [<ಸಂ. ರಸರ್ದ್ಧಿ]

**ರಸವಂತಿ** (ನಾ). ೧. ರಸವನ್ನು ಹೊಂದಿರುವುದು ; ಸಾರವತ್ತಾದುದು : ಯಾರ ಪುಣ್ಯ ಬೆಳೆಯಲೆಂದು . . . ಸತತ ಶ್ರಮಿಸಿದೆನೊ ಆ ರಸವಂತಿ ಈಗ ಬತ್ತಿ ಹೋಯಿತೆ ! (ಶಾಂತಕಾ. ೩೩೯). ೨. ಒಂದು ಬಗೆಯ ಔಷಧಿಮೂಲಿಕೆ : ೩೯೫. ರಸವಂತಿ ೩೯೬. ರಸಸಿಂಧೂರ (ಮುಂಜಿಪ್ರ. ೦೭೩). [← ಹಿಂ. ಮರಾ. ರಸವಂತೀ]

**ರಸವಂತಿಕೆ** (ನಾ). ರಸಿಕತನ : ಮನೋಹರವಾಗಿ ಹೃದಯಂಗಮವಾಗುವಂತಹ ವಿಶೇಷತರದ ರಸವಂತಿಕೆಯೂ ಇಲ್ಲ (ರಾಜಪ. ೬೨) ; ನನ್ನೀ ರೂಪು . . . ಐಶ್ವರ್ಯ ರಸವಂತಿಕೆ ಎಂಥ ಮಹಾಯೋಗಿಯ ದೃಢನಿಷ್ಠೆಯನ್ನೂ ಹುಡಿಗಟ್ಟಬಲ್ಲುದು (ಶುಂಗಶ. ೬೨). [ರಸ + — ವಂತ + — ಇಕೆ]

**ರಸವಚ್ಚ** (ನಾ). ಚಿನ್ನದ ಆಭರಣ : ರಸವಚ್ಚಂಗಳ ಬಣ್ಣಗೆವೆಳಗಿನಿಂದೆ ಇಂದ್ರಧನುವಂ ಸಿರಿರಾಣಿಯ ಪೊಂಜೆಳೆಮೆಯ್ಯಿಂ ಮಿಂಚುವಳ್ಳಿಯನೊಳಕೊಂಡಸೆವಮರ್ದುಗಂಡ ಕರ್ಮುಗಿಲಂತೆಯುಂ ತೋರ್ಕುಂ (ಶಶಪಂ. ೦೨೩-೦೩). [ರಸ + ಪಚ್ಚ$_2$]

**ರಸವಣ್** (ನಾ). ರಸಭರಿತವಾದ ಹಣ್ಣು : ಸಾರವತ್ತಾದ ಫಲ : ಸೋರ್ವ ರಸವಣ್ಗಳಂ ತಾಳ್ದ ಚೂತಂ ತುದಿಗೆ ಪರ್ವಿದೆಳೆವಳ್ಳಿಯಿಂದೆಸೆವ ಪೂಗಂ . . . ನಾಡೆ ಸಾರ್ವಕಾಲಂ ಕುಂದವು (ಶಂಖ. ೦೦-೨೨). [ ರಸ + ಪಣ್$_3$]

**ರಸವಣೆ** (ನಾ). ಒಂದು ಬಗೆಯ ಮದ್ಯ : ರಸವಣೆಯನುಂಡ ಗೊರವಿತಿ ಪೊಸತಾಶೀರ್ವಾದವುಳ್ಳದೊಂದೆಂದೊಗಳ್ ಬಸಿಗಳ್ಳಿಂಗೆ ಮಹೇಶರ ಪಸಾದ ಸುರುಂಕವಡೆ ಕವಡೆ ಹರಿಪೋ ಎಂದಳ್ ( ? ) (ಕೂಶ್ತಸು. ೦೩-೨೦). [ರಸ + < ಪಾಣಿ$_1$]

**ರಸವಣೆಗ** (ನಾ). ಮದ್ಯವನ್ನು ಕುಡಿಯುವವನು : ಇಚುದುದಕದಂತೆ ಹಾಲಿನ ನಚುಸೋನೆಯನುಂಡ ಬಣ್ಣದರಲ್ಗಳ ಸೊನೆಯಿಂ ತುಬುಕಿನ ಜೋಲುವ ತಿಳಿಗಳನೀಜಿಗಿದರಾ ಜನಮನಳುರೆ ಹೊಸರಸವಣಿಗರ್ ( ? ) (ಕೂಶ್ತಸು. ೦೩-೦೯). [ರಸವಣ + — ಗ$_2$]

**ರಸವತಿ** (ನಾ). ಅಡುಗೆಮನೆ ; ಪಾಕಶಾಲೆ : " ಪಾಕಸ್ಥಾನಂ. ರಸವತೀ, ಮಹಾನಸಂ — ಈ ೩ ಬಾಣಸಿನ ಮನೆ '' (ಹಲಾಯು. ೪೯-೦೪೦). [ಸಂ. ರಸವತೀ]

**ರಸವತ್ತು** (ನಾ). ರಸವುಳ್ಳುದು ; ರಸಭರಿತವಾದುದು : ಇದರಿಂದ ಒಳ್ಳೆ ರಸವತ್ತಾದ ಪಲಾವ್ ಆಗುತ್ತದೆ (ಮರಿಪಾ. ೩೭) ; ಗುರುಮೂರ್ತಿ . . . ರಸವತ್ತಾದ ಸಾಮಗ್ರಿ ತುಂಬಿದ ತಾಟು ಮುಂದೆ ಸರಿಸಿದ (ಶಾಪವಿ. ೨೪೩). [ಸಂ. ರಸವತ್]

**ರಸವದ್ಗೇಯ** (ನಾ). ಸಾರವತ್ತಾದ ಹಾಡು : ಲಲಿತಾಲಂಕರಣಪ್ರಸನ್ನರಸವದ್ಗೇಯಂಗಳೊಳ್ ಮಾಡುತುಂ ಮುಬುಗುತ್ತುಂ (ಆದಿಪು. ೦-೪೪). [ಸಂ.]

**ರಸವರ್ಗ** (ನಾ). ೧. ಆಹಾರಕ್ಕೆ ರುಚಿಕೊಡುವ ಮೆಣಸು, ಉಪ್ಪು ಮೊದಲಾದ ಪದಾರ್ಥ. ೨. ಚೆನ್ನಾಗಿ ಮಿಶ್ರಣ ಮಾಡಿದ ಗಾರೆ : ವಜ್ರಗಾರೆ. [ಸಂ.]

**ರಸವಶ** (ನಾ). ರಸಾನುಭವದಲ್ಲಿ ತನ್ಮಯನಾದವನು : ಕನ್ನಡವನೆ ಆಡಿ ಕನ್ನಡವನೆ ಹಾಡಿ ರಸವಶನಾದೆನೋ ರಂತೆ (ಇಂಚರಪ. ೭೯-೬೩) ; ದೇವರು

ರುಜುಮಾಡಿದನು : ರಸವಶನಾಗುತ ಕವಿ ಅದ ನೋಡಿದನು (ಶಬ್ದಾ. ೨೮-೪೦). [ಸಂ.]

**ರಸವಸ್ತು** (ನಾ). ಸತ್ವವನ್ನು ನೀಡುವ ದ್ರವಪದಾರ್ಥ ; ಎಣ್ಣೆ : ರಸವಸ್ತುವನುಂಡು ಜ್ಯೋತಿ ತಾ ಪೋಪಾಗ ಪಣತಿಗೆ ಪೇಳದೆ ಹೋಯಿತು (ಪುರಂದ. ದಾ. ೩-೦೩೯-೪). [ಸಂ.]

**ರಸವಾದ** (ನಾ). ಒಂದು ಬಗೆಯ ಲೋಹವಿದ್ಯೆ ; ಕಬ್ಬಿಣ ಮುಂತಾದ ಕೀಳುಲೋಹಗಳನ್ನು ಚಿನ್ನವನ್ನಾಗಿ ಮಾರ್ಪಡಿಸುವ ವಿದ್ಯೆ : ಬಲಭದ್ರನೆಂಬ ಸಿದ್ಧನು . . . ಸಕಲಸಾಧನವಂ ಕೂಡಿ ರಸವಾದದಿಂದ ಸುವರ್ಣವಂ ಮಾಡಲು (ಶೈರಸೂ. I. ೪೨೮); ರಸವಾದದ (Alchemy) ಮಾತು ಮೊದಲು ಬಂದಿರುವುದು ಕ್ರಿ. ಪೂ. ೧೩೩ರಲ್ಲಿ ಚೀನದಲ್ಲಿ (ಶಿಲ್ಪಶಾ. ೯೯). [ಸಂ.]

**ರಸವಾದಕ** (ನಾ). ಲೋಹವಿದ್ಯೆಯನ್ನು ಬಲ್ಲವನು ; ಕಬ್ಬಿಣ ಮುಂತಾದ ಕೀಳುಲೋಹಗಳನ್ನು ಚಿನ್ನವನ್ನಾಗಿ ಮಾಡುವವನು: ಒರ್ವ ರಸವಾದಕನೆಂಬ ಬಿಚ್ಚುವನೀ ಬಾವಿಯೊಳಗಿಟಿದು ನೀನೀ ರಸಮಂ ಮೊಗೆದು ಕೊಟ್ಟೊಡದರಿಂದೊಳ್ ಮಾಡಿದ ಪೊನ್ನುಂ ನಿನಗಮೆನಗಂ ಸಮಭಾಗಮಕ್ಕುಮೆಂದೊಡೆ (ಶಬ್ದಾರಾ. ೦೮೭-೧೦). [ಸಂ.]

**ರಸವಾದಸಿದ್ಧ** (ನಾ). ರಸವಾದದಲ್ಲಿ ಸಿದ್ಧಿಯನ್ನು ಪಡೆದವನು : ಶಿವನು ರಸವಾದಸಿದ್ಧನೆಂಬ ಜಂಗಮವಾಗಿ ಬಂದು . . . ಪರುಷದ ಗಟ್ಟಿಯಿಂದ ಮುಟ್ಟಿಸಿ ಚಿನ್ನವ ಮಾಡಿ ಜಂಗಮಾರ್ಚನೆಯ ಮಾಡು ಎನಲು (ಶೈರಸೂ. I. ೪೯೯). [ಸಂ.]

**ರಸವಾದಸಿದ್ಧಿ** (ನಾ). ರಸವಾದದ ಪ್ರಯೋಗದಲ್ಲಿ ದೊರೆಯುವ ಸಾಧನೆ ; ರಸಸಿದ್ಧಿ : ಎನ್ನ ರಸವಾದಸಿದ್ಧಿಯಂ ನೋಡೀಗಳ್ ನಿನ್ನ ಮನೆಯೊಳಿರ್ದ ಬೆಳ್ಳಿ ತಾಮ್ರ ಸೂಚಿಗಳ್ ಮೊದಲಾದವಂ ತಂದು ಮುಂದೆ ಮಡಗೆಂದು ನುಡಿಯಲ್ (ಹಾರಿಶ್ಚ. ೩-೪-೧ ವ). [ಸಂ.]

**ರಸವಾದಿ** (ನಾ). = ರಸವಾದಕ : ಎಂದು ಬಿನ್ನಪಂಗೆಯ್ಯಲೊಡಂ ಬದ್ಧರಸನುಂ ಸಿದ್ಧರಸವೇದಸುಪಾದ ರಸವಾದಿಯಂತೆ ಜ್ವಳಸಜಟಿ ರಾಗಿಸಿ (ಶಾಂತಿಪು. ೩-೩೭ ವ); ಸೊಗಸ ಹುಟ್ಟಿಸಿ ಸುಲಿವ ರಸವಾದಿಗಳವರ ವಿಡಾಯಿಗಳ ನಂಬುಗೆಯ ಕೇವಣ ಪಾದುಕಾಜಿರ ಕರ್ಣ ನೋಡು (ಕುವ್ಯಾದ್ರೌ. ೧೭-೨೫).

[ಸಂ. ರಸವಾದಿನ್]

**ರಸವಾಳೆ** ' ರಸವಾಟ್ ' ನೋ.

**ರಸವಾಟಿ**[3], ರಸಬಾಳೆ, ರಸವಾಳೆ (ನಾ). ಒಂದು ಬಗೆಯ ಶ್ರೇಷ್ಠವಾದ ಬಾಳೆ : '' ನೇಪಾಳೇಕ್ಷು ರಸವಾಟಿ[3] '' (ಟಿಶಂ. ೯೭). **ರಸಬಾಳೆ** : ರಸಬಾಳೆ ಚಿರುಬಾಳೆ ತಸಬಾಳೆ ಕೆಂಬಾಳೆ ಹೊಂಬಾಳೆ ಕರ್ಪೂರ ಬಾಳೆ . . . ಮೊದಲಾದ ರಸ್ಯ ಸುಖಾರ್ಹ ಸಾರ್ವತ್ರಿಕವಾದ ಫಲಂ (ಶಿವೇಶ. ೨೦೦); ಬಾಳೆಯ ಕುಲದಲ್ಲಿ ಗುಜರಾಥಿ, ರಸಬಾಳೆ . . . ಪಣಿಬಾಳೆ ಎಂದು ಈ ಪ್ರಕಾರ ಹಲವು ವಿಧ (ಕೃಷಿಶ. ೦೩೭); ನಂಜನಗೂಡಿನ ರಸಬಾಳೆ ಅತಿ ಪ್ರಸಿದ್ಧ (ರೂಢಿ). **ರಸವಾಳೆ** : ರಸವಾಳೆ ಪುಟವಾಳೆ ರಾಜವಾಳೆ ಸಕ್ಕರೆಯಸವಾ ದೇವಾಳೆ . . . ಮಂಜಿದುಪರ್ತಿಯಲಿ (ಕಂಸಾ. ೩-೯೭) ; ರಸವಾಳೆತಣ್ಣನು ಒಸೆದು ಮೆಲುವಂತಾಯ್ತು (ಕಸಳಾ. ೦೪-೦೦).

[ರಸ + ಬಾಟಿ[3]]

**ರಸವಿಕಾರದೋಷ** (ನಾ). ಜೀರ್ಣರಸವಲ್ಲಿ ದೋಷವುಂಟಾಗುವ ಒಂದು ಬಗೆಯ ರೋಗ : ನೊರೆವೆರಸು ಲದ್ದಿ ಪೊಜಿಮಡೆ ತುರಗಂ ದಡವಡಿಸಿ ನಡೆಯಲಾಜಿದೆ ಕಾಲ್ಗಟ್ಟಿರೆ ರಸವಿಕಾರದೋಷಂ ತುರಗ ಮುಖಕ್ಕಕ್ಕುಂ (ಅಶ್ವಶಾ. ೦೩-೨೭). [ಸಂ.]

**ರಸವಿಜ್ಞಾನಿ** (ನಾ). ರಸಾಯನಶಾಸ್ತ್ರವನ್ನು ಬಲ್ಲವನು ; ರಸಶಾಸ್ತ್ರಜ್ಞ : ರಸವಿಜ್ಞಾನಿ ಕಾಕಾಫೋಡೆಲ್ ತನಗೆ ಸಿಕ್ಕಿದ ಕಲ್ಲಿನ ಚೂರನ್ನು ತೆಗೆದುಕೊಂಡು ಪ್ರಯೋಗಶಾಲೆಗೆ ಹಿಂತಿರುಗಿದನು (ಯೋಧಕ. ೭೦).

[ಸಂ. ರಸವಿಜ್ಞಾನಿನ್]

**ರಸವೃತ್ತಿ** (ನಾ). ನವರಸಗಳಿಂದ ಕೂಡಿದುದು; ರಸಮಯವಾದುದು : ರಸವೃತ್ತಿ ಸಭೆಗೆ ಮೋಹನರಸವೃತ್ತಿಯನೀಯೆ ವಿಭ್ರಮಂ ವಿಭ್ರಮಮಂ ಷಸರಿಸೆ ವಿಲಾಸವತಿ ನರ್ತಿಸಿದಳ್ ಕಂದರ್ಪನಾಯಕಂ ನರ್ತಿಪವೋಲ್ (ಮಲ್ಲಿಪು. ೬-೯೯) ; ನೆಟೆದೆಂಟುಮಾರ್ಚನೆಗಳಿಂ ರಸವೃತ್ತಿಯ ನೃತ್ತಮಂ ಪ್ರವರ್ತಿಸಿ (ಚಂದ್ರಪು. ೪-೩೪). [ಸಂ.]

**ರಸವ್ಯಂಗ್ಯ** (ನಾ). [ಕಾವ್ಯಮೀ] ರಸಾನುಭವಕ್ಕೆ ಸಹಕಾರಿಯಾದ ವ್ಯಂಗ್ಯ : ವಸ್ತು ರಸ ಅಲಂಕಾರಗಳು ವ್ಯಂಗ್ಯಗಳಾಗುವುವೆಂದೂ ಅವುಗಳಲ್ಲಿ ರಸವ್ಯಂಗ್ಯವೇ ಶ್ರೇಷ್ಠವೆಂದೂ ಸಿದ್ಧಾಂತಿಸಿದ ಮೇಲೆ . . . ಅದಕ್ಕೆ ಪ್ರಾಧಾನ್ಯವನ್ನು ಕೊಟ್ಟಂತೆಯೂ ತೋರುತ್ತದೆ (ಕಶಿಕ. ೦೭೩).

[ಸಂ.]

**ರಸಶಾಸ್ತ್ರ** (ನಾ). ೧. = ರಸವಾದ. ೨. [ಕಾವ್ಯಮೀ] ನವರಸಗಳನ್ನು ಕುರಿತ ಶಾಸ್ತ್ರ : ವಿಪ್ರಲಂಭ ವಿಟ ಪ್ರಸ್ತುತ ವೈಶಿಕಾದಿ ರಸಶಾಸ್ತ್ರೋದ್ಭೂತಸನ್ಮಾರ್ಗ ವೃತಿ ವಿಕಲ್ಪಂಗಳುಮಂ ಮನಂಗೊಳಿಸಿದಂ ಶೃಂಗಾರ ರತ್ನಾಕರಂ (ಶೃಂಗಾರ. ೦-೦೭). ೩. [ವಿಜ್ಞಾನ] ರಸಾಯನಶಾಸ್ತ್ರ : ' ರಸಶಾಸ್ತ್ರಜ್ಞ ' ಪರಾ. [ಸಂ.]

**ರಸಶಾಸ್ತ್ರಜ್ಞ** (ನಾ). ರಸಾಯನವಿಜ್ಞಾನವನ್ನು ಬಲ್ಲವನು ; ರಸವಿಜ್ಞಾನಿ : ತಾವು ವಾಯುವಿನಲ್ಲಿ "ಆರ್ಗಾನ್" ಎಂಬ ಇನ್ನೊಂದು ಹೊಸ ಅನಿಲವು ಇದ್ದೇ ಇರಬೇಕೆಂದು ಹೇಳಿದಾಗ ಇಂಗ್ಲೆಂಡಿನ ರಸಶಾಸ್ತ್ರಜ್ಞರು (chemists) ತಮ್ಮನ್ನು ಧಿಕ್ಕರಿಸಿ ಅವಹೇಳನ ಮಾಡಿದರು (ಜಗಶಂ. ೪೭). [ಸಂ.]

**ರಸಶುದ್ಧಿ** (ನಾ). ಪಾದರಸವನ್ನು ಶುದ್ಧಿಗೊಳಿಸುವಿಕೆ. [ಸಂ.]

**ರಸಶೇಷ** (ನಾ). ವಿಷೂಚಿ ಎಂಬ ರೋಗದಲ್ಲಿ ಒಂದು ಬಗೆ ; ಆ ವಿಷೂಚಿ ವಿಷೂಚಿಕೆಯೆಂದು, ಅಲಸಕವೆಂದು, ಅಜೀರ್ಣವೆಂದು, ವಿಳಂಬಿಕೆಯೆಂದು, ರಸಶೇಷವೆಂದು ಐದು ತೆಱನಾಗಿಹದು (ವೈದ್ಯಸಾ. I. ೨೪೩); ಜೀರ್ಣಾಜೀರ್ಣದೊಡನೆ ಕೂಡಿಕೊಂಡಿರ್ದ ವಿಷೂಚಿಯು ರಸಶೇಷವೆನಿಸಿಕೊಂಬುದು (ಸಕವೈ. ೪೩೬). [ಸಂ.]

**ರಸಸಿಂಧೂರ** (ನಾ). ಪಾದರಸ ಮತ್ತು ಗಂಧಕಗಳ ಸಂಯೋಗದಿಂದ ಸಿದ್ಧವಾಗುವ ಒಂದು ಬಗೆಯ ರಾಸಾಯನಿಕ ವಸ್ತು : ರಸಸಿಂಧೂರ ವನ್ನೇ ಅವರು ಧರಿಸುವುದು (ಪೂಜುವ. ೦೪೩) ; ರಸವಂತಿ. . . ರಸಸಿಂಧೂರ (ಮುಂಬವ್ಯಾ. ೦೭೩). [ಸಂ.]

**ರಸಸಿದ್ಧ** (ನಾ). = ರಸವಾದಸಿದ್ಧ : ರಸಸಿದ್ಧನಿಟ್ಟ ಗುಳಿಗೆಯನನ್ಯರೊಯ್ಯಲಾ ನೊಸಲ ಬೆವರಂ ಪರುಷವೇದಿಯಂ ಮಾಡಿ (ಶೀಕ್ಷಪು. ೬-೩-೬೦); ಶಿವನು ರಸಸಿದ್ಧನೆಂಬಾಚಾರ್ಯನಾಗಿ ಬಂದು ರಸವಾದಸಿದ್ಧಿಯ ಕಲಿಸಿಹೆನೆನಲು (ಶೈರಸೂ. I. ೪೩೩) ; ಮುಟ್ಟಿದುದನೆಲ್ಲ ಚಿನ್ನ ಮಾಡಿದ ರಸಸಿದ್ಧರವರು (ಜಶ. ೬೭೦). [ಸಂ.]

**ರಸಸಿದ್ಧಿ** (ನಾ). ೧. ರಸವಾದದಲ್ಲಿ ದೊರೆತ ಸಾಧನೆ ; ರಸವಾದಸಿದ್ಧಿ : ಉರಿಗೆ ರಸ ನಿಂದಾಗವೆ ರಸಸಿದ್ಧಿ ಎಂಬೆ ಅಸಿಗೆ ಶರೀರ ನಿಂದಲ್ಲಿಯೆ ಕಾಯ ಸಿದ್ಧಿ ಎಂಬೆ (ವೋಳವಾ. ೦೯-೭೩) ; ಜಂಗಮದ ಪಾದೋದಕವೆಂಬ ರಸಸಿದ್ಧಿ ನಮಗುಂಟು (ಶೈರಸೂ. I. ೪೩೩) ೨. ಕಾವ್ಯಾನಂದವನ್ನು ದೊರಕಿಸಿಕೊಳ್ಳುವುದು : ರಸಜೀವನಕೆ ಮಿಗಿಲ್ ತಪವಿಹುದೆ ? ರಸಸಿದ್ಧಿಗಿಂ ಮಿಗಿಲೆ ಸಿದ್ಧಿ ? (ಶ್ರೀರಾಮಾ. ೩೨-೧೨೬). [ಸಂ.]

**ರಸಸೂತ್ರ** (ನಾ). [ಕಾವ್ಯಮೀ] ರಸಾನುಭವದ ವಿಚಾರವನ್ನು ತಿಳಿಸುವ ಸೂತ್ರರೂಪದ ನಿರೂಪಣೆ : ಭರತಾಚಾರ್ಯನು . . . ಉಸುರಿದ ರಸಸೂತ್ರವೇ ಇತ್ತೀಚಿನ ಕವಿಗಳಿಗೂ ಲಕ್ಷಣಕಾರರಿಗೂ ಅಮೃತಾನ್ನ

ವಾಗಿದೆ (ಜಾಹಿಂ. ೩) ; ಭರತಮುನಿಯ ರಸಸೂತ್ರದ ವಿಸ್ತಾರವಾದ ವ್ಯಾಖ್ಯಾನಗಳಿಂದ ಆ ವಿಚಾರ ಚರ್ಚಿತವಾಗಿದೆ (ಕಾಂದಕ. ೧೩೯). [ಸಂ.]

**ರಸಸ್ಥಾನ** (ನಾ). ಕಾವ್ಯದಲ್ಲಿ ಸ್ವಾರಸ್ಯವು ಅತಿಶಯವಾಗಿ ಇರುವ ಸ್ಥಳ, — ನೆಲೆ : ಪುರುದೇವನ ಚರಿತ್ರೆಯಲ್ಲಿ ಅಲ್ಲಲ್ಲಿ ಚೆಲುವಾದ ರಸಸ್ಥಾನಗಳಿರುತ್ತವೆ (ಕಜಾತ. ೯೦). [ಸಂ.]

**ರಸಸ್ಥಿತಿ** (ನಾ). ರಸಾನುಭವವಾಗುತ್ತಿರುವ ಆನಂದದ ಇರವು : ಕವಿಯ ರಸಸ್ಥಿತಿಯನ್ನೂ ಮೀರಿದ ಸಮರಸಸ್ಥಿತಿಯು ಅನುಭಾವಿಯದು (ರಮುಗಾ. ೧೦೦). [ಸಂ.]

**ರಸಸ್ಯಂದಿ** (ನಾ). ಸ್ವಾರಸ್ಯವನ್ನುಂಟುಮಾಡುವುದು ; ರಸಾನುಭವಕರವಾದುದು : ಅವಳ ವಚನಗಳಲ್ಲಿ ಸಮಭಯಗಳ ಕೊರತೆ ಕಂಡುಬಂದರೂ ಒಟ್ಟನಲ್ಲಿ ರಸಸ್ಯಂದಿಯಾದ . . . ನಿರ್ಮಾಣವಿದೆ (ಕಜಾತ. ೦೬೩). [ಸಂ. ರಸಸ್ಯಂದಿನ್]

**ರಸಹಾರಿ** (ನಾ). (ಸಂಬಾರ ಪದಾರ್ಥಗಳನ್ನು) ಅರೆಯುವ ಕಲ್ಲು ; ಅಮ್ಮಿಕಲ್ಲು : " ರಸಹಾರಿಯೆನಲಮ್ಮಿಕಲ್ಲಕ್ಕು " (ಮಂಗರಾ. ೬೦-೦೯). [ಸಂ. ರಸಹಾರಿನ್ = ದ್ರವವನ್ನು ಉತ್ಪತ್ತಿಮಾಡುವಿಕೆ]

**ರಸಹೀನ** (ನಾ). ರಸವಿಲ್ಲದುದು ; ಶುಷ್ಕವಾದುದು ; ರಸಹೀನಂಕೆಯ್ಗಳೊಳಂ ರಸಮಯಮಪ್ಪುದು ವಿಚಿತ್ರಮೇಂ ಕಾಣಲೊಡಂ . . . ಮುನೀಂದ್ರಚಂದ್ರನ ಮುಖಮುಂ (ಅವಂಪು. ೯-೦೦೦). [ಸಂ.]

**ರಸಾಂಜನ** (ನಾ). ೧. ಔಷಧವಾಗಿ ಬಳಕೆಯಾಗುವ ಒಂದು ಧಾತು ವಿಶೇಷ; ಮೈಲುತುತ್ತ : ವನದಂತಿಯ ಪಂದಿಯ ಕೋಣನ ಬಸೆಯೊಳ್ ಮೊಲೆಯುನೊರಸಿ ಕಟುವೆರಸು ರಸಾಂಜನಮಂ ನಸ್ಯಂಗೆಯ್ದೊಡೆ ಪಣಜಾಕ್ಷಿಯ ಮೊಲೆಗಳೊದವಿ ನಡುವಂ ಮುಚ್ಚುಗುಂ (ಬಿಜಾಳಕಾಸ. ೯-೦೬೦) ; ಲಾಮಂಚ, ರಸಾಂಜನ, ಮುಡಿವಾಳ . . . ಸಕ್ಕರೆ ಸಹ ಚೂರ್ಣಿಸಿ ಹಾಕಿ ಸೇವಿಸೆ ವಾಂತಿ ನಿಲ್ಗುಂ (ಸಕವ್ಯ. ೨೬೯). ೨. ಕಣ್ಕಪ್ಪು : ಕಾಡಿಗೆ : "ದಾರ್ವಿಕಾ, ಕ್ವಾಥೋದ್ಭವಂ, ತುತ್ಥಂ, ರಸಾಂಜನಂ, ರಸಗರ್ಭಂ, ತಾರ್ಕ್ಷ್ಯಶೈಲಂ— ೬ ರಸಾಂಜನದ ಹೆಸರುಗಳು" (ಸಿದ್ಧಾಂಶಿ. ೩೦೩). [ಸಂ.]

**ರಸಾಗ್ರ** (ನಾ). ಹಾಲು, ಮೊಸರು ಮುಂತಾದ ದ್ರವಪದಾರ್ಥಗಳ ಮೇಲುಭಾಗದಲ್ಲಿ ಕಟ್ಟುವ ಕೆನೆ; ಮಂಡ : "ರಸಾಗ್ರಮಂತದು ಮಂಡಂ" (ವಸ್ತುಕೋ. ೯೨-೨). [ಸಂ.]

**ರಸಾತಲ, ರಸಾತಳ** (ನಾ). ಭೂಮಿಯ ಕೆಳಗಿರುವುದೆಂದು ಭಾವಿಸಲಾದ ಅತಳ, ವಿತಳ, ಸುತಳ, ರಸಾತಳ, ತಳಾತಳ, ಮಹಾತಳ ಮತ್ತು ಪಾತಾಳವೆಂಬ ಏಳುಲೋಕಗಳಲ್ಲಿ ಒಂದು : "ರಸಾತಲಮೆನಲ್ಕಧೋಭುವನಮೆಂದೆನಲು ಪಾತಾಳಲೋಕಕ್ಕೆ ನಾಮಂ" (ಮಂಗರಾ. ೮೨-೦); ಬಲಿಯಂ ಕಟ್ಟಿದನಾವನೀ ಧರಣಿಯಂ ವಿಕ್ರಾಂತದಿಂದಂ ರಸಾತಲದಿಂದೆತ್ತಿದನಾವಂ (ಹಂಕಿಲಾ. ೬-೪೦). **ರಸಾತಳ** : ಆ ಮಹಾರ್ಣವಂ . . . ರಸಾತಳದಂತೆ ವಿಷಧರನಿಷೇವ್ಯಮುಂ (ಜಗಪು. ೦-೯೯ ವ) ; ಶರಧಿಯ ಮಥಿಸಲು ಮಂದರಗಿರಿಯ ತಂದಿರಿಸಿ ರಸಾತಳಕಿಳಿಯೆ ಭರದಿಂದ ಕಮಠ ನೀನಾಗಿ ದೆಸ್ನೊಳು ಪೊತ್ತ ಸಿರಿಯಾಣ್ಮ (ಕವಾಣಕ. ೨೨೬). [ಸಂ.]

**ರಸಾತಳ** ' ರಸಾತಲ ' ನೋ.

**ರಸಾತ್ಮಕ** (ನಾ). ಸಾರವತ್ತಾದುದು : ರಸಾತ್ಮಕವಾದ ವಾಕ್ಯವು ಕಾವ್ಯ (ಕಾರಪಿ. ೦೫೨ ಅಡಿ); ರಸಾತ್ಮಕವಾದ ವಾಕ್ಯವೇ ಕಾವ್ಯ (ಕಾರರ. ೪೪೯). [ಸಂ.]

**ರಸಾತ್ಮಿಕೆ** (ನಾ). ರಸಿಕಳಾದ ಹೆಂಗಸು,— ಸ್ತ್ರೀ : ಭಾವಜೀವಿಯೂ ರಸಾತ್ಮಿಕೆಯೂ ಆದ ಮಹಾರಾಣಿ ಶಾಂತಲಾದೇವಿ . . . ನರ್ತಿಸುತ್ತಿದ್ದ ಶಿಲಾಪೀಠವಿದೆಂದು ನನ್ನ ಹೃದಯ ಹೇಳಿತು (ಶಾಂತಲಾ. iii. ೪೦೯). [ಸಂ. ರಸಾತ್ಮಿಕಾ]

**ರಸಾಧಿಭೂತೆ** (ನಾ). ಆನಂದಕ್ಕೆ ನೆಲೆಯಾದವಳು; ಸಂತೋಷದಾಯಕಿ: ಸುರಕ್ಷಿತಾಮರವ್ರತೆ ರಸಾಧಿಭೂತೆ ರಮಣೀಯುರಮಾರತಿಮುಖ್ಯಶಕ್ತಿವಿಖ್ಯಾತೆ . . . ಪಾಲಿಪುದೆನ್ನ (ರಾಜಶೇ. ೫-೦೩೪). [ಸಂ. ರಸಾಧಿಭೂತಾ]

**ರಸಾನಂದ** (ನಾ). ರಸಾನುಭವದಿಂದ ಆಗುವ ಆನಂದ : ದೃಶ್ಯದಲಿ . . . ಒಂದಾಗುವುದೆ ಪರಮರಸಿಕತೆ; ಅದಕೆ ಮಿಗಿಲಹ ರಸಾನಂದ ಮತ್ತೆ ಬೇರೊಂದಿಲ್ಲ! (ಶಕ್ತಿಕಾ. ೬೪-೯೯); ಅದು, ಕೇವಲ ಭೋಗಿಸಬೇಕೆನ್ನುವ ರಸಾನಂದವಲ್ಲ; ಅದು ರಚಿಸಿ ನೋಡಬೇಕೆನ್ನುವ ರುಚಿರಾನಂದ (ಇತ್ಯಕ. ೪೦೩). [ಸಂ.]

**ರಸಾನುಭವ** (ನಾ). [ಕಾವ್ಯಮೀ] (ನವರಸಗಳಲ್ಲಿ ಯಾವುದಾದರೂ) ರಸವನ್ನು ಅನುಭವಿಸುವಿಕೆ ; ರಸಾಸ್ವಾದ : ಇವನಿಗೆ ರಸಾನುಭವ ಹೇಗೆ ಉಂಟಾಗುವುದು (ಕಾರಪಿ. ೩೫೬); ಅಭಿನಯಿಸುತ್ತಿರುವಾಗಲಾಗಲಿ ಆಮೇಲಾಗಲಿ ನಟನು ರಸಾನುಭವ ಮಾಡಿದರೆ ಅವನು ಆಗ ಸಾಮಾಜಿಕನಾಗುವನು (ಕೃಪಿಪ. ೦೯೪); ರಸಾನುಭವವು ರಸವದಲಂಕಾರ ಎಂಬ ಹೆಸರಿನಿಂದ ಅಲಂಕಾರಗಳಲ್ಲಿ ಮಧ್ಯೆ ಪ್ರವೇಶ ಪಡೆದಿತ್ತು (ಕಾಂದಕ. ೦೬೧). [ಸಂ.]

**ರಸಾನುಭೂತಿ** (ನಾ). = **ರಸಾನುಭವ** : ರಸಾನುಭೂತಿಯ ರಸಪಥವಲ್ಲದೆ ಸತ್ಯಕೆ ಗತಿಯಿಲ್ಲ ! (ಶಕ್ತಿಕಾ. ೨೦-೬). [ಸಂ.]

**ರಸಾನ್ನ** (ನಾ). ರುಚಿಯಾದ ಅನ್ನ; ಸವಿಯಾದ ಆಹಾರ : ಕಾಗೆಗೆ ರಸಾನ್ನ ಮುಂದಿರಲಿಕ್ಕೆ ಹರಿವ ಕೀಟಕಂಗೆ ಸರಿವುದಲ್ಲದೆ ಮತ್ತೆ ಅದು ಸವಿಸಾರವ ಬಲ್ಲುದೆ (ಬಸವೇಶ್ವ. ೫೨); ಪಂಚಭಕ್ಷ್ಯ ರಸಾನ್ನಯುತಸ್ವೈವೇದ್ಯಮುಂ ಸೌರಾಷ್ಟ್ರಪತಿಗಿತ್ತು (ಬಸಪು. ೪೩-೨೦). [ಸಂ.]

**ರಸಾಭಾಸ** (ನಾ). ೧. [ಕಾವ್ಯಮೀ] ಕಾವ್ಯ ನಾಟಕಾದಿಗಳಲ್ಲಿ ಬರುವ ನವರಸಗಳಲ್ಲಿ, ಯಾವುದನ್ನೇ ಆಗಲಿ ಕವಿಯು ಪ್ರತಿಪಾದಿಸುವಾಗ ಉದ್ದೇಶಪೂರ್ವಕವಾಗಿ ಅಥವಾ ಪ್ರಮಾದದಿಂದ ತಲೆದೋರುವ ಅನೌಚಿತ್ಯಸನ್ನಿವೇಶ: ಇದುವುಮೇಕತ್ರಾನುರಾಗದಿಂ ರಸಾಭಾಸಮಪ್ಪುದು (ರಸರ. ೪-೨೫೯); ಸಾಮಾಜಿಕರಿಗೆ ಇದು ಅನುಚಿತ ಎಂಬ ಬುದ್ಧಿಯು ಉಂಟಾದರೆ ಆಗ ನಿಜವಾದ ರಸವು ಹುಟ್ಟದೆ ರಸದಂತೆ ತೋರುವ 'ರಸಾಭಾಸ'ವು ಉಂಟಾಗುವುದು (ಕೃಪಿಪ. ೨೦೪); ರಸವಲ್ಲದಿದ್ದರೂ ರಸದಂತೆ ತೋರತಕ್ಕದ್ದು, ರಸಸದೃಶವಾದದ್ದು ರಸಾಭಾಸ (ಕಾರಪಿ. ೪೨೪). ೨. (ಅಲಂ) ಅನುಚಿತವಾದುದು; ಔಚಿತ್ಯಮೀರಿದುದು; ರಸಭಂಗ : ನಡಿ ಗುರುಮೂರ್ತಿ ಇವಳು ಇನ್ನು ರಸಾಭಾಸ ಮಾಡಿಬಿಡುತ್ತಾಳೆ (ಮಾತುಪ. ೦೬೩). [ಸಂ.]

**ರಸಾಭಿನಯ** (ನಾ). ಆನಂದವನ್ನು ಕೊಡುವ ಅಭಿನಯ : ರಸಿಕರ್ಕಳೊಪ್ಪುವನ್ನಂ ರಸಾಭಿನಯಕೌಶಲಂಗಳೊಳ್ಪಿದುವೆನುತಾನುಸಿರೆ (ಜಾಕಂಕ. ೦-೨). [ಸಂ.]

**ರಸಾಭಿವ್ಯಂಜಕ** (ಗು). [ಕಾವ್ಯಮೀ] ನವರಸಗಳಲ್ಲಿ ಯಾವುದಾದರೂ ಭಾವವನ್ನು ಅಭಿವ್ಯಕ್ತಿಗೊಳಿಸುವ,—ವ್ಯಕ್ತಪಡಿಸುವ : ರಸಾಭಿವ್ಯಂಜಕ ಶಬ್ದಾರ್ಥಗಳು ಕೂಡ ಹೀಗೆ "ಮಧುರ", "ಮಧುರತರ ", "ಮಧುರತಮ" ವಾಗಿರಬಹುದು (ಕೃಪಾಲೋ. ೬೦). [ಸಂ.]

**ರಸಾಭಿವ್ಯಂಜನ** (ನಾ). [ಕಾವ್ಯಮೀ] ನವರಸಗಳ ಅಭಿವ್ಯಕ್ತಿ : ಸಂಗೀತದಲ್ಲಿ ಯಾವ ಯಾವ ರಸಾಭಿವ್ಯಂಜನಶಕ್ತಿ ಇದೆ ಎನ್ನುವುದನ್ನೂ ಹೇಳಿದೆ (ಕಾಂದಕ. ೦೨೨). [ಸಂ.]

**ರಸಾಭಿವ್ಯಕ್ತಿ** (ನಾ). = ರಸಾಭಿವ್ಯಂಜನ : ಎಲ್ಲ ಕಲೆಗಳೂ ರಸಾಭಿವ್ಯಕ್ತಿಯನ್ನೇ ತಮ್ಮ ಗುರಿ ಎಂದು ಸಾರಿದುವು (ಕಾಂದಕ. ೦೨೨). [ಸಂ.]

**ರಸಾಯ** (ನಾ). ಸಿಹಿ ನೀರಿನಿಂದ ಕೂಡಿದುದು : ಮಣಿಯಲ್ಲದ ಕಲ್ ಜ್ಯೋತಿಸ್ತೃಣಮಲ್ಲದ **ಪುಲ್** ರಸಾಯಮಲ್ಲದ ಮಡು . . . ಇಲ್ಲ ತತ್ಪರಿಸರದೊಳ್ (ಕಂಪ್ರತಿ. ೦೦-೪೬). [ ಸಂ. ರಸಾಯ್ಯ = ರುಚಿಯಾದ]

**ರಸಾಯನ** (ನಾ). ೧. ಹಿತವಾದುದು ; ಇನಿದಾದುದು ; ಅಪ್ಯಾಯಮಾನವಾದುದು : 'ಕರ್ಣರಸಾಯನ' ವರಾ. ೨. ಮಧುರವಾದ ಪೇಯ ; ರುಚಿಕರವಾದ ಪಾನೀಯ : ಚೋಳನ ರಸಾಯನವನೊಲ್ಲದೆ ಚಿನ್ನನ ಅಂಬಳಕವನ್ನು ಉಂಡುದನ್ನು ವೇದವುನಾಪ ಕೇಳಿರಲಿಲ್ಲ ! (ಚೋರಕಾ. ೨೭ ಕ್ರಿಯಾ,ಪದ). ೩. ಸಿಹಿ, ಖಾರ, ಹುಳಿ ಮೊದಲಾದ ಆರು ರಸಗಳ ಮಿಶ್ರಣ : "ಇವಂತು ಷಡುರಸಮುಕ್ಕುವಿವು ತಮ್ಮೊಳೊಂದೊಂದು ಬೆರಸಿ ತೋಱಲ್ ಸ್ವಾದು ರುಚಿ ರಸಾಯನ ಮೆನಿಕ್ಕುಂ" (ಸೂಪಶಾ. ೬೩-೩) ; ಊಳಿಗವನೆ ಮಾಳ್ಪ ಪೆಣ್ಗಳೊಡನೆ . . . ಕುಷ್ಪವನು ರಸಾಯನವವನು ಪಣ್ಗಳನು ತರಂಗೊಳಲ್ಕೆ ಸಾಚರ್ಣತೆ (ಜಜ. ೬-೦೪). ೪. ಬಾಳೆಹಣ್ಣು, ಬೆಲ್ಲ ಮುಂತಾದುವುಗಳ ಮಿಶ್ರಣದಿಂದ ತಯಾರಿಸುವ ಒಂದು ಬಗೆಯ ಸಿಹಿಖಾದ್ಯ : ಮೊದಲು ಚಿಂತೂರವರು ಸೊಂಟಕ್ಕೆ ಟೌಲು ಬಿಗಿದು ಬಾಗಿ ಭಕ್ತಿಯಿಂದ ರಸಾಯನಕ್ಕೆ ಕೈ ಒಡ್ಡಿದರು (ಸೂಜುಕ. ೦೫೬). ೫. ರಸವಾದ ; ರಸವಿದ್ಯೆ. ೬. ಮಜ್ಜಿಗೆ. ೭. ವಿಷ. ೮. ಬಾಲಮೆಣಸು ; ಹಿಪ್ಪಲಿ. ೯. ಗರುಡನ ಹೆಸರುಗಳಲ್ಲಿ ಒಂದು. ೧೦. [ವೈದ್ಯಶಾ] ಒಂದು ಬಗೆಯ ಪಾಕ : ರಸಾಯನ . . . ಸಿದ್ಧಲೇಪಾದಿ ವಸ್ತುಗಳನೇಕವಾಗಿ ಅಲ್ಲಿಯ ಶಿವಭಕ್ತರಿಗೆ ಸುಕೃತಾನುರೂಪದಿಂದಾನಂದಕರಗಳಾಗಿರ್ಪುವು (ಶಿಪಕ. ೨೦೦) ; ಅಶ್ವಗಂಧಿರಸಾಯನ . . . ನಿತ್ಯವೂ ಸೇವನೆಯಂ ಮಾಡಲು ಕ್ಷಯರೋಗ ಮುಂತಾದ ಸಮಸ್ತವ್ಯಾಧಿ ಪರಿಹಾರವಹುದು (ಸಕಕ್ಕ. ೨೩೪) : ಔಷಧಿ, ರಸಾಯನಾದಿಗಳಲ್ಲಿ ಇವರು ಆ ಕಾಲದ ತಜ್ಞರಾಗಿದ್ದರು (ಕರ್ನಾಟಿ. ೦೬). ೧೧. ಶಕ್ತಿ, ಉತ್ಸಾಹಗಳನ್ನು ಹೆಚ್ಚಿಸುವ ಒಂದು ಬಗೆಯ ಔಷಧದ ಮಿಶ್ರಣ : ಅಂದಿನ ಅನುಭವವು ಕಿಟ್ಟಿಯ ಮೈಯಲ್ಲಿ ರಸಾಯನವಾಗಿ ತಿಂಗಳುಗಳವರೆಗೆ ಹಬ್ಬಿಕೊಂಡು ಅನೇಕ ಚಿಕ್ಕಪುಟ್ಟ ಬದಲಾವಣೆಗಳನ್ನು ಮಾಡಿತು (ಗುಲಾಬಿ. ೫೬). ೧೨. ಕ್ರಿಮಿರೇಚಕ ಔಷಧಿಯಾಗಿ ಬಳಸುವ ಒಂದು ಬಗೆಯ ಮೂಲಿಕೆ ; ವಿಡಂಗ. ೧೩. [ವಿಜ್ಞಾನ] ವಸ್ತುಗಳ ಗುಣ ಮತ್ತು ಧರ್ಮವನ್ನು ತಿಳಿಸುವ ವಿದ್ಯೆ,—ಶಾಸ್ತ್ರ : 'ರಸಾಯನ ಶಾಸ್ತ್ರ' ವರಾ. [ಸಂ.]

**ರಸಾಯನಜ್ಞ** (ನಾ). ರಸಾಯನಶಾಸ್ತ್ರವನ್ನು ಬಲ್ಲವನು : ಇತ್ತೀಚೆಗೆ ರಸಾಯನಜ್ಞರು ಹುಟ್ಟಿಕೊಂಡು ಕೃತಕಚಿನ್ನ ತಯಾರಿಸುತ್ತಿರುವರಂತೆ (ಜೀಜುಕೂ. ೦೩). [ಸಂ.]

**ರಸಾಯನವಿಜ್ಞಾನ** (ನಾ). "ಮೂಲಧಾತುಗಳು, ಅವು ಸಂಯೋಗವಾಗುವ ನಿಯಮಗಳು, ಮತ್ತು ಅವು ಬೇರೆ ಬೇರೆ ಸ್ಥಿತಿಗಳಲ್ಲಿ ತೋರಿಸುವ ಚರ್ಯೆಗಳು, ಮೊ. ವಿಷಯಗಳನ್ನು ವಿಚಾರಮಾಡುವ ಶಾಸ್ತ್ರ" (chemistry. ೩೮೪೩) : ವೃಸ್ತಿಕಗಳು ಭೌತವಿಜ್ಞಾನ, ರಸಾಯನವಿಜ್ಞಾನ . . . ಮೊದಲಾದುವುಗಳಿಗೆ ಸಂಬಂಧಿಸಿದುವು (ಶರಶ. IV. ೩೭೩೭೩). [ಸಂ.]

**ರಸಾಯನವಿಜ್ಞಾನಿ** (ನಾ). = ರಸಾಯನಜ್ಞ : "ರಸಾಯನವಿಜ್ಞಾನಿ. ಔಷಧವಸ್ತು ವ್ಯಾಪಾರಿ" (chemist. ೩೮೪೩). [ಸಂ.]

**ರಸಾಯನಶಾಸ್ತ್ರ** (ನಾ). = ರಸಾಯನವಿಜ್ಞಾನ : ಭೌತಶಾಸ್ತ್ರ (Physics), ರಸಾಯನಶಾಸ್ತ್ರ (Chemistry) . . . ಖಗೋಳಶಾಸ್ತ್ರ (Astronomy) ಮುಂತಾದ ಭಾಗಗಳು ಈ ರೀತಿಯಲ್ಲಿ ಬೇರೆಬೇರೆಯಾದವು (ಭೌತಶಾ. ೦೨) ; ಮೊದಮೊದಲು ಜನರು ರಸಾಯನಶಾಸ್ತ್ರ ಓದಿದ್ದರೆ ಸಾಕೆಂದು ಭಾವಿಸಿದ್ದರು (ಜೀವಶಕ್ತಿ. ೦೦೩). [ಸಂ.]

**ರಸಾರುಹ** (ನಾ). ಭೂಮಿಯಲ್ಲಿ ಹುಟ್ಟಿದುದು : ಮರ ಗಿಡ ಮೊದಲಾದ ಸಸ್ಯ : ಮತ್ತೊಂದು ಸುಮಮಿಳಿತರಸಾಲರಸಾರುಹದ ಕೆಳಗೆ . . . ತದ್ಭುಕಚವೃಷ್ಟಿಗಳನ್ನಧುದಿಯು ತೋಱುಗುಂ (ಲಾಜಶ. ೦೦-೨೪ ೮). [ಸಂ.]

**ರಸಾಲ**, ರಸಾಳ (ಗು). ೧. ಸವಿಯಾದ ; ಮಧುರವಾದ. (ನಾ). ೨. ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಮಾವು : ಇದು ಪಿಕತುಂಡಖಂಡಿತಗಳಿದ್ರ ಸಕೋಶರಸಾಲಸಾಲಂ (ಅಪುಕ್ಷು. ೬೨೨) ; ಗಣಪಂ . . . ಶಿವನಂ ಬಳಸಿ ಬಂದು ಪಣ್ಣೀವುದೆನೆ ಹರಿಸದಿಂ ಮಚ್ಚಿ ಗಜವದನಂಗೆಯಾ ರಸಾಲದ ಪಣ್ಣನಿತ್ತನಭವಂ (ಚಸೋಶ. ೦೦-೪೦) ; ಉರಿವ ಕಡು ಬೇಸಗೆಯ ಬಿಸಿಲಿಂದ ಬಳಲಿದ ಕೋಮಲರಸಾಲದಂತೆ (ಶಂಶ. ೦೨೦). ೩. ಕಬ್ಬು. ೪. ಒಂದು ಬಗೆಯ ಕಬ್ಬು ; ಪುಂಡ್ರಕ. ೫. ದ್ವೀಪದ ಹಲಸಿನ ಮರ. ೬. ಧೂಪದ ಮರ ; ಲೋಬಾನ. ೭. ಗೋದಿ. ೮. ಒಂದು ಬಗೆಯ ಇಲಿ. **ರಸಾಳ** : ೧. ಪುಣ್ಯಕಾರಕಕಥೆಗಳನ್ನೂ ಹೇಳುತ್ತಾ ನಿನ್ನ ರಸಾಳವಾಣಿಯಿಂದ ಅವರನ್ನು ಸಮಾಧಾನಪಡಿಸುತ್ತಾ ಹೋಗು (ಕುಳಸೀ. ೦೨೮). ೨. ರಸಾಳೇಕ್ಷುಮತ್ರೇಣಿ . . . ಸೊಗಯಿಸಲೆಸಗುಂ ತತ್ಪುರೋದ್ಯಾನವೆಂಬುದುಂ (ಜಗಾ. ೨-೦೬) ; ಸಾಳ ರಸಾಳ . . . ಹಿಂತಾಳ ಮುಖ್ಯತರುಸಂತತಿಯಿಂ ವನಬೃಂದಮೊಪ್ಪುಗುಂ (ಯಾದಶಂ. ೦-೩೫). ೯. ರಸಿಕನಾದವನು ; ರಸಗ್ರಾಹಿ ; ರಸಜ್ಞ : ಖರಿದು ರಸಾಳನೆನಿಸುವ ಪುರಾಣಿಕಂ . . . ಪೇಳಲುದ್ಯತನಾದಂ (ಕೃಷ್ಣ. ೦೬-೦೬). [ಸಂ.]

**ರಸಾಲಂಕಾರ** (ನಾ). [ಕಾವ್ಯಮೀ] ರಸಕ್ಕೆ ಅಂಗವಾದ ಅಲಂಕಾರ : "ರಸವತ್, ಪ್ರೇಯ . . . ಭಾವಶಬಳಂ ಎಂದು ರಸಾಲಂಕಾರಗಳೇಬುಂ (ಅಕ್ಷಶ. ೦೯೦) ; ರಸಾಲಂಕಾರವಿಲ್ಲದ ಕೃತಿಯುದೇನಿದ್ದೇನು ಫಲ (ಕೊರಶ. ೬-೦೫-೦೩) ; ನವೀನರ ಮತದಲ್ಲಿ ರಸಕ್ಕೆ ಪ್ರಧಾನಸ್ಥಾನವೇ ಬಂದಿರುವುದರಿಂದ 'ರಸಾಲಂಕಾರಗಳು' ಉಪಮಾದಿ ಉಕ್ತಿವೈಚಿತ್ರ್ಯಗಳ ಜೊತೆಗೆ ಸೇರತಕ್ಕವುಗಳಲ್ಲ (ಕೃಶಾ. ೨೩೨). [ಸಂ.]

**ರಸಾಲೆ** (ನಾ). ಪದ ಮಾಡಿ, ಒಗ್ಗರಿಸಿದ ಮಜ್ಜಿಗೆ : "ರಸಾಲಾ, ಮಾರ್ಜಿತಾ – ೨ ಮೊಸರು ಕೈಗೆಡದು ಮಾಡಿದ ಮಜ್ಜಿಗೆ . . . ವಗ್ಗರಿಸಿದ ಸಂಬಾರದ ಮಜ್ಜಿಗೆ" (ಸಿಲ್ಪಾಂಕ. ೨೦೬). [ಸಂ. ರಸಾಲಾ]

**ರಸಾವೇಶ** (ನಾ). ನವರಸಗಳಲ್ಲಿ ಯಾವುದಾದರೂ ರಸದ ಆವಿರ್ಭಾವ ; ರಸಾನುಭವ : ಕಾವ್ಯನಂ ನಟನುಮಾತಂ ರಸಾವೇಶ ನುಡಿಹಾಲಸ್ಯವೆಡೆಗೊಳಲು ತಪ್ಪುಗಳಿಲ್ಲದೆ ಕಾವ್ಯಕರ್ತೃ ತಪ್ಪುಮಲೆ (ಶಕಶ. ೦-೨೬) ; ಕವಿಯ ರಸಾವೇಶದೆಡೆಯಲ್ಲಿ ತಾನಾಗಿ ಅಸ್ಕರ ಉಕ್ತಿಗಳು – ಪ್ರಯೋಗಗಳು ಬರಲು ಸಾಧ್ಯವಿದೆಯೆಂದು ಇಲ್ಲಿನ ಅಭಿಪ್ರಾಯವಾಗಿದೆ (ಸಂಶೋಧ. ೦೩೬). [ಸಂ.]

**ರಸಾಶ್ರಯ** (ನಾ). ೧. ನೀರಿಗೆ ಆಶ್ರಯವಾದುದು. ೨. ಕಾವ್ಯರಸಕ್ಕೆ ಆಶ್ರಯವಾದವನು ; ರಸಜ್ಞ. ೧, ೨ : ಕ್ಷಿತಿತಳದಂತೆ ರಸಾಶ್ರಯನತರ್ಕಸುಕವೀಂದ್ರಬೃಂದವಂತೆ ವಿಶೇಷಾನ್ವಿತನಂಬರದಂತೆ ಸದಾವೃತಸಂಬುಧಿಯಂತೆ ಪರಮಗಂಭೀರಗುಣಂ (ಸುಕುಮಾ. ೪-೮೩). [ಸಂ.]

**ರಸಾಸ್ವಾದ** (ನಾ). ರಸಾನುಭವವನ್ನು ಹೊಂದುವುದು ; ರಸವನ್ನು ಅನುಭವಿಸುವುದು : ಕಳಗೆಯಂ ಒಗೆಗೊಂಡ ರೂಪು ಕುಸುಮಾಮೋದಂ ರಸಾಸ್ವಾದಮಗ್ಗಳಮುಪ್ಪುಂಗಜಲಾಗಂ ತಳ್ತೊಯ್ಯ ಪಂಚೇಂದ್ರಿಯಂಗಳೊಳ್ . . . ತಣಿದಂ ಸುಖಾಂಬುನಿಧಿಯೊಳ್ (ಶಾಂತಿಪು. ೬-೦೨೬) ; ಮುಖಮಂಡಲಂ ಶಿವಸ್ತೋತ್ರ ಗೀತಾಮೃತರಸಾಸ್ವಾದ[ಶಾಶಾ. ರಸಾಕ್ಷರ]ಕ್ಕೆ ತೀವಿರ್ದ ರತ್ನಖಚಿತಮಾಣಿಕ್ಯ ಕರಂಡಗೆಯಂತಿರ್ದಪ್ಪುದು (ಶಂಕರ. ೪-೩೩) ; ಅತ್ಯುತ್ತಮ ಕಲಾವಿದ ತನ್ನ ಕೃತಿಯಲ್ಲಿ . . . ರಸಾಸ್ವಾದದಲ್ಲಿ ತಲ್ಲೀನವಾಗುವಂತಹ ಮನಸ್ಥಿತಿಯನ್ನು ಉಂಟು ಮಾಡಿ ಬಿಡುತ್ತಾನೆ (ಶೌಂದಕ. ೭೩). [ಸಂ.]

**ರಸಾಳ** 'ರಸಾಲ' ನೋ.

**ರಸಿಕ** (ಗು). ೧. ಸವಿಯಾದ ; ಮಧುರವಾದ : ಕತೆಗಾರ್ತಿಯರು 'ಹೆಣ್ಣಿನ ಬಾಳಿನ' ಕಣ್ಣೀರನ್ನು ರಸಿಕದಾಂಪತ್ಯದ ಮಧುರಹಾಸವನ್ನೂ . . . ಚಿತ್ರಿಸಬಲ್ಲರು (ಬಾಗಿಪ iii, ಮುನ್ನುಡಿ) ; ಶಾರೀರಕ ಗುಣಧರ್ಮಗಳು ಸ್ಫುಟಗೊಂಡು ರಸಿಕಜೀವನವು ಆರಂಭವಾಗುತ್ತದೆ (ಶಿಕ್ಷದ. ೦೦೩). ೨. ಹಾಸ್ಯ ಮನೋಭಾವದ ; ವಿನೋದಸ್ವಭಾವದ : ಗಾದೆಯನ್ನು ರೂಢಿಸಿದವಳು ಒಬ್ಬ ಕೋಮಲೆಯಾದ ರಸಿಕ ಮುತ್ತೈದೆಯೇ ಆಗಿರಬೇಕು (ದೇಶಪ. ೧೯). (ನಾ). ೩. ರಸಾನುಭವ ಮಾಡಬಲ್ಲವನು ; ರಸಜ್ಞ : ರಸಿಕರ್ ಬಣ್ಣಿಸೆ ಭಾವಕರ್ ಪೊಗಟೆ . . . ನಾಟ್ಯಮಂ (ಶಿಶುಪು. ೦೨-೩೦) ; ರಸಿಕರೂಟಕ್ಕೆ ಪಿರಿದುಂ ಯೋಗ್ಯಮಾಗಿಯಾ ಬೋನವೆಸರಂ ತಳೆದುದು (ಸೂಶಶಾ. ೦-೬೦) ; ವಸುಧೇಶಂ ಮನುರಾಜಂ ರಸಿಕಂ ರಾಜೇಂದ್ರನಮಳಹಮ್ಮೀರನೆನಿಪ್ಪಸದ್ಯಶತರನಾಮಂಗಳ್ ಪಸರಿಸುಗುಂ (ಹರಿಶ್ಚ.ರ. ೦-೨೯) ; ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ ರಸಿಕನಲ್ಲದನ ಬಱಮಾತು ಕಿವಿಗೆ ಕೂರ್ದಸಿಯು ಬಡಿದಂತೆ (ಸರ್ವಜ್ಞ. ೦೩೩೦) ; ಕಾವ್ಯದ ಸವಿಯನ್ನು ಅರಿಯುವವನು ರಸಿಕ (ಶಾರವಿಶ. ೨೨೩). ೪. ಶೃಂಗಾರದಲ್ಲಿ ಆಸಕ್ತಿಯುಳ್ಳವನು ; ವಿಲಾಸಿ : ಬಿಂಬಾಧರವು ಡೊಂಕು ಚುಂಬಿಸುವುದು ಡೊಂಕೆ ರಸಿಕಾ ಪೇಳೊ (ಗಂ. ೩೨-೦೨) ; ರಸಿಕನೆಂದರೆ ಭೋಗಿಯೆಂದು ಎಲ್ಲರೂ ಬಲ್ಲರು (ಶಾಹಿಪ. ೯೩). ೫. ಮರ್ಮ; ರಹಸ್ಯ : ಕಪಾಲವ ಹಿಡಿದಾತನ ಕೈಯಲ್ಲಿ ಗಸಣಿಗೊಳಗಾದರು ಆತ್ಮನ ರಸಿಕವನಱಿಯದೆ (ಷೋಇಪಶ. ೩೯-೨೯೩). [ಸಂ.]

**ರಸಿಕತನ** (ನಾ). ೧. ರಸಿಕನಾಗಿರುವಿಕೆ : ಪಾನಾದಿಗಳನೀಂಟುತ ರಸಿಕತನದಿಂ ಚಪ್ಪಳಿಪ ದನಿ ಕೋಲಾಹಲು (ಬಸವ. ೩೩-೦೩). ೨. ವಿಷಯಲಂಪಟತ್ವ : ಮೊದಮೊದಲಿಗೆ ರಸಿಕತನವೂ ಇತ್ತು ಮಾವಯ್ಯನಿಗೆ (ಪಮ್ಮರು. ೨೦೯). [ರಸಿಕ + — ತನ]

**ರಸಿಕತೆ** (ನಾ). = ರಸಿಕತನ ೧ : ಪೊಸಬಗೆ ಬಗೆ ರಂಜಿಪ ರಸಿಕತೆ ರಸಿಕತೆ ಕುಸಿವ ಪಸರಿಸುವ ರೀತಿ ರೀತಿಯೆಸೆ ಮೆಚ್ಚದರಾರ್ (ಸುಳುಪಶ. ೦-೯೩) ; ಇನ್ನೆನಗೆ ನವಯೌವನಂ ಬಂದು ರಸಿಕತೆಯು ಬುಗ್ಗೆಯುಕ್ಕುವುದೊಂದು ಅಚ್ಚರಿಯೆ ? (ಶಂದ್ರಸ. ೯೨-೦೦) ; ರಸಿಕತೆ ಬರಿಯ ವಿಲಾಸವಲ್ಲ. ಅದು ಹಿತವೂ ಮಿತವೂ ಆಗಿದ್ದರೆ ಜೀವನಪಥವನ್ನು ಸುಗಮವಾಗಿ ಮಾಡುತ್ತದೆ (ಸಂಶಾಪ. ೩೬೦). [ಸಂ. ರಸಿಕತಾ]

**ರಸಿಕತ್ವ** (ನಾ). = ರಸಿಕತನ ೧ : ನಿನ್ನ ಪಾಂಡಿತ್ಯಕೆಲ್ಲಿಂದಮೈತಂದುದೀ ರಸಿಕತ್ವಂ ? (ಶಂದ್ರಸ. ೯೦-೨೩). [ಸಂ.]

**ರಸಿಕೆ** 'ಲಸಿಕೆ' ನೋ.

**ರಸಿಗೆ** 'ಲಸಿಕೆ' ನೋ.

**ರಸಿತ** (ಗು). ೧. ರುಚಿ ನೋಡಿದ ; ಸವಿದ. ೨. ಗಿಲೀಟು ಮಾಡಿದ. ೩. ಧ್ವನಿ ಮಾಡಿದ ; ಕೂಗಿದ. (ನಾ). ೪. ಧ್ವನಿ ; ಕೂಗು : ಅನೇಕಾಕಾರವಿಕೃತಾಮರಕುಮಾರಪರಿಪಠನನಟನಮೃದು ಕೂಜಿತ ರುಸಿತದರಹಸಿತ . . . ನಾನಾವಿನೋದಂಗಳೊಳಂ (ಆದಿಪು. ೯-೩ ವ) ; ನೂಪುರಂಗಳ ದನಿಯಿಂ ಕುಸುಮೋಪಹಾರದಳಿಗಳ ರಸಿತಂ ದ್ವಿಗುಣಿಸಿತು ನೃಪಗೃಹಪ್ರಾಂಗಣದೊಳ್ (ಪುಷ್ಪಪು. ೯-೩೩). [ಸಂ.]

**ರಸೀತಿ** 'ರಶೀತಿ' ನೋ.

**ರಸೀದಿ** 'ರಶೀತಿ' ನೋ.

**ರಸುಗೆ** 'ಲಸಿಕೆ' ನೋ.

**ರಸುಮಿ, ರಸುಮೆ, ರಸ್ಮೆ** (ನಾ). ಕಾಂತಿ ; ಪ್ರಭೆ : ರಸುಮಿ ತೋರಿತು ಮೂಡಣಾದ್ರಿಯ ಮೇಲೆ (ಸುದಾಮ. ೨೯). 'ರಸುಮಿಸು' ಪರಾ.
**ರಸುಮೆ** : "ರಸುಮೆ — ರಶ್ಮಿ — ಕಿರಣಲೇಖೆ" (ಕನ್ನಕೋ. ೩೯) ; ನಸುನಗೆಯ ಚೂಣಿಯಲಿ ವದನದ ರಸುಮೆ ಝಳಪಿಸೆ (ಕುಮ್ಮಾರ. ೨-೯) ; ಎಲ್ಲಿ ನೋಡಿದೊಡಲ್ಲಿ ಮಿಂಚುಬುಳುವಿನ ರಸುಮೆ (ಸವ್ಯಶ್. ೦೦-೩೬) ; ಸೂರ್ಯನ ರಸುಮೆಗಳು ಮಾಸಿದವು (ಜಿಶಾಗ. ೯-೦-೩೬). **ರಸ್ಮೆ** : ಚಂದದಿ ಪಂಜನು ಹಿಡಿದು . . . ಚಂದ್ರನ ಕಿರಣ ಪ್ರಜ್ವಲಿಸುವಂದದಿ ರಸ್ಮೆಯಿಂದ ಪರ್ಬಿದುದಾಸ್ಥಾನ (ಬಸಪ. ೩-೦೩). [ < ಸಂ. ರಶ್ಮಿ ]

**ರಸುಮಿಸು** (ಕ್ರಿ). ಬೆಳಗು ; ಪ್ರಕಾಶಮಾನವಾಗು : ವಜ್ರಸ್ತಂಭಗಳ ಕಂಡರಣೆಗಳಲೊಪ್ಪಿರ್ದ ರಸುಮಿಪ ವಜ್ರಧಾರೆಗಳ . . . ವೈವಾಹಮಂಟಪ ವೆಸೆದುದು (ಶೀಪಂತ. ೬-೨೯) ; ಕಡೆಗಣ್ಣ ನೋಟವೆಳನಗೆಯು ಮಿಸುಗು ರಸುಮಿಸುವ ಬಟ್ಟದೊಡೆ (ಸೌಂದಪು. ೯-೯) ; ರಸುಮಿಪ ರಪೆಯದ ಕಂಕಣವಂಗಜವೆಸರಂ ಕಂಠಿಕೆ ರತಿವೆಸರಂ . . . ತಳೆದು (ಜಯಶಾ. ೩-೨೩).
[ರಸುಮಿ + — ಇಸು₃]

**ರಸುಮೆ** 'ರಸುಮಿ' ನೋ.

**ರಸೆ** (ನಾ). ೧. ನೆಲ ; ಭೂಮಿ ; ಧರೆ : "ಭೂಃ . . . ರಸಾ, ಕ್ಷಿತಿಃ . . . ಆಧಾರಾ — ಈ ೩೭ ಭೂಮಿಯ ಪೆಸರ್" (ಹಲಾಯು. ೨೬-೦) ; ರಸೆಯುಂ ತಾಂ ಶಾಂಕೆ ಕಲ್ಪಾಂತದ ಬಱಸಿಡಿಲೆಯ್ತೆಂದು ಪೊಯ್ಕಲ್ (ಕಾದಂಪೂ. ೬೦೦). ೨. ಅಧೋಲೋಕ ; ಪಾತಾಳ : ಎಳೆ ರಸೆಯೊಳಟ್ಟುದಂ ಭುಜಬಳದಿಂ ಮುನ್ನೆತ್ತಿದಂತೆ ವಿಷಯಾಂಬುಧಿಯೊಳ್ ಮುಳುಗಿರ್ದವ್ಮಯ್ವರುಮಂ ಬಳಿಹರ ಪಿಡಿದೆತ್ತಲೆಂದು ಬಂದ್ಕೆ ಬರವಂ (ಶಂಪಶಾ. ೯-೧೩); ರಸೆಯಿಂ ಕಾಲಾಗ್ನಿರುದ್ರಂ ಪೊಱಮಡುವ ವೊಲ್ (ಗದಾಯು. ೬-೩೦). ೩. ತದುಕಿನ ಗಿಡ ; ಆನೆಬೇಲ : "ಗಜಭಕ್ಷ್ಯಾ, ಸುವಹಾ, ಸುರಭೀ, ರಸಾ . . . ಹ್ಲಾದಿನೀ — ರ ತದುಕಿನ ಗಿಡದ ಹೆಸರು, ಆನೆಬೇಲ" (ಸಿದ್ಧಾಂತಿ. ೧೯೦). ೪. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : ರಸೆ ಧರೆ ಇಳೆ ರೂಪವೈಕವೊಂದಱ ನಾಮಂ (ವ್ಯವಹಾ. ೯).
**ರಸೆಯರಸ** = ಭೂಮಿಯ ಒಡೆಯ ; ರಾಜ : ರಸೆಯರಸನಸಕ್ತಿಯಿಂ ಪಾಲಿಸುವೊಡಾಂ ಚೀರವಸನಂ ಜಟಾಧಾರಿಯೆನಿಸಿ ವನಮಂ ಪೊಗುವೆ (ವೆಂಕಾರಾ. ೨-೯-೦೯). [ಸಂ. ರಸಾ]

**ರಸಗಳ್ತಲೆ, ರಸಗತ್ತಲೆ** (ನಾ). ದಟ್ಟವಾದ ಕತ್ತಲೆ ; ಕಗ್ಗತ್ತಲೆ : ಪೊದಳ್ದ ಪೆರ್ಗಳ್ತಲೆ ನಾಲ್ದೆಸೆಗಳ್ತಲೆ ಪೊಸಗಳ್ತಲೆಯೆನಿಸಿ ಕೂಡೆ ತೀವಿತು ತಿಮಿರಂ (ಗಂಶ. ೯-೬೩). **ರಸಗತ್ತಲೆ** : ಸಂಕೇತಸ್ಥಲಕ್ಕೆ ಬರಲೊರ್ವ ಜಾರೆ ರಸಗತ್ತಲೆಯೊಳವಳನೆರ್ದೆಯನೀಳ್ಕುಳಿಗೊಳ್ವ ರಸಿಕಜಾರಂ ಬರುತಿರಲ್ಕೆ (ಬಕೋಪ. ೯-೬೩). 'ಭೂಚ್ಛಾಯ' ಹೋ.
[ರಸೆ + ಕಳ್ತಲೆ (< ಕಟ್ಟಲೆ)]

**ರಸೇಕ್ಷು** (ನಾ). ಒಂದು ಬಗೆಯ ಕಬ್ಬು ; ರಸದಾಳಿ : ಇಕ್ಷು ಧವಳೇಕ್ಷು ಪುಂಡ್ರೇಕ್ಷು ರಸೇಕ್ಷು (ಬಿವೇಶ. ೨೦೦). [ಸಂ.]

**ರಸೇಶ್ವರ** (ನಾ). ೧. ಪಾದರಸ ; ಪಾರದ. ೨. ಷಡ್ದರ್ಶನಗಳಿಗೆ ಹೊರತಾದ ಒಂದು ದರ್ಶನ: 'ರಸೇಶ್ವರಶೈವ' ಪರಾ. [ಸಂ.]

**ರಸೇಶ್ವರಶೈವ** (ನಾ). [ಶೈವ] ಶೈವಮತದ ಎಂಟು ಭೇದಗಳಲ್ಲಿ ಒಂದು : ಶೈವಮತದಲ್ಲಿ ನಾವು ಎಂಟು ಪ್ರಭೇದಗಳನ್ನು ಕಾಣಬಹುದು. ೧) ದ್ವೈತಪಾಶುಪತ . . . ೬)ನಂದಿಕೇಶ್ವರಶೈವ, ೭) ರಸೇಶ್ವರಶೈವ, ೮) ಕಾಶ್ಮೀರಶೈವ (ಶಾರರ. ೨೦೦). [ಸಂ.]

**ರಸೋಕ್ತಿ** (ನಾ). ೧. ರಸಭರಿತವಾದ ನುಡಿ ; ಸಾರವತ್ತಾದ ಮಾತು. ೨. [ಕಾವ್ಯಮೀ] ರಸಾಲಂಕಾರ : ವಕ್ರೋಕ್ತಿ ಸ್ವಭಾವೋಕ್ತಿ ರಸೋಕ್ತಿ ಪಾಕಲಾಲಿತ್ಯ . . . ನೂತನಮಾಗೆ (ಗಂಶ. ೨-೦೦೩ ವ). [ಸಂ.]

**ರಸೋತ್ಪತ್ತಿ** (ನಾ). ನವರಸಗಳಲ್ಲಿ ಯಾವುದಾದರೂ ಭಾವದ ಉತ್ಪತ್ತಿ,— ಆವಿರ್ಭಾವ : ಒದವಿದ ನಾಟಕದೊಳ್ ಕಾವ್ಯದೊಳೀಕ್ಷಿಸೆ ಪೇಟಲಾದ ಭಾವಾದ್ರಿಯನೊಳ್ಪೊದವೀಕ್ಷಿಪ ಕೇಳ್ದ ಸಭಾಸದರ್ಗೆ ರಸೋತ್ಪತ್ತಿಯೆಂದು ಪೇಟ್ವರ್ ಪಿರಿಯರ್ (ರಸರ. ೦-೩). [ಸಂ.]

**ರಸೋದ್ದೀಪನ** (ನಾ). ಆನಂದವಾಗುವಿಕೆ ; ಸಂತೋಷವುಂಟಾಗುವಿಕೆ : ' ರಸೋದ್ದೀಪನಂಗೊಳ್ ' ಪರಾ. [ಸಂ.]

**ರಸೋದ್ದೀಪನಂಗೊಳ್** (ಕ್ರಿ). ಆನಂದವನ್ನು ಹೊಂದು ; ರಸಾನುಭವವನ್ನು ಪಡೆ : ಈ ಉದ್ಯಾನ ಶೋಭೆಗೆ ರಸೋದ್ದೀಪನಂಗೊಂಡು ಮೈಮರೆಯುದಿರು (ಶಂಪ್ರಸ. ೭೦-೯). [ರಸೋದ್ದೀಪನ + ಕೊಳ್$_1$]

**ರಸೋದ್ರೇಕ** (ನಾ). ಆನಂದದ ಹೆಚ್ಚಳ ; ರಸದ ಉದ್ರೇಕ : (Catharsis. ಶಾಂತಿ. ೦೨). [ಸಂ.]

**ರಸೋನಕ** (ನಾ). ಬೆಳ್ಳುಳ್ಳಿ : " ಲಶುನಂ ಗೃಂಜನಸಂಜ್ಞಂ ರಸೋನಕಂ " (ಚಿಪ್ರಕೋ. ೩೯-೨೬). [ಸಂ.]

**ರಸೋಪಾಸಕ** (ನಾ). ಕಾವ್ಯರಸಾನುಭವದ ಉಪಾಸನೆ ಮಾಡುವವನು: ರಸಜ್ಞ : ಹುಟ್ಟು ರಸೋಪಾಸಕನಾದ ಆತನು ತನ್ನ ದರ್ಶನವನ್ನು . . . ರಸ್ಯವಸ್ತುವನ್ನಾಗಿ ರೂಪಿಸುತ್ತಾನೆ (ಪಶ್ಚಿಕಾ. ೦೨೦). [ಸಂ.]

**ರಸ್ತಾಳೆ** ' ರಸದಾಳಿ ' ನೋ.

**ರಸ್ತು** ' ರಸದು ' ನೋ.

**ರಸ್ತುಬಿಡು** (ಕ್ರಿ). ಸೈನಿಕರಿಗೆ ಆಹಾರವನ್ನು ಸರಬರಾಜು ಮಾಡು ; ಸೇನೆಗೆ ಧಾನ್ಯವನ್ನು ಕೊಡು : ಅವರ ದಂಡಿಗೆ ರಸ್ತುಬಿಡದಂತೆ ಅಟಕಾವು ಮಾಡಿಸಿ (ಮಹಾಶಂ. I. ೮೩). [ರಸ್ತು (<ರಸದು) + ಬಿಡು$_1$]

**ರಸ್ತುಮುಸ್ತೈದೆ** (ನಾ). ಆಹಾರಸಾಮಗ್ರಿ : ಜಕೀರಿ ರಸ್ತುಮುಸ್ತೈದೆಗಳೊಳಪೊಗದಂತು ಕಂಡಿ ಕಣವೆ ಪಥಂಗಳಂ ಕಟ್ಟಿ ಜೀರುಮುತ್ತಿಗೆಯಂ ರಚಿಸಲು (ಕಳಕ್ಕ. ೩-೯೩ ಪ); ರಸ್ತುಮುಸ್ತೈದೆಯೂ ಇಲ್ಲವಾಗಿ ಬಹಳ ಜನ ಮೃತವಾಗಿ ಹೋದರು (ರಾಜೇಂದ್ರ. ೨೮).
[ರಸ್ತು (<ರಸದು) + ಮುಸ್ತೈದೆ]

**ರಸ್ತೆ** (ನಾ). ದಾರಿ ; ಮಾರ್ಗ ; ಬೀದಿ : ರಾಜಧಾನಿಯಿಂದ ಆಶ್ರಮದವರೆಗಿರುವ ರಸ್ತೆಯು ಬಹಳ ದೂರ (ಹುಬ್ಬಿಪ. ೦೬೯) ; ಅಲ್ಲಿಗೆ ರಸ್ತೆ ಇಲ್ಲ (ದೌಲತ್. ೩೨೫).
[← ಪಾರ. ರಾಸ್ತಹ್; ಹಿಂ. ರಸ್ತಾ, ರಾಸ್ತಾ ; ಮರಾ. ರಸ್ತಾ]

**ರಸ್ತೆಸಾರಿಗೆ** (ನಾ). (ರಸ್ತೆಯ ಮೇಲೆ) ಸಾಗಣೆಯ ಸೌಕರ್ಯಕ್ಕಾಗಿ ಏರ್ಪಾಡಾಗಿರುವ ವಾಹನವ್ಯವಸ್ಥೆ : ರಸ್ತೆಸಾರಿಗೆ ಸಂಸ್ಥೆಯ ಕೆಲಸಗಾರರು ಸಂಪು ಹೂಡಿದ್ದಾರೆ (ರೂಢಿ). [ ರಸ್ತೆ + ಸಾರಿಗೆ$_1$ ]

**ರಸ್ಮೆ** ' ರಸುಮಿ ' ನೋ.

**ರಸ್ಯ** (ಗು). ೧. ರಸಭರಿತವಾದ ; ರಸವುಳ್ಳ : ರಸ್ಯಗುಣವೊಂದನ್ನು ಹೊರತು ಕವಿಯ ದರ್ಶನಕ್ಕೂ ತಾತ್ತ್ವಿಕರ ನೀತಿಶಾಸ್ತ್ರಜ್ಞರ ದರ್ಶನಗಳಿಗೂ ಇರುವ ಅಂತರವು ಬಹಳ ಕಡಿಮೆ (ಅಂಕಾ. ೯೬). (ನಾ). ೨. ನೆತ್ತರು ; ರಕ್ತ. [ಸಂ.]

**ರಹ$_1$** (ನಾ). ೧. ಏಕಾಂತಸ್ಥಳ ; ನಿರ್ಜನಪ್ರದೇಶ. ೨. ಏಕಾಂತತೆ. ೩. ಗುಟ್ಟು ; ರಹಸ್ಯ : " ಗುಹ್ಯ ರಹಮುಂಪಹ್ವರಮದು ರಹಸ್ಯಂ " (ಮಂಗರಾ. ೦೨೯-೦೦) ; ಬಹುತಪವ ಕೈಕೊಂಬೆವೆಂಬೊಲು ರಹಕೆ ಸೇರವೆ ಮುಳುಗಿದುವು ವಿಸಾನುಗಳು ಕೊಳನೊಳಗೆ (ಕೋಗಸು. ೪-೬೩). ೪. ಗುಪ್ತಾಲೋಚನೆ : ಮಂತ್ರಿಯ ಗೃಹಕೆ ಕಳುಹಿಸು ತಂದೆ ಮಕ್ಕಳು ರಹವ ಮಾಡಿದರು (ಕೊರರಾ. ೬-೦-೩೦). ೫. ಆಶ್ಚರ್ಯ ; ಸೋಜಿಗ : '' ರಹಮೆನಲಷ್ಯಾಶ್ಚರ್ಯಂ '' (ಶಾರಿ. ೩೪) ; ಏನು ನಿನ್ನಂಭವಣೆ ನೀನಾರಾ ನರೇಂದ್ರರ ಸೆಜೆಯ ಬಿಡುಗಡೆಗೇನನೆಂಬೆನು ರಹವನೆಂದನು (ಕುವ್ಯಾಸ. ೨-೬೨). [ ಸಂ. ರಹಸ್ ]

**ರಹ$_2$**, **ರಹಿ$_2$** (ನಾ). ೧. ತಂತ್ರ ; ಉಪಾಯ. ೨. ದಾರಿ; ಮಾರ್ಗ; ಹಾದಿ : ನಾಟ್ಯದ ಗೃಹಕೆ ಸೂಚನೆಗೊಟ್ಟು ನಿಮಿಷಕೆ ರಹವ ಮಾಡಿದರವರು (ಕುವ್ಯಾವಿ. ೪-೬) ; ಹೊಗಳಲದೇಕೆ ನಿಂದಿಸಲೇಕೆ ನಿಮಗೆ ನಾ ಜಗಳವನಿಕ್ಕಬಂದವನೆ ಮಗಳನು ಕೆಡಿಸಿದನಿಗೆ ರಹವಜೀಯದೆ ದೃಗುಯುಗದೊಳು ಕಿಡಿಯೇಕೆ (ಪ್ರೋಚಕ. ೩೩-೨೩) ; ಜನಗಳ ನೆಮ್ಮದಿಗೆ ಭಂಗವನ್ನುಂಟು ಮಾಡುವುದಕ್ಕೆ ಅವಕಾಶಕ್ಕೆ ರಹ ಇಲ್ಲದಂತೆ . . . ತಿಳಿಸುವುದು (ಗ್ರಾಶಾಸ. ೩೦). ರಹಿ$_2$ : ೨. ' ರಹಿಗೆಡು ' ಪರಾ.
[ ← ಅರ. ಪಾರ. ಹಿಂ. ರಾಹ್ ; ಮರಾ. ರಹಾ ]

**ರಹಟ** ' ಜಾಟ್ಟ ' ನೋ.

**ರಹಟಘಟಿಕಾನ್ಯಾಯ** (ನಾ). [ತರ್ಕಶಾ] ಒಂದು ಬಗೆಯ ನ್ಯಾಯ ; ರಾಟೆ ಮತ್ತು ಅದರ ಗಡಿಗೆಗೆ ಸಂಬಂಧಿಸಿದ ನ್ಯಾಯ ; ಕ್ರಮವಾಗಿ ಪುನರಾವರ್ತನೆಯಾಗುವುದನ್ನು ಸೂಚಿಸುವ ನ್ಯಾಯ : ಅನುಸಂಧಾನಂಗಿಡದ್ಯದನೆಯದು ದುಷ್ಪಮಮೆನಿಪ್ಪ ಕಾಲಂ ಬಟಿಕಾಜಿನೆಯದತಿದುಷಮಮಂ ವರ್ತನಮಿಂತೀ ತೆಜನೆ ರಹಟಿಘಟಿಕಾನ್ಯಾಯಂ (ಶಂಶಾಪು. ೦-೩೭).
[ರಹಟ (< ಜಾಟ್ಟ) + (ಸಂ. ಘಟಿಕಾ) + ನ್ಯಾಯ]

**ರಹಟಘಟೀಯಂತ್ರ** (ನಾ). ಬಾವಿಯಿಂದ ನೀರೆತ್ತುವ ಸಾಧನ ; ರಾಟೆ : ರಹಟಘಟೀಯಂತ್ರಂಗಳ್ ಬಹುವಿಧವಿಭ್ರಮದಿನೆಸೆವುವುಪಶಲ್ಯಕದೊಳ್ (ಕೃಕೃತಿ. ೨-೫೦). [ರಹಟ (< ಜಾಟ್ಟ) + ಘಟೀಯಂತ್ರ]

**ರಹಣ** (ನಾ). ಓಡಿಹೋಗುವುದು ; ಪಲಾಯನ : ರಕ್ಕಸರಾಯು ಭೈರವನಾದನಹಹಾ ಕೈಯ ಮುಚ್ಚಿದನೇನ ಹೇಳುವೆ ರಹಣವಾಯ್ತೆಂದು (ಕೌರಿರಾ. ೨೨-೫೦).
ರಹಣಾದಾಕಾರ = ಛದ್ಮವೇಷ ; ಮಾರುವೇಷ : ಆ ಮಹಾಸಭೆಯಾ ರಹಣದಾಕಾರಂಗಳಲಿ ವಿಗ್ರಹಪಲಾಯನನಾಟಕವ ನಿರ್ವಹಿಸಿದಿಂದ್ರಾದಿಗಳು (ಉತ್ತರಾ. ೯-೯೫). [ಸಂ.]

**ರಹಣೆ** (ನಾ). ೧. ಸಾಲು ; ಸರಣಿ : "ರಹಣಿಯೆನಲ್ ಸರಣಿ" (ಶಾರಿ. ೨೦) ; ಗಹಗಹಿಸಿ ನಗೆ ನಗುವ ನಗೆಗಳ ರಹಣೆಗಳಿಗೊಳಗಾದೆನಲ್ಲಾ (ಬಸಪ್ರ. ೨೯-೨೦) ; ಲಹರಿ ಮಸಗಿದುದತ್ತ ಕಾಂತಾಬಹಳಪಾರಾವಾರ . . . ಗಹಗಹಿಕೆ ಮಿಗೆ ಅಟ್ಟಹಾಸದ ರಹಣೆಗಳ (ಕುವ್ಯಾಅ. ೦೫-೦೯) ; ಅಹುದಲೇ ವಾಲ್ಮೀಕಿ ಕವಿತೆಯ ರ[ಶಾಕು. ವ]ಹಣೆ ಲೇಸ್ಸೆ (ಕೊರರಾ. ೦-೨-೦೭). ೨. ನಟನೆ ; ಅಭಿನಯ : ಹಯಮಂ ತಡೆದ ರಹಣ ರಾಯರ ಮುಂದೆ ಹೋಗೆಂದು ದುಷ್ಪ್ರತಿಯ ಕುಹಕದಿಂ ಬೈದು (ಕೈಪಿಶಾ. ೦೭-೫೫). ೩. ಉಪಾಯ ; ತಂತ್ರ : ಕಾಮನ ಮಹಿಮೆಯಿಂದೆ ಪರವಧುವಿನ [ವನು] ರಹಣೆಯಿಂದೆ ತನ್ನ ಬಗೆಗೆ ಒಹವೊಲಿಸಗುವಳು ಸಮರ್ಥದೂತಿ (ಅವವ. ೦೩-೫). [← ಮರಾ. ರಹಣೇ, ರಹಾಣೇ]

**ರಹಣೆಕಾಜಿ** (ನಾ). ನಟನೆ ಮಾಡುವವನು ; ನಟ : ಗರ್ದಭಗಳಂತೊದೆದಾಡಿ ರಹಣೆಕಾಜಿರವೊಲು ಕೆಲೆದು ಮಹಿಷನಂದದಿ ನೋಡಿ ಕುದುರೆವೊಲ್ಯಾಡುವ ಮಹಿಯ ರೊಟ್ಟಿಗರ ವರ್ತನವೆ (ಭರತ. ೩೦-೦೦೨).
[ ರಹಣೆ + — ಕಾಜಿ ]

**ರಹದಾರಿ** (ನಾ). ೧. ಅನುಜ್ಞಾಪತ್ರ ; ಪರವಾನೆ : ಮಡಕೆಯನು ಬಡಿದು ಹೊಸ್ ಕೊಡವ ತೋರುವ ಸವಿನೆ ಪಡೆದಿಪೆಯು ರುಹದಾರಿಯನು ಹೊನ್ನ ಗಣಿಗೆ ? (ಮಂಕುಸ. ೬೭೪) ; ಪ್ರಾಚೀನ ಕರ್ನಾಟಕದಲ್ಲಿ ಈಗಿನ ರಹದಾರಿ (Pass-Ports)ಗಳನ್ನು 'ಉಂಡಿಗೆ'ಗಳೆಂದು ಕರೆಯುತ್ತಿದ್ದರು (ಕಶಾಅ. ೩೩೯). ೨. ರಸ್ತೆ ; ಮಾರ್ಗ : ಮೈಸೂರಿಗೆ ಹೋಗಬೇಕಾದ್ದಕ್ಕೆ ಒಳ್ಳೆ ರಹದಾರಿ ಮಾಡಿ (ರಾಜೇಂದ್ರ. ೦೨೭); ಎಡಬದಿಯ ದೊಡ್ಡಬಯಲನ್ನು ದಾಟಿ ರಹದಾರಿಗಳಿಂದ ದೂರಹೋಗಿ ಸಣ್ಣದಿನ್ನೆಯೊಂದರ ಮೇಲೆ ಕುಳಿತುಕೊಂಡೆವು (ಮುಂಕ್ರಿ. ೨೭). [← ಪಾರ. ಹಿಂ. ರಾಹದಾರೀ ; ಮರಾ. ರಹದಾರೀ ]

**ರಹದಾರಿಚೀಟಿ** 'ರಹದಾರಿಚೀಟು' ನೋ.

**ರಹದಾರಿಚೀಟು**, **ರಹದಾರಿಚೀಟಿ** (ನಾ). (ಒಂದು ಸ್ಥಳದಿಂದ ಹೊರಹೋಗಲು ಅಥವಾ ಒಂದು ಸ್ಥಳದ ಒಳಗೆ ಬರಲು ಪಡೆಯ

ಬೇಕಾದ) ಅಪ್ಪಣೆಚೀಟಿ ; ಅನುಮತಿಪತ್ರ : ಮೂಡಸೀಮೆ ಹೋಗು ವಂಥಾ ಜನರಿಗೆ ರಹದಾರಿಚೀಟು ಕೊಡಬೇಕು (ಶಾಕೇಂದ್ರ. ೨೬೦). **ರಹದಾರಿಚೀಟಿ :** ನಗರದಿಂದ ಯಾರೂ ಮುಂದ್ರೆ ಒತ್ತಿದ ರಹದಾರಿಚೀಟಿ ಯಿಲ್ಲದೆ ಹೊರಕ್ಕೆ ಹೋಗದಂತೆ ತಡೆಯಲ್ಪಟ್ಟರು (ವ್ಯಾಕಶಿ. ೦೩೮).

[ ರಹದಾರಿ + ಚೀಟು$_{4}$ ]

**ರಹವಾಸಿ** ' ರಹಿವಾಸಿ ' ನೋ.

**ರಹಸಿಯ** (ನಾ). ಗುಟ್ಟು ; ರಹಸ್ಯ : ರಹಸಿಯುದ ಬುಗ್ಗೆಯುದು ಚಿಮ್ಮುತಿಹುದೆಲ್ಲರೊಳು (ಬುಂಕುಳ. ೨೦೫). [< ಸಂ. ರಹಸ್ಯ]

**ರಹಸ್ಯ** (ನಾ). ಗುಟ್ಟು ; ಗೋಪ್ಯ ; ಮರ್ಮ : "ಗುಪ್ತರಹಸ್ಯುಪಹ್ವರಮದು ರಹಸ್ಯಂ" (ಬುಂಗರಾ. ೦೨೬-೦೦) ; ನಿರ್ಮಳದ ಧರ್ಮಸ್ಥಿತಿ ರಹಸ್ಯವ ತಿಳುಪಿದವರಾರ್ (ಶುವ್ಯಾಳ. ೦೭-೦೨); ಇವನ ರಹಸ್ಯವನಿನ್ನು ಮರಿಯುಲು . . . ಇಂತೆಂದನು ನಾಸಪನಂ ಕುರಿತು (ಗಹೇಶ. ೯-೨೨೩).

[ಸಂ.]

**ರಹಾಟ** ' ಜುಟ್ಟು ' ನೋ.

**ರಹಿ$_{1}$** (ನಾ). ೧. ರೀತಿ ; ಪ್ರಕಾರ ; ಬಗೆ : "ರಹಿಯೆಂದೊಡದೀ ಪ್ರಕಾರ" (ಚಾರಹ. ೫೬) ; ತಾರಾಗಣದ ಮಧ್ಯದ ಚಂದ್ರಮನ ಹೊಯ್ದಿಣ ಲೊಳಡಸಿದ ರಾಹುವಿನ ರಹಿಯಾಯ್ತು ನಿಮಿಷದಲಿ (ಶುವ್ಯಾಳ. ೨೫-೨೯) ; ವಂದಿಗಳ ವೈತಾಳಿಕಾಮರವೃಂದ ಸೂಸುವ ಪುಷ್ಪವೃಷ್ಟಿಗಳಿಂದ ದೆಸೆ ಮಘ ಮಘಿಸೆ ಪರಮೋತ್ಸವದ ರಹಿಗಳಲಿ (ಪಭಾಗ. ೩-೭-೩೭). ೨. ಸಡಗರ ; ಸಂಭ್ರಮ ; ಉತ್ಸಾಹ : ರಾಣಿಯರ ರಹಿಯಿಂದ ರಂಜಿಸಿ ಜಾಣೆನಲಿ ಬಹೆವರಸ ನಿಮ್ಮಡಿಯಾಣೆಯೆಂದೊಡಬಡಿಸಿದರು (ಶುವ್ಯಾಆ. ೦೭-೨೩) ; ಮೊಳಗಿದವು ಘನಗಂಭೀರಭೇರಿಗಳಬ್ಬರದಲಿ ನಾರಿಯರ ಪೆಕ್ಕಣದ ಪರಮೋತ್ಸವದ ರಹಿ ಮಿಗಲು (ಪಭಾಗ. ೯-೦೦-೩೬). [ < ಪ್ರಾ. ರಹ ]

**ರಹಿ$_{2}$** ' ರಹ$_{2}$ ' ನೋ.

**ರಹಿಗೆಡು** (ಕ್ರಿ). ದಾರಿ ಕಾಣದಾಗು : ದಿಕ್ಕು ತೋರದಂತಾಗು : ಮಹಿಯೊಳ್ ಭೂಸುರವೇಷದಿಂದ ಕಲಿಯಲ್ ಕರ್ಣಂ ಧನುರ್ವೇದಮಂ ರಹಿಗೆಟ್ಟಂ (ಕೋವೀಕ. ೯೨). [ ರಹಿ$_{2}$ ( < ರಹ$_{2}$ ) + ಕೆಡು$_{1}$ ]

**ರಹಿತ** (ಗು). ೧. ಇಲ್ಲದ. (ನಾ). ೨. ಬಿಡುವಿಕೆ ; ತ್ಯಜಿಸುವಿಕೆ : ' ನಿಯಮರಹಿತ ' ಪರಾ. [ಸಂ.]

**ರಹಿತಾಘ** (ನಾ). ಪಾಪವಿಲ್ಲದವನು ; ನಿಷ್ಕಳಂಕ : ಸುಹಿತಾಚಾರನುದಾರಲಾಳ ಮಲಧಾರಿಖ್ಯಾತನಾಮಾಂಕಿತೆ[ಂ] ರಹಿತಾಘಂ ವರಪದ್ಮಸೇನ ಮುನಿಪಂ (ಶಾಶಾ. XX. ೨೦೫-೨೬; 1247). [ಸಂ.]

**ರಹಿತಾನುಕೂಲೆ** (ನಾ). ೧. ಅನುಕೂಲೆಯಲ್ಲದವಳು. ೨. ದಂಡೆಯನ್ನು ಬಿಟ್ಟು ಹರಿಯುವ ನದಿ. ೧, ೨ : ಹರನಂತೆ ಧನದಸಖಿ ನವರತ್ನದಂತೆ ಗುಣವಿರಹಿತೆ ಸುರಾಚಾರ್ಯನಂತೆ ಗತಸೌಮ್ಯ ಸನ್ನರುಷ ಋತು ನಿಮ್ನಗಾರಯದಂತೆ ರಹಿತಾನುಕೂಲೆ (ಕಂಕ್ಷ. ೦೦-೩೬).

[ ಸಂ. ರಹಿತಾನುಕೂಲಾ ]

**ರಹಿತು** (ನಾ). ರದ್ದು ; ವಜಾ : ಏನು ನರಹರಿ ! ಈ ವರ್ಷ ಕಾಲೇಜಿಗೆ ಹೋಗುವುದನ್ನು ನೀನು ರಹಿತು ಮಾಡಿದಿಯಾ ? (ಸಬುಜ. ೦೮೭).

[< ರಹಿತ ]

**ರಹಿವಾಸಿ**, ರಹವಾಸಿ (ನಾ). ವಾಸಿಸುವವನು ; ನಿವಾಸಿ : ಅಂಕಾರಾಯರಾದರೂ ಅಲ್ಲಿಯ ಮೂಲ ರಹಿವಾಸಿಗಳಲ್ಲ (ಶಾರಿಕೋ. ೬) ; ಇಲ್ಲಿಯ ರಹಿವಾಸಿಗಳು ಕನ್ನಡ ಮಾತೃಭಾಷೆಯವರು (ದೇಪಠ. ೩೯). **ರಹವಾಸಿ :** ನಾವೂ ಪುಣೆಯ ರಹವಾಸಿಗಳಾಗುತ್ತೇವೆ ! (ಸಬುಜ. ೩೭೭).

[ ← ಮರಾ. ರಹಿವಾಸೀ ]

**ರಹಿಸು** (ಕ್ರಿ). ಇರು ; ವರ್ತಿಸು ; ಉಂಟಾಗು : ಸೂಳೆಯರೇಕಪುರುಷರಲ್ಲಿ ವಿಹರಿಸುವರೇ ಲೋಕಧರ್ಮದ ರಹಣಿ ರಹಿಸುವುದೈಸಲೇ (ಶುವ್ಯಾಶ. ೨೨-೨೫) ; ನಾರದನ ತುಂಬುರನ ಸಂಗೀತ ರಹಿಸೆ ರಂಭಾ ರಮ್ಯನರ್ತನ ಕಣ್ಗೆಸೆಯೆ ನೀಲಕಂಧರನಲ್ಲಿ ನೃತ್ಯದೋಜಾವ (ಸೌಂದಪು. ೦೭-೬೭).

[ ರಹ$_{2}$ + — ಇಸು$_{3}$ ]

**ರಹೋಭ್ಯಾಖ್ಯಾನ** (ನಾ). [ಜೈನ] ಸತ್ಯಾಣುವ್ರತದ ಐದು ಅತಿಚಾರಗಳಲ್ಲಿ ಒಂದು ; ಗಂಡ ಹೆಂಡಿರ ಏಕಾಂತದ ವಿಷಯಗಳನ್ನು ಬಹಿರಂಗಪಡಿಸುವುದು : ನಾನಾ ಮಿಥ್ಯೋಪದೇಶಂ ಪುದಿದೊದವಿದ ಸಾಕಾರಮಂತ್ರಂ ರಹೋವ್ಯಾ[ಭ್ಯಾ]ಖ್ಯಾನಂ ನ್ಯಾಸಾಪಹಾರಕ್ರಮಮನುಗತಿಯಿಂ ಕೂಟಲೇಖಕ್ರಿಯಾವಿಜ್ಞಾನಂ ಸತ್ಯವ್ರತಕ್ಕಂತಿವು ಪರಿವಿಡಿಯಿಂದಮ್ದತೀಚಾರಮುಕ್ಕುಂ (ಸುಕುಮಾ. ೬-೦೯). [ಸಂ.]

**ರಳ** ' ರಟಿ ' ನೋ.

**ರಾಉತ** ' ರಾವುತ ' ನೋ.

**ರಾಉತ್ತ** ' ರಾವುತ ' ನೋ.

**ರಾಂಕವ** (ಗು). ೧. ರಂಕು ಎಂಬ ಜಿಂಕೆಯ ಕೂದಲಿನಿಂದ ಮಾಡಿದ : ಸುಕುಮಾರವಿಚಿತ್ರರಾಂಕವಾಸ್ತರಣಂಗಳಿಂದೆಯುಂ . . . ಶೋಭಿಸುವ (ಮರಾಹ. ೨-೦೩-೩೯). (ನಾ). ೨. ರಂಕು ಎಂಬ ಜಿಂಕೆಯ ಕೂದಲಿನಿಂದ ಮಾಡಿದ ವಸ್ತ್ರ. ಕಂಬಳಿ, ಶಾಲು ಮುಂತಾದುವು: "ರಾಂಕವಂ, ಮೃಗರೋಮಜಂ–ಮೃಗರೋಮಗಳಿಂದ ಮಾಡಲ್ಪಟ್ಟ ಶಾಲು . . . ಮುಂತಾದುವುಗಳಿಗೆ ಪೆಸರುಗಳು" (ಸಿದ್ಯೌಹ. ೨೦೨). [ಸಂ.]

**ರಾಂಡಬಾಜ** (ನಾ). ವ್ಯಭಿಚಾರ ; ಸೂಳೆಗಾರಿಕೆ : ಹೆಣ್ಣಿನ ಸಹವಾಸಕ್ಕೆ 'ರಾಂಡಬಾಜ'ವೆಂದೂ ಆಗದವರು ಕರೆಯುವ ವಾಡಿಕೆ (ಹೇಮಂಕ. ೦೯೨).

[ ← ಹಿಂ. ರಂಡೀಬಾಜೀ ; ಮರಾ. ರಾಂಡಬಾಜ್ ]

**ರಾಂಡಬಾಜತನ** (ನಾ). = ರಾಂಡಬಾಜ : ಮನುಷ್ಯ ಕಳವುಮಾಡಿ ಬದುಕುತ್ತಾನೆ ; ರಾಂಡಬಾಜತನ ಮಾಡಿಯೂ ಮೆರೆಯುತ್ತಾನೆ (ದೀಶಹ. II. ೨೬೦). [ ರಾಂಡಬಾಜ + –ತನ]

**ರಾಕಟಿ** ' ರಾಕಡಿ ' ನೋ.

**ರಾಕಡಿ**, ರಾಕಟಿ, ರಾಕುಟಿ, ರಾಕುಡಿ, ರಾಗಟಿ, ರಾಗುಟಿ, ರೇಗಟಿ, ರೇಗಟೆ, ರ್‍ಯಾಕಟಿ, ರ್‍ಯಾಕಟೆ, ರ್‍ಯಾಕಡೆ, ರ್‍ಯಾಗಟೆ (ನಾ). ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ ; ಜಡೆಬಿಲ್ಲೆ : "ರಾಕಡಿ . . . ಹೆಣ್ಣುಮಕ್ಕಳ ತಲೆಯ ಆಭರಣ" (ಶಾವಕೋ. ೯೦). **ರಾಕಟಿ :** ಶೃಂಗಾರವಾದ ಜಡೆಭಂಗಾರ ಹೊಂಗ್ಯಾದಿಗೆ ಮುಡಿದ ಭಂಗಾರದ ಹರಳಿನ ರಾಕಟಿ [ಶಾಶಾಂ. ಗುಟಿ] (ಪುರಂದ. ೦-೦೯೦-೫). **ರಾಕುಟಿ :** ಮುತ್ತಿನ ಮೂಗುತಿ ಕೆತ್ತಿದ ವಾಲೆಯು ಇತ್ತರಾ ಬುಗುಡಿ ನೆತ್ತಿಗರಳಿಲೆ ಚಿನ್ನದ ರಾಕುಟಿ (ವಾದೀಕ. ೦-೬೫-೦೭). **ರಾಕುಡಿ :** ಸ್ತ್ರೀಪಾತ್ರಧವರು ರಾಕುಡಿ, ಚಂದ್ರವಂಕಿ, ಜಡೆ, ಅಡ್ಡಬಾಸ ಮುಂತಾದ ಹಳೇಆಭರಣಗಳನ್ನು ತೊಟ್ಟುಕೊಳ್ಳುತ್ತಾರೆ (ಅಶಾಕ್ಷ. ೬೦). **ರಾಗಟಿ :** ಬಿಚ್ಯೋಲೆ ರಾಗಟಿಗೆಡೆದ ಭೋರೆಂದೆಂಬ ನಿಡುನರವಿಗಳನೀಕ್ಷಿಸಿದ (ಪ್ರಶಾಶಾ. ೨-೩೭). **ರಾಗುಟಿ :** ಅಯ್ಯೊಯಿನ್ನಯ . . . ಬುಗುಡಿ ರಾಗುಟಿಯು (ಶುಲ್ಲಕ. ೭-೭) ; ಹೆರಳು ರಾಗುಟಿ ಚೌರಿ ಗಿಳಿಗಳೆಡಬಲಕ (ಶಾವಗೀ. ೪೯). **ರೇಗಟಿ :** ರೇಗಟಿ, ಕೇದಗೆ . . . ಮೊದಲಾದ ಆಭರಣಗಳು (ಬುರಿಪುಂ. ೩೮). **ರೇಗಟೆ :** ಕುರುಳು ರೇಗಟೆ ಕರ್ಣಪತ್ರವು ಮೆರೆವ ಕಾಂಚನ ಪೂವ್ವು ಬೆರಳೊಳಗಿಟ್ಟ ಮುದ್ರಿಕೆ (ಶಪಶಾ. ೦೯-೬) . **ರ್‍ಯಾಕಟಿ :** ಕುವರಿಯುಳಯುಸಿತ ಮುಡಿದಲೆಗೆ ರ್‍ಯಾಕಟಿಯನಮರ್ಚಿ (ಪಪಮೋ. ೨೯-೩೯). **ರ್‍ಯಾಕಟೆ :** ಮೇಲೆ ರ್‍ಯಾಕಟಿ ಚೌರಿ ಮುಡಿದ ಕುಸುಮವು (ಶಿವಾಕ್ಷ. ೧೦-೩) ; ರ್‍ಯಾಕಟೆ ಚೌರಿ ಶತಜಡೆ ಭಂಗಾರವು (ಕುಶೇಲೋ. ೦೨೭). **ರ್‍ಯಾಕಡೆ :** ಹಿಣಲು ಹಾಕಿದ ಚೌರಿ ರ್‍ಯಾಕಡೆಯು ಗೊಂಡೆ (ಶಬಾಶ. ೯೮-೦೦). **ರ್‍ಯಾಗಟೆ :** ಪದ್ಮರಾಗ

ಮಣಿಯು ರ‍್ಯಾಗಟೆಯು ಬಿಲ್ಲೆಯುಂ ಬಿಗಿದು (ಶ್ರೀಗಂಧಿ. ೨೦೦-೦೯) ; ಕಾಳವ್ವಾಳ ವೇಣಿ ಮ್ಯಾಲೆ ರ‍್ಯಾಗಟೆಯು ಸಂದು ಕೀಲಿಸಿದ (ಜನಪು. ೪೩-೨೪).

[ದೇ.॥ ತಮಿ. ರಾಕ್ಕಟಿ, ರಾಕ್ಕಿಟಿ, ರಾಕ್ಕುಟಿ; ತೆಲು. ರಾಕಿಡಿ, ರಾಗಿಡಿ./ ಮರಾ. ರಾಖಡೀ]

**ರಾಕರಿ** (ನಾ). ಕಲ್ಲುಗುಡ್ಡೆ : ಈ ಒಂದೆ ಹೂವು ಜರ್ಬರಾ. ಮರದ ಬುಡದ ರಾಕರಿಯಲ್ಲಿ ಮೂಡಿ ಕಠಿಣವರ್ತ್ಯದಲ್ಲಿ ನಾಚುತಿರುವ ನಿರ್ಜರಾ ಬಿಂಬಾಧರದಪ್ಸರಾ ! (ಅನಿಕೇ. ೦೬-೦೩) : ತುಂಡುಜಾತಿ ರಾಕರಿಗಳಲ್ಲಿ ಬೆಳೆಸಲು ಉಪಯುಕ್ತವಾಗಿವೆ (ಕಾರ್ಶಾ. I, ೩೩೯). [← ಇಂ. Rockery]

**ರಾಕಾಚಂದ್ರ** (ನಾ). ಪೂರ್ಣಚಂದ್ರ ; ಹುಣ್ಣಿಮೆಯ ಚಂದ್ರ : ತಾರೆಗಳ ಸಮೂಹದೊಂದಿಗೆ ಬರುವ ರಾಕಾಚಂದ್ರನಂತೆ ತರುಣಿರನ್ನೆಯರ ಮೊತ್ತದಲಿ ನಾಟಕಶಾಲೆಗೆ ಬಂದನು (ಕರ್ಣಾಟ. ೦೬೬). [ಸಂ.]

**ರಾಕಾಸ** ' ರಕ್ಕಸ ' ನೋ.

**ರಾಕಾಸಿ** ' ರಕ್ಕಸಿ ' ನೋ.

**ರಾಕುಟಿ** ' ರಾಕಡಿ ' ನೋ.

**ರಾಕುಡಿ** ' ರಾಕಡಿ ' ನೋ.

**ರಾಕೆ** (ನಾ). ೧. ಪೂರ್ಣಚಂದ್ರನಿರುವ ದಿನ ; ಹುಣ್ಣಿಮೆ : "ಚಂದ್ರಂ ನೆಟ್ಟನೆ ನೆಱೆದು ಬಿಂಬದಿಂ ಪೂರ್ಣನಾಗೆ ರಾಕಾಖ್ಯೆ ಪೌರ್ಣಮಾಸಿಯುದಕ್ಕುಂ" (ವಸ್ತುಕೋ. ೦೩-೯). ೨. ಮೊದಲನೆಯ ಬಾರಿ ಋತುಮತಿಯಾದ ವಳು ; ಮೈನೆರೆದ ಹುಡುಗಿ : "ಕನ್ಯಕಿಯಾಗಿ ಮುಟ್ಟವೆಗೊಂಡವಳ ರಾಕಾಯೆಂಬುದು" (ಹಲಾಯು. ೬೦-೩೩೪). [ಸಂ. ರಾಕಾ]

**ರಾಕೆಟ್** ' ರಾಕೆಟ್ಟು ' ನೋ.

**ರಾಕೆಟ್ಟು, ರಾಕೆಟ್** (ನಾ). ೧. ಒಳಗಿನ ಮದ್ದನ್ನು ಹೊತ್ತಿಸುವುದ ರಿಂದ ಮೇಲಕ್ಕೆ ಹಾರಬಲ್ಲ ಲೋಹದ ಅಥವಾ ಕಾಗದದ ಉರುಳೆ ಯಾಕಾರದ ಕೋಶ ; ಪಟಾಕಿಯಲ್ಲಿ ಒಂದು ಬಗೆ : ಆಕಾಶಬಾಣ, ರಾಕೆಟ್ಟು (Rocket. ಶಶ್ರಿಶಿ. ೭೦). **ರಾಕೆಟ್** : ೨. ಕ್ಷಿಪಣಿ : ಅಮೆ ರಿಕನ್ನರು ತಮ್ಮ ಮರಿಚಂದ್ರನನ್ನು ಹಾರಿಸಲು ಜೂಪಿಟರ್ ಎಂಬ ರಾಕೆಟ್ ಉಪಕರಣಗಳನ್ನು ಉಪಯೋಗಿಸಿದರು (ಅಶಾಕ. ೪೭). [← ಇಂ. Rocket]

**ರಾಕೇಂದು** (ನಾ). = ರಾಕಾಚಂದ್ರ : ಒಪ್ಪುವ ಸುಕುಮಾರಂಗೆ . . . ರಾಕೇಂದುವದನ ಶ್ರೀಕಾರಕರ್ಣದ . . . ಗೌರೀದೇವಿಯೆಂಬ ತರುಣಿಯುಂ ಮದುವೆಯುಂ ಮಾಡಿ (ಹಮ್ಮೀರ. ೨-೩೨ ವ). [ಸಂ.]

**ರಾಕ್ಷಸ** (ಗು.) ೧.ರಕ್ಕಸರಿಗೆ ಸಂಬಂಧಿಸಿದ. ೨. ಬಯಂಕರವಾದ ; ಅಮಾನುಷವಾದ : ' ರಾಕ್ಷಸಮೌನ ' ಪರಾ. (ನಾ). ೩ ದೇವತೆ ಗಳ ಶತ್ರು ; ದೈತ್ಯ ; ದನುಜ : ಕ್ರಿಯೆ ಇಲ್ಲದ ಭಕ್ತ ಮನುಜ ಕ್ರಿಯೆ ಇಲ್ಲದ ಜಂಗಮ ರಾಕ್ಷಸ (ವಚರ. ೯೩-೩೬೩) ; ತಪೋಯೋಗ್ಯರಲ್ಲಿ ದೈತ್ಯ, ರಾಕ್ಷಸ, ಪಿಶಾಚ, ಮನುಷ್ಯಾಧಮ ಎಂದು ನಾಲ್ಕು ಪ್ರಕಾರಗಳು (ಹಿಂದಶಾ. ೨೮೬). ೪. ನೈಋತ್ಯದಿಕ್ಕಿನ ಅಧಿಪತಿ ; ನೈಋತಿ : "ಯಾತು, ಯಾತುಧಾನಃ, ಕ್ರವ್ಯಾತ್, ರಾಕ್ಷಸಃ . . . ಕೈಕಸೇಯಃ — ಈ ೯ ನೈಋತಿಯ ಪೆಸರ್" (ಹಲಾಯು. ೧೩-೭೩). ೫. ಎಂಟು ಬಗೆಯ ವಿವಾಹಗಳಲ್ಲಿ ಒಂದು ; ಕನ್ಯೆಯ ಬಂಧುಗಳನ್ನು ಸೋಲಿಸಿ, ಬಲಾತ್ಕಾರವಾಗಿ ಅವಳನ್ನು ಕೊಂಡೊಯ್ದು ಮಾಡಿ ಕೊಳ್ಳುವ ವಿವಾಹ. ೬. ಅರುವತ್ತು ಸಂವತ್ಸರಗಳಲ್ಲಿ ಐವತ್ತನೆ ಯದು : ಪ್ರಭವ . . . ರಾಕ್ಷಸ . . . ಅಕ್ಷಯವೆಂದಱುವತ್ತು ತೆಱನಾಗಿ ಹುದು (ವಿವೇಕ. ೨೬೩). ೭. ಒಂದು ಬಗೆಯ ಕತ್ತಾಳೆ : ಹಂದಿಗಳಿಗೆ ರುಚಿಯಾದ ಆಹಾರ ರಾಕ್ಷಸನ (ಕತ್ತಾಳೆ) ಗೆಡ್ಡೆ (ಹಳ್ಳಿಶಾ. ೩೯). [ಸಂ.]

**ರಾಕ್ಷಸಗಣ** (ನಾ). [ಜ್ಯೋತಿ] ನಕ್ಷತ್ರಗಳ ಮೂರುಗಣಗಳಲ್ಲಿ ಒಂದು ; ರಾಕ್ಷಸವರ್ಗಕ್ಕೆ ಸೇರಿದುವೆಂದು ಭಾವಿಸಲಾದ ನಕ್ಷತ್ರಗಳ ಗುಂಪು ; ೯ ಕೃತ್ತಿಕೆ, ಆಶ್ಲೇಷೆ, ಮಖೆ, ಚಿತ್ತೆ, ವಿಶಾಖೆ, ಜ್ಯೇಷ್ಠೆ, ಮೂಲ, ಧನಿಷ್ಠೆ ಮತ್ತು ಶತಭಿಷೆ ಇವು ಒಂಬತ್ತು ಸೇರಿ ರಾಕ್ಷಸಗಣ : ದೇವ ಗಣ ರಾಕ್ಷಸಗಣಂಗಳ್ ಕೂಡಿದೊಡೆ ಅಧಮಂ (ಲೋಕೋಪ. ೨-೮೩ ಟೀಕೆ). ' ದೇವಗಣ ' ಪರಾ. [ಸಂ.]

**ರಾಕ್ಷಸಬಾಳೆ** (ನಾ). ಒಂದು ಬಗೆಯ ಬಾಳೆ ; ರಕ್ಕಸಬಾಳೆ ; ದೆವ್ವ ಬಾಳೆ : ರಾಕ್ಷಸಬಾಳೆಯ ಹೂವಿನ ದಳದಲ್ಲಿರುವ ಕಾಯಿಗಳನ್ನು ಬೇಯಿಸಿ (ಸೂಶಶಾ. ೪-೬೫ ಅಡಿ). [ರಾಕ್ಷಸ + ಬಾಳೆ$_1$ (< ಬಾೞೆ[3])]

**ರಾಕ್ಷಸಭೇದಿ** (ನಾ). ರಾಕ್ಷಸರನ್ನು ನಾಶಪಡಿಸಿದವನು ; ವಿಷ್ಣು : ರಾಕ್ಷಸಭೇದಿಯಂಗುಷ್ಠಸಂಭವೆ . . . ಪರಮಪಾವನೆಯ ನಿರೀಕ್ಷಣೆಗೆಯ್ದ ಮನ್ಮಥನು (ಮೋಹತ. ೬-೩೨). [ಸಂ. ರಾಕ್ಷಸಭೇದಿನ್]

**ರಾಕ್ಷಸಮೌನ** (ನಾ). ಭಯಂಕರವಾದ ನಿಶ್ಶಬ್ದತೆ ; ರಣಮೌನ : ಹಿಫೀಸ್ಟಸ್ ಮತ್ತು ಶಕ್ತಿಯರೊಂದಿಗೆ ಹೊರಡುವವರೆಗೆ ರಾಕ್ಷಸಮೌನ ವನ್ನು ಅವಲಂಬಿಸಿ . . . ನಿಂತಿರಬೇಕು (ಬದ್ಧಶ್ರ. XLVI. ೩೬೩೪). [ಸಂ.]

**ರಾಕ್ಷಸಸತ್ವ** (ನಾ.) [ಕಾಮಶಾ] ಸ್ತ್ರೀಯರ ಹನ್ನೆರಡು ಬಗೆಯ ಸ್ವಭಾವಗಳಲ್ಲಿ ಒಂದು ; ರಾಕ್ಷಸರ ಮನಸ್ಸಿನಂತೆ ಕ್ರೂರವಾಗಿರುವ ಮನಸ್ಸು : ದೇವಸತ್ವ . . . ರಾಕ್ಷಸಸತ್ವ ಕಿನ್ನರಸತ್ವ ಖರಸತ್ವವೆಂಬ ದ್ವಾದಶಸತ್ವದ ಸತಿಯರಿಂ (ವಿವೇಕ. ೦೮೩). [ಸಂ.]

**ರಾಕ್ಷಸಾಂಶಕೆ** (ನಾ). ೧. ರಾಕ್ಷಸೀ ಅಂಶವನ್ನು ಪಡೆದವಳು. ೨. ಕ್ರೂರ ಳಾದ ಹೆಂಗಸು : ಕರಂ ಕೋಪಮುಂ ಪುಸಿಯುಂ ವಿಡಂಬದ ಪಾಱು ಗೆಯ್ಯುನಮುಗ್ರವಿದ್ರೂಪಮುಂ × × × ಕೃಪೆ ರಾಕ್ಷಸಾಂಶಕೆಯೆಂದು ನೀನಱಿ ಧೂರ್ತೆಯಂ (ಮುದಶಿ. ೩-೪). [< ಸಂ. ರಾಕ್ಷಸಾಂಶಿಕಾ]

**ರಾಕ್ಷಸಿ** (ನಾ). ೧. ರಾಕ್ಷಸರ ಹೆಣ್ಣು ; ರಕ್ಕಸಿ : ರಾಕ್ಷಸಿಯೆ ತಿಂಬೆ ನೀನೇಳೆಮ್ಮನು (ಭಾಗ. ೦೦-೭೦-೪೯); ನಖಚಯಂ ಮೊರದವೋಲಗು ರ್ವಾದುದಾ ಸ್ವೈರರಾಕ್ಷಸಿಗೆ (ಶ್ರೀರಾಮಪಾ. ೨೦೯-೪೦೨); ಅವಳಿಗೆ ಆಯುಧ ಧಾರಿಣಿಯರಾದ ವಿಕೃತರಾಕ್ಷಸಿಯರು ಹಗಲೂ ಇರುಳೂ ಕಾವಲಾಗಿದ್ದರು (ವಚಶಾ. ೪೦೬). ೨. (ಅಲಂ) ಕ್ರೂರಳಾದ ಹೆಂಗಸು : ದುಷ್ಟೆ : ಆ ಮೊಮ್ಮಗನನ್ನು ಹಡೆದ ಮೇನಕಿ, ಅವರು ಕ್ಷಮಿಸಲಾರದ ರಾಕ್ಷಸಿ (ಸಮಾಜ. ೪೬೦). ೩. ಒಂದು ಬಗೆಯ ಸಸ್ಯ ; ಕರಿಯ ಕಚೋರ : "ರಾಕ್ಷಸೀ, ಚಂಡಾ . . . ಗಣಹಾಸಕಃ — ೬ ಕರೀಕಚೋರ, ಬಲರಾಕ್ಷಸೀ ಗಡ್ಡೆ" (ಸಿದ್ಧೌಷ. ೦೪೦). ೪. [ಸಂಗೀತ] ಒಂದು ರಾಗದ ಹೆಸರು : ನೀಲೋತ್ಪಳಿನಿ . . . ರಾಕ್ಷಸಿ [ಪಾಠಾಂ. ರಕ್ಕಸಿ] . . . ಇಪ್ಪತ್ತೆರಡು ಕ್ರಿಯಾಂಗದಿಂದಾದ ರಾಗಂಗಳು (ವಿವೇಕ. ೧೮೬). [ಸಂ. ರಾಕ್ಷಸೀ ]

**ರಾಕ್ಷೆ** (ನಾ). ಕೆಂಪುಬಣ್ಣಕ್ಕಾಗಿ ಉಪಯೋಗಿಸುವ ಒಂದು ಬಗೆಯ ಅರಗು ; ಲಾಕ್ಷೆ : "ಲಾಕ್ಷ, ರಾಕ್ಷಾ . . . ದ್ರುಮಾಮಯಃ — ೬ ಅರಗಿನ ಪೆಸರುಗಳು. ಕೆಂಪರಗು" (ಸಿದ್ಧೌಷ. ೨೦೭). [ ಸಂ. ರಾಕ್ಷಾ ]

**ರಾಖಿ** (ನಾ). ಶ್ರಾವಣಶುದ್ಧಪೌರ್ಣಮಿಯಂದು, ಸೋದರತ್ವದ ಸಂಕೇತವಾಗಿ ಕೈಗೆ ಕಟ್ಟುವ ರೇಷ್ಮೆಯ ದಾರ; ರಕ್ಷಾಬಂಧ : ಅವರು ಯಾವನೊಬ್ಬ ಬಲಾಢ್ಯರಾಜನ ಕಡೆಗೆ 'ರಾಖಿ' ಯನ್ನು ಕಳಿಸಿ, ಆತನ ಸಹಾಯವನ್ನು ಯಾಚಿಸುತ್ತಿದ್ದರಂತೆ (ಹಂಪಾ. ೦೨೬); ಆಕೆಯು ರಾಜಪುತ್ರರ "ರಾಖಿ" ಎಂಬ ಪದ್ಧತಿಯಂತೆ ಹುಮಾಯೂನನ ಸಹೋದರತ್ವವನ್ನು ಪಡೆದಿದ್ದಳು (ಭಕ್ತಿಶ್ರೀ. ೦೪೦). [← ಹಿಂ. ಮರಾ. ರಾಖೀ./ಸಂ. ರಕ್ಷಾ]

**ರಾಗ** (ನಾ). ೧. ಬಣ್ಣ ; ರಂಗು : ಮೌಕ್ತಿಕ ಉಂಡ ಜಲಕ್ಕೆ ರಾಗ ಉಂಟೇ ಅಯ್ಯಾ (ಪೋಸಮಾ. ೦೦೩-೪೪). ೨. ಕೆಂಪುಬಣ್ಣ : ತನ್ನ ರಾಗಮಂ ರಾಗಿಗಳ್ಗೆಲ್ಲಂ ಪಚ್ಚುಕೊಟ್ಟಂತೆ ಕೆಂಪು ಪತ್ತುವಿಟ್ಟಾಗಳ್ (ಶಂಕರಾ. ೪-೩೦ ವ); ಅಧಿಕತರ ರಾಗದೀಧಿತಿನಿಧಾನಮೆನಲೆಸೆವ ಚಕ್ರಚರಣಮಂ ಬುಜಮಾ ಮಧುಕೈಟಭಮದಮರ್ದನರುಧಿರಾರುಣಚಕ್ರಚರಣಮಂ ನೆನೆಯಿ

ಸುಗುಂ (ಕಾದಂಪೂ. ೨೭); ಎಸೆವಲತಗೆಯಿಂ ಪೊರೆದ ಮೆಲ್ಲಡಿಯ ನಡೆಯ ಬೆಡಂಗಿನೊಂದು ಭಾವದಿಂ ನೆಲೆವಟ್ಟಿಯ ಕಲ್ಗಳ್ಗೆ ರಾಗಮನೊಡರ್ಚುಮುಂ (ರಾಮಾಶ್ವ. ೩೯-೯). ೩. ಒಲುಮೆ ; ಅನುರಾಗ ; ಆಸಕ್ತಿ : ಬಾಳರವಿ ತನ್ನಯ ಸೋಗಿಲ ಮೇಗೆ ರಾಗದಿಂ ಪೊಡವಟ್ಟುದಂ. . . ಸತಿ ಕಂಡೊಸೆದಳ್ ನಿಶಾಂತದೊಳ್ (ಶಂಕರಾ. ೦-೦೯೦); ರಾಗವೇ ಮೂಡಲು ಯೋಗವೇ ಬಡಗಲು ರೋಗವದು ಶುದ್ಧ ಪಡುವಲು ತೆಂಕಲು ಭೋಗದ ಬೀಡು (ಸರ್ವಜ್ಞ. ೦೬೦೩). ೪. ಹಿಗ್ಗು; ಸಂತೋಷ : ಅಱದೆಱೆವಟ್ಟು ರಾಗದ ತವರ್ಮನೆ (ಎಕ. IV, ಹುಣಸೂ. ೦೩೭-೪೩; 1162) ; ಲೋಕಪಿತನೊಲ್ದು ಚತುರ್ಮುಖನೀಗೆ ರಾಗಮಂ (ಜಗಪ. ೦-೨). ೫. ಚೆಲುವು; ಸೊಬಗು. ೬. ವೀರ್ಯ ; ರೇತಸ್ಸು : ರಾಗವೆಂಬುದು ರೇತಸ್ಸಿಗೆ ಪೆಸರು (ಕಾಮಶಾ. ೨೪೨). ೭. [ಸಂಗೀತ] ಇಂಪಾಗುವಂತೆ ಹೊಂದಿಸಿದ ಸ್ವರಗಳ ಮೇಳೈಕೆ : ಶ್ರೋತೃವಿನ ಮನಸ್ಸಿಗೆ ರಂಜನೆಯುಂಟಾಗುವ ರೀತಿಯಲ್ಲಿ ಸ್ವರಗಳು ಮೇಳೈಸಿದರೆ ರಾಗವಾಗುತ್ತದೆ. ರಂಜನೆಯನ್ನುಂಟು ಮಾಡುವುದು ರಾಗದ ಗುಣ (ಸಂಗೀಶಂ. ೨೨) ; ಭೈರವಿ ಪೂರ್ವಯಾಮದ ರಾಗ. ಸೂರ್ಯ ಮೂಡುವ ಮೊದಲು . . . ಹಾಡಿದರೆ ಆ ರಾಗ ಸಿದ್ಧಿಸುತ್ತದೆ (ಸಂಗೀಶ. ೦೪೦). ೮. [ಶೈವ] ಶೈವಾಗಮದ ಮೂವತ್ತಾರು ತತ್ತ್ವಗಳಲ್ಲಿ ಒಂದು : ಶಿವ, ಶಕ್ತಿ . . . ವಿದ್ಯಾ, ರಾಗ, ನಿಯತಿ . . . ಭೂಮಿಯ (ಇವು ಶೈವಾಗಮದಲ್ಲಿರುವ ತತ್ತ್ವ ಸಂದೋಹಗಳು) (ಶಾರದ. ೭೩ ಅಡಿ).

**ರಾಗತೆಗೆ** = ೧. (ಆಲಂ) ಅಳು ; ರೋದಿಸು : ಆ ಮಗು ರಾಗತೆಗೆ ಯಿತು ಅಂದರೆ ಅದು ನಿಲ್ಲಿಸುವುದಿಲ್ಲ (ರೂಢಿ). ೨. ಅಪಸ್ವರ ನುಡಿ; ಅಪಶಕುನ ಹೇಳು : ಒಳ್ಳೆಯದಕ್ಕೆ ನೀನು ರಾಗತೆಗೆಯಬೇಡ, ಸುಮ್ಮ ನಿರು (ರೂಢಿ). ೩. ನೆವ ತೆಗೆ ; ತಕರಾರು ಮಾಡು : ಗಂಡಿನವರು ಒಪ್ಪಿಗೆ ಕೊಡದೆ ರಾಗತೆಗೆದರು (ರೂಢಿ). [ಸಂ.]

**ರಾಗಂಗೆಡು**, ರಾಗಗೆಡು (ಕ್ರಿ). ೧. ಪ್ರೀತಿಯಿಲ್ಲವಾಗು ; ಆಸಕ್ತಿ ಯಿಲ್ಲವಾಗು : ಮನದೊಳ್ ರಾಗಂಗೆಟ್ಟು ಕೆಲಂಬರ್ ಮೂಗಂ ಮುಚ್ಚಿ ದರ್ (ಧರ್ಮಾಮೃ. ೪-೦೩೯). **ರಾಗಗೆಡು** : ೨. ಸಂತೋಷವಿಲ್ಲ ವಾಗು : ಬಳಿಕ ಮರಳಿದು ರಾಗಗೆಟ್ಟಾ ಲಲನೆಯರು ಗೋಕುಲಕೆ ಪರಿ ಜನವುಲಿಯಲಾ ನಿತ್ಯಾತ್ಮರಾಮರು ನಡೆದರುರವಣಿಸಿ (ಐಭಾಗ. ೧೦-೩೪-೫೦). [ರಾಗ + ಕೆಡು$_1$]

**ರಾಗಂಬೆಱು** (ಕ್ರಿ). ಪ್ರೀತಿಯನ್ನು ಹೊಂದು ; ಒಲುಮೆಯನ್ನು ತಾಳು : ಪುಂಸ್ನ ಪುತ್ರ್ಯಕ್ಕೆ ಇಂದುಮತೀಳಿಯ ಬೆಸನದಿಂದವೆ ಬಂದ ನಂದೀಶನು ಹೃದಯದೊಳಮುಂದರಾಗಂಬೆತ್ತು ತಾನೆಯ್ತಪ್ಪ ಬರವಿಂಗೆ (ಬಸವ. ೨-೫೭). [ರಾಗ + ಪೆಱು$_1$]

**ರಾಗಂಬೊರೆ** (ಕ್ರಿ). ಬಣ್ಣದಿಂದ ಲೇಪಿತವಾಗು ; ವರ್ಣಮಯ ವಾಗು : ರಾಜಕಂ ಬೇಗಮೆಱಗೆ ತನ್ಮಣಿಮುಕುಟಸ್ಫುರಣೆಗಳಿಂ ಧರೆ ರಾಗಂ ಬೊರೆದಂತೆಸೆದತ್ತು ರಾಜಭವನಾಂಗಣದೊಳ್ (ಶಾಂತಿಪು. ೩-೧೧೩). [ರಾಗ + ಪೊರೆ$_2$]

**ರಾಗಗೆಡು** ' ರಾಗಂಗೆಡು ' ನೋ.

**ರಾಗಟೆ** ' ರಾಕಡಿ ' ನೋ.

**ರಾಗಧರ** (ನಾ). ಒಂದು ಬಗೆಯ ಪಕ್ಷಿ : ಟಿಟ್ಟಿಭ ಕುಕಿಲ ತುಱುಮೆಗಣ್ಣಂ ಹಂಸೆ ರಾಗಧರನೆಂಬ ಪಕ್ಷಿಗಳ ದನಿಯಿಂ ಕರೆಯಲು (ಹಕಶಾ. ೫-೪೨). [?]

**ರಾಗಮಾಲಿಕೆ** (ನಾ). ೧. ಒಂದು ಬಗೆಯ ವಾದ್ಯ ; 'ಮೌತ್ ಆರ್ಗನ್' ಎಂಬ ವಾದ್ಯ. ೨. [ಸಂಗೀತ] ಒಂದು ಕೀರ್ತನೆಯ ಹಲವು ಚರಣ ಗಳಿಗೆ ಬೇರೆಬೇರೆ ರಾಗಗಳನ್ನು ಅಳವಡಿಸಿ ಹಾಡುವ ಒಂದು ಪ್ರಕಾರ : ಒಂದು ಪಲ್ಲವಿಯನ್ನು ರಾಗಮಾಲಿಕೆಯಲ್ಲಿ ಕಟ್ಟುವುದು ಸಾಧ್ಯ (ಸಂಗೀಶ. ೩೯) ; ಇವುಗಳಲ್ಲಿ ಒಂದೊಂದು ಭಾಗವೂ ಪ್ರತ್ಯೇಕರಾಗಗಳಲ್ಲಿ ಹಾಡಲ್ಪಡಲು ಪ್ರಾರಂಭವಾಗಿ ರಾಗಮಾಲಿಕೆಯೇ ಆಯಿತು (ಸಂಗೀಶಂ. ೭೭). [ಸಂ. ರಾಗಮಾಲಿಕಾ]

**ರಾಗಮಾಲಿನಿ** (ನಾ). ಒಂದು ಬಗೆಯ ತಂತೀವಾದ್ಯ : ವಿಪಂಚಿಕೆ . . . ರಾಗಮಾಲಿನಿ . . . ಮೂವತ್ತುಮೂಱು ತಂತೀವಾದ್ಯಂಗಳು (ವಿವೇಕ. ೨೩೭). [ಸಂ. ರಾಗಮಾಲಿನೀ]

**ರಾಗರಸ** (ನಾ). ಪ್ರೇಮಾನುರಾಗ ; ಪ್ರಣಯಾಭಿಲಾಷೆ : ಶ್ರೀಗೆ ಕುಳಸದನಮೆನೆ ತೊಳಪ ಮಣಿಭವನದೊಳ್ ರಾಗರಸವೊದವೆ ಸರಸಿರುಹ ಸಮುವದನದೊಳ್ (ಆದಿಪು. ೭-೨೭ ರಗಳೆ). [ಸಂ.]

**ರಾಗರಸಿಕ** (ನಾ). ಪ್ರೀತಿಯಲ್ಲಿ ಆಸಕ್ತನಾದವನು ; ರಸಜ್ಞ : ಅನ್ನದ ಸಮಸ್ಯೆಯನ್ನು ಬಿಡಿಸಿದವ ರಾಗರಸಿಕನಾಗಬಲ್ಲ (ಸಮಶೀ. ೩೧೭). [ಸಂ.]

**ರಾಗವಿಡಿ** (ಕ್ರಿ). ಬಣ್ಣವೇರು ; ಕಾಂತಿಗೂಡು : ಸೋಗೆದುಱುಬಿನ ಶೃಂಗಾರದಾಭರಣದ ರಾಗವಿಡಿದ ತನುಲತೆಯ ಪೂಗಣೆಯನ ಮಸೆವಲಗಿ ನಂತೆಸೆವಳು (ಕಂನವ. ೨೦-೭೯). [ರಾಗ + ಇಡಿ$_2$]

**ರಾಗಾಂಧತೆ** (ನಾ). ಮೋಹದಿಂದ ಮುಂದನ್ನು ಕಾಣದಿರುವಿಕೆ : ವ್ಯಾಮೋಹದಿಂದ ವಿವೇಕರಹಿತವಾಗಿರುವಿಕೆ : ಸಾಂಸಾರಿಕವಿಳಾಸಂ . . . ಶಾಶ್ವತಮೆಂದೆ ಬಗೆದು ರಾಗಾಂಧತೆಯಿಂ ಗತಿಗಿಡುವರೇಂ ವಿಚಿತ್ರಮೊ ಕರ್ಮಂ (ಚಂದ್ರಪ್ರ. ೪-೫೨). [ಸಂ. ರಾಗಾಂಧತಾ]

**ರಾಗಾಧರೆ** (ನಾ) . ಕೆಂಪಾದ ತುಟಿಯುಳ್ಳವಳು ; ಬಿಂಬಾಧರೆ : ಪಾಡುವ ರಾಗಾಧರೆಯರ ರಾಗರಸಪೂರಂ ಮೇರೆದಪ್ಪಿ ಮೇಲ್ವರಿಯೆ (ರಾಜಶೇ. ೦೩-೪೩ ವ). [ಸಂ. ರಾಗಾಧರಾ]

**ರಾಗಾಲಾಪನ** (ನಾ). [ಸಂಗೀತ] ನಿರ್ದಿಷ್ಟರಾಗವನ್ನು ಸಾಹಿತ್ಯ ವಿಲ್ಲದೆ ವಿಸ್ತಾರವಾಗಿ ಹಾಡುವುದು : ರಾಗಾಲಾಪನಲಾಲಸಂ ನವ ನವೋತ್ಫುಲ್ಲಾನನಾಂಭೋರುಹಂ (ಶಕಟ. ೪-೦೩೦) ; ರಾಗಾಲಾಪನಪದ್ಧತಿ ಯಲ್ಲಿ ಎರಡು ಕ್ರಮ—೧. ಆಕ್ಷಿಪ್ತಕ್ರಮ, ೨. ರಾಗವರ್ಧಿನಿ ಕ್ರಮ (ಸಂಗೀತಂ. ೨೯). [ಸಂ.]

**ರಾಗಾಲಾಪನೆ** (ನಾ). = ರಾಗಾಲಾಪನ : ಮಹಾವೈದ್ಯನಾಥಅಯ್ಯರ್ ಅವರು ತಮ್ಮ ಎಳೆಯ ವಯಸ್ಸಿನಲ್ಲಿಯೇ ರಾಗಾಲಾಪನ ಮತ್ತು ಪಲ್ಲವಿ ಯನು ಹಾಡುವ ಸಾಮರ್ಥ್ಯವನ್ನು ಪಡೆದುಕೊಂಡಿದ್ದರು (ಸಂಗೀಶ. ೫). [ ಸಂ. ರಾಗಾಲಾಪನ ]

**ರಾಗಾವಲಂಬ** (ನಾ). ರಾಗದ್ವೇಷಗಳಿಗೆ ಒಳಗಾದವನು; ವಿಷಯಾಸಕ್ತ : ನೀವು ಸುಹೃದಯರಿಂದು ದುರ್ಜನರಾವು ನೀವ್ವೀರಾಗಿಗಳು ರಾಗಾವಲಂಬರು ನಾವಲೇ (ಕುವ್ಯಾಸ. ೦೩-೩೭). [ಸಂ.]

**ರಾಗಾವಳಿ** (ನಾ). ಒಂದು ಬಗೆಯ ಕೆಂಪುಬಣ್ಣದ ಬಟ್ಟೆ : ಪೊಪ್ಪಳಿಯ ತಿಗುಳಿ ರಾಗಾವಳಿಯ ರತ್ನಾವಳೀಧಾವಳ್ಯ ದಿವ್ಯತಾರಾವಳಿಯ ಗಗನ ಮಾಲಾವಳಿಯ ವಿರುಪ ನೇತ್ರಾವಳಿಯ ಮುಖ್ಯನಾನಾವಿಧದ ಸೀರೆಗಳ . . . ಬೇಹನಿತ ತಗದು (ಪವಮೋ. ೦೭-೩೦). [ <ರಾಗ + ಪಳಿ$_4$ (<ಪಟ್ಟಿ$_5$ ) ]

**ರಾಗಾವಿಲ**, ರಾಗಾವಿಳ (ಗು). ೧. ಕೆಂಪುಬಣ್ಣದಿಂದ ಕೂಡಿದ. ೨. ಮೋಹದಿಂದ ಮಲಿನವಾದ ; ಅತಿಯಾದ ಮೋಹಕ್ಕೆ ಒಳಗಾದ : ಯೋಗಂ ಮೂಗಾವುದವೆನೆ ರಾಗಾವಿಲಚಿತ್ತರಾಗಿ ಕುತ್ತದ ಬೇರಂ ನೀಗಲ್ಕರಿ ಯದರುಂ ನಿಜರೋಗಕ್ಕೌಷಧಮನೀತ್ರನೆಡೆಯೊಳ್ ಪಡೆವರ್ (ವಸ್ತುವಂ. ೩೦). (ನಾ). ೩. ಕೆಂಪುಬಣ್ಣದಿಂದ ಕೂಡಿದವನು. ೪. ಮೋಹದಿಂದ ಮಲಿನವಾದುದು ; ಅತಿಮೋಹಕ್ಕೆ ಒಳಗಾದುದು : ರಾಗದ್ವೇಷ ನಿಬಂಧಮಪ್ಪ ಕೃತಿಯಂ ನಿರ್ಬಂಧದಿಂ ಬಂಧಮಿಂಬಾಗಿರ್ಪಂ ಪೊಸತಾಗೆ ಪೇಳ್ದಬಿಲಮುಂ ರಾಗಾವಿಲಂ[ಶಾಂಕಾಂ.೪೦] ಮಾಟ್ಟಿ ವಿದ್ಯಾಗರ್ವಗ್ರಹ

ಟಂಡಿತರ್ (ಶಂಶಾಪು. ೦-೩೪). ೫. ಮೋಹಕ್ಕೆ ಒಳಗಾದ ವ್ಯಕ್ತಿ : ಮೋಹದಲ್ಲಿ ತೊಡಕಿಕೊಂಡವನು : ರಾಗಾವಿಲ[ಶಾಕಾಂ. ೪]ರಾಪದ್ಗತ ರಾಗದರಾರೆಂದು ' ದಶರುಖಂಗಳುಂ ಕ್ರಮವೊಲ್ ಆಗಸದಿನಪರಸಂಧ್ಯಾ ರಾಗಾವಿಲ[ಶಾಕಾಂ. ೪]ನರ್ಕನಪರವಾರಿಧಿಗಿಳಿದಂ (ಶಂಶಾಪು. ೯-೧೮೮).

**ರಾಗಾವಿಳ** : ೩, ೫ : ಸತತಂ ರಾಗಾವಿಳಂ ಪೀಡಿತಕುವಲಯನುನ್ಮಾರ್ಗ ಸಂಸಕ್ತನುನ್ಮೀಲಿತಸಾರ್ವ್ರತ್ವಂ ಸದ್ದರ್ಶನರುಚಿ ವಿರದಂಡಕ್ರಿಯಂ ತಾನೆನಿಪ್ಪಾ ಕ್ಷಿತಿಪಂಗೆ (ಶಂಪ್ರಕ. ೨-೪೩). [ಸಂ.]

**ರಾಗಾವಿಳ** ' ರಾಗಾವಿಲ ' ನೋ.

**ರಾಗಿ**$_1$, ರಾಘಿ (ನಾ). ಒಂದು ಬಗೆಯ ಏಕದಳಧಾನ್ಯ : "ಧೂಳಿಕಂ ರಾಗಿಯದು" (ಮಂಗರಾ. ೧೦೦-೪) ; ವರಕೋಷ್ಠ ರಾಮಾತಂಗಳಸರೆದೊಂದಾಗಿರಲು ಪಾಲೊಳೇವುದು ಮತ್ತಂ ಪರಿಪರಿಪ್ರದಾಕ್ಷಣಂ ತಾಂ ಧರೆಯೊಳ್ ರಾಗಿಯ ವಿಷಂಗಳಂ (ಜಸಾವ. ೨-೦೩೬) ; ರಾಗಿ ತಂದಿರ್ಪರ್ ಭಿಕ್ಷಕೆ ರಾಗಿ ತಂದಿರ್ಪರ್ (ಪುರಂದ. ೦-೭೯ ಪಲ್ಲವಿ) : ರಾಗಿಯನು ಉಂಬುವ ನಿರೋಗಿ ಎಂದೆನಿಸುವನು ರಾಗಿಯು ಭೋಗಿಗಳಿಗಲ್ಲ ಬಡವರಿಗಾಗಿ ಬೆಳೆದಿಹುದು (ಸರ್ವಜ್ಞ. ೨೦೨೨). **ರಾಘಿ** : ವ್ಯವಸಾಯವ ಮಾಡಿ ರಾಘಿಯ ಬಿತ್ತುವ ಹೊಲ (ಸೌಇಎ. ೦೯೩೪, ಶಿಂಗಪೂರು. ೦೩೬-೦೦ ; 1419).

**ರಾಗಿಬೀಸು** = ೧. ರಾಗಿಯನ್ನು ಬೀಸಿ ಹಿಟ್ಟು ಮಾಡು : ರಾಗಿ ಬೀಸುವಾಗ, ಗದ್ದೆ ನಾಟಿಮಾಡುವಾಗ . . . ಹಾಡುವ ಹಾಡುಗಳೆಲ್ಲಾ ಅವಳು ಕಲಿತವುಗಳೇ (ನಮ್ಮೂರು. ೨೩) ; ರಾಮರಾಜ್ಯವಾದರೂ ರಾಗಿ ಬೀಸುವುದು ತಪ್ಪಲಿಲ್ಲ (ಗಾದೆ). ೨. (ಆಲಂ) ಅನುಭವ ಪಡೆ : ಪಕ್ವಗೊಳ್ಳು : ನೀನಿನ್ನೂ ಒಹಳ ರಾಗಿಬೀಸಬೇಕು (ರೂಢಿ). **ರಾಗಿಮಾಲ್ಟ್** = ರಾಗಿಯಿಂದ ತಯಾರಿಸುವ ಮಸಿ, —ಶಾಯಿ : ರಾಗಿಯನ್ನು ಹುರಿದು ಸೀಯಿಸಿ ಪುಡಿಮಾಡಿ ನೀರಿನಲ್ಲಿ ಕಲಸಿ ಅದಕ್ಕೆ ಗೋಂದನ್ನೂ ಸಕ್ಕರೆಯನ್ನೂ ಅಂಟಿಗಾಗಿ ಸ್ವಲ್ಪ ಮಿಶ್ರಮಾಡಿ ಆದನ್ನು ಬರವಣಿಗೆಗೆ ಉಪಯೋಗಿಸುತ್ತಿದ್ದರು. ಇದಕ್ಕೆ ರಾಗಿಮಸಿ ಎಂದು ಹೆಸರು (ಕಪ್ರಸಂ. ೪೪). **ರಾಗಿಮುದ್ದೆ** = ರಾಗಿಯ ಹಿಟ್ಟನ್ನು ಬೇಯಿಸಿ ಮಾಡುವ ಮುದ್ದೆ : ಹಿಟ್ಟು : ರಾಗಿಮುದ್ದೆ ಮೈಗೆ ತುಂಬ ಪುಷ್ಟಿಯನ್ನು ಕೊಡುವ ಆಹಾರ (ರೂಢಿ). **ರಾಗಿಯ ಪದ** = ರಾಗಿ ಮುಂತಾದುವನ್ನು ರಾಗಿಕಲ್ಲಿನಲ್ಲಿ ಬೀಸುವಾಗ ಹಾಡುವ ಹಾಡು : ಮುಂಗೋಳಿ ಕೂಗಿತೆಂದರೆ ನನ್ನೂರಿನ ಎಲ್ಲಾ ಮನೆಗಳಲ್ಲಿಯೂ ರಾಗಿಕಲ್ಲಿನ ಶ್ರುತಿಯೊಡನೆ ಸೇರಿ ಕೇಳಿಬರುವ ರಾಗಿಯ ಪದಗಳು (ನಮ್ಮೂರು. ೨೦). **ರಾಗಿರೊಟ್ಟಿ** = ರಾಗಿಯ ಹಿಟ್ಟಿನಿಂದ ತಯಾರಿಸುವ ರೊಟ್ಟಿ : ರಾಗಿಹಿಟ್ಟು, ರಾಗಿರೊಟ್ಟಿ, ರಾಗಿದೋಸೆ ಇತ್ಯಾದಿ . . . ಊಟ ಮಾಡುವುದರಿಂದ ದೇಹಕ್ಕೆ ಕ್ಯಾಲ್ಸಿಯಂ ದೊರಕುತ್ತದೆ (ಗೃಹವಿ. ೨೦) ; ಹೆಂಗಸರು ರಾಗಿರೊಟ್ಟಿಗಳನ್ನು ತಟ್ಟಿ ಚಟ್ನಿ ಅರೆದುಹಾಕಿ ಬುತ್ತಿ ಕಟ್ಟಿಕೊಡುವರು (ಹುಬ್ಬಿಹ. ೦೯). **ರಾಗಿಹಿಟ್ಟು** = ೧. ರಾಗಿಯನ್ನು ಬೀಸಿದಾಗ ಬರುವ ಪುಡಿ, — ಹಿಟ್ಟು : ಮನೆಯಲ್ಲಿ ರಾಗಿಹಿಟ್ಟು ಮುಗಿದಿದೆ (ರೂಢಿ). ೨. = ರಾಗಿಮುದ್ದೆ : ರಾಗಿಹಿಟ್ಟು, ರಾಗಿರೊಟ್ಟಿ, ರಾಗಿದೋಸೆ ಇತ್ಯಾದಿ . . . ಊಟಮಾಡುವುದರಿಂದ ದೇಹಕ್ಕೆ ಕ್ಯಾಲ್ಸಿಯಂ ದೊರಕುತ್ತದೆ (ಗೃಹವಿ. ೨೦).

[ದೇ. ॥ ತಮಿ. ಇರಾಕಿ ; ಮಲ. ರಾಗಿ, ಮುತ್ತಾರಿ ; ತುಳು. ತೆಲು. ರಾಗಿ ; ಕೊಡ. ಎರಿ. / ಸಂ. ರಾಗಾ, ರಾಗೀ ]

**ರಾಗಿ**$_2$ (ನಾ). ೧. ಬಣ್ಣವುಳ್ಳದು ; ರಾಗಯುಕ್ತವಾದುದು. ೨. ಕೆಂಪುಬಣ್ಣ. ೩. ಬಣ್ಣಹಾಕುವಿಕೆ ; ಚಿತ್ರಬಿಡಿಸುವಿಕೆ. ೪. ರಾಗೋದ್ರೇಕವನ್ನು ಹೊಂದಿರುವಿಕೆ. ೫. ಸಂತೋಷವನ್ನು ಕೊಡುವಂತಹುದು. ೬. ಅತಿಯಾಗಿ ಮೋಹಗೊಳ್ಳುವಿಕೆ, — ಇಚ್ಛಿಸುವಿಕೆ. ೭. ಬಣ್ಣಹಾಕುವವನು ; ಚಿತ್ರಗಾರ. ೮. ಪ್ರೇಮಿ ; ಅನುರಕ್ತ : ಆಗಳ್ ತನ್ನ ರಾಗಮುಂ ರಾಗಿಗಳ್ಗೆಲ್ಲಂ ಪಚ್ಚುಕೊಟ್ಟಂತೆ ಕೆಂಪು ಪತ್ತು ವಿಟ್ಟಾಗಳ್ (ಶಂಶಾ. ೪-೩೦ ವ) ; ಬಂದನೆಂತೆಂತಕ್ಕೆ ಅಗಲಲಾಱದೆ ರಾಗಿ ಸಂಗಮನ ಕರುಣವೇ ತನಗೆ ಬೆಂಬಲವಾಗಿ (ಬಸರ. ೩-೪೪). ೯. ವಿಷಯ ಲಂಪಟ ; ವಿಷಯಾಸಕ್ತ : ನಿನ್ನನು ಭಜಿಸಲಱಿಯದ ರಾ[ಶಾಕಾಂ. ಯೋ]ಗಿಗಳ ಮಾತೇನು (ಹಂಶಾ. ೦೬) [ಸಂ. ರಾಗಿನ್]

**ರಾಗಿಕಲ್ಲು** (ನಾ). (ರಾಗಿ ಮುಂತಾದ ಧಾನ್ಯಗಳನ್ನು) ಬೀಸಿ ಹಿಟ್ಟು ಮಾಡುವ ಕಲ್ಲು : ಬದಿರೆ ಬೆಟ್ಟದ ಮೇಲೆ ಚದುರ ರಾಗಿಕಲ್ಲು ಮದನಾರಿ ನೆಂಬೊ ಹಿಡಿಗೂಟ ಹಿಡುಕೊಂಡು ಶಿವನ ಪಾಡ್ಯಾಳೆ ಸಿರಿಗೌರಿ (ಜಾಪದ. ೬೨); ಮುಂಗೋಳಿ ಕೂಗಿತೆಂದರೆ ನನ್ನೂರಿನ ಎಲ್ಲಾ ಮನೆಗಳಲ್ಲಿಯೂ ರಾಗಿಕಲ್ಲಿನ ಶ್ರುತಿಯೊಡನೆ ಸೇರಿ ಕೇಳಿಬರುವ ರಾಗಿಯ ಪದಗಳು (ನಮ್ಮೂರು. ೨೦).

**ರಾಗಿಕಲ್ಲು ಪದ** = ರಾಗಿ ಮುಂತಾದುವನ್ನು ರಾಗಿಕಲ್ಲಿನಲ್ಲಿ ಹಾಕಿ ಬೀಸುವಾಗ ಹಾಡುವ ಹಾಡು : ರಾಗಿಕಲ್ಲುಪದ — ಶರಣೆಂಬೆ ಶಿವನಿಗೆ ಶರಣೆಂಬೆ ಗುರುವಿಗೆ ಶರಣೆಂಬೆ ಶಿವನ ಮದದೀ(ಗೆ) (ಜಾಗೀತ. ೨).

[ ರಾಗಿ$_1$ + ಕಲ್ಲು ( < ಕಲ್$_3$ ) ]

**ರಾಗಿಣಿ** (ನಾ). ೧. ಪ್ರೀತಿಯುಳ್ಳವಳು ; ಅನುರಕ್ತೆ. ೨. [ಸಂಗೀತ] ಹಿಂದೂಸ್ಥಾನೀ ಸಂಗೀತದಲ್ಲಿ ಬರುವ ಸ್ತ್ರೀರಾಗ : ಋತುಗಳ ಹೆಸರು ಹೊಂದಿರುವ ಆರು ರಾಗಗಳು, ಅವಕ್ಕೆ ಆರು ರಾಗಿಣಿಯರು ಕಲಾವಿದನ ಪ್ರತಿಭಾಕಲ್ಪನೆಗೆ ಸಾಕಷ್ಟು ಉದ್ದೀಪನವಸ್ತುಗಳಾಗಿವೆ (ಶಾರದ. ೫೩೦) ; ಅನೇಕ ರಾಗಗಳು ಇವುಗಳಲ್ಲಿ ಹುಟ್ಟಿ 'ರಾಗಿಣಿ'ಗಳೆಂದು ಹೆಸರಾಂತಿವೆ (ಸಂಗೀಶಂ. ೧೬೨). [ಸಂ. ರಾಗಿಣೀ]

**ರಾಗಿಸು** (ಕ್ರಿ). ೧. ಕೆಂಬಣ್ಣವೇರು ; ಕೆಂಪಾಗು : ಸೌಕುಮಾರ್ಯ ವೇಱಿ ಮೆಲ್ಲಡಿಗಳು ಮೆಲ್ಲನೆ ರಾಗಿಸೆ ಕಿಳ್ಪೊಡೆ ತ್ರಿವಳಿಗಳಂ ಬೀಳ್ಕೊಡ (ಬಸರ. ೦೦-೯೭). ೨. ಕೆಂಪಾಗುವಂತೆ ಮಾಡು ; ರಂಗೇರಿಸು : ಕಂಡಾಕ್ಷಣವೆ ತಕ್ಕೈಸಿ ಮುಂಡಾಡಲಿರ್ಪರ ಪರಿತೋಷ ಪೂರ್ವದಿಙ್ಮಂಡಲವನು ರಾಗಿಸಿತು (ಮೋಹತ. ೨೯-೫೬). ೩. ವಿಶ್ವಾಸವಿಡು ; ಆಸಕ್ತಿ ಹೊಂದು : ಗುರುಗಳ ಪೊಗಟಿಗೆ ರಾಗಿಸಿ ಸಂತೋಷಂಬಟ್ಟು (ಪಜ್ಞಾರಾ. ೬೨-೨೩). ೪. ಪ್ರೀತಿಯನ್ನು ತೋರು ; ಪ್ರೀತಿಸು : ಬಡವಂ ಮಾಣಿಕಮಂ ಕಂಡಡೆ ರಾಗಿಸುವಂತೆ (ಸಮುಶ. ೪-೩೦) ; ಐದೆ ರಾಗಿಸಿ ದೆಸೆಗೀಗಳೀಗಳುಲಿದಪ್ಪುದು ಕೋಗಿಲೆ (ಕಾವ್ಯಾವ. ೩೭೭); ತಾಗದ ಚುಂಬನಂ . . . ಮಿಗೆ ರಾಗಿಸುವ ಮನಂ ಮನೋಹರಂ ಜಾರೆಯರೊಳ್ (ಗಂಶ. ೪-೯೩). ೫. ಸಂತೋಷವನ್ನುಂಟುಮಾಡು : ಕಂಪಿಡುತೆ ಕನಕರುಚಿದಾಳುತ್ತುಂ ರಾಗಿಸುತೆ ರಂಜಿಸುತೆ ಸೊಂಪಾಗಿರ್ದುವು ಕಣ್ಗೆ ಗಂಧಶಾಲಿವನಂಗಳ್ (ರಾಜಶೇ. ೨-೦೦). ೬. ಬಯಸು ; ಅಪೇಕ್ಷಿಸು : ರಾಗಿಸಿ ರಾಸಭನಿರದೆತಿ ವೇಗದಿನಾ ಸರಿಯ ಪಿಂದುಪಿಂದನೆ ಬಂದಂ (ಶಂಶಶಂ. ೨೯೩-೪೦೩).

[ರಾಗ + — ಇಸು$_3$]

**ರಾಗುಟಿ** ' ರಾಕಡಿ ' ನೋ.

**ರಾಗೋಪಗೂಢಕ** (ನಾ). [ಕಾಮಶಾ] ಒಂದು ಬಗೆಯ ಚುಂಬನ : ಒಳದುಟಿಯನೊತ್ತಿ ಪಲ್ಗಳೊಳ್ಕೌಂಕಲದು ಮನಂಗೊಳಿಪ ರಾಗೋಪಗೂಢಕ [ಶಾಕಾಂ. ನ]ಮೆನಿಪ್ಪುದು (ಜಪವ. ೭-೨೯). [ಸಂ.]

**ರಾಘಿ** ' ರಾಗಿ$_1$ ' ನೋ.

**ರಾಘೆ** (ನಾ). ಕುದುರೆಯನ್ನು ಹತ್ತಲು, ಅದರ ಮಗ್ಗುಲಲ್ಲಿ ನೇತು ಬಿಟ್ಟಿರುವ ಬಳೆ ; ರಿಕಾಪು ; ಅಂಕವಣಿ : ಅಶ್ವವಂ ಬೇಗದಿಂ ಬೆಂಗ ವಾಯ್ದು ರಾಘೆಯೊಳ್ಕೌಂಕಿ ವಾಘೆಯೊಳ್ ನಿಲಿಸಿ (ಗಂಶ. ೨-೦೦೩ ವ); ಗರುವ ಜಾತ್ಯಶ್ವಗೊಂದೇ ರಾಯರಾವುತನ ರಾಘೆ ವಾಘೆಯೆ ಸಾಲದೇ (ಪ್ರಭುಲೀ. ೦೩-೭೦). [← ತೆಲು. ರಾಗೆ]

**ರಾಘೋಲು** ' ರಾಯಗೋಲು ' ನೋ.

**ರಾಚಮಲ್ಲ** (ನಾ). ಒಬ್ಬಾತನ ಹೆಸರು ; P ತಲಕಾಡಿನ ಗಂಗವಂಶದ ಕೆಲವು ಅರಸರ ಹೆಸರು : ಸೊಬಂಬಿವಡಿಗ ರಾಚಮಲ್ಲ[ಂ] ಮಯಿಸ್ವಡಿ ಗುಂಡಿಗೆಗು[ಳ] ಎನಿಬರು ಸಮಸ್ತಬಲಂಬೆಜೆಂಸಿ ಬಿಟ್ಟೊಡೆ (ಎಇ. XXIV. ೦೯೦-೬; 885). [ರಾಚ್ಯ₀ (P ← ಸಂ. ರಾಜನ್) + ಮಲ್ಲ]

**ರಾಚಮಲ್ಲಗಾವುಂಡ** (ನಾ). ಒಬ್ಬಾತನ ಹೆಸರು : ರಾಚಮಲ್ಲಗಾವುಣ್ಡನು ಸಿಜಿನುಂ ಗಂಗಗಾವುಣ್ಡನುಂ . . . ಸಾಕ್ಷಿ (ಎಇ. XII, ಗುಬ್ಬಿ. ೬೦-೯೭; 812). [ರಾಚಮಲ್ಲ + ಗಾವುಂಡ]

**ರಾಚಮ್ಮ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಪೆಮ್ಮಾರ್ಡಿಯ ಮಸೆವ ಗತಿ ನೀಲಬ್ಬೆಯ ಮಗಂ ರಾಚಮ್ಮನ ಧರ್ಮ್ಮ (ಎಇ.III. ನಂಜನ. ೦೩೯-೨; 970). [ರಾಚ್ಯ₀ (P ← ಸಂ. ರಾಜನ್) + ಅಪ್ಪ₁]

**ರಾಚು** (ಕ್ರಿ). ೧. (ರಭಸದಿಂದ) ಚೆಲ್ಲು ; ಎಸೆ ; ಎರಚು : ಅನಲ ಹೊಟ್ಟನು ತಳಿದುವುರಿಯೊಳು ರಾಚುವುದುಯೆನಗೊಲುಮೆಯುಪಚರ ನಾರಿಯರು ಅಹುದೆಂದೆವಳಿಂದುಮುಖೀ (ಜನಪ. ೨೯-೩). ೨. ವೇಗವಾಗಿ ಹೊಡೆ, — ಬಡಿ ; ಅಪ್ಪಳಿಸು : ಅವರ ಮಾತು ಕೇಳಿ ನನಗೆ ಮುಖಕ್ಕೆ ರಾಚಿದಂತಾಯಿತು (ಹಂಗೀತ. ೬೦); ನಾಗವೇಣಿ ನಾಗಿಣಿಯಂತೆ ಸಿಡಿದು ರಪ್ಪನೆ ರಾಚಿದಂತೆ. ಚಿಂತಾಮಣಿಯನ್ನೂ ನುಂಗುವಂತೆ ನೋಡಿ ಹೊರಟು ಹೋದಳು (ವಾಪುವ. ೩). ೩. ಅಡ್ಡವಾಗಿ ಬೀಳು,—ಕೆಡೆ : ಕೂಚಿ ಯಾದುದು ಕೂಡೆ ಸಾಸಿರಲೋಚನನ ಕಟಕದಲಿ ಗುಡಿಗಳು ರಾಚಿ ಕೆಡದವು (ಉಂಬಿಕಾ. ೪೬-೦೦). ೪. ವ್ಯಾಪಿಸು : ಈ ಕವನದಲ್ಲಿ ಅವನ ಕ್ರೋಧಜ್ವಾಲೆ ಹೇಗೆ ರಾಚುತ್ತದೆಂದರೆ, ಅದರ ಹಬೆಯಲ್ಲಿ ಕವಿತಾಕುಸುಮವು ಬಾಡಿ ಹೋಗಿದೆ (ನವಸಾಹಿ. ೪೩). ೫. (ಆಲಂ) ಅಹಿತವಾಗು; ಅಸುಖಕರ ವಾಗು : ನಡುಹಗಲಿನ ಬಿಸಿಲು ಮುಖಕ್ಕೆ ರಾಚುತ್ತಿದೆ (ರೂಢಿ); ಆ ಸೀರೆಯ ದಟ್ಟಕೆಂಪುಬಣ್ಣ ಕಣ್ಣಿಗೆ ರಾಚುತ್ತದೆ (ರೂಢಿ).

[< ಎರಚು (<ಎಱಚು)./ ತೆಲು. ರಾಚು=ತಿಕ್ಕು, ತೀಡು].

**ರಾಚೆಯ** (ನಾ). ಒಬ್ಬಾತನ ಹೆಸರು ; ಪುಳ್ಳಿಯಣ್ಣನ ಮಗಂ ರಾಚೆಯಂ (ಎಇ. XI. ಚಿತ್ರದು. ೭೩-೦೨; 941).

[ರಾಚ್ಯ₀ (P ← ಸಂ. ರಾಜನ್) + < ಅಯ್ಯ₁ (< ಅಯ್ಯ₆₁)]

**ರಾಚೆಯಂಗಂಗ** (ನಾ). ಒಬ್ಬಾತನ ಹೆಸರು : ಶ್ರೀಮತ್ ಪೆರ್ಮ್ಮಾನಡಿಗಳ ಪಟ್ಟಂಗಟ್ಟಿದ ಇಪ್ಪತ್ತೆರಡನೆ ವರಿಷ × × × ರಿಳ್ಳಗರ ಕೋಟೆಯೊಳ್ ನೊಲಮ್ಮನೊಳ್ ಕಾದಿ ರಾಚೆಯಗಙ್ಗ ಸತ್ತೊಡೆ (ಎಇ. III, ನಂಜನ. ೦೩೯-೩; 915 ?). [ರಾಚೆಯ + ಗಂಗ]

**ರಾಜ** (ನಾ). ೧. ದೊರೆ ; ಅರಸು : "ನೃಪತಿ ರಾಟ್ ರಾಜಂ . . . ಪ್ರಜಾಧಿಪನೆನಲ್ಕರಸಕ್ಕು" (ಮಂಗರಾ. ೭೬-೦); ಕಳಿಂಗರಾಜನ ನೂಂಕಿದ ಕರಿಘಟೆಯನುಡಿಯೆ ಬಡಿಬಡಿದೆತ್ತಂ ಕಿಂಕೋಟಿ ಮಾಟ್ಟುದುಮುಜಿವಟ್ಟಂ ಕರ್ಣಂ ನಿಶಿತಶರದಿನೆರಡುಂ ಕರಮಂ (ಪಂಪಭಾ. ೦೦-೦೦೨); ಜೊನ್ನವಕ್ಕಿ ಗಳಂಬ ವಿಬುಧರ್ಕಳಂ ತಣಿಪಿದನ್ನಾವೆ ಜಲಮಾರ್ಗಮಂ ಪೊಕ್ಕ ರಾಜ ನೆನಲಿಂದು ಪಡುಗಡಲ ಸಾರ್ದಂ (ಲಾವಣ್ಣಂ. ೬-೩೩) : ಸಾಕೇತಪುರಜನರ್ . . . ಕೊಂಡಾಡಿದರ್ ರಾಜನಂ (ಶ್ರೀರಾಮಪಾ. ೦೬-೪೨೮). ೨. ಕ್ಷತ್ರಿಯ ವಂಶದಲ್ಲಿ ಹುಟ್ಟಿದವನು ; ಕ್ಷತ್ರಿಯ : "ರಾಜಾ — ಚಿಪ್ರ. ಕ್ಷತ್ರಿಯ, ನರಪತಿ" (ನಿಘಂಟು. ೪೦೦). ೩. ಒಡೆಯ : ಪ್ರಭು : ರಾಜರಾಜಸುಮಿತ್ರ . . . ಮರುಳ್ಗಳ ರಾಜ ಪರಮಪವಿತ್ರ ಜಯಜಯ ಶರಣವನಚೈತ್ರ (ಶಂಕರಾ. ೦೩-೪೫). ೪. ಚಂದ್ರ : "ಇಂದು . . . ದ್ವಿಜರಾಜನೆನೆ ಸುಧಾಂಶುವೆನಿಕ್ಕು" (ಮಂಗರಾ. ೦೦-೪) ; ರಾಜರಾಜಸುಮಿತ್ರ ಭಾಸ್ಕರ ರಾಜಪಾವಕನೇತ್ರ . . . ಜಯಜಯ ಶರಣವನಚೈತ್ರ (ಶಂಕರಾ. ೦೩-೯೫). ೧, ೪ : ಪರರಾಜಾಶೇಷತೇಜಸ್ಥಿತಿ ಕೆಡೆ ಕಮಳಾಮೋದಮಂ ಬಾಗೆ ಧಾತ್ರೀಪರಿತೋಷಂ ಪರ್ಚೆ (ರಾಜಶೇ. ೩-೩೩).

೫. ಇಂದ್ರ. ೬. ಯತಿ ; ಸಂನ್ಯಾಸಿ : ಕೇಳ್ ಮರುಳೆ ಶೂನ್ಯಾಲಯ ದೊಳಣ್ಣ ದರಿರರು ಸಿಕ್ಷ್ಯ ರಾಜನಿಹನೆನಲು (ಶಂಕರಾ. ೦೦-೨೯). ೭. ಸಮಾಸದ ಮೊದಲು ಅಥವಾ ಕಡೆಯಲ್ಲಿ ಸೇರಿ 'ದೊಡ್ಡ, ಮುಖ್ಯ, ಶ್ರೇಷ್ಠ, ಉತ್ತಮ' ಇತ್ಯಾದಿ ಅರ್ಥವನ್ನು ಕೊಡುವ ಪದ : 'ಕವಿ ರಾಜ', 'ಗಜರಾಜ', 'ರಾಜಕೀರ' ಪರಾ.

**ರಾಜನ ಸೇಸೆ** = ಒಂದು ಬಗೆಯ ತೆರಿಗೆ (?) : ಸೇಸೆ—'ರಾಜನ ಸೇಸೆ', ಚಕ್ರವರ್ತಿಯ ಸೇಸೆ' ಎಂದು ಶಾಸನಗಳಲ್ಲಿ ಉಕ್ತವಾಗಿದೆ. ರಾಜ ಅಥವಾ ಚಕ್ರವರ್ತಿಯ ಮದುವೆಯ ಸಮಯದಲ್ಲಿ ಜನರು ಕೊಡುತ್ತಿದ್ದ ತೆರಿಗೆಯಿರಬಹುದೆ ? (ಕಶಾಅ. ೪೦೩). **ರಾಜಮಾರ್ತಂಡರೂಪ** = ೧. ರಾಜರಲ್ಲಿ ಸೂರ್ಯನಂತೆ ಇರುವವನು. ೨. ಚಂದ್ರ ಮತ್ತು ಸೂರ್ಯನ ರೂಪವನ್ನು ಪಡೆದವನು. ೧, ೨ : ಶ್ರೀಕಾಂತಾನೇತ್ರ ನೀಲೋತ್ಪಳವದನಸರೋಜಾತಸಸ್ಮೇರಲೀಲಾಲೋಕಂ . . . ಶ್ರೀವಿಷ್ಣು ಭೂಪಂ ಬೆಳಗುಗೆ ಜಗಮಂ ರಾಜಮಾರ್ತ್ತಣ್ಡರೂಪಂ (ಎಇ. IV. ನಾಗಮಂ. ೭೭-೬ ; 1145). **ರಾಜಾಸಾಹೇಬ** = ಸ್ಥಳೀಯರಾಜರ ಒಂದು ಬಿರುದು : (?). [ಸಂ. ರಾಜನ್]

**ರಾಜಋಷಿ** (ನಾ). (ಪುರೂರವ, ಜನಕ, ವಿಶ್ವಾಮಿತ್ರ ಮೊದಲಾದವರಂತೆ) ರಾಜನ ವ್ಯಕ್ತಿತ್ವವನ್ನೂ ಋಷಿಯ ವ್ಯಕ್ತಿತ್ವವನ್ನೂ ಮೈಗೂಡಿಸಿಕೊಂಡವನು : ಉತ್ಪಾದನೆನಿಸುವ ರಾಜಋಷಿ ಮೊದಲು ಪೆತ್ತ ಭರತಂಗೆ ಹಿಮವಂತದಿತ್ತಣ ಧರೆಯನಿತ್ತ ಕತದಿಂದೆ ಭಾರತವರುಷ ವೆನಿಸಿತು (ಕಾವಕಂ. ೨-೩); ಮಹಾಪ್ರಭಾವವುಳ್ಳವನಲ್ಲವೆ ರಾಜಋಷಿಯು! (ಶಾಕುಂತ. ೬೦-೪). 'ರಾಜರ್ಷಿ' ಪರಾ. [ಸಂ.]

**ರಾಜಋಷಿತನ** (ನಾ). ರಾಜಋಷಿಯಾಗಿರುವಿಕೆ : ನಿಯಮವೆಮಗಿದು ವನನಿವಾಸಾಶ್ರಯದ ತುದಿಪರಿಯಂತ ಮೃಗಹಿಂಸೆಯಲಿ ಮಾಡೆವು ಮನದ ಮತವಿದು ರಾಜಋಷಿತನದ (ತೊರಭಾ. ೩-೩-೬). [ರಾಜಋಷಿ + —ತನ]

**ರಾಜಋಷಿತ್ವ** (ನಾ). = ರಾಜಋಷಿತನ : ಶರ್ವಾಣಿಯ ಪ್ರಸಾದದಿಂದ ಅವರ ರಾಜಋಷಿತ್ವವು ಸಾರ್ಥಕ್ಯವಡೆಯಲಿ ! (ಸುಗುಗಂ. ೦೧೭-೦೩). [ಸಂ.]

**ರಾಜಕ** (ನಾ). ೧. ರಾಜರ ಸಮೂಹ ; ಅರಸರ ಗುಂಪು : ನೆರೆದ ಸಮಸ್ತರಾಜಕಮನಾವರದಿಂದಿದಿರ್ಗೊಂಡು (ಶಂಕರಾ. ೩—೪೦) ; ಯುಕುತಿ ನಮಗಿನ್ನೇನುಭಯ ರಾಜಕವ ಸಂತೈಸುವುದು (ಕುಮ್ಮಾರ. ೬-೦೩). ೨. ಸಣ್ಣದೊರೆ ; ಚಿಕ್ಕಅರಸು. ೩. ರಾಜನಿಂದ ಆಗುವ ಆಕ್ರಮಣ,— ಮುತ್ತಿಗೆ : ಕೊಳ್ಳೆಯೋ, ದಂಗೆಯೋ, ಸುಲಿಗೆಯೋ. ಧಾಳಿಯೋ, ರಾಜಕವೋ, ಏನೋ ಬರುತ್ತಿದೆ ! (ಬರುಗಂ. ೦೨-೦೩); ರಾಜಕ ಬಂದರೂ ರಾಜ್ಯಕ್ಕೆ, ದೈವಿಕ ಬಂದರೂ ರಾಜ್ಯಕ್ಕೆ (ಗಾದೆ). 'ರಾಜಿಕ' ಪರಾ. [ಸಂ.]

**ರಾಜಕದಲಿ, ರಾಜಕದಳಿ** (ನಾ). ಒಂದು ಬಗೆಯ ಶ್ರೇಷ್ಠಜಾತಿಯ ಬಾಳೆ ; ರಾಜಬಾಳೆ : (?). **ರಾಜಕದಳಿ** : ಬಕ್ಕೆ ಪಲಸು ರಾಜಕದಳಿ ಯಾಳಿಗಳಾದಿ ಚೊಕ್ಕಫಲವನಾಂತು (ಅನಂತ. ೦_೯೩) ; ಪಣ್ತ ಬಿಣ್ಗೊನೆ ಯಿಂದೆಜಗಿ ನಿಂದ ರಾಜಕದಳಿಗಳುಂ (ಲಬಶಂ. ೨-೧೨ ವ). [ಸಂ. ರಾಜಕದಲೀ]

**ರಾಜಕದಳ** (ನಾ). ರಾಜಕದಲಿ : ರಾಜಕದಳಾಮ್ರಜಂಬೀರ ಫಲ ಗುಚ್ಛದಿಂ . . . ಪೂಜಿಸಿ (ತಂಪ್ರಕೃ. ೬—೦೦೦ ರಗಳೆ). [ಸಂ. ರಾಜಕದಲ]

**ರಾಜಕದಳಿ** 'ರಾಜಕದಲಿ' ನೋ.

**ರಾಜಕದ್ವಾದಶ** (ನಾ). ಹನ್ನೆರಡು ಜನ ಮಹಾರಾಜರ ಗುಂಪು : ಗೆಲ್ಲನೆ ನಯಶೌರ್ಯದ್ವಯದಿಂ ಪೂಜಿಪಗೆಯ ರಾಜಕದ್ವಾದಶಮಂ (ಕುಕ್ಕಪು. ೩-೭). [ಸಂ.]

**ರಾಜಕಪೋತ** (ನಾ). ಶ್ರೇಷ್ಠಜಾತಿಯ ಪಾರಿವಾಳ : ಮೋಘಳಥಧರಾಧೀಶ್ವರನ ಮುಂದೆ ಬಂದು ಬಿಟ್ಟರ್ದ ರಾಜಕಪೋತ (ಕಾಂತಿಕ್ಕೃ. ೯-೯೯ ವ) [ಸಂ.]

**ರಾಜಕರ** (ನಾ). ೧. ರಾಜನು ಪ್ರಜೆಗಳ ಮೇಲೆ ಹೇರುವ ಕಂದಾಯ. ೨. ಚಂದ್ರನ ಕಿರಣ. ೧, ೨ : ರಾಜಕರಜಾತಭೀತಿ ಸರೋಜದೊಳ್ . . . ಸಮನಿಕುಮಾ ಜನಪದಜನದೊಳೆಂತುಮೇಂ ಸಮನಿಕುಮೇ (ಚಂಪ್ರಶ. ೧೦-೪೮). [ಸಂ.]

**ರಾಜಕರ್ಮ** (ನಾ). ರಾಜನು ಮಾಡಬೇಕಾದ ಕಾರ್ಯ, ಕರ್ತವ್ಯ : ರಾಜದ್ರೋಹಿ! ಇವನ ನೀ ಕೊಲಿಸದಿರೆ ರಾಜಕರ್ಮವ ಸಮಂತೆಸಗಿದೆಯ ? (ಗೊರೆಸ್ಯಾಖಾ. ೪೬-೦೫೮). [ಸಂ. ರಾಜಕರ್ಮನ್]

**ರಾಜಕಲೆ, ರಾಜಕಳೆ** (ನಾ). ೧. ದೊರೆಗಳು ಕಲಿಯಬೇಕಾಗಿದ್ದ ಆಯುಧಗಳ ಪ್ರಯೋಗ ಮುಂತಾದ ವಿದ್ಯೆ : ರಾಜಕಲೆಗಳೊಳೆ ಕವಿರಾಜಗೋಷ್ಠಿಯೊಳೆ ವನಿತಾಜನೋತ್ಸವವೃತ್ತಿಯೊಳೆ ಸಂತತಂ ರಾಜಿಸುವ ಸದ್ಗುಣಸಮಾಜನಂ ಭೂಕಲ್ಪಭೂಜನಂ ಭೋಜನಂ ಮಿಗೆ ಮೆಚ್ಚುವೆಂ (ಜಪವ. ೦-೯). ರಾಜಕಳೆ : ೨. ರಾಜತೇಜಸ್ಸು : ರಾಜತ್ವದ ಕಳೆ : ರಾಜಮುಖಿ ನಿನ್ನಲ್ಲಿ ರಾಜಕಳೆಯಿರುವುದು ! (ಗು. ೩೫-೫). [ಸಂ. ರಾಜಕಲಾ]

**ರಾಜಕಶೇರು** (ನಾ). ಸುವಾಸನೆಯನ್ನು ಬೀರುವ ಒಂದು ಬಗೆಯ ಗೆಡ್ಡೆ ; ಕೊಡನಾರಿಗೆಡ್ಡೆ. [ಸಂ.]

**ರಾಜಕಳಾಪ** (ನಾ). ಚಂದ್ರನನ್ನು ಅಲಂಕಾರವನ್ನಾಗಿ ಮಾಡಿಕೊಂಡವನು : ಶಿವ : ಜೋಜೋ ರಾಜಕಳಾಪ ಭಕ್ತಜನಚಿಂತಾರತ್ನ (ಹಮ್ಮಿರ. ೨-೨೬). [ಸಂ. ರಾಜಕಲಾಪ]

**ರಾಜಕಳೆ** ' ರಾಜಕಲೆ ' ನೋ.

**ರಾಜಕಾರಣ** (ನಾ). ರಾಜ್ಯದ ಆಡಳಿತಕ್ಕೆ ಸಂಬಂಧಿಸಿದ ವ್ಯವಹಾರ; ರಾಜಕೀಯ : ಸುತ್ತಲಿನ ಜನ ಬಹುತರವಾಗಿ ಸ್ಥಳೀಯ ರಾಜಕಾರಣದಲ್ಲಿ . . . ನಿರತರಾದರು (ಸ್ವಪ್ನ. ೪೪) ; ಕಾಂಗ್ರೆಸ್ ರಾಜಕಾರಣದಲ್ಲಿ ಮೋಹನನ ಪ್ರಾಬಲ್ಯವನ್ನು ಯಾವ ರೀತಿ ಕಡಮೆ ಮಾಡಬಹುದು? (ಚಂಚಲ. ೯೬). [ಸಂ.]

**ರಾಜಕಾರಣಪಟು** (ನಾ). ರಾಜಕೀಯದಲ್ಲಿ ನಿಪುಣನಾದವನು ; ರಾಜ್ಯದ ಆಡಳಿತದಲ್ಲಿ ದಕ್ಷನಾದವನು : ಆ ಚರ್ಚೆಯನ್ನು ಕೇಳಿದರೆ ಎಂಥ ರಾಜಕಾರಣಪಟುವಿಗೂ ಬುದ್ಧಿ ಚುರುಕಾದೀತು (ಯೋಗಪು. ೬೬); ನಮ್ಮಲ್ಲಿನ ವೈಜ್ಞಾನಿಕರೂ ರಾಜಕಾರಣಪಟುಗಳೂ ದೇಶವಿದೇಶ ಕಂಡವರೂ . . . ತಮ್ಮ ಓದಿನ ಪರಿಜ್ಞಾನವನ್ನು . . . ಪ್ರಸಾರಮಾಡಬೇಕು (ರಾಮಾಯ. ೪೫). [ಸಂ.]

**ರಾಜಕಾರಣಿ** (ನಾ). ರಾಜಕಾರಣವನ್ನು ತಿಳಿದ ವ್ಯಕ್ತಿ : ಲೋಕಮಾನ್ಯರು ನಿಜಕ್ಕೂ ಶ್ರೇಷ್ಠರಾಜಕಾರಣಿ (ಭಮಾಚಿ. ೧೨೮). [ಸಂ. ರಾಜಕಾರಣಿನ್]

**ರಾಜಕಾರಿಯ** (ನಾ). ರಾಜನಿಗೆ ಅಥವಾ ರಾಜ್ಯದ ಆಡಳಿತ ಮುಂತಾದುವಕ್ಕೆ ಸಂಬಂಧಿಸಿದ ಕೆಲಸ : ತೊಡಗಿದಗ್ಗದ ರಾಜಕಾರಿಯ ಕೆಡುವುದೆಂದೇ ನಿನ್ನನುಳುಹಿದೆ (ಕುವ್ಯಾಕ. ೯-೩೮); ಖಾನ ಮುಂದೆಸಗಿದ ರಾಜಕಾರಿಯವ (ಕಂಠವ. ೧೦-೬೬). [< ಸಂ. ರಾಜಕಾರ್ಯ]

**ರಾಜಕಾರ್ಯ** (ನಾ). ೧. = ರಾಜಕಾರಿಯ : ಶ್ರೀಮನ್ಮಹಾ ಪ್ರಧಾನ ಶಂಬರದೇವಒಡೆಯರು ತುಳುಪಟಕಸಹಿತ ಹಾಡುವಳ್ಳಿ ಮೇಲೆ ರಾಜಕಾರ್ಯಕ್ಕೆ ಬಟಕಳದಲಿ ಪಾಳೆಯ ಬಿಡಲಾಗಿ (ಕಶಾ. 7, ೪೦-೯ ; 1415) ; ದ್ರುಪದನಕ್ಷೋಣಿಸೇನೆಯು ನೆರವು ಬಂದುದು ರಾಜಕಾರ್ಯದ ಬಳಿಕ ಲೇಸೆಂದ (ಕುವ್ಯಾಉ. ೮-೨೦) ; ಕೆಡಿಸಿ ಕಳೆದೈ ರಾಜಕಾರ್ಯವ ತತ್ತ ಸಮಯದಲಿ (ಕೌರಿವ. ೪೬-೭೮). ೨. (ಅಲಂ) ಮುಖ್ಯವಾದ ಕೆಲಸ : ದೊಡ್ಡ ಕಾರ್ಯ : ಊರಿಗೆ ಹೋಗಿ ಏನು ರಾಜಕಾರ್ಯ ಸಾಧಿಸಿ ಬಂದೆ ? (ರೂಢಿ). [ಸಂ.]

**ರಾಜಕೀಯ** (ಗು). ೧. ರಾಜನಿಗೆ ಸಂಬಂಧಿಸಿದ ; ಅರಸನಿಗೆ ಸೇರಿದ. ೨. ಆಡಳಿತಕ್ಕೆ ಸಂಬಂಧಿಸಿದ. (ನಾ). ೩. ರಾಜನಿಗೆ ಸಂಬಂಧಿಸಿದುದು, — ಸೇರಿದುದು : ರತ್ನಮಯವಾಗಿ ಹೆಸರನ್ನು ಕೆತ್ತಿರುವ ರಾಜಕೀಯವಾದ ಈ ಉಂಗುರವನ್ನು ಎಲ್ಲಿ ಕದ್ದೆ ? (ಶಾಕುಂತ. ೬೩-೯). ೪. = ರಾಜಕಾರಣ : ಪೂಜಿಸುತ್ತಲಿರುತಿರ್ದಳೀ ವಿವಿಧ ರಾಜಕೀಯಂಗಳೀನೊಂದರಿಯದತುಳಸಂತೋಷದಿಂದ (ವಂಕಾರಾ. ೨-೧೦-೩೬) ; ಮತಕ್ಕೂ ರಾಜಕೀಯಕ್ಕೂ ಏನು ಸಂಬಂಧ ? (ಮಾನವಂ. ೧೯೦). ೫. (ಅಲಂ) ಅಂತಃಕಲಹ ; ಒಳಜಗಳ : ಈಗಿನ ಅನೇಕ ಸಂಘ ಸಂಸ್ಥೆಗಳಲ್ಲಿ ರಾಜಕೀಯ ನಡೆಯುತ್ತಿದೆ (ರೂಢಿ). ೬. ಪಿತೂರಿ ; ಒಳಸಂಚು: ಆ ವೈದ್ಯರನ್ನು ವರ್ಗಾಯಿಸಲು ದೊಡ್ಡ ರಾಜಕೀಯ ನಡೆಯುತ್ತಿದೆ (ರೂಢಿ).

**ರಾಜಕೀಯಕ್ಷೇತ್ರ** = ಆಡಳಿತಕ್ಕೆ ಸಂಬಂಧಪಟ್ಟ ವಲಯ, ಕ್ಷೇತ್ರ : ನಾನಕ ಮತ್ತು ರಾಮದಾಸರು ರಾಜಕೀಯಕ್ಷೇತ್ರದಲ್ಲಿ ಕಾರ್ಯ ಮಾಡಿದರು (ರಮಾಗಾ. ೧೫೦). **ರಾಜಕೀಯ ಖೈದಿ** = ರಾಜದ್ರೋಹ ಅಥವಾ ದೇಶದ್ರೋಹಕ್ಕಾಗಿ, ರಾಜಕಾರಣದಲ್ಲಿ ಮಾಡಿದ ತಪ್ಪಿಗಾಗಿ ಸೆರೆಯಾಳಾದವನು, ಬಂದಿಯಾದವನು : ಸಾವಿರಾರು ರಾಜಕೀಯಖೈದಿಗಳಿಗೆ ಏಳು ದಾಕ್ಷಿಣ್ಯ ಕನಿಕರಗಳಿಲ್ಲದೆ ಚಿತ್ರಹಿಂಸೆ ಕೊಡುತ್ತಿದ್ದ ನಂತೆ (ಕ್ರಮರು. ೩೩೫). [ಸಂ.]

**ರಾಜಕೀರ** (ನಾ). ಶ್ರೇಷ್ಠವಾದ ಗಿಳಿ ; ಅರಗಿಳಿ : ವಿರಹಿಗಳ ಸುಯ್ಯ ಬೆಂಕೆಯೊಳ್ . . . ಕರಿಮುರಿಕನಾದುವುನ್ಮದಪರಭೃತಷಟ್ಚರಣರಾಜಕೀರಕುಲಂಗಳ್ (ಪಂಶಭಾ. ೩-೯೦); ಸಲ್ಲಲಿತದ ರಾಜಕೀರನ ನುಡಿಗೇಳಿ ವಲ್ಲಭ ಬಾರೆಂದಳವಳು (ಕಂಸವ. ೯-೨೦೦). [ಸಂ.]

**ರಾಜಕೀರಕ** (ನಾ). = ರಾಜಕೀರ : ರಾಜಕೀರಕವಾಕ್ಪಾಟವಮಲ್ಲದಿಲ್ಲ ಪಟಿಕಂ ವಾಕ್ಪಾಟವಂ ಸುತ್ತಲುಂ (ಶಾಂತಿಪು. ೩-೩). [ಸಂ.]

**ರಾಜಕೀರೆ** ' ರಾಜಗೀರೆ ' ನೋ.

**ರಾಜಕುಂಜರ** (ನಾ). ಶ್ರೇಷ್ಠವಾದ ಆನೆ ; ಗಜರಾಜ : ಅನುಕೂಲಾನಿಲಾಂದೋಲಾಯಮಾನರಾಜಕುಂಜರವಿಜಯಕದಲಿಕಾತರಂಗಿತ ಗಗನಾಂಗಣನುಂ . . . ಆಗಿ ನಡೆಯೆ (ಆದಿಪು. ೦೩-೬೦ ವ). [ಸಂ.]

**ರಾಜಕುಮಾರ** (ನಾ). ದೊರೆಯ ಮಗ ; ಅರಸುಪುತ್ರ : ಪಲುಂಬರ್ ರಾಜಕುಮಾರರ ನಡುವೆ . . . ಶಸ್ತ್ರಕಳಾಧರರಾಗಿ ತನ್ನುಮಂ ಗೆಲೆವಂದ ಸಾಮಂತಚೂಡಾಮಣಿಯ ಶರಪರಿಣತಿಯನಾರಯಲು (ಪಂಶಭಾ. ೨-೩೯ ವ); ರಾಜಕುಮಾರರೀರ್ ಸುರರಾಜಕುಮಾರಕರೋಳ್ . . . ದೊರೆಯಪ್ಪರಾರೊ ಪೇಟೀ ಜತಕಂತುಗೆ (ಪಂರಾವಿಜ. ೩-೦೩೯). [ಸಂ.]

**ರಾಜಕುಮಾರಕ** (ನಾ). = ರಾಜಕುಮಾರ : ರಾಜಕುಮಾರಕರ್ ನಿಜವಿನೋದಿಗಳ್ . . . ಜೂಜುಗಳಂ ಸಮಗ್ರಮೆನಲಾಡುತಿರಲ್ ಪಡೆವಲ್ಲಿಗೆಯ್ದಿದೆಂ (ವಕಶು. ೯-೯೭); ಸಾರಿತೇಯಕಟಕಟ ರಾಜಕುಮಾರ ಕರಿಗಾಪತ್ತು (ತೊರವ. ೭-೨೮-೪೪). [ಸಂ.]

**ರಾಜಕುಮಾರಿ** (ನಾ). ದೊರೆಯ ಮಗಳು ; ಅರಸುಪುತ್ರಿ : ರಾಜಕುಮಾರಿಯು ಶ್ವೇತಚಾಮರವನ್ನು ಶ್ರೀರಂಗರಾಯನ ಕೈಗೆ ತಂದು ಕೊಟ್ಟಳು (ಶ್ರೀರಾಯ. ೩೬೦). [ಸಂ. ರಾಜಕುಮಾರೀ]

**ರಾಜಕುಲ** (ನಾ). ೧. ಅರಸುವಂಶ ; ಕ್ಷತ್ರಿಯಕುಲ : ಆಳೋಳಿಯೊಳೆರ್ಕೆ ರಾಜಕುಲಮೆಂದುತ್ಸಾಹತೂರ್ಯಸ್ವನಂ ದೆಸೆಯುಂ ತೀವೆ (ಪಂರಾವಿಜ. ೦೩-೦೧); ರಾಜಕುಲಭೀತರನು ಭಜಿಸಿವೆ (ಪಿಭಾಗ. ೧೦-೯೭-೧೦). ೨. ರಾಜಮನೆತನ : ನಾನು ಶುದ್ಧ ಮುಸಲ್ಮಾನಳೇನೋ ಹೌದು . . . ಯಾವ ರಾಜಕುಲದಲ್ಲಿಯೂ ಹುಟ್ಟಿದವಳಲ್ಲ (ದೌಲತ್. ೩೬೦). ೩. ಅರಸರ ಗುಂಪು ; ಅರಸರ ಸಮೂಹ. ೪. ಅರಮನೆ. ೫. ವಿಲಾಸಿನಿಯರ ಸಮೂಹ : " ವಾರಸತಿ ರಾಜಕುಲವೆನೆ ವಿಳಾಸಿನಿಯರಕ್ಕು " (ಕುಂಗರಾ. ೯೦-೬). [ಸಂ.]

**ರಾಜಕುವರ** ' ರಾಜಗುವರ ' ನೋ.

**ರಾಜಕುಳಪ್ರತಿಬದ್ಧೆ** (ನಾ). ವಿಲಾಸಿನಿ ; ಎಂಗಾರದವಳು : " ರಾಜಕುಳಪ್ರತಿಬದ್ಧಾ, ವಾರಸ್ತ್ರೀ, ವಾರಮುಖ್ಯಾ — ಈ ೩ ವಿಳಾಸಿನಿಯರ್" (ಹಲಾಯು. ೬೦-೩೩೬). [ ಸಂ. ರಾಜಕುಲಪ್ರತಿಬದ್ಧಾ ]

**ರಾಜಕೇತನ** (ನಾ). ಅರಸನು ಇರುವ ನಿವಾಸ ; ಅರಮನೆ ; ರಾಜಗೃಹ : ಆತನುಂ . . . ನಿಜಸೌಧಪುರವರಮನೆಯ್ದಿ ರಾಜಕೇತನನಿವಿಷ್ಟನೊಡ್ಡೋಲಗಂಗೊಟ್ಟಿರ್ದ ಗಗನಚರೇಂದ್ರನಂ . . . ಕಂಡು (ಶಾಂತಿಪು. ೫-೩೬ ವ). [ಸಂ.]

**ರಾಜಕ್ಷಯ** (ನಾ). ತೀವ್ರತರವಾದ ಒಂದು ಬಗೆಯ ಕ್ಷಯರೋಗ : ಪುಷ್ಕರಮೂಲ, ಬಿಜೋರ . . . ನೆಗ್ಗಿಲು ಸಹ ಸಮಾನಗೊಂಡರೆದು ತುಪ್ಪದಿಂ ಸೇವಿಸೆ ರಾಜಕ್ಷಯಾದಿ ರೋಗಂ ಪರಿಹರಂ (ಸಕವೈ. ೨೪೬). 'ರಾಜಯಕ್ಷ್ಮ' ಪರಾ. [ಸಂ.]

**ರಾಜಖರ್ಜೂರ** (ನಾ). ಒಂದು ಬಗೆಯ ಉತ್ತಮಜಾತಿಯ ಖರ್ಜೂರ : "ಮುನಿಖರ್ಜೂರಿಕಾ — ರಾಜಖರ್ಜೂರ" (೬೩೦. ೦೨೬). [ <ಸಂ. ರಾಜಖರ್ಜೂರೀ ]

**ರಾಜಗಾಂಭೀರ್ಯ** (ನಾ). ರಾಜೋಚಿತವಾದ ಠೀವಿ,— ಗತ್ತು : ಅವರು . . . ರಾಜಗಾಂಭೀರ್ಯದಿಂದ ಬೀದಿಯಲ್ಲಿ ನಡೆದು ಬರುತ್ತಿದ್ದ ವ್ಯಕ್ತಿಯ ಕಡೆಗೆ ಕುತೂಹಲದಿಂದ ದೃಷ್ಟಿಹರಿಸಿದರು (ಕೊನರು. ೨೬೬). [ಸಂ.]

**ರಾಜಗಾಮಿ** (ನಾ). ಹಕ್ಕುದಾರರಿಲ್ಲದ ಆಸ್ತಿಯನ್ನು ರಾಜ್ಯದ ಬೊಕ್ಕಸಕ್ಕೆ ಸೇರಿಸಿಕೊಳ್ಳುವುದು : ಭಾರತದ ರಾಜ್ಯಕ್ಷೇತ್ರದಲ್ಲಿರತಕ್ಕ ಯಾವ ಸ್ವತ್ತು . . . ರಾಜಗಾಮಿಯಾಗುವುದರಿಂದ . . . ಅಂಥ ರಾಜ್ಯದ ವಶದಲ್ಲಿ ನೆಲಸತಕ್ಕುದು (ಭಾಸಾನ. ೦೭೦). [ ಸಂ. ರಾಜಗಾಮಿನ್ ]

**ರಾಜಗಾಮಿತ** (ನಾ). = ರಾಜಗಾಮಿ : ' ರಾಜಗಾಮಿತಂಗೆಯ್ ' ಪರಾ. [ಸಂ.]

**ರಾಜಗಾಮಿತಂಗೆಯ್** (ಕ್ರಿ). ಹಕ್ಕುದಾರರಿಲ್ಲದ ಆಸ್ತಿಯನ್ನು ರಾಜ್ಯದ ಬೊಕ್ಕಸಕ್ಕೆ ಸೇರಿಸಿಕೊಳ್ಳು,— ವಶಪಡಿಸಿಕೊಳ್ಳು : ಗುಣ್ಣಮಯ್ಯಂ ದೋಜಿ ಎಡೆಯಾಯ್ತುತನದಿಂ ರಾಜಗಾಮಿತಂಗೆಯ್ದು ಮೆಣ್ಣೆಯತನದ ಲೂರನೆನ್ನದೆನ್ದು . . . ಇಪ್ಪುರ್ದಂ ಕಣ್ದು (ಶಾಶಾ. IX-i, ೦೨೩-೦೬; 1069). [ ರಾಜಗಾಮಿತ + ಕೆಯ್$_1$ ]

**ರಾಜಗಿರಿ** (ನಾ). ಒಂದು ಬಗೆಯ ಸೊಪ್ಪು : " ರಾಜಾಗ್ರ:—ರಾಜಗಿರಿ" (೬೩೦. ೦೩೭) ; ದಿನಾಲು ರಾಜಗಿರಿಯ ಕಾಳುಗಳನ್ನು ತಿನಿಸಿ ಜೋಕೆ ಮಾಡಿದ್ದರಿಂದ ಆ ಚಿಗರೆ ಅವನಿಗೆ ಬಹಳ ಈಲಾಗಿತ್ತು (ಮುಂಬಯು. ೫-೩೦೦) ; ಒಂದು ದಿನ 'ರಾಜಗಿರಿ'ಯ ಪಲ್ಲೆಯ ಎಲೆ ಹಸಿರು ಮುರಿಯುತ್ತಿದ್ದವು (ನಮಹಿ. ೪೬೦) ; ಸೋಮವಾರ ಪ್ರತಿಯೊಬ್ಬರೂ ಬರೀ ರಾಜಗಿರಿಪಲ್ಲೆ . . . ತಿನ್ನತಕ್ಕದ್ದು (ಹವಿಸ್ಕಂದ. ೬೮). 'ರಾಜಗೀರೆ' ಪರಾ. [ ಸಂ./ ಮರಾ. ರಾಜಗಿರಾ ]

**ರಾಜಗಿಳಿ** (ನಾ). = ರಾಜಕೀರ : " ಪ್ರಾಜ್ಞ: — ರಾಜಗಿಳಿ " (೬೩೦. ೯೬). [ ರಾಜ + ಗಿಳಿ ]

**ರಾಜಗೀರೆ,** ರಾಜಕೀರೆ (ನಾ). ಒಂದು ಬಗೆಯ ಕೀರೆಸೊಪ್ಪು : " ಶತಪತ್ರ: — ರಾಜಗೀರೆ " (೬೩೦. ೦೬೦). **ರಾಜಕೀರೆ** : " ರಾಜಶಾಕಿನೀ— ರಾಜಕೀರೆ " (೬೩೦. ೦೩೯). 'ರಾಜಗಿರಿ' ಪರಾ. [ ರಾಜ + ಕೀರೆ ]

**ರಾಜಗುವರ,** ರಾಜಕುವರ (ನಾ). = ರಾಜಕುಮಾರ : ನೀವೆಂದಾದರೂ ಈ ಮಾಡದತ್ತ ಬಂದು ರಾಜಗುವರರ ಕುಶಲವನ್ನು ವಿಚಾರಿಸಿದುಂಟೆ ? (ನವಿಶ. ೨೫೬). **ರಾಜಕುವರ** : ನರನೊಳಿನ್ನಬಿಹುವೆನು. . . ರಾಜಕುವರನ ಮರಣವಾರ್ತೆಯ (ಕುಪ್ಪಾರಿಸ್ತ್ರೀ. ೯-೩) ; ರಂಗನ ನೋಡಿರೆ ರಾಜಕುವರ ನರಸಿಂಗದೇವ ನಮ್ಮ ದೇವಕಿಸುತನ (ಕುರಂಡ. ೪-೯೬ ಹಲ್ಲ೭). [ ರಾಜ + ಕುವರ$_2$ ]

**ರಾಜಗೃಹ** (ನಾ). ೧. ಅರಸನ ನಿವಾಸ ; ಅರಮನೆ : ಲತಾಗೃಹಮೆಂಬ ರಾಜಗೃಹಕ್ಕೆ ಬಂದು (ಆದಿಪು. ೯-೪೦ ವ) ; ರಾಜಗೃಹಕ್ಕೆ ಮಿಕ್ಕ ಗಜದಂತಚಯಂಗಳುಮಂ . . . ಬಿದಿರಕ್ಕಿಯುಮಂ ತಱುಂಬಿ ನಿರ್ವ್ಯಾಜದಿನೆಯ್ದೆ (ಶೀಪುಪು. ೧-೭೬). ೨. ಪ್ರಾಚೀನ ಮಗಧರಾಜ್ಯದ ರಾಜಧಾನಿಯ ಹೆಸರು. ೧, ೨ : ಅಂತು ಮಗಧವಿಷಯದಂತೆ ರಾಜಗೃಹಸನಾಥಮುಂ . . . ಯಾಮ್ಯದಿಶೆಯಂತೆ ಧರ್ಮಪ್ರಭಾವವಿಭಾವಿತಮುಮೆಂಬ ಮಹಿಮೆಯ ಮಹಿಮೆಯುಂ ತಳೆದು (ಚಿತ್ರಪು. ೯-೩೦ ವ). [ಸಂ.]

**ರಾಜಗೇಹ** (ನಾ). = ರಾಜಗೃಹ ೧ : ಪರಿತಾಂಕುರಫಳಪುಷ್ಪೋತ್ಕರಂಗಳಂ. . . ಧರಣೀಶಂ ಕೆದಱಿಸಿದು ನಿರಂತರಂ ರಾಜಗೇಹದೊಳಗಂ ಪೊಱಗಂ (ಆದಿಪು. ೦೫-೭) ; ರಾಜಗೇಹದ ಮುತ್ತಿನ ಬಾಗಿಲಿದಿರೊಳು . . . ನವಿಲು ಯ್ಯಾಲೆಯಿತ್ತುವು ಕಣ್ಗೆ ಕೌತುಕವ (ಕಂಪರಾ. ೭-೮). [ಸಂ.]

**ರಾಜಗೋಳಿ** (ನಾ). ಒಂದು ಬಗೆಯ ಗೋಣಿಸೊಪ್ಪು : ರಾಗೀಯ ಒಣರೊಟ್ಟಿ ರಾಜಗೋಳಿಯ ಪಲ್ಲೆ ರಾಜಕ ತವರು ಬಡವರ ಮನಿಯಾಗ ನಾಕುದಿನವಿದ್ದು ಒರುವೇನ (ಗರತಿ. ೯). ' ರಾಜಗೀರೆ ' ಪರಾ. [ರಾಜ + ಗೋಳಿ$_1$]

**ರಾಜಚಿಹ್ನ** (ನಾ). ಅರಸುತನದ ಅಧಿಕಾರ, ಘನತೆ ಮುಂತಾದುವುಗಳನ್ನು ಸೂಚಿಸುವ ಗುರುತು ; ರಾಜಲಾಂಛನ : ಪಟಳಶಂಖಸಂಕಾಶಪಾಂಡುಛತ್ರಚಾಮರಂಗಳುಂ ಪೆಱವುಂ ರಾಜಚಿಹ್ನಂಗಳುಮೆಸೆಯೆ (ಸಂಕಶಾ. ೦೦-೫೭ ವ) ; ನಿಜನಿಜರಾಜಚಿಹ್ನನಿವಹಂ ಪರಿರಂಜಿಸೆ (ಜಗು. ೦-೪೦). [ಸಂ.]

**ರಾಜಚಿಹ್ನೆ** (ನಾ). = ರಾಜಚಿಹ್ನ : ರಾಜನು ಮಂತ್ರಿಗೆ ಬೆಳ್ಗೊಡೆ, ಚಾಮರ . . . ಮುಂತಾದ ರಾಜಚಿಹ್ನೆಗಳನ್ನು ಕೊಡುತ್ತಿದ್ದನು (ಕಶಾಆ. ೩೨೯) ; ಅರಸನು ಉಳಿಸಿಕೊಂಡಿದ್ದ ಆ ಅಲ್ಪಪರಿವಾರವನ್ನೂ ರಾಜಚಿಹ್ನೆಗಳನ್ನೂ ಸೈರಿಸಲಾರದವರಾಗಿ . . . ನಿರಾಕರಿಸಿ ಬಿಟ್ಟರು (ಕವಿಕ. ೩೫). [ಸಂ. ರಾಜಚಿಹ್ನ]

**ರಾಜಜಿಘಾಂಸು** (ನಾ). ಅರಸನನ್ನು ಕೊಲ್ಲಲು ಬಯಸುವವನು : ಜನರ ಮಾರ್ಮಲೆಸುವೀ ಪರಿಯ ರಾಜಜಿಘಾಂಸುಗೆವ್ವು ಬಡ ಧರ್ಮ ದಂಡವೆ ಸಾಕೆ ? (ಗೂರ್ಲ್ಕೂಶಾ. ೪೦-೦೦೫). [ಸಂ.]

**ರಾಜಠೀವಿ** (ನಾ). = ರಾಜಗಾಂಭೀರ್ಯ : ಆತನಲ್ಲಿ ಏನೋ ಒಂದು ಬಗೆಯ ರಾಜಠೀವಿ ಕಾಣುತ್ತಿತ್ತು (ಶ್ಯಾಮಸ್ಕೀ. ೦೪೮). [ರಾಜ + ಠೀವಿ]

**ರಾಜಣ** ' ರಾಜನ ' ನೋ.

**ರಾಜತ** (ಗು). ಬೆಳ್ಳಿಯಿಂದ ಆದ ; ಬೆಳ್ಳಿಯ : ಆ ರಾಜತಶೈಲೇಂದ್ರದೊಳೆ ಮಹಾಜಿನಚಂದ್ರಂ ಪ್ರಶಸ್ತಿಯಂ ಬರೆಯಿಸಿದಂ (ಶಾಂತಿಪು. ೪-೩೯) ; ಮರಳಿ ಸುತನಂ ಪಡೆದು ರಾಜತಗಿರಿಯನಾಗಳೆ ಸೂಱೆಗೊಂಡನು (ಬಸಪು. ೨೫-೦೫). [ಸಂ.]

**ರಾಜತಂತ್ರ** (ನಾ). ರಾಜಕೀಯಕಾರ್ಯದಲ್ಲಿರುವ ಚಾತುರ್ಯ ; ಆಡಳಿತತಂತ್ರ : ಹಿಂಗಲೊಲ್ಲದೆ ಹೋಯ್ತು ರಾಮನ ವಿಚಿತ್ರರುಚಿ . . . ದಿನದಿನಕೆ ರಾವಣನ ರಾಜತಂತ್ರದ ಜಯಕೆ ಕೈಗೂಡಿದತ್ತೆಂಬಿನಂ ಮುರುಟಿದುದು ಮನದ ಕೆಚ್ಚು (ಶ್ರೀರಾಪ. ೨೬೫-೩೦೮). [ಸಂ.]

**ರಾಜತರು** (ನಾ). ಒಂದು ಬಗೆಯ ಮರ ; ಕಕ್ಕೆಮರ : "ಆರಗ್ವಧಂ ಸ್ವರ್ಣಪುಷ್ಪ ಕೃತಮೂಲಮೆನಲ್ಕಾ ರಾಜತರುವೆನಲ್ ಕಕ್ಕೆ" (ಮಂಗರಾ. ೫೫-೦೨) ; ಕನಕಚಂಪಕ, ರಾಜತರು (ಪ್ರಮಿ. ೬೫-೦೩೦). [ಸಂ.]

**ರಾಜತೆ$_1$** (ನಾ). ದೊರೆತನ ; ಪ್ರಭುತ್ವ : ನನ್ನ ರಾಜತೆಗೊಂಡೆ ಸತ್ಯವನಿತರ ಸಾಕ್ಷಿ! (ಗೂರ್ಲ್ಕೂಶಾ. ೦೦೦-೦೫೦); ಸ್ತ್ರೀಮದ್ಯಲೋಲನಾಗಿ . . .

ಪಣ್ಯಮೋಹಿನಿಯರಿಂಗೆ ಮೆಯ್ಮನಗಳನು ರಾಜ್ಯ ರಾಜತೆಗಳನು ಸೋಲ್ತು (ಶಬ್ದಾ. ೨೦೩-೩). [ಸಂ. ರಾಜತಾ]

**ರಾಜತೆ₂** (ನಾ). ಪ್ರಕಾಶ ; ಹೊಳಪು ; ಕಾಂತಿ : ಐಕ್ಯನಾವಲ್ಲಿ ಸುಗಂಧದ ಸುಳುಹಿನಂತೆ ಪಳುಕಿನ ರಾಜತೆಯಂತೆ ಶುಕ್ತಿಯು ಅಪ್ಪುವಿನಂತೆ (ಸಶವ. ೪. II. ೩೩೪-೬). [ಸಂ. ರಾಜತ]

**ರಾಜತೇಜ** (ನಾ). ೧. ಅರಸನಲ್ಲಿರುವ ತೇಜಸ್ಸು, –ಕಾಂತಿ : ರೆಳೊಂಪಿಸುವ ಸಿರಿಮೊಗದ ನೋಟದ ಸೊಂಪಡಗಿದಾಲಿಗಳ ಧೈರ್ಯದ ಗುಂಪಳಿದ ನಿಜರಾಜತೇಜದ ವಿಪುಳವೇದನೆಯ . . . ವಿಘಾತಿಯ ರೆಳೊಂಪಿನಲಿ ಹುದುಗಿದ ಮಹೀಶನ ಕಂಡನಾ ಪಾರ್ಥ (ಕುವ್ಯಾ.ಶ. ೦೩-೩). ೨. ಘನತೆ ; ಹಿರಿಮೆ : ನ್ಯಾಯನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ ಲೋಕವಿರೋಧಿ ಶರಣನಾರಿಗಂಜುವನಲ್ಲ ಕೂಡಲಸಂಗಮದೇವರ ರಾಜ ತೇಜದಲ್ಲಿಪ್ಪನಾಗಿ (ಬಸವ. ೭೩೩). [ಸಂ. ರಾಜತೇಜಸ್]

**ರಾಜತ್ವ** (ನಾ). = ರಾಜತೆ₁ : ಮೃಗರಾಜಂ ರಾಜತ್ವದ ಪಗೆಗಿಜಿಪಂತಿ ಜಿದು ನಖದಿಂ (ಶಾಂತಿಪು. ೭-೭೨) ; ಮನಸ್ಸು ರಾಜತ್ವ ಮಾಡುತ್ತಿರುವಾಗ ಅದು ತನ್ನ ಸುಖವನ್ನು ತಾನೇ ಸೃಷ್ಟಿಮಾಡಿಕೊಳ್ಳಬಲ್ಲುದು (ಶಕ್ತ್ಯ. ೨೦೯). [ಸಂ.]

**ರಾಜದಂಡ** (ನಾ). ೧. ಪ್ರಭುತ್ವದ ಚಿಹ್ನೆಯಾಗಿ ಅರಸನು ಕೈಯಲ್ಲಿ ಹಿಡಿಯುವ ರತ್ನಖಚಿತವಾದ ಚಿನ್ನದ ದಂಡ : ರಾಜದಂಡಕ್ಕಿಂತಲೂ ಕಾಲನ ಕೈಯು ಹೆಚ್ಚು ಬಲಶಾಲಿ ; ಏನನ್ನೂ ಎಸಗಬಲ್ಲದು (ರಾಖಿತ್ತಿ. ೪). ೨. ರಾಜಾಧಿಕಾರ ; ಪ್ರಭುತ್ವ. ೩. ಅರಸನು ವಿಧಿಸುವ ಶಿಕ್ಷೆ, —ದಂಡನೆ : ಅವನು ಘಾತುಕ. ಅವನಿಗೆ ತಕ್ಕ ರಾಜದಂಡವಾಗುವುದು (ದೌಲತ್. ೭೨). ೪. ಅರಸನಿಗೆ ತೆರಬೇಕಾದ ದಂಡ, — ಜುಲ್ಮಾನೆ. [ಸಂ.]

**ರಾಜದಂಡನೆ** (ನಾ). =ರಾಜದಂಡ ೩ : ದ್ವೀಪಾಂತರವಾಸ ಮಾಡಬೇಕೆಂಬ ರಾಜದಂಡನೆಗೆ ಗುರಿಯಾದವರು ಇರುವುದಕ್ಕಾಗಿ ಈ ದ್ವೀಪಗಳಲ್ಲಿ ಸ್ಥಳವು ಏರ್ಪಾಟಾಗಿದೆ (ಭೂಗೋಳ. ೩೦). [ಸಂ. ರಾಜದಂಡನ]

**ರಾಜದರಬಾರು** (ನಾ). ಅರಸನ ಆಸ್ಥಾನ : ರಾಜನ ದರ್ಬಾರು : ರಾಜದರಬಾರಿನಲ್ಲಿ ದೊಡ್ಡಕೆಲಸವನ್ನು ಸಂಪಾದಿಸಬೇಕೆಂಬ ಆಶೆಯಿಂದಲೂ ಅವನು . . . ಅಲ್ಲಿ ವಾಸಮಾಡುತ್ತಿದ್ದನು (ಕಪಾಳಕುಂ. ೩೪).

[ ರಾಜ + ದರಬಾರು (< ದರ್ಬಾರು) ]

**ರಾಜದಾರಕ** (ನಾ). = ರಾಜಕುಮಾರ : ಸಮಪಾಂಸುಕ್ರೀಡಾನೇಕವಿಧ್ರುವ ಕ್ರೀಡಾರಸೋದಾರರಾಜದಾರಕಪರಿವೃತನಾಗಿ (ಆದಿಪು. ೬-೪೦ ವ). [ಸಂ.]

**ರಾಜದೂತ** (ನಾ). (ಅರಸನಿಂದ ನಿಯಮಿಸಲ್ಪಟ್ಟು) ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಕಳುಹಿಸಲಾಗುವ ಪ್ರತಿನಿಧಿ ; ರಾಯಭಾರಿ : ಲಾಂಗಲಹಸ್ತಂ ವಿದ್ಯಾಧರರಾಜದೂತನ ಮೊಗಮಂ ನೋಡಿ (ಶಾಂತಿಪು. ೨-೦೬ ವ). [ಸಂ.]

**ರಾಜದ್ರವ್ಯ** (ನಾ). ಅರಸನಿಗೆ ಸಲ್ಲಿಸಬೇಕಾದ ಹಣ,—ಧನ : ಬಾಳ್ಗುಳಿಯೂರೊಡೆಯಂ ಪಶುಪತಿಭಟ್ಟಬಿಗ್ಗಿ ಬಾಬನ್ನಿಯ ಸಂಬನ್ಧದ ರಾಜದ್ರವ್ಯ ಮಾದುದೆಲ್ಲಮಂ ಬಿಟ್ಟರ್ (ಶಾಸ. IX-i, ೩೩-೧೨ : 956). [ಸಂ.]

**ರಾಜದ್ರೋಹ** (ನಾ). ಅರಸನಿಗೆ ಅಥವಾ ಆಡಳಿತಕ್ಕೆ ಕೇಡು ಬಗೆಯುವಿಕೆ,- ಅನ್ಯಾಯ ಮಾಡುವಿಕೆ : ಆ ಶಿಬಿರದಲ್ಲಿ ನಡೆಯುತ್ತಿರುವುದೆಲ್ಲಾ ಸ್ವಾಮಿದ್ರೋಹ- ರಾಜದ್ರೋಹಗಳೆಂದು ನನಗೆ ಮನವರಿಕೆಯಾಯಿತು (ಶ್ರೀರಾಯ. ೩೩೩). [ಸಂ.]

**ರಾಜದ್ರೋಹಿ** (ನಾ). ಅರಸನಿಗೆ ಅಥವಾ ಆಡಳಿತಕ್ಕೆ ಕೇಡೆಣಿಸುವವನು; ರಾಜದ್ರೋಹವನ್ನು ಬಗೆಯುವವನು: ರಾಜದ್ರೋಹಿಯಾದ ಹೈದರನು ರಾಜ್ಯಭ್ರಷ್ಟನಾದ (೭ಶಕ. ೪೯) ; ರಾಜಾಧಿರಾಜರಾದ ಮೈಸೂರಿನ ಸುಲ್ತಾನರಿಗೂ ರಾಜದ್ರೋಹಿಯಾದ ಈ ದಂಗೆಕೋರನಿಗೂ ಮೈತ್ರಿಯೆಂದರೇನು ? (ದೌಲತ್. ೬೩). [ಸಂ. ರಾಜದ್ರೋಹಿನ್]

**ರಾಜದ್ವಾರ** (ನಾ). (ಅರಮನೆಯ) ಮುಖ್ಯದ್ವಾರ ; ಹೆಬ್ಬಾಗಿಲು : ರಾಜದ್ವಾರದೊಳಗ್ನಿಕುಂಡಮನಲಂಪಿಂ ಮಾಡಿ ತಂದಿಕ್ಕಿ (ದಶಕು. ೦೦-೦೦೩); ತೆಂಕಣ ಬಾಗಿಲೇ ಅರಮನೆಯವರು ಪ್ರವೇಶಿಸುವ ರಾಜದ್ವಾರ (ಸವತಿ. ೪೩). [ಸಂ.]

**ರಾಜದ್ವೇಷ** (ನಾ). ೧. ಅರಸನ ಮೇಲಿನ ದ್ವೇಷ,—ಸೇಡು. ೨. ಚಂದ್ರನ ಮೇಲಿನ ದ್ವೇಷ,—ವೈರ. ೧, ೨ : ರಾಜದ್ವೇಷಂ ಮಧುಪಸಮಾಜಾತಿಪ್ರೀತಿ ತನ್ನ ಸಂಗದೆ ಗುಣಿ ನೀರೇಜಕ್ಕೊಳವೆನಿಸಿದ ಲಕ್ಷ್ಮೀಜಾಯೆಗೆ ಕೂರ್ತವಂಗೆ ಮತಿ ಸಮನಿಪುದೇ (ವ್ಯಶಬಿ. ೦೨-೪೨). [ಸಂ.]

**ರಾಜಧರ** (ನಾ). ಚಂದ್ರನನ್ನು ಧರಿಸಿದವನು ; ಚಂದ್ರಶೇಖರ; ಶಿವ : ರಾಜಧರನಂತಾ ಪ್ರಮಥಗಣರಾಜಿಸಾರೂಪ್ಯದೊಳಮರ್ದ್ ವಿರಾಜಿಸುತ್ತಿರೆ (ಬಸವ. ೬-೨೯) ; ನೀರೇಜಬಾಂಬಕನೊಲ್ದು ರಾಜಧರನಿಂದಂ ಸೂನುವಂ. . . ಪಡೆದಂ (ಹವ್ಯಾರ. ೨-೭). [ಸಂ.]

**ರಾಜಧರ್ಮ** (ನಾ). ಅರಸನು ಪಾಲಿಸಬೇಕಾದ ಧರ್ಮ,–ಕರ್ತವ್ಯ : ವಸುಧೆಯನೇಕಾಯತ್ತವಾನಸನಟಿವಿಂ ನೆಟಿದು ರಾಜಧರ್ಮದಿನಭಿರಕ್ಷಿಸೆ ಪೋಯ್ತು ಕಾಲಂ (ಶಾಂತಿಪು. ೩-೩೯); ಹೇಳು ಹೇಳೆನ್ನೊಮ್ಮೆ ಧರ್ಮವ ಕೇಳಿದಟಿಂದುವು ನಿಮ್ಮ ಕಯ್ಯಲಿ ಕೇಳಲಾಗದೆ ರಾಜಧರ್ಮ ಪುರಾಣಸಂಗತಿಯ (ಕುವ್ಯಾ.ಶ. ೨೭-೩೩). [ಸಂ.]

**ರಾಜಧಾನಿ** (ನಾ). ದೇಶದ ಅಥವಾ ರಾಜ್ಯದ ಮುಖ್ಯಪಟ್ಟಣ,_ ಆಡಳಿತಕೇಂದ್ರ : '' ಸ್ಕಂಧಾವಾರಃ, ರಾಜಧಾನೀ–ಈ ೨ ರಾಜಧಾನಿ '' (ಹಲಾಯು. ೪೬-೧೩೦) ; ದಕ್ಷಿಣೋತ್ತರಶ್ರೇಣಿಗಳ್ಗೆ ರಾಜಧಾನಿಗಳಾಗಿರ್ದ. . . ಪೊಟಲ್ಗಳನೊಳಕೊಂಡು (ಆದಿಪು. ೦-೭೨ ವ). [ಸಂ. ರಾಜಧಾನೀ]

**ರಾಜನ, ರಾಜಣ, ರಾಜಾಣ, ರಾಜಾನ, ರಾಜುಣ** (ನಾ). ಒಂದು ಬಗೆಯ ಶ್ರೇಷ್ಠಜಾತಿಯ ಬತ್ತ ಮತ್ತು ಅದರ ಅಕ್ಕಿ ; ರಾಜಾನ್ನ : ಕನ್ನದ ಬೊಮ್ಮಿದೇವಯ್ಯಗಳು ದಮುಮರಸುಗಳು ರಾಜನದ ಬೊಮ್ಮಿದೇವಯ್ಯಗಳು (ಬಸವ. ೩೬-೨) ; ಕಲ್ಲವ್ವ ತಾಯಿ ಮೆಲ್ಲವ್ವ ರಾಜನವ ಜಲ್ಲಜಲ್ಲಾನೆ ಉದುರವ್ವ ನಾ ನಿನಗೆ ಬೆಲ್ಲದಾರತಿಯ ಬೆಳಗೇನು (ಜಗೀತ. ೨). **ರಾಜಣ** : ಉತ್ತ ಹೊಲದಲ್ಲಿ ಉತ್ರಾಣಿ ಕಾಳಲ್ಲಿ ಪುಟ್ಟರಾಜಣದ ಬಯಲಲ್ಲಿ ಬನಶಂಕ್ರಮ್ಮ ಚಿತ್ರುಸಾಲಲ್ಲಿ ಬರುತಾಳೆ (ಜಗೀತ. ೯೦) ; ರಾಜಣದ (ನೇ) ಗಣೆಗೆ ಒರಗಿ ನಿಂದಿರುವ್ಹೋಳೆ ರಾಜ ಮಾದುಣನ ಕಿರುದಂಗಿ ಕಡುಚೆಲುವೆ ರಾಜಣ ತತ್ವಾರೆ ಹಸೆ ಹುಯ್ಯ (ಜಾಕಥ. ೦೨೩). **ರಾಜಾಣ** : ರಾಗಿಯು ಮುಗಿದಾವು ರಾಜಾಣ ಹೆಚ್ಚಾವು ನಾಸ್ಟಿಡಿದ ಕೆಲಸ ಮದಗ್ಯಾವು ರಾಗೀಕಲ್ಲೆ ನಾ ತೂಗಿ ಬಿಡುವೇನು ಬಲದೋಳ (ಜಗೀತ. ೩). **ರಾಜಾನ** : ರಾಗಿ ಬೀಸೋ ಕಲ್ಲೆ ರಾಜಾನ ಒಡೆಗಲ್ಲೆ ರಾಯ ಅಣ್ಣಾಯ್ನ ಅರಮನೆ ರಾಗೀಕಲ್ಲೆ ರಾಜಬೀದಿಗೆ ದನಿದೋರೆ (ಜಾಕಥ. ೩೪). **ರಾಜುಣ** : ಗಂಧಾದ ಮರಪಡಿ ರನ್ನಾದ ಕಲ್ಲಿನೊರ್ಳ ಆಡೀ ರಾಜುಣವ ತೋಳಸೋಳಿ ಗೋಪಮ್ಮ ನಂದಾಗೋವಿಂದನ ಕರಕೊಳ್ಳೆ (ಜುಬ್ಬಜ. ೩೬).

[ < ಸಂ. ರಾಜಾನ್ನ ]

**ರಾಜನೀತಿ** (ನಾ). ೧. ಅರಸನಿಗೆ ಅಥವಾ ರಾಜ್ಯದ ಆಡಳಿತಕ್ಕೆ ಸಂಬಂಧಿಸಿದ ನೀತಿ : ಆಡಳಿತವ್ಯವಹಾರ ; ರಾಜಕಾರಣ : ಸಾಮವೆಂಬುದು ರಾಜನೀತಿಗೆ ತಾ ಮನೋಹರ ರೂಪು ಬದುಕುವ ಭೂಮಿಪಾಲರನಂತವಿಭವಕೆ ಬೀಜಮಂತ್ರವದು (ಕುವ್ಯಾ.ಉ. ೯-೩); ಈ ಗಣಿಯು . . . ರಾಜನೀತಿಯರಿತು ಸಮಯೋಚಿತವಾಗಿ ಮಾತನಾಡಬಲ್ಲುದು (ಪಕಶಾ. ೦); ರಾಜದ್ರೋಹಿ . . . ಇನ್ನಿವನ ಜೀವದಿಂದಿರಲೀವ ಕರುಣೆ ಏತರ ರಾಜನೀತಿ ? (ಗೂಟ್ಯೊಕಾ. ೩-೦೭೦). ೨. [ಗಣಿತ] ಒಂದು

ಬಗೆಯ ಲೆಕ್ಕ (?) : ಕರ್ಣಾಟಕದ ವಾರ್ತೆಯಲ್ಲಿ ಅಷ್ಟಾದಶಗಣಿತಂಗಳುಂಟು ಆವಾವುವೆಂದೊಡೆ ಮಗ್ಗಿ ಗಣಿತ . . . ಕ್ಷೇತ್ರಗಣಿತ ಮಂಗಳಿ ಅಳತೆ ರಾಜನೀತಿ ಬಣ್ಣಾಂತರ ಪದ್ಮನಾಭ . . . ಮುತ್ತಿನ ಚೆಲ್ವಿನ ಗಣಿತವುಂ ಅಷ್ಟಾದಶಗಣಿತಂಗಳು (ಕ್ಷೇತ್ರಗ. ೨-೩). [ಸಂ.]

**ರಾಜನೀತಿಜ್ಞ** (ನಾ). ರಾಜನೀತಿಯನ್ನು ಬಲ್ಲವನು; ರಾಜ್ಯದ ಆಡಳಿತ ವ್ಯವಹಾರವನ್ನು ತಿಳಿದವನು : ಆಂಗ್ಲರಾಜನೀತಿಜ್ಞರು ನಿರೂಪಿಸಿದ ವಿದ್ಯಾಭ್ಯಾಸವಿನ್ಯಾಸ ಇವೆರಡಕ್ಕೂ ಪುಷ್ಟಿ ಕೊಟ್ಟಿತು (ಮುಕ್ತಾ.ರ. ೦೦೪ ೩೬೬೪). [ಸಂ.]

**ರಾಜನೆಲ್ಲು** (ನಾ). ಒಂದು ಬಗೆಯ ಉತ್ತಮಜಾತಿಯ ಬತ್ತ; ರಾಜಾನ್ನ : (*). [ರಾಜ + ನೆಲ್ಲು (< ನೆಲ್)]

**ರಾಜನ್ಯ** (ನಾ). ೧. ದೊರೆ ; ಅರಸು : "ರಾಜಾ, ರಾಜನ್ಯಃ . . . ಲೋಕಪಾಲಃ—ಈ ೧೨ ಅರಸು" (ಹಲಾಯು. ೬೯—೨೬೭). ೨. ಕ್ಷತ್ರಿಯ ವಂಶದಲ್ಲಿ ಹುಟ್ಟಿದವನು ; ಕ್ಷತ್ರಿಯ : "ಮೂರ್ಧಾಭಿಷಿಕ್ತಃ, ರಾಜನ್ಯಃ, ಬಾಹುಜಃ, ಕ್ಷತ್ರಿಯಃ, ವಿರಾಟ್—೫ ರಾಜ್ಯಾಧಿಕಾರದ ಪಟ್ಟ ಕಟ್ಟಿಕೊಂಡಿರುವ ಕ್ಷತ್ರಿಯನಿಗೂ ಅವನ ವಂಶದಲ್ಲಿ ಹುಟ್ಟಿದವರಿಗೂ ಹೆಸರುಗಳು" (ಸಿದ್ಧಾಂತಿ. ೨೩೪); ರಾಜನ್ಯಗೊಂದು ಸಭೆ; ಪುರದ ಪುರಂಧ್ರಿಯಗೊಂದು ಸಭೆ ಯೋಜನವಳತೆಯೊಳಾಯ್ತು (ರಾಜಶೇಖ. ೦೬೬-೦); ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು . . . ರಾಜನ್ಯರಿಪು ಪರಶುರಾಮನಮ್ಮನ ನಾಡು (ಕನ್ನಡಾ. ೦೦೦). [ಸಂ.]

**ರಾಜನ್ಯಕ** (ನಾ). ಅರಸರ ಸಮೂಹ ; ದೊರೆಗಳ ಗುಂಪು : "ರಾಜಕಂ, ರಾಜನ್ಯಕಂ-ಅರಸುಗಳ ಗುಂಪಿಗೆ ರಾಜನ್ಯಕವೆಂದು ಹೆಸರು" (ಸಿದ್ಧಾಂತಿ.೨೩೫); ಅನೇಕ ರಾಜನ್ಯಕಮುಕುಟಸಂಘಟ್ಟೋಚ್ಚಲನ್ಮಣಿಮರೀಚಿಗಳ್ ವಿಲಯಾನಲ ವಿಸ್ಫುಲಿಂಗಂಗಳಂತೆ ದೆಸೆದೆಸೆಗೆ ಕೆದಱೆ (ಆದಿಪು. ೦೪-೬೨ ವ) ; ರಾಜಶೇಖರ ಸುಕುಮಾರನ ಬಗೆಗೆ ಸಭಾಸದವೃದ್ಧಪ್ರಸಿದ್ಧರಾಜನ್ಯಕಂ ಬಗೆ ಮೆಚ್ಚಿ ಮಣಿಮಕುಟಮನೊಲೆದು ತೂಗಿ (ರಾಜಶೇ. ೦೪-೩೦ ವ). [ಸಂ.]

**ರಾಜನ್ವತಿ** (ನಾ). ಒಳ್ಳೆಯ ರಾಜನನ್ನು ಉಳ್ಳ ದೇಶ ; ಸದ್ಗುಣಿಯಾದ ಅರಸನಿರುವ ನಾಡು : ರಾಜನ್ವತಿ ಮಾಡು ಧರಣಿಯಂ ಧರಣಿಪತೀ (ಆದಿಪು. ೦೪-೨೦) ; ರಾಜನ್ವತೀನಾಮಮಂ ವಸುಧಾವಲ್ಲಭೆ ತಾಳ್ದಿ (ಅಪಂಪು. ೯-೪): [ಸಂ. ರಾಜನ್ವತೀ]

**ರಾಜಪಟ್ಟ** (ನಾ). ೧. (ವಿಧಿಪೂರ್ವಕವಾಗಿ) ಅರಸನ ಹಣೆಗೆ ಕಟ್ಟುವ ರಾಜ್ಯಾಧಿಕಾರದ ಪಟ್ಟ,—ಲಲಾಟಪಟ್ಟ : (*). ೨. ದೊರೆಯ ಅಧಿಕಾರ ; ಅರಸೊತ್ತಿಗೆ : ರಾಜಪಟ್ಟವು ದೊರಕುವ ಮೊದಲು ಬಡಜನರ ಗೆಳೆಯರ ಸುಖದುಃಖಗಳು ಅವನಿಗೆ ತಿಳಿದಿರುವುವು (ಗುರುಚ. ೫). [ಸಂ.]

**ರಾಜಪಿಂಡ** (ನಾ). ಅರಸುಕುಲದಲ್ಲಿ ಹುಟ್ಟಿದವನು ; ರಾಜವಂಶಕ್ಕೆ ಸೇರಿದವನು : ಚಂದ್ರಹಾಸನ ಮುಖ ನೋಡಿದ ಕೂಡಲೆ ಅವನು ರಾಜಪಿಂಡ ಎಂದು ತಿಳಿಯುತ್ತಿತ್ತು (ರತ್ನ). [ಸಂ.]

**ರಾಜಪಿಂಡೆ** (ನಾ). = ರಾಜಪಿಂಡ : ಪಾಜಗಳೂ ರಾಜಪಿಂಡೆಯವರೂ ದಿವ್ಯಾಸನಗಳನ್ನು ಅಲಂಕರಿಸಿದ್ದಾರೆ (ದಾರಿಶ್. ೨೨). [< ರಾಜಪಿಂಡ]

**ರಾಜಪುತ್ರ** (ನಾ). ೧. ಅರಸುಮಗ ; ರಾಜಕುಮಾರ : ಬಾಹುಬಲಿವಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು (ಶಾಂತಿಪು. ೪-೩೦ ವ) ; ತಗರ. . . ಜಗಳವ ಕಾದಿಸುತಿಹ ರಾಜಪುತ್ರರು ಸೊಗಸಿದರಾ ಬೀದಿಯೊಳಗೆ (ಕಂಪಿ. ೭-೦೨). ೨. ಒಂದು ಕ್ಷತ್ರಿಯವಂಶದ ಹೆಸರು : ರಜಪೂತ : ಬಾಟನೀರೆಂಬಲ್ಲಿನ ರಾಜಪುತ್ರ ಅರಸನೊಬ್ಬನು ಅವನನ್ನು ಪ್ರತಿಭಟಿಸಿದನು (ಶಾಶ್ರ. III, ೦೨೩೦). [ಸಂ.]

**ರಾಜಪುತ್ರಿ** (ನಾ). ದೊರೆಯ ಮಗಳು ; ಅರಸನ ಪುತ್ರಿ : ರಾಜಪುತ್ರಿಯು ನಾನು, ರಾಜೀವಕುಲದ ಕುಲದೈವತದ ಹಾಗೆ ಬೆಳೆದು . . . ರಾಜಿಸಿದೆವು (ಸೃಷ್ಟಿಶು. ೪-೦೫); ರಾಜಪುತ್ರಿಯು ಎಚ್ಚೆತ್ತರೆ ತನ್ನನ್ನು ಕೇಳದೆ ನಿನ್ನನ್ನು ಹೊರಗೆ ಬಿಟ್ಟದ್ದಕ್ಕಾಗಿ ವಿಪರೀತವನ್ನು ತಿಳಕೊಂಡಾಳು (ಶದ್ಮಸ. ೬೫). [ಸಂ. ರಾಜಪುತ್ರೀ]

**ರಾಜಪುರುಷ** (ನಾ). ೧. ದೊರೆಯ ಸೇವಕ ; ಅರಸನ ಆಳು. ೨. ಅರಸನ ಕೈಕೆಳಗಿನ ವ್ಯಕ್ತಿ,— ಅಧಿಕಾರಿ : ಮಂತ್ರಿ ಪೂರ್ಣಯ್ಯನವರು ಜೊತೆಯಲ್ಲಿ ಅಜಾನುಬಾಹುವಾದ ರಾಜಪುರುಷನೊಬ್ಬನನ್ನು ಕರೆದುಕೊಂಡು ದರಿಯಾದೌಲತ್ತಿನ ಮೆಹಡಿಯ ಮೇಲೆ ಬಂದರು (ದಾರಿಶ್. ೨೩). ೩. ಮಂತ್ರಿ ; ಸಚಿವ. [ಸಂ.]

**ರಾಜಪುರೋಹಿತ** (ನಾ). ಅರಮನೆಯ ಧಾರ್ಮಿಕ ವ್ರತಾದಿಗಳನ್ನು ಮಾಡಿಸುವವನು,— ಪುರೋಹಿತ : ಚಕ್ರವರ್ತಿಯು . . . ರಾಜಪುರೋಹಿತನನ್ನು ಕರೆಯಿಸಿ, ಶಾಂತಿಸಂಸ್ಕಾರಗಳನ್ನು ಮಾಡಿಸಿದನು (ಮುಕ್ತ. ೫೭); ರಾಜಪುರೋಹಿತರು ಮಹಾಬ್ರಾಹ್ಮಣರು . . . ಶಾಂತಲ ದೇವಿಗೆ ಮಂತ್ರಪೂರ್ವಕವಾಗಿ ಅಭಿಷೇಕಮಾಡಿದರು (ಶಾಂತಲಾ. ೦೦೩). [ಸಂ.]

**ರಾಜಪೂಜಿತ** (ನಾ). ಅರಸರಿಂದ ಪೂಜಿಸಲ್ಪಟ್ಟವನು,— ಗೌರವಿಸಲ್ಪಟ್ಟವನು : ಕಾಳಿಗನತಿಧವಳಯಶಂ ರಾಜಪೂಜಿತಂ ಸ್ಥಿರವಚನಂ (ಶಾಇ. XX, ೩೦-೦೨; 1044). [ಸಂ.]

**ರಾಜಪೂಜ್ಯ** (ನಾ). ಅರಸರಿಂದ ಪೂಜಿಸಲ್ಪಡುವವನು,—ಗೌರವಿಸಲ್ಪಡುವವನು : ನಾಗನಾಯಕಜಿತಾರಿಮಣ್ಡಲವಂ ರಾಜಪೂಜ್ಯಮಮಲ ಶ್ರೀಯುಮಪ್ಪುದವಂ ಕಾಮದವಂ ಹತಮದವಂ ನಮಾಮ್ಯಹಮ್ (ಎಕ. II, ೩೪-೩; ಕು. 700); ನುಡಿದಡೆ ಕರ್ಣ್ನಾಹವದೊಳಿನ್ದ್ರಸುತಂ . . . ಚಾರುದತ್ತನೆನ್ದಡೆ ಸಲೆ [ಮೆಚ್ಚು] ಬಣ್ಣಿಸುವರಾಗ್ಗಳ್ ರಾಜಿತ ರಾಜಪೂಜ್ಯನಂ (ಶಾಇ. XX, ೩೦-೦೫; 1044); ರೂಪೋತ್ಕರನು ಧನಿಕನು ರಾಜಪೂಜ್ಯನು ಕೀರ್ತಿವಲ್ಲಭನು (ಕುಮಾ.ಲಾ. ೩-೦೦೫). [ಸಂ.]

**ರಾಜಪೆಂಡಿ** (ನಾ). = ರಾಜಪಿಂಡ : "ರಾಜಬೀಜೀ, ರಾಜವಂಶ್ಯಃ — ೨ ರಾಜವಂಶದಲ್ಲಿ ಹುಟ್ಟಿದವನ ಹೆಸರುಗಳು. ರಾಜಪೆಂಡಿ, ಅರಸುಪೆಂಡಿ" (ಸಿದ್ಧಾಂತಿ. ೨೦೨). 'ಅರಸುಪೆಂಡಿ' ಪರಾ. [ರಾಜ + ಪೆಂಡ್ಸು]

**ರಾಜಪ್ರಕೃತಿ** (ನಾ). ಅರಸನು ಮಂತ್ರಾಲೋಚನೆಯನ್ನು ಮಾಡಿ ಕಾರ್ಯವನ್ನು ನಿರ್ವಹಿಸುವಿಕೆ : "ಮಂತ್ರಂ ಕ್ಷಾತ್ರವಟ್ಟೆ ರಾಜಪ್ರಕೃತಿಯಕ್ಕು" (ಮಂಗರಾ. ೭೯-೬). [ಸಂ.]

**ರಾಜಪ್ರತಿನಿಧಿ** (ನಾ). ಅರಸನ ಪರವಾಗಿ ಅಧಿಕಾರವನ್ನು ನಿರ್ವಹಿಸುವ ಅಧಿಕಾರಿ : ಇನ್ನು ಕೆಲವು ಸಂದರ್ಭಗಳಲ್ಲಿ ರಾಜಪ್ರತಿನಿಧಿಗಳೂ ಇವರೊಂದಿಗೆ ಕಲೆಯುತ್ತಿದ್ದುದುಂಟು (ಶಾಸಗ. ೩೫). [ಸಂ.]

**ರಾಜಪ್ರಮುಖ** (ನಾ). ರಾಜ್ಯದ ಪ್ರಧಾನವ್ಯಕ್ತಿ ; p ಈಗಿನ 'ರಾಜ್ಯಪಾಲ' ಎಂಬ ಪದಕ್ಕೆ ಪರ್ಯಾಯವಾಗಿ ಹಿಂದೆ ಬಳಕೆಯಲ್ಲಿದ್ದ ಪದ : ಎಲ್ಲೆಲ್ಲಿ "ರಾಜ್ಯಪಾಲರು" ಎಂಬ ಪದವು ಬರುತ್ತದೆಯೋ ಅಲ್ಲಲ್ಲಿ ಆ ಪದಕ್ಕೆ ಬದಲಾಗಿ "ರಾಜಪ್ರಮುಖರು" ಎಂಬ ಪದವನ್ನು ಸೇರಿಸಿಕೊಳ್ಳತಕ್ಕದು (ಶಾರಾಸ. ೦೩೦). [ಸಂ.]

**ರಾಜಪ್ರಶಂಸೆ** (ನಾ). ಅರಸನನ್ನು ಹೊಗಳುವುದು,— ಶ್ಲಾಘಿಸುವುದು : ರಾಜಪ್ರಶಂಸೆ, ವಂಶಾನ್ವಯ, ಫಲಶ್ರುತಿ ಇವುಗಳನ್ನು ಸಕ್ರಮವಾಗಿ ನಿರೂಪಿಸುವ ಶಾಸನ (ನೂರೆಂಬಿ. ೬೭). [ಸಂ. ರಾಜಪ್ರಶಂಸಾ]

**ರಾಜಫಣಿ** (ನಾ). ಹಾವುಗಳಲ್ಲಿ ಶ್ರೇಷ್ಠವಾದುದು ; ನಾಗರಾಜ ; ರಾಜಸರ್ಪ : "ಫಣಿಫಣಾಗ್ರಾಜಫಣಿಯೊನಲ್ಕರವಾವು" (ಮಂಗರಾ. ೦೦೬-೩). [ಸಂ. ರಾಜಫಣಿನ್]

**ರಾಜಬಲೆ** (ನಾ). ಒಂದು ಬಗೆಯ ಸಸ್ಯ ; ಸಾರಣೆ : "ಸಾರಣೀ . . . ರಾಜಬಲಾ, ಭದ್ರಬಲಾ — ೫ ಕಿರಿಯ ಹಸಾರಣೀಗಿಡ, ಸಾರಣೀಗಿಡ" (ಸಿದ್ಧಾಂತಿ. ೦೪೭). [ಸಂ. ರಾಜಬಲಾ]

**ರಾಜಬಾಳೆ** ' ರಾಜವಾಳೆ ' ನೋ.

**ರಾಜಬಿತ್ತರಿ** (ನಾ). ಅರಸನ ವಿಲಾಸಿನಿ : ಮುತ್ತಿಕೊಂಡಾ ರಾಜಬಿತ್ತರಿಯರು . . . ತೋರಲಾ ರಾಜಪೋಯಿಯರ್ ಧೀರರಾಗಿ ವರದರಗಿಳಿಯಂ ಕುರಿತು ವಹಿಲದಿಂದ ಸರಸಸುಕುಮಾರ ಶುಕರಾಜ ಸಾರ್ವಭೌಮ ಯಾರು ನೀಂ ಬಂದ ಕಾರ್ಯವನ್ನರುಹು ಜೀಯಾ (ಶಗಂಧಿ. ೩೨-೩). [ ರಾಜ + ಬಿತ್ತರಿ$_2$ ]

**ರಾಜಬೀಜಿ** (ನಾ). = ರಾಜಪಿಂಡ : " ರಾಜಬೀಜೀ, ರಾಜವಂಶ್ಯ:— ೨ ರಾಜವಂಶದಲ್ಲಿ ಹುಟ್ಟಿದವರ ಹೆಸರುಗಳು; ರಾಜಪಿಂಡಿ, ಅರಸುಪಿಂಡಿ " (ಸಿದ್ಧಾಂತಿ. ೨೦೨). [ ಸಂ. ರಾಜಬೀಜಿನ್ ]

**ರಾಜಬೀದಿ** (ನಾ). ಮುಖ್ಯರಸ್ತೆ ; ಹೆದ್ದಾರಿ : ಮುಂದೆ ಕಂಬಿಯ ಕಂಚುಕಿಯರೊಲವಿಂದ ವಿಪ್ರರ ಮಂತ್ರಘೋಷಣೆಯಿಂದ ಬಂದರು ರಾಜಪುತ್ರರು ರಾಜಬೀದಿಯಲಿ (ಕೂರಣ. ೦-೦೬-೪೨) ; ದ್ವಾರಕನಾಥಭಟ್ಟನು ತನ್ನ ಮಗನಾದ ಹರಿಯನ್ನು ಕರಕೊಂಡು ರಾಜಬೀದಿಯಲ್ಲಿ ಹೋಗುತ್ತಿದ್ದನು (ಮುಂಬಯಿ. ೯-೦೬೬). [ ರಾಜ + ಬೀದಿ ]

**ರಾಜಬುರಿಹಣ್ಣು** (ನಾ). ಒಂದು ಬಗೆಯ ಹಣ್ಣು : ಗೋಮುಳ್ಳು, ರಾಜಬುರಿಹಣ್ಣು (ಪ್ಯಕಿಶಿ. ೬೭-೦೬೬೦). [ರಾಜಬುರಿ$_0$ (P ← ಇಂ. Raspberry) + ಹಣ್ಣು (< ಪಣ್$_3$)]

**ರಾಜಬೋಯಿ**, ರಾಜಬೋವ (ನಾ). ಅರಸನ ಪಲ್ಲಕ್ಕಿಯನ್ನು ಹೊರುವವನು : ಅಂದಣವನ್ನು ಹೊತ್ತಿರುವವರು . . . ರಾಜಬೋಯಿಗಳು (ಕಂಗಿಳ. ೩೬). **ರಾಜಬೋವ** : ರಾಜಬೋವಂ ಚಂಡವಂಶವುಂ ತನಗೆಂಬ ವ್ಯಾಜದಿಂ ಮನೆಮನೆಗೆ ಬೇಡಿ ಕಲ್ಯಾಣದೊಳಗಾ ಜನಂ ಕುಡದಿರಲು (ಲಕಸಂ. ೩೨-೨೬). [ರಾಜ + ಬೋಯಿ ( < ಬೋಯ)]

**ರಾಜಬೋವ** ' ರಾಜಬೋಯಿ ' ನೋ.

**ರಾಜಬ್ರುವ** (ನಾ). ಅರಸನೆಂದು ಹೇಳಿಕೊಳ್ಳುವವನು ; ಹೆಸರಿಗೆ ಮಾತ್ರ ದೊರೆಯಾದವನು : ಸವನಿಸಿದ ಗರ್ವದಲಿ ರಾಜಬ್ರುವನು ಕಳುಹಿದನಿಂದು ಕರುಣಾರ್ಣವನೆ ನಿಮ್ಮಡಿಯುಂಘ್ರಿಸನ್ನಿಧಿಗೆ (ಶಿಭಾಗ. ೦೦-೩೯-೯೯). [ಸಂ.]

**ರಾಜಭಕ್ತಿ** (ನಾ). ಅರಸನ ಮೇಲಿರುವ ಭಕ್ತಿ; ರಾಜನಿಷ್ಠೆ : ಅವರು ರಾಜಭಕ್ತಿಯನ್ನು ತೋರ್ಪಡಿಸಿದರೆ ಅವರಿಗೆ ನಗರದ ದಿವಾನಗಿರಿಯನ್ನು ಕೊಡಬಹುದು (ಬೌಲಿಕ್. ೬೪). [ಸಂ.]

**ರಾಜಭತ್ತ** (ನಾ). = ರಾಜನೆಲ್ಲು : ಏಲಕ್ಕಿ, ರಾಜಭತ್ತದರಳು ಇವನ್ನು ಸಕ್ಕರೆಯೊಡನೆ ತಿನ್ನಲು ದಾಹವಡಗುವುದು (ಸಕಪ್ರ. ಕಂ. ೪೬೩). [ ರಾಜ + ಭತ್ತ$_1$ (<ಬತ್ತ) ]

**ರಾಜಭವನ** (ನಾ). ಅರಸನ ನಿವಾಸ ; ಅರಮನೆ : ಮಹಾಮಕುಟಬದ್ಧಪರಿವೃತಂ ರಾಜಭವನಮಂ ಪೊಱಮಟ್ಟು (ಆದಿಪು. ೦೦-೦೯ ವ) ; ರಾಜಭವನದ ರಾಜಾಂಗಣಮಂ ಪೊಕ್ಕು (ಪುಶ್ಯಪು. ೮-೯೭ ವ). [ಸಂ.]

**ರಾಜಭಾಷೆ** (ನಾ). ಒಂದು ದೇಶದ ಅಧಿಕೃತವಾದ ಆಡಳಿತಭಾಷೆ : ಆಗ ರಾಜಭಾಷೆಯೊಂದು ಹಿಮಾಲಯದಿಂದ ರಾಮೇಶ್ವರದವರೆಗೂ ಸ್ವೇಚ್ಛೆಯಾಗಿ ಓಡಾಡುವುದು (೪೬ಜಾ. ೨) ; ಪರ್ಷಿಯನ್‌ಭಾಷೆ ಬಹುಕಾಲ ದೆಹಲಿಅರಸರ ರಾಜಭಾಷೆಯಾಗಿ ನಡೆದುಬಂದಿತು (ಭಾರದ. ೪೦೪). ' ರಾಜ್ಯಭಾಷೆ ' ಪರಾ. [ ಸಂ. ರಾಜಭಾಷಾ ]

**ರಾಜಭೋಗ** (ನಾ). ೧. ಅರಸನಿಗೆ ಯೋಗ್ಯವಾದ ಆಹಾರ ; ಶ್ರೇಷ್ಠವಾದ ಆಹಾರ : ಇದರಲ್ಲಿ ಅನ್ನ ಸಾರು ಇವೆ. ಅದೇ ನನಗೆ ರಾಜಭೋಗ (ಕೀಶ್ರಕ್ಷಿ. ೪೨). ೨. ಅರಸರಿಗೆ ಯೋಗ್ಯವಾದ ಸುಖ ; ಶ್ರೇಷ್ಠವಾದ ಸುಖ. ೩. ಒಂದು ಬಗೆಯ ಬತ್ತ ಮತ್ತು ಅದರ ಅಕ್ಕಿ : ರಾಜಭೋಗ ಊಟಕ್ಕೆ ಚೆನ್ನಾಗಿರುತ್ತದೆ (ಲೂ೩). [ಸಂ.]

**ರಾಜಮಂಡಲ**, ರಾಜಮಂಡಳ (ನಾ). ೧. ದೊರೆಗಳ ಸಮೂಹ ; ಅರಸರ ಗುಂಪು : ಭಾರತೀಯರಾಜರಾದ ತಾವೇ ನಿಯೋಜಿಸಿದ ಯಾವದೇ ಸಾಯುಕ್ತರಾಜಮಂಡಲದ ಕೈಯಲ್ಲಿ . . . ಸಮರ್ಪಿಸಿ (ಶ್ರಣಂರ. ೫೭). ೨. ಚಂದ್ರಮಂಡಲ. **ರಾಜಮಂಡಳ** : ೧, ೨ : ರಿಪುರಾಜಮಂಡಳಂ ಕುಂದಿ ಪದ್ಮತೇಜದಿನದೊರ್ಮೆಯುಂ ಪೆರ್ಚಿದು ಭಾವಿಪೊಡೆಯ್ದು ಮಿತ್ರಮಂಡಳಮುಂಪಚಯಮುಂ ತಾಳ್ದುದಂತದುಚಿತಂ ಚಿತ್ರಂ (ಪ್ರಶ್ನಪು. ೬-೮). [ಸಂ.]

**ರಾಜಮಂಡಳ** ' ರಾಜಮಂಡಲ ' ನೋ.

**ರಾಜಮಂತ್ರ** (ನಾ). ಅರಸನು ಮಂತ್ರಿಗಳೊಡನೆ ಮಾಡುವ ಆಲೋಚನೆ ; ದೊರೆಯ ಮಂತ್ರಾಲೋಚನೆ : ರಾಯನನುಜರು ದುರುಳರುಚಿತಾನುಚಿತಗೇಡಿಗಳಿರುಳು ದೊರೆಗಳು . . . ಹರಿಯ ಬಲು ಹುಂಟಾದಡೆಯು ಧಿಕ್ಕರಿಸಬಾರದು ರಾಜಮಂತ್ರವನು (ಕುವ್ಯಾಉ. ೬-೦೯). [ಸಂ.]

**ರಾಜಮಂದಿರ** (ನಾ). = ರಾಜಭವನ : ಭರತೇಶ್ವರಚಕ್ರವರ್ತಿ ನಿಜಸ್ಥಪತಿರತ್ನವಿರಚಿತಮಣಿಮಯರಾಜಮಂದಿರಮಂ ಪುಗುವುದುಂ (ಆಪು. ೦೨-೦ ವ); ಜಯರವದ ರಭಸದುದಾರ ಮೆಱೆಯಲು ಬೀಳುಕೊಂಡನು ರಾಜಮಂದಿರವ (ಕುವ್ಯಾಉ. ೦-೪೪). [ಸಂ.]

**ರಾಜಮುಖ** (ನಾ). ರಾಜಸೂಯ ಯಾಗ : ನಿನ್ನ ಕೃಪೆಯಲಿ ರಾಜಮುಖ ನಿಷ್ಪನ್ನವಾದರೆ ಬೊಪ್ಪನಿಂದ್ರನ ಮನ್ನಣೆಯ ವೈಸ್ಸೋಂಕಿನೋಲಗ ಸುಲಭವಹುದು (ಕುವ್ಯಾಸ. ೬-೦೯). ' ರಾಜಸೂಯ ' ಪರಾ. [ಸಂ.]

**ರಾಜಮನೆತನ** (ನಾ). = ರಾಜಕುಲ ೧ : ರಾಜಮನೆತನದಲ್ಲಿ ಜನ್ಮವೆತ್ತಿದರೂ . . . ಗಟ್ಟಿಮುಟ್ಟಾಗಿ ಬೆಳೆದನು (ಮುಕಿಶ. ೭೪). [ರಾಜ + ಮನೆತನ]

**ರಾಜಮನ್ನಣೆ** (ನಾ). ೧. ದೊರೆಯಿಂದ ಬರುವ ಮಾನ್ಯತೆ ; ಅರಸನು ತೋರುವ ಗೌರವ : ಹಿಂದೆ ವೀಣೆ ಶೇಷಣ್ಣನವರು ತಮ್ಮ ಕೊನೆಗಾಲದವರೆಗೂ ಮೈಸೂರಿನ ಆಸ್ಥಾನವಿದ್ವಾಂಸರಾಗಿ ರಾಜಮನ್ನಣೆಗೆ ಪಾತ್ರರಾಗಿದ್ದರು (ಲೂ೩). ೨. ಅತಿಶಯವಾದ ಮನ್ನಣೆ ; ಶ್ರೇಷ್ಠ ಮರ್ಯಾದೆ : ರಾಜಮನ್ನಣೆಯುಂಟು ಭೀಮುವಿಗೆ ! (ಕೆಂಪಡು. ೪೫). [ರಾಜ + ಮನ್ನಣೆ]

**ರಾಜಮಯ್ಯ** (ನಾ). ಒಬ್ಬಾತನ ಹೆಸರು : ರಾಜಮಯ್ಯನ ಮಗ ಭೀಮಯ್ಯ (ಎಕ. X. ಬಂಗಾಮ. ೪೯-೮; 961). [ರಾಜ + ಅಮ (< ಅಮ್ಮ$_1$) + ಅಯ್ಯ$_1$]

**ರಾಜಮರಾಲ**, ರಾಜಮರಾಳ (ನಾ). ಶ್ರೇಷ್ಠವಾದ ಹಂಸ ; ಅರಸಂಚೆ : " ಕಾಲ್ಮೊಗಂ ಕೆಂಪುದೋಱೆ ರಾಜಮರಾಲಂ [ಶಾಶಾಂ. ೪೦] " (ಮುಂಗಿರಾ. ೩೦-೭). **ರಾಜಮರಾಳ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ರಾಜಮರಾಳ** ' ರಾಜಮರಾಲ ' ನೋ.

**ರಾಜಮರ್ಯಾದೆ** (ನಾ). ೧. = ರಾಜಮನ್ನಣೆ ೧: ಕರವಯ್ಯನಿಗೆ . . . ಅಪ್ಪಣೆಗೆ ಮತ್ತು ಗದ್ದಿಗೆಗಳೆಂಬ ರಾಜಮರ್ಯಾದೆಗಳನ್ನೊಳಗೊಂಡು ಪುಲಿನಾಡ ಕೊಳತೂರನ್ನು ವೈಶ್ಯದತ್ತಿಯಾಗಿ ಕೊಟ್ಟನು (ಕೊಳಂಬ. ೪೪ C). ೨. = ರಾಜಮನ್ನಣೆ ೨: ಆ ಸಜ್ಜನರನ್ನು ಕಾಣಲು ಹೋದಾಗ ನಮ್ಮನ್ನು ರಾಜಮರ್ಯಾದೆಯಿಂದ ನೋಡಿಕೊಂಡರು (ಲೂ೩). [ಸಂ. ರಾಜಮರ್ಯಾದಾ]

**ರಾಜಮಲ್ಲ** (ನಾ). ಒಬ್ಬಾತನ ಹೆಸರು ; P ಗಂಗವಂಶದ ಒಬ್ಬ ಅರಸನ ಹೆಸರು : ರಾಜಮಲ್ಲಪೆರ್ಮ್ಮಾನಡಿಗಳ್ ಪೃಥುವೀರಾಜ್ಯಂಗೆಯೆ (ಎಕ. III. ತಂಜಪ. ೬೩-೪ ; 870). ' ರಾಚಮಲ್ಲ ' ಪರಾ. [ಸಂ.]

**ರಾಜಮಹಿಷಿ** (ನಾ). ಅರಸನ ಪಟ್ಟದ ರಾಣಿ ; ಮಹಾರಾಣಿ : ವಿಜಯ ರಾಜಮಹಿಷೀಮಯೂರಾತಪತ್ರಶಂಖಾವಹಸಂಕುಳಂಗಳಿಂದಂ . . . ಶೀವಿದ ಸಿಬಿಗೆಯೊಳ್ (ಆದಿಪು. ೦೪–೯೦ ವ); ಮಂದ್ರತಾರಗೀತಿಯ ಪವಣೊಪ್ಪೆ ರಾಜಮಹಿಷೀಸಭೆಯೊಳ್ ಕಡುಜಾಣೆಯುಂ ಪ್ರವೀಣೆಯುಮೆನೆ ವೀಣೆಯಂ ಮಿಡಿದಳ್ (ಶಾಂತಿಪು. ೯–೦೪೭). [ಸಂ. ರಾಜಮಹಿಷೀ]

**ರಾಜಮಾತೆ** (ನಾ). ಅರಸನ ತಾಯಿ : ರಾಮನು ಪಟ್ಟಕ್ಕೆ ಬಂದರೆ . . . ಕೌಸಲ್ಯೆ ರಾಜಮಾತೆಯಾಗುತ್ತಾಳೆ (ಚಾರಿದ. ೯೬೨) ; ರಾಜಮಾತೆಯವರ ಸಂತೋಷವಂತೂ ಹೇಳತೀರದಷ್ಟಾಗಿತ್ತು (ಶಾಂತಲಾ. ೬೯). [ಸಂ. ರಾಜಮಾತಾ]

**ರಾಜಮಾನ** (ನಾ). ರಾಜನಿಂದ ಅಥವಾ ಸರಕಾರದಿಂದ ಅಧಿಕೃತವಾಗಿ ಗೊತ್ತುಪಡಿಸಲಾದ ಒಂದು ನಿರ್ದಿಷ್ಟ ಅಳತೆ : ಮಹಾಜನ ಪ್ರಜೆಯೂ ಸನ್ಮತದೆ ಕೊಟ್ಟದು ರಾಜಮಾನ ಅಯ್ವತ್ತು ಮತ್ತರ್ (ಎಪಿಕ. IX–i, ೯೬–೭; ಚಿಕಮ ೪೪) ; ಸರ್ವ ನಮಸ್ಯಮಾಗಿ ಬಿಟ್ಟ ಕರಿಯ ಕೈ ರಾಜಮಾನ ಧೊಳಾಜು ಮತ್ತರ್ (ಎಪಿಕ. XVIII, ೯೪–೯೭; 1019). [ಸಂ.]

**ರಾಜಮಾನ್ಯ** (ನಾ). ೧. ದೊರೆಯಿಂದ ಗೌರವಿಸಲ್ಪಟ್ಟವನು. ೨. ಗೌರವಾಸ್ಪದರನ್ನು ಕುರಿತು ಬರೆಯುವಾಗ ಅಥವಾ ಮಾತನಾಡುವಾಗ ಉಪಯೋಗಿಸುವ ಸಾಂಪ್ರದಾಯಿಕವಾದ ಮರ್ಯಾದೆಯ ಮಾತು : ರಾಜಮಾನ್ಯರಾಜಶ್ರೀ . . . . ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯವುಂಟು (ಕುಂಬಾಯ. ೯–೬೯). 'ರಾಜಶ್ರೀ' ನೋ. [ಸಂ.]

**ರಾಜಮಾರ್ಗ** (ನಾ). ೧. ದೊಡ್ಡ ರಸ್ತೆ ; ಮುಖ್ಯವಾದ ಮಾರ್ಗ ; ಹೆದ್ದಾರಿ : "ಘಂಟಾಪಥಃ, ಸಂಸರಣಂ_ಈ ೨ ರಾಜಮಾರ್ಗದ ಪೆಸರು. ೧೦೦೦ ಮಾರಳತೆಯ ಮಾರ್ಗವೆಂದೆಂಬರು" (ಚಾಕರಾ. ೦೯೩) ; ಸಾರ್ವಭೌಮಂ . . . ಚಂಚತ್ಪಂಚರತ್ನತೋರಣಾಲಂಕೃತರಾಜಮಾರ್ಗದಿಂ ಬರ್ಪಾಗಳ್ (ಆದಿಪು. ೦೦–೦೪ ವ) ; ಲಲಿತಕಟಕದ ರಾಜಮಾರ್ಗದೊಳುಲಿವುತಾಡುವ ಭಕ್ತ ಗಣಸಂಕುಳದ ನಡುವೆ . . . ಶವವಸೀಕ್ಷಿಸಿ (ಬಸವ. ೩೨–೦೨). ೨. ದೇಶದ ಮುಖ್ಯಪಟ್ಟಣಗಳಿಗೆ ಹೋಗುವ ದೊಡ್ಡ ರಸ್ತೆ; ಬಾಟಾಮಾರ್ಗ : ರಾಷ್ಟ್ರೀಯ ಹೆದ್ದಾರಿ. ೩. (ಅಲಂ) ಒಳ್ಳೆಯ ದಾರಿ ; ತಕ್ಕ ಉಪಾಯ : ಜನ ತುಂಬಿಸಲಿಕ್ಕೆ ಚರುವೇ ರಾಜಮಾರ್ಗ (ಶೈರ್ಯ. ೧೦೦); ಶಿಸ್ತಿನ ಹೆಸರಿನಲ್ಲಿ ಅದುಮಿ ಹಿಡಿಯುವುದು ಶಿಕ್ಷಣದೃಷ್ಟಿಯಿಂದ ಅಹಿತ. ಅಷ್ಟೇ ಅಲ್ಲ, ಅಪಾಯಕಾರಿ. ಅದರ ಬದಲು ಪ್ರಕಾಶಕ್ಕೆ ಅವಕಾಶ ಕಲ್ಪಿಸುವುದೇ ರಾಜಮಾರ್ಗ (ಬಿಳಿ. ೩೨೨). [ಸಂ.]

**ರಾಜಮಾವು** (ನಾ). ಒಂದು ಬಗೆಯ ಉತ್ತಮ ಜಾತಿಯ ಮಾವು : "ಮಹಾರಾಜಚೂತಃ, ಮಹಾರಾಜಾಮ್ರಃ—ಈ ಯೆರಡುಂ ರಾಜಮಾವು" (ಚಿಕಧ. ೦೨೨). [ರಾಜ + ಮಾವು]

**ರಾಜಮಾಷ** (ನಾ). ಒಂದು ಬಗೆಯ ದ್ವಿದಳಧಾನ್ಯ; ಉತ್ತಮಜಾತಿಯ ಅಲಸಂದೆ : "ಅಲಸಂದೆ ರಾಜಮಾಷಂ" (ವಸ್ತುಕೋ. ೯೩–೦೯); ಮಸೂರಿಕಾ ಕುಲತ್ಥಮುದ್ಗಮಾಷರಾಜಮಾಷಾಢಕೀನಿಷ್ಪಾವಚಣಕಂಸಾಂಭಿಕಾಪರ್ಣಾಸರ್ಷಪಜೀರಕಧಾನ್ಯಕಾದಿವಿವಿಧಧಾನ್ಯಭೇದಂಗಳುಂ (ಆದಿಪು. ೬–೬೨ ವ). [ಸಂ.]

**ರಾಜಮುಡಿ** (ನಾ). ದೊರೆಯು ಮಾಡಿಸಿದ ಕಿರೀಟ; ಕ್ರಿ. ೧೫೭೮–೧೬೧೭ರಲ್ಲಿ ಮೈಸೂರನ್ನು ಆಳಿದ ರಾಜಒಡೆಯರು ಮೇಲುಕೋಟೆಯ ಚೆಲುವರಾಯಸ್ವಾಮಿ ದೇವರಿಗೆ ಮಾಡಿಸಿಕೊಟ್ಟ ರತ್ನಖಚಿತವಾದ ಚಿನ್ನದ ಕಿರೀಟ : ಮೇಲುಕೋಟೆ ಚಲುವರಾಯಸ್ವಾಮಿಯವರಿಗೆ ಅಮೂಲ್ಯ ರತ್ನಗಳಿಂದ ನೂತನವಾಗಿ ಮಾಡಿಸಿದ ವಯಿರಮುಡಿಯಂತಿರುವ ರಾಜಮುಡಿ ಎಂಬ ಕಿರೀಟವನ್ನು ಸಮರ್ಪಿಸಿ...ವಿಶೇಷೋತ್ಸವಗಳಲ್ಲಿ ರಾಜಮುಡಿ ಮಾತ್ರ ಹೋಗಿ ಬರುವಂತೆಯೂ, ನಿಬಂಧನೆ ಮಾಡಿ . . . ಒಪ್ಪಿಸಿದರು (ಮಹಾವಂ. I, ೯೦) ; ವೈರಾಮುಡೀ ಚೆಲುವ ಒಳಗೇನ ಮಾಡೀಯೊ ರಾಜಮುಡೀಯಾ ಬೆಳಕಲ್ಲಿ ಚಲುವಯ್ಯ ವಾಲೇಗೆ ವಜ್ರಾರ ಬಿಗಿಸ್ಯಾನೆ (ಹುಟ್ಟಿಕ. ೬೬). 'ವೈರಮುಡಿ' ಪರಾ. [ರಾಜ + ಮುಡಿ$_{2}$]

**ರಾಜಮುದ್ರೆ** (ನಾ). ಅರಸನ ಲಾಂಛನ, - ಮೊಹರು ; ಅರಸೊತ್ತಿಗೆಯ ಗುರುತು : ಸಮಸ್ತಪ್ರಜೆಯನ್ನು ಪರಿಪಾಲಿಸುತ ಚಂದದಿಂದಿಹುದೆನುತ ರಾಜಮುದ್ರೆಯನಿತ್ತು ಬೀಳ್ಕೊಡುತ (ಸಬಸೋ. ೩೪–೬೨). [ಸಂ. ರಾಜಮುದ್ರಾ]

**ರಾಜಮೋಡಿ** (ನಾ). ಅರಸನ ಪ್ರಭಾವ,—ವರ್ಚಸ್ಸು : ಸುಮ್ಮನಿರ್ದುದು ಜನ ಭರತಚಕ್ರೇಶನ ಸೊಮ್ಮಲ್ಲವೇ ರಾಜಮೋಡಿ (ಭರತ. ೦–೬೦) ; ರಾಜ ಮೋಡಿಯಿಂದೊಡಗೂಡಿ ಆಹ್ವಾನಿಸುವ ಸುಗಂಧರಾಯನ ಗಂಭೀರಧ್ವನಿ (ಸೌಗಂಧಿ. ೬೪೬–೦೨) ; ಅಲ್ಲಿಗೆ ಪುರೋಹಿತನುಂ ಬಂದು ಅಲಂಕಾರಯುಕ್ತನಾದ ರಾಜೇಂದ್ರನ ಮುಂಗಡೆಯೊಳ್ ನಿಂತು ಸೌಂದರ್ಯಾದಿ ರಾಜಮೋಡಿಗಳಂ ನೋಡಿದನು (ಕುರುಕ. ೮೩೬). [ರಾಜ + ಮೋಡಿ$_{1}$]

**ರಾಜಮೋಡಿಗ** (ನಾ). ಅರಸನ ವರ್ಚಸ್ಸುಳ್ಳವನು : ಅರುಹಪೂಜೆಯೊ ಮಧುವೆಯೊ ಅಲ್ಲವಿದು ಸ್ವಯಂವರಕೆ ಕೂಡಿದ ಕೂಟದಂತೆ ಲೆರಸೊಬಗಾಗಿದೆ ಹೇಳೆಂದನು ಜೀಯಗೆ ಪರಿಯೊಳು ರಾಜಮೋಡಿಗನು (ಭರತ. ೩೩–೯೦). [ರಾಜಮೋಡಿ + — ಗ$_{2}$]

**ರಾಜಯಕ್ಷ್ಮ** (ನಾ). ತೀವ್ರತರವಾದ ಒಂದು ಬಗೆಯ ಕ್ಷಯರೋಗ : "ರಾಜಯಕ್ಷ್ಮಾ, ಕ್ಷಯಃ, ಶೋಷಃ — ಈ ೩ ಕ್ಷಯವ್ಯಾಧಿ" (ಸರಾಯು. ೯೬–೪೪೯) ; ಅಳಿಯಂ ಪೂಗಣ ನೆಸ್ಸೀ ಮಗಳೆ ಚಿವಳೆ ಪುತ್ರಂ ಕರಂ ರಾಜಯಕ್ಷ್ಮಾಕುಳನೆನ್ಸಿ ಶ್ಚರ್ಯಮುಂ ನಿರ್ಜರರೆ ಕಪರ್ದಾರ್ (ರಾಜಕೆ. ೦–೦೦೨). [ಸಂ.]

**ರಾಜಯೋಗ** (ನಾ). ೧. [ಯೋಗ] ನಾಲ್ಕು ಬಗೆಯ ಯೋಗಗಳಲ್ಲಿ ಒಂದು ; ಹಠಯೋಗದಿಂದ ಭಿನ್ನವಾದ, ಸುಲಭವಾಗಿ ಅಭ್ಯಾಸ ಮಾಡಬಹುದಾದ ಒಂದು ಬಗೆಯ ಯೋಗ : ಅಂತರ್ಬಾಹ್ಯದ ದೃಷ್ಟಿ ಮನಸ್ಸುಗಳ ಹೊಂದಿಹೊಮ್ಮಲೀಯದೆ . . . ನಾದಬ್ರಹ್ಮ ಸಾಕ್ಷಾತ್ಕಾರವಂ ಕಂಡುಕೊಳ್ಳುವುದೆ ರಾಜಯೋಗ (ಶರಗೋ. ೩–೦೪) ; ಮಂತ್ರಯೋಗ ಲಯಯೋಗ ಹಠಯೋಗ ರಾಜಯೋಗವೆಂದು ಯೋಗಚತುರ್ವಿಧದೊಳಗೆ ಮೊದಲು ಮಂತ್ರಯೋಗದ ಭೇದವೆಂತೆಂದೊಡೆ (ಅನುಭಸೆ. ೨೦೨–೩೨). ೨. [ಜ್ಯೋತಿ] ಜನ್ಮಕುಂಡಲಿಯಲ್ಲಿ ರಾಜತ್ವವನ್ನು ಸೂಚಿಸುವ ಗ್ರಹಗಳ ಕೂಟ : ಉದಯಿಸಿದಾಲಯಕ್ಕು ಮಹಿಯಾಲಯದಲ್ಲಿ ಸಮಸ್ತ ಸೌಮ್ಯರೊಂದಿದೊಡತಿಧನ್ಯನೆಂಗುಂ . . . ಇದು ಮುಖ್ಯಮೆನಿಪ್ಪುದು ರಾಜಯೋಗದೊಳ್ (ಜಾತಕ. ೦೨–೩೩). ೩. [ವೈದ್ಯಶಾ] ಅತ್ಯುತ್ತಮವಾದ ಔಷಧ.

**ರಾಜಯೋಗ ಪಳದ್ಯ**—(ಅತ್ಯುತ್ತಮ ಔಷಧಿಗಳಂತೆ ಉಪಯೋಗವಾಗುವ ಪದಾರ್ಥಗಳಿಂದ ತಯಾರಿಸಿದ) ಒಂದು ಬಗೆಯ ಮೇಲೋಗರ : ಕೊತ್ತುಂಬ್ರಿ, ಓಮ, ಸಾಸಿವೆ, ಸೈಂಧವಲವಣ, ದಾಳಿಂಬದ ಕಾಯಿ, ನೆಲ್ಲಿಚಟ್ಟು, ಶುಂಠಿ, ಬಿಡುಲವಣ ಇಷ್ಟನ್ನೂ ಸಮಭಾಗ ಚೂರ್ಣಮಾಡಿ ಇರಿಸಿಕೊಂಡು ಹಸುವಿನ ಮಜ್ಜಿಗೆಯಲ್ಲಿ ಕದಡಿ ಪಳದ್ಯ ಕಾಸಿ ಊಟಮಾಡುವಾಗ ಮೊದಲು ಪಳದ್ಯವಂ ಬಿಟ್ಟುಕೊಂಡು ಉಣ್ಣಲು ಸಪ್ತಧಾತುವಿನಿಂದ ಹುಟ್ಟಿದಂಥಾ ವಾಯು ಕೆಡುಗು . . . ಇದು ರಾಜಯೋಗಪಳದ್ಯ. ಸಮಸ್ತ ವ್ಯಾಧಿಗಳಿಗೆಲ್ಲಾ ಒಳ್ಳೆಯದು (ಶಿಶ್ಯಪ. ೯೬). [ಸಂ.]

**ರಾಜಯೋಗಿ** (ನಾ). ರಾಜಯೋಗವನ್ನು ಅಭ್ಯಾಸ ಮಾಡುವವನು : ಆ ತಾರಕಬ್ರಹ್ಮವನಭ್ಯಾಸಂಗೈವಾತನೆ ರಾಜಯೋಗಿ ನೋಡಾ (ಅನುಭಸೆ. ೨೨೪–೬೭) ; ಇಲ್ಲಿರುವ ಯೋಗಿಗಳೆಂಬ ಮಾತಿಗೆ ರಾಜಯೋಗಿಗಳೆಂದೋ

ಅಥವಾ ಜ್ಞಾನಯೋಗಿಗಳಿಂದೋ ಅರ್ಥ (ಅವ್ಯ.ಕ. ೦-೨ ಟೀಕು).
[ಸಂ. ರಾಜಯೋಗಿನ್]

**ರಾಜಯೋಗ್ಯ** (ನಾ). ದೊರೆಗೆ ಉಚಿತವಾದುದು; ಅರಸನಿಗೆ ಯೋಗ್ಯವಾದುದು,-ತಕ್ಕುದು: ಅರೆಯಿಂಗಿ ಕಾದ ಹಾಲಂ ಮಾದಲದ ಹಣ್ಣನೆರಡಾಗಿ ಕೊಯ್ದು ಕುಸುರೆಯ ತೆಗೆದವಕೆ ತುಂಬಿ . . . ಮೆಣಸಿನ ಬಿಳಿಯ ಬೇಳೆಯಂ ಹಾಕಿದೋಗರ ರಾಜಯೋಗ್ಯ ಸೌಗಂಧಿಕಾಸಹಿತ ರುಚಿರೋಗರವೆನಿಸಿಕೊಂಬುದು (ಸೂಶಾ. ೩-೨೨) ; ಪಾಂಡುವಿಗೂ ಮಾದ್ರಿಗೂ ರಾಜಯೋಗ್ಯವಾದ ರೀತಿಯಲ್ಲಿ ಉತ್ತರಕ್ರಿಯೆಗಳು ನಡೆದುವು (ವಕಥಾ. ೦೫).
[ಸಂ.]

**ರಾಜಯ್ಯ** (ನಾ). ಒಬ್ಬಾತನ ಹೆಸರು : ಶ್ರೀರಾಜಯ್ಯಂ ಬರೆದಂ (ಎಕ. XI, ದಾವಣ. ೦೦೯-೦೯ ; ೨೨೨). [ರಾಜ + ಅಯ್ಯ$_{1}$]

**ರಾಜರಸ್ತೆ** (ನಾ). = ರಾಜಮಾರ್ಗ ೧ : ಅವನ ಮನೆಯ ಮುಂದಿನ ರಾಜರಸ್ತೆಯು ಪೊತ್ತಾರೆಯ ತಂಗಾಳಿಯ ತಂಪಿನಿಂದ ಮರವಟ್ಟು ಹೋಗಿತ್ತು (ಮಡಿಸ. ೦) ; ವಾಹನಗಳಿಗೆ ಹೋಗಲು, ಬರಲು, ಹಾಗೇ ಜನರಿಗೆ ಬೇರೆ ಕಾಲ್ದಾರಿಗಳಿರುವ ಭವ್ಯವಾದ ರಾಜರಸ್ತೆ (ವಾತ್ಸಲ್ಯ. ೫೯).
[ರಾಜ + ರಸ್ತೆ]

**ರಾಜರಹಸ್ಯ** (ನಾ). ಅರಸನಿಗೆ ಅಥವಾ ರಾಜ್ಯಾಡಳಿತಕ್ಕೆ ಸಂಬಂಧಿಸಿದ ರಹಸ್ಯ : ಅರಸೊತ್ತಿಗೆಯ ಗುಟ್ಟು : ತನ್ನ ರಾಜರಹಸ್ಯವನ್ನು ತಿಳಿಯಬೇಕಾದ ಪ್ರಸಂಗವೂ ಆತನಿಗೆ ಬರದೆ ಹೋಗುವುದಿಲ್ಲ (ಐಕ್ಯ.ಕ್ರ. XXX. ೩೬೪).
[ಸಂ.]

**ರಾಜರಾಜ** (ನಾ). ೧. ಅರಸರಲ್ಲಿ ಶ್ರೇಷ್ಠನಾದವನು ; ಸಾಮ್ರಾಟ ; ಚಕ್ರವರ್ತಿ : ಆ ಮುನಿರಾಜಂ ಕರ್ಮಂಗಳಂ ಗಾಳಿಸಿದಂ ಈ ರಾಜರಾಜಂ ಪಟ್ಟಂಡಮಂಡಲಮಂ ಬಾಯ್ಕೇಳಿಸಿದಂ (ಆದಿಪು. ೬-೨೯ ವ) ; ರಾಜರಾಜಂ ನದೀತನೂಜನಂ ವಮಾಣಿಸಿ . . . ನಿಜಾಗಮನವೃತ್ತಾಂತಮಂ ಸಮರಪರಿಚ್ಛೇದಮುಮನಱಿಪಿದೊಡೆ (ಗದಾಯು. ೫-೪೪ ವ). ೨. ಕುಬೇರ : "ಐಳಬಿಳಃ . . . ರಾಜರಾಜಃ ಧನೀ ಪುಣ್ಯಜನೇಶ್ವರಃ— ಈ ೧೭ ಕುಬೇರನ ಪೆಸರ್" (ಹಣಾಯು. ೦೯-೭೯); ರಾಜರಾಜಸುಮಿತ್ರ ಭಾಸ್ಕರರಾಜ ಪಾವಕನೇತ್ರ ಸುಮನಸರಾಜಸಂಸ್ತುತಪಾದ (ಶಂಕರಾ. ೦೫-೯೫). ೧, ೨ : ಅರಿರಾಯಗಿರಿವಜ್ರದಂಡನಘವನಕಾಲಸರಣಿ . . . ರಾಜರಾಜಂ ಮದೀಶಂ (ಭಾವತಂ. ೩-೩೫). ೩. ಚಂದ್ರ. ೧, ೨, ೩ : ಅರಿಕಾಮಧ್ವಂಸಿ ನಾಗವ್ರಜಮಯಕಟಕಂ ರಾಜರಾಜಪ್ರತಿಷ್ಠಾನಿರತಂ . . . ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ (ಖಗಂ. ೦-೩). [ಸಂ.]

**ರಾಜರ್ಷಿ** (ನಾ). = ರಾಜಋಷಿ : ಬ್ರಹ್ಮಋಷಿಯಾದಡೊಳಗು ನಿರ್ಮಳವಪ್ಪುದಯ್ಯ ನೀಂ ರಾಜರ್ಷಿ ಕೋಪಿಸದೆ ಧಟ್ಟಿಸದೆ ಕಿಡೆನುಡಿಯದೆ ನಿಲಲೆಂತು ಬಲ್ಲೆ (ಹಕಥಾ. ೨-೩೨) ; ರಾಜರ್ಷಿಯಾ ದೀರ್ಘದರ್ಶಿಯಾ ಸಮದರ್ಶಿ ತಾಂ . . . ಸಮಬುದ್ಧಿಯಿಂ ದರ್ಪದಿಂ ಪಾಲಿಸಿರ್ದನು ತನ್ನ ರಾಜ್ಯಮಂ (ಶ್ರೀರಾಮಾ. ೭-೦೭೯).
[ಸಂ.]

**ರಾಜಲೀಲೆ** (ನಾ). ೧. ಅರಸನ ವಿಲಾಸ : ಅಂತು ನಿಜರಾಜಲೀಲೆಯಂತೆ ಜಲಕ್ರೀಡಾದ ರಾಜಲೀಲೆಯಂ ಸವಯೋವಯಸ್ಸ ರಾಜಲೋಕಪರಿವೃತಂ . . . ಅವಲೋಕಿಸುತ್ತುಮಿರ್ಪಲ್ಲಿ (ಶಾಕ್ಯ. ೦೩-೨೯ ವ). ೨. ಚಂದ್ರನ ವಿಲಾಸ : ಬೆಳುದಿಂಗಳು. ೧, ೨ : ಸಮುಚ್ಛ್ರಿತಾನೇಕಮೇಘಡಂಬರಚಾರುತಾವಳಂಬಿಯಾಗಿಯುಂ ಪ್ರಕಟೀಕೃತರಾಜಲೀಲೋದಯಮಲ್ಲು (ಚಂದ್ರಪು. ೯-೯೨ ವ)
[ಸಂ. ರಾಜಲೀಲಾ]

**ರಾಜವಂಶ** (ನಾ). ೧. ಅರಸುಮನೆತನ ; ಅರಸುಕುಲ : ಆಂಧ್ರಭೃತ್ಯವೆಂಬ ರಾಜವಂಶವೊಂದು ಇತ್ತು (ದ್ರಾವಿ. ೦೨೩). ೨. ಶ್ರೇಷ್ಠವಾದ ಬಿದಿರು ; ಒಳ್ಳೆಯ ಬಿದಿರು. ೧, ೨ : ಜಿತಧಾತ್ರೀಚಕ್ರಚಕ್ರಾಧಿಪನೃಪವರಬಲ್ಲಾಳ ಕೇಳ್ ನಿನ್ನೊಳಾಂತುದ್ಧತವೀರಾರಾತಿಯೂಥಂ ವಿಗತವಿಭವಮಾಗಿರ್ದಡಂ ರಕ್ಷಿಕುಂ ವಿಶ್ರುತನಾನಾವಾಹಿನೀಸಂಕುಲಪರಿಗತಶೋಭಾನುಕೂಲ್ಯಂ ಸದಾಸೇವಿತರಾಜದ್ರಾಜವಂಶಂ ಸಕಲಕವಿನಿಕಾಯಸ್ವನಾತೀರ್ಣಕರ್ಣಂ (ಎಕ. VIII, ಸೊರಬ. ೦೯೦-೯ ; 1098); ಅತ್ಯುದ್ಧತರಾಜವಂಶವನಮಂ ನಿರ್ಮೂಲಿಸಲ್ ಪೋಪೆಂ (ಕೃಕಕೃ. ೫-೩). [ಸಂ.]

**ರಾಜವಂಶೀಯ** (ನಾ). ಅರಸುವಂಶಕ್ಕೆ ಸೇರಿದ ವ್ಯಕ್ತಿ ; ಅರಸುಮನೆತನದಲ್ಲಿ ಹುಟ್ಟಿದವನು : ಪಲ್ಲವರು ಎಲ್ಲಾ ದೃಷ್ಟಿಯಿಂದಲೂ ದಕ್ಷಿಣಭಾರತದ ರಾಜವಂಶೀಯರೆಂಬುದರಲ್ಲಿ ಸಂಶಯ ಕಾಣದು (ವೊಳಂಬ. ೦೩).
[ಸಂ.]

**ರಾಜವಂಶ್ಯ** (ನಾ). = ರಾಜವಂಶೀಯ : "ರಾಜಬೀಜೀ, ರಾಜವಂಶ್ಯಃ — ೨ ರಾಜವಂಶದಲ್ಲಿ ಹುಟ್ಟಿದವನ ಹೆಸರುಗಳು, ರಾಜಪೆಂಡಿ, ಅರಸುಪೆಂಡಿ" (ಸಿದ್ಧಾಂತಿ. ೨೦೨). [ಸಂ.]

**ರಾಜವಟ** 'ರಾಜವಟ್ಟ' ನೋ.

**ರಾಜವಟ್ಟ**, ರಾಜವಟ (ನಾ). ರಾಜಕಾರ್ಯಗಳಲ್ಲಿ ಒಂದಾದ ಸಂಧಾನಕಾರ್ಯ ; ರಾಯಭಾರ : ಕಟ್ಟಾಣಿಮುತ್ತ ಸೇರಿಪೊಲು ದೇಸಿಯ ರಾಜವಟ್ಟದ ಸವಿನುಡಿಗಳನ್ನು ಸೃಷ್ಟೀಶ್ವರಗೆ ಬಿನ್ನೈಸುತ (ಕಂವಶಿ. ೬-೩೭); ಆತನ ಸಮೀಪಕ್ಕೆ ಕುಲೀನನಾಗಿಯೂ . . . ಪರಿಶುದ್ಧನಾಗಿಯೂ ಇರುವ ಒಬ್ಬನನ್ನು ರಾಜವಟ್ಟಕ್ಕೆ ಕಳುಹಿಸಬೇಕೆಂದು ನುಡಿಯಲು (ಕೃವಾಕಾ. ೭). **ರಾಜವಟ** : ಕಣ್ಣೂರ ಬೀಬಿ ಕಡೆ ನಾಲಕ್ಕುಸಾವಿರ ಮಾಪಿಳ್ಳೆರು ಸಹ . . . ರಾಜವಟ ನಡೆಸಿವಲ್ಲಿ (ರಾಜೇಂದ್ರ. ೬೩). [<ಸಂ. ರಾಜವೃತ್ತ]

**ರಾಜವತಿ** (ನಾ). ಹೆಸರಿಗೆ ಮಾತ್ರ ರಾಜನನ್ನು ಪಡೆದಿರುವ ಭೂಮಿ : ರಾಜವತಿಯಕ್ಕುಮಲ್ಲದೆ ರಾಜನ್ವತಿಯಾಗದಲ್ತೆ ಧರೆ ಮತ್ತೊರ್ವಂ ತೇಜಸ್ವಿ ಪೊಡಮರ್ಡದಱಿಂ ರಾಜನ್ವತಿ ಮಾಡು ಧರೆಯಂ ಧರಣೀಪತೀ (ಆದಿಪು. ೦೯-೨೦): ರಾಜವತಿಯಾಯ್ತು ರಿಪುಮಹಿ ರಾಜನ್ವತಿಯಾಯ್ತು ತನ್ನ ಧರೆ (ಶಾಂತಿಪು. ೦೦-೦೦೨). 'ರಾಜನ್ವತಿ' ಪರಾ. [ಸಂ. ರಾಜವತೀ]

**ರಾಜವಶ್ಯ** (ನಾ). ೧. ಒಂದು ಬಗೆಯ ವಶೀಕರಣವಿದ್ಯೆ: (ಮಂತ್ರದಿಂದ) ಅರಸನನ್ನು ವಶಪಡಿಸಿಕೊಳ್ಳುವಿಕೆ ; ಅರಸನನ್ನು ಅಧೀನಮಾಡಿಕೊಳ್ಳುವಿಕೆ: (ಕ). ೩. (ಮಂತ್ರಕ್ಕೆ) ದೊರೆಯು ವಶವಾಗುವಿಕೆ ; ಅರಸನು ಅಧೀನವಾಗುವಿಕೆ : ಈ ಮಂತ್ರದಿಂ ಉತ್ತರಾಣಿಯ ಕಡ್ಡಿಯ ೨೧ ಸಾರಿ ಮಂತ್ರಿಸಿ ದಂತಧಾವನಮಾಡಿಕೊಳ್ಳೆ ರಾಜವಶ್ಯ (ವಿಪ್ಯಶಿ. ೨೦೦); ಕುಂಕುಮ ಶ್ರೀಗಂಧ. ಕರ್ಪೂರ ಇವಂ ಹಸುವಿನ ಹಾಲಿನಲ್ಲಿ ತೇದು ತಿಲಕವಿಡೆ ರಾಜವಶ್ಯ (ವಿಪ್ಯಶಿ. ೨೧೩). [ಸಂ.]

**ರಾಜವಸು** (ನಾ). ಚಂದ್ರನ ಬೆಳಕು,-ಕಾಂತಿ : ನಿಜಕರದಿಂದೆ ರಾಜವಸು ವೆಲ್ಲಮನೊಯ್ಯನೆ ಕಳ್ದು ನೀಲನೀರಜನಿಯ ಬಾಯ ಮುದ್ರಿಸಿ ಫಿಸುಣ್ಗೆಡೆವಪ್ಪಳಿಸುತ್ತೆ (ರಾಜಶೇ. ೧೦-೨೦). [ಸಂ.]

**ರಾಜವಾಡೆ** (ನಾ). ಅರಸರು ಶ್ರೀಮಂತರು ವಾಸಿಸುವ ಭವ್ಯವಾದ ಗೃಹ: ಅರಮನೆ: ಪ್ರಾಸಾದ: P ವಿಶೇಷವಾಗಿ ಮರಾಠಿಯ ಪೇಶ್ವೆಗಳು ವಾಸಿಸುತ್ತಿದ್ದ ಭವನಗಳಿಗೆ ಈ ಹೆಸರು ಬಳಕೆಯಾಗಿದೆ : ರಾಜವಾಡೆಯವರು ಮಾತ್ರ ಉಡಲು ಯೋಗ್ಯವಾದ ಚೀನಾಂಬರವನ್ನು ನೋಡುತ್ತ ಮೇಲಕ್ಕೆತ್ತಿದಾಗ ಕೆಳಗೆ ಒಂದು ಓಲೆ ಕಂಡಿತು (ಶಾಂತಲಾ. ೨೭); ಒಳಭಾಗವು ರಾಜವಾಡೆಯಂತೆ ಒಳ್ಳೇ ಭವ್ಯವಾಗಿದ್ದಿತು (ಅಂಬಿಕೆ. ೨೯).
ರಾಜ + ವಾಡೆ$_{2}$ (<ಬಾಡ)]

**ರಾಜವಾಹನ** (ನಾ). ಅರಸನ ಕುದುರೆ; ಪಟ್ಟದ ಕುದುರೆ : "ಪಂಚಪಲ್ಲವದ ವಾಜಿಯೆ ರಾಜವಾಹನಂ" (ಕಬ್ಬಿಗಂ. ೪೨). [ಸಂ.]

**ರಾಜವಾಹ್ಯ** (ನಾ). ಅರಸನ ಆನೆ ; ಪಟ್ಟದ ಆನೆ : "ಔಪವಾಹ್ಯಃ. ರಾಜವಾಹ್ಯಃ —ಈ ೨ ಅರಸರೇಱುವ ಆನೆ" (ಹಲಾಯು. ೩೯-೭೦). [ಸಂ.]

**ರಾಜವಾಳೆ**, ರಾಜಬಾಳೆ (ನಾ). ಒಂದು ಬಗೆಯ ಉತ್ತಮಜಾತಿಯ ಬಾಳೆ : ರಸವಾಳ ಪುಟವಾಳೆ ರಾಜವಾಳೆ ಸಕ್ಕರೆಯೆಸೆವಾ ದೇವಾಳೆ . . . ಮೆಱೆದುವರ್ತಿಯುಂ (ಕಂಪಂ. ೩-೯೭). **ರಾಜಬಾಳೆ** : ಬಾಳೆಯಲ್ಲಿ ಅನೇಕ ಜಾತಿಗಳಿವೆ. ರಸಬಾಳೆ, ಚಂದ್ರಬಾಳೆ, ರಾಜಬಾಳೆ (ವೃಷವು. ೩೭).
[ರಾಜ+ಬಾಳೆ₁ (<ಬಾೞೆ³) ]

**ರಾಜವಿಡ್ವೂರ** (ನಾ). ಅರಸನಿಂದ ಪ್ರಜೆಗಳಿಗೆ ಉಂಟಾಗುವ ಉಪದ್ರವ,–ಹಿಂಸೆ: (*). [ರಾಜ + ವಿಡ್ವೂರ]

**ರಾಜವಿದ್ಯೆ** (ನಾ). ಅರಸನಿಗೆ ಉಚಿತವಾದ ವಿದ್ಯೆ : ನೀನಾದಿರಾಜನ್ಯೆ ನಿನಗಾ ನಾಲ್ಕುಂ ರಾಜವಿದ್ಯೆ ಪುಟ್ಟಿದುವು (ಆದಿಪು. ೦೪-೨೦); ಅಮಲಸ್ವಭಾವನೊಳ್ ನಿತ್ಯಮುಹತ್ವನೊಳತುಳರಾಜವಿದ್ಯೆ [ಶಾಕಾಂ. ವ್ಯ]ಗಳನಿತುಂ ಕ್ರಮದೆ ಸಮನಿಸಿದುವಾತನೊಳಮಳಿನತಾರಾಳಿ ಗಗನದೊಳ್ ನೆಲಸುವವೊಲ್ (ಕಂದ್ರಪ್ರ. ೪-೩). [ಸಂ. ರಾಜವಿದ್ಯಾ]

**ರಾಜವೀಥಿ** (ನಾ). ದೊಡ್ಡ ರಸ್ತೆ; ರಾಜಮಾರ್ಗ: ವಿಶಾಲವೂ ಸುಂದರವೂ ಆದ ರಾಜವೀಥಿಗಳಲ್ಲಿ . . . ಆ ಬಂಡಿ ಮೇರಿಯಟ್ಟಳ ಗೃಹಾಭಿಮುಖವಾಗಿ ಸಾಗಿತ್ತು (ವೃಷರು. ೩೩೭). [ಸಂ.]

**ರಾಜವೀಧಿ** (ನಾ). =ರಾಜವೀಥಿ : ಅನೇಕವಿದ್ಯಾಧರರಾಜರಾಜದ್ರಾಜವೀಧೀವಿಸ್ತೀರ್ಣಮುಮಾಗಿ (ಆದಿಪು. ೦-೭೦ ವ). [ರಾಜ + ವೀಧಿ]

**ರಾಜವೃಕ್ಷ** (ನಾ). ಒಂದು ಬಗೆಯ ಸಸ್ಯ ; ಕಕ್ಕೆಯ ಗಿಡ : "ಆರಗ್ವಧಃ . . .ರಾಜವೃಕ್ಷಃ . . . ಕೃತಮಾಲಃ, ಸುವರ್ಣಕಃ–ಈ ಕಕ್ಕೇಗಿಡದ ಹೆಸರು" (ಸಿದ್ಧೌಷಿ. ೦೦೭); ರಾಜವೃಕ್ಷದ ಸಮೀಪದೊಳಗೆರಲೆಗಾಲಿಂ ತುಳಿದ ನೆಲದ ಠಾವು ಇದೆ (ಶಾಕಂ. ೩-೦೦). [ಸಂ.]

**ರಾಜವೃತ್ತ** (ನಾ). ೧. ಅರಸನ ನಡವಳಿಕೆ,– ವ್ಯವಹಾರ : ನ್ಯಾಯಾರ್ಜಿತವಿತ್ತಂ ಧರ್ಮಾಯತ್ತಮೆನಿಪ್ಪ ರಾಜವೃತ್ತಂ ತನಗೇಕಾಯತ್ತಮಾಗೆ ಧರೆಯಂ ಜೀಯೆನಿಸಿದನಿಂತುದಾತ್ತಚರಿತರುಮೊಳರೇ (ಶಂಖಪಾ. ೨-೭೦). ೨. ಚಂದ್ರಬಿಂಬದ (ವೃದ್ಧಿ, ಕ್ಷಯಗಳ) ಸ್ವಭಾವ. ೧, ೨ : ವಸುವಂ ಸನ್ಮಾರ್ಗದೊಳಾರ್ಜಿಸುವಂ ವರ್ಧಿಸುವನೆಯ್ದೆ ರಕ್ಷಿಸದೀವಂ ನಿಸದಂ ವಿಬುಧರ್ಗದು ಭಾವಿಸೆ ಚಿತ್ರಂ ರಾಜವೃತ್ತಮಾಯ್ತನ್ನೂನಂ (ಧರ್ಮಾಮೃ. ೩-೯). [ಸಂ.]

**ರಾಜವೃಷಭ** (ನಾ). ಅರಸರಲ್ಲಿ ಶ್ರೇಷ್ಠನಾದವನು : ಉತ್ತಮನಾದ ದೊರೆ : ಮುನಿವೃಷಭಂಗೆ ಕೇವಲಜ್ಞಾನೋತ್ಪತ್ತಿಯಾದುದೀ ರಾಜವೃಷಭಂಗೆ ಸಕಲಸಾಮ್ರಾಜ್ಯಸಂಪತ್ತಿಯಾದುದು (ಆದಿಪು. ೬–೨೪ ವ). [ಸಂ.]

**ರಾಜವೈದ್ಯ** (ನಾ). ೧. ಅರಸನಿಗೆ ಚಿಕಿತ್ಸೆಮಾಡುವವನು : ಅರಮನೆಯ ವೈದ್ಯ : ರಾಜವೈದ್ಯನು ತಲೆತಗ್ಗಿಸಿ ನಿಂತಿದ್ದನು (ಮಾತಿಕ. ೦೬). ೨. ಅತ್ಯುತ್ತಮವಾದ ವೈದ್ಯವೃತ್ತಿ : (*). [ಸಂ.]

**ರಾಜವೊಟಲ್** (ನಾ). ಒಂದು ಊರಿನ ಹೆಸರು : ಮಾಗಟಿನಾಡ ರಾಜವೊಟಲ ಬೀಡಿನೊಳ್ ಸುಖಸಂಕಥಾವಿನೋದದೊಳ್ ಪ್ರಿಥುವೀರಾಜ್ಯಂಗೆಯ್ಯುತ್ತುಮಿರೆ (ಎಕ. IV, ನಾಗಮಂ. ೩೦-೭; 972). [ರಾಜ + ಪೊಟಲ್]

**ರಾಜಶಾಸನ** (ನಾ). ೧. ಅರಸನ ಅಪ್ಪಣೆ,– ಆಜ್ಞೆ : ಟಾಮಂದರವರು ನಗರಕ್ಕೆ ದಯಮಾಡಿಸಿದ ಮೊಟ್ಟಮೊದಲನೆಯ ರಾಜಶಾಸನವು ಒಬ್ಬ ಮುಸಲ್ಮಾನ್‌ಸರದಾರನ ವಧೆಯೆಂಬುದು ದೊಡ್ಡ ಅಪಖ್ಯಾತಿ (ದೌಲತ್. ೭೭). ೨. ರಾಜ್ಯದ ಆಡಳಿತ,– ವ್ಯವಹಾರ : 'ರಾಜಶಾಸನಪಟು' ನೋಡಿ. [ಸಂ.]

**ರಾಜಶಾಸನಪಟು** (ನಾ). ರಾಜ್ಯದ ಆಡಳಿತ ಅಥವಾ ವ್ಯವಹಾರವನ್ನು ಚೆನ್ನಾಗಿ ತಿಳಿದುಕೊಂಡವನು ; ರಾಜನೀತಿಜ್ಞ : ಆಕೆ ಅನೇಕಾನೇಕ ನಾಮಾಂಕಿತರಾಜನೀತಿಜ್ಞರನ್ನೂ ಮುತ್ಸದ್ದಿಗಳನ್ನೂ ರಾಜಶಾಸನಪಟುಗಳನ್ನೂ ಹೆತ್ತಿದ್ದಾಳೆ (ಪಂಚಾಪೋ. ೦೭೪). [ಸಂ.]

**ರಾಜಶುಕ** (ನಾ). ಅರಗಿಳಿ ; ರಾಜಕೀರ : ಮಿಡಿಯಂ ಕರ್ದುಂಕಿ ನಲಿದಾಡುವ ರಾಜಶುಕಂ . . . ಇಲ್ಲದುದಿಲ್ಲ ನಂದನಂ (ಜಗಂ. ೨-೧೦); ವರ ಕಂಠೀರವಮಧ್ಯೆ . . . ಸುಕೇಶಿ ರಾಜಶುಕಸಲ್ಲಾಪಾಂಗಶೃಂಗಾರೆ (ಹರಿಶ್ಚ. ೨-೭೨). [ಸಂ.]

**ರಾಜಶೂನ್ಯ** (ನಾ). ೧. (ರಾಜ್ಯದಲ್ಲಿ) ಅರಸನಿಲ್ಲದಿರುವುದು; ಅರಾಜಕತೆ. ೨. (ಆಕಾಶದಲ್ಲಿ) ಚಂದ್ರನಿಲ್ಲದಿರುವುದು ; ಕಗ್ಗತ್ತಲು. ೧, ೨ : ಅದು ಸಲೆ ರಾಜಶೂನ್ಯಮುರುರಾಜವಿಭಾಸಿಯೆ ನಾಂ ದ್ವಿಜಿಹ್ವಸಂಪದಮದು ಸಜ್ಜನಕ್ಕೆ ಶರಣಾಂ . . . ಎನೆ ಭೋಗವತೀಪುರಮೆನ್ನನೆಂತುಮೋಲ್ವುದು ಚಿರಮೆಂದಧಃಕರಿಸುವಂತಿದೆ ಮೇಲೆನಿಸಿರ್ದುದಾ ಪುರಂ (ಧರ್ಮಾಮೃ. ೯-೭೨). [ಸಂ.]

**ರಾಜಶೂಲೆ** (ನಾ). [ಅಶ್ವಶಾ] ಕುದುರೆಗೆ ಬರುವ ಒಂದು ಬಗೆಯ ತೀವ್ರತರವಾದ ರೋಗ : ತೋರಿದುವಾಗಿರೆ ನಡುಗಳ್ ನೇರಿದುವಪ್ಪೆರಡು ರೇಖೆಗಳ್ ತಾಂ ಮೊದಲಾಕಾರದೊಳಿರೆ ನವವರುಷಪ್ರಾರಂಭದೆ ವಾಜಿ ರಾಜಶೂಲೆಗೆ ಬೀಡುಂ (ಅಶ್ವಶಾ. ೩-೦೨). [ಸಂ. ರಾಜಶೂಲಾ]

**ರಾಜಶೇಖರ** (ನಾ). ೧. ಅರಸರಲ್ಲಿ ಶ್ರೇಷ್ಠನಾದವನು, –ಮುಖ್ಯನಾದವನು : ನಿಯೋಗಿಸಮಸ್ತರನು ಬೀಳ್ಕೊಟ್ಟು ವಿನಿಯೋಗಸ್ಥರೋಲಗದಲ್ಲಿ ಎಸೆದನು ರಾಜಶೇಖರನು (ರಾಜಶೇ. ೬೦-೨೭). ೨. (ಮುಡಿಯಲ್ಲಿ) ಚಂದ್ರನನ್ನು ಧರಿಸಿದವನು ; ಸೋಮಶೇಖರ ; ಶಿವ : ರಾಜಶೇಖರ ದಿವಿಜವಂದಿತಪಾದ . . . ಭೋಗಿರಾಜಭೂಷಣ . . . ಸಲಹೆಂದು ಹರಿ ಪೊಗಳ್ದನು (ಕವಿಪು. ೦೭-೩೦) ; ಆ ಸಮಯದೊಳಾ ರಾಜಶೇಖರಂ ರಾಜಶೇಖರಪೂಜೆಗೆಯ್ದು ಯಥೋಚಿತಪ್ರಾತರಾಚಾರವಂ ನಿರ್ವರ್ತಿಸಿ (ರಾಜಶೇ. ೭-೩೦ ವ). [ಸಂ.]

**ರಾಜಶ್ರಾವಿತ** (ನಾ). ಅರಸನಿಗೆ ತಿಳಿಸಿದುದು ; ದೊರೆಯ ಗಮನಕ್ಕೆ ತಂದುದು : ಅಮೋಘವರ್ಷದೇವರೊಳ್ ರಾಜಶ್ರಾವಿತಂ ಮಾಡಿ ತದನುಮತದಿಂದಿರ್ವ್ವರುಂ (ಎಇ. VI, ೦೦೪-೨೪ : 866); ರಾಜಶ್ರಾವಿತ[ಂಗಳ್ವೈ] ಶಾಖಮಾಸ ಶುಕ್ಲಪಕ್ಷಪುಣ್ಣಮೆ ದಿನ (ಕಇಇ. XI-i, ೦೩-೯ ; 896). [ಸಂ.]

**ರಾಜಶ್ರೀ** (ನಾ). ೧. ಅರಸನ ಐಶ್ವರ್ಯ. ೨. = ರಾಜಮಾನ್ಯ ೨ : ಕನ್ನಡದಲ್ಲಿ . . . ರಾಜಮಾನ್ಯ, ರಾಜಶ್ರೀ . . . ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯವುಂಟು (ಮುಂಬಯಿ. ೪-೩೪). [ಸಂ.]

**ರಾಜಶ್ರೇಷ್ಠಿ** (ನಾ). ಪ್ರಧಾನನಾದ ಸೆಟ್ಟಿ : ವರ್ತಕಶ್ರೇಣಿಯ ಮುಖಂಡ : ಆ ಪೊೞಲೊಳ್ ರಾಜಶ್ರೇಷ್ಠಿ ಸಾಗರಸೇನಂಗಮಮೃತಮತಿಗಂ ಪುಟ್ಟಿದ ದತ್ತನುಂ ನಂದಿಷೇಣನುಂ ಎಂಬರ್ . . . ಬರ್ದೆಡೆಯೊಳ್ (ಶಾಂತಿಪು. ೯-೯೦ ವ) ; ಸೆಟ್ಟಿವಟ್ಟಮಂ ಕಟ್ಟಿಸಿಕೊಂಡಲ್ಲಿಯೆ ರಾಜಶ್ರೇಷ್ಠಿಯಾಗಿ ಸುಖದೊಳಿರ್ಪನ್ನೆಗಂ (ಜೀವಸಂ. ೩೯-೦೬). [ಸಂ. ರಾಜಶ್ರೇಷ್ಠಿನ್]

**ರಾಜಸ** (ಗು). ೧. ರಜೋಗುಣಕ್ಕೆ ಸಂಬಂಧಿಸಿದ : ಕಾಮಕ್ರೋಧಗಳಿಂದ ಕೂಡಿದ : ಅರಸ ಕೇಳ್ ರಾಜಸಾಂತಃಕರಣವದು ಕಾಮ್ಯಾರ್ಥಸಿದ್ಧಿಸ್ಫುರಣೆಗೋಸುಗ ತಪವಲೇ ರಾಜ್ಯಾಭಿಲಾಷೆಯಿಂ (ಕುಮಾರ. ೩-೯) ; ಇಂದ್ರಿಯಗಳಿಗೆ ಯಾವುದು ಉಪಾದಾನಕಾರಣವೋ ಅದು ಸಾತ್ವಿಕಾಹಂಕಾರವೆಂದೂ . . . ಈ ಯೆರಡಕ್ಕೂ ಯಾವುದು ಅನುಗ್ರಾಹಕವೋ ಅದು ರಾಜಸಾಹಂಕಾರವೆಂದೂ ತಿಳಿಯಬಹುದು (ತತ್ತ್ವಕು. ೩). (ನಾ). ೨. ಕಾಮಕ್ರೋಧಗಳಿಂದ ಕೂಡಿದ ಗುಣ ; ರಜೋಗುಣ : ರಾಜಸ ಸಾತ್ವಿಕಮೆಂಬೀ ರಾಜಗುಣಂ ವಿಷವಿಷಾಪಹಾರಂಗಳವೊಲ್ ರಾಜಿಸೆ ವಿಷಮೋರಗನಂತೀ ಜಗತೀತಳಮನಾಂತನವನೀಕಾಂತಂ (ಮಲ್ಲಿಕಾ. ೩-೭) ; ಮನಸ್ಸನ್ನು ರಾಜಸಕ್ಕೆ ಒಪ್ಪಿಸಿ ಅವರು ಈ ಮೂಲಕ ನಿನ್ನನ್ನು ಶಿಕ್ಷಿಸುವುದಕ್ಕೆ

ಹೊರಟಿದ್ದಾರೆ (ದೂರಕ. ೨೯೯). ೩. ರಜೋಗುಣವುಳ್ಳ ವ್ಯಕ್ತಿ : ಜೀವರಾಶಿಗಳ ದೇವಮನುಷ್ಯಾದಿ ಭೇದಗಳಿಂದ ಸಾತ್ವಿಕರು, ರಾಜಸರು, ತಾಮಸರೆಂಬ ಮೂರುವಿಧರಾಗಿ ಭಾಗಿಸಲ್ಪಟ್ಟಿರುವವರು (ಹಕಾರ. ೧-೯ ವಿಶೇಷಾರ್ಥ). [ಸಂ.]

**ರಾಜಸದನ** (ನಾ). ಅರಸನ ನಿವಾಸ ; ಅರಮನೆ : "ಸೌಧಃ, ರಾಜ ಸದನಂ — ೨ ರಾಜಗೃಹದ ಹೆಸರು. ಅರಮನೆ, ರಾಜಯೋಗ್ಯವಾದ ಉಪ್ಪರಿಗೆ" (ಸಿದ್ಧಾಂತಿ. ೦೦೦); ರಾಜಸದನಸಂಸ್ಥೆಯಾಗಿಯುಂ ಶೂನ್ಯಾರಣ್ಯ ಸಂಸ್ಥೆಯಂತೆಯುಂ . . . ಇರ್ಪನೆಗಂ (ಚಂದ್ರಪ್ರ. ೩-೩೦ ವ) ; ರಾಜ ಸದನಕ್ಕೆ ಹೋಗುವೆನು (ಶಾಕುಂತ. ೭೬-೦೭). [ಸಂ.]

**ರಾಜಸಬುದ್ಧಿ** (ನಾ). ೧. ರಜೋಗುಣದಿಂದ ಕೂಡಿದ ಬುದ್ಧಿ. ೨. ರಜೋಗುಣದಿಂದ ಕೂಡಿದ ಬುದ್ಧಿಯುಳ್ಳವನು : ಎಮಗೆ ಜಯವೆಂತಹುದು ರಾಜ್ಯಭ್ರುವೆಯ ರಾಜಸಬುದ್ಧಿಗಳು ವಿಕ್ರಮವಿಹೀನರು ನಾವು (ಕುಮಾ.ಭೀ. ೭-೨೦). [ಸಂ.]

**ರಾಜಸಭೆ** (ನಾ). ದೊರೆಯ ಒಡ್ಡೋಲಗ ; ಅರಸನ ಆಸ್ಥಾನ : "ಆಸ್ಥಾನವೆಂಬುದು ರಾಜಸಭೆ" (ಶಬ್ದಮ. ೦೨೬-೯೩) ; ಅಂದು ಕೌರವ ನಾಯಿ ಸಭೆಯಲಿ ತಂದು ತೋಟಿದನುನ್ನತಿಯ ಬಳಿಕಿಂದು ಕೀಚಕ ಕುನ್ನಿಯೊದೆದನು ರಾಜಸಭೆಯೊಳಗೆ (ಕುಮಾ.ವಿ. ೩-೯೭). [ಸಂ. ರಾಜ್ಯಸಭಾ]

**ರಾಜಸರ್ಪ** (ನಾ). = ರಾಜಫಣಿ : "ರಾಜಸರ್ಪಃ, ಸರ್ಪಭುಕ್ — ಈ ಎರಡು ಅರವಾ(ಹಾ)ವು" (ಶಬ್ದಮ. ೦೦೬-೨೦). [ಸಂ.]

**ರಾಜಸರ್ಷಪ** (ನಾ). ಕರಿಯ ಸಾಸುವೆ : "ಆಸುರೀ, ರಾಜಿಕಾ, ರಾಜ ಸರ್ಷಪಃ — ಈ ಮೂರು ರಾಯಸಾಸುವೆ" (ಶಬ್ದಮ. ೯೩-೯೩೭). [ಸಂ.]

**ರಾಜಸಿಕ** (ಗು). ೧. ರಜೋಗುಣದಿಂದ ಕೂಡಿದ : ನಮಗೆ ಚಿರ ಪರಿಚಿತವಾದ ಪ್ರಿಯವಾದ ಈ ರಾಜಸಿಕತಮುಲಗಳ ನಡುವೆ ನಾವು ಮತ್ತೆ ಮೊದಲಿನಂತಾಗುತ್ತೇವೆ (ಶಂಕ. ೨). (ನಾ). ೨. ರಜೋಗುಣದಿಂದ ಕೂಡಿದುದು : ಎಲ್ಲ ವ್ಯಾಪಾರಗಳೂ ಈ ತ್ರಿಗುಣಕ್ರಿಯೆಗಳೇ. ಅವರಲ್ಲಿ ಹಲವು ಪ್ರಧಾನವಾಗಿ ಸಾತ್ವಿಕ, ಮತ್ತೆ ಹಲವು ಪ್ರಧಾನವಾಗಿ ರಾಜಸಿಕ ಅಥವಾ ತಾಮಸಿಕ (ಕ್ರಾಂದಕ. ೧೦೦). [ಸಂ.]

**ರಾಜಸುತ** (ನಾ). = ರಾಜಕುಮಾರ : ರಾಜಸುತಂ ಪಸಿದಂ ನೀರಡಿಸಿದೆ ನೆನಗಿವಲ್ಲದಲ್ಲೆನ್ನಂ ಪಾರ್ಶ್ವಸಂ ಪಲವಂ (ಅರಿಪು. ೩-೮೮); ಇದಿರ್ಗೊಂಡು ಶ್ಲಾಘಿಸುತಾ ಭೂಪ ತನ್ನ ಪುರಕೆ ತಂದನಾ ಘನೋಜ್ಜ್ವಲರಾಜಸುತರ (ಭರತ. ೩೩-೯೯). [ಸಂ.]

**ರಾಜಸುತೆ** (ನಾ). = ರಾಜಕುಮಾರಿ : ರಾಜಾಂತರದಿಂದೆ ರಾಜಸುತೆಯುಂ ನಯದಿಂದವಳುಯ್ಯಲ್ (ಶಂಕರಾ. ೩-೩೭). [ಸಂ. ರಾಜಸುತಾ]

**ರಾಜಸೂಯ** (ನಾ). ಚಕ್ರವರ್ತಿಯು ಮಾಡುವ ಒಂದು ಬಗೆಯ ಯಾಗ : ೨ ವಾಜಪೇಯಯಜ್ಞವನ್ನು ಮಾಡಿಲ್ಲದ ರಾಜನಿಗೆ ಮಾತ್ರ ಈ ಯಜ್ಞ ಮಾಡುವ ಅಧಿಕಾರವುಂಟು. ಈ ಯಜ್ಞ ಮಾಡುವ ರಾಜನು ಸಾಮ್ರಾಟನಾಗುತ್ತಾನೆ : ಗಾಳುಗೊರವಂ ತಗುಳ್ಚಿ ಪಳಾಳಮನೇನೊಂದನಪ್ಪೊಡಂ ಗಟಪಿದೊಡಾ ಬೇಳು ನುಡಿಗೇಳ್ದು ಕಮ್ಮನೆ ಬೇಳಲ್ ನಿಮಗುಂತು ರಾಜಸೂಯಂ ಮೊಗ್ಗೇ (ಶಂಕರಾ. ೬-೨೯) ; ಸ್ವರ್ಗಾಪವರ್ಗೈಕಕಾರಣವಪ್ಪಗ್ಗದ ರಾಜಸೂಯ ಮನೊಡರ್ಚಿಂ (ಜಗಪ. ೧೭-೧೧) ; ವಿರಿಂಚಿಪ್ರಭವನನುಮತದಿಂದ ಧರಣೀವಿಭು ಮಹಾಕ್ರತು ರಾಜಸೂಯವನೊಲಿದು ಕೈಕೊಂಡ (ಕುಮಾ.ಸ. ೧ ಸೂಕವ). 'ಅಶ್ವಮೇಧ' ಪರಾ. [ಸಂ.]

**ರಾಜಸೇವೆ** (ನಾ). ಅರಸನ ಸೇವೆ.—ಊಳಿಗ :ಸೇನಾನಿನಲಿ ಸಮದರ್ಶಿಗಳು ಧಾರುಣಿಯ ಪತಿಗಳು ರಾಜಸೇವಾಪ್ರಣಯಮಿಮಾಮಾಂಸಾದಿ ಮೂಢರು ನಮ್ಮ ಭಟರೆಂದ (ಕುಮಾ.ಭೀ. ೭.೦೦). [ಸಂ. ರಾಜಸೇವಾ]

**ರಾಜಸ್ವ** (ನಾ). ೧. ಅರಸನ ಆಸ್ತಿ. ೨. ರಾಜ್ಯದ ಹುಟ್ಟುವಳಿ. — ಆದಾಯ : ಸಂಘಕ್ಕೂ ರಾಜ್ಯಗಳಿಗೂ ರಾಜಸ್ವಗಳ ಹಂಚಿಕೆ (ಭಾರಾಸ. ೦೫೨). [ಸಂ.]

**ರಾಜಸ್ವರ** (ನಾ). [ಸಂಗೀತ] ಒಂದು ರಾಗದ ಮುಖ್ಯವಾದ ಸ್ವರ; ಜೀವಸ್ವರ : ಒಂದು ರಾಗದ ಸ್ವರೂಪ ಪ್ರತ್ಯೇಕತೆ ಎತ್ತಿ ತೋರಲು ಯಾವ ಸ್ವರ ಪದೇಪದೇ ಉಪಯೋಗವಾಗುವುದೋ ಆ ಸ್ವರ, ವಾದಿಸ್ವರ . . . ವಾದಿಸ್ವರಗಳನ್ನು ರಾಜಸ್ವರಗಳೆಂದೂ ಸಂವಾದಿಸ್ವರಗಳನ್ನು ಮಂತ್ರಿ ಸ್ವರಗಳೆಂದೂ . . . ಕರೆಯುವ ವಾಡಿಕೆ (ಸಂಗೀತಂ. ೨೦). [ಸಂ.]

**ರಾಜಹಂಸ** (ನಾ). ೧. = ರಾಜಮರಾಲ : " ರಾಜಹಂಸಃ . . . ಕೆಂಪಾದ ಕಾಲುಗಳೂ ಮೂಗೂ ಉಳ್ಳ ಬಿಳೀಹಂಸೆ, ಅರಸಂಚೆ" (ಸಿದ್ಧಾಂತಿ. ೧೬೦) ; ಕುರುಕುಳಸರೋರಾಜಹಂಸನಲ್ಲಿಯ ರಾಜಹಂಸಿಗಳುಮಂ . . ಅತಿ ಕುತೂಹಲಂಬೆರಸು ನೋಡಿ (ಗದಾಯು. ೬-೦೩ ವ) ; ಮಹೋದ್ಧತರಾಜ ಹಂಸತೇಜದಿನೆಸೆದತ್ತು ರಾಜ್ಯವಿಭವಂ ಜಳದಾಗಮಚಕ್ರವರ್ತಿಯಾ (ಜಗಪ. ೯-೩೩). ೨. ಅರಸರಲ್ಲಿ ಶ್ರೇಷ್ಠನಾದವನು ; ನೃಪೋತ್ತಮ : ಜಟಾಯುನೆ ಜರೆ ಹಂಸೀಕುಳಮುಟಾದು ಸರೋವರದಮನದಿ ಪುಟೀಲೊಳ್ ನಲವಂ ಸುಟಾಯಲ್ಕೆ ತಳರ್ದ ಹಂಸನನಿಟ್ಟಿಪಿದನಾ ರಾಜಹಂಸನಬುಳಾಳಿ ಯುತಂ (ಚಂದ್ರಪ್ರ. ೭-೦೯೭). ೩. ಸೂರ್ಯ. ೪. ಚಂದ್ರ. ೧, ೩, ೪ : ನಾರವನ ತೆಜದೆ ಸರದಿಂ ತಾರಾಪಥದಂತೆ ರಾಜಹಂಸಾನ್ವಿತದಿಂ ಕ್ಷೀರಾಬ್ಧಿ ಶಯನನುರವ್ವಪೊಲಾರಮೆಯಿಂ ತುಱುಗಿ ಪೊಜಪೊಟಲ್ ಸಾ(ಸೊ)ಗಯಿ ಸುಗುಂ (ಎಪ. XIV, ೨೬೦—೧೦ ; 1181). ೧, ೨, ೩, ೪ : ಜನನುತರಾಜಹಂಸನಯನಂ ಕಮಳಾವಸಥಂ ಕಳಾನಿಕೇತನನೆನಿಸಿರ್ದ . . . ಲೋಕಪಿತನೊಲ್ದು ಚತುರ್ಮುಖನೀಗೆ ರಾಗಮಂ (ಜಗಪ. ೧-೨). ೨,೩,೪ : ಉರ್ವಿಯಂತೆ ನಭದಂತವಲಂಬಿತರಾಜಹಂಸವಾಪ್ರಾವಳಿಯಂತೆ ಕಾಮಿಜನ ದಂತೆ ಸಮುತ್ಕಳಿಕಾಕುಳಂ ಕೊಳಂ (ಪುಷ್ಪ. ೨-೩೩). [ಸಂ.]

**ರಾಜಹಂಸಿ** (ನಾ). ಶ್ರೇಷ್ಠವಾದ ಹೆಣ್ಣುಹಂಸಪಕ್ಷಿ ; ಹೆಣ್ಣಂಚೆ : ಪರಮಜಿನಜನನಿಗೊರ್ವಳ್ ಸುರವಧು ಕೊಡೆವಿಡಿದು ನಳಿನಿಯೊಡವೆಳೆದು ರಜಂಬೊರೆದು ಕೊಡೆಯೆಲೆಯ ಕಟಗಿರ್ದ ರಾಜಹಂಸಿಯ ವಿಳಾಸಮಂ ನೆನೆಯಿಸಿದಳ್ (ನೇಮಿಪು. ೯-೭೭೮) ; ಕುರುಕುಳಸರೋರಾಜಹಂಸನಲ್ಲಿಯ ರಾಜಹಂಸಿಗಳುಮಂ . . . ಅತಿಕುತೂಹಲಂಬೆರಸು ನೋಡಿ (ಗದಾಯು. ೬-೦೩ ವ). [ಸಂ. ರಾಜಹಂಸೀ]

**ರಾಜಹಂಸೆ** (ನಾ). = ರಾಜಹಂಸಿ : ಲೀಲಾಲಸಗಮನಮಂ ಗಜಗಮನೆ ಯುರ್ಗುಪದೇಶಂಗೆಯ್ವ ದೀವದ ರಾಜಹಂಸೆಗಳುಮಂ . . . ಕೊಟ್ಟು (ಅರಿಪು. ೯-೩೯ ವ). [ಸಂ. ರಾಜಹಂಸಾ]

**ರಾಜಹರ್ಮ್ಯ** (ನಾ). ದೊರೆಯ ನಿವಾಸ ; ಅರಮನೆ : ಈ ವಾತಾ ವರಣದಲ್ಲಿ ಒಮ್ಮೆ ಸುಳಿದು ಬಂದರೆ ಸಾಕು . . . ಯಾವುದೋ ಒಂದು ರಾಜಹರ್ಮ್ಯದಲ್ಲಿ — ಮಹಾದೇವಸ್ಥಾನದಲ್ಲಿ — ಸುಳಿದುಬಂದ ಭಾಸ ವಾಗುತ್ತದೆ (ಐಶಪ. II, ೯೩). [ಸಂ.]

**ರಾಜಹುಂಡಿ** (ನಾ). ಸರ್ಕಾರದ ಖಜಾನೆಯಿಂದ ಬರುವ ಹಣದ ಆದೇಶ ಪತ್ರ.— ಹುಂಡಿ : ಭಾರತಸರ್ಕಾರದಿಂದ ಸ್ವೀಕರಿಸಲಾದ ಎಲ್ಲ ರಾಜಸ್ವ ಗಳೂ ರಾಜಹುಂಡಿಗಳನ್ನು, ಸಾಲಗಳನ್ನು . . . ಸಂಚಿತವಾದ ಒಂದು ನಿಧಿಯಾಗಿ ಏರ್ಪಡಿಸತಕ್ಕುದು (ಭಾರಾಸ. ೦೫೦). [ರಾಜ + ಹುಂಡಿ$_1$]

**ರಾಜಹುಣ್ಣು** (ನಾ). ಒಂದು ಬಗೆಯ ಭಯಂಕರವಾದ ಹುಣ್ಣು ; ಬೆನ್ನುಫಣಿ : "ಕಟ್ಟಕುರು ; ಬೆನ್ನುಫಣಿ ; ರಾಜಹುಣ್ಣು, ನೆರಡಿರೋಗ" (Carbuncle, ಇಂಕಪ) ; ನವಾಬ್‌ಹೈದರಲ್ಲಿಖಾನರು ಬೆನ್ನಿನಲ್ಲಿ ರಾಜ ಹುಣ್ಣು ಎದ್ದು ಅರಕಾಡಿನಲ್ಲಿ ಮೃತರಾದರು (ರಾಜೇಂದ್ರ. ೨೬). [ರಾಜ + ಹುಣ್ಣು (<ಪುಣ್)]

**ರಾಜಾಂಗಣ** (ನಾ). ೧. ಅರಮನೆಯ ಅಂಗಳ : ವಿವಿಧಫಲಪ್ರಸೂನ ಪಲ್ಲವತತಿಯಿಂ ತೀವಿದ ರಾಜಾಂಗಣಮನಿಳಾವಂದ್ಯರ್ ಮೆಟ್ಟಲೊಲ್ಲದಲ್ಲಿಯೆ ನಿಂದರ್ (ಅಜಿತ. ೦೫-೯). ೨. (ವಿಶಾಲವಾದ) ಅಂಗಳ: ಬಂಗಲಿ ಪೋದಗೆ ಪೊಜಸು ಬಕ್ಕಂ ಗಿಡಿಗಂ ಗೂಗೆಯಾದಿಯಾದ ಖಗಂ ರಾಜಾಂಗಣದೊಳ್ ಚರಿಸುವೊತೆ ಸರಂಗೆಯ್ವುಡೆ ತಡೆಯದಾ ಗೃಹಂ ಪಾಟಕ್ಕುಂ (ರೋಗರೋಚ. ೯-೬೩).

**ರಾಜಾಂಗಣದ ಊಟ** = ಉಡುಪಿಯ ಮಠದ ವಿಶಾಲವಾದ ಅಂಗಳದಲ್ಲಿ ಸೇರಿ ಮಾಡುವ ಭೂರಿಭೋಜನ,– ಭರ್ಜರಿಊಟ : ಬಿಮ್ಮಗೆ ಉಂಡು ತೇಗಬೇಕಾದರೆ ಮಧ್ವನವಮಿಊಟಕ್ಕೋ, ರಾಜಾಂಗಣದ ಊಟಕ್ಕೋ ಉಡುಪಿಗೇನೆ ಹೋಗಬೇಕು (ಮರಳು. ೯೯).

[ ರಾಜ + ಅಂಗಣ ]

**ರಾಜಾಂಗನೆ** (ನಾ). ರಾಜವಂಶದ ಸ್ತ್ರೀ ; ಅರಸುಮನೆತನದ ಹೆಣ್ಣು: ಸುದತಿಯರು ಹೊಂಬಿಮಂಟರೊಗ್ಗಿನ ಮೃದುಮೃದಂಗದ ಕಹಳೆಗಳು ಸಂಪದದ ಸೊಂಪಿನಲೆಸೆಯೆ ರಾಜಾಂಗನೆಯರನುವಾಯ್ತು (ಕುಮಾ.ವ. ೯-೧೦).

[ಸಂ. ರಾಜಾಂಗನಾ]

**ರಾಜಾಂಗವಸ್ತ್ರ** (ನಾ). ಒಂದು ಬಗೆಯ ಶ್ರೇಷ್ಠವಾದ ಬಟ್ಟೆ : ಗಾಜು ನೋಟಕ್ಕೆ ಲೇಸು ಮೋಜು ಇರುಳಲಿ ಲೇಸು ರಾಜಾಂಗವಸ್ತ್ರ ಉಡ ಲೇಸು ಊಟಕ್ಕೆ ರಾಜಾನ್ನ ಲೇಸು (ಸರ್ವಜ್ಞ. ೦೦೬೫).

[ಸಂ.]

**ರಾಜಾಜ್ಞೆ** (ನಾ). ದೊರೆಯ ಆದೇಶ ; ಅರಸನ ಅಪ್ಪಣೆ : ತಳೆದೇನಿರ್ದರೊ, ತಮ್ಮತಮ್ಮ ತಲೆಯೊಳ್ ರಾಜಾಜ್ಞೆಯಂ ಮೂರ್ತಿಗೊಂಡಳನೆಂಬಂತಿರೆ ಭೂಪತಿಪ್ರಕರ ನಾನಾಮೌಳಿಮಾಣಿಕ್ಯಸಂಕುಳದೊಳ್ ಮಾರ್ಪೊಳೆವುತ್ತಮೊಯ್ಯನೆ ಬರುತ್ತಿರ್ದರ್ ಪ್ರತೀಹಾರಿ (ರಾಜಂಪೂ. ೨೯) ; ಲಂಚವನ್ನು ತೆಗೆದುಕೊಳ್ಳುವುದನ್ನು ರಾಜಾಜ್ಞೆಯು ವಿರೋಧಿಸಿದ್ದಿತು (ಕರಾ. ೩೪೫).

[ ಸಂ. ರಾಜಾಜ್ಞಾ ]

**ರಾಜಾಣ** ' ರಾಜನ ' ನೋ.

**ರಾಜಾತಿಥ್ಯ** (ನಾ). ೧. ಅರಸನು ಮಾಡುವ ಅತಿಥಿಸತ್ಕಾರ. ೨. ರಾಜಯೋಗ್ಯವಾದ ಆತಿಥ್ಯ ; ಶ್ರೇಷ್ಠವಾದ ಆತಿಥ್ಯ : ಐದಾರುದಿನಗಳ ತನಕ ಒಗ್ಗಲಿ ಮತ್ತು ಭಟ್ಟರು ಮುದುಕನ ಮನೆಯಲ್ಲಿ ರಾಜಾತಿಥ್ಯವನ್ನು ಅನುಭವಿಸಬೇಕಾಯಿತು (ಕಂಠಹು. ೨೦).

[ಸಂ.]

**ರಾಜಾದನ** (ನಾ). ೧. ಒಂದು ಬಗೆಯ ಬಾದಾಮಿಮರ : ಮೊರಟೆ ಮರ ; ಪ್ರಿಯಾಲ : " ರಾಜಾದನಂ, ಪ್ರಿಯಾಲಃ, ಸನ್ನಕದ್ರುಃ, ಧನುಃಪಟಃ – ೪ ಮೊರಟೀಗಿಡ, ಮೊರಟೀಗಿಡ " (ಸಿದ್ಧಾಂತ. ೦೦೯). ೨. ಒಂದು ಬಗೆಯ ದಪ್ಪ ಹಣ್ಣು ಬಿಡುವ ಮರ. ೩. ಒಂದು ಬಗೆಯ ಗಿಡ ; ಹಾಲೆ : '' ರಾಜಾದನಂ, ಫಲಾಧ್ಯಕ್ಷಂ, ಕ್ಷೀರಿಕಾ – ೩ ಹಾಲೇಗಿಡ, ಹಾಲುಬಳ್ಳಿ ಪೆಸರು'' (ಸಿದ್ಧಾಂತ. ೦೨೨).

[ಸಂ.]

**ರಾಜಾದಾಯ** (ನಾ). ಅರಸನಿಗೆ ಸಲ್ಲಬೇಕಾದ ಆದಾಯ; ಕಂದಾಯ, ತೆರಿಗೆ ಮುಂತಾದುವು : ಮಿತಿಮೀರಿದ ರಾಜಾದಾಯವನ್ನು ಅನ್ಯಾಯವಾಗಿ ಕೇತಮಲ್ಲನ ಮೇಲೆ ವಿಧಿಸಿ ಅವನ ಹಣದ ಬಹುಭಾಗವನ್ನು ಅಪಹರಿಸಿದ್ದನು (ಚಂಪಕ. ೦೦೬) ; ರಾಜರೂ ಮಂತ್ರಿಯೂ ಇಬ್ಬರೂ ಸೇರಿ ರಾಜಾದಾಯವನ್ನು ಹೆಚ್ಚಿಸಲು ಅನೇಕ ಉಪಾಯಗಳನ್ನು ಯೋಚಿಸಿದರು (ಬಿಳಿ. ೯೩).

[ಸಂ.]

**ರಾಜಾದೇಶ** (ನಾ). = ರಾಜಾಜ್ಞೆ : ದೂತನ ನುಡಿಯುಮಂ ರಾಜಾದೇಶಮುಮನವಧರಿಸಿ ಬಂದ ದೂತನಂ . . . ಪೋಗಲ್ವೇಟ್ಟು (ಅಜಿತ. ೦೯-೩೦ ವ).

[ಸಂ.]

ಮಂಗಳಂ ಜಯ ಮಂಗಳಂ . . . ರಾಜಿತ ಪುರಂದರವಿಟ್ಠ ರಾಜಾಧಿರಾಜ ಸರ್ವೇಶಗೆ (ಪುರಂದ. ೩-೦೩೬-೩).

[ಸಂ.]

**ರಾಜಾಧ್ಯಕ್ಷ** (ನಾ). ಅರಸನ ಆಸ್ಥಾನದ ಹಿರಿಯ ಅಧಿಕಾರಿ : ರಾಜಾಧ್ಯಕ್ಷ ×೪ಪಿಟ್ಟಪ್ಪಯ್ಯನ × × × ಲಿಖಿತ (ಎಕ. VII ೩೦೦-೩೨ ; 1057) ; ಶ್ರೀಮನ್ ಮಹಾಪ್ರಧಾನಂ ರಾಜಾಧ್ಯ... ವೆರ್ಗ್ಗಡೆ ಕನ್ನಡಸಂಧಿವಿಗ್ರಹಿ ದಂಡನಾಯಕಂ ಕಾಳಿಮರಸರ್ (... 1032).

[ ಸಂ. ]

**ರಾಜಾಧ್ವರ** (ನಾ). = ರಾಜಸೂಯ : ಪರಮಜ್ಯೈಮಿನಿಕಣ್ವ... ಗಳಾಗ್ನೀಧ್ರಾದಿ ರಾಜಾಧ್ವರನಿಯೋಗಿಗಳಾಯ್ತು ವೇದವ್ಯಾಸನ... (ಕುಮಾ.ಶ. ೭-೨೩).

[ಸಂ.]

**ರಾಜಾನ** ' ರಾಜನ ' ನೋ.

**ರಾಜಾನ್ನ** (ನಾ). ಒಂದು ಬಗೆಯ ಶ್ರೇಷ್ಠಜಾತಿಯ ಬತ್ತ... ಅದರ ಅಕ್ಕಿ : "ಸಿತಶಾಲಿ ಕೆಂಗಟವೆ ಕಂಬತ್ತ ರಾಜಾನ್ನಂ" ... ೧೦೦-೪) ; ಮುಂದೆ ಮಂದ್ಯೈಸಿ ತಲೆಯುದ್ದವಾಗಿ ತುಱುಗಿ ಬ... ರಾಜಿಸುವ ರಾಜಾನ್ನದ ಕುಸುಂಕುಚಿಕೊಳಗೆ . . . ನೆಗೆವ ಸುಟ್ಟು... (ಅರಾವ. ೩-೭೨ ವ) ; ಬೇಗಿ ಬೆಳೆದು ನಭಕಡರ್ದೊಡೆ ದೇವರ್ಕಳ್ ಸವಿಗಾಣರ್ ಪೋಗಿ ಮಾಡುವುದೇನೆನುತ ಲಜ್ಜಿಸಿ ತಲೆವಾಗಿದ... ರಾಜಾನ್ನ (ವೋಹಕ. ೨-೪೦).

**ರಾಜಾನ್ನದಕ್ಕಿ** = ರಾಜಾನ್ನವೆಂಬ ಬತ್ತದ ಅಕ್ಕಿ : ನಿವೇದ್ಯಕ್ಕೆ ರಾಜಾನ್ನದಕ್ಕಿ ಕೊಳಗ ಒಂದು (ಕವಿ. ೭೯-೧೩-೪೦ ...) ಉತ್ತಮವದ ರಾಜಾನ್ನದಕ್ಕಿಯ ಬೋನವಂ ಮಾಡಿ ಇತ್ತು... ೨೭-೦೫).

[ಸಂ.]

**ರಾಜಾನ್ವಯ** (ನಾ). = ರಾಜಕುಲ ೧ : ಕೆಟ್ಟುದಿಂದ್ರಪ್ರಸ್ಥ... ರುಚಿಟ್ಟು ಹೋದರು ನಾರ ಸೀರೆಯ ನಟ್ಟಡವಿ ಮನೆಯಾಯ್ತು... ನ್ವಯದ ರಾಜರಿಗೆ (ಕುಮಾ.ವ. ೦-೦೯).

[ಸಂ.]

**ರಾಜಾಪುರಿ** (ನಾ). ಒಂದು ಬಗೆಯ ಸಕ್ಕರೆ : ಪುಡಿಸಕ್ಕರೆಯ... ರಾಜಾಪುರೀ, ಎಳಗಾಡೀ, ಹುರಿಸಕ್ಕರೆ, ಮಗುದುಮ್ಮಾ ಎಂದ... ತರವುಂಟು (ಮುಂಬಯಿ. ೩-೪೫). ' ರಾಯಪುರಿಸಕ್ಕರೆ ' ಪರಾ...

**ರಾಜಾಭರಣ** (ನಾ). ಚಂದ್ರನನ್ನೇ ಆಭರಣವನ್ನಾಗಿ ಧರಿಸಿ... ಚಂದ್ರಶೇಖರ ; ಶಿವ : ರಾಜಾಭರಣನೆ ಕೇಳಯ್ಯ... ವಿರೂಪಾಕ್ಷಾ (೭೬೦೮. ದೇ. ೩೮-೩).

[ಸಂ.]

**ರಾಜಾಯತ್ತ** (ನಾ). ಪ್ರಭುಸಿದ್ಧಿಯ ಮೂರು ಬಗೆಗಳಲ್ಲಿ... ಸಂಪೂರ್ಣವಾಗಿ ಅರಸನು ನಡೆಸುವ ಅಧಿಕಾರ; ನಿರಂಕುಶ... ಪ್ರಭುಸಿದ್ಧಿಯನ್ನು ಅರ್ಥಶಾಸ್ತ್ರಕಾರರು ರಾಜಾಯತ್ತ, ಸಚಿ... ಉಭಯಾಯತ್ತ ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾರೆ ... ೪೭). ' ಸಚಿವಾಯತ್ತ ' ಪರಾ.

[ಸಂ.]

**ರಾಜಾರೂಪಾಯಿ** (ನಾ). ೧. ಹಿಂದಿನ ಮೈಸೂರುಅರಸ... ಡಲ್ಲಿದ್ದ ಒಂದು ಬಗೆಯ ನಾಣ್ಯ : (*). ೨. ಐದನೆಯ ... ಮುಖದ ಮುದ್ರೆಯಿದ್ದ ಒಂದು ಬೆಳ್ಳಿಯ ನಾಣ್ಯ : ವಸ... ಲಯದಲ್ಲಿ ಇಂದೂ ರಾಜಾರೂಪಾಯಿಯೂ ಇರಬಹುದು (ರೂ...

[< ರಾಜ + ರೂಪಾಯಿ]

**ರಾಜಾರೋಪ** (ನಾ). ಎಲ್ಲರಿಗೂ ತಿಳಿಯುವಂತಿರುವುದು ; ಮರೆಯಿಲ್ಲದಿರುವುದು ; ಬಹಿರಂಗವಾಗಿರುವುದು.

**ರಾಜಾರೋಪವಾಗಿ** = ಎಲ್ಲರಿಗೂ ತಿಳಿಯುವಂತೆ ; ಬಹಿರ...

ವಾಗಿಯೇ ಕೋಳಿಮಾಂಸ ಮತ್ತು ಹೋಟಲುತಿಂಡಿ ತಿನ್ನುತ್ತಿದ್ದರು (ಅಣ್ಣರ. ೬). [←ಮರಾ. ರಾಜಾರೂಸ್, ರಾಜಾರೋಸ್, ರಾಜಾರೋಶ್, ರಾಜಾರೋಷ್]

**ರಾಜಾರ್ಹ** (ಗು). ೧. ಅರಸನಿಗೆ ಉಚಿತವಾದ : ರಾಜಯೋಗ್ಯವಾದ. (ನಾ). ೨. ಒಂದು ಬಗೆಯ ಸುಗಂಧದ ಮರ ; ಧೂಪದ ಮರ; ಅಗ್ಗರು : "ವಂಶಕಂ, ಅಗರು, ರಾಜಾರ್ಹಂ, ಲೋಹಂ, ಕ್ರಿಮಿಜಂ, ಜೋಂಗಕಂ— ೬ ಅಗರುಗಂಧ, ಶ್ವೇತಾಗರು" (ಸಿದ್ಧಾಂತಿ. ೨೦೬). ೩. ಒಂದು ಬಗೆಯ ಶ್ರೇಷ್ಠಜಾತಿಯ ಬತ್ತ ; ರಾಜಾನ್ನ. ೪. ಕತ್ತಾಳೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ. [ಸಂ.]

**ರಾಜಾಲಯ** (ನಾ). ದೊರೆಯ ನಿವಾಸ ; ಅರಮನೆ : ಜನನಿಯುಮಂ ಜನ್ಮಭೂಮಿಯುಮಂ ಕಂಡಾಗಿನಿವಿರಿದು ರಾಗೋದಯಮದೇವಿರಿದೆನುತುಂ ಬಂದು ರಾಜಾಲಯಮಂ ತೋಱಿ (ಚಂದ್ರಪ್ರ. ೩-೧೧ ವ) ; ಹೊಂಗೆಲಸದಲಿ ರಾಜಾಲಯವನನುಕರಿಸಿದರು ಕುಂತೀಕುಮಾರರಿಗೆ (ಕುಮಾವ್ಯಾಸ. ೧೧-೪೪).
[ಸಂ.]

**ರಾಜಾವರ್ತ** (ನಾ). ಚಿನ್ನದ ಹೊಳಪಿನ ಎಳೆಗಳುಳ್ಳ (ವಿಶೇಷವಾಗಿ ಕಂದುಬಣ್ಣದಿಂದ ಕೂಡಿದ) ಒಂದು ಬಗೆಯ ಹರಳು : "ರಾಜಾವರ್ತವೆಳೆಯ ನೀಲಕ್ಕೆ ಪೆಸರ್" (ಕಬ್ಬಿಗ. ೪೪); ದ್ರುಪದಂ ಪಚ್ಚೆಯ ನೆಲಗಟ್ಟನೊಳಂ ರಾಜಾವರ್ತದ ಕಂಬದೊಳಂ . . . ವಿವಾಹಗೇಹಮಂ ಸಮೆಯಿಸಿ (ಕಂಕರ. ೩-೭೪ ವ) ; ಪುಷ್ಯರಾಗ, ರಾಜಾವರ್ತ, ಆಡುಸೋಗೆ ಹೂವು . . . ಇವುಗಳಲ್ಲಿ ನಾಲಿಗೆಗೆ ಗಂಡೂಷವನ್ನು ಮಾಡಲು ಪಿತ್ತಜ್ವರ . . . ಗುಣವಾಗುವುವು (ಸಕವ್ಯ. ೮೫). [ಸಂ.]

**ರಾಜಾವರ್ತಿ** (ನಾ). =ರಾಜಾವರ್ತ : ನನ್ನ ರಾಜಾವರ್ತಿ ಕಲ್ಲಿನ ಪದಕ ಕಳೆದುಹೋಗಿದೆ (ಆಡು). [<ಸಂ. ರಾಜಾವರ್ತ]

**ರಾಜಾವಳಿ** (ನಾ). ೧. ಅರಸರ ಸಮೂಹ. ೨. ಅರಸನ ವಂಶಾವಳಿಯ ನಿರೂಪಣೆ : ಚಾಳುಕ್ಯಚಕ್ರವರ್ತಿಗಳ ವಂಶದ ರಾಜ್ಯಂಗೆಯ್ದರಸುಗಳ ರಾಜಾವಳಿ ಮಂಗಳ (ಎಕ. XII, ೨೭೬-೧೦೬ ; 1077).
[ಸಂ. ರಾಜಾವಲಿ]

**ರಾಜಾಶ್ರಯ** (ನಾ). ದೊರೆಯ ಆಸರೆ ; ಅರಸನ ಆಶ್ರಯ : ಪೂಜಿಸಿದವರ್ಗೆ ಬೇಳ್ಪುದನಾ ಜನ್ಮದೊಳೀವ ದೆಯ್ವಮುಳ್ಳಡೆ ಬಳಿಯಂ ರಾಜಾಶ್ರಯಮೇವುದೊ (ಸಮಸ. ೯-೯೦) ; ರಾಜಾಶ್ರಯವು ತಿಳಿದಷ್ಟು ಅನುಕೂಲವಾದುದಲ್ಲ (ಶಾರದ. ೩೬೩). [ಸಂ.]

**ರಾಜಾಸ್ಥಾನ** (ನಾ). ರಾಜಸಭೆ : ಸ್ಮೃತಿಗಳ ಕಾಲದಲ್ಲಿ ರಾಜಾಸ್ಥಾನವೇ ನ್ಯಾಯಾಸ್ಥಾನವಾಗಿತ್ತು (ಶಾರದ. ೩೬) ; ರಾಜಾಸ್ಥಾನಗಳ ಒಂದು ಸಮಗ್ರ ಚಿತ್ರವು ಎಲ್ಲಿಯೂ ದೊರೆಯದಿರುವುದು ದುರದೃಷ್ಟ (ಕಶಾಂ.೩೨೩). [ಸಂ.]

**ರಾಜಿ**$_1$ (ನಾ). ೧. ಸಾಲು ; ಓಳಿ ; ಪಂಕ್ತಿ : "ಆಳೀ(ಃ) . . . ವೀಥೀ, ರಾಜೀ(ಃ) — ಈ ೬ ಪಂತಿ" (ಹಲಾಯು. ೧೦೯-೩೬). ೨. ಗುಂಪು; ಸಮೂಹ ; ರಾಶಿ : ಜಲರುಹಬೀಜರಾಜಿಗಳನಾಱಪ ಪರ್ಣಕುಟೀರಕಂಗಳಂ ನಿಲಿಸುವ . . . ಅಕ್ಷಮಣಿಯಂ ಸಮೆವೀ ವ್ಯವಸಾಯಮೆತ್ತಲುಂ (ಶಾಕುಂತ. ೨೨೩) ; ಕೊಡಲಿ ಕುಜನಮಹೀರಾಜಿಗೆ ಕೊಡಲಿ. . . ಕೊಡಲಿ ವೀರವನೆನುತಲಾತನ ಕೊಡಲಿಯಂ ಕೊಂಡಾಡಿದರು (ಏಕಪು. ೯-೦೪) ; ಸೋನ್ನತದೇಹ . . . ಭುಜದವರೆಗೆ ತೂರಿ ಹರಿದು ಬಂದಿರುವ ಕೇಶರಾಜಿ (ಚಾಂಕಲಾ. ೧೦೬). ೩. ಕರಿಯ ಸಾಸುವೆ. ೪. ಕಿರುನಾಲಗೆ. ೫. ಬಯಲು ; ಮೈದಾನ. ೬. ಮೈಮೇಲೆ ಪಟ್ಟೆಗಳುಳ್ಳ ಒಂದು ಬಗೆಯ ಹಾವು : ದರ್ವೀಕರ ಮಂಡಲ ರಾಜಿಗಳೆಂಬ ಮೂರು ತೆರನಾದ ಸರ್ಪವಿಷಗಳಲ್ಲಿ ಸಳಿಯ ಸಟ್ಟುಗದ ಬೇರ ನೀರಲ್ಲಿ ಅರೆದು ಕುಡಿಯಲು ವಿಷಹರ (ಏಕಸ. ೧೦-೯). ೭. [ಅಶ್ವಶಾ] ಕುದುರೆಯ ಮೈಮೇಲೆ ಇರುವ ಒಂದು ಬಗೆಯ ರೇಖೆ : ಮೂವತ್ತೆರಡುರೇಖೆಗಳ ನಡುವೆ ಕಾಣಿಸುವ ಇಪ್ಪತ್ತೈದು ಅಡ್ಡರೇಖೆಗಳಿಗೆ ರಾಜಿಗಳೆಂಬ ಹೆಸರು (ಅಶ್ವಶಾ. ೫೬-೧೨). [ಸಂ.]

**ರಾಜಿ**$_2$ ' ರಾಜೀ ' ನೋ.

**ರಾಜಿಕ** (ಗು). ೧. ಅರಸನಿಗೆ ಸಂಬಂಧಿಸಿದ : (?). (ನಾ). ೨. ಮುತ್ತಿಗೆ ; ಆಕ್ರಮಣ : ರಾಜ್ಯದ ಸರ್ವಸ್ವವೂ ಆರ್ವ ರಾಜಿಕದವರ ಕಯ್ಗೆ ಬಿದ್ದು ಸೂರೆಯಾಗಲು . . . ಸಿದ್ಧವಾಗಿದೆ (ಕಲ್ಯಾಣ. ೪೪-೨೪) ; ೧೬೮೪ನೇ ಚಿತ್ರಭಾನು ಸಂ ೧೧ ದಲ್ಲಿ ಇನ್ನೊಂದು ರಾಜಿಕ ಸಂಭವಿಸಿತು (ಕತ್ರಕಾ. ೬೩). ೩. ಕರಿಯ ಸಾಸುವೆ : "ಸರ್ಷಪಮದಾ ರಾಜಿಕಂ ಸಾಸಿವೆಯೆನಿಕ್ಕು" (ಮಂಗರಾ. ೪೦-೩೩).
[←ಮರಾ. ರಾಜೀಕ./ಸಂ. ರಾಜಿಕಾ]

**ರಾಜಿಕೆ** (ನಾ). ೧. ಸಾಲು ; ಪಂಕ್ತಿ ; ಶ್ರೇಣಿ. ೨. ಬಯಲು ; ಮೈದಾನ. ೩. ಕರಿಯ ಸಾಸುವೆ : "ಸಾಸಿವೆ ರಾಜಿಕೆ ಸರ್ಷಪ ವಾಸುರಿ" (ವಸ್ತುಕೋ. ೯೩-೦೯). [ಸಂ. ರಾಜಿಕಾ]

**ರಾಜಿಗೈ** (ಕ್ರಿ). ಒಪ್ಪಂದವಮಾಡಿಸು ; ಒಡಂಬಡಿಸು : ಸಮರವ್ಯಾಪವೆಮ್ಮೊಳಗೇಕೆ ರಾಜಿಗೈವುದಕೆ ನಿಜಜನರನಟ್ಟ (ಕಲಾಂಡು. ೩).
[ರಾಜಿ$_2$ (<ರಾಜೀ) + ಕೈ$_{೧1}$ (<ಕೆಯ್$_1$)]

**ರಾಜಿತ** (ಗು). ಶೋಭಿಸುವ ; ರಂಜಿಸುವ : ಸಭಾಸದನದಂತೆ ವೇತ್ರಾಸನಾಧಿಷ್ಠಿತರಾಜರಾಜಿತಮುಂ (ಚಂದ್ರಪ್ರ. ೩-೩೨ ವ); ಮಾಣಿಕ್ಯಪ್ರಭಾರಾಜಿತಾಂಘ್ರಿಯುಗ . . . ಪಾಲಿಪುದೆನಗೆ ಚಾರುಮತಿಯಂ (ಕಬ್ಬಿಗ. ೧); ಭಾಜಿತ ದಿನಾಧಿಪಂ ರಾಜಿತ ಜನಾಧಿಪಂ . . . ಪೂಜಿಸಿದನೊಲ್ಮೆಯಿಂ (ರಾಜಶೇ. ೦೩-೩೦ ರಗಳೆ). [ಸಂ.]

**ರಾಜಿನಾಮೆ** ' ರಾಜೀನಾಮೆ ' ನೋ.

**ರಾಜಿಲ, ರಾಜಿಳ** (ಗು). ೧. ಪಟ್ಟೆಗಳುಳ್ಳ ; ಗೆರೆಗಳಿರುವ. (ನಾ). ೨. (ಮೈಮೇಲೆ ಪಟ್ಟೆಗಳಿರುವ) ಒಂದು ಬಗೆಯ ನಿರ್ವಿಷವಾದ ಹಾವು ; ಒಳ್ಳೆ ; ನೀರುಹಾವು : ರಾಜಿಲಸರ್ಪದಿಂದಾವುಂಟಾದ ಮೊದಲ ವೇಗ ಮೈಮೇಲೆ ನರಗಳಯೇಳಿಸುವದು (ಏಕಸ. ೦೦-೨). ೩. ಎರಡುತಲೆಗಳುಳ್ಳ ಒಂದು ಬಗೆಯ ಹಾವು: "ರಾಜಿಲಃ, ಡುಂಡುಭಃ — ೨. ಎರಡುತಲೆಗಳುಳ್ಳ ಶಿಖಂಡಿಯೆಂಬ ಸರ್ಪಭೇದದ ಹೆಸರುಗಳು, ಎರಡು ತಲೆ ಉರಿಶಿಂಗಿ" (ಸಿದ್ಧಾಂತಿ. ೬೨). ೪. ಆನೆ ; ಗಜ. **ರಾಜಿಳ** : ೨. "ರಾಜಿಳಃ, ಡುಂಡುಭಃ — ಈ ೨ ಒಳ್ಳೆ" (ಹಲಾಯು. ೦೦೬-೨೦). [ಸಂ.]

**ರಾಜಿಸು** (ಕ್ರಿ). ಶೋಭಿಸು ; ಕಂಗೊಳಿಸು : "ರ್‍ಾಜಸು—ಶೋಭಾಯಾಂ" (ಕಮದಾ); ರಾಜಭವನದೊಳೆಸೆವ ಮಣಿತೋರಣಂಗಳಿಂ ರಾಜಿಸುವುವೆತ್ತಿದಾತಪವಾರಣಂಗಳಿಂ . . . ಕಣ್ಗೆಸೆದುದು ನರೇಂದ್ರಭವನಾಂಗಣಂ (ಆಪು. ೯-೬ ರಗಳೆ) ; ಕಂಡರಿಸಿದರೊ ಕಡೆದರೋ ಎನೆ ಗಿರಿರಾಜತನೂಜೆ ಪೂಜೆಯೊಳ್ ರಾಜಿಸುವಳ್ (ಗಿರಿಕ. ೩-೦೦೨) ; ಒಪ್ಪುವ ಕಾಡುಮಲ್ಲಿಗೆಯ ಬಳ್ಳಿವಾಡಮುಂ ರಾಜಿಸೆ (ರಾಜಶೇ. ೩೦-೦೯).

**ರಾರಾಜಿಸು** (ದ್ವಿರುಕ್ತಿ): ದಾಸನಯಾಳಂಕಾರೆ ರಾರಾಜಿಸಿದಳಖಿಳ ವಿದ್ಯಾರ್ತ್ಥಿದೀನಾವಳೀನನ್ದಿನಿಯುಕಸ್ಯ ದೇವಿ (ಎಕ. XVIII, ೨೬೩-೨೦; 1022); ದಂತದ್ಯುತಿ ರಾರಾಜಿಸಿ ಮುಖದಿನುಣ್ಮೆ ನುಡಿದಂ ಕೃಷ್ಣಂ (ಜಗು. ೦೦-೦೪); ರಂಗಧಾಮನ ರಾಣಿಗೆ ರಾರಾಜಿಪ ರಂಗನಾಯಕಿಗೆಜಿಗುವೆನು (ಹರಿ. ೨-೨).
[ರಾಜ್$_0$ (P←ಸಂ. ರಾಜ್ =ಪ್ರಕಾಶಿಸು) + —ಇಸು$_3$]

**ರಾಜಿಳ** ' ರಾಜಿಲ ' ನೋ.

**ರಾಜೀ, ರಾಜಿ**$_2$ (ನಾ). ೧. ಒಪ್ಪಂದ ; ಒಡಂಬಡಿಕೆ : ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ . . . ಶಬ್ದಗಳೆಂದರೆ . . .

ರಾಜೀ (ರಾಶಿಘ), ತಾರೀಖು (ಛಾಕಾಕಾ. ೦೬೬); ಇವನು ಹೋಗಿ ತಪ್ಪಾಯಿ ತೆಂದು ಬೇಡಿಕೊಂಡೊಡನೆಯೇ ಪುನಃ ರಾಜೀ (ರಾಕಕು. ೦೩). **ರಾಜಿ₂:** ೧. ಕಕ್ಷಿಗಾರರೇ ರಾಜಿಗೆ ಒಪ್ಪಿದರೆ ಅವರನ್ನು ಒಪ್ಪಿಸಬಹುದು ಎಂದಿದ್ದ (ಕಂದಕೋ. ೦೩೪). ೨. ಒಪ್ಪಿಗೆ; ಸಮ್ಮತಿ; ಕಬೂಲು: ಅದಕ್ಕೆ ನಿಮ್ಮ ರಾಜಿ ಇದೆಯೆ? ನಿಮಗೆ ರಾಜಿ ಇರಲಿ, ಇಲ್ಲದಿರಲಿ ನಾನಂತೂ ರಾಜಿ ಯಾಗಿದ್ದೇನೆ (ಕಮುಳ. ೦೩೬). ೩. ಸ್ವಂತ ಇಚ್ಛೆ; ಸ್ವಯಂಸಮ್ಮತಿ: ನಡಸಿಕೊಂಡು ಬಹಿರಿಯೆಂದು ನಮ್ಮ ರಾಜಿಯಿಂದ ಒಡಂಬಟ್ಟು ಕೊಟ್ಟ ಧರ್ಮಸಾಧನ (ಎಕ. XIV, ಶ್ರೀರಂಗ. ೨೬೦-೭೭; 1419); ಜೂಜವಾಡಿಯುಂ ಸಕಲರಾಜ್ಯವನು ಪುಷ್ಕರಗೆ ರಾಜಿಯಿಂದಲಿ ಸೋತು (ಯುನಳ. ೮೪). ೪. ರಾಜೀನಾಮೆ: ಈಗಿನ ಕೆಲಸಕ್ಕೆ ರಾಜಿಯಿತ್ತರೆ ಮುಂದೆ ಕೆಲಸಮಾಡುವುದೆಲ್ಲಿ (ದೇಕಥು. ೦೭).

**ರಾಜಿಕಬೂಲಿ** = ಒಪ್ಪಂದ; ಒಡಂಬಡಿಕೆ: ಜನರು ಅದನ್ನು ನೋಡಿ–ನಾವು ಕೇಡಿಗತನದೊಡನೆ ರಾಜಿಕಬೂಲಿ ಮಾಡಿಕೊಳ್ಳತಕ್ಕವರೆಂದು ಭಾವಿಸಿ, ನಮ್ಮ ಮಾತೆಲ್ಲ ಪೊಳ್ಳುಹರಟೆಯೆಂದುಕೊಂಡುಬಿಟ್ಟಾರು (ರಾಜ್ಯಕಾ. ೨೬೨). **ರಾಜೀ ಆಗು, ರಾಜಿಯಾಗು** = ೧. ಹಿಂದಿನ ವಿರೋಧವನು ಬಿಟ್ಟು ಸ್ನೇಹದಿಂದ ಒಪ್ಪಂದ ಮಾಡಿಕೊಳ್ಳು; ಒಡಂಬಡು: ರೈತರು ರಾಜೀಆಗಿ ಹೇರಳವಾಗಿ ಭೂಮಿ ಸಾಗುವಳಿ ಮಾಡುತ್ತಾರೆ (ಮಹಾಚ. II, ೬೩). ೨. ಒಪ್ಪಂದವಾಗು; ಒಡಂಬಡಿಕೆಯಾಗು: ಪಕ್ಷದ ನಾಯಕರು ಸ್ವಾತಂತ್ರ್ಯವಿಲ್ಲದೆ ಕೈಕಟ್ಟದವರಾಗಿ ಅಲ್ಲಿ ಬಂದು ಕುಳಿತರೆ ಅವರಲ್ಲಿ ರಾಜಿಯಾಗುವುದೆಲ್ಲಿ? (ರಾಜ್ಯಕಾ. ೩೦೨). ೩. ಒಪ್ಪು; ಸಮ್ಮತಿಸು: ಅದಕ್ಕೆ ನಿಮ್ಮ ರಾಜಿ ಇದೆಯೆ . . . ನಾನಂತೂ ರಾಜಿ ಯಾಗಿದ್ದೇನೆ (ಕಮುಳ. ೦೩೬). **ರಾಜೀಮಾಡಿಸು** = ಪರಸ್ಪರ ಒಪ್ಪಿಸು; ಒಂದುಗೂಡಿಸು; ಒಡಂಬಡಿಸು: ನ್ಯಾಯಾಧೀಶರು ಗಂಡನಿಗೆ ಉಪದೇಶಮಾಡಿ ರಾಜೀಮಾಡಿಸಿದರಂತೆ (ಕತ್ರಿಕಾ. ೬).

[←ಅರ. ರಾಜೀ, ರಾಶಿಘಾ; ಹಿಂ. ಮರಾ. ರಾಜೀ]

**ರಾಜೀನಾಮೆ,** ರಾಜಿನಾಮೆ (ನಾ). ೧. ಪರಸ್ಪರ ಒಪ್ಪಿಗೆಯಿಂದ ಬರೆದುಕೊಡುವ ಪತ್ರ; ಒಪ್ಪಿಗೆಪತ್ರ; ಒಡಂಬಡಿಕೆಯ ಪತ್ರ: (*). ೨. ಉದ್ಯೋಗ ಮೊದಲಾದುವುಗಳಿಂದ ಬಿಡುಗಡೆ ಮಾಡಬೇಕೆಂದು ಕೇಳಿ ತಾನೇ ಒಪ್ಪಿ ಬರೆದುಕೊಡುವ ಪತ್ರ: ಮಂಡಳಿಯ ಸಭಾಸದ ಕೆಲಸಕ್ಕೆ ನಾನು ಈಗ ರಾಜೀನಾಮೆಯನ್ನು ಕೊಡುತ್ತೇನೆ (ಮೋಹಿಹೀ. ೦೩೬); ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟು ಬಿಟ್ಟ (ದುಂಬಿಕ. ೦೩೬). **ರಾಜಿನಾಮೆ:** ೨. ತನ್ನ ಕೆಲಸಕ್ಕೆ ರಾಜಿನಾಮೆ ಯಿತ್ತು . . . ಧೊಡ್ಡ ಚಳವಳವನ್ನು ಹೂಡಿದನು (ಜಗಸಂ. ೬೦); ನಾನು ಸೇನಾಪತಿಯ ಕೆಲಸಕ್ಕೆ ರಾಜಿನಾಮೆ ಕೊಡುತ್ತೇನೆ (ಮಂದಾಕಿ. ೦೨೮).

[← ಪಾರ. ರಾಜೀನಾಮಹ್, ರಾಶಿಘಾನಾಮಾ; ಹಿಂ. ಮರಾ. ರಾಜೀನಾಮಾ]

**ರಾಜೀವ** (ನಾ). ೧. ಕಮಲ; ತಾವರೆ: "ಸಹಸ್ರಪತ್ರಂ . . . ರಾಜೀವಂ . . . ಪಂಕಜಂ – ಈ ೧೭ ತಾವರೆ" (ಹಲಾಯು. ೦೦೨-೩೮); ಬೆಳಗೆಲ್ಲಂ ಪೋಗೆ ವಿಯತ್ತಳದೊಳ್ ಬೆಳರ್ಗೆಂಪು ಪಸರಿಸುತ್ತಿರಲಪರಾಚಲಶಿಖರದತ್ತ ಲೊಯ್ಯನೆ ತಳರ್ದಂ ರಾಜೀವಜೀವಿತೇಶ್ವರನಾಗಳ್ (ಕಾದಂಕಾ. ೦೩೭); ಮೂರವಲಿ ರಾಜೀವಗಂಧಸಮೀರಣನ ಸಂಭಾವನೆಗೆ ಸೊಗಸಿವಳು ಸತಿ (ಕುವ್ಯಾಕ. ೦೦-೦೫); ಪಾದರಿ ಸುರಗಿ ಸೇವಂತಿ ರಾಜೀವ ನಿರ್ಜರಸುಮಮಾಲೆ ಕಣ್ಗೆ ವಿರಾಜಿಸಿದುವು (ಮೋಹಕ. ೦೬-೦೬). ೨. ನೈದಿಲೆ; ಕನ್ನೈದಿಲೆ. ೩. ಒಂದು ಬಗೆಯ ಮೀನು: "ಶಾಲಃ . . . ರಾಜೀವಃ, ಲೋಹಿತಃ, ಪಲ್ಲವಕಃ – ಈ ೬ ಮತ್ಸ್ಯದ ಭೇದಂಗಳ್" (ಹಲಾಯು. ೦೦೯-೩೭); ಪೆರ್ಚಿರ್ಮಿಗದಧಿಕತರಸತ್ತ್ವದಿಂ ಸತ್ವದಿಂದುರ್ಚಿ ಮೆಯ್ಗರೆವ ರಾಜೀವಮಾ ಜೀವಮುಂ ಕರ್ಚಿ ಪಾಯ್ದುಡಂಗುವ ತರಂಗದಿಂ ರಂಗದಿಂದೆಟ್ಟಿ ಪೆರ್ಮೀನಿನಿಂದ . . . ಆ ಸಮುದ್ರಂ (ಶ್ರೀರಾಪು. ೩-೨೫). ೪. (ಮೈಮೇಲೆ ಪಟ್ಟೆಗಳಿರುವ) ಒಂದು ಬಗೆಯ ಜಿಂಕೆ. ೫. ಆನೆ; ಗಜ. ೬. ಸಮೂಹ; ಗುಂಪು. ೭. ತಲೆಯ ಕೂದಲು; ಕೇಶರಾಶಿ. ೮. ನೀರು; ಜಲ: "ಕೂದಲು ತಾವರೆಯುದಕ ಸಮೂಹ ನಾಲ್ಕು ರಾಜೀವಾಖ್ಯಂ" (ನಾವಾಕಂ. ೫೪). [ಸಂ.]

**ರಾಜೀವಪೀಠ** (ನಾ). ೧. ಕಮಲದ ಪೀಠ; ತಾವರೆಯ ಆಸನ. ೨. ಕಮಲವನ್ನು ಪೀಠವಾಗಿ ಉಳ್ಳವನು; ಬ್ರಹ್ಮ: ಶ್ರೀವನಿತೆಯರಸನೆ ವಿಮಲರಾಜೀವಪೀಠನ ಪಿತನೆ . . . ಕಾವುದಾನತಜನವ ಗದುಗಿನ ವೀರನಾರಯಣ (ಕುವ್ಯಾಕ. ೦-೦). [ಸಂ.]

**ರಾಜುಣ** 'ರಾಜನ' ನೋ.

**ರಾಜುಳ್ಳಿ** (ನಾ). ಒಂದು ಬಗೆಯ ದಪ್ಪ ಈರುಳ್ಳಿ: "ರೋಚಕಃ – ಹೊಂಗೆ, ರಾಜುಳ್ಳಿ" (೬ಶಧಿ. ೦೯೦). 'ರಾಯುಳ್ಳಿ' ಪರಾ.

[ರಾಜ + ಉಳ್ಳಿ₁]

**ರಾಜೇಂದ್ರ** (ನಾ). ಚಕ್ರವರ್ತಿ; ಮಹಾರಾಜ: ರಾಜೇಂದ್ರ ಚಿತ್ತೈಸೆಂದ ನಸುರೇಂದ್ರ (ಕೊರಲಾ. ೬-೩-೩೨); ಸೃಷ್ಟಿಯ ಶಕ್ತಿದೊತ್ತನೆಂ, ರಾಜೇಂದ್ರ (ಶ್ರೀರಾಪು. ೦೩-೩೫೩). [ಸಂ.]

**ರಾಜೋಚಿತ** (ಗು). ಅರಸನಿಗೆ ಉಚಿತವಾದ; ರಾಜಯೋಗ್ಯವಾದ: ಮಕ್ಕಳು ರಾಜೋಚಿತ ಅಲಂಕಾರದಲ್ಲಿ ಬಹಳ ಮುದ್ದಾಗಿ ಕಾಣುತ್ತಿದ್ದರು (ರೂಢಿ). [ಸಂ.]

**ರಾಜೋಪಚಾರ** (ನಾ). ೧. ಅರಸನಿಗೆ ಮಾಡುವ ಸೇವೆ–ಉಪಚಾರ: ಸುದತಿ ನೀ ಕೇಳು ಯಿಂತಧಿಕನಗರದ ಮಧ್ಯ . . . ಕುಧರಜಾರ್ಧಾಂಗ ಪರಮೇಶ್ವರನ ಭವನಮಿದೆ ರಾಜೋಪಚಾರದೊಡನೆ (ಶಶಮೋ. ೨-೬೨). ೨. ರಾಜೋಚಿತವಾದ ಉಪಚಾರ; ಹೆಚ್ಚಿನ ಸೇವೆ: ರಾಜೋಪಚಾರಮಂನ್ನಿರ್ವ್ಯಾಜದೊಳಾನೆಸಗದಾವೆನೋ ಶಂಭುಗೆ (ವೃಕಾಬ. ೩೦-೨೦): ಹೆಣ್ಣಿನವರು ವರನ ಕಡೆಯವರಿಗೆ ರಾಜೋಪಚಾರ ಮಾಡಿದರು (ರೂಢಿ). [ಸಂ.]

**ರಾಜ್ಞಿ** (ನಾ). ೧. ಅರಸಿ; ರಾಣಿ: ರಾಜ್ಞೀಗರ್ಭದೊಳಿರ್ದುಂ ತ್ರಿಜ್ಞಾನ ಸಮೇತನೆಂದು ಪೇಟ್ವಿರ್ದೆವೆ ದಲಭಿಜ್ಞಾರೇಖೆಗಳೆನಿಸಿ ಮನೋಜ್ಞತೆಯಂ ತ್ರಿವಳಿರೇಖೆ ತಳೆದೆಸೆದಿರ್ಕುಂ (ಚಂಪ್ರಪು. ೦೨-೨೫); ರಾಜ್ಞಿ, ಕುಸುಮ ಸುಖಮೊದಗಿತೀ ಮಾಮರಕೆ (ಶ್ರೀರಾಪಾ. ೦೪-೩೬೩). ೨. [ಸಂಗೀತ] ಒಂದು ರಾಗದ ಹೆಸರು: ನೀಲೋತ್ಪಲಿನಿ . . . ಗೀತಿ ರಾಜ್ಞಿ [ಪಾಠಾಂ. ರಯೆ] ತರಂಗಿಣಿ . . . ವಸಂತಬಂಗಾಳವೆಂಬಿಪ್ಪತ್ತೆರಡು ಕ್ರಿಯಾಂಗದಿಂದಾದ ರಾಗಂಗಳು (೬ಪೇಕ. ೦೬೮). [ಸಂ. ರಾಜ್ಞೀ]

**ರಾಜ್ಞೀನಿವಾಸ** (ನಾ). ರಾಣಿಯ ನಿವಾಸಸ್ಥಾನ; ಅಂತಃಪುರ: "ಅಂತಃಪುರಮೆನಿಕುಂ ಶುದ್ಧಾಂತಂ ರಾಜ್ಞೀನಿವಾಸಂ" (ಪಸ್ತುಕೋ. ೪೮-೦೮); ರಾಜ್ಞೀನಿವಾಸದಂತೆ ಜರತ್ಕಂಚುಕಿಕತೋದಂಚಿತಮುಂ . . . ಆಗಿಯುಂ (ಚಂಪ್ರಪು. ೫-೫೨ ವ). [ಸಂ.]

**ರಾಜ್ಯ** (ನಾ). ೧. ಅರಸನ ಸಪ್ತಾಂಗಗಳಲ್ಲಿ ಒಂದು; ದೊರೆಯ ಅಧಿಕಾರಕ್ಕೆ ಒಳಪಟ್ಟ ಭೂಮಿ; ದೇಶ: "ನೆಲನೆಂದೆನೆ ರಾಜ್ಯಂ" (ಕಪೆಕಂ. ೨೫೯); ತಾಮಿಲ್ಲದೆ ರಾಜ್ಯಮಂ ಪರಿಪಾಲಿಸುವೊರಾರುಮಿಲ್ಲ (ಪಮ್ಪಾರಾ. ೦೩೦-೨೫); ರಾಜ್ಯಕ್ಕಂ ತ್ರಿಭುವನಸಾಮ್ರಾಜ್ಯಕ್ಕಂ ಬಗೆಯೆ ಹಸ್ತಿಮಶಕಾಂತರಮೆಂದಿಜ್ಯಾಪುರಸ್ಸರಂ ಪ್ರವ್ರಜ್ಯಮನವಯವದೆ ಹಲಧರಂ ಧರಿಯಿಪುದುಂ (ಶಾಂತಿಪು. ೫-೬೨); ರಾಜ್ಯವೆಂದರೆ ಕೆಲವು ಮೂಲನಿಬಂಧನೆಗಳಿಗೆ ಅನುಸಾರವಾಗಿ ಒಟ್ಟುಗೂಡಿಕೊಂಡು ಬದುಕಲು ಒಡಂಬಟ್ಟಿರುವ ಜನರ ಸಂಘ ಅಥವಾ ಸಮಾಜ (ರಾಜ್ಯಕಾ. ೪೫). ೨. (ಭಾಷಾನುಗುಣವಾಗಿ) ವಿಂಗಡಿಸಲ್ಪಟ್ಟ ದೇಶದ ಭಾಗ; ಪ್ರಾಂತ:

ಪ್ರತಿಯೊಂದು ರಾಜ್ಯಕ್ಕೂ ಒಬ್ಬೊಬ್ಬ ರಾಜ್ಯಪಾಲರು ಇರುತ್ತಾರೆ (ಬೂಡಿ). ೩. ಅರಸೊತ್ತಿಗೆ ; ದೊರೆತನ. ೪. ಆಡಳಿತ ; ಆಳ್ವಿಕೆ : ' ರಾಜ್ಯಂಗೆಯ್ ' ಪರಾ. [ಸಂ.]

**ರಾಜ್ಯಂಗೆಯ್**, ರಾಜ್ಯಂಗೈ (ಕ್ರಿ). ರಾಜ್ಯವನ್ನು ಆಳು ; ರಾಜ್ಯಭಾರ ಮಾಡು : ಆಡಳಿತ ನಡೆಸು : ಶ್ರೀಪುರುಷ ರಾಜ್ಯಂಗೆಯ್ಯುತ್ತಿರೆ (ಎಕ. XVI, ಸಿರಾ. ೧೨೩-೬; 788) ; ಸಮಸ್ತಂ ಪರಿವಾರಮೆಂಬ ಗುಣಸಂಘಾತಂಗಳಂ ಶಾಲ್ದಿ ಪೆಂಪೆಸಕಂಬೆತ್ತಿರೆ ಸಂತಮಿಂತತಿಬಳಂ ರಾಜ್ಯಂಗೆಯುತ್ತಿರ್ಪಿನಂ (ಆದಿಪು. ೧-೬೯); ಶ್ರೀಮತ್ರಿಭುವನಮಲ್ಲದೇವರು ಜಯಂತೀಪುರದ ನೆಲೆವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ (ಕಇಕ. ೪೪-೩-೬; 1124). **ರಾಜ್ಯಂಗೈ** : ರಾಜರಾಜಾಧೀಶ ರಘುಕುಲ ರಾಜಪರಮೇಶ್ವರನು ನಿಮಿಕುಲರಾಜನಂದನೆ ಸಹಿತ ರಾಜ್ಯಂಗೈದನೊಲವಿನಲಿ (ತೊರರಾ. ೬-೫೫ ತೊಪವ). [ರಾಜ್ಯ + ಕೆಯ್$_1$]

**ರಾಜ್ಯಂಗೈ** ' ರಾಜ್ಯಂಗೆಯ್ ' ನೋ.

**ರಾಜ್ಯಕ** (ನಾ). ರಾಜ್ಯವನ್ನು ಆಳುವವನು ; ಆಡಳಿತಗಾರ : ಪಾರಿಜಾತವ ಕಂಡು ನಿಡುಸುಯ್ದು, ಪದಗಳಿಂ ಶೌರಿಕಥೆಯನು ಹೇಳಿದು ತೃಪ್ತನಹನು ಕವಿ ಊರಿನುದ್ಯಾನಕದ ತರಿಸಿ ಬೆಳಸುವ ಕಾರ್ಯಧೀರನಲ ರಾಜ್ಯಕನು (ಪಂಕುಶ. ೪೬೩). [ಸಂ.]

**ರಾಜ್ಯಕಾರಿಯ** (ನಾ). ಆಡಳಿತದ ವ್ಯವಹಾರ,—ಕೆಲಸ : ಅತಿಬೇಗದಲಿ ರಾಜ್ಯಕಾರಿಯದಿರವ ಬಿನ್ನೈಸಿ ಕಳುಹಿದ (ಕಂನಪ. ೧೧-೧೧೬).
[< ಸಂ. ರಾಜ್ಯಕಾರ್ಯ]

**ರಾಜ್ಯಕಾರ್ಯ** (ನಾ). = ರಾಜ್ಯಕಾರಿಯ : ರಾಜ್ಯಕಾರ್ಯಗಳನ್ನು ಕುರಿತ ಜ್ಞಾನಕ್ಕೆ ರಾಜಮಾರ್ಗವಾವುದೂ ಇಲ್ಲ (ರಾಜ್ಯಾಂಗ. ೧೧೨). [ಸಂ.]

**ರಾಜ್ಯಕಾಲ** (ನಾ). ರಾಜ್ಯವಾಳುವ ಕಾಲ ; ಆಳ್ವಿಕೆಯ ಅವಧಿ : ಸಾರವಸ್ತುಗಳೊಳ್ ನಿಸರ್ಗದಿಂದೆ ತಾಂ ನಿರಾದರನಾಗಿ ಶುಭಭಾವನೆಯೊಳ್ ರಾಜ್ಯಕಾಲಮಂ ಸಲಿಸುತ್ತುಮಿರೆ (ಶಾಂತಿಪು. ೬-೧೧೬ ಪ) ; ದಶಲಕ್ಷಪೂರ್ವ ಕುಮಾರಕಾಲಂ ಪೋಗೆ ರಾಜ್ಯಕಾಲದೊಳ್ ನಿಂದೇಕೋನತ್ರಿಂಶಲ್ಲಕ್ಷಪೂರ್ವಮುಂ ಪನ್ನೆರಡು ಪೂರ್ವಾಂಗಮುಂ ರಾಜ್ಯಕಾಲಂ ಪೋಗೆ (ಶಾಪುಂಪು. ೧೧೯).
[ಸಂ.]

**ರಾಜ್ಯಕ್ಷೇತ್ರ** (ನಾ). ರಾಜ್ಯದ ಪ್ರದೇಶ ; ಆಡಳಿತದ ಸೀಮೆ : (೧) ಭಾರತವು ರಾಜ್ಯಗಳ ಒಂದು ಸಂಘವಾಗಿ ಇರತಕ್ಕುದು. (೨) ಅದರ ರಾಜ್ಯಗಳೂ ರಾಜ್ಯಕ್ಷೇತ್ರಗಳೂ ಮೊದಲನೆಯ ಅನುಸೂಚಿಯ . . . ರಾಜ್ಯಕ್ಷೇತ್ರಗಳೂ ಆಗಿರತಕ್ಕುದು (ಭಾರಾ [illegible]). [ಸಂ.]

**ರಾಜ್ಯಚಿಹ್ನ** (ನಾ). ಅರಸೊತ್ತಿಗೆಯ ಗುರುತು ; ರಾಜಚಿಹ್ನೆ : ಬೆಳ್ಗೊಡೆ ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ (ಪಪ್ಪರಾ. ೧೩೦-೨೦) ; ಕಂದಂಗೆ ರಾಜ್ಯಚಿಹ್ನಮನೊಂದೆರಡುಮನಾಟಿಸಿ ಪಂದಿಗೆರೆದರ್ಥಮನಾ ಮಂದಾರಂ ಕಯ್ವಂದವೊಲೆಂದಿತ್ತೆಸಗುವನೊ ನೃಪತಿ ಜನನೋತ್ಸವಮಂ (ಪುಷ್ಪಪು. ೩-೯೦). [ಸಂ.]

**ರಾಜ್ಯಚಿಹ್ನೆ** (ನಾ). = ರಾಜ್ಯಚಿಹ್ನ : ಗುಡಿ, ಚಾಮರ, ಮೇಘಾಡಂಬರಾದಿಗಳು ರಾಜ್ಯಚಿಹ್ನೆಗಳೆಂದು ಒಂದು ಶಾಸನವು ತಿಳಿಸುತ್ತದೆ (ಕರಾಶ. ೩೩೬).
[ಸಂ. ರಾಜ್ಯಚಿಹ್ನ]

**ರಾಜ್ಯದಾಹ** (ನಾ). ರಾಜ್ಯವನ್ನು ಪಡೆಯಬೇಕೆಂಬ ಆತ್ಯಾಸೆ ; ರಾಜ್ಯಲಾಲಸೆ : ಈ ಆಕ್ರಮಣದಿಂದ, ಡಿಲ್ಲಿಸುಲ್ತಾನರ ರಾಜ್ಯದಾಹ ಹೆಚ್ಚಿತು (ಭಾರರ. ೪೨೨). [ಸಂ.]

**ರಾಜ್ಯನೀತಿ** (ನಾ). ರಾಜ್ಯದ ಆಡಳಿತಕ್ಕೆ ಸಂಬಂಧಿಸಿದ ನೀತಿ, —ವ್ಯವಹಾರ : ರಾಜ್ಯಪಟ್ಟಂಗಟ್ಟಿ ಸಂಕ್ಷೇಪದಿಂ ರಾಜ್ಯನೀತಿಯನಿಂತೆಂದು ಕಲ್ಪಿಸಿದಂ (ಪಪ್ಪರಾ. ೧೪೪-೨೩). [ಸಂ.]

**ರಾಜ್ಯನೀತಿಜ್ಞ** (ನಾ). ರಾಜನೀತಿಯನ್ನು ಬಲ್ಲವನು ; ರಾಜನೀತಿಜ್ಞ : ರಾಜ್ಯಶಾಸನ ದೊಡ್ಡದೇ ? ಈ ಪ್ರಶ್ನೆಯನ್ನು ರಾಜ್ಯನೀತಿಜ್ಞರು ಬಹುವಾಗಿ ಚರ್ಚಿಸಿದ್ದಾರೆ (ರಾಜ್ಯಶಾ. ೩೨೫). [ಸಂ.]

**ರಾಜ್ಯಪಟ್ಟ** (ನಾ). ರಾಜಪದವಿ ಸೂಚಕವಾಗಿ ಹಣೆಗೆ ಕಟ್ಟುವ ಚಿನ್ನದ ಪಟ್ಟಿ,— ಲಲಾಟಪಟ್ಟ : ಅಭಿಷೇಕಪುರಸ್ಸರಂ ಸ್ಮರಂ ನಸುಬಿರಿದಿರ್ದ ಮಲ್ಲಿಗೆಗೆ ಕಟ್ಟಿದನಂಕದ ರಾಜ್ಯಪಟ್ಟಮಂ (ಶಾಂತಿಪು. ೬-೧೪೨). [ಸಂ.]

**ರಾಜ್ಯಪತ್ರ** (ನಾ). ಸರ್ಕಾರವು ಪ್ರಕಟಿಸುವ ಪತ್ರ ; ಗೆಜೆಟ್ಟು : ಬಹಳ ಶಕ್ತಿಯುಳ್ಳ ಕಾಗದವನ್ನು . . . ಸನ್ನದು- ರಾಜ್ಯಪತ್ರಗಳು, ಮೌಲ್ಯಬಲಾವಣಿಪತ್ರಗಳು. . .ಮುದ್ರಿಸುವುದಕ್ಕೆ ಉಪಯೋಗಿಸುವರು (ಮುದ್ರಣ. ೯೦).
[ಸಂ.]

**ರಾಜ್ಯಪದ** (ನಾ). ಅರಸನ ಪದವಿ ; ಅರಸೊತ್ತಿಗೆ : ಸೀತೆಯ ತಂದವನ ತೋಱಿದರೆ ನಮಗದು ರಾಜ್ಯಪದವೆಂದ (ತೊರರಾ. ೬-೧೧-೪೪) ; ಆತನ ಕುಮಾರಂಗೆ ಪಟ್ಟಂಗಟ್ಟಿ ರಾಜ್ಯಪದದೊಳಿಟ್ಟು ಕಾಣ್ಕೆಗೊಂಡು . . . ತೆರಳ್ದಂ (ರಾಪಮಾಕ. ೩೩-೧೬). [ಸಂ.]

**ರಾಜ್ಯಪರಿಷತ್ತು** (ನಾ). ಸಂಸತ್ತಿನ ಒಂದು ಅಂಗ ; ಕೇಂದ್ರಸರ್ಕಾರದ ಒಂದು ಸಭೆ ; ರಾಜ್ಯಸಭೆ ; P ಸ್ವತಂತ್ರಭಾರತದ ಕೇಂದ್ರಸರ್ಕಾರದಲ್ಲಿ ' ರಾಜ್ಯಪರಿಷತ್ತು ' ಮತ್ತು ' ಲೋಕಸಭೆ ' ಎಂದು ಎರಡು ಸಭೆಗಳುಂಟು. ಇವು ಇಂಗ್ಲೀಷಿನ ' Upper-House ' ಮತ್ತು ' Lower-House ' ಎಂಬ ಪದಗಳಿಗೆ ಸಮಾನವಾದುವು : ಭಾರತ ಸಂಘಕ್ಕೆ, ರಾಷ್ಟ್ರಪತಿಯವರೂ ರಾಜ್ಯಪರಿಷತ್ತೆಂಬ ಹೆಸರಿನ ಒಂದು ಸದನವೂ ಲೋಕಸಭೆ ಎಂಬ ಹೆಸರಿನ ಒಂದು ಸದನವೂ ಸೇರಿರುವ ಒಂದು ಸಂಸತ್ತು ಇರತಕ್ಕುದು (ಭಾರಾಪ. ೩೯). [ಸಂ. ರಾಜ್ಯಪರಿಷದ್]

**ರಾಜ್ಯಪಾಲ** (ನಾ). ಸ್ವತಂತ್ರಭಾರತದ ಕೇಂದ್ರಸರ್ಕಾರದಿಂದ ನೇಮಕಗೊಂಡ ಪ್ರತಿರಾಜ್ಯದ ಮುಖ್ಯಾಧಿಕಾರಿ : ಶ್ರೀಜಯಚಾಮರಾಜ ಒಡೆಯರವರು . . . ಅಖಂಡಕರ್ನಾಟಕಕ್ಕೆ ರಾಜ್ಯಪಾಲರಾಗಿ . . ಎಲ್ಲ ಕನ್ನಡಿಗರ ಸೌಖ್ಯವನ್ನು ನೋಡಿಕೊಳ್ಳುತ್ತಿದ್ದಾರೆ (ಪ್ರವಾಸು. ೨೦). [ಸಂ.]

**ರಾಜ್ಯಭರ** (ನಾ). ರಾಜ್ಯದ ಆಡಳಿತ, —ಆಳ್ವಿಕೆ : ಮಹಿತನಿಜೈಕರಾಜ್ಯಭರದೊಳ್ ನಿಲವೇಟ್ಟುದು ನೀಂ (ಶಾಂತಿಪು. ೧೧-೧೧೨); ಸಿಂಹಭೂಪತಿ [ಗೆ ಪ್ರಮಾ] ಸಾಮಂತರುಂ ಮಣ್ಡಳೇಶ್ವರರುಂ ತಪ್ಪೆ ಕಳ[ಲ್ದ][ರಾಜ್ಯ]ಭರಮಂ ಕೈಕೊಣ್ಡು (ಕಇಕ. ೩-೨-೬೯; 1058); ಆ ರಾಯಂ ಪೊಸಜವ್ವನದ ಮುದ್ದುಗುವರನೊಳ್ ರಾಜ್ಯಭರಮನೊಪ್ಪಿಸಿ ತಾಂ ತಪಸ್ಸಾಮ್ರಾಜ್ಯಮಂ ಸೂಱೆಗೊಂಡಾಳುತುಮಿರ್ದಂ (ರಾಪಮಾಕ. ೧೧೯-೩). [ಸಂ.]

**ರಾಜ್ಯಭಾರ** (ನಾ). ೧. ರಾಜ್ಯಾಡಳಿತದ ಹೊಣೆ,— ಜವಾಬ್ದಾರಿ. ೨. = ರಾಜ್ಯಭರ : ಅಂತು ಮೇಘನಾದಂ ತನ್ನ ಮಗಂ ಸಿಂಹನಾದಂಗೆ ರಾಜ್ಯಭಾರಮನಿತ್ತು ತಪೋಭಾರದೊಳ್ ತಾಂ ನಿಂದು (ಶಾಂತಿಪು. ೭-೧೬೪ವ); ಆತನ ತಾಯಿ . . . ಇರಿವನೊಳಂಬನ ರಾಜ್ಯಭಾರವನ್ನು ನಿರೀಕ್ಷಿಸುತ್ತಿದ್ದಳು (ಪೂಳೆಂಬ. ೫೩). [ಸಂ.]

**ರಾಜ್ಯಭಾಷೆ** (ನಾ). ರಾಜ್ಯದ ಅಧಿಕೃತಭಾಷೆ : ಒಡಂಬಟ್ಟಿರುವ ಜನಕ್ಕೆ ರಾಜ್ಯಭಾಷೆಯಲ್ಲಿ "ಪ್ರಜೆ" ಎಂದು ಹೆಸರು (ರಾಜ್ಯಶಾ. ೪೫).
[ ಸಂ. ರಾಜ್ಯಭಾಷಾ.]

**ರಾಜ್ಯಭ್ರಂಶ** (ನಾ). ರಾಜ್ಯವನ್ನು ಕಳೆದುಕೊಳ್ಳುವಿಕೆ; ರಾಜ್ಯಚ್ಯುತಿ : ಶ್ರೀದುದೆಮಗೆ ವನಪ್ರವಾಸದ ಖೇದ . . . ಹೋದ ರಾಜ್ಯಭ್ರಂಶ ಬಹಳವಿಷಾದ ಬೀತುದು ನಿಮ್ಮ ಕಾರುಣ್ಯೋದಯವುಯಮಗಾಯ್ತಲಾ (ಕುಮಾಭಾ. ೧೧-೨೯). [ಸಂ.]

**ರಾಜ್ಯಭ್ರಷ್ಟ** (ನಾ). ರಾಜ್ಯದಿಂದ ಹೊರಹಾಕಲ್ಪಟ್ಟವನು ; ರಾಜ್ಯಚ್ಯುತ : ರಾಜ್ಯಭ್ರಷ್ಟಂಗೆ ತ್ಯಾಗಭೋಗವುಂಟೆ (ಸಕಪಚII. ೫೧೧-೯೦);

ಮುಳಿದು ವಾಸಿಷ್ಠಮುನಿ ಕೊಟ್ಟ ಶಾಪದೊಳು ಕುಲವಳಿದು ರಾಜ್ಯಭ್ರಷ್ಟನಾಗಿ ಚಾಂಡಾಲತ್ವವಳವಟ್ಟು (ಹರಿಶ್ಚ. ೬-೩೯); ಹೈದರನು ರಾಜ್ಯಭ್ರಷ್ಟನಾದನೆಂಬ ಸಮಾಚಾರವನ್ನು ತಿಳುಹಿ . . . ಮರಾಟೆಯವರ ದಳವನ್ನು ಕಳುಹಿಸಿದನು (ಓಡೆಯ. ೯೮). [ಸಂ.]

**ರಾಜ್ಯಲೋಭ** (ನಾ). = ರಾಜ್ಯದಾಹ : ಮಣೆಯದೆ ರಾಜ್ಯಲೋಭವಶದಿಂ ಪುರುಷಾರ್ಥಮನೊಕ್ಕು ಪಾರ್ಥಿವಾಗ್ರಣಿಗಳನೇಕರುಂ ಜವನ ದಾಡೆಯೊಳಟ್ಟಿರ್ದರ್ (ಕೃಷ್ಣಚ. ೦೩-೭೯). [ಸಂ.]

**ರಾಜ್ಯವಿಚ್ಯುತ** (ನಾ). = ರಾಜ್ಯಭ್ರಷ್ಟ : ರಾಜ್ಯವಿಚ್ಯುತನಾದ ಚಕ್ರವರ್ತಿಯೆಂಬ ಕ್ಷುದ್ರದೇವತೆಯನ್ನು ಸೇವೆಮಾಡಿದುದರಿಂದ ನನ್ನ ತಂದೆಯು ಬಹುಕಷ್ಟಗಳನ್ನು ಅನುಭವಿಸಿರುವನು (ರಾಜಾಮು. ೯೭). [ಸಂ.]

**ರಾಜ್ಯವಿಭ್ರಂಶ** (ನಾ). = ರಾಜ್ಯಭ್ರಂಶ : ಚಿರಂತನಭವದ ಕಿಲ್ಬಿಷಕರ್ಮಪಾಕಪ್ರಪರ ದುರಿಯೋಧನನ ಸದ್ವ್ಯಪದೇಶಮಾತ್ರದಲ್ಲಿ ಎಮಗೆ ರಚಿಸಿತು ರಾಜ್ಯವಿಭ್ರಂಶವನು (ಕುಮಾ.ಗ. ೦೦-೪೪). [ಸಂ.]

**ರಾಜ್ಯವ್ಯಸನ** (ನಾ). ಸಪ್ತವ್ಯಸನಗಳಲ್ಲಿ ಒಂದು : ರಾಜ್ಯದ ಚಿಂತೆ : ತನುವ್ಯಸನ ಮನೋವ್ಯಸನ ಧನವ್ಯಸನ ರಾಜ್ಯವ್ಯಸನ . . . ಸೇವಕವ್ಯಸನವೆಂಬ ಸಪ್ತವ್ಯಸನದಿಂ ಹಸಂಗೆಟ್ಟು (ವಿವೇಕ. ೦೯೭); ರಾಜ್ಯವ್ಯಸನವೆತ್ತಿದಲ್ಲಿ ವಾಹನ ವಸ್ತ್ರಾಭರಣ ಅನುಲೇಪನ ತಾಂಬೂಲಂಗಳಂ ಬಯಸುತ್ತಿಹನು (ವಚನ. II, ೦೨೪). [ಸಂ.]

**ರಾಜ್ಯಶಾಸನ** (ನಾ). ರಾಜ್ಯದ ಆಡಳಿತಪಕ್ಷವು ಪ್ರಕಟಿಸುವ ಕಟ್ಟಳೆ,– ಆಜ್ಞೆ : ರಾಜ್ಯಶಾಸನಕ್ಕೆ ವಿಧೇಯನಾಗಿ ನಡೆದುಕೊಳ್ಳುವುದು (ರಾಜ್ಯಾಂಗ. ೧೩೦). [ಸಂ.]

**ರಾಜ್ಯಶಾಸ್ತ್ರ** (ನಾ). ರಾಜ್ಯದ ಆಡಳಿತವನ್ನು ವಿವರಿಸುವ ಶಾಸ್ತ್ರ ; ರಾಜನೀತಿಶಾಸ್ತ್ರ : ರಾಜ್ಯಶಾಸ್ತ್ರದ ವಿಷಯ ಮನಸ್ಸಿಗೆ ಬಂದಾಗಲೆಲ್ಲ ಅಲ್ಲಿ ತಂಬೂರಿಯ ತಂತಿಗಳಂತೆ ಸಮಾಂತರವುಳ್ಳ ಎರಡು ವಿಚಾರಸರಣಿಗಳು ನಾದಮಾಡುತ್ತಿರುತ್ತವೆ (ರಾಜ್ಯಶಾ. ೩೦೬). [ಸಂ.]

**ರಾಜ್ಯಶ್ರೀಕ** (ನಾ). ರಾಜ್ಯಸಂಪತ್ತುಳ್ಳವನು : ಅತುಳತಪಶ್ಶ್ರೀಕರನನು ನ್ನತರಾಜ್ಯಶ್ರೀಕನವಧಿವರ್ಶನನಂ . . . ನೃಪತಿ ಭಕ್ತಿಯಿಂ ವಂದಿಸಿದಂ (ಚಂದ್ರಪ್ರ. ೩-೭೦). [ಸಂ.]

**ರಾಜ್ಯಸಭೆ** (ನಾ). = ರಾಜ್ಯಪರಿಷತ್ತು : ಕೇಂದ್ರಸರ್ಕಾರದಲ್ಲಿರುವ ವಿವಿಧರಾಜ್ಯಗಳಿಂದ ಆಯ್ಕೆಯಾದ ಸದಸ್ಯರ ಸಭೆ ; ಪಾರ್ಲಿಮೆಂಟಿನ ಮೇಲ್ಮನೆ (Council of State. ಶಬ್ದಾ.ಕೋ. ೨೭). [ಸಂ. ರಾಜ್ಯಸಭಾ]

**ರಾಜ್ಯಸಿರಿ** (ನಾ). ರಾಜ್ಯದ ಸಂಪತ್ತು : ಪೂತುರೇ ಠಣಮೆಂಬುದೆಮ್ಮಯ ಘಾತು ಕಲಿ ಮೂದಲಿಸಿ ಕರೆದರೆ ರಾಜ್ಯಸಿರಿಯೇಕೆ (ಕುಮಾ.ದ್ರೋ. ೦೫-೨೫). [< ಸಂ. ರಾಜ್ಯಶ್ರೀ]

**ರಾಜ್ಯಸೂತ್ರ** (ನಾ). ಆಡಳಿತದ ಅಧಿಕಾರ : ಮೃಗೇಶವರ್ಮ ರವಿವರ್ಮರ ಆಳಿಕೆಗಳ ಮಧ್ಯದಲ್ಲಿ ರಾಜ್ಯಸೂತ್ರಗಳನ್ನು ವಹಿಸಿರಬೇಕು (ಕದಂಬ. ೦೪); ರಾಮಚಂದ್ರರಾಯನು ರಾಜ್ಯಸೂತ್ರವನ್ನು ಸ್ವಾಧೀನಪಡಿಸಿಕೊಂಡು ಕೆಲವು ದಿನಗಳಲ್ಲಿಯೇ ಖಜಾನೆಯನ್ನೂ ಬರಿದು ಮಾಡಿದನು (ಕುಮಾರಕ. ೨). [ಸಂ.]

**ರಾಜ್ಯಾಂಗ** (ನಾ). ೧. ಆಡಳಿತಕ್ಕೆ ನೆರವಾಗುವ ರಾಜ, ಪ್ರಧಾನಿ, ಸ್ನೇಹಿತ, ಬೊಕ್ಕಸ, ನಾಡು, ಕೋಟೆ ಮತ್ತು ಸೈನ್ಯ ಎಂಬ ಏಳು ಅಂಗಗಳು ; ಇವುಗಳ ಜೊತೆಗೆ ಪೌರ ಮತ್ತು ಪುರೋಹಿತ ಎಂಬೆರಡನ್ನು ಸೇರಿಸಿ ಕಿಟೆಲ್ ಅವರು ರಾಜ್ಯಾಂಗಗಳು ಒಂಬತ್ತು ಎಂದು ಹೇಳಿದ್ದಾರೆ : ಗಬಗಬ ಸುರಿದುವು ಕಣ್ಣಾನಿ ಪಟಲಿಪ್ತದ ರೂಪುಗಳ್ಗೆ ರಾಜ್ಯಾಂಗಂಗಳ್ ಕಟಕುಟಮಾಗಿರ್ದುವು ತತ್ತಟಿಗುದಿದುವು ಭವನದೀರ್ಘಿಕಾಚ್ಛಜಲಂಗಳ್ (ಶಾಂತಿಪು. ೩-೦೦೬). ೨. ರಾಜ್ಯದ ಆಡಳಿತ ವ್ಯವಸ್ಥೆ : ರಾಜತ್ವ . . . ಅನೇಕ ನಾಯಕಪ್ರಭುತ್ವ –ಹೀಗೆ ರಾಜ್ಯಾಂಗವು ನಾಲ್ಕಾರು ಮಾರ್ಪಾಟುಗಳನ್ನು ಪಡೆದು ಬೆಳೆದಿದೆ (ರಾಜ್ಯಾಂಗ. ೧೦೪). [ಸಂ.]

**ರಾಜ್ಯಾಂಗಸಪ್ತಕ** (ನಾ). = ರಾಜ್ಯಾಂಗ ೧ : ಆಳುವ ನರಪತಿಗಳ ಸ್ವಾಮ್ಯಮಾತ್ಯ ಬಂಧು ಕೋಶ ರಾಷ್ಟ್ರ ದುರ್ಗ ಬಲಂಗಳೆಂಬ ರಾಜ್ಯಾಂಗ ಸಪ್ತಕದಿಂ (ವಿವೇಕ. ೨೪೪). [ಸಂ.]

**ರಾಜ್ಯಾದಾಯ** (ನಾ). ರಾಜ್ಯದ ಉತ್ಪತ್ತಿ,– ಹುಟ್ಟುವಳಿ : ರಾಜ್ಯಾದಾಯಕ್ಕೆ ಸಂಬಂಧಪಟ್ಟ ಎಲ್ಲ ವಿಧಿಗಳೂ ಶಾಸನವೆಂದೇ ಎನ್ನಿಸಿಕೊಳ್ಳುತ್ತವೆ (ರಾಜ್ಯಾಂಗ. ೭೩). [ಸಂ.]

**ರಾಜ್ಯಾಧೀನ** (ಗು). ರಾಜ್ಯಾಡಳಿತದ ಕೈಕೆಳಗಿರುವ ; ಸರ್ಕಾರದ ಹತೋಟಿಯಲ್ಲಿರುವ : ಕೇವಲ ಧರ್ಮ, ಮೂಲವಂಶ . . . ಅವುಗಳಲ್ಲಿ ಯಾವುದೊಂದರ ಆಧಾರದ ಮೇಲೆ ಮಾತ್ರವೇ, ಯಾವನೊಬ್ಬ ನಾಗರಿಕನಿಗೆ ರಾಜ್ಯಾಧೀನ ನೌಕರಿಯ ಅಥವಾ ಹುದ್ದೆಯ ವಿಚಾರದಲ್ಲಿ ಅಪಾತ್ರತೆಯುಂಟಾಗತಕ್ಕುದಲ್ಲ (ಶಾಸನ. ೯). [ಸಂ.]

**ರಾಜ್ಯಾಧ್ವರ** (ನಾ). ರಾಜಸೂಯಯಾಗ : ಸಿರಿಯ ವಲ್ಲಭನೊಲಿದು ರಾಜ್ಯಾಧ್ವರವನಾನಲು ಕಾಲಭಾಗ್ಯದ ಭರವ ಬಣ್ಣಿಪನಾವ (ಕುಮಾ.ಸಭಾ. ೪೪-೩೭). [ಸಂ.]

**ರಾಜ್ಯಾನುಷ್ಠಾನ** (ನಾ). ಆಡಳಿತದ ಕೆಲಸವನ್ನು ವಿಧಿವತ್ತಾಗಿ ನಡೆಸುವುದು ; ರಾಜಕಾರ್ಯನಿರ್ವಹಣೆ : ನೀನೆಮ್ಮಂ ವಿವಾಹದೆ ರಾಜ್ಯಾನುಷ್ಠಾನಮನೊಡಂಬಡು (ಆದಿಪು. ೪-೬೦); ಅಂತು ವಿವಾಹದಿಮುಖಿನುಂ ರಾಜ್ಯಾನುಷ್ಠಾನಾಭಿಮುಖಿನುಮಾಗಿ (ಚಂದ್ರಪ್ರ. ೨-೬೦). [ಸಂ.]

**ರಾಜ್ಯಾಪಹಾರ** (ನಾ). ರಾಜ್ಯವನ್ನು ಕಿತ್ತುಕೊಳ್ಳುವುದು : ಏನ ನೆನೆದ್ಯೆ ಮಗನೆ ಕುಂತೀಸೂನುಗಳ ರಾಜ್ಯಾಪಹಾರದೊಳೇನು ಬುದ್ಧಿವಿಳಾಸ (ಕುಮಾ.ಸ. ೦೨-೩೮). [ಸಂ.]

**ರಾಜ್ಯಾಭಿಲಾಷೆ** (ನಾ). ರಾಜ್ಯವನ್ನು ಪಡೆಯಬೇಕೆಂಬ ಬಯಕೆ,– ಅಪೇಕ್ಷೆ : ನಿನ್ನ ಸುತರು ದೃಢೈಕಸತ್ಯರು ನುಡಿದ ಕಾಲವ ನೂಕಿದರು ರಾಜ್ಯಾಭಿಲಾಷೆಗೆ ನೆರಹಿದರು ಬಲವ (ಕುಮಾ.ಶಾ. ೬-೨೩). [ಸಂ. ರಾಜ್ಯಾಭಿಲಾಷಾ]

**ರಾಜ್ಯಾಭಿಷವಣ** (ನಾ). ರಾಜನಾಗುವವನಿಗೆ ಮಾಡುವ ಅಭಿಷೇಕ ; ಪಟ್ಟಾಭಿಷೇಕ : ರಾಜ್ಯಾಭಿಷವಣಭವನದಂತೆ ಪೂರ್ಣಕುಂಭೋಪಶೋಭಿತಮುಂ . . . ಭದ್ರಲಕ್ಷಣಲಕ್ಷಿತಮುಮಪ್ಪ ಪಟ್ಟವರ್ಧನಮನೇಱಿ (ಮಲ್ಲಿಪು. ೫-೩೩). [ಸಂ.]

**ರಾಜ್ಯಾಭಿಷೇಕ** (ನಾ). = ರಾಜ್ಯಾಭಿಷವಣ : ಅಂತು ಭುವನತ್ರಯಚೂಡಾಮಣಿಯ ರಾಜ್ಯಾಭಿಷೇಕದೊಸಗೆಯಂ ನಾಭಿರಾಜಾದಿರಾಜಸಭೆಗಱಿಪಿ (ಆದಿಪು. ೬-೭೭ ವ). [ಸಂ.]

**ರಾಜ್ಯಾಭ್ಯುದಯ** (ನಾ). ರಾಜ್ಯಾಡಳಿತ : ರಾಜ್ಯಭಾರ : ಶ್ರೀಮಚ್ಚಾಳುಕಪೆರ್ಮಾನಡಿದೇವರು ತತ್ಪುತ್ರಿ ಶ್ರೀಪಂಪಾದೇವಿಯರ ರಾಜ್ಯಾಭ್ಯುದಯದಂದು (ಎಕ. IV, ಹುಣಸೂ. ೩೦–೩ ; ೯೯೭). [ಸಂ.]

**ರಾಜ್ಯಾರ್ಹ** (ನಾ). ರಾಜ್ಯದ ಆಡಳಿತಕ್ಕೆ ಯೋಗ್ಯನಾದವನು ; ಅರಸುತನಕ್ಕೆ ಅರ್ಹನಾದವನು : ಅರಸಂಗಮರಸಿಯರ್ಗಂ . . . ಶರೀರ ಸಂಸ್ಕಾರವಿಧಿಯಂ ವಿಧಿಪೂರ್ವಕಂ ನಿರ್ವರ್ತಿಸಿ ರಾಜ್ಯಾರ್ಹನಪ್ಪಿಂದ್ರನ ಮಗಂ ಚಂದ್ರನಂ ಧುರಾಭಾರಧುರಂಧರಂ ಮಾಡಿದರ್ (ಶಾಂತಿಪು. ೩-೯೭ ವ). [ಸಂ.]

**ರಾಟ** (ನಾ). ಮಲ್ಲಯುದ್ಧದ ಒಂದು ಪಟ್ಟು : ಉರ್ಬಿನೊಳೆಱಗುವ ಸೊರ್ಕಾನೆಯ ಸಿಗ್ಗವಕ್ಕೆ ಎರ್ದೆಯೊಡ್ಡಿ ಸೋಂಕದ ಮುನ್ನಮೆ ಒರ್ಮೆಯ್ಯೊಳೊಲೆದು ತಪ್ಪಿಸಿ ಎಡೆಗೆಡಮವಂತೆ ಕೆಡಪಿ ಬೆನ್ನೇಱಿಯುಂ [ಯಿಂ] ರಾಟದೊಳ್ಪಿಗಿದು ತನ್ನ ಸಾದಕದ ಚಳಕಮಂ ಮೆಱೆಯಲ್ಕೆ (ಚಂದ್ರ. ೦೬೩-೩). [ದೇ.? ತೆಲು. ರಾಟ, ರಾಟವ]

**ರಾಟಣ** 'ಱಾಟಣ' ನೋ.

**ರಾಟಣಪೂ** (ನಾ). ಒಂದು ಸ್ಥಳದ ಹೆಸರು (?): ರಾಟಣಪೂ ವಿನ್ನಿರ್ಪ್ರರ್ತ್ತಿಯ್ಗಿನ್ನಾಗ್ಂ ವತ್ತ ತೆಱುವೊದು (ಎಕ. XIV. ತಿರುಮ. ೨೭೬-೬; ಸು. 800). [ ? ]

**ರಾಟಣೆ** 'ಱಾಟಣ' ನೋ.

**ರಾಟವಣಿ** 'ಱಾಟಣ' ನೋ.

**ರಾಟವಾಳ** 'ಱಾಟಣ' ನೋ.

**ರಾಟವಾಳಿ** 'ಱಾಟಣ' ನೋ.

**ರಾಟಳ** 'ಱಾಟಣ' ನೋ.

**ರಾಟಳಕ** (ನಾ). (ಕರಾ) ಬಟ್ಟೆಯನ್ನು ಸ್ವಚ್ಛಮಾಡಲು ಬಳಸುವ ಒಂದು ಬಗೆಯ ಕಾಯಿ; ಅಂಟುವಾಳದ ಕಾಯಿ: ಬಟ್ಟೆಯನ್ನು ಬೆಳ್ಳಗೆ ಮಾಡಲು "ರಾಟಳಕ"ದ ಕಾಯನ್ನು ಉಪಯೋಗಿಸುತಿದ್ದವು (ಶಾಂಕ್ರ. III. ೦೪೯೦). [ ? ]

**ರಾಟಾಣ** 'ಱಾಟಣ' ನೋ.

**ರಾಟಾಲ** 'ಱಾಟಣ' ನೋ.

**ರಾಟಾಳ** 'ಱಾಟಣ' ನೋ.

**ರಾಟಾಳತೇರು** (ನಾ). ಒಂದು ಬಗೆಯ ರಥ; ತಿರುಗಣೆ ತೇರು: ಎಡವಲಯ್ಯನ ತೇರು ಬಲದಲಮ್ಮನ ತೇರು ರಾಟಾಳತೇರು ಕೈತೇರು ಗೊಂಬೆತೇರು ಹರಿದೂ ನಂಜಯ್ಯ ಎಡಬಲ್ಗಕೆ (ಜಾನ್ಪ. ೩೬).

[ರಾಟಾಳ (<ಱಾಟಣ) + ತೇರು₂ (<ತೇರ್₂)]

**ರಾಟ** (ನಾ). ತೊಂದರೆ; ಉಪದ್ರವ; ಹಿಂಸೆ: ಬೇಟೆಯೊಳು ರತನಾಗಿಹನಾತನ ರಾಟಿಗೆ ಮೃಗ ನಿಲ್ಲವಲ್ಲಿ (ಕರ್ಣಕು. ೬-೯೬); ಬಹಳದಿವಸ ಪ್ರವಾಳಭಸ್ಮ ತಕ್ಕೊಳ್ಳಲು ಈ ರಾಟಿಯು ತಪ್ಪುವದು (ಶಿಶರೋ. ೭೦). 'ರಾವಡಿ' ಪರಾ. [ದೇ.॥ ತೆಲು. ರಾಟು]

**ರಾಟೆ** 'ಱಾಟ್ಟೆ' ನೋ.

**ರಾಟೆವಾಳೆ** 'ಱಾಟಣ' ನೋ.

**ರಾಡಿ** (ನಾ). ೧. ಕೆಸರು; ಬಗ್ಗಡ: ನಾಡೊಳು ಪರಿವ ನಿರ್ಮಲಜಲದೊಳು ಬಲುರಾಡಿ ಕೂಡಿ ಸಾಗಿ ಪೋಗುವಂತೆ (ಪೋಕ್ಷರ. ೬೩-೩); ರಾಡಿಯ ನೀರೊಳಗೆ ಘಟಕದ ಪುಡಿ ಚೆಲ್ಲಿದರೆ, ರಾಡಿಯು ತಳಕ್ಕೆ ಕೂಡ್ರುತ್ತದೆ (ಮುಂಖಿಯು. ೩-೦೬೦). ೨. ಮಂದವಾದ ದ್ರವ,– ರಸ: ದ್ರಾಕ್ಷೀ ಜೋಡೀ ಖಾರದ ರಾಡಿ ತುಸಾ ಉಳಸದ. ಹಸನ್ ಮಾಡಿ ಮಾಸೀ ಮಾತ್ರ ಒರಸಿಕೊಂಡು ಹೊರಗ ಬರಬೇಕು (ಹೊಸಂಶಾ. ೦೫); ಬಳ್ಳಿಯ ತೊಪ್ಪಲನ್ನು ಹರಿದು ಅದನ್ನು ಒಂದು ಕಲ್ಲಿನ ಮೇಲೆ ಗುಂಡಿನಿಂದ ಅರೆದು ರಾಡಿಯನ್ನು ಮಾಡಿ (ಪೊಣವು. ೯೩). ೩. ಹೊಲಸು; ಕೊಳಕು: ದೇಹದ ರಾಡಿಯ ತೊಳಕೋಳ . . . ಹೇಸಿ ನಿನ ಮಾರಿ ತೊಳಕೋಳ (ಕರ್ನಾಕ. ೨೩೯). ೪. (ಅಲಂ) ರಂಪ; ಗೊಂದಲ; ರಾದ್ಧಾಂತ: ಇದೆಲ್ಲಾ ರಾಡಿ ಆ ಕೃಷ್ಣಾಜೀದೇ. ಮೊದಲಿಂದಲೂ ಅವಗೆ ನನ್ನ ಕಂಡರಾಗುವುದಿಲ್ಲ (೬೮೦೬. ೯೭); ನಮ್ಮ ಮನೆಯಾಗಿನ ರಾಡಿ – ಹೊಲಗೇರಿ ಹೊರಗ ಹೋಗೂದು ಬ್ಯಾಡಾ (ದೀಕಹ. II. ೩೩೨). ೫. ದುರುದ್ದೇಶ; ಕೆಟ್ಟ ಭಾವನೆ: ನನ್ನ ಮಿದುಳಿನಲ್ಲಿಯ ರಾಡಿಯನ್ನು ತೊಳೆದು ಸ್ವಚ್ಛಮಾಡುವುದೇ ನನ್ನ ಮುಖ್ಯಉದ್ದೇಶ (ಮುಕ್ತ. ೯೨).

**ರಾಡಿಯಾಗು** = ಕೆಸರಾಗು; ಬಗ್ಗಡವಾಗು: ಅದೇ ಬಿದ್ದ ಮಳೆಯಿಂದ ರಾಡಿಯಾದ . . . ನೀರನ್ನೂ ಕುಡಿಯಬಾರದು (ಅಶ್ವಾಂಗ. ೬೩); ಅವನ ಮುಖ, ತಲೆ, ಮೈಯೆಲ್ಲ ರಾಡಿಯಾಯಿತು (ಬಂಗಾಹ. ೭೦).

**ರಾಡಿಯಾಟ** = ಕೆಸರನ್ನು ಎರಚಿ ಆಡುವುದು: ವಿಷಮಸಂಸಾರಸಾಗರದಲ್ಲಿ 'ರಾಡಿಯಾಟ'ವನಾಡುತ್ತ . . . ಬಡಿದಾಡಿ (ಪೋಕಾವಿತಾ. ೦೨೬ ಕೃಷ್ಣಾಪನ). [← ಮರಾ. ರಾಡ್, ರಾಡೀ, ರಾಹಡೀ./ತುಳು. ರಾಡಿ]

**ರಾಡು** (ನಾ). ೧. ಮುಖ್ಯದ್ವಾರದ ಮೇಲೆ ಅಡ್ಡಲಾಗಿ ಕಟ್ಟಿರುವ ಕಟ್ಟಡ,—ರಚನೆ: ಮೂಡಲ ಬಾಗಿಲ ರಾಡಿನಲ್ಲಿರುವ ಬಡಗ ಚಾರಿ ವೆಂಕಟಾಚಲನ ಕೊತ್ತಲದಲ್ಲಿ ೧ . . . ಮೈಸೂರುಬಾಗಿಲ ರಾಡಿನಲ್ಲಿ ಜಯವಿಜಯ ಕೊತ್ತಲಗಳಲ್ಲಿ ೨ . . . ಫಿರಂಗಿಗಳನ್ನಿರಿಸಿ (ಮಹಾಮಂ. I. ೦೦೩). ೨. ಬಾಗಿಲಿಗೆ ಅಡ್ಡಲಾಗಿ ಹಾಕುವ ಪಟ್ಟಿ; ಅಗಳಿ: ಪಾರುಪತ್ತೆಗಾರನು ಬಾಗಿಲನ್ನು ಹಚ್ಚಿ ರಾಡು ಹಾಕಿದನು (ಕಂಗಾಳ್ಕ. ೫೩೩).

[?./ತೆಲು. ರಾಡು = ಸ್ತಂಭ./ಇಂ. Rod = ಕಂಬಿ, ಪಟ್ಟಿ]

**ರಾಡುಬಾಗಿಲು** (ನಾ). ಅಗಲವಾದ ಬಾಗಿಲು (?): ಕಣದ ರಾಡುಬಾಗಿಲ ಹತ್ತಿರಕ್ಕೆ ಹೋಗಿದ್ದ ಸಾಹುಕಾರ ಭದ್ರಪ್ಪನವರ ಕಾಲುಗಳ ಮೇಲೆ ಬಿದ್ದು (ಬಿಡಾ. ೬). [ರಾಡು₁ + ಬಾಗಿಲು (< ಬಾಗಿಲ್)]

**ರಾಣ** (ನಾ). ರಾಜ; ದೊರೆ: ಕಂಠೆಯಬಾರದ ನನ್ನಪಯ್ಯರಾಣನ ತನೆ(ನ)ಯಂ ವಿವೇಕನಿಧಿ ಕತ್ತಮಹೀಭುಜನೆಂಬ ಪೆರ್ಮ್ಮಗಂ (ಎಕ. XVI. ೯-೯೦; 978). [< ಪ್ರಾ. ರಾಣ./ಸಂ. ರಾಜನ್]

**ರಾಣದೆಱಿ**[3] (ನಾ). ರಾಜನಿಗೆ ಕೊಡಬೇಕಾದ ತೆರಿಗೆ: ಪಂಚಕಾರುಕ ರಾಣದೆಱೆಯಂ ಶ್ರೀಮದ್ರಾಜಗುರುಲೋಕಾಭರಣಗುರುದೇವರ್ಗ್ಗೆ . . . ಬಿಟ್ಟ ಧರ್ಮ್ಮ (ಕ೩ಇ. IX-i. ೩೨೩-೩; 1107). [ರಾಣ + ತೆಱೆ₃]

**ರಾಣವೆ** 'ರಾಣುವೆ' ನೋ.

**ರಾಣಾರಂಪು** 'ರಣರಂಪ' ನೋ.

**ರಾಣಿ** (ನಾ). ರಾಜನ ಹೆಂಡತಿ; ಅರಸಿ: ಭಾಗಿಯಬ್ಬೆರಾಣಿಗೆ ಸುತ್ × × × (ಎಕ. XVIII. ೧೬೬-೫೦; 1146); ಭೂಮಿಗೆ ಕಡುಚಾಣೆ ರಾಣಿ ರವಾಣೀಯತೆಯುಂ ಪಡೆದಿರ್ದ ಲಾಕ್ಷಣಂ (ಶಾರಪು. ೬-೧೦೦); ರಾಣಿಯರ ನವರತ್ನದ ತೊಟ್ಟಿಗಳಹುಮರ್ತಿಯಲಿ (ಕೃಪವು. ೬-೯೨).

**ರಾಣಿಯ ವಾಸ**=ಅರಸಿಯು ವಾಸಮಾಡುವ ಸ್ಥಳ; ಅಂತಃಪುರ: ಈ ಬರ್ಪುದೇಂ ರಾಣಿಯ ವಾಸಂ ನೋಡಿಮೆಂಬಂಕೆಸೆದುದು ಪಲವುಂ ತಂಡದಿಂ ಪೆಂಡವಾಸಂ (ಅಂಕೃ. ೧೦-೫೩); ಚಿತ್ರಮಂ ತಳೆದು ವಿಲಾಸಮಂ ಮೆಱೆವ ರಾಣಿಯ ವಾಸದ ಬಳ್ಯಮಾಡದುಜ್ಜ್ವಳಮಣಿಭಿತ್ತಿ ಚೆಲ್ವನೊಳಕೊಂಡು (ಕಂಶಾಮ. ೦-೦೨೬). [< ಪ್ರಾ. ರಾಣೀ./ಸಂ. ರಾಜ್ಞೀ]

**ರಾಣಿಕ** (ನಾ). ಹೊಂದಾಣಿಕೆ; ಸಾಮಂಜಸ್ಯ: ರಾಜಸೂಯದ ಹೊಱಗೆ ನಿನ್ನದು ರಾಣಿಕವ ನಾನಱಿಯೆನೆಮ್ಮಭ್ರಾಭಿಮಾನಪ್ರಾಣದೊಡೆಯನಲೆ (ಕುವ್ಯಾಸ. ೨-೫೦); ಭೀಷ್ಮನ ವಾಣಿ ವಿಷಮೃ ನಿನಗೆ ವಿದುರನು ರಾಣಿಕವ ನಿನ್ನಲ್ಲಿ ಬಲ್ಲನೆ (ಕುವ್ಯಾಸ. ೨೦-೦೨). [ ? ]

**ರಾಣಿಗವಲ್ಲ** (ನಾ). ಒಬ್ಬಾತನ ಹೆಸರು: ರಾಣಿಗವಲ್ಲಂ ಪಲರಂ ತಳ್ತಿಱಿದು ಸತ್ತು ಸುಗತಿಗೆ ಸನ್ದಂ (ಎಕ. VII. ಹೊನ್ನಾಳಿ. ೨೩-೯; 934). [ ? ]

**ರಾಣಿಗೆದ್ದಲು** (ನಾ). ಗೆದ್ದಲುಹುಳುಗಳಲ್ಲಿ ರಾಣಿಯಂತೆ ಇರುವ ಹುಳು; ಮೊಟ್ಟೆಯಿಡುವ ಹುಳು; ತಾಯಿಗೆದ್ದಲು: ರಾಣಿಗೆದ್ದಲು (ತಾಯಿಗೆದ್ದಲು) ಪ್ರತಿನಿಮಿಷ ಅರವತ್ತರಂತೆ ಲಕ್ಷಾಂತರ ಮೊಟ್ಟೆಗಳನ್ನಿಡುತ್ತದೆ (ಕೀಟಶ. ೦೦೭). [ರಾಣಿ + ಗೆದ್ದಲು (< ಗೆದಲ್)]

**ರಾಣಿಜೇನು** (ನಾ). ಜೇನುಹುಳುಗಳಲ್ಲಿ ರಾಣಿಯಂತೆ ಇರುವ ಹುಳು,– ಮೊಟ್ಟೆಯಿಡುವ ಹುಳು: ರಾಣಿಜೇನು ಮತ್ತು ಇರುವೆಗಳು ಬಾಯಿಯ 'ಫೆರೊಮೋನ್'ಗಳನ್ನು ಸ್ರವಿಸುತ್ತವೆ (ಕೀಟವಿ. ೯೩).

[ರಾಣಿ + ಜೇನು₁ (< ಜೇನ್₁)]

**ರಾಣಿವಾಸ**, ರಾಣೀವಾಸ (ನಾ). ೧. ಅರಮನೆಯಲ್ಲಿ ರಾಣಿಯರೂ ಹೆಂಗಸರೂ ವಾಸಿಸುವ ಭಾಗ; ಜನಾನಾ; ಅಂತಃಪುರ: "ರಾಣಿವಾಸವೆ ಪೆಂಡವಾಸ" (ಕ್ಮುಕ್ತ. ೬೨); ಬಾಣಸಿನ ಮಜ್ಜನದ ರಾಣಿವಾಸದ ಮನೆಗಳುಮಂ (ಕಂಕಥಾ. ೫-೯೭ ಪ); ರಾಗಿಯೆನಿಪ್ಪವನ ರಾಣಿವಾಸದ ಕಾಪುಂ

. . . ಅತ್ಯಂತ ದುಃಖಮಂ ಪುಟ್ಟಿಸುಗುಂ (ರರ್ಜಾವ್ಯ. ೬-೧೦೨) ; ಕೀಚಕನು . . . ರಾಣಿವಾಸಕ್ಕೆ ಹೋದನು (ಶೀತಿವಿಂ. IX, ೬). ೨. ಅಂತಃಪುರದಲ್ಲಿ ವಾಸಮಾಡುವ ಅರಸಿಯರು ಮುಂತಾದವರು : ಎಲೆ ದೇವ ನಿಮ್ಮ ತೊತ್ತಿರು ನೂರ್ವರುಂಟಲ್ಲಿ . . . ಎಂದು ತನ್ನಯ ರಾಣಿವಾಸಮಂ ಕರೆಸುತ್ತೆ (ಇಹರ. ದೇ. ೩೫-೦೦) ; ಓವೊ ತಪೋವನವಧುಗಳ ಲಾವಣ್ಯಂ ರಾಣಿವಾಸಕರಿದೆನೆ ಪಡೆಯಲ್ಕೇವೇಳ್ದಪನು (ಶಾಕುಂತ. ೯-೦೭). ರಾಣೀವಾಸ: ೧. ಮಾಣಿಕ್ಯಸಿಂಹಾಸನದೊಳು ಕೃಷ್ಣ ಕುಳಿತು . . . ರಾಣೀವಾಸಕ್ಕೆ ವನವನೊಪ್ಪಿಸಿದ (ಪೋಕಶ. ೯-೫೬) ; ರಾವಣನ ರಾಣೀವಾಸವು ಬಲು ದೊಡ್ಡದು (ಶಾಕಿತ. ೯೯).

**ರಾಣಿವಾಸವಾಗು** = ಅಂತಃಪುರದವಳಾಗು ; ಅರಸಿಯಾಗು ; ರಾಣಿಯಾಗು : ಜನಕಮಹೀಶಸುತೆ ನಿನಗಂದು ಭವಬಾಣಾಸನದ ಭಾರಣೆಯ ಬಿಗುಹಿನ ಜಗುಳುದಲೆಯಿಂದ ದಾಶರಥಿಗಾ ರಮಣಿ ರಾಣೀವಾಸವಾದಳು (ಕೊರರಾ. ೩-೭-೦೭). [ ರಾಣಿ + ವಾಸ$_2$ ]

**ರಾಣಿವೆ** ' ರಾಣುವೆ ' ನೋ.

**ರಾಣಿಸಾಲು** (ನಾ). ಇಸ್ಪೀಟುಆಟದಲ್ಲಿ ಒಂದು ಬಗೆ : ಯಾರೋ ಪರಸ್ಥಳದ ಜನ ; 'ರಾಣಿಸಾಲು' ಆಡುವುದಕ್ಕೆ ಬಂದಿದ್ದವರು (ಶಳುವು. ೩೩). [ ರಾಣಿ + ಸಾಲು$_2$ (< ಸಾಲ್$_2$) ]

**ರಾಣೀವಾಸ** ' ರಾಣಿವಾಸ ' ನೋ.

**ರಾಣುವೆ**, ರಾಣವೆ, ರಾಣಿವೆ, ರಾಣ್ಯ (ನಾ). ೧. ಪಡೆ ; ಸೈನ್ಯ ; ದಳ : " ರಾಣುವೆಯೆನೆ ಸೇನೆ " (ಧಾರಪ. ೬೦) ; ಏಕಛತ್ರರಾಜನು ಹಲವು ಛತ್ರುವ ಕೊಟ್ಟು ರಾಣುವೆಗೆ ಹೊಲಬಿಗರ ಮಾಡಿದಂತೆ (ಕುಶೋಗ. ೬೩) ; ರಾಮಚಂದ್ರದಣಾಯಕ್ಕರು ಸಮಸ್ತರಾಣುವೆ ಪ್ರಾರುಪತ್ಯವನು ಚಿತ್ತಯಿಸಿ (ಶಾಇ. IX-ii, ೯೬೦-೬ : 1465) ; ಪಿಲಾತನು ಯೇಸುವಿಗೆ ಮುಳ್ಳಿನಕಿರೀಟ ಯನ್ನು ವಿಧಿಸಿ ಅವನನ್ನು ರಾಣುವೆಯರಿಗೆ ಒಪ್ಪಿಸಿದನು (ಗೊರ್ಮ್ಮ ಶಾ. viii, ಮುನ್ನುಡಿ). ೨. ಪರಿವಾರ : ತನ್ನಿಂದ್ರಜಾಲದ ಮಹಿಮೆಗಿಹಿಮೆಯುಂ ನೋಡುವೆಂ ನಿನ್ನ ರಾಣುವೆಯೊಳುಳ್ಳಲ್ಲ ಬಲ್ಲವರ್ಗಳಂ ನಿಖಿಳಜನನಿಚಯಮಂ ಬರಿಸು (ಶವ್ಯರಾ. ೯-೧೬). **ರಾಣವೆ**: ೧. ಸಕಲ ರಾವುತರಾಣವೆಯಂ ಕಳುಹಿಸಿ (ಶಾರಂಗ. ೦೩). **ರಾಣಿವೆ**: ೧. ಸಕಲ ರಾಣಿವೆ ಸಹಾ ಯದುರುಗೊಂಡು (ಯುವಳ. ೦೩೮). **ರಾಣ್ಯ**: ೧. ಭರದಿ ಮಾಡಲು ರಾಣ್ಯ ಕೈಕೊಂಡು ಪೊಗಳುವಕ್ಕರಿಗರ ಸಂದಣಿಯೊಳಗೆ (ಶ್ಯಾವಿಶ. ೯೦-೩೫) ; ರಾಣ್ಯವೆಂದರೆ ಸೇನೆ ಎಂದು ಒಂದು ಕಡೆ ಪೋಲೀಸ್ ಅಥವಾ ಕಂದಾಚಾರದ ಸಿಬ್ಬಂದಿ ಎಂದು ಒಂದು ಕಡೆ ಅರ್ಥವಾಗಬಹುದು. ಆ ಕಾಲದಲ್ಲಿ ಎರಡು ಚಾಕರಿಯೂ ಎಂಗಡಿಸಲ್ಪಡದೇ ಒಟ್ಟಿಗೇ ಸೇರಿಕೊಂಡಿರಬಹುದು (ಶಾಳಗಾ. ೯೬).

**ರಾಣೇರು** = ಸೈನ್ಯನವರು ; ಪಡೆವಳರು : ಬಂದರು ರೈತರು ರಾಣೇರು ಗುರಿಕಾರರು (ಕರ್ವಾಶ. ೨೭೮).

[ದೇ. ೫ ತಮಿ. ರಾಣುವ, ರಾಣು ; ಮಲ. ತೆಲು. ರಾಣುವ; ತುಳು. ರಾಣುವೆ, ರಾಣ್ಯ ]

**ರಾಣೆಯ** (ನಾ). ದೊರೆ ; ರಾಜ : ಸ್ವಸ್ತಿಪಯ ಬಲುಗಿದೇವರಾಣೆಯನು ನಾಗರಖಂಡನಾಡುಮಂ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತಮಿರೆ (ಎಕ. VII (S), ೩೬೦-೨೦ : 1075) ; ಶ್ರೀಮಂಡಳಿಕಮಹಾದೇವರಾಣೆಯರು (ಕೊರ್ತಾ ಶಾ. ೨೦-೨೮ ; 1278). [< ಪ್ರಾ. ರಾಣಯ]

**ರಾಣ್ಯ** ' ರಾಣುವೆ ' ನೋ.

**ರಾತಲು**, ರತ್ತಲು, ರಾತ್ಲು (ನಾ). ನಲುವತ್ತು ತೊಲಗಳ ಒಂದು ತೂಕ : ಇಂಗ್ರೇಜ ರಾತಲು ಎರಡಕ್ಕೆ ಪಣ್ಣೇರು ಒಂದು (ರಾಕೀಂದ್ರ. ೦೨೯) ; ಒಬ್ಬ ಪ್ರಾಯಸ್ಥನ ಸಮತೂಕಆಹಾರವೆಂದರೆ . . . ೧೨ ಔನ್ಸಿನಿಂದ ಒಂದು ರಾತಲಿನವರೆಗೆ ಶರ್ಕರಪಿಷ್ಟಗಳು ಇರಬೇಕು (ಆರುಸಾ. ೭೦). **ರತಲು** : ಒಂದು ರತಲು ನಾಲ್ವತ್ತುರೂಪಾಯಿ ತೂಕವುಳ್ಳದ್ದು (ಮುಂಬಾ. ೬೦). **ರಾತ್ಲು** : ಒಂದು ಖಂಡಿತೂಕದ ಗೋಧಿಕಾಳನ್ನು ಬೆಳೆಯಿಸಲು ಸಾಧಾರಣ ೧೨ ರಾತ್ಲು ಸಾರಜನಕವೂ . . . ೧೨ ರಾತ್ಲು ಪೊಟೇಸಿಯಂ ಕ್ಷಾರವೂ ಬೇಕಾಗುವುದು (ಬಾಂಕ್ರ. II, ೬೯೩) ; ಒಂದು ರಾತ್ಲು ಭಾರದ ಸಾಮಾನು ಹೊರಲಿಕ್ಕೆ ಸುಮಾರು ೫೦ ರೂಪಾಯಿ ತಗಲುತ್ತದೆ (ಏಬಿವ್ಯ. ೦೯೯). [← ಅರ. ರತ್ಲ್ ; ಹಿಂ. ರಾತುಲ್ ; ಮರಾ. ರತಲ್, ರತ್ತಲ್ /ಪೋರ್ಚು. Arratel]

**ರಾತಾರಾತ್ರಿ** ' ರಾತೋರಾತು ' ನೋ.

**ರಾತೀಪು** ' ರಾತೀಬು ' ನೋ.

**ರಾತೀಬು**, ರಾತೀಪು (ನಾ). ೧. ಪುಷ್ಟಿಕರವಾದ ಆಹಾರ; ಸತ್ತ್ವವುಳ್ಳ ಆಹಾರ : (+). ೨. (ಸಾಮಾನ್ಯವಾಗಿ) ದಿನನಿತ್ಯದ ಆಹಾರ : ಮನೆಯಲ್ಲಿ ರಾತೀಬಿಗೆ ಗತಿಯಿಲ್ಲ, ರತ್ನಪಡಿಯ ವ್ಯಾಪಾರ (ಗಾದೆ). **ರಾತೀಪು** : ೧. ಆಡು, ಕುರಿ ಮುಂತಾದ ರಾತೀಪಿನ ಸಾಮಾನು ಹೇರಳವಾಗಿ ತರಿಸಿ (ರಾಕೀಂದ್ರ. ೬೯). ೨. ಹುಟ್ಟಿಸಿದ ದೇವರು . . . ನನಗೂ ರಾತೀಪು ಕೊಟ್ಟ (ಕಂಗೂಂ. ೬೩) ; ಮೂರುದಿನಗಳಿಂದ ರಾತೀಪು ತಿನ್ನದೇ ಹಸಿದಿರುವೆ (ಶ್ರೀರಾಮು. ೦೯).

[← ಅರ. ಹಿಂ. ರಾತಿಬ್ ; ಮರಾ. ರತೀಬ್]

**ರಾತು** (ನಾ). ಹುಲುಸು ; ಸೊಂಪು : ರಾತಾಗಿ ಬೆಳೆದ ಮೆಣಸೀಯ ಮೆಳೆಯಲ್ಲಿ ಮೋಸಮಾಡಿದಳು ಗೆಣೆಕಾತಿ (ಹಳ್ಳಿಯು. ೬೦). [ ? ]

**ರಾತೋರಾತ್** ' ರಾತೋರಾತು ' ನೋ.

**ರಾತೋರಾತು**, ರಾತಾರಾತ್ರಿ, ರಾತೋರಾತ್, ರಾತೋರಾತ್ರಿ, ರಾತ್ರಾರಾತ್ರಿ, ರಾತ್ರೋರಾತ್ರಿ (ಅ). ರಾತ್ರಿಯಲ್ಲಿಯೆ : ರಾತ್ರಿ ಮುಗಿಯುವುದರೊಳಗಾಗಿ : ತಿಮ್ಮಣ್ಣನಾಯಕನು ರಾತೋರಾತು ನಾಗತಿಯವರೊಡನೆ . . . ದುರ್ಗದ ಗುಡ್ಡಕ್ಕೆ ಬಂದನು (ಶಶ್ರಶಾ. ೬). **ರಾತಾರಾತ್ರಿ** : ಮುತ್ತಣ್ಣನು ಸಂಗಡಯಿದ್ದ ಕೊಡಗಜನ ಯಾವತ್ತು ತೆಗೆದುಕೊಂಡು ರಾತಾರಾತ್ರಿಯೇ ಕಣ್ಣೂರಿಗೆ ಹೊರಟುಹೋಗುವಲ್ಲಿ (ರಾಕೀಂದ್ರ. ೦೨). **ರಾತೋರಾತ್** : 'ರಾತೋರಾತ್' ಹೀಗೆ ಘಾತಕ ಹಿಡಿದು ಹೋಗುವ ಅವಸರ (ಮೂರುದಾ. ೨೨೦). **ರಾತೋರಾತ್ರಿ** : ತೆಂಗಿನ ಮಡಲಿನ ಸೂಟೆಯೊಂದನ್ನು ಉರಿಸಿಕೊಂಡು ರಾತೋರಾತ್ರಿ ಹೊರಟೆಬಿಟ್ಟಿದ್ದರು (ಜಗುಪ. ೬೦) ; ದ್ಯಾವಮ್ಮ ಇವತ್ತು ಬರೋದಿಲ್ಲ . . . ಅಂತ ಅವಳಣ್ಣ ತನಿಯ ಬಂದು ರಾತೋರಾತ್ರಿ ಹೇಳಿದ (ಹೊಸಕ್ಥ. ೯೮). **ರಾತ್ರಾರಾತ್ರಿ** : ಕಾಡಿನಲ್ಲಿ ಗುಟ್ಟಾಗಿ ರಾತ್ರಾರಾತ್ರಿ ಕುದುರೆಹಿಂಡನ್ನು ಮೇಯಿಸುವ ಸಲುವಾಗಿ ಅಟ್ಟಿಕೊಂಡು ಹೋಗುತ್ತಿದ್ದರು (ಕ್ಷಪರು. ೨೯೩) ; ರಾತ್ರಾರಾತ್ರಿಯೇ ಆತ ಕನ್ನಾನೂರಿಗೆ ಹೋಗಿ . . . ಪೋರ್ಚುಗಲ್ಲಿಗೆ ತನ್ನ ಮರುಪ್ರಯಾಣವನ್ನು ಆರಂಭಿಸಿದನು (ಕ್ರವಾಇ. II, ೨೨೬). **ರಾತ್ರೋರಾತ್ರಿ** : ರಾತ್ರೋರಾತ್ರಿ ಯುದ್ಧಸಿದ್ಧತೆಗಳು ನಡೆದವು (ರೂಂ).

[← ಮರಾ. ರಾತೋರಾತ್, ರಾತೋರಾತೀ]

**ರಾತೋರಾತ್ರಿ** ' ರಾತೋರಾತು ' ನೋ.

**ರಾತ್ಕೃತ** (ನಾ). [ಕಾಮಶಾ] ರತಿಕ್ರೀಡೆಯ ಒಂದು ಧ್ವನಿ : ಸೀತ್ಕೃತಂ ಹೂಂಕೃತಂ . . . ರಣಿತ ಮೃದುರತಮಾಹತಂ ದೂತ್ಕೃತಂ ಶ್ವಸಿತ ಮುರುರಾತ್ಕೃತಂ [ಶಾಕಾಂ. ದಾತ್ಕೃತಂ, ಫಾತ್ಕೃತಿ] ಎನಿಪ್ಪೀ ಚಮತ್ಕೃತಿಯನಜಿಂದು ರಮಿಸುವನೆ ಚದುರಂ (ಜನವ. ೯-೩೦). [ಸಂ.]

**ರಾತ್ರಾರಾತ್ರಿ** ' ರಾತೋರಾತು ' ನೋ.

**ರಾತ್ರಿ** (ನಾ). ೧. ಇರುಳು ; ನಿಶೆ ; ರಜನಿ : "ತಮಾ . . . ಶ್ಯಾಮಾ, ರಾತ್ರಿಃ –ಈ ೧೯ ಇರುಳಿನ ಪೆಸರ್" (ಹಲಾಯು. ೦೯-೦೦೭) ; ಅಗ್ನಿಕುಂಡ

ದುರಿ ದೇದೀಪ್ಯಮಾನಮಾದುದು . . . ರಾತ್ರಿಯಾಕಾಶದಲಿ ಕಾಣ್ಬೊಂದು ತಾರಾಗರ್ಭದಂತೆ (ಶ್ರೀರಾಪು. ೧೦-೨೬೪). ೨. ಇರುಳಿನ ಕತ್ತಲೆ,– ಅಂಧಕಾರ. ೩. ಅರಿಸಿನ. [ಸಂ.]

**ರಾತ್ರಿಂಚರ** (ನಾ). ೧. ರಾಕ್ಷಸ : ನಡೆವಾಡದೊಳಗಿರ್ದ ರಾತ್ರಿಂಚರರ್ . . . ಎರಗಿ ಕಂಗೆಡಿಸಲ್ಕೆ (ಕೇಶರಾ. ೦೯-೩೪). 'ರಾತ್ರಿಂಚರಪತಿ' ಪರಾ. ೨. ಕಳ್ಳ. ೩. ಪಿಶಾಚಿ ; ದೆವ್ವ. ೪. ಕಾವಲುಗಾರ.

**ರಾತ್ರಿಂಚರಪತಿ** (ನಾ). ರಾಕ್ಷಸರ ಮುಖಂಡ; ನೈರುತಿ : ರಾತ್ರಿಂಚರಪತಿ ಸಿತಪಂಷ್ಟಾಂಪರಂ ಪಾಶಿಪಾರೋರುಮಯೂಖಂ . . . ಬಳೆದು ಬಳಸಿ ದಂತಾಯ್ತು ಬೆಳ್ದಿಂಗಳೆತ್ತಂ (ರಾಜಶೇ. ೦೩-೯೨). [ಸಂ.]

**ರಾತ್ರಿಚರ** (ನಾ). ೧. ಇರುಳಿನಲ್ಲಿ ಓಡಾಡುವವನು ; ಕಳ್ಳ. ೨. ಪಿಶಾಚಿ ; ದೆವ್ವ. ೩. ನಿಶಾಚರ; ರಾಕ್ಷಸ : ಖಚರಸುರೋರಗನರ ರಾತ್ರಿಚರಚಮೂವಂದ್ಯ (ಜಗನ್ನಾ. ೩-೩). ೪. ಕಾವಲುಗಾರ; ಪಹರಿ. [ಸಂ.]

**ರಾತ್ರಿಜ** (ನಾ). ಇರುಳಿನಲ್ಲಿ ಮೂಡುವುದು; ನಕ್ಷತ್ರ; ತಾರೆ. [ಸಂ.]

**ರಾತ್ರಿಜಲ** (ನಾ). ಮಂಜು ; ಕಾವಳ. [ಸಂ.]

**ರಾತ್ರಿಜಾಗರ** (ನಾ). ೧. ರಾತ್ರಿಯಲ್ಲಿ ಎಚ್ಚರವಾಗಿರುವಿಕೆ. ೨. ಇರುಳಿನಲ್ಲಿ ಎಚ್ಚರದಿಂದಿರುವ ಪ್ರಾಣಿ ; ನಾಯಿ : "ಕೌಳೇಯಕಂ ರಾತ್ರಿಜಾಗರಂ ಗ್ರಾಮಶಾರ್ದೂಲಂ . . . ನಾಯಿ" (ಪುಂಗರಾ. ೩೩-೮). [ಸಂ.]

**ರಾತ್ರಿಜ್ವರ** (ನಾ). ರಾತ್ರಿಯಲ್ಲಿ ಮಾತ್ರ ಬರುವ ಒಂದು ಬಗೆಯ ಜ್ವರ: ವಿಷ್ಣುಕ್ರಾಂತಿ, ಶುಂಠಿ . . . ಸಮಭಾಗ ಕಷಾಯವಿಟ್ಟು ಕೊಡಲು ರಾತ್ರಿ ಜ್ವರಂ ಮಾಣ್ಗುಂ (ಕಳನ್ಯ. ೦೦೭). [ಸಂ.]

**ರಾತ್ರಿನಾಡಿ** (ನಾ). ಶರೀರದ ಬಲಭಾಗದಲ್ಲಿರುವ ನಾಡಿ : ಸ್ತ್ರೀ ಪುರುಷ ನಾಡಿಗಳಿಗೆ ದಿವಾನಾಡಿಗಳೆಂತಲೂ ರಾತ್ರಿನಾಡಿಗಳೆಂತಲೂ ವ್ಯವಹಾರ ಉಂಟು (ಹನಾರ. ೮-೩ ಶಾಕ್ತ್ಯರ್ಥ). [ಸಂ.]

**ರಾತ್ರಿಭುಕ್ತವ್ರತಿಕ** (ನಾ). [ಜೈನ] ರಾತ್ರಿಯಲ್ಲಿ ಊಟಮಾಡದಿರುವ ವ್ರತವಮಾಡುವವನು : ದಿವದೊಳ್ ಸುರತವ್ಯಾಪಾರವಿನೋದಮನನ್ನ ಪಾನಮುಂ ರಾತ್ರಿಯೊಳಾಸೆವಡುವುದುಮನುಬಿಡಸಗುವ ವಿವೇಕಿಯಾಬನೆಯ ರಾತ್ರಿಭುಕ್ತವ್ರತಿಕಂ (ಸುಕುಮಾ. ೩-೩೦). [ಸಂ.]

**ರಾತ್ರಿಮಣಿ** (ನಾ). ೧. ಇರುಳಿನಲ್ಲಿ ರತ್ನದಂತಿರುವವನು : ಚಂದ್ರ. ೨. ಕರ್ಪೂರ. [ಸಂ.]

**ರಾತ್ರಿಯುದ್ಧ** (ನಾ). ಇರುಳಿನಲ್ಲಿ ನಡೆಯುವ ಕಾಳಗ : ಪ್ರಾಚೀನ ಕರ್ಣಾಟಕದಲ್ಲಿ . . . ರಾತ್ರಿಯುದ್ಧವು ಇರಲಿಲ್ಲವೆಂದೇ ಹೇಳಬಹುದು. ಆದರೂ ಒಂದೇ ಒಂದು ಶಾಸನದಲ್ಲಿ ಮಾತ್ರ ರಾತ್ರಿಯುದ್ಧಗಳು ('ಇರುಳ ಬವರ') ಬಹು ವಿರಳವಾಗಿಯಾದರೂ ನಡೆಯುತ್ತಿದ್ದುವೆಂಬುದಕ್ಕೆ ಸೂಚನೆ ಯಿದೆ (ಕರಾಶ. ೨೬೦). [ಸಂ.]

**ರಾತ್ರಿರಾಣಿ** (ನಾ). ಇರುಳಿನಲ್ಲಿ ಮಾತ್ರ ಅರಳಿ, ಸುವಾಸನೆಯನ್ನು ಬೀರುವ ಒಂದು ಬಗೆಯ ಹೂವು ಮತ್ತು ಅದರ ಗಿಡ : ಸೊಕ್ಕು ಜವ್ವನದ ರಾತ್ರಿರಾಣಿ ಮುಸುಗುಡಿಸೆ ಆಯ್ತು ಹಗಲು (ಸೂರ್ಯಪಾ. ೩೪-೦೪) ; ಬೆಳದಿಂಗಳಿರುಳಲ್ಲಿ ರಾತ್ರಿರಾಣಿಯ ಹೂವು ನಾಲ್ದೆಸೆಗು ಅಚ್ಚ ಸೌಸವ ಬೀರಿರೆ (ಕಾವಚೇ. ೦೬-೩೦೩). [ರಾತ್ರಿ + ರಾಣಿ]

**ರಾತ್ರಿವಿರಾಮ** (ನಾ). ಇರುಳು ಮುಗಿಯುವ ಕಾಲ ; ಮುಂಜಾವ : "ರಾತ್ರಿವಿರಾಮಂ ವ್ಯುಷ್ಟಂ" (ಪಸ್ತುಕೋ. ೦೩-೬). [ಸಂ.]

**ರಾತ್ರೀಚರ** (ನಾ). ನಿರರುತಿ ; ನಿರುತಿ : ದಿನಮಣಿಯ ಪುತ್ರನೇ ಪಾಪ ಪುಣ್ಯವಿಚಾರಕಂ ನೆಗಳ್ದ ರಾತ್ರೀಚರನೆ ಪಾದುಕಾಧಾರನೆನೆ ಶಿವಂ ವೈಭವ ದೊಳಿರುತಿರ್ದನು (ಶಂಪು. ೨೯-೩೪). [ಸಂ.]

**ರಾತ್ರೀಶ** (ನಾ). ರಾತ್ರಿಯ ಒಡೆಯ ; ಚಂದ್ರ : ದಿವಸೇಶ ರಾತ್ರೀಶಾ ಧಿಕಗ್ರಹತಾರಕಾವಳಿಯಧೀಶ ಸಕಲಮುನೀಶರುಂ . . . ನೆರೆದು (ಜಕಥ. ೨೯-೯೮) ; ಘೋರಾಂಧಕಾರರಕ್ಕಸನ ಪೆರ್ವಡೆಯ ಮೇಲೋರಂತೆ ದಂಡೆತ್ತಿ ಬಹನೋ ರಾತ್ರೀಶನೆನೆ (ಪವಮೋ. ೨೩-೩೪). [ಸಂ.]

**ರಾತ್ರೆ** (ನಾ). ರಾತ್ರಿ ; ಇರುಳು : ಚಿಕ್ಕದೇವರಾಜರು ರಾತ್ರೆ ಹಗಲು ಫವುಜು ಕಳುಹಿಸಿ (ರಾತೇಂದ್ರ. ೪). 'ನಡುರಾತ್ರೆ' ಪರಾ. [< ಸಂ. ರಾತ್ರಿ]

**ರಾತ್ರೆರಾಣಿ** (ನಾ). = ರಾತ್ರಿರಾಣಿ : ಮನೆಯ ಮುಂದೆಯೇ ಸರ್ಪಗಳಿಗೆ ಪ್ರಿಯವಾದ ದೇವರ ಮುಡಿಗೆ ಅರ್ಹವಾದ ಶಾಮಸಪುಷ್ಪ – ರಾತ್ರೆರಾಣಿ (ಸಂಸ್ಕಾರ. ೦೭). [ರಾತ್ರೆ + ರಾಣಿ]

**ರಾತ್ರೋರಾತ್ರಿ** 'ರಾತೋರಾತು' ನೋ.

**ರಾತ್ರ್ಯಂಧ** (ನಾ). ೧. ರಾತ್ರಿಯಲ್ಲಿ ಕಣ್ಣು ಕಾಣಿಸದವನು ; ಇರುಳು ಗಣ್ಣ : ಕೌಶಿಕಂಗಳ್ಗಂ ನಮಗ್ಗಂ ದುರ್ಧರಮಪ್ಪ ವೈರಮುಂಟಾಗಿಯುಂ ನಾವೆಲ್ಲರುಂ ರಾತ್ರ್ಯಂಧರುಮಪ್ಪುದರಿಂ ದಿವಾಂಧರುಮಪ್ಪುದೆಱಿಂ ಸಂಧಾನಮೆಂತುಮಪ್ಪಾಗಲರಿಯದು (ಪಂತಂ. ೨೨೦-೨೦). ೨. ರಾತ್ರಿಯಲ್ಲಿ ಕಣ್ಣು ಕಾಣಿಸದಿರುವ ಕಾಗೆ ಮುಂತಾದ ಪಕ್ಷಿ. 'ದಿವಸಾಂಧ' ಪರಾ. [ಸಂ.]

**ರಾತ್ಲು** 'ರಾತಲು' ನೋ.

**ರಾದ್ಧ** (ಗು). ೧. ಬಲಿಸಿಕೊಂಡ. ೨. ಸಾಧಿಸಿಕೊಂಡ ; ಸಿದ್ಧಿಯನ್ನು ಪಡೆದ. ೩. ದೊರಕಿಸಿಕೊಂಡ ; ಪಡೆದ. [ಸಂ.]

**ರಾದ್ಧಾಂತ** (ನಾ). ೧ [ತರ್ಕಶಾ] ವಾದವಿವಾದಗಳ ನಿರ್ಣಯ ; ಸಿದ್ಧಾಂತ : "ಕೃತಾಂತಃ, ರಾದ್ಧಾಂತಃ, ಸಿದ್ಧಾಂತಃ, ಸಮಯಃ — ಈ ೪ ಸಿದ್ಧಾಂತದ ಪೆಸರು" (ಕಲಾಯು. ೩-೦೦) ; ತತ್ತ್ವಭಾವನೆಯುಂ ಧ್ಯಾನಮುಮೆಂದುಮೊದುವವರಾ ರಾದ್ಧಾಂತಮುಂ ತತ್ತ್ವಯೋಜನಮುಂ ತುಪ್ಪದ ಕಾದ ಪಾಲವೊಲದೇಂ ಸಂಭಿನ್ನಸಂಯೋಗಮೋ (ಶಾಂತಿಪು. ೯-೦೯೩); ಸಕಳಜೀವದಯಾಪರ ಜೈನಮಾರ್ಗರಾದ್ಧಾಂತಪಯೋಧಿಗಳ್ (ಎಕ. II. ೦೦೭-೦೦೭ ; 1123). ೨. (ಆಲಂ) ರಂಪ ; ಗೊಂದಲ ; ಕೋಲಾಹಲ ; ನಾಳೆ ನಿನ್ನಣ್ಣ ಬಂದಾಗ ರಾದ್ಧಾಂತ ಆಗಬಾರದು (ಮುಕುರುದಾ. ೩೦೪); ಮನೆಯಲ್ಲಿ ಈ ಮಾತಿನಿಂದ ರಾದ್ಧಾಂತವಾಗುತ್ತದೆ (ಮುಕ್ತ್ಯ.ದಿ. ೩೭).

**ರಾದ್ಧಾಂತಚಕ್ರಾಧಿಪ**= ವಾದವಿವಾದ ಮಾಡುವುದರಲ್ಲಿ ಪ್ರಮುಖ ನಾದವನು ; ಒಂದು ಬಿರುದು : ಲೋಕಕ್ಕೆ ಸದ್ಗುರುವಾದಂ ನಯ ಕೀರ್ತಿದೇವಮುನಿಪಂ ರಾದ್ಧಾಂತಚಕ್ರಾಧಿಪಂ (ಎಕ. II. ೩೩-೯೦ ; 1176). **ರಾದ್ಧಾಂತಪಾರಗ** = ಸಿದ್ಧಾಂತದಲ್ಲಿ ಪರಿಶ್ರಮವುಳ್ಳವನು: ರಾದ್ಧಾಂತ ಪಾರಗಂ ಗುಣವೃದ್ಧಂ ಮಾರ್ಗಪ್ರಭಾವನಾರ್ಥದಿನಿರ್ದಂ (ಕಂದ್ರಪು. ೯-೨೦). **ರಾದ್ಧಾಂತವಿದ** = ರಾದ್ಧಾಂತಪಾರಗ : ತತ್ತ್ವನಿರ್ಣ್ಣಕ್ತ ರಾದ್ಧಾಂತ ವಿದಂ (ಸೌಇಇ. XX. ೩೦-೨೯ ; ೪). **ರಾದ್ಧಾಂತೇಶ** = ರಾದ್ಧಾಂತ ಚಕ್ರಾಧಿಪ : ತಪೋನಿಧಿ ಮುನಿಚಂದ್ರಪ್ರತಿಪನಖಿಳರಾದ್ಧಾಂತೇಶಂ (ಎಕ. VII. ಶಿವಮೊ. ೩೭-೩೩ ; 1115). [ಸಂ.]

**ರಾಧ** (ನಾ). ೧. ಅನುಗ್ರಹ ; ದಯೆ. ೨. ವೈಶಾಖಮಾಸ : "ವೈಶಾಖಃ, ಮಾಧವಃ, ರಾಧಃ — ೩ ವೈಶಾಖಮಾಸದ ಹೆಸರುಗಳು" (ಸಿದ್ಧಾಂತ. ೯೦). ೩. ಏಳಿಗೆ ; ಅಭ್ಯುದಯ. [ಸಂ.]

**ರಾಧನ** (ನಾ). ೧. ಪ್ರಾಪ್ತಿ ; ಲಾಭ. ೨. ತಣಿವು ; ತೃಪ್ತಿ. ೩. ನೆರವೇರಿಕೆ. ೪. ಅನುಗ್ರಹ ಸಂಪಾದನೆ. ೫. ಸಾಧನೆ. [ಸಂ.]

**ರಾಧಾತನೂಜ** (ನಾ). ರಾಧೆಯ ಮಗ ; ಕರ್ಣ : ಗಂಗಾಕುಮಾರನ ಕಳಶಜನ ರಾಧಾತನೂಜನ ರಂಗಭೂಮಿಯಿದು (ಕುಮಾ.ಭಾ. ೩-೨೩). [ಸಂ.]

**ರಾಧೆ** (ನಾ). ೧. ಏಳಿಗೆ ; ಅಭ್ಯುದಯ. ೨. ಮಿಂಚು. ೩. ನೆಲ್ಲಿಗಿಡ. ೪. ವೈಶಾಖಮಾಸದ ಹುಣ್ಣಿಮೆ. ೫. ಕರ್ಣನ ಸಾಕುತಾಯಿ.

ಬಾಳನಂ . . . ಎತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡೆ (ಶಂಶಖ. ೦-೯೬ ವ). ೬. ಶ್ರೀಕೃಷ್ಣನ ನೆಚ್ಚಿನ ಪ್ರೇಯಸಿಯಾದ ಒಬ್ಬ ಗೋಪಿಕಾಸ್ತ್ರೀ : ನೋಡುತಿರಲು ಒಳಗಣ್ಣನಿದಿರು ನೀ ಹೇಗೊ ರಾಧೆಯಾದೆ (ಕೃಶಾ ಕು. ೨೭-೨೨). ೭. ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿನಾರನೆಯದು; ವಿಶಾಖಾನಕ್ಷತ್ರ: " ರಾಧೆಯೆ ವಿಶಾಖೆ " (ಮಂಗರಾ. ೦೨-೭); ಚಾಗಿಯಂತೆ ನೆಱೆ ಕೊಟ್ಟಿಸೆ ದೊಪ್ಪಿತು ರಾಧೆಯಂತೆ ಸಂದಿಸಿ ಮುಡಿ ಮೇಲೆ ಕೊಂಕಿದುದು (ಹುಕೋಶ. ೩-೭೬). [ಸಂ. ರಾಧಾ]

**ರಾಧೇಯ** (ನಾ). = ರಾಧಾತನೂಜ : ಕೊಳ್ಳೆಂದರಿದೀಡಾಡಿದನಿಂದ್ರಂಗೆ ಕವಚಮಂ ರಾಧೇಯಂ (ಶಂಶಖ. ೦-೦೦೦) ; ಮಱೆದಪ್ಪೊಡಂ ತೊಡರ ನುಡಿದಱಿಯನಪ್ಪುದಱಿಂ ಸತ್ಯರಾಧೇಯನುಮಂ . . . ಎನಿಸಿ (ಪೃಕೃಪು. ೦-೯೨ ಶ). [ಸಂ.]

**ರಾಪೆ**[1] (ನಾ). ಕಬ್ಬಿನ ರಸವನ್ನು ಹೆಚ್ಚಾಗಿ ಕುದಿಸಿ ಮಾಡಿದ ಪಾಕ : ಆ ರಸವನ್ನು ತುಸು ಕುದಿಸಿದರೆ ಕಾಕವಿಯಾಗುವುದು, ಅದಕ್ಕೂ ಹೆಚ್ಚು ಕುದಿಸಿದರೆ ರಾಪವಾಗುವುದು (ಮುಂಬಯು. ೩-೯೩).

[ ← ಹಿಂ. ಮರಾ. ರಾಬ್ ]

**ರಾಪ್ಮ** (ನಾ). ಒಬ್ಬಾತನ ಹೆಸರು : ಬಂಕೇಯಂಗೆ ಧರ್ಮ್ಮಮೆಕ್ಕಿನ್ನು ಕುನ್ನಟ್ಟಿಯುಂ ರಾಪನುಮ್ಮಿಟ್ಟು (ಎಇ. VII, ೨೦೩-೦೦ ; 874). [ ? ]

**ರಾಪಣ** (ನಾ). (?) : ಆ ಪುರದ ತರದ ವಿಸ್ತರದ ಸೌಧೋತ್ಕರದ ಶ್ರೀಪುರದ ರಾಪಣದ ಸಿಂಗರದ ಮಂಗಳದ ಗೋಪುರದ ಮತ್ತವಾರಣದ ತೋರಣದ ಉಱೆ ಮೆಱೆವ ವೃಷಭಧ್ವಜಗಳು (ಗುಶಕ. ೦-೩೩). [ ? ]

**ರಾಪಮ್ಮ** (ನಾ). ಒಬ್ಬಾತನ ಹೆಸರು : ತದಸೂರಾ ಸಿಜ್ಜಿವಡ್ಡಗಿ ರಾಪಮ್ಮನ್ ಸಿರಿವಾಳ್ಳ ಮಾಡಿದಾನ್ (ಕೌಇ. XX, ೯-೩; ಶು. ೩ನೆಯ ಶತ). [ ರಾಪ್ಪ₂ + ಅಮ್ಮ₁ ]

**ರಾಪಾಟ** (ನಾ). ಆರ್ಭಟ ; ಅಬ್ಬರ : ಅವರ ರಾಪಾಟ ಹೇಳತೀರದು (ಲೂ). [ ರಾಪು + ಆಟ ]

**ರಾಪಾಡು** (ಕ್ರಿ). ಆರ್ಭಟಿಸು ; ಕೂಗಾಡು : ಅವನನುಂ ಖಂಡಿಸಲಡ ಹಾಯ್ದು ರಾಪಾಡಿ ಶಿರವನು ಕಟ್ಟಿ ಮೇಣ್ ತೋರಣಕೆ ಕಟ್ಟಿದಂ ದಿಟ್ಟ ತನದಿಂ (ಹಶಸಂ. ೩೯-೯೭). [ ರಾಪು + ಆಡು₁ ]

**ರಾಪಿಸು** (ಕ್ರಿ). ಕಂಗೊಳಿಸು ; ಶೋಭಿಸು : ಅಂಗನೆಯ ರೂಪು ರಾಪಿಸುತಾ ಕಂಗಳಿಂವರಿದು ಕುಡಿವಳಂತ ವಾಲಗರಂಗದಿ ಬಂದು ನಿಂದಿಹಳು (ಕೌಂಡಕಾ. ೩-೨೯). [ ರಾಪು + _ಇಸು₃ ]

**ರಾಪು** (ನಾ). ೧. ದಿಗಿಲು ; ಅಂಜಿಕೆ ; ಭಯ : ' ರಾಪುಗೊಳ್ ' ಪರಾ. ೨. ಆರ್ಭಟ ; ಜೋರು : ಮಳೆಯ ರಾಪಿಗೆ ಮನುಷ್ಯರು ಹತ್ತಿರ ಸುಳಿಯದ ಹಾಗೆ ಮಾಡಿದ (ಮರಪು. ೯೦) ; ನಿನ್ನಪ್ಪನ ಬಾಯಿ ರಾಪಿಗೆ ಯಾರು ಹೆದರುತ್ತಾರೆ ? (ಮೂರುಬಾ. ೯೭) ; ಅದರ ಬಾಯಿ ಕಟ್ಟಿಸಿ, ಕಣ್ಣಿಗೆ ಪೊಳೆ ಹೊಡೆದು 'ರಾಪು ನಿಲ್ಲಿಸುತ್ತೀಸ' ಎಂದ ಇವರ ಹಮ್ಮು ಅಡಗಿತು ! (ಕೃಕೃಹೊ. ೨೭). ' ರಾಪಾಡು ' ಪರಾ. ೩. ಕಾಂತಿ ; ಶೋಭೆ : 'ರಾಪಿಸು', ' ರಾಪುದೋರು' ಪರಾ. ೪. ಸೊಕ್ಕು ; ಗರ್ವ ; ಜಂಭ: ಈ ಮೊಗೇರ ಮಕ್ಕಳಿಗೆ ರಾಪು ಹೆಚ್ಚಿಯೇ ಈ ವರ್ಷ ಕಡಲಿಗೆ ಬೈಗೆಮೀನು ಬಾರದೆ ಇದ್ದುದು (ಮರಪು. ೩೩೬).

**ರಾಪಾಗು** = ಭಯಪಡು ; ಗಾಬರಿಬೀಳು : ಕಾವುಗಾರರು ಬಿಟ್ಟು ಪೋದರು ಅವರೆಲ್ಲ ರಾಪಾಗಿ ಮನ ಬಂದ ಕಡೆಗೆ (ಕರಂ. ೩೯೭-೩).

**ರಾಪು ಮಾಡು** = ೧. ಗಾಬರಿಯನ್ನುಂಟುಮಾಡು ; ಹೆದರಿಸು : ರಾಪುಮಾಡದೆ ಬಿಡನು ಯಮನು (ಶಂಶಾ. ೬೮). ೨. ಜೀರ್ಣೋದ್ಧಾರಮಾಡು ; ಸರಿಪಡಿಸು : ಆ ಗ್ರಾಮವು ಬಿಲವಾಗಿಯಿರಲಾಗಿ ಆ ಗ್ರಾಮವನೂ ರಾಪುಮಾಡಿ ಆ ಗ್ರಾಮದ ಕುಂಟೆಯನೂ ಕಟ್ಟಿಸಿ (ಕೌಇ. IX-ii, ೯೭೪-೦೦ ; 1497). [ದೇ.? ತುಳು. ತೆಲು. ರಾಪು]

**ರಾಪುಗೊಳ್** (ಕ್ರಿ). ಗಾಬರಿಯಾಗು ; ಹೆದರು : ಬಱಿಯ ಬಿಲ್ಲನಿಗೆ ರವಣನ ತಾಗಿತಂಬೆಂದು ನೆಱೆ ಮೋಹದಿಂ ಪೊರಳ್ದವು ಕೆಲವು ರಾಪುಗೊಂಡೊಂದಿದಿನಿಯನನಗಲ್ದು ಮಱುಗಿ ಮದನಾಸ್ತ್ರದಿಂದಿರದೆ ಬಿದ್ದುವು ಕೆಲವು (ಕೃಪಿಶಾ. ೨೯-೩೦). [ ರಾಪು + ಕೊಳ್₁ ]

**ರಾಪುದೋರು** (ಕ್ರಿ). ಶೋಭಿಸು ; ಕಂಗೊಳಿಸು : ಈ ಪರಿಯಲಿ ರಾಪುದೋರುತ ಸಿಂಹಪೀಠದಿ ಕುಳಿತು ಸಂತಸದಿ (ಕೌಂಡಕಾ. ೨-೩); ರಾಪುದೋರುವ ಕನಕನೂಪುರಂದುಗೆಗಳ . . . ಇತ್ತು (ದೇವೀಕೃ. ೨೪).

[ ರಾಪು + ತೋರು (< ತೋಱು) ]

**ರಾಭಸಿಕ** (ಗು). ದುಡುಕಿನ ; ಆತುರದ : ಕಾಲೋಚಿತಸಂಧಿವಿಗ್ರಹದೊಳೊಂದಂ ಕಾರ್ಯಮಂ ಪ್ರಾಪ್ತಮಪ್ಪುದನಾಪ್ತೋಕ್ತಮನುಂತೆ ರಾಭಸಿಕ ವಾಕ್ಯಾತಕ್ಕೆ ಮೆಯ್ದೊರ್ಪುದೇ (ಶಾಂತಿಪು. ೩-೭೩). [ಸಂ.]

**ರಾಭಸಿಕವೃತ್ತಿ** (ನಾ). ದುಡುಕುತನ ; ಆತುರದ ಸ್ವಭಾವ : ಆ ಭವದೊಳ್ ತಾಯಾಗಿಯುಮಿಾ ಭವದೊಳ್ ತಂದೆಯಾಗಿಯುಂ ನೀನೆಮ್ಮಾ ರಾಭಸಿಕವೃತ್ತಿಯುಂ ವಾಗ್ವ್ಯಭವದಿಂ ಕಳೆದು ಪೊರೆದೆಯ್ದುಮ್ಮನುಂದ್ಯಾ (ಶಾಂತಿಪು. ೬-೯೦). [ಸಂ.]

**ರಾಭೆಯ** (ನಾ). ಒಬ್ಬಾತನ ಹೆಸರು : ಮಾಱಿಾಂತರನೇಕರಂ ತವಿಸಿ ವಸ್ತುಗಳಂ ಮದವಾರಣಂಗಳಂ ಕಾನ್ತೆಯರಂ ತುರಂಗಚಯಮಂ ಪಿಡಿದಿತ್ತೊಡೆ ಮೆಚ್ಚಿ ರಾಭೆಯಂ ದನ್ತಿಯನಿತ್ತನಂತದುವೆ ಪೇಳದೆ ಪಟ್ಟಿಗ ನಿನ್ನಗೆ[ಲ್ಲ]ಮಂ (ಕೌಇ. XX, ೦೬-೦೯ ; 980). [ ? ]

**ರಾಮ** (ಗು). ೧. ಸಂತೋಷಗೊಳಿಸುವ ; ಆನಂದಕರವಾದ. ೨. ಮನೋಹರವಾದ ; ಸುಂದರವಾದ. ೩. ಕಪ್ಪಾದ ; ಕಪ್ಪನೆಯ : 'ರಾಮಧಾನ್ಯ' ಪರಾ. ೪. ಬಿಳಿಯ; ಬಿಳಿದಾದ : ' ರಾಮಗುಳ್ಳ', ' ರಾಮತುಳಸಿ' ಪರಾ. (ನಾ). ೫. ಮನೋಹರವಾದುದು ; ಸುಂದರವಾದುದು : ದಳಿತಾಬ್ಜಪ್ರಸರಂ ಸರಂ ಕುಸುಮಮಾಳಾರಾಮಮಾರಾಮಂ (ಜಗಂ. ೨-೨). ೬. ಕತ್ತಲೆಯ ಬಣ್ಣ ; ಕಪ್ಪು. ೭. ಬಿಳಿಯ ಬಣ್ಣ ; ಶ್ವೇತ ವರ್ಣ : "ಬಿಳಿದಱಲ್ಲಿಯುಂ ಶುಚಿಯೆಂಬುದು, ರಾಮಮುಮೆಂಬುದು" (ಕಲಾಯು. ೦೩೪-೨೨). ೮. ಹಸುರು; ಹರಿದ್ವರ್ಣ : "ಶ್ಯಾಮಮುಂ, ಶ್ಯಾಮಳಂ, ರಾಮಂ, ಪಾಲಾಶಂ, ಹರಿತಂ, ಹರಿತ್_ಈ ೬ ಪ(ಹ)ಸುರ್" (ಕಲಾಯು. ೦೨೦-೯೯). ೯. ಶುಚಿಯಾದುದು; ನಿರ್ಮಲವಾದುದು. ೧೦. ಸಂತೋಷ ; ಆನಂದ. ೧೧. ವಿಷ್ಣುವಿನ ಆರನೆಯ ಅವತಾರ : ಜಮದಗ್ನಿಯ ಮಗ ; ಪರಶುರಾಮ : ಕೂರಿ[ಸೆ] ಗುರುಶುಶ್ರೂಷೆಯೊಳಾ ರಾಮನನನುಗ್ರಹಶಪಾಟಿತ ರಿಪುವಂಶಾರಾಮನನಿಷುವಿದ್ಯಾಪಾರಗನೆನಿಸಿದುದು ಬಲ್ಪೆ ವೈಕರ್ತನನಾ (ಶಂಶಖ. ೦-೦೦೪) ; ಸಾಗರವ ಕಾಸರ ಸೆಣಸುವಂತಾಯ್ತುಱಿಯಬಹುದಿನ್ನೆನುತ ಕೊಡಲಿಯ ರಘುಡಿದನಾ ರಾಮು (ಕೂರರಾ. ೦-೦೭-೦೦). ೧೨. ವಿಷ್ಣುವಿನ ಏಳನೆಯ ಅವತಾರ ; ದಶರಥನ ಮಗ ; ರಾಘವ : ರಾಮನಕಟ್ಟಾ ಹಸುಳೆ ಭಾರ್ಗವರಾಮನಗ್ಗದ ಜವನ ಜೂಜು (ಕೂರರಾ. ೦-೦೭-೦೨) ; ರಾಮನೊಡಗೂಡಿ ಬಳೆದರು ಮೂವರನುಜರುಂ (ಶ್ರೀರಾಮಪ. ೦೯-೪೪೪) ; ರಾಮನಂತಹ ರಾಜನಿಲ್ಲ ಕಾಮನಂತಹ ಪುರುಷನಿಲ್ಲ (ಗಾದೆ). ೧೩. ವಿಷ್ಣುವಿನ ಎಂಟನೆಯ ಅವತಾರವಾದ ಕೃಷ್ಣನ ಅಣ್ಣ ; ಬಲರಾಮ ; ವಸುದೇವನ ಮಗ : "ಬಲದೇವಃ . . . ರಾಮಃ, ಕಾಮಪಾಲಃ . . . ಹಲಾಯುಧಃ_ಈ ೧೮ ಬಲದೇವನ ಪೆಸರ್" (ಕಲಾಯು. ೬-೨೦) ; ಒಲ್ದೀಕ್ಷಿಸಿದಂ ನಿಜಾಗ್ರಭವನಂ ದೈತ್ಯಾರಿ . . . ವಿಜಯಾನ್ಯಂಗಾರಾಮನಂ ರಾಮನಂ (ಜಗಂ. ೪-೩೯). ೧೪. ವರುಣ :

ರಾಮೋತ್ಕಂಠೆ' ಪರಾ. ೧೫. ಕುದುರೆ ; ಅಶ್ವ. ೧೬. ಒಂದು ಬಗೆಯ ಜಿಂಕೆ. ೧೭. ಪ್ರಿಯ ; ಇನಿಯ : ಅಭಿವರ್ಣಿಪೆಂ ರಣ ಯಶಶ್ರೀರಾಮನಂ ಭೀಮನಂ (ಗದಾಯು. ೦-೩೨). ೧೮. [ವೀರಶೈ] ಪಂಚಾಚಾರ್ಯರಲ್ಲಿ ಒಬ್ಬ : ಏಕೋರಾಮ : ರೇಣುಕ ರಾಮ ಪಂಡಿತ ಮಹಾಮರುಳಾರ್ಯರ . . . ಮಾಣದೆ ಬಣ್ಣಿಸುತ್ತಿಗಿ ಮೇಣ್ಬಡೆವೆಂ ಪರಮಾರ್ಥಸಿದ್ಧಿಯಂ (ರಾಜಶೇ. ೦-೦೭). [ಸಂ.]

**ರಾಮಕಲಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ವಿರಾಗವು ರಕ್ತದ ಒತ್ತಡವನ್ನೂ, ತಿಲಂಗ್, ಬಿಲಾವಲ್, ಮುಲ್ತಾನಿ, ರಾಮಕಲಿ ರಾಗಗಳು ಕ್ಷಯರೋಗವನ್ನೂ. . . ಗುಣಪಡಿಸುವುವೆಂಬ ಭಾವನೆ ಉತ್ತರ ಭಾರತದಲ್ಲಿದೆ (ಶಾರದ. ೩೯೯). [ಸಂ. ರಾಮಕಲೀ]

**ರಾಮಕ್ರಿಯೆ** (ನಾ). [ಸಂಗೀತ] ಒಂದು ರಾಗದ ಹೆಸರು : ಬಳಿಕ ಸಪ್ತಸ್ವರಾಗಂಗಳೊಳಗೆ ರಾಮಕ್ರಿಯೆ [ಪಾಠಾಂ. ರಾಮಕ್ರಿ] . . . ಮಧ್ಯಮಾವತಿಯೆಂಬ ಮೂವತ್ತಾಱುರಾಗಂಗಳು (ಅವೇಶ. ೨೩೯). [ಸಂ. ರಾಮಕ್ರಿಯಾ]

**ರಾಮಕ್ರೀ** (ನಾ). [ಸಂಗೀತ] ಒಂದು ರಾಗದ ಹೆಸರು : ಲಲಿತಾ ಹರಿನಾಟಿ ರಾಮಕ್ರೀರಾಗ ತೋಡಿ ಮಕರಂದಿ ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹಮ್ಮಾರ. ೨-೯೦). [ಸಂ.]

**ರಾಮಗಬ್ಬು** (ನಾ). ಒಂದು ಬಗೆಯ ಬಿಳಿಯ ಕಬ್ಬು : ಕಬ್ಬಿನ ಜಾತಿಗಳು—ರಸದಾಳಿ, ರಾಮಗಬ್ಬು, ಕರಿಗಬ್ಬು, ಬೆತ್ತಗಬ್ಬು . . . ಎಂದು ಅನೇಕವುಂಟು (ಮುಂಂಡಯ. ೩-೨೦೦). [ರಾಮ + ಕಬ್ಬು$_2$ (<ಕರ್ವು$_1$)]

**ರಾಮಗುಳ್ಳ** (ನಾ). ಒಂದು ಬಗೆಯ ಬಿಳಿಯ ಬದನೆ : ರಾಮಗುಳ್ಳ, ಕಿರೀಗುಳ್ಳ (ವೃಕ್ಷಶಿ. ೬೦-೦೫೩೦) ; ಆ ತುಸೋಗೆಯೊಲೆಯ ಕಡ್ಡಿ . . . ರಾಮಗುಳ್ಳ, ಶುಂಠಿ, ಕಟುಕರೋಹಿಣಿ ಇವುಗಳನ್ನು ಸಮಭಾಗ ಕಷಾಯ ಕಾಯಿಸಿಕೊಡಲು ಶ್ಲೇಷ್ಮಜ್ವರವು ಗುಣವಾಗುವುದು (ಸಕಚ. ೯೦). [ರಾಮ + ಗುಳ್ಳ]

**ರಾಮಗೋಟು** (ನಾ). ಒಂದು ಬಗೆಯ ಸಸ್ಯ : ಬಿಂಡಿಕಾಯಿ, ರಾಮಗೋಟು (ವೃಕ್ಷಶಿ. ೩೩-೨೦೦೯). [ ? ]

**ರಾಮಚ** (ನಾ). ಒಂದು ಬಗೆಯ ಔಷಧೀಸಸ್ಯ : ಪರ್ಪಾಟಕ, ರಾಮಚದ ಚೂರ್ಣ . . . ಸಕ್ಕರೆ ಸಹ ಕೊಡಲು, ಸಕಲಕ್ಷಯವ್ಯಾಧಿ . . . ಹರ (ಖಪ್ಪಶಿ. ೨೭). [ ? ]

**ರಾಮಚಂಗಿ** (ನಾ). ಒಂದು ಬಗೆಯ ಫಿರಂಗಿ,— ತೋಪು : ಹಿರಿಯ ತೋಪುಗಳು, ಸಣ್ಣ ತೋಪುಗಳು, ರಾಮಚಂಗಿಗಳು, ರಾಮಬಾಣಗಳು, ಮತಾಪುಗಳು. . . ರಣಗಾಡಿಗಳು ಮೊದಲಾದ ಯುದ್ಧೋಪಕರಣಗಳನ್ನೆಲ್ಲ ಎಣಿಸಿದುದಾಯಿತು (ಬಕ್ಕರು. ೦೨). [← ಹಿಂ. ರಾಮಚಂಗೀ]

**ರಾಮಚರಿತ** (ನಾ). ರಾಮನ ಕಥೆ : ರಾಮಚರಿತಾರ್ಥವನು ಕೇಳ್ದಪ ರಾಮನಿಗೆ ಸರಿಯಹನು ಜಗದೊಳು ರಾಮನಾಮದ ಮಹಿಮೆಯನು ಬಣ್ಣಸುವಡರಿದು (ತೊರರಾ. ೬-೩೩-೬೦ ಅಂತರ್ಧ). [ಸಂ.]

**ರಾಮಟಂಕಿ**, ರಾಮಟೆಂಕಿ (ನಾ). ರಾಮನ ಪಟ್ಟಾಭಿಷೇಕದ ಚಿತ್ರವಿರುವ ಒಂದು ಚಿನ್ನದ ನಾಣ್ಯ : 'ಶ್ರೀರಾಮಟಂಕೀವರಹ' ಪರಾ. **ರಾಮಟೆಂಕಿ** : ರಾಮಟೆಂಕೀ ನಾಣ್ಯವು ಕಟಾಕಟಿ ನಾಲ್ಕು ತೊಲಿ ಇರುತ್ತಿತ್ತು (ಕಾಗ. ೩೯೦). [ರಾಮ + ಟಂಕಿ$_2$]

**ರಾಮಟೆಂಕಿ** 'ರಾಮಟಂಕಿ' ನೋ.

**ರಾಮಠ** (ನಾ). ಇಂಗು ; ಹಿಂಗು : "ಹಿಂಗುಃ, ರಾಮಠಂ—ಈ ೨ ಹಿಂಗು" (ಕರಾಯು. ೦೦೦-೪೬೩) ; ಎರಡುಳ್ಳಿ ಹಿಂಗು ನಿಂಬದ ತಿರುಳಾಡಿನ ಬೆಣ್ಣೆ ಬೇವಿನೆಣ್ಣೆಯಂ ಬಿತ್ತರದಿಂ ನೆಯ್ ನಿಲೆ ಕುದಿಯಿಸುಗೆ ರಾಮಠಕ್ಕೆಲ್ಲ ಮಿಂತಿದುಂ ಸಮನಕ್ಕುಂ (ಲೋಕೋಪ. ೭-೩೮). [ಸಂ.]

**ರಾಮಣೀಯಕ** (ಗು). ೧. ಸುಂದರವಾದ ; ರಮಣೀಯವಾದ ; ಚೆಲುವಾದ : ಸಂಧಿ ಮುಗಿದುದು ರಾಮಣೀಯಕ ರಾಮಕಥೆಯೊಳಗೆ (ತೊರರಾ. ೦೩-೪೯); ರಾಮಣೀಯಕ ರಾಶಿಗೆ ಪಶ್ಚಿಮರಂಗಧಾಮನಿಗಾನೆಱಗುವೆನು (ಹದಿ. ೦-೦). (ನಾ). ೨. ರಮಣೀಯವಾದುದು ; ಚೆಲುವಾದುದು : ವನ ರಾಮಣೀಯಕಂ, ಜಲ ರಾಮಣೀಯಕಂ (ಶ್ರೀರಾಪಟಾ. ೦೯೬-೩೨). [ಸಂ.]

**ರಾಮಣೀಯತೆ** (ನಾ). = ರಾಮಣೀಯಕ ೨ : 'ರಾಮಣೀಯತೆವೆಱು' ಪರಾ. [ಸಂ. ರಾಮಣೀಯತಾ]

**ರಾಮಣೀಯತೆವೆಱು** (ಕ್ರಿ). ಸುಂದರವಾಗು ; ಚೆಲುವಾಗು : ರಾಮಣೀಯತೆವೆತ್ತ ಚೆಂದಳಿರ್ ಮಿಡಿಯಿಂದೆ ಮಾಮರ ಮನಗೊಳಿಸಿದುವು (ಪೊಪಶ. ೨೪-೪೯). [ರಾಮಣೀಯತೆ + ಪೆಱು$_1$]

**ರಾಮತುಳಸಿ** (ನಾ). ತುಳಸಿಯಲ್ಲಿ ಒಂದು ಬಗೆ; ಬಿಳಿತುಳಸಿ : (ವೃಕ್ಷಶಿ. ೩೭-೦೦೯೬). 'ಕರಿತುಳಸಿ' ಪರಾ. [ಸಳ. ರಾಮತುಲಸೀ]

**ರಾಮದೂತ** (ನಾ). ೧. ರಾಮನ ಸೇವಕ : ರಾಮದೂತನೆ ? ಎಲ್ಲಿ ? ಎಲ್ಲಿ ತೋರ್ ! (ಶ್ರೀರಾಪಟಾ. ೬೩೩-೦೬೭). ೨. ಹನುಮಂತ. ೩. ಕಪಿ ; ಕೋತಿ : ಈತನಂ ರಾಮದೂತನೆಂದು ಗೋಸಣೆಗಳೆದು ಪರಿಭವಿಸಿ ಪೊಱಮಡಿಸಿ ಕಳೆಯಿಂ (ಕಂರಾಪಟಾ. ೦೦-೦೯೦ ಪ). [ಸಂ.]

**ರಾಮಧಾನ್ಯ** (ನಾ). ಒಂದು ಬಗೆಯ ಕಪ್ಪನೆಯ ಧಾನ್ಯ ; ರಾಗಿ : ರಾಮಧಾನ್ಯದ ಕೃತಿಯನು . . . ಪೇಳುವೆನು (ರಾಮಕ. ೩-೩). [ಸಂ.]

**ರಾಮನಡಿಕೆ** (ನಾ). ಒಂದು ಬಗೆಯ ಔಷಧೀಸಸ್ಯ : ರಾಮನಡಿಕೆ, ರಾಮಪತ್ರೆ (ವೃಕ್ಷಶಿ. ೩೩-೦೦೦೭). [ ? ]

**ರಾಮನವಮಿ** (ನಾ). ಶ್ರೀರಾಮನು ಹುಟ್ಟಿದ ಚೈತ್ರಶುದ್ಧನವಮಿಯ ದಿನ ಮತ್ತು ಅಂದು ಆಚರಿಸುವ ಹಬ್ಬ : ರಾಮನವಮಿಯಲ್ಲಿ ರಾಮಭಕ್ತರು ಉಪವಾಸ ಮಾಡುವರು (ಪಾಪಕ್ಕ. ೬೨). [ಸಂ. ರಾಮನವಮೀ]

**ರಾಮನಾಥ** (ನಾ). ಶಿವ ; ಈಶ್ವರ : ರಾಮನಾಥನು ಸರ್ವಗತನೀ ರಾಮನಾಥನ ಭಕ್ತರನಘರು ರಾಮನಾಥನನರ್ಚಿಸಿದವರು ಪರಮಪಾವನರು (ಬಸವ. ೩೦-೬೦). [ಸಂ.]

**ರಾಮಪಟ್ಟಿ** (ನಾ). ಒಂದು ಬಗೆಯ ಆಟ ; ತಿಳ್ಳಿಯಾಟ : ಸ್ಕೂಲಿನ ಸುತ್ತ ಓಡುವುದೋ, ಅಲ್ಲಿನ ಹುಣಸೇಮರದ ಕೆಳಗೆ ರಾಮಪಟ್ಟಿ ಆಡುವುದೋ ಅವನ ವಾಡಿಕೆ (ಸ್ವಾಬಸ್ಕೇ. ೩). [ ? ]

**ರಾಮಪ್ರಿಯ** (ನಾ). ೧. ರಾಮನಿಗೆ ಪ್ರಿಯನಾದವನು : ಯದುಗಿರಿಯೊಳ್ ನೆಲಸಿದ ರಾಮಪ್ರಿಯಂಗೆ ಪ್ರಿಯತಮರೆನಿಸಿದ ರಾಮಾನುಜರಂ ಸನ್ನುತಿಸುವರ್ (ಗೀತಗೋ. ೪೬-೩ ಪ). ೨. [ಸಂಗೀತ] ಒಂದು ರಾಗದ ಹೆಸರು : ರಾಮಪ್ರಿಯ . . . ಕರುಣಾರಸಪ್ರಧಾನರಾಗ, ರಕ್ತಿರಾಗ (ಸಂಗೀತಮು. ೦೬೩). [ಸಂ.]

**ರಾಮಫಲ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು : (ವೃಕ್ಷಶಿ. ೬-೨೨). 'ಸೀತಾಫಲ' ಪರಾ. [ಸಂ./ತೆಲು. ರಾಮಫಲ, ರಾಮಾಫಲ]

**ರಾಮಬಾಣ** (ನಾ). ೧. ಶ್ರೀರಾಮಚಂದ್ರನು ಬಿಡುವ ಬಾಣ ; ರಾಮನು ಬಾಣವನ್ನು ಒಮ್ಮೆ ಪ್ರಯೋಗಿಸಿದರೆ ಅದು ತನ್ನ ಗುರಿಯನ್ನು ತಪ್ಪದೆ ಭೇದಿಸಿ ಮತ್ತೆ ಬತ್ತಳಿಕೆಗೆ ಹಿಂದಿರುಗಿ ಬರುವ ವಿಶಿಷ್ಟಶಕ್ತಿಯುಳ್ಳುದೆಂದು ಭಾವಿಸಲಾದ ಬಾಣ : ದಿವ್ಯಾಸ್ತ್ರದಿಂ ವಿರಥಮಾಡಿದನೇಱಸೂಟ್ಟರೆಗಮಾವಂ ರಾಮಬಾಣಕ್ಕೆ ನಿತ್ತರಿಪಂ (ಕಂರಾಪಟಾ. ೦೯-೬೦); ತರಿಹರಿಸಬಾರದಿಹ ರಾಮಬಾಣಂಗಳ್ಪೆದಿದುವು ಕಾಲಾಗ್ನಿಯಂತೆ (ಕೃಪಿಂಪಾ. ೨೦-೩೩); ರಾಮಬಾಣಕ್ಕೆ ಹುಸಿಯಿಲ್ಲ, ವಾಲಿಯ ಮೈಗೆ ಕಲೆಯಿಲ್ಲ (ಗಾದೆ). ೨. ಒಂದು ಬಗೆಯ ಯುದ್ಧೋಪಕರಣ ;

ರಾಮಚಂಗಿಗಳು, ರಾಮಬಾಣಗಳು, ಮತಾಪುಗಳು . . . ರಣಗಾಡಿಗಳು ಮೊದಲಾದ ಯುದ್ಧೋಪಕರಣಗಳನ್ನೆಲ್ಲ ಎಣಿಸಿಮುದಾಯಿತು (ಐತ್ಕರು. ೦೩). ೩. (ಆಲಂ) ನಿಶ್ಚಿತಫಲವನ್ನು ಕೊಡುವಂತಹುದು ; ವ್ಯರ್ಥವಲ್ಲದುದು : ಶ್ರೀ ಶಂಕರರ ಕಪಾಟದಲ್ಲಿನ ಔಷಧಗಳಲ್ಲಿ ಇದು ರಾಮಬಾಣದಂತಹುದು (ಕೀವಾಕ್ಯ. ೩೦೦); ನಗಡಿಗೆ ರಾಮಬಾಣ ಯಾವುದೂ ಇಲ್ಲ (ಪಂಚರು. ೩೭). [ಸಂ.]

**ರಾಮರಕ್ಷೆ** (ನಾ). ೧. ಶ್ರೀರಾಮನನ್ನು ಕುರಿತ ಪ್ರಸಿದ್ಧವಾದ ಒಂದು ಸ್ತೋತ್ರ. ೨. (ಆಲಂ) ಏನೂ ಇಲ್ಲದಿರುವ ಸ್ಥಿತಿ : ಯಾರ ಮನೆಯಲ್ಲಿ ಹೊಕ್ಕು ನೋಡಿದರೂ 'ರಾಮರಕ್ಷೆ' (ಯಾದುರಾ. ೦೦೩); ಈಗೆಲ್ಲಾ ರಾಮರಕ್ಷೆಯಾಗಿ ಕೂತದ ಮನ್ನಾಗ (ತಿರುಗು. ೪೦). [ಸಂ. ರಾಮರಕ್ಷಾ]

**ರಾಮರಗಡು** (ನಾ). ಹೆಚ್ಚಾದುದು ; ಪುಷ್ಕಳವಾದುದು : ಈ ಪಶುಪತಿ ಸಾಂಬಶಾಸ್ತ್ರಿಗಳ ಮನೇ ಊಟದ ಹಾಗೆ ರಾಮರಗಡಾದ ಊಟ . . . ಸಿಕ್ಕಿದರೆ (ವಚಮರಾ. ೬೯) [←ಮರಾ ರಾಮರಗಡಾ, ರಾಮರಗಾಡಾ]

**ರಾಮರಸ** (ನಾ). ಭಂಗಿಸೊಪ್ಪಿನಿಂದ ತಯಾರಿಸುವ ಒಂದು ಬಗೆಯ ಮಾದಕಪಾನೀಯ : ಬಣ್ಣ ಒಳಿದುಕೊಳ್ಳುವುದಕ್ಕೆ ಮುಂಚೆ ನನ್ನ ಕೈಯಿಂದಲೇ ಅರ್ಧಸೇರು ರಾಮರಸ ಅರೆಸಿಕೊಂಡು ಕುಡಿದರು (ಗರುಡಾ. ೪೦); ಮಿರ್ಜಾಫರನು ಭಂಗಿ, ರಾಮರಸಗಳನ್ನು ಕುಡಿದು ನಿದ್ರೆ ಹೋಗುತ್ತಿದ್ದನು (ಐಂಕಪು. ೨೭೩). [ಸಂ.]

**ರಾಮರಸದಾಳಿ** (ನಾ). ಒಂದು ಬಗೆಯ ಬಿಳಿಯ ಕಬ್ಬು : ರಾಮರಸದಾಳಿಯನ್ನು ತೋಟಗಳಲ್ಲಿಯೂ ಬತ್ತದ ಭೂಮಿಯಲ್ಲಿಯೂ ಹಚ್ಚುವರು (ಕಶಾಗ. ೨೭೩). [ರಾಮ + ರಸದಾಳಿ]

**ರಾಮರಾಜ್ಯ** (ನಾ). ೧. ರಾಮನ ಆಳ್ವಿಕೆಯಲ್ಲಿದ್ದ ಸಾಮ್ರಾಜ್ಯ : ಸಿರಿಯ ವಲ್ಲಭನೊಲಿದು ರಾಜ್ಯಾಧ್ವರವನಾವಲು . . ಹರಸುತಿರ್ದುದು ರಾಮರಾಜ್ಯದೊಳಖಿಳಜನನಿವಹ (ಕೌಶರಾ. ೪೪-೫೭) ; ರಾಮರಾಜ್ಯದೊಳ ಕಾಲದ ಮರಣಮಿಲ್ಲಖಿಳಜೀವಿಗಳ್ಗೆ (ಕೈಮಿಣಾ. ೦೮-೦೩). ೨. (ಆಲಂ) ಯಾರಿಗೂ ಯಾವ ತೊಂದರೆಯೂ ಇಲ್ಲದೆ ಬಾಳುವ ರಾಜ್ಯ ; ಸುಖೀರಾಜ್ಯ : ಗಾಂಧೀಯುಗದಲ್ಲಿ 'ರಾಮರಾಜ್ಯ'ವೆಂಬುದಕ್ಕೆ 'ಸ್ವರಾಜ್ಯ' ಎಂಬ ಅರ್ಥವನ್ನು ದೇಶದ ದೊಡ್ಡವರು ಸಂಪಾದಿಸಿ ಕೊಟ್ಟಿದ್ದಾರೆ (ರಾಮರಾ. ೪ ಮುನ್ನುಡಿ). [ಸಂ.]

**ರಾಮರಾಯಿ** (ನಾ). (ಚಿತ್ರದುರ್ಗದ ಪಾಳೆಯಗಾರರಲ್ಲೊಬ್ಬನಾದ ರಾಮರಾಯನು ಚಲಾವಣೆಗೆ ತಂದ) ಒಂದು ಬಗೆಯ ಚಿನ್ನದ ನಾಣ್ಯ : ದುರ್ಗವು ಕೈವಶವಾದ ಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದು ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ೧ ದೇವರಾಯಿ ೧ ಕಲ್ಲುಕುಂಟಿ ೧ ರಾಮರಾಯಿ (ಚಿತ್ರಶಾ. ೦೦೪). 'ಕಂಠೀರಾಯಿ', 'ದೇವರಾಯಿ' ಫರಾ. [ರಾಮರಾಯ$_{0}$ + — ಇ$_{3}$]

**ರಾಮವಚನ** (ನಾ). ೧. ರಾಮನ ಮಾತು,–ನುಡಿ : ಹನುಮನು. . . ರಾಮವಚನಾನುಗ್ರಹವು ವಿಶ್ರಾಮಿಸಲು ಕರ್ಣದಲಿ ನೃಪಪದತಾಮರಸಕಭಿನಮಿಸಿ ಬೀಳ್ಕೊಂಡನು ಸರಾಗದಲಿ (ತೊರರಾ. ೬-೪೭-೪೭). ೨. (ಆಲಂ) ತಪ್ಪದೆ ಪಾಲಿಸುವ ಮಾತು,–ಭಾಷೆ : ಇವತ್ತು ಏನು ಮಾಡಿದರೂ ಸಾವಿರಾರು ಹೊನ್ನು ಕೊಟ್ಟರೂ ಬರಲಾರೆ, ನಾಳೆ ಅವಶ್ಯವಾಗಿ ಬರುವೆನೆಂದು ರಾಮವಚನವನಿತ್ತಳು (ಕಂಠೀ. ೦೯). [ಸಂ.]

**ರಾಮಸೇವಕ** (ನಾ). = ರಾಮದೂತ ೧ : ರಾಮಸೇವಕನಾಗಿ ರಾವಣನ ಪುರವ ನಿರ್ಧೂಮವ ಮಾಡಿದೆ (ಪುರಂದ. ರಾ. ೦-೪೦-೦). [ಸಂ.]

**ರಾಮಾಂಗಿ** (ನಾ). ಸುಂದರವಾದ ದೇಹವನ್ನುಳ್ಳವಳು ; ಚೆಲುವೆ ; ಸುಂದರಿ : ವಿಕಚೇಂದೀವರವಕ್ತ್ರೆ ಸಸ್ಮರಕತಚ್ಛಾಯಾಂಗಿ ರಾಮಾಂಗಿ (ಸುಳುಮಾ. ೦-೮). [ಸಂ. ರಾಮಾಂಗಾ]

**ರಾಮಾನುಜ** (ನಾ). ೧. ಶ್ರೀರಾಮನ ತಮ್ಮ : ಅಜನು ಬಳಿಕ . . . ಆತ್ಮಜನು ಜನಿಸಿದನೀ ದಶಸ್ಯಂದನಮಹೀಪಾಲ . . . ಬಳಿಕೀ ರಾಮರಾಮಾನುಜರು ಮಕ್ಕಳು ನಾಲ್ವರೀತಂಗೆ (ತೊರರಾ. ೦-೦೩-೨೪). ೨. ಲಕ್ಷ್ಮಣ : ಬಳವದ್ವಿಕ್ರಾಂತದೊಳ್ . . . ಭೀಮಸೇನಂ . . . ಬಳವದ್ರಾಮಾನುಜಂ ಬಾಡವಶಿಖಿಹನುಮಂ ವೈನತೇಯಂ ಸಮಂತನ್ನೊಳೆನಿಪ್ಪಂ (ಎಕ. VIII, ಸೊರಬ. ೦೩೮-೨೯; 1145); ಬೆರಗಾಗಿ ನೋಡುತಿರೆ ರಾಮಾನುಜಂ ಶಾಸ್ತ್ರವೇತ್ತನಾ ಯೋಗಸಿದ್ಧಂ ಪೇಳ್ದನಾತಂ ಗಾಂಜನೇಯಂ ಬ್ರಹ್ಮವಿಜ್ಞಾನಿ (ಶ್ರೀರಾಪಾ. ೭೨೯-೩೩೮). ೩. ಭರತ : ಪವಮಾನಜಂ . . . ಭರತಂಗೆ ತೋರಿಸಲ್ಕೆ . . . ರಾಮಾನುಜಂ ಕುಶಲಮಂ ಬಿಕ್ಕೆದಿ ನುಡಿಸಿದಂ (ಕೈಮಿಣಾ. ೨೦-೦೩). ೪. ಶತ್ರುಘ್ನ. ೫. ತ್ರಿಮತಗಳಲ್ಲಿ ಒಂದಾದ ವಿಶಿಷ್ಟಾದ್ವೈತಧರ್ಮವನ್ನು ಪ್ರತಿಪಾದಿಸಿದ ಹನ್ನೆರಡನೆಯ ಶತಮಾನದ ಯತಿ : ಶ್ರೀಮತೇ ರಾಮಾನುಜಾಯ ನಮಃ (ಎಕ. VIII (R), ಹೊಳೆ. ೩೪-೦; ಸು. 16ನೆಯ ಶತ) ; ವಿಶಿಷ್ಟಾದ್ವೈತಸಿದ್ಧಾಂತವೆಂಬುದು ಶ್ರೀಮದ್ರಾಮಾನುಜಾಚಾರ್ಯರಿಂದ ಪ್ರಚಾರಕ್ಕೆ ಬಂದಿರುವುದು (ಹಿಂದಣಾ. ೨೩೦). ೬. ರಾಮಾನುಜಾಚಾರ್ಯರ ಅನುಯಾಯಿ.

ರಾಮಾನುಜಕೂಟ = ರಾಮಾನುಜರ ಅನುಯಾಯಿಗಳು ಸಾಮೂಹಿಕವಾಗಿ ಭೋಜನಮಾಡುವ ಛತ್ರ : ನಾಲು ಕಟ್ಟಿಸ್ತ ಶ್ರೀರಾಮಾನುಜಕೂಟದಲೂ . . . ಶ್ರೀವಯಿಷ್ಣವರಗಳಿಗೆ ಯಿಕ್ಕುವ ಹಾಗೆ ಕಟ್ಟಳೆಯ ಮಾಡಿದೆವಾಗಿ . . . ರಾಮಾನುಜಕೂಟಕೆ ನಡಸಿಬಹುದು (ಸೌಇಇ. IX-ii, ೪೭೨-೪; 1467). [ಸಂ.]

**ರಾಮಾಭಿರಾಮೆ** (ನಾ). ಅತಿಚೆಲುವೆಯಾದವಳು ; ಅತ್ಯಂತ ಸುಂದರಿ : ಎಲೆಗೆ ರಾಮಾಭಿರಾಮೆ ! ಸುಗ್ರೀವೆ ! ನೀಲಕುಂತಳೆ ! ಕುಮುದನಯನೆ ! (ರಾಮಾಶ್ವ. ೦೪೮-೩). [ಸಂ. ರಾಮಾಭಿರಾಮಾ]

**ರಾಮಾಯಣ** (ನಾ). ೧. (ಶ್ರೀರಾಮ ಮತ್ತು ಸೀತೆಯರ ಚರಿತ್ರೆ ರಾಮ-ರಾವಣರ ಯುದ್ಧ ಮುಂತಾದ ವರ್ಣನೆಗಳನ್ನೊಳಗೊಂಡ) ಆದಿಕವಿ ವಾಲ್ಮೀಕಿಮಹರ್ಷಿಯಿಂದ ಸಂಸ್ಕೃತದಲ್ಲಿ ರಚಿತವಾದ ಮಹಾಕಾವ್ಯ: ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ (ಕುವ್ಯಾಆ. ೦-೦೭); ವಾಲ್ಮೀಕಿ . . . ರಾಮಾಯಣವನೆಲ್ಲಮಂ ಕಂಡಂತೆ ಹಾಡಿದನೊ (ಶ್ರೀರಾಪಾ. ೩-೩೪); ರಾಮಾಯಣ ಶಬ್ದವು ರಾಮ ಮತ್ತು ಅಯನ ಎಂಬ ಎರಡು ಶಬ್ದಗಳ ಸಮಾಸವಾಗಿದೆ (ಭಾರದ. ೬೯) ; ಬೆಳತನಕ ರಾಮಾಯಣ ಕೇಳಿ ರಾಮನಿಗೆ ಸೀತೆಯೇನಾಗಬೇಕೆಂದ (ಗಾದೆ). ೨. (ಆಲಂ) ದೀರ್ಘವಾದ, ಬೇಸರ ತರುವ ಮಾತು; ಕಗ್ಗ : ನಿನ್ನ ರಾಮಾಯಣ ತೆಗೆಯಬೇಡ (ರೂಢಿ). ೩. ಜಗಳ : ಅವರ ಮನೆಯಲ್ಲಿ ಪ್ರತಿನಿತ್ಯವೂ ರಾಮಾಯಣ ತಪ್ಪಿದ್ದಿಲ್ಲ (ರೂಢಿ). [ಸಂ.]

**ರಾಮಾರಕ್ತ** (ನಾ). ತುಂಬ ರಕ್ತದಿಂದ ಕೂಡಿದುದು : ಬನುವ ಅಣ್ಣನ ರಾಮಾರಕ್ತವಾದ ಕಳೇಬರವನ್ನು ಅವರಿಗೆ ತೋರಿಸಿದ (ಐಪಸಿ. ೪೦). [←ತುಳು. ರಾಮಾರಕ್ತ = ಅತಿಯಾದ ರಕ್ತಸ್ರಾವದಿಂದ ಕೂಡಿದ]

**ರಾಮಾವತಾರ** (ನಾ). ೧. ವಿಷ್ಣುವಿನ ಏಳನೆಯ ಅವತಾರ; ಶ್ರೀರಾಮಚಂದ್ರನ ಅವತಾರ : ವಿನುತ ರಾಮಾವತಾರದ ಪುಣ್ಯಶಕ್ತಿಯಿಂದೆ . . . ಶೀವಿದ ಮಹಾಶರವನು . . . ಫಲುಗುಣನೆಚ್ಚನು (ಕೈಮಿಣಾ. ೦೩-೪೭). ೨. ರಾಮನ ಅವತಾರವನ್ನು ಎತ್ತಿದವನು,—ಅವತಾರಪುರುಷ : ಪೂಜಿಸನೆ ರಾಮಾವತಾರನು ಸೇತುವಿನೊಳಾ ರಾಮನಾಥನನು (ಐಸತ್ತು. ೩೪-೭೨). [ಸಂ.]

**ರಾಮಾಸ್ತ್ರ** (ನಾ). = ರಾಮಬಾಣ ೧ : ಔಕುವುದು ಬಲವೈದುವುದು ಸುರಲೋಕವನು ರಾಮಾಸ್ತ್ರದಲಿ (ತೊರರಾ. ೬-೩೫-೩೭). [ಸಂ.]

**ರಾಮಿ** (ನಾ). ಒಂದು ಬಗೆಯ ಸಸ್ಯ : ರಾಮಿ (ರಾಮಿಟ). – ಸಣ್ಣಗಿಡ. ತೊಪ್ಪಲವನ್ನು ನೀರೊಳಗೆ ಚಲ್ಲಿದರೆ ಮೀನುಗಳು ನಿಶ್ಚೇತನವಾಗುತ್ತವೆ (ಕಣಗಿ. ೪೭). [ಸಂ. ರಾಮಿ]

**ರಾಮೆ** (ನಾ). ೧. ಹೆಂಗಸು; ಸ್ತ್ರೀ : "ರಾಮಾ, ವಾಮಾ . . . ವಶಾ, ಯುವತಿಃ – ಈ ೨೮ ಸ್ತ್ರೀಯರ್" (ಹಲಾಯು. ೬೯-೩೨). ೨. ಹೆಂಡತಿ : ರಾಮಂ ಕಲಿಸಿದ ತೆಱದಿಂ ರಾಮೆಗೆ ಪುಸಿ ನುಡಿದು ರಥಮನೇಱಸಿಕೊಂಡಾ ಭೀಮಾಟವಿಯಂ . . . ಎಯ್ತಂದಂ (ಶಂರಾಶತ. ೦೫-೬೩). ೩. ನಲ್ಲೆ; ಪ್ರಿಯೆ ; ಕಾದಲೆ : ಅರಸ ಸತಿಯೆಡೆಗೆಯ್ದಿ ರಾಮೆ ಹೇರಡವಿಯೊಳು ಶಿವನ ಭವನಕೆ ಹೋಗಿ ನೀ ಮಾಡಿದಾಚರಣೆಯೇನು . . . ಎನೆ (ಗುರುಚಾ. ೩-೦೯). ೪. ಲಕ್ಷ್ಮಿ : "ಶರಧಿಸುತೆ ರಾಮೆ ಗೋಮಿನಿ ಲಕ್ಷ್ಮಿ . . . ಮನ್ಮಥಮಾತೆಯೆನಲು ಸಿರಿಗಕ್ಕು ನಾಮಂ" (ಶಬ್ದಮಣಿ. ೬-೦೫). ೫. ಶಾಕಿನಿ, ಡಾಕಿನಿ ಮುಂತಾದ ಪಿಶಾಚಸ್ತ್ರೀ : ಪಱೆದ ಶಿರಂಗಳಿಂ ಕೆದಱಿ ಬಿರ್ದ್ದ ಗಜಂಗಳಿನಾಡುವಟ್ಟೆಯಿಂ ಸುಱಿದರುಣಾಂಬುವಂ ನಲಿವ ರಾಮೆಯರಿಂ ಪೆಣವತ್ತ ಸಾರ್ವ್ವ ಪೆಂಪೆಱೆಯರಿಂ . . . ಸಮರವಮಾಸುರ ಮಾದುದು (ಎಕ. VII, ಶಾಗರ. ೦೦೯-೩೯; 1042). [ಸಂ. ರಾಮಾ]

**ರಾಮೇಶ್ವರ** (ನಾ). ೧. ದಕ್ಷಿಣಭಾರತದ ದಕ್ಷಿಣತುದಿಯಲ್ಲಿರುವ ಒಂದು ತೀರ್ಥಕ್ಷೇತ್ರ : ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡದು (ಗಾದೆ). ೨. ಈ ಕ್ಷೇತ್ರದಲ್ಲಿರುವ ಶಿವಲಿಂಗದ ಹೆಸರು: ದಾಸಿಮಯ್ಯಂ ಗಂಡು ರಾಮೇಶ್ವರನು ಕದವಂ ತೆಱೆದನತಿಶಯವು (ಬಸವು. ೯೩-೯೬). [ಸಂ.]

**ರಾಮೋಜ** (ನಾ). ಒಬ್ಬಾತನ ಹೆಸರು : × × × ರಾಮೋಜನ ಮಣ್ಣು ಕದಂಬರಸಾ ಮಾಡಿಕೊಟ್ಟ (ಎಕ. V, ಶುಂಶಾ. ೨೮-೦೩; ಸು. 1000 ?).
[ರಾಮ + ಓಜ₁ (<ಒವಜ್ಝ)]

**ರಾಮೋತ್ಕಂಠೆ** (ನಾ). ೧. ರಾಮನಲ್ಲಿ ಉತ್ಸುಕತೆಯುಳ್ಳವಳು. ೨. ಜಲಾಭಿಮಾನಿದೇವತೆಯಾದ ವರುಣನಲ್ಲಿ ಉತ್ಸುಕತೆಯುಳ್ಳವಳು. ೧, ೨ : ಕುಲಭೂಭೃದ್ವೃವೆ ಲಕ್ಷ್ಮಣಾಭಿನುತೆ ರಾಮೋತ್ಕಂಠೆ ವೈದೇಹಿ ಮಂಜುಲವೇಣೀ ರವಣೀಯೆ . . . ಕಣ್ಣೂಳಿಕುಂ ವಾಹಿನಿ ಸೀತೆ ಪೋಲ್ತು ಭುವನಪ್ರಖ್ಯಾತೆಯಂ ಸೀತೆಯಂ (ಶಕ್ತಿಶ. ೨-೬).
[ಸಂ. ರಾಮೋತ್ಕಂಠಾ]

**ರಾಯ**, **ರಾವ್** (ನಾ). ೧. ಅರಸ ; ರಾಜ ; ದೊರೆ : ರಾಯೆಂಬೀ ಪೆಸರಿಲ್ಲದೆತು . . . ಭಾರ್ಗವಂ ಕೊಂದಂ (ಶಂಶಶಾ. ೦೨-೩೬); ಉಱೆದ ರಾಯರ ಕೊಡೆಗಳ್ ಆಣಂಬೆಯ ಕೊಡೆವೋಲ್ ಬೆಳ್ಗೊಡೆಗಳಾದುವು (ಶಬ್ದಶಾ. ೩೦); ಆ ಯುಧಿಷ್ಠಿರಸಹಿತ ನೀನೇ ರಾಯನಾಗಿರು (ಕುವ್ಯಾಕ. ೧೨-೯೩). ೨. ಒಬ್ಬಾತನ ಹೆಸರು; ಚಾವುಂಡರಾಯ : ಗಂಡರ ಮುಕುತಿ ಯೆನಿಸಿದ ಮಂಡಳಿಕರ ಮಂತ್ರಿ ಸಂಧಿವಿಗ್ರಹಿ ರಾಯಂ ಕೊಂಡಾಡಿ ಪೊರೆದು (ಲಂದೋಂಬು. ೧-೨೪) ; ಗಂಗರಾಜನಾ ಮುನ್ನಿನ ಗಂಗರ ರಾಯಂಗಂ ಸೂರ್ಮ್ಮಡಿ ಧನ್ಯನಲ್ತೇ (ಎಕ. II, ೬೩-೩೩; 1118). ೩. ಗಂಡಸರ ಹೆಸರಿನ ಕೊನೆಯಲ್ಲಿ 'ರಾಜ' ಎಂಬಂತೆ ಸೇರುವ ಶಬ್ದ: ಅ. ನ. ಕೃಷ್ಣರಾಯರು ಪ್ರಸಿದ್ಧ ಕಾದಂಬರಿಕಾರರು (ರೂಢಿ). ೪. ಯಜಮಾನ; ಒಡೆಯ : ಬರಬರುತ್ತ ರಾಯರ ಕುದುರೆ ಕತ್ತೆಯಾಯಿತು (ಗಾದೆ) ; ರಾಯರು ಮನೆಯಲ್ಲಿಲ್ಲ (ರೂಢಿ). ೫. ಸಮಾಸಪದಗಳ ಆದಿಯಲ್ಲಿ 'ಮಿಗಿಲಾದ', 'ಅತಿಶಯವಾದ', 'ದೊಡ್ಡ' ಎಂಬ ಅರ್ಥಗಳಲ್ಲಿ ಬಳಕೆಯಾಗುವ ಪದ : 'ರಾಯಂಚೆ' 'ರಾಯಗಿಡಿಗ' ಪರಾ. **ರಾವ್** : ೩. ದಿವಾನ್ ಮಾಧವರಾವ್ ರಸ್ತೆಯಲ್ಲಿ ನಮ್ಮ ಮನೆಯಿದೆ (ರೂಢಿ).

**ರಾಯಕಂದರ್ಪ** = ರಾಜರಲ್ಲಿ ಮನ್ಮಥನಂತಿರುವವನು; ಒಂದು ಬಿರುದು : ರಾಯಕಂದರ್ಪ ಹೃದಯಪರಿತೋಷಕರಿಷೆ ರಾಯದಾಮೋದರಾನುರಾಗಪ್ರತ್ಯಕ್ಷ × × ಯೌವನವನವಸಂತಲಕ್ಷ್ಮಿ (ತ್ತೀಇ. XX. ೯೬-೦೨; 1072). **ರಾಯಕೋಲಾಹಲ**, **ರಾಯಕೋಳಾಹಳ** = ರಾಜರಲ್ಲಿ ಕಲಕಲವನ್ನುಂಟುಮಾಡುವವನು ; ಒಂದು ಬಿರುದು : ರಾಯಕೋಲಾಹಲಂ, ಜವಾದಿಕೋಲಾಹಲಂ (ಕಶ್ಚಿಮ. ೨೯೩ ಪ್ರಯೋ) ; ರಾಯದಲ್ಲಣ ರಾಯಕೋಳಾಹಳ . . . ಸ್ಥಿರಂಜೀವಯೆಂದು ಕೀರ್ತಿಸಿ (ಹಕಶಾ. ೬-೩); ದೞಮುಖಾದಿತ್ಯಂ ರಾಯಕೋಳಾಹಳಂ (ಕಮಂ. ೦೭೪ ಪ್ರಯೋ). **ರಾಯಗಂಡರದಾವಣಿ** = ಶೂರರಾದ ರಾಜರನ್ನು ಬಾಧಿಸುವವನು ; ಒಂದು ಬಿರುದು : ಹುಸಿವರ ಶೂಲ ನಿಗಳಂಕಮಲ್ಲ ಚಲದಂಕರಾಮ ರಾಯಗಂಡರ ದಾವಣಿ (ಎಇ. XXVII. ೦೬೦-೦೮; 1256). **ರಾಯಗಜಕೇಸರಿ** = ರಾಜರೆಂಬ ಆನೆಗಳಿಗೆ ಸಿಂಹದಂತಿರುವವನು ; ಒಂದು ಬಿರುದು : ಮೂರ್ಪ್ಪಡಿಭೀಮಂ ರಾಯಗಜಕೇಸರಿ ಗಂಡರೊಳ್ ಗಂಡ(ಡಂ) (ಇಳ. V. ೦೫-೯; 1019); ಮಱವುತೆಚ್ಚಱುತವನಿಪತಿ ಕರೆ ತರುಣ ನಾವೆಡೆ ರಾಯಗಜಕೇಸರಿಯೆಂದಾವೆತ್ತ ಕಂದ ಬಾಯೆನುತಪ್ಪಿದನು ಬಯಲ (ಕುವ್ಯಾದ್ರೋ. ೬-೯). **ರಾಯಗಜಸಿಂಹ** = ರಾಯಗಜಕೇಸರಿ : ರಾಯಮುರಾರಿ ರಾಯಗಜಸಿಂಹಂ ಸೋಮಭೂಪಾಳಕಂ (ಕೊಕ್ಕಾ. ೦೯-೦೦; 1176). **ರಾಯಘರಟ್ಟ** = (ಪರ)ರಾಜರನ್ನು ನಾಶಮಾಡುವವನು ; ಒಂದು ಬಿರುದು : ಈ ರಣಪದಾಂಧನ ತೊಟ್ಟುಳಿಕೆಯನು ಕೀಳ್ವ ರಾಯಘರಟ್ಟನಿಲ್ಲಾ ಎನುತ ತನಿ ಮಸಗಿತು ಭಟಸ್ತೋಮ (ಕುವ್ಯಾಕ. ೨೦-೨). **ರಾಯಜಗರ್ಝಂಪಿ** = (ಪರ)ರಾಜರನ್ನು ಗೆದ್ದವನು ; ಒಂದು ಬಿರುದು: ಚೌವಣ ಸಹಸ್ರಬಾಹು ರಾಯಜಗರ್ಝಂಪಿ ಕೀರ್ತಿವಿದ್ಯಾಧರಂ (ಇಳ. V. ೧೫-೬ ; 1019). **ರಾಯಜಳ್ಝಳಪ್ಪ**, **ರಾಯಜಳಪ್ಪ** = (ಉದ್ಧಟರಾದ) ರಾಜರ ಮೇಲೆರಗಿ ಸೋಲಿಸುವವನು ; ಒಂದು ಬಿರುದು : ಸಾಮಾನ್ಯಮಲ್ಲನೆಳೆಯೊಳ್ ಸೋಮೇಶ್ವರನನುಜನದಟರಾಯರ್ಝಳಪ್ಪಂ (ತ್ತೀಇ. XX. ೩೩-೬; 1082) ; ಸೌಭಾಗ್ಯಸದನೆ ರಾಯಜಳಪ್ಪ ಕಲ್ಪಾವನೀಜ ಸಮಾಲಿಂದ(ಗಿತ) ಜಂಗಮಲತೆ (ಎಇ. XXVIII. ೩೩-೩೯; ಸು. 1082). **ರಾಯದಲ್ಲಣ** = ರಾಜರನ್ನು ತಲ್ಲಣಗೊಳಿಸುವವನು ; ಒಂದು ಬಿರುದು : ರಾಯದಲ್ಲಣ ರಾಯಕೋಳಾಹಳ (ಹಕಶಾ. ೬-೩); ರಾಜಗೃಹಕೆ ವಿಡಾಯದಲಿ ಕತಿಪಯಬಲವು ಸಹ ರಾಯದಲ್ಲಣನೆಯ್ದೆ ಚಕ್ರಿಯ ಕಂಡು ವಸುದೇವ (ಸಾಳ್ವಶಾ. ೦೯-೨೨). **ರಾಯದಳದುಳಕಾಱ**, **ರಾಯದಳವುಳಕಾಱ** = (ಶತ್ರು)ರಾಜರ ಸೈನ್ಯವನ್ನು ಸೂರೆಮಾಡುವವನು ; ಒಂದು ಬಿರುದು : ರಾಯದಳದುಳಕಾಱ ಕೌರವರಾಯಸೇನಾಸೂಱೆಕಾಱನಜೇಯನೋ ಕಲಿಭೀಮ ಗೆಲಿದನು ಭಾನುನಂದನನ (ಕುವ್ಯಾಕ. ೧೨ ಸೂಚನೆ) ; ರಾಯರ್ಝಳಪ್ಪ ರಾಯದಳವುಳಕಾಱ . . . ಸ್ಥಿರಂಜೀವಯೆಂದು ಕೀರ್ತಿಸಿ (ಹಕಶಾ. ೬-೩). **ರಾಯದಾಮೋದರ** = ರಾಯಮುರಾರಿ : ರಾಯದಾಮೋದರಾನುರಾಗಪ್ರತ್ಯಕ್ಷ (ತ್ತೀಇ. XX. ೯೬-೦೨ ; 1072). **ರಾಯಮುನ್ನೀರಬಡವಾನಳ** = ರಾಜರೆಂಬ ಸಮುದ್ರಕ್ಕೆ ಬಡಬಾನಳದಂತಿರುವವನು; ಒಂದು ಬಿರುದು : ಶೌರ್ಯನಾರಾಯಣಂ ರಾಯಮುಂನೀರ ಬಡವಾನಳಂ ಚೌವಾಣ ಸಹಸ್ರಬಾಹು (ಇಳ. V. ೧೩-೬ ; 1019). **ರಾಯಮುರಾರಿ** = ರಾಜರಿಗೆ ಮುರಾರಿಯಂತಿರುವವನು; ಒಂದು ಬಿರುದು : ಪ್ರತಾಪ ಲಂಕೇಶ್ವರ ರಿಪುಮದನ ಮಹೇಶ್ವರ ರಾಯಮುರಾರಿ ಭುಜಬಳಮಲ್ಲ (ಕಇಳ. ೬೯-೦೩-೦೯; 1170). **ರಾಯಸಿರಸೆಲ್ಲ** = (ಶತ್ರು)ರಾಜರಿಗೆ ಶೂಲದಂತಿರುವವನು; ಒಂದು ಬಿರುದು : ಗಿರಿದುರ್ಗಮಲ್ಲಂ ರಾಯಸಿರಸೆಲ್ಲಂ ಚಲದಂಕರಾಮಂ (ಎಕ. VI. ಕಂಕ. ೯೩-೩೦; 1196). [☞ ಸಂಸ್ಕೃತಕೋಶಗಳಲ್ಲಿ ಇದು 'ರಾಜನ್' ಶಬ್ದದ ತಪ್ಪುರೂಪವೆಂದು ಹೇಳಿದೆ./ಪ್ರಾ. ರಾಯ]

**ರಾಯಂಚೆ** (ನಾ). ಹಂಸಗಳಲ್ಲಿ ಶ್ರೇಷ್ಠವಾದುದು ; ರಾಜಹಂಸ; ಅರಸಂಚೆ : "ರಾಯಂಚೆಯೆನಲ್ ರಾಜಹಂಸಂ" (ಶಬ್ದಂ. ೩೯); ಚಾರು ದತ್ತನು ವನಜಷಂಡದ ಬಂಡುವಿಂಡಿನ ಕೂಡೆ ರಾಯಂಚೆ ಬಿನದದಿಂದೆಡೆ ಯಾಡುತಿಹ ಚೆಲುವನು. . . ಕಂಡು ಮೆಚ್ಚಿದನು (ಶಾಸ್ತ್ರ. ೦೭-೦೨); ಪಾಂಡಿತ್ಯಮನೀಯೆ ಕಯ್ಯ ಗಿಳಿಗೊಲ್ದೈತಂದ ರಾಯಂಚೆಗೊಳ್ನಡೆಯಂ ಮೆಲ್ಲಡಿ ಬೇಟಂ ಬಂದು (ರಾಜಶೇ. ೭-೦೨). [ರಾಯ + ಅಂಚೆ]

**ರಾಯಕಟಕ** (ನಾ). ರಾಜನ ಸೈನ್ಯ; ಅರಸನ ಪಡೆ : ತಪ್ಪದೀ ಯುವ ರಾಜನಾಡಿದ ಕಪ್ಪುದೋಜದ ಮಾತು ಹನುಮಂಗುಪ್ಪರದ ಭಟರುಂಟೆ ನಮ್ಮಾ ರಾಯಕಟಕದಲಿ (ಕೊರಣ. ೯-೦೨-೦೨).

**ರಾಯಕಟಕಪಿತಾಮಹ** = ರಾಜನ ಸೈನ್ಯಕ್ಕೆ ಅಜ್ಜನಂತಿರುವ ವನು ; ಭೀಷ್ಮ : ರಾಯಕಟಕಪಿತಾಮಹನ ತಲುವಾಯಲಭಿಷೇಕವನು ಕೌರವರಾಯ ಮಾಡಿಸಿ ಪತಿಕರಿಸಿದನು ಕುಂಭಸಂಭವನ (ಕುಮಾ.ದ್ರೋ. ೧ ಸೂಚನೆ). **ರಾಯಕಟಕಾಚಾರ್ಯ** = ರಾಜಸೈನ್ಯದ ಆಚಾರ್ಯ ; ಸೇನಾಪತಿ; ದ್ರೋಣ : ರಾಯಕಟಕಾಚಾರ್ಯನಾ ಚಾಪಾಯುಧಾಗ್ರಣಿ ಮೋಹಿದನು ಪದ್ಮಾಯತವ್ಯೂಹವನು (ಕುಮಾ.ದ್ರೋ. ೯ ಸೂಚನೆ).

[ರಾಯ + ಕಟಕ₃]

**ರಾಯಕಲ್ಲು** (ನಾ). ಅರೆಯುವ ಕಲ್ಲು : ಅರೆವ ಗುಂಡ ದೇವರ ಜಗಲಿ ಯೊಳಿಟ್ಟು ಹರಿಗಳ ತಂದು ರಾಯಕಲ್ಲ ಮೇಲಿಟ್ಟು ಮಜ್ಜಿದೊಜಿಗಿದ್ದ ಮಕ್ಕಳ ಬಡಿದೆಬ್ಬಿಸಿ ಆಡೀಯದಂತೆ ಬೊಬ್ಬಿಡುವ. . . ಮಾಧವನ ಮಹಿಮೆ ಅಳವಲ್ಲವಾರಿಗೂ (ಪುರಂದ. ೩-೭೭-೩). [ರಾಯ₁ + ಕಲ್ಲು (<ಕಲ್$^{3}$)]

**ರಾಯಕುಮಾರ** (ನಾ). ರಾಜಕುಮಾರ; ಅರಸುಕುವರ.

**ರಾಯಕುಮಾರಚಮತ್ಕಾರ** = ರಾಜಕುಮಾರರಿಗೆ ತನ್ನ ಶೌರ್ಯದ ಚಮತ್ಕಾರವನ್ನು ತೋರಿಸುವವನು; ಒಂದು ಬಿರುದು: ವಿಜಯಲಕ್ಷ್ಮೀ ಮುಖದರ್ಪಣಂ ರಾಯಕುಮಾರಚಮತ್ಕಾರಂ (ಶಾಸ. XX, ೧೦-೦೨; ೧೦೦೦). [ರಾಯ + ಕುಮಾರ]

**ರಾಯಕುವರ** (ನಾ). = ರಾಯಕುಮಾರ : ಎಲೆ ರಾಯಕುವರ ನೀನಾರ ಲಸಿಕೆಯಂ ನೋಡದೆನ್ನಸುವನೊಯಿದೆ (ಉದ್ಭಟ. ೩-೩); ರಾಯಕುವರನ ಮರಣವಾರ್ತೆಯನಾ ಸುಭದ್ರಾದೇವಿ ಕೇಳಿದಳು (ಕುಮಾ.ದ್ರೋ. ೭-೧೧).

**ರಾಯಕುವರವಿಭಾಡ** = ರಾಜಕುಮಾರರನ್ನು ನಾಶಮಾಡುವವನು; ಒಂದು ಬಿರುದು : ರಾಯಕುವರವಿಭಾಡ ಬಂದನು ರಾಯಕಟಕಾಚಾರ್ಯ ಬಂದನು (ಕುಮಾ.ದ್ರೋ. ೬೦೩. ೪-೩೨ ಆವೃ). [ರಾಯ + ಕುವರ₂]

**ರಾಯಗಜ್ಜ** (ನಾ). ರಾಜಕಾರ್ಯ : ಈ ರಾಯಗಜ್ಜದೊಳಾಂ ಪಡೆವಳ ನಪ್ಪೆಂ ಎನಗಪ್ಪಣೆ ವೀಳೆಯಮಂ ದಯೆಗೆಯ್ವುದು (ಜಗವಂ. ೦೩-೩೦). [ರಾಯ + ಕಜ್ಜ₁]

**ರಾಯಗರೀಟಸೀರೆ** (ನಾ). ಒಂದು ಬಗೆಯ ಸೀರೆ : ಪಂಕಜಮುಖಿಪು ಮಿನಾಂಕ ಮರಿವ ನೋಟ ಶುಭಗೊರಳು ಗಿಳಿಮಾತು ಶಂಕಿಸಿ ರಾಯ ಗರೀಟಸೀರೆಯನುಟ್ಟು ನಿಶ್ಯಂಕನೋಲಗದಿ ನಿಂದಿಹಳು (ಸೌಂದರ್ಯ. ೩-೯೦). [ ? + ಸೀರೆ₂ ]

**ರಾಯಗಿಡಿಗ** (ನಾ). ಒಂದು ಬಗೆಯ ದೊಡ್ಡವಾದ್ಯ : ಗಜಜಿಮಗ್ಗದ ಬೊಗ್ಗುಗಳ ದಿಗ್ಗಜವ ಸುಡಿಸುವ ರಾಯಗಿಡಿಗನ ವಿಜಯಬಲ ತೊಡ ರಿಕ್ಕಿತ್ತೆ ಕಲ್ಪಾಂತಸಾಗರಕೆ (ಕುಮಾ.ಶ. ೨-೩) ; ತೂಳುವಟಿಗಳ ರಾಯ ಗಿಡಿಗನ ಘೋಳಘೋರದ ಘೋಷವಪೆಸಿಯ ಸೀಳೆ ನಡೆದುದು ಸೇನೆ (ಕುಮಾ.ಶ. ೨-೨). [ರಾಯ + ಗಿಡಿಗ₀ (ಕ← ತೆಲು. ಗಿಡಿಯ)]

**ರಾಯಗಿಡಿಬಿಡಿ** (ನಾ). = ರಾಯಗಿಡಿಗ : ಬೊಬ್ಬಿಡುವ ನಿಸ್ಸಾಳದ ಮಹಾರವ ರಾಯಗಿಡಿಬಿಡಿ [ಶಾಕಾಂ. ಗಿಡಬಿಡಿ]ಯಾ ಘುಮುಘುಮುಸ್ವರವೆಸೆಯ ಲಂಬರವೊಡೆದುದೋಯೆಂಬಂತೆ ನಗರವನೊಡನೆ ಹೊಜಮಂಟರು ನೃಪಾಲನ ಮಲ್ಲಸಂದೋಹ (ಕುಮಾ.ಶಿ. ೬೨೩. ೯-೦೬) ; ಡೌಡೆ ರಾಯಗಿಡಿಬಿಡಿ ಕಹಳೆ ಕಂಬು ಭೇರಿ ಮೃದಂಗ ಬೊಂಬುಳಿರವಂಗಳಿಂದಂಬುಜಭವಾಂಡವುದಿರೆ (ಕಂಠೀ. ೩೯-೨೮). [ರಾಯ + ಗಿಡಿಬಿಡಿ]

**ರಾಯಗಿಳಿ** (ನಾ). ಅರಗಿಳಿ ; ರಾಜಶುಕ : ಮಣಿಪಂಜರದೊಳು ರಾಯ ಗಿಳಿಯ ಹಸುಳೆ ಪಿರಿದುಂ ರಾಜಿಸುವಂದದಿಂ . . . ತೊಟ್ಟಿರೊಳರಸುಮಗಂ ಬಳೆದಂ (ಖಗೇಶಾ. ೨-೬೨). [ರಾಯ + ಗಿಳಿ]

**ರಾಯಗುರಿಪು** (ನಾ). ರಾಜಚಿಹ್ನೆ ; ಅರಸನ ಲಾಂಛನ : ಐಹಿಕವಾದ ತಂತ್ರಮ್ಮ ಎಲ್ಲಾ ವಾದ್ಯಗಳನ್ನೂ ಬಿರುದಾವಳಿಗಳನ್ನೂ ಮತ್ತಿನ ರಾಯ ಗುರಿಪುಗಳನ್ನೂ ನಿಲಿಸಿ (ಬಿರುಗಂ. ೦೨-೯). [ರಾಯ + ಕುರಿಪ್ಪು (~ ಕುಜುಪು)]

**ರಾಯಗುರು** (ನಾ). ರಾಜನ ಗುರು : ನಾಗಲಾಂಬಿಕೆ ಗಡ ವಿರಕ್ತೆ ಗಡ ರಾಯಗುರುವ ಬಲು ದಣಾಯಕ ಬಸವನಕ್ಕ ಗಡ ಗರ್ಭವುಂ ತಳೆದಳ್ಗಡೆಂ ಚಿತ್ರಂ (ಚನ್ನಬ. ೯-೦೬). [ರಾಯ + ಗುರು₂]

**ರಾಯಗೆಂಪು** (ನಾ). ಗಾಢವಾದ ಕೆಂಪು ; ಅತಿಯಾದ ರಕ್ತವರ್ಣ : (ಅಂದಳದ ರಾಯಗೆಂಪಿನ ಮುಕಮಲ್ಲಿನ ಮೇಲ್ಮುಸುಕನ್ನೆತ್ತಿ ಸರಿಯಿಸುವಳು) (ಬಿರುಗಂ. ೨೯-೦). [ರಾಯ + ಕೆಂಪು₁]

**ರಾಯಗೆಲಸ** (ನಾ). ದೊಡ್ಡ ಕೆಲಸ ; ಮಹಾಕಾರ್ಯ : ನಮ್ಮ ಹೊಚ್ಚ ಹೊಸಗನ್ನಡದ ಗುಡಿಯನ್ನೇರಿಸುವ ರಾಯಗೆಲಸಕ್ಕೆ ಕೈನೀಡುತ್ತೀರೊ ? (ಪದಾ. I. ೯೩೭). [ರಾಯ + ಕೆಲಸ]

**ರಾಯಗೋಪುರ** (ನಾ). ದೊಡ್ಡಗೋಪುರ : ರಾಯಗೋಪುರವನ್ನು ಹದ್ದು ಕೊಂಡುಹೋಯಿತೋ ? (ಗಾದೆ). [ರಾಯ + ಗೋಪುರ]

**ರಾಯಗೋಲು, ರಾಘೋಲು** (ನಾ). ಒಕ್ಕುವಾಗ ಕಣದಲ್ಲಿ ತೆನೆ, ಹುಲ್ಲು ಮೊದಲಾದುವುಗಳನ್ನು ಎಳೆಯಲು ಉಪಯೋಗಿಸುವ ಒಂದು ಸಾಧನ ; ಮೆರೆಕೋಲು : ರಾಯಗೋಲಿನಿಂದ ಕಣದಲ್ಲಿ ತೆನೆ ಎಳೆದುಕೊ (ರೂಢಿ). **ರಾಘೋಲು** : ಸೆಳ್ಳು, ಜಂತಗುಂಟೆ, ರಾಘೋಲು ಮೊದಲಾದ ಉಪಕರಣಗಳನ್ನು ಹೊತ್ತು (ಕನ್ನಡಾ. ೧೩೬). [ರಾಯ + ಕೋಲು₁ (< ಕೋಲ್$_{1}$)]

**ರಾಯಗೋವಳ** (ನಾ). ದನ ಕಾಯುವವರ ಮುಖಂಡ : ರಾಯ ಗೋವಳಂಗೆ ಬಿನ್ನವಿಸುವರ್ (ಗೀತಗೋ. ೪೬-೦ ವ). [ರಾಯ + ಗೋವಳ (< ಗೋವಾಳ)]

**ರಾಯಗೋಳಾಯ್ಲ** (ನಾ). ಶ್ರೇಷ್ಠನಾದ ಕುದುರೆಸವಾರ : ಉಮ್ಮತ್ತೂರ ಶ್ರೀವೀರ ಶ್ರೀಮಲ್ಲರಾಜಒಡೆಯ ರಾಯಗೋಳಾಯ್ಲನ ಕುದುತೆಯಲ್ಲಿ ಪ್ರವೇಶ (ಬಿರುಗಂ. ೪೯-೦೨). [ರಾಯ + ಗೋಳಾಯ್ಲ (< ಗೋಟಾಯಿಲ)]

**ರಾಯಜಗಜಟ್ಟಿ** (ನಾ). ರಾಜನ ಪ್ರಖ್ಯಾತ ಜಟ್ಟಿ ; ಅರಸನ ಪ್ರಸಿದ್ಧ ನಾದ ಮಲ್ಲ : ರಾಯಜಗಜಟ್ಟಿಗಳು ರಿಪುಕುರುರಾಯ ಘಟ್ಟನೊಳಿನಿಬರಿಗೆ ನಿನ್ನಾಯತದಿ ನಿಲುವಂಘವಣಗಾವೇನ ಹೇಳುವೆವು (ಕುಮಾ.ಕ. ೦೩-೦೦). [ರಾಯ + ಜಗಜಟ್ಟಿ]

**ರಾಯಜಗದಳ** (ನಾ). ಒಂದು ಬಗೆಯ ನಾಣ್ಯ : ಶ್ರೀಕೇಶವದೇವರಿಗಂ ಬ್ರಾಹ್ಮಣರಿಗಂ ಕ್ರಯದಾನವಾಗಿ ಕೊಟ್ಟುಕೊಂಡ ರಾಯಜಗದಳಂ ಗದ್ಯಾಣ ಅಯಿನೂಱಹತ್ತು ಮತ್ತಂ (ಕಶಾ. II, ೦೬-೨೦; 1122). [ರಾಯ + ಜಗದಳ₁]

**ರಾಯಡೆಂಕಣಿ** (ನಾ). ಒಂದು ಬಗೆಯ ಯುದ್ಧಸಾಧನ : ದೊಡ್ಡ ಡೆಂಕಣಿ : ತೋಜಿದೆಡೆಗೆ ಸಿಡಿವ ಡೆಂಕಣಿ ರಾಯಡೆಂಕಣಿಗಳ ಸಾಲು ಬಿಡ ದೊಪ್ಪಿದವು ದುರ್ಗದೊಳು (ಕುಂದಾಶಾಂ. ೪೨-೩೯) ; ಗಗನದೊಳಿಟ್ಟಣಿಸಿದುವು ರಾಯಡೆಂಕಣಿ ಕವಣೆಗಲ್ಲುಗಳು (ಪ್ರಭುಲಿಂ. ೨-೦೬). [ರಾಯ + ಡೆಂಕಣಿ]

**ರಾಯುತನ** (ನಾ). ದೊರೆತನ ; ರಾಜತ್ವ : ರಾಯುತನವೆಮಗಿಂದ್ರ ಲೋಕದ ರಾಯದಲಿ ದಿಟ (ಕುಮ್ಯಾ.ಕ. ೦೩-೯೩) ; ಶ್ರೀಮಂತರನ್ನು ಅವರ ರಾಯುತನದ ಹಾವುಗೆಯ ಮಂಗಳಕ್ಕೆ ಸೀಳಿಡುವುದಾಗಿಯೂ ಕೂಗಿ ಕಳಕಳ ಮಾಡಿದರು (ಏಗಿಹ. ೬೯-೨೦). [ ರಾಯ + — ತನ ]

**ರಾಯುತವಸಿ** ' ರಾಯದವಸಿ ' ನೋ.

**ರಾಯಘಟ್ಟು** (ನಾ). = ರಾಯಕಟಕ : ರಾಯಕಟಕಾಚಾರ್ಯನೊಡ್ಡಿದ ರಾಯಘಟ್ಟನೊಳರುಳು ಕೊಂದನು ವಾಯುತನಯನ ತನುಜನಗ್ಗದ ದೈತ್ಯಕೋಟಿಗಳ (ಕುಮ್ಯಾ.ದ್ರೋ. ೦೫ ಸೂಚನೆ). [ ರಾಯ + ಘಟ್ಟು$_2$ ]

**ರಾಯದವಸಿ, ರಾಯತವಸಿ** (ನಾ). ರಾಜಋಷಿ : ರಾಜರ್ಷಿ : ಅಗ್ರಜಂಗಾಂ ಬಟಿಯನಿರ್ಪನಂ ರಾಯದವಸಿಯ ಕುವರಿಯಂ . . . ಸೀತೆಯನಣ್ಣನಾಣತಿಯಿಂ ಕಾಡೊಳ್ ಬಿಸುಡಲ್ಕೆ ಬದ್ಧನಾದಂ (ರಾಘಾಶ್ಯ. ೨೬-೯). **ರಾಯತವಸಿ :** ಆ ರಾಯುತವಸಿ ತನ್ನೊಳಿರ್ದ ದೃಢ ಭಕ್ತಿಯಂ ಕಾಣುತೆ ಸಂತಸಂದಾಳ್ದು . . . ಜನಾರ್ದನಂ ತಾಂ ಪ್ರತ್ಯಕ್ಷನಾದಂ (ಅದ್ಭುತ. ೬-೦೩). [ ರಾಯ + ತವಸಿ ]

**ರಾಯದಳ** (ನಾ). = ರಾಯಕಟಕ : ಗಜದ ಬಳಿಯಲಿ ಸಂದಣಿಸಿದುದು ರಾಯದಳ ಮಣಿರಥಾಳಿಯಾಯದಲಿ (ಕುಮ್ಯಾ.ಕ. ೨-೧೦) ; ರಾಯ ರಘುಕುಲ ಸಾರ್ವಭೌಮಂಗೆ . . . ಅನುಪಮರಾಯದಳವನು ಕೋಟಿ ಮನ್ನಿಸಿ ಕೊಂಡನಾ ರವಿಜ (ತೊರರಾ. ೪-೬ ಸೂಚನೆ). [ ರಾಯ + ದಳ$_2$ (=ದಲ) ]

**ರಾಯನಿಂಬೆ** (ನಾ). ಒಂದು ಬಗೆಯ ದೊಡ್ಡಜಾತಿಯ ನಿಂಬೆ : ಭರಮಹೆಗ್ಗಡೆ . . . ರಾಯನಿಂಬೆಯ ಹಣ್ಣುಗಳನ್ನಿತ್ತು ತನ್ನ ಪರಿಚಯವನ್ನು ಹೇಳಿಕೊಂಡನು (ಸಕಾ. ೬೩). ' ಗಜನಿಂಬೆ ' ಪರಾ. [ ರಾಯ + ನಿಂಬೆ ]

**ರಾಯನೆಲ್ಲಿ** (ನಾ). ಒಂದು ಬಗೆಯ ದೊಡ್ಡಜಾತಿಯ ನೆಲ್ಲಿ; ಅರನೆಲ್ಲಿ : ಈಳೆ ಕಿತ್ತಳೆ ಹಲಸು ಬಕ್ಕೆವಲಸಿನ ಸಾಲುನೆಲ್ಲಿಯ ರಾಯನೆಲ್ಲಿ (ರೇವಾಂಕು. ೬-೨೬೭) ; ಆನೆಯ ಮರಿಗಳು ಮುರಿದ ರಾಯನೆಲ್ಲೀಮರದ ಕೊಗಟಿಯ ವಾಸನೆ ಬರುತ್ತದೆ (ಮುಂಐಯು. ೩-೩೦೩). [ ರಾಯ + ನೆಲ್ಲಿ ]

**ರಾಯನೇರಿಲು** (ನಾ). ಒಂದು ಬಗೆಯ ದೊಡ್ಡಜಾತಿಯ ನೇರಿಳೆ ; ಅರನೇರಿಲು : ನೇರಿಲುಂ ರಾಯನೇರಿಲು ಜಂಬುನೇರಿಲು ತೋರುತಿಹ ಹಿಪ್ಪಲಿಯ ನೇರಿಲುಂ (ಪಪುರಾ. ೨೯-೩೦). [ ರಾಯ + ನೇರಿಲು ( < ನೇರಿಲ್ ) ]

**ರಾಯಪುಡಿಶರ್ಕರೆ** (ನಾ). = ರಾಯಪುಡಿಸಕ್ಕರೆ : ಹಸುವಿನ ಹಾಲು ಚೆನ್ನಾಗಿ ಕಾಸಿ ರಾಯಪುಡಿಶರ್ಕರೆ ಜೇನುತುಪ್ಪವೆರಸಿ ಸೇವಿಸೆ ಹೆಣ್ಣಿತ್ತ್ರರು ನಿಲುವುದು (ಸಕಪ್ಪ. ೧೯೬). [ < ರಾಯಪುಡಿಸಕ್ಕರೆ ]

**ರಾಯಪುಡಿಸಕ್ಕರೆ, ರಾಯಿಪುಡಿಸಕ್ಕರೆ** (ನಾ). ಒಂದು ಬಗೆಯ ಸಕ್ಕರೆ : ಚಿತ್ರಮೂಲ, ಬೆಳ್ಳುಳ್ಳಿ . . . ಜೀರಿಗೆ ಇವುಗಳನ್ನು ಸಮಭಾಗವಾಗಿ ಕಷಾಯಮಿಕ್ಕಿ ಶೋಧಿಸಿಕೊಂಡು, ರಾಯಪುಡಿಸಕ್ಕರೆ ಮತ್ತು ಹಸುವಿನ ತುಪ್ಪದಲ್ಲಿ ಪ್ರತಿಪಾಕವನಿಕ್ಕಿ ಕೊಡಲು ವಿಷಮಜ್ವರ ಗುಣವಾಗುವುದು (ಸಕಪ್ಪ. ೦೦೩). **ರಾಯಿಪುಡಿಸಕ್ಕರೆ:** "ಶರ್ಕರಾ. ಸಿತಾ—೨ ತವರಾಜನೆಂಬ ಸಕ್ಕರೆ, ರಾಯಿಪುಡಿಸಕ್ಕರೆ" (ಸಿದ್ಧಾಂತ. ೨೯೬). [ < ರಾಯಪುರಿಸಕ್ಕರೆ ]

**ರಾಯಪುರಿಸಕ್ಕರೆ** (ನಾ). ರಾಯಪುರಿ ಎಂಬ ಊರಲ್ಲಿ ತಯಾರಾದ ಸಕ್ಕರೆ : ಇಪ್ಪು ಸೊಪ್ಪನ್ನು ಸಮಾನಂಗೊಂಡು ಅಕ್ಕಿಗಟ್ಟಿನಲ್ಲಿ ರಾಯಪುರಿಸಕ್ಕರೆ, ತುಪ್ಪದಲ್ಲಿ ಮೆಲ್ಲಲು ಗರ್ಭಕಟ್ಟುವುದು (ಕಿಪ್ಪವಿ. ೧೦೩).

**ರಾಯಪುರಿಯ ಸಕ್ಕರೆ**=ರಾಯಪುರಿಸಕ್ಕರೆ : ವಿಷ್ಣುಕ್ರಾಂತಿಪರ್ಣವು . . . ಒಂದು ಪಾವು ರಾಯಪುರಿಯ ಸಕ್ಕರೆಯಿಂದ ಕಲ್ಕಮಾಡಿ ಕೂಡಿ ಮೂರುದಿನ ಕೊಳ್ಳಲು ದ್ವಂದ್ವಮೇಹ ನಾಶ (ಅಪ್ಪ.ಪ. ೦೨೨). ' ರಾಯಪುಡಿಸಕ್ಕರೆ ' ಪರಾ. [ ← ಮರಾ. ರಾಯಪುರೀಸಾಖರ್ ]

**ರಾಯಫೌಜು** (ನಾ). = ರಾಯಕಟಕ : ವಿಜಯವಾದ್ಯಗಳಬ್ಬರ ರಾಯಫೌಜಲಿ ತ್ರಿಜಗಕ್ಕೆ ಭಯವ ಬೀಜಿದುವು (ಕಂಪ. ೦೩-೨೦). [ ರಾಯ + ಫೌಜು ( < ಫೌಜು ) ]

**ರಾಯಬಿತ್ತರಿಗೆ** (ನಾ). ರಾಜಪೀಠ ; ಸಿಂಹಾಸನ : ಅವಳು ಮುಂದೆ ರಾಯಬಿತ್ತರಿಗೆಯನ್ನೇರಿದ ವಿಜಯನಾರಸಿಂಹನನ್ನು ಪಡೆದದ್ದರಿಂದ ವಂಶವೃಕ್ಷವನ್ನಡರಿದ ಅವನ ಜತೆಯಲ್ಲಿ ಇವಳೂ ಪ್ರಧಾನಳಾಗಿ ಕಂಡಳು (ಸಪ. V. ಕೃಷ್ಣಾಪಪ). [ ರಾಯ + ಬಿತ್ತರಿಗೆ$_1$ ]

**ರಾಯಬೀದಿ** (ನಾ). ಮುಖ್ಯವಾದ ದಾರಿ ; ರಾಜಮಾರ್ಗ : "ರಾಯಬೀದಿಯೆಂದುಂ ರಾಜಬೀದಿ" (ಶಸಾ. ೩೯-೩೦೩) ; ಕಣ್ಗೆಂಬಾದುದು ರಾಯ[ಪಾಠಾಂ.ಜ]ಬೀದಿ (ಕಬ್ಬಿಗ. ೩೩) ; ರಾಯಂಚೆ ಪೊಣರ್ವಕ್ಕಿಗಳೆಡೆಯಾಟದ ರಾಯಬೀದಿಯೊ ತುಂಬಿಗಳ ಲ್ಯಾಯವೊ ಪೇಳು (ಕುಂಠಸಾಂ. ೨-೬೨). [ ರಾಯ + ಬೀದಿ ]

**ರಾಯಬೊಗರಿ**(ನಾ). ಜೂಜಿನಂತೆ ಆಡುವ ಒಂದುಬಗೆಯ ಬುಗುರಿಯ ಆಟ : ಲೆತ್ತ, ಪಗಡೆ, ರಾಯಬೊಗರಿ . . . ಮೊದಲಾದ ಜೂಜಿನಾಟಗಳನ್ನಾಡಿ (ಕಪಾಗ. ೧೦೯). [ ರಾಯ + ಬೊಗರಿ ( < ಬವರಿ ) ]

**ರಾಯಬೋರೆ** (ನಾ). ಒಂದು ಬಗೆಯ ದೊಡ್ಡ ಜಾತಿಯ ಬೋರೆ.— ಎಲಚಿ : " ರಾಜಕೋಲಃ— ರಾಯಬೋರೆ, ಹೇರೀಚಲು" (೬ಕಧಿ. ೦೩೪); ಬೋರೆಯುರಬೋರೆ ಪುಳಿಬೋರೆ ಸೀಬೋರೆಯಿಂ ರಾಯಬೋರೆಯು (ಪಪುರಾ. ೨೯-೩೦). [ ರಾಯ + ಬೋರೆ$_2$ ]

**ರಾಯಭಾರ** (ನಾ). ೧. ರಾಜ್ಯಾಡಳಿತವನ್ನು ನಡೆಸುವುದು ; ರಾಜ್ಯಭಾರ : ರಾಜೇಂದ್ರನು ಸುಪ್ರಸಿದ್ಧರಾಯಭಾರಕಾರ್ಯಧುರಂಧರತ್ವದೊಳ್ ದೀಕ್ಷಾಬದ್ಧನಾಗಿ (ಶಾಗಂಧಿ. ೬-೦೦). ೨. ದೂತಕಾರ್ಯ; ದೌತ್ಯ : ಶರಣದೇಹಿಕದೇವನೆಂಬೀ ಬಿರುದ ಮೆಚಿಯಲು ರಾಯಭಾರವ ಧರಿಸಿ ಕೌರವನರಮನೆಗೆ ನಡೆತಂದನಸುರಾರಿ (ಕುಮ್ಯಾ.ಉ. ೬ ಸೂಚನೆ) ; ಈತನ ರಾಯಭಾರವು ಸಫಲವಾಯಿತು (ಕಂಠಾಪ್ಯ. ೨೬). [ < ಸಂ. ರಾಜ್ಯಭಾರ./ತೆಲು. ರಾಯಬಾರ, ರಾಯಭಾರ ]

**ರಾಯಭಾರಿ** (ನಾ). ೧. ಪ್ರತಿನಿಧಿ ; ನಿಯೋಗಿ : ಜಯವರ್ಮಂ ಆದರದಿಂದಟ್ಟಿದ ರಾಯಭಾರಿ ದಮನಂ ಬಂದಿರ್ದಪಂ (ಕೃಕೃಕು. ೬-೩೬); ತ್ವರಿತದಿಂ ಬುದ್ಧಿವಂತರ ರಾಯಭಾರಿಮುಖ್ಯರನು ಕಳುಪೆ (ಕೃರಹ. I. ೦೩೬). ೨. ಒಂದು ರಾಷ್ಟ್ರದಿಂದ ಇನ್ನೊಂದು ರಾಷ್ಟ್ರಕ್ಕೆ ಕಳುಹಿಸಲ್ಪಟ್ಟ ನಿಯೋಗಿ,— ರಾಜದೂತ : ನೀವು ನಿಮ್ಮ ಮಂತ್ರಿಪದವಿಗೆ ರಾಜೀನಾಮೆಯನ್ನು. . . ಪರದೇಶದ ರಾಯಭಾರಿಯಾಗಿ ನಿರ್ದೇಶಿಸಲ್ಪಡಬೇಕೆ ಕೊಡಬೇಡಿರಿ (ರೂಹಸಂ. ೨೩) ; ಐರೋಪ್ಯನಾಡುಗಳ ಗಿಡಮರಗಳೂ ಇಲ್ಲಿಗೆ ರಾಯಭಾರಿಗಳಂತೆ ಬಂದು ನೆಲಸಿದವು (ಶಾಸಗ. ೩. ಮುಖ್ಯ). [ರಾಯಭಾರ + — ಇ$_1$. / ತುಳು. ರಾಯಭಾರಿ; ತೆಲು. ರಾಯಬಾರಿ, ರಾಯಭಾರಿ]

**ರಾಯಭಾರಿತನ** (ನಾ). = ರಾಯಭಾರ ೨ : ಧನದನಗಂ ತನಗಟ್ಟಿದೊಡೆ ರಾಯಭಾರಿತನಂ ಬಂದಂತಿರ್ಪುವಿದಲ ಕುಂಡೋಪಾಂತ ಥಳಥಳಿಸಿ ಬೆಳಗುಳಿಶಾಶೃಂಗಳ್ (ಶಾಂತಿಪು. ೨-೦೦೩) ; ಆಕೆಯ ಪರವಾಗಿ ರಾಯಭಾರಿತನ ವಹಿಸಿ ಬಂದಿರುವುದು ನಾನೇ(ವಾತ್ಸಲ್ಯ. ೩೨೦). [ ರಾಯಭಾರಿ + — ತನ ]

**ರಾಯಭೇರಿ** (ನಾ). ದೊಡ್ಡದಾದ ಭೇರಿ ; ಭಾರಿಯಾದ ನಗಾರಿ : ಧ್ವನಿಗೈದುವನಿತಜಿಹೊಳಗೆ ರಾಯಭೇರಿಗಳನುವಾದ ಚಿನ್ನಗಾಳೆಗಳು (ಕಂಪಪ. ೨೫-೦). [ ರಾಯ + ಭೇರಿ ]

**ರಾಯಭೇರಿಗೆ** (ನಾ). = ರಾಯಭೇರಿ : ಹಾಯಿ ಹರಿಗೋಲಾದ ರಾಯಭೇರಿಗೆಯಾದ ರಾಯರಾ ಕಾಲಿಗೆ ಮುಳ್ಳೊತ್ತುವಾದ (ಜಾಪ. ೪-೩೬). [ ರಾಯ + ಭೇರಿಗೆ$_0$ (P ←ತಮಿ. ಪೇರಿಕೈ) ]

**ರಾಯಮನೆ** (ನಾ). ರಾಜನ ನಿವಾಸ ; ಅರಮನೆ : ಘನತರಭದ್ರ ಮಂಟಪಗಳಿಂದಾ ರಾಯಮನೆ ರಾರಾಜಿಸುತಿಹುದು (ಕಂಠೀಸಾಂ. ೩-೩). [ ರಾಯ + ಮನೆ ]

**ರಾಯಮನೆತನ** (ನಾ). ರಾಜಮನೆತನ ; ಅರಸುಕುಲ : ಆ 'ಮೊನೆಗಾರ' ಎಂಬ ಬಿರುದೂ ಮಹೀಶೂರ ರಾಯಮನೆತನಕ್ಕೆ ಆಚನ್ದ್ರಾರ್ಕವಾಗಿ ಸಲ್ಲತಕ್ಕದ್ದು (ಬಿರುಗಂ. ೯೦-೧). [ ರಾಯ + ಮನೆತನ ]

**ರಾಯಮನ್ನಣೆ** (ನಾ). ಅರಸನಿಗೆ ದೊರೆಯುವ ಗೌರವ ; ರಾಜಮನ್ನಣೆ : ಅಲ್ಲಿಯು ಪ್ರಜೆಗಳಾದರಂ ಮಿಗೆ ಮಾಡಿದ ರಾಯಮನ್ನಣೆಯಂ ಕಯ್ಕೊಂಡು (ಮುಂಡಾಕ. ೬-೮೮ ವ). [ ರಾಯ + ಮನ್ನಣೆ ]

**ರಾಯಮಟಿಗೆ** (ನಾ). ಶ್ರೇಷ್ಠವಾದ ಸ್ಥಳ,— ಸ್ಥಾನ (?) : ನೆಟ್ಟನೆ ಜಂಬೂದ್ವೀಪಕ್ಕೆಟ್ಟಳ ಹಗರಟಗೆನಾಡು ನೊಸಲಾ ನೊಸಲಿಂಗಿಟ್ಟೆಸೆವ ತಿಲಕದಂತಿರೆ ಪಟ್ಟಣವಿದು ರಾಯಮಟಿಗೆ ಕಲುಕೆಟಯೆಸೆಗುಂ (ಕ್ಶಾಇ. XX. ೩೦೨-೪೦ ; 1244). [ರಾಯ + ಮಟಿಗೆ]

**ರಾಯಮಾನ** (ನಾ). ರಾಜನಿಗೆ ಸಲ್ಲುವ ಆದಾಯ ; ರಾಜಾದಾಯ : ರಾಜ್ಯಾದಾಯವು ಷಡ್ಭಾಗವೆಂದು ಗೊತ್ತಾದ ನೆಲಗಂದಾಯದಿಂದಲೂ ಪೊಗದಿ, ನಿಕ್ಷೇಪ, ಶುಲ್ಕ, ದಂಡ ಮತ್ತು ಗಣಿಗಳ ರಾಯಮಾನಗಳಿಂದಲೂ ಉತ್ಪತ್ತಿಯಾಗುತ್ತಿತ್ತು (ಕಾಶಕ. ೬೩). [ರಾಯ + ಮಾನ]

**ರಾಯಮೂದಲೆ** (ನಾ). ಅಧಿಕವಾದ ತಿರಸ್ಕಾರ,—ಅವಹೇಳನ : ಆತನ ಪೆಣ್ಣಾಸಕ್ಕೆ ಕ್ಷಾತ್ರದ ರಾಯಮೂದಲೆಯನೊಡ್ಡಿ ವಿಡಂಬಿಸಿ ಕೆಣಕಿ . . . ಮಹಾಪರಾಧವನ್ನು ನೀನು ನಡೆಯಿಸಿದ್ದಪನಾದೆ (ಬಿರುಗಂ. ೩೬-೭). [ರಾಯ + ಮೂದಲ್ಕೆ]

**ರಾಯಮೋಹರ** (ನಾ). = ರಾಯಕಟಕ : ಬಲವಲ್ಲಲ್ಲಿ ಭಯಗೊಳೆ ದ್ರೋಣ ಹೊಕ್ಕನು ರಾಯಮೋಹರಕ್ಕ (ಕುಮಾವ್ಯಾ. ೨-೩೯); ಹೊಂತಕಾಱಗಳಾಗ ರಾಯಮೋಹರದಲಿ ಪಂತದೊಳೆಸೆದರುಬ್ಬಿಸಲಿ (ಕಂಪಭಾ. ೦೩-೨೦). [ರಾಯ + ಮೋಹರ$_1$]

**ರಾಯರಾವುತ**, ರಾಯರಾವುತ್ತ, ರಾಯರಾವ್ತ (ನಾ). ಶ್ರೇಷ್ಠನಾದ ಕುದುರೆಸವಾರ : ಹಿರಿಯ ಮಲಧಾರಿಗಳು ಬಪ್ಪಾಗ ಮುಂದೆ ವೀರರ ಮಕುಟವರ್ಧನರ ರಾಯರಾವು[ಕಾಕಾಂ . ಹು]ತರ . . . ನಡುವೆ . . . ಚಂದಪ್ರಭಿತೀರ್ಥನಿರ್ದನು (ಸೋಮಚಂತ. ೪-೩೩) ; ಮಿಱ ಕುಣಿದಾಡೆ ಹೊಕ್ಕರು ರಾಯರಾವುತರು (ಕುಮಾವ್ಯಾ. ೦೬-೨). **ರಾಯರಾವುತ್ತ** : ಗೆಲ್ಲಂಬಡೆದ ರದಟನಿಂ ರಾಯರಾವುತ್ತರಾಗಲ್ (ಕವಿಕಾ. ೨೭೯). **ರಾಯರಾವ್ತ** : ವಾನಾಯುಜದ ಸಾಲೆಸೆದುದೊಱಗಿದ ರಾಯರಾವ್ತರ ಮಣಿಮಕುಟ ಮರಗೋಡನೋಲೈಸೆ (ಕುಮಾವ್ಯಾ. ೦೭-೯). [ರಾಯ + ರಾವುತ]

**ರಾಯರಾವುತ್ತ** 'ರಾಯರಾವುತ' ನೋ.

**ರಾಯರಾವ್ತ** 'ರಾಯರಾವುತ' ನೋ.

**ರಾಯರಿಸಿ** (ನಾ). ರಾಜಋಷಿ ; ರಾಜರ್ಷಿ : ಈತನನಂತರಿಕ್ಷದೊಳ್ ಕರಗಳನೆತ್ತಿ ರಾಯರಿಸಿಯೆಂದುರೆ ಕೀರ್ತಿಪರಲ್ತೆ ಚಾರಣರ್ (ಚಾಕಂಚ. ೨೬-೯೯). [ರಾಯ + ರಿಸಿ (< ಋಷಿ)]

**ರಾಯರೂವಾರಿ** (ನಾ). ಶಿಲ್ಪಿಗಳಲ್ಲಿ ಶ್ರೇಷ್ಠನಾದವನು : ಕಲ್ಯಾಣದ ರಾಯರೂವಾರಿ ಬಲ್ಲೋಜ ಕಂಡರಿಸಿದ ಸಾಸನ (ಕ್ಶಾಇ. XX. ೩೦೨-೧೦೦ ; 1244). [ರಾಯ + ರೂವಾರಿ]

**ರಾಯರೇಖೆ** (ನಾ). ರಾಜನು ಮಾಡಿದ ಆಜ್ಞೆ ; ರಾಜಾಜ್ಞೆ : ರಾಯರೇಖೆಯ ಭವ್ಯರಾಲಿಸಿ ರಾಯಬಿಜ್ಜಣ ಬಸವಗುಲಿದವುಪಾಯ ತಂತ್ರಾಲೋಡವಾದುದೆ ಭಾರ್ಯೆಯಗ್ರಜನ (ಬಸ್ವಪು. ೭೭-೦). [ರಾಯ + ರೇಖೆ]

**ರಾಯಲ್**$_1$ (ನಾ). ಮುದ್ರಣಕಾಗದದ ಒಂದು ಅಳತೆ; ಇಪ್ಪತ್ತುನಾಲ್ಕು ಅಂಗುಲ ಉದ್ದವೂ, ಹತ್ತೊಂಬತ್ತು ಅಂಗುಲ ಅಗಲವೂ ಇರುವ ಮುದ್ರಣದ ಕಾಗದ : ಮುದ್ರಣದಲ್ಲಿ ಏಂಗಡಣೆ ಮಾಡುವಾಗ ಈ ಮುಂದಿನ ಪಟ್ಟಿಯನ್ನು ಅನುಸರಿಸುವುದು ಲೇಸು . . . ರಾಯಲ್, ಡೆಮ್ಮಿ, ಕ್ರೌನ್ (ಮುಂದ್ರಕ. ೨೭). [← ಇಂ. Royal]

**ರಾಯಲ್**$_2$ (ನಾ). ಚಿತ್ರದುರ್ಗದ ಪಾಳೆಯಗಾರರ ಕಾಲದ ಒಂದು ಚಿನ್ನದ ನಾಣ್ಯ : ದುರ್ಗವು ಕೈವಶವಾದ ಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದು ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ೧೦೦,೦೦೦ ರಾಯಲ್ (ಚಿತ್ರಕಾ. ೦೦೪). [ ? ]

**ರಾಯವಜೀರ** (ನಾ). ರಾಜನ ಮಂತ್ರಿ,—ಸಚಿವ : ರಾಯವಜೀರರೊಳ್ ರಾಣಾ ಜಗದೇವರಾಯರಸನಗ್ಗಳಂ (ಶಕವಂ. ೦೨-೦೯). [ರಾಯ + ವಜೀರ]

**ರಾಯವತ್ತಳೆ** (ನಾ). ರಾಜನ ನಿರೂಪ ; ಅರಸನ ಅಪ್ಪಣೆ : ಶ್ರೀ ಚಿಟ್ಟದ ಚಾಮರಾಜಒಡೆಯರ ಬಳಿಗೆ ಈ ನಿರ್ಣಯವನ್ನು ರಾಯವತ್ತಳೆಯಟ್ಟಿ (ಚಿಟ್ಟಕ. ೨೦೩-೩). [ರಾಯ + ಪತ್ತಳೆ$_1$]

**ರಾಯವಾಡ** (ನಾ). ರಾಜನನ್ನು ಕುರಿತ ಸ್ತುತಿ,—ಹೊಗಳಿಕೆ : ಓದುವ ರಾಯವಾಡದುಗ್ಗಡಿಸುವ ಮಾಗಳಿಕದ ಚಪ್ಪರಿಸುವ ಪಡಿಯಜರ . . . ಕೈವಾರಿಗಳಾಡಂಬರವಮಳುಂಬವಾಗೆ (ಅನಂತ. ೦೦-೯೩ ವ). [ರಾಯ + ವಾಡ$_0$ (p ← ಪ್ರಾ. ಪಾಢ = ಅಧ್ಯಯನ, ಶಾಸ್ತ್ರ)]

**ರಾಯವಾವುಡ** (ನಾ). ರಾಜನ ವಸ್ತ್ರ ; ಅರಸನು ಉಡುವ ಬಟ್ಟೆ : ಇದು ರಾಯವಾವುಡಂ ನೆಲೆಯಿದನೆಂತೋ ತಂದನಿಂದು ಸಬ್ಬವಕಾಱಂ (ಶಕವಂ. ೬-೦೭೩). [ರಾಯ + ಪಾವುಡ$_1$]

**ರಾಯಶಿಲ್ಪಿ** (ನಾ). = ರಾಯರೂವಾರಿ : ರಾಯಶಿಲ್ಪಿ "ಅಪ್ಪಣೆ ಆದರೆ ಹೋಗಿ ಬರುತ್ತೇನೆ ಪ್ರಭು" ಎಂದನು (ಸವತ. ೯೩). [ರಾಯ + ಶಿಲ್ಪಿ$_1$]

**ರಾಯಸ** (ನಾ). ೧. (ತಮ್ಮ ಪ್ರಜೆಗಳನ್ನು ಕುರಿತು ಗುರು, ರಾಜ ಮುಂತಾದ) ಹಿರಿಯರು ಬರೆಸುವ ಪತ್ರ ; ನಿರೂಪ : ಬಲ್ಲರಿಗೆ ದಿವಿಜಾರಿ ರಾಯಸಂ ಬರೆಯಿಸುವಂ (ಅನಂತ. ೦೩-೯) ; ರಾಯನಾಯುಷ್ಯಾವಸಾನದ ರಾಯಸವ ಬರೆಸಿದರು (ಕೊರರಾ. ೨-೬-೧) ; ಆಡಳಿತವನ್ನು ನಡೆಸಲು . . . ಯಾವ ಭಾಷೆಯಲ್ಲಿ ರಾಯಸಗಳನ್ನು ಬರೆಯಬೇಕು ? (ಹುಕ್ಕಕ. ೨೮). ೨. (ರಾಜನ) ಆಜ್ಞೆ ; ಅಪ್ಪಣೆ ; ಕಟ್ಟಳೆ : ಊರೂರ್ಗೆ ಬೇಱಬೇಱಲಿದು ರಾಯಸವಿತ್ತು ಹಾರ್ರೈಸುತರಸಾಳ್ಗಳೆಲ್ಲರ್ಗೆ ಬೆಸನಿತ್ತು (ಸಂಬಿರ. ೩-೯) ; ಯಿಾ ರಾಯಸದ ಮರ್ಯಾದೆಯ ಆ ಚಂದ್ರಗಿರಿಯ ಮಲ್ಲಿಕಾರ್ಜುನದೇವರಿಗೆ ಪೂರ್ವ್ವದಲು ಸಲುವಂತೆ . . . ಮಾಡಿಸಿಕೊಂಬುದು (ಕ್ಶಾಇ. IX-ii. ೪೨೯-೪೦: 1405) ; ರಾಯಸವೆಂಬುದು ರಾಯಗಲ್ಲದೆ ಮಿಕ್ಕ ನಾಯಕಮಕ್ಕಳಿಗುಂಟೆ (ಕುರಾಕಾಂ. ೦೦-೨೨). ೩. ಆಜ್ಞಾಪತ್ರಗಳನ್ನು ಬರೆಯುವ ಹಾಗೂ ಓದಿ ಹೇಳುವ ವೃತ್ತಿ : ಈ ಲಿಖಿತಪತ್ರರಿ . . . ವಾಚಿಸುವೆನೆಂದೆನುತ ರಾಯಸದ ಕಡುಜಾಣರು ನಿಲ್ಲದನಿಬರ್ ನೋಡಿ (ಅಕಾಂ. ೩೦-೪೭); ಕರಿಸಿ ರಾಯಸವ ಮಂತ್ರಿಗಳ . . . ದೊರೆಗಳಿಗೋಲೆಯ ಬರಿಸಿದ ಲಿಂಗರಾಜೇಂದ್ರ (ಕಂಪಭಾ. ೨೦-೩೩); ರಾಯಸದ ಶಕಟದಾಸನು ಅಮಾತ್ಯರಾಕ್ಷಸನ ಪ್ರೇರಣೆಗೆ ಒಳಗಾಗಿ . . . ತಂತ್ರಗಳನ್ನು ನಿತ್ಯವೂ ಹೂಡುತ್ತಿದ್ದ ಕಾರಣ (ರಾಕ್ಷಮು. ೨೩).

**ರಾಯಸದವ** = ರಾಯಸವನ್ನು ಬರೆಯುವ ಹಾಗೂ ಓದಿ ಹೇಳುವ ಕೆಲಸದವನು : ರಾಯಭಾರಿಗಳ ರಾಯಸದವರ ಕರಣಿಕರ ಜೋಯಿಸರ . . . ನಡುವೆವೊಡ್ಡೋಲಗಂಗೊಟ್ಟು ರಂಜಿಸುತ್ತಿರ್ದನು (ಸಮ್ಮಕಾ. ೨-೩) ; ಅಂತಸ್ಸು ಗೌರವಗಳಿಗೆ ತಕ್ಕಂತೆ ಒಕ್ಕಣಿಸಿದ ಲಗ್ನದ ಓಲೆಗಳನ್ನು ಯೋಗ್ಯರಾದ ರಾಯಸದವರು, ಭಟರು ಒಯ್ದರು (ಶಾಂಕಲಾ. ೯೩). [ದೇ.॥ ತಮಿ. ಇರಾಯಚವಮ್, ರಾಯಚಮ್; ತುಳು. ರಾಯಸ; ತೆಲು. ರಾಯಸ, ವ್ರಾಯಸ]

**ರಾಯಸನ್ನಿ** (ನಾ). ಸನ್ನಿಪಾತಜ್ವರದಲ್ಲಿ ಒಂದು ಬಗೆ ; ತೀವ್ರವಾದ ಸನ್ನಿ : ಕಿವುಡುಸನ್ನಿಯೆಂದರೆ ಸನ್ನಿಗಳೊಳಗೆ ರಾಯಸನ್ನಿಯಂತೆ (ಪಶಶಾ. I. ೪೩೬). [ರಾಯ + ಸನ್ನಿ]

**ರಾಯಸಭಾರಿ** (ನಾ). = ರಾಯಭಾರಿ ೨ : ಪಾಂಡವರ್ಗೆ ಪಾಗುಡಂಗಳಂ ಸಮಕಟ್ಟಿ ಸ್ವಕೀಯ ರಾಯಸಭಾ[ಶಾಕಾಂ. ಬಾ]ರಿಗಳಂ ಕಟಿಪುವುದುಂ (ಪುಹಾಶೀ. ೯-೦೨೬ ವ). [< ರಾಯಭಾರಿ]

**ರಾಯಸವಿದ್ಯೆ** (ನಾ). ರಾಯಸವನ್ನು ಬರೆಯುವ ಕಲೆ : ಚಿತ್ತಾರಿವಿದ್ಯೆ, ಸಿಪ್ಪರಿಗೆವಿದ್ಯೆ, ಪುಸ್ತಕದ ಲೇಖನವಿದ್ಯೆ, ರಾಯಸವಿದ್ಯೆ . . . ನಾನಾಭಾಷೆ ನಾನಾಸಂಜ್ಞೆಗಳನು ಅರಿತು (ಪಶಕ. ೬). [ರಾಯಸ + ವಿದ್ಯೆ]

**ರಾಯಸಾಹಣಿ** (ನಾ). = ರಾಯರಾವುತ : ವಜ್ರದೇವನ ಡಿಂಗರಿಗ ರಾಯಸಾಹಣಿ ಸೋವಪ (ಇಎ. ೦೯೩೨, ಸಂಕಗಾದಿ. ೩-೩; ೪). [ ರಾಯ + ಸಾಹಣಿ ]

**ರಾಯಸಿಗ** (ನಾ). ರಾಯಸವನ್ನು ಬರೆಯುವವನು : ರಾಯಸಿಗನಂ ಕರೆಯಿಸಿ ಪಲವುಂ ಗಡಿಗೋಂಟೆಗಳ ಬಲಮುಂ ಪಯಣಸನ್ನದಂಗೆಯ್ವು ದೆಂದು ರಾಯಸಂಗಳಂ ಕಳುಪಿ (ಪಳಂ. ೩-೬೬ ವ); ಅರಸನ ಕಣ್ಸನ್ನೆಯಿಂ ರಾಯಸಿಗನವಂ ಕೊಂಡು (ಪಳವ. ೦೬-೦೬). [ರಾಯಸ + – ಇಗ]

**ರಾಯಸೂಯ** (ನಾ). ಚಕ್ರವರ್ತಿಯು ಮಾಡುವ ಯಾಗ : "ರಾಯಸೂಯಮಂ ಮಾಡಿದಾತನಂ ಸಾಮ್ರಾಟ್‌ಯೆಂಬುದು" (ಹರಿಚಂ. ೬೦-೨೬೮). [ < ರಾಜಸೂಯ ]

**ರಾಯಸೆಜ್ಜೆ** (ನಾ). ರಾಜನ ಹಾಸುಗೆ; ಅರಸನ ಶಯ್ಯೆ : ಮಹಾರಾಜ:- (ರಾಯಸೆಜ್ಜೆಯಲ್ಲಿ ಸ್ಥಿತನಾಗುವನು) (ಪಟ್ಟ. ೦೪-೦); ಶಾಂತಲಾದೇವಿ ರಾಯಸೆಜ್ಜೆಯ ಇನ್ನೊಂದು ಅಂಚಿನಲ್ಲಿ ಕುಳಿತಳು (ಸವಿ. ೪೩). [ ರಾಯ + ಸೆಜ್ಜೆ$_2$ ]

**ರಾಯಸೊಮ್ಮು** (ನಾ). ರಾಜನ ಸಂಪತ್ತು; ಅರಸನ ಐಶ್ವರ್ಯ : [ಸ್ಥಾನ:_ಶ್ರೀರಂಗಪಟ್ಟಣ. ಅರಮನೆಯ ನೆಲಮಾಳಿಗೆ. ರಾಯಸೊಮ್ಮಿನ ಒಳಭಂಡಾರ] (ಮುಂತ್ರಕ. ೦೦-೦). [ ರಾಯ + ಸೊಮ್ಮು$_3$]

**ರಾಯಿತ** (ನಾ). ತರಕಾರಿ ಮತ್ತು ಮೊಸರು ಬೆರಸಿ ಮಾಡುವ ಒಂದು ಬಗೆಯ ವ್ಯಂಜನಪದಾರ್ಥ : ಬೆಂಡೇಕಾಯಿ ರಾಯಿತವೂ ಅರುಚಿಯಾಯಿತು (ಶಾಟಿಕಾ. ೦೦೬). [←ಹಿಂ. ರಾಯತಾ; ಮರಾ. ರಾಯತೀ]

**ರಾಯಿಪುಡಿಸಕ್ಕರೆ** ' ರಾಯಪುಡಿಸಕ್ಕರೆ ' ನೋ.

**ರಾಯುಳ್ಳಿ** (ನಾ). ಒಂದು ಬಗೆಯ ದಪ್ಪ ಈರುಳ್ಳಿ : "ರಾಜಪ್ರಿಯಃ – ರಾಯುಳ್ಳಿ" (೬ಕಂ. ೦೩೬); ರೊಟ್ಟಿ ಸಕ್ಕರೆ ತುಪ್ಪ ಬೆಲ್ಲ ಗೋಧುವೆ ತಣ್ಪಿಟ್ಟು ರಾಯುಳ್ಳಿಯ ಪಿನಿಯ ಬಟ್ಟಲು ಕವಳ ಕಟ್ಟೊಗ್ಗಡದ ಮಾಂಸದ ರಾಶಿಯುಟ್ಟಣಿಸಿದಂಗಡಿಯೊಳು (ಶುರಾಸಾಂ. ೪೨-೬೦). ' ರಾಜುಳ್ಳಿ ' ಪರಾ. [ ರಾಯ + ಉಳ್ಳಿ$_1$ ]

**ರಾಯ್ಯಂಗೆಯ್**, ರಾಯ್ಯಗೆಯ್ (ಕ್ರಿ). ರಾಜ್ಯಭಾರಮಾಡು ; ಆಡಳಿತವನ್ನು ನಡೆಸು ; ಆಳು : ಬನವಾಸಿಪನ್ನಿರ್ಚ್ಛಾಸಿರಕೆ ಚಟ್ಟು ರಾಯ್ಯಂಗೆಯುತ್ತಿರೆ (ಎಕ. VIII, ಸೊರಬ. ೪೦೩-೬; 986). **ರಾಯ್ಯಗೆಯ್** : ಚಂದ್ರಾರ್ಕತಾರಂಬರಂ ರಾಯ್ಯಗೆಯುತ್ತಿರಲು (ಎಕ. V, ಹಾಸನ. ೦೬೦-೪; 1104). [ < ರಾಜ್ಯಂಗೆಯ್ ]

**ರಾಯ್ಯಗೆಯ್** ' ರಾಯ್ಯಂಗೆಯ್ ' ನೋ.

**ರಾರಾಜಿಸು** ' ರಾಜಿಸು ' ಪರಾ.

**ರಾಲ**, ರಾಳ (ನಾ). ೧. ಒಂದು ಬಗೆಯ ಮರ; ಅರಾಲ; ಸಜ್ಜರಸ : "ಸಸ್ಯಂ _ ರಾಲ, ಸಸಿ" (೬ಕಂ. ೦೬೪). **ರಾಳ** : ೧. "ಸೌರಮೆನಲಾ ರಾಳಮೆನೆ ಸಜ್ಜರಸಮುಕ್ಕ್ಯ" (ವಂಗಾ. ೪೩-೪೨); ಕರೀಡಮಾರ, ರಾಳ (ಪ್ರಾಸಿ. ೬೦-೦೪೨೬). ೨. ರಾಲಮರದಿಂದ ದೊರಕುವ ಅಂಟು : ಇನ್ನು ಕೆಲವೊಂದು ವಿಶಿಷ್ಟವೃಕ್ಷಗಳಿಂದ ಅಂಟು, ರಾಳ, ಶೀಗೇಕಾಯಿ . . . ಕಾಚು ಮೊದಲಾದ ಉಪಯುಕ್ತವಸ್ತುಗಳು ದೊರೆಯುವವು (ಕಕಪ್ತ. ೬-೦೪); ಲೋಲನಾಗರಮೋತಿ ಚಂದನ-ಕರ್ಪೂರ ರಾಳ ಗುಗ್ಗುಳದ ದಶಾಂಗ (ಸಿದ್ಧಕ. ೦೯-೩). [ಸಂ.]

**ರಾವ್** ' ರಾಯ ' ನೋ.

**ರಾವ** (ನಾ). ೧. (ಪ್ರಾಣಿಗಳ) ಕೂಗು ; ಅರಚಾಟ : ನರಲ್ವ ರಾವದಂತೇಂ ಬಗೆಗೊಂಡುದೋ ಗುಡುಗು ಸೂಕಿಮರುತ್ಕೃತತೋವ ದೇಳ್ಗೆಯಿಂ (ರಾಜಶೇ. ೬-೦೦೩); ಪಾಲಿ ದೆಸೆಗಳು ಬಿರಿಯ ರಾವದಲನು ಜನನು ತಿವಿದನು ಸರೋಷದಲಿ (ಅರಾಪು. ೪-೨-೩೦); ಹೆಬ್ಬುಲಿಯ . . . ಭಯಂಕರರಾವದ ಇದಿರು ನಾಯಿಯ ಬೊಗಳು ನಗಣ್ಯವಾಗಿ ಬಿಟ್ಟಿತ್ತು (ಪುರಪು. ೨೩೦). ೨. ಶಬ್ದ; ಧ್ವನಿ; ಸದ್ದು : ದಿಗ್ಭಿತ್ತಿವಿಭೇದಿ ಪರ್ಚೆ ಕದನಾನಕರಾವಮುಗುರ್ವಿನುರ್ವೆ ಪರ್ವುತ್ತಿರೆ (ಕಂಪಾ. ೬-೯೨); ಅಂಬುಧಿಯ ನಿರ್ಘೋಷಮುಂ ಪಳಿವಂತೆ ಡಮರುಗದ ರಾವಮೆಸೆಯ (ಐತಿಚಂ. ೯-೪). [ಸಂ.]

**ರಾವಟಿಗೆ** (ನಾ). ಚಿಕ್ಕ ಡೇರೆ ; ಗುಡಾರ : ನವಾಬರು . . . ತಲೆದಿಂಬಿಗೆ ಶಾಲನ್ನೂ ಸಕಲಾತಿಯನ್ನೂ ತಾವು ಮಲಗಿದ್ದಂತೆಯೇ ಹೊದಿಸಿ, ಆ ರಾವಟಿಗೆಯನ್ನು ಕೊಯಿದು ಮತ್ತೊಂದು ಗುಡಾರಕ್ಕೆ ಹೋಗಿ (ಮುಹಾಮಂ. I. ೨೨೩). [ ← ಮರಾ. ರಾವಟೀ]

**ರಾವಡಿ** (ನಾ). ಉಪದ್ರವ ; ತೊಂದರೆ : ನೊಣ ರಣವ ಹೊಕ್ಕು ಶೋಣಿತವ ಭುಂಜಿಸುವಾಗ ಕೀನಾಸರದ ಭಟರೆಲ್ಲರೂ ನೊಣದ ರಾವ[ಶಾಕಾಂ. ಡಿ]ಯಾವುಡಿಗಂಜಿ ಹೇಳದೆ ಹೋದರು (ಮುರಾವ. ೬೦-೩) ; ಬಡತನದ ರಾವಡಿಗೆಯಾಜದೆ ಕಡುಗಿ ಭೂಮಿಯ ತೊಳಲಿ ಬರುತವೆ (ಹಾದಪ. ೦೦-೦೬). [← ತೆಲು. ರಾವಡಿ]

**ರಾವಣ** (ನಾ). ೧. ಗಟ್ಟಿಯಾದ ಕೂಗು ; ಗರ್ಜನೆ. ೨. ಗಟ್ಟಿಯಾಗಿ ಕೂಗುವವನು ; ಗರ್ಜಿಸುವವನು. ೩. ರಾಮನಿಂದ ಹತನಾದ ಲಂಕಾದ್ವೀಪದ ಒಬ್ಬ ರಾಕ್ಷಸರಾಜ : ಸೀತೆಯ ದೂಸಜಿಂ ದಟಿದ ರಾವಣನಂತಿರೆ ನೀನುಂ ಅಟಿಯಲಾಟಿಸಿದ್ಯೆ (ಕಂಪಾ. ೯-೪೯) ; ರಾವಣನಂ ಜಗತ್ರಿತಯ ರಾವಣನಂ . . . ರಘುಪ್ರಭವರೂಪದೆ ಮರ್ದಿಸಿದ್ಯೆ ಜನಾರ್ದನಾ (ಜಗದಿ. ೦-೬೦) ; ರಾವಣನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ (ಗಾದೆ). ೪. ಒಂದು ಬಗೆಯ ವೀಣೆ : ವಿಪಂಚಿಕೆ . . . ರಾವಣ . . . ಕಾಲಕೀಯೆಂಬ ಮೂವತ್ತುಮೂಱು ತಂತ್ರೀವಾದ್ಯಂಗಳಲ್ಲಿ (ಶಿವೇಳ. ೨೩೬). [ಸಂ.]

**ರಾವಣಕರ** (ನಾ). [ಗಣಿತ] ಇಪ್ಪತ್ತು ಎಂಬ ಸಂಖ್ಯೆಯ ಸಂಕೇತ : ಕರಿ ದಿನಪ ರಾಜ ರಾವಣಕರ ಪರಿಸಂಖ್ಯಾಕ್ಷರಂ ಪೊದಟ್ದಿಸೆಯ (ಲಯೋಂಬು. ೩-೨೩). [ಸಂ.]

**ರಾವಣವೀಣೆ** (ನಾ). = ರಾವಣ ೪ : ರಾವಣವೀಣೆಯ ರಂಜಕರಿಂ . . . ಒಪ್ಪುದತ್ತಾ ಮಹಾಲಿಂಗದಾಸ್ಥಾನಂ (ಹರಿಶ್ಚ. ೬-೪೦ ವ); ತಂತ್ರೀವಾದ್ಯ ಕಳಾಮಹಿತನಾದ ಮಾದರಸ ರಾವಣವೀಣೆ . . . ಪಿನಾಕಿವೀಣೆ ಮೊದಲಾದ ಮೂವತ್ತೆರಡು ವೀಣೆಗಳನ್ನೂ . . . ಶ್ರುತಿಗೊಳಿಸಿ (ಶರಶ. ೨೬೩). [ಸಂ. ರಾವಣವೀಣಾ]

**ರಾವಣಶಾಖಿ** (ನಾ). ಒಂದು ಬಗೆಯ ಸಸ್ಯ ; ಆಡುಸೋಗೆ : ಬಡಗಿ ಮಾಚಲದೇವಿಯ ಕುಲಜೆಯ ಮಾಡಿಹನೇದು ಹೊನ್ನ ಕಬಿಲೆಯ ರಾವಣ ಶಾಖಿದುಬ್ಬಿಪ್ಪದ ಹಾಲಿನಿಂದ ಕೋಣಟ್ಟುಂಬವರನೇನೆಂಬೆ (ಬಸವ. ೩೬೪). [ ? ]

**ರಾವಣಹಸ್ತ** (ನಾ). ಒಂದು ಬಗೆಯ ವೀಣೆ : ಸುಲಲಿತವಾಗೆ ವಸು ಗುಣರೂಪಜನಸ್ವನಾಂಕಮಾಲೆಯಿಂ ಪಲಕೇಜಿದಿಂ ರಸಂಬಡೆಯ ರಾವಣ

ಹಸ್ತದಿನಂದು ರಾವಣಂ ಅಂತು ನಿರ್ಭರಭಕ್ತಿಯಿಂ ಬಾಜಿಪಾಗಳ್ (ಶಂಗಾಪು. ೧೧-೦೬೬); ಪ್ರಾಚೀನಗ್ರಂಥಗಳು, ಕಿನ್ನರಿ . . . ರಾವಣಹಸ್ತ ಮುಂತಾಗಿ ನಾನಾರೀತಿಯ ವೀಣೆಗಳನ್ನು ನಮೂದಿಸುತ್ತವೆ (ಸಂಗೀಕೋ. ೩೦೦).
[ಸಂ. ರಾವಣಹಸ್ತ]

**ರಾವಣಾರಿ** (ನಾ). ರಾವಣನ ಶತ್ರು; ರಾಮ: ರಾವಣಾರಿಯ ಕಾಣಿಕೆಗೆ ಬಲುಹೀವಿಯನು ತೋಱಿದನು ಸಾರುವ ಭಟ್ಟರೋಳಿಯಲಿ (ಕುಭ್ಯಾ.ಅ. ೬-೯೬); ರಾವಣಾರಿಯ ನಾಮ ಇದ್ದಲಿಗೆ ಸುಖಿಯುಂಡೆ (ಕೌರಂ. ಧಾ. ೩-೩೭-೨). [ಸಂ.]

**ರಾವಣಾಸುರ** (ನಾ). ಒಬ್ಬ ರಾಕ್ಷಸ; ರಾವಣ: 'ರಾವಣಾಸುರ ವಧನ' ಪರಾ. [ಸಂ.]

**ರಾವಣಾಸುರಮಥನ** (ನಾ). ರಾವಣನನ್ನು ನಾಶಮಾಡಿದವನು; ರಾಮ: ರಾವಣಾಸುರಮಥನ . . . ಕಾವ್ಯದಾನತಜನವ (ಕುಭ್ಯಾ.ಆ. ೦-೦).
[ಸಂ.]

**ರಾವಣಿ** (ನಾ). ೧. ರಾವಣನ ಮಗ. ೨. ಇಂದ್ರಜಿತು: ರಾವಣಿಯ ಸಮರಂಗ ಕಂಗೆಡಿಸಿತ್ತು ಕಪಿಬಲವ (ಕೌರಾ. ೦೯-೯೬); ಎತ್ತಿ ಬಾಹಾದಂಡವನು ನಭಕೊತ್ತಿ ಹಲುಗಳನಾಡಿನಲಿ ಲಯಮಿತ್ತುಮೊಗನೆಬಿಗಿದನು ಮದದುಬ್ಬಿನಲಿ ರಾವಣಿಯ (ಕೊರಾ. ೩-೬-೨೦). [ಸಂ.]

**ರಾವದಿ** (ನಾ). ಕುದುರೆಯ ಹೃದಯದ ಜಾಗ: ವಕ್ಷದ ಹೃದಯದೆಡೆಗೆ ರಾವದಿಯೆಂಬ ಪೆಸರಕ್ಕುಂ (ಅಶ್ವಶಾ. ೬೬-೦೬). [?]

**ರಾವಬಹದ್ದೂರ್** (ನಾ). ಹಿಂದಿನ ಕಾಲದಲ್ಲಿ ಬ್ರಿಟಿಷ್ ಸರ್ಕಾರದವರು ಪ್ರಸಿದ್ಧರಾದ ಸಮಾಜಸೇವಕರಿಗೆ ಕೊಡುತ್ತಿದ್ದ ಒಂದು ಬಿರುದು: ರಾವಬಹದ್ದೂರ್ ತೋಟದಪ್ಪನವರು ಶ್ರೇಷ್ಠದಾನಿಗಳು (ರೂಢಿ).
[←ಹಿಂ. ರಾವ್‌ಬಹಾದುರ್]

**ರಾವಲ್** (ನಾ). ರಜಪೂತರಾಜರಿಗೆ ಸಲ್ಲುತ್ತಿದ್ದ ಒಂದು ಬಿರುದು: ಟೆಹರಿಮಹಾರಾಜರವರಿಂದ ಕೊಡಲ್ಪಟ್ಟ "ರಾವಲ್" ಎಂಬ ಬಿರುದು ಅನೂಚಾನವಾಗಿ ನಡೆದು ಬಂದಿರುವುದು (ಗುರುಚ. ೩೦).
[←ಹಿಂ. ರಾವಲ್./ಪಾಲಿ. ರಾಜುಲ್]

**ರಾವಸಾಬ್** ' ರಾವಸಾಹೇಬ ' ನೋ.

**ರಾವಸಾಹೇಬ, ರಾವಸಾಬ್** (ನಾ). ಹಿರಿಯರನ್ನು ಗೌರವದಿಂದ ಸಂಬೋಧಿಸುವಾಗ ಬಳಸುವ ಒಂದು ಮಾತು: ಕೆಲವು ಹೊತ್ತಿನ ಮೇಲೆ ಪೇದೆ ತಾನಾಗಿ ನುಡಿದ—'ರಾವ ಸಾಹೇಬ' (ಶಲಾಂ. ೯೦). **ರಾವಸಾಬ್**: ಯಾವ ಕೆಲಸವಿದ್ದರೂ ಬಿಟ್ಟುಬರಲು ಹೇಳಿದ್ದಾರೆ ರಾವಸಾಬ್! (ರಂಗಗೋ. ೬೯). [←ಹಿಂ. ರಾವ್‌ಸಾಹಬ್]

**ರಾವಳಿಸು** (ಕ್ರಿ). ಅಬ್ಬರಿಸು; ಆರ್ಭಟಿಸು: ಎಂಟುದಿಕ್ಕುಂ ಮುತ್ತಿ ರಾವಳಿಸಿ ಮುಳಿದೆಮ್ಮ ಗುಂಟಲಂ ಕೊಱೆಯಬೇಡ (ಜೀಕೃತೊ. ೩-೩೭-೯೯).
[<ರವಳಿ + — ಇಸು₃./ ತೆಲು. ರವಳಿಂಚು]

**ರಾವಿ** (ನಾ). ಒಂದು ಬಗೆಯ ಮರ; ಅರಳಿ: "ಬೋಧಿದ್ರುಮಃ . . . ಅಶ್ವತ್ಥಃ—ಇ ಅರಳೀಮರದ ಹೆಸರುಗಳು, ಅಶ್ವತ್ಥ, ರಾವಿಚೆಟ್ಟು" (ನಿಘ್ನಂಟು. ೦೦೩); ರಾವಿ — . . . (ಅಶ್ವತ್ಥ) (ಶಾಸಗ. ೯). [←ತೆಲು. ರಾವಿ]

**ರಾವಿನಾಡು** (ನಾ). ಒಂದು ನಾಡಿನ ಹೆಸರು: ಬಯ್ದುಕೂರ ರಾವಿನಾಡ ಮಾರ್ಯರ್ಮಮ್ಮ ಮಮ್ಮ ಗಣಿಪ ರಾಮ ತುಜುವನಿಕ್ಕಿಸಿ ಅಱ್ಱಿ ಸತ್ತನ್ (ಎಕ. X, ಮುಳಬಾ. ೨೦೩-೨; ೬೭೬). [ರಾವಿ₁ + ನಾಡು]

**ರಾವು₁** (ಕ್ರಿ). ಅಂಟಿಕೊಳ್ಳು; ಹತ್ತಿಕೊಂಡಂತಿರು: ಅತನು . . . ನೆಲಕ್ಕೆ ರಾವಿ ಗಗನಕ್ಕೆ ನೆಗೆದು ಹಗೆಯ ಹೊಡೆತವನ್ನು ತಪ್ಪಿಸಿ ಖಡ್ಗದಿಂದ ಪ್ಪಳಿಸಿ ಫಾಲನ್ನೊಡ್ಡಿ ತಿವಿದು ರಿಪುಶಿರವನ್ನು ಇಳುಹಿದನು (ಕಪೀಲ್ಪ. ೩೦); ಸುಭಗೆ ಅಡಿಗೆಯ ಮನೆಯ ಮೂಲೆಯಲ್ಲಿ ರಾವಿಕೊಂಡು ಕುಳಿತಿದ್ದಳು (ಗಂಗಾಸಾ. ೦೨೬); ಅವನು ಮನೆಯೊಳಗೆ ರಾವಿಕೊಂಡು ಕುಳಿತಿದ್ದ (ಕಲಿತಾಸ್ಥಾ. ೩೩). [?]

**ರಾವು₂** (ನಾ). ಒಂದು ಕೋಡಾಟದ ಮಾತು: ಹಳುರೆ ಹಳುರೇ ರಾವು ರಾವುರೆಯೆಂದು ಖಳರುಲಿಯೆ (ಕೌರಾ. ೩೨-೨೦); ರಾವು ಘಲುಗುಣಯೆನುತ ಪಾರ್ಥನ ಭಾವ ಕುಡಿಚಮ್ಮಟಿಗೆಯಲಿ ತುರಗಾವಳಿಯನದುಹಿದನು ಸುಳಿಸಿದ ಸಾಹವಕೆ ರಥವ (ಕುಭ್ಯಾದ್ರೋ. ೯-೩೬).

**ರಾವು₃** (ನಾ). ೧. ನವಗ್ರಹಗಳಲ್ಲಿ ಎಂಟನೆಯ ಗ್ರಹ; ರಾಹು: "ರಾವು (ರಾವು)—ರಾಹು=ಗ್ರಹವಿಶೇಷ" (ಶಬ್ದಕೋ. ೩೪); ನೆಱೆ ಮೊಗವೆಂಬ ಚಂದಿರ ರಾವಿನೊಳು ಸೇರಿ ಹಱಿವುದೆನುತ ಬಲುಬೆದಱಿ ಮಱಿವೊಕ್ಕ ಕಿಱು ಮೆಱೆಯನು ಸೋಲಿಸುತಂದು ಮೆಱೆದುದವಳ ನುಣ್ಗೂಸಲು (ರಾಘುಪ. ೦೨-೩೩). ೨. ದೆವ್ವ; ಭೂತ: ಅವರ ಹಿರಿಯರು ನಂಬಿದ ರಾವು ಮತ್ತು ಕೀಳುದೆವ್ವಗಳು ಅವು (ಶದ್ವಸ. ೨೬). ೩. ಅಬ್ಬರ; ಆಟೋಪ; ಉಗ್ರತೆ: ಪ್ಲೇಗಿನಮ್ಮನ ರಾವಿನ ಮುಂದ್ಯಾರು ನಿಲುವೋರು (ಜಪ್ಮ್ಯಾರು. ೩೦). ೪. ಭಯಾನಕವಾದುದು: ಭೀಕರವಾದುದು: ಹೆಣವನ್ನು ತೆಗೆದರು: ಮೈ ಉಬ್ಬಿ ರಾವಾಗಿದೆ (ಕನಕ. ೩೯); ತಂದೆಯವರ ಸಿಟ್ಟಿನಿಂದ ರಾವಾದ ಮೋರೆ . . . ಮನಸ್ಸನ್ನು ಕಲಕಿದವು (ಅಶ್ವ. ೯೬). ೫. ಕೋಪ; ಸಿಟ್ಟು: ಜಮಾದಾರರ ಮುಖದ ಮೇಲೆ ರಾವಿನ ಕಳೆಯಿರಲಿಲ್ಲ (ಗಂಗಾಸಾ. ೦೩೩); ವಾಲೀಕಾರ ಮಲಪ್ಪ ದಾದಾನ ರಾವು ನೋಡಿ . . . ಎಂದು ಕೇಳಿದ (ಗ್ರಾಮಾಯ. ೬೬). ೬. (ಕರಾ) ಅತಿಯಾಸೆ; ಹಂಬಲ; ಬಯಕೆ.
[< ಸಂ. ರಾಹು]

**ರಾವುಕನಡಿ** ' ರಾವುಗನ್ನಡಿ ' ನೋ.

**ರಾವುಗಣ್ಣು** (ನಾ). ೧. ಭಯವನ್ನು ಹುಟ್ಟಿಸುವ ಕಣ್ಣು; ರೌದ್ರವಾದ ಕಣ್ಣು: ಗೌಡರ ಮನೆಗೆ ಬೇಗದಿ ಬೇಗ ಹಾಕಿ ರಾವುಗಣ್ಣಿನ ತುರುಕರ ಕಾವಲಿಟ್ಟು (ಜಾಕದ. ೧೨೦). ೨. ಕೆಟ್ಟ ನೋಟ; ಕ್ರೂರದೃಷ್ಟಿ: ಅವಳ ರಾವುಗಣ್ಣಿಗೆ ಬೀಳಬೇಡ (ರೂಢಿ). [ರಾವು₃ + ಕಣ್ಣು (< ಕಣ್)]

**ರಾವುಗನ್ನಡಿ, ರಾವುಕನಡಿ** (ನಾ). ಸಣ್ಣವಸ್ತುವನ್ನು ದೊಡ್ಡದನ್ನಾಗಿ ಮಾಡಿ ತೋರಿಸುವ ಕನ್ನಡಿ; ಭೂತಕನ್ನಡಿ: ಕಲಕಲವು ಋಜೆಗೆ ಬರೆದ ಅಕ್ಷರಗಳನ್ನು ರಾವುಗನ್ನಡಿ ಹಿಡಿದೇ ನೋಡಬೇಕು (ಕ್ಷೇತಿಶಾ. ೦೩೬); ಉಬ್ಬಿದ ಭೂತಕನ್ನಡಿಗೆ . . . ಬದಲಾಗಿ ಹಳ್ಳವಾಗಿರುವ ರಾವುಗನ್ನಡಿ (Concave mirror)ಯನ್ನು ಉಪಯೋಗಿಸಿದನು (ವಿಜ್ಞಾಕ. ೪೮). **ರಾವುಕನಡಿ**: ಅರಸು ರಾವುಕನಡಿಯ ಕಂಡು ಡಕ್ಕೆಯ ಬಿಸುಡು (ಜಪದಾ. I. ೯೩೩). [ರಾವು₃ + ಕನ್ನಡಿ₁]

**ರಾವುಗಾಣು** (ಕ್ರಿ). ಅತಿಭಯಾನಕವಾಗು: ನಾಯಕನ ಅವ್ಯವಸ್ಥಿತ ಚಿತ್ತದಿಂದ ಆಡಳಿತದಲ್ಲಿ ಉಂಟಾದ ಗಲಭೆಯು ಆತನ ಮಡದಿಯಿಂದ ರಾವುಗಂಡಿತು (ಕಲಿಂಅ. ೩೬). [ರಾವು₃ + ಕಾಣು (< ಕಾಣ್)]

**ರಾವುಗೆಂಪು** (ನಾ). ಉಗ್ರವಾದ ಕೆಂಬಣ್ಣ; ಅತಿರಕ್ತವರ್ಣ: ದಾಸವಾಳ, ಕೆಂಜಲ್ಕ ಮೊದಲಾದ ರಾವುಗೆಂಪು ಹೂಗಳನ್ನು ಒಯ್ದು ಅವಳ ಮುಂದೆ ಚೆಲ್ಲಿರಿ (ಕೃಹಾರ. ೦೨೩). [ರಾವು₃ + ಕೆಂಪು₁]

**ರಾವುಗೈ** (ನಾ). ಬಲಿಷ್ಠವಾದ ಕೈ: ಮರಕಾಲ ರಾವುಗೈಯಿಂದ ಆ ಹುಚ್ಚುಹೋಳಿಯನ್ನು, ತೊಳೆಯಿಂದ ಮರ್ದಿಸತೊಡಗಿದನು (ಶಿರಾಲು. ೦೬೩). [ರಾವು₃ + ಕೈ₁₂ (< ಕೆಯ್₂)]

**ರಾವುಗೋಲು** (ನಾ). ಕಮ್ಮಾರನು ಉಪಯೋಗಿಸುವ ಒಂದು ಬಗೆಯ ಉದ್ದವಾದ ಕಬ್ಬಿಣದ ಸಲಾಕೆ; "ಲೋಹದ ಪಟ್ಟೆಯು ಒಂದಕ್ಕೊಂದಕ್ಕೆ ಅಂಟಿಕೊಳ್ಳುವುದಕ್ಕೆ ಬೇಕಾಗುವ ಶಾಖದ ಹದವನ್ನು ಪರೀಕ್ಷಿಸುವ ಸಲಾಕೆ" (ಅಶಂಅ).
[ರಾವು₁ + ಕೋಲು₁ (< ಕೋಲ್₁)]

**ರಾವುತ**, ರಾಉತ, ರಾಉತ್ತ, ರಾವುತ್ತ, ರಾವ್ತ, ರಾಹುತ, ರಾಹುತ್ತ (ನಾ). ಕುದುರೆ ಸವಾರ; ಅಶ್ವಾರೋಹಿ : "ಘೋಟಾರೂಢನೆ ರಾವುತಂ" (ಶಶಂಖ. ೩೯); ರಾವುತನ ತಲೆ ಕುದುರೆಯ ಕಾಲು ಬಲ್ಲಹದ ಮೊನೆ ಅಲ್ಲಿಯೆ ಅಡಗಿತ್ತು (ಸಕವ. ೪. II. ೬೬೫-೬೪); ತೆಪ್ಪವ ತೆಗೆವಂತೆ ತೆಗೆದೇಱಿ ರಾವುತ ರೊಪ್ಪದಿ ಬಂದರೋಲೈಸಿ (ಭರತ. ೨೩-೩೦); ಉಭಯಪಾರ್ಶ್ವದಲ್ಲಿಯೂ ರಾವುತರ ಪಹರೆ (ಶ್ರೀರಾಯು. ೪೩). **ರಾಉತ** : ಸಿರಿಯಂಗರಾಉತರಿಗೆ ಖಿ ೩ ವೊಗಂಗೊಡಗೆ (ಎಕ. XIV, ಎಳಂದೂ. ೨೩-೦೫; ಸು. 1448). **ರಾಉತ್ತ**. **ರಾವುತ್ತ** : ರಾವುತ್ತರಂ ತಳ್ತಿಱಿದು (ಎಕ. VIII, ಸೊರಬ. ೨೨೩-೦೦; 1152 ?) ; ರಥಿಕರಿಗೆ ಮಾವಂತರಿಗೆ ಕಾಲಾಳಿಂಗೆ ರಾವುತ್ತರಿಗೆ ಕೊಡಿಸಿದನವರ ವರಿಗವರಂಗದಾಯುಧವ (ಕುವ್ಯಾದ್ರೋ. ೦೫-೨೦); ಪಡೆವಳ್ಳರ್ ರಾವುತ್ತರ್ ಸಾದಿಗಳ್ . . . ದಂಡೆತ್ತಿ ಪೋದರ್ (ರಾಮಾಶ್ವ. ೯೩-೨೯). **ರಾವ್ತ** : ಭಯದಿ ತೇಜಿಯನಿಳಿದು ರಾವ್ತರು ಕರವ ಮುಗಿದರು ಕೊರಳ ಸಲಹೆನುತ (ಕುವ್ಯಾದ್ರೋ. ೫-೦೪); ಮೊಱೆವ ಬೊಬ್ಬೆಗೆ ರಾವ್ತರಂ ಬಿಸುಟು ವಾಜಿಗಳ್ ಪರಿದಾಡಿದುವು (ತೆಂಪು. ೨೪-೨೪). **ರಾಹುತ** : " ಘೋಟಾರೂಢನೆನಲು ರಾಹುತ " (ಕಬಿಕಂ. ೦೫೬); ಶ್ರೀಮನ್ಮಹಾವಡ್ಡವ್ಯವಹಾರಿ ಕಲ್ಲ ಹಣ ರಾಹುತರುಂ (ಎಕ. V, ಹಾಸನ. ೦೪೯-೦೪; 1113 ?) ; ಮದಕರಿಯು ಮಾಹುತನ ಕುದುರೆ ತಾ ರಾಹುತನ ಹದುಳವನಱಿದು ನಡೆವಂತೆ ಸೂಳೆ ತನಗೊದಗುವರನಱಿಗು (ಸರ್ವಜ್ಞ. ೦೯೦೫). **ರಾಹುತ್ತ** : ಹೊಸ ಬಿರುದರ ಗಂಡೋರಾಯ ರಾಹುತ್ತಮಿಂಡಃ (ಎಕ. VII, ಶಿವಮೊ. ೯೩-೦೦೩; 1587).

**ರಾವುತರಾಯ**, **ರಾಉತರಾಯ**, **ರಾಉತ್ತರಾಯ**, **ರಾವುತ್ತರಾಯ**, **ರಾಹುತರಾಯ** = ಅಶ್ವಾರೋಹಿಗಳಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ಶ್ರೀಮನುಮಹಾಪ್ರಧಾನಿಯಿಮ್ಮಡಿರಾವುತರಾಯ ರಾಯಕುಮಾರ (ಎಕ. VII, ಶಿವಮೊ. ೬೦-೭ ; 1787); ಅರಸುಗಳವರ ಕಾರ್ಯಕ್ಕೆ ಕರ್ತರಾದ ರಾಉತರಾಯರು . . . ಕೊಟ ಗ್ರಾಮ (ಎಕ. XI, ದಾವಣ, ೦೪೮-೮; 1684 ?) ; ರಾಉತ್ತರಾಯರುಂ ಜವನಿಕೆ ನಾರಾಯಣರುಂ ಶ್ರೀ ರಾಮಕೃಷ್ಣಪದಪದ್ಮಾರಾಧಕರುಮಪ್ಪ ಶ್ರೀಮನುಮಹಾಪ್ರಧಾನಂ ಪೆರುಮಾಳೆದೇವ (ಎಕ. XI, ಚಿತ್ರದು. ೦೨-೦೩; 1286); ಸ್ವಸ್ತಿಪುರ ವರಾಧೀಶ್ವರ ಇಂಮಡಿರಾಉತ್ತರಾಯ ಶ್ರೀಪೆರುಮಾಳದಣ್ಣಾಯಕರ ಸುಪುತ್ರಂ (ಎಕ. XIV, ಗುಂಡ್ಲುಪೇ. ೦೩೦-೯ ; 1310) ; ರಾವುತ್ತರಾಯಂ (ಕಬ್ಬಿಷ. ೨೯೫ ಕ್ರಯೋ); ಶ್ರೀಸೋಮ ಶಿಲಾದೇಉ ರಾಹುತರಾಯ ಮಹಾ ಪಾತ್ರ ಅರಸುಗಳ ಕಾರ್ಯಕ್ಕೆ (ಎಕ. XIV, ಗುಂಡು ಪೇ. ೦೩೨-೩; 1540).

[←ಮರಾ. ರಾಉತ್, ರಾಊತ್, ರಾವುತ್./ತಮಿ. ರಾವುತ್ತ, ಇರಾವುತ್ತ; ತುಳು. ರಾವುತೆ, ರಾಹುತೆ ; ತೆಲು. ರವುತು, ರಾವುತು, ರಾವುತ್ತು, ರಾಹುತು, ರಾಹುತ್ತು]

**ರಾವುತಟ್ಟು** (ಕ್ರಿ). ದೆವ್ವ ಭೂತ ಮುಂತಾದುವುಗಳ ಬಾಧೆ ತಟ್ಟು : ಗರ ಬಡಿದಂತಾಗು : ಅವನ ಮುಖ ರಾವುತಟ್ಟಿದಂತಿತ್ತು (ರೂಢಿ). [ರಾವು$_3$ + ತಟ್ಟು$_1$]

**ರಾವುತಪಡೆ** (ನಾ). ಕುದುರೆಗಳ ಪಡೆ ; ಅಶ್ವಬಲ ; ಅಶ್ವಾರೋಹಿಗಳ ತಂಡ : ಕಡೆಮೊದಲಿಲ್ಲದೆ ಖಳರಾಯರಾವುತಪಡೆ ಬಿದ್ದುದಿತ್ತ ಮೇಣತ್ತ (ಮೋಹತ. ೪೦-೭೨). [ರಾವುತ + ಪಡೆ$_2$]

**ರಾವುತಪಾಯಿಕೆ** (ನಾ). ಕುದುರೆಸವಾರಿ ; ಅಶ್ವಾರೋಹ : ಕಾಟಣ್ಣನ ರಾವುತಪಾಯಿಕೆಯ ಸಘಾಟಿಕೆಯನು ಕಂಡು ಮೆಚ್ಚಿ ನೋಟಕರೊಲಿದು ಕೊಂಡಾಡಿದರು (ಕುರಾಸಾಂ. ೦೩-೦೯). [ರಾವುತ + ಪಾಯಿಕೆ$_0$]

**ರಾವುತಿಕೆ** (ನಾ). = ರಾವುತಪಾಯಿಕೆ : ಆದರಿಸಿ ರಾವುತಿಕೆಯಾದುದ ಭೇದವಿಲ್ಲದೆ ಮಾಳ್ಪ ಹಯವನು ಸಾಧನೆಯ ಧನಪತಿಯ ದಿಕ್ಕಿಗೆ ಹೋಗದಿರಿ (ಸೌಶತ. ೩-೫); ಕುದುರೆಯ ಹಿಡಿಯ ಹೇಳಿದರೆ ರಾವುತಿಕೆಯ ಮಾಡಿದರೆ ಒಪ್ಪುವರೇ (ಸಿದ್ಧೇಪ. ೫೭-೭); ನಿಡುಮಾಳಕೆ ತೇಜಿಯ ತೆಗೆದು ಲೀಲೆಯೊಳೊಂದೆರಳ್ಬೀದಿಯನೇಱಿ ನೃಪಾಲ ರಾವುತಿಕೆದೋಱಿದನು (ಭರತ. ೨೯-೨೨). [ರಾವುತ + — ಇಕೆ]

**ರಾವುತು** (ನಾ). ಮೆಚ್ಚುಗೆಯ ಒಂದು ಮಾತು ; ಕೊಂಡಾಟದ ಒಂದು ನುಡಿ : ಪೂತು ರಾವುತೆನೆ (ಎಕ. VI, ತರೀಕೆ. ೪೫-೨೪; 1196) ; ಅರರೆ ರಾವುತು ಜಾಗು ಸ್ವಾಮಿಯ ಹರಿಬಕೋಸುಗ ಹಗೆಯ ಹೊಯ್ದಿರಿ (ಕುವ್ಯಾಕ. ೩-೪).

**ರಾವುತೆಗೆ** (ಕ್ರಿ). ದೆವ್ವ, ಗ್ರಹ ಮೊದಲಾದುವುಗಳ ಪೀಡೆಯನ್ನು ಮೈ ಮೇಲಿನಿಂದ ಬಿಡಿಸು,– ಓಡಿಸು : ಬಲಿಕೊಟ್ಟು ರಾವುತೆಗೆಯಬೇಕು (ರೂಢಿ). [ರಾವು$_3$ + ತೆಗೆ$_1$]

**ರಾವುತ್ರ** ' ರಾವುತ ' ನೋ.

**ರಾವುಬಡಿ** (ಕ್ರಿ). = ರಾವುತಟ್ಟು : ಅವನು ರಾವುಬಡಿದವನಂತೆ ಸುಮ್ಮನೆ ಕುಳಿತುಬಿಟ್ಟಿದ್ದ (ರೂಪತ. ೦೯); ಅವರ ಮುಖಗಳು ರಾವುಬಡಿದಂತೆ ವಿಕಾರವಾಗಿ ಕಾಣುತ್ತಿದ್ದುವು (ಕೃಪರು. ೩೦೦). [ರಾವು$_3$ + ಬಡಿ$_1$]

**ರಾವುಮುಖ** (ನಾ). ಗರಬಡಿದಂತಿರುವ ಮುಖ ; ಭಯದಿಂದ ವಿಕಾರ ವಾದ ಮುಖ : ಪ್ರೇತಕಳೆಯ ನಿನ್ನ ರಾವುಮುಖ ನೋಡಿ ಸಾವೆ ಸತ್ತಿತೂ ಏನೊ (ನಾದರೀ. ೪೦-೭). [ರಾವು$_3$ + ಮುಖ]

**ರಾವುಮೊಗ** (ನಾ). ಭಯಂಕರವಾದ ಮುಖ ; ಹೆದರಿಕೆಯನ್ನುಂಟು ಮಾಡುವಂಥ ಮುಖ : ಜಡೆಗಟ್ಟಿದ ಮೊರಟುಗುರುಳು – ಕಿಸಿಬಾಯಿ– ದೊಡ್ಡಹೊಟ್ಟೆ – ರಾವುಮೊಗಗಳಿಂದ ಅವನು ಯಮದೂತನಂತೆ ಭೀಷಣ ನಾಗಿದ್ದನು (ಶ್ರೀರಾಪ. ೩೪). [ರಾವು$_3$ + ಮೊಗ]

**ರಾವುರೆ** (ನಾ). ಕೊಂಡಾಟದ ಒಂದು ನುಡಿ : ರಾವುರೆ ಅಮರನೀತಿ ಪೂತುರೆ ಅಮರನೀತಿ (ಅಬೀರ. ದೇ. ೦೦೪-೫) ; ಎಲುವ ಗದೆಯಿಂ ಹಿಟ್ಟು ಗಿಟ್ಟೋ ಹಳುರೆ ಹಳುರೇ ರಾವು ರಾವುರೆಯೆಂದು ಖಳರುಲಿಯೆ (ಕೌಶಿರಾ. ೩೨-೨೦).

**ರಾವುಹಿಡಿ** (ಕ್ರಿ). = ರಾವುತಟ್ಟು : ರಾವುಹಿಡಿದುಹೋಗಿದ್ದ ಮುಖದಿಂದ ಸುಂದರಮ್ಮ ಗೋಳಾಡುತ್ತ ಹೊರಕ್ಕೆ ಬಂದಳು (ಸಂಚತ್ರ. ೨೨) ; ಅವನು ಅಬ್ಬರಿಸಿದರೆ ಯಾರಾದರೂ ತುಂಬಿದ ಬಸುರಿ ಇದ್ದರೆ ರಾವುಹಿಡಿದು ಹೋಗುತ್ತಿದ್ದಳು (ಪಮೂರು. ೩೦೩). [ ರಾವು$_3$ + ಹಿಡಿ$_1$ (<ಪಿಡಿ$_1$) ]

**ರಾವುಹೊಡೆ** (ಕ್ರಿ). = ರಾವುತಟ್ಟು : ಅವನ ಮೋರೆ ರಾವುಹೊಡೆದಿತ್ತು (ಸಪುಜೀ. ೭೫೦) ; ಅವರ ಕೂಗಾಟಕ್ಕೆ ಓಣಿಗೆ ಓಣಿಯೇ ರಾವುಹೊಡೆದಂತಾ ಗಿತ್ತು (ಗಂಪಾಯು. ೨೫೨). [ರಾವು$_3$ + ಹೊಡೆ$_1$ (<ಪೊಡೆ$_1$) ]

**ರಾವುಳ** (ನಾ). ಒಂದು ಬಗೆಯ ತೆರಿಗೆ : ಐನೂರ್ವರಾಹು ಮಲ್ಲೇಶ್ವ ರಂಗೆ ಪೂಜೆಗೆ ಲೋಕಾಭರಣಮುನಿಗೊಲ್ದು ಹೆಜ್ಜುಂಕ ರಾವುಳದ ಪಾಗಮಿತ್ತ ರಾಜೇಂದ್ರಾರ್ಕ್ಕರ್ (ಸೌಇಇ. IX–i, ೩೯೦-೮; 1181). [ ? ]

**ರಾವ್ತ** ' ರಾವುತ ' ನೋ.

**ರಾಶಿ** (ನಾ). ೧. (ಧಾನ್ಯ ಮೊದಲಾದ ವಸ್ತುಗಳ) ಗುಪ್ಪೆ; ಒಟ್ಟಿಲು : "ಪುಂಜಃ, ರಾಶಿಃ, ಉತ್ಕರಃ, ಕೂಟಂ – ೪ ಧಾನ್ಯಾದಿಗಳ ರಾಶಿ" (ಸಿದ್ಧಾಂತ. ೦೭೭); ಕಾಳನು ತೂರುತ ರಾಶಿಯ ಹೇರುತ ಕುಣಿವರು ರೈತರು ಊರಲ್ಲಿ (ಕಬಳ. ೩-೭೭). ೨. ಗುಂಪು; ಸಮೂಹ : "ನಿಕರಃ. . . ರಾಶಿಃ . . . ಸ್ತೋಮಃ.– ಈ ೩೯ ಸಮೂಹಂ" (ಹಲಾಯು. ೦೦೪-೦); ಮುದ್ರಿಸಿತು ಮಂಡೆಯುಂ ಕೆನ್ನವಿರ ರಾಶಿ (ಶ್ರೀರಾಪಾ. ೦೩-೩೪೨). ೩. ಹೆಚ್ಚು; ಬಹಳ : ರಾಶಿ ಅನ್ನ ಹಾಕಬೇಡ, ಎಷ್ಟು ಬೇಕೋ ಅಷ್ಟು ಹಾಕು (ರೂಢಿ). ೪. ಮಧ್ಯಮತರಗತಿಯಂದು: ' ರಾಶಿಚಿಕ್ಕಣಿ ' ಪರಾ. ೫. [ಶೈವ] ಕಾಳಾಮುಖ ಮತ್ತು ಪಾಶುಪತಪಂಥದವರ ಹೆಸರಿನ ಕೊನೆಯಲ್ಲಿ ಸೇರುವ ಒಂದು ಪದ: ಶ್ರೀವಿದ್ಯಾರಾಶಿಪಂಡಿತ ದೇವರನ್ನು ಶಾಸನವೊಂದು ಸ್ತುತಿಸುತ್ತದೆ (ಕಶಾಅ. ೦೨೯). ೬. [ಜ್ಯೋತಿ] ಜ್ಯೋತಿಶ್ಚಕ್ರದಲ್ಲಿರುವ

ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಮತ್ತು ಮೀನ ಎಂಬ ಹನ್ನೆರಡು ವಿಭಾಗಗಳು : ಧನು ಝಷಂ ಸುಂದರಿ ಮಿಥುನಂ ದ್ವಿಸ್ವಭಾವರಾಶಿಗಳೆನಿಕುಂ (ಜಾತಕ. ೦-೨೩); ಸೂರ್ಯ . . . ವರ್ಷದ ಹನ್ನೆರಡುತಿಂಗಳುಗಳಲ್ಲಿ ಹನ್ನೆರಡು ರಾಶಿಗಳಲ್ಲಿ ಇರುತ್ತಾನೆ (ಆಕಾಶ. ೯೩). ೭. [ಗಣಿತ] ಕೂಡುವುದು, ಗುಣಿಸುವುದು ಮೊದಲಾದ ಗಣಿತಪ್ರಕ್ರಿಯೆಗಳಲ್ಲಿಯ ಸಂಖ್ಯೆಗಳ ಗುಂಪು: ಸಂಖ್ಯಾನವು (ಗಣಿತವು) ಹತ್ತು ವಿಷಯಗಳನ್ನೊಳಗೊಳ್ಳುತ್ತದೆ : ಪರಿಕರ್ಮ, ವ್ಯವಹಾರ, ರಜ್ಜು, ರಾಶಿ, ಕಲಾಸವರ್ಣ, ಯಾವತ್‌ತಾವತ್, . . . ವರ್ಗವರ್ಗ ಮತ್ತು ವಿಕಲ್ಪ (ಗಣಿತ. ೨೦೦). 'ತ್ರೈರಾಶಿ', 'ಭಿನ್ನರಾಶಿ' ಪರಾ. [ಸಂ.]

**ರಾಶಿಕುಂಡಲಿ** (ನಾ). [ಜ್ಯೋತಿ] ನಿಶ್ಚಿತಕಾಲದಲ್ಲಿ ಗ್ರಹಗಳ ಗತಿಯನ್ನು ಗುರುತಿಸುವ ಹನ್ನೆರಡುಮನೆಗಳ ರೇಖಾಕೃತಿ : ಆ ಗ್ರಾಮದಲ್ಲಿ ಯಾರ ಮನೆಯಲ್ಲಿ ಮಗು ಹುಟ್ಟಿದರೂ ಶಾಸ್ತ್ರಿಗಳೇ ಅವರ ರಾಶಿಕುಂಡಲಿಯನ್ನು ಬರೆಯುವ ವಾಡಿಕೆ (ಕೊರ). [ಸಂ. ರಾಶಿಕುಂಡಲೀ]

**ರಾಶಿಚಕ್ರ** (ನಾ). ೧. ಆಕಾಶದಲ್ಲಿ ಗ್ರಹಗಳು ಸಂಚರಿಸುವ ಮಂಡಲಾಕಾರವಾದ ಮಾರ್ಗ,-ಪಥ : ಆಕಾಶದಲ್ಲಿ ನಾವು, ಸೂರ್ಯ, ಚಂದ್ರ ಮತ್ತು ಇತರ ಗ್ರಹಗಳ ಚಲನವಲನಗಳನ್ನು ಗಮನಿಸುವಾಗ, ನಕ್ಷತ್ರಗಳ ನಡುವೆ ಯಾವುದೋ ಒಂದು ರಾಜಮಾರ್ಗವಿರಬೇಕು ಎಂದು ಭಾಸವಾಗುತ್ತದೆ . . . ಈ ರಾಜಮಾರ್ಗವನ್ನು ರಾಶಿಚಕ್ರ ಎಂದು ಕರೆದರು (ಆಕಾಶ. ೯೩). ೨. = ರಾಶಿಕುಂಡಲಿ. [ಸಂ.]

**ರಾಶಿಚಿಕ್ಕಣಿ** (ನಾ). ಹೆಚ್ಚು ಬಲಿಯದ. ಹಾಗೂ ಅತಿ ಎಳೆಯದೂ ಅಲ್ಲದ ಅಡಕೆ : ಮಧ್ಯಮದರ್ಜೆಯ ಅಡಕೆ : ಅಡಿಕೆಗಳು . . . ಮಧ್ಯ ಎಳಸಾದರೆ ರಾಶಿಚಿಕ್ಕಣಿಯಾಗುವವು (ಕೃಷಿಶ್ರ. ೦೫೨). [ರಾಶಿ + ಚಿಕ್ಕಣಿ$_1$]

**ರಾಶಿಭವಿಷ್ಯ** (ನಾ). [ಜ್ಯೋತಿ] ವ್ಯಕ್ತಿಯ ಜನ್ಮರಾಶಿಯನ್ನು ನೋಡಿ ಹೇಳುವ ಭವಿಷ್ಯ: ಚಕ್ರಬಂಧದ ಒಗಟು, ರಾಶಿಭವಿಷ್ಯ, ಲೂಟಿ, ಲಾಟರಿ (ಸೂರ್ಯಶಾ. ೫೦-೭). [ಸಂ.]

**ರಾಶಿವಾಳ** (ನಾ). (?) : ಚೌರಾಸಿಲಕ್ಷಜೀವರಾಶಿಗಳಿಗೆ ರಾಶಿವಾಳ [ಪಾಠಾಂ. ರಾಶಿವಾಳ, ರಾಶಿವಾಳುಕ, ರಾಶಿವಾಳಕ]ತಾನಾಗಿ (ಅವಶಂ. ೩-೮). [ ? ]

**ರಾಶೀಶ** (ನಾ). [ಜ್ಯೋತಿ] ರಾಶಿಯ ಒಡೆಯ,- ಅಧಿಪತಿ : ಕ್ರಮದಿಂ ದ್ವಾದಶಭಾಗವೊಂದು ಗ್ರಹಕಕ್ಕುಂ . . . ಪ್ರಥಮಕ್ಕೆ ತತ್ಪ್ರಥಮ ರಾಶೀಶಂ (ಜಾತಕ. ೦-೨೭). [ಸಂ.]

**ರಾಶ್ನೆ**, ರಾಷ್ನೆ, ರಾಸ್ನೆ (ನಾ). ಒಂದು ಬಗೆಯ ವನಸ್ಪತಿ : "ನಾಕುಲಿ- ಈಶ್ವರಿ, ಸರ್ಪಾಕ್ಷಿ, ರಾಶ್ನೆ, ಕಾಡುವಿಟ್ಟಿ, ಒಪ್ಪಲಿ, ತುಳಸಿ" (ಓಷಂ. ೯೩). **ರಾಷ್ನೆ** : ಬಿಲ್ವಪತ್ರೆಯ ಬೇರು ಆ ಹಣ್ಣಿನ ತಿರುಳು ಕಳ್ಳಂಗಡಲೆ ಜೊಳ್ಳಂಗಡಲೆ ಅಕಲಕರೆ ರಾಷ್ನೆ ಸುಂಟಿ ಗಂಟುಪರಂಗಿಯಿವ ಕಷಾಯವನಿಟ್ಟು (ಜಾತಕ. ೦೯-೬). **ರಾಸ್ನೆ** : "ಏಲಾಪರ್ಣೀ, ಸುವಹಾ, ರಾಸ್ನಾ, ಯುಕ್ತರಸಾ-ಈ ೪ ರಾಸ್ನೆ" (ನಾಶಶಾ. ೦೦೦); ರಾಸ್ನೆ, ಅಮೃತವಳ್ಳಿ . . . ಕಷಾಯವ ಕಾಸಿ . . . ಕೊಡಿಸಲು ಸಂಧಿಕಸನ್ನಿಪಾತ ಪರಿಹರವಹುದು (ವೈದ್ಯಶಾ. I. ೬೬). [<ಸಂ. ರಾಸ್ನಾ]

**ರಾಷ್ಟ್ರ** (ನಾ). ೧. ಒಂದು ಆಡಳಿತದ ವ್ಯಾಪ್ತಿಗೆ ಒಳಪಟ್ಟ, ಅನೇಕ ರಾಜ್ಯಗಳ ಸಮುದಾಯ : ದೇಶ ; ನಾಡು : "ವಸುಮತೀಶರಿಗೆ ತಮಗೆಸೆತು ಮಹಿಯುಂಟದಱ ಪೆಸರು ರಾಷ್ಟ್ರಂ" (ಮಂಗರಾ. ೫೬-೨) ; ರಾಜನಿಲ್ಲದ ರಾಷ್ಟ್ರವು ವಿನಾಶಹೊಂದುವುದು (ರಾಷ್ಟ್ರಾಂಗ. ೦೫). ೨. ಸಾಮ್ರಾಜ್ಯ: ಚಕ್ರಾಧಿಪತ್ಯ. ೩. ಒಂದು ದೇಶದ ಜನತೆ,- ಪ್ರಜಾವರ್ಗ. [ಸಂ.]

**ರಾಷ್ಟ್ರಕ** (ನಾ). ದೇಶದಲ್ಲಿರುವವನು ; ಪ್ರಜೆ : ಪ್ರಜೆಯೆಂದರೆ ಇಲ್ಲಿ ರಾಷ್ಟ್ರಕಾರ್ಯಸಮರ್ಥನಾದ ಪ್ರಜೆಯೆಂದು ಭಾವ. ಅಂಥ ಪ್ರಜಾವ್ಯಕ್ತಿಯೇ ರಾಷ್ಟ್ರಕ (ಸಿಟಿಜನ್) (ರಾಷ್ಟ್ರಾಂಗ. ೮೩೦). [ಸಂ.]

**ರಾಷ್ಟ್ರಕೂಟ** (ನಾ). ಕನ್ನಡನಾಡಿನ ಒಂದು ರಾಜವಂಶದ ಹೆಸರು: ಕುಂತಳ ದೇಶಮಂ ಸಮರಧಾರಿಣಿಯಲ್ಲಿಯೆ ರಾಷ್ಟ್ರಕೂಟಭೂಕಾಂತರನೆಲ್ಲರಂ ನಿಜಭುಜಾಬಳದಿಂದವೆ ಕಾದಿ ಗೆಲ್ದು (ಕೊಲ್ಹಾ.ಶಾ. ೯-೬; 1147) ; ರಾಷ್ಟ್ರಕೂಟದವರ ಭಾಷೆಯು ಕನ್ನಡವೇ ಆಗಿತ್ತು (ದಶಾಇ. ೯೦). [ಸಂ.]

**ರಾಷ್ಟ್ರಗೀತೆ** (ನಾ). ದೇಶದ ಹಿರಿಮೆಯನ್ನು ಸೂಚಿಸುವ ಸಂಕೇತವಾಗಿ ಆರಿಸಿಕೊಂಡಿರುವ ಒಂದು ಹಾಡು : ಠಾಕೂರರು . . . ಜನಗಣಮನ ಗೀತೆಯನ್ನು ರಚಿಸಿದರು. ಅದು ಸಾರ್ವಭೌಮಸ್ವತಂತ್ರಭಾರತದ ಗಣರಾಜ್ಯಗಳ ರಾಷ್ಟ್ರಗೀತೆಯೆಂದು ಸ್ವೀಕೃತವಾಗಿದೆ (ಠಕೂರ್‌ಕಾ. ೬೬) ; ನಾಲ್ಕು ನಿಟ್ಟಿನಿಂದಲೂ ಕೇಳಿ ಬರುತ್ತಿತ್ತು ಭಾರತದ ರಾಷ್ಟ್ರಗೀತೆ (ಆತ್ಮಾರ್ಥ. ೦೯೨). [ಸಂ. ರಾಷ್ಟ್ರಗೀತಾ]

**ರಾಷ್ಟ್ರಧ್ವಜ** (ನಾ). ದೇಶದ ಸಂಕೇತವಾಗಿ ರಚಿಸಿಕೊಂಡಿರುವ ಬಾವುಟ: ತ್ರಿವರ್ಣರಾಷ್ಟ್ರಧ್ವಜವೇ ಭಾರತಮಾತೆಯ ಪವಿತ್ರಪ್ರತೀಕ (ರಾಷ್ಟ್ರ. ೦೯೨). [ಸಂ.]

**ರಾಷ್ಟ್ರಪಕ್ಷಿ** (ನಾ). ದೇಶದ ವಿಶಿಷ್ಟಸಂಕೇತವೆಂದು ಆಯ್ಕೆಯಾಗುವ ಪಕ್ಷಿ : ನವಿಲು ಈಗ ಭಾರತದ ರಾಷ್ಟ್ರಪಕ್ಷಿ (ಕವಿಕೋ. X, ೦೧೦). [ಸಂ. ರಾಷ್ಟ್ರಪಕ್ಷಿನ್]

**ರಾಷ್ಟ್ರಪತಿ** (ನಾ). ೧. ಚಕ್ರವರ್ತಿ; ಸಾಮ್ರಾಟ. ೨. ದೇಶದ ಒಡೆಯ; ನಾಡಿನ ಅಧಿಪತಿ : ರಾಷ್ಟ್ರಪತಿ ವಿಷಯಪತಿ ಗ್ರಾಮಕೂಟಕಾಯುಕ್ತಕ ನಿಯುಕ್ತಾಧಿಕಾರಿಕ ಮಹತ್ತರಾದಿ ಸಮೇತದಿಂ (ಎಇ.XII. ೨೬೩-೨೦೦; 1077); ನಿಮಗೆ ಅದಿನ್ನೂ ಹೊಸದಾಗಿರದಿದ್ದರೂ ರಾಷ್ಟ್ರಪತಿಯಾಗಿ ನಿವೇದಿಸುತ್ತೇನೆ (ವೀರಶಂ. ೯೩). ೩. ಭಾರತದ ಸಂವಿಧಾನದಂತೆ ಚುನಾಯಿತನಾದ ದೇಶದ ಅಧ್ಯಕ್ಷ; ದೇಶದ ಸರ್ವೋಚ್ಚ ಅಧಿಕಾರಿ : ಭಾರತಕ್ಕೆ ಒಬ್ಬರು ರಾಷ್ಟ್ರಪತಿಯವರು ಇರತಕ್ಕದ್ದು (ಭಾರಾವ. ೨೬) ; "ಪ್ರೆಸಿಡೆಂಟ್" ಪದಕ್ಕೆ "ಪತಿ"—ರಾಷ್ಟ್ರಪತಿ ಎಂದು ಕೆಲವರು ಸಮಾನಪದ ಮಾಡಿಕೊಂಡಿದ್ದಾರೆ (ರಾಷ್ಟ್ರಾಂಗ. ೦೦೯ ಅ೨೬). [ಸಂ.]

**ರಾಷ್ಟ್ರಪ್ರಜ್ಞೆ** (ನಾ). 'ಇದು ನನ್ನ ದೇಶ' ಎಂಬ ಭಾವನೆ; ದೇಶಾಭಿಮಾನ : ರಾಷ್ಟ್ರಪ್ರಜ್ಞೆ, ವೈಜ್ಞಾನಿಕದೃಷ್ಟಿ . . . ನಮ್ಮಲ್ಲಿ ಜಾಗ್ರತವಾಗಿದ್ದರೆ, ನಮ್ಮ ದೇಶ ಭಾರತವಾಗಿ ಬಹುದಿನ ಉಳಿಯುವುದೂ ಕಷ್ಟ ಎನ್ನಿಸುತ್ತದೆ (ಹೇಮಕೂ. ೨ ಮುಮ್ಮುಖ). [ಸಂ. ರಾಷ್ಟ್ರಪ್ರಜ್ಞಾ]

**ರಾಷ್ಟ್ರಸ್ವಾಮ್ಯ** (ನಾ). ದೇಶದ ಒಡೆತನ,-ಯಜಮಾನ್ಯ: ಪ್ರಜಾಪ್ರಭುತ್ವ ಕ್ರಮದಲ್ಲಿ ರಾಷ್ಟ್ರವೇ ಭೂಸ್ವಾಮಿಯಾಗುವುದು. ಆಗ ಉಭಯಪಕ್ಷದವರಿಗೂ ರಾಷ್ಟ್ರಸ್ವಾಮ್ಯವೇ ಲಕ್ಷ್ಯವಾಗುವುದು (ಭಾರಜ. ೩೩೧). [ಸಂ.]

**ರಾಷ್ಟ್ರಾಧ್ಯಕ್ಷ** (ನಾ). ದೇಶದ ಒಡೆಯ : ಅವನೇ ದೊರೆ ಅಥವಾ ರಾಜ ಅಥವಾ ರಾಷ್ಟ್ರಾಧ್ಯಕ್ಷ (ರಾಷ್ಟ್ರಕಾ. ೯೬). [ಸಂ.]

**ರಾಷ್ಟ್ರಾಭಿಮಾನ** (ನಾ). ದೇಶದ ಮೇಲಿನ ಮಮತೆ; ದೇಶಭಕ್ತಿ: ಇಟಲಿ, ಜರ್ಮನಿ . . . ಮುಂತಾದ ದೇಶಗಳು ಹೇಗೆ ತಮ್ಮ ರಾಷ್ಟ್ರಾಭಿಮಾನವನ್ನು . . . ಸಾಧಿಸಿಕೊಂಡವು ಎಂದು ಅರಿತು, ಉದ್ವೇಗಗೊಂಡರು (ಭಾರದ. ೯೨೭). [ಸಂ.]

**ರಾಷ್ಟ್ರಿಕ** (ಗು). ೧. ದೇಶಕ್ಕೆ ಸಂಬಂಧಿಸಿದ ; ದೇಶದ : ಕವಿಗಳು ಪಾರಮಾರ್ಥಿಕವಿಷಯಗಳಿಗಿಂತ ರಾಷ್ಟ್ರಿಕ, ಸಾಮಾಜಿಕ, ಚಾರಿತ್ರಿಕ ಮುಂತಾದ ಲೌಕಿಕಪ್ರಮೇಯಗಳಿಗೆ ಹೆಚ್ಚು ಗಮನಕೊಡುವರು (ಕಪು. ೪೧೮೩). (ನಾ). ೨. ರಾಷ್ಟ್ರದ ಹಕ್ಕುಬಾಧ್ಯತೆಯನ್ನು ಪಡೆದಿರುವವನು ; ಪೌರ ; ಪ್ರಜೆ. ೩. = ರಾಷ್ಟ್ರಕೂಟ : ಈ ರಾಷ್ಟ್ರಿಕರು ಅಥವಾ ರಾಷ್ಟ್ರಕೂಟರು

ಎಂಬವರೇ ಮಹಾರಾಷ್ಟ್ರರೆಂದು ಹೆಸರಿಟ್ಟುಕೊಂಡು ತಮ್ಮ ರಾಷ್ಟ್ರಕ್ಕೆ ಮಹಾರಾಷ್ಟ್ರವೆಂದು ಹೆಸರಿಟ್ಟರು (ಕರ್ನಾ. ೦೯). ೪. ರಾಜ್ಯದ ಆಡಳಿತವನ್ನು ನಡೆಸುವವನು ; ರಾಜ್ಯಪಾಲ : ರಾಷ್ಟ್ರಿಕ ಅಥವಾ ಭೋಜಕ ಇವು ಮೂಲತಃ ಆಡಳಿತದ ಅಧಿಕಾರಕ್ಕೆ ಸಂಬಂಧಿಸಿದ ಪಾರಿಭಾಷಿಕಶಬ್ದಗಳು (ಕರ್ನಾಟಿ. ೧೩೭). [ಸಂ.]

**ರಾಷ್ಟ್ರಿಕೆ** (ನಾ). ಒಂದು ಬಗೆಯ ಮುಳ್ಳುಬದನೆಕಾಯಿ ; ಹೆಗ್ಗುಳ್ಳ : "ನಿದಿಗ್ಧಿಕಾ, ಸ್ಪೃಶೀ, ವ್ಯಾಘ್ರೀ, ಬೃಹತೀ . . . ರಾಷ್ಟ್ರಿಕಾ_೧೦ ಹೆಗ್ಗುಳ್ಳದ ಹೆಸರುಗಳು" (ಸಿದ್ಧಾಂತ. ೦೩೩). [ಸಂ. ರಾಷ್ಟ್ರಿಕಾ]

**ರಾಷ್ಟ್ರಿಯ** (ಗು). ೧. ದೇಶಕ್ಕೆ ಸಂಬಂಧಿಸಿದ. (ನಾ). ೨. ರಾಜನ ಭಾವಮೈದುನ,—ಶ್ಯಾಲಕ: "ರಾಷ್ಟ್ರಿಯಃ, ರಾಜ್ಯಃ, ಸ್ಯಾಲಃ_ಅರಸಿನ ಹೆಂಡತಿಯ ಒಡಹುಟ್ಟಿದವನ ಹೆಸರು" (ಸಿದ್ಧಾಂತ. ೬೦). [ಸಂ.]

**ರಾಷ್ಟ್ರೀಕರಣ** (ನಾ). (ಕೈಗಾರಿಕೆ ಇತ್ಯಾದಿಗಳನ್ನು) ದೇಶದ ಸ್ವಾಮ್ಯಕ್ಕೆ ಒಳಪಡಿಸುವುದು ; ಸರ್ಕಾರದ ಅಧೀನಕ್ಕೆ ತೆಗೆದುಕೊಳ್ಳುವುದು : ಕೈಗಾರಿಕೆಗಳ ರಾಷ್ಟ್ರೀಕರಣವಾದ ಮೇಲೂ ವಿಜ್ಞಾನದ ಮೇಲೆ ಹೆಚ್ಚಿನ ಪರಿಣಾಮವಾಗಿಲ್ಲ (ತಿಲ್ಯನಾ. ೦೯೩). [ಸಂ.]

**ರಾಷ್ಟ್ರೀಯ** (ಗು). ೧. = ರಾಷ್ಟ್ರಿಯ ೧ : ರಾಷ್ಟ್ರೀಯ ರಕ್ಷಣಾಬಲದವರು . . . ಹೆಚ್ಚಾಗಿ ಬೆಳೆಯಿರೆಂದು ಸ್ವಾವಲಂಬನೆಯ ಸಂದೇಶವನ್ನು ಸಾರುತ್ತಿರುವರು (ಕರಶಿ. ೬೩). (ನಾ). ೨. = ರಾಷ್ಟ್ರಿಯ ೨ : ಆರ್ಯನೆ, ರಾಷ್ಟ್ರೀಯನಾದ ಮಿತ್ರಾವಸುವು ಮಹಾರಾಜನ ಸನ್ನಿಧಿಯಿಂದ ಇಲ್ಲಿಗೆ ನಮ್ಮನ್ನು ಕಳುಹಿಸಿ ಕೆಲವು ದಿವಸಗಳಾದುವು (ನಾಗಾನಂ. ೮೦-೩). ೩. ರಾಜ ; ದೊರೆ. [ಸಂ.]

**ರಾಷ್ಟ್ರೀಯತೆ** (ನಾ). ೧.ಒಂದು ದೇಶದ ಜನರು ತಮ್ಮ ದೇಶದ ಒಟ್ಟು ಸತ್ವವನ್ನು ಕುರಿತು ಹೊಂದಿರುವ ಅಭಿಮಾನ ; ಒಟ್ಟು ದೇಶದ ಐಕ್ಯದ ಪರಿಭಾವನೆ : ಮಾಂಡಲಿಕ ಪ್ರಭುತ್ವಗಳನ್ನು ಅನುಭವಿಸಿ ರಾಷ್ಟ್ರೀಯತೆಯ ಉದಯವನ್ನು ಕಣ್ಣಾರೆ ಕಂಡು (ಸಮ್ಯಕಾ. ೦೩). ೨. "ಜನಾಂಗ ಲಕ್ಷಣ ; ರಾಷ್ಟ್ರೀಯತೆ . . . ಜನಾಂಗವಾಗಿರುವುದು ; ಒಂದು ಅಥವಾ ಹೆಚ್ಚಿನ ರಾಜಕೀಯ ರಾಷ್ಟ್ರಗಳ ಭಾಗವಾಗಿರುವ ಕುಲ" (Nationality. ೩೦೪೩). [ಸಂ. ರಾಷ್ಟ್ರೀಯತಾ]

**ರಾಷ್ಮೆ** 'ರಾಶ್ಮೆ' ನೋ. [ಸಂ.]

**ರಾಸ** (ನಾ). ೧. ಶಬ್ದ : ಸದ್ದು. ೨. ಕೃಷ್ಣನು, ಗೋಪಿಯರು ಮತ್ತು ಗೋಪಾಲಕರ ಸಂಗಡ ಮಾಡಿದ ಒಂದು ಬಗೆಯ ನೃತ್ಯ : ಮೋಹನನೆನ್ನಂ ಮೋಹಿಸಿ ರಾಸಕೆ ಕರೆದಂತೆ (ಪಂಪಭಾ. ೪೩-೨೦). 'ರಾಸಕ್ರೀಡೆ' ಪರಾ. ೩. ನಾಟ್ಯ ; ಕುಣಿತ : ಸಂಜೆಯು ಬೀಸುತ್ತಿದ್ದ ಗಾಳಿಯಲ್ಲಿ ಪೈರುಪಚ್ಚೆಗಳ ಸಾಮೂಹಿಕರಾಸವು ಛಂದೋಬದ್ಧವಾಗಿ ನಡೆದಿತ್ತು (ದೂರಕ. ೬೪). [ಸಂ.]

**ರಾಸಕ** (ನಾ). [ಕಾವ್ಯಮೀ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು; ಒಂದು ಅಂಕದಿಂದೊಡಗೂಡಿದ ಇದರಲ್ಲಿ ಐದು ಪಾತ್ರಗಳಿದ್ದು, ನಾಯಿಕೆಯ ಪಾತ್ರವು ಮೇಲುಗೈಯಾಗಿದ್ದು ನಾಯಕನು ಮೂರ್ಖನಾಗಿರುತ್ತಾನೆ, ಸೂತ್ರಧಾರನಿರುವುದಿಲ್ಲ : ೧. ನಾಟಿಕಾ . . . ೯. ಪ್ರೇಂಖಣ. ೧೦. ರಾಸಕ . . . ಎಂದು ಉಪರೂಪಕಗಳು ಹದಿನೆಂಟು ವಿಧ (ಸಂನಾಟಿ. ೩೨). [ಸಂ.]

**ರಾಸಕೇಳಿ** (ನಾ). ಕೃಷ್ಣನು ಗೋಪಿಕಾಸ್ತ್ರೀಯರ ಜೊತೆ ಆಡಿದ ಮಂಡಲಾಕಾರದ ನೃತ್ಯ : ಮೊಗಮೊಗದಲಿ ದೀಪಾವಳಿ ! ರಾಸಕೇಳಿ ! ರಾಸಕೇಳಿ ! (ಕ್ರಾಂತಿಕಾ. ೦೦-೧೯). [ಸಂ. ರಾಸಕೇಲಿ]

**ರಾಸಕ್ರೀಡೆ** (ನಾ). = ರಾಸ.೨ : ರಾಸಕ್ರೀಡೆಯನು ನಿಜವಲ್ಲಭೆಯರೊಡಗೂಡಿ ಲಕ್ಷ್ಮೀವಲ್ಲಭನು ತೊಡಗಿದನು (ಕಭಾಗ. ೧೦-೨೯-೨). [ಸಂ. ರಾಸಕ್ರೀಡಾ]

**ರಾಸಗೋಷ್ಠಿ** (ನಾ). = ರಾಸಕೇಳಿ : ಎಳನಗೆಯ ಸುಪ್ರೇಮವೀಕ್ಷಣದಲಸಗಮನದ ವಿಭ್ರಮದ ಹರಿ ಸಲಿಸಿದನು ಮನವನು ಸರಾಗದ ರಾಸಗೋಷ್ಠಿಯಲಿ (ಕಭಾಗ. ೦೦-೨೯-೩). [ಸಂ.ರಾಸಗೋಷ್ಠೀ]

**ರಾಸನ** (ನಾ). ೧. ಧ್ವನಿಮಾಡುವಿಕೆ. ೨. ಕತ್ತೆಯ ಕೂಗು : "ರಾಸಃ. ರಾಸುಃ, ರಾಸನಂ, ರಾಸನೀಯಂ, ರಾಸ್ಯಂ; ಈ ೫ ಕಳ್ತೆಗೂಗು" (ಕಾಶಕ. ೦೨೦). [ಸಂ.]

**ರಾಸಭ** (ನಾ). ಕತ್ತೆ ; ಗಾರ್ದಭ : "ರಾಸಭಾಖ್ಯಾತಿ ಗರ್ದಭಂ" (ಹಸ್ತಕೋ. ೮೯-೩೯); ರಾಗಿಸಿ ರಾಸಭನಿರದತಿವೇಗದಿನಾ ನರಿಯ ಪಿಂದುಭೂದನೆ ಬಂದಂ (ಪಂಚತಂ. ೨೯೩-೯): ಮಹಾತಾಳವನವಂ ಧೇನುಕನೆಂಬ ರಾಸಭರಾಕ್ಷಸಂ ಕಾದಿರ್ಪಂ (ಜಗಭಿ. ೪-೩೯ ವ). [ಸಂ.]

**ರಾಸಭಿ** (ನಾ). ಹೆಣ್ಣುಕತ್ತೆ : ಎನ್ನಿರ್ಪ ಕಾಡಿನೊಳಿರಿಸೆ ನಿಶ್ಚಿಂತರಾಗಿರ್ದ ರಾಸಭೀವಿಲಾಸಿನಿಯರ್ ತಮಗೊರ್ವ ಪುರುಷನಂ ತರವೇಟ್ಕುಮೆಂದೆನ್ನಂ ತಾತಿಸುತ್ತಿರ್ದಪರ್ (ಪಂಚತಂ. ೨೯೩-೫). [ಸಂ. ರಾಸಭೀ]

**ರಾಸಮಯ್ಯ** (ನಾ). ಒಬ್ಬಾತನ ಹೆಸರು : ಪುಲಿನಾಡು ರಾಸಮಯ್ಯ ಹಲಿಯೂರರಸರಂ ದಣ್ಡುವೇಟಿಸ್ಸೊಡೆ (ಎಕ, X, ಶ್ರೀನಿವಾ. ೬೩-೪; ಸಂ. ೨೦೦). [ರಾಸ$_{?}$ + ಅಮ (< ಅಮ್ಮ$_{1}$) + ಅಯ್ಯ$_{1}$]

**ರಾಸಲೀಲೆ** (ನಾ). = ರಾಸಕೇಳಿ : ಕೃಷ್ಣಗೋಪಿಯರ ರಾಸಲೀಲೆಯಲ್ಲಿ ಗೋಪಿಯರು (ಜೀವಾತ್ಮ) ಕೃಷ್ಣ (ಪರಮಾತ್ಮ)ನನ್ನು ಸೇರಲು ಹಂಬಲಿಸುತ್ತಾರೆ (ಶಾರದ. ೩೪೯) ; ಕೋಲು ಕೋಲಿನ ಆಟ, ಕೂಡಿ ಕೊಳಲಿನ ಆಟ, ರಾಸಲೀಲೆಯ ಕೋಲ (ಅರಳು. ೪೩೬-೨). [ಸಂ. ರಾಸಲೀಲಾ]

**ರಾಸಾಯನಿಕ** (ಗು). ೧. [ವಿಜ್ಞಾನ]ರಸಾಯನವಿಜ್ಞಾನಕ್ಕೆ ಸಂಬಂಧಿಸಿದ, –ಸೇರಿದ. ೨. ರಸಾಯನವಿಜ್ಞಾನದ ಪ್ರಕ್ರಿಯೆಯಿಂದ ಸಿದ್ಧಪಡಿಸಿದ : ರಾಸಾಯನಿಕ ಗೊಬ್ಬರಗಳನ್ನೂ ನಮ್ಮ ದೇಶದಲ್ಲಿ ತಯಾರು ಮಾಡುವ ಪ್ರಯತ್ನ . . . ನಡೆದಿದೆ (ರಾಷ್ಟ್ರಶಾ. ೦೬೭). [ಸಂ.]

**ರಾಸಾಯನಿಕವಿದ್ಯೆ** (ನಾ). [ವಿಜ್ಞಾನ] ಮೂಲಧಾತುಗಳು, ಅವುಗಳ ಸಂಯೋಗ ಮೊದಲಾದ ವಿಷಯಗಳ ನಿಯಮಗಳಿಗೆ ಸಂಬಂಧಿಸಿದ ಶಾಸ್ತ್ರ; ರಸಾಯನಶಾಸ್ತ್ರ : ದೇವಾ, ನನ್ನನ್ನೇಕೆ ಹುಟ್ಟಿಸಿದೆ ? ಹುಟ್ಟಿಸಿದರೂ ನನ್ನಲ್ಲಿ ರಾಸಾಯನಿಕ ವಿದ್ಯೆಯನ್ನಾದರೂ ಏಕೆ ಹಾಕಿದೆ ? (ಕುಬ್ಜ. ೨೩೦). [ಸಂ. ರಾಸಾಯನಿಕವಿದ್ಯಾ]

**ರಾಸಿ$_{1}$** 'ರಾಸು$_{1}$' ನೋ.

**ರಾಸಿ$_{2}$** (ನಾ). ೧. = ರಾಶಿ ೧ : ಕುಬೇರನಿಳ್ಕ ತಂದೊಟ್ಟಿದ ಪೊನ್ನ ರಾಸಿಗಳನ್ನಿತ್ತು ಧರಾಮರರ್ಗೆ (ಗದಾಯು. ೨-೩೭); ಮಿಸುನಿಯ ಪೊಂಗಳುಂ . . . ಬಸವನ ಮನೆಯ ಮುಂದೆ ಸುರಿದು ರಾಸಿಯಾಗಿರೆ (ಬಸರ. ೦೨-೬೬); ಅಂಗಡಿಯೊಳು ಗೋಧಿ ಕಡಲೆ ನಾನಾಧಾನ್ಯಂಗಳ ರಾಸಿ ರಂಜಿಸಿತು (ಮೋಹತ. ೩-೨೦) ; ಜ್ಯೋತಿರ್ಲಿಂಗದಂತೆ ರಾರಾಜಿಸುವುದು ಆ ಜೋಳದ ರಾಸಿ (ಬೆಳುವ. ೨೩೭). ೨. = ರಾಶಿ ೬ : ಜ್ಯೋತಿಷ್ಕರಂ . . . ಬೆಸಗೊಳಲು ಅಪರಾಭಿಧಾನನಕ್ಷತ್ರರಾಶಿಯ ಗ್ರಹಕರಣಕೂಟಾದಿಗಳನು . . . ನಿಶ್ಚೈಸಲು (ನವಮೋ. ೦೩-೨೯). [< ಸಂ. ರಾಶಿ.]

**ರಾಸಿಕ್ಯ** (ನಾ). ರಸಿಕತನ : ಕಾಶ್ಮೀರದ ವಿಮುಕ್ತಪ್ರಕೃತಿಸೌಂದರ್ಯದ ನಿತಾಂತರಮಣೀಯತೆ, ನೂರಳ ಅನುರಕ್ತ ರಾಸಿಕ್ಯ ಎಲ್ಲವೂ ಸಂದಿಗ್ಧವಾಗಿದ್ದವು (ನೂರಜ. ೩೩) ; ಬಲ್ಲಾಳಕವಿ . . . ಭೋಜನ ರಾಸಿಕ್ಯ, ದಾನಶೂರತ್ವಗಳನ್ನು ಬಣ್ಣಿಸಿದ್ದು ಅಸತ್ಯವಲ್ಲ (ಸಾಂಗಾ. ೨೬). [ಸಂ.]

**ರಾಸಿಗೂಳು** (ನಾ). ೧.ಗುಡ್ಡೆ ಹಾಕಿರುವ ಅನ್ನ : ಸುತ್ತಳ ಪಳ್ಳಿಯ ಜನರು ವರುಷಗೊಂದು ಬಾರಿ ಬಿಱುಗೂಳ ಸುರಿಯಲು, ತಪಸಿಯಾಗಿ ರಾಸಿಗೂಳ ತಿಂದು . . . ಆ ಗ್ರಾಮಗಳಿಗೆ ಶಾಂತಿಯ ಮಾಡಿಕೊಂಡಿಪ್ಪನು (ಭೈರಸೂ. I, ೨೬೨) ೨. ಸಾಮಾನ್ಯವಾದ ಆಹಾರ : ರಾಸಿಗೂಳಲ್ಲ

ದಿವ್ಯಾಹಾರವದು ಶಕ್ತಿ ಸೂಸುವುದದಱಿಂದು ತುತ್ತ ಪೂಸರ ದಕ್ಕಿಸಬಲ್ಲನೆ (ಶರಶ. ೩೦-೦೦೦). [ರಾಸ್ಸಿ$_2$ + ಕೊಳ್ಳು$_2$ ( < ಕೊಟ್ಟು$_1$ ) ]

**ರಾಸಿಗೆಯ್**, ರಾಸಿಗ್ಗೆ (ಕ್ರಿ). ಗುಡ್ಡೆಮಾಡು ; ರಾಶಿಹಾಕು : ಕಾಂಚೀರ ಮಹೀರುಹದ ಪಣ್ಗಳಂ . . . ತಿಱಿದು ತಂದು ಧನ್ವಂತರಿ ವಿಶ್ವಾನು ಲೋವರ ಮುಂದೆ ರಾಸಿಗೆಯ್ವುದುಂ (ರರ್ಜಾಕು. ೨-೦೮೫). **ರಾಸಿಗ್ಗೆ** : ನಿರ್ಮಳನಕ್ಷತ್ರಸಮಾಜವುಂ ನೆಗಟ್ದಲಂಪಿಂ ರಾಸಿಗ್ಗೆದಂತೆ ಕಣ್ಗಳವಟ್ಟಿಂ ತುರುಕಾಂತಿಯುಂ ಪರವೃತಂ ಪ್ರೋತ್ತುಂಗತಾರಾಚಳಂ . . . ಕಣ್ಗೆಸೆದುವು (ಉದ್ಭಟ. ೦೨-೦೦೯). [ ರಾಸ್ಸಿ$_2$ + ಕೆಯ್$_1$ ]

**ರಾಸಿಗ್ಗೆ** 'ರಾಸಿಗೆಯ್' ನೋ.

**ರಾಸಿಗೊಳ್** (ಕ್ರಿ). ರಾಶಿಯಾಗು; ಒಟ್ಟಾಗು; ಕೂಡು : ಮಕರಂದ ಸಂದೋಹಮೊಂದೆಡೆಯೊಳ್ ರಾಸಿಗೊಂಡು ಪಾಸಾದಂತೆ ಮನೋಹರ ಮಾರ್ಗದ ಮೃದುತಳ್ಪಸಂಪುಟದೊಳಾ ಪುಣ್ಯಜೀವಂ ಬಂದು ನೆಲಸಿ (ಶರಪು. ೦೨-೫೨೮). [ ರಾಸ್ಸಿ$_2$ + ಕೊಳ್$_1$ ]

**ರಾಸಿಹಬ್ಬ** (ನಾ). ಸುಗ್ಗಿಕಾಲದಲ್ಲಿ ಕಣದಲ್ಲಿಯ ರಾಶಿಯನ್ನು ಪೂಜೆಮಾಡುವ ಹಬ್ಬ : ನೀನಾದರೂ ಬಂದೆಯಲ್ಲ ರಾಸೀಹಬ್ಬಕ್ಕೆ ಸರಿಯಾಗಿ (ಶೆಲುವು. ೨೪೭). [ ರಾಸ್ಸಿ$_2$ + ಹಬ್ಬ (<ಪರ್ವ) ]

**ರಾಸು$_1$**. ರಾಸಿ$_1$ (ನಾ). ದನ ; ಜಾನುವಾರು : ರಾಸುಗಳ ಅತಿಕ್ರಮ ಪ್ರವೇಶದ ಆಕ್ಷನ್ನು ತಿದ್ದುಪಡಿ ಮಾಡಿದ ಕಾನೂನು (ಗ್ರಾಮಾಕ. ೧೦೩); ಐವತ್ತು ರಾಸು ಇರುತ್ತಾ ಇದ್ದವು (ತಂದತರೋ. ೩೦). **ರಾಸಿ$_1$** : 'ಗಿಡ್ಡರಾಸಿ' ಪರಾ. [ ? ]

**ರಾಸು$_2$** (ನಾ). ಅಸಲು ಮತ್ತು ಬಡ್ಡಿ ಕೂಡಿದ ಮೊತ್ತ : ಯಾವುದೊ ಅಸಲಿನ ಯಾವುದೊ ಬಡ್ಡಿದರದ ರಾಸುಗಳನ್ನು ಹಿಂಜಿ ತೆಗೆದು . . . ಅನೇಕರಿಗೆ ತಿಳಿಸಿಕೊಟ್ಟು ದಣಿದಿದ್ದೇನೆ (ಗಾಳಿಕ. ೦೫೭). [←ಮರಾ. ರಾಸ್]

**ರಾಸೆ** (ನಾ). = ರಾಸ ೨ : ರಾಸೆಯನರ್ಥಕೆ ತಡೆದವಳು ಹಾಡನು ಪಾಡಂ ಗೈದವಳು (ಗೋಕುಂ. ೪೨-೨೩). [ಸಂ. ರಾಸ]

**ರಾಸ್ತ** (ಗು). ೧. ಸರಿಯಾದ ; ಯೋಗ್ಯವಾದ ; ನ್ಯಾಯವಾದ : ಆಚಾರೆಪ್ಪ ರಾಸ್ತ ಮಾತ ಆಡಿದಿರಿ (ಮನಶಿ. ೦೮) ; ನೀ ಏನ ಹೇಳಿದೆಲ್ಲ ಈ ಮಾತೂ ಇದಾ ನೋಡಿದು ರಾಸ್ತ ಮಾತು (ಹಿಡುಗು. ೪೯). (ನಾ). ೨. ಸಮರ್ಪಕವಾದುದು ; ಯೋಗ್ಯವಾದುದು : ನಾ ಹೇಳೂದು ರಾಸ್ತ ಏತಿಲ್ಲೋ (ಗ್ರಾಮಪಡು. ೨೫). [← ಪಾರ. ಹಿಂ. ಮರಾ. ರಾಸ್ತ]

**ರಾಸ್ತಿ** (ಗು). ೧. ಸರಿಯಾದ : 'ರಾಸ್ತಿತೂಕ' ಪರಾ. (ನಾ). ೨. ನಿಜ ; ಸತ್ಯ : ಶಾಸ್ತ್ರ ಶ್ರವಣಗಳಾದೆ ಶ್ರೌತಸ್ಮಾರ್ತಗಳಾದೆ ರಾಸ್ತಿ ಚಿದಾನಂದ ಅವಧೂತನಾದೆ (ಶಬಾವ. ೦೦೦-೭). [←ಹಿಂ. ಮರಾ. ರಾಸ್ತಿ]

**ರಾಸ್ತಿತೂಕ** (ನಾ). ಸರಿಯಾದ ತೂಕ : ತಾವು ಮಾಮಿಲತ್ತು ತಿಳಿಯು ವಂಥಾದ್ದು ರಾಸ್ತಿತೂಕ ಮಾಡುವಂಥಾದ್ದು (ರಾಜೇಂದ್ರ. ೨೬೨).
[ರಾಸ್ತಿ + ತೂಕ]

**ರಾಸ್ನೆ** (ನಾ). = ರಾಸ್ನ: "ಏಲಾಪರ್ಣೀ, ಸುವಹಾ, ರಾಸ್ನಾ, ಯುಕ್ತರಸಾ- ಈ ೪ ರಾಸ್ನೆ" (ವಾಶಿರಾ. ೦೦೦) : ಸರಳಂ ಕೋಷ್ಠಂ ಮಂಜಿಷ್ಠೆ ರಾಸ್ನೆ ಬೆಳ್ಳುಳ್ಳಿ ಸೈಂಧವಂ ತಗರಮಿವಂ ಕರಿಯಾಮಿನ ನೊರೆವಾಲೊಳ್ ಬೆರಸಿ ಬೞಿಕ್ಕೆಣ್ಣೆವೊಯ್ವುದು (ಅಶ್ವಶಾ. ೦೫-೩೭). [ಸಂ. ರಾಸ್ನಾ]

**ರಾಸ್ನೆ** 'ರಾಶ್ನೆ' ನೋ.

**ರಾಹ** (ನಾ). ವೇಗ ; ರಭಸ ; ಆರ್ಭಟ : ನಿಗುರ್ಗಿಡಿಗಳೇಱಿಕೆಯ ರಾಹದಿಂ ಲಗಡ್ಗಳಂ ತಗಡೇಣ್ಗಳೆಂಬಂತೆ ಬೆಂಗೊಡದೆ (ಶರಕು. ೩೦-೯) ; ಬರಸೆಳೆದು ರಾಹದಿಂ ಶಿರಗಳಂ ಕೊರೆದು ಕೊರೆದೀಡಾಡಿ (ಶರಕು. ೩೭-೦೯).
[ಈ ಇದು 'ರಂಹಸ್' ಎಂಬುದರ ಅಪಭ್ರಂಶವಿರಬಹುದು]

ರಾಹು (ನಾ). ೧. ಸಿಂಹಿಕೆ ಎಂಬ ರಾಕ್ಷಸಿಯ ಮಗ ; ಈ ಇವನೇ ನವಗ್ರಹಗಳಲ್ಲಿ ಒಬ್ಬ ಮತ್ತು ಸೂರ್ಯ, ಚಂದ್ರರನ್ನು ಗ್ರಹಣ ಕಾಲದಲ್ಲಿ ನುಂಗುತ್ತಾನೆ ಎಂಬ ಪ್ರತೀತಿಯಿದೆ: "ಭಾನುರಿಪು ಸಿಂಹಿಕಾ ಪ್ರಿಯಸೂನು . . . ವಿಧುಂತುದನಂತದು ಕಾನಕ್ಕುಂ" (ಶಬ್ದಮಣಿ. ೦೪-೩೩); ಸುರಪತಿ ಶಿಖಿ ಯಮ ನೈರುತಿ . . . ರಾಹು ಮಂದೇಂದು ಚಂದ್ರನಂದನ ಗುರುಗಳ್ (ಶಾಶಿ. ೨-೦) ; ಶಶಿವಂಶದ ನಿಲವನು ರಾಹು ಗೆದ್ದುದ ಕಂಡು ಹಿರಿಯರು ಹೊಲಬುಗೆಟ್ಟರು (ಅಶಕಂ. ೪. ೦೯೯-೩೦೯) ; ರವಿ ಚಂದ್ರ ಬುಧ ನೀನೆ ರಾಹುಕೇತುವು ನೀನೆ (ಶರೆಂತ. ೨-೨೬-೦). ೨. ಗ್ರಹಣ, ಉಲ್ಕಾಪಾತ, ಭೂಕಂಪ ಮೊದಲಾದ ಉತ್ಪಾತ. ೩. ಅಗ್ನಿ ; ಬೆಂಕಿ : "ಅನಲೋತ್ಪಾತಂ ಕರಾಳಂ ಗ್ರಹವಿವರಮಿವುಂ ರಾಹುವಕ್ಕುಂ" (ನಾವಾರ. ೭೭). [ಸಂ.]

**ರಾಹುಕಾಲ** (ನಾ). ರಾಹುವು ಅಭಿಮಾನಿದೇವತೆಯಾಗಿರುವ ಕಾಲ ; ಶುಭಕಾರ್ಯಗಳಿಗೆ ಪ್ರಶಸ್ತವಲ್ಲವೆಂದು ಪರಿಗಣಿಸಿರುವ, ಪ್ರತಿ ದಿನದ ಮೂರು ಮುಕ್ಕಾಲು ಗಳಿಗೆ ; ಅಶುಭಕಾಲ : ನಾವು ಇಲ್ಲಿಗೆ ರಾಹುಕಾಲದಲ್ಲಿ ಬಂದಂತಾಯಿತು (ಕೃಲಾಶ. ೩೦) ; ರಾಹುಕಾಲದಲ್ಲಿ ಶುಭ ಕಾರ್ಯವನ್ನು ಮಾಡಬಾರದು (ರೂಢಿ). [ಸಂ.]

**ರಾಹುಗ್ರಸ್ತ** (ನಾ). ರಾಹುವಿನಿಂದ ಹಿಡಿಯಲ್ಪಟ್ಟುದು, - ನುಂಗಲ್ಪಟ್ಟುದು : ಕೆಡದನಕಟಕಟ ಮುದಮುದಿತ ರಾಹುಗ್ರಸ್ತವಾದ ತರಣೀಂದು ಬಿಂಬಂ ನೆಲಕೆ ಬೀಳ್ವಂದದೆ (ಹಶಿಕಾ. ೦೨-೯) ; ರಾಹುಗ್ರಸ್ತವಾದಂದದಲಿ ಚಂಡಗಭಸ್ತಿಮಂಡಲವಿಳೆಗೆ ಕಾಣಿಸದಾಯ್ತು (ಕೊರಿದಾ. ೬-೨೬-೫೭). [ಸಂ.]

**ರಾಹುಗ್ರಹಣ** (ನಾ). ಚಂದ್ರ, ಸೂರ್ಯರನ್ನು ರಾಹುವು ಹಿಡಿಯುವಿಕೆ ; ಉಪರಾಗ : ರವಿ ರಾಜರ್ . . . ರಾಹುಗ್ರಹಣಗಾಢಪೀಡಿತ ರಾದರ್ (ಹರಿವ್ಯಾರ. ೨-೫೩). [ಸಂ.]

**ರಾಹುಟಿ** (ನಾ). ಸಣ್ಣಗುಡಾರ; ಡೇರೆ; ತಂಬೂ : ದಾರಿಗುಂಟ ಚಿಕ್ಕಚಿಕ್ಕ ರಾಹುಟಿಗಳಿದ್ದು, ಪ್ರತಿಯೊಂದರಲ್ಲಿ ೨-೩ ಜನ ಶಿಪಾಯಿಗಳು ಇರುತ್ತಿದ್ದರು (ಹಂಸಾ. ೦೦೬); ಪ್ರಯಾಣೋಪಯುಕ್ತವಾದ ಡೇರೆ, ರಾಹುಟಿ ಮೊದಲಾದವುಗಳನ್ನು ತಕ್ಕೊಂಡು ಹೊರಟರು (ಮಂಜುಳ. ೦೭೫).
[←ಹಿಂ. ರಾವಟೀ; ಮರಾ. ರಾವಟೀ, ರಾವ್ಹಟೀ, ರಾಹುಟೀ, ರಾಹೋಟೀ]

**ರಾಹುತ** 'ರಾವುತ' ನೋ.

**ರಾಹುತ್ತ** 'ರಾವುತ' ನೋ.

**ರಾಹುಸಂಸ್ಪರ್ಶ** (ನಾ). = ರಾಹುಗ್ರಹಣ : ಉಪರಾಗಃ, ಉಪಪ್ಲವಃ (ರಾಹುಸಂಸ್ಪರ್ಶ ಉಚ್ಯತೇ)-ಈ ೨ ಗ್ರಹಣದ ಪೆಸರ್ (ಹಲಾಯು. ೬-೪೦). [ಸಂ.]

**ರಾಳ** 'ರಾಲ' ನೋ.

**ರಾಳಕರ್ಪೂರ** (ನಾ). ಒಂದು ಬಗೆಯ ಕರ್ಪೂರ ; ಸಜ್ಜರಸದ ಕರ್ಪೂರ : ಚರ್ವಿಸಿ ವೀಳ್ಯಯೇಲವ ರಾಳಕರ್ಪೂರವಾ (ಶಿಶಿಶೂ. ೩೬೫-೩೭).
[ ರಾಳ (=ರಾಲ) + ಕರ್ಪೂರ (< ಕಪ್ಪುರ) ]

**ರಾಳಧೂಪ** (ನಾ). ಒಂದು ಬಗೆಯ ಮರದ ರಸದಿಂದ ತಯಾರಿಸುವ ಸುಗಂಧದ್ರವ್ಯ ; ಲೋಬಾನ : ರಾಳಧೂಪ(ರಾಳ)- ಸುಂದರವಾದ ವೃಕ್ಷವು. ಇದರ ಅಂಟಿಗೆ ರಾಳವೆನ್ನುವರು. ಅದು ಔಷಧಕ್ಕೆ ಬರುತ್ತದೆ (ಕಥಾಗ. ೪೭). [ ಸಂ. ರಾಲಧೂಪ]

ರಾಳು (ನಾ). (ಬೆಂಕಿಯನ್ನು ಸುಲಭವಾಗಿ ಹಿಡಿಯಬಲ್ಲ) ಸಾಲವೃಕ್ಷದ ಅಂಟು ; ಸಜ್ಜರಸ : ಕ್ಷಣಹೊತ್ತು ಮನಸ್ಸಿಟ್ಟು ನೋಡುವವರೊಂದೇ ತಡ, ರಾಳಿನಂತೆ ಮದ್ದಿನ ಸ್ಫೋಟದಂತೆ ಒಮ್ಮೆಲೇ ಆ ವ್ಯಕ್ತಿಯಲ್ಲಿ ಮಹಾ ಜ್ವಾಲೆಯೇ ಏಳುವದು (ಶ್ರಿಕೃಶೀ. ೯೯). [< ರಾಲ]

ರಿ (ನಾ). [ಸಂಗೀತ] ಸಪ್ತಸ್ವರಗಳಲ್ಲಿ ಎರಡನೆಯದು ; ಋಷಭ : "ಸಪ್ತಸ್ವರಂಗಳ್ . . . ಸರಿಗಮಪಧನಿಯೆಂಬಿವು" (ಸಂಗರಾ. ೨೪-೩) ;

ಸಪ್ತಸ್ವರಗಳು ಕ್ರಮವಾಗಿ ಸ, ರಿ, ಗ, ಮ, ಪ, ಧ, ನಿ ಎಂಬ ಸಂಕೇತಾಕ್ಷರಗಳಿಂದ ಪ್ರಯೋಗದಲ್ಲಿವೆ (ಸಂಗೀತಂ. ೦೩). [ಸಂ.]

**ರಿಂಕಿಸು** (ಕ್ರಿ). ಒತ್ತಿ ಹಿಡಿ ; ಅದುಮಿ ಹಿಡಿದುಕೊಳ್ಳು : ನಲ್ಲನೇ ಕೂಪದೊಳು ಬಿದ್ದಿರ್ದ ಪಣ್ಣ ನೀಂ . . . ಕಾಲಲ್ಲಿ ರಿಂಕಿಸಿ ಮೊಗನೂಱು ನೆಲವಂ ಮುಟ್ಟಿಯಲ್ಲಿಂದ ತರುವುದು (ಕ್ರೀಶಿಕಾ. ೩-೨೬). [ರಿಂಕು + — ಇಸು₁]

**ರಿಂಕು** (ಕ್ರಿ). ಬಿಗಿಯಾಗಿ ಕಟ್ಟು ; ಒತ್ತಿ ಕಟ್ಟು : ಕುಂಕುಮಜಲವ ಹೊನ್ನಂಡೆಗಳೊಳು ತುಂಬಿ ಮುಂಕೊಂಡು ಹೊಯ್ದಾಡಲವಳ ರಿಂಕಿದ ಕುಚಯುಗ ಬಾಹುಮೂಲಂಗಳ ಕುಂಕುಮ ಜಗವ ಮೋಹಿಸಿತು (ಮೋಹಕ. ೧೪-೬೦) ; ಕೊಂಕುಗುರುಳುಗಳು ಕುಣಿದಾಡೆಯಲ್ಲಾಡೆ ಮಿಗೆ ರಿಂಕಿರ್ದ ಬಟ್ಟಮೊಲೆ ನಚ್ಚಣಿಸುತಿರ್ಪ ಮುಡಿಯಿಂ ಕುಸುಮ ಸೂಸೆ . . . ಬಳಲಿಕೆ ಗಳೆದಲೊಂದೆಸೆಯೊಳೊರ್ವ ನೀಱೆ (ಧಾಶಕ. ೬-೯೦). [< ಇಱುಂಕು]

**ರಿಂಖ** (ನಾ). ೧. ತೆವಳುವಿಕೆ ; ಸರಿಯುವಿಕೆ. ೨. ಕುಣಿಯುವಿಕೆ. ೩. ಕುದುರೆಯ ಗತಿಗಳಲ್ಲಿ ಒಂದು. ೪. ಕುದುರೆಯ ಗೊರಸು. ೫. ಮೋಸಗೊಳಿಸುವುದು. [ಸಂ.]

**ರಿಂಖಣ** (ನಾ). ೧. (ಮಕ್ಕಳು) ತೆವಳುವಿಕೆ ; ದೇಕುವಿಕೆ. ೨. ಋಜುಮಾರ್ಗವನ್ನು ಬಿಟ್ಟು ನಡೆಯುವುದು ; ದುರ್ವ್ಯವಹಾರ : "ರಿಂಖಣಂ, ಸ್ಖಲನಂ — ೨ ಜಾರುವವಕ್ಕಾದರೂ, ತಪ್ಪುವದಕ್ಕಾದರೂ ನ್ಯಾಯನಿರ್ಬಂಧದಿಂದ ಹಾರಿಹೋಗುವದಕ್ಕಾದರೂ ಹೆಸರುಗಳು" (ಸಿದ್ಧಾಂತಿ. ೬೯) ; ರಿಂಖಣದ ತೆಂಕಣರಾಯರ ಬಿಂಕವ ಮುಱಿವ ರಣಾಂಕದ ಬಿರುದಂಕು ಶ್ರೀಮದ್ವಸವ ರಾಜದೇವರುಂ ಕಲ್ಯಾಣಪುರವರದೊಳ್ಪೊತ್ತಿರೆ (ಹವ್ಯಾ.ರ. ೯-೬ ಶ). ೩. ಸುತ್ತು ; ಬಳಸು : 'ರಿಂಖಣಂಗೊಳಿಸು' ಪರಾ. [ಸಂ.]

**ರಿಂಖಣಂಗೊಳಿಸು** (ಕ್ರಿ). ಸುತ್ತು ; ಬಳಸುವಂತೆ ಮಾಡು : ವಾಲವಂ ಶಿರದಲಿ ರಿಂಖಣಂಗೊಳಿಸಿ ಕರ್ಣಗಳೆತ್ತಿ ನಿಮಿರ್ಚಿ . . . ಲಂಘಿಸಿದಂ (ಹಸುಮು. ೨೦). [ರಿಂಖಣ + ಕೊಳ್₁ + — ಇಸು₃]

**ರಿಂಗಣ** (ನಾ). ೧. (ಸುತ್ತುತ್ತಾ ಮಾಡುವ) ಒಂದು ವಿಶಿಷ್ಟಬಗೆಯ ಕುಣಿತ — ನೃತ್ಯ : "ರಿಂಗಣಮೆಂದು ಕುಣಿಹಂ" (ಳಕಾ. ೬-೩೨೦) ; ಮಂಗಳದ ರಿಂಗಣ ಝೂಡಿಸಿತು ವೈವಾಹಮಂಟಪವ (ಕುಮಾ.ಆ. ೦೨-೦೫) ; ಮನವ ರಿಂಗಣದ ರಂಗಭೂಮಿಯನು ಆಗೆದು ಬಗೆದು (ಅರಳಿ. ೧೯೦-೦). ೨. ಚಟುವಟಿಕೆ ; ಚಲನೆ : ಅಣುವಿನಲಿ ಲಘುವಿನಲಿ . . . ವಶಿತ್ವದಲಿ ವೆಂಟಣಿಸಿ ರೇಚಕ ಪೂರಕದ ರಿಂಗಣವನಱುವುದು ಯೋಗಸಿದ್ಧಿಗೆ ಲಕ್ಷಣವನು (ಕುವ್ಯಾ.ಅ. ೪-೯) ; ಆ ಕಪಿಗಳುಬ್ಬಟೆಯ ಕೂಲೆಯ ಸವಿಪಾಕದಂಗದ ರಿಂಗಣದ ಲೋಕೈಕವೀರರ ಮುಂಡ ಕುಣಿದವು ಕೋಟಿ ಸಂಖ್ಯೆಯಲಿ (ಕೋರಕಾ. ೬-೪೨-೦೯) ; ನಮ್ಮ ರಿಂಗಣ ನಡದೇ ಇತ್ತು. ಆದರಿಂದ ಅವಳ ಬಯ್ಯುವಿಕೆಗೆ ಮತ್ತಷ್ಟು ಹುರುಪು ಬಂದಿತು (ಕಹಳೆ. ೯೬). ೩. = ರಿಂಖಣ ೧. [ಸಂ.]

**ರಿಂಗಣಂಗುಣಿ**, ರಿಂಗಣಕುಣಿ, ರಿಂಗಣಗುಣಿ (ಕ್ರಿ). ೧. (ಸುತ್ತುತ್ತಾ) ನೃತ್ಯಮಾಡು ; ಲಾಸ್ಯವಾಡು : ಮೇಗಣ್ಗೆ ನೂಂಕಿ ತೆಗೆದೆತ್ತಿ ಪಾಱಿಸಿ ಸೋರ್ಕಿ ಪೂಗೊಳಲಂಗಳೊಳ್ಪೆಡೆ ರಿಂಗಣಂಗುಣಿವರ್ಪಿ (ಅದ್ಯ.ಟ. ೦೦-೦೨೩) ; ಅಂತರಿಕ್ಷದೊಳ್ ನಾರದಂ ಜಡೆಗೆದಱಿ ರಿಂಗಣಂಗುಣಿವುತಿರಲು (ಶಾಂಜ್ಞಾ. ೧೨-೯೬) ; ಕೆಲರು ಮನಬಂದಂತೆ ರಿಂಗಣಂಗುಣಿವುತಿರೆ (ಶಾಸೋಶು. ೦೫-೨೦). **ರಿಂಗಣಕುಣಿ** : ೨. ಸುತ್ತು ; ತಿರುಗು ; ಅಳವಿ ಮಿಗೆ ಕೌರವಚತುರ್ಬಲದೊಳಗೆ ರಿಂಗಣಕುಣಿವ ಖಾತಿಯ ನಿಲ್ಲಿಸಿ . . . ಹೊಯಿದನು (ಕುವ್ಯಾ.ಐ. ೫೦. ೦೩). **ರಿಂಗಣಗುಣಿ** : ೧. ನಾರದ ರಿಂಗಣಗುಣಿದನು ನಲಿಯ ಮರುಳ್ಗಳ್ (ಶಿಲೀಶ. ೨-೦೯) ; ರಿಂಗಣಗುಣಿದಾರ್ದು ಸಾರ್ದು ನಲವೆರ್ಚುವ . . . ಸಂಭ್ರಮವಾದೇಂ ಬಗೆಗೊಂಡುದೊ ಪಾಂಡುಪುತ್ರನಾ (ಕಶಕಂ. ೩-೩೬) ; ಅಂಗನೆಯರು ಆರತಿಯೆತ್ತಿದರು ; ಯುವಕರು ರಿಂಗಣಗುಣಿದರು (ಕರಕ. ೬೬೭). ೨. ಚಿಕ್ಕಿಯ ಬಾಲ್ಯವೂ . . . ಅವಳ ಮನದಂಗಣದಲ್ಲಿ ರಿಂಗಣಗುಣಿಯತೊಡಗಿತು (ಪಡಿದಾ. II, ೬೯೦).

[ರಿಂಗಣ + ಕುಣಿ₁]

**ರಿಂಗಣಕುಣಿ** 'ರಿಂಗಣಂಗುಣಿ' ನೋ.

**ರಿಂಗಣಗುಣಿ** 'ರಿಂಗಣಂಗುಣಿ' ನೋ.

**ರಿಂಗಣಗುಣಿತ** (ನಾ). (ಸುತ್ತುತ್ತಾ) ಕುಣಿಯುವಿಕೆ; ನಾಟ್ಯವಾಡುವಿಕೆ : ಕ್ರಾಂತಿಯ ದಾರಿಯನ್ನು ನೋಡುತ್ತ ನಡೆದಿರುವ ರಿಂಗಣಗುಣಿತವನ್ನು ನಾವೂ ಕೂಡಿಕೊಳ್ಳುವೆವು (ಕ್ರಾಂಥ. ೪೦).

**ರಿಂಗಣಗುಣಿತ ಹಾಕು** = ಸುತ್ತು; ತಿರುಗು : ನೂರಳ ಹೃದಯದಲ್ಲಿ ದುಃಖವು ರಿಂಗಣಗುಣಿತ ಹಾಕುತ್ತಲಿತ್ತು (ನೂರಳ. ೫೬).

[ರಿಂಗಣ + ಕುಣಿತ]

**ರಿಂಗಳ** (ನಾ). ತಿರುಗುವಿಕೆ; ಸುತ್ತುವಿಕೆ: 'ರಿಂಗಳಗುಣಿಸು' ಪರಾ. [< ರಿಂಗಣ]

**ರಿಂಗಳಗುಣಿಸು** (ಕ್ರಿ). ಸುತ್ತಿಸು ; ತಿರುಗಿಸು : ರಣದಿ ಕುಬಿಬಿರಿದುಬ್ಬಿ ರಿಂಗಳಗುಣಿಸುತಕ್ಷಿಯೊಳಾಗ ಶರಭನು ತನಗೆ ಮಾರಾಂತವಿಳಿಳಿನುರು ಚಾತುರಂಗವನು. . . ಸವರಿ (ಅಂಬಿಕಾ. ೨೬-೯೦). [ರಿಂಗಳ + ಕುಣಿಸು]

**ರಿಃಫ** (ನಾ). [ಜ್ಯೋತಿ] ಲಗ್ನದಿಂದ ಹನ್ನೆರಡನೆಯ ಸ್ಥಾನ : ಉದಯಕ್ಕೆಂಟಱೊಳಿಂದು ಕೂಡೆ ಸರುಜಂ . . . ರಿಃಫದೊಳಸತ್ಕಂ ವಾಮನೇತ್ರಾಂಧಕಂ (ಜಾತಕ. ೦೯ ೬). [ಸಂ.]

**ರಿಕಾಪು** 'ರಿಕಾಬು' ನೋ.

**ರಿಕಾಬು**, ರಕಾಬು, ರಿಕಾಪು (ನಾ). ಕುದುರೆಯನ್ನು ಹತ್ತುವಾಗ ಕಾಲನ್ನಿಡಲು ಅನುಕೂಲವಾಗುವಂತೆ ಜೀನಿಗೆ ಅಳವಡಿಸಿರುವ ಬಳೆ; ಅಂಕವಣಿ : ಅಶ್ವರತ್ನದ ಆಭರಣದ ಲೆಕ್ಕ. . . ೨ ರಿಕಾಬು (ಎಕ. XIV. ಪಂಹಪ. ೨೯೩-೦೯೨; ಸು. 1847); ಕುದುರೆಯ ಪಂದ್ಯದಲ್ಲಿ ವಿಶ್ವಾಸ ರಿಕಾಬು_ ಲಗಾಮು ಇಲ್ಲದೆ, ಬತ್ತಲೆಕುದುರೆ ಏರಿ ಒಂದು ಮೈಲಿನ ಶರ್ಯತ್ತನ್ನು ಗೆದ್ದಿದ್ದ (ರೀಹಹ. I. ೦೫). **ರಕಾಬು** : ನೀಲನು ತನ್ನ ಕುದುರೆಯನ್ನು ಒಮ್ಮೆಲೆ ಮುಂದೆ ನೂಕಿ ರಕಾಬಿನ ಮೇಲೆಯೇ ಎದ್ದುನಿಂತು ಕೈಯಲ್ಲಿಯ ಚೂರಿಯನ್ನು ಬಲವಾಗಿ ಬೀಸಿ ಒಗೆದನು (ಶಿಂಗಾಹ. ೬೬). **ರಿಕಾಪು** : ಕುದುರೆಯ ರಿಕಾಪು ಚಾಗಟಿಯ ಬಳ್ಳಿಯೊಂದಕ್ಕೆ ತೊಡಕಿಕೊಂಡಿತು (ಹುಂಹಾ. ೬) ; ಎರಡೇ ನಿಮಿಷಗಳಲ್ಲಿ ಜೀನುಪೋಶಿ ಹೊಟ್ಟೆಗೆ ಪಟ್ಟಿ ಬಿಗಿದ, ರಿಕಾಪು ಸರಿಮಾಡಿಕೊಂಡ (ರಜಾಂ. ೪೦). [ ← ಅರ. ರಕಾಬ್; ಪಾರ. ಹಿಂ. ರಿಕಾಬ್, ರಕಾಬ್; ಮರಾ. ರಿಕಬ್, ರಿಕಬೀ, ರಿಕಾಬೀ]

**ರಿಕಾಮಿ₁** (ಗು). ಖಾಲಿಯಾದ ; ಬರಿಯ : ಸತುವಿನಾ ರಿಕಾಮಿ ಡಬ್ಬಿಗಳು (ಪುಂಬಾಪ್ಯಾ. ೦೩೯). [← ಮರಾ. ರಿಕಾಮ]

**ರಿಕಾಮಿ₂** (ಅ). ನಿರರ್ಥಕವಾಗಿ ; ವ್ಯರ್ಥವಾಗಿ ; ಸುಮ್ಮನೆ : ಈ ಬಂಟನ್ನ ನಾ ಬಲ್ಲೆ. ರಿಕಾಮಿ ತೋಟತೋಟದ ಸುತ್ತ ತಿರಗತಾನು (ಜಾಂಬ.. ೯೬). [< ರಿಕಾಮಿ₁]

**ರಿಕ್ಕು₁** (ನಾ). ಒತ್ತಾಗಿರುವುದು ; ಇರುಕು : ಜನರೆಲ್ಲ ರಿಕ್ಕಾಗಿ ಕೂತಿದ್ದಾರೆ (ಅವ. ೦೦೬) ; ರಿಕ್ಕಾಗಿ ಬಿಗಿಯಾದ ಬಂಧನಗಳು ಬಹಳ ಹೊತ್ತು ಬಾಳವು (ಯುಕ್ಷಕ್ರ.. ೦೫೮). [< ರಿಂಕು]

**ರಿಕ್ಕು₂** 'ರಿಚೆ' ನೋ.

**ರಿಕ್ತ₁** (ಗು). ೧. ಬರಿದಾದ ; ಖಾಲಿಯಾದ : ರಿಕ್ತಕುಂಭಂ ವಿಲಾಪಿಪ ಭಗ್ನಾಂಗನ ಕುಷ್ಠಿಯುಂ. . . ಧೂಮಮುಂ ನಿಪುಣರ್ ಕಂಡರೆ ಪೋಗರ್ಕೆ (ಸೋಮೇಶ. ೬೮). ೨. ತಿರುಳಿಲ್ಲದ; ಬೆಲೆಯಿಲ್ಲದ. (ನಾ). ೩. ಶೂನ್ಯ ; ಬರಿದು : ತದಂತರ್ಗತರೋಮಂಗಳಂ ಪ್ರತಿಸಮಯಮೊಂದೊಂದಂ ಅಪಕರ್ಷಣಂ ಮಾಡಿದೊಡೆಂದಿಂಗೆ ರಿಕ್ತಮಕ್ಕುಂ (ಹಕ್ಕಿಕ್ರ. ೦೬೫). ೪. ಹೀನ

ವಾದುದು ; ತುಚ್ಛವಾದುದು : " ರಿಕ್ತಂ, ತುಚ್ಛಂ, ಅಸಾರಂ, ಫಲ್ಗು, ವ್ಯಷ್ಟಫಲಂ – ಈ ೫ ತುಚ್ಛಂ" (ಹಲಾಯು. ೦೨೯-೯೨) ; ಮೃಗಗಳ ಭಾಷೆ ಮನುಷ್ಯನ ಭಾಷೆಯ ಎದುರಿಗೆ ಹೇಗೆ ರಿಕ್ತವೆಂದು ಕಾಣುತ್ತದೆಯೋ ಹಾಗೆ ಮಾನವರ ಇಂದಿನ ಭಾಷೆಯನ್ನು ರಿಕ್ತವೆಂದೆನ್ನಿಸುವ ಒಂದು ಭಾಷೆಯನ್ನು ಊಹಿಸುವುದು ಕಷ್ಟವಲ್ಲ (ಪಮ್ಯಪು. ೨). ೫. ಬಡವ ; ದರಿದ್ರ. [ಸಂ.]

**ರಿಕ್ತ₂** (ನಾ). ಒಂದು ಬಗೆಯ ಸಸ್ಯ : ಕಾಡುಪಿಂಡಿ, ರಿಕ್ತಾ, ರಕ್ತಮರ (ವೃಶಿಗಿ. ೪೮-೯೬೭). [ ? ]

**ರಿಕ್ತಕ** (ನಾ). ಏನೂ ಇಲ್ಲದುದು ; ಬರಿದು : "ಶೂನ್ಯಂ . . . ರಿಕ್ತಕಂ— ೪ ಬರಿದಾದ ಮನೆ, ಮಡಿಕೆ, ಮುಂತಾದ್ದು" (ನಿಘಂಟು. ೩೩೯). [ಸಂ.]

**ರಿಕ್ತಗೊಳಿಸು** (ಕ್ರಿ). ಖಾಲಿ ಮಾಡು ; ತೆರವುಗೊಳಿಸು : ರಾಷ್ಟ್ರಪತಿಯವರು ಸಂಸತ್ತಿನ ಉಭಯಸದನಗಳಲ್ಲಿ ಯಾವುದೊಂದರಲ್ಲಾಗಲಿ ನಿರ್ವಾಚಿತರಾದರೆ . . . ಸದನದ ತಮ್ಮ ಸದಸ್ಯಸ್ಥಾನವನ್ನು ರಿಕ್ತಗೊಳಿಸಿದಂತೆ ಭಾವಿಸತಕ್ಕುದು (ಭಾರಾವ. ೨೯). [ರಿಕ್ತ₁ + ಕೊಳ್₁ + — ಇಸು₃]

**ರಿಕ್ತತೆ** (ನಾ). ೧. ಬರಿದಾಗಿರುವಿಕೆ ; ಶೂನ್ಯತೆ : ಸುತ್ತಣ ಈ ವಿಪುಲರಿಕ್ತತೆಯಲ್ಲಿ ಈ ಚಿತ್ರ ಎಷ್ಟು ಸಂಪೂರ್ಣವಾಗಿ, ಒಂದಾಗಿ, ನನಗೆ ಗೋಚರಿಸಿತು ! (ಶಿವರಾ. II. ೨೦೭). ೨. ದಾರಿದ್ರ್ಯ ; ಬಡತನ. [ಸಂ. ರಿಕ್ತತಾ]

**ರಿಕ್ತಪೂರ್ಣ** (ನಾ). [ನಾಟ್ಯ] ನೃತ್ಯದಲ್ಲಿಯ ನಾಲ್ಕು ಬಗೆಯ ಉದರ ಭೇದಗಳಲ್ಲಿ ಒಂದು : P "ಶ್ವಾಸರೋಗದಿಂದ [ಉಬ್ಬಸ] ಪೀಡಿತನಾದವನಿಗಿರುವಂತೆ ಹೊಟ್ಟೆಯನ್ನು ಒಳಕ್ಕೂ ಹೊರಕ್ಕೂ ಚಲಿಸುವುದು" (ಅಸ್ಮರಂ. ೨೬೨ ಗದ್ಯಾನುವಾದ) : ಕ್ಷಾಮ, ಖಲ್ವ, ಪೂರ್ಣ, ರಿಕ್ತಪೂರ್ಣ— ಈ ನಾಲ್ಕು ಉದರಭೇದಂಗಳ್ (ಅಸ್ಮರಂ. ೨-೦೩೩ ಪ). [ಸಂ.]

**ರಿಕ್ತಹಸ್ತ** (ನಾ). ೧. ಬರಿಗೈ. ೨. ಬರಿಯ ಸೊಂಡಿಲು : ಕಾಣಮಾಕಾಡಾನೆ . . . ಬಾಯ್ಗೆ ಪುಗಿಸುತಿದೆ ರಿಕ್ತಹಸ್ತವನುಸಿರ ಬಿಸುಪಿಂಗೆ ಬಯಸಿ ! (ಶ್ರೀರಾಮಪಾ. ೨೦೨-೨೦೯). [ಸಂ.]

**ರಿಕ್ತೆ** (ನಾ). ೧. ಬಡವಿ ; ಅತಿದರಿದ್ರಳಾದವಳು. ೨. ಶುಭಕಾರ್ಯಗಳಿಗೆ ಪ್ರಶಸ್ತವಲ್ಲದ, ಶುಕ್ಲ ಮತ್ತು ಕೃಷ್ಣಪಕ್ಷಗಳಲ್ಲಿ ಬರುವ ಚತುರ್ಥಿ, ನವಮಿ, ಚತುರ್ದಶೀ ತಿಥಿಗಳು. [ಸಂ. ರಿಕ್ತಾ]

**ರಿಕ್ಥ** (ನಾ). ೧. ಪಿತ್ರಾರ್ಜಿತವಾಗಿ ಬಂದ ಆಸ್ತಿ ; ಸ್ವತ್ತು. ೨. ಧನ ; ಹಣ . "ದ್ರವ್ಯಂ . . . ರಿಕ್ಥಂ . . . ವಿಭವಃ—೧೩ ಧನದ ಪೆಸರುಗಳು" (ನಿಘಂಟು. ೩೦೨). ೩. ಬಂಗಾರ : ಚಿನ್ನ : " ರಿಕ್ಥ [ಪಾಠಾಂ. ತ್ತ]ಮಾ ಕನಕಂ ಹಿರಣ್ಯಮರ್ಥಂ" (ಪಂಗರಾ. ೦೭-೦೭). [ಸಂ.]

**ರಿಕ್ಷ** ' ರಿಕ್ಷೆ ' ನೋ.

**ರಿಕ್ಷಾ** (ನಾ). ೧. ಮನುಷ್ಯನಿಂದ ನಡೆಸಲ್ಪಡುವ, ಎರಡು ಅಥವಾ ಮೂರು ಚಕ್ರಗಳುಳ್ಳ ವಾಹನ : ಅನಂತ . . . ರಿಕ್ಷಾದಲ್ಲಿ ಕೂತನು . . . ರಿಕ್ಷಾವಾಲನು ಕಾಲುಗಾಡಿ ತುಳಿಯಹತ್ತಿದನು (ಜೀವಾನ. ೩೩). ೨. ಯಂತ್ರಚಾಲಿತವಾದ, ಮೂರುಚಕ್ರಗಳುಳ್ಳ ವಾಹನ : ಬಸ್ಸೂ ರಿಕ್ಷಾ ಹತ್ತಿ ಓಡತಾರ (ಅರಳು. ೨೯೦-೦೭); ರಿಕ್ಷಾದಲ್ಲಿ ಕುಳಿತು ಮನೆಯ ಕಡೆಗೆ ಹೊರಟೆ (ರೂಪ). [ ← ಇಂ. Ricksha]

**ರಿಕ್ಷೆ, ರಿಕ್ಷ** (ನಾ). ನಕ್ಷತ್ರ; ತಾರೆ : ಗರ್ಭಂಗಟ್ಟು(ಟ್ಟಂ)ಗಂದಿನ ರಿಕ್ಷೆಯೊಳ್ (ಅಭ್ಯಪು. ೭-೩). **ರಿಕ್ಷ** : " ರಿಕ್ಷಮುಂ ನು [illegible] ಎಂಬ ನಕ್ಷತ್ರಂ " (ಪಮ್ಯಕೋ. ೦೯-೭೭). [< ಸಂ. ಋಕ್ಷ]

**ರಿಗ್ಗವಣೆ. ರಿಗ್ಘವಣೆ** (ನಾ). ೧. ಮದ್ದಳೆ ಮೊದಲಾದ ಚರ್ಮವಾದ್ಯಗಳನ್ನು ಬಾರಿಸುವುದರಲ್ಲಿಯ ಒಂದು ಕ್ರಮ ; ಗತಿ : ನಿನದತ್ಸಂಧ್ಯಾನಕಂ ರಿಗ್ಗವಣೆಯ ಪಟು ಪೂರ್ವಾಚಲಂ ತುಂಗರಂಗಂ ತನಗಾದತ್ತೆಂಬಿನಂ ನೀಲಿಯ ಜವನಿಕೆಪೋಲ್ ಪಿಂಗೆ (ಚಂದ್ರಪ್ರ. ೯-೩೦); ಆಡಂಗುರಗಳೆಂಬ ರಿಗ್ಗವಣೆಯ ಪಟುಗಗ್ಗಲಿಸುವ ನಗರನರ್ತಕಿಯರ ಚಿತ್ತದಂತಿರೆತ್ತುವ ತೋರಣದ (ಅನಂತ. ೯-೩೯ ಪ); ಮಲಪು ರಿಗ್ಗವಣೆ ಒಡ್ಡಾಸರ ಪಡಿಸಣ ಚಮತ್ಕಾರ . . . ಮೊದಲಾದ ವಾದ್ಯಪ್ರಬಂಧಂಗಳಲ್ಲಿ ತನ್ನ ನೇರುವೆಯನಾರ್ಯವೃತ್ತ . . . ಬಾಜಿಸುತಿರ್ದಂ (ವಿರೂಪಾ. ೬೦ ಪ). ೨. ಒಂದು ಬಗೆಯ ಚರ್ಮವಾದ್ಯ ; ಮೃದಂಗ : " ರಿಗ್ಗವಣೆಯನೆ ಮೃದಂಗಂ " (ಕಕುಶ. ೧೧೧). **ರಿಗ್ಘವಣೆ** : ೧. ಮದ್ದಳೆಗಂ ಮದ್ದಳೆಯುಂ . . . ಚಮತ್ಕಾರ ತುಡುಕು ರಿಗ್ಘವಣೆ ಪಹರಣೆಗಳೆಂಬ ನಾನಾಶಬ್ದಂಗಳಂ ಬಾಜಿಸಿ (ಧರ್ಮನಾ. ೨-೨೩ ಪ). [< ಸಂ. ರಿಗೋಣೀ]

**ರಿಗ್ಘವಣೆ** ' ರಿಗ್ಗವಣೆ ' ನೋ.

**ರಿಚೆ, ರಿಕ್ಕು₂, ರುಕ್ಕು₁** (ನಾ). ೧. ಆಶೀರ್ವಾದ ಮಂತ್ರ: ಮುಂದದೆಸೆದಿರ್ಪ ಬದ್ದವಣಮುದ್ದವಣಂ ರಿಚೆ [ಪಾಠಾಂ. ರಿಚ, ರಿಜೆ, ರುಚ] ಪಾಟಮಾಟಮೆತ್ತಿದ ಗುಡಿ ತೋರಣಂ (ಅರ್ಧನೇ. ೨-೩೯). ' ರಿಚೆವೇಟಿಸ್ ' ಪರಾ. **ರಿಕ್ಕು₂** : ೨. ವೇದಮಂತ್ರ ; ಋಕ್ಕು : " ರುಕ್ಕು (ರಿಕ್ಕು) – ಋಚ್(ಕ್) = ಕಿರಣ, ವೇದಮಂತ್ರ " (ಕಧ್ಯಕೋ. ೩೯). **ರುಕ್ಕು₁** : ೨. ವೇದರುಕ್ಕಂ ಪೇಟ್ಟಕ್ಷತೆಯನೀವುದುಂ (ಧರ್ಮಾಮೃ. ೦-೯೭). [< ಸಂ. ಋಚ್]

**ರಿಚೆವೇಟಿಸ್** (ಕ್ರಿ). ಆಶೀರ್ವಾದ ಮಂತ್ರವನ್ನು ಹೇಳು ; ವೇದಘೋಷ ಮಾಡು : ಅಂತು ಪೊಕ್ಕಾ ನೃಪಂಗೆ ರಿ[ಪಾಠಾಂ. ರು]ಚೆವೇಟ್ಟಕ್ಷತಂಗಳ ಕೊಟ್ಟು (ನೇಮಿಪು. ೦೦-೦೨೨ ಪ). [ರಿಚೆ + ಪೇಟ್]

**ರಿಜಮಿಾಟದಾರ** (ನಾ). ಸೈನ್ಯದ ವಿಭಾಗಾಧಿಕಾರಿ ; ತುಕಡಿದಾರ : ಬಾಬುರಾವನ್ನಾಲ ರಿಜಮಿಾಟದಾರ (ಎಕ. XIV. ಮಂಡ್ಯ. ೦೩೯. ೩; 1851). [ರಿಜಮಿಾಟ್₀ (P ← ಇಂ. Regiment) + — ದಾರ್₄]

**ರಿಜಿಸ್ಟರು** ' ರೆಜಿಸ್ಟರು ' ನೋ.

**ರಿಜು** ' ರುಜು₁ ' ನೋ.

**ರಿಣ** ' ರುಣ ' ನೋ.

**ರಿಣಗೂಳು** (ನಾ). ಹಂಗಿನ ಅನ್ನ : ಎಷ್ಟು ದಿನ ರಿಣಗೂಳನ್ನುಂಡುಕೊಂಡು ಇರುವುದು (ಜಳಕ. ೦೦); ಪರೀಕ್ಷಾ ನಾಪಾಸಾದಿ. ಮನ್ಯಾಗ ಕೂತು ರಿಣಗೂಳು ತಿಂತೀದಿ (ಅಸ್ಥಿಕಂ. ೦೯೯). [ರಿಣ (< ರುಣ) + ಕೂಳು₂ (< ಕೂಟ್₁)]

**ರಿಣಗೇಡಿ** (ನಾ). ಸಾಲವನ್ನು ತೀರಿಸದೆ ಇರುವವನು ; ಋಣದಲ್ಲಿರುವವನು : ವ್ರಣ ನೋಡಿ ಬಂದದರ ಮೇಲ್ಕೂತ ನೊಣದಂತೆ ರಿಣಗೇಡಿ ಜೀವವಿನ್ನೇಕೆ ಮಮತೆಯ ಚಿಂತೆ ? (ಸೂರ್ಯಪಾ. ೭೯-೦೨). [ರಿಣ (< ರುಣ) + ಕೇಡಿ₁]

**ರಿಣಸ್ತ** (ನಾ). ಋಣವನ್ನು ಹೊಂದಿರುವವನು ; ಹಂಗಿಗ : ನೀನು ಲಿಂಗದ ರಿಣಸ್ತನು, ನಾನು ನಿನ್ನ ರಿಣಸ್ತನಾದೆನು (ಶೂರಸೂ. I, ೦೯೦). [ರಿಣ (< ರುಣ) + — ಸ್ತ]

**ರಿತುಗಾನ** (ನಾ). ಆಯಾ ಋತುಗಳಲ್ಲಿ ಹಾಡುವ ಗಾನ ; ಋತುಗಾನ : ನವನವ ರಿತುಗಾನವನವತರಿಸುವೆ (ಗೀತಾಂ. ೪೭-೦). [ರಿತು (< ರುತು) + ಗಾನ]

**ರಿದ್ಧಿ, ರುದ್ಧಿ** (ನಾ). ೧. ಅಭಿವೃದ್ಧಿ : " ರಿದ್ಧಿ–ಋದ್ಧಿ = ಅಭಿವೃದ್ಧಿ " (ಕಧ್ಯಕೋ. ೩೯); ಋದ್ಧಿ–ರಿದ್ಧಿ (ಕಬ್ಬಾಪು. ೦೩೯ ಪ್ರಯೋ). ೨. ಜನನದಿಂದಾಗುವ ಸೂತಕ ; ಪುರುಡು ; ವೃದ್ಧಿ : ನಮಗ್ಯಾರಿಗೂ ಹುಟ್ಟಿದ ರಿದ್ಧಿಯೂ ಇಲ್ಲ ; ಸತ್ತ ಸೂತಕನೂ ಇಲ್ಲ (ಹೂಸಂಸಾ. ೭೭). **ರುದ್ಧಿ** : ೧. ಶ್ರುತಕೇವಳಿಯವಧಿಜ್ಞಾನಿ ಪಲವು ರುದ್ಧಿಗಳಿಂದಂ ಕೂಡಿದೊಂ (ವಡ್ಡಾರಾ. ೭೪ ಅಬ). [<- ಪ್ರಾ. ರಿದ್ಧಿ./ಸಂ. ವೃದ್ಧಿ]

**ರಿಪಿ** (ನಾ). ೧. ಕಾಟ ; ಹಿಂಸೆ ; ಕಿರಿಕಿರಿ : 'ರಿಪಿಗೇಡಿ' ಪರಾ. ೨. ಕಾಟ ಕೊಡುವವನು ; ಉಪದ್ರವಕಾರಿ : ನಿನ್ನೆ ದಿನ ನಾನೇ ಹೋಗಿದ್ದರೆ ಆ ರಿಪಿಯು ನನ್ನ ಬೆನ್ನಿಗೇ ಬೀಳುತ್ತಿದ್ದಿತಲ್ಲಾ ಎಂದು ನಡುಗಿದೆನು (ಕಾಳರಾ. ೬೬).

**ರಿಪಿರಿಪಿ** (ದ್ವಿರುಕ್ತಿ) : ಸುಮ್ಮನೆ ಆಶೆ ತೋರಿಸಿ ರಿಪಿರಿಪಿ ಹಚ್ಚಿರುತ್ತಾನೆ ! (ಮೋಹಿನೀ. ೬೩). [ ← ಮರಾ. ರಿಪರಿಪ ]

**ರಿಪಿಗೇಡಿ** (ನಾ). ಕಾಟ ಕೊಡುವವನು ; ಉಪದ್ರವಕಾರಿ : ಮನಿಯಾಗ ರಿಪಿಗೇಡಿ ಆಡ ಹ್ಯಾದಲ್ಲಿ ಕಿಡಿಗೇಡಿ ಬಾಳನ ಹ್ಯಾಂಗ ಸಂಬಸಲೆ ಹಡೆದವ್ವ (ಗರತಿ. ೯೦) ; ರಿಪಿಗೇಡಿ ! ಸಾಕುಮಾಡು ನಿನ್ನ ಬುಡುಬುಡುಕೀನ (ಏಕ್ತ. ೯೩). [ ರಿಪಿ + ಕೇಡಿ$_1$ ]

**ರಿಪಿಜಿಡ್ಡು** (ನಾ). ಜಿಪುಣತನ ; ಜಿಗುಟುಸ್ವಭಾವ : ಅಂಥ ಜಿಗಟು ರಿಪಿಜಿಡ್ಡು ಮುದುಗರಿಗೆ ಕೂಡ . . . ಅವರ ಕೈಯಿಂದ ಒಂದು ಕಪರ್ದಕವನ್ನೂ ಉಚ್ಚಿಕೊಳ್ಳಲು ಸಾಧ್ಯವಾಗಿದ್ದಿಲ್ಲ (ಇಕ್ಷು. ೨೯೯). [ರಿಪಿ+ಜಿಡ್ಡು]

**ರಿಪೀಸು** (ನಾ). ಮರದ ಪಟ್ಟಿ,– ತುಂಡು : ಮನೆಯ ರಿಪೀಸುಗಳಿಗೆ ಬೆಂಕಿ ತಗುಲಿತು (ರೂಢಿ). 'ರೀಪು' ಪರಾ. [ ←ಇಂ. Reeper /ಮರಾ. ರೀಪ ]

**ರಿಪು** (ನಾ). ೧. ಹಗೆ; ಶತ್ರು : "ಅಭಿಯಾತಿಃ, ಅರಾತಿಃ, ಅಮಿತ್ರಂ, ರಿಪುಃ . . . ದ್ವಿಷತ್ — ಈ ೨೪ ಹಗೆ " (ಹಲಾಯು. ೬೩-೩೦೦): ಆ ಮಹೋಗ್ರರಿಪುಭೂಭುಜಶ್ರವಣ ಭೈರವಾಡಂಬರಂ . . . ಆದುದಾ ರವಿತನೂಭವಜ್ಯಾರವಂ (ಪಂಪಭಾ. ೧೨-೦೩೬); ಮಡದೀ ನೀಂ ಪಡೆವಾ ಸುತಂ ರಿಪುಚಮೂಸಂಹಾರವಂ ಹಾರವಂ ಪೊಡೆರಲ್ ಮಾಟ್ಟುಂ (ಜಗ. ೨-೬೩). ೨. [ಜ್ಯೋತಿ] ಲಗ್ನದಿಂದ ಆರನೆಯ ಸ್ಥಾನ ; ಶತ್ರುಸ್ಥಾನ : ತನಯಸ್ಥಾನದೊಳಾತ್ಮಮಂತ್ರಿ ರಿಪುವೊಳ್ ನಿಶ್ಚತ್ರು (ಜಾತಕ. ೦೬-೦೦).

**ರಿಪುಕಟಕಭೈರವ** = ಶತ್ರುಸೈನ್ಯಕ್ಕೆ ಭೈರವನಂತಿರುವವನು ; ಒಂದು ಬಿರುದು : ಭಟರ ತೆಗೆತೆಗೆ ಪಾರ್ಥನೋ ರಿಪುಕಟಕಭೈರವನೋ (ಕುಮಾ.ಭಾ. ೯-೦೯). **ರಿಪುಕವಿದಲ್ಲಣ** = ಶತ್ರುಕವಿಗಳನ್ನು ತಲ್ಲಣಗೊಳಿಸುವವನು ; ಒಂದು ಬಿರುದು : ಕಲ್ಲಿನಾಥನ ಭೃತ್ಯ ರಿಪುಕವಿದಲ್ಲಣಾಗ್ರಘರಟ್ಟ ಪಂಡಿತಮಲ್ಲಿಕಾರ್ಜುನ (ಪಂಪರಾ. ೦-೦೯). **ರಿಪುಗೋಧೂಮಘರಟ್ಟ** = ಶತ್ರುವೆಂಬ ಗೋಧುಮೆಗೆ ಬೀಸುವ ಕಲ್ಲಿನಂತಿರುವವನು ; ಒಂದು ಬಿರುದು : ಮಟ್ಟವಿರದಾಂತ ಪಗೆವರ ಪಟ್ಟಂ ಪಾಟಿಸದೆ ಮಾಣ್ಬನೇ ವೈರಿದಿಶಾಪಟ್ಟಂ ರಿಪುಗೋಧೂಮಘರಟ್ಟಂ ಮಲಿದೇವನದಟರುಪ್ಪರಪಟ್ಟಂ (ಕೊಲ್ಹಾ.ಶಾ. ೦೩-೩೩ ; 1186). **ರಿಪುಘಟಾಕೇಸರಿ** = ಶತ್ರುವೆಂಬ ಆನೆಗೆ ಸಿಂಹದಂತಿರುವವನು ; ಒಂದು ಬಿರುದು : ಪಾಣಸ್ಕನ್ಧಯ ಪುರಂದರಂ ರಿಪುಘಟಾಕೇಸರಿ (ಕಇಶ. ೭-೩-೨೬೨ ; 1062). **ರಿಪುನೃಪತಿನಿಕ್ಷತ್ರ** = ನಿಲ್ಲಲು ನೆಲೆಯಿಲ್ಲದಂತೆ ಶತ್ರುರಾಜರನ್ನು ನಾಶಪಡಿಸುವವನು ; ಒಂದು ಬಿರುದು : ಪರಿವಾರಚಿನ್ತಾಮಣಿ ಸುಜನಚೂಡಾಮಣಿ ರಿಪುನೃಪತಿನಿಕ್ಷತ್ರಂ ಗೋತ್ರಪವಿತ್ರಂ (ಎಕ. VII, ಶಿಕಾ. ೨೦-೦೯ : 1032). **ರಿಪುನೃಪಬಂದಿಕಾಱ** = ಶತ್ರುರಾಜರನ್ನು ಸೆರೆಹಿಡಿಯುವವನು ; ಒಂದು ಬಿರುದು : ಇನನಂದನನು . . . ರಿಪುನೃಪಬಂದಿಕಾಱವಧಾರು ಧಿರುಪಯವೆಂದು ಕಳಕಳ ಗಜಱು ಮಿಗೆ ಕುರುಭೂಮಿಗೈತಂದ (ಕುಮಾ.ದ್ರೋ. ೨-೦೯). **ರಿಪುಬಲದಿಶಾಪಟ** = ಶತ್ರುಸೈನ್ಯವನ್ನು ಚೆಲ್ಲಾಪಿಲ್ಲಿ ಮಾಡುವವನು ; ಒಂದು ಬಿರುದು : ಗೆಲಿವನಹಿತಾನೀಕವನು ರಿಪುಬಲದಿಶಾಪಟ ಭೀಷ್ಮನು (ಕುಮಾ.ಭೀ. ೩-೨೪). **ರಿಪುಭೀಕರ** = ಶತ್ರುಗಳಿಗೆ ಭೀತಿಯನ್ನುಂಟುಮಾಡುವವನು ; ಒಂದು ಬಿರುದು : ರಾಜ್ಯಲಕ್ಷ್ಮೀನಿವಾಸನೆನೆ ನೆಗಟ್ದನಖಿಳರಿಪುಭೀಕರಸೌಷ್ಠವಭುಜಬಳಂ . . . ಚಾವುಂಡನೃಪಂ (ಕರ್ನಾ. XI-ii, ೦೦೯-೦೬ ; ಕಿ. 948). **ರಿಪುಮಂಡಳಿಕಭೈರವ** = ಶತ್ರುಮಾಂಡಲಿಕರಿಗೆ ಭೀಕರನಾದವನು ; ಒಂದು ಬಿರುದು : ಸುವರ್ಣಗರುಡಧ್ವಜಂ ಮಱುವಂಕಸಪ್ಪರ್ಮ ಅಯ್ಯನ ಸಿಂಗಂ ರಿಪುಮಂಡಳಿಕಭೈರವಂ . . . ಶ್ರೀಮದ್ವಿಜಯಾದಿತ್ಯದೇವರಸರು (ಕೊಲ್ಹಾ.ಶಾ. ೨೪-೩ ; ೯). **ರಿಪುಮದನಮಹೇಶ್ವರ** = ಶತ್ರುವೆಂಬ ಕಾಮನಿಗೆ ಈಶ್ವರನಂತಿರುವವನು ; ಒಂದು ಬಿರುದು : ಪ್ರತಾಪಲಂಕೇಶ್ವರ ರಿಪುಮದನಮಹೇಶ್ವರ ರಾಯಮುರಾರಿ ಭುಜಬಳಮಲ್ಲ (ಕಇಶ. ೬೯-೦೨–೦೪ ; 1170). **ರಿಪುರಾಯಕಟಕಸೂಱೆಕಾಱ** = ಶತ್ರುಸೈನ್ಯವನ್ನು ನಾಶಮಾಡುವವನು ; ಒಂದು ಬಿರುದು : ಸಹಜಮನೋಜರಿಪುರಾಯಕಟಕಸೂಱೆಕಾಱ (ಕರ್ನಾ. XX, ೩೩-೦೩ ; 1082). **ರಿಪುಸಂವರ್ತ** = ಶತ್ರುಗಳನ್ನು ಪ್ರಳಯಕಾಲದಂತೆ ನಾಶಪಡಿಸುವವನು ; ಒಂದು ಬಿರುದು : ಎಲೆಲೆ ರಿಪುಸಂವರ್ತನೊಳು ಕೊಳುಗುಳಕೆ ವರ್ತಿಸಲರಿದೆನುತ ತಲ್ಲಳಿಸಿ ತೆತ್ತುದು ಮನವನವನೀಪಾಲಸಂದೋಹ (ಕುಮಾ.ದ್ರೋ. ೦೨-೦೦). **ರಿಪುಸರ್ಪಗರುಡ** = ಶತ್ರುವೆಂಬ ಹಾವಿಗೆ ಗರುಡನಂತಿರುವವನು ; ಒಂದು ಬಿರುದು : ಮಹಾಪ್ರಚಂಡದಂಡನಾಯಕವಿಭೂತಿಯ ನಪ್ಪುಕೆಯ್ದು ರಿಪುಸರ್ಪ್ಪಗರುಡನೆನಿಸಿ ನೆಗಟ್ದ ಗೋವಿಂದನ ಮಗನಖಿಳಕಳಾವಿದಂ (ಕೊಲ್ಹಾ.ಶಾ. ೩-೦೬ ; 1079). **ರಿಪುಹೃದಯಶಲ್ಯ** = ಶತ್ರುಗಳ ಹೃದಯಕ್ಕೆ ಈಟಿಯಂತಿರುವವನು ; ಒಂದು ಬಿರುದು : ನಿರ್ಮಲಕೀರ್ತಿ ದೋಷಕಾನನದಾವ ನಮಿತದೇವಾ ಮಾಂಗಲ್ಯ ರಿಪುಹೃದಯಶಲ್ಯ ಲೋಕಖ್ಯಾತ . . . ಶಾಂತನಂಜೇಶ್ವರಾ (ಏಕ್ತ. ೯-೦೪-೨). [ಸಂ.]

**ರಿಪುಕುಲ, ರಿಪುಕುಳ** (ನಾ). ಹಗೆಗಳ ಸಮೂಹ : 'ರಿಪುಕುಲಾಂತಕ' ಪರಾ. **ರಿಪುಕುಳ** : ಉಭಯದೇಸೀಮನೋರಂಜನಂ ರಿಪುಕುಳಜಳಧರಪ್ರಭಂಜನ ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಕಇಶ. ೦೦೩-೯-೦೪ ; 1076).

**ರಿಪುಕುಲಮೃತ್ಯು** = ಶತ್ರುಸಮೂಹಕ್ಕೆ ಯಮನಂತೆ ಇರುವವನು ; ಒಂದು ಬಿರುದು: ಸಿಂಧದ ಸತ್ತಿಗೆಯ ಸಾಲಿನಲಿ ರಿಪುಕುಲಮೃತ್ಯುವಾತನು ವೀರಗಂಗಾಸುತನು ನೋಡು (ಕುಮಾ.ಭೀ. ೬-೩೯). [ಸಂ.]

**ರಿಪುಕುಲಾಂತಕ** (ನಾ). ಶತ್ರುವಂಶಕ್ಕೆ ಯಮಸದೃಶನಾದವನು : ಕಂದ ಬಾರೋ . . . ರಿಪುಕುಲಾಂತಕನಿಪುಣ ಮುಖದೋಱೆನೊ (ಕುಮಾ.ದ್ರೋ. ೯-೨೦). [ಸಂ.]

**ರಿಪುಕುಳ** 'ರಿಪುಕುಲ' ನೋ.

**ರಿಪುಬಲ, ರಿಪುಬಳ** (ನಾ). ಹಗೆಗಳ ಪಡೆ ; ಶತ್ರುಸೈನ್ಯ : ರಿಪುಬಲದುರ್ಭೇದನಮತಿವಿಪುಲಂ ಕ್ರೀಡೋಪಯೋಗ್ಯಮೆಂಬೆಡೆಯುಮನೀಕ್ಷಿಪುದೊಂದು ಪೊೞಲುಮಂ ನಡೆಯಿಪುದೀಗಳೆ ನಮ್ಮ ಕಟಕಮಂ (ಜಗ. ೯-೨೩): ಏನಿದದ್ಭುತವೆಂದಿನಾಹವದಾಸಿಕೆಯ ರಿಪುಬಲದ ಸಂಭ್ರಮ (ತೊರವೆ. ೬-೨೦-೩೩). **ರಿಪುಬಳ** : ರಿಪುಬಳಕಮಳಾಕರಮಂ ನೃಪದ್ವಿಪಂ ಮಿಕ್ಕು ಪೊಕ್ಕು ಕೀಲ್ತ್ತಿತ್ತು (ರಾಜಶೇ. ೩-೯). [ಸಂ.]

**ರಿಪುಬಳ** 'ರಿಪುಬಲ' ನೋ.

**ರಿಪುಬ್ರಜೆ** (ನಾ). ಶತ್ರುಗಳ ಸಮೂಹ : ರಿಪುಬ್ರಜೆ ಮಂಡಳಮೆಯ್ದೆ ಸಾಕ್ಷಿ ಸಾಹಸಕೆ (ಕರ್ನಾ. XX, ೯೭-೩೦; 1072). [< ರಿಪುವ್ರಜ]

**ರಿಪುಭಟ** (ನಾ). ಶತ್ರುಪಕ್ಷದ ವೀರ ; ಅರಿಭಟ : ವಿರಿಂಚಿಪಿತನೊಂದಂಚಿನಲಿ ರಿಪುಭಟನ ಸಾರಥಿಯ ಮಱೆಸಿದನು (ತೊರವೆ. ೭-೪೦-೩೦). [ಸಂ.]

**ರಿಪುಮಥನ** (ನಾ). ಹಗೆಯ ನಾಶ ; ಶತ್ರುಸಂಹಾರ : ಕಥೆಯನಿದನಾ ಕೇಳಿದೆನು ಕಡುಶಿಥಿಲವಾದವು ಹಿಂದಕಿವು ರಿಪುಮಥನವುಂಟೇ ಹೇಳು (ತೊರವೆ. ೬-೩೪–೨೩). [ಸಂ.]

**ರಿಪುರಾಮಗಾಮುಂಡ** (ನಾ). ಒಬ್ಬಾತನ ಹೆಸರು : ಸಂಗಮದ ಪೃಥುವೀಗಾಮುಣ್ಡರುಂ ರಿಪುರಾಮಗಾಮುಣ್ಡನುಂ ಎನೆಬ್ಬರುಂ ನರಸಾಕ್ಷಿಯಾಗೆ

ಪಡೆದಾವರ್ (ಎಕ. VI (R)· ಶ್ರೀರಂಗ· ೬೬-೨೨; ಸು. ೬೦೦).
[ರಿಪು + ಗ್ರಾಮ + ಗಾವುಂಡ]

**ರಿಪುರಾಯ** (ನಾ). ಶತ್ರುರಾಜ : ಯಾದವಕುಳಕಮಳಕಳಿಕಾವಿಕಾಸ ರಿಪುರಾಯ ಗಳಗಾಳಪಾಸ ವಾಳವಮದವಲ್ಲಂ (ಕಎಲ್ಯಾ. ೦೬-೮; 1235); ಮುಳಿದುದ್ದೈ ರಿಪುರಾಯದಳ ಹಗೆ ಹಱಿದುದ್ದೈ ಕುರುಪತಿಗೆ (ಕಬ್ಯಾ.೪. ೪೦-೬). [ರಿಪು + ರಾಯ]

**ರಿಪುವಂಗಡಿಗ** (ನಾ). ಶತ್ರುಪಂಗಡಕ್ಕೆ ಸೇರಿದವನು; ಹಗೆಯ ಪಕ್ಷದವನು : ಹೋಗದಿರು ತಲೆಗೊಡುವೊಡಿದಿರಾಗೆನುತ ರಿಪುವಂಗಡಿಗರನು ಮೂದಲಿಸಿ (ಕಬ್ಯಾ.೩. ೬೦೪. ೩-೩೪). [ರಿಪು + ವಂಗಡ + – ಇಗ]

**ರಿಪುವ್ರಜ** (ನಾ). ಶತ್ರುಗಳ ಸಮೂಹ : ಅನ್ಯೋದಕಂ ಕಿಱಿದಾದಲ್ಲಿ ರಿಪುವ್ರಜಂಗಳೆಡೆಯೊಳ್ . . . ಇರ್ದೊಡೆ ಹಾನಿಯ್ಕು (ಸೋಮೇಕ. ೨೫). [ಸಂ.]

**ರಿಪೇರಿ** (ನಾ). ಶಿಥಿಲವಾದ ಕಟ್ಟಡ, ಕೆಟ್ಟುಹೋದ ಯಂತ್ರ ಮೊದಲಾದುವನ್ನು ಸರಿಪಡಿಸುವಿಕೆ ; ದುರಸ್ತು : ಕೆರೆ ತೂಬು ವಗೈರೆ ರಿಪೇರಿ ಮಾಡತಕ್ಕದ್ದು (ಗ್ರಾಪಚಳ. ೦); ಆ ಕಟ್ಟಡಕ್ಕೆ ರಿಪೇರಿ ಆಗಿ ಎಷ್ಟೋ ವರ್ಷಗಳಾಗಿವೆ (ಕಂಗಳ. ೧೦೦). [←ಇಂ· Repair]

**ರಿಪೋರ್ಟು** (ನಾ). ಯಾವುದಾದರೊಂದು ಸಂಗತಿಯ ಬಗ್ಗೆ ಮಾಡಿದ ವರದಿ,–ವಿವರ : ಪ್ರತಿದಿನವೂ ನಡೆದ ವಿದ್ಯಮಾನಗಳನ್ನು ರಿಪೋರ್ಟು ಮಾಡುವುದು (ಕೃಚಾಪಂ. II, ೩೯); ಲಿಖಿತಮೂಲಕವಾದ ರಿಪೋರ್ಟುಗಳನ್ನು . . . ತಯಾರ್ಮಾಡಲು ಬದ್ಧರಾಗಿರಬೇಕು (ಗ್ರಾಪಚಳ. ೩). [←ಇಂ. Report]

**ರಿಬು, ರಿಭು** (ನಾ). ದೇವತೆ ; ಅಮರ್ತ್ಯ : ಆ ರಿಬುಗಳ ಮೊತ್ತದಿನಿಂದ್ರಂ . . . ಸೊಗಯಿಸೆ (ಶಾಲಾಕ್ಕ. ೦-೨-೯೦ ರಗಳೆ). **ರಿಭು** : ' ರಿಭುವಿಮಾನ' ಪರಾ. [<ಸಂ. ಋಭು]

**ರಿಬ್ಬನ್‌ಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಕೃಷಿನಿ. ೬೦-೦೨೨೦).
[ರಿಬ್ಬನ್ + ಹುಲ್ಲು (<ಪುಲ್)]

**ರಿಭು** ' ರಿಬು ' ನೋ.

**ರಿಭುವಿಮಾನ** (ನಾ). ದೇವವಿಮಾನ : ನೆಲ್ಲವತ್ತಿಯ ಜಿನಭವನಂ ರಿಭು ವಿಮಾನಮಂ ಪೋಲ್ತಿರ್ಕುಂ (ಎಕ. VII. ಶಿಕಮೊ. ೦೦-೯೯; 1085 ?).
[ರಿಭು (<ರಿಬು) + ವಿಮಾನ]

**ರಿಯಾಯತಿ,** ರಿಯಾಯಿತಿ, ರಿಯಾಯ್ತಿ (ನಾ). ೧. ತೆರಿಗೆ, ವ್ಯಾಪಾರದ ವಸ್ತು ಮೊದಲಾದುವುಗಳ ಮೇಲೆ ನೀಡುವ ಸೋಡಿ,–ವಟ್ಟ : ಸರಕಾರವು ಅಷ್ಟೊಂದು ರಿಯಾಯತಿಯನ್ನೂ ತೋರಿಸುವುದಿಲ್ಲ. ತೆರಿಗೆಯ ದರವೂ ಕಡಿಮೆಯಾಗಿರುವುದಿಲ್ಲ (ಬಿಕಸಂ. ೫೩). ೨. ದಯೆ; ಕರುಣೆ : ಶರಣಾಗತನಾದ ಅಪರಾಧಿಗೆ ವಿಶೇಷವಾಗಿ ರಿಯಾಯತಿಯೂ ದೊರೆಯುತ್ತಿತ್ತು (ಕುಟ್ಮಿಕ. ೦೯). **ರಿಯಾಯಿತಿ** : ೧. ಇಂಡಿಯಾದಿಂದ ತಂದ ಅಥವಾ ಮುಂದೆ ತರುವ ಸಾಮಾನುಗಳ ಮೇಲೆ ಕೇವಲ ಐದರಷ್ಟು ಮಾತ್ರ ಸುಂಕ ಕೊಡಬಹುದೆಂಬ ರಿಯಾಯಿತಿಯೂ ದೊರೆಯಿತು (ಕೃಚಾಪಂ.II, ೨೨೪); ಅನುಭವಶಾಲೆಯ ಶುಲ್ಕ ದುಬಾರಿಯದಲ್ಲಿ ರಿಯಾಯಿತಿಯಿಲ್ಲ (ಇಂಚಾಕ. ೦೦೬–೨೯). ೨. ನಾನು ಬಹಳ ರಿಯಾಯಿತಿ ತೋರಿಸಿದ್ದೇನೆ (ಗಾಂಬಂಗಾಂ. ೦೩೪). **ರಿಯಾಯ್ತಿ** : ೨. ಯಾರಿಗೂ ಯಾವ ರಿಯಾಯ್ತಿಯೂ ಇರುವುದಿಲ್ಲ (ಥೂಂಡಿ. ೦೬೩); ಅದೇನೋ ರಿಯಾಯ್ತಿಯಿಂದ ಮೂರು ವರ್ಷಗಳ ಶಿಕ್ಷೆ ಆರೇ ತಿಂಗಳಲ್ಲಿ ಸಿವೃತ್ತಿಯಾಗಿದೆ (ದೀಕಥಾ. ೩೬).
[←ಅರ· ರಿಆಯತ್ ; ಹಿಂ. ರಿಆಯತ್, ರಿಯಾಯತ್]

**ರಿಯಾಯಿತಿ** ' ರಿಯಾಯತಿ ' ನೋ.

**ರಿಯಾಯ್ತಿ** ' ರಿಯಾಯತಿ ' ನೋ.

**ರಿಯಾಸತ** ' ರಿಯಾಸತ್ತು ' ನೋ.

**ರಿಯಾಸತ್ತು,** ರಿಯಾಸತ (ನಾ). ಸಂಸ್ಥಾನ ; ರಾಜ್ಯ : ರಿಯಾಸತ್ತುಗಳಲ್ಲಿಯೂ ಈ ವಿಧಾನವನ್ನು ಜಾರಿಗೆ ತರಲಾಗುವುದೆ ? (ಥೂಂಡಿ. ೯೩). **ರಿಯಾಸತ** : ದಾಖಲ ರಿಯಾಸತ ಮೈಸೂರ (ಮೈಕಂ. ೦೯೨೯, ೯೪-೩; 1813). [← ಅರ. ಹಿಂ. ರಿಯಸತ್ ; ಮರಾ. ರಿಯಾಸತ್, ರಿಯಾಪತ್]

**ರಿರಂಸೆ** (ನಾ). ರಮಿಸುವ ಆಸೆ ; ಕಾಮತೃಷ್ಣೆ : ರಾಜಸುತೆಯೆನ್ನುತ ರಿರಂಸೆಯಿಂ ಭ್ರಮೆಗೊಂಡು ಕೈವಿಡಿದು ಕಡೆಯೊಳತಿಹಿಂಸೆಗೊಳಗಾದೆ (ಕಂಗಾರಾ. ೨-೬-೯೭). [ಸಂ. ರಿರಂಸಾ]

**ರಿವಾಜು** (ನಾ). ಪದ್ಧತಿ ; ರೂಢಿ ; ರೀತಿ : ಮನೆಯ ರಿವಾಜಿನಂತೆ ಅವಳು ಘೋಷಾ ಪಾಲಿಸಬೇಕಾಗಿತ್ತು (ಗ್ರಾಮಾಜು. ೭೯); ಯುಗಾದಿಯ ಸಮಯ ಮಳೆ ಬರುವ ರಿವಾಜೇ ಇದೆ (ಮಂಕಮ. ೫೫).
[← ಅರ. ಹಿಂ. ಮರಾ. ರಿವಾಜ್]

**ರಿಷಭ,** ರಿಸಬ (ನಾ). ಬಸವ ; ವೃಷಭ : ಖ್ಯಾತರಾ ದ್ವಾದಶಾದಿತ್ಯರವರೊಳಗೆ ಪುರುಹೂತಶಚಿಯರ್ಗೆ ವಿಾಷತು ಜಯಂತಂ ರಿ[ಶಾಕಾಂ. ಬೆ.,ವೃ] ಷಭರೋತು ಸಂಭವಿಸಿದರ್ (ಕೆಜ್ಯ. ೦೪-೯). **ರಿಸಬ** : ಋಷಭ – ರಿಸಬ (ಕಚ್ಚಾಸು. ೦೫೪ ಕೃಯೋ). [< ಸಂ. ಋಷಭ]

**ರಿಷಿ** ' ರುಷಿ ' ನೋ.

**ರಿಷಿಗ** (ನಾ). ಒಬ್ಬಾತನ ಹೆಸರು (?) : ಕುಂದಿಗನೃಪಂ ಚಾವುಣ್ಡರಾಯ ಮುನ್ನತಶೌರ್ಯ್ಯಂ ವಿಭು ಮಾದಿಗಂ ರಿಷಿಗನನ್ತ ನನ್ವವರ್ಯ್ಯಂ ಗುಣ ಸ್ತುತಿಗೆಯ್ದು (ಕೆಇಇ. XX, ೩೧-೦೩; 1044). [ ? ]

**ರಿಷಿಹಳ್ಳಿ** ' ರುಸಿವಳ್ಳಿ ' ನೋ.

**ರಿಷ್ಟ** (ನಾ). ೧. ಅಪಾಯ ; ಕೇಡು. ೨. ಅಶುಭ ; ಅಮಂಗಳ : ಶಿರಿ ರಿಷ್ಟಹರಂ (ಜಾತಕಿ. ೭-೪). ೩. ಪಾಪ; ಕಳಂಕ : "ಪಾಪದಲ್ಲಿಯುಂ ರಿಷ್ಟಮೆಂಬುದು" (ಶಲಾಯು. ೦೩೪-೦೬). ೪. ಅದೃಷ್ಟ; ಸುದೈವ : "ರಿಷ್ಟಂ–೧. ಕ್ಷೇಮ, ಅಶುಭ ಇಲ್ಲದೇ ಇರುವಿಕೆ" (ಸಿದ್ಧಾಂತಿ. ೩೬೨). [ಸಂ.]

**ರಿಷ್ಟಿ** (ನಾ). ೧. ಕತ್ತಿ; ಖಡ್ಗ : "ಖಡ್ಗಃ, ನಿಸ್ತ್ರಿಂಶಃ, ಚಂದ್ರಹಾಸಃ, ಅಸಿಃ, ರಿಷ್ಟಿಃ . . . ಕೃಪಾಣಕಾ – ೯ ಖಡ್ಗದ ಹೆಸರು" (ಸಿದ್ಧಾಂತಿ. ೨೬೫). ೨. ಕೇಡು ; ಹಾನಿ. ೩. ದುರದೃಷ್ಟ. [ಸಂ.]

**ರಿಸಬ** 'ರಿಷಭ' ನೋ.

**ರಿಸಾಲು,** ರಿಸಾಲೆ (ನಾ). ಸಾಮಾನ್ಯವಾಗಿ ನೂರು ಕುದುರೆಗಳ ಪಡೆ : ' ರಿಸಾಲುದಾರ ' ಪರಾ. **ರಿಸಾಲೆ** : ಒಟ್ಟು ೫೧,೦೦೦ ಕುದುರೆಗಳು ಸೇರಿ ಒಂದೊಂದು ಸಾವಿರಕ್ಕೊಂದೊಂದು ರಿಸಾಲೆಯಂತೆ ವಿಭಾಗವಾಗಿ (ಕುಚಾಪಂ. II, ೦೬); ಯಾವಾಗ ರಿಸಾಲೆಗಾಗಲಿ (ಅಶ್ವಸೇನೆ) ಅಥವಾ ಪದಾತಿಸೈನ್ಯಕ್ಕಾಗಲೀ ಆದೇಶ ದೊರಕುವುದೋ ಆಗ ಅವು ಸೂಚಿಸಿದ ಕಡೆ ಯುದ್ಧ ಮಾಡಬೇಕೆಂದೂ ನಿರ್ದೇಶಿಸಿದಳು (ಥೂಂಡಿ. ೪೨೬).
[← ಅರ· ರಿಸಾಲ್; ಪಾರ. ರಿಸಾಲಹ್; ಹಿಂ. ಮರಾ. ರಿಸಾಲಾ]

**ರಿಸಾಲುದಾರ** ' ರಿಸಾಲ್ದಾರ್ ' ನೋ.

**ರಿಸಾಲೆ** ' ರಿಸಾಲು ' ನೋ.

**ರಿಸಾಲ್ದಾರ್,** ರಿಸಾಲುದಾರ, ರಿಸಾಲ್ದಾರ (ನಾ). ಅಶ್ವದಳದ ಅಧಿಪತಿ: (ಕೃಚಾಪಂ. II, ೫೩೦). **ರಿಸಾಲುದಾರ** : (೪). **ರಿಸಾಲ್ದಾರ** : ಈ ಸೇನೆಯ ಟೋಲಿಗಳು ರಿಸಾಲ್ದಾರರ ಕೈಕೆಳಗಿದ್ದವು (ಕುಚಾಪಂ. II, ೪೭).
[← ಅರ. ಪಾರ. ಹಿಂ. ರಿಸಾಲ್‌ದಾರ್, ರಿಸಾಲೇದಾರ್; ಮರಾ. ರಿಸಾಲ್ದಾರ್]

**ರಿಸಾಲ್ದಾರ** 'ರಿಸಾಲ್ದಾರ್' ನೋ.

**ರಿಸಿ** 'ರುಷಿ' ನೋ.

**ರಿಸಿಕುವರಿ** (ನಾ). ಋಷಿಯ ಮಗಳು : ಚಟುಲಕಾಮೋದ್ದೀಪನದಿಂದೆ ಕಡುಧೂರ್ತವಟುಗಳು ರಿಸಿಕುವರಿಯರ ಬಟುವೊಲೆಗಳ ಕೈದುಡುಕಿದುದು ಕೇಳೆಲೆ ನಿಟಿಲಾಕ್ಷ ತಪವಿರ್ಪ ಬನದಿ (ಶೋಕಶ. ೬-೦೩).
[ರಿಸಿ (< ಋಷಿ) + ಕುವರಿ]

**ರಿಸಿವೆಣ್** (ನಾ). ಋಷಿಯ ಹೆಂಡತಿ; ಮುನಿಪತ್ನಿ: ತಾನೆ ಸೀತೆ ದೋಹದದಿನಡವಿಯ ರಿಸಿವೆಣ್ಗಳಂ ಕಾಣಲ್ಕೆಂದು ಬಯಸಿದಳ್ (ರಾಮಾಕ್ಯ. ೨೩-೨೨).
[ರಿಸಿ (< ಋಷಿ) + ಪೆಣ್]

**ರೀಠಾ** (ನಾ). ಕರಂಜಮರದ ಒಂದು ಪ್ರಕಾರ : "ಮಂಗಲಃ – ರೀಠಾ. ಕರಂಜ, ಅರಳಿ, ಇಪ್ಪೆ" (೬ಶಂ. ೧೧೫). [ಸಂ.]

**ರೀಡರ್** (ನಾ). ೧. ಉಪಪ್ರಾಧ್ಯಾಪಕ ; ಪ್ರವಾಚಕ : ಅವರು ಕನ್ನಡ ರೀಡರ್ ಆಗಿದ್ದಾರೆ (ರೂಢಿ). ೨. ಪಾಠದ ಪುಸ್ತಕ; ಪಠ್ಯಪುಸ್ತಕ : ಕನ್ನಡ ಐದನೆಯ ರೀಡರ್‌ನಲ್ಲಿ ನಳನ ಕಥೆಯಿದೆ (ರೂಢಿ). [← ಇಂ. Reader]

**ರೀಢೆ** (ನಾ). ಅವಮಾನ; ಅವಜ್ಞೆ ; ತಿರಸ್ಕಾರ : "ಅವಗಣನಮವಜ್ಞಾನಮದವಹೇಳಂ ರೀಢೆ" (ಶಬ್ದಮಣಿ. ೦೧೨-೬). [ಸಂ. ರೀಢಾ]

**ರೀಣ** (ಗು). ಸ್ರವಿಸುವ ; ಸೋರುವ. [ಸಂ.]

**ರೀತಿ** (ನಾ). ೧. ಗಮನ; ಗತಿ. ೨. ನದಿಯ ಹರಿವು, — ಪ್ರವಾಹ. ೩. ಮಾರ್ಗ; ಪದ್ಧತಿ : ನಾನಾಜಾತಿನೀತಿಯ ರೀತಿಗಳ ವಿಸ್ತರಿಸಿ (ಗಣಿತ. ೦೯-೦). ೪. ಬಗೆ; ವಿಧ; ಕ್ರಮ : ಹೊಳಲು ಹೊಸರೀತಿಯಲಿ ಮಿಗೆ ಕಂಗೊಳಿಸುತಿರ್ದುದು (ತೊರವೆ. ೦-೯-೦೦) ; ರೀತಿ ತಿಳಿಯದವನ್ದರೂ ಮಾತು ಬಲ್ಲ (ಗಾದೆ). ೫. ಆಚಾರ; ರೂಢಿ; ಸಂಪ್ರದಾಯ: "ಚರಿತಂ ರೀ[ಪಾಠಾಂ. ನೀ]ತಿ ಚಾರಿತ್ರಂ . . . ಆಚಾರಕಕ್ಕು ನಾಮಂ" (ಮಂಗರಾ. ೬೪-೩); ಪರಕೀಯರ ರೀತಿ ಅನುಕರಣೀಯವಲ್ಲ (ರೂಢಿ). ೬. ಒಂದು ಬಗೆಯ ಲೋಹ ; ಹಿತ್ತಾಳೆ : "ಆರಕೂಟಃ, ರೀತಿಃ – ಈ ೨ ಹಿತ್ತಾಳೆ" (ಹಲಾಯು. ೨೯-೦೬). ೭. ಪೋರೆ ; ಗಡಿ ; ಎಲ್ಲೆ. ೮. ಕಬ್ಬಿಣ ಮುಂತಾದ ಲೋಹಗಳ ಜಂಗು,-ಕಿಟ್ಟ. ೯. ಸ್ವಭಾವ; ಗುಣ : ಅವನ ರೀತಿಯೇ ವಿಚಿತ್ರವಾಗಿದೆ (ರೂಢಿ). ೧೦. [ಕಾವ್ಯಮಿಾ] ಮಾಧುರ್ಯಾದಿ ಕಾವ್ಯಗುಣಗಳಿಂದ ಕೂಡಿದ ಪದಗಳ ಜೋಡಣೆ : ರೀತಿವಿನೂತವಸ್ತು ಕೃತಿಗೊಪ್ಪುವ ಪೆಂಪು . . . ರೀತಿಯೊಳೊಂದೆ ಪೇಟ್ಟುದು ರಸಂ ಬಿಡೆ ಬಂಧುರಕಾವ್ಯಬಂಧಮಂ (ಕಾವ್ಯಾವ. ೬೮೦); ಹೊಸ ರೀತಿ ನೋಡಿದು (೬ಬಶಂ. ೦-೨೩); ರೀತಿ ಅಥವಾ ಮಾರ್ಗವೆಂದರೆ 'ವಚನವಿನ್ಯಾಸಕ್ರಮ' (ಕ್ಯಬಿಂ. ೨೨೦). [ಸಂ.]

**ರೀತಿಕೆ** (ನಾ). ಹಿತ್ತಾಳೆ : "ರೀತಿಕೆ[ಪಾಠಾಂ. ರೀತಿ]ಯೆನಲು ಹಿತ್ತಾಳೆ" (ಮಂಗರಾ. ೩೦-೩) ; ಅಯ್ಯ ರೀತಿಕೆಯಲ್ಲಿ ಅಪರಂಜಿಯಾನಬಿಸುವರೆ (ಅದಪ. ೦೩-೨೯). [ ಸಂ. ರೀತಿಕಾ ]

**ರೀತಿಕೆಡು** ' ರೀತಿಗೆಡು ' ನೋ.

**ರೀತಿಗೆಡಿಸು** (ಕ್ರಿ). ಹಾಳುಮಾಡು ; ದಾರಿತಪ್ಪಿಸು : ನಂಬಬೇಡ ... ಪ್ರೀತಿಪಡಿಸಿ ಹಣವ ಸೆಳೆದು ರೀತಿಗೆಡಿಸಿ ಕಡೆಯಲವನ ಕೋತಿಯಂತೆ ಮಾಡಿಬಿಡುವ ಜಾತಿಕಾಜಿ ಹೆಂಗಳ (ಪುರಂದ. ೨-೦೬-೨) ; ಬೆಳೆಯುವ ಮಕ್ಕಳನ್ನು ಅತಿಯಾಗಿ ಮುದ್ದಿಸಿ, ರೀತಿಗೆಡಿಸದೆ ಅವುಗಳನ್ನು ಶಿಸ್ತಿನಿಂದ ಬೆಳೆಸುವುದು ತಾಯಿ ತಂದೆಗಳ ಮಹಾಕರ್ತವ್ಯವಾಗಿದೆ(ಗೃಹಪಿ. ೧೩೨).
[ ರೀತಿಗೆಡು + — ಇಸು$_3$ ]

**ರೀತಿಗೆಡು**, ರೀತಿಕೆಡು (ಕ್ರಿ). ಹಾಳಾಗು ; ದಾರಿತಪ್ಪು: ರೀತಿಗೆಡಿಸು ' ಪರಾ. **ರೀತಿಕೆಡು** : ನೀತಿಕೆಟ್ಟ ರೀತಿಕೆಟ್ಟ ನಾಯಿ (ಪೊಕಪ್ಪ. ೦೦).
[ ರೀತಿ + ಕೆಡು$_1$ ]

**ರೀತಿಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು : ರೀತಿಗೌಳ :– ೨೨ನೇ ಮೇಳಕರ್ತ ಖರಹರಪ್ರಿಯದಲ್ಲಿ ಜನ್ಯ. ಉಪಾಂಗರಾಗ. ಘನರಾಗಗಳಲ್ಲೊಂದು(ಸಂಗೀತಂ. ೦೩೨). [ ಸಂ. ರೀತಿಗೌಲ ]

**ರೀತಿತಪ್ಪು** (ಕ್ರಿ). = ರೀತಿಗೆಡು : ಇವು ರೀತಿತಪ್ಪಿದಾಗಲೆಲ್ಲಾ ಕಾಣದಂತೆ ಅಸಡ್ಡೆ ಅಲಕ್ಷದಿಂದ ಇರಬಾರದು (ಗೃಹಪಿ. ೦೩೩). [ ರೀತಿ + ತಪ್ಪು$_1$ ]

**ರೀತಿಪುಷ್ಪ** (ನಾ). ಹಿತ್ತಾಳೆಭಸ್ಮದಿಂದ ತಯಾರಿಸಿದ ಕಣ್ಣಿನ ಅಂಜನ; ಕುಸುಮಾಂಜನ : "ರೀತಿಪುಷ್ಪಂ, ಪುಷ್ಪಕೇತುಃ, ಕುಸುಮಾಂಜನಂ – ೩ ಕುಸುಮಾಂಜನದ ಹೆಸರು" (ಶಿದ್ಧೌಷ. ೩೦೫). [ಸಂ.]

**ರೀತಿವಿಫಲ** (ನಾ). [ಕಾವ್ಯಮಿಾ] ಹದಿನೆಂಟು ಬಗೆಯ ಪದದೋಷಗಳಲ್ಲಿ ಒಂದು : ಅಪದಾರ್ಥಂ . . . ವಿಶ್ಲೇಷನಷ್ಟಸಮಾಸಂ ನಯನಾಶರೀತಿವಿಫಲಂ ದುರ್ಲಕ್ಷಣಂ . . . ಇವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೦-೪೬ ಕಥೆ). [ಸಂ.]

**ರೀಪು** (ನಾ). = ರಿಪೀಸು : ನಮ್ಮದು ಚಿಕ್ಕಮನೆ ; ಬಿದಿರಿನ ರೀಪು ಹೊಡೆದರೆ ಸಾಕು (ಮುಂಗಾರು. ೬೦) ; ಚಿಕ್ಕಪ್ಪನು ಹನ್ನೆರಡು ಕೋಲು ಹಲಗೆ, ಇಪ್ಪತ್ತು ಕೋಲು ರೀಪು, ಎರಡು ಸೇರು ಆಣಿ . . . ತರಿಸಿದ (ಬಳಿಕ. ೬). [ ← ಮರಾ. ರೀಪ ]

**ರೀಮು** (ನಾ). ಐನೂರು ಹಾಳೆಗಳಿರುವ ಕಾಗದದ ಕಟ್ಟು; ಇಪ್ಪತ್ತು ದಸ್ತು : ಬರೆಯುವ ಕಾಗದಗಳಾದರೆ . . . ೨೦ ಕ್ವಯರುಗಳಿಗೆ ಒಂದು ರೀಮನ್ನಾಗಿ ಕಟ್ಟುವರು (ಪಾಠಕ್ರ. II. ೯೨೫). [← ಇಂ. Ream]

**ರೀಲ್** ' ರೀಲು ' ನೋ.

**ರೀಲು**, ರೀಲ್ (ನಾ). ದಾರ, ತಂತಿ, ಚಲನಚಿತ್ರಪಟಲ ಮೊದಲಾದುವುಗಳನ್ನು ಸುತ್ತುವ ಸಲಕರಣೆ ; ಕಂಡಿಕೆ : ಇಲ್ಲಿದೋ ಬೆಳ್ಳಕ್ಕಿಯ ಸಾಲು: ಹೊಸಯುಗದ ರೀಲು ! (ಬಂಕಪ. ೯೦-೪). **ರೀಲ್** : ಇದು ಮುಗಿಯುವ ಹೊತ್ತಿಗೆ ಎರಡು ರೀಲ್‌ಗಳು ಮುಗಿದಿರಬಹುದು (ಪಾಡಿಗೇ. ೦೩೦).

**ರೀಲ್‌ಬಿಡು** = (ಆಲಂ) ಸುಳ್ಳು ಹೇಳು; ಬುರುಡೆ ಹೊಡೆ : ನನ್ನ ಮುಂದೇನೇ ಇಷ್ಟು ರೀಲ್ ಬಿಡ್ತಾ ಇದ್ದೀಯಲ್ಲಾ (ರೂಢಿ).
[ ← ಇಂ. Reel ]

**ರುಂಡ** (ನಾ). ೧. ತಲೆಯಿಲ್ಲದ ದೇಹ ; ಮುಂಡ. ೨. ತಲೆಬುರುಡೆ ; ಶಿರಸ್ಸು : " ರುಂಡಮೆಂದು ಶಿರಂ " (ಛಕಾ. ೫೯-೨೬೪) ; ಧರಣಿ ಕಂಪಿಸೆ ಖಳನ ರುಂಡವು ಹೊರಳಿ ಬಂದುಗು ಹರಿಯ ಚರಣಕೆ (ಕೌರಾ. ೨೬-೫೮) ; ಕಡಿವಡೆದ ರುಂಡಗಳ ಘೊನೆಗಣೆಯಿಡಿದಿರುವ ಮುಂಡಗಳ . . . ಕಡು (ತಿಮ್ಮಸ್ತ್ರೀ. ೩-೦೩); ರಣಕಾಳಿ ರುಂಡ ಮುಂಡಗಳ ಚೆಂಡಾಟವಾಡಿದಳಲ್ಲಿ (ಕಶ್ರಾಂಗ. ೯೨-೨೨೫೯). ೩. ಹೇಸರಗತ್ತೆ. [ಸಂ.]

**ರುಂಡಮಾಲೆ**, ರುಂಡಮಾಳೆ (ನಾ). ತಲೆಬುರುಡೆಗಳ ಹಾರ ; ಕರೋಟಿಮಾಲೆ : ದೇಹ ರುಂಡಮಾಲೆಯ ಸ್ಥಾನ ಕರ್ಣ ನಾಗೇಂದ್ರನ ಸ್ಥಾನ (ಬಸವ. ೯೪೪); ಕರುಳುದುಡೆಯ ರುಂಡಮಾಲೆಯ ಮರುಳುಗಳು ಕುಣಿದಾಡೆ (ಕೌರಾ. ೪೪-೦೫) ; ಚಂಡಸುರಥನ ಶಿರವನು . . . ತರಿಸಿದನದಂ ರುಂಡಮಾಲೆಯ ತೊಡವಿಗೆ (ಕ್ಯಪಿಾಶಾ. ೦೪ ಸೂಚನೆ). **ರುಂಡಮಾಳೆ** : ಅಂಭುಟರುಣ್ಡಮಾಳೆ ಪಳನಿಕ್ಕಿ ತದೀಯಕಪೋಳದೊಳ್ಪುದುಳ್ದಿರಸಿದ ನೆತ್ತರಂ ಸುಜಿದು ಕತ್ತಿಗೆಯುಂ ಜಡಿಯುತ್ತೆ . . . ನರ್ತಿಸುವ ಭೈರವನೀ ರಣರಂಗಭೈರವ (ಶಾಂತಿ. XX. ೯೬-೩೪ ; ?). [ಸಂ. ರುಂಡಮಾಲಾ]

**ರುಂಡಮಾಳೆ** ' ರುಂಡಮಾಲೆ ' ನೋ.

**ರುಂಡಾಭರಣ** (ನಾ). ತಲೆಬುರುಡೆಯ ಮಾಲೆಯನ್ನು ಆಭರಣವಾಗಿ ಧರಿಸಿದವನು : ರುಂಡಾಭರಣರು ಘನವೆಂಬೆನೆ ರುಂಡಾಭರಣರು ಘನವಲ್ಲ (ಅಕಂದೆ. ೩೩೯-೫೦). [ಸಂ.]

**ರುಂಡಿಕೆ** (ನಾ). ೧. ಯುದ್ಧರಂಗ. ೨. ದೂತಿ ಅಥವಾ ಕುಂಟಣಗಿತ್ತಿ. ೩. ಹೊಸ್ತಿಲು. ೪. ಅತಿಮಾನುಷ ಶಕ್ತಿ. [ಸಂ. ರುಂಡಿಕಾ]

**ರುಂಡಿಮಾರಮ್ಮ** (ನಾ). ಒಬ್ಬಾತನ ಹೆಸರು : ವಲ್ಲಭಗಾವುಂಡ್ನನುಂ ರುನ್ದಿವಚ್ಚರು ರುಣ್ಡಿಮಾರಮ್ಮನುಂ ಕಾದಳೂರ ಶ್ರೀವಿಕ್ರಮಗಾವುಣ್ಡರುಂ (ಎಕ. II, ೩೫-೬ ; ಸು. 800). [ರುಂಡಿಮಾರ? + ಅಮ್ಮ₁]

**ರುಂದಿ** (ನಾ). ಅಡ್ಡಳತೆ ; ಅಗಲ : ಲಾಂಬಿಯ ಪಕ್ಕದ ಮೂಲೆಗಳ ನಿಶಾನಿಗಳನ್ನು ಹಿಡಿದು ಶಂಕು ಹತ್ತಿಸಿ ಯಾವ ಅಳತೆ ಬರುತ್ತದೆಯೋ ಅದನ್ನು ರುಂದಿಯೆಂದು ಹೇಳುವುದು (ಭೂಮಿ. ೧೨).

[<ಪ್ರಾ. ರುಂದೀ./ಮರಾ. ರುಂದೀ]

**ರುಂದಿವಚ್ಚ** (ನಾ). ಒಬ್ಬಾತನ ಹೆಸರು : ವಲ್ಲಭಗಾವುಣ್ಡರುಂ ರುನ್ದಿವಚ್ಚರು ರುಣ್ಡಿಮಾರಮ್ಮನುಂ (ಎಕ. II, ೩೫-೬ ; ಸು. 800). [ ? ]

**ರುಂದ್ರ** (ಗು). ೧. ವಿಸ್ತಾರವಾದ ; ವಿಶಾಲವಾದ : "ಬೃಹದುರು ರುಂದ್ರಂ ಪೃಥು ಗುರು ಮಹದ್ವಿಶಾಳಂ ವಿಶಂಕಟಂ ವಿಸ್ತೀರ್ಣಂ" (ಪಶ್ಚು.ಕೋ. ೦೦೬-೩೩) ; ವ್ಯಾಸಮುನೀಂದ್ರರುಂದ್ರವಚನಾವ್ಯತವಾರ್ಧಿಯನೀಸುವೆಂ (ಶಂಕರಾ. ೧-೦೩) ; ಇದು . . . ಶ್ರೀಪಾದನಖಚಂದ್ರಸಾಂದ್ರರುಚಿರುಂದ್ರಚಂದ್ರಿಕಾಚಂಚಚ್ಚಕೋರಾಯಮಾನ (ರಾಜಶೇ. ೨-೦೪೩ ಪ) ; ಪುಲಕಿಸಿತು ನಿಶ್ಶಬ್ದರುಂದ್ರದಂಡಕವನಂ ಕೂಡೆ ಪುಲಕಿಸುವಂತೆ (ಶ್ರೀರಾಮಾ. ೦೭೯-೯೬). ೨. ವ್ಯಾಪಕವಾದ ; ನಿಬಿಡವಾದ : ವಿಯಚ್ಚರಧರಣೀಶರತ್ನಮಕುಟಪ್ರಭೆಯಿಂ ದಶದಿಙ್ಮುಖಂಗಳುಂ ಭರಿತಮೆನಿಪ್ಪಿನಂ ನೆರೆದುದಾ ಧ್ವನಿಗಿಂಪುನ ರುಂದ್ರಸೈನಿಕಂ (ಶಂಕರಾ. ೦೦-೦೯೯). [ಸಂ.]

**ರುಂಬಾಲ** 'ರುಮಾಲು₁' ನೋ.

**ರುಂಹರಿ** (ನಾ). ಭೂಮಿ ; ಇಳೆ : ಭಟಾವಳಿಯೊ ತ್ರಿಜಗದಲಿವಿನ ಯಮಪ್ರಸಭಟವ್ರಜವೊ ಜೊಗಳುವೆನೇನ ರುಂಹರಿ ರುಚಿಗೆ ಸಂದಳು ಧರಿಸಲಾಜದೆ ವೈರಿವಾಹಿನಿಯ (ಕುರಂಗ. ೬-೦೬-೦೨) ; ಹರಿಯಕ್ಷವಾಹಿನಿ ಹಂಸಸ್ವರೂಪೆ ರುಂಹರಿಯ ಭಾರವನು ಭೇದಿಸು (ದೇವೀಕೃ. ೩೪). [ ? ]

**ರುಕ್‌ಸತು** (ನಾ). ಪರವಾನಿಗೆ ; ನಿರೂಪ : ಮಾಮಿನಿಸಾಹೇಬರು . . . ಕೊಡಗಿನ ಮಹಾರಾಜರವರ ಸಂಗಡ ರುಕ್‌ಸತು ತೆಗೆದುಕೊಂಡು ತಲಚೇರಿಗೆ ಹೋದರು (ಕಾಕೇಂದ್ರ. ೦೦೦).

[←ಅರ. ರುಖ್ಸತ್ ; ಹಿಂ. ಮರಾ. ರುಖಸತ್]

**ರುಕುಮತೋರಣ** (ನಾ). ಚಿನ್ನದ ತೋರಣ ; ಸುವರ್ಣತೋರಣ : ಆ ರುಕುಮತೋರಣದ ಕಾಂತಿಗಳಿಂದ ರಂಜಿಸುವ ದ್ವಾರಕಾಪುರವರವ ಪೊಕ್ಕನುದಾರವೇಂಕಟನಾಥ ಕೃಷ್ಣನು (ಕಿಷ್ಕು.ಕ. ೩-೦೩೨).

[ < ಸಂ. ರುಕ್ಮತೋರಣ ]

**ರುಕ್ಕು₁** 'ರಿಚೆ' ನೋ.

**ರುಕ್ಕು₂** (ನಾ). ೧. ಕಾಂತಿ ; ಪ್ರಭೆ : ಆ ನತಭೂಮಿಪಾಳಿಸಂಕುಳಮಣಿಮೌಳಿರುಕ್ಕುಪ್ರಸರಪೂಜಿತಪಾದಪಯೋಜಯುಗ್ಮಂ (ಶಾಸಿತ. ೦೫; ಸು. 1370). ೨. ಕದಿರು ; ಕಿರಣ : "ರೋಚಿಃ . . . ರುಕ್ . . . ಗೌ — ಈ ೩೨ ರಶ್ಮಿಗಳ ಪೆಸರ್" (ಹಲಾಯು. ೬-೩೮). [< ಸಂ. ರುಚ್]

**ರುಕ್ಕು₃** (ನಾ). ರೋಗ ; ಜಡ್ಡು : "ರೋಗಃ, ರುಕ್ . . . ರುಜಾ — ಈ ೧೨ ವ್ಯಾಧಿ" (ಹಲಾಯು. ೯೪-೪೯೬). [ < ಸಂ. ರುಜ್ ]

**ರುಕ್ಚಕ್ರ** (ನಾ). ಕಿರಣಗಳ ಸಮೂಹ : ಈತನೆ ಶಕ್ರನೆನಲ್ ಪಿಂಗದಂಗದಂ ವಜ್ರದ ರುಕ್ಚಕ್ರಂ ದೆಸೆಯಂ ದಳ್ಳಿಸೆ ಚಕ್ರಮನಾಕ್ರಮಿಸಲೆಂದು ತಟಿ ಸಂದಿರ್ದಂ (ಶಂಶಾಕಾ. ೦೯-೦೮೦). [ಸಂ.]

**ರುಕ್ಮ** (ಗು). ೧. ಹೊಳೆಯುವ ; ಪ್ರಕಾಶಿಸುವ. (ನಾ). ೨. ಚಿನ್ನ ; ಬಂಗಾರ : "ರೈ ರುಕ್ಮಮಷ್ಟಾಪದಂ . . . ಸ್ವರ್ಣಮನೆ ಪೊನ್ನಿಂಗೆ ನಾಮಮಕ್ಕುಂ" (ಮಂಗರಾ. ೩೦-೪) ; ರುಕ್ಮರಶ್ಮಿನೆಯುಂ ದೇಹದ ಕಾಂತಿಯೊಳ್ ನಿಟಿಸಿದರ್ (ಎಕ. VIII, ಸೊರಬ. ೦೯೬-೦೩ ; 1388). ೩. ಕಬ್ಬಿಣ. ೪. ಒಂದು ಬಗೆಯ ಕಾಡಿಗೆ. [ಸಂ.]

**ರುಕ್ಮಕ** (ನಾ). ಒಂದು ಬಗೆಯ ಪಕ್ಷಿ : ಆ ವನಂಗಳೊಳು ಶುಕ . . . ರುಕ್ಮಕ . . . ವಾಸಕ ಮೊದಲಾದ ಚಿತ್ರರೂಪಶಕ್ತಿಗಳುಳ್ಳ ಪಕ್ಷಿಕುಲಂಗಳುಂ (ಶಿವತ. ೨೦೨). [ ಸಂ. ]

**ರುಕ್ಮದಾನ** (ನಾ). ಚಿನ್ನವನ್ನು ದಾನಮಾಡುವುದು ; ಸುವರ್ಣದಾನ : ರುಕ್ಮಭೂಷಿತಗಾತ್ರನಾಶ್ರಿತರುಕ್ಮದಾನವಿನೋದಿಯಿಂತಾ ರುಕ್ಮವರ್ಣಾಂಬರನ ವಂಶವದಾಯ್ತು ವಿಖ್ಯಾತ (ಜರಾಗ. ೦೦-೯೭-೩೩). [ ಸಂ. ]

**ರುಕ್ಮಾಂಗದ** (ನಾ). ೧. ಚಿನ್ನದ ತೋಳುಬಂದಿ : ಈತಂಗೆ . . . ಸೊಬಗುಸಿರಿಯ ನಳಿದೋಳ್ಗೆ ರುಕ್ಮಾಂಗದಮೆನೆ ಸಲ್ವ ರುಕ್ಮಾಂಗದನೆಂಬ ಸೀಮಂತಪುತ್ರನುಂಟು (ರಾಮಾಕ್ಯ. ೦೨೨-೨೦). ೨. ಒಬ್ಬ ರಾಜನ ಹೆಸರು. ೧. ೨ : ಈತಂಗೆ ರುಕ್ಮಾಂಗದನೆಂತೆಂತು ಹರಿಭಕ್ತಿಗಿಂಬಾಗಿ . . . ಸಲ್ವ ರುಕ್ಮಾಂಗದನೆಂಬ ಸೀಮಂತಪುತ್ರನುಂಟು (ರಾಮಾಕ್ಯ. ೦೨೨-೨೦). [ಸಂ.]

**ರುಕ್ಷ₁** (ನಾ). ೧. ಕರಡಿ : ರು[ಕಾಕಂ. ಖು]ಕ್ಷ ದಂತಿ ತರಕ್ಷು ಫಣಿ ಹರಿಯಕ್ಷ . . . ರಾಕ್ಷಸರೂಕ್ಷಭೀಷಿಗಳ್ ಆ ಕ್ಷಣವಳಿದು (ಜಸ್ತು. ೬೦-೯೩) ; ಪಕ್ಷಿಗಳ ನುಣ್ಣಚಿ ಸೀದುದರಣ್ಯದಲ್ಲಿ ಸಂಗಡಿಸಿದ ರುಕ್ಷರೋಮತತಿ ಬೆಂದುದು ಬೇಸಗೆಯುಗ್ರಮೆಂತುಟೋ (ರಾಜಶೇ. ೩-೯೬). ೨. ನಕ್ಷತ್ರ ; ತಾರೆ : ಪುನರ್ವಸುರುಕ್ಷಂ (ಖರ್ಗಪು. ೦೬-೯೭) ; ಮರುನ್ಮಾರ್ಗದಂತಿರೆ ಚಂಚತ್ತ್ವಗರಾಜರುಕ್ಷಯುತಂ . . . ಗಹನಂ (ರಾಜಶೇ. ೩-೩೭).

[ < ಸಂ. ಋಕ್ಷ ]

**ರುಕ್ಷ₂** (ಗು). ೧. ಒರಟಾದ ; ಕಠಿಣವಾದ. ೨. ತೀಕ್ಷ್ಣರುಚಿಯ. (ನಾ). ೩. ಕಾಠಿಣ್ಯ ; ಒರಟು : ಮುಂದೇನು ಬೇಕು ? ಶ್ರೀಕಾಂತ ರುಕ್ಷವಾಗಿ ನುಡಿದ (ಮುಕ್ತಿ. ೦೯೨). ೪. ನಯವಿಲ್ಲದುದು ; ದೊರಗು : ಶರೀರವೆಲ್ಲ ಪರೆ ಬಂದಂತೆ ರುಕ್ಷವಾಗಿಯೂ ಮತ್ತು ಕಾಂತಿಹೀನವಾಗಿಯೂ ಕಾಣುವುದು (ಪ್ರಿತ್ಯಕಾ. ೨೬). [ಸಂ.]

**ರುಖೋತ, ರುಖ್ಸೋತ** (ನಾ). (ಉಕ) ಮದುವೆಯ ಹಿಂದಿನ ದಿನ ಹೆಣ್ಣಿನ ಕಡೆಯವರು ಗಂಡಿನ ಕಡೆಯವರಿಗೆ ಏರ್ಪಡಿಸುವ ಔತಣ ಮತ್ತು ಆ ಸಮಾರಂಭ : ಮೊದಲು ಎದುರುಗೊಳ್ಳುವುದು, ಆಮೇಲೆ ರುಖೋತವನ್ನು ಹಾಕುವುದೆಂದು ಬಹಳ ಚರ್ಚೆಯಾಗಿ ನಿರ್ಣಯವಾಯಿತು (ಅನಂತ. ೯). **ರುಖ್ಸೋತ** : ರಾತ್ರಿ ಸುಳ್ಳೌತಣ ಮುಗಿದು ರುಖ್ಸೋತ ಆಗೂ ತನಕಾ ಅಂದರ ಎರಡು ಘಂಟೆ ಆತು (ಬೃಹ. ೯) ; ಹಿಂದಿನ ರಾತ್ರಿ, ಬೀಗರು ಬಂದು ಎದುರುಗೊಂಡು ಸುಳ್ಳೌತಣ ರುಖ್ಸೋತ ಮುಗಿಯುವುದಕ್ಕೆ ರಾತ್ರಿ ಮೂರು ಹೊಡೆದುಹೋಗಿತ್ತು (ಸಾಹಿಲಾ. ೯೯).

[←ಮರಾ. ರುಖತ್, ರುಖಸತ್]

**ರುಖ್ಸೋತ** 'ರುಖೋತ' ನೋ.

**ರುಗ್ಣ** (ಗು). ೧. ಮುರಿದ ; ಒಡೆದ. ೨. ಖಾಯಿಲೆಯಿಂದ ಕೂಡಿದ ; ರೋಗದ : ಅವನು ನನ್ನ ರುಗ್ಣ ಶಾಯಿಯ ಸೇವೆಯಲ್ಲಿ ಬಹಳ ಸಹಾಯ ಮಾಡಿದ (ಭಾರತ. ೩೬). (ನಾ). ೩. ಕೆಟ್ಟದು; ಹಾಳಾದುದು : "ಭಗ್ನಮೆನೆ ರುಗ್ಣಮೆನೆ . . . ಭಿನ್ನಮೆನೆ ಕೆಟ್ಟದು" (ಮಂಗರಾ. ೦೩೨-೨೬). ೪. ಮುರಿದುಹೋದುದು : "ರುಗ್ಣಂ, ಭಗ್ನಂ—೨ ಮುರಿದು ಹೋದದ್ದು" (ಸಿದ್ಧಾಂತ. ೪೯೭). ೫. ರೋಗಿ. [ಸಂ.]

**ರುಗ್ಣಗೃಹ** (ನಾ). ರೋಗಿಗಳಿಗೆ ಚಿಕಿತ್ಸೆ ಮಾಡುವ ಮನೆ ; ಚಿಕಿತ್ಸಾಲಯ ; ಆಸ್ಪತ್ರೆ : ರುಗ್ಣಗೃಹದ ಅವರ ಸಭೆಯಲ್ಲಿ . . . ಆನಂದ ಪ್ರವಾಹಕ್ಕೆ ತುಂಬ ತಡೆಯುಂಟಾಗುತ್ತಿತ್ತು (ಐಶ್ವ.ಕ. ೩೯೨). [ಸಂ.]

**ರುಗ್ಣತೆ** (ನಾ). ರೋಗ ; ಜಡ್ಡು ; ಖಾಯಿಲೆ : ಸಾಮಾಜಿಕ ರುಗ್ಣತೆಯನ್ನು ಕಳೆಯುವ ಇವರ ಹಾಸ್ಯ . . . ಬೆಳಗುವಂತಿರಲಿ (ಗರುಡಾ. ೬ ಪುಷ್ಪ೨). [ಸಂ. ರುಗ್ಣತಾ]

**ರುಗ್ಣಶಯ್ಯೆ** (ನಾ). ರೋಗದಿಂದ ಹಾಸುಗೆ ಹಿಡಿದಿರುವ ಸ್ಥಿತಿ : ಅಂತ್ಯದಲ್ಲಿ, ರುಗ್ಣಶಯ್ಯೆ ಇಲ್ಲದಿರುವುದು ಮಾನವಜನ್ಮಕ್ಕೆ ಒಂದು ಪೂರ್ವ ಪುಣ್ಯ (ಶಾಂತಲಾ. ೦೯೦). [ಸಂ. ರುಗ್ಣಶಯ್ಯಾ]

**ರುಗ್ಣಾಲಯ** (ನಾ). = ರುಗ್ಣಗೃಹ : ರೋಗಿಗಳ ರುಗ್ಣಾಲಯದಲ್ಲಿ ತೋರಿ ಬರುವ ಶಾಂತತೆ ಅಲ್ಲಿ ಪಸರಿಸಿದ್ದಿತು (ಕಾಂಚನಾ. ೬೬); ಅವಳು ರುಗ್ಣಾಲಯಕ್ಕೆ ಹಿಂದಿರುಗಿದಾಗ ದಾದಿಯ ಆಜ್ಞೆ ಕಾದಿತ್ತು (ಛಸರು. ೩೨೩). [ಸಂ.]

**ರುಗ್ಣಾವಸ್ಥೆ** (ನಾ). ರೋಗದಿಂದ ನರಳುತ್ತಿರುವ ಸ್ಥಿತಿ : ರಾಜರೇ ಖುದ್ದಾಗಿ ಹೋಗಿ ರುಗ್ಣಾವಸ್ಥೆಯಲ್ಲಿದ್ದ ಮಲ್ಲಿಗಮ್ಮನನ್ನು ಕರೆಸಿಕೊಂಡು ಬಂದ ಸುದ್ದಿಯು ಅರಮನೆಯಲ್ಲಿ ಹರಡದೇ ಹೋಗಲಿಲ್ಲ (ಶ್ರೀರಾಮ. ೦೦೩); ಮತ್ಸರಾಗ್ನಿ ಆ ರುಗ್ಣಾವಸ್ಥೆಯಲ್ಲಿಯೂ ಹೊಗೆಯಾಡತೊಡಗಿತ್ತು (ಮರಳು. ೬೮೭). [ಸಂ. ರುಗ್ಣಾವಸ್ಥಾ]

**ರುಗ್ದಾಹ** (ನಾ). ಹದಿಮೂರು ಬಗೆಯ ಸನ್ನಿಪಾತಗಳಲ್ಲಿ ಒಂದು ; ಎಡೆಬಿಡದೆ ಬಾಯಾರುವ ಒಂದು ಬಗೆಯ ಸನ್ನಿಪಾತ : ತ್ರಯೋದಶ ಸನ್ನಿಪಾತವಾವುವೆಂದೊಡೆ : _ ಸಂಧಿಗ, ಅಂತಕ, ರುಗ್ದಾ[ಶಾಕಾಂ.ಗ್ರಾ]ಹ, ಚಿತ್ತವಿಭ್ರಮ . . . ಪ್ರಳಾಪಗಳೆಂದು ಪದಿಮೂರು ತೆರನು (ಸಳಪ್ಪ. ೦೩೦). [ಸಂ.]

**ರುಗ್ವೇದ** (ನಾ). ಚತುರ್ವೇದಗಳಲ್ಲಿ ಒಂದು ; ಋಗ್ವೇದ : 'ರುಗ್ವೇದದೆರೆ' ಪರಾ. [< ಸಂ. ಋಗ್ವೇದ]

**ರುಗ್ವೇದದೆರೆ** (ನಾ). ಋಗ್ವೇದದ ಬೋಧನೆಗೆಂದು ಎತ್ತುತ್ತಿದ್ದ ತೆರಿಗೆ ; ಭಟ್ಟವೃತ್ತಿ : ವೇದಾಂತದೆರೆ ಮತ್ತ ೧೫ ಹರಳ್ಕತ್ರರು ೧೦. × × ರುಗ್ವೇದದೆರೆ ಮತ್ತ ೧೫ (ಶಾಇ. XX, ೩೦೦-೦೭ ; 12ನೆಯ ಶತ). [ರುಗ್ವೇದ + ತೆರೆ$_2$ (< ತೆಱೆ$_3$)]

**ರುಚ** (ನಾ). ೧. ಹೊಳಪು ; ಪ್ರಕಾಶ. ೨. ಕಿರಣ ; ರಶ್ಮಿ : "ರುಚಿ ದ್ಯುತಿ ಪ್ರಗ್ರಹಂ ದೀಪ್ತಿ ಘೃಷ್ಟಿ ರಶ್ಮಿ ರುಚಂ ಕಿರಣಂ" (ಮಂಗರಾ. ೧೦-೩). [ಸಂ. ರುಚ್, ರುಚಾ]

**ರುಚಕ** (ಗು). ೧. ಹಿತವಾದ ; ಮನಸ್ಸಿಗೆ ಒಗ್ಗುವ. ೨. ಜೀರ್ಣಕಾರಿಯಾದ ; ಜಠರೋತ್ತೇಜಕವಾದ. ೩. ತೀಕ್ಷ್ಣರುಚಿಯುಳ್ಳ ; ಕಟುರುಚಿಯ. ೪. ಮಂಗಳಕರವಾದ. (ನಾ). ೫. ಮಂಗಳದ್ರವ್ಯ. ೬. ಒಂದು ಬಗೆಯ ಉಪ್ಪು ; ಸೌವರ್ಚಲ : "ಸೌವರ್ಚಳಃ, ರುಚಕಕೆ -ಈ ೨ ಸೌವರ್ಚಳಂ" (ಕಲಾಯು. ೦೦೦-೧೭೩). ೭. ಒಂದು ಬಗೆಯ ಚಿನ್ನದ ಕಂಠಾಭರಣ. ೮. ಮಾಲೆ ; ಹಾರ. ೯. ಹಲ್ಲು ; ದಂತ. ೧೦. ಕುದುರೆಯ ಕುತ್ತಿಗೆಯ ಮೇಲಿನ ಕೂದಲು ; ಆಯಾಲು. ೧೧. ಉತ್ತರದ ಕಡೆ ಮಾತ್ರ ಮುಚ್ಚಿ, ಉಳಿದ ಮೂರು ಕಡೆಗಳಲ್ಲಿ ತೆರೆದ ಆವರಣಗಳಿರುವ ಒಂದು ಬಗೆಯ ಕಟ್ಟಡ. ೧೨. ಅಮೃತ ; ಸುಧೆ. ೧೩. ಒಂದು ಬಗೆಯ ಹಣ್ಣಿನ ಮರ ; ಮಾದಲ; ಮಾತುಲುಂಗ. ೧೪. ಎಡಲದ ಘುರ. ೧೫. ನಿರ್ದಿಷ್ಟನಕ್ಷತ್ರರಾಶಿಯಲ್ಲಿ ಹುಟ್ಟಿದ, ಅಸಾಧಾರಣವಾದ ಐದುಗಣ್ಯಪುರುಷವರ್ಗಗಳಲ್ಲಿ ಒಂದು: ವರಾಹಮಿಹಿರನು ಮನುಷ್ಯರನ್ನು ಶರೀರದ ಅಳತೆ ಆಕಾರದ ಮೇಲೆ, ಐದು ಜಾತಿಗಳನ್ನಾಗಿ ವಿಂಗಡಿಸುತ್ತಾನೆ. ಹಂಸ, ಶಶ, ರುಚಕ, ಭದ್ರ, ಮಾಲವ್ಯ ಎಂಬುವೇ ಈ ಐದು ಜಾತಿಗಳು (ಭಾರತ. ೩೦೭). ೧೬. ಕೊರಳು; ಕತ್ತು: "ಭೂಧರದಶನಾಮೃತಂ ಲವಣಭದ್ರ ಶಿರೋಧರ ಮಾತುಳಂಗವಾಭರಣಗಳೆಂಬಿವೈದೆ ರುಚ[ಶಾಕಾಂ.ಟಿ]ಕಾಹ್ವಯಂ" (ವಾಪಾರ. ೯೨). ೧೭. [ಜೈನ] ಸುಮೇರುಪರ್ವತದ ಬಳಿ ಇರುವ ಒಂದು ಪರ್ವತ : ಪ್ರಾಗ್ದಿಗ್ದೇಶದ ವೋಘಸುಪ್ರಬುದ್ಧ ರುಂದ್ರವಿಮಳರುಚಕ . . . ಸುಪ್ರತಿಷ್ಠವೆಂಬ ಕೂಟಾಷ್ಟಕಂಗಳೊಳ್ (ಅಂಪು. ೭-೩೭) ; ತ್ರಿಕೂಟ . . . ಪತಂಗ ರುಚಕ . . . ನಿಷಧವೆಂಬೈದು ಗಿರಿಗಳ್ (ಬಳೀಲ. ೨೦೪). ೧೮. ಅರುವತ್ತುಮೂರು ಇಂದ್ರಕಗಳಲ್ಲಿ ಒಂದು : ೧. ಋತು . . . ೧೫ ರುಚಕಂ . . . ೬೩ ಸರ್ವಾರ್ಥಸಿದ್ಧಿ ಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್ (ತತ್ತ್ವಸ್ತ್ರ. ೨೦೩). [ಸಂ.]

**ರುಚಕಾಯೋಗ** (ನಾ). [ಜ್ಯೋತಿ] ಶುಭವನ್ನುಂಟುಮಾಡುವ ಒಂದು ಯೋಗ, — ದೆಸೆ : ಕುಜನ ಚತುಃಷ್ಕೇಂದ್ರಂಗಳಲ್ಲಿ ಶುಭಗ್ರಹರಿರಲೂ ರುಚಕಾಯೋಗಂ ಯಿದರಿಂದಂ ಅಷ್ಟಾದಶವಿಧ ಧಾನ್ಯಲಾಭಮಕ್ಕು (ಅಯುಬೀ. ೨೩-೦೦). [ಸಂ.]

**ರುಚಿ** (ನಾ). ೧. ಕಾಂತಿ ; ಪ್ರಕಾಶ ; ತೇಜಸ್ಸು : ಸಂಧ್ಯಾಸಮಯಾತ್ತ ರಕ್ತರುಚಿ ಪಿಂಗೆ ಬಟಿಕ್ಕುದಯಾದ್ರಿಯೊಳ್ ಪದಂಗಾಸಿದ ಪೊಸ ಪುಂಜಿಯಮೊಲಿರ್ದುದು ಕಣ್ಗೆ ಹಿಮಾಂಶುಮಂಡಲಂ (ಸಂಕಲಾ. ೩-೯೦); ಸುಧಾಂಶುರುಚಿಯಂತೆ . . . ಶಂಕರಂ . . . ಮೆಱೆವುತಿರ್ದನು ದಿವ್ಯತೇಜದಲಿ (ಶ್ರತುಂಲೀ. ೨-೦೩). 'ರುಚಿವೀಱು' ಪರಾ. ೨. ಕಿರಣ ; ರಶ್ಮಿ : "ರೋಚಿಃ . . . ಕಿರಣಃ, ರುಚಿಃ . . . ಗೌಃ — ಈ ೩೨ ರಶ್ಮಿಗಳ ಪೆಸರ್" (ಕಲಾಯು. ೭-೩೬). ೩. ಅಪೇಕ್ಷೆ ; ಬಯಕೆ : "ಇಚ್ಛೆ . . . ರುಚಿ ಕಾಮ ವಾಂಛೆ ಈಪ್ಸಿತವೆನಲು ಬಯಕೆ" (ಮಂಗರಾ. ೦೨೯-೦೦); ಸನ್ಮಾರ್ಗರುಚಿಪ್ರಸ್ಫೂರ್ತಿ ಚೆಲ್ವಾಗಿರೆ ಕರಮುದಯಂಗೊಂಬ ಬಾಲಾರ್ಕನಂ ಮದ್ವರಚೇತಃಪದ್ಮವಿಗಳ್ ಬಯಸಿದಪುದು (ರಾಜಶೇ. ೩-೭೩); ಕರ್ವುಗಳಲ್ಲಿ ರುಚಿ ಹುಟ್ಟಿಸಬೇಕಾಗಿದೆ (ಕೃಷಿಬೀ. ೪೩). ೪. ಸವಿ ; ಸ್ವಾದ : ತೆಂಗಿನ ತಿರುಳಂ ಪಿಪ್ಪಲಿಯ ನೀರೊಳರದವನಿಂಬಾಗಿರೆ ಪಿಟೆದು ಕಳೆಯೆ ದುಗ್ಧಸ್ವರೂಪಮಂ ತಳೆವಾ ವಿಮಳರುಚಿಯಾಗಿರ್ಕುಂ (ಲೋಕೋಪ. ೯-೯೬); ವಾಸಂತಿಯ ಮನಸ್ಸಿಗೆ ಸೊಗಸಿಲ್ಲ ; ಊಟದಲ್ಲಿ ರುಚಿಯಿಲ್ಲ (ಶೇಷನೀಲ. ೦೦೦) ; ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ (ಗಾದೆ). ೫. (ವಿಶೇಷ ಸಂದರ್ಭಗಳಲ್ಲಿ) ಉಪ್ಪು : ಸಾರಿಗೆ ರುಚಿ ಸಾಲದು (ಕೂಡು). ೬. ಒಂದು ಬಗೆಯ ಹುಲ್ಲು : "ಕಹಿಹುಲ್ಲು ರುಚಿಯುಕ್ಕು" (ಮಂಗರಾ. ೩೩-೬). ೭. ಒಂದು ಬಗೆಯ ಸಸ್ಯ : "ಸೊಂಡೆ ರುಚಿ ಚಿತ್ರರಟಿ ಸಿಂಹಿಕಾಖ್ಯಂ" (ಮಂಗರಾ. ೩೯-೨೮).

**ರುಚಿಯಾಗು** = ೧. ಕಾಂತಿಯಿಂದ ಕೂಡಿರು ; ರಂಗಾಗು : ಸುರಧನು ಪಾಟಳರುಚಿಯಾಗಿರೆ ಸಮರಂ ಪೀತವರ್ಣಮಾಗಿರೆ ವೈಶ್ವಾನರಭಯಂ (ಲೋಕೋಪ. ೯-೨೩). ೨. ಸ್ವಾದುವಾಗು ; ಹಿತವಾಗು : ಕರಿದ ಆಹಾರ ರುಚಿಯಾಗಿರುತ್ತದೆ (ಆರುಜ್ಞಾ. ೯೯). [ಸಂ.]

**ರುಚಿಕಟ್ಟು$_1$** (ಕ್ರಿ). ರುಚಿಯಾಗು ; ಸವಿಯಾಗು : ಸಾರಿಗೆ ಇಂಗಿನ ಒಗ್ಗರಣೆ ಹಾಕಿದರೆ ಅಡಿಗೆ ರುಚಿಕಟ್ಟುತ್ತದೆ (ರೂಢಿ). [ ರುಚಿ + ಕಟ್ಟು$_1$ ]

**ರುಚಿಕಟ್ಟು$_2$** (ನಾ). ರುಚಿಯಾದುದು ; ಸವಿಯಾದುದು : ಬಾಳೆಯ ಹೂ ಹಾಗೂ ದಿಂಡಿನ ಪಲ್ಲೆ ರುಚಿಕಟ್ಟು (ಸುಕತುಂ. ೯೦) ; ಬಹಾಳ ಬಹಾಳ ರುಚಿಕಟ್ಟು ! ಅಮೃತದ ಕೆನೆ ಇರ್ತದಂತಲ್ಲ, ಅದಾ ಇದರ ಮುಂದೆ ಸಕ್ಕಟ್ಟೆ ಸಪ್ಪೆ ! (ಬೆಳುವು. ೨೦೪). [< ರುಚಿಕಟ್ಟು$_1$]

**ರುಚಿಕತ್ರಿ** (ನಾ). ಒಂದು ಬಗೆಯ ಸಸ್ಯ : ಅರದ್ರಿ, ದೊಡ್ಡನಾತದ ಗಿಡ, ಇಬಿನ್ನೆ, ರುಚಿಕತ್ರಿ (ವೈಶಿಗಿ. ೦೩-೨೯೩). [?]

**ರುಚಿಕರ** (ಗು). ೧. ಸ್ವಾದುವಾಗಿರುವ; ರುಚಿಕಟ್ಟಾದ. (ನಾ). ೨. ರುಚಿಕಟ್ಟಾದುದು ; ಸ್ವಾದುವಾದುದು : ತಿಳಲು ಬಲು ರುಚಿಕರವು (ಮುಂಬಯು. ೯-೬೦); ಅಟ್ಟ ಆಹಾರ ರುಚಿಕರವಾಗಿರುವುದು ಮಾತ್ರವಲ್ಲದೆ ಜೀರ್ಣಕಾರಿಯೂ ಆಗಿದೆ (ಆರುಜ್ಞಾ. ೯೯). [ಸಂ.]

**ರುಚಿಕಾರ** (ನಾ). ರುಚಿಯನ್ನು ಕೊಡುವ ವಸ್ತು, — ಪದಾರ್ಥ : ಅನ್ನಾದಿ ರುಚಿಕಾರದೊಳು ಸಾಧನಾಖ್ಯಂ (ಮಂಗರಾ. ೧೯೭-೩೭). [ಸಂ.]

**ರುಚಿಕೆಡು** 'ರುಚಿಗೆಡು' ನೋ.

**ರುಚಿಕೊಡು** 'ರುಚಿಗೊಡು' ನೋ.

**ರುಚಿಗೆಡು**, ರುಚಿಕೆಡು (ಕ್ರಿ). ೧. ಸವಿಯಿಲ್ಲದಂತಾಗು; ಅರುಚಿಯಾಗು: ರುಚಿಗೆಡದು . . . ಅಮಳ ಸುಭಾಷಿತರಸವು (ಇಂಶಾಕ. ೨೨೨-೧೦೦). ೨. ಕಾಂತಿಗುಂದು ; ತೇಜೋಹೀನವಾಗು : ಭವದಾನನಕ್ಕೆ ಸೋಲ್ತಾತ್ಮ ವಿಲಾಸಮನುಟಾದ ತೆಱದೆ ರುಚಿಗೆಟ್ಟು ದಿಗಂತವಿಲಂಬಿಬಿಂಬನಂಬುರುಹ ವೈರದಿಂದುಡುಪನುಡುಪನಾದಂತಾದು (ಶಾಂತಿಪು. ೩-೬೮). **ರುಚಿಕೆಡು** : ೧. ಈ ರೋಗದಿಂದಾಗಿ ಜೀರ್ಣಶಕ್ತಿಯ ಮೇಲೆ ಪರಿಣಾಮವಾಗುವುದು ; ರುಚಿಕೆಡುವುದು (ಅಡುಶಾ. ೬೩). [ರುಚಿ + ಕೆಡು$_1$]

**ರುಚಿಗೆಯ್** (ಕ್ರಿ). ಸವಿನೋಡು ; ಆಸ್ವಾದಿಸು : ಉಚಿತವಱಿದು ಮಿಂಡಿವೆಣ್ಗಳು ನವರತ್ನಖಚಿತಭೂಷಣಹಸ್ತದಲಿ ರುಚಿವೆತ್ತು ಬಡಿಸಲ್ಕೆ ಶ್ರೀಕೃಷ್ಣರಾಯನು ರುಚಿಗೆಯ್ದು ಮೊಗವನೀಕ್ಷಿಸಿದ (ಮೋಹತ. ೧೪-೧೪).
[ರುಚಿ + ಕೆಯ್$_1$]

**ರುಚಿಗೊಡು**, ರುಚಿಕೊಡು (ಕ್ರಿ). ೧. ಸವಿಯಾಗು; ರುಚಿಯಾಗು : ಎಲ್ಲಿ ಕಡಲಿನ ಉಪ್ಪು ಎಲ್ಲಿ ಕಾಡಿನ ನೆಲ್ಲಿ ಸವಿಕೂಟ ಕೂಡಿಬಂದಲ್ಲಿ ನನ್ನಲ್ಲಿ ರುಚಿಗೊಡುವ ಕಂದ ಬಂದಿಲ್ಲಿ (ಗಾ. ೧೦೬-೦೨). **ರುಚಿಕೊಡು** : ೨. ರುಚಿಯೊದಗಿಸು : ಊಟಕ್ಕೆ ಉಪ್ಪಿನಕಾಯಿ ರುಚಿಕೊಡುತ್ತದೆ (ರೂಢಿ).
[ರುಚಿ + ಕೊಡು$_1$]

**ರುಚಿಗೊಳಿಸು** (ಕ್ರಿ). ಸವಿಯಾಗಿಸು ; ರುಚಿಯಾಗಿಸು : ಸ್ವಾತಂತ್ರ್ಯ ದುಪ್ಪು ಸಾಗರದವರೆಗೆ ಮುಟ್ಟಿಸುವ ಪಂಥ ತಳೆದ. ಅಂಥ ಉಪ್ಪಿನಲೆ ಜೀವ ರುಚಿಗೊಳಿಸಿ ಸಪ್ಪೆತನವ ಕಳೆದ (ಸೂರ್ಯಪಾ. ೦೩-೦೨).
[ರುಚಿ + ಕೊಳ್$_1$ + —ಇಸು$_3$]

**ರುಚಿತೋರು** 'ರುಚಿದೋಱು' ನೋ.

**ರುಚಿತ್ವ** (ನಾ). ೧. ರುಚಿಯಾಗಿರುವಿಕೆ ; ಸವಿ. ೨. ಕಾಂತಿಯಿಂದ ಕೂಡಿರುವುದು : ದ್ವಿಜಮುಖ್ಯವೃತ್ತಿ ಕೃಷ್ಣರುಚಿತ್ವಂ ಪೆಱದಿರೆ ಪುರೋಹಿತ ಬ್ರಾಹ್ಮಣನೆನಿಸಿದುದತನುನೃಪತಿಗೀ ಪರಪುಷ್ಪಂ (ಶಂಪ್ರಪು. ೭-೬೬). [ಸಂ.]

**ರುಚಿದೋಱು**, ರುಚಿತೋರು (ಕ್ರಿ). ೧. ಹೊಳಪನ್ನು ತೋರು ; ಕಾಂತಿ ಬೀರು : ಕುವಲಯನೇತ್ರೆ ದಾಳಿಂಬದ ಬಿತ್ತಿನಂತೆಸೆವ ಕೆಂಬಲ್ಲ ರುಚಿದೋಱೆ ಬಿನ್ನವಿಸಿದಳು ಪೀತಾಂಬರಧರಗೆ (ಮೋಹತ. ೦೩-೨೯). **ರುಚಿತೋರು** : ೨. ಸವಿಯಾಗು; ರುಚಿಕಾಣು : ರುಚಿತೋರದ ಊಟ ಉಂಡರೆಷ್ಟು ಬಿಟ್ಟರೆಷ್ಟು ? (ರೂಢಿ). [ರುಚಿ + ತೋಱು]

**ರುಚಿನೋಡು** (ಕ್ರಿ). ಪದಾರ್ಥದ ಸವಿಯು ಸರಿಯಾಗಿದೆಯೇ ಇಲ್ಲವೇ ಎಂದು ಪರೀಕ್ಷಿಸಲು ಸ್ವಲ್ಪ ಭಾಗವನ್ನು ತಿಂದು ನೋಡು : ಉತ್ತಮವಾದ ಫಲಗಳನ್ನು ನಿಮಗೋಸ್ಕರ ರುಚಿನೋಡಿ ಇರಿಸಿದ್ದೇನೆ (ಶೀತಾಂ. XV, ೨೧). [ರುಚಿ + ನೋಡು]

**ರುಚಿರ$_1$** (ನಾ). [ಛಂದ] ಒಂದು ವೃತ್ತದ ಹೆಸರು : ಅತಿಜಗತಿ ಛಂದಸ್ಸಿನಲ್ಲಿ ಹದಿಮೂರಕ್ಷರಪಾದವಾಗಿ ಹುಟ್ಟುವ ವೃತ್ತಗಳಲ್ಲಿ ಒಂದು : ದಿನೇಶ ಚಂದ್ರ ಪವನ ಭಾನು ರುದ್ರರೊಂದಿನಿಲ್ವುದುಂ . . . ರುಚಿರಮಿದಾಗಮೋಕ್ತಿಯಿಂ (ಛಂದೋಂಬು. ೨-೦೩೪). [ಸಂ. ರುಚಿರಾ]

**ರುಚಿರ$_2$** (ಗು). ೧. ಹೊಳೆಯುವ ; ಪ್ರಕಾಶಮಾನವಾದ : ಯತಿತತಿ ಚಕ್ರವರ್ತಿರುಚಿರಾಮಳಮೂರ್ತಿ . . . ಮಾಳ್ಕೆಮಗಿಷ್ಟಸಿದ್ಧಿಯಂ (ರಾಜಶೇ. ೦-೬). ೨. ಸುಂದರವಾದ ; ಚೆಲುವಾದ : ಆ ರುಚಿರವನಧಿಪರಿಯಂತ . . . ಒಪ್ಪುವುದು ಚಾರುತರಲಾಳದೇಶ (ಹರಿಶ. ೦-೩೪). ೩. ರುಚಿಯಾದ ; ಸವಿಯಾದ : ಪ್ರಿಯಕುಶಲಪೂರ್ವಕೋಚಿತ ನಯವಿನಯೋದಾರರುಚಿರವಚನಪ್ರಾಯಂ ಪ್ರಿಯತರಮೆಂಬುದು (ಕಬಾ. ೩-೨೦೩). ೪. ಜೀರ್ಣಕಾರಿಯಾದ; ಜಠರೋತ್ತೇಜಕವಾದ. (ನಾ). ೫. ಸೌಂದರ್ಯ ; ಚೆಲುವು : "ಪ್ರಾಗ್ರ್ಯಂ . . . ಮನೋಹರಂ, ರುಚಿರಂ . . . ಪೇಶಲಂ —ಈ ೨೯ ಒಳ್ಳಿತು" (ಹಲಾಯು. ೦೦೪-೪). ೬. ಕೇಸರಿಬಣ್ಣ. ೭. ಕೆಂಪುಬಣ್ಣದ ಕುದುರೆ : ಅತ್ತಿಹಣ್ಣಿನ ವರ್ಣ ಉಳ್ಳ ಕುದುರೆಯು ರುಚಿರವೆಂದು ಹೇಳಲ್ಪಡುವುದು (ಶಾಗಂ. ೩೦೦-೦೬). [ಸಂ.]

**ರುಚಿರತೆ** (ನಾ). ಸೌಂದರ್ಯ ; ಚೆಲುವು : ಯಾವ ವಸ್ತು ಸುಂದರವಾಗಿದೆಯೋ ಅದರ ಮೊದಲ ಗುಣ ರುಚಿರತೆ (ಸೌಂದ. ೪೬).
[ಸಂ. ರುಚಿರತಾ]

**ರುಚಿರಾಮು** (ನಾ). ೧. ಪಾದರಸ ; ಪಾರದ : (+). ೨. ಕಣ್ಣು; ನಯನ : (+). ೩. ಬಿಳಿದು ; ಶ್ವೇತ : "ಬಿಳಿದೆನಿಪ್ಪುದಂ ನುಡಿವಲ್ಲಿ [ಶಾಕಾಂ.ಶು]ಚಿರಾಮುವೆಂದೆಂಬುದು" (ರುಂಗರಾ. ೦೪೦-೦೦) ; "ಸಿತಂ ದೃಕ್ಸೂತಂ ರುಚಿರಾಮುಮಕ್ಕುಂ" (ಶಾಪಾರ. ೦೩೨). [ಸಂ.]

**ರುಚಿರೆ** (ನಾ). ನಲ್ಲೆ ; ಕಾದಲೆ : ಪ್ರಿಯತಮೆ : "ಪ್ರಿಯತಮೆ ಸುಭಗೆ . . . ರುಚಿರೆ ವಲ್ಲಭೆ ತಾಂ" (ವಸ್ತುಕೋ. ೩೨-೩). [ಸಂ. ರುಚಿರಾ]

**ರುಚಿವಡಿಸು** (ಕ್ರಿ). ರುಚಿಗೊಳಿಸು ; ಸವಿಗೊಳಿಸು : ನಿನ್ನ ಕರ್ಣಕೆ ಕಡುರುಚಿವಡಿಸುವ ಪೇಳ ಮೇಲ್ಗತೆಯ (ಮೋಹತ. ೦೪-೨).
[ರುಚಿ + ಪಡಿಸು]

**ರುಚಿವಡೆ** (ಕ್ರಿ). ರುಚಿಯಾಗು ; ಸವಿಯಾಗು : ಉಪ್ಪಿಲ್ಲದೆ ಕೇಳೊಕ್ಕಳ ತುಪ್ಪವನೆಱೆದುಣ್ಣೆನೆಂಬೊಡುಂಬುಣಸೇಂ ಸ್ವಾದಪ್ಪುದೆ ಸಹಜಂ ತನಗಿನಿಸಪ್ಪೊಡಮಿಲ್ಲದನ ಕವಿತೆ ರುಚಿವಡೆದಪುದೇ (ಧರ್ಮಾಮೃ. ೦-೩೦).
[ರುಚಿ + ಪಡೆ$_1$]

**ರುಚಿವೀಱು** (ಕ್ರಿ). ಕಾಂತಿಯನ್ನು ಬೀರು ; ಪ್ರಕಾಶಿಸು : ಪಸುರುಗಲ್ಲಾ ಬೆಳೆದ ರುಚಿವೀಱುವ ಗವಾಕ್ಷದಿ ತೊಳಪ ಬಹುರತ್ನಂಗಳ್ (ಕಾವ್ಯಶಾ. ೪-೩೦).
[ರುಚಿ + ಬೀಱು$_1$]

**ರುಚಿವೆಱು** (ಕ್ರಿ). ಕಾಂತಿಯನ್ನು ಹೊಂದು ; ಹೊಳಪನ್ನು ಪಡೆ : ತರುಣಮೃಣಾಲಗರ್ಭರುಚಿವೆತ್ತ ರಘೂದ್ವಹದೇಹದೀಪ್ತಿಮಂಜರಿಯನುಪಾಶ್ರಯಂಬಡೆದು (ಶಂರಾಮಾ. ೦೨-೦೩) ; ಉಚಿತವಱಿದು ಮಿಂಡಿವೆಣ್ಗಳು ನವರತ್ನಖಚಿತಭೂಷಣಹಸ್ತದಲಿ ರುಚಿವೆತ್ತು ಬಡಿಸಲ್ಕೆ ಶ್ರೀಕೃಷ್ಣರಾಯನು ರುಚಿಗೆಯ್ದು ಮೊಗವನೀಕ್ಷಿಸಿದ (ಮೋಹತ. ೦೪-೦೪). [ರುಚಿ + ಪೆಱು$_1$]

**ರುಚಿಸು** (ಕ್ರಿ). ೧. ರುಚಿಯಾಗು ; ಸ್ವಾದುವಾಗು : ಶ್ರೋತ್ರಂಗಳೇಕೆ ಆಲಿಸಬೇಡ ಎಂದಡೆ ಮಾಣವು ಜಿಹ್ವೆಯೇಕೆ ರುಚಿಸಬೇಡ ಎಂದಡೆ ಮಾಣವು (ಅವಕಂ. ೨೪-೯೬). ೨. ಆಸ್ವಾದಿಸು ; ತಿನ್ನು : ಜಿಹ್ವೆಯೊಳಗೆ ಜಿಹ್ವೆಯಿದ್ದೂ ರುಚಿಸಲೇಕಱಿಯರಯ್ಯಾ (ಬಸವ. ೯೦೬). ೩. ಹೊಳೆ ; ಪ್ರಕಾಶಿಸು : ರತುನರವಿ ರುಚಿಸಿದನು ಕೋಟೀರಕೋಟಿಕಿರಣಕಿರೀಟ ತಾನಾಗಿ (ತ್ರೀರಾಮ. ೦೬೩-೩೯೯). ೪. ಇಷ್ಟಪಡು ; ಆಶಿಸು ; ಬಯಸು : ಪರಿಪೂರಿತಾಮೃತಕಿರಣರುಚಿಯಂ ರುಚಿಸುವ ಚಕೋರ ಸೇರಿ ಮರ್ಬಿಂಗೆಳಸುವುದೆ (ಬಸಪು. ೦೦-೦೦). ೫. ಮೆಚ್ಚಿಗೆಯಾಗು ; ಮನಸ್ಸಿಗೆ ಬರು,— ಹಿಡಿಸು : ಉಚಿತವನು ನಾನಱಿಯೆ ಮಾರ್ಥಕರಚಿತನಿಜವನು ನುಡಿಯೆ ನಿನಗವು ರುಚಿಸವೇ ಮಾಣಲಿ (ಕುಮ್ಮಾರಭಾ. ೦-೨೩) ; ಹುಡುಗರಿಗೆ ಈ ಸೂಚನೆ ಒಪ್ಪಿತವಾಯಿತು ; ಹುಡುಗಿಯರಿಗೆ ರುಚಿಸದಾಯಿತು (ಹಸುಹೂ. ೬೨). [ರುಚಿ + —ಇಸು$_3$]

**ರುಚ್ಯ** (ಗು). ೧. ಪ್ರಕಾಶಮಾನವಾದ ; ಹೊಳಪುಳ್ಳ. ೨. ಚೆಲುವಾದ ; ಸುಂದರವಾದ ; ಮನೋಹರವಾದ. ೩. ಸಂತೋಷಗೊಳಿಸುವ ; ಆಹ್ಲಾದಗೊಳಿಸುವ. ೪. ಹಸಿವನ್ನು ಉದ್ದೀಪನಗೊಳಿಸುವ. (ನಾ). ೫. ಹೊಳಪು ; ಕಾಂತಿ : "ರುಕ್ . . . ರುಚ್ಯಂ, ರೌಚ್ಯಂ, ಈ ೬ ಪೊಗರ್" (ಕಾಕ್ಕ. ೦೩೦). ೬. ಸುಂದರವಾದುದು ; ಮನೋಹರವಾದುದು : ಪ್ರಕಟಿಸುವುವಖಿಳಧಾನ್ಯಪ್ರಕರಂಗಳ್ . . . ಬೆಳೆವಕೃಷ್ಣಪಚ್ಯಂಗಳತುಳಫಳರುಚ್ಯಂಗಳ್ (ಕುಕ್ಕು.

೯-೦೩). ೭. ಗಂಡ ; ಪತಿ : "ಕಾಂತಃ , . . . ರುಚ್ಯಃ . . . ಅನುಕಃ _ ಈ ೧೪ ಗಂಡಂ" (ಹಲಾಯು. ೬೨-೩೪೩). [ಸಂ.]

**ರುಜ** (ನಾ). ನಿರುತ ; ದಿಟ ; ಸತ್ಯ (?): ಇಜಿವ ಅಸಿ ಸೋವ ಬಲ್ಲುದೆ ಬೇಡುವಾತ ರುಜವ ಬಲ್ಲನೇ (ಬೋಳಬಸ. ೦೩-೩೯) ; ಸ್ಕಂದ ಕೇಳ್ ರುಜದಿಂ ಶಿವಪ್ರಸಾದದೊಳು ನೀಂ ಅಮ್ಮ ನಾಗಲೆಯೊಳುದಿಸು (ಶ್ರೀಶುಷು. ೩-೬೦). [ < ಋಜು, ]

**ರುಜಾಂಗ** (ನಾ). ಖಾಯಿಲೆಯವನು ; ವ್ಯಾಧಿಗ್ರಸ್ತ ; ರೋಗಿ: ಘನರುಜಾಂಗನ ಬಿಡುದಲೆಯ ರೋಧಿನಿಯನುಪ್ಪವಡಿಸುವ ಸಮಯ ದೊಳಿನಿಬರನು ಕಾಣ್ಬುದು ಮಹೀಶರಿಗಂಗವಲ್ಲ (ಶಬ್ದಾಲು. ೩-೦೦೭). [ಸಂ.]

**ರುಜಾವು** (ನಾ). ತೆಳುವಾದ ಅರಳೆಯ ಗಾದಿ : ಗಾದಿ ರುಜಾವುಗಳ ಮೇಲೆ ಶಯನವನ್ನು ಮಾಡದೆ ಹುಲ್ಲುಚಾಪೆಯ ಮೇಲೆ ದೇಹವನ್ನು ಆವಶ್ಯಕವಾದ ವಿಶ್ರಾಂತಿಗಾಗಿ ಚಲ್ಲುವ ಪ್ರತಿಜ್ಞೆಯನ್ನು ಪ್ರತಾಪನು ಮಾಡಿದನು (ಚಿಳದೀ. ೬೦). ' ರಜಾಯಿ ' ಪರಾ.

[ ← ಪಾರ. ಮರಾ. ರುಜಾಮಾ ]

**ರುಜಾರ್ತ** (ನಾ). ರೋಗಪೀಡಿತನಾದವನು: ಖರಧುಜ್ಜಂದನನೊಂದಿವಂ ದುದಯದೊಳ್ ರೋಗಾನ್ವಿತಂ ಬಾಲ್ಯಕಾಲರುಜಾರ್ತಂ . . . ಅಕ್ಕುಂ (ಜಾತಕ. ೦೯-೦೪). [ಸಂ.]

**ರುಜಿನ** (ನಾ). ಖಾಯಿಲೆ ; ವ್ಯಾಧಿ ; ರೋಗ : ಅತಿವೈದ್ಯದಿಂದ ಹೊಸರುಜಿನಕಡೆಯಾದೀತೊ (ಮಂಕುಳ. ೬೭೭). ' ರೋಗರುಜಿನ ' ಪರಾ.

[ < ಸಂ. ವೃಜಿನ = ಆಪತ್ತು, ಗಂಡಾಂತರ ]

**ರುಜು**$_1$, ರಿಜು (ಗು). ೧. ವಕ್ರವಲ್ಲದ ; ನೇರವಾದ : "ರುಜು (ರಿಜು) — ಋಜು = ನೇರ" (ಶಬ್ದಕೋ. ೩೩). (ನಾ). ೨. ನ್ಯಾಯವಾದುದು; ಸರಿಯಾದುದು : ನಿಜಕಾಂತನಿಲ್ಲದೊಡೆ . . . ಪ್ರಜೆಗಳಂ ಪಡೆದು ಸದ್ಗತಿಗೈದವೇಳ್ಪುದಿದು ರುಜುವಲ್ಲ (ಕೈಖಿಶಾ. ೨೭-೦೪); ಸಹಜವಾಗಿ ಸುಳಿವ ನಿಜಜಂಗಮವುದಾಚರಣೆ ರುಜುವೆಂದ ಗುರುವೆ ಕೃಪೆಯಾಗು (ಪ್ರಲಾರ. ೭೦-೨೩೩) ; ನೇರಾದ ರೀತಿ ರುಜು ಅವನ ನೀತಿ (ಕೃತ್ಯಾಂ. ೪-೨). ೩. ಸರಳಸ್ವಭಾವದವನು; ಕಪಟವನ್ನರಿಯದವನು: ಎಂತೋ ಕಾಂತೆಯ ಮರಸೀಮಂತಂ ಕೆಳೆಗೊಂಡುದಿರ್ಕಲದ ಕುಟಿಲಾಂತಃ ಕುಂತಳವುಂ ಸ್ನಿಗ್ಧಮೃದುತ್ವಂ ತೋಱಲ್ ಪೊಱಗೆ ರುಜುಗಳೇನಂ ಬಲ್ಲರ್ (ಕೃತ್ತ್ವಪು. ೩-೩೩). ರಿಜು : ೨. ಋಜು _ ರಿಜು (ಶಬ್ದ. ೨೬೮ ಕೃಯೋ). ರುಜುವಾಗು = ಪ್ರಾಮಾಣಿಕವಾಗು ; ಋಜುವಾಗು : ನೀವು ಈ ವಕ್ರವನ್ನು ಬಿಟ್ಟು ರುಜುವಾಗಿ ಇದ್ದರೆ ಸರಿ (ಶಿವದ. ೦೦೯-೦೪); ತ್ರಿಜಗವತಿಚಿತ್ರಮುಖಲಮದಿಲ್ಲಿ ನೆಲೆಗೊಂಡು ರುಜುವಾದುದೆನೆ ದೇವಶಿಲ್ಪಿಗಳ ಕರ್ಮವಂ ಭಜಿಸಿ ಮೆರೆದತ್ತು . . . ವೈವಾಹದುತ್ಸವಂ (ಮಹಾಪಿ. ೨೩-೩೭). [ < ಸಂ. ಋಜು ]

**ರುಜು**$_2$ (ನಾ). ೧. ಸಹಿ ; ದಸ್ಕತ್ತು ; ಒಪ್ಪಿತ : ರುಜು ಶ್ರೀ ಕೃಷ್ಣ (ಪ್ರಊಂ.೦೯೪೨, ೭೩_೩೭ ; 1818) ; ಭಗವಂತಗಿರಿಗೋಸಾವಿ ರುಜುವೂ (ಎಕ. IX, ಬೆಂಗಳೂ. ೩-೨೩ ; 1855) ; ಕರುಣೀಕರುಗಳು ನಾಡಿಗರುಗಳಿಂದಲೂ ರುಜುವು ಮಾಡಲ್ಪಟ್ಟ ನಂತರ . . . ರವಾನಿಸಬೇಕು (ಗ್ರಾಮಾಳ. ೬). ೨. ಆಧಾರ ; ಸಾಕ್ಷಿ ; ಪುರಾವೆ : (ಕೈಶ್‌ಗೆ. ೪I, ೩೬೦).

ರುಜುಮಾಡು = ೧. ಸ್ವಹಸ್ತಾಕ್ಷರ ಹಾಕು ; ಸಹಿಮಾಡು : ನಿಮಗೆ ಅವಳ ವಿಚಾರವೆಲ್ಲಾ ಗೊತ್ತಿರುವಂತಿದೆ ; ಅದನ್ನು ಬರೆದು ರುಜು ಮಾಡಿಕೊಡುವಿರಾ ? (ಬಂಕಿಮು. ೦೨೦). ೨. ರುಜುವಾತು ಮಾಡು ; ಖಚಿತಪಡಿಸು : ಸಮುದ್ರದ ಮೇಲೆ ಬರುವ ಹಡಗವು ಭೂಮಿ ಗುಂಡಾಗಿಯಿರುವುದನ್ನು ರುಜುಮಾಡುತ್ತದೆ (ಅವಂಕ. ೯೦).

ರುಜುವಾಗು = ೧. ಸಹಿ ಹಾಕಲ್ಪಡು ; ದಸ್ಕತ್ತು ಮಾಡಲ್ಪಡು : ಸಾಹೇಬರ ರುಜುವಾಗಿದೆ (ರಂಗಳ. ೯). ೨. ರುಜುವಾತಾಗು ; ಸಾಬೀತಾಗು : ದೊಣ್ಣೆಯು ಮುನಿಯುನದೆಂದು ರುಜುವಾಯಿತು (ಮುಖಬಸ. ೨೦೨). ರುಜುಹಾಕು = ಸಹಿಮಾಡು ; ರುಜುಮಾಡು : ಸಂಧಿಗೆ ರುಜುಹಾಕಬೇಕೆಂದೂ ಗಾಮಾನಿಗೆ ಹೇಳಿ ಕಳುಹಿಸಿದನು (ಕ್ರಪಾತ. II, ೨೩೪) ; ' ವಕಾಲತ್ತು ಫಾರಂ'ಗೆ ರುಜುಹಾಕಿ ಬಂದರು, ಕರಿಯಪ್ಪ, ತಿಪ್ಪಾರೆಡ್ಡಿ (ಕಂಬಕೋ. ೦೯೯).

[ ← ಅರ. ರುಜೂಅ ; ಮರಾ. ರುಜೂ ]

**ರುಜುಪಡಿಸು** (ಕ್ರಿ). ಯಾವುದಾದರೊಂದು ವಿಷಯವನ್ನು ಸಾಕ್ಷ್ಯಾಧಾರಗಳಿಂದ ಸಿದ್ಧಪಡಿಸು ; ರುಜುವಾತು ಮಾಡು : ಅವರು . . . ಜವ್ವನಿಕೆ ಹರೆಯದಲ್ಲಿಲ್ಲ; ಮನಸ್ಸಿನಲ್ಲಿದೆ ಎಂಬ ಹುರುಳನ್ನು ರುಜುಪಡಿಸಿದರು (ಜಗುಬ. ೪) ; ಅದನ್ನು ರುಜುಪಡಿಸುತ್ತೀರಾ ? (ಕಾವೇಂ. ೦೨೩).

[ರುಜು$_2$ + ಪಡಿಸು]

**ರುಜುಭಾವ** (ನಾ). ನೇರವಾದ ಸ್ವಭಾವ; ಸರಳತೆ : ಉತ್ತರಾಭಿಮುಖಂ ಪ್ರಸನ್ನಮುಖಂ ಪದ್ಮಾಸನಮನವಷ್ಟಂಭಿಸಿ ರುಜುಭಾವದಿಂ ಕುಳ್ಳಿರ್ದು (ರಾಜಕೇ. ೦೩-೯೩ ವ). [< ಸಂ. ಋಜುಭಾವ]

**ರುಜುರೋಹಿತ** (ನಾ). ಕೆಂಪಗೆ ನೇರವಾಗಿರುವ ಇಂದ್ರನ ಬಿಲ್ಲು : ಹರಿಯ ಹಳಚಿ ಗದಾಯುಧವವನೀಶ್ವರನ ಜಚಿದಜಗರನಿಂದ್ರನ ಪರಿಭವಿಸಿ ರುಜುರೋಹಿತವನಂತಕನ ಸದೆಬಡಿದು ಪರಿಘವನು . . . ಧರಿಸಿದತಿಬಲರಿರ್ದುದು (ಕೊರಂ. ೭-೦೦-೯). [< ಸಂ. ಋಜುರೋಹಿತ]

**ರುಜುವತ್ತು** ' ರುಜುವಾತು ' ನೋ.

**ರುಜುವಾತು**, ರುಜುವತ್ತು (ನಾ). ಸಾಕ್ಷ್ಯ; ಆಧಾರ : ಅವ ನಿಮ್ಮೂರಿಗೆ ಹೋದದ್ದಕ್ಕೆ ರುಜುವಾತು ಇದೆ (ಶಂಕಸಂ. ೦೯೯) ; ಅದನ್ನು ರುಜುವಾತು ಪಡಿಸುವುದು ಕಷ್ಟ (ಅನಾಥ. ೨೪) ; ರುಜುವಾತಿಗಾಗಿ ಮರದ ಪೆಟ್ಟಿಗೆಯನ್ನು ತಲೆಕೆಳಗು ಮಾಡಿ ತೋರಿಸಿದಳು (ನ್ಯಾಯಸ್ನೇ. ೭೯). ರುಜುವತ್ತು: ಈಗಿರುವ ರುಜುವತ್ತೇ ಸಾಕು (ಕಂಪಿ. ೦೦೭).

[← ಅರ. ರುಜಅತ್; ಮರಾ. ರುಜುವಾತ್]

**ರುಜುವೆರು** (ಕ್ರಿ). ಸರಳಸ್ವಭಾವವನ್ನು ಹೊಂದು ; ಋಜುಭಾವದಿಂದಿರು : ಸಕಲದೇಶಮನಾಳ್ವ ನೃಪರೆಲ್ಲ ರುಜುವೆತ್ತು ಕಪ್ಪಮಂ ತೆತ್ತು ಬಾಳುವರು (ಶಬರ. ೩-೨೭). [ರುಜು$_1$ + ಪೆರು$_1$ (< ಪೆಱು$_1$)]

**ರುಜೆ** (ನಾ). ೧. ಒಡೆದುದು ; ಮುರಿದುದು ; ಭಂಗವಾದುದು. ೨. ಖಾಯಿಲೆ ; ರೋಗ : " ರೋಗಃ . . . ರುಜಾ – ಈ ೧೨ ವ್ಯಾಧಿ " (ಹಲಾಯು. ೯೬-೧೯೭); ಇದು ದುಃಖಿಮೊ ರುಜೆಯೊ ಕಳವಳಮೊ ಪೇಟ್ (ಕಾದಂಪೂ. ೭೬೭) ; ರುಜೆಯುಡಸಿ ಕೆಡೆದಿಹ ಹೊತ್ತು ರಂಭೆ ದೊರೆಕೊಂಡಲ್ಲಿ ಫಲವೇನು (ಹಕಳಾ. ೭-೮). ೩. ನೋವು ; ಬಾಧೆ. ೪. ಒಂದು ಬಗೆಯ ಮರ : ಸಿರಿಕಂಡಂ ರುಜೆ ಮಾಂಸಿ . . . ಎಂಬಿನಿತುಮಂ ಶೀತಾಂಬುವಿಂ ಪೂಸೆ (ಲೋಕೋಪ. ೯-೦೬೩). [ಸಂ. ರುಜಾ]

**ರುಡ್ಡುಗೋಲು** (ನಾ). (?) : ಶಿವನು ಹಚಿಕುಗಡ್ಡ, ಕೆದರುಮೀಸೆ, ದೊಡ್ಡಕಚ್ಚೆ . . . ಕೈಯಲ್ಲಿ ರುಡ್ಡುಗೋಲು, ಹೆಗಲ ಮೇಲೆ ಕಂಬಳಿ, ನೊರೆವಾಯಿಕಿಂದ ಗಾವುಡಿಯಾಗಿ, ನಡುಪಟ್ಟಣದೊಳು ಬರುತ (ಭೈರಕಾ. I, ೨೦೩). [ರುಡ್ಡು ? + ಕೋಲು$_1$ (< ಕೋಲ್$_1$)]

**ರುಣ**, ರಿಣ (ನಾ). ೧. ಸಾಲ ; ಕಡ : ಗೋಣುವಾಣಿಗಳೊಳಗದ ಹಣರುಣವ ನೀಗಿದರು (ಶುಪ್ರಾಕ. ೮-೦೩) ; ಜೂಜಾಟಕಿ ಸೂಳೆಬಂಟಿಕೆ ರುಣದ ಸಂವಾಜ ಪೆರ್ಗುಡಿಗಳ ಚರ್ಚೆ . . . ಮಾಜದು ನಿತ್ಯಕೃತ್ಯದಲಿ (ಪೋಹಕ. ೨೦-೨೭). ೨. (ಆಲಂ) ಹಂಗು : ಎಲ್ಲರ ಮುಂದೆ ಮೊಗಗೆಡಿಪ ರುಣದೊಳಗೆ ಸುಡುತಿರುವ ಚಿಂತೆ (ಕೃಶವ. ೦-೦೯-೨). ರಿಣ :

೨. ಅಖಿಳದಳಭಾರ ಬಿದ್ದುದು ಸಾತ್ಯಕಿಯ ಸುರನಾರಿಯರ ತೋಳಿನಲಿ ಕಾಬುದು ನೆಲನ ರಿಣ ಹಱಿದು (ಕುಪ್ಪಾಶ. ೩-೧೫) ; ಎಣ್ಣೆ ಬೆಣ್ಣೆಯ ರಿಣವು ಅನ್ನವಸ್ತ್ರದ ಋಣವು ಹೊನ್ನು ಹೆಣ್ಣಿನ ರಿಣ ತೀರಿದಾಕ್ಷಣದಿ ಮಣ್ಣು ಪಾಲು (ಸರ್ವಜ್ಞ. ೪೬೩). ೩. ಉಪಕಾರ : ಯಾವ ಜನ್ಮದಲ್ಲಿನ್ನು ರಿಣವ ತೀರಿಸಲಿ (ಸೂರ್ಯಶಾ. ೭೮-೫). [< ಸಂ. ಋಣ]

**ರುಣಪಾತಕ** (ನಾ). ಸಾಲ ತೀರಿಸದಿರುವುದರಿಂದಾದ ಪಾಪ; ಋಣದ ಪಾಪ : ಅಣು ಹೋಗಿ ಪರ್ವತವಾದರೂ ರುಣಪಾತಕ ಬೆನ್ನು ಬಿಡದು (ಗಾದೆ). [< ಸಂ. ಋಣಪಾತಕ]

**ರುಣಿ** (ನಾ). ಸಾಲವನ್ನು ತೀರಿಸದೆ ಇರುವ ವ್ಯಕ್ತಿ: 'ರುಣಿತನ' ಪರಾ. [< ಸಂ. ಋಣಿನ್]

**ರುಣಿತನ** (ನಾ). ಸಾಲಗಾರಿಕೆ : ಸಂಸಾರವಿಚಾರವನ್ನೂ ಧನಿಕನ ರುಣಿತನದ ಗತಿಗಳನ್ನೂ (ಶೀಶಧ. ೦-೧). [ರುಣಿ + — ತನ]

**ರುತ** (ಗು). ೧. ಶಬ್ದ ಮಾಡಲ್ಪಟ್ಟ ; ಧ್ವನಿಮಾಡಿದ. ೨. ಪುಡಿ ಮಾಡಿದ ; ಮುರಿದ ; ಚೂರುಚೂರಾದ. (ನಾ). ೩. (ಪಶು, ಪಕ್ಷಿ ಮೊದಲಾದುವುಗಳ) ಧ್ವನಿ; ಕೂಗು : ತಟಿನೀವ್ಯೂಹದೊಳ್ ಪೂರವಾರಂ ವಿರಹಿವ್ರಾತಂ ಬಿಗುರ್ವಂತೊಡನೊಡನೆ ರುತಂ ಪರ್ವಿಸುತ್ತಿರ್ದುವೆತ್ತಂ (ಕಾದಂಚಾ. ೫೩೨); ಎನ್ನಿರವನಱಿಪುವೆನೆಂದು ಭಿನ್ನಸ್ವರದಿಂ ಸರಂಗೆಯ್ವುದು ಮುಳೂಕಂಗಳ್ ಕೇಳ್ದು ಕಾಕರುತಮಪ್ಪುದೆಂದರಿಮರ್ದನಂಗಱಿಪುವುದುಂ (ಶಂಶಕಂ. ೨೩೯-೦೮). [ಸಂ.]

**ರುತಿ** (ನಾ). ೧. ಧ್ವನಿ : ಪಾಸಱ್ ಸಿಂಹಪೀಠಮಳನೀರುತಿ ಮಂಗಳಗೀತಿ (ಶಂಶಭಾ. ೭-೨೯); ಮಂಜೀರಕಂಕಣಕಿಂಕಿಣೀರುತಿ ಪೂಣ್ಮೆ (ಜಗಬಿ.೩-೫೨); ಈ ಶಾಶ್ವತರುತಿಗೊಂದಿದ ಅಂದಂದಿನ ಸ್ಮೃತಿಯೋಲ್ (ಗಹೀಕ. ೨೭-೦). ೨. ಮಾತು : ಸೊಗದಂತಕೆ ಸೆಳೆದೊಯ್ವುದು ಅದೊ! ನೇಹದ ರುತಿಯು ಇನಿವೇಟದ ಸೊಧಗಡೆದು ಸವಿದಾಡುವ ಸೈಗರೆದು (ಕವಿಕಾ. ೬೫-೨). [ಸಂ.]

**ರುತು**$_1$, ರಿತು (ನಾ). ೧. ವಸಂತ, ಗ್ರೀಷ್ಮ ಮೊದಲಾದ ಆರು ಋತುಗಳು : " ಎರಡೆರಡು ಮಾಸಂ ಕೂಡಿದೊಡೆ ವಸಂತ, ಗ್ರೀಷ್ಮ, ಪ್ರಾವೃ(ಟ್)ಡ್, ಶರ(ದ್)ತ್, ಹೇಮಂತಃ, ಶಿಶಿರಃ – ಎಂದಾಱು ರುತುಗಳಕ್ಕುಂ " (ಹಲಾಯು. ೦೯-೦೦೩) ; ಈ ಪೊೞ್ತಿಂಗೀ ರುತುವಿಂಗೀ ಪಸದನಂ (ಶಂಶಭಾ. ೩-೪೫); ಪಸದನವಾವುದಾವ ರುತುವಿಂಗಮದೊಪ್ಪುಗುಮಾವ ಪೊೞ್ತದಾವೆಸಕದೊಳೊಂದುಗುಂ (ಗದಾಯು. ೦೦-೨೦ ಅಡಿಶಿಪ್ಪ). ೨. ಮುಟ್ಟು ; ರಜಸ್ಸು : 'ರುತುಕಾಲ' ಪರಾ. ೩. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ : ದ್ರವ್ಯ, ಋತು . . . ರುತು . . . ಇಂತಿನಿತುಂ ೬ಕ್ಕೆ ಪೆಸರು. (ವ್ಯವಹಾ. ೦೦). 'ರುತುವದನ' ಪರಾ. **ರಿತು** : ೧. ತಮ್ಮತಮ್ಮಂದಿನಂದಮನಾಱುಂ ರಿತು ಪತ್ತುವಿಟ್ಟು (ಶಾಂತಿಪು. ೯-೦೩೫) ; ಉಪೇಂದ್ರನ ವನಕೇಳಿಯ ಪದನಂ ಸಾರ್ದೊರ್ೀಲಗಕ್ಕೆ ರಿತುಗಳ್ ಬಂದಿರ್ಪುದನಱಿಪುಗುಂ . . . ಸುಮನೋಲತೆಗಳ್ (ವರ್ಧಪು. ೮-೭೬); ಸಕಲರಿತುವೊಳು ಪೂವ ಪಣ್ಣ ಮರವೇನು ? (ಗಿರಿಪಿಂ. ೨೮-೩೮). [< ಸಂ. ಋತು]

**ರುತು**$_2$ (ನಾ). = ರುತ ೩ : ಅಮರವಿರೋಧಿ ಬಭ್ರು ರುತುಗಾನ ನಭಂಗಳು ಗೀತವಾಚಕಂ " (ಜಾವಾರ. ೩೬). [< ಸಂ. ರುತ]

**ರುತುಕಾಲ** (ನಾ). ಮುಟ್ಟಾಗುವ ಕಾಲ ; ರಜೋದರ್ಶನದ ಸಮಯ: ರು[ಪಾಠಾಂ. ಋ]ತುಕಾಲವೇಬುದಱಿಯಲ್ಲ ಸತಿಯಳ (ಅಧ್ಯಾಪ. ೨-೩೯). [< ಸಂ. ಋತುಕಾಲ]

**ರುತುಕಾಲವಡೆ** (ಕ್ರಿ). ಮುಟ್ಟಾಗಂ ; ರಜಸ್ವಲೆಯಾಗು : ಮೊಡವಿಯ ಮೊಳೆಯುನೊತ್ತುತ . . . ರುತುಕಾಲವಡೆದ ಪುಷ್ಪಿಣಿಯರೊಪ್ಪಿದರು (ವೋಹಶ. ೦೮-೫೨). [ರುತುಕಾಲ + ಪಡೆ$_1$]

**ರುತುವದನ** (ನಾ). ಆರುಮುಖಗಳನ್ನು ಹೊಂದಿರುವವನು; ಷಣ್ಮುಖ : ರುತುವದನನೆಚ್ಚ ಬಾಣಗಳ ಕತ್ತರಿಸಿ ಮನ್ಮಥ ನುಡಿದ (ನವಮೋ. ೩೦-೪೪). [< ಸಂ. ಋತುವದನ]

**ರುದಂತಿ** (ನಾ). ಒಂದು ಬಗೆಯ ಸಸ್ಯ : ಶ್ರೀಗಂಧಂ ರುದಂತಿ ಜಟಾಮಾಂಸಿ . . . ಇವೆಲ್ಲಮನುದಕದಲ್ಲರೆದು ಪೂಸಲ್ ಕಂಚುಕೆ . . . ಗಾಯದ ಪುಣ್ಗಳ್ ಇವೆಲ್ಲಂ ಮಾಣ್ಬುವು (ಲೋಕೋಪ. ೯-೦೭೩ ಟೀಕು) ; ನಲಿದು ಮಾಕ್ಷಿಕದೆ ಪಿಪ್ಪಲಿ ರುದಂತಿಗಳನೊಡೆಗಲಸಿ ಮಧುವಿಂವರೆದು (ಜವವ. ೦೩-೫೨). [ಸಂ. ರುದಂತೀ]

**ರುದಮಿತ್ರ** (ನಾ). ದುಃಖಕ್ಕೆ ಶತ್ರುವಾದವನು ; ದುಃಖನಿವಾರಕ : ಭಾಸ್ವತ್ರಯಿಾ ಸ್ತೋತ್ರವರಪಾತ್ರ ರುದ[ಪಾಠಾಂ. ತರು]ಮಿತ್ರ ಶರ್ವ ತ್ರಾಹಿ (ಉದ್ಭದೇ. ೩-೩೭). [ಸಂ.]

**ರುದಾಕ** (ನಾ). ಒಂದು ಬಗೆಯ ವೃಕ್ಷ ; ರುದ್ರಾಕ್ಷಿಮರ : ರುದಾಕ (ರುದ್ರಾಕ್ಷ)–ಬಹು ದೊಡ್ಡಮರ. ಇದರ ಬೀಜಗಳೇ ರುದ್ರಾಕ್ಷಮಣಿಗಳು (ಕಪಾಗ. ೪೭). [< ರುದ್ರಾಕ್ಷ]

**ರುದಿತ** (ಗು). ೧. ರೋದಿಸಿದ ; ಗೋಳಾಡಿದ ; ಅತ್ತ. (ನಾ). ೨. ಅಳುವುದು ; ರೋದಿಸುವುದು ; ರೋದನ : "ಕ್ರಂದಿತಂ, ರುದಿತಂ, ವಿಲಾಪಃ, ಪರಿದೇವನಂ – ಈ ೪ ಅೞ್ಕೆ" (ಹಲಾಯು. ೦೦೫-೦೭); ಅರಣ್ಯರುದಿತಂ ವಲವೆನ್ನೊಲವಿಂದುವಕ್ತ್ರೆಯಾ (ಶಂಶಭಾ. ೪-೭೯) ; ಕದನದೊಳ್ಪಡೆದ ವೃತ್ತಾಂತಮಂ ಪೇಳಲ್ಕೆ ರುದಿತದಿಂ ಕೈವೆರಲ್ಗಳನೊತ್ತಿಕೊಳುತೆ (ಕ್ರೈಬಿಭಾ. ೨೦-೧೯). [ಸಂ.]

**ರುದ್ದು** (ಕ್ರಿ). ಕುಟ್ಟು : ಕಡಗಿ ಜವದಿ ರುಡ್ಡಿ{ದ್ದಿ} ನಸುಮಿಸಿಯಿಂದ ಬಡಿಸಿ ಘೃತವನ್ನೀಡೆ ಲಡ್ಡುಗೆಯನರ್ಪಿಸುವುದು (೦ಂಗಪು. ೮-೦೩). [← ತೆಲು. ರುದ್ದು, ರುತ್ತು]

**ರುದ್ಧ** (ಗು). ೧. ತಡೆಯಲ್ಪಟ್ಟ ; ಪ್ರತಿಬಂಧಿತ : ಶುದ್ಧತತ್ವಾಧಿಪತಿ ಶಿವನೆನಗೆ ಕರ್ತು ತದ್ರುದ್ಧಮಾರ್ಗದೊಳಾನು ಬಂಟಂ (ಬಿಕ್ಕೆಪು. ೪-೦೦-೪೨). ೨. ಆವರಿಸಿದ ; ಸುತ್ತಲ್ಪಟ್ಟ : " ವೇಷ್ಟಿತಂ, ವಲಯಿತಂ, ಸಂವೀತಂ, ರುದ್ಧಂ, ಆವೃತಂ— ೫ ಈಚಿನವರಿಗೆ ಅಡ್ಡವಾಗಿರುವಂತೆ ಸುತ್ತಿಕೊಳ್ಳಲ್ಪಟ್ಟದ್ದು " (ಸಿದ್ಧಾಂತಿ. ೩೪೭). ೩. ಮುಚ್ಚಿದ; ಹಾಕಿದ : ಸತ್ಯವಾದ ಪ್ರೇಮ ಭಾರತವಾಸಿಗಳ ಬಹುದಿನಗಳ ರುದ್ಧದ್ವಾರದಲ್ಲಿ ಯಾವ ಮುಹೂರ್ತದಲ್ಲಿ ಬಂದು ನಿಂತಿತೊ ಆ ಕ್ಷಣ ಅದು ತೆರೆದುಕೊಂಡಿತು (ಸಬಂಧ. I, ೫೦೭). (ನಾ). ೪. ತಡೆ ; ಅಡ್ಡಿ ; ಪ್ರತಿಬಂಧ : ಅಂ ಮಾಡುವ ರುದ್ಧದೊಳ್ಕಿಱಿದು ನಾಚುಗುವೋ ವಧು (ಕಾದಂಬ. ೬೮೩); ಸ್ವಭಾವತಃ ಆತನ ಮನಸ್ಸು ಶುದ್ಧವಿದ್ದುದರಿಂದ ಆತನ ಶ್ವಾಸಗತಿಯು ರುದ್ಧವಾಗಿ ಆತನಿಗೆ ಸಮಾಧಿಯು ಹತ್ತಿತು (ತುಳಸೀ. ೩೮). [ಸಂ.]

**ರುದ್ಧನೇತ್ರ** (ನಾ). ಮುಚ್ಚಿದ ಕಣ್ಣು ; ತೆರೆಯದ ಕಣ್ಣು : ನನ್ನ ರುದ್ಧನೇತ್ರಗಳ ಮುಂದಿದ್ದ ಅಸೀಮಅಂಧಕಾರದ ಮಧ್ಯದಲ್ಲಿ ನಾನು ಏಕಾಕಿಯಾಗಿ ನಿಂತು . . . ಕೂಗಿಕೊಳ್ಳಹತ್ತಿದೆನು (ಇಕ್ಕೃತ. ೨೦೩). [ಸಂ.]

**ರುದ್ಧಿ** ' ರಿದ್ಧಿ ' ನೋ.

**ರುದ್ರ** (ಗು). ೧. ಭಯವನ್ನು ಹುಟ್ಟಿಸುವ ; ಭಯಂಕರವಾದ ; ಭೀಕರವಾದ : ನೋಡು ಬರುತಲಿರುವಳದೋ ರುದ್ರ ಭದ್ರಕಾಳಿಯು (ಶಾಂಕಚ. ೦೦-೦೮). (ನಾ). ೨. ಭಯವನ್ನು ಹುಟ್ಟಿಸುವವನು ; ಭೀಕರನಾದವನು. ೩. ತ್ರಿಮೂರ್ತಿಗಳಲ್ಲಿ ಒಬ್ಬ ; ಶಿವ : " ಈಶಾನಃ . . . ರುದ್ರ . . . ನೀಲಲೋಹಿತಃ — ಈ ೪೫ ಮಹಾದೇವರ ಪೆಸರ್ " (ಹಲಾಯು. ೩-೦೨); ಕಾಳಾಗ್ನಿರುದ್ರನ ಮೇಳಾಪವನಱಿಯದವರು ಕಾಳುಬೇಳೆಯೆನುತಿಪ್ಪರಯ್ಯಾ (ಬಸವ. ೨೨೭); ಆ ರುದ್ರನ್, ಉರಿಗಣ್ಣನ್, ಆರ ನಚ್ಚಲ್ಲದನ್ . . . ಎನ್ನನ್, ಮರುಳ್ಗೊಳಿಸಿ

(ಅಕ್ಕಶಾ. ೦೬-೩೬೪). ೪. ಈಶಾನ್ಯದಿಕ್ಕಿನ ಪಾಲಕ : " ಇಂದ್ರಃ . . . ಧನದಃ , ರುದ್ರಃ — ಈ ೮ ಮೂಡಲ್ ಮೊದಲಾದೆಂಟುದೆಸೆಗಂ ಕ್ರಮದಿಂದೊಡೆಯರ್ " (ಹಲಾಯು.೦೭–೧೦೦). ೫. (ಸೃಷ್ಟಿಯ ಆರಂಭದಲ್ಲಿ ಬ್ರಹ್ಮನ ಭ್ರೂಮಧ್ಯದಿಂದ ಹುಟ್ಟಿದವರೆನ್ನಲಾದ) ಹನ್ನೊಂದು ಜನ ಗಣದೇವತೆಗಳು ; ಏಕಾದಶರುದ್ರರು : ಸುರ ಮಹೀಜನರಾಜ ರುದ್ರರ ಚರಿತೆಗಳಿಗಿಮ್ಮಡಿಯೆನಿಸಿ ಸತ್ಪುರುಷನಿಲ್ಲಿಗೆ ಸಲಹ ಬಂದನು ಬಸವವಿಭುವೆನುತ (ಬಸಪು. ೩-೬೪); ೪೯ ಮರುತ್ತುಗಳು ೧೧ ರುದ್ರರು (ಹಸಾರ. ೩-೩೦ ತಾತ್ಪರ್ಯ). ೬. 'ಜಗನ್ನಾಥವಿಜಯ'ಎಂಬ ಕನ್ನಡಕಾವ್ಯವನ್ನು ಬರೆದ ಒಬ್ಬ ಕವಿಯ ಹೆಸರು : ವಾಣಿ ಬಂದು ಸಮಂತಿರ್ಕೆ ಸವೀನಸೌರಭದವೋಲ್ ಜಿಹ್ವಾಗ್ರದೊಳ್ ರುದ್ರನಾ. (ಜಗಬ. ೦-೬). ೭. ಯಜುರ್ವೇದದಲ್ಲಿ ಪ್ರಸಿದ್ಧವಾದ ಶತರುದ್ರೀಯವೆಂಬ ಹೆಸರುಳ್ಳ ಹನ್ನೊಂದು ಅನುವಾಕಗಳುಳ್ಳ ವೇದಭಾಗ : (ಶ). ೮. [ಗಣಿತ] ಹನ್ನೊಂದು ಎಂಬ ಸಂಖ್ಯೆಯ ಸಂಕೇತ : " ದಿಶಿ ಹತ್ತು ನಭ ಸೊನ್ನೆ ರುದ್ರರೆನೆ ಹನ್ನೊಂದು " (ಮಂಗಣಿ. ೦೦೪-೮). ೯. [ಛಂದ] ಅಂಶಗಣದ ಒಂದು ಪ್ರಭೇದ ; ನಾಲ್ಕು ಅಂಶಗಳ ಗಣ : ಎರಡುಂ ಮೂಱುಂ ನಾಲ್ಕುಂ ಗುರುವಿಂ ಪ್ರಸ್ತರಿಸಲ್ . . . ಸರಸಿಜಭವ ವಿಷ್ಣು ರುದ್ರ ಸಂಜ್ಞೆಗಳಕ್ಕುಂ.(ಛಂದೋಂಬು. ೩-೨೪೦); ಬ್ರಹ್ಮ, ವಿಷ್ಣು, ರುದ್ರ ಎಂಬ ಅಥವಾ ಎರಡು, ಮೂರು, ನಾಲ್ಕು ಅಂಶಗಳ ಗಣಗಳು ಹೋಗಿ . . . ಮೂರು ಗಣಗಳು ಉಳಿದುವು (ಕ್ಛಬಿ. ೦೦೯). ೧೦. ಗುರುವಿನ ಸಂಕೇತ ; ದೀರ್ಘಾಕ್ಷರದ ಸಂಕೇತ. [ ಸಂ. ]

**ರುದ್ರಕಾಂತ** (ನಾ). [ವಾಸ್ತು] ಕಂಬದ ಪ್ರಭೇದಗಳಲ್ಲಿ ಒಂದು : ಶಿಲ್ಪಶಾಸ್ತ್ರಗಳಲ್ಲಿ ಬ್ರಹ್ಮಕಾಂತ, ವಿಷ್ಣುಕಾಂತ, ರುದ್ರಕಾಂತ ಇತ್ಯಾದಿ ಸ್ತಂಭಪ್ರಭೇದಗಳು ಉಕ್ತವಾಗಿವೆ (ಹೊಯ್ಸವಾ. ೨೭). [ಸಂ.]

**ರುದ್ರಕಾವ್ಯ** (ನಾ). ದುಃಖದಲ್ಲಿ ಕೊನೆಗೊಳ್ಳುವ ಕಾವ್ಯ; ದುರಂತ ಕಾವ್ಯ: ಒಂದು ರುದ್ರಕಾವ್ಯವನ್ನು ಓದಿದಾಗ ಸಹ ನಾವು ಆನಂದಪಡು ತ್ತೇವೆ (ನವ್ಯಕಾ. ೩೭). [ಸಂ.]

**ರುದ್ರಗಂಟಿ** (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ಹೂವು : ರುದ್ರಗಂಟಿ ಜಾಜಿ . . .ಅಂಟುಗಳನ್ನು ಮಾಡಿ ಹಚ್ಚಬೇಕು (ಕೃಷಿಶ್ರ. ೨೦೦); ರುದ್ರಗಂಟಿ ಮೂಸಿ ವಿಷ್ಣುಗಂಟಿ ಹಾಸಿ (ಗಂ. ೯೭-೩). ೨. ರುದ್ರಾಕ್ಷಿಯ ಚಿತ್ರದ ಅಂಚಿರುವ ಸೀರೆ ಅಥವಾ ಪಂಚೆ: ಆಕೆಯು ಉಟ್ಟಿರುವುದು ರುದ್ರಗಂಟಿ ಸೀರೆ (ಒೂ). 'ವಿಷ್ಣುಗಂಟಿ' ಪರಾ. [ರುದ್ರ + ಕಂಟ್ಟ]

**ರುದ್ರಗಂಟು** (ನಾ). [ವೀಶೈ] ಶಿವದಾರದ ಎರಡು ತುದಿಗಳನ್ನೂ ಸೇರಿಸಿ ಹಾಕುವ ಗಂಟು : ಶಿವದಾರಕ್ಕೆ ರುದ್ರಗಂಟು ಹಾಕು (ಒೂ). 'ಬ್ರಹ್ಮಗಂಟು' ಪರಾ. [ರುದ್ರ + ಗಂಟು]

**ರುದ್ರಗಣ** (ನಾ). ೧. ಪರಮೇಶ್ವರನ ಪರಿವಾರದಲ್ಲಿರುವ ಒಂದು ದೇವತಾಗಣ : ಆ ಕೈಲಾಸವೇ ಕಲ್ಯಾಣವಾಗಲಾ ಕಲ್ಯಾಣಕ್ಕೆ ಪ್ರಮಥ ಗಣಂಗಳ ರುದ್ರಗಣಂಗಳ ಅಮರಗಣಂಗಳ . . . ತಂದು ನೆರಹಿದಾತ ನಮ್ಮ ಬಸವಯ್ಯನು (ಶೀಂಪ.ಳ. ೬-೯); ರುದ್ರಲೋಕದ ರುದ್ರಗಣಂಗಳೆಲ್ಲರು ರುದ್ರಪದವೆಂಬ ಸಂಸಾರಕ್ಕೊಳಗಾದರು (ಅಪಶಂ. ೨೩೪-೦೦೬೨). ೨.[ಛಂದ] ಅಂಶಗಣದಲ್ಲಿ ಒಂದು ಬಗೆ ; ನಾಲ್ಕು ಅಂಶಗಳಿರುವ ಗಣ: ರುದ್ರ ಗಣಮೆಂತೆಂದೊಡೆ ಗಂಗಾಧೀಶಂ (ಛಂದೋಂಬು. ೩-೨೪೦ ಪ); ಬ್ರಹ್ಮಗಣ, ವಿಷ್ಣುಗಣ, ರುದ್ರಗಣ (ಕ್ಛಬಿ. ೦೦೨). [ಸಂ.]

**ರುದ್ರಜಟೆ** (ನಾ). ಒಂದು ಬಗೆಯ ಬಳ್ಳಿ: "ಶಿವಾ–ರುದ್ರಜಟೆ, ಮುಡಿವಾಳ, ನಾಳಲು" (ಓಷಧಿ. ೧೭೪) ; ಪುಷ್ಯನಕ್ಷತ್ರದಲಿ ತಂದು ರುದ್ರ ಜಟೆಯುಂರನಣಲಿಂದಗಿಡು ಕಿವಿಯಲೂಡೆ ಲಲನೆಯೊಲ್ವಳ್(ಜಪಪ. ೦೩-೪೩) ; ರುದಂತಿ ರುದ್ರಜಟೆ ಸಹದೇವಿ ಮಯೂರಶಿಖಿಯಿಮಂ ಸರಿಗೂಡಿ ತಣ್ಣೀರಿಂದ ರೆದು ಮೈಗೆ ಪೂಸಿಕೊಳ್ಳೆ ಸಕಲಕಾರ್ಯವು ಸಿದ್ಧಿಯಹುದು (ಕಾಮಕಾ. ೨೭೭). [ಸಂ. ರುದ್ರಜಟಾ]

**ರುದ್ರಜಡೆ**, ರುದ್ರಜಿಡೆ (ನಾ). = ರುದ್ರಜಟೆ : "ರುದಾ–ರುದ್ರಜಡೆ" (ಓಷಧಿ. ೨೩೪). **ರುದ್ರಜಿಡೆ** : ತುಋುಚ,ನೀಲಿ, ರುದ್ರಜಿಡೆ ಇವ ಸಮಾನಂ ಗೊಂಡು ಸಹದೇವಿರಸದಲ್ಲಿ ಲೇಪವಂ ಮಾಡಿದುದು ಜ್ವರಹರ (ಖಗೇ. ೦೬೩). [<ಸಂ. ರುದ್ರಜಟಾ]

**ರುದ್ರಜಿಡೆ** ' ರುದ್ರಜಡೆ ' ನೋ.

**ರುದ್ರನಾಟಕ** (ನಾ). ದುಃಖದಲ್ಲಿ ಕೊನೆಗೊಳ್ಳುವ ನಾಟಕ ; ದುರಂತ ನಾಟಕ : ರುದ್ರನಾಟಕವು ಗಂಭೀರವಾದ, ಸ್ವಲ್ಪ ವಿಶಾಲವಾದ, ಸ್ವಸಂಪೂರ್ಣವಾದ ಕಾರ್ಯವೊಂದರ ಅನುಕರಣ (ಅಂಕಾ. ೨೪ ಟಿಪ್ಪ); ರುದ್ರನಾಟಕದಂತೆ ನಗರದ ಜೀವನ, ನರನೆ ಈ ನಾಟಕಕಾರ (ಇಂಶಾಶ. ೦೦೮-೨೮). [ಸಂ.]

**ರುದ್ರನಾಟ್ಯ** (ನಾ). ಭಯಂಕರವಾದ ನೃತ್ಯ: ಉಗ್ರಮಾರುತನು ವಾತಾವರಣವನ್ನು ಅಲ್ಲೋಲಕಲ್ಲೋಲ ಮಾಡಿ . . . ಅಬ್ಬರದಿಂದ ರುದ್ರನಾಟ್ಯದಲ್ಲಿ ತಾನೆ ತಾನಾಗಿ ಮೈಮರೆತಿದ್ದನು (ಬಿಕಲು. ೦೭೪). [ಸಂ.]

**ರುದ್ರನಾಡಿ** (ನಾ). ದೇಹದಲ್ಲಿರುವ ನಾಡಿಗಳಲ್ಲಿ ಒಂದು; ಕಾಲು ಹರಡಿನ ಕೆಳಗಿರುವ ನಾಡಿ : ರೋಗಿಗಳಿಗೆ . . . ಕಾಲ ಹರಡಿನ ಕೆಳಗೆ ರುದ್ರನಾಡಿ ಕಾಣಿಸಿಕೊಳ್ಳದೆ ಇದ್ದರೆ ಆತನಿಗೆ ಆ ದಿನವೇ ಮರಣವೆಂದರಿ ವುದು (ಸಳವ್ಯ. ೦೩). [ಸಂ. ರುದ್ರನಾಡೀ]

**ರುದ್ರನಾಯಕ** (ನಾ). ರುದ್ರನಾಟಕದ ನಾಯಕ ; ದುರಂತನಾಯಕ : ಸಂಪೂರ್ಣವಾಗಿ ನಿರ್ದೋಷಿಯಾದ ಪರಮಸದ್ಗುಣಿಯಾದ ವ್ಯಕ್ತಿಯು ರುದ್ರನಾಯಕನಾಗಲು ಸಾಧ್ಯವೇ (ಅಂಕಾ. ೦೭೮); ಇದು ನನ್ನ ಜೀವನದ ರುದ್ರನಾಟಕದ ಕೊನೆಯ ದೃಶ್ಯ, ನಾನೇ ಅದರ ರುದ್ರನಾಯಕ (ಬೀಳಕ. ೦೭೦). [ಸಂ.]

**ರುದ್ರಪುಷ್ಪ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು : ದಾಸವಾಳ : "ರುದ್ರಪುಷ್ಪಂ, ಜಪಾ–ಈ ೨ ದಾಸವಣಂ" (ಹಲಾಯು. ೩೩-೩೪). [ಸಂ.]

**ರುದ್ರಬಾಣ** (ನಾ). ರುದ್ರಮಂತ್ರವನ್ನು ಅಭಿಮಂತ್ರಿಸಿ ಬಿಡುವ ಬಾಣ: ರವಿಕುಲಾನ್ವಯ ರುದ್ರಬಾಣವ ಬಿಡೆ ಪಿನಾಕಿಗಳು ಕವಿದುದಗಣಿತ ನಂದಿ ವಾಹನ ರವಿಯ ತೇಜದ ಭಾಳನೇತ್ರರು (ಕೌಶಿರಾ. ೪೦-೩೪). [ಸಂ.]

**ರುದ್ರಭೂಮಿ** (ನಾ). ರುದ್ರನು ವಾಸಮಾಡುವ ಸ್ಥಳ ; ಶ್ಮಶಾನ : ಆ ದೇಶದ ಪ್ರಾಣಿಗಳೆಲ್ಲರೂ ಮೃತರಾದರು ಅವರ ಸುಟ್ಟ ರುದ್ರಭೂಮಿ ಯಲ್ಲಿ ನಾ ನಿಮ್ಮ ನಜಿಸುವೆ (ಅಪಶಂ. ೩೩-೨೨೭); ಆ ದಿಗಂಬರಂ ಪಡುವೊಡೆ ರುದ್ರಭೂಮಿ ನಿಮಗಲ್ಲದೊಡೆ . . . ಎಮಗೇನನೆಂದಪರ್ (ಶಂಶಾಶ. ೨೦); ಬೊಪ್ಪಣ ರುದ್ರಭೂಮಿಗೆ ಬಂದಾಗ ಚಿತೆ ಪ್ರಜ್ವಲಿಸುತ್ತಿತ್ತು (ಶಾಂಕಲಾ. ೦೬೦). [ಸಂ.]

**ರುದ್ರರೂಪಕ** (ನಾ). = ರುದ್ರನಾಟಕ : ಒಂದು ರುದ್ರರೂಪಕವನ್ನು ಓದುವಾಗ ಭೀತಿಯೊಡನೆ ಶಾಂತಿಯೂ ಬೆರತುಕೊಂಡಿರುತ್ತದೆ(ಪಶ್ಚಕಾ. ೬೪); ಶ್ರೀಕಂಠಯ್ಯನವರು . . . ರನ್ನನ ಗದಾಯುದ್ಧವನ್ನು ರುದ್ರರೂಪಕವಾಗಿ ಪರಿವರ್ತಿಸಿದರು (ಬಿಶಾಪಂ. ೦೦೭). [ಸಂ.]

**ರುದ್ರವಾಸ** (ನಾ). [ಸಂಗೀತ] ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು ; ಮುಖರಂಧ್ರದಿಂದ ಧ್ವನಿರಂಧ್ರದವರೆಗೆ ಹನ್ನೊಂದು ಅಂಗುಲ ಅಂತರವಿರುವ ಕೊಳಲು : ಜಾತಿವಾಸ . . . ರುದ್ರವಾಸ . . . ಭುವನಾಧಿಪತಿವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವ ನಱಿದಾ ಜಾತಿ ಮುಖದ ಕಳೆಯ ಮಯಣವಂ ಸ್ಥಿತುಮಾಡಿ (ಬಿಪೀಳ. ೦೯೦). [ರುದ್ರ + $ವಾಸ_1$]

**ರುದ್ರವೀಣೆ** (ನಾ). ಒಂದು ಬಗೆಯ ವೀಣೆ : ವೀಣೆ ರುದ್ರವೀಣೆ ತುಂಬುರ ವೀಣೆ ಕಿನ್ನರವೀಣೆ ಕೈಲಾಸವೀಣೆ ಮೊದಲಾದ ತಂತಿ ಕಟ್ಟಿ ನುಡಿವ ವಾದ್ಯ ವನಱಿವುದು (ಅದಿಪ. ೬-೦೩) ; ವಿಪಂಚಿಕೆ . . . ರುದ್ರವೀಣೆಯೆಂಬ ಇಪ್ಪತ್ತೆರಡು ತೆಱದ ತಂತ್ರೀವಾದ್ಯಕ್ರಮವೆಂಬುದು (ಶಿವೇಶ. ೨೩೬); ಯಾಕೊ ಕಾಣೆ ರುದ್ರವೀಣೆ ಮಿಡಿಯುತಿರುವುದು (ಗಂ. ೦೦೫-೨).

[ಸಂ. ರುದ್ರವೀಣಾ]

**ರುದ್ರವೀರ್ಯ** (ನಾ). ೧. ಶಿವನ ರೇತಸ್ಸು : (*). ೨. ಪಾದರಸ ; ಪಾರಜ : (*). ೩. ಗಂಧಕ : (*). [ಸಂ.]

**ರುದ್ರಸಾವರ್ಣಿಕ** (ನಾ). ಹದಿನಾಲ್ಕುಮನುಗಳಲ್ಲಿ ಹನ್ನೆರಡನೆಯವನು: ಸ್ವಾಯಂಭುವ . . . ರುದ್ರಸಾವರ್ಣಿಕ . . . ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳೊಳಗೆ (ಶಿವೇಶ. ೨೦೪). [ಸಂ.]

**ರುದ್ರಸೂಕ್ತ** (ನಾ). ರುದ್ರನನ್ನು ಕುರಿತು ಪಠಿಸುವ ಋಗ್ವೇದದ ಮಂತ್ರ : ಚತುರ್ಮುಖದಿಂ ರುದ್ರಸೂಕ್ತರಥಂತರಾದಿಮಂತ್ರಮನೋದು ವಬ್ಜಭವನಿಂ . . . ಪೆಂಪನಾಳ್ದ (ಶಬಶಂ. ೦-೭೯ ವ). [ಸಂ.]

**ರುದ್ರಹೋಮ** (ನಾ). ರುದ್ರದೇವತೆಯ ಪ್ರೀತ್ಯರ್ಥವಾಗಿ ಮಾಡುವ ಯಜ್ಞ : ಮುರುಗಸೆಟ್ಟಿಯ ಮಗಂ ಬಸವಯ್ಯಂ ರುದ್ರಹೋಮಂಗೆಯ್ದು (ಎಕ. IV. ಹೆಗ್ಗಡ. ೦೬-೬; 1021). [ಸಂ.]

**ರುದ್ರಾಕ್ಷ** (ನಾ). ೧. ಒಂದು ಬಗೆಯ ಮರ ಮತ್ತು (ಜಪಮಾಲೆಗೆ ಉಪಯೋಗಿಸುವ) ಅದರ ಕಾಯಿ ; P ಇದು ರುದ್ರನ ಕಣ್ಣೀರಿನಿಂದ ಹುಟ್ಟಿತು ಎಂಬ ನಂಬಿಕೆಯಿದೆ : ನಂದನಾದ್ಯಾರಾಮಂಗಳೊಳು ರುದ್ರಾಕ್ಷ . . . ಶಿರೀಷ (ಶಿವೇಶ. ೨೦೧). ೨. [ವೀಶೈ] ಅಷ್ಟಾವರಣಗಳಲ್ಲಿ ಒಂದು ; ರುದ್ರಾಕ್ಷಮರದ ಬೀಜ ; P ಶೈವರು ಹಾಗೂ ವೀರಶೈವರು ಇದನ್ನು ಪವಿತ್ರವೆಂದು ದೇಹದಲ್ಲಿ ಧರಿಸುತ್ತಾರೆ : ಮೆಣಸು: ಕಾಳು ದೊಡ್ಡದಿರಬೇಕು, ಮೇಲಿನ ಹುರುಬುರುಕುತನ ಧಮ್ಮಾಗಿದ್ದು ರುದ್ರಾಕ್ಷದಂತೆ ಸ್ಪಷ್ಟಾಗಿರಬೇಕು (ಮುಂಬಿವ್ಯಾ. ೫೦). [ಸಂ.]

**ರುದ್ರಾಕ್ಷಹಲಸು** (ನಾ). ಒಂದು ಬಗೆಯ ಹಲಸು : ರುದ್ರಾಕ್ಷಹಲಸು ನೆಲಹಲಸು ಬಕ್ಕೆವಲಸು (ಶಿವೇಶ. ೨೦೦).

[ರುದ್ರಾಕ್ಷ + ಹಲಸು (< ಪಲಸು)]

**ರುದ್ರಾಕ್ಷಿ** (ನಾ). ೧. = ರುದ್ರಾಕ್ಷ ೧ : ಇರಲು ರುದ್ರಾಕ್ಷಿಗಳ ಬೀಜವ ಹರನ ಉರಿಗಣ್ಣದನು ಧರಿಸಲು ದುರಿತನಿರ್ದಹ (ಬಸ್ವ.ಪು. ೪೫-೭೯) ; ರುದ್ರಾಕ್ಷಿ ಅಮರದವಳ್ಳಿ . . . ಕಷಾಯವಂ ಕಾಯಿಸಿ ಕುಡಿಯೆ ದಾಹಜ್ವರ ಪರಿಹಾರವಾಗುವುದು (ಸಕವೈ. ೬೩). ೨. = ರುದ್ರಾಕ್ಷ ೨ : ವಿಭೂತಿಯನೆ ಪೂಸಿ ರುದ್ರಾಕ್ಷಿಯನೆ ಕಟ್ಟ ಶಿವ ನಿರ್ಮೊಲವಿಲ್ಲದಂತೆ ಆಗಿರ್ದನಯ್ಯಾ (ಬಸವ. ೨೬೯) ; ಆ ಯಜ್ಞಂಗಳ ಫಲವು ರುದ್ರಾಕ್ಷಿಯ ಧರಿಸಿದಾಕ್ಷಣದಲ್ಲಿಯೇ ದೊರೆಕೊಂಬುದು ನೋಡಾ (ಅಬಿಂದೇ. ೪೪-೨). [< ಸಂ. ರುದ್ರಾಕ್ಷ]

**ರುದ್ರಾಕ್ಷೆ** (ನಾ). ೧. = ರುದ್ರಾಕ್ಷ ೧ : "ಶಿವಾಕ್ಷಂ . – ರುದ್ರಾಕ್ಷೆ" (೬೩೦. ೧೬೪). ೨. = ರುದ್ರಾಕ್ಷ ೨ : ವಿಭೂತಿಯುಮುನುದ್ಧೂಳನಂ ಮಾಡಿ ಹರುಷದಿಂ ಪಾಡುತುಂ ರುದ್ರಾಕ್ಷೆ[ಪಾಕಾಂ. ಕ್ಷಿ]ಯಂ ಸೂಡಿ (ತಿರುಶ. ದೇ. ೪-೦೦). [ಸಂ. ರುದ್ರಾಕ್ಷ]

**ರುದ್ರಾಟ್ಟಹಾಸ** (ನಾ). ೧. ಶಿವನ ನಗು : ಎಲೆ ತಾರಾಗಂ ಹರಂ ಕಣ್ಣಿಡೆ ಕರಗಿದುದಂತಲ್ತು ರುದ್ರಾಟ್ಟಹಾಸಂ ಜಲವಾದತ್ತಲ್ತು . . . ಎಸೆಲ್ ಚೆಲ್ವದಾಯ್ತುಬ್ಜಷುಡಂ (ಕಾದಂಪೂ. ೬೩೪). ೨. ಭಯಂಕರವಾದ ನಗು : ಭೀಕರವಾದ ಅಟ್ಟಹಾಸ : ಮೊರೆದುರುಳು, ರತ್ನಧಿಯೆ. ಉಲ್ಲೋಲ ಕಲ್ಲೋಲ ರುದ್ರಾಟ್ಟಹಾಸದಿಂ (ಚತ್ರಾಂಗ. ೬೫-೦೬೭೪).

[ರುದ್ರ + ಅಟ್ಟಹಾಸ]

**ರುದ್ರಾಣಿ** (ನಾ). ಪರಮೇಶ್ವರನ ಹೆಂಡತಿ ; ಪಾರ್ವತಿ : "ರುದ್ರಾಣೀ . . . ಗಿರಿಜಾ, ಮೇನಕಾತ್ಮಜಾ – ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೪-೧೫) ; ರಾಣಿಯ ವಾಸದ ಪೊಸ ನೇರಾಣಿಯ ಮಾಡಂಗಳೊಳಗೆ ಕಯ್ಗೆಯ್ದಿರೆ ರುದ್ರಾಣಿ ವರುಣಾನಿ ನೆಗಟ್ದಿಂದ್ರಾಣಿಯೆನಲ್ಕಕ್ಕುಮಿಕ್ಕ ಮಹಿಷೀಬೃಂದಂ (ಶಾಂತಿಪು. ೧೦-೭೦). [ಸಂ. ರುದ್ರಾಣೀ]

**ರುದ್ರಾಭಿಷೇಕ** (ನಾ). ರುದ್ರಮಂತ್ರವನ್ನು ಪಠಿಸುತ್ತಾ ಶಿವಲಿಂಗಕ್ಕೆ ಮಾಡುವ ಅಭಿಷೇಕ : ಮಧ್ಯಾಹ್ನ ರುದ್ರಾಭಿಷೇಕ . . . ನೂರೆಂಟು ಆರತಿಯ ರಂಗಪೂಜೆ (ದೇಶಹಂ. ೯). [ಸಂ.]

**ರುದ್ರಾವತಾರ** (ನಾ). ೧. ಶಿವನ ಅವತಾರ : ಭಾವಿಸುವಡೀತಲ್ಲದಿದ್ದಡೆ ಭೂವಳಯದೊಳಗುದಯಿಸಿದ ರುದ್ರಾವತಾರದ ದಿವ್ಯಮಹಿಮೆಯದೆಂತ ಮರ್ದಪುದು (ಬಸಪು. ೫೩-೬). ೨. ರುದ್ರನ ಅಂಶದಿಂದ ಹುಟ್ಟಿದವನು; ಅಶ್ವತ್ಥಾಮ ಮೊದಲಾದವರು : ಕಮಲಕುಲೋದ್ಭವ ಮಿಗೆ ವಿಷ್ಣುಮೂರ್ತಿ ರುದ್ರಾವತಾರನಿಱಿವಬೆಡಂಗಂ (ಗದಾಯು. ೦-೦೪) ; ರುದ್ರಾವತಾರನು ವೀರಶೃಂಗಾರ (ಬಸಪು. ೬೦-೦) : ಬಾರ, ಬೀರರ ಬೀರ, ದೈವಮನ್ ಲೆಕ್ಕಿಸದ ರುದ್ರಾವತಾರ ! (ಅಶ್ವತ್ಥಾ. ೪-೬೦). ೩. ಭಯಂಕರವಾದ ರೂಪ : ರಣಹಲಗೆ ಸದ್ದಿನಲಿ ಜಿದ್ದುಕಟ್ಟಿದ್ದಿರುವ ಜಡಿಮಳೆಯ ರುದ್ರಾವತಾರ ! (ನಲಮು. ೦೪-೮) ; ಅವಳ ಚಿತ್ರಪಟಲದ ಮೇಲೆ ಅವಳ ಹಿಂದಿನ ಜೀವನವೆಲ್ಲ ಜೀವ ತಾಳಿ ರುದ್ರಾವತಾರದಿಂದ ಕುಣಿಯತೊಡಗಿತು (ಹಳ್ಳಿಹಾ. ೭೩).

ರುದ್ರಾವತಾರಜನಕ = ಅಶ್ವತ್ಥಾಮನ ತಂದೆ; ದ್ರೋಣ: ತ್ರೈಲೋಕ್ಯಧನುರ್ಧರನುಂ ರುದ್ರಾವತಾರಜನಕನುಂ . . . ಎನಿಸಿದ ಬಿಲ್ಲ ಜಾಣಂ ದ್ರೋಣನಟೞಿನೊಳಂ (ಗದಾಯು. ೨-೦೦ ವ). [ಸಂ.]

**ರುಧಿರ** (ಗು). ೧. ಕೆಂಪಾದ ; ರಕ್ತವರ್ಣದ. (ನಾ). ೨. ಕೆಂಪುಬಣ್ಣ : ರಕ್ತವರ್ಣ : ಬಾಳುಡಿ ಪಾಱಿ ಬೀೞೆ ಪಗಲುಳ್ಕದವೊಲ್ ರುಧಿರಂ ದಿಗಂತಮಂ ಮೇಳಿಸಿ ಕೊರ್ವಿ ಕಲ್ಪದವಸಾನದ ಸಂಜೆಮುಗಿಲ್ಗಳಂದಮಂ ಪಾಳಿಸೆ (ಶಂರಾಮಾ. ೦೩-೬೩). ೩. ನೆತ್ತರು; ರಕ್ತ : "ಕ್ಷತಜಂ . . . ರುಧಿರಂ . . . ರಕ್ತಂ — ಈ ೭ ನೆತ್ತರು" (ಹಲಾಯು. ೦೦೪-೦೦); ಅಧಿಕರಿಪುನೃಪತಿಬಳನವರುಧಿರಜಳಸ್ಫುರಿತರೌದ್ರಮಿಾ ಗದೆ ಪೆಸರಿಂ ರುಧಿರಮುಖಿಯೆಂಬುದು (ಶಂಪರಾ. ೬-೫); ರುಧಿರಂ ಬಸಿಯೆ [ಪಾಕಾಂ. ಕಡುಮುಳಸಿಂದ] ಹೊಯ್ದು (ಹರಿಶ. ೭-೨೫); ರಾಮಾದಿಗಳುಮರಸುತ್ತ ಬಂದು ಕಂಡರು . . . ರುಧಿರಸಿಕ್ತಾಂಗನಂ, ಕ್ಲಾಂತ ಸುಗ್ರೀವನಂ (ತ್ರೀರಾಮಾ. ೩೦೭-೦೭೦). ೪. [ಜ್ಯೋತಿ] ಕುಜಗ್ರಹ ; ಅಂಗಾರಕ : ಹತ್ತನೆಯೊಳ್ ರುಧಿರಂ ನಾಲ್ಕನೆಯೊಳ್ ರವಿ ನಿಧನಂ ಮನುಜಂಗೆ ಲಗುಡಪಾತದಿನಕ್ಕುಂ (ಜಾತಿತಿ. ೨೩-೦೦). [ಸಂ.]

**ರುಧಿರೆ** (ನಾ). ಒಂದು ಬಗೆಯ ಸಸ್ಯ; ಮದರಂಗಿ : "ರುಧಿರೆಯೆನೆ ಮಧುರಂಗಿ" (ಮಂಗರಾ. ೩೫-೦೫). [ಸಂ. ರುಧಿರ]

**ರುಧಿರೋದ್ಗಾರಿ** (ಗು). ೧. ರಕ್ತವನ್ನು ಕಾರುವ. (ನಾ). ೨. ಅರುವತ್ತು ಸಂವತ್ಸರಗಳಲ್ಲಿ ಐವತ್ತೇಳನೆಯದು : ೯ನೆಯ ರುಧಿರೋದ್ಗಾರಿ ಸಂವತ್ಸರದ ಪುಷ್ಯಸುದ್ಧ ೧೩ (ಕೊಲ್ಲಾಪು. ೪-೯ ; 1083) ; ಮತ್ತಮಾ ವರ್ಷವೇ ಪ್ರಭವ . . . ರುಧಿರೋದ್ಗಾರಿ . . . ಅಕ್ಷಯಮೆಂದಱುವತ್ತು ತೆಱನಾಗಿಹುದು (ಶಿವೇಶ. ೨೬೩). [ಸಂ. ರುಧಿರೋದ್ಗಾರಿನ್]

**ರುಪಾಯಿ** 'ರೂಪಾಯಿ' ನೋ.

**ರುಬ್ಬು** (ಕ್ರಿ). ತಿರುವು ; ನುಣ್ಣಿಸು : ಆ ಶರಣ ಬೀದಿಲೀ ಬರುತ್ತಲಿರ್ದು ಜೋಳ ರುಬ್ಬುತಲಿಂದುಮಂದನೆ ಓರ್ವಳಿರಲಾ ರುಬ್ಬುಕಲ್ಲೂ ಕಂಡು (ಕೊಲ್ಲಿಮಾ. ೦೪೦-೪); ಆಲದ ಮೊಗ್ಗು . . . ಅಕ್ಕಿ ಇವನ್ನು ರುಬ್ಬಿ ಅಂಬಲಿ ಕಾಯಿಸಿ ತುಪ್ಪ ಹಾಕಿಕೊಂಡು ಕುಡಿಯಲು ಮೂತ್ರ ಬಿಡುವುದು (ಸಕವೈ. ಶಂ. ೪೯೪). [ದೇ. ॥ ತಮಿ. ರುಪ್ಪು; ತೆಲು. ರುಬ್ಬು]

**ರುಬ್ಬುಕಲ್ಲು** 'ರುಬ್ಬುಗಲ್ಲು' ನೋ.

**ರುಬ್ಬುಗಲ್ಲು**, ರುಬ್ಬುಕಲ್ಲು (ನಾ). ಒರಳಿನಲ್ಲಿ ಪದಾರ್ಥವನ್ನು ಹಾಕಿ ತಿರುವಲು ಬಳಸುವ ಗುಂಡಾದ ಕಲ್ಲು; ಗುಂಡುಕಲ್ಲು : ಅವನ ಕೈ ರುಬ್ಬುಗಲ್ಲನ್ನು ಉರುಳಿಸುತ್ತಿತ್ತು (ಮುಳ್ಳುಹಾ. ೬೫). **ರುಬ್ಬುಕಲ್ಲು :** ಆ ಶರಣ ಬೀದಿಲೀ ಬರುತ್ತಾಲಿರ್ದ್ರ . . . ಆ ರುಬ್ಬುಕಲ್ಲೂ ಕಂಡು (ಕೊಳ್ಳವಾ. ೦೪೦-೪). [ರುಬ್ಬು + ಕಲ್ಲು (< ಕಲ್$_3$)]

**ರುಬ್ಬುಗುಂಡು** (ನಾ). = ರುಬ್ಬುಗಲ್ಲು : ನಿಮ್ಮ ಶಿರಸ್ಸು ಎಂಬುದು ಹೇಗೆ ಬೇಕೋ ಹಾಗೆ ಹೊರಳಿಸಬಲ್ಲ ರುಬ್ಬುಗುಂಡಾಗಬೇಕು (ದೇಳಪ್ಪ. ೭೨); ಹೃದಯವೋ ರುಬ್ಬುಗುಂಡೋ (ತಂದೆಮ. ೨೬-೩). [ರುಬ್ಬು + ಗುಂಡು]

**ರುಮಡಿ** (ನಾ). ಒಂದು ಬಗೆಯ ಮರ; ಔದುಂಬರವೃಕ್ಷ; ಅತ್ತಿಮರ : ಅತ್ತಿ (ಉಂಬರ, ರುಮಡಿ) :_ ಪ್ರಸಿದ್ಧ – ಕಟ್ಟಿಗೆ ಸಾಧಾರಣ ತರದ್ದು (ಕಭಾಗ. ೩೫). [← ಮರಾ. ರುಮಡ, ರುಂಬಡ]

**ರುಮಾಲಿ** (ನಾ). ಕಳ್ಳತನಕ್ಕಾಗಿ, ದೇಹವು ಒಳಗೆ ತೂರುವಂತೆ, ಮನೆಯ ಛಾವಣಿಯಲ್ಲಿ ರಂಧ್ರ ಕೊರೆದು ಇಳಿಯುವಿಕೆ : ಬಾಗಿಲಿನ ಹತ್ತಿರ ಗೋಡೆ ಕೊರೆದು ಒಳಸೇರುವುದಕ್ಕೆ "ಬಗಲಿ" ಪದ್ಧತಿಯೆಂದೂ, ಛಾವಣಿಯಿಂದಿಳಿಯುವುದಕ್ಕೆ "ರುಮಾಲಿ" ಪದ್ಧತಿಯೆಂದೂ ಕರೆಯುವ ರೂಢಿಯಿದೆ (ಬಂಗಾರ. ೦೫೦). [← ಮರಾ. ರುಮಾಲೀ]

**ರುಮಾಲು$_1$**, ರುಂಬಾಲ, ರುಮಾಲೆ, ರುಮ್ಮಾಲು, ರೂಮಾಲು, ರೂಮಾಲೆ (ನಾ). ತಲೆಗೆ ಸುತ್ತಿಕೊಳ್ಳುವ ಉದ್ದವಾದ ಬಟ್ಟೆ; ಪೇಟ ; ಮುಂಡಾಸು : ಚಿನ್ನದ ಸರಿಗೆರುಮಾಲು ಸುತ್ತಿ ಮಲ್ಲಿಗೆಯಂ ಮುಡಿದು (ಹುಬಳ. ೬೦); ರುಮಾಲುಗಳಂ ಕೈಗಳಿಂ ಸುಮಾನದಿಂದ ಪಿಡಿದು (ಸೌಗಂಧಿ. ೨೦೩-೨೦) ; ಹೊರಗೆ ಹೊರಟಾಗ ತಲೆಗೊಂದು ರುಮಾಲು (ರತ್ನಗೋ. ೫). **ರುಂಬಾಲ :** ನೀ ರುಂಬಾಲ ಸುತ್ತು (ಅಕೋಳ. ೦೬) ; ನಾಲ್ಕು ಬೆರಳು ಅಂಚಿನ ಜರದ ರುಂಬಾಲ (ಜುಂಗಾಕೃ. ೨೩). **ರುಮಾಲೆ :** ಗಂಡಸರು ತಲೆಗೊಂದು ರುಮಾಲೆಯನ್ನು ಬಿಗಿಯುವರು (ಜಾಂಕ್ರ. I. ೩೬೨). **ರುಮ್ಮಾಲು :** ಮಿಸುನಿಯ ಜರತಾರ ರುಮ್ಮಾಲು ಪೈರಣೆ ಪೊಸತಾದ ದುಪ್ಪಟದಿಂದ . . . ರಂಜಿಸಿದನು (ಕಂಸಬಿ. ೨೩-೬೦) ; ಭಾರಿಜರದ ಮಾರಿ ರುಮ್ಮಾಲಾ ಸುತ್ತಿಕೊಂಡಾಂವಾ (ಗಬೀಗೀ. ೯೨-೩). **ರೂಮಾಲು :** ಜರೀಪೇಟ ರೂಮಾಲನ್ನು ಸುತ್ತಿಕೊಂಡು ಹಾಡುತ್ತಿರಲು (ಕಥಾಮಂ. IV. ೦೦). **ರೂಮಾಲೆ :** ಪೂಮಾಲೆ ಇಲ್ಲದಿದ್ದರೆ ರೂಮಾಲೆ ಬೇಡವೋ ? (ಗಾದೆ). [← ಪಾರ. ಹಿಂ. ರುಮಾಲ್, ರೂಮಾಲ್ ; ಮರಾ. ರುಮಾಲ್./ತಮಿ. ರುಮಾಲೈ, ಉರು[illegible]ಲೈ; ತುಳು. ರುಮಾಲ್; ತೆಲು. ರುಮಾಲು]

**ರುಮಾಲು$_2$** (ನಾ). ಒಂದು ಘನಅಡಿ ; ಒಂದು ಘನಪೂಟು : ಬಾವಿಯ ಆಳವನ್ನೆಲ್ಲ ಒಂದು ರುಮಾಲಿನಳತೆಯಷ್ಟು ಅಗಿದು ತೆಗೆದರೆ ಹತ್ತು ಆಣೆ ಯೆಂದವರು ತಿಳಿದಿದ್ದರು. ಆದರೆ ಒಂದು ರುಮಾಲೆಂದರೆ ಒಂದು ಘನಪೂಟು ಎಂದು ಲೆಕ್ಕವಿತ್ತು (ಸ್ವ.ಕಿತ. ೩೩೯). [ ? ]

**ರುಮಾಲೆ** ' ರುಮಾಲು$_1$ ' ನೋ.

**ರುಮುಜುಮು** (ನಾ). ಒಂದು ಅನುಕರಣ ಪದ : ಜುಮ್‌ಜುಮು ರುಮುಜುಮು ಗುಂಗುಣು ದುಮುದುಮುನಾದದ ನದಿಯೊಂದು ನಡೆಧಾಂಗ (ಗಬೀಗೀ. ೫೦-೦೩).

**ರುಮುರುಮು** (ಅ). ವೇಗವಾಗಿ ಎಂಬರ್ಥವನ್ನು ಸೂಚಿಸುವ ಒಂದು ಅನುಕರಣಾವ್ಯಯ : ರುಮುರುಮು ಹೆಜ್ಜೆ ಇಡುತ್ತ ಶಿನ್ನನ ಮನೆಯತ್ತ ನಡೆಯಹತ್ತಿದ (ಶೂರುದಾ. ೦೦) ; ಗಾಳಿ ರುಮುರುಮು ಬೀಸುತ್ತಿರುತ್ತದೆ (ಹುತ್ತುತು. ೩೦).

**ರುಮೆ** (ನಾ). ಉಪ್ಪಿನ ಗಣಿ ; ಉಪ್ಪಿನ ಮೋಳೆ : "ಉಪ್ಪಿನ ಕಟ್ಟೆರು ಮನೆ (ರುಮಾ)ಯೆಂಬುದು" (ಹಲಾಯು. ೨೯-೦೫) ; ಪುಷ್ಪಾದಿ ರುಮೆಯ ನ್ನೆರದು ಲವಣವೆನಿಪಂತೆ (ಅಮಗಾ. ೯-೪-೭). [ಸಂ. ರುಮಾ]

**ರುಮ್ಮಾಲು** ' ರುಮಾಲು$_1$ ' ನೋ.

**ರುಮ್ಮು$_1$** (ಕ್ರಿ). ಸುತ್ತಾಡಿಸು ; ಶ್ರಮಪಡಿಸು (?) : ಗಾಣ ಹಾಕಿ ರುಮ್ಮಿದರ ಇದರ ಡುಬ್ಬ ಕಡಿಯಾಕ ಆಗದಿದ್ದರ ನನ್ನ ಹೆಸರಗೊಂಡ ಕರಿ ಬ್ಯಾಡಿರಿ (ಜಾಬಿಬಿ. ೦೫). [<ರುಬ್ಬು$_1$]

**ರುಮ್ಮು$_2$** (ನಾ). (ಉಕ) ಕುಂಟೆಯನ್ನು ಹಿಡಿಯಲು ಅನುಕೂಲಿಸುವಂತೆ ಅಳವಡಿಸಿರುವ ಹಿಡಿ,–ಹಿಡಿಕೆ : ರುಮ್ಮಿನ ಮೇಲೆ ಭಾರ ಹಾಕಿ ರಂಟೆ ಹೊಡೆಯಲಿ (ರೂಢಿ). [?./ಮರಾ. ರುಮಣೇ]

**ರುರು** (ನಾ). ೧. ಮೈಮೇಲೆ ಬಿಳಿಯ ಚುಕ್ಕೆಗಳಿರುವ ಒಂದು ಬಗೆಯ ಜಿಂಕೆ : "ಸಾರಂಗಃ . . . ರುರುಃ – ಈ ೪ ಸಾರಂಗಂ" (ಹಲಾಯು. ೩೯-೭೭) ; ರುರುಗಣಮಿತ್ರಲಿತ್ತ ವಿಚರನ್ಮೃಗಸಂಕುಳಮಿತ್ರಲಿತ್ತ (ಕಾದಂಪೂ. ೦೫೭) ; ಕರಿ ರುರು ಹರಿಣ ಶಶಕ ಸಾರಂಗಮು ಮೊದಲಾದ ಮೃಗಂಗಳೊಡನೆ ಬದ್ಧವೈರಮಂ ಪತ್ತುವಿಟ್ಟು (ಶಂಕಶಂ. ೦೦೯-೨೦). ೨. ನಾಯಿ : 'ರುರುಪರಿಚಿತ' ಪರಾ. ೩. ಒಂದು ಬಗೆಯ ಕ್ರೂರ ಮೃಗ. [ಸಂ.]

**ರುರುಪರಿಚಿತ** (ಗು). ೧ ಜಿಂಕೆಗಳಿಂದ ಕೂಡಿರುವ. ೨. ನಾಯಿಗಳಿಂದ ಕೂಡಿರುವ. ೧, ೨ : ಆ ಮಹಾವನಂ . . . ಭೈರವಾವಳಿಯಂತೆ ರುರುಪರಿಚಿತಮುಂ ಪಿತಾಮಹಾನನದಂತೆ ಸಾಮಜಪದಾಭಿರಾಮಮುಂ (ಚಂದ್ರಪ್ರ. ೫-೫೨ಪ). [ಸಂ.]

**ರುರುವಂತಿ** (ನಾ). ಒಂದು ಬಗೆಯ ಸಸ್ಯ ; ತೂಬರೆಗಿಡ : "ತುಂಬಿ ರುರುವಂತಿ ತಿಂದುಕಂ" (ಪಂಗಶಾ. ೩೫-೦೩). [ ? ]

**ರುರುವಕ್ತ್ರ** (ನಾ). ೧. ಜಿಂಕೆಯಂತೆ ಮುಖವುಳ್ಳವನು. ೨. ಶಿವಗಣಗಳಲ್ಲಿ ಒಬ್ಬ : ಪಯಶ್ಚರವಕ್ತ್ರಂ ರುರುವಕ್ತ್ರನೆಂಬರೆಸೆದರ್ವಿಶ್ವೇಶ್ವರಾಸ್ಥಾನದೊಳ್ (ರಾಶಕೇ. ೦೯-೦೫೪). [ಸಂ.]

**ರುವತ್ಕೀರ** (ನಾ). ಧ್ವನಿಮಾಡುತ್ತಿರುವ ಗಿಳಿ : ಅಗಲ್ದು ಪೋಗವು ರುವತ್ಕೀರಾಳಿ ಕೇದಾರದಿಂ (ಜಗಬಿ. ೨-೩). [ಸಂ.]

**ರುವರಿ** ' ರೂವಾರಿ' ನೋ.

**ರುವಾರಿ** ' ರೂವಾರಿ' ನೋ.

**ರುವಿ** 'ರುವ್ವಿ' ನೋ.

**ರುವ್ವಿ**, ರುವಿ (ನಾ). ಒಂದು ಸಣ್ಣ ನಾಣ್ಯ ; ದಮ್ಮಡಿ : ಕೊಂಡಾಡ ಬೇಡಿದರು ಕೊಡರೊಂದು ರುವ್ವಿಯನು [ ಪಾಠಾಂ. ಪೈಸವನು] (ಭರಂದ. ೦-೨೯-೩) ; ಟೆಂಕೆ ೧೯ ೪ ದುಡ್ಡು ೧೬ ಸುಗಾಣಿ ೪ ಪೈಸಾ ೮ ಭಾರ್ಡೌ ಗಾಣಿ ೧೨ ಭಾರಾಗಾಣಿ ೧೯ ದುಗ್ಗಾಣಿ ೨ ದುಡ್ಡಿಗೆ ೩ ರುವ್ವಿ (ಚಾಸ್ಕರ. ೭೭-೨) ; ರುವ್ವಿ ಕೊಡದವ ರುಮಾಲು ಕೊಟ್ಟಾನೆ ? (ಗಾದೆ). **ರುವಿ :** ಒಂದು ದುಡ್ಡಿಗೆ ಮೂರು ರುವಿ (ಕಭಾಗ. ೨೮೧) ; ರುವಿ ದುಗ್ಗಾಣಿಯನ್ನು ಕೂಡಿಸಿ ಗಿರಾಕಿಯನ್ನು ಕಳುಹಿಸುವುದಕ್ಕೆ ಹತ್ತು ನಿಮಿಷ ಬೇಕಾಯ್ತು ಅಜ್ಜಯ್ಯನಿಗೆ (ದೇವಹಂ. ೬೭).

[ದೇ.॥ ತುಳು. ರುವಿ, ರುಯಿ ; ತೆಲು. ರುವ್ವ]

**ರುಷವತ್ತು** 'ರುಷುವತ್ತು' ನೋ.

**ರುಷಿ**, ರಿಷಿ, ರಿಸಿ, ರುಸಿ (ನಾ). ತಪಸ್ಸುಮಾಡುವವನು ; ಮುನಿ : ಶ್ರಾವಕರಿಂ ರುಷಿಯರಿಂ ಕೃತಾರ್ಥರುಮೊಳರೇ (ಧರ್ಮಾಮೃ. ೦-೨೦೫) ; ಒಡನಂದಿನ ರುಷಿಗಳು ತಮ್ಮ ಪೆಸರಲಿ ಬಿಡದೆ ತೀರ್ಥವ ಕಲ್ಪಿಸಲು (ಕಂಶಬಿ. ೫-೩೭). **ರಿಷಿ :** ಶ್ರೀಮಾಸೇನಪ್ಪರಮಪ್ರಭಾವರಿಷಿಯರ್ (ಎಕ. II. ೨೭-೦ ; ಶು. 700) ; ಅಲ್ಲಿಯ ರಿಷಿಯರಾನ್ ಚಿರಚ್ಛೇದಂಗೆಯ್ದು ಪಾತಕನಕ್ಕು (ಎಕ. X (S). ಶಕ್ಕಬ. ೬೭-೨೪; 850). **ರಿಸಿ :** ನಾಡೊಳಗಿರ್ದ ರಿಸಿಯ

ರ್ಕಳ್ಗೆಲ್ಲಂ ಬಟಿಯುಟ್ಟಿ (ವರ್ಧ್ಮಾ.ಪು. ೬೬-೮); ರಿಸಿಗಳೊಳ್ ಆರೆಬರ್ ಒಂದೆಡೆಯೊಳ್ ಪಟಿವಾತಂ ನುಡಿಯುತ ಜನ್ನದಾರವಂ ಪೊಸೆಯುತಿರ್ಪರ್ (ಅದ್ಭುತ. ೦-೯). ರುಸಿ : 'ರುಸಿವಳ್ಳಿ' ಪರಾ. [<ಸಂ. ಋಷಿ]

**ರುಷಿತ** (ಗು). ಕೋಪಗೊಂಡ ; ರೋಷಗೊಂಡ : ಸಿಂಜಿನಿಯ ಚಾಪಟಂಕೃತಿ. ಕಲಿಯ ಪೌರುಷದ ರುಷಿತರಾವಂ . . . ಕೇಲಿಸಿತು ಕಿವಿಗತಿ ಕಠೋರವಂ ! (ಜಗನ್ನಾಥ. ೬೨-೨೨೫). [ಸಂ.]

**ರುಷುವತ್ತು**, ರುಷವತ್ತು (ನಾ). ನ್ಯಾಯವಿರುದ್ಧವಾಗಿ ಪಡೆಯುವ ಅಥವಾ ಕೊಡುವ ಹಣ ; ಲಂಚ : ಕಕ್ಷಿಗಾರರಿಂದ ರುಷುವತ್ತಿಗೆ ಯತ್ನಪಟ್ಟರೆ ನಾನು ಮ್ಯಾಜಿಸ್ಟ್ರೇಟಾಗಿ ಗವುನಿಸಬೇಕಾಗುತ್ತೆ (ಕಲಿತ. ೩೩೯); ನಮ್ಮ ಅಧಿಕಾರಿಗಳು ಯಾರೂ ಲಂಚ ರುಷುವತ್ತು ತೆಗೆದುಕೊಳ್ಳಕೂಡದು (ಕೃಷ್ಣಾ. II, ೪೮೦). **ರುಷವತ್ತು** : ಲಂಚ, 'ರುಷವತ್ತು' (Bribe. ೩೦೯೩). [ ←ಅರ. ಪಾರ. ಹಿಂ. ರಿಶ್ವತ್ ; ಮರಾ. ರುಶವತ್, ರುಶ್ವತ್, ರುಷ್ವತ್, ರಿಶ್ವತ್ ]

**ರುಷೆ** (ನಾ). ಕೋಪ ; ಸಿಟ್ಟು : ನೀಂ . . . ರುಷೆಯನಿಂತಾರೊಳಭಿನಯಿಸುತಿರುವೆ (ಶಾಕುಂ. ೯೩). [ ಸಂ. ರುಷಾ ]

**ರುಷ್ಟ** (ಗು). ೧. ಕೋಪಗೊಂಡ ; ಸಿಟ್ಟಿನಿಂದ ಕೂಡಿದ. (ನಾ). ೨. ಕೋಪ ; ಸಿಟ್ಟು. ೩. ಕೋಪಗೊಂಡ ವ್ಯಕ್ತಿ ; ಸಿಟ್ಟಾದ ವ್ಯಕ್ತಿ : ಪದಗರ್ಭವನ್ನು ಕೇಳಿದ ಪಂಡಿತರು ಒಡನೇ ರುಷ್ಟರಾದರು (ಕಥಾ. ೩೨೯) ; ಅವರ ಮಾತಿಗೆ ಸಾಧ್ವಿಯಾದ ಸೋಫಿಯಾಳು ರುಷ್ಟಳಾದಳು (ಸ್ತ್ರೀಲಿಂ. ೯೭). [ ಸಂ. ]

**ರುಷ್ಯ** (ನಾ). ಮೈಮೇಲೆ ಬಿಳಿಚುಕ್ಕೆಗಳುಳ್ಳ ಅಥವಾ ಬಿಳಿಬಣ್ಣದ ಪಾದಗಳುಳ್ಳ ಜಿಂಕೆ : "ಆ ರುಷ್ಯಮದು . . . ಸಾರಂಗಮಕ್ಕು" (ಮಂಗರಾ. ೧೬-೦೦). [ <ಸಂ. ಋಶ್ಯ ]

**ರುಸಿ** ' ರುಷಿ ' ನೋ.

**ರುಸಿಪಳ್ಳಿ** ' ರುಸಿವಳ್ಳಿ ' ನೋ.

**ರುಸಿವಳ್ಳಿ**, ರಿಷಿಹಳ್ಳಿ, ರುಸಿಪಳ್ಳಿ (ನಾ). ಋಷಿಗಳು ವಾಸಿಸುವ ಸ್ಥಳ ; ಆಶ್ರಮ : ಈ ರುಸಿವಳ್ಳಿಯೊಳಾನವಿಚಾರದೆ ಋಷಿಸುತನನೊರ್ವನಂ ಕೊಂದೊಡೆ (ಶಂಕರ. ೨೬೯-೦೩). **ರಿಷಿಹಳ್ಳಿ** : ಬಸದಿಯ ವಸದಲಿ ಪಲವ ಮನೆಗಳ ಮಾಡಿಸಿ ರಿಷಿಹಳ್ಳಿಯೆಂದು ಪೆಸರನಿಟ್ಟು (ಎ.ಕ. ೦೯೩೨ ; ೦೩-೨೬ ; 1069). **ರುಸಿಪಳ್ಳಿ** : ಸಿಂಧುತೀರದ ರುಸಿ[ಶಾಸನ. ಋಷಿ] , ಪಳ್ಳಿಯೊಳ್ ಮೃಗಾಯಣನೆಂಬ ಮುನಿಗಂ ವಿಶಾಖೆಯೆಂಬ ಗೊರತಿಗಂ ಗೌತಮನೆಂಬ ಮಗನಾಗಿ ಪುಟ್ಟಿ (ಅರ್ಧನೇ. ೪-೦೨೭ ವ).
[ ರುಸಿ (<ರುಷಿ) + ಪಳ್ಳಿ₁ ]

**ರುಸುಂ**, ರುಸುಮು (ನಾ). ನಿಯಮಾನುಸಾರವಾಗಿ ಕೊಡುವ ಶುಲ್ಕ, ತೆರಿಗೆ ಮೊದಲಾದ ಹಣ : ದಿವಾನ್‌ಪೂರ್ಣಯ್ಯನವರಿಗೆ . . . ನಿವ್ವಳಹಣದಲ್ಲಿ ಶೇಕಡ ಅರ್ಧರೂಪಾಯಿಯಂತೆ ರುಸುಂ ಸಹ ಪಾವತಿಯಾಗುತ್ತಿತ್ತು (ಪುಣಾಪಂ. II, ೩೩) ; ಅವರಿಗೆ ಕೊಡುವ ರುಸುಂ ಕ್ರಮಪಡಿಸಲ್ಪಡುವುದು (ಗ್ರಾಮಾಡ. ೮). **ರುಸುಮು** : ಫಸಲು ಕಟಾವಾದ ಕೂಡಲೆ ಧಾನ್ಯವು ಕಣದಲ್ಲಿ ಇದ್ದ ಹಾಗೆಯೇ ಬಾರಾಬಲೂತಿಯ ರುಸುಮುಗಳನ್ನು ತೆಗೆಯುತ್ತಿದ್ದರು (ಕಾಪುಕಂ. ೩೪೦) ; ಒಂದು ಗಂಟೆಯ ಸಮಾರಂಭಕ್ಕೆ ಐವತ್ತುರೂಪಾಯಿಗಳ ರುಸುಮು ತೆಗೆದುಕೊಂಡ ಒಬ್ಬ ಪುರೋಹಿತ (ಪಂಕಪ್ಪ. ೨೪೦). [ ←ಅರ. ರಸೂಮ್ ; ಹಿಂ. ರುಸೂಮ್, ರಸೂಮ್ ; ಮರಾ. ರುಸುಮ್, ರುಸೂಮ್ ]

**ರುಸುಮು** ' ರುಸುಂ ' ನೋ.

**ರುಸ್ತುಂ** (ಗು). ೧. ಸಮರ್ಥನಾದ ; ಗಟ್ಟಿಗನಾದ : ಕ್ಲಬ್ಬಿನ ರುಸ್ತುಂ ಆಟಗಾರರು (ಕಾಯಕ.೩೩).(ನಾ). ೨. ಸಮರ್ಥ; ಗಟ್ಟಿಗ; ಬಹಳ ರುಸ್ತುಂ ಕಾಣೆನೋ, ನೀನು (ನಡತಾ. II, ೯೩೬).
[ ←ಅರ. ಹಿಂ. ರುಸ್ತಮ್ ; ಪಾರ. ಮರಾ. ರುಸ್ತುಮ್,ರುಸ್ತೂಮ್, ರುಸ್ತಮ್ ]

**ರುಹೆ** (ನಾ). ಗರಿಕೆ ; ದೂರ್ವೆ : "ದೂರ್ವಾ . . . ರುಹಾ, ಅನಂತಾ— ೬ ಗರಿಕೆಹುಲ್ಲಿನ ಪೆಸರುಗಳು" (ಸಿದ್ಧಾಂತಿ. ೦೯೯). [ ಸಂ. ರುಹಾ ]

**ರುಳಿ** ' ಲುಳ್ಳಿ₂ ' ನೋ.

**ರೂ₁** (ನಾ). (ಪಾಠ, ಮಗ್ಗಿ ಮೊದಲಾದುವನ್ನು) ಕಂಠಪಾಠಮಾಡುವುದು ; ಉರು : (೩).

**ರೂಹಾಕು** = ಗಟ್ಟಿಮಾಡು ; ಉರುಹಾಕು : ಸಂಜೀ ಮುಂಜಾನೇ ಎಷ್ಟು ರೂಹಾಕಿದ್ರೂ ನನಗನಕಾ ಒಂದ ಕವಿತಾಯೇನ್ಪಾಠ ಮಾಡಲಿಕ್ಕ ಆಗತಿದ್ದಿಲ್ಲಾ (ಬಿಂಚು. ೪೨) ; ಮಾಸ್ತರರು . . . ಮಾತನ್ನು 'ರೂ' ಹಾಕುತ್ತಿದ್ದರು (ಗಂಗಾಕಾ. ೩೭). [← ತೆಲು. ರೂವು, ರುವ್ವು ]

**ರೂ₂** (ನಾ). 'ರೂಪಾಯಿ' ಎಂಬುದರ ಸಂಕ್ಷಿಪ್ತರೂಪ : ಆ ಪುಸ್ತಕಕ್ಕೆ ಎರಡು ರೂ. ಹತ್ತು ಪೈಸೆ (ರೂಢಿ). [ < ರೂಪಾಯಿ ]

**ರೂಕ್ಷ** (ಗು). ೧. ಬಿರುಸಾದ ; ಒರಟಾದ ; ನುಣುಪಾಗಿರದ : ರೂಕ್ಷಕೇಶದ ಕಲಿಪುರುಷ ಸಾಕ್ಷಾತ್ಕರಿಸಿ (ತಿಮ್ಮಸ್ತ್ರೀ. ೦-೮೪); ಸಿಂಹಾಕೃತಿಯ ಮಹಾರೂಕ್ಷಶ್ಮಲೋಪಮಂ ಭೀಮಕಾಯಂ ಕಠಿನಗಂಭೀರನಾ ಯೋಗಿ (ಶ್ರೀರಾಮಾ. ೦೯೩-೩೬). ೨. ಕಠಿಣವಾದ ; ಕ್ರೂರವಾದ. ೩. ತೀಕ್ಷ್ಣವಾದ : 'ರೂಕ್ಷದಾಹ' ಪರಾ. (ನಾ). ೪. ಕಾಠಿಣ್ಯ ; ಗಡುಸುತನ : "ರೂಕ್ಷಮಾ ವಸು ತೀಕ್ಷ್ಣಂ" (ಮಂಗರಾ. ೦೦-೨). ೫. ಕಠಿಣವಾದ ಮಾತು; ಒರಟುನುಡಿ : ರೂಕ್ಷವನು ನುಡಿಯುತಿಹೆ ಮಿತಿಮೀರಿ (ಶಾಕಸಾ. ೭೭). ೬. ಕ್ರೂರನಾದವನು; ನಿರ್ದಯಿ : ಆ ಹಿರಣ್ಯಾಕ್ಷನಂ ದಿವಿಜಾಧೀಶ್ವರರೂಕ್ಷನಂ . . . ಕೊಂದು (ಜಗಪಿ. ೦-೩೭) ; ರೂಕ್ಷನಿಗೆ ಕಣ್ಣ ಕಲ್ಲದೆಯು ಬೇರೆ ಗುರಿ ಸಲ್ಲದಯ್ (ಶ್ರೀರಾಮಾ.೦೬೦-೦೫೭). ೭. ಸಿಡುಕು; ಕೋಪ : ಕತ್ತಲೆಯು ಭೀತಿಯನ್ನುಂಟುಮಾಡಿ ರೂಕ್ಷವನ್ನೂ ಎಚ್ಚರವನ್ನೂ ನಾಶಮಾಡುವುದು (ಸಕಪ್ಪ. ೩೬). [ಸಂ.]

**ರೂಕ್ಷಣ** (ಗು). ಕಠಿಣವಾದ : ಪೌರುಷದ ರೂಕ್ಷಣಧನುರ್ವಿದ್ಯೆಯಲ್ಲದೆಯ ಲಲನಾಸಹಜರತಿಲಾಭ್ಯಾಸವಿನಿತಿರದ ಆ ಚೈತ್ರುವಾಹಿನಿ ಕಿರೀಟಿಯೆಡೆಗೈದಿದಳ್ (ಜಗನ್ನಾಥ. ೨೨-೧೦೦). [< ರೂಕ್ಷ]

**ರೂಕ್ಷತನ** (ನಾ). ಒರಟುತನ : ರೂಕ್ಷತನದಿಂದ ಕೂಡಿದ್ದೂ ಮೌಲಿಕ ತರತಮಜ್ಞಾನವಿಲ್ಲದ್ದೂ ಆದ ಉಚ್ಛೃಂಖಲತೆಯು ಅದಕ್ಕೆ ಸಲ್ಲುವುದಿಲ್ಲ (ಪಂಕಪ್ಪ. ೦೦ ಹಿನ್ನುಡಿ). [ ರೂಕ್ಷ + — ತನ ]

**ರೂಕ್ಷತೆ** (ನಾ). = ರೂಕ್ಷತನ : ರೂಕ್ಷತಾವಿಕೃತಿಯಿಂ ಗುಜ್ಜುಮೆಯ್ಯಿಂ ಕುರೂಪಂಬೆತ್ತ ಶ್ರೀಗಂಧಕಾಷ್ಠವಕ್ರತೆಗಗ್ನಿಲಗ್ನದಿಂ, ಕೇಳ್, ರೂಪಶೂನ್ಯತೆಯೊದಗಲೇಂ ? (ಶ್ರೀರಾಮಾ. ೦೨೪-೩೩೫); ಒಂದು ಬಾಳಿನ ಬೆಳಸು ಸಂಯಮದ ರೂಕ್ಷತೆಯ ಶಾಂತಿಸೌಜನ್ಯವನು ರೂಢಿಸಿದ ನಿಮ್ಮಂಥ ಬದುಕು ಇನ್ನೆಂದು ಬಂದೀತು ಬುವಿಗೆ ?. (ಅಮಕಂ. ೨೦-೦೯).
[ ಸಂ. ರೂಕ್ಷತಾ ]

**ರೂಕ್ಷದಾಹ** (ನಾ). ತೀಕ್ಷ್ಣವಾದ ಉರಿ ; ಅತಿಯಾದ ಉರಿ : ರೂಕ್ಷದಾಹಗಳು ಶಮನವಾಗಿ ಸುವರ್ಣದಂತೆ ವರ್ಣ ಉಂಟಾದ ದೇಹವುಂಟಾಗಿ ಹೊಟ್ಟೆಯುಬ್ಬರವನ್ನು . . . ಪರಿಹರಿಸುವುದು (ಸಕಪ್ಪ. ೨೭). [ಸಂ.]

**ರೂಕ್ಷಾನಿಲ** (ನಾ). ಬಿರುಸಾದ ಗಾಳಿ; ಬಿರುಗಾಳಿ : ರೂಕ್ಷಾನಿಲಪಾತದಿಂ ತಪನತಾಪದಿನಂಬಿಕೆಗಗ್ಗಳಂ ಪರಿಮ್ಲಾನತೆಯಕ್ಕುಂ (ಶಂರಾಪಪಾ. ೦೦-೦೨೮).
[ಸಂ.]

**ರೂಕ್ಷಾವರ್ತ** (ನಾ). ಒಂದು ಒಗೆಯ ರೋಗ : ತೊಡೆಯುಂ ಮೊಗಮುಂ ಕಾಲುಂ ಬಿಡದಾಡುವುದರ್ಕಾಬಿಂಬದಸ್ಥಲೆ ನೋಟ್ಕುಂ

ನಿಡುಸುಯ್ಯುಗಂ ಧಾತುಗಳುಂ ಕಿಡುಗುಮತಿಪ್ರಬಲಮಾಗೆ ರೂಕ್ಷಾವರ್ತಂ (ಅಕ್ಕಿಶಾ. ೦೦-೦೩). [ಸಂ.]

**ರೂಕ್ಷಾಳಕ** (ನಾ). ಒರಟಾದ ಮುಂಗುರುಳು : ಅತಿರಕ್ತಾಶೋಕದ ಸುತ್ತಿನೊಳಿರ್ದ ರೂಕ್ಷಾಳಕಂಗಳನೋಸರಿಸುತ್ತುಂ ಮೆಲ್ಲನೆ ಮೇಳಿಸಿ ಕನ್ನೆಯುಂ (ಅಂಕ. ೩-೫೦). [ ಸಂ. ರೂಕ್ಷಾಲಕ ]

**ರೂಡಿ** (ನಾ). ೧. ಬಳಕೆ; ಚಾಲ್ತಿ : "ರೂಡಿ–ರೂಢಿ=ವಾಡಿಕೆ, ಪ್ರಸಿದ್ಧಿ" (ಕಚ್ಕಿಕೋ. ೪೮); ಹಾಗೆ ಇದ್ದ ಪಕ್ಷಕ್ಕೆ ನಮ್ಮಲ್ಲಿ ಹೊಸ ನಡತೆಗಳು ಎಂದಿಗೂ ರೂಡಿಯಲ್ಲಿ ಬರುತ್ತಿದ್ದಿಲ್ಲ (ಮುಂಬಯು. ೩. ೯–೦೬೬). ೨. ಹೆಸರುವಾಸಿ; ಪ್ರಸಿದ್ಧಿ : ಬಸಂತನೊಲ್ದೊಲಿಸಿ ಕಾಡುವ ರೂಡಿಯು ಬರ್ದುವೆಂಡಿರಂ ನಿಲೆ ಸಱಿಗೆಯ್ವುಂ (ಕಬ್ಬಿಗ. ೩೭). [ < ಸಂ. ರೂಢಿ ]

**ರೂಡಿಸು** (ಕ್ರಿ). ೧. ಎಲ್ಲರಿಗೂ ಪರಿಚಿತವಾಗು,– ವಿದಿತವಾಗು : ಕ್ರೀಡಿಸುವನಾ ಪುರದ ರೂಡಿಸಿದ ಬೀದಿಯೊಳಿಕ್ಕೇಡದೆಲ್ಲೆಡೆಯೊಳಂ ಪಸುಳೆ ಪರವುಟ್ಟನಾಗಿ (ಕೃಬಿಶಾ. ೨೬–೨೨). ೨. ಏಳಿಗೆಯಾಗು; ಅಭಿವೃದ್ಧಿಯನ್ನು ಹೊಂದು : ಪಾಡಿವದೆಳವೆಱೆ ಪುಣ್ಣಿಮೆವರೆಗಂ ರೂಡಿಸಿ ದಿನದಿನದಪ್ಪದೆ ಕಲೆಯೊಳ್ ಕೂಡಿ ಬಳೆದು (ಜಯಂಕಾ. ೨-೬೩). ೩. ಕಲ್ಪಿಸು ; ಏರ್ಪಡಿಸು : ಮೋಡಿಯಱಿದು ದ್ವೊರೆದೊರೆಗಳ್ಗ ಮನೆಗಳ ರೂಡಿಸಿರ್ದನು ವಿಶ್ವಕರ್ಮ (ಭರತ. ೨೨-೭೩). ೪. (ಆಸ್ತಿ ಮುಂತಾದುವನ್ನು) ಗಳಿಸು ; ಸಂಪಾದಿಸು : ಆತ ಮನೆಬಾಗಿಲು ಚೆನ್ನಾಗಿ ರೂಡಿಸಿಕೊಂಡಿದ್ದಾನೆ (ರೂಢಿ). [ರೂಡಿ + –ಇಸು₃]

**ರೂಢ** (ಗು). ೧. ಹತ್ತಿದ ; ಏರಿದ. ೨. ಹುಟ್ಟಿದ ; ತಲೆದೋರಿದ. ೩. ಬೆಳೆದ ; ವೃದ್ಧಿಯಾದ. ೪. ದೊಡ್ಡ ; ಬೃಹತ್ತಾದ. ೫. ಎಲ್ಲರಿಗೂ ತಿಳಿದ,–ವಿದಿತವಾದ. ೬. ಪ್ರಸಿದ್ಧವಾದ ; ಖ್ಯಾತವಾದ. ೭. ಪದ್ಧತಿಯ ; ಬಳಕೆಯ. (ನಾ). ೮. [ವ್ಯಾಕ] ಪದಗಳಿಗೆ ಇರುವ ವಾಚ್ಯಾರ್ಥವಲ್ಲದ ಅರ್ಥ,– ಪ್ರಸಿದ್ಧವಾದ ಅರ್ಥ ಅವಯವಾರ್ಥವಿಲ್ಲದೆಯೂ . . . ಪ್ರಸಿದ್ಧವಾದರ್ಥವು ರೂಢವು (ಹೊಸಗ. ೧೬೦); ಪದಗಳ ವಿಭಾಗವನ್ನು ಯೋಗ, ರೂಢ, ಯೋಗರೂಢ ಮೊದಲಾದ ಭೇದಗಳಿಂದ ವಿಭಾಗಮಾಡುವರು (ಹಿಂದಶಾ. ೦೯೭). [ಸಂ.]

**ರೂಢಗೊಳಿಸು** (ಕ್ರಿ). ಬಳಕೆಗೆ ತರು ; ರೂಢಿಯಲ್ಲಿರುವಂತೆ ಮಾಡು : ಮೊದಲಿನ ಕನ್ನಡಕವಿಗಳೆಲ್ಲ ಜೈನರಾಗಿದ್ದುದರಿಂದ ಚಂಪೂರೂಪವನ್ನು ಕಲ್ಪಿಸಿ ಕನ್ನಡದಲ್ಲಿ ಅವರೇ ರೂಢಗೊಳಿಸಿದರೆಂದು ತೋರುತ್ತದೆ (ಕಪೂ. ೪೦). [ರೂಢ + ಕೊಳ್₁ + – ಇಸು₃]

**ರೂಢನಾಮ** (ನಾ). ೧. ರೂಢಿಯಿಂದ ಬಂದ ಹೆಸರು ; ಖ್ಯಾತನಾಮ: ಈ ನಾಡ ಪ್ರಭುಗಳೆಲ್ಲರಿಗೂ ಚಿಕ್ಕಪ್ಪಗೌಡರೆಂಬುದು ರೂಢನಾಮವಾಗಿತ್ತು (ನೆಗಳ್ತೆಂಬ. ೬೨). ೨. [ವ್ಯಾಕ] ನಾಮಪದದಲ್ಲಿ ಒಂದು ಬಗೆ ; ನಿಷ್ಪತ್ತಿಗೆ ಒಳಪಡದೆ, ರೂಢಿಯಿಂದ ಅರ್ಥವನ್ನು ಹೊಂದುವ ಪದ ; ಬಳಕೆಯಿಂದ ಅರ್ಥಪಡೆಯುವ ಪದ : ರೂಢನಾಮಮೆಂದುಂ, ಅನ್ವರ್ಥನಾಮಮೆಂದುಂ, ಅಂಕಿತನಾಮಮೆಂದುಂ, ನಾಮಂ ಮೂದೆಱನಾಗಿರ್ಪುದು (ಶಬ್ದ. ೭೭ ವೃತ್ತಿ) ; ಗಂಡಸು, ಹೆಂಗಸು, ನೆಲ . . . ಇವು ಆಯಾ ಪದಾರ್ಥಗಳಿಗೆ ಹಿಂದಿನಿಂದಲೂ ರೂಢಿಯಾಗಿ ಬಂದಿರುವ ಹೆಸರನ್ನು ಹೇಳುತ್ತವೆ. ಇಂಥ ನಾಮವಾಚಕಗಳಿಗೆ ರೂಢನಾಮಗಳೆಂದು ಹೆಸರು (ಮಧ್ಯಕು. ೨೫). [ಸಂ. ರೂಢನಾಮನ್]

**ರೂಢಬುದ್ಧಿ** (ನಾ). ವ್ಯಾವಹಾರಿಕ ಬುದ್ಧಿ : ಸಹಜವಾದ ಅರಿವು : ಯಾವ ಮಾತು – ಸಂದರ್ಭಗಳಲ್ಲಿ ರೂಢಬುದ್ಧಿಗೆ ಅಶ್ಲೀಲತೆಯ ಧ್ವನಿಯು ಹುಟ್ಟಬಹುದೋ ಅಂಥ ಮಾತು . . . ಅವರದು (ವಿಶಾವಂ. ೦೦೦). [ಸಂ.]

**ರೂಢಮೂಲ** (ಗು). ಬಹಳಕಾಲದಿಂದ ಬಳಕೆಯಲ್ಲಿರುವ; ಅನೂಚಾನವಾದ : ತರಗತಿಯ ಪಾಠಗಳೇ ಶಿಕ್ಷಣದ ಸರ್ವಸ್ವವೆಂದು ರೂಢಮೂಲವಾಗಿರುವ ಭಾವನೆ ಹೋಗಬೇಕು (ಶಿಕ್ಷದ. ೦೫೭). [ಸಂ.]

**ರೂಢಿ** (ನಾ). ೧. ಭೂಮಿ ; ಧರೆ : ರೂಢಿಗೆ ರೂಢಿವೆತ್ತೆಸೆವ ಬೆಳ್ವಲದೇಶಮನಾಳ್ದ ಗಂಗಪೆರ್ಮ್ಮಾನಡಿಗಳಿಂದಂ (ಎಇ. XV, ೩೪೦-೦೬ ; 1071) ; ಅವಿವೆನ್ನದೆ ರೂಢಿಯ ತಾಣಮೆಲ್ಲಮಂ ತೀರ್ಥಕರರ ಕೇವಳಿಗಳ ಮುನ್ನೆ ವಿಹಾರಿಸಿದೆಡೆಗಳಿವೆಲ್ಲಮೆಂದು ವಂಬುವುದು (ಸಮುಶ. ೨-೭೩). ೨. ಲೋಕದ ಜನ ; ಜನತೆ : ವರಶಿಶುವ ನಲಿದಾಡಿಸುವ ರೂಢಿಯಿಲ್ಲೆಂದು ನೆಱೆ ನೊಂದು ಮಱುಗುವಳು (ಕೃಬಿಶಾ. ೨೬-೦೬). ೩. ಪ್ರಸಿದ್ಧಿ ; ಕೀರ್ತಿ : ಅಗ್ಗಳಿಸಿರ್ದ ರೂಢಿ ತನ್ನೊಳಮದ್ರ್ಕೊಟ್ಟರೆ (ಎಕ. V, ಬೇಲೂರು. ೦೭–೫೬ ; 1136); ರೂಢಿಯೊಳೆಯುಕಾಱನರ್ಜುನನಾಡ ಪತಿಕರಿಸುವನು ನೀನದ ನೋಡಿ ಸಂತಸಬಡು (ಕುಮಾವ್ಯ. ೯-೦೩). ೪. ವಾಡಿಕೆ ; ಬಳಕೆ ; ಅಭ್ಯಾಸ : ಸಕಳವ್ಯಾಕರಣಾರ್ಥಶಾಸ್ತ್ರ . . . ಶಕುನಾದಿ ಪ್ರೌಢಿಯೊಳ್ ರೂಢಿಯಾಯ್ತು ಕುಮಾರಂಗೆ (ಕುಸ್ಕೃ. ೦೨-೬೯) ; ಇದು ರೂಢಿಯ ಮಾತು (ಕೀಶಾಕ. ೦೬೦) ; ರೂಢಿ ಇಲ್ಲದ ಪದ ಹಾಡಿದರೆ ತಿಳಿದಾನೆ ? (ಗಾದೆ). ೫. [ಕಾವ್ಯಮಿ] ಶಬ್ದಗುಣಗಳಲ್ಲಿ ಒಂದು ; ಹೆಚ್ಚು ಪ್ರಚಾರದಲ್ಲಿರುವುದು : ಶ್ಲೇಷ, ಲಾಲಿತ್ಯ . . . ರೂಢಿ, ಯೌಗಿಕೀ – ಇವು ಏಳೂ 'ಶಬ್ದಗುಣ'ಗಳು (ಶ್ರೀವಿ. ೨೩೨ ಅವ). [ಸಂ.]

**ರೂಢಿತ** (ಗು). ಏರಿದ ; ಹತ್ತಿದ : ಉಮಾಕಾಂತೆಯು ಮಹೇಶ್ವರನು ಮಾನಿತೋನ್ನತ ದಿವ್ಯರತ್ನವಿಮಾನರೂಢಿತಯಾನರಾಗಿ ಸುಮಾನದಿಂ ಗಮನಿಸುತ (ಬಸವು. ೫೦-೨). [ಸಂ.]

**ರೂಢಿಪ** (ನಾ). ಭೂಮಿಯ ಒಡೆಯ ; ರಾಜ : ರೂಢಿಪ ದಾನಚಿಂತಾಮಣಿ ಜಯತೆಂದು ಪಾಡಿದರು (ಕಂಸವಿ. ೬-೯೦). [ಸಂ.]

**ರೂಢಿಪತಿ** (ನಾ). = ರೂಢಿಪ : ಅರಸನಂ ಕೊಲ್ವೆನೆಂದಾಯುಧವ ಭರದಲುಗಿದು ರೂಢಿಪತಿಯಂ ಪೊಯ್ವೆನೆಂದು ಬರೆ (ಕುರಂಗ. ೬೪-೪೨) ; ನಾಡೆಂಬ ದೇಹಕ್ಕೆ ರೂಢಿಪತಿಯೇ ಪ್ರಾಣ (ಶಿಶಾವಂ. ೨೦). [ಸಂ.]

**ರೂಢಿಮಾತು** (ನಾ). ಜನಬಳಕೆಯ ಮಾತು,– ನುಡಿ : ಗಾಡಿಕಾಱ ಕೃಷ್ಣ ನಿನ್ನ ಬೇಡಿಕೊಂಬೆ ಬಾರೋ ರೂಢಿಮಾತನಾಡ ಸರ್ವರೂಢಿಗೊಡೆಯ ಬಾರೋ (ಪುರಂದ. ಧಾ. ೧-೬೦-೨). [ರೂಢಿ + ಮಾತು₁]

**ರೂಢಿಲಕ್ಷಣೆ** (ನಾ). [ಕಾವ್ಯಮಿ] ಲಕ್ಷಣಾವೃತ್ತಿಯಲ್ಲಿ ಒಂದು ವಿಧ ; ರೂಢಿಯಿಂದ ಬಂದ ವಾಚ್ಯಾರ್ಥವನ್ನು ತ್ಯಜಿಸಿ ಬೇರೆ ಅರ್ಥವನ್ನು ಹೇಳುವುದು : ಪ್ರಯೋಜನವಿರಹಿತವಾಗಿ ಪರಿಣಮಿಸಿದ ಇಂಥ ವ್ಯಾಪಾರವನ್ನು "ರೂಢಿಲಕ್ಷಣಾ" ಎಂದು ಕರೆಯುತ್ತಾರೆ. ಭಾಷಾಪಥದ ಉದ್ದಕ್ಕೂ ರೂಢಿಲಕ್ಷಣೆಯ ನಿದರ್ಶನಗಳು ಕಿಕ್ಕಿರಿದಿವೆ (ಶಾರಮಿ. ೨೫೬).

[ಸಂ. ರೂಢಿಲಕ್ಷಣಾ]

**ರೂಢಿವಡೆ** (ಕ್ರಿ). ೧. ಪ್ರಸಿದ್ಧಿಯನ್ನು ಪಡೆ ; ಹೆಸರುವಾಸಿಯಾಗು : ವೀರದೊಳುಕ್ಕಿ ಮಚ್ಚರಿಸಿ ಕೋಪದೆ ಜೈನನೆ ಕಾದಿ ಸತ್ತು ವೈಲಾರನೆನಲ್ಕೆ ರೂಢಿವಡದಂ (ಸಮುಶ. ೨-೭೦) ; ರೂಢಿವಡೆದ ನೃಪಾಲಕರ ನೆಲೆವಾಡ . . . ಚೆಲುವಿಕೆಯನೀವುವು ನೋಡುವರ ಕಂಗಳಿಗೆ (ಜಾಶ್ವಶಾ. ೨-೯). ೨. ಅತಿಶಯವಾಗು : ರೀತಿ ನೂತನವಾಗೆ ಗದ್ಯಪದ್ಯಕಾವ್ಯಕಳಾಪ್ರೌಢಿ ರೂಢಿವಡೆಯೆ ಮೆಱೆದಿರ್ದ ಸರಸಕವಿಗಳ ಸಂದಣಿಯೊಳಂ (ಗಿರಿ. ೨-೦೦೩ ವ).

[ ರೂಢಿ + ಪಡೆ₁ ]

**ರೂಢಿವಿಡಿ** (ಕ್ರಿ). = ರೂಢಿವಡೆ ೨ : ನೋಡಲು ನರಜನ್ಮದೊಳಗಿಂತು ಸೊಬಗಿನ ರೂಢಿವಿಡಿದ ನೀಱರುಂಟೆ (ಕಂಸವಿ. ೯-೦೦೩).

[ ರೂಢಿ + ಹಿಡಿ₁ ]

**ರೂಢಿವೆಱು** (ಕ್ರಿ). ಪ್ರಸಿದ್ಧಿಯನ್ನು ಹೊಂದು; ಕೀರ್ತಿಯನ್ನು ಪಡೆ : ಭಾಸುರವೆನಿಸಿರ್ದ ದೇವನಿಳಯಂಗಳನೇಳಿಸಿ ರೂಢಿವೆತ್ತನಂ ಪುರವಧುಗಾಸೆಗೆಯ್ಕೆ ಕಿಡುಗುಂ (ಸಮುಶ. ೫-೬೯) ; ಕೆಲವು ಸಕ್ಕದದ ಮಾಱುಲಿಂಗವುಂ

ರೂಢಿವೆತ್ತ ಕರ್ಣಾಟಕದೊಳ್ ನಿಲೆ (ಕವಿರಾ. ೦೩೩) ; ಆ ರೂಢಿವೆತ್ತ ಮಹಾಭಾರತದೊಳ್ . . . ಕಥೆಯೊಂದುಂಟು (ಹರಿಶ. ೨-೨೯).

[ ರೂಢಿ + ಪೆಱು$_1$ ]

**ರೂಢಿಸು** (ಕ್ರಿ). ೧. ಹೆಚ್ಚಾಗು ; ಅಧಿಕ್ಯವನ್ನು ಹೊಂದು : ತಿರುಗುವ ಮೃಗಂಗಳ್ ದುಷ್ಟಮೃಗಮಲ್ಲಿ ವೃಕ್ಷಮೇ ಬೆಂದ ಕೊಱಡು ರೂಢಿಸುವ ಝಳವುಲಿವ ಬಿಱುಗಾಳಿ ಬಿಱುಬಿನಿಂ ಕಾಡುತಿಹ ಯಮದೂತರ್ (ಶಂಕ್ರ. ೩೬-೨೩). ೨. ಪ್ರಸಿದ್ಧಿಯಾಗು ; ಖ್ಯಾತಿಹೊಂದು : ರೂಢಿಸಿದ ಸರ್ವೋಹನಾಸ್ಪದ ಪಾಡಱಿದು ಕಲಿಪಾರ್ಥಗಿತ್ತನು (ಸಂಭಕ. ೨೭-೭). ೩. ನೆಲಸು ; ಇರು : ಸುಡುಗಾಡ ಬೂದಿಯನೊಂದು ಶುನಿ ಮೆಟ್ಟಿಯೋಡುತುಂ ಬೇಡವಣೆಯೊಳ್ ಬೂದಿ ಪೊರೆದ ಕಾಲೂಱಲಾ ಬೂದಿ ಬೇಡನ ಪಣೆಯೊಳು ರೂಢಿಸಿರೆ (ಬಕೋಶ. ೦೩-೦೦೩).

**ರೂಢಿಸಿಕೊಳ್ಳು**=ಒಗ್ಗಿಸಿಕೊಳ್ಳು; ಅಭ್ಯಾಸಮಾಡಿಕೊಳ್ಳು : ನಾನು ಲೇಖನ ಬರೆಯಲು ರೂಢಿಸಿಕೊಳ್ಳಲೇಬೇಕು (ಇಶ್ಟ. ೨೬೩); ಕಾಲಕ್ಕೊಪ್ಪುವ ತತ್ತ್ವದೃಷ್ಟಿಯನ್ನು ರೂಢಿಸಿಕೊಳ್ಳುವ ಯತ್ನ . . . ಕಂಡುಬಂದಿದೆ (ತತ್ತ್ವದ. V. ಮುನ್ನುಡಿ). [ರೂಢಿ + – ಇಸು$_3$]

**ರೂಪ** (ನಾ). ೧. ಆಕಾರ ; ಆಕೃತಿ ; ಪರಿಜು : ವಿವರಿಸಲ್ ಸ್ಥೂಲವೆನಿಸುವ ದ್ರವ್ಯವೇ ರೂಪವುವಿರತಂ ಪ್ರವಿವಿಕ್ತವೆನಿಪುದೇ ರುಚಿ (ಅಶಿಸಂ. ೩೩-೩೬) ; ರೂಪವಾಗಬಲ್ಲ ಅರೂಪವಾಗಬಲ್ಲ ರೂಪ ಅರೂಪವೆರಡೊಂವಾಗಬಲ್ಲ (ಪುರಂದ. ದಾ. ೪-೦೪೦-೦) ; ಜಗತ್ತೆಂಬುದು ಅಸ್ತಿ (ಇದೆ), ಭಾತಿ (ತೋರುತ್ತದೆ), ಪ್ರಿಯ (ಬೇಕೆನಿಸುವುದು), ನಾಮ (ಹೆಸರು), ರೂಪ (ಆಕಾರ) ಈ ಐದಂಶಗಳನ್ನು ಕೂಡಿದೆ (ಅಮೃತ. ೭-೦೭ ಟೀಕು). ೨. ಚೆಲುವು ; ಸೌಂದರ್ಯ : ವಸ್ತುವಿನಲ್ಲಿ ಸೌಂದರ್ಯದ ಆವಿರ್ಭಾವಕ್ಕೆ ಅನುಕೂಲಸ್ಥಿತಿಯೊಂದು ಮಾತ್ರ ಇರಬೇಕಾಗುತ್ತದೆ. ಇದನ್ನು ರೂಪವೆಂದು ಕರೆಯಬಹುದು (ಪಶ್ಚಾ. ೬೬). ೩. ಬಣ್ಣ ; ವರ್ಣ. ೪. ಪಶು ; ಜಾನುವಾರು : "ಮೃಗಸಮೂಹಂ ವರ್ಣ ರೂಪಾಂಕಿತಂ" (ನಾನಾಥ. ೦೨೦). ೫. ಐಶ್ವರ್ಯ; ಸಂಪತ್ತು : 'ರೂಪ' ವೆಂದರೆ ಐಶ್ವರ್ಯವೆಂದೂ ಅರ್ಥವಾಗುತ್ತದೆ (ಸೌಂದ. ೪೩ ಅಡಿ). ೬. ಪರಮಾತ್ಮನ ದಿವ್ಯರೂಪವಾದ ದೇಹ : ರೂಪವೆಂದರೆ . . . ಪರಮಾತ್ಮನ ಶುದ್ಧ ಸತ್ತ್ವದ್ರವ್ಯಮಯವಾದ ದೇಹ (ಹಿಂವಾ. ೨೪೯). ೭. ಸ್ವಭಾವ ; ಸಹಜಗುಣ. ೮. ರೀತಿ ; ವಿಧ. ೯. ಪ್ರತಿಕೃತಿ ; ಪಡಿಯಚ್ಚು. ೧೦. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: ರಸೆ ಧರೆ ಇಳೆ ರೂಪಮೈಕವೊಂದಱ ನಾಮಂ (ವ್ಯವಹಾ. ೯). ೧೧. [ಕಾವ್ಯಮೀ] ದೃಶ್ಯಕಾವ್ಯ ; ರೂಪಕ. ೧೨. [ವ್ಯಾಕ] ಪ್ರಕೃತಿ ಅಥವಾ ಧಾತುಗಳಿಗೆ ಪ್ರತ್ಯಯವು ಸೇರಿ ಆಗುವ ಸ್ವರೂಪ: ಬೆಳ್, ಪೊಸ ಮೊದಲಾದ ಪ್ರಕೃತಿಗಳಿಗೆ ದು ತುಗಳು ಸೇರಿ ಬಿಳಿದು ಪೊಸತು ಮೊದಲಾದ ರೂಪಗಳು ಬಂದಿವೆ (ಕೈಪಿಡಿ. ೦೪). ೧೩. [ತರ್ಕಶಾ] ವೈಶೇಷಿಕದ ಇಪ್ಪತ್ತುನಾಲ್ಕು ಗುಣಗಳಲ್ಲಿ ಒಂದು. [ಸಂ.]

**ರೂಪಂದಳೆ** (ಕ್ರಿ). ರೂಪವನ್ನು ತಾಳು ; ಆಕಾರವನ್ನು ಧರಿಸು : ಪಂಚೇಂದ್ರಿಯವೃತ್ತಿಗಳೆ ಬೇಱೆಬೇಱೆ ರೂಪಂದಳೆದುವೆನಿಪಂಗುಳಿಗಳಿಂ ಮನಂಗೊಳಿಸುವ ಕರಕಮಲಂಗಳಂ ಚಂದ್ರಾಪೀಡಂ ನೀಡೆ (ಕಾದಂಬ. ೩೮). [ರೂಪ + ತಳೆ$_1$]

**ರೂಪಂಬೆಱು** (ಕ್ರಿ). ಚೆಲುವನ್ನು ಪಡೆ ; ಸುಂದರವಾಗು : ಗಿರಿಜೆಗುತ್ತರೋತ್ತರರೂಪಂಬೆತ್ತ ಘನಯೌವನಂ ಸಾರುತ್ತಿರ್ದಪುದು (ಗಿರಿಕ. ೪-೩೪). [ರೂಪ + ಪೆಱು$_1$]

**ರೂಪಕ** (ನಾ). ೧. ಆಕಾರ ; ಪರಿಜು. ೨. ಚೆಲುವು ; ಸೌಂದರ್ಯ ೩. ಹೋಲಿಕೆ; ಸಾದೃಶ್ಯ : ನರನಾರೀಪರಿಚುಂಬಿರೂಪಕಮದೇನಿಂಬಾಯ್ತೊ ಬಂಧೂಕಬಂಧುರಪುಷ್ಪಾಧರದಿಂದಮುಟ್ಟ ಮಧುಗಳ್ . . . ವಿಡಂಬಿಸೆ (ರೀಲಾವ. ೦೧-೬೮). ೪. ರೀತಿ ; ವಿಧ : ಆರ್ಯರು ತಮ್ಮ ಧರ್ಮಾಚರಣೆಯ ಪವಿತ್ರಪ್ರತೀಕವಾದ ಯಜ್ಞದ ರೂಪಕದಿಂದಲೇ ಪುರುಷನನ್ನು ಭಾವಿಸಿ ಸೃಷ್ಟಿಯನ್ನು ವರ್ಣಿಸಿರುವುದು ಆಶ್ಚರ್ಯವೇನೂ ಅಲ್ಲ (ಭಾರದ. ೨೭). ೫. ಒಂದು ರೂಪಾಯಿಯ ನಾಣ್ಯ. ೬. [ಕಾವ್ಯಮೀ] ಅಭಿನಯದ ಸಹಾಯದಿಂದ ಪ್ರದರ್ಶಿಸುವ ನಾಟಕ ಮುಂತಾದುವು ; ದೃಶ್ಯಕಾವ್ಯ : ಅಭಿನಯದ ಸಹಾಯದಿಂದ ಪ್ರದರ್ಶಿಸಲ್ಪಡಬಹುದಾದ ಕಾವ್ಯಗಳಿಗೆ ದೃಶ್ಯ (ಎಂದರೆ ನೋಡಬಹುದಾದ) ಕಾವ್ಯಗಳೆಂದೂ ರೂಪಕಗಳೆಂದೂ ಹೆಸರು (ಕೈಪಿಡಿ. ೨೦೩) ; ಪ್ರಾಚೀನ ಹಿಂದೂ ನಾಟಕವು ಅಂಗವಿನ್ಯಾಸ, ಭಂಗಿ, ವೇಷಭೂಷಣ, ನೃತ್ಯಗೀತಗಳ ಮೂಲಕ ನಿರ್ವಹಿಸಲ್ಪಡುತ್ತಿದ್ದ ಕಾರಣ, ಅದಕ್ಕೆ ರೂಪಕ ಎಂಬ ಹೆಸರೇ ಬಂತು (ಭಾರದ. ೩೪೯). ೭. ಅರ್ಥಾಲಂಕಾರಗಳಲ್ಲಿ ಒಂದು ; ಉಪಮಾನ, ಉಪಮೇಯ ವಸ್ತುಗಳನ್ನು ಒಂದರಂತೆ ಮತ್ತೊಂದು ಎಂದು ವರ್ಣಿಸದೆ ಒಂದು ಮತ್ತೊಂದು ಎಂದೇ ವರ್ಣಿಸುವುದು : ರೂಪಕಮೆಂಬುದು ಪೆಱವರ ರೂಪಾದಿಗುಣಂಗಳನಭೇದೋಕ್ತಿಗಳಿಂ ರೂಪಿಸುವುದಿಂತು ಬಾಹುಲತಾಪಾದಾಂಬುಜಮುಖೇಂದುನಯನಾಳಿಗಳಿಂ (ಕವಿರಾ. ೩-೦೨) ; ಪ್ರತಿವಸ್ತೂಪಮೆ ಸಾಮ್ಯಪ್ರತೀತಿಯಿಂದಂ ಸಮಾನವಸ್ತುನ್ಯಸನಂ ಪ್ರತಿಪಾದಿಸುವುದಭೇದಾತ್ಮತೆಯಿಂದುಪಮೆಯನದಲ್ತೆ ರೂಪಕಮಕ್ಕುಂ (ಕಾವ್ಯಾವ. ೬೬೩). ೮. ಒಂದು ವಿಷಯವನ್ನು ಮನಸ್ಸಿಗೆ ನಾಟುವಂತೆ ಅದೇ ರೀತಿಯ ಮತ್ತೊಂದು ವಿಷಯದ ಮೂಲಕ ಹೇಳುವ ಕಥನ : ಈ ಹೊಸ ಅರ್ಥದಲ್ಲಿ 'ರೂಪಕ' ಎಂಬುದು ಇಂಗ್ಲಿಷಿನ 'ಎಲಿಗರಿ' (Allegory) ಎಂಬುದಕ್ಕೆ ಪರ್ಯಾಯವಾಗಿದೆ (ಶ್ರೀಕೃಷ್ಣ. ೦೦೬). ೯. [ಸಂಗೀತ]ಒಂದು ಬಗೆಯ ತಾಳ : ಧ್ರುವ ಮಠ್ಯ ರೂಪಕ . . . ಎಂಬ ಸಪ್ತತಾಳಭೇದಂಗಳ್ (ಬಿವೇಕ. ೨೩೮); ಏಕತಾಳ ತ್ರಿಪುಟೆ ರೂಪಕ ಹೀಗೆ ಆರೆಂಟು ತಾಳಗಳನ್ನು . . . ಅನುಕರಿಸಬಹುದು (ಶಾಂಶ್ರ. II. ೯೮೦). "ಅತ್ಯಲಂಕಾರದೊಳು ನಾಟ್ಯದೊಳು ಧೂರ್ತನೊಳು ಕಾವ್ಯದೊಳು ತಾಳಮಾನದೊಳು ರೂಪಕಮೆಂಬ ನಾಮಮಕ್ಕುಂ" (ಶುಂಗರಾ. ೦೩೩-೬೨). [ಸಂ.]

**ರೂಪಕತಾಲ, ರೂಪಕತಾಳ** (ನಾ). = ರೂಪಕ ೯. **ರೂಪಕತಾಳ** : ಧ್ರುವತಾಳ, ಮಠ್ಯತಾಳ, ರೂಪಕತಾಳ . . . ಏಕತಾಳ ಇವೇ ಸೂಳಾದಿ ಸಪ್ತತಾಳಗಳು (ಸಂಗೀಶಂ. ೩೯); ಅಲ್ಲಿ ಪದ್ಯದಲ್ಲಿ ಬರುವ ಗಣಗಳು ಮೂರು ಮಾತ್ರೆಯವಾದರೆ ರೂಪಕತಾಳವಾಗುವುದು (ಸಂಕೋರ. ೧೨೦). [ಸಂ.]

**ರೂಪಕತಾಳ** ' ರೂಪಕತಾಲ ' ನೋ.

**ರೂಪಕರೂಪಕ** (ನಾ). [ಕಾವ್ಯಮೀ]ರೂಪಕದಲ್ಲಿ ಒಂದು ಬಗೆ; ಒಂದು ರೂಪಕವನ್ನು ಮತ್ತೊಂದು ರೂಪಕವನ್ನಾಗಿ ಭಾವಿಸಿ ಅತಿಶಯತೆಯನ್ನುಂಟುಮಾಡುವುದು : ರೂಪಕರೂಪಕಕ್ಕೆ–ತರುಣಿಯ ಮುಖೇಂದು ಕಮಲಾಕರದೊಳ್ ದೃಗ್ಗೋಳಕಾಂತಿ ನೀಳಾಬ್ಜಮಳಂಕರಿಸೆ ಪಿಟರಾಹು ಭೃಂಗಂ ಬರೆ ಪೀರ್ದತ್ತಧರಚಂದ್ರಿಕಾಪರಿಮಳಮಂ (ಕಾವ್ಯಾವ. ೬೪೪). [ಸಂ.]

**ರೂಪಕಾತಿಶಯೋಕ್ತಿ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ಬಗೆ: ಉಪಮಾನೋಪಮೇಯಗಳಲ್ಲಿ ಉಪಮೇಯವನ್ನು ಹೇಳದೆ ಇದ್ದರೂ ಅದು ಗಮ್ಯವಾಗಿ ಅದಕ್ಕೂ ಉಪಮಾನಕ್ಕೂ ಅಭೇದವು ಕಂಡುಬರುತ್ತಿದ್ದರೆ ಅದು ' ರೂಪಕಾತಿಶಯೋಕ್ತಿ ' (ಕೈಪಿಡಿ. ೨೬೬). [ಸಂ.]

**ರೂಪಕಾಪಹ್ನುತಿ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ಬಗೆ : ವದನಮಿದಲ್ತಂಬುರುಹಂ ಮದಲೋಲವಿಲೋಚನಂಗಳಲ್ಲಮಿವಳಿಗಳ್ ಮುದಮಲ್ಲಿದು ವಿಕಸನಮೆಂಬಿದನಿಂ[ಬೆ]ನೆ ಬಗೆಗೆ ರೂಪಕಾಪಹ್ನುತಿಯಂ (ಕವಿರಾ. ೩-೨೪). [ಸಂ.]

**ರೂಪಕಾಲಂಕಾರ** (ನಾ). = ರೂಪಕ ೭ : ಉಪಮಾನ ಉಪಮೇಯ ವಸ್ತುಗಳನ್ನು 'ಒಂದರಂತೆ ಮತ್ತೊಂದು ಇದೆ' ಎಂದು ಅವುಗಳ ಹೋಲಿಕೆ ಕಾಣುವಂತೆ ವರ್ಣಿಸದೆ 'ಒಂದು ಮತ್ತೊಂದೆಯೇ' ಎಂದು ವರ್ಣಿಸಿದರೆ ಅದು ರೂಪಕಾಲಂಕಾರವಾಗುತ್ತದೆ (ಕೈಪಿಡಿ. ೨೬೩). [ಸಂ.]

**ರೂಪಗೊಳಿಸು** (ಕ್ರಿ). ರೂಪಿಸು ; ರಚಿಸು : ದೇಶಾಂಗೀಕೃತವನ್ನು ರೂಪಗೊಳಿಸುವುದಕ್ಕಾಗಿ ಮಂತ್ರಿಸಂಪುಟ (ಅಕ್ಕಾ. ೩೬). [ರೂಪ + ಕೊಳ್₁ + –ಇಸು₃]

**ರೂಪಗೊಳ್ಳು** (ಕ್ರಿ). ಆಕಾರವನ್ನು ತಾಳು; ರಚನೆಯಾಗು: ಈ ಸ್ವಭಾವ ಗುಣ ನಮ್ಮ ಜನದಲ್ಲಿ ರೂಪಗೊಂಡಿತ್ತು (ಅಕ್ಕಾ. ೦೩); ಗಿಡದ ಆರೈಕೆಯನ್ನು ಅನುಸರಿಸಿ ಕಾಯಿಗಳ ಗಾತ್ರ ರೂಪಗೊಳ್ಳುತ್ತೆ (ತರಕಾ. ೨೩). [ರೂಪ + ಕೊಳ್ಳು₁ (< ಕೊಳ್₁)]

**ರೂಪಚಿತ್ರ** (ನಾ). [ಚಿತ್ರಶಾ] (ಮೂಲವಸ್ತುವಿನ) ಆಕಾರದ ಪ್ರತಿಕೃತಿ : ಈತನಕ ಯೂರೋಪಿನ ಚಿತ್ರಕಾರರು ರೂಪಚಿತ್ರದ ಹಾದಿಯನ್ನು ಹಿಡಿದಿದ್ದರು (ಪಾಶ್ಚಕ. II, ೬೨೬). [ಸಂ.]

**ರೂಪಜೀವನೆ** (ನಾ). ಸೌಂದರ್ಯದಿಂದ ಜನರನ್ನು ವಶಪಡಿಸಿಕೊಂಡು ಜೀವಿಸುವವಳು ; ಸೂಳೆ ; ವೇಶ್ಯೆ : "ರೂಪಿಣೀ, ರೂಪಜೀವನಾ, ಈ ೨ ಸೂಳೆ" (ಶಾಕೈ. ೨೯೦). [ಸಂ. ರೂಪಜೀವನಾ]

**ರೂಪಜೀವೆ**, ರೂಪುಜೀವೆ (ನಾ).= ರೂಪಜೀವನೆ : "ರೂಪಜೀವಾ, ವೇಶ್ಯಾ, ಗಣಿಕಾ, ಪಣ್ಯಾಂಗನಾ, ಕ್ಷುದ್ರಾ – ಈ ೫ ಸೂ(ಟ)ಳೆ" (ಶಬ್ದಮು. ೬೦–೩೩೬); ಸೊಬಗಾಂತಿಕ್ಕುಚಾಪನಾಡುಂಬೊಲದಂತೆಸದಿಹ ವಲ್ಲಿ ರೂಪ[ಪಾಠಾಂ. ಪು]ಜೀವೆಯರ ಕೇರಿಗಳು (ರಾಜಶೇ. ೩-೯೩). **ರೂಪುಜೀವೆ** : ದೂತಿಯರು ನೆಟ್ ಕಾಣುತಾ ರೂಪುಜೀವೆಗಡ ತೋಟಿ (ಶ್ರೀಶಚಾ. ೯-೦೯). [< ಸಂ. ರೂಪಾಜೀವಾ]

**ರೂಪಣ** (ನಾ). ೧. ಆಕಾರವನ್ನು ಕೊಡುವಿಕೆ ; ರೂಪಿಸುವಿಕೆ. ೨. ಚಿತ್ರಣ ; ಚಿತ್ರಿಸುವಿಕೆ : ಈ ವ್ಯಕ್ತಿತ್ವದ ರೂಪಣದಲ್ಲಿ ಒಂದು ದಿವ್ಯ ಸಂಕಲ್ಪದ ಅಮೃತಸಂಸ್ಪರ್ಶವನ್ನು ಸ್ವಾಮಿದಾಸರು ಅನುಭವಿಸಿದ್ದರು (ನವಜೀ. ೦೦೬೭). ೩. ಹೇಳುವುದು; ತಿಳಿಸುವಿಕೆ. [ಸಂ.]

**ರೂಪದ್ವಿತ್ವ** (ನಾ). ಒಂದು ಪದವನ್ನು ಎರಡು ಸಲ ಹೇಳುವುದು; ದ್ವಿರುಕ್ತಿ: ಚಾಪಲ ವೀಪ್ಸಾಭೀಕ್ಷ್ಣ್ಯ ಸಮೀಪಾನುಕೃತಿ ಕ್ರಿಯಾಸಮಭಿಹಾರಾದಿ ಜ್ಞಾಪನೆಯೊಳ್ ಪದಕಕ್ಕುಂ ರೂಪದ್ವಿತ್ವಂ ಯಥಾಪ್ರಯೋಗಾನುಗತಂ (ಶಾಬ್ದ್ಯಾಕ. ೨೮೭). [ಸಂ.]

**ರೂಪಧಾರಿ** (ನಾ). ರೂಪವನ್ನು ಧರಿಸಿದವನು ; ಆಕಾರವನ್ನು ತಾಳಿರುವವನು : ಲಾವುಕ ಸಿಂಹ ಕೇಕಿ ವಾನರ ಮೃಗರೂಪಧಾರಿ ಸುರಕೋಟಿ ವಿನೋದದ ತೋಟಿಯೊಳ್ ಚರಾಚರಗುರುವಿಂಗೆ ಪೊಟ್ಟುಗಳೆಯುತ್ತಿರೆ (ಶಾಂತಿಪು. ೦೦-೯೦). [ಸಂ. ರೂಪಧಾರಿನ್]

**ರೂಪನಿಧಾನ** (ನಾ). ಚೆಲುವಿನ ಕಣಿಯಂತಿರುವವನು; ಸುಂದರ : ನೀರೊಳಗಳ್ಕಿದ ನೆವದಿಂದಾ ರೂಪನಿಧಾನನಂ ಮೃಗಾಕ್ಷಿಯರಪ್ಪರ್ ಸಾರೆ ಬಿಡುತಂದು ಕೂಡಲ್ (ಶಾಂತಿಪು. ೬-೯೭). [ರೂಪ+ ನಿಧಾನ₁]

**ರೂಪನಿಷ್ಪತ್ತಿ** (ನಾ). ೧. ಆಕಾರವು ಹುಟ್ಟುವಿಕೆ ; ರೂಪವು ಕಾಣಿಸುವಿಕೆ : ಸಾಮಾನ್ಯನಯನಗಳಿಗೆ ಬೇಕಾದುದು ಬರಿ ಬೆಳಕಲ್ಲ – ಕತ್ತಲು ಬೆಳಕಿನ ಸರಿಬೆರಿಕೆ. ಅಲ್ಲಿಯೆ ಸಾಮಾನ್ಯರಿಗೆ ರೂಪನಿಷ್ಪತ್ತಿ (ಸಾಹಿಪಿ. ೩೩). ೨. ಆಕಾರವನ್ನು ಚಿತ್ರಿಸುವಿಕೆ ; ಚಿತ್ರವನ್ನು ಬರೆಯುವಿಕೆ : ಅವನ ಕರ್ಮಕೌಶಲ್ಯವೆಲ್ಲವೂ ರೂಪನಿಷ್ಪತ್ತಿಯಲ್ಲಿ ತಲ್ಲೀನವಾಗಿತ್ತು (ಹಂಪೆಹ. ೩೦). ೩.[ವ್ಯಾಕ] ಶಬ್ದಗಳು ಈಗಿನ ರೂಪವನ್ನು ಹೇಗೆ ಪಡೆದುವು ಎಂದು ಗುರುತಿಸುವುದು,—ನಿರೂಪಿಸುವುದು : ಹಿಂದಿನ ಪ್ರಕರಣಗಳಲ್ಲಿ ಪದಗಳ ರೂಪನಿಷ್ಪತ್ತಿಯನ್ನೂ ಅವುಗಳ ಪ್ರಯೋಗದ ಸಾಮಾನ್ಯಾಂಶಗಳಲ್ಲಿ ಕೆಲವನ್ನು ಹೇಳಿದೆ (ಕೈಪಿಡಿ. ೩೩); ಕೆಮ್ಮಣ್ಣು, ಕೇಸಕ್ಕಿ . . . ಇವುಗಳ ರೂಪನಿಷ್ಪತ್ತಿಯನ್ನು ದೊಡ್ಡ ವ್ಯಾಕರಣಗಳಿಂದ ತಿಳಿದುಕೊಳ್ಳಬೇಕು (ಮಧ್ಯಕೆ. ೦೪೬). [ಸಂ.]

**ರೂಪಪರಾವರ್ತನ** (ನಾ). ರೂಪವನ್ನು ಬದಲಾಯಿಸಿಕೊಳ್ಳುವುದು ; ರೂಪಾಂತರ : ಅಜ್ಞಾತವಾಸಕ್ಕೆ ಚಿಂತಿಪೊಡಿನ್ನನ್ನವು ಕಾಣಮಿಲ್ಲದೆಟೆ ನುಂತಾರ್ಗಪ್ಪೊಡಂ ಮಿಕ್ಕ ರೂಪಪರಾವರ್ತನದಿಂ ವಿರಾಟಪುರವಂ ಪೊಕ್ಕರ್ದದಂ ನೀಗೆವೇ (ಪಂಪಭಾ. ೬-೩೦). [ಸಂ.]

**ರೂಪಪರಾವರ್ತನವಿದ್ಯೆ** (ನಾ). ಶರೀರಾಕೃತಿಯನ್ನು ಮಾರ್ಪಾಟು ಮಾಡುವ ವಿದ್ಯೆ ; ರೂಪವನ್ನು ಬದಲಾವಣೆ ಮಾಡುವ ವಿದ್ಯೆ : ರೂಪಪರಾವರ್ತನವಿದ್ಯೆಯಿಂ ತುರಗರೂಪಾದಂ ಚರಂ ಖೇಚರಂ (ಪಂಪರಾಮಾ. ೯-೦೦೩) ; ತನಗೆ ವಶವಾಗಿದ್ದ ರೂಪಪರಾವರ್ತನವಿದ್ಯೆಯಿಂದ ನಾನಾ ರೂಪಗಳನ್ನು ಧರಿಸುವುದಲ್ಲದೆ . . . ಶತ್ರುಗಳನ್ನು ನಡುಗಿಸುತ್ತಾನೆ (ಪಂಪಾಂ. ೦೯೦). [ಸಂ. ರೂಪಪರಾವರ್ತನವಿದ್ಯಾ]

**ರೂಪಪರಾವರ್ತನೆ** (ನಾ). ಮಾರ್ಪಾಟು; ಬದಲಾವಣೆ; ರೂಪಾಂತರ: ಉದಾತ್ತಗುಣಸನ್ನಿಕರ್ಷದಿಂದ ಪ್ರಮಿತ್ಯೂಸನ ಪಾತ್ರದ ರೂಪಪರಾವರ್ತನೆ ಅದ್ಭುತವಾಗಿ ನಡೆದಿದೆ (ಐರ್ಪಶ್ರ. VI. ಮುಖ್ಯಬ). [ಸಂ. ರೂಪಪರಾವರ್ತನ]

**ರೂಪಪಲ್ಲಟ** (ನಾ). [ವ್ಯಾಕ] ಪದದ ಒಂದು ರೂಪಕ್ಕೆ ಬದಲಾಗಿ ಮತ್ತೊಂದು ರೂಪವು ಬರುವುದು : ರೂಪಪಲ್ಲಟ – (i) ಕ್ರಿಯಾಪದದ ಒಂದು ರೂಪಕ್ಕೆ ಪ್ರತಿಯಾಗಿ ಮತ್ತೊಂದು ರೂಪವು ಕೆಲವು ವೇಳೆ ಬರುವುದುಂಟು (ಕೈಪಿಡಿ. ೩೯). [ಸಂ.]

**ರೂಪಪ್ರವೀಚಾರ** (ನಾ). [ಜೈನ] ದೇವವನಿತೆಯರ ಅವಲೋಕನ ಮಾತ್ರದಿಂದಲೇ ಇಂದ್ರಿಯಜನಿತ ಸುಖವನ್ನು ಹೊಂದುವ ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠಕಲ್ಪಗಳ ದೇವತಾವರ್ಗ : ಅಲ್ಲಿಯ ದಿವಿಜರೆಲ್ಲಂ . . . ರೂಪಪ್ರವೀಚಾರರಪ್ಪರ್ (ಸುಕುಮಾ. ೦೦–೩೩ ವ). [< ಸಂ. ರೂಪಪ್ರವಿಚಾರ]

**ರೂಪಮದ** (ನಾ). ಎಂಟು ಬಗೆಯ ಮದಗಳಲ್ಲಿ ಒಂದು ; ತನ್ನ ರೂಪವೇ ಮಿಗಿಲಾದುದು ಎನ್ನುವ ಅಹಂಕಾರ : ಕುಲಮದವೊಂದು ರೂಪಮದವೊಂದು . . . ಅಲ್ಲದೆ ಬೇಟ ರಾಗವುಗ್ಗಲಿಸಿದ ದೋಷದೃಷ್ಟಿ ವಿಷಯಾತುರರೇಂ ಗಡ ಮುಂದುಗಾಣ್ಬರೇ (ಪಂಪಭಾ. ೬-೦೯) ; ಅನ್ನಮದ ಅರ್ಥಮದ ಅಖಿಳವೈಭವದ ಮದ ಮುನ್ನ ಪ್ರಾಯದ ಮದವು ರೂಪಮದವು (ಪುರಂದ. ಧಾ. ೨-೦೬-೦). 'ಅಷ್ಟಮದ' ಪರಾ. [ಸಂ.]

**ರೂಪರೇಖೆ** (ನಾ). (ಕಾರ್ಯ, ಯೋಜನೆ ಇತ್ಯಾದಿಗಳ) ಸ್ಥೂಲ ಆಕಾರ ; ಬಾಹ್ಯರೇಖೆ : ಇದರ ಪ್ರಾಚೀನತೆಯ, ಪೂರ್ವಸ್ಥಿತಿಯ ರೂಪರೇಖೆಗಳ ವಿವರಗಳು ಕತ್ತಲೆಯಲ್ಲಿ ಮುಳುಗಿಹೋಗಿರುವುದು (ದ್ರಾವಿಡಿ. ೩೦) ; ರಾಜ್ಯವ್ಯವಸ್ಥೆಯ ರೂಪರೇಖೆಯನ್ನು ಹಿಂದಿನ ಪ್ರಕರಣದಲ್ಲಿ ಕೊಂಚಮಟ್ಟಿಗೆ ನೋಡಿದ್ದಾಗಿದೆ (ರಾಜ್ಯಶಾ. ೯೩). [ಸಂ. ರೂಪರೇಖಾ]

**ರೂಪರೇಷೆ** (ನಾ). = ರೂಪರೇಖೆ : ಸಂಸ್ಥೆಯ ಕಾರ್ಯಕಲಾಪಗಳ ರೂಪರೇಷೆಯು ನಿಶ್ಚಯಿಸಲ್ಪಟ್ಟಿತು (ಮೂರುಊ. ೩ ಮುಖ್ಯಬ); ಮುಂದಿನ ಕಾರ್ಯಕ್ರಮದ ರೂಪರೇಷೆಗಳನ್ನು ಹಾಕಿಕೊಂಡನು (ಐಂಗಾಹ. ೩೯). [ಸಂ. ರೂಪರೇಖಾ]

**ರೂಪವಂತ** (ನಾ). ಚೆಲುವ ; ಸುಂದರ : ಅರಿಂದಮನು ಚಿತ್ರವನ್ನು ನೋಡಿ ರೂಪವಂತನೆಂದೂ . . . ಮನದಲ್ಲಿ ಸಿದ್ಧಾಂತವಮಾಡಿಕೊಂಡ ಬಳಿಕ . . . ಪರೀಕ್ಷಿಸಲಾರಂಭಿಸಿದನು (ಪಶ್ಚಿಶೇ. ೬೦) ; ಮನ್ಮಥನಂತಹ ರೂಪವಂತನೂ ಅಭಿಮನ್ಯುವಿನಂತಹ ವೀರನೂ ಗುಣವಂತನೂ ಉದಾರಿಯೂ ಆದವನು ತನ್ನ ಕೈಹಿಡಿದನು (ಕಾಂತಕಾ. ೨೦೬). [< ಸಂ. ರೂಪವತ್]

**ರೂಪವತಿ** (ನಾ). ಚೆಲುವೆ ; ಸುಂದರಿ : "ಸುಂದರಿ ಸುತನು ರೂಪವತಿ" (ಪಸು.ಶೀ. ೩೨-೩) ; ರೂಪವತಿ ಶಾನೇ ಶತ್ರು ಗಂಡಂಗೆ ಮೇಣ್ ಮೊದಿಗಾ ಯವ್ವನೆ ಶತ್ರುವೈ (ಸೀಪುೀತ. ೬೬) ; ವರವಚನೆ ಭಾವೆ ಸಿಂಗರಕಾರ್ತಿ ರೂಪ [ಶಾಕಾಂ. ವು]ವತಿ ಸುರತಪ್ರವೀಣೆ . . . ಕನ್ನಡಿತಿ (ಶಪವ. ೭-೯) ; ರೂಪವತಿಯಾದ ಒಂದು ಹುಡುಗಿ ಕೇರಿಯಲ್ಲಿರುವುದು ಅಪಾಯ (ದೇಪಹಂ. ೯೬). [ಸಂ. ರೂಪವತೀ]

**ರೂಪವಿಕ್ರಯಿ** (ನಾ). = ರೂಪಜೀವನೆ : ಜಯಂತ, ನಿನ್ನ ರೂಪಾ ರೂಪವಿಕ್ರಯಿಯೆಂದು ತಿಳಿಯುವೆಯಾ (ಜಯಂತ. ३०೯). [ಸಂ. ರೂಪವಿಕ್ರಯಿ]

**ರೂಪವಿದ್ಯಾಧರ** (ನಾ). ಚೆಲುವಿನಲ್ಲಿ ದೇವತೆಯಂತೆ ಇರುವವನು ; ಬಹಳ ಸುಂದರನಾದವನು : ಓರ್ವಳ್ ವಿಮುಗ್ಧೆ ರೂಪವಿದ್ಯಾಧರನ ರೂಪಾತಿಶಯವಿಲೋಕನಮಾತ್ರದಿಂ . . . ಕಂಡು ವಿಸ್ಮಯಾಪನ್ನಮಾನಸೆ ಯಾಗಿ (ಸುಕುಮಾ. ೧೧-೦೯ ಪ). [ಸಂ.]

**ರೂಪವಿದ್ಯಾಧರಿ** (ನಾ). ಚೆಲುವಿನಲ್ಲಿ ವಿದ್ಯಾಧರಸ್ತ್ರೀಯಂತೆ ಇರುವವಳು ; ಬಹಳ ಸುಂದರಿ : ವಿಶಿಷ್ಟಜನಕಾಮಧೇನು ಆಶ್ರಿತಜನ ಕಲ್ಪಲತೆ ರೂಪವಿದ್ಯಾಧರಿ ಕಲಿಕಾಲುಸರಸ್ವ[ತಿ] (ಸೌಇಂ. XX, ೭೩-೭; 1029); ಪದನಖಕೇಶಾಗ್ರಂಬರಮೊದವಿದ ಮಾನಪ್ರಮಾಣಲಕ್ಷಣಮಂ [ತು][ಪ್ವಿ]ದ ಚತುರಾಸ್ಯಂಗಂ ಬಾರದು ಬರೆಯಲ್ ರೂಪು ರೂಪವಿದ್ಯಾಧರಿಯ (ಸೌಇಇ. XX, ೯೯-೩೨; 1076 ೯). [ಸಂ. ರೂಪವಿದ್ಯಾಧರೀ]

**ರೂಪವಿಹೀನ** (ನಾ). ರೂಪವಿಲ್ಲದ ವ್ಯಕ್ತಿ ; ಕುರೂಪಿ: ರೂಪವಿಹೀನರಂ ಕುಟಿಲಬುದ್ಧಿಗಳಂ . . . ನಿರ್ಮಿಸಿದುತ್ಕಟಚಿಂತೆಯಿಂದೆ ತತ್ಪಾಪಮಡಂಗ ಲೆಂದು ಪಡೆದಂ ದಮಯಂತಿಯನಬ್ಜಸಂಭವಂ (ನಳಚಂ. ೯೦). [ಸಂ.]

**ರೂಪವಿಹೀನೆ** (ನಾ). ರೂಪವಿಲ್ಲದವಳು ; ಕುರೂಪಿ : ರೂಪವಿಹೀನೆ ರೂಪಸಿಯೊಳಿರ್ದುರ್ ತನಗಿಲ್ಲದಾ ಚೆಲ್ವಿನಲಿ ಲೋಲಾಡಿದಳ್ (ಶ್ರೀರಾಮ. ೨೩-೭೦೯). [ಸಂ. ರೂಪವಿಹೀನಾ]

**ರೂಪಸಾಧಾರಣ** (ನಾ). [ಸಂಗೀತ] ಒಂದು ರಾಗದ ಹೆಸರು : ನರ್ತಕಿ ಕಕುಭ ಷಡ್ಜಕೌಶಿಕ ಭ್ರಮಾಳ ಪಂಚಮಭ್ರಮಾಳ ಪಂಚಮಗಾಂಧಾರ ರೂಪಸಾಧಾರಣವೆಂಬೀಳು ರಾಗಂಗಳ್ (ವಿವೇಕ. ೦೯೭). [ಸಂ.]

**ರೂಪಸಿ** (ನಾ). ಚೆಲುವೆ ; ರೂಪವತಿ : ರೂಪವಿಹೀನೆ ರೂಪಸಿ ಯೊಳಿರ್ದುರ್ ತನಗಿಲ್ಲದಾ ಚೆಲ್ವಿನಲಿ ಲೋಲಾಡಿದಳ್ (ಶ್ರೀರಾಮ. ೨೩-೭೦೯); ಆ ನಡುಗಡ್ಡೆಯ ಅಧಿರಾಣಿಯಿರಬೇಕು ಆ ಅಪೂರ್ವವಿಚಿತ್ರರೂಪಸಿ (ಸಿಡಿಲು. ೩೬).
[ < ಸಂ. ರೂಪಸ್ವಿನೀ./ ತೆಲು. ರೂಪಸಿ./ಹಿಂ. ರೂಪಸೀ ]

**ರೂಪಸ್ಕಂಧ** (ನಾ). [ಬೌದ್ಧ] "ರೂಪಸ್ಕಂಧವೆಂದರೆ — ಕಣ್ಣು ಕಿವಿ ಮೂಗು ನಾಲಗೆ ದೇಹ ಎಂಬ ಐದು ಇಂದ್ರಿಯಗಳು" (ಹಿಂದಧಾ. ೨೯): ವಿಷಯದ ಆಕಾರವನ್ನು ಹೊಂದಿದ ಪ್ರವೃತ್ತಿವಿಜ್ಞಾನಕ್ಕೂ ತಮ್ಮ ವಿಷಯಗಳಿಂದ ಸಹಿತಗಳಾದ ಇಂದ್ರಿಯಗಳಿಗೂ ರೂಪಸ್ಕಂಧವೆಂದು ಹೆಸರು (ಶಾತತ. ३०೭). [ಸಂ.]

**ರೂಪಸ್ತವ** (ನಾ). ಸೌಂದರ್ಯದ ಹೊಗಳಿಕೆ ; ರೂಪವನ್ನು ಕುರಿತ ಸ್ತುತಿ : ಫಣಿಪ್ರಭುಗಮೆತ್ತಮತ್ತಳಗಮಲ್ತೆ ರೂಪಸ್ತವಂ ಗುಣಸ್ತವ ಮುದಾತ್ತವೃತ್ತಭವದೀಯವಸ್ತುಸ್ತವಂ (ಆದಿಪು.೦೩-೯೦) ; ಶಚೀಪತಿಯುಂ . . . ಬಂದನೇಕವಸ್ತುಸ್ತವರೂಪಸ್ತವಗುಣಸ್ತವಂಗಳಿಂ ಸ್ತುತಿಯಿಸಿ (ಕುತ್ತ.ಕು. ೦೯-೯೯ ಪ). 'ಗುಣಸ್ತವ', 'ವಸ್ತುಸ್ತವ' ಪರಾ. [ಸಂ.]

**ರೂಪಳಿ** 'ರೂಪಟು' ನೋ.

**ರೂಪಟು**, ರೂಪಳಿ, ರೂವಳಿ, ರೂವಟು (ಕ್ರಿ). ೧. ರೂಪವು ನಾಶವಾಗು ; ವಿರೂಪಗೊಳ್ಳು : ಇನರಥಹತಿಯಿಂ ನೆಗೆದ ಗಗನ ಧಾತುಸ್ಥಳಿರಜಂಗಳಿಂ ರೂಪಟುದಿತ್ತೆನೆ ಸಂಜೆ ಕೆಂಪನುಟುದಿರೆ (ಜಗಂ. ೦೬-೯೬); ವಣ್ಮಟು — ರೂಪಟುದ ಸಾವು (ಕಮುದ. ಶಂ. ೦). ೨. ರೂಪವನ್ನು ನಾಶಗೊಳಿಸು ; ವಿರೂಪಗೊಳಿಸು : ಸಗ್ಗಮದು ಕಟುಪಿರ್ಪ ರೂಪಟುವ ಪೀಡೆಯನ್ . . . ಬಣ್ಣಿಸಿದ ನೀನಯ್, ನೀನಾರ್ಗೆ ಪೇಟಯ್ ? (ವಿದ್ಯಕ್ರಿ. ४೧-೬೭೨). **ರೂಪಳಿ** : ೧. ತೊನ್ನುವಿಡಿ ದಾವರಿಸಿ ಒಪಳಿದಿಂತಿರುತ್ತಿರಲ್ (ಬಸತ್ತ. ೫೭-೫೭) ; ಉಟುಿ ರೂಪಳಿದಂ ರತಿರಾಜಂ (ಹರಿಶ್ಚಂ. ೬-४೦). **ರೂವಳಿ** : ೧. ಇರುಳ ಹಾವಸೆಯಂತೆ ರೂವಳಿದು ತೇಲುತಿವೆ . . . ಹೊಂಗೆ ಹಿಪ್ಪೆ (ಗಣೇಶ. ३೯-೭). **ರೂವಟು** : ೧. ರೂವಟುಿಯೆ . . . ಸೂಕ್ಷ್ಮಸಾಂಪರಾಯಕ್ಷಪಕಂ ಭಾವತರವಾರಿಯಿಂದಷ್ಟಾವಿಂಶತಿ ಮೋಹಬಲಮನುನ್ಮೂಲಿಸಿದಂ (ಅಜಿತಪು. ೯-೦೦೬). [ ರೂಪು + ಅಟು$_1$ ]

**ರೂಪಾಂತರ** (ನಾ). ಬೇರೆಯ ಆಕಾರ, — ಸ್ವರೂಪ : ರೂಪಾಂತರ ಕೈಯ್ದು ಭಾಸುರದಿಂ ತತ್ಪುರರಾಜನಂದು ಪಿರಿದೊಂದುತ್ಸಾಹಮಂ ಮಾಡಿದಂ (ಆದಿಪು. ೦೬-೩೨) ; ಕೋಟಿಕ್ಕೆ (ಕೋಡಿಗೆ), ನಾಟಿಕ್ಕೆ (ನಾಡಿಗೆ), ಇವುಗಳು ಸಮಾಸವಿಧಿಯಿಂದ ಡಕಾರಕ್ಕೆ ಟಕಾರವಾಗಿ ರೂಪಾಂತರವಾಗಿವೆ (ಶಬ್ದಶಾಂ. ೭೫). [ಸಂ.]

**ರೂಪಾಂತರಿಸು** (ಕ್ರಿ). ರೂಪವನ್ನು ಬದಲು ಮಾಡು ; ಬೇರೆಯ ರೂಪವನ್ನು ಕೊಡು : ಅನ್ಯಕವಿಗಳ ಗದ್ಯಪದ್ಯಗಳನ್ನು ಯಥಾರೀತಿ ತನ್ನ ಪದ್ಯರೂಪಕ್ಕೆ ರೂಪಾಂತರಿಸಿದಾಗ ಅದು ಅನುವಾದವೆನಿಸುವುದು (ಸಂಕೀಲ. ೦೨೭). [ರೂಪಾಂತರ + — ಇಸು$_3$]

**ರೂಪಾಜೀವೆ** (ನಾ). ತನ್ನ ಸೌಂದರ್ಯದಿಂದ ಜೀವಿಸುವವಳು ; ವೇಶ್ಯೆ : ಕುಂದ ಚಿತ್ರಮಾಲತಿಯ ಪುಷ್ಪಂಗಳಂ ಹರುಷದಿಂ ಸೂತ್ರದಿಂ ಕೊಯ್ದು ರೂಪಾಜೀವೆಗಳ ಮುಡಿಗೆ ಮುಡಿಸುವಂ ಮೋಹದಿಂದಂ (ಶೃಕುಪು.४-೭೩) ; ನಾನು ರೂಪಾಜೀವೆ, ಸೂಳೆ, ಬೆಲೆವೆಣ್ಣು, ವಾರ ವಿಲಾಸಿನಿ (ಮಂಕ್ತಿಕ. ४४-३०). [ ಸಂ. ರೂಪಾಜೀವಾ ]

**ರೂಪಾಧಿಕ** (ನಾ). ಅತ್ಯಂತ ಸುಂದರನಾದವನು ; ಮಿಗಿಲಾದ ಚೆಲುವ : ರೂಹಿಸುವಲ್ಲಿ ರೂಪಾಧಿಕ ನೋಡುವಲ್ಲಿ ನೋಟ ಘನ (ಬಸವ. ೯೦೭) ; ಉನ್ನತನ ರೂಪಾಧಿಕನ ಸಂಪೂರ್ಣದಕ್ಷನನನ್ಯರೆನ್ನವರನ್ನದನ . . . ಪಡಿಹಾಜಿಕನ ಮಾಡುವುವು (ಕುಮಾ. ಉ. ४-೯೯). [ಸಂ.]

**ರೂಪಾನು** (ಕ್ರಿ). ರೂಪವನ್ನು ತಾಳು ; ಆಕಾರವನ್ನು ಪಡೆ : ನೀ ಪಾಲಿಸಬೇಕು ನನಗೊರ್ವ ಕಂದರ್ಪರೂಪಾಂತ ವರಕುಮಾರಕನ (ಮೋಹತ. ೯-३೦); ಎರಡು ರೂಪಾಂತ್ಯೈರಾವತವೆಂದೆನೆ ಮೆಚುವವು ಬಾಗಿಲಾನೆಗಳು (ಶಂಪವಿ. ೭-೯೯). [ರೂಪು + ಅನು$_1$ (<ಅನ್$_1$) ]

**ರೂಪಾನುಪಾತ** (ನಾ). [ಜೈನ] ದೇಶವ್ರತಾತಿಚಾರಗಳಲ್ಲಿ ಒಂದು ; ತನ್ನ ರೂಪವನ್ನು ಬೇರೆಯವರಿಗೆ ತೋರಿಸುವುದು : ಕಪಟದೊಳೀಂ ಪ್ರೇಷಣಶಬ್ದಪುದ್ಗಲಕ್ಷೇಪಸಮುದಿತಾನಯನಂ ತಾಪಪಚಾರಂಗಳ್ ರೂಪಾನು ಪಾತಮುಂ ಪ್ರಮಿತದೇಶನಿಯಮವ್ರತದೊಳ್ (ಸುಕುಮಾ.೬-೦೯). [ಸಂ.]

**ರೂಪಾಯಿ**, ರುಪಾಯಿ (ನಾ). (ಭಾರತದಲ್ಲಿ ಹಿಂದೆ ಚಲಾವಣೆಯಲ್ಲಿದ್ದ ಹದಿನಾರಾಣೆಯ ಹಾಗೂ ಈಗಿನ ನೂರುಪೈಸೆಯ ಬೆಲೆಯುಳ್ಳ ಬೆಳ್ಳಿ ಮುಂತಾದ ಲೋಹಗಳ) ಒಂದು ನಾಣ್ಯ ಅಥವಾ ನೋಟು : ಖರ್ಚು ೪೦ ರೂಪಾಯಿ (ಎಕ. IX, ಕಾವಕಾ. ೯೦-೩೬; 1700) ; ಸನ್ ೧೮೪೦ರ ವರೆಗೆ ಹದಿನಾರುಪ್ರಕಾರದ ರೂಪಾಯಿಗಳು ನಡಿಯುತ್ತಿದ್ದವು (ಕರಾಗೆ. ३೬೦): ರೈತರು ಅಜ್ಜ ಮುತ್ತಜ್ಜರು ಹೂತಿಟ್ಟಿದ್ದ ರೂಪಾಯಿ ಗಳನ್ನು ಕೊಟ್ಟಿದ್ದರು (ಹುಚ್ಚುಹ. ೫). **ರುಪಾಯಿ**: ಸುಬಾಚಾರಿ ಮಾಡಿದ ರುಪಾಯಿ ಮಡಿವ ಪಂಚರಸಿಯ ಸಲಾಕೆ (ಮೈಕಂ. ೦೯४೩, ೬३-೦; 1726).
[ ←ಹಿಂ.ರುಪಯಾ; ಮರಾ. ರುಪಯಾ.ರುಪಾಯಾ. ಸಂ. ರೂಪ್ಯ]

**ರೂಪಾರ**, ರೂವಾರ, ರೂಹಾರ (ನಾ). ೧. ಶಿಲ್ಪಿ : ಚಿತ್ರಕಾರ–ಚಿತ್ತಾರ; ರೂಪಾಕಾರ–ರೂಪಾರ (ಕವುದ. ೨೯೫ ಕ್ರಯೋ) ; ಸೌನ್ದರ್ಯತತ್ತ್ವಮವತರಿಸಿ ಕೊಳ್ವವನೊಲ್ವಾರ್ವ ರೂಪಾರಂ ಮೆಯ್ಸಿರಿ ಬಣ್ಣವುರಂ ಬಾಳ್ಕೆಗಳಿನೊಪ್ಪಿಸಿಯುದಂ ಕಾಣ್ಕೆ ಮಾಳ್ಕುಂ (ಸಂಕಶ. ೫೦-೬೯). **ರೂವಾರ** : ೧. "ರೂವಾರ(ರೂಪಾರ) ರೂಪಾಕಾರ, ರೂಪಕಾರ_ಶಿಲ್ಪಿ" (ಕನ್ನಕೋ. ೩೯). ೨. ವಿಗ್ರಹ ; ಮೂರ್ತಿ : ತಳದಿಂ ಕಳಶಂಬರಮೊಂದಳವಿಯು ರೂವಾರ ಮೆನಿಸಿ ಬಹುರೂಪಿಣಿಯೊಲ್ . . . ಒಪ್ಪುವವು ನಾಡೆಯುಂ ಕರುಮಾಡಂ (ಅಜಪು. ೨-೨೦); ಕಾರ ಮಿಂಚಿನ ಬೊಂಬೆಯೊ ಅಮರ್ದಿನ ರೂವಾರಮೊ . . . ಎನಲಾ ನಾರಿ ಪಳಚ್ಚನೊಪ್ಪಿದಳು (ಶ್ರೀಪಾಂ. ೨-೫೨). **ರೂಹಾರ** : ೨. ಲತಾವಳಿಯ ವಿಳಸದ ಸರ್ವರೂಹಾರದ ಚಂದ್ರಿಕಾಮಂಟಪ (ಕೇಶಿರ. ೦೦೦-೨೨); ಪಚ್ಚೆಪವಳಂಗಳ ಸ್ತಂಭಗಳ ಶಶಿಕಾಂತಶಿಲೆಯ ತೊಲೆಯ ಕಡೆದ ರೂಹಾರಗಳಲೀಕ್ಷಿಸಲು (ಸೋಮಪುಕ. ೨-೨೦).

[<ಪ್ರಾ. ರೂಅರ./ಸಂ. ರೂಪಕಾರ]

**ರೂಪಿ** (ಗು). ೧. ರೂಪವುಳ್ಳ ; ಆಕಾರವನ್ನು ಹೊಂದಿರುವ. ೨. ಸುಂದರವಾದ ಆಕಾರವುಳ್ಳ. ೩. ಹೋಲಿಕೆಯುಳ್ಳ ; ಸಾಮ್ಯವಿರುವ. (ನಾ). ೪. ರೂಪವುಳ್ಳವಳು ; ಚೆಲುವೆ : ನೋಡುವುದೆ ಕಣ್ಣು . . . ಮುರುಕಿ ಕುಬ್ಜೆಯ ಡೊಂಕ ತಿದ್ದಿ ರೂಪಿಯ ಮಾಡಿ ಸೆಱಗ ಪಿಡಿಸಿಕೊಂಬನ (ಪುರಂದ. ಧಾ. ೪-೪೦-೫). [ಸಂ. ರೂಪಿನ್]

**ರೂಪಿಡು**, ರೂವಿಡು, ರೂಹಿಡು (ಕ್ರಿ). ೧. ತನ್ನ ರೂಪದಂತೆಯೇ ಕಾಣು ; ಹೋಲು : ಕಾಮಿನಿ . . . ಖಚರೀಜನಂಗಳೊಳ್ ರೂಪಿಡೆ ತನ್ನ ರೂಪೊಲಿದು ಪಾಡಿದಳಚ್ಯುತನಂಕಮಾಲೆಯಂ (ಜಗಪು. ೦೬-೦೦೪). ೨. ತನ್ನನ್ನು ಒಪ್ಪಿಸಿಕೊಳ್ಳು_ಅರ್ಪಿಸಿಕೊಳ್ಳು : ಪಾಪಿ ಗಂಡನೆಯೆನ್ನ ಆಪತ್ತಿಗೊಡೆಯನೆಂಬಾಪೇಕ್ಷೆಯಲಿ ಬಂದು ನಿನಗೆ ರೂಪಿಟ್ಟೆ ದುಃಖವನೀ ಪರಿ ಮಾಳ್ಪರೆ (ಪಿಪಾಂ. ೪-೪೬). ೩. ಕೋಪವನ್ನು ಪ್ರಕಟಿಸು ; ರೇಗು ; ಕೆರಳು : "ರೂಪಿಡು_ಕ್ರೋಧನಿರ್ದೇಶೇ" (ಕಮಧಾ) ; ಚಪ್ಪರಿಸು ರೂಪಿಡು ಕೂಪಿಡು ಕೂರ್ಪುದೋಱು ಪಾಱಿಗಿಯದೆ ಕೂರ್ಮೆ ಮಿಕ್ಕು ತೆಗೆ ತೋಂಗಲನಿಂಬೆನೆ ನೂಂಕು ಯುದ್ಧಮಂ (ಕಾವ್ಯಾವ. ೪೦೬); ಸೇನಾನಿಯುಮದಂತೆಯೇ ತಮ್ಮ ಹೆಗ್ಗಡೆಗೆ ವೀರವನ್ದನವನ್ನೊಪ್ಪಿಸಲಿಲ್ಲವೆಂದು ರೂಪಿಟ್ಟು ಹುಚ್ಚೆದ್ದು (ಮಂತ್ರಕ. ೬೮-೭). **ರೂವಿಡು** : ೪. ಆಕಾರವನ್ನು ಕೊಡು,– ನೀಡು : ರೂವಾರಿ ರೂವಿಟ್ಟ ಕಲ್ಲಲ್ಲ, ಮೂರ್ತಿಯಿದು ಎಂತೆಂದರಂತಾಗಬಲ್ಲ ಬಯಲಲ್ಲ (ಮಲಿದೇ. ೦೯-೧). **ರೂಹಿಡು** : ೧. ಚೆನ್ನೆ ನೀನಲ್ಲದೆ ಬಳಿಕಾರಿನ್ನು ದಿಟವಿದಿರಿಟ್ಟು ತೋಱಿಸಲನ್ಯರುಂಟೇ ರೂಹಿ[ಪಾಠಾಂ. ಕುಱುಹಿ]ಡಲು ನೆಱೆ ನೋಡು ನೀನೆನುತ ಕನ್ನಡಿಯ ತೋಱಿದಳೊಬ್ಬಳು (ಪ್ರಭುಲೀ. ೬-೨೨). ೪. ಸರಸಿಜಭವ ಚದುರಿನೊಳು ಅರೆಕಾಣೆ ತಟ್ಟಿಲ್ಲದ ತ್ರಾಸಿನೊಳು ತೂಗಿ ಪರಿಕಿಸಿ ರೂಹಿಟ್ಟನಿವರ (ನಾಗಕು. ೬-೪೦). ೫. ಅಂದವಾಗಿ ಕಾಣು ; ಕಂಗೊಳಿಸು : ರೂಹಿಟ್ಟ ಮನ್ಮಥನಂತೆ ಬೆಳಗಿದನಖಿಳದಿಗುತಟವ (ಏಕಾಗ. ೦೦-೨೯-೯). [ರೂಪು + ಇಡು$_1$]

**ರೂಪಿಣಿ** (ನಾ). ೧. ಚೆಲುವೆ ; ರೂಪವತಿ : ರೂಪಿಣಿಯರನುದಿನಂ . . . ಮುನಿತಿಲಕನ್ಯತಪ್ಪ ಪಥಮಂ ನಿರೀಕ್ಷಿಸುತಿರೆ (ವಂಕಾರಾ. ೧-೫-೪೩). ೨. ಸೂಳೆ ; ವೇಶ್ಯೆ : "ರೂಪಿಣೀ, ರೂಪಜೀವನಾ, ಈ ೨ ಸೂಳೆ" (ಕಾಶಬ್ದ. ೨೯೦). [ಸಂ. ರೂಪಿಣೀ]

**ರೂಪಿತ** (ಗು). ೧. ಕಲ್ಪಿಸಿದ ; ಯೋಜಿಸಿದ. ೨. ಧರಿಸಿದ ; ತೊಡಿಸಿದ: ಶಿವಮಂತ್ರಾಭಿಮಂತ್ರಿತಭೂತಿ ರುದ್ರಾಕ್ಷಾದಿ ರೂಪಿ[ಪಾಠಾಂ. ಭೂಷಿ]ತ ಜಾತನಿರ್ಮಳಪಂಚಮುದ್ರಾಧಾರರಂ ಮಾಡಿ (ಬಸಪು. ೪೯-೪೦). (ನಾ). ೩. ರೂಪುಗೊಂಡುದು: ಕ್ರಿಯಾತ್ಮಕಶಿಕ್ಷಣಯೋಜನೆಯು ಪ್ರಪಂಚದಲ್ಲೇ ಶ್ರೇಷ್ಠಮೇಧಾವಿಯವರಾದ ಮಹಾತ್ಮಾಗಾಂಧಿಯವರಿಂದ ರೂಪಿತವಾಯಿತು (ಕ್ರಿಯಶಿ. ೧೯೨); ಮಹಾಭಾರತವು ಇಂದು ನಮಗೆ ಉಪಲಬ್ಧವಿರುವ ರೀತಿಯಲ್ಲಿ ರೂಪಿತವಾದದ್ದು ಬಹುಶಃ ಕ್ರಿ. ಪೂ. ಐದನೆಯ ಮತ್ತು ಒಂದನೆಯ ಶತಮಾನದ ಅಂತರದಲ್ಲಿರಬಹುದು (ಭಾರದ. ೧೦೯). [ಸಂ.]

**ರೂಪಿಮಾ** (ನಾ). [ಭಾಷಾಶಾ] ಭಾಷೆಯ ಅರ್ಥವತ್ತಾದ ಚಿಕ್ಕಘಟಕ: ಮೂಲರೂಪಗಳನ್ನು ಸಾಧಿಸುವಲ್ಲಿ ಧ್ವನಿಮಾ, ರೂಪಿಮಾಗಳ ಪರಸ್ಪರ ಸಾದೃಶ್ಯವನ್ನು ಅರಿತುಕೊಳ್ಳುವುದರಲ್ಲಿ ಅತ್ಯಂತ ಪ್ರಯೋಜನವಾಗುವುದು (ಸಂಪರ್ಕ. ೨೯೩). 'ಧ್ವನಿಮಾ', 'ಸ್ವನಿಮಾ' ಪರಾ. [ಸಂ.]

**ರೂಪಿಲಿ**, ರೂವಿಲಿ (ನಾ). ರೂಪವಿಲ್ಲದ ವ್ಯಕ್ತಿ ; ಕುರೂಪಿ : ಸೊಬಗಂ ಪುಟ್ಟಿನೆನೆಯುಂ ಆದಂ ರೂಪಿಲಿ ನಾಡೆ ಅಪ್ಸರಃಸ್ತ್ರೀಚಿಂತೆಯಿನುಂ (ಕೌಷಂದ. ೦೦-೬). **ರೂವಿಲಿ** : ನಮ್ಮ ತಾಯ್ನುಡಿ . . . ತಾನಮಂಗಳೆಯೆನಿಸಿ ಹಿರಿಮೆಯ ನೀಗಿ ಹೆಸರನಳಿದು ರೂವಿಲಿಯಾಗಿ ಬನ್ನಪಡುತಿರಲು (ಗಡೀಕ. ೪೦-೯). [ರೂಪು + – ಇಲಿ$_3$]

**ರೂಪಿಸು**, ರೂವಿಸು, ರೂಹಿಸು (ಕ್ರಿ). ೧. (ಚಿತ್ರ, ಶಿಲ್ಪ ಮೊದಲಾದುವುಗಳಂತೆ) ಆಕಾರವನ್ನು ಕೊಡು ; ರೂಪಕೊಡು : ಆವ ದೇಮರುವಾಗೆ ಬಯಲ ರೂಪಿಸಬಲ್ಲರೇ (ಪಪಪೋ. ೭-೩೬); ನನ್ನೂರಿನ ಸುತ್ತಣ ಪ್ರದೇಶವನ್ನು, ಆಸಕ್ತಿಯಿಂದ ಅವಲೋಕಿಸಿ . . . ಚಿತ್ರವನ್ನು ರೂಪಿಸುವ ಕೆಲಸಕ್ಕೆ ಕೈಹಾಕಿದೆ (ಪಮ್ಮರು. ೦೩ ಪೀಠಿ). ೨. ಕಲ್ಪಿಸು ; ಯೋಚಿಸು : ನಾನು ನನ್ನ ಸಂಸಾರವನ್ನು ಹೇಗೆ ರೂಪಿಸುವೆನೆಂಬುದನ್ನು ನೋಡುವಿರಂತೆ (ಸ್ವಶಿಪ. ೩); ಇವನ್ನೆಲ್ಲಾ ಓದಿಕೊಂಡು, ನಾನು ನನ್ನ ಅಭಿಪ್ರಾಯವನ್ನು ರೂಪಿಸುತ್ತೇನೆಯೋ ? (ಒಬಿದ. ೦೦). ೩. ಹೇಳು ; ನಿರೂಪಿಸು : ರೂಪಕವೆಂಬುದು ಪೆಱವರ ರೂಪಾದಿಗುಣಂಗಳಾನಭೇದೋಕ್ತಿಗಳಿಂ ರೂಪಿಸುವುದು (ಕವಿರಾ. ೩-೦೨); ರೂಪಿಸುವ ತನ್ನೀಶನಿಂದಾಲಾಪಮಂ ಕೇಳದೆ (ಬಸಪು. ೬೦-೦೮); ಮುನಿ ರೂಪಿಸಿದ ಮಾತುಗಳೆನಗೆ ಸಾಮ್ಯವದಾಯ್ತು (ಜೀಪಂಕ. ೫-೩೯). ೪. ತಿಳಿ ; ಭಾವಿಸು : ಸತಿಯೋಪ ಶಿವನಂ ತನಯನೆಂದೇ ರೂಪಿಸುತ್ತುಪಲಾಲಿಸುತ ಕೊಂಡಾಡುತಿರಲು (ಬಸಪು. ೦೫-೦೫); ಧ್ಯಾನಿಸುತೆ ಭಾವಿಸುತೆ ರೂಪಿಸುತೆ ಕಾಮಿಸಿದನಾ ಭೂಮಿಪಂ ತದ್ರೂಪಗುಣಹೃದಯರಂ (ಶ್ರೀಪಾಪು. ೦೨-೩೦೦). ೫. ಸ್ಥಿರಪಡಿಸು: ನಾನಾಪುರಾಣಾಗಮನಿಗಮಸರ್ವಪ್ರಮಾಣದಲಿ ರೂಪಿಸಲು ಸಂಸಿದ್ಧವೆಂಬಾಲಾಪಮಂ ಕೇಳ್ದು (ಬಸಪು. ೫೦-೪೦). ೬. ಪ್ರದರ್ಶಿಸು ; ಕಾಣುವಂತೆ ಮಾಡು : ಎಲ್ಲ ವಿಕೃತಿಯ ತಳದ ವಾತ್ಸಲ್ಯ ದೃಷ್ಟಿಯನು ರೂಪಿಸುವೊಲು (ಮಲಿದೇ. ೪೦-೯). ೭. ಉಂಟು ಮಾಡು : ಕೌರವ ಪಾಂಡವರ ವೈರಜೀವನ ಹಲವು ಪರಿಯಲ್ಲಿ ಮುಂದುವರಿದು ಅನೇಕ ವಿಷಘಟನೆಗಳನ್ನು ರೂಪಿಸಿತು (ಕಾಪುಕ. ೦೦). ೮. ಸಿಟ್ಟಾಗು ; ಕೋಪಗೊಳ್ಳು ; ಕೆರಳು : ರೂಪಿಸುತ ಬಂದೇಱಿರೊಡನೆ ನಿರೂಪನಾಗಳೆ ಮಾಳ್ಪ ತರುಗಳ ರೂಪಿಸುತ ಬಂದೇಱಿರೊಡನೆ ನಿರೂಪನಾದಡೆಯು (ಬಸಪು. ೦೯-೫೦). **ರೂವಿಸು** : ೯. ಆಕಾರವನ್ನು ತಳೆ ; ರೂಪವನ್ನು ಹೊಂದು : ಭೂರವಮಂ ಭಟಂ ನಿಮಿರ್ದು ಕುತ್ತಿದೊಡುರ್ಚಿದ ಚಂಡಶಾಸನಂ ಚಾರಣದಾಸೆಯಿಂ ನುಸುಳ್ದು ಮುಜ್ಜುಟದೊಳ್ಮಗುಚ್ದಿಕ್ಕಿವಟ್ಟೆ ಸ್ವೈಪಾರಿಸೆ ಕಂಡ ಭೂರಣದೆ ರೂವಿಸಿದಂ ಪೊಯ್ಯೆ ಕಾಳವಟ್ಟದಿಂ ಪೋರಗದಿಂದೆ ಪೊಯ್ದನೆರಡುಂ ಸರಿವೋದವು ಲಾಗುಬೇಗದೊಳ್ (ಅಪಂಪು. ೦೦-೬೦). **ರೂಹಿಸು**: ೧. ಉರಿ ಕರ್ಪೂರ ಸಂಯೋಗ ನಿಷ್ಪತ್ತಿಯಾದಲ್ಲಿ ಮರಳಿ ರೂಹಿ[ಪಾಠಾಂ. ಪಿ]ಸಿ ಹಿಡಿಯಲುಂಟೆ ಅಯ್ಯಾ (ಅಬಂಪೀ. ೩೪೦-೫೬). ೪. ನಿಜಲಿಂಗೈಕ್ಯನ ಉಪಮಿಸಲಿಲ್ಲ ಉಪಮಿಸಲಿಲ್ಲಾಗಿ ರೂಹಿಸಲಿಲ್ಲ ರೂಹಿಸಲಿಲ್ಲಾಗಿ ಭಾವಿಸಲಿಲ್ಲ (ಅವಪಂ. ೨೮೦-೦೨೮೨) ; ಆತ್ಮನಲ್ಲಿ ಮಲವು ಹುದುಗಿರ್ದ ಭೇದವ ತಿಳಿದು ರೂಹಿಸಿ ಹೇಳಬಲ್ಲಡೆ ಸಿದ್ಧಾಂತಿ ಎಂಬೆ (ಉಂಪ. ೪. ೨೦೬-೨೮೬). ೬. ರವದ ಪೊರ್ಕುಳ ಗಂಟೆಯ ಮೋಹಿಸುವ ಮೊಗವಡದ ರೂಹಿಸುವ

ನೊಸಲ ಕನ್ನಡಿಯ . . . ತುರಂಗಬಲದೊಳು (ಗಂಳ. ೬-೩೩ ಪ). ೧೦. ಕೆತ್ತು ; ಕಂಡರಿಸು : ಮರಮರದ ಮೇಲೆಲ್ಲ ಪ್ರೇಯಸಿಯ ಹೆಸರನ್ನು ರೂಪಿಸಿದ (ಪಶ್ಚಿ. ೨೨). ೧೧. ಕಾಣಿಸಿಕೊಳ್ಳು ; ಹುಟ್ಟು ; ಮೈದೋರು : ಸುರರು ಹೂಮಳೆಗಳಿಂದರಾಗಳು . . . ಗುರು ಗುಹೇಶ್ವರನಿಳೆಗೆ ರೂ[ಪಾಠಾಂ. ಮೋ]ಹಿಸಿ ಮೆರೆದ ಕತದಿಂದೆ (ಪ್ರಭುಲಿಂ. ೬-೨೩) ; ಭೂಮಿಯ ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಪಿಸಿದ (ಕೊರವಾ. ೬-೨-೨೦) ; ರೂಪಿಸಿತೊಂದು ದಿವ್ಯೋಪಾಯ (ಭರತ. ೩೦-೪೭). ೧೨. ನಿರ್ಮಿಸು ; ರಚಿಸು : ಕೇಡಿಗರೂ ಕೃತ್ರಿಮರಚನೆಯಲಿ ರೂಹಿ [ಪಾಠಾಂ. ಮಾಡಿ]ಸಿದರರಮನೆಯ (ಸಂಭರ. ೨೦-೭೦). [ರೂಪು + — ಇಸು$_3$]

**ರೂಪು**, ರೂವ$_1$, ರೂವು, ರೂಹ, ರೂಹು (ನಾ). ೧. ಆಕಾರ ; ರೂಪ : ಬಾಲನುರವಣಿಸಿದನು ಮಸಗಿದ ಕಾಲರುದ್ರನ ರೂಪ ತಾಳ್ದನು ವೈರಿಸೇನೆಯಲಿ (ಶಬ್ದಾ.ದ್ರೋ. ೬-೨೭) ; ಅವರನಾಜಿಯಲಿ ಕೊಂದನೊಬ್ಬನ ಸೂಕರನ ರೂಪಿಂದಲೊಬ್ಬನ ನರಹರಿಯ ರೂಪಿಂದ ಲಕ್ಷ್ಮೀಕಾಂತನಹಿತ ಕೃತಾಂತನಾಜಿಯಲಿ (ಕೊರವಾ. ೦-೮-೨೨). ೨. ಚೆಲುವು ; ಅಂದ ; ಸೊಗಸು : ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಪೋ ಮೆಚ್ಚೆಂ (ಹಂಸರಾ. ೪-೩೬) ; ಊರಿಂಗೆ ದೊರೆ ರೂಪು ನಾರಿಂಗೆ ಗುಣ ರೂಪು ಚಾರು ಕೋಕಿಲೆಗೆ ಸ್ವರ ರೂಪು ರಾಜಂಗೆ ಧೀರತ್ವ ರೂಪು (ಸರ್ವಜ್ಞ. ೭೦೬). **ರೂವ$_1$** : ೧. ಧಾರಿಣಿಯೊಳು ಪೂಜೆಗೊಂಬನತಿಭಕ್ತರ ರೂವದೊಳು ನಿರಂತರಂ ಪರಮಸಿವಾಗಮಿಕರಿಗೆ (ಎಕ. VII, ಶಿಕಾರಿ. ೯೭-೦೭ ; 1422). **ರೂವು** : ೧. ಕುಳ್ಳಿರ್ದಂ ಸಿರಿಯುರಸಂ ಕಾರ ಮುಗಿಲ ರೂವೆಂಬಿನೆಗಂ (ಶಬ್ದಾ. ೦೬೩) ; ರೂಪ – ರೂವು, ರೂವು (ಶಮಂತ. ೨೭೬ ಪ್ರಯೋ) ; ಹರಿಯತು ದುಷ್ಕರನಿರಿಯಲೋಸುಗ ನರರ ರೂವಿಂ ರಾಮನಾಮವ ಧರಿಸಿ (ರಾಮಾಶ್ವಂ. ೦-೨-೪೩). **ರೂಹ** : ೧. ಬೆಟ್ಟಬಿಲ್ಲಯ್ಯನ ರೂಹಕ್ಕೆ ಒಟ್ಟಿ ಭಕ್ತನಾದನೆಂಬುವನ ಯುಕ್ತಿ ಮಳಲೊಟ್ಟೆಯಂತೆ ನೋಡಾ (ಸಿದ್ಧ ವ. ೫೨-೪೮೦) ; ಲಿಂಗಾರ್ಚನಂಗೆಯ್ದು ತಲ್ಲಿಂಗದಂಗದೊಳನಂಗಾರಿಯಿಚ್ಛೆ ರೂಹ ಕಂಡು (ಪ್ರಭುರಾ. ೭ ಸೊಸಪ). **ರೂಹು** : ೧. ''ರೂಹೆಂಬುದು ರೂಪಂ'' (ಶಬ್ದಮ. ೨೦೭) ; ರೂಹಿಲ್ಲದೊಡಂ ಕೆಲಬರ ಸಹಾಯದಿಂ ... ರೂಹಂ ಪಡೆ ದೇಕೆ ಮರುಳೆ ನೀಂ ವ್ಯಥೆಗಳೆವೈ (ಧರ್ಮಾಮೃ. ೩-೦೩೦); ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವಂಗಾನೊಲಿದೆ (ಬಸವಾದಿ. ೩. ೦೨೨-೨೬೩); ಕಳಿತ ಹಲಾ ಹಳದ ಕಜ್ಜಾಯವೆನಿಸಿತು ರೂಹು . . . ಸುರಸತಿಯ (ಶಬ್ದಾ.ಶಿ. ೬-೯೨).

**ರೂಪುಮಾಡಿಸು** = ಭೂಮಿಯನ್ನು ವ್ಯವಸಾಯಯೋಗ್ಯವನ್ನಾಗಿ ಮಾಡಿಸು : ದೊಡ್ಡೇರಿಯ ಕೆರೆಯ ಕಟಿಸಿ ರೂಪು ಮಾಡಿಸಿದಕ್ಕೆ ಕೊಟ್ಟ ಗದೆ (ಎಕ. VII, ಶಿಮೊ. ೯೭-೭; 1648 ?). **ರೂಪುಮಾಡು** = ರೂಪು ಮಾಡಿಸು : ತೋಟಗದ್ದೆಯನು ಮಾಡಿಸಿ ವ್ಯವಸಾಯದಿಂದ ರೂಪು ಮಾಡಿಕೊಂಡು (ಎಕ. XVI, ೨೨೭-೬೯; 1414); ಕೆಱೆಯ ಒಡವುಗಳನೂ ಕಟ್ಟಿ ರೂಪುಮಾಡಲಾಗಿ (ಎಕ. IX (s), ಹೊಸಕೋ. ೦೬೪-೧೬; 1433).
[< ಪ್ರಾ. ರೂವ. / ಸಂ. ರೂಪ ]

**ರೂಪುಗರೆ**, ರೂಹುಗರೆ (ಕ್ರಿ). ೧. ಆಕಾರವು ಕಾಣದಂತಾಗು ; ಅದೃಶ್ಯವಾಗು : ಬ್ರಹ್ಮರಾಕ್ಷಸನವಳ ಮಾತಂ ನಂಬಿ . . . ರೂಪು ಗರೆದು ಪೆಱಪೆಱಗನೆ ಬರುತಿರ್ದು (ಸುಕುಮಾ. ೭-೦೭ ಪ); ಪೊಕ್ಕಳ್ ತ್ರಿದ ಶೋತ್ತಮ ರೂಪುಗರೆದು ಜನನೀಗೃಹಮಂ (ಶಸಂಪು. ೩-೦೪). ೨. ಬೇರೆ ರೂಪವನ್ನು ಧರಿಸು ; ವೇಷ ಮರೆಸಿಕೊಳ್ಳು : ತನ್ನ ರೂಪುಗರೆದಿ ರುಳ್ ಪೊಟಲಿಲ್ಲಮಂ ಕಳ್ದು ದಿವಸಕ್ಕೀ ಪಾಂಗಿನೊಳ್ ತೊನ್ನನಾಗಿರ್ಪೊಂ (ಶಬ್ದಾ.ರಾ. ೦೨೪-೯) ; ಭೀಮಸೇನಂ ಕೇಳ್ದವಂದಿರೊಡನೆ ರೂಪುಗರೆದು ಪೊಟಲಂ ಪೊಱಮಟ್ಟು . . . ಕೀಚಕನಿಕಾಯಧ್ವಂಸನಂ ಮಾಡಿದಂ (ಹಂಸರಾ. ೬-೭೯ ಪ). **ರೂಹುಗರೆ** : ೨. ದ್ರೋಹಿಯನು ಗೆಲಲರಿದು . . . ರೂಹುಗರೆದಿಳಿಯುಮರರಂದದಲಾಹವವ ಬೇಡುವುದು ಕೊಲುವುದು (ಶಿಭಾಗ. ೦೦-೭೬-೩೯). [ರೂಪು + ಕರೆ$_3$]

**ರೂಪುಗಾಣ್** (ಕ್ರಿ). ೧. ಆಕಾರವನ್ನು ಕಾಣು; ರೂಪವನ್ನು ನೋಡು : ರೂಪಗಾಣುತಲಂತರಂಗದೊಳ್ ಸಂತಸ ವ್ಯಾಪಿಸೆ (ಮಿರೇಶ. ೨೦-೨೦). ೨. ಚೆಲುವನ್ನು ಕಾಣು : ಸೌಂದರ್ಯವನ್ನು ನೋಡು : ಈ ಲೋಕದೊಳ್ ರೂಪುಗಾಣಲೊಡಂ ತೊಟ್ಟನೆ . . . ಏರ್ದೆಗೆಟ್ಟರಾರ್ (ಕಾದಂಪೂ. ೬೩೦). [ರೂಪು + ಕಾಣ್]

**ರೂಪುಗಾಣಿಸು**, ರೂಹುಗಾಣಿಸು (ಕ್ರಿ). ೧. ಆಕಾರವು ತೋರು,— ಕಾಣು : ತಾನರ್ಧತನುವಿನೊಳಾ ಗಿರಿಜೆ ಶಿವನೊಳು ಬೆರಸಿದಳೊ ರೂಪು ಗಾಣಿಸದು (ಬಸವ. ೦೭-೩). **ರೂಹುಗಾಣಿಸು** : ೧. ರೂಹುಗಾಣಿಸದಂತೆ ವಿಪ್ರವೇಷವನಾಂತು . . . ಅವರಿರ್ವರುಂ ಮಯೂರಧ್ವಜನ ಪಟ್ಟಣಕೆ ನಡೆತಂದರು (ಜೈಮಿ. ೨೬-೩). ೨. ರೂಪವನ್ನು ತೋರಿಸು,– ಪ್ರದರ್ಶಿಸು : ಕ್ಷೋಣಿಯೊಳಾತ್ಮೇಶ್ವರನ ದಿಟ್ಟಿಗೆ ರೂಹುಗಾಣಿಸಿ ಬಾಯಾಱಿಸುತೆ ಬಾಣತಿರೂಪಿಂದೆ ಬಂದಳು ಹರಿನೀಲವೇಣಿ (ಪೋಲಹತ. ೦೭-೯೭). [ರೂಪು + ಕಾಣಿಸು]

**ರೂಪುಗಿಡು** ' ರೂಪುಗೆಡು ' ನೋ.

**ರೂಪುಗೂಡು** (ಕ್ರಿ). ರೂಪವನ್ನು ತಾಳು,—ಪಡೆ : ಲೋಹಸಂಗದಿಂದಗ್ನಿ ಒಡಿವಡೆದಂತೆ ರೂಪುಗೂಡಿದ ರುಚಿಯ ಸತ್ಕ್ರಿಯೆಯಿಂದರ್ಪಿಸಬೇಕು (ಅವಸಂ. ೨೫೭-೦೦೬೯). [ರೂಪು + ಕೂಡು$_1$]

**ರೂಪುಗೆಡು**, ರೂಪುಗಿಡು, ರೂವುಗಿಡು, ರೂಹುಗೆಡು (ಕ್ರಿ). ೧. ಆಕಾರವು ಕೆಟ್ಟುಹೋಗು ; ವಿಕಾರವಾಗು : ಕದನದೊಳಾರ್ದು ಸಾರ್ದಿಸೆ ಮಹಾರಥರ್ . . . ಮಡಂ ಕಡಿವೋದುವು ಪಾಪೆ ರೂಪುಗೆಟ್ಟುದು (ಹಂಠಾಮಾ. ೦೭-೬೯) ; ದೀಪಿಸುವ ಮಾಣಿಕ್ಯಮಂ ಮಲಿನಾಪರಿಮಿತಪಟಂ ಮುಸುಕಿದಡೆ ರೂಪುಗೆಡುವುದೆ (ಬಸವ. ೩೭-೭೦). ೨. ರೂಪವು ಕಾಣದಾಗು ; ಮರೆಯಾಗು : ತರದಿಂ ಮೇಲೊಗೆದಿರ್ಪ ಪೀಲಿವಟಿಗೆಗಳ್ ತಳ್ತಾಗಸಂ ರೂಪುಗೆಟ್ಟರೆ (ಶಬ್ದಾ. ೨೮೨). **ರೂಪುಗಿಡು** : ೧. ನೀಂ ಪ್ಯಡನೊಳಿರ್ದಿ ರೂಪುಗಿಡುವಂದಿವು ಮಾಡಿದ ಮಾಟವಾವುದು (ಜಗಂ. ೦೬-೩೭). **ರೂವುಗಿಡು** : ೨. ರೂವು[ಪಾಠಾಂ. ಪುಣ್ಯ]ಗಿಡೆ ತೆಂಬೆಲರಂಚಿಗೆಗಳೊಡ್ಡು ಪಾಱೆ (ಶಬ್ದಾ. ೩೦೦). **ರೂಹುಗೆಡು** : ೧. ತ್ರಾಹಿ ಮದನಾಂತಕ . . . ಜಗತ್ರಯ ರೂಹುಗೆಡುತಿದೆ ದೇವ (ಶಬ್ದಾ.ಶ. ೭-೯೩). [ರೂಪು + ಕಿಡು$_1$]

**ರೂಪುಗೇಡು**, ರೂಹುಗೇಡು (ನಾ). ಕುರೂಪ ; ವಿಕಾರ ; ವಿಕೃತಿ : ಕಳವಳದಿಂದನ್ನೆಗಮಿಂದುಕಾಮಸೂರ್ಯರ್ ಜಗುಟ್ಟರ್ ಕಱೆ ರೂಪುಗೇಡು ನಿಡುಬವಣಿಗಳಿಂ (ಶಶಿ. ೩-೦೦). **ರೂಹುಗೇಡು** : ಎಂತೆನಗೆ ರೂಹು ಗೇಡನ್ ತಂದತ್ತು ಎಂಬುದನ್. . . ಬಿತ್ತರಿಸುವೆನ್ (ಐದ್ಧಶ್ರ. ೩೪-೭೨೯). [ ರೂಪು + ಕೇಡು ]

**ರೂಪುಗೊಳ್**, ರೂಪುಗೊಳ್ಳು, ರೂಹುಗೊಳ್ (ಕ್ರಿ). ಆಕಾರವನ್ನು ಪಡೆ; ರೂಪವನ್ನು ತಾಳು : ಭಕ್ತಿಯೆ ಭವಸನ್ನಿಧಿಯಲ್ಲಿ ರೂಪುಗೊಂಡಂತಿ ರ್ದಳ್ (ಕಾದಂಪೂ. ೩೭೦); ಶಿವನಾ ರೂಪುಗೊಂಡೊಲಿದಿಹುದು ಚೋದ್ಯಮೆ (ಬಸವ. ೦೫-೦೭). **ರೂಪುಗೊಳ್ಳು** : ನಿರ್ದಿಷ್ಟರೀತಿಯಲ್ಲಿ ಪತ್ರವಿಷಯ ರೂಪುಗೊಳ್ಳಬೇಕು (ಪತ್ರ. ೦೩೯); ಸಂಯುಕ್ತಜೀವಕಣದ ವಿಭಜನೆ ವಿಕಾಸ ದಿಂದ ನವಮಾಸದಲ್ಲಿ ಒಂದು ಮಗುವು ರೂಪುಗೊಳ್ಳುವುವು (ಗೃಹಪ. ೦೦೭). **ರೂಹುಗೊಳ್** : ಭವನ ನೇಹದ ಕಾಹು ರೂಹುಗೊಂಡೊಗೆವಂತೆ ಉದಯಮಾದಂ ಶಿವನ ಸೌಂದರಾಧಿಪನಂದು (ಸೌಂದರ. ೦-೦೦೬); ಪರಿಮಳವೇ ರೂಹುಗೊಂಡು ಪುಷ್ಪವಾದಂತೆ (ಪೋಳಿಪು. ೬೪ ಪ್ರಸ್ತಾವನೆ).
[ ರೂಪು + ಕೊಳ್$_1$ ]

**ರೂಪುಗೊಳ್ಳು** ' ರೂಪುಗೊಳ್ ' ನೋ.

**ರೂಪುಜೀವೆ** ' ರೂಪಜೀವೆ ' ನೋ.

**ರೂಪುದಳೆ,** ರೂಹುದಳೆ (ಕ್ರಿ). = ರೂಪುಗೊಳ್ : ಆಂ ಭರದಿಂದೆ ನಿನ್ನಯ ಭುಜಬಲದೆಟ್ಟರವಂ ಪರೀಕ್ಷಿಸಲ್ ಡಂಭದಿನೊಂದು ರೂಪು [ಪಾಠಾಂ. ಹು]ದಳೆದಿನ್ನೆವರಂ ಪೊಣರ್ದಿರ್ಕುವಟ್ಟು ಕಂಡೆಂ (ಕಂದ್ರ್ಯ. ೫-೬೨). **ರೂಹುದಳೆ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ರೂಪು + ತಳೆ$_1$ ]

**ರೂಪುದೋಱಿಸು** (ಕ್ರಿ). ಆಕಾರವನ್ನು ತೋರಿಸು; ಪ್ರತ್ಯಕ್ಷವಾಗು : ಎಡೆವಿಡದ ರೂಪುದೋಱಿಸುವ ಸಂಕಲ್ಪವಾಯಿಸಪ್ಪ ಯುವರಾಜನೆ ಮದೀಯ ವಿರಹಮರಣಭಯಹರಣನಪ್ಪುದಕ್ಕೆ ಕಾರಣಂ (ಕಾದಂಉ. ೩೦೭); ಪರಪುರುಷರು ರೂಪುದೋಱಿಸಿ ಸರಿವರಲ್ಲದೆಯೊಂದುಶಾವಿಸೊಳಿರರು (ಜೀಪಂಶ. ೬-೨). [ ರೂಪುದೋಱು + — ಇಸು$_3$ ]

**ರೂಪುದೋಱು,** ರೂಹುದೋಱು (ಕ್ರಿ). = ರೂಪುದೋಱಿಸು : ರೂಪುದೋಱದೆ ಬಂದು ಸುಭಟನ ಚಾಪವನು ಖಂಡಿಸುವುದು (ಕುವ್ಯಾದ್ರೋ. ೬-೨೯); ಇಭಚರ್ಮಾಂಬರಮಣಿಯರಮಮರ್ದಸೆಯೆ ರೂಪುದೋಱದ ನಾಗಳ್ (ಪ್ರಶಪು. ೦೪-೦೦೬ ಪ). **ರೂಹುದೋಱು :** ಚತುರ್ಮುಖನಬ್ಜ ನೇತ್ರನೆಂದೊದವಿದತರ್ಕ್ಯರೆಂಬವರ್ಗೆ ಸುಂಟಿಸಬಾರದು ರೂಹುದೋಱ ಬಾರದು (ಶಂಪಾಶ. ೪೩); ಕಲಿಭೀಮ ಸಾತ್ಯಕಿ ರೂಹುದೋಱದರು (ಕುವ್ಯಾದ್ರೋ. ೨-೬೩). [ ರೂಪು + ತೋಱು ]

**ರೂಪುರೇಖೆ** (ನಾ). ಸ್ವರೂಪ; ಆಕಾರ : ನಮ್ಮ ಶಿಕ್ಷಣಕ್ಕೆ ಉಚಿತವೆನಿಸುವ ನೂತನ ತತ್ವದೃಷ್ಟಿಯ ರೂಪುರೇಖೆಗಳು (ಶಿಕ್ಷದ. ೧೭); ಖಿಲ್ಜಿಯ ರೂಪು ರೇಖೆಗಳುಳ್ಳ ಒಬ್ಬ ಯವನನು ಗೌಡದೇಶವನ್ನು ಜಯಿಸುವವನಾಗಿದ್ದನು (ಬಂಕಿಪು. ೦೬೨). [ ರೂಪು + ರೇಖೆ ]

**ರೂಪುವಡೆ,** ರೂಹುವಡೆ (ಕ್ರಿ). = ರೂಪುಗೊಳ್ : ಏಳಿಂದನಾಸನದ್ರೃಥತೆ ರೂಪುವಡೆದತ್ತೆನಲಿಂದ್ರಾಯುಧಮನಂದು ಚಂದ್ರಾಪೀಡಂ (ಕಾದಂಪೂ. ೪೬೯); ಕೇಳೀನಂದನ ನವಪುಷ್ಪಚಾಪನ ಬಂಡಾರದಂತೆ ರೂಪುವಡೆದು ಮೆಱದುದು (ಕಂಪಬಿ. ೫-೦೦೦). **ರೂಹುವಡೆ :** ಮಂದರಾಗವೆ ರೂಹು ವಡೆದುದೆನೆ ಸಂಪ್ರೀತಿಯಿಂದೊಂದಿ ಚಲಿಸದಿರು (ಪದ್ಮರಾ. ೩-೬೯). [ ರೂಪು + ಪಡೆ$_1$ ]

**ರೂಪುವಿಡಿ,** ರೂಹುವಿಡಿ (ಕ್ರಿ). ೧. ಚೆಲುವನ್ನು ಹೊಂದು; ಅಂದ ವಾಗು : ರೂಪುವಿಡಿದ ಹೊನ್ನ ಪುತ್ಥಳಿಗಳ ಕಾಂತಿ ವ್ಯಾಪಿಸಿದುವು ಚೌದೆಸೆಯ (ಕಂಪಬಿ. ೨೦-೨೬). **ರೂಹುವಿಡಿ :** ೨. ಆಕಾರವನ್ನು ತಾಳು; ರೂಪುದೋರು : ಮನಸಿನ ಭ್ರಮೆ ರೂಹುವಿಡಿದಲೆವುದು ಬಂದು ಕನಸಿನೊಳು (ಮದೀಶ್ವ. ೨೦-೦೯). [ ರೂಪು + ಪಿಡಿ$_1$ ]

**ರೂಪುವೆರು** ' ರೂಪುವೆಱು ' ನೋ.

**ರೂಪುವೆಱು,** ರೂಪುವೆರು (ಕ್ರಿ). = ರೂಪುಗೊಳ್ : ಉರಿಗಣ್ಣನೊಗೆದ ಬೀರಂಬೆರಸೊದವಿದ ನಂಜು ರೂಪುವೆತ್ತವೊಲೇನೆಚ್ಚರಿಯಂ ಪುಟ್ಟಿಸಿದರೊ . . . ಬೀರಗಣೇಸರ್ (ಕನ್ನೇ. ೦೬೦). **ರೂಪುವೆರು :** ಶಾಂತಿಯೇ ಮನೆಯ ರೂಪುವೆತ್ತಿದೆಯೋ (ಸುಭಷಂ. ೨). [ರೂಪು + ಪೆಱು$_1$]

**ರೂಪೋತ್ಕರ** (ನಾ). ರೂಪದಲ್ಲಿ ಮಿಗಿಲಾದವನು; ಅತ್ಯಂತ ಸುಂದರ ನಾದವನು: ಕಡುಸುಖಿ ಭೋಗಿ ರೂಪೋತ್ಕರನು ಧನಿಕನು ರಾಜಪೂಜ್ಯನು (ಕುವ್ಯಾಉ. ೩-೦೦೫). [ಸಂ.]

**ರೂಪ್ಯ** (ಗು). ೧. ಚೆಲುವಾದ ; ಸುಂದರವಾದ. ೨. ಮುದ್ರೆ ಯೊತ್ತಿದ ; ಠಸ್ಸೆ ಹಾಕಿದ. (ನಾ). ೩. ಬೆಳ್ಳಿ; ರಜತ : ''ರಜತಂ, ಕಳಧೌತಂ, ರೂಪ್ಯಂ, ತಾರಂ— ಈ ೪ ಬೆಳ್ಳಿ'' (ಪಠಾಯು. ೨೮-೦೬); ಜಗಚ್ಛಾಶ್ಚರ್ಯವೈಶ್ವರ್ಯಪೂಮಸಥಂ ರೂಪ್ಯಮಹೀಧರೇಂದ್ರಂ (ಆದಿಪು. ೦-೬೯); ರೂಪ್ಯದ ಕುಪ್ಪಿಗೆಗಳೊಳಂ . . . ತೀವಿದೆನಿತಾನುಂ ತೆಱದ ಬಂಧುರ ಸುಗಂಧವಸ್ತುಸಂದೋಹಮಂ ಪಿಡಿದು (ಜಗಪು. ೬-೦೮೫). ೪. ಮುದ್ರಿಸಿದ ಬೆಳ್ಳಿ, ಚಿನ್ನ ಮುಂತಾದ ಲೋಹಗಳ ನಾಣ್ಯ; ರೂಪಾಯಿ: ''ರೂಪ್ಯಂ, ಆಹತಂ, ತದ್ವಯಂ–ಅರಸಿನ ಮುದ್ರೆ ಹೊಡೆ ಯಲ್ಪಟ್ಟ ಬೆಳ್ಳಿ ಭಂಗಾರದ ನಾಣ್ಯಗಳ ಪೆಸರು'' (ಸಿದ್ಧಾಂತ. ೩೦೩). [ಸಂ.]

**ರೂಬ್‌ರೂಬ್** 'ರೂಬುರೂಬು' ನೋ.

**ರೂಬರು** (ಅ). ಸಮ್ಮುಖದಲ್ಲಿ; ಎದುರಿನಲ್ಲಿ : ದಂಡನ್ನು ಕೂಡುಮಾಡಿ ಅವರ ರೂಬರು ಇಳಿದು ಲಡಾಯಿ ಕೊಡಬೇಕು (ಕತ್ರಪಾ. ೬೩).
[←ಪಾರ. ರೂಬಾರೂ; ಹಿಂ. ರೂಬರೂ; ಮರಾ. ರೂಬರೂ, ರುಬರು]

**ರೂಬುರೂಬು,** ರೂಬ್‌ರೂಬ್ (ಅ). ಎದುರಿಗೆ; ಪ್ರತ್ಯಕ್ಷವಾಗಿ : ಈಗ ರೂಬುರೂಬು ಬಂದು ಇರುವಂಥಾ ಕಷ್ಟ ಪರಿಹರಿಸುವುದಕ್ಕೆ ಇದೇ ವಳ್ಳೇದು (ರಾಕೇಂದ್ರ. ೬೬). **ರೂಬ್‌ರೂಬ್ :** ಗ್ರಾಮಾಧಿಕಾರಿಗಳು ತಾವೇ ರೂಬ್‌ರೂಬ್ ತಾಲ್ಲೂಕುಕಚೇರಿಗೆ ಹೋಗಲಾರದ ಪಕ್ಷದಲ್ಲಿ . . . ನಮೂದಿಸಬೇಕು (ಗ್ರಾಶಾಕ. ೬). [← ಮರಾ. ರುಬೇರೂಬ್].

**ರೂಮಾಲು** ' ರುಮಾಲು$_1$ ' ನೋ.

**ರೂಮಾಲೆ** ' ರುಮಾಲು$_1$ ' ನೋ.

**ರೂಯಿ** (ನಾ). ಬೀಜ ತೆಗೆದ ಹತ್ತಿ; ಅರಳೆ: ಕಾಳುಕಡಿ ರೂಯಿ ಅಂದರೆ ಅರಳೆ ಮತ್ತು ಕೆಲವು ಕಿರಾಣೀಜೀನಸುಗಳ ವ್ಯಾಪಾರಣೆಯು ಪತ್ರದೊಳ ಗಿಂದ . . . ಕಳುಹಿಸುತ್ತಿದ್ದೆವು (ಮುಂಪಿವ್ಯಾ. ೬೦).
[ ← ಹಿಂ. ರುವಾ; ಮರಾ. ರೂಯ್, ರುಈ]

**ರೂಲು** (ನಾ). ೧. ನಿಯಮ ; ಶಾಸನ : ಕಟ್ಟಳೆ: ಕಂದಾಯವನ್ನು ಕಟ್ಟಲೇಬೇಕೆಂದು ರೂಲಿದೆ (ರೂಶಿ). ೨. ಗೆರೆ; ಸಾಲು ; ರೇಖೆ : ಆ ಕಾಲದಲ್ಲಿ ಪಾವತಿಯಾದ ಐಟಂಗಳ ರೂಲಿನಲ್ಲಿ ಕಾರಣಗಳನ್ನು ಬರೆಯ ತಕ್ಕದ್ದು (ಗ್ರಾಪಶಾಕ. ೬). ' ರೂಲುದೊಣ್ಣೆ ' ಪರಾ. [← ಇಂ. Rule]

**ರೂಲುದೊಣ್ಣೆ** (ನಾ). ಗೆರೆ ಹಾಕಲು ಉಪಯೋಗಿಸುವ ದುಂಡನೆಯ ಕೋಲು : ಗೆರೆ (ಹಾಕುವ) ಕಡ್ಡಿ, ಉರುಳೆ; ರೂಲುದೊಣ್ಣೆ (Ruler. ಇಂಕಶ). [ರೂಲು + ದೊಣ್ಣೆ$_1$]

**ರೂವ$_1$** ' ರೂಪು ' ನೋ.

**ರೂವ$_2$** (ನಾ). ಕಂಡರಿಸುವವನು ; ಶಿಲ್ಪಿ (?): ಗುತ್ತಂ ರೂವಂಗೆ ಮಾಘಮಾಸದುಳ್ ಕೊಡುವೆದು (ಎಕ. XIV. ೦೯೦-೨೨; 725); ನಾಗಯಬ್ಬೆಯ ಮಗ ಮಾರೆಯ್ಯ ಕೊಟ್ಟೂರ ತುಱುಗೊಳಲಣ್ಣೆ ಸತ್ತ ಹೊನ್ನ ರೂವ (ಎಕ. XI, ಹಕ್ಕಿ. ೧-೬; 974). [<ರೂವಾರಿ$_1$]

**ರೂವರಿ** ' ರೂವಾರಿ ' ನೋ.

**ರೂವಳಿ** ' ರೂಪಟಿ ' ನೋ.

**ರೂವಟಿ** ' ರೂಪಟಿ ' ನೋ.

**ರೂವಾರ** ' ರೂಪಾರ ' ನೋ.

**ರೂವಾರಿ,** ರುವರಿ, ರುವಾರಿ, ರೂವರಿ, ರೂಹರಿ (ನಾ). ವಿಗ್ರಹ, ಶಾಸನ ಮೊದಲಾದುವುಗಳನ್ನು ಕೆತ್ತುವವನು : ಖಣ್ಡಸ್ಫುಟಿತ ಮೊದ ಲಾಗೆಲ್ಲಾ ಬೆಸನುಮಂ ನಡೆಯಿಸುವ ರೂವಾರಿ ಮಜ್ಜೋಜಂಗೆ ಮತ್ತರ್ಪ್ಪ ನ್ನೆರಡು (ಕೌಇಇ. IX-i, ೦೦೨-೫೫ ; 1045); ಮಱಿಯಾನೆಯ ಸಿಸ್ಯ ಚಿಕ್ಕ ರೂವಾರಿ (ಪ್ಕಿಅ. ೦೯೩೨, ೨೪-೦೦ ; 1226); ದಾಸೋಜ ಸಾಮಾನ್ಯನಲ್ಲ. ತುಂಬ ಹೆಸರಾದ ರೂವಾರಿ (ಶಪಶಿ. ೪೭). **ರುವರಿ :** ಯಿ ರೂವ ಮಾಡಿದ ರುವರಿ ಬೋಗೋಜ (ಪ್ಕಿಅ. ೦೯೩೨, ೨೩-೯; 1313). **ರುವಾರಿ :** ರುವಾರಿಯ ಉಳಿಯು ಬೆಳಗಲ್ಲನ್ನು . . . ಚಮತ್ಕೃತಿ ಲಾಲಿತ್ಯಗಳಿಂದ ನಿರ್ಮಿಸಿದ ಕೆಲಸ (ಅಶಿಪಿ. ೦೦). **ರೂವರಿ :** ರೂವರಿ ಮಲ್ಲಿತಮ್ಮ (ಎಕ. XIV, ತಿರುಶು. ೦೭೫-೨೦; ಸು. 1208); ರೂವರಿ ಚಕ್ರವರ್ತಿ ಪಾಲೋಜ

(ಮುಂಐಅ. ೧೯೦೫, ೩೩೩-೭; ?). **ರೂಹರಿ :** ರೂಹರಿ ಬಮ್ಮೋಜನ ಮಗ ಸುರಿಯಾಚಾರಿ ಬರದ (ಎಕ. XII, ತಿಶ್ಯಾ. ೯-೯೬: 1187).
[< ಸಂ. ರೂಪಕಾರಿನ್]

**ರೂವಿಕ** (ನಾ). ಒಂದು ಊರಿನ ಹೆಸರು : ಯಾಪದ್ರೂವಿಕಗ್ರಾಮ (ಇಅ. VII, ೨೦೩, ೯೯-೬೨; ಸು. 10ನೆಯ ಶತ). [ ? ]

**ರೂವಿಡು** ' ರೂಪಿಡು ' ನೋ.

**ರೂವಿಲಿ** ' ರೂಪಿಲಿ ' ನೋ.

**ರೂವಿಲ್ಲ** (ನಾ). ಆಕಾರವಿಲ್ಲದವನು; ಮನ್ಮಥ : " ಅನಂಗನಲ್ಲಿ ರೂವಿಲ್ಲನ" (ಶಬ್ದಾ. ೯೯). [ರೂವು (< ರೂಪು)+ಇಲ್$_1$+ — ಅ$_7$]

**ರೂವಿಸು** ' ರೂಪಿಸು ' ನೋ.

**ರೂವು** ' ರೂಪು ' ನೋ.

**ರೂವುಕ** (ನಾ). ಒಂದು ಬಗೆಯ ಸಸ್ಯ; ಹರಳು; ಔಡಲ. [ಸಂ.]

**ರೂವುಗಿಡು** ' ರೂಪುಗೆಡು ' ನೋ.

**ರೂಷಿತ** (ಗು). ೧. ಶೃಂಗರಿಸಿದ; ಅಲಂಕರಿಸಿದ. ೨. ಒರಟು ಮಾಡಿದ; ತರಕಲು ಮಾಡಿದ. ೩. ಪುಡಿಯನ್ನಾಗಿ ಮಾಡಿದ. ೪. ಲೇಪಿಸಿದ; ಬಳಿದ. ೫. ಆವರಿಸಿದ; ವ್ಯಾಪ್ತವಾದ. (ನಾ). ೬. ಮುಸುಕಿದುದು; ಆವೃತವಾದುದು: "ರೂಷಿತಂ, ಕುಂಠಿತಂ — ಈ ೨ ಮುಸುಕಿದುದು" (ಕಲಾಯು. ೦೨೬-೯೩). [ಸಂ.]

**ರೂಹ** ' ರೂಪು ' ನೋ.

**ರೂಹರಿ** ' ರೂವಾರಿ ' ನೋ.

**ರೂಹಾರ** ' ರೂಪಾರ ' ನೋ.

**ರೂಹಿಡು** ' ರೂಪಿಡು ' ನೋ.

**ರೂಹಿಸು** ' ರೂಪಿಸು ' ನೋ.

**ರೂಹು** ' ರೂಪು ' ನೋ.

**ರೂಹುಗರೆ** ' ರೂಪುಗರೆ ' ನೋ.

**ರೂಹುಗಳೆ** (ಕ್ರಿ). ರೂಪವು ಕೆಡು ; ಅಸ್ತವ್ಯಸ್ತಗೊಳ್ಳು : ರೂಹುಗಳೆ ದುಟ್ಟುಟುವೆಗಳ ಕಾಳಿಕೆಯು ಮೋಟಿಯ ತಾಟಿದೊಡಲುಗಳ . . . ತರಳ ಹೃದಯದ ದೇವಮಿಂದ್ರನನುಪಿ ಕಂಡರು (ಕುವ್ಯಾಕ. ೬-೦೨).
[ರೂಹು (< ರೂಪು) + ಕಳೆ$_1$]

**ರೂಹುಗಾಣಿಸು** ' ರೂಪುಗಾಣಿಸು ' ನೋ.

**ರೂಹುಗೆಡಿಸು** (ಕ್ರಿ). (ಆಕಾರವನ್ನು) ಇಲ್ಲವಾಗಿಸು; ನೀಗು : ಜನನ ಮರಣಂಗಳಂ ರೂಹುಗೆಡಿಸಿದ್ದ ಗುರುವೆ (ಕೊಪೀರ. ದೇ. ೨೪೪-೨೦); ಸ್ತ್ರೀ ಜನ್ಮವ ರೂಹುಗೆಡಿಸಿ ಮುಂದೆ ನೀನು ಹೋಹ ಮುಕ್ತಿಗೆ ನಾನು ಬರಬೇಕು (ಭರತ. ೩೯-೩೩). [ರೂಹುಗೆಡು (<ರೂಪುಗೆಡು)+—ಇಸು$_3$]

**ರೂಹುಗೆಡು** ' ರೂಪುಗೆಡು ' ನೋ.

**ರೂಹುಗೇಡು** ' ರೂಪುಗೇಡು ' ನೋ.

**ರೂಹುಗೊಳ್** ' ರೂಪುಗೊಳ್ ' ನೋ.

**ರೂಹುಗೊಳಿಸು** (ಕ್ರಿ). ರೂಪಿಸು; ರಚಿಸು : ಕಿನ್ನರಂ. . . ಬಿಂಕಂ ಬಡೆಯೆ ಮುಹಚಾರೆಯುಮಂ ಮಾಡಿ ರೂಢಿವಡೆದ ಮಧ್ಯಮಾದಿಯೆಂಬಾದಿ ರಾಗವುಂ ರೂಹುಗೊಳಿಪುದುಂ (ಶಾಂತೀಶ್ವ. ೦೩-೭೭ ವ).
[ರೂಹು (< ರೂಪು)+ಕೊಳ್$_1$+— ಇಸು$_3$]

**ರೂಹುದಳೆ** ' ರೂಪುದಳೆ ' ನೋ.

**ರೂಹುದೋಱು** ' ರೂಪುದೋಱು ' ನೋ.

**ರೂಹುವಡೆ** ' ರೂಪುವಡೆ ' ನೋ.

**ರೂಹುವಿಡಿ** ' ರೂಪುವಿಡಿ ' ನೋ.

**ರೆಂಕೆ** ' ಎಱಂಕೆ ' ನೋ.

**ರೆಂಚೆ** ' ಱಂಚೆ ' ನೋ.

**ರೆಂಜೆ** ' ರಂಜ ' ನೋ.

**ರೆಂಟೆ$_1$**, ರಂಟೆ (ನಾ). ಹೊಲವನ್ನು ಉಳಲು ಬಳಸುವ ನೇಗಿಲಿನಂಥ ಒಂದು ಬಗೆಯ ಸಾಧನ : ರೆಂ[ಶಾಶಾ. ರಂ]ಟೆಹೊಡೆದು ಬೆಳೆಸುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ (ಕಪಕ. ೦೭೬-೯); ಅದು . . . ಬಂಡಿ, ರೆಂಟೆ, ಕುಂಟೆ ಮೊದಲಾದ ಸಾಮಗ್ರಿಗಳನ್ನೂ ತೊಳೆದು ಪೂಜೆಮಾಡು ತ್ತಾರೆ (ಕಪ್ನಕಾ.೦೭೬). **ರಂಟೆ :** ಉಗೆಯ ರಂಟೆ, ಕಬ್ಬಿಣದ ರಂಟೆಗಳು ಉಪಯೋಗದಲ್ಲಿ ಬರಹತ್ತಿವೆ (ಮುಂಐಕೂ.೩೭); ಒಡೆಯರೇ ಮಾಡುತ್ತ ಬಂದ ಅನೇಕ ರಂಟೆಗಳ ಬೇಸಾಯ ಅಲ್ಲಿತ್ತು (ಕ್ರೀಜುಕ್ರ. ೯೯). [ ? ]

**ರೆಂಟೆ$_2$** (ನಾ). ಒಂದು ಬಗೆಯ ಹೂವು : ಅವಿರಳಮಪ್ಪ ವಲ್ಲಿಗೆಯ ಮೊಗ್ಗೆಯ ರಂಜಿಪ ರೆಂಟೆಯುಂ ಸುಧಾಂಶುವ ಪೊಳೆಪಂ ಪಗಲ್ ಪಸರಿ ಪಂಶುಕದುಟ್ಟುಡೆ ತೊಟ್ಟ ಕಂಚುಕಂ ವಿವಿಧಲತಾಂತಸಂತತಿಯಲಂಕರಣಂ ಸಿರಿಗಂಪಿನಂಪು ತನ್ನವಯವಶೋಭೆಯಿಂದೆ ಕಡುಶೋಭೆಯನಾಂತಿರಲೆಯ್ದೆ ವರ್ಣನಂ. (ಮಹಾಶೇ. ೦೪-೨೨). [ ? ]

**ರೆಂಬೆ** (ನಾ). ಮರದ ಕೊಂಬೆ ; ಶಾಖೆ ; ಟಿಸಿಲು : ತಳೆದು ತಾಂ ಪಲಬಗೆಯ ಬಲುಗೊಂಬೆ ರೆಂಬೆಗಳನ್ನು (ಶರಶು. ೦೨-೭); ಹಿಗ್ಗಿದನು ಮನದೊಳಗೆ ರೆಂಬೆಯು ನೆಗ್ಗಿತೆನೆ ಕುಣಿದಾಡುತ (ರಾಚೂಸಂ. ೫-೨-೯೭); ಮಾಧವ ಮರದ ರೆಂಬೆಯ ಮೇಲೆ ಕುಳಿತಿದ್ದನು (ಪಂಚತ. ೩೬).
[←ತೆಲು. ರೆಂಬ, ರೆಬ್ಬ, ರೆಮ್ಮ]

**ರೆಕ್ಕೆ** ' ಎಱಂಕೆ ' ನೋ.

**ರೆಕ್ಕೆಇರುವೆ** (ನಾ). ರೆಕ್ಕೆಗಳಿರುವ ಒಂದು ಜಾತಿಯ ಇರುವೆ : (•).
[ರೆಕ್ಕೆ (< ಎಱಂಕೆ)+ಇರುವೆ$_1$ (<ಇಱುಂಪೆ)]

**ರೆಕ್ಕೆಹುಳು** (ನಾ). ರೆಕ್ಕೆಗಳಿರುವ ಒಂದು ಬಗೆಯ ಹುಳು; ಈಚಲು ಹುಳು : ಮಳೆಗಾಲದಲ್ಲಿ ಸಂಜೆಯಾದ ಕೂಡಲೆ ರೆಕ್ಕೆಹುಳುಗಳು ಬಂದು ಬಿಡುತ್ತವೆ (ರೂಢಿ). [ರೆಕ್ಕೆ (< ಎಱಂಕೆ)+ಹುಳು (<ಪುೞು)]

**ರೆಜಿಸ್ಟರು**, ರಿಜಿಸ್ಟರು (ನಾ). ನಿಗದಿಮಾಡಿದ ವಿವರಗಳನ್ನು ನಮೂದಿಸುವ ಪುಸ್ತಕ; ದಾಖಲೆಪುಸ್ತಕ: ಕೌಂಟರಿನಲ್ಲಿದ್ದ ರೆಜಿಸ್ಟರಿನಲ್ಲಿ ತನಗೆ ಸಂಬಂಧಪಟ್ಟ ವಿವರಗಳನ್ನು ಬರೆಯುತ್ತಿದ್ದಂತೆ . . . ಪ್ರಶ್ನಿಸುತ್ತಿದ್ದ (ಹೊಸಕ್ಷಿ. ೦೩೩). **ರಿಜಿಸ್ಟರು :** ಅವಳು ರಿಜಿಸ್ಟರಿನಲ್ಲಿ ಸಹಿ ಹಾಕಿದಳು (ರೂಢಿ). [← ಇಂ. Register]

**ರೆಟ್ಟೆ** ' ಱಟ್ಟೆ ' ನೋ.

**ರೆಡಿಯೂರ್** (ನಾ). ಒಂದು ಊರಿನ ಹೆಸರು : ಉದಕಪೂರ್ವ್ವಕನ್ ದತ್ತಃ ಅಸ್ಯ ತಟಾಕಸ್ಯ ರೆಡಿಯೂರ್ನ್ನಾಮಗ್ರಾಮಸ್ಯ ಕೇದಾರೇಷು (ವ್ಯಕಅ. ೧೯೦೬. ೦೨-೩೨: 540). [ ? ]

**ರೆಡ್ಡಿ**, ರಡ್ಡಿ (ನಾ). ೧. ಕರ್ನಾಟಕ ಮತ್ತು ಆಂಧ್ರಪ್ರದೇಶದ ಗಡಿಗಳಲ್ಲಿ ನೆಲಸಿರುವ, ವ್ಯವಸಾಯವೇ ಮುಖ್ಯಕಸುಬಾಗಿದ್ದು, ತೆಲುಗು ಭಾಷೆಯನ್ನಾಡುವ ಒಂದು ಜನಾಂಗ : (•). **ರಡ್ಡಿ :** ೧. ಕಾಮ ಹರಭಕ್ತನೋರ್ವಂ ರಡ್ಡಿಕುಲಭವಂ . . . ಹೇಮರಡ್ಡಿಯೆನಿಪ್ಪವಂ . . . ಸಂಸಾರಮುಂ ಮಾಡುತಿರಲು (ಮಲ್ಲಿತ. ೨-೯); "ರಡ್ಡಿ "ಯೆಂಬ ಅಡ್ಡಹೆಸರು ಹೇಮನ ವಂಶದವರಿಗೆ ಬಿತ್ತು (ಕಹಾಗ. ೦೨೩). ೨. ಗ್ರಾಮಾಧಿಕಾರಿಗಳಲ್ಲಿ ಒಬ್ಬ ; ಪಟೇಲ : ಪಟೇಲನಿಗೆ . . . ರಡ್ಡಿ, ಹೆಗ್ಗಡೆ ಎಂತಲೂ ಹೆಸರುಂಟು (ಗ್ರಾಮಪಾಕ. ೦) ; ಗೌಡ, ನಾಯಕ, ರಡ್ಡಿ (ದೇಸಾಯಿ) ಎಂಬುವು ಬೇರೆಬೇರೆ ಪ್ರದೇಶಗಳಲ್ಲಿ ಅವರಿಗೆ ಸಲ್ಲುತ್ತಿದ್ದ ಹೆಸರುಗಳು (ಕರ್ನಾಭೂ. ೦೨೫).
[ದೇ.॥ ತಮಿ. ಇರಟ್ಟಿ, ರೆಟ್ಟಿ ; ತೆಲು. ರೆಡ್ಡಿ, ರಡ್ಡಿ]

**ರೆಪ್ಪು$_2$** ' ಱಿಪ್ಪು$_2$ ' ನೋ.

**ರೆಪ್ಪೆ$_1$** ' ಱೆಪ್ಪೆ ' ನೋ.

**ರೆಪ್ಪೆ$_2$** (ನಾ). ಒಂದು ಬಗೆಯ ಸಸ್ಯ : ರೆಪ್ಪೆ, ತೊಟ್ಟಲ್ಲ (ವ್ಯಶಿಗ. ೦೬-೩೦೫). [?./ ತೆಲು. ರೆಪ್ಪಲ]

**ರೆಪ್ಪೆಬಡಿ** (ಕ್ರಿ). ಎವೆಯನ್ನು ಅಲುಗಾಡಿಸು ; ರೆಪ್ಪೆಹೊಡೆ : ನವ ಕುಮಾರನನ್ನು ರೆಪ್ಪೆಬಡಿಯದೆ . . . ನೋಡುತ್ತ ರಾಜಮೋಹಿನಿಯಾಗಿ ನಿಂತಳು (ಕಥಾಕುಂ. ೯೦). [ರೆಪ್ಪೆ$_1$ (< ಱೆಪ್ಪೆ) + ಬಡಿ$_1$]

**ರೆಪ್ಪೆಹೊಡೆ** (ಕ್ರಿ). ೧. = ರೆಪ್ಪೆಬಡಿ : ಅವನು, ಅವಳನ್ನು ರೆಪ್ಪೆ ಹೊಡೆಯದ ಹಾಗೆ ನೋಡಿದ (ರೂಢಿ). ೨. ಸೂಚಿಸು; ಸನ್ನೆಮಾಡು : ಅವಳು ಆ ಸಂಗತಿಯನ್ನು ಎಲ್ಲರ ಮುಂದೂ ಹೇಳಬೇಡವೆಂದು ರೆಪ್ಪೆ ಹೊಡೆದು ಸೂಚಿಸಿದಳು (ರೂಢಿ).

[ ರೆಪ್ಪೆ$_1$ (< ಱೆಪ್ಪೆ) + ಹೊಡೆ$_1$ (< ಪೊಡೆ$_1$) ]

**ರೆವಡಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಶಿಲೇಮುದ್ದರ ಮಮ್ರ್ಯಾನ್ ಸರ್ವ್ವಸಿದ್ಧಿ ಆಚಾರ್ಜ್ಯ(ರ್ಯ್ಯ)ರ ಬಟ್ಟರ ರೆವಡಿಒವಜ್ಜರ್ ತೆಂಕಣದಿಶೆ ಮಾಡಿದೊರ್ (ಇಕ. X, ೧೭೦-೪ ; ೬ನೆಯ ಶಶ). [ ? ]

**ರೆವಡಿಬದ್ದ** (ನಾ). ಒಬ್ಬಾತನ ಹೆಸರು : ಪೆಸದೊರಾ ಮಗನ್ ರೆವಡಿ ಬದ್ದರಾಟದಾಳೆ ಕೊಮರಸಿಙ್ಗನ ದೇಗುಲವ ಆದಿತ್ಯಬಟಾರಗೆ ಕೊಟ್ಟುದು (ಇಕ. VII, ೨೬೬-೨ ; 732). [ ? ]

**ರೆವಿನ್ಯೂ, ರೆವೆನ್ಯು** (ನಾ). ತೆರಿಗೆ, ಸುಂಕ ಮುಂತಾದುವುಗಳಿಂದ ಬರುವ ಹುಟ್ಟುವಳಿ ; ರಾಜ್ಯಾದಾಯ : ಗ್ರಾಮಾಧಿಪತಿಗಳು ಸರ್ಕಾರದ ರೆವಿನ್ಯೂಬಾಬಿನಲ್ಲೆಲ್ಲಾ ಕಂದಾಯದ ಹಣದ ವಸೂಲಿಯು ಅತಿಮುಖ್ಯ ವಾದುದೆಂದು ತಿಳಿದಿರಬೇಕು (ಗ್ರಾಮಾಪ. ೬೮). **ರೆವೆನ್ಯು** : ರೆವೆನ್ಯು . . . ಹುಟ್ಟುವಳಿ, ಆದಾಯ, ಆಯ, ಉತ್ಪತ್ತಿ (Revenue. ಇಂಕ).

[ ← ಇಂ. Revenue ]

**ರೆವೆನ್ಯು** ' ರೆವಿನ್ಯೂ ' ನೋ.

**ರೆಳ್ಳು** (ನಾ). ಒಂದು ಬಗೆಯ ಜೊಂಡು,— ಗಲಗು : "ರೆಳ್ಳು — ಗಲಗು" (ಶಾಶಕೋ. ೯೦). [ ← ತೆಲು. ರೆಲ್ಲು. ಱೆಲ್ಲು ]

**ರೆಳ್ಳುಗುಸುವು** (ನಾ). ಒಂದು ಬಗೆಯ ಜೊಂಡು : "ಹುಲ್ಲುಮೆದೆ. . . ಸಣ್ಣಹುಲ್ಲು — ಈ ೪ ಜಾಬುಹುಲ್ಲು ಹೆಸರೆಂದು ಕೆಲವರನ್ನುವರು. ಆಂಧ್ರ ದಲ್ಲಿ ರೆಳ್ಳುಗಸುವು " (ಸಿದ್ಧಾಂತಿ. ೦೩೦). [ ರೆಳ್ಳು + ಕಸುವು$_?$ ]

**ರೇಂಜರು** (ನಾ). ಅರಣ್ಯಗಳ ರಕ್ಷಣೆಯನ್ನು ನೋಡಿಕೊಳ್ಳುವವನು : ಇಷ್ಟು ಚಿಕ್ಕವಯಸ್ಸಿನಲ್ಲಿ ರೇಂಜರರಾಗಿದ್ದೀರಿ (ಕೃಪಸ. ೩೯).

[ ← ಇಂ. Range.. ]

**ರೇಂಜರುಗಿರಿ** (ನಾ). ಅರಣ್ಯಗಳನ್ನು ರಕ್ಷಿಸುವ ಅಧಿಕಾರ,— ಪದವಿ: ಮಂತ್ರಿತ್ವ ಮಾಡಲು ಹುಟ್ಟಿದವನು . . . " ರೇಂಜರುಗಿರಿ " ಯಿಂದಲೇ ತೃಪ್ತನಾಗಬೇಕಾಯಿತು (ಕುರಾಉ. ೩೦). [ರೇಂಜರು + — ಗಿರಿ$_2$]

**ರೇಕ** (ನಾ). ೧. ಸಂದೇಹ ; ಸಂಶಯ. ೨. ಕೀಳುಜಾತಿಯವನು. ೩. ಕಪ್ಪೆ. ೪. ಒಂದು ಬಗೆಯ ಮೀಸು. ೫. ಭೇದಿ ; ವಿರೇಚನ.

[ ಸಂ. ]

**ರೇಕವಿಸರ** (ನಾ). ಒಂದು ಬಗೆಯ ಕಬ್ಬಿಣದ ಆಯುಧ : ಮಕರದಿಬ್ಬಿ ರೇಕವಿಸರ ಗೋವಿ ತುಪಾಕಿ ಮೊದಲಾದ ಆಯಸಯಂತ್ರಜಾಲಗಳು (ಳ್ಪಾಸ. ೮೭). [ ? ]

**ರೇಕು** (ನಾ). ೧. ಚಿನ್ನ ಮುಂತಾದ ಲೋಹಗಳ ತೆಳುವಾದ ತಗಡು; ವರ್ತಿ : ದಪ್ಪಮೀನು, ಸಣ್ಣಮೀನು ಬೆಳ್ಳಿಯ ಚೂರುಗಳಂತೆ. ಚಿನ್ನದ ರೇಕುಗಳಂತೆ . . . ಮೇಲಕ್ಕೆ ಬರುತ್ತಿದ್ದವು (ಚಿಸ್ತ೪. ೭) ; ಚಂದ್ರನ ಬೆಳ್ಳಿ ಎಲೆಗಳ ಮೇಲೆ ರೇಕುಗಳನ್ನು ಚಿಮುಕಿಸಿದಂತೆ ಕಾಣುತ್ತಿತ್ತು (ಅಂಹಾ. ೦೦೨). ೨. ಹೂವಿನ ಎಸಳು ; ಪಕಳೆ : ಹುವ್ವಿನ ರೇಕುಗಳಂ ಕರ್ಪೂರದ ಪುಡಿಯಂ ಶರಗಿನಿಂ ಸವರಿ (ಶಾಗಂ. ೦೬೬-೧೦) ; ಆ ಪುಷ್ಪಗಳಲ್ಲಿ ಒಂದಾದರೂ ಮುರಿದ ರೇಕಿನ . . . ಬಾಡಿದ ಪುಷ್ಪಗಳಿರಲಿಲ್ಲ (ಶಾಂತಲಾ. ೦೦೦). ೩. ಚಿನ್ನ ; ಬಂಗಾರ : ರಂಗನ್ನ ನೋಡೋಕೆ ರೇಕು ಮಾಣಿಕವೇಕೆ (ಹಳ್ಳಿಪಾ. ೦೬).

[ ದೇ. ॥ ತಮಿ. ಇರೇಕ್ಕು ; ತೆಲು. ರೇಕು, ಱೇಕು ]

**ರೇಕೆ, ರೇಖು** (ನಾ). ೧. ಗೆರೆ ; ಎಳೆ ; ರೇಖೆ : " ರೇಕೆ— ರೇಖಾ= ಗೆರೆ. ಗುರುತು " (ಶಬ್ದಕೋ. ೩೯). ೨. ಒಂದು ಅಳತೆ : ಹೊಲಗದೆ ೧ ರೇಕೆ ಒಂದುವೆ ಎಱ ರೇಕೆ (ಎಕ. IX. ಮಾಗ೩. ೦೨-೩ ; 1692). ೩. ಹಸನುಮಾಡುವುದು ; ಶುದ್ಧಮಾಡುವುದು. **ರೇಖು** : ೪. ಕಂದಾಯ ; ತೆರಿಗೆ (?) : ರೇಖು ಪ್ರಮಾಣು ಗ ೨೪ (ಎಕ. VII. ಶಿಮೊ. ೩-೦೩ ; 1671).

**ರೇಕೆಮಾಡು, ರೇಖುಮಾಡು** = ಶುದ್ಧಮಾಡು ; ಹಸನುಗೊಳಿಸು : ರೇಕೆ ಮಾಡಲಿಕ್ಕೆ ತಿಳಿಯದಿದ್ದರೆ ತೋಕೂರಿಗೆ ಹೋಗಲಿಕ್ಕೆ ತಿಳಿಯದೇ ? (ಗಾದೆ) ; ಪೈರನ್ನು ಕುಯಿದು ಒಟ್ಟಿ . . . ರೇಖುಮಾಡಿ ಗುತ್ತಿಗೇದಾರರಿಗೆ ಕೊಡುತ್ತಿದ್ದರು (ಹುಟ್ಟಿಹ. ೬೨). **ರೇಕೆಯಾಗು** = ಒಕ್ಕಣೆಯಾಗು ; ಹಸನಾಗು : ರಾಗಿ ರೇಕೆಯಾಗಿದೆ (ರೂಢಿ).

[ < ಸಂ. ರೇಖಾ ]

**ರೇಖಾಂಶ** (ನಾ). [ಭೂಗೋಳ] ಭೂಮಂಡಲದ ಉತ್ತರಧ್ರುವ ದಿಂದ ದಕ್ಷಿಣಧ್ರುವಕ್ಕೆ, ಒಂದು ಅಂಶಕ್ಕೆ ಒಂದರಂತೆ ಮುನ್ನೂರು ಅರುವತ್ತುರೇಖೆಗಳನ್ನು ಎಳೆದಂತೆ ಭಾವಿಸಿರುವ ಉದ್ದ ರೇಖೆ; ಮಧ್ಯಾಹ್ನ ರೇಖೆ : ರೇಖಾಂಶ (Longitude) ಅಂದರೆ ಯಾವದಾದರೂ ಒಂದು ಮಧ್ಯಾಹ್ನರೇಖೆಯಿಂದ ಪೂರ್ವಕಡೆಯಲ್ಲಾಗಲಿ . . . ಅಥವಾ ಪಶ್ಚಿಮಕಡೆಯಲ್ಲಾಗಲಿ ಇರುವ ಒಂದು ಸ್ಥಳಕ್ಕೂ ಮತ್ತು ಮಧ್ಯಾಹ್ನರೇಖೆಗೂ ಮಧ್ಯದಲ್ಲಿರುವ ದೂರವು (ಭೂಗೋಳ. ೬); ಅಕ್ಷವೃತ್ತಗಳ ಮೇಲೆ ಪ್ರಥಮಯಾಮ್ಯೋತ್ತರದಿಂದ ಎಣಿಸಿದ ಅಂಶಗಳಿಗೆ ರೇಖಾಂಶಗಳೆಂತಲೂ ಅನ್ನುವರು (ಭೂಂಬಉ. ೬-೬೩). 'ಅಕ್ಷಾಂಶ' ಪರಾ. [ಸಂ.]

**ರೇಖಾಕೃತಿ** (ನಾ). ಗೆರೆಗಳಿಂದ ಕೂಡಿದುದು : ರೇಖಾಕಾರವಾದುದು: ಬ್ರಾಹ್ಮೀಲಿಪಿ ಹುಟ್ಟಿನ ಮಟ್ಟಿಗೂ ರೇಖಾಕೃತಿಯದು (ಸಂಕೋಠ. ೪). [ಸಂ.]

**ರೇಖಾಗಣಿತ** (ನಾ). [ಗಣಿತ] ಗೆರೆಗಳು, ಕ್ಷೇತ್ರಗಳು ಮತ್ತು ಘನಾಕೃತಿಗಳು ಮುಂತಾದುವುಗಳ ಲಕ್ಷಣಗಳು, ಪ್ರಮಾಣಸಂಬಂಧಗಳನ್ನು ತಿಳಿಸುವ ಶಾಸ್ತ್ರ; ಜಾಮಿಟ್ರಿ : ಭೂಮಿಯ ಅಳತೆಯಲ್ಲಿ ಮುಖ್ಯವಾಗಿ ತಿಳಿದಿರಬೇಕಾದ ರೇಖಾಗಣಿತ ಸಿದ್ಧಾಂತಗಳಾವವು ? (ಭೂಮಿ. ೪೭); ಈ ಪಿರಮಿಡ್ಡುಗಳನ್ನು ಕಟ್ಟಿದ ಶಿಲ್ಪಿಗಳಿಗೆ ರೇಖಾಗಣಿತದ ಜ್ಞಾನವು ತಕ್ಕಮಟ್ಟಿಗೆ ಚೆನ್ನಾಗಿಯೇ ಇದ್ದಿರಬೇಕು (ಗಣಿ. ೩). 'ಅಂಕಗಣಿತ', 'ಬೀಜಗಣಿತ' ಪರಾ. [ಸಂ.]

**ರೇಖಾಚಿತ್ರ** (ನಾ). ಗೆರೆಗಳಿಂದ ಬರೆದ ಚಿತ್ರ : ಮಧ್ಯಹಿಂದೂಸ್ಥಾನದ ವಿಂಧ್ಯಾಚಲದ ಕೈಮೂರುಬೆಟ್ಟದಲ್ಲಿ ಕೆಲವು ರೇಖಾಚಿತ್ರಗಳಿವೆ (ಭಾಶ್ರ. ೦೭).

[ಸಂ.]

**ರೇಖಾಮಾತ್ರ** (ಅ). ಒಂದು ಗೆರೆಯಷ್ಟು; ಸ್ವಲ್ಪಮಾತ್ರ : ಇದುವೆ ರೇಖಾಮಾತ್ರ ಸರ್ವಾಂಗದಲಿ ನಿನ್ನನು ಮುಟಿಯದಿರು (ಕುವ್ಯಾಸ. ೦೦-೩೭).

[ < ಸಂ. ರೇಖಾಮಾತ್ರಂ ]

**ರೇಖಾಯಿಲ** (ನಾ). ರೇಖೆಗಳನ್ನು ಬಳಸಿ ಬರೆಯುವವನು (?) : ಆಕಾಲಪ್ರತ್ಯಯಕ್ಕೆ — ಗಾಥಾಯಿಲಂ, ರೇಖಾಯಿಲಂ (ಶಮದ. ೨೦೩ ಪ್ರಯೋ). [ < ರೇಖೆ + — ಆಯಿಲ$_2$ ]

**ರೇಖಾರೂಪ** (ನಾ). ಗೆರೆಗಳನ್ನು ಬಳಸಿ ಬರೆದ ನಕ್ಷೆ : ಮೂಲಭಾಷೆಯಿಂದ ಮೊದಲು ಪ್ರತ್ಯೇಕವಾದುದು ತೆಲುಗುಭಾಷೆಯೆಂದೂ, ಆಮೇಲೆ

ತಮಿಳು ಕನ್ನಡಗಳು ಕವಲೊಡೆದುವೆಂದೂ . . . ಹೇಳಬಹುದು. ಇದನ್ನೇ ರೇಖಾರೂಪವಾಗಿ ಹೀಗೆ ತೋರಿಸಬಹುದು (ಕೈಪಿಹಿ. ೩೦೬). [ಸಂ.]

**ರೇಖಾಶಾಸ್ತ್ರ** (ನಾ). = ರೇಖಾಗಣಿತ : ಸಂಖ್ಯಾಶಾಸ್ತ್ರವನ್ನು ಕಂಡುಹಿಡಿದ ಯಶಸ್ಸು ಭಾರತಕ್ಕೆ ಸಲ್ಲುತ್ತದೆ. ರೇಖಾಶಾಸ್ತ್ರದಲ್ಲಿ ಯವನರು ಪ್ರವೀಣರು (ಕಲ್ವಾ. ೬೨). [ಸಂ.]

**ರೇಖಿಕೆ** (ನಾ). ಗೆರೆ; ಗೀಟು : ಮಳಯಜರೇಣುಜಾಲಪರಿಪಾಂಡುರ ಮಾಯ್ತು ಕುಚದ್ವಯಂ ವಿಕಜ್ಜಳಕೃತರೇಖಿಕಾರಚನಮಾದುವು ಲೋಚನ ಯುಗ್ಮಂ (ಕಾವ್ಯಶ. ೬–೭೭). [ಸಂ. ರೇಖಿಕಾ]

**ರೇಖಿಸು** (ಕ್ರಿ). ೧. ಗೆರೆಯನ್ನು ಎಳೆ; ಗೀಟುಹಾಕು : ಕಸ್ತೂರಿಯಿಂದನುಮಾಡಿದ ನೆಲದೊಳ್ ವೃತ್ತಪಯೋಧರೆಯೊರ್ವಳ್ ಸಂತಸವೆತ್ತು ಮಸೆದ ಕೂರುಗುರಿಂ ರೇಖಿಸಿ (ಜಯಸಿಕಾ. ೬–೦೩). ೨. ಚಿತ್ರಿಸು : ಶಂಕರನು 'ನೆಲ–ಮುಗಿಲಿ'ನ ಮುಖಪುಟವನ್ನು ಸುಂದರಯಾಗಿ ರೇಖಿಸಿ ಕೊಟ್ಟನು (ಶಂಕಮು. XI, ಪಪಕಯು ೩೨). ೩. ಕಲ್ಪಿಸು ; ಯೋಜಿಸು : ಇವರು ತಮ್ಮ ನಾಟ್ಯಗಳಲ್ಲಿ ರೇಖಿಸುವ ರಂಗನಮೂನೆಗಳು . . . ಮಾಯಾಜಾಲವನ್ನು ಬೀಸುತ್ತವೆ (ಕಾರಂ. ೩೭೪) ; ಜಗದಾವ ವಸ್ತುವೂ ಇದರಾಸೆ ರೇಖಿಸದು (ಮಂಕಿರ. ೩೬–೭). [ರೇಖೆ + — ಇಸು$_3$]

**ರೇಖಿ** 'ರೇಕೆ' ನೋ.

**ರೇಖೆ** (ನಾ). ೧. ಗೆರೆ ; ಗೀಟು : "ಗೆಜ್ಜೆ ರೇಖೆಯುಕ್ಕು" (ಮಂಗರಾ. ೯೬–೦೬); ಬಿಜುಗಯ್ಯು ಕೂರುಗುರಿಂದ ಮೈಯೊಳು ತಾಗಲಿಜಿದು ರೇಖೆಗಳ ಮಾಡಿದನು (ಚಿತಸಾ. ೪–೩೭); ನಕ್ಷೆಯಲ್ಲಿ ಉತ್ತರದಿಂದ ದಕ್ಷಿಣಕ್ಕೆ ಎಳೆದಿರುವ ರೇಖೆಯು (ವೃತ್ತದ ವ್ಯಾಸವು) ಸರಿಯಾಗಿ ೧೮೦ ಡಿಗ್ರಿಗಳು (ನಕ್ಷತ್ರ. ೦೬). ೨. ಗಡಿಯನ್ನು ನಿರ್ಧರಿಸಲು, ಭೂಮಿಯನ್ನು ಅಳತೆಮಾಡಿ ಹಾಕಿರುವ ಗೆರೆ. ೩. ಹಸನುಮಾಡುವಿಕೆ : ಶುದ್ಧಗೊಳಿಸುವಿಕೆ : ಸಾಲಗಾರನು ಅಡಕೆ ಭತ್ತಗಳನ್ನು ರೇಖೆಮಾಡುತ್ತಿರುವುವನ್ನು . . . ನೋಡುತ್ತಾ ಇದ್ದರು. ಸಂಪೂರ್ಣ ರೇಖೆಯಾದೊಡನೆ ಕೋರ್ಟಿನಲ್ಲಿ ಅಮಲ್ದಾರ ದಾಖಲ್ಮಾಡಿಸುತ್ತಿದ್ದರು (ಕಂಜಶಂ. ೯೭). ೪. ನಿರ್ದೇಶನ ; ಸೂಚನೆ : ಘುಳುಘುಳಿಪ ಚೀತ್ಕಾರ ಕೋಳಾಹಳದ ಸೂಚನ ರೇಖೆಯಲಿ ಭಟಕುಲಲಲಾಮನ ತೇರು ಬಂದುದು ತೀವಿದಸ್ಥದಲಿ (ಕುಮಾವ್ಯಾದ್ರೋ. ೪–೩೦). ೫. ಅಂದ ; ಸೊಗಸು : ಬರಿಸುವುತ್ತಮದಿವ್ಯವಾಜಿಯನರಸ ಮೇಣವು ವೈಶ್ಯಜಾತಿಯ ತುರಗ ಕಣ್ಣಿಗೆ ರೇಖೆಯಲ್ಲದ ಸತ್ವಮೆಳ್ಳನಿತುಮಗುಳಲಾರವು (ಅಂಬಿಗ. ೧೬–೨೯). 'ರೇಖೆಗೊಳ್' ಪರಾ. ೬. ಲಾವಣ್ಯ ; ವಿಲಾಸ : ರೇಖೆ ನೃತ್ತದಿರವಂ ನೆರವೊಂದಿರೆ ದೇಸೆಯಿಂ ಶ್ರಮಂ ಬೆರಸುವನೀ ಕುಮಾರನೊಸೆವೆಂದಿನ ನಂದನ ಕಂದನಂದದಿಂ (ಚಕಲ. ೪–೦೩೩). ೭. [ಅಶ್ವಶಾ] ಕುದುರೆಯ ಆರು ಬಗೆಯ ಲಕ್ಷಣಗಳಲ್ಲಿ ಒಂದು (?) : ಭಂಜಳಿ ಮುರಳಿ ರ್‍ಸುಳಂಪಿ ವಾಹಿಣಿ ರೂಪು ರಂಜಿವ ರೇಖೆಯೆಂದೆಂಬ ಮಂಜುಳವಾದ ಷಡಂಗದೊಳಾ ಹಯ ರಂಜನೆವಡೆದುದು (ತ್ರೀಶಾಂ. ೪–೦೨). ೮. ಕಂದಾಯ ; ತೆರಿಗೆ (?): ತ್ರಿಭುವನಮಹಾದೇವಿ ಪಟ್ಟನ ಮೊಸುಕೋಳತ್ತೂರ ಗ್ರಾಮ ೧೫೦ ರೇಖೆ ಗ ೧೭.೨ (ಸೌಇಇ. IX – ii, ೪೭೭–೪ ; ಕ್ರಿ. 1472) ; ನಂದಿಗೇರೀಗ್ರಾಮ ೧೪ಕ್ಕೆ ರೇಖೆ ಗ ೮೦ (ಎಕ. VII, ಶಿಮಹೊ. ೨–೯೩ ; 1641).

**ರೇಖೆಮಾಡಿಸು** = ಧಾನ್ಯವನ್ನು ಹಸನುಮಾಡಿಸು : ದೊರೆಗಳವರು ಒಂದು ವರ್ಷ ಆದ ಫಲವನ್ನು ರೇಖೆಮಾಡಿಸಿ . . . ಸಮುದಾರು ಕೊಡುವಂತೆಯೂ ನಿಬಂಧನೆಮಾಡಿದರು (ಮಹಾಶಂ. I, ೦೦೬). **ರೇಖೆಮಾಡು** = ೧. ಬರೆ : ಈ ಕೆಳಗಿನ ಪಟ್ಟಿಯಲ್ಲಿ ಸೂಕ್ಷ್ಮವಾಗಿ ರೇಖೆಮಾಡಿದೆ (ರಾಜ್ಯಶಾ. ೩೩೩). ೨. ಹಸನುಮಾಡು : ರಾಗಿಯ ರೇಖೆಮಾಡು (ಅಶಾಂಪಿ. ೪೦–೪೦) ; ಸಾಲಗಾರನು ಅಡಕೆ ಭತ್ತಗಳನ್ನು ರೇಖೆಮಾಡುತ್ತಿರುವುದನ್ನು ಗೌಡರು . . . ನೋಡುತ್ತಾ ಇದ್ದರು (ಕಂಜಶಂ. ೯೭). **ರೇಖೆಯ ಕಾಲ** = ಒಕ್ಕಣೆ ಮಾಡುವ ಕಾಲ : ರೇಖೆಯ ಕಾಲದಲ್ಲಿ ಧಾನ್ಯವನ್ನು ಅಳೆಸಿ ರಾಜಾದಾಯವನ್ನು ಪ್ರತ್ಯೇಕಿಸಿಡಬೇಕು (ಕಶಂ. ೩೬೬). [ಸಂ. ರೇಖಾ]

**ರೇಖೆಗೊಳ್** (ಕ್ರಿ). ಚೆಲುವಾಗು ; ಸುಂದರವಾಗು : ಬಳ್ವಳಬೆಳೆದಳಗೌಂಗಿನಂತೆ ಲೋಕದ ಚೆಲ್ವೆಲ್ಲಮನೊಳಕೊಂಡು ರೇಖೆಗೊಂಡ ಲಾಟೀಲಲಾಮನ ಪರಿಣದ್ಧಕಂಧರಂ (ಕಂಕಶಾ. ೨–೩೯೪). [ರೇಖೆ + ಕೊಳ್$_1$]

**ರೇಖೆಗೊಳಿಸು** (ಕ್ರಿ). ಗೆರೆಯನ್ನು ಬರೆ ; ಗೀಟು ಎಳೆ : ತುಱುಗಿವೆ ಗಪ್ಪು ಕವಲ್ತು ಕುಡಿಗೊಂಡುದೆನಿಸಿ ನಿಡುಗಣ್ಗಂಜನಮನೆರ್ಚಿ ಸೋಗೆಯಂ ರೇಖೆಗೊಳಿಸಿಯುಂ (ವೃಕಶ. ೩–೦೫೪). [ರೇಖೆ + ಕೊಳ್$_1$ + — ಇಸು$_3$]

**ರೇಖೆದೆಗೆ** (ಕ್ರಿ). ಗೆರೆಯೆಳೆ ; ಗುರುತುಮಾಡು : ಮೊಲೆಯನುಗುರೊಳೌಂಕಿ ತೊಡೆಯನಲೆದು ರೇಖೆದೆಗೆದು ತುಟಿಯನೊಲಿದು ಸವಿವುತೊತ್ತಿ ತೋಳೊಳಪ್ಪಿ ಚುಂಬಿಸಿ (ಜಪಶ. ೩–೦೩). [ರೇಖೆ + ತೆಗೆ$_1$]

**ರೇಖೆದೋಱು** (ಕ್ರಿ). ೧. ಗೆರೆಯು ಕಾಣಿಸಿಕೊಳ್ಳು : ವರನಾರಾಯಣನ ರಾಣಿಯರ ಪಾದದ ಹೊನ್ನ ಸರಪಳಿಯೆಳೆಯುತ್ತ ಬರಲು ವರ ನೀಲದ ನೆಲಗಟ್ಟಲ್ಲಿ ಪೊಂಬಳ್ಳಿವರೆದಂತೆ ರೇಖೆದೋಱಿದುವು (ಮೋಶಹ. ೦೪–೨೭). ೨. ಚೆಲುವಾಗು ; ಸುಂದರವಾಗು : ತವರುಗುಳಿಯಿಲ್ಲದೊಪ್ಪುವ ರೇಖೆದೋರ್ಪ ಪೊಂಬವಳ ಪೊಳ್ಳಿಗಳದಾತಂ ತಾಳ್ದಿಹ ಪವಣ್ಣಿಪ ಚಿತ್ರಸಂಭವಕೇತನಾಗ್ರಮುಳ್ಳವನಿಳಾತಳವನಾಳ್ವಂ (ಜಪಶ. ೦೦–೨೨). [ರೇಖೆ + ತೋಱು]

**ರೇಗಟ** 'ರಾಕಡಿ' ನೋ.

**ರೇಗಟಿ** 'ರಾಕಡಿ' ನೋ.

**ರೇಗಡ** 'ರೇಗಡೆ' ನೋ.

**ರೇಗಡಿ** 'ರೇಗಡೆ' ನೋ.

**ರೇಗಡೆ,** ರೇಗಡ, ರೇಗಡಿ (ನಾ). ವ್ಯವಸಾಯಕ್ಕೆ ಉತ್ತಮವಾದ ಒಂದು ಬಗೆಯ ಭೂಮಿ ; ಎರೆಭೂಮಿ : ರೇಗಡೆ ಪಾಳುಭೂಮಿಗೆ ತಮ್ಮ ಕೈಯಿಂದ . . . ಸಾಗುವಳಿ ಮಾಡುತ್ತೇನೆಂದು ದರಖಾಸ್ತು ಮಾಡಿದವರಿಗೆ ಕ್ರಯಕ್ಕೆ ಕೊಡಬೇಕಾದರೆ (ಕುಹಾಶಂ. II, ೬೨) ; ನೆಲದಲ್ಲಿ ಜಾತಿಗಳು : ರೇಗಡೆ, ಎರೆ, ಕರಲು (ಪಮ್ಮಕು. ೨೪೩). **ರೇಗಡ** : (ಕೃಶ್‌ಗ. II, ೩೬೦). **ರೇಗಡೆ** : "ರೇಗಡಿನೆಲ– ಕರ್ಲುಭೂಮಿ" (ಜಾಪಕೋ. ೪೦).
[ದೇ.ಶ ತಮಿ. ರೇಕಟ ; ತೆಲು. ರೇಗಡ, ರೇಗಡಿ, ರೇವಡ, ರೇವಡಿ]

**ರೇಗಾಟ** (ನಾ). ಕೋಪದಿಂದ ಕೂಗಾಡುವಿಕೆ : ನಮ್ಮ ರೇಗಾಟಕ್ಕೆ ಯಾರೂ ಹೆದರುವುದಿಲ್ಲ (ಜಾತಿ). [ರೇಗು$_1$ + ಆಟ]

**ರೇಗಾಡು** (ಕ್ರಿ). ಕೋಪದಿಂದ ಕೂಗಾಡು ; ಕೆರಳು : ನಾನೊಂದು ಹತ್ತು ನಿಮಿಷವಿದ್ದು ಹೋಗುತ್ತೇನೆ. ಇಲ್ಲವಾದರೆ ದೊಡ್ಡಮ್ಮ ರೇಗಾಡುತ್ತಾರೆ (ವಾತ್ಸಲ್ಯ. ೨೬೪); ಅವನು ಯುಕ್ತಾಯುಕ್ತವಿವೇಚನೆಯನ್ನು ಕಳೆದುಕೊಂಡು ಕಂಡಕಂಡವರ ಮೇಲೆಲ್ಲ ರೇಗಾಡತೊಡಗಿದನು (ರಾಜಸ್ಕೂ. ೩೨). [ರೇಗು$_2$ + ಆಡು$_1$]

**ರೇಗಿಸು** (ಕ್ರಿ). ೧. ಸಿಟ್ಟಿಗೇಳಿಸು ; ಕೆರಳಿಸು : ಕೇಸರಿಗಳನು ರೇಗಿಸುತ್ತಿರುವ ನರಪತಿ (ಶ್ರೀರಾತ. ೩೪ ೮೬೨೪). ೨. ಹೆಚ್ಚುಮಾಡು ; ಉದ್ರೇಕಗೊಳಿಸು : ಆ ಸುದ್ದಿ ಒಮ್ಮೊಮ್ಮೆ ಅವನ ಮಾತ್ಸರ್ಯಾಗ್ನಿಯನ್ನು ರೇಗಿಸಿ, ಅವನ ಹೃದಯವನ್ನು ಹಿಂಡಿದರೂ . . . ಆಶಾಭಾವನೆ ತಾಳಿದನು (ಕುಸರು. ೦೬) ; ಆಹಾರವ್ಯತ್ಯಾಸಗಳಿಂದ ಈ ಇಸುಬು ಬರುವುದೆಂದು ತಿಳಿದು ಬಂದಿದೆ. ಔಷಧಿಯ ಮೇಲೆ ಔಷಧಿ ಹಾಕಿ ರೇಗಿಸದೆ ಮಗುವನ್ನು ಶುಚಿಯಾಗಿ ಇಟ್ಟುಕೊಂಡರೆ ಅದು ಸ್ವಲ್ಪ ಶಮನವಾಗುತ್ತದೆ (ಗೃಶಾ. ೦೪೪). [ರೇಗು$_2$ + — ಇಸು$_3$]

**ರೇಗು$_1$** (ಕ್ರಿ)· ಕೋಪಗೊಳ್ಳು; ಕೆರಳು : ಮಕ್ಕಳು ಅತ್ತರೆ ತಾಯಂದಿರು ಆಗಾಗ ರೇಗುವುದುಂಟು (ತೀತಾಕ್ಕ. ೧೭೦) ; ನೀನು ರೇಗಿದಾಗ ನಾನು ಒಪ್ಪುವುದು ಅಂದರೇನು ? (ಬಿಕಾಶ. ೪೩).

[ದೇ.॥ ತಮಿ. ರೇಜ್ಕು ; ತುಳು. ರೇಗು ; ತೆಲು. ರೇಗು, ರೇವು./ ಮರಾ. ರೇಂಕಣೇ, ರೇಕಣೇ]

**ರೇಗು$_2$** (ನಾ)· ಕೋಪ : ಸಿಟ್ಟು ; ಆಕ್ರೋಶ : ನನಗೆ ಬೆರಗೂ ಹುಟ್ಟಿತು, ರೇಗೂ ಇಟ್ಟಿತು (ಮುಂಗಾರು. ೬೬) ; ನನಗರಿವಿಲ್ಲದೆಯೇ ನಾನು ರೇಗಿನಿಂದ ಆಡಿದೆ (ಅಂತೂ. ೦೩೩). [<ರೇಗು$_1$]

**ರೇಗು$_3$** (ನಾ)· ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಎಲಚಿ : "ಕುವಲಂ . . . ಕೋಲಂ—ಇ ಯೆಳಚೀಹಣ್ಣು, ಬೋರೆ ಹಣ್ಣು, ರೇಗುವಂಡು" (ಸಿದ್ಧಾಂತಿ. ೦೨೦)·

[ದೇ.॥ ತೆಲು. ರೇಗು ; ಕೋಲಾ. ರೇಂಗ ; ಪರ್ಜಿ. ರೇಗ ; ಗೊಂಡಿ. ರೇಂಗಾ, ರೇಂಗ]

**ರೇಗುಪ್ತಿ** (ನಾ)· [ಸಂಗೀತ] ಒಂದು ರಾಗದ ಹೆಸರು : ರಾಗ ರೇಗುಪ್ತಿ, ಛಾಪುತಾಳ (ಹಪಮ. ೩೪) ; ಹಾಡುಗಳಿಗೆ ಕಾಂಬೋಧಿ, ಕಲ್ಯಾಣಿ· ರೇಗುಪ್ತಿ . . . ಆನಂದಭೈರವಿರಾಗಗಳೂ, ಆದಿ ಅಟತಾಳಗಳೂ ಸೂಚಿತವಾಗಿವೆ (ಯಕ್ಷಗಾ. ೩೮)· [ಸಂ.]

**ರೇಚ** (ನಾ)· ೧· ಉಸಿರನ್ನು ಹೊರಬಿಡುವುದು ; ನಿಶ್ವಾಸ· ೨. ಒಂದು ಬಗೆಯ ಗಿಡ : (ಕಿ)· [ಸಂ.]

**ರೇಚಕ** (ನಾ)· ೧· ಉಸಿರು ಬಿಡುವುದು ; ನಿಶ್ವಾಸ : 'ರೇಚಕವಾತ' ಪರಾ. ೨. ಭೇದಿಯಾಗಲು ಕೊಡುವ ಔಷಧ ಮುಂತಾದುವು ; ವಿರೇಚಕ : ಬಾಳೆಹಣ್ಣು ರೇಚಕವೆಂಬುದೇನೋ ನಿಜ. ಆದರೆ ಬೇನೆ ಬಿದ್ದಾಗ ಅದನ್ನು ಯಾರೂ ಕೊಡುವುದಿಲ್ಲ (ದಾಂಪ. ೬೬)· ೩. ಒಳಗಿನ ವಾಯುವನ್ನು ಹೊರಹಾಕುವ ಒಂದು ಬಗೆಯ ಸಲಕರಣೆ ; ನಿಷ್ಕಾಸನಾಳ : ಯಂತ್ರದ ರೇಚಕದಲ್ಲಿ (ಎಗ್ಸಾಸ್ಟ್) ವ್ಯರ್ಥವಾಗ ಬಹುದಾದ ಶಕ್ತಿಯನ್ನು ಬಳಸಿಕೊಂಡು . . . ಅತಿಪೂರಕಗಳನ್ನು ನಡೆಸು ವುದು ಮತ್ತೊಂದು ವಿಧಾನ (ಕವಿಕೋ. I, ೨೯೬)· ೪. ಕಳಂಕ ; ದೋಷ : ಖೇಚರತ್ವದ ನಿಲವ ಭೂಚರರರಿವರೆ ವಾಚಾಳಿಗಳ ಮಾತು ಹೊಲ್ಲದು ಮನದೊಳು ರೇಚಕವಳಿಯದೆ ಹೋಳಿಯದು (ಸಿದ್ಧೇ. ೩೭-೨೩)· ೫. [ಯೋಗ] ಮೂರು ಬಗೆಯ ಪ್ರಾಣಾಯಾಮದ ಅಂಗಗಳಲ್ಲಿ ಒಂದು ; ಮೂಗಿನ ಒಂದು ಹೊರಳೆಯಿಂದ ಉಸಿರನ್ನು ಹೊರ ಹಾಕುವುದು : "ನಾಸಿಕದಿ ಬಿಡುವಾನಿಲಂ ರೇಚಕಮೆನಿಕ್ಕು" (ಮಂಗರಾ· ೦೬-೦೪) ; ವನರುಹವಿಷ್ಟರಂ ರುಚಿರರೇಚಕಪೂರಕಕುಂಭಕಕ್ರಿಯಾಮುನಮಿರೆ (ಗದಾಯು· ೦೬-೦೫); ರೇಚಕಪೂರಕದ ರಿಂಗಣವನರಿವುದು ಯೋಗಸಿದ್ಧಿಗೆ ಲಕ್ಷಣವನು (ಕುವ್ಯಾಸ. ೪-೯) ; ನಾಸಿಕಾಪುಟದಿಂದ ಪ್ರಾಣವಾಯುವನ್ನು . . . ಹೊರಗೆ ಬಿಡುವುದಕ್ಕೆ ರೇಚಕ ಎಂದು ಹೆಸರು (ಶಾತತ್ತ್ವ. ೩೩೭). 'ಪೂರಕ' ಪರಾ. ೬. [ನಾಟ್ಯ] ನೃತ್ಯದ ಒಂದು ಚಲನೆ : ಕರಣಂ ರೇಚಕಮಂಗಹಾರಮಿನಿತೆಂದೋದುತ್ತುಮಿರ್ಪೋದದತ್ತಿರಲ್ (ಆದಿಪು· ೭-೦೨೦); ಒಂದು ಅಂಗದ ವರ್ತುಲಾಕಾರಚಲನೆಗೆ 'ರೇಚಕ' ವೆಂದು ಹೆಸರು (ಅಭಾಶ್ಯ. ೩೩). [ಸಂ.]

**ರೇಚಕಯಂತ್ರ** (ನಾ). ಒಳಗಿರುವ ಗಾಳಿಯನ್ನು ಹೊರಕ್ಕೆ ಹೊರಡಿಸುವ ಸಾಧನ; ಪಂಪು : "ರೇಚಕಯಂತ್ರ ; ಪೂರಕಯಂತ್ರ" (Pump· ಇಂಕನ). [ಸಂ.]

**ರೇಚಕವಾತ** (ನಾ)· ಉಸಿರಿನ ಗಾಳಿ : ಧಾತ್ರಿ ರೇಚಿಸುವ ರೇಚಕವಾತ ದಿನಭ್ರುದೊಡ್ಡುಗಳ್ ಝಳಿಸೆ (ಮಹಾಪೇ. ೯-೦೦). [ಸಂ.]

**ರೇಚಕಾನಿಳಹತಿ** (ನಾ). ಉಸಿರಿನ ಗಾಳಿಯ ಹೊಡೆತ : ಮಿರ್ಪವ ಪತಾಕೆಗಳೆತ್ತಿದ ಶಿಳಮೆನೆ ಜನಶಿಶುವ ರೇಚಕಾನಿಳಹತಿಯಿಂ ತಳರ್ದು ನಭೋಬ್ಧಿಯ ನೌಸಂಕುಳದಂತೋಡಿದುದು ಸುರವಿಮಾನವಿತಾನಂ (ಶಂಕ್ರಶ. ೦೨-೦೩೭)· [ ಸಂ. ರೇಚಕಾನಿಲಹತಿ ]

**ರೇಚನ** (ನಾ)· ದೋಷವನ್ನು ಹೊರಹಾಕುವಿಕೆ : ನಾಚಿಕೆಯನಾಗಿಪುವು ನಮ್ಮ ಸುಖಿದಾತುರದ ಯೋಚನೆಗಳವನು ಮರುವಗಲು ಪರಿಕಿಸಲು ಚಾಚಿದ್ದ ರಸನೆ ತಾನೊಳಸೇರಿಕೊಳ್ಳುವುದು ರೇಚನವದಾತ್ಮಕ್ಕೆ (ಮಂಕುತ. ೨೬೩). [ಸಂ.]

**ರೇಚನಿ** (ನಾ)· ಒಂದು ಬಗೆಯ ಸಸ್ಯ : ಲಾಲ್‌ತಿಗಡೆ : "ಸರ್ವಾನು ಭೂತಿಃ . . . ರೇಚನೀ—೭ ಕೆಚ್ಚನೇ ತಿಗಡೆಯ ಹೆಸರುಗಳು" (ಸಿದ್ಧಾಂತಿ· ೦೩೭). [ ಸಂ. ರೇಚನೀ ]

**ರೇಚಯ್ಯ** (ನಾ). ಒಬ್ಬಾತನ ಹೆಸರು : ಪೃಥುವೀಪರಮೇಶ್ವರಮಹಾ ನಾಯ್ಕರ ರೇಚಯ್ಯನ ಮಗನ್ (ಎಕ. XV, ಹೊಳೆ. ೬೮-೩; ಸು. 950)· [ ರೇಚ? + ಅಯ್ಯ$_1$ ]

**ರೇಚಿತ** (ಗು)· ೧· ಬರಿದು ಮಾಡಿದ· (ನಾ). ೨. ಕುದುರೆಯ ಐದು ಬಗೆಯ ನಡಗೆಗಳಲ್ಲಿ ಒಂದು : ನೆಟ್ಟಗೆ ನಿಲ್ಲದೆ ಓಡುವುದು ರೇಚಿತವೆನಿಸಿಕೊಂಬುವುದು (ಅಶ್ವಶಾ· ೨೩-೨) ; ದಾರಿತಿಕ ಸ್ಕಂಧಿತ ಪ್ಲುತ ವಲ್ಗಿತ ಚಾರು ರೇಚಿತಗಳು (ಜ್ಞಾನಸ. ೯-೩೩). ೩. [ನಾಟ್ಯ] ಹಸ್ತ ಚಲನೆಗಳಲ್ಲಿ ಒಂದು ಬಗೆ ; P" ಪತಾಕಹಸ್ತಗಳೆರಡನ್ನು ಅಂಗೈ ಮೇಲಕ್ಕೆ ಮಾಡಿ ನೀಡುವುದು ಅಥವಾ ಹಂಸಪಕ್ಷಹಸ್ತಗಳೆರಡರ ಮುಂಗೈಗಳನ್ನು ಜಾಗ್ರತೆ ತಿರುಗಿಸುವುದು [ಚಲಿಸುವುದು]" (ಅಭಿನಯಶಾಸ್ತ್ರ ೨೧೯ ಗದ್ಯಾನುವಾದ) : ಅಂಗೈ ಮೇಗಾಗಿ ಪತಾಕಂಗಳ್ ಮೇಣ್ ಹಂಸಪಕ್ಷಮಾಗಿಯೆ ಬೇಗಂ ಪಿಂಗದೆ ಮುಂಗೈ ತಿರುಗಲ್ ಕಂಗೊಳಿಸುವ ರೇಚಿತಾಖ್ಯಹಸ್ತಮೆನಿಕ್ಕುಂ (ಅಭಿನಯದ. ೨-೩೩)· ೪. ಕೊರಳನ್ನು ತಿರುಗಿಸುವ ಒಂದು ಪ್ರಕಾರ : ಸಮ, ನಿವೃತ್ತ, ವಲಿತ, ರೇಚಿತ, ಕುಂಚಿತ, ಅಂಚಿತ, ತ್ರ್ಯಸ್ರ, ನತ, ಉನ್ನತ — ಈ ಒಂಬತ್ತುಂ ಕೊರಲ ಭೇದಂಗಳ್ (ಅಭಿನಯದ. ೨-೦೦೯೭)· ೫. ಮೂವತ್ತೆರಡು ಬಗೆಯ ಅಂಗ ಹಾರಗಳಲ್ಲಿ ಒಂದು: ಸ್ಥಿರಹಸ್ತ . . . ರೇಚಿತ . . . ಸ್ವಸ್ತಿಕರೇಚಿತ — ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಅಭಿನಯದ. ೫-೭೭). [ಸಂ.]

**ರೇಚಿಸು** (ಕ್ರಿ)· ೧· ಉಸಿರನ್ನು ಹೊರಕ್ಕೆ ಬಿಡು ; ನಿಶ್ವಾಸಿಸು : ಧಾತ್ರಿ ರೇಚಿಸುವ ರೇಚಕವಾತದಿನಭ್ರುದೊಡ್ಡುಗಳ್ ಝಳಿಸೆ (ಮಹಾಪೇ. ೯-೦೦) : ಶರಣ ರೇಚಿಸುವಲ್ಲಿಯೇ ಪಂಚಾಕ್ಷರಂಗಳು ಎಡೆಯಾಡುತ್ತಿವೆ (ಶಿವವ. ೬೩-೫೨)· ೨. [ಯೋಗ] ಪ್ರಾಣಾಯಾಮದಿಂದ ನಿರೋಧಿ ಸಿದ್ದ ವಾಯುವನ್ನು ಮೂಗಿನಿಂದ ಹೊರಕ್ಕೆ ಬಿಡು : ಪದ್ಮಾಸೀನ ನಾಗಿ . . . ಪ್ರಾಣವಾಯುವಂ ಪೂರಿಸುತೆ ಸಲ್ಲೀಲೆಯಿಂದವಂ ರೇಚಿಸುತೆ (ಕದ್ಮಗ· ೨-೪೩). ೩. [ನಾಟ್ಯ] ಹಸ್ತಾಭಿನಯ ಮಾಡು : ಅರುಣ ಸರೋರುಹದಲರಂ ಮುರಿಮುರಿದೀಡಾಡುವಂತೆ ನಿಟ್ಟಿಸಿ ನೋಡಲ್ ಕರಮರಿದೆನೆ ಕರಮಿವು ಸಾಸಿರಮೆನೆ ರೇಚಿ [ಶಾಕಾಂ· ರಚಿಯಿ]ಸಿದಳಾಕೆಯಿಡಕಂ ಬಲಕಂ (ಲೀಲಾವ. ೯-೦೧೦). [ ರೇಚ + — ಇಸು$_3$ ]

**ರೇಜಿಗೆ** (ನಾ)· ೧. ಹೊಲಸು ; ಕೊಳಕು : ರೇಜಿಗೆ ರೇಚನದಿಂದ ಆದದ್ದು. ಆರಂಭದ ಅರ್ಥ ಮಾಂತಿ. ಈಗ ಯಾವುದೇ ಹೊಲಸು (ಪಮ್ಮಪ. ೦೩೭). ೨. (ಆಲಂ) ರಂಪ ; ರಾದ್ಧಾಂತ; ರಗಳೆ : ಸುಮ್ಮನೆ ನಾವು ಇದನ್ನು ರೇಜಿಗೆ ಮಾಡಬಾರದು. ಕೆತ್ತಿದರೆ ಇನ್ನೂ ಚಿಗುರೇ ಆಗುತ್ತೆ (ಶೀಮುಕಾ. ೦೫೭); ಈಗ ನೋಡಿ ಮನೇಲೆಲ್ಲ ಜಗಳ. ಮೂರುಹೊತ್ತೂ ರೇಜಿಗೆ (ಕಾನೂರು· ೦೮೦). ೩. ಅಸಹ್ಯ ; ಜುಗುಪ್ಸೆ : ನನಗೆ ಅವರ ಮೇಲೂ ಅವರ ಮಾತು, ಕತೆ. ಆಚಾರಗಳ ಮೇಲೂ . . . ರೇಜಿಗೆಯಾಯ್ತು (ಹೊಸಕ್ಷೆ· ೦೦೬). [ ? ]

**ರೇಜಿಡು** (ಕ್ರಿ). ಸಾಲಾಗಿ ನಿಲ್ಲು ; ಸಾಲುಗಟ್ಟು : ಜನ ರೇಜಿಟ್ಟೈತಿ ನೋಡು ನಾಯಕರ ಮನಿಗೆ (ಜನಪಾ. ೪೬) ; ಅವರ ಮನಿ ಮಂದೆಲ್ಲ ರೇಜಿಟ್ಟಾಂಗ ಕಾಣತ್ಯೆತಿ (ಆಮೂ. ೧೩). [ರೇಜು + ಇಡು$_1$]

**ರೇಜು** (ನಾ). (ಉಕ) ಸಾಲು; ಓಳಿ: 'ರೇಜಿಡು', 'ರೇಜುಗಟ್ಟು' ಪರಾ. [← ಮರಾ. ರೇಘ. / ಸಂ. ರೇಖಾ]

**ರೇಜುಗಟ್ಟು** (ಕ್ರಿ). = ರೇಜಿಡು : ಶೇಷಾಚಲದಿಂದ ಆಕಾಶರಾಜನ ಪಟ್ಟಣದವರೆಗೂ ಜನಸಮೂಹವು ರೇಜುಗಟ್ಟಿತು (ವೇಂಪುಶಾಹಾ. ೧೧೧) ; ಜೇನುತುಪ್ಪ ತೀರುವ ತನಕ ಆ ಹಲಿಗೆಯ ಮೇಲೆ ಇರುವೆಯು ಸಾಲು ಒಂದೇ ಸಮನೆ ರೇಜುಗಟ್ಟಿತ್ತು (ಮುಂಬಯಿ. ೫-೮೩). [ರೇಜು + ಕಟ್ಟು$_1$]

**ರೇಡಿಯೋ** (ನಾ). ೧. ಆಕಾಶದಲ್ಲಿ ಕಳಿಸುವ ನಿಸ್ತಂತುಸಂಜ್ಞೆಗಳನ್ನು ಹಿಡಿಯುವ ಸಲಕರಣೆ : ರೇಡಿಯೋ ಪಾಲ್ವಿನ ಒಳಗಡೆ ಏನಿದೆಯೆಂದು ತೋರಿಸುವ ಚಿತ್ರ (ಬಾಂಶ್ರ. III, ೧೫೯೫). ೨. ಆಕಾಶವಾಣಿ ; ಬಾನುಲಿ : ಇಂದು ರಾತ್ರಿ ಅವರ ರೇಡಿಯೋ ಭಾಷಣವಿದೆ (ರೂಢಿ). [← ಇಂ. Radio]

**ರೇಣು** (ನಾ). ೧. ಹುಡಿ ; ಧೂಳು ; ಕಣ : "ಪಾಂಸುಃ, ಕ್ಷೋದಃ, ರೇಣುಃ . . . ರಜಃ—ಈ ೬ ಧೂಳಿ" (ಹಲಾಯು. ೬೩-೨೮೯) ; ಎಲರಲೆಪ ದಿಂದುರುಳ್ದು ಪರೆದೆಸೆವ ಕುಸುಮರೇಣುಗಳೊಳಂ (ಶಾದಂಪು. ೯೬) ; ಅಣುರೇಣುಮಧ್ಯದಲ್ಲಿ ಗುಣಭರಿತ ನೀನೆಂದು ಮಣಿವುತಿಪ್ಪೆನಯ್ಯ (ದೇದಾವ. ೨-೩) ; ಕೆಂದೂಳಿ ಸೋಂಕಿದ ಸಿರಿಮುಡಿಯ ಕುಡಿಮೀಸೆಯಲಿ ಕೆಂಪಡರ್ದ ರೇಣುಗಳ . . . ದೇಪನ ಬರವ ಕಂಡನು (ಕುವ್ಯಾ ಉ. ೮-೬). ೨. ಹೂವಿನಲ್ಲಿರುವ ಪುಡಿ; ಪರಾಗ. ೩. ಒಂದು ಅಳತೆಯ ಪ್ರಮಾಣ: ಅಣುವೆಂಟು ರೇಣುವು (ವ್ಯವಹಾ. ಅಮಂದಿಂ. I, ೬-೩೦). [ಸಂ.]

**ರೇಣುಕ$_1$** (ನಾ). ೧. ಒಂದು ಬಗೆಯ ಔಷಧದ್ರವ್ಯ ; ಭಸ್ಮಗಂಧಿ : "ದ್ವಿಜಾ, ಹರೇಣು ... ಭಸ್ಮಗಂಧಿನೀ ಈ ೬ ರೇಣುಕವೆಂಬ ಗಂಧದ್ರವ್ಯ" (ಪಾತರಾ. ೧೧೧) : ನವಘೃತದೊಳ್ ಕೊಡಸಿಗೆ ಸೈಂಧವ ರೇಣುಕ ಚಿತ್ರಮೂಲ ಪಾಣಜಮಿಂಗೆಂಬಿವನಿಕ್ಕಿ ಪಿಂಡಮಂ ಮಾಡುವುದು (ಅಶ್ವಶಾ. ೧೧ ೧೮) ; ಜಟಾಮಾಂಸಿ, ರೇಣುಕ, ಗಂಟುಭಾರಂಗಿ, ಅರಸಿನ (ವೃದ್ಧಶಾ. II, ೫೫). ೨. ಒಂದು ಬಗೆಯ ದ್ವಿದಳಧಾನ್ಯ ; ಬಟ್ಟಗಡಲೆ : ರೇಣುಕ (ಕಾಕಡೀಜ) (ಮುಂಶಿವ್ಯಾ. ೧೭೯). 'ರೇಣುಕಬೀಜ' ಪರಾ. [ಸಂ. ರೇಣುಕಾ]

**ರೇಣುಕ$_2$** (ನಾ). ೧. ಒಬ್ಬ ಯಕ್ಷನ ಹೆಸರು. ೨. ಗಣಗಳಲ್ಲಿ ಒಬ್ಬ : ವೀರವೀರಕನಂದಿ ರೇಣುಕದಾರುಕರುವೃಷಮನ್ಯುಭೃಂಗಿಯು ವೀರಭದ್ರಾದಿ ಪ್ರಮಥರೋಲೈಪ ಸಮಯದೊಳು (ಶಿಗಪು. ೧-೫೨). ೩. [ವೀಶೈ] ಪಂಚಾಚಾರ್ಯರಲ್ಲಿ ಒಬ್ಬ ; ಪಂಚಪೀಠಗಳಲ್ಲಿ ಒಂದಾದ ರಂಭಾಪುರೀ ವೀರಸಿಂಹಾಸನವನ್ನು ಸ್ಥಾಪಿಸಿದವನು : ರೇಣುಕ ರಾಮಪಂಡಿತ ಮಹಾಮರುಳಾರ್ಯರ . . . ಬಣ್ಣಿಸುತ್ತೆಟಗಿ ಮೇಣ್ಪಡೆಮೆ ಪರಮಾರ್ಥಸಿದ್ಧಿಯಂ (ರಾಶಶೀ. ೧-೧೬). 'ದಾರುಕ' ಪರಾ. ೪. ಒಂದು ಸರ್ಪದ ಹೆಸರು : ಮಿತ್ರಾರಿ ರೇಣುಕನು ... ದಂಡಿಪಾದಾದ್ಯುಥುತರವ ಕಿಲ್ಬಿಷದ ಫಣಿಗಳು ಲಕ್ಷಸಂಖ್ಯೆಯವು (ಶಿಗಪು. ೯೬-೨೮). ೫. ಒಂದು ಆನೆಯ ಹೆಸರು [ಸಂ.]

**ರೇಣುಕಪೀಠ** (ನಾ). [ವೀಶೈ] ಪಂಚಪೀಠಗಳಲ್ಲಿ ಒಂದು : ಬಾಳೆ ಹೊನ್ನೂರಿನಲ್ಲಿ ರೇಣುಕಪೀಠವಿದೆ (ರೂಢಿ). [ಸಂ.]

**ರೇಣುಕಬೀಜ** (ನಾ). ಒಂದು ಬಗೆಯ ಔಷಧದ್ರವ್ಯ : ಭಸ್ಮಗಂಧಿ : "ಕಪಿಲೆ – ರೇಣುಕಬೀಜ" (ಗಂಗಾವು. ೬೦) ; ಸೈಂಧಸಲವಣ, ರೇಣುಕ ಬೀಜ, ಇವು ಸಣ್ಣನಾಗಿ ಪುಡಿಮಾಡಿ ಆ ಕಷಾಯಕ್ಕೆ ಹಾಕಿ ಕೊಳ್ಳಲು ಬಾಣಂತಿಯರ ಸಕಲರೋಗಂಗಳು ಮಾಣುವುವು (ಶಿಸ್ವಶಿ. ೧೩೨). [ರೇಣುಕ$_1$ + ಬೀಜ]

**ರೇಣುಕಾನಂದನ** (ನಾ). ರೇಣುಕೆಯ ಮಗ ; ಪರಶುರಾಮ : ನಿಜಭುಜ ಶಕ್ತಿಯಂ ಪ್ರಕಟಂ ಮಾಡಲೆಂದು ರೇಣುಕಾನಂದನನಲ್ಲಿಗೆ ಪೋಗಿ (ಕುಂಶಧ. ೧-೧೧೩ ವ). [ಸಂ.]

**ರೇಣುಕೆ** (ನಾ). ೧. = ರೇಣುಕಬೀಜ : ಸಬ್ಬಸಿಗೆ, ರೇಣುಕೆ ಇವುಗಳ ಕಷಾಯವನಿಕ್ಕಿ ತೆಗೆದುಕೊಳ್ಳಲು ವಾತಜ್ವರಂ ಮಾಣ್ಗುಂ (ಸಕವೈ. ೬೫). ೨. ಜಮದಗ್ನಿಯ ಹೆಂಡತಿ; ಪರಶುರಾಮನ ತಾಯಿ : "ರೇಣುಕಾ= ಜಮದಗ್ನಿಯ ಹೆಂಡತಿ" (ಕಾಕೆಕ. ೩೩); ಒಲುಮೆಯವಳಂತಿರ್ದು ಗಂಡನ ತಲೆಯ ರೇಣುಕೆ ತಬಿಸಳೆ (ಮದೇಪು. ೨೬-೪೬). [ಸಂ. ರೇಣುಕಾ]

**ರೇಣುಕೇಶ** (ನಾ). = ರೇಣುಕ$_2$ ೩ : ಶಿವವಕ್ಷೋಭಸ್ಮರೇಣುಪ್ರಭವನೆನಿಸಿ ಮುಂ ರೇಣುಕೇಶಾಖ್ಯೆಯಂ ತಾಳ್ದು (ರಾಶಶೀ. ೧-೫೩). [ಸಂ.]

**ರೇಣುಕೇಶ್ವರ** (ನಾ). = ರೇಣುಕ$_2$ ೩ : ರೇಣುಕೇಶ್ವರಮಹಾಗುರು ಮಾಳ್ಕೆ ಮಗಿಷ್ಟಸಿದ್ಧಿಯಂ (ವೃಶಪಿ. ೧-೧೧). [ಸಂ.]

**ರೇತ** (ನಾ). ವೀರ್ಯ ; ಶುಕ್ಲ : "ಇಂದ್ರಿಯಮಂತೆ ಧಾತು ರೇತಂ ಶುಕ್ಲಂ" (ಪಸ್ತುಕೋ. ೬೩-೩೦) ; ರೇತ ರಜಸ್ಸಿನಲ್ಲಿ ಜನಿತ ಆಧಿವ್ಯಾಧಿಯ ತವರುಮನೆ . . . ತನು (ಪಶಸಂ. ೪೫-೬೨). [ಸಂ. ರೇತಸ್]

**ರೇತಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ಪೆರ್ಗ್ಗಡೆ ರೇತಯ್ಯನ ವೇದ ಸಂಕಯ್ಯ (ಎಕ. II, ೪೬೬; ಸು. 1000). [ರೇತ ? + ಅಯ್ಯ$_1$]

**ರೇತಸ್ಸು** (ನಾ). ೧. = ರೇತ : ಮಲಮೂತ್ರನಿರೋಧದಿಂದಲೂ . . . ರೇತಸ್ಸು ಕ್ಷೀಣವಾಗುವುದು (ಸಕವೈ. ೨೯೬); ರಾಗವೆಂಬುದು ರೇತಸ್ಸಿಗೆ ಪೆಸರು (ಕಾಮಶಾ. ೨೪೨). ೨. ಪಾದರಸ; ಪಾರಜ. ೩. ನೀರು. [ಸಂ. ರೇತಸ್]

**ರೇಪಡಿಸು** (ಕ್ರಿ). (ಉಕ) ಎಣ್ಣೆ, ತುಪ್ಪ ಮೊದಲಾದ ಜಿಡ್ಡುಪದಾರ್ಥ ಗಳನ್ನು ಸವರು—ಬಳಿ : ಅವಳ ಸರ್ವಾಂಗಕ್ಕೆಲ್ಲವೂ ಅಗ್ನಿರಸವನ್ನು ರೇಪಡಿಸಿದಂತಾಗಿ ಕಣ್ಣ ಕೊನರುಗಳು ಉರಿಯ ಹತ್ತಿದ್ದವು (ರಕ್ತರ್. ೩೪೦). [ರೇಪಡ$_0$ (P ← ಮರಾ. ರೇಬಟಣೇ) + — ಇಸು$_3$]

**ರೇಫ** (ನಾ). ೧. 'ರ' ಎಂಬ ಅಕ್ಷರ : ಪಲ್ಲಟಿಸಿ ಡಕಾರದ ನೆಲೆಯಲ್ಲಿ ಟಕಾರಂ ಟಕಾರದೊಳ್ ರೇಫಂ ತಾನೆಲ್ಲಿಯುಮಕ್ಕುಂ ಪದವಿಧಿಯಲ್ಲಿ ಪರಂ ವ್ಯಂಜನಾದಿಯಾಗಿರೆ ಬಹುಳಂ (ಶಾವ್ಯಾವ. ೨೯೬); ರೇಫ ಟಕಾರಂಗಳ ವರ್ಣಾವೃತ್ತಿಗೆ (ಶಮದ. ೧೯ ಪ್ರಯೋ); ಹಳಗನ್ನಡದಲ್ಲಿ ರೇಫಯುಕ್ತ ವಾಗಿದ್ದ ಒತ್ತಕ್ಷರಗಳು ಈಗ ಸಜಾತೀಯ ಸಂಯುಕ್ತವ್ಯಂಜನಗಳಾಗಿವೆ (ಕೈಶಿದ. ೬). 'ಶಕಟರೇಫ' ಪರಾ. ೨. 'ರ' ಕಾರದ ಧ್ವನಿ,—ಶಬ್ದ. ೩. ಆಸಕ್ತಿ; ಒಲವು. ೪. ನೀಚ; ಅಧಮ : "ರೇಫ . . . ನಿಕೃಷ್ಟನೆನೆ ಕಷ್ಟನೆಂದೆಂಬವಗೆ ನಾಮಂ" (ಮಂಗರಾ. ೬೬-೪). ೫. [ಛಂದ] ಅಕ್ಷರ ಗಣಗಳಲ್ಲಿ ಒಂದು; ರಗಣ (— ∪ —). [ಸಂ.]

**ರೇಫೆ** (ನಾ). = ರೇಫ ೧ : ರೇಫೆ ಪುಟ್ಟುವ ತಾಣಮಂ ಬೆಟ್ಟತಾಗುಚ್ಚರಿಸೆ ಟಕಾರಂ ಪುಟ್ಟುಗುಂ (ಶಮದ. ೧೨ ವೃತ್ತಿ). [ಸಂ. ರೇಫ]

**ರೇಭಣ** (ನಾ). ಆಕಳಿನ ಧ್ವನಿ; ಹಸುವಿನ ಕೂಗು. [ಸಂ.]

**ರೇಯ** (ನಾ). ಒಡೆಯ; ಪ್ರಭು : ಆದಿಮೂರುತಿ ಸಿರಿಹಯವದನ ರೇಯಾ (ವಾದಿಕೀ. ೮೫-೫); ಬಲವೈರಿನುತ ನಮ್ಮ ವಿಜಯವಿಠ್ಠಲರೇಯ . . . ನಮ್ಮ ಭಾರ ವಹಿಸುವ (ವಿದಾಕೃ. ೧೪-೫). [< ರಾಯ]

**ರೇಯೂರ್** (ನಾ). ಒಂದು ಊರಿನ ಹೆಸರು : ರೇಯೂರುನಾಮ ಗ್ರಾಮ [ಃ] (ಇಂ. VII, ೧೮೮-೧೩; ೮೮೪). [? + ಊರ್]

**ರೇರಿಹಾಣ** (ನಾ). ೧. ಶಿವ ; ಈಶ್ವರ. ೨. ಕಳ್ಳ; ತಸ್ಕರ. ೩. ಒಬ್ಬ ರಾಕ್ಷಸನ ಹೆಸರು. [ಸಂ.]

**ರೇಲ** (ನಾ). ಒಂದು ಬಗೆಯ ಮರ : ಶಮ್ಯಾಕ : (?) [← ತೆಲು. ರೇಲ]

**ರೇಲು** ' ರೈಲು ' ನೋ.

**ರೇಲುವೆ** ' ರೈಲ್ವೆ ' ನೋ.

**ರೇವ** (ನಾ). ೧. ರೈವಂತನ ತಂದೆ. ೨. ನರ್ಮದಾ ನದಿ. ೩. ನೀಲಿಗಿಡ. [ಸಂ.]

**ರೇವಂತ** (ನಾ). ೧. ಸ್ವರ್ಗದ ಕಲ್ಪದ ಐದನೆಯ ಮನುವಿನ ಹೆಸರು. ೨. ಒಬ್ಬಾತನ ಹೆಸರು : ರೇವಂತನಡೆಗೌಡ ಸುರಿತಂಣ ಪಿರಿಯ ತಮ್ಮ ಗೌಡರು (ಎಕ. VII. ಶಿಕಮೊ. ೦೦೪-೦೫ ; 950 ?) ; ವೈರಿಘರಟ್ಟ ವಿಶದ ಹಯಾರೂಢಪ್ರೌಢ ರೇವಂತ ಪರಬಳಕೃತ್ತಾಂತ (ಕಇಅ. ೦೩-೪-೮೪; 1093). ೩. ಒಬ್ಬ ರಾಜನ ಹೆಸರು : ಕಡುಗಲಿಗಳೇಟಾಟದಲಿ ಮಿಗೆ ಠಾಡಿ ಪವಾಡ ದೃಢಾಯತಿಕೆಗಿದು ಪಡಿಯ ನಳ ರೇವಂತರೆಂದುದು ರಾವುತಿಕೆಗಳಲಿ (ಕುವ್ಯಾಭಾ. ೭-೨). [ಸಂ.]

**ರೇವಡಿ**, ಲೇವಡಿ$_2$ (ನಾ). (ಉಕ) ಸಕ್ಕರೆ ಅಥವಾ ಬೆಲ್ಲದ ಪಾಕಕ್ಕೆ ಎಳ್ಳು ಹಾಕಿ ಮಾಡುವ ಒಂದು ಬಗೆಯ ಸಿಹಿತಿಂಡಿ : ಅವುಗು ಲಡ್ಡುಗೆ ಬೆಲ್ಲ ಸವಿ ಮೂಕುಂಡೆಯು ರೇವಡಿಯು ಸವಿವಡೆ ತಣಿಗು ಭಾವಿಸುವಂತೆ ಚಕ್ಕುಲಿ (ಕರಪ. ೫-೦೦೨) ; ಅವಲಕ್ಕಿ ರೇವಡಿ ಬೆಂಡು ಬೆತ್ತಸ ಪುಟಾಣಿ ಮಕ್ಕಳ ಕಸಕೊಂಡು ಮುಕ್ಕಿತು ಮಂಗ (ಜನಗೀ. ೫೦). **ಲೇವಡಿ$_2$** : ಲೇವಡೀ ರುಚಿ ಹಾವಾಡಿಗ ಬಲ್ಲನೇ ? (ಗಾದೆ).

[←ಹಿಂ. ಮರಾ. ರೇವಡೀ./ ತುಳು. ಲೇವಡ]

**ರೇವಡಿಗಾರ** (ನಾ). ರೇವಡಿಯೆಂಬ ತಿಂಡಿಯನ್ನು ಮಾರುವವನು : ಒಬ್ಬ ಒಕ್ಕಲಿಗ, ಬಳಿಕ ಒಬ್ಬ ರೇವಡಿಗಾರ ಬಂದರು (ಪಪಪ. ೬೯).

[ರೇವಡಿ + — ಗಾರ (< — ಕಾಱ)]

**ರೇವಡಿಗಿಡ** (ನಾ). ಮುಳ್ಳುಗಳಿಂದ ಕೂಡಿರುವ ಒಂದು ಬಗೆಯ ಗಿಡ : (*). [ರೇವಡಿ$_0$ (P ← ತೆಲು. ರೇವಿಡಿ) + ಗಿಡ (< ಗಿಡು)]

**ರೇವಣನಾತ** (ನಾ). ಒಬ್ಬಾತನ ಹೆಸರು : ಆತನ ಸೂನು ದಾನಿ ತಾಂ [? ರೇ]ವಣನಾತನ್ (ಎಕ. XI. ಚಿತ್ರದು. ೭೪-೬ ; 968). [ ? ]

**ರೇವತಿ** (ನಾ). ೧. ಹಸು. ೨. ಬಲರಾಮನ ಹೆಂಡತಿ : "ರೇವತೀ . . . ಕೃಷ್ಣನಣ್ಣನ ಬಲಮನ ಹೆಂಡತಿಯುಂ" (ಶಾಶಕ್ಕೆ. ೦೦೬) ; ರೈವತಕಂ ತಂದು ತನ್ನ ಮಗಳಂ ಕುಡಲ್ ಆ ರೇವತಿಯೊಳ್ ಬಲದೇವಂ ವೈವಾಹೋತ್ಸವದೆ ನೆರೆದು ಸುಖದಿಂದಿರ್ದಂ (ಜಗಪು. ೦೦.೨). ೩. [ಜ್ಯೋತಿ] ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಕೊನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ರೇವತಿ ಪುಷ್ಯಮಶ್ವಿನಿ ಧನಿಷ್ಠೆ . . . ತಾರಾವಳಿಯುತ್ತಮಂ . . . ಚೌಲಕರ್ಮದೊಳ್ (ಲೋಕೋಪ. ೨-೩೦) ; ಅಶ್ವಿನಿ . . . ರೇವತಿಗಳೆಂಬಿಪ್ಪತ್ತೇಳು ತಾರೆಗಳ್ (ವಿವೇಕ. ೨೩೬) ; ಸೂರ್ಯನು ರೇವತೀತಾರೆಯನ್ನು ಸೇರಿದ ಕ್ಷಣವೇ ಮೇಷಸಂಕ್ರಮಣ (ಪಕ್ಷಕು. ೯೬). [ಸಂ. ರೇವತೀ]

**ರೇವದಾಸ** (ನಾ). ಒಬ್ಬಾತನ ಹೆಸರು : ರೇವದಾಸ ವೀಸೋತ್ತರ ದೀಕ್ಷಿತರತಿಪ್ರವಸ್ಥರತಿಮಾರ್ಗ್ಗಸ್ಥರ್ (ಎಕ. XIII. ೩೩೦-೦೫ ; 929). [ಸಂ.]

**ರೇವಮಂಗಾವಿಗ** (ನಾ). ಒಬ್ಬಾತನ ಹೆಸರು : ಇದಕೆ ಸಕ್ಕಿ ರೇವಮಗಾವಿಗನು (ಎಕ. VIII. ಸೊರಬ. ೩೭೦-೪೦ ; 692). [ ? ]

**ರೇವಮ್ಮ** (ನಾ). ಒಬ್ಬಾತನ ಹೆಸರು : ಪಣ್ಣತರ ಸಿಂಹ ಶ್ರೀರೇವಮ್ಮನ ಅಣ್ಣನ್ × ಕ್ಕಿಗನ್ (ಎಕ. XVI. ತುಮಕೂ. ೯೨-೦೯ ; ಸು. 780).

[ರೇವ + ಅಮ್ಮ$_1$]

ರೇವಲ್ಚಿನ್ನಿ ' ರೇವಾಚಿನ್ನಿ ' ನೋ.

**ರೇವಾಚಿನ್ನಿ**, ರೇವಲ್ಚಿನ್ನಿ (ನಾ). ಒಂದು ಬಗೆಯ ಔಷಧೀಸಸ್ಯ : "ಚೀನಾ ಮತ್ತು ಟಿಬೆಟ್ಟುಗಳ ಒಂದು ಸಸ್ಯದ ಬೇರು ; ಇದರಿಂದ ಮಾಡಿದ ಭೇದಿಯೌಷಧ , ವಿರೇಚಕ ; ರೇವಲ್ಚಿನ್ನಿ, ರೇವಾಚಿನ್ನಿ" (Rhubarb. ಇಂಕಸ). ' ದಾಲಚಿನ್ನಿ ' ಪರಾ. **ರೇವಲ್ಚಿನ್ನಿ** : ರೇವಲ್ಚಿನ್ನಿ, ಮಡ್ಡಿ ಕರ್ಪೂರ, ಗಂಧದ ಮರ, ಏಲಕ್ಕಿ . . . ಇವು ಇಲ್ಲಿ ದೊರೆಯುವ ಸಾಮಾನುಗಳು (ಕೃಪಾ. I. ೩೯೯). [← ಮರಾ. ರೇವಾಚಿನೀ, ರೇವಚಿನೀ]

**ರೇವು** (ನಾ). ಸಮುದ್ರದ ದಡದಲ್ಲಿ ಹಡಗುಗಳು ನಿಲ್ಲುವ ಸ್ಥಳ ; ಬಂದರು : ದೇಶದ ಸಮೀಪದಲ್ಲಿ ಹಡಗುಗಳು ಲಂಗರುಹಾಕುವ ಸ್ಥಳವು "ರೇವು" ಅಥವಾ "ಅಳವೆ" ಎಂದು ಕರೆಯಲ್ಪಡುತ್ತದೆ (ಭೂಗೋಳ. ೦೦); ಅವನು ರೇವಿಗೆ ಹೋಗಿ ನೌಕೆಯೊಂದನ್ನು ಸಿದ್ಧಪಡಿಸಿದ (ಪಾಪುಸ್ತ. ೪೫).

[ದೇ.॥ ತಮಿ. ತುಳು. ತೆಲು. ರೇವು]

**ರೇವುಕುಂಟೆ** (ನಾ). ಒಂದು ಸ್ಥಳದ ಹೆಸರು : ತೆಂಙ್ಕಣ ದೆಸೆ ಗುಡ್ಡೆಗಲ್ಲು ತುಮ್ಬುಕುಣ್ಟೆ ಪಾಮ್ಬುಳಕುಣ್ಟೆ (ಎಕ. XVI. ಶಿರಾ. ೩೬-೩೩; 878).

[ರೇವು ? + ಕುಂಟೆ$_3$]

**ರೇವುಪಟ್ಟಣ** (ನಾ). ಹಡಗುಗಳ ನಿಲ್ದಾಣವಿರುವ ಪಟ್ಟಣ ; ಬಂದರಿರುವ ನಗರ : ಭಾರತದೇಶದ ಹೆಚ್ಚು ವ್ಯಾಪಾರ ಬೊಂಬಾಯಿ, ಕಲ್ಕತ್ತ, ಕರಾಚಿ, ರಂಗೂನ್, ಮದರಾಸ್ — ಈ ಐದು ರೇವುಪಟ್ಟಣಗಳ ಮೂಲಕ ನಡೆಯುತ್ತದೆ (ಭೂಶಿಪ. ೩೬೩). [ರೇವು + ಪಟ್ಟಣ]

**ರೇವೆ$_1$** (ನಾ). ೧. ಒಂದು ನದಿಯ ಹೆಸರು; ನರ್ಮದೆ: "ಮೇಖಳಕನ್ಯಾ. ನರ್ಮದಾ. ರೇವಾ — ಈ ೩ ನರ್ಮದೆ" (ಕರಾಯು. ೦೦೦-೫೨). ೨. ನೀಲಿಗಿಡ. ೩. ರತಿ. [ಸಂ. ರೇವಾ]

**ರೇವೆ$_2$** (ನಾ). ೧. ಸಣ್ಣ ಕಣ ; ಪುಡಿ : ಪೀಪಿನ ತಳಕ್ಕೆ ಉಳಿಯುವ ರೇವೆಯೋ ನೀಲಿಯು . . . ಆ ರೇವೆಯನ್ನು ತೆಗೆದು . . . ಬಿಸಿ ಮಾಡುತ್ತಾರೆ (ಮುಂಬಯು. ೪-೫೩). ೨. ಪ್ರವಾಹದಲ್ಲಿ ಕೊಚ್ಚಿಕೊಂಡು ಬರುವ ಮರಳು ; ಮೆಕ್ಕಲುಮಣ್ಣು : ಸಿಂಧು ಮತ್ತು ಗಂಗಾನದಿಗಳು ಹಿಮಾಲಯದಿಂದ ತಂದ ರೇವೆಯಿಂದ ಬೈಲುಸೀಮೆಯಾಯಿತೆಂದು ಕಂಡು ಬರುತ್ತದೆ (ಹಿಂದೂಇ. ೨).

**ರೇವೆಯ ಭೂಮಿ** = ಮರಳುಮಿಶ್ರವಾದ ಭೂಮಿ ; ಮೆಕ್ಕಲು ಮಣ್ಣಿನ ಜಮೀನು : ರೇವೆಯ ಭೂಮಿ . . . ಸಾಗುಮಾಡಲಿಕ್ಕೆ ಸುಲಭವಾಗಿರುವುದು (ಸಸ್ಯಶಾ. ೦೨೬). [← ಮರಾ. ರೇವ]

**ರೇಶಿಮೆ** ' ರೇಶ್ಮೆ ' ನೋ.

**ರೇಶ್ಮೆ**, ರೇಶಿಮೆ, ರೇಷ್ಮೆ, ರೇಸಿಮೆ, ರೇಸ್ಮೆ (ನಾ). ೧. ಕೋಶದಲ್ಲಿ ವಾಸಿಸುವ ಒಂದು ಬಗೆಯ ಹುಳುವಿನಿಂದ ಉತ್ಪತ್ತಿಯಾಗುವ ಎಳೆ: 'ರೇಶ್ಮೆಬಟ್ಟೆ' ಪರಾ. ೨. ರೇಶ್ಮೆಯ ಎಳೆಯಿಂದ ತಯಾರಿಸಿದ ಬಟ್ಟೆ; ಪಟ್ಟೆವಸ್ತ್ರ : ಶ್ರೀಮನ್ನಾರಾಯಣನು ರೇಶ್ಮೆಯುಟ್ಟುಕೊಂಡು . . . ಮಲಗಿದ್ದಾನೆ (ದೇಕಸ್ತ. ೦೦). **ರೇಶಿಮೆ** : ೨. ರೇಶಿಮೆ, ಮಣ್ಣುಪಾತ್ರೆ ಮುಂತಾದ ಜಿನಸುಗಳು ಚೀನದೇಶದಿಂದ ನಮ್ಮ ದೇಶಕ್ಕೆ ಬರುತ್ತವೆ (ಮುಂಬಯು. ೪-೦೫೩); ನೀರೊಡೆದ ಕಣ್ಣುಗಳನ್ನು ಉಟ್ಟ ರೇಶಿಮೆಯ ಮುಗುಟದಿಂದ ಒರಸಿಕೊಳ್ಳತೊಡಗಿದಳು (ಅಕ್ಕೀಶ. ೨); ತನ್ನ ರೇಶಿಮೆಯ ಸೆರಗಿನ ತುದಿಯಿಂದ ನನ್ನ ಮುಖವನ್ನು ಮುಚ್ಚಿದಳು (ಕೃಪಾಶ. ೨). **ರೇಷ್ಮೆ** : ೧. ರೇಷ್ಮೆಯ ನಾರು ರೇಷ್ಮೆಯ ಹುಳುವಿನಿಂದ ಉತ್ಪತ್ತಿಯಾಗುತ್ತದೆ. ರೇಷ್ಮೆಹುಳು ಕಟ್ಟಿದ ಗೂಡಿನಿಂದ ತೆಗೆದ ದಾರವೇ ರೇಷ್ಮೆ ನಾರು (ಗೃಹವಿ. ೬೩). ೨. ರೇಷ್ಮೆಕಮ್ಬಿ ಲಗಾಮು ಸಹ (ಎಕ. XIV. ನಂಜನ. ೨೯೨—ಕೃಟಿ. ೦೪೨; 1847); ಮುನ್ನೂರು ವರಹಗಳು ಮಾತ್ರವೇ ಅಲ್ಲ . . . ಅಪೂರ್ವವಾದ ರೇಷ್ಮೆದುಪ್ಪಟ, ಅದನ್ನೂ ಕೊಡುತ್ತೇನೆ (ಅರ್ಜುನ. ೫). **ರೇಸಿಮೆ** : ೧. ಉಪ್ಪುನೀರಿಳಿಸೊಪ್ಪು ಕೂಡ ತೆಳ್ಳನೆ ಬೆಳ್ಳನೆ ರೇಸಿಮೆನೂಲಾಗಿ ಮಾರ್ಪಾಟುಗೊಳುವುದು ನೋಡ (ಜಂಪಾಶ. ೦೩೩-೪೬). **ರೇಸ್ಮೆ** : ೨. ದಿವಿಜರೀಕ್ಷಿಸುವಂತೆ ರೇಸ್ಮೆನಿಡುದುಗುಲಮಂ ತೋಯಿಸುತೆ ರುಧಿರದೊಳ್ ನಿಂದಿರ್ದಂ (ಶರಶು. ೩೦-೫೩).

[← ಪಾರ. ಹಿಂ. ರೇಶಮ್; ಮರಾ. ರೇಶೀಮ್. / ಚೀನಿ. ರೇಶಮ್]

**ರೇಶ್ಮೆಬಟ್ಟೆ,** ರೇಷ್ಮೆಬಟ್ಟೆ (ನಾ). ರೇಶ್ಮೆನೂಲಿನಿಂದ ತಯಾರುಮಾಡಿದ ಬಟ್ಟೆ ; ಪಟ್ಟೆವಸ್ತ್ರ : ಹಳೆರೇಶ್ಮೆಬಟ್ಟೆಯ ತುಂಡು . . . ಫರ್ನಿಚರನ್ನು ಉಜ್ಜಿ ಪಾಲಿಷ್ ಮಾಡಲು ಬಹಳ ಅನುಕೂಲವಾಗಿರುತ್ತದೆ (ಗೃಹಪ. ೦೭೦). **ರೇಷ್ಮೆಬಟ್ಟೆ** : ರೇಷ್ಮೆಬಟ್ಟೆಗಳು ವೈಯನ್ನು ಶಾಖವಾಗಿಡುವುವು. ರೇಷ್ಮೆಬಟ್ಟೆಗಳು ಬಹಳ ನುಣುಪಾಗಿರುವುದರಿಂದ ಇವು ಬೇಗ ಕೊಳೆಯಾಗುವುದಿಲ್ಲ (ಗೃಹಪ. ೬೭). [ರೇಶ್ಮೆ + ಬಟ್ಟೆ]

**ರೇಷಣ** (ನಾ). ೧. ಅರಚುವುದು; ಅರ್ಭಟಿಸುವುದು. ೨. ಗೊಣಗುವುದು: "ರೇಷಃ, ರೇಷಣಂ, ರೇಷಣೀಯಂ, ಈ ೩. ಗೊಣಗು" (ಶಾಶಕ್. ೦೨೦). ೩. ತೋಳದ ಕೂಗು; ಊಳು. ೪. ಗಾಯ. [ಸಂ.]

**ರೇಷನ್ನು** (ನಾ). ಒಬ್ಬ ಮನುಷ್ಯನಿಗೆ ನಿಗದಿಯಾಗಿ ಕೊಡುವ ಆಹಾರಪದಾರ್ಥಗಳ ಪ್ರಮಾಣ ; ಪಡಿತರ : ರೇಷನ್ನಿನಕ್ಕಿಯ ಚೀಲ ಬಂದಿತು ಕೈಗೆ (ಕಂಪ್ರಪೀ. ೩೫-೬೭). [←ಇಂ. Ration]

**ರೇಷಮಾನಿ** (ನಾ). = ರೇಶ್ಮೆ ೨: ಒಬ್ಬ ಸಂಗೀತಗಾರನು . . . ಕುತ್ತಿನಿ ಪಾಯಿಜಾಮಾ ಹಾಕಿಕೊಂಡು ರೇಷಮಾನಿ ಕೈವಸ್ತ್ರ ಸಹ ಬಹಳ ಡಬಡ್ನಾಳಕೆಯಿಂದಹಾಡುತ್ತಿರಲು (ಕಥಾಮಂ. VI, ೯). [<ರೇಶ್ಮೆ]

**ರೇಷೆ** (ನಾ). ಗೆರೆ; ರೇಖೆ: ಎರಡೂ ಸಂಸ್ಕೃತಿಯ ಪ್ರಗತಿಯು ಎಷ್ಟು ಸಮಾನಾಂತರರೇಷೆಯಲ್ಲಿ ಸಾಗಿತ್ತೆಂಬುದು ಇದರಿಂದ ವ್ಯಕ್ತವಾಗುತ್ತಿದೆ (ಕರ್ನಾಪು. ೬೮); ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ ತನ್ನ ದೈವರೇಷೆ ಬರೆಯುವಂತೆ ತಾನೆ ಛಾಲಾ (ನಾದಲೀ. ೮೯-೦೦). [ಸಂ. ರೇಖಾ]

**ರೇಷ್ಮೆ** 'ರೇಶ್ಮೆ' ನೋ.

**ರೇಷ್ಮೆಕಾಯಿಲೆ** (ನಾ). ಒಂದು ಬಗೆಯ ರೋಗ : ಅವರು ರೇಷ್ಮೆ ಕಾಯಿಲೆಯಿಂದ ಮೃತರಾಗಿದ್ದರು (ಶಾಪೂರು. ೩೬). [ರೇಷ್ಮೆ + ಕಾಯಿಲೆ]

**ರೇಷ್ಮೆಜ್ವರ** (ನಾ). = ರೇಷ್ಮೆಕಾಯಿಲೆ: ನಾಳಸಂಕೋಲೆ, ಛಳಿಜ್ವರ, ರೇಷ್ಮೆಜ್ವರ, ಗಂಟಲುಬೇನೆಗಳಿಗೆ ಸಿದ್ದಣ್ಣನ ಮೂಲಿಕೆಗಳು ಸಿದ್ಧೌಷಧವಾಗಿದ್ದುವು (ಕಂಜಕಂ. ೩೯). [ರೇಷ್ಮೆ + ಜ್ವರ]

**ರೇಷ್ಮೆಬಟ್ಟೆ** 'ರೇಶ್ಮೆಬಟ್ಟೆ' ನೋ.

**ರೇಷ್ಮೆಸೀರೆ** (ನಾ). ರೇಶ್ಮೆದಾರದಿಂದ ನೆಯ್ದ ಸೀರೆ ; ಪಟ್ಟೆಸೀರೆ : ತರೋದೆ ಉಂಟಂತೆ. ಒಂದು ರೇಷ್ಮೆಸೀರೆ ತರೋದು ಬೇಡವೆ! (ನನ್ನೂರು. ೨೯೨). [ರೇಷ್ಮೆ (< ರೇಶ್ಮೆ) + ಸೀರೆ]

**ರೇಷ್ಮೆಹಿಪ್ಪಲಿಗಿಡ** (ನಾ). ರೇಶ್ಮೆಹುಳುಗಳು ತಿನ್ನುವ ಸೊಪ್ಪಿನ ಗಿಡ; ಉಪ್ಪುನೇರಳೆ: ಕಂಬಳಿಗಿಡ, ರೇಷ್ಮೆಹಿಪ್ಪಲಿಗಿಡ (ವೃಕಿಗಿ. ೩೫-೦೦೦೦). [ರೇಷ್ಮೆ (<ರೇಶ್ಮೆ) + ಹಿಪ್ಪಲಿ + ಗಿಡ (< ಗಿಡು)]

**ರೇಷ್ಮೆಹುಳು** (ನಾ). ರೇಶ್ಮೆಯನ್ನು ಉತ್ಪತ್ತಿ ಮಾಡುವ ಒಂದು ಬಗೆಯ ಹುಳು: "ಕೌಶೇಯಂ . . . ರೇಷ್ಮೆಹುಳು" (ಸಿದ್ಧಾಂತಿ. ೨೦೨); ರೇಷ್ಮೆಹುಳುಗಳನ್ನು ಮೊಟ್ಟಮೊದಲು ಚೀನಾದೇಶದಲ್ಲಿ ರೇಷ್ಮೆಗಾಗಿ ಸಾಕಲು ಪ್ರಾರಂಭಿಸಿದರು (ಗೃಹಪ. ೬೩). [ರೇಷ್ಮೆ (<ರೇಶ್ಮೆ)+ಹುಳು (<ಪುಟು)]

**ರೇಸಿಮೆ** 'ರೇಶ್ಮೆ' ನೋ.

**ರೇಸು** (ನಾ). ಕುದುರೆಗಳೂ, ಕ್ರೀಡಾಪಟುಗಳೂ ಓಡುವ ಪಂದ್ಯದ ಓಟ : ಬೆಂಗಳೂರಿನಲ್ಲಿ ಕುದುರೆರೇಸು ನಡೆಯುತ್ತದೆ (ರೂಢಿ). [←ಇಂ. Race]

**ರೇಸ್ಮೆ** 'ರೇಶ್ಮೆ' ನೋ.

**ರೈ** (ನಾ). ೧. ದ್ರವ್ಯ ; ಸಂಪತ್ತು; ಐಶ್ವರ್ಯ : "ಧನಕನಕವಾಚಕಂ ರೈಶಬ್ದಂ" (ಪತ್ತುಕೋ. ೦೨೫-೯೨); ಐಕಾರಕ್ಕೆ–ದ್ಯೆಯೆಂದಂ ; ರೈಯೊದವಿತ್ತು (ಕಮುದ. ೩೩ ಪುಟೋ); ಸೌರ್ಯದಿಂದಂಕಮಂ ರೈಯಂ ಕೈಮಿಗೆ ಸಾರ್ಚಿ ಸಂತವಿಸಿದಾ ಗೋವಿಂದನಂ ಮಂದಿಪೆಂ (ಐಕ್ರಗೋ. ೦-೦). ೨. ಚಿನ್ನ ; ಸುವರ್ಣ: "ಗೈರಿಕಂ ... ಕಾಂಚನಂ ರೈ ರುಕ್ಮಮಷ್ಟಾಪದಂ . . . ಸ್ವರ್ಣಮೆನೆ ಹೊನ್ನಿಂಗೆ ನಾಮಮುಕ್ಕುಂ" (ಮಂಗರಾ. ೪೦-೪); ಸಕಳಾರ್ಥಿವ್ರಾತ ಚೇತೋಮುದಮನವಮನವಲರ್ರೈಧಾರೆಯಿಂ . . . ಮಾಡಿ (ಕಂಪ್ರಕು. ೯-೬೯). [ಸಂ.]

**ರೈಟರು** (ನಾ). ಕರಣಿಕ ; ಗುಮಾಸ್ತ: ನಮ್ಮ ಕಚೇರಿಯಲ್ಲಿ ಇಬ್ಬರು ರೈಟರು ಗಳಿದ್ದಾರೆ (ರೂಢಿ). [← ಇಂ. Writer]

**ರೈತ,** ರೈಹಿತ್ತ₂ (ನಾ). ಆರಂಬಮಾಡುವವನು ; ಒಕ್ಕಲಿಗ ; ವ್ಯವಸಾಯಗಾರ : ಸರಕಾರಕ್ಕೆ ರುಜು ಇಲ್ಲದೆ ರೈತನಾಗಬಾರದು ಅದೆಂತೆಂದೊಡೆ ಇಷ್ಟುಳ್ಳಾತನೇ ಪಾಚ್ಯಾರೈತ (ಪಕಸಂ. ೬೦); ರೈತರು ಯೆಲ್ಲಾ ಬಿತ್ತಿ ಬೆಳದಾ ಧಾನ್ಯ (ಹುಪಳ. ೦೦); ಎರಡು ವರ್ಷಗಳಿಂದಲೂ ಬರಗಾಲವು ಬಂದು ರೈತರು ದಣಿದಿದ್ದಾರೆ (ಶ್ರೀರಾಮು. ೦೬೬). **ರೈಹಿತ್ತ₂** : ಕಿಗ್ಗಟ್ಟುಹತ್ತುನಾಡುರೈಹಿತರು ತಂಮ ಭಕ್ತಿಯಿಂದ . . . ರಾಮೇಶ್ವರದೇವರ ದೇವಸ್ಥಾನವನ್ನು ಜೀರ್ಣೋದ್ಧಾರಮಾಡಿಸಿಯಿದ್ದಾರೆ (ಎಕ. I. ೦೦೬-೨; 1840). [← ಅರ. ರಈಯತ್ ; ಹಿಂ. ರಯ್ಯತ್, ರೈಯತ್; ಮರಾ. ರಯತ್, ರಯ್ಯತ್, ರೈಯತ್ /ಇಂ. Ryot]

**ರೈತಾಪಿ** (ನಾ). ೧. ಆರಂಬ ; ಬೇಸಾಯ : ಆದವಾನಿಸೀಮೆ ರೈತರ ಹಿಡಿತಂದು ಕೊಡಗಿನ ಸೀಮೆಯಲ್ಲಿ ರೈತಾಪಿಗೆ ಇಟ್ಟು (ರಾಕೆಂದ. ೦೭). ೨. ವ್ಯವಸಾಯಗಾರ: ಹೆಚ್ಚು ತರಕಾರಿ ಬೆಳೆಯಬೇಕೆಂಬ ಪ್ರಚಾರವನ್ನು ರೈತಾಪಿ ಜನರು ಸ್ವಾಗತಿಸುವುದರಲ್ಲಿ ಸಂದೇಹವಿಲ್ಲ (ಕರಪ. ೬೭); ರೈತಾಪಿ ಜನರು . . . ಬಾಧೆಪಡುವುದನ್ನೂ ನಿಲ್ಲಿಸುವುದಕ್ಕೆ ಈ ಸಹಕಾರಸಂಘಗಳು ಸ್ಥಾಪಿತವಾದವು (ಗೃಹಪ. ೦೯೯). [ < ರೈತ]

**ರೈದ** (ನಾ). ಐಶ್ವರ್ಯವನ್ನು ಕೊಡುವವನು ; ಕುಬೇರ : ಜಯ ಜಯವಿಚಿತ್ರಚಾರಿತ್ರ ರೈದನ ಮಿತ್ರ ಜಯಜಯ . . . ಗುರುಸಂಗಮೇಶಾ (ಶೃಕುಪು. ೬-೦೦೦). [ಸಂ.]

**ರೈಲು,** ರೇಲು (ನಾ). ೧. ಕಂಬಿ : ಹಳಿ : 'ರೈಲುಮಾರ್ಗ' ಪರಾ. ೨. ಆವಿ ಅಥವಾ ವಿದ್ಯುತ್ತಿನ ಸಹಾಯದಿಂದ ಕಂಬಿಗಳ ಮೇಲೆ ಚಲಿಸುವ ಗಾಡಿ ; ಟ್ರೈನು : ರೈಲಿನ ಉಪಯೋಗ ಎಲ್ಲಿಯವರೆವಿಗೆ ? ನಮ್ಮ ಸ್ಟೇಷನ್ ಸಿಕ್ಕುವವರೆವಿಗೆ (ಕಲಾಶ್ಯ. ೨೭೦). ಕಳುಹಿಸಿ ಕೊಟ್ಟಳು ಪತಿಯನು ರೈಲಿಗೆ (ಕಂಪ್ರಪೀ. ೨೫-೯೭). **ರೇಲು** : ೧. ನೀವು ನಿಲ್ಲನೆ ಮುಟ್ಟುವಲ್ಲಿ ರೇಲು ಹೋಯಿತೆಂಬುದು ಖಚಿತವಾಯಿತು (ಕೆಂಡುಟ. ೦೦); ಆದಪ್ಪ ಮಾಸ್ತರರು . . . ಬೆಳಗಿನ ರೇಲಿಗೆ ಇಳಿದು . . . ಊರಿನ ಕಡೆಗೆ ನಡೆದರು (ಅಕೋಳ. ೨೪೬).

**ರೈಲು ಬಿಡು** = (ಅಲಂ) ಸುಳ್ಳುಹೇಳು ; ಬುರುಡೆ ಹೊಡೆ : ಚಾರ್ಲಿ ಚಾಪ್ಲಿನ್ ರೈಲುಬಿಟ್ಟ ಮೇಲೆ ರೈಲಿನಲ್ಲಿಯೂ ಕುಳಿತುಕೊಳ್ಳಬಾರದೆಂದು ನಿರ್ಧಾರ ಮಾಡಿತು ನನ್ನೂರಿನ ಮಹನೀಯರ ಮಂಡಳಿ (ನನ್ನೂರು. ೨೯). **ರೈಲು ಹತ್ತಿಸು** = (ಅಲಂ) ಪೂಸಿಮಾಡು ; ಪುಸಲಾಯಿಸು : ಈಗ ಅವರಿಗೆ ತಮ್ಮ ಕೆಲಸವಾಗಬೇಕಾಗಿದೆ, ಅದಕ್ಕೇ ಅವನನ್ನು ರೈಲು ಹತ್ತಿಸುತ್ತಾ ಇದ್ದಾರೆ (ರೂಢಿ). [ ← ಇಂ. Rail ]

**ರೈಲುಚೆಂಬು,** ರೈಲುಚೊಂಬು (ನಾ). (ಪ್ರಯಾಣದಲ್ಲಿ ತೆಗೆದುಕೊಂಡು ಹೋಗಲು ಉಪಯೋಗಿಸುವ) ನೀರು ತುಳುಕದಂತೆ ತಿರುಪಿನ ಮುಚ್ಚಳವಿರುವ ಚೆಂಬು : ಅವಳು ಕೈಯಲ್ಲಿ ಒಂದು ಸಣ್ಣ ರೈಲುಚೆಂಬು ಹಿಡಿದಿದ್ದಳು (ಕಪಸಂ. ೦೨೦). **ರೈಲುಚೊಂಬು** : ಎರಡು ಟ್ರಂಕ್, ಬೆಡ್ಡಿಂಗ್, ರೈಲುಚೊಂಬು ಇಷ್ಟನ್ನೇ ಸಾಗಿಸಿಬಿಟ್ಟು (ರೂಪಕಸಂ. ೨). [ ರೈಲು + ಚೆಂಬು₁ ]

**ರೈಲುಚೊಂಬು** 'ರೈಲುಚೆಂಬು' ನೋ.

**ರೈಲುಮಾರ್ಗ** (ನಾ). ರೈಲುಗಾಡಿಯು ಚಲಿಸಲು ಉಕ್ಕಿನ ಕಂಬಿಗಳಿಂದ ನಿರ್ಮಿಸಿರುವ ರಸ್ತೆ : ನಿಟ್ಟೂರು : ಬೆಂಗಳೂರು – ಪೂನ ರೈಲು

ಮಾರ್ಗದಲ್ಲಿ ಹದಿಮೂರನೆಯ ನಿಲ್ದಾಣ (ಏಟ್ಟುಕಾಂ. ೨).
[ ರೈಲು + ಮಾರ್ಗ ]

**ರೈಲ್ವೆ,** ರೇಲುವೆ (ನಾ). ರೈಲುಮಾರ್ಗ ಮತ್ತು ಅದಕ್ಕೆ ಸಂಬಂಧಿಸಿದ ಕಾರ್ಯಭಾರವನ್ನು ನಿರ್ವಹಿಸುವ ಇಲಾಖೆ : ರೈಲ್ವೆ ಕಂಪನಿಯ ಯಾ ಸ್ಥಳೀಯಾಧಿಕಾರಿಯ ನಾಕರನಿಗೆ ಸಲ್ಲಬೇಕಾದ ಸಂಬಳ (ಗ್ರಾಮಶಾ. ೩೫). **ರೇಲುವೆ :** ಎಣ್ಣೆಯು ಸೋರಹತ್ತಲು ರೇಲುವೆ ಕಂಪನಿಯವರು ತಕ್ಕೊಳ್ಳು ವದಿಲ್ಲ (ಮುಂಬವ್ಯಾ. ೪೯ ಪ್ರಸ್ತಾವನ). [ ← ಇಂ. Railway ]

**ರೈವತ** (ನಾ). ೧. ಐಶ್ವರ್ಯವಂತ ; ಧನಿಕ. ೨. ಹದಿನಾಲ್ಕು ಮನುಗಳಲ್ಲಿ ಐದನೆಯವನು : ಸ್ವಾಯಂಭುವ ರೈವತ . . . ಇಂದ್ರ ಸಾವರ್ಣಿಕರೆಂಬ ಹದಿನಾಲ್ಕು ಮನುಗಳು (ಶಿವೇಕ.೨೦೯). ೩. ರೇವತೀ ನದಿಯ ಹತ್ತಿರದಲ್ಲಿರುವ ಒಂದು ಬೆಟ್ಟದ ಹೆಸರು : ಶ್ರೀವೃಕ್ಷಪನಸ ನಿವಹಮುಮಾವಿಷ್ಕೃತಕುಸುಮವಿಸರಮೆನೆ ಶಿಖರಿವನಂ ಶೀವಿರೆ ಶಿಖಂಡ ಮಣಿಕಿರಣಾವಳಿಯಿಂ ಕಾಣಲಾಯ್ತು ರೈವತಶೈಲಂ (ಜಗವಿ. ೦೬-೦). ೪. ಮೋಡ. ೫. ಶಿವ. ೬. ಒಬ್ಬ ರಾಜನ ಹೆಸರು. [ಸಂ.]

**ರೈವೃಷ್ಟಿ** (ನಾ). ಚಿನ್ನದ ಮಳೆ ; ಸುವರ್ಣವೃಷ್ಟಿ : ಧನದಂ ಕಾಂಚನ ಪಂಚರತ್ನಮಯಮಂ ರೈವೃಷ್ಟಿಯಂ ಮಾಡುವಲ್ಲಿ (ಅಜಪು. ೭-೨೪) ; ಹೇಮಗರ್ಭಂ ವಸುಧಾಂತರ್ಭಾಗವಾಗಿರ್ಪನೆಗಮನುದಿನಂ ಕೂಡೆ ರೈವೃಷ್ಟಿಯಂ ನಿರ್ಮಿಸಿಪಂ (ವರ್ಧಮಾ. ೦೦-೩೪). [ಸಂ.]

**ರೈಸು** ' ರಯಿಸು ' ನೋ.

**ರೈಸ್ತಂಭ** (ನಾ). ಚಿನ್ನದ ಕಂಬ ; ಸುವರ್ಣಸ್ತಂಭ : ತ್ರಿಭುವನಮಂಗಲ ತೋರಣನಿಭಮಂ ಪ್ರವಚನಮನೆಯ್ದಿ ರೈಸ್ತಂಭಮುಪ್ರಭರಂತರ್ನಿಭೃತೋ ನ್ನತವಿಭವರ್ ಭೂತಬಲಿ ಪುಷ್ಪದಂತಾಚಾರ್ಯರ್ (ಚಂದ್ರಪ್ರ. ೦-೦೩). [ಸಂ.]

**ರೈಹಿತ**$_1$ (ನಾ). ಲಕ್ಷ್ಮಿಗೆ ಹಿತನಾದವನು ; ನಾರಾಯಣ : ಭೀಮ ರೈಹಿತ ರೌದ್ರಸ್ತುತ ರಂಗ ಸಿರಿಧಾಮ ರಕ್ಷಿಸು (ಶಕರಾಂ. ೭೭-೯೩). [ಸಂ.]

**ರೈಹಿತ**$_2$ ' ರೈತ ' ನೋ.

**ರೊಂಕಣೆ** (ನಾ). ಲೇಪನ ; ಗಿಲೀಟು ; ಒಪ್ಪ (?) : ಮಿಟುಗುವ ಮಿಂಚಿಗಿಂದುಂಗಳೆಯಿಂ ಮಿಗೆ ರೊಂಕಣೆಯುಕ್ಕುವಂತಿರಲ್ಕಜಿನಪಟ್ಟಿಪ ನಾಡ ಕಡುನೀಟಿಯರಂ ನಡೆನೋಡಿ ಸೋಲದಿಂ ಮೆಚ್ಚಿವುದು ರಂಭೆಯೂರ್ವಶಿ ತಿಲೋತ್ತಮೆ ಮೇನಕಿ ಮಂಜುಘೋಷೆಯೆಂಬಚ್ಚಕೆಯ ದೇವಸೌಂದರಿ ಯರಂ ಚರಿಯಿಪ್ಪ ನಿಳಿಂಪಸಂಕುಳಂ (ಸೂಕ್ತಿಸು. ೯-೦೨೭).
[ ?. / ಸಂ. ರೋಕ = ಬೆಳಕು, ಕಾಂತಿ]

**ರೊಂಕೆ** ' ಜೊಂಕು ' ನೋ.

**ರೊಂಡಿ** (ನಾ). ಸೊಂಟದ ಕೆಳಗಿನ ಹಿಂಬದಿಯ ಭಾಗ ; ಕುಂಡೆ ; ಪಿರ್ರೆ : " ಕಟಿ – ರೊಂಡಿಯಲ್ಲಿ " (ಶಾಶಟೀ. ೨-೦-೭೭ ಪ); ದೇಹದಲ್ಲಿ ನಡುವಿನ ಕೆಳಗೆ ಎರಡುಪಕ್ಕಗಳಲ್ಲಿಯೂ ಚಾಚಿಕೊಂಡಿರುವ ಕಿಬ್ಬೊಟ್ಟೆಯ ಭಾಗ : ಟೊಂಕ ; ರೊಂಡಿ ; ಚಪ್ಪೆ ; ಕಟಿ (Hip. ೩೦೪೩).
[ದೇ.॥ ತೆಲು. ರೊಂಡಿ]

**ರೊಂಡೆ** (ನಾ). ಕೆಸರು ; ರಾಡಿ : " ರೊಂಡೆ = ಕೆಸರು " (ಶಾಸಕೋ.೪೦); ಜಾಜಲಂಟಿದ ಕಾಲ ರೊಂಡೆ [ಪಾಠಾಂ. ಜೊಂಡೆ, ಜೊಂಪೆ] ಯನೂಜು ಬದ್ದಗಯ್ಯ ಕೆಸಜಂ ತೊಜುತಂ (ಬಸವ. ೦೦-೮). ' ಜೊಂಪೆ ' ಪರಾ. [ ? ]

**ರೊಂದಿಬಗ್ಗ** (ನಾ). ನಾಡಾಡಿ ಜನ ; ಅಲ್ಪಜನ (?) : ಸಂದಿಯ ರೊಂದಿ ಬಗ್ಗರ ಸಮಕ್ಷದೊಳಿದ್ದುರಿದೆದ್ದು ದುರ್ಜನಂ ನಿಂದಿಸುತಿರ್ಪನುತ್ತಮರ ಕಾವ್ಯಮನಂತಟುಟು ದಲ್ ನಿರಂತರಂ ಹಂದಿಗೆ ಮಿಂದ ಕೆಸಟಿಗೊಗ್ಗುವುದಲ್ಲದೆ ತಣ್ಣನೀವ ಸಚ್ಛಂದನದಣ್ಬದೊಗ್ಗುವುದೆ (ಪಶಸಂ. ೬). [ ? ]

**ರೊಂಯ್** (ನಾ). ಒಂದು ಅನುಕರಣ ಶಬ್ದ : ಗಾಳಿಪಟ ರೊಂಯ್ ಎಂದು ಶಬ್ದ ಮಾಡುತ್ತಿದೆ (ರೂಢಿ)

**ರೊಕ** ' ರೊಕ್ಕ ' ನೋ.

**ರೊಕ್ಕ**. ರೊಕ, ರೊಖ, ರೊಖ್ಖ, ರೋಕ$_2$, ರೋಖ, ರೋಖು (ನಾ). (ಉಕ) ಬಳಸಲು ಸಿದ್ಧವಾಗಿರುವ ಹಣ ; ನಗದು ; ದುಡ್ಡು : ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ (ಸಕವ. II. ೯೬೩-೩೨); ಅಕ್ಕಿಯರುಗಳುಯೆಂಬ ಹಣನಿಗೆ ರೊಕ್ಕವನು ತೆಗೆಯೆಂಬ ಹರದನು (ಕೌತಿರಾ. ೦೦-೨೪) ; ರೊಕ್ಕ ಎರಡಕ್ಕು ದುಃಖ ಕಾಣಕ್ಕ (ಪುರಂದ. ೨-೪೮ ಪಲ್ಲವಿ); ರೊಕ್ಕವಿಲ್ಲದ ಬಾಳ್ವೆ ಮಕ್ಕಳಿಲ್ಲದ ಮನೆಯು ಅಕ್ಕಜವಿರದ ತವರೂರು ಇವು ಮೂಜು ದುಃಖ ಕಾಣಯ್ಯ (ಸರ್ವಜ್ಞ. ೦೬೯೨). **ರೊಕ :** ಗದೆಯ ಮೇಲೆ ರೊಕ ಭತವನೂ (ಶಾಸಾ. ೦೯೩೪, ಶೃಂಗವೂರು. ೦೫೭-೦೪ ; 1419) ; ಬಂದ ಬಡಿಯ ರೊಕವನು ಆಗುಮಾಡಿ (ಎಕ. XIV, ಮಳವ. ೦೦೦-೦೬; 1604). **ರೊಖ :** ರೊಖ ಹಣವು ಮುಂಗಡವಾಗಿ ಕಳುಹಿಸಿ (ಮುಂಬವ್ಯಾ. ೨೫೯). **ರೊಖ್ಖ :** ರೊಖ್ಖವಂ ಗಳಿಸುವಡೆ ದುಃಖ ಮಗುಳಾ ಧನವ ರಕ್ಷಿಸುವಡತಾಳದುಃಖಂ , . . ರೊಖ್ಖಕ್ಕಂ ನೃಪ ಚೋರ ಬಾಧೆಗಳು ದಿನದಿನಂ ಮಿಕ್ಕುದು (ಕುರಂಗ. ೪-೭). **ರೋಕ**$_2$ : ರೋಕರಕಮಿನಿಂದ ವ್ಯವಹಾರ ಮಾಡಿದರೆ . . . ತಕ್ಕೊಳ್ಳಲಾದೀತು (ಮುಂಬವ್ಯಾ. ೦೦ ಪ್ರಸ್ತಾವನೆ). **ರೋಖ :** ಇವತ್ತು ರೋಖ ನಾಳೆ ಉದ್ದರಿ (ಶಿವೋದ. ೨೨). **ರೋಖು:** ತಂದೆ ಗಳಿಸಿದ ರೋಖು ರೂಪಾಯಿಗಳನ್ನು ಬಡ್ಡಿಗೆ ಹಚ್ಚಿದ್ದರು (ಇಕ್ಕಿಕ. ೨೯೯) ; ಎಂಭತ್ತೈದು ರೋಖು ಎಣಿಸಿಕೊಟ್ಟೆವ್ನಿ (ಬೆಂಗಾ. ೦೨).

**ರೊಕ್ಕ ಮಾಡು** = ಹಣವನ್ನು ಸಂಪಾದಿಸು ; ಐಶ್ವರ್ಯವನ್ನು ಗಳಿಸು : ತಂಬುಲಿಗರ್ ಹುಟ್ಟಿದ ಧಾರಣೆಯಿಂ ರೊಕ್ಕಮಾಡಿ ಕುಡುವರ್ (ಮುಂಬಿರಾ. XII. ೦೩-೯೯ ; 1223) ; ಈ ವಿಶ್ವನಾಥ ರೊಕ್ಕಮಾಡಿದ ರೀತಿ ನನಗೆ ಗೊತ್ತಿಲ್ಲವೆ ? (ಮೂರುಬಂ. ೭೦). [←ಹಿಂ. ರೋಕ್ ; ಮರಾ. ರೋಖ್./ತಮಿ. ಮಲ. ತುಳು. ತೆಲು. ರೊಕ್ಕ]

**ರೊಕ್ಕಮುಕ್ಕ** (ನಾ). ಹಣವನ್ನು ಕಬಳಿಸುವವನು : ಗಂಟುಗಳ್ಳ : ಪ್ರತಿಭೆಯ ಫಲವನ್ನು ನಾನು ಅನುಭವಿಸುವ ಮುಂಚೆಯೇ "ರೊಕ್ಕಮುಕ್ಕ" ಗಳು ಯಾರಾದರೂ ಅನುಭವಿಸಿಯಾರೆಂದು ಹೆದರಿಕೆ (ಪಂಚಿರು. ೦೯).
[ರೊಕ್ಕ + ಮುಕ್ಕ$_1$]

**ರೊಕ್ಕಸ್ತ** (ನಾ). ಹಣವುಳ್ಳವನು ; ಸಾಹುಕಾರ : "ರೊಕ್ಕಸ್ತ = ಸಿರಿ ವಂತ, ಸಾವುಕಾರ" (ಶಾಸಕೋ. ೪೦). ' ದುಡ್ಡಸ್ತ ' ಪರಾ.
[ರೊಕ್ಕ + –ಸ್ತ]

**ರೊಕ್ಕಿ** (ನಾ). ಒಂದು ಬಗೆಯ ಸಸ್ಯ ; ಲಕ್ಕಿಗಿಡ : "ಸಿಂಧುಕಃ, ಸಿಂಧು ವಾರಃ, ಇಂದ್ರಸುರಸಃ, ನಿರ್ಗುಂಡಿಃ, ಇಂದ್ರಾಣೀ – ಈ ೫ ರೊಕ್ಕಿ " (ನಾಶಬಾ. ೦೦೬). [< ಲೆಕ್ಕಿ]

**ರೊಖ** ' ರೊಕ್ಕ ' ನೋ.

**ರೊಖ್ಖ** 'ರೊಕ್ಕ' ನೋ.

**ರೊಚ್ಚು** ' ಜಿಚ್ಚಿ ' ನೋ.

**ರೊಚ್ಚುಗುಂಡಿ**, ರೊಚ್ಚೆಗುಂಡಿ (ನಾ). ಕೊಳಕು ನೀರು ನಿಲ್ಲುವ ಸ್ಥಳ : "ಬಚ್ಚಲು, ಚರಂಡಿ, ಪಾಯಖಾನೆ ಮೊ. ಗಳಿಂದ ಬಂದ ರೊಚ್ಚಿನ ನೀರಿ ನಲ್ಲಿಯ ಘನಪದಾರ್ಥಗಳನ್ನು ತಡೆದಿಟ್ಟುಕೊಳ್ಳುವುದಕ್ಕಾಗಿ ಮಾಡಿದ ತೊಟ್ಟಿ : ರೊಚ್ಚುಗುಂಡಿ" (Cesspool. ೩೦೪೩). **ರೊಚ್ಚೆಗುಂಡಿ :** ರೊಚ್ಚೆಗುಂಡಿಯಲ್ಲಿ ನೀರು ನಿಂತು ನಾರುತ್ತಿದೆ (ರೂಢಿ).
[ರೊಚ್ಚು (<ಜಿಚ್ಚಿ) + ಗುಂಡಿ$_1$]

**ರೊಚ್ಚುಗೊಳ್ಳು** (ಕ್ರಿ). ಕೋಪಗೊಳ್ಳು ; ಸಿಟ್ಟಿಗೇಳು ; ರೇಗು : ಕಾರ್ಯಕ್ರಮಗಳ ಬಗೆಗೆ ಸ್ವಲ್ಪ ಭಿನ್ನಾಭಿಪ್ರಾಯವನ್ನು ಸೂಚಿಸಿದೊಡನೆ

ರೊಚ್ಚುಗೊಳ್ಳುವ . . . ಜನರು ಎಲ್ಲೆಲ್ಲೂ ತುಂಬಿದ್ದು (ಮುಕ್ಷಕ್ಕ. ೦೩).
[ರೊಚ್ಚು (<ಉಚ್ಚಿ) + ಕೊಳ್ಳು₁ (<ಕೊಳ್₁)]

**ರೊಚ್ಚಿ** 'ಉಚ್ಚಿ' ನೋ.

**ರೊಚ್ಚಿಗುಂಡಿ** 'ರೊಚ್ಚುಗುಂಡಿ' ನೋ.

**ರೊಚ್ಚಿಬ್ಬಿಸು** (ಕ್ರಿ). ಸಿಟ್ಟಿಗೇಳಿಸು ; ರೇಗಿಸು : ಜಗಳವ ತೆಗೆದು ರೊಚ್ಚಿಬ್ಬಿಸುವಿವಳೇನು ನಾರಿಯೊ ಮಾರಿಯೊ (ಕಂಪ್ರಶೀ. ೦೬-೭೩).
[ರೊಚ್ಚು(<ಉಚ್ಚಿ) + ಎಬ್ಬಿಸು(<ಎಬ್ಬಿಸು)]

**ರೊಚ್ಚೇಳು** (ಕ್ರಿ). ಸಿಟ್ಟಿಗೇಳು ; ರೇಗು : ಹೆಂಡತಿ ಬರುತ್ತಲೇ, ಹೆತ್ತು ಸಾಕಿ ಸಲಹಿದ ತಾಯಿ ಇವನಿಗೆ ದೂರವಾದವಳಲ್ಲ ಎಂದು ಅವಳ ಮನಸ್ಸು ರೊಚ್ಚೆದ್ದಿತ್ತು (ಹೊಸಕ್ಕ. ೨೦) ; ಹಟತೊಟ್ಟು ಕಚ್ಚಿ ಕೆಡಮುವೆನು ಕುಣಿತದೊಳು ಚೌಡನಿಗೆ ರೊಚ್ಚೆದ್ದು ಸಿಂಹ ಜಿಗಿದಂತೆ (ಕನ್ನಜಾ. ೨೯೦).
[ರೊಚ್ಚು (<ಉಚ್ಚಿ) + ಏಳು₁ (< ಏೞ್₁)]

**ರೊಜ್ಜು** 'ಉಚ್ಚಿ' ನೋ.

**ರೊಟ್ಟಿ**, ರೋಟು₁(ನಾ). ೧. ರಾಗಿ, ಅಕ್ಕಿ, ಜೋಳ ಮೊದಲಾದುವುಗಳ ಹಿಟ್ಟು, ಉಪ್ಪು, ಖಾರ ಮುಂತಾದುವನ್ನು ನೀರಿನಲ್ಲಿ ಕಲಸಿ, ತಟ್ಟಿ, ಹಂಚಿನ ಮೇಲೆ ಬೇಯಿಸಿ ಮಾಡುವ ಒಂದು ಬಗೆಯ ತಿಂಡಿ : ರೊಟ್ಟಿಯುಂ ಮೆಲ್ಲುವನೊರ್ವನಂಬುತತಿಯಂ ಬಿಡದೀಂಟುವನೊರ್ವನುಂಟೆ (ಉದ್ಭಟಿ. ೧೧-೭೧) ; ದೋಸೆ ಕಜ್ಜಾಯ ರೊಟ್ಟಿ ಹೊಯಿಗಡುಬತಿರಸಂಗಳ್ (ತಂಪು. ೯೭-೯೨) ; ಶಿವು . . . ರಾಗಿಯ ರೊಟ್ಟಿಯನ್ನು ತಿಂದುಕೊಂಡು ಒಂದುವಾರ ಇರಬಲ್ಲ (ರಾಷಜಾನ. ೦೦೫) ; ರೊಟ್ಟಿ ತೊಳದು ನೀರು ಕುಡಿದ ಹಾಗೆ (ಗಾದೆ). ೨. "ಅಕ್ಕೀಹಿಟ್ಟಿನೊಳಗೆ ಬೆಲ್ಲವನ್ನೂ ತುಪ್ಪವನ್ನೂ ಹಾಕಿ ಮಾಡಿದ ರೊಟ್ಟಿ, ಕಜ್ಜಾಯ" (ಗಂಗಾಪು. ೬). ೩. ಬ್ರೆಡ್ಡು : ಬೇಕರಿಯಿಂದ ರೊಟ್ಟಿ ತಂದರು (ರೂಢಿ). **ರೋಟು₁** : ೩. ಮೂವ್ವರೂ ಕೂಡಿ ಚಹಾ ಮತ್ತು ರೋಟು ತೆಗೆದುಕೊಂಡೆವು (ಬಿರುಗಾ. ೦೨); ಆ ಜಾಗಿರ ವಾರ ಏಳೋದರಾಗ ರೋಟು ತರಿಸಿ ಇಡಬೇಕಂತೆ (ಭಾಗ್ಯಶ್ರೀ. ೯೦).
[ದೇ.೫ ತಮಿ. ಮಲ. ತುಳು. ಕೊಡ.ರೊಟ್ಟಿ; ತೆಲು. ರೊಟ್ಟೆ, ರೊಟ್ಟಿಯ./ಹಿಂ. ರೋಟೀ, ರೋಟಾ; ಮರಾ. ಗುಜ ರೋಟ್, ರೋಟಾ./ಪ್ರಾ. ರುಟ್ಟಿಯಾ. ರೋಟ್ಟ./ಸಂ. ರೋಟಿ. ರೋಟಿಕಾ]

**ರೊಟ್ಟೀಹಲಸು** (ನಾ). ಹಿಟ್ಟಿನಂತೆ ಮೃದುವಾದ ತಿರುಳುಳ್ಳ ಒಂದು ಬಗೆಯ ಹಲಸು : ದ್ವೀಪದ ಹಲಸು : ಸೀಮೆಹಲಸು. ದೀವಿಹಲಸು, ರೊಟ್ಟೀಹಲಸು (ವೃಶಿಗಿ. ೬೦೬೦). [ರೊಟ್ಟಿ + ಹಲಸು (< ಪಲಸು)]

**ರೊಡ್ಡ**, ಲೊಡ್ಡ (ನಾ). ೧. ಎಡಗಡೆ ; ವಾಮಭಾಗ : 'ರೊಡ್ಡ ಕೆಯ್' ಪರಾ. ೨. ಎಡಗೈಯನ್ನೇ ಉಪಯೋಗಿಸಿ ಕೆಲಸ ಮಾಡುವವನು ; ಎಡಚ : "ರೊಡ್ಡ–ಎಡಚ" (ಶಾವಕೋ. ೯೦). **ಲೊಡ್ಡ** : ೨. ಅವನೊಬ್ಬ ಲೊಡ್ಡ (ರೂಢಿ). [←ತೆಲು. ರೊಡ್ಡ, ಚೊಡ್ಡ]

**ರೊಡ್ಡಕೆಯ್**. ರೊಡ್ಡಗೈ (ನಾ). ಎಡಗೈ ; ವಾಮಹಸ್ತ : (೬). **ರೊಡ್ಡಗೈ** : ಎಡಗೈಯನ್ನೇ ಹೆಚ್ಚಾಗಿ ಉಪಯೋಗಿಸುವ ; ಎಡಚು; ರೊಡ್ಡಗೈಯ (Left handed. ಇಂಕಶ). [ರೊಡ್ಡ + ಕೆಯ್₂]

**ರೊಡ್ಡಗೈ** 'ರೊಡ್ಡಕೆಯ್' ನೋ.

**ರೊಡ್ಡಿ** (ನಾ). ಒಂದು ಬಗೆಯ ಔಷಧೀಸಸ್ಯ ; ಕಾಕೋಲಿ : ರೊಡ್ಡಿ, ಹಾಲುರೊಡ್ಡಿ, ಮಂಜಿಷ್ಠೆ . . . ಚೂರ್ಣಿಸಿ (ವೈದ್ಯಸಾ I. ೯೦೫) ; ಸಿಪಿ ಹಾಲೆ. ರೊಡ್ಡಿ, ಹಾಲರೊಡ್ಡಿ . . . ಕಾಯಿಸಿ ಪಾಕದಲ್ಲಿಳಿಹಿ ಶರೀರಕ್ಕೆ ಲೇಪಿಸೆ ಪಿತ್ತಜ್ವರ, ಉನ್ಮಾದ, ಮೂರ್ಛೆ ಸಹ ಮಾಣುವುವು (ಕಕವೈ. ೬೩)
[←ಮರಾ. ರೋಡಾ]

**ರೊಣವೊಡೆಯು** (ನಾ). ಒಬ್ಬಾತನ ಹೆಸರು : ಏಜಿಸಾಳ್ಳೆಜಿದು ಬಿಟ್ಟುದ್ದಾರ್ ಕ[ನ್ನ]ರಸರುಬಿಟ್ ಇದರ್ಕೆ ಚಿವಾನಿಕಳನಿ ವಾಳ್ಗೆಟ್ಟು ಕೊಟ್ಟೊದು ರೊಣವೊಡೆಯೊಗೆ ಕೊಟ್ಟರ್ (ಎಕ. XVI. ತುಮಕೂ. ೯೩-೭: 750). [ ? ]

**ರೊಣೆ** (ನಾ). ಒರಟಾದ ಮೈಗೂದಲು ; ರೋಮ : ಕೊಬ್ಬು ಕರಗಿ ಒಣಗ ಹತ್ತಿದ ಕಪ್ಪುರೊಣೆ ತುಂಬಿದ ಕೈರಟ್ಟೆಗಳು (ಮೂರುದಾ. ೦೭೯) ; ಮೋರೆಗೆ ಇಷ್ಟುದ್ದ ಕಪ್ಪು ಪೊತ್ತ–ಮೀಸೆಗಳು; ಕಪ್ಪು ಎದೆಯ ಮೇಲೆ ಕಪ್ಪು ರೊಣೆ (ಹೊಸಕ್ಕ. ೦೭೦). [ ? ]

**ರೊಪ್ಪ** 'ಕೊಪ್ಪ' ನೋ.

**ರೊಯ್** (ನಾ). ೧. ಒಂದು ಅನುಕರಣ ಶಬ್ದ : 'ರೊಯ್ಯನೆ' ಪರಾ. ೨. ಎಮ್ಮೆಯ ಕೂಗು : (೬).

**ರೊಯಿಲಿ** (ನಾ). "ಶತ್ರುಗಳ ಹಡಗನ್ನು ಹಿಡಿದೆಳೆದುಕೊಳ್ಳುವುದಕ್ಕಾಗಿ ಹಗ್ಗ ಕಟ್ಟಿ ಎಸೆಯುವ ಕಬ್ಬಿಣದ ಕೊಂಡಿಗಳುಳ್ಳ ಸಲಕರಣೆ, ಅನೇಕ ಕೊಂಡಿಗಳುಳ್ಳ ಸಣ್ಣ ಲಂಗರು, ಪಾತಾಳಗರಡಿ" (ಆಪಂಪಾ).
[←ಮರಾ. ರೋಯಲೀ, ಲ್ಯೋಯಲೀ]

**ರೊಯ್ಯನೆ** (ಅ). ಒಂದು ಅನುಕರಣಾವ್ಯಯ : ಗಾಳಿ ರೊಯ್ಯನೆ ಬೀಸುತ್ತಿದೆ (ರೂಢಿ). [ರೊಯ್ + – ಅನೆ₁]

**ರೊಷ್ಟು** (ನಾ). ೧. ಕಾಟ ; ಹಿಂಸೆ : ಆದರೂ ಹಸುವ ಕಟ್ಟುವುದೆ ಸರಿ ; ಇನ್ನೆಷ್ಟು ಹೇಳಿದರು ಎಮ್ಮೆಯೇ ರೊಷ್ಟು (ಸುಶೀಕ. ೩೩-೯); ಅರಮನೆಗೆ ಬಿಟ್ಟಿಮಡಕೆಗಳು ಬೇಕೆಂದು ತಗಾದಿ ಹಚ್ಚಿ ಬಹಳವಾಗಿ ರೊಷ್ಟುಮಾಡಿ ತೊಂದರೆಪಡಿಸಿದನು (ಕಥಾಪುಂ. IV. ೫೦). ೨. "ಕೊಳೆ" (ಆಪಂಪಾ).
[ದೇ.೫ ತಮಿ. ರೊಷ್ಟು; ತೆಲು. ರೊಷ್ಟು, ರೊಸ್ಸು]

**ರೊಳ್ಳಿ** (ನಾ). (ಉಕ) ನೆಪ; ಕಾರಣ; ಸೋಗು : ಭಟ್ಟರು ರೊಳ್ಳೀ ತೆಗೆದರು (ದಾಸಹು. ೬೬); ಏ ರಂಗ್ಯಾ, ನೀ ಏನಾರ ರೊಳ್ಳೀ ತಗೀಬ್ಯಾಡ (ಆಮೂ. ೯೯). [?./ತೆಲು. ರೊಲ್ಲು=ಪ್ರಲಾಪಿಸು]

**ರೋಂಕಿಸು** (ಕ್ರಿ). ಗರ್ಜನೆ ಮಾಡು ; ಆರ್ಭಟಿಸು : ಭಾನುಸುತ ಬಿಲ್ಲೊಂಡು ಸಮರಕಿನ್ನಾರೆನುತ ಪರಿದಾಡಿ ರೋಂಕಿಸುತ ಭಂಗವುಂ ಬರಿಸಿದನು ರಿಪುಬಲದೊಳು (ಕುರಂಗ. ೬೩-೧).
[ರೋಂಕು (< ಜೌಂಕು) + – ಇಸು₃]

**ರೋಂಕು** 'ಜೌಂಕು' ನೋ.

**ರೋಕ₁** (ನಾ). ೧. ತೂತು ; ರಂಧ್ರ : "ನಿಮ್ನಂ . . . ರಂಧ್ರಃ, ರೋಕಃ, ಕುಹರಃ, ದರ್ಃ – ಈ ೧೫ ಕುಟಃ" (ಹಲಾಯು. ೦೦೩-೨) ; ಕುಹರಕರುವೆಯನಿಡುಕಿ ಛಿದ್ರಮಂ ಮುಚ್ಚಲಿಕ್ಕೆಳಸಲಾ ರೋಕಮನ್ನುಂ ಪೆರ್ಚಿ (ಶ್ರೀರಾಮಪ. ೬೬–೬೦೭). ೨. ಜಹಜು : ಹಡಗು. ೩. ಕಾಂತಿ ; ಪ್ರಕಾಶ. [ಸಂ.]

**ರೋಕ₂** 'ರೊಕ್ಕ' ನೋ.

**ರೋಕಡ**, ರೋಕಡಿ, ರೋಖಡಿ (ನಾ). ನಗದು ಹಣ ; ರೊಕ್ಕ : ರೈಲುಪಾದಿ ಕಟ್ಟುವ ಮಜೂರರಿಗೆ ರೋಕಡ ಸಂಬಳ ದೊರೆಯಲು ಬಹಳ ಕಾಲ ಹಿಡಿಯಿತು (ಐತಿಸಂ. ೨೦). **ರೋಕಡಿ** : ರೋಕಡಿಯ ಕೆಲಸ ಅಂದರೆ ಹಣ ಕೊಡುವುದು, ತಕ್ಕೊಂಬುವುದು (ಮುಂಬಾವ್ಯಾ. ೨೬೯). **ರೋಖಡಿ** : ರೋಖಡಿ ಮತ್ತು ಕರೆನ್ಸಿನೋಟುಗಳೂ ಇಲ್ಲದಂತಾಗಿದ್ದು ಉಳಿದ ಜಿನಸುಗಳೆಲ್ಲ ಇಟ್ಟಂತೆಯೇ ಇದ್ದವು (ಪೋತೀಪ. ೦೪೦).
[ ← ಹಿಂ. ಮರಾ. ರೋಕಡ್]

**ರೋಕಡಿ** 'ರೋಕಡ' ನೋ.

**ರೋಕು** (ನಾ). ರೋಷ ; ಕ್ರೋಧ : ಭೂವರನ ಬೀಳ್ಕೊಂಡು ರೋಕಿನಿಂ ಖತಿ ಮಸಗಿ ಜೀವಾಳಮುಟ್ಟೆಪ್ಪರೊಡಗೊಂಡು (ಕಠಕು. ೨೩-೨೦) ; ಆಕಾಶಕೇಶನುಂ . . . ರೋಕಿನಿಂದಾ ನಿಶಾಟನ ಕೊಲ್ಲಲುರಿಗಣ್ಣ ಭೀಕರದ ತೆರೆದನಹುದು (ಪಂಕಾರಾ. ೩-೦೩-೦೭).
[← ಹಿಂ. ಮರಾ. ರೋಖ್./ಸಂ. ರೋಷ]

**ರೋಖ** ' ರೊಕ್ಕ ' ನೋ.

**ರೋಖಡಿ** ' ರೋಕಡ ' ನೋ.

**ರೋಖು** ' ರೊಕ್ಕ ' ನೋ.

**ರೋಗ** (ನಾ). ಆರೋಗ್ಯವಿಲ್ಲದಿರುವಿಕೆ ; ಖಾಯಿಲೆ ; ವ್ಯಾಧಿ : ''ರೋಗಃ . . . ರುಜಾ – ಈ ೧೨ ವ್ಯಾಧಿ" (ಶಬ್ದಮ. ೯೮-೪೪೬) ; ದೇಹವನಲೆದುದಲ್ಲಿ ರೋಗದ ಕೇಳಿ ರೋಗದಿಂ ಪತ್ತೆಂಟು ದಿವಸಕಸುವೊಜಿತೆ ಯಾಗಿ (ಬಸವ. ೩-೦೯೯) ; ರಾಗವೇ ಮೂಡಲು ಯೋಗವೇ ಬಡಗಲು ರೋಗವದು ಶುದ್ಧ ಪಡುವಲು ತೆಂಕಲು ಭೋಗದ ಬೀಡು (ಸರ್ವಜ್ಞ. ೦೬೦೩) ; ಉಗುಳಿ ಉಗುಳಿ ರೋಗ, ಬೊಗಳಿ ಬೊಗಳಿ ರಾಗ (ಗಾದೆ). [ಸಂ.]

**ರೋಗಂದ, ರೋಗಂಧ** (ನಾ). ಒಂದು ಬಗೆಯ ಅಂಟುದ್ರವ್ಯ : ಧೂಪದ ಮರ – ಬಹು ಸುಂದರವಾದ ಉನ್ನತವೃಕ್ಷವು . . . ಅಂಟಿನಿಂದ ರೋಗಂದವಾಗುತ್ತದೆ (ಕಭಾಗ. ೮೨) ; ಕಪ್ಪುರವು ಬಹಳ ದೊಡ್ಡ ಔಷಧಿಯಿದೆ. ಅದರಿಂದ ಒಂದು ತರದ ಮೇಲಾದ ರೋಗಂದವೂ ಆಗುತ್ತದೆ (ಮುಂಬಯಿ. ೪-೭೨). **ರೋಗಂಧ :** ಕಟ್ಟಿಗೆಗಳು ಹುಳ ಹತ್ತಿ ಕೆಡದ ಹಾಗೆ ಅವುಗಳಿಗೆ ಎಣ್ಣೆರೂಳ ಹುರಮುಂಜನ್ನು ಕುದಿಸಿ ಹಚ್ಚಬೇಕು ಅಥವಾ ಡಾಂಬರವನ್ನಾಗಲಿ ರೋಗಂಧವನ್ನಾಗಲಿ ಹಚ್ಚಿದರೂ ಬರುತ್ತದೆ (ಕೃಷಿಶ್ರ. ೦೦೨). [← ಪಾರ: ರೌಗನ್, ರೌಘನ್; ಹಿಂ. ರೋಗನ್, ರೌಗನ್; ಮರಾ. ರೋಗಣ್]

**ರೋಗಂಧ** ' ರೋಗಂದ ' ನೋ.

**ರೋಗಗ್ರಾಹಿ** (ನಾ). ರೋಗಗ್ರಸ್ತನಾದವನು ; ವ್ಯಾಧಿಪೀಡಿತ : ರೋಗಗ್ರಾಹಿಗಳಿಗೆ ಮಾತ್ರ ಈ ಇಂಜಕ್ಷನ್‌ಗಳನ್ನು ಕೊಡಬೇಕು (ಕಂಠೀರ. ೨೬). [ಸಂ. ರೋಗಗ್ರಾಹಿನ್]

**ರೋಗಜೀವ** (ನಾ). ವ್ಯಾಧಿಗ್ರಸ್ತ ; ರೋಗಿ : ವೈದ್ಯ ಬಂದ ನೋಡಿ . . . ಧರ್ಮವೈದ್ಯನಿವ ಜಗಕೆಲ್ಲ ಒಬ್ಬನೆ ಮರ್ಮ ಬಲ್ಲ ರೋಗಜೀವಂಗಳ (ಪುರಂದ. ದಾ. ೩-೦೯೨-೪). [ಸಂ.]

**ರೋಗಜ್ವರ** (ನಾ). ಒಂದು ಬಗೆಯ ಜ್ವರ : ಕಲ್ಯಾಣಘೃತ . . . ಸಂಬೆಕಾಯಿತೋರ ಒಂದು ಮಂಡಲ ಕೊಳ್ಳಲು ರೋಗಜ್ವರ, ಕಾಸರೋಗ . . . ಪರಿಹರವಹುದು (ಸಕವೈ. ೦೪೯). [ಸಂ.]

**ರೋಗತಂಡುಲ** (ನಾ). ಒಂದು ಬಗೆಯ ಸಸ್ಯ; '' ವಾಯುವಿಳಂಗ" (ಅಭಿನಾ). [ಸಂ.]

**ರೋಗನಿದಾನ** (ನಾ). ವ್ಯಾಧಿಯ ಲಕ್ಷಣಗಳಿಂದ ರೋಗವು ಇಂತಹುದೇ ಎಂದು ಕಂಡು ಹಿಡಿಯುವುದು : ವೀರರಾಜನು . . . ರೋಗನಿದಾನ ದಲ್ಲಿಯಾಗಲಿ ಚಿಕಿತ್ಸಾಕ್ರಮದಲ್ಲಿಯಾಗಲಿ ಇರುವ ಭಿನ್ನಾಭಿಪ್ರಾಯಗಳನ್ನು ಸೂಚಿಸಿದ್ದಾನೆ (ಕಕವ್ಯ. IX, ಪ್ರಸ್ತಾವನೆ) ; ರೋಗಕ್ಕೆ ಸರಿಯಾದ ರೋಗ ನಿದಾನ ಹುಡುಕಬೇಕು (ಹೊಸಕ್ಷ. ೨೯೩). [ಸಂ.]

**ರೋಗರಾಜ** (ನಾ). ರೋಗಗಳಲ್ಲಿ ಬಹು ದೊಡ್ಡ ರೋಗ ; ಕ್ಷಯ; ರಾಜಯಕ್ಷ್ಮ. [ಸಂ.]

**ರೋಗರುಜಿನ** (ನಾ). ರೋಗ ಮತ್ತು ಖಾಯಿಲೆ ; ಖಾಯಿಲೆಕಸಾಲೆ : ಎಲ್ಲ ಜಗವ ನುಂಗಿ ದಕ್ಕಿಸಿಕೊಂಡವಗೆ ಸಲ್ಲದು ರೋಗರುಜಿನವು (ಲಕ್ಷ್ಮೀಕೋ. ೩೬); ಪ್ರಾಣಿಗಳ ರೋಗರುಜಿನಗಳನ್ನು ಗುಣಮಾಡಲು ಆಸ್ಪತ್ರೆಯನ್ನು ತೆರೆಯಲಾಗಿದ್ದಿತು (ಕಸ್ವಪ್ರಾ. ೩೦೯). [ರೋಗ + ರುಜಿನ]

**ರೋಗಹಾರಿ** (ಗು). ೧. ರೋಗವನ್ನು ನಿವಾರಿಸುವ; ಕಾಯಿಲೆಯನ್ನು ವಾಸಿಮಾಡುವ. (ನಾ). ೨. ರೋಗವನ್ನು ನಿವಾರಿಸುವವನು; ವೈದ್ಯ; ಡಾಕ್ಟರು : ''ರೋಗಹಾರೀ . . . ವೈದ್ಯಃ, ಚಿಕಿತ್ಸಕಃ– ೫ ವೈದ್ಯನ ಹೆಸರುಗಳು'' (ಸಿದ್ಧಾಂತಿ. ೦೪೪). [ಸಂ. ರೋಗಹಾರಿನ್]

**ರೋಗಾಣು** (ನಾ). ರೋಗಕ್ಕೆ ಕಾರಣವಾದ ಸೂಕ್ಷ್ಮಜೀವಿ : ಮಾನವನಿಗೆ ಬರಬಹುದಾದ ಕಾಯಿಲೆಗಳಲ್ಲಿ ಹೆಚ್ಚು ಕಾಯಿಲೆಗಳು ರೋಗಾಣುಗಳಿಂದ ಬರುತ್ತವೆ (ಕಂಠೀರ. VI, ಬಸ್ಸಹ); ಆಮಶಂಕೆ, ಕ್ಷಯ ಮೊದಲಾದ ರೋಗಗಳು ರೋಗಾಣುಗಳಿಂದ ಕೂಡಿದ ಆಹಾರ ಮತ್ತು ನೀರಿನ ಮೂಲಕ ಹರಡುವ ಸಂಭವವಿದೆ (ಅಡುಗೆ. ೯೪). [ಸಂ.]

**ರೋಗಿ** (ನಾ). ಕಾಯಿಲೆಯಿಂದ ನರಳುತ್ತಿರುವವನು; ವ್ಯಾಧಿಗ್ರಸ್ತ : ಸಲೆ ನವೆವ ರೋಗಿ ಬೇಗಂ ತಲೆಯೆತ್ತಲ್ಕಾಡಿ ನವೆವನನ್ಯರ ಮತದೊಳ್ (ನವಚ. ೩-೬೪); ಮುಕ್ಕುಳಿಸಿಸಿದಂ ರೋಗಿಯಿಂ ಬೆಜ್ಜಂ (ಕಶಾ.ಸು. ೩೪೦ ವ್ಯಾಖ್ಯಾ); ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲು ಅನ್ನ (ಗಾದೆ). [ಸಂ. ರೋಗಿನ್]

**ರೋಗಿತ** (ಗು). ೧. ರೋಗದಿಂದ ನರಳುತ್ತಿರುವ ; ಕಾಯಿಲೆಯ. ೨. (ನಾಯಿಯಂತೆ) ಹುಚ್ಚಾದ. [ಸಂ.]

**ರೋಗಿಷ್ಟ** (ನಾ). = ರೋಗಜೀವ : ರೋಗಿಷ್ಟನೂ ದಯಾಮಯಿಯೂ ಆದ ಅವರ ವಯಸ್ಸಿನ ಇನ್‌ಸ್ಪೆಕ್ಟರ್‌ನ ಸ್ಥಿತಿ ಅವೆಲ್ಲಕ್ಕಿಂತ ಭಯಾನಕ ವಾಗಿತ್ತು (ಪುಸರು. ೨೪೪).

**ರೋಗಿಷ್ಟವಾಗು** = ರೋಗಗ್ರಸ್ತವಾಗು : ಈ ತಾಪವು ಸಾಹಿತ್ಯಕ್ಕೆ ತಪಸ್ಸಿನಂತೆ ಫಲದಾಯಕವಾಗಿ ಪರಿಣಮಿಸಲು ಬಾರದಿದ್ದರೆ ಸಾಹಿತ್ಯವು ರೋಗಿಷ್ಟವಾಗುವುದು (ಕ್ಷಬಿಂದು. ೪೯). [ಸಂ.]

**ರೋಗುಟ್ಟು** (ಕ್ರಿ). 'ರೋ' ಎಂದು ಧ್ವನಿಮಾಡು : ನಿನ್ನನ್ನು ಎಷ್ಟೆಷ್ಟು ಸೇವಿಸಬೇಕೆಂದು ಆಶೆ ಇಟ್ಟುಕೊಂಡಿದ್ದೆ . . . ಎಂದೂ ರೋಗುಟ್ಟಿ ಅಳಹತ್ತಿದನು (ಜಮುಂತ. ೨೮೦) [ರೋ ? + ಕುಟ್ಟು₁]

**ರೋಚಕ** (ಗು). ೧. ತೇಜಸ್ಸುಳ್ಳ ; ಪ್ರಕಾಶಮಾನವಾದ. ೨. ಹಸಿವನ್ನುಂಟುಮಾಡುವ. ೩. ಹಿತಕರವಾದ ; ಸುಖಕರವಾದ: ರೋಚಕ ಆರೋಚಕವೆಂಬನ್ನಕ್ಕ ಪ್ರಸಾದಿಸ್ಥಲವಿಲ್ಲ (ಷಟ್ಸ್ಥಲವ. ೦೩೬-೩೨೩). ೪. ಜೀರ್ಣಕಾರಿಯಾದ ; ಪಚನಕಾರಿಯಾದ. ೫. ಪ್ರಿಯಕರವಾದ : ಖೇಚರರ ವರ್ತನಾಚಾರದೊಳ್ವರ್ತಿಸುವ ಶೌಚವಿಧ[ದ]ರೆನಿಪ ರೋಚಕ ಸಾಧುಜನರುಂಟು (ಐಕೋಕ್ತಿ. ೩-೩೦). (ನಾ). ೬. ಹಸಿವು ; ಕುಳ್ಳಿರ್ದನು . . . ನಿಖಿಲೇಂದ್ರಿಯದ ರೋಚಕ ಬಗಿಯೆ ಬೇಸಟಿನ ಬಿಸುಗುದಿಯ ಸುಯ್ಲಿನಲಿ (ಕುಮ್ಯಾಕ. ೨೨-೦೩). [ಸಂ.]

**ರೋಚಕದ್ರವ್ಯ** (ನಾ). ರುಚಿಕರವಾದ ಪದಾರ್ಥ ; ಸವಿಯಾದ ವಸ್ತು : ಅಜ್ಜಿಯ ಸ್ವಹಸ್ತರಚಿತವಾದ ಉಪ್ಪಿನಕಾಯಿ, ಅವ್ವು, ಸತ್ವ ಮೊದಲಾದ ರೋಚಕದ್ರವ್ಯಗಳನ್ನೆಲ್ಲ ಶೈಲೇಂದ್ರನು . . . ಕದ್ದು ತಿಂದು ತೀರಿಸಿಯೇ ಬಿಟ್ಟಿದ್ದಾನೆ (ಇಶ್ವಶ. ೨೯೩). [ಸಂ.]

**ರೋಚಕಿ** (ನಾ). ಆಸಕ್ತಿಯುಳ್ಳವನು ; ಇಷ್ಟವಿರುವವನು : ಅರೋಚಕಿಯೆ ಬಾಳಿನಲ್ಲಿ ? ರೋಚಕಿಯಿರಲಾವ ಪುಣ್ಯ ? (ತಂತನ. ೩೬-೦೭). [ಸಂ. ರೋಚಕಿನ್]

**ರೋಚನ** (ಗು). ೧. ಹೊಳೆಯುವ ; ಪ್ರಕಾಶಿಸುವ. ೨. ಸುಂದರವಾದ; ಚೆಲುವಾದ. ೩. ಹಸಿವನ್ನುಂಟುಮಾಡುವ ; ಜೀರ್ಣಕಾರಿಯಾದ. (ನಾ). ೪. ಜೀರ್ಣಕಾರಿಯಾದ ವಸ್ತು, ಪದಾರ್ಥ. ೫. ಒಂದು ಬಗೆಯ ಮರ ; ಕೆಂಪು ಬೂರುಗ ; ಶಾಲ್ಮಲಿ : " ರೋಚನಃ, ಕೂಟ ಶಾಲ್ಮಲೀ – ೨ ಕೆಚ್ಚನೆ ಎಲವದ ಪೆಸರು, ಬೆಟ್ಟಬೂರುಗ, ಕೆಂಪುಬೂರುಗ " (ಸಿದ್ಧಾಂತಿ. ೧೨೩). ೬. ಹಳದಿ ಬಣ್ಣದ ಒಂದು ಬಗೆಯ ಸುಗಂಧ ದ್ರವ್ಯ ; ಗೋರೋಚನ : ಅತಿಂಪಳರೋಚನಾರಚಿತತಿಳಕಮದು ನೊಸಲ ಕಣ್ಬೊಲೆಸದಿರೆ (ಕಾದಂಪೂ. ४೦); ಸರೋರುಹತಂತು ರೋಚನಂ . . . ಪೂರ್ಣಕುಂಭಮೆಸೆದತ್ತು ವಿವಾಹಗೃಹಾಂತರಾಳದೊಳ್ (ರಾಜಶೇ. ೯-೦೦). [ಸಂ.]

**ರೋಚನಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರಿಂದ ತಯಾರಿಸಿದ ಔಷಧ : "ಕಾಂಪಿಲ್ಯಃ . . . ರೋಚನೀ – ೫ ಕಂಪಿಲ್ಲದ ಹೆಸರು, ರೋಚನೀಯೆಂಬುವ ಓಷಧಿ" (ಸಿದ್ಧ೦ಶಿ. ೦೯೬). [ಸಂ. ರೋಚನೀ]

**ರೋಚಮಾನ** (ನಾ). ಕುದುರೆಯ ಕತ್ತಿನಲ್ಲಿರುವ ಸುಳಿ : "ಉರದಿಂದ ಮೇಲಿಪ್ಪ ಸುಟಿ ರೋ[ಶಾಶಾಂ. ಲೋ]ಚಮಾನ ನಡುಗೊರಲ ಸುಟಿ ದೇವಮಣಿ" (ವಂಗರಾ. ೬೩–೨೦); ಕೊರಲೊಳ್ ಕಣ್ಗೆಸೆದೊಪ್ಪೆ ದೇವಮಣಿ ಮೇಣ್ ರೋಚಮಾನಂ ಪೊದಟ್ಟಿರೆ ಪೂರ್ವಾಂಗದ ದೋಷಮಂ . . . ಪಿಂಗುಗುಂ (ರೋಕೋಶ. ೦೦–೯೯). [ಸಂ.]

**ರೋಚಿ** (ನಾ). ೧. ಬೆಳಕು ; ಕಾಂತಿ. ೨. ಕಿರಣ ; ರಶ್ಮಿ : "ರೋಚಿಃ . . . ವಿರೋಕಃ, ಗೌಃ – ಈ ೩೨ ರಶ್ಮಿಗಳ ಪೆಸರ್" (ಹರಿಯು. ೭–೩೯); ಚಂಚಲ್ಲಸಚ್ಚಂದ್ರರೋಚಿರ್ಘಾವಳಿ ಮಾಡಿತ್ತು ತನ್ಮಂದಿರಮಹಿಧರಮಂ ಕ್ಷೀರಧಾರಾಪ್ರವಾಹಂ (ರಜಪು. ೪–೩೪); ಕಾಲಾನಲಾಕ್ಷಿ ಸ್ಫುರದ್ರೋಚಿರ್ಜಾಲಂ ಪೊಣ್ಮೆ (ರಾಶಕೆ. ೩–೯೯). [ಸಂ. ರೋಚಿಸ್]

**ರೋಚಿಮಂಡಲ** (ನಾ). ಕಾಂತಿಯ ಆವರಣ ; ತೇಜೋವಲಯ : ಮೂಡಣಾದ್ರಿಯ ಕೋಡುಗಲ್ಲಿನೆಡೆ ರುಚಿರರವಿರೋಚಿಮಂಡಲವಿಣಿಕಿ ಬರೆ (ಶತ್ರ್ಯಂಗ. ೩೦–೦೩೩೭). [ಸಂ.]

**ರೋಚಿಷ್ಣು** (ಗು). ೧. ಕಾಂತಿಯುತವಾದ ; ಪ್ರಕಾಶಮಾನವಾದ. ೨. ಅಲಂಕಾರಗೊಂಡ ; ಶೋಭಾಯಮಾನವಾದ : ಜಿಷ್ಣುವಂ ಸಾರೆ ಭಗದೇಹನಾದನುರೆ ರೋಚಿಷ್ಣು ಭೂಪಾಲರುಂ ಸಾರಲವರಳಿದಿರ್ದರೆಂದಾ ಮಹಾಲಕ್ಷ್ಮಿಯುಂ (ಜುರುಕ್ಕ. ೦೭–೬). (ನಾ). ೩. ಕಾಂತಿ : ಪ್ರಕಾಶ : ಕಾಂಚನರೋಚಿಷ್ಣುಗಳೆ ಮಿಕ್ಕ ಕುಲಧರರೆಲ್ಲಂ (ಕುಣಾಮಾ. ೦–೬೭). ೪. ಅಲಂಕರಿಸಿಕೊಂಡಿರುವವನು : "ವಿಭ್ರಾಟ್, ಭ್ರಾಜಿಷ್ಣುಃ, ರೋಚಿಷ್ಣು ೩ ಭೂಷಣಾದಿಗಳಿಂದ ಪ್ರಕಾಶಿಸುತ್ತಿರುವವನ ಹೆಸರುಗಳು" (ಸಿದ್ಧ೦ಶಿ. ೧೯೮). [ಸಂ.]

**ರೋಚಿಸು** (ಕ್ರಿ). ೧. ಬೆಳಗು ; ಶೋಭಿಸು ; ರೋಚಿಸೆ ನಾನಾರಸಭಾವೋಚಿತ ಕರಣಾಂಗಹಾರಪಥದಲ್ಲಿ ಕೆಲರ್ ಸೂಚಿಸೆ ನಾಟ್ಯಮನಾಡಿದರ್ (ಜ್ಞಶ್ರೀ. ೦೨–೯೭). ೨. ಇಷ್ಟಪಡು ; ಆಶಿಸು : ಯೋಚಿಸಿ ನೀನದುಕಾರಣವನುದಿನ ರೋಚಿಸದಿರು ಮರಣಕ್ಕೆ (ಜೋಗಾಂವಿ. ೩–೨೭); ನಿಮ್ಮಡಿಯ ಮೇಲೆ ರೋಚಿಸಿತು ಮನ (ಶಿಭಾಗ. ೯–೨೩–೬). [ರೋಚನ + – ಇಸು$_3$]

**ರೋಜ$_1$** 'ರೋಜಾ$_1$' ನೋ.

**ರೋಜ$_2$**, ರೋಜಾ$_2$ (ನಾ). ೧. (ಸಾಮಾನ್ಯವಾಗಿ ತಿಳಿಗೆಂಪುಬಣ್ಣದ) ಸುವಾಸನೆಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ಮತ್ತು ಅದರ ಹೂವು: ಗುಲಾಬಿ : ಮೇಜಿನ ಮೇಲೊಂದು ರೋಜದ ಹೂವು, ಹಿಂದೆಂದು ಕಾಣದ ಸೊಗಸಿನ ಹೂವು (ಮೂಂದೇ. ೦೨–೦). **ರೋಜಾ$_2$** : ೨. ಗುಲಾಬಿ ಹೂವಿನಂತಹ ತಿಳಿಗೆಂಪುಬಣ್ಣ : ಚಿರಂಜೀವಿ . . . ರೋಜಾ ಬಣ್ಣದ ರೇಷ್ಮೆಯ ವಲ್ಲಿಯನ್ನು ಹೊದೆದಿರುವನು (ವರದಾ. I, ೩೩೯).
[← ಇಂ. Rose]

**ರೋಜನಾಮಾ** 'ರೋಜುನಾಮು' ನೋ.

**ರೋಜಮಾರಿ** (ನಾ). ಸುವಾಸನೆಯ ಎಲೆಗಳುಳ್ಳ ಒಂದು ಬಗೆಯ ಸಸ್ಯ : (ವೃ೩ಗ. ೨–೨೩).
[← ಇಂ. Rosemary / ಮರಾ. ರೋಜ್‌ಮಾರೀ]

**ರೋಜಮೇಳ** (ನಾ). ಆಯಾದಿನದ ಆಯವ್ಯಯ ; ದಿನದ ಲೆಕ್ಕ : ಪಕ್ಕಾ ರೋಜಮೇಳ ಬರಿಯುವದು (ಮುಂಬಿದ್ಯಾ. ೨೭೯).
[ ← ಮರಾ. ರೋಜ್‌ಮೇಳ]

**ರೋಜಾ$_1$**, ರೋಜ$_1$ (ನಾ). ೧. ಮುಸಲ್ಮಾನರು ರಂಜಾನ್ ತಿಂಗಳಲ್ಲಿ ಕೈಗೊಳ್ಳುವ ಉಪವಾಸವ್ರತ. ೨. (?) : ಮಶೀದಿಯು ರೋಜಾ ಎಂಬುದರ ಪಶ್ಚಿಮಕ್ಕಿರುತ್ತದೆ (ಮುಂಬಿಯು. ೬–೦೦೪). **ರೋಜ$_1$** : (೬).
[ ← ಪಾರ. ರೋಜಾ, ರೋಜದ್ ; ಹಿಂ. ಮರಾ. ರೋಜಾ]

**ರೋಜಾ$_2$** 'ರೋಜ$_2$' ನೋ.

**ರೋಜಾಂಬರಿ** (ನಾ). ರೋಜಾಹೂವಿನ ಬಣ್ಣದ ಸ್ಫಟಿಕದ ಹೂವು : ಜಾಜಿಮಲ್ಲಿಗೆ ಪುಷ್ಪ ಸೂಜಿಮಲ್ಲಿಗೆ ದವನ ರೋಜಾಂಬರಿ ನಿತ್ಯಮಲ್ಲಿಗೆ (ಸಿದ್ಧಪು. ೦೬–೯೯). 'ನೀಲಾಂಬರ' ಪರಾ. [ < ರೋಜ$_2$]

**ರೋಜಾಹೂವು** (ನಾ). ಸಾಮಾನ್ಯವಾಗಿ ತಿಳಿಗೆಂಪುಬಣ್ಣವನ್ನು ಹೊಂದಿರುವ, ಸುವಾಸನಾಯುಕ್ತವಾದ ಒಂದು ಬಗೆಯ ಹೂವು ; ಗುಲಾಬಿಯ ಹೂವು : ಫೋಟೋ ಮೇಲೆ ಇಟ್ಟಿದ್ದ ರೋಜಾಹೂವು ಎರಡು ದಿನವಾದರೂ ಬಾಡಿಲ್ಲ (ರೂಢಿ).
[ರೋಜಾ$_2$ ( < ರೋಜ$_2$) + ಹೂವು ( < ಪೂ$_2$) ]

**ರೋಜಿ** (ನಾ). ೧. ದಿನಭತ್ಯ : ಪಡಿ : (೬). ೨. ಕೆಲಸ; ಕಸುಬು ; ವೃತ್ತಿ : (೬). [ ← ಪಾರ. ಹಿಂ. ಮರಾ. ರೋಜೀ ]

**ರೋಜಿನ** (ಅ), ಪ್ರತಿದಿನ ; ದಿನವೂ : ಯಜಮಾನರು ರೋಜಿನ ಇಷ್ಟೊತ್ತಿಗೇ ಬತ್ತಿದ್ರು (ಅವಕಂ. ೯೩).
[ ← ಪಾರ. ರೋಜಾನಹ್ ; ಹಿಂ. ರೋಜಾನಾ ]

**ರೋಜು** (ನಾ). ೧. ದಿನ ; ನಿತ್ಯ : (೬). ೨. ಕೆಲಸ ; ಉದ್ಯೋಗ : (೬). ೩. ಕೂಲಿ ; ಸಂಬಳ : (ಜಾನಕೋ. ೪೦).
[ ← ಪಾರ. ಹಿಂ. ಮರಾ. ರೋಜ್ ]

**ರೋಜುಗಾರ** (ನಾ). ವೃತ್ತಿಯಲ್ಲಿರುವವನು ; ಕೆಲಸಗಾರ : (೬).
[ ← ಪಾರ. ಹಿಂ. ಮರಾ. ರೋಜ್‌ಗಾರೀ ]

**ರೋಜುಗಾರಿ** (ನಾ). ೧. ಕೂಲಿ ; ಮಜೂರಿ : (೬). ೨. ದಂಧೆ ; ಕೆಲಸ ; ಉದ್ಯೋಗ : (೬). [←ಪಾರ. ಹಿಂ. ಮರಾ. ರೋಜ್‌ಗಾರ್]

**ರೋಜುಗಾರಿಕೆ** (ನಾ). ಕೆಲಸ ; ದಂಧೆ : (೬). [ರೋಜುಗಾರ + – ಇಕೆ]

**ರೋಜುನಾಮು**, ರೋಜನಾಮಾ, ರೋಜುನಾಮೆ (ನಾ). ೧. ಪ್ರತಿದಿನದ ಕಾರ್ಯಕಲಾಪವನ್ನು ಬರೆದಿಡುವ ಪುಸ್ತಕ; ದಿನಚರಿ : (೬). ೨. ಆಯಾದಿನದ ಖರ್ಚನ್ನು ಬರೆದಿಡುವ ಪುಸ್ತಕ ; ಕಿರ್ದಿ : (೬). **ರೋಜನಾಮಾ** : ೧. ಬ್ರಹ್ಮಲಿಪಿ ರಾಯರ ಅದು. ಅದ್ದೇನು ರೋಜನಾಮಾ ಲಿಪೀನ ? (ವಡುಮ. ೩೩). **ರೋಜುನಾಮೆ** : (ಅಸಂಪಾ). [ ←ಪಾರ. ರೋಜ್‌ನಾಮಹ್ ; ಹಿಂ. ರೋಜ್‌ನಾಮಚಾ]

**ರೋಜುನಾಮೆ** 'ರೋಜುನಾಮು' ನೋ.

**ರೋಟರಿ**(ನಾ). ೧. ಸುರುಳಿಕಾಗದದಿಂದ ಮುದ್ರಿಸಬಹುದಾದ ಒಂದು ಬಗೆಯ ಮುದ್ರಣಯಂತ್ರ : 'ರೋಟರಿಯಂತ್ರ' ಪರಾ. ೨. "ಮಾನವ ಸೇವೆಯ ಉದ್ದೇಶದಿಂದ ಅಂತರರಾಷ್ಟ್ರೀಯ ಆಧಾರದ ಮೇಲೆ ಸ್ಥಾಪಿಸಿದ, ಹಲವು ಶಾಖೆಗಳುಳ್ಳ, ಒಂದು ವಿಶ್ವವ್ಯಾಪಕ ಸಂಘ" (Rotary. ಇಂಳಿ). 'ರೋಟರಿಕ್ಲಬ್ಬು' ಪರಾ.
[ ← ಇಂ. Rotary ]

**ರೋಟರಿಕ್ಲಬ್ಬು** (ನಾ). = ರೋಟರಿ ೨ : ರೋಟರಿಕ್ಲಬ್ಬಿನಲ್ಲಿ ಇಂದು ಅವರ ಭಾಷಣವಿತ್ತು (ರೂಢಿ). [ರೋಟರಿ + ಕ್ಲಬ್ಬು]

**ರೋಟರಿಮುದ್ರಣ** (ನಾ). ರೋಟರಿಯಂತ್ರದಲ್ಲಿ ಮಾಡುವ ಮುದ್ರಣ : ಬಾಗಿದ ಸ್ಟೀರಿಯೋ ತಯಾರಿಕೆಯೂ ಸ್ವಲ್ಪಕಾಲದಲ್ಲೇ ಬಳಕೆಗೆ ಬಂದುದರಿಂದ ರೋಟರಿಮುದ್ರಣವು ಸಾಧ್ಯವಾಯಿತು (ಮುದ್ರಶ. ೯೯).
[ರೋಟರಿ + ಮುದ್ರಣ]

**ರೋಟರಿಯಂತ್ರ** (ನಾ). = ರೋಟರಿ ೧ : ಬಿಡಿಹಾಳೆಗಳನ್ನು ಊಡಿಸಿ ಮುದ್ರಿಸುವ ರೋಟರಿಯಂತ್ರಗಳೂ ಇವೆ (ಮುದ್ರಶ. ೯೯).
[ ರೋಟರಿ + ಯಂತ್ರ ]

**ರೋಟಿ** (ನಾ). ೧. ಸೆಳೆಯುವುದು; ಎಳೆಯುವುದು : "ರೋಟಿಃ-ಸೆಳೆ" (ಶಾಶಕ್ಕ. ೦೩೦). ೨. ಗಿಡ, ಮರಗಳಿಂದ ಎಲೆ, ಕಾಯಿ, ಸೊಪ್ಪು ಮುಂತಾದುವುಗಳನ್ನು ಕೀಳಲು ಬಳಸುವ, ತುದಿಯಲ್ಲಿ ಕೊಕ್ಕೆ ಇರುವ ಕೋಲು ; ದೋಟಿ : ಅಡಿಗೆ ಸೊಪ್ಪು ಸೆಳೆಯಲು ರೋಟಿ ಬೇಕು (ರೂಢಿ). 'ರೋಟಿಗಳೆ' ಪರಾ. [ ? ]

**ರೋಟಿಗಳೆ** (ನಾ). = ರೋಟಿ ೨ : ಫಳಹರದ ಸೂತ್ರಿಕೆಗಳೊತ್ತುಗೆ ತಲೆಜವಳ ರೋಟಿಗಳೆ ವೇಟಿನ ಸೆಳೆವಲಗೆಯಗ್ಗರಣೆ ತಿರುಜೆಯ ಮುರುಜೆ ಹೊರಜಗಳ (ಅಂಬಿಗ. ೨೯-೬). [ ರೋಟಿ + ಗಳೆ (< ಗಟಿ[3]) ]

**ರೋಟು$_1$** 'ರೊಟ್ಟಿ' ನೋ.

**ರೋಟು$_2$** 'ರೋಡು' ನೋ.

**ರೋಡಾಡಿಸು** 'ಜಿ[3]ೋಡಾಡಿಸು' ನೋ.

**ರೋಡಾಡು** 'ಜಿ[3]ೋಡಾಡು' ನೋ.

**ರೋಡಿಗ** 'ಜಿ[3]ೋಡಗ' ನೋ.

**ರೋಡಿಸು** 'ಜಿ[3]ೋಡಿಸು' ನೋ.

**ರೋಡು**, ರೋಟು$_2$ (ನಾ). ರಸ್ತೆ : ದಾರಿ: ಮಾರ್ಗ : ಅವರು ಮಾಗಡಿರೋಡಿನಲ್ಲಿ ಮನೆ ಮಾಡಿದ್ದಾರೆ (ರೂಢಿ). **ರೋಟು$_2$** : ನಡುವೆ ಅಗಲವಾದ ಗಾಡಿರೋಟು ಹೋಗುತ್ತಿದ್ದುದರಿಂದ (ಪಟ್ಟಿಣ. ೧೩೭).
[ ← ಇಂ. Road ]

**ರೋಡೆಗ** 'ಜಿ[3]ೋಡಗ' ನೋ.

**ರೋಣ** (ನಾ). ಒಂದು ಊರಿನ ಹೆಸರು ; ಈಗಿನ ಧಾರವಾಡ ಜಿಲ್ಲೆಯ ರೋಣ : ರೋಣದ ಮಹಾಜನಕೆ . . . ಕೊಟ್ಟು (ಎಇ. XIII. ೦೬೩-೭; 874) ; ರೋಣ[ದ] ಹನ್ನಿರ್ವ್ವರ್ಬು ಗದ್ಯಾಣಂ (ಇಇ. XII. ೨೫೬-೦೩ ; 971). [ ? ]

**ರೋಣುಗಲ್ಲು** (ನಾ). ತೆನೆಯಿಂದ ಕಾಳುಗಳನ್ನು ಬೇರ್ಪಡಿಸಲೂ ಗಾರೆ ಮೊದಲಾದುವನ್ನು ಪುಡಿಮಾಡಲೂ ಬಳಸುವ ದುಂಡನೆಯ ಕಲ್ಲನ್ನು ಅಳವಡಿಸಿದ ತಿರುಗುಯಂತ್ರ : ಒಂದು ಪಾಲು ಸುಣ್ಣಕ್ಕೆ ಮೂರು ಪಾಲು ಮರಳನ್ನು ಬೆರಸಿ ಸುಣ್ಣದ ಕಾಲುವೆಗಳಲ್ಲಿ ರೋಣುಗಲ್ಲಿಗೆ ಎತ್ತುಗಳನ್ನು ಕಟ್ಟಿ ಹಿಂದೆ ಅರೆಯುತ್ತಿದ್ದರು (ಶಿಲ್ಪಸಾ. ೨೯೦): ರೋಣುಗಲ್ಲು ಹತ್ತುತ್ತಾನೆ. ಕಣಮಾಡುವಾಗ, ಎತ್ತುಗಳನ್ನು ತಾನೆ ಹೆಣೆಗೆ ಕಟ್ಟಿ . . . ಹಿಗ್ಗುತ್ತಾನೆ (ಜಿಲುವು. ೦೩೭). [ ರೋಣು$_0$ + ಕಲ್ಲು (< ಕಲ್$_3$)]

**ರೋಣುಹೊಡೆ** (ಕ್ರಿ). ರೋಣುಗಲ್ಲನ್ನು ತಿರುಗಿಸು : ಅವನು . . . ಕವರಿದ ಹುಲ್ಲಿನ ಮೇಲೆ ರೋಣುಹೊಡೆಯುವವನು (ಜಿಲುವು. ೦೯೦).
[ ರೋಣು$_0$ + ಹೊಡೆ$_1$ ( < ಪೊಡೆ$_1$ ) ]

**ರೋಣೂರ್** (ನಾ). ಒಂದು ಊರಿನ ಹೆಸರು : ಪೆಜ್ಜಪೆ × × ಅರಸರ್ ರೋಣೂರಾಳೆ × × ಸಗರ ಮಿಕ್ಕಾಣೆ (ಎಕ. X. ಶ್ರೀನಿವಾ. ೬೩-೩; ಸು. 765). [ ರೋಣು$_0$ + ಊರ್ ]

**ರೋತಿ** 'ರೋತೆ' ನೋ.

**ರೋತೆ**, ರೋತಿ (ನಾ). ೧. ಕೊಳಕು ; ಹೊಲಸು ; ಹೇಸಿಗೆ : ಪಕ್ಕದಲ್ಲಿ ಮಲಗಿದ್ದ ಗಂಡನ ರೋತೆಯನ್ನು ನೆನೆದು ಚಿಂತಿಸುತ್ತಾ ಮಲಗಿದ್ದಳು (ಮಲೆಮ. ೨೬೩). ೨. ಅಸಹ್ಯ; ಜುಗುಪ್ಸೆ : ಇದೊ! ಶರಣಾದೆನು ! ನಾ ಸೋತೆ! ನಂಗೆನ್ನನು ! ತಪ್ಪುಲ್ಲಿ ರೋತೆ ! (ಪಾಂಚಜ. ೫೯-೨೦). ೩. ಅಸಹ್ಯಕರನಾದವನು : ಗೌತಮನ ಸತಿಯರಿಗೆ ಗಜವಾಹನನು ಮೆಚ್ಚಿ ರೋತೆಯಾಗನೆ ಮುನ್ನ ಋಷಿಯ ಶಾಪದಲಿ (ಸಾರಂಗ. ೨೭). **ರೋತಿ** : ೧. ಉಸುರು ಕೊರಳಲ್ಲಿ ಸಿಕ್ಕಿ ತಿರುಗದೆ ಉಬ್ಬಸ ಬರಮರುವಾಗಿ ಕರ್ನ ಕಂಗಳ ರೋತಿಯು ಸೋರೆ (ಏಕಾಸು. ೫೦-೩).
[ ದೇ.॥ ತಮಿ. ರೋನ್ತ್ಯ; ತೆಲು. ರೋತ ]

**ರೋದನ** (ನಾ). ೧. ಅಳುವಿಕೆ; ಪ್ರಲಾಪ : "ಆಟಿಕ್ಕೆಯೆನೆ ರೋದನಂ" (ಸಂಚಿತ. ೭); ರೋದನದಿಂ ಸುತನ ಶಿರಶ್ಛೇದನದಬಲಾಜಿದಾಬುಗಂ ರಿಪುರುಧಿರಾಸ್ವಾದನದಿಂ (ಶಂರಾಮಪ. ೯-೩೩); ಆ ರೋದನಕ್ಕುರಿ ಬೆರ್ಚಿ . . . ಕಾನಾಯೆಡೆಗೆ ಬರೆ (ಶ್ರೀರಾಮಪಾ. ೧೯-೫೦೦). ೨. ಕಣ್ಣೀರು ; ಕಂಬನಿ : "ಅಶ್ರು, ಬಾ(ಷ್ಪಂ)ಜ್ಜಂ, ರೋದಸಂ, ನಯುನಜಳಂ, ಅಸ್ರಂ-ಈ ೫ ಕಣ್ಣನೀರ್" (ಹಲಾಯು. ೮೬-೩೬೩). [ಸಂ.]

**ರೋದನಿ** (ನಾ). ಒಂದು ಬಗೆಯ ವನಸ್ಪತಿ ; ಬಳ್ಳಿದುರುಚೆ : "ಯಾಸಃ . . . ರೋದನೀ, ಕಚ್ಛುರಾ . . . ದುರಾಲಭಾ-೧೧೦ ತೀಟಕ ಸಂಧಿ ಹೆಸರುಗಳು" (ನಿಘಂತಿ. ೦೩೩). [ಸಂ. ರೋದನೀ]

**ರೋದನಿಸು** (ಕ್ರಿ). ಅಳು ; ಪ್ರಲಾಪಿಸು : ರಮಣನಗಲಿದನೆಂದು ರೋದನಿಸಿ ಮುಖಿ ಬಳಲಿ ಕಮಲ ನೆಟಿ[3] ನೊಂದು ಜೀವಿಸಲಾಜದಂತಿಹುವು (ಕಿಂತ. II. ೩೦೦ ಶಿವಾಂಕ್ಕಪುರಾಣ). [ರೋದನ + —ಇಸು$_3$]

**ರೋದನೆ** (ನಾ). ರೋದನ ೧ : 'ರೋದನೆಗೆಯ್' ಪರಾ.
[ಸಂ. ರೋದನ]

**ರೋದನೆಗೆಯ್** (ಕ್ರಿ). ರೋದನಿಸು : ರೋದನೆಗೆಯ್ಯಲೇತಕೆ ಕೇಳು ಕೇಳು ತಳೋದರಿ (ವಿಃಹತ. ೦೦-೫೩). [ರೋದನೆ + ಕೆಯ್$_1$]

**ರೋದಸಿ** (ನಾ). ಆಕಾಶ ಮತ್ತು ಭೂಮಿ : "ದ್ಯಾವಾಭೂಮೀ, ರೋದಸ್ಯೌ, ರೋದಸೀ, ರೋಷಸೀ – ಈ ೪ ನೆಲನುಂ ಆಕಾಶದ ಪೆಸರ್" (ಹಲಾಯು. ೨೦-೦೨೦): ಪೂರಿಪ ಶಂಖಂಗಳ ಘನಘೋಷದ ಪೆರ್ಚುಗೆ ಬಳೆದುಟಿ[3] ತೀವಿತ್ತು ರೋಧ[ದ] ಸೀಮಂಡಲಮಂ (ತ್ರಿಪುರ. ೦೬-೬೦).
[ಸಂ. ರೋದಸೀ]

**ರೋದಸ್ಥಳ** (ನಾ). ಸ್ವರ್ಗ : ಚರಾಚರಧಾತ್ರಿಯುನೆಯ್ದೆ ಸುತ್ತಿ ರೋದಸ್ಥಳಮಂ ಪಳಂಚಲೆವ ಭಂಗುರತುಂಗತರಂಗಸಂಗತ (ಶಾಸಪ. ೫೨-೮; 1138). [<ಸಂ. ರೋದಸ್ಥಲ]

**ರೋದಿಸು** (ಕ್ರಿ). = ರೋದನಿಸು : ಸಿತಕಂಜದಳನೇತ್ರೆಯು ಪೊಡೆಯೊಳಗಿರ್ದ ಸುತ ಪೊಜಿಮಟ್ಟ ರೋದಿಸುತ (ಮೋಹಕ. ೦೭-೦೭) ; ಮಗನ ಮರಣವಾರ್ತೆಯನ್ನು ಅರಿತ ರಾಣಿ ರೋದಿಸಿದಳು (ಹಾಹುತ. ೫೦).
[ರೋದನ+ —ಇಸು$_3$]

**ರೋದೋಂಗಣ** (ನಾ). ಆಕಾಶಪ್ರದೇಶ : ಗಗನಸ್ಥಳ : ಪಾಡುವ ಕೀರಮಾಲೆ ರೋದೋಂಗಣಮೆಂಬ ಪಟ್ಟಣದೊಳೊಪ್ಪುವ ಬೆಳ್ಳುಗಿಲೆಂಬ ಬಳ್ಳಿಮಾಡಂಗಳ ಪೊನ್ನ ಮಾಣಿಕದ ಪಚ್ಚೆಯ ತೋರಣದಂತೆ ರಂಜಿಕುಂ (ಜಗನ. ೯-೬೭). [<ಸಂ. ರೋದೋಂಗನ]

**ರೋದೋವಾತ** (ನಾ). ಆಕಾಶದಲ್ಲಿ ಬೀಸುತ್ತಿರುವ ಗಾಳಿ : ರೋದೋವಾತಮಂ ಕೇತುತತಿ ತೆಗೆಯೆ (ಚಂದ್ರಪ್ರ. ೦೦-೫೦). [ಸಂ.]

**ರೋದೋವಿವರ**(ನಾ). ಭೂಮಿ ಮತ್ತು ಆಕಾಶಗಳ ಮಧ್ಯದ ಪ್ರದೇಶ ; ಗಗನಾಂತರ ; ಕ್ಷಿತಿಜ : ಪ್ರಚಂಡಪ್ರಳಯಘನಘಟಾರಾವದಿಂ ವಾರ್ದು ಬಾಣಾವಲಿಯಿಂದಂ ಪೂಟಿ[3] ರೋದೋವಿವರಮನೊದವಿತ್ತೊಂದು ಘೋರಾಂಧಕಾರಂ (ಶಂಕರಾ. ೦೦-೦೪೯). [ಸಂ.]

**ರೋಧ** (ನಾ). ೧. ತಡೆಯುವುದು ; ನಿಲ್ಲಿಸುವುದು : ಒಂದು ತಂತಿಯ ಮೂಲಕ ವಿದ್ಯುತ್ಪ್ರವಾಹವು ಹರಿಯುವುದನ್ನು ತಡೆಗಟ್ಟುವ ಗುಣವು ಆ ತಂತಿಗೆ ಇರುತ್ತದೆ. ಈ ಗುಣಕ್ಕೆ ರೋಧವೆಂದು (Resistance) ಹೆಸರು (ಭೌತಪ. ೨೯೭). ೨. ಹಿಡಿದುಕೊಳ್ಳುವುದು ; ಬಂಧಿಸುವುದು. ೩. ತಡೆ ; ಅಡ್ಡಿ. ೪. ನದಿಯ ತೀರ, –ದಡ : "ತೀರಂ ರೋಧಂ ತಟಂ ಪ್ರಪಾತಂ ಕೂಲಂ" (ವಸ್ತುಕೋ. ೨೯-೦೩); ರೋಧಮನ್ಯೆದೆ ನೀಳ್ದಿರದುಮಂ ಪುದಿದೊಪ್ಪುವ ನಂದನಾಳಿಯಗ್ರಾಧರಪಕ್ಷಮಪಾಳಿ (ಚಂದ್ರಪ್ರ. ೦-೬೨).
[ಸಂ.]

**ರೋಧಕ** (ಗು). ೧. ತಡೆಯುವ ; ಅಡ್ಡಿಪಡಿಸುವ. (ನಾ). ೨. ತಡೆಯುವಂಥದು ; ಅಡ್ಡಿಪಡಿಸುವಂಥದು : ಕಾಜು — ರೇಶಿಮೆಗಳು ವಿದ್ಯುಲ್ಲತೆಯ ರೋಧಕಗಳುಂಟು (ಮುಂಬಯಿ. ೫-೨೦೩). [ಸಂ.]

**ರೋಧನ** (ನಾ). ೧. ತಡೆಯುವುದು ; ಅಡ್ಡಿಪಡಿಸುವುದು. ೨. [ಜ್ಯೋತಿ] ಬುಧಗ್ರಹ. [ಸಂ.]

**ರೋಧಸಿ** (ನಾ). ದಡಗಳನ್ನು ಹೊಂದಿರುವುದು ; ಹೊಳೆ ; ನದಿ : "ನದಿ ತರಂಗಿಣಿ . . . ರೋಧಸಿ ಸರಿತ್ತು . . . ತೊಱೆಗೆ ನಾಮಂ" (ಮಂಗರಾ. ೦೨೨-೦೦). [ಸಂ. ರೋಧಸೀ]

**ರೋಧಸ್ವಿನಿ** (ನಾ). ನದಿ ; ಹೊಳೆ : ದುರಿತವ್ರಾತಲತಾಕೃಪಾಣಿ ವಿಸರದ್ದುರ್ಬೋಧರೋಧಸ್ವಿನೀತರಣದ್ರೋಣಿ . . . ವಾಣಿ (ಚಂದ್ರಕೌ. ೦-೦೨). [ಸಂ. ರೋಧಸ್ವಿನೀ]

**ರೋಧಿ** (ನಾ). ತಡೆಯುವವನು ; ಪ್ರತಿಬಂಧಿಸುವವನು. [ಸಂ. ರೋಧಿನ್]

**ರೋಧಿನಿ** (ನಾ). ತಡೆಯುವವಳು ; ಪ್ರತಿಬಂಧಿಸುವವಳು : ಅಂಗಹೀನನ ಪಂಗುಲಾಂಧಕನ ಘನರುಜಾಂಗನ ಬಡುದಲೆಯ ರೋಧಿನಿಯನುಪ್ಪವಡಿಸುವ ಸಮಯದೊಳಿನಿಬರನು ಕಾಣ್ಬುದು ಮಹೀಶರಿಗಂಗವಲ್ಲ (ಶಂಪ್ಯಾ. ಉ. ೩-೦೦೭). [ಸಂ. ರೋಧಿನೀ]

**ರೋಧೋವಕ್ತ್ರ** (ನಾ). = ರೋಧಸಿ : "ಸಿಂಧುಃ . . . ರೋಧೋವಕ್ತ್ರಾ — ಈ ೨೧ ತೊಱೆ" (ಹಲಾಯು. ೦೦೦-೯೯). [ಸಂ. ರೋಧೋವಕ್ತ್ರಾ]

**ರೋಧ್ರ** (ನಾ). ೧. ಒಂದು ಬಗೆಯ ಮರ ; ಲೋಧ್ರ : "ರೋಧ್ರಂ ತಿಲ್ಲಂ" (ವಸ್ತುಕೋ. ೩೪-೮). ೨. ಪಾಪ. [ಸಂ.]

**ರೋಪ** (ನಾ). ೧. ಮೇಲಕ್ಕೆ ಏರಿಸುವುದು. ೨. ನಾಟಿಹಾಕುವುದು ; ನೆಡುವುದು. ೩. ಬಾಣ ; ಸರಳು : "ಕಂಕಪತ್ರಃ, ಶರಃ . . . ರೋಪಃ — ಈ ೧೬ ಅಂಬು" (ಹಲಾಯು. ೭೭-೩೦೨) ; ನಿಜಧನುದನುಜಾರಾತಿಜಾತಾಧಿವಾಸಂ ನಿಜರೋಪಂ ವಿಶ್ವರೂಪಂ (ರಾಜಶೇ. ೦-೨). ೪. ತೂತು ; ರಂಧ್ರ. [ಸಂ.]

**ರೋಪಣ** (ನಾ). ಬಾಣ ; ಸರಳು : ಕೊಳದಿಂ ಕೂಪ ಪರಿಕಾಲಿಂದೆ ಪಲ್ಲವರೋಪಣನ ಲೀಲಾಸ್ಪದಂ ದಿಟವೆನಿಸಿ ರಾಜಿಪುದು (ಮರೇಕೌ. ೨-೨೭). [ಸಂ.]

**ರೋಪಣಾಸನ** (ನಾ). ಬಿಲ್ಲು ; ಶರಾಸನ : ಅರ್ಜುನಶಿಲೋಚ್ಚಯ ಸುರೋಪಣಾಸನಕೃತಂ ದುರ್ಜನಕ್ಷಣದಾಚರಾದ್ರಿ ಕುಲಕುಲಿಶ . . . ಸಂಗಮೇಶ್ವರ ರಕ್ಷಿಸೆನ್ನ ಸತತಂ (ತ್ರೈಶರಾ. ೭-೦). [ಸಂ.]

**ರೋಪಿತ** (ಗು). ೧. ಬೆಳೆಸಲ್ಪಟ್ಟ. ೨. ನೆಟ್ಟ. [ಸಂ.]

**ರೋಪು, ರೋಫ್, ರೋಫು** (ನಾ). ಜೋರು ; ಜಬರ್ದಸ್ತು : ನಿನ್ನ ರೋಪು ನನ್ನ ಹತ್ತಿರ ತೋರಿಸಬೇಡ (ರೂ೦). **ರೋಫ್** : 'ನಿನ್ನ ತೀರಿಸಿಬಿಡ್ತಿನಿ' ಅಂತ ಗುಮಾನಿ 'ಖಾಲಿ ರೋಫ್' ಹಾಕಿದ್ದ (ನಮ್ಮೂರು. ೨೦೦). **ರೋಫು** : ನಿಮ್ಮ ಬೆಂಗಳೂರಿನ 'ರೋಫು' ಇಲ್ಲಿ ನಡೆಯೋದಿಲ್ಲ (ಹೊಸಮೀ. ೨೨೦).

[←ಅರ. ರುಅಬ್ ; ಹಿಂ. ರೋಬ್ ; ಮರಾ. ರೋಬ್, ರೂಆಬ್]

**ರೋಫ್** ' ರೋಪು ' ನೋ.

**ರೋಫು** ' ರೋಪು ' ನೋ.

**ರೋಮ** (ನಾ). ೧. ಮೈಮೇಲೆ ಬೆಳೆಯುವ ಕೂದಲು; ತನೂರುಹ : "ರೋಮನ್, ತನೂರುಹಂ — ಈ ೨ ಮೆಯ್ಯ ಕೂದಲ್" (ಹಲಾಯು. ೮೭-೩೭೦) ; ಮೆಯ್ಯೊಳ್ ಸಮುದ್ಗತರೋಮಂ . . . ಎಸೆಯುತಿರ್ಪನ್ನವಿಂತೆಂದರ್ (ಜಗ. ೩-೩). ೨. ಹಕ್ಕಿಯ ಗರಿ. [ಸಂ. ರೋಮನ್]

**ರೋಮಂಥ** (ನಾ). ೧. (ಹಸು ಮೊದಲಾದ ಪ್ರಾಣಿಗಳು) ತಿಂದ ಆಹಾರವನ್ನು ಮೆಲುಕು ಹಾಕುವಿಕೆ : ಮೃಗಸಂದೋಹರೋಮಂಥಫೇನೋದ್ಗತಬಿಂದುಸ್ಯಂದಿ ತೀಡಿತ್ತೆಸಗಿ ಸುರಭಿ ವೈಭಾತಿಕಂ ವಾತರಿಶ್ವಂ (ಕಾದಂಪೂ. ೦೯೭) ; ಸರಳಲತಾಲಾಸ್ಯನಟಂ ಹರಿಣೀರೋಮಂಥಮಂಥರಂ ಲವಲೀಮರ್ಮರಮುಖರಂ ಕರಿಕರಶೀಕರಶೀತಳಮೆಸಗಿದತ್ತರಣ್ಯಸಮೀರಂ (ವಲ್ಲಕೌ. ೦೦-೩೨). ೨. ಪುನರುಕ್ತಿ; ಪುನರಾವೃತ್ತಿ. [ಸಂ.]

**ರೋಮಂಥಿಸು** (ಕ್ರಿ). ಮೆಲುಕು ಹಾಕು : ರೋಮಂಥಿಸಿತು ರತಿರೋಮಹರ್ಷಣದಿ ಭಾವಜಪ್ರಾಣಪಶು (ಶ್ರೀರಾಮಪ. ೨೦೬-೦೯೩).

[ರೋಮಂಥ + —ಇಸು₃]

**ರೋಮಂಬೊರೆ** (ಕ್ರಿ). ಕೂದಲನ್ನು ಹೊಂದು : ಆ ಚಂಡಾಲಕನ್ನಿಕೆ ರೋಮಂಬೊರೆದ ಪಂದೊವಲ ಪಂಜರದೊಳಿಕ್ಕಿ (ಕಾದಂಉ. ೭೩೦).

[ರೋಮ + ಪೊರೆ₂]

**ರೋಮಕಂದ** (ನಾ). ಗೆಡ್ಡೆಗಳನ್ನು ಬಿಡುವ ಒಂದು ಬಗೆಯ ಸಸ್ಯ ; ವಾರಾಹಿ : "ರೋಮಕಂದಃ — ರೋಮಕಂದರ, ರಸಮೂಲಿಕ" (೬೫೦. ೦೯೦). [ಸಂ.]

**ರೋಮಕಂದರ** (ನಾ). = ರೋಮಕಂದ : "ಪರ್ವಮೂಲಾ – ರೋಮಕಂದರ, ಬೇನ" (೬ಷಧಿ. ೯೩). [< ಸಂ. ರೋಮಕಂದ]

**ರೋಮಕರ್ಣಕ** (ನಾ). ೧. ಕೂದಲು ತುಂಬಿದ ಕಿವಿಯುಳ್ಳದು. ೨. ಮೊಲ. [ಸಂ.]

**ರೋಮಕಲವಣ** (ನಾ). ಒಂದು ಬಗೆಯ ಉಪ್ಪು : "ಉತ್ಕಂ— ರೋಮಕಲವಣಂ" (೬ಷಧಿ. ೦೩). [ಸಂ.]

**ರೋಮಕೂಪ** (ನಾ). ಕೂದಲು ಬೆಳೆಯುವ ರಂಧ್ರ : ಅನಂತಕೋಟಿ ಬ್ರಹ್ಮಾಂಡಗಳು ನಿಮ್ಮ ರೋಮಕೂಪದೊಳಗಡಗಿಪ್ಪವೆಂದರೆ ಬ್ರಹ್ಮ ವಿಷ್ಣು ರುದ್ರರಿವರೆಲ್ಲ ಒಂದು ಬ್ರಹ್ಮಾಂಡದೊಳಗಣ ಬಾಲಕರು (ಅರವ. ೨-೯) ; ಬಿಗಿದ ರಸುತದ ರೋಮಕೂಪದ ತೊಗಲ ಕೋಟಿಯ ನಂಬಿ (ಹಂಸಾ. ೮೮). [ಸಂ.]

**ರೋಮನಾಳ** (ನಾ). ಕೂದಲು ಬೆಳೆಯುವ ನಾಳ : ಸುಮಾನಾಸಿಲಂ . . . ಅನ್ನರಸಮಂ ಲೇಸಾಗಿ ಬಹು ರೋಮನಾಳಕ್ಕೆ ಹಂಚಿಕ್ಕಿ ಸಾಸದಿಂದಿಹುದು (ಶೀಕ್ಷಕೌ. ೪-೨೦-೨೩). [ಸಂ. ರೋಮನಾಲ]

**ರೋಮಪುಳಕ** (ನಾ). ಸಂತೋಷ, ಭಯ ಮುಂತಾದುವುಗಳಿಂದ ಮೈಗೂದಲು ನಿಮಿರುವಿಕೆ : ಕದಡಿತೀ ಬಲ ರೋಮಪುಳಕವ ಹೊದೆದುದಾ ಬಲ . . . ನರನ ರಥ ಸುಳಿಯೆ (ಕುಮಾವ್ಯಾ. ದ್ರೋ. ೩-೯೭). [ಸಂ. ರೋಮಪುಲಕ]

**ರೋಮರಂಧ್ರ** (ನಾ). = ರೋಮಕೂಪ : ಶರೀರದಲ್ಲಿ ೭೦ ಲಕ್ಷ ರೋಮರಂಧ್ರಗಳುಂಟೆಂದು ತಿಳಿಯುತ್ತದೆ (ಮುಂಬಯಿ. ೫-೦೭೯) ; ರೋಮರಂಧ್ರಗಳರಳೆ ಶತಕೋಟಿ ಕಣ್ಣುಗಳು ಆ ಮಹಾರೂಪ ಕಂಡಾಕಣಿಯನುಸಿರುವೆನು (ಗಂ. ೦೦-೦೭). [ಸಂ.]

**ರೋಮಲತೆ** (ನಾ). (ಹೊಕ್ಕುಳಿನಿಂದ ಮೇಲುಭಾಗದಲ್ಲಿ ಬೆಳೆಯುವ) ಕೂದಲಿನ ಸಾಲು : ಬಾಸೆ ಪೊಲೆ ಪೊಣರ್ವೆಟ್ಟು ರೋಮಲತೆ ಬಟ್ಟೆ ನಿತಂಬಮಿಂಬು ನಾಭಿ ಕುತ್ತುಜುಗುಟಿ ಮಿಂಚುಪೊಳ್ದೊಡೆ . . . ಆಗೆ ಮದನಾಟವಿಯಂತೆಪೊಲೊಪ್ಪಿ ತೋಱಿದಳ್ (ಕಾವ್ಯಸಾ. ೬೦೨ ಸೂಕ್ತ್ರಿ). [ಸಂ. ರೋಮಲತಾ]

**ರೋಮಶ** (ನಾ). ೧. ಮೈತುಂಬ ಕೂದಲುಳ್ಳದು. ೨. ಕುರಿ. ೩. ಕಾಡುಹಂದಿ. ೪. ಒಬ್ಬ ಋಷಿಯ ಹೆಸರು : ಮಾರ್ಕಂಡೇಯ ರೋಮಶರ್ಪ್ರತ್ಯೇಕರಳಿವರ್ (ಕ್ಷೈಖಿಶಾ. ೩೨-೩೦). ೫. ಗುಹ್ಯಾಂಗ. [ಸಂ.]

**ರೋಮಸ್ಸನ** (ನಾ). ಕುದುರೆಯ ಬಾಲದ ಬುಡ ; ಪೇಚಕ (?) : ಬಾಲದ ಕಟಗು ತಗರಿಯೆಂಬ ಪೆಸರಕ್ಕುಂ ಅದಱ ಕೆಲಂಗಳ್ಗೆ ವೃತ್ತಿಯೆಂಬ

ಪೆಸರಕ್ಕುಂ ವೃತ್ತಿಯಿಂ ಕೆಟಗೆ ರೋಮಸ್ಥ(ಸ್ವ)ನಮೆಂಬ ಪೆಸರಕ್ಕುಂ (ಅಕ್ಷನಾ. ೬೯-೧೦). [ ? ]

**ರೋಮಹರುಷಿತೆ** (ನಾ). ಸಂತೋಷದಿಂದ ಪುಳಕಗೊಂಡವಳು : ಹಾ ಮಹಾದೇವೆಂದು ಪುಳಕಿತ ರೋಮಹರುಷಿತೆಯಾಗಿ. . . ಬಿನ್ನೈಸಿದಳು ಗಿರಿಜಾತೆ (ಕೊರಶಾ. ೦-೨-೦೦). [<ಸಂ. ರೋಮಹರ್ಷಿತಾ]

**ರೋಮಹರ್ಷ** (ನಾ). = ರೋಮಪುಳಕ : "ರೋಮಾಂ(ಕ)ಚಃ, ಪುಳಕಃ . . . ರೋಮಹರ್ಷಃ _ ಈ ೧೦ ರೋಮಾಂಚಂ" (ಹಲಾಯು. ೦೦೭-೨೯); ವಿಸ್ಮಯಂಬಡನೆ ಮಯಂ ಬೆರಲ್ಮಿಡಿಯನೇ ಸುರವರ್ಧಕಿ ರೋಮಹರ್ಷದೊಳ್ ತೊಡರನೆ ಚೀರಘಟ್ಟಿ (ಶಂಪ್ರಕೃ. ೦-೦೯೯); ನಯನಸಲಿಲದ ರೋಮಹರ್ಷದ ಸತ್ಯಭಾವದ ಭೂಮಿಪತಿ ಮೈಯಿಕ್ಕಿದನು ಮುನಿವರನ ಚರಣದಲಿ (ಕುವ್ಯಾ೦. ೪-೬). [ಸಂ.]

**ರೋಮಹರ್ಷಣ** (ಗು). ೧. ರೋಮಾಂಚನಗೊಳಿಸುವ. (ನಾ). ೨. = ರೋಮಪುಳಕ : ವಸುಧೆಯುದಿರಿತು ಮೇರುಶೈಲಮೆಲ್ಲಾಡಿದುದು ಬಸವಳಿದನಹಿ . . . ಆಹವಂ ಘೋರವಾದುದು ರೋಮಹರ್ಷಣದೊಳು (ಕೈ ಐಳಾ. ೨೫-೨೫). [ಸಂ.]

**ರೋಮಹರ್ಷಿತ** (ನಾ). ಪುಳಕಿತನಾದವನು ; ರೋಮಾಂಚನಗೊಂಡವನು. [ಸಂ.]

**ರೋಮಾಂಗಿ** (ನಾ). ಮೈಮೇಲೆ ತುಂಬ ಕೂದಲುಳ್ಳವಳು : ವಾಮನೆ ವಿಕಳೆ ರೋಮಾಂಗಿ ಮಾರ್ಜಾಲಾಕ್ಷಿ ಕಪಿಲಕಚೆ ಶುನಕಯಾನೆ. . . ಎನಿಪಂಗನೆಯರಿಂದ ಗತಾಯು ಪುರುಷಂಗೆ (ಜೀವಂಶ. ೦೭-೬೦).
[ಸಂ. ರೋಮಾಂಗೀ (ರೋಮ + ಅಂಗ + — )]

**ರೋಮಾಂಚ** (ನಾ). ೧. ಮೈಗೂದಲು ನೆಟ್ಟಗೆ ನಿಲ್ಲುವಿಕೆ ; ಪುಳಕ ; ನವಿರು : "ರೋಮಾ(ಕ)ಚಃ . . . ರೋಮಹರ್ಷಃ — ಈ ೧೦ ರೋಮಾಂಚಂ" (ಹಲಾಯು. ೦೦೭-೨೯) ; ಶರೀರದೊಳೆತ್ತಂ ರೋಮಾಂಚಕಂಚುಕಂ[ತಾಳಿಂ ವಂ] ಮದಿರಾಮದವಾಗಿಸೆ ತೆಗಟ್ಟಿನಾಕೆಯ ನುಡಿಯೊಳ್ (ಕವಿರಾ. ೩-೯) ; ರೋಮಾಂಚಮನಾನಂದಾಶ್ರುವಂ ತಾಳ್ದಿದನಮಲಯಶಂ ಭಾರತೀಕರ್ಣಪೂರಂ (ಶಂರಾಷಮ. ೨-೭೭). ೨. [ಕಾವ್ಯಮಿ]ಸಾತ್ವಿಕಭಾವಗಳಲ್ಲಿ ಒಂದು : ಸ್ತಂಭ ಸ್ವೇದ ರೋಮಾಂಚ . . . ಸಾತ್ವಿಕಭಾವಂಗಳ್ (ಐವಳ. ೨೨೭) ; ಮರವಟ್ಟಿರುವುದು, ರೋಮಾಂಚ ಮುಂತಾದ ಸಾತ್ವಿಕ ಭಾವಗಳು . . . ಚೇತನವನ್ನು ಧ್ವನಿಸುತ್ತವೆ (ಧ್ವನ್ಯಾಲೋ. ೭೯ ಅಡಿ).
[ಸಂ.]

**ರೋಮಾಂಚಕಾರಕ** (ಗು). ಮೈನವಿರೇಳಿಸುವ ; ಪುಳಕವನ್ನುಂಟುಮಾಡುವ : ಅದೊಂದು ರೋಮಾಂಚಕಾರಕ ದೃಶ್ಯ (ಅತ್ಯಾರ್ಶ. ೦೫೨).
[ಸಂ.]

**ರೋಮಾಂಚಕಾರಿ** (ನಾ). ರೋಮಾಂಚವನ್ನುಂಟುಮಾಡುವುದು ; ಪುಳಕ : ಕೊನೆಯ ವಾಕ್ಯದ ವಿಸ್ಮಯಪಂತೂ ರೋಮಾಂಚಕಾರಿಯಾಗಿದೆ (ಕೂಶ್ಚಕು. ೦೫೯). [ ಸಂ. ರೋಮಾಂಚಕಾರಿನ್ ]

**ರೋಮಾಂಚಗೊಳ್ಳು** (ಕ್ರಿ). ಮೈಗೂದಲು ನಿಮಿರಿ ನಿಲ್ಲು ; ರೋಮಾಂಚವಾಗು ; ಪುಳಕಹೊಂದು : ಈ ಮಾತನ್ನು ಕೇಳಿ ದಾರಾಜನು ಹರ್ಷದಿಂದ ರೋಮಾಂಚಗೊಂಡು 'ಕೊಟ್ಟೆ' ಎಂದನು (ವತಕಾ. ೪). [ ರೋಮಾಂಚ + ಕೊಳ್ಳು$_1$ (< ಕೊಳ್$_1$). ]

**ರೋಮಾಂಚತೆ** (ನಾ). = ರೋಮಾಂಚ ೧ : ಅಲರ್ದು ಕಪವಿನ ಮರಗಳ್ ಪರಿಗತರೋಮಾಂಚತೆಯಂ ದೊರೆಮಾಡಿದುದೆನ್ನ ತನುವುಮಂ ನೆಟಿಚ್ ತನ್ನೊಳ್ (ಶಂಪ್ರಕೃ. ೨-೯೯). [ಸಂ. ರೋಮಾಂಚತಾ]

**ರೋಮಾಂಚನ** (ನಾ). = ರೋಮಾಂಚ ೧ : ಹೂಗೊಂಚಲ ರೋಮಾಂಚನ ಪಡೆದೆ (ಕಲಿ್ರಿ೯೮. ೨೭. ೩). [ಸಂ.]

**ರೋಮಾಂಚನಗೊಳ್ಳು** (ಕ್ರಿ). = ರೋಮಾಂಚಗೊಳ್ಳು : ಮೈ ಕೂಡಾ ರೋಮಾಂಚನಗೊಂಡಿತು. ಶರೀರವೇ ಒಮ್ಮೆ ನಡುಗಿತು (ಕಂಬಿತು. ೦೩೩).
[ರೋಮಾಂಚನ + ಕೊಳ್ಳು$_1$ (<ಕೊಳ್$_1$)]

**ರೋಮಾಂಚನವೆಸಗು** (ಕ್ರಿ). = ರೋಮಾಂಚಗೊಳ್ಳು : ನಿಟ್ಟಿಸುವಳು ಚುಂಬಿಸುವಳು ಮೈ ಮುಮ್ಮುದಟ್ಟಿ ರೋಮಾಂಚನವೆಸಗಿ ಉಟ್ಟುದು ಸರಿದು ಮದನಜಲ ನೆಟಿ ಪೊಜಮಟ್ಟುದು ನಾಣೆಡೆಯಿಂದ (ಕಂಪವ. ೯-೦೯೭).
[ರೋಮಾಂಚನ + ಎಸಗು$_1$]

**ರೋಮಾಂಚನಿಸು** (ಕ್ರಿ). = ರೋಮಾಂಚಗೊಳ್ಳು : ಮಿಂಚಿ ರೋಮಾಂಚನಿಸಿತೆಂಬವೋಲ್ ಮೊಗಕೆ ತುಳ್ಕಿದುದು ತೈಜಸಂ (ಶ್ರೀರಾಷಮ. ೫೯೯-೯೯೫).
[ರೋಮಾಂಚನ + -ಇಸು$_3$]

**ರೋಮಾಂಚವೇಳು** (ಕ್ರಿ). = ರೋಮಾಂಚಗೊಳ್ಳು : ಶಂಖಧ್ವನಿಯು ಮೇಲಿಂದ ಮೇಲೆ ಕಿವಿಗೆ ಬೀಳುತ್ತಲೇ ಇತ್ತು. ಅದನ್ನು ಕೇಳಿದಾಗ ನನ್ನ ಮೈ ರೋಮಾಂಚವೇಳುತ್ತಿತ್ತು (ಪಕಭಾ. ೬೯).
[ರೋಮಾಂಚ + ಏಳ್ಳು$_1$ (< ಏಟ್$_1$)]

**ರೋಮಾಂಚಿತ** (ಗು). ೧. ಕೂದಲು ನೆಟ್ಟಗಾದ,- ನಿಮಿರಿದ. (ನಾ). ೨. = ರೋಮಾಂಚ ೧ : ಬರ್ಕನ ವಕ್ತೃತೆಯನ್ನು (Speeches) ಓದಿದರೆ ಶರೀರವೆಲ್ಲಾ ರೋಮಾಂಚಿತವಾಗಿ ಮನಸ್ಸು ಉನ್ನತ್ತವಾಗಿ ಹೋಗುತ್ತದೆ (ದೇಶೀಕಾ. ೩೦). [ಸಂ.]

**ರೋಮಾಳಿ** (ನಾ). ೧. = ರೋಮಲತೆ ; ಕರ್ಪೂರವಿದ ರೋಮಾಳಿ ರಂಜಿಕುಂದೇವಕಿಯಾ (ಜಗಬ. ೨-೯೦). ೨. = ರೋಮಾಂಚ ೧ : ಹೊಳಿಡುವ ಹರುಷದಲಿ ರೋಮಾಳಿಗಳ ಗುಡಿಯಲಿ ತನ್ನ ನಿಳಯಕೆ ಮುಗುದೆ ಬಂದಳು (ಕುವ್ಯಾಬಿ. ೩-೦೦೩). ೩. ಹೆಣೆದ ಕೂದಲು ; ಜಡೆ : ಕವಿಕುಲಪಾರಿಜಾತ ಸನ್ಮಂದಗಾಮಿನಿ ಸಿಂಹಿಕೇಯರೋಮಾಳಿಸದೃಶ (ಕವಿಕೃ. ೦೦-೯೩). ೪. ಮೈನೆರೆದಿರುವ ಸ್ಥಿತಿ ; ಯೌವನದ ಆರಂಭಕಾಲ. [ಸಂ. ರೋಮಾಲೀ]

**ರೋಮಿ** (ಗು). ೧. ಕೂದಲುಗಳಿಂದ ತುಂಬಿದ ; ರೋಮದಿಂದ ಕೂಡಿದ. (ನಾ). ೨. ಒಂದು ಬಗೆಯ ಜಿಂಕೆ ; ಚಮರೀಮೃಗ : "ರೋಮಿ ಗೋಕರ್ಣಮೆನಲು ಚಮರಿಯ ಮೃಗಂ" (ಮಂಗರಾ. ೯೯-೦೦).
[ಸಂ. ರೋಮಿನ್]

**ರೋಮೋದ್ಗಮ** (ನಾ). = ರೋಮಾಂಚ ೧ : ಆನಂದಾಶ್ರುಬಿಂದು ಪ್ರತತಿ ಸುರಿಯೆ ರೋಮೋದ್ಗಮಂ ಕೂಡೆ ಪೊಣ್ಮುತ್ತಿರೆ (ಕಾದಂಪೂ. ೯೯೦); ಹೇಳಿದಳು ಚಿತ್ರೆ ಪಾರ್ಥಂಗೆ ರೋಮೋದ್ಗಮಂ ಸುಭವಿಸುವಂತೆ (ತತ್ಯಾಂಗ. ೯೭-೦೩೦೩). [ಸಂ.]

**ರೋರುವ** (ನಾ). ರುರು ಎಂಬ ಜಾತಿಗೆ ಸೇರಿದ ಒಂದು ಬಗೆಯ ಜಿಂಕೆ : ಈ ಕಾಂಡಕ್ಕೆ ಸುತ್ತಿರುವ ಸ್ನಾಯುವು ಗೋವಿನದೆ, ಮಹಿಷದ್ದೆ, ರೋರುವದ್ದೆ, ಅಥವಾ ಕೋತಿಯದೆ ? (ಬುದ್ಧಕ. ೬೦). [<ಸಂ. ರುರು]

**ರೋಲಂಬ** (ನಾ). ದುಂಬಿ ; ಭ್ರಮರ : "ಮಧುವ್ರತಃ . . . ರೋಲಂಬಃ, ಬಂಭರಃ— ೧೫ ತುಂಬಿಯ ಹೆಸರುಗಳು" (ನಿಘಂಶ. ೦೬೨); ಫಾಲಾಕ್ಷಪದಪದ್ಮಮಕರಂದರಸಪಾನರೋಲಂಬಸಮರೂಪ (ದುರಕೃ.೩೩-೩೨).
[ಸಂ.]

**ರೋಲ್ಲ್ಯಾಬಿಕಿ** (ನಾ). ಒಂದು ಸ್ಥಳದ ಹೆಸರು : ರೋಲ್ಲ್ಯಾಬಿಕ್ಕುತ್ತರತಃ . . . ಉದಕಪೂರ್ವ್ವಕಂ ದತ್ತಃ (ಇಆ. VI. ೭೩-೦೫; 535).
[ ? ]

**ರೋವ** (ನಾ). = ರೋಮ ೧ : "ರೋವ _ ರೋಮ(ನ್) = ಕೂದಲು, ತುಪ್ಪಳ" (ತದ್ಭಕೋ. ೩೬); ಮಕಾರಕ್ಕೆ ವಕಾರಂ — ಅಮರೀ — ಅವರಿ . . . ರೋಮ — ರೋವ (ಕಶಬ್ದ. ೨೬೩ ವೃತ್ತಿ).
[<ಸಂ. ರೋಮನ್]

**ರೋಷ** (ನಾ). ಸಿಟ್ಟು ; ಕೋಪ : "ಕೋಪಃ, ಕ್ರೋಧಃ, ಅಮರ್ಷಃ, ರೋಷಃ, ಪ್ರತಿಘಃ – ಈ ೫ ಮುನಿಸು" (ಹಲಾಯು. ೫೯-೨೦೭); ಅಶೆ ಇಲ್ಲದಿಪ್ಪುದೇ ತಪ. ರೋಷವಿಲ್ಲದಿಪ್ಪುದೇ ಜಪ (ಉಂಶ. ೪. ೦೯೯-೨೬೩); ದುರುಳರಿಬ್ಬರಿಗಿತ್ತರತಿನಿಷ್ಠುರದ ಶಾಪವನಸುರವಂಶೋತ್ಕರದೊಳಗೆ ಸಂಭವಿಸಿ ನೀವೆಂದಧಿಕರೋಷದಲಿ (ಕೊರರಾ. ೧-೬-೦೮); ದೋಷ ಮಾಡು ವವನಿಗೆ ರೋಷ ಬಹಳ (ಗಾದೆ). [ಸಂ.]

**ರೋಷಂದಟ್ಟು** (ಕ್ರಿ). ಕೋಪವುಂಟಾಗು ; ಸಿಟ್ಟುಬರು ; ಕ್ರೋಧ ಗೊಳ್ಳು : ಮಡದಿಯರ ಮನದಿ ರೋಷಂದಟ್ಟಿದೊಡೆ ಪ್ರಾಣ ಬಿಡುವರ್ಪೆ (ಪವಪೋ. ೯-೩೭). [ರೋಷ + ತಟ್ಟು$_1$]

**ರೋಷಂಬಡೆ** (ಕ್ರಿ). ಕೋಪಗೊಳ್ಳು ; ರೇಗು : ಉಗ್ರರೋಷಂಬಡೆದು ಹೊಯ್ದನು ತೋರಣದ ಕಂಬದಲಿ ರಕ್ಕಸನ (ಕೊರರಾ. ೫-೫-೨೬). [ರೋಷ + ಪಡೆ$_1$]

**ರೋಷಚ್ಯುತ** (ನಾ). ಕೋಪವನ್ನು ಬಿಟ್ಟವನು ; ಶಾಂತಚಿತ್ತ : ಯತಿಗಳಾದರಿ ನೀವು ರೋಷಚ್ಯುತರಲೇ ಬಳಿಕೇನು ಧರ್ಮಜ್ಞತೆಯ ನೆಲೆ ಗಳನಱಿದ ಮನವೆಱಗುವುದೆ ಕಾಳಗಕೆ (ಕುವ್ಯಾ ಉ. ೬-೨೦). [ಸಂ.]

**ರೋಷಣ** (ಗು). ೧. ಸಿಟ್ಟಿಗೆದ್ದ; ಕೋಪಗೊಂಡ. (ನಾ). ೨. ಸಿಟ್ಟು; ಕೋಪ : "ರೋಷಣಂ, ರೋಷಣೀಯಂ, ಈ ೨ ರೋಸಂ" (ಕಾಕಳ. ೨೬೯). ೩. ಕೋಪಗೊಳ್ಳುವವನು ; ಕೋಪಿಷ್ಠ : "ಕೋಪನಃ, ಕ್ರೋಧನಃ, ಕ್ರೋಧೀ, ರೋಷಣಃ, ಅಮರ್ಷಣಃ – ಈ ೫ ಮುನಿವವಂ" (ಹಲಾಯು. ೫೯-೨೦೩). [ಸಂ.]

**ರೋಷಣೆ** (ನಾ). ಕೋಪ ; ಸಿಟ್ಟು : ಚಿಂತೆ ರೋಷಣೆ ಮಾತ್ರ ಸಮುಗುಣ ವಾಂತುವಲ್ಲಾ ಧಾತು ಬಲಗಳ ವೈಂತನಾಗೆಲೆಯಾತ್ಮ ರಕ್ಷಿಪ ದೇವನನವರತಾ (ಶರಾಮಾ. ೩೩೨-೯೩). [ಸಂ. ರೋಷಣ]

**ರೋಷಭೀಷಣ** (ನಾ). ಕೋಪದಿಂದ ಭಯಂಕರನಾದವನು : ರೋಷ ಭೀಷಣನಾಗಿ ಕಾರ್ದನ್ ಕಠೋರಮಂ (ಶ್ರೀರಾಮಾ. ೭೨-೯೬೯). [ಸಂ.]

**ರೋಷಸಿ** (ನಾ). ಭೂಮಿ ಮತ್ತು ಆಕಾಶ : "ದ್ಯಾವಾಭೂಮಿ, ರೋದಸ್ಯೌ, ರೋದಸೀ, ರೋಷಸೀ – ಈ ೪ ನೆಲನುಂ ಆಕಾಶದ ಪೆಸರ್" (ಹಲಾಯು. ೨೦-೦೨೦). [ಸಂ. ರೋಷಸೀ]

**ರೋಷಿ** (ಗು). ಕೆರಳಿದ ; ಕುಪಿತಗೊಂಡ : ಸೋದರನ ಧನುರ್ಗುಣಮಂ ಭೇದಿಸಿದಂ ರೋಷಿರಾವಣಂ (ಶಂರಾಮಾ. ೦೪-೦೩). [ಸಂ. ರೋಷಿನ್]

**ರೋಸ** (ನಾ). = ರೋಷ : ಚಕ್ಕಟಱದ ಮೊಲೆಗಳುಂ ಕೈಮಿಕ್ಕಂಕುರ ದುಗಿಯುಮಲೆಯ ಸೆಳೆಗೊಂಬು ನೊಸಲ್ಗೊಕ್ಕಳಕಮುಮಿನಿಯನ ರೋಸಕ್ಕೆಡೆಯಾಯ್ತುಪ್ಪೆ ತರುಣಿ ಕುರವಕತರುಮಂ (ಲೀರಾಪ. ೧೩-೯೩) ; ಷಕಾರಕ್ಕೆ . . . ರೋಷ – ರೋಸ (ಶಮದ. ೨೫೩ ಕ್ರಯೋ). [< ಸಂ. ರೋಷ]

**ರೋಸಿಕೆ, ರೋಸಿಗೆ** (ನಾ). ಜುಗುಪ್ಸೆ ; ಅಸಹ್ಯ : ಅಧ್ಯಾತ್ಮವನ್ನು ಚಿಂತಿಸಿ ಚಿಂತಿಸಿ ನಮ್ಮವರು ಬೇಸತ್ತಿದ್ದಾರೆ, ಇವರಿಗೆ ಅದರಲ್ಲಿ ರೋಸಿಕೆ ಯುಂಟಾಗಿದೆ (ಕವಮಹಾಂ. ೯೦). **ರೋಸಿಗೆ** : ಷಡುರಥರೊಂದಾಗಿ ಕೊಂದೊಬ್ಬ ಹಸುಳೆಯ ಹೊಡದರು ರೋಸಿಗೆಗೊಳದೆ (ಅಭಿಕಾ. ೦೬). [ರೋಸು$_1$ + – ಇಕೆ]

**ರೋಸಿಗೆ** 'ರೋಸಿಕೆ' ನೋ.

**ರೋಸು$_1$** (ಕ್ರಿ). ೧. ಬೇಸರಗೊಳ್ಳು ; ಜುಗುಪ್ಸೆಹೊಂದು : ಮನಸ್ಸು ರೋಸಿ ನುಡಿಯಿತು (ಐಕಾಂಗಿ. ೩). ೨. ಕೋಪಗೊಳ್ಳು ; ಸಿಟ್ಟಾಗು : ಸೋಸಿ ದೈತ್ಯರನೆಲ್ಲ ರೋಸಿ ಪ್ರಾಣವ ಕೊಂಡ ದೋಷತನವ ನಾನು ಹೇಳಲೆ (ಪುರಂದ. ಶಾ. ೨-೦೦೫-೬) ; ಸಾಸಿರಗಾವುದಕ್ಕೆಯ್ದಿ ತನ್ನಿಷ್ಟಾರ್ಥ ಕೈಸಾರುವ ಸಮಯದೊಳು ರೋಸಿ ಬಿಸುಟು ಮರಳುವ ತೆಜದೊಳು (ಕಜಿವ್ಯ. ೦೦-೦೩) ; ರೋಸದವರ ಮೇಲೆ ರೋಸುವೆ (ಖುದ್ರಶ. ೬೪).

**ರೋಸಿಕೊಳ್ಳು** = ಹೇಸು : ಬೇಸರಪಡು : ನಾನು ನನ್ನ ಮೇಲೆಯೇ ರೋಸಿಕೊಂಡು ಆಕೆಯನ್ನು ಹಿಂಬಾಲಿಸಿದೆ (ಬಾಜಾಲ. ೨೦೬).

**ರೋಸಿಬಿಡು** = ಕೋಪಗೊಳ್ಳು ; ಸಿಟ್ಟಾಗು : ಈ ಪ್ರಪಂಚವನ್ನು ಕಂಡು ಅಪ್ಪು ರೋಷ ಬಂತು. ರೋಸಿ ಬಿಟ್ಟು ಆ ಮಾತು ಆಡಿದೆ (ಸಂಪಕಂ. ೨೪). **ರೋಸಿಹೋಗು** = ರೋಸಿಕೊಳ್ಳು : ನನಗೂ ಜೀವ ರೋಸಿಹೋಗಿದೆ (ಪಾಪೂರೀ. ೨೨೪) ; ಶಾಂತಾಳ ಮನಸ್ಸು ರೋಸಿ ಹೋಯಿತು (ಮರುಲರಾ. ೦೭೦). [ದೇ. ೫ ತೆಲು. ರೋಯು]

**ರೋಸು$_2$** (ನಾ). ಕೊಳಕು ; ಹೇಸಿಗೆ : "ರೋಸು – ಹೊಲಸು" (ಜಾನಕೋ. ೪೦). [< ರೋಸು$_1$]

**ರೋಹಣ** (ನಾ). ೧. ಹತ್ತುವುದು; ಏರುವುದು. ೨. ಬೆಳೆಯುವುದು; ಏಳಿಗೆ: "ರುಟ್, ರುಹಂ, ರೋಹಣಂ, ರೋಹಣೀಯಂ–ಈ ೪ ಮೊಳಕೆ" (ಕಾಕಳ. ೦೫೦). ೩. ಬಾಣ; ಅಂಬು. ೪. (ಸಿಂಹಳದಲ್ಲಿರುವ) ಒಂದು ಪರ್ವತ: ತಾರಾಚಳಮೊಡನೆ ರೋಹಣಂ ಪೋರ್ದುದೆನಲ್ ವಾರಣ ದೊಡನೆ ಖಗಪ್ರಭುವಾ ರಣದೊಳ್ ಪೋರ್ದು (ಜಗಪು. ೦೩-೦೦೦); ಉರ್ವೀಧ್ರಂ ರೋಹಣಾವು ಗಡಾರ್ಪವರ್ಣಿಸಲಱಿವರಣ್ಣ ತಜ್ಜನಪದಮಂ (ಶಂದ್ರಪು. ೩-೧೦). [ಸಂ.]

**ರೋಹಣದ್ರುಮ** (ನಾ). ಗಂಧದ ಮರ; ಚಂದನವೃಕ್ಷ. [ಸಂ.]

**ರೋಹಿ** (ನಾ). ೧. ಸವಾರಿಮಾಡುವವನು; ಸವಾರ: ರೋಹಿ ಜಾಗ್ರತ ದಪ್ಪೆ ಯಾತ್ರೆ ಸುಖ ಸಾಗೀತೆ (ಮಂಕುಕ. ೩೯೭). ೨. ಬೆಳೆಯುವುದು; ವೃದ್ಧಿ. ೩. ಒಂದು ಬಗೆಯ ಜಿಂಕೆ. ೪. ಒಂದು ಬಗೆಯ ಮರ: "ರೋಹೀ . . . ದಾಡಿಮಪುಷ್ಪಕಃ—ನಾಲ್ಕು ಮುಳ್ಳುಮುತ್ತುಗದ ಹೆಸರುಗಳು" (ಸಿದ್ಧಾಂತಿ. ೦೪೩). [ಸಂ.]

**ರೋಹಿಣ** (ಗು). ೧. ರೋಹಿಣೀನಕ್ಷತ್ರದಲ್ಲಿ ಹುಟ್ಟಿದ. (ನಾ). ೨. ವಿಷ್ಣು. ೩. ಒಂದು ಬಗೆಯ ಸಸ್ಯ; ಮುಳ್ಳುಮುತ್ತುಗ. [ಸಂ.]

**ರೋಹಿಣಿ** (ನಾ). ೧. ಹತ್ತುವುದು ; ಸವಾರಿ ಮಾಡುವುದು. ೨. ಶ್ರೀಗಂಧ; ಚಂದನ: "ರೋಹಿಣಿ ಮಲಯಜಂ ಚಂದನಂ ಗಂಧಮೆಂದೆ ನಿಕ್ಕುಂ" (ಮಂಗರಾ. ೯೯-೨೦). ೩. ಕೆಂಬಣ್ಣದ ಹಸು: "ರೋಹಿಣಿಯನಡ್ವಿ ಯರ್ಜುನಿ ವೃಷೆ ಗೋ ಸ್ವೃಷಭ ವಾಹಿನಿಯೆನೆ ಹಸು" (ಮಂಗರಾ. ೫೩-೩). ೪. ದಕ್ಷಬ್ರಹ್ಮನ ಮಗಳು; ಚಂದ್ರನ ಹೆಂಡತಿ : "ರೋಹಿಣೀ—ಚಂದ್ರನ ಹೆಂಡತಿ" (ಕಾಕಳ. ೦೫೦); ಕ್ಷಿತಿಗೆ ಲಕ್ಷ್ಮಿಗೆ ರೋಹಿಣಿಗೆ ಭಾರತಿಗೆ . . . ನೂಱುಮುಡಿ . . . ಗಂಗಾಯಿ (ಬಸಪು. ೪-೩೦). ೫. ವಸುದೇವನ ಹೆಂಡತಿ; ಬಲರಾಮನ ತಾಯಿ: ಮಾಯಾದೇವಿ . . . ದೇವಿಯ ಗರ್ಭದರ್ಭಕನನತ್ತಲ್ ಗೋಕುಲಕ್ಕುಯ್ದು . . . ಯೋಜಿಸಿದಳಂತಾ ರೋಹಿಣೀಗರ್ಭದೊಳ್ (ಜಗಪು. ೨-೬೦). ೬. ಮೈನೆರೆದ ಹುಡುಗಿ. ೭. ಒಂದು ಬಗೆಯ ಸಸ್ಯ ; ಕಟುಕರೋಹಿಣಿ : "ಕಟುಃ, ಕಟಂಭರಾ, ಅಶೋಕಾ, ರೋಹಿಣೀ . . . ಶಕುಲಾದನೀ–೯ ಕಟುಕರೋಹಿಣೀ ಹೆಸರು ಗಳು" (ಸಿದ್ಧಾಂತಿ. ೦೫೦). ೮. ಒಂದು ಬಗೆಯ ಕಂಠರೋಗ: ಪಿತ್ತಾಧಿಕ್ಯ ದಿಂದ ಉಂಟಾಗಿ ಕೊರಳ ನರಗಳು ಬಿಗಿದು ಬಾಯಾಱಿಕೆ ತಾಪ, ಬಳಲಿಕೆಗಳ ಉಂಟುಮಾಡುವುದು ರೋಹಿಣಿ ಎನಿಸಿಕೊಂಬ ಕಂಠರೋಗವೆಂದಱಿವುದು (ವೈದ್ಯಸಾ. II. ೦೦೭). ೯. [ಜ್ಯೋತಿ] ಇಪ್ಪತ್ತೇಳುನಕ್ಷತ್ರಗಳಲ್ಲಿ ನಾಲ್ಕನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ಅಶ್ವಿನಿ ರೋಹಿಣಿಯುದಿತಿಯುಸಿಪ್ಪಿನಿತುಂ ನಕ್ಷತ್ರಮುತ್ತಮಂ ಪೊಸತನುಡಲ್ (ಲೋಕೋಪ. ೦-೦೨) ; ತಾವರೆಮರದ ಬದನಿಕೆಯುಂ ರೋಹಿಣಿನಕ್ಷತ್ರದಲ್ಲಿ ತಂದು ಮುಂಗೈಗೆ ಕಟ್ಟುವುದು (ಸಕಪ್ರ. ೦೨೦) ; ರೋಹಿಣಿ ಮೃಗಶಿರ . . . ಆಶ್ಲೇಷ ಈ ಆರು ಮಳೆಗಳಲ್ಲಿ ಮುಂಗಾರಿಯನ್ನು ಬಿತ್ತುವದು (ಕೃಷಿಶ್ರ. ೬೫);

ರೋಹಿಣಿ ಬಿತ್ತನೆ ರೋಗವಿಲ್ಲದ ತೆನೆ (ಗಾದೆ).

**ರೋಹಿಣ್ಯಾದಿಕಲ್ಕ** = ಕಟುಕರೋಹಿಣಿ ಮುಂತಾದುವುಗಳಿಂದ ಮಾಡಿದ ಒಂದು ಬಗೆಯ ಔಷಧದ್ರವ್ಯ: ರೋಹಿಣ್ಯಾದಿಕಲ್ಕ–ಕಟುಕ ರೋಹಿಣಿ, ಕೊತ್ತುಂಬರಿ . . . ಗೋರೋಜನ ಇವುಗಳನ್ನು ಸಮವಾಗಿ ಸೇರಿಸಿ, ಕಲ್ಕ ಮಾಡಿ ಸಹದೇವಿರಸವನ್ನು ಸೇರಿಸಿ ಕೊಟ್ಟಲ್ಲಿ ಸರ್ವಜ್ವರವು ಬಿಡುವುದು (ಸಕವೈ. ೦೦೪). **ರೋಹಿಣ್ಯಾದಿಘೃತ** = ಕಟುಕರೋಹಿಣಿ ಮುಂತಾದುವನ್ನು ಹಾಕಿ ಮಾಡಿದ ಒಂದು ಬಗೆಯ ಔಷಧದ್ರವ್ಯ: ರೋಹಿಣ್ಯಾಧಿಘೃತ . . . ಕಟುಕರೋಹಿಣಿ ೫ ತೊಕಮಂ ಚೂರ್ಣವ ಮಾಡಿ ಹಾಕಿ ತೊಳಸಿ ಇರಿಸಿಕೊಂಡು ನಿತ್ಯವೂ ಸೇವಿಸಲು ಹಳೆಯ ಜ್ವರ ಗುಣಮಕ್ಕುಂ (ಸಕವೈ. ೧೨೪). [ಸಂ. ರೋಹಿಣೀ]

**ರೋಹಿಣಿಸಂಧಿ** (ನಾ). ಕುದುರೆಯ ಒಂದು ಅಂಗ : ಶ್ರಿಕದೆರಡುಂ ಕೆಲಕ್ಕುಂ ರೋಹಿಣಿಸಂಧಿಯೆಂಬ ಪೆಸರಕ್ಕುಂ (ಅಶ್ವಶಾ. ೯೯-೬). [ರೋಹಿಣೀ + ಸಂಧಿ]

**ರೋಹಿಣೀಪರಿಗತ** (ನಾ). ೧. ಕೆಂಪುಬಣ್ಣದ ಆಕಳಿನಿಂದ ಕೂಡಿದುದು. ೨. ರೋಹಿಣೀನಕ್ಷತ್ರದಿಂದ ಕೂಡಿದುದು. ೧, ೨ : ನೀಹಾರರುಕ್ಚಿತ್ತ ವೃತ್ತದವೋಲ್ ರಾಜಿತರೋಹಿಣೀಪರಿಗತಂ . . . ಪಂ ಚೆಲ್ವಾಯ್ತೊ ಗವಾಶ್ರಯಂ (ರಾಜಶೇ. ೩-೦೨೦). [ಸಂ.]

**ರೋಹಿಣೀವಲ್ಲಭ** (ನಾ). ಚಂದ್ರ : "ಇಂದುಃ . . . ರೋಹಿಣೀವಲ್ಲಭಃ . . . ದಾಕ್ಷಾಯಣೀರಮಣಃ– ಈ ೧೨ ಚಂದ್ರನ ಪೆಸರ್" (ಕರಾಮು. ೬-೪೨). [ಸಂ.]

**ರೋಹಿತ** (ಗು). ೧. ಕೆಂಪಾದ ; ಕೆಂಪುಬಣ್ಣದಿಂದ ಕೂಡಿದ. (ನಾ). ೨. ಕೆಂಪುಬಣ್ಣ ; ರಕ್ತವರ್ಣ : "ಲೋಹಿತಃ, ರೋಹಿತಃ, ರಕ್ತಃ– ೩ ಕೆಂಪುಬಣ್ಣದ ಹೆಸರುಗಳು" (ನಿಘಂಶಿ. ೯೬). ೩. ನೆತ್ತರು; ರಕ್ತ: ಕಾಳಿಮ್ಮೆಯ ಕಚ್ಚಿಯಲಾಗಿ ಹಾಲು ರೋಹಿತವಾಗಿ ಬದ್ದಿತ್ತು (ಮೋಕ್ಷಶಾ. ೨೨೬-೭೭೩); ಏಳ್ರರುತಿರ್ದಪುದಿತ್ತ ನಿನ್ನ ಪೆರ್ಬುಲಮುಡಿದಸ್ಥಿಯುಂ ಸುರಿವ ರೋಹಿತದಿಂ (ರಾಜಶೇ. ೩-೦೦೪). ೪. ಒಂದು ಬಗೆಯ ಜಿಂಕೆ ; ಚಮರೀ ಮೃಗ : "ರೋಹಿತಃ, ಚವುರಃ –ಚೌರೀಬಾಲದ ಮೃಗ" (ನಿಘಂಶಿ. ೦೫೩). ೫. ಕುಂಕುಮಕೇಸರಿ. ೬. ಮನುಷ್ಯನ ಕಣ್ಣಿಗೆ ಕಾಣುವುದಿಲ್ಲ ವೆಂದೂ ನೆಟ್ಟಗಿರುವುದೆಂದೂ ನಂಬಲಾದ ಕಾಮನ ಬಿಲ್ಲು: "ಇಂದ್ರನ ಬಿಲ್ಲು ಋಜು(ವಾದುದು) ರೋಹಿತವೆಂಬುದು" (ಕರಾಮು. ೦೦–೫೭). ೭. ಒಂದು ಬಗೆಯ ಕೆಂಬಣ್ಣದ ಮೀನು : "ರೋಹಿತಃ, ಮದ್ಗುರಃ –ಯಾವಾಗಲೂ ಮುಳುಗಿಕೊಂಡಿರುವ ಮೀನು, ಕೆಂಪುಮೀನು" (ನಿಘಂಶಿ. ೯೨); ಆಳದ ಮಡುವಿನೊಳಾಡುತಲಿದ್ದರು ತಾನು ನಿಗರ್ವಿ ರೋಹಿತನು ಉಂಗುಟಮಾತ್ರದ ನೀರಿನೊಳಿದ್ದರು ಶಫರಿ ತಾ ಫುರ್ಫುರಾಯತನು (೨೦ಶಾಶ. ೬೨-೪೯). [ಸಂ.]

**ರೋಹಿತಕ** (ನಾ). ಒಂದು ಬಗೆಯ ಮರ ; ಮುಳ್ಳುಮುತ್ತುಗ : "ರೋಹೀ, ರೋಹಿತಕಃ, ಪ್ಲೀಹಶತ್ರುಃ, ದಾಡಿಮಪುಷ್ಪಕಃ – ೪ ಮುಳ್ಳು ಮುತ್ತುಗದ ಹೆಸರುಗಳು" (ನಿಘಂಶಿ. ೦೨೩). [ಸಂ.]

**ರೋಹಿತಾಶ್ವ** (ನಾ). ೧. ಕೆಂಪುಕುದುರೆಗಳನ್ನುಳ್ಳವನು ; ಅಗ್ನಿ : "ಅಗ್ನಿಃ . . . ಅನಲಃ, ರೋಹಿತಾಶ್ವಃ . . . ಅಪ್ಪಿತ್ತಂ – ೩೪ ಅಗ್ನಿ ಹೋತ್ರನ ಹೆಸರುಗಳು" (ನಿಘಂಶಿ. ೨೩). ೨. ಹರಿಶ್ಚಂದ್ರನ ಮಗ; ಲೋಹಿತಾಶ್ವ : ರೋಹಿತಾಶ್ವನು ಮರಣಹೊಂದಿದಾಗ ಅವನ ತಾಯಿ ತಂದೆಗಳು ಹೇಡಿತನದಿಂದ ಅಗ್ನಿಪ್ರವೇಶಮಾಡಲು ಸಿದ್ಧರಾದರು (ಹಕಾ. ೨೯ ಟಿಪ್ಪ). [ಸಂ.]

**ರೋಹಿಷ** (ನಾ). ೧. ಒಂದು ಬಗೆಯ ಸುವಾಸನೆಯ ಹುಲ್ಲು; ಲಾಮಂಚ. ೨. ಒಂದು ಬಗೆಯ ಮೀನು. ೩. ಒಂದು ಬಗೆಯ ಜಿಂಕೆ. [ಸಂ.]

**ರೋಹಿಸು** (ಕ್ರಿ). ಮೇಲೆಬೀಳು ; ಆಕ್ರಮಿಸು : ಆ ಕಾಕರಾಸರುವೆಟ್ಟು ಪೆಗರ್ಗಾಳ್ಪಿಯ ಕೋಟೆಯಾನ್ ರೋಹಿಸಿ (ಎಕ. VIII, ಸೊರಬ. ೦೦-೪; ಕು. ೮೦೦). [ರೋಹಣ + – ಇಸು]

**ರೋಹೀತಲ್ಲ** (ನಾ). ಒಂದು ಊರಿನ ಹೆಸರು : ತಸ್ಯ ಪೂರ್ವತಃ ರೋಹೀ ತಲ್ಲಗ್ರಾಮಃ (ಇಕ. XII, ೨೬೬-೫೯; ೯೭೩). [ ? ]

**ರೌಕುಳ** ' ರವಕುಳ ' ನೋ.

**ರೌಕುಳಿ** (ನಾ). ಚೆಲ್ಲಾಪಿಲ್ಲಿ ; ಅಸ್ತವ್ಯಸ್ತತೆ: ಆ ರೌಕುಳಿಯ ರಣದೊಳೆತ್ತ ತ್ತಲುಂ ಪರಿದಪಾರಶೋಣಿತನದಿಗಳ್ (ಶೀಶಾ. ೦೭-೫೭). [< ರವಕುಳ]

**ರೌಚನಿಕ** (ಗು). ೧. ಹಳದಿಬಣ್ಣದ. (ನಾ). ೨. ಹಲ್ಲಿನ ಮೇಲಿನ ಕೊಳೆ. [ಸಂ.]

**ರೌಚ್ಯ** (ನಾ). ೧. ಕಾಂತಿ; ಹೊಳಪು: "ರುಕ್ . . . ರುಚ್ಯಂ, ರೌಚ್ಯಂ, ಈ ೬ ಪೊಗರ್" (ಅಭಿಕ. ೧೩೦). ೨. ಹದಿನಾಲ್ಕು ಮನುಗಳಲ್ಲಿ ಒಬ್ಬ: ರುದ್ರಸಾವರ್ಣಿಕ ರೌಚ್ಯ ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳ (ವಿವೇಕ. ೨೦೪). [ಸಂ.]

**ರೌಡಿ** (ನಾ). ತುಂಟಃ ಪುಂಡ : ಆ ಹಳ್ಳಿಯಲ್ಲಿ ಅವನು ರೌಡಿರಂಗಣ್ಣ ನೆಂದೇ ಹೆಸರುವಾಸಿಯಾಗಿದ್ದಾನೆ (ರೂಢಿ). [← ಇಂ. Rowdy]

**ರೌಡು** (ನಾ). ಆರ್ಭಟ ; ಜೋರು (?) : ಈ ಸಾರಿ ಜಾತ್ರೀ ರಾಡು ಸ್ವಲ್ಪ ಹೆಚ್ಚು ಮಾಡಬೇಕಾಗೇದ (ತಿಮುಗು. ೪೩) ; ಲಗೂ ಹೋಗೌ ಎಂದು ರೌಡು ಮಾಡಿದನು (ಗಂಟುಮು. ೧೯೯).

**ರೌಡಿಗೇಳು** = ಉದ್ರೇಕಗೊಳ್ಳು ; ಅಬ್ಬರಮಾಡು : ಅವರು ತುಸು ರೌಡಿಗೆದ್ದೇ ಮಾತಾಡಿದರು (ಗಂಟುಮು. ೯೩). [ ? ]

**ರೌದ್ರ** (ಗು). ೧. ರುದ್ರನಿಗೆ ಸಂಬಂಧಿಸಿದ. ೨. ಭಯಂಕರವಾದ ; ಭೀಕರವಾದ : ಮಹಾಬೀಭತ್ಸುಕುತ್ಸಿತೋತ್ಪತ್ತಿಸ್ಥಾನಂಗಳೊಳುತ್ಪನ್ನ ಕೃಷ್ಣನೀಲಕಪೋತಲೇಶ್ಯಾನುಬಂಧರೌದ್ರಪರಿಣಾಮಪರಿಣತರುಂ (ಸುಕುಮಾ. ೦೦-೪೦ ವ); ಹರುಷದಿಂ ಶಾಂತಿ ಸತ್ಯಂ ಭೂತದಯೆಗಳಂ ದೊರಕಿಸಿಯೆ ಕ್ರೋಧಾರ್ಥರೌದ್ರಮಿಥ್ಯಂಗಳಂ ಪರಿಹರಿಸಿ (ಹಕಾ. ೮-೦೬). (ನಾ). ೩. ಭಯಂಕರತೆ ; ಬೀಭತ್ಸ. ೪. ಕೋಪ ; ಕ್ರೋಧ. ೫. ಬಿಸಿಲು: " ಆತಪಃ , ರೌದ್ರಃ (ಕಥ್ಯತೇ) — ಈ ೨ ಬಿಸಿಲ್ " (ಕರಾಮು. ೬-೪೦). ೬. ಒಂದು ಕ್ರೂರದೇವತೆ. ೭. ಅರುವತ್ತುನಾಲ್ಕು ಸಂವತ್ಸರಗಳಲ್ಲಿ ಐವತ್ತುನಾಲ್ಕನೆಯದು ; ರೌದ್ರಿ. ೮. [ಕಾವ್ಯಮೀ] ನವರಸಗಳಲ್ಲಿ ಒಂದು; ಕ್ರೋಧವೆಂಬ ಸ್ಥಾಯೀ ಭಾವದಿಂದ ಹುಟ್ಟುವ ರಸ: '' ಶೃಂಗಾರಃ, ಹಾಸ್ಯಃ, ಕರುಣಃ, ರೌದ್ರಃ . . . ಶಾಂತಃ — ಈ ೯ ರಸಂಗಳ್ '' (ಕರಾಮು. ೦೬-೯೨); ಶೃಂಗಾರ ಹಾಸ್ಯ ಕರುಣ ರೌದ್ರ . . . ನವರಸಾವಸ್ಥೆ (ವಿವೇಕ. ೨೨೭) ; ರೌದ್ರ– ಗದಾಯುದ್ಧದಲ್ಲಿ ಮತ್ತು ವೇಣೀಸಂಹಾರದಲ್ಲಿ ದುರ್ಯೋಧನ ಭೀಮರ ಆಟೋಪ ಬರುವ ಕಡೆಗಳು (ಕೃಶಿಶಿ. ೦೪೦). ೯. [ಜೈನ] ನಾಲ್ಕು ಬಗೆಯ ಧ್ಯಾನಗಳಲ್ಲಿ ಒಂದು : ಆರ್ತರೌದ್ರಧರ್ಮಶುಕ್ಲಾಭಿ ಧಾನಧ್ಯಾನಚತುಷ್ಟಯಮುಮಂ (ಸುಕುಮಾ. ೩-೩೯ ವ). [ಸಂ.]

**ರೌದ್ರಕ** (ನಾ). ಉಗ್ರತೆ ; ತೀಕ್ಷ್ಣತೆ : ಕುಶನೆ ಕೇಳಚ್ಚರಿಯು ಕಚ್ಚಿದವು ರಸವಸಿರದಕ್ಷಿಗಳು ಲಕ್ಷ್ಮಣ ದಶಮುಖರ ಮೇಲೆಂದುಸೂರ್ಯರ ಶಾಂತ ರೌದ್ರಕದ (ತೊರರಾ. ೬-೨೫-೦). [ಸಂ.]

**ರೌದ್ರಕಾಲ** (ನಾ). ರಾತ್ರಿ ; ಇರುಳು : ಈ ರೌದ್ರಕಾಲದಲ್ಲಿ ರಾಕ್ಷಸರಿಗೆ ಬಲ ಹೆಚ್ಚಾಗುತ್ತದೆ (ವಕಾ. ೩೯). [ಸಂ.]

**ರೌದ್ರತೆ** (ನಾ). ಭಯಂಕರತೆ ; ಭೀಷಣತ್ವ : ನಂದೀಶ್ವರನ ಸರ್ವಜ್ಞತೆಯು ಭೃಂಗೀಶ್ವರನ ಶಿವ ಲಿಂಗೈಕಭಾವನೆ ವೀರಗಣವರನ ಪರಮ ರೌದ್ರತೆ (ಬಸಪು. ೩೩-೩). [ಸಂ. ರೌದ್ರತಾ]

**ರೌದ್ರತೆವೆಱು** (ಕ್ರಿ). ಭಯಂಕರವಾಗು ; ಭೀಷಣತ್ವವನ್ನು ಹೊಂದು : ಪುಟ್ಟೆ ಸಮಸ್ತಧಾತ್ರಿಗೆ ಭಯಂ ನಿಟಲಾಕ್ಷ ಚತುರ್ಭುಜಾನ್ವಿತಂ ಪುಟ್ಟಿದ ಗರ್ವು ರಾವಣನ ರೌದ್ರತೆವೆತ್ತವತಾರವೀತನೊಂದೊಟ್ಟಜೆ (ಜಗಾ. ೭-೯೩). [ರೌದ್ರತೆ + ಪೆಱು₁]

**ರೌದ್ರದೃಷ್ಟಿ** (ನಾ). [ನಾಟ್ಯ] ಉಗ್ರತೆಯನ್ನು ಸೂಚಿಸುವ ನೋಟ ; "ಹುಬ್ಬನ್ನು ಗಂಟಿಕ್ಕಿ, ಕಣ್ಣನ್ನು ಕೆಂಪಗೆ ಮಾಡಿ ರೆಪ್ಪೆಬಡಿಯದೆ ನಟ್ಟ ದೃಷ್ಟಿಯಲ್ಲಿ ಆತುರದಿಂದ ನೋಡುವುದು" (ಅಸ್ಕರಂ. ೨೬೭ ಗದ್ಯಾನುವಾದ) : ಎವೆಪೊಯ್ಯದೆ ಕಡುಗೆಂಪಂ ಸವನಿಸಿ ನಟ್ಟಾಲಿಗೊಂಡು ಪುರ್ವಂ ಗಂಟಿಕ್ಕುವ ಭಾವದಿಂದೆ ನೋಡುವ ತವಕಂ ವಿಗೆ ರೌದ್ರದೃಷ್ಟಿಯೆನಿಕುಂ (ಅಸ್ಕರಂ. ೩-೦೩). [ಸಂ.]

**ರೌದ್ರಧ್ಯಾನ** (ನಾ). = ರೌದ್ರ ೯ : ಬಹ್ವಾರಂಭಸುರಂಭರೌದ್ರಧ್ಯಾನಪರಿಣತಂ (ಆದಿಪು. ೨-೦೦ ವ) ; ಬಹ್ವಾರಂಭರೌದ್ರಧ್ಯಾನದಿನುಪಾರ್ಜಿತ ನರಕಾಯುಷ್ಯನಾಸನ್ನಮೃತ್ಯುವಾಗಿ (ಶಾಪುಂಕೌ. ೦೯). [ಸಂ.]

**ರೌದ್ರರತಿ** (ನಾ). ಉಗ್ರವಾದ ಸುರತ : ಅವಳು ಕೋಪದಿಂ ಕೆಂಗಣ್ಣಾಗಿ ಎವೆ ಇಕ್ಕದೆ ನೋಡುವಳು. ಅವನತ್ಯಂತ ಭಾವಿಸುವಳು . . . ನಖಕ್ಷತಂಗೈದು ಪೀಡಿಸಿ ಅವನ ಕೆಳಗಿಕ್ಕಿ ಮೇಲೇರಿ ಉಪರಿಸುರತಂಗೈವಳು. ಇದು ರೌದ್ರರತಿ (ಕಾಮಶಾ. ೨೩೬). [ಸಂ.]

**ರೌದ್ರರವ** (ನಾ). ಭಯಂಕರವಾದ ಶಬ್ದ,—ಅಬ್ಬರ : ರೌದ್ರರವಭಟಭಟಿತನಿಸ್ವನದ ಇಡಿದ ಧೂಳಿಯ ಧೂಮರಾಶಿಯು ಪಡೆ . . . ದಾವಾಗ್ನಿಯಂತಿರೆ ತೋಱಿತು (ಕುವ್ಯಾಪಿ. ೭-೩). [ಸಂ.]

**ರೌದ್ರರಸ** (ನಾ). = ರೌದ್ರ ೮ : ನೃಪತುಂಗದೇವ ಮಾರ್ಗೋತ್ಸವ ಮೂರ್ಜಿತೋಕ್ತಿಗಳಿನಕ್ಕತಿರೌದ್ರರಸಂ ರಸಾವಹಂ (ಕವಿರಾ. ೨-೦೦೦) ; ಕ್ರೋಧಾತ್ಮಕವಾದ ರೌದ್ರರಸದಲ್ಲಿ ಹೃದಯಸಂವಾದವನ್ನು ಪಡೆಯುವುದು ತಾಮಸಪ್ರಕೃತಿಯವರಿಗೇ ಸಹಜವು (ಭಾರಪೀಶಾ. ೪೦೯). [ಸಂ.]

**ರೌದ್ರಾವತಾರ** (ನಾ). ಭಯಂಕರವಾದ ಅವತಾರ ; ಉಗ್ರವಾದ ರೂಪ : ನಿನ್ನನ್ನೂ ಸೀಳಿ ನಾಲ್ಕುಭಾಗ ಮಾಡಿ ನಾಲ್ಕುಬಾಗಿಲುಗಳಿಗೆ ಜೋತುಹಾಕುತ್ತೇನೆ ನೋಡು ಈಗ ಎಂದು ರೌದ್ರಾವತಾರ ತಾಳಿ . . . ಒಳಗೆ ಹೋದಳು (ಹಳ್ಳಿಹಾ. ೦೧೬) ; ಜನರು ಅವನ ರೌದ್ರಾವತಾರವನ್ನು ನೋಡಿ ಬೆಕ್ಕಂಬೆರಗಾಗುತ್ತಿದ್ದರು (ಪಪೂರು. ೩೨). [ಸಂ.]

**ರೌದ್ರಾವಹ** (ನಾ). ಭಯವನ್ನುಂಟುಮಾಡುವುದು; ಭೀಕರತೆಯನ್ನುಂಟುಮಾಡುವುದು : ದೇವ ಮದೇಭದಾಕೃತಿಯನಾಂತು ಕೃತಾಂತನೆ ಬಂದನೆಂಬ ರೌದ್ರಾವಹಮಪ್ಪುದೊಂದು ಗಜಮೆತ್ತಣಿನಕ್ಕೆ ಪುರಕ್ಕೆ ಬಂದು (ಸಂಪ್ರಕೌ. ೯ ೩೭). [ಸಂ.]

**ರೌದ್ರಾಹವ** (ನಾ). ಭಯಂಕರವಾದ ಕಾಳಗ; ಭೀಕರವಾದ ಯುದ್ಧ : ಗದಾಯುದ್ಧಂ ಪರಿಚ್ಛನ್ನಮಿಂತು ದಿನಂಗಳ್ ಪದಿನೆಂಟಱಿಂ ಸಮೆದುದಾ ರೌದ್ರಾಹವಂ ಭಾರತಂ (ಗದಾಯು. ೯-೩೭) [ಸಂ.]

**ರೌದ್ರಿ** (ನಾ). ೧. ಭಯಂಕರಸ್ವರೂಪವನ್ನು ಹೊಂದಿರುವವಳು ; ದುರ್ಗೆ; ಪಾರ್ವತಿ : ಕ್ರೂರಮಾತೆಯರ, ರೌದ್ರಿಯರ, ಕಟ್ಟುಗ್ರಮೆಱಗಿಂ, ತೀರಿಸಿಂ ನಿಮ್ಮ ಕೋಪಂಗಳನ್ (ಅಕ್ಕಶಾ. ೩೪-೩೩೭) ; ಶಕ್ತಿಯು . . . ವಾಮಾ. ಜ್ಯೇಷ್ಠಾ. ರೌದ್ರೀ ಎಂಬ ಸಂಜ್ಞೆಗಳಿಂದಲೂ ಇರುತ್ತಾಳೆ (ಶಾರದ. ೨೨೨). ೨. ಅರುವತ್ತುಸಂವತ್ಸರಗಳಲ್ಲಿ ಐವತ್ತುನಾಲ್ಕನೆಯದು: ಪ್ರಭವ . . . ರೌದ್ರಿ . . . ಅಕ್ಷಯವೆಂಬಱುವತ್ತು ತೆಱನಾಗಿಹುದು (ವಿವೇಕ. ೩೨೦). ೩. ಒಂದು ಬಗೆಯ ಬಳ್ಳಿ : "ರೌದ್ರಿಯೆನೆ ಕಣಬೆ" (ಮಂಗರಾ. ೪೪-೯೩). [ಸಂ. ರೌದ್ರೀ]

**ರೌದ್ರಿಕ** (ನಾ). ಭಯವನ್ನುಂಟುಮಾಡುವವನು : ಮೃತ್ಯುಧ್ಯಾನವನೆ ಮಾಡುತಿರುವ ರೌದ್ರಿಕರ ನಡುವೆ ನಡೆದೆ (ಸೂರ್ದೀಪಾ. ೦೭-೩). [ಸಂ.]

**ರೌದ್ರೆ** (ನಾ). ೧. ಭಯಂಕರವಾಗಿರುವವಳು : ಕಡುವೇದನೆಯ ಕಳಕಳದ ಹಾಹಾರವದ ರೌದ್ರೆ ಸುಭದ್ರೆ ನಡೆತಂದು (ಕುವ್ಯಾದ್ರೋ. ೭-೦೩). ೨. ದುರ್ಗೆ : ಜಯ ರೌದ್ರೆ ಭೈರವಿ ವಿರೂಪಟ್ಟಹಾಸಿನಿ (ದೇವೀಮ. ೯೦). [ಸಂ. ರೌದ್ರಾ]

**ರೌನಾಡು** (ನಾ). ಒಂದು ಪ್ರದೇಶದ ಹೆಸರು : ಅಯ್ಯಪ್ಪ ರೌನಾಡ ಪಕ್ಕದ ಭಾಗದ ತೋಂಟಮಾವಾ ಮೂಡಣ ಬಸದಿಗೆ ಕೊಟ್ಟರ್ (ಮ್ಯಸಂ. ೦೯೦೯, III. ೭-೩ ; 800). [ ? + ನಾಡು]

**ರೌಪ್ಯ** (ಗು). ೧. ಬೆಳ್ಳಿಯಿಂದ ಮಾಡಿದ ; ರಜತದ. (ನಾ). ೨. ಒಂದು ಬಗೆಯ ಲೋಹ ; ಬೆಳ್ಳಿ ; ರಜತ : "ರೌಪ್ಯಮೆನೆ ಕಾರಮೆನೆ . . . ಬೆಳ್ಳಿಗಭಿಧಾನಮಕ್ಕುಂ" (ಮಂಗರಾ. ೩೦-೩) ; ಖೇಚರಕಾಂತೆಯ ಹಸ್ತದಿಂ ಕಟಲ್ದಿದ ನವರೌಪ್ಯಕುಂಭಮೆ . . . ಕಾಣಲಾದವು ದೆನಲ್ . . . ಪೊಳೆಯುತಿರ್ದುದು ಚಂಡಮರೀಚಿಮಂಡಲಂ (ಜಗಾ. ೪-೭೦) ; ಬಿಳಿಮಂಜು ತಾಂ ರೌಪ್ಯಧೂಳಿಯ ಸಾಂದ್ರಧೌತಧವಳವನೆರಚಿ ಮುಚ್ಚಿ ಮುಸುಕಿದುದು ಗಿರಿವನಭುವನಮಂ (ಶ್ರೀರಾಮಾ. ೦೯೯-೦೩೩). [ಸಂ.]

**ರೌಪ್ಯಾದ್ರಿ** (ನಾ). ಬೆಳ್ಳಿಯ ಬೆಟ್ಟ ; ರಜತಗಿರಿ : ಅರ್ಥಶಾಸ್ತ್ರೋದಾತ್ತಂ ದಂಡೋಪ[ನತ]ನೆನೆ ರೌಪ್ಯಾದ್ರಿ ಚೆಲ್ವಾದುದಾಗಳ್ (ಶಾಂತಿಪು. ೦೦-೩೦) ; ನಗಂ ತೊಟ್ಟನೆ ಚಂಚಚ್ಚಂದ್ರರೋಚಿರ್ಧವಳಮೆನಿಸಿ ರೌಪ್ಯಾದ್ರಿಯಂ ಶಿರ್ದುದು (ಅಪು. ೪-೭೯). [ಸಂ.]

**ರೌಮಕ** (ಗು). ೧. ರೋಮದೇಶಕ್ಕೆ ಸಂಬಂಧಪಟ್ಟ,— ಸೇರಿದ. (ನಾ). ೨. ಅಜ್ಮೀರದ ಬಳಿಯಲ್ಲಿ ದೊರೆಯುವ ಒಂದು ಬಗೆಯ ಉಪ್ಪು : "ರೌಮಕಂ, ಬಸ್ತಕಂ'— ೨ ಸಾಭರಿದೇಶದಲ್ಲಿ (ರುಮ) ಎಂಬ ಗಣಿಯೊಳಗೆ ಹುಟ್ಟುವ ಉಪ್ಪು, ಚೌಳುಪ್ಪಿಗೆ ಹೆಸರುಗಳು" (ಸಿದ್ಧಾಂತಿ. ೨೯೩). [ ಸಂ. ]

**ರೌರವ** (ಗು). ೧. ರುರು ಎಂಬ ಜಿಂಕೆಯ ಚರ್ಮದಿಂದ ಮಾಡಿದ. ೨. ಭಯಂಕರವಾದ ; ಭೀಕರವಾದ. ೩. ಅಪ್ರಾಮಾಣಿಕತೆಯಿಂದ ಕೂಡಿದ ; ಮೋಸದ. (ನಾ). ೪. (ಚಿತ್ರವಿಚಿತ್ರ ಹಿಂಸೆಗಳನ್ನು ಕೊಡುವುದೆಂದು ಭಾವಿಸಲಾದ) ಭಯಂಕರವಾದ ನರಕಗಳಲ್ಲಿ ಒಂದು : "ತಪನಃ . . . ರೌರವಃ . . . ಕಾಲಸೂತ್ರಂ . . . ಆ ನರಕಭೇದಂಗಳ ಹೆಸರುಗಳು" (ಸಿದ್ಧಾಂತಿ. ೭೪) ; ಭಾರತದ ಕಥನಪ್ರಸಂಗವು . . . ಘೋರರೌರವವನ್ನು ಕೆಡಿಸುಗು ಕೇಳ್ದ ಸಜ್ಜನರ (ಕುವ್ಯಾಆ. ೦-೨೨) ; ರೌರವ . . . ಕಾಲಸೂತ್ರಗಳೆಂಬವೇಳೆಂಟು ನರಕಂಗಳು (ವಿವೇಕ. ೦೭೯). ೫. ಇಪ್ಪತ್ತೆಂಟು ಶಿವಾಗಮಗಳಲ್ಲಿ ಒಂದು : ಕಾಮಿಕ . . . ವೀರ, ರೌರವ, ಮಕುಟ . . . ವಾತುಲ ಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಶಾರದ. ೭೨). ೮. [ಜೈನ] ಹದಿಮೂರು ಇಂದ್ರಕಗಳಲ್ಲಿ ಒಂದು : ರೌರವ ಭ್ರಾಂತ . . . ವಿಶ್ರಾಂತಾಖ್ಯ ತ್ರಯೋದಶೇಂದ್ರಕ . . . ಬಿಲಂಗಳ್ (ಕತ್ರೈಕ್ರ. ೦೨೦). [ ಸಂ. ]

**ರೌಸು** (ನಾ). ಆರ್ಭಟ ; ಅಬ್ಬರ : ರೌಸಿನಲ್ಲಿ ಯೋಗ್ಯಾಯೋಗ್ಯದ ವಿವೇಕವು ಅಳಿದು ಆವೇಶದ ಕೂಗು ಕೇಳಿಬರುತ್ತದೆ (ಯುಕ್ಷಶ್ರು. ೦೩೭) ; ರೌಸಿನಿಂದ ಎದ್ದು ಕುಳಿತಳು (ಶರಶಂ. ೯೬). [← ಮರಾ. ರವಸ]

**ರೌಹಿಣ** (ಗು). ೧. ರೋಹಿಣೀನಕ್ಷತ್ರದಲ್ಲಿ ಹುಟ್ಟಿದ. (ನಾ). ೨. ಶ್ರೀಗಂಧದ ಮರ ; ಚಂದನವೃಕ್ಷ. ೩. ಅಗ್ನಿಯ ಹೆಸರುಗಳಲ್ಲಿ ಒಂದು. [ ಸಂ. ]

**ರೌಹಿಣೇಯ** (ನಾ). ೧. ರೋಹಿಣಿಯ ಮಗ ; ಬುಧ : "ರೌಹಿಣೇಯಃ, ಬುಧಃ, ಸೌಮ್ಯಃ, ಚಾಂದ್ರಮಸಾಯನಃ— ಈ ೪

ಬುಧನ ಪೆಸರ್ " (ಹರಿವಂ. ೯-೯೬) ; ನಮ್ಮ ದೇಶದಲ್ಲಿ ಈ ಗ್ರಹಕ್ಕೆ ಬುಧ, ರೌಹಿಣೇಯ (Rauhineya) ಎಂದು ನಾಮಕರಣ ಮಾಡಿದ್ದರು (ಅಕಾಶ. ೦೩). ೨. ವಸುದೇವನ ಹೆಂಡತಿಯಾದ ರೋಹಿಣಿಯ ಮಗ ; ಬಲರಾಮ : "ಬಲದೇವಃ . . . ರೌಹಿಣೇಯಃ . . . ಹಲಾಯುಧಃ— ಈ ೧೮ ಬಲದೇವನ ಪೆಸರ್ " (ಹರಿವಂ. ೬-೪೦) ; ರೌಹಿಣೇಯಂ ಮಾಯಾವೇಷನಾಗಿ ಗೋಪನಪ್ಪ ಪ್ರಳಂಬನೊಡನೆ ಮಿಕ್ಕ ಗೋಪಾಲರೆಲ್ಲಂ ಗೋಪಾಲರೊಡನೆ ಗೆಡೆಯಾಗಿ (ಜಗ. ೯-೩೨ ವ). ೩. ಒಂದು ಬಗೆಯ ರತ್ನ ; ಪಚ್ಚೆ; ಮರಕತ. ೪. ಕರು.
[ಸಂ.]

ರೌಹಿಷ (ನಾ). ೧. ಒಂದು ಬಗೆಯ ಜಿಂಕೆ : " ಸಾರಗ, ರೌಹಿಷಃ, ಬೆಟ್ಟಕುರಿ . . . ಪೃಷತಃ, ಚುಕ್ಕೆದುಪ್ಪಿ " (ಸಿದ್ಧಾಂತಿ. ೦೩೩). ೨. ಒಂದು ಬಗೆಯ ಹುಲ್ಲು ; ಕಾಚಿಹುಲ್ಲು : "ಕತ್ತೃಣಂ . . . ರೌಹಿಷಂ— ೬ ಕಾಚೀಹುಲ್ಲು " (ಸಿದ್ಧಾಂತಿ. ೦೩೦). ೩. ಒಂದು ಬಗೆಯ ಮೀನು: (?). [ಸಂ.]

ರ್‍ಯಾಕಟಿ ' ರಾಕಡಿ ' ನೋ.

ರ್‍ಯಾಕಟೆ ' ರಾಕಡಿ ' ನೋ.

ರ್‍ಯಾಕಡೆ ' ರಾಕಡಿ ' ನೋ.

ರ್‍ಯಾಗಟೆ ' ರಾಕಡಿ ' ನೋ.

*

# ಲ

ಲ (ನಾ). ೧. ಕನ್ನಡ ವರ್ಣಮಾಲೆಯ ನಲವತ್ತೆಂಟನೆಯ ಅಕ್ಷರ; ಅವರ್ಗೀಯದ ಮೂರನೆಯ ವರ್ಣ ; ಲಕಾರ. ೨. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : "ಗ ಡ ಬ ಲಂ ಮೂಱಕ್ಕು" (ಮಂಗರಾ. ೦೦೯-೦೦). ೩. [ಛಂದ] ಲಘು ಎಂಬುದರ ಸಂಕೇತ : "ಮಯರಸತಜಭನಂಲಗವೆನಿಪ್ಪಕ್ಷರಂ ಗಣಾಕ್ಷರಗಳಕ್ಕುಂ" (ಮಂಗರಾ. ೦೦೬-೦೯); ಮಯರಸತಜಭನಲಗವಿನಿಚಯವೆಂಬಿವು ನಿಯಮದಿಂ ಗಣಾಕ್ಷರಮಕ್ಕುಂ (ಛಂದೋಂಬು. ೦-೩೬).

ಲಂಕ (ನಾ). ಬಡಗಿ : ಲಂಕರೊಕ್ಕಲಲ್ಲಿ ಆಱುತಿಂಗಳ್ಗೆ ಮಾಣಿತಿವಿಗೆ ಮರವಿಯೆಂಬಿವೊನ್ದಕ್ಕುಂ ವರ್ಷಕ್ಕೆ ಮಂಚವೊನ್ದಕ್ಕುಂ (ಎಇ. XIX, ೩೩-೨೯; 1136) ; " ಬಡಿಗ, ಮರದ ಕೆಲಸ ಮಾಡುವವನು" (ಎಇ. XIX, ಪು. ೩೩ ಭಾಷಾಂತರ).

ಲಂಕಿಗ (ನಾ). ಲಂಕೆಯಲ್ಲಿ ವಾಸಿಸುವವನು ; ಲಂಕೆಯ ಪ್ರಜೆ : ಲಂಕೆಗಿನ್ ಸುಖಮೆಲ್ಲಿ? ಲಂಕೆಗಿನ್ ಶುಭಮೆಲ್ಲಿ? ಲಂಕಿಗರ್ ನಮಗೆ ನೆಮ್ಮದಿಯೆಲ್ಲಿ ? (ಶ್ರೀರಾಮಾ. ೯೬೩-೯೮೦). [ಲಂಕೆ + – ಇಗ]

ಲಂಕಿಣಿ (ನಾ). ೧. ಲಂಕೆಯ ಕಾವಲಿನ ರಾಕ್ಷಸಿ : ಹರಿತಂದಳಾ . . . ಮಹಾದ್ಭುತಘೋರರಕ್ಕಸಯುವತಿ ಲಂಕಿಣಿಯೆಂಬವಳು ರಕ್ಕಸಿಯರೊಡಗೂಡಿ (ತೊರರಾ. ೩-೨-೬) ; ಲಂಕಿಣಿಯನು ಕೊಂದು ಶಂಕೆಯಿಲ್ಲದೆ ನಾನು ಬಿಂಕದಿಂದಲಿ ಬಂದೆ (ಪುರಂದ. ೯-೬೮-೨). ೨. (ಆಲಂ) ದುಷ್ಟ ಹೆಂಗಸು; ಗಯ್ಯಾಳಿ : ಆ ಲಂಕಿಣಿಯ ಕಾಲು ಕಟ್ಟಿಕೊಳ್ಳುವ ಸ್ಥಿತಿ ನನಗೆ ಬಂತು (ಮಹಾಗ. ೯೦). ' ತಾಟಕಿ ' ಪರಾ. [< ಸಂ. ಲಂಕಾ]

ಲಂಕಿಣಿವಿದ್ಯೆ (ನಾ). (ಆಲಂ) ಘಾಟಿತನ ; ಕುಯುಕ್ತಿ : ಅವಳಿಗೇನು ಬಂದಿದೆ ರೋಗ ! ಲಂಕಿಣಿವಿದ್ಯೆ ಮಾಡಿದ್ದಾಳೆ (ಮಹಾಗ. ೦೬೮).
[ಲಂಕಿಣಿ + ವಿದ್ಯೆ]

ಲಂಕೆ (ನಾ). ೧. ಭಾರತದ ದಕ್ಷಿಣಕ್ಕಿರುವ ಒಂದು ದ್ವೀಪ ; ಸಿಂಹಳ; ಈಗಿನ ಸಿಲೋನು. ಇದರ ರಾಜಧಾನಿಗೆ ಲಂಕಾನಗರಿ ಎಂಬ ಹೆಸರಿತ್ತು : ಲಂಕೆಯ ಚೆಲ್ವಂ ನೋಡುತ್ತುಂ . . . ಅರಮನೆಯಂ ಪೊಕ್ಕಂ (ಕಂಠಾಮಾ. ೦೯-೯೬); ರಾವಣಾಸುರ ಲಂಕೆಯಲಿ ಮತ್ಸ್ಯಾವತಾರಂ ಮತ್ಸ್ಯೇಶ್ವರದೇವರಂ ತಾ ನಿಲಿಸಿ ಭಜಿಸನೆ (ಬಸಪು. ೩೯-೬೨) ; ಅಂಕೆಯಿಲ್ಲದ ಕೋತಿ ಲಂಕೆ ಸುಟ್ಟಿತು (ಗಾದೆ). ೨. ಒಂದು ದ್ವೀಪಸಮುದಾಯದ ಹೆಸರು : ಗೋದಾವರೀನದಿಯು ಸಮುದ್ರಕ್ಕೆ ಸೇರುವ ಕಡೆ . . ಲಂಕೆಗಳು ಎಂದು ಕರೆಯಲ್ಪಡುವ ಅನೇಕ ದ್ವೀಪಗಳೂ . . . ಇವೆ (ಭೂಗೋಳ. ೬೦). [ಸಂ. ಲಂಕಾ]

ಲಂಕೋಯಿಕೆ (ನಾ). ಒಂದು ಬಗೆಯ ಸಸ್ಯ; ಸ್ಪೃಕ್ಕೆಯೆಂಬ ಗಂಧದ್ರವ್ಯ ; ಸಂಕೇಬೇರು : "ಮರುನ್ಮಾಲಾ . . . ಲಘುಃ, ಸಮುದ್ರಾಂತಾ, ವಧೂಃ, ಕೋಟಿವರ್ಷಾ, ಲಂಕೋಯಿಕಾ–೧೦ ಸ್ಪೃಕ್ಕೆಯೆಂಬ ಗ್ರಂಥ್ಯದ್ರವ್ಯ, ಸಂಕೇಬೇರು" (ಸಿದ್ಧಾಂತಿ. ೦೯೩).
[ಸಂ. ಲಂಕೋಯಿಕಾ]

ಲಂಗ (ನಾ). ಹೆಣ್ಣುಮಕ್ಕಳ ಒಂದು ಉಡುಗೆ ; ಪಾವಡೆ : ಚಿಕ್ಕ ಮಕ್ಕಳು ಇಂಗ್ಲೀಷಿನವರಂತೆ ಷರಾಯಿ ಲಂಗಗಳನ್ನು ಹಾಕಿಕೊಳ್ಳುತ್ತಿದ್ದವು (ಹುಟ್ಟಿಹ. ೬) ; ನಿನ್ನ ಲಂಗ ಯಾರು ಹೊಲಿದದ್ದು ? (ದೀಹದ. ೦೦೦).
[← ಹಿಂ. ಮರಾ. ಲಹಂಗಾ]

ಲಂಗಟ ' ಲಂಗೋಟಿ ' ನೋ.

ಲಂಗಡ, ಲಂಗಡೆ (ನಾ). ಕಾಲಿನಲ್ಲಿ ಊನವುಳ್ಳವನು ; ಕುಂಟ : ಟೀಪುಸುಲ್ತಾನರ ಕಡೆಯಿಂದ ಲಂಗಡಾ ದಾಡಿಸೇಖ್‌ಯಿಮಾಮುಯೆಂಬ ಶಿಪಾದಾರನು (ರಾಜೇಂದ್ರ. ೮೬). ಲಂಗಡೆ : ವೆಂಕಟಕೃಷ್ಣ ಪಾಪ ಕೊಂಚ ಕುಂಟು. ತೀರ ಲಂಗಡೆ ಅಲ್ಲ (ಮಾಮಿ. ೦೩); ಕಾಲುಗೀಲು ಮುರಿದುಕೊಂಡು ಲಂಗಡೇ ಆಗೀರಿ (ಸಂಯುಕ್ತ. ೯೨). [←ಹಿಂ. ಮರಾ. ಲಂಗಡಾ]

ಲಂಗಡೆ ' ಲಂಗಡ ' ನೋ.

ಲಂಗರಖಾನೆ (ನಾ). ಬಡಬಗ್ಗರಿಗಾಗಿ ಇರುವ ತಂಗುಮನೆ.– ಅನ್ನಛತ್ರ : ಆರು ತಿಂಗಳಲ್ಲಿ ಮಶೀದಿಯು ತಯಾರಾಯಿತು. ಲಂಗರಖಾನೆಯ ಕಟ್ಟಡವೂ ಸಿದ್ಧವಾಯಿತು (ಬಾಲಚ. ೨೯೦).
[ ← ಪಾರ. ಹಿಂ. ಮರಾ. ಲಂಗರ್‌ಖಾನಾ]

**ಲಂಗರು**. ಸಂಗರು, ನಂಗಲ್ಲು (ನಾ). ಹಡಗನ್ನು ನಿಲ್ಲಿಸುವಾಗ ನೀರಿನಲ್ಲಿ ಇಳಿಬಿಡುವ ಭಾರವಾದ ಕಬ್ಬಿಣದ ಸಲಕರಣೆ; ಗುಂಡು ಮತ್ತು ಸರಪಳಿ : ' ಲಂಗರು ' ಎಂಬುದು ಬಹಳ ಭಾರವಾದ ಕಬ್ಬಿಣದ ತೊಲೆ . . . ಹಡಗು ಗಾಳಿಗೆ ಕದಲದೆ ನಿಲ್ಲಬೇಕಾದ ಸಂದರ್ಭದಲ್ಲಿ ಅದನ್ನು ಸರಪಳಿಯಿಂದ ನೀರಿನಲ್ಲಿ ಬಿಟ್ಟು, ಅದು ನೆಲದ ಮೇಲೆ ಕುಳಿತುಕೊಳ್ಳುವಂತೆ ಮಾಡುವರು (ಗುಣಾ. ೬೩); ಅದು ಲಂಗರಿಲ್ಲದ ನೌಕೆ (ಹುಕಳ. ೩೯). **ನಂಗರು** : (ಕಿಸಂಗ್ರಾ. ೦೩೩). **ನಂಗಲ್ಲು** : " ನಂಗಲ್ಲು ಸ್ಥಾಪ್ಯಮಕ್ಕುಂ " (ಮಂಗರಾ. ೦೨೦-೯); ನಂಗಲ್ಲನಿಳುಹಿದ ಹಡಗು ನಿಲ್ವಂತೆ ರಥಾಂಗ ನಿಂದುದು ತೊಟ್ಟನಲ್ಲಿ (ಶರತ. ೨೯-೩೦); ನಂಗಲ್ಲನಿಕ್ಕಿದ ಹಡಗಿನಂತಾ ರಥ ಕಂಗೊಳಿಸುತ ನಿಂದಿರಲು (ಗೋಮುಟೀ. ೦೦-೬೬).

**ನಂಗರುಎತ್ತು** = ಲಂಗರನ್ನು ಎತ್ತು,—ತೂಗು: (ಕಿಸಂಗ್ರಾ. ೦೩೩). **ನಂಗರುಬಿಡು** = ಲಂಗರುಹಾಕು : (ಕಿಸಂಗ್ರಾ. ೦೩೩). **ನಂಗರುವಾಡೆ** = ಹಡಗನ್ನು ಲಂಗರು ಹಾಕಿ ನಿಲ್ಲಿಸುವ ಸ್ಥಳ : (ಕಿಸಂಗ್ರಾ. ೦೩೩). **ಲಂಗರುಹಾಕು**, **ನಂಗರುಹಾಕು** = ಹಡಗನ್ನು ನಿಲ್ಲಿಸಲು ಲಂಗರನ್ನು ನೀರಿನಲ್ಲಿ ಇಳಿಬಿಡು ; ಹಡಗನ್ನು ನಿಲ್ಲಿಸು : ಹರಿಕುಲಿಶನು . . . ಕಪ್ಪುಸಮುದ್ರವನ್ನು ದಾಟಿ ಆ ಪುರದ ಬಂದರಿನಲ್ಲಿ ಲಂಗರುಹಾಕಿದನು (ಕುಡಿಸ. ೯೬); ಹಡಗುಗಳು ಲಂಗರುಹಾಕುವ ಸ್ಥಳವು 'ರೇವು' ಅಥವಾ 'ಅಳವೆ' ಎಂದು ಕರೆಯಲ್ಪಡುತ್ತದೆ (ಶೂಗೋಳ. ೦೦). [ ← ಪಾರ. ಹಿಂ. ಲಂಗರ್ : ಮರಾ. ಲಂಗರ್, ನಾಂಗರ್.. ಇಂ. Anchor]

**ಲಂಗರುಸುಂಕ** (ನಾ). ಲಂಗರು ಹಾಕಿದ ಹಡಗುಗಳ ಮೇಲೆ ಹಾಕುವ ತೆರಿಗೆ : (Anchorage. ೩೦೪೩). [ಲಂಗರು + ಸುಂಕ$_1$]

**ಲಂಗಿಗ** (ನಾ). ಬಿದಿರಿನ ಗಳೆಯ ಮೇಲೆ ಕಸರತ್ತು ಮಾಡುವವನು; ದೊಂಬ : ಮೀಳಯ ಬಿದಿರ ಮೇಗೇಱಿಯಾಕಾಶದೊಳಾಡುವ ವಿದ್ಯಾಧರ ಲಂಗಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪುಟ್ಟಿ (ವಡ್ಡಾರಾ. ೯-೨೬). [< ಪ್ರಾ. ಲಂಖಿಗ. / ಸಂ. ಲಂಘಕ]

**ಲಂಗಿಸು** (ಕ್ರಿ). ನೆಗೆ; ಹಾರು; ಕುಪ್ಪಳಿಸು; ಜಿಗಿ : ತುಂಗಗಿರಿಶಿಖರದಿಂದಂ ಲಂಗಿಸಿ ಶೂದ್ರಕನ ಪೊಳಲ ಸುರಿಗೆಯ ಮೊನೆಯೊಳ್ . . . ಪಾಯ್ದು ಬರ್ದುಂದು ಸಿಂಗಂ (ಕಾವ್ಯಸಾ. ೦೦೦೯ ಶೂದ್ರ೪) ; ಪೊಗೆ ಪುಗೆ ಕಣ್ಣಿಂ ಸಿಂಗಂಗಳಳುರೆ ಗರ್ಜಿಸಿ ಲಂಗಿಸಿ ಪುಡವುಡನೆ ಪುಟ್ಟಿ ಸತ್ತುವು ಪಲವುಂ (ಶಂಕಖಾ. ೩-೯೨); ಸಿಂಗಾಡಿಗಳ ತುಂಡಿಸಿ ನೇಜೆಯುಗಳ ಲಂಗಿಸಿ ಸೆಳೆಸೆಳೆದಿಡುತ (ಳಂಪಶಿ. ೦೩-೯೭). [< ಲಂಘಿಸು]

**ಲಂಗು** (ನಾ). ಕಡಿವಾಣದ ಒಂದು ಭಾಗ ; ಕಡಿವಾಣ .

**ಲಂಗುಲಗಾಮು** = ೧. ಕುದುರೆ ಮತ್ತು ಒಂಟೆಗಳನ್ನು ಹತೋಟಿಯಲ್ಲಿಡಲು ಬಳಸುವ ಸಾಧನಗಳು; ಕಡಿವಾಣ, ಮತ್ತು ಕಡಿವಾಣ: ಸೊಗಸಾದ ಜೀನುಗಳನ್ನು ಮತ್ತು ಲಂಗುಲಗಾಮುಗಳನ್ನು ಹಾಕಿದ್ದ ಎರಡು ಒಂಟೆಗಳನ್ನೂ . . . ಅರ್ಪಿಸಿದೆ (ಶ್ರವಾಷ. II. ೯೪); ಇಂದ್ರಿಯಗಳ ಹಿಂದೆ ಮನಸ್ಸನ್ನು ಲಂಗುಲಗಾಮಿಲ್ಲದ ಕುದುರೆಯಂತೆ ಬಿಟ್ಟುಕೊಟ್ಟು (ವಾರಾಳ. ೦೦೭). ೨. (ಅಲಂ) ಕಟ್ಟು; ತಡೆ; ನಿರ್ಬಂಧ ; ಹಿಡಿತ : ನಿನ್ನ ಬಾಯಿಗೆ ಲಂಗುಲಗಾಮು ಏನೂ ಇಲ್ಲ (ರಂಗರೂ. ೦೮೦); ಅವರ ಕೋಪಕ್ಕೇನು ಲಂಗುಲಗಾಮೋ ಬೇಡವೆ ? (ಸ್ವಾಖಿಸ್ಕೀ. ೩೯). [< ಸಂ. ಲಂಖಿನೀ]

**ಲಂಗೂಟ** ' ಲಂಗೋಟಿ ' ನೋ.

**ಲಂಗೋಟಿ**, ಲಂಗಟಿ, ಲಂಗೂಟ (ನಾ). (ಗಂಡಸು) ಗುಹ್ಯಾಂಗವನ್ನು ಮಾತ್ರ ಮುಚ್ಚುವಂತೆ ಧರಿಸುವ ಬಟ್ಟೆ ; ಕೌಪೀನ ; ಪುಟಗೋಸಿ : ಲಂಗೋಟಿ ಬಲುಪೊಳ್ಳೆದಣ್ಣ ಒಬ್ಬರ್ಹಂಗಿಲ್ಲದೆ ಮಡಿಗೆ ಒದಗುವುದಣ್ಣ ಬಡವರಿಗಾಧಾರವಣ್ಣ ಈ ಲಂಗೋಟಿ ಬೈರಾಗಿಗಳ ಭಾಗ್ಯವಣ್ಣ (ಪುರಂದ. ೪-೮೮ ಪಲ್ಲವಿ) ; ಲಂಗೋಟಿ ಹಾಕಿದಿ ಕಂಗೆಟ್ಟು ಹೋಕದಿ (ಶಂಕರ. ೬೩ ಕವಿಕಾವ್ಯಕಂಠಯು) ; ಲಂಗೋಟಿಯ ಮೇಲೆಯೇ ಒಂದು ಸಣ್ಣ ರೇಶಿಮೆಯ ಮಡಿ ಉಟ್ಟುಕೊಂಡಿದ್ದ (ವೃಶಿ. ೦೯೩). **ಲಂಗಟಿ** : ಲುಂಗೀ ಆರ ಸುತ್ತರೀ ಲಂಗಟಾ ಆರ ಲಪಾಡಿಸಿರಿ (ಸಮಾಜ. ೨೯೩) ; ಒಂದೂವರಿ ಗೇಣು ಲಂಗಟಾ ಸಿಗಿಸಿಕೊಂಡು . . . ಹೊರಟ್ರು (ಕಿಡುಗು. ೦೯). **ಲಂಗೂಟ** : ಲಂಗೂಟ ಹಾಕಿ ಬತ್ತಲೆಯಾಗಿ ಗುರ್ಜಿಯನ್ನು ಹೊರುವ ಹುಡುಗರು ಕೋಪಣ ಧರಿಸುವ ವಿರಕ್ತಮೂರ್ತಿಯನ್ನು ಚಿತ್ರಿಸದಿರವು. (ಕನ್ನಡಾ. ೦೩೯).

**ಲಂಗೋಟಿಗೆಳೆಯ** = ಚಿಕ್ಕಂದಿನ ಸ್ನೇಹಿತ : ಬಾಲ್ಯಮಿತ್ರ : ಲಂಗೋಟಿ ಗೆಳೆಯರೊಂದಿಗೆ ವಿಶ್ವಾಸದಿಂದ ಕಲಿಯುತ್ತಿದ್ದನು (ಕೃಷರು. ೩೨೬). **ಲಂಗೋಟಿಮಿತ್ರ** = ಲಂಗೋಟಿಗೆಳೆಯ : ಅಪರಿಚಿತರನ್ನು ಸಹ ಲಂಗೋಟಿಮಿತ್ರರಂತೆ ಮಾತನಾಡಿಸುತ್ತಾನೆ (ನಾಡಗೀ. ೯೦). **ಲಂಗೋಟಿ ಸ್ನೇಹಿತ** = ಲಂಗೋಟಿಗೆಳೆಯ : ಅವರಿಬ್ಬರೂ, ಲಂಗೋಟಿಸ್ನೇಹಿತರು (ರೂಢಿ). [← ಪಾರ. ಲಂಗೋಟೀ ; ಹಿಂ. ಲಂಗೋಟ್, ಲಂಗೋಟಾ, ಲಂಗೋಟೀ; ಮರಾ. ಲಂಗುಟಾ, ಲಂಗುಟೀ, ಲಂಗೋಟ್, ಲಂಗೋಟಾ, ಲಂಗೋಟೀ]

**ಲಂಘಕ** (ನಾ). = ಲಂಗಿಗ : ತನ್ನ ವಿದ್ಯೆಯನ್ನು ತೋರಿಸಲು ಬಯಸುವ ಲಂಘಕನು ನೆಲವನ್ನು ಅಗೆಯಿಸಿ, ಕಲ್ಲುಬಕ್ಕರೆಗಳನ್ನು ತೆಗೆಯಿಸಿ, ನೆಲವನ್ನು ಸಮಗೊಳಿಸಿ. ಮೃದುವಾದ ನೆಲದಲ್ಲಿ ತನ್ನ ವಿದ್ಯೆಯನ್ನು ತೋರಿಸುವನು (ಬುದ್ಧಕ. ಪುರಂದ. ೯೩). [ಸಂ. / ಪಾಲಿ. ಲಂಘಕ]

**ಲಂಘನ** (ನಾ). ೧. ಹಾರುವಿಕೆ ; ನೆಗೆತ; ಜಿಗಿತ: ' ಲಂಘಿಸು ' ಪರಾ. ೨. ಕುದುರೆಯ ಒಂದು ಬಗೆಯ ಓಟ;ನೆಗೆದು ನೆಗೆದು ಓಡುವುದು;ಪ್ಲುತ: ನೆಗೆನೆಗೆಯಿಸಿ ಓಡಿಸುವುದು ಲಂಘನವೆನಿಸಿಕೊಂಬುವುದು (ಅಶ್ವಶೀ. ೨೩-೦೦). ೩. ಮಿತಿಯನ್ನು ಮೀರುವುದು; ಹದ್ದು ಮೀರಿದ ವರ್ತನೆ. ೪. ಹತ್ತುವುದು; ಏರುವುದು. ೫ ಉಪವಾಸ ; ನಿರಾಹಾರ : ಲಂಘನವು ದೀಪನ ಪಾಚನಂಗಳನ್ನುಂಟುಮಾಡುವುದು (ಸಳವೈ. ೦೦೦) ; ಲಂಘನವು ಶೋಧನ, ಶಮನ ಎಂದು ಎರಡು ಪ್ರಕಾರವಾಗಿದೆ (ಅಂಶಾ. ೦೯೩). ೩, ೫ : ಭಕ್ತದ್ವೇಷಂ ಜಡಸಂಸಕ್ತಿ ಸದಾಚರಿತಲಂಘನಂ . . . ಕುಂದದ ಮುಕ್ತಜ್ವರನಂದದಿಂದಮರಸರೊಳೆಂದುಂ (ಕಂದ್ರಪು. ೦೦-೦೦೮).

**ಲಂಘನಮಾಡು** = ಲಂಘನಹಾಕು : ಅಜೀರ್ಣವಾದಾಗ ಲಂಘನ ಮಾಡಿದರೆ ಒಳ್ಳೆಯದು (ರೂಢಿ). **ಲಂಘನಹಾಕು** = ಉಪವಾಸವಿರು ; ನಿರಾಹಾರಿಯಾಗಿರು : ಎರಡು ದಿವಸ ಲಂಘನಹಾಕಿದರೆ ಸರಿಹೋಗುತ್ತೆ ಎಂದು ಅದನ್ನು ಮಾಡಿದೆ (ಮಹೋಪಂ. ೭೮). [ಸಂ.]

**ಲಂಘನಂಗೆಯ್** (ಕ್ರಿ). ಉಪವಾಸವಿರು ; ನಿರಾಹಾರಿಯಾಗಿರು : ಗಜಮಸ್ತಕಮುಸ್ತಿಷ್ಯದಿನಜೀರ್ಣಮಾಯ್ತೆಂದು ಲಂಘನಂಗೆಯ್ದುಪೊಲೇಂ ಗಜರಿಪು ಲಂಘಿಸಿದುದೊ (ಅಜಪು. ೯-೨೭). [ಲಂಘನ + ಕೆಯ್$_1$]

**ಲಂಘನೀಯ** (ನಾ). ಮೀರಬೇಕಾದುದು : ತಿರಸ್ಕರಿಸಲು ಯೋಗ್ಯವಾದುದು : ಮುದುಗಣ್ಗಳುಚಿತವುಂ ನುಡಿವುದು . . . ಉಚಿತಮಂ ಬಗೆಯದೆ ನುಡಿದೊಡಮವುಗೆ ಲಂಘನೀಯಮಪೇಯಂ (ಕಾಂತಿಪು. ೦೦-೦೨೦). [ ಸಂ. ]

**ಲಂಘನೆ** (ನಾ). = ಲಂಘನ ೧ : ಅಡಿದೊಡರ್ವ ನಿಡುಜಡೆಯ ನಡುಬಳಸಿಯಸುಗೊಳಿಸಿ ಜಡಿವಪೋಲೆಯನೊಡಂಬಡಿಸಿಪೊಡನೆ ಲಂಘನೆಲಾಗು ಬಿಡುತೆಗಳ ಬರುಬಿನಿಂ (ಶಳಸ. ೯೬). [ ಸಂ. ಲಂಘನ ]

**ಲಂಘಿತ** (ಗು). ೧. ದಾಟಿದ; ಜಿಗಿದ. ೨. ಮೀರಿದ; ಅತಿಕ್ರಮಿಸಿದ. ೩. ತಿರಸ್ಕರಿಸಲ್ಪಟ್ಟ; ಅಲಕ್ಷಿಸಲ್ಪಟ್ಟ; ಅಪಮಾನಿತ. (ನಾ). ೪.

[ನಾಟ್ಯ] ಮೂವತ್ತೈದು ದೇಶೀಯಭೌಮಚಾರಿಗಳಲ್ಲೊಂದು; "ಒಂದು ಕಾಲನ್ನು ಖಂಡಸೂಚಿಸ್ಥಾನಕದಲ್ಲಿ [ಸ್ಥಾನಕ ೪೯] ನಿಲ್ಲಿಸಿ ಜಾಗ್ರತೆ ಇನ್ನೊಂದು ಕಾಲಿಂದ ದಾಟುವುದು" (ಲಾಕ್ಷರಂ. ೩೨೨ ಗದ್ಯಾನುವಾದ) : ಉರು ಖಂಡಸೂಚಿಕಾದಿ ನಿರುತೊಂದುಂ ಪಾದಮುದನೆ ಬೇಗಂ ಬೇಗಂ ಏರಿದುಂ ತೆಗೆವುತೆ ತದಿತರ ಚರಣದೆ ದಾಂಟಲ್ಕೆ ಲಂಘಿತಾಖ್ಯ ಮೆನಿಕ್ಕುಂ (ಲಾಕ್ಷರಂ. ೬-೬೯). ೫. [ಸಂಗೀತ] ಹಾಡುವಾಗ ಅನುಕ್ರಮ ವಾಗಿ ಉಚ್ಚರಿಸದೆ ಮಧ್ಯದ ಸ್ವರಗಳನ್ನು ಹಾರಿಸಿ ಹೇಳುವುದು : ಮಂದ್ರ ಮಧ್ಯಮ ತಾರವೆಂಬ ತ್ರಿವಿಧವೊಂದಲು ಚಾರವೆಂಬ ಲಯ ಲಂಕಿ [ಘಿ] ತಂಗಳು ನಿಮಿರ್ದಮರ್ದಿರಲು . . . ದೇಶೀಮಾರ್ಗವೆಸೆಯಲು (ಬಿಕಥ. ೦೯-೦೦); ಲಳಿತ ಗಾಢ ಮಿತಾಯಿ ಲಂಘಿತ ಕಾಕುಜಾಯನುಜಾಯಿ . . . ಬೆಡಂಗಮರೆ ಬಾಜಿಸುತೆ ಚಾರುವೀಣೆಯಂ (ಭೃಕಂ. ೦೦-೯).
[ಸಂ.]

**ಲಂಘಿಸು** (ಕ್ರಿ). ೧. ಹಾರು ; ಜಿಗಿ ; ನೆಗೆ : ಸಿಂಧುರಾರಾತಿಯನು ಜ್ವಾಳಿತನುವನಭ್ರಪಥದತ್ತ ಲಂ[ಕಾಕಾಂ. ೪೦]ಘಿಸಲ್ಕಿರ್ದುದಂ ಚಮೂಪತಿ ಕಂಡಂ (ಅದಿಪು. ೦೬-೯೩); ಕೊಂಬಿನ ಮೇಲಣ ಮರ್ಕಟನಂತೆ ಲಂಘಿಸು ವುದೆನ್ನ ಮನವು (ಜಿಪ. ೩೨); ಹೊಯ್ದನು ಭೀಮ ಲಂಘಿಸಿ ಗಜದ ಮಸ್ತಕವ (ಕುಮಾ.ದ್ರೋ. ೩-೩೩). ೨. ದಾಟು; ಕ್ರಮಿಸು : ನಿನ್ನಾಜ್ಞೆ ಯಂತೆ ಗಗನಮನುನ್ನತಿಯಿಂ ದಾಂಟಿ ಪೆರ್ಜಿರ್ಗ ಲಂಘಿಸಲರಿದೆಂಬನ್ನೆಗ ಮೊಪ್ಪಿರ್ದುದು (ಆದಿಪು. ೦೦-೩೭); ಜಲಧಿಯ ಲಂಘಿಸಿದವಗೆ ಜಯ ಮಂಗಲ (ಪುರಂದ. ೧-೨೨೯ ಪಲ್ಲವಿ). ೩. ಮೇಲೇರು ; ಹತ್ತು ; ಏರಿಹೋಗು : ತೊಲೆಗಳೊಳಗೆ ದಟಿಗಳ ಪೆಟ್ಟಿ ಲಂಘಿಪ ಬಲುಮೆಕಾಲಿರ ಮೇಲೆ ನೂಕೆ . . . ತೊಟಿದರು ಜೀವಗಳನು (ಕಂಪಲಿ. ೦೯-೭೦). ೪. ಮೀರು ; ಮೀರಿ ನಡೆ; ಅತಿಕ್ರಮಿಸು : ಲಂಘಿಸಿದೆಂ ನಿಮ್ಮಯ ಮಾತನೊರ್ಮೆಗವಿದಾಜ್ಞಾಲಂಘನಂ ದೋಷಂ (ಗದಾಯು. ೬-೩).
[ಲಂಘನ + — ಇಸು₃]

**ಲಂಘ್ಯ** (ಗು). ೧. ಹಾರಬೇಕಾದ; ಜಿಗಿಯಬೇಕಾದ. ೨. ಮೀರಲು ಸಾಧ್ಯವಾದ; ಅತಿಕ್ರಮಿಸಬಹುದಾದ. ೩. ತಿರಸ್ಕಾರಕ್ಕೆ ಯೋಗ್ಯ ವಾದ; ಅಲಕ್ಷ್ಯ ಮಾಡಬಹುದಾದ. [ಸಂ.]

**ಲಂಚ** (ನಾ). ಕಾರ್ಯಸಾಧನೆಗಾಗಿ ಅಕ್ರಮವಾಗಿ ಪಡೆಯುವ ಅಥವಾ ಕೊಡುವ ಹಣ, ವಸ್ತು ಮೊದಲಾದುವು; ರುಷುವತ್ತು : "ಲಂಚಃ, ಉತ್ಕೋಚಃ, ಉಪಾದಾನಂ, ಉಪಚಾರಃ, ಆಮಿಷಂ — ಈ ೫ ಲಂಚಂ" (ಹಲಾಯು. ೭೧-೨೯೦); ಲಂಚಂ ಬೇಪ್ರ್ವ ಘಳಿಲೆನೆ ತಾಯ್ಗಂ ತಂಗೆಗವಳಿಪಿದವಂ ಲೆಕ್ಕವಿಡುವವಂ ಮಾದಿಗಂ (ಶಿಶಾಸ. IX-i, ೦೦೭-೨೬; 1050); ತನಿವಣ್ಣಂ ಲಂಚಮಿಮೆಂ ಪುರುಳಿ ನಿನಗೆ (ಶಬ್ದಕಾ. ೩೦೩); ಹವಣನಾರಯ್ದು ಲಂಚವಂ ಮೊದಲೆ ಕೊಂಡು ಕಸವರ ಮನರಮನೆಯ ಭಂಡಾರಕೊದಗಿಸುವ . . . ರಾಜಮಂತ್ರಿಗಳ್ (ಕಂಪು.೭-೬).

**ಲಂಚತಿನ್ನು** = ಲಂಚವನ್ನು ಸ್ವೀಕರಿಸು : ಸಾವಿರ ಸಾವಿರ ಸಂಬಳ ಬರುತ್ತಿದ್ದರೂ ಅವರು ಲಂಚತಿನ್ನುವುದನ್ನು ಬಿಟ್ಟಿಲ್ಲ (ವಾಪೋಲೀ. ೦೦೦). **ಲಂಚಲಾವಣಿ** = ಲಂಚ ಮತ್ತು ಆ ಬಗೆಯ ಇತರ ಹಣ : ಸಾಲವನ್ನು ಕೊಟ್ಟವರಿಗೂ ತೆಗೆದುಕೊಂಡವಂಗೂ ಶಿಕ್ಷೆಮಾಡಿ, ಜನಗಳಿಗೆ ಲಂಚಲಾವಣಿಗೆ ಆಸ್ಪದವಿಲ್ಲದಂತೆಯೂ . . . ಬಂದೋಬಸ್ತು ಮಾಡಿ ಬುದ್ಧಿ ಕಲಿಸಿದರು (ಮುಹಾವಂ. ೧. ೦೩೭) ; ನಿಮ್ಮ ನಿಮ್ಮ ಮರೆಮೋಸ ಲಂಚಲಾವಣಿಗಳ ಪ್ರಪಂಚವನ್ನೂ . . . ಸಂಗ್ರಹಿಸಿಕೊಂಡಿರುವೆವು (ಟಿಪ್ಪೂ. ೩೨-೨೬). **ಲಂಚಹಾಕು** = ಅಕ್ರಮವಾಗಿ ಹಣವನ್ನು ಕೊಡು : ಮಹಮ್ಮದಲ್ಲಿಖಾನನು ಮುರಾರಿರಾಯರಿಗೆ ಲಂಚಹಾಕಿ ಆತನ ಮುಖಾಂತ್ರ ಅರಶಿನವರ ಬಳಿಯಲ್ಲಿ ಕವುಲು ಮಾಡಿಕೊಂಡ ವಿವರ (ಹೈದರ. ೩೯).

**ಲಂಚಹೊಡೆ** = ಅಕ್ರಮವಾಗಿ ಹಣ ತೆಗೆದುಕೊಳ್ಳು : ಲಂಚಹೊಡೆ ಯುವುದರಲ್ಲಿ ಪಟಾಯಿತನಾಗಿಬಿಟ್ಟ (ವಾಪೋಲೀ. ೦೦೩).
[ಸಂ. ಲಂಚಾ./ಪ್ರಾ. ಲಂಚಾ]

**ಲಂಚಂಗುಳಿ**, ಲಂಚಗುಳಿ (ನಾ). ಲಂಚವನ್ನು ತೆಗೆದುಕೊಳ್ಳುವ ಸ್ವಭಾವವುಳ್ಳ ವ್ಯಕ್ತಿ ; ಕೈಯಾಸೆ ಮಾಡುವ ವ್ಯಕ್ತಿ : ಗುಳಿ ಪ್ರತ್ಯಯಕ್ಕೆ–ಆಟಂಗುಳಿ, ಸಾಲಂಗುಳಿ, ಲಂಚಂಗುಳಿ (ಶಮದ. ೨೦೨ ಪ್ರಯೋ) ; ಲಂಚಮಂ ಕೊಳ್ವಂ, ಲಂಚಂಗುಳಿ (ಶಬ್ದಾನು. ೪೦೯ ಪ್ರಯೋ). ಲಂಚಗುಳಿ : ಲಜ್ಜೆಯ ಲಂಚಗುಳಿಯ ನೋಟದ ತವಕಕಾರ್ತಿಯ . . . ಮನಮಂ ತನ್ನತ್ತ ಸೆಳೆದು (ಸಂಬಿರ. ೦೯-೯೬); ಇಂಚರೆವೋಯಿತ್ತು ನಮ್ಮಯ ತೇಜವಿನ್ನೇನು ಲಂಚಗುಳಿಯಾದ ಶಿವ (ಸಿದ್ಧರಾ. ೮-೭೦); ಘಾತಿಸುವರೀ ಲಂಚಗುಳಿಯಂ (ಶೀಕರಾ. ೦೩-೨೦). [ಲಂಚ + — ಗುಳಿ₃ (< — ಕುಳಿ₃) ]

**ಲಂಚಂಗೊಡು**, ಲಂಚಕೊಡು (ಕ್ರಿ). ತನ್ನ ಕೆಲಸವನ್ನು ಸಾಧಿಸಿ ಕೊಳ್ಳಲು ಅಕ್ರಮವಾಗಿ ಹಣ, ವಸ್ತು ಮೊದಲಾದುವನ್ನು ಕೊಡು; ಕೈಯಾಸೆ ತೋರು : ಒಂದು ಕಂಕಣಮನಾಕೆಗೆ ಲಂಚಂಗೊಟ್ಟು ಬೆಸಗೊಂಡು (ಬಿಂಹಂ. ೨-೬ ವ). **ಲಂಚಕೊಡು** : ಆತ ಲಂಚ ಕೊಡುವಾಗ ಪೋಲಿಸರ ಕೈಗೆ ಸಿಕ್ಕಿಬಿದ್ದ (ರೂಢಿ). [ಲಂಚ + ಕೊಡು₁]

**ಲಂಚಂಗೊಳ್** (ಕ್ರಿ). ಅಕ್ರಮವಾಗಿ ಹಣ, ವಸ್ತು ಮೊದಲಾದುವನ್ನು ಸ್ವೀಕರಿಸು ; ಕೈಯಾಸೆ ಮಾಡು : ಅವನ ಕೆಯ್ಯೊಳು ಲಂಚಂಗೊಂಡ ನಕ್ಕುಮೆಂದು ಕಳ್ಳಂಗಂ ತಳಾಱಂಗಂ ಕೆಳೆಸಂಕಲೆಯನಿಕ್ಕಿದಾಗಳ್ (ವಾಪುಂಪು. ೭೯) ; ರತಿರೂಪಂ ಲಂಚಂಗೊಂಡ ವಿಲಾಸದಿನೆಸೆದತ್ತಾ ರಾಣೀವಾಸ (ಜಯಾಕಾ. ೨-೨). [ಲಂಚ + ಕೊಳ್₁]

**ಲಂಚಕೊಡು** ' ಲಂಚಂಗೊಡು ' ನೋ.

**ಲಂಚಕೋರ**, ಲಾಚಖೋರ (ನಾ). ಲಂಚವನ್ನು ತೆಗೆದುಕೊಳ್ಳು ವವನು : ಬೇಕನ್ನನು ಲಂಚಕೋರನೆಂದೂ . . . ಯುಧಿಷ್ಠಿರನು ಸುಳ್ಳುಹೇಳಿದನೆಂದೂ, ಅರ್ಜುನ ಮಗನಿಗೆ ಸೋತನೆಂದೂ ಹೇಳಿದೆ (ಬಿಂಕಿಮು. ೦೬೯) ; ನೀನೆ ನನ್ನ ಲಂಚಕೋರನಾಗೂಂತ ಹೇಳಬಹುದೇ ? (ಪಪಶೀ. ೯೦). ಲಂಚಖೋರ : ನಮ್ಮಲ್ಲಿಯ ಅಧಿಕಾರಿಗಳಂತೆ ನನ್ನನ್ನೂ ಲಂಚಖೋರನೆಂದು ಎಣಿಸಿದ್ದಾರೆ (ಪಟ್ಟೊಂದ. ೦೩೩).
[ಲಂಚ + — ಕೋರ್₃./ಮರಾ. ಲಾಂಚಖೋರ್]

**ಲಂಚಕೋರಿ** (ನಾ). ಲಂಚವನ್ನು ತೆಗೆದುಕೊಳ್ಳುವವಳು ; ಕೈಯಾಸೆ ಮಾಡುವವಳು : ಬಡವಿ ಅವಳು. ಆದರೇನು ? ಸತ್ಯವಂತೆ. ಲಂಚ ಕೋರಿಯಲ್ಲ (ಶಾಗನ. ೦೯). [ಲಂಚಕೋರ + — ಇ₂]

**ಲಂಚಖೋರ** ' ಲಂಚಕೋರ ' ನೋ.

**ಲಂಚಗ** (ನಾ). ಕೈಯಾಸೆಯಿಂದ ಜೀವಿಸುವವನು : ಲಂಚದಿಂ ಜೀವಿಸುವಂ ಲಂಚಗಂ, ಲಂಚವಣಿಗಂ (ಶಬ್ದಾನು. ೪೦೩ ಪ್ರಯೋ) ; ಲಂಚ ದಿಂದ ಬದುಕುವವನು ಲಂಚವಣಿಗನು, ಲಂಚಗನು (ಹೊಮಂಗ. ೬೭).
[ಲಂಚ + — ಗ₂]

**ಲಂಚಗಾರ** ' ಲಂಚಗಾಜಿ ' ನೋ.

**ಲಂಚಗಾರಿಕೆ** (ನಾ). ಅಕ್ರಮವಾಗಿ ಹಣ, ವಸ್ತು ಮೊದಲಾದುವನ್ನು ತೆಗೆದುಕೊಳ್ಳುವುದು; ಕೈಯಾಸೆಗೊಳಗಾಗುವುದು ; ಲಂಚಗುಳಿತನ: ಅವನು ತನ್ನ ಲಂಚಗಾರಿಕೆಯಿಂದ ಇದ್ದ ಕೆಲಸವನ್ನು ಕಳೆದುಕೊಂಡ (ರೂಢಿ). [ಲಂಚಗಾರ (< ಲಂಚಗಾಜಿ) + — ಇಕೆ]

**ಲಂಚಗಾಜಿ**, ಲಂಚಗಾರ (ನಾ). ಲಂಚವನ್ನು ತೆಗೆದುಕೊಳ್ಳುವವನು ; ಲಂಚಕೋರ : ಲಂಚಗಾಜನಂತೆ ನುಡಿಗೆಡಿಸದೆ [ಏಕಚಿತ್ತದಿಂ] ಕೇಳ್ದಿರಪ್ಪೊಡೆ ಪೇಟ್ದಪೆಂ (ಧರ್ಮಾಮೃ. ೦-೦೬೩). **ಲಂಚಗಾರ** : ' ಲಂಚಗಾರಿಕೆ ' ಪರಾ.
[ಲಂಚ + — ಕಾಜಿ]

**ಲಂಚಗಿ** (ನಾ). ಲಂಚದಿಂದ ಜೀವಿಸುವವಳು : ಬೂತುಗಿ, ಬೂತುಗಿತಿ; ಲಂಚಗಿ, ಲಂಚಗಿತಿ (ಶಬ್ದಾನು. ೦೯೩ ಪ್ರಯೋ). [ಲಂಚಗ + –ಇ$_2$]

**ಲಂಚಗಿತಿ** (ನಾ). = ಲಂಚಗಿ : ಲಂಚಗಿ, ಲಂಚಗಿತಿ (ಶಬ್ದಾನು. ೦೯೩ ಪ್ರಯೋ). [ಲಂಚಗ + – ಇತಿ$_1$ (< – ಇತ್ತಿ)]

**ಲಂಚಗುಂಡಿ** (ನಾ). = ಲಂಚಂಗುಳಿ : ಬೆವಕೂಫ್ ಲಂಚಗುಂಡಿ ಚಾಕರರು ಬಹಳ ಜನಯಿಧಾರೆ (ಹ್ಯದರ. ೩೦). [< ಲಂಚಂಗುಳಿ]

**ಲಂಚಗುಳಿ** ' ಲಂಚಂಗುಳಿ ' ನೋ.

**ಲಂಚಗುಳಿತನ** (ನಾ). ಅಕ್ರಮವಾಗಿ ಹಣ, ವಸ್ತು ಮುಂತಾದುವನ್ನು ತೆಗೆದುಕೊಳ್ಳುವ ಸ್ವಭಾವ : ಪೋಲೀಸರು ಲಂಚಗುಳಿತನದಿಂದ ಮಾಡುವ ಅನ್ಯಾಯ (ಕಾಲೂರ. ೧೦ ಮುಮ್ಮುಖ); ಸರಕಾರಿನೌಕರರಲ್ಲಿ ಲಂಚಗುಳಿತನ ಮಿತಿ ಮೀರಿ ನೆಲೆಯೂರಿದುದರಿಂದ ನಮ್ಮ ದಾರಿ ಸುಗಮವಾಯಿತು (ಕುರುಕಾ. ೧೩೦). [ಲಂಚಗುಳಿ (< ಲಂಚಂಗುಳಿ) + – ತನ]

**ಲಂಚನಿರೋಧ** (ನಾ). ಅಕ್ರಮವಾಗಿ ಹಣ ಮೊದಲಾದುವನ್ನು ಸ್ವೀಕರಿಸುವುದನ್ನು ತಡೆಗಟ್ಟುವಿಕೆ : " ಭ್ರಷ್ಟಾಚಾರನಿರೋಧ, ಲಂಚನಿರೋಧ " (Anticorruption. ಶಶ್ರಿ೩೪ ೩). [ಲಂಚ + ನಿರೋಧ]

**ಲಂಚನಿರ್ಮೂಲನ** (ನಾ). ಅಕ್ರಮವಾಗಿ ಹಣವನ್ನು ಕೊಡುವ, ತೆಗೆದುಕೊಳ್ಳುವ ವ್ಯವಹಾರವನ್ನು ಕಿತ್ತುಹಾಕುವುದು ; ಭ್ರಷ್ಟಾಚಾರನಿವಾರಣೆ : ಪ್ರತಿಯೊಬ್ಬನೂ ಲಂಚಕ್ಕಾಗಿ ಬಾಯಿ ತೆರೆದು ಕೊಂಡಿರುವಾಗ ನನ್ನೊಬ್ಬನಿಂದ ಲಂಚನಿರ್ಮೂಲನ ಹೇಗೆ ತಾನೆ ಸಾಧ್ಯ ? (ತ್ರಿಪರು. ೩೬೭). [ ಲಂಚ + ನಿರ್ಮೂಲನ ]

ಲಂಚಬಡಕ (ನಾ). = ಲಂಚಕೋರ : ಸುತ್ತಮುತ್ತಲಿನ ಸೀಮೆಯಲ್ಲೆಲ್ಲ ಆತ ಲಂಚಬಡಕ ಗೌಡನೆಂದು ಹೆಸರು ಪಡೆದಿದ್ದ (ಮುಮ್ಮ.ಹ. ೩೦). [ಲಂಚ + – ಬಡಕ$_2$ ( < – ಬಡಿಕ$_2$ )]

ಲಂಚಬಡಕತನ (ನಾ). = ಲಂಚಗುಳಿತನ : ಲಂಚಬಡಕತನವು ದೇಶದಿಂದ ನಿರ್ನಾಮವಾಗಬೇಕೆಂದು ನ್ಯಾಯದೇವತೆಯು ಅಪೇಕ್ಷಿಸುತ್ತಲಿದ್ದಾಳೆ (ನ್ಯಾಯಲಂ. ೦೬). [ ಲಂಚಬಡಕ + – ತನ ]

**ಲಂಚವಣಿಗ** (ನಾ). = ಲಂಚಕೋರ : ವಣಿಗ ಪ್ರತ್ಯಯಕ್ಕೆ . . . ಲಂಚವಣಿಗಂ, ಸಾಲವಣಿಗಂ (ಶಮದ. ೨೦೭ ಪ್ರಯೋ) ; ಲಂಚದಿಂ ಜೀವಿಸುವಂ ಲಂಚಗಂ, ಲಂಚವಣಿಗಂ (ಶಬ್ದಾನು. ೪೦೩ ಪ್ರಯೋ) ; ಒಲ್ಲೆ ನೊಲ್ಲೆನೀ ಲಂಚವಣಿಗರಂ (ರಾಮಾಶ್ವ. ೩೮–೨೦). [ ಲಂಚ + – ವಣಿಗ$_2$]

**ಲಂಚವೊಗು** (ಕ್ರಿ). ಲಂಚಕ್ಕೆ ಒಳಗಾಗು ; ಲಂಚವನ್ನು ಸ್ವೀಕರಿಸು : ಬಲ್ಲಿದಂ ಕೈಕೊಂಡ ಸತಿಯಂತೆ ಲಂಚವೊಕ್ಕಿರ್ದ ಪ್ರಧಾನನಂತೆ . . . ಚಿತ್ತದೊಳಾನಂದಂ ಬೆರಸಿರ್ಪುದು (ಧರ್ಮಾಮೃ. ೯–೩). [ ಲಂಚ + ಪೊಗು ]

**ಲಂಜಿಕೆ** (ನಾ). ಸೂಳೆ ; ಬೆಲೆವೆಣ್ಣು ; ವೇಶ್ಯೆ : ಅದೇಂ ಲಂಜಿಕೆಯರ ಗುಂಜನ್ಮಣಿಮಂಜೀರಕಮಂಜುಸಿಂಜಿತಂ ರಂಜಿಸಿತೊ (ಅಜಿತ. ೩–೪೨); ರಂಜಿಸಿದುದು ಕಡುಸೊಬಗಿಂ ಲಂಜಿಕೆಯರ ಬೀದಿ ಬೀಱುತಂ ಪರಿಮಳಮಂ (ಅದ್ಯಪು. ೦–೭೬).

**ಲಂಜಿಕಾಮದನಾಸ್ತ್ರ** = ಬೆಲೆವೆಣ್ಣುಗಳಿಗೆ ಕಾಮನ ಬಾಣದಂತಿರುವವನು ; ಸುಂದರಾಂಗ ; ಒಂದು ಬಿರುದು : ರಿಪುಪುಣ್ಯಾಕಣ್ಯಾವನಕೇಳೀಕುಞ್ಜರಂ ಲಞ್ಜಿಕಾಮದನಾಸ್ತ್ರಂ ಚಲದಂಕರಾಮ ನೃಪಲಕ್ಷ್ಮೀಲಕ್ಷ್ಮನಂ ಲಕ್ಷ್ಮಣಂ (ಎಕ. VII, ಶಿಕಾರಿ. ೦೩೬–೨೪ ; 1068). [ ಸಂ. ಲಂಜಿಕಾ ]

**ಲಂಜಿಗೇಸರ** (ನಾ). ಲಕ್ಷ್ಮೀಪತಿ ; ವಿಷ್ಣು (?) : ಲಂಜಿಗೇಸರಂ ದೇವರ್ಕೆ ಪೂನಿಱುವ ಮಾಲ(ಲಾ)ಕಾರರ್ಗ್ಗೆ (ಇಆ. X, ೬೦–೨ ; 578). [ಲಂಜಿಗ$_0$ (p ← ಸಂ. ಲಂಜಾ = ಲಕ್ಷ್ಮೀ) + ಈಸರ]

**ಲಂಜೆ** (ನಾ). = ಲಂಜಿಕೆ : ಕಾಂಚಿಯು ಪಟ್ಟಣದಲಿ ಕಣಿಯು ಕೇಳಿರೊ ಅಲ್ಲಿ ಲಂಚೆ [ಜೆ] ಯರು ಕೆಡಿಸ್ಯಾರು ಕಣಿಯು ಕೇಳಿರೊ (ಎಬೀಕ. ೦೯೨–೪೦). [ ಸಂ. ಲಂಜಾ ]

**ಲಂಟವಾಣಿ** 'ಲಂಟಾನಾ' ನೋ.

**ಲಂಟಾನ** 'ಲಂಟಾನಾ' ನೋ.

**ಲಂಟಾನಾ**, ಲಂಟವಾಣಿ, ಲಂಟಾನ, ಲಂತಾನ, ಲಾಂಟನಾ (ನಾ). ನೀರಿನ ಸೌಕರ್ಯವಿಲ್ಲದಿದ್ದರೂ ಪೊದೆಪೊದೆಯಾಗಿ ಬೆಳೆಯುವ, ಸಣ್ಣ ಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ : ಲಂಟಾನಾ ಹೂಗೊಂಚಲು ನುಡಿಯಿತು (ಸುಶೀಕ. ೨೭–೦೩). **ಲಂಟವಾಣಿ** : ಲಂಟವಾಣಿಗಿಡ, ಹೇಸಿಗೆಹೂ ಕಾಡುಜೋಳ (ವ್ಯಶಿಗಿ. ೪೯೦–೯೭೮). **ಲಂಟಾನ** : ಪಾಳುದೇಗುಲದಲ್ಲಿ ಲಂಟಾನಪೊದೆಯಲ್ಲಿ ಸಾಗುತಿರಲು (ಕೋಗಿಲೆ. ೪೩–೦೨) ; ನಮ್ಮ ನಿತ್ಯಜೀವನದಲ್ಲಿ ಅದರ ಪ್ರಭಾವ ಲಂಟಾನ ಬೆಳೆ ಹಾಗೆ ಹಬ್ಬಿದೆ (ವಾಡಿಗೇ. ೩೩). **ಲಂತಾನ** : ಲಂತಾನದಂತಹ ಸಣ್ಣಸಣ್ಣ ಪೊದೆ ಪೊದರುಗಳೂ ಮುಳ್ಳುಗಿಡಗಳೂ ಬೆಳೆದಿವೆ (ಬಾಳಗಿ. ೪೬); ಸುತ್ತಲೂ ಲಂತಾನ ಪೊದೆ ಬೆಳೆದಿತ್ತು (ಹುಲಿಹಾ. ೦೮). **ಲಾಂಟನಾ**: ಮಲೆನಾಡಿನಲ್ಲಿ ಲಾಂಟನಾ ಇದ್ದಹಾಗೆ (ಕಂಗೂಂ. ೯೮). [← ಇಂ. Lantana]

**ಲಂಡ$_1$**, ಲಂಡಿ$_1$, ಲಂಡು, ಲೆಂಡ, ಲೆಂಡು (ಗು). ೧. ದುಷ್ಟತನದಿಂದ ಕೂಡಿದ ; ಕೆಟ್ಟತನದ : ' ಲಂಡವೇಷ್ ' ಪರಾ. ೨. ಮೋಟಾದ ; ಮೊಂಡಾದ ; ಗಿಡ್ಡವಾದ : ಲಂಡತೋಳಿನ ಬುಷ್‌ಕೋಟು ಅವನ ಮೊದಲಿನ ನೆಹರುಶರ್ಟನ್ನು ಓಡಿಸಿತ್ತು (ಬಾರಿಶಿ. ೦೦೯). (ನಾ). ೩. ನೀತಿ ನಿಯಮವಿಲ್ಲದವನು ; ದುಷ್ಟ ; ನೀಚ : " ಲಂಡ – ಲಡ್ಡ(ಟ್ಟ) = ಧೂರ್ತ, ಅಸಭ್ಯ" (ಕದ್ಯಕೋ. ೩೮) ; ಜಾರ ಚೋರ ಸಂದಣಿಗ ಲಂಡ ಭಂಡ ಚಾರ್ವಾಕ . . . ಇಂತಿವರಲ್ಲಿ . . . ನುಡಿದಡೆ ಆ ಭಕ್ತಂಗೆ ಭಕ್ತಿಯಿಲ್ಲ (ಪೋಳವಾ. ೨೭–೦೦೦) ; ಕಂಡ ನಾರಿಗಿಚ್ಛೈಸುವ ಲಂಡಗೆ ಪುರಾಣವೇಕೆ (ಪುರಂದ. ೦–೩೦–೩) ; ಪಂಡಿತನು ಭಂಡರೊಡನಾಡಿ ಅವಶುದ್ಧ ಲಂಡ ತಾನಕ್ಕು (ಸರ್ವಜ್ಞ. ೬೨೪). ೪. ಧರ್ಮಶ್ರದ್ಧೆಯಿಲ್ಲದವನು; ಪಾಷಂಡಿ : ಧರ್ಮದ ಸೋಗಿನಿಂದ ಸ್ವಾರ್ಥಸಾಧನಕ್ಕಾಗಿ ಮನಬಂದಂತೆ ನಡೆಯುವ ಲಂಡರ ಆಚರಣೆಯೆತ್ತ ? (ವಾರಿಧ. ೯) ; ಪಿಂಡ ಹಾಕಿದರೂ ಲಂಡ ಎನಿಸಿಕೊಳ್ಳೋದು ತಪ್ಪಲಿಲ್ಲ (ಗಾದೆ). ' ಧರ್ಮಲಂಡ ' ಪರಾ. ೫. ಒರಟ ; ಉದ್ಧತ : ಲಂಡರಹ ದಾನವರ ಕೊಲುವವಖಂಡ ವಿಕ್ರಮವೀರ ನರಹರಿ (ಕೋಗಯು. ೨೬–೪೨). ೬. ತುಂಡಾದುದು ; ಮೋಟಾದುದು ; ಮೊಟಕಾದುದು : ಕೂದಲನ್ನು ಲಂಡವಾಗಿ ಕತ್ತರಿಸಿದ್ದರಿಂದ . . . ಅವು ಹೆಗಲ ಮೇಲೆ ಲೋಲಾಡುತ್ತಿದ್ದವು (ಹೇಮಂತ. ೧೯೪). **ಲಂಡಿ$_1$** : ೩. ಕದನಮುಖವ ಕೈಕೊಂಡುಳಿವರಿಲ್ಲ ನಿನಗಾತನೊಳು ವೈರವೇ ಲಂಡಿ ಹೋಗೆಂದು ನೆರೆ ಜರೆಯೆ ಕೋಪಾಟೋಪದಿಂ ಖಡ್ಗಮಂ ಜಡಿದನು (ಲಕ್ಷ್ಮಭಾ. ೩–೩೦–೭೬) ; ತರಳರೆಂದುದ ಕೇಳಿ ಶ್ರೀಹರಿ ಮರಳಿ ಪೇಳಿದ ಲಂಡಿಗಳು ನೀವ್ ಬರಿದೆ ಪೊಗಳುವಿರಾಕೆಯನು (ಕಂದ್ರಾವ. ೯). **ಲಂಡು** : ೧. ಅನಾರ್ಪಿತವ ಮಾಡಿ ಕೆಡಿಸುವಂಥಾ ಲಂಡು ಪುಂಡರುಯಿದ್ದರೆ ವೀರಮಾಹೇಶ್ವರರು ಪೊಡೆಯರು ಭಕ್ತರು ವಿಚಾರಿಸಿಕೊಂಡು ಅಂಥಾ ಲಂಡು ಪುಂಡರ ತೆಗೆದು ಸತ್ಪುರುಷರ ಯಿರಿಸುವುದು (ಎಕ. XVI, ಚಳ್ಳಕೆ. ೦–೨೩ ; 1623). ೭. ನೀಚತನ ; ದುಷ್ಟತನ : ತೊಂಡುತೊಳಸಿಕ್ಕಸಿಕ್ಕ ವಂಚನೆ ಕುಹಕ ಜೂದು ಕುತ್ಸಿತ ಲಂಡು ಬಂಡು ದುರ್ಜನಮೆಂಬಿವೆಲ್ಲ ದುಷ್ಟಸ್ವಭಾವಂ ನೀವಿದಕ್ಕೇನ ಮಾಳ್ಪಿರಿ (ಸಪ್ತಶಾ. ೬–೩೩). **ಲೆಂಡ** : ೧. ದಂಡಾಧೀಶ್ವರ ಬಂದ ಲೆಂಡಗಣವನಳಿದ (ಕೋಡಕ. ೩–೯). ೪. ದಿಂಗುವಿಡಿದು ಭಂಡರಾದ ಲೆಂಡರಿಗೇಕೋ ಲಿಂಗದ ಸುದ್ದಿ (ಪೋಳವಾ. ೦೮೪–೭೯೩); ಕೆಂಡುದ ಹೇಳಹನೆ ಸಮಯಕ್ಕೆ

ದೂರ ಎನ್ನ ಇರವನಱಿಯರು ಲೆಂಡನೆಂಬರು ಸುಮ್ಮನಿದ್ದೇನೆ ಇವರೆನ್ನ ಅರ್ಯೆದು ಕಂಡುದ ನುಡಿವರು (ಬಸಸಂ. ೯-೨೬). **೫.** ಲೆಂ[ಪಾಠಾಂ. ಲಂ]ಡ **ಪುಂಡರ ಕೂಡಿಕೊಂಡು** ರಾಜ್ಯವ ನೀವಂಡಲೆವುದನೆಮ್ಮ ರಾಯ ಕಂಡು ಸೈರಿಸುವನೆ (**ಕುಮಾರಾಂ. ೦೦-೦೭**) ; ದಂಡವಗೊಳದಿರು ಧರ್ಮವ **ಬಿಡದಿರು ಲೆಂಡ ಪುಂಡರ** ಸೇರಿಸದಿರು (ಬಸ್ತ್ರಾ. ೦೨-೯೦). **ಲೆಂಡು** : ೭. ಪೃಥುಲನಿಂದೆಯಗಳಿಂದೊಪ್ಪುವ ಲೆಂಡು ದುರ್ಮಾರ್ಗದುರ್ಗವ ಬಸವ ರಾಜೇಂದ್ರು **ಕೊಂಡು** (ಸಿಂಗಿರಾ. ೨೫-೨೦).

**ಲಂಡಾಗು** = ಗಿಡ್ಡವಾಗು : ನಾವೇ ಅವರಣ್ಣನಿಗೆ ಕೊಟ್ಟ ಧೋತರ ಅವರಿಗೆ ಲಂಡಾಗುತ್ತದೆ (ವೃಪಿ. ೪೭). **ಲಂಡೋಬಂಡೋ ಆಟ** = ಲಂಡತನದೀದ ಆಡುವ ಆಟ ; ಭಂಡಾಟ : ಲಂಡೋಬಂಡೋ ಆಟ ಆಡಿ ಮೂರಾಬಟ್ಟೆ ಮನಿ ಆತಂತ (ಜೀವಂ. ೨೯-೦೩). [<ಸಂ. ಲಡ್ಡ]

**ಲಂಡ$_2$** (ನಾ). ಆನೆ, ಕುದುರೆ ಮುಂತಾದುವುಗಳ ಮಲ ; ಲದ್ದಿ ; ಸಗಣಿ : "ಲದ್ದಿಯೆನೆ. ಲಂಡಮುಕ್ಕುಂ" (ಮಂಗರಾ. ೪೭-೬) ; ಲಂಡ ದೊದವಿಂದಂ ತನ್ನದೀಕೂಲಮಂ ಕದಡುತ್ತಿರ್ದುದು . . . ಕರೀಂದ್ರೋತ್ಕರಂ (ಪುಷ್ಪ. ೦೦-೬೬) ; ಇಕ್ಕಿದ ಲಂಡದ ಬೆಂಕೆಯಿಂ ಕವಿವ ಕಿಟ್ಟದದೊಳ್ಸೊನ ಲೊಳ್ . . . ಸಂಯ್ಯಾಲಿದ ಪೆರ್ನೊರೆಯಿಂ . . . ಅಱಿದಂ ಕಾಡಾನೆ ಗಳಾಗಡೆ ಪೋದುದಂ (ಅವ್ಯ. ೬೨೬) ; ಪೊಡೆಯೊತ್ತೆ ಬಾಲಂ ನಿಮಿರೆ ಲಂಡಮನುಚ್ಚರ್ವಾಕಳಿಂ (ರಾಜಶೇ. ೪೩-೨೨). [ಸಂ.]

**ಲಂಡಂಗಿ** (ನಾ). ಅರ್ಧತೋಳಿನ ಅಂಗಿ ; ಗಿಡ್ಡತೋಳಿನ ಷರಟು : ಬರಿಯೊಂದು ಲಂಡಂಗಿಯ ಮೇಲೆ ಬೆಳದಿಂಗಳಲ್ಲಿ ಹೋಗಿಬಿಟ್ಟ (ಕವಕ. ೩೨). [ಲಂಡ$_1$ + ಅಂಗಿ$_2$]

**ಲಂಡಗಚ್ಚೆ** (ನಾ). ಮೇಲಕ್ಕೆ ಎತ್ತಿ ಕಟ್ಟಿದ ಕಚ್ಚೆ : ರಾಯರು ಲಂಡಗಚ್ಚೆ ಹಾಕಿಕೊಂಡು ತೋಟದ ಕೆಲಸವನ್ನು ಪ್ರಾರಂಭಿಸಿದರು. (ರೂಪ). [ಲಂಡ$_1$ + ಕಚ್ಚೆ$_1$]

**ಲಂಡಚಣ್ಣ** (ನಾ). ಗಿಡ್ಡವಾದ ಚಲ್ಲಣ ; ಚಡ್ಡಿ ; ನಿಕ್ಕರು : ಅವನು ಲಂಡಚಣ್ಣ ಹಾಕಿರಬೇಕು (ವೃಪಿ. ೬) ; ಕಚೇರಿಗೆ ಖಾಕೀ ಲಂಡಚಣ್ಣದ ಮೇಲೆ ಕಳಿಸಿದ ಆಕೆ ಈಗ ಬದಲಾಗುತ್ತಾಳೆಯೋ ? (ಗಂಪಾರು. ೦೨೩). [ಲಂಡ$_1$ + ಚಣ್ಣ (<ಚಲ್ಲಣ)]

**ಲಂಡತನ**, ಲೆಂಡತನ (ನಾ). ಔದ್ಧತ್ಯ; ಉದ್ಧಟತನ: ಲಂಡತನದಲಿ ನಡೆವ ಭಂಡ ಹೊಲೆಯ (ಪುರಂದ. ೧-೦೭೬-೨); ಲಂಡತನದಿ ಕಾಳಗಕೊಡ್ಡಿದೊಡ್ಡನು ದ್ದಂಡಿಸಿ ಪುರಕೆ ಪೋಪವನ ಕಂಡು ಭಟರು ಪೋಗಬೇಡ ಬೇಡೆನೆ (ಸಂಕ್ರಗಾಂ. ೬-೭೪) ; ಕಂಡು ಸತಿಯುಳ ಭ್ರಾಂತುಗೊಂಡು ಕಳವಳಿಸುತ್ತ ಚಂಡಭುಜಬಲನೆಂಧ ಲಂಡತನದಿಂದ (ಉಪಶ. ೯). ಲೆಂಡತನ: ಅಷ್ಟ ಮದಂಗಳ ವರ್ತನೆಯ ಲೆಂಡತನವ ನಷ್ಟವ ಮಾಡಿ (ಮೋಕ್ಷ. ೦೯೫-೭೨೬ ೪ರ್ಥ). [ಲಂಡ$_1$ + – ತನ]

**ಲಂಡಪಂಚೆ**, ಲಂಡಪಂಜೆ (ನಾ). ಮೋಟಾದ (ನೀರು)ಪಂಚೆ; ಗಿಡ್ಡವಾದ ಧೋತ್ರ : ಲಂಡಪಂಚೆ ಹಚ್ಚಿಕೊಂಡು . . . ಕ್ಷೌರ ಮಾಡಿಸಿಕೊಂಡು ಆಮೇಲೆ ಗೋಮಹಚ್ಚಿ ಇತ್ಯಾದಿ ಎಲ್ಲ ವಿಧಾನಗಳು ಆಗತಕ್ಕವು (ಮುಂಗಾರು. ೮೫). **ಲಂಡಪಂಜೆ** : ಅನಂತರ ನಮ್ಮ ಮಡಿಯ ಲಂಡಪಂಜೆ ಯನ್ನು ಇಳಿಸಿ . . . ಹಳೆಯ ತ್ಯಾಪೀ ಹಚ್ಚಿದ ಅಂಗಿ_ಚಣ್ಣದ ಚಿಲಖತ್ತು ಏರಿಸುತ್ತಿದ್ದೆವು (ಬೀಚಕ. II, 1). [ಲಂಡ$_1$ + ಪಂಚೆ]

**ಲಂಡಪಂಜೆ** 'ಲಂಡಪಂಚೆ' ನೋ.

**ಲಂಡಪಾತಿ** (ನಾ). [ಅಶ್ವಶಾ] ಲದ್ದಿ ಹಾಕುವುದಕ್ಕೆ ಸಂಬಂಧಿಸಿದ ರೋಗ : ಮಾರ್ಜಾಲದ ಕಣ್ಣಂ ಪೋಲ್ವ ಕಣ್ಗಳುನ್ಮೀ(ಣ್ಮಿ)ಲಿತನೇತ್ರದ ಲಂಡಪಾ[ಪಾಠಾಂ. ನಾ]ತಿಯುಪ್ಪಾ ಕುದಿರೆಯುದು ಗತಾಯುವಕ್ಕುಮೋಟಿಬ್ಬ ದೊಳಂ (ಅಶ್ವಶಾ. ೬-೬). [ಸಂ. ಲಂಡಪಾತಿನ್]

**ಲಂಡಪೆಣ್** 'ಲಂಡವೆಣ್' ನೋ.

**ಲಂಡವೆಣ್**, ಲಂಡಪೆಣ್, ಲಂಡಹೆಣ್ಣು (ನಾ). ದುಷ್ಟಹೆಂಗಸು; ನೀಚ ಸ್ತ್ರೀ: ತೊಂಡುವೆಣ್ಗಳ ನೇಹದೊಡಕಿಗೆ ಸಿಲುಕದೆ ಲಂಡವೆಣ್ಗಳ **ರಾಲಿಸದೆ** . . . ನಲ್ವೆಂಡಿರೊಡನೆ ಬೆರಸುವುದು (ಹರಿ. –೪೬). ಲಂಡಪೆಣ್ : ಇಂತೆಂದು ಲಂಡಪೆಣ್ಗಳು ನುಡಿಯಲು , (ಕಂಕ. ೯೫-೯). ಲಂಡಹೆಣ್ಣು: ಸುಜ್ಞೆಯಿಂದಾಳಬೇಕಣ್ಣ ಗಂಡನಾಜ್ಞೆಯ ಮೀಱಿ ನಡೆವ ಲಂಡಹೆಣ್ಣ (ಪುರಂದ. ೨-೦೪ ಅನುಕ್ರಮ). [ಲಂಡ$_1$ + ಪೆಣ್]

**ಲಂಡಹೆಣ್ಣು** 'ಲಂಡವೆಣ್' ನೋ.

**ಲಂಡಿ$_1$** 'ಲಂಡ$_1$' ನೋ.

**ಲಂಡಿ$_2$** (ನಾ). ದುಷ್ಟೆ ; ನೀಚಸ್ತ್ರೀ : ಲಂಡಿಯರು ನಿರ್ಲಜ್ಜರಾ ಜಗಭಂಡೆಯರು . . . ಪಾತಕದ ರೂಪಿನ ಕೋಪಿಗಳು (ದೇವಪ್ರ. ೬-೦೫). [ಲಂಡ$_1$ + –ಇ$_2$]

**ಲಂಡು** 'ಲಂಡ$_1$' ನೋ.

**ಲಂಡೆ**. ಲೆಂಡೆ (ನಾ). =**ಲಂಡಿ$_2$** : ಉಂಡಳೊಬ್ಬಳೆ ಮಗನ ಪಡೆದಳು ಲಂಡೆ ನಾವೇನಾಳಿದರೆಲ್ಲರು ಪೆಂಡಿರಲ್ಲಾ (ಶಿವಾಗ. ೬-೦೩-೨೬); ದುರಿತಗಣಕಂಜದಿಹ ಲಂಡೆಯರ್ದಿಂಡೆಯರ್ನರರ ಹೃದಯವ ಕೊಯ್ವ **ಕತ್ತಿಗಳ್** ತಿತ್ತಿಗಳ್ (ಶತಂ. ೨-೫೭) ; ಆ ಲಂಡೆಯರು ತಮ್ಮ ದುರ್ನಡತೆಯನ್ನು ಬಿಟ್ಟಿಲ್ಲ (ಕೃಪಾ. II, ೫೦೦). **ಲೆಂಡೆ** : ಗಂಡು ತನ್ನದು ಎಂದು ಲೆಂ[ಪಾಠಾಂ. ಲಂ]ಡೆ ಸುತನೆಂಬುವಳು ಖಂಡಪರಶುವಿನ ವರಪುತ್ರ ಆನು ನೆಱೆ ಕಂಡುದನೆ ನುಡಿದೆ (ಸರ್ವಜ್ಞ. ೦೩). [ಲಂಡ$_1$ + – ಎ$_2$]

**ಲಂತಾನ** 'ಲಾಟಾನಾ' ನೋ.

**ಲಂದಣ** 'ರಂದಣ' ನೋ.

**ಲಂದಣಗಿತ್ತಿ** 'ರಂದಣಗಿತ್ತಿ' ನೋ.

**ಲಂದಣಿಗ** 'ರಂದಣಿಗ' ನೋ.

**ಲಂಪಂಬೆಱು** (ಕ್ರಿ). ಮೇಲ್ಮೆಯನ್ನು ಪಡೆ. ಹಿರಿಮೆಯನ್ನು ಹೊಂದು : ಸಂಪದ್ಧರ್ಮಾರ್ಥಕಾಮಾಂಬುರುಹ ವನಜಮಿತ್ರಂ ಧರಿತ್ರೀಸುವಕ್ತ್ರಂ ಲಂಪಂಬೆತ್ತಿರ್ದೆ ಕಣ್ಗೊಪ್ಪಿದುದು . . . ಪಂಪಾಕ್ಷೇತ್ರಂ (ಅರ್ಧ ಟ. ೩-೩೪). [< ಲಂಪು + ಪೆಱು$_1$]

**ಲಂಪಟ** (ನಾ). ೧. ಯಾವುದಾದರೊಂದು ಚಟವುಳ್ಳವನು,–**ಗೀಳುಹಿಡಿ** ದವನು : "ಲೋಲುಪಂ ಲಾಲಸಂ ಲೋಲುಭಂ ಲಂಪಟಂ **ಲೋಲ** ನೆನಲಳಿಪುವವನಕ್ಕು" (ಮಂಗರಾ. ೬೯-೦೦) ; ಕರ್ಣನುಮಂದೀರ್ಣವೀರ ರಸಾಸ್ವಾದನಲಂಪಟನಾಗಿ . . . ಬಂದು ತಾಗಿದಾಗಳ್ (ಪಂಪಭಾ. ೦೨-೦೦೬ ವ); ಅಧರಪೀಯೂಷಲಂಪಟಜಿಹ್ವನೇತ್ರತ್ರಯನೆ(ಶ್ರೀಶರಾ. ೨-೪೨). ೨. ಕಾಮಾಸಕ್ತ ; ಕಾಮುಕ : ಅಟಮಟಗಂ ಗಾಳುವಿಮಂ ಕುಟಿಲಂ ಲಂಪಟನೆನಿಪ್ಪಮಂ ಮಾನಸನೇ (ಅವ್ಯ. ೩೬); ಕಾಮಾಂಧವಶನಾಗಿ ಲಂಪಟ ನೊರ್ವ ಮತಿಗೆಟ್ಟ ಮುಪ್ಪುದೊರೆ ಹೆಂಗುಸೊರ್ವಳ ಪೆದಕೆ ದಾಸನಾ ಗುರುಳಿದರೆ, ಪೂಜ್ಯನೀ ರಾಮಚಂದ್ರಂ ರಾಜ್ಯಮಂ ತ್ಯಜಿಸಿ ವಿಪಿನಾಂತರದ ವಾಸಮಂ ಕೈಕೊಳ್ವುದೇಕೆ? (ಶ್ರೀರಾಮಾ. ೯೦-೬೩). **೩. ಗೀಳು ; ಚಟ ;** ಅತ್ಯಾಸಕ್ತಿ : ಪಂಚೇಂದ್ರಿಯಲಂಪಟದಿಂದಂ ಸುರನರರನೊಯ್ವುದೊಂದಾ ಶ್ಚರಿಯೇ (ಅದಿಶ. ೩೨-೨) ; ಹೀನಮಾನವರು ತಾವು ಬ್ರಹ್ಮವೆಂದು ಜಿಹ್ವೆ ಗುಹ್ಯೆ ಲಂಪಟದಲ್ಲಿ ಹೊಂದಿದುದ ನೋಡಿ ನಗುತಿದ್ದನು ನಮ್ಮ ಗುಹೇಶ್ವರಲಿಂಗನು (ಪ್ರಭುಶಾಂ. ೨೬). [ಸಂ.]

**ಲಂಪಟತನ** (ನಾ). ಅತಿಯಾದ ಆಸಕ್ತಿ, – ವ್ಯಾಮೋಹ ; **ಲೋಲುಪ್ತಿ** : ಜಂಗಮವೇ ಲಿಂಗವೆಂಬುದಕ್ಕೆ ಏನು ಗುಣ ಮನದ ಲಂಪಟತನ ಹಿಂಗದಾಗಿ ಒಡೆಯರ ಬರವಿಂಗೆ ಕುನ್ನಿ ಬಾಲ ಬಡಿವರೆ ಮೆಚ್ಚುವೇನು ಹತ್ತುವದು (ಬಸವ. ೨೦೭). [ಲಂಪಟ + – ತನ]

**ಲಂಪಟತೆ** (ನಾ). ವಿಷಯಲೋಲುಪತೆ ; ಕಾಮುಕತೆ : ದಿಟದಿಂದೊಲ್ದವರಂ ಲಂಪಟತೆಯಿನಮರ್ದಪ್ಪಿ ನೆರೆವ ನೆರೆವನಿತು ಸುಖಂ ಘಟಿಯಿಸದು ತಮ್ಮೊಳ್ (ಚಂದ್ರಪ್ರ. ೪-೭೩). [ಸಂ. ಲಂಪಟತಾ]

**ಲಂಪಟತ್ವ** (ನಾ). ಅತ್ಯಾಸಕ್ತಿ ; ಅತಿಯಾಸೆ : ಇವರಚ್ಯುತಾಂಘ್ರಿದರ್ಶನಲಂಪಟತ್ವದಿಂದ . . . ಬಂದರ್ (ಕೈಬಂಥಾ. ೪-೬೦). [ಸಂ.]

**ಲಂಪಟೆ** (ನಾ). ಕಾಮಾಸಕ್ತಳಾದವಳು ; ವಿಷಯಲೋಲುಪಳಾದ ಸ್ತ್ರೀ : ವಿಟಗೋಷ್ಠಿಯೊಳ್ಭೋಗವುಂ ಬಯಸಿ ಕಾಮಲಂಪಟೆಯಾಗಿ ಮೇಣರ್ಥಮುಂ ಗಳಿಸಿ (ಕೈಬಂಥಾ. ೫-೫೬). [ಸಂ. ಲಂಪಟಾ]

**ಲಂಪಣ** 'ಲಂಪಳ' ನೋ.

**ಲಂಪಳ**, ಲಂಪಣ, ಲಂಬಳ$_1$ (ನಾ). ೧. ವಿಷಯಾಸಕ್ತ ; ಸುಖಲೋಲುಪ; ಕಾಮುಕ : ಒಂದೊಂದೆ ರಸದ ಸೋಲಮದೊಂದೊಂದನೆ ಕೊಲ್ಗುಮೋವೋ ಲಂಪಳ [ಪಾಠಾಂ. ಟ]ರಪ್ಪೆಮ್ಮಂದಿಗರಂ ಬಗೆವಂದದೆ ಕೊಂದಿಕ್ಕವೆ ಸಕಳವಿಷಯವಿಷಮವಿಷಂಗಳ್ (ಆದಿಪು. ೪-೭೩). **ಲಂಪಣ**: ೧. ಲಂಪಣನವೊಲೇನಾನುಮಲಂಪಿನ ಸಗೆನುಡಿಯ ನೆವದಿ ನೆಯ್ದಿಲ ಪೂವಿಂದಂ ಪೊಯ್ಯೆ ಮೂರ್ಛೆವೋದಳ್ (ಚುಕೋತ. ೨-೬೭). **ಲಂಬಳ$_1$**. ೧. "ಲಂಬಳ (ಲಂಬಾಳ) — ಲಂಪಟ = ಲೋಲುಪ" (ಶಬ್ದಕೋ. ೩೯). ೨. ವಿಷಯಾಸಕ್ತಿ ; ವಿಷಯಲೋಲುಪತೆ ; ಕಾಮುಕತೆ : ಲಂಪಟಶಬ್ದಕ್ಕಾದ ಲಂಬಳಮೆಂಬುದುಂ ಅಟಕ್ಕ ಸಂದೇಹಂ (ಶಮದ. ೨೨ ಪ್ರಯೋ) ; ಪಳದಂ ಚೆಲ್ವಿಕೆಗೆತ್ತಿ ಪೊಚ್ಚಪೊಸತೊಂದಂ ಮಾಡಿ ಸಾಲ್ಪುರ್ವಿ ಲಂಪಳದಿಂ ತನ್ಮಯಮಪ್ಪವೋಲ್ ಕೊಳಿಸು (ಸಂಶಕ. ೫೦-೧೦೦).

[<ಸಂ. ಲಂಪಟ]

ಲಂಪಳಿಕೆ (ನಾ). ವಿಷಯಾಸಕ್ತಿ ; ಮೋಹ ; ಲಂಪಟತನ : "ಲಂಪಳಿಗೆ(ಕೆ) — ಲಾಂಪಟ್ಯ = ಅತ್ಯಾಸಕ್ತಿ" (ಶಬ್ದಕೋ. ೫೦) ; ಬಿಸುಡಂ ಮುನ್ನಿನ ತನ್ನ ಲಂಪಳಿಕೆಯಂ (ಆದಿಪು. ೨-೪೫) ; ಅಶ್ವಗ್ರೀವನುಂ ರಾವಣನುಂ ಕೀಚಕನುಂ ದುಶ್ಶಾಸನನುಂ ಕಮಠನುಮೆಂದಿವರೆಲ್ಲರುಂ ಪರವನಿತಾಲಂಪಳಿಕೆಯಿಂ ಕೆಟ್ಟರ್ (ಪಾರ. ೩೦೨). [ಲಂಪಳ + — ಇಕೆ]

ಲಂಪು (ನಾ). ವೈಭವ ; ಆಡಂಬರ : "ಲಂಪೆನಲು ವಿಭವಂ" (ಕಶರ. ೯೬) ; ನಿಗುರ್ವ ಪೂಮಾಲೆಗಳ ಲಂಪಿಂದಲಂಪಿಂದೆ ಮಂಟಪಂ ಚೆಲ್ವಾದುದು (ಸಂಪು. ೩೭-೩೨). 'ಲಂಪಂಬೆಱು' ಪರಾ. [<ಅಲಂಪು]

**ಲಂಬ** (ಗು). ೧. ಜೋಲುವ ; ನೇತಾಡುವ ; ತೂಗುತ್ತಿರುವ : ಉತ್ತುಂಗಪೀನನಿಜಾಂಸಾರ್ಪಿತ ಲಂಬಹಾರನವನಾ ಪಾಂಡ್ಯಂ (ಕಂಕಥಾ. ೩-೫೪) ; ಲಂಬೋಪರಂ ಲಂಬಕೂರ್ಚಕಲಾಪಂ ಸಿತಕಂಚುಕಂ ತ್ವರಿತದಿಂ ಬಂದಂ ಪ್ರತೀಹಾರಕಂ (ಕಂಠಾಪಥ. ೨-೨). ೨. ದೊಡ್ಡದಾದ; ದಪ್ಪವಾದ: ತುಂಬಿಕುಳುಕಾಡಿದಪುದಯ್ಯನ ಲಂಬಜಠರವಿದೆನುತ (ಬಸಪು. ೫೯-೦೭). ೩. ಉದ್ದವಾದ ; ಎತ್ತರವಾದ : ದನಗಾಹಿಯು ಕರಿಯ ಕಂಬಳಿಯನ್ನು ತಲೆಯಿಂದ ಮೊಳಕಾಲ ತನಕ ಹೊತ್ತಿದ್ದನು . . . ಒಂದು ಲಂಬಕಟ್ಟಿಗೆಯ ಮೇಲೆ ಕಂಬಳಿಯನ್ನು ಹೊದಿಸಿದಂತೆ ತೋರುತ್ತಿತ್ತು (ರಳ್ತ್ಯ. ೦೨). (ನಾ) ೪. ಉದ್ದಳತೆ : 'ಹೈಪೊಫ್ಯಾರಿಂಕ್ಸ್' ಇದು ಬಾಯಿಯ ತಳ ಅಥವಾ ಮುಂಬಾಯಿಯ ನಾಲಗೆಯಂತಹ ಲಂಬ (prolongation) (ಕೀಟಶ. ೭೨). ೫. ಬಾಗಿಲಿನ ಚೌಕಟ್ಟು ಮೊದಲಾದುವುಗಳ ಉದ್ದವಾದ ಪಟ್ಟಿ: "(ಬಾಗಿಲ ಚೌಕಟ್ಟು, ಗೋಡೆಯ ಹಲಗೆಸೇರುವೆ. ಮೊ.ಗಳಲ್ಲಿ) ನಿಲು, ಲಂಬ,—ಪಟ್ಟಿ, ಮರ" (stile. ಇಂಕೋ). ೬. [ರೇಖಾಗ] ಸಮತಲ ರೇಖೆಯ ಮೇಲೆ ಸಮಕೋನವಾಗುವಂತೆ ಎಳೆದ ಗೆರೆ : ಒಂದು ರೇಖೆಯು ಮತ್ತೊಂದು ರೇಖೆಯ ಬಳಿ ಬಂದು ಸೇರುವುದರಿಂದ ಎರಡು ಕೋನವಾಗುತ್ತೆ . . . ಹಾಗೆ ಸೇರುವಂತಾ ರೇಖೆಗೆ ಲಂಬವೆಂಬ ಹೆಸರಾಗುವುದು (ಕೂಬಂಆ. ೦೦). ೭. ಒಂದು ಸ್ಥಳದ ಹೆಸರು : ವೀರನಾಯಕ ಬಲವರ್ಬೆರಸು ಲಂಬದ ಕೋಟೆಯುಮಂ ಕಿಡಿಸಿ (ಎಪಿಕಂ. ೧೯೨೩. ೬೨-೭; ೪). [ಸಂ.]

**ಲಂಬಕ** (ನಾ). ೧. ಒಂದು ಬಗೆಯ ಆಭರಣ : ಪ್ರತಿಮೆಗಳಿಗೆ . . . ಮುಖ್ಯವಾದ ಆಭರಣಗಳು_ಕೌಸ್ತುಭ, ಕುಂಡಲ, ಕಿರೀಟ, ಜಟಾಮುಕುಟ, ಲಂಬಕ, ಮೇಖಲಾ, ಕಟಕ ಮುಂತಾದುವು (ಶಾರದ. ೫೦೭). 'ಲಂಬಣ' ಪರಾ. ೨. ಗ್ರಂಥದ ಅಧ್ಯಾಯ,—ಪ್ರಕರಣ. [ಸಂ.]

**ಲಂಬಣ**, ಲಂಬಳ$_2$ (ನಾ). ೧. ಉದ್ದವಾದ ಒಂದು ಬಗೆಯ ಸರ : ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾಡುತ್ತಿರೆ ಲಂಬಣಂ ಪಱಿಯೆ ಮುತ್ತಿನ ಕೇಡನೆ ನೋಡಿ ನೋಡಿ ಬಳ್ಕುತ್ತಿರೆ (ಪಂಪಭಾ. ೯-೭೯) ; ಲುಂಗದ ಲಂಬಣಂಗಳಿಂ ಚಂದನದ ವಂದನಮಾಲೆಗಳಿಂ . . . ತಣ್ಪಿನ ತಾಣಮುಮೆನಿಸಿರ್ಪ ಲತಾಮಂಟಪಮಂ ಪೊಕ್ಕು (ಸುಕುಮಚ. ೧೨-೦೫೭ ವ); ಮುತ್ತಿನ ಸರವೆನ್ನ ರನ್ನವಾವುಗೆಗಳ ಸುತ್ತ ಲಂಬಣಮಾದುದಿಂದು (ಹರಿ. ೦-೪೨). ೨. ಕುಚ್ಚು ; ಗೊಂಡೆ : ಒಪ್ಪಿದುವು ಶಾಡ್ವಲರತ್ನವಿತಾನದೊಳ್ಮನಂಗೊಳಿಸುವ ಪದ್ಮರಾಗಮಣಿಕೀಲಿತ ಲಂಬಣಜಾಲಮೆಂಬಿನಂ (ಮಲ್ಲಪು. ೨-೦೯) ; ಪಚ್ಚೆಯ ಚಿಂಬವಳದ ಲಂಬಣದಿಂ ಸಿಂಗರಿಸಿ . . . ನಟ್ಟ ಕಾವನ ಗೆಲ್ಲಗಂಬಮೆನೆ . . . ಕಣ್ಗೆಡ್ಡಮಾಗಿರ್ಪಂ ಕೌಂಗುದೋಂಟಂ (ರಾಜಶೇ. ೮-೨೨) **ಲಂಬಳ$_2$** : ೧. ಬರಗೆಲೆಯುಂ ಕೊಪ್ಪುಂ ನೂಪುರಮುಂ ಲಂಬಳ [ಪಾಠಾಂ. ಣ]ಮುಮಲ್ಲಿ ಮಲ್ಲಿಗೆಯ ಮುಗುಳ್ ಬರಿಮುಗುಳೆಂಬಿವು ತನಗಾಗಿರೆ ದೇಸೆಯ ಮಾಸರಿಕ್ಕೆಯುಂ ಪೊಸಯಿಸಿದಳ್ (ಶಾಂತಿಪು. ೯-೨೨) ; ಮುತ್ತಿನ ಲಂಬಳದ ಲೋವೆಗಳಕಾಂತಿಯ ಲಳಿಯ ಲಹರಿಯೊಳೆದ್ದನಮರಾರಿ (ಕುಮಾವ್ಯಾ. ೫-೨೯) : ಕನಕದ ಸಡಕು ಮಣಿಲಂಬಳದ ಹಯವಿಗೆ ಗುಡಿಯಿಱಿದು ಮೊಗವೆತ್ತಿ ನರ್ತಿಸಿತಸುರನಿದಿರಿನಲಿ (ತೊರಡಾ. ೬-೨೯-೧೨). ೨. ಕೋಮಳಹರಿನ್ಮಣಿಭಿತ್ತಿಗಳನೊಪ್ಪುವ ಮುತ್ತಿನ ಲಂಬಳಂಗಳಿಂ (ಶಾರಪು. ೬-೨).

[< ಸಂ. ಲಂಬನ]

**ಲಂಬಣಮಾಲೆ** (ನಾ). ಉದ್ದವಾದ ಸರ ; ಜೋಮಾಲೆ : ರಂಭಾಸ್ತಂಭಂ ಕೇತಕಿ . . . ವಿಚಿಕಿಲ ಲಂಬಣಮಾಲೆಗಳು (ಶ್ರೀರಪು. ೫-೦೭); ಪಚ್ಚೆಯ ಕುಟ್ಟಿಮಸ್ಥಳಂ ಸುತ್ತಿಡಿದಿರ್ದ ಮಾಣಿಕದ ಲಂಬಣಮಾಲೆ (ರಾಜಶೇ. ೯-೨). [< ಸಂ. ಲಂಬನ ಮಾಲಾ]

**ಲಂಬಣಿಗೆ**, ಲಂಬಳಿಗೆ (ನಾ). = **ಲಂಬಣಮಾಲೆ** : "ಲಂಬನಂ. ಲಲಂತಿಕಾ — ಈ ೨ ಮುತ್ತಿನ ಲಂಬಣಿಗೆ" (ನಾಚರಾ. ೦೨೩) ; ಮಣಿಮಕುಟಂ ಶಿಖರಂ ಲಂಬಣಿಗೆಯ ಪೊಸಮುತ್ತು ನಿರ್ಝರಂ . . . ಆಗೆ ತದ್ಗಿರಿಗೆಣೆಯಾದಂ ತನ್ನ ಪೆಸರೊಳಂ ವಿಜಯಾರ್ಧಂ (ಆದಿಪು. ೦೭-೦೩). **ಲಂಬಳಿಗೆ** : ಮುತ್ತಿನ ಲಂಬಳಿಗೆಯಿಂ ಬೆಡಂಗುವಡೆಯೆ ಕಟ್ಟಿದ ಕಾಂಚಿಯಿಂ ಕಾಂಚೀಪದದೊಳಂಗಜಂಗೆ ಸಾಮ್ರಾಜ್ಯಪಟ್ಟಮಂ ಕಟ್ಟಿಯುಂ (ವರ್ಧಪು. ೭-೯ ವ). [< ಸಂ. ಲಂಬನಿಕಾ]

ಲಂಬನ (ನಾ). ೧. ಜೋಲಾಡುವುದು; ನೇತಾಡುವುದು : "ಲಂಬಃ. ಲಂಬನಂ, ಲಂಬನೀಯಂ-ಈ ೩ ನೇಲ್ಕೆ" (ಶಾಶಕ್ಕ. ೦೦೪). ೨. ಉದ್ದವಾದ ಒಂದು ಬಗೆಯ ಸರ,— ಹಾರ : "ಲಂಬನಂ, ಲಲಂತಿಕಾ— ಈ ೨ ಮುತ್ತಿನ ಲಂಬಣಿಗೆ" (ನಾಚರಾ. ೦೨೩). ೩. [ಖಗೋಳ] ವೀಕ್ಷಣೆಯ ಸ್ಥಾನವನ್ನು ವ್ಯತ್ಯಾಸಮಾಡುವುದರಿಂದ ವೀಕ್ಷಿತ ವಸ್ತುವಿನ ಸ್ಥಾನವು ಬದಲಾವಣೆಯಾದಂತೆ ಕಂಡುಬರುವುದು : ವಸ್ತುಸ್ಥಾನಾಭಾಸ : 'ಲಂಬನ' ಎಂದರೆ ಭಿನ್ನದೃಷ್ಟಿ (ಕೊ.ಕಿಬರ. ೨೬೨); ದಶಜ್ಯಾ ವಿಧಾನ ಎಂಬುದಾಗಿ ಕರೆಯಲಾದ ಲಂಬನ (parallax) ವನ್ನು ಕಂಡುಹಿಡಿಯುವ ಮೊದಲನೆಯ ಆರ್ಯಭಟನ ಮಾರ್ಗವು ಮುಖ್ಯವಾಗಿ ಭಾರತೀಯವಿಧಾನ (ತತ್ತ್ವಶಾ. ೪೬೫). [ಸಂ.]

**ಲಂಬಹಸ್ತ** (ನಾ). ಕೆಳಗೆ ಇಳಿಬಿಟ್ಟ ಕೈ : ಪೂರ್ವದಲ್ಲಿ ಷಡ್ಭುಜನೃತ್ಯ ಮಾಡುವ ಕೃಷ್ಣ (ಅಭಯ, ಶಂಖ, ಸ್ವರ್ಗಹಸ್ತ, ಚಕ್ರ, ಲಂಬಹಸ್ತ, ದಾನ) (ಹೊಯ್ಸಳಶಾ. ೦೩೩). [ಸಂ.]

**ಲಂಬಳ$_1$** 'ಲಂಪಳ' ನೋ.

**ಲಂಬಳ$_2$** 'ಲಂಬಣ' ನೋ.

**ಲಂಬಳಿಗೆ** 'ಲಂಬಣಿಗೆ' ನೋ.

**ಲಂಬಾಡಿ**, ಲಂಬಾಣಿ, ಲಮಾಣಿ, ಲವಾಣ (ನಾ). ಒಂದು ಅಲೆಮಾರಿ ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ : "ಲಂಬಾಡಿ (ಲಮ್ಮಾನಿ) — ಒಂದು ಕಾಡುಜನಾಂಗ" (ಶಾವಕೋ. ೯೩). **ಲಂಬಾಣಿ :** 'ತಾಂಡೆ'ಯಿಂದಲಿ ಬರುವ ಲಂಬಾಣಿ ಹೆಂಗಸರ ಉಡುವು ತೊಡಪೇನು (ಛಾವಜಾ. ೩-೦). **ಲಮಾಣಿ :** ಹಾದಿ ಯೊಳಗ ಲಮಾಣಿ ತಾಂಡೆ ಇತ್ತು (ಇತಿಶ್ರೀ. ೩೯); ನಮ್ಮ ಊರ ಲಮಾಣ್ಯಾರು ಇದ್ದಾರ (ಗಂಪಜಾಯ. ೦೦೬). **ಲವಾಣ :** ಲವಾಣರು, ಇಲ್ಲವೆ ಲಂಬಾಡಿಗರು :– ಇವರು ವಾಡಿಕೆಯಾಗಿ ಅಡವಿಯ ಹತ್ತರ ಇಲ್ಲವೆ ಗುಡ್ಡದ ಮೇಲೆ ಇರುತ್ತಾರೆ (ಕಶಾಗ. ೦೦೩).

[ದೇ.; ತಮಿ. ಲಮ್ಬಾಟಿ; ತುಳು. ಲಂಬಾಡಿ, ಲಂಬಾಣಿ; ತೆಲು. ಲಂಬಾಡ. / ಮರಾ. ಲಂಬಾಣ, ಲಮಾಣ]

**ಲಂಬಾಡಿಗ**, ಲಂಬಾಣಿಗ (ನಾ). = ಲಂಬಾಡಿ : ಲವಾಣರು, ಇವೆಲ್ಲ ಲಂಬಾಡಿಗರು.– ಇವರು ವಾಡಿಕೆಯಾಗಿ ಅಡವಿಯ ಹತ್ತರ ಇಲ್ಲವೆ ಗುಡ್ಡದ ಮೇಲೆ ಇರುತ್ತಾರೆ (ಕಶಾಗ. ೦೦೩). **ಲಂಬಾಣಿಗ :** ಎತ್ತುಗಳನ್ನು ಅದರ ಸಂಗಡ ಇದ್ದ ಲಂಬಾಣಿಗರನ್ನು ಸಹ ಹಿಡಿದುಕೊಂಡು ಬರುವಾಗ್ಯೆ (ಶಾಕೀಂಶ್ರ. ೯೩). [ಲಂಬಾಡಿ + – ಇಗ]

**ಲಂಬಾಣಿ** 'ಲಂಬಾಡಿ' ನೋ.

**ಲಂಬಾಣಿಗ** 'ಲಂಬಾಡಿಗ' ನೋ.

**ಲಂಬಾಳಕ** (ನಾ). ಜೋಲುವ ಮುಂಗುರುಳುಳ್ಳವನು : ಪ್ರಸಾರಿತ ಕಜ್ಜಲಂ ತಿಳಕವಿಳಸದ್ಭಾಳಂ . . . ತಳೆದಂ ಚೆಲ್ವಂ ಲಂಬಾಳಕಂ ನೃಪ ಬಾಲಕಂ (ಸುಕುಚ. ೯-೦೩೦). [ಸಂ. ಲಂಬಾಲಕ]

**ಲಂಬಿಕಾಯೋಗ** (ನಾ). [ಯೋಗ] ಯೋಗದ ಸಾಧನೆಗಳಲ್ಲಿ ಒಂದು ; ನಾಲಗೆಯನ್ನು ಬ್ರಹ್ಮರಂಧ್ರದ ಕುಹರಕ್ಕೆ ಒಯ್ಯುವುದು : ಬಹುಪ್ರಯಾಸಮಾದ ಲಂಬಿಕಾಯೋಗವೆನಿಸುವ ಬಾಹ್ಯಖೇಚರಿಯನವಲಂಬಿಸಿ ನಾಲಗೆಯನು ಛೇದಿಸುವ ವ್ಯಾಪಾರದಲಿ ತತ್ಪರರಾಗಿ ಕಪಾಲಕುಹರಾಂತ ರ್ಗತಮಾದ ಶ್ಲೇಷ್ಮರಸಾಸ್ವಾದನಮಂಮಾಳ್ಪ ಹಠಯೋಗಿಗಳಂ (ಶರವಾ. ೩-೭೭) ; ಶಿವನು ಪ್ರಸನ್ನವಾಗದಿರಲು, ಲಂಬಿಕಾಯೋಗದಲ್ಲಿ ನಾಲಗೆಯ ಬ್ರಹ್ಮರಂಧ್ರಕೆ ನೀಡಿ . . . ಒಂದು ಕಾಲಲ್ಲಿ ನಿಂದು ಹತ್ತುಸಾವಿರವರುಷ ತಪವ ಮಾಡುವಾಗ (ಶ್ರೀರಸೂ. I, ೯೦) ; ಲಂಬಿಕಾಯೋಗದ ದಂಭದಿ ನುಡಿಬೇಡ ತುಂಬಿ ತುಳುಕಬೇಕು ಸರ್ವಾಂಗ (ಸಿದ್ಧಕೃ. ೩೭-೩). [ಸಂ.]

**ಲಂಬಿಕಾಯೋಗಿ** (ನಾ). ಲಂಬಿಕಾಯೋಗವನ್ನು ಸಾಧಿಸಿರುವವನು : ಮಥಿಸಿ ಮಸ್ತಕಮಧ್ಯಭಾಗಸ್ಥಿತದ ಚಂದ್ರಾಮೃತವ ಸೇವಿಸಿ ಸತತ ಸೊಕ್ಕಿದ ಲಂಬಿಕಾಯೋಗಿಗಳ ಪರಿಯಂತೆ (ಗಗತಾ. ೦೭-೩೭).

[ಸಂ. ಲಂಬಿಕಾಯೋಗಿನ್]

**ಲಂಬಿಕೆ** (ನಾ). ೧. ನೇತಾಡುವುದು; ತೂಗಾಡುವುದು. ೨. ಕಿರುನಾಲಗೆ : ಖಂಡಿಸಿದ ಕರಗಳಂ ಬಿಲ್ಲ ಹಿಡಿಯಬೇಕು ವದನದಿಂ ದೃಷ್ಟಿಯಿಲ್ಲದೆ ನಭವ ನೋಡಬೇಕು ಲಂಬಿಕೆಯಿಂದು ಬೆಲ್ಲಮಂ ಮೆಲಲು ಬೇಕು (ಲಂಗಕೃ. ೨೨-೦೩). ೩. ಕಿವಿಯ ಹಾಲೆ : "ಹಾಲೆ ಪತ್ರಾಶ್ರಯಂ ಲಂಬಿಕಾಖ್ಯಂ" (ಮಂಗರಾ. ೯೪-೩). ೪. =ಲಂಬಿಕಾಯೋಗ: ಹಠಯೋಗ ಲಂಬಿಕೆಯೆಂದು . . . ಇದು ಪೂರ್ವನವನಾಥಸಿದ್ಧರ ಮತೋಕ್ತವೆಂದು ಕಾಪಾಲಿಕಾಚರಣೆ ಯನಾಚರಿಸುವರಲ್ಲ ಶರಣರು (ಅವಕಂ. ೦೩೬-೭೨೪); ಲಂಬಿಕೆಯಿಂ ಸುಷುಮ್ನೆ ಯೊಳು ಜ್ಯೋತಿಯಂ ನಡಸಿ (ಸಿದ್ಧರಾ. ೯-೨೭). [ಸಂ. ಲಂಬಿಕಾ]

**ಲಂಬಿತ** (ಗು). ಜೋಲಾಡುವ ; ತೂಗಾಡುವ ; ಇಳಿಬಿದ್ದಿರುವ : ಧೃತದಂಡಂ ಚಾರುಚಂಪಕಚ್ಛಾಯಂ ಲಂಬಿತಕೂರ್ಚಂ (ಜಾತಕ. ೦೯-೩೭); ಲಲನೆ ಶಯನಿಸುವವಮಳಪುಷ್ಪಕನಿಳಯಲಂಬಿತರತ್ನಮಾಲಾಕಲಿತಮಣಿಗಣ ದೀಪವಿಭ್ರಮಕಾಂತಿಯಗ್ಗಳಿಸೆ (ಜಶಕೃ. ೦೨-೦೯). [ಸಂ.]

**ಲಂಬಿಸು** (ಕ್ರಿ). ೧. ತೂಗಾಡು ; ಜೋಲಾಡು : ಸೋರ್ಮುಡಿ ಲಂಬಿಸೆ ಕರ್ಣಪೂರಿತೋತ್ಪಲವೊಲೆದಾಡೆ ಗಟ್ಟಿಗಳನಂದು ಮಗುಳ್ಚಿದರಿಂದುವಕ್ತ್ರೆ ಯರ್ (ಗಂಕ. ೨-೯೦) ; ಲಂಬಿಸುವ ಫಲಭರದ ರಸದಾಳಿಂಬ ಖರ್ಜೂರಾಮ್ರಕದಳಿಕದಂಬ (ಕೊರಂಶ. ೦-೩-೪೦) ; ಲಂಬಿಸುವಲರ್ಮುಡಿಗಳ ಶಿರಂಗಳಿಂ ಬಾಗಿ ಲಕ್ಷ್ಮೀಪತಿಗೆ ವಂದಿಸಿದರು (ಕೃದಿಭಾ. ೭-೦೩). ೨. ಹೆಚ್ಚು ; ವೃದ್ಧಿಯಾಗು : ಲಂಬಿಸಿತು ಭಯತಿಮಿರ ಶೋಕಾಡಂಬರದ ಡಾವರ ವಿವೇಕವ ಚುಂಬಿಸಿತು (ಕುವ್ಯಾಗ. ೯-೦೯) ; ಚಿಗುರಿದುದು ದುರ್ವಾರ್ತೆಲತೆ ನಿಜನಗರದಲಿ ಲಂಬಿಸಿತು ಕರ್ಣದೊಳಾ ಶಕುತ್ಸ್ನಜನ (ತೊರಂಶ. ೧-೩-೩); ರಂಭೆ ಮುಖವು ಬಿಳಿದಾಗಿ ಸುಜಠರವು ಲಂಬಿಸೆ (ಅಶ್ವಖ. ೨-೯೦). ೩. ದೊಡ್ಡದನ್ನಾಗಿ ಮಾಡು ; ಬೆಳೆಸು ; ಹೆಚ್ಚಿಸು : ಕ್ಷಯದ ವೇಗವನ್ನು ನಿರೋಧಿಸಿ ಜೀವಮಾನವನ್ನು ಲಂಬಿಸುವುದು ಸಾಧ್ಯವ (ಆರ್ಯಶ. ೦೬೦); ಯಾವುದೊಂದು ವಿಷಯವಾಗಲಿ ಅತಿಯಾಗಿ ಲಂಬಿಸಿರ ಬಾರದು (ಶಿಕ್ಷದ. ೨೬೬). ೪. ಮೈಚಾಚು ; ಒರಗು ; ಮಲಗು : ತುದಿಮಿರವನೂಚಿ ನವಾಯಿ ಮಿಗಲರೆನೋಟದಾಲಿಯ ಮಿಡುಕದವಿಲಾಸದ ಲಾಯದಲಿ ಲಂಬಿಸಿದವೊಲು ವಾನಾಯುಜದ ಸಾಲೆಸೆದುದು (ಕುವ್ಯಾದ್ರೋ. ೦೭-೯). [ಲಂಬನ + – ಇಸು$_3$]

**ಲಂಬು** (ಗು). ೧. ಉದ್ದನೆಯ ; ಉದ್ದವಾದ. (ನಾ). ೨. ಉದ್ದಳತೆ: "ಲಂಬು (ಲಾಂಬು) ∸ ಲಂಬ" (ಕರ್ನಕೋ. ೩೯). ೩. ಉದ್ದವಾಗಿರು ವವನು ; ಎತ್ತರವಾಗಿರುವ ವ್ಯಕ್ತಿ : ಅವನೇನು ಆರೂವರೆ ಅಡಿ ಉದ್ದದ ಲಂಬುವಂತೆ (ಕೃಸರು. ೦೦೧). [←ಹಿಂ. ಲಂಬೂ. / ಸಂ. ಲಂಬ]

**ಲಂಬೂಷ** (ನಾ). ಏಳು ಎಳೆಗಳ ಸರ.–ಕಂಠಹಾರ : ತಾರಾತರಲಮುಕ್ತಾ ಫಲಲಂಬಲಂಬೂಷಭೂಷಿತಮುಂಮಾವಲಂಬಿತ ಸುರಭಿಕುಸುಮದಾಮಾಕೀರ್ಣ ಮುಂ . . . ಅಪ್ಪ ಶ್ರೀಮಂಟಪಮಂ ವಿರಚಿಸಿ (ಆದಿಪು. ೭-೭೩ ಪ); ಪಾಂಡುಕಶಿಲಾತಲೋಪರಿಮಂಡಪಲಂಬೂಷ ಲಂಬವಂದನಮಾಲಾಮಂಡನ ಲತಾಂತಪರಿಮಳಮಂಡಳಿತ ಮದಾಳಿಗೀತ ಮಂದಸಮೀರಂ (ಅಜಂಪು. ೩-೯೩).

[<ಸಂ. ಲಂಬೂಷಾ]

**ಲಂಬೋದರ** (ನಾ). ೧. ದೊಡ್ಡಹೊಟ್ಟೆಯವನು ; ಡೊಳ್ಳು ಹೊಟ್ಟೆಯವನು : ಧವಲೋತ್ತರೀಯವಸನಂ ಲಂಬೋದರಂ ಲಂಬಕೂರ್ಚ ಕಲಾಪಂ . . . ಬಂದಂ ಪ್ರತೀಹಾರಕಂ (ಶಂರಾಮೂ. ೨-೨) ; ಆಜಾನು ಬಾಹುಗಳುಳ್ಳ ಲಂಬೋದರಸ್ವರೂಪಿಯಾದ ಭವ್ಯತರುಣನೊಬ್ಬನು ನಿಂತು ಕೊಂಡಿದ್ದನು (ಕಳ್ಳಾ. ೩೨). ೨. ಹೊಟ್ಟೆಬಾಕ ; ತಿಂಡಿಪೋತ : (ಕ). ೩. ಗಣೇಶ ; ಬೆನಕ ; ವಿನಾಯಕ : "ಹೇರಂಬಃ, ಲಂಬೋದರಃ . . . ವಿಘ್ನರಾಜಃ — ಈ ೯ ಬೆನಕನ ಪೆಸರ್" (ಹಳಾಯು. ೯-೦೯) ; ಕರಿಗೊರಳ ತನ್ನ ಕಂಠದಲಿ ಲಂಬೋದರನ ತ್ವರಿತ ಪುಟ್ಟಿಸಿ (ಶ್ರೀಶರಾ. ೦-೦೦) ; ಲಂಬೋದರಗೇತಕೆ ತರಳೋದರೆ ಕುಂಭಶಿರಂಗೇತಕೆ ಬಿಂಬಾಧರೆ (ಗಕೇಶ. ೩-೦೨೦). [ಸಂ.]

**ಲಂಬೋದರಿ** (ನಾ). ೧. ದೊಡ್ಡ ಹೊಟ್ಟೆಯುಳ್ಳವಳು. ೨. ಒಬ್ಬ ರಾಕ್ಷಸಿಯ ಹೆಸರು : ರೋಷದಿಂದೊದಗಿದಳ್ ಮತ್ತೂರ್ವಳಸುರಿ ಲಂಬೋದರಿ ನಿಶಾಚರಿ ಮಹಾಭಯಂಕರಿ (ಕೃದಿಭಾ. ೦೭-೩೩).

[ಸಂ. ಲಂಬೋದರೀ]

**ಲಂಭ** (ನಾ). ೧. ಪಡೆಯುವುದು ; ದೊರಕಿಸಿಕೊಳ್ಳುವುದು. ೨. **ಪ್ರಾಪ್ತಿ** ; ಸಿದ್ಧಿ : ವಿವಿಧವಿಭವಶೋಭಾರಂಭಲಂಭಪ್ರಲಂಭೋದ್ಭವ ವಿಹಿತವಿವಾಹೋತ್ಸಾಹಸಾಕಲ್ಯಕಲ್ಪಂ . . . ಸಮುದಿತಸೇವಾರಾತಿವೃತ್ತಾಂತ ವೃತ್ತಂ (ಕಬರಾ. ೩-೨೦೩). ೩. [ಸಂಗೀತ] ಒಂದು ಬಗೆಯ ಗೀತ ಪ್ರಬಂಧ : ಏಲಾ, ಢೇಂಕೀ, ಝೊಂಬಡ, ಲಂಭ, ರಾಸಕ . . . ಲೋಲೀ, ಢೊಲ್ಲರೀ, ದಂತೀ — ಈ ಇಪ್ಪತ್ತೆರಡು ಪ್ರಬಂಧಗಳೂ ತಾರಾವಳೀ ಜಾತಿಯವೆಂದು ಪ್ರಸಿದ್ಧವಾಗಿವೆ (ಕಕುಕ್ರ : ೯೩). [ಸಂ.]

**ಲಂಭನ** (ನಾ). = ಲಂಭ ೧ : ಭಾವೇಂದ್ರಿಯಂ ದ್ವಿವಿಧಂ ಜ್ಞಾನಾವರಣ ಕ್ಷಯೋಪಶಮವಿಶೇಷಮಪ್ಪ ಲಂಭನಂ ಲಬ್ಧಿ (ತತ್ತ್ವಸೂ. ೯೬). [ಸಂ.]

**ಲಕಚ** 'ಲಕ್ಕಚಣ' ನೋ.

**ಲಕಪರಾಲಿ** (ನಾ). ಒಂದು ಊರಿನ ಹೆಸರು : ಅನ್ತೆ ಬನ್ದು ಬೆಳೆ ಕೆಱೆಯ ಪಡುವಣಕಡೆಯಿಂ ಅನ್ತೆ ಬನ್ದು ಲಕಪರಾಲಿಯ ಮೂಡಣ ಬೇಲಿಯಿಂ (ಎಕ. III, ನಂಜನ. ೦೪೯-೦೯ ; 915 ?). [ ? ]

**ಲಕಮುಕ** 'ಲಕುಮುಕಿ' ನೋ.

**ಲಕಲಕ** (ನಾ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣ ಪದ : ಪಾತ್ರೆ ಪರಡಿಗಳನ್ನೆಲ್ಲ ಹುಣಿಸೇಹಣ್ಣಿನಿಂದ ತಿಕ್ಕಿ ಲಕಲಕ ಮಾಡಿದಳು (ಮುಕ್ತ್ವದ. ೨೩) ; ಎಲೆಯ ಮೇಲ್ಮೈಯು ಲಕಲಕ ಹೊಳೆಯುವ ಕೆಂಪುಬಣ್ಣದ್ದಿರುತ್ತದೆ (ಮುಂಬಯಿ. ೯-೭೦).

**ಲಕಲಕನೆ** (ಅ). ಕಾಂತಿಯಿಂದ ಹೊಳೆಯುವಂತೆ ಎಂಬರ್ಥವನ್ನು ಸೂಚಿಸುವ ಒಂದು ಅನುಕರಣಾವ್ಯಯ : ಹಲವರು ಬಿಂದಿಗೆ ಕೊಡಗಳನ್ನು ಲಕಲಕನೆ ತಿಕ್ಕುತ್ತಿದ್ದಾರೆ (ಶಲಸಂ. ೯).
[ಲಕಲಕ + – ಅನ್ನೆ₁]

**ಲಕಲಕಿಸು** (ಕ್ರಿ). ಕಾಂತಿಯಿಂದ ಬೆಳಗು ; ಥಳಥಳಿಸು ; ಮಿಂಚು : ಕಪ್ಪುದ್ರಾಕ್ಷಿಯಲ್ಲಿ ನಕ್ಷತ್ರಗಳನ್ನು ಸೆರೆಹಿಡಿದಿಟ್ಟಂತೆ ಲಕಲಕಿಸುವ ಕಣ್ಣುಗಳು (ಪಿಕಂಜಾ. ೬೩) ; ಬೆಳ್ಳಿಯ ಭಾಂಡಿಗಳು ಎಲ್ಲ ಕಡೆಗೆ ಲಕಲಕಿಸುತ್ತವೆ (ಅಶ್ವ. ೯೩). [ಲಕಲಕ + – ಇಸು₃]

**ಲಕಲಿ** 'ಲೊಕ್ಕಿ₁' ನೋ.

**ಲಕಾರ** (ನಾ). 'ಲ' ಎಂಬ ಅಕ್ಷರ : ವಿಕಲ್ಪಂ ಕ್ಷಳನಿಲ್ಲದಿಲ್ಲ ಸಂಸ್ಕೃತದೊಳಾ ಲಕಾರಕ್ಕೆ ಪೇಟ್ಟಿನೆದಱಿಂ ಕ್ಷಳನಂ (ಕರ್ಣಾಭ. ೩). [ಸಂ.]

**ಲಕುಚ** (ನಾ). ೧. ಗಜನಿಂಬೆ : "ಲಕುಚಃ, ಲಿಕುಚಃ, ಡಹುಃ — ೩ ಗಜನಿಂಬೇ ಹೆಸರುಗಳು" (ಸಿದ್ಧಾಂತ. ೦೨೩). ೨. ಬೇಲ ; ಕಪಿತ್ಥ : "ಲಿಕುಚಂ [ಲಕುಚಂ] ಕಪಿತ್ಥಮಱಿಗೆ ದಧಿತ್ಥಂ" (ವಸ್ತುಕೋ. ೩೩-೩). ೩. ಒಂದು ಬಗೆಯ ಕಾಡುಹಲಸು. [ಸಂ.]

**ಲಕುಟ** (ನಾ). ಬಡಿಗೆ ; ದೊಣ್ಣೆ ; ಕೋಲು : "ವೈಣವಃ, ಲಕುಟಃ . . . ಯಷ್ಟಿಃ — ಈ ೫ ಕೋಲ್" (ಕರ್ಣಾಟಶ. ೦೨೦-೯೦) ; ಲಕುಟ ಯಷ್ಟ್ಯಾದಿವಿಧಿಯನುಪದೇಶಿಗೆಯ್ದಾತಂ ಕ್ಷೇಮಂಧರನೆಂಬ ಪೆಸರಂ ಪಡೆದಂ (ಅಪು. ೬-೩೬ ವ) ; ಅರಸಂ ಮುಳಿದು ಲಕುಟ ತಾಟ(ಡ)ನಪೂರ್ವಕಮಾ ಶುನಕನಂ ಕಳೆದಂ (ಶಾಪುಂಪು. ೯೩೩) ; ಗಳಿತಾಶ್ರು ವಿಷಣ್ಣನೆಣ್ಣೆವೂಸಿದನತಿ ರಕ್ತವಸ್ತ್ರಕುಸುಮಂ ಲಕುಟಾಜಿನಪಾಶಹಸ್ತಂ (ಲೋಕೋಪ. ೦೦-೩). [ಸಂ.]

**ಲಕುಮಿ**, ಲಕ್ಕಿ₂, ಲಕ್ಷುಮಿ, ಲಚ್ಚಿ, ಲಚ್ಛಿ (ನಾ). ೧. ಐಶ್ವರ್ಯ ; ಸಂಪತ್ತು. ೨. ವಿಷ್ಣುವಿನ ಹೆಂಡತಿ ; ಲಕ್ಷ್ಮಿ : "ಲಕುಮಿ ಲಕ್ಷ್ಮಿಯೆನಿಕ್ಕುಂ" (ಶಬ್ದಸಂ. ೨೬) ; ನಂದಿವರ್ಮನಂಗನೆ ಭೂನಾರಿಗೆ ರತಿಗರುನ್ಧತಿದೇವಿಗೆ ಲಕುಮಿನಾರಿಗೆ ಪಡಿಯೆನೆ ಭೂನುತೆ ತಾ ಚಾಕಣಬ್ಬೆ ಕಾಂತಾರತ್ನ (ಎಇ. XX, ೦೦೩-೨೭ ; 1146) ; ಲಕ್ಷ್ಮೀ — ಲಕುಮಿ, ಶ್ರೀ — ಸಬುದ (ಶಬ್ದದ. ೨೩೯ ಪ್ರಯೋ). ೧, ೨ : ದೇಹಕಾಂತಿಗೆ ಮುಳಿದ ತರಣಿಸತಿಯ ಪಿಡಿದು ಕಾಹನಿಟ್ಟನುಡೆ ಲಕುಮಿಯನೊಳಗೆ ತುಂಬಿ ರಾಜಂಗೆ ಕೈಸೆಕೆಯ ತೋಱುವೆನೆನುತ್ತ . . . ಇನನುದಯಗಿರಿಯನಡರ್ದಂ (ಕಾಶಖಂ. ೬-೩೪). ೩. ಶೋಭೆ ; ಕಾಂತಿ : ನಿನಗೆ ತಾನೆಲೆ ದೇವ ವಲ್ಲಭೆಯೆನಿಸುವಡೆ ಕೀಳೀ ದ್ರುಮವ ನಡೆ ಮನಕೆ ಬಾರದಡೆಂದಳಪಗತವದನ ಲಕುಮಿಯಲಿ (ನಿಭಾಗ. ೦೦-೭೦-೩೪). **ಲಕ್ಕಿ₂** : ೨. "ಲಕುಮಿ (ಲಚ್ಚಿ, ಲಕ್ಕಿ)ಲಕ್ಷ್ಮೀ = ಶ್ರೀದೇವಿ" . (ಕನ್ನಕೋ. ೩೬). **ಲಕ್ಷುಮಿ** : ಒಳ್ಳಿತೀ ಶಕುನಫಲವೆಲ್ಲ ನಮಗೆ ಲಕ್ಷುಮಿವಲ್ಲಭನ ಸೇವೆ ದೊರಕೊಂಬುದೇ ರಮಣಿ (ಕುರಂಡ. ೩-೮೦ ಪಲ್ಲವಿ). **ಲಚ್ಚಿ** : ೨. "ಲಕ್ಷ್ಮೀ-ಲಚ್ಚಿ" (ಶಬ್ದಾಸ. ೦೬೦ ಪ್ರಯೋ). ೪. ಒಬ್ಬಾಕೆಯ ಹೆಸರು : ಬಂಮರಸಂಗಂ ಲಚ್ಚಿಯಬರಸಿಗಂ ಪುಟ್ಟಿದ (ಎಕ. VIII, ಸಾಗರ. ೦೩-೦೩ ; 1218). **ಲಚ್ಛಿ** : ೫. [ಜೈನ] ಊರ್ಧ್ವಲೋಕದ ಒಂಬತ್ತು ಅನುದ್ದಿಶ ವಿಮಾನಗಳಲ್ಲಿ ಒಂದು : ನವಗ್ರೈವೇಯಕಂಗಳೊಳಮಲ್ಲಿಂ ಮೇಗಣ ಲಚ್ಛಿ ಮಹಾಲಚ್ಛಿ ಮಾಳಿನಿ ವೈರೆ ವೈರೋಚನೆ ಸೋಮೆ ಸೋಮರೂಪೆ ಅಂಕೆ ಪಳಿಕೆ ಆಯಿಚ್ಚೆಯೆಂಬ ನವಾನುದ್ದಿಸೆಗಳೊಳಂ (ವಡ್ಡಾರಾ. ೯೭-೩೦).
[< ಸಂ. ಲಕ್ಷ್ಮೀ./ಪ್ರಾ. ಲಚ್ಛಿ]

**ಲಕುಮುಕಿ**, ಲಕಮುಕ (ನಾ). ೧. ಜಾಲಗಾರನ ಹಕ್ಕಿ; ಮೀಂಚುಳ್ಳಿ (ಕ). ೨. ಟಿಟ್ಟಿಭ ಪಕ್ಷಿ : "ಟಿಟ್ಟಿಭಕಃ, ಲಕುಮುಕೀ ಹಕ್ಕಿ" (ಸಿದ್ಧಾಂತ. ೦೬೩). **ಲಕಮುಕ** : (ಕ). [ ← ತೆಲು. ಲಕುಮುಕಿ ]

**ಲಕುಲೀಶ** (ನಾ). ೧. ಒಂದು ಶೈವಪಂಥದ ಪ್ರವರ್ತಕನಾದ ಒಬ್ಬ ಮಹಾಪುರುಷ : ಆಯೆಂಬ ವರ್ಣವೈಶ್ವರ್ಯಮಂ ವರ್ಧಿಪುದು ಲಾಯೆಂಬ ವರ್ಣ ಲಕುಲೀಶಗಣಪದಮಕ್ಕು . . . ನಂಬಿಯಲ್ಲಮಪ್ರಭುವೆಂಬ ಮಂತ್ರಾ ಮೃತವ ಸೇವಿಸಿ (ಪ್ರಭುಪು. ೯-೩೨). 'ಲಕುಲೀಶಪಾಶುಪತ' ಪರಾ. ೨. ಶೈವ ಧರ್ಮದ ಒಂದು ಪ್ರಭೇದ ; ಲಕುಲೀಶನಿಂದ ಸ್ಥಾಪಿಸಲ್ಪಟ್ಟ ಪಂಥ : ಕಾಳಾಮುಖ, ಲಕುಲೀಶ, ಮಾಹೇಶ್ವರ . . . ಇವೇ ಮೊದಲಾದವು ಶಿವಭಕ್ತಿಪಂಥದ ಮುಖ್ಯಪ್ರಭೇದಗಳು (ಭಾರದ. ೩೦೬). [ಸಂ.]

**ಲಕುಲೀಶಪಾಶುಪತ**, ಲಕುಳೀಶಪಾಶುಪತ (ನಾ). ಶೈವಧರ್ಮದಲ್ಲಿ ಒಂದು ಪಂಥ ; ಲಾಕುಳಶೈವಪಂಥ : ಕ್ರಿ.ಶ. ಏಳನೇ ಶತಮಾನ ದಿಂದಲಾದರೂ ಲಕುಲೀಶಪಾಶುಪತವೆಂಬ ಶೈವಧರ್ಮ ಪ್ರಚಾರದಲ್ಲಿತ್ತು (ಕೊಪ್ಪಳಶಾ. ೮ ಹಿನ್ನೆಲೆ). **ಲಕುಳೀಶಪಾಶುಪತ** : ಈ ಲಕುಳೀಶಪಾಶುಪತ ಶೈವಪಂಥವು ಪ್ರವರ್ತಿತವಾದುದು ಕ್ರಿ. ಪೂ. ೨ನೇ ಶತಕದಲ್ಲಿಯೆಂದು . . . ಅಭಿಪ್ರಾಯಪಡುವರು (ಶಿವಗೀ. ೨ ವೀಠಿಕೆ). [ಸಂ.]

**ಲಕುಳ** (ನಾ). ಮುಂಗುಸಿ ; ನಕುಲ : ನರಿ ನವಿಲು ಲ[ಶಾಂತಿ.ನ]ಕುಳ ವಾಯಸಂಗಳು ತಿರ್ದ ಶುಭಶಕುನಂಗಳು (ಶಿವೇಕ. ೦೨೩). [< ಸಂ. ನಕುಲ]

**ಲಕುಳೀಶಪಾಶುಪತ** 'ಲಕುಲೀಶಪಾಶುಪತ' ನೋ.

**ಲಕೋಟ** 'ಲಗಾಟ' ನೋ.

**ಲಕೋಟೆ₁**, ಲಕ್ಕೋಟೆ₁ (ನಾ). ೧. ಪತ್ರವನ್ನು ಇಟ್ಟು (ಅಂಟಿಸಿ) ಕಳುಹಿಸುವ ಕಾಗದದ ಸಣ್ಣ ಚೀಲ; ಪಾಕೀಟು ; ಸಣ್ಣ ಕವರು : ಅವಳು ಲಕೋಟೆಯೊಳಗಿನ ಕಾಗದವನ್ನು ಹೊರಗೆ ತೆಗೆಯುತ್ತ ನುಡಿದಳು (ಸೀಪಮಂತ. ೩೩೦); ಫೋಟೋವನ್ನು ಲಕೋಟೆಯಿಂದ ತುಸು ಹೊರಗೆಳೆದು ತೀವ್ರಾಸಕ್ತಿಯಿಂದ ನೋಡುತ್ತಿದ್ದಳು (ಕುಶರು. ೩೨೩). ೨. ಅಂಟಿಸಿದ ಅಥವಾ ಅಂಟಿಸದೆ ಮುಚ್ಚಿರುವ ಅಂಚೆಯ. ಪತ್ರ : ಅಂಚೆಯವನು ಒಂದು ಲಕೋಟೆಯನ್ನಿತ್ತು ತೆರಳಿದನು (ಸುಂದಂ. ೬೩); ಲಕೋಟೆಯೊಂದನ್ನು ಹಕ್ಕಿ ಎಲ್ಲಿಂದ ಬಂದುದೆಂದು ಮುದ್ರೆ ನೋಡಿದೆ (ಮುಂಗಾಮು. ೦೬). **ಲಕ್ಕೋಟೆ₁**: ೧. ಲಕ್ಕೋಟೆಯನ್ನು ಒಡೆದು ನೋಡಿದೆ (ಶಪಶಿ. ೯೯); ಪತ್ರಗಳನ್ನು ಒಂದು ಲಕ್ಕೋಟೆಯಲ್ಲಿಟ್ಟು ತಲೆಚೀಟಿ ಹಚ್ಚಿದಳು (ಕ್ಷಾಪಿನ್ನೇ. ೦೪೦). [← ಹಿಂ. ಲಖೋಟಾ; ಮರಾ. ಲಖೋಟಾ, ಲಾಖೋಟಾ]

**ಲಕೋಟೆ$_2$** · ಲಕ್ಕೋಟೆ$_2$ (ನಾ). ಒಂದು ಬಗೆಯ ಹಣ್ಣು · (*).
**ಲಕ್ಕೋಟೆ$_2$** : (ವ್ಯಶಿಗ. ೩೪-೭೭೭). [ ? ]
**ಲಕೋಟೆಹೋಳಿಗೆ** (ನಾ). ಲಕೋಟೆಯ ಆಕಾರದಲ್ಲಿ ಮಡಿಸಿ ಮಾಡಿದ ಒಂದು ಬಗೆಯ ಹೋಳಿಗೆ : (*).
[ಲಕೋಟೆ$_1$ + ಹೋಳಿಗೆ$_1$ ( < ಪೋೞಿಗೆ$_1$)]

**ಲಕ್ಕ$_1$, ಲಕ್ಕ$_3$, ಲಕ್ಖ, ಲಖ್ಖ$_1$, ಲಖ್ಖೆ, ಲಚ್ಚ$_1$, ಲಾಖ** (ನಾ). ಒಂದು ಸಂಖ್ಯೆ ; ನೂರುಸಾವಿರ ; ಲಕ್ಷ: "ಲಕ್ಷದೊಳ್ ಲಕ್ಕಂ" (ಕರ್ನಾಟಶ. ೩೮) : ಚತುರತ್ತಂ ಮೂಱುಂಯೋಜನದಳವಿಯ ಸಭಾಮಂಟಪಮನೊಂದುಲಕ್ಕ ರಕ್ಕಸವಡೆಯಿಂ ಪೊತ್ತು ತರಿಸಿ (ಕಂಕಥಾ. ೭-೨ ವ) ; ನೂಱು ಕರಿಘಟೆ ಲಕ್ಕ ಪಾಯದಳ (ಕುವ್ಯಾ ಕ. ೨-೯); ಲಕ್ಕಧನಮಿರಲು ಕೆಡುಗುಂ ಚಿಕ್ಕಂದಿನ ವಿದ್ಯೆ ಪೊರೆಗು (ಶಶಕ. ೩-೧೪೭). **ಲಕ್ಕ$_2$** : ಮೂಱುಲಕ್ಕ ದೇವಿಯರಪ್ಪರಸಿಯರ್ಕಳುಂ (ವರ್ಧಾ ೮೩. ೯೩-೧೯); ಒಂದೊತ್ತಂ ನಡೆಯಿಸುವುದ ದೊಂದೊಂದಱ ಲಯಕೆ ಲಕ್ಕತೆಱನಾಡುವುದೇನೆಂದೇಂ ಬಣ್ಣಿಸುವುದೊ ಸುರಸುಂದರಿಯ ವಿಲಾಸವಿಭ್ರಮಭ್ರೂಲತೆಯಂ (ಆದಿಪು. ೯-೩೭); ಮಾರ್ಪಡೆ ಸರಲೊಂದಱಿಂ ಕಿಡೆಯೆ ಲಕ್ಕಿಯ ಲೆಕ್ಕದಿನೆಚ್ಚ ನರ್ಜುನಂ (ನೇಮಿಪು. ೦೦-೦೪೯). **ಲಕ್ಖ** : ಕಲ್ಯಾಣದ ನೆಲೆವೀಡಿನೊಳು ಸಪ್ತಾರ್ದ್ಧಲಕ್ಖಭೂಮಿಯಂ ದುಷ್ಟನಿಗ್ರಹಂ ಶಿಷ್ಟಪ್ರತಿಪಾಲನಂಗೆಯ್ದು . . . ರಾಜ್ಯಂಗೆಯ್ಯುತ್ತಿರೆ (ಎಕ. VI, ಕಡೂರು. ೩೭-೮ ; 1187 ?). **ಲಖ್ಖ$_1$** : ವಡ್ಡರಾವುಳದ ಸುಂಕ ಲಖ್ಖಕ್ಕೆ ಅಱುವಣ ಮುಪ್ಪಾಗದೊಳಗೆ ಶ್ರೀಸ್ವಯಂಭುಕಲಿದೇವಸ್ವಾಮಿದೇವರ ಗ್ರಾಸನದ ಸತ್ರಕ್ಕೆ ಬಿಟ್ಟ ಪಾಗವೊಂದು (ಸೌಇಇ. IX-i, ೨೦೦-೨೦; 1122). **ಲಖ್ಖೆ** : ತ್ರೈಲೋಕ್ಯಮಲ್ಲ ವಿಕ್ರಮಾದಿತ್ಯದೇವರು ಸಪ್ತಾರ್ದ್ಧಲಖ್ಖೆ ಪ್ರಿಥ್ವಿಯನಾಚಂದ್ರಾರ್ಕತಾರಂಬರಂ . . . ರಾಜ್ಯಂಗೆಯ್ಯುತ್ತಿರೆ (ಎಕ. VI, ತರೀಕೆ. ೯೩-೪ ; 1173). **ಲಚ್ಚ$_1$** : ಪೊನ್ನೊಡೆಯಂ ಲಚ್ಚದ ಪೊನ್ನೊಡೆಯಂ ಗಡ ಶತಲಕ್ಷದ ಪೊನ್ನೊಟ್ಟಿಲ ನಾನೀವೆಂ (ಉದ್ಭಟ. ೨-೨೭). **ಲಾಖ** : ಸಂಭಾವಿತರು ಲಾಖ ಮಂದ್ಯಾಗ ಒಬ್ಬಾವ ಇದ್ದರ ಇರಬೇಕು (ಗ್ರಾವಾಯ. ೦೨೩).

**ಲಕ್ಕಲಕ್ಕ, ಲಚ್ಚಾಳಚ್ಚ** (ದ್ವಿರುಕ್ತಿ) : ಲಕ್ಕಲಕ್ಕಕ್ಕೆ ನೆರೆದಭವಭಕ್ತರ ನಡುವೆ (ಬಸರ. ೦೦-೦೦೭) ; ಲಕ್ಕಲಕ್ಕದಲಿ ಕಿಕ್ಕಿರಿದಿರೆ ಜೇಂಬುಳು ಮೋಹಾ ದುಂಬಿ (ಕೋಗಿಲೆ. ೯೭-೨೦) ; ಲಚ್ಚಾಳಚ್ಚ ಕುದುರೆಯಂ ಗಜರಥವ ಪೊಸ್ತಾಗಿ ಜೋಡಿಸಲ್ನೇಮಿಸುತ ಕೈದುಗಳ ಮಸ್ತಾಗಿ ಪೊಸದಾದುದಂ ತರಿಸಿ (ತುರಂಗ. ೩೭-೪೨). **ಲಕ್ಕಮುಕ್ಕ**=ಲಕ್ಷಾಂತರ ಹಣವನ್ನುಳ್ಳ ಮೂರ್ಖ ; ಸಿರಿವಂತನಾಗಿರುವ ದಡ್ಡ : ಅಕ್ಕೊ ಬರುವ ಸೊಕ್ಕಿ ಮೆರೆವ ಲಕ್ಕಮುಕ್ಕ. ಏನೆ ಇರಲಿ ; ಅರಿತು ಕಣ್ಣ, ಹರಿವರಣ್ಣ — ಬೆಪ್ಪ, ಬಿಡೆಲಾ, ಏನೆ ಇರಲಿ (ಇಂಗೀತ. ೩೭-೦೬). [<ಪ್ರಾ. ಲಕ್ಖ / ಸಂ. ಲಕ್ಷ]

**ಲಕ್ಕ$_2$, ಲಕ್ಕು, ಲಚ್ಚ$_2$, ಲೆಕ್ಕ$_1$** (ನಾ). ೧. ಗಮನ ; ಲಕ್ಷ್ಯ : 'ಲಕ್ಕಿಸು' ಪರಾ. ೨. ವ್ಯಾಖ್ಯೆ ಅಥವಾ ವಿವರಣೆಗಳಿಂದ ಹೇಳಲ್ಪಟ್ಟುದು ; ಲಕ್ಷಣಕ್ಕೆ ಉದಾಹರಣೆಯಾದುದು ; ದೃಷ್ಟಾಂತ : ಸಕ್ಕದದಿಂ ಲಕ್ಕಣಮಂ ಲಕ್ಕಮನೊಳ್ಗನ್ನಡಂಗಳಿಂ ವಿವರಿಸಿದು (ಅಕ್ಷರಶಿ. ೦-೦೪). **ಲಕ್ಕು** : ೧. ಗ್ಯಾಲಿಲಿಯೊನಿಗೆ ವಿದ್ಯಾಭ್ಯಾಸದ ಲಕ್ಕು ಬಹಳ (ಶುಂಠಿಯು. ೩-೨೨೨) ; ಆದರೆ ಈಗ ನಿನ್ನ ಲಕ್ಕೆಲ್ಲ ಹೊರಗೆಯೇ ಇದೆ (ಕವಶೀ. ೨) ; ಕುಮುದೆಯ ಮೇಲೆ ಅವನ ಲಕ್ಕಂತೆ (ಕನಕ. ೩೭). **ಲಚ್ಚ$_2$** : ೩. ಗುರುತು ; ಚಿಹ್ನೆ : ಇದು ನಿಚ್ಚಂ ತನ್ನ ಲಚ್ಚಂ ಮಟತರುವೆನಿಪೀ ವಾಂಛೆಯಿಂ ಚಂದ್ರಮಂ ಸೂಸಿದಪಂ ಪೀಯೂಷಮಂ (ಕಶಿ. III, ೨೦೯, ಹಿರಣ್ಯಗರ್ಭನ ಸರಸ್ವತೀಶ್ರುಬಂಧ). **ಲೆಕ್ಕ$_1$** : ೧. ಅವನಿಗೆ ಹಿರಿಯರನ್ನು ಕಂಡರೆ ಲೆಕ್ಕವೇ ಇಲ್ಲ (ರೂಢಿ). 'ಲಕ್ಷ$_1$', 'ಲೆಕ್ಕಿಸು$_1$' ಪರಾ.
[< ಪ್ರಾ. ಲಕ್ಖ / ಸಂ. ಲಕ್ಷ್ಯ]

**ಲಕ್ಕ$_3$** (ನಾ). ಅರಗು ; ಲಾಕ್ಷ : ಲಕ್ಕವ ತಂದಗ್ನಿಮುಖದಲ್ಲಿ ಇಟ್ಟಂತೆ ಉಕ್ಕುವ ಹೊಳೆಯೊಳು ಪೊಕ್ಕು ಮುಣಗಿದಂತೆ (ವಿಕಾಸು. ೯೦-೪).
[ <ಪ್ರಾ. ಲಕ್ಖ, ಲಕ್ಖಾ. / ಸಂ. ಲಾಕ್ಷಾ]

**ಲಕ್ಕ$_4$, ಲಖ್ಖ$_2$** (ಗು). ೧. (ಉಕ) ಸುಂದರವಾದ ; ಚೆನ್ನಾದ ; ಶೋಭೆಯಿಂದ ಕೂಡಿದ : ಏನು ರಾಯರೇ, ಲಕ್ಕ ಬೆಳದಿಂಗಳು ನೋಡಿ ಗೊಂಬೆಯ ಹಾಗೆ ಮಲಗಿಬಿಟ್ಟಿದ್ದಿರೇನು (ಕಾರುಕ. ೭). (ನಾ). ೨. ಸುಂದರವಾದುದು ; ಒಳ್ಳೆಯದು : ನಾ ಮಾಡಿದ್ದೆಲ್ಲ . . . ಪಾಡ, ನಾ ಮಾಡಿದ್ದೆಲ್ಲಾ ಲಕ್ಕ . . . ಎಂದು ತುಳಜಾ ಅವನನ್ನಣಕಿಸುತ್ತಾಳೆ (ಬನಸಿ. ೬೭). **ಲಖ್ಖ$_2$** : ೨. ಲಖ್ಖದ ಈ ನಿವಾಂತ ಜಾಗಾ ನನ್ನ ಕೆಲಸಕ್ಕ (ಪಾಠಾಂ. ೪೬).

**ಲಕ್ಕಾಗು** = ಚೆನ್ನಾಗು ; ಒಳ್ಳೆಯದಾಗು : ನಿಮ್ಮ ಪ್ರಕೃತಿ ಬಹಳ ಲಕ್ಕಾಗಿದೆ, ಗುರುತು ಸಹ ಹತ್ತುವಂತಿಲ್ಲ (ಸಂಳವು. ೪೨).
[← ಮರಾ. ಲಕ್ಕ, ಲಕ್ಖ, ಲಖ್ಖ]

**ಲಕ್ಕಂಬಡೆ** (ಕ್ರಿ). ಲಕ್ಷ ಬೆಲೆಯನ್ನು ಹೊಂದು ; ಲಕ್ಷ ಹೊನ್ನಿನ ಬೆಲೆಬಾಳು : ತೊಡವೆನಗಪ್ಪೊಡೆ ಲಕ್ಕಂಬಡೆವವು ಪಲವೊಳವು ನಂಬೆಯಪ್ಪೊಡೆ ನೋಡೀಗಡೆ (ಧರ್ಮಾಮೃ. ೨-೦೨೦). [ಲಕ್ಕ$_1$ + ಪಡೆ$_1$]

**ಲಕ್ಕಗೆಯ್** (ಕ್ರಿ). ಲಕ್ಷವನ್ನಾಗಿ ಮಾಡು ; ಲಕ್ಷಸಂಖ್ಯೆಗೆ ಏರಿಸು : ಸಾಸಿರವೊಂಗೆಯ್ದು ಚಃ ಕಾಸಟಮೆಂದೊಂದುಲಕ್ಕಗೆಯ್ವುದಿದರ್ಕಂ ಮಾಸರ ಮುಡಲೇದಧಿಕವಿಳಾಸದಿನುಡಲಿಕ್ಕಿ ನೆಱೆಯೆ ಬಿಯಮಂ ಮೆಱೆದಂ (ಕಂಕಥಾ. ೩-೪೪). [ಲಕ್ಕ$_1$ + ಕೆಯ್$_1$]

**ಲಕ್ಕಚಣ, ಲಕಚ** (ನಾ). ಒಂದು ಬಗೆಯ ಸಾಧನ, — ಸಣ್ಣ ಆಯುಧ; ಚಾಣ : "ಲಕಚಂ ಲಕ್ಕಚಣಮೆಂದೆನಿಕ್ಕುಂ" (ಮಂಗರಾ. ೦೦೩-೬) ; ಸುಲಿಪಲ್ಲಂ ಮೆಱೆವೈ ಪರಲಲನೆಯರ್ಗೆಂದಿಕ್ಕುಟಿಂದೆ ಕೀಟ್ವರ್ ಪಲ್ಲಂ ಸಲೆ ಕಣ್ಣಂ ಕಿತ್ತುವೆಯೆಂದು ಲಕ್ಕಚಣದಿಂದೆ ವಿಮಂಟಿ ಕಳೆವರ್ ಕಣ್ಣಂ (ಪಾರ್ಶ್ವಪು. ೬-೯೦). **ಲಕಚ** : ಮೇಲಿನ 'ಮಂಗರಾ ' ಪ್ರಯೋಗವನ್ನು ನೋಡಿ. [ಲಕ್ಕ? + < ಚೀಣ]

**ಲಕ್ಕಡಿ** (ನಾ). ಮರದ ದಿಮ್ಮಿ : 'ಲಕ್ಕಡಿಕೋಟೆ' ಪರಾ.
[ ← ಹಿಂ. ಲಕಡೀ. / ಸಂ. ಲಕುಟ. / ಪ್ರಾ. ಲಕ್ಕುಡ ]

**ಲಕ್ಕಡಿಕೋಟೆ** (ನಾ). ಭಾರವಾದ ಮರದ ದಿಮ್ಮಿಗಳನ್ನು ನಿಲ್ಲಿಸಿ ಕಟ್ಟಿದ ಕೋಟೆ, — ಮರದ ದಿಮ್ಮಿಗಳಿಂದಾದ ದುರ್ಗ : ಅಲ್ಲಲ್ಲಿ ಲಕ್ಕಡಿಕೋಟೆಗಳ ಹಾಕಿ ಠಾಣ್ಯ ಇಟ್ಟುಕೊಂಡು . . . ಬರುತ್ತಾರೆ (ರಾಜೇಂದ್ರ. ೪೦). [ ಲಕ್ಕಡಿ + ಕೋಟೆ$_1$ ( < ಕೋಂಟೆ ) ]

**ಲಕ್ಕಣ, ಲಚ್ಚಣ$_1$, ಲಚ್ಛಣ** (ನಾ). ೧. ಗುರುತು, — **ಚಿಹ್ನೆ** : "ಲಕ್ಕಣಮೆನೆ ಲಕ್ಷಣ" (ಕಬಿಕಂ. ೧೦೬); ಬೂದಿ ಜೆಡೆ ಲಕ್ಕಣಂ ತಪಕಾದುವೆರಟಿೞ್ದಣ ಶರಾಸನಂ ಕವಚಮಿವೆಂತಾದುವೊ (ಕಂಕಥಾ. ೭-೯೨). ೨. ಒಂದು ವಸ್ತು ಇಲ್ಲವೆ ಸಂಗತಿಯ **ವಿಶಿಷ್ಟ**ವಾದ ಗುಣದ ನಿರೂಪಣೆ ; ವ್ಯಾಖ್ಯೆ; ಸೂತ್ರ : ಏಳೆಯ ಲಕ್ಕಣ [ಪಾಠಾಂ. ಲಕ್ಷಣ]ಮಂ ಪೇೞ್ವೆಂ (ಛಂದೋಂಬು. ೩-೨೩೦); ಸಕ್ಕದದ **ತದ್ಭವಂ**ಗಳ ಲಕ್ಕಣಮಂ ಕನ್ನಡಕ್ಕೆ ಲಕ್ಷಿಸಿ ಪೇೞ್ವೆಂ (ಕಮುದ. ೨೩೩); ಸಕ್ಕದದಿಂ ಲಕ್ಕಣಮಂ ಲಕ್ಕಮನೊಳ್ಗನ್ನಡಂಗಳಿಂ ವಿವರಿಸಿದಂ (ಅಕ್ಷರಶಿ. ೦-೦೪). ೩. ದುರ್ಯೋಧನನ ಮಗ; ಲಕ್ಷಣಕುಮಾರ : ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಂ ಸುತ್ತಿಱಿದು ಬಳಸಿ ಬರೆ (ಕಂಕಥಾ. ೦೦-೨೭ ವ). ೪. [ಕಾವ್ಯಮೀ] ಕಾವ್ಯದ ಸೌಂದರ್ಯವನ್ನು ಹೆಚ್ಚಿಸುವ ಗುಣ, — ಲಕ್ಷಣ : ಪುರುಳುಂ ಲಕ್ಕಣಮುಂ ಮಯ್ಸಿರಿಯುಂ ತಳ್ತಸೆಯೆ **ಪೇಟ್ದ** ಕಬ್ಬಂ (ಕಬ್ಬಿಗಕಾ. ೭); ರಸಮೊಸರೆ, ಲಕ್ಕಣಂ ಮಿಕ್ಕಿರೆ, ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ, ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ (ರಾಮಾಶ್ವ. ೭-೦೭). **ಲಚ್ಚಣ$_1$** : ೧. "ಲಚ್ಚಣಮೆಂದು ಲಕ್ಷಣದೊಳಂ"

(ಕಬ್ಬಾಪ. ೮೩-೩೩); ''ಲಕ್ಷಣಕ್ಕೆ ಲಚ್ಚಣಮೆನಿಪ್ಪುದು'' (ಕಶರ. ೦೨೯).
೫. [ನಾಟ್ಯ]ಹತ್ತು ಬಗೆಯ ನೃತ್ಯಭೇದಗಳಲ್ಲಿ ಒಂದು: ತಾಂಡವ ನಾಟ್ಯ ನೃತ್ಯ ಲಾಸ್ಯ ಗುಂಡಿಲ ಪೆಕ್ಕಣ ಲಚ್ಚಣ. . . ದಶವಿಧಪಾತ್ರಂಗಳಂ ತೋಱಿ ರಂಜಿಸುವ ನರ್ತನ ನರ್ತಕಿಯರಿಂ (ಕೃರಪು. ೩-೩೪). ಲಚ್ಚಣ: ೫. ತಾಂಡವ ನಾಟ್ಯ ನೃತ್ತ ಲಾಸ್ಯ ಗುಂಡಲ ಪೆಕ್ಕಣ ಲಚ್ಚಣ ಅಪರಿಪಾತ್ರ ಸುಪಾತ್ರ ಸರ್ವತೋಭದ್ರವೆಂಬ ದಶವಿಧಪಾತ್ರಂಗಳಂ (ಏವೇಕ. ೨೩೯).
[ < ಸಂ. ಲಕ್ಷಣ ]

ಲಕ್ಕಣಿಕೆ ' **ಲೆಕ್ಕಣಿಕೆ** ' ನೋ.

ಲಕ್ಕರಿ ' **ಲಪ್ಕರು** ' ನೋ.

ಲಕ್ಕಲಿ ' **ಲೊಕ್ಕಿ₁** ' ನೋ.

ಲಕ್ಕಾ (ನಾ). ಪಾರಿವಾಳಗಳಲ್ಲಿ ಒಂದು ಜಾತಿ : ಲಕ್ಕಾ ಎಂಬ ಪಾರಿವಾಳಗಳು (ಪುಂಂಬಿಯ. ೩-೦೦೦). [ ← ಅರ. ಪಾರ. ಹಿಂ. ಲಕ್ಕಾ ]

ಲಕ್ಕಿ₁ ' **ಲೊಕ್ಕಿ₁** ' ನೋ.

ಲಕ್ಕಿ₂ ' **ಲಕುಮಿ** ' ನೋ.

ಲಕ್ಕಿಗಿಡ, ಲಕ್ಕಿಲಿಗಿಡ (ನಾ). ಒಂದು ಬಗೆಯ ಔಷಧೀಸಸ್ಯ; ಲೊಕ್ಕಿ : '' ಸಿಂಧುಕಃ . . . ಇಂದ್ರಾಣೀ- ಪಾವಿಲೀಗಿಡದ ಹೆಸರುಗಳು; ಲಕ್ಕಿಗಿಡ '' (ನಿಘಂಟು. ೦೨೭); ಎಕ್ಕೆ ಎಲಚಿಯು ಲಕ್ಕಿಗಿಡಗಳು ಸೊಕ್ಕಿ ಮೆರೆವಾಸೀಗೆಮರಗಳು (ಗೋಹಾಡು. ೨-೬). **ಲಕ್ಕಿಲಿಗಿಡ** : '' ಲಕ್ಕಿಲಿಗಿಡ, ನೆಕ್ಕಿ. . . ವಾಮಿ, ಭೂತವೇಶಿ '' (ಸಸ್ಯಪ. ೦೩೩); ಲಕ್ಕಿಲಿಗಿಡ, ನೆಕ್ಕಿ (ವೃಕ್ಷಿನಿ. ೬೮-೭೯೮). [ ಲಕ್ಕಿ₁ (< ಲೊಕ್ಕಿ₁) + ಗಿಡ (< ಗಿಡು) ]

ಲಕ್ಕಿಮುಷ್ಟಿ (ನಾ). (ಉಕ) ಒಂದು ಬಗೆಯ ಜೂಜಾಟ; '' ರೊಕ್ಕದಾಟ '' (ಜಾನಕೋ. ೯೦) : ಲಕ್ಕಿಮುಷ್ಟಿ ಆಡಿ ಆಸ್ತಿ ಕಳಕೊಂಡ (ರೂಢಿ).
[ ಲಕ್ಕಿ₂ (< ಲಕುಮಿ) + ಮುಷ್ಟಿ₂ ]

ಲಕ್ಕಿಲಿ ' **ಲೊಕ್ಕಿ₁** ' ನೋ.

ಲಕ್ಕಿಲಿಗಿಡ ' **ಲಕ್ಕಿಗಿಡ** ' ನೋ.

ಲಕ್ಕಿಸು, **ಲೆಕ್ಕಿಸು₁** (ಕ್ರಿ). ಗಮನ ಕೊಡು; ಲಕ್ಷಿಸು : ಹೂಳಿದನು ಮೂರೆ ಸಾಸಿರಕೋಲುಗಳ ಬಾಯೊಳಗೆ ಲಕ್ಕಿಸದಾಳವಾಡುತ ದನುಜನೆಂದನು ಮಂದಹಾಸದಲಿ (ಕೋಗಪು. ೨೩-೬೦). **ಲೆಕ್ಕಿಸು₁** : ಅನೇಕ ಶೀಲಗುಣ ದೊಳ್ಪದೊರಿಂತು ಲೆಕ್ಕಿಸದುದುವ್ ನೆನೆಗೆನ್ದೊರು ಮುನಿಯಿಂದಳ್ತಪಚ್ಚಲೆ ಸೋನ್ತು ತಾವುಮ್ ತಮಗೆ ಮೃತ್ಯುವರವಾನಱಿದಂ (ಎಕ. II. ೦೦೩-೦; ಶಾ. ೭೫೦) ; ಮನನೆಲಲಂ ನೆನೆಯದೆ ಅರ್ಥಮಂ ಲೆಕ್ಕಿಸದೆ ವೃತ್ತಿಯಂ ವಿಚಾರಿಸದೆ . . . ಬಾಗೆವಾಡಿಯಂ ಪೊಱಮಟ್ಟು (ಬಸರ. ೨-೯೩); ರಾವುತ ಪಾಯಕರ ಲೆಕ್ಕಿಸದೆಕ್ಕಲ ಖನ್ನೋಜಿಗಳು ರಕ್ಕಸನಿದಿರೊಳೊಪ್ಪಿದರು (ಕುಮಾರಾಂ. ೦೬-೯೯). [ಲಕ್ಕ₂ + _ ಇಸು₃]

ಲಕ್ಕು ' **ಲಕ್ಕ₂** ' ನೋ.

ಲಕ್ಕೆ₁ ' **ಲೊಕ್ಕಿ₁** ' ನೋ.

ಲಕ್ಕೆ₂ ' **ಲಕ್ಕ₁** ' ನೋ.

ಲಕ್ಕೆ₃ (ನಾ). ಗುರಿ; ಉದ್ದೇಶ (?): ವನಧಿಯ ನೀಳ್ದ ಪೆರ್ದೆರೆಗಳೀ ನೆಲನಂ ಕವಿದಪ್ಪುವೀಗಳೆಂಬಿನಮತಿವೇಗದಿಂ ಪರಿವ ಪಾಱುವ ಲಕ್ಕೆಯನೊಡ್ಡುವೊಳ್ಪು ತನ್ನನೆ ನಡೆ ನೋಡಿಸುತ್ತುಮಿರೆ ಜಾಯಿಲವೊಂದೆರಡೆಂದು ತೋಱಿ ನೆಟ್ಟನೆ ಪದಿನೆಂಟುಕೋಟಿವರೆಗಂ ತಳರ್ದತ್ತು ತುರಂಗಸಾಧನಂ (ಆದಿಪು. ೦೦-೩೦).
[<ಲಕ್ಷ್ಯ ?]

ಲಕ್ಕೋಟೆ₁ ' **ಲಕೋಟೆ₁** ' ನೋ.

ಲಕ್ಕೋಟೆ₂ ' **ಲಕೋಟೆ₂** ' ನೋ.

ಲಕ್ಖ ' **ಲಕ್ಷ₁** ' ನೋ.

ಲಕ್ಖಗಡುಗೆ, **ಲಖಗಡುಗೆ** (ನಾ). ದೇವರಿಗೆ ಲಕ್ಷ ಗಡಿಗೆಗಳ ನೀರಿನಿಂದ ಮಾಡುವ ಅಭಿಷೇಕ ; ಲಕ್ಷಕುಂಭಾಭಿಷೇಕ : ಶ್ರೀಮತು ಕಲಿದೇವರ್ಗ್ಗೆ ಪ್ರತಿವರ್ಷಂ ಲಕ್ಖಖಗಡುಗೆನಿಮಿತ್ತವಾಗಿಯಲ್ಲಿಯಗ್ರ್ರವಾಣಿಯುಂ ತಹರು ನಾಲ್ವರು (ಕಾಡ್ನಿ. IX-i, ೨೩೩-೦೩ ; 1148). **ಲಖಗಡುಗೆ** : ಸಮಸ್ತ ಸಿವಸ್ಥಾನಂಗಳಿಗೆ ಲಖಗಡುಗೆ ನಂದಾದೀವಿಗೆಗಂ ಸುಂಕಪನ್ನಾಯ ಸರ್ವ್ವಬಾಧೆಪರಿಹಾರವಾಗಿ . . .. ಧಾರಾಪೂರ್ವ್ವಕಂ ಮಾಡಿ ಬಿಟ್ಟ ದತ್ತಿ (ಎಕ. VI. ಕಡೂರು. ೦೬೯-೩; 1200).
[ಲಕ್ಖ (<ಲಕ್ಷ₁) + ಗಡುಗೆ (< ಗಡಿಗೆ) ]

**ಲಕ್ವ** (ನಾ). ಶರೀರದ ಒಂದು ಭಾಗವು ನಿಷ್ಕ್ರಿಯವಾಗುವ ಒಂದು ಬಗೆಯ ರೋಗ ; ಅರ್ಧಾಂಗವಾಯು ; ಪಾರ್ಶ್ವವಾಯು : ಮೃದುತಾಳಿಗೆಗೆ ಲಕ್ವ (Paralysis) ಹೊಡೆದಾಗ ನುಂಗಿದ ಆಹಾರ ಮೂಗಿನ ಮೂಲಕ ಹೊರಬರುತ್ತದೆ (ಕಂಠರೋ. ೦೪); ವಿಧಿ ಅವನಿಗೆ ಲಕ್ವ ಹೊಡಿಸಿ, ಪ್ರಾಣಾನ ಕಿತ್ತುಕೊಂಡುಹೋಯಿತು (ಸಂಗೊಂ. ೦೩).
ಲಕ್ವಬಡಿ = ಅರ್ಧಾಂಗವಾಯುವುಂಟಾಗು ; ಪಾರ್ಶ್ವವಾಯು ಬರು: ಅವನ ಕ್ರಿಯಾಪಟುತ್ವಕ್ಕೇ ಲಕ್ವಬಡಿದ ಹಾಗಾಯಿತು (ಪುಲಿಪು. ೩೬೪). **ಲಕ್ವಹೊಡೆ** = ಲಕ್ವಬಡಿ : ಅವರಿಗೆ ಲಕ್ವ ಹೊಡೆದು ಆಸ್ಪತ್ರೆ ಸೇರಿದ್ದಾರೆ (ರೂಢಿ). [← ಅರ. ಹಿಂ. ಲಕವಾ ; ಮರಾ. ಲಕವಾ, ಲಖವಾ]

**ಲಕ್ಷ₁**, **ಲಕ್ಷೆ** (ನಾ). ಗಮನ ; ಧ್ಯಾಸ ; ಲಕ್ಷ್ಯ : ಸಮುದ್ರತಳದಲ್ಲಿ ನಡೆಯುವ ಕೆಲವು ಮಹತ್ಕಾರ್ಯಗಳು ನಿಮ್ಮ ಲಕ್ಷಕ್ಕೆ ಬರದೆ ಇರಲಾರವು (ಪುಂಂಬಿಯ. ೬-೨೦೯); ಈ ಎಲ್ಲಾ ಪ್ರಕಾರಗಳು ಲಕ್ಷದಲ್ಲಿಡುವುದು ಅವಶ್ಯಕವದೆ (ಪುಂಂಬಿಪ್ರಾ. ೯. ಕ್ರಿ ಸಾ ಪರಿ); ನಿರ್ಜನವಾದ ಬೀದಿಯಲ್ಲಿ ಅದು ಬಹುಶಃ ಯಾರ ಲಕ್ಷಕ್ಕೂ ಬರಲಿಕ್ಕಿಲ್ಲ (ಹೊಸಕ್ಷ. ೨೦೦). ' **ಲಕ್ಷಗೊಡು** ' ಪರಾ. **ಲಕ್ಷೆ** : ತನ್ನ ಮಗಳನುಪೇಕ್ಷಿಸದಿರೆಂದು ಕಟ್ಟಮ್ಮಾಡಿ ತರುಣಿಯರನಾಕ್ಷಣವೆ ಕಳುಹಿಸಿ ಯಯಾತಿ ಸಂಗಡ ಶುಕ್ರ ಮರಳಿದನು ನಿಜ ನಿಲಯಕೆ ಲಕ್ಷೆ[ಶಾಪಾಂ. ಕ್ಷಿ]ಯನ್ನಿವರ ಮೇಲಿಟ್ಟು (ಶುರಂಗ. ೯-೩೦). '**ಲಕ್ಕ₂** ' ಪರಾ. [< ಸಂ. ಲಕ್ಷ್ಯ]

**ಲಕ್ಷ₂** (ನಾ). ೧. ಒಂದು ಸಂಖ್ಯೆ ; ನೂರುಸಾವಿರ : ಚತುರಶೀತಿಲಕ್ಷಪೂರ್ವಾನಪವರ್ತ್ಯಾಯುಷ್ಯನುಮಪ್ರತಿಹತಶಾಸನುಮಪ್ಪಾಗಿ(ಆದಿಪು. ೦೩-೩೪); ಕೆಟಗಶೀತ ಸಹಸ್ರೋತ್ತರಲಕ್ಷಯೋಜನಬಾಹುಲ್ಯಮನಾಂತು ರತ್ನಪ್ರಭೆಯೆಂಬ ಪೃಥ್ವಿಯಿರ್ಕುಂ (ಪುಲಕಪು. ೦೦-೯೦ ಪ); ಲಕ್ಷ ಸಂಖ್ಯೆಯ ಹಿರಣ್ಯವ ತಂದು (ಬಸವ. ೬೦೩) ; ಏಳು ಲಕ್ಷವೆ ಲಕ್ಷ . . . ವಚನಗಳ ಹೇಳಿದನು ಕೇಳೊ (ಸವಗ್ಣ. ೨೯); ತುಂಬಿತ್ತೊಡನೆ ವನದೇಶವಂ ಲಕ್ಷ ಪಕ್ಷಿಯುಲಿ (ಶ್ರೀರಾಮಾ. ೩೦-೦೦೩); ಲಕ್ಷವಾದರೂ ಭಿಕ್ಷೆ ಬೇಡಬಾರದು (ಗಾದೆ). ೨. ಗುರುತು ; ಚಿಹ್ನೆ : ಉಕ್ಷವರಲಕ್ಷ ವಿಜಿತಾಕ್ಷ ಮದದಕ್ಷ ಮಖಶಿಕ್ಷ . . . ಜಯಸಿದ್ಧನಂಜ (ಗುರುಪಾ. ೬-೦). ೩. ತೋರಿಕೆ ; ನಟನೆ. ೪. ಕಪಟ ; ಮೋಸ. ೫. ಗುರಿ ; ಧ್ಯೇಯ : "ಲಕ್ಷ್ಯಂ, ಲಕ್ಷಂ, ಶರವ್ಯಂ— ೩ ಗುರಿಯ ಹೆಸರು ; ಗುರಿಯ ಗುರ್ತು" (ನಿಘಂಟು. ೨೬೪). ೬. ಮುತ್ತು ; ಮೌಕ್ತಿಕ.

**ಲಕ್ಷಗಟ್ಟಲೆ**, **ಲಕ್ಷಗಟ್ಲೆ** = ಲಕ್ಷಾಂತರ ; ಬಹಳ : ರಾಮಾಯಣದಲ್ಲಿ ಲಕ್ಷಗಟ್ಟಲೆಯ ರಾಕ್ಷಸರ ಆಕಾರಗಳು ಬಹುಘೋರವಾಗಿಯೂ, ವಿಚಿತ್ರವಾಗಿಯೂ ಇದ್ದುವೆಂದು ವರ್ಣಿಸಲಾಗಿದೆ (ಕಾರದ. ೬೬) ; ಅಲ್ಲಿ ನಡೆಯುವ ಜಾತ್ರೆಗೆ ಲಕ್ಷಗಟ್ಲೆಯಲ್ಲಿ ಜನ ಸೇರುತ್ತಾರೆ (ರೂಢಿ). **ಲಕ್ಷದೀಪಾರಾಧನೆ** = ದೀಪಾವಳಿಯಲ್ಲಿ ಲಕ್ಷದೀಪಗಳನ್ನು ಹಚ್ಚಿಟ್ಟು ಮಾಡುವ ಪೂಜೆ, — ಉತ್ಸವ : ಲಕ್ಷದೀಪಾರಾಧನೆಯ ಹಬ್ಬವೆಂದು ಲಕ್ಷಾಧಿಪತಿ ಮಹಾತ್ಮರ ಮುಂದೆ ಬಂದು ಲಕ್ಷಲಕ್ಷಾಂತರದಿ ಹರಸುವೆವು ಬೇಡಿ (ಕಂಪ್ಲ. ೦೩-೦೬). ಲಕ್ಷಾನುಲಕ್ಷ = ಅನೇಕ ಲಕ್ಷ ; ಲಕ್ಷಗಟ್ಟಲೆ: ಒಂದು ಭಾರೀ ದೂರದರ್ಶಕದ ಮೂಲಕ ಲಕ್ಷಾನುಲಕ್ಷ ನಕ್ಷತ್ರಗಳನ್ನು

ನೋಡಬಹುದು (ಆಕಾಶ. ೩೨). ಲಕ್ಷಾವಧಿ=ಲಕ್ಷಗಟ್ಟಲೆ : ಅನ್ಯಪತ್ರಿಕೆಗಳು ಲಕ್ಷಾವಧಿ ಓದುಗರ ಕೈಗಳಿಗೆ ಹೋಗುತ್ತವೆ (೬೬ಬಿರ. ೮). ಲಕ್ಷೋಪಲಕ್ಷ =ಲಕ್ಷಾನುಲಕ್ಷ : ಕತ್ತಿಯು ಏಟಿಗೆ ಸಿಕ್ಕಿ ಸತ್ತವರನು ಲಕ್ಷೋಪಲಕ್ಷ ವೆನ್ನುವರು (೩೦ಕಾಶ. ೩೪೮-೬೦). [ಸಂ.]

**ಲಕ್ಷಕ** (ಗು). ೧. ಗುರುತಿಸುವ ; ಸೂಚಿಸುವ. (ನಾ). ೨. [ಕಾವ್ಯಮಿ] ಲಕ್ಷ್ಯಾರ್ಥವನ್ನು ಕೊಡುವ ಶಬ್ದ : ಅರ್ಥವು ಮುಖ್ಯವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರು ವಿಧ ; ಈ ಅರ್ಥಗಳನ್ನು ಕೊಡುವ ಶಬ್ದಗಳಿಗೆ (ಕ್ರಮವಾಗಿ) ವಾಚಕ, ಲಕ್ಷಕ, ವ್ಯಂಜಕಗಳೆಂದೂ . . . ಹೆಸರು (ಕೈಶಿ. ೦೭೬) ; ವಾಚ್ಯಾರ್ಥಕ್ಕೆ ಬಾಧೆ ತಟ್ಟಿದಾಗ ಮಾತ್ರ ಲಕ್ಷಣಾವೃತ್ತಿಗೆ ಪ್ರವೃತ್ತಿಯುಂಟಾಗಿ ಲಕ್ಷ್ಯಾರ್ಥವು ಗೋಚರವಾಗುತ್ತದೆ. ಇದನ್ನು ತಿಳಿಸುವ ಶಬ್ದಕ್ಕೆ 'ಲಾಕ್ಷಣಿಕ' ಅಥವಾ 'ಲಕ್ಷಕ' ಎಂದು ಹೆಸರು (ಭಾರಶಾ. ೨೬೩). [ಸಂ.]

**ಲಕ್ಷಕೊಡು** 'ಲಕ್ಷಗೊಡು' ನೋ.

**ಲಕ್ಷಗೊಡು**, ಲಕ್ಷಕೊಡು (ಕ್ರಿ). ಗಮನ ಕೊಡು ; ಲಕ್ಷಿಸು : ಆಕಾಶವನ್ನು ನೋಡಿ ಹವೆಯಲ್ಲಿ ಮೂಸಿ, ಪ್ರಕೃತಿಯ ಪ್ರಕೋಪಗಳೇನಾದರೂ ತೋರುವವೋ ಎಂದು ಲಕ್ಷಗೊಡುತ್ತಿದ್ದನು (೩೦ಗಾಹ. ೩೩). **ಲಕ್ಷಕೊಡು** : ಹಿರಿಯರ ಮಾತಿಗೆ ಲಕ್ಷಕೊಡದ್ ಹುಡುಗ ಹಾಳಾದ (ರೂಢಿ). [ಲಕ್ಷ್ಯ + ಕೊಡು$_1$]

**ಲಕ್ಷಣ$_1$** (ನಾ). ೧. ಗುರುತು ; ಚಿಹ್ನೆ ; ಕುರುಹು : "ಚಿಹ್ನಂ ಲಾಂಛನು ಕಳಂಕಂ ಲಕ್ಷಣಂ ಲಕ್ಷ್ಮಮುಂಕಮದು" (ಶಬ್ದಗಣ. ೦೧-೩) ; ಜಂಗಮಸ್ಥಳಕ್ಕೆ ಲಕ್ಷಣವಾವುದೆಂದರೆ ಹೇಳಿಹೆ ಕೇಳಿರಣ್ಣ (ಅವಶಂ. ೦೦೪-೪೭೦) ; ಲಕ್ಷಣವೆಂದರೆ ಆಯಾ ವಸ್ತುಗಳಲ್ಲಿರುವ ಮುಖ್ಯವಾದ ಸಾಧಾರಣವಲ್ಲದ ಧರ್ಮಗಳು, ಗುರುತುಗಳು (ಹಿಂದಶಾ. ೨೨೦) ; ನೀನಂತೂ ಇಲ್ಲಿಂದ ಬೇಗ ಅಲ್ಲಾಡುವ ಲಕ್ಷಣ ಕಾಣಲಿಲ್ಲ (ಇಕ್ಕ. ೨೦೩). ೨. ವಿಶಿಷ್ಟವಾದ ಗುಣ. ೩. ಚಂದ್ರನಲ್ಲಿರುವ ಕಪ್ಪು,— ಕಳಂಕ : "ಮೃಗಃ . . . ಲಕ್ಷ್ಮ, ಲಕ್ಷಣಂ, ಕಳಂಕಃ . . . ಈ ೮ ಚಂದ್ರಮಂಡಲದ ನಡುವಣ ಕರ್ಪು" (ಹಲಾಯು. ೪-೪೩). ೪. (ಮೈಮೇಲಿನ) ಒಳ್ಳೆಯ ಗುರುತು,— ಶುಭಚಿಹ್ನೆ : ಪುಟ್ಟುವ ಕಟ್ಟಿದ ಬಳಿಕ ಲಕ್ಷಣವನೆಣಿಸುವರೆ (ಚಿತವ. ೦೩೬) ; ನಿಮ್ಮ ಮಗನಿಗೆ ಯೋಗಪುರುಷನ ಲಕ್ಷಣಗಳಿವೆ (ಸಂಗಾಳ್. ೪). ೫. (ರೋಗದ) ಸೂಚನೆ ; (ಕಾಯಿಲೆಯ) ಚಿಹ್ನೆ : ಲಕ್ಷಣವೆಂಬುದು ಹುಟ್ಟಿದ ರೋಗದ ವ್ಯಕ್ತಲಕ್ಷಣ (ಸಕವ. ೨೦) ; ಅಬಾಧಿತತ್ವ ಕಡಿಮೆಯಾದಾಗ ರೋಗ ತಗುಲಿದರೆ ರೋಗದ ಲಕ್ಷಣಗಳು ಕಾಣಬರುತ್ತವೆ (ಕಂರೋ. ೩). ೬. ಚೆಲುವು ; ಅಂದ ; ಸೌಂದರ್ಯ: ಲಕ್ಷಣಕ್ಕಮನುರೂಪಮಾದ ವ್ಯಂಜನಕ್ಕಂ ಹಾವಕ್ಕನುರೂಪಮಾದ ಪೆಣ್ಬಾವಕ್ಕಂ . . . ಬೆಕ್ಕಸಂಬಟ್ಟು (ಕಾಂತಿತ. ೩-೩೩ ವ) ; ಕಣ್ಣು ಮೂಗಿನಿಂದ ಲಕ್ಷಣವಾಗಿದ್ದಳಾದರೂ ಮೈಬಣ್ಣ ಸ್ವಲ್ಪ ಕಪ್ಪು (ಪಾತೋಲ. ೦೬೪). ೭. ಒಂದು ವಸ್ತು ಇಲ್ಲವೆ ಸಂಗತಿಯ ವಿಶಿಷ್ಟಗುಣಗಳ ಸೂತ್ರಬದ್ಧವಾದ ನಿರೂಪಣೆ ; ವ್ಯಾಖ್ಯೆ : ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಮೆಂದೆ ಪಟ್ಟನ್ನಡಮಂ ಪೊಲಗೆಡಿಸಿ ನುಡಿವರಾಗಮಬಲ್ಲೋನರ್ (ಕವಿರಾ. ೦-೪೮) ; ಕಂದಕ್ಕೆ ಲಕ್ಷಣಮಂ ಪೇಟ್ಟಿಂ (ಛಂದೋಂಬು. ೪-೨೩೦) ; ತಮ್ಮಾಯತವ ತಮ್ಮಾರುಭಟೆಯನು ಲಕ್ಷ್ಯಲಕ್ಷಣಭೇದಭಂಗಿಗಳ ಸಾರತರಕೋದಂಡಪಂಡಿತರಾರಯಿಕೆಯಲಿ ತಬುಬಿ ನಿಂದರು (ಕುವ್ಯಾ. ೪. ೨೦-೨೩) ; ಸಂಗೀತದಲ್ಲಿ ಲಕ್ಷ್ಯಕ್ಕೂ ಲಕ್ಷಣಕ್ಕೂ ಭಿನ್ನಾಭಿಪ್ರಾಯವಿದ್ದೇಯಿದೆ (ಭಾರರ. ೩೩೭). ೮. ನೋಟ; ದರ್ಶನ : "ನಿಭಾಳನಂ . . . ಲಕ್ಷಣಂ, ದರ್ಶನಂ, ದೃಷ್ಟಿಃ, ದ್ಯೋತನಂ —ಈ ೮ ನೋಟಂ" (ಹಲಾಯು. ೪೬-೫೦೨) ; "ಲಕ್ಷಣಂ ದರ್ಶನಂ ಧ್ಯಾನಮವಲೋಕನಂ ನೋಟಮಕ್ಕು" (ಮಂಗರಾ. ೪೩-೨). ೯. ಗುರಿ; ಉದ್ದೇಶ; ಆಶಯ; ಧ್ಯೇಯ. ೧೦. ದುರ್ಯೋಧನನ ಮಗ ಕೌರವೇಶ್ವರಂ . . . ತನ್ನ ಮಗನಪ್ಪ ಲಕ್ಷಣಕುಮಾರನಂ ನೆನೆದು ಮನ್ಯೂದ್ಗತಕಂಠನಾಗಿ ತದಾಸನ್ನಪ್ರದೇಶದೊಳ್ ತನ್ನ ಕುಮಾರನಂ ಕಂಡು (ಗದಾಯು. ೯-೩೪ ವ) ; ನಿನ್ನಯ ಬಸಿಱ ಸೀಳಿಯೆ ತೆಗೆವೆವೆಮ್ಮಯ ಕುವರನೆನುತಾ ಲಕ್ಷಣಾದಿಗಳು ತೆಗೆದೆಸುತ ನೇಱಿ ಕೈದರು (ಕುವ್ಯಾದ್ರೋ. ೩-೭೩). ೧೧. = ಲಕ್ಷಣಾವೃತ್ತಿ : ಅಭಿಧಾ, ಲಕ್ಷಣ, ವ್ಯಂಜನವೇ ಮುಂತಾದ ಶಬ್ದಶಕ್ತಿಯನ್ನು ಈ ಕಾಲದ ಯಾವ ಕವಿಯೂ ಕಣ್ಣೆತ್ತಿ ನೋಡಲಿಲ್ಲ (ಭಾರರ. ೪೬೩). ೧೨. [ಜೈನ] ಪಾರಿವ್ರಾಜ್ಯಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು : ಲಕ್ಷಣಮೆಂಬುದು ಪರಮಲಕ್ಷಣಧರನಪ್ಪ ಜನಪತಿಯನಾಶ್ರಯಿಸಿ ತನ್ನ ದೇಹಲಕ್ಷಣಮನಪಮಾನಂಗೆಯ್ದು ತಪದೊಳ್ ನೆಗಟ್ಟೊಡೆ ದಿವ್ಯಲಕ್ಷಣ ವಿಜಯಲಕ್ಷಣ ಪರಮಲಕ್ಷಣಂಗಳಂ ಪಡೆಯಲಕ್ಕುಂ (ಚಾಪುಂಕ. ೨೨೪). ೧೩. ಅಷ್ಟಾಂಗನಿಮಿತ್ತಗಳಲ್ಲಿ ಒಂದು : ನೆಚಿಯುಚಿದೇಂತರಿಕ್ಷಸ್ವರ ಭೌಮವ್ಯಂಜನಾಂಗಭಿನ್ನಸ್ವಪ್ನೋದ್ಧರಲಕ್ಷಣಮೆಂದೇ ಬಿತ್ತರಿಪಷ್ಟಾಂಗದ ನಿಮಿತ್ತಶಾಸ್ತ್ರಾವಳಿಯಂ (ಶಾಂತೀಶ್ವ. ೩-೩೪). 'ನಿಮಿತ್ತ', 'ಲಕ್ಷಣನಿಮಿತ್ತ' ಪರಾ. ೧೪. [ಯೋಗ] ಸಮಾಧಿಸ್ಥಿತಿಗೆ ಕಾರಣವಾಗುವ ಚಿತ್ತಪರಿಣಾಮ : ನಿರೋಧ, ಸಮಾಧಿ, ಏಕಾಗ್ರತಾ ಎಂಬ ಮೂರು ವಿಧವಾದ ಚಿತ್ತಸ್ಥಿತಿಗಳು ಧರ್ಮ, ಲಕ್ಷಣ, ಅವಸ್ಥಾ ಎಂಬ ಸೂಕ್ಷ್ಮಸ್ಥೂಲರೂಪವಾದ ಚಿತ್ತಪರಿಣಾಮಗಳೆನ್ನಲ್ಪಡುವುವು . . . ಭೂತ ವರ್ತಮಾನ ಭವಿಷ್ಯತ್ ಎಂಬ ಕಾಲಭೇದದಿಂದ ತಿಳಿಯಲ್ಪಡುವ ಪರಿಣಾಮವು ಲಕ್ಷಣಪರಿಣಾಮ (ಹಿಂದಶಾ. ೦೬೩). [ಸಂ.]

**ಲಕ್ಷಣ$_2$** (ನಾ). (ಉಕ) ಉಗುರು ತೆಗೆಯುವ ಸಾಧನ : ಲಕ್ಷಣವನ್ನು ಉಪಯೋಗಿಸುವವನಿಗೆ ಬಹಳ ಜಾಣ್ಮೆ ಇರಬೇಕಾಗುತ್ತದೆ (ರೂಢಿ). [ ? ]

**ಲಕ್ಷಣಂಬಿಡಿ** (ಕ್ರಿ). ಉದ್ದೇಶವನ್ನು ಅನುಸರಿಸು ; ಸೂತ್ರಬದ್ಧವಾಗು : ದಕ್ಷಿಣದೊಳಕ್ಷೀಣರವದಿಂ ಲಕ್ಷಣಂಬಿಡಿದು ಚತುರ್ಮುಖದಿಂ . . . ಮಂತ್ರಮನೋದುವಬ್ಜಭವನಂ (ಕಶಕಂ. ೦-೭೪ ವ). [ಲಕ್ಷಣ$_1$ + ಪಿಡಿ$_1$]

**ಲಕ್ಷಣಗೇಡಿ** (ನಾ). ಶುಭಚಿಹ್ನೆಗಳಿಲ್ಲದ ವ್ಯಕ್ತಿ : ಲಕ್ಷಣಗೇಡಿ ಹತ್ತಳೇ ಲೆಕ್ಕವಿಲ್ಲದ ಮಕ್ಕಳ (ಜಾರ). [ಲಕ್ಷಣ$_1$ + ಕೇಡಿ$_1$]

**ಲಕ್ಷಣಗ್ರಂಥ** (ನಾ). (ಭಾಷೆ, ಕಾವ್ಯ ಮುಂತಾದುವುಗಳ) ಲಕ್ಷಣಗಳನ್ನು ಪ್ರತಿಪಾದಿಸುವ ಗ್ರಂಥ ; ಅಲಂಕಾರಶಾಸ್ತ್ರ, ವ್ಯಾಕರಣ ಇತ್ಯಾದಿ : ಕವಿರಾಜಮಾರ್ಗವು . . . ಅಲಂಕಾರಶಾಸ್ತ್ರಕ್ಕೆ ಸಂಬಂಧಪಟ್ಟ ಲಕ್ಷಣಗ್ರಂಥ (ಕವಿರಾ. ೦ ಪೀಠಿ) ; ಈ ಕಾಲದಲ್ಲಿ ಸಾಹಿತ್ಯಾಚಾರ್ಯರು ಲಕ್ಷಣಗ್ರಂಥಗಳನ್ನು ಅನೇಕವಾಗಿ ರಚಿಸಿದರು (ಭಾರರ. ೪೬೩). [ಸಂ.]

**ಲಕ್ಷಣದೋಷ** (ನಾ). [ತರ್ಕಶಾ] ಒಂದು ವಸ್ತು ಇಲ್ಲವೆ ಸಂಗತಿಯ ವಿಶಿಷ್ಟಗುಣಗಳ ನಿರೂಪಣೆಯಲ್ಲಿ ಉಂಟಾಗುವ ಕೊರತೆ, ನ್ಯೂನತೆ: ಇದರಲ್ಲಿ ಅವ್ಯಾಪ್ತಿ, ಅತಿವ್ಯಾಪ್ತಿ, ಅಸಂಭವ, ಆತ್ಮಾಶ್ರಯ ಮತ್ತು ಅನ್ಯೋನ್ಯಾಶ್ರಯಗಳೆಂಬ ಐದು ವಿಧಗಳಿವೆ. 'ದೋಷ' ಪರಾ. [ಸಂ.]

**ಲಕ್ಷಣನಿಮಿತ್ತ** (ನಾ). = ಲಕ್ಷಣ$_1$ ೧೩ : ಅಂತರಿಕ್ಷನಿಮಿತ್ತ ಭೌಮನಿಮಿತ್ತ . . . ಲಕ್ಷಣನಿಮಿತ್ತ ಛಿನ್ನನಿಮಿತ್ತ ಸ್ವಪ್ನನಿಮಿತ್ತ ಎಂದಿವಷ್ಟಾಂಗನಿಮಿತ್ತಮೆಂಬುದು . . . ಶರೀರದ ಹಲ ಕುಲಿಶ . . . ಶ್ರೀವತ್ಸ ಚಕ್ರ ಅನಲ ಕುಂಭ ಎಂಬ ದ್ವಾತ್ರಿಂಶತ್ ಶುಭಲಕ್ಷಣಂಗಳಂ ನೋಡಿ ಶುಭಾಶುಭಂಗಳಂ ಪೇಟ್ವುದು ಲಕ್ಷಣನಿಮಿತ್ತಮೆಂಬುದು (ಕಸಾರ. ೩೬೭). [ಸಂ.]

**ಲಕ್ಷಣವಂತ** (ನಾ). ೧. ಶುಭಚಿಹ್ನೆಗಳಿಂದ ಕೂಡಿದವನು ; ಅದೃಷ್ಟವಂತ. ೨. ಚೆಲುವ ; ಸುಂದರ : ಹುಡುಗನು ಲಕ್ಷಣವಂತನೆಂದು ಅವನ ಮನಸ್ಸಿಗೆ ಹೊಯಿತು (ಜಾಗ್ರಿತ. ೦೦೨). [<ಸಂ. ಲಕ್ಷಣವತ್]

**ಲಕ್ಷಣವಂತೆ** (ನಾ). ಚೆಲುವೆ ; ಸುಂದರಿ : ಆ ಹುಡುಗಿ ತುಂಬ ಲಕ್ಷಣವಂತೆ (ರೂಢಿ). [ಲಕ್ಷಣವಂತ + – ಎ₁]

**ಲಕ್ಷಣವಿಧಿ** (ನಾ). ವ್ಯಾಖ್ಯೆಯ ನಿಯಮ ; ಲಕ್ಷಣದಲ್ಲಿ ಹೇಳಿರುವ ಕ್ರಮ : ಕೂಷ್ಮಾಂಡದ ಷತ್ವಕ್ಕಂ ಬಿಂದುಗಮುಂದಯಿಸುಗುಂ ಲೋಪವೃತ್ತಿ ಲಕ್ಷಣವಿಧಿಯಿಂ (ಶಮದ. ೨೬೪). [ಸಂ.]

**ಲಕ್ಷಣಶಾಸ್ತ್ರ** (ನಾ). ದೈಹಿಕಚಿಹ್ನೆಗಳಿಂದ ಮನುಷ್ಯರ ಮತ್ತು ಪ್ರಾಣಿಗಳ ಸ್ವಭಾವ, ಯೋಗ್ಯತೆಗಳನ್ನು ತಿಳಿದು ಹೇಳುವ ಶಾಸ್ತ್ರ : ಅಕ್ಷರ ಲೆಕ್ಕ ಗಂಧರ್ವ ಜ್ಯೋತಿಷ್ಯ . . . ಸಾಮುದ್ರಿಕಶಾಸ್ತ್ರ ಲಕ್ಷಣಶಾಸ್ತ್ರ ಅಶ್ವಪರೀಕ್ಷೆ ಗಜಶಿಕ್ಷೆ . . . ಇವೆಲ್ಲವ ಕಲಿತರದೇನೋ (ಮುಣಿಷಾ. ೪೩-೭೦). [ಸಂ.]

**ಲಕ್ಷಣಾವೃತ್ತಿ** (ನಾ). [ಕಾವ್ಯಮೀ] "ಶಬ್ದದ ವಾಚ್ಯಾರ್ಥವು ಸನ್ನಿವೇಶಕ್ಕೆ ಹೊಂದದಿದ್ದಲ್ಲಿ, ಹೊಂದಿಕೆಯಾಗುವಂತೆ ಅದನ್ನು ಸರಿಪಡಿಸಿ ಅರ್ಥ ಕೊಡುವ ಮತ್ತೊಂದು ವೃತ್ತಿ ಕೆಲಸ ಮಾಡುತ್ತದೆ ; ಇದಕ್ಕೆ ಲಕ್ಷಣಾವೃತ್ತಿಯೆಂದೂ, ಇದರಿಂದ ಬರುವ ಅರ್ಥಕ್ಕೆ ಲಕ್ಷ್ಯಾರ್ಥವೆಂದೂ ಹೆಸರು" (ಭಾರಮೀ. ೪೪) : ಅರ್ಥವು ಮುಖ್ಯವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರುವಿಧ ; ಈ ಅರ್ಥಗಳನ್ನು ಕೊಡುವ ಶಬ್ದಗಳಿಗೆ (ಕ್ರಮವಾಗಿ) ವಾಚಕ, ಲಕ್ಷಕ, ವ್ಯಂಜಕಗಳೆಂದೂ ಅವುಗಳಲ್ಲಿರುವ ಸಾಮರ್ಥ್ಯಕ್ಕೆ (ಅಥವಾ ವೃತ್ತಿಗೆ – ಕ್ರಮವಾಗಿ) ಅಭಿಧಾವೃತ್ತಿ, ಲಕ್ಷಣಾವೃತ್ತಿ, ವ್ಯಂಜನಾವೃತ್ತಿ ಎಂದೂ ಹೆಸರು (ಕೃಶಿಪ. ೧೭೭). [ಸಂ.]

**ಲಕ್ಷಣಾವ್ಯಾಪಾರ** (ನಾ). = ಲಕ್ಷಣಾವೃತ್ತಿ : ಶಬ್ದವು ಮುಖ್ಯವಾದ ವೃತ್ತಿಯನ್ನು ( = ಅಭಿಧಾವ್ಯಾಪಾರವನ್ನು) ಬಿಟ್ಟು ಗುಣವೃತ್ತಿಯಿಂದ ( = ಲಕ್ಷಣಾವ್ಯಾಪಾರದಿಂದ ) ಅರ್ಥವನ್ನು ಬೋಧಿಸುವುದಕ್ಕೆ ಒಂದು ಪ್ರಯೋಜನವೇ ಕಾರಣವಾಗಿರುವುದಷ್ಟೆ (ಶ್ರವ್ಯಾಲೋ. ೪೬). [ಸಂ.]

**ಲಕ್ಷಣೆ** (ನಾ). = ಲಕ್ಷಣಾವೃತ್ತಿ : ವಾಚ್ಯ ಲಕ್ಷ್ಯದ ತೆಱನದಾವುದು ಲಕ್ಷಣೆಯಲವಕ್ಕೆಕ್ಯವೆಂತಹುದು (ಅವ್ಯಾತ. ೩-೦೪) ; ಅರ್ಥಪ್ರಕರಣ ಮೊದಲಾದವುಗಳಿಂದ ಶಕ್ಯಾರ್ಥವ ಹೇಳಕೂಡದೆ ಶಕ್ಯಾರ್ಥ ಸಂಬಂಧವುಳ್ಳದನ್ನು ಹೇಳಿದರೆ, ಅದು ಲಕ್ಷಣೆ (ಹೊಮನಿ. ೦೭೦) ; ಈ ಉಕ್ತಿಯಲ್ಲಿ ಲಕ್ಷಣೆಯ ಚಮತ್ಕಾರವಿದೆ (ಕ್ರೀಕೃಕ್ರ. ೩). [ಸಂ. ಲಕ್ಷಣಾ]

**ಲಕ್ಷವರಾಳಿ** (ನಾ). [ಸಂಗೀತ] ಏಳು ಬಗೆಯ ಮಿಶ್ರರಾಗಗಳಲ್ಲಿ ಒಂದು : ಶೋಕವರಾಳಿ ವಸಂತವರಾಳಿ ಜೋಗಿವರಾಳಿ. . . ಲಕ್ಷವರಾಳಿ ನಾಗವರಾಳಿಯೆಂಬ ವರಾಳೀಸಪ್ತಕವೇ ಶುದ್ಧವರಾಳಿಗೆ ಮಿಶ್ರಂಗಳ್ (ಏವೀಳ. ೨೩೩). [ಲಕ್ಷ₁ + ವರಾಳಿ]

**ಲಕ್ಷಾಂತರ** (ನಾ). ಲಕ್ಷಗಟ್ಟಲೆ ; ಬಹಳ : ಯುದ್ಧಕ್ಕೆ ಹೋದ ಲಕ್ಷಾಂತರ ಸೈನಿಕರ ಪೈಕಿ ಸಾವಿರಾರುಜನ ಗೈರುಹಾಜರ್ ಆಗಿಬಿಟ್ಟಿದ್ದಾರೆ (ವೀಕಮೋ. ೬೬). [ಸಂ.]

**ಲಕ್ಷಾಧಿಕಾರಿ** (ನಾ). ಲಕ್ಷಸಂಖ್ಯೆಯ ಸಂಪತ್ತಿನ ಒಡೆಯ; ಲಕ್ಷಾಧೀಶ್ವರ: ದುರದೃಷ್ಟದಿಂದ ಲಕ್ಷಾಧಿಕಾರಿಯಾಗಿದ್ದವನು ದರಿದ್ರನಾದನು (ರೂಢಿ). [ಸಂ. ಲಕ್ಷಾ ಧಿಕಾರಿನ್]

**ಲಕ್ಷಾಧಿಪತಿ** (ನಾ). = ಲಕ್ಷಾಧಿಕಾರಿ : ಲಕ್ಷಾಧಿಪತಿ ಮಹಾತ್ಮರ ಮುಂದೆ ಬಂದು ಲಕ್ಷಲಕ್ಷಾಂತರದಿ ಹರಸುವೆವು ಬೇಡಿ (ಕಂಕೃ. ೦೫-೦೮). [ಸಂ.]

**ಲಕ್ಷಾಧೀಶ್ವರ** (ನಾ). = ಲಕ್ಷಾಧಿಕಾರಿ : ಅವನೊಬ್ಬ ಲಕ್ಷಾಧೀಶ್ವರ (ಪುವಗು. ೩೦೦). [ಸಂ.]

**ಲಕ್ಷಿತ** (ಗು). ೧. ಲಕ್ಷಣಗಳಿಂದ ಕೂಡಿದ ; ಕುರುಹುಗಳನ್ನುಳ್ಳ. ೨. ಗಮನಕ್ಕೆ ಬಂದ ; ಗಮನಿಸಿದ; ಗ್ರಹಿಸಲಾದ. ೩. ಗುರಿಯಾಗಿಟ್ಟುಕೊಂಡ. (ನಾ). ೪. ಲಕ್ಷಣಗಳಿಂದ ಕೂಡಿದುದು; ಚಿಹ್ನೆಗಳಿಂದ ಕೂಡಿದುದು : ಪೂರ್ವಾಪರವಿಷಯವಿಶಿಷ್ಟಾರ್ಥವ್ಯಂಜನಯೋಗಸಂಕ್ರಮಣಲಕ್ಷಣಲಕ್ಷಿತಮಪ್ಪ [ಪಾಠಾಂ. ಲಕ್ಷಣಮಪ್ಪ] . . . ಶುಕ್ಲಧ್ಯಾನದೊಳ್ (ಆದಿಪು. ೬-೩೪ ವ) ; ಅಕ್ಷೂಣಲಕ್ಷಣಲಕ್ಷಿತಂಗಳಪ್ಪ ಪುತ್ರನಂಗಪ್ರತ್ಯಂಗಂಗಳಂ ನೀಡುಂ ಭಾವಿಸಿ ನೋಡಿ (ಶಂಧ್ರಪು. ೩-೦೦೨ ವ) ; ತಾಪತ್ರಯದ ಲಕ್ಷಣಲಕ್ಷಿತವನಱಿದು . . . ನಡೆವಂಗರಿದೆನಿಸುವುದದಾವುದೈ (ಶುಮ್ಯಾಶಾ. ೪-೭೦). [ಸಂ.]

**ಲಕ್ಷಿಸು** (ಕ್ರಿ). ೧. ಗುರಿಯಿಡು : ನನೆಗಣೆಯುಂ ತೊಟ್ಟು . . . ಕೇಣಮನಿಂಬಿಟ್ಟು ಕಲಹಮನೊಡಂಬಟ್ಟು ಭಾಳಾಕ್ಷನಂ ಲಕ್ಷಿಸಿ ನೋಡಿ (ಗಂಧ. ೬-೨೬ ವ). ೨. ಹೊಂದಿಸು ; ಅಳವಡಿಸು : ಸಕ್ಕದದ ತದ್ಭವಂಗಳ ಲಕ್ಷಣಮಂ ಕನ್ನಡಕ್ಕೆ ಲಕ್ಷಿಸಿ ಪೇೞ್ದೆಂ (ಶಬ್ದಮ. ೨೩೩). ೩. ಗಮನಿಸು ; ಲಕ್ಷ್ಯಕ್ಕೆ ತೆಗೆದುಕೊಳ್ಳು ; ಪರಿಗಣಿಸು : ತದಾಸ್ವದಗಂಧವಂತೆ ತದ್ಗಂಧಮೆಂದು ಲಕ್ಷಿಸುಗವಳ್ (ರೋಕೋಶ. ೦೦-೩೪) ; ರಚಿತಮಾಯ ಏಮಾಯ ಮಾಯಾನಿಚಿತ ಮಾಯಾಧಾರ . . . ಲಕ್ಷಿಸಿ ಕರುಣಿಸುವುದು (ಶುಮ್ಯಾಶ. ೬೦೫. ೭-೯೦) ; ಸೇನರೂ ಸಹ ಅವಶ್ಯವಿದ್ದಾಗ ಅಷ್ಟೇ ಅವಳೊಂದಿಗೆ ಕೂಡಿರುತ್ತಾರೆಂಬುದನ್ನಾದರೂ ನೀವು ಲಕ್ಷಿಸುರುವಿರೋ ? (ಹೇಮಂಕ. ೩೬೯). [<ಲಕ್ಷ್ಯ + – ಇಸು₁]

**ಲಕ್ಷುಮಿ** 'ಲಕುಮಿ' ನೋ.

**ಲಕ್ಷೆ** 'ಲಕ್ಷ₁' ನೋ.

**ಲಕ್ಷ್ಮ** (ನಾ). ೧. ಗುರುತು ; ಚಿಹ್ನೆ ; ಕುರುಹು : "ಅಭಿಜ್ಞಾನಚಿಹ್ನಲಾಂಛನ ಲಕ್ಷ್ಮಾಖ್ಯಂ" (ಪಶುಕೋ. ೦೨-೬೯). ೨. ಚಂದ್ರನಲ್ಲಿರುವ ಕಳಂಕ ;– ಕರೆ : "ಮೃಗಃ . . . ಲಕ್ಷ್ಮ, ಲಕ್ಷಣಂ, ಕಳಂಕಃ . . . ಈ ೨ ಚಂದ್ರಮಂಡಲದ ನಡುವಣ ಕರ್ಪು" (ಹಲಾಯು. ೯-೯೩) ; ನಗೆಯೆಂಬೀ ನೆವದೆ ಬೆಳಗೀ ಮೊಗಮೆಂಬೀ ನೆವದೆ ಶಿಂಗಳೊಳಗೆಸೆದಾದಂ ಸೊಗಯಿಸಿ ತೋರ್ಕುಂ ಲೋಚನಯುಗಮೆಂಬೀ ನೆವದೆ ಲಕ್ಷ್ಮಮೆನೆ ತದ್ವ್ಯಾಜಂ (ಶಬಠಾ. ೩-೨೬) ; ತೆಳ್ಪಂ ತಾಳ್ದ ಚಂದ್ರೋಪಳಮಮಳಶರತ್ಪೂರ್ಣಶುಭ್ರಾಂಶುಮಂ ಸಂತಸದಿಂದಂತಲ್ಲಿ ಪಟ್ಟಿರ್ದರಲೆವಱ ಲಸಲ್ಲಕ್ಷ್ಮಮಂ ಪೋಲ್ತು (ಪುಕ್ಕಪು. ೩-೭೬) ; ಚಂದ್ರಮಧ್ಯವಟಪತ್ರದಲ್ಲಿ ಲಕ್ಷ್ಮೀಂದ್ರನಿರ್ಪನೆನೆ ಲಕ್ಷ್ಮ [ಪಾಠಾಂ. ಕ್ಷ್ಮೈ] ಮೊಪ್ಪುಗುಂ (೦೫೩೬೯. ೦೦-೬೨). ೩. ಮುಖ್ಯವಾದುದು ; ಪ್ರಮುಖವಾದುದು. [ಸಂ. ಲಕ್ಷ್ಮನ್]

**ಲಕ್ಷ್ಮಣ** (ನಾ). ೧. ಗುರುತುಳ್ಳುದು ; ಚಿಹ್ನೆಯುಳ್ಳುದು. ೨. ಶುಭಲಕ್ಷಣದಿಂದ ಕೂಡಿದವನು ; ಭಾಗ್ಯಶಾಲಿ ; ಸುದೈವಿ. ೩. ಒಂದು ಬಗೆಯ ಪಕ್ಷಿ ; ಸಾರಸ. ೪. ದಶರಥನ ಮಗ ; ರಾಮನ ತಮ್ಮ ; ಸೌಮಿತ್ರಿ : ವಿದ್ಮುದಂಗಂ . . . ರಾಮಂಗಂ ಲಕ್ಷ್ಮಣಂಗಮಾನತನಾದಂ (ಶಂಠಾಪಾ. ೭-೭೩) ; ಧರಣಿಜೆಯ ಬಿಱುನುಡಿಗೆ ಲಕ್ಷ್ಮಣ ತೆರಳಿದನಭಿಸಂಧಿಯಲಿ ಸೀತಾತರುಣಿಯನು ಕದ್ದೊಯ್ದನಡವಿಯಲಾ ದಶಗ್ರೀವ (ಕೊರಠಾ. ೩-೯ ಸೂಕಸ) ; ಹಿಂದೆ ಶೂರ್ಪಣಖಿ ಲಕ್ಷ್ಮಣನನಂಡಲೆದು ಪಡೆದಂದಮಂ ನೆನೆದು (ಕೃಬಿಠಾ. ೦೬-೦೯). [ಸಂ.]

**ಲಕ್ಷ್ಮಣಕಂದ** (ನಾ). ಒಂದು ಬಗೆಯ ಗಡ್ಡೆ : ''ಮಂಜಿಷ್ಠಾ–ಮಂಜಿಷ್ಠೆ, ಲಕ್ಷ್ಮಣಕಂದ" (೬ತಧಿ. ೦೦೬). [<ಸಂ.ಲಕ್ಷ್ಮಣಾಕಂದ]

**ಲಕ್ಷ್ಮಣೆ** (ನಾ). ಹೆಣ್ಣು ಸಾರಸಪಕ್ಷಿ : "ಸಾರಸಾ, ಲಕ್ಷ್ಮಣಾ–ಈ ೨ ಸಾರಸಿ" (ಹಲಾಯು. ೪೦-೪೦) ; "ಲಕ್ಷ್ಮಣಾ. ಸಾರಸಸ್ಯ ಯೋಷಿತ್– ಹೆಣ್ಣುಜಲಪಕ್ಷಿ" (ಸಿದ್ಧಾಂತಿ. ೦೬೦). [ಸಂ. ಲಕ್ಷ್ಮಣಾ]

**ಲಕ್ಷ್ಮಿ** (ನಾ). ೧. ಸಂಪತ್ತು ; ಐಶ್ವರ್ಯ ; ಭಾಗ್ಯ. ೨. ಸುದೈವ ; ಅದೃಷ್ಟ. ೩. ಏಳಿಗೆ ; ಅಭಿವೃದ್ಧಿ ; ಯಶಸ್ಸು. ೪. ಚೆಲುವು ; ಶೋಭೆ ; ಸೌಂದರ್ಯ : "ಲಕ್ಷ್ಮೀ, ಶ್ರೀ, ಕಾಂತಿ, ವಿಭ್ರಮವೆಂಬಿವು ಶೋಭೆಯಲ್ಲಿಯುಂ ವರ್ತಿಸುಗುಂ" (ಹಲಾಯು. ೦೩೩-೨೬) ; ಲಕ್ಷ್ಮಿ ಮತ್ತು ಶ್ರೀ ಎಂಬ ಎರಡು ಪದಗಳೂ ಸೌಂದರ್ಯವೆಂಬ ಅರ್ಥದಲ್ಲಿ

ಪ್ರಯೋಗದಲ್ಲಿವೆ (ಸೌಂದ. ೪೪). ೫. ಐಶ್ವರ್ಯ ಮತ್ತು ಸೌಂದರ್ಯಗಳ ಅಧಿದೇವತೆ ; ವಿಷ್ಣುವಿನ ಹೆಂಡತಿ : '' ಶರಧಿಸುತೆ ರಾಮೆ ಗೋವಿಂದಿ ಲಕ್ಷ್ಮಿ ಪದ್ಮಮಂದಿರೆ . . . ಮನ್ಮಥಮಾತೆಯೆನಲು ಸಿರಿಗಕ್ಕು ನಾಮಂ '' (ಮಂಗರಾ. ೬-೧೯) ; ತಕ್ಕೆತಮೊಳ್ ಕಡೆಗಣಿಸುವ ನೃಪವಿಡಂಬಮಿವು ಲಕ್ಷ್ಮಿ ನಿನ್ನ ದೂಸಱಿನಲ್ತೇ (ಗದಾಯು. ೯-೮) ; ಆದಿಶಕ್ತಿಯ ಮಗ ವಿಷ್ಣು ಅವನ ಅರ್ಧಾಂಗಿ ಲಕ್ಷ್ಮಿ (ಚಿಪ. ೯೩೦) ; ಭಾಗ್ಯದ ಲಕ್ಷ್ಮೀ ಬಾರಮ್ಮಾ ನಮ್ಮಮ್ಮಾ ನೀ ಸೌಭಾಗ್ಯದ ಲಕ್ಷ್ಮೀ ಬಾರಮ್ಮಾ (ಪುರಂದ. ೦-೨೦೦ ಕಲ್ಲಿ). ೬. ಒಂದು ಬಗೆಯ ಸಸ್ಯ ; ಕರಿಯ ಉಗುನಿ : ಕ್ರಿಯೆಯಱಿದು ಲಕ್ಷ್ಮಿಯಂ ಪೋಣ್ ಮಯೂರಶಿಖೆಯಂ ಪಯೋನ್ವಿತಂ ಕುಡಿ ಗಾಪ್ಯಪ್ರಯಾತಂ ಪೇಣಂಬಿನೆ ಲಕ್ಷ್ಮಿಯ ಬೇರಂ ನಸ್ಯಮೆಱಿಗೆ ಗರ್ಭಿಣಿಯಕ್ಕುಂ (ಲೋಕೋಪ. ೯-೦೭೭) ; ತಿಗಡ ಪರಾಪಸೋಕ ಕಱಿದಂ(ದೇ)ಗು . . . ಲಕ್ಷ್ಮಿಯೆಂಬ ಗಿಡು ಪುಟ್ಟಿದ ತಾಣಮನೊಳ್ಳಿತಾಗಿ ನೀಂ ಬಗೆಯವಱಿಂದ ತಂಕೆರಡು ಕಯ್ಯಿರಲಿತ್ತಗುಟ್ಟಿದು ಥಾರೆ ಬೇಗೊಗೆಗು (ಅಶ್ವಶಾ. ೧೦-೩೩). ೭. ಒಂದು ಬಗೆಯ ಗಂಧದ್ರವ್ಯ : '' ಯೋಗ್ಯ. ವೃದ್ಧಿ. ಸಿದ್ಧಿ. ಲಕ್ಷ್ಮಿ — ವೃದ್ಧಿಯೆಂಬ ಗಂಧದ್ರವ್ಯಂ '' (ನಾತರಾ. ೬). ೮. ಅರಿಸಿನ. ೯. ಒಬ್ಬಾಕೆಯ ಹೆಸರು : ವಿಷ್ಣುಮಹೀಶಂ ಸಲೆ ತಾನೆ ವಿಷ್ಣುವೆನಿಪಂ ಲಕ್ಷ್ಮೀವಧೂವಲ್ಲಭಂ (ಎಕ. V. ಅರಸೀ. ೬೨-೧೭ ; 1117). ೧೦. [ಸಂಗೀತ] ಇಪ್ಪತ್ತಾರು ಆರ್ಯಾಭೇದಗಳಲ್ಲಿ ಒಂದು : ಲಕ್ಷ್ಮೀ ಮೊದಲಾದ ಇಪ್ಪತ್ತಾರು ಆರ್ಯಾಭೇದಗಳನ್ನು (ಸಂಗೀತ)ರತ್ನಾಕರದಲ್ಲಿ ಹೇಳಿದೆ (ಸಕಂಶ್ರ. ೦೦೫).

ಲಕ್ಷ್ಮೀಕಾಸು = ಲಕ್ಷ್ಮಿಯ ಚಿತ್ರವಿರುವ ಕಾಸು · ಲಕ್ಷ್ಮೀಕಾಸುಗಳನ್ನು ಪೋಣಿಸಿದ ಸರವನ್ನು ಆಭರಣವಾಗಿ ಧರಿಸುತ್ತಾರೆ (ರೂಢಿ). **ಲಕ್ಷ್ಮೀಚೇಳು** = ಜರಿ ; ಸಾವಿರಕಾಲು ಚೇಳು : ಲಕ್ಷ್ಮೀಚೇಳು ಕಂಡರೆ ತುಂಬ ಅದೃಷ್ಟವೆಂದು ಅನೇಕರ ನಂಬಿಕೆ ಇದೆ (ರೂಢಿ). [ಸಂ. ಲಕ್ಷ್ಮೀ]

**ಲಕ್ಷ್ಮೀಕಟಾಕ್ಷ** (ನಾ). ಲಕ್ಷ್ಮಿಯ ಕೃಪೆ ; ಸೌಭಾಗ್ಯ : ಶ್ವೇತಚಾಮರವನ್ನುಪಯೋಗಿಸುವುದರಿಂದ . . . ಲಕ್ಷ್ಮೀಕಟಾಕ್ಷಕ್ಕೆ ಆವಾಸಸ್ಥಾನವಾಗಿ . . . ಚಂದ್ರನಿಗೆ ಸಮಾನವಾದ ಬೆಳುಪು ಉಂಟಾಗುವುದು (ಸಕಪ್ರ. ೫೭). [ಸಂ.]

**ಲಕ್ಷ್ಮೀಕಾಂತ** (ನಾ). ಲಕ್ಷ್ಮಿಯ ಪತಿ ; ವಿಷ್ಣು : ಇಂತು ರಮೆಯ ಮನೋರಥಂಗಳ ಸಂತಸವನೀವುತ್ತ ಲಕ್ಷ್ಮೀಕಾಂತನೆಸೆದಿರ (ಭಾರತ. ೪೪-೩೬); ಮುಂದೆ ಸುರಪುರದ ಲಕ್ಷ್ಮೀಕಾಂತನಾವ ತೆಱದಿಂದ ಪರಿಹರಿಸುವನೊ ತನ್ನ ಶರಣಾಗತರನೊಂದುಪಾಯದೊಳುಳುಹದಿರನೆಂದು ಧೈರ್ಯವುಂ ತಾಳ್ದಿರಿಂದ್ರಾದಿ ಸುರರು (ಕೃಬಂಧಾ. ೯-೩೪). [ಸಂ.]

**ಲಕ್ಷ್ಮೀಧವ** (ನಾ). = ಲಕ್ಷ್ಮೀಕಾಂತ : ಲಕ್ಷ್ಮೀಧವನ ಕಳುಹಿದನಿತ್ತ ಬೀಳ್ಕೊಟ್ಟನು ಸುಯೋಧನನ (ಕುಮ್ಯಾಭಾ. ೦೦-೪೦). [ಸಂ.]

**ಲಕ್ಷ್ಮೀನೀಡ** (ನಾ). ಲಕ್ಷ್ಮಿಯ ವಾಸಸ್ಥಳ ; ಸುಖಸಂಪತ್ತುಗಳ ಆಶ್ರಯಸ್ಥಾನ : ಆ ನಾಡೆಂಬ ಸರೋವರಕ್ಕೆ ವಿಕಸತ್ಪಂಕೇಜಮೆಂಬಂತೆ ಲಕ್ಷ್ಮೀನೀಡಂ ಭುವನೋನ್ನತಂ . . . ಕಾಕಂದಿನಾಮಂ ಪುರಂ (ಪುಷ್ಪ. ೯-೦೯). [ಸಂ.]

**ಲಕ್ಷ್ಮೀಪತಿ** (ನಾ). ೧. = ಲಕ್ಷ್ಮೀಕಾಂತ : ನಿಜಸೈನಿಕವನಲ್ಲಿ ಬಿಡಿಸಿದಂ ದೇವಪುರ ಲಕ್ಷ್ಮೀಪತಿಯ ಮೈದುನಂ ಮುಂದದೊಳು (ಕೃಬಂಧಾ. ೬-೪೯). ೨. ಸಿರಿವಂತ; ಧನಿಕ : ಲಕ್ಷ್ಮೀಪುತ್ರರೂ ಲಕ್ಷ್ಮೀಪತಿಗಳೂ ಸಾಹಿತ್ಯದ ಕಡೆಗೆ ತಮ್ಮ ದೃಷ್ಟಿಯನ್ನು ತಿರುವಬೇಕು (ರಾಮುರಾ. ೪೭). [ಸಂ.]

**ಲಕ್ಷ್ಮೀಪುತ್ರ** (ನಾ). ೧. ಲಕ್ಷ್ಮಿಯ ಮಗ ; ಕಾಮ ; ಮನ್ಮಥ. ೨. ಐಶ್ವರ್ಯವಂತ ; ಧನಿಕ : ಲಕ್ಷ್ಮೀಪುತ್ರರೂ. ಲಕ್ಷ್ಮೀಪತಿಗಳೂ ಸಾಹಿತ್ಯದ ಕಡೆಗೆ ತಮ್ಮ ದೃಷ್ಟಿಯನ್ನು ತಿರುವಬೇಕು (ರಾಮುರಾ. ೪೭) ; ಊರ ಹೊರಗೆ, ಊರಿಗೆ ತಾಗಿಕೊಂಡು, ಲಕ್ಷ್ಮೀಪುತ್ರರಾದ ಬಿರ್ಲಾ ಮನೆತನದವರು ಕಟ್ಟಿಸಿದೊಂದು ದೇವಾಲಯವಿದೆ (ಅರುಣು. ೪೩). [ಸಂ.]

**ಲಕ್ಷ್ಮೀರಮಣ** (ನಾ). = ಲಕ್ಷ್ಮೀಕಾಂತ : ಚಿಕಲನಸಿತಂ ಮಾಡಿದಂದಿನ ಕದಾಚನಗ್ಗದ ಹಾಳೆಹಳನಿಂತಡಸಿ ಬಂದುದೆನುತ್ತ ಲಕ್ಷ್ಮೀರಮಣಾನಳುಕಿದನು (ದಸಕ. ೫೮-೬೨) ; ಎಳನಗೆಯ ಬೆಳ್ದಿಂಗಳಂ ಪಸರಿಸುವ ದೇವಪುರ ಲಕ್ಷ್ಮೀರಮಣಾಸ್ಯಚಂದ್ರನಾನಂದವಂ ನಮಗೀಯಲಿ (ಕೃಬಂಧಾ. ೦-೦). [ಸಂ.]

**ಲಕ್ಷ್ಮೀಲೋಲ** (ನಾ). = ಲಕ್ಷ್ಮೀಕಾಂತ : ಲಕ್ಷ್ಮೀಲೋಲನಾಜ್ಞೆಯಲಿವರು ಬಲಿದರು ತಮ್ಮ ಪೋಷರವ (ಕುಮ್ಯಾಭಾ. ೬-೦) ; ಜೀಯ ಚಕ್ರಿಯೆ ಪೀತವಾಸ ಲಕ್ಷ್ಮೀಲೋಲ . . . ಬಿಡಿಸು ಸಂಸಾರಪಾಶದಿಂದೆನ್ನನು (ಕೃಬಂಧಾ. ೦೩-೨೮). [ಸಂ.]

**ಲಕ್ಷ್ಮೀವಲ್ಲಭ** (ನಾ). = ಲಕ್ಷ್ಮೀಕಾಂತ : ಅಪ್ಪಾಪನಂ . . . ಲಕ್ಷ್ಮೀವಲ್ಲಭಂ ಗೆತ್ತಿದಾ ಗಗನಚ್ಛತ್ರದ ಕೋಮಂಡದಮಿನಿಸರ್ ಸಾಲ್ದತ್ತು ಹೇಮಾಚಲಂ (ಜಗಾ. ೦-೨೫). [ಸಂ.]

**ಲಕ್ಷ್ಮೀಶ** (ನಾ). ೧. ಲಕ್ಷ್ಮಿಯ ಒಡೆಯ ; ವಿಷ್ಣು : ಮಂಗಳಂ ಜಯಮಂಗಳಂ . . . ಕ್ಷೀರಸಾಗರವಾಸಿ ಲಕ್ಷ್ಮೀಶಗೆ (ಪುರಂದ. ೩-೦೫೮-೨); ವಿರಚಿಸಿದಂ . . . ಹೃದ್ವನಜದೊಳ್ದೇವಪುರದ ಲಕ್ಷ್ಮೀಶನ ಪದದ್ವಯವನಾವಗಂ ಧ್ಯಾನಿಸುವರಡಿಗಳಂ ಸದ್ವಿನಯದಿಂ ಭಜಿಪ ಬಲ್ಪಿಂದ (ಕೃಬಂಧಾ. ೦-೧೧). ೨. ಕನ್ನಡದಲ್ಲಿ ಜೈಮಿನಿಭಾರತವನ್ನು ರಚಿಸಿದ ಕವಿ : ವಿರಚಿಸಿದಂ . . . ಅಣ್ಣಮಾಂಕನ ಸುತಂ ಸದ್ವಿನುತಕರ್ಣಾಟಕವಿಚೂತವನಚೈತ್ರ ಲಕ್ಷ್ಮೀಶನೆಂಬೊರ್ವನು (ಕೃಬಂಧಾ. ೦-೦೧). ೩. [ಸಂಗೀತ] ಒಂದು ತಾಳದ ಹೆಸರು : ವರಾಳಿರಾಗದ ಇವರ ವರ್ಣವೂ, ೧೦೮ ತಾಳಗಳಲ್ಲಿ ಒಂದಾದ ಲಕ್ಷ್ಮೀಶತಾಳದ ಶಿಲ್ಪಾನವೂ ಉತ್ಕೃಷ್ಟಕೃತಿಗಳು (ಸಂಗೀತ. ೫೫). [ಸಂ.]

**ಲಕ್ಷ್ಯ** (ಗು). ೧. ಗುರುತಿಸಲ್ಪಡುವ. ೨. ಲಕ್ಷಣಕ್ಕೆ ವಿಷಯವಾದ : ವ್ಯಾಖ್ಯೆಯಿಂದ ಹೇಳಲ್ಪಡುವ. ೩. ಗುರಿಯಿಡಬೇಕಾದ; ಉದ್ದೇಶಿಸತಕ್ಕ. ೪. ಗಮನಿಸಬೇಕಾದ ; ಗಣನೀಯ. ೫. ವಿಶಿಷ್ಟವಾದ ಗುಣದಿಂದ ಕೂಡಿದ. ೬. ವಿವರಿಸಬೇಕಾದ. ೭. ಪರ್ಯಾಯವಾಗಿ ಸೂಚಿಸುವ. (ನಾ). ೮. ಗುರುತು ; ಚಿಹ್ನೆ. ೯. ಗುರಿ ; ಧ್ಯೇಯ; ಉದ್ದೇಶ : "ಶರವ್ಯ [ನಿಮಿತ್ತ] ವೇಧ್ಯಮಂತದು ಲಕ್ಷ್ಯಂ" (ಪಸ್ತುಕೋ. ೬೫-೦೯) ; ನೆರೆದಿನಿಬರುವಿಗ ಲಕ್ಷ್ಯಮನಿರದಕ್ಕಟ ಸರದ ತಗೆಯಲಾರ್ತರುಮಿಲ್ಲಾ (ರೇಕರಾ. ೨-೩೨) ; ಸ್ಮರಶರಸಂಧಾನಕ್ಕಂಬುರುಹೇಕ್ಷಣೆ ಲಕ್ಷ್ಯಮಾಗೆ (ಶಾಂತಿಪು. ೬-೮೨) ; ತಮ್ಮಾರುಭಟೆಯನು ಲಕ್ಷ್ಯಲಕ್ಷಣ ಭೇದಭಂಗಿಗಳ ಸಾರತರ ಕೋದಂಡಪಂಡಿತರಾರಯಿಕೆಯಲಿ ತಱುಬಿ ನಿಂದರು (ಕುಮ್ಯಾಭಾ. ೨೧-೨೩). ೧೦. ಲಕ್ಷಣಕ್ಕೆ ಉದಾಹರಣೆಯಾದುದು ; ದೃಷ್ಟಾಂತ ; ನಿದರ್ಶನ : ಪ್ರಸ್ತುತಮೆಂಬುವಳಂಕೃತಿ ವಿಸ್ತರಮಿಂತಕ್ಕುಮದಱ ಲಕ್ಷ್ಯವಿಭಾಗಂ (ಕವಿರಾ. ೩-೦೩೯); ತಾಂಡವಕ್ಕೆ ಲಕ್ಷ್ಯಮಿದೆಂಬಂತಿರೆ ದೇವಮನುಜಸಭೆಗಚ್ಚರಿ ಬೆಚ್ಚರೆ ದಿವಿಜನಾಯಕಂ ನರ್ತಿಸಿದಂ (ಪುಲ್ಲಿ. ೦೩-೪೨) : ಗುಣವರ್ಮ ಶ್ರೀವಿಜಯರ ಪೊನ್ನನ ಹಂಪನ ಸುಜನೋತ್ತಂಸನ ಸುಮಾರ್ಗಮಿದಱೊಳೆ ಲಕ್ಷ್ಯಂ (ಕಶುದ. ೩ ಶಿ೪೪). ೧೧. ಗಮನ ; ಧ್ಯಾಸ ; ಅವಧಾನ : ಈ ನಿಯಮಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ನಡೆಯುವವನಿಗೆ ಬಹುತರ ರೋಗಗಳು ಬರಲಿಕ್ಕಿಲ್ಲ (ಪುಂಬಾಯು. ೪-೨೫); ಒಂದು ಕೊಂಬೆಯುಳ್ಳ ದೊಡ್ಡ ಕರಿಯ ಮರದ ಕೊರಡು ಅವನ ಲಕ್ಷ್ಯವನ್ನು ಎಳೆಯಿತು (ಮಲೆವಾ. ೪೪). ೧೨. ತೋರಿಕೆ ; ಕಪಟ ; ಮೋಸ : ಲಕ್ಷದೀಪಾರಾಧನೆಯ ಹಬ್ಬವೆಂದು ಲಕ್ಷಾಧಿಪತಿಮಹಾತ್ಮರ ಮುಂದೆ ಬಂದು ಲಕ್ಷಲಕ್ಷಾಂತರದಿ ಹರಸುವೆವು ಜೇಡಿ. ಲಕ್ಷ್ಯವೇನುಂ ಬೇಡ ; ಮಾನವೊಲಿದು

ನೀಡಿ (ಕುಮಾ. ೧೩-೩). ೧೩. ಪಾತ, ಲಕ್ಷ್ಯ, ಶೀಘ್ರ, ಘಾತ ಮತ್ತು ಬಹುವೇಗವೆಂಬ ಐದು ಬಗೆಯ ಬಾಣಪ್ರಯೋಗಗಳಲ್ಲಿ ಒಂದು : ಪಾತಂ ಲಕ್ಷ್ಯಂ ಶೀಘ್ರಂ ಘಾತಂ ಬಹುವೇಗಮೆಂಬಿವಯ್ದುಂ ಶಿಸೆಯೊಳಂತೀತನ ದೊರೆಯಿಲ್ಲೆನಿಸಿದುದಾತನ ಬಿಲ್ಬಲ್ಮೆ ಸುರರಿನಂಬರತಲದೊಳ್ (ಶಾಂತಿಪು. ೧೨-೦೩೩). ೧೪. ಒಂದು ಸಂಖ್ಯೆ : ನೂರುಸಾವಿರ ; ಲಕ್ಷ. ೧೫. [ಕಾವ್ಯಮೀ] ಲಕ್ಷಣಾವೃತ್ತಿಯಿಂದ ಸೂಚಿತವಾಗುವ ಅರ್ಥ : ಅರ್ಥವು ಮುಖ್ಯವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರು ವಿಧ (ಕೃವಿಚಿ. ೦೬೭) ; ಲಕ್ಷಣೆಯೆಂಬ ವೃತ್ತಿಯಿಂದ ತೋರುವರ್ಥವು ಲಕ್ಷ್ಯವು (ಕಾವ್ಯಸ. ೧೬೦).

**ಲಕ್ಷ್ಯಕ್ಕೆ ತರು**=ಗಮನಕ್ಕೆ ತರು : ಆ ವಿಚಾರವನ್ನು ಅವನ ಲಕ್ಷ್ಯಕ್ಕೆ ತಂದರು (ರೂಢಿ). **ಲಕ್ಷ್ಯಕ್ಕೆ ಬರು** = ಗಮನಕ್ಕೆ ಬರು ; ಮನಸ್ಸಿಗೆ ಬರು : ಹಿರಿಯರ ಬುದ್ಧಿಮಾತು ಅವನ ಲಕ್ಷ್ಯಕ್ಕೆ ಬರಲಿಲ್ಲ (ರೂಢಿ). [ಸಂ.]

**ಲಕ್ಷ್ಯಕೊಡು** 'ಲಕ್ಷ್ಯಗೊಡು' ನೋ.

**ಲಕ್ಷ್ಯಗೊಡು, ಲಕ್ಷ್ಯಕೊಡು** (ಕ್ರಿ). ಗಮನ ಕೊಡು ; ಮನಸ್ಸಿಗೆ ತಂದುಕೊಳ್ಳು : ಕರಗಿದಂತಃಕರಣದಲ್ಲಿಪ ಎರಕಹೊಯ್ದರಿ ನನ್ನನೆ ಹೋದ ಹೋದೆಡೆ ಲಕ್ಷಲಕ್ಷದಿ ಲಕ್ಷ್ಯಗೊಟ್ಟರಿ ಸುಮ್ಮನೆ (ವಿಠಲು. ೩೨-೧೦) ; ಅತ್ತ ಕಡೆಗೆ ಹೆಚ್ಚಾಗಿ ಲಕ್ಷ್ಯಗೊಡದವನಂತೆ . . . ನೋಡುವುದರಲ್ಲಿ ತಲ್ಲೀನನಾಗಿದ್ದನು (ಅಂಬಿಕೆ. ೨೩). **ಲಕ್ಷ್ಯಕೊಡು** : ಅವನ ಎಲೆಗಳ ಕಡೆಗೇ ಲಕ್ಷ್ಯ ಕೊಟ್ಟರೂ ತನ್ನ ಆಟವನ್ನು ಸಹ ಬಹಳ ಎಚ್ಚರಿಕೆಯಿಂದ ಆಡುತ್ತಿದ್ದನು (ಬಂಗಾರ. ೩೨). [ಲಕ್ಷ್ಯ + ಕೊಡು$_1$]

**ಲಕ್ಷ್ಯಚ್ಯುತ** (ನಾ). ಗುರಿ ತಪ್ಪಿದವನು : "ಲಕ್ಷ್ಯಚ್ಯುತಂ ತಪ್ಪಲೆಚ್ಚನಕ್ಕು" (ಮಂಗರಾ. ೬೬-೪೩). [ಸಂ.]

**ಲಕ್ಷ್ಯಭಾವ** (ನಾ). ಉದ್ದೇಶಿಸಿದ ಗುರಿ ; ಮುಟ್ಟ ಬಯಸಿದ ಸ್ಥಳ : ಬಸವಣ್ಣ ಸಂಗಮಕ್ಕೆ ಚೆನ್ನಬಸವಣ್ಣ ಉಳುವಿಗೆ ಪ್ರಭು ಕದಳಿಗೆ ಮಿಕ್ಕಾದ ಪ್ರಮಥರೆಲ್ಲರೂ ತಮ್ಮತಮ್ಮ ಲಕ್ಷ್ಯಭಾವಕ್ಕೆ ಮುಕ್ತಿಯನೆಯ್ದಿಹರು (ಪಾಲ್ಕುರಿ. ೦೦೪-೪೪೬). [ಸಂ.]

**ಲಕ್ಷ್ಯಲಕ್ಷಿತ** (ನಾ). ಗುರಿಗೆ ಸರಿಯಾಗಿ ಹೊಡೆಯುವವನು; ಗುರಿಯನ್ನು ಭೇದಿಸುವವನು : "ಲಕ್ಷ್ಯಲಕ್ಷಿತನೆನಲು ತಾಗಲೆಸುವವನಕ್ಕು" (ಮಂಗರಾ. ೬೬-೪೩). [ಸಂ.]

**ಲಕ್ಷ್ಯವಿಡು** (ಕ್ರಿ). ಗಮನ ಕೊಡು ; ಎಚ್ಚರವಹಿಸು : ಗುಡಿಸುವಾಗಲೂ ಮೂಲೆಗಳ ಕಡೆಗೆ ಲಕ್ಷ್ಯವಿಟ್ಟುಕೊಳ್ಳುವುದಕ್ಕೆ ಮರೆಯಬಾರದು (ಆರೋಗ್ಯ. ೩೯). [ಲಕ್ಷ್ಯ$_6$ + ಇಡು$_1$]

**ಲಕ್ಷ್ಯಸಿದ್ಧಿ** (ನಾ). ೧. ಗುರಿಯನ್ನು ಮುಟ್ಟುವುದು ; ಉದ್ದೇಶ ಸಾಫಲ್ಯ : ಗುರು ಲಕ್ಷ್ಯಸಿದ್ಧಿಯಿಲ್ಲೆನೆ ಪರಿವಂಬಿಂ ಪರಿದು ಒಡಿದು ಬೇಗಂ ತರ್ಪಂತಿರೆ . . . ಮರುತ್ಸುತಂ ಪರಿದಂ (ಗದಾಯು. ೬-೨೯) ; ನಿಯಮಿಸುವರ್ ತ್ರಿವಿಧಧನುಃಪ್ರಯೋಗದೊಳ್ ದೃಷ್ಟಿಮುಷ್ಟಿ ಶರಸಂಧಾನಕ್ರಿಯೆ ಲಕ್ಷ್ಯಸಿದ್ಧಿ ನಿಜಶಿಕ್ಷೆಯಿನನುಪಮಮಾಗೆ ಚತುರಚಾಪಾಚಾರ್ಯರ್ (ಕುಕ್ಕು. ೨-೩೯). ೨. ಉದಾಹರಣೆಗಳಿಂದ ಸಿದ್ಧವಾಗುವಿಕೆ ; ನಿದರ್ಶನಗಳಿಂದ ಸಿದ್ಧಮಾಡಿ ತೋರಿಸುವಿಕೆ : ಧಾತುಗಳವು ನಾನಾರ್ಥೋಪೇತಂಗಳ್ ಲಕ್ಷ್ಯಸಿದ್ಧಿವಿಡಿದುವನಜಾಕ್ಷಿ . . . ಪೂರಿಸುಗೆ (ಕರ್ಣಾದ. ೨೫೦). [ಸಂ.]

**ಲಕ್ಷ್ಯಾರ್ಥ** (ನಾ). [ಕಾವ್ಯಮೀ] "ಒಂದೊಂದು ಕಡೆ ಶಬ್ದದ ವಾಚ್ಯಾರ್ಥವು ಸನ್ನಿವೇಶಕ್ಕೆ ಹೊಂದದಿದ್ದಲ್ಲಿ, ಹೊಂದಿಕೆಯಾಗುವಂತೆ ಅದನ್ನು ಸರಿಪಡಿಸಿ ಅರ್ಥಕೊಡುವ ಮತ್ತೊಂದು ವೃತ್ತಿ ಕೆಲಸ ಮಾಡುತ್ತದೆ ; ಇದಕ್ಕೆ ಲಕ್ಷಣಾವೃತ್ತಿಯೆಂದೂ ಇದರಿಂದ ಬರುವ ಅರ್ಥಕ್ಕೆ ಲಕ್ಷ್ಯಾರ್ಥವೆಂದೂ ಹೆಸರು" (ಭಾರ. ೨. ೯೬) ; ಬೇರೆ ಅರ್ಥಗಳು ವಾಚ್ಯಾರ್ಥಗಳಿಂದ 'ಸೂಚ್ಯ'ವಾಗಿ ಲಕ್ಷ್ಯಾರ್ಥವೆನಿಸುವುವು (ಕೃವಿಚಿ. ೦೬೬). [ಸಂ.]

**ಲಕ್ಷ್ಯ$_6$** (ನಾ). ಗುರಿಯಾಗಿ ಬಳಸುವ ಸಾಧನ; ಗುರಿಹಲಗೆ : ಅದು ಹೋಗಿ ಒಂದು ಗಟ್ಟಿಯಾಗಿರುವ ಗುರಿಯನ್ನು (Target) ಹೊಡೆದು, ಅಲ್ಲಿಯೇ ಕೆಳಗೆ ಬೀಳುವುದೆಂದು ಊಹಿಸುವ . . . ಗುಂಡು ಹೊಡೆದಲ್ಲಿ ಲಕ್ಷ್ಯಯು ಬಿಸಿಯಾಗುತ್ತದೆ (ಎಕ್ಸ್‌ರೇ. ೨೪). [ಸಂ. ಲಕ್ಷ್ಯ]

**ಲಖಗಡುಗೆ** 'ಲಕ್ಕಗಡುಗೆ' ನೋ.

**ಲಖ್ಖ$_1$** 'ಲಕ್ಕ$_1$' ನೋ.

**ಲಖ್ಖ$_2$** 'ಲಕ್ಕ$_4$' ನೋ.

**ಲಖ್ಖಣಿ** (ನಾ). ಒಂದು ಬಗೆಯ ಸೈನ್ಯ (?) : ತುರಗದಳ ಪದಾತಿಬಲ ಬಿಲ್ಲಿನ ಲಖ್ಖಣಿ ವಗ್ಗಸೇನೆ ಬಹುವಡೆಯಿಂ ಬೆಳಗವತ್ತಿಯ ಕೋಟೆಯು ಮುತ್ತಿ ಪತ್ತಿ ಧುರದೊಳು ಬಲಗೌಡನ ಸುತ್ತಿ . . . ತಳ್ತುಬಂದು (ಮೈಶಿಲಾ. ೦೬೪೨. ೬೬-೬ ; 1166). [ಲಖ್ಖ$_1$ + ಅಣಿ$_3$]

**ಲಖ್ಖೆ** 'ಲಕ್ಕ$_1$' ನೋ.

**ಲಗಕ್ರಿಯೆ** (ನಾ). [ಛಂದ] ಷಟ್ಪ್ರತ್ಯಯಗಳಲ್ಲಿ ಒಂದು ; ಒಂದು ಛಂದಸ್ಸಿನಲ್ಲಿ ಯಾವುದೇ ಒಂದು ನಿರ್ದಿಷ್ಟವಾದ ವೃತ್ತವು ಎಷ್ಟನೆಯದು ಎಂಬುದನ್ನು ಕಂಡುಹಿಡಿಯುವ ವಿಧಾನ : ಏಕದ್ವ್ಯಾದಿ ಲಗಕ್ರಿಯೆಯಿಂತಕ್ಕುಂ . . . ಈ ಪ್ರತ್ಯಯವು ಯಾವುದಾದರೊಂದು ಛಂದಸ್ಸಿನಲ್ಲಿ ಒಂದು ಲಘುವಿರುವ ವೃತ್ತವೆಷ್ಟು ? ಎರಡು ಲಘುವಿರುವ ವೃತ್ತವೆಷ್ಟು? ಎಂಬ ಒಂದು ಎರಡು ಮೊದಲಾದ ಲಘುಗಳಿರುವ ವೃತ್ತಗಳ ಲೆಕ್ಕವನ್ನು ತಿಳಿಸುತ್ತದೆ (ಛಂದೋಂಬುಧಿ. ೬-೪). 'ಷಟ್ಪ್ರತ್ಯಯ' ಪರಾ. [ಸಂ. ಲಗಕ್ರಿಯಾ]

**ಲಗಡ$_1$** 'ಲಗಡು' ನೋ.

**ಲಗಡ$_2$, ಲಗಡಿ, ಲಗುಡಿ** (ನಾ). ೧. ಹೊಡೆತ ; ಪೆಟ್ಟು : 'ಲಗಡಿಸು' ಪರಾ. ೨. ಮಲ್ಲಯುದ್ಧದ ಒಂದು ಪಟ್ಟು : ಮುಷ್ಟಿ ಕಮ್ಮರಿ ಮುಸುಡಂ ಜವತ್ಸವಡಿ ಪಾಸಗೆ ಕಕ್ಕವಡುಮ್ಮಹುಗ್ಗಮಂತರಲಗಡಂ . . . ಪಟ್ಟಿ ಕತ್ತರಿಗಳನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಕು. ೨೬-೦೯). **ಲಗಡಿ** : ೨. ತಳಹತ್ತದಲಿ ತವಕಿಸುವ ಲಗಡಿಯಲಿ ಲಟಕಟಿಸುವಂತರಲಗಡಿಯಲಿ ಲಾಲಿಸುವ . . . ಬಿನ್ನಾಣದಲಿ ಹಣಗಿದರು (ಕುವ್ಯಾಶ. ೦೯-೯೩) ; ಸೆಳೆದು ಶಿರ್ರನೆ ತಿರುಗಿ ಲಗಡಿಯ ಲುಳಿಯ ಪಯಪಾಡಿನಲಿ ನೆಲಕಪ್ಪಳಿಸಿದೊಡೆ (ಅಕ್ರೂರ. ೬-೬೯). **ಲಗುಡಿ** : ೩. ಕೋಲು ; ದೊಣ್ಣೆ : 'ಲಗುಡಿಗ' ಪರಾ. ೪. ಕೋಲುಕಾರ ; ವೇತ್ರಧರ : ಶೂಜಿ ಲಗುಡಿ ಭಾಯಿಪಯ್ಯ ಲಗುಡಿಗರ ಧುರ್ಯವಾಗಿ ತಮ್ಮ ತಿಜಿಯಿಂ ಬಿಟ್ಟ ನರಸಿಂಘಯ್ಯನ ಮಗ ಸೋಮನಾಥಯ್ಯನು (ಎಕ. IX-i. ೦೦೬-೦೯ ; 1050). [< ಸಂ. ಲಗುಡ]

**ಲಗಡಿ** 'ಲಗಡ$_2$' ನೋ.

**ಲಗಡಿಸು** (ಕ್ರಿ). ೧. ಹೊಡೆ ; ಬಾರಿಸು ; ಲಗಾಯಿಸು : (೪). ೨. ಮಲ್ಲಯುದ್ಧದಲ್ಲಿ ಲಗಡವೆಂಬ ಪಟ್ಟನ್ನು ಹಾಕು : ಬಿಗಿವ ಬಿಡಿಸುವ ಬಿಡಿಸಿದಾಕ್ಷಣ ತೆಗೆವ . . . ಬಗಿವ ಬಳಸುವ ಬಂಧಗತಿಯಲಿ ಲಗಡಿಸುವ ಲೋಕೈಕವೀರರು ಹೊಕ್ಕು ಹಣಗಿದರು (ಕುವ್ಯಾಶ. ೬-೨೬) ; ಹೊಗುವ ಹೊಳಕುವ ಬಗಿವ ಬಾಗುವ ಲಗಡಿಸುವ ಲಾಗುಗಳ (ಅಂಬಿಕಾ. ೦೬-೨೨). [ಲಗಡ$_2$ + — ಇಸು$_3$]

**ಲಗಡು, ರಗಡ, ಲಗಡ$_1$, ಲಗಡೆ, ಲಗುಡ$_1$** (ನಾ). ಒಂದು ಮಾಂಸ ಭಕ್ಷಕ ಪಕ್ಷಿ ; ಗಿಡುಗ ; ಡೇಗೆ : ಒಬ್ಬರ ಕಂಡೊಬ್ಬರ ಮನದೊಳು ಕ್ರೋಧ ಹಬ್ಬಿತು ದೊರೆ ದೊರೆಗಳಿಗೆ ಕಬ್ಬಕ್ಕಿ ಗಿಳಿವಿಂಡು ಲಗಡು ಸಾಳುವ ನಾನು ತಬ್ಬಿಕೊಂಬರೆ ಬರುವಂತೆ (ಅಕ್ಷಯಾಂ. ೨-೧೦) ; ಲಗಡಿನಂತೆಬಾ

ಲಾಗಿಸುವ ಹೋರಾಟದ ವಿಗತವಮಲ್ಲರುಗಳೊಪ್ಪಿದರು (೪೦ಪ೩. ೨೦-೪೩) ; ಪಕ್ಷಿಗಳ ಗೂಡು ಗುಂಪುಗಳ ಗುಯರ್ಗಡುವ ಗಿಡುಗ ಲಗಡು ಬಿಜ್ಜುಗಳಂ (ಸಗಂ೦. ೩೦-೭). **ರಗಡ** : ರಗಡನೆತ್ತಲು ರಾಯುಗುಲಗೀಜಗಖಿಗಾವಳಿಯೆತ್ತ ಸಿಂಹದ ನೆಗೆತವೆತ್ತಲು ಹರಿಣಪೋತಮದೆತ್ತ ಪಾಕಿಸಲು (೬೦ದಳ. ೪೦-೨೦). **ಲಗಡ**$_1$ : ಕುಕ್ಕುಭ ಲಗಡ ಸಲೆ ಕೂಕುಟಿಗ . . . ಕಬ್ಬಕ್ಕಿ ತುಬ್ಬಕ್ಕಿಗಳ ನೋಡಿದವು (ಪುದೀಕೃ. ೩-೯) ; ಎರಗುವ ಲಗಡನಂದದೊಳಮರಸುಭಟರ ತಗುಲಿ ಮೊಗದೋರಿದವು ಬೆನ್ನಿಂ ಬೋಳಿಯಂಬುಗಳು (೬೦ದಳ. ೦೭-೪). **ಲಗಡೆ** : ಲಗಡೆ ರಣಹದ್ದು ಸುಳಿವ ಕಾಳಿಂಗ ಹಂಸ ಚಕೋರನ ಬಳಗವೊಪ್ಪಿತು ವನದೊಳು (ಗೋಹಾರು. ೩-೦೨). **ಲಗುಡ**$_1$ : ಗಿಡುಗ ಲಗುಡ [ಶಾಶಾಂ. ಗಡು]ಗಳೆಸೆಯಲಲ್ಲಿ ವನಚರರಿಂದೆ ವನವೆಸೆದುದು (ಕಬಕೃ. ೩೩-೨೨).

[ದೇ.॥ ತೆಲು. ಲಗುಡು./ಹಿಂ. ಮರಾ. ಲಗಡ್]

**ಲಗಡೆ** ' ಲಗಡು ' ನೋ.

**ಲಗತ** (ನಾ). ಲಯಬದ್ಧವಾದ ಕುಣಿತ, —ನೃತ್ಯ : ಪುಗಿಸೆಳಸಂಜೆಯೊಳ್ ಸುಟಿವ ಪಾರಿವಮಂ ಸಖಿ ಗೂಡಿನೊಳ್ ಮಯೂರಿಗೆ ಲಗತಂಗಳಂ ಕಲಿಸು (೦೧ರಾಪ. ೦೪-೦೦೯). [< ಸಂ. ಲಯಗತ ?]

**ಲಗತಿಡು** (ಕ್ರಿ). ಜೋಡಿಸು ; ಸೇರಿಸು ; ಹೊಂದಿಸು : ಈ ಎಲ್ಲ ಖಲಮಾಗಳಿಗೆ ಬೇಕಾದ ಪುರಾವೆಯನ್ನು ಇಲ್ಲಿ ಲಗತಿಟ್ಟು ಕಳಿಸಿದೆ (ಇಪಪ. ೯೩). [ಲಗತು (< ಲಗತ್ತು)+ ಇಡು$_1$]

**ಲಗತು** 'ಲಗತ್ತು' ನೋ.

**ಲಗತ್ತಿಸು** (ಕ್ರಿ). = ಲಗತಿಡು : ಒಂದು ಛಾಯಾಗ್ರಾಹಕಯಂತ್ರವನ್ನು ದೂರದರ್ಶಕಕ್ಕೆ ಲಗತ್ತಿಸಿ ಛಾಯಾಚಿತ್ರ ಹಿಡಿದರೆ ಲೆಕ್ಕವಿಲ್ಲದಷ್ಟು ನಕ್ಷತ್ರಗಳನ್ನು ನೋಡಬಹುದು (ಆಕಾಶ. ೩೨) ; ನಿರೂಪದ ನಕಲೊಂದನ್ನು ಈ ಕಾಗದದೊಡನೆ ಲಗತ್ತಿಸಿದ್ದೇನೆ (ಕುಪರು. ೩೬೯).

[ಲಗತ್ತು + – ಇಸು$_3$]

**ಲಗತ್ತು**, ಲಗತು (ನಾ). ೧. ಜೋಡಣೆ ; ಹೊಂದಿಕೆ ; ಸೇರಿಕೆ : ಅವು ನಮ್ಮ ಅಳಿಯನಿಗೂ ನಿಮಗೂ ಲಗತ್ತು. ಇನ್ನು ಕಾಸೀಮಂದ್ನು ಕರೀಮಂದು ಯಾವುದೂ ಸಂಬಂಧ ಇಲ್ಲ (ಗಾರುದಾ. ೦೦೯). **ಲಗತು** : ೨. ಹತ್ತಿರ ; ಸಮೀಪ : ಇಲ್ಲೆ ಲಗತಿನಾಗ ಇರತಾರು (ಇಪನಾ. ೪೪).

**ಲಗತ್ತಾಗು**=ಹೊಂದಿಕೆಯಾಗು ; ಜೋಡಣೆಯಾಗು ; ಸೇರಿಕೆಯಾಗು : ಆ ನೌಕರಿಗೆ ಪುರಾವಿನಲ್ಲಿ ಲಗತ್ತಾಗಿದ್ದ ಕೆಲಸಗಳು ಈಗ ಮಾಡಲ್ಪಡುತ್ತಿರಲಿ (ಗ್ರಾಮಸೆ. ೪೪). [←ಮರಾ. ಲಗತ್]

**ಲಗರಗೋಲು** (ನಾ). ನಂದಿಕೋಲು (?) : ವೃಷಭನಾಟಕ್ಕೆ ಲಗರಗೋಲನಿತ್ತು ನೀವು ಪಶುಪತಿಯ ಮುಂದಣ ಎಸೆವ ಅಸಾದಿಗಳೀವೆಂದು ಶೀಲವ ಬಸವಣ್ಣನಿಟ್ಟು ಬೆರಸಿದ (ಬಸ್ವರಾ. ೯-೪೦).

[? + ಕೋಲು$_1$(< ಕೋಲ್$_1$)]

**ಲಗಳಿ** ' ಲಗಳೆ ' ನೋ.

**ಲಗಳಿಚಣ್ಣ** (ನಾ). ಸಡಿಲವಾದ ಚಲ್ಲಣ, – ಪಾಯಿಜಾಮಾ : (೪).

[ಲಗಳಿ$_1$ + ಚಣ್ಣ (< ಚಲ್ಲಣ)]

**ಲಗಳೆ**, ಲಗಳಿ (ನಾ). ನೀರು ಮೊದಲಾದ ದ್ರವಪದಾರ್ಥಗಳನ್ನು ತುಂಬುವ ದೊಡ್ಡ ಚರ್ಮದ ಚೀಲ ; ಪಕಾಲಿ : ಹೊಗೆಯು ಕುಡಿದೆಲೆಯನಗಿವ ಬಾಯತ್ ಸಿಂದಿಯ ಲಗಳೆಯಂತಿಹುದು (ಸರ್ವಜ್ಞ. ೦೩೦೭) ; ಶಿಶುನಾಳಧೀಶನ ದಿವ್ಯಜ್ಞಾನದ ಲಗಳೆ ಹೊತ್ತು ತಿರುಗುವ ಕಾಯಕವು ತನ್ನದು (ಕಂಠಕ. ೭೪ ಕವಿತಾಪ್ರಸಂಗ). 'ಸಗ್ಗಳೆ' ಪರಾ. **ಲಗಳಿ** : ಎರಡೆರಡು ಮೂರುಮೂರು ಮೈಲಿನ ಮೇಲಿಂದ ಲಗಳಿಗಳಲ್ಲಿ ಇಲ್ಲವೆ ಛಕ್ಕಡಿಗಳಲ್ಲಿ ನೀರು ತರುತ್ತಿರುತ್ತಾರೆ (ಕರಾಗ. ೨೩೩). [?]

**ಲಗಾಟ**, ಲಕೋಟಿ, ಲಗಾಟ$_1$, ಲಘಾಟಿ (ನಾ). ೧. ತಲೆ ಕೆಳಗು ಮಾಡಿ, ಕಾಲು ಮೇಲು ಮಾಡಿ ನೆಗೆದು ಮತ್ತೆ ನಿಲ್ಲುವುದು; ಲಾಗ; ಪಲ್ಟಿ : ಲಖಿತಲಲಾಟದೋಳರದಿರಲೇಗೈವೆ ಎಷ್ಟು ಲಗಾಟವ ಹೊಡೆವೆ (ಇಂತಾಪ. ೦೭೦-೪೦). ೨. (ಆಲಂ) ಅನುತ್ತೀರ್ಣ; ನಪಾಸು; ಫೇಲು: ಮ್ಯಾಟ್ರಿಕ್‌ಪರೀಕ್ಷೆಯಲ್ಲಿ ಪ್ರಥಮ ಲಗಾಟವಾದ ಮೇಲೆ . . . ಶಾನಾದರೂ ಶಾಲೆಯ ಲಾಯಿಫ್‌ಮೆಂಬರ ಎಂಬಂತೆ ವಸಂತ ವರ್ತಿಸತೊಡಗಿದನು (ಗಂಪೂಯು. ೬೦). **ಲಕೋಟಿ** : ೧. ರಣಸೂರಬಾಬೂಸಾಹೇಬ ಹೊಡೆದ ಲಕೋಟಿ ಆದ ಸುಮಾರ (ಶ್ರಂಠ. ೬೩). **ಲಗಾಟ$_1$**. **ಲಘಾಟಿ**: ೧. ಲಗುಬೀರಣ್ಣಾ ಲಗುಬೀರಾ ಚಲ್ ಲಘಾಟಿ ಕೊರವರು ಬರುತಾರೆ (ಜಾಲ್ವಹ. ೪೬).

ಲಗಾಟಹಾಕು, ಲಗಾಟಹಾಕು=೧. ಲಾಗಹಾಕು ; ಪಲ್ಟಿಹೊಡೆ. ೨. (ಆಲಂ) ಸಾಯು ; ಮರಣಹೊಂದು : ಅವಳಾದರೋ ತುಂಬ ಮುದುಕಿ, ಯಾವಾಗ ಲಗಾಟಹಾಕುತ್ತಾಳೆ ಎಂಬುದನ್ನು ತಿಳಿಯಲು ಅಸಾಧ್ಯ (ಬದೂಗೀ. ೨). ೩. ಅಯಶಸ್ವಿಯಾಗು; ಅನುತ್ತೀರ್ಣವಾಗು; ನಪಾಸಾಗು: ಕನ್ನಡ ನಾಲ್ಕನೆ ಇಯತ್ತೆಯಲ್ಲೇ ಮೂರುಸರತಿ ಲಗಾಟ ಹಾಕಿ ಸಾಲೆ ಬಿಟ್ಟು ಈಗ ಅಂಗಡಿಯಲ್ಲಿ ಕೂಡ್ರುತ್ತಾನೆ (ಮೂರುದಾ. ೨೩೪). **ಲಗಾಟಹೊಡೆ**, **ಲಗಾಟಹೊಡೆ**=ಲಗಾಟಹಾಕು ೧ : ಗಿಮಿ ಗಿಮಿ ಹಸಿರು ಹುಲ್ಲ ಮೇಲೆ ಲಗಾಟಹೊಡೆಯಬೇಕೆಂದೆನಿಸಿತು (ಪಶುಮನ. ೪೩) ; ಮಂದೀ ಕುಂಬೀ ಮ್ಯಾಲ ಏಟ ದಿನಾ ಲಗಾಟಹೊಡೆಯೋದು ? (ದಾಂಂ. ೪೪).

[< ಲಾಗು$_1$ + ಆಟ]

**ಲಗಾಟ$_1$** ' ಲಗಾಟ ' ನೋ.

**ಲಗಾಟ$_2$** (ನಾ). ಜಗಳಗಂಟಿ ಹಾಗೂ ದುಷ್ಟಳಾದ ಹೆಂಗಸು : (೪) [?]

**ಲಗಾಡಿ** (ನಾ). ಕೇಡು ; ನಾಶ ; ನಷ್ಟ : 'ಲಗಾಡಿತೆಗೆ' ಪರಾ.

[← ತುಳು. ಲಗಾಡ್, ಲಗಾಡಿ]

**ಲಗಾಡಿತೆಗೆ** (ಕ್ರಿ). ಹಾಳುಮಾಡು : ನಾಶಮಾಡು : ಕಳೆ : ಆಸ್ತಿಹಣಗಳನ್ನು ಲಗಾಡಿತೆಗೆಯಲು ಏನೇನು ಬೇಕೋ ಅದಕ್ಕೆ ತಕ್ಕ ಬರವಣಿಗೆ ಹೇಳಿಕೊಡುತ್ತಿದ್ದರು (ಹುಮುಂಬ. ೦೭); ನಮ್ಮ ಮಾಧವನು ಇದ್ದುದನ್ನು ಲಗಾಡಿತೆಗೆದ ಮೇಲೆ . . . ಎಲ್ಲವನ್ನು ಹಂಚಿಕೊಟ್ಟೆ (ಶಾರುದಾ. ೦೬೩); ಬೂದಿಕಟ್ಟೆದೇವರು ಸುಟ್ಟು ಲಗಾಡಿತೆಗೆದ (ಮೂಳೆಪ್ರ. ೪೪). [ಲಗಾಡಿ + ತೆಗೆ$_1$]

**ಲಗಾಮು** (ನಾ). ೧. ಕುದುರೆಯನ್ನು ಹಿಡಿತವಲ್ಲಿಟ್ಟುಕೊಳ್ಳಲು, ಅದರ ಬಾಯಲ್ಲಿ ಸಿಕ್ಕಿಸುವ ಕಬ್ಬಿಣದ ತುಂಡು ಮತ್ತು ಅದಕ್ಕೆ ಕಟ್ಟುವ ಚರ್ಮದ ಪಟ್ಟಿ; ವಾಘೆ : ತಡಿ ಸುಖಾಸನ ಸುಗತಿ ಪೊಂಬಾವುಡೆ ಜನಾಖಿ ಲಗಾಮು . . . ಮಣಲಂಬಳದ ಹಯ ಮಿಗೆ ಗುಡಿಯುಜಾದು ಮೊಗವೆತ್ತಿ ನರ್ತಿಸಿತಸುರನಿದಿರಿನಲಿ (ಕೊರದಾ. ೬-೨೯-೦೨); ರಥದ ಅಲಂಕಾರಕ್ಕೆ . . . ೪ ಬೆಳ್ಳಿಮುಲಾಮಿನ ಲಗಾಮು ಸಾರಥಿ ಕುದುರೆಗೆ (ಎಕ. XIV, ವಂಶನ. ೨೯೨-ಪುಟ,೦೪೨ ; 1847); ಅದರ ಲಗಾಮಿಗೆ ಕೈಹಾಕಲು ಅದು ಗರ್ರನೆ ತಿರುಗಿ ಹಿಂಗಾಲು ಜಾಡಿಸಿ ಕೊಸರಿಕೊಂಡು ಓಡಿ ಹೋಯಿತು (ಮುಂಬಯು. ೪-೬೯); ತುಂಟುಕುದುರೆಗೆ ಗಂಟುಲಗಾಮು (ಗಾದೆ). ೨. (ಆಲಂ) ಅಂಕೆ; ಹತೋಟಿ; ಹಿಡಿತ; ನಿರ್ಬಂಧ : ಈಗವನ ಬುದ್ಧಿಗೆ ಲಗಾಮು ಇಲ್ಲದಾಗಿದೆ (ತ್ಯಾಗಮ. ೭೦); "ನಿನ್ನ ನಾಲಗೇಗೆ ಲಗಾಮು ಐತಾ ?" "ನೀವು ಆಕ್ತೀರಾ, ಲಗಾಮು ?" (ಬಂಗಾ. ೦೯೯).

[← ಪಾರ. ಹಿಂ. ಮರಾ. ಲಗಾಮ್]

**ಲಗಾಯಿಸು** (ಕ್ರಿ). ೧. ಕೂಡಿಸು; ಜೋಡಿಸು; ಸೇರಿಸು : (೪). ೨. (ಆಲಂ) ಹೊಡೆ; ಬಾರಿಸು; ಪೆಟ್ಟುಕೊಡು : ಹೆಚ್ಚು ಮಾತನಾಡಿದರೆ ಒಂದು ಲಗಾಯಿಸುತ್ತೇನೆ ನೋಡು (ಕೂಡ). ೩. ತಿನ್ನು; ನುಂಗು : ಸೀಬೆಯ ಹಣ್ಣು ಕೊಡುತ್ತಾನೆ. ಲಗಾಯಿಸು (ಪಪದಾ. I ಪು. ೩೨೩). ೪. ಒತ್ತಿ ಹೇಳು ; ಗಟ್ಟಿಯಾಗಿ ಉಚ್ಚರಿಸು : ಹಲೊ ಎನ್ನುವಲ್ಲಿ 'ಲ'ವತ್ತು

ಲಗಾಯಿಸಿ ಕೂಗಿದ್ದು ಚೇಂಡಿದವರಿಗೆ ಅಸಂತೋಷವಾಯ್ತು (ಶತಮಹ. ೯೯).
[ಲಗಾ$_0$ (P ← ಹಿಂ. ಲಗಾನಾ) + —ಇಸು$_1$./ತುಳು. ಲಗಾಸ್]

**ಲಗಾವು** (ನಾ). ಸೇರುವಿಕೆ ; ಹೊಂದಿಕೆ ; ಲಗತ್ತು$_1$ : ಗ್ರಾಮನೌಕರಿಗೆ ಅಥವಾ ನೌಕರಿಗಳಿಗೆ ಲಗಾವಾಗಬೇಕಾದುದಿಲ್ಲವೆಂದು ಸರ್ಕಾರಿ ಗೆಜೆಟ್ಟಿನಲ್ಲಿ . . . ಸರ್ಕಾರದವರು ವಿನಾಯಿಸಬಹುದು (ಗ್ರಾಮಾಶ. ೬೩).

**ಲಗಾವಾಗು** = ಸರಿಹೊಂದು ; ಹೊಂದಿಕೆಯಾಗು : ಸೀತೆಗೂ ಕೂಡ ಅದೇ ಪ್ರಾಯಶ್ಚಿತ್ತರ ಲಗಾವಾಗದಿದ್ದೀತೇ ? (ಮಂಕಶ್ರ. ೨೩೦).
[← ಹಿಂ. ಮರಾ. ಲಗಾವ್]

**ಲಗಿಮ** (ನಾ). ೧. ಅಲ್ಪತೆ; ಲಘುತ್ವ. ೨. ಅಲ್ಪನಾದವನು ; ಹೀನ : ಸುಗುಣಿ ಗುಣಗಳನೆಣಿಸಿ ಸಂತೋಷಗೊಳುವಂತೆ ಲಗಿಮನರಿವನೆ (ವಿಂಶಾರಾ. ೪-೦೪-೭). [< ಸಂ. ಲಘಿಮನ್]

**ಲಗಿಸು** (ಕ್ರಿ). ಯೋಜಿಸು ; ಸಿದ್ಧಪಡಿಸು (?) : ಕಾಳಗಾವುಣ್ಡನ ತಮ್ಮ ಲೆಂಕರಾಯನಂ ಕರೆದು ವಿಷ್ಣುವರ್ದ್ಧನ ಹೊಯ್ಸಳದೇವಂ ಮುಂಗೊಳುವಾಯದ ಕಾಳಗಕ ಲಗಿಸಿ ಬೆಸಂಬೇಳೆ ಲೆಂಕರಾಯಂ ಮಾಡಿದ ಪರಾಕ್ರಮೋನ್ನತಿಯಿಂದೆಂತೆಂದಡೆ (ಎಕ. V. ಬೇಲೂರು. ೨೦೨-೭; 1138).
[P ಇದು 'ಲಾಗಿಸು' ಎಂಬುದರ ಅಪಲಿಖಿತವಿರಬಹುದು]

**ಲಗು$_1$**, ಲಗೂ$_1$ (ನಾ). ೧. ಹಗುರ; ಭಾರವಿಲ್ಲದುದು : "ಲಗು–ಲಘು = ಶೀಘ್ರ, ಹಗುರ" (ಕನ್ನಕೋ. ೩೬). 'ಲಗುಗೆಯ್' ಪರಾ. ೨. ಸರಳವಾದುದು; ಸುಲಭವಾದುದು : ಲಗುವಿಂ ಪಾಡಲುವಾಯ್ದು ನಾಳ್ಕುಡಿಗಳಂ ಲಾಲಿತ್ಯದಿಂ . . . ಆಗಿಸುವನೊರ್ವಂ ಕಬ್ಬಿಗಂ (ಕಂಕಾಕ. ೩೬-೪). ೩. ಅವಸರ; ತ್ವರೆ. ೪. ಚೇತರಿಸಿಕೊಳ್ಳುವಿಕೆ ; ಆರೋಗ್ಯ ಸುಧಾರಿಸುವಿಕೆ : (೩). ಲಗೂ$_1$ : ೩. 'ಲಗೂನೆ' ಪರಾ.

**ಲಗುಬಿಗಿ** = ಸರಳತೆ ಮತ್ತು ಬಿಗುಮಾನ.—ಕಾಠಿಣ್ಯ : ಮೊದಲನೆಯ ಪತ್ರವು ನಮ್ಮ ಲಗುಬಿಗಿಯನ್ನು ನೋಡುವ ಪತ್ರ (ಕ್ರಿಯಾಮು.೦೯೬).
**ಲಗುಬಿಗು** = ಲಗುಬಿಗಿ : ಮೊದಲು ಲಗುಬಿಗು ನೋಡಿಕೊಂಡು ಆಮೇಲೆ ಕೆಲಸ ಮಾಡಬೇಕು (ಕೂಶ). **ಲಗುಮಾಡು** = ಅವಸರ ಪಡು ; ತ್ವರೆಮಾಡು : ಬಲ್ಲೆ ನಾ ಭಾವಣ್ಣ, ಸಣ್ಣವನಿದ್ದ ನೀ ಲಗುಮಾಡದೆ (ಜಾತುಜಾ. ೩೨-೨೨). [< ಸಂ. ಲಘು]

**ಲಗು$_2$**, ಲಗೂ$_2$ (ಅ). ಬೇಗನೆ ; ಶೀಘ್ರವಾಗಿ : ಅದಷ್ಟು ಲಗು ಬಳಸದಿದ್ದರೆ ಹಳಸಿ, ಹದಗೆಟ್ಟು, ಹಾಳಾಗಿ ಹೋಗಬಹುದು (ಬಾನಾರ. ೦೦೭); ಒಂದಿನಿತು ಲಗು ನಡಿ (ಕಂದುಬಿ. ೩೨). **ಲಗೂ$_2$** : ಏನು ಗೌಡ್ರು, ಎಷ್ಟು ಲಗೂ ಬಂದ್ರಿ (ಬಾಂಕಹು. ೦೩) ; ಆದಷ್ಟು ಲಗೂ ತಿಳಿಸೋದು ನಿನಗೂ ಹಿತ (ಕಂಂ. ೩೦).

**ಲಗುಲಗು**, **ಲಗೂಲಗೂ** (ದ್ವಿರುಕ್ತಿ) : ನೂರಾಎಂಟು ಸಾರೆ . . . ಎಂದೆನ್ನಬೇಕು. ಬಹಳ ಲಗುಲಗು (ಕಾಂಹಿಂ. ೨೭) ; ಹೋಗಿರಿ . . . ಲಗೂಲಗೂ ಮಾಡಿಕೊಂಡು ಬರ್ರಿ (ಧಕಂಶ. ೩೬). [< ಲಗು$_1$]

**ಲಗುಗೆಯ್** (ಕ್ರಿ). (ಅಲಂ) ಹಗುರವಾಗಿ ಭಾವಿಸು; ಕಡೆಗಣಿಸು ; ಉಪೇಕ್ಷಿಸು : ಲಗುಗೆಯ್ಯದೆನ್ನ ಬಿನ್ನಪವ ಲಾಲಿಪುದೆಂದು ಸುಗುಣಾಂಗಿ ಬಿನ್ನಯಿಸಿದಳು (ವೀಚಿಕಕ. ೯-೨೩). [ಲಗು$_1$ + ಕಯ್$_1$]

**ಲಗುಡ$_1$** 'ಲಗಡು' ನೋ.

**ಲಗುಡ$_2$** (ನಾ). ದೊಣ್ಣೆ ; ಬಡಿಗೆ : "ಲಗುಡ – ಲಕುಟ = ದೊಣ್ಣೆ" (ಕನ್ನಕೋ. ೩೬); ನೇವಾಡಿ ಪ್ರಾಯುಧಮಂ ಲಗುಡಮ ಪಿಡಿಯಿರಿ ಮಾನವರೆಚ್ಚರಿಕೆ (ಬ್ರಹ್ಮಕ. ೨೨೦) ; ಮೊದಮೊದಲು ಮೊನಚಾದ ಲಗುಡ (ಕೋಲು)ದಿಂದ ಭೂಮಿಯಲ್ಲಿ ಹಳ್ಳ ಕೆರೆದು ಕಾಳನ್ನು ಬಿತ್ತಲಾಯಿತು (ಕಾಶಗ. ೧ ಮುಮ್ಮು). [ಸಂ.]

**ಲಗುಡತಾಡನೆ** (ನಾ). ದೊಣ್ಣೆಯ ಪೆಟ್ಟು ; ಕೋಲಿನ ಹೊಡೆತ. — ಪೆಟ್ಟು! ಜೋಳದ ಪಟ್ಟಿಂ ನೀರಂಬಲಿಯಂ ಪ್ರತಿದಿನಂ ಕುಡುವುದದು ಹೆಚ್ಚು ಕಡಮೆಯಾಗೆ ಲಗುಡತಾಡನೆಯಂ ಪಡೆವೆನೆಂದು ನಿಯಮಿಸೆ (ರಾಜಾವ. ೯೨). [ಸಂ. ಲಗುಡತಾಡನ]

**ಲಗುಡಪಾತ** (ನಾ). = ಲಗುಡತಾಡನೆ : ನಾಲ್ಕನೆಯೊಳ್ ರವಿ ನಿಧನಂ ಮನುಜಂಗೆ ಲಗುಡಪಾತದಿನಕ್ಕುಂ (ಜಾತಕ. ೨೬-೦೦). [ಸಂ.]

**ಲಗುಡಿ** 'ಲಗಡ್ಡ$_2$' ನೋ.

**ಲಗುಡಿಗ** (ನಾ). ಕೋಲುಕಾರ ; ವೇತ್ರಧರ ; ಒನ್ದು ಪೊಲ್ ಲಗುಡಿ ಭಾಯಿವಯ್ಯ ಲಗುಡಿಗರ ಧರ್ಮ್ಮವಾಗಿ ತಮ್ಮ ತೆಜಿಯಂ ಬಿಟ್ಟ ನರಸಿಂಘಯ್ಯನ ಮಗ ಸೋವುನಾಥಯ್ಯನು (ಕೌಪಾ. IX-i, ೦೦೭-೦೯ ; 1050).
[ಲಗುಡಿ (<. ಲಗಡ್ಡ$_2$) + — ಗ$_2$]

**ಲಗುಡೆ** (ನಾ). ಮಲ್ಲಯುದ್ಧದ ಒಂದು ಪಟ್ಟು : ಪಾಯಕರ ದಂಡೆಯಲಿ ಲಗುಡೆಯ ಲಾಯಿಯೊಳಗೆ ನವಾಯಿ ಬಿನ್ನಾಣದಲಿ . . . ಆಯುತವನ ಜಾದಿಹನೆ ಮಲ್ಲನೆಂ (ಕುವ್ಯಾಕ. ಭೀಷ್ಮ. ೦-೬೭). 'ಲಗಡ್ಡ$_2$' ಪರಾ.
[ಸಂ. ಲಗುಡ]

**ಲಗುನ**, ಲಗ್ಗ$_1$ (ನಾ). ೧. ಮದುವೆ : "ಲಗುನಮೆನೆ ಲಗ್ನಮಕ್ಕುಂ" (ಕಕಶ. ೯೮) ; ಮಾಯದ ಕೈಯಲ್ಲಿ ಓಲೆ ಕಂತವ ಕೊಟ್ಟರೆ ಲಗುನವಿಗುನವ ಬರೆಯಿತ್ತು ನೋಡಾ (ಅವಪ. ೯-೩೬) ; ಲಗ್ನ – ಲಗುನ, ಲಕ್ಷ್ಮಣ – ಲಕುಮಣ (ಕಮರ. ೨೫೯ ಕ್ರಿಯೋ). ೨. ಶುಭಮುಹೂರ್ತ : ದಶರಥ ಜನಪನಲ್ಲಿ ಪಯಣ ಲಗುನದೊಳನುವಿನಿಂ ಪೊರಮಟ್ಟನುರೆ ಸಾಕೇತಪುರಿಗಾಗಿ (ರಾಮಾಸಂ. ೦-೩-೦). ಲಗ್ಗ$_1$ : ೧. ಕೊಂಡುದಿಲ್ಲ ಕೊಟ್ಟುದಿಲ್ಲ ಲಗ್ಗವಿಲ್ಲ ವಿಲಗ್ಗವಿಲ್ಲ (ಬಸವ. ೪. ೦೨೦೯). ೩. ಸಂಬಂಧ ; ಸಂಪರ್ಕ : ಯಿ ಹೊಂನು ಭತ್ತವಲ್ಲದೆ ಮತ್ತಾವ ಸೀಮೆ ಸಿದ್ಧಾಯದ ಹೊಂನು ಭತ್ತದ ಲಗ್ಗವಿಲ್ಲ (ಕೌಪಾ. IX-ii, ೯೩೦-೨೨ ; 1465) ; ಮಾಯೆಯ ಲಗ್ಗವನು ಪರಿಹರಿಸಿದೆನು ಸುಪಿಯಾದೆ ನಾನು (ಅರಾಗ. ೦೦-೩೭-೩೬) ; ಶರಣರ ದ್ವಿತಯಾಕ್ಷರವ ಲಗ್ಗವನಾಂತ ಚರಣಾನ್ವಿತ ಕೃಷ್ಣ ಜಯತು (ಮೋಹತ. ೯೦-೦೭). [< ಸಂ. ಲಗ್ನ]

**ಲಗುನಿ** (ನಾ). ಅನುರಕ್ತೆ : ಜಗವಂದ್ಯಗೆ ಬೇಟವ ಮಾಡಿದ . . . ಗಗನಗಿರಿಯ ಮೇಲಿರ್ದಹನೆಂದಡೆ ಲಗುನಿಯಾಗಿ ನಾನಜಿಸುತ ಬಂದೆನು ಅಘಹರ ಕರುಣಿಸು ನಿಪುಣಾನೊಲಿದೆನು (ಮಹಾರೇ. ೩. ೯೬-೨೩೩).
[ಲಗುನ + — ಇ$_2$]

**ಲಗುಬಗೆ** (ನಾ). ಅವಸರ ; ಆತುರ ; ತ್ವರೆ : ಎಂಥ ಲಗುಬಗೆಯಿಂದ ಕಣ್ಮರೆ ಸಂದೆಯೋ (ಜಾತುಜಾ. ೯೯-೨) ; ಲಗುಬಗೆಯಿಂದ ಊಟ ತೀರಿಸಿಕೊಂಡು ಕೋಟು ಟೊಪ್ಪಿಗೆ ಹಾಕಿಕೊಂಡು ಹೊರಟೆ (ಮುಂಗಾರು. ೯೩).
[ಲಗು$_1$ + ಬಗ್$_3$./ತುಳು. ಲಗಬಗ./ಮರಾ. ಲಗ್‌ಬಗ್]

**ಲಗುಬದರಿ** (ನಾ). ಒಂದು ಬಗೆಯ ಸಸ್ಯ: "ಮಧುರಃ – ಬಿಳಿಯವರೆ, ಲಗುಬದರಿ, ಕೆಂಗಬ್ಬು" (ಟಿಕಾ. ೦೦೯). [< ಸಂ. ಲಘುಬದರೀ]

**ಲಗೂ$_1$** 'ಲಗು$_1$' ನೋ.

**ಲಗೂ$_2$** 'ಲಗು$_2$' ನೋ.

**ಲಗೂನೆ** (ಅ). ಬೇಗನೆ ; ಶೀಘ್ರವಾಗಿ ; ತಟ್ಟನೆ ; ಬಸ್ಸು ಬೇಗ ಸಿಕ್ಕಿತು. ಹಾಗಾಗಿ ಲಗೂನೆ ಬರುವಂತಾಯ್ತು (ಕನ್ನಸ. ೨೩೯); ಬಡವರ ಮದುವೆ ಲಗೂನೆ ಹ್ಯಾಂಗ ಆದೀತು ಹೇಳು ? (ಧಕಂ. ೨೦).
[ಲಗೂ$_1$ (< ಲಗು$_1$) + — ಅನ್ನೆ]

**ಲಗೋರಿ** (ನಾ). ಒಂದು ಬಗೆಯ ಲಗ್ಗೆಚೆಂಡಾಟ : ಓಣಿಯ ಹುಡುಗರು ಆಟದ ಬಯಲಿನಲ್ಲಿ ಕೂಡಿದರು. ಲಗೋರಿಆಟ ಆಡಲು ಸಿದ್ಧಯಿಸಿದರು (ಕಶಪ. ೪-೯೭). 'ಲಗ್ಗೆ' ಪರಾ.
[← ಮರಾ. ಲಗೋರೀ]

**ಲಗ್ಗ₁** ' ಲಗುನ ' ನೋ.

**ಲಗ್ಗ₂** ' ಲಗ್ಗ ' ನೋ.

**ಲಗ್ಗಿಕ, ಲಗ್ಗಿಗ** (ನಾ). ಲಗ್ನವನ್ನು ಹೇಳುವವನು ; ಜ್ಯೋತಿಷಿ ; ನೈಮಿತ್ತಿಕ : "ಲಗ್ಗಿಕರಿ ಲಾಗ್ನಿಕರ್ಕಳ್" (ಶಬ್ದಮ. ೪೭). ; ನತ್ವಕ್ಕೆ ಗತ್ವಂ-ಅಗ್ನಿ-ಅಗ್ಗಿ ; ಲಾಗ್ನಿಕ-ಲಗ್ಗಿಕ, ಲಗ್ಗಿಗ (ಶಮದ. ೩೭೭ ಪ್ರಯೋ). **ಲಗ್ಗಿಗ :** ಅರಯುತ್ತ ಲಗ್ಗಿಗರುಸಿರಲು ಕೇಳುತ್ತ್ಯವಗಲಾಗೆ (ಶಮಶಾ. ೨-೬೦) ; ಲಾಗ್ನಿಕ-ಲಗ್ಗಿಗ (ಶಬ್ದಾನು. ೧೬೦ ಪ್ರಯೋ). [< ಸಂ. ಲಾಗ್ನಿಕ]

**ಲಗ್ಗಿಗ** ' ಲಗ್ಗಿಕ ' ನೋ.

**ಲಗ್ಗಿಸು** (ಕ್ರಿ). ಮುತ್ತಿಗೆ ಹಾಕು ; ಆಕ್ರಮಣ ಮಾಡು : ಸುರಕುಲಂ . . . ನಡೆತಂದು ಪರಿದು ನೆರೆದು ಮುಂಗುಡಿಗೆದಱ ಸಂಗರಭೂಮಿಯೊಳೊಡ್ಡಿ ನಿಂದೆಡ್ಡವಾಗಿ ಲಗ್ಗಿಸಿ ಮೊಗ್ಗರಿಸುತ್ತೊಗ್ಗುಗೆಡದೆ ನಡೆಗೋಂಟೆಯಂತೆ ನೆಲೆವೆರ್ಚಿ ನಿಂದು (ಗಿರಿ. ೩-೫೫ ವ).

[ಲಗ್ಗ + – ಇಸು₃]

**ಲಗ್ಗೆ, ಲಗ್ಗ₂, ಲೆಗ್ಗ** (ನಾ). ೧. ಮುತ್ತಿಗೆ : ದಾಳಿ ; ಆಕ್ರಮಣ : "ಲಗ್ಗೆಯು ದಾಳಿಯೆನಿಕ್ಕುಂ" (ಶಾರದಾ. ೧೭); ಮೆಯ್ವೆತ್ತಿ ಲಗ್ಗೆಯಂ ಮಾಱ್ಪಾಳ್ಗಳ್ ದುರ್ಗದವರ್ಗಳ್ ನುಗ್ಗುಮಾಡೆ ನಾಡೆಯುಂ ಸಿಗ್ಗಾಗಿ ಲಗ್ಗೆಯಂ ತೆಗೆಸಿ (ಶಾಕ್ಯಶ್ರೀ. ೬-೧೪೦ ವ); ಮೊದಲ ಲಗ್ಗೆಗೆ ಮಡಿದು ಸಾವಿರತೇರು ನೆಗ್ಗಿದವೊಂದುನಿಮಿಷದಲಿ (ಕುಮಾ.ರಾ. ೯-೪೯) ; ತುಡುಕಿ ಲಗ್ಗೆಯನೇಱದು ವಜ್ರೀರರ್ಗೆ ಕಡುಗಲಿ ಖಾನ ಬೆಸಸಿದ (ಶಂಕರ. ೦೩-೯೫). ೨. ಕೋಲಾಹಲ ; ಗದ್ದಲ ; ಗಲಭೆ : ಲಗ್ಗೆಯ ರವದ ನಿಲಿಸಿದನುಳ ಘನಗಂಭೀರನಾದದಲಿ (ಕುಮಾ.ರಾಮ. ೧೭-೫); ಲಗ್ಗೆ ಮಸಗಿತು ಕೂಡೆ ರಕ್ಕಸ ಮೊಗ್ಗರದ ಮುಂಬಿನಲಿ (ತೊರವೆ. ೬-೨೦-೩೦). ೩. ಅರ್ಭಟ : ನೊರೆ ಬುದುಬುದವನೊಡೆಗಲಸಿ ಕದಡಿ ಕಂಗಳಮ್ಮು ಲಹರಿಗಳ ಲಗ್ಗೆಯಿಂದೆಸೆವ ನದಿಯೊಪ್ಪವನದೇವೊಗಳ್ವೆನು (ಹರಿಶ. ೧೦-೨೯). ೪. (ಆಕ್ರಮಣದ ಸಮಯದಲ್ಲಿ ಬಾರಿಸುವ) ಹಲವು ವಾದ್ಯಗಳ ಮೇಳ : "ಮೊಟಗೆ ಬಹುವಾದ್ಯಮದು ಲಗ್ಗೆಯಕ್ಕುಂ" (ಮಂಗರಾ. ೯೫-೨೭); ತಂಬಟದ ಸೂಳಿನ ಲಗ್ಗೆಯೆಡೆವಿಡದೆ ಚೀಱದವು (ಹರಿಶ. ೬-೦೯); ಉಲಿವ ಕೈವಾರಿಗಳ ಲಗ್ಗೆಯ ಬಲಿವ ತಂಬಟಕೋಟಿಗಳ . . . ಅಬ್ಬರಣೆ ಮಿಗೆ ಕೈಕೊಂಡ ರಥಿಬಳರು (ಕುಮಾ.ರಾ. ೯-೫೬); ಕಿತ್ತಿರಿಯ ತಂಬಟದ ಲಗ್ಗೆಯ . . . ಭಾರಿಯ ಘೋರಘೋಷದಲಿ (ತೊರವೆ. ೬-೭-೬); ಹೆಗ್ಗಡಲ ತೆರೆಯಂತೆ ಮೊಳಗುವ ಲಗ್ಗೆಗಳಲೋರಂತೆ ಸುಭಟರ . . . ಸಿಂಹನಾದದಲಿ (ಶಶಾಂಗ. ೧೦-೫೨-೯೬). ೫. ಮಲ್ಲಯುದ್ಧದ ಒಂದು ಪಟ್ಟು,—ವರಸೆ : ಉಬ್ಬಸವಾದ ತೋರಹತ್ತಕ್ಕೆ ತಗುಳ್ದು ಪತ್ತಿಸುವ ಮಾನ್ಯೆಗೋಳಮೆನಿಪ್ಪ ಡೊಕ್ಕರಕ್ಕಿಕ್ಕಿದ ಮಪ್ರುಲೇಪಮೆನೆ ಪತ್ತುವ ಲಗ್ಗೆಗೆ ಮಾರಿಯೊಳ್ ಮೊಗಂಬೊಕ್ಕವೊಲಾಗೆ ಬೆರ್ಚಿದನವಂ ಕುಪರಂಗೆನಸುಂ ನಿಯುದ್ಧದೊಳ್ (ಕಂದ್ರಪ್ರ. ೫-೬೦). ೬. ಚೆಂಡಾಟದಲ್ಲಿ ಚೆಂಡನ್ನು ಎಸೆಯಲು ಇಟ್ಟಿರುವ ಗುರಿಹಲಗೆ : ವಿರಹಿಜನದೆರ್ದೆಯ ಲಗ್ಗೆಯನಿಡುವ ಮನಸಿಜನ ಕರದ ಪತೌಕ್ತಿಕದ ಸೆಂಡೋ (ಸಮ್ಯಕ್ತ್ವ. ೦-೩೯) ; ವರಪೂಜೆಯನಾಂತು ಮೆಱೆವ ಮುತ್ತಿನ ಚೆಂಡು ಬರಬೇಕದು ಲಗ್ಗೆಯೆಡೆಗೆ (ಕುಮಾರಾಮ. ೩೦-೫): ಗುಂಡಾದ ಮುತ್ತಿನ ಚೆಂಡು ಉದಯಗಿರಿಯೆಂಬ ಲಗ್ಗೆಯಂ ತಾಗಿ ಪುಟಹಾರಿಯದುರೇರಿ ಬರುವುದೊಯೆಂಬಂತೆ (ಶಾಗಂ೦. ೦೪೭-೦೩). ೭. ಪೇರಿಸಿ ಇಟ್ಟುದು ; ರಾಶಿ : ಸಣ್ಣಸೇವಗೆಯ ಮದ . . . ದೋಸೆಯ ಲಗ್ಗೆ ಬೆಲ್ಲಗಾರಿಗೆಯ ಬಣಬೆ (ಸಮ್ಯಕ್ತ್ವ. ೭-೨೫). ೮. ಒಂದು ಬಗೆಯ ಚೆಂಡಾಟ ; ಲಗೋರಿ : ಬೊಗರಿ ಗದುಗು ಸಡುಗುಡು ಲಗ್ಗೆ ಹಿಡಿಗವಡೆ ಮೊದಲಾದ ಆಟಪಾಟಗಳು ಪ್ರಸಿದ್ಧವಾಗಿದ್ದುವು (ಶಂಕುಂಡ. ೧೩೨). ೯. ಗುಂಪು ; ಸಮೂಹ : ಮಱುದಿನ ತನ್ನ ಮಂತ್ರಿಯ ಮುಂದುಮಾಡೆಲ್ಲರ ಕೂಡೆ ಬಂದ ಪೆಂಗಳಗೆ ಪೇಚರಮಂತ್ರಿಗುಱಿಸವಿತ್ತೊಂದೆ ಲಗ್ಗೆಯೊಳು ಕೆಸಿಸಿದ (ಪ್ರಶ್ನ. ೩೭-೦೨೫). ' ಲಾಗ₁ ' ಪರ್ಯಾ. **ಲಗ್ಗ₂ :** ೫. ಕಳಂಬೊಳ್ಳು . . . ನಾಲ್ಕುಂ ಸ್ಥಾನದೊಳಂ ಮೂಱುಂ ಲಗ್ಗದೊಳ್ ಐದುಂ ಡೊಕ್ಕರದೊಳಂ ಎಣ್ಬತ್ತುನಾಲ್ಕು ಬಿನ್ನಣದೊಳಂ ಪಲತೆಱದ ಪಾತುಗಳೊಳಂ ನೆರೆದು (ಕಂದ್ರಪ್ರ. ೩-೭೭ ವ). **ಲೆಗ್ಗ :** ೧. ತೊಡಗಿದರೊಂದು ಲೆಗ್ಗಗ ವಿಶೇಷವಿರೋಧ ನಿರೋಧಗಾಢದಿಂ (ಹರಿವ.ರ. ೩-೪೭) ; ಗಿರಿದುರ್ಗದಿಂದೆ ಲೆಗ್ಗೆಯೊಳರಿವರ್ಗಮನಿಱಪಲೆಳಸಿ ದಿವ್ಯಮೆನಿಪ್ಪಾ ಗಿರಿದುರ್ಗಮನೇಱಸಿದಂ ನರಪತಿಯುಪ್ರತಿಮವೀರಚಿಕದೇವೇಂದ್ರಂ (ಅಪ್ರತಿ. ೯೫-೩). ೧೦. ಜಗಳ : ಕದನ.

**ಲಗ್ಗೆನುಗ್ಗು** = ಮುತ್ತಿಗೆ ಹಾಕು ; ಆಕ್ರಮಣ ಮಾಡು : ಮಾಗಿಯ ಮಂಜು ಲಂಕೆಯಂ ಸುತ್ತಿದುದು ಮುತ್ತಿದುದು, ಲಗ್ಗೆನುಗ್ಗೊಳಹೊಕ್ಕು ನುಂಗಿನುದಮಿಲದ್ಯಗ್ವಿಷಯಮಂ (ಶ್ರೀರಾಮಾ. ೪೭೪-೦೨). **ಲಗ್ಗೆಬೀಳು** = ಲಗ್ಗೆನುಗ್ಗು : ಲಗ್ಗೆಬಿದ್ದ ಕೋಟೆಯ ಒಳಗಿನ ಜನರಿಗೂ – ಹೊರಗಿನವರನ್ನು ತೊಂದರೆಗೀಡುಮಾಡುವುದಕ್ಕೆ ಅನೇಕ ತರದ ಸಾಧನ_ಸಲಕರಣೆಗಳಿರುವುವು (ಕರ್ನಾಟ. ೫). **ಲಗ್ಗೆಮಾಡು** = ಲಗ್ಗೆನುಗ್ಗು : ಲಗ್ಗೆಮಾಡಿದ ಪರುಣನ ಸುತಶತಗಳೊಳೊಗ್ಗೊಡೆಯದೆ ತಮತಮಗೆ ಉಗ್ರದೊಳಸು ತೊಡವರಲು ವಿಭೀಷಣ ಭಾರ್ಗವನಂಶಿದಿರಾಗಿ (ಅರಶ್ರ. ೬-೧೭೫). **ಲಗ್ಗೆಯಾಟ** = ಲಗ್ಗೆ ಚೆಂಡಿನ ಆಟ: ಕುಮಾರರಾಮನೂ ಆತನ ಸಂಗಡಿಗರೂ ಲಗ್ಗೆಯಾಟವನ್ನು ಆಡುತ್ತಿರುವರೆಂದು ತಿಳಿಸಿದ್ದಳು (ಕುಮಾರಾ. ೦೦೧). **ಲಗ್ಗೆಯಿಕ್ಕು** = ಲಗ್ಗೆನುಗ್ಗು : ಕೋಟೆಗೆ ಲಗ್ಗೆಯಿಕ್ಕಿದರು (ಕರ್ನಾಟ. ೦೯೨). **ಲಗ್ಗೆಯೇರು** = ಲಗ್ಗೆನುಗ್ಗು : ಎರಡು ಕಡೆಯಲ್ಲಿಯೂ ಲಗ್ಗೆಯೇರಿ ಬರುತಲಿರುವ ಆ ಶತ್ರುಜನಗಳು ಅಡಿಯಿಡದಂತೆ . . . ಮಾಡಿದರು (ಮುದ್ರಾ. I, ೭೪) ; ಆತನ ಪಡೆ ಲಗ್ಗೆಯೇರಲು ತೊಡಗಿತ್ತು (ಕುಮಾರಾ. ೭೩). **ಲಗ್ಗೆಹತ್ತು, ಲೆಗ್ಗೆಹತ್ತು** = ೧. ಲಗ್ಗೆನುಗ್ಗು : ರಂಗಪಟ್ಟಣಕ್ಕೆ ಲಗ್ಗೆಹತ್ತುತಿದಾರೆಂಬ ವರ್ತಮಾನ ತಿಳಿಯಿತು (ತತ್ತ್ವಶಾ. ೩) ; ಶೌರ್ಯದಿಂದ ಕಾದಿದರೂ ಶತ್ರುಗಳು ಲಗ್ಗೆಹತ್ತುವುದನ್ನು ನಿಲ್ಲಿಸಲಾಗದೆ ಹೋಯಿತು (೭೩೪. ೪೨). ೨. ಜಗಳವುಂಟಾಗು ; ವಿರೋಧವುಂಟಾಗು : ರೂಪಚಂದನಿಗೂ ದಯಾವತಿಗೂ ಲೆಗ್ಗೆಹತ್ತಿರುವುದು ಗಜೇಂದ್ರಸಿಂಹನಿಗೆ ಗೊತ್ತಾಗಿತ್ತು (ಹಸಿವಾ. ೦೩೨). **ಲಗ್ಗೆಹಾಕು** = ಲಗ್ಗೆನುಗ್ಗು : ತರೀಕೆರೆ ದಂಡು ಬಂದು ರಂಗ ಪಟ್ಟಣಕ್ಕೆ ಲಗ್ಗೆಹಾಕಿದ್ದ (ತತ್ತ್ವಶಾ. III. ಅಮುಬಂಧ ೦). **ಲಗ್ಗೆಹೂಡು** = ಲಗ್ಗೆನುಗ್ಗು : ಇವನು ಪಡಸಾಲೆಯಲ್ಲಿ ಕುಳಿತಾಗ ಸ್ನೇಹಿತರು ಬಾಗಿಲ ಬಳಿ ಲಗ್ಗೆಹೂಡಿ . . . ಸನ್ನೆ ಮಾಡುತ್ತಿದ್ದರು (ಗಂಡಾಂತ. ೯೫).

[< ಸಂ. ಲಂಘನ]

**ಲಗ್ಗೆಗೆಯ್** (ಕ್ರಿ). ಮುತ್ತು ; ದಾಳಿಮಾಡು ; ಲಗ್ಗೆಯಿಕ್ಕು : ತುರಗಾಧಿರೂಢರ್ . . . ಉತ್ಖಾತಾಸಿಸ್ಫುರಿತಭುಜಪರಿಘರೊಂದೊರ್ವರ ಸೆಣಸಿಂ ಲಗ್ಗೆಗೆಯ್ದು ಪಾಯಿಸೆ ಜವದಿಂ (ಚಂದ್ರ. ೪-೦೫) : ಅಱಿಯೊಡ ಲೆಂಬ ಮಣ್ಣ ಮುಱಿಗೋಟೆಯೊಳಿಂದ್ರಿಯದುಃಪರಿಗ್ರಹಂಗಳನೊಳ ಕೊಂಡು ಜೀವನಿಲಲಾರ್ತಪ ನಾಳೆಯು ಲಗ್ಗೆಗೆಯ್ದು ತೊತ್ತಳದುಳದಿಪ್ಪನು ದ್ದಪರಿಯಿಂ ಜವಂ (ಸಮಶ. ೧೫-೯೫). [ಲಗ್ಗೆ + ಕೆಯ್₁]

**ಲಗ್ಗೆಚೆಂಡು** ' ಲಗ್ಗೆಸೆಂಡು ' ನೋ.

**ಲಗ್ಗೆಚೆಂಡು** ' ಲಗ್ಗೆಸೆಂಡು ' ನೋ.

**ಲಗ್ಗೆದಂಬಟ** (ನಾ). ಆಕ್ರಮಣದ ಸಮಯದಲ್ಲಿ ಬಾರಿಸುವ ತಮಟೆಗಳ ಸಮೂಹ : ಇಕ್ಕೆಲದ ರಾವುತರ ತೇರಿನ ತೆಕ್ಕೆಗಳ ಗಜಘಟೆಯ ಕಾಲಾಳ್ಕೆಜದ ನಿಸ್ಸಾಳಸೂಳಿನ ಲಗ್ಗೆದಂಬಟದ (ಕುಮಾ.ರ. ೬-೨೫) : ಸಂತಪಿಸಿತಾ ಸೇನೆ ಕುರುಬಲ ಕಂತುಹರನುದ್ಯೋಗವಾಗೆ ನಿರಂತರದ ನಿಸ್ಸಾಳಸೂಳಿನ

ಲಗ್ಗದಂಬಟದ (ಶಬ್ದಾ.ಶ. ೨೦-೧೪). 'ಲಗ್ಗವಟಿ' ಪರ್ಯ.
[ ಲಗ್ಗ + ತಂಬಟ ]

**ಲಗ್ಗದೋಱು** (ಕ್ರಿ). ಗದ್ದಲ ಹುಟ್ಟು; ಗಲಭೆಯಾಗು : ಅಚ್ಚಂ ಕೊಂಡು ಕವಡೆಯಂ ತೂಗಿಯುನಿತ್ತಂದುಱೆ ಕೈಚಳಕಂ ಮಿಗೆ ಚೆಂದಮೆನಲ್ ಲಗ್ಗದೋಱಲಾಡುತ್ತಿರ್ದರ್ (ದಕಸು. ೬-೯೯). [ ಲಗ್ಗ + ತೋಱು ]

**ಲಗ್ಗಮಣೆ** (ನಾ). ೧. ಚೆಂಡನ್ನು ಎಸೆಯುವ ಗುರಿಹಲಗೆ : ಲಗ್ಗಮಣೆ ಚೆಂಡು ತರಲು ಹೊರಟದ್ದವನು . . . ಮನೆಯೊಳಗೆ ಓಡಿದನು (ಪುರಪು. ೨೯೦). ೨. ಗುರಿಹಲಗೆಗೆ ಚೆಂಡನ್ನು ಎಸೆಯುವ ಆಟ : ಬನ್ರೋ ಲಗ್ಗಮಣೆ ಆಡಾನ (ಪುರಪು. ೨೯೦). [ ಲಗ್ಗ + ಮಣೆ ]

**ಲಗ್ಗವರಿಗೆ** (ನಾ). (ದಾಳಿಗೆ ನುಗ್ಗುವಾಗ) ಆತ್ಮರಕ್ಷಣೆಗಾಗಿ ಬಳಸುವ ಗುರಾಣಿ,-ಢಾಲು : ತಕ್ಕವರಿಗೆ ಲಗ್ಗವರಿಗೆಯಿಂದೆಯ್ತಂದೆಕ್ಕೆಕ್ಕೆಯಿಂ ಪಟುಭಟರು ಹೊಕ್ಕು ಹೊಯ್ದಾಡಿ (ಶಂರಾಶಾಂ. ೦೨-೬೭).
[ ಲಗ್ಗ + ವರಿಗೆ ]

**ಲಗ್ಗವಲ್ಲೆ** (ನಾ). = ಲಗ್ಗಮಣೆ ೧ : ಬಳಕಾಡುವ ಚೆಂಡು ಲಗ್ಗವಲ್ಲೆಗಳ ತಂದಿಳುಪಲೂಳಗದ ಬೋಳಕರು (ಶಂರಾಶಾಂ. ೩೦-೬೭).
[ ಲಗ್ಗ + ವಲ್ಲೆ$_2$ ]

**ಲಗ್ಗವಟಿ** (ನಾ). = ಲಗ್ಗದಂಬಟ : ಅನೇಕದುರ್ಗಸಾಧನಪರಿಕರಂಗಳ್ವೆರಸು ನಡೆದು ಘೋರ್ಗರೆವ ಲಗ್ಗವಟಿಗಳ್ ಮೊಟಗೆ ಸುತ್ತಿ ಮುತ್ತಿ (ಜಗಂ. ೭-೯೬ ವ); ಲಗ್ಗವಟಿಗಳಗಮವು ವ್ಯೌನದ ಸುಗ್ಗಿಯಾಯಿತು (ಶಬ್ದಾ.ಶ. ೬-೩೩); ಲಗ್ಗವಟಿ ಮೊಳಗಿದವು ನಿಜಬಲದೊಳ್ (ಕೃಶಂಶಾ. ೦೩-೯೩). [ ಲಗ್ಗ + ವಟಿ$_1$ ]

**ಲಗ್ಗವಿಡಿ** (ಕ್ರಿ). ಮುತ್ತಿಗೆ ಹಾಕು ; ಆಕ್ರಮಣ ಮಾಡು : ಗೊಂಡದುರ್ಗಕ್ಕೆ ಚಿಕ್ಕರದಿಂ ಮುತ್ತಿ ಪೊದಳ್ದು ಲಗ್ಗವಿಡಿದಾತ್ಮಾಧೀನಮುಂ ಮಾಡಿ (ಶ್ರೀಮುಚ. ೨-೩೯). [ ಲಗ್ಗ + ಪಿಡಿ$_1$ ]

**ಲಗ್ಗಸೂಳು** (ನಾ). ಅನೇಕ ವಾದ್ಯಗಳ ಜೋರಾದ ಧ್ವನಿ : ನಡುಗಿತ ವನ್ಯಿಯಪಾಂಡವಿರ್ವರವೊಡೆಯಲವನಿಯು ಲಗ್ಗಸೂಳಿನ ಹೊಡೆಗುಳಿನೊಳ್ಬುರಿಬಿವವು ನಿಸ್ಸಾಳಕೋಟಿಗಳು (ಶಬ್ದಾ.ಶಾ. ೦೦-೩೯).
[ ಲಗ್ಗ + ಸೂಳ್$_3$ ( < ಸೂಳ್$_2$ ) ]

**ಲಗ್ಗಸೆಂಡು**, ಲಗ್ಗಚೆಂಡು, ಲಗ್ಗಚೆಂಡು (ನಾ). ೧. ಗುರಿಹಲಗೆಗೆ ಚೆಂಡನ್ನು ಎಸೆದು ಆಡುವ ಆಟ : ಬಿಡದೆ ಶಿವದ್ರೋಹಿಗಳಂ ಪಡಲಿಡುವೊಡೆ ತಾಳ್ದ ಲಗ್ಗಸೆಂಡೆಬಿನೆಗಂ ನಿಡುಗಣ್ಣ ಗಾಡಿಕಾರ್ತಿಯ ಮಡಮಾವು ವೃತ್ತತೆಯಿನೊಪ್ಪ ಕಣ್ಗೊಳಿಸಿರ್ಕುಂ (ಶಿಕಶಂ. ೯-೯). **ಲಗ್ಗಚಂಡು** : ೧. ಲಗ್ಗಚಂಡನು ಬುಗುರಿ ಗುಡುಗಾಲಂಕಿ ಘನ ಜೂಜಂಗಳಾಡೆ (ಶಿರಂಗ. ೩) ; ಜತಿಜನರ ಕಲ್ಲೆರ್ದೆಯ ಲಗ್ಗಗಳನೂ . . . ಚೂರ್ಗ್ಯೆಯದಲ್ಲದೆ ಬಿಜವೆಂಬ ಮಾಳ್ಕೆಯಿಂ ಲಗ್ಗಚಂಡಾಡುತಿರ್ದರು ಪಂಥದಿ (ಶಶಮೋ. ೦೭-೩೭). **ಲಗ್ಗಚೆಂಡು** : ೨. ಗುರಿಹಲಗೆಗೆ ಎಸೆದು ಆಡುವ ಚೆಂಡು : ನೀವೆಲ್ಲಾ ಕಣಕ್ಕೆ ಹೋಗ್ರೋ, ನಾ ಲಗ್ಗಚೆಂಡು, ಮಣೆ ಹುಡುಕಿ ತರ್ತೀನಿ (ಪುರಪು. ೨೯೦). [ ಲಗ್ಗ + ಸೆಂಡು ]

**ಲಗ್ನ** (ಗು). ೧. ಸೇರಿದ; ಕೂಡಿದ : ತತ್ಕಮಳಾನನಕಂಟಕಲಗ್ನವಾದ ನಾದವೊಲುಡುಗುತ್ತುಮಾತ್ಮಕರವಂ ರವಿ ಪೊರ್ದಿದನಸ್ತಶೈಲಮಂ (ಶಂಶರಾ. ೯-೯೩). ೨. ಅಂಟಿದ ; ನಾಟಿದ. ೩. ಸಂಬಂಧಿಸಿದ ; ಹೊಂದಿಕೊಂಡ. ೪. ನಾಟಿಕೆಗೊಂಡ. ೫. ಬಳಸಿದ; ಉಪಯೋಗಿಸಿದ. ೬. ಮಂಗಳಕರವಾದ; ಪ್ರಶಸ್ತವಾದ. ೭. ಆಸಕ್ತಿಯುಳ್ಳ; ತತ್ಪರವಾದ. (ನಾ). ೮. ಮುಹೂರ್ತ; ನಿಶ್ಚಿತವಾದ ಕಾಲ : ಸಾವ ಲಗ್ನವು ಸನಿಯ ಬಂದುದು (ಕೌಶರಾ. ೨೩-೯೩). ೯. ಶುಭಕೆಲಸವನ್ನು ಮಾಡಲು ಮಂಗಳಕರವೆಂದು ಗೊತ್ತುಪಡಿಸುವ ಗಳಿಗೆ; ಶುಭವುಹೂರ್ತ : ನೈಮಿತ್ತಿಕನಂ ಬರಿಸಿ ತದಾತನಮುಮತ್ಯಂತ ನೂತನಮುಮಪ್ಪುದೊಂದು ಲಗ್ನಮಂ ಪೇಟುಮೆಂಬುದುಂ (ಶಾಂತಿಪು. ೩-೩೬೩); ಲಗ್ನವೆಲ್ಲಿಯುದೊ ವಿಘ್ನವೆಲ್ಲಿಯುದೊ ಸಂಗಯ್ಯಾ (ಬಸವ. ೯೭೦). ೧೦. ಮದುವೆ; ವಿವಾಹ : ಸುರರ ಸೇನಾಧಿಪ ಕುಮಾರನು ಗುಹನಿಗೆ ಲಗ್ನವಾಗಿಲ್ಲವಾಹ ! (ತಂಕಾಶ. ೦೬೦-೯೯); ನಿಮ್ಮ ಲಗ್ನ ಆಗೇದೇನು (ಅಶಪಾ. ೨೯). ೧೧. ಮದಿಸಿದ ಆನೆ ; ಮದಗಜ: "ಲಗ್ನಃ. ಪ್ರಭಿನ್ನಃ. ಮತ್ತಃ – ಈ ೩ ಮದದಾನೆ" (ಹಲಾಯು. ೩೭-೬೭); "ಲಗ್ನಂ ಪ್ರಭಿನ್ನಂ ಮತ್ತಮೆನೆ ಮದಗಜಂ" (ಶಂಗರಾ. ೯೭-೩). ೧೨. ರಾಜನನ್ನು ನಿದ್ದೆಯಿಂದೆಬ್ಬಿಸುವ ಸ್ತೋತ್ರಪಾಠಕ,– ಸ್ವಸ್ತಿವಾಚಕ. ೧೩. [ಜ್ಯೋತಿ] ಒಂದು ದಿನದ ಹನ್ನೆರಡನೆಯ ಒಂದು ಭಾಗ. ೧೪. ಸೂರ್ಯ ಅಥವಾ ಗ್ರಹಗಳ ಉದಯ. ೧೫. ಸೂರ್ಯನು ಯಾವುದೇ ರಾಶಿಯನ್ನು ಪ್ರವೇಶಿಸುವ ಕಾಲ,– ಸಮಯ: ಮೇಷವೇ ಮೊದಲಾದ ರಾಶಿಯ ಉದಯ: "ಪಂವಿಡಿದು ಮೇಷಾದಿಗಳು ಲಗ್ನಮೆನಿಕುಂ" (ಶಂಗರಾ. ೨೦-೩) ; "ಯಾವ ಕಾಲದಲ್ಲಿ ಯಾವ ರಾಶಿ ಉದಿಸುತ್ತೋ ಆಗ ಅದು ಲಗ್ನವಹುದು" (ಸಿದ್ಧಾಂತಿ. ೩೨). ಕನಕನಿರ ಲಗ್ನದೊಳ್ ಕ್ಷತತನು (ಶಾಶಶ. ೦೬-೯). ೧೬. ಹನ್ನೆರಡು ರಾಶಿಗಳ ಆಕೃತಿ,–ಆಕಾರ.

**ಲಗ್ನವಾಗು** = ಮದುವೆಯಾಗು ; ವಿವಾಹವಾಗು : ಭಾರತೀಯ ವಿದ್ಯಾರ್ಥಿಗಳು ಆಂಗ್ಲಕನ್ನೆಯರನ್ನು ಏಕೆ ಲಗ್ನವಾಗುತ್ತಾರೆ ? (ಸಪುಶೀ. ೬೦೦). [ಸಂ].

**ಲಗ್ನಂಬಡೆ** (ಕ್ರಿ). ಮಗ್ನವಾಗು; ಆಸಕ್ತವಾಗು: ರಾರಾಜಿಪ ಲೋಚನಕ್ಕೆರವದೊಳು ಕೂರುಗುರ್ಗೆದಗೆಯೆಸಳೊಳು ನೃಪತಿಯ ಚಾರುನಯನಮತಿಲಗ್ನಂ ಬಡೆದುವು ಬಂಡುಣಿಪಟಿಯಂತೆ (ಶಯಶಾ. ೩-೦೩). [ಲಗ್ನ + ಪಡೆ$_1$]

**ಲಗ್ನಕ** (ನಾ). ಹೊಣೆಗಾರ; ಜಾಮೀನಾದವನು : "ಪ್ರತಿಭೂಃ, ಲಗ್ನಕಃ – ಈ ೨ ಹೊಣೆ(ಗಾಱು)" (ಹಲಾಯು. ೩೨-೨೨೩); "ಲಗ್ನಕಃ, ಪ್ರತಿಭೂಃ – ೨ ಹೊಣೆಗಾರ, ಜಾಮೀನ್‌ದಾರ" (ಸಿದ್ಧಾಂತಿ. ೩೦೯). [ಸಂ.]

**ಲಗ್ನಕಾಲ** (ನಾ). ಶುಭಕಾರ್ಯಗಳನ್ನು ನೆರವೇರಿಸಲು ಒಳ್ಳೆಯದೆಂದು ನಿಶ್ಚಯ ಮಾಡಿದ ಸಮಯ ; ಶುಭಮುಹೂರ್ತ: ಲಗ್ನಕಾಲಕ್ಕೆ ವಿಘ್ನ ಮಾಡಬಾರದು (ಗಾದೆ). [ಸಂ].

**ಲಗ್ನಪತ್ರಿಕೆ** (ನಾ). ೧. ಮದುವೆ, ಮುಂಜಿ ಮುಂತಾದ ಶುಭಕಾರ್ಯಗಳಿಗೆ ಆಮಂತ್ರಿಸುವ ಪತ್ರ,–ಆಹ್ವಾನಪತ್ರಿಕೆ,— ಕರೆಯೋಲೆ : ನಂಟರಿಗೆಲ್ಲ ಲಗ್ನಪತ್ರಿಕೆಗಳನ್ನು ಕಳುಹಿಸಿಬಿಡಿ (ಶಶಿಶ. ೯೯); ಕವರು ಬಿಚ್ಚಿ ನೋಡಿದೆ : ಲಗ್ನಪತ್ರಿಕೆ (ರಾಮಪುಶ. ೬೯). ೨. ಮದುವೆಯ ದಿನ, ಮುಹೂರ್ತಗಳನ್ನು ನಿಶ್ಚಯಿಸಿ ಕರೆಯೋಲೆಯನ್ನು ಸಿದ್ಧಪಡಿಸುವ ಸಮಾರಂಭ; ನಿಶ್ಚಿತಾರ್ಥ: ಅವರ ಮನೆಯಲ್ಲಿ ಈವೊತ್ತು ಲಗ್ನಪತ್ರಿಕೆ (ರೂಢಿ). [ಸಂ. ಲಗ್ನಪತ್ರಿಕಾ]

**ಲಗ್ನಾಧಿಪತಿ** (ನಾ). ೧. [ಜ್ಯೋತಿ] ಆಯಾ ರಾಶಿಗೆ ಮುಖ್ಯಸ್ಥಾನದಲ್ಲಿರುವ ಗ್ರಹ; ಉದಾಹರಣೆಗೆ—ಕನ್ಯಾರಾಶಿಗೆ ಬುಧ, ಧನೂರಾಶಿಗೆ ಗುರು ಲಗ್ನಾಧಿಪತಿಗಳು. ೨. ಎಲ್ಲರ ಮದುವೆಯನ್ನು ನಿಷ್ಕರ್ಷೆ ಮಾಡುವ ಅಧಿಕಾರಿ; ಬ್ರಹ್ಮ : ಈ ಮೊದಲು ಲಗ್ನಾಧಿಪತಿಯಾದ ಬ್ರಹ್ಮನು ಎಂದೂ ನನ್ನ ಲಲಾಟಪಟ್ಟದಲ್ಲಿ ಬಂದು ಕುಳಿತಿರದಿದ್ದರೂ ಒಮ್ಮೆ ನನ್ನ ಮಾನಸಪದ್ಮದಲ್ಲಿ ಕುಳಿತಿದ್ದನು (ಾಚಶ. ೯೩೯). [ಸಂ].

**ಲಗ್ನಾಹ** (ನಾ). ಮದುವೆ, ಮುಂಜಿ ಮುಂತಾದ ಶುಭಕಾರ್ಯಗಳನ್ನು ಮಾಡಲು ಗೊತ್ತುಪಡಿಸಿದ ದಿನ,–ದಿವಸ: ಉದ್ವಾಹಲಗ್ನಾಹಮುಂ ಭೋಂಕನೆ ಸಾರ್ತಂದಿರ್ದುದೇನುಂ ತಡೆದಿರಲೆಡೆಯಿಲ್ಲ (ಶಂಶ್ರಪು. ೬-೯೩).
[ಸಂ.]

**ಲಗ್ನಿಗ** (ನಾ). ಮದುವೆ, ಮುಂಜಿ ಮೊದಲಾದ ಶುಭಕಾರ್ಯಗಳಿಗೆ ಮುಹೂರ್ತವನ್ನು ನಿಶ್ಚಯಿಸಿ ಹೇಳುವವನು ; ಜ್ಯೋತಿಷಿ : ಸಮಯದ ವಿವರವಱಿದು ಲಗ್ನಿಗರು ನವಕಾಂಚನಘಟದೊಳು ಘಟಿಕಾಪಾತ್ರ ವನಿರಿಸಿದರೊಲವಿಂದ (ಶ್ರೀಪಾಂ. ೦೦-೫೨). [ಲಗ್ನ + – ಇಗ]

**ಲಗ್ನಿಸು** (ಕ್ರಿ). ಸಂಬಂಧಿಸು; ಸೇರು; ಬೆರೆ; ಲೀನವಾಗು: ಭಗ್ನದುರಾತ್ಮಗೆ ಸುಪ್ರಭೆ ಸುಜ್ಞಾನ ಲಗ್ನಿಸಲೆರಡೊಂದೆ ರೂಪು (ಶಶಕ. ೬೬-೯೬).
[ಲಗ್ನ + – ಇಸು]

**ಲಘಾಟ** 'ಲಗಾಟ' ನೋ.

**ಲಘಿಮ** (ನಾ). ೧. ಹಗುರವಾಗಿರುವಿಕೆ; ಲಘುವಾಗಿರುವಿಕೆ; ಭಾರ ವಿಲ್ಲದಿರುವಿಕೆ. ೨. ಸಣ್ಣತನ ; ಅಲ್ಪತೆ. ೩. ಕೀಳುತನ ; ಕ್ಷುದ್ರತೆ. ೪. ವಿಚಾರಹೀನತೆ ; ಗಾಂಭೀರ್ಯವಿಲ್ಲದಿರುವಿಕೆ ೫. ವಿಚಾರಶೂನ್ಯನಾದವನು ; ಅವಿವೇಕಿ : ಕಾಮಿನೀವಶನಾದ ನಾವನಾಗಲಿ ಮನೋಭ್ರಾಮಕತ್ವದಿ ತೊಳಲಿ ಲಘಿಮನಪ್ಪಂತೆ (ವಿಂಶಾರಾ. ೨-೬-೫೪). ೬. [ಯೋಗ] ಅಷ್ಟಸಿದ್ಧಿಗಳಲ್ಲಿ ಒಂದು ; ಇಚ್ಛಿಸಿದಾಗ ದೇಹವನ್ನು ಅತ್ಯಂತ ಹಗುರವಾಗಿಸಿಕೊಳ್ಳಬಲ್ಲ ಶಕ್ತಿ : ಅಣಿಮವೆಂಬುದದು ತಾನೊಂದು . . . ಮತ್ತೆ ಅರಿ ಲಘಿಮವುದುವೆ ನಾಲುಕು (ಜ್ಞಾನಸಿಂ. ೨೦-೪೨) ; ಇಂಥಾ ದೃಢಭಕ್ತಿಯಿಂದ ಅಣಿಮ, ಮಹಿಮ, ಲಘಿಮ, ಗರಿಮ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವಗಳೆಂಬ ಅಷ್ಟೈಶ್ವರ್ಯಂಗಳನ್ನು ಹೊಂದಿದರು (ಪುರಾಶಿ. ೦೩೨).
[ಸಂ. ಲಘಿಮನ್]

**ಲಘಿಮೆ** (ನಾ). ೧. = ಲಘಿಮ ೧. ೨. ಸಣ್ಣದಾಗಿರುವಿಕೆ; ಚಿಕ್ಕ ದಾಗಿರುವಿಕೆ. ೩. ಕೀಳುತನ; ಅಲ್ಪತೆ. ೪. ವಿಚಾರಹೀನತೆ. ೫. = ಲಘಿಮ ೬ : "ಅಣಿಮೆ ಲಘಿಮೆಗಳೆನಲ್ಕಷ್ಟಸಿದ್ಧಿಗಳಕ್ಕು" (ಮಂಗರಾ. ೦೪೯-೩೩) ; ಅಣಿಮಾ ಗರಿಮಾ ಮಹಿಮಾ ಲಘಿಮಾ ಪ್ರಾಪ್ತಿ ಪ್ರಾಕಾಮ್ಯ ಈಶತ್ವ ವಶಿತ್ವಮೆಂಬಷ್ಟಗುಣ ಮಣಿಭೂಷಿತನುಮಾಗಿ (ಕ್ರಾವಣ. ೧೦೯) ; ಮಹಾಮೇರುಪರ್ವತಕ್ಕೆ ಸಮಾನವಾದ ಶರೀರಮುಳ್ಳಾತನಂ ಮೇಲಕ್ಕೆ ನೆಗಹುವ ಕೃತ್ಯದಲ್ಲಿ ಪರಮಾಣುವಿಗೆ ಸದೃಶವಹುದೇ ಲಘಿಮೆ (ಏವೇಕ. ೨೯೦).
[ಸಂ. ಲಘಿಮನ್]

**ಲಘಿಷ್ಠ** (ಗು). ೧. ಬಹಳ ಹಗುರವಾದ. ೨. ಎಲ್ಲಕ್ಕಿಂತ ಸಣ್ಣದಾದ; ಕನಿಷ್ಠಗಾತ್ರದ. ೩. ಅತ್ಯಂತ ವೇಗವುಳ್ಳ ; ಚುರುಕಾದ. [ಸಂ.]

**ಲಘು** (ಗು). ೧. ಹಗುರವಾದ ; ಭಾರವಿಲ್ಲದ : ತೂಕವಿಲ್ಲದ. ೨. ಸುಲಭವಾದ ; ಸರಳವಾದ. ೩. ಸಣ್ಣದಾಗಿರುವ ; ಚಿಕ್ಕ ದಾದ. ೪. ದೀರ್ಘವಲ್ಲದ ; ಹ್ರಸ್ವವಾದ ೫. ಅಲ್ಪವಾದ ; ತುಚ್ಛವಾದ : ಅತೀವಜಘನ್ಯಶರೀರಮಂ ಕೈಕೊಂಡು ಪುಟ್ಟಿ ಮತ್ತಮಾ ಯೆಡೆಯೊಳ್ ಪಲವುಂ ಸೂಟ್ ಲಘುಜನ್ಮಾವಗಾಹದಿಂ ಪುಟ್ಟಿ ಸತ್ತು (ಸುಕುಮಾ. ೬-೬ ವ). ೬. ದುರ್ಬಲವಾದ ; ಬಲಹೀನವಾದ. ೭. ಸತ್ತ್ವ ರಹಿತವಾದ ; ನಿಸ್ಸಾರವಾದ. ೮. ಮನೋಹರವಾದ ; ಸುಂದರ ವಾದ. ೯. ಮೃದುವಾದ ; ನಯವಾದ. ೧೦. ವೇಗವಾದ ; ಶೀಘ್ರವಾದ : ಲಘುಲಕ್ಷಸುಟಿಯೊಳೊದಗಿ ಪೊಕ್ಕು ಪೊಡದಿಱಿದೊಗೆದು ಸಂಗ್ರಾಮಮುಖದೊಳು ಬಗೆಗುಂದಿಸುವನು ಶತ್ರುಗಳ ಭೈರವರಾಜ ನಿಗದಾವನಾಂಪ (ಭೈರವೇ. ೩-೦೦). (ನಾ). ೧೧. ಮುಖ್ಯವಲ್ಲ ದುದು ; ಕ್ಷುಲ್ಲಕವಾದುದು ; ತುಚ್ಛವಾದುದು : ಅಧಿಕಸತ್ವಗುಣಕ್ಕಾಗ್ರಣಿಗಾ ನೃಪಂಗೆ ಮನದೊಳ್ ತೃಣವಲ್ಲಘುವಾದುದಾವಗಂ ಸ್ತ್ರೈಣಸುಖಂ (ಕಾದಂಪೂ. ೦೯) ; ಗುರುವ ಲಘುವನು ಉತ್ತಮಾಧಮವೆರಡ ಸರಿಗಾಂಬ ವರ ಮಧ್ಯದ ಪಿರಿಯನೇಗುವ ಹೇಮ ಗುಂಜಿಗೆ ಸರಿಯೆನಿಪ್ಪಂತೆ (ಕೌಶಿರಾ. ೨೩-೦೦) ; ಲಘುವೆನಿಸಿ ಗುರುವಾಯ್ತಲಾ ! (ಶ್ರೀರಾಮಪೂ. ೨೪೯-೬೭೦). ೧೨. ದೀರ್ಘವಲ್ಲದುದು ; ಸಂಕ್ಷಿಪ್ತವಾದುದು ; ಹ್ರಸ್ವವಾದುದು : ಮಾತುಗಳು ಯಾವತ್ತೂ ತೀರ ಲಘುವಾಗಿ ಇರಲಿ (ರೂಪಸಂ. ೨೨). ೧೩. ವೇಗ ; ಶೀಘ್ರತೆ : "ಲಘು ಶೀಘ್ರಂ" (ವಸ್ತುಕೋ. ೦೦೩-೦೩). ೧೪. ಗಾಳಿಯ ನಡೆ ; ವಾಯುವಿನ ವೇಗ. ೧೫. ನಿಸ್ಸಾರವಾದುದು. ೧೬. ದೀನತೆ ; ದೈನ್ಯ. ೧೭. ಸುಂದರವಾದುದು. ೧೮. ಒಂದು ಬಗೆಯ ಸುಗಂಧದ್ರವ್ಯ ; ಅಗುರು : "ಕರ ಶೀಘ್ರದಲಿ ಮನೋಜ್ಞ ನಿಸ್ಸಾರದಲಿ ಮರುತಗತಿಯಲಿ ಅಗರಿನಲಿ ಲಘುವೆನಿಕ್ಕು" (ಮಂಗರಾ. ೦೪೯-೬೪) ; "ವಾಯುಚಾರಂ ದೈನ್ಯಂ ನಿಸ್ಸಾರಮುಂ ಶೀಘ್ರಮುಮಗುರು ಮನೋಜ್ಞಂ ಲಘೂವಾಕ್ಯಮಕ್ಕುಂ" (ನಾಚಾರ. ೦೪೬). ೧೯. ಕೈಚಳಕ ; ಲಾಘವ : 'ಲಘುದೋರು' ಪರಾ. ೨೦. ಗದಾಯುದ್ಧದ ಒಂದು ವರಸೆ. – ಪಟ್ಟು : ಬವರಿ ಮತ್ತೊಳ್ಳೋದ್ಗತಿ ವಿಲಂಘನ . . . ನವವಿದ್ರಾವಣ ಲಘುವಿನ್ನೃಸ್ತವೆಂಬೀ ವಿಪರದಲಿ ಕಾದಿದರು ಕೌತುಕವೆನಲು ಸುರನಿಕರ (ಜಯ್ಯಾಗ. ೬-೨೩). ೨೧. ಆರೋಗ್ಯ ; ಸ್ವಾಸ್ಥ್ಯ : ಬರಿದೆ ದೇಹಕ್ಕೆ ಲಘುವಿಲ್ಲವೆಂದು ಮೂರು ನಾಲ್ಕುದಿನ ಹೋಗದೆ ಇದ್ದು (ಚಕ್ರೀಕ. ೦೨೨). ೨೨. ಲಾಮಂಚ ; "ಕರೇಬಾಳದ ಬೇರು" (ಸೂಗಾಮ. ೨೬೬). ೨೩. [ಛಂದ] ಒಂದು ಮಾತ್ರೆಯ ಅವಧಿ ಯಲ್ಲಿ ಉಚ್ಚರಿಸುವ ಅಕ್ಷರ ; ಹ್ರಸ್ವಾಕ್ಷರ : ಬರೆದಯ್ದ ಲೆಕ್ಕಮನಾದರದಿಂ ಗುರುಲಘುವಿಭೇದಮಂ ಭಾವಿಸು ನೀಂ ಗುರು ಮುಂತೆ ಕೊಂಕೆ ತೋಱುವ ಬರೆ ಪಿಂತಣ ಸೈತನಪ್ಪ ಬರೆ ಲಘು ಕೆಳದ (ಛಂದೋಂಬು. ೦-೩೩) ; ಮೊದಲು ಕೊನೆಗಳಲ್ಲಿ ಲಘುವೂ ಮಧ್ಯದಲ್ಲಿ ಗುರುವೂ ಇದ್ದರೆ ಜಗಣವೆಂದು ಪ್ರಮೃತಿಸಿದೆ (ಕಕುಪ್ರ. ೬೩). ೨೪. [ಸಂಗೀತ] ತಾಳದ ಆರು ಅಂಗಗಳಲ್ಲಿ ಒಂದು : ಪಂಚಸ್ಥಳದಲಿ ಲಘುವಿಡಿದೊಪ್ಪೆ . . . ಪಂಪನಾಟಕಭೇದವ ವಾಚಿಸುತ್ತ (ಪ್ರಕಂಡ. ೩-೦೯೪-೩) ; ಝಂಪೆಟತಾಲದಲ್ಲಿ ಎರಡೆರಡು ಅಕ್ಷರ(ಕಾಲ)ಗಳ ಎರಡು ದ್ರುತಗಳೂ ನಂತರ ನಾಲ್ಕಕ್ಷರಪ್ರಮಾಣದ ಒಂದು ಲಘುವೂ ಇವೆಯೆಂದು ತಿಳಿಯಬೇಕು (ಕಕುಪ್ರ. ೨೮). 'ಷಡಂಗ' ಪರಾ. ೨೫. [ನಾಟ್ಯ] ನೃತ್ಯದ ಒಳಭೇದಗಳಲ್ಲಿ ಒಂದು ; ವಿಷಮ, ವಿಕಟ, ಲಘುವೆಂಬ ಮೂರು ನೃತ್ತಗಳಲ್ಲಿ ಒಂದು : "ಅಂಚಿತ ಮೊದಲಾದ ಅಲ್ಪ ಕರಣಗಳನ್ನು ಮಾಡುವುದು ಲಘುನೃತ್ತವು" (ಲಾಸ್ಯಕಂ. ೨೦೯ ಗದ್ಯಾಕು ವಾದ) : ಒಪವಿದ ನೃತ್ತಂ ತ್ರಿವಿಧಾಖ್ಯದೆ ರಂಜಿಪುದೆಯ್ದೆ ವಿಷಮ ವಿಕಟಂ ಲಘುವೆಂದುದಯಿಪುದು . . . ಅಂಚಿತ ಮೊದಲಾಗಿರುವಲ್ಪಕರಣಮಂ ಕೇಳ್ ವಿರಚಿಸುವುದು ಲಘುವೆನಿಪ್ಪ ಪೆಸರಂ ಪಡೆಗುಂ (ಲಾಸ್ಯರಂ. ೦-೬೩). ೨೬. [ಜೈನ] ಎಂಟು ಬಗೆಯ ಸ್ಪರ್ಶನಾಮಕರ್ಮಗಳಲ್ಲಿ ಒಂದು : ಸ್ಪರ್ಶನಾಮಕರ್ಮಮಷ್ಟವಿಧಮಕ್ಕುಂ ಕರ್ಕಶಮೃದುಗುರುಲಘುರೂಕ್ಷ ಸ್ನಿಗ್ಧಶೀತೋಷ್ಣ ಸ್ಪರ್ಶನಾಮಕರ್ಮಮೆಂದಿಂತು (ಗೊಮ್ಮಸಾ. ೪-೦೦). 'ನಾಮಕರ್ಮಪ್ರಕೃತಿ' ಪರಾ.

ಲಘುವಾಗು = ಗೌರವವನ್ನು ಕಳೆದುಕೊಳ್ಳು ; ಅಲ್ಪವಾಗು : ಎನ್ನವರಂ ಲಘುವಾಗದಿರ್ಪನೋ ಅನ್ಯಗಮಿಗಳೆಯೆಡೆಯಾನಾಂ ತೊಲಗಿ ರ್ಪುದು ಕಜ್ಜಂ (ಕಾದಂಪೂ. ೬೩೨). [ಸಂ.]

**ಲಘುಕರಿ** (ನಾ). [ಜೈನ] ಒಂದು ವಿದ್ಯೆಯ ಹೆಸರು : ಪ್ರಜ್ಞಪ್ತಿ . . . ಪರ್ಣಲಘು ಲಘುಕರಿ . . . ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಶಾಪುಂಕ. ೦೪೬).
[ಸಂ.]

**ಲಘುಕಾವ್ಯ** (ನಾ). ಸಣ್ಣಕಾವ್ಯ ; ಖಂಡಕಾವ್ಯ : ಕಬ್ಬಿಗರ ಕಾವವೇನೂ ಒಂದು ಮಹಾಕಾವ್ಯವಲ್ಲ. ಅದೊಂದು ಲಘುಕಾವ್ಯ (ಕಾಬಿಸ. ೦೦೩).
[ಸಂ.]

F-73

**ಲಘುಕೃತಿ** (ನಾ). ಸಣ್ಣಗ್ರಂಥ : ಕವಿಗಳು . . . ದೀರ್ಘಪುರಾಣಗಳ ಬದಲಾಗಿ ಲಘುಕೃತಿಗಳನ್ನು ರಚಿಸುವರೆಂದೂ . . . ಸೂಚಿಸಿದ್ದ ಲಕ್ಷಣಗಳಿಗೆ ಈ ಪದ್ಯಪುಸ್ತಕವು ಲಕ್ಷ್ಯವಾಗಿದೆ (ಕಪು. ೩೭೦೯). [ಸಂ.]

**ಲಘುಗೀತ** (ನಾ). ಶಾಸ್ತ್ರೀಯವಾದ ರಾಗ, ತಾಳಗಳಿಂದ ಭಿನ್ನವಾದ ಹಾಡು : ನವೀನಸಮಾಸಗಳು ಲಘುಗೀತಗಳಂತೆ ಸುಂದರವಾಗಿವೆ (ಪವ್ಯಶಾ. ೨೮). [ಸಂ.]

**ಲಘುಟಿಪ್ಪಣಿ** (ನಾ). ಚಿಕ್ಕವಿವರಣೆ ; ಸಣ್ಣಟೀಕೆ : ಮನಸ್ಸಿನ ವಿಷಯವಾಗಿ ಶಾಕ್ತದೃಷ್ಟಿಯನ್ನು ಕುರಿತ ಒಂದು ಲಘುಟಿಪ್ಪಣಿ ಇಲ್ಲಿ ಅಪ್ರಸಕ್ತವಾಗುವುದಿಲ್ಲ (ಶಕ್ಯದ. ೯೯೩). [ಸಂ. ಲಘುಟಿಪ್ಪಣೀ]

**ಲಘುತೆ** (ನಾ). ೧. ಭಾರವಿಲ್ಲದಿರುವಿಕೆ ; ಹಗುರವಾಗಿರುವಿಕೆ : "ಲಾಘವಮದು ಲಘುತೆ" (ಪಸ್ತುಕೋ. ೦೦೩-೨೯). ೨. ಚಟುವಟಿಕೆ ; ಪಟುತ್ವ : ಕೃಷ್ಣ ಸಾಹಿತ್ಯಪ್ರೇಮಿಯಲ್ಲ ; ವಿಹಾರಪ್ರೇಮಿ. ಜೀವನದ ಲಘುತೆ ಅವನಲ್ಲಿ ತುಂಬಿ ಚೆಲ್ಲುವಷ್ಟಿದೆ (ವೊಕವು. ೨೭). ೩. ದೀರ್ಘವಲ್ಲದುದು : ಸಂಕ್ಷಿಪ್ತವಾದುದು. [ಸಂ. ಲಘುತಾ]

**ಲಘುತ್ವ** (ನಾ). ೧. ಹಗುರವಾಗಿರುವಿಕೆ : ಭಾರವಿಲ್ಲದಿರುವಿಕೆ : ರೂಪ . . . ದ್ರವತ್ವ, ಲಘುತ್ವ, ಮೃದುತ್ವ, ಕಠಿನತ್ವ . . . ಸೌಭಾಗ್ಯವೆಂದು, ಸಾಮಾನ್ಯವಾಗಿ ನಲವತ್ತುವಿಧ ಗುಣಗಳು (ಹಿಂದಶಾ. ೨೭೩). ೨. ಸಣ್ಣದಾಗಿರುವಿಕೆ. ೩. ಕೀಳುತನ ; ಕ್ಷುದ್ರತನ. ೪. ಹುಡುಗಾಟ ; ಗಂಭೀರರಾಹಿತ್ಯ. ೫. ವೇಗ ; ಶೀಘ್ರತೆ. ೬. ಅಗೌರವ ; ಅಪಮರ್ಯಾದೆ. ೭. ಅನುಕೂಲ ; ಸೌಲಭ್ಯ. [ಸಂ.]

**ಲಘುದೋರು** (ಕ್ರಿ). ಕೈಚಳಕವನ್ನು ತೋರು ; ಲಾಘವವನ್ನು ತೋರು : ಸೆಣಸಿ ಮುಂಬರಿದು ಲಘುದೋರಿ ತಪ್ಪಿಸುತ (ಪವಮೋ. ೨೯-೩೮). [ಲಘು + ತೋರು ( < ತೋಱು ) ]

**ಲಘುದೋಷ** (ನಾ). [ಛಂದ] ಗುರುವಿರಬೇಕಾದ ಕಡೆಯಲ್ಲಿ ಲಘುವನ್ನಿಡುವುದರಿಂದಾಗುವ ದೋಷ : ಕವೀಶರಾರ್ಪಂತು ಪಿಂಗಿಸುಗೆ ಕಾವ್ಯದಿನಾ ಲಘುದೋಷಮುಂ (ಕವಿರಾ. ೦-೦೨೯). [ಸಂ.]

**ಲಘುನೃತ್ತ** (ನಾ). = ಲಘು ೨೫ : ಅಂಚಿತ ಮೊದಲಾದ ಅಲ್ಪಕರಣಗಳನ್ನು ಮಾಡುವುದು ಲಘುನೃತ್ತವು (ಲಾಸ್ಯರಂ. ೨೦೯ ಗದ್ಯಮವಾದ). [ಸಂ.]

**ಲಘುಪಾಳಿ** (ನಾ). ವೇಗದ ಕ್ರಮ ; ಶೀಘ್ರವಿಧಾನ : ಕಲಿತರು ನಿಮ್ಮ ಪೂರ್ವನೃಪಾಲಕರು ಸರಹಸ್ಯಸಾಂಗೋಪಾಂಗವಿದ್ಯೆಗಳ ಸ್ಥೂಲದಲಿ ಸೂಕ್ಷ್ಮದಲಿ ಬಹಳವಿಶಾಲದಲಿ ಸಂಕೋಚದಲಿ ಲಘುಪಾಳಿಯಲಿ ಹಾರದಲಿ ವಿವಿಧಾನುಪ್ರಯೋಗದಲಿ (ಕುವ್ಯಾಕ. ೬-೦). [ಲಘು + ಪಾಳಿ$_3$ ( < ಪಾೞಿ$_3$)]

**ಲಘುಪುಟ** (ನಾ). ಸ್ವಲ್ಪಮಾತ್ರ ಬೇಯಿಸುವುದು : ಹೆಮ್ಮರದ ತೊಕ್ಕನ್ನು . . . ಇಡಿದು ಮುದ್ದೆಯ ಮಾಡಿ . . . ಲಘುಪುಟವಿಟ್ಟು ಬೆವರಿಸಿ ತೆಗೆದು (ಶಕವ್ಯ. ೩೦೦). [ಸಂ.]

**ಲಘುಪ್ರಹಸನ** (ನಾ). ದೀರ್ಘವಲ್ಲದ ನಗೆನಾಟಕ; ಸಣ್ಣ ಪ್ರಹಸನ : ಫ್ರೆಂಚ್‌ನಾಟಕಮಂದಿರದಲ್ಲಿ ಲಘುಪ್ರಹಸನಗಳನ್ನು ನೋಡಿ ಬಂದು . . . ಪ್ರೋತ್ಸಾಹ ನೀಡುತ್ತಿದ್ದರು (ಪುನರು. ೬೦). [ಸಂ.]

**ಲಘುಬದರಿ** (ನಾ). ಒಂದು ಬಗೆಯ ಸಸ್ಯ; ಸಣ್ಣಬೋರೆ : ಎಲಚಿ : "ಬಹುಕಂಟಃ – ಲಘುಬದರಿ" (೬ಕಧಿ. ೦೦೬). [ಸಂ. ಲಘುಬದರೀ]

**ಲಘುಲಯ** (ನಾ). ಒಂದು ಬಗೆಯ ಸುವಾಸನೆಯ ಬೇರು ; ಲಾಮಂಚ : ಮುಡಿವಾಳ : "ಉಶೀರಂ . . . ಲಘುಲಯಂ . . . ಲಾಮಂಚದ ಹೆಸರುಗಳು" (ಸಿದ್ಧಾಂತಿ. ೦೩೦). [ಸಂ.]

**ಲಘುಶಂಕೆ** (ನಾ). ಮೂತ್ರವಿಸರ್ಜನೆ. [ಸಂ. ಲಘುಶಂಕಾ]

**ಲಘುಶರೀರಿ** (ನಾ). ಚಟುವಟಿಕೆಯಿಂದ ಕೂಡಿದವನು : ಪ್ರಾಯದ ಜಿಂಕೆಗಳಂತೆ ಲಘುಶರೀರಿಗಳಾಗಿ ಇಬ್ಬರೂ ಎದ್ದು . . . ಪರ್ವತದ ಸಾನುಪ್ರದೇಶದ ಕಡೆ ತಿರುಗಿದರು (ಯೋಗಕ್ಷೇ. ೬೩). [ಸಂ. ಲಘುಶರೀರಿನ್]

**ಲಘುಸಂಗೀತ** (ನಾ). ಶಾಸ್ತ್ರೀಯಸಂಗೀತಕ್ಕಿಂತ ಭಿನ್ನವಾದ, ಆಧುನಿಕ ಕವನ ಮುಂತಾದುವುಗಳ ಮನೋರಂಜಕವಾದ ಹಾಡುಗಾರಿಕೆ : ಈಚಿನ ದಿನಗಳಲ್ಲಿ ಶಾಸ್ತ್ರೀಯಸಂಗೀತಕ್ಕಿಂತ ಲಘುಸಂಗೀತದ ಕಡೆಗೆ ಹೆಚ್ಚು ಜನರ ಒಲವು ಕಾಣುತ್ತಿದೆ (ಕಬೂ). [ಸಂ.]

**ಲಘುಹಸ್ತ** (ನಾ). ೧. ಕೈಚಳಕವುಳ್ಳವನು ; ಕರಕೌಶಲವುಳ್ಳವನು. ೨. ವೇಗವಾಗಿ ಬಾಣಪ್ರಯೋಗ ಮಾಡಬಲ್ಲವನು ; ನುರಿತ ಬಿಲ್ಲುಗಾರ : "ಲಘುಹಸ್ತಃ, ಶೀಘ್ರವೇಧೀ – ಈ ೨ ಶೀಘ್ರ ವಿಸುವಾತಂ" (ಹಲಾಯು. ೬೬-೩೧೭). [ಸಂ.]

**ಲಘೂಕರಣ** (ನಾ). ಹಗುರ ಮಾಡುವುದು; ಕಡಮೆಯಾಗಿಸುವುದು : ಯಾವ ವ್ಯಕ್ತಿಯ ಮೇಲಿನ ದಂಡವನ್ನಾದರೂ ಕ್ಷಮಾಮಾಡುವ . . . ಪರಿಹಾರಮಾಡುವ ಅಥವಾ ಲಘೂಕರಣ ಮಾಡುವ ಶಕ್ತಿಯು ರಾಷ್ಟ್ರಪತಿಯವರಿಗಿರತಕ್ಕದು (ಶಾರಾಪ. ೩೩). [ಸಂ.]

**ಲಘೂಪಧೆ** (ನಾ). [ವ್ಯಾಕ] ಯಾವುದಾದರೂ ಶಬ್ದದ ಕೊನೆಯ ಅಕ್ಷರದ ಹಿಂದಿನ ಅಕ್ಷರವು ಲಘುವಾಗಿರುವ ಶಬ್ದ, ಪದ : ಗದವಜಕಾರಮುವಿದಿರಿರೆ ಪದಮಧ್ಯಂ ವಿಷಯಮಾಗನೇಕಾಕ್ಷರದೊಳ್ ಪುದಿಯೆ ಲಘೂಪಧೆ ಕೆಲಕೆಲವೊದವಿರ್ಕುಂ ಠಾಂತಳಾಂತಮಾವು ಶಿಥಿಲತೆಯಂ (ಕಮಾತ. ೪೩). [ಸಂ. ಲಘೂಪಧಾ]

**ಲಘೂಪಾಗಮ** (ನಾ). = ಲಘುದೋಷ : ಬೇಗಮಾ ಲಘುಗಳಲ್ಲದ ತಾಣದೊಳಂ ಲಘೂಪಾಗಮಕ್ರಮದೆ ನಂಬುಗೆ ಲಾಘವದೋಷಮಂ (ಕವಿರಾ. ೦-೦೨೭). [ಸಂ.]

**ಲಚಂಡ, ಲಚಾಂಡ** (ನಾ). ೧. (ಉಕ) ಗೋಜು ; ಸಿಕ್ಕು : ತೊಡಕು : ಏನೂ 'ಲಚಂಡ'ವಿಲ್ಲದ ವಿರಕ್ತ ಸುಂದರಕ್ಕ. ಆಕೆಯ ಕಣ್ಣಲ್ಲಿ ಈ ಪರಿ ಮಹಾಪೂರವೇ! (ಪ್ರಕಿ. ೩೨೪) ; ನಿನಗೆ ಯಾರು ಹೇಳಿದ್ದು ಎರಡನೆಯವರ ಲಚಂಡ ಸಂಭಾಳಿಸುವದು ! (ಸ್ವ.ಕಿವ. ೯೦೪). **ಲಚಾಂಡ** : ೨. ಗೋಳು ; ಸಂಕಟ : ಇಲ್ಲಿಯ ಲಚಾಂಡ ಯಾರು ನೋಡಬೇಕು ? (ದೀಕಹ. I. ೨೦೨). [←ಮರಾ. ಲಚಂಡ್, ಲಚಾಂಡ್]

**ಲಚಾಂಡ** 'ಲಚಂಡ' ನೋ.

**ಲಚ್ಚ$_1$** 'ಲಕ್ಕ$_1$' ನೋ.

**ಲಚ್ಚ$_2$** 'ಲಕ್ಕ$_2$' ನೋ.

**ಲಚ್ಚಣ$_1$** 'ಲಕ್ಕಣ' ನೋ.

**ಲಚ್ಚಣ$_2$, ಲಚ್ಚಣೆ$_2$** (ನಾ). ೧. ಗುರುತು; ಚಿಹ್ನೆ ; ಲಕ್ಷಣ : "ಲಚ್ಚಣವೆನೆ ಲಾಂಛನಮದು" (ಪಕುಬಿ. ೨೯) ; ಅಲ್ಲಿ ವಲ್ಲಭೆಯೊಳಿರಬಿಲ್ಲದೆ ನೆರಮುವನೀ ಲಚ್ಚಣವ ಪೇಟ್ಟಿಮಿಲ್ಲಿ ಸಂವೆಗದೋವುದು (ಆರಾಪ. ೦೦-೯೭ ವ) ; ಬಿಂಬಿಬೋಪಕ್ಕಿ . . . ಲಾಂಛನ–ಲಚ್ಚಣ (ಕಮರ. ೨೮೩ ಶ್ರಯೋ) ; ಹಿರಿಯ ಲಚ್ಚಣದ ಮೊಯ್ಗಟ್ಟು (ಶಬ್ದರಾ. ೯-೩೨). ೨. ಕಾಳನ್ನು ರಾಶಿಮಾಡಿದ ಮೇಲೆ ರಾಶಿಯ ಸುತ್ತಲೂ ಹಾಕುವ ಗೆರೆ, – ರೇಖೆ : ನಿಮ್ಮ ಶರಣನು ಲಚ್ಚಣವಳಿಯದೆ ರಾಸಿಯನಳೆವನು (ಅವಸಂ. ೧೮೬-೮೩೩) ; ರಾಶಿಗಿಕ್ಕಿದ ಲಚ್ಚಣ ರಾಶಿಯ ಕೊಳಬಲ್ಲುದೇನೋ ಮೂಢ ರಾಶಿಯ ಒಡೆಯನಲ್ಲದೆ ಆ ಪರಿಯಲ್ಲಿ ಈ ಲಿಂಗವು ಜಂಗಮದ ಮುದ್ರೆ ಎಂದು ತಿಳಿ (ಶನ್ಯಪ. ೦೦-೮). **ಲಚ್ಚಣೆ$_2$** : ೨. ಸುರರುಣಸಿ ಗಜನೆಂಬ ಪಾಮರಂ ಬೆಳಸಿದುದುತರದ ರಾಜಾನ್ನರಾಶಿಯ ಲಚ್ಚಣೆಯೊ . . . ಎನಲು ಮೆಱೆದುದಾ ಪರಿವೇಷಮಪ್ಪುತದೊಬ್ಬುಳಿಯ ಕೋ (ಶೇರಪು. ೬-೩೭). 'ಲಕ್ಕಣ' ಪರಾ. [<ಸಂ. ಲಾಂಛನ]

**ಲಚ್ಚಣಗಂಬ** (ನಾ). ಸಂಕೇತವಾಗಿ ನೆಟ್ಟ ಕಂಬ ; ಗುರುತಿನ ಕಂಬ : ಎಂಟುವಾನೆಗಳುಂ ತಱತಱನಟ್ಟನಂ ಜಯದ ಲಚ್ಚಣಗಂಬದೊಳುದ್ದಿರ್ಕೊಳುವವಾವಱಿವವೆ ವಿಷ್ಣುವಿಕ್ರಮದುಪಕ್ರಮಮಂ (ಎಶಿ. V. ಬೇಲೂರು. ೧೭೦–೦೬ ; 1160). [ಲಚ್ಚಣ$_2$+ಕಂಬ$_1$ (<ಕಂಭ)]

**ಲಚ್ಚಣಿಸು** (ಕ್ರಿ). ೧. ಗುರುತಿಸು ; ಗುರುತುಮಾಡು : ಕೇಳುತವೆ ಕಂಬನಿಗಳೊಸರಿದವಾಲಿಗಳಲೋರಂತೆ . . . ಬೀಳುತಿರಲಾ ಮುಂದೆ ಬಹಳ ವಿಶಾಲಭೋಗಸ್ಥಾನವೆಂಬುದನಾಲಿಸುತ ಲಚ್ಚಣಿಸಿ ತೋಱಿಸುವಂತೆ ಬಿಂದುಗಳು (ಶಬಾಗ. ೦೦–೨೫–೬೫). ೨. (ಕಾವ್ಯದ) ಲಕ್ಷಣಕ್ಕೆ ಹೊಂದಿಸು : ಹಲಗೆ ಬಳಪದಿಂದ ಚಲಿಸದಂದದಿ ಪ್ರಾಸ ನೆಲೆಮಾಡಿ ತಿದ್ದಿ ಲಚ್ಚಣಿಸಿ ಬಲಿದು ಪದನ ಮಾಡಿ ಪೇಳ್ದನಾವಪೆ (ಬಸಾಂ. ೦–೦೫).
[ಲಚ್ಚಣ$_1$ (<ಲಕ್ಕಣ) + —ಇಸು$_2$]

**ಲಚ್ಚಣೆ$_1$** (ನಾ). ಸಾರಸ ಪಕ್ಷಿ : ಪಾಡುವ ಸಾಳಗಂ ಲಳಿಯೊಳಾಡುವ ಲಚ್ಚಣೆ[ಣೆ] (ಳಶಾಬ. ೧೮). [<ಸಂ. ಲಕ್ಷ್ಮಣಾ]

**ಲಚ್ಚಣೆ$_2$** 'ಲಚ್ಚಣ$_2$' ನೋ.

**ಲಚ್ಚಿ** 'ಲಕುಮಿ' ನೋ.

**ಲಚ್ಚಿಸು** (ಕ್ರಿ). ಗುರುತುಮಾಡು ; ಗುರುತಿಸು : ಸೆರೆಗಳ್ ಪರ್ವಿರೆ ತುಱಿಯುಂ ಕಿರಕುಂ ದುಷ್ಟವ್ರಣಂಗಳುಂ ಕುಂದದಪಂದಿರ ತನುಗಳ್ ಪಾಪದ ಫಲದ ರಾಶಿಗಳ್ ಲಚ್ಚಿಸಿರ್ದ ತೆಱದಿಂದಿರ್ಕುಂ (ಧರ್ಮಾ. ೦೦–೩೬).
[ಲಚ್ಚ$_2$ (<ಲಕ್ಕ$_2$) + —ಇಸು$_3$]

**ಲಚ್ಛಣ** 'ಲಕ್ಕಣ' ನೋ.

**ಲಚ್ಛಿ** 'ಲಕುಮಿ' ನೋ.

**ಲಜ್ಜರಿಕೆ** (ನಾ). ಮುಟ್ಟಿದರೆ ಮುದುರಿಕೊಳ್ಳುವ ಎಲೆಗಳುಳ್ಳ ಒಂದು ಬಗೆಯ ಗಿಡ ; ಮುಟ್ಟಿದರೆ ಮುನಿ : ಮೊ(ಮೊ)ರಕೆಯು ಬೂದಿಯುಂ ಗರುಗದಾ ರಸಮುಪ್ಪುವನೊ(ನ)ಟ್ಟುಗಲ್ಲ ಲಜ್ಜರಿಕ ಸರೋಚನಂ . . . ಶಿಲತೈಲದೊಳಟ್ಟು ಪೂಸುಗೆ (ಲೋಕೋ:ಸ. ೯–೨೦೬) ; ವಿವಿಧಶಸ್ತ್ರದ ಘಾಯದೊಳ್ . . . ಹೊನ್ನಗನ್ನೆಯುತಕ್ಕೆ ಸಂಭವಿಸೆ ಲಜ್ಜರಿ[ಶಾಶಾಂ. ರಿ] ಕಾಖ್ಯಮುಂ . . . ಇವಱೊಳಾವುದನಾದೊಡಂ ತೊಡೆಗೆ (ಖಶಾದ. ೨–೨೦೫).
'ಲಜ್ಜಾವತಿ' ಪರಾ. [ಸಂ. ಲಜ್ಜರಿಕಾ]

**ಲಜ್ಜಾಲು. ಲಜ್ಜಾಳು** (ಗು). ೧. ನಾಚಿಕೆಯ ಸ್ವಭಾವದ ; ಸಂಕೋಚ ಪ್ರವೃತ್ತಿಯ. (ನಾ). ೨. ನಾಚಿಕೆಯ ಸ್ವಭಾವದ ವ್ಯಕ್ತಿ; ಸಂಕೋಚ ಸ್ವಭಾವದವನು : "ಲಜ್ಜಾಶೀಲಂ ಲಜ್ಜಾಲು" (ವಸ್ತುಕೋ. ೬೯–೭೬). ೩. = ಲಜ್ಜರಿಕೆ. **ಲಜ್ಜಾಳು** : ೨. ನಾನು ಅತ್ಯಂತ ಲಜ್ಜಾಳುವಾದ ಮನುಷ್ಯ (ಇಶ್ವ. ೯೮೩). [ಸಂ.]

**ಲಜ್ಜಾವತಿ** (ನಾ). ೧. ನಾಚಿಕೆಯ ಸ್ವಭಾವದವಳು. ೨. = ಲಜ್ಜರಿಕೆ : ಮುಟ್ಟಿದರೆ ಮುನಿ. ಮುಡುಗುದಾವರೆ. ನಾಚಿಕೆಗಿಡ. ಲಜ್ಜಾವತಿ (ಕೃಷಿಗ. ೫೯–೧೦೬೪) ; ನನ್ನ ತೋಟದಲ್ಲಿ ಲಜ್ಜಾವತಿ ಬಳ್ಳಿ (ಹೊಸಕ್ಷಿ. ೬೬).
[ಸಂ. ಲಜ್ಜಾವತೀ]

**ಲಜ್ಜಾವಿಹೀನ** (ನಾ). ನಾಚಿಕೆಯಿಲ್ಲದವನು; ನಾಚಿಕೆಗೇಡಿ ; ನಿರ್ಲಜ್ಜ : "ನಾಣಲಿಯನಲ್ಕೆ ಲಜ್ಜಾವಿಹೀನನು" (ಕನ್ನ. ೩೯). [ಸಂ.]

**ಲಜ್ಜಾವಿಹೀನತ್ವ** (ನಾ). ನಾಚಿಕೆಯಿಲ್ಲದಿರುವಿಕೆ ; ಭಂಡತನ : "ಲಜ್ಜಾವಿಹೀನತ್ವದೊಳ್ ಬಂಡು" (ಕಬ್ಬಿದಂ. ೯೯). [ಸಂ.]

**ಲಜ್ಜಾಶೀಲ** (ನಾ). ೧. ನಾಚಿಕೆಯ ಸ್ವಭಾವ ; ಸಂಕೋಚಪ್ರವೃತ್ತಿ. ೨. ನಾಚಿಕೆಯ ಸ್ವಭಾವದ ವ್ಯಕ್ತಿ ; ಸಂಕೋಚಸ್ವಭಾವದವನು : "ಲಜ್ಜಾಶೀಲಂ ಲಜ್ಜಾಲು" (ವಸ್ತುಕೋ. ೬೯–೬) ; [ಸಂ.]

**ಲಜ್ಜಾಹೀನ** (ನಾ). ನಾಚಿಕೆಯಿಲ್ಲದ ವ್ಯಕ್ತಿ ; ಭಂಡ : ನಾನು . . . ಲಜ್ಜಾಹೀನರಾದ ನವೀನಸುಂದರಿಯರನ್ನು ಕುರಿತು ಬರೆಯುವುದಿಲ್ಲ [ಸಂ.]

**ಲಜ್ಜಾಳು** 'ಲಜ್ಜಾಲು' ನೋ.

**ಲಜ್ಜಿಕೆ** (ನಾ). ನಾಚಿಕೆಯನ್ನುಂಟುಮಾಡುವಂಥದು ; ಲಜ್ಜಾಸ್ಪದ ವಾದುದು : ನನ್ನ ಪ್ರಣಯವನ್ನು ಜನ್ಮವನ್ನು ಸರ್ವಸ್ವವನ್ನೂ ಸಾರ್ಥಕ ಮಾಡಿಕೊಳ್ಳುವುದು ಲಜ್ಜಿಕೆಯ ಅನ್ಯಾಯದ ಅಕ್ರಮದ ದ್ರೋಹದ ಆಕಾರ್ಯವೆ ? (ಬಿಸ್ಮಿ. ೨೫–೨). [ಲಜ್ಜೆ + — ಇಕೆ]

**ಲಜ್ಜಿತ** (ಗು). ೧. ನಾಚಿಕೆಪಟ್ಟುಕೊಂಡ ; ಲಜ್ಜೆಗೊಳಗಾದ. ೨. ಅವಮಾನಗೊಂಡ ; ಅಪಮಾನವನ್ನು ಹೊಂದಿದ. (ನಾ). ೩. ನಾಚಿಕೆಗೊಂಡವನು : ಸಂಕೋಚ ಹೊಂದಿದವನು : ಪ್ರಜೇಶ್ವರನು ವಿಸ್ಮಿತನಾಗಿ. ಲಜ್ಜಿತನಾಗಿ . . . ಸ್ವಲ್ಪ ಭಯಪಟ್ಟವನೂ ಆದನು (ದೇವೀಕಾ. ೧೨೯). ೪. ಅವಮಾನಗೊಂಡ ವ್ಯಕ್ತಿ; ಅಪಮಾನ ಹೊಂದಿದವನು : ಲಜ್ಜಿತನಾಗಿ ತಿರುಗಿದನನುವರದಲೀ ಕರ್ಣನು (ಶುಪ್ರಾದ್ರೋ. ೬–೩೫). ೫. [ನಾಟ್ಯ] ಇಪ್ಪತ್ತು ಸಂಚಾರಿದೃಷ್ಟಿಗಳಲ್ಲಿ ಒಂದು ; ಲಜ್ಜೆಯನ್ನು ವ್ಯಕ್ತಪಡಿಸುವ ನೋಟ; P" ರೆಪ್ಪೆಗಳನ್ನು ಮೇಲಕ್ಕೂ ಕೆಳಕ್ಕೂ ಚಲಿಸುತ್ತಾ ಕೆಳಗೆ ನೋಡುವುದು" (ಶಾಕ್ವರಂ. ೨೬೯ ಗದ್ಯಾನುವಾದ) : " ಲಜ್ಜಿತ — ನೆಲನಂ ನೋಡುತೆ ಕಣ್ಣೆವೆಯಲಸದೆ ಮೇಲ್ನೋಡಿ ಬಾಗೆ ಲಜ್ಜೆಯೆನಿಕ್ಕುಂ (ಶಾಕ್ವರಂ. ೩–೨೯). [ಸಂ.]

**ಲಜ್ಜಿತೆ** (ನಾ). ನಾಚಿಕೊಂಡವಳು ; ಸಂಕೋಚಗೊಂಡವಳು : ಆಗುತ ಬೆಱಗಾಗುತ್ತೆ ಸಂವರಿಸಿಕೊಳುತೆ ವಲ್ಕಲವಸನಾಭೋಗಮನತಿಲಜ್ಜಿತೆ ತಲೆವಾಗಿದಳನುರಾಗವೇಱೆ ಪುಳಕಿಸುತಿರ್ದಳ್ (ಗಂಶ. ೦೦–೨). [ಸಂ. ಲಜ್ಜಿತಾ]

**ಲಜ್ಜಿಸು** (ಕ್ರಿ). ೧. ನಾಚಿಕೊಳ್ಳು ; ಸಂಕೋಚಪಟ್ಟುಕೊಳ್ಳು : ನಿಜರೂಪಸ್ತುತಿಗೆ ಲಜ್ಜಿಸಿ ಕೇಳದಂತೆ ಪೋಗೆ (ಶಾದಂಪೂ. ೬೬೮) ; ತಾನೇ ಧರಣಿಪತಿ ನಳನೆನಲು ಲಜ್ಜಿಸಿ ಶಿರವ ನಸುಬಾಗಿದಳು (ನಳಚ. ೩–೪೩) ; ವಲ್ಲಭೆಯ ನುಡಿಗೆ ಲಜ್ಜಿಸಿ ಮನಂ ಕಂದೆ ಕಣ್ಣಾಲಿಗಳ್ ಕೆಂಪಡರೆ (ಕೃಬಶಾ. ೬–೩೮). ೨. ನಾಚಿಕೆಪಡಿಸು ; ನಾಚಿಕೊಳ್ಳುವಂತೆ ಮಾಡು : ಸಜ್ಜನ ಸ್ತುತಿಗೆಯ್ಯಲಾತ್ಮಸ್ತುತಿಯುಕ್ಕು ಮಜ್ಜೀವಪರಾಗಿ ಕುಜನರ ಲಜ್ಜಿಸಿ ನಿಂದಿಪ್ಪೊಡಿಪು ಪುಣ್ಯಕಥೆ (ತ್ರಿಕುತ. ೦–೦೮). [ಲಜ್ಜೆ + —ಇಸು$_3$]

**ಲಜ್ಜೆ** (ನಾ). ೧. ನಾಚಿಕೆ ; ಸಂಕೋಚ: "ವ್ರೀಡೆ ಲಜ್ಜೆಯೆನೆ ಮಂದಾಕ್ಷಂ" (ವಸ್ತುಕೋ. ೧೦೯–೦೯) ; ಕಾಮಿಗುಂಟೆ ಲಜ್ಜೆ ನಾಚಿಕೆ (ದಸಪ. ೩೦೬): ಪಿಂಪಣ ಸೋಲಮಂ ಮಱೆದು ಲಜ್ಜೆಯನೊಲ್ಲದೆ ಮತ್ತೆ ಬಂದನೇ ಪಂದೆ ಗಳೋಜಂ (ಪಶಕು. ೨–೨೫). ೨. ಅವಮಾನ ; ಅಪಮಾನ : ಲಜ್ಜೆಯಿಂ ತಲೆವಾಗಿ ತೋರ್ಪ ತದೀಯ ದೇಶಿಕನಂದಮಂ . . . ನಿಟ್ಟಿಸಿ (ಉದ್ಭಟ. ೫–೦೦೯) ; ನಾರೀವೃಂದ . . . ಗೊಳ್ಳೆಂದು ನಕ್ಕುದು ನೊಂದು ತಲೆವಾಗಿದನು ಲಜ್ಜೆಯಲಿ (ಕುಪ್ಯಾಸ. ೦೨–೩೭). ೩. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು : ಮತಿನಿರ್ವೇದಾವಹಿತ್ಥ ಶ್ರಮ . . . ಅಪಸ್ಮಾರ ಲಜ್ಜಾ ವಿಷಾದಸ್ಥಿತಿ ಚಿತ್ತಭ್ರಂಶ ಮೋಹಾಮಯಕೃತಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೬೯೫) ; ಮತಿ ಲಜ್ಜೆ ಆವೇಗ ಶಂಕೆ . . . ಅಪಸ್ಮಾರವೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ ಪರಿವರ್ಧಿಸಿ (ಬವೇಶ. ೦೮೦). [ಸಂ. ಲಜ್ಜಾ]

**ಲಜ್ಜೆಕಾತಿ** (ನಾ). ನಾಚಿಕೆಯ ಸ್ವಭಾವದವಳು ; ಲಜ್ಜಾಶೀಲೆ : ಮಾನಭೂಷಣೆ ಲಜ್ಜೆಕಾತಿ ಸೌಜನ್ಯನಿಧಾನೆ ಗಂಭೀರೆ ಸುಶೀಲೆ (ಬಿರಸ. ೯೩–೬೯).
[ಲಜ್ಜೆ + — ಕಾತಿ$_5$]

**ಲಜ್ಜೆಗಾ** (ಕ್ರಿ). ನಾಚಿಕೆಯಿಂದಿರು ; ಸಂಕೋಚವನ್ನು ಉಳಿಸಿಕೊಳ್ಳು: ಸುತ್ತಲುಂ ಸುಜನಮಿರೆಯುಂ ವಿಚಾರಿಸನೆ ಪುಃಖದೊಳಕ್ಕನಿರಲ್ಕೆ ಲಜ್ಜೆಗಾಯೆನೆ ಗುರುಗಳ್ಗೆ ಬೆಳ್ಕಱೆನೆ ಚೇಟಕಿಯರ್ನೆರೆದಿರ್ದರೆಂಬುದಂ ನೆನೆಯೆನೆ ಕೆಟ್ಟೆನೇನನಿರದಿಂತುಟು ವಿಭ್ರಮದಿಂದೊಡರ್ಚಿದಂ (ಶಾದಂಪೂ. ೬೬).
[ಲಜ್ಜೆ + ಕಾ$_1$]

**ಲಜ್ಜೆಗೆಡು** (ಕ್ರಿ). ನಾಚಿಕೆ ಇಲ್ಲವಾಗು ; ನಿರ್ಲಜ್ಜೆಯಿಂದ ವರ್ತಿಸು : ತೊಟ್ಟನೆ ಲಜ್ಜೆಗೆಟ್ಟುಜೀವುಗೆಟ್ಟನ್ನಂತೆ ಕಣ್ಗೆಟ್ಟು ಪೇಟಕೂಲವಿಂದಿಂತೆರ್ದೆಗೆಟ್ಟರಾರ್ (ಶಾರಂಶು. ೬೫೦); ಲಜ್ಜೆಗೆಟ್ಟ ಪೆಣ್ಗಳಂತೆ ಮೇಲ್ವಾಯ್ವ ಪೆರ್ಬುನಲಿಂದಿಂ (ರಪರ್ಾಶ್ಮ. ೩-೫೩) ; ಲಜ್ಜೆಗೆಟ್ಟಾದರೂ ಲಿಂಗವನೊಲಿಸುವೆ (ಬಸವ. ೪೯೬). [ಲಜ್ಜೆ + ಕೆಡು$_1$]

**ಲಜ್ಜೆಗೇಡಿ** (ನಾ). ನಾಚಿಕೆಗೇಡಿ ; ನಿರ್ಲಜ್ಜ : 'ಲಜ್ಜೆಗೇಡಿತನ' ಪರಾ. [ಲಜ್ಜೆ + ಕೇಡಿ$_1$]

**ಲಜ್ಜೆಗೇಡಿತನ** (ನಾ). ನಾಚಿಕೆಯಿಲ್ಲದಿರುವಿಕೆ ; ನಿರ್ಲಜ್ಜತೆ : ನನ್ನ ಲಜ್ಜೆಗೇಡಿತನವನ್ನು ಮನ್ನಿಸಬೇಕು (ಶರೀವ. ೬೯). [ಲಜ್ಜೆಗೇಡಿ + —ತನ]

**ಲಜ್ಜೆಗೇಡು** (ನಾ). ೧. ನಾಚಿಕೆಗೇಡು ; ನಾಚಿಕೆಯಿಲ್ಲದಿರುವುದು. ೨. ಅವಮಾನಾಸ್ಪದವಾದುದು ; ಅಪಮರ್ಯಾದೆಯಿಂದ ಕೂಡಿದುದು : ಅಜ್ಜಯಿಲ್ಲದ ಮನೆಯು ಮಜ್ಜಿಗಿಲ್ಲದ ಊಟ ಕೊಜ್ಜೆಯುರಿಲ್ಲದರ ಮನೆಯು ಇವು ಮೂಟು ಲಜ್ಜೆಗೇಡು (ಸರ್ವಜ್ಞ. ೬೫೦). [ ಲಜ್ಜೆ + ಕೇಡು ]

**ಲಜ್ಜೆಗೊಳ್ಳು** (ಕ್ರಿ). ನಾಚಿಕೊಳ್ಳು ; ಸಂಕೋಚಪಡು ; ಕೃತ್ತಿಕಾಪುಂಜವು ಲಜ್ಜೆಗೊಂಡಂತೆ ಅಡಗಿಕೊಂಡಿರುವುದು (ಕಾ. ೬೩). [ಲಜ್ಜೆ + ಕೊಳ್ಳು$_1$ ( < ಕೊಳ್$_1$) ]

**ಲಜ್ಜೆಪಡು** (ಕ್ರಿ). = ಲಜ್ಜೆಗೊಳ್ಳು: ಎಲೆ ಮಗಳೆ, ಒಂದು ಮುಹೂರ್ತ ಲಜ್ಜೆಪಡದಿರು (ಶಾಕುಂತ. ೬೬-೭) ; ತನ್ನ ವೃತ್ತಿ ಕೀಳಾದುದೆಂದು ಭಾವಿಸಿಕೊಂಡು ಲಜ್ಜೆಪಡಬಹುದೆಂಬ ಕಲ್ಪನೆ ಸರ್ವಸಾಧಾರಣವಾದುದು (ಶ್ರೀಪರು. ೦೯೭). [ಲಜ್ಜೆ + ಪಡು$_1$]

**ಲಜ್ಜೆಯೇಱು** (ಕ್ರಿ). ನಾಚಿಕೆಯನ್ನು ಹೊಂದು ; ಸಂಕೋಚವನ್ನು ತಾಳು : ಗಣಕರು ಲೆಕ್ಕಿಸಲಾಱದೆ ಬೆಱಗಾಗೆ ಪರಸಮಯಿಗಳ ಮೊಗಂ ಬೆಳ್ಪೇಱೆ ಬಿಜ್ಜಳನ ಮೊಗಂ ಲಜ್ಜೆಯೇಱೆ ಶರಣರ ಮೊಗಂಗಳು ಹರುಷವೇಱೆ (ಬಸವ. ೬-೦೨೬). [ಲಜ್ಜೆ + ಏಱು$_1$ ( < ಏಱ್$_1$) ]

**ಲಜ್ಜೆವೆರಸು** (ಕ್ರಿ). ನಾಚಿಕೆಯಿಂದ ಕೂಡಿರು ; ಸಂಕೋಚಗೊಳ್ಳು : ಕುವರನಂ ಧಟ್ಟಿಸಿ ಮರಾಳಧ್ವಜಂ ಕೇಳ್ವೊಡಡಿಗಿಟ್ಟ ದಿಟ್ಟಿಯಿಂದಂಜುತೊಯ್ಯನೆ ಲಜ್ಜೆವೆರಸಿ ಬಿನ್ನೈಸಿದನವಂ ಪಿತಂಗೆ (ಜೈಮಿನಿ. ೧೧-೨೬) ; ಸಜ್ಜಾತಿಸತಿಯರಿಸಿಯರ ಸನ್ನಿಧಿಯೊಳು ಲಜ್ಜೆವೆರಸಿ ರಂಜಿಪುದು (ಹಂಬ. ೩-೩೯). [ಲಜ್ಜೆ + ಬೆರಸು$_1$ ( < ಬೆರಯಿಸು ) ]

**ಲಟಕ್** (ನಾ). ಒಂದು ಅನುಕರಣ ಶಬ್ದ : ಕೈಯಲ್ಲಿಯ ಪೆನ್ನನ್ನು ಕೆಳಗಿಟ್ಟು ಕೈಯ ಬೊಟ್ಟು ಲಟಕ್ಕನಿಸಿಕೊಂಡರು (ಅಮೃ. ೬ ಹಸ್ತಿರ).

**ಲಟಕಟ** (ನಾ). ಬಳಲಿಕೆ; ಆಯಾಸ : "ಲ[ಶಾಕಾಂ.ಅ]ಟಕಟಮೆಂದೊಡೆ ಬಳಲಿಕೆ" (ಕಾರಿಶ. ೪೦). 'ಲಟಕಟಿಸು' ಪರಾ.

**ಲಟಕಟಿಸು** (ಕ್ರಿ). ೧. ಬಳಲು ; ಆಯಾಸಗೊಳ್ಳು : ಗಸಿಯಾದನು ಪವನಸುತನೆಳ್ಳಿಸು ವಿಡುಕದು ಬಾಲ ಊರ್ಧ್ವಶ್ವಾಸಲಹರಿಯಲಡಿಗಡಿಗೆ ಲಟಕಟಿಸಿದನು ಭೀಮ (ಕುಮಾರ. ೧೧-೦೮) ; ಖಂಡೆಯವನುರೆ ರಘುಡಿದು ಕಿಟಿ ಲಟಕಟಿಸೆ ಘಾತಿಸಲು (ತತ್ವರಾ. ೦-೯-೨೯). ೨. ಆತುರಪಡು ; ತವಕಿಸು ; ಹಾತೊರೆ : ತದ್ವಾದಿಗುತ್ತರಂಗುಡಲೆಂದು ಲಟಕಟಿಪ ಸಮಯದಲ್ಲಿ (ಪಮ್ಪರಾ. ೧೦-೬) ; ಘಟ ಬೀಳಲವಿದ್ದ ಬಳಿಗೆ ಬಂದಪೆನೆಂದು ಲಟಕಟಿಸಿದನು ಕುಮಾರ (ಚೋಹತ. ೪೦-೨೩) ; ದನುಜರಾರ್ಭಟಿಸಿದರ್ ಜಯಕೆ ಲಟಕಟಿಸಿದರ್ (ಶಂಕ. ೦೬-೦೦) ; ಲಟಕಟಿಪ ಸಮರಲಂಪಟರ ಭುಜಗಳ ಹೊಯ್ಲು (ಜೈಮಿನಿ. ೪-೦೬). ೩. ಉದ್ರೇಕಗೊಳ್ಳು ; ಉದ್ದೀಪನಗೊಳ್ಳು : ಉಕ್ಕಿದಾ ಕಿವಿಪೇಟ ಕಣ್ಬೇಟಕ್ಕೆ ತಂದುದು ಕಂಗಳೆಕೆಯ ಮುಕ್ಕುಳಿಸಿ ಮೈಸೋಂಕಿನಲಿ ಲಟಕಟಿಸಿದುದು ಹೃದಯ (ಕುಮಾರ. ೧೩-೫೬); ನಿಟಿಲನೇತ್ರನ ಕೋಪಶಿಖಿ ಲಟಕಟಿಸುವಂತಿರೆ ಸಿಕ್ಕಿತಳಲಿಗೆ ಹೆಚ್ಚಿದತಿ ಬಲದಟವಿಯನು ಸವಱಿದುದು ಪಾರ್ಥಗಾಮರಶರಜಾಲ (ಕುಮಾರ. ೩-೬೦). ೪. ಅಬ್ಬರಿಸು : ಅರ್ಭಟವಮಾಡು : ಸಂತೈಸಿಕೊಂಡಟಮಟಸಿ ಗದೆಯಲಿ ಹೊಯ್ದು ... ಹೆಚ್ಚಿದನೌಕಿ ಬೊಬ್ಬಿಡುತ ಫಟದ ಕಂತುಕ ದಂತೆ ಫಣಿ ಲಟಕಟಿಸಲೌಕಿತು ಗಿಡಗನೆಱೆಯ ಪುಟದ ಗಿಳಿಯಂದದಲಿ ಗಿಱಿ ಗಿಱಿಗುಟ್ಟಿದನು ಭೀಮ (ಕುಮಾರ. ೦೩-೩೪) ; ಪಟಪಡಿಂಡಿಮವಾದ್ಯ ಮುರಿತಾಪ ಭೇರಿತಂಬಟದಮಾವಿಗಳಾದಿಯಲಿ ಲಟಕಟಿಸುವ ನಾನಾವಾದ್ಯ ಸಕಲದಿಕ್ತಟ ಬಿರಿವಂತೆ ಗರ್ಜಿಸಿತು (ಚೋಹತ. ೩೭-೯). ೫. ಹೀಗಳೆ ; ಕೀಳುಮಾಡು : ಮಟಘಟವನತಿಗಳೆದು ಬಿಂಬವ ಲಟಕಟಿಸಿ . . . ಕುಟಿಲ ಕುಂತಳೆಯಧರವತಿಶಯದಿಂದಲೊಪ್ಪಿದುದು (ಸೌಗಂಧಿ. ೦೩-೩೭). ೬. ತಗ್ಗು ; ಕಡಮೆಯಾಗು : ಝಷದ ಲಳಿ ಲಟಕಟಿಸೆ ಮಾರ್ಗಸ್ಖಲಿತ ಖೇದಸ್ವೇದಬಿಂದುಗಳೊಳಸರಿಯೆ ರೋಮಾಳಿ ಚಾಳಿಸೆ . . . ಭಾಪೆನುತ ಘುಲ್ಲವಿಸಿದನು ಭೀಮ (ಕುಮಾರ. ೦೦-೪೪). [ಲಟಕಟ + — ಇಸು$_3$]

**ಲಟಕರಿಸು** (ಕ್ರಿ). ಲಟಲಟವೆಂದು ಸದ್ದುಮಾಡು : ಲಟಲಟಾ ಲಟಲಟಾ ಲಟಕರಿಸಿ ವನಜಜಾಂಡ . . . ಬಿಚ್ಚುತಿರಲು (ಎಡಿಸ್ತ. ೬೫-೪). [ ಲಟಕರಣ$_0$ + — ಇಸು$_3$ ]

**ಲಟಕಾಯಿಸು** (ಕ್ರಿ). ತೂಗುಹಾಕು; ನೇತುಹಾಕು : ಮಾಧವನ . . . ಚಿತ್ರ ಅವನ ಬಲಪಾರ್ಶ್ವದಲ್ಲಿ ಕಟ್ಟಿಗೆಯ ಫಳಿಗೆ ಲಟಕಾಯಿಸಿತ್ತು (ಬೀಹತ. I. ೧೫೬). [ ಲಟಕಾ$_0$ (P ← ಹಿಂ. ಲಟಕನಾ, ಲಟಕಾನಾ; ಮರಾ. ಲಟಕಣೇ ) + — ಇಸು$_3$ ]

**ಲಟಕಿ** 'ನೆಟ್ಟಿಕೆ' ನೋ.

**ಲಟಕಿಮುರಿ** 'ನೆಟ್ಟಿಗೆಮುರಿ' ನೋ.

**ಲಟಕು** 'ನೆಟ್ಟಿಕೆ' ನೋ.

**ಲಟಕುಮುರಿ** 'ನೆಟ್ಟಿಗೆಮುರಿ' ನೋ.

**ಲಟಕ್ಕು** 'ನೆಟ್ಟಿಕೆ' ನೋ.

**ಲಟಪಟ** (ನಾ). ಒಂದು ಅನುಕರಣ ಶಬ್ದ : ಕೈಕಾಲು ಸತ್ತುಹೋಗಿ ಲಟಪಟ ನಡುಗುತ್ತವೆ (ಮುಂಬಯಿ. ೪-೪೦); ಜಾತಿಕುದುರೆಗಳು ಮೆಲ್ಲನೆ ಘೂಂಕರಿಸುತ್ತ ಓಟ ಕಿತ್ತುವು ; ಅವುಗಳ ಗೊರಸು ಕಲ್ಲಿಗೆ ತಗುಲಿ ಲಟಪಟ ಧ್ವನಿ ಹೊರಹೊಮ್ಮುತ್ತಿತ್ತು (ಪುಪರು. ೩೩೬).

**ಲಟಪಟ** (ಅ). ಒಮ್ಮೆಂದೊಮ್ಮೆಲೆ; ಇದ್ದಕ್ಕಿದ್ದಂತೆ : ಏತಱ ಕಟಪಟ ಒಂದಿನ ಹೋಗುತಿದ್ದೆ ಲಟಪಟ (ಕನಂಪ. ೨-೨೨ ಪದ್ಯ).

**ಲಟಪಟಿ** (ನಾ). ಒಂದು ಅನುಕರಣ ಶಬ್ದ : ಓತು ಲಟಪಟಿ ಶಬ್ದಗಳ ಬಲ್ಲೆನೆಂದೆನುತ ಚಾತುರ್ಯದಿಂದೆ ಕೆಲ ಶಬ್ದಗಳ ಗಂಟಿಕ್ಕ (ಹತಂ. ೦-೨೦).

**ಲಟಲಟ** (ನಾ). ಒಂದು ಅನುಕರಣ ಶಬ್ದ : ಲಟಲಟಾ ಲಟಲಟಾ ಲಟಕರಿಸಿ ವನಜಜಾಂಡ . . . ಬಿಚ್ಚುತಿರಲು (ಎಡಿಸ್ತ. ೬೫-೪); ನೆಲದ ಲಟಲಟ ಮುರಿಯೆ ಮೆಟ್ಟುವ ಪಡಂಭೂತಗಳೆಲ್ಲವೆ ? (ಕುಮಾರ. ೨೯-೧). 'ಲಟಲಟನೆ', 'ಲಟಲಟಿಸು' ಪರಾ.

**ಲಟಲಟನೆ** (ಅ). ಲಟಲಟ ಎಂದು ಸದ್ದಾಗುವಂತೆ : ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ ಹೊಟ್ಟೆಡಿಯಾಗಿ ಬೀಳುವ ಲೊಟ್ಟೆಮೂಳನ ಕಂಡಡೆ ಮೆಟ್ಟಿದ್ದ ಎಡಪಾದರಕ್ಷೆಯ ಕಗೊಂಡು ಲಟಲಟನೆ ಹೊಡಿ (ವಚನ. I. ೩೨೬-೦೨); ಲಟಲಟನೆ ಲಟಿಗೆಹೊಡೆಯುತಲಿಹುವು ಮೊಗ್ಗೆಗಳಿ (ಕರುಣ. ೪೩-೦೩). [ ಲಟಲಟ + — ಅನೆ$_1$ ]

**ಲಟಲಟಿಸು** (ಕ್ರಿ). ೧. ತವಕಿಸು ; ಆತುರಪಡು : ನೆಱನೆತ್ತಿ ಬೈವ ಪುರುಡಿಪ ಜಱಿಚುವ ಬಿರಿದಲಸೆ ಕೂಡ ಲಟಲಟಿಸುವ ಮೇಲ್ವರಿಯದೆ ಸೋಂಕುವ ಕೂರದೊಡೆಱಗುವ ವಿಟನೆಗ್ಗನಲ್ತೆ (ಮರಶ. ೦೦-೪೬); ಮೆಟ್ಟು ನೋಱುವ ದೃಷ್ಟಿಯೆವೆಯಿಕ್ಕ ಲಟಲಟಿಸುತಿರೆ ಚಿತ್ತ (ಸೌಗಂಧ. ೨-೫೫); ಕಟಕದೊಳಿದ್ದಾನೆಕುದುರೆ ಬೆದಱಿ ಲಟಲಟಿಸುತ್ತಿತ್ತಲೋಡಿದುವು

(ಶಶಿಕ. ೩೪-೩೬). ೨. ಹಿಂಸೆಪಡು : ತೊಂದರೆಗೊಳಗಾಗು : ಪಸಿವು ನೀರಡಿಕೆಯಿಂ ಲಟಲಟಸುತಿಹ ಬಾಧೆ (ಶೀಕೃತ. ೪-೨೩-೩). ೩. ಉತ್ಸಾಹದಿಂದ ಮುನ್ನುಗ್ಗು : ವುಟಚಂಡಿನಂತೆ ಲಂಛಿಸುತಾಗೊಳ ಹೊಕ್ಕು ಪಟುವಾದ ಶೌರ್ಯದೇಳ್ಗೆಯುಲಿ ಲಟಲಟಿಸುತ ಕಾಲಾಳ ಖಂಡಿಸು ತುತ್ಕಟದಲಿ ಕಲಿಯೇಱಿ ಮೆಚಿದ (ಕಂಪಿ. ೦೮-೦೬೨). ೪. ಚೂರು ಚೂರಾಗು; ಛಿನ್ನಛಿನ್ನವಾಗು : ನಟಿಸಿ ಮೇಗೆತ್ತಿ ಕುಕ್ಕುಱಿಸಿ ನೆಲನಂ ಟೊಣೆದು ಹಲಗೆಯೊತ್ತಿನೊಳಸಿಯುನು ಲಟಲ[ಪಾಠಾಂ. ಕ]ಟಿಸಲಿಕ್ಕಿ ಪಾಪಾಂಗ ಕುಸಿಯುಲು (ಕೋಪುಕ. ೫-೦೩). [ ಲಟಲಟ + — ಇಸು$_3$ ]

**ಲಟಹ** (ನಾ). ಸೊಗಸು ; ಸೌಂದರ್ಯ : ಪಱಿಯುಂ ಪೊಯ್ದುಯೊಸೆದು ರಾಗಿಸಿ ತ್ರಿದಂಡಮನೆತ್ತಿ ಸೊರ್ಕಿದ ಪ್ರಜಿಪೆರಸು ಲಟಹದಿಂದಾಡಿದೊಂ (ಪಶ್ಚಾ.ರಾ. ೦೧೦-೦೩); ಲಟಹ[ಪಾಠಾಂ. ನ]ಯುತಂಗಳ್ ದುಗ್ಧಚ್ಛಟೋಜ್ಜ್ವಲಂಗಳ್ ತದಮರಚಮರರುಪಂಗಳ್ (ಅಂಕೃ. ೭-೩೦) ; ಆ ತರಳಾಪಾಂಗ ವಿಲಾಸಮಾ ಲಟಹಮಾ ಲಾವಣ್ಯಮಾ ಪುಣ್ಯಮಾ ದರಹಾಸಾಮೃತಮೇ ಮನಂಗೊಳಿಸಿತೋ (ಗದಾಯು. ೭-೩೦). [ಸಂ.]

**ಲಟಾಪಟ** (ನಾ). ಹೊಡೆದಾಟ ; ಗುದ್ದಾಟ : ನನಗೂ ಅವನಿಗೂ ಒಮ್ಮೆ ಆಗಿತ್ತು ಲಟಾಪಟ (ಪೇಚಪು. ೯) ; ಗಂಡ_ಹೆಂಡತಿ, ಮಾವ--ಅಳಿಯ ಇವರಿಗೆ ಲಟಾಪಟ ಜಗಳಗಳಾದದ್ದುಂಟು (ಪಂಪಾಸ. ೨೪) ; ದೊಣ್ಣೆಗಳ ಲಟಾಪಟ ಶಬ್ದ ಮುಂತಾಗಿ ಬಹಳ ಗದ್ದಲವು ಹತ್ತಿತು (ರೀಲಾಚ್. ೦೩೬). [ ← ಹಿಂ. ಮರಾ. ಲಟಾಪಟೀ]

**ಲಟಿ** (ನಾ). ಒಂದು ಬಗೆಯ ಭಕ್ಷ್ಯ : ಭಾಗ್ಯಪುರದ ಚೆನ್ನಿಗರಾಯಗೆ ಮಾಡಿದ ಸೇವೆ . . . ತುಪ್ಪದ ಲಟಿ ಬೆಲ್ಲದ ಕಜ್ಜಾಯ ೧೦ ತಾಂಬೂಲಕೆ ಅಡಕೆಯ ಹೋಳು ೧೦ (ಎಕ. XI. ಹೊಳಲ್ಕೆ. ೦೦೩-೦೮ ; 1566). [?]

**ಲಟಿಕೆ** ' ನೆಟ್ಟಿಕೆ ' ನೋ.

**ಲಟಿಕೆಹೊಡೆ**. ಲಟಿಗೆಹೊಡೆ (ಕ್ರಿ). ಚಿಟಿಕೆಹಾಕು : ನಾನು . . . ಹೇಳಿದರೆ ನಿನ್ನ ಬಾಯಿ ತಾನೇ ಮುಚ್ಚುವುದು (ಲಟಿಕೆಹೊಡೆಯುವಳು) (ಕಾದಪ್ಪ. ೩೩) : (ಆಕಳಿಸಿ ಲಟಿಕೆಹೊಡೆದು) ಕಾಲಾಯತಸ್ಮೈನಮಃ ! (ಹೂಸಂಶಾ. ೯೦). **ಲಟಿಗೆಹೊಡೆ** : ಲಟಿಗೆಹೊಡೆದು ಮೋಜು ಗುದ್ದಿ . . . ಒಮ್ಮೆಲೆ ನನ್ನನ್ನು ಮಾತನಾಡಿಸಿದ (ಗಾಳಿಕ. ೨೦) ; ಲಟಲಟನೆ ಲಟಿಗೆ ಹೊಡೆಯುತಲಿಹವು ಮೊಗ್ಗೆಗಳು (ಕರುಣಾ. ೯೩-೦೩).

[ಲಟಿಕೆ ( < ನೆಟ್ಟಿಕೆ) + **ಹೊಡೆ$_1$** ( < ಪೊಡೆ$_1$)]

**ಲಟಿಕೆ** 'ನೆಟ್ಟಿಕೆ' ನೋ.

**ಲಟಿಕೆಮುರಿ** 'ನೆಟ್ಟಿಗೆಮುರಿ' ನೋ.

**ಲಟಿಗೆ** 'ನೆಟ್ಟಿಕೆ' ನೋ.

**ಲಟಿಗೆಮುರಿ** 'ನೆಟ್ಟಿಗೆಮುರಿ' ನೋ.

**ಲಟಿಗೆಹೊಡೆ** 'ಲಟಿಕೆಹೊಡೆ' ನೋ.

**ಲಟುಕಿಕೆ** (ನಾ). ಒಂದು ಬಗೆಯ ಪಕ್ಷಿ : ಚಿಕ್ಕಹಕ್ಕಿಯಾದ ಲಟುಕಿಕೆ ಕೂಡ ತನ್ನ ಗೂಡಿನಲ್ಲಿ ಬೇಕಾದುದನ್ನು ಹೇಳಬಲ್ಲುದು (ಬುದ್ಧಿಕ. ೯೦).

[< ಸಂ. ಲಟ್ವಾಕಾ ?]

**ಲಟುಕು** (ನಾ). ಸೊಗಸು ; ಸೌಂದರ್ಯ : ಸಾಮಾನ್ಯವಾಗಿ ಅಂಥ ಲಟುಕು ಅವರ ಸ್ವಂತದ್ದಾಗಿರುವುದು (ಸುಕ್ಷ್ಮದ. ೬೨). [< ಸಂ. ಲಟಹ]

**ಲಟ್ಟ$_1$** (ನಾ). ದುಷ್ಟ ; ನೀಚ ; ಧೂರ್ತ : "ಲಂಡ — ಲಡ್ವ(ಟ್ಟ) = ಧೂರ್ತ, ಅಸಭ್ಯ" (ಶಬ್ದಕೋ. ೩೬). [ಸಂ.]

**ಲಟ್ಟ$_2$** 'ಲತ್ತ' ನೋ.

**ಲಟ್ಟಣಿಗೆ** (ನಾ). ೧. ಚಪಾತಿ, ಹಪ್ಪಳ ಮೊದಲಾದುವನ್ನು ಲಟ್ಟಿಸುವ (ಮರದ) ಉರುಳೆಯಂಥ ಸಾಧನ ; ರತ್ತೋಡಿ ; ಲತ್ತೋಡಿ ; ಲತ್ತೆಗೊಣೆ : ಹಿಟ್ಟನು ಕೊಟ್ಟರೆ ಭಟ್ಟರು ರೊಟ್ಟಿಯ ಥಟ್ಟನೆ ಸುಟ್ಟು ಕೊಟ್ಟಾರು ಹಿಟ್ಟಿಲ್ಲದಿದ್ದರೆ ಕುಟ್ಟಿ ಲಟ್ಟಣಿಗೆಯ ಥಟ್ಟನೆ ಸಿಟ್ಟಿಗೆದ್ದಾರು (ಕಂದ್ರಪಿ. ೦೩-೫೨) ; ಲಟ್ಟಣಿಗೆ : ೧೦" ಉದ್ದವಿರಬೇಕು (ಅಡುಗೆ. ೩೪). ೨. ಮುದ್ರಣಯಂತ್ರದಲ್ಲಿ ಜೋಡಿಸಿದ ಅಚ್ಚಿನ ಮೊಳೆಗಳಿಗೆ ಮಸಿಯನ್ನು ಹಚ್ಚುವ ಉರುಳುಕಂಬಿ ; ಉರುಳಿ : ಅಕ್ಷರಗಳೆಲ್ಲ ಆ ಕಲ್ಲ ಮೇಲೆ ಮೂಡುತ್ತವೆ . . . ಅದರ ಮೇಲೆ ಮಸಿ ಹಚ್ಚುವ ಲಟ್ಟಣಿಗೆಯನ್ನು ಆಡಿಸಿ, ಮೇಲೆ ಬಿಳೇ ಕಾಗದವನ್ನು ಹಾಕಿ ಒತ್ತಿದ ಕೂಡಲೆ ಅದರ ಮೇಲಿನ ಆ ಕಾಗದದ ಮೇಲೆ ಮೂಡುತ್ತವೆ (ಮುಂಬಯಿ. ೯-೨೦೩). [?./ಮರಾ. ಲಾಟಣೇ, ಲಾಟಣೀ]

**ಲಟ್ಟನೆ** (ಅ). ಕೂಡಲೆ ಎಂಬರ್ಥವನ್ನು ಸೂಚಿಸುವ ಒಂದು ಅನುಕರಣಾವ್ಯಯ : ಉದಾರ ಹುದ್ದರಿಗಳ ಲೆಕ್ಕಪತ್ರವನ್ನು ಲಟ್ಟನೆ ಗೋಡೆಗೆ ನೇತುಹಾಕಿದ ಪಾಟಿಯ ಮೇಲೆ ಹಚ್ಚಿಡುವ (ಮುಂಗಾರು. ೩೬) ; ಅದರ ವಾಸನೆ ನಿನಗೆ ಲಟ್ಟನೇ ಬಡೀತದ (ದೀಪಕ. II. ೩೬). [ಲಟ್$_0$ + — ಅನೆ$_1$]

**ಲಟ್ಟಲೂರ್**. ಲತ್ತಲೂರ್ (ನಾ). ಒಂದು ಊರಿನ ಹೆಸರು ; P ಈಗಿನ ಮಹಾರಾಷ್ಟ್ರದಲ್ಲಿರುವ ಲಾತೂರ್ : ಲಟ್ಟಲೂರ ಪುರಪರಮೇಶ್ವರಂ ಶ್ರೀನೃಪತುಙ್ಗನಾಮಾಙ್ಕಿತ ಲಕ್ಷ್ಮೀವಲ್ಲಭೇಂದ್ರಂ (ಇಇ. XII. ೨೦೮-೦೩; 814). **ಲತ್ತಲೂರ್** : ಲತ್ತಲೂರ್ ಪುರವರೇಶ್ವರಂ (ಇಇ. XIX. ೦೬೬-೬; ೨೬೨).

[ ? + ಊರ್]

**ಲಟ್ಟವಾಡ** (ನಾ). ಒಂದು ಊರಿನ ಹೆಸರು : ಬಧವಾಳಿದ್ವಾದಶಸ್ಸಾಸ್ತ್ರ ಲಟ್ಟವಾಡೂ(ಡೋ)ನಾಮಗ್ರಾಮಃ ತ್ರಿ(ತ್ರ)ತೀಯಃ (ಇಇ. VII. ೨೦೯-೮೮ ; ಕು. 10ನೆಯ ಶ.). [ಲಟ್$_0$ + ವಾಡ ( < ಪಾಡ) ]

**ಲಟ್ಟಿಸು** (ಕ್ರಿ). (ಚಪಾತಿ, ಹಪ್ಪಳ ಮೊದಲಾದುವನ್ನು ಮಾಡಲು) ಹಿಟ್ಟಿನ ಉಂಡೆಯನ್ನು ಲಟ್ಟಣಿಗೆಯಿಂದ ಒತ್ತಿ ತೆಳ್ಳಗೆ ಮಾಡು : ಮೊನ್ನೆ ಬೇಸಗೆಯಲ್ಲಿ ಲಟ್ಟಿಸಿದ ಹಪ್ಪಳ, ಇಟ್ಟ ಸಂಡಿಗೆ, ತುಂಬಿಟ್ಟ ಉಪ್ಪಿನಕಾಯಿಭರಣಿ ಎಲ್ಲ ತೆರೆದಿಸು (ಪಂಚು. ೦೬-೭); ಭವಾನಿಯು ಹಪ್ಪಳವನ್ನು ಲಟ್ಟಿಸುತ್ತಾ ಮಾರಿನಿಯೊಡನೆ ಹರಟೆ ಹೊಡೆಯುತ್ತಲಿದ್ದಳು (ಮೊಗ್ಗು. ೨೪). [ಲಟ್$_0$ (P ← ಮರಾ. ಲಾಟಣೀ) + — ಇಸು$_3$]

**ಲಟ್ಟಿ$_1$** (ನಾ). ೧. ನಾಲಗೆಯಿಂದ ಮಾಡುವ ಒಂದು ಶಬ್ದ,- ಧ್ವನಿ ; ಚಪ್ಪರಣೆ; ಲೊಟ್ಟೆ : ಆನೆ ಮುಂದಕ್ಕೆ ಹೊರಟಿತು . . . ಹಯಾತನು ಲಟ್ಟೀ ಹಾಕುತ್ತಲೇ ಇದ್ದ (ಕಂಗಾಳ. ೨೮೨). ೨. ವ್ಯರ್ಥವಾದುದು ; ನಿಷ್ಪ್ರಯೋಜಕವಾದುದು : ' ಲಟ್ಟಿಕಾರ ' ಪರಾ.

**ಲಟ್ಟಿಹಾಕು** = ನಾಲಗೆಯಿಂದ ಶಬ್ದ ಮಾಡು : ಚಪ್ಪರಿಸು : ಹಯಾತನು ಕಪ್ಪಗಳಾಚೆ ನಿಂತು ಲಟ್ಟಿಹಾಕಿದನು (ಕಂಗಾಳ. ೨೯೩).

**ಲಟ್ಟಿ$_2$** (ನಾ). ಎಳೆಯ ಬಿದಿರು; ಕಳಿಲೆ : ಎಳಮಾವಿನ ಮಿಡಿ ಮಾಗುಳ ಮೆಟುಸಿನ ಕರ ಬೆತ್ತ ಲಟ್ಟಿಯಾಳಿಯ ಗೊರೆಯಿಂದಳವಟ್ಟರೆ ಲಾವಣಕಂಗಳ ನಿಕ್ಕಿದರಾಗಳ್ಬುಯಿಂದಂಗನೆಯರ್ (ಸುಕುಮಾ. ೦೦-೪೦). 'ಬಿತ್ತರಟ್ಟಿ' ನೋ.

**ಲಟ್ಟಿ$_3$** (ನಾ). ಕೆಟ್ಟ ಹೆಂಗಸು ; ದುಷ್ಟೆ : ದಿಟ್ಟೆಯರು ಕುಟಿಲೆಯರು ಕುಹಕದ ಘಟ್ಟಿಯರು ಲಟ್ಟಿ[ಪಾಠಾಂ. ಮಟ್ಟಿ]ಯರು (ಬಸವ. ೧೦-೫೬).

[ ಸಂ. 'ಲಟ್ವಾ]

**ಲಟ್ಟಿಕಾರ** (ನಾ). ನಿಷ್ಪ್ರಯೋಜಕ ವ್ಯಕ್ತಿ : ಉಬ್ಬುಗುಣದಿಂದ ತೊಟ್ಟು ಋಣವನ್ನುಂಗುವರು . . . ಲಟ್ಟಿಕಾರರನೇರಿ ಘನ ಘಳಿಸಿ ಧರ್ಮಕ್ಕೆ ಥಟ್ಟನೆ ಪದಗುವವರು (ಉಪದೇಶ. ೭-೯೦-೦೨). [ಲಟ್ಟಿ$_1$ + — ಕಾರ$_1$ ( < — ಕಾಱ)]

**ಲಟ್ಟಿಕಾರಿಕೆ** (ನಾ). ವ್ಯರ್ಥವಾದುದು ; ತಿರುಳಿಲ್ಲದುದು ; ಸತ್ವವಿಲ್ಲದುದು : ಪೊಟ್ಟೆಯ ಹೊರುವರು ಲಟ್ಟಿಕಾರಿಕೆಯ ಮಾತಾಡಿ ಜಗದೊಳು ಸಿಟ್ಟಲಿ ಮೆರವರು ಪ್ರಜ್ಞಾನಿ (ಉಪದೇಶ. ೭-೯೬-೦೦).

[ಲಟ್ಟಿಕಾರ + — ಇಕೆ]

**ಲಠ್ಠ**, ಲಟ್ಟ (ಗು). ೧. ದಪ್ಪವಾದ ; ಸ್ಥೂಲವಾದ : ಈಗ ಯಜಮಾನನಾಗಿದ್ದಾನೆ. ಈ ಲಠ್ಠ ಹೊಟ್ಟೆಯವ (ಶಾರಧಿ. ೬೪). (ನಾ). ೨. ದಪ್ಪ; ಸ್ಥೂಲ : ಅಪ್ಪಾ ಎಷ್ಟು ಲಠ್ಠ ಆನೆಯಂತಿದ್ದಾಳಲ್ಲ (ತ್ರಿಶಂ. ೪); ಎರಡು ದಿನದಾಗ ಎಷ್ಟ ಲಠ್ಠ ಆಗೀನಿ ನೋಡ್ರಿ (ಕೃಶಿ. ೦೯೪). ೩. ಲಾಠಿ; ದೊಣ್ಣೆ : ಲಠ್ಠ ಹಿಡಿದ ಪೋಲೀಸಿನವನು ಗಸ್ತು ತಿರುಗುತ್ತಿದ್ದನು (ರೂಪ). **ಲಟ್ಟ** : ೩. ಅವರುಗಳ ಕೈಯಲ್ಲಿ ಹಣಮಟ್ಟದ ಲಟ್ಟಗಳಿದ್ದುವು (ಕೆಂಗಾಕ್ಕ. ೪೪೭). [← ಹಿಂ. ಲಟ್ಠಾ ; ಮರಾ. ಲಠ್ಠ]

**ಲಡತ್ತು** (ನಾ). ಕುಸ್ತಿ; ಜಟ್ಟಿಕಾಳಗ; ಮಲ್ಲಯುದ್ಧ : ನನ್ನ ಎದುರಿಗೆ ಅವರನ್ನು ಲಡತ್ತು ಮಾಡಿಸುತ್ತಿದ್ದರು (ಕೆಂಪಿ. ೦೯೦). [← ಹಿಂ. ಲಡಂತ್]

**ಲಡಾಯ** ' ಲಡಾಯಿ ' ನೋ.

**ಲಡಾಯಿ**, ಲಡಾಯ, ಲಢಾಯಿ (ನಾ). ಯುದ್ಧ; ಕಾಳಗ : ಆಯುತದ ರಣರಾಜಕವ ನೋಡ್ದು ಭೀಮನ ಲಡಾಯಿಯುಂವರಿದು ಗುರು ಪಹಿಲದಿಂ ಬರುತಲು (ತುರಂಗ. ೩೩-೩೭); ಚಿತ್ರಗಲ್ಲ ಪಾಳೆಗಾರನು ಶೀರ್ಯದವರ ಮೇಲೆ ಲಡಾಯಿಗೆ ಬಂದಲ್ಲಿ (ಕೃಚರ. ೨೯); ಬಡಾಯಿ ಬಲ್ಲವನು ಲಡಾಯಿ ಬಲ್ಲನೇ ? (ಗಾದೆ). **ಲಡಾಯ** : ಘೋರಳ ಲಡಾಯುವಾಗಿ ಅವರ ಕಡೇ ಸುಮಾರು ೧೫೦೦ ಜನ ಪರಿಯಂತ್ರ ಮೃತವಾಗಿ (ರಾಚೆಂಪ್ರ. ೭); ಇಬ್ಬರಿಗೂ ಪದ್ಧತಿಯಂತ ಬೈಗುಳದ ಒಂದು ಲಡಾಯುವೇ ನಡೆದುಹೋಯ್ತು (ಹುಲಿಹು. ೪೫೦). **ಲಢಾಯಿ** : ಊರವವನೊಡನೆ ಏಕೆ ಲಢಾಯಿ ? (ಅರಳು. ೦೩೬-೦೦). [←ಹಿಂ. ಲಡಾಈ ; ಮರಾ. ಲಡಾಈ, ಲಢಾಈ]

**ಲಡಿ** (ನಾ). ದಾರ ಮುಂತಾದುವುಗಳ ನೀಳವಾದ ಮತ್ತು ಸಡಿಲವಾದ ಸುರುಳಿ, –ಸರ : ನಿದ್ದೆಗೆಟ್ಟು ದಾರದ ಲಡಿಗಳನ್ನು ಅಳೆದರು . . . ದಾರ ಕಡಿಮೆಯಿರುವುದರಿಂದ ಲಡಿಗಳನ್ನೆಲ್ಲ ನಿರಾಕರಿಸಬೇಕೆಂದು ದಾದಾಭಾಯಿ ಅಭಿಪ್ರಾಯಪಟ್ಟರು (ಶ್ಯಾಶೀರ. ೬); ಗೂಡುಗಳನ್ನು ಸಂಗ್ರಹಿಸಿ, ಹಬೆಯಲ್ಲಿ ಇವನ್ನು ಬೇಯಿಸಿ ತುಂಡಾಗದ ಸಿಲ್ಕ್ ನಾರನ್ನು ಲಡಿಗಳನ್ನಾಗಿ ಸುತ್ತುತ್ತಾರೆ (ಗೃಶಾ. ೬೬). [←ಹಿಂ. ಮರಾ. ಲಡ್, ಲಡೀ]

**ಲಡ್ಡ** (ನಾ). ದುಷ್ಟ; ನೀಚ; ಧೂರ್ತ : " ಲಂಡ–ಲಡ್ಡ(ಟ್ಟ) = ಧೂರ್ತ, ಅಸಭ್ಯ '' (ಕರ್ಣಕೋ. ೩೬). [ಸಂ.]

**ಲಡ್ಡಿ** ' ಲೊಡ್ಡು ' ನೋ.

**ಲಡ್ಡಿಕೆ** ' ಲಡ್ಡುಗೆ ' ನೋ.

**ಲಡ್ಡಿಗೆ** ' ಲಡ್ಡುಗೆ ' ನೋ.

**ಲಡ್ಡು₁** ' ಲೊಡ್ಡು ' ನೋ.

**ಲಡ್ಡು₂** (ನಾ). ಒಂದು ಬಗೆಯ ಸಿಹಿತಿನಿಸು ; ಲಾಡು : ಮನಕಕ್ಕರ ತೋರುವ ಬುಂದೆಗಳು ಕರದಿಕ್ಕಿದ ಜಿಲ್ಪಿಲಿ ಲಡ್ಡುಗಳು (ಜನಗೀ. ೪೬) ; ಲಡ್ಡು ತಿನ್ನುತ್ತೀಯಾ ? (ರುಜಾಕಾಪ. ೦೪). ' ಲಾಡು ' ಪರಾ. [ಸಂ./ಹಿಂ. ಲಡ್ಡೂ ; ಮರಾ. ಲಡ್ಡು]

**ಲಡ್ಡುಕ** (ನಾ). = ಲಡ್ಡು₂ : ಲಡ್ಡುಕ ಪೂಪ ಗಾರಿಗೆ ಮುಂತಾದ ಪಲವು ಭಕ್ಷ್ಯಗಳ . . . ನೈವೇದ್ಯವೆತ್ತಿದನು (ಶಾಂತೀಶ. ೯-೯೯). [ಸಂ.]

**ಲಡ್ಡುಗ** ' ಲಡ್ಡುಗೆ ' ನೋ.

**ಲಡ್ಡುಗೆ**, ಲಡ್ಡಿಕೆ, ಲಡ್ಡಿಗೆ, ಲಡ್ಡುಗ (ನಾ). = ಲಡ್ಡು₂ : ಪಲವುಂ ತೆಱದ ಲಡ್ಡುಗೆಗಳ್ ಮಂಡಗೆಗಳುಂ ಮೊದಲಾಗೊಡೆಯ ಪಲವುಂ ಭಕ್ಷ್ಯರೂಪಂಗಳುಮಂ ಕೊಂಡು (ವಡ್ಡಾರಾ. ೦೩-೦೩) ; ವಿಷದ ಲಡ್ಡುಗೆಯ ನಿಕ್ಕೆಯುಂ . . . ಗೆಲಲಾಜಿದೆ (ಶಂಕರಾ. ೨-೩೨ ಪ) ; ಹೂರಿಗೆಯ ಲಡ್ಡುಗೆಯ ಬೆಟ್ಟಂಗಳಲ್ಲಲ್ಲಿ (ಚಿಕರ. ೬-೦೦) ; ಮುಗಿಲ ಬೆನಕಗೆ ಲಡ್ಡುಗೆಗಳಾದವು ಸಮಸ್ತಗ್ರಹಸುತಾರೆಗಳು (ಕುವ್ಯಾಕ. ೦೯-೦೬). **ಲಡ್ಡಿಕೆ** : ಸದ್ದಕನಿಗಿಂತ ನೆಂಟನಿಲ್ಲ, ಲಡ್ಡಿಕೆಗಿಂತ ಕಜ್ಜಾಯವಿಲ್ಲ (ಗಾದೆ). **ಲಡ್ಡಿಗೆ** : ವಿಷದ ಲಡ್ಡಿಗೆ ಮೆದ್ದಿತು ಕೂಸು (ತುರಂಗ. ೦-೦೯-೨) ; ಲಡ್ಡಿ[ಕಾಶಾಂ. ಡ್ಡು]ಗೆಯ ಬಿಚ್ಚೋರಿಗೆಗಳಂ ಬಡ್ಡಿಸಿದರಂಗನೆಯರು (ಸುರೇಶು. ೦೩-೨೪); ತರಗು ಲಡ್ಡಿಗೆಗೆ ಜೊಳ್ಳು ಗಣಪತಿಯೇ ಶ್ರೇಷ್ಠ (ಗಾದೆ). **ಲಡ್ಡುಗ** : ವರದ ಪಾಶಾಂಕುಶಕ ಲಡ್ಡುಗದಿಂದೆ ಕರವೆಸೆವ . . . ಗಣನಾಥ ಕರುಣಿಸು ಮತಿಗೆ ಮಂಗಳವ (ಅಕ್ರೂಚ. ೦-೩). [< ಸಂ. ಲಡ್ಡುಕ]

**ಲಡ್ಡುಮರ** ' ಲೊಡ್ಡುಮರ ' ನೋ.

**ಲಢಾಯಿ** ' ಲಡಾಯಿ ' ನೋ.

**ಲತಾಂಗ** (ನಾ). ೧. ಬಳ್ಳಿಯಂತೆ ಬಳುಕುವ ಕೋಮಲವಾದ ಶರೀರ : ಕುಡಿಹುಬ್ಬು ಸಿಂಗಾಡಿಯೋಲ್ ಪೊಳೆವ ಪೊಂಬಣ್ಣದ ಲತಾಂಗ (ಕನ್ತಿರಂ. ೩-೨೬) ; ಮಾಲೆಗಾರ್ತಿಯರ . . . ಲತಾಂಗಮಂ ತಾಗಿ. ಬೀಗಿ. ದಕ್ಷಿಣಾನಿಲನೆಂತಿರೆ ಪಶ್ಚಿಮಾನಿಲಂ ಮೈದೋಱಲೊಡಂ (ರಾಜಾಶ್ಚ. ೨-೨೩). ೨. [ಜೈನ] ದೀರ್ಘವಾದ ಕಾಲದ ಒಂದು ಅವಧಿ,—ಮಾನ : ಎಂಬತ್ತುನಾಲ್ಕುಲಕ್ಷ ಗುಣಿತಕ್ರಮದಿಂದ . . . ಲತಾಂಗ ಮತ್ತು ಲತಾ, ಮಹಾಲತಾಂಗ ಮತ್ತು ಮಹಾಲತಾ ಎಂಬವು ಕ್ರಮದಿಂದ ಆಗುತ್ತವೆ (ಜೈಪಶ. ೩೦೬). [ಸಂ.]

**ಲತಾಂಗಿ**, ಲತಾಂಗಿ (ನಾ). ೧. ಬಳ್ಳಿಯಂತೆ ಕೋಮಲವಾದ ಶರೀರವುಳ್ಳವಳು ; ಸುಂದರ ಸ್ತ್ರೀ : ನೀಳನೀರಜವನಂಗಳ ಚೆಲ್ವುಗಳೆಂಬುವಾ ಲತಾಂಗಿಯ ಕಡೆಗಣ್ಣ ಬೆಳ್ಪುಗಳ ಸಿಲ್ಕಿದ ಸಿಲ್ಕಿನ ಸಿಲ್ಕಿವಲ್ಲವೇ (ಕಂಕಳಾ. ೪-೭೦) ; ತಲ್ಲಕಾಂಗಿಯು ನಾಮವಣ್ಣಾಲದೇವಿ (ಬಸಪು. ೪೬-೪) ; ಬಂದೆತ್ತಿದರು ರಾಘವಪ್ರಾಣೆಯಂ . . . ಲಂಕಾಲತಾಂಗಿಯರ್ (ಶ್ರೀಣಾಮಾ. ೩೨೨-೬೬). ೨. [ಸಂಗೀತ] ಒಂದು ರಾಗದ ಹೆಸರು : ಅವರು ಹಾಡಿದ ಲತಾಂಗಿರಾಗದ ಕೀರ್ತನೆ ತುಂಬ ಸೊಗಸಾಗಿತ್ತು (ರೂಪ). **ಲತಾಂಗಿ** : ೧. ಪಕ್ಕ ಸೋವ ಲತಾಂಗೀಜನದೊಂದು ಮೆಲ್ಲುಲಿವುಮಂ ಕೇಳ್ದು (ಜಗಂ. ೨-೩). [ ಸಂ. ಲತಾಂಗೀ (ಲತಾ+ಅಂಗ+ —) ]

**ಲತಾಂತ** (ನಾ). ಹೂವು ; ಪುಷ್ಪ : ವಿಕಸಲ್ಲತಾಂತಮಂಜರಿ ಫಲದೇಟಿಗೆಯಿಂ ನೆಱೆಯೆ ಪೇಟ್ಟವೋಲ್ (ಕಾದಂಬರಿ. ೩೯೬) ; ವಿಶ್ವಯಿಪರ್ ಸತಿಯರ್ ಲತಾಂತತಮಂ (ಜಗಂ. ೨-೨೯) ; ಅಂತೊಳಗೆ ಪುದುಗಿರ್ದ ಪವುಳದೊಳೊಪ್ಪುವ ಲತಾಂತಕುಟ್ಮಲದಂತೆ (ಕೈಪಿಡಾ. ೦೩-೦೯). [ಸಂ.]

**ಲತಾಕರ** (ನಾ). [ನಾಟ್ಯ] ಮೂವತ್ತು ವಿಧವಾದ ನೃತ್ತಹಸ್ತಗಳಲ್ಲಿ ಒಂದು ; P "ಪತಾಕ ಅಥವಾ ತ್ರಿಪತಾಕಹಸ್ತಗಳೆರಡನ್ನು ಜೋತು ಬಿಟ್ಟು ಅಡ್ಡಲಾಗಿ ನೀಡುವುದು " (ಲಾಸ್ಯರಂ. ೨೩೦ ಗದ್ಯಾನುವಾದ) : ಚತುರಸ್ರ, ಉದ್ವೃತ್ತ . . . ಕೇಶಬಂಧ, ಲತಾಕರ, ಕರಿಹಸ್ತ . . . ವಲಿತ, ಲಲಿತ—ಈ ಮೂವತ್ತು ನೃತ್ತಹಸ್ತಂಗಳ್ (ಲಾಸ್ಯರಂ. ೨-೪೪ ಪ). [ಸಂ.]

**ಲತಾಕ್ಷೇಪ** (ನಾ). [ನಾಟ್ಯ] ಮೂವತ್ತೈದು ಬಗೆಯ ದೇಶೀಯ ಭೌಮಚಾರಿಗಳಲ್ಲಿ ಒಂದು ; P "ಕಾಲನ್ನು ಹಿಂದಕ್ಕಿರಿಸಿ ಪುನಃ ಮುಂದಕ್ಕೆ ನೀಡಿ ನೆಲವನ್ನು ಕುಟ್ಟುವುದು" (ಲಾಸ್ಯರಂ. ೩೨೩ ಗದ್ಯಾನುವಾದ): ಭುರಿಕಂ ವಿಸ್ಫುರಿಪ ನಿಕುಟ್ಟನಂ ಲತಾಕ್ಷೇಪಾಖ್ಯಂ (ಲಾಸ್ಯರಂ. ೬-೦೨). [ಸಂ.]

**ಲತಾಗೃಹ** (ನಾ). ಬಳ್ಳಿಮಾಡ ; ಲತಾಮಂಟಪ : ಲತಾಗೃಹದೊಳ್ಪು ಮಲ್ಲಿಕಾಕುಸುಮದ ಬೆಳ್ಪು . . . ತಮಾಳದ ಸುರ್ವು ಸುತ್ತಲುಂ (ಸುಕುಮಾ. ೯-೪೬) ; ವನಲತಾಗೃಹಂಗಳೊಳ್ ವಿಶ್ರಮಿಸುತ್ತೆ (ಪುಷ್ಪಕೃ. ೯-೯೯ ಪ). [ಸಂ.]

**ಲತಾಡ** (ನಾ). ಹಿಂಸೆ ; ಕಾಟ ; ತೊಂದರೆ : ಇಬ್ಬರೂ ನನ್ನದು ತನ್ನದು ಎಂದು ಮಗುವನ್ನು ಎಳೆದಾಡಿದರು. ಆ ಹಸುಳೆಯು ಈ ಲತಾಡವನ್ನು

ಸಹಿಸಲಾರದೆ ಗಟ್ಟಿಯಾಗಿ ಅತ್ತಿತು (ಸೀತಸಂ. ೩, ೦೯).
[← ಹಿಂ. ಲತಾಡ್]

**ಲತಾಬಂಧ** (ನಾ). ಜಟ್ಟಿಕಾಳಗದ ಒಂದು ವರಸೆ : ಮಲ್ಲಯುದ್ಧದ ಒಂದು ಪಟ್ಟು : ಉರೋಬಂಧಂ ಲತಾಬಂಧಮುಜ್ಜ್ವಳಶಾಖಾಚರಬಂಧಂ ಚಮತ್ಕರಿಸೆ ನಾನಾಕೌಶಲಂದೋರ್ಬರ್ (ಶಬಶಂ. ೮-೭೩). [ಸಂ.]

**ಲತಾಲೀಢ** (ನಾ). ಬಳ್ಳಿಗಳಿಂದ ಆವರಿಸಿದುದು : ಲತಾಮಂಟಪ : ಪುರವೆಲ್ಲಂ ಮಾಡಬಿಂದಲ್ಲಿಯ ಪುರವನವೆಲ್ಲಂ ಲತಾಲೀಢದಿಂ ಗೋಪುರವೆಲ್ಲಂ ಚೈತ್ಯಗೇಹಂಗಳಿಂ . . . ರಂಜಿಸೆ (ಮಲ್ಲಿಕೆ. ೩-೩). [ಸಂ.]

**ಲತಾವೃಶ್ಚಿಕ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು; "ಒಂದು ಕಾಲನ್ನು ಚೇಳಿನ ಬಾಲದಂತೆ ಹಿಂದಕ್ಕೆತ್ತಿ ಎಡಗೈಯನ್ನು ಲತಾಹಸ್ತದಲ್ಲಿ ಹಿಡಿಯುವುದು. ವಿ–ಆಕಾಶದಿಂದ ಬೀಳುವುದನ್ನು ಅಭಿನಯಿಸುವಾಗ" (ಲಾಸ್ಯರಂ. ೨೯೭ ಗದ್ಯಾನುವಾದ) : ವೃಶ್ಚಿಕರೇಚಿತ ಲತಾವೃಶ್ಚಿಕ . . . ಗಂಗಾವತರಣ — ಈ ನೂರೆಂಟು ಕರಣಂಗಳ್ (ಲಾಸ್ಯರಂ. ೮-೯೨ ವ). [ಸಂ.]

**ಲತಾವೇಷ್ಟನ** (ನಾ). [ಕಾಮಶಾ] ಹನ್ನೆರಡು ಬಗೆಯ ಆಲಿಂಗನಗಳಲ್ಲಿ ಒಂದು : ಪುಷ್ಕರ ವಿವಿಧಕ . . . ಲತಾವೇಷ್ಟನ . . . ಎಂಬ ದ್ವಾದಶವಿಧಾಲಿಂಗನಂಗಳಿಂ (ವಿವೇಕ. ೨೨೯) ; ನಿಂದಿರ್ದ ಪುರುಷನಂ ಸ್ತ್ರೀಯರು ಮರನನು ಬಳ್ಳಿ ಹ್ಯಾಗೆ ಹತ್ತುವುದೋ ಹಾಗೆ . . . ಪುರುಷನಂ ಬಾಗಿಸುವಳು. ಇದು ಲತಾವೇಷ್ಟನವೆಂಬ ಆಲಿಂಗನ (ಕಾಮಶಾ. ೨೨೨). [ಸಂ.]

**ಲತಿಕಾಗೃಹ** (ನಾ). = ಲತಾಗೃಹ : ಓರೊರ್ವೆ ಸುರಭಿಪರಿಮಳೋದ್ಗಾರಿಸ್ಮೇರಕುಸುಮಮಂಜರೀನಿಕರಭರವಿನತಲತಿಕಾಗೃಹಂಗಳೊಳ್ ಭ್ರಮರಮಿಥುನದಂತೆ ಪುಷ್ಪಾಪಚಯದಿಂ ಭ್ರಮಿಸಿಯುಂ (ಚಂದ್ರಪ್ರ. ೩-೨೯ ವ). [ಸಂ.]

**ಲತಿಕೆ** (ನಾ). ಸಣ್ಣ ಬಳ್ಳಿ ; ಹಂಬು : ಲತಿಕಾಲಾಸ್ಯೋಪದೇಶವ್ಯಸನ . . . ಚಂಚಚ್ಚಂಚರೀಕಂ (ಕಾದಂಪೂ. ೦೯೭) ; ಚಲುವ ಕಣ್ಣಾಪನಂಬಕಂಗಳ ತಳಿರ್ವ ಲತಿಕೆಗಳೋ (ಬಸವ. ೦೮-೮೪). [ಸಂ. ಲತಿಕಾ]

**ಲತೆ, ಳತೆ** (ನಾ). ೧. ಹಬ್ಬುವ ಸಸ್ಯ ; ಬಳ್ಳಿ ; ಹಂಬು : "ಲತಾ, ಪ್ರತಾನಿನೀ, ವಲ್ಲೀ, ವ್ರತತೀ, ಪ್ರತತಿಃ — ಈ ೫ ಬಳ್ಳಿ" (ಶಬ್ದಮ. ೪೦-೨೭) ; ಮಡಲ್ತು ಪೂತ ಲತೆಗಳ್ ಕೆಯ್ಗೆಯ್ದು[ಪೂ]ನೀಡಲ್ಕರ್ಘ್ಯಮನೀವಂತೆವೊಲಾದುದು (ಶಂಕರಾ. ೭-೭೭) ; ಲತೆಗಳ ಜನ್ಮಭೂಮಿ ಪುಳಿನಂಗಳ ಪೆರ್ಗಣಿ . . . ಸಾಲ ತಣ್ಣೆಲಲ ತಾಯ್ಮನೆ ತಾನೆನಿಸಿರ್ದುದಾ ವನಂ (ಕುಸುಮಾ. ೦೦-೦೭೯) ; ಕುಸುಮಕಿಸಲಯಲತಾಶೋಭಿತದ ರಮಣೀಯಗಂಧಬಂಧುರದೇವಕಾನನ (ಶ್ರೀರಾಮಾ. ೦೦-೨೭೯). P ಸುಕುಮಾರವಾದುದು ಎಂಬ ಅರ್ಥದಲ್ಲಿ ಕೆಲವು ಮರಗಳ ಹೆಸರುಗಳ ಕೊನೆಗೂ ಈ ಶಬ್ದ ಸೇರಿ ಬರುವುದುಂಟು. ಉದಾಹರಣೆಗೆ—'ಕಲ್ಪಲತೆ', 'ಚೂತಲತೆ'. ೨. ಕೊಂಬೆ ; ರೆಂಬೆ : "ಶಾಖಾ, ಲತಾ . . . ೨ ಕೊಂಬೆಗಳ ಹೆಸರುಗಳು, ರೆಂಬೆಗಳು" (ನಿಘಂಟು. ೧೦೨). ೩. ಒಂದು ಬಗೆಯ ಸಸ್ಯ ; ಪ್ರಿಯಂಗು : "ಶ್ಯಾಮಾ, ಮಹಿಲಾಹ್ವಯಾ, ಲತಾ . . . ಪ್ರಿಯಕಃ — ೧೨ ಪ್ರೇಂಕಣಗಿಡದ ಹೆಸರು ; ಪ್ರಿಯಂಗು ಪ್ರಸಿದ್ಧವಾದದ್ದು" (ನಿಘಂಟು. ೦೨೪). ೪. ಒಂದು ಬಗೆಯ ಗಂಧದ್ರವ್ಯ ; ಸ್ಪೃಕ್ಕೆ : "ಮರುನ್ಮಾಲಾ, ಪಿಶುನಾ, ಸ್ಪೃಕ್ಕಾ, ದೇವೀ, ಲತಾ . . . ಲಂಕೋಯಿಕಾ—೧೦ ಸ್ಪೃಕ್ಕೆಯೆಂಬ ಗಂಧದ್ರವ್ಯ ; ಸಂಕೇಬೇರು" (ನಿಘಂಟು. ೦೯೩). ೫. ಕಂಗೊಂಗೆ ಗಿಡ ; ಮಿಂಚುಬಳ್ಳಿಗಿಡ : "ಪಾರಾವತಾಂಘ್ರೀಃ, ಕಟಭೀಃ, ಪಣ್ಯಾ, ಜ್ಯೋತಿಷ್ಮತೀ, ಲತಾ — ೫ ಕಂಗೊಂಗೇಗಿಡ, ಕಂಗೊಂದೀಗಿಡ, ಮಿಂಚುಬಳ್ಳೀಗಿಡ" (ನಿಘಂಟು. ೦೯೬). ೬. ಒಂದು ಬಗೆಯ ಬಳ್ಳಿ ; ತೊಟ್ಟೆ : "ಗೃಹಭೇದ ಲತೆಯೊಳು ತೊಟ್ಟೆ" (ಕಬ್ಬಿಗ. ೯೦). ೭. [ಜೈನ] ಒಂದು ಕಾಲಗಣನೆ : ಎಂಬತ್ತನಾಲ್ಕುಲಕ್ಷ ಗುಣಿತಕ್ರಮದಿಂದ . . . ಲತಾಂಗ ಮತ್ತು ಲತಾ . . . ಎಂಬಿವು ಕ್ರಮದಿಂದ ಆಗುತ್ತವೆ (ತ್ರಿಸಾ. ೩೦೭). ೮. [ನಾಟ್ಯ] ನೃತ್ತಹಸ್ತಗಳಲ್ಲಿ ಒಂದು : ಈ ಕೆಳಗೆ ಹೇಳಿರುವ ಹಸ್ತಗಳು ನೃತ್ತಹಸ್ತಗಳು — ಚತುರಸ್ರ, ಉದ್ವೃತ್ತ . . . ಕೇಶಬಂಧ, ಲತಾ, ಕರಿಹಸ್ತ (ಅಭಿನ. ೯೯). ಳತೆ : ೧. ಕಂದಳಿಗೊರ್ಗಂ ಚಲ ಚೆಲ್ಲಣಂ ಪ್ರವಾಳಳತೆಯ ಬಾಲಿಗಟ್ಟೆ (ಲೀಲಾವ. ೦೦-೭೩). 'ಳತಾಂಗಿ' ಪದಾ. [ಸಂ. ಲತಾ]

**ಲತೆಯಿಡು** (ಕ್ರಿ). (ಎಲೆಯಂತೆ) ತೆಳ್ಳಗೆ ಒತ್ತು,— ಲಟ್ಟಿಸು : ಹಿಟ್ಟಿಯ ಹಿಟ್ಟನೊತ್ತಿ ಲತೆಯಿಟ್ಟುದರಡು ಬಟ್ಟಲ ನಡುವೆಯಿರಿಸಿ ಯೆರಡಂಚುಗಳ ಮಳ್ಳರಿದು (ಸೂಪಶಾ. ೦-೦೦) ; ಗೋಧುವೆಯ ಹದನಾಗಿ ಹಿಟ್ಟು ಮಾಡಿ ಎಣ್ಣೆಯೊಳು ಕಲಸಿ ಹಪ್ಪಳದಂತೆ ಲತೆಯಿಟ್ಟುದು (ಸೂಪಶಾ. ೦-೯೩). [ಲತೆ + ಇಡು₁]

**ಲತೆವನೆ** (ನಾ). = ಲತಾಗೃಹ : ಲತೆವನೆಯೊಳಗಣ ತಣ್ಪುಟ್ಟಿಲ ತಾಣದೊಳ್ ಕುಸುಮದೆಸಟ ಪಸೆಯುಂ ಸೀತಾಪತಿಗೆ ಸಮೆದಂ ಸುಮಿತ್ರಾಸುತಂ (ಶಂರಾಮಾ. ೬-೩) ; ಕಾಂತೆಯಾನೆಯ್ದೆ ಪಸದನಂಗೊಳಿಸಿ ಲತೆವನೆಯೊಳಿರಿಸಿ (ಸಾಳ್ವಭಾ. ೨೭-೯). [ಲತೆ + ಮನೆ]

**ಲತ್ತ** 'ನೆತ್ತ₁' ನೋ.

**ಲತ್ತಲೂರ್** 'ಲಟ್ಟಲೂರ್' ನೋ.

**ಲತ್ತಾಪ್ರಹಾರ** (ನಾ). ಕಾಲಿನಿಂದ ಒದೆಯುವಿಕೆ ; ಒದೆತ : ಅವನ ರಥವನ್ನು ಮುರಿದು ಸಾರಥಿಯನ್ನು ಕೊಂದು ಅವನ ಎದೆಗೆ ಲತ್ತಾಪ್ರಹಾರ ಮಾಡಿದನು (ಕುಳಕೀ. ೩೦೦) ; ಈ ಅತ್ತಿಮರದ ಕಟ್ಟಿಗೆಯ ಕದವು ನಿನ್ನ ಲತ್ತಾಪ್ರಹಾರಕ್ಕೆ ಮುರಿಯುವುದೆ? (ಅಂಬಿಕೆ. ೦೩೯). [< ಲತ್ತೆ + ಪ್ರಹಾರ]

**ಲತ್ತೆ, ಲಾತ, ಲಾತು** (ನಾ). ೧. = ಲತ್ತಾಪ್ರಹಾರ : ನಿನಗೂ ಲತ್ತೆ ಬೀಳಲಿಕ್ಕಿಲ್ಲ (ಮುಂಬಯಿ. ೩-೭೩) ; ಅಂದು ಅವನಿಗೆ ಮನೆಯಲೆರಡು ಲತ್ತೆಗಳು ಬಿದ್ದವು (ದಾಸಕು. ೦೦) ; ಕುದುರೆಗೆ ಇಷಾರೆ, ಕತ್ತೆಗೆ ಲತ್ತೆ (ಗಾದೆ). **ಲಾತ** : ೨. ಏಟು ; ಹೊಡೆತ ; ಪೆಟ್ಟು : ಒಂದು ದಿನ ತಪ್ಪಿಸಿಕೊಂಡರೆ ಮಾರನೆಯ ದಿನ ಆರಾರು ಲಾತಗಳು (ಶ್ಯಾಮಸ್ಮೀ. ೦೯೭) ; ಯಾವಾಗಲೂ ಮುಟ್ಟಿ ನೋಡಿಕೊಳ್ಳುವಂಥ ಲಾತ ಕೊಡುತ್ತೇನೆ (ಶ್ರೀಸರು. ೯೩೭) ; ನಾಲ್ಕು ಲಾತ ಬಿಗಿದು ಇವನಿಗೆ ಬುದ್ಧಿ ಕಲಿಸೋದು (ಹೊಸಕ್ಕೆ. ೦೦೩). **ಲಾತು** : ೨. ಮಗು ಆದರೆ ಎರಡು ಲಾತು ಬಿಗಿದು ಬುದ್ಧಿ ಕಲಿಸಬಹುದು (ಲೀಮಶಾ. ೦೩೭). ೩. (ಅಲಂ) ಮೋಸ ; ದಗಾ : ನಿನ್ನನ್ನು ನೋಡಿದರೆ ಮನೆಗೆ ಲಾತು ಕೊಟ್ಟು ಬಂದವಳೆಂದು ತೋರುತ್ತದೆ (ಕದಂಬ. ೬೪).

**ಲತ್ತೆತಿನ್ನು** = ಒದೆಯಿಸಿಕೊಳ್ಳು : ಲತ್ತೆ ತಿಂದ ತಿಂಮನ ನೆತ್ತಿಯಿಂದ ರಕ್ತ ಸುರಿಯುತ್ತಿದ್ದರೂ . . . ಸುಮ್ಮನೆ ಕುಳಿತಿದ್ದನು (ತಿಂಮಕ. ೩೦).

**ಲತ್ತೆಹೊಡೆ** = ೧. ತ್ಯಜಿಸು ; ಬಿಡು : ತನ್ನ ನಾಕರಿಗೆ ಲತ್ತೆಹೊಡೆದು ಅವರೊಂದಿಗೆ ಹೋಗಿಬಿಡೋಣ ಎಂದೆನಿಸುತ್ತಿತ್ತು (ಮೊಕಪು. ೦೦೭). ೨. (ಅಲಂ) ಕೆಡುಕಾಗು ; ದುರದೃಷ್ಟ ಒದಗು ; ಗ್ರಹಚಾರ ಬಡಿ : ಅವನಿಗೆ ಲತ್ತೆ ಹೊಡೆಯಿತು (ರೂಢಿ).

[<ಪ್ರಾ. ಲತ್ತಾ, ಲತ್ತಿಅ./ಹಿಂ. ಲತ್ತೀ, ಲಾತ್ ; ಮರಾ. ಲತ್ತಾ, ಲಾತ್, ಲಾಥ್]

**ಲತ್ತೆಗುಣಿ** (ನಾ). ಲಟ್ಟಿಸಲು ಬಳಸುವ ಸಾಧನ ; ಲಟ್ಟಣಿಗೆ : "ಲಟ್ಟಿಸುವ ಉಳಕ" (ಜಾತಕಟೀ. ೯೨). [?]

**ಲತ್ವ** (ನಾ). = ಲಕಾರ : ದ ವರ್ಗಗಳ ಪರವಾಗೆ . . . ಕೊಲ್ ಸಲ್‌ಗಳ ಲತ್ವಕ್ಕಂ ನಕಾರಾದೇಶಂ (ಶಮದ. ೨೩ ವೃತ್ತಿ) ; ಶ್ಲೋಕದ ಲತ್ವಕ್ಕೆ ದುರ್ಜನರೆಮರೊಳು ಲೋಪವೆ ಸಂಭವಿಸುವುದು (ಶಿಂಕಾಶ. ೨೦೩-೭೭). [ಸಂ]

**ಲದ್ದಿ** (ನಾ). ಆನೆ, ಕುದುರೆ, ಕತ್ತೆ, ಒಂಟೆ ಮೊದಲಾದುವುಗಳ ಮಲ :

"ಲದ್ದಿಯೆನೆ ಲಂಡಮಕ್ಕುಂ" (ಮಂಗರಾ. ೯೭-೩); ಕರಮಾಮುದೊಳೊಂದಿ ಲದ್ದಿ ಪೋಪೊಡಮದು ಶೂಲೆಯೆಂದಱಿದು ವಾಜಿಗೆ ಪಿಪ್ಪಲಿ ಶುಂಠಿ ಸೈಂಧವಂ ಗಿಡಿವುದು ಮೂಗಿನೊಳ್ (ಲೋಕೋಪ. ೯-೨೨೭); ಇದ್ದು ಉಣ ದಿಪ್ಪ ಬಾಯೊಳಗೆ ಕತ್ತೆಯ ಲದ್ದೆ [ದ್ದಿ]ಯೇ ಬೀಳ್ಗು (ಸರ್ವಜ್ಞ. ೬೩೪); ವೃದ್ಧಿ ದುಡಿಮೆಯ ಹಾಗೆ ಶುದ್ಧಿ ವಿಚಾಹದ ಹಾಗೆ ಲದ್ದಿ ಆಹಾರದ ಹಾಗೆ (ಇಂಚಾಪ. ೬೨-೯೬). [<ಪ್ರಾ. ಲದ್ದೀ]

**ಲದ್ದಿಗುತ್ತ** (ನಾ). ದನಕರುಗಳಿಗೆ ಬರುವ ಒಂದು ಬಗೆಯ ರೋಗ ; ಲದ್ದಿಗೆ ಸಂಬಂಧಿಸಿದ ರೋಗ : ಅನುಲೋಮವಾಗಿ ವಾಜಿಗೆ ಜನಿಯಿಸೆ ಬಲವರ್ಮೆಯು ಲದ್ದಿಗುತ್ತಂ ಪಿರಿದಪ್ಪಿನಮಲ್ಲಿ ಕಜ್ಜಿ ಗಟ್ಟುವುವನುನಯುದಿಂ ಕುಡುಗೆಣ್ಣೆಯಂ ನವರಸಮಂ (ಅಶ್ವಶಾ. ೭-೨೭). [ಲದ್ದಿ+ಕುತ್ತ]

**ಲದ್ದಿಬೇನೆ** (ನಾ). = ಲದ್ದಿಗುತ್ತ : ಕುದುರೆಗಳಿಗೂ ದನಗಳಿಗೂ ಬರುವ ಸಾಂಕ್ರಾಮಿಕರೋಗವಾದ 'ಅಂತ್ರಾಕ್ಸ್' (ಲದ್ದಿಬೇನೆ, ಗಂಟ್ಲುಕಟ್ಟು) ಎಂಬುದು ಲಂಡನ್ನಿನಲ್ಲಿ . . . ಅಂಟಿಕೊಂಡ ವಿಷಯವು ಬಹಳ ವಿಚಿತ್ರ ವಾಗಿರುವುದು (ವಿಜ್ಞಾ. ಕ. ೨೨೩). [ಲದ್ದಿ+ಬೇನೆ]

**ಲದ್ದು, ಲದ್ದೆ** (ನಾ). ಹೊರೆ ; ಹೇರು ; ಭಾರ : ಕಟ್ಟಿಗೆಯ ರಾಶಿಗೆ ೧ ರೂಪಾಯಿ ; ಒಂದು ಎತ್ತಿನ ಲದ್ದಿಗೆ ಒಂದಾಣೆ, ಗಂಡಸಿನ ತಲೆಹೊರೆಗೆ ೧ ದುಡ್ಡು (ಕಥಾಗ. ೩೪). **ಲದ್ದೆ** : ಈತನೇ ಒಕ್ಕಲಿಗ ಮುದ್ದಯ್ಯ ನೆಂಬಾತನೀತನೇ ಲದ್ದೆಯಾ ಸೋಮಯ್ಯನೆಂಬಾತನು (ಚೆಂಶ. ೩೭-೫೬) ; ಚೆನ್ನಯ್ಯಗಳು ಲದ್ದೆಯ ಹುಲ್ಲು ಸೋಮಯ್ಯಗಳು ಬಡತನದಲ್ಲಿ ಶಿವನೊಳು ಬೆರಸಲಿಲ್ಲವೆ (ಸುಶಾರ. ೯೬-೭).

[←ಹಿಂ. ಲಾದಿ, ಲದಾವ್ ; ಮರಾ. ಲಾದಾ]

**ಲದ್ದೆ** 'ಲದ್ದು' ನೋ.

**ಲಪಟಾಯಿಸು** (ಕ್ರಿ). ಪರರ ವಸ್ತುವನ್ನು ಸ್ವಾಧೀನಪಡಿಸಿಕೊಳ್ಳು.- **ಎತ್ತಿ ಹಾಕು** : ವಿಷ್ಣು, ಲಕ್ಷ್ಮಿ, ಕೌಸ್ತುಭ ಮುಂತಾದ ಅನರ್ಘ್ಯರತ್ನ ಗಳನ್ನೆಲ್ಲಾ ತಾನೇ ಲಪಟಾಯಿಸಿ, ಏನೂ ತಿಳಿಯದ ಈಶ್ವರನಿಗೆ ವಿಷವನ್ನು ಕುಡಿಸಿಬಿಟ್ಟನು (ಶಿವರಾ. ೭೦); ಸಾಮಾನ್ಯಜನರ ಆಸ್ತಿಪಾಸ್ತಿಗಳನ್ನು ಲಪಟಾಯಿಸಿಕೊಂಡಿದ್ದ (ಭುವರು. ೩೯೭).

[?+—ಇಸು₃. / ತೆಲು. ಲಪಟಾಯಿಂಚು, ಲಪ್ಪಾಯಿಂಚು]

**ಲಪನ** (ನಾ). ೧. ಮಾತನಾಡುವುದು; ನುಡಿಯುವುದು. ೨. ಮುಖ; ವದನ : "ವದನಮಾನನಮಾಸ್ಯಂ . . . ಲಪನಂ ವಕ್ತ್ರಂ ಮೊಗಕ್ಕೆ ನಾಮಂ" (ವಸ್ತುಕೋ. ೬೯-೦೫); ಲಪನಂ ಕಾರುಣ್ಯಮಂ ಕನ್ನಡಿಪೆ (ಅರ್ಥನೇ. ೦-೨೦); ಮತ್ತೊಂದು ದೆಸೆಗೆ ಲಪನವನ್ನೈದೆ ತಿರುಪಲಾ ಠಾವಿಗೆಯ್ದಿ (ಪಿಕ್ಕೃ. ೩-೨-೭೦). [ಸಂ.]

**ಲಪಾಡಿಸು** (ಕ್ರಿ). ಸುತ್ತು; ಕಟ್ಟು : ಝುಗಾ ಆರ ಹಾಕರೀ ! ಲುಂಗೀ ಆರ ಸುತ್ತರೀ; ಲಂಗಟಾ ಆರ ಲಪಾಡಸರಿ! (ನವಜೀ. ೨೪೪).

[ಲಪಾಡು₀ (← ಹಿಂ. ಲಪೇಟನಾ)+—ಇಸು₃]

**ಲಪಿತ** (ನಾ). ೧. ಮಾತಾಡಿದುದು; ಹೇಳಿದುದು : "ಉಕ್ತಂ, ಭಾಷಿತಂ, ಉದಿತಂ, ಜಲ್ಪಿತಂ, ಆಖ್ಯಾತಂ, ಅಭಿಹಿತಂ, ಲಪಿತಂ—೭ ಹೇಳಲ್ಪಟ್ಟದ್ದು ನುಡಿಯಲ್ಪಟ್ಟದ್ದು" (ಸಿದ್ಧಾಂತಿ. ೩೬೨). ೨. ಮಾತು; ನುಡಿ. [ಸಂ.]

**ಲಪಿಸು** (ಕ್ರಿ). ಹೇಳು; ನುಡಿ : ಜಿಪ್ಪೆಯನ್ನಲುಗಿ ಮಾಳ್ಪ ಜಪವೆ ರಸನಾಧಿಕಂ ಮೌನದಿಂ ಚಿತ್ತದೊಳ್ ಲಪಿಸುವುದೆ ಮಾನಸಿಕಂ (ವಂಶಾರಾ. ೨-೦೩-೩೪). [ಲಪನ+—ಇಸು₃]

**ಲಪೇಟ, ಲಪ್ಪಟ್ಟೆ, ಲಪ್ಪಾಟಿ** (ನಾ). (ತಲೆಗೆ ಅಥವಾ ಸೊಂಟಕ್ಕೆ) **ಸುತ್ತಿಕೊಳ್ಳುವ ಬಟ್ಟೆ** : ಸಣ್ಣ ಪಂಚೆಯೊಂದನ್ನು ಲಪೇಟಿಯಂತೆ ಅಡ್ಡ **ಸುತ್ತಿಕೊಂಡಿದ್ದ** (ಹುಕ್ಕುಮು. ೬೦). **ಲಪ್ಪಟ್ಟೆ** : ತಲೆಗೆ ಒಂದು ಲಪ್ಪಟ್ಟೆ **ಕಟ್ಟಿ ಹೊರಟೇ ಬಿಟ್ಟರು** (ರೂಢಿ). **ಲಪ್ಪಾಟಿ** : ಕೇಶವರಾಯನು ತಲೆಗೆ ಲಪ್ಪಾಟಿಯನ್ನು ಸುತ್ತಿ . . . ಎದುರಿಗೆ ಬರುತ್ತಿದ್ದ ದಾಸಪ್ಪನನ್ನು ಕಂಡನು (ಕಥಾ. ೩). [← ಹಿಂ. ಮರಾ. ಲಪೇಟಾ]

**ಲಪ್ಪಟ್ಟೆ** 'ಲಪೇಟಿ' ನೋ.

**ಲಪ್ಪಾಟಿ** 'ಲಪೇಟಿ' ನೋ.

**ಲಫಂಗ** (ನಾ). ಪುಂಡ ; ದುರಾಚಾರಿ : ಹೋದಲ್ಲೆಲ್ಲ ತನ್ನ ಚರಿತ್ರ ಹೀನತೆಯನ್ನು ಪ್ರದರ್ಶನಕ್ಕಿಡುವ ಲಫಂಗ (ವಾತ್ಸಲ್ಯ. ೩೨೩); ಊರಾಗಿನ ಲಫಂಗರದು ಬೆಂಬಲ ಆದ (ದೀಶಪ. II, ೦೯೬).

[← ಪಾರ. ಲಫಂಗ್; ಹಿಂ. ಮರಾ. ಲಫಂಗಾ]

**ಲಫಂಗಗಿರಿ** (ನಾ). ಪುಂಡತನ; ದುರಾಚಾರ : ಅವರ ಲಫಂಗಗಿರಿಯ ವಿಷಯ ಮಾತ್ರ ಸುಳ್ಳೇನೂ ಆಗಲಾರದು ! (ಹಿರೀಕ್ಷೆ. ೦೦೦).

[ಲಫಂಗ+—ಗಿರಿ₂]

**ಲಬಕ್** (ನಾ). ಒಂದು ಅನುಕರಣ ಶಬ್ದ : ಅವನು ಕಲ್ಲುಸಕ್ಕರೆಚೂರನ್ನು ಲಬಕ್ ಎಂದು ಬಾಯಿಗೆ ಹಾಕಿಕೊಂಡು ಬಿಟ್ಟನು (ರೂಢಿ).

**ಲಬಲಬ** (ನಾ). ಬಾಯಿ ಬಡಿದುಕೊಳ್ಳುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ : ಲಬಲಬ ಬಾಯಿ ಬಡಿದುಕೊಂಡರು (ರೂಢಿ). 'ಲಬಲಬಿಸು' ಪರಾ.

**ಲಬಲಬನೆ** (ಅ). ಬಾಯಿ ಬಡಿದುಕೊಳ್ಳುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಲಬಲಬನೆ ಬಾಯಿ ಬಡಿದುಕೊಂಡೂ ಎದೆ ಗುದ್ದಿಕೊಂಡೂ ಕೇರಿಯೆಲ್ಲಾ ನೆರೆಯುವಂತೆ ಗೋಳು ಹೊಯ್ದು ಕೊಂಡಿದ್ದಳು (ಮಲೆಮ. ೪೦೩). [ಲಬಲಬ+—ಅನೆ₁]

**ಲಬಲಬಿಸು** (ಕ್ರಿ). ಲಬಲಬ ಎಂದು ಬಾಯಿಬಡಿದುಕೊಳ್ಳು : ಅವನ ಅಪ್ಪ . . . ಯಾರಾದರೂ ಸತ್ತರೆ ಬಾಯಿ ಬಡಿದುಕೊಳ್ಳುವಂತೆ ಲಬಲಬಿ ಸಿದ್ದರು (ಮಲೆಮ. ೩೩೭). [ಲಬಲಬ+—ಇಸು₃]

**ಲಬಾಡ** (ನಾ). ಸುಳ್ಳುಗಾರ ; ಅಸತ್ಯವನ್ನಾಡುವವನು : ಏನೋ ಲಬಾಡಾ, ನಾನು ತಿಂದದ್ದು ಯಾವಾಗ ? (ಸ್ವಪ್ನ. ೨೫೯).

[←ಹಿಂ. ಲಬಡಾ, ಲಬರಾ; ಮರಾ. ಲಬಾಡ್]

**ಲಬಾಡಿ** 'ಲಬಾಡು' ನೋ.

**ಲಬಾಡು, ಲಬಾಡಿ** (ನಾ). ೧. ಮೋಸ ; ಕಪಟ ; ವಂಚನೆ : ಇನ್ನು ಮುಂದೂ ಲೂಟಿ ಲಬಾಡು ಮಾಡದೆ, ಅಪ್ಪಣೆ ಪ್ರಕಾರ ನಡ ಕೊಳ್ಳುತ್ತೇನೆ (ರಾಜೇಂದ್ರ. ೦೯೩). **ಲಬಾಡಿ** : ೧. ಜೀನಸುಗಳು ಲಬಾಡಿ ಯಿಂದ ಅಂದರೆ ಖೊಟ್ಟಿತನದಿಂದ ತುಂಬಿದ್ದಾದರೆ ಆವಾಗಲೆ ತಿಳಿದು ಬರು ವುದು (ಮುಂಬಿವ್ಯಾ. ೪೨). ೨. ಸುಳ್ಳು ; ಸಟೆ ; ಅಸತ್ಯ : ಲಬಾಡಿ ಬಿಲ್‌ಕುಲ್ ಕೇಳಬೇಡ (ಮೋಹಿಪೀ. ೪೦).

[←ಹಿಂ. ಮರಾ. ಲಬಾಡ್, ಲಬಾಡೀ]

**ಲಬುಧ** (ಗು). ದೊರಕಿದ : ಈಡಗೂರ ದೇವೀಲಬುಧವರಪ್ರಸಾದಮೃಗ ಮದಾವೋದಯರ್ (ಎಕ. XII, ತಿಪಟೂ. ೦೦೯-೨೦ ; 1130) ; ಜಯನ್ತೀ ಮದು(ಧು)ಕೇಶ್ವರದೇವರ (ವ)ಲಬುಧವರಪ್ರಸಾದಂ ಸಹಜಮೃಗಮದಾ ಮೋದಂ (ಎಇ. XXVII, ೦೬೦-೦೫ ; 1256). [<ಸಂ. ಲಬ್ಧ]

**ಲಬೋಲಬೋ** (ನಾ).=ಲಬಲಬ : ಬೀದೀಲಿ ನಿಂತುಕೊಂಡು ಲಬೋ ಲಬೋ ಅಂತ . . . ಕೂಗೋದು (ತುಂಗಭ. ೩೦).

**ಲಬ್ಧ** (ಗು). ೧. ದೊರಕಿದ ; ಪ್ರಾಪ್ತವಾದ : ಸ್ವಪಕ್ಷ ಸ್ಥಾಪನೆಗೆಯ್ದು ಸನ್ಮಾರ್ಗ ಪ್ರಕಾಶನದಿಂ ಮಾರ್ಗಪ್ರಭಾವನೆಯಂ ಮಾಡಿ ಸಭಾಸದರಿಂ ಲಬ್ಧಪ್ರಶಂಸನಾಗಿ (ಆದಪು. ೨-೨೨ವ). (ನಾ). ೨. ಪಡೆದುದು ; ಪ್ರಾಪ್ತಿ; ಫಲ : ಅಲಬ್ಧಲಾಭಂ ಲಬ್ಧಪರಿರಕ್ಷಣಂ ರಕ್ಷಿತವಿವರ್ಧನಂ (ಕಂಕಕಂ. ೮. ೨೦-೦೬) ; ವ್ರೀಹಿಯಂ ನೆರಪುತ್ತೊಯ್ಯನೆ ಮಾಱುಗೆಂಟನೆಯ ತಿಂಗಳ್ಗೆಂ ದಿದಂ ಮಾಱಿಸಲ್ ನಿರುತಂ ಲಬ್ಧಮನೆಟ್ಟನೆಂದುದೆ ನಯಂ. ಶ್ರೀ ಅಟ್ಟ

ಕಂದರ್ಪನಾ (ಅಭಿಕು. ೬-೩೨). ೩. ಸಂಭಾವಿತ ; ಯೋಗ್ಯ : "ಅಭಿಜಾತಂ ತಾಂ ಲಬ್ಧನುಮಭಿವಿನುತಕುಳಪ್ರಸೂತನಂ" (ಪಶ್ಚಕೋ. ೦೨೪-೩೬). ೪. [ಗಣಿತ] ಲೆಕ್ಕಾಚಾರದ ಪ್ರಕ್ರಿಯೆಗಳ ಮೂಲಕ ಬರುವ ಉತ್ತರ,—ಮೊತ್ತ : ಅರ್ಧನವಾಂಶಂಗಳಿನಾಯುವನ್ನಱಿದು ಭಾಗಂಗೊಂಡು ನೂಱಿಂಟಱಿಂದೆ, . . . ಪೆತ್ತಾ ಲಬ್ಧಮಂ ನೋಡೆ (ಗಾಕಅ. ೬-೬) ; ಗುಣಿಸಿ ಬಂದ ಲಬ್ಧ (ಭಾಸ್ಕರ. ೦-೬). [ಸಂ.]

**ಲಬ್ಧವರ್ಣ** (ನಾ). ಅಕ್ಷರಗಳನ್ನು ಕಲಿತವನು; ಪಂಡಿತ; ವಿದ್ವಾಂಸ : "ಧೀರಃ, ಧೀಮಾನ್, ಲಬ್ಧವರ್ಣಃ . . . ಮತಿಮಾನ್—ಈ ೨೮ ವಿದ್ವಾಂಸರ್" (ಹಲಾಯು. ೫೫-೦೬೬). [ಸಂ.]

**ಲಬ್ಧಿ** (ನಾ). ೧. ದೊರಕಿದುದು ; ಪ್ರಾಪ್ತಿ. ೨. ಗಳಿಕೆ ; ಸಂಪಾದನೆ. ೩. ಲಾಭ ; ಫಾಯಿದೆ ; ನಫೆ : ಮೊದಲುಗೆಟ್ಟಿಹ ಹರದ ಕಾಬನೆ ಲಬ್ಧಿಯನು ಮತಿಬಱಿಸ ಹೋಗೆಂದ (ತೊರಂ. ೬-೫-೫೬). ೪.= ಲಬ್ಧ ೪. ೫. [ಜೈನ] "ಮೋಕ್ಷ ಪೂರ್ವಜ್ಞಾನ" (ಶಂರಾಮು. ೯-೦೫ವ ಅವತಾರ): ಎಮ್ಮಂ ಕಂಡ ದೊಸಱಿಂ ಕರ್ಮಬಂಧಂ ಶಿಥಿಲವಾದುದೆಂಬದಱ ಮನೋವಿಷಾದಮಂ ಕಳೆವದರ್ಕೆ ಲಬ್ಧಿ ದೊರೆಕೊಂಡುದು (ಶಂರಾಮು. ೯-೦೫ ವ); ಲಬ್ಧಿವಶದಿಂದೆ ಸಂಸಾರಾಬ್ಧಿಯ ನಾಱೀಸಲೆಂದು ಬಗೆದು (ಪಾರ್ಶ್ವ. ೪-೬೫). ಯಾವುದೊಂದು ವಸ್ತುವನ್ನು ಅದರೊಡನೆ ಸಂಬಂಧವಿರುವ ಯಾವುದೊಂದು ವಿಷಯದ ಸಹಾಯದಿಂದ ನಿರ್ದೇಶಿಸುವುದು ಲಬ್ಧಿಯೆನಿಸುವುದು (ಕ್ನಪ. VIII. ಉಪೋದ್ಘಾತ). 'ಪಂಚಲಬ್ಧಿ' ಪರಾ. [ಸಂ.]

**ಲಬ್ಧಿಗ್ರಹಣ** (ನಾ). [ಜೈನ] ಲಬ್ಧಿಯನ್ನು ಪಡೆಯುವಿಕೆ ; ಸಮ್ಯಕ್ತ್ವಜ್ಞಾನಸಂಪಾದನೆ : ಜಿನದೀಕ್ಷಾಗ್ರಹಮಂ ಪಡೆದಲ್ ಲಬ್ಧಿಗ್ರಹಣದಿನೊಳ್ಪುವಡೆವುದೊಂದಚ್ಚರಿಯೇ (ಶಂರಾಮು. ೨-೨೫). [ಸಂ.]

**ಲಬ್ಧಿಚತುಷ್ಟಯ** (ನಾ). [ಜೈನ] ಕ್ಷಯೋಪಶಮ, ವಿಶುದ್ಧಿ, ದೇಶನಾ ಮತ್ತು ಪ್ರಾಯೋಗ್ಯಗಳೆಂಬ ನಾಲ್ಕು ಬಗೆಯ ಲಬ್ಧಿಗಳು : ಅವು ಲಬ್ಧಿಚತುಷ್ಟಯವೆಂಬಿನನೆಯ್ದದೆ ದುರಿತವಶದೆ ಬಹುವಿಧದುಃಖಾರ್ಣವದೊಳಗಬ್ದಿರೆ (ಜೀಷಂ. ೪೭೬). [ಸಂ.]

**ಲಬ್ಧಿತ್ರಯ** (ನಾ). [ಜೈನ] ಕಾಲ, ಕರಣ ಮತ್ತು ಉಪಶಮ ಎಂಬ ಮೂರು ಬಗೆಯ ಲಬ್ಧಿಗಳು : ಅಂತು ತನಗೆ ಕಾಲಲಬ್ಧಿಯುಂ ಕರಣಲಬ್ಧಿಯು ಮುಪಶಮಲಬ್ಧಿಯುಮೆಂಬ ಲಬ್ಧಿತ್ರಯಂ ದೊರೆಕೊಳೆ (ಅಜಿತ. ೩-೦ ವ). [ಸಂ.]

**ಲಬ್ಧಿಬಧಿರಸಮ** (ನಾ). [ಜೈನ] ಹುಟ್ಟುಕಿವುಡನಂತೆ ಮತ್ತೇನನ್ನೂ ಕೇಳದೆ ಜಿನೋಪದಿಷ್ಟತತ್ತ್ವವನ್ನು ಮಾತ್ರ ಏಕಚಿತ್ತದಿಂದ ಗ್ರಹಣ ಮಾಡುವವನು : ಲಬ್ಧಿಬಧಿರಸಮನೆಂಬೊಂ ಸಾಱುಂಗಿ ಕಿವುಡನಂತೆ ಕೋಟಿಗೆಯ್ಯದೆ ತನ್ನ ಮನೋಭಿಲಷಿತಮಪ್ಪರ್ಥಮಂ ಕೇಳ್ದು ಕೈಕೊಳ್ಗುಂ (ಶಾವುಂತ. ೬). [ಸಂ.]

**ಲಬ್ಧಿಬುದ್ಧ** (ನಾ). [ಜೈನ] ಜ್ಞಾನಪ್ರಾಪ್ತನಾದವನು; ಸಮ್ಯಕ್‌ಜ್ಞಾನಿ : ಅನುಕೂಲಕನುಮನಾಲಸ್ಯನುಮನವಕಾರ್ಯನುಂ ಲಬ್ಧಿಬುದ್ಧಸದೃಶನುಂ (ಅಜಿತ. ೦೦-೩ ವ). [ಸಂ.]

**ಲಬ್ಧೋಪದೇಶ** (ನಾ). ಉಪದೇಶ ಹೊಂದಿದವನು : ನೀರ ಪೋಗಿ ಕಾಲ್ಗೆ ಜಗಲೊಡಂ ಕೇವಲಜ್ಞಾನಮಕ್ಕುಮೆಂದು ಬೆಸಸಿದೊಡೆ ಲಬ್ಧೋಪದೇಶನಾಗಿ . . . ಬಂದೆಱಗಿ (ಅಜಿತ. ೦೯-೦೯೬ ವ). [ಸಂ.]

**ಲಬ್ಬ** 'ಲಬ್ಬೆ₁' ನೋ.

**ಲಬ್ಬೆ₁**, ಲಬ್ಬಿ (ನಾ). ಮೂಲತಃ ಅರಬ್ಬನಾಗಿದ್ದು ತಮಿಳು ಮಾತನಾಡುವ ಮಹಮದೀಯ ವ್ಯಕ್ತಿ : "ಮುಸಲ್ಮಾನರ ಒಂದು ಪಂಗಡ ; ತೊಗಲು ಹದಮಾಡುವವರು" (ಜಾಪಕೋ. ೯೩) : ಇಬ್ಬರೂ ಮಾಪಿಳ್ಳೆ ಲಬ್ಬೆ ಬ್ಯಾರಿ ಮೊದಲಾದ ಮಲೆಯಾಳಿಗಳು ಉಡುವಂತೆ . . . ಅಡ್ಡಪಂಚೆ ಸುತ್ತಿ, ಉದ್ದುದ್ದ ಬನೀನು ಹಾಕಿದ್ದರು (ಮಲೆಮ. ೪೪೮). ಲಬ್ಬೆ : ಕ್ರಿ.ಶ. ಏಳನೆಯ ಶತಮಾನದ ಹೊತ್ತಿಗೆ ಮುಸ್ಲಿಮರು ಹೆಚ್ಚು ಸಂಖ್ಯೆಯಲ್ಲಿ ಮಲಬಾರಿನಲ್ಲಿ ನೆಲಸಿದ್ದರೆಂದು ಮಾಪ್ಪಿಳ್ಳೆಗಳಲ್ಲೂ ಲಬ್ಬೆಗಳಲ್ಲೂ ಐತಿಹ್ಯವಿದೆ (ಕಾರಿದ. ೩೨೫). [ ?./ ತಮಿ. ಲಪ್ಪೈ ; ತುಳು. ಲಬ್ಬೆ ; ತೆಲು. ಲಬ್ಬಿ]

**ಲಬ್ಬೆ₂** (ನಾ). ಕೂಗು ; ಬೊಬ್ಬೆ : ಈ ಭಯಂಕರದೃಶ್ಯವನ್ನು ನೋಡಿ ಹೌಹಾರಿ ಒಂದೇ ಸಮನೇ ಲಬ್ಬೆ ಇಡತೊಡಗಿದನು (ಪೆಪಂ. ೬೬). 'ಲಬಲಬ' ಪರಾ. [ ? ]

**ಲಭಿಸು** (ಕ್ರಿ). ಪ್ರಾಪ್ತವಾಗು; ಉಂಟಾಗು : ಕಾಲಕಾಲದಲ್ಲಿ ನೆನದಕಾರ್ಯ ಲಭಿಸುವದಕ್ಕೆ ಪ್ರತ್ಯಕ್ಷ ಪರೋಕ್ಷಗಳಲ್ಲಿ ನಿದರ್ಶನ ಉಂಟಾಗುತ್ತಿರಲು (ಕೌಗಂಧಿ. ೨೫೦-೬) ; ಸಾಹಸಂ ಲಭಿಸಿತೆಂದುಕರ್ಷಹದಿನುರಿದೆದ್ದು, ಕಾಳೆಗಂಗೊಡೆ ಮನಂಮಾಡಿ (ಪತ್ರಾಂಗ. ೬೪-೨೦೪೫). [ಲಭನ್ + — ಇಸು₂]

**ಲಭ್ಯ** (ಗು). ೧. ಹೊಂದಬಹುದಾದ ; ಪಡೆಯಬಹುದಾದ. ೨. ಉಚಿತವಾದ ; ತಕ್ಕುದಾದ. ೩. ತಿಳಿಯಲಾಗುವ ; ಗ್ರಹಿಸಲಾಗುವ. (ನಾ). ೪. ದೊರೆತುದು ; ಪ್ರಾಪ್ತಿ : ಯಾವ ಸಂಖ್ಯೆಯನೇನು ಸೊನ್ನೆಯಿಂ ಗುಣಿಸಿದರೆ ಲಭ್ಯ ಸೊನ್ನೆ (ಶಾಂತಅ. ೪೯-೯). ೫. ದೊರಕುವಂಥವನು : ನಿಶ್ಚಲವಾದ ಅಪೇಕ್ಷೆಯಿಂದ ಯತ್ನ ಮಾಡಿದರೆ ಎಂತಹ ಕನಿಷ್ಠಜೀವಕ್ಕೂ ದೇವನು ಲಭ್ಯನೆಂಬುದನ್ನು ನಾವು ಮನಗಾಣಬೇಕು (ಧರ್ಮಸಾ. ೯೫). ೬. ಅದೃಷ್ಟ : ಸಂತೋಷಪಡುವುದಕ್ಕೆ ಅವನಿಗೆ ಲಭ್ಯವಿಲ್ಲ (ಕಅಂ). [ಸಂ.]

**ಲಮಾಣಿ** 'ಲಂಬಾಡಿ' ನೋ.

**ಲಯ** (ನಾ). ೧. ಅಂಟಿಕೊಂಡಿರುವುದು ; ಅನುಸರಿಸುವುದು. ೨. ಅಡಗುವಿಕೆ ; ಗುಪ್ತವಾಗಿರುವಿಕೆ. ೩. ಹಾಳು ; ಕೇಡು ; ನಾಶ : ಯುಧಿಷ್ಠಿರಂ ಕೊಟ್ಟ ನನ್ನಿಯ ಬಲದೊಳ್ ತನಗೆ ಲಯಮಿಲ್ಲಮದನಱಿದು ಮೇಗಿಲ್ಲದ ಗೊಡ್ಡಾಟಮಾಡಲ್ ಬಗೆದು (ಪಂಪಭಾ. ೬-೪ ವ); ಈ ಹೊತ್ತಿನಲಿ ಧರ್ಮಸ್ಥಿತಿಗೆ ಲಯವಿಲ್ಲ (ಕುಮ್ಯಾಕ. ೦೬-೨). ೪. ಪ್ರಳಯ : ರಾಗರಂಜನೆಯ ಉತ್ಪತ್ತಿ ಸ್ಥಿತಿ ಲಯ ನಿನಗೆಂದಾದುವು (ಬಸವ. ೪೬೬); ಹರಿ ಹರ ನಳಿನಭವರಾರಾಜ್ಞೆಯಿಂ ಲಯ ಸೃಷ್ಟಿಗೈಯುವರು (ಗಗಶಾ. ೦೨-೨೯); ಲಯವಾದ ಮೇಲೆ ಭಯವೇನು ? (ಗಾದೆ). ೫. ತನ್ಮಯತೆ; ಲೀನವಾಗುವಿಕೆ; ತಾದಾತ್ಮ್ಯ : ತನಗೆಷ್ಟು ಲಯ ಬೇಕು ಶಿವನ ನೆನೆವಲ್ಲಿ (ಸಿದ್ಧಕೃ. ೦-೬೬); ನಾವು ಮಾಡುವ ಕೆಲಸ ಕಲೆಯಾಗಬೇಕಾದರೆ ಅದರಲ್ಲಿ ಮುಖ್ಯವಾದ ಒಂದು ವಿಶಿಷ್ಟಧರ್ಮವಿರಬೇಕು, ಅದನ್ನು ನಾವು ಲಯವೆಂದು ಕರೆಯಬಹುದು (ಶಾಹಿಕಾ. ೯). ೬. ವಿಶ್ರಮಿಸುವ ಸ್ಥಳ ; ತಂಗುದಾಣ. ೭. ಒರಗುವಿಕೆ ; ನಿದ್ರಿಸುವಿಕೆ : ಲಯವೆಂದರೆ ನಿದ್ರಬಾಹಣ (ಕೃಷ್ಣ. ೨೨-೦). ೮. ಗತಿ ; ಗಮನ : ಲಯದಿಂ ಮೆಲ್ಪಿಂ ಜೆಡಂಗಂ ಪಡೆವ ತುರಗದಿಂ (ಆದಿಪು. ೦೦-೪೫). ೯. [ಸಂಗೀತ] ತಾಳ. ತಾಳಗಳ ನಡುವೆ ಬರುವ ಸಮಾನವಾದ ಕಾಲಪ್ರಮಾಣ; ದ್ರುತ, ಮಧ್ಯಮ ಮತ್ತು ವಿಲಂಬಿತ ಎಂದು ಇವು ಮೂರು ಬಗೆ : "ಹೊತ್ತು ಕ್ರಿಯಾಪ್ರಮಾಣಂ ತಾಳಮೆನಿಕು ಸಮವೆತ್ತಲ್ಲಿ ಲಯಮೆನಿಕ್ಕು" (ಚುಂಗಿಶಾ. ೨೯-೬); ಒಂದೊತ್ತಂ ನಡೆಯಿಸುವುದದೊಂದೊಂದಱ ಲಯಕೆ ಲೆಕ್ಕ ತೆಱನಾಡುವುದೇನೆಂದೋ ಬಣ್ಣಿಸುವುದೊ ಸುರಸೌಂದರಿಯ ವಿಲಾಸವಿಭ್ರಮಭ್ರೂಲತೆಯಂ (ಆದಿಪು. ೯-೩೩); ಸಂಗೀತದ ಆಧಾರಸ್ತಂಭಗಳು ನಾದ ಮತ್ತು ಲಯ (ಕಾರಿದ. ೫೩೫). ೧೦. [ಛಂದ] ಛಂದೋಬದ್ಧವಾದ ಗಣಗಳ ನಡುವೆ ಬರುವ ಸಮಾನವಾದ ಕಾಲಪ್ರಮಾಣದ ನಡೆ : ಛಂದಸ್ಸಿನ ಜೀವಾಳ ಲಯ ; ಲಯವನ್ನು ರೂಪಿಸತಕ್ಕವು

ಗಣಗಳು (ಶಬ್ದಾರ್ಥ. ೦೮೭). ೧೧. = ಲಯಯೋಗ : ಮಂತ್ರ ಲಯ ಹಠ ರಾಜವೆಂಬ ನಾಲ್ಕು ಯೋಗಭೇದಂಗಳು (ವಿವೇಕ. ೦೨೯); 'ಯೋಗ ಮಾರ್ಗದ ಪ್ರಭೇದಗಳು ಹಠ, ಮಂತ್ರ, ಲಯ, ರಾಜ ಎಂದು ನಾಲ್ಕು ಬಗೆಯಾಗಿವೆ (ಭಾರತ. ೦೫೩). [ಸಂ.]

**ಲಯಂಗಿಡು** (ಕ್ರಿ). [ಸಂಗೀತ] ಕಾಲಪ್ರಮಾಣವು ಕೆಡು : ಲಯಂಗಿಡ ದೊಡನುಲಿವಾವು ಬೆರಲ ಕೊರಲ ನಾಲಗೆಯುಲಿಗಳ್ (ಕಾವ್ಯಸಾ. ೭೩೬ ಟೂರ್೯). [ಲಯ + ಕಿಡು (< ಕೆಡು$_1$) ]

**ಲಯಕರ್ತೃ** (ನಾ). ನಾಶವನ್ನುಂಟುಮಾಡುವವನು ; ಪ್ರಳಯಕಾರಿ: ಲಯಕರ್ತೃ ಹರನೆಂದು ನುಡಿವ ವಾದಿಗಳನನುನಯದೆ ಬಾಧಿಸುತೆ (ಅರಾಕ. ೦-೦-೬೨); ಈಶ್ವರನು ಲಯಕರ್ತೃವಾದುದರಿಂದ ಈ ರುದ್ರದೇವ ರಿಂದೊಗೆದ ಈ ಜ್ವರವು ಕಾಲಮೃತ್ಯುರೂಪವಾಗಿ ಒಪ್ಪುತ್ತದೆ (ಸಕಪ್ರ. ೬೦). [ಸಂ.]

**ಲಯಕರ್ಮಿ** (ನಾ). ಹಾಳುಮಾಡುವವನು ; ನಾಶಗೊಳಿಸುವವನು : ಕಾಣ್, ಗಿರಿಜೆ . . . ಕುಂಭಕರ್ಣಮಹೋಗ್ರಸಂಗ್ರಾಮಮಂ. ಪ್ರಿಯಂ ಲಯಮೂರ್ತಿಗೆನಗಿವಂ ಲಯಕರ್ಮಿ (ಶ್ರೀರಾಮಾ. ೬೭೯-೨೨). [ ಸಂ. ಲಯಕರ್ಮಿನ್ ]

**ಲಯಕಾಲ** (ನಾ). ಪ್ರಳಯಕಾಲ : ನಿನ್ನಂ ಹಿಡಿಂಬಾಂತಕಂ ಲಯ ಕಾಲಾಂತಕನಂತೆ ಕೊಲ್ಲದಿರಂ (ಗದಾಯು. ೪-೬೬); ಮಾಧವನ ಸೂತ್ರದ ಯಂತ್ರವಿದು ಲಯಕಾಲ ನಮಗೆಂದ (ಕುಮಾರವ್ಯಾ. ೦೬-೨೨). [ಸಂ.]

**ಲಯಕೃತಾಂತ** (ನಾ). ಪ್ರಳಯಕಾಲದ ಯಮ : ಕುಂಭಕರ್ಣ ಸ್ತೋಮವೆನಲದೆ ಲಯಕೃತಾಂತನ ಕ್ರೂರಪರಿವಾರ (ಕುಮಾಭಿ. ೨-೦೩). [ಸಂ.]

**ಲಯಗತಿ** (ನಾ). ೧. ಒಳ್ಳೆಯ ನಡೆಗೆ,–ಗಮನ : ತರದೊಳುಡುಗಿರ್ದ ಬಾಲಂ ಕೊರಲುನ್ನತವಕ್ಷಮೆಸೆವ ಲಯಗತಿ ಶುಭದಂ (ಅಶ್ವಶಾ. ೩-೩೪). ೨. ಹಾಡುಗಾರಿಕೆಯ ಲಯ : ಕ್ರೀಡಾಸರಸಿಯೊಳಳಿಗಳ್ ಪಾಡುವ ಲಯಗತಿಗೆ ಕೃತಕಗಿರಿಯೊಳ್ ನವಿಲೆಳ್ದಾಡುವುದಂ ಪಥಿಕರ್ ನಡೆ ನೋಡುವರ್ (ವರ್ಧಮಾ. ೨-೨೨). [ಸಂ.]

**ಲಯಗ್ರಾಹಿ** (ನಾ). [ಛಂದ] ಒಂದು ಅಕ್ಷರವೃತ್ತದ ಹೆಸರು; 'ಭಜಸನಭಜಸನಭಯ' ಎಂಬ ಗಣವಿನ್ಯಾಸವಿದ್ದು ೧೦, ೧೮ ಮತ್ತು ೨೬ನೆಯ ಅಕ್ಷರಗಳ ಸ್ಥಾನವಲ್ಲಿ ದ್ವಿತೀಯಾಕ್ಷರಪ್ರಾಸ ಪುನರಾವರ್ತಿಸುತ್ತದೆ : ವ್ಯೋಮಂ ನಭೋಕಾಶವಿಹಾಯಸ್ಸ್ವಯಂಗಳ್ ಕಾಮೊಂದಿರಲ್ಕಾಗಂಭೋಜನೇತ್ರೆ ನಾಮಂ ಲಯಗ್ರಾಹಿಯೆಂದಾಯ್ತು (ಛಂದೋಂಬು. ೨-೦೨೪). [ ಸಂ. ಲಯಗ್ರಾಹಿನ್ ]

**ಲಯತ್ರಯ** (ನಾ). [ಸಂಗೀತ] ಸಂಗೀತ, ನಾಟ್ಯಗಳಲ್ಲಿ ಮತ್ತು ವಾದ್ಯಗಳನ್ನು ನುಡಿಸುವಲ್ಲಿ ಬರುವ ದ್ರುತ, ವಿಲಂಬಿತ ಮತ್ತು ಮಧ್ಯಮವೆಂಬ ಮೂರು ಲಯಗಳು : ಹೃದ್ಯವಾದ್ಯವಿಶೇಷಂಗಳೊಳ್ . . . ದ್ರುತವಿಲಂಬಿತಮಧ್ಯಮವೆಂಬ ಲಯತ್ರಯದೊಳಂ . . . ನೆಱೆದು (ಅನಪು. ೫-೩೨ ಪು). [ಸಂ.]

**ಲಯದೂರ** (ನಾ). ನಾಶವಿಲ್ಲದವನು ; ಪ್ರಳಯಕ್ಕೆ ದೂರವಾದವನು: ಲಯದೂರಂಗೆ ಲಯಾನ್ವಿತರ್ ಸತತ . . . ತೊಣೆಯೆ ಪೇಳ್ (ವೃಷಭ. ೩೭-೭೯). [ಸಂ.]

**ಲಯನ** (ನಾ). ೧. ಅಂಟಿಕೊಂಡಿರುವುದು ; ಹೊಂದಿಕೊಂಡಿರುವುದು. ೨. ಒರಗಿಕೊಳ್ಳುವಿಕೆ ; ವಿಶ್ರಾಂತಿ. ೩. ವಿಶ್ರಮಿಸುವ ಸ್ಥಳ : ತಂಗುದಾಣ. [ಸಂ.]

**ಲಯಬದ್ಧ** (ಗು). ೧. ಲಯಕ್ಕೆ ಹೊಂದಿಕೊಂಡಿರುವ : ಅದು ಲಯಬದ್ಧ ಆವಿಷ್ಕಾರ ಅಥವಾ ಅಭಿವ್ಯಕ್ತಿ (ಶಿಲ್ಪಕಾ. ೦೦೩). (ನಾ). ೨. ಲಯಕ್ಕೆ ಹೊಂದಿಕೊಂಡಿರುವುದು : ಸಂಗೀತರಚನೆಗಳು ಒಂದು ರಾಗದ ಕೆಲವು ಅಂಶಗಳನ್ನು ಲಯಬದ್ಧವಾಗಿ ತೋರುತ್ತವೆ (ಸಂಗೀತ. ೨). [ಸಂ.]

**ಲಯಮಿತ್ತು** (ನಾ). ಪ್ರಳಯಕಾಲದ ಮೃತ್ಯು : ಲಯಮಿತ್ತು ಮೊಗ ನೆಗಹಿದನೊ ಮದದುಬ್ಬಿನಲಿ (ಕೂರಣ. ೫-೬-೨೦). [ ಲಯ + ಮಿತ್ತು (<ಮೃತ್ಯು) ]

**ಲಯಮೂರ್ತಿ** (ನಾ). ಪ್ರಳಯವನ್ನುಂಟುಮಾಡುವವನು : ಶಿವ : ಕಾಣ್, ಗಿರಿಜೆ . . . ಕುಂಭಕರ್ಣಮಹೋಗ್ರಸಂಗ್ರಾಮಮಂ. ಪ್ರಿಯಂ ಲಯಮೂರ್ತಿಗೆನಗಿವಂ ಲಯಕರ್ಮಿ (ಶ್ರೀರಾಮಾ. ೬೭೯-೨೨). [ಸಂ.]

**ಲಯಯೋಗ** (ನಾ). [ಯೋಗ] ಮಂತ್ರಯೋಗ, ಹಠಯೋಗ, ರಾಜಯೋಗ ಮತ್ತು ಲಯಯೋಗಗಳೆಂಬ ನಾಲ್ಕು ವಿಧವಾದ ಯೋಗಗಳಲ್ಲಿ ಒಂದು ; ಸಾಂಪ್ರದಾಯಿಕವಾದ ಯೋಗಸಾಧನೆ ಗಳಲ್ಲಿ ಮನಸ್ಸನ್ನು ಲಯಗೊಳಿಸುವಿಕೆ ; ಮನಸ್ಸು ಮತ್ತು ಪ್ರಾಣ ವಾಯುಗಳು ಪರಸ್ಪರ ಲೀನವಾಗುವುದು : ಮಂತ್ರಯೋಗ ಹಠಯೋಗ ಲಯಯೋಗ ಜ್ಞಾನಯೋಗ ಇವು ಮೊದಲಾದ ಎಲ್ಲ ಯೋಗ ವನಱಿದು (ಕನ್ನಡ. ೦೦೮-೨) ; ಈಡಾ ಪಿಂಗಳೆಯಲ್ಲಿ ತುಂಬಿ ಸೂಸುವ ಹಂಸರೂಪವಾದ ಪ್ರಕೃತಿಪ್ರಾಣವಾಯುವನು ಸೋಹಂಭಾವದಿಂದೆ . . . ಮನೋಮಾರುತಂಗಳೊಳಗೂಡಿ ಲಯಿಸುವುದೆ ಲಯಯೋಗ (ಮಿಶ್ರಂಠ. ೨೦೩-೫೩). [ಸಂ.]

**ಲಯಯೋಗಿ** (ನಾ). ಲಯಯೋಗವನ್ನು ಆಚರಿಸುವವನು : ಲಯ ಯೋಗಿಗಳ ರೀತಿ ಬೇರೆ, ಇವರು ಅಲ್ಪತೃಪ್ತರಲ್ಲ (ಶಾಹಿತ. ೦೦). [ಸಂ, ಲಯಯೋಗಿನ್]

**ಲಯವಡಿಸು** (ಕ್ರಿ). ಪ್ರಳಯವನ್ನುಂಟುಮಾಡು : ನಯನಯುಗದಿಂ ಜಗವ ಪೊರೆದು, ನಿಟಿಲಾಕ್ಷಿಯಿಂ ಲಯವಡಿಸುವುದದೇನು ಶಿವಯೋಗಲೀಲೆ? (ಮಂಕುತಿ. ೬೦೩). [ ಲಯವಡು + – ಇಸು$_3$ ]

**ಲಯವಡು** (ಕ್ರಿ). ನಾಶವಾಗು ; ಪ್ರಳಯವಾಗು : ‹ ಲಯವಡಿಸು ಪರಾ. [ ಲಯ + ಪಡು$_1$ ]

**ಲಯವಾದ್ಯ** (ನಾ). [ಸಂಗೀತ] ಲಯಕ್ಕಾಗಿ ಬಳಸುವ ವಾದ್ಯ : "ಭೂಮಿದುಂದುಭಿ" ಎಂಬ ಲಯವಾದ್ಯವನ್ನು ಅವರು ಸೃಷ್ಟಿಸಿಕೊಂಡ ರೆಂದು ತಿಳಿದು ಬಂದಿದೆ (ಸಂಗೀತಂ. ೨೨). [ಸಂ.]

**ಲಯವಿನ್ಯಾಸ** (ನಾ). [ಸಂಗೀತ] ಲಯದ ಕ್ರಮ, –ಗತಿ : ಈ ತೊಡಕಾದ ತಾಳದಲ್ಲಿ ಪಲ್ಲವಿಯನ್ನು ಹಾಡುವ ಯಾವ ಗಾಯಕನಿಗೇ ಆಗಲಿ ಲಯವಿನ್ಯಾಸದಲ್ಲಿ ಮಹತ್ತರ ಪ್ರತಿಭೆಯಿರಲೇ ಬೇಕು (ಸಂಗೀತ. ೭). [ಸಂ.]

**ಲಯವಿಹೀನ** (ನಾ). ನಾಶವಿಲ್ಲದವನು ; ಚ್ಯುತಿಯಿಲ್ಲದವನು : ಜಯ ಜಗತ್ರಯನಾಥ . . . ಲಯವಿಹೀನ ಮಹೇಶ (ಕುಮಾರ. ೬-೯೩). [ಸಂ.]

**ಲಯಸಮಯ** (ನಾ). ಪ್ರಳಯಕಾಲ : "ಲಯಸಮಯಂ . . . ಮಹಾ ಪ್ರಳಯಮೆಂಬುದದು ಸಂವರ್ತಂ" (ಶಬ್ದಕೋ. ೦೭-೦೭) ; ಲಯಸಮಯಂ ಜಗಕ್ಕೆ ಪೆಜತಾವುದೊ ರಾವಣನುಗ್ರಕೋಪವಹ್ನಿಯೆ ವಿಲಯಾನಿಲಂ ಮುಳಿಸೆ ಕಲ್ಪವಿರಾಮಂ (ಶಂರಾಮಾ. ೦೪-೦೬೦) : ಲಯಸಮಯತಾಂಡವಪ್ರಳಯ ನಾಟ್ಯಾಕುಂಕಿಗಳ್ ಕುದಿದು ಘೀಂಕರಿಸಿ ಗಜಗದಿಸಿದುವು ಚಕಿತ ದಿಗುದಂತಿ ! (ಶ್ರೀರಾಮಾ. ೬೬೬-೪೩೯). [ಸಂ.]

**ಲಯಾಂತಕ** (ಗು). ೧. ಪ್ರಳಯಕಾಲದ : ಲಯಾಂತಕಘೋಷಭೀಷಣಂ ಪುರದೊಳಗುಣ್ಮಿದತ್ತು ಭಯವಿಹ್ವಲಪೌರಕೃತಂ ಮಹಾರುತಂ (ಸಂಧ್ಯಾಪು. ೪-೯೫). (ನಾ). ೨. ಪ್ರಳಯಕಾಲದ ಯಮ : ಪೊವಟ್ಟ ಲಯಾಂತಕ ತ್ರಿಶೂಲೋಪಮ ಭೀಷಣಭ್ರುಕುಟಿ ಮುನ್ನಮ ರೌದ್ರಗದಾ ಯುಧಂಬರಂ ಪೋಪ ಭುಜಾರ್ಗಳಂ ರಿಪುಗಳ ಗ್ರಹ ಮಾದುದು

ಭೀಮಸೇನನಾ (ಕಂಕಥಾ. ೭-೩). [ಸಂ.]

**ಲಯಾಗ್ನಿ** (ನಾ). ಪ್ರಳಯಾಗ್ನಿ : ಕಾನನದುರ್ಗಕ್ಕೆ ಮಹಾದವಾಗ್ನಿ ಜಲದುರ್ಗಕ್ಕುರ್ವಿದೌರ್ವಾಗ್ನಿ ಧಾನ್ವನದುರ್ಗಕ್ಕೆ ಬೃಹಲ್ಲಯಾಗ್ನಿಯೆನೆ. ... ನೃಪಸುತಂ ವಿಕ್ರಾಂತಮಂ ತೋಱಿದಂ (ಧನ್ಯಕು. ೫-೫೦); ಮಗ್ನನಾದನೆ ಕಪೀಂದ್ರಂ ಮಹಾಸುರಲಯಾಗ್ನಿಯೊಳ್ ? (ಶ್ರೀರಾಮಾ. ೬೯೦-೬೬). [ಸಂ.]

**ಲಯಿಸು** (ಕ್ರಿ). ೧. ನಾಶಮಾಡು : ಪಾಣಿಬಲ ಮುನ್ನೂಱುಪದ್ಮವ . . . . ಲಯಿಸಿದನಂದು ರಘುರಾಮ (ಕೌಶಿರಾ. ೩೭ ಸೂಚನ) ; ಇನಿತಿಲ್ಲದಂತೆ ಲಯಿಸುವ ತೇಜನನು . . . ಒರವೆನಾಲಿಸು (ಶರಶೋ. ೫-೦೬-೦). ೨. ಲೀನವಾಗು ; ಮಗ್ನವಾಗು ; ತಲ್ಲೀನವಾಗು : ಅಜ್ಞಾನವೆಂಬ ಬೀಜದಲ್ಲಿ ಮನಸ್ಸು ಲಯಿಸುತ್ತದೆ (ಶಾರದ. ೨೩೭) : ಈ ಚಿತ್ತವೃತ್ತಿಗಳು ಅಥವಾ ಭಾವಗಳು ಆತನ ಆತ್ಮ ಅಥವಾ ಹೃದಯಸಮುದ್ರದಲ್ಲಿದ್ದು ಅಲ್ಲೇ ಲಯಿಸಿ ಹೋಗುವ ತರಂಗಗಳು (ಕಾವ್ಯಕು. ೮೦).
[ಲಯ + – ಇಸು₃]

**ಲಯೋತ್ತರ** (ನಾ). [ಛಂದ] ಮಾತ್ರಾ — ವರ್ಣ ಮಿಶ್ರವೃತ್ತಗಳಲ್ಲಿ ಒಂದು ; ಇದರಲ್ಲಿ ಕೆಲವು ಪ್ರಭೇದಗಳು ಇವೆ. ಉತ್ಪಲವೃತ್ತ ಮತ್ತು ರಥೋದ್ಧತವೃತ್ತದ ಪಾದಗಳನ್ನು ಬೆರಸಿ ಇದರ ಪ್ರಭೇದಗಳನ್ನು ಕಲ್ಪಿಸಲಾಗುತ್ತದೆ. ಜಯಕೀರ್ತಿಯು ಲಯೋತ್ತರವೃತ್ತದ ಮೊದಲನೆಯ ಪ್ರಭೇದದಲ್ಲಿ ಉತ್ಪಲದ ಒಂದು ಪಾದ+ರಥೋದ್ಧತದ ಒಂದು ಪಾದ ಬರುತ್ತದೆ. ಉದಾಹರಣೆಗೆ — ೨ ಗಲ/ನಗಣ, ಗ+ಜಗಣ, ೨ ಗಲ/ನಗಣ, ಗ. [ಸಂ.]

**ಲರಿಲರಿ** (ನಾ). ಒಂದು ಅನುಕರಣ ಶಬ್ದ : ತಿಂದರು ಶವಗಳ ಲರಿಲರಿ ಕಡಿದು (ಶಾಂತಪು. ೭೦-೬).

**ಲಲಂತಿಕೆ** (ನಾ). ಒಂದು ಬಗೆಯ ಸರ : ಉದ್ದವಾಗಿರುವ ಕಂಠಹಾರ: "ಏಕಾವಳಿ ಸರಿಗೆ ಸುವರ್ಣಕಳಿತಂ ಲಂಬನಂ ಲಲಂತಿಕೆ ಮುಕ್ತಾನೀಕಂ. . . ನಕ್ಷತ್ರಮಾಲೆಯೆನಿಕುಂ ಪೆಸರಿಂ" (ಚನ್ನಕೋ. ೬೫-೯). [ಸಂ. ಲಲಂತಿಕಾ]

**ಲಲನ** (ನಾ). ೧. ಆಟವಾಡುವುದು; ವಿನೋದವಾಡುವುದು ; ಕ್ರೀಡೆ. ೨. ನಾಲಗೆಯನ್ನು ಚಾಚುವುದು.— ಜೋಲುಬಿಡುವುದು. ೩. ಗಂಡ ; ಪತಿ : ಎನ್ನ ಲಲನನಂ ಪಶ್ಚಿಮಸಮುದ್ರಕ್ಕೆಳಿಪಿದಿರ್ ನೀವೆನುತ ದಿನಸತಿ ಸಲೆ ಕರಂ ಮುಗಿದಿಹವೊಲು ಕರಂ ಮುಗಿದವಬ್ಜಾಳಿ (ಧಸಪು. ೧೧-೯೫) ; ಲಲನನಂ ತೋಱಿದು ಬಹುಬುದ್ಧಿಯಿಂದಿರ್ಪಳುಜ್ವಲ ಕುಂಭದೊಳು ಸೂಳೆ (ಶೀಕ್ಷಕು. ೪-೨೦-೨೨). [ಸಂ.]

**ಲಲನೆ, ಲಳನೆ** (ನಾ). ೧. ಪೆಂಗಸು ; ಹೆಣ್ಣು ; ಸ್ತ್ರೀ : "ಪ್ರಮದೆ ನಿತಂಬಿನಿ . . . ಮನೋರಮೆ ಲಲನೆ ಕಾಂತೆ ಎಂದಿಂತು ಮತ್ತಮಬಲಾ ವಿಶೇಷ [ಮುಂ೧ ತಾಮು]ಕ್ಕುಂ" (ಚನ್ನಕೋ. ೫೨-೨) ; ಲಲನಾಮುಖೇಂದು ಲಾವಣ್ಯಲೀಲೆಯುಂ ಪಡೆವ ಬಣ್ಣದಿಂ ಕಂಪಿಂದೇನಲೆದುದೊ ಪೈತಿಕದಂತಿರೆ ಕುಸುಮಸೌರಭಮಂ ಕಸ್ತೂರಿಯಂ (ಅದಿಪು. ೧೧-೦೨೯) ; ಲಲನೆಯ ಬಾಸೆಯ ಕರ್ಪಿಂ ಗೆಲೆವಂದುದೊ ವಿಷ್ಣು ಗರ್ಭದೊಳ್ಮಲಸಲೊಡಂ (ಅಜಿಂಪು. ೦೨-೬೯); ಈ ಲಲನೆಯ ಸೌಂದರ್ಯಂ ಸೋಲಿಸಿದುದು ಗಡ ಮದೀಯ ಮನಮಂ (ರಾಜಶೇ. ೭-೬೦). ೨. ಹೆಂಡತಿ ; ಪತ್ನಿ : ಪುರುಷನ ಒಲವಿಲ್ಲದ ಲಲನೆಯಂತೆ ಆಗಿದ್ದೆನಯ್ಯಾ (ಬಸವ. ೨೬೯); ಮಲುಹಣಂ ಕಾಮಬಾಣದಿ ನೊಂದು . . . ಲಲನೆಯಂ ಕಾಣದಲ್ಲದೆ ಉಳಿಯೆನೆಂದವಳ ಗೃಹಕೆ ಬರುತಿರಲು (ಶ್ರೀಶಿವ. ೯-೨೯). ೩. ನಾಲಗೆ. ಲಳನೆ : ೧. ಲಳನಾ ಭೂಷಣಮೀಕೆ ಭೂಷಣಾಕೆ ಭೂಪಾಲಕ್ಷ್ಮಿಯಂ ಮಾಟ್ಪುದು (ಜಗು. ೧೧-೧೦೩); ಲಳ[ನಾಕಾಂ. ಲ]ನೆ ಮನೋಭವಾಂಬುದದ ಮಾಟಿಯುವೋಲ್ಪದವಿತ್ತು ವನಾಗ . . . ರತಾಂತಮಂತಲಘುತರೋಪಶಾಂತ ಘನಕಾಲದ ಲೀಲೆಯು ನಾಂತುದಾವಗಂ (ಕಾವ್ಯಗು. ೦೦-೭೯) ; ಲಳನಾಧಮ್ಮಿಲ್ಲಮಾಲಾಕುಸುಮ ಪರಿಮಳಾಮೋದಿ . . . ಸಮೀರಂ (ಧನ್ಯಕು. ೬-೦೦೬). [ಸಂ. ಲಲನಾ]

**ಲಲಾಟ** (ನಾ). ೧. ಹಣೆ ; ನೊಸಲು : "ನಿಟಿಳಂ ಭಾಳಮಳಿಕಮಱಿಗೆ ಲಲಾಟಂ" (ಚನ್ನಕೋ. ೭೦-೦೬) ; ಸಹಜಮನೋಜನ ಲಲಾಟ[ಂ] ಪಟ್ಟಂಗಟ್ಟಿದ ನೊಸಲ್ಗೆ ಲಕ್ಷಣಮನಱಿಸಲ್ವೇಡೆಂಬಂತಾದುದು (ಕಂಕಥಾ. ೨-೩೯೮); ಲಲಾಟದಲ್ಲಿ ವಿಭೂತಿಯ ಬರೆಯಲಿಕೆ ಪಾಪ ಪಲ್ಲಟವಾಗದೆ (ಬಸವ. ೭೩) ; ಲಿಖಿತ ಲಲಾಟದೊಳಿರದಿರಲೇಗೈವೆ ಎಷ್ಟು ಲಗ್ಗಾಟವ ಹೊಡೆವೆ (೩೦ಸಾಕ. ೦೭೦-೯೦). ೨. [ಕಾಮಶಾ] ಆಲಿಂಗನಗಳಲ್ಲಿ ಒಂದು ಬಗೆ : ಸ್ತ್ರೀಯ ಮುಖದಿಂ ತನ್ನ ಮುಖಮಂ ಕಂಗಳಿಗೆ ಕಂಗಳಂ ಹಣೆಗೆ ಹಣೆಯಿಂದೊತ್ತರಿಸುತ್ತ ಆಲಿಂಗನಂಗೆಯ್ವುದು ಇದು ಲಲಾಟವೆಂಬಾಲಿಂಗನ (ಕಾಮಶಾ. ೨೨೯). [ಸಂ.]

**ಲಲಾಟಕ** (ನಾ). ೧. ಹಣೆ ; ನೊಸಲು. ೨. [ಕಾಮಶಾ]ಆಲಿಂಗನಗಳಲ್ಲಿ ಒಂದು ಬಗೆ : ಮುಸುಡು ಮುಸುಡೊಳು ನೊಸಲು ನೊಸಲೊಳೆದೆಯೆದೆಯೊಳಗೆ ಉಸಿರುಸಿರೊಳೊಂದಿ ಬೇಱಿಲ್ಲದಂತೆ ಸಸಿನೆ ತಳ್ತಮರ್ದಪ್ಪಿ ದಸಿಯುಳಸಿಯನ ದೆಸೆಯೊಳಿಸುವುದು ಲಲಾಟಕಮಿದಪ್ಪುದಬಲೆ (ಶಬರ. ೭-೦೯) ; ಪುಷ್ಕರ . . . ಲಲಾಟಕವೆಂಬ ದ್ವಾದಶವಿಧಾಲಿಂಗನಂಗಳಂ (ಬಸವ. ೨೨೯). [ಸಂ.]

**ಲಲಾಟನೇತ್ರ** (ನಾ). ೧. ಹಣೆಯಲ್ಲಿರುವ ಕಣ್ಣು; ಹಣೆಗಣ್ಣು: ಮುಳಿಸು ಲಲಾಟನೇತ್ರ ಶಿಖಿ ಮೆಚ್ಚೆ ವಿನೂತರಸಪ್ರಸಾದಂ (ಕಂಕಥಾ. ೦-೨) ; ಸ್ಮರರಿಪುಲಲಾಟನೇತ್ರಸ್ಫುರದುರುಹುತವಹನಿಸೆಯ್ದು ಬೇವುತ್ತಿರ್ದಾ ಸ್ಮರನ ಪೊಗೆಯಿಂದ ಪದಿದಿರ್ದ ರತಿಯವೋಲ್ ಕಾಂತೆ ಕರಮೆ ಕಣ್ಗೆಸೆದಿರ್ದಳ್ (ಸುರಂಪು. ೯೩). ೨. ಹಣೆಯಲ್ಲಿ ಕಣ್ಣುಳ್ಳವನು; ಹಣೆಗಣ್ಣ ; ಶಿವ: ಲಲಾಟನೇತ್ರ ನಾಗಸೂತ್ರ ವಿಶ್ವಜೈತ್ರ . . . ಪಾಹಿಮಾಂ ಮಹೇಶ್ವರಾ (ಜಾರಾಕ. ೨-೩-೨೬). [ಸಂ.]

**ಲಲಾಟಪಟ್ಟ** (ನಾ). ೧. ಹಣೆ : ನಿಜಾನುಜಸಹಿತಮಿದಿರ್ವಂದು ಧರಾತಳ ನಿಷ್ಟ ಲಲಾಟಪಟ್ಟಂ ಸಾಷ್ಟಾಂಗವೆಱಗಿ ಪೊಡಮಟ್ಟು ತದೀಯಾಶೀರ್ವಾದ ಮನಾಂತು (ಕಂಕಥಾ. ೭-೫೯ ಬ) ; ಮಹೀತಳಾಶ್ಲಿಷ್ಟಲಲಾಟಪಟ್ಟನೆಱಗಿ ಪೊಡವಟ್ಟು (ಶಾಂತಿಕು. ೫-೩೦ ಬ). ೨. ಹಣೆಪಟ್ಟಿ : ಈಗಲಾದರೆ 'tourist' ಎಂಬ ಲಲಾಟಪಟ್ಟವನ್ನು ಧರಿಸಿ ಪ್ರೇಕ್ಷಕಸಮುದಾಯವನ್ನು ತುಂಬಿಕೊಂಡು ಅನೇಕ ಬಸ್ಸುಗಳು ಸಂಚರಿಸುತ್ತವೆ (ಪಂಟಿರು. ೦೦೫). ೩. ಒಂದು ಬಗೆಯ ಆಭರಣ; ಹಣೆಗೆ ಕಟ್ಟುವ ಅಲಂಕಾರದ ಪಟ್ಟಿ : ಸುಜನೈಕಮಿತ್ರ ಅಭಿಮಾನಮನ್ದರ ವಿಭವಪುರಂದರ ಸರಸ್ವತೀಗಣಲಲಾಟಪಟ್ಟ ಕನ್ನಕೈರ ದಿಶಾಪಟ್ಟ ವಾಜಿಕುಳಾಂಬರದ್ಯುಮಣಿ (ಕ್ಶಿಇ. XX, ೬೯-೦೯ ; 1107). [ಸಂ.]

**ಲಲಾಟರೇಖೆ** (ನಾ). ೧. ಆಯುಷ್ಯವನ್ನು ಸೂಚಿಸುವ ಹಣೆಯ ಮೇಲಿನ ರೇಖೆ. ೨. ಹಣೆಯ ಬರಹ ; ಅದೃಷ್ಟ : ದೊರೆಗಳು ಎನ್ನಿಸಿಕೊಂಡವರೆಲ್ಲರಿಗೂ ಈ ಭಾಗದಲ್ಲಿ ಲಲಾಟರೇಖೆಯು ಏಕರೀತಿಯಾಗಿದೆಯೋ (ಮೂಮುರಾ. ೬೨). [ಸಂ. ಲಲಾಟರೇಖಾ]

**ಲಲಾಟಲಿಖಿತ** (ನಾ). = ಲಲಾಟರೇಖೆ ೨: ಲಲಾಟಲಿಖಿತ ಬರೆದ ಬಳಿಕ ಪಲ್ಲಟವ ಮಾಡಬಾರದು (ಬಸವ. ೫೩): ಲಲಾಟಲಿಖಿತವಾದ ವಿಧಿಯಿಚ್ಛೆಯಂತೆ ನಡೆಯುವುದು ನನ್ನ ಕರ್ತವ್ಯ (ಭುಪರು. ೨೯೯). [ಸಂ.]

**ಲಲಾಟಲೋಚನ** (ನಾ). ಹಣೆಯಲ್ಲಿ ಕಣ್ಣುಳ್ಳವನು: ಹಣೆಗಣ್ಣ ; ಶಿವ: ಜಯಂತೀಮಧುಕೇಶ್ವರದೇವಲಬ್ಧವರಪ್ರಸಾದಂ ಮೃಗಮದಾಮೋದಾ ತ್ರಿಯಕ್ಷಕ್ಷಮಾಕ್ಷಸಂಭವ ಚತುರಶೀತಿನಗರಾಧಿಷ್ಠಿತ ಲಲಾಟಲೋಚನ (ಕ್ಶಿಇ.XX, ೬೬-೬; 1118); ಲಲಾಟಲೋಚನನ ಮಹಿಮೆಯ ಪೇಳು ತಿರಲಿಂದು (ಶೀಕ್ಷಕು. ೪-೫-೪೦). [ಸಂ.]

**ಲಲಾಟಶೂನ್ಯ** (ನಾ). ಹಣೆಯ ಮೇಲೆ ತನ್ನ ಧರ್ಮದ ಚಿಹ್ನೆಯನ್ನು ಧರಿಸದೆ ಇರುವವನು; ಹಾಳುಹಣೆಯುಳ್ಳವನು : (✝). [ಸಂ.]

**ಲಲಾಟಾಕ್ಷ** (ನಾ). = ಲಲಾಟಲೋಚನ : ಪಾಲಿತಾಖಿಲಸುಮನಸೇ ವಿಧುಮೌಲಿ . . . ಲಲಾಟಾಕ್ಷ ಪ್ರತಿಮ ಬಸವಾಯತೇ ಜಯತು (ಬಸವ. ೬೦-೯೯). [ಸಂ.]

**ಲಲಾಟಿಕೆ** (ನಾ). ೧. ಮುಂದಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ ; ಬೈತಲೆಮಣಿ. ೨. ಮುಂದಲೆಯಲ್ಲಿ ಧರಿಸುವ ಹೂವಿನ ಕುಚ್ಚು : "ಮಾಲೆಯಂ ಚಂಡಿಕೆಯೊಳಿಕ್ಕೆ ಪ್ರಭ್ರಷ್ಟಕಂ ಮುಂದಲೆಯ ಲಲೆವ್ಪವು ಲಲಾಟಿಕಾಖ್ಯಂ" (ಶುಂಗರಾ. ೯೬-೨೦). ೩. ಹಣೆಯ ಮೇಲೆ ಚಂದನ ಮೊದಲಾದ ಸುಗಂಧದ್ರವ್ಯಗಳಿಂದ ಇಡುವ ಗುರುತು ; ತಿಲಕ; ಬೊಟ್ಟು : "ತಿಳಕಂ ತಮಾಳಪತ್ರಂ . . . ಲಲಾಟಿಕಾ — ಈ ೬ ಬೊಟ್ಟು" (ಕರಾಯು. ೯೯-೩೯೭) ; ಅನಂಗರಚಿತಚಂದನಲಲಾಟಿಕಾ ತ್ರಿಪುಂಡ್ರನುಂ (ಕಾದಂಪೂ. ೯೦೦). [ ಸಂ. ಲಲಾಟಿಕಾ ]

**ಲಲಾಟೇಕ್ಷಣ** (ನಾ). = ಲಲಾಟಲೋಚನ : ಶಿವಲಿಂಗಾಂತಃಸ್ಥನಾದಂ ವಿಯತ್ತ್ರಿಪುರಾರಣ್ಯದವಾಗ್ನಿ ಹಂಪೆಯ ವಿರೂಪಾಕ್ಷ ಲಲಾಟೇಕ್ಷಣಂ (ಶಂಬರ. ೬ ಸೂಕ್ತ). [ಸಂ.]

**ಲಲಾಮ** (ನಾ). ೧. ಮುಂದಲೆಯ ಆಭರಣ ; ಬೈತಲೆಮಣಿ : ಆ ವತ್ಸವಿಷಯಂ . . . ಭೂಲಲನಾವದನಲಲಾಮಮೆಂಬಿನಂ ಸೊಗಯಿಸುಗುಂ (ಸುಕುಮಾ. ೧-೬೦); ಈ ಭೂಕಾಂತೆಗೆ ಲಲಾಮಮೆಂಬಂತೆ . . . ಒಪ್ಪುವುದಹಿಚ್ಛತ್ರಪುರಂ (ರಾಮಾಶ್ವ. ೩೩-೧೦). ೨. = ಲಲಾಟಿಕೆ ೩ : ಕಟಕಳ ಕಾಂಚಿಯಿಂದೆ . . . ನಿಟಿಲಂ ಲಲಾಮದಿಂ ನಿಟಿಲದಿನಾ ಲಲಾಮಮುಮಲಂಕರಿಸಿರ್ದುವೆಸುತ್ತೆ ನೋಡಿದರ್ (ಚಂದ್ರಪ್ರ. ೬-೬೭). ೩. ಗುರುತು; ಚಿಹ್ನೆ. ೪. ಬಾವುಟ ; ಪತಾಕೆ. ೫. ಬಾಲ. ೬. ಹೆಚ್ಚುಗಾರಿಕೆ; ಹಿರಿಮೆ. ೭. ಕೊಂಬು ; ಕೋಡು ; ಶೃಂಗ. ೮. ಕುದುರೆ. ೯. ಮಂಗಳಕರವಾದ ಗುರುತು; ಶುಭಲಕ್ಷಣ. ೧೦. ತಿಲಕಪ್ರಾಯವಾದುದು; ಶ್ರೇಷ್ಠವಾದುದು ; ℙ ಸಮಾಸದ ಕೊನೆಯಲ್ಲಿ ಈ ಅರ್ಥ ಬಳಕೆಯಾಗುತ್ತದೆ : ಸಕಲಕ್ಷತ್ರಕುಲಪೂಜ್ಯನಮಳಚರಿತ್ರಂ ಪ್ರೋದ್ದಾಮಸೋಮವಂಶಲಲಾಮಂ (ಕಂಜಾ. ೧-೬೦); ಗುರುಕುಲ ಲಲಾಮನಂ ಕಂಡನು (ಭಾರತಿ. ೨-೨೩). ೧೧. ಒಡೆಯ; ಸ್ವಾಮಿ : ಅಪವರ್ಗಸಂಪದ್ವಿಳಾಸಿನೀಲಲಾಮನುಂ (ಧರ್ಮಾ. ೧೧-೬೨ ವ). ೧೨. ಚೆಲುವು; ಸೌಂದರ್ಯ. ೧೩. ಸರಸ್ವತಿ. ೧೪. ಲಕ್ಷ್ಮಿ. ೧೫. ಬಸವ; ವೃಷಭ. ೧೬. ಸೂರ್ಯ. ೧೭. ಚಂದ್ರ. ೧೮. ತುದಿ; ಅಗ್ರ. ೧೯. ಕಿರಣ; ರಶ್ಮಿ. ೨೦. ಕೆಂಪುಬಣ್ಣ. ೨೧. ಅರಗು; ಅಲತಗೆ. ೨೨. ಬಿಳಿದು; ಶ್ವೇತವರ್ಣ. ೨೩. ಆಟ; ಕ್ರೀಡೆ. ೨೪. ನಾದ; ಸ್ವರ. ೨೫. ಮುಖ್ಯನಾದವನು; ಪ್ರಧಾನವ್ಯಕ್ತಿ : "ತಿಲಕದಲಿ ಹೆಮ್ಮೆಯಲಿ ಕೋಡಿನಲಿ ಮುಖ್ಯನಲಿ ಅಲತಗೆಯೊಳಾಭರಣದಲಿ ಪತಾಕೆಯಲಿ ನೀಳ್ದಲೆವ ಬಾಲದಲಿ ವಾಜಿಗಳಲಿ ಲಲಾಮವೆಂದೆಂಬ ನಿಜನಾಮಮಕ್ಕುಂ" (ಮಂಗರಾ. ೦೯೬-೩೪); "ಭಾರತಿ ಗೋಮಿನಿ ವೃಷಭ ತುಂಗ ತುರಂಗ ಪತಂಗ ಶೃಂಗ ಶೃಂಗಾರ ವಿಭೂಷಣಾಂಶು ಧವಳಾಗ್ರ ಸಲಕ್ಷಣ ವಾಳ ಕೇಳಿ ಚಂದ್ರಾರುಣ ಶ್ರೇಷ್ಠನಾದ ತಿಲಕ ಧ್ವಜಮಿಂತು ಲಲಾಮಶಬ್ದಂ" (ನಾನಾರ. ೨೭). [ಸಂ.]

**ಲಲಾಮಕ** (ನಾ). ಮುಂದಲೆಯಲ್ಲಿ ಧರಿಸುವ ಹೂವಿನ ಕುಚ್ಚು : "ಮುಂದಲೆಯ ಹೂ ಲಲಾಮಕಮೆಂಬುದು" (ಕರಾಯು. ೯೦-೩೯೯). [ಸಂ.]

**ಲಲಾಮೆ** (ನಾ). ೧. ತಿಲಕಪ್ರಾಯಳಾದವಳು; ಶ್ರೇಷ್ಠಳಾದವಳು : ಅಗಳಾತನಂತಃಪುರಸೀಮಂತಿನೀ ಲಲಾಮೆಯಪ್ಪನಂಗವುಷ್ಟ . . . ಸುಗ್ರೀವನ ಸಂತೋಷದೊಳಾದ ಮನೋರಾಗಮುಮನಪ್ಪುಕೆಯ್ಯೆ (ಕಂರಾಮಾ. ೧೦-೩೨೪). ೨. (?) : ಮಹಿಷಾಸುರನಂತೆ ಸೂಲದೊಳ್ ನೊಂದು ನರಳ್ವ ಕಳ್ಳರಿಂ ಬೊರಂತಿಯಂತೆ ದಕ್ಕಿನೊಳಿರ್ದ ಪಂದಲೆಗಳಿಂ ಬಂದಿಕಾಬನಂತೆ ತೆಜಪುವಾರ್ದು ಓಡಿವ ಶಾಕಿನಿಯರಿಂ ಮೃಗಯಾಪತಿಯಂತೆ ಕೀಲಾಲಜಲ್ಲದೊಳೋಲಾಡುವ ಲಲಾಮೆಯರಿಂ (?) ಸೋಂಬನಂ ಮೆಚ್ಚಿ ಬೇಟೆರ್ಗೆ ಪೋದ ಸೂಳೆಯಂತುಯ್ಯಲಾಡುವ ರಣದೇವತೆಯರಿಂದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೯ ಕನ್ನಡ ೪). [<ಸಂ. ಲಲಾಮಾ]

**ಲಲಿತ, ಲಳಿತ** (ಗು). ೧. ವಿನೋದದ ; ಲೀಲೆಯ. ೨. ಚೆಲುವಾದ ; ಸುಂದರವಾದ ; ಮನೋಹರವಾದ : ಲಲಿತಮುಖಸರಸಿಜಂ . . . ನಿಶ್ಚಳತನು ನಡೆ ನೋಡೆ ಭರತರಾಜಂ ಸೋಲ್ತಂ (ಆದಿಪು. ೦೪-೦೦೫) ; ಲಲಿತಾನನಾಂಬುಜಮಲರ್ದೆಸೆದುದು ಮಂದಹಾಸದಿಂ ಮುರಹರನಾ (ಜಗನ್ನಾ. ೩-೩೨); ಜಲರಸಾನಲಮರುದ್ಗಗನರವಿಸೋಮಾತ್ಮಲಲಿತಕಾಯಂ (ಶ್ರೀಕರಾ. ೨-೧). ೩. ಕೋಮಲವಾದ; ಮೃದುವಾದ : ಲಲಿತಕಿಸಲಯಮೆ ಬಾಸಂ ಮಲರಕ್ಷತಮಳಿರುತಿ ಶ್ರುತಿ ಸ್ವರಮಾಗಲ್ ಸಲೆ ಕಂತುವಿನ ಪುರೋಹಿತಕುಲಮೆನಿಸಿತು ಬನದ ಬಾಲಚೂತವ್ರಾತಂ (ಸುಕುಮಾ. ೨-೬೩) ; ಲಲಿತಮೃಣಾಳದಿಂ ತಣಿದು ತಣ್ಬುಳಿನಸ್ಥಳದೊಳ್ನಿಜೇಚ್ಛೆಯಿಂ ನಲಿವ ಮರಾಳದೊಳ್ನಡೆಯನು . . . ಕಲಲೆಂದು ಬರ್ಪುದು ತದೀಯ ಬನಕ್ಕಬಲಾಕದಂಬಕಂ (ಶಾಂತೀಶ್ವ. ೦೩-೮೯೯). (ನಾ). ೪. ಚೇಷ್ಟೆ ; ಆಟ ; ಕ್ರೀಡೆ. ೫. ಸ್ತ್ರೀಯ ಶೃಂಗಾರಭಾವಗಳಲ್ಲಿ ಒಂದು : "ಹೇಳಾ ವಿಳಾಸ ವಿಭ್ರಮ ಲೀಳಾ ಬಿಬ್ಬೋಕ ಲಲಿತ ಹಾವಾಖ್ಯಂಗಳ್ . .. ಶೃಂಗಾರಭಾವಸಂಭೂತಂಗಳ್" (ಮನ್ಮಥವಿಜಯ. ೬೬-೨೨) : "ಹೇಳಾ, ವಿಳಾಸಃ ... ಲಲಿತಂ, ವಿಭ್ರಮಃ- ಇವು ಮೊದಲಾದುವು ಸ್ತ್ರೀಯರ ಭಾವಂಗಳ್" (ಕರಾಯು. ೦೫-೮೯). ೬. ಮನೋಹರವಾದುದು ; ಆಕರ್ಷಕವಾದುದು : ಬೀಸುವ ಧವಳ ಚಾಮರಂಗಳ್ . . . ಎಸೆದುವತಿಲಲಿತಂಗಳ್ (ಧರ್ಮಾ. ೫-೦೭). ೭. ಚೆಲುವು ; ಸೌಂದರ್ಯ. ೮. ಮೃದುತನ ; ನಯ ; ಮಾರ್ದವತೆ. ೯. ಸರಳತೆ ; ಮುಗ್ಧತೆ. ೧೦. ಲಲಿತಾಗಮದ ನಾಲ್ಕು ಭೇದಗಳಲ್ಲಿ ಒಂದು : ಲಲಿತ ಲಲಿತೋತ್ತರ ಕೌಮಾರತಂತ್ರ ವಿಘ್ನೇಶ್ವರಾಗಮವೆಂದು ಲಲಿತಾಗಮದ ನಾಲ್ಕು ಭೇದಂಗಳು (ಶಿವತ. ೬೦). ೧೧. ಒಂದು ಬಗೆಯ ಸಸ್ಯ : "ಹಸ್ಯಗಣೆ ಲಲಿತವಕ್ಕು" (ಮಂಗರಾ. ೩೭-೦೯). ೧೨. [ನಾಟ್ಯ] ಮೂವತ್ತು ಬಗೆಯ ನೃತ್ತ ಹಸ್ತಗಳಲ್ಲಿ ಒಂದು ; "ಅಲಪಲ್ಲವ ಹಸ್ತಗಳೆರಡನ್ನು ತಲೆಯ ಹತ್ತಿರ ಮೇಲೆ ಹಿಡಿಯುವುದು" (ಶಾಸ್ತ್ರರಂ. ಗದ್ಯಾನುವಾದ. ೨೫೫) : ಲಲಿತಮೆನಿಪ್ಪೀ ಹಸ್ತಂ ನೆಲೆಗೊಳ್ಗುಂ ಭರತದಲ್ಲಿ ಮೂವತ್ತೊಂದುಂ (ಶಾಸ್ತ್ರರಂ. ೨-೪೪). ೧೩. ನೃತ್ಯದ ಮೂವತ್ತಾರು ಬಗೆಯ ಸಂಚಾರೀಭಾವದೃಷ್ಟಿಗಳಲ್ಲಿ ಒಂದು ; "ಮುಗುಳ್ನಗೆಯಿಂದ ಕೂಡಿ ಅನುರಾಗ ಹೆಚ್ಚುವಂತೆ ಹುಬ್ಬು ಹಾರಿಸುತ್ತಾ ಕಡೆಗಣ್ಣಿನಿಂದ ನೆಲವನ್ನು ನೋಡುವುದು ; ವಿ – ಹೆಂಗಸರ ವಿಲಾಸವನ್ನು ಅಭಿನಯಿಸುವಾಗ" (ಶಾಸ್ತ್ರರಂ. ೨೬೦ ಗದ್ಯಾನುವಾದ) : ನೆಲನಂ ನೋಡುವಪಾಂಗಂ ಚಲಿಸುವ ಭ್ರೂ ಮಂ[ದ]ಹಾಸಮುಂಗಜನುರ್ಬಂ ಗೆಲೆ ಮಾಳ್ಪ ನೋಟವೊಪ್ಪಲ್ ಜಲಜಾಕ್ಷೀ ಲಲಿತಮೆಂಬ ಪೆಸರಂ ಪಡೆಗುಂ (ಶಾಸ್ತ್ರರಂ. ೩-೩೪). ೧೪. [ಛಂದ] ಒಂದು ಅಕ್ಷರ ವೃತ್ತದ ಹೆಸರು ; ℙ ಇದರಲ್ಲಿ ಎರಡು ಬಗೆಗಳಿವೆ. 'ನನಭನಜನನಯ' ಎಂಬ ವಿನ್ಯಾಸದ್ದು ಒಂದು. 'ಭಜಸನ ಭಜಸನಭಯ' ಎಂಬ ವಿನ್ಯಾಸವಿದ್ದು, ೧೦, ೧೮ನೆಯ ಅಕ್ಷರಗಳು ಪ್ರಾಸಾಕ್ಷರದ ಆವೃತ್ತಿಯಾಗಿರುವುದು ಮತ್ತೊಂದು : ಲಲಿತಾಕ್ಷರ ಪದರಚನೆಗಳಿಂದಂ ಪರೆದುದು ಲಲಿತಂ (ಛಂದೋಂಬು. ೨-೦೯೦). ೩. ೧೪ : ಹರಿಣೀ ಮತ್ತೇಭ ವಿಕ್ರೀಡಿತ ಲಲಿತ ಮಯೂರಾನ್ವಿತಂ . . . ನಭಮಂ ಪೋಲ್ತು ಚೆಲ್ವಾಯ್ತರಣ್ಯಂ (ರಾಜಶೇ. ೫-೬೫). ೧೫. ರಗಳೆ ಛಂದಸ್ಸಿನಲ್ಲಿ ಒಂದು ಬಗೆ : ಪಾದವೊಂದಕ್ಕೆ ಐದು ಮಾತ್ರೆಯ ಗಣವು ನಾಲ್ಕಿರಲು ಲಲಿತರಗಳೆಯಾಗುವುದು (ಛಂದೋ. ೯೯).

೧೮. [ಸಂಗೀತ] ಒಂದು ರಾಗದ ಹೆಸರು: ನಾದರಾಮಕ್ರಿಯಾ . . . ಗೌಲ. ಲಲಿತ, ಗುರ್ಜರೀ ಗುಂಡಕ್ರಿಯಾ, ಮಲಹರಿಯೆಂಬುದು. ಆದ್ಯದೇಶಿಕಾರಾಗ (ಕಕುಕ್ರ. ೦೨೯). ಲಳಿತ : ೧. ಲಳಿತ ಲತಾಂಗಭಂಗಿಯು ಬೆಡಂಗಿಯರಿಕ್ಕುವ ಚಾಮರಗಳ ಸಂಚಳನದ ಚಿತ್ರಕಾಂತಿ ನಿಮಿರುತ್ತಿರಲ್ (ಶಾಂತೀಶ್ವ. ೦೩-೦೨). ೨. ಲಳಿತನಿಜರೂಪವಿಭ್ರಮವಿಳಾಸಮಂ ಡರ್ದಿಸೆಯೆ ಬಂದರ್ . . . ಜವ್ವನೆಯರ್ (ಜಗಂ. ೪-೦೨೦); ಲಳಿತತರಂಗಂ ಒಳ್ನುಡಿ ಲ್ಲಸತ್ಪುಳಿನಸ್ಥಳ ಸತ್ಕಟೀತಟಂ . . . ಎನಿಪ್ಪ ವಿಯತ್ತರಂಗಿಣೀಲಳನೆ (ರಕಾ. ೭-೦೦೭). ೫. ಲಳಿತತಮಾಳಲತಾಕೋಮಳೆ (ಪಂಪ. ೦-೭೯); ಲಳಿತ ವಿಳಾಸ ವಿಭ್ರಮಾ ಕಳಾವತಿಯರ್ (ಪುಶ್ಚ. ೭-೩೭). ೧೭. [ನಾಟ್ಯ] ಒಂದು ಬಗೆಯ ನೃತ್ಯ : ಅಳಿನಿನದದ ಮದಕೋಕಿಳಕಳನಿನದದ ಜತಿಯೊಳ್ಘನಮುಂ ನೆಗಟ್ಟಿನೆಗಂ ಲಳಿತಮನೇನಾಡಿಸಿದನೊ ಮಳಯಮಾನಿಳನರ್ತಕಂ ಲತಾನರ್ತಕಿಯುಂ (ಆದಿಪು. ೦೦-೯೦). [ಸಂ.]

**ಲಲಿತಕಲೆ** (ನಾ). ಮನಸ್ಸಿಗೆ ಆನಂದವನ್ನುಂಟುಮಾಡುವ ಕಾವ್ಯ, ಸಂಗೀತ, ಚಿತ್ರ, ಶಿಲ್ಪ ಮುಂತಾದ ಕಲೆಗಳು : ಲಲಿತಕಲೆಗಳಲ್ಲಿ ಈ ತತ್ವದ ಅನುಷ್ಠಾನವನ್ನು ಕಾಣುತ್ತೇವೆ (ರಾಕದ. ೯೦೯) ; ವೈವಿಧ್ಯದ ಅಧ್ಯಯನ ಯೋಜನೆಗಳನ್ನು ಅವರು ಸಲಹೆ ಮಾಡಿರುವರು. ಅವುಗಳಲ್ಲಿ . . . ಲಲಿತಕಲೆ . . . ಇವು ಮುಖ್ಯವಾದುವು (ಶಿಕ್ಷದ. ೦೯೩). [ಸಂ. ಲಲಿತಕಲಾ]

**ಲಲಿತತೆ**, ಲಳಿತತೆ (ನಾ). ಲಾವಣ್ಯ ; ಸೊಬಗು: 'ಲಲಿತತೆವೆಱು' ಪರಾ. **ಲಳಿತತೆ :** ಶ್ರೀಯುಂ ಶ್ರೀಕಲ್ಲಿನಾಥಂ ಕುಡುಗೆ . . . ಗೌರೀಜಾಯಾಕಾಯಾನುಷಂಗಾಕಳಿತಲಳಿತತಾಪ್ರೋಲ್ಲಸದ್ವಾಮಭಾಗಂ (ಎಇ. XXI. ೦೨-೩; 1260). [ಸಂ. ಲಲಿತತಾ]

**ಲಲಿತತೆವೆಱು** (ಕ್ರಿ). ಸೊಬಗನ್ನು ಪಡೆ ; ಲಾವಣ್ಯವನ್ನು ಹೊಂದು: ಲಲಿತತೆವೆತ್ತು ಕೊಂಕಿ ಪರಿದೊಪ್ಪದೊಳೊಂಬರೆ ಪುರ್ವು ಚಾಪಮುಂ . . . ಪೋಲ್ತಿರೆ (ರಮಾನಪ್ಪ. ೭-೦೯೭). [ಲಲಿತತೆ+ವೆಱು]

**ಲಲಿತಪದ** (ನಾ). ೧. ಮೃದುವಾದ ಶಬ್ದ : ಕೋಮಲವಾದ ಪದ: ಲಲಿತಪದಂ ಪ್ರಸನ್ನಕವಿತಾಗುಣವಿಲ್ಲದೆ ಮಾಣ್ದು ಪೇಟ್ದ ಬೆಳ್ಗಳ ಕೃತಿಬಂಧಮುಂ ಬರೆ[ಪ]ಕಾಱರ ಕೈಗಳ ಕೇಡು ನುಣ್ಣನಪ್ಪಳಕದ ಕೇಡು (ಕುಶಬಾ. ೦-೦೨). ೨. [ಛಂದ] ಒಂದು ಅಕ್ಷರವೃತ್ತದ ಹೆಸರು ; ಪಾದವೊಂದಕ್ಕೆ ಹನ್ನೆರಡು ಅಕ್ಷರಗಳಿರುವ, ಜಗತೀಛಂದಸ್ಸಿನ ಒಂದು ವೃತ್ತ : ಕುಲಿಶಧರಾರ್ಕಯುಗಂಗಳ ಮುಂದಾ ಜಲಗಣಮೊಪ್ಪಿರೆ ಬಂದು ವಿರಾಮಂ ಕುಲಗಿರಿಯೊಳ್ನಿಲೆ ನಾಕಿಗನಿಂದು ಲಲಿತಪದಂ ಪೆಸರಿಂ ಲಲಿತಾಂಗೀ (ಛಂದೋಂಬು. ೨-೦೩೩). [ಸಂ.]

**ಲಲಿತಭ್ರೂಕ** (ನಾ). ಮನೋಹರವಾದ ಹುಬ್ಬುಗಳುಳ್ಳವನು; ಸುಂದರವಾದ ಭ್ರೂವಿನ್ಯಾಸವುಳ್ಳವನು : ಶ್ರೀ ಕಮಳಲೋಚನಂ . . . ಲಲಿತಭ್ರೂಕಂ . . . ಊರ್ದುತಿರ್ದಂ ಕೊಳಲಂ (ಜಗಂ. ೩-೦). [ಸಂ.]

**ಲಲಿತಸ್ತರಣ** (ನಾ). ಮೃದುವಾದ ತಲ್ಪ,—ಹಾಸಿಗೆ : ಚಿತ್ರಾವಳಿಯ ಮೇಲ್ಕಟ್ಟನಲಿ ಲಲಿತಸ್ತರಣಮಧ್ಯದಲಿ ಹೊಳೆಹೊಳೆವ ನವರತ್ನಭೂಷಣ ಕಳಿತಕಾಯನ ಕಂಡು ರೋಷಪ್ರಳಯಭೈರವರೂಪನೊದೆದನು ವಾಮಪಾದದಲಿ (ಕುವ್ಯಾಗ. ೯-೨೮). [ಸಂ.]

**ಲಲಿತಾಂಗ**, ಲಳಿತಾಂಗ (ನಾ). ೧. ಸುಂದರವಾದ ದೇಹ ; ಚೆಲುವಾದ ಶರೀರ : ಲಲಿತಾಂಗ ಕನಕಾವದಾತಮಲರ್ಗಣ್ ನೀಲೋತ್ಪಲಚ್ಛಾಯೆ (ಅಜಪು. ೨-೯೩) ; ಲಲಿತಾಂಗಂ ಲತೆ ಕೆಂದಳಂ ತಳಿರಲರ್ ಕಣ್ಗಳ್ ಕುರುಳ್ ಭೃಂಗಸಂಕುಲಂ . . . ಎನಲ್ಕೆ ನಿಂದು . . . ಕಣ್ಗೊಪ್ಪಿದರ್ ಕಾಂತೆಯರ್ (ಶಾಂತೀಶ್ವ. ೯-೦೨) ; ರಾಜಲಕ್ಷಣದ ಚೆಲ್ವಿಡಿದ ಲಲಿತಾಂಗದಿಂ ಕುಶಲವರ್ಕುಶಲವರ್ಧನರಾಗಿ ರಂಜಿಸಿದರು (ಕೈಎಪಾ. ೦೯-೩೦). ೨. ಕೋಮಲವಾದ ಶರೀರ : ಲಲಿತಾಂಗದ ಬೆಮರ್ವನಿಗಳನಲೆದಾಱೆಪ ಕೀರಕುಳದೆಱಂಕೆಯ ಕಡುದಣ್ಣೆಲರ್ಗಳಸಿ ಪಕ್ಕಿ ಸೋಯದೆ ಕೆಲಬರ್ ಪಾಮರಿಯರವರ ಬರವನೆ ಪಾರ್ವರ್ (ಕುಶ್ಚ. ೨-೦೯). ೩. ರೂಪವಂತ ; ಚೆಲುವ : ಲಲಿತಾಂಗ [ನಂಗ]ವಿಷಯಾಧೀಶಂ ಸುರಸ್ತ್ರೀಜನೋದಾತ್ತಪ್ರಾರ್ಥಿತಯೌವನಂ (ಶಾಂತೀ. ೩-೦೩೩). ಲಳಿತಾಂಗ : ೧. ಲಳಿತಾಂಗದ್ಯೋತಿಯಿಂ ಭೂವಳಯಮನೊಳಕೊಂಡಿರ್ದ್ದಳ್ (ಎಇ. XX. ೯೯-೨೯ ; 1076). [ಸಂ.]

**ಲಲಿತಾಂಗಿ** (ನಾ). ಸುಂದರವಾದ ದೇಹವುಳ್ಳವಳು ; ಚೆಲುವೆ : ಲಲಿತಾಂಗಿ ಮೆಲ್ಲಮೆಲ್ಲನೆ ನಳಿತೋಳಂ ಬೀಸೆ ಮಿಸುಗುವಸಿಯುಂಗುರ್ಗಳ ಸುಣ್ಬೆಳಗು ನಿಮಿರ್ದಸೆದುವು (ಕಾದಂಪೂ. ೩೦೭) ; ಲಲಿತಾಂಗಿಯರ ಕರತಳದ ವಿಮಲಕಲಶೋದಕವನೊಲಿದೀಂಟುತಿರ್ದೊಡಂ ಮನ ತಣಿಯದು (ಕೈಎಪಾ. ೩-೦೦). [ಸಂ. ಲಲಿತಾಂಗೀ]

**ಲಲಿತಾಕಾರ**. ಲಳಿತಾಕಾರ (ನಾ). ಸುಂದರವಾದ ಆಕಾರ; ಮನೋಹರವಾದ ರೂಪ : ಲಲಿತಾಕಾರನುದೀಯೆ ನಾಡೆ ನಯನಕ್ಕಾನಂದಮಂ (ಪಂಚಾಮಾ. ೭-೦೬೨) ; ಲಲಿತಾಕಾರದ ರಾಜಪುತ್ರತತಿಯಿಂದ . . . ಒಪ್ಪಿದುರ್ದೊಡ್ಡೋಲಗಂ (ಕುಸುಮಾ. ೩-೮೭). **ಲಳಿತಾಕಾರ :** ಲಳಿತಾಕಾರಂ ವಿಭವಂ ಬೆಳಗುವ ಲಾವಣ್ಯಮೆಸೆಯೆ ಬಂದರ್ . . . ಕೋಮಲೆಯರ್ (ಜಗಂ. ೪-೦೨೯). [ಸಂ.]

**ಲಲಿತೆ**, ಲಳಿತೆ (ನಾ). ೧. ಹೆಂಗಸು ; ಸ್ತ್ರೀ. ೨. ಸ್ವೇಚ್ಛಾಚಾರಿಯಾದ ಹೆಂಗಸು ; ಸ್ವೈರಿಣಿ., ೩. ವಿಲಾಸಿನಿ ; ಸುಂದರಿ : ಲಲಿತೆಯ ಮುಖೇಂದುಬಿಂಬದ ಬೆಳಗಿನೊಳಿರದಗಿದು ಪೆಱತೆಗೆದು ತಮೋಬಳವಿರ್ದುದೆಂಬಿನಂ ಕಣ್ಗೊಳಿಸುಗುಂ ಮಕರಿಯಾ ವಿನೀಳಕಬರೀಭಾರಂ (ಸುಕುಮಾ. ೯-೩೯). ೪. ದುರ್ಗೆಯ ಒಂದು ಹೆಸರು. ೫. [ಕಾವ್ಯಮೀ] ಒಂದು ಅನುಪ್ರಾಸದ ಹೆಸರು : ಸೌಷ್ಠವಗುಣಸಮನ್ವಿತಂ ಲಲಿತವೃತ್ತಿಯಿಂ ಲಲಿತೆಯೆಂಬ ವೃತ್ತಿಯುದಕ್ಕುಂ (ಕಾವ್ಯಾವ. ೩೬೪). ೬. ಒಂದು ಅಲಂಕಾರದ ಹೆಸರು : ಪ್ರಸ್ತುತ ಪೇಳ್ದಸದೆ ಪ್ರತಿಬಿಂಬರೂಪದ ಪ್ರಸ್ತುತವ ವರ್ಣಿಪೆ ಲಲಿತೆಯು (ಕುವಲ. ೦೨೯). ೭. = ಲಲಿತ ೧೫ : ಇಪ್ಪತ್ತು ಮಾತ್ರೆ ಲಲಿತೆಗೆ ಬಪ್ಪುದು ಪದಿನಾಱು ಮಾತ್ರೆ ಮುಂದಾನಿಲಕಂ ತಪ್ಪದುವುತ್ಸಾಹಕ್ಕಱಿಯೊಪ್ಪುವುದಿಪ್ಪತ್ತುನಾಲ್ಕು ಮಾತ್ರೆಗಳಬಲೇ (ಛಂದೋಂಬು. ೩-೨೨೨ ಅವತರ). ೮. [ಸಂಗೀತ] ಒಂದು ರಾಗದ ಹೆಸರು : ಕೌಶಿಕ ವೇಳಾವಳಿ . . . ಲಲಿತೆ . . . ಕಯುಸೋದರಿಯೆಂಬ ಮೂವತ್ತುನಾಲ್ಕುರಾಗಂಗಳೀ ಭಾಷಾಂಗದಿಂದ ಪುಟ್ಟಿದವು (ಶಿವೇಶ. ೨೩೩). **ಲಳಿತೆ :** ೮. ಚಾರುವೀಣೆಯು ಬಾಜಿಸುತ್ತ ಲಳಿತೆಯು ಪಾಡೆ (ಗುರುಚಾ. ೭-೩೦). [ಸಂ. ಲಲಿತಾ]

**ಲಲಿತೋಚ್ಚರಿತ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು : ಸ್ಫುರಿತ . . . ಲಲಿತೋಚ್ಚರಿತ [ಶಾಕಾಂ. ಚ್ಯುದ] . . . ಕೋಮಲವೆಂಬ ಯಿಪ್ಪತ್ತೆರಡು ಶ್ರುತಿಗಮಕಂಗಳು (ಶಿವೇಶ. ೧೯೭). [ಸಂ.]

**ಲಲಿತೋತ್ತರ** (ನಾ). ಲಲಿತಾಗಮದ ನಾಲ್ಕುಭೇದಗಳಲ್ಲಿ ಒಂದು : ಲಲಿತ ಲಲಿತೋತ್ತರ ಕೌಮಾರತಂತ್ರ ವಿಘ್ನೇಶ್ವರಾಗಮವೆಂದು ಲಲಿತಾಗಮದ ನಾಲ್ಕು ಭೇದಂಗಳು (ಶಿವೇಶ. ೬೬). [ಸಂ.]

**ಲಲ್ಲಯಿಸು**, ಲಲ್ಲೈಸು (ಕ್ರಿ). ಮುದ್ದಿಸು ; ರಮಿಸು ; ಪ್ರೀತಿಸು : ಎರೆವ ಪುರಲ್ದು ಲಲ್ಲಯಿಪ ಕಾಲ್ವಿಡಿವೆಂಬುದನಿಂಬುಕೆಯ್ದು ಳಂಕರಣ ವಿಳಾಸಮಂ ಮೆಱೆವ ಮೇಳಿಸುವಂದಿನ ರೂಪು ಶಾಸನಂಬರೆದುದು (ಆದಿಪು. ೩-೯೩) ; ನುಡಿದು ಕಾತರಿಸದೆ ಕೂಡೆ ಲಲ್ಲಯಿಸದೆ . . . ಬದ್ದೆಯನೊಲಿಪನಾವಂ (ಸುಕುಮಾ. ೭-೦೩) ; ಮೆಲ್ಲನೆ ಮೇಳಿಸಿ ಮರ್ದಿಸಿ ಲಲ್ಲಯಿಸುವ ಪೆಱರನಟ್ಟೆ ದೂಱುವ . . . ಮಱಸಿನುಲ್ಲಿ ಜನೋಕ್ತಿಯನೆ

ಕೇಳಲಾಗದು ಚತುರಂ (ರರಾಸಮ್ಮ. ೬-೨೦೨). **ಲಲ್ಲೈಸು :** ಕುಡದಿರ್ ಪುರಿಗಣೆಯುನೆನಿತು ಲಲ್ಲೈಸಿದೊಡಂ (ಸಂಪಕಾ. ೯-೭೪) ; ಕಡುಮುಳಿದ ನಲ್ಲನಂ ಕಾಲ್ವಿಡಿದುಂ ಲಲ್ಲೈಸಿ . . . ತಿಳಿಪಲ್ (ಶೃಂಗಾರ. ೨-೪) ; ಮೆಲ್ಲದೆ ರಾಗವ ಹರಿಯಿಸಿ ನಿಂದು ಲಲ್ಲೈಸುವನೀ ಧರಣಿಯನಿಂದು (ಪಲ್ಸ. ೭೭-೨).
[ ಲಲ್ಲೆ + – ಇಸು₃ ]

**ಲಲ್ಲೆ** (ನಾ). ೧. ಮುದ್ದು : ಪ್ರೀತಿ : "ಲಲ್ಲೆಯೆಂದಕ್ಕು ಮುದ್ದಿಂಗೆ ಪೆಸರು" (ಕಬ್ಬಿಗ. ೭೬) ; ಲಾಲಿಸಿ ಕೇಳ್ವರ ಕಿವಿಗೋಪವಳಾಡಿದ ಲಲ್ಲೆಯೆನೆ ಅನುರಾಗದಿ ಲಿಖಿಸುವೆನು (ಜಯಕಾ. ೧-೨೩) ; ಮಾತಿನಲ್ಲಿ ಲಲ್ಲೆ[ಪಾಠಾಂ. ಲೀಲೆ] ಮನದಲ್ಲಿ ಘಾತಕತನವುಳ್ಳವನ ಕನಿಷ್ಠನೆಂಬರು (ಅಖಂಡೇ. ೯೯-೨೩). ೨. ವಿನೋದ ; ಸರಸ : ಲಲಿತಾಂಗನಂ ಮನಂಗೊಳಿಸುವರಿಚ್ಚೆ ಕಾರ್ತನದ ಲಲ್ಲೆಯ ಸಗ್ಗದ ದೇಸೆಕಾರ್ತಿಯರ್ (ಅದಿಪು. ೨-೬೦) ; ತಮ್ಮ ಲಲ್ಲೆ ಕುಣಿತಗಳಲ್ಲಿ, ಪುಷ್ಪಾಪಚಯದಲ್ಲಿ, ಜಲಕ್ರೀಡೆಯಲ್ಲಿ, ಯಾರನ್ನು ಲೆಕ್ಕಿಸದೆ . . . ನುಗ್ಗುತ್ತಾರೆ (ಕಾವ್ಯಸ. ೬೨).

ಲಲ್ಲೆಯಾಡು = ಮುದ್ದಾಡು : ಬಾಲಸೂರ್ಯನ ಬಂಗಾರ ಕಿರಣಗಳು ಆಗಲೇ ಜಾಜ—ಗುಲಾಬಿ ಬಳ್ಳಿಗಳ ಮೇಲೆಲ್ಲ ಲಲ್ಲೆಯಾಡುತ್ತಲಿದ್ದವು (ಹಾಡುಹು. ೧೧೨). ಲಲ್ಲೆ ಹಾಕು = ವಿನೋದಪಡು ; ಸಂತೋಷಪಡು : ಕಂಡವರ ಮಕ್ಕಳನ್ನು ಭಾವಿಗೆ ತಳ್ಳಿ ಅವು ತೇಲಿ ಮುಳುಗುವುದನ್ನು ನೋಡಿ ಲಲ್ಲೆ ಹಾಕುವ ಗುಣವಿಲ್ಲ (ಕಾಂಪೂಕ. ೧೧). **ಲಲ್ಲೆಹೊಡೆ** = ಸರಸವಾಗಿ ಮಾತನಾಡು ; ಚಕ್ಕಂದವಾಡು : ಅವಳೂ ಅವನೊಡನೆ ಲಲ್ಲೆ ಹೊಡೆಯುತ್ತಿದ್ದಳು (ಮಹಾತ್ಮಾ. ೧೯); ಓಣಿಯಲ್ಲಿಯೋ ಪಡಸಾಲೆಯಲ್ಲಿಯೋ . . . ನಿಂತು ಅವರು ಲಲ್ಲೆ ಹೊಡೆಯುತ್ತಿದ್ದರು (ಕ್ಷಪರು. ೩೭).
[ದೇ. ೩ ತುಳು. ಲಲ್ಲೆ. ಲಲ್ಲ; ತೆಲು. ಲಲಿ]

**ಲಲ್ಲೆಗಣ್ಣು** (ನಾ). ಪ್ರೀತಿಯನ್ನು ಸೂಸುವ ಕಣ್ಣು : ನಿಡಿಗಣ್ಣ ಹುಲ್ಲೆಗಣ್ಣವರೆಸಳ್ಗಣ್ಣ ಲಲ್ಲೆಗಣ್ಣವರ್ ನಗೆನೋಟದ ತೋರ ಧಮ್ಮಿಲ್ಲೆ ಯರೆಯ್ದಿ ತೊಗ್ಗಿನಲಿ (ಮೋಹತ. ೨೯-೧೨).
[ ಲಲ್ಲೆ + ಕಣ್ಣು (< ಕಣ್) ]

**ಲಲ್ಲೆಗರೆ** ' ಲಲ್ಲೆಗಱೆ ' ನೋ.

**ಲಲ್ಲೆಗಱೆ**, ಲಲ್ಲೆಗರೆ (ಕ್ರಿ). ೧. ಪ್ರೀತಿಯ ಮಾತನ್ನು ಆಡು ; ರಮಿಸು : ಮುದ್ದಿಸು : ವಲ್ಲಭನಿದ್ದಾನೆಂದು ಲಲ್ಲೆಗಱೆಯ ಬೇಡ (ಸಿದ್ಧವ. ೪. ೧೧೨-೭) ; ರುಗುಮಿಣಿ ಮುಸಿಯೆ ಪುಂಡರೀಕಾಕ್ಷನಾಕೆಯ ಚರಣದಲ್ಲಿ ನೊಸಲಂ ಚಾಚಿ ಲಲ್ಲೆಗಱೆಯೆ (ಸಾಳ್ವಭಾ. ೨೬-೧೧) ; ರನ್ನಗಲ್ಲೆಡೆಯ ಪಲ್ಲ ನಲ್ವಾಸಿನೊಳ್ ಚೆಲ್ಲದಿಂ ನಲ್ಲಳ್ವೆರಸು ನಿಲ್ಲದೆ ಕುಳ್ಳಿರ್ದು ಮೆಲ್ಲಮೆಲ್ಲನೆ ಲಲ್ಲೆಗಱೆವ (ರಾಮಾಶ್ವ. ೭೬-೨). **ಲಲ್ಲೆಗರೆ :** ೧. "ನಾನೇ ಚಿನ್ನಮರಿ" ಎಂದು ಪ್ರೈದಿ ಬುಸೋವ್‌ಕಿನ್ ಲಲ್ಲೆಗರೆದನು (ಕ್ಷಪರು. ೩೩೮). ೨. ಸರಸವಾಡು ; ಚಕ್ಕಂದವಾಡು : ಕೊಂಚ ಸಲುಗೆ ಕೊಟ್ಟೆಯೋ ಲಲ್ಲೆಗರೆಯೋಕೆ ಬರುತ್ತವೆ (ಹೂವುವ. ೦೨೦). [ಲಲ್ಲೆ + ಕಱೆ₁]

**ಲಲ್ಲೆಗಾರಿಕೆ** (ನಾ). ಪ್ರೀತಿಯನ್ನು ತೋರಿಸುವುದು ; ಪ್ರಣಯ : ಮಟಚೀತಿ – ಲಲ್ಲೆಗಾರಿಕೆಯನಾಡಿದಪನೆಂಬುದು (ಕಾಕಿ. ೧೮).
[ಲಲ್ಲೆ + – ಕಾರ₁ (< – ಕಾಱ) + – ಇಕೆ]

**ಲಲ್ಲೆಗಾರ್ತಿ** (ನಾ). ಸರಸವಾಡುವವಳು ; ಚೆಲ್ಲಾಟದ ಹೆಣ್ಣು: ಬೆಳತಿಗೆ ಗಣ್ಣ ಬೆಡಂಗಿ ಲೋಲಾಪಾಂಗದ ಲಲ್ಲೆಗಾರ್ತಿ ಕುಡುವುರ್ವುಗಳ ಕುಶಲೆ (ಉದ್ಭಟ. ೩-೩೩ ೪). [ಲಲ್ಲೆ + – ಕಾಱ + – ತಿ₁ (< – ಇತ್ತಿ) ]

**ಲಲ್ಲೆಗೆಯ್**, ಲಲ್ಲೆಗೈ (ಕ್ರಿ). = ಲಲ್ಲೆಗಱೆ ೧ : ಲಲ್ಲೆಗೆಯ್ದು ಲಲ್ಲೆಗೆ ಮಱೆದಿರ್ದೊಡೆ (ಸಂಪಕಾ. ೯-೧೧೭) ; ಪಕ್ಕವಂ ಬಿರ್ಚಿ ಲಲ್ಲೆಗೆಯ್ದು[ಪಾಠಾಂ. ಗಱೆದ]ತ್ತು ಪಾರಿವಂ ಪಾರಿವದೊಳ್ (ಗಿರಿ. ೨-೫೨) ಲಲ್ಲೆಗೆಯ್ಯುತ್ತೆ ದೈನ್ಯಂದೋಱೆ (ಶಬ್ದಾ. ೭-೩೦). **ಲಲ್ಲೆಗೈ :** ಗಲ್ಲ ಮನೊಲ್ದೊಲಿದೆತ್ತಿ ಮುದ್ದಿಪಳ್ ಮಾಣವೆ ಲಲ್ಲೆಗೈವಳ್ (ಉದ್ಭಟ. ೩-೦೨೩); ಲಲ್ಲೆಗೈದೊಲವನಾಣ್ಮಂಗೆ ಕಾಣಿಸಿದಳು (ತ್ರಿಬಿಶಾ. ೧೧-೨೨); ಬೀಸು ವಿಱಿಸಲು ಸೂಸುವ ಸೋನೆಯಂ ಸೈರಿಸದೆ ಪಕ್ಕಿಯೊಳೆ ಪಟ್ಟು, ಕಣಸಂ ಲಲ್ಲೆಗೈದು (ಗಾಪಾಕ್ಷ. ೩-೨೭). [ಲಲ್ಲೆ + ಕೆಯ್₁]

**ಲಲ್ಲೆಗೈ** ' ಲಲ್ಲೆಗೆಯ್ ' ನೋ.

**ಲಲ್ಲೆನುಡಿ** (ನಾ). ಪ್ರೀತಿಯ ಮಾತು ; ಮುದ್ದುಮಾತು ; ಸರಸ ಸಲ್ಲಾಪ : ಗದ್ಗದತ್ವಂ ಪಡೆದಿರ್ಪ ಲಲ್ಲೆನುಡಿ ಲೀಲೆಯನೀಯೆ (ಉದ್ಭಟ. ೩-೧೧೭) ; ಎಸೆವಂಗಪರಿಮಳಂಗಳ ನಾಸಿಕದಿನೀಂಟಿ . . . ಕರ್ಣಂಗಳೊಳು ಲಲ್ಲೆನುಡಿಯನಿದುಗೇಳಿ . . . ಸುರತಪನೆಸಗಲು (ಶಾಪಶಂ. ೩-೩೦) ; ಸವಿ ಲಲ್ಲೆನುಡಿಗೆ ಲವಲವಿಪ ನಾಲಗೆ ಕೊಟಕೆ ಕಾತರಿಸಿ ಮಿಡುಮಿಡುಕಲೊಸರ್ವ ನಾಣೆಡೆ (ಚಿದಪು. ೦೯-೩೨). [ಲಲ್ಲೆ + ನುಡಿ₂]

**ಲಲ್ಲೆಮಾತು** ' ಲಲ್ಲೆವಾತು ' ನೋ.

**ಲಲ್ಲೆವಾತು**, ಲಲ್ಲೆಮಾತು (ನಾ). = ಲಲ್ಲೆನುಡಿ : ಲಲ್ಲೆವಾತಿಂ ಗಲ್ಲವ ಪಿಡಿದು ಪುಷ್ಪಪರಿಮಳದಂತೆ ನಾ ನೀನುಭಯವಿಲ್ಲದಂತೆ ಕೂಡೆನ್ನ ಪ್ರಾಣೇಶನೇ (ಶಿಸಪ. ೨-೧); ಹಲವು ಪರಿಯಲಿ ಲಲ್ಲೆವಾತಿನಲಲದು ರಾಮನ ಕೋಮಲಾಂಘ್ರಿಯೊಳೆಳುಹಿದಳು ಮೂರ್ಧ್ನಿಯನು (ತೊರೆರಾ. ೩-೮-೩೩); ಜತೆಗೊಂಡು ಸಾರ್ದು ಇನಿವೊಱ್ಱಂ ಲಲ್ಲೆವಾತಿನ ಸೊಲ್ಲ ಸೊಗದೊಳಿರ್ದು (ರಾಜಾಶ್ವ. ೬೦-೨೭). **ಲಲ್ಲೆಮಾತು :** ಲೇಸು ಹಾಸು ನೋಟವಾಭರಣ ಆಲಿಂಗನ ವಸ್ತ್ರ ಚುಂಬನವಾರೋಗಣೆ ಲಲ್ಲೆಮಾತು ತಾಂಬೂಲ ಲವಲವಿಕೆಯೆ ಅನುಲೇಪನವೆನಗೆ (ಮಹಾದೇ. ೪. ೦೦೩-೨೬೭). [ಲಲ್ಲೆ + ಮಾತು₁]

**ಲಲ್ಲೈಸು** ' ಲಲ್ಲಯಿಸು ' ನೋ.

**ಲವ** (ನಾ). ೧. ಕೀಳುವುದು. ೨. ಕಟಾವು. ೩. ಸಂಗ್ರಹಿಸುವುದು; ಒಟ್ಟುಗೂಡಿಸುವುದು. ೪. ಅಲ್ಪ; ಸ್ವಲ್ಪ; ಲೇಶ : " ಅಣು ಸೂಕ್ಷ್ಮಂ ಲೇಶಂ ತುಟಿ ಕಣಂ ಲವಂ . . . ಅಣಮೆ ಕಿಱಿದಪ್ಪುದೆಮ ತಾಂ" (ವಸ್ತುಕೋ. ೦೦೭-೩೬); ಬೆದಬೆದ ಬೆಂದ ಜೀವಕ್ಕಂತಾಸುಂ ಕ್ಷಯೋಪಶಮ ನಿಮಿತ್ತದಿಂ ಸದ್ಧರ್ಮಾಮೃತ ಲವಂ ದೊರೆಕೊಂಡುದಪ್ಪೊಡೆ (ಸುಕುಮಾ. ೩-೩೩ ವ); ತನ್ನಲ್ಲಿ ರಾಜಸಂ ತಾಮಸಂ ಸಾತ್ತ್ವಿಕಗುಣಂ ಲವಮಿಲ್ಲದಂತೆ ಲಯವಪ್ಪವು (ಲಶಿಶಂ. ೩೯-೮). ೫. ನೀರಿನ ತುಂತುರು,–ಹನಿ : ನಗೇಂದ್ರೋಪಕಂಠಂಗಳೊಳ್ ನಿರ್ಝರವಂ ಮಾಡುತ್ತುಮುದ್ಯಲ್ಲವ ನಿವಹವೆ ದೇವೇಂದ್ರಲೋಕಕ್ಕಮುತ್ಕಾದರವಂ ಮಾಡುತ್ತುಮೇನಾಱಿಸಿದುದೊ ದಿವಿಜವ್ರಾತವಂ ಗಂಧತೋಯಂ (ಆದಿಪು. ೬-೦೦೩). ' ಲವೋದ್ಗಮ ' ಪರಾ. ೬. ಸಣ್ಣ ತುಣುಕು,–ಭಾಗ,– ತುಂಡು. ೭. ಉಣ್ಣೆ; ತುಪ್ಪುಳು. ೮. ಆಟ; ಕೇಳಿ. ೯. ಸ್ವಲ್ಪಕಾಲದ ಅವಧಿ ; ಅತ್ಯಲ್ಪಕಾಲ : ಕಾಲಮದು . . . ತೃಟಿ ಲವಮುಖ್ಯಕಾಲಂಗಳಿಂದೆ ತಾನ ಖಿಲಮಾಗೆಸೆದಿರ್ಪುದು (ಅರಾಶ. ೩-೯-೭); ಒಮ್ಮೆ ಕಣ್ಣೆವೆಯನಿಕ್ಕುವನಿತರ ನಾಲ್ಕು ಭಾಗೆಯೊಳಗೊಂದು ಭಾಗವೇ ತೃಟಿಯೆನಿಸುಗುಮದೇ ಎರಡಾಗಲೊಂದು ಲವವೆನಿಸುಗು (ವಿವೇಕ. ೨೭೦). ೧೦. ಶ್ರೀರಾಮನ ಅವಳಿ ಮಕ್ಕಳಲ್ಲಿ ಒಬ್ಬ: ಲವನ ಬಲಕ್ಕೆ ರಾಘವಬಲಂ ಪೆಱಪಿಂಗೆ ಕಡಂಗಿ ರಾಘವಂ ಲವನೊಳಿದಿರ್ಚೆ . . . ಅವನಾಹವದೊಳಿದಿರ್ಚಿ ಜೀವಿಸುವವಂ ಲವನಂ ಜವನಂ ಮಹೀಭುಜಂ (ಹಂರಾಮಾ. ೦೬-೦೦); ಕಂಡನರ್ಚಿತ ಸುವಾಜಿಯಂ ವೀರಲವನು (ತ್ರಿಬಿಶಾ. ೨೦-೩). ೧೧. ಒಂದು ಬಗೆಯ ಪಕ್ಷಿ; ಲಾವಕ್ಕಿ; ಪುರಲೆಹಕ್ಕಿ. ೧೨. ಲವಂಗ. ೧೩. ಒಂದು ಬಗೆಯ ಸುವಾಸನೆಯ ಬೀಜ: ಜಾಯಿಕಾಯಿ. ೧೪. ಒಂದು ಬಗೆಯ ಮೂಲಿಕೆ; ಲಾವಂಚದ ಬೇರು. ೧೫. [ಕಾವ್ಯಮೀ] ಒಂದು ಕಾವ್ಯಾಲಂಕಾರ ; ಲವ ರೂಪ ವಿಕೃತವಂ ಮುಚ್ಚುವುದು ಲವಂ ರಾಜಸುತೆಯನೀಕ್ಷಿಸಿ ಮೆಯ್ವೋ

ಉವ ಪುಳಕವುನಟುವರ್ಗ೯ಂತು ವಿಟ್ಠಂ ವನದತುಳ ಶೀತಪವನನಿನೆಂದಂ (ಉದಯಾ. ೪೪).

ಲವಲವ₁ (ದ್ವಿರುಕ್ತಿ) : ವ್ಯುತ್ಕ್ರ ತಾಂ ಬಂದು . . . ನಿತ್ಯ ನಿನ್ನಸುವ ಲವಲವ ಪೀರುತಲಿ ದೀರ್ಘಹತ್ಯೆಯಲಿ ಹರುಷಿಪಳೊ (ಪುಂಕುಶ. ೦೮೦).

**ಲವಲೇಶ** = ಸ್ವಲ್ಪ ; ತೀರ ಅಲ್ಪ ; ಕೊಂಚ : ಲವಕುಶಶಾತ ಲಂಕಾಧೀಶಸುಹಾರ ಲವಲೇಶದೋಷವಿದೂರ (ಕಕಸಾಂ. ೭೦-೭೦) ; ಲವಲೇಶವಾದರೂ ಹೊಟ್ಟೆಯ ಕಿಚ್ಚಿನ ಕಿಡಿ ಕಾರದಂಥ ಶೀತಲರು (ಬಂಶಾಕ. ೨೨-೯೬). [ಸಂ.]

**ಲವಂ** (ಅ). ಸ್ವಲ್ಪವೂ : ಅದರ್ಕೆ ಲವಂ ಲವಂ ಬೆರ್ಚದೆ . . . ಲಕ್ಷ್ಮಣನ ಧನುವಂ ಮುಟಿದಂ (ರಾಮಾಶ್ವ. ೦೩೯-೦೭). [ಸಂ.]

**ಲವಂಗ** (ನಾ). ೧. ಒಂದು ಬಗೆಯ ಮರ ಮತ್ತು ಅದರಲ್ಲಿ ಬಿಡುವ ಸುವಾಸನೆಯುಳ್ಳ ಒಂದು ಸಂಬಾರಪದಾರ್ಥ ; ದೇವಕುಸುಮ : ಲವಂಗಂ ನಾಗೋರ್ವೀರುಹಕುಸುಮಮಲ್ಲಿಂ ಮೆಟಿಸ್ತು ಸೈಂಧವ ಬೆಲ್ಲಂ . . . ಕೂಡಿ (ಲೋಕೋಪ. ೬-೩೪) ; ಅಲುಂಗ ಲವಂಗ[ಪಾಠಾಂ. ವಿಳಂಗ]ಗಳ ಸೊಂಪೊಗೆವ ಸಕಲ ಸುರದ್ರುಮಾಳಿಯನು (ತೊರರಾ. ೫-೪-೭) ; ಶುಂಠಿ, ಹಿಪ್ಪಲಿ, ಮೆಣಸು . . . ಬೆಳ್ಳುಳ್ಳಿ, ಲವಂಗ, ಅರಿಸಿನ . . . ಇವಿಷ್ಟನ್ನೂ ಸಮಭಾಗವಾಗಿ ಬಿಸಿನೀರಿಂದರೆದು ಕೊಡಲು ಶೀತಜ್ವರ ಪರಿಹಾರವಕ್ಕುಂ (ಸಕವೈ. ೭೩). ೨. ದಾಲಚಿನ್ನಿ: 'ಲವಂಗಚೆಕ್ಕೆ', 'ಲವಂಗಪಟ್ಟೆ' ಪರಾ. [ಸಂ.]

**ಲವಂಗಚೂರು** (ನಾ). ಲವಂಗದ ಆಕಾರಕ್ಕೆ ಕತ್ತರಿಸಿ, ಬೇಯಿಸಿ ಒಣಗಿಸಿದ ಒಂದು ಬಗೆಯ ಅಡಕೆ : ಚತುರ್ಭಾಗ, ಕೊರಪ್ಪ, ಲವಂಗಚೂರು, ಮೋಡಿ, ಅಣ್ಣಾವಾರ, ದೇಶಾವಾರ ಎಂದು ಬೇರೆ ಬೇರೆ ರಾಶಿಗಳನ್ನು ಮಾಡುತ್ತಾರೆ (ಕೃಷಿಕ್ರ. ೦೩೨). [ಲವಂಗ + ಚೂರು₃]

**ಲವಂಗಚೆಕ್ಕೆ** (ನಾ). ಸಂಬಾರವಸ್ತುವಾಗಿ ಬಳಸುವ, ಸುವಾಸನೆಯಿಂದ ಕೂಡಿದ ಒಂದು ಬಗೆಯ ಮರದ ತೊಗಟೆ ; ದಾಲ್ಚಿನ್ನಿ : ಲವಂಗ ಚೆಕ್ಕೆ, ದಾಲ್ಚಿನ್ನಿ, ಕನ್‌ಕಟ್ಟು (ವೈಶಿಗ. ೨೦-೩೯೨).

[ ಲವಂಗ + ಚೆಕ್ಕೆ (<ಸೆಕ್ಕೆ₁) ]

**ಲವಂಗತಿಗುಡು** (ನಾ). = ಲವಂಗಚೆಕ್ಕೆ : "ವಸು . . . ಲವಂಗ ತಿಗುಡು" (೬ಕಂ. ೦೪೪). [ಲವಂಗ + ತಿಗುಡು₁]

**ಲವಂಗತೊಕ್ಕು** (ನಾ). = ಲವಂಗಚೆಕ್ಕೆ : "ತ್ವಚಂ–ಲವಂಗತೊಕ್ಕು" (ಬಾಹಟ. ೨-೨-೬೦ವ) ; ಮಗ್ಗಾರೆಸೊಪ್ಪು ಜಾಯಿಕಾಯಿ ಯಾಲಕ್ಕಿ ಲವಂಗತೊಕ್ಕು ಲವಂಗಪತ್ರ (ಕಾಮಶಾ. ೨೬೪). [ಲವಂಗ + ತೊಕ್ಕು₂]

**ಲವಂಗಪಟ್ಟೆ** (ನಾ). = ಲವಂಗಚೆಕ್ಕೆ : ಕಾಫಿ, ಅಕ್ಕಿ . . . ಲವಂಗಪಟ್ಟೆ ಸಿಂಕೋನಾ ಮುಖ್ಯವಾಗಿ ಬೆಳೆಯಾಗುತ್ತವೆ (ಭೂಗೋಳ. ೯೭) ; ಕ್ರಿ. ಪೂ. ೧೫ನೆಯ ಶತಮಾನದ ಈಜಿಪ್ಟ್ ಶಿಲಾಶಾಸನಗಳಲ್ಲಿ ಕಂಡುಬರುವ ಲವಂಗ ಪಟ್ಟೆ ಅಥವಾ ದಾಲ್ಚಿನ್ನಿ ಮಲಬಾರಿನಲ್ಲಿ ಉತ್ಪನ್ನವಾಗುವ ವಸ್ತುವನ್ನೇ ಪ್ರಾಯಶಃ ಸೂಚಿಸುತ್ತದೆ (ದಳಾಇ. ೩೨). [ಲವಂಗ + ಪಟ್ಟೆ₁]

**ಲವಂಗಪತ್ರ** (ನಾ). ಸುವಾಸನೆಯಿಂದ ಕೂಡಿದ, ದಾಲ್ಚಿನ್ನಿ ಜಾತಿಗೆ ಸೇರಿದ ಒಂದು ಗಿಡದ ಎಲೆ ; "ತೇಜಪತ್ರ" (ಶಂಡಕ. ೨೬೦): ಏಲಕ್ಕಿ, ಲವಂಗಚಕ್ಕೆ, ಲವಂಗಪತ್ರ . . . ತೆಗೆದುಕೊಳ್ಳೆ . . . ಪೈತ್ಯಜ್ವರಂ ಮಾಣ್ಗುಂ (ಸಕವೈ. ೭೭). [ಸಂ. ಲವಂಗಪತ್ರ]

**ಲವಕುಟ** (ನಾ). ಬಹಳ ಚಿಕ್ಕದಾದ ಮಣ್ಣಿನ ಪಾತ್ರ ; ಮಣ್ಣಿನ ಕುರುಳಿ : "ಕರಗಳಂತಿಗೆಯೆನಲು ಕೈಗಡಿಗೆ ಲವಕುಟಂ ಕುರುಳಿಯುಕ್ಕು" (ಪುಂಗರಾ. ೭೨-೨೪). 'ಕುರುಳಿ₁' ಪರಾ. [ಸಂ.]

**ಲವಡ** 'ಲವುಡ' ನೋ.

**ಲವಡಿ** 'ಲೌಡಿ₂' ನೋ.

**ಲವಣ** (ನಾ). ೧. ಉಪ್ಪು ; ಕ್ಷಾರ : "ಲವಣಂ ಸಮುದ್ರಜಂ ಕಲ್ಲುಪ್ಪೆನಿಕ್ಕು" (ಪುಂಗರಾ. ೪೩-೪೦) ; ನರಡಿಯೆಂದಟಿದದನೊಡೆದೊರಸು ವೃಷು ಪುಳಿಯೊಳಂ ಲವಣದೊಳಂ (ಲೋಕೋಪ. ೯-೨೦೬). ೨. ಷಡ್ರಸ ಗಳಲ್ಲಿ ಒಂದು ; ಉಪ್ಪಿನ ರುಚಿ ; "ತುವರಂ ತಿಕ್ತಂ ಮಧುರಂ ಳವಣಂ ಕಟುಕಾರಮೆಂದು ರಸಮಾಟು ತೆಜಂ" (ವಸ್ತುಕೋ. ೯೪-೦೫). ೩. ರಾಸಾಯನಿಕ ಲವಣ ; ಸೈಂಧವ : "ಲವಣಂ ಸೈಂಧವಮುಂ" (ವಸ್ತುಕೋ. ೦೩೪-೯೯). ೪. ಮನೋಹರವಾದುದು ; ಸುಂದರ ವಾದುದು ; ಚೆಲುವಾದುದು: 'ಲವಣಿಕೆ' ಪರಾ. ೫. ಶತ್ರುಘ್ನ ನಿಂದ ಹತನಾದ ಒಬ್ಬ ರಾಕ್ಷಸನ ಹೆಸರು : 'ಲವಣಾಸುರ' ಪರಾ. ೬. ಒಂದು ಬಗೆಯ ತೆರಿಗೆ ; ಉಪ್ಪಿನ ತೆರಿಗೆ : ಮಗ್ಗತೆಱೆ ಹೊಗೆದೆಱೆ ಲವಣ ಪಣ್ಣುಕಾರುಕ (ಎಕ. IX, ಕನ್ನಕ. ೭೭-೦೪ ; 1288). [ಸಂ.]

**ಲವಣಜಲಧಿ** (ನಾ). ಉಪ್ಪುನೀರಿನ ಸಮುದ್ರ, ಕಡಲು : ನಿಜವಿಜಯವರೂಥಮೊಂದೆಱೊಳೆ ನುಗುಟ್ಟು ಲವಣಜಲಧಿಯುಂ ಪೊಕ್ಕು (ಆದಿಪು. ೦೪-೫೩ ವ). [ಸಂ.]

**ಲವಣತೆ** (ನಾ). ಉಪ್ಪಿನ ಅಂಶ ; ಕ್ಷಾರತ್ವ : ನದೀಮುಖಗಳ ಸಮೀಪದಲ್ಲಿ ಅಥವ ಅನೇಕ ನದಿಗಳು ಬಂದು ಬೀಳುವ, ಭೂಪ್ರದೇಶಗಳು ಬಳಸಿದ ಸಮುದ್ರಗಳಲ್ಲಿ . . . ಲವಣತೆ ಬಹಳ ಕಡಿಮೆ (ಭೂವಿ. ೯೫). [ಸಂ. ಲವಣತಾ]

**ಲವಣಾಸುರ** (ನಾ). = ಲವಣ ೫ : ಲವಣಾಸುರಂ ಕಾಳಗದೊಳೀತನಿಂದಳಿ ದನಾ ಬಾಲಕರ ತೋಳ ಬಲ್ಪೆಂತೋ (ಜೈಮಿಭಾ. ೨೦-೩೫). [ಸಂ.]

**ಲವಣಿ₁, ನವಣಿ₁, ಲಹಣಿ₁** (ನಾ). ೧. ಕಾಂತಿ ; ಶೋಭೆ ; ಮೆರುಗು : ಕವಿವವರುಣಾಂಶುಗಳ ಲಹರಿಯ ಲವಣಿ ಲಾವಣಿಗೆಯಲಿ ನೀಲಚ್ಛವಿಯ ದೀಧಿತಿ ರ್ಝಳಪಿಸಿತೋ ದೆಸೆದೆಸೆಯ ಭಿತ್ತಿಗಳ (ಕುವ್ಯಾಸ. ೦೩-೨೭) ; ಪೊಳೆವ ಮಿಂಚಿನ ಲವಣಿ[ಪಾಠಾಂ. ಅೞವಿ]ಯನು ಮೈಗಳಲಿ . . . ತೋಱಿದರು ಭರದಿ (ಸಾಳ್ವಭಾ. ೨೨-೭೯). ನವಣಿ₁ : ೨. ಮನೋಹರತೆ ; ಅಂದ ; ಸೊಗಸು : ಕೋಮಳಿಕೆ ಕೊಂಕುವಡೆಯೆ ಕೊಂಕು ಬಿಂಕಂಬಡೆಯೆ ಬಿಂಕಂ ಲುಳಿವಡೆಯೆ ಲುಳಿ ನವಣಿ ವಡೆಯೆ ನವಣಿ ಬಹುವಿಕವಡೆಯೆ ಬಹುವಿಧದ ವಹಣಿಯ ಮಾರಚಿತ್ರದ ಗತಿಗಳೊಳ್ ಮೆಱೆದು (ಅವಂಪು. ೨-೨೬ ವ). ಲಹಣಿ₁ : ೧. ನಡುವೆ ಪರಿಮಳದ ನಾವೆಯೆಂತಡ್ಡಮಿರ್ದ ನಾಸಿಕಮಂ ದಾಂಟಲಾಱದುಭಯಪಕ್ಷದಿಂ ಸುತ್ತಿ ಬಪ್ಪಾಸೆಯೊಳು ಬಟ್ಟೆಗೊಡುವುದೆಂದು ಕರ್ಣಾವತಂಸದಳಂಗೆ ಲಹಣಿಶ್ರೀಗೆ ಮೌಕ್ತಿಕಾವತಂಸಕಿರಣಚ್ಛಲದಿಂ ಚಾಮರವನಿಕ್ಕುವಂತೆ ಗಂಡ ಮಂಡಲದೊಳು ಮಾರ್ಪೊಳೆವ ಕರ್ಣಪಾಲಿಕೆಗಳ (ದಸರ. ೦೨-೯೪).

[ < ಸಂ. ಲವಣಾ ]

**ಲವಣಿ₂, ನವಣಿ₂, ಲವಣೆ, ಲಹಣಿ₂, ಲಾವಣಿ₂** (ನಾ). ೧. ಯುದ್ಧದ ಒಂದು ವರಸೆ,– ಚಳಕ: ಸುಯೋಧನ ಕವಿದು ನಾಭಿಗೆ ತೋಱಿ ಜಂಘೆಗೆ ಹೂಡಿ ರ್ಝಳಪದಲಿ ಲವಣಿಯಲಿ ಲಳಿಯೆದ್ದು ಹೊಯ್ದನು ಪವನಜನ ಭುಜಶಿರವ (ಕುವ್ಯಾಗ. ೭-೩೫) ; ಕೇಳ್ಕೆ ಲವನೆ ಲವಣಿಯ ಲಾಗು ಬೇಱವರ (ತೊರರಾ. ೭-೨೫-೦೬); ವಜ್ರದ ಬಂಧುರದ ಗದೆಗಳಲಿ ಲವಣಿಯ ಬಂಧದಲಿ ಬಿಡದೊಡನೆ ಬಡಿದಾಡಿದರು ಜಡಿತೆಯಲಿ (ಅಂಬಿಕಾ. ೦೫-೦೨). ೨. [ಸಂಗೀತ] ಹಾಡುವಿಕೆಯ ಒಂದು ಸೊಗಸು; ಜಟಿಲವಲ್ಲದ ಗೇಯಸೌಂದರ್ಯವು ಪ್ರಸನ್ನವಾಗಿ ಸರಳರೂಪದಲ್ಲಿ ಪ್ರಕಟ ಗೊಳ್ಳುವಂಥ ಒಂದು ಠಾಯಿ,– ರಾಗದ ಅವಯವ. ಕೆಲವರು ಸಂಸ್ಕೃತದ 'ನಮನ'ಶಬ್ದಕ್ಕೆ ಇದು ಸಂಬಂಧಿಸಿದೆಯೆಂದು ಹೇಳು ತ್ತಾರೆ : ಸ್ಥಾಯಿಯನಾರೋಹಿಯನವರೋಹಿಣಿಯನೋಯರಮಂ

ಸಂಚಾರಿ ಬಚಾವಣೆ ಠಾಯೆ ಲವಣಿ ವಹಳಿಕೆ ಡಾಳಂಗಳಕಾರಪರಂಪರೆಯ . . . ಚತುರ್ವಿಧ ದಂಡಿಯು ಗಾಯಕಿ ರಸಿಕಮನೋದಾಯಕಿ ಪಾಡಿವಳತಿ ಚದುರಿಂದ (ಶರು॰. ೦೪-೯೩). ೩. [ನಾಟ್ಯ] ದೇಶೀಸ್ಸ್ರತ್ಯದ ಒಂದು ರೀತಿ : ನಟನ ತಾಂಡವ ನಾಟ್ಯ ಪಟುನೃತ್ಯ ಲಾಸ್ಯದುತ್ಕಟ ನೇರು ತಿರುಪುರುಲವಣಿ (ಭೈರವೇ. ೦-೬೪೪) ; ಪದತಳದೊಳ್ ತಾಳಮಂ ಬೀಸರಂ ಬೋಗಲೀಯದೆ ಸೆಱೆವಿಡಿದು ರೂಪು ನೇರು ಲಾಗು ಲವಣಿಯಡಪು ತಿರುಪು ಕೈಮಱೆ ಕಳಾಸ ಕೂಟಮಾನಂಗಳಂ ಸಂಗಳಿಸಿ . . . ತೋರ್ಪ ನರ್ತಕಿಯರಿಂ (ರಾಜಶೇ. ೩-೦೪ ವ). ನವಣಿ$_2$ : ೧. ವಹಿಲತನಂ ಪದಗತಿಯಿಂ ಬಹುವಿಕೆ ಕೈ ಮಾಟ್ಟ ನವಣಿಯಿಂ . . . ಅಹಮಹಮಿಕೆ ಮಿಕ್ಕು ಮೆಱೆದು ವಿರ್ವರ ಮೆಯ್ಯೊಳ್ (ಅನಂಪು. ೦೦-೩೯). ಲವಣೆ : ೧. ಚಲದಿಂದಲೋರೋರ್ವರೆಚ್ಚಾಡಿದರ್ವೆಯ್ಯ ಲವಣೆ ವಿಗೆ ಚಮತ್ಕೃತಿಯೊಳು (ಶೋರಾಸು. ೬-೭). ಲಹಣಿ$_2$ : ೨. ಇಂಪಂ ಕಱೆವ ಸುಧಾರಸಗಾನಂ ನಾನಾರಸವ ಲಹಣಿಯ ರೂಪುವಡೆಯೆ ಪಾಡುವ ಗಾಯಕರೊಳಂ (ಗಿಂಕ. ೨-೦೦೩ ವ). ಲಾವಣಿ$_2$ : ೨. ಗಳೆಯೋಸರಿಸಲು ಮುಂದಳದೊಳು ಥಮ್ಮನೆ ಉಳಿಯಲೊದಗಿ ಪೊಸೆದೋಱೆ ಕಳಿದ್ಯು ಲಾವಣಿಯೊಳಾಗಳೆ ಹೊಕ್ಕನೆದೆ ಪೋಟು ಗಳೆವಂತೆ (ಭೈರವೇ. ೩-೦೩).

[ ?. / ಸಂ. ಲವಣೀ./ ಮರಾ. ಲವಣೀ = ಬಾಗಿರುವಿಕೆ ]

**ಲವಣಿಕೆ** (ನಾ). ರಮ್ಯತೆ ; ಮನೋಹರತೆ : ಕಾಲೇಳುಗೆಯ ಲವಣಿಕೆ ಕೋಟೆಕೆಯ ಶುದ್ಧ ಬಾಲದದರು ಮನದೆಸಕ ಮೇಲು ಹಗುರದಿಂದವೆ ಹಮವಾ ಭೂಪಾಲನ ಮನವ ಮೆಚ್ಚಿಸಿತು (ಶ್ರೀಶಾರಿ. ೯-೦೦).

[ಲವಣ + — ಇಕೆ]

**ಲವಣಿಸಾರ** (ನಾ). ೧. ಯುದ್ಧದ ಒಂದು ಚಾಕಚಕ್ಯತೆ : ಲವಣಿಸಾರದೊಳ್ ನುಣ್ಣುವ ಮಲ್ಲನನೌಕಿ ಒಡಿದು ಸುತ್ತಿ (ಗಿಂಕ. ೨-೦೦೩ ವ). ೨. ಯುದ್ಧದ ವರಸೆಗಳ ಚಾಕಚಕ್ಯತೆಗಳನ್ನು ಬಲ್ಲವನು ; ಯುದ್ಧ ನಿಪುಣ : ಬಲಿದ ದಂಡೆಯ ಮನೆಯು ಬಯಸಿಕೆ ಲುಳಿಯ ಮೈಗಳ ಲವಣಿಸಾರರು ಕೋಲುಗಿಡಿಯ ಖಂಡೆಯದ ಖಣಿಕಟಲೆಸೆಯೆ ಕಾದಿದರು (ಕುಮಾರವ್ಯಾ. ೦೪-೬). [ಲವಣಿ$_2$ + ಸಾರ$_2$]

**ಲವಣಿಸು$_1$** (ಕ್ರಿ). ಉಪ್ಪುಹಾಕು ; ಉಪ್ಪನ್ನು ಸೇರಿಸು : ನೀಳವಾಗು ತ್ರರಿಸಿ ಲವಣಿಸುತ ಪಚನಿಸುತ (ಂಗಪು. ೮-೩೭). [ಲವಣ + — ಇಸು$_3$]

**ಲವಣಿಸು$_2$** (ಕ್ರಿ). ಬೆಳಕು ಸೂಸು ; ಕಾಂತಿಯು ಹೊರಹೊಮ್ಮು : ಅಗ್ನೇಯವನು ಹೂಡಿದನು . . . ವಾಯು ಪಡಿಬಲವಾಗೆ ಕಿಡಿಗಳ ಬಾಯಿಧಾರೆಯ ಹೊದಱ ಕಬ್ಬೊಗೆ ಲಾಯದಲಿ ಲವಣಿಸುವ ದಳ್ಳುರಿದಿರುಳ [ಪಾಠಾಂ. ರಾಯದಳವಲಿ ಮೋಹಿಸಿತು ದಳ್ಳುರಿಯ] ಚೂಣಿಯಲಿ (ಕುಮಾ. ೪. ೨೩-೩೦). [ಲವಣಿ$_1$ + — ಇಸು$_3$]

**ಲವಣಿಸು$_3$** (ಕ್ರಿ). ಕಾಳಗದಲ್ಲಿ ಸುತ್ತ ತಿರುಗಿ ಚಮತ್ಕಾರದಿಂದ ಹೋರಾಡು : ಬಿರುದಿನಂಕದ ಭಟರು ಭೋರೆಂದು ಬೊಬ್ಬೆಗೈದು ಲಾಗಿಸಿ ಲವಣಿಸಿ ವಂಚಿಸಿ . . . ಹಿಮ್ಮೆಟ್ಟಿ ಬೊಗರಿದಿರುಗಿ ಮುತ್ತಿ ಕಾದುವಲ್ಲಿ (ದಕಾವ. ೩-೦೪೭ ವ). [ಲವಣಿ$_2$ + — ಇಸು$_3$]

**ಲವಣೆ** 'ಲವಣಿ$_2$' ನೋ.

**ಲವಣೋತ್ತಮ** (ನಾ). ೧. ನದಿ ಅಥವಾ ಗಣಿಯ ಉಪ್ಪು; ಸೈಂಧವ: "ಸಿಂಧೂತ್ಥಂ . . . ಲವಣೋತ್ತಮಮಂ–ಈ ೪ ಸೈಂಧವಂ" (ಹಲಾಯು. ೦೦೦-೯೬೦) ; " ಲವಣೋತ್ತಮಮಂ ಮಾಣಿಮಂತಂ ಸೈಂಧವಂ" (ಮಂಗರಾ. ೩೦-೬). ೨. ಪೆಟ್ಲುಪ್ಪು : (೬). [ಸಂ.]

**ಲವಣೋದ** (ನಾ). ಉಪ್ಪುನೀರಿನ ಕಡಲು : "ಲವಣೋದಃ . . . ಉಪ್ಪುನೀರಿನ ಕಡಲು" (ಸಿದ್ಧಾಂತಿ. ೭೬). [ಸಂ.]

**ಲವಣೋದಕ** (ನಾ). ೧. ಉಪ್ಪುನೀರು. ೨. ಸಮುದ್ರ. [ಸಂ.]

**ಲವಣೋದಧಿ** (ನಾ). = ಲವಣೋದ : ದ್ವಾದಶರಾಜಕಮೆಂಬುದ ನೋದುಗಳೊಳ್ ಕೇಳಲಾದುದಲ್ಲದೆ ಕಾಣಲ್ಕಾದುದೆ ಲವಣೋದಧಿವೃತ ಮೇದಿನಿಯೊಳ್ ದೇವ ನಿನ್ನ ಪೆಸರೆಸೆವೆಡೆಯೊಳ್ (ಆದಿಪು. ೦೪-೦೪). [ಸಂ.]

**ಲವನ** (ನಾ). ೧. ಕೊಯ್ಯುವಿಕೆ : " ಲವಃ, ಅಭಿಲಾವಃ, ಲವನಂ–೩ ಹೊಲಗದ್ದೆ ಮುಂತಾದ ಬೆಳೆಗಳನ್ನು ಕುಯ್ಯುವಿಕೆ, ಛೇದಿಸುವಿಕೆ" (ಸಿದ್ಧಾಂತಿ. ೩೩೩). ೨. ಕೊಯ್ಯುವ ಸಾಧನ; ಕುಡುಗೋಲು. [ಸಂ.]

**ಲವಲವ$_1$** ' ಲವ ' ಪರಾ.

**ಲವಲವ$_2$** (ನಾ). ೧. ಉತ್ಸುಕತೆ; ಆತುರ; ತವಕ: 'ಲವಲವಿಕೆ' ಪರಾ. ೨. ಆಸೆ ; ಹಂಬಲ : ' ಲವಲವಿಕೆ ', ' ಲವಲವಿಸು ' ಪರಾ.

[←ಮರಾ. ಲವಲವ]

**ಲವಲವಿ** (ನಾ). ಉತ್ಸಾಹ: ಲವಕುಶತಾತ . . . ಲವಣಾಸುರಾಂತಕಪ್ರಿಯ ಲಕ್ಷ್ಮೀಪತಿ ನಿನ್ನೊಲವೆ ಲವಲವಿಯೆನಿಸುವುದು (ಕಶಶಾ. ೭೩-೭೦).

[<ಲವಲವ$_2$]

**ಲವಲವಿಕೆ** (ನಾ). ೧. ಉತ್ಸಾಹ ; ಹುರುಪು : ಒಲವಿಲ್ಲದ ಭಕ್ತಿ, ಲವಲವಿಕೆಯಿಲ್ಲದ ಪೂಜೆ . . . ಹುಲುಸರವಿಯಿಂದ ಕರಕಷ್ಟ (ದೇವಾವ. ೨೦-೩೭) ; ಲವಲವಿಕೆಯಲಿ ಕಾದಬೇಕಮ್ಮವನಿಯನು ಕೈಕೊಳಲುಬೇಕು (ಕುಮಾರಿ. ೩-೩೯) : ಬೇಸಗೆಯ ದಿನಗಳ ಲವಲವಿಕೆ ನನ್ನಲ್ಲಿ ಮೂಡಿತು (ಕಾರೆಮ. ೬೬). ೨. ಹಂಬಲ ; ಆಸಕ್ತಿ : ಈ ವಿಷಯವನ್ನು ಪೂರ್ಣ ಅರಿಯಬೇಕೆಂಬ ಲವಲವಿಕೆಯಿಂದ ಒಲ್ಗಾ ಕೇಳಿದಳು (ಕೀಮೋದ. ೨೦).

[ಲವಲವ$_2$ + — ಇಕೆ]

**ಲವಲವಿಸು** (ಕ್ರಿ). ೧. ಉತ್ಸುಕವಾಗು ; ತವಕಪಡು ; ಆತುರಗೊಳ್ಳು : ಕೈ ಶಿವಪೂಜೆಗೆ ಲವಲವಿಸುತ್ತಿರೆ ತನ್ನಂ ಮಱೆವುತೆ ಪರವಶನಾಗಲ್ (ಶೃಂಗಾರ. ಪ. ೪೯೬-೨೩) ; ತವರೂರ ವಿಭವಕೆ ಕವಿಗೊಟ್ಟ ಹೆಂಗಳು ಲವಲವಿಸುವರಲ್ತೆ (ಶರಜ. ೩೯-೦೪) ; ಹರೆಯದಲಿ ಲವಲವಿಸಿ ನಾ ಕಲಿಯಲೆಂದೆ ಬಲ್ಲವರ ಸಂತರೆಲ್ಲರ ಬಳಿಗೆ ಸಂದೆ (ಗೀಪಿಂ. ೦೦೯-೦೬). ೨. ಹಂಬಲಿಸು ; ಬಯಸು : ಲವಲವಿಸುವ ನೋಟಂ ಕೆತ್ತುವ ತೋಳ್ ಕಂಪಿಸುವ ಹಸ್ತಂ (ಗಿಂಕ. ೩-೨೭) ; ತರುಣಿಯರಧರಪಾನರುಚಿಗೆ ಲವಲವಿಸಿದುದು ಜಿಹ್ವೆ (ಸೌಂದರ್ಯ. ೯-೩) ; ಅಂತು ಕುಳ್ಳಿರ್ದು ಲವಲವಿಸಿ ನೋಡಿ (ದಕಾವ. ೬-೨೩ ವ). ೩. (ಅಲಂ) ಒದ್ದಾಡು ; ಹೊರಳಾಡು: ನಾ ತಿವಿದ ಖಡ್ಗಕೆ ಸರನ ಮೈ ಲವಲವಿಸಲಡಿ ಮೇಲಾಗಿ ಹೊರಳ್ದರೆ ಧನ್ಯ ತಾನೆಂದ (ಕುಮಾ. ೬. ೯-೯೦). [ಲವಲವ$_2$ + — ಇಸು$_3$]

**ಲವಲಿ, ಲವಳಿ** (ನಾ). ೧. ಒಂದು ಬಗೆಯ ಬಳ್ಳಿ : ಕಕುಭಾಶೋಕ ಕದಂಬ ಲುಂಗ ಲವಲೀಭೂಜಾರ್ಜುನಾನೋಕಹಪ್ರಕರಂ (ಕಂಕಭಾ. ೩-೪೦); ಚಂಪಕ ಲವಲೀ ನಾಗಂ ವಕುಳ ಪಾಟಳಾಶ್ವತ್ಥವ್ರಾತಂ (ಸುಕುಮಾ. ೦೦-೩೩ ೮೬೪) ; ಮುಚುಕುಂದ ಕುಂದೆ ಲವಲೀ ಹರಿಚಂದನ (ಶಾಇಕ. XX. ೨೩೬-೦೩ ; 1155) ; ಮತ್ತಕೋಕಿಲೆಗಳು ಲವಲಿಯ ವಿಕಸಿತಪಲ್ಲವದೊಳಗೆ ಮುಳುಗಿ ಮಕರಂದವನ್ನು ಹೀರುತ್ತಿದ್ದವು (ಬಾಅಿ. ೬೯). ೨. "ಕಾಚು ಮರ" (ಅದಿಪು. ಕೋಶ) : ತೀರಸ್ಥ ಲವಂಗ ಚೂತ ಲವಲೀಪುಷ್ಪಾಸವಾಸ್ವಾದಿತಾಲಿಯುತೋನ್ಮಾದೆಯ (ಆದಿಪು. ೦-೩೯). ೩. "ಅರನೆಲ್ಲಿ" (ಆದಿಪು. ಕೋಶ) : ಏಲಾಲವಂಗಲವಲೀವೇಲಾವನಭೂಮಿಯೊಳ್ (ಆದಿಪು. ೦೩-೨) ; ಸರಳ ಲತಾಲಾಸ್ಯನಟಂ ಹರಿಣೀರೋಮಂಥಬಂಧುರಂ ಲವಲೀಮರ್ಮರಮುಖರಂ ಕರಿಕರಶೀಕರಶೀತಳಮೆಸಗಿದತ್ತರಣ್ಯಂ ಸಮೀರಂ (ಕಂಪಾಶಾ. ೬-೦೦೩). ೪. ಒಂದು ಬಗೆಯ ಸಸ್ಯ ; ಅದಿರ್ಗಂತಿ : "ಲವಲಿಃ, ಲವಲೀ– ಈ ೨ ಅದುರ್ಗಂತಿ" (ಕಾಶಕೃ. ೨೯೩). ಲವಳಿ : ೨. ಸಾಳ ತಾಟ ಲವಳೀ ಹಿಂತಾಳ ನಾಳೀ . . . ಕೋಳ ನಿಚುಳಾಕ್ಷೋಣಂ ಗಳಿಂದೊಪ್ಪುಗುಂ (ಶರಶಮಾ. ೩-೯೬). [ಸಂ. ಲವಲೀ]

**ಲವಲಿಕೆ** (ನಾ). = ಲವಲವಿಕೆ : ಫುಲಿ ನೀರುಣಾತಿರೆ ಜಾಯ್ದೆಕ್ಕಲವಂದಿ ತದೀಯ ವಿಪುಳಗಳ ವಿಗಳದಸೃಗ್ಜಲದಿಂ ಬಗರಗೆ ಶೀವಿದೊಡೆ ಲವಲಿಕೆಯಿ ನೂಡಿ ಪೋದುದು (ಅನಂತ. ೬-೪೬).

[? ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು]

**ಲವಳಿ** 'ಲವಲಿ' ನೋ.

**ಲವಳಗೆ** (ನಾ). ಬಿಲ್ಲಿನ ಹಗ್ಗ; ನಾರಿ: ಬಳಿಕಾ ರವಿಸುತನು ಬಲವಂದು ಬಿಲ್ಲಿನ ಲವಳಗೆಯ ನೇವರಿಸಿ ರವಿಮಂಡಲಕೆ ಕೈಮುಗಿದ (ಕಂಭಕ. ೦೯-೩೧). [?]

**ಲವಾಜಮೆ**, ಲವಾಜಮ್ಮು (ನಾ). ೧. ಪರಿಕರ ; ಸಾಧನಸಾಮಗ್ರಿ: ಆವಶ್ಯಕವಸ್ತು : ಶಯನಮಂಟಪಕ್ಕೆ ಲವಾಜಮೆಸಹಿತವಾಗಿ ಚಪ್ಪರಗಾಲು ಮಂಚವನ್ನು ಸೇವಾರ್ಥವಾಗಿ ಒಪ್ಪಿಸಿರುತ್ತಾರೆ (ಪಾಶುಪ. ೨೬೯); ಇವನ್ನು ಕಡಿದು ತಿನ್ನುವವರಿಗೆ ತಕ್ಕ ಲವಾಜಮೆ ಬೇಡವೆ? (ಕಳುವು. ೦೦೦). ೨. ಪರಿವಾರ; ಪರಿಜನ : ಅರಮನೆಯಿಂದ ಪುರೋಹಿತರ ಮನೆಗೆ ಸಕಲಸಾಮಗ್ರಿಗಳೂ ಲವಾಜಮೆ ಕಳುಹಿಸಲ್ಪಟ್ಟಿತು (ಶ್ರೀರಾಮ. ೬೦). **ಲವಾಜಮ್ಮು**: ೨. ಅವರ ಸಂಗಾಟ ಅವರ ಲವಾಜಮ್ಮೂ ಬಂದಿತ್ತು (ಕವಿಶಿ. ೫).

[←ಅರ. ಲವಾಜಿಮ್ ; ಹಿಂ. ಲವಾಜಮಾ, ಲವಾಜಿಮಾ ; ಮರಾ. ಲವಾಜಮೊ]

**ಲವಾಜಮ್ಮು** 'ಲವಾಜಮೆ' ನೋ.

**ಲವಿತ್ರ** (ನಾ). ಕೊಯ್ಯುವ ಸಾಧನ ; ಕುಡುಗೋಲು : "ಲವಿತ್ರಂ. ದಾತ್ರಂ-ಈ ೨ ಕುಡುಗೋಲ್" (ಹಲಾಯು. ೯೪-೯೨೩) ; ಅವರ ಮಿತ್ರತ್ವ ವೆಂಬುದು ಜನ್ಮತರುಲವಿತ್ರವೆ ಆಗಬಾರದು (ಸಿದ್ಧವ. ೬೩-೩೩೨) ; ಉತ್ತಮ ಕೃಪಾಪಾತ್ರನಧಿಕಜ್ಞಾನನೇತ್ರ ನಘವಲ್ಲೀಲವಿತ್ರನೆನಿಪ . . . ಮಾಯಿದೇವ (ಶದ್ಯಾ. ೨-೬೨); ಕೆಡಹಿ ಲವಿತ್ರದೊಳ್ಕೊಯಿದು ಸೀಳಿದರೀಗ ಬಿಡೆವು ಸದ್ಗುಣವನು (ಕಂಪಾ. ೫-೬೫). [ಸಂ.]

**ಲವುಡ, ಲವಡ** (ನಾ). ಪುರುಷನ ಜನನೇಂದ್ರಿಯ ; ಶಿಶ್ನ : (೬) **ಲವಡ** : (೬). [←ಮರಾ. ಲವಡಾ; ಹಿಂ. ಲೌಡಾ]

**ಲವುಡಿ$_1$**, ಲೌಡಿ$_1$, ಲೌಡೆ (ನಾ). ಒಂದು ಬಗೆಯ ಕಬ್ಬಿಣದ ಆಯುಧ-ದೊಣ್ಣೆಯಂಥ ಸಾಧನ : ತಡಯುವ ಲವುಡಿಯ ಬಾವುಡಿಯ ಬಾವುಲಿಯ ಬಲ್ಲಾಳ್ಗಳ ಮುಂದೆತ್ತಿದ ಪರಿಪರಿಯ ಪರಾಕಾವಳಿಯ (೧೦೪. ೬-೫೫೪); ಭಾರಾಂಕ ಲವುಡಿಯ ಗವಿಯ ಗರುವರು ನೂಕಿದರು ತೇಜಿಗಳನೋಜೆಯಲಿ (ಕುಮಾರಿ. ೪-೫೦) ; ಸುರಗಿಯಲಿ ಲವುಡಿಯಲಿ ಮುಸಲದಲಾ ಕೃಪಾಣದಲಿ ಪೂತು ಮಝರೆನುತರಮರಿಸಲೆಚ್ಚಾಡಿದರು (ಕೋಣಯ. ೨೦-೨೫). **ಲೌಡಿ$_1$** : ಹೊಡೆವ ಲೌಡಿಗಳೊತ್ತಿ ನೆತ್ತಿಯ ಬಿಡುಮಿದುಳ ಕೆದರಿದವು (ಕುಮಾರೀ. ೪-೫೯) ; ಪೊಡೆದನು ಲೌಡಿಯಿಂ ತಲೆಯ ಮಿದುಳ ಖಂಡ ಕಡಗೆ ಚೆಲ್ಲಲು ರಾವುತರನು (ಕಂಠೀರಾ. ೪೦-೨೯). **ಲೌಡೆ** : ಪೇಡರಸು ಬೆನ್ನೀಯೆ ನೆತ್ತಿಯ ಬೀಡೆ ಬಿರಿಯಲು ಬಿದ್ದ ಲೌಡಿಗಳೀಡಿಜಿದಪರಿಚಾತುರಂಗದ ಚಪಳ ಚೂಣಿಯಲಿ (ಕುಮಾರ. ೦೦-೦೦). [< ಪ್ರಾ. ಲಉಡ. / ಸಂ. ಲಗುಡ]

**ಲವುಡಿ$_2$** 'ಲೌಡಿ$_2$' ನೋ.

**ಲವುಡಿ**ಮಗ 'ಲೌಡಿಮಗ' ನೋ.

**ಲವೋದ್ಗಮ** (ನಾ). ಸಿಡಿದ ಸಣ್ಣ ಹನಿ.-ತುಂತುರು : ತಣಿಯಂಬೊ ದೇವಲೋಕ ಸುಖಸಾಗರಮಂ ತವೆ ಪೀರ್ದುಮಿಾಗಳೇಂ ತಣಿವೊ ಮನುಷ್ಯ ಕೀಟಕಸುಖಾಂಬುಲವೋದ್ಗಮದೊಳ್ ವಿಚಾರಿಸಲ್ ಗಣಿದಮಿದೊಂದು ಮಿಲ್ಲ (ಅಂಕ. ೩-೬೦). [ಸಂ.]

**ಲಶುನ** (ನಾ). ಬೆಳ್ಳುಳ್ಳಿ : "ಲಶುನಂ ಗೃಂಜನ" (ವಸ್ತುಕೋ. ೩೭-೨೬); ಲಶುನಂ ನಿಂಬಫಳಂ ಹಿಂಗು ಶುಂಠಿ (ಲೋಕೋಪ. ೭-೬೦); ಕಸ್ತೂರಿಯೊಡ ನಿಟ್ಟು ಕುಟ್ಟಿ ತೆಗೆದಿಟ್ಟರು ಲಶುನಕೆ ಸೌರಭ ಬರದು (ಇಂದಾಶ. ೨೨೦-೯೯). [ಸಂ.]

**ಲಷ್ಕರ್** 'ಲಷ್ಕರು' ನೋ.

**ಲಷ್ಕರಿ** 'ಲಷ್ಕರು' ನೋ.

**ಲಷ್ಕರು**, ಲಕ್ಕರಿ, ಲಷ್ಕರ್, ಲಷ್ಕರಿ, ಲಸಿಕರಿ. ಲಸುಕರಿ (ನಾ). ೧. ಸೈನ್ಯ ; ದಳ: ನಾಳೆ ಬರುವ ಬಳ್ಳಾರಿ ಲಷ್ಕರ ಸರಬರಾಯಿಯಂ ತುಸ ಪುಕಸಿರಿಲ್ಲದಂತೆಸಗ ಪೇಳು (ಅಶ್ವಿನಿ. ೩೦-೩೯). ೨. ಸೈನ್ಯವನ್ನಿಟ್ಟಿರುವ ಸ್ಥಳ ; ದಂಡುಪ್ರದೇಶ; ಕಂಟೋನ್ಮೆಂಟು : ಪೂರ್ವಕ್ಕೆ ಇದ್ದ ಬೆಟ್ಟ ಗುಡ್ಡಗಳ ಶ್ರೇಣಿಯು ಲಷ್ಕರಿನಿಂದ ಸುಮಾರು ಎರಡು ಮೈಲಿ ದೂರವಿದ್ದಿತು (ಪುರಾಣ. ೪೫೩); ಈ ಮ್ಯಾರಿಗೆಲ್ಲಾ ಬಂದೋಬಸ್ತು ಮಾಡಿದರು ಶಿವಾಯಿ ಲಷ್ಕರು ಕುಚು ಮಾಡೀ ರತ್ನಗೇರಿಯಿಂದಾ ಯೆರಡು ಮಜಲ್ಲು ಮಾಡಿ (ಮುದ್ರ. ೩೫-೦೪). **ಲಕ್ಕರಿ** : ೧ ಅಂಬರಖಾನನ ಬಳಿಯ ಲಕ್ಕರಿಗಳ ತುಂಬುಳೆಕ್ಕಕ್ಕೆ ಸಂದಾಗ ಒಂಭತ್ತುಸಾವಿರ ಮಡಿದುದು ರಣದಲ್ಲಿ (ಕಂಪಾ. ೦೫-೬೯). **ಲಷ್ಕರ್** : ೧. ಬೆಂಗಳೂರಿನಲ್ಲಿ ಬ್ರಿಟಿಷ್ ಸರ್ಕಾರದವರು ಸ್ಥಾಪಿಸಿದ ಲಷ್ಕರ್ ಸ್ಥಾನಕ್ಕೆ . . . ಒದಗಿಸಿಕೊಟ್ಟರು (ಮಹಾಪು. II. ೪೪). ೨. "ಸೇನೆಯ ದಳಗಳಿಗೆ ಗೊತ್ತುಮಾಡಿರುವ ವಾಸಸ್ಥಾನ; ಸೈನ್ಯಾವಾಸ. (ಇಂಡಿಯಾದಲ್ಲಿ) ಸೈನ್ಯವನ್ನಿಟ್ಟಿರುವ ಪಟ್ಟಣ ಅಥವಾ ಪಟ್ಟಣದ ಭಾಗ: 'ಲಷ್ಕರ್'; ದಂಡು" (Cantonment. ೨೦೪೩). **ಲಷ್ಕರಿ** : ೧. ಜೀವನದಲ್ಲಿ ಸಾಹಸವೊಂದೇ ಸುಖ ಕೊಡುವುದರಿಂದ ಕೊನೆಗೆ ಲಷ್ಕರೀ ಸೇರಬೇಕೆಂದು ಬಯಸುತ್ತೇನೆ (ಮೇದಿಮ. ೦೬೬); ಸುಶೀಲ ರಾಯನು ಲಷ್ಕರೀ ಸುಭೇದಾರನಿರುತ್ತಾನೆ (ಮೋಹಿನೀ. ೬೦). **ಲಸಿಕರಿ**: ೧. ಹಸುರು ನಿಸಾನಿ ಶಮನಕಾಲಿ ನಗಾರಿ ಲಸಿಕರಿಗಳು ಸುತ್ತ ಬಳಸಿ (ಕೌಂಡಲ. ೬-೬೪). **ಲಸುಕರಿ** : ೧. 'ಲಸುಕರಿತನ' ಪರ್ಯಾ.

[←ಪಾರ. ಮರಾ. ಲಶ್ಕರ್; ಹಿಂ. ಲಷ್ಕರ್, ಲಶ್ಕರೀ]

**ಲಸಿಕರಿ** 'ಲಷ್ಕರು' ನೋ.

**ಲಸಿಕೆ**, ರಸಿಕೆ, ರಸಿಗೆ, ರಸುಗೆ (ನಾ). ೧. ಸಾಂಕ್ರಾಮಿಕರೋಗಗಳ ತಡೆಗಾಗಿ ಬಳಸುವ ಔಷಧಿದ್ರವ ; ಸಿಡುಬು ಮೊದಲಾದುವುಗಳ ಮೇಲ್ಲು: ಲಸಿಕೆಗಳ ಪ್ರಯೋಗ, ಕಾಯಿಲೆ ಬಂದಾಗ ಅತಿ ಬೇಗ ಅದನ್ನು ಗುರುತಿಸಿ ತಕ್ಕ ಚಿಕಿತ್ಸೆ ಕೊಡುವುದೇ ಮುಂತಾದ ಕ್ರಮಗಳು ಸಾಂಕ್ರಾಮಿಕ ರೋಗಗಳ ಗತಿಯನ್ನೇ ಬದಲಿಸಿವೆ (ಕೆಂಪೋ. VI. ೮೫೩). **ರಸಿಕೆ**: ೧. ರಸಿಕೆ (serum) ಮನುಷ್ಯನನ್ನು ೧೨೫ ವರ್ಷಗಳ ವರೆಗೆ ಬದುಕಿಸುವುದಂತೆ (ವೈಜ್ಞಾನಿಕ. ೬೫). ೨. ಗಾಯ ಮೊದಲಾದುವುಗಳಿಂದ ಸೋರುವ ನೀರು; ಕೀವು : ಕುಷ್ಠ ಬಲಿತರೆ . . . ರಸಿಕೆ ಸುರಿಯುತ್ತಿ ಹುದು (ವೈದ್ಯಶಾ. I. ೩೯೭); ಆಕಳ ಕಚ್ಚಲಿನ ಮೇಲಿನ ಹುಣ್ಣಿನ ರಸಿಕೆಯು ಕೈಗೆ ಹತ್ತಿ ಮೈಲಿ ಎದ್ದು ಹೋಗಿರುತ್ತವೆ (ಮುಂಬಯಿ. ೪-೨೦೭). **ರಸಿಗೆ** : ೨. ಕೀವಿಂ ಕೊಬರಿಯಿಂ ಮಹಾರಸಿಗೆಯಿಂ ಪೊಂಗಿರ್ದ ಪುಣ್ (ರಮಾಗಮ. ೪-೭೪); ಬಸಿದಪ್ಪುದು ಮೆಯ್ಯ ಕೀವುಂ ರಸಿಗೆಯುಂ (ಯಶೋಧ. ೩-೭೨). ೩. ಕಬ್ಬಿನ ಹಾಲಿನ ಪಾಕ; ಕಾಕಂಬಿ : "ರಸಿಗೆ-ರಸಿಕಾ = ಕಬ್ಬಿನ ರಸ. ಕೀವು" (ಶಬ್ದಕೋ. ೩೯). **ರಸುಗೆ** : ೨. ಪುಣ್ಗಳ ಬಾಯಿಂ ಪಡುಕನಾರ್ವ ರಸುಗೆಗಳೊಸರ್ಗಂ (ಅಶ್ವಶಾ. ೨೦-೪). [< ಸಂ. ಲಸೀಕಾ = ದ್ರವ, ರಸ]

**ಲಸಿತ** (ಗು). ೧. ಕಾಣಿಸಿಕೊಂಡ ; ಬೆಳಕಿಗೆ ಬಂದ. ೨. ಹೊಳೆಯುವ; ಪ್ರಕಾಶಿಸುವ : ಲಸಿತಭಸಿತೋಜ್ವಲಗಾತ್ರಂಸ್ಥಾಣು ನೊಸಲಕಣ್ತೋರ್ಪಂದ ಪೋಲ್ (ಕಂಠೀರವ. ೫-೦೦೬); ಬೆಳ್ಮುಗಿಲಾಗಸದಂತಿರೆ ಭಸಿತೋದ್ಧೂಳಿತ ಲಸಿತ ಲಲಾಟಂ ಕಣ್ಗೊಳಿಸೆ (ರಾಮಾಶ್ವ. ೪೦-೦೬). [ಸಂ.]

**ಲಸುಕರಿ** 'ಲಷ್ಕರು' ನೋ.

**ಲಸುಕರಿತನ** (ನಾ). ಸೈನ್ಯಾಧಿಪತ್ಯ: ಒರಿದು ಸಂತೋಷದೆ ಪಾತಷ್ಯವು ಖಾನಗೆ ಸರಿ ಲಸುಕರಿತನವಿತ್ತು . . . ಹೋಗೆಂದ (ಕಂಪಾ. ೧೦-೬).

[ಲಸುಕರಿ (<ಲಷ್ಕರು) + -ತನ]

**ಲಸುನ,** ಲಸೋನ (ನಾ). ಬೆಳ್ಳುಳ್ಳಿ : ಲಸುನಂ ತುಂಬಿರ್ದ ಪಾತ್ರಂ (ಜಾಪ್ರಾಶ. ೬೧). **ಲಸೋನ** : "ಉಳ್ಳಿ ಗೃಂಜನಂ ಲಶುನಂ ಲಸೋನಂ ಪಲಾಂಡುವಕ್ಕುಂ" (ಮಂಗರಾ. ೯-೦೩). [<ಪ್ರಾ. ಲಸುಣ./ಸಂ. ಲಶುನ]

**ಲಸೋನ** ' ಲಸುನ ' ನೋ.

**ಲಸ್ತಕ** (ನಾ). ಬಿಲ್ಲಿನ ಮಧ್ಯಭಾಗ ; ಬಿಲ್ಲನ್ನು ಕೈಯಲ್ಲಿ ಹಿಡಿಯುವ ಸ್ಥಳ : "ಲಸ್ತಕಃ, ಧನುರ್ಮಧ್ಯಂ—ಬಿಲ್ಲಿನ ನಡುವಿಗೆ ಹೆಸರು. ಕೋದಂಡದ ಮಧ್ಯಪ್ರದೇಶ ; ಬಿಲ್ಲಿನ ಕೈಪಿಡಿಯ ಸ್ಥಳ" (ಸಿದ್ಧಾಂತ. ೬೩). [ಸಂ.]

**ಲಸ್ತಕಿ** (ನಾ). ಬಿಲ್ಲು. [ಸಂ. ಲಸ್ತಕಿನ್]

**ಲಹಣ್ಣ$_1$** ' ಲವಣ್ಣ$_1$ ' ನೋ.

**ಲಹಣ್ಣ$_2$** ' ಲವಣ್ಣ$_2$ ' ನೋ.

**ಲಹಣಗೊಡು** (ಕ್ರಿ). [ಸಂಗೀತ] ಸೊಗಸನ್ನುಂಟುಮಾಡು : ಗತಿಗೊಡುವ ಮದ್ದಳೆಯ ಲಹಣಗೊಡುವ ಅವುಜದ ದೆಕ್ಕಳಂಗೊಡುವ ಕರಡೆಯ (ಕುಬಿಚ. ೦೦೭_೦). [ಲಹಣ್ಣ (< ಲವಣ್ಣ) + ಕೊಡು$_1$]

**ಲಹರಿ** (ನಾ). ೧. ಅಲೆ ; ತೆರೆ ; ತರಂಗ : ಮಂದಮಂದಂ ಕ್ರೀಡಿತಾಲೋಲಗಂಗಾಲಲಿತಲಹರಿ ಕಾಸಾರಸಾರಂ ಸಮೀರಂ (ಆದಿಪು. ೭-೨೫); ಅನುರಾಗರಸದ ಲಹರಿಯೊಳು ಏಗೈವೆನೆಂಬುದನರಿಯದವನಿಗಿದಿರಾಗಿ ನಿಟ್ಟಿಸಿ ನಿಂದಿಹಳು (ಹರಿಶ್ಚ. ೭-೯೦); ಕಾವ್ಯಕರುಣಾರಸದ ಲಹರಿಯ . . . ಲಸದ್ರೂಪಂ ಮೆರೆಯದಿಹುದೆ? (ಶ್ರೀರಾಮಾ.೦೦೩-೬೬). ೨. ದೊಡ್ಡ ಅಲೆ,_ತೆರೆ : "ಊರ್ಮಿಃ . . . ಕಲ್ಲೋಲಃ, ಲಹರೀ — ಈ ೫ ಪೆರ್ದೆರೆ" (ಶಬ್ದಾಮ. ೦೦೬-೭೦). ೩. ಮನಸ್ಸಿಗೆ ಒಮ್ಮೆಲೇ ಉಂಟಾಗುವ ಇಚ್ಛೆ,-ಒಲವು : ಯಾರಿಗೆ ಯಾವಾಗ ಲಹರಿಯೋ ಆಗ ಬರುತ್ತಾರೆ ಹೋಗುತ್ತಾರೆ (ಇಕ್ಷು. ೩೦೬); ಆತನ ಲಹರಿಯು ಯಾವ ಕಾಲಕ್ಕೆ ಎತ್ತ ಕಡೆ ಹೊರಳೀತೆಂಬುದರ ಭರವಸೆಯೇ ಇರಲಿಲ್ಲ (ಕಂದುಕು. ೩); ಯಾರಿಗೂ ಪಾಠಪ್ರವಚನದ ಲಹರಿ ಬಂದಿರಲಿಲ್ಲ (ದೂರಕ. ೩೦). ೪. ಉಲ್ಲಾಸ ; ಸಂತೋಷ : ಕೇವಲ ಲಹರಿಗಾಗಿ ರೇ. . . ಪುಸ್ತಕವೊಂದನ್ನು ಪ್ರಕಟಿಸಿದನು (ಶಕ್ಯಶ. ೪). ೫. ಒಂದು ಬಗೆಯ ಮಾದಕಪದಾರ್ಥ : ಹುರಿದ ಹೊಸ ಭಂಗಿ ಹದಗೆಯ್ದು ಪಿನಿಕೂಟದೊಳೇ ಬೆರೆದಮಲ್ ಜಾಯಿಕಾಯ್ ಪತ್ರೆ ಕಸಕಸೆಯೆಂಬ ತರತರದೊಳೆಸೆವ ಲಹರಿಗಳುಮೆಲ್ಲಾ ಪಕ್ಷಿಮೃಗಕುಲದ ಮಾಂಸಂಗಳು (ಕಬಿಪು. ೯೭-೯೩). ೬. ಅಮಲು ; ಗುಂಗು : ಒಳ್ಳೆಯಲ್ಲಿ ದೋಷ ಬಂಗಿನುಗ್ಗೆಯಲ್ಲಿ ಲಹರಿ ಉಳ್ಳಿಯಲ್ಲಿ ದುರ್ಗಂಧ (ಏಕೋತ್ತ. ೬೪); ಮಣ್ಣೆಂಬ ಘಟದ ಮಧ್ಯದಲ್ಲಿ ಹೊನ್ನೆಂಬ ಸುರೆ ಹುಟ್ಟಿತ್ತು ಹೆಣ್ಣೆಂಬ ಬಟ್ಟಲಲ್ಲಿ ಅಂತು ಈಂಟಲಾಗಿ ಲಹರಿ ತಲೆಗೇರಿತ್ತು (ಸವಚನ. ೦೧೨-೬೭೭).
[ಸಂ. ಲಹರೀ./ಹಿಂ. ಮರಾ. ಲಹರ್]

**ಲಹರಿಕೆ** (ನಾ). ಅಲೆ ; ತೆರೆ ; ತರಂಗ : "ಭಂಗಂ ಲಹರಿಕೆ ವೀಚಿ ತರಂಗಂ ಲಳಿಯೆಂಬಿವೂರ್ಮಿಪರ್ಯಾಯಂಗಳ್" (ಚಸ್ಸುಕೋ. ೨೨-೩) ; ನಾನಾಜಲಚರನಿಕರಾಸ್ಫಾಳನಪ್ರೋಜ್ಜ್ವಲತ್ಪ್ರೋಚ್ಚದನಚ್ಛನ್ನಚ್ಛಟಾಪುಕ್ಷುಭಿತಲಹರಿಕಾ ಸ್ಫಾರ ರೌದ್ರಂ ಸಮುದ್ರಂ (ಕಾವ್ಯಸಾ. ೬೪ ಕೂರ್ಮ್ಸ್ ೪) ; ಸೊಗಯಿಸುವ. . . ಲಲಿತಗಂಗಾನದೀಲಹರಿಕಾತಲ್ಪದೊಳ್ (ಆದಿಪು.೭-೦೬೪). [ಸಂ. ಲಹರಿಕಾ]

**ಲಳಗಿ** ' ನಳಿಗೆ ' ನೋ.

**ಲಳನೆ** ' ಲಲನೆ ' ನೋ.

**ಲಳಿ** (ನಾ). ೧. ರಭಸ; ತೀವ್ರತೆ; ಆವೇಗ : ಭಾರಿಯ ಭೂರಿ ಕೋಪಾನಳನ ಲಳಿಯ ತಗ್ಗಿಸುವೆನೆನುತ (ಕುಮಾರ್ಶ. ೦೨-೦೨); ಬುದ್ಬುದದ ಜಲಜಂತುಜಾಲದ ಲಳಿಯ ಉಳಿಯ ಲಹರಿಗಳ ವಿಸ್ತರದ ವರಗಂಗೆಯಂ ಕಂಡಳು (ಕೃಷಿಂಭಾ. ೯-೨೩). ೨. ಚಾಕಚಕ್ಯತೆ; ಚುರುಕು : ಶರಸಂಧಾನ ಸತ್ತ್ವ ಸಾಹಸ ಲಕ್ಷ್ಯ ಲಳಿ ಲಾಘವಗಳಿಂದೆ (ಕೃಷಿಂಭಾ. ೨೭-೦೫). ೩. ಕೌಶಲ್ಯ ; ನೈಪುಣ್ಯ ; ಚಮತ್ಕಾರ : ಸುಸ್ವರಂ ಲಳಿ ಉಳಿ. . . ಸಂಗಳಿಸೆ ಸುಕಂಠೆ ಪಾಡಿ ಪುದಿದಳ್ ಮುದಮಂ ನರನಾಥಚಿತ್ತದೊಳ್ (ಕುಸುಮಾ. ೦-೩೭) ; ಕರಿಗಳಟ್ಟೆಯನೆಳೆವ ರಕ್ತದ ಹೊನಲ ಮುಂಡದ ಲಳಿಯ ನಾಟ್ಯದಲೆಸೆದುದೈ ಬೀಭತ್ಸ ರೌದ್ರದಲಿ (ಕುಮಾರ್ಶ. ೦೩-೨೭). ೪. ಕಾಂತಿ ; ಪ್ರಭೆ : "ತೊಳಗು ಬೆಳಗೆನೆ ಕಾಂತಿ ಲಳಿ" (ಸಂಕೀಶ. ೨೫) ; ಪಚಕಿನ ಸೂಸಕದ ಲಂಬಳದ ಲಳಿಗಳ ಲಹರಿಯಲಿ ರಂಜಿಸಿದುದು (ಕೂರರಾ. ೦-೭-೦೯). ೫. ಅಲೆ; ತೆರೆ: "ಭಂಗಂ ಲಹರಿಕೆ ವೀಚಿ ತರಂಗಂ ಲಳಿಯೆಂಬ ಪೂರ್ವಿಪರ್ಯಾಯಂಗಳ್" (ಚಸ್ಸುಕೋ. ೨೨-೩). [?]

**ಲಳಿಗೆ** ' ನಳಿಗೆ ' ನೋ.

**ಲಳಿತ** ' ಲಲಿತ ' ನೋ.

**ಲಳಿತತೆ** ' ಲಲಿತತೆ ' ನೋ.

**ಲಳಿತಾಂಗ** ' ಲಲಿತಾಂಗ ' ನೋ.

**ಲಳಿತಾಕಾರ** ' ಲಲಿತಾಕಾರ ' ನೋ.

**ಲಳಿತೆ** ' ಲಲಿತೆ ' ನೋ.

**ಲಳಿಮಸಗು** (ಕ್ರಿ). ೧. (ಅಲೆಗಳು) ಉಕ್ಕು,-ಉಕ್ಕೇರು : ಒಸರಿದುದು ಶಶಿಕಾಂತಶಿಲೆ ಧವಳಿಸಿದುದಂಬರವಂಬುನಿಧಿ ಲಳಿ ಮಸಗಿದುದು (ಕೂರರಾ. ೩-೩-೪). ೨. ರಭಸಗೊಳ್ಳು ; ಉದ್ವೇಗಗೊಳ್ಳು : ಎಸೆದುದಾ ಮಣಿಖಚಿತಕಿರಣಪ್ರಸರಮುದ್ರಿಕೆ ಪೂತ್ಕರಿಸಿ ಲಳಿಮಸಗಿದಹಿಪನ ಪೆಡೆಮಣಿಯ ಪೊಲು (ಕೂರರಾ. ೯-೬-೦೭). [ಲಳಿ+ಮಸಗು$_1$]

**ಲಳಿಯೇಳು** (ಕ್ರಿ). ರಭಸಗೊಳ್ಳು ; ಉದ್ವೇಗ ಹೊಂದು : ಲಾಗಿಸುತ ಲಳಿಯೆದ್ದು ಭೀಮನ ತಾಗಿಸಿದನವನೀಶನು (ಕುಮಾಗ. ೭-೨೦) ; ವಿಗಡ ಬಸವಂ ಮಸಗಿ ಲಳಿಯೆದ್ದು ತತ್‌ಕ್ಷಣಂ ಚಿಗಿಯಲ್ ತೊಡರ್ದ ದಾವುಂಗಳೆಲ್ಲಂ ಪರಿದವು (ಚಬಸ. ೯೯-೦೩) ; ಕಡುಪಾಂಥ ಕಾಲಾಳ್ಗಳೊಡಲಳಿಯ ಲಳಿಯೆದ್ದು ಪಡೆಯನುಚಿ ಕೊಂದವು (ಕೃಷಿಂಭಾ. ೨೨-೨೦).
[ಲಳಿ+ಏಳು$_1$ (<ಏಟು$_1$)]

**ಲಾಂಗಲ** (ನಾ). ೧. ನೇಗಿಲು ; ಹಲ : "ಹಲಂ, ಲಾಂಗಲಂ, ಸೀರಃ— ಈ ೩ ನೇಗಿಲ್" (ಶಬ್ದಾಮ. ೯೯-೯೨೦) ; ಪಿಂಗಾಕ್ಷನ ವಕ್ಷಸ್ಥಳಮಂ ತನ್ನ ಗದಾಲಾಂಗಲದಿಂದಿರ್ಬಗಿಯಾಗಿ ಪೋಟ್ಟು (ಗದಾಯು. ೬-೦೬೫) ; ಶರಧಿ ತೆರೆಯಿಂದೆ ನೂಂಕಲ್ : . . . ಒಂದು ಪೆಟ್ಟಿಗೆ ಪೊಳಲ್ಕಿರದೆ ಲಾಂಗಲಕೆ ಸಿಲ್ಕಿತು (ದಕಾಪ. ೬-೦೦೬). ೨. ಒಂದು ಬಗೆಯ ಆಯುಧ : ಬರಲೀಯದೆಂದು ಲಾಂಗಲ ಶರಂಗಳಂ ಪಿಡಿದು ಪವನನಂದನನಿರ್ದಂ (ತಂಜಾಶಾಮ. ೦೯-೦೮೦) ; ತಣಿಪುವೆಂ ಮುಸಲಮನೀ ಲಾಂಗಲಮಂ (ಜಗಂ. ೦೫-೩೨). ೩. ಒಂದು ಬಗೆಯ ಮರ ; ತಾಳೆ. ೪. [ಜೈನ] ಅರುವತ್ತುಮೂರು ಇಂದ್ರಕಗಳಲ್ಲಿ ಒಂದು : ೧. ಋತು . . . ೬೭. ಲಾಂಗಲಂ . . . ೬೩ ಸರ್ವಾರ್ಥಸಿದ್ಧಿ — ಎಂಬಿವು ಅನುಕ್ರಮದಿಂ ಅರುವತ್ತುಮೂರು ಇಂದ್ರಕಂಗಳ ಪೆಸರ್ಗಳ್ (ತತ್ತ್ವಸೂ. ೨೦೩). 'ಲಾಂತವ' ಪರಾ. [ಸಂ.]

**ಲಾಂಗಲಗತಿ** (ನಾ). [ಜೈನ] ಸಂಸಾರಿಜೀವದ ಇಷುಗತಿ, ಪಾಣಿಮುಕ್ತಗತಿ, ಲಾಂಗಲಗತಿ, ಗೋಮೂತ್ರಗತಿಗಳೆಂಬ ನಾಲ್ಕು ಗತಿಗಳಲ್ಲಿ ಒಂದು ; ನೇಗಿಲಿನಿಂದ ಉತ್ತಾಗ ನೆಲದ ಮೇಲೆ ಮೂಡುವ ಎರಡು ರೇಖೆಯಂಥ ಗತಿ,—ಗಮನ : ಸಂಸಾರಿಜೀವಕ್ಕೆ . . . ಹಲದ ಪೋಲ್ ಎರಡು ವಕ್ರಮನುಳ್ಳ ಲಾಂಗಲಗತಿಯುಂ . . . ಗೋಮೂತ್ರಗತಿಯುಂ, ಎಂದು ಗತಿ ನಾಲ್ಕುತೆರಂ (ತತ್ತ್ವಸೂ. ೦೦೦).
[ಸಂ.]

**ಲಾಂಗಲದಂಡ** (ನಾ). ನೇಗಿಲಿಗೆ ಜೋಡಿಸುವ ಉದ್ದವಾದ ಮರ; ಈಸು : "ಈಷಾ, ಲಾಂಗಲದಂಡಃ — ೨ ಈಚಿನ ಹೆಸರು; ಈಚುಕೋಲು" (ಸಿದ್ಧಾಂತ. ೨೭೬). [ಸಂ.]

**ಲಾಂಗಲಹಸ್ತ** (ನಾ). ೧. ನೇಗಿಲನ್ನು ಕೈಯಲ್ಲಿ ಹಿಡಿದಿರುವವನು, ಹಲಾಯುಧಧಾರಿ. ೨. [ಜೈನ] ಲಾಂಗಲವೆಂಬ ಆಯುಧವನ್ನು ಉಳ್ಳವನು; ಬಲದೇವ : ಭದ್ರಾಸನದೊಳ್ ಕುಳ್ಳಿರೆ ಲಾಂಗಲಹಸ್ತಂ ವಿದ್ಯಾಧರ ರಾಜದೂತನ ಮೊಗಮಂ ನೋಡಿ (ಶಾಂತಿಪು. ೨-೦೬೫). [ಸಂ.]

**ಲಾಂಗಲಿ₁, ಲಾಂಗಳಿ** (ನಾ). ೧. ನೇಗಿಲನ್ನು ಆಯುಧವನ್ನಾಗಿ ಹೊಂದಿದವನು; ಬಲರಾಮ : ಅರುಣಾಧರಪಾಂಡುರದಶನರುಚಿಗಳಾ ನನದಿನೊಗೆಯೆ ಲಾಂಗಲಿ ನುಡಿದಂ (ಜಗ. ೦೩-೩೦). ೨. ಒಂದು ಬಗೆಯ ಔಷಧೀಸಸ್ಯ; ಕೋಳಿಕುಟುಮನ ಗಿಡ : "ಲಾಂಗಲೀ, ಲಾಂಗಲಿಕೀ, ಅಗ್ನಿಶಿಖಾ – ಕೊಲುಕುಟುಗನ ಗಿಡದ ಹೆಸರುಗಳು" (ಸಿದ್ಧಾಂತಿ. ೦೩೯) ; ಒಳಗಂಬುಡಿದಿರ್ದೊಡೆ ಲಾಂಗಲಿಯಂ ತಂದು . . . ಪುಣ್ಣ ಬಾಯೊಳೆ ವಿಳೇಪನಂಗೆಯ್ದೊಡಾ ಸರಲ್ ಪೊಡಮಡುಗುಂ (ಗೋವೈದ. ೯-೦೩೯). ೩. ತೆಂಗಿನ ಮರ : "ನಾಳಿಕೇರಃ, ಲಾಂಗಲೀ– ತೆಂಗಿನ ಮರದ ಹೆಸರುಗಳು" (ಸಿದ್ಧಾಂತಿ. ೧೫೩). ೪. ಹಾವು ; ಸರ್ಪ. **ಲಾಂಗಳಿ** : ೨. ತಿಳಿತ್ಯೈಳದೊಳ್ . . . ಲಾಂಗಳಿಯೆಂಬಿವನಟ್ಟೊಂದಿರೆ . . . ಪುಣ್ಗಳ್ ಕಿಡುಗುಂ (ಗೋವೈದ. ೯-೩೯). [ಸಂ. ಲಾಂಗಲಿನ್]

**ಲಾಂಗಲಿ₂** (ನಾ). ನೀರುಹಿಪ್ಪಲಿ : "ಲಾಂಗಲೀ, ಶಾರದೀ, ತೋಯ ಪಿಪ್ಪಲೀ, ಶಕುಲಾದನೀ – ನೀರುಹಿಪ್ಪಲೀ ಹೆಸರುಗಳು" (ಸಿದ್ಧಾಂತಿ. ೦೩೭). [ ಸಂ. ಲಾಂಗಲೀ ]

**ಲಾಂಗಲಿಕ** (ಗು). ೧. ನೇಗಿಲಿಗೆ ಸಂಬಂಧಿಸಿದ. (ನಾ). ೨. ಒಂದು ಬಗೆಯ ವಿಷ; ಸ್ಥಾವರವಿಷ. [ಸಂ.]

**ಲಾಂಗಲಿಕಿ** (ನಾ). = ಲಾಂಗಲಿ₁ ೨ : "ಲಾಂಗಲೀ, ಲಾಂಗಲಿಕೀ, ಅಗ್ನಿಶಿಖಾ – ಕೊಲುಕುಟುಗನ ಗಿಡದ ಹೆಸರುಗಳು" (ಸಿದ್ಧಾಂತಿ. ೦೩೯). [ ಸಂ. ಲಾಂಗಲಿಕೀ ]

**ಲಾಂಗಳಿ** 'ಲಾಂಗಲಿ₁' ನೋ.

**ಲಾಂಗುಲಿಕ** (ನಾ). ಲಾಂಗೂಲವನ್ನುಳ್ಳವನು; ಬಾಲವನ್ನು ಹೊಂದಿದವನು : ಅಲ್ಲಿ . . . ಏಕಪಾದರುಂ ಲಾಂಗುಲಿಕರುಂ ವಿಷಾಣಿಗಳುಂ ಅಭಾಷಕರುಂ ಅಪ್ಪರ್ (ಕಲ್ಯಕ್ರಿ. ೦೯೩). [ < ಸಂ. ಲಾಂಗೂಲಿಕ ]

**ಲಾಂಗೂಲ** (ನಾ). ಬಾಲ ; ಪುಚ್ಛ : "ಲೋಮಪುಚ್ಛಂ, ಲಾಂಗೂಲಂ, ವಾಲಹಸ್ತಃ, ವಾಳಧಿಃ – ಈ ೪ ಬಾಲಂ" (ಕರ್ಣಾಟು. ೬೨-೩೪೭); ಚಮರೀ ಲೋಲಲಾಂಗೂಲವಾಲಾವಳಿವಿಕ್ಷೇಪಂಗಳಿಂ (ಕಂಕಶಾ. ೪-೦೪); ತುಂಗಶೃಂಗಗಳಿಂದ ಭೂಮಿಯ ಮುಟ್ಟುವ ಲಾಂಗೂಲದಿಂ ಕೊರ್ಬಿ ಬೆಳೆದು ಸಿಂಗರವಡೆದ ಓಲೆನಿಂದೆಸೆವ ವೃಷಪುಂಗವನೆಯ್ದುಂದುದು (ಶಂಕ್ರಶಾಂ. ೨-೪೩).

**ಲಾಂಗೂಲಚಾಲನ** = ೧. ಬಾಲವನ್ನು ಅಲ್ಲಾಡಿಸುವುದು ; ಬಾಲ ಬಡಿಯುವಿಕೆ. ೨. (ಅಲಂ) ಇನ್ನೊಬ್ಬರು ಹೇಳಿದ್ದಕ್ಕೆಲ್ಲಾ ಹೂಗುಟ್ಟುವಿಕೆ ; ಬಾಲಬಡಿಕತನ : ಲಾಂಗೂಲಚಾಲನದ ಅಧಃಪತನಕ್ಕಿಳಿಯುವ . . . ಆಟವನ್ನು ಎಲ್ಲಿ ಕಲಿತೆ ? (ರಕ್ತಕ್ರ..೦೨೩); ಭಾಸ್ಕರನ ಲಾಂಗೂಲಚಾಲನ ವೃತ್ತಿ ಒಮ್ಮೊಮ್ಮೆ ಮೋಹಿನಿಯಲ್ಲಿ ಆತ್ಮಾಭಿಮಾನವನ್ನು ಕೆರಳಿಸುತ್ತಿತ್ತು (ಕಮನ. ೦೩೪). [ಸಂ.]

**ಲಾಂಗೂಲಕರ್ತನ** (ನಾ). ಒಂದು ನರಕದ ಹೆಸರು : ಲಾಂಗೂಲಕರ್ತನ ಕಾಳಪತ್ರಪಾಟನ . . . ಮೋಹಸಭ್ರಂಶವೆಂಬೈದು ಮಂತ್ರಿನರಕಂಗಳಿಂ (ಬವೀಳ. ೦೫೦). [ಸಂ.]

**ಲಾಂಛನ** (ನಾ). ೧. ಗುರುತು ; ಚಿಹ್ನೆ ; ಮುದ್ರೆ : "ಚಿಹ್ನಂ ಲಾಂಛನಂ ಕಳಂಕಂ" (ಚಾಂಗಲಾ. ೦೨-೩) ; ಕಮಲವಮಾಲಾಚಕ್ರವಸ್ತ್ರಗಜಲಾಂಛನಮಪ್ಪ ದಶವಿಧದಿನೆಸೆದು (ಆಕಪು. ೬-೨೦೫) ; ಲಾಂಛನವ ಕಂಡು ನಂಬುವೆ ಅವರಂತರಂಗವ ನೀವೇ ಬಲ್ಲಿರಿ (ಬಸವ. ೪೦೦) ; ಹಣೆಯ ಮೇಲಿನ ಲಾಂಛನದಿಂದ ಅವರಿಗೆ ಉಂಟಾಗಿರುವುದೆಂಬುದನ್ನು ತಿಳಿದು (ಳೆಕಹಂ. ೯೬). ೨. ಜಾತಿ, ಮತ, ಪಂಥ, ಸಂಪ್ರದಾಯಗಳ ಗುರುತನ್ನು ಸೂಚಿಸುವ,ಹಣೆಯ ಮೇಲೆ ಇಡುವ ಗುರುತು ಮುಂತಾದುದು. ೩. (ಚಂದ್ರಬಿಂಬದ ಮೇಲಿರುವ) ಕಲೆ ; ಮಚ್ಚೆ ; ಕಪ್ಪು : "ಮೃಗಃ . . . ಲಾಂಛನಂ, ಲಕ್ಷ್ಮ, ಲಕ್ಷಣಂ, ಕಳಂಕಃ — ಈ ೮ ಚಂದ್ರಮಂಡಲದ ನಡುವಣ ಕರ್ಪು" (ಕರ್ಣಾಟು. ೯-೪೩). ೪. ಕಳಂಕ ; ಅಪಮಾನಕರವಾದುದು : ಪ್ರತ್ಯಕ್ಷ ರಾಜಧಾನಿಯಲ್ಲಿ ಈ ಪ್ರಕಾರ ಕಳವಾಗುವುದು ಬಹಳ ಲಾಂಛನದ ಮಾತು (ಮುಂಬಯಿ. ೪-೨೦); ಅದೆಂತಹ ದುಷ್ಟಲಾಂಛನವು ನನ್ನನ್ನು ಅಂಟಿಕೊಂಡು ಬಿಟ್ಟಿತು ! (ಕಠಿ. ೯೮). [ಸಂ.]

**ಲಾಂಛನಾಸ್ಪದ** (ನಾ). ಅಪಮಾನಕರವಾದುದು; ಲಜ್ಜಾಸ್ಪದವಾದುದು: ಸಂಪ್ರದಾಯದಂತೆ ಹೆಣ್ಣನ್ನು ನೋಡಲಿಕ್ಕೆ ಹೋಗದೆ ಲಗ್ನವಾಗುವುದು ಅವನಿಗೆ ಲಾಂಛನಾಸ್ಪದವೆನಿಸಿತು (ಕಮನ. ೪೨); ಇದು ನನಗೂ, ತಮಗೂ ಕೂಡಿಯೇ ಲಾಂಛನಾಸ್ಪದವು (ಅಂಬಿಕೆ. ೦೭೩). [ಸಂ.]

**ಲಾಂಛಿತ** (ಗು). ಗುರುತುಳ್ಳ ; ಚಿಹ್ನೆಯುಳ್ಳ ; ಲಕ್ಷಣವುಳ್ಳ : ಕನಕಪತ್ರಲತಾಲಾಂಛಿತಗದಾದಂಡಮಂ ಕೊಂಡು . . . ನಡೆಗೊಂಡು (ಕಂಕಶಾ. ೦೩-೬೦೫). [ಸಂ.]

**ಲಾಂಟಾನಾ** 'ಲಂಟಾನಾ' ನೋ.

**ಲಾಂತ** (ನಾ). 'ಲ' ಎಂಬ ವರ್ಣದಿಂದ ಕೊನೆಗೊಳ್ಳುವ ಪದ: "ಲಾಂತಕ್ಕೆ—ಅಂಚಲೆ. ಅಸನ್ನಪೀಡನೇ (ತೊಂದರೆ ಪಡಿಸು)" (ಕಮನಾ). [ಸಂ.]

**ಲಾಂತವ** (ನಾ). ೧. [ಜೈನ] ಹದಿನಾರು ಕಲ್ಪಗಳಲ್ಲಿ ಒಂದು : ಲಾಂತವ ಕಾಪಿಷ್ಠದೊಳೋರಂತಿರೆ ಪದಿನಾಲ್ಕು ಮಂತ್ಪಮುಳಿದಿರ್ದವರೊಳ್ ಭ್ರಾಂತೇನೆರಡಧಿಕಂ (ಪಾರ್ಶ್ವಪು. ೫-೬೩) ; ಲಾಂತವ ಕಾಪಿಷ್ಠಂಗಳೊಳಿಂತೊಳ ವಯ್ಯತ್ತುಸಾಸಿರಂ ಜಿನಗೇಹಂ (ಪಾರ್ಶ್ವಪು. ೦೩-೦೬). ೨. ಅರುವತ್ತು ಮೂರು ಇಂದ್ರಕಗಳಲ್ಲಿ ಒಂದು : ೧. ಋತು . . . ೪೪. ಲಾಂತವಂ . . . ೬೩. ಸರ್ವಾರ್ಥಸಿದ್ಧಿ—ಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್ (ಕಲ್ಯಕ್ರಿ. ೨೦೩). [ಸಂ.]

**ಲಾಂದರ, ಲಾಂದ್ರ, ಲಾಟನ, ಲಾಟಾನು, ಲಾಟೀನು** (ನಾ). ಗಾಳಿ ತಾಗದಂತೆ ಗಾಜಿನ ಆವರಣವುಳ್ಳ, ಎಲ್ಲಿಗಾದರೂ ಒಯ್ಯಲು ಅನುಕೂಲವಾಗುವಂತೆ ಹಿಡಿಕೆಯುಳ್ಳ ದೀಪ : ಕಂದೀಲು : ನುಸುಳಿ ಬರುವ ಬೆಳುದಿಂಗಳ ಮುಂಜಲ್ಲಿ ಮಂಕಾದ ಬೆಳಕಿನ ಲಾಂದರದಲ್ಲಿ (ಖಂಗೀತ. ೦೯-೬) ; ಒಂದು ಲಾಂದರವನ್ನು ನನ್ನ ಕೈಗೆ ಕೊಟ್ಟು . . . ಹೋಟೆಲಿನ ಮಾಲೀಕ ಜಾರಿದನು (ಪಂಬಿಲು. ೪೪). **ಲಾಂದ್ರ** : ಲಾಂದ್ರ ಹಚ್ಚಿಕೊಂಡಿತು (ಮುಖಿಪು. ೬) ; ಲಾಂದ್ರದಲ್ಲಿ ದೀಪವು ನಿರ್ಮಲವಾಗಿ ಕಂಡಂತೆ ಬೋಕಿಯಲ್ಲಿ ನಿರ್ಮಲವಾಗಿ ಕಾಣುವದೇ ? (ಕೃಷಿಶ್ರ. ೨೪೦). **ಲಾಟನ** : ಕಾಮಾಕ್ಷಿ ಒಳಗಿನಿಂದ ಲಾಟನವೊಂದನ್ನು ಹಚ್ಚಿ ತಂದಳು (ಮಹಾರುದಾ. ೩೪) ; ಕೈಯೊಳಗ ಲಾಟನ ಒಯ್ಯತ್ತೀರಿ (ಅಕೋಳ. ೦೪೩). **ಲಾಟಾನು** : ಕೊಠಡಿಯಲ್ಲಿದ್ದ ಲಾಟಾನಿನಲ್ಲಿ ಎಣ್ಣೆಯಿರಲಿಲ್ಲ (ಶಿಂಗಾಳ. ೪೨); ಲಾಟಾನಿನ ಮಂದಪ್ರಕಾಶದಲ್ಲಿ . . . ಮುಖಗಳು ಸ್ಪಷ್ಟವಾಗಿ ಕಾಣುತ್ತಿದ್ದುವು (ಪುರೀ. ೩). **ಲಾಟೀನು** : ಲಾಟೀನು ಬೆಳಕಿನಲ್ಲಿ ಓದೋಕಾದರೆ ಓದು (ಖಿಂದಕೆ. ೦೩) ; ಕೈಯಲ್ಲಿದ್ದ ಲಾಟೀನನ್ನು ಬಿಸಾಡಿ ಕಾಲಿಗೆ ಬುದ್ಧಿ ಹೇಳಿದ (ಕನ್ನಶ. ೦೯೬). [←ಪೋರ್ಚ್. Lanterna. / ಇಂ. Lantern. / ತಮಿ. ಲಾನ್ತರ್; ತುಳು. ಲಾಂಟನ್, ಲಾಂದರ್]

**ಲಾಂದ್ರ** 'ಲಾಂದರ' ನೋ.

**ಲಾಂಪಟ್ಯ** (ನಾ). ಅತ್ಯಾಸಕ್ತಿ ; ಗೀಳು ; ಲಂಪಟತನ : ಸಂಪಗೆಯ ಪೆಂಪಮರ್ದ ಜೊಂಪದಲಂಪಿನಿಂಪಿನ ಲಾಂಪಟ್ಯದಿಂ ತಾಂ ಪರಿದು ತಣಿಯುಂಡು ಝೋಂಪಿಸಿ ಜೀಬ್ಬಲಿರ್ವಕ್ಕೆಪಱುಗಳನೆತ್ತಿ ತೆಗೆದು (ಉದ್ಭಟ. ೦-೬೪೮). [ಸಂ.]

**ಲಾಂಬಿ** (ನಾ). ೧. ಉದ್ದ ; ಉದ್ದಳತೆ ; ನೀಳ : ಈ ಒಂದೊಂದು ಕೊಂಡಿಯೂ ೨ ಅಡಿ ಲಾಂಬಿ ಇರುವುದು (ಭೂಪಿಂ. ೪). ೨. (ಪ್ರಮಾಣ ಅಥವಾ ಸಮರ್ಥನೆಗಾಗಿ ಇಟ್ಟುಕೊಳ್ಳುವ) ಆಧಾರರೇಖೆ : ಭೂಮಿಯನ್ನು ಅಳೆಯ ಮೊದಲಿಟ್ಟವನು ಆ ಭೂಮಿಯಲ್ಲಿ ಅಳತೆಯ ಸೌಕರ್ಯಕ್ಕಾಗಿ ಒಂದು ಸರಳರೇಖೆಯನ್ನಾಗಿ ಯಾವುದನ್ನು ಕಲ್ಪಿಸಿಕೊಳ್ಳುತ್ತಾನೋ ಅಂತಹ ಸರಳರೇಖೆಯನ್ನು ಆಧಾರರೇಖೆ ಅಥವಾ ಲಾಂಬಿಯೆಂದು ಹೇಳುವುದು (ಭೂಪಿಂ. ೮೨). ೩. ಉದ್ದವಾಗಿರುವ ಮರದ ತುಂಡು ; ದಿಮ್ಮಿ. [ ←ಮರಾ. ಲಂಬೀ, ಲಾಂಬೀ ; ಹಿಂ. ಲಂಬಾಈ ]

**ಲಾಕ, ಲಾಕು** (ನಾ). ದೋಣ್ಣೆ ; ಬಡಿಗೆ : "ಲಾಕಮೆಂದು ಲಾಕುಳಂ" (ಕಕಾ. ೭೦-೭೦೭). **ಲಾಕು** : "ಲಾಕೆಂದೆನೆ ಲಾಕುಳಕ್ಕೆ ಪೆಸರು" (ಕಪಕ. ೨೯೭). [ <ಲಾಕುಲ ]

**ಲಾಕಪ್ಪು** (ನಾ). ಸೆರೆಮನೆ ; ಜೈಲು : ಇಬ್ಬರನ್ನೂ ಕೋಳ ಹಾಕಿ ತೀರ್ಥಹಳ್ಳಿ ಲಾಕಪ್ಪಿಗೆ ಕರೆದುಕೊಂಡು ಹೋದರು (ಮಲೆಮ. ೬೦೩).
[← ಇಂ. Lock-up]

**ಲಾಕು** ' ಲಾಕ ' ನೋ.

**ಲಾಕುಲ, ಲಾಕುಳ, ಲಾಗುಳ** (ನಾ). ೧. ಲಕುಲೀಶನೆಂಬುವನಿಂದ ಸ್ಥಾಪಿತವಾದ ಶೈವಮತದ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದ ವ್ಯಕ್ತಿ : ಶೈವಾಗಮಗಳು ಒಂದೊಂದು ಬಾರಿ ಶೈವಮತವನ್ನು . . . ಸೋಮಸಿದ್ಧಾಂತ ಮತ್ತು ಲಾಕುಲ ಎಂದೂ . . . ವಿಂಗಡಿಸುತ್ತವೆ (ಶಿಕ್ಷ. ೮೩). **ಲಾಕುಳ** : ೧. ಗಾನಗರ ಲಾಕುಳರ ಚಿನಿವಾಲರ (ಸಿದ್ಧಕಾ. ೦೩-೩೭). ೨. ದೊಣ್ಣೆ ; ಬಡಿಗೆ : ವಲ್ಲಭಧ್ವಜಮೆಂಬ ಲಾಕುಳದ ಕೋಲ ತುದಿಯಲ್ಲಿ (ಶಬ್ದ. ೦೦-೬೨). ೩. ಸಂನ್ಯಾಸಿಗಳು ಉಪಯೋಗಿಸುವ ದಂಡ ; 'ಯೋಗದಂಡ : ಅಚಳಿತವೇ ಖರ್ಪರ ಅಪ್ರಮಾಣವೇ ಲಾಕುಳ (ಅವಕಂ. ೬೩-೩೭೯); ಯೋಗಪಟ್ಟಂ ಮೃಗದ ಸದಜಿನಂ ವಲ್ಕಲಂ ಲಾಕುಳಂ ಮಂಜುಳಮೆಂದ ಸ್ಮೇರವಕ್ತ್ರಂ ಮಿಸುಗೆ ಚರಿಯಿಪರ್ ತಪ್ಪಲೊಳ್ ತಾಪಸೇಂದ್ರರ್ (ಜಾತಕೀ. ೦-೦೬೨). **ಲಾಗುಳ** : ೨. "ಲಾಗುಳ (ಲಾಕುಳ) — ಲಕುಟ (ಲಗುಡ) = ಬಡಿಗೆ, ಯೋಗದಂಡ" (ಕದ್ಯಕೋ. ೩೯). ೩. ನಿನ್ನೀ ಜಡೆಯುಂ ತೊವಲುಂ ಪಾವಿನ ತೊಡವುಂ ಲಾಗುಳಮುಮದ್ಧ ಮೋಂ ಬಂದಪುದೇ (ಕನ್ನಕಾ. ೨೯೭). [< ಸಂ. ಲಕುಟ]

**ಲಾಕುಲಾಗಮ, ಲಾಕುಳಾಗಮ** (ನಾ). ಲಕುಲೀಶನೆಂಬುವನಿಂದ ಸ್ಥಾಪಿತವಾದ ಆಗಮ : ಲಕುಲೀಶನಲ್ಲಿ . . . ಮತ್ತು ಅವನ ಬೋಧನೆಗಳನ್ನೊಳಗೊಂಡಿರಬಹುದಾದ ಲಾಕುಲಾಗಮದಲ್ಲಿ ಪರಮಭಕ್ತಿ ಎದ್ದು ಕಾಣುತ್ತದೆ (ಕೂಪ್ಯಕು. ೦). **ಲಾಕುಳಾಗಮ** : ಅನೇಕ ದಾನ ವಿನೋದರುಂ ಲಾಕುಳಾಗಮಾಭರಣರುಂ ಸಮಸ್ತಶಾಸ್ತ್ರಾಗಮವಿಚಾರಚಾರು ಚತುರರುಂ (ಎಕ. VII, ಶಿಕಾ. ೦೨೩-೬೨; 1159). [ಲಾಕುಲ + ಆಗಮ]

**ಲಾಕುಳ** 'ಲಾಕುಲ' ನೋ.

**ಲಾಕುಳಾಗಮ** ' ಲಾಕುಲಾಗಮ ' ನೋ.

**ಲಾಕ್ಷ** (ನಾ). ಒಂದು ಬಗೆಯ ಕೆಂಪುದ್ರವ್ಯ ; ಅರಗು ; ಅಲತಗೆ : "ಲಾಕ್ಷಮದರಗು" (ಮಂಗರಾ. ೯೩-೯೨) ; "ಲಾಕ್ಷಕೃಶಾನುಧಾತ್ರಿಧರಕಾಷ್ಠಗಳೆಂಬಿವು ಕೀಲಕಾಷ್ಟಯಂ" (ಜಾತಕಾ. ೦೮೨). [ಸಂ. ಲಾಕ್ಷಾ ]

**ಲಾಕ್ಷಣಿಕ** (ಗು). ೧. ಲಕ್ಷಣಗಳನ್ನು ಬಲ್ಲ : ಶಾಸ್ತ್ರಜ್ಞಾನವಿರುವ : ಲಾಕ್ಷಣಿಕ ಕವಿವರ್ಗದೊಳೆ ಸಂದು (ಕಪ್ಪಮೂ. ೭೪). ೨. ಸಾಂಕೇತಿಕ ಅರ್ಥವನ್ನು ಸೂಚಿಸುವ; ಆಲಂಕಾರಿಕವಾದ : ಭಕ್ತಿಯೆಂದರೆ ಕೇವಲ 'ಉಪಚಾರ' (ಅಥವಾ ಗೌಣ ಮತ್ತು ಲಾಕ್ಷಣಿಕಪದಪ್ರಯೋಗ) (ಧ್ವನ್ಯಾಲೋ. ೯೨) ; ಅಲ್ಲಲ್ಲಿ ಅನೇಕ ಲೇಖನಗಳನ್ನು . . . ಪತ್ರಿಕೆಗಳಿಗೆ ಬರೆಯುತ್ತಿದ್ದರೂ ಲಾಕ್ಷಣಿಕ (Feature) ಬರಹಗಳು ವಿನಾಸಶೀಲದುದು ಜಯಂತಿಯಲ್ಲಿಯೆ (ಶ್ರೀರಂಗ. ೦೬೦). (ನಾ). ೩. ಕಾವ್ಯಲಕ್ಷಣಗಳನ್ನು ಬಲ್ಲವನು ; ಕಾವ್ಯ ಶಾಸ್ತ್ರಜ್ಞ : ಧ್ವನಿ ಎಂಬುವನ್ನು ಲಾಕ್ಷಣಿಕರು ಮೊದಲಿಂದ ಅರಿತಿದ್ದರೂ ಅದನ್ನು ಪ್ರಧಾನವಾಗಿ ಪ್ರತಿಪಾದಿಸಿದವನು ಆನಂದವರ್ಧನ (ಧ್ವನ್ಯಾಲೋ. VI, ಮುನ್ನು.೩) ; ಇದರಲ್ಲಿಯ ಅಭಿಪ್ರಾಯಗಳು ಹೆಚ್ಚಾಗಿ ದಂಡಿ ಮುಂತಾದ ಪ್ರಾಚೀನಲಾಕ್ಷಣಿಕರ ಅಭಿಪ್ರಾಯಗಳೆಂದು ತಿಳಿಯುತ್ತದೆ (ಕಪಾಕ. ೩೩). ೪. [ಕಾವ್ಯಮಿಮಾ] ಲಕ್ಷ್ಯಾರ್ಥವನ್ನು ಹೊಂದಿರುವ ಶಬ್ದ : ವೈಖರೀರೂಪ ಶಬ್ದಸಮೂಹವೇ ವಾಚಕವೆಂದು ಲಾಕ್ಷಣಿಕವೆಂದು ವ್ಯಂಜಕವೆಂದು ತ್ರಿವಿಧಮಾಗಿಹುದು . . . ಅನ್ಯಾರ್ಥಮಂ ಲಕ್ಷಿಪ ಶಬ್ದಾದಿಕವೇ ಲಾಕ್ಷಣಿಕಶಬ್ದವೆನಿಸುವುದು (ಶಿವೇಶ. ೦೪೩) ; ವಾಚ್ಯಾರ್ಥಕ್ಕೆ ಬಾಧೆ ತಟ್ಟಿದಾಗ ಮಾತ್ರ ಲಕ್ಷಣಾವೃತ್ತಿಗೆ ಪ್ರವೃತ್ತಿಯುಂಟಾಗಿ ಲಕ್ಷ್ಯಾರ್ಥವು ಗೋಚರವಾಗುತ್ತದೆ ; ಇದನ್ನು ತಿಳಿಸುವ ಶಬ್ದಕ್ಕೆ "ಲಾಕ್ಷಣಿಕ" ಅಥವಾ "ಲಕ್ಷಕ" ಎಂದು ಹೆಸರು (ಭಾರಮೀ. ೨೬೩).
[ಸಂ.]

**ಲಾಕ್ಷಣ್ಯ** (ನಾ). ಲಕ್ಷಣಗಳಿಂದ ಕೂಡಿದುದು; ಚಿಹ್ನೆ ಅಥವಾ ಗುರುತಿಗೆ ಸಂಬಂಧಿಸಿದುದು. [ಸಂ.]

**ಲಾಕ್ಷಾಗೃಹ** (ನಾ). ಅರಗಿನ ಮನೆ : ಲಾಕ್ಷಾಗೃಹೋಗ್ರಾಗ್ನಿ[ಯಾ]ನನದೊಳ್ ಮುಟ್ಟಿಗದರ್ (ಕಂಕಪಾ. ೩-೩೨). [ಸಂ.]

**ಲಾಕ್ಷಾದ್ರವ** (ನಾ). ಅರಗಿನ ರಸ : "ಅಲತಗೆ ಜತು ಲಾಕ್ಷಾದ್ರವಮಲಕ್ತಕಂ ಯಾವಮಿವು ಸಮಾನಾರ್ಥಂ" (ಪತ್ತುಕೋ. ೭೭-೦೩) ; ಲಾಕ್ಷಾದ್ರವಾದಿಕಾರಿತ ಮಾಯಾಪಾರುಣಜಲಪರಿಪೂರ್ಣವಾಪಿಯುಂ ಸಮೆಯಿಸಿದೊಡೆ (ಆದಿಪು. ೨-೦೯೭); ರಕ್ತಮಂ ಪೋಲ್ವ ಲಾಕ್ಷಾದ್ರವದೊಳು ಬೊಡ್ಡಣಬಾವಿಯಂ ತೀವಿದೊಡೆ (ಶಾಪುಂಪು. ೦೪). [ಸಂ.]

**ಲಾಕ್ಷಾಪ್ರದೀಪ** (ನಾ). ಒಂದು ನರಕದ ಹೆಸರು : ಲಾಕ್ಷಾಪ್ರದೀಪ . . . ಕ್ರಿಮಿಕುಲಗಳೆಂಬವೇ ಯೆಂಟು ರಾಜನರಕಂಗಳು (ಶಿವೇಶ. ೦೬೯). [ಸಂ.]

**ಲಾಕ್ಷಾಪ್ರಸಾದನ** (ನಾ). ಒಂದು ಬಗೆಯ ಮರ ; ಕೆಂಪು ಅರಗಿನ ಮರ : "ಕ್ರಮುಕಃ, ಪಟ್ಟಿಕಾಖ್ಯಂ, ಪಟ್ಟಿ, ಲಾಕ್ಷಾಪ್ರಸಾದನಃ— ೪ ಕೆಂಪುಅರಗಿನ ಗಿಡ, ಕೆಂಪುಜಾಲಾರೀಗಿಡ, ಪವಕದ ಮರವೆಂದು ಕೆಲವರೆನ್ನುವರು" (ಸಿದ್ಧಾಂತಿ. ೮೨೦). [ಸಂ.]

**ಲಾಕ್ಷಾಮುದ್ರೆ** (ನಾ). ಅರಗಿನ ಮುದ್ರೆ : ನವಲಾಕ್ಷಾಮುದ್ರೆಯನೊಡೆದು ಪರಿಪುದುಂ (ಸುಕುಮಾ. ೦೦-೦೦೩). [ಸಂ. ಲಾಕ್ಷಾಮುದ್ರಾ]

**ಲಾಕ್ಷಾರಸ** (ನಾ). = ಲಾಕ್ಷಾದ್ರವ : ಪೆಜರಜೀಯದಂತು ಕರುವಿಟ್ಟು ಲಾಕ್ಷಾರಸಾದಿಗಳಿಂ ಸಪ್ತಧಾತುಗಳಂ ಪಡೆದು ವರ್ಣಕ್ರಮಂಗೈಯೆ (ಶಂರಾಪಾ. ೩-೨೩೭). [ಸಂ.]

**ಲಾಕ್ಷೆ** (ನಾ). = ಲಾಕ್ಷ : "ಜತು, ಯಾವಕಃ, ಲಾಕ್ಷಾ—ಈ ೩ ಅರಗು" (ಹಲಾಯು. ೯೦-೯೦೦) ; ಕೃಷ್ಣಾಗರು ಶ್ರೀಗಂಧ ಲಾಕ್ಷಾ . . . ಕರ್ಪೂರವೆಂಬ ದಶಾಂಗಗಳಂ (ಶಿವೇಶ. ೦೦೩) ; ಮತ್ತಮದೊಂದು ವೃಕ್ಷಮಿರದಿತ್ತುದು ಕಾನಡಿಯೂಡೆ ಲಾಕ್ಷೆಯಂ (ಜಾಕಂಂಕ. ೩೦-೮೩). [ಸಂ. ಲಾಕ್ಷಾ]

**ಲಾಖ** 'ಲಕ್ಕ$_1$' ನೋ.

**ಲಾಖಿ** (ನಾ). ಕಡುಗೆಂಪುಬಣ್ಣ ; ಅರಗಿನ ಬಣ್ಣ : (೪). [←ಹಿಂ. ಲಾಖೀ]

**ಲಾಗ$_1$** ' ಲಾಗು$_1$ ' ನೋ.

**ಲಾಗ$_2$** ' ಲಾಗು$_2$ ' ನೋ.

**ಲಾಗರು** (ನಾ). ನಿಶ್ಶಕ್ತವಾದುದು ; ದುರ್ಬಲವಾದುದು : ದಂಡಿನಲ್ಲಿ ಇರುವಂಥಾ ಸಾಮಾನು ಹೇರುವ ಎತ್ತು, ಗಾಡಿಯೆತ್ತು, ಸಹ, ಬಹಳ ಲಾಗರಾಗಿ ಇದೆ. ಇದರಿಂದ ಕೆಲಸ ಸಾಗುವದಿಲ್ಲಾ (ಠಾಕೀಂದ್ರ. ೦೯೩).
[←ಪಾರ. ಹಿಂ. ಲಾಗರ್]

**ಲಾಗವಡು**, ಲಾಗವಾಡು, ಲಾಗುವಡು, ಲಾಗುವಾಡು, ಲಾಗೋಡು (ನಾ). ೧. (ವ್ಯವಸಾಯದ) ಖರ್ಚು ; ವೆಚ್ಚ : ...ನಿರೂಪ ಸೌದರಾದ ಪ್ರಕಾರ ಲಾಗವಡು ಮುಟ್ಟಿಸಿ (ಶುಶಾಶಂ. II. ೭೩) ; ದನಕರುಗಳಿಗೆ ನೀರು, ಮೇವು ಕೊಡುವ ಏರ್ಪಾಟನ್ನು ಮಾಡುವರಲ್ಲದೆ ಅದಕ್ಕಾಗಿ ತಗಲುವ ಲಾಗವಡನ್ನು ಆಯಾಯ ಕಾಲಕ್ಕನುಗುಣವಾಗಿ . . . ನಿರ್ಧರಿಸುವರು (ಗ್ರಾಪಂಶ. ೦೦೯). **ಲಾಗವಾಡು** : ೧. "ಲಾಗವಾಡು = ವರ್ಷದ ಖರ್ಚು" (ಶಾಪಕೋ. ೪೨). **ಲಾಗುವಡು** : ೧. ಯಿನ್ನೂರುಐವತ್ತು ವರಹದ ವರಿಗು ಲಾಗುವಡು (ಎಕ. XI, ಹಿಂದುಶಾ. ೩೬-೦೦ ; 1533ರ). **ಲಾಗುವಾಡು** : ೧. ಪ್ರಯಾಣದ ವೆಚ್ಚ, ಊಟ, ತಿಂಡಿಗಳ ವೆಚ್ಚ-ಬೇರೆ ಲಾಗುವಾಡು ಖರ್ಚುಗಳು, ಎಲ್ಲ ನನ್ನ ಲೆಕ್ಕಕ್ಕೆ ! (ಧೂಮಕೇ. ೨೨). **ಲಾಗೋಡು** : ೧. (ನೂರು) ೧೦೦ ರೂಪಾಯಿ ಲಾಗೋಡಾಗುತ್ತೆ (ಕಂಪ. ೩೫೦) ; ಇಂತಹ ಗೊಬ್ಬರದಲ್ಲಿ ಲಾಗೋಡು ಕಡಮೆ, ಸ್ವಲ್ಪ ಹೆಚ್ಚು ಕಾಲ ಬೇಕಾಗುತ್ತದೆ (ಕರಕ. ೯). ೨. ಗೊಬ್ಬರ : ಈ ಸಲದ ಮಳೆ ಬೀಳುವ ಮೊದಲೇ ಹೊಲಕ್ಕೆ ಲಾಗೋಡು ಹೊಡೆಯಬೇಕು (ದೂಪ). [← ಮರಾ. ಲಾಗವಡ./ತೆಲು. ಲಾಗುಬಡಿ]

**ಲಾಗವಾಡು** 'ಲಾಗವಡು' ನೋ.

**ಲಾಗಾಯತು₁**, ಲಾಗಾಯತ್ತು₁, ಲಾಗಾಯಿತು₁, ಲಾಗಾಯ್ತು₁ (ನಾ). ಮೊದಲು : ಪ್ರಾರಂಭ : ಇಂಗ್ಲೆಂಡಿನಲ್ಲಿ ಲಾಗಾಯತಿನಿಂದ ಶ್ರೀಮಂತ ಸಭೆಯೊಂದು . . . ಪಾರ್ಲಿಮೆಂಟಿನ ಅಂಗವಾಗಿ ಬೆಳೆದುಕೊಂಡು ಬಂದಿರುವುದು (ರಾಜ್ಯಶಾ. ೩೧೧). **ಲಾಗಾಯತ್ತು** : ಲಾಗಾಯತ್ತಿನಿಂದ ಹಂಗೇನೇ ನಡೆದುಕೊಂಡು ಬಂದದೆ (ಸಾಹೇಬ್. ೧೨೩). **ಲಾಗಾಯಿತು₁** : ಲಾಗಾಯಿತಿನಿಂದಲೂ ಸಾಗುವಳಿ ಮಾಡುತ್ತಿದ್ದ ಒಕ್ಕಲಿಗರಿಗೆ ಗುತ್ತಿಗೆಗೆ ಕೊಟ್ಟು ಮಾಡಿಸುತ್ತಾರೆ (ಕಂಪ. ೦೫೩). **ಲಾಗಾಯ್ತು₁** : ಲಾಗಾಯ್ತಿನಿಂದ ನಿಮ್ಮನೇ ಬೇಡಿಲೆ ಇದ್ದೇನೆ, ಸಾರ್ (ಪುಟೋಶಂ. ೭೭) ; ಪ್ಪಲ್ಲಯ್ಯನಿಗೂ ನಮಗೂ ಲಾಗಾಯ್ತಿನಿಂದ ವ್ಯಾಜ್ಯ (ಮುಯ್ಯಿ. ೩೦). [< ಲಾಗಾಯತ್ತು₂]

**ಲಾಗಾಯತು₂**, ಲಾಗಾಯಿತು₂, ಲಾಗಾಯ್ತು₂ (ಅ). ೧. ಮೊದಲಿನಿಂದ; ಪ್ರಾರಂಭದಿಂದ: ಈ ಲಾಗಾಯತು ೧೮೩೧ನೇ ಇಸವಿಯವರಿಗೂ ಮಹಾರಾಜರವರೇ ಸ್ವಂತವಾಗಿ ರಾಜ್ಯಭಾರ ಮಾಡಿದರು (ಶಾಮುಶಂ. ೩೩೬) ; ಹೋದ ಜುಲಾಯಿತಿಂಗಳು ಲಾಗಾಯತು ಯುದ್ಧಕ್ಕೆ ತಯಾರು ಮಾಡುವುದಕ್ಕಾಗಿ (ರಾಕೇಂದ್ರ. ೦೫೭). **ಲಾಗಾಯಿತು₂** : ೧. ಮೊಕದ್ದಮೆಯ ಕಾರ್ತಿಕದ ಲಾಗಾಯಿತು ಹುಟ್ಟಿ ವಾನ್ಯೂಗುವ ಕಾರ್ತೀಕ ವರೆಗೆ (ಗ್ರಾಪಂಶ. ೩೩). ೨. ಹೊತ್ತಿನಿಂದ ; ಸಮಯದಿಂದ : ೧೮೮೫ರ ಲಾಗಾಯತು ಬೊಂಬಾಯಿಯಲ್ಲಿ ಅನೇಕ ಕಾರ್ಖಾನೆಗಳು ಏರ್ಪಟ್ಟುದರಿಂದ (ಶಾಸ್ತ್ರ. ೪೦) ; ಮುಂಜಾನೆ ಸುದ್ದಿ ತಿಳಿದ ಲಾಗಾಯಿತು ಬಹಳ ಕಾತರಳಾಗಿ ಬಿಟ್ಟಿದ್ದಾಳೆ (ಸಾಹೇಬ್. ೨೨೭). **ಲಾಗಾಯ್ತು₂** : ೨. ಇಲ್ಲಿಂದ ಹೋದ ಲಾಗಾಯ್ತು ಅವಳ (ನಿರ್ಮಲೆಯ) ಮೇಲೆ ಕಣ್ಣಿಟ್ಟಿದ್ದೆ (ಜುಶುದಾ. ೨೬೯) ; ವರುಷವರುಷಗಳ ಲಾಗಾಯ್ತು ನಾನು ಜೀವ ಹಿಡಿದು ಕೊಂಡಿರುವುದು ಅಪ್ಪರ ಸಲುವಾಗಿಯೇ ಮಗೂ (ಹಳ್ಳಿಪಾ. ೦೦೨).

[← ಅರ. ಹಿಂ. ಲಗಾಯತ್]

**ಲಾಗಾಯತ್ತು₁** 'ಲಾಗಾಯತು₁' ನೋ.

**ಲಾಗಾಯಿತು₁** 'ಲಾಗಾಯತು₁' ನೋ.

**ಲಾಗಾಯಿತು₂** 'ಲಾಗಾಯತು₂' ನೋ.

**ಲಾಗಾಯ್ತು₁** 'ಲಾಗಾಯತು₁' ನೋ.

**ಲಾಗಾಯ್ತು₂** 'ಲಾಗಾಯತು₂' ನೋ.

**ಲಾಗಿಸು₁**, ಲಾಘಿಸು₁ (ಕ್ರಿ). ೧. ಹಾರು ; ನೆಗೆ ; ಜಿಗಿ : ಭಯವಡಗಿ ರಾಯನಲ್ಲಿಗೆ ಮೆಲ್ಲಮೆಲ್ಲನುಪಾಯಗತಿ ಪಲ್ಲವಿಸಲುಪ್ಪರಘಾಯದಲಿ ಲಾಗಿಸುವ ಪಾರ್ಥನ ಕಂಡುದಖಿಳಜನ (ಕುಮ್ಯಾ.ಕ. ೦೭-೨); ಲಾಗಿಸಿ ನಭಕುಪ್ಪರಿಸುವ ಬಂದಿದಿರಾಗಿ ನಿಲ್ಲುವ ಭೂತದಂತೆ (ಪೋಜಕ. ೦೦-೬೮) ; ಕುವಲಯ ಕುಟ್ಮಳಾವಳಿಯ ವರ್ಗಳೆಯುಂ ನೆಗೆದೇಱೆ ಲಾಗಿಸುತ್ತೆ (ಶಾಜಕ. ೨-೭೨). ೨. ನೆಗೆಯಿಸು ; ಹಾರಿಸು ; ಚಿಮ್ಮಿಸು : ಸೀಗುರಿಸುವುರಿವಿಷದ ಲೋಳೆಯ ಲಾಗಿಸುವ ನಾಲಗೆಯ . . . ಹಾವ್ ತುಡುಕಿದವು ಥಟ್ಟನರಿ (ಕುಮ್ಯಾ.ಕ. ೨೩-೩೯) ; ಮನೆಮನೆ ತೋಟದ ಅಡಿಮೇಲಾಗಿಸಿ ತೆಂಗನು ಲಾಗಿಸಿ ಅಡಕೆಯ ಬಾಗಿಸಿ (ಕಂಪ. ೨೬-೦೦). ೩. ಎಳೆ ; ಜಗ್ಗು : ಕೀಚಕನು ಬೆನ್ನಟ್ಟಿ ತುರುಬನ್ನು ಹಿಡಿದು ಲಾಗಿಸಲು ಆ ರಾಜಪುತ್ರಿಯು ಭೂಮಿಯಲ್ಲಿ ಬಿದ್ದಳು (ಕೃಪಾಪ. ೨೯). **ಲಾಘಿಸು₁** : ೧. ಕಟಿಕಟಕ ಕವಿಕವಿದು ನಾಲ್ದೆಸೆಯ ಗಿರಿತರುನಿವಹಗಳ ಲಾಘಿಸುತ ಕಂಠೀರವರವದೊಳೈತಂದರು (ಅಕಂಶಾ. ೩-೬-೩).

[ಲಾಗು₁ + – ಇಸು₃]

**ಲಾಗಿಸು₂** (ಕ್ರಿ). ೧. ಯೋಜಿಸು ; ಎಸೆಕೆ ಹಾಕು : ವೇಗದಲಿ ಸನ್ನದ್ಧ ಚಾಪದಲಾಗ ಪಾರ್ಥನು ಬರುತ ಮನದಲಿ ಲಾಗಿಸುತ ತಾನೊಂದ ನೆನೆದನು (ಸಂಕಪ. ೦೬-೨೩). ೨. ಒದಗು ; ಉಂಟಾಗು : ಸಮಬುದ್ಧಿ ಮೆಲ್ಲನೆ ಲಾಗಿಸುವುದಿರುತಿರುತಲೀ ಪರಿ ಚಿತ್ತಶುದ್ಧಿಯಲಿ (ಕೃಬುಲೀ. ೦೩-೯೩). ೩. ಒದಗಿಸು : ಲಾಗಿಸುತಿರ್ದುವು ಸುಜ್ಞಾನಸುಖಗಳು ಯೋಗದ ಸಿರಿಯನು (ಚರಕ. ೯-೩). ೪. ಹೊಡೆ ; ಬಡಿ ; ತಾಟಿಸು : ದೂರಕೆ ಸಿಡಿದ ಗದೆಯನು ತುಡುಕಿ ನೃಪತಿಯು ತೊಡೆಗೆ ಲಾಗಿಸಿದ (ಕುಮ್ಯಾಗ. ೭-೯೯) ; ಲಗಿಡನಂತೆಬಗೆ ಲಾಗಿಸುವ ಹೋರಾಟದ ವಿಗಡಮಲ್ಲರುಗಳೊಪ್ಪಿದರು (ಕಂಪಪ. ೨೦-೯೩). 'ಲಗಾಯಿಸು' ಪರಾ.

[ಲಾಗು₃ + – ಇಸು₃]

**ಲಾಗು₁**, ಲಾಗ₁ (ನಾ). ೧. ನೆಗೆಯುವಿಕೆ ; ಲಂಘನ : "ವೆಗ್ಗಳ ಲಂಘನಂಗಳೊಳು ಲಾಗು" (ಕಬ್ಬಿಮುಂ. ೪೩); ತೋಹಿನ ಶಬರನಂತೆ ಲಾಗಿನ ವ್ಯಾಘ್ರದಂತೆ ಅಡುವ ವಿಧಾನದಂತೆ ಇಂತೀ ವೇಷ ಸಹಜ (ಪೋಳಕಶು. ೩೯-೦೯೦); ಗಜಗಮನ ಅಹಿಯ ಸರಸಂಧಾನ ಮಯೂರನ ಶಯನ ಮಾರ್ಜಾಲನ ಧ್ಯಾನ ಕಂಠೀರವನ ಲಾಗು . . . ಇಂತೀ ನಾನಾ ಗುಣಂಗಳ ಲಕ್ಷ್ಯಾಲಕ್ಷತವಂ ತಿಳಿದು (ಸಪಕ. ೦೩೯-೬೬೩). ೨. ಪಲ್ಟಿ : ಕುರುಡಡೊಂಬನ ಲಾಗುಗಳಂತೆ ಕಡೆಯೊಳು ನರಕಗತಿಗೆ ಕೆಡಹಿದುದು (ಪರ್ಕ. ೩-೯೯). ೩. ಮಲ್ಲಯುದ್ಧದ ಒಂದು ಪಟ್ಟು,-ವರಸೆ : ಒಂದೆರಡು ಲಾಗಿನಲಿ ನಿಮ್ಮನು ಹಿಂದುಮುಂದನು ಮಾಡದುಳಿವೆನೆ ಎಂದು ದಾನವ ಗದೆಯ ತಿರುಹುತ ಮುಂದೆ ಹರಿತಂದ (ಕೌಶಿರಾ. ೨೫-೪೦). ಭುಜಗಳನು ಹೊಯ್ದು ಘಲ್ಲಿಸುತ್ತಿದಿರಾಗಿ . . . ಆವದಿರು ಲವಣ ಲಾಗು ಮುರಿ ಮೊದಲ ಬಗೆಯಿಂದ ಹೂಣಗುತ್ತಿರ್ದರು (ವಿಕ್ರಮಶ. ೨-೦೨-೪೦). ೪. [ನಾಟ್ಯ] ನೃತ್ಯದ ಒಂದು ಭಂಗಿ : ನಲವಿನ ರೇಖೆ ರೇಖೆಗಳಮ್ಮು ಶರೀರದ ಲಾಗು ಲಾಗಿನೊಳ್ ನೆಲಸಿದ ರೂಪು . . . ಭಾವವಳಮ್ಮರೆ ನರ್ತಕಿ ನಾಡೆ ನರ್ತಿಪಳ್ (ಧರ್ಮಶ. ೨-೨೯); ಪದತಳದೊಳ್ ತಾಳಮಂ ಬೀಸರಂಬೋಗಲೀಯದೆ ಸೆಱೆವಿಡಿದು ರೂಪು ನೇರು ಲಾಗು ಲವಣಿಯುಡವು . . . ಕೂಟಮಾನಂಗಳಂ ಸಂಗಳಿಸಿ ರಸಭಾವಂದಪ್ಪದೆ . . . ಚತುರ್ವಿಧ ನರ್ತನಮಂ ಚತುರಜನ ಮಚ್ಚುವಂತೆ ತೋರ್ಪ ನರ್ತಕಿಯರಿಂ (ಶಾಜಕ. ೩-೦೯ ಪ). ೫. [ಸಂಗೀತ] ಹಾಡುವಿಕೆಯ ಒಂದು ಸೊಗಸು : ವಳಿ ಲಾಗು ನೋಗು ಪಸರಂ ಏರಿ ಪಾಂಗು ಬೆಡಂಗು ಭಂಗಿ ಸಂಗಳಿಸೆ ಸುಕಂಠೆ ಪಾಡಿ ಪುದಿದಳ್ ಮುದವಂ ನರನಾಥಚಿತ್ತದೊಳ್ (ಕುಶುಶು. ೦-೬೭). 'ಲವಣ್ಕೆ' ಪರಾ. **ಲಾಗ₁** : ೧. ಧರೆಗೆ ಕಾಲಿಡದೊಂದು ಲಾಗ ಲಾಗಿಸಿತಲ್ಲಿಗೆರಡಾಬುಯೋಜನವಾಯ್ತು (ಶಕಕ. ೨೯-೯೩). ೨. ಹುಲಿ ಕರಡಿಗಳಿಂದ ಸಾವೂ ಮಾಡಿಸಬೇಕು ಹೊಡಿ ಮೂರು ಲಾಗವೆನಬೇಕು (ತಂಶಾಕ. ೦೦೯-೪೯) ; ಚಿತ್ರವಿಚಿತ್ರವಾದ ಲಾಗಗಳು

ಹಾಕುವುದನ್ನು ನಾನು ಅನೇಕ ಸಾರಿ ಕಂಡಿದ್ದೇನೆ (ಗಂಶ್ರ. ೩೨). ೪. ಅಂಬಾವರನ ಮುಂದೆ ಇಂಬಾದ ಭಾವಪ್ರೇರಣೆ ತಿರುಪು ಲಾಗಗಳು ಸಂಭ್ರಮಂಬಡೆ ಸ್ತ್ರೀಯು ನರ್ತನದ ಕೇಳಿಕೆಯು ನಿತ್ಯ ಕೇಳಿಸುವಾತನು (ಗುರುಚಾ. ೭-೭೦). 'ಲಗ್ಗೆ' ಪರಾ.

**ಲಾಗಹಾಕು** = ೧. ತಲೆಕೆಳಗು ಮಾಡಿ ನೆಗೆ; ಪಲ್ಟಿಹೊಡೆ : ಬೇಗ ತಿರ್‍ರನೆ ತಿರುಗಿ, ಸರ್‍ರನೆ ಲಾಗ ಹಾಕಿದ ಡೊಂಬನು (ಕಂಪು. ೩೮-೭); ಪಾರಿವಾಳ ಹಾರುವಾಗ ಲಾಗ ಹಾಕುವುದು (ಕಂಕೋ. I. ೭೧೦); ಲಾಗ ಹಾಕೋಣ ಎಂದು ಆಸೆಯಾಯಿತು (ಶಾರದಾ. ೦೨೦). ೨. (ಆಲಂ) ಪ್ರಯತ್ನಮಾಡು : ಕಷ್ಟಪಡು : ವರ್ಷವೆಲ್ಲಾ ಲಾಗಹಾಕಿ ತಲೆ ಕೆಡಿಸಿಕೊಂಡು ಹಗಲೂ ರಾತ್ರಿ ಓದಿ, ಓದಿ (ಬಾಗಿನ. ೦೦೨). ೩. ಅನುತ್ತೀರ್ಣನಾಗು : ಸೋಲು : ನಪಾಸಾಗು : ಪರೀಕ್ಷೆಯಲ್ಲಿ ಲಾಗಹಾಕಿದ್ದ ವಿದ್ಯಾರ್ಥಿ (ಪಾಂಗೇ. ೦೯೦) ; ಬಿ.ಎ. ಯಲ್ಲಿ ಎರಡನೆಯ ವರ್ಷ ಲಾಗ ಹಾಕಿ ಮೂರನೆಯ ದಂಡಯಾತ್ರೆಗೆ ಸಿದ್ಧನಾಗುತ್ತಿದ್ದ (ಅಂತೂ. ೯೮); ಅವರಲ್ಲಿ ಬಹುಮಂದಿ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಲಾಗ ಹಾಕಿ ಬಂದವರೇ (ರಮಣಶ್ರೀ. ೯೮). **ಲಾಗಹೊಡೆ** = ೧. ನೆಗೆ; ಜಿಗಿ : ಹಾರು : ಡೊಂಕ ಮಾರಿಯ ಹನುಮ . . . ಲಂಕಾಕ ಲಾಗ ಹೊಡೆದಾನೊ (ಕನ್ನಜಾ. ೦೦). ೨. ಬಹಳ ಪ್ರಯತ್ನ ಮಾಡು : ಕಾಮಣ್ಣ ಎಂಥ ಲಾಗಹೊಡೆದರೂ ಸಹ ಜನರು ಗೌಡನ ಕಡೆ ಹೋಗುವುದನ್ನು ನಿಲ್ಲಿಸಿರಲಿಲ್ಲ (ಮುನ್ನುಡಿ. ೫೦). ೩. ಸಾಯು : ಮರಣ ಹೊಂದು : ಅವಳಿಗಾದರೂ ವಯಸ್ಸು ಬಹಳಾಗಿದೆ. ಯಾವಾಗ ಲಾಗಹೊಡೆಯುವಳೋ ಎಂಬುದು ತಿಳಿಯುವುದಿಲ್ಲ (ಸಿರೋಳಿ. ೦೪).

[ದೇ.॥ ತೆಲು. ಲಾಗು./ಸಂ. ಲಂಘನ]

**ಲಾಗು೨**. ಲಾಗ್ಗು೨. ಲಾಘು (ನಾ). ೧. ರಭಸ; ತೀವ್ರತೆ : ಕುಸುಮಂಗಳಂ ಲಾಗಿನಿಂ ತಿರಿವ ಪಸುಗೂಸುಗಳ್ . . . ದಾರಿಯಂ ತೋಱಲ್ಕೆ (ಶಾಸೋಪು. ೫-೫೦) ; ತನಿಗಿಡಿಯು ದಳ್ಳುರಿಯ ನಾಲಿಗೆ . . . ಕಡುಲಾಗಿನಲಿ ಲಂಘಿಸಿ ಚುಂಬಿಸಿದುದುರಿ ಲಲಿತನಂದನವ (ಕುವ್ಯಾಭ. ೨೦-೨೭) ; ಸರಳ ಹಿಡಿವುದ ಬಿಡುವ ಲಾಗುವ ಸುರರಿಗುಪಮಿಸಲರಿದು (ಗೌತಿಲ. ೩೫-೨೭). ೨. ಚಳಕ; ಕೌಶಲ; ಚಾತುರ್ಯ : ಲಾಗಿಂದ ಕಲ್ಲುಕೋಳಯು ತಾ ಕೂಗೀತು (ಜಾಂಶಂ. ೩೦) ; ನಮ್ಮ ಲಾಗಿನ ಧುರವು ತಾನಿದು ದಿಟ್ಟನಹೆಯೋ ಪಾರ್ಥ (ಕುವ್ಯಾದ್ರೋ. ೯-೯೭) ; ಮಗನೆ ಕೇಳ್ಕೆ ಲವನೆ ಲವಣಿಯು ಲಾಗು ಬೇಟಿಾವರ (ತೊರವೆ. ೭-೨೫-೦೮). ೩. ಆಧಿಕ್ಯ : ಅತಿಶಯತೆ : ಹೆಚ್ಚಳ : ಬೇಗದಲಿ ಪರಸಿದ್ಧಿಯ ಲಾಗಿನಲಿ ಶಂಘುವನು ಮೆಚ್ಚಿಸುತ (ಸಂಭಶ. ೬-೨) ; ಇವನ . . . ಕಪಟಪಾರಿಗಭೇದ್ಯ ಬೊಮ್ಮನ ವರದ ಲಾಗಿನಲಿ (ಗೌತಿಲ. ೨೭-೦೪). ೪. ಹಗುರ; ಸರಳ; ಸುಲಭ : ಈ ಪ್ರಶ್ನೆಯು ನಿನಗೆ ಲಾಗಲ್ಲಾಯೆಂದು (ಬರೀಕ್ಕ. ೭೭) ; ಬೆಲೆಯ ಹೇಳಿನಗೆ ಲಾಗಾಗೆ ಹೊಂಗೊಡುವೆನೇಳೆಂಟುದಿನಕೆಂದನು (ಹರಿಶ. ೦೦-೭) ; ಲಾಗಿನಿಂದಲಿ ಗುರುಗುಹೇಶ್ವರನಾಗಳೆನ್ನನು ನುಡಿಸಿದೊಡೆ ನುಡಿವಾಗುವಾದಿಯ ಪೇಳ್ವೆನು (ಶ್ರಶುಂ. ೦-೯). ೫. ಗುರಿ ; ಲಕ್ಷ್ಯ; ಧ್ಯೇಯ: ಉದ್ದೇಶ : ಆಡುವ ಆಟ ತಪ್ಪಿ . . . ಮತ್ತೆ ಆ ಲಾಗು ಬಂದಿತ್ತೆಂಬ ದಿಮ್ಮು ಮನುಜರುಗಳಿಗೆ ಹೇಳುವುದುಂಟೇ (ಮೋಕ್ಷಮ. ೬೬-೩೫೦) ; ಭವಭವಂಗಳಲಿ ತೊಳಲಿ ಬಳಲುವ ಜೀವಭಾವದೊಳುಳಿವುದಾವುದು ಲಾಗು ಮೂಢರ ಬಳಿಕಗಾವಂಜುವೆವು (ಕುವ್ಯಾಶ. ೫-೪೦). **ಲಾಗ್ಗು೨** : ೬. ತ್ವರೆ; ಶೀಘ್ರತೆ : ಮಾಯಾವಾದನು ಲಾಗದಲಿ ಕಳದಾಟಿಗೆ . . . ಸನ್ನೆ ಮಾಡುತ ಕೈಗಳಿಂದಾ ಹುಡುಗಿಗೆ (ಕಂತು. ೯೦-೨೫). ೭. ಮೋಸ ; ಕಪಟ ; ವಂಚನೆ (?) : ಎನ್ನ ಒಡಲ ಹೊರೆದನೆಂದು ಹೋದ ಠಾವಿನಲ್ಲಿ ಒಗರವನಿಕ್ಕುವ ಲಾಗಿನ ಶೀಲವಂತರ ಮನದ ಭೇದವ ನೀವೆ ಬಲ್ಲರಿ (ಕವಾಶ. ೦೩೭). **ಲಾಘು** : ೮. ಡೊಂಬಗಣಿಯನೇರುತಾನೆ ಅವನು ಕಂಬ ಮುರಿದು ಲಾಘು ತಪ್ಪಿ (ಜಾಂಶಂ. ೯).

**ಲಾಗುವೇಗ**. **ಲಾಗುಬೇಗೆ** = ಅತಿಶಯವಾದ ಕೈಚಳಕ,_ ಕೌಶಲ : ಕರ್ಣನ ಲಾಗುವೇಗವನೇನನೆಂಬೆನು ಚಾಪತಂತ್ರದಲಿ (ಕುವ್ಯಾಕ. ೨೩-೩೯); ಅನಲಾಂಬಕ ಹರಿಸವಲಿ ಘನ ಲಾಗುವೇಗದಿ ಜೋಡಿಸಿ ನಂದಿವಾಹನವೇಱಿ ವನಾಹವಕೆ (ಮೋಹತ. ೩೭-೪೭); ಪೊಯ್ಯೆ ಕಾಳವಟ್ಟದಿ ಪೋರಗದಿಂದೆ ಪೊಯ್ವು ನೆರತುಂ ಸರಿವೋದವು ಲಾಗುಬೇಗದೊಳ್ (ಜಿಸಂಪು. ೦೧-೭೦). [ < ಸಂ. ಲಾಘವ ]

**ಲಾಗು೩** (ನಾ). ೧. ಹೊಂದಿಕೆ; ಸೇರುವಿಕೆ; ಲಗತ್ತು : ಈ ಭಾಗದಲ್ಲಿರುವ ನಿಯಮಗಳು ಕೆಲವು ಜನರಿಗೆ ಲಾಗು ಇರುತ್ತವೆ ಮತ್ತು ಕೆಲವರಿಗೆ ಲಾಗು ಇರುವುದಿಲ್ಲ (ಸಂವಿಧಾ. ೩೪ ಕ್ರಮಾವಳಿ); ಇದಕ್ಕೆ ಯಾವ ಕಾಯದೆ ಲಾಗೂ ಆಗಾಣೆಲ್ಲಾ (ರಕ್ತರ. ೦೨೦). ೨. (ಆಲಂ) ಹೊಡೆತ; ತಾಡನೆ: ಹಗಲಿರುಳೆನ್ನದೆ ಹೊಡೆಯುವ ಜಡಿಮಳೆ ಬಡಿಕೋಲ್ಮಿಂಚಿನ ಲಾಗುಗಳು (ಪಕ್ಷಿ. ೨೦-೩). [ < ಲಗಾವು./ಮರಾ. ಲಾಗೂ ]

**ಲಾಗುಕಾಱ** (ನಾ). ಚತುರ : ಭೇದದ ಗುರು ಚೋದ್ಯದ ಶಿಷ್ಯ ಇಂತೀ ಲಾಗುಕಾಱರನೊಲ್ಲ ಆತುರವೈರಿ ಮಾರೇಶ್ವರಾ (ಶಗಿಮಾ. ೪. ೯೨೨-೦೨೦೯); ತೆಗೆದೆಚ್ಚು ಗರುಡಿಯ ಲಾಗುಕಾಱನ ರಥವ ಮುಱಿದನು (ಕುವ್ಯಾದ್ರೋ. ೫೦. ೨೯೦). [ ಲಾಗು೨ + – ಕಾಱ ]

**ಲಾಗುವಡು** 'ಲಾಗವಡು' ನೋ.

**ಲಾಗುವಾಡು** 'ಲಾಗವಡು' ನೋ.

**ಲಾಗುಳ** 'ಲಾಕುಲ' ನೋ.

**ಲಾಗೊತ್ತು** (ಕ್ರಿ). ಕಾರ್ಯೋನ್ಮುಖಗೊಳಿಸು : ತೊಡಗಿಸು ; ನಿಯೋಜಿಸು : ಅಡಿಯನಾರ್ಕೈದೆಯ್ದೆ ಹಕ್ಕಿಯಿಕ್ಕೆಯನಱಿವ ಗಿಡುಗನಂ ಲಾಗೊತ್ತಿ ಸಲಿಗೆಯಿಂಟಿಂ ಸಿಲುಕೆ . . . ತೋಱಿದರು ಬೇಂಟೆಯಂ (ಅಶಿಶಂ. ೨೩-೦೭). [ ಲಾಗು೨ + ಒತ್ತು೧ ]

**ಲಾಗೋಡು** 'ಲಾಗವಡು' ನೋ.

**ಲಾಘು** 'ಲಾಗು೨' ನೋ.

**ಲಾಘವ** (ನಾ). ೧. ಚಿಕ್ಕದಾಗಿರುವುದು : ಪುಟ್ಟದಾಗಿರುವುದು. ೨. ಹಗುರವಾಗಿರುವಿಕೆ ; ಲಘುತ್ವ : "ಲಾಘವಮದು ಲಘುತೆ" (ವಸ್ತುಕೋ. ೦೦೫-೨೯); ಹಿಂದಿನ ಕಾವ್ಯಗೌರವಗಳಿಗೆ ಲೋಪಗಳುಂಟಾಗಿ, ಎಲ್ಲವರಲ್ಲಿಯೂ ಲಾಘವ ಹೆಚ್ಚುತ್ತಿದೆ (ಅರಯೋ. VII, ಮುನ್ನುಡಿ). ೩. ಕೀಳುತನ; ಕ್ಷುದ್ರತೆ ; ಸಣ್ಣತನ : ಲಾಘವದಿಂದಿರುವುದು ರಣಧೀರನಿಗೆ ಸಹನೆಯಾಗದೆ. ಅವನು ಅವರಿಗೆ ಬುದ್ಧಿ ಕಲಿಸಿದ (ಸಂತಕ. ೦೦೩). ೪. ಕೀಳಾದುದು; ಕ್ಷುಲ್ಲಕವಾದುದು; ಹೀನವಾದುದು : ಕೈಕೆ ಬೇಡೆ ಧರೆಯುಂ ತೃಣದಿಂ ಲಾಘವಮೆನೆ ಬಗೆದೀಗುಂ ರಾಘವನೌದಾರ್ಯತುಂಗನೀಯದುದುಂಟೇ (ಶಂರಾಮ. ೭-೦೦೯); ಕಾಮಧೇನುವನ್ನೆ ಮನದಲ್ಲಿ ಕಟ್ಟಿಕೊಂಡು ಉಚ್ಚೈಶ್ರವಾಶ್ವವನ್ನೆ ಲಾಘವದೊಳರಿಸಿ ದೇವಗಜವನ್ನೆ ಕೀರ್ತಿಯೊಳು ಬೆರಸಿಕೊಂಡು (ಸೌಗಂಧಿ. ೦-೨). ೫. ಸೌಲಭ್ಯ; ಅನುಕೂಲ. ೬. ವೇಗ; ತ್ವರಿತತೆ; ಶೀಘ್ರತೆ. ೭. ಕೌಶಲ; ಚಳಕ; ಪಟುತ್ವ : ಚದುರ್ಪಾಣಿ ಲಾಘವ ಪಂಥಪಾಡುಗಳನಱಿದು ಬಿನ್ನಾಣದಿಂ ಗಾಯಗಾಣಿಸಿದರು (ಕೈಬಿಹಾ. ೨೨-೭); ಲಾಘವದಲ್ಲಿ ಪಾಂಡಿತ್ಯದಲ್ಲಿ ಪಟುತರದಲ್ಲಿ ಪರಾಕ್ರಮದಲ್ಲಿ ಭೀಮನ ಸರಿ ದಾರು ಇಲ್ಲ (ಕಾತ್ಯಾ. ೦೩-೩); ಕತ್ತಿ ಗರಾಣೆಗಳನ್ನು ತೆಗೆದುಕೊಂಡು ಲಾಘವ, ಸೌಷ್ಠವ, ಸೊಗಸು, ಸ್ಥೈರ್ಯ, ಹಿಡಿತ ಮುಂತಾದವುಗಳನ್ನು ಪ್ರದರ್ಶಿಸಿದರು (ವಹುರಾ. ೨೩). [ಸಂ.]

**ಲಾಘವದೋಷ** (ನಾ). [ಛಂದ] ಲಘುವಲ್ಲದ ಕಡೆಗಳಲ್ಲಿ ಲಘುವನ್ನು ಬಳಸುವ ಒಂದು ದೋಷ : ಆಗಳುಂ ಗುರುಗಳಲ್ಲದ ತಾಣದೊಳಂ ಗುರುವೊಮ್ಮೆಗದಿಂ ಬಗೆಗೆ ಗೌರವದೋಷಮಿದೆಂಬುದಂ ಬೇಗವೂ

ಲಘುಗಳಲ್ಲದ ಠಾಣದೊಳಂ ಲಘೂವಾಗಮಕ್ರಮದ ನಂಬುಗೆ ಲಾಘವ ದೋಷಮುಂ (ಕಂಠ. ೦-೦೫). [ಸಂ.]

**ಲಾಘಿಸು₁** ' ಲಾಗಿಸು₁ ' ನೋ.

**ಲಾಘಿಸು₂** (ಕ್ರಿ). ಕೀಳುಮಾಡು ; ಕಡೆಗಣಿಸು : ನೀಲೋತ್ಪಲದ ದಳವ ಲಾಘಿಸುವ ಸುಂದರಾಂಬಕದ . . . ಸೊಬಗಿ (ಗುರುಚ. ೦೩-೪೦). [< ಲಾಘವ + -ಇಸು₁]

**ಲಾಚಾರ್** ' ಲಾಚಾರು ' ನೋ.

**ಲಾಚಾರಿ** ' ಲಾಚಾರು ' ನೋ.

**ಲಾಚಾರು**, ನಾಚಾರ್ಲು, ಲಾಚಾರ್, ಲಾಚಾರಿ (ಗು). ೧. ಸತ್ತ್ವಹೀನ ವಾದ; ದುರ್ಬಲವಾದ : ಈ ಲಾಚಾರು ವೈರಿನಿಂದ ಏನು ಬೆಳೆ ಸಿಕ್ಕೀತು? (ಕೂಕ). (ನಾ). ೨. ಅಸಹಾಯಕವಾದುದು : ಬಲಹೀನ ವಾದುದು : ತನ್ನ ಜೋರು ಇಲಾಜು ಯೇನೂ ನಡೆಯದೆ ಲಾಚಾರಾಗಿ . . . ತಿರುಗುತ್ತ ಇದ್ದಲ್ಲಿ (ಐಕೇಂದ್ರ. ೨೯); ಕುರ್ಕನುಗುರು ಬಗೆದಿದ್ದ ಕಣ್ಣಿನ ಗಾಯದ ಬೇಸಿಯಿಂದ . . ಹುಲಿಯು, ಲಾಚಾರಾಗಿದ್ದರೂ . . . ಬೇಟೆಯಾಡಿ (ಕುಂಚು. ೫೭). **ನಾಚಾರ್ಲು** : ೩. ನಿಶ್ಶಕ್ತ ; ಬಲ ಹೀನನಾದವನು ; ಈಗ ತಿನ್ನುವುದು ಕುಡಿಯುವುದು ಎಲ್ಲಾ ಬಿಟ್ಟು ನಾಚಾರ್ಲಾಗಿದ್ದಾರೆ (ಪಪ್ಪು. ೩). **ಲಾಚಾರ್**: ೩. ಹುಡುಗ ಯಾಕೋ ಲಾಚಾರ್ ಆಗಿದ್ದಂಗೆ ಕಾಣ್ತಾನೆ (ಐಮಚಾ. ೦೩). **ಲಾಚಾರಿ** : ೧. ತುಂಬಾ ಲಾಚಾರಿ ಮನುಷ್ಯ. (ಕಂಬಡ. ೦೦೭). ೪. ಅಸಹಾಯಕತೆ ; ದುರ್ಬಲತೆ : ಈ ಕೊಲೆಗಾರರದೆ ಲಾಚಾರಿಯಿಂದ . . . ಇಕ್ಕಟ್ಟಾದ ಗ್ರಾಮಗಳಿಗೆ ಬಾರದೆ . . . ರೈತರ ಮನೆಮಾರು ಲೂಟಿ ಮಾಡಿ ಬೆಂಕಿ ಹಾಕುತ್ತ ಇದ್ದನು (ಐಕೇಂದ್ರ. ೩೯). [←ಹಿಂ. ಮರಾ. ಲಾಚಾರ್, ಲಾಚಾರಿ]

**ಲಾಜ₁** (ನಾ). ೧. ನೆನೆಸಿದ ಅಕ್ಕಿ. ೨. ಅಕ್ಷತೆ : 'ಲಾಜಾರೋಪ' ಪರಾ. ೩. ಹುರಿದು ಅರಳಿಸಿದ ಕಾಳು ; ಬತ್ತದ ಅರಳು ; ಅವಲು : "ಅರಳು ಲಾಜಾಪ್ಯೆಯಕ್ಕು" (ಕುಂಗಬಾ. ೦೦೦-೬); ತಪ್ಪಾಯಃಕಟಾಹಪತಿತ ಲಾಜಃಪುಂಜದಂತೆ . . . ಸಿಡಿಲ್ದು (ಆಕಪು. ೦೦-೩೩೪) ; ಪುಷ್ಪಗಳಿಂ ಕೂಡಿದ ಲಾಜಗಳಿಂ ಪೂಜಿತನಾಗಿ (ಶೌಗಂಂ. ೨೩೩-೦೩). ೪. ಒಂದು ಬಗೆಯ ಸಸ್ಯ: "ಲಾಕ್ಷಾವೃಕ್ಷಃ—ಲಾಜ, ಕೋಶ ಮೂವು" (ಓಷಂ. ೦೯೩).

**ಲಾಜಾವರುಷ**=ಅರಳನ್ನು ಸೂಸುವಿಕೆ ; ಅರಳಿನ ಮಳೆ : ವೀರ ಭುಜಕ್ಕೆ ಸುರಿವ ಲಾಜಾವರುಷದಂತಿರೆ ಮುತ್ತುಗಳೆಸೆದವು (ಕುವ್ಯಾ. ೯೯. ೪-೮೯).

**ಲಾಜಾವರ್ಷ**=ಲಾಜಾವರುಷ : ಪೌರಜನದ ಸೂಸುವ ಲಾಜಾವರ್ಷ ಮುಮಂ ಕುಸುಮವರ್ಷಮುಮನಾಂತುಕೊಳುತ್ತುಂ (ಆಂತು. ೪-೨೫ ಪ). [ಸಂ.]

**ಲಾಜ₂** (ನಾ). ತಕ್ಷಣ; ಬೇಗ; ಒಂದು ಕ್ಷಣ : ಒಂದೇ ಒಂದು ಲಾಜ ದಾರಿ ತಪ್ಪಿ ಹೋಗಿದ್ದುವು ಎಂಬುದಾಗಿ ಮತ್ತೊಬ್ಬಳು ಹೆಂಗುಸು ನುಡಿದಳು (ಕುಪು. ೨೯೭); ಎಲ್ಲ ಲಾಜದಲ್ಲಿ ನಡೆಸುಬುಡ್ತೀನಿ (ಸರ್ಕುಂ. ೦೭೩). [ ? ]

**ಲಾಜಕ** (ನಾ).=ಲಾಜ₁ ೨: ತಳಿವ ಲಾಜಕಮೆತ್ತುವ ಪುಷ್ಪಮಾಲೆ ನೀಡುವ ನವಮಾತುಲುಂಗಫಲಮೆಂಬಿವನಚ್ಯುತನೊಲ್ದು ತಾಳ್ದಿದಂ (ಜಗಾ. ೬-೨). [ಸಂ.]

**ಲಾಜಾಂಜಲಿ**, ಲಾಜಾಂಜಳಿ (ನಾ). ೧. ಬತ್ತದ ಅರಳಿನಿಂದ ತುಂಬಿದ ಬೊಗಸೆ. ೨. = ಲಾಜ₁ ೨ : ಲತಾಂಗಿಯರ್ಸೂಸುವ ಕುಸುಮ ಮಿಶ್ರಲಾಜಾಂಜಲಿಗಳ್ (ಅರಂಕೂ. ೪೬೩); ಬಟುಯಂ ಪುರೋಹಿತಾದೇಶದಿಂ ಹೋಮಾಗ್ನಿಯಂ ಪ್ರದಕ್ಷಿಣಂಗೈದು ಲಾಜಾಂಜಲಿಯನಿಕ್ಕಿ ಬಂದೊಂದೆ ಪಸೆಯೊಳ್ ಕುಳ್ಳಿರ್ದಂ (ಕಂದ್ರಪು. ೩-೩೩ ಪ). **ಲಾಜಾಂಜಳಿ** : ೧. ದಿಕ್ಕನ್ನಕೆಯರ ಸೂಸುವ ಲಾಜಾಂಜಳಿ[ಕಾಶಾಂ. ೮] ನಿಚಯವೆನಿಸುವ ಮದಕರಿಕರಶೀಕರಮುಮಂ (ಆಂತು. ೦೩-೪೪೩) ; ಸೂಸುವ ಲಾಜಾಂಜಳಿಗಳ ಸೇಸೆಯ ಸಿದ್ಧಾರ್ಥದೊದವಿನಿಂ (ವರ್ಧಮಾ. ೬-೪೨). [ಸಂ.]

**ಲಾಜಾಂಜಳಿ** ' ಲಾಜಾಂಜಲಿ ' ನೋ.

**ಲಾಜಾಕ್ಷತೆ** (ನಾ).=ಲಾಜ₁ ೨ : ಬಟ್ಟಲು ವೀಳ್ಯ ವಿಶಿಷ್ಟ ಲಾಜಾಕ್ಷತೆ ಪುಷ್ಪ ಕದಳಿ ಬೆಲ್ಲ ಕತ್ತುರಿಗಳಿಂದ ಕೃಷ್ಣರಾಯನ ಮುಂದಿಟ್ಟು ಸಮರ್ಪಿಸಿ (ಪೃರಂಪ. ೪-೪೨-೪). [ಸಂ. ಲಾಜಾಕ್ಷತಾ]

**ಲಾಜಾರೋಪ** (ನಾ). ಅಕ್ಷತೆಯನ್ನು ಎರಚುವುದು, –ಸೂಸುವುದು : ಸಭೆಯಲ್ಲಿದ್ದವರೆಲ್ಲರೂ ದೊರೆಗಳ ಮೇಲೆ ಲಾಜಾರೋಪ ಮಾಡಿ ತಮ್ಮ ಸಂತೋಷವನ್ನೂ ಶುಭಾಶಯವನ್ನೂ ವ್ಯಕ್ತಪಡಿಸಿದರು (ಕೃಕೃಪ. ೦೯೯). [ಸಂ.]

**ಲಾಜಾಹುತಿ** (ನಾ). ಅರಳಿನಿಂದ ಮಾಡುವ ಹೋಮ ; ಅಗ್ನಿಗೆ ಅರಳನ್ನು ಅರ್ಪಿಸುವುದು : ಪುರೋಹಿತರು ವಧುಗೇಗೆ ಈ ಅರ್ಥ ಬರುವ ಮಂತ್ರಗಳನ್ನು ಹೇಳಿಸಿ ಅಗ್ನಿಗೆ ಲಾಜಾಹುತಿಯನ್ನು ಮೂರಾ ವರ್ತಿ ಮಾಡಿಸಿದರು (ಶಾಂಕಅ. ೦೦೦). ' ಲಾಜಾಹೋಮ ' ಪರಾ. [ಸಂ.]

**ಲಾಜಾಹೋಮ** (ನಾ). ಮದುವೆಯಲ್ಲಿ ಮಾಡುವ ಒಂದು ವಿಧಿ ; ವಧೂವರರು ಇಬ್ಬರೂ ಬೊಗಸೆಗಳನ್ನು ಕೂಡಿಸಿ ಅರಳುಗಳನ್ನು ಅಗ್ನಿಗೆ ಹೋಮ ಮಾಡುವುದು : ಲಾಜಾಹೋಮಂ ರಾಜಸುಲಾ ಜಲ ರುಹಪತ್ರನೇತ್ರೆ . . . ಉದ್ಭಟರಾಜನ ಬಲದಿಂದೆಡಕ್ಕೆ ಬಂದಳ್ಳುದದಿಂ (ಅಧ್ವಳಿ. ೬-೩೪) ; ಹಾರುವರುಚ್ಚರಿಸುವ ಅಗ್ನಿಹೋತ್ರಪ್ರಕಾರದಿಂದ ಅವನು ವಧುವನ್ನು ಕೈಹಿಡಿದ. ಲಾಜಾಹೋಮವಾಯಿತು (ಅರುಕಿ. ೫೩). [ಸಂ.]

**ಲಾಜು** (ನಾ).=ಲಾಜ₁ ೨ : ಲಾಜಿನಿಂದಭಿಷೇಕವ ಜನರಾಜನಿಗಾ ಜಿನೇಂದುವನೂನು ಮಾಡೆ (ತ್ರಾಪಕ. ೬-೭೭). [<ಸಂ. ಲಾಜ]

**ಲಾಜೆ** (ನಾ).=ಲಾಜ₁ ೩ : "ಅರಳಾಗಿ ಪುರಿದ ಧಾನ್ಯೋತ್ಕರಮಂತವೆ ಲಾಜೆ" (ಕಪ್ರಕೋ. ೯೩-೦೦) ; ಓಜೆಯೊಳ್ ಲಾಜೆಯನಗ್ನಿಕುಂಡದೊಳ್ ಸುರಿದು (ಕಂಕಅ. ೩-೭೩ ಪ) ; ಅರಲ ಸರಂಗಳಂ ಸವೆವ ಲಾಜೆಯನೆಣಿಚೆ ಯೊಳಾಯ್ದು . . . ನೀಚಿಯರದೇನೆಸೆದಿರ್ದರೊ ಮಂಟಪಾಗ್ರದೊಳ್ (ದಾಶರ. ೬-೭). [ಸಂ. ಲಾಜಾ]

**ಲಾಟ** (ನಾ). ೧. ಒಂದು ನಾಡು ಮತ್ತು ಅಲ್ಲಿಯ ಜನರ ಹೆಸರು; ಈಗಿನ ಗುಜರಾತು ರಾಜ್ಯ : ಇದು ಲಾಟಬಲಂ (ಆಂತು. ೦೩-೪೫೭) ; ಲಾಟ ಭೋಟಕ ಗೌಳ ಪಾರ್ಶ್ವ . . . ಸಕಲದೇಶಾಧೀಶಸಮುದಯಸ್ವೀಕಶ ಸೇತುಮಹಾಸಿಂಧುಪ್ರವಾಹ ಪರಾಕು (ಹೂಡಶಂ. ೩-೦೪) ; ನಖಕ್ಷತ ದಂತಕ್ಷತಂಗಳಿಂ ಬಹು ದ್ರವಿಸುವಳು . . . ಇವಳು ಲಾಟದೇಶದ ಸ್ತ್ರೀ (ಕಾಕುಶ. ೨೦೯). ೨. ಲಾಟದೇಶದ ಭಾಷೆ : "ಲಾಟಕ ಲಾಟಮೆಂಬ ನುಡಿ ಲಾಟಮಯ್ಯು"(ಶಂಶಬ. ೨೦). ೩. (ಬಟ್ಟೆ, ಆಭರಣ ಇತ್ಯಾದಿಗಳು) ಹಳೆಯದಾದುದು ; ಹರಿದು ಹೋದುದು ; ಹಾಳಾದುದು. ೪. ಮಲ್ಲಯುದ್ಧದ ಒಂದು ಪಟ್ಟು : ಕೊಂತಮಾರವು ಲಾಟ ಡೊಕ್ಕರ. . . ತುಳಿಲ ವಿಂದಾಣದಲಿ ಹರಿ ಕಾದಿ ಬಳಲಿಸಿದ (ಶಾಳ್ಯಪ. ೨೨-೭೩). [ಸಂ.]

**ಲಾಟಕ** (ನಾ). ೧. ಲಾಟದೇಶಕ್ಕೆ ಸಂಬಂಧಿಸಿದುದು. ೨. = ಲಾಟ ೪: ಕೊಂತಮಾರಿಯು ಲಾಟಕಾ ಕೋದಂತೆ ಉತ್ತರ ಡೊಕ್ಕರವು ನೆಜೆ ಕೊಂತ ಮಾರವು ಲಾಟ ಡೊಕ್ಕರ . . . ತುಳಿಲ ವಿಂದಾಣವಲಿ ಹರಿ ಕಾದಿ ಬಳಲಿಸಿದ (ಶಾಳ್ಯಪ. ೨೨-೭೩). [ಸಂ.]

**ಲಾಟನ** 'ಲಾಂದರ' ನೋ.

**ಲಾಟರಿ** (ನಾ). "ಹಣ ಕೊಟ್ಟು ಪಡೆದ 'ಟಿಕೆಟ್ಟು' ಚೀಟಿಗಳ ಮೂಲಕ, ಕೆಲವರಿಗೆ ಕೇವಲ ಅದೃಷ್ಟದಿಂದ ಬಹುಮಾನ ದೊರೆಯುವಂತೆ

ಏರ್ಪಡಿಸಿದ ಅದೃಷ್ಟದ ಆಯ್ಕೆ" (Lottery. ಇಂಕೋ): ಯಾವನೋ ದಾರಿಯಲ್ಲಿ ಲಾಟರಿಯಿಟ್ಟುಕೊಂಡಿದ್ದ . . . ನಾನೂ ಒಂದಾಣೆ ಹಾಕಿದೆ ಎರಡು ಪೆಪ್ಪರ್‌ಮೆಂಟ್ ಬಂತು (ಹಿಂ. ೯); ಮದುವೆಯೆಂಬುದು ಒಂದು ಲಾಟರಿ ಎಂದು ಉತ್ತರ ಕೊಡುತ್ತಾನೆ (ಬಿಂಕು. ೯೯).

[ ← ಇಂ. Lottery ]

**ಲಾಟರಿಹೊಡೆ₁** (ಕ್ರಿ). ಅದೃಷ್ಟಪರೀಕ್ಷೆಯಲ್ಲಿ ಜಯ ದೊರಕು; ಲಾಟರಿಯಲ್ಲಿ ಬಹುಮಾನವು ಬರು : ಅವನಿಗೆ ಲಾಟರಿಹೊಡೆದು ಇದ್ದಕ್ಕಿದ್ದಂತೆ ಲಕ್ಷಾಧಿಪತಿಯಾದನು (ರೂ). [ ಲಾಟರಿ + ಹೊಡೆ₁ (< ಪೊಡೆ₁) ]

**ಲಾಟರಿಹೊಡೆ₂** (ಕ್ರಿ). ೧. (ಕೆಲಸವಿಲ್ಲದೆ) ವ್ಯರ್ಥವಾಗಿ ಅಲೆ—ತಿರುಗು : ಎರಡುವರ್ಷಕಾಲ ಉದ್ಯೋಗವಿಲ್ಲದೆ ಲಾಟರಿಹೊಡೆದು ಪತ್ರಿಕೋದ್ಯಮಕ್ಕೆ ಆತ ಧುಮುಕಿದಂದಿನಿಂದ . . . ಅವನನ್ನು ಬಲ್ಲೆ (ಜನುಾ. ೧೯). ೨. ತೊಳಲಾಡು ; ಬವಣೆಪಡು : ಅವನಿಗೆ ಕೊಟ್ಟು ನನ್ನ ಕಣ್ಣು ಮುಂದೆ ಅವಳು ಊಟಕ್ಕಿಲ್ಲದೆ ಲಾಟರಿಹೊಡೆಯುವುದನ್ನು ನೋಡುವುದಿಲ್ಲ (ಹಾಂಗ. ೭೬). [ಲಾಟರಿ₀ (ρ← ಇಂ. Loiter) + ಹೊಡೆ₁(< ಪೊಡೆ₁) ]

**ಲಾಟಾನು** ' ಲಾಂದರ ' ನೋ.

**ಲಾಟ** (ನಾ). [ಕಾವ್ಯಮೀ] ವೈದರ್ಭಿ, ಗೌಡಿ, ಪಾಂಚಾಲಿ ಹಾಗೂ ಲಾಟಿ ಎಂಬ ಕಾವ್ಯದ ನಾಲ್ಕು ಬಗೆಯ ರೀತಿಗಳಲ್ಲಿ ಒಂದು : ಇವುಗಳ ಜೊತೆಗೆ 'ಲಾಟ'ಯನ್ನು ಸೇರಿಸಿ ರೀತಿಗಳು ನಾಲ್ಕೆಂದೂ . . ಹೇಳುತ್ತಾರೆ (ಕೃಬಿ. ೨೨೦). [ ಸಂ. ಲಾಟೀ ]

**ಲಾಟೀನು** ' ಲಾಂದರ ' ನೋ.

**ಲಾಟು** (ನಾ). ಜನ ಅಥವಾ ವಸ್ತುಗಳ ತಂಡ,—ಮೊತ್ತ : ಮಿನು ಹ್ಯಾಗೆ ಕೊಡುತ್ತಿ ? ಲಾಟ(Lot)ಗೆ ಹೇಗೆ? (ಹೂಕಸ್ಥ. ೩೦).

**ಲಾಟುಲಾಟು** (ದ್ವಿರುಕ್ತಿ): ಮಾರ್ಕೆಟ್ಟನಲ್ಲಿ ತರಕಾರಿ ಲಾಟುಲಾಟಾಗಿ ಬಂದು ಬಿದ್ದಿವೆ (ರೂ). [ ← ಇಂ. Lot ]

**ಲಾಠಿ, ಲಾತಿ** (ನಾ). ಬಡಿಗೆ; ದೊಣ್ಣೆ; ದಂಡ : ನಿನಗೆ ಲಾಠಿ ತಿರುವಲು ಬರುತ್ತದೆಯೊ? (ಕೂಕಣ. ೬೬); ಕೋವಿ ಲಾಠಿಗಳನ್ನು ಧರಿಸಿದ ಪೋಲೀಸ್ ಪಡೆ ಹಳ್ಳಿಗೆ ಬಂತು (ಕರುಣ. ೦೨೦) ; ಪ್ರತಿಯೊಬ್ಬರ ಕೈಯಲ್ಲೂ ಒಂದೊಂದು ಲಾಠಿ (ಸ್ವಾತಂತ್ರ್ಯ. ೯). **ಲಾತಿ** : ಬ್ರಿಟಿಶರ ಲಾತಿಪ್ರಹಾರಗಳು ಅವರನ್ನು ವಂಚಿಸದಾಯಿತು (ಬಾಂತ್ರ. III. ೭೦೬).

**ಲಾಠೀಚಾರ್ಜು** = ಲಾಠಿಹಲ್ಲೆ : ಮುಖಂಡರ ಬಂಧನ . . . ಲಾಠೀಚಾರ್ಜು ಗೋಳೀಬಾರ್ . . . ಫಾಸೀ . . . ಘೋರ ಘೋರ ಶಿಕ್ಷೆಗಳು (ಅಗ್ನ್. ೯). [< ಪ್ರಾ. ಲಟ್ಠಿ./ಹಿಂ. ಮರಾ. ಲಾಠೀ]

**ಲಾಠಿಹಲ್ಲೆ** (ನಾ). ದೊಣ್ಣೆ ಬೀಸಿ ಗುಂಪನ್ನು ಚದುರಿಸುವುದು : ಸ್ತ್ರೀಯರ ಮೇಲೆಯೂ ಲಾಠಿಹಲ್ಲೆಗಳಾಗುತ್ತಿದ್ದುವು (ಕಾಂಗ್ರೆಸ್. ೨೩). [ಲಾಠಿ + ಹಲ್ಲೆ₄ (< ಹಲ್ಲಾ) ]

**ಲಾಡ₁** ' ಲಾಳ₂ ' ನೋ.

**ಲಾಡ₂** ' ನಾಲ₂ ' ನೋ.

**ಲಾಡಿ₁** ' ಲಾಳಿ₁ ' ನೋ.

**ಲಾಡಿ₂** (ನಾ). ಲಾಟದೇಶದವನು : ಅಖಂಡೈಶ್ವರ್ಯದಿಂದೊಪ್ಪಿದ ಗುಜರಾತಿಯರು ಕಾಯತರು ಗೋಸಾವಿಯರು ಲಾಡಿಯರು (ತೌಳಂ. ೦೭೩-೦). [ < ಲಾಡ₁ ]

**ಲಾಡಿ₃** (ನಾ). ೧. ನೀಳಪಟ್ಟಿ ; ಕಸೆ ; ದಾರ : "ಲಾಡೀ— ಚಲ್ಲಣದ ಕಸೆ" (ಕಾಕಶ್. ೨೩೯) ; ಈ ಪರ್ಯಾಯಗಳಿಗೆ ಕಾಣಿಸುವ ತೆರಪು ಗಳಿರುವುದಿಲ್ಲ . . . ಇವನ್ನು ಬೆನ್ನಿನ ಹಿಂಭಾಗದಲ್ಲಿ ಲಾಡಿಯಿಂದ ಕಟ್ಟುತ್ತಾರೆ (ಕೃಪಾಸ. I. ೩೩೬). ೨. ಹಗ್ಗ ; ಹುರಿ : ಲಾಡಿಯ ಲಗಾಮನ್ನು ಹಿಡಿದಿದ್ದ ಅವರ ಕೈಗಳಲ್ಲಿ ಪವಿತ್ರದ ಉಂಗುರಗಳು ಹೊಳೆಯುತ್ತಿದ್ದುವು (ಕಕಕ. ೦) ; ಅವನ್ನು ಕೂಡಲೆ ಲಾಡಿಗಳ ಮೂಲಕ ಮೋಟರನ್ನು ಜೋಡಿಸುವಲ್ಲಿಗೆ ಕಳುಹುವರು (ಬಾಂಕ್ರ. I. ೯೦೩). ೩. ತೆಳುವಾಗಿ ಉದ್ದಕ್ಕೆ ಲಾಡಿಯಾಕಾರದ ಒಂದು ಬಗೆಯ ಹುಳು; ಕರುಳಿನ ಹುಳು : "ಲಾಡಿಯಂತಿರುವ (ಕರುಳಿನಲ್ಲಿಯ ಜಂತು) : ಲಾಡಿಜಂತು" (Cestoid. ಇಂಕೋ) ; ಲಾಡಿಹುಳುಗಳ ವರ್ಗದಲ್ಲಿ ದೇಹವು ಚಪ್ಪಟೆಯಾಗಿ ಲಾಡಿಯಂತೆ ಉದ್ದನಾಗಿರುತ್ತದೆ (ಪ್ರಾಣಿಶಾ. ೦೪೩).

[← ಹಿಂ. ನಾಡಾ; ಮರಾ. ನಾಡಾ, ನಾಡೀ. / ಪ್ರಾ. ಣಾಡಿ./ಸಂ. ನಾಡೀ]

**ಲಾಡು** (ನಾ). ಒಂದು ಬಗೆಯ ಸಿಹಿಭಕ್ಷ್ಯ; ಲಡ್ಡು : ವಡೆ ಅತಿರಸ ಲಾಡು ಸೇವಿಗೆ ಪರಮಾನ್ನ (ಶಂದ್ರಾಶ. ೬) : ಶಿವು . . . ಲಾಡು ಸಮಾರಾಧನೆಗೆ ಒಂದು ದಿನವಾದರೂ ತಪ್ಪಿಸಿಕೊಳ್ಳುವ ಮನುಷ್ಯನಲ್ಲ (ರಾಷಾಶ. ೦೦೩): ಚಿರೋಟಿ, ಲಾಡು, ಮತ್ತೊಂದು ಸಿಹಿ ದಪ್ರೋಟು (ಸಂಗಾ. ೩೯). [ ← ಹಿಂ. ಲಾಡೂ, ಲಡ್ಡೂ ; ಮರಾ. ಲಾಡು./ತಮಿ. ಲಾಡು. /ಸಂ. ಲಡ್ಡು ]

**ಲಾತ** ' ಲತ್ತೆ ' ನೋ.

**ಲಾತಕೋಲು** (ನಾ). ಏಟು ಕೊಡುವ ಕೋಲು : ಬಡಿಗೋಲು : ಮೇಲೆ ಮಿಳ್ಳುವಿನ ದಾಡೆಯುಂ ಕೀಳುತಂ ಲಾತಕೋಲಂತೆ ತಿರುವುವ ಮಹಾಮೇರುಮಂದರ ಸುಕೀಲಕಂಗಳ ಕಂತುಕಕ್ರೀಡೆಯಾಡುವ . . . ಓರ್ವಂ (ಶಿಕ್ಕಪು. ೬-೬-೨೮): ಪಿರಿಯ ಮಿಳ್ಳುವಿನ ದಾಡೆಗಳನಲುಗಿಸಿ ಕಿಳ್ತು ಭರದಿಂದೆ ಲಾತಕೋಲಂತೆ ತಿರುಗಿಪನೊರ್ವನುರು ಮೇರು ಮಂದರಾದ್ರಿಗಳ ಪೊಡೆಚೆಂಡಾಡುವಂ ಸಂತತಂ ಮುದದೊಳು (ಅರಾಶ. ೩-೦೬-೯).

[ ಲಾತ (< ಲತ್ತೆ) + ಕೋಲು₁ ( < ಕೋಲ್₁) ]

**ಲಾತಿ** 'ಲಾಠಿ' ನೋ.

**ಲಾತು** 'ಲತ್ತೆ' ನೋ.

**ಲಾಪ** (ನಾ). ಸಂಭಾಷಣೆ; ಆಲಾಪ : ಪೀಠದೊಳ್ ಕುಳ್ಳಿರಿಸಿ ಲಾಪಮಂ ಪರಮಯೋಗೀಂದ್ರನೊಡನಾರಂಭಿಸುತ್ತೆಂದ ಶಕ್ರ ನಗುತ (ಕುಮಾರ. ೬).

[ಸಂ.]

**ಲಾಪಿಸು** (ಕ್ರಿ). ಹೇಳು; ತಿಳಿಸು : ಒಲ್ಲದಕುಬಾಯವನು ಲಾಪಿಸುವನು (ದೇವಾಂಕ. ೨-೩೮). [ ಲಾಪ + — ಇಸು₃ ]

**ಲಾಭ** (ನಾ). ೧. ದೊರಕಿದುದು ; ಪ್ರಾಪ್ತಿ: "ಲಭ, ಲಬ್ಧಿ . . . ಲಭಃ, ಲಾಭಃ, ಈ ೯ ಪಡೆತಂ" (ಕಾಕಶ್. ೦೫೦); ಲೋಭವೇಕೋ ಭಕ್ತಿಯ ಲಾಭವ ಬಯಸುವಂಗೆ (ಬಸವ. ೦೦೬). ೨. (ವ್ಯಾಪಾರದಲ್ಲಿ) ಖರ್ಚು ಕಳೆದು ಬರುವ ಫಾಯಿದೆ,— ನಫೆ : "ಉಟ್ಟದುದು — ಬಟ್ಟುದು . . . ಲಾಭವಾದುದು" (ಕಪುದ. ಕಂ. ೦) ; ವ್ಯಾಪಾರ ಮಾಡುವಾಗ ಖರ್ಚೆಲ್ಲಾ ಕಳೆದು ಬಳಿ ಉಳಿಯುವ ಹಣವೇ ಲಾಭ (ಗೃಶಾ. ೦೯೪): ಲಾಭವಿಲ್ಲದೆ ಸೆಟ್ಟಿ ಹಳ್ಳಿಗೆ ಹೋಗ (ಗಾದೆ). ೩. ಪ್ರಯೋಜನ : ಈ ಸಂಸಾರದಲ್ಲಿ ವಿನಯದಿಂದ ಬಹಳ ದೊಡ್ಡ ಲಾಭವಾಗುವುದು (ಮುಂಶಾಬು. ೯-೭೩). [ಸಂ.]

**ಲಾಭಂಬೆಜು** (ಕ್ರಿ). (ವ್ಯಾಪಾರದಲ್ಲಿ) ಖರ್ಚುಮಾಡಿದುದಕ್ಕಿಂತ ಹೆಚ್ಚು ಹಣವನ್ನು ಪಡೆ; ಆದಾಯವನ್ನು ಪಡೆ : ಮುಂವರದಂತೆ ಧೈರ್ಯಂ ಬೆರಸು ಲಾಭಂಬೆತ್ತ ಪರವನಂತುತ್ಸಾಹಂಬೆರಸು . . . ದೃಢಚಿತ್ತದಿಂದಿರ್ದು (ರಪಾರ್ಶ್ವ. ೦-೮೩). [ ಲಾಭ + ಪೆಱು₁ ]

**ಲಾಭಕ** (ನಾ). ೧. ನಫೆ; ಫಾಯಿದೆ. ೨. ಲಾಭವನ್ನು ಪಡೆದವನು; "ಲಭಕಃ, ಲಾಭಕಃ, ಲಭಮಾನಃ, ಈ ೩ ಪಡೆವಂ" (ಕಾಕಶ್. ೦೫೦). [ಸಂ.]

**ಲಾಭಕರ** (ಗು). ೧. ಲಾಭವನ್ನುಂಟುಮಾಡುವ; ಲಾಭದಾಯಕವಾದ. (ನಾ). ೨. ಪ್ರಯೋಜನಕಾರಿಯಾದುದು : ವೈಯುಕ್ತಿಕವಾಗಿಯೂ ತನಗೂ ಮತ್ತು ತನ್ನ ಮಗಳಿಗೂ ಲಾಭಕರವಾಗಿರುವಾಗ, ಎರೆ ನುಂಗಿ

ಗಾಳಕ್ಕೆ ಸಿಕ್ಕಿದ ಮೀನನ್ನು ದಡಕ್ಕೆಳೆಯದೆ ಬಿಡುವಷ್ಟು ಎಗ್ಗನಾಗಿರಲಿಲ್ಲ ಅವನು (ಮಲೆಮ. ೬೭೦). [ಸಂ.]

**ಲಾಭಗವಳಿಗೆ** (ನಾ). (ವೀಳೆಯದೆಲೆಯ ಕಟ್ಟುಗಳ ಮೇಲೆ ಹಾಕುವ) ಒಂದು ಬಗೆಯ ತೆರಿಗೆ : ಪೇಟೆಂಗೆ ಲಾಭಗವಳಿಗೆ ಯೆಣ್ಬನೂಱಲೆಯುಮಂ ತಲೆವೊಱೆಗೆ ಲಾಭಗವಳಿಗೆಯ ನಾಲ್ನೂಱೆಲೆಯುಮಂ . . . ಸಾಸಿರ್ವರ್ಬಿಟ್ಟಾರ್ (ಎಂ. XVIII. ಅರ್ಕ-೩೪ : 1184).

[ ಲಾಭ + ಕವಳಿಗೆ₃ ]

**ಲಾಭದಾಯಕ** (ಗು). ೧. ಲಾಭವನ್ನುಂಟುಮಾಡುವ. (ನಾ). ೨. ಲಾಭಕರವಾದುದು : ತರಕಾರಿ ಬೆಳೆಯುವುದು ಮೋಹದ ಅನ್ವೇಷಣೆ ಮಾತ್ರವಲ್ಲದೆ ಲಾಭದಾಯಕವೂ ಆಗಿದೆ (ಅಡುಸ. ೦೨೬) ; ಬಂದ ಹಣ ಲಾಭದಾಯಕವಾಗುತ್ತಿರಲಿಲ್ಲ. (ಐರುಜ. ೦೪೯). [ಸಂ.]

**ಲಾಭಬಡಕ**, ಲಾಭಬಡುಕ (ನಾ). ಹೆಚ್ಚು ಲಾಭವನ್ನು ಪಡೆಯಲು ಪ್ರಯತ್ನಿಸುವವನು : ಲಾಭಬಡಕರಿಗೆಂದು ಒಳ್ಳೆಯ ಸುವರ್ಣಸಂಧಿ ಬಂದೊದಗಿತು (ಕುರುಣ. ೦೩೦). **ಲಾಭಬಡುಕ :** ಕೆಲವರು ಲಾಭಬಡುಕ ಕಂಟ್ರಾಕ್ಟರುಗಳಿಂದಲೂ, ದಲ್ಲಾಳಿಗಳಿಂದಲೂ . . . ಹೇರಳವಾಗಿ ಹಣವನ್ನು ಸಂಗ್ರಹಿಸಿ (ಕಂಜಕಂ. ೦೪೬).

[ ಲಾಭ + – ಬಡಕ₂ (< – ಬಡಕ₂) ]

**ಲಾಭಬಡುಕ** 'ಲಾಭಬಡಕ' ನೋ.

**ಲಾಭಸೆರೆ** (ನಾ). (?) : ಗೇಣಿದಾರರು ಗೇಣಿಯನ್ನು ಕೊಡುವುದರ ಜೊತೆಗೆ ತರಕಾರಿ, ತರಪಡಿ, ತಳರಾಸಿ, ಮೇಲ್ಗೊಳಗ, ಲಾಭಸೆರೆ ಮುಂತಾದ ಮರ್ಯಾದೆಗಳನ್ನೂ ಭೂಮಾಲೀಕರಿಗೆ ಕೊಡಬೇಕಾಗಿತ್ತು (ಕಂಜಕಂ. ೦೧).

[ ಲಾಭ + ಸೆರೆ₇ ]

**ಲಾಭಾಂತರಾಯ** (ನಾ). [ಜೈನ] ಅಂತರಾಯಪಂಚಕಗಳಲ್ಲಿ ಒಂದು; ಲಾಭವನ್ನು ಸಂಪಾದಿಸಬೇಕೆಂದಿದ್ದರೂ ಅದು ಸಿಗದಂತೆ ಮಾಡುವ ಕರ್ಮಪ್ರಕೃತಿ : ಲಾಭಾಂತರಾಯ : ಲಾಭವನ್ನು ಸಂಪಾದಿಸುವ ಬಯಕೆ ಇದ್ದರೂ ಸಿಗದಿರುವುದು. (ಕೃಪಥ. ೩೭೭). 'ಅಂತರಾಯಪಂಚಕ' ಪರಾ. [ಸಂ.]

**ಲಾಮ** 'ಲಾಮಾ' ನೋ.

**ಲಾಮಂಚ**, ಲಾಮಚ, ಲಾಮಚ್ಚ, ಲಾಮಚ್ಚ, ಲಾಮಜ್ಜ, ಲಾಮಜ್ಜೆ, ಲಾವಂಚ, ಲಾವಂಚಿ (ನಾ). ಒಂದು ಬಗೆಯ ಸುವಾಸನೆಯ ಬೇರುಳ್ಳ ಹುಲ್ಲು ; ಬಾಳದ ಬೇರು : "ಬಾಳಮಾ ಹ್ರೀವೇರಮೆನಲು ಲಾಮಂಚಮಕ್ಕು" (ಮಂಗನಿಘ. ೩೯-೨೯) ; ಪೊಸ ಲಾಮಂಚದ ತೆ[ಕೇ]ರ್ಗಳಲಂಪಿಂ ಸಿಸಿರ್ವದೆವೇದಿಕೆಗಳ ಕಡುಸೊಂಪಿಂ (ಅದ್ಭುಟಿ. ೩-೦೪); ಕುಂಚ ಸತ್ಯನಕ ದಂಡಿಗೆ ಚಮರಗಳು ಲಾಮಂಚ ಬಿಜ್ಜಣ ದಾಲವಟ್ಟ ಕಾಂಚನ ಸೌಖ್ಯ ಸಗ್ಗಳೆ ಗಿಂಡಿವಣ್ಣಗಳು ಚಂಚಲಾಕ್ಷಿಯೊಳ್ಪಿದಿದರು (ಸೋಹಕ. ೨೪-೯). **ಲಾಮಚ :** "ಜತ್ವಕ್ಕೆ ಚತ್ವಂ – ಲಾಮಜ್ಜ – ಲಾಮಚ್ಚ, ಲಾಮಚ" (ಶಮದ. ೨೫೨ ಕ್ರಿಯೋ) ; ಲಾಮಚದ ನೆರಕೆ ಗಜಪೂವುಗಳ ಹೊದಕೆ ಪಚ್ಚೆಗಪ್ಪುರವಾಳೆಗಳ ಕಂಬವಮರ್ದ ಮುಡಿವಾಳ ಗಟ್ಟು (ಕಬ್ಬಾ. ೬-೬) ; ಲಾಮಚವು ಮುಡಿವಾಳ ಪಚ್ಚೆಯ ಚಾಮರಂಗಳು (ಅತ್ತಶ. ೦೪-೩೩). **ಲಾಮಚ್ಚ :** "ಲಾಮಜ್ಜ [ಶಾಕಾಂ. ಮಂಚ] ದಿರವ ಕೊಳವೇರೆಸಿಕ್ಕುಂ" (ಕಬ್ಬಿಕೈ. ೨೦). **ಲಾಮಚ್ಚ :** "ಕಾಶ್ಚಿಕಾ – ಲಾಮಚ್ಚ, ಒ(ಪೊ)ಗರು (ಜು)ಮಣ್ಣು" (೬ಆಫಿ. ೨೯). **ಲಾಮಜ್ಜ :** "ಶ್ವೇತವಾಲಂಕಂ – ಲಾಮಜ್ಜ" (೬ಆಫಿ. ೦೭೦). **ಲಾಮಜ್ಜೆ :** "ಇಷ್ಟಕಾಪಥಂ – ಲಾಮಜ್ಜೆ" (೬ಆಫಿ. ೦೪). **ಲಾವಂಚ :** ಕಂಪಿನ ಮೊಲ್ಲೆ ಮಲ್ಲಿಗೆ ಪದ್ಮ ಲಾವಂಚ ತಂಪೆನುತಿರ್ದರಲ್ಲಲ್ಲಿ (ಕರಕ. ೯೭-೨೩) ; ಯಾವ ಲಾವಂಚದ ಬೀಸಣಿಗೆ . . . ತಂಪಿಡಿದೀತು ? (ಚಾಂಕ್ರ. II. ೦೦೬೦).

**ಲಾವಂಚಿ :** ಕಬ್ಬು, ನಸೇ, ಲಾವಂಚಿ, ಕಾಶಿ (ಷಷ್ಮುಪಿ. ೨೬೯).

[ < ಪ್ರಾ. ಲಾಮಂಜಯು, ಲಾಮಂಜ. / ಸಂ. ಲಾಮಜ್ಜಕ ]

**ಲಾಮಚ** 'ಲಾಮಂಚ' ನೋ.

**ಲಾಮಚ್ಚ** 'ಲಾಮಂಚ' ನೋ.

**ಲಾಮಚ್ಚ** 'ಲಾಮಂಚ' ನೋ.

**ಲಾಮಜ್ಜ** 'ಲಾಮಂಚ' ನೋ.

**ಲಾಮಜ್ಜಕ** (ನಾ). = ಲಾಮಂಚ : "ಉಶೀರಂ, ಅಭಯಂ . . . ಲಾಮಜ್ಜಕಂ, ಲಘು, ಲಯಂ, ಅವದಾಹಂ, ಇಷ್ಟಕಾಪಥಂ–೧೦ . . . ಲಾಮಂಚದ ಹೆಸರು" (ಸಿದ್ಧಾಂತಿ. ೦೫೦). [ಸಂ.]

**ಲಾಮಜ್ಜೆ** 'ಲಾಮಂಚ' ನೋ.

**ಲಾಮಾ**, ಲಾಮ (ನಾ). [ಬೌದ್ಧ] ಧರ್ಮಗುರು : ಬೌದ್ಧಧರ್ಮದ ಮುಖ್ಯ ಆಚಾರ್ಯನಾದ ಲಾಮಾ ಎಂಬುವನು ಇರುತ್ತಾನೆ (ಕುಂಶಿಕು. ೯-೨೦೯). **ಲಾಮ :** ಮತಪ್ರವರ್ತಕರಾದ ಗುರುಗಳು 'ಲಾಮ' ಎಂದು ಕರೆಯಲ್ಪಡುತ್ತಾರೆ. ಮಹಾಲಾಮನು ಬುದ್ಧನ ಅವತಾರವೆಂದು . . . ಭಾವಿಸೋಣವಾಗಿದೆ (ಭೂಗೋಳ. ೦೨೦).

[← ನೇಪಾಳಿ. ಲಾಮಾ ; ಟಿಬೆಟಿಯನ್. ಬ್ಲಾಮ]

**ಲಾಮಾಪಂಥ** (ನಾ). ಬೌದ್ಧರ ಒಂದು ಪಂಥ,–ಪಂಗಡ : ಪದ್ಮಸಂಭವ ತಾಂತ್ರಿಕಬೌದ್ಧಮತದ ಆಚಾರ್ಯನಾಗಿದ್ದು . . . ಲಾಮಾ ಪಂಥವನ್ನು ಆರಂಭಿಸಿದ (ಕಾಕಪ. ೩೪೭). [ಲಾಮಾ+ಪಂಥ]

**ಲಾಯ** (ನಾ). ಕುದುರೆಗಳನ್ನು ಕಟ್ಟುವ ಕೊಟ್ಟಿಗೆ ; ಅಶ್ವಶಾಲೆ ; ತಬೇಲಿ : "ಲಾಯ:_ಕುದುರೆಯ ಮನೆ" (ಕಾಕಕೈ. ೦೬೬) ; ಲಾಯದ ಅಶ್ವ ನೀರನೊಡಗೂಡಿತ್ತು (ಮರುಕ. ೩೭) ; ಲಾಯದೊಳಗುತ್ತಮದ ತೇಜಿಯನಾಯ್ದು ಹೂಡಿದ ರಥಕೆ (ವಳಕ. ೯-೨೯) ; ಒಬ್ಬನು ಕುದುರೆಗಳನ್ನು ಲಾಯದಲ್ಲಿ ತಂದು ಕಟ್ಟಿದನು (ಪಂಕಾಕ. ೦೦); ಅರಸನ ಕುದುರೆ ಲಾಯದಲ್ಲೇ ಮುಪ್ಪಾಯಿತು (ಗಾದೆ).

[? ./ ತಮಿ. ಮಲ. ತುಳು. ತೆಲು. ಲಾಯ]

**ಲಾಯಃಖ್** 'ಲಾಯಕ್ಕು' ನೋ.

**ಲಾಯಕು** 'ಲಾಯಕ್ಕು' ನೋ.

**ಲಾಯಕ್ಕು**, ಲಾಯಃಖ್, ಲಾಯಕು, ಲಾಯಖು, ಲಾಯಖ್ಖು (ನಾ). ೧. ಯೋಗ್ಯವಾದುದು ; ಅರ್ಹವಾದುದು : ಒಂದು ರೀತಿಯಿಂದ ಸುದ್ದಿಗಳು ಹುಟ್ಟುವುದು ಲಾಯಕ್ಕು (ಐದುಜ. ೨). ೨. ಯೋಗ್ಯವ್ಯಕ್ತಿ ; ಅರ್ಹನಾದವನು: ಶ್ರೀಧರನು . . . ಆ ಹುಡುಗಿಗೆ ಸುತರಾಂ ಲಾಯಕ್ಕಲ್ಲ (ಚಿಪಾ. ೦೦೯) ; ಹೆಣಾ ಹೊರೋಕೆ ನೀನು ಲಾಯಕ್ಕು (ಅವ್ವಕೂ. ೭೩) ; ಸೇವೆಗೆ ಲಾಯಕ್ಕು ಆಗಿದ್ದೀ (ಬೆಳಕ್. ೨೯೨). **ಲಾಯಃಖ್ :** ೧. ಮಳಿಕತ್ತೆ ಲಾಯಃಖಾಗಿಲ್ಲ, ಕುಂಟುತ್ತದೆ (ಹಸಹೂ. ೩೨೦). **ಲಾಯಕು :** ೧. ಎತ್ತುಗಳು ಗಿಡ್ಡರಾಸಿ ಆಗಿ ಗಾಡಿ ಎಳೆಯುವ ಲಾಯಕು ಅಲ್ಲ (ರಾತೇಂದ್ರ. ೩೯). **ಲಾಯಖು :** ೧. ಸಾಗುವಳಿ ಲಾಯಖು ಭೂಮಿ (ಭೂಂಬಂ. ೩೪) ; ತಮಿಳು, ತೆಲುಗು ಸಿನೇಮಾನೇ ಅವರಿಗೆ ಲಾಯಖು (ಹಸ್ನಿಂದ. ೩೬). ೨. ಚಿಕ್ಕಪಟ್ಟ ಕಳವು ಮೊಕದ್ದಮೆಗಳನ್ನು ಹಿಡಿದು ವಿಚಾರಿಸಲು ಲಾಯಖಾಗಿರುತ್ತಾನೆ (ಗ್ರಾಪಶಿಕ. ೬೦). **ಲಾಯಖ್ಖು :** ೧. ಕೇವಲ ಗುಮಾಸ್ತರ ವರ್ಗವನ್ನು ಉತ್ಪತ್ತಿ ಮಾಡುವುದಕ್ಕೆ ಲಾಯಖ್ಖಾದ ಶಿಕ್ಷೆ (ಭೂಂತಕ. ೦೬೩) ; ಇದು ಅದಕ್ಕಿಂತ ಪಸಂದಾಗಿದೆ. ಲಾಯಖ್ಖಾಗಿ ಬಳುಕ್ತದೆ. ಎಂದು ಐಗಳಿಗೆ ಕೊಟ್ಟರು (ಮಲೆಮ. ೩೩೬).

[←ಅರ. ಲಾಇಕ್ ; ಹಿಂ. ಲಾಯಕ್ ; ಮರಾ. ಲಾಯಕ್, ಲಾಯಖ್]

**ಲಾಯಖು** 'ಲಾಯಕ್ಕು' ನೋ.

**ಲಾಯಖ್ಖು** 'ಲಾಯಕ್ಕು' ನೋ.

**ಲಾಯಗುದುರೆ** (ನಾ). ಲಾಯದಲ್ಲಿರುವ ಕುದುರೆ : ಮತ್ತಗಜ ವಂದ ವೇಟ ಕಂಥವ ಕಿತ್ತುದುಪ್ಪರಿಗೆಯು ಮುಟಿದುದಾ ಲಾಯಗುದುರೆಗಳಾ ತುತ್ತಿದುದು (ಕಾಳ್ಗ. ೨೨-೪೨). [ಲಾಯ + ಕುದುರೆ]

**ಲಾಯರ್** 'ಲಾಯರು' ನೋ.

**ಲಾಯರಿ** (ನಾ). ವಕೀಲವೃತ್ತಿ ; ವಕಾಲತ್ತು : ಈ ಸಲದ ಲಾಯರಿ ಪರೀಕ್ಷೆಗೆ ಅವನು ಕುಳಿತಿದ್ದ (ರಚ). [< ಲಾಯರು]

**ಲಾಯರಿಕೆ** (ನಾ). ವಕೀಲನಾಗಿರುವಿಕೆ ; ವಕೀಲಿವೃತ್ತಿ : ಸೀತಾ ರಾಮು ನೋಡಲು ಗಡುಸಾಗಿದ್ದರೂ ಸ್ವಭಾವ ಮಾತ್ರ ಬಹಳ ಮೃದು . . . ಅದರಿಂದಲೇ ಇರಬೇಕು ಲಾಯರಿಕೆಯಲ್ಲಿ ಅಷ್ಟಾಗಿ ಹೆಸರು ಬರಲಿಲ್ಲ (ಅಂಕು. ೬೬). [ಲಾಯರು + – ಇಕೆ]

**ಲಾಯರು**, ಲಾಯರ್ (ನಾ). ನ್ಯಾಯವಾದಿ ; ವಕೀಲ : ಮೃದುಸ್ವಭಾವದ ಜನರು ಲಾಯರುಗಳಾದರೆ ಕಕ್ಷಿಗಾರರಿಗೆ ಕೈಲಾಸವೇ ಗತಿ ! (ಅಂಕು. ೬೬). **ಲಾಯರ್** : ಈಗ ಮೈಸೂರಿಗೆ ಬಂದು ಲಾಯರ್ ಆಗಿರಲು ಪ್ರಯತ್ನಿಸುತ್ತಿದ್ದ (ಅಂಕು. ೬೬). [← ಇಂ. Lawyer]

**ಲಾಯವಳ್ಳ** (ನಾ). ಲಾಯದ ಸೇವಕ : ಈ ಲಾಯದಿಂ ಮಿಟಜ ಬಂದತ್ತರರೇ ಕರ್ಗೋಡಗಂ ಭೋಯೆನುತೆ ಪೆಱಗೆ ಸಾರ್ತರ್ಪಿನಂ ಲಾಯ ವಳ್ಳರ್ (ಜಿತ್ರಗೋ. ೨೦-೪೯). [ಲಾಯ + – ವಳ್ಳ (< – ವಳ)]

**ಲಾಯಿ** (ನಾ). ವರಸೆ (?) : ಛಾಯದಲಿ ಸಲೆ ಚೊಕ್ಕಯದಲು ಪಾಯ ಕರ ದಂಡೆಯಲಿ ಲಗುಡೆಯ ಲಾಯಿಯೊಳಗೆ ನವಾಯಿ ಬಿನ್ನಾಣದಲಿ ಬೇಸಱದೆ ಸ್ಥಾಯಿಯಲಿ ಸಂಚರಿಯಲೀಯದಳ್ಳಾಯಿಯಲಿ ಬಂಧದ ವಿನೋದ ದಲಾಯತನವನಱದಿಹನೆ ಮಲ್ಲನು ರಾಯ ಕೇಳೆಂದ (ಕುವ್ಯಾ. ಶ. ೬೦೮. ೦-೮೩). [ ? ]

**ಲಾರಣಾ** (ನಾ). (?) : ಮಾರ್ಗದಲ್ಲಿ ಅವರನ್ನೆಲ್ಲಾ ಲೂಟೀಮಾಡಿ ಭರತರ್ಪೂ ಕುದುರೆ ಪೈಕಿ ಕೆಲವೂ ತಮ್ಮ ಕಡೆ ಲಾರಣಾ ಬರಶಿಕೊಂಡು . . . ಕೋಟೆಯಲ್ಲಿಯಿದ್ದ ಫವುಜನೆಲ್ಲಾ ತೆಗೆದು ಕಡತನಾಳು ಕೆಂಗಾಳು ಬೋರೆ ಮೇಲೆ ಯಿಳಿಸಿದರು (ಕೃದಶ. ೩೯). [ ? ]

**ಲಾರಿ** (ನಾ). ಸಾಮಾನು, ಸರಂಜಾಮುಗಳನ್ನು ಸಾಗಿಸುವ ಒಂದು ಬಗೆಯ ಮೋಟಾರು ವಾಹನ : ಲಾರಿಯಲಿ ಇದನು ಸಾಗಿಸಿ ಇಳಿಸಿ ಬಾಗಿಲಲಿ ಹಣ ಸಂದಿತೆಂದು ತೆರಳಿದನು ಸಂತುಷ್ಟಿಯಲಿ (ಅಕವು. ೬೦-೦೩); ದೊಡ್ಡದೊಂದು ಲಾರಿ ಬಂದು ನಿಂತಿತು (ಕೆರೂ. ೩೯) ; ಘಾಟಿಯ ದಾರಿಯ ಲಾರಿಯ ನಡುಸುವುದು (ಕಂಪ್ರಶಿ. ೦೦೮-೨೯). [← ಇಂ. Lorry]

**ಲಾಲ್** (ನಾ). ೧. ಕೆಂಪುಬಣ್ಣ ; ಕೆಂಬಣ್ಣ. ೨. ಕಂದುಬಣ್ಣದ ಮೈ ಹಾಗೂ ಕೆಂಬಣ್ಣದ ಎದೆ ಇರುವ ಒಂದು ಬಗೆಯ ಹಕ್ಕಿ : ಚಿಕ್ಕ ಹಕ್ಕಿಗಳಲ್ಲಿ ಹೂಗುಬ್ಬಿಗಳ ಸಾಲಿಗೆ ಸೇರುವ "ಲಾಲ್" ನಮ್ಮಲ್ಲಿ ಅತಿ ಪ್ರಿಯವಾದ ಹಕ್ಕಿ (ಬಾಂಕ್ರ. III. ೦೯೩೬).

**ಲಾಲ್‌ತರಕಾರಿ** = ಮಾಂಸ : ಮುಖ್ಯವಾಗಿ ಅವನಿಗೆ ಬೇಕಾದುದು ಲಾಲ್‌ತರಕಾರಿ (ಶಷ್ಕೊತು. ೨೨೦). [← ಪಾರ. ಹಿಂ. ಮರಾ. ಲಾಲ್]

**ಲಾಲ್‌ತಿಗಡೆ** (ನಾ). ಒಂದು ಬಗೆಯ ತಿಗಡೆ ; ಕೆಂಪು ತಿಗಡೆ : "ಸರಳಾ, ಶಿಪ್ರಾ . . . ಭೇದಿಯಾಗುವ ಲಾಲ್‌ತಿಗಡೆ" (ಸಿದ್ಧಾಂತಿ. ೦೩೬). [ಲಾಲ್ + ತಿಗಡೆ]

**ಲಾಲ್‌ಬಾಗ್**, ಲಾಲಬಾಗು (ನಾ). ಉದ್ಯಾನವನ ; ತೋಟ : "ಆಕ್ರೀಡಃ, ಉದ್ಯಾನಂ . . . ಅರಸುಗಳಿಂದ ಹಾಕಿಸಲ್ಪಟ್ಟಿರುವ ಊರು ಹೊರಗಣ ತೋಟ, ಲಾಲ್‌ಬಾಗ್" (ಸಿದ್ಧಾಂತಿ. ೦೦೦) ; ಲಾಲ್‌ಬಾಗಿನಿಂದ ದವಲತ್ತುಬಾಗು . . . ಪ್ರಾರಂಭಮಾಡಿಸಿದರು (ರಾಕಂಪ್ರ. ೯೨). **ಲಾಲಬಾಗು** : ಸರ್ವಮಾನ್ಯವಂ ಪಡೆದು ಒರಿಯ ಕೆಱಿಯ ಕೆಳಗೆ ಲಾಲಬಾಗಿನ ಹರುನೀರಲ್ಲಿ ಬಿಟ್ಟಡಕೆ ತೋಂಟ (ಶಾಸಸ. IX–i, ೨೬೭-೩೯ ; 1160) ; 'ಚಿಕ್ಕಲಾಲ್‌ಬಾಗ್' ಎಂದು ಯಾರು ಹೆಸರಿಟ್ಟರೋ, ಏಕೆ ಇಟ್ಟರೋ ತಿಳಿಯದು, ಬೆಂಗಳೂರಿಗೆಲ್ಲ ಹೆಮ್ಮೆಯ ಉದ್ಯಾನವಾದ ಲಾಲಬಾಗಿಗೂ ಇದಕ್ಕೂ ಒಂದು ವಿಷಯದಲ್ಲೂ ಹೋಲಿಕೆಯಿಲ್ಲ (ಪ್ರಾಕೋ. ೪೦). [ಲಾಲ್ + ಬಾಗ್]

**ಲಾಲ** (ನಾ). ಒಂದು ಬಗೆಯ ಅಳಲೆ : "ಸಜ್ಜರಸ _ ಲಾಲ" (೬ಕಂ. ೦೭೪). [ಸಂ. ಲಾಲಾ]

**ಲಾಲಂಕಿ** (ನಾ). ಒಂದು ಬಗೆಯ ಆಟ (?) : ಒಂದುದಿವಸಂ ಬ್ರಾಹ್ಮಣರ ಪುತ್ರರೊಳಗೆ ಬಸವಂ ಸಂತೋಷದಿಂದೆ ಲಾಲಂಕಿಯಾಡಲು ಪೂರ್ವ ಭ್ರಾಂತನುಂ ಮಕ್ರೊರ್ವನಂ ಬಾವಿಯೊಳು ನೂಂಕಿಯಿಂತು ಕೆಡಪುವರೆ ಬಸವರಸರೇ ಎಂದಷ್ಟುಮುಂದಿವನ ಮೇಲಿಕ್ಕಲು (ಕ್ರಕುಪು. ೬-೭೭). [?]

**ಲಾಲಂಗಿ** (ನಾ). [ಸಂಗೀತ] ರಾಯಗಳಲ್ಲಿ ಒಂದು ಪ್ರಭೇದ ; ರಾಗಾಲಾಪನೆಯ ಒಂದು ಪ್ರಕಾರ : ಗಮಕಂ ಗಾರವಂಬಡೆಯೆ ಗಹಗಹಿಕೆಗೊಂಡಂಗೊಂಡಿ ಚಡಂ ಬಾಹಟಂ ಲಾಲಂಗಿ ತನ್ನೆವಣೆ ನಿಸ್ಸರಡೆ ರಂಗರಕ್ತಿ ಬೇಗವಣಿತು . . . ಕಮ್ಮಣೆ ಪೆಸರಂ ಬೆಡಂಗುವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೦೬-೬೭ ಪ). [ ? ]

**ಲಾಲಣೆ** (ನಾ). (?) : ನೂಕದರೊಳ್ಪಾಗೆ ಪಾಲ ಮಣಿಯೊಳ್ ಪರಿಸಾ ಮೇಲುಂ ವಿಷಮಗಳಿದ್ದಪೆ ಮೂಲದೊಳುಂ ದ್ವಿಗುಣಗಾಣ್ ಅದನಂ ಮತ್ತಾ ಪಾಲಿಂ ಮೂಱನು ಕೂಡಿಸು ಲಾಲಣೆಯೊಳ್ಗುಣಿಸೆ ಚೌವಮಣಿಯೊಳ್ಪರಿಸಾ (ಧಾಕ್ಕರ. ೬೮-೨). [ ? ]

**ಲಾಲನೆ** (ನಾ). ೧. ಅಕ್ಕರೆಯನ್ನು ತೋರಿಸುವುದು; ಮುದ್ದಾಡುವುದು; ಮುದ್ದಾಟ : ಬಾಲಕನ ಲೀಲೆಯಂ ಕಂಡು ಹಿಗ್ಗುವಳೊಮ್ಮೆ ಲಾಲನೆಗಳಿಲ್ಲೆಂದಳಲ್ದು ಮಱುಗುವಳೊಮ್ಮೆ (ಕೃಶಿಥಾ. ೨೮-೦೯) ; ಪಾಲನೆ ಇಲ್ಲದಿದ್ದರೆ ಲಾಲನೆಗೆ ಕಡಿಮೆಯೇ ? (ಗಾದೆ). ೨. (ರಕ್ಷಣೆಯಲ್ಲಿರುವ ಕಾಡೆಮ್ಮೆಗಳ) ಗುಂಪು (?): ಕಂಡ ಮೃಗ ಮೃದೆಗೆಯದಿಕ್ಕೆಯ ಹಿಂಡು ಹೊಳಹಿನ ಹುಲಿಯ ಮೇಕೆಯ ಮಿಂಡವಂದಿಯ ಲಾವಣಿಗೆಯ ಲುಲಾಯ ಲಾಲನೆಯ ತೊಂಡುವೊಲನ ತೊಡಂಕು ನವಿಲಿನ ಖಂಡೆಯದ ಮೊಳನೆಡಹದ ಪಿಡ್ಡದ ಹಿಂಡುಗಳ ತೋಱಿಸುವೆನು (ಕುವ್ಯಾಅ. ೦೩-೦೮). [ಸಂ. ಲಾಲನ]

**ಲಾಲಬಂದಿ** 'ನಾಲಬಂದಿ' ನೋ.

**ಲಾಲಬಾಗು** 'ಲಾಲ್‌ಬಾಗ್' ನೋ.

**ಲಾಲಸ** (ನಾ). ೧. ಅತಿಯಾದ ಆಸೆ,—ಬಯಕೆ : "ಲಾಲಸಾ, ಮಹಾನ್ಸ್ಪೃಹಾ—ಹೆಚ್ಚಾದ ಅಪೇಕ್ಷೆಗೆ ಹೆಸರು" (ಸಿದ್ಧಾಂತಿ. ೬೬) ; ಮಾತಂಗಳ್ ಮದನ ರಾಗೋನ್ಮಾದವಂ ಬೀಱೆ ಬಾಹುಗಳಾಲಿಂಗನಲಾಲಸಂಗಳೆನೆ ಧೈರ್ಯಂಗೆಟ್ಟು ಮೇಲ್ವಾಯ್ವ ಚೇಷ್ಟೆಗೆ ಪೌಲಸ್ತ್ಯನುಮೊತ್ತುಗೊಟ್ಟನೆನರಾಜಂ ದರ್ಪಕಂ ದಂಡಿಸಂ (ಶಂರಾಚ. ೯-೦೯೮). ೨. ಅತಿಯಾದ ಅಪೇಕ್ಷೆಯುಳ್ಳವನು : "ಲೋಲುಭಂ, ಲೋಲುಪಂ, ಲೋಲಂ, ಲಾಲಸಂ, ಲಂಪಟಂ_ಈ ೫ ಅಳಿಪುವವಂ" (ಶಬಯು. ೩೮-೦೯೮); ಶ್ರೀರಾಮಚಂದ್ರ ದರ್ಶನಲಾಲಸರ್ . . . ಕಾಣಿಸಿಕೊಂಡರ್ (ರಾಪಾಕ್ಷ. ೦೬-೮); ಅತ್ಯಲ್ಪ ಸಂಖ್ಯೆಯ ಜನ ಅತಿಧನಿಕರಾಗಿ ಭೋಗಭಾಗ್ಯಗಳಲ್ಲಿ ಲಾಲಸರಾಗಿರುವುದು ಅನ್ಯಾಯ (ಹಪತ್ರ. ೨೦೮). [ಸಂ.]

**ಲಾಲಸಕ** (ನಾ) = ಲಾಲಸ ೨ : "ಲೋಲುಪನಭಿಲಾಷುಕನತಿಲಾಲಸಕಂ ಗೃಧ್ನು ಲಂಪಟಂ ಲುಬ್ಧನವಂ" (ಶಸ್ತ್ರ. ೯೯-೬). [ಸಂ.]

**ಲಾಲಸೆ** (ನಾ). ೧. ಅತಿಯಾಸೆ; ಉತ್ಕಟವಾದ ಇಚ್ಛೆ; ಔತ್ಸುಕ್ಯ : ಎಲ್ಲಿ ಸೌಂದರ್ಯವಿರುವದೋ ಅಲ್ಲಿ ಲಾಲಸೆಯು ಸುತ್ತುವರೆದಿರುತ್ತದೆ (ಹೀಕುಂತ. ೪೯೬); ನಮ್ಮ ಪ್ರೇಮವು ಶುದ್ಧ. . . ಅದರಲ್ಲಿ ಲಾಲಸೆ ಇಲ್ಲ (ತ್ರಿಗಾತ. ೦೯೦). ೨. ಗರ್ಭಿಣಿಯ ಆಸೆ,—ಬಯಕೆ : "ದೋಹಳಂ,

ದೌಹೃದಂ. ಶ್ರದ್ಧಾ. ಲಾಲಸಾ_ಈ ೪ ಬಯಕೆ" (ಹಲಾಯು. ೬೨-೬೪೪).
[ಸಂ.]

**ಲಾಲಾಂಬು** (ನಾ). ಜೊಲ್ಲು : ಕರಿಕರಶೀಕರಮದಜಳ ತುರಂಗಲಾಲಾಂಬು ಸೇಕದಿಂದಟ್ಟುಂಬುದಿರ್ದ ರಜಂ ನರೇಂದ್ರಚಾಮರಮರುದ್ಧಷಹತಿಯಿಂ ತೆರಳ್ದು ತೊಳ್ದತ್ತು (ಆದಿಪು. ೧೧-೩೮). [ಸಂ.]

**ಲಾಲಾಗ್ರಂಥಿ** (ನಾ). ಜೊಲ್ಲು ಉತ್ಪತ್ತಿಯಾಗುವ ಗ್ರಂಥಿ,-ಕೋಶ : ಪಚನಕ್ಕೆ ಸಂಬಂಧಿಸಿದ ಕಿಣ್ವಗಳನ್ನು. ಲಾಲಾಗ್ರಂಥಿಗಳು . . . ಸ್ರವಿಸುತ್ತವೆ (ಶರೀರ. ೨೯). [ಸಂ.]

**ಲಾಲಾಜಲ**, ಲಾಲಾಜಳ, ಲಾಳಾಜಳ (ನಾ). =ಲಾಲಾಂಬು : ಖಲೀನಸ್ಖಲನಭವಬಹುಳಲಾಲಾಜಲಪುಗಾತಿರೆ ತುರಗರತ್ನಮೆಸೆದತ್ತಾಗಳ್ (ಗಾದಂಪು. ೯೩೯); ಮೋಹವಲ್ಲರಿ ಪಸರಿಸಿ ಪರ್ವಿಬುದು ಸಾತರ ಲಾಲಾಜಲದಿಂ (ಶಂಭಾಮಾ. ೩-೦೩೯); ಗಜಗಳ ಮದಧಾರಾಜಲದ ಮತ್ತು ಕುದುರೆಗಳ ಲಾಲಾಜಲದ ಪ್ರವಾಹವು . . . ಅನವರತವಾಗಿ ಹರಿಯುತ್ತಿತ್ತು (ಕವೀರ. ೯೭). **ಲಾಲಾಜಳ** : ಗಜಮದಧಾರಾಜಳದ ಹಯಂಗಳ ಲಾಲಾಜಳದ ಪೊನಲ್ (ಎಕ. VII. ಶಿಕಾಂ. ೧೦೦-೦೩; 1129). **ಲಾಳಾಜಳ**: ಘಟ್ಟಿಸಿದ ಕೀಟ ಘಟ್ಟಣೆಯೊಳ್ ಪೊಟ್ಟಗೊಡೆದ ತಾಳುಗೆಗಳ ರುಧಿರಜಲದೊಳ್ ಬೆರಸಿ ಪದಗೆಂಪನಾಳ್ದ ಜಾತ್ಯಶ್ವದ ಲಾಳಾಜಳದೊಳಂ (ಶಂಕಠಾ. ೦೦-೭೦ ವ); ಹಯಲಾಳಾಜಳಮುಂ ಮದೇಭಮದಮೂತ್ರಾಸಾರಮುಂ. . . ಮೊಟ್ಟಿಸಿ (ಪುಶ್ಕ್ರ. ೩-೯೩). [ಸಂ.]

**ಲಾಲಾಜಳ** 'ಲಾಲಾಜಲ' ನೋ.

**ಲಾಲಾಟ** (ಗು). ೧. ಹಣೆಯಲ್ಲಿರುವ : ಭವಲಾಲಾಟವಿಲೋಚನಾಗ್ನಿಶಿಖೆಯಿಂ ಬೆಂದು (ಶಂಕಠಾ. ೭-೨೯). (ನಾ). ೨. ಹಣೆ; ನೊಸಲು. [ಸಂ.]

**ಲಾಲಾಟಿಕ** (ನಾ). ೧. ಒಡೆಯನ ಮುಖವನ್ನು ನೋಡಿಯೇ ಅವನ ಅಭಿಪ್ರಾಯವನ್ನು ತಿಳಿದುಕೊಳ್ಳುವವನು. ೨. ಕೊಟ್ಟ ಕೆಲಸವನ್ನು ಮಾಡಲು ಅಸಮರ್ಥನಾದವನು : "ಲಾಲಾಟಿಕಃ. ಪ್ರಭೋರ್ಭಾವದರ್ಶೀ—ಅರಸಿನ ತಾತ್ಪರ್ಯವನ್ನು ತಿಳಿದವನು. ಕಾರ್ಯಾಕ್ಷಮಃ. ಕೆಲಸವನ್ನು ನಿರ್ವಹಿಸಲಾರದ ಅಸಮರ್ಥನು — ೨ಕ್ಕೂ ಹೆಸರು" (ಸಿದ್ಧಾಂತಿ. ೩೭೩). [ಸಂ. ಲಾಲಾಟಿಕ]

**ಲಾಲಾರಸ** (ನಾ). =ಲಾಲಾಂಬು : "ಜೊಲ್ಲು. ಲಾಲಾ(ರಸ). ಉಗುಳು. ಬಾಯಿನೀರು" (Saliva. ೩೦೯೬). [ಸಂ.]

**ಲಾಲಿ₁** (ನಾ). ಮಕ್ಕಳನ್ನು ಮಲಗಿಸುವಾಗ ಹಾಡುವ ಹಾಡು; ಜೋಗುಳ : ಲಾಲಿ ಲಾಲಿ ರಂಗಯ್ಯಗೆ ಲಾಲಿ ಲಾಲಿ (ಪುರಂದ. ೩-೨೦೯ ಪಲ್ಲವಿ): ಲಾಲಿ ಮಿಸುನಿಯ ಬೊಂಬೆರನ್ನವೆ ಲಾಲಿ ಲಾಲೀಯೆಂದು ತೂಗಿದರಾಳಿಕನ್ನೆಯರು (ತನಲಾ. ೩೨-೧೦) ; ಜಗದಂಬೆ ತೊಡೆಯಲ್ಲಿ ಲಾಲಿ ಕೇಳುತ್ತ ಸೊಗನಿದ್ದೆಗೊಂಡವನು ಬರುವನೇ ಇತ್ತ ? (ಕಾಪು. ೯೭-೦೩). 'ಲಾಲಿಪದ' ಪರಾ. [ದೇ.೪ ತಮಿ. ತೆಲು. ಲಾಲಿ]

**ಲಾಲಿ₂** 'ಲಾಳಿ₁' ನೋ.

**ಲಾಲಿತ**. ಲಾಳಿತ (ಗು). ೧. ಮಮತೆಯಿಂದ ಕೂಡಿದ ; ಪ್ರೀತಿಯ : ಲಾಲಿತಾಸ್ಯವೆ ಮಮತೆ ತೊಳಗುವ ಲೋಲಲೋಚನಮಟುಹುಕುಟುಹು ಸಮೇಳವಾಗಿಹ ಗಿರಿಜೆ ಮೆಚ್ಚಿದಳು ಶಂಕರಾಂಕವಲಿ (ಶ್ರಶಂಲೀ. ೨-೦೦). ೨. ಪ್ರೀತಿಯಿಂದ ಪೋಷಿಸಿದ,-ರಕ್ಷಿಸಿದ,-ಸಾಕಿದ : ಲಾಲಿತೋತ್ತಮವಾಜಿಗಳು ತೊಂಬತ್ತುಸಾವಿರವು (ಬಸವು. ೫-೦೬). (ನಾ). ೩. ಒಲವು; ಪ್ರೀತಿ: ಅನುರಾಗ. ೪. ಆನಂದ; ಸಂತೋಷ: 'ಲಾಲಿಸು' ಹೋ. **ಲಾಳಿತ** : ೫. ಪ್ರೀತಿಯಿಂದ ಸಾಕಿದುದು,-ಪೋಷಿಸಲ್ಪಟ್ಟುದು : ಲಾಳಿತವಾಗಿ ತನ್ನ ನಡೆಯಿಂ ನಡೆಗಲ್ತೊಡವರ್ಪ ಕೇಳಿಹಂಸಾಳಿಯ ಬೆನ್ನೊಳ್ಪದೆ ನಡೆಯಲ್ ಬಸಮಲ್ಲದೆ ನಿಂದು (ಜಗಪ. ೨-೯೭). [ಸಂ.]

**ಲಾಲಿತ್ಯ** (ನಾ). ೧. ಚೆಲುವು ; ಸೌಂದರ್ಯ. ೨. ಮಾಧುರ್ಯ ; ಇಂಪು : ಸರಸಪದಶಯ್ಯಾದೃಢವ್ಯಾಕರಣಯುತ ಲಾಲಿತ್ಯನಿಯಮಾಕ್ಷರ ಸಲಕ್ಷಣಭಾವಮಾಗಿರೆ ರಚಿಸುವೆಂ ಕೃತಿಯ (ಬಸವು. ೦-೦೯); ಸಂಗೀತವು . . . ಕೇವಲ ಲಾಲಿತ್ಯದೆಡೆಗೆ ವಾಲಿದಂತಿವೆ (ಕಾರಣ. ೫೯೭). ೩. [ಕಾವ್ಯಮೀ] ಶಬ್ದಗುಣಗಳಲ್ಲಿ ಒಂದು : ಶ್ಲೇಷ, ಲಾಲಿತ್ಯ . . . ಯೌಗಿಕೀ ಇವು ಏಳೂ 'ಶಬ್ದಗುಣಗಳು' (ಕೃವಿಪ. ೨೩೨ ಅಡಿ). [ಸಂ.]

**ಲಾಲಿಪದ** (ನಾ). =ಲಾಲಿ₁ : ತಾಯಿಯ ಇಂಪಾದ ಲಾಲಿಪದವನ್ನು ಕೇಳುತ್ತಾ ಮಗು ಮಲಗಿತು (ರೂಢಿ). [ಲಾಲಿ₁+ಪದ₂]

**ಲಾಲಿಸು** (ಕ್ರಿ). ೧. ಅಕ್ಕರೆಯನ್ನು ತೋರಿಸು ; ಮುದ್ದಾಡು : ಪಶುಗಳ್ ಕಪ್ಪುರವನ್ನುಗಂಗಳ್ . . . ಪ್ರಜೆಗಳುಂ ತಾವೆಲ್ಲರುಂ ತಮ್ಮಯಾಶಿಶುವಂ ಲಾಲಿಸದಿರ್ಪರೇ (ಸೊಬಗಿನ. ೯೪) : ಪುಳಕಿಸುತೆ ಕಂಪಿಸುತೆ ಬೀಳ್ಕೊಂಡನಕ್ಕಬಿಂ ಲಾಲಿಸುತ್ತಾಲಿಸುತೆ (ಚಿತ್ರ. ೩-೮); ಯಾವಾಗಲೂ ಅದನ್ನು ಎತ್ತಿಕೊಂಡೇ ಇರುತಾ ಲಾಲಿಸುತಿದ್ದಳು (ಮಾವುಶಾ. ೦೨೨). ೨. ಪೋಷಿಸಲ್ಪಡು ; **ಆರೈಕೆ ಹೊಂದು** : ಅಂದಳವನೇರಿಕೊಂಡು ತಿರುಗಾಡುವುದರಿಂದ ಆಯುಸ್ಸು ಹೆಚ್ಚಿ. . . ಕೀರ್ತಿಯಿಂದ ಲಾಲಿಸಲ್ಪಟ್ಟು ಬಹುಸಿದ್ಧಿಕರವಾಗಿರುವುದು (ಸಕಪ್ಪ. ೫೫). ೩. (ಕಿವಿಗೊಟ್ಟು) ಕೇಳು ; ಆಲಿಸು : ಆಲಿಸೆನ್ನ ಬಿನ್ನಪವ ಲಾಲಿಸೆನ್ನ ಬಿನ್ನಪವ (ಮುಹಾದೇ. ಶಿ. ೩೭-೮೦); ಒರೆಯೆ ಲಾಲಿಸಲೋದುಶಿರ್ದುದು ಕರಣಸಂದೋಹ (ಗೌತಮ. ೯೯-೫೦); ದಯವಿಟ್ಟು ನನ್ನ ಮಾತುಗಳನ್ನು ಲಾಲಿಸು (ಆರ್ಯಕ. ೫೯). ೪. ಸಂತೋಷಿಸು : ಮದ್ದಳೆಯ ಗತಿಗೆ ಜಘನಗಳೆದ್ದಾಡಲು ನಗುತ ಕಂಡು ಲಾಲಿಪರಲ್ಲದೆ ಪದ್ಯ ಪದ ಕಾವ್ಯದರ್ಥವ ದೊಡ್ಡಗರೇಂ ಬಲ್ಲರ್ (ಪೀಠಾ. ೭೩). [ಲಾಲನೆ+—ಇಸು₃]

**ಲಾಲಿಹಾಡು** (ನಾ). = ಲಾಲಿ₁ : ತೆಲುಗರ ಜನಪದಸಾಹಿತ್ಯ ತುಂಬಿದ ಸಾಹಿತ್ಯವಾಗಿದೆ. ಲಾಲಿಹಾಡುಗಳು . . . ಸುಗ್ಗಿಯ ಹಾಡುಗಳು ಅಪಾರವಾಗಿವೆ (ಭಾರದ. ೯೦೩). [ಲಾಲಿ₁+ಹಾಡು₂ (<ಪಾಡು₂)]

**ಲಾಲೆ**, ಲಾಳೆ (ನಾ). =ಲಾಲಾಂಬು : "ಸ್ಯನಿಕಾ. ಸ್ಯಂದನೀ. ಲಾಲಾ_೩ ಬಾಯಿಜೊಲ್ಲು" (ಸಿದ್ಧಾಂತಿ. ೦೬೬) ; "ಲಾಲಾ=ಜೊಲ್ಲು" (ಶಾಶಕ. ೨೭೦). **ಲಾಳೆ** : ಕೂರೆಪೊಡೆ ಬೆಟ್ಟುಗಳ್ ಬಿರಿವುವುಣ್ಮುವ ಲಾಳೆಯ ಲೋಳೆಗಳ್ ಪೊನಲ್ವರಿವುವು (ಶಂಕಠಾ. ೯-೦೦೦) ; ಸಿಂಬುಳ್ . ಸಿಳ್ಳುಗಟ್ಟ್ ಲೋಳೆ ಲಾಳೆ ಸರಸ್ಮೂತ್ರಜಳಂ (ಕುಶ್ರು. ೦೩-೯೯). [ ಸಂ. ಲಾಲಾ ]

**ಲಾಲ್ಯ** (ನಾ). ಅಕ್ಕರೆ ; ಪ್ರೀತಿ : ಕುಲ್ಯವಾದ್ಯರ ಲಾಲ್ಯವನಘರ ತಾಲ್ಯವಕ್ಷಮುಮೂಲ್ಯವಘವಸ್ಥಾಲ್ಯಮಹಕೈವಲ್ಯವೀ ನಿರ್ಮಾಲ್ಯವೆನಲೆಸೆದು (ಜಾಶಿ. ೯೩-೭೭). [ಸಂ.]

**ಲಾವ** (ಗು). ೧. ಕತ್ತರಿಸುವ : ತುಂಡುಮಾಡುವ. (ನಾ). ೨. ಒಂದು ಬಗೆಯ ಪಕ್ಷಿ : ಲಾವುಗೆ ; ಪುರಲೆ : "ಲಾವಃ. ಲಾವಿಗೆ ಹಕ್ಕಿ . . . ಸಿಡಿಮಿಡಿಪಕ್ಕಿ—ಈ ೧೩ ಶಬ್ದಗಳೂ ಪಕ್ಷಿಭೇದಗಳಿಗೆ ಬೇರೆಬೇರೆ ಹೆಸರುಗಳು'' (ಸಿದ್ಧಾಂತಿ. ೦೭೩); ಮರಾಳ ಲಾವ ಚಾತಕ ಬಕ ಖಂಜನ ದ್ರುಪದಿ ಘೂಟ ನಿಶಾಟನ ಪತ್ರಿಕಂಕ ವರ್ತಕ ಕುರರೀಪ್ಲವಪ್ರಕರದಿಂದೆ ವಿರಾಜಿಕುಮುನ್ನತಂ ವನಂ (ಹರಿಶ್ಚಂ. ೯-೭೨) ; ಪಿಳಿಪಿಳಿರ್' ಪಿಳಿಲೆಂದು ಲಾವಂಗಳುಬ್ಬಿದುವು (ಶರಶು. ೯-೯೫). [ಸಂ.]

**ಲಾವಂಚ** 'ಲಾಮಂಚ' ನೋ.

**ಲಾವಂಚಿ** 'ಲಾಮಂಚ' ನೋ.

**ಲಾವಕ** (ನಾ). ೧. ಕತ್ತರಿಸುವವನು; ಕಡಿಯುವವನು. ೨. ಚಾಡಿ ಹೇಳುವವನು; ಪಿಸುಣ: ಲಾವಕರ ನುಡಿಗೇಳಿ ನಡೆದರೆ ಭೂವಳಯದೇಶಾಧಿಪತ್ಯದ ಠಾವು ಕೆಡುವುದು (ಶುಭಾಸ. ೬೦೩. ೦-೯೫); ಹರನ ಭಕ್ತರ ಮಹಾತ್ಮೆಯನರಿಯದೀ **ಲಾವಕರ** ಮಾತಗೇಳಿ ತಗಸಿದ **ಭೂರಿದುರ್ಭಾವ**

ದುರವಣೆಯ ನೋಡಲು (ಸಿಂಗರಾ. ೨೨–೪೪) ; ಲಾವಕರು ಬಿಜ್ಜಳನೊಳಿಂ ತೆಂದು ಪೇಳ್ದರು (ಶ್ರಬಸವ. ೯–೨೭). ೩. ಕೆಡುಕ ; ದುಷ್ಟ : ಅರಸಿಗಂಪ ಹತಿಯನೊದವಿಸಿದ ಲಾವಕನು ಕಾಲಕೋಟಿಸಹಿತ ಮಹೀವಲಯದಲಿ ಲಯವನೆಯ್ದಿಯೆ ಜೀವಿಸುತ್ತಿಹನು (ಜೀವಂಧ. ೯–೬೩); ಕೃಷ್ಣ . . . ಲಾವಕರ ಕೊಲಗಿಸೋ (ವೀರಭದ್ರ. ೨೨–೦); ಗಾವಿಲಗೆ ಭಾಗ್ಯವಾದೊಡೆ ಲಾವಕಂಗೆ ರುಷ್ಟದುಷ್ಟದುರ್ಜನರ್ಗಲ್ಲದೆ ಭಾವಕರಿಂಗೊಲಿದೀವನೆ (ಶೀತಿಸಾ. ೨೩೫). ೪. ಒಂದು ಬಗೆಯ ಹಕ್ಕಿ; ಲಾವುಗೆ: "ಕಾರಂಡವ ಲಾವಕ ಜೀವಂಜೀವಕ ಶಾರಿಕಾದಿಗಳ್ ವಿಹಗಜಾತಿಯಕ್ಕುಂ" (ವಸ್ತುಕೋ. ೯೩–೨೦) ; ಹಾರಜೆ ಗವುಜು ಲಾವಕ ಗುಬ್ಬಿ ಸಾಳುವ (ಪನ್ನಗ. ೬–೬೭). ೫. ಹಾವನ್ನು ಹಿಡಿದು ಆಡಿಸುವವನು; ಹಾವಾಡಿಗ; "ಪಾವಡಿಗ" (ಶಶಾ. ೪. 1, ೫೮). [ಸಂ.]

**ಲಾವಕು ?** (ನಾ). (?): ಸುಕವಿಪಿಕನಿಕರಶೀತ ಸಹಕಾರನಂದನಂ ನಿಜ ವಿಜಯಭುಜಾಸಿ ಲತಾಸತ್ವರ್ಗಕೀನರ್ತ್ತನವಿನೋದಲಾವಕುಂ ಕುನಾಗಿಲ [ಕೋ]ಟಾಟ[ವೀ]ದಾವಪಾವಕಂ . . . ರಾಜಾದಿತ್ಯರಸರ್ (ಕಶಾ. ೨೦–೭–೦೭; 1083). [ ? ]

**ಲಾವಕ್ಕಿ** (ನಾ). = ಲಾವಕ ೪ : ಗಿಡಗವನ್ನು ನೋಡಿ ಲಾವಕ್ಕಿಗಳ ಹಿಂಡು ಅಡಗಿಕೊಳ್ಳುವಂತೆ (ಕಾಳಸೀ. ೬೧) ; ಕವುಜಗಹಕ್ಕಿಯ ಜಾತಿಯ, ಒಳ್ಳೆಯ ಆಹಾರವೆಂದೆಣಿಸುವ, ಒಂದು ಬಗೆಯ ಪ್ರವಾಸಪಕ್ಷಿ; ಲಾವಕ್ಕಿ; ಪುರಲಿಹಕ್ಕಿ (Quail. ಇಂಗ್ಲಿ). [ಲಾವ + ಹಕ್ಕಿ (< ಪಕ್ಕಿ). / ತುಳು. ಲಾವಕ್ಕಿ]

**ಲಾವಗ** ' ಲಾವಗೆ ' ನೋ.

**ಲಾವಗೆ, ಲಾವಗ, ಲಾವಿಗ, ಲಾವಿಗೆ, ಲಾವುಕ, ಲಾವುಗೆ** (ನಾ). ೧. ಒಂದು ಬಗೆಯ ಪಕ್ಷಿ ; ಪುರಲೆ : ಮಂದಪಾಲನೆಂಬ ಮುನಿಗವೊಂದು ಲಾವಗೆಗಂ ಪುಟ್ಟಿದ ನಾಲ್ಕುಂ ಲಾವಗೆಗಳಗ್ನಿಸೂಕ್ತಂಗಳನೋದುತ್ತುಮುದಿರದಿದಿರಂ ಬರೆ (ಪಂಪಭಾ. ೩–೦೦೦ ವ); ತಗರು ಕೋಟಿಗಳಂ ಲಾವಗೆಗಳನೆಸೆವೆ ಮೈವೋರಿಯಂ ಪಾಪಿಪ್ಪರ್ ಮಿಗೆ ಬಸನದಿಂದೆ ಪೋರಿಪರ್ (ಸಮಯ. ೩–೦೫); ಅರಗಿಳಿ ಪಾರಿವಂ ಕುರರಿ ಲಾವಗೆಯನ್ಯಭೃತಂ (ಗಂಗ. ೦–೭೪). ಲಾವಗ: ೧. 'ಕರಿಲಾವಗ', 'ಕೆಂಪುಲಾವಗ' ಪರಾ. ೨. ಹಾವಾಡಿಗ : "ಲಾವಗ — ಲಾವಕ = ಹಾವಾಡಿಗ" (ತತ್ತ್ವಕೋ. ೩೨). **ಲಾವಿಗ :** ೧. ಲಾವಿಗನ ಹಕ್ಕಿಗಳೂ . . . ಅವನು ಹೇಳಿದಂತೆ ಶಿಕಾರಿ ಮಾಡಿಕೊಂಡು ಅವನ ಪ್ರೀತಿಗೆ ಪಾತ್ರವಾಗಿದ್ದವು (ತುಗಡೂಂ. ೨೫). **ಲಾವಿಗೆ :** ೧. ಗಿಳಿಗಳಾ ಕುಳುವ ಲಾವಿಗೆ ಪುರುಳಿಯೆಜಲಾವಿಗೆ . . . ಹೊಡೆಗಳೆಂಬ ಪಕ್ಕಿಗಳು (ಶಬ್ದಮ. ೩–೨೦) ; ಅರಿರಾಯಲಾವಿಗೆಗೊಡ್ಡಿದ ಬಲೆಯೆನೆ (ಶಶಿಕ. ೦–೩೩) ; ಹದ್ದು ಬಿಗಿವಿಡಿದ ಲಾವಿಗೆಯಂತೆ (ಗೂರ್ಜರ. ೦೦–೨೯೯). **ಲಾವುಕ :** ೧. ಇದೆ ಚಳಿತಲಾವುಕಸ್ವನಂ . . . ಇದೆ ಕಪಿಂಜಲನಿನದಂ (ಕಾದಂಬ. ೦೩೩) ; ಶುಕ . . . ಲಾವುಕ . . . ಪಕ್ಷಿಕುಲಂಗಳುಂ (ಜಗಳ. ೨೦೨). ೩. ಚಾಡಿ ಹೇಳುವವನು ; ಪಿಸುಣ : ದಟಿಯಿಂದಿದಾಯಿಟ್ ಮಿಗೆ ಲಾವುಕನಂ (ಜೀವಸಂ. ೦೫೦–೩೩); ಲಾವುಕರ ನುಡಿಗೇಳಿ ಕೊಲಿಸದೆ ಕಾವುದೊಳ್ಳಿತು (ಅಭ್ಯಾಸ. ೭–೭೬). **ಲಾವುಗೆ :** ೧. " ಲಾವುಗೆ ಕಪಿಂಜಲಮೆನಿಕ್ಕು " (ಮಂಗರಾ. ೫೨–೦೦); ಕೋಗಿಲೆ ಚಾದಗೆ ಪೋದಗೆ . . . ಬಲಾಕೆ ಲಾವುಗೆ ಸೇನು (ಕಾವ್ಯಸಾ. ೦೦೪೯ ಸೂತ್ರ೪); ಲಾವುಗೆಯುಂ ಕೆಕೊರಸುಂ ಮೊದಲಾಗೊಡೆಯ ಪಕ್ಷಿಜಾತಿಗಳಂ ಬಲೆಯ ನೊಡ್ಡಿ ಪಿಡಿದು (ಪದ್ಮರಾ. ೦೫೦–೩) ; ಲಾವುಗೆಯು ಕಂಠದಪ್ಪುರದಲ್ಲೈವಡಿ ಮಾಡಿ (ಹರಿಶಾ. ೩–೩೫). [< ಸಂ. ಲಾವಕ. / ಪ್ರಾ. ಲಾವಗ]

**ಲಾವಣ್ಯ$_1$** (ನಾ). ಸೈನಿಕರ ಪಟ್ಟಿ ; ಸಿಪಾಯಿಗಳ ಯಾದಿ : ಜಡನೆಂಬ ನುಡಿ ಶರಧಿಯೊಳುಂಟು ಭಂಗವೆಂದೊಡೆ ತೆರೆಯೊಳಗಾದಂತಹುದೂ ವಡಸೆ ಕಠಿಣವೆನಲಿಡಿದ ಲಾವಣದೊಳನುಡಿಯಲ್ಲದನ್ಯತವಿಲ್ಲ (ಅಮುಸಾಂ. ೦–೫೪); ಕೃಷ್ಣರಾಯನು ರಾಜ್ಯವಾಳುತ್ತಿರುವಾಗ ನೂರಾಳು ನೂರುಕುದುರೆ ಲಾವಣಕ್ಕೆ ಶೇರದೆ ಇರುವ ದಿವಸ ಒಂದಾದರೂ ಇಲ್ಲ (ಕಥಾವುಂ. IV, ೭೯). [ದೇ.॥ ತಮಿ. ಇಲಾವಣ ; ಮಲ. ತೆಲು. ಲಾವಣ]

**ಲಾವಣ್ಯ$_2$** (ಗು). ೧. ಉಪ್ಪಿನಿಂದ ಕೂಡಿದ. (ನಾ). ೨. ಉಪ್ಪು. [ಸಂ.]

**ಲಾವಣಿ$_1$, ಲಾವಳಿ** (ನಾ). ಜನಪದಹಾಡುಗಳ ಒಂದು ಪ್ರಕಾರ : ' ಲಾವಣಿಯೆಂಬುದು ಗರಡಿಯವರು ಹಾಡುವ ಹಾಡು ' ಎಂದು ಜನ ಸಾಮಾನ್ಯದ ಅಭಿಪ್ರಾಯ (ಕರ್ನಾಸಂ. ೨೦); ಹೆಂಗಸರ ಹಾಡುಗಳಲ್ಲಿಯೂ ಲಾವಣಿಗಳಲ್ಲಿಯೂ ಈ ಛಂದಸ್ಸಿನ ತಳಹದಿಯನ್ನೂ ರೂಪಾಂತರಗಳನ್ನೂ ಗುರುತಿಸಬಹುದು (ಕೃಶಿಬ. ೦೦೭) ; ಲಾವಣಿಗಳನ್ನು ಹಾಡಿದರು (ಹಮ್ಮಿ. ೭೩). **ಲಾವಳಿ :** ಲಘುಗಳ ಮಿಳಿತವ ಮಾಡಿ ಕೊನೆಯಲಿ ಗುರುಗಳ ಹೂಡಿ ಅರ್ಥದ ಸಾರವ ನೋಡಿ . . . ಲಾವಳಿ ಕೃತಿಗಳ ಪಾಡಿ (ಛಂದಸ್ಸು. ೫–೦೭). [←ಹಿಂ. ಲಾವನಿ, ಲಾವನೀ ; ಮರಾ. ಲಾವಣೀ. / ತಮಿ. ಲಾವಣಿ ; ತುಳು. ಲಾವಣಿ, ಲಾವಣ]

**ಲಾವಣಿ$_2$** ' ಲವಣಿ$_2$ ' ನೋ.

**ಲಾವಣಿ$_3$** (ನಾ). ಭೂಮಿಯ ಒಡೆಯನಿಗೆ ರೈತರು ಸಾಗುವಳಿಗಾಗಿ ಕೊಡುವ ಹಣ ; ಗುತ್ತಿಗೆಹಣ ; ಗೇಣಿ : ಹೊಲಗಳನ್ನೂ ಲಾವಣಿಗೆ ರೈತರಿಗೆ ಬಿಟ್ಟುಕೊಟ್ಟು (ಗಂಪಾಡು. ೯) ; ಒಮ್ಮೆ ಲಾವಣಿಯ ವಸೂಲಿಗೆ ನರಹರಿಯು ಗಂಗೇಲೂರಿಗೆ ಹೋಗುವ ಪ್ರಸಂಗ ಬಂದಿತು (ಸವುಶ. ೦೯೦) ; ವಸೂಲಾದ ಹಣದ ಮೇಲೆ ಪ್ರತಿಗ್ರಾಮಕ್ಕೂ ಒಂದೆರಡು ರೂಪಾಯಿಯೂ ಸಲ್ಲುತ್ತಿತ್ತು. ಇದಕ್ಕೆ ಲಾಣಿ (ಲಾವಣಿ) ಎಂದು ಹೆಸರು (ಶಾಸಗ. ೦೨). 'ಲಾವಣಿಪದ್ಧತಿ' ಪರಾ. [←ಮರಾ. ಲಾವಣೀ=ಜಮೀನನ್ನು ಬೆಳೆಯಲು ಯೋಗ್ಯವನ್ನಾಗಿ ಮಾಡುವುದು. / ತೆಲು. ಲಾವಣಿ=ಹುಲ್ಲುಗಾವಲಿನಲ್ಲಿ ಪಶುಗಳನ್ನು ಮೇಯಿಸುವುದಕ್ಕಾಗಿ ಕೊಡುವ ಮುಂಗಡ ಹಣ]

**ಲಾವಣಿ$_4$** (ನಾ). ೧. ಗುಂಪು ; ಸಮೂಹ ; ಸಂದಣಿ : "ಬಂಬಲ್ . . . ಲಾವಣಿ . . . ಗೊಂದಣಿ (ಉಂದಲ್)—ಈ ೪೦ ಸಮೂಹಂ" (ಕಶಾ. ೫೭–೨೨೨) ; ತಳಿರ್ಗಳ ಲಾವಣಿಯೊಯೆಳವಳ್ಳಿಬಳಗವೊ[ಪಾಠಾಂ. ಲಾವಣಿಗೆಯೊ ಎಳೆವಳ್ಳಿಯ ಬಳಗವೊ] (ಕೂಚಿಕೋ. ೩–೫೦). ೨. ಹೊಂದಿಸುವಿಕೆ ; ಅಳವಡಿಸುವಿಕೆ : 'ಲಾವಣಿಸು' ಪರಾ. [ ? ]

**ಲಾವಣಿ$_5$** (ನಾ). ಒಂದು ಬಗೆಯ ಔಷಧೀಸಸ್ಯ : "ಲಾಜಾ (ಜಲಾ)— ಹಿಪ್ಪಲಿ, ಲಾವಣಿ, ಎಸಗ" (೬ಶಂ. ೦೯೩). [ ? ]

**ಲಾವಣಿಕ** (ಗು). ೧. ಸುಂದರವಾದ (ನಾ). ೨. ಉಪ್ಪಿನಿಂದ ಕೂಡಿದುದು : "ಲವಣದಿಂ ಲಾವಣಿಕಂ" (ವಸ್ತುಕೋ. ೯೪–೦೨). ೩. ಉಪ್ಪಿನಕಾಯಿ : ಎಳಮಾವಿನ ಮಿಡಿ ಮಾಗುಳಿ ಮೆಣಸಿನ ಕರೆ ಬೆತ್ತಲಟ್ಟೆಯಿಾಳೆಯ ಗೊಲೆಯಿಂದಳವಟ್ಟಿರೆ ಲಾವಣ[ಣಿ]ಕಂಗಳನಿಕ್ಕಿದರಾಗಳಟ್ಟಿಯಿಂದಂಗನೆಯರ್ (ಸುಕುಮಾ. ೦೦–೩೦). [ಸಂ.]

**ಲಾವಣಿಕಾರ** ' ಲಾವಣಿಗಾರ ' ನೋ.

**ಲಾವಣಿಗಾರ, ಲಾವಣಿಕಾರ** (ನಾ). ಲಾವಣಿಯನ್ನು ರಚಿಸುವವನು : 'ಮಠುಮಾ' (ಲಾವಣಿಗಾರರ ಎರಡು ಗುಂಪುಗಳೂ ಸೇರಿ ಹಾಡುವುದಕ್ಕೆ ಕುಳಿತುಕೊಳ್ಳುವ ಸಭೆ) (ಕರ್ನಾಸಂ. ೨೪). **ಲಾವಣಿಕಾರ :** ಹಾಡಬಲ್ಲ ಲಾವಣಿಕಾರನು ಹುಟ್ಟಿಕೊಂಡಂತೆಲ್ಲ ಅವೂ ಹೊಸಹೊಸ ರೂಪಗಳನ್ನು ತಾಳುತ್ತವೆ (ಕರ್ನಾಸಂ. ೭೫). P ಈ ಜನಪದಹಾಡುಗಾರಿಕೆಯ ಪದ್ಧತಿಯಲ್ಲಿ ಎಷ್ಟೋ ಜನರು ಆಶುಲಾವಣಿಗಳನ್ನು ರಚಿಸುವವರೂ ಹಿಂದೆ ಇದ್ದರು. [ ಲಾವಣಿ$_1$ + — ಕಾರ$_1$ (< — ಕಾಜ) ]

**ಲಾವಣಿಗೆ$_1$** (ನಾ). ಉಪ್ಪಿನ ಕಾಯಿ : ಸೋದಿಗೆ ಲಾವಣಿಗೆ ಘೃತಪೂರಂ . . . ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ . . . ಬಡ್ಡಿಸಿ (ಪದ್ಮರಾ. ೭೬–೦೭).

[ < ಸಂ. ಲಾವಣಿಕ]

**ಲಾವಣಿಗೆ₂**, ಲಾವಳಿಗೆ (ನಾ). ೧. ಗುಂಪು ; ಸಮೂಹ ; ಸಂದಣಿ : "ಲಾವಣಿಗೆವೋಳಿಯು ಸಮೂಹ" (ಕರ್ನಾ. ೬೦); ಭೂಪಾಳಿಗಳ ರತ್ನಪ್ರಭೆಯ ಲಹರಿಯ ಲಾವಣಿಗೆ ಮಿಗಿಲು (ಕುಮಾ.ರಾ. ೬-೩೬); ಬೆಳ್ದಿಂಗಳ ಹಕ್ಕಿಯ ಹಸುಳೆಗಳ ಲಾವಣಿಗೆಯೆ ಮುಸುಕಿದವೋಲ್ . . . ಕುವರನ ಲಾವಣ್ಯಾಂಗ ಮನದರ್ದುವು ಪುರಸತಿಯರ ಕಣ್ಗಳ ಬೆಳಗು (ಜಗನ್ನಾ. ೧೦-೩೩). **೨. ಆಕ್ರಮಣ**; ಮುತ್ತಿಗೆ ; ದಾಳಿ : ಪುರವರದಷ್ಟದಿಕ್ಕಿನೊಳೆಡೆವಿಡದೆ ಇಟ್ಟರು ಲಾವಣಿಗೆಯನಾದೀಶ್ವರ ಬಿಟ್ಟಹ ರಣಭೂಮಿಯೊಳು (ತ್ರಿಷಷ್ಟಿ. ೦೯-೨೦೦); ಲಾವಣಿಗೆಯನೊಡೆಹಾಯಿಸಿದನಿದಿರಾದ ರಾವುತರನು ಕೆಡಹಿದನು (ಶಬರಶಂ. ೪೩-೩೦) ; ಅವರ ವಿಘಾತಿಯ ಲಾವಣಿಗೆಗೆ ಅದ್ರಿಗಳು ಬಿರಿದುವು (ರಾಜಶೇ. ೨೪). ೩. ಸಂಬಂಧ : ಗೋಜು : ನಾವು ವೃದ್ಧರು ಬಿರುದುಗಿರುದಿನ ಲಾವಣಿಗೆ ನಮಗೇಕೆ (ಕುಮಾ.ವಾ. ೯-೩೦). ೪. ಹಿಡಿತ ; ವಶ ; ಅಧೀನ : ಆಕೆಯಾಕ್ಷಣ ಶಿರವರಿದ ಹಯಕಿದಿರು ಕುಳ್ಳಿರೆ ನಗ್ನೆ ತಾನಾಗಿ ನಿರುತ ಲಾವಣಿಗೆಯಲಿ ಹೊಕ್ಕಿರೆ ಸುರಪತಿಯು ಹಯದಲ್ಲಿ ವಸಿಸಿದ ನೆರೆದನ್ನೆ ತನ್ನಾತ್ಮಸತಿಯಳ ಯಜ್ಞಕಾಲದಲಿ (ಸಂಕಚ. ೩-೨೩) ; ಆವನಜೀವನು ಶರಣಸಂಜೀವನನೆ ತಮಗೆಂತು ಕಂಗಳ ಲಾವಣಿಗೆಗೊಳಗಾದೆಯೆಂದನು (ಬಿಡಾಗ. ೯-೩-೪); ಅವಂ ಲಾವಣಿಗೆಯೊಳ್ ತಪ್ಪದೀವ ಕೃಜೀತದೊಳಂ (ಶಕಪು. ೦೯-೦೬). **೫.** ಒಂದು ಬಗೆಯ ತೆರಿಗೆ : ತಲೆವೂಜಿಗೆ ೩೦೦ ಲಾವಣಿಗೆ ವೊಕ್ಕಲ್ದೆಟಿ (ಎ. XVI, ೩೪-೪೦; 1102); ಅರಸುವೇಟಿಂಗೆ ಮುನ್ನನ್ನಡವ ಪಾಗವಲ್ಲದೆ ಮತ್ತೊಂದು ಪಾಗಮುಂ ಲಾವಣಿಗೆಯು ಪಣಮುಂ . . . ಬಿಟ್ಟನ್ (ಶಾಇ. IX-i, ೦೫೨-೨೯ ; 1105). **೬.** (?): ರಸಭಂಡವೈದ್ಯನು . . . ದೆಶೆದಿಕ್ಕಿನ ಕಾಲ್ನಡೆಯಬುವತ್ತಾಱುಕೋಟಿ ಹೊಸಲಾವಣಿಗೆ ತಿದ್ದುವ ಸುಂಕ ಸುಸರ (ಶಿವಗೀ. ೦೫೯-೯೯೩). **ಲಾವಳಿಗೆ** : ೧. ರಾವಣನ ಪುರದೊಳಗೆ ಹೊಕ್ಕು ಕಪೀಂದ್ರರುರವಣಿಸಿ ಸಾವ ಸಲಿಸಿದರೊಕ್ಕಲಿಕ್ಕಿ ಸುರಾವಳಿಗೆ ಸಂತೋಷ ದೊಟ್ಟಲು ಲಾವಳಿ[ಪಾಠಾಂ. ಣ]ಗೆದೋಱದರು ದಾಱದರಸುಚಿತದ ಫಲವ (ಬಿಡಾಗ. ೯-೦೦-೩೦). [ಲಾವಣ್₄ + – ಗೆ]

**ಲಾವಣಿಗೆಗೊಳು** 'ಲಾವಣಿಗೆಗೊಳ್ಳು' ನೋ.

**ಲಾವಣಿಗೆಗೊಳ್ಳು**, ಲಾವಣಿಗೆಗೊಳು (ಕ್ರಿ). ೧. ಒಟ್ಟಾಗು ; ಒಂದುಗೂಡು; ಸೇರು : ಭೂಪ ನಿನ್ನಯ ಶಕುನಿಭಾವನೋರ್ವಂ ಕರಿತುರಗ ಪಂಕ್ತಿಗಳಿಂದ ಲಾವಣಿಗೆಗೊಂಡು ಮಿಗಡಿಸಿದಂ ಐನೂರುಗಜಂವೊಂದು ಸಾವಿರ ಹಯ (ತುರಂಗ. ೩೩-೪). ೨. ಆಕ್ರಮಣ ಮಾಡು; ಮುತ್ತು : ಕಮಲವನವನು ಲೋಚನಲಿ ಲಾವಣಿಗೆಗೊಂಡನು ಭೀಮ ನಿಮಿಷದಲಿ (ಕುಮಾ.ಭಾ. ೦೦-೩೭). ೩. ಹಿಡಿತಕ್ಕೆ ಸಿಕ್ಕಿಸಿಕೊಳ್ಳು ; ವಶಪಡಿಸಿಕೊಳ್ಳು : ಅತಿರಥರ ಲಾವಣಿಗೆಗೊಂಡನು ಕರ್ಣ (ಕುಮಾ.ಭ. ೬-೨೯); ಹರಿಲೀಲೆ ಮಿಗೆ ಲಾವಣಿಗೆಗೊಂಡುದು ಲೋಕಜನಮನವ (ಬಿಡಾಗ. ೦೦-೨೩-೭). **ಲಾವಣಿಗೆಗೊಳು** : **೪.** ಹಿಡಿತಕ್ಕೆ ಸಿಕ್ಕು ; ವಶವಾಗು : ಲಾವಣಿಗೆಗೊಳಲಲಸಿ ಯಮನನು ಜೀವಿಗಳು ಜಡರಾಯ್ತು (ಕುಮಾ.ಶ. ೦೯-೨೯). [ಲಾವಣಿಗೆ₂+ಕೊಳ್ಳು₁ (<ಕೊಳ್₁)]

**ಲಾವಣಿಪದ್ಧತಿ** (ನಾ). ಭೂಮಿಯನ್ನು ಗೇಣಿಗೆ ಕೊಡುವ ಪದ್ಧತಿ; ಗುತ್ತಿಗೆ ಪದ್ಧತಿ : ಪಾಲಾವ ಒಂದು ಮಾರದೊಳಗಾಗಿಯೇ ಜ್ಞಾನ ಶಂಕರರು . . . ಲಾವಣಿಪದ್ಧತಿ ಕಿತ್ತಿಹಾಕುವ ಸಿದ್ಧತೆಯಲ್ಲಿ ತೊಡಗಿದರು (ಪ್ರೇಷಜಾತ್ರ. ೪೯). [ಲಾವಣ್₃ + ಪದ್ಧತಿ]

**ಲಾವಣಿಸು** (ಕ್ರಿ). ಸೇರಿಸು; ಹೊಂದಿಸು; ಅಳವಡಿಸು : ಮಂದರನಗನಿಭಾಂಗನ ವಜ್ರಮಯಪಕ್ಕಗಳ ಪಡಿಮುಖದೊಳಗೆ ಲಾವಣಿಸಿದನು ಖಂಡೆಯವ (ಕೂರಿರಾ. ೩-೦೦-೦೯); ಆಯುಧಮುಖದ ಶಿಖಿ ತವಹೃದಯದಾಮಿಷಹವಿಗೆ ಹದಿರಿಕ್ಕುವದ ನೋಡೆನುತ ಹೊದಱುಗೈಗಳಲೆತ್ತಿ ಲಾವಣಿಸಿದನು (ಕಜರಾ. ೭-೪೯-೩೭). [ಲಾವಣ್₄ + – ಇಸು₃]

**ಲಾವಣ್ಯ₁** (ನಾ). ೧. ಉಪ್ಪಾಗಿರುವುದು; ಉಪ್ಪಿನ ರುಚಿಯುಳ್ಳುದು : ಲಾವಣ್ಯ = 'ಉಪ್ಪಿನ ರುಚಿಯಿಂದ ಕೂಡಿರುವಿಕೆ' ಮುಖ್ಯಾರ್ಥ; 'ಪ್ರಸ್ಕೃತ್ವ' ರೂಢಮೂಲವಾದ ಲಕ್ಷ್ಯಾರ್ಥ (ಶೃತ್ಯಾರೋ. ೪೩). ೨. ಚೆಲುವು; ಸೌಂದರ್ಯ : ಲಾವಣ್ಯಂ ಲಯಮಾಯ್ತು (ಗಂಶ. ೯-೩೨). ೧, ೨ : ಶ್ರೀಮನತಾಪ್ರಸವದಿನಾ ಲಾವಣ್ಯದಿನತಿಗಭೀರಭಾವದೆ ನೀನಿಂತಾ ವಾರಿಧಿಯಂ ಪೋಲ್ವೆ (ಕುರಾ. ೩-೪೦); ಕಮಲಸಂಭವನಂತೆವೋಲ್ ಸರಸ್ವತಿಯರಸನೆಂಬ ಪೆಸರಂ ಪಡೆದು ಲೋಕಮುಱಿಯೆ . . . ಲಾವಣ್ಯಲೀಲೆಯಿಂದೆಸೆದಬ್ಬ ಭವನಲ್ಲ ಸಕಲಭುವನಾಶ್ರಯಂ ತಾನೆನಿಸುತರ್ಣವಂ ಕಣ್ಗೊಳಿಪುದು (ಶ್ರೀರಾಕ. ೩-೩೭). ೩. ಸೊಬಗು; ಒನಪು; ಒಯ್ಯಾರ: ಲಜ್ಜೆ ಬಿಂಬಿಸೆ ಲಾವಣ್ಯದೊಳೊಯ್ಯನೆ ಪಜ್ಜೆಯಿಡುವುದು ಭಾವೆಯರು (ಹರಿಭ. ೯-೩೭). [ಸಂ.]

**ಲಾವಣ್ಯಂದಳೆ** (ಕ್ರಿ). ಚೆಲುವನ್ನು ಪಡೆ; ಅಂದವಾಗು : ನೃಪವರಸೂನು ಹಿಂಗದೆ ಲಾವಣ್ಯಂದಳೆದೆಸೆದುತ್ತುಂಗಪಯೋಧರಯುಗಳೆಯು ಬಸಿಱಿಕೊಳು . . . ಬಳೆದು (ಜಗನ್ನಾ. ೨-೩೬). [ಲಾವಣ್ಯ + ತಳೆ₁]

**ಲಾವಣ್ಯವತಿ** (ನಾ). ಚೆಲುವೆ ; ಸುಂದರಿ ; ಅಂದಗಾತಿ : ಲಾವಣ್ಯವತಿಯರುಂ ನಾನಾವಾಹನದಿಂದಮಿಱಿದು ಮೋಹನವಿದ್ಯಾದೇವತೆಯರಂತೆ (ಪುಲ್ಲಶ. ೩-೬೨); ಪ್ರವಹಿಸೆ ಕಪೋಲದಲಿ ಲವಣಾಶ್ರುಬಿಂದುತತಿ ನದಿ ಹರಿಯುವಂತೆ ಕಡಲಿಂಗೆ ಲಾವಣ್ಯವತಿ ನಡೆದಳ್ ಲವಣಸಿಂಧುತಟಕೆ (ಶತ್ರುಂಗ. ೩೭-೦೪೦೦). [ಸಂ. ಲಾವಣ್ಯವತೀ]

**ಲಾವನ** (ನಾ). ಒಂದು ಬಗೆಯ ಕತ್ತರಿಸುವ ಆಯುಧ ; ಕುಡುಗೋಲು; ಮಚ್ಚುಗತ್ತಿ : ಬಿಲ್ಲು ತೀರು . . . ಲಾವನ . . . ಪೇಟಕ ಮುಂತಾದ . . . ಸಾಧನವಿಶೇಷಂಗಳಿಂ (ವಿವೇಕ. ೨೬೩). [< ಸಂ. ಲವನ]

**ಲಾವಳಿ** 'ಲಾವಣ್₁' ನೋ.

**ಲಾವಳಿಗೆ** 'ಲಾವಣಿಗೆ₂' ನೋ.

**ಲಾವಾ** (ನಾ). ಜ್ವಾಲಾಮುಖಿಯಿಂದ ಪ್ರವಹಿಸುವ ರಸ ; ಶಿಲಾರಸ : ದಕ್ಷಿಣಭಾಗದ ನೆಲದಲ್ಲಿ ಲಾವಾ ಹೆಪ್ಪುಗಟ್ಟಿ ಉಂಟಾದ ಬಂಡೆಗಳೇ ಅಧಿಕ (ಅಭೂಕ. ೨೭೭) ; ಅತೃಪ್ತಿಬಯಕೆಯ ಲಾವಾರಸ ಬುಗ್ಗೆಯಾಗಿ ಕಾರುತ್ತದೆ (ಸಂಕಾಂತ. ೦೦೩); ಅವನ ಲೇಖನ ಲಾವಾರಸದಲ್ಲಿ ಅದ್ದಿದಂತೆ ಇರುತ್ತಿತ್ತು (ತಜಾವಾದ. ೦೬). [← ಇಂ. Lava]

**ಲಾವಿಗ** 'ಲಾವಗ' ನೋ.

**ಲಾವಿಗೆ** 'ಲಾವಗೆ' ನೋ.

**ಲಾವುಕ** 'ಲಾವಗೆ' ನೋ.

**ಲಾವುಕೋವು** (ನಾ). ಕಪಟ ; ವಂಚನೆ : ಆ ವೈಶ್ಯವಲ್ಲಭ ಸಮುದ್ರದತ್ತನೊಳು ತನಗಾವಗಂ ಸ್ನೇಹಮಾದುದಱಿಂದ ದಾಕ್ಷಿಣ್ಯಭಾವಯುತನವಗೊಂದು ಲಾವುಕೋವಂ ಮಾಡಲೀಸದಿಂತೆನುತುಸಿರ್ದನು (ಶಬ್ದಾಳಿ. ೦೦-೭). [ ? ]

**ಲಾವುಗೆ** 'ಲಾವಗೆ' ನೋ.

**ಲಾಸ** (ನಾ). ಕುಣಿತ ; ನೃತ್ಯ : ಹಂಸನಿಲ್ಲದ ಸರಸಿ ಬಲುವಿದ್ವಾಂಸರಿಲ್ಲದ ಸಭೆ . . . ಪರಭೃತವಿಲ್ಲದುದ್ಯಾನ ಲಾಸವಿಲ್ಲದ ಗಾನ . . . ನೆರೆಯದು (ಕೌಶಿರಾ. ೦-೨೯). [ಸಂ.]

**ಲಾಸಕ** (ನಾ). ೧. ನೆಗೆಯುವವನು ; ಜಿಗಿಯುವವನು. ೨. ಕುಣಿಯುವವನು ; ನರ್ತಕ. [ಸಂ.]

**ಲಾಸಕಿ** (ನಾ). ಕುಣಿಯುವವಳು ; ನೃತ್ಯಗಾತಿ : "ವರ್ತಕೀ ಲಾಸಕೀ— ೨ ಕುಣಿಯುವ ನಾಟ್ಯಗಾತಿಯ ಹೆಸರುಗಳು" (ಸಿದ್ಧಾಂತಿ. ೩೯) ; ಸತಿ . . .

ಅಂಗಜಲಾಸ್ಯಲೀಲೆಯಂ ಕ್ಷಿತಿಪನ ಚಿತ್ತವೃತ್ತಿಗುಪದೇಶಿಪ ಲಾಸಕಿಯಂತೆ ತೋಱಿದಳ್ (ಕಂಪ್ರತಿ. ೩-೬೩). [ಸಂ. ಲಾಸಕೀ]

**ಲಾಸಿ** (ನಾ). ೧. ಅಲ್ಲಿಂದ ಇಲ್ಲಿಗೆ ಚಲಿಸುವುದು. ೨. ಕುಣಿತ ; ನೃತ್ಯ. [ಸಂ. ಲಾಸಿನ್]

**ಲಾಸಿಕೆ** (ನಾ). = ಲಾಸಕಿ : "ನರ್ತಕಿ ಲಾಸಿಕೆಯೆಂಬಳಕ್ಕು" (ಶಬ್ದಮ. ೬೪-೭೩) ; ಕಣ್ಗೊಳಿಸಿದಳಿಂದುಕಾಂತಮಣಿಮಂಗಳರಂಗದೊಳಪ್ಪುನಾಳಮಂ ಸೆಳೆವಿಡಿದಂಗಜನ್ಮಜಯಲಕ್ಷ್ಮಿಯ ಲಾಸಿಕೆಯಾಕೆಯೆಂಬಿನಂ (ಚುಲ್ಲಿಕ. ೪-೩೨) ; ನರ್ತಿಸುತ್ತಿರ್ಪ ಮರುತ್ಸುದತಿಯರ್ಗಿಂದ್ರನ ಹೃತ್ಪದ್ಮದೊಳಾಡುವ ಭಕ್ತಿಲಕ್ಷ್ಮಿ ಲಾಸಿಕೆಯಕ್ಕುಂ (ಕಂಪ್ರವು. ೦೨-೭೦). [ಸಂ. ಲಾಸಿಕಾ]

**ಲಾಸ್ಯ** (ನಾ). ೧. ಕುಣಿಯುವುದು ; ನರ್ತಿಸುವುದು. ೨. ಕುಣಿತ ; ನೃತ್ಯ : ರಾಮನೇರ್ದನು ಬಂಡೆಯಂ, ಲಾಸ್ಯವಂ ತೊಡಗಿ (ಶ್ರೀರಾಮಪ. ೩೮-೨೭೯). ೩. [ನಾಟ್ಯ] ಗಾಯನ ಮತ್ತು ವಾದ್ಯದಿಂದೊಡಗೂಡಿದ ನೃತ್ಯ. ೪. ಶೃಂಗಾರ ಮೊದಲಾದ ಭಾವಗಳನ್ನು ತೋರಿಸುವ ನಾಟ್ಯ,— ನರ್ತನ : "ನೃತ್ಯಂ, ತಾಂಡವಂ, ಲಾಸ್ಯಂ – ಈ ೩ ನಾಟ್ಯಮೆಂಬುದು" (ಹಲಾಯು. ೦೭-೯೩) ; ಸುತ್ರಾಮನಂದಿಂತು ತಾಂಡವಲಾಸ್ಯಂಗಳ ಚೆಲ್ವನೊರ್ನೆಯೆ ತದೀಯಾಸ್ಥಾನದೊಳ್ ತೋಱಿದಂ (ಆದಿಪು. ೭-೦೨೩) ; ಆ ಶಿವಪ್ರಸುಮತವಂ ಪಡೆದಾ ಶಿವೆ ಭರತಂಗೆ ಮಧುರನಾಟ್ಯಕ್ರಮದಾ ಮೈಸಿರಿಯನೊರೆಯಲಾದುದು ಭಾಸುರತರಮಪ್ಪ ಲಾಸ್ಯನಾಮಂ ಜಗದೊಳ್ (ಲಾಸ್ಯರ. ೦-೦೩) ; ನೀಟ್ ಮಿಟ್‌ದಳ್ ಲೀಲಾಲಸಲ್ಲಾಸ್ಯಮು (ರಾಜಶೇ. ೦೨-೭೨). ೯ ಪಾರ್ವತಿಯಿಂದ ಕಲ್ಪಿತವಾದುದೆನ್ನಲಾದ ಲಾಸ್ಯವು ಸೌಕುಮಾರ್ಯವಾದ ಅಂಗವಿನ್ಯಾಸಗಳಿಂದ ಕೂಡಿದ್ದು, ಶಿವನ ಮತ್ತು ಅವನ ಗಣಗಳ ಉಗ್ರವಾದ ನಾಟ್ಯಕ್ಕೆ ವಿರುದ್ಧವಾದುದಾಗಿದೆ. ೫. ಕುಣಿಯುವವನು ; ನರ್ತಕ. 'ತಾಂಡವ' ಪರಾ.

**ಲಾಸ್ಯವಾಡು** = ಕುಣಿ; ನಾಟ್ಯವಾಡು: ಅವನ ಮುಖದಲ್ಲಿ ನಗೆಯು ಲಾಸ್ಯವಾಡುತ್ತಿತ್ತು (ಮಶೇ. ೯೩) ; ಗೆಜ್ಜೆನಾದದಿ ಲಾಸ್ಯವಾಡುತ ತಣಿಸಿ ಕುಣಿಸುವೆ ರಸಿಕನ (ಕಂಪ್ರದಾ. ೩೭-೭). [ಸಂ.]

**ಲಾಸ್ಯಾಂಗ** (ನಾ). [ನಾಟ್ಯ] ಗೇಯಪದ, ಸ್ಥಿತಪಾಠ್ಯ, ಆಸೀನ (ಪಾಠ್ಯ), ಪುಷ್ಪಗಂಡಿಕಾ, ಪ್ರಚ್ಛೇದಕ, ತ್ರಿಗೂಢಕ, ಸೈಂಧವ, ದ್ವಿಗೂಢಕ, ಉತ್ತಮೋತ್ತಮಕ ಮತ್ತು ಉಕ್ತಪ್ರತ್ಯುಕ್ತ ಎಂಬ ನಾಟ್ಯದ ಹತ್ತು ಭೇದಗಳು : ಭಾಣ . . . ಮುಖನಿರ್ವಹಣಸಂಧಿಗಳೂ, ಹತ್ತು ಲಾಸ್ಯಾಂಗಗಳೂ ಪ್ರಾಯಿಕವಾಗಿ ಭಾರತೀವೃತ್ತಿಯೂ ಇರುತ್ತವೆ (ಕಂನಾಟ. ೩೦). [ಸಂ.]

**ಲಾಹರಿ** (ನಾ). ಚಳಕ ; ಕೌಶಲ : ಅಚ್ಚಿನಲ್ಲಿ ಬೇಟದಱವು ದೃಷ್ಟವಾಯಿತ್ತು ಮನವಚ್ಚಿ ಕೊಟ್ಟ ಲಿಂಗ ಹೃತ್ಕಮಲದಲ್ಲಿ ನೆಟ್ಟುದಿಲ್ಲಾ ದೃಷ್ಟ ತಾನಾದಲ್ಲದೆ ಇದಿರಿಗೆ ದೃಷ್ಟವ ಕಟ್ಟಬಾರದು ಕಟ್ಟಿಕೊಂಡ ಮತ್ತೆ ಗುಱಿಯನೆಚ್ಚ ಕೈಯ ಲಾಹರಿಯಂತಿರಬೇಕು (ಮೋಳಿಗಾ. ೦೩೩-೩೭೪).

[ < ಲಹರಿ ]

**ಲಾಹಿರಿ** (ನಾ). ಮದ ; ಮತ್ತು ; ಮತ್ತತೆ : ಕುಲವು ಕುಕುವರನಿಂದ ಶೀಲವಾ ದೇಶಾಂತರಗಳಿಂದ ಲಜ್ಜೆ ಲಾಹಿರಿಗಳಿಂದ . . . ಕೆಡುವುದು (ಕಶಂ. ೦೩-೦೭). [ ← ತೆಲು. ಲಾಹಿರಿ, ಲಾಹಿರೀ ]

**ಲಾಹಿರಿಗೊಳ್** (ಕ್ರಿ). ಮದಿಸು : ಉರವ ಸಿಗಿದಾ ರಕುತವನು ಸುರಿಸುರಿದು ಲಾಹಿರಿಗೊಂಡು ಮದವದ್ವಿರದಗಳ ಚಂದದಲಿ ತರುಬಿದರಾ ಕಪಿವ್ರಜವ (ಅಸಂರಾ. ೬-೭-೦೮). [ಲಾಹಿರಿ + ಕೊಳ್$_1$]

**ಲಾಳ**$_1$ (ನಾ). ೧. ಕೊಳವೆ ; ನಳಿಗೆ : (೯). ೨. ಲೇಖನಿಗಳನ್ನು ಮಾಡಲು ಬಳಸುವ, ಟೊಳ್ಳಾಗಿರುವ ಒಂದು ಬಗೆಯ ಗಲಗು,— ಬೆತ್ತ : "ಲಾಳ – ನಾಳ" (ಕದ್ಯಕೋ. ೩೪) ; ಹೆಗ್ಗಳ್ಳಿಂಗಡಲೇ ಬೇರು . . . ಲಾಳದ ಬೇರು, ನಾಗಕೇಸರ ಇವಿಷ್ಟನೂ ಪ್ರತ್ಯೇಕ ಎರಡು ವರಹ ತೂಕ ಆಡಿನ ಹಾಲಿನಿಂದ ಅರೆದು ಕುಡಿಯ ಕೊಡಿಸಲು ಶ್ಲೇಷ್ಮಯುಕ್ತವಾದ ಯೋನಿ ಶುದ್ಧವಹುದು (ವೈದ್ಯಶಾ. II, ೪೦) ; ಒಂದು ತರದ ಲಾಳದ ಕಡ್ಡಿ ಬೆಳೆಯುತ್ತದೆ. ಈ ಕಡ್ಡಿಗಳಿಂದ ಮೀನು ಹಿಡಿಯುವ ದೋಣಿಗಳನ್ನು ಮಾಡುತ್ತಾರೆ (ಶ್ರಜಾತ. II, ೦೨೮) ; ನದಿಯ ಇಬ್ಬದಿಯ ಮೇಲೂ ಲಾಳದ ಕಡ್ಡಿಗಳು ಹುಚ್ಚು ಹುಚ್ಚಾಗಿ ಬೆಳೆದು . . . ತಲೆದೂಗುತ್ತಿದ್ದುವು (ಹುಗಶಾಂ. ೭೪).

**ಲಾಳದ ಕಡ್ಡಿ** = ಲಾಳದಿಂದ ಮಾಡಿದ ಲೇಖನಿ : ಕಂಟ, ಸೀಸಗಡ್ಡಿ ಕುಂಚಗಳು, ಲಾಳದ ಕಡ್ಡಿ ಮತ್ತು ಮರಗಡ್ಡಿ (Wooden pens)ಗಳನ್ನು ಒಳಗೊಳ್ಳುತ್ತದೆ (ಶಾಶಶ. ೦೮). [< ಸಂ. ನಾಲ]

**ಲಾಳ**$_2$, **ಲಾಡ**$_1$, **ಲಾಟ** (ನಾ). ೧. ಒಂದು ದೇಶದ ಹೆಸರು : ೯ ಈಗಿನ ಗುಜರಾತು : "ಲಾಟಃ—ಲಾಳಂ, ನಾಡು" (ಅಭಿಧ. ೦೩) ; ಆ ವಿಭುವಾಹವಮಲ್ಲ ಮಹೀವಲ್ಲಭನಲ್ಲಿ ಪಡೆದನುರುತರನಿಜವಿದ್ಯಾವಿಭವದಿಂದ ಮೆಚ್ಚಿಸಿ ಭೂವಿನುತಂ ಲಾಳಸಂಧಿವಿಗ್ರಹಪದವಂ (ಎಕ. XII, ೨೮೦–೦೭೭; 1077) ; ಲಾಳ ಚೋಳ ವರಾಳ ಯವ ಬಂಗಾಳ . . . ಧರಣೀಪಾಲತತಿ ಸಂದಣಿಸಿದುದು (ಕೋರಾ. ೦-೭-೦೮). ೨. ಲಾಳದೇಶಕ್ಕೆ ಸೇರಿದವನು : ಓಡಿದ ಲಾಳಂ ಕವಿವಿಡಿದಾಡಿದ ಚೋಳಂ (ಎಕ. VII, ಶಿಕಾ. ೦೭೭-೨೦ ; 1114). **ಲಾಡ**$_1$ : ೧. "ಲಾಡಃ = ನಾಡು" (ಅಭಿಧ. ೨೩೪). ೨. ಕರಸಣ್ಣಗಳ ನೆಯ್ವ ಜೇಡರಂ ಲಾಡರಂ ಪರಿಮಳದ ಪೂವಿನಾ ಮಾಲೆಗಾಱರ ನೀಲಿಗಾಱರಾ ಪಸರಮೆಸೆಗುಂ (ಗುರುಚಾ. ೦-೩೪) ; ಬಿಳಿದಂ ನೇಯ್ವ ಜಾಡರುಂ ಲಾಡರುಂ (ಕಿಕಪು. ೨-೪೭). **ಲಾಟ** : ೧. "ಲಾಟಕೆ ಲಾಟಂ" (ಕಂಶಬ್ದ. ೨೦). ೨. ತಱಸಂದು ಲಾಟರೊಳ್ ತ[ಳ್ತ]ಱಿದೇಱಂ ಪೇಟ್ ಕೇಳ್ದು (ಕಂಕಣ. ೦-೩೩). 'ಲಾಟಬಾಸೆಗ' ಪರಾ.

**ಲಾಳ ಸಿಂಗಡುಕಾಱ** = ಲಾಳರನ್ನು ಸದೆಬಡಿಯುವವನು : ಶ್ರೀಮನ್ಮಹಾಪ್ರಧಾನಂ ಸೇನಾಧಿಪತಿ ಲಾಳಖಂಡೆಯಕಾಱರಧಿಷ್ಠಾಯಕ ನಾಗ ಸಾಹಣಾಧಿಪತಿ . . . ಪ್ರತಿಪಾಳಿಸುತ್ತಮಿರ್ದ್ದ (ಸೌಇಂ. IX-i, ೨೭೭-೨೩ ; 1184). [< ಸಂ. ಲಾಟ]

**ಲಾಳ**$_3$ 'ನಾಲ$_3$' ನೋ.

**ಲಾಳಕ**$_1$ (ನಾ). ಕುದುರೆ, ದನ ಮುಂತಾದುವುಗಳ ಗೊರಸಿಗೆ ಲಾಳ ಹೊಡೆಯುವವನು : ಗಾಣಿಗರ್ ಚಿಪ್ಪಿಗರ್ ಮುಚ್ಚಿಗರ್ ಲಾಳಕರ್ ಸಾಣಿಗರ್ . . . ಬರುತಿರ್ದರು (ಕಂಶ. ೪೭-೪೦).

[ಲಾಳ$_3$ (<ನಾಲ$_3$) + -ಕ$_2$]

**ಲಾಳಕ**$_2$ (ನಾ). (?) : ಅದರ ಸೊಪ್ಪಿನಲ್ಲಿ ಕಟ್ಟಿ, ಕಟ್ಟಿ ಅಭ್ರಕದ ಮೇಲೆ ಪಡಗ ಲಾಳಕದ ಗುಳಿಗೆ ಹುಡಿಮಾಡಿ ಅದರಲ್ಲಿ ಇಟ್ಟು (ಗಂಧಶಾ. ೩-೪).

[ ? ]

**ಲಾಳಕಟ್ಟು** 'ನಾಲಕಟ್ಟು' ನೋ.

**ಲಾಳಗಾರ** 'ನಾಲಗಾರ' ನೋ.

**ಲಾಳಗುಂಡಿಗೆ** 'ಲಾಳವಿಂಡಿಗೆ' ನೋ.

**ಲಾಳಗುಡಿಗೆ** 'ಲಾಳವಿಂಡಿಗೆ' ನೋ.

**ಲಾಳಬಂದಿ** 'ನಾಲಬಂದಿ' ನೋ.

**ಲಾಳಬುಂಡಿಗೆ** 'ಲಾಳವಿಂಡಿಗೆ' ನೋ.

**ಲಾಳಲಿಪಿ** (ನಾ). ಲಾಟದೇಶದ ಭಾಷೆಯ ಲಿಪಿ : ತೆಲುಗಲಿಪಿ . . . ಲಾ [ಪಾಠಾಂ. ಳ] ಳಲಿಪಿ ಮೊದಲಾದ ಹಲವು ಲಿಪಿಗಳನೋದಬಲ್ಲಗ್ಗಳದ ಕರಣಿಕರಂ ಕರೆಸಿ (ಬಸವ. ೩-೩೩). [ಲಾಳ$_2$+ಲಿಪಿ]

**ಲಾಳವಂಡಿಗೆ** 'ಲಾಳವಿಂಡಿಗೆ' ನೋ.

**ಲಾಳವಟ್ಟೆ** (ನಾ). ಲಾಳದ ಕಡ್ಡಿಯ ಸೀಳು,-ಪಟ್ಟೆ : ಪುರವರದೊಳೆಡೆ ವಿಡಲಿಲ್ಲದಾಯಿತ್ತೆಂಕೆಯಂಡನಲರ್ಗಣೆಯುನಿಟ್ಟು ಮತ್ತಾಯಗಾಣಿಸಿ ಪುರಜನಂಗಳೆರ್ದೆಯಂ ಲಾಳವಟ್ಟೆಯುಪ್ಪಂತಿರೆಸುವಾ ಕಾಯಜನ ಕೋಳಾಹಳವನು ಕಂಡು (ಸಮ್ಮೇ. ೩-೩೦); ಲಾಳವಟ್ಟೆಯು ಮಾಡಿದುವಾನೆಯೊಡಲನು . . . ಆ ಕಣೆಗಳು (ಕೇಂಬಸಂ. ೨೯-೦೩೪) ; ಬಿಲ್ಲವರೆಚ್ಚ ಶರಗಳಿಂದ ಟ್ಟಣಿಸುತಲೆಯ್ತಂದು ತಟ್ಟುರ್ಚೆ ರಿಪುಗಳ ಪೇರುರಗಳ ಲಾಳವಟ್ಟೆಯ ಮಾಡಿದವಾಗ (ಸಂತ್ರಸಾಂ. ೬-೩೫). [ಲಾಳ$_1$+ಪಟ್ಟೆ$_1$]

**ಲಾಳವಾಟೆ** (ನಾ). =ಲಾಳವಟ್ಟೆ : ಲಾಳವಾಟೆಗಳಾದವಾನೆಯ ಹಾಳು ವಡಲುಗಳು (ಜಜಾ. ೭೪-೯). [< ಲಾಳವಟ್ಟೆ]

**ಲಾಳವಿಂಡಿಗೆ**, ಲಾಳಗುಂಡಿಗೆ, ಲಾಳಗುಡಿಗೆ, ಲಾಳಮುಂಡಿಗೆ, ಲಾಳವಂಡಿಗೆ, ಲಾಳವುಂಡಿಗೆ (ನಾ). ೧. ಬಾಗಿಲನ್ನು ಮುಚ್ಚಿ ಭದ್ರಪಡಿಸಲು, ಅಡ್ಡಲಾಗಿ ಹಾಕುವ (ಮರದ) ಪಟ್ಟಿ : ಅಗುಳಿ : ತಾಳು : "ಪರಿಘಃ, ಪರಿಘಾತನಃ- ೨ ಲಾಳವಿಂಡಿಗೆ" (ಕರಾಮು. ೭೬-೩೨೧); ದಿಶಾಧಿಪರ್ ದಿಗಿಭಸಂಹತಿಯಂ ಮನವೊಲ್ದು ಪಾರಿಸಲಿಕ್ಕಿದ ಲಾಳವಿಂಡಿಗೆಯ [ಮಾ]ಟ್ಕೆಯೊಳಿರ್ದುದು ವಿಂಧ್ಯಪರ್ವತಂ (ವರ್ಧಮಾ. ೦೩-೫); ತಂದನ್ ಮನದ ವೇಗದಿ ಬಾಗಿಲುಕ್ಕಿನ ಲಾಳವಿಂಡಿಗೆಯ (ಳಿಕಾ. ೩೩-೩೬); ಜವನರಮನೆಯ ಮುಂಬಾಗಿಲ್ಗೆ ಲಾಳವಿಂಡಿಗೆಯಂ ಸಮೆವೆನು (ರಾಮಾಶ್ವ. ೯೨-೨). ೨. (ಜಾಗಟೆಯನ್ನು ಬಡಿಯುವ) ದಂಡ,— ಕೋಲು : ಒಂದೆಡೆ ಜಾಗಟೆಯನ್ನು ನೇತುಹಾಕಿದ್ದಾರೆ. ಅದನ್ನು ಬಾರಿಸುವ ಕಿರಿಯ ಲಾಳವಿಂಡಿಗೆಯೂ ಪಕ್ಕದಲ್ಲಿದೆ (ಕಂದ್ರಸ. ೦೦೯-೪). **ಲಾಳಗುಂಡಿಗೆ** : ೧. ಮಗದಿಗೆ ಲಾಳಗುಂಡಿಗೆ ಸ್ವಾಮಿವಂಚಕರ ಗಂಡ (ಎಕ. VII, ಶಿಕಾ. ೭೬-೦೩; 1291). **ಲಾಳಗುಡಿಗೆ** : ೧. ಶರಣಾಗತ ವಜ್ರಪಂಜರರುಂ ಗಡಿಗೆ ಲಾಳಗುಡಿಗೆ ಬಂಧುಜನಬಾಂಧವರುಂ (ಎಕ. XI, ಹೊಳಲ್ಕೆ. ೦೦೩-೫; 1681 ?). **ಲಾಳಮುಂಡಿಗೆ** : ೧. ಹರಿನೀಲದಿಂದಲೆಸವ ಲಾಳಮುಂಡಿಗೆ ವರಕುಲಿಶದ ಬಲುವೊಳೆಯಂ ಒರಿದು ರಂಜಿಪ ದ್ವಾರವಟ್ಟದ ಮಹಿಮೆಯನೊರೆವಡಿನ್ನಾರಳವಹುದು (ಅಂಶ. ೩-೦೨) ; ಹುಲಿಮುಖಪಂಕ ವಜ್ರದ ಕಂಬದಾಳೀರಿ ಬಲು ಲಾಳಮುಂಡಿಗೆ (ಜೈಂದಶ. ೫-೩೨). **ಲಾಳವಂಡಿಗೆ** : ೧. ಮಾರುತಿ ಕಡುಹಿನಲಿ ಭುಗುಭುಗಿಪ ಭಾರಿಯ ಕಿಡಿಗೆದರು ನೋಡಿದನು ಬಾಗಿಲ ಲಾಳವಂ[ಪಾಠಾಂ. ವಿಂ]ಡಿಗೆಯ (ಕುಮ್ಯಾಸ. ೦೫-೩೬); ಲಾಳವಂ [ಪಾಠಾಂ. ವಿಂ]ಡಿಗೆಗಳಲಿ ಬಂಡಿಯ ಗಾಲಿಗಳ ಗಾಡಣೆಗಳಲಿ . . . ರಕ್ಕಸಭಟರಿಗಕ್ಕಜವಾದುದಾ ದುರ್ಗ (ತೊರೆರಾ. ೩-೭-೦೩) **ಲಾಳವುಂಡಿಗೆ** : ೧. ರಿಪುಬಲವನಸಿಯುಟ್ಟರೆವವಿಭ ಬರಿಕೆಯ ಬಾರಿಯ ಲಾಳವುಂಡಿಗೆಯ ಸರಿಸಗುಂಡಿಸೊಳೊಂದನೊಂದಿಟ್ಟೊರಸಿದವು (ಕುಮ್ಯಾರೀ. ೪-೬೦); ಪೊಸಬೀಗ ಬಾಗಿಲು ಲಾಳವುಂ [ಪಾಠಾಂ. ಮುಂ]ಡಿಗೆ ಕಣ್ಗೆಸೆದವು ಕುಮ್ಮಟದೊಳಗೆ (ಕುಮಾರಾಂ. ೩೭-೫೨). [ಲಾಳ$_1$ + ಬಂಡಿಗೆ]

**ಲಾಳವುಂಡಿಗೆ** 'ಲಾಳವಿಂಡಿಗೆ' ನೋ.

**ಲಾಳವ್ಯವಹಾರಿ** (ನಾ). ಲಾಳದೇಶದ ವ್ಯಾಪಾರಿ : ಪರಶುರಾಮ ನಾಯಕ ಪೊಮ್ಮಣನಾಯಕ ಅಮ್ಮುಗಿ ನಾಯಕ ಪ್ರಮುಖರಪ್ಪ ಸಮಸ್ತಲಾಳವ್ಯವಹಾರಿಗಳುಂ (ಎಕ. XII, ೨೦-೯೯ ; 1204). [ಲಾಳ$_2$ + ವ್ಯವಹಾರಿ]

**ಲಾಳಾಜಳ** 'ಲಾಲಾಜಲ' ನೋ.

**ಲಾಳಿ$_1$**, ಲಾಡಿ$_1$, ಲಾಲಿ$_2$ (ನಾ). ೧. ಒಂದು ಬಗೆಯ ಗಲಗು,-ಬೆತ್ತ : "ವೀರಣಂ. ವೀರತರಂ- ೨ ಮರಕಬ್ಬಿನ ಪೆಸರುಗಳು. ಕೆಲವರು ಲಾಳೀಕಡಿಯನ್ನುವರು" (ನಿಘಂ.ಚಿ. ೦೫೦). ೨. ಬಟ್ಟೆಯನ್ನು ನೇಯಲು ನೇಯ್ಗೆಯವನು ಉಪಯೋಗಿಸುವ ಒಂದು ಸಾಧನ; ನಾಳಿ: ಸೀರೆಯ ನೆಯ್ಯುವಾತನ ಕೈಯ ಲಾಳಿ ನುಂಗಿತ್ತ ಕಂಡೆ (ಬೋಳಬಸ. ೦೦೭-೪೨೭) ; ಹರುಗಗಣ ಗೂಟ ಠವಣೆಗೋಲು ಲಾಳಿಯು . . . ನಾಲಿಗೆಗೂಟವನಿ[...] ದೊಂದುಳಿಯದ ಕಟ್ಟಿದನು (ಅಮುಕಾಂ. ೫-೬); ತರದ ಕೊಂಬಿನ ಲಾಳಿಯ[...] ಮುಟ್ಟಿಸದೆ ರುಚಿರತರವಾದ ಪೊದಕೆಯಂ ನೆಯ್ದುಕೊಳ್ವ[...] (ಪಾಕೋಶ. ೨-೭೦). ೩. ಇಕ್ಕುಳ; ತಂಡಸ : "ಇಕ್ಕುಟಂ ಲಾಳಿ ತಂಡಸ[...] ಗಾರಿಕಾಖ್ಯಂ" (ಮಂಗರಾ. ೧೦೩-೪). ೪. ಒಂದು ಬಗೆಯ ಆಯುಧ [...] ಭೋಂಕೆನೆ ವಿಡುವ ಲಾಳಿಯ ಬಿಲ್ಲು ಪೆಟಲ್ಗಳ ಸಂಕುಲವಿರ್ದುದ[...] (ಮೋಹತ. ೨೦-೯) ; ಜೇಡರ 'ಲಾಳಿ'ಯನ್ನು ಅನೇಕರ[...] ನೋಡಿರಬಹುದು. ಹಾಗೆಯೆ ಸಿಡಿದಾಡುವ ಒಂದು ಇಬ್ಬದಿಮೊನೆಯ[...] ಜಡವಾದ ಚಕ್ರ ಆಯುಧವಿದು (ಕರ್ನಾಟ. ೫೭). **ಲಾಡಿ$_1$** : ೨[...] ಎಂಥೆಂಥ ಎಂಜಿನ್ ಮಾಡಿ ಇರಿಸಿದಾನೆ . . . ಬೇಲು ಬಿಚ್ಚುವುದಕ್ಕೊಂದ[...] ಹಬೇನ ಹತೋಟಿಯಲ್ಲಿಡುವುದಕ್ಕೊಂದು, ಲಾಡಿ ತಯಾರಿಸುವುದಕ್ಕೊಂದು[...] ನೂಲುವುದಕ್ಕೆನಲವತ್ತೆಂಟು (ಕಂಗೂಂ. ೩೭). **ಲಾಲಿ$_2$** : ೨. ಈ ಬತ್ತಿಗಳ[...] ಮರದ ಲಾಲಿ (Bobbins)ಗಳಿಗೆ ಸುತ್ತಲ್ಪಡುವುವು (ಬಾಂಶ. I. ೪೦೭)[...]

**ಲಾಳಿ ಆಡಿಸು**=೧. ನೇಯು : ಅವನು ಪಾತ್ರಗಳನ್ನೂ ಘಟನೆಗಳನ್ನೂ[...] ಎರಡುಕಥೆಗಳಿಗೆ ಮಧ್ಯೆ ಲಾಳಿಆಡಿಸಿದಂತೆ ಆಡಿಸಿ ಅವುಗಳನ್ನು ಹಾಸು[...] ಹೊಕ್ಕಾಗಿ ನೆಯ್ದಿದ್ದಾನೆ (ಸಂಪಾಟಿ. ೦೦೭). ೨. (ಆಲಂ) ಅಲ್ಲಿಂದಿಲ್ಲಿಗ[...] ಓಡಾಡಿಸು ; ಅಲೆಸು : ನನ್ನನ್ನು ಲಾಳಿಆಡಿಸಬೇಡ (ರೂಢಿ)[...] [< ಸಂ. ನಾಲೀ]

**ಲಾಳಿ$_2$** (ನಾ). ಲಾಟದೇಶದವಳು : "ಲಾಟಿ-ಲಾಳಿ[ಪಾಠಾಂ. ಟಿ]"[...] (ಅಭಿಧಾ. ೯೩). [ಲಾಳ$_2$ + — ಇ$_2$]

**ಲಾಳಿಕೆ** (ನಾ). ಬಾಯಿ ಕಿರಿದಾದ ಪಾತ್ರೆಗೆ ದ್ರವವಸ್ತುಗಳನ್ನು ಹಾಕಲ[...] ಬಳಸುವ, ಅಗಲ ಕಿರಿದಾಗುತ್ತಾ ಹೋಗುವ ಕೊಳವೆ; ಬುದ್ಧಿವಂತ[...] ಪನ್ನಾಲೆ : ಗಾಜಿನ ಪಾತ್ರೆಯಲ್ಲಿರುವ ನೀರಿಗೂ ಲಾಳಿಕೆಯಲ್ಲಿರುವ ದ್ರಾ[...] ಣಕ್ಕೂ ಒಂದು ತೆಳುವಾದ ಪೊರೆಯಿದೆ (ಸಸ್ಯಶಾ. ೬೭) ; ಲಾಳಿಕೆಯಂ[...] (ಫನ್ನಲ್) ಅಗಲ ಕಿರಿದಾಗುತ್ತ ಹೋಗುವ ಕೊಳ್ಳಿ (ಳಾಳೋ. I. ೫೨೫); ತ[...] ಕೆಳಗೆ ಮಾಡಿ ಮಲಗಿಸಿ ಮೂಗಿನಲ್ಲೊಂದು ಲಾಳಿಕೆ ಇಟ್ಟ[...] (ಶುಶ್ರೂಷು. ೨೯). [< ಸಂ. ನಾಲಿಕಾ]

**ಲಾಳಿಕೋಲು** (ನಾ). ಒಂದು ಬಗೆಯ ಆಯುಧ : ತುರುಕಸಿಂಗಾ[...] ಬೇಡೆಯ ಲಾಳಿಕೋಲ ನಿಷ್ಠುರವಾಕ್ಯದಾಳ್ಗಳೊಗ್ಗಿನೊಳು ಚುರುಚುರನೆಯ[...] ಕೈಮುಗಿದು (ಭರತ. ೨೨-೩೭). [ಲಾಳಿ$_1$ + ಕೋಲು$_1$ (< ಕೋಲ್$_1$)]

**ಲಾಳಿತ** 'ಲಾಲಿತ' ನೋ.

**ಲಾಳಿತೆ** (ನಾ). ಸಂತೋಷ;ಲಾಳಿತೆಯು ರಮಣೀಯರಸಗಳ ಸೂಳು ನುಡಿಗಳ[...] . . . ಕಥೆಗಳನೊಲಿದು ಬಣ್ಣಿಸುವೆ (ಳೀಶಿರ. ೦-೩). [< ಸಂ. ಲಾಲಿತ[...]

**ಲಾಳೆ** 'ಲಾಲೆ' ನೋ.

**ಲಾಟಿ** 'ಲಾಳ$_2$' ನೋ.

**ಲಾಟಿಬಾಸೆಗ** (ನಾ). ಲಾಳದೇಶ ಭಾಷೆಯನ್ನು ಆಡುವವನು : ಲಾಟಂ = ಲಾಟಂ; ಲಾಟಭಾಷಿಕಂ = ಲಾಟಬಾಸೆಗಂ (ಶಮದ. ೨೦ ಪ್ರಯೋ.). [ಲಾಟ (< ಲಾಳ$_2$) + ಬಾಸೆ$_3$ + — ಗ$_2$]

**ಲಿಂಗ** (ನಾ). ೧. ಚಿಹ್ನೆ ; ಗುರುತು: ಶಿರಸ್ಸೆಂಬ ಸ್ಥಾನಾಷ್ಟಕದಲ್ಲಿ ಪ್ರಾ[...] ವಾಯುಸಂಬಂಧಮಾಗಲಲ್ಲಿ ಪುಟ್ಟುವ ಅರ್ಣ ವರ್ಣ ಬೀಜ ಲಿಂ[...] ಮಾತೃಕೆ ಶುದ್ಧಗೆಯೆಂಬ ಪರ್ಯಾಯ ಸಂಜ್ಞೆ (ಶಿವೇಳ. ೦೭೦); ಶ್ರುತಿ ಎಂದ[...] ಬಾಯಿಬಿಟ್ಟು ಹೇಳುವ ಶಬ್ದವು ; ಲಿಂಗವೆಂದರೆ ಅದೆಂದು ತಿಳಿಸುವ ವಿಶೇಷ[...] ರೂಪವಾದ ಗುರುತು (ಭ್ರಹ್ಮಶಾ. ೨೦೨ ಅಡಿಟಿ) ; ಭಾರತೀಯಮೂರ್ತಿಶಿಲ್ಪ[...] ಹೆಗ್ಗುರುತು. ಅದರಲ್ಲಿನ ಚಿಹ್ನೆ, ಲಿಂಗ ಅಥವಾ ಸಂಜ್ಞೆ (Symbolism[...] (ಭಾರದ.೫೦೬). ೨. ಗಂಡಸಿನ ಜನನೇಂದ್ರಿಯ: "ಶಿಶ್ನಃ, ಶೇಫಃ, ಮೇಢ್ರಃ[...] ಲಿಂಗಂ, ಮೇಹನಂ, ಶೇಫಸ್—ಈ ೬ ಶೇಫಂ" (ಕರಾಮು. ೦೫-೩೭೦)

ಲಿಂಗಂ ಬೆನ್ ಜಂಘಾಯುಗಳಂಗಳುಮೆಂಬೀ ಪ್ರದೇಶಮಿವು ನಾಲ್ಕುಂ ಹ್ರಸ್ವಂಗಳೆನೆ . . . ನಿಧಿವುರುಷಂ (ಲೋಕೋಪ. ೧೧-೪೭). ೩. ಸ್ತ್ರೀ ಅಥವಾ ಪುರುಷಚಿಹ್ನೆ : ಈ ನಿಯಮವನ್ನು ಲಿಂಗಭೇದವಿಲ್ಲದೆ ಅನುಸರಿಸಬೇಕು (ಲೂ). ೪. ದೇವಸ್ಥಾನಗಳಲ್ಲಿ ಪ್ರತಿಷ್ಠಾಪಿಸುವ ಶಿವನ ಪ್ರತೀಕವಾದ ಮೂರ್ತಿ ; ಸ್ಥಾವರಲಿಂಗ ; ವರಸುಂಗ ಲಿಂಗ ಶರಣಾಗು (ಬಸವ. ೬-೫೬) ; ನಮ್ಮೂರ ದೇವಸ್ಥಾನದಲ್ಲಿ ಈ ದಿನ ಲಿಂಗದ ಪ್ರತಿಷ್ಠಾಪನೆ ಇದೆ (ಲೂ). ೫. [ವೀಶೈ] ಮೈಮೇಲೆ ಧರಿಸುವ ಶಿವನ ಒಂದು ಪ್ರತೀಕ; ಇಷ್ಟಲಿಂಗ: ಹೊತ್ತಾರೆ ಎದ್ದು ಅಗ್ಘವಣಿ ಪತ್ರೆಯ ತಂದು ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ (ಬಸವ. ೧೭೨) ; ಲಿಂಗನಿಜಸದ್ಭಾವದೊಳು ಮನಂ ಮುಳುಗಿ (ಲಕ್ಷ್ಮೀ. ೧-೩) ; ಲಿಂಗಕ್ಕೆ ಕಡೆಯಲ್ಲಿ ಲಿಂಗಿಲ್ಲದೆಡೆಯಲ್ಲಿ ಲಿಂಗದೊಳು ಜಗವು ಅಡಗಿಹುದು ಲಿಂಗವನು ಹಿಂಗಿದವರುಂಟೆ (ಸರ್ವಜ್ಞ. ೧೧೭). ೬. [ತರ್ಕಶಾ] ಪ್ರಮಾಣ ; ಪುರಾವೆ : 'ಅನುಮಾನ'ದಲ್ಲಿ ಸಾಧಕವಾದ ' ಲಿಂಗ 'ಕ್ಕಿರುವ ವರ್ತನೆಯನ್ನೇ ವ್ಯಂಜಕತ್ವದಲ್ಲಿಯೂ ನೋಡಬಹುದು (ಕೃಷ್ಣಕೋ. ೨೦೨). ೭. [ವ್ಯಾಕ] ಪುಂ. ಸ್ತ್ರೀ. ನಪುಂಸಕಗಳ ಸೂಚನೆ : ನೀನಱ ಕರ್ಣಾಟಕದೊಳ್ ಪೀನಂ ಸ್ತ್ರೀ ಪುಂ ನಪುಂಸಕೋಭಯ ಪುಂ ಸ್ತ್ರೀ ಸ್ತ್ರೀನಪ್ಸಮಸ್ತವಾಚ್ಯಾನ್ಯೂನಾವ್ಯಯಮೆಂದು ಲಿಂಗಮೊಂಬತ್ತು ತೆಱಂ (ಶಬ್ದ. ೬೬); ಲಿಂಗವೆಷ್ಟು ವಿಧವು ? ಪುಲ್ಲಿಂಗವೆಂತಲೂ ಸ್ತ್ರೀಲಿಂಗವೆಂತಲೂ ನಪುಂಸಕಲಿಂಗವೆಂತಲೂ ಮೂರು ವಿಧವಾಗಿರುವದು (ಹೊಸಗ. ೫೩). ೮. ಯಾವುದೇ ಪ್ರತ್ಯಯ ಮೊದಲಾದುವುಗಳು ಸೇರದೆ ಇರುವ ಶಬ್ದದ ಮೂಲರೂಪ ; ಪ್ರಾತಿಪದಿಕ : ಕ್ರಿಯೆಯಂ ನುಡಿಯದುದು ವಿಭಕ್ತಿಯನಿಲ್ಲದುದರ್ಥಮುಳ್ಳುದಂತದು ಲಿಂಗಂ (ಶಬ್ದ. ೭೨) ; ಧಾತು ಪ್ರತ್ಯಯಾಂತಗಳಲ್ಲದ ಅರ್ಥವುಳ್ಳ ಶಬ್ದಗಳು ಲಿಂಗವೆಂದು ಹೇಳಲ್ಪಡುತ್ತದೆ (ಹೊಸಗ. ೩೪). "ಅನುಮಾನದೊಳು ಮುಷ್ಕದೊಳು ಪ್ರಕೃತಿಯೊಳು ಶೈವಮೂರ್ತಿಯೊಳು ಲಿಂಗಮಕ್ಕುಂ " (ಮಂಗರಾ. ೧೩೦-೩೦).

ಲಿಂಗದ ಕಲ್ಲು=ಲಿಂಗಮುದ್ರೆಯಿರುವ ಕಲ್ಲು : ನಾಲ್ಕುಂ ದೆಸೆಯೊಳು [ಆ] ನಟ್ಟ ಲಿಂಗದ ಕಲ್ಲುಗಳು[ಆ] (ಕೊಲ್ಲಾಪು. ೧೩-೭೮; 1186). ಲಿಂಗದ ಕಾಯಿ = ಶಿವಲಿಂಗವನ್ನಿಡುವ ಕರಡಿಗೆ; ಚೌಕ : ಅವರು ಲಿಂಗದ ಕಾಯನ್ನು ಕೊರಳಲ್ಲಿ ಹಾಕಿದ್ದಾರೆ (ಲೂ). ಲಿಂಗದ ಬೀರ, ಲಿಂಗದ ವೀರ = ವೀರಭದ್ರನ ಖಡ್ಗ ಹೇಳುವ ಕಾಯಕದವನು; ಪುರವಂತ : ಲಿಂಗದ ಬೀರರು ಖಡ್ಗ ಹೇಳುತ್ತಾರೆ (ಲೂ) ; ಲಿಂಗದ ವೀರರ ಕುಣಿತ. ಗಡ್ಡುಗರಕುಣಿತ . . . ಗಮನಾರ್ಹ ನೃತ್ಯಗಳು (ಜಾನಕೋ. I, ೭೦೪). [ಸಂ.]

**ಲಿಂಗಕಲ್ಲು** (ನಾ). ಲಿಂಗದ ಮುದ್ರೆಯುಳ್ಳ ಗಡಿಕಲ್ಲು : ಬಡಗಲು ಬಟ್ಟೆಯ ನಟ್ಟ ಲಿಂಗಕಲ್ಲು (ಎಕ. XIII, ೧೭೨-೪೦; 1055).
[ಲಿಂಗ + ಕಲ್ಲು (< ಕಲ್$_{3}$)]

**ಲಿಂಗಕಾಣಿಕೆ** (ನಾ). ಒಂದು ಬಗೆಯ ತೆರಿಗೆ : ಯುವಿರ್‍ಗೆ ಚಪರಕಾಣಿಕೆಯಿಲ್ಲ ಮರ್‍ಕಾಣಿಕೆಯಿಲ್ಲ ಡೊಂಬಕಾಣಿಕೆಯಿಲ ಲಿಂಗಕಾಣಿಕೆಯಿಲ (ಎಕ. XVI. ಗುಬ್ಬಿ, ೩೪-೩೩ ; ೪). [ಲಿಂಗ + ಕಾಣಿಕೆ (< ಕಾಣ್ಕೆ)]

**ಲಿಂಗಗ್ರಾಹಕ** (ನಾ). ಶಿವತತ್ತ್ವವನ್ನು ಅರ್ಥಮಾಡಿಕೊಂಡವನು. — ತಿಳಿದವನು : ಶಿವಲಿಂಗಾರ್ಚನಾತಿಸ್ನೇಹದೊಳು ಕುಳ್ಳಿರ್ದ ಲಿಂಗಗ್ರಾಹಕಂ ಬಸವಣ್ಣನಿತ ಸದ್ಭಾವಮಂ ನೋಡಿ (ಬಸವ. ೩೩-೪೩). [ಸಂ.]

**ಲಿಂಗಜ** (ನಾ). ೧. ಇಂದ್ರಿಯ ಮೂಲಕವಾಗಿ ಬಂದ ಜ್ಞಾನ : ಶ್ರುತಭೇದಂ ತದ್ಭೇದದ್ವಿತಯಂ ಲಿಂಗಜಮುಮಾವಗಂ ಶಬ್ದಜಮುಂ ಅಲ್ಲಿ ಲಿಂಗಜಮನೇಕಭೇದಮನಂಗೀಕರಿಸಿರ್ಕುಮಾವಗಂ (ಚಂದ್ರಪ್ರ. ೧೪-೪೩). ೨. ಲಿಂಗಾಯತ : ತೋರದಂತಿನ್ನನ್ಯರೆಲ್ಲರಿಗೋಸರಿಸಿದ ಲಿಂಗಜರನೇವಿಸ್ತಾರಗೈವ ಪ್ರಧಾನಿಬಸವನು ಕೇಳಿ ಸದ್ಭುಧರು (ಬಸವ. ೮-೨೨). [ಸಂ.]

**ಲಿಂಗತತ್ತ್ವ** (ನಾ). ಶಿವಲಿಂಗದ ವಿಚಾರವನ್ನು ತಿಳಿಸುವ ತತ್ತ್ವ; ಶಿವತತ್ತ್ವ: ಹೀಗೆ ೨೫ ತತ್ತ್ವಗಳು ಲಿಂಗೈಕ್ಯವಾದಲ್ಲಿ ಆ ಲಿಂಗತತ್ತ್ವಗಳು ಹನ್ನೊಂದು ತಾವು ಪರಸ್ಪರ ಕೂಡಿಕೊಂಡು ಹೋಗುವುವು (ಶಿವಾಕೋ. ೨೭). [ಸಂ.]

**ಲಿಂಗತನು** (ನಾ). ೧. [ವೀಶೈ] ಸೂಕ್ಷ್ಮಶರೀರ : ಲಿಂಗತನುಚಿಚ್ಛಾಯೆಯೊಳು ತಾ ಸಂಗಿಸಿ (ಅಮೃತ. ೩-೧೭). ೨. ದೇಹದಲ್ಲಿ ಇಷ್ಟಲಿಂಗವನ್ನು ಧರಿಸಿರುವವನು ; ಲಿಂಗಧಾರಿ : ಅಹಂಕಾರಕ್ಕೆ ಎಡೆಗುಡದೆ ಲಿಂಗತನುವಾಗಿರಬೇಕು (ಬಸವ. ೬೦೦). [ಸಂ.]

**ಲಿಂಗತೊಂಡೆ** (ನಾ). ಒಂದು ಬಗೆಯ ತೊಂಡೆಯ ಗಿಡ : ಲಿಂಗತೊಂಡೆ, ಶಿವಲಿಂಗಿ (ವೃಕ್ಷಶಿ. ೦೪-೨೩೬). [ಲಿಂಗ + ತೊಂಡೆ$_{1}$./ತೆಲು. ಲಿಂಗದೊಂಡ]

**ಲಿಂಗತ್ರಯ** (ನಾ). ೧. [ವೀಶೈ] ಇಷ್ಟ, ಪ್ರಾಣ ಮತ್ತು ಭಾವ ಎಂಬ ಮೂರು ಲಿಂಗಗಳು : ಇಷ್ಟಪ್ರಾಣ ಭಾವಗಳೆಂಬ ಲಿಂಗತ್ರಯಗಳನು ನೆಲೆಗೊಳಿಸಿ (ಅಖ್ಯಾಶಿ. ೦); ಇಷ್ಟ ಪ್ರಾಣ ಭಾವವೆಂಬ ಲಿಂಗತ್ರಯಂಗಳಂ ಕಳೆದು (ಅಕ್ಕತ್ರಿ. ೬೦ ೩೬೪). ೨. [ವ್ಯಾಕ] ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕಲಿಂಗ ಎಂಬ ಮೂರು ಬಗೆಯ ಲಿಂಗಗಳು : ಅವ್ಯಯಲಿಂಗಂ ಸಪ್ತವಿಭಕ್ತಿಗಂ ಲಿಂಗತ್ರಯಕ್ಕಂ ವಚನತ್ರಯಕ್ಕಂ ಸರಿಯಾಗಿರ್ದ ತೆಱದಿನರ್ಥಮಂ ಕುಡುಗುಂ (ಶಬ್ದ. ೯೦ ವೃತ್ತಿ). [ಸಂ.]

**ಲಿಂಗದಾಹ** (ನಾ). ಉರಿಮೂತ್ರರೋಗ : ಅಯಿಲೇಯಾದಿ ಚೂರ್ಣ . . . ಆ ಚೂರ್ಣಮಂ ಸಕ್ಕರೆಗೂಡಿ ಹಸುವಿನ ಹಾಲಿನಲ್ಲಿ ಸೇವಿಸಲು . . . ಕಾಮಾಲೆ, ಶಿರೋದಾಹ, ಲಿಂಗದಾಹ ಪರಿಹರಮಕ್ಕುಂ (ಸಿವೈ. ೦೪೭) [ಸಂ.]

**ಲಿಂಗದೀಕ್ಷೆ** (ನಾ). ಇಷ್ಟಲಿಂಗವನ್ನು ಧರಿಸುವ ದೀಕ್ಷೆ : ಕಾಳಾಮುಖರು ಈ ಹೊಸ ವೀರಶೈವಪಂಥದಲ್ಲಿ ಲಿಂಗದೀಕ್ಷೆ. ಶಿಕ್ಷೆಗಳಿಗೆ ಗುರುಗಳಾಗಿ ಜಂಗಮರೆಂದು ಕರೆಸಿಕೊಂಡರು (ಹೊಳಂಬ. ೦೩೪). [ಸಂ. ಲಿಂಗದೀಕ್ಷಾ]

**ಲಿಂಗದೂರ** (ನಾ). ಲಿಂಗತನುವಲ್ಲದವನು : ತನ್ನ ಅನುವ ಕಾನಱಿಯದೆ ಬಂದುಂಬ ಜಂಗಮದಲ್ಲಿ ಅಂಗವನಱಿಸುವ ಲಿಂಗದೂರರಿಗೇಕೆ ಜಂಗಮಭಕ್ತಿ (ಶೂನ್ಯಸಂ. ೨೭-೦೦೯). [ಸಂ.]

**ಲಿಂಗದೆರಿಗೆ** (ನಾ). ಒಂದು ಬಗೆಯ ತೆರಿಗೆ : ಕನಗೊಂಡನಹಳ ಗ್ರಾಮದಲಿ ಲಿಂಗ [ಧಾ] ರಿಗಳು ಕೊಡುವಂಥ ಲಿಂಗದೆರಿಗೆಯನು ಸಮರ್ಪಣೆಮಾಡಿ (ಸೌಇಇ. IX-ii, ೬೩೬-೮೩; 1550). [ಲಿಂಗ + ತೆರಿಗೆ$_{3}$ (<ತೆಱಗೆ)]

**ಲಿಂಗದೆಱೆ** (ನಾ). =ಲಿಂಗದೆರಿಗೆ : ಕೊಟೂರಸೀಮೆಯೊಳಗಣ ಬಾಗುಳಿಯ ನಾಯಿಂದರಿಗೆ ಕಾಣಿಕೆ ಕಡಾಯ ಬಿಟಿ ಕೊಟಣ ಬತೆಱ ಲಿಂಗದೆಱೆ ವಿನೂಯಿಲಾ (ಸೌಇಇ. IX-ii, ೬೨೨-೦೪; 1547). [ಲಿಂಗ + ತೆಱೆ$_{3}$]

**ಲಿಂಗದೇಹ** (ನಾ). ಸೂಕ್ಷ್ಮಶರೀರ : ಲಿಂಗದೇಹವ ಹೊದ್ದಿದಂತಿಹ ಸಂಗವದಱಿೊಳಗಿಲ್ಲ (ಅಮೃತ. ೩-೦೪); ಒಬ್ಬೊಬ್ಬ ಜೀವನಿಗೂ ದೇಹಾವರಣಗಳುಂಟು. ಅವಾವುವೆಂದರೆ, ಮೊದಲು ಜೀವನ ಸ್ವರೂಪದೇಹ, ಎರಡನೆಯದು ಲಿಂಗದೇಹ (ಹಕಾರ. ೩-೭ ಟೀಕಾರ್ಥ). ' ಲಿಂಗಶರೀರ ' ಪದಾ. [ಸಂ.]

**ಲಿಂಗದೇಹಿ** (ನಾ). ಲಿಂಗದೇಹವನ್ನುಳ್ಳವನು ; ಸೂಕ್ಷ್ಮಶರೀರಿ : ದೇಹಗುಣಗಳಳಿದು ಲಿಂಗದೇಹಿಯಾದ ಶರಣನು ಬಾಹಿರಂಗದ ಬಳಕೆ ಮಾಯಾಮೋಹವನ್ನು ಜಱಿದನು (ಅಶಕ. ೨೪೦-೦೩೦೭).
[ಸಂ. ಲಿಂಗದೇಹಿನ್]

**ಲಿಂಗಧರ** (ನಾ). ಇಷ್ಟಲಿಂಗವನ್ನು ಧರಿಸಿದವನು ; ಲಿಂಗವಂತ ; ವೀರಶೈವ : ಆನೆಗೊಂದಿಯ ಕಾಡವೀರನೆಂಬ ಲಿಂಗಧರ[ನೂ] . . . ಕೊಡುವಂಥ ಲಿಂಗದೆರಿಗೆ (ಸೌಇಇ. IX-ii, ೬೩೬-೦೦; 1550); ಲಿಂಗಧರಾಧರಪ್ರತತಿ ಲಿಂಗಮಹೀರುಹಪಂಕ್ತಿ ಲಿಂಗತೀರ್ಥಂಗಳ ರಾಜಿ . . . ಕಣ್ಗೆಸೆದಿರ್ದುದು (ಪ್ರಭುಲಿ. ೦೦-೨೩). [ಸಂ.]

**ಲಿಂಗಧಾರಕ** (ನಾ). = ಲಿಂಗಧರ : ನಿರತಿಶಯಮುಕ್ತಾಕ್ಷೀನಕಂಥಾವರಣ ಶರಣರು ಕಕ್ಷಕರತಳಸುರುಚಿರೋರಸ್ಥಳಕಲಿತಶಿವಲಿಂಗಧಾರಕರು (ಬಸವ. ೫೯-೫೦); ಗುರುಕಾರುಣ್ಯ ಹೊಂದಿದವನು ಯಾವಾಗಲು ಲಿಂಗಧಾರಕನಾಗಿರತಕ್ಕದ್ದು (ದೇವಾವ. ೦೬-೨೦ ವಿವರಣ). [ಸಂ.]

**ಲಿಂಗಧಾರಣ** (ನಾ). [ವೀಶೈ] ದೀಕ್ಷಾಪೂರ್ವಕವಾಗಿ ಇಷ್ಟಲಿಂಗವನ್ನು ಕಟ್ಟುವುದು,— ಧರಿಸುವುದು : ಭಕ್ತನು ಲಿಂಗಧಾರಣಮಾಡಿದ ಬಳಿಕ ತನ್ನನ್ನು ನಾನಾದಿಕ್ಕಿಗೆ ಒಯ್ಯುವ ತತ್ತ್ವಗಳ ಸಮುದಾಯವನ್ನು ನಿವಾರಣೆ ಮಾಡಬೇಕು (ದೇವಾವ. ೦೫-೨೦ ವಿವರಣ) : ದೀಕ್ಷೆಯನ್ನು ಹೊಂದದವನು ಲಿಂಗಧಾರಣಕ್ಕೆ ಅರ್ಹನಲ್ಲ (ಶಾರದ. ೨೪೯). [ಸಂ.]

**ಲಿಂಗಧಾರಣೆ** (ನಾ). = ಲಿಂಗಧಾರಣ : ಲಿಂಗಧಾರಣೆಯಾದ ಬಳಿಕ ಆ ಲಿಂಗವೇ ಭಕ್ತನಿಗೆ ಗುರುಸ್ವರೂಪವು (ದೇವಾವ. ೦೫-೨೦. ವಿವರಣ).
[ಸಂ. ಲಿಂಗಧಾರಣ]

**ಲಿಂಗಧಾರಿ** (ನಾ). ೧. = ಲಿಂಗಧರ : ಅವರಿವರುಯುಸದಿನ್ನೆಲ್ಲರೊಂದೇ ಲಿಂಗಧಾರಿಗಳೇಕಕೂಟದಲಿ (ಬಸ್ತು. ೯೭-೨೭) ; ಲಿಂಗವನ್ನು ತನ್ನ ಹಸ್ತದಲ್ಲಿರಿಸಿ . . . ಧ್ಯಾನಯುಕ್ತನಾಗಿರುವದು ಲಿಂಗಧಾರಿಯ ಕರ್ತವ್ಯ (ದೇವಾವ. ೦೩-೨೦ ವಿವರಣ) ; ಪಾಶುಪತಯೋಗಚಿಹ್ನೆಗಳುಳ್ಳವನೇ ಲಿಂಗಧಾರಿಯೂ, ಇವರೇ ಲಿಂಗಿಗಳು ಎಂದು . . . ಕಾಳಾಮುಖರ ಬಗ್ಗೆ ಹೇಳಿದೆ (ಶೋಳಂಬ. ೦೩೪). ೨. ಒಂದು ಬಗೆಯ ಮರ : (ಕೋಣನ ಕೊಂಬುಮರ, ಲಿಂಗಧಾರಿ, ಅಂಬಾರಿಹೊಡೆ (ವೃಕ್ಷಶಿ. ೭೫-೦೩೬೪). [ಸಂ. ಲಿಂಗಧಾರಿನ್]

**ಲಿಂಗಪತ್ರಿಕೆ** (ನಾ). (?) : ಮೊದಲ ಪದನಪಭ್ರಂಶಕ್ಕೆ ಬಾರದೆ ಉತ್ತರಪದಂ ತದ್ಭವವಾದ ಸಮಾಸಕ್ಕೆ . . . ಪಾದಶೃಂಖಲೆ —ಪಾದಸಂಕಲೆ, ಲಿಂಗಪತ್ರಿಕೆ—ಲಿಂಗವತ್ತಿಗೆ (ಶಮದ. ನ. ೩೦೪ ಪ್ರಯೋ). [ ? ]

**ಲಿಂಗಪಥ** (ನಾ). [ವೀಶೈ] ಲಿಂಗೈಕ್ಯಸಾಧನೆಯ ದಾರಿ; ಮೋಕ್ಷಮಾರ್ಗ: ಎನಗೆ ಗುರುಪಥವ ತೋಱಿದವರಾರು ಲಿಂಗಪಥವ ತೋಱಿದವರಾರು (ಬಸವ. ೯೩೨): ಲಿಂಗಪಥದಲ್ಲಿ ನಡೆಸಿ ಮಹಾಲಿಂಗಪದದಲ್ಲಿ ನಿಲಿಸುವಾತ ಜಂಗಮ (ಮೋಳಿವಚ. ೦೦೦ ಪ್ರಸ್ತಾವನ). [ಸಂ.]

**ಲಿಂಗಪ್ರತಿಷ್ಠೆ** (ನಾ). (ಪೂಜೆಗಾಗಿ ದೇವಸ್ಥಾನ ಮೊದಲಾದೆಡೆಗಳಲ್ಲಿ) ಶಿವಲಿಂಗವನ್ನು ಸ್ಥಾಪಿಸುವಿಕೆ : ಕಲ್ಲ ಮನೆಯ ಮಾಡಿ ಕಲ್ಲ ದೇವರ ಮಾಡಿ ಆ ಕಲ್ಲು ಕಲ್ಲ ಮೇಲೆ ಕೆಡೆದರೆ ದೇವರೆತ್ತ ಹೋದರೋ ಲಿಂಗಪ್ರತಿಷ್ಠೆಯ ಮಾಡಿದವಂಗೆ ನಾಯಕನರಕ (ಅವಶಂ. ೫೦-೨೦೨).
[ಸಂ. ಲಿಂಗಪ್ರತಿಷ್ಠಾ]

**ಲಿಂಗಪ್ರಸಾದ** (ನಾ). ಈಶ್ವರಲಿಂಗಕ್ಕೆ ಅರ್ಪಿಸಿದ ನೈವೇದ್ಯ : ಲಿಂಗಪ್ರಸಾದವನುಂಡು ಅನ್ಯದೈವಂಗಳ ಕೊಂಡಾಡುವವರ ನಮ್ಮ ಕೂಡಲಸಂಗಮದೇವನು ಆ ಭಂಡರಿಗೆ ಮಾಡಿದ ಹುಳುಗೊಂಡವನು (ಬಸವ. ೭೦೭): ಅಸಮಭಕ್ತಪ್ರಾಣನಿಧಿ ಕರವೊಸೆದು ಕೈಕೈಯಿಂದವಾರೋಗಿಸುತಿರಲ್ ತ್ರ್ಯಸಂಧಿಯುಲಿ ಲಿಂಗಪ್ರಸಾದವನು (ಬಸಪು. ೩೩-೦೨). [ಸಂ.]

**ಲಿಂಗಪ್ರಸಾದಿ** (ನಾ). [ವೀಶೈ] ಲಿಂಗಪ್ರಸಾದವನ್ನು ಪಡೆದವನು : ಆಧಿಯಿಲ್ಲದಿದ್ದಡೆ ಲಿಂಗಪ್ರಸಾದಿಯೆಂಬೆ ವ್ಯಾಧಿಯಿಲ್ಲದಿದ್ದಡೆ ಜಂಗಮಪ್ರಸಾದಿಯೆಂಬೆ (ಅವಶಂ. ೩೯-೦೭೭) ; ಲಿಂಗಪ್ರಸಾದಿಗಳಲ್ಲದವರ ಸಂಗ ಭಂಗವೆಂದುದು ಗುರುವಚನ (ಬಸವ. ೭೯೦). [ಸಂ. ಲಿಂಗಪ್ರಸಾದಿನ್]

**ಲಿಂಗಪ್ರಾಣಿ** (ನಾ). [ವೀಶೈ] ಲಿಂಗವೇ ಪ್ರಾಣವಾದವನು : ಪೂರ್ವಬೀಜವಾಯುಪ್ರಾಣಿಯಲ್ಲ ಲಿಂಗಪ್ರಾಣಿಯಾ ಶರಣನು (ಬಸವ. ೭೭೫) : ಎನ್ನ ದೇಹೇಂದ್ರಿಯ ಮನಃಪ್ರಾಣಾದಿಗಳು ಲಿಂಗದ ಪತಿಯರಾಗಿ ಲಿಂಗಕ್ಕೆಂದೆ ಬಯಸಿ ಲಿಂಗಪ್ರಾಣಿಗಳಾದ ಕಾರಣ ಲಿಂಗಕ್ಕೆಂದೆ ಕೈಕೊಂಡೆನು (ಬಸವ. ೨೦-೫೯). [ಸಂ. ಲಿಂಗಪ್ರಾಣಿನ್]

**ಲಿಂಗಮುಖ** (ನಾ). [ವೀಶೈ] "ಲಿಂಗಸ್ಥಾನಗಳೂ ಲಿಂಗಸ್ವರೂಪಗಳೂ ಆದ ನಾಸಿಕ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರವೆಂಬ ಜ್ಞಾನೇಂದ್ರಿಯಂಗಳು ಮತ್ತು ಗುದ, ಗುಹ್ಯ, ಪಾದ, ಪಾಣಿ, ವಾಕ್ಕುಗಳೆಂಬ ಕರ್ಮೇಂದ್ರಿಯಂಗಳು ಲಿಂಗಮುಖಗಳೂ ಆಗಿರುವುವು" (ಶಿವಾಸೂ. ೯೪): ನರಜನ್ಮದಲ್ಲಿ ಹುಟ್ಟಿ ಲಿಂಗಮುಖವನಱಿಯದೆ ಉದಮದಸೊಕ್ಕಿ ತಲೆಗೇಱಿತ್ತ ಅಯ್ಯಾ (ಬಸವ. ೫೬೯). [ಸಂ.]

**ಲಿಂಗಮುದ್ರೆ** (ನಾ). ('ಇದು ದೇವರಿಗೆ ಸೇರಿದುದು' ಎಂದು ತೋರಿಸಲು ಎತ್ತು, ಕಲ್ಲು ಮೊದಲಾದುವುಗಳ ಮೇಲೆ ಒತ್ತುವ ಅಥವಾ ಮುದ್ರಿಸುವ) ಲಿಂಗದ ಗುರುತು,– ಚಿಹ್ನೆ : ಬೀದಿಯ ಬಸವಂಗೆ ದೇಗುಲದ ಪಶುವಿಂಗೆ ಹುಟ್ಟಿದ ಕಱುಹೋರಿಗಳು. ಬಸವಗಳಪ್ಪುವೆ ಲಿಂಗಮುದ್ರೆಯನೊತ್ತದನ್ನಕ್ಕರ (ತನ್ನವ.ಳ. ೦೯೨-೪೨೪) ; ಲಿಂಗಮುದ್ರೆಯ ಸೀಮೆಯ ಮೃತ್ತಿಕೆ ಮರ ಕಲ್ಲು ಮುಂತಾದ ವಸ್ತುವ ಗುಣಂಗಳೆಲ್ಲವೂ ಲಿಂಗಧಾರಣದ ಸೀಮೆಯಾಗಿ (ಬಲೀಶ್ವ. ೭೪) : ಸ್ವತಃ ಇಳಕಲ್ಲ ಮಹಾಂತಸ್ವಾಮಿಗಳವರೇ . . . ಲಿಂಗಮುದ್ರೆಗಳನ್ನು ಸ್ಥಾಪಿಸಿದರು (ಕರಕ. ೬೨೯)

**ಲಿಂಗಮುದ್ರೆಕಲ್ಲು**, **ಲಿಂಗಮುದ್ರೆಯ ಕಲ್ಲು** = ಲಿಂಗದ ಚಿಹ್ನೆಯುಳ್ಳ (ಗಡಿ)ಕಲ್ಲು : ಹೊಲ ಮಾಡಿಬಿಟ್ಟು ನಾಲ್ಕುಮೂಲೆಗೂ ನಾಲ್ಕು ಲಿಂಗಮುದ್ರೆಕಲ್ಲು ನಡಿಸಿ ಕಾವುಕಟ್ಟು ಮಾಡಿಸಿಬಿಡು (ಶಿಳುಶು. ೪೯) ; ಆ ಶಾಸನಿಗರು ಆ ದೇವರ್ಗ್ಗೆಯಂಗಡಿಗೆ ಲಿಂಗಮುದ್ರೆಯ ಕಲ್ಲ ನಡಿಸಿಕೊಟ್ಟರ್ (ಎ೩. XIX. ೨೫-೫೩; 1245) : ಬಾಣೇಶ್ವರದೇವರ ಲಿಂಗಭೋಗರಂಗಭೋಗಕ್ಕೆ ಬಯನಾಡೊಳಗಣ ಬಾಣೂರನು ಹುಲಿಕಲ್ಲನು ಲಿಂಗಮುದ್ರೆಯ ಕಲ್ಲ ಹಾಕಿ ಕೊಟ್ಟೆಉ (ಎಕ. III (R), ಹಗ್ಗದ. ೦೪೩-೦೭ ; 1497). **ಲಿಂಗಮುದ್ರೆಬಸವೆ** = ಲಿಂಗಮುದ್ರೆಯನ್ನು ಒತ್ತಿರುವ ಬಸವ : (ಶ್ಯಾಂತರ್. ೬೪೭). **ಲಿಂಗಮುದ್ರೆವಳಯ** = ಲಿಂಗಮುದ್ರೆಯ ಕಲ್ಲುಗಳನ್ನು ನೆಟ್ಟಿರುವ ಗಡಿಯ ಪ್ರದೇಶ : ಆ ಪುರದ ಚತುರ್ಸೀಮೆಗೆ ಲಿಂಗಮುದ್ರೆವಳಯ ಶಾಶನವ ಹಾಕಿಸಿ (ಎಕ. XVI. ೫೪ಶಾ. ೯೩-೦೭; 1529). [ಸಂ. ಲಿಂಗಮುದ್ರಾ]

**ಲಿಂಗಮೆಣಸು** (ನಾ). ಮೆಣಸಿನಲ್ಲಿ ಒಂದು ಬಗೆ: ಲಿಂಗಮೆಣಸು, ಗುರುಗು (ವೃಕ್ಷಶಿ. ೨೦-೩೭೫). [ಲಿಂಗ + ಮೆಣಸು (< ಮೆಳಸು)]

**ಲಿಂಗರೋಗ** (ನಾ). ಮೇಹರೋಗ; ಪರಂಗಿರೋಗ : ಕ್ರಮುಕಮನಕ್ಕೆ ಫಲತ್ರಯದ ಮಸಿಯನಕ್ಕಣಿಲೆಯುಂ ರಸಾಂಜನಮುಮನಕ್ಕೆ ಮಾನುಷ್ಯಕಪಾಲಮನಕ್ಕೆ ಮೊಕ್ಕಳಂ ಪೂಸೆ ಲಿಂಗರೋಗಂ ಕಿಡುಗುಂ (ಲೋಕೋಪ. ೯-೦೩೯). [ಸಂ.]

**ಲಿಂಗವಂತ** (ನಾ). [ವೀಶೈ] ಇಷ್ಟಲಿಂಗವನ್ನು ಧರಿಸಿರುವವನು : ಲಿಂಗವಂತನ ಸನ್ನಿಧಿಯಿಂದ ಹಿಂದಣ ದುಸ್ಸಂಗ ಕೆಡುವುದು (ಬಸವ. ೦೫೦); ಅರಳೆಲೆಯುರಸಂ ಮಾಗಾಯ್ಗಳ ಮಾಲ್ಲಳಿಗಾಱಿಂ ಹೊಂಗತಗದ ಲಿಂಗವಂತಂ (ಬಸರ. ೦೦-೦೦೫); ಲಿಂಗಭಾವರು ಲಿಂಗಜೀವರು ಲಿಂಗವಂತರು ಲಿಂಗಶಾಂತರು (ಬಸಪು. ೬-೪೯). [ಸಂ. ಲಿಂಗವತ್]

**ಲಿಂಗವತ್ತಿಗೆ** (ನಾ). (?): "ವಾಳೆ(ಲಾಳೆ) = ಲಿಂಗವತ್ತಿಗೆ" (ಶಮದ. ೫೦. ೨); "ಲಾಳೆಯೆನೆ ಲಿಂಗವತ್ತಿಗೆ" (ಕಶಾಣ. ೩೪) ; "ಲಿಂಗವತ್ತಿಗೆಗೆ ಲಾಳೆಂಬುದು" (ಕದ್ವಿಕ. ೬೦). [< ಲಿಂಗಪತ್ರಿಕೆ]

**ಲಿಂಗವರ್ಜಿತ** (ನಾ). [ವೀಶೈ] ಇಷ್ಟಲಿಂಗವನ್ನು ತ್ಯಜಿಸಿದವನು : ಸರ್ವಸಂಸಾರ ಕಾರಣಭಕ್ತಿಗಮ್ಯನಂ ನಿರ್ವಿಕಾರನ ಲಿಂಗವರ್ಜಿತನುದಾರನಂ ಸರ್ವಾಂಗ ಪೊಂದಿ ಪಂದಿಸುಪೇಽ ಲಿಂಗದೊಳಗಿರ್ಪನಂ ಕುಱಿತೆಂದನು (ಬಸ್ತು. ೭-೦-೩೫). [ಸಂ.]

**ಲಿಂಗವಿಕಾರಿ** (ನಾ). [ವೀಶೈ] ಲಿಂಗಾಭಿಮಾನಕ್ಕೆ ಒಳಗಾದವನು ; ಇಷ್ಟಲಿಂಗಾಭಿಮಾನಿ : ಲಿಂಗವಿಕಾರಿಗೆ ಅಂಗವಿಕಾರವೆಂಬುದಿಲ್ಲ ಜಂಗಮವಿಕಾರಿಗೆ ಧನವಿಕಾರವೆಂಬುದಿಲ್ಲ (ಬಸವ. ೭೯೫). [ಸಂ. ಲಿಂಗವಿಕಾರಿನ್]

**ಲಿಂಗವಿವಕ್ಷೆ** (ನಾ). [ವ್ಯಾಕ] ಲಿಂಗದ ವಿಷಯವನ್ನು ನಿರ್ಧರಿಸುವುದು : ಪುಲ್ಲಿಂಗ, ಸ್ತ್ರೀಲಿಂಗ ಅಥವಾ ನಪುಂಸಕಲಿಂಗವೇ ಎಂದು ನಿರ್ಧರಿಸುವುದು : ಅರ್ಥಾನುಸಾರಿಯಾಗಿ ಲಿಂಗವಿವಕ್ಷೆ ಮಾಡುವುದು ಎಲ್ಲ ದ್ರಾವಿಡ ಭಾಷೆಗಳ ವೈಶಿಷ್ಟ್ಯವಾಗಿದೆ (ಭಾಶಾಶಾ. ೨೬೪) : ಸರ್ವನಾಮಗಳಲ್ಲಿ ಲಿಂಗ ನಿರ್ದೇಶನ ಕಾಣಿಸಿದರೂ ಅದು ಲಿಂಗವಿವಕ್ಷೆಗೆ ಸಂಬಂಧಪಡದ ವಿಚಾರ (ದ್ರಾಶಿಶಿ. ೨೩೬). [ಸಂ. ಲಿಂಗವಿವಕ್ಷಾ]

**ಲಿಂಗವೀರ** (ನಾ). ವೀರಭದ್ರನ ಸ್ತೋತ್ರವನ್ನು ಹೇಳುವ ಕಾಯಕದವನು : ಲಿಂಗದ ಬೀರ : ಮೆರಸಿ ನಂದೀಧ್ವಜವ ಕರಡಿಯು ಮೊರವಿನೊಳಗೀ ಲಿಂಗವೀರರ ಸರವಿಯೊಳಗವಗ್ಗೈದ ಖಡ್ಗವ ಹೊಗಳುತ ಪುರದಿ (ಬಜ್ಜ್‌ಪು. ೯೨-೩). [ಸಂ.]

**ಲಿಂಗವೃತ್ತಿ** (ನಾ). ಧರ್ಮದ ಹೆಸರಿನಲ್ಲಿ ಸ್ವಾರ್ಥವನ್ನು ಸಾಧಿಸಿಕೊಳ್ಳುವವನು ; ತಪಸ್ವಿಯ ವೇಷ ಧರಿಸಿಕೊಂಡು ಹೊಟ್ಟೆಹೊರೆಯುವವನು ; ಆಷಾಢಭೂತಿ : "ಧರ್ಮಧ್ವಜಃ. ಲಿಂಗವೃತ್ತಿ ಈ ೨ ತಪೋವೇಷಗೊಂಡವಂ" (ಹಲಾಯು. ೭೭-೨೩೦). [ಸಂ.]

**ಲಿಂಗವ್ಯಭಿಚಾರ** (ನಾ). ಪುಲ್ಲಿಂಗ, ಸ್ತ್ರೀಲಿಂಗ ಅಥವಾ ನಪುಂಸಕಲಿಂಗಗಳನ್ನು ವ್ಯತ್ಯಾಸಮಾಡಿ ಹೇಳುವುದು : ಲಿಂಗಸಂಖ್ಯಾಸಾಧನಾದಿ ವ್ಯಭಿಚಾರನಿವೃತ್ತಿಯಿಂ ಶಬ್ದಾನುಗತಾರ್ಥಮಂ ಕೆಯ್ಕೊಳ್ವುದು ಶಬ್ದನಯಂ ಪುಷ್ಯಸ್ತಾರಕಾನಕ್ಷತ್ರಮೆಂಬುದು ಲಿಂಗವ್ಯಭಿಚಾರಂ (ತತ್ತ್ವಸೂ. ೭೩). [ಸಂ.]

**ಲಿಂಗವ್ಯವಸ್ಥೆ** (ನಾ). [ವ್ಯಾಕ] ಪುಂ. ಸ್ತ್ರೀ. ನಪುಂಸಕಲಿಂಗಗಳನ್ನು ಉಪಯೋಗಿಸುವ ನಿಯಮ, ‒ಕಟ್ಟುಪಾಡು : ಭಾಷೆಗೆ ಲಿಂಗವ್ಯವಸ್ಥೆ ಒಂದು ಬಗೆಯ ಅನುರೂಪತೆಯನ್ನು ತಂದುಕೊಡುತ್ತದೆ (ದ್ರಾಶಿಶಿ. ೨೪೭). [ಸಂ. ಲಿಂಗವ್ಯವಸ್ಥಾ]

**ಲಿಂಗವ್ಯಸನಿ** (ನಾ). [ವೀಶೈ] ಲಿಂಗವನ್ನು ಕುರಿತು ಚಿಂತಿಸುವವನು; ಶಿವಧ್ಯಾನಿ : ಮರ್ತ್ಯಸನಿ ದುರಾಚಾರಿಯೆಂದೆನಿಸದಿರಯ್ಯಾ ಎನ್ನ ಲಿಂಗವ್ಯಸನಿ ಜಂಗಮಪ್ರೇಮಿಯೆಂದೆನಿಸಯ್ಯಾ (ಬಸವ. ೨೬೨) ; ಎಲ್ಲವನು ಹಿಂಗಿಸಿ ತಾ ಲಿಂಗವ್ಯಸನಿಯಾಗಬಲ್ಲಡೆ ಮುಂದೆ ಮಹಾಮಂಗಳದ ಬೆಳಗು ಕಾಣಿಪುದು (ಲಿಂಗಪ. ೨-೬). [ಸಂ. ಲಿಂಗವ್ಯಸನಿನ್]

**ಲಿಂಗವ್ಯಾಧಿ** (ನಾ). = ಲಿಂಗರೋಗ : ರೋಹಿಣೀಧವನುಗ್ರಗ್ರಹಯುಕ್ತನಾಗಿ ನಿಲೆ ಲಿಂಗವ್ಯಾಧಿಯಿಂ ಬರ್ದುಗುಂ (ಜಾತಕ. ೨೧-೧೧). [ಸಂ.]

**ಲಿಂಗಶರಣ** (ನಾ). [ವೀಶೈ] ಲಿಂಗಕ್ಕೆ ಶರಣಾದವನು : ಶಿವಭಕ್ತ : ಲಿಂಗಶರಣನ ಪಂಚೇಂದ್ರಿಯಂಗಳಂ ಲಿಂಗಮುಖವಾಗಿ ನಿಂದು ಮನ ಸಹಿತ ಪಂಚವಿಷಯಂಗಳುಬಿಲಸುಖಂಗಳ ಲಿಂಗಾರ್ಪಿತದಿಂದ ಚರಿಸುತ್ತ (ಅದವ. ೨೩-೭೦). [ಸಂ.]

**ಲಿಂಗಶರೀರ** (ನಾ). =ಲಿಂಗದೇಹ: ಭೂತಂಗಳೈದು ಬುದ್ಧಿ ಚಿತ್ತಂಗಳೆರಡು ಇಂತೇಳಂ ಬಿಟ್ಟು ಉಳಿದ ಪದಿನೇಳ್ತತ್ವಂಗಳ್ ಕೂಡಿ ಸೂಕ್ಷ್ಮಶರೀರಮಾದುದು ಅದಕ್ಕೆ ಲಿಂಗಶರೀರಮೆಂದು ಪೆಸರುಂಟು (ಮನೋವಿ. ೩-೩೦) : ಬುದ್ಧಿ ಮೊದಲಾಗಿ ತನ್ಮಾತ್ರೆಗಳ ಪರ್ಯಂತ ಹದಿನೆಂಟು ತತ್ತ್ವಗಳು ಪ್ರತಿಪ್ರಾಣಿಗೂ ಲಿಂಗಶರೀರವಾಗಬೇಕಾಗಿರುವುದು (ಹಿಂದಶಾ. ೩೭). [ಸಂ.]

**ಲಿಂಗಶರೀರಿ** (ನಾ). = ಲಿಂಗಧರ : ನಳಿನಪತ್ರೇಕ್ಷಣನ ಓಲಗಶಾಲೆಗೆ ಸಲುವರೆ ಲಿಂಗಶರೀರಿಗಳು (ಕುರಂದ. ದಾ. ೩-೦೩೩-೧). [ಸಂ. ಲಿಂಗಶರೀರಿನ್]

**ಲಿಂಗಶುದ್ಧಿ** (ನಾ). ಐದು ಬಗೆಯ ಶುದ್ಧಿಗಳಲ್ಲಿ ಒಂದು ; ಲಿಂಗಪೀಠವನ್ನು ನೀರಿನಿಂದ ತೊಳೆಯುವುದು : ಆತ್ಮಶುದ್ಧಿ ಸ್ಥಾನಶುದ್ಧಿ ದ್ರವ್ಯಶುದ್ಧಿ ಲಿಂಗಶುದ್ಧಿ ಮಂತ್ರಶುದ್ಧಿಯೆಂಬ ಪಂಚಶುದ್ಧಿಗಳಂ ವಿಸ್ತರಿಸುವಡಲ್ಲಿ . . . ಲಿಂಗಪೀಠಮಂ ವಾರಿಯಿಂ ಪ್ರಕ್ಷಾಲನಂಗೈವುದೇ ಲಿಂಗಶುದ್ಧಿಯೆನಿಸುವುದು (ಶಿವೇಶ. ೯೨). [ಸಂ.]

**ಲಿಂಗಸಲಾಖೆ** (ನಾ). ಲಿಂಗದ ಗುರುತುಳ್ಳ ಸಲಾಕೆ, ‒ಸರಳು (?) : × × × ಗಮಹಾದೇವಿಯರುಂ ಸ್ವರ್ಗ್ಗಗಾಮಿಗಳಾದಡಂ . . . ಶ್ರೀಪರ್ವ್ವತಕ್ಕಟ್ಟಿ ಪಾತಾಳಗಂಗೆಯ × × × ಇಟ್ಟಳಲ್ಲಿ ಸಲಕ್ಷಣಮಪ್ಪ ಲಿಂಗಸಲಾಖೆಗಳಂ ತರಿಸಿ (ಎಕ. VI. ಕಡೂರು. ೦೫೭‒೫೫; 1191). [ಲಿಂಗ+ಸಲಾಖೆ (<ಸಲಗೆ$_2$)]

**ಲಿಂಗಸಾರಾಯ** (ನಾ). [ವೀಶೈ] ಲಿಂಗತತ್ತ್ವವನ್ನು ಅರಿತವನು; ಶರಣ: ಅಸಂಬಂಧ ಸಂಬಂಧವಾಯಿತ್ತು ಲಿಂಗಸಾರಾಯರ ಸನ್ನುಮತದಿಂದ (ಬಸವ. ೬೪೩). [ಲಿಂಗ + ಸಾರಾಯ$_2$]

**ಲಿಂಗಸ್ಥಲ**, ಲಿಂಗಸ್ಥಳ (ನಾ). [ವೀಶೈ] ನೂರೊಂದು ಸ್ಥಲಗಳಲ್ಲಿಯ ಒಂದು ವಿಭಾಗ: ಶಿವತತ್ತ್ವವು ಸ್ವಶಕ್ತಿಯ ಸ್ಫುರಣೆಯಿಂದ ತಾಳಿದ ಎರಡು ಪ್ರಕಾರಗಳಲ್ಲಿ ಒಂದು : ಸಹಸ್ರಮೂಲಮಂತ್ರಮಂ ಜಪಿಸುತ್ತಾ ಲಿಂಗಸ್ಥಲಕ್ಕೆ . . . ಪ್ರಾಣಪ್ರತಿಷ್ಠೆಯಂ ಮಾಡಿ (ಶಿವೇಶ. ೦೦೦) ; ಸ್ಥಲತತ್ತ್ವವು ತನ್ನ ವಿಮರ್ಶಶಕ್ತಿಯ ಕ್ಷೋಭೆಯಿಂದ (ಚಲನದಿಂದ) ಲಿಂಗಸ್ಥಲವೆಂದೂ ಅಂಗಸ್ಥಲವೆಂದೂ ಎರಡುವಿಧ (ಶಿವಾಸಂ. ೧೧-೨೨); ಲಿಂಗಸ್ಥಲವು ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗ ಎಂದು ಮೂರು ವಿಧವಾಯಿತು (ಚಾರವ. ೨೫೩). **ಲಿಂಗಸ್ಥಳ** : ಆದಿಯಲ್ಲಿ ಶಿವಬೀಜವಲ್ಲದವರಿಗೆ ವೇದ್ಯವಾಗದು ಶಿವಜ್ಞಾನ ಶಿವಭಕ್ತಿ ಲಿಂಗಸ್ಥಳವಳವಡದು (ಬಸವ. ೬೫೬). ಅಂಗಸ್ಥಲ ' ಪರಾ. [ಸಂ.]

**ಲಿಂಗಸ್ಥಳ** ' ಲಿಂಗಸ್ಥಲ ' ನೋ.

**ಲಿಂಗಸ್ವಾಯತ** (ನಾ). [ವೀಶೈ] ಲಿಂಗವನ್ನು ಬ್ರಹ್ಮರಂಧ್ರಪ್ರದೇಶದಲ್ಲಿ ಇರಿಸಿಕೊಳ್ಳುವುದು : ಲಿಂಗಭಾವದ ಸಾಕ್ಷಾತ್ಕಾರ : ಬ್ರಹ್ಮರಂಧ್ರದಲ್ಲಿ ಲಿಂಗಸ್ವಾಯತೆ ಭ್ರೂಮಧ್ಯದಲ್ಲಿ ಜಂಗಮಸ್ವಾಯತ (ಅವತಂ. ೯೭-೨೦೦);ಆ ಗುರುವಿತ್ತ ಲಿಂಗವನೇ ಶಿಷ್ಯನು ಸಾವಧಾನದಿಂದುತ್ತಮಾಂಗಾದಿ ಸ್ಥಾನಂಗಳಲ್ಲಿ ಧರಿಸುವುದೇ ಲಿಂಗಸ್ವಾಯತವೆನಿಸುವುದು (ಶಿವೇಶ. ೦೦೨). 'ಜಂಗಮಸ್ವಾಯತ ' ಪರಾ. [ಲಿಂಗ + ಸ್ವಾಯತ]

**ಲಿಂಗಾಚಾರ** (ನಾ). [ವೀಶೈ] ಪಂಚಾಚಾರಗಳಲ್ಲಿ ಒಂದು : ಗುರುವು ಅನುಗ್ರಹಿಸಿದ ಲಿಂಗಕ್ಕಲ್ಲದೆ ಬೇರೆ ಲಿಂಗ ಸೇವೆಯನ್ನು ಸಲ್ಲಿಸದಿರುವುದು : ಲಿಂಗಾಚಾರ ಸದಾಚಾರ ಭೃತ್ಯಾಚಾರ ಶಿವಾಚಾರ ಗಣಾಚಾರವೆಂಬ ಪಂಚಾಚಾರನಿಷ್ಠನಾಗಿ . . . ಇವರ್ಗಾತನೇ ವೀರಶೈವನಪ್ಪಂ (ಶಿವೇಶ. ೯೭); ಸದಾಚಾರ ಲಿಂಗಾಚಾರ . . ಭೃತ್ಯಾಚಾರವೆಂಬ ಪಂಚಾಚಾರಂಗಳಳವಟ್ಟು (ಅಬಂದೇ. ೯೭-೯೦). 'ಪಂಚಾಚಾರ' ಪರಾ. [ಸಂ.]

**ಲಿಂಗಾಣು** (ನಾ). ಲಿಂಗದಿಂದ ಉತ್ಪತ್ತಿಯಾಗುವ ಅಣು : ವೀರ್ಯ : ಮಳೆಗಾಲದಲ್ಲಿ ಒಂದೆರಡು ತಿಂಗಳ ಮಟ್ಟಿಗೆ ಜೀವದಿಂದಿದ್ದು ಒಂದು ಸಲ ಲಿಂಗಾಣುಗಳನ್ನು ಉತ್ಪತ್ತಿಮಾಡಿ . . . ಅಳಿಯುವಂಥದ್ದು (ಹಸುಸೂ. ೦೯೦). [ಸಂ.]

**ಲಿಂಗಾತ್ಮಕ** (ನಾ). ಲಿಂಗದಲ್ಲಿ ಸೇರಿಕೊಂಡಿರುವವನು, ‒ ಲೀನವಾಗಿರುವವನು : ಲಿಂಗಮಯ ನಿರ್ಲಿಂಗ ತೇಜೋಲಿಂಗ ಲಿಂಗಾತ್ಮಕ ಸದಾಶಿವಲಿಂಗ ನಿರ್ಮಳಲಿಂಗ ಲಿಂಗಸ್ಥಿತ ಮಹಾಲಿಂಗ. . .ಕರುಣಿಸುವುದು (ಕುವ್ಯಾಕ. ೭-೮೬). [ಸಂ.]

**ಲಿಂಗಾಯುತ**, ಲಿಂಗಾಯಿತ, ಲಿಂಗಾಯ್ತ (ನಾ). ೧. [ವೀಶೈ] ಗುರುವು ಶಿಷ್ಯನಿಗೆ ಕೊಡುವ ಇಷ್ಟಲಿಂಗವನ್ನು, ಶಿಷ್ಯನಿಗೆ ಪೂಜಿಸಿ ತೋರಿಸುವುದು : ಮಾರಂಗಕ್ರೀಯ ಸಂಪಾದಿಸಿ ಲಿಂಗಾಯುತ ಸ್ವಾಯತವಾಗಿ ಒಳಹೊಜಗೆನ್ನದೆ ವೇಧಿಸಿಕೊಳಲು ಮಾಡಿದ ಕ್ರೀಯೆಂದೆನಿಸಿತ್ತು (ಶಿವಗ. ೦೦೨-೩೩೦): ಆಚಾರ್ಯಂ ತಾನು ಶಿಷ್ಯಂಗೆ ಕೊಡಲ್ಕಕ್ಕ ಲಿಂಗವನರ್ಚಿಸಿ ಶಿಷ್ಯನಂ ನೋಡಿಸುವುದೇ ಲಿಂಗಾಯುತವೆನಿಸುವುದು (ಶಿವೇಶ. ೦೦೨) ; ಆಚಾರ್ಯನು ತಾನು ಶಿಷ್ಯನಿಗೆ ಕೊಡತಕ್ಕ ಲಿಂಗವನ್ನು ಪೂಜಿಸಿ ಶಿಷ್ಯನಿಂದ ನೋಡಿಸುವುದೇ ಲಿಂಗಾಯುತವೆನಿಸುವುದು (ಅಷ್ಟಾವ. ೧). ೨. ಇಷ್ಟಲಿಂಗವನ್ನು ಧರಿಸಿದವನು ; ಲಿಂಗವಂತ : ವೀರಶೈವ : ಲಿಂಗಾಯುತರಿಗೆ

ಶ್ವವರೆಂತಲೂ. ಹೆಸರುಂಟು (ಕಾಗ.೯೦). **ಲಿಂಗಾಯಿತ** : ೨.
ಗ. ೩೩೩). **ಲಿಂಗಾಯ್ತು** : (೩). [ಲಿಂಗ + ಆಯತ್ತ]
**ಯಿತ** 'ಲಿಂಗಾಯತ' ನೋ.
**ಯ್ತು** 'ಲಿಂಗಾಯತ' ನೋ.
**ರಾಧನೆ** (ನಾ). [ವೀಶೈ] ಇಷ್ಟಲಿಂಗವನ್ನು ಪೂಜಿಸುವುದು :
ಗಾರಾಧನೆಯ ಮಾಡುವೆ ಜಂಗಮಾರಾಧನೆಯ ಮಾಡುವೆ (ಬಸವ. ೭೦೬).
[ಸಂ. ಲಿಂಗಾರಾಧನ]
**ರ್ಚನೆ** (ನಾ). = ಲಿಂಗಾರಾಧನೆ : ನಾನು ಬೆವಹಾರವ ಮಾಡುವೆ
ನ್ನು ಲಿಂಗಾರ್ಚನೆಗೆಂದು (ಬಸವ. ೭೦೬); ನಿತ್ಯಲಿಂಗಾರ್ಚನೆಗೆ ನಡೆತಂದು
ತಸಂಬಡುತ ಹರನಾಲಯಕ್ಕೆಯ್ತಂದು (ಶಿವರ. ೮. ೪-೭) ; ಲಿಂಗಾ
ನೆಯಿಂದ ಜಂಗಮಾರ್ಚನೆಯಧಿಕ (ಅನಂತ. ೭೦-೯೨).
[ಸಂ. ಲಿಂಗಾರ್ಚನ]
**ರ್ಪಿತ** (ಗು). ೧. ಲಿಂಗಕ್ಕೆ ಅರ್ಪಿಸಿದ, – ನೀಡಿದ : ಲಿಂಗಾರ್ಪಿತ
ಪದೊಳಿಭವಂಗರ್ಪಿತವಾಗದಂದನೆ ಬೆರಸಿದೆಯೊ ಮಹಾಲಿಂಗ
ವಿಧೋದಕಮಂ ಪಿಂಗದೆ ನೀನೊಂದುಗೆಯ್ದೆಯೋ ಮಜಪಿಂಡಂ (ವೃಷ.
-೦೭). (ನಾ) ೨. ಆಹಾರಪದಾರ್ಥ ಮುಂತಾದುವನ್ನು
ಂಗಕ್ಕೆ ಅರ್ಪಿಸುವುದು,– ನೀಡುವುದು : ಆವ ಪದಾರ್ಥವಾದರೇನು
ನಿದ್ದೆಡೆಗೆ ಬಂದುದ ಲಿಂಗಾರ್ಪಿತವ ಮಾಡಿ ಭೋಗಿಸುವುದೆ ಆಚಾರ
ಸವ. ೭೭೪). [ಸಂ.]
**ವತಾರ** (ನಾ). ೧. [ವೀಶೈ] ಶಿವನು ಲಿಂಗದ ಅವತಾರವನ್ನು
ರಿಸುವುದು; ಶಿವನು ಲಿಂಗರೂಪವನ್ನು ತಾಳುವುದು. ೨. ಶರಣ;
ವಭಕ್ತ : ಮಂಗಳದ ಲಿಂಗಾವತಾರರ ಸಂಗದಿಂ ಮಡಿವಳನು ಭಕ್ತಿ
ರಂಗಮಾಪಿಮೆಯನೆಜಿಂಬಿಲಾಜದೆ ಪಲವುರೂಪುಗಳ ಧರಿಸಿ (ಬಸವ.
-೩೮). [ಸಂ.]
(ನಾ). ೧. ಸಂನ್ಯಾಸಿನಿ ; ಯೋಗಿನಿ : ವಿರಕ್ತೆ : ವ್ಯಾಧಿಯುತ
ಳಂ ಲಲನೆ ಮರುಳ್ಗೊಂಡಳೊಳಂ ಲಿಂಗಿಯೊಳಂ . . . ನೆರೆದೊಡ
ಗುವಪಾಯಮುಂ ಶ್ರೀಯುಂ (ಮರತ. ೬-೪) ; ಸೂಳೆ ರಂಡೆ ಕೊಡಗೂಸು
ನತ್ತು ಲಿಂಗಿ ದೇವತೆ ತಿರ್ಯಗ್ಜಾತಿ ಕೀಲ್ಜಾರೆಯೆಂಬಿವವೊದಲಾಗೊಡೆಯ
ಯರೊಳು (ರತ್ನ. ೩-೬ ಪ), ೨. ಒಂದು ಬಗೆಯ ಗಿಡ;
ಲಿಂಗಿಯೆನಲ್ಕೆರಡು" (ಮಂಗರಾ. ೪೪-೯೨).
[< ಸಂ. ಲಿಂಗಿನೀ]
(ನಾ). ೧. ಯತಿ ; ಮುನಿ ; ಋಷಿ : ಬ್ರಾಹ್ಮಣರಂ ಲಿಂಗಿಗಳಂ
ಪುಣ್ಯದಿನಂಗಳೊಳಳದವರ್ಗಳಪ್ಪರಿಂತಿದನಳದರ್ (ಎಪಿ. XVI, ೩೯-೪೦;
07) ; ಜೈನ ಭೈರವ ಬುದ್ಧ ಲಿಂಗಿಗಳು ವಿವಿಧವರ್ಣಾಶ್ರಮಸುಧರ್ಮ
ವಹರಣಿಸಪ್ಪರು . . . ಒವಗಿದರಸಂಖ್ಯಾತ (ಕುಮಾ.ಭ. ೦೨-೨೨);
ಂಗಿಯಪ್ಪುದಂ ಹಲ್ಲುಹೋವುದಂ . . . ಇಂತಪ್ಪ ದುಸ್ವಪ್ನಂಗಳಂ
ಡೊಡೆ ಸಾವರು (ಅವೇಶ. ೦೩೯). ೨. [ವೀಶೈ] ಇಷ್ಟಲಿಂಗವನ್ನು
ರಿಸಿರುವವನು ; ಲಿಂಗಧಾರಿ : ಶಿವಜ್ಞಾನ ಸಂಪನ್ನನಾದ ಜ್ಯೋತಿ
ರ್ಯಲಿಂಗಿಗೆ ಅಂಗವುಂಟೆ (ವಚರ೭೦). [ಸಂ. ಲಿಂಗಿನ್]
**ಗ** (ನಾ). [ವೀಶೈ] ಇಷ್ಟಲಿಂಗವನ್ನು ಹೊಂದಿರುವವನು ;
ಂಗಧಾರಿ ; ಲಿಂಗವಂತ : ಸರ್ವಾಂಗಲಿಂಗಿಗನೆಂದು ಮಂಗಳಾತ್ಮಕ
ರು ನುಡಿದ (ಅಭ್ಯಾ.೦-೩-೯೩). [ಲಿಂಗ + — ಇಗ]
**ನಿ** (ನಾ). [ವೀಶೈ] ಸಂನ್ಯಾಸಿನಿ ; ಯೋಗಿನಿ : ಬಹುವ್ಯಸನ ಲಿಂಗಿನಿ
. . . ಬೆಲೆವೆಣ್ ಮುದುಗುಂಟಣಿ ದೈವಕಾರ್ತಿ ನಾಪಿತ ಕಥವೇಟ್ಬು

**ಲಿಂಗೈಕನಿಷ್ಠ** (ನಾ). [ವೀಶೈ] ಇಷ್ಟಲಿಂಗದಲ್ಲಿ ಏಕನಿಷ್ಠೆಯುಳ್ಳವನು :
ಲಿಂಗೈಕನಿಷ್ಠನೆನಿಸುವ ಭೃಂಗೀಶಂ ಶಕ್ತಿಯುಕ್ತಮೆಂನಿಪೀಶನ ವಾಮಾಂಗ
ಮನೆ ಪಿಂಗುತೆಯಂ ಬಲದಂಗಕೆ ಬಲಗೆಯ್ಯೋಳಾಗಿ ಭಜಸಿದನಲ್ತೇ (ವೃಷ.
೩೭-೨೨). [ಸಂ.]
**ಲಿಂಗೈಕ್ಯ** (ನಾ). ೧. ಲಿಂಗದಲ್ಲಿ ಐಕ್ಯನಾಗುವುದು. ೨. [ವೀಶೈ]
ಮರಣ ಹೊಂದಿದ ವ್ಯಕ್ತಿ ; ಶಿವೈಕ್ಯ : ಲಿಂಗದಲ್ಲಿ ಐಕ್ಯನಾದವನು :
ಕೂಡಲಸಂಗನ ಶರಣರಲ್ಲಿ ಅಚ್ಚಲಿಂಗೈಕ್ಯಂಗೆ ತೊತ್ತಾಗಿಹುದಯ್ಯಾ
(ಬಸವ. ೦೩೩) ; ನಿರುಪಮನಿರಾಳನು ನೋಡಾ ಲಿಂಗೈಕ್ಯನು (ಅನಂತ.
೩೦೬-೩). [ಸಂ.]
**ಲಿಂಗೋದಕ** (ನಾ). [ವೀಶೈ] ಇಷ್ಟಲಿಂಗಕ್ಕೆ ಅಭಿಷೇಕಮಾಡಿದ ನೀರು:
ಲಿಂಗದೇವನ ಮುಟ್ಟಿ ಮಜ್ಜನಕ್ಕೆಱೆವ ಕೈಯಲು ವಿಪ್ರನ ಕಾಲ ತೊಳೆವರೆ
ಲಿಂಗೋದಕ ಹೃದಯದಲ್ಲಿ ವಿಪ್ರನ ಕಾಲ ತೊಳೆದ ನೀರು ಮಂಡೆಯ
ಮೇಲೆ (ಬಸವ. ೩೯೪) : ಪಾದದಲ್ಲಿ ಪಾದೋದಕ ಆ ಪಾದತೀರ್ಥವನ್ನು
ಲಿಂಗಕ್ಕೆ ಮಜ್ಜನಕ್ಕೆರೆಯಬೇಕೆಂಬ ಇಚ್ಛೆ ಹುಟ್ಟಿದಲ್ಲಿ ಲಿಂಗೋದಕ ಮಜ್ಜನ
ಕ್ಕೆರೆದಲ್ಲಿ ಮಜ್ಜನೋದಕ (ಕರ್ಣಾಶ. ೦೩೭). [ಸಂ.]
**ಲಿಂಗೋದ್ಭವ** (ನಾ). ೧. ಲಿಂಗದ ಉದ್ಭವ,– ಹುಟ್ಟುವಿಕೆ : ಪರಮ
ಸುಜ್ಞಾನನಿಧಿನಂದೀಶ್ವರಂಗಮಲಕರಕಮಲಮಂ ಮುಗಿದು ಕೊಂಡಾಡಿ
ಚಿತ್ತಸುಸ್ಥಿರನಾಗಿ ಲಿಂಗೋದ್ಭವದ ನಿರೂಪಣವನು ಸನತ್ಕುಮಾರಂ ಕೇಳಲು
(ಲಿಶಿಂ. ೪-೧). ೨. "ಅಯೋನಿಜ, ಶಿವಕೃಪೆಯಿಂದ ಜನಿಸಿ
ದವನು" (ಕರಾ. ೨೪-೭). [ಸಂ.]
**ಲಿಂಗೋಪಾಸನೆ** (ನಾ). [ವೀಶೈ] ಇಷ್ಟಲಿಂಗವನ್ನು ಉಪಾಸನೆ
ಮಾಡುವುದು ; ಲಿಂಗಪೂಜೆ : ಷಟ್‌ಸ್ಥಲಮಾರ್ಗವು ವೀರಶೈವರ
ಲಿಂಗೋಪಾಸನೆಗಾಗಿ ಯುಕ್ತಿಯುಕ್ತವಾಗಿ ಕಲ್ಪಿಸಿದ ಸಾಧನಮಾರ್ಗವು
(ಶಿವಾಸೂ. iv. ಪ್ರಸ್ತಾವನೆ). [ಸಂ. ಲಿಂಗೋಪಾಸನ]
**ಲಿಂಬಿ** 'ನಿಂಬೆ' ನೋ.
**ಲಿಂಬೆ** 'ನಿಂಬೆ' ನೋ.
**ಲಿಕಿತ** (ನಾ). ಬರಹ ; ಬರವಣಿಗೆ : ಪಲ್ಲವಾಚಾರಿ ಲಿಕಿತಂ (ಎಕ. II,
೨೦–೩; ಸು. 700) ; ದಿನಕರಯ್ಯಶೆಟ್ಟಿಯ ಲಿಕಿತಂ (ಎಕ. IV, ಎಳಂದೂ.
೨೩-೦೩ ; ಸು. 925 ?). [< ಸಂ. ಲಿಖಿತ]
**ಲಿಕಿಲಿಕಿ** (ನಾ). ೧. (ಉಪಕರಣಗಳ ಕೀಲು ಮುಂತಾದುವು ಪಳೆಯ
ದಾಗುವುದರಿಂದಾಗುವ) ಸಡಿಲ ; ಅಳ್ಳಕ : ಸಾಮ್ರಾಜ್ಯಕೋಟೆಯ
ಭದ್ರಕೀಲುಗಳು ಲಿಕಿಲಿಕಿಯಾಗುತ್ತಿದ್ದವು (ರಕ್ತರ್. ೦೨೨): ಮೊಗಲ
ರಾಜ್ಯದ ಕೀಲುಗಳು ಸಡಿಲಿಹೋಗಿ, ರಾಜ್ಯವು ಲಿಕಿಲಿಕಿಯಾಯಿತು (ರಾಜಾರಾ.
೦೬); ಮೋಟಾರು ೪ ಮೈಲಿ ದೂರದಲ್ಲಿ ಬರುತ್ತಿದ್ದರೂ ಶಬ್ದವಾಗುವಷ್ಟು
ಅವು ಲಿಕಿಲಿಕಿಯಾಗಿದ್ದರೆ ಅಂತಹ ಮೋಟಾರಿಗೆ ಹಾರನ್ ಇದ್ದರೆ
ಅದನ್ನು ತೆಗೆಯಿಸಿ ಹಾಕುತ್ತೇನೆ (ನಾಡಗೀ. ೭೭). ೨. ಶಿಥಿಲ ; ಜರ್ಜರಿತ:
ಕಲ್ಪವೃಕ್ಷವನ್ನು ಸಮೂಲ ಕಿತ್ತು ಒಗೆದಂತೆ ಅರಸನ ಸರ್ವಾಂಗಗಳು
ಲಿಕಿಲಿಕಿಯಾದವು (ತುಳಸಿ. ೦೦೬) : ಅವನ ಮೈಯೆಲ್ಲ ಲಿಕಿಲಿಕಿಯಾಗಿತ್ತು
(ಎರಸಿ. ೯೭) ; ಅದರ ಮೇಲಿಂದ ಬಿದ್ದದ್ದರಿಂದ ನನ್ನ ಮೈಯೆಲವು
ಲಿಕಿಲಿಕಿಯಾಗಿವೆ (ಕನ್ನಸ. ೦೪). [← ಮರಾ. ಲಿಕಿಲಿಕೀ ]
**ಲಿಕುಚ** (ನಾ). ೧. ಈಳೆಜಾತಿಗೆ ಸೇರಿದ ಒಂದು ಬಗೆಯ ಮರ
ಮತ್ತು ಅದರ ಹಣ್ಣು; ಗಜನಿಂಬೆ : "ಲಕುಚಃ, ಲಿಕುಚಃ, ಡಹುಃ_೩
ಗಜನಿಂಬೇ ಹೆಸರುಗಳು" (ಸಿದ್ಧಾಂತ. ೦೨೩); ವಕುಳ ಪಾಟಲಾಶ್ವತ್ಥಬ್ರಾತಂ
ಲಿಕುಚ ನಾಳಿಕೇರದ್ರುಮಜಾತಂ (ಸುಕುಮಾ. ೦೦-೩೭ ರಗಳೆ); ಬಿಲ್ವಾ ಏವಿಸ

ಭಾಳಾಕ್ಷನೆಂದರ್ಚಿಸುತ್ತೆ (ರಾಶತ. ೬-೩೦). ೨. ಒಂದು ಬಗೆಯ ಮರ ಮತ್ತು ಅದರ ಹಣ್ಣು; ಬೇಲ; ಬೆಲ್ಲವತ್ತ: "ಲಿಕುಚಂ (ಲಕುಚಂ) ಕಪಿತ್ಥ ಮಣಿಗೆ ದಧಿತ್ಥಂ" (ಚಸ್ತುಕೋ. ೩೩-೩); ಒರ್ವಳ್ ಲಿಕುಚಕುಚದ ನಸೆಗಾರ್ತಿ ಕಣ್ಣಮಿರೆ . . . ಕುಪ್ಪಸಮಂ ಸಡಿಲ್ಚಿದಳ್ (ಅವಂತ್. ೧೨೩-೦೨). [ಸಂ.]

**ಲಿಕ್ಷೆ** (ನಾ). ೧. ಹೇನಿನ ಮೊಟ್ಟೆ; ಸೀರು: ಮತ್ಕುಣದಂಶಮಶಕಲಿಕ್ಷಾಯೂಕಪಿಪೀಲಿಕಾದೇಹಿಕಂ (ಶಶ್ವಕ್ರ ೯೬). ೨. ದೂರವನ್ನು ಅಳೆಯುವ ಒಂದು ಮಾನ: ಆ ತ್ರಸರೇಣುಗಳೆಂಟಾಗಲೊಂದು ವಾಲಾಗ್ರವೆನಿಸುಗುಂ ಆ ವಾಲಾಗ್ರವೆಂಟಾಗಲೊಂದು ಲಿಕ್ಷೆಯೆನಿಸುಗುಂ (ಶಿವೇಶ. ೨೩೯). [ಸಂ. ಲಿಕ್ಷಾ]

**ಲಿಖನ** (ನಾ). ೧. ಬರೆಯುವಿಕೆ: 'ಲಿಖಿಸು' ಪರಾ. ೨. ಬರೆದುದು: ಬರವಣಿಗೆ; ಬರಹ. ೩. ಬರೆದ ಆಧಾರ ಪತ್ರ; ದಾಖಲೆ. [ಸಂ.]

**ಲಿಖಾವಟ್ಟು** (ನಾ). ೧. ಬರವಣಿಗೆ. ೨. ಲಿಖಿತ ದಾಖಲೆ.—ಪತ್ರ: ಈ ಕಾಯಿದೆಯಲ್ಲಿ ಹೊಸದೇನೂ ಇಲ್ಲ. ಇದುವರೆಗೆ ಲಿಖಾವಟ್ಟಿನಲ್ಲಿ ಇಲ್ಲದ್ದಕ್ಕೆ ಈಗ ಲೇಖನರೂಪವನ್ನು ಕೊಟ್ಟಿದೆ (ಬಂಕಿಮ. ೩೩೯); ಪ್ರಾಚೀನ ಕಾಲದ ಶಾಸನಗಳು ಮತ್ತಿತರ ಲಿಖಾವಟ್ಟುಗಳನ್ನೆಲ್ಲಾ . . . ಸಂಪಾದಿಸಿದ್ದು ಚೊಕ್ಕವಾಗಿ ಇಂಗ್ಲಿಷ್‌ಲಿಪಿಯಲ್ಲಿ ಮುದ್ರಣವಾಗಿವೆ (ಶಾಶ್ವವಿ. ೯೮೩). [←ಹಿಂ. ಮರಾ. ಲಿಖಾವಟ್]

**ಲಿಖಾವಟ್ಟುದಾರ** (ನಾ). ಬರವಣಿಗೆಗಾರ; ಲಿಪಿಗಾರ: ಅನೇಕ ಗ್ರಾಮಗಳಲ್ಲಿ ಕೆಲಸಕ್ಕೆ ಬಾರದ ಲಿಖಾವಟ್ಟುದಾರರಲ್ಲದ ಪಟೇಲರುಗಳಿದ್ದರು (೯೦೨. ೦೬೬). [ಲಿಖಾವಟ್ಟು + — ದಾರ₄]

**ಲಿಖಿಚ್ಚು** 'ಲಿಖಿಸು' ನೋ.

**ಲಿಖಿತ** (ಗು). ೧. ಬರೆದ: ಪರಲಿಖಿತಪತ್ರ್ರೀಲಿಪಿಯೊಂದಂಬರದೊಳಿರ್ದಾಕಸ್ಮಿಕಂ ಭೂವರನ ಸಮ್ಮುಖದಲ್ಲಿ ಬೀಳಲು (ಬಸಕೃ. ೩-೩೨): ನಮಗೆ ದೊರೆತಿರುವ ಪ್ರಾಚೀನ ಲಿಖಿತದಾಖಲೆಗಳು ಕ್ರಿ. ಪೂ. ೪ನೆಯ ಶತಮಾನಕ್ಕಿಂತ ಹಿಂದಿನವಾಗುವುದಿಲ್ಲ (ಭಾರಪ. ೯). ೨. ಕೊರೆದ; ಕಂಡರಿಸಿದ. (ನಾ). ೩. ಬರೆದುದು: ಬರಹ: ಶಿರದ ಲಿಖಿತವ ಕಂಡು ಮರುಳುತಂಡಗಳು ಓದಿ ನೋಡಲು (ಬಸವ. ೩೩೯): ನಿಮ್ಮ ಲಿಖಿತವನಿಂದು ಕಾಣಿಸಿದರೇ (ಸಂಬರ. ೬-೬೦). ೪. ಬರೆದ ದಾಖಲೆ: ಕಡತ: ನಾಲ್ಕನೆಯ ಲಿಖಿತದಲ್ಲಿ ಮಂಗರಸರ ಪೂರ್ವಜರ ವಿವರಗಳನ್ನು ಹೇಳಲಾಗಿದೆ (ಕುಮಾರಾಂ. ೦೮). ೫. ಸ್ಮೃತಿಯನ್ನು ಬರೆದ ಒಬ್ಬ ಋಷಿಯ ಹೆಸರು: ಅಜ್ಞಾನ ದ್ವಿಜಾಧಮಂ ತಾನಾದನೀ ದ್ರೋಹಕೆಂದು ಲಿಖಿತಂ ನುಡಿದನು (ಕೃಬಾಶಾ. ೦೨-೨). [ಸಂ.]

**ಲಿಖಿಸು**. ಲಿಖಿಚ್ಚು (ಕ್ರಿ). ಬರೆ; ಲೇಖಿಸು: ಬರೆದಂ = (ವೃತ್ತಿಯಂ) ಲಿಖಿಸಿದಂ (ಕವಿರ. ಟೀಕೆ. ೬ ೭೬೯); ಪಂಚಾಕ್ಷರಿಯನಕ್ಷರವಾಗಿ ಲಿಖಿಸುತ್ತ (ಬಸಕೃ. ೩೩-೬೩): ಮುಖಿಮುದ್ರೈವತ್ಸ್ಯನಾಲ್ಕಕ್ಷಿ ನೂಚಿಂಟರಲ್ ಲಿಖಿಸಿರ್ದ ಪ್ರತಿಮೆಯಂದದಿ ಬೆಚಿಗುವಟ್ಟ ಷಣ್ಮುಖನ ಮುಗ್ಧಸುಭಾವವಂ ಕಂಡು (ಶಂಕೃ. ೯-೦). **ಲಿಖಿಚ್ಚು**: ಶ್ರೀಮತ್ತನ್ಧರ್ಮವಾ ಚನ್ದ್ರಧರಾರ್ಣವವ್ ಲಿಖಿಚ್ಚಿದೋನ್ ದಿವ್ಯಭಾಷಾಕಲನ್ (ಎಕ. XVI, ಶಾಪುಗ. ೦೨-೯; ಸ. 754). [ಲಿಖನ + — ಇಸು₃]

**ಲಿಗಾಡ**. ಲಿಗಾಡಿ. ಲಿಗಾಡು (ನಾ). (ಉಕ) ೧. ಒತ್ತಾಯ; ನಿರ್ಬಂಧ: ಈ ಶೆಟ್ಟಿಯು ನಿನ್ನ ಮೇಲೆ ಲಿಗಾಡ ಹಾಕಿ ತೆಗೆದುಕೊಂಡನೋ (ಕಥಾಮ. IV. ೮೩). **ಲಿಗಾಡಿ**: ೨. ಗೋಜು; ಉಸಾಬರಿ; ಗೊಡವೆ: ನಡೆದಾದರೂ ಹೋಗಬಹುದು. ನಿಮ್ಮ 'ಲಿಗಾಡಿ' ಬೇಡ (ಸರಸ. ೨೬). **ಲಿಗಾಡು**: ೨. ಈ ಪ್ರಾಣಿಗೆ ಸಮಾಧಾನವೆಂಬುದೇ ಇರಲಿಲ್ಲ. ಒಂದಿಲ್ಲ ಒಂದು ಲಿಗಾಡು ಬೇಕಾಗುತ್ತಿತ್ತು (ದೀಸಹ. II. ೦೦೬). ೩. ನಷ್ಟಕ್ಕಾಗಿ ಕೊಡುವ ಪರಿಹಾರ: (೬). [← ಮರಾ. ಲಿಗಾಡ್]

**ಲಿಗಾಡಿ** 'ಲಿಗಾಡ' ನೋ.

**ಲಿಗಾಡು** 'ಲಿಗಾಡ' ನೋ.

**ಲಿಪಿ** (ನಾ). ೧. ಮೆತ್ತುವಿಕೆ: ಬಳಿಯುವಿಕೆ. ೨. ಬರೆಯುವಿಕೆ: ಲೇಖಿಸುವಿಕೆ. ೩. ಅಕ್ಷರ: "ಲಿಪಿಯೆಂಬುದು ಚಿತ್ರದ ಬರಹಮುಂ, ಅಕ್ಷರದ ಬರಹಮುಂ" (ಹಲಾಯು. ೧೨೦-೯೩); ತೆಲುಗಲಿಪಿ ನಾಗರದ ಲಿಪಿ ಗ್ರಂಥಲಿಪಿ ಹಳೆಗನ್ನಡದ ಲಿಪಿ ದ್ರಾವಿಳಲಿಪಿಯು ಪಾರಿಸಲಿಪಿಯು ಲಾಳಲಿಪಿ ಮೊದಲಾದ ಹಲವು ಲಿಪಿಗಳನೋದಬಲ್ಲಗ್ಗಳದ ಕರಣಿಕರಂ ಕರೆಸಿ (ಬಸಕೃ. ೩-೩೩): ಅಕ್ಷರಗಳನ್ನು ಕಣ್ಣಿಗೆ ಗೋಚರಿಸುವಂತೆ ಮಾಡಲು ನಿಶ್ಚಿತವಾಗಿರುವ ಸಂಕೇತಗಳು ಅಥವಾ ಚಿಹ್ನೆಗಳು ಲಿಪಿಗಳೆನಿಸುತ್ತವೆ (ಸಂಕೋಶ. ೧). ೪. ಬರವಣಿಗೆ; ಕೈಬರಹ; ಹಸ್ತಾಕ್ಷರ: ಪಂಕ್ತಿಭೇದಂ ಲಿಪಿಗಳೊಳ್ . . . ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಆಗಪು. ೨-೧೦ ವ). ೫. ಹಣೆಬರಹ; ವಿಧಿಲಿಖಿತ: 'ಲಿಪಿಕರ್ತೃ' ಪರಾ. ೬. [ತರ್ಕಶಾ] ಹನ್ನೆರಡು ಬಗೆಯ ಪ್ರಮಾಣಗಳಲ್ಲಿ ಒಂದು; ಯಥಾರ್ಥಜ್ಞಾನದ ಲಿಖಿತಪ್ರಮಾಣ.—ಸಾಧನ: ಪ್ರಮಾಣವು ಪ್ರತ್ಯಕ್ಷ. ಅನುಮಾನ. ಉಪಮಾನ. ಶಬ್ದ. ಅರ್ಥಾಪತ್ತಿ. ಅನುಪಲಬ್ಧಿ, ಸಂಭವ, ಐತಿಹ್ಯ, ಲಿಪಿ. ಲೋಕಪ್ರಸಿದ್ಧಿ, ಚೇಷ್ಟೆ. ಪ್ರಾತಿಭ ಎಂದು ಹನ್ನೆರಡು ವಿಧ (ಕಂದಸಾ. ೦೩೩). [ಸಂ.]

**ಲಿಪಿಕ** (ನಾ). ಬರೆಯುವವನು; ಲೇಖಕ: "ಲಿಪಿಕನೆನೆ ಗ್ರಂಥಲೇಖಕಂ" (ಮಂಗರಾ. ೦೦೬-೦೬). [ಸಂ.]

**ಲಿಪಿಕರ** (ನಾ). ೧. ಸುಣ್ಣ, ಬಣ್ಣ ಬಳಿಯುವವನು. ೨. ಬರೆಯುವವನು: ಲೇಖಕ: "ಲೇಖಕಃ, ಲಿಪಿಕರಃ ... ಈ ೨ ಲೇಖಕಂ" (ಹಲಾಯು. ೯೬-೪೩೨). ೩. ಕೆತ್ತನೆ ಕೆಲಸ ಮಾಡುವವನು: ಶಿಲ್ಪಿ. [ಸಂ.]

**ಲಿಪಿಕರ್ತೃ** (ನಾ). ಹಣೆಬರಹವನ್ನು ಬರೆಯುವವನು; ಬ್ರಹ್ಮ: ಲಿಪಿಕರ್ತೃವಿನ ಮಾನಸಪುತ್ರ ಮತ್ಕರ್ಮವಿಪಿನಕುಠಾರ ನೀ ಬಂದ ಗುಪಿತ ಪೇಳು (ವೋಹಕ. ೦೨-೩). [ಲಿಪಿ+ಕರ್ತೃ (< ಕರ್ತಾರ)]

**ಲಿಪಿಕಾರ** (ನಾ). =ಲಿಪಿಕರ ೨: "ಲಿಪಿಕಾರಂ ಲೇಖಕಂ" (ಚಸ್ತುಕೋ. ೬೦-೩೯); ವೀರನಾರಾಯಣನೆ ಕವಿ ಲಿಪಿಕಾರ ಕುವರವ್ಯಾಸ (ಕುವ್ಯಾಭ. ೦-೬); ಲಿಪಿಕಾರ ಎಂಬುದು 'ಲೇಖಕ'ಕ್ಕಿಂತ ಈಚಿನ ಕಾಲದ ಶಬ್ದವೆಂದು ಹೇಳುತ್ತಾರೆ (ಕನ್ನಸಂ. ೯೬). [ಸಂ.]

**ಲಿಪಿಗಲ್ಲು** (ನಾ). ಲಿಪಿಯನ್ನು ಕೊರೆದ ಕಲ್ಲು; ಶಿಲಾಶಾಸನ: ಶ್ರೀ ಲೋಕಪಾಲೇಶ್ವರ ಕಪ್ಪಾರೆ ಬಳಿ (ಪಟ್ಟದ ಕಲ್ಲಿನ ವಿರೂಪಾಕ್ಷನ ಗುಡಿಯ ಪ್ರಾಕಾರದಲ್ಲಿಟ್ಟ ಲಿಪಿಗಲ್ಲು ಕ್ರಿ. ಶ. ಎಂಟನೆಯ ಶತಮಾನ) (ಕುಳುವಾ. ೨೬೩). [ಲಿಪಿ+ಕಲ್ಲು (< ಕಲ್₃)]

**ಲಿಪಿಗಾರ** (ನಾ). = ಲಿಪಿಕರ ೨: ಈಕ್ಷಿಸದೆ ಭಕ್ತಿಪ್ರಭೆಯ ವಿರಜಾಕ್ಷಿಯಿಂ ಕ್ರತುಪುರದೊಡೆಯನಧೋಕ್ಷಜನ ನೀ ವಿಶ್ವಕವಿಗವಗೆಂತು ಲಿಪಿಗಾರ? (೧೯ವಿಂ. ೯೬-೪); ಅತ್ತಿಮಬ್ಬೆ ನೂರಾರು ಜನ ಲಿಪಿಗಾರರನ್ನು ಕರೆಸಿದಳು (ದಾನಚಿ. ೦೬೩). [< ಸಂ. ಲಿಪಿಕಾರ]

**ಲಿಪಿಜ್ಞ** (ನಾ). ಬರವಣಿಗೆಯನ್ನು ಬಲ್ಲವನು: ತಿಳಿದವನ ಮತಿವಿದನ ಭಾಷಾವಳಿಲಿಪಿಜ್ಞನ ಸಾಕ್ಷರನ . . . ಸಂಧಿವಿಗ್ರಹರೆನಿಸಬೇಕು (ಕುವ್ಯಾಉ. ೩-೮೯). [ಸಂ.]

**ಲಿಪಿವಿಜ್ಞಾನ** (ನಾ). ಪ್ರಾಚೀನ ಕಾಲದ ಲಿಪಿ ಮತ್ತು ಅದರ ಬೆಳವಣಿಗೆಗೆ ಸಂಬಂಧಿಸಿದ ವಿಜ್ಞಾನ-ಶಾಸ್ತ್ರ; ಅಕ್ಷರಶಾಸ್ತ್ರ: ಇತ್ತೀಚೆ ಮುಂದೆ ಶಾಸನ ವಿಜ್ಞಾನ (Epigraphy) ಮತ್ತು ಲಿಪಿವಿಜ್ಞಾನ (Palaeography)ಗಳು ಪ್ರತ್ಯೇಕ ಶಾಖೆಗಳಾಗಿ ಬೆಳೆಯತೊಡಗಿದುವು (ಪ್ರಾವಿಶಿ. ೩೯). [ಸಂ.]

**ಲಿಪಿವಿಧಾನ** (ನಾ). ಅಕ್ಷರಗಳನ್ನು ಬರೆಯುವ ಕ್ರಮ : ಸೇವಾಧರ್ಮೋಚಿತಮೆನಿಸುವಸಿಕರ್ಮಮುಮನೇಕ ಲಿಪಿವಿಧಾನಾಧೀನಮಪ್ಪ ಮಷಿಯುಮಂ . . . ಪಡೆದು (ಆದಿಪು. ೬-೬೪ ವ). [ಸಂ.]

**ಲಿಪಿಶಾಲೆ** (ನಾ). ಬರಹವನ್ನು ಹೇಳಿಕೊಡುವ ಶಾಲೆ; ಲಿಪಿಯನ್ನು ಕಲಿಸುವ ಶಾಲೆ : ಮಹಾವಗ್ಗದಲ್ಲಿ ಸಿದ್ಧಾರ್ಥನು ವಿದ್ಯಾರ್ಥಿಯಾಗಿ ಚಂದನಫಲಕವನ್ನೂ ಸುವರ್ಣಶಲಾಕೆಯನ್ನೂ ಹಿಡಿದು ಲಿಪಿಶಾಲೆಗೆ ಹೋಗುತ್ತಿದ್ದ ವರ್ಣನೆಯಿದೆ (ಭಾಶಾಶಾ. ೦೦೦). [ಸಂ. ಲಿಪಿಶಾಲಾ]

**ಲಿಪಿಶಾಸ್ತ್ರ** (ನಾ). =ಲಿಪಿವಿಜ್ಞಾನ : ಭಿನ್ನಲಿಪಿರೂಪಗಳ . . . ಪ್ರತಿಗಳು ದೊರೆತಾಗ ಲಿಪಿಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸಮಾಡಬೇಕಾಗುತ್ತದೆ (ಕನ್ನಸಂ. ೯೩). [ಸಂ.]

**ಲಿಪಿಶಾಸ್ತ್ರಜ್ಞ** (ನಾ). ಲಿಪಿವಿಜ್ಞಾನವನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದವನು : ಕನ್ನಡಲಿಪಿಯು ಬೆಳವಣಿಗೆಯು ರಾಷ್ಟ್ರಕೂಟರ ಕಾಲದಲ್ಲಿ ಒಂದು ವಿಶಿಷ್ಟಹಂತವನ್ನು ಮುಟ್ಟಿದೆಯೆಂದು ಲಿಪಿಶಾಸ್ತ್ರಜ್ಞರು ಹೇಳಿದ್ದಾರೆ (ನೊಳಂಬ. ೬೦). [ಸಂ.]

**ಲಿಪಿಸಂಖ್ಯಾನಸಂಗ್ರಹ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು : ಅನ್ನಪ್ರಾಶನವ್ಯುಷ್ಟಿಕೇಶವಾಪಲಿಪಿಸಂಖ್ಯಾನ ಸಂಗ್ರಹೋಪನಯನವ್ರತಚರ್ಯಾವ್ರತ . . . ಎಂಬಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೦೩-೦೩ ವ) ; ಲಿಪಿಸಂಖ್ಯಾನಸಂಗ್ರಹಮುಂ ಉಪನೀತಿಯುಂ . . . ಅಪ್ಪ ಯ್ವತ್ತುಮೂಱು ಗರ್ಭಾನ್ವಯಕ್ರಿಯೆಯೊಳ್ (ಶಾಪುಳ. ೨೦೨). [ಸಂ.]

**ಲಿಪಿಸಾದೃಶ್ಯ** (ನಾ). ಅಕ್ಷರಗಳು ಒಂದೇ ರೀತಿಯಾಗಿ ಇರುವಿಕೆ ; ಅಕ್ಷರ ಸಾದೃಶ್ಯ : 'ಚಿಕುರ' ಎಂಬುದಕ್ಕೆ ಅರ್ಥವಾಗದೆ ಯಾವನೋ ಪ್ರತಿಕಾರ ಅದನ್ನು 'ಚತುರ' ಎಂದು ಭ್ರಮಿಸಿರಬೇಕು, ಲಿಪಿಸಾದೃಶ್ಯ ಕಾರಣವಾಗಿ (ಕನ್ನಸಂ. ೦೯೯). [ಸಂ.]

**ಲಿಪಿಸು** (ಕ್ರಿ). ಬರೆ ; ಲೇಖಿಸು : ಇದಕ್ಕೆ ತಪ್ಪದಂತೆ ಪಣೆಯೊಳಾ ಬ್ರಹ್ಮನೇ ಲಿಪಿಸಿರುವ ಹಾಗೂ . . . ತೋರುತ್ತಾ ಇದ್ದೀತು (ಸಕವ್ಯ. ೬).

[ಲಿಪಿ + — ಇಸು]

**ಲಿಪಿಸುಧಾರಣೆ** (ನಾ). ಲಿಪಿಯ ಸಂಸ್ಕರಣ; ಅಕ್ಷರಗಳಿಗೆ ಸಂಬಂಧಿಸಿದ ಬೆಳವಣಿಗೆ,—ಮಾರ್ಪಾಟು : ಕನ್ನಡದ ಈಗಿನ ಲಿಪಿಯನ್ನು ಲಿಪಿ ಯಂತ್ರಕ್ಕೂ . . . ಹೊಂದಿಸುವ ದೃಷ್ಟಿಯಿಂದ ಲಿಪಿಸುಧಾರಣೆಯ ಬಗೆಗೆ ಕೆಲವು ಪ್ರಯತ್ನಗಳೂ ನಡೆದಿವೆ (ಸಂಕೋಶ. ೩).

[ಸಂ. ಲಿಪಿಸುಧಾರಣಾ]

**ಲಿಪ್ತ** (ಗು). ೧. ಬಳಿದ : ಸವರಿದ ; ಹಚ್ಚಿದ : ಸದಸದ್ವೇದನೀಯಪ್ರಕೃತಿಗೆ ಮಧುಲಿಪ್ತಖಡ್ಗಧಾರೆಯವೋಲ್ ಸುಖಾಸುಖದಾಯಕತ್ವಂ ಸ್ವಭಾವಂ (ಕಕ್ಕ. ೩೧೦). ೨. ಮಲಿನವಾದ ; ಮಾಸಿದ. ೩. ವಿಷವನ್ನು ಬೆರಸಿದ. ೪. ತಿಂದ ; ಕಬಳಿಸಿದ. (ನಾ). ೫. ಬಳಿದುದು : "ದಿಗ್ಧಂ, ಲಿಪ್ತಂ – ೨ ಬಳಿಯಲ್ಪಟ್ಟದ್ದು" (ಸಿದ್ಧಾಂಶಿ. ೪೯೭). ೬. ವಿಷವನ್ನು ಲೇಪಿಸಿದ ಬಾಣ : "ದಿಗ್ಧಃ, ಲಿಪ್ತಃ – ೨ ವಿಷಾಕ್ತ – ನಂಜು ಪೂಸಿದ ಕೋಲು, ವಿಷ ಬಳಿಯಲ್ಪಟ್ಟ ಸರಳು, ವಿಷಬಾಣ" (ಸಿದ್ಧಾಂಶಿ. ೨೬೫). ೭. ತಿಂದುದು : "ಭಕ್ಷಿತಂ, ಚರ್ವಿತಂ, ಲಿಪ್ತಂ . . . ಭುಕ್ತಂ – ೧೪ ಭುಜಿಸಲ್ಪಟ್ಟದ್ದು" (ಸಿದ್ಧಾಂಶಿ. ೩೫೨). [ಸಂ.]

**ಲಿಪ್ಯಂತರ** (ನಾ). ಬೇರೆ ಭಾಷೆಯ ಅಕ್ಷರ; ಬೇರೆಯ ಲಿಪಿ : 'ಲಿಪ್ಯಂತರ ಗೊಳ್ಳು' ಪರಾ. [ಸಂ.]

**ಲಿಪ್ಯಂತರಗೊಳಿಸು** (ಕ್ರಿ). ಬೇರೆ ಭಾಷೆಯ ಲಿಪಿಯಲ್ಲಿ ಬರೆ : ಅವುಗಳನ್ನು ಅನುವಾದಿಸುವ ಅಥವಾ ಲಿಪ್ಯಂತರಗೊಳಿಸಬೇಕಾದ ಅಗತ್ಯವೂ ಇಲ್ಲ (ಕ್ರೀಕಸ್ರ. ೬೪). [ಲಿಪ್ಯಂತರ+ಕೊಳು (<ಕೊಳ್$_1$)+ – ಇಸು$_3$]

**ಲಿಪ್ಯಂತರಗೊಳ್ಳು** (ಕ್ರಿ). ಬೇರೆ ಭಾಷೆಯ ಲಿಪಿಯಲ್ಲಿ ಬರೆಯಲ್ಪಡು : ಇವು ಟಿಬೆಟನ್‌ಭಾಷೆಗೋ ಅಥವಾ ಚೈನೀಭಾಷೆಗೋ ಅನುವಾದಿತವಾಗಿವೆ ಇಲ್ಲವೆ ಲಿಪ್ಯಂತರಗೊಂಡಿವೆ (ಭಾರಶ. ೩೬).

[ಲಿಪ್ಯಂತರ+ಕೊಳ್ಳು$_1$ (<ಕೊಳ್$_1$)]

**ಲಿಪ್ಸು** (ಗು). ೧. ಪಡೆಯಬೇಕೆಂಬ ಆಸೆಯುಳ್ಳ. (ನಾ). ೨. ಆಸೆ ಪಡುವವನು: "ತೃಷಕಃ, ಗರ್ಧನಃ, ಗೃಧ್ನುಃ, ಲಿಪ್ಸುಃ, ಲುಬ್ಧಃ, ಅಭಿಲಾಷುಕಃ – ಈ ೭ ಕಾಂಕ್ಷಿತಂ" (ಶಲಾಮು. ೬೦-೨೦೬). [ಸಂ.]

**ಲಿಪ್ಸೆ** (ನಾ). ಆಸೆ ; ಕಾಂಕ್ಷೆ : "ತೃಷ್ಣಾಃ, ಅಭಿಲಾಷಾ, ಲಿಪ್ಸಾ, ಆಶಾ, ಧನಾಯಾ, ಗರ್ಧನಾ – ಈ ೭ ಕಾಂಕ್ಷೆ" (ಶಲಾಮು. ೬೦-೨೦೯). [ಸಂ. ಲಿಪ್ಸಾ]

**ಲಿಫಾಪೆ** 'ಲಿಫಾಫೆ' ನೋ.

**ಲಿಫಾಫೆ,** ಲಿಫಾಪೆ (ನಾ). ಲಕೋಟೆ : ಹುಜೂರುಖಜಾನೆಯಿಂದ ಬಂದ ಸರಾಫ . . . ಈ ದರ್ಶನಹುಂಡಿಯ ಲಿಫಾಫೆಯನ್ನು ತೋರಿಸಿದರು (ಅಜಾಟ. ೮). **ಲಿಫಾಪೆ** : (ಕಸಂಗ್ರ. ೦೦೦).

[←ಅರ. ಹಿಂ. ಲಿಫಾಫಾ; ಮರಾ. ಲಿಫಾಫಾ, ಲಿಫಾಪಾ]

**ಲಿಬಿ** (ನಾ). ಅಕ್ಷರ; ಬರಹ : ಅಶೋಕನ ಶಾಸನಗಳಲ್ಲಿ ಲಿಪಿ, ಲಿಬಿ, ದಿಪಿ ಎಂಬ ಸಮಾನಾರ್ಥಕಶಬ್ದಗಳಿವೆಯೆಂದೂ, ದಿಪಿ ಎಂಬುದು ಪುರಾತನ ಪಾರಸೀ ಭಾಷೆಗೆ ಸೇರಿದ್ದೆಂದೂ . . . ತಿಳಿದುಬರುತ್ತದೆ (ಕನ್ನಸಂ. ೯೬). [ಸಂ.]

**ಲಿಬಿಕಾರ** (ನಾ). ಬರೆಯುವವನು ; ಲಿಪಿಕಾರ : ಕ್ರಿ.ಪೂ. ನಾಲ್ಕನೆಯ ಶತಮಾನಕ್ಕಾಗಲೇ ಲೇಖಕವೃತ್ತಿಯವನನ್ನು ಲಿಪಿಕಾರ ಅಥವಾ ಲಿಬಿಕಾರ ಎಂದು ಕರೆದಿದೆ (ಭಾರಶ. ೦೪). [ಸಂ.]

**ಲಿಬಿಲಿಬಿ** (ನಾ). ಸಂಕಟ, ತಳಮಳ ಮುಂತಾದುವನ್ನು ಸೂಚಿಸುವ ಒಂದು ಅನುಕರಣ ಶಬ್ದ : ರಂಗನಾಥ ಸಾಯುವಾಗ ಹಣವನ್ನೂ ದುಶ್ಚಟಗಳನ್ನೂ ಬಿಟ್ಟು ಹೋಗಲಾರದೆ ಲಿಬಿಲಿಬಿ ಒದ್ದಾಡಿ, ಸಾಯಲಾರದೆ ಸಾಯುತ್ತಾನೆ (ಶಂಕಶಂ. ೨೦೩). 'ವಿಲಿವಿಲಿ' ನೋ.

**ಲಿಲಾವು** (ನಾ). (ಉಕ) ಹರಾಜು ; ಏಲಂ : ಬೆಳಗಾದರೆ ಹಣ ಕಟ್ಟಬೇಕು, ಇಲ್ಲವೆ ಹೊಲಮನೆಗಳ ಲಿಲಾವಿಗೆ ಸಿದ್ಧರಾಗಬೇಕು (ಕಠ. ೭೩೬); ಸರಕಾರದವರು ಜೀನ ತುಪ್ಪ ಜಮೆಮಾಡುವ ಹಕ್ಕು ಪ್ರತಿವರ್ಷ ಲಿಲಾವಿನಿಂದ ಮಾರುವರು (ಕಠಾಗ. ೬೬). [← ಮರಾ. ಲಿಲಾವ್, ನಿಲಾವ್]

**ಲಿಲಾವುದಾರ** (ನಾ). ಹರಾಜು ಹಾಕುವವನು : ವಕ್ಕಾರ ಹಾಗೂ ಲಿಲಾವುದಾರ ಇವರಲ್ಲಿ ಅಂತರವಿರುವುದೇ ಕ್ವಚಿತ (ಪ್ರವಾಕೋ. ೯೩).

[ಲಿಲಾವು + – ದಾರ$_4$]

**ಲಿವಿ$_1$** (ನಾ). = ಲಿಬಿ : "ಲಿಪಿಯುಂ ಲಿಭ[ವಿ] ಲಿಖಿತಾಕ್ಷರಾಳಿನ್ಯಾಸಂ" (ವಸ್ತುಕೋ. ೬೦-೩೯). [ಸಂ.]

**ಲಿವಿ$_2$** (ನಾ). ಹಗುರ ; ಲಘು : ಈ ದಿವಸ ನನ್ನ ದೇಹವು ಬಹು ಲಿವಿಯಾಗಿದೆ . . . ಹೊರಗೆ ಸ್ವಲ್ಪ ತಿರುಗಾಡಿ ಅಂಗಗಳು ಲವಿಯಾಗಿ ಆಡುವಂತೆ ಕೆಲಸವನ್ನು ಮಾಡಿದ ಹೊರತು ನಾವು ತಿಂದ ಅನ್ನ ಜೀರ್ಣಕ್ಕೆ ಬರುವುದಿಲ್ಲ (ಶಿಂತಿಂ. I. ೨೯).

[←ತೆಲು. ಲಿವ. / ಮರಾ. ಲಿವಣಾ=ಬಗ್ಗುವ, ಮಣಿಯುವ]

**ಲಿವಿಸಾಧನೆ** (ನಾ). ದೇಹವನ್ನು ಹಗುರ ಮಾಡಿಕೊಂಡು ಗಳೆಯ ಮೇಲೆ ಲಾಗ ಮುಂತಾದುವನ್ನು ಹಾಕುವುದು ; ದೊಂಬರಾಟ : ಎರಡನೆಯದಾದ "ಅಸ್ತ್ರವಿದ್ಯೆ"ಯಲ್ಲಿ ಪುರಾತನಕಾಲದ ಲಿವಿಸಾಧನೆ (Acrobatics)ಯನ್ನು ಕಾಣಬಹುದು (ಅಶಾಸ್ತ್ರ. ೯೯) ; ದೊಂಬರಾಟ ; ಲಿವಿಸಾಧನೆ (Acrobatics. ೨೦೪೩). [ಲಿವಿ+ಸಾಧನೆ]

**ಲಿಸ್** (ನಾ). ಆಯಾಸ ಅಥವಾ ದುಃಖದಿಂದ ಹೊರಹೊಮ್ಮುವ ಉದ್ಗಾರ : ಎಲುಬುಗಳ ಸಂತತವರ್ಷದಲ್ಲಿಯೂ ಲಿಸ್ಸನ್ನದೆ, ಬೆಂಕಿಗೆ ಕೈಹಾಕಿ (ಗ್ರಾವಾಡು. ೨೨೮) : ಗೊಡ್ಡದೊಡ್ಡ ಗಾಯಗಳಾದರೆಯೇ

ಕಣ್ದೆರೆದು ನೋಡಲಾರದವರು, 'ಲಿಸ್' ಎನ್ನಲಾರದವರು ಈ ಸಣ್ಣಪುಟ್ಟ ಗಾಯಗಳಿಗೆ ಹೆದರಿಯಾರೆ? (ಏಪಸಿ. ೨೮).

**ಲಿಸುಗುಟ್ಟು** (ಕ್ರಿ). (ಉಕ) 'ಲಿಸ್' ಎಂದು ಶಬ್ದ ಮಾಡು : ಇಳಿಯ ಲಿಕ್ಕೆಂದು ಎದ್ದಾಗ . . . ಅವ್ವ ಲಿಸುಗುಟ್ಟಿದಳು (ವೃ.ಬಿ. ೮೪) ; ಗೌಡರು ಧೋತರದ ಶೆರಗಿನಿಂದ ತುಟಿ ಬಾಯಿ ಒರೆಸಿಕೊಳ್ಳುತ್ತ ಲಿಸುಗುಡುತ್ತ ಬರುತ್ತಾರೆ (ಪಡಿಪಾ. I. ೨೮೪). [< ಲಿಸ್ + ಕುಟ್ಟು]

**ಲಿಸ್ಟು** (ನಾ). ಹೆಸರು ಮೊದಲಾದುವನ್ನು ಬರೆದಿರುವ ಪಟ್ಟಿ ; ಯಾದಿ : ಪ್ರತಿತಿಂಗಳೂ ಅಂಗಡಿಯಿಂದ ಸಾಮಾನುಗಳನ್ನು ತರುವ ಮೊದಲು ಲಿಸ್ಟು ತಯಾರಿಸುವುದು ಒಳ್ಳೆಯ ಅಭ್ಯಾಸ (ರೂಪಿ).

[ ← ಇಂ. List ]

**ಲೀಟರು**(ನಾ). ದ್ರವಪದಾರ್ಥಗಳನ್ನು ಅಳೆಯುವ ಒಂದು ಅಳತೆ: ಒಂದು ಲೀಟರು ಎಳ್ಳೆಣ್ಣೆಗ ನಲವತ್ತೈದುರೂಪಾಯಿಗಳಾಗಿವೆ (ರೂಪಿ).

[← ಇಂ. Litre]

**ಲೀಢ** (ಗು). ತಿಂದ ; ರುಚಿನೋಡಿದ. [ಸಂ.]

**ಲೀಢೆ** (ನಾ). ಕಡೆಗಣಿಸುವುದು : ತಿರಸ್ಕಾರ; ಅವಹೇಳನ : "ಹೇಳಾ, ಅವಹೇಳಾ, ಲೀಢಾ, ಅವಜ್ಞಾ, ಅವಲೀಢಾ —ಈ ೫ ಅವಜ್ಞೆ" (ಕರಾಡು. ೦೦೬-೪೦). [ಸಂ. ಲೀಢಾ]

**ಲೀನ** (ಗು). ೧. ಅಂಟಿಕೊಂಡ ; ಹತ್ತಿಕೊಂಡ. ೨. ಕರಗಿದ. ೩. ಆಸಕ್ತನಾದ; ಮಗ್ನವಾದ. ೪. ಅಡಗಿದ. ೫. ಕಣ್ಮರೆಯಾದ; ಅಗಲಿದ. (ನಾ). ೬. ಯಾವುದಾದರೊಂದು ವಿಷಯದಲ್ಲಿ ಮಗ್ನನಾದವನು,-ಮುಳುಗಿದವನು: ಸುಖದುಃಖಗಳಲ್ಲಿ ಪದೇಪದೇ ಲೀನನಾಗಿ ತನ್ನನ್ನು ತಾನು ಮರೆತುಬಿಡುತ್ತಿದ್ದನು (ಮಣಿಕಾ. ೬); ವಾಲ್ಮೀಕಿ ವ್ಯಾಸರು ತಮ್ಮ ಕೃತಿಗಳಲ್ಲಿ . . . ಲೀನರಾಗಿ ಹೋಗಿದ್ದಾರೆ (ಶಾಕಿ. ೨). ೭. ಒಂದೇ ವಿಷಯದಲ್ಲಿ ಮುಳುಗುವಿಕೆ; ತಲ್ಲೀನವಾಗುವಿಕೆ: ವಿಜ್ಞಾನಿಗಳು ತಂಡೋಪತಂಡವಾಗಿ ಭೌತಘಟನೆಗಳ ವಿಮರ್ಶೆಯಲ್ಲಿ ಲೀನವಾಗಿದ್ದಾರೆ (ಜೀವಾಕ್ಕ. ೦೦೬). ೮. [ಸಂಗೀತ] ಗಮಕದಲ್ಲಿ ಒಂದು ಬಗೆ : ಕಂಪಿತ . . . ಲೀನ . . . ಆಹತಮೆಂಬೀಳು ದೇಶೀಗಮಕಂಗಳು (ವಿವೇಕ. ೨೪೨) ; ಶಾರ್ಙ್ಗದೇವನ ಪಂಚದಶವಿಧ ಗಮಕಗಳು ಹೀಗಿವೆ . . . ಲೀನ – ಹಿಂದಿನ ಸ್ವರವೊಂದು ಮುಂದಿನ ಸ್ವರದಲ್ಲಿ ಮೃದುವಾಗಿಯೂ ನಿಧಾನವಾಗಿಯೂ ಐಕ್ಯವಾಗುವುದು (ಸಂಗೀತ. ೨೬). ೯. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : ಎರಡುಂ ಕೈಗಳನೂರ್ಧ್ವಮಂಡಲದಿನೊಳ್ಪಂ ಬೆತ್ತು ತದ್ವಕ್ಷದೊಳ್ ಕರಯುಗ್ಮಂಗಳನಂಜಲೀಕೃತಿಯನೊಲ್ದಿಂ [ಮಾಡಿ] ನೀಹಂಚಿತೋತ್ಕರಮೆಂಬೊಂದು ಶಿರಸ್ಸಿನೊಳ್ ಮುಡುಪಿನೊಳ್ ಸ್ಥಿತಿಟ್ಟು ಕೊಂಕಲ್ ಕೊರಲ್ ಕರಣಂ ಲೀನಮೆನಿಪ್ಪ ಚೆಲ್ವ ಪೆಸರಂ ತಾಳ್ದತ್ತು (ಶಾಸ್ತ್ರ. ೪-೪೪). [ಸಂ.]

**ಲೀನತೆ** (ನಾ). ೧. ಆಸಕ್ತವಾಗಿರುವಿಕೆ; ಮಗ್ನತೆ. ೨. ಕರಗುವಿಕೆ ; ಐಕ್ಯತೆ. [ಸಂ. ಲೀನತಾ]

**ಲೀಯ** (ಗು). ೧. ಕೂಡಿಹೋದ; ಬೆರೆತ; ಒಂದಾದ. (ನಾ). ೨. ಬೆರೆಯುವಿಕೆ; ಐಕ್ಯ ; ಮನ ದಾಸೋಹಕ್ಕೆ ಲೀಯವಹಂತೆ ಮಾಡು (ಬಸವ. ೪೫೬) ; ಸಾಗರವನ್ನು ಸೇರಿ ಅದರಲ್ಲಿ ಲೀಯವಾಗಿ ಅದರಲ್ಲಿ ಹರಿದಾಡುವ ನದಿಗೆ ... ಬೇರೆ ಗತಿಯುಂಟೇ? (ವಚನ. ೩೭ ಪ್ರಸ್ತಾವನೆ).

[< ಸಂ. ಲೀನ]

**ಲೀಲಾಂದೋಳ** (ನಾ). ವಿನೋದವಿಹಾರದಲ್ಲಿ ಬಳಸುವ ಉಯ್ಯಾಲೆ : ಲೀಳಾವನದೊಳೆ ವಿಹರಿಪ ಲೀಳಾಸರದೊಳಗೆ ಮಾಡಿ ಮುಟ್ಟುವ ಲೀಲಾಂದೋಳಮನೇಜುವ ಲೀಲಾಕೇಳಿಗಳೆ ವಿಲಾಸಕೇಳಿಗಳ್ ನೃಪಪತಿಯಾ (ಆದಿಪು. ೩-೯). [ಸಂ. ಲೀಲಾಂದೋಲ]

**ಲೀಲಾಜಲಾಶಯ** (ನಾ). ಜಲಕ್ರೀಡೆಗಾಗಿ ನಿರ್ಮಿಸಿದ ಕೊಳ, ತಟಾಕ : ನಾನಾಭವನವಿನ್ಯಾಸೋದ್ಯಾನಲೀಲಾಜಲಾಶಯಂಗಳುಮಂ . . . ಮಾಡಿ (ಆದಿಪು. ೬-೬೩ ವ). [ಸಂ.]

**ಲೀಲಾದೀರ್ಘ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು ಬಗೆ : ಸ್ಫುರಿತ . . . ಲೀಲಾದೀರ್ಘ [ಪಾಠಾಂ. ಲೀಲೋದ್ದೀರ್ಘ] . . . ಕೋಮಲಮೆಂಬ ವಿಪ್ಪತ್ತೆರಡೇ ಶ್ರುತಿಗಮಕಂಗಳು (ವಿವೇಕ. ೧೮೬).

[ ಸಂ. ]

**ಲೀಲಾಭಾವಿ** (ನಾ). ಆಟವಾಡುವ ಮನಸ್ಸುಳ್ಳವನು ; ಕ್ರೀಡಾಮನಸ್ಕ : ಲೀಲಾಭಾವಿಯಾಗಿ ಏಕೆ ಬಂದೆನೇಂಬುದನರಿದು ಸಾಕಾರದ ನೀತಿಯ ನಿರ್ಣಯವ ಕಂಡು ಪ್ರತಜೀವ ತಿಳಿವು ಇನ್ನೇತರಿಂದ ಉಳಿವು ಈ ಉಭಯದ ನೀತಿಯಲ್ಲಿ ನಿಮ್ಮ ಮೇಲಪ್ಪ ತಾಣವನರಿಯಬೇಕು (ವಚನ. ೩೦-೨೦೩). [ ಸಂ. ಲೀಲಾಭಾವಿನ್ ]

**ಲೀಲಾಯಿತ** (ನಾ). ಆಟ; ವಿನೋದ; ಕ್ರೀಡೆ : ಆದಿಪುರುಷಂ . . . ತುಱುಗಾದಂ ಲೀಲಾಯಿತಂ ಸ್ವಯಂಪ್ರಭುಗುಚಿತಂ (ಆದಿ. ೩-೬೪). [ಸಂ.]

**ಲೀಲಾಯುದ್ಧ** (ನಾ). ವಿನೋದದ ಯುದ್ಧ; ಹುಸಿಕಾಳಗ : ಮಲ್ಲಯುದ್ಧ ಲೀಲಾಯುದ್ಧಾದಿ ವಿಹಾರಗಳಿಂ (ವಿವೇಕ. ೨೦೩). [ಸಂ.]

**ಲೀಲಾರಥ** (ನಾ). ವಿಲಾಸಕ್ಕೆ ಉಪಯೋಗಿಸುವ ತೇರು : ತನ್ನ ಲೀಲಾರಥದೊಳೆ ಲವಣಾಂಭೋಧಿಯಂ ದಾಂಟಿ (ಆದಿಪು. ೧೨-೦೨೬).

[ ಸಂ. ]

**ಲೀಲಾವತಿ**, ಲೀಳಾವತಿ (ನಾ). ೧. ವಿನೋದಾಸಕ್ತಳಾದ ಹೆಂಗಸು: ಹಾಸ್ಯದಲ್ಲಿ ನಿರತಳಾದವಳು. ೨. ಚೆಲುವೆ ; ಸುಂದರಿ. ೩. ನೇಮಿಚಂದ್ರನೆಂಬ ಕವಿಯು ಬರೆದ ಒಂದು ಕನ್ನಡ ಚಂಪೂಕಾವ್ಯ ಮತ್ತು ಅದರ ಕಥಾನಾಯಕಿಯ ಹೆಸರು : ಅತಿಚತುರಸ್ತ್ರೀಯರು ಮತಿಚತುರಕವಿಗಳುಂ ಕೇಳ್ದೊಲವಿಂ ಬಾಯಂ ಬಿಡುತಿರೆ ಕರ್ಣರಸಾಯನಮೆನೆ ಪೇಟ್ವೆನೆಸೆಯೆ ಲೀಲಾವತಿಯಂ (ಲೀಲಾವ. ೧-೪೪) ; ಲೀಲಾವತಿ ಪತಿಯಾಪ್ಪಾಲೋಲತೆಯಿಂದೊಸೆದು ದೇವಿಯಂ ಪೂಜಿಸಿದಳ್ (ಲೀಲಾವ. ೧೧-೬). ೪. ಭಾಸ್ಕರಾಚಾರ್ಯನೆಂಬುವನಿಂದ ರಚಿತವಾದ ಗಣಿತ ಶಾಸ್ತ್ರ ಗ್ರಂಥ. **ಲೀಳಾವತಿ** : ೩. ಲೀಳಾವತಿ ಲೀಳಾವತಿ ಬಾಳೆಯೆ ಬಂಧುಪ್ರಿಯೇ ನಿಜಪ್ರಿಯಸಖಿಯರ್ ಕೇಳ ಕಳವಳದೊಳಟ್ಟಿದಪರ್ (ಲೀಲಾವ. ೧೧-೭೭). [ ಸಂ. ಲೀಲಾವತೀ ]

**ಲೀಲಾಳಕ** (ನಾ). ಅಲುಗಾಡುವ ಮುಂಗುರುಳು : ಮುನಿಚರಣಕಮಲದೊಳ್ ನಿಜವಿನತಶಿರೀಪದ್ಮವಿನುತ ಲೀಲಾಳಕಭೃಂಗನಿಕಾಯಮೆಱಗಿ ತುಱುಗಿರೆ (ಸುಕುಮಾ. ೮-೩೭). [ ಸಂ. ಲೀಲಾಲಕ ]

**ಲೀಲೆ**, ಲೀಳೆ (ನಾ). ೧. ಆನಂದ : ಲೀಲೆಯಿಂದುಡಿಸಿ ದಿವ್ಯವಸ್ತ್ರಮಂ . . . ಪೂಮಾಲೆಯುಂ ಮುಡಿಯಿಸುತ್ತುಮರ್ತಿಯಿಂ (ರಘುಕಾವ್ಯ. ೩-೯); ಲೀಲೆಯೆಂದರೆ ಸ್ವಾರ್ಥವಾಗಲಿ ಪರಾರ್ಥವಾಗಲಿ ಬೇರೊಂದು ಪ್ರಯೋಜನವನ್ನು ಉದ್ದೇಶಿಸದೆ ತಾನೇ ಪ್ರಯೋಜನರೂಪವಾದ ಸಂತೋಷವ್ಯಾಪಾರ (ಹಿಂದಣ. ೬೩). ೨. ಆಟ ; ಕ್ರೀಡೆ ; ವಿನೋದ : ಲೀಲೆಯೊಳೆ ಮಳಲ ಜಗಲಿಯ ಮೇಲೆ ಸರೋಜಾತಸಖಿಗೆ ಮಿಗಿಲೆನಿಸುವ ಸಲ್ಲೀಲೆಯ ತೇಜೋಧಿಕನಂ ಬಾಲಕನಂ ನಲಿಯುತಿರ್ದನಂ ಕಂಡು (ರಘುಕಾವ್ಯ. ೧೧-೦೯೬) ; ಪಾಲುಗಡಲಲಿ ಫಣಿಯ ಮಂಚದ ಮೇಲೆ ಪವಡಿಸಿ ಪರಮನೆನಿಸಿದ ಲೀಲೆಯೆತ್ತಲು ಮನುಜಭಾವದ ನಟನೆ ತಾನೆತ್ತ (ಕೌಶಿಕ. ೪೩-೪೩); ಚಿಮ್ಮಿ ನೆಗೆಯುವ ತೊರೆಯ ಲೀಲೆಯ ಮನೋಹರತೆ (ಕಿನ್ನರಿಗ. ೨೫-೬೦೪). ೩. ಸ್ತ್ರೀಯ ಒಂದು ಬಗೆಯ ಶೃಂಗಾರಭಾವ; ವಿಲಾಸ; ಬೆಡಗು : "ಹೇಳಾ, ವಿಳಾಸಃ, ಬಿಬ್ಬೋಕಃ, ಲೀಲಾ, ಲಲಿತಂ, ವಿಭ್ರಮಃ — ಇವು ಮೊದಲಾದುವು ಸ್ತ್ರೀಯರ ಭಾವಂಗಳ್"

(ಹರಿಶ್ಚಂ. ೦೩-೮೯) ೪. ಚೆಲುವು : ಸೌಂದರ್ಯ : ಕಿಸಲಯಲೀಲೆಯ ಪೋಲ್ವುದು ಅಧರವು ಬಹುಸುಖ ನಿನ್ನ ಸಮ್ಮುಖವು (ಇಂಕಾಶ. ೯೩-೩೨), ೫. ಸರಾಗ ; ಸುಲಭ ; ಹಗುರ : ವಿರಾಟರಾಜನಗರಂ ವಲ್ಲೂರಿವೆಲ್ಲಂ ಭುಜಾಬಲದಿಂ ಲೀಲೆಯ ಸಾಧ್ಯವಾದುದೆಣೆಯಾವ್ರ್ವ್ಗಾಮ್ನ್ಣಕ್ಷಮಾಪಾಳನೊಳ್ (ಎಕ್. V, ಅರಸೀ. ೦-೦೦ ; 1169). ಲೀಳೆ : ೧. ಲೀಳೆಯನಪ್ಪುಕೆಯ್ದು ನಯನೋತ್ಸವಮಂ ದಯೆಗೆಯ್ದು ಗಾಡಿಯಿಂದೇಳಿಸಿ ಕಾಮಕಲ್ಪ ಲತೆಯಂ ಪರಿಪೂರ್ಣಕಳಾವಿಳಾಸದಿಂದೇಳಿಸಿ ಚಾರುಚಂದ್ರಕಲೆಯಂ ನೆಲೆ ವೆರ್ಚಿಸಿದಳ್ (ಶಂಕಾಪು. ೯-೩೨). ೨. ಲೀಳೆಯೊಳೆ ತಾಮೆ ನಡೆಪಿದ ಕೇಳೀವನಲತೆಗಳಂ ನಿರೀಕ್ಷಿಸಿ ಸುಯ್ದಾವಾಳವಳಯಂಗಳಂ ಭ್ರಮರಾಳಕಿಯರ್ ಬಾಷ್ಪವಾರಿಯಿಂ ಪೂರಿಸಿದರ್ (ಕುಸ್ಕೃತಿ. ೦೩-೯೯).

ಲೀಲಾಜಾಲವಾಗಿ = ಅತಿಸುಲಭವಾಗಿ; ನಿರಾಯಾಸವಾಗಿ : ಚಿತ್ರಗಳನ್ನು ಲೀಲಾಜಾಲವಾಗಿ ಚಿತ್ರಿಸುತ್ತಿದ್ದ, ಕಳ್ಳಕಲಾವಿದನೊಬ್ಬ ! (ಕುಗಪುಂ. ೬೯); ಯಾರೊಡನೆಯೂ ಬಾಯಿಬಿಡದ ನಾನು ನಿನ್ನ ಬಳಿ ಲೀಲಾಜಾಲವಾಗಿ ಮಾತನಾಡಿದ್ದೇನೆ (ಗೋಕೃಶ. ೬೨). [ಸಂ. ಲೀಲಾ]

**ಲೀಲೆಗಾತಿ** (ನಾ). ವಿಲಾಸವತಿ ; ಬೆಡಗಿ : ಲೀಲೆಗಾತಿಯರ ಮಸ್ತಕದಲಿ ಮೆಱೆವ ಪೂಮಾಲೆ (ಬೋಹಕ. ೨೦-೨); ಶೈಲಪದ್ಮದ ಬಟ್ಟವಾವುಗೆಗಳನು ಪೊಂಬಾಳೆಯ ನಿಡುಚವರಗಳಾ ಲೀಲೆಗಾತಿಯರೊಯ್ಯುತಿರೆ ದಕ್ಷಿಣಾಂಕನಿಂದಾಲೋಕಿಸುತಿರ್ದನಿನಿಸು (ಭರತ. ೯೭-೯೩). [ಲೀಲೆ + —ಕಾತಿ₃]

**ಲೀಲೆಗಾರ್ತಿ** (ನಾ).= ಲೀಲೆಗಾತಿ : ಲೀಲೆಗಾರ್ತಿಯರಚ್ಯುತನಾಜ್ಞೆಯಿಂದ ಪೆರ್ಗಾಲ ಹೊಂದೊಂಬನು ನೆಗಹೆ ಕೀಲಣೆಗೆಯ್ದ ಸುವರ್ಣವೇತಂಡ ಶುಂಡಾಲದೆ ಸುರಿದುದು ಸಲಿಲ (ಬೋಹಕ. ೦೯-೩೫).

[ಲೀಲೆಗಾಱ + —ತಿ₁ (<—ಇತ್ತಿ) ]

**ಲೀಲೆಗಾಱ** (ನಾ). ವಿಲಾಸಿ; ರಸಿಕ : ಬಾಲೆಯರುಗಳು ಬೊಬ್ಬಿಡಲು ಗೋಪುರದಗ್ರಶಾಲೆಯ ರೋದನಗೇಳಿ ಲೀಲೆಗಾಱನ ಕೊಲ್ವುದಿಲ್ಲೆಂದು ದುಃಖದ ಶೀಲೆಗೆ ಮಾತನಟ್ಟಿದನು (ಬೋಹಕ. ೩೫-೩೨).

[ಲೀಲೆ + — ಕಾಱ]

**ಲೀಲೆಗೆಡು** (ಕ್ರಿ). ಸಂತೋಷವನ್ನು ಕಳೆದುಕೊಳ್ಳು; ಆನಂದವಿಲ್ಲದಾಗು : ಪಾರ್ಥನು ಲೀಲೆಗೆಟ್ಟು ದ್ವಾರವತಿಯನು ಪೊಕ್ಕು . . . ಅಱುಹಿದನು ಸರ್ವರಿಗೆ (ಕುಮ್ಮಕು. ೩-೦). [ಲೀಲೆ + ಕೆಡು₁]

**ಲೀಲೆದೋಱು** (ಕ್ರಿ). ವಿನೋದವನ್ನು ಸೂಸು,— ತೋರಿಸು : ಆ ಸಕಲನಿಃಕಲತತ್ತ್ವವೆ ತನ್ನ ಶಕ್ತಿಸಮರಸಸಂಭಾಷಣೆಯಿಂದ ಲೀಲೆದೋಱಲಾಗಿ ತಾನೇ ಗುರುವಾದ (ಶತಸ. ೩೯೦-೨೯). [ಲೀಲೆ + ತೋಱು]

**ಲೀಲೆವಡೆ** (ಕ್ರಿ). ಸೊಗಸಾಗು; ಚೆಲುವನ್ನು ಹೊಂದು ; ಸುಂದರವಾಗಿ ಕಾಣು : ಸಿವಿಗೆ ತಟಿದ್ದುಱುಗಲೊಡನಿಕ್ಕುವ ಕುಂಚಂ ಲೀಲೆವಡೆಯೆ (ಅಧಿಪು. ೦೦-೩೯) ; ವಿಚಕಿಲಮುಕುಲಮಾಲೆಯಂತೆ ಕುಚತಟದೊಳ್ ಕಂಠಮಾಲೆ ಲೀಲೆವಡೆಯೆ (ರಾಜಶೇ. ೫-೦೯ ಪ). [ಲೀಲೆ + ಪಡೆ₁]

**ಲೀಳಾವತಿ** 'ಲೀಲಾವತಿ' ನೋ.

**ಲೀಳೆ** 'ಲೀಲೆ' ನೋ.

**ಲುಂಗ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು; ಮಾದಲ ; ಮಾತುಲುಂಗ : ಕಕುಭಾಶೋಕಕದಂಬಲುಂಗಲವಲೀಭೂಜಾರ್ಜುನಾನೋಕಹಪ್ರಕರಂ (ಸೂಕಥಾ. ೫-೬೦) ; ತುಲಸಿಯ ಲುಂಗಕಷಾಯದ ಜಲದೊಳ್ ಗೋವನಧಿಕಬೂದಿಯ ಜಲದೊಳ್ ಕಟವೆಯ ಸಮನಿಸು ತಾಂ ಮೊಸರೊಳೆ ಮೇಣ್ ಕಲಸಿದೊಡೆ ಪಲವು ದಿವಸಂ ನಿಲ್ಕುಂ (ಲೋಕೋಪ. ೬-೩); ವಟಕುಟಜ ಲವಂಗ ಲುಂಗ ಮಾತುಲುಂಗ . . . ಬಲ್ಲಾಶ್ವತ್ಥಾದಿ ವೃಕ್ಷಂಗಳು ಸುಮನಸಭರಿತವಾಗಿ ಶೋಭಿಸುತಲಿತ್ತು (ಕುರಾಪ. ೯೭). [ಸಂ.]

**ಲುಂಗಿ** (ನಾ). ಗಂಡಸರು ಸೊಂಟಕ್ಕೆ ಸುತ್ತಿಕೊಳ್ಳುವ ನಾಲ್ಕು ಮೊಳದ ವಸ್ತ್ರ; ಲಪಾಟಿ : ಅಲ್ಲಿ ಎಲ್ಲರೂ ಲುಂಗಿ ಸುತ್ತುತ್ತಾರೆ (ಕುಂಹಿಂ. ೨೦) ; ಪಚ್ಚಗೆ ಮುಖಕ್ಕೆ ಚಿತ್ರವಿಚಿತ್ರ ಬಣ್ಣ ಬರೆದು ಒಂದು ಲುಂಗಿಯನ್ನು ಉಡಿಸಿ (ಕುರಿಪು. ೦೦೦). [ ←ಪಾರ. ಹಿಂ. ಮರಾ. ಲುಂಗೀ].

**ಲುಂಚನ** (ನಾ). ಕೀಳುವುದು ; ಕಿತ್ತು ತೆಗೆಯುವುದು : ಕೇಶಲುಂಚನಾನಶನಾತಪಸ್ಥಾನಾದಿ ಶರೀರಪೀಡಾಕರಮಪ್ಪ ತಪೋನುಷ್ಠಾನದೊಳಂ (ಕಕ್ಕಕ್ರ. ೨೬೦). [ಸಂ.]

**ಲುಂಚೆ** (ನಾ). ಒಂದು ಬಗೆಯ ಮರ ; "ಹೆಂಡ ಇಳಿಸುವ ಮರ" (ಕ್ರಕವ್ರ) : ಕರಿಯ ಸೀಗೆಯ ತಾಳ ಲುಂಚೆಯಿರಾಂಚಲ ಸಕಲತರು ಧಾನ್ಯದಿಂದಾದ ಮದ್ಯಮಂ ಕುಡಿಕುಡಿದು ಮರುತಹತಿಯಿಂದ ಚಾಂಡಾಳಸುವ ಚಿತ್ತೆಯನರಸ ನೋಡುತ ಬಂದನು (ಹಕಗ. ಕಂ. ೨೦೦). [ ? ]

**ಲುಂಟಾಕ₁** (ನಾ). ೧. ಕದಿಯುವುದು ; ಅಪಹರಣ: "ಲುಂಟಾಕಮೆನಲಲ್ಲಿ ನೆಗಪುವುದಕ್ಕುಂ" (ಕಬ್ಬಕ. ೭೩). ೨. ಕದಿಯುವವನು ; ಕಳ್ಳ; ತಸ್ಕರ : ಗೆಂಟಲಾಱುತ ಸೋರಿ ಬರಿದಂಗದಲಿ ರಕ್ತ ಟೆಂಟಣಿಸುತ ಪೋಗಿ ಪೊಗಲು ಎಂಟಂಗವೆಲ್ಲ ಕತ್ತರಿಸಿ ಬೀಳಲು ಬೀಳ್ವ ಲುಂಟಾಕ ವೈತರಣಿಯೊಳು (ಪರ್ವತ. ೬-೯೮). ೩. ಕಾಗೆ. [ಸಂ.]

**ಲುಂಟಾಕ₂** (ನಾ). ಎರಡು ಬೆಟ್ಟಗಳ ಮಧ್ಯದ ಪ್ರದೇಶ: "ಲುಂಟಾಕ= ಗುಡ್ಡದ ಭೂಮಿ" (ಗುಂಪಕೋ. ೦೦೭) ; ''ಲುಂಟಾಕಮೆನಲೆರಡು ಬೆಟ್ಟಗಳ ಮಧ್ಯಕೆ ಪೆಸರ್" (ಕಕರ. ೯೮). [?]

**ಲುಂಟಾಕಿನಿ** (ನಾ). ನಿವಾರಿಸುವವಳು ; ಹೋಗಲಾಡಿಸುವವಳು : ಪರಿಪೂತನಾಕಿನೀ ಪಾಪಲುಂಟಾಕಿನೀ ಸುರಭಿದವಲೋಕಿನೀ ಪೂರ್ವಮಂದಾಕಿನಿಯೆನುತಿರ್ದರು (ವೀಕ್ಕಕು. ೩-೨೩-೭೯). [ಸಂ. ಲುಂಟಾಕಿನೀ]

**ಲುಂಠನ** (ನಾ). ದರೋಡೆ ; ಲೂಟಿ : ಮಹಮ್ಮದನ ಸೈನ್ಯದಲ್ಲಿ ಹೆಚ್ಚು ಹೆಚ್ಚಾಗಿ ಲುಂಠನಪ್ರಿಯರು ಬಂದು ಸೇರಿಕೊಂಡರು (ಭಾಇಕ್ರ. ೩೦೭).

[ಸಂ.]

**ಲುಂಠನಕಾರಿ** (ನಾ). ಸುಲಿಗೆಮಾಡುವವನು ; ದರೋಡೆಗಾರ; ಕಳ್ಳ : ಅವನು ಅಷ್ಟಿಷ್ಟು ದಂಡನ್ನು ಕಟ್ಟಿಕೊಂಡು ಲುಂಠನಕಾರಿಯಾಗಿ . . . ಪ್ರಸಿದ್ಧಿಗೆ ಬಂದನು (ಕಗದ್ಯ. II, ೨೭); ಕೃಷಿಜೀವಿಗಳೂ, ಶಿಲ್ಪೋಪಜೀವಿಗಳೂ, ವರ್ತಕರೂ ದುರ್ವೃತ್ತರಾದ ಲುಂಠನಕಾರಿಗಳ ಕೃಪಾಧೀನರಾದರು (ಆಯುಕೆ. ೦೯೦). [ಸಂ. ಲುಂಠನಕಾರಿನ್]

**ಲುಂಠಾಕ** (ನಾ). ೧. = ಲುಂಠನಕಾರಿ. ೨. ನಾಶಮಾಡುವವನು: ನಿನ್ನಂಶಾಂಶದವತಾರಮೂರ್ತಿಯಿಂ ಲೋಕಲುಂಠಾಕರನಾವ ಪದದೊಳ್ ಮಡಿಯಿಸಲ್ವೇಡಿರ್ದಪುದವರವರಸಂತಂತೆ ಮಡಿಯಿಪುದು (ಜಗಪ. ೬-೭೩ ಪ).

[ಸಂ.]

**ಲುಂಠಿಸು** (ಕ್ರಿ). ೧. ಸೂರೆಮಾಡು ; ಕೊಳ್ಳೆಹೊಡೆ : ವೀರಭದ್ರದುರ್ಗದ ನೆರವಿಂ ಗೆಂಟಿಪ ಡೆಂಕಣಿಕೋಂಟೆಯನಂಟಿಸಿಯಾ ರಾಯಗೋಂಟೆಯಂ ಲುಂಠಿಸಿದಂ (ಚಿಕಪ. ೨-೦೨೯). ೨. ನಾಶಮಾಡು: ರವಣಗೆಯ್ದವನ ಕಂಠವ ಲುಂಠಿಸಿದ ಕಂಠೀರವಮೂರ್ತಿಗಾನೆರಗುವೆನು (ಕಕಾಂ. ೭೦-೫೯).

[ಲುಂಠನ + — ಇಸು₃]

**ಲುಂದು₁** (ಕ್ರಿ). ೧. ಮಲಗು : ಇರುಳ್ ಕಳ್ಳರ್ ವಂದಾಕೆಯ ಲುಂದಿದ[ಪಾಠಾಂ. ನಿದ್ರೆಗೆಯ್ದ] ಮನೆಯೊಳ್ ಕನ್ನಮಿಕ್ಕಿದೊಡೆ (ವಡ್ಡಾರಾ. ೦೯-೨) : ಕಾರ್ತಿಕಮಾಸದ ಪುಣ್ಣಮಿಯಂದು ಸುಖದಿಂದೆ ಲುಂದಿರ್ದಂ [ಪಾಠಾಂ. ಉಂದಿರ್ದಂ, ಪಟ್ಟಿರ್ದಂ, ಪಟ್ಟಿರ್ದೋಂ] (ವಡ್ಡಾರಾ. ೨೬-೭). ೨. ಸಂಭೋಗಿಸು : ಮೋಲ್ವಾಯ್ದು ಮೇವ್ವೆಸಿಯುಂ ಬರಿದುಂ ಲುಂದುವ ಬೇಟದೊಂದು ಸುಸಿಲುಂ ನೋಯಿಕ್ಕುಮಾಱಿಕ್ಕುಮುಗ್ಗಲಿಕ್ಕುಂ (ಅಧಿಪು. ೦೨-೨೯). 'ಮಱಲುಂದು' ಪರಾ.

**ಲುಂದುಪೋವರಿಗೆ**=ಮಲಗುವ ಕೋಣೆ; ಶಯ್ಯಾಗೃಹ: ಸರ್ವರುಚಾಪಹಾರಮೆಂಬ ಹಾರಂ ಸಂತತಿಯಿಂ ವಾಮರಥಂಗೆ ಬಂದುದಂ ವಾಮರಥಂ ಕರುವಾಡದೇಟನೆಯ ನೆಲೆಯೊಳ್ ತನ್ನ ಲುಂದುಪೋವರಿಗೆಯ [ಪಾಠಾಂ. ಪವಡಿಪೋವರಿಯಲ್] ಪುಡಿಕೆಯೊಳಿಟ್ಟು (ವಡ್ಡಾರಾ. ೦೨೩-೯).

**ಲುಂದು₂** (ನಾ). ೧. ಮಲಗುವಿಕೆ. ೨. ಸಂಭೋಗ: ಬಳಸುವ ಬೇಟದೊಳ್ ಮೊಳೆವ ಗೊಟ್ಟಿಯೊಳೆರಲೆವೋದ ಲುಂದಿನೊಳ್ ಬಳೆದ ವಿಯೋಗದೊಳ್ . . . ಗೊಳೆಗೊಂಡ ಬೇಟಂ (ಅದಿಪು. ೦೨-೨೦); ಅಮರ್ದಿನ ಧಾರೆಯಂತೆ ನುಡಿಯಿಂಪಮರ್ದಂ ತಳೆದಂತೆ ಸೋಂಕಿನಿಂಪಮರ್ದಿನ ಪೂರದಂತೆ ಪದದಿಂಪಮರ್ದಂ ಕುಡಿವಂತೆ ಲುಂದಿನಿಂಪಮರ್ದೊಡಮೇನಗಲ್ಕೆ ಮುಳಿಸಂಚೆರೆತುಂ ಗಡ ಕಾಳಕೂಟಮಾಗಮರ್ದಿನ ಕಾಳಕೂಟದೊಡವುಟ್ಟಿದಳೆಂದಪೆನೆನ್ನ ನಲ್ಲಳಂ (ಅದಿಪು. ೦೨-೨೭). [< ಲುಂದು₁]

**ಲುಂಬಾಳಕಾರಿ** (ನಾ). ಒಂದು ಬಿರುದು (?) : ಸಕಳಸಾಮನ್ತಲಕ್ಷ್ಮೀಕಾಂತಲಂಬಲುಂಬಾಳಕಾರಿನಿಲುಂ ಬೀರಚಂದ್ರಿಕಾಚಂದನತಿಳಕ (ಎಕ. VI. ಕಡೂರು. ೩೫-೯೬ ; 1136). [ ? ]

**ಲುಕಸಾನ** 'ಲುಕ್ಸಾನು' ನೋ.

**ಲುಕಸಾನು** 'ಲುಕ್ಸಾನು' ನೋ.

**ಲುಕಸಾನೆ** 'ಲುಕ್ಸಾನು' ನೋ.

**ಲುಕುಸಾನು** 'ಲುಕ್ಸಾನು' ನೋ.

**ಲುಕ್ಸಾನ** ' ಲುಕ್ಸಾನು ' ನೋ.

**ಲುಕ್ಸಾನು,** ನುಕಸಾನಿ, ನುಕಸಾನು, ನುಕ್ಸಾನು, ಲುಕಸಾನ, ಲುಕಸಾನು, ಲುಕಸಾನೆ, ಲುಕುಸಾನು, ಲುಕ್ಸಾನ (ನಾ). ನಷ್ಟ; ಹಾನಿ : ತಮಗೆ ಬಹಳ ಲುಕ್ಸಾನು ಆಯಿತು (ರಾಕೇಂದ್ರ. ೬೩). **ನುಕಸಾನಿ :** ಹೀಗೆ ಮಾಡೋಣದರಿಂದ ಸುಮ್ಮನೆ ನುಕಸಾನಿ ಆಗುವ ಸಂಭವವಿರುತ್ತದೆ (ವಚನವಿಚ್ಛಾ. ೩೩). **ನುಕಸಾನು :** ಸರಕಾರೀಕಂಡಾಯದಲ್ಲಿ ಶೇಕಡಾ ಮೂವತ್ತರಂತೆ ಸರಕಾರಕ್ಕೆ ನುಕಸಾನು ಬಂತು (ಕಥಾಗ. ೩೬೭). **ನುಕ್ಸಾನು:** ವ್ಯಾಪಾರದಲ್ಲಿ ಬಹಳ ನುಕ್ಸಾನು ಆಯಿತು (ರೂಢಿ). **ಲುಕಸಾನ :** ಇದರ ದೆಸೆಯಿಂದ ವರ್ತಕರಿಗೆ ಲುಕಸಾನವಾಗಿ ಬಹಳೇ ಖೇದವಾಗುತ್ತದೆ (ಕುಂಬಿವ್ಯಾ. ೬ ಪ್ರಶ್ನಾ ೭೩). **ಲುಕಸಾನು :** ಐಂದಾ ಸಾಗುವಳಿ ಆಗತಕ ಲುಕಸಾನು (ಪ್ಮಕಂ. ೦೯೩೭, ೨೦-೯; 1817); ಇದರ ಲುಕಸಾನು ಸರ್ವನಾಶ (ಹಿಂದಿ. I. ೪೬೪). **ಲುಕಸಾನೆ :** ಶಿರಿಫನಿಂದ ಯಾವನಾದರೊಬ್ಬನಿಗೆ ಲುಕಸಾನೆಯಾಗಿದ್ದರೆ, ಆ ಲುಕಸಾನೆ ಹೊಂದಿದವನು . . . ಫಿರ್ಯಾದಿ ಮಾಡಬಹುದಾಗಿತ್ತು (ಇಂಗ್ಲಂಡ. ೩೫). **ಲುಕುಸಾನು :** “ ಲುಕುಸಾನು _ ನುಕುಸಾನು, ಹಾನಿ” (ಕಾವಕೋ. ೯೩). **ಲುಕ್ಸಾನ :** ವಿಷ್ಣಯದ ಲಾಭ ಲುಕ್ಸಾನವನೆ ಬಲ್ಲನು (ಕದಾವ. ೦೩೩-೭).

[ ←ಅರ. ನುಕ್ಸಾನ್; ಹಿಂ. ಮರಾ. ಲುಕ್‌ಸಾನ್, ನುಕ್‌ಸಾನ್]

**ಲುಚ್ಚ** ' ಲುಚ್ಚಾ ' ನೋ.

**ಲುಚ್ಚತನ** ' ಲುಚ್ಚಾತನ ' ನೋ.

**ಲುಚ್ಚಾ,** ಲುಚ್ಚ, ಲುಚ್ಛಾ (ಗು). ೧. ಕೀಳಾದ ; ಯೋಗ್ಯವಲ್ಲದ ; ಅಲ್ಪ ; ಹೀನ : ಈ ಲುಚ್ಚಾ ಸೂಳೆಮಗನ ಮಾತು ನಂಬಿಕೊಂಡಲ್ಲೇ ಈಗೆಲ್ಲಾ ರಾಮರಕ್ಷಿಯಾಗಿ ಕೂತೇದ (ತಿರುನು. ೯೦); ಲುಚ್ಚಾಜನರ ಸಹವಾಸ ಮಾಡಿ ಆತ ಹಾಳಾದ (ರೂಢಿ). (ನಾ). ೨. ದುರಾಚಾರಿ ; ದುಷ್ಟ ; ದುರ್ವ್ಯಸನಿ : ಘಜನೀಮಹಮ್ಮದನೂ ಔರಂಗಜೇಬನೂ ಲುಚ್ಚಾಗಳು ದುಷ್ಟರು ಅಂತ ಬೈತಾನೆ (ಸ್ವಾಮಿಸ್ಮೃ. ೦೩೦). **ಲುಚ್ಚ :** ೧. ಅವಳು ರಂಗಭೂಮಿಯ ಮೇಲೆ ಬಂದಾಗ ತನ್ನ ಪಕ್ಷದವರು ಲುಚ್ಚಮಾತುಗಳನ್ನಾಡಿ ಚಪ್ಪರಿಸಿದಾಗ ತಾನು ಗದರಿಸಲಿಲ್ಲವೆ? (ರಂಗಬಾ. ೩). ೨. ಇಚ್ಛಾಳಗಾತಿ ತಾಯಮ್ಮ ಇದ್ದಾಗ ಲುಚ್ಚರ ಸಂಗ ನಮಗೇನು (ಕಳ್ಳಕು. ೭೩); ವ್ಯೆಗಳ್ಳ, ಕಳ್ಳ, ಲುಚ್ಚನೆಂಬ ಪದವಿಗಳೇ ಅವನಿಗೆ ದೊರೆತವು (ಕದಂಬ. ೩೬). **ಲುಚ್ಛಾ :** ೧. ಗಂಧರ್ವಭಾಷೆಯಲ್ಲಿ ಆಡದ ' ಲುಚ್ಛಾ ' ಮಾತುಗಳಿಲ್ಲ (ಪಾಂಪು. ೨೬); ಲುಚ್ಛಾ ಜನ ನೀವು (ಗ್ರಾಹೇಜ್. ೪೪೪).

[← ಪಾರ. ಹಿಂ. ಮರಾ. ಲುಚ್ಚಾ]

**ಲುಚ್ಚಾಗಿರಿ** (ನಾ). ಅಲ್ಪತನ ; ಕೀಳುತನ : ಈ ಸಣ್ಣ ವಿಚಾರಕ್ಕೆ ಲುಚ್ಚಾಗಿರಿ ತೋರಿಸಬೇಡ (ರೂಢಿ). [ಲುಚ್ಚಾ + —ಗಿರಿ₂]

**ಲುಚ್ಚಾತನ,** ಲುಚ್ಚತನ (ನಾ). ೧. ಕೀಳುತನ; ಹೀನಬುದ್ಧಿ : ಅವನ ಲುಚ್ಚಾತನದಿಂದಾಗಿ ಅವನ ನೆಂಟರಿಷ್ಟರೆಲ್ಲ ದೂರವಾದರು (ರೂಢಿ). ೨. ಪೋಕರಿತನ ; ಸ್ವೇಚ್ಛಾಚಾರ : (ಕ). **ಲುಚ್ಚತನ :** ೧. ವಿನೋದ ವಿನೋದ ಮಾಡಿದರೆ . . . ವಿನೋದ ! ವಿಕೃತಕಾಮ ! ಲುಚ್ಚತನ ! (ರಂಗಬಾ. ೦೬೩). [ಲುಚ್ಚಾ + —ತನ]

**ಲುಚ್ಛಾ** ' ಲುಚ್ಚಾ ' ನೋ.

**ಲುಟಾಯಿಸು** (ಕ್ರಿ). ಲೂಟಿ ಮಾಡು ; ಕೊಳ್ಳೆಹೊಡೆ ; ದೋಚು : ನಿಮ್ಮ ಸೀಮೆ ಯಾವತ್ತೂ ಲುಟಾಯಿಸಿ, ಆಕ್ರಮಿಸಿಕೊಳ್ಳುತ್ತೇವೆ(ರಾಕೇಂದ್ರ. ೯೩) ; ವರ್ತಕರಿಂದ ತೆರಿಗೆಗಳನ್ನು ಎತ್ತುತ್ತಲೂ . . . ಅವರ ಭಂಡಸಾಲೆಗಳನ್ನು ಲುಟಾಯಿಸುತ್ತಲೂ ಇದ್ದರು (ರಕಕ. ೦೯).

[ಲುಟಾ₀ (P ← ಹಿಂ. ಲುಟನಾ = ಲೂಟಿಯಾಗು) + — ಇಸು₁]

**ಲುಟುಲುಟು** (ನಾ). ಒಂದು ಅನುಕರಣ ಶಬ್ದ : ಅಡವಿಯಿಂದ ಮನೆಗೆ ಹೋಗುವಾಗ ಲುಟುಲುಟು ಹೆಜ್ಜೆಹಾಕುವ ಆಕಳ ಕರುವಿನಂತೆ ನೀನು ಹೀಗೇಕೆ ಓಡತೊಡಗಿದ್ದೀಯೆ (ಕುಗರೋ. ೦೯೬) ; ಲುಟುಲುಟು ಹೆಜ್ಜೆ ಹಾಕುತ್ತ ಸಮೀಪದ ಪುಸ್ತಕದ ಅಂಗಡಿಯಲ್ಲಿ ಕುಳಿತು . . . ಪತ್ರ ಬರೆದು ಬೀದಿಯ ಮಗ್ಗುಲಲ್ಲಿರುವ ಟಪಾಲುಡಬ್ಬಿಯಲ್ಲಿ ಒಗೆದುಬಿಟ್ಟ (ಮುಕ್ತ್ಯರ-೬೩).

**ಲುಠನ** (ನಾ). ೧. ಹೊರಳುವಿಕೆ; ತಿರುಗುವಿಕೆ. ೨. ತಿರುಗುಮುರುಗು ; ತಲೆಕೆಳಗು. [ಸಂ.]

**ಲುಠಿತ** (ಗು). ೧. ಹೊರಳಿದ ; ತಿರುಗಿದ. (ನಾ). ೨. ಹೊರಳಾಡುವ ಕುದುರೆ : “ಉಪಾವೃತ್ತಃ, ಲುಠಿತಃ — ೨ . . . ನೆಲದಲ್ಲಿ ಬಾರಿಬಾರಿಗೂ ಬಿದ್ದು ಹೊರಳಾಡಿದ ಕುದುರೆಯ ಹೆಸರು” (ಸಿದ್ಧಾಂತ. ೨೫೦). [ಸಂ.]

**ಲುಪ್ತ** (ಗು). ೧. ಬಿಟ್ಟ ; ತಿರಸ್ಕರಿಸಿದ. ೨. ಕರಗಿದ. ೩. ಕಾಣದೆ ಹೋದ ; ಮರೆಯಾದ : ಗುಣಲುಪ್ತಪ್ರಮುದಿತಚಿತ್ತಂ ಪ್ರಳಯದೂರಂ . . . ವಿಕಲ್ಪಿತನು (ಬಸಪು. ೬-೩). ೪. ಕಳವು ಮಾಡಿದ ; ದೋಚಿದ. ೫. ಇಲ್ಲವಾದ ; ಲೋಪವಾದ : ' ಲುಪ್ತೋಪಮೆ ' ಪರಾ. (ನಾ). ೬. ಕೊರತೆ ; ಕುಂದು ; ಊನ : ಕ್ಲಪ್ತಮೆನಿಸುವ ರಾಜಭೋಜ್ಯದೊಳಗಾವುದಂ ಲುಪ್ತಮಾಗದವೊಲಾರೋಗಣೆಯಿನ್ನೆದೆ ಲೋಲುಪ್ತಿಯಿಂ ಮಾಡುತಿರ್ದಂ (ಕೈಪಿಡಾ. ೬-೯೩). ೭. ಮರೆಯಾಗುವಿಕೆ ; ಕಾಣದಾಗುವಿಕೆ ; ಅದೃಶ್ಯ : ನಾನಾಸಂಪ್ರದಾಯಗಳು ಲುಪ್ತವಾಗಿವೆ (ಪುಕ್ಕಾರ. ೦೨೦ ೩೬೬೪) ; ಲುಪ್ತವಾದ ಭಾರತೀಯಕ್ಷಾತ್ರತೇಜವನ್ನು ಮರಳಿ ಪ್ರಖರಗೊಳಿಸುವ ಉದ್ದೇಶವಿರಲಿಕ್ಕೆ ಬೇಕು (ಕರ್ನಾಟ. ೪೨೪). ೮. ಕಳವುಮಾಲು; ಕದ್ದ ವಸ್ತು : “ಅಪಹೃತಂ ಲುಪ್ತಂ— ಈ ೨ ಕಳ್ಳೊಡವೆ'' (ಶಬ್ದಾಯು. ೫೬-೦೭೪). [ಸಂ.]

**ಲುಪ್ತಪಿಂಡ** (ನಾ). ಪಿಂಡಪ್ರದಾನಕ್ಕೆ ಯಾರೂ ಇಲ್ಲದಿರುವವನು,—ವಾರಸುದಾರನಿಲ್ಲದವನು : ನೀನು ಲುಪ್ತಪಿಂಡ ಆಗಿ ಸಾಯಿ (ಗಂಪತಾಯು. ೦೦೭). [ಸಂ.]

**ಲುಪ್ತಿ** (ನಾ). ಇಲ್ಲದಾಗುವಿಕೆ ; ಕಾಣದಾಗುವಿಕೆ : ವ್ಯಕ್ತಿ ಲುಪ್ತಿಗಳು ಮಾನವಪ್ರಕೃತಿಯ ಯಾವ ನಿಗೂಢವಾದ ವಿಶೇಷತೆಯೊಡನೆ ಸಂಬಂಧವಾದವು ಎಂಬುದನ್ನು . . . ನಿರ್ಣಯಮಾಡಲಾಗಿಲ್ಲ (ಹಿಂದಿ. II. ೨೦).

[<ಲುಪ್ತ]

**ಲುಪ್ತೋಪಮೆ** (ನಾ). [ಕಾವ್ಯಮೀ] ಉಪಮೆಯಲ್ಲಿ ಒಂದು ಬಗೆ ; "ಉಪಮಾನ ಉಪಮೇಯ ಸಾಧಾರಣಧರ್ಮ ವಾಚಕ ಶಬ್ದ ಇವುಗಳಲ್ಲಿ ಒಂದಾದರೂ ಕೆಲವಾದರೂ ಸ್ಪಷ್ಟವಾಗಿ ಉಕ್ತವಾಗದಿರುವ ಸಾದೃಶ್ಯಕ್ಕೆ ಲುಪ್ತೋಪಮೆಯೆಂದು ಹೆಸರು" (ಕ್ಯಾಶಿ. ೨೫೭) : ಉಪಮೇಯಮುಪಮಾನಂ ಸಮಾನಧರ್ಮಂ ಉಪಮಾವಾಚಕಪದಂ ಎಂಬೀ ನಾಲ್ಕರೊಳ್ ಒಂದನಾದೊಡಮೆರಡನಾದೊಡಂ ಮೂಱನಾದೊಡಂ ಪೇೞದಿರೆ ಲುಪ್ತೋಪಮೆಯೆನಿಪುದು (ಅಕ್ರಚಿ. ೩೪). [ಸಂ. ಲುಪ್ತೋಪಮಾ]

**ಲುಬ್ಧ** (ಗು). ೧. ಆಸೆಯುಳ್ಳ ; ಬಯಕೆಯುಳ್ಳ. ೨. ಅತಿಯಾಸೆಯ ; ಲೋಭತನದ : ದಾನಂ ದುರ್ಬಲಲುಬ್ಧಪ್ರಸ್ತುತಂ (ಶಾಂತಿಪು. ೩-೯೩ ವ). (ನಾ). ೩. ಅತಿಯಾಸೆಯುಳ್ಳವನು ; ಲೋಭಿ ; ಜಿಪುಣ : "ತೃಷಕಃ, ಗರ್ಧನಃ, ಗೃಧ್ನುಃ, ಲಿಪ್ಸುಃ, ಲುಬ್ಧಃ, ಅಭಿಲಾಷುಕಃ — ಈ ೬ ಕಾಂಕ್ಷಿತಂ" (ಹಲಾಯು. ೭೦-೨೦೮) ; ಚನ್ನಮಾದೊಡಂ ಗುಣಮಿಲ್ಲದಾತಂಗೆ ಲುಬ್ಧನ ಧನದಂತೆ ವಿಫಲಮಕ್ಕು (ಸುದಶಿ. ೧೧-೨೪) : ಡಿಂಗರಾತ ಬಲಗುಪ್ತರು ಅತಿಲುಬ್ಧರು (ರಾಜಶಮು. ೫೨). ೪. ಬೇಟೆಗಾರ; ಬೇಡ. [ಸಂ.]

**ಲುಬ್ಧಕ** (ನಾ). ೧. ಅತಿಯಾಸೆಯುಳ್ಳವನು ; ಲೋಭಿ ; ಜಿಪುಣ. ೨. ಬೇಟೆಗಾರ : ಬೇಡ : "ಮೃಗಯುಃ, ಲುಬ್ಧಕಃ, ವ್ಯಾಧಃ, ವಾಗುರಿಕಃ – ಈ ೪ ಮಾವುಲಿಗಂ" (ಹಲಾಯು. ೯೮-೪೪೨) ; ಲುಬ್ಧಕಾರಣ್ಯಚರಪುಳಿಂದಶಬರಾದಿಪರಿರಕ್ಷಿತಾಂತರಾಲದೇಶಂಗಳುಂ (ಆದಿಪು. ೮-೭೩ ವ) ; ಪನಮರ್ದಿರ್ದನೊ . . . ಕಟ್ಟಲೆಯ ಪೊತ್ತಮುದಂ ಬನವೊರ್ವ ಲುಬ್ಧಕಂ (ಕುಶಪು. ೫-೯೪). ೩. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಆರನೆಯದು ; ಆರ್ದ್ರಾ : "ಆರ್ದ್ರಾ, ಲುಬ್ಧಕಃ — ಈ ೨ ಆರ್ದ್ರಾ (ನಕ್ಷತ್ರದ ಪೆಸರ್)" (ಹಲಾಯು. ೮-೪೯) ; "ಕೃಪಣಂ ಶಾಬರರಾರ್ದ್ರಾ ಲುಬ್ಧಕಮೆನಿಕ್ಕುಂ" (ಶಾಶಾರ. ೧೨೮). [ಸಂ.]

**ಲುಬ್ಧತ್ವ** (ನಾ). ಅತಿಯಾಸೆ ; ಜಿಪುಣತನ. [ಸಂ.]

**ಲುಲಾಯ** (ನಾ). ಕೋಣ : "ಮಹಿಷಃ, ಸೈರಿಭಃ, ರಕ್ತಾಕ್ಷಃ, ಕಾಸರಃ, ಲುಲಾಯಃ – ಈ ೫ ಕೋಣಂ" (ಹಲಾಯು. ೩೮-೭೪); ಭೀಕರತರಮಾಯಿತ್ತುಭಂ ವಿಲಯಕಾಲಕರಾಳಲುಲಾಯಸನ್ನಿಭಂ (ಚಂದ್ರಪ್ರ. ೧೦-೯೭) ; ಪೃಥುಳಕಂಧರ ಮೃಗಲುಲಾಯ ರಿತುಮಹಿಷೆಗಳ ನಡುವಿರ್ದುದು (ಹಕಾಶ. ೫-೩೮). [ಸಂ.]

**ಲುಲಾಯಚ್ಛವಿಕ** (ನಾ). ಕೋಣದ ಬಣ್ಣವುಳ್ಳುದು ; ಅತಿಕಪ್ಪು : ದಹನಬಹಳಧೂಮಂ ಯಮೋಚ್ಚೈರ್ಲುಲಾಯಚ್ಛವಿಕಂ ಕೃಷ್ಣಾದ ಕಾಯದ್ಯುತಿ . . . ಪರ್ಬಿತ್ತೆನೆ ದೆಸದೆಸೆಯಂ ಮುಬ್ಬುಗೆ ಪರ್ಬಿತ್ತುಗುರ್ಬಿಂ (ಲೀಲಾವ. ೧೧-೨೭). [ಸಂ.]

**ಲುಲಿತ**, ಲುಳಿತ (ಗು). ೧. ಅಲುಗಾಡಿದ ; ಅಲ್ಲಾಡಿದ ; ಕಂಪಿಸಿದ. ೨. ಕೆದರಿದ ; ಅಸ್ತವ್ಯಸ್ತಗೊಂಡ. ೩. ಚಿಮುಕಿಸಿದ ; ಸಿಂಪಡಿಸಿದ. ೪. ತೊಟ್ಟಿಕ್ಕಿದ ; ಹನಿಸಿದ : ಮನ್ಯುಗದ್ಗದಕಂಠೆಯುಮಶ್ರುಜಲಲುಲಿತಲೋಚನೆಯುಮಾದ ಜಾನಕಿಗೆ ಹನುಮನಿಂತೆಂದಂ (ಕಂರಾಮಾ. ೧೧-೧೧೧ ವ) ; ಲುಲಿತಜಲಲವಲಲಿತನವಜಲರುಹದಳವಿಸರಲಸಿತವಿಮಳಮರಾಲಾವಲಿಕಲಿತ . . . ಮಂದಮಾರುತಮಹಿತಂ (ರಾಜಶೇ. ೧೧-೭೩). ೫. ಚೆಲುವಾದ ; ಅಂದವಾದ : ಲಲಿತಮಾಗೆಸೆವ ಭಾವಳಿಯ ಪಾತ್ರಂ ಮಾಡಿ ಲುಲಿತವಿಷಯಪದಾರ್ಥನಿಕರಮಂ ಭೈತದೞೊಳೊಲವಿನಿಂ ಪ್ರಾಣಲಿಂಗಕ್ಕೆ ಕೊಟ್ಟಾ ಪ್ರಸಾದಮನುಂಡು (ಅರಾತ. ೧-೮-೧೧೧). ಲುಳಿತ : ಎ. ನಂದನಾವಳಿಗಳಂ ಬಳಸಿರ್ದ ಮದಾಳಿಸಂಕುಲಂಗಳ್ ವಿಷಯಾಂಗನಾಲುಳಿತಕುಂತಳದಂತೆವೊಲೊಪ್ಪಿ ತೋಱುಗುಂ (ಶಂಕರಾ. ೧-೫೩) ; ಸುವರ್ಣಕುಂಭಯುಮಳಮಂ ತರಳತರತರಂಗಲುಳಿತಲಲಿತಫೇನಪಿಂಡಮಂ (ಧರ್ಮನಾ. ೧೧-೫೮ ರಗಳೆ). ೨. ಚಿತ್ರರಥನಂದನೆ ತುರಗಖುರಲುಳಿತ . ಧೂಳೀಧೂಸರಮಪ್ಪ ಭವದ್ಗಮನಮಾರ್ಗಮಂ ನೋಡುತ್ತಮಿರ್ಪಳ್ (ಕಾದಂಬ. ೨೦೧). ೩. ಮಲಯಜರಸಲುಳಿತ ನಳಿನೀದಳಾವಕುಂಠಿತಮಾದ ಮೆಲ್ಲೆರ್ದೆಯೊಳಮೋರೊರ್ವೆ ಕಳವಳಿಸಿ (ಕಾದಂಪೂ. ೯೨೭). ೪. ಆನಂದಬಾಷ್ಪಜಲಲುಳಿತನೇತ್ರನಾಗಿ (ಜಗಚ. ೩-೨೩ವ) ; ಪ್ರಮೋದಬಾಷ್ಪಜಲಲುಳಿತನಯನಪಾಲೀನನುಮಾಗಿ (ಚಂದ್ರಪ್ರ. ೨-೦೦೭). (ನಾ). ೬. ಅಲ್ಲಾಡುವುದು ; ಅಲುಗಾಟ ; ಕಂಪನ : "ಪ್ರೇಂಖೋಳಿತಂ, ತರಳಿತಂ, ಪ್ರೇಂಖಿತಂ, ಲುಳಿತಂ —ಈ ೪ ಅಲ್ಲಾಡುವುದು" (ಹಲಾಯು. ೧೨೩-೭೦). [ಸಂ.]

**ಲುಲಿತಕುಂತಲೆ** (ನಾ). ಅಲುಗಾಡುವ ಮುಂಗುರುಳುಳ್ಳವಳು : ಸ್ಖಲಿತಗತಿ ಲುಲಿತಕುಂತಲೆ ಪಲಿತಸಜಗ್ರೀವೆ ಮಗುಟ್ದು ನೋಡಿದಳೊರ್ವಳ್ (ಅಜಪು. ೯-೩೮). [ಸಂ. ಲುಲಿತಕುಂತಲಾ]

**ಲುಲಿತಾಳಕಿ**, ಲುಳಿತಾಳಕಿ (ನಾ). = ಲುಲಿತಕುಂತಲೆ : ಅವಳೊಲ್ದಡೆಗೆನೆರಿಯದಿನಿತಿನಿತಂ ಪಳಿಯಲೀಯದಂತೀವುದು ಮನಮಂ ಕಾಣ್ದುದು ವಿಟಂ ಸ್ಥಿರನಾಗಿ ಲುಲಿತಾಳಕಿ (ಸುದಶಿ. ೧೧-೯೭). ಲುಳಿತಾಳಕಿ : ಅಳವಿಗಳದೆನ್ನ ಮನದುಮ್ಮಳದಿಂ ಪರಿಣತನೆನಿಪ್ಪ ನೈಮಿತ್ತಿಕನಂ ಲುಳಿತಾಳಕಿ ಬೆಸಗೊಳೆ (ಮಲ್ಲಿಪು. ೪-೨೭) ; ಪೂತವನಮಂ ಲುಳಿತಾಳಕಿ ಎಂದು ನೋಡಿದಳ್ (ಪಾಂಡವಾ. ೨-೩೨೮). [< ಸಂ. ಲುಲಿತಾಲಕಾ]

**ಲುಲ್ಲಿ** (ನಾ). ಒಂದು ಬಗೆಯ ಸಣ್ಣಹುಳು : ಸಮುದ್ರದೊಳಗೆ ಲುಲ್ಲಿಯಂತೆ ಮೃದುಶರೀರವುಳ್ಳದ್ದೊಂದು ಜಂತುವಿರುತ್ತದೆ (ಜುಂಬಯು. ೫-೨೯). [ ? ]

**ಲುಳಿ**$_1$ (ನಾ). ೧. ರಭಸ ; ವೇಗ : ಮುಂತೆಯ್ದುವ ತುಳಿಯಂ ಪೀಳಿನ [ದ] ಲುಗುವ ಡಮರವನಗ್ಗಿಸಿ ಕೊಡಹುವ . . . ಕರಿಘಟೆ ನೆರದುವು ಬಲದೊಳಗೆ (ಪೀರೇಶ. ೨-೨೮) ; ಲುಳಿಯ ಬಿಲುವಿದ್ಯಾಚಮತ್ಕೃತಿಯುಳವು ಗರುಡಿಯೊಳಲ್ಲದೀ ರಿಪುಬಲಕೆ ತೋರಿಸಬಹುದೆ (ಕುಮಾರಾ. ೩-೫) ; ಉರುಕೇಶಬಂಧನಂ ವಿಟಜನಕೆ ಬಂಧನಂ ಕರದ ಲುಳಿ ಕಾಮನಾಟಕಕೆ ಲಳಿ ಲುಳಿ (ಸಮ್ಯಕ್ತ್ವ. ೬-೧೩). ೨. ಕಾಂತಿ ; ಹೊಳಪು : ಬಲಿದಿಂಗಲೀಕ ಸುವರ್ಣರೇಖೆಗಳ ಲುಳಿಯ ಹಂಗನ ಗಱಿಯ ಬಿಗುಹಿನ ಹಿಳುಕುಗಳ ಹೊಗರಂಬು ಕವಿದವು (ಕುಮಾರವ್ಯಾ. ೫-೦೩) : ಸುಳಿವ ಹಸ್ತದ ಜಾತಿ ಭಾವದ ಬಳಿಯಲಾಡುವ ನೋಟ ನೋಟದ ಲುಳಿಯವೊಲು ತೆಗೆದತ್ತ ತಿರುಗುವ ಕೊರಳು (ಕೃಭೂಲೀ. ೪-೫೮). ೩. ಚುರುಕುತನ ; ಲವಲವಿಕೆ : ಈ ಬಲ್ಮೆಯಿಾ ಲುಳಿಯಿಾ ಬಿನ್ನಣಾ . . . ಶ್ರೀಚಿಕದೇವನೊಳ್ ಮೆಱೆಗುಂ (ಚಿಕಶಿ. ೪-೦೪೮).

**ಲುಳಿ**$_2$, ರುಳಿ (ನಾ). ಕಾಲಿಗೆ ಧರಿಸುವ ಒಂದು ಬಗೆಯ ಆಭರಣ : ಕಡಗ ಪೆಂಡೆಯ ಕಾಲುಲುಳಿಯ ವ್ಯಾಡಶರಣರಿಗುಳಿವದೆ ಇತ್ತು ರುದ್ರಾಣಿ (ಅಮುಗಾಂ. ೭-೭೯) ; ಪದಕದ ಲುಳಿಯ ರವೆಯದ ಕಂಕಣದ . . . ಪೆಣ್ಗಳ ತಂಡವೆಳಸಿದುದಾರತಿವಿಡಿದು (ಕುರಾಶಾ. ೪೦-೭೭) ; ಭೂರಿಕುಮಾರರುಂಟೆಮಗೆ ಪದಕದಂತೆ ಹಾರದಂದದಿ ಲುಳಿಯಂತೆ (ಭರತ. ೯೭-೩೦). ರುಳಿ : ಕನ್ಯಾಶಿರೋಮಣಿಯ ಚರಣಗಳಿಗೆಯಂದುಗೆ ಗೆಜ್ಜೆ ರುಳಿದೊಡರನಿಟ್ಟರೊಲಿದು (ಪಪಮೋ. ೨೩-೪೨) ; ಕಾಲ ಸರ್ಪಳಿ ರುಳಿ . . . ಜೋಮಾಲಿಗಳು ಇಂಥ ಮೇಲಾಭರಣನಿಟ್ಟು ಲೋಲ್ಯಾಡುತಲಿ ಚೆಲ್ವ ಬಾಲೆಯರು ಬರುವ ವಿಶಾಲವೇನೆಂಬೆನೊ (ಜಪಗೀ. ೪೪). [← ಮರಾ. ರುಳೀ]

**ಲುಳಿತ** 'ಲುಲಿತ' ನೋ.

**ಲುಳಿತಾಲಕ**, ಲುಳಿತಾಳಕ (ನಾ). ಅಲುಗಾಡುವ ಮುಂಗುರುಳು : ಪದದಿಂದಾ ಲುಳಿತಾಲಕಂಬರೆಗ[ಮಂ]ಗೋಪಾಂಗಮಂ ಪಂಚರತ್ನದಿನಂ

ಗೋಚಿತಮಾಗೆ ನಿರ್ಮ್ಮಿಸಿ (ಕಥಾ. ೩೦-೦೭-೩೬; 1117). **ಲುಳಿತಾಳಕ** : ಲುಳಿತಾಳಕಜಾಳವುಂ ಕೊಡಂಕೆಗೆ ತೆಗೆದೇಱೆ ನೂಂಕೆ . . . ಒಪ್ಪಿದರಂದು ಕಾಂತೆಯರ್ (ಕಾದಂಫ. ೭೦) ; ಸುರಸುಂದರಿಯರ್ನಡೆತಂದರಂದು ಸುಯ್ಗೆಗೆದಳಿವಲೆ ತಮ್ಮ ಲುಳಿತಾಳಕದೊಳ್ತಡವಾದುವೆಂಬಿನಂ (ಧರ್ಮಪು. ೦೯-೨೭೭). [ಸಂ. ಲುಲಿತಾಲಕ]

**ಲುಳಿತಾಳಕ** ' ಲುಳಿತಾಲಕ ' ನೋ.

**ಲುಳಿತಾಳಕಿ** ' ಲುಲಿತಾಳಕಿ ' ನೋ.

**ಲುಳಿದಾರ** (ನಾ)· ಒಂದು ಬಗೆಯ ಆಭರಣ : ಲುಳಿದಾರ ಮುಂಗೈಯ ಮುರಿ ಪೆಂಡೆಯ ತೋಳ ಬಳೆ. . . ಮೆಱೆಯೆ ಬಂಟರ ನೋಡಿ ಕಳುಹಿದ ನಂದು ಕಗ್ಗೊಲೆಗೆ (ಕುಮಾರಾ. ೭೩-೯೫) ; ಲುಳಿದಾರ ಕಂಠಿಕೆ ಖಡೆಯ ಪೊಂಗಲು ಹೊನ್ನ ಬಳೆಯುತ್ತರಿಗೆ ಚೆನ್ನಸರವ ಕಳುಪು (ಕುಮಾರಾ. ೯೨-೨೯).
[ಲುಳಿ$_2$ + ದಾರ$_1$]

**ಲುಳಿಮನ** (ನಾ)· ೧· ಚುರುಕಾದ ಮನಸ್ಸು. ೨. ಆಸಕ್ತವಾದ ಮನಸ್ಸು : ಹಲವು ವಿಧದರ್ಚನೆಗಳಿಂದಿಷ್ಟಲಿಂಗವಂ ಲುಳಿಮನದಿ ಪೂಜಿಸಲು ಮೆಚ್ಚಿದಂ ಗೌರೀಶ (ಲಿಚಂ. ೦೬-೦೮) ; ನಳಿನರಿಪುಧರಾಲಿಯಿಂದಿರೊಳ್ ತೋಱೆ ಕಾಣುತಂ ಲುಳಿಮನದಿ ಮೆಯ್ಯಿಕ್ಕಿ ಭಕ್ತಿಯಿಂ ತುತಿಸುತಂ (ಲಿಚಂ. ೨೯-೨೬). [ಲುಳಿ$_1$ + ಮನ]

**ಲುಳಿಯಂಬು** (ನಾ). ವೇಗವಾಗಿ ಚಲಿಸುವ ಬಾಣ : ಅರಸ ಚಿತ್ರವಿಸು . . . ಲುಳಿಯಂಬು ಕಣಗಲ ಸರಳುಗೂಡಿಪ್ಪತ್ತು ಸಾವಿರವೆರಡುಸಾವಿರ ವುಳಿದವೀ ನಾರಾಚನಿಕರದಲಿ (ಕುಮಾ.ಭಾ. ೦೮-೨೦) [ಲುಳಿ$_1$ + ಅಂಬು$_2$]

**ಲುಳಿಯಾಣ** (ನಾ). ರತ್ನದ ಒಂದು ಬಗೆಯ ದೋಷ (?) : ಆ ಮಾಣಿಕರೊಳ್ ಬೇಱೆ ಬೇಱೆ ಅರ್ಕರಿಂ ಧರಿಸಿದವರಿಗೆ ಫಲವ ಪೇಳುವೆಂ ಕರ್ಕರಕೆ ಭಿನ್ನವೆಂದೊಡದು ಹುಟ್ಟಿದುದೆಂದು ಅಶ್ಮಜದ ಮೊರಬು ಲುಳಿಯಾಣ ಸುನಗಳೆಂದು ಪುಟದೋಷಮೆಂದಿರ್ಪುದು (ರತ್ನಶಾ. ೯-೩). [ ? ]

**ಲುಳಿವಡಿಸು** (ಕ್ರಿ)· ವೇಗಗೊಳಿಸು : ಕಮಲಜನೇಱಿದನು ರಥವ . . . ತುರಗಪ್ರುಸರವನು ಬೋಳೈಸಿ ರಥವನು ದೆಸೆದೆಸೆಗೆ ಹೊಳೆಸಿದನು ಲುಳಿವಡಿಸಿದನು ಮಹಾರಥವ (ಕುಮಾ.ಭಾ. ೭-೦೯). [ಲುಳಿ$_1$ + ಪಡಿಸು]

**ಲುಳಿವಡೆ** (ಕ್ರಿ)· ೧· ವೇಗಗೊಳಿಸು : ರಭಸಗೊಳಿಸು : ತುರಗವನು ಬೋಳಯಿಸಿ ವಾಘೆಯ ತಿರುಹಿ . . . ಕೃಷ್ಣ ಪಾರ್ಥನ ರಥವ ಲುಳಿವಡೆದ (ಕುಮಾ.ದ್ರೋ. ೩-೨) ; ಬಳಿಕ ಶಾರ್ಙ್ಗ ಮಹಾಧನುವನುಜ್ವಲಿತ ಮೌರ್ವಿಯ ನೀವಿ ಬೆರಳಲಿ ಲುಳಿವಡೆದು ಬರಸೆಳೆದು ಹೂಡಿದನಾ ಮಹಾಶರವ (ತೊರವೆ. ೬-೩೦-೯೩). ೨. ಚುರುಕುತನವನ್ನು ಹೊಂದು : ಕೊಂಕು ಬಿಂಕಂಬಡೆಯೆ ಬಿಂಕಂ ಲುಳಿವಡೆಯೆ ಲುಳಿ ನುಣಿವಡೆಯೆ ಮೆಱೆದು (ಅಪಂಪು. ೨-೨೯ವ). [ಲುಳಿ$_1$ + ಪಡೆ$_1$]

**ಲುಳಿವಡೆಸು** (ಕ್ರಿ)· ವೇಗಗೊಳಿಸು : ವಾಘೆಯ ಕೊಂಡು ತುರಗವ ತಿರುಹಿ ಲುಳಿವಡೆಸುತ್ತ ಪಾರ್ಥಗೆ ಮಾಯೆಯನು ಬೀಸಿ . . . ಎಂದನು ನಗುತ ಮುರವೈರಿ (ಕುಮಾ.ದ್ರೋ. ೩-೯೨). [ಲುಳಿವಡೆ + —ಇಸು$_3$]

**ಲುಳಿವೆರು** 'ಲುಳಿವೆಱು' ನೋ·

**ಲುಳಿವೆಱು**, ಲುಳಿವೆರು (ಕ್ರಿ)· ೧· ಕಾಂತಿಯನ್ನು ಪಡೆ ; ಹೊಳಪಾಗು: ನಳಿನಪತ್ರಾಯತೇಕ್ಷಣೆಯಂಗದೇಶದೊಳ್ ಪುಳಿ[ಪಾಠಾ· ಬೆಳ]ಸಿದ ಲಾವಣ್ಯವನದ ಲುಳಿವೆತ್ತು ರತಿಕಾಮ ದೇವರಾಡುವ ಕಾಸುಗೊಳಿಯನೆ ಹೊಕ್ಕುಳೊಪ್ಪಿದುದು (ಶೋಚಕ. ೨೩-೦೯)· **ಲುಳಿವೆರು** : ೨· ವೇಗವನ್ನು ಹೊಂದು : ಸಡಗರಿಸಿ ಮೆಯ್ಮೞಿಗೊಂಡು ಲುಳಿವೆತ್ತು ನೆಗೆದರ್ದು (ಸಂಕರ. ೨೩-೬). [ಲುಳಿ$_1$ + ಪೆಱು$_1$]

**ಲೂಟಿ** (ನಾ). ಕೊಳ್ಳೆ ಹೊಡೆಯುವುದು ; ಸುಲಿಗೆ ; ದರೋಡೆ : ಕದನದೆ ಮುಱಿದಿಕ್ಕಿ ಖಳರಾಯನ ಶಸ್ತ್ರಸದನವ ಹೊಕ್ಕು ಲೂಟಿಯಲಿ ಹದವಿಲ್ಲು ಕೋಲ್ಗಳ ಕೈಕೊಂಡು ಬತ್ತೀಸಾಯುಧನಾಗಿ ಪೊಱಮಟ್ಟು ಬಂದ (ಬೋಚಕ. ೦೨-೯೦) ; ಈ ಪುರದೊಳು ಪ್ರಜೆ ಉಳುವಿಲ್ಲ ಲೂಟಿಯು ಬಲುಹ ನೇನೆಂಬೆ (ಚಿಕಂ. ೨೭೨-೦) ; ಇವರ ಲೂಟಿ· ದರೋಡೆಗಳೆ ಜನತೆಯ ಭೀತಿಗೆ ಮುಖ್ಯ ಕಾರಣವಾಗಿತ್ತು (ಪ್ರಾಚಿ. ೧೬೩)·

**ಲೂಟಿ ಮಾಡಿಸು** = ಕೊಳ್ಳೆ ಹೊಡೆಯಿಸು ; ಸೂರೆ ಮಾಡಿಸು : ನಿಮ್ಮ ತಂಗಿಯರು ತಮ್ಮಂದಿರು . . . ಬೇಕಾದಾಗ ಕರೆಸಿಕೊಳ್ಳುತ್ತೀರಿ· ಮನೆಯೆಲ್ಲ ಲೂಟಿ ಮಾಡಿಸುತ್ತೀರಿ (ಮಹಾಗ. ೯೮)· **ಲೂಟಿ ಮಾಡು** = ಕೊಳ್ಳೆ ಹೊಡೆ ; ಸೂರೆ ಮಾಡು ; ಸುಲಿ : ತೋಟಿಯಿಂದೊಳಪೊಕ್ಕು ಪುರಗಳೊಳಗೆ ಬಲು ಬೇಟೆಯ ನಾಯ ಹಿಡಿವರು ಲೂಟಿ ಮಾಡುವರು (ಕುಮಾರಾ. ೦೦-೩) ; ಶತ್ರುಗಳು ದೇಶದ ಮೇಲೆ ನುಗ್ಗಿ ದೇಶವನ್ನೆಲ್ಲಾ ಸುಟ್ಟು ಲೂಟಿ ಮಾಡುತ್ತಿದ್ದರು (ಪಾಂಡ್ಯಪು. ೨)· **ಲೂಟಿಯಾಗು** = ಕೊಳ್ಳೆ ಹೋಗು ; ಸೂರೆಯಾಗು ; ಸುಲಿಗೆಯಾಗು : ಪಕ್ಕದ ಹಳ್ಳಿ ಲೂಟಿಯಾಯಿತು (ಶಿರಾಕ· ೯೬). **ಲೂಟಿಯಾಡು** = ಲೂಟಿ ಮಾಡು : ಕೇರಿಕೇರಿಯೊಳು ಪರಿದು ಲೂಟಿಯಾಡಿದರೂರು [ಪಾಠಾ· ಮಾಡುತಲೂರು] ಕಿಚ್ಚಿನ ಬೀಡಾಯ್ತು (ಕುಮಾರಾ· ೦೦-೯೬) ; ನೀನಾರ ಗಂಡನಂ ಲೂಟಿಯಾಡಲ್ಬಂದೆ ಎಂದು ಚೇಲಾಗ್ರವಂ ಪಿಡಿದೆಳೆಯಲು (ಶೀತಮು.೯-೨೬)· [← ಹಿಂ. ಲೂಟ್, ಲೂಟಿ; ಮರಾ. ಲೂಟ್]

**ಲೂಟಿಸು** (ಕ್ರಿ). ಕೊಳ್ಳೆಹೊಡೆ ; ದೋಚು ; ಲೂಟಿಮಾಡು : ಮೇಣಾ ವಧೂಟಿಯರು ಲೂಟಿಸಿದರಖಿಲವಿಟಚಿತ್ತಧನವಂ(ಕರಿಶ. II· ೯೬೬ ಶತಕ) ; ಬಾರೆಲೆ ವಿಶಾಲಾಕ್ಷಿ ನಿನಗಹಿತಪತ್ನಿಯಾಗಾರವಂ ಲೂಟಿಸು (ಜವಮು. ೬-೨೩); ಹೈದರೆಲ್ಲಿ ಖಾನರು ನಾಜರುಜಂಗರ ಖಜಾನೆ ದ್ರವ್ಯವೆಲ್ಲ ದಿಕ್ಕಾಪಾಲಿಗೆ ಲೂಟಿಸಿ ಕೊಂಡ ಹೋಗುವರಲ್ಲಿ ಕೆಲವರನ್ನು ಹೊಡೆದು (ಹೈದರ· ೨೬). [ಲೂಟಿ + —ಇಸು$_3$]

**ಲೂತಿ, ನೂತಿ$_1$** (ನಾ)· ೧· ಒಂದು ಬಗೆಯ ಗುಹ್ಯರೋಗ ; ಗುಹ್ಯವ್ರಣ ; ಭಗಂದರ : " ಲೂತಿ [ಪಾಠಾ· ಲೂಕಿ, ವೂರಿ]ಯೆಸರಾಸನದ ಪುಣ್ಣಕ್ಕು " (ಮಂಗರಾ. ೦೦೯-೩) ; ಸರ್ವ ಮಿಗಿಲೆಂಬಹಂಕಾರೀಕನ್ನೆಯ್ಯ ಲೂತಿಯು ಹುಣ್ಣನುಳ್ಳಾತನು (ಲಕ್ಷ್ಮೀ. ೯-೨೨-೩೦) ; ಪ್ರೀತಿಯಿಂದ ನೀತಿ ಹುಟ್ಟುವುದು ಲೂತಿಯಿಂದ ಗಜ್ಜಿ ಹುಟ್ಟುವುದು (ಗಾದೆ). **ನೂತಿ$_2$**: ೧.ಬಾಳೆ ಹೂವು· ಹುರುಳಿ· ಗೇರ ಹರಳು ಇವೆಲ್ಲಟ್ಟು ಇಳುಹಿ· ಗೇರ ಹರಳು ಮೆಲಲು ನೂತಿ ಮಾಣ್ಗುಂ (ಶಿವ್ಯಶಿ· ೬೩) ; ನಾಡೀವ್ರಣವೇ ನೂತಿ ಎನಿಸಿಕೊಂಬುದು (ವೈದ್ಯಶಾ. II, ೧೨೩); ಎಳೇ ನೀಲಿ. . .ನೂತಿ· ಬಾಯಿಹುಣ್ಣು ಗಂಟಲುಹುಣ್ಣು· ಕಾವುಗಣ್ಣುಗಳಿಗೆ ಇದು ಸಂಜೀವನ (ಲಿಪಿ. ೯)· ೨. ಒಂದು ಬಗೆಯ ರೋಗ : ' ಕಣ್ಣುನೂತಿ ' ಪರಾ.
[<ಸಂ· ಲೂತಾ = ಚರ್ಮರೋಗ /ತುಳು. ಲೂತಿ = ಚರ್ಮರೋಗ]

**ಲೂತೆ** (ನಾ). ೧· ಜೇಡರ ಹುಳು : "ಲೂತಾಹ್ವಯವುೂರ್ಣನಾಭಂ" (ಶಬ್ದಮಣಿ. ೯೦-೬) ; ಭದ್ರಾಂಗನೆಂದೆಂಬವನ ಮೇಲೊಂದು ಲೂತೆಯು ಡರಲ್ಕಾ ಮುನಿಯ ಶಿಷ್ಯನಾಲೋಕಿಸುತ್ತ ಕೌಶಲ್ಯನೇದೆಂಬಾತನದಸೆಳೆದು ಕಡೆಗೆ ಹಾಯ್ಕೆ (ಸಿದ್ಧೇಶ್ವ· ೦೨-೦೮). ೨. ಇರುವೆ. ೩./ಜೇಡರ ಹುಳುವಿನ ಎಂಜಲಿನ ಸಂಪರ್ಕದಿಂದ ಉಂಟಾಗುವ) ಒಂದು ಬಗೆಯ ಚರ್ಮರೋಗ: (*)· [ಸಂ. ಲೂತಾ]

**ಲೂನ** (ಗು)· ೧. ಕತ್ತರಿಸಿದ ; ಕಡಿದ : ಐರಾವತಕರಲೂನಸಲ್ಲಕೀಶಬಳ ಮುಮಪ್ಪುದಯಗಿರಿಯಂ ಸೊಗಯಿಸುವ ಮೂಡಣದೆಸೆಗೆ ವಂದು (ಶುಕಶಾ· ೯-೦೮ ವ); ಏನ ಹೇಳುವೆನುಭಯಬಲದಲಿ ಲೂನನಿವಹದ ಹಯವ ನಡೆಗೆಡೆವಾನೆಗಳ ಹೊದಱೆದ್ದು ಮುಗ್ಗಿದ ರಥವ ವಾಜಿಗಳ (ಕುಮಾ.ದ್ರೋ· ೬-೩)·(ನಾ). ೨. ಕತ್ತರಿಸಿದುದು ; ತುಂಡುಮಾಡಿದುದು : "ದಾತಂ ಲೂನಂ ದಿತಮಱಿಗೆ". (ಶಬ್ದಮಣಿ· ೦೦೬-೯೯). ೩. ಕೊಯ್ದುದು;

ಕಟಾವಾದುದು : "ಲೂನಂ ಕೊಯ್ಲು [ಶಾಕಾಂ. ಕೋಯಲು]" (ಕುಂಗನಾ. ೦೦೯-೨). ೪. ಬಾಲ. [ಸಂ.]

**ಲೂನವಕ್ಷ** (ನಾ). ಕತ್ತರಿಸಿಕೊಂಡುದರಿಂದುಂಟಾದ ಗುರುತನ್ನು ಎದೆಯಲ್ಲಿ ಹೊಂದಿರುವವನು ; ಹಿಂದಿನ ಕಾಲದಲ್ಲಿ ವೇಳೆವಾಳಿಗಳು, ಗರುಡರು ಮುಂತಾದವರು ತಮ್ಮ ಒಡೆಯರ ಸೇವೆಗೆ ತಮ್ಮನ್ನು ಒಪ್ಪಿಸಿಕೊಂಡುದರ ಸೂಚನೆಯಾಗಿ ಹರಿತವಾದ ಆಯುಧದಿಂದ ತಮ್ಮ ಎದೆಯ ಮೇಲೆ ಒಂದು ಗುರುತನ್ನು ಮಾಡಿಕೊಳ್ಳುತ್ತಿದ್ದರು : ನೃಪಾಲರ ಮಗನೊ ಮೊಮ್ಮನೊ ನೀನವರ ಬಾಂಧವನೊ ಭೃತ್ಯನೊ ನೂ[ಲೂ]ನವಕ್ಷ [ಪಾಠಾಂ. ಪಕ್ಷ]ನೊ ಬೆರಳ ಬದೆಗನೊ (ಕುವ್ಯಾ.ಸ. ೨-೬೨). [ಸಂ. ಲೂನವಕ್ಷ]

**ಲೆಂಕ** (ನಾ). ೧. ತನ್ನ ಒಡೆಯನ ಸಲುವಾಗಿ ಪ್ರಾಣಾರ್ಪಣೆಯನ್ನು ಮಾಡುವ ನಿಷ್ಠಾವಂತನಾದ ಆಳು ; ಆಪ್ತ ಸೇವಕ : ಕರ್ಣನ ಲೆಂಕಂ ಪ್ರಾಣಿತಿಳಿವಿರುಂಬನುಮಂ . . . ಪೇಟಿಸ್ಕೊಡೆ (ಪಂಪಭಾ. ೬-೯೪) ; ತತ್ಪಾದಪದ್ಮೋಪಜೀವಿ ಲೆಂಕ ಬೇಣಯ್ಯಂ (ಎಪಿಕ. XI-i, ೩೦-೦೩; 1005); ಓಡುವಾತ ಲೆಂಕನಲ್ಲ ಬೇಡುವಾತ ಭಕ್ತನಲ್ಲ (ಬಸವ. ೪೯೦). ಸ್ವಾಮಿ ನಿಮ್ಮಡಿಯ ಲೆಂಕರ ಪರಮ ಲೆಂಕನೆನಗೀ ಮಾತದೇಕೆ (ತಿರುಪ್ಪ. ೩-೩೨). ೨. ಕಿಂಕರ ; ಭಕ್ತ . ಲೆಂಕನಾಗಲಿ ಕಿಂಕರನಾಗಲಿ ಶರಣನಾಗಲಿ ಸಕಳೇಶ್ವರದೇವರಾರ ಮನದಲ್ಲಿ ಹೋಗಿದ್ದಾನೆಂದಱಿಯಬಾರದು (ಸಕಲೇಶ ೦೦-೯೩) ; ಲೆಂಕರ ಬಗೆದಾವರೆಯೊಳ್ ಜಂಕದೆ ನೆಲಸಿರ್ಪ ದೇವಂ (ಶೀಕುಪುಂ II, ೩) ; ಇಂಥ ಲೆಂಕನ್ನ ದೇವರು ಕೈ ಬಿಡೋದಿಲ್ಲ (ಜನಪ. ೦೮೯).

[ದೇ.ಶ ತುಳು. ಲೆಂಕೆ ; ತೆಲು. ಲೆಂಕ, ಲೇಕ ]

**ಲೆಂಕತನ** (ನಾ). ದಾಸತ್ವ ; ಸೇವಕತನ : ನಿಮ್ಮ ಅಂಕೆಗೆ ಅಳುಕಿಗೆ ಶಂಕಿಸಿದೆನಾದರೆ ಎನ್ನ ಲೆಂಕತನಕ್ಕೆ ಹಾನಿ (ಬಸವ. ೭೨೯). [ಲೆಂಕ + – ತನ]

**ಲೆಂಕದಂಡ** (ನಾ). ಲೆಂಕರ ವರ್ಗದ ಜನರಿಗೆ ಅಧಿಕಾರಿಯಾದವನು : ಸೇವಕರ ಮುಖ್ಯಸ್ಥ (?): ಪ್ರಧಾನರುಂ ಪರಿಚಾರಕರುಂ ವೆರ್ಗಡೆಗಳುಂ ಲೆಂಕದಂಡರುಂ ಸಾಮಂತರುಂ . . . ವೆರ್ಚಿ ಮೇಗುಮೆಯ್ಯಱಿಯದಂತೆ ರಾಗಿಸಿ ತಮ್ಮೊಳಿಂತೆಂದರ್ (ಧರ್ಮಾಮೃ. ೬-೩೦೩). [ಲೆಂಕ + ದಂಡ]

**ಲೆಂಕವಳಿ, ಲೆಂಕವಾಳಿ** (ನಾ). =ಲೆಂಕತನ: ಲೆಂಕವಳಿಯೊಳು ವೀರತನಂ ತನಗೆನಿಸಿ ಬೀ[ರ] ಡೊಂಗಿನ ಬಸವಂ ಕೊಟ್ಟು ಪಡೆದ[ಂ] ಸಗ್ಗದ ಸುಖವನು (ಮೈ.ಆರ್. ೦೯೯೩, ೩೩-೩ ; 1217). **ಲೆಂಕವಾಳಿ** : ಕನ್ನೆಯನಾಯಕಂ ಭಯಂಕರ ಗರುಡಂಗೆ ಮಾರ್ಮಲೆದು ಹೊಯ್ಯುಮಾರ್ದಪ್ಪಿ ನಿಮಿರ್ಚಿ ತೋಱಿದ ಬಿರುದರ ಗೋವನುರ್ವರಗ ಸೋಮನೃಪಾಳನ ; ಲೆಂಕವಾಳಿಯುಂ (ಎಪಿ. I೪, ಕೃಷ್ಣರಾ. ೯-೭೨ ; 1257). [ಲೆಂಕ + — ವಳಿ₃]

**ಲೆಂಕವಾಳ** (ನಾ). = ಲೆಂಕ ೧ : ಲಿಂಗೋಪಜೀವಿಗಳುಂ ಮಾಸವಾಳರುಂ ಲೆಂಕವಾಳರುಂ . . . ಈಯುವಸರ್ಪಿಣಿಯೊಳಾಚಾರ್ಯರ್ಕಲ್ಪಿಸಿದ ನಿರವದ್ಯಚರಿತರಪ್ಪ ಪಂಚಮಜಾತಿಯುಂ ಕಥಂ ಚಿದ್ದಾನಂಗೊಡಲು ಯೋಗ್ಯರಕ್ಕುಂ (ಚಾರ. ೬೨೦). [ಲೆಂಕ + – ವಾಳ₃ (<–ವಳ)]

**ಲೆಂಕವಾಳಿ** 'ಲೆಂಕವಳಿ' ನೋ.

**ಲೆಂಕಿ₁, ಲೆಂಗಿ** (ನಾ). ೧. ಸೇವಕಿ ; ದಾಸಿ : ಲೆಂಕದಂಡರುಂ ಸಾಮಂತರುಂ ಪೌರರುಂ ಲೆಂಕಿಯರುಂ . . . ರಾಗಿಸಿ ತಮ್ಮೊಳಿಂತೆಂದರ್ (ಧರ್ಮಾಮೃ. ೬-೩೦೩). ೨. (ಸ್ವಾಮಿನಿಷ್ಠನಾದ) ಸೇವಕನ ಹೆಂಡತಿ : ಲೆಂಕರೊಡನೆ ಸಹಗಮನ ಮಾಡಲು ಲೆಂಕಿಯರು ಸಿದ್ಧರಾಗುತ್ತಿದ್ದರು (ಕನಾಶಿ. ೩೦೦). **ಲೆಂಗಿ** : ೧. ಒಕ್ಕುದ ಮಿಕ್ಕುದನುಂಡು ಕಿವಿವಿಡಿದಾಡುವೆ ಶರಣರ ಮನೆಯ ಲೆಂಗಿಯು ಡಂಗರಿಗ ನಾನು (ಬಸವ. ೯೬೦). [ಲೆಂಕ + – ಇ₂]

**ಲೆಂಕಿ₂, ಲೇಕಿ** (ನಾ). ೧. ಒಂದು ಬಗೆಯ ಧಾನ್ಯ : ಜೋಳ ಲೆಂಕಿ ಬಟ್ಟಗಡಲಿ ಕರಿ ಹೆಸರು ಮೊದಲಾದವುಗಳನ್ನು ಕೂಡಿಸಿ ಬಿತ್ತಬೇಕು (ಕೃಷಿಶ. ೬೦). ಲೇಕಿ: ೨. ನೆಲದ ಮೇಲೆ ಬಿದ್ದಿರುವ ಕಾಳು. – ಧಾನ್ಯ: 'ಲೇಕಿಗೆ' ಪರಾ. [– ತೆಲು. ಲೇಕಿ]

**ಲೆಂಕಿತಿ** (ನಾ). ೧. ಸೇವಕಿ; ದಾಸಿ: "ಅಸಿಕ್ಕಿ ಎಂಬುದು ಲೆಂಕಿತಿ" (ಪದಾರ್ಥಚು. ೩೦-೩೩೭). ೨. = ಲೆಂಕಿ₁ ೨ : ಲಖಿಯ ನಾಯಕಂ ತಂನ ಹೆಂಡತಿ ಗಂಗಾದೇವಿಯುಂ ಅಯ್ವರು ಲೆಂಕರು ಮೂವರು ಲೆಂಕಿತಿಯರುವೆರಸಿ ಬಾಸೆಯಂ ಪೂರೈಸಿದನು (ಎಪಿ. VI (R), ಕೃಷ್ಣರಾ. ೬೯-೩೭ ; 1291).

[ಲೆಂಕ + – ಇತಿ₁ (<–ಇತ್ತಿ)]

**ಲೆಂಕೆ** (ನಾ). ಸೇವಕಿ ; ದಾಸಿ : ಲೆಂಕೆಯನೊಕ್ಕಲಿಕ್ಕುವವೊಲಬ್ಧಿಜೆ ಲಂಕೆಯನೊಕ್ಕಲಿಕ್ಕಿ ಕೀಟಿಸ್ಕಿಂ ಕಡುಪಿಂ ತ್ರಿಕೂಟಗಿರಿಯಂ (ಶಂಗಾಪು. ೦೦-೩೩). [ಲೆಂಕ + – ಎ₂]

**ಲೆಂಗಣೆ** (ನಾ). ಜಿಗಿತ ; ಹಾರುವಿಕೆ : ಮೃಗದ ಲೆಂಗಣೆ ಸೋಗೆಯಾಟದ ಸೊಗಸುಗಳನ್ನು ನೋಡುತ (ಕಂಠ. ೨೦-೦೦). [< ಲಂಘನೆ]

**ಲೆಂಗಿ** ' ಲೆಂಕಿ₁' ನೋ.

**ಲೆಂಡ** ' ಲಂಡ₁' ನೋ.

**ಲೆಂಡತನ** ' ಲಂಡತನ' ನೋ.

**ಲೆಂಡು** ' ಲಂಡ₁' ನೋ.

**ಲೆಂಡೆ** ' ಲಂಡೆ ' ನೋ.

**ಲೆಕ್ಕ₁** ' ಲಕ್ಕ₂' ನೋ.

**ಲೆಕ್ಕ₂, ಲೆಖ್ಖ** (ನಾ). ೧. ಎಣಿಸುವುದು; ಗಣನೆ : ನುಡಿಯಲಕ್ಕುಮೆ ಪೂಗಳ ಲೆಕ್ಕಮಂ (ಅಂಪು. ೦೦-೦೦೩); ಕ್ಷಿತಿಯಂ ಶೋಧಿಸಲಕ್ಕು ವೀಚಿಗಳ ಲೆಕ್ಕಂ ಮಾಡಲಕ್ಕು . . . ಸತಿಯಾ ಚಿತ್ತವಭೇದ್ಯಮೈ (ಸೋಮೇಶ. ೬೦); ಕರ್ಣ ದ್ರೋಣರುಗಳ ತಱಿವಾಯ ಲೆಕ್ಕಕ್ಕೆ ಸಂದನೈ (ಕುವ್ಯಾ.ಸ. ೨೦-೩೩); ಸರೆ ಚಿತ್ರಗುಪ್ತರ ಲೆಕ್ಕವ ಟಕ್ಕರಿಗೆಳೆದು ಲೆಕ್ಕದೆ ಶೂರರೆನಿಪ ಲುಳಿಯಲಿ ವಾಚಿಸುತಿಹ ಕರಣಿಕಕುಲತಿಲಕರ ಗೃಹವಿರುತಿಹುವು (ಕೆಂಪಿ. ೬-೯೪). ೨. ಸಂಖ್ಯೆ; ಅಂಕಿ : "ಅಂಕಿ ಸಂಖ್ಯೆಯೆನೆ ಲೆಕ್ಕಮಕ್ಕು" (ಕುಂಗನಾ. ೦೦೯-೦೦); ಗುಣಾರ್ಣವನೆಂಬ ಲಕ್ಕ ಲೆಕ್ಕದೆ ಕೊಳೆ (ಪಂಪಭಾ. ೬-೨೦); ಬರೆದಿಯ್ದಱ ಲೆಕ್ಕಮನಾದರದಿಂ ಗುರುಲಘುವಿಭೇದಮಂ ಭಾವಿಸು ನೀಂ (ಛಂದೋಂಬು. ೦-೩೩); ಪಟ್ಟಣದ ಧರ್ಮ್ಮಕ್ಕೆತಕ್ಕೆ ಬಿಟ್ಟ ಮತ್ತರು ಪನ್ನೆರಡು ಲೆಕ್ಕದೊಳಂ ೧೨ (ಎಪಿಕ. IX-i, ೦೩೦-೦೯; 1070); ಕುದುರೆಯ ಗಜ ರಥವ ಭೂಪಾಲರಳಿದುಳಿದವರ ಲೆಕ್ಕವನೈದೆ ವಿಸ್ತರಿಸಿ (ಕುವ್ಯಾ.ಸ. ೦-೦೭). ೩. ಅಂಕಗಳಿಂದ ಮಾಡುವ ಗಣಿತ; ಅಂಕಗಣಿತ : ತರ್ಕವ್ಯಾಕರಣಾಗಮ ಕಾವ್ಯ ಛಂದಸ್ಸು ಲೆಕ್ಕವಾದಿಯ ವಿದ್ಯೆ (ರಾಜಾಬು. ೦-೩೩); ಒಬ್ಬ ಹುಡುಗ ಪುಸ್ತಕದಲ್ಲಿನ ಲೆಕ್ಕಗಳನ್ನು ಮಾಡುವುದನ್ನು ಬಾಯಿಪಾಠ ಮಾಡಿದ್ದನು (ಶ್ಯಾಮೀರ. ೨). ೪. ಆಯವ್ಯಯ; ಜಮಾಖರ್ಚು : ಲೆಕ್ಕಗಳನ್ನು ಬರೆಯುವ ಪ್ರವೃತ್ತಿಯಿರುವ ತರುಣನನ್ನು ವ್ಯವಸಾಯ ಮಾಡುವಂತೆ ನಿಯೋಜಿಸುವುದು ಯುಕ್ತವಲ್ಲ (ಕ್ರಿಯಾಶಿ. ೯೩). ೫. ವ್ಯವಹಾರದಲ್ಲಿ ಬರೆದಿಡುವ ಕೊಳುಕೊಡೆಯ ಗಣನೆ.–ಆಯವ್ಯಯದ ಗಣನೆ : ಎಲ್ಲಾ ಕರಣಂಗಳಂ ಕರೆಯಿಸಿ ಭಂಡಾರದ ಲೆಕ್ಕಮಂ ನೋಡಿ (ಚಿಕರ. ೬-೯೯) ೬. ಪರಿಗಣನೆ : ಪೊಟ್ಟಳಿಸಿ ನೆಗಟ್ಟಿಗಾಟಿಸುವ ದುಷ್ಕವಿಯುಂ ಕವಿಯೆಂಬ ಲೆಕ್ಕಮೇ (ಪಂಪಭಾ. ೦-೦೨) ; ಕಾಮೆ ತಮ್ಮ ಮನದೊಳ್ ಸರ್ವಜ್ಞರೆಂದಿರ್ಪ ಕಬ್ಬಿಗರುಂ ಕಬ್ಬಿಗರೆಂಬ ಲೆಕ್ಕದೊಳಗೇಂ ಭೂಭೃತ್ಸಭಾಭೂಷಣಂ (ಅರ್ಧನೇ. ೦-೩೩) ; ಲೆಕ್ಕದಲ್ಲಿ ನೀ ಮೊದಲು ಮಾಡಿದ್ದಲ್ಲದೆ ಒಮ್ಮಾನಕ್ಕೆ ವೆಗ್ಗಳವಾಗಿ ಕೊಡುವರುಂಟೆ (ಪ್ರಭುಲಿಂ. ೬-೦೬೯-೩). ೭. ಲೆಕ್ಕಾಚಾರ; ವ್ಯವಹಾರ : ಲೆಕ್ಕದಲ್ಲಿ ಲೇಪಿತವಾದ ವರಗೇಕೆ ಅಜಾತನ ಸುದ್ದಿ (ಬೋಳಬಸ. ೦೨-೪೪). ೮. (ಅಲಂ) ಅಭಿಪ್ರಾಯ; ಅನಿಸಿಕೆ : ಬೆಸಗೊಳ್ಳ ಗುಣಾರ್ಣವನ ಲೆಕ್ಕ [ಪಾಠಾಂ. ಪಂಕ]ಮಂ

ಪೊಕ್ಕಮುಮಂ (ಶಂಕಕಾ. ೨-೩೩) : ಯುಧಿಷ್ಠಿರನಟಮಟಿಸಿ ತಾ ಚುಕ್ಕಿಗಿಕ್ಕುವ ಲೆಕ್ಕ ಲೇಸಾಯ್ತು (ಕುವ್ಯಾದ್ರೌ. ೨-೩೬). ಲೆಖ್ಖಿ : ೧. ಕ್ಷೋಣಿಯೊಳ್ಪುಗೆಗೊಳ್ವ ಲೆಖ್ಖಿಗಳೆಲ್ಲಮುಜ್ವಳಿಪೊಂದಜೀೞಳ್ ಮೇಣದಂಗಿದವೊಲ್ (ಉದ್ಭಟ. ೩-೦೦೯). ೪. ಲೆಖ್ಖಿಗ ಪಟ್ಟಿಗಳು ತೀವ್ರ ಕಳುಹಿಸಲಿಕ್ಕೆ ಕಲವು ಅಡಚಣೆಗಳಿರುತ್ತವೆ (ಮುಂಬಿಪ್ರಾ. ೨೯ ಕ್ರಿಸ್ತ ಶಖ). ೮. ಆ ಲೆಖ್ಖಿದಿಂದ ಎಲ್ಲಾ ಕೆಟ್ಟು ಹಾಳಾಯಿತು (ಶಾಲಿಮ. ೦೬).

**ಲೆಕ್ಕಕೊಡು, ಲೆಕ್ಕಾಕೊಡು** = ಮಾಡಿದ ಖರ್ಚಿಗೆ ವಿವರವನ್ನು ನೀಡು. –ಕೊಡು : ದೇವರಿಗೆ ಅದರ ಲೆಕ್ಕ ಕೊಡಬೇಕಾದೀತು (ಮುಂಬಿಯ. ೩-೦೮೯); ಯಾರು ಅಡಿ ಆಟಕಾವು ಮಾಡಿ ನಡಸದೆ ಸುಂಕವ ಲೆಕ್ಕಾಕೊಟ್ಟು (ಎಕ. XVI. ೫೪ವಾ. ೬೦-೨೭; 1802). **ಲೆಕ್ಕದಾಳು** = ಎಣಿಕೆಗೆ ಮಾತ್ರ ಇರುವ ಆಳು ; ಕೆಲಸಕ್ಕೆ ಬಾರದವನು : ತುಳಿಲಾಳ್ಗಳಲ್ಲದೆ ರಾಮನ ಪೆಯ್ಗಾವಲೊಳಗಿಲ್ಲ ಲೆಕ್ಕದಾಳುಗಳು (ಕುಂಬಾಶಾಂ. ೯-೦೮). **ಲೆಕ್ಕಪಕ್ಕ, ಲೆಕ್ಕಪೊಕ್ಕ** = ಗಣಿತ, ವ್ಯವಹಾರ ಮುಂತಾದುವು: ಲೆಕ್ಕಪಕ್ಕವನರಿತು ಲೋಕದ ಮಕ್ಕಳಿಗೆ ಮಿಗಿಲಾಗಬೇಕು (ಕೃಷ್ಣಾ.ಕ. ೭-೦೯); ಲೆಕ್ಕಪಕ್ಕಂಗಿಡಲ್ ಕಿಕ್ಕಿರಿದು ಪೊಯ್ದಾಡಿದರ್ (ಶ್ರೀರಾಮಪಾ. ೩೭೦-೯೭); ಸರಕಾರದಿಂದ ಬಿಟ್ಟುಕೊಡುವಂಥಾ ಸೀಮೆ ಲೆಕ್ಕಪೊಕ್ಕವನ್ನು ಬರೆಸಿ (ರಾಜೇಂದ್ರ. ೦೨೨). **ಲೆಕ್ಕಬಿಡಿಸು** = ಸಮಸ್ಯೆಯನ್ನು ಬಿಡಿಸು : ಸನ್ಯಾಸಿಯು . . . ಏಕಾಗ್ರಮನಸ್ಕನಾಗಿ ಲೆಕ್ಕಬಿಡಿಸುತ್ತಿದ್ದನು (ಇಷ್ಟಿ. ೩೯೦). **ಲೆಕ್ಕ ಮಾಡು** = ಗಣನೆ ಮಾಡು ; ಎಣಿಸು : ರಾಜಣ್ಣ ಲೆಕ್ಕ ಮಾಡುವ ವಿಧಾನವನ್ನೆಲ್ಲಾ ತಿಳಿಸಿ ಮೇಲೆ ಬಂದ (ಮರೀ. ೫೮) : ಸ್ವತಂತ್ರವಾಗಿ ಲೆಕ್ಕಮಾಡುತ್ತಿರುವಾಗ ಎಲ್ಲಿ ತಪ್ಪಿರುವೆವೆಂಬುದನ್ನು . . . ಗಮನ ಕೊಟ್ಟಿಲ್ಲ (ಶಿಕ್ಷದ. ೨೬೬). **ಲೆಕ್ಕಹಾಕು** = ೧. ಲೆಕ್ಕವನ್ನು ಮಾಡು ; ಎಣಿಕೆಹಾಕು : ಒಂದುದಿನಕ್ಕೆ ಎಷ್ಟಾಗುವುದೆಂದು ಲೆಕ್ಕಹಾಕಿ ಅದಕ್ಕೆ ಸರಿಯಾಗಿ ನೀವು ಕೊಂಡುಕೊಳ್ಳುವ ಆಹಾರಗಳನ್ನು ನಿಶ್ಚಯಿಸಬೇಕು (ಅಡುಗೆ. ೦೨೩) ; ಅಲ್ಲಿ ಕೂತು ಶಾಂತವಾಗಿ ತಮ್ಮ ಲಾಭ ನಷ್ಟಗಳನ್ನು ಲೆಕ್ಕಹಾಕುತ್ತಿದ್ದರು (ಶಗಹೂ. ೦೦೭). ೨. ಯೋಚಿಸು ; ಊಹಿಸು : ಶಂಕರಪ್ಪ ಲೆಕ್ಕಹಾಕಿದವನಂತೆ ಹೇಳಿದ (ಮಣಿಶ. ೩); ದೇವರಾಜಒಡೆಯರನ್ನು ಸಿಂಹಾಸನದಿಂದ ಕದಲಿಸುವ ಸಮಯ ಸಮೀಪಿಸಿತೆಂದು ಪಂಡಿತನು ಲೆಕ್ಕ ಹಾಕಿದ್ದ (ಕರೀಶ. ೨೨೩).

[<ಸಂ. ಲೇಖ್ಯ. / ಪ್ರಾ. ಲೇಕ್ಖ. / ತುಳು. ಲೆಖ್ಖ ; ತೆಲು. ಲೆಕ್ಕ]

**ಲೆಕ್ಕಂಗೊಳ್, ಲೆಕ್ಕಗೊಳು** (ಕ್ರಿ). ೧. ಲೆಕ್ಕ ಮಾಡು ; ಎಣಿಕೆ ಮಾಡು: ಶಾರ್ದೂಲಾಭೀಲವನಂಗಳೊಳ್ ತಿರಿಪಿದೀಯುರ್ಕೊಂದೆ ಲೆಕ್ಕಂಗೊಳಲ್ ಕಾಲಂ ಸಾಲವೆ (ಶಂಕಕಾ. ೯-೨೨) ; ಲೆಕ್ಕಂಗೊಳೆ ಕೊಂಗಬಲಂ ಲಕ್ಕಂಬರ ಮಿರ್ಪುವೆಂಬರ್ (ಶಶಿವ. ೩-೩೩) ; ಸಂದಾ ಮುನ್ನರ ದೇಗುಲಂಗಳೆನಿತೋ ಲೆಕ್ಕಂಗೊಳಲ್ಬರ್ಕುಮೇ (ಪ್ರಸೂಮ. ೨-೦೦೦). **ಲೆಕ್ಕಗೊಳು** : ೨. (ಆಲಂ) ಭಾವಿಸು ; ವಿಚಾರಿಸು : ಸಿಕ್ಕಿದರು ತಮಗೆಂದು ಮನದೊಳು ಲೆಕ್ಕಗೊಳಲಿಲ್ಲ (ಐತಕ್ಕ. ೪೦-೬೬). [ಲೆಕ್ಕ$_{2}$ + ಕೊಳ್$_{1}$]

**ಲೆಕ್ಕಗೊಳು** ' ಲೆಕ್ಕಂಗೊಳ್ ' ನೋ.

**ಲೆಕ್ಕಣಿ, ಲೇಖಣಿ** (ನಾ). ಮಸಿಯಲ್ಲಿ ಅದ್ದಿಕೊಂಡು ಬರೆಯುವ ಚೂಪಾದ ತುದಿಯುಳ್ಳ ಒಂದು ಸಾಧನ; ಲೇಖನಿ; ಟಾಕು (ಉಕ): "ಲೆಕ್ಕಣಿ(ಲೇಖಣಿ)_ಲೇಖನೀ" (ಕದ್ದಕೋ. ೩೯) ; ಕೆಂಗರಿಗನುದಿರ್ಗರಿಯ ನೆಲರ ಸೀಗುರಿಯಿಂದು ಮರೆತದಂ ಬರೆಯೆ ಲೆಕ್ಕಣಿ ಎಸಗುವನ್ನ (ಗೀರಿಂ. ೨೯-೬೨) : ಅವರು ಯಾವ ಶಿಕ್ಷಕನ ಬಗ್ಗೆಯೂ ಲೆಕ್ಕಣಿ ಎತ್ತಿದವರಲ್ಲ (ರಂಗಕೋ. ೬೦). **ಲೇಖಣಿ** : ಹೆಚ್ಚು ಕಡಿಮೆ ಇಂದಿನ ದಬ್ಬಳದಂತೆ ಇದ್ದುದನ್ನು ಲೇಖಣಿಯಾಗಿ ಬಳಸುತ್ತಿದ್ದರು (ಪ್ರಾಶಿಶಿ. ೩೯) ; ಬರೆಯುವ ಕಾಲದಲ್ಲಿ ನನ್ನ ಲೇಖಣಿ ನಿಲ್ಲಲಾರದು (ಪ್ರಾಸತಿ. ೨). [ಸಂ. ಲೇಖನೀ]

**ಲೆಕ್ಕಣಿಕೆ, ಲಕ್ಕಣಿಕೆ** (ನಾ). ೧. =ಲೆಕ್ಕಣಿ : ತರಲಾಪಾಂಗವಿಲಾಸಸ್ಫುರಿತಮೆ ಲೆಕ್ಕಣಿಕೆಯಾಗೆ ನಲ್ಲಳ್ ಮುನ್ನಂ ಬರೆದತನುಚರಿತವಿನಾಗಳ್ ಬರೆದಂತಿರ್ದಪುದು ಮನ್ಮನಃಪುಸ್ತಕದೊಳ್ (ಅಂಕ್ಷ. ೯-೦೯) ; ಧರೆ ಹಲಗೆ ವೃದ್ಧಿಯಾಮುದು ಧರಣಿಯ ಮೇಲಿರ್ದ ಮರನೆ ಲೆಕ್ಕಣಿಕೆ (ರಂರೋಂಶು. ೦-೩೦ ಕಾಟ) ; ಶರವೊಂದಂ ತೆಗೆದು ನಿಜೋದರದಿಂ ಲೆಕ್ಕಣಿಕೆ ಮಾಡಿ ಗಜಮದ ಮಸಿಯುಂ ತರಿಸಿ ಪತಾಕಾಪಟದೊಳ್ ಬರೆದಟ್ಟಿದನಂಧ್ರನೃಪತಿಗಾಸಿಂಧುಸುತಂ (ಗದಾಯು. ೬-೨) ; ಮಸಿಯಲ್ಲಿ ಬರೆಯುವುದಕ್ಕಾಗಿ ಲೆಕ್ಕಣಿಕೆಯನ್ನು ಬಳಸುತ್ತಿದ್ದರು (ಕನ್ನಸಂ. ೯೯). ೨. ಚಿತ್ರ ಬರೆಯುವ ಸಾಧನ ; ಕುಂಚ : "ಈಷಿಕಾ, ತೂಲಿಕಾ–೨ ಚಿತ್ರ ಬರೆಯುವ ಲೆಕ್ಕಣಿಕೆ" (ಸಿದ್ಧಾಂಶಿ. ೩೦೬). **ಲಕ್ಕಣಿಕೆ** : ೨. ಲಕ್ಕಣಿಕೆಯ ಪಿಡಿದೊಸೆದು ಚಿತ್ರಿಗ ಕಣ್ಣಿಕ್ಕಿ ಬರೆವ ಗಂಡುರೂಪ (ಕುರಾಶಾಂ. ೨೭-೬); ಬಟ್ಟಿತರ ಮಸಿಯು ಗುಳ್ಳಿಯು ಲಕ್ಕಣಿಕೆ ಬಿಳಿಯ ಪತ್ರಂಗಳನು ಪಿಡಿದು (ಪಪಮೋ. ೨೭-೦೯).

[<ಸಂ. ಲೇಖನಿಕಾ]

**ಲೆಕ್ಕತಪಾಸಿಗ** (ನಾ). ಲೆಕ್ಕವನ್ನು ಪರಿಶೀಲಿಸುವವನು ; ಲೆಕ್ಕಪರೀಕ್ಷಕ : ಪ್ರತಿವರುಷವೂ ಲೆಕ್ಕತಪಾಸಿಗರಿಂದ ಎಲ್ಲ ಲೆಕ್ಕಪತ್ರಗಳ ಶೋಧನೆ ನಡೆಯುತ್ತಿತ್ತು (ಕಪಲು. ೫೪); ಲೆಕ್ಕತಪಾಸಿಗರದೊಂದು ವರ್ಗವೆ ನಿರ್ಮಾಣವಾಗಹತ್ತಿದೆ (ಕಕ್ಕಿ. ೬೨). [ಲೆಕ್ಕ$_{2}$ + ತಪಾಸು + –ಇಗ]

**ಲೆಕ್ಕಪತ್ರ** (ನಾ). = ಲೆಕ್ಕ ೫ : ಒಡೆಯರು ಆ ಲೆಕ್ಕಪತ್ರದ ಆಯವ್ಯಯ ಪತ್ರಕದ ಇಲ್ಲವೆ ಲೆಕ್ಕಗಳನ್ನಿಟ್ಟ ಪುಸ್ತಕಗಳ ಬೇಕಾದ ಭಾಗವನ್ನು ನೋಡಬಯಸಿದರೂ . . . ಒದಗಿಸಿಕೊಡುವಂತಿರಬೇಕು (ಕಕ್ಕಿ. ೬೨); ಲೆಕ್ಕಪತ್ರಗಳ ಗೊಂದಲದಿಂದ ಪಾರಾದ ಮೇಲೆ ಮನಸ್ಸು ಶಾಂತಿಯನ್ನು ಬಯಸುತ್ತಿತ್ತು (ಮರೀ. ೨೪). [ಲೆಕ್ಕ$_{2}$ + ಪತ್ರ]

**ಲೆಕ್ಕಪರೀಕ್ಷಕ** (ನಾ). = ಲೆಕ್ಕತಪಾಸಿಗ : " ಕರಣಿಕ, ಲೆಕ್ಕಿಗ . . . ಲೆಕ್ಕಪರೀಕ್ಷಕ " (Accountant. ಇಂಕಿ). [ಲೆಕ್ಕ$_{2}$ + ಪರೀಕ್ಷಕ]

**ಲೆಕ್ಕಮಿಡು, ಲೆಕ್ಕವಿಡು** (ಕ್ರಿ). ೧. ಗಣನೆ ಮಾಡು ; ಎಣಿಕೆಹಾಕು : ಅನಿತಿನಿತೆಂದು ಲೆಕ್ಕಮಿ[ಶಾಶಾಂ.ವಿ]ಡಲಾನಜೀಯಿಂ ಬನಮಂ ಲತಾನಿಕೇತನ ಕೃತಕಾದ್ರಿಯುಂ ಪುಳಿನಮಂ ಕೊಳನಂ (ಮಲ್ಲಿಕೃ. ೨-೯೩) ; ಅಲ್ಲಿಯ ಸಾರಮಪ್ಪ ಬೆಳಸಂ . . . ಲೆಕ್ಕಮಿಡಲ್ಕಣಮಾಜಿರಂತು ಮತ್ತೆಲ್ಲಮನೆಯ್ದೆ ಲೆಕ್ಕಿಸಿದೊಡಂ ಮನೆಗೆಯ್ದಿ ಸಲಾಜಿರಂತವಂ (ಜಾರಕೃ. ೯-೦೩). **ಲೆಕ್ಕವಿಡು** : ೨. ಲೆಕ್ಕವನ್ನು ಬರೆ ; ಲೆಕ್ಕಾಚಾರವನ್ನು ಲಿಖಿತದ ಮೂಲಕ ಇರಿಸಿಕೊಳ್ಳು : ಅಂಗಡಿಗಳಲ್ಲಿ ಲೆಕ್ಕವಿಟ್ಟುಕೊಂಡು ಸಾಮಾನುಗಳನ್ನು ಕೊಳ್ಳುತ್ತಾ ಹೋಗುವುದೇನೋ ಸುಲಭ (ಅಡುಗೆ. ೦೨೩).

[ಲೆಕ್ಕ$_{2}$ + ಇಡು$_{1}$]

**ಲೆಕ್ಕವಣಿಗೆ** (ನಾ). ಲೆಕ್ಕದ ವಿವರ ; ಲೆಕ್ಕಾಚಾರ : ತಂದೊಡಮೆಯಿಂ ದಿದಿರೊಳ್ ಪಿಡಿದಂಗಜಂಗೆ ಲೆಕ್ಕವಣಿಗೆದೋಱುವಂತೆಸೆದು ತೋಱಿದುವಂದಿನ ಬಂದ ಮಾವುಗಳ್ (ಅಕ್ಷ. ೬-೨೯). [ಲೆಕ್ಕ + – ವಣಿಗೆ]

**ಲೆಕ್ಕವಲಗೆ** (ನಾ). ಲೆಕ್ಕ ಬರೆಯುವ ಹಲಗೆ,— ಫಲಕ : ಅದಱಿಂದೊಳಗೆ ಪೂರ್ವಾಪರದಿಗ್ಭಾಗದ ಸಮಭೂತಳಪ್ರದೇಶದೊಳಪೂರ್ವಶಿಲ್ಪಿಕೃತಮಪ್ಪ ಲೆಕ್ಕವಲಗೆಯುಂ ಕಾಡಿಗೆಯೊಳ್ ಪುಟ್ಟಿಸಿ ಪೊಟ್ಟಿಗವಡಿಕಿಯೊಳೊರಸಿದಂತೆ ಮಿಂಚಿ . . . ವಾಹಳಿಗಳ್ ಮನೋಹರಂ (ಶಾಂತಿಪು. ೯-೦೧೩ ವ).

[ಲೆಕ್ಕ$_{2}$ + ಪಲಗೆ]

**ಲೆಕ್ಕವಿಡು** ' ಲೆಕ್ಕಮಿಡು ' ನೋ.

**ಲೆಕ್ಕಾಚಾರ, ಲೆಕ್ಖಾಚಾರ, ಲೆಖ್ಖಾಚಾರ** (ನಾ). ೧. ಎಣಿಸುವುದು ; ಲೆಕ್ಕಮಾಡುವುದು : ನಮ್ಮ ನಮ್ಮ ಜಮ – ಖರ್ಚಿನ ಪುಸ್ತಕದಲ್ಲಿ ಲೆಕ್ಕಾಚಾರ ಸರಿಹೂಗಿರುತ್ತದೆ ! (ಹೀರಹೊ. ೫೬) ; " ಕೊಳ್ಳುವುದಕ್ಕೆ ೧೦.೦೦೦, ರಿಪೇರಿಕೆಲಸಕ್ಕೆ.೧೦.೦೦೦ " ಎಂದು ಏಜೆಂಟ್ ಹೇಳಿದಾಗ

ಆ ಲೆಕ್ಕಾಚಾರ ಸರಿಯಾಗಿಯೇ ಕಂಡಿತು (ಯೋರವು. ೨೩). ೨. ನಿಶ್ಚಿತವಾದುದು; ನಿಖರವಾದುದು : ಕಾಲೋಚಿತಸನ್ಮಾರ್ಗದಲ್ಲಿ ನಡೆದವರಿಗೆ ಒಳ್ಳೆಯ ಫಲವು ದೊರೆಯುವುದು ಲೆಕ್ಕಾಚಾರ (ಯುಕ್ತಕ್ರ. ೦೬.೨) ; ಅವನು ಆಡುವ ಮಾತೆಲ್ಲ ಲೆಕ್ಕಾಚಾರದ ಮಾತು (ರೂಢಿ). **ಲೆಕ್ಕಾಚಾರ** : ೨. ನಮ್ಮ ಗ್ರಾಮದ ಹಣ ಲೆಕ್ಕಾಚಾರ ಪ್ರಕಾರ ಕೊಡಿಯಂತ ಕೇಳಿದಲ್ಲಿ (ಎಕ. VIII. ತಾಸ. ೯೬-೦೫; 1646 ?). **ಲೆಖ್ಖಾಚಾರ** : ೧. ಅವನು ತನ್ನ ಲೆಖ್ಖಾಚಾರದಿಂದ ಕ್ರಿ. ಪೂ. ೫೮೫ರಲ್ಲಿ ನಡೆದ ಗ್ರಹಣ ಒಂದನ್ನು ಕುರಿತು ಭವಿಷ್ಯ ನುಡಿದಿದ್ದನಂತೆ (ಕಕ್ಷಶಾ. ೪).

**ಲೆಕ್ಕಾಚಾರಮಾಡು, ಲೆಖ್ಖಾಚಾರಮಾಡು** = ೧. ಎಣಿಸು ; ಲೆಕ್ಕಮಾಡು : ಅಯನಸಂಚಲನ(Angle of Position)ವನ್ನು ಲೆಕ್ಕಾಚಾರ ಮಾಡಲು ಅವನು ಅದನ್ನು ಉಪಯೋಗಿಸಿದ್ದಾನೆ (ಕಕ್ಷಶಾ. ೪೭೭). ೨. ಪೂರ್ವಾಪರವನ್ನು ಪರಿಶೀಲಿಸು ; ಆಲೋಚಿಸು : ಮಗನಿಗೆ ಮದುವೆ ಮಾಡಬೇಕೆಂದು ಯೋಚಿಸಿದರೆ ತಮಗೆ ಪತ್ರಿರದ ನೆಂಟೂ ಗಂಟೂ ಉಳಿಯುವುದನ್ನೆಲ್ಲಾ ಲೆಖ್ಖಾಚಾರವಮಾಡಿ ಆಮೇಲೆ ಜೋಯಿಸರಲ್ಲಿ ಹೆಸರು ಬಲ ಕೇಳುವರು (ಹುಟ್ಟಿಹ. ೦೦). **ಲೆಕ್ಕಾಚಾರಹಾಕು** = ಆಲೋಚಿಸು; ಯೋಚಿಸು : " ಎಂದುಕೊಂಡಳು ತನ್ನಲ್ಲೇ, ಮನಸ್ಸಿನಲ್ಲಿ ಏನೇನೋ ಲೆಕ್ಕಾಚಾರ ಹಾಕಿಕೊಳ್ಳುತ್ತ (ಜೊಕಸ್ವಿ. ೦೭). [ಲೆಕ್ಕ₂ + ಆಚಾರ]

**ಲೆಕ್ಕಿ** 'ಲೊಕ್ಕಿ₁' ನೋ.

**ಲೆಕ್ಕಿಗ** (ನಾ). ೧. ಲೆಕ್ಕ ಬರೆಯುವವನು ; ಕರಣಿಕ : ಲೆಕ್ಕಿಗಂ ನಡೆನಡೆದು ಕರಣಸಾಲೆಗೆ ಬಂದು ಕುಳ್ಳಿರ್ದು (ಬಸರ. ೩-೩೦); ಜೋಯಿಸಿಗಂ, ಲೆಕ್ಕಿಗಂ (ಕಶಬ್ದ. ೦೯೭ ಪ್ರಯೋ) ; ಆ ಕಿರಾತನು ತನ್ನ ಕೆಳದಿಗೂಡಲಿಯ ಲಾಗವರ ಎಳದೊಯಿದಿರಿಸಲಾಗೆಮಧರ್ಮಗುಪುರ್ದರು ತಳು ಮಾಡದಾಗ ಲೆಕ್ಕಿಗರು (ಪಪ್ಪಕಾ. ೦೨-೩೦) ; ಆ ಸಂಸ್ಥೆಯ ಲೆಕ್ಕಿಗರು ಈ ಎರಡೇ ವರುಷಗಳ ಅಂಕಿಗಳನ್ನಿಟ್ಟಿದ್ದಾರೆ (ಕಳ್ಳಡಿ. ೬೦). ೨. ಜೋಯಿಸ ; ಜ್ಯೋತಿಷಿ : " ಕಲತೆ=ಜೀವಿಗಳ ಆಯುಷ್ಯಮಂ ಎಣಿಸಿದಪಂ . . . ಲೆಕ್ಕಿಗಂ " (ಕಾಕಳ್ಯ. ೦೦೪).

**ಲೆಕ್ಕಿಗರ ಪಿರಿಯ** = ಕರಣಿಕರಲ್ಲಿ ಶ್ರೇಷ್ಠನಾದವನು : ಲೆಕ್ಕಿಗರ ಪಿರಿಯನೆನಿಪಾಂಡಯ್ಯಂ (ಕಬ್ಬಿಕಾ. ೪). **ಲೆಕ್ಕಿಗರರಸ**=ಲೆಕ್ಕಿಗರ ಪಿರಿಯ : ಒಪ್ಪುವ ಲೆಕ್ಕಿಗರರಸನೊಗೆದನೆಸೆವಾಂತಯ್ಯಂ (ಕಬ್ಬಿಕಾ. ೦೦) ; ಲೆಕ್ಕಿಗರರಸನಂತೆ ಇವನು ! ಕರಣಿಕಾಗ್ರಣಿಯಂತ ! (ಕುಂಗಕ. ೦೯).

[ಲೆಕ್ಕ₂ + – ಇಗ]

**ಲೆಕ್ಕಿಸು₁** 'ಲಕ್ಕಿಸು' ನೋ.

**ಲೆಕ್ಕಿಸು₂** (ಕ್ರಿ). ಎಣಿಕೆ ಮಾಡು ; ಲೆಕ್ಕ ಹಾಕು : " ಎಣ್ಣನೆ ಲೆಕ್ಕಿಪುದುಂ " (ರಪ್ಪಕಂ. ೬) ; ಮೇಣಲಸದೆ ಲೆಕ್ಕಿಸುತುಂ ಸಿಳ್ಳೆಲೆಯಂ ಮಸರ್ಗೊಂಡು ಪಜಿಂದೊಡಾದುವು ಕಿಡುಗುಂ (ರೋಕೆಆಶ. ೯-೨೭) ; ಗಣಕರು ಲೆಕ್ಕಿಸಲಾಜದೆ ಬೆಜಗಾಗೆ (ಬಸರ. ೮-೦೨೭) ; ಲೆಕ್ಕಿಪರಾರು ಕಲ್ಲರೆಗಳ (ವೀರಹಕ. ೦೯-೬೪). [ಲೆಕ್ಕ₂ + – ಇಸು₁]

**ಲೆಕ್ಕಾಚಾರ** 'ಲೆಕ್ಕಾಚಾರ' ನೋ.

**ಲೆಖ್ಖ** 'ಲೆಕ್ಕ₂' ನೋ.

**ಲೆಖ್ಖತನಿಖೆ** (ನಾ). ಲೆಕ್ಕದ ಪರಿಶೀಲನೆ,—ತಪಾಸಣೆ : ಭಾರತದ ಹಣಕಾಸಿನ ಆಡಳಿತಾಧಿಕಾರ – (Controller)' ಮತ್ತು ಲೆಖ್ಖತನಿಖೆ ಅಧಿಕಾರಿ . . . ಇವರ ಅಧಿಕಾರ . . . ಈ ಎಲ್ಲ ವಿಷಯಗಳ ಮೇಲೆ ರಾಜ್ಯಾಂಗ ರಚನೆಯಾಗಿದೆ (ಏಳ್ಳಿಕ. ೦೨೭). [ಲೆಖ್ಖ (< ಲೆಕ್ಕ₂) + ತನಿಖೆ]

**ಲೆಖ್ಖಾಚಾರ** 'ಲೆಕ್ಕಾಚಾರ' ನೋ.

**ಲೆಗ್ಗೆ** 'ಲಗ್ಗೆ' ನೋ.

**ಲೆಟಗೆ** 'ನೆಟ್ಟಿಕೆ' ನೋ.

**ಲೆಡ್ಜರ್** (ನಾ). ೧. ವ್ಯಾಪಾರ, ವ್ಯವಹಾರಗಳ ಲೇವಾದೇವಿಯ ಲೆಕ್ಕಗಳನ್ನು ಬರೆದಿಡುವ ಪುಸ್ತಕ ; ಮುಖ್ಯಲೆಕ್ಕದ ಪುಸ್ತಕ ; ವರ್ಗ ; ಹಣಕಾಸಿನ ದಾಖಲೆ : ಲೆಡ್ಜರ್ ಬರೆಯುವ ಅವಾಂತರದಲ್ಲಿ ಕಾಗದವನ್ನು ಒಡೆದು ಓದಿಕೊಂಡ (ಕಾಯಿಕ. ೦೭). ೨. ಒಂದು ಬಗೆಯ ಅಳತೆಯ ಕಾಗದ : ಯಂತ್ರದಲ್ಲಿ ಕಾಗದವನ್ನು ತಯಾರಿಸುವಾಗ 'ಸೈಜ್' ಅನ್ನು ಸೇರಿಸಿ ಬಾಂಡ್, ಲೆಡ್ಜರ್, ಇಂಡೆಕ್ಸ್ ಮೊದಲಾದ ಕಾಗದಗಳನ್ನು ತಯಾರಿಸುವರು (ಕುಂದ್ರಕ. ೬೦). [← ಇಂ. Ledger]

**ಲೆತ್ತ** 'ನೆತ್ತ₁' ನೋ.

**ಲೆಪ್ಪ** (ನಾ). ೧. ಬಳಿಯುವಿಕೆ ; ಲೇಪನ : " ಲೆಪ್ಪ ಮೊದಲಾಗುಳ್ಳ ಕೆಲಸಮುಂ (ಹ)ಪುಸ್ತಕರ್ಮ ಎಂಬುದು " (ಶಲಾಯು. ೯೭-೪೩೭) ; ಲೆಪ್ಪದ ಬೊಂಬೆಯನೆರಕಂಬೊಯ್ದೊಪ್ಪಂಬೂಸಿದ ಪುತ್ತುಟಿಯಂ ಬೇಟಾಗಿ ತೋಱುಗುಮಲ್ತೆ (ರಾಜಶಾಕ. ೦೦-೦೯). ೨. ಬಳಿಯುವ ದ್ರವ; ಲೇಪನ ಸಾಮಗ್ರಿ : "ಲೆಪ್ಪಮೆನೆ ಲೇಪ್ಯಂ" (ಕಚಿ. ೯೬); ಇಲ್ಲಿಯ ಚಿತ್ರದ ಲೆಪ್ಪದ ಕಾಷ್ಠಕರ್ಮದ ರೂಪುಗಳೊಳೆಲ್ಲಂ (ಪಪ್ಪಕಾ. ೩೩-೭); ಇರುಳ ಲೆಪ್ಪವ ತೊಡೆದ ಕಾಳೋರಗನ ಮನೆಯೊ (ಹಕಶಾ. ೫-೦೭); ಒಪ್ಪಗೆಟ್ಟಾಬುದರುಶನದ ಗತಿ ಮಿತಿವಿಡಿಯ ಲೆಪ್ಪದಲಿ ಸನೆವ ಬಹುಭೂಷಿಯುಳ್ಳ (ಶಿವಗೀ. ೩೬-೨೭೩). ೩. ವಿಗ್ರಹಾದಿಗಳನ್ನು ಮಾಡಲು ಉಪಯೋಗಿಸುವ ಎರಕ : ರುಕ್ಮಿಣೀ ರಮಣಿ ಲೆಪ್ಪದ ಕಲ್ಲ ಪೆಣ್ಣ ರೂಪೆನೆ ಮರವಟ್ಟಳ್ (ಜಗಿ. ೦೦-೬೭); ಒಪ್ಪಿದಳ್ ಲೆಪ್ಪದ ಕರುವಿನವೋಲ್ (ದಕಳು. ೬-೯೨). ೪. ಮಣ್ಣು, ಮೇಣ, ಎರಕ ಮೊದಲಾದುವುಗಳಿಂದ ಮಾಡಿದ ಗೊಂಬೆ,—ಪ್ರತಿಮೆ : ಸಹಜಮಪ್ಪ ಕಾಂತಿಯೊಳೊಪ್ಪಲ್ಪಡೆದು ಲೆಪ್ಪದಂತಿರ್ದ ಮಗನಂ ಗೆಂಟಿನೊಳೆ ಕಂಡು (ಕಾರಂಕಾ. ೬೭೨); ಇದು ಭೂಪನ ರೂಪಿದು ಲೆಪ್ಪದ ರೂಪೆನಲೆಂತುಮಬಿಯಲರಿದು (ಶಂಗಪು. ೩-೨೬); ಲೆಪ್ಪದುರಗನ ಹಿಡಿವಪೇತಕೆ ಗರುಡಮಂತ್ರವು (ಕುಪ್ಪಾಡ್ರೆ. ೪-೩೯); ಸುರಗಿಯಿಂದಾ ಲೆಪ್ಪದರಸನ ಉರವನಿರಿದಿಂಟಿದಳು ಮಿಗೆ ನೆತ್ತರನು (ಶಾಳ್ಯಕಾ. ೦೯-೪೯). ೫. (ಆಲಂ) ಸಂಬಂಧ : ಇಂತೀ ಜೀವದ ದೃಷ್ಟವ ಕಡು ಎನಗಿದೆತ್ತಳ ಸರ್ವಜೀವದಯ ಈ ರಕ್ತವ ಲೆಪ್ಪವ ಬಿಡಿಸಾ ಕಲ್ಲು ಮಣ್ಣು ಮರನಂತೆ (ಸವಚ. ೩೩-೨೯೨). [< ಪ್ರಾ. ಲೇಪ್ಪಾ. / ಸಂ. ಲೇಪ್ಯ]

**ಲೆಪ್ಪಗಾಟಿ** (ನಾ). ಲೇಪಿಸುವವನು ; ಬಳಿಯುವವನು : "ಲೇಪಕಃ, ಪಳಗಂಟಃ—ಈ ೨ ಲೆಪ್ಪಗಾಟಿಂ" (ಶಲಾಯು. ೯೭-೪೩೭).

[ಲೆಪ್ಪ + – ಕಾಟಿ]

**ಲೆಪ್ಪಾಹಾರ** (ನಾ). [ಜೈನ] ಜೈನಾಗಮದಲ್ಲಿ ಹೇಳಿರುವ ಕರ್ಮಾಹಾರ, ನೋಕರ್ಮಾಹಾರ, ಕಬಳಾಹಾರ, ಲೇಪ್ಯಾಹಾರ, ಓಜಾಹಾರ ಮತ್ತು ಮಾನಸಾಹಾರ ಎಂಬ ಆರುಬಗೆಯ ಆಹಾರದ ಪ್ರಕಾರಗಳಲ್ಲಿ ಒಂದು: ವೃಕ್ಷಂಗಳ್ಗೆ ಲೆಪ್ಪಾಹಾರಮಕ್ಕುಂ (ಕ್ಷಾಪಕ. ೭೨-೬) ; ಈ ಗಾಥಾಸೂತ್ರನಿರೂಪಿತಕ್ರಮದಿಂ ನೋಕರ್ಮಾಹಾರಮುಂ ಕರ್ಮಾಹಾರಮುಂ ಕಬಳಾಹಾರಮುಂ ಲೆಪ್ಪಾಹಾರಮುಂ ಓಜಾಹಾರಮುಂ ಮಾನಸಾಹಾರಮುಂ ಮೆಂದವಕ್ಕುಂ . . . ಏಕೇಂದ್ರಿಯನಿಕಾಯಕ್ಕೆ ಲೆಪ್ಪಾಹಾರಮಕ್ಕುಂ (ಕಸಾರ. ೩೦೦). [< ಸಂ. ಲೇಪ್ಯಾಹಾರ ]

**ಲೇ** (ಅ). ಸಂಬೋಧನಾರ್ಥಕ ಅವ್ಯಯ : ಇನ್ನೇನು ಮಾಡಲಿ, ಲೇ (ಪಪ್ಪಕ. ೦೦೨). [ < ಎಲೆ₂ ]

**ಲೇಕಿ** 'ಲೆಂಕಿ₂' ನೋ.

**ಲೇಕಿಗ** (ನಾ). (ನೆಲದ ಮೇಲೆ ಬಿದ್ದಿರುವ) ಕಾಳನ್ನು ಆರಿಸಿಕೊಂಡು ತಿನ್ನುವವನು ; (ನೆಲದ ಮೇಲೆ ಬಿದ್ದಿರುವ) ಧಾನ್ಯವನ್ನು ಆರಿಸಿಕೊಂಡು ಜೀವಿಸುವವನು : ನಿನ್ನ ಪಾಕಶಾಲೆಯಲ್ಲಿ ಬಿದ್ದ ಕಾಳ ರಾಶಿ ತಿಂಬ ಲೇಕಿಗನು (ಶಿಶುಲೀಯ. ೩೦-೦). [ಲೇಕಿ (< ಲೆಂಕಿ₂) + – ಗ₂]

**ಲೇಖ** (ನಾ). ೧. ಬರಹದ ದಾಖಲೆ : ಬರಹ : ಅವರ ಕೈಯೊಳು ಕೊಟ್ಟು ಲೇಖಾರ್ಥವನರಿದು ನೀವನಿಬರುಂ ಹೇಳುವುದೆನಲು (ಬಸಪು. ೩-೩೯); ಮರ ಸುಲಭವಾಗಿ ಒಡೆದು ಹೋಗುವುದರಿಂದಲೂ ಗೆದ್ದಲು ಮುಂತಾದ ಕೀಟಗಳಿಗೆ ತುತ್ತಾಗುವುದರಿಂದಲೂ ದೀರ್ಘಕಾಲ ಇರಬೇಕಾದ ಯಾವ ಲೇಖಕ್ಕೂ ಅದನ್ನು ಭಾರತೀಯರು ಉಪಯೋಗಿಸಲಿಲ್ಲವೆಂದು ತೋರುತ್ತದೆ (ಕನ್ನಸಂ. ೩೭). ೨. ಕ್ರಮವರಿತು ವಿಷಯವನ್ನು ಪ್ರತಿಪಾದಿಸುವ ಬರವಣಿಗೆ : ಲೇಖನ : ಹೀಗೆ ಈ ಎಲ್ಲ ಸಂಗತಿಗಳನ್ನು ಒಟ್ಟುಗೂಡಿಸಿ ಅವಳೊಂದು ಲೇಖ ಬರೆದಳು (ಇಶ್ವ. ೨೩೧); ವೈಜ್ಞಾನಿಕ ವಿಷಯದ ಲೇಖಗಳಿಗೆ ಮೂಲಸ್ಥಾನವೆಂದರೆ 'ಪ್ರಬುದ್ಧ ಕರ್ಣಾಟಕ' (ಸುವರ್ಣ. ೨೦೬) ೩. ಬರವಣಿಗೆ ಅಥವಾ ಚಿತ್ರಲೇಖನಕ್ಕೆ ಉಪಯೋಗಿಸುವ ಹಲಗೆ,-ಲೇಖನ ವಸ್ತು : "ಲೇಖಮೆನ್ನಲಳಕಮುದಕ್ಕುಂ" (ಶಬ್ದ. ೧೧೨). ೪. ದೇವತೆ : "ಆದಿತ್ಯಃ . . . ಲೇಖಃ, ಸುಪರ್ವಾ . . . ದೈವತಂ – ಈ ೨೧ ದೇವರ್ಕಳ ಪೆಸರ್"(ಹಲಾಯು. ೨-೯). ಲೇಖವಲ್ಲಭ' ಪರಾ. [ ಸಂ. ]

**ಲೇಖಕ** (ನಾ). ೧. ಬರೆಯುವವನು; ಲಿಪಿಕಾರ : "ಲೇಖಕಃ, ಲಿಪಿಕರಃ – ಈ ೨ ಲೇಖಕಂ" (ಹಲಾಯು. ೯೭-೯೩೨); ಚರಣಂಗಳ್ನಾಲ್ಕುಅರೊಳಂ ಪರಿಕಿಸೆ ಕರ್ತನಂತೆ ಕವಿಗೆ ಲೇಖಕನಪ್ಪಂಗಿರದಕ್ಕುಮುಪಾಯಂಗಳ್ ಚರಣಾಂತ್ಯದೊಳೊಂದುಮಗೆ ದುಷ್ಕರಮಕ್ಕುಂ (ಛಂದೋಂಬು. ೧-೯೯ ಅವತರ್ನ ೧೭); ಪ್ರತಿಯೊಂದು ಪಂಚಾಯಿತಿಯಲ್ಲಿಯೂ ಗಣಕ, ಲೇಖಕ ಮತ್ತು ಸಾಧ್ಯಪಾಲ ಎಂಬ ಮೂವರನ್ನು ನೇಮಿಸಿರುತ್ತಿದ್ದರು (ಭಾರತ. ೩೭). ೨. ಸಾಹಿತ್ಯದ ಯಾವುದಾದರೂ ಪ್ರಕಾರವನ್ನು ಬರೆಯುವವನು; ಬರಹಗಾರ; ಗ್ರಂಥಕರ್ತ : ಇಷ್ಟು ಅನುಕೂಲವಾದ ರಾಜಮಾರ್ಗ ದೊರೆತ ಮೇಲೆ ಲೇಖಕರು ಉಳಿದ ಪ್ರಯೋಗಗಳ ಹವ್ಯಾಸವನ್ನು ಬಿಟ್ಟುಬಿಟ್ಟರು (ಪಠರಾ. II, ೦೨೯೯). ಓದುಗನಿಗೆ ಲೇಖಕನ ಅನುಭವದ ಆನಂದವೂ ಉಂಟಾಗುತ್ತದೆ (ಸ್ವಶಿಕ್ಷ. ೯).

**ಲೇಖಕಗಿರಿವಜ್ರ** = ಲಿಪಿಕಾರರೆಂಬ ಬೆಟ್ಟಕ್ಕೆ ವಜ್ರಾಯುಧದಂತಿರುವವನು : ಒಂದು ಬಿರುದು : ಬಿರುದ ಲೇಖಕಗಿರಿವಜ್ರಂ ನಾಗದೇವನ ಲಿಖಿತಂ (ಕಇಕ. ೭೦-೨-೦೦೩; 1056). [ ಸಂ. ]

**ಲೇಖಕಿ** (ನಾ). ಸಾಹಿತ್ಯದ ಯಾವುದಾದರೂ ಪ್ರಕಾರವನ್ನು ಬರೆಯುವವಳು,-ರಚಿಸುವವಳು : ರಚನೆಯ ಪ್ರಥಮ ಪ್ರಯತ್ನದ ದೃಷ್ಟಿಯಿಂದ ಲೇಖಕಿಯ ಉದ್ಯಮ ಹೊಗಳತಕ್ಕಂತಹವೇ ಸರಿ (ಇಶ್ವ. ೨೩೨). [ ಲೇಖಕ + – ಇ₂ ]

**ಲೇಖಣಿ** 'ಲೆಕ್ಕಣಿ' ನೋ.

**ಲೇಖನ** (ನಾ). ೧. ಬರಹ; ಬರವಣಿಗೆ : "ಅಕ್ಷರಂ ಲಿಪಿ ಲೇಖನಂ ಬರಹಂ" (ಚುಂಗರಾ. ೦೦೭-೦೭). ೨. = ಲೇಖ ೨ : ಅನೇಕ ಪ್ರಬಂಧಗಳನ್ನೂ ಲೇಖನಗಳನ್ನೂ ಪ್ರಕಟಿಸಿವರು (ಸಸ್ವ. ೯೦); ಶಕುಂತಲೆಯ ವಿಷಯದಲ್ಲಿ ಗಮನಾರ್ಹವೆನಿಸಿದ ಕೆಲವಂಶಗಳನ್ನು ವಿವೇಚಿಸುವುದೇ ಈ ಲೇಖನದ ಉದ್ದೇಶ (ರಮ್ಯ. ೩೭). ೩. ತಾಳೆಗರಿ. [ಸಂ.]

**ಲೇಖನಕಲೆ** (ನಾ). ಅಕ್ಷರವನ್ನು ಸುಂದರವಾಗಿ ಬರೆಯುವಿಕೆ: ಲಿಪಿಶಾಸ್ತ್ರ : ಲೇಖನಕಲೆಯನ್ನು (calligrapny) ಕಲಿಸುವ ಶಾಲೆಗಳೂ ಇದ್ದುವು (ಕನ್ನಸಂ. ೨೦). [ ಸಂ. ಲೇಖನಕಲಾ ]

**ಲೇಖನಪದ್ಧತಿ** (ನಾ). (ಯೋಚಿಸಿದ ವಿಚಾರಗಳನ್ನು) ಬರಹದಲ್ಲಿ ಮೂಡಿಸುವ ಪದ್ಧತಿ : ಪಠನಪದ್ಧತಿ (Oral transmission)ಯಿಂದ ಲೇಖನಪದ್ಧತಿಗೆ (Written transmission) ಆದ ಈ ಪರಿವರ್ತನೆ ಕ್ರಮಕ್ರಮೇಣ ನಡೆದಿರಬೇಕು (ಭಾರಕ. ೨೯). [ಸಂ.]

**ಲೇಖನಶಾಲೆ** (ನಾ). ಬರವಣಿಗೆಯ ಕೋಣೆ : ಸಂನ್ಯಾಸಿ ಲಿಪಿಕಾರರು ತಮ್ಮ ಕೊಠಡಿಯಲ್ಲಿ ಅಥವಾ ಕೋಣೆಯಲ್ಲಿ ಕುಳಿತು ಹಸ್ತಪ್ರತಿಗಳನ್ನು ಬರೆಯುತ್ತಿರಲಿಲ್ಲ . . . ಇವರಿಗೆ ಮಠದಲ್ಲಿ ಪ್ರತ್ಯೇಕವಾದ ಕೊಠಡಿಯೊಂದಿತ್ತು; ಅದನ್ನು ಲೇಖನಶಾಲೆ (scriptorium) ಎಂದು ಕರೆಯುತ್ತಿದ್ದರು (ಕನ್ನಸಂ. ೩೦). [ ಸಂ. ಲೇಖನಶಾಲಾ ]

**ಲೇಖನಸಾಮಗ್ರಿ** (ನಾ). ಬರೆಯಲು ಬೇಕಾಗುವ ಲೇಖನಿ, ಮಸಿ, ಕಾಗದ ಮೊದಲಾದ ವಸ್ತುಗಳು : ಎಲೌ ಸಖಿಯರೆ, ಒಂದು ಗೀತಿಯನ್ನು ಆಲೋಚಿಸಿರುವೆನು ; ಲೇಖನಸಾಮಗ್ರಿ ಸಮೀಪದಲ್ಲಿಲ್ಲವಲ್ಲ ? (ಶಾಕುಂತ. ೩೯-೩). [ಸಂ. ಲೇಖನಸಾಮಗ್ರೀ]

**ಲೇಖನಿ** (ನಾ). = ಲೆಕ್ಕಣಿ : ಬಿಳಿಯ ಕಾಗದ ಹೃದಯ ಬಾಯಿ ಕಲಮದಾನಿ ನಾಲಿಗೆ ಎಂಬೋದು ಲೇಖನಿಯು (ತ್ರಿರಂಗ. ೨-೦೩-೨) ; ಹರಸೊರೆದ ತೆಱದಿ ಭಕ್ತರ ಚರಿತಗಳನುಸುರುತಿರಲೊರ್ವ ಮಾಹೇಶನಲ್ಲವೆನೆ ಕೋಪದಿಂ ಮರವಿರೂಪಾಕ್ಷನಂ ಲೇಖನಿಯೊಳಿಟ್ಟು ಶಿವ ಮತ್ತೆ ಪೇಳ್ದಂತುಸುರಲು (ಗುರುಚಾ. ೦೩-೨೩) ; ರಾಯನ ಕತ್ತಿಯಲ್ಲಿಲ್ಲದ ಬಿಸಿಯು ಪೆದ್ದನ್ನನ ಲೇಖನಿಯಲ್ಲಿ ಆವೇಶಗೊಂಡಿದೆ (ಸಾಹಿತ್ಯ. ೯೦). [ಸಂ. ಲೇಖನೀ]

**ಲೇಖರಿ** (ನಾ). = ಲೇಖಕ ೧ : ತಪ್ಪಿರೆ ತಿದ್ದಲ್ಬಲ್ಲಂ ಒಪ್ಪುವ ಪಳಗವಿಗಳುಸಿರ್ದ ಕನ್ನ(ಡ)ಗಬ್ಬದಿ ತಿಪ್ಪಣಾಖ್ಯಂ ಲೇಖರಿಯಪ್ಪಂ ಸೇನಾನಿ ದೇವರಾಯನಿಕಟದೊಳ್ (ಮಂಡ್ಯ. III, ೩೭೩ ಕ್ರಿ.ಶ.೧೪೩೩೪). [←ತೆಲು. ಲೇಕರಿ]

**ಲೇಖಲಿಪಿ** (ನಾ). ಒಂದು ಬಗೆಯ ಲಿಪಿ : ಚಕ್ರಲಿಪಿ ಲೇಖಲಿಪಿ ದರ್ಪಣಲಿಪಿ . . . ಯಿಾ ಅಗಣಿತಲಿಪಿಗಳನೋದಲರಿಯದೆ . . . ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲ (ಭಾಸ್ಕರ. ೭೭-೩). [ಸಂ.]

**ಲೇಖವಲ್ಲಭ** (ನಾ). ದೇವತೆಗಳ ಒಡೆಯ ; ಇಂದ್ರ : ಕೂಲಿ ಸೂಡಿದ ಪುಷ್ಪಮಾಲೆಯಂ ಮರ್ವಾಸಲೋಲಮುನಿ ಕುಡೆ ಸಿತವ್ಯಾಲಕುಂಭ ಕೈಟ್ಕೊಡಾ ಲೇಖವಲ್ಲಭಸ್ಥೂಲಭಾಗ್ಯಂ ಪೋದ ಕಾಲದೊಳು (ಜಾವತಂ. ೩-೦೯). [ಸಂ.]

**ಲೇಖವಾರ್ತೆ** (ನಾ). ಬರಹದಲ್ಲಿರುವ ಸುದ್ದಿ ; ಪತ್ರದ ಅಭಿಪ್ರಾಯ : ಬಾಹುಬಲಿಕುಮಾರನಲ್ಲಿಗಮಾ ಸ್ಥಿತಿಯೊಳೋಲೆಯುಮಂ ದೂತರುಮನಟ್ಟಿದೊಡೆ ಲೇಖವಾರ್ತಾಕರ್ಣನದೊಳತಿಕುಪಿತನುಂ ಸಮರಸನ್ನದ್ಧನುಮಾಗಿ (ಜಾವುಂಪು. ೯೯) ; ಸೀತೆಯಲ್ಲಿಗೆ ದೂತರನಟ್ಟುವುದೆಂಬ ಲೇಖವಾರ್ತೆಯಂ ಕೇಳ್ದು (ಜಾವುಂಪು. ೩೦೩). [ಸಂ. ಲೇಖವಾರ್ತಾ]

**ಲೇಖವಾಹ** (ನಾ). ಪತ್ರಗಳನ್ನು ಒಯ್ಯುವವನು ; ಪತ್ರವಾಹಕ ; ಓಲೆಕಾರ : "ಲೇಖವಾಹಂ ದೂತಂ" (ಪಸ್ತುಕೋಶ. ೩೦-೩೮) ; ಅಂದಿದಿರೊಳೆ ಲೇಖವಾಹನಿವಹಂ ಬರೆ ಕಂಡನಿಳಾಧಿನಾಯಕಂ (ಗಾದಂಬ. ೩೩೩) ; ಉಡೆದೋಲುಂ ಪಣೆಕಟ್ಟುಂ ಮಡಮೋಚಿಸಿ ಮೆಟ್ಟಿದೆಕ್ಕಮಡಮುಂ ಕಯ್ಯೊಳ್ ಪಿಡಿದಿರ್ದ ಕುಂಚಮುಂ ತನಗೊಡಂಬಡಂಬಡೆಯೆ ಲೇಖವಾಹಾಕೃತಿಯೊಳ್ (ಪರ್ಗವು. ೨-೯೩). [ಸಂ.]

**ಲೇಖವಾಹಕ** (ನಾ). = ಲೇಖವಾಹ : ಲೇಖವಾಹಕರ್ ತ್ವರಿತಗತಿ ಸಮೇತಂ ರಾಜಾಧಿರಾಜಂಗೆ ಕೃತಪ್ರಣಾಮರಾಗಿ (ಗಾದಂಬ. ೩೩೯); ಜನಕಂ ದಶರಥನಲ್ಲಿಗೆ ಲೇಖವಾಹಕರನಟ್ಟೆ (ಕಂಠಾವು. ೪-೯೨ ವ) ; ಲೇಖವಾಹಕರಂ ಶತಮುಖನಲ್ಲಿಗೆ ಕಳುಪುವುದುಂ (ಚಂದ್ರಪ್ರ. ೧೩-೩೩ ವ). [ಸಂ.]

**ಲೇಖವಾಹನ** (ನಾ). = ಲೇಖವಾಹ : ಲೇಖವಾಹನಂ ಚಂದ್ರವಾಹನಂಗುತ್ಸಾಹದಿಂ ವಾರ್ತೆಯಂ ಪೇಳ್ವುದುಂ (ಸುಕುಮಾ. ೭-೩ ವ). [ಸಂ.]

**ಲೇಖಾಧುನಿ** (ನಾ). ಸುರನದಿ : ದೇವಗಂಗೆ (?) : ನರನಾಥ ನೋಡಿ ಲೇಖಾಧುನಿಯ ಸಂತಸಂಬೆರೆದು ಸೌಮಿತ್ರಿಯಂ ಕರೆದೆಂದನಿರುಳಿರುವವರರೆ ಈ ತಾಣಮತಿರಮ್ಯಕರವಾಗಿದೆಕೊ ನೋಡು ತೀರದ ಬನವನು (ತೊರವೆರಾ. ೨-೦೭-೦). [<ಲೇಖ+ಧುನಿ]

**ಲೇಖಿಕೆ** (ನಾ). = ಲೇಖಕಿ : ಅವಳು ಲೇಖಿಕೆ, ಕವಯಿತ್ರಿ, ಭಾಷಣಕಾರ್ತಿ –ಹೀಗೆಲ್ಲ ಆಗಬೇಕೆಂದು ಅವರು ಆ ದಿಸೆಯಲ್ಲಿ ಯಾವಾಗಲೂ ಯತ್ನಿಸುತ್ತಿದ್ದರು (ಸ್ಮೃತಿ. ೨೪೯). [ಸಂ. ಲೇಖಿಕಾ]

**ಲೇಖಿತ** (ಗು). ಬರೆಯಲ್ಪಟ್ಟ ; ಬರೆದ. [ಸಂ.]

**ಲೇಖಿಸು** (ಕ್ರಿ). ೧. ಬರೆ ; ಲೇಖನ ಮಾಡು. ೨. ಬರೆಯಿಸು : ಹರನಿಂದಧಿಕ ಹರಿಯೆ ಸರ್ವೋತ್ಕೃಷ್ಟನೆಂದಾಗ ಮಂದಮತಿ ವ್ಯಾಸಪತ್ರಿಕೆಯ ಲೇಖಿಸಿ ಪೊಳಲ ಬಾಗಿಲೊಳ್ಕಟ್ಟಿಸಿದನು (ಕಕುಹ. ೩-೪-೨೪). ೩. ಚಿತ್ರಿಸು : ತೋಳಿನೊಳೊಜುಗಿದಿನಿಯಳ ಕರ್ಣಪೂರದೊಳೆಬಿಯು ಕತ್ತೂರಿರಸವ ನನೆಮೊನೆಯಿಂದ ಲೇಖಿಸಿದ (ಕಾವ್ಯಸಾ. ೦೭-೦). [ಲೇಖನ + — ಇಸು₃]

**ಲೇಖೀ** (ಗು). ಬರವಣಿಗೆಯಲ್ಲಿರುವ : ಮಹಾಲಕರಿಯ ಲೇಖೀ ಪರವಾನೆಯನ್ನು ಪಡೆಯದೆ ಯಾರೂ ಕಡಿಯಲಾಗದು (ಕಭಾಗ. ಕಂ. ೦೪).

[←ಮರಾ. ಲೇಖೀ]

**ಲೇಖೀದಾಖಲೆ** (ನಾ) ಲಿಖಿತ ದಾಖಲೆ : ನಮ್ಮ ಪ್ರತಿಯೊಂದು ಕೆಲಸಕ್ಕೂ ಲೇಖೀದಾಖಲೆ ಬೇಕು (ಇಂಧ್ರಕ. ೦೨೦). [ಲೇಖೀ + ದಾಖಲೆ]

**ಲೇಖೀಹೊಣೆ** (ನಾ). ಲಿಖಿತದ ಮೂಲಕ ಕೊಡುವ ಜಾಮೀನು: ಚೆಕ್ಕಿನ ರಕಮು ವಸೂಲಿಮಾಡುವ ಬ್ಯಾಂಕಿನವರು ಅದರ ಲೇಖೀಹೊಣೆಯನ್ನು ತೆಗೆದುಕೊಂಡರೆ ಚೆಕ್ಕಿನ ಹಣವನ್ನು ಕೊಡಬಲ್ಲೆವು (ಬ್ಯಾಂಕಕ್ಕೆ. ೭೦). [ಲೇಖೀ + ಹೊಣೆ (<ಪೊಣ್ಮೆ)]

**ಲೇಖೆ** (ನಾ). ೧. ಬರೆಯುವುದು ; ಬರವಣಿಗೆ. ೨. ಪತ್ರ ; ಕಾಗದ: ಜಟಿಲನಾಯನಾರರು . . . ನಂಬಿಯಾರೂರರ ವಿವಾಹಕ್ಕೆ ಬರುವಂತೆ ಶುಭಲೇಖೆಗಳನ್ನು ಕಳುಹಿಸಿದರು (ಕೃಂಪು. ೨೩). ೩. ಗೆರೆ ; ಸಾಲು ; ಪಂಕ್ತಿ : ಕಡುಗರಿದಪ್ಪ ಲೇಖೆಯದು ಕಾಳಿಕೆ (ರೂಕಸಾಕ. ೦೦-೮೦) ; ಬಹುಧೂಮಲೇಖೆ ನಿಮಿರ್ದುವು ಮಿಹಿರಾಧ್ವದೊಳಾಂಜನೇಯನೊಡರಿಸೆ ಲಂಕಾದಹನಂ (ಕಂರಾಮಾ. ೦೦-೦೪೩) ; ಡೊಂಕು ಲೇಖೆಗಳೆಲ್ಲ ಚೆಲುವಿನ್ನೆಂಕೆಗೆ ಸಂದು (ಹಕಸ. ೦೦). 'ಧೂಮಲೇಖೆ' ಪರಾ. ೪. ಚಂದ್ರಬಿಂಬದ ರೇಖೆ. [ಸಂ. ಲೇಖಾ]

**ಲೇಖ್ಯ** (ನಾ). ಬರೆದುದು ; ಪತ್ರ ; ಕಾಗದ : "ಓಲೆ ಪತ್ರಮದು ಲೇಖ್ಯಮಕ್ಕು" (ಮಂಗರಾ. ೦೦೩-೦೩) ; ವ್ಯವಹಾರಕಾಂಡದಲ್ಲಿ . . . ಸಾಕ್ಷ್ಯ, ಲೇಖ್ಯ, ದಿವ್ಯ . . . ಪ್ರಕೀರ್ಣ ಎಂಬ ೨೫ ಪ್ರಕರಣಗಳಿವೆ (ಬಾಕರ. ೬೨). [ಸಂ.]

**ಲೇಖ್ಯದೋಷ** (ನಾ). ಬರವಣಿಗೆಯ ತಪ್ಪು— ದೋಷ : ಅಕಾಂತಿ, ವ್ಯಾಘಾತ (=ಅರ್ಥವಿರೋಧ), ಪುನರುಕ್ತ, ಅಪಶಬ್ದ, ಸಂಪ್ಲವ (= ಕೆಟ್ಟಜೋಡಣೆ) – ಇವು ಲೇಖ್ಯದೋಷಗಳು (ಕಶಾಂ. ೪೩). [ಸಂ.]

**ಲೇಜಯ** 'ನೇಜಯ' ನೋ.

**ಲೇಟು** (ನಾ). ತಡ ; ನಿಧಾನ ; ವಿಳಂಬ : ಗಾಡಿ ಎಷ್ಟು ದಿನ ಲೇಟು ? (ಜಾಂಗೀ. ೯೦). [←ಇಂ. Late]

**ಲೇಣದೇಣ** 'ಲೇನದೇನೆ' ನೋ.

**ಲೇಣೆ** (ನಾ). ಸಾಲ ; ಕಡ : ಸರ್ಕಾರದ ಉದ್ದೇಶಗಳಿಗಾಗಿ ಸಮ್ರಾಟರ ಸ್ವಾಧೀನದಲ್ಲಿಟ್ಟದ್ದ ಎಲ್ಲ ಸ್ವತ್ತೂ, ಆಸ್ತಿಯ ರೂಪದ ಲೇಣೆಗಳೂ . . . ರಾಜ್ಯದ ವಶದಲ್ಲಿ ನೆಲಸತಕ್ಕುದು (ಕಾರಾಜ. ೦೬೪). 'ದೇಣೆ', 'ಲೇಣೆದೇಣೆ' ಪರಾ. [← ಹಿಂ. ಲೇನಾ]

**ಲೇಣೆದೇಣೆ** 'ಲೇನೆದೇನೆ' ನೋ.

**ಲೇನು** (ನಾ). ಓಣಿ ; ಗಲ್ಲಿ; ಸಂದಿ : ಆ ರೋಡಿನ ಒಂದು ಲೇನಿನೊಳಗೆ ತಿರುಗಿದನು (ಕಾರು. ೪೬). [← ಇಂ. Lane]

**ಲೇನೆದೇನೆ, ಲೇಣದೇಣ, ಲೇಣೆದೇಣೆ** (ನಾ). (ಸಾಮಾನ್ಯವಾಗಿ ಹಣವನ್ನು) ಸಾಲ ತೆಗೆದುಕೊಳ್ಳುವ ಮತ್ತು ಕೊಡುವ ವ್ಯವಹಾರ ; ಲೇವಾದೇವಿ : "ಲೇನೆದೇನೆ" ವ್ಯವಹಾರದ ನಿರ್ಭಾಗ್ಯರನ್ನೆಲ್ಲಾ ಜೀವಣ್ಣ ಅಲ್ಲಿಗೆ ಹಿಡಿದು ತರುತ್ತಿದ್ದ (ಮಾಮುಪ. ೦೦೬). **ಲೇಣದೇಣ** : ಆಯಾ ದಿನ ಲೇಣದೇಣ ಎಲ್ಲಾ ಫೈಸಲ್ ಮಾಡಿಬಿಡುತ್ತೇನೆ (ರಂಕ. ೦೯೨). **ಲೇಣೆದೇಣೆ**: ಬ್ಯಾಂಕುಗಳಂತೆ ತಮ್ಮ ಲೇಣೆದೇಣೆ ಪರಿಸ್ಥಿತಿಯನ್ನು ಪ್ರಕಟಿಸುವುದಿಲ್ಲ(ಹಅತ್ರ. ೩೦೮) ; ತಮ್ಮ ಸ್ಥಿರ ಚರಆಸ್ತಿಭೂಮಿಕಾಣಿ ಲೇಣೆದೇಣೆಗಳ ವಿವರವಿತ್ತು (ಮಾಮುಪ. ೨). 'ದೇಣಾಲೇಣ' ಪರಾ.

[←ಹಿಂ. ಲೇನಾದೇನಾ ; ಮರಾ. ಲೇಣದೇಣ]

**ಲೇಪ** (ನಾ). ೧. ಹಚ್ಚುವಿಕೆ ; ಸವರುವಿಕೆ : ನೇಪಾಳದ ಬೀಜವಂ ಗಿರಿಕರ್ಣಿಕೆಯ ರಸದಿಂ ಮರ್ದಿಸಿ ನಾಭಿಗೆ ಲೇಪವ ಮಾಡೆ ಶೀಘ್ರವಿರೇಕವಕ್ಕು (ಕಳನ್ನ. ೩೦೪). ೨. ಮುಲಾಮು, ಗಿಲೀಟು, ಸುಣ್ಣ ಮುಂತಾದ ಲೇಪನ ವಸ್ತು : ಕಂದುಬಣ್ಣಕ್ಕೆ ಚಿನ್ನದ ಲೇಪಕೊಟ್ಟಂತೆ ರಂಜಿಸುತ್ತಿತ್ತು (ಕಕುಹ. ೬-೨೭) ; ಹುಣ್ಣ ಜೇನಿಗೆ ಲೇಪ ಹಚ್ಚಿಸಲೊ ? ಉಪ್ಪಿಡಲೊ ? (ಹಪ್ಪರ. ೨೨-೩). ೩. ಅಂಟಿಕೊಂಡಿರುವ ವಸ್ತು : ಮಾಪರೇ ಪೋಪರೇ ಪಾಪವೇನದು ಕೇಸಜಿ ಮಾಪರೆ ಮೈಯ ಮಲ ಪೋಪುದಾ ಪಾಪ ಲೇಪವಾಗಿಕ್ಕು (ಸರ್ವಜ್ಞ. ೯೨೪). ೪. ಕೊಳೆ ; ಕೊಳಕು : ಜ್ಞಾನಕ್ಕೆ ಲೇಪವಾದವನಿರವು ತುಪ್ಪವ ನಂಜಿದ ಬತ್ತಿಯಂತೆ (ಶೋಕಸೂ. ೪-೦೦). ೫. ಊಟ ; ಆಹಾರ : "ಲೇಪಃ . . . ನ್ಯಾದಃ —೭ ಭೋಜನದ ಹೆಸರುಗಳು" (ಸಿದ್ಧಾಂತ. ೨೯೦). ೬. (ಆಲಂ) ಸಂಬಂಧ : ಗೊಡವೆ : ಈಶ್ವರನೊಬ್ಬನಿದ್ದರೆ . . . ಜಗದ್ವ್ಯವಹಾರದಲ್ಲಿ ಅವನಿಗೆ ಆಸಕ್ತಿಯಾಗಲಿ ಲೇಪವಾಗಲಿ ಇದೆಯೆಂದು ನಿರೀಕ್ಷಿಸಲಾಗುವುದಿಲ್ಲ (ಮುಕ್ತಾರ. ೪ ಶೀಕಳಿ).

**ಲೇಪಮಾಡು** = ಬಳಿ ; ಹಚ್ಚು ; ಲೇಪಿಸು : ಶೀತತೊಳಸಿಯನ್ನೂ ಸುಗ್ಗೆಬೇರನ್ನೂ ಮಜ್ಜಿಗೆಯಿಂದರೆದು ಲೇಪವಮಾಡೆ ಶೀತಜ್ವರಂ ಮಾಣ್ಗುಂ (ಕಳನ್ನ. ೭೦). **ಲೇಪಹಾಕು** = ೧. ಮುಲಾಮು ಇತ್ಯಾದಿಯನ್ನು ಬಳಿ. – ಸವರು : ತಲೆ ಒಡೆದವನೂ ಸಮ ಲೇಪಹಾಕಿದವನೂ ಸಮ (ಗಾದೆ). ೨. (ಆಲಂ) ಸಂತೈಸು ; ಸಮಾಧಾನಮಾಡು : ತಂಡತಿ ಅವನ ನೊಂದ ಮನಸ್ಸಿಗೆ ಲೇಪಹಾಕಿದಳು (ಯೋಧಕ. ೨೬). [ಸಂ.]

**ಲೇಪಕ** (ನಾ). ೧. ಬಳಿಯುವವನು ; ಲೇಪಿಸುವವನು : "ಲೇಪಕಃ, ಪಳಗಂಡಃ _ಈ ೨ ಲಿಪ್ಪಗಾಜಿಂ" (ಹಲಾಯು. ೪೬-೪೩೭). ೨. ಅಚ್ಚು ತಯಾರಿಸುವವನು ; ಮಾದರಿಯನ್ನು ಮಾಡುವವನು. [ಸಂ.]

**ಲೇಪನ** (ನಾ). ೧. = ಲೇಪ ೧ : "ಲೇಪನಮೆನಲ್ ಪೂಸುವುದೆನಿಕ್ಕು" (ಮಂಗರಾ. ೦೦೦-೨೩) ; ಉಪಚರಿತಲೇಪನಾಲಂಕಾರನುಂ . . . ಆಗಿ (ಕಾರಂಭ. ೭೯) ; ದ್ರಾವಕವನ್ನು ಗಂಟಲೊಳಕ್ಕೆ ಲೇಪನ ಮಾಡಿಸಿಕೊಂಡೆ (ಹಂಟರು. ೬). ೨. =ಲೇಪ ೨. [ಸಂ.]

**ಲೇಪಾಳ₁** 'ನೇಪಾಲ₁' ನೋ.

**ಲೇಪಾಳ₂** (ನಾ). ಒಂದು ದೇಶದ ಹೆಸರು ; ನೇಪಾಳ : 'ಲೇಪಾಳಿಗ' ಪರಾ. [< ಸಂ. ನೇಪಾಲ]

**ಲೇಪಾಳಿಗ** (ನಾ). ನೇಪಾಳದೇಶದವನು : 'ಲೇಪಾಳಿಗಿತಿ' ಪರಾ.

[ಲೇಪಾಳ₂ + — ಇಗ]

**ಲೇಪಾಳಿಗಿತಿ** (ನಾ). ನೇಪಾಳ ದೇಶದವಳು : ಇತಿಗೆ . . . ಕನ್ನಡಿಗಿತಿ, ಲೇಪಾಳಿಗಿತಿ [ಶಾಶಾಂ. ೪೭] (ಶಮದ. ೨೦೬ ವೃ ಯೋ).

[ಲೇಪಾಳಿಗ + — ಇತಿ₁ (< — ಇತ್ತಿ)]

**ಲೇಪಿ** (ನಾ). ಲೇಪಿಸಿಕೊಂಡುದು ; ಬಳಿದುಕೊಂಡುದು : ಅವನೀಶ ಕೇಳ್ ಘೃತಂ ಪೊರೆಪಿ ಕೈ ಜಡ್ಡಹುದು ಸವಿಯುನಜಿಯದು ರಸಜ್ಞಂ ಲೇಪಿಯಲ್ಲದಿನಿದಜಿಯುವಂತಟಪ್ಪೆಯುದ್ಯ (ಜೈಭಾ. ೬-೦೩).

[ಸಂ. ಲೇಪಿನ್]

**ಲೇಪಿತ** (ಗು). ೧. ಬಳಿದ; ಸವರಿದ: ಆಗ ಇವನು ಸೋತು ಧೂಳು ರಕ್ತ ಯಶಸ್ಸಿನಿಂದ ಲೇಪಿತನಾಗಿ ಬರುತ್ತಾನೆ (ಮಲಿಪಾ. ೦೪) (ನಾ). ೨.(ಆಲಂ) ಅಪಯಶಸ್ಸನ್ನು ಹೊಂದಿರುವುದು; ಅಪಕೀರ್ತಿಯುನ್ನು ಹೊಂದಿರುವುದು(?): ಲೆಕ್ಕದಲ್ಲಿ ಲೇಪಿತವಾದವರಿಗೇಕೆ ಅಜಾತನ ಸುದ್ದಿ (ಮೋಲಕಟ. ೦೨–೪೪). [ಸಂ.]

**ಲೇಪಿಸು** (ಕ್ರಿ). ೧. ಬಳಿಯಲ್ಪಡು: ಲೇಪನ ಹೊಂದು: ಆಗಸವೆಲ್ಲಂ ಸುಧೆಯಿಂದೆ ಲೇಪಿಸಿದುದು . . . ದೆಸೆಯೆಲ್ಲಂ ಚಂದನಾಸಾರದಿಂ ಮುಸುಕಿತ್ತೆಂಬಿನಮೊಂದು ಬೆಳ್ಪೆಳಗು ಪರ್ವಿತ್ತೆಯ್ದೆ ರೋದೋಂತಮಂ (ಕಾದಂಬ. ೦೦೩). ೨. ಬಳಿ; ಸವರು: ನಾನು ಪರಿಮಳವ ಲೇಪಿಸುವುದಕ್ಕೆ ಮುನ್ನವೇ ಜಂಗಮಕ್ಕೆ ಸುಗಂಧದ್ರವ್ಯಗಳ ಲೇಪಿಸುವೆ (ಮಹಾದೇ. ೪. ೭೩–೦೮೩); ಉಬ್ಬಿದ ಸ್ಥಳಕ್ಕೆ ಅರಿಷಣಬೇರನ್ನು ತೇದು ಲೇಪಿಸಿದಳು (ಕಂಗ. ೦೪). ೩. ಅಂಟು; ಹತ್ತಿಕೊಳ್ಳು: ಲೋಪವಾದರು ಸರಿಯೆ ಕರ್ಮಜ ಪಾಪಪುಣ್ಯಗಳೆರಡು ನಿನ್ನನು ಲೇಪಿಸವು (ಹಹರಿ. ೨೯–೦೦). [ಲೇಪನ + – ಇಸು]

**ಲೇಪು** (ನಾ). ಅರಳೆ ತುಂಬಿ ಮಾಡಿದ ತೆಳ್ಳನೆಯ ಗಾದಿ: ಬಲದೇವ ಮಂತ್ರಿ ತನ್ನ ಬಾಲೆಯಳಿಗಿತ್ತ ಬಹುತರಳಿತ ಹೇಮದ ಮಂಚ ಲೇಪು ಮುಸ್ತೈದ (ಶರಣೀ. ೦೪೭–೩); ಮಲಗಿಬಿಡೋಣ ಮತ್ತನೆ ಲೇಪಿನ ಮೇಲೆ (ಶಿವಾಂ. ೨೭); ಹಂಸತೂಲಿಕಾತಲ್ಪ ಎಂದರೆ . . . ಹತ್ತಿಗೆ ಬದಲಾಗಿ ಅದನ್ನು ಉಪಯೋಗಿಸಿ ತುಂಬಿ ಹೊಲಿದ ಲೇಪು (ಸಾಹಿಹ. ೩೩). [←ಮರಾ. ಲೇಪ್. / ತೆಲು. ಲೇಪು]

**ಲೇಪ್ಯ** (ಗು). ೧. ಬಳಿದ; ಲೇಪಿಸಿದ. (ನಾ). ೨. ಬಳಿಯುವ ವಸ್ತು; ಲೆಪ್ಪ: "ಲೆಪ್ಪಕ್ಕೆ ಲೇಪ್ಯ" (ಕಶಕಂ. ೨೬೯). [ಸಂ.]

**ಲೇಲಿಹಾನ** (ನಾ). ೧. ಹಾವು; ಸರ್ಪ: ಈ ಕರ್ಮಾಡುವಿನೊಳ್ ಕಾಳಿಯಮಹಾಸರ್ಪನಿರ್ಪಂ . . . ಈ ಸಮುದ್ದಾಮಧೂಮಸ್ತೋಮಮಾ ಲೇಲಿಹಾನನಾಭೀಲಹಾಲಾಹಳೋದ್ದಾಮಧೂಮಸ್ತೋಮಂ (ಜಗಚ. ೩–೮೦೪). ೨. ಶಿವ. [ಸಂ.]

**ಲೇಲೆ** (ನಾ). (ಕರಾ) ಒಂದು ಅನುಕರಣ ಶಬ್ದ: ಬೆಳ್ಳಿ "ಲೇ ಲೇಲ್" ಎಂದು ಹಾಡತೊಡಗಿದಳು (ತೋಕುದು. ೯).

**ಲೇಲೆಹಾಕು** = (ಕುಣಿತದ ತಾಳಕ್ಕೆ ಸರಿಯಾಗಿ) 'ಲೇ ಲೇ' ಎಂದು ಹೇಳು: ನಾವು ಹೊಲೆಯರು ನಾಲ್ಕು ಲೇಲೆಹಾಕಿ ಇವತ್ತಾದರೂ ಸ್ವಲ್ಪ ಕುಣಿಯುತ್ತೇವೆ (ದಂಬಿಪಾ. ೦೩).

[← ತುಳು. ಲೇಲೆ = ಹೊಲೆಯರ ಒಂದು ಬಗೆಯ ಕುಣಿತ]

**ಲೇವಡಿ$_1$** (ನಾ). ಗೇಲಿ; ಅಣಕ; ಕುಚೋದ್ಯ: ಈ ರಂಪ ಲೇವಡಿ ನೋಡ್ದೊ (ಹುಟ್ಟಿಕ. ೦೬೦); ಲೇವಡಿ ಬೇರೆ ಮಾಡ್ತಾಳೆ? (ಬಿಡಕಂ. ೬೦)

**ಲೇವಡಿಮಾಡು** = ಗೇಲಿಮಾಡು; ಅಣಕಿಸು: ಹೊಸವೇಷ್ಟರು ಅವನನ್ನು ಲೇವಡಿಮಾಡಿದುದರಿಂದ ಅವರ ಪ್ರಾಣ ಆಗಿಹೋಗುವುದರಲ್ಲೇ ಇತ್ತಂತೆ (ಸ್ವಾಬಿಸ್ನೇ. ೮). **ಲೇವಡಿಯೆಬ್ಬಿಸು, ಲೇವಡಿಎಬ್ಬಿಸು** = ಲೇವಡಿಮಾಡು: ಧರಣಯ್ಯನ ಗೆಳೆಯರು ಅವನನ್ನು . . . ಲೇವಡಿ ಯೆಬ್ಬಿಸುತ್ತಿದ್ದರು (ಮರಿ. ೨೭); ನಿನ್ನ ಉಲಿತವನ್ನು ಕೇಳಿದ ಕಾರಿ ಲೇವಡಿಎಬ್ಬಿಸಿದ (ಪಪಂಶಾ. II. ೦೦೪೦).

[←ತೆಲು. ಲೇವಡಿ = ದಾರಿದ್ರ್ಯ, ಕಷ್ಟ. / ಮರಾ. ರೇವಡೀ = ಫಜೀತಿ]

**ಲೇವಡಿ$_2$** 'ರೇವಡಿ' ನೋ.

**ಲೇವಣ** 'ನೇವಳ' ನೋ.

**ಲೇವಳ** 'ನೇವಳ' ನೋ.

**ಲೇವಾದೇವಿ** (ನಾ). ಹಣವನ್ನು ಕೊಡುಕೊಳ್ಳುವ ವ್ಯವಹಾರ; ಹಣದ ಕೊಡುಕೊಳೆಯ ವ್ಯವಹಾರ: ಕಕ್ಷಿಗಾರರಲ್ಲಿ ಪರಸ್ಪರ ಲೇವಾದೇವಿ ನಡೆಯುತ್ತಿದ್ದಲ್ಲಿ . . . ಮೂರು ವರ್ಷಗಳು (ಗ್ರಾಕಾಶ. ೦೬೭); ಸಾಲಿಗರು ಲೇವಾದೇವಿಯ ಫೈಸಲಾತಿ ಕ್ರಮಗಳಿಗೆ ಅವನನ್ನೇ ನೇಮಿಸಿದರು (ಡಾರಾಕ. ೪೦).

**ಲೇವಾದೇವಿ ಪತ್ರ**=ಹಣವನ್ನು ತೆಗೆದುಕೊಳ್ಳುವ ಮತ್ತು ಕೊಡುವ ವ್ಯವಹಾರದ ಪತ್ರ: ಲೋಹವನ್ನೂ ನಾಣ್ಯವನ್ನೂ ಬೆಲೆಯನ್ನೂ ಕೊಂಡು ತರುವ ಸಾಲಪತ್ರ, ಲೇವಾದೇವಿಪತ್ರಗಳೂ ಇರುವುವು (ಹಪಕ್ರ. ೨೯).

[←ಹಿಂ. ಲೇವಾದೇಈ]

**ಲೇವೆ** (ನಾ). (ಕುದುರೆಯ ತಲೆಗೆ ಅಲಂಕರಿಸುವ) ಒಂದು ಬಗೆಯ ಅಲಂಕಾರ ಸಾಧನ; ತುರಾಯಿ: ಪಸುವಟ್ಟೆಯಪಿವ ಪೊಸಲೇವೆಯಾ ಮುಯ್ವಣ್ಣ ಕಿಸುಗಲ್ಲ ಕೀಲಣೆಯ ಮೊಗಮುಟ್ಟೆ . . . ತದ್ವಾಜಿಯಾಕಾಶ ದೊಳ್ಕುಸುಮಬಾಣನ ರಥದ ಗಿಳಿಯಂತೆ ವಿಜಯಾರ್ಧಗಿರಿಯ ಬಸದಿಗೆ ಪಾಱಿತು (ಶಬ್ದಸ್ತೇ. ೦೦–೬೨); ಕುದುರೆಗಳ ಜೀನ ಹಲ್ಲಣ ಲೇ[ಪಾಠಾಂ. ತೀ]ವೆ ಕಬ್ಬಿ ಕಂದದ ಹಕ್ಕರಿಕೆ ಚಬುಕು ಮೊಗರಂಬ ವಾಘೆಗಳ್ (ಕಪಕ್ಷ. ೯೭–೪೪); "ಹೊಲಿದು ಸಿದ್ಧಮಾಡಿದ ಆಸನ" (ಕಪಕ್ಷ. ೯೦೮೩).

[ದೇ.॥ ತುಳು. ಲೇವೆ; ತೆಲು. ಲೇವು]

**ಲೇಶ** (ನಾ). ೧. ತುಂಡು; ಚೂರು. ೨. ತೀರ ಸ್ವಲ್ಪ; ಅಲ್ಪ; ಕೊಂಚ: "ಅಣು ಸೂಕ್ಷ್ಮಂ ಲೇಶಂ ತ್ರುಟಿ ಕಣಂ ಲವಂ" (ಪಸ್ತುಕೋ. ೦೦೭–೩೭); ಉದರವೈರಾಗ್ಯವಿದು ನಮ್ಮ ಪದುಮನಾಭನಲ್ಲಿ ಲೇಶಭಕುತಿಯಿಲ್ಲ (ಪುರಂದ. ೨–೨೫ ಪಲ್ಲವ); ಸುಖಲೇಶಮುಮಂ ಸುಳಿಯಗುತಿಕರಿಸಕ್ಕೆ, ರಾಜಪುತ್ರಿ, ಲತಾಂಗಿ, ನಿನ್ನನೆಂತೊಯ್ದಪೆನ್ ಪೇಳ್? (ಶ್ರೀದಾಪು. ೯೬–೩೦೫). ೩. ಕಿರಿದು: ಚಿಕ್ಕದು: "ಸೂಕ್ಷ್ಮಃ, ಲೇಶಃ, ಲವಃ . . . ತ್ರುಟಿಃ – ಈ ೧೫ ಕಿಱಿದು" (ಹಲಾಯು. ೦೦೪–೩). ೪. [ಕಾವ್ಯವಿಶಾ] ಒಂದು ಬಗೆಯ ಅಲಂಕಾರ; ಗುಣದಲ್ಲಿ ಸ್ವಲ್ಪ ಅವಗುಣವನ್ನೂ ದೋಷದಲ್ಲಿ ಸ್ವಲ್ಪ ಗುಣಾಂಶವನ್ನೂ ಸೇರಿಸಿ ವರ್ಣಿಸುವುದು: ಗುಣದೊಳಮಱ ಪುವುದಿನಿಸಪಗುಣಮಂ ದೋಷದೊಳಮಿನಿಸು ಗುಣಮಂ ತಂದಿರ್ದೆಣಿಸು ವುದು ಲೇಶಮೆಂಬುದು (ಕೀಚಾ. ೩–೦೭೦); ಗುಣಮನೆ ತರ್ಪುದು ದೋಷದ ಗಣನೆಗೆ ದೋಷಮುಮಂ ಇನಿಸು ಗುಣಗಣನೆಗೆ ತಂದೊಣರ್ಪುದು ಲೇಶಂ (ಕಾವ್ಯಾವ. ೬೭೯). [ಸಂ.]

**ಲೇಶಾಲಂಕಾರ** (ನಾ). = ಲೇಶ ೪: ಮರಳಿ ಗುಣದಲಿ ದೋಷ ದೋಷದಲಿ ಗುಣ ತೋಱೆ ಹರುಷದಿ ಲೇಶಾಲಂಕಾರ (ಕುವಲ. ೦೭೪). [ಸಂ.]

**ಲೇಶ್ಯ** (ನಾ). ೧. = ಲೇಶ್ಯೆ ೨: ಪರಮಾಯುವಿಂದವಧಿಯಿಂ ಸಾಮರ್ಥ್ಯದಿಂ ಲೇಶ್ಯದಿಂ[ಪಾಠಾಂ. ಶ್ಯೆಯಿಂ] . . . ಅಮರತ್ವಂ ಹೇಯ ಮಾದೇಯಮೇ (ಪುಣ್ಯಾಸ್ರ. ೦೭–೦೨೨); ಅಂತರಾತ್ಮನ ಸಹಜಜ್ಞಾನ ಸ್ಫೂರ್ತಿಯು ಕೆಲವು ವೇಳೆ ವಿಚಿತ್ರವಾದ ಸೌಂದರ್ಯವನ್ನು ಹೊಳಪನ್ನು ಉಳ್ಳದಾಗಿಯೂ ಕೆಲವುವೇಳೆ ವಿಕಾರವಾದ ಲೇಶ್ಯಗಳಿಂದ ಎಳೆಯಲ್ಪಟ್ಟಂತಾಗಿಯೂ ಆಂದೋಲನಗೊಳ್ಳುವುದು (ಶ್ರವಂಪ. ೦೭೪). ೨. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ: ಅರಿಷಡ್ವರ್ಗಾದ್ರಿ ಲೇಶ್ಯ ಜೀವಂ ದ್ರವ್ಯಂ . . . ಆಱಿಱ ನಾಮಂ (ವ್ಯವಹಾ. ೯–೬). [ಸಂ.]

**ಲೇಶ್ಯಾವಿಶುದ್ಧಿ** (ನಾ). [ಜೈನ] "ಲೇಶ್ಯೆಯು ಹೆಚ್ಚು ಹೆಚ್ಚು ಮಂದವಾಗುತ್ತ ಹೋಗಿ ಅದು ಇಲ್ಲವಾಯಿತೆಂದರೆ ಅದು ಲೇಶ್ಯಾ ವಿಶುದ್ಧಿ. ಹದಿನಾಲ್ಕನೆಯ ಗುಣಸ್ಥಾನದಲ್ಲಿ ಲೇಶ್ಯೆಯು ಸಂಪೂರ್ಣ ನಷ್ಟವಾಗಿರುತ್ತದೆ. ಆ ಸ್ಥಿತಿಯೇ ಲೇಶ್ಯಾವಿಶುದ್ಧಿ" (ಅಂಕ್ಷ. ಕ್ಷ ಪ ಶಾಂತಿನಾಥ ಶಬ್ದಕೋಶ): ಜ್ಞಾನಾದಿ ಪರಿಣಾಮಂಗಳೊಳ್ ನಿರತಿಶಯ ಲೇಶ್ಯಾವಿಶುದ್ಧಿಯಂ ತಾಳ್ದಿ (ಅಂಕ್ಷ. ೦೦–೦೪ ವ). [ಸಂ.]

**ಲೇಶ್ಯಾಶುದ್ಧಿ** (ನಾ). = ಲೇಶ್ಯಾವಿಶುದ್ಧಿ: ಅಂದು ಪೊಱಗಣೊಳಗಣ ರಡುಂ ಲೇಶ್ಯಾಶುದ್ಧಿಯಂ ತಾಳ್ದಿ (ಶಾಂತಿಕ್ಷ. ೯–೩೩ ವ). [ಸಂ.]

**ಲೇಶ್ಯ** (ನಾ). ೧. ಬೆಳಕು; ಕಾಂತಿ. ೨. [ಜೈನ] "ಆತ್ಮವು ಯಾವುದರ ಮುಖಾಂತರ ಪುಣ್ಯ, ಪಾಪಗಳಿಗೆ ಅಧೀನವಾಗುವುದೋ ಅದಕ್ಕೆ ಲೇಶ್ಯಾ ಎಂದು ಹೇಳುವರು" (ಕೈವಶ. ೨೯೬) : ಗತಿ ಮೆಯ್ವೆತ್ತ ಕಷಾಯಲಿಂಗತತಿ ಮಿಥ್ಯಾದರ್ಶನಜ್ಞಾನಮಪ್ರತಿಮಾಸಂಯುತೆ ತಾನಸಿದ್ಧತೆ ನಿಕಾಂತಂ ಲೇಶ್ಯೆಯೆಂದಿರ್ಪತೆರೊಂದುತೆಱು (ಸುಕುಮಾ. ೮೦-೭) ; ಲೇಶ್ಯಾನುವಾದದಿಂ ಆಱುಲೇಶ್ಯದವರ್ಗಂ ಮೂಱುಸಮ್ಯಕ್ತ್ವಮುಮಕ್ಕುಂ (ತತ್ತ್ವಾ. ೦೨). [ಸಂ. ಲೇಶ್ಯಾ]

**ಲೇಸಯ್ಯ** (ನಾ). ಒಬ್ಬಾತನ ಹೆಸರು : ನೆಗಟ್ದ ಗುಣಾಂಕ ಮಾರ್ಬ್ಬಲ ಧೀರಂ ಶ್ರೀಮತ್‌ಲೇಸಯ್ಯ (ಎಕ. V, ಹಸ್ಸನ. ೨೬೭-೦೨; 971). [ಲೇಸು$_1$ + ಅಯ್ಯ$_1$]

**ಲೇಸಿಗ** (ನಾ). ಹಿತವಾದುದನ್ನು ಬಯಸುವವನು ; ಒಳ್ಳೆಯದನ್ನು ಹಾರೈಸುವವನು : ಪಶು ಸಾವುತ್ತ ತನ್ನ ಶಿಶುವಿಂಗೆ ಏನ ಗಳಿಸಿ ಕೊಟ್ಟಿತ್ತು . . . ಆರು ಸತ್ತರೂ ಲೇಸಿಗರಿಲ್ಲ ತಮ್ಮತಮ್ಮಿಷ್ಟಕ್ಕೆ ಲೇಸಿಗರೆಲ್ಲರೂ (ಸರ್ವಶ. ೦೬-೮೭). [ಲೇಸು$_1$ + — ಇಗ]

**ಲೇಸು$_1$** (ನಾ). ೧. ಒಳ್ಳೆಯದು ; ಹಿತವಾದುದು : ನಿಮ್ಮಡಿ ಕೊಲೆ ಸಾವುದು ಲೇಸಲ್ತೆ (ಶಂಕಥಾ. ೧೦-೩೦) ; ಲೇಸ ಕಂಡು ಮನ ಬಯಸಿ ಬಯಸಿ ಆಸೆ ಮಾಡಿದೊಡಿಲ್ಲ (ಬಸವ. ೨೩) ; ಕರ್ಣಂಗೆ ಸಾವಿನ ಸಖಿಗಳೇ ಲೇಸೆನುತ ಕೈಕೊಂಡೆಚ್ಚನಾ ಭೀಮ (ಕುಮಾ.ಕ. ೦೩-೩೩). ೨. ಮಂಗಳಕರವಾದುದು ; ಶುಭಕರವಾದುದು ; ಶ್ರೇಯಸ್ಸು : ಕಿಡದ ವಿಧಾನಮನುಳ್ಳ ಇವು ಲೇಸುಗಳ್ಗೆ ಬಟ್ಟೆಯೆನಿಸುವುದು (ಶಂಕಶಂ. ೭೫-೨) ; ದೇವರ್ಕಳಂ ತುಂಬಿಯುಂ ತಿಳಿಯಲ್ ಸ್ವಪ್ನದಿ ಲೇಸೆಲ್ತೆ (ಸೋಮೇಶ. ೭೯). ೩. ದೃಢವಾದುದು : ಇರೆ ಶುಭಗ್ರಹಮಾ ಮರಂ ಲೇಸಕ್ಕುಂ (ಜಾತಕ. ೯-೦೭). ೪. ಶುಭಕಾರ್ಯ ; ಮಂಗಳಕಾರ್ಯ : ಮದುವೆ ಮುಂಜಿ ಮೊದಲಾದ ಲೇಸುಗಳಲ್ಲಿ ಶೇಷನ ವಾಲಗಕ್ಕೆ ಒಂದು ವೈಭವದ ಸ್ಥಾನವೇ ಇತ್ತು (ಕಂಬಹು. ೦೦೨). ೫. ಉತ್ತಮವಾದುದು ; ಶ್ರೇಷ್ಠವಾದುದು : "ನಿಗರ, ಸೆಟ್ಟೆ . . . ಲೇಸು, ಒಳ್ಪು, ಕಣ್ಗೆವಂದುದು, ಪರಿವಡೆದುದು — ಈ ೧೪ ಮನೋಹರಂ" (ಶಶಾ. ೫೫-೨೦೦) ; ಎನ್ನಾಳ್ವ ಮಂಡಳಂಗಳೊಳ್ ಪುಟ್ಟಿದ ಲೇಸ[ಪಾಠಾಂ. ದೊಳ್ಳಿತ]ಪ್ಪ ವಸ್ತುವಾಗರಕ್ಕುಂ (ವಡ್ಡಾರಾ. ೦೦೫-೨೯). ೬. (ಸಂಭೋಗದ)ಸುಖ — ಸಂತೋಷ : ಭಾಷೆಗೆ ತಪ್ಪಿದ ಬಂಟ ಲೇಸಿಗೆ ಪೊವಗದ ಸ್ತ್ರೀ ವ್ರತದ ದೆಸೆಯುಸಱಿಯದ ಆಚಾರ . . . ಘಾಸಿಯಾಯಿಮೆಂತಾಯಿತ್ತು (ಬಿಲೆ.ಕ. ೦೯) ; ಬೇಟದೊಳ್ ಬಿರಿದು ಕೂಟದೊಳರಲ್ದು ಲೇಸಿನೊಳ್ ವಾಸನೆವಡೆದು (ಅನಂಪು. ೨-೨೦ ವ) ; ಲೇಸುದಟ್ಟಿದ ಮನ ಹೊಸಮೋಹ ಮತ್ತವರಾ ಸೆಜ್ಜೆವನೆಯೊಳು ಮಾಳ್ಪ ಲೇಸನವರೆ ಬಲ್ಲರ್ (ಭರತ. ೯೨-೧೫೨). ೭. ಒಳ್ಳೆಯ ಕೆಲಸ ; ಪುಣ್ಯಕಾರ್ಯ : ಹಿಂದಿನ ಜನುಮದಲಿ ಎಂದೋ ಲೇಸನು ಮಾಡಿ ಇಂದು ನಿಮ್ಮಡಿಗೆ ಎಱಗಿದೆನು (ಸರ್ವಜ್ಞ. ೦೦೭).

**ಲೇಸುಲೇಸು** (ದ್ವಿರುಕ್ತಿ) : ಲೇಸುಲೇಸಿದು ತಮ್ಮನಾಡಿದ ಭಾಷೆ ಬಾಹಿರವಾಗಬೇಡ (ಕುಮಾ.ವ. ೧೭-೦೦) ; ಲೇಸು, ಲೇಸು ! ನೀರಿಟ್ಟಿಯುವ ಗಂಟಲೊಳ್ ಕಡುಬಂ ತುಱುಕಿದಂತಾಯಿತ್ತು (ರಾಜಶೇ. ೭-೮). **ಲೇಸನಾಡು** = ಒಳ್ಳೆಯದನ್ನು ಹೇಳು : ಲೇಸನಾಡಿದೆ ಕರ್ಣ ನಿನಗಿನ್ನೈಸಲೇ ಸಾರಥಿಯ ಕೊಱತೆ (ಕುಮಾ.ವ. ೫-೯). **ಲೇಸಲ್ಲರ್** = ಅಹಿತರು; ಶತ್ರುಗಳು : ಲೇಸಲ್ಲರ್ಗಿದೇ ಮಂತಣಂ (ಕಬ್ಬಿಗ. ೦೮೯). **ಲೇಸಾಗು** = ೧. ಒಳ್ಳೆಯದಾಗು ; ಸರಿಯಾಗು ; ಹಿತವಾಗು : ನುಡಿದೆನಪ್ಪಡೆ ಲೇಸಾಗಿ ನುಡಿಯಲ್ಕೆ ಬಲ್ಲುದೀ ಗಿಳಿ (ಕಾದಂಬ. ೬೫೦) ; ಸಭೆ ಮೆಚ್ಚಿ ಲೇಸಾಯ್ತೆನುತ್ತಮಿರೆ (ತಿರುಶ. ದೇ. ೨೦-೩) ; ಕೊತರ್ಜ ನೀನವಗೆಂದುದದು ಲೇಸಾಯ್ತು (ಜೈಮಿ. ೨೩-೦೯). ೨. ಚೆನ್ನಾಗು ; ಸೊಗಸಾಗು : ಲೇಸಾಗಿ ತುಲಸಿಯ ಮಾಲೆಯ ಧರಿಸಿದ ವಾಸುದೇವನು ಬಂದ ಕಾಣಿರೇನೆ (ಪುರಂದ. ೧-೦೪೦-೩) ; ಈಶ ನಿಮಗತ್ಯಧಿಕಸುಖವ ಕೊಡಲೆಂದು ಲೇಸಾಗಿ ಹರಸಿದೆವು ಬಾಲಕರು ಬಂದು (ಕುಶ. ೦೫-೦). [ದೇ. ತುಳು. ಲೇಸು, ಲೇಸ್; ತೆಲು. ಲೆಸ್ಸ]

**ಲೇಸು$_2$** (ನಾ). "ಬೂಟ್ಸು, ಮೊ. ಗಳ ಎದುರುಬದುರಿನ ಅಂಚುಗಳನ್ನು, ಗುಂಡುರಂಧ್ರಗಳ ಅಥವಾ ಕೊಕ್ಕೆಗಳ ಮೂಲಕ, ಒಟ್ಟಿಗೆ ಬಿಗಿಯುವ ಹುರಿ ಅಥವಾ ತೊಗಲಿನ ದಾರ. ಬಟ್ಟೆ, ಅಂಗಿ, ಮೊ. ಗಳ ಅಲಂಕಾರಕ್ಕಾಗಿ ಉಪಯೋಗಿಸುವ ಹೆಣಿಗೆಯ ಪಟ್ಟಿ (ಸಾ. ಜರತಾರಿಯದು); ಕಲಾಬತು; ನಾರು, ಹತ್ತಿ, ಉಣ್ಣೆ, ರೇಷ್ಮೆ, ಲೋಹ—ಇವುಗಳಿಂದ ಮಾಡಿದ ದಾರದಿಂದ ಚಿತ್ರರಚನೆಯಾಗಿ ಹೆಣೆದು ಮಾಡಿದ ಸೂಕ್ಷ್ಮರಚನೆಯ ಅಲಂಕಾರದ ಪಟ್ಟಿ" (Lace. ೩೦೪೩) : ಮನೆಯಿಂದ ಹೊರಡುವ ಮುನ್ನ ನನ್ನ ಮಗಳೊಬ್ಬಳು ಲೇಸಿಗೂ . . . ಮಗನೊಬ್ಬನು ಪೆನ್ಸಿಲಿಗೂ ಪುಸ್ತಕಕ್ಕೂ ಹೇಳಿರುತ್ತಾನೆ (ಪಾಡಿಗೆ. ೦೭೯) ; ನಾನು ರೈತಹೆಂಗಸರಿಂದ ಲೇಸು ಕೊಂಡ್ಕೋತೀನಿ (ಶಾರು. ೩೯೩). [←ಇಂ. Lace]

**ಲೇಸುಗಾತಿ** (ನಾ). ಸುಖವನ್ನು ಬಯಸುವವಳು : ನಾಲಗೆಯೊಳಗಿಲ್ಲ ನಿನ್ನೆದೆಯೊಳಗೆ ವಿಶಾಲಾಕ್ಷಿಯಿದ್ದು ನೀನೆನ್ನ ಬಾಳಿಸುತಿದ್ದೆಯ ಠಕ್ಕರ ದೇವಯೆಂದಾ ಲೇಸುಗಾತಿಯೊತ್ತಿದಳು (ಭರತ. ೩೭-೮೦). [ಲೇಸು$_1$ + — ಕಾತಿ$_5$]

**ಲೇಸುಗಾಱ** (ನಾ). ಸುಖವನ್ನು ಬಯಸುವವನು : ಲಲನೆಯರಯ್ಯಂದಿರೆಲ್ಲರನೇಳಿಸಿ ಕಳುಹಿದನಾ ಲೇಸುಗಾಱ (ಭರತ. ೩೨-೮೯) ; ಕಾಳಗವುಂಟು ಮಿತ್ತದ ಯುದ್ಧ ಬೇಡ ಕೇಳ್ಮೇಲಾದ ಮೃದುಲಯುದ್ಧವನು ತೋಳ ಬಲ್ಮೆಯೊಳೆ ನೀವಿಬ್ಬರು ಮಾಳ್ಪುದೆಂದಾ ಲೇಸುಗಾಱರಾಡಿದರು (ಭರತ. ೫೦-೦೭). [ಲೇಸು$_1$ + — ಕಾಱ]

**ಲೇಸುಗೆಯ್** (ಕ್ರಿ). ಒಳ್ಳೆಯದನ್ನು ಮಾಡು ; ಹಿತವಾದುದನ್ನು ಆಚರಿಸು : ಕಂಡು ಗೆಂಟಱಿಂದೊಳೆ ಪೊಡವಟ್ಟು ಮೆಲ್ಲನೆ ನೀಡೆ ಲೇಸುಗೆಯ್ದೆಯೆಂದೆನ್ನಂ ಕರತಲದೊಳ್ ತಳೆವು (ಕಾದಂಬ. ೭೯೮) ; ಆ ಸುರೋತ್ತಮಂ ಸಂತಸದಿಂದೆ ಭಕ್ತಿವೆರಸಾಗಳೆ ಪೂಜಿಸಿ ಲೇಸುಗೆಯ್ದನಿನ್ನಂತುಟೆ ತನ್ನನೀಂದ್ರ ಕೃತಮಂ ಮಱೆದಂದು ಕೃತಘ್ನನಾಗನೇ (ಸುಕುಮಾ. ೯-೩೦). [ಲೇಸು$_1$ + ಕೆಯ್$_1$]

**ಲೇಸುದಟ್ಟು** (ಕ್ರಿ). ಸುಖದ ಬಯಕೆಯಾಗು : ಲೇಸುದಟ್ಟಿದ ಮನ ಹೊಸಮೋಹ ಮತ್ತವರಾ ಸೆಜ್ಜೆವನೆಯೊಳು ಮಾಳ್ಪ ಲೇಸನವರೆ ಬಲ್ಲರ್ (ಭರತ. ೪೨-೧೫೨). [ಲೇಸು$_1$ + ತಟ್ಟು$_1$]

**ಲೇಹ** (ನಾ). ೧. ನೆಕ್ಕುವುದು : 'ಲೇಹಂಗೈ' ನೋಡಿ. ೨. [ವೈದ್ಯಶಾ] ಕೆಲವು ಔಷಧೀಯಗುಣವುಳ್ಳ ವಸ್ತುಗಳನ್ನು ಹೆಚ್ಚು ಗಟ್ಟಿಯೂ ಅಥವಾ ಹೆಚ್ಚು ನೀರಾಗಿ ಆಗದಂತೆ ಪಾಕಮಾಡಿದ, ನೆಕ್ಕಿ ತಿನ್ನಬಹುದಾದ ಔಷಧವಸ್ತು : ಚೂರ್ಣ, ಘೃತ, ತೈಲ, ಆಸವ, ಲೇಹ ಇವುಗಳನ್ನು ಮಾಡುವಾಗ ಚಂದನವನ್ನು ಹೇಳಿದ್ದರೆ . . . ಉಪಯೋಗಿಸಬೇಕು (ಸಕಪ್ರ. XII, ಶ್ರೀಗಂಧ) ; ಎಲೆ, ಬೇರು ಮತ್ತು ಹೂಗಳನ್ನು ಸೇರಿಸಿ ಮಾಡಿದ ಕಹಿಯಾದ ಲೇಹ ಹೊಟ್ಟೆಯಲ್ಲಿರುವ ಜಂತುಹುಳುಗಳನ್ನು ನಾಶಮಾಡುವುದು (ಕಡಕೋ. I, ೭೨೯). [ಸಂ.]

**ಲೇಹಂಗೈ** (ಕ್ರಿ). ನಾಲಗೆಯಿಂದ ನೆಕ್ಕು : ಪುಲ್ಲೆಗಳ್ಕಂಡು . . . ಬಾಲಕನಂಘ್ರಿಪಲ್ಲವದ ರುಧಿರಮಂ ಕುಡಿನಾಲಗೆಗಳಿಂದೆ ಸೊಗಸೆ ಲೇಹಂ [ಪಾಠಾಂ. ಪಂ]ಗೈದುವು (ಜೈಮಿ. ೨೮-೩೭). [ಲೇಹ + ಗೈ (<ಕೆಯ್$_1$)]

**ಲೇಹಕ** (ನಾ). ಬರಹಗಾರ : ಲೇಖಕ : ಲೇಖಕ ಎಂಬುದು ಸಂಸ್ಕೃತದಲ್ಲಿ ತುಂಬ ಹಳೆಯ ಶಬ್ದ, ಲೇಹಕ ಎಂಬುದು ಅದರ ತದ್ಭವ (ಕಸ್ನಸಂ. ೪೭). [< ಸಂ. ಲೇಖಕ]

**ಲೇಹಿನಿ** (ನಾ). [ನಾಟ್ಯ] ನಾಲಗೆಯ ಆರು ಬಗೆಯ ಚಲನೆಗಳಲ್ಲಿ ಒಂದು : ☞ "ನಾಲಗೆಯಿಂದ ತುಟಿ ಮತ್ತು ಹಲ್ಲುಗಳನ್ನು ಸೋಂಕಿಸಿ ರುಚಿ ನೋಡುವುದು" (ರಾತ್ನರಂ. ೨೬೮ ಗದ್ಯಾನುವಾದ) : ಏಗೆ ಖುಜ್ಜಂ . . . ಲೇಹಿನಿಯೆಂದುಂ ನಗೆಮೊಗವಳೆ ಜಿಹ್ವೆಯಾಬುಭೇದ ದಿನೆಸೆಗುಂ (ಲಾತ್ನರಂ. ೩-೯೪). [ಸಂ. ಲೇಹಿನೀ]

**ಲೇಹಿಸು** (ಕ್ರಿ). ನೆಕ್ಕು : ನಿಜನಾಸಾಗ್ರದ ಮಧುಬಿಂದುವಿಗಿರದುತ್ಸವಿಸಿ ಲೇಹಿಸುವವನಂತೇಕೆ ವೃಥಾ ಯುವುಗಾಹುತಿಯಹೆ (ಹೋಗಾಂಬ. ೪-೩೭). [ಲೇಹ + – ಇಸು₃]

**ಲೇಹ್ಯ** (ಗು). ೧. ನೆಕ್ಕಬೇಕಾದ. (ನಾ). ೨. ನೆಕ್ಕಿ ತಿನ್ನಬೇಕಾದುದು : ಭೋಜ್ಯ ಭಕ್ಷ್ಯಂ ಪೇಯ ಲಲಿತ ಲೇಹ್ಯಂ ಚೋಷ್ಯ ಪಿಚ್ಛಿಲ ಷಡ್ರಸಗಳಂ ವಿಳಸವನುಗುಣದ ರುಚಿಯುಂ ಮೇಲೆಯುಳ್ಳವರ ಚರಣಾಂಬುಜಕೆ ಶರಣು (ಲಶಿಶಂ. ೩೯-೨೪) ; ಲೇಹ್ಯವೆಂದರೆ ನಾಲಿಗೆಯಿಂದ ಚಪ್ಪರಿಸಿ ನುಂಗುವುದು (ಹವಾರ. ೪-೨ ಶಬ್ದಾರ್ಥ). ೩. = ಲೇಹ ೨: ಬಿಲ್ವಾದಿಲೇಹ್ಯ . . . ತೆಗೆದುಕೊಳ್ಳಲು ಸಮಸ್ತ ಪೈತ್ಯವ್ಯಾಧಿ, ಅಂತರ್ಗತ ಜ್ವರ, ಕ್ಷಯರೋಗ, ಪಾಂಡುಕಾಮಾಲೆ ಮುಂತಾದುವೆಲ್ಲವು ಪರಿಹರವಾಕ್ಕುಂ (ಸಕವ್ಯ. ೦೩೩). [ಸಂ.]

**ಲೇಹ್ಯದ್ರವ್ಯ** (ನಾ). ಲೇಹ್ಯ ಮಾಡಲು ಬಳಸುವ ಸಾಮಗ್ರಿ : ಲೇಹ್ಯ ದ್ರವ್ಯಪ್ರಮಾಣವನ್ನು ಹೇಳದಿದ್ದರೆ ಚೂರ್ಣಕ್ಕೆ ನಾಲ್ಕರಷ್ಟು ತೂಕ ಸಕ್ಕರೆಯನ್ನು . . . ಮಿಶ್ರ ಮಾಡಿ ಇಳಿಸಬೇಕು (ಸಕವ್ಯ. XIII, ಪ್ರಸ್ತಾವನೆ). [ಸಂ.]

**ಲೇಹ್ಯಪಾಕ** (ನಾ). ಲೇಹ್ಯದ ಹದ, – ಪಕ್ವತೆ : ಲಾಮಂಚ . . . ಕರಿಜೀರಿಗೆ – ಇವು ಪ್ರತ್ಯೇಕ ಗದ್ಯಾಣ ೪ ತೂಕವಂ ಚೂರ್ಣವ ಮಾಡಿ ಪಾಕದಲ್ಲಿ ಹಾಕಿ ಲೇಹ್ಯಪಾಕವಾಗಿ ಅಟ್ಟು . . . ಭಕ್ಷಿಸಿದರೆ . . . ಪೈತ್ಯರೋಗ ಸಹ ಗುಣವಾಕ್ಕುಂ (ಸಕವ್ಯ. ೦೩೪). [ಸಂ.]

**ಲೈಂಗ** (ಗು). ಲಿಂಗಕ್ಕೆ ಸೇರಿದ, – ಸಂಬಂಧಿಸಿದ : 'ಲೈಂಗಪುರಾಣ' ಪರಾ. [ಸಂ.]

**ಲೈಂಗಪುರಾಣ** (ನಾ). ಹದಿನೆಂಟು ಮಹಾಪುರಾಣಗಳಲ್ಲಿ ಒಂದು : ಬ್ರಹ್ಮಪುರಾಣ . . . ಲೈಂಗ[ಪಾಠಾಂ. ಗ್ಯ]ಪುರಾಣ . . . ಬ್ರಹ್ಮಾಂಡ ಪುರಾಣವೆಂಬವೇ . . . ಹದಿನೆಂಟು ಮೂಲಪುರಾಣಂಗಳ್ (ಶಿವೇಕ. ೬). [ಸಂ.]

**ಲೈಂಗಿ** (ನಾ). ಲಿಂಗದ ಸಂಬಂಧವುಳ್ಳವನು ; ಲಿಂಗವಂತ : ಲಿಂಗಮೆಂದು ಅರ್ಚಿಸಿ ಸಂಗವನಱಿಯದ ಲೈಂಗಿಗಳಗೆಲ್ಲಿಯದೋ ಶಿವಲಿಂಗಪೂಜೆ (ವಿಶೀಣಕಶಾ. ೩೩-೨೦೬) ; ಈತನುಚ್ಛಿಷ್ಟವನೆ ಕೊಂಡೀ ಭೂತನಾಥಂ ವಿಧಿನಿಷೇಧಾತೀತನಾದಂ ಲಿಂಗವೀತನ ಲೈಂಗಿ[ಪಾಠಾಂ. ಲಿಂಗಿ] ತಾನಾಗಿ(ಬಸಪು. ೦೮-೯೪). [ಲೈಂಗ + – ಇ₃]

**ಲೈಂಗಿಕ** (ನಾ). ಸ್ತ್ರೀ, ಪುರುಷ ಲಿಂಗಕ್ಕೆ ಸಂಬಂಧಿಸಿದುದು : ಕೀಟಗಳಲ್ಲಿ ಸಂತಾನೋತ್ಪತ್ತಿ ಲೈಂಗಿಕ (ಕೀಟಬಿ. ೯೪). [ಸಂ.]

**ಲೈಸನ್ಸು** (ನಾ). ಅನುಮತಿ ; ರಹದಾರಿ : ಮೂರು ತಿಂಗಳ ಲೈಸನ್ಸು ಪಡೆದುಕೊಂಡು (ಕಾಬಂಕಾಂ. ೬). [<– ಇಂ. Licence]

**ಲೊಂಚು** (ನಾ). ಕೀಳುವಿಕೆ (?) : ಮುಳ್ಳಿಗಡು ಲೊಂಚುಗೊಳಲ್ಕೆ ಚುಂಚು ತಾವರಿಸಿದ ಶಂಕೆ ಭೋಂಕನೆ ನೆಳಲ್ಗಗಿದ್ದುಟ್ಟಪದನಿಕ್ಕೆ (ಎಶ. XVI, ೩೩೬-೪೦ ; ೧೦೭೬). [< ಲೋಚು ?]

**ಲೊಕಶಿದಿ**, **ಲೊಕಶಿರಿ** (ನಾ). ಆನೆಗೆ ತೊಡಿಸುವ ಅಲಂಕಾರಗಳಲ್ಲಿ ಒಂದು (?) :ಆನೆಗೆ ಹಳದೀಬನಾತಿನ ಜಬ್ರೀ ಜೂಲು ರೇಶ್ಮೆ ಜಾಲರು ಸಹ ೧ ಬದಸ್ತೂರು ಲೊಕಶಿದಿ ೧ ಕತ್ತಿಗೆ ಕಟ್ಟುವ ಪಟ್ಟಿಬದಸ್ತೂರು ೧ ಸಹಾ (ಎಕ. XIV, ಶಂಪಪ. ೨೧೨-ಪುಟ ೦೧೨; 1847). **ಲೊಕಶಿರಿ** : ಆನೆಗೆ ಸಾದಾಬನಾತಿನ ಜೂಲು ೧ ಲೊಕಶಿರಿ ೧ (ಎಕ. XIV, ಶಂಪಪ. ೨೧೨-ಪುಟ ೦೧೨; 1847). [ ? ]

**ಲೊಕಶಿರಿ** '–ಲೊಕಶಿದಿ' ನೋ.

**ಲೊಕ್ಕಿ₁**, ನೆಕ್ಕಿ, ಲಕಲಿ, ಲಕ್ಕಲಿ, ಲಕ್ಕಿ₁, ಲಕ್ಕಿಲಿ, ಲಕ್ಕೆ₁ (ನಾ). (ಕಟುವಾದ ವಾಸನೆಯುಳ್ಳ, ಪೊದೆಯಾಗಿ ಬೆಳೆಯುವ) ಒಂದು ಬಗೆಯ ಔಷಧೀಸಸ್ಯ ; ಸಿಂಧುವಾರ: "ನಿರ್ಗುಂಡೀ, ಸಿಂಧುವಾರ – ಈ ☞ ಲೊಕ್ಕಿ" (ಹಠಾಯು. ೩೩-೯೭) ; ಉರಗನಿವಾಸಂ ಲೊಕ್ಕಿಯ ಪೊರೆಯೊಳ್ ಸವಾನಿಸಿ ದೊಡದಱ ತೆಂಕಣ ದೆಸೆಯೊಳ್ ಪುರುಷದ್ವಿತಯದೊಳಕ್ಕುಂ ಕರತ್ರಯಾಂತರದಿನುಗುಬ ಸುಸ್ವಾದುಜಳಂ (ಲೋಕೋಪ. ೩-೦೬) ; ಪೊಂಬುರ್ಚ್ಚದ ಲೊಕ್ಕಿಯ ಮಾರದಲ್ಲೆಲಸಿ ಲೊಕ್ಕಿಯುಬ್ಬೆಯೆಂಬೆರಡನೆಯ ಪೆಸರಂ ತಾಳ್ದಿ (ಎಕ. VIII, ಸಗರ. ೩೩-೦೨; 1077); ಮಿಗೆ ಸೊಕ್ಕುಗಂಪನೇಳಿಪ ಉಸುರನು ನಗೆಮೊಗದೊಳು ತೀವಿ ಸೊಗಸಲೂಡಿ ಮಗುಳೇಱಿಸಿದರು ಲೊಕ್ಕಿಯ ನಿಮ್ಮ ಜಾತಿಯ ಬಗೆಗೆ ತಹುದು ಪ್ರಿಯೆ ಕೊರ್ತರ (ಸಂಚಿಸೂಲ. ೩-೩೦). "ಕರಿಲೊಕ್ಕಿ" ಪರಾ. **ನೆಕ್ಕಿ**: "ಲಕ್ಕಲಿಗಿಡ, ನೆಕ್ಕಿ . . . ವಾಮಿ, ಭೂತವೇಷಿ" (ಸಸ್ಯಶಿ. ೦೦೩) ; ಮನೆ ನೆಕ್ಕಿ ನಿಡಿಲು ಹಾಡಿ ಹಕ್ಕಲು (ಕೌಇಂ. ೦೯೬೨, ೩೦೯-೮೫ 1336); ತಾ ಕೊಂಡು ಬಾಳು ನೀರು ತೋಟ ಮನೆ ಮಕ್ಕಿ ಮ[ರ] ನೆಕ್ಕಿ ನಿಡಲು . . . ನೀರನೆಱದು ಬಿಟ್ಟೆನು (ಕೌಇಾ. IX-ii, ೪೦೭-೩೦ ; 1364). **ಲಕಲಿ** : ಕಾಶಿತುಂಬಿ ಲಕಲಿ . . . ಸೂರ್ಯಕಾಂತಿಪುಷ್ಪಗಳು (ಸಿದ್ಧಶು. ೦೮-೮೨). **ಲಕ್ಕಲಿ** : (ಎಸವ್ಯ. II, ೬). **ಲಕ್ಕಿ₁** : "ನಿರ್ಗುಂಡಿಯೆನೆ ಸಿಂಧುವಾರ ವೆನಲಿಂದ್ರಾಣಿಯೆನೆ ಲಕ್ಕಿ [ಪಾಠಾಂ. ಲೊಕ್ಕಿ]ಯಕ್ಕು" (ಮಂಗರಾ. ೩೪-೦೨) ; ಹುಲಿಗಿಲ ಬೇರ್ತವಸದ ತಿಗುಡು ಲಕ್ಕಿ ಕಡಸಿಗೆಯ ಬೇರ್ ಮರುಂಗುಳಿಯೊಳಗ್ಗಳಿಸಿರೆ (ಕಲ್ಯಾಕಾ. ೪-೨೨) ; ಲಕ್ಕಿ:– ಈ ಸೊಪ್ಪಿನ ರಸ ಹರಳ ಎಣ್ಣೆಯಲ್ಲಿ ತೆಗೆದುಕೊಳ್ಳೆ ಮಹೋದರ ಮಾಣ್ಗುಂ (ಬಿವ್ವಶಿ. ೬); ಅಲ್ಲಲ್ಲಿ ಸೀಗೆ, ಲಕ್ಕಿ, ಕೆಂಜಿಗೆ . . . ಕರ್ಜಿ ಇತ್ಯಾದಿ ಪೊದೆಗಳು ಬೆಳೆದುಕೊಂಡಿದ್ದುವು (ಮಲೆಮ. ೩೩೨). 'ಕರ್ಲಕ್ಕಿ' ಪರಾ. **ಲಕ್ಕಿಲಿ** : "ಶೇಫಾಲಿಕಾ . . . ಕರೀಹುವ್ವುಗಳುಳ್ಳ ಲಕ್ಕಿಲಿ, ಕರೀಲಕ್ಕಿಲಿ" (ಸಿದ್ಧಾಂತಿ. ೦೨೮). **ಲಕ್ಕೆ₁** : (ಶಂದಶ. ೦೯೩).
[ವೇ. ೩ ತಮಿ. ಮಲ. ನೊಚ್ಚಿ ; ತುಳು. ನೆಕ್ಕಿ, ಲಕ್ಕಿ ; ತೆಲು. ಲೊಕ್ಕಿ, ನೊಚ್ಚಿಲಿ]

**ಲೊಕ್ಕಿ₂** (ನಾ). ಒಂದು ಊರಿನ ಹೆಸರು ; ☞ ಈಗಿನ ಧಾರವಾಡ ಜಿಲ್ಲೆಯ ಲಕ್ಕುಂಡಿ : ಲೊಕ್ಕಿ ಪೊಂಗದ್ಯಾಣವೆಪ್ಪತ್ತು ಅಂಕದೊಳು (ಕೌಇಾ. XV, ೦-೨೦ ; 1059 ). 'ಲೊಕ್ಕಿಗುಂಡಿ' ಪರಾ.

**ಲೊಕ್ಕಿಯ ಗದ್ಯಾಣ** = ಲೊಕ್ಕಿಗುಂಡಿಯಲ್ಲಿ ಟಂಕಿಸಿದ ಗದ್ಯಾಣ : ಬಡ್ಡಿಯಿಂದಕ್ಷಯವಾಗಿ ಕೊಟ್ಟ ಲೊಕ್ಕಿಯ ಗದ್ಯಾಣಂ (ಎಕ. VII, ಶಿಕಮೊ. ೯೨-೩೬ ; 1113). **ಲೊಕ್ಕಿಯಚ್ಚು** = ಲೊಕ್ಕಿಗುಂಡಿಯ ಗದ್ಯಾಣವನ್ನು ತಯಾರಿಸುತ್ತಿದ್ದ ಅಚ್ಚು : ದೇವರ್ಗ್ಗೆ ಬಿಟ್ಟ ಹೊಸ ಲೊಕ್ಕಿಯಚ್ಚಿನ ಗದ್ಯಾಣ ಹತ್ತು (ಕೌಇಾ. XV, ೨೨-೭೪ ; 1142). **ಲೊಕ್ಕಿಯ ಪೊನ್**, **ಲೊಕ್ಕಿಯ ಹೊನ್** = ಲೊಕ್ಕಿಯ ಗದ್ಯಾಣ : ಶ್ರೀಸ್ವಾಮಿದೇವರ ನವಿಲಚ್ಚಿನ ಪೊನ್ನಂ ಲೊಕ್ಕಿಯ ಪೊನ್ನಾಣಿಯುಂ(೦)ಮಾ ಪೊನ್ನ ತೂಕವುಮಾಗಿ ಪೊಯ್ದು ಸಲಿಸುವರು (ಕೌಇಾ. IX-i, ೦೬೪-೨೫ ; 1098) ; ಸೋಮೇಸ್ವರ ಭಟ್ಟರ್ಗ್ಗೆ ಪಾದಪೂಜೆಯಯ್ವತ್ತುಗದ್ಯಾಣ ಲೊಕ್ಕಿಯ ಪೊನ್ನ ಕೊಟ್ಟು . . . ಸರ್ಬ್ಬಬಾಧಾಪರಿಹಾರವಾಗಿ ಬಿಟ್ಟ ಗಟ್ಟಿ (ಕೌಇಾ. XX, ೦೦೦-೯೩ ; 1129) ; ಲಕ್ಕಕ್ಕಿಪ್ಪತ್ತೆರಡಂ ಲೊಕ್ಕಿಯ ಹೊನ್ನಂಗೆ ಸಾವಿರಕ್ಕಂ ಬೆಲೆ (ಕೃಪಶಾ. ಉತ್ತರಾರ್ಧ).

[☞ ಇದು 'ಲೊಕ್ಕಿಗುಂಡಿ' ಎನ್ನುವುದರ ಸಂಕ್ಷಿಪ್ತರೂಪ]

**ಲೊಕ್ಕಿಗ** (ನಾ). ಒಂದು ಬಗೆಯ ಹಕ್ಕಿ : ಲೊ[ಪಾಠಾಂ.ಲೊ]ಕ್ಕಿಗನು ಹುಡಿಕೀಲು ಹಾಲ್ವಕ್ಕಿ ಕೋಗಿಲೆ ಕೋಟದೇವನ ಕುಕ್ಕುಮಾಯಿಯ ಕೆಂಡವಕ್ಕಿಗಳವಱೊಳೊಪ್ಪಿದುದು (ಶಾಲ್ಯಶಾ. ೩-೨೨). [ ? ]

**ಲೊಕ್ಕಿಗದ್ಯಾಣ** (ನಾ). ಲೊಕ್ಕಿಗುಂಡಿಯಲ್ಲಿ ಟಂಕಿಸಿದ ಗದ್ಯಾಣ : ವರ್ಷಕ್ಕೆ ಪಣವೃದ್ಧಿಯ ಲೆಕ್ಕದೆ ಕೊಟ್ಟ ಲೊಕ್ಕಿಗದ್ಯಾಣಂ ನೂಱಱ್ಪತ್ತು (ಎಇ. XII. ೯೯-೮೪; 1112). [ಲೊಕ್ಕಿ$_2$+ಗದ್ಯಾಣ]

**ಲೊಕ್ಕಿಗುಂಡಿ** (ನಾ). = ಲೊಕ್ಕಿ$_2$ : ಏಸೆದುವಸದಳಂ ಲೊಕ್ಕಿಗುಣ್ಡೀ ಪುರೋಬ್ಬೀಪತಿ ಚಂಚದ್ರತ್ನಕೋಟಿಸ್ಫುರಿತಮುಕುಟಸಂಭಾಸಜ್ಜೈನಾಧಿವಾಸಂ (ಸೌಇಇ. XI-i. ೩೨-೪೪ ; 1008). [ಲೊಕ್ಕಿ$_2$+ಗುಂಡಿ$_2$]

**ಲೊಕ್ಕಿಯಬೆ** 'ಲೊಕ್ಕಿಯಬ್ಬೆ' ನೋ.

**ಲೊಕ್ಕಿಯಬ್ಬೆ**, ಲೊಕ್ಕಿಯಬೆ (ನಾ). [ಜೈನ] ಪದ್ಮಾವತಿ ಎಂಬ ಯಕ್ಷಿಯ ಹೆಸರು : ಪದ್ಮಾವತೀದೇವಿ . . . ಲೊಕ್ಕಿಯ ಮರದಲ್ಲೆಲಸಿ ಲೊಕ್ಕಿಯಬ್ಬೆಯೆಂಬೆರಡನೆಯ ಪೆಸರಂ ತಾಳ್ದಿ (ಎಕ. VIII. ನಗರ. ೩೫-೦೨; 1077) ; ಪದ್ಮಾವತಿಯು ಲೊಕ್ಕಿ ಎಂಬ ಮರದಲ್ಲಿದ್ದುದರಿಂದ ಅವಳಿಗೆ ಲೊಕ್ಕಿಯಬ್ಬೆ ಎಂಬ ಪರ್ಯಾಯನಾಮವೂ ಇತ್ತು (ಕೆಶಾಅ. ೦೦೦). **ಲೊಕ್ಕಿಯಬೆ** : ಲೊಕ್ಕಿಯಬೆಯುಂ ಜಿನಗೇಹಮು ಮಾಡಿದಂ ಧರೆಯೆಲ್ಲಂ ಪೊಗಳ್ವನ್ನೆಗಂ. . . ಅವನಿಪಾಳಕಂ (ಎಕ. VII. ಶಿವಮೊ. ೦೦೪-೧೦; 950 ?).
[ಲೊಕ್ಕಿ$_1$ + ಅಬ್ಬೆ$_1$]

**ಲೊಚ** (ನಾ). ಒಂದು ಅನುಕರಣ ಶಬ್ದ: 'ಲೊಚಗರೆ', 'ಲೊಚಗುಟ್ಟು' ಪರಾ.

**ಲೊಚಲೊಚ** (ದ್ವಿರುಕ್ತಿ) : ನಾಯಿಗಳು ಬೆಕ್ಕುಗಳ ಹಾಗೆ ತುದಿನಾಲಗೆಯಿಂದ ಲೊಚಲೊಚ ನೀರು ಕುಡಿಯುತ್ತವೆ (ಮುಂಬಯಿ. ೩-೯೦).

**ಲೊಚಕ್** (ನಾ). ಒಂದು ಅನುಕರಣ ಶಬ್ದ. 'ಲೊಚಕು' ಪರಾ.

**ಲೊಚಕು** (ಕ್ರಿ). = ಲೊಚಗುಟ್ಟು : ಗವರುತಿವೆ ಹುಲಿಯಂತೆ. ಲೊಚಕುತಿದೆ ಹಲ್ಲಿ (ಗೀಶಿಂ. ೦೦೩-೦೨). [ < ಲೊಚಕ್]

**ಲೊಚಗರೆ** (ಕ್ರಿ). 'ಲೊಚ್' ಎಂದು ಶಬ್ದಮಾಡು : ನಮ್ಮ ವೃತ್ತಾಂತವನ್ನೆಲ್ಲಾ ಹೇಳಿದೆ. ಅವರೆಲ್ಲರೂ ಲೊಚಗರೆದರು (ತಂಗಾಳಿ. ೦೦೩).
[ಲೊಚ + ಕರೆ$_1$]

**ಲೊಚಗುಟ್ಟು** (ಕ್ರಿ). ಬಾಯಿಂದ 'ಲೊಚ' ಎಂದು ಶಬ್ದಮಾಡು : ಕೊಕ್ಕರೆಯಂತೆ ತಲೆಯಾಡಿಸಿ ಅವಳದೇ ಆದ ವಿಶೇಷರೀತಿಯಲ್ಲಿ ಲೊಚಗುಟ್ಟಿದಳು (ಹೊಸಕ್ಷಿ. ೭೯) ; ಹಲ್ಲಿ ಲೊಚಗುಟ್ಟಿತು (ವಠಬಿಂ. ೦೦೦-೦೬).
[ಲೊಚ + ಕುಟ್ಟು$_1$]

**ಲೊಚ್ಚು** (ನಾ). ಒಂದು ಅನುಕರಣ ಶಬ್ದ : 'ಲೊಚ್ಚುಗರೆ' ಪರಾ.

**ಲೊಚ್ಚುಗರೆ** (ಕ್ರಿ). = ಲೊಚಗುಟ್ಟು : ಬಾಯಿಂದ ಲೊಚ್ಚುಗರೆಯುತ (ಸೌಗಂಧಿ. ೨೬೪-೦). [ಲೊಚ್ಚು + ಕರೆ$_1$]

**ಲೊಟ** (ನಾ). ಒಂದು ಅನುಕರಣ ಶಬ್ದ : 'ಲೊಟಗುಟ್ಟು' ಪರಾ.

**ಲೊಟಲೊಟ** (ದ್ವಿರುಕ್ತಿ) : ಲೊಟಲೊಟ ಶಬ್ದ ಮಾಡಬೇಡ (ರೂಢಿ).

**ಲೊಟಕ್** (ನಾ). ಒಂದು ಅನುಕರಣ ಶಬ್ದ : ಲೊಟಕ್ ಎಂದು ಆ ಮರದ ಕೊಂಬೆ ಮುರಿಯಿತು (ರೂಢಿ).

**ಲೊಟಕಲು** (ನಾ). 'ಲೊಟಲೊಟ' ಎಂದು ಮಾತನಾಡುವಿಕೆ ; ವಟಗುಟ್ಟುವಿಕೆ : ಆ ಮುದುಕಿಯ ಲೊಟಕಲು ಕೇಳಲಾಗುವುದಿಲ್ಲ (ರೂಢಿ).
[ಲೊಟಕು + — ಅಲು (< —ಅಲ್$_2$)]

**ಲೊಟಕು**, ಲೊಟಗು (ಕ್ರಿ). ವಟಗುಟ್ಟು ; ಗೊಣಗು : ಸೋರುವ ಮನೆಯೂ ಲೊಟಕುವ ಗಂಡನೂ ಸರಿ (ಗಾದೆ). **ಲೊಟಗು** : ನಮ್ಮ ತಂದೆಯ ಮೇಲೆ ನಮ್ಮಮ್ಮ ಲೊಟಗುತ್ತಿದ್ದರು (ರೂಠಸ. ೨೬೪).
[ < ಲೊಟ ]

**ಲೊಟಕೆ** (ನಾ). ನಾಲಗೆಯಿಂದ ಮಾಡುವ ಒಂದು ಬಗೆಯ ಶಬ್ದ : ಉಪ್ಪಿನಕಾಯನ್ನು ಲೊಟಕೆ ಹಾಕುತ್ತ ತಿಂದಳು (ರೂಢಿ).

**ಲೊಟಗು** 'ಲೊಟಕು' ನೋ.

**ಲೊಟಗುಟ್ಟು** (ಕ್ರಿ). = ಲೊಟಕು : ಹಳಬರೇ ಹೀಗೆ ಏನಾದರೂ ಲೊಟಗುಟುತ್ತಲೇ ಇರೋದು (ಹುಟ್ಟಿಹ. ೦೬೪). [ಲೊಟ + ಕುಟ್ಟು$_1$]

**ಲೊಟಗೆ** (ನಾ). ನಾಲಗೆಯಿಂದ ಮಾಡುವ ಒಂದು ಬಗೆಯ ಶಬ್ದ : "ಸವಿದರೆ ಈ ಮಾವಿನವನ್ನು ಸವಿಯಬೇಕು" ಎಂದು ದೊಡ್ಡದಾಗಿ ಲೊಟಗೆ ಹಾಕಿದ (ಹಸುಹೊ. ೦೯).

**ಲೊಟನ್ಪಾರಿವಾಳ** , ನೊಟಿನಪಾರಿವಾಳ (ನಾ). (ನೆಲದ ಮೇಲೆ ಹೊರಳಾಡುವ) ಒಂದು ಬಗೆಯ ಪಾರಿವಾಳ : "ಪಾರಾವತೇಷು ವಿಲುಠನ್ = ಲೊಟನ್ಪಾರಿವಾಳ" (ಶಾಠುಂಂಆ. ೩೭ ಟಿ೮೪). **ನೊಟನ ಪಾರಿವಾಳ** : ನೊಟನ ನೋಟನಪಾರಿವಾಳ, ಜುಟ್ಟನು ಧರಿಸಿಹವು (ಶಿಶಿಂಧ. II. ೩೭೦). 'ಲೋಟ್ವಾ' ಪರಾ.
[ಲೊಟನ್$_0$ (p ← ಸಂ. ಲುಠಸ) + ಪಾರಿವಾಳ$_1$]

**ಲೊಟಪಟ** (ನಾ). ಖಾಲಿಯಾದುದು, ನಿರರ್ಥಕವಾದುದು ಎಂಬರ್ಥವನ್ನು ಸೂಚಿಸುವ ಒಂದು ಅನುಕರಣ ಶಬ್ದ : (೬).

**ಲೊಟಪಾಟ** (ನಾ). = ಲೊಟಪಟ : ಲೊಟಪಾಟ ಸಂಸಾರದೊಳಗೆ ಸಿಲುಕಿನಾ ವಿಠಲ ನಿನ್ನ ಧ್ಯಾನವ ಮಱೆತೆನಯ್ಯ (ಪುರಂಪ. ೨-೦೨ ಕಲ್ಲಿ೦).

**ಲೊಟಲೊಟನೆ** (ಅ). 'ಲೊಟಲೊಟ' ಎಂಬ ಶಬ್ದವನ್ನು ಸೂಚಿಸುವ ಒಂದು ಅನುಕರಣಾವ್ಯಯ : ಆ ಮರದ ಕೊಂಬೆ ಲೊಟಲೊಟನೆ ಮುರಿದು ಬಿತ್ತು (ರೂಢಿ). [ < ಲೊಟ + — ಅನೆ$_1$ ]

**ಲೊಟವಿಟ** (ನಾ). = ಲೊಟಪಟ : ಲೊಟವಿಟ ಸಂಸಾರ ಹೇಯವೆನ್ನ (ವೀಕ್ಷಿಂ. ೯೯-೩).

**ಲೊಟ್ಟಾಲೊಟ್ಟಿ** (ನಾ). ಒಂದು ಅನುಕರಣ ಶಬ್ದ : ಬಿಟ್ಟ ಸೂಟಿಯಲರಿನೃಪಾಲರ ಮುಟ್ಟಿ ಪಾಡದಲಿಸುತ್ತ ಮೋಹಿದ ಥಟ್ಟನೊಡೆಹಾಯ್ದುಹಿತ ಜಲದೊಳಗಾಸೆವರಿದು ಪಿಟ್ಟುಗುಟ್ಟುತ ಪೆಣನ ಲೊಟ್ಟಾಲೊಟ್ಟಿ [ಪಾಠಾಂ. ನೊಟ್ಟಲೊಳೊಟ್ಟಿ, ವಟ್ಟಾವಟ್ಟಿ] ಮಸಗಲು ಕಳನ ಚೌಕದಲಟ್ಟಿಯಾಡಿಸ ಜಲ್ಲಿಪದ ರಾವುತನು (ಕುಮಾವ್ಯಾ. ೩-೦೦೪) ; ಮೆಟ್ಟಿ ಸೀಳಿದು ಹಾಯ್ದು ದಾಡೆಯ ಕೊಟ್ಟು ಮೋಱೆಯನೊಳಿದು ಹರಿವರಿಯಟ್ಟಿ ಹಿಡಿದಪ್ಪಳಿಸಿ ಜೋದರನಂಘ್ರಿಯಿಂದರೆದು ಇಟ್ಟು ಕೆಡಹಲು ಹೆಣನ ಲೊಟ್ಟಾಲೊಟ್ಟಿ [ಪಾಠಾಂ. ಅಟ್ಟಿಗಳೊಟ್ಟಿ, ಮೊಟ್ಟಿಲೊಳೊಟ್ಟಿ] ಮಸಗಿತು ತುರಗನರರಥ ವಿಟ್ಟಣಿಸೆ ಸವಱಿವು ದಂತಿವ್ರಾತವುಭಯದೊಳು (ಕುಮಾವ್ಯಾ. ೯-೭೬).
[ ? ]

**ಲೊಟ್ಟಿ** (ನಾ). ೧. ಹೆಂಡ ; ಮದ್ಯ : 'ಲೊಟ್ಟಿಗ', 'ಲೊಟ್ಟಿಗುಡಿಹಿ' ಪರಾ. ೨. ಮರದಿಂದ ಹೆಂಡವನ್ನು ಇಳಿಸಲು ಬಳಸುವ ಮಣ್ಣಿನ ಸಣ್ಣ ಮಡಕೆ. [ದೇ. II ತಮಿ. ತೆಲು. ಲೊಟ್ಟಿ]

**ಲೊಟ್ಟಿಗ** (ನಾ). ಮಣ್ಣಿನ ಮಡಕೆಯಲ್ಲಿ ಮದ್ಯಪಾನಮಾಡುವವನು ; (ಸಸಮ್ಮ. XVII. ೯). [ಲೊಟ್ಟಿ + — ಗ$_2$]

**ಲೊಟ್ಟಿಗುಡಿಹಿ** (ನಾ). = ಲೊಟ್ಟಿಗ (?) : ಒಟ್ಟಿದ್ದ ಮಣ್ಣಿಗೂ ನೆಟ್ಟಿದ್ದ ಕಲ್ಲಿಗೂ ಕಟ್ಟಿದ್ದ ಲಿಂಗವಡಿಯಾಗಿ ಬೀಳುವ ಲೊಟ್ಟಿಗುಡಿಹಿಗಳನೇನೆಂಬೆನಯ್ಯಾ ಕಲಿದೇವರ ದೇವಾ (ಬಸವಮಾ. ೨೨-೨೪).
[ಲೊಟ್ಟಿ + ಕುಡಿಹಿ]

**ಲೊಟ್ಟವಮೂಳ** (ನಾ). = ಲೊಟ್ಟಿಗ (?) : ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ ಹೊಟ್ಟೆಬಡಿಯಾಗಿ ಬೀಳುವ ಲೊಟ್ಟವಮೂಳನ ಕಂಡಡೆ ಮೆಟ್ಟಿದ್ದ ಎಡಪಾದರಕ್ಷೆಯ ತಗೊಂಡು ಲಟಲಟನೆ ಹೊಡಿ (ಏಕಾಂ. I. ೩೨೮). [ಲೊಟ್ಟ + ಮೂಳ$_1$ (< ಮೂಳ)]

**ಲೊಟ್ಟೆ₁** (ನಾ). ನಾಲಗೆಯಿಂದ ಮಾಡುವ ಒಂದು ಬಗೆಯ ಶಬ್ದ : ಲೊಟ್ಟೆಯಲ್ಲಿ ಗಟ್ಟಿಗನಾದರೂ ಕೊಟ್ಟ ಏನಹಾ ಬಿಡುವುದಿಲ್ಲ (ಗಾದೆ)

**ಲೊಟ್ಟೆಹಾಕು** = ನಾಲಗೆಯಿಂದ ಶಬ್ದ ಮಾಡು : ಅವರು ಲೊಟ್ಟೆ ಹಾಕಿಕೊಂಡು ಎತ್ತುಗಳನ್ನು ಓಡಿಸಿದರು (ಕೂಡಿ). **ಲೊಟ್ಟೆಹೊಡೆ** = ಲೊಟ್ಟೆಹಾಕು : ಗಾಡಿ ಹೊಡೆಯುವವ ಲೊಟ್ಟೆಹೊಡೆಯುವಂತೆ ಆಯ್ತು (ಶುಕೋಶಂ. ೯೦) ; ದುಬಾರಿ ಬಡ್ಡಿಗಾರನ ಕಡೆ ಕಣ್ಣು ಮಿಟುಕಿಸಿ ಲೊಟ್ಟೆ ಹೊಡೆದನು (ವಗಹೋ. ೧೨೨).

**ಲೊಟ್ಟೆ₂** (ನಾ). ೧. ಹುರುಳಿಲ್ಲದುದು ; ವ್ಯರ್ಥವಾದುದು : ಹೀಗೆ ಹುಡುಗಿಯನ್ನು ಬಿಟ್ಟುಕೊಂಡಿರುವುದು ಅಶ್ರೇಯಸ್ಕರ, ಪೂರ್ವಾಚಾರಕ್ಕೆ ವಿರುದ್ಧ, ಬ್ರಾಹ್ಮಣಮತಕ್ಕೆ ಸರಿಯಾದ್ದಲ್ಲ – ಹೀಗೆಯೇ ಏನೇನೋ ಲೊಟ್ಟೆ, ಲಸ್ಕು ಇದೆಯಲ್ಲ (ಇಂದು. ೯೬). ೨. ಸುಳ್ಳು ; ಸಟೆ : ಹಾಗೆ ಹೀಗೆ ಎಂದು ಕಂಡಾಪಟ್ಟೆ ಲೊಟ್ಟೆಹೊಡೆದರು (ಗಂಗಾಪ. ೧೬೭).

**ಲೊಟ್ಟೆಲೊಸಕು, ಲೊಟ್ಟುಲೊಸಕು** = ಕೆಲಸಕ್ಕೆ ಬಾರದುದು ಎಂಬುದನ್ನು ಸೂಚಿಸಲು ಬಳಸುವ ಮಾತು : ಲೊಟ್ಟೆಲೊಸಕು ಅಂತ ನೂರೆಂಟು ಹೇಳಿದರು (ಕಂಗೂಂ. ೦೦೯); ಬಾಬು ನಿಮ್ಮ ಚಿಕ್ಕಮ್ಮಣ್ಣ ಯವರಿಗೆ ಏನಾಗಬೇಕು ? ಲೊಟ್ಟುಲೊಸಕೂ (ಸಾಹೇಬ್. ೨೩೦).

[ದೇ.॥ ತಮಿ. ಲೊಟ್ಟೈ ; ಮಲ. ಲೊಟ್ಟ ; ತುಳು. ಲೊಟ್ಟೆ]

**ಲೊಟ್ಟೆ₃** (ನಾ). (?): ದೇಗುಲ, ಲೊಟ್ಟೆ, ಕಟ್ಟೋಗರ (ಅಕ್ರಳು. ೧೨೬) : ಕಟ್ಟಿನ ಕೆಳಗೆ ಲೊಟ್ಟೆಯ ಶ್ರೀಧರಕ್ರವಿನ್ನರು (ಇಒ. ೦೯೯೬, ಶಾಶಬಗ. ೨೯೬–೨೯; ?).   [ ? ]

**ಲೊಡಕ** (ನಾ). ೧. ವ್ಯರ್ಥವಾದುದು : ಲೊಡಕ ಲೊಡಕ ಜಿಹ್ವರ ಕೆಟ್ಟಸಂಸಾರವು ನೋಡಮ್ಮವ್ವ (ಪುರಂದ. ೩–೦೦೦ ಕಲ್ಲಿಂ). (ಗು). ೨. ವ್ಯರ್ಥವಾದ : ಲೊಡಕಸಂಸಾರವು ನಮ್ಮೆಲ್ಲರ ಗತಿರಹಿತ ಮಾಡುವ ಲೊಡಲೊಟ್ಟೆಮ್ಮ (ಪುರಂದ. ೩–೧೦೦ ಅಮುಕಲ್ಲಿಂ). [ ? ]

**ಲೊಡಕಜಿಹ್ವ** (ನಾ). ಹರಟೆ ಹೊಡೆಯುವ ನಾಲಗೆಯವನು : ಲೊಡಕ ಲೊಡಕಜಿಹ್ವರ ಕೆಟ್ಟಸಂಸಾರವು ನೋಡಮ್ಮವ್ವ (ಪುರಂದ. ೩–೧೦೦ ಕಲ್ಲಿಂ).   [ಲೊಡಕ+ಜಿಹ್ವ]

**ಲೊಡಲೊಟ್ಟೆ** 'ಲೊಳಲೊಟ್ಟೆ' ನೋ.

**ಲೊಡಲೊಡ** (ನಾ). ಒಂದು ಅನುಕರಣ ಶಬ್ದ : ಲೊಡಲೊಡ ಎಂದು ಮಾತನಾಡಬೇಡ (ಕೂಡಿ).

**ಲೊಡ್ಡ** 'ರೊಡ್ಡ' ನೋ.

**ಲೊಡ್ಡು, ಲಡ್ಡಿ, ಲಡ್ಡು₁** (ನಾ). ೧. ನಿಸ್ಸಾರವಾದುದು ; ಪೊಳ್ಳು ; ಜಳ್ಳು : 'ಲೊಡ್ಡುಮರ' ಪರಾ. **ಲಡ್ಡಿ** : ೧. ಹಸಿಯ ಕಟ್ಟಿಗೆಗಳು ನೀರೊಳಗೆ ಇರುವುದರಿಂದ ಲಡ್ಡಿ ಹಾಯದೆ ಕಬ್ಬಿನಂತೆ ಆಗಿ ಇರುವುವು (ಕೃಶಿಶ್ರ. ೧೧೨). **ಲಡ್ಡು₁** : ೨. ನಿಸ್ಸಾರವಾದ ಜೊಂಡು ಹುಲ್ಲು : ಗದ್ದೆಗಳಲ್ಲೆಲ್ಲಾ ಲಡ್ಡು ಮತ್ತು ವಡಕೆ ಬೆಳೆದುಕೊಂಡಿತ್ತು (ಶಪ್ಪಕು. ೨೬೦). ೩. (ಆಲಂ) ಪೊಳ್ಳುತನ ; ದೌರ್ಬಲ್ಯ : ಈ ದುಡ್ಡಿದ್ದವರ ಲಡ್ಡು ಹರಿಯೋ ದಿನಾ ಇನ್ನೇನೂ ದೂರಿಲ್ಲಾ (ಶಿಂಕಹು. ೧೬೬). (ಗು). ೪. ಪೊಳ್ಳಾದ ; ಜಳ್ಳಾದ : ಅದೊಂದು ಹಳೆಯ ಲಡ್ಡುಪೆಟ್ಟಿಗೆ (ಮೂಕಜ್ಜ. ೯೨) ; ಹೀಗೆ ನಡೆಯುವ ಲಡ್ಡು ಯಂತ್ರ ಯಾವಾಗ ಮುರಿದು ಬಿದ್ದರೂ ಆಶ್ಚರ್ಯವಿಲ್ಲ (ಮುಡಿಶಾರೆ. ೨೮೬). ೫. ನಿಸ್ಸತ್ತ್ವನಾದ : ದುರ್ಬಲನಾದ : ನಿಮ್ಮ ತಂದೇನೂ ಲಡ್ಡ ಮನುಷ್ಯ ಅಲ್ಲ (ಗಂಶೂಡು. ೨೭೦).

**ಲೊಡ್ಡಾಗು, ಲಡ್ಡಾಗು** = ಪೊಳ್ಳಾಗು ; ನಿಸ್ಸಾರವಾಗು : ಮರದಲ್ಲಿರುವ ನೀರು ವಿನಾಶಕರವಾದ ಏಕಾಣುಜೀವಿಗಳಿಗೂ ಅಣಬೆಗಳಿಗೂ ಆಹಾರವಾಗಿ ಮರವು ಲೊಡ್ಡಾಗುತ್ತದೆ (ಕಿರ್ವಾ. ೨೮೦) ; ತೋಟದ ಸಾರ ದಾಟುವಾಗ ಅಡಿಕೆಮರಗಳು ತುಂಬ ಲಡ್ಡಾಗಿದ್ದುದರಿಂದ ಬಳುಕಿದವು (ಜೀಕೃ. ೧೨೫). **ಲೊಡ್ಡು ಮಾಡು** = ಪೊಳ್ಳುಮಾಡು ; ಟೊಳ್ಳುಮಾಡು : ಅಂಥ ಪದಾರ್ಥವನ್ನು . . . ಒಳಗಿನಿಂದ ಕುಟ್ಟಿ ತಿಂದು ಲೊಡ್ಡು ಮಾಡುತ್ತಲೇ ಇರುತ್ತದೆ (ಬಂಕಿಶು. ೩೨೫). **ಲೊಡ್ಡು ಹಿಡಿ** = ಪೊಳ್ಳಾಗು ; ಟೊಳ್ಳಾಗು : ಸಾಮಾನುಗಳು ಮೂಲೆ ಮೂಲೆ ಯಲ್ಲಿಯೂ ಧೂಳು ತುಂಬಿ ಲೊಡ್ಡುಹಿಡಿದು ಬಿದ್ದಿದ್ದರೆ , ಅದಕ್ಕೆ ಏನೂ ಅರ್ಥವಿರಲಿಲ್ಲ (ಶಿಬಂಧ. II. ೧).

**ಲೊಡ್ಡುಗಿನಮರ** (ನಾ). ಒಂದು ಬಗೆಯ ಮರ : ಬಲಲೊಡ್ಡಿ, ಬುಡಿಗಾನೆ, ಲೊಡ್ಡುಗಿನಮರ (ವೃಶಿಗ. ೭೩–೦೯೯೦).   [ ? + ಮರ₁]

**ಲೊಡ್ಡುಮರ, ಲಡ್ಡುಮರ** (ನಾ). ಪೊಳ್ಳಾದ ಮರ; ಜಳ್ಳು ಮರ : ಹಳೇಕಾಲದ ಲೊಡ್ಡುಮರ ಅದು (ಪಳುಶು. ೦೭೩). **ಲಡ್ಡುಮರ** : ಈ ಸಲ ಬಂದ ಬಿರುಗಾಳಿಗೆ ಲಡ್ಡುಮರಗಳೆಲ್ಲ ಮುರಿದು ಬಿದ್ದವು (ಕೂಡಿ).

[ಲೊಡ್ಡು + ಮರ₁]

**ಲೊದಡಿ** 'ಲೊದಳೆ' ನೋ.

**ಲೊದಳೆ, ಲೊದಡಿ** (ನಾ). ೧. ಜೊಲ್ಲು ; ಲಾಲಾರಸ : ಸುರಿವ ಬೆಮರಿನ ಬಾಯಲೊದಳೆ[ಪಾಠಾಂ. ಬಾಯ ಲೋಳೆ]ಯ . . . ಕುದುರೆ ಬೀಜಿಾತು ಭಯವನಹಿತರಿಗೆ (ಕೊರಂ. ೩–೩೦–೩೩). ೨. ಜಿಗುಟಾದ ಮುದ್ದೆ : ತಲೆದೊಳ್ ತೆಕ್ಕೆಗೊಂಡ ನುಣ್ಮದುಳ ಲೊದಳೆಯಂ ಮೆಟ್ಟಿ (ಶಾಂತೀಶ್ವ. ೯–೦೦೯ ವ). **ಲೊದಡಿ** : ೨. ರಾಯಸಾಹೇಬರು ವೇದನೆಯಿಂದ ನರಳಿದರು. ಕೆಮ್ಮು ಬಂತು. ಬಾಯಿಂದ ನೆತ್ತರ ಲೊದಡಿ ಬಿದ್ದಿತು (ಶ್ರೀಶಾಕ್ರ. ೨೦೦). ೩. ಕಫ ; ಶ್ಲೇಷ್ಮ : ಮುದುಕನು ಕೆಮ್ಮು ತಾಳಿ ಕೊಂಡು ಬಹು ಪ್ರಯಾಸದಿಂದ ಲೊದಡಿಯನ್ನುಗುಳಿ ಕುಳಿತುಕೊಂಡು ಕೇಳಿದನು (ಕುಂಶಿ. ೦೦). 'ಲೋಳೆ' ಪರಾ.

**ಲೊಲ್ಲೊಟ್ಟೆ** 'ಲೊಳಲೊಟ್ಟೆ' ನೋ.

**ಲೊಳ್** (ನಾ). ಒಂದು ಅನುಕರಣ ಶಬ್ದ : ಲೊಳ್ ಎಂದು ನಾಯಿ ಬಗುಳಿತು (ಕೂಡಿ).

**ಲೊಳ** (ನಾ). ಬರಿದಾಗಿರುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ : 'ಲೊಳಲೊಟ್ಟೆ' ಪರಾ.

**ಲೊಳಲೊಟ್ಟೆ, ಲೊಡಲೊಟ್ಟೆ, ಲೊಲ್ಲೊಟ್ಟೆ** (ನಾ). ಪ್ರಯೋಜನ ವಿಲ್ಲದುದು ; ನಿಷ್ಪ್ರಯೋಜಕವಾದುದು ; ವ್ಯರ್ಥ : ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ (ಪುರಂದ. ೦–೦೦೦ ಕಲ್ಲಿಂ). **ಲೊಡಲೊಟ್ಟೆ** : ಲೊಡಕ ಸಂಸಾರವು ನಮ್ಮೆಲ್ಲರ ಗತಿರಹಿತ ಮಾಡುವ ಲೊಡಲೊಟ್ಟೆಮ್ಮ (ಪುರಂದ. ೩–೧೦೦ ಅಮುಕಲ್ಲಿಂ). **ಲೊಲ್ಲೊಟ್ಟೆ** : ಇವಳಿಗೆ ಸಹಾಯ ಲೊಲ್ಲೊಟ್ಟೆಯೆಂದು ಬೇರೆ ಕೆಲವರು (ವಾಗ್ಮೀಶಿ. ೨೯೦) ; ಊರಿಗೆ ಹಬ್ಬವಾದರೆ ನಾಯಿಗೆ ಲೊಲ್ಲೊಟ್ಟೆ (ಗಾದೆ).   [ಲೊಳ+ಲೊಟ್ಟೆ₂./ತಮಿ. ಲೊಟಲೊಟ್ಟೈ]

**ಲೋಕ** (ನಾ). ೧. ಸೃಷ್ಟಿಯಲ್ಲಿ ಕಾಣುವ ಭೂಮಿ, ಆಕಾಶ, ಸಮುದ್ರ ಗಳ ಎಲ್ಲ ಭಾಗಗಳು ಸೇರಿದ ಭಾಗ ; ವಿಶ್ವ ; ಪ್ರಪಂಚ ; ಜಗತ್ತು : "ಭುವನಂ, ವಿಷ್ಟಪಂ, ಲೋಕಃ, ಜಗತ್ – ಈ ೪ ಜಗದ ಪೆಸರ್" (ಹಲಾಯು. ೨೨–೦೩೩) ; ಹುಟ್ಟೆಂದು ಲೋಕದಲ್ಲಿ ಹುಟ್ಟಿಸಿ ಇಳಿಯ ಬಿಟ್ಟೊಡೆ ನಿಮ್ಮ ನಗುವರಯ್ಯಾ (ಬಸವ. ೬೩) ; ಲೋಕವಿವನ ಮನೆ, ಲೋಕದುದ್ಧಾರಣವೆ ಮನೆವಾರ್ತೆ (ಗೋರೈಶಾ. ೨–೯೨). ೨. ಭೂಮಿ ; ಮರ್ತ್ಯಲೋಕ : ಲೋಕದೊಳಾಂ ಕಾಣದರಿಲ್ಲೇ ಕುತ್ತಂ ಪೊರ್ದ ನಮೆವ ಮಾನಿಸರಂ ಕೇಳಿ . . . ಕಂಡಜೀಯೆಂ (ಧರ್ಮಾಮೃ. ೪–೯೦) ; ನಂಬಲಜೀಯರೀ ಲೋಕದ ಮನುಜರು (ಬಸವ. ೦೦೬) ; ಲೋಕದೊಳಗೆಲ್ಲ ಕಂಡುದನು ನುಡಿದು ತಾನೇಕವಾಗಿಹನು (ಸರ್ವಜ್ಞ. ೦೬). ೩. (ಸಾಮಾನ್ಯ) ಜನ; ಪ್ರಜೆ ; ಜನತೆ :" ಜನಃ, ಲೋಕಃ, ಪ್ರಜಾ — ಈ ೩ ಪ್ರಜೆ "

(ಕಲಿಯು. ೪೭-೦೨೪). ೪. ಮನುಷ್ಯಸಮುದಾಯ ; ಮಾನವಕುಲ : ಲೋಕಕ್ಕಿದರ್ಥಶಾಸ್ತ್ರದ ಟೀಕೆನಿಸಿದ ತನ್ನ ನುಡಿ ಮನಂಗೊಳಿಸೆ (ಶಂಕರಾ. ೯-೦೪) ; ಲೋಕದ ಡೊಂಕ ನೀವೇಕೆ ತಿದ್ದುವಿರಿ (ಬಸವ. ೦೨೪) ; ತಂದೆಯನು ಜಱೆವ ಮಗ ಹೊಲ್ಲ ಲೋಕಕ್ಕೆ ಬಂಧನವೆ ಹೊಲ್ಲ (ಸರ್ವಜ್ಞ. ೬೯೮). ೫. ಲೋಕದ ವ್ಯವಹಾರ,– ನಡವಳಿಕೆ : ಲೋಕ ಬಲ್ಲವರಿಗೆ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೆ (ಶಂಬರು. ೪೭). ೬. ನೋಡುವುದು ; ನೋಟ. ೭. ಭೂಮಿಯೂ ಸೇರಿದಂತೆ ಮೇಲೆ ಏಳು ಮತ್ತು ಕೆಳಗೆ ಏಳು ಎಂದು ಕಲ್ಪಿಸಿರುವ ಜಗತ್ತು : ಆತನವಯವವೆಲ್ಲವೀ ಸತ್ಯಾದಿ ಲೋಕಗಳು (ಅಮೃತ. ೩-೨೫); ಲೋಕಗಳು ೧೪ ಇವೆ. ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಳ ಈ ಏಳು ಕೆಳಗಿನ ಲೋಕಗಳು. ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ— ಈ ಏಳು ಮೇಲಿನ ಲೋಕಗಳು (ಅಮೃತ. ೩-೨೫ ಟೀಕು). 'ಚತುರ್ದಶಲೋಕ' ಪರಾ. ೮. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : ಹರನಯನವಹ್ನಿ . . . ಲೋಕಮಲತ್ರಿತಯಂ . . . ಮೂಱಱ ನಾಮಂ (ವ್ಯವಗ. ೯). ೯. ಏಳು ಎಂಬ ಸಂಖ್ಯೆಯ ಸಂಕೇತ. ೧೦. ಹದಿನಾಲ್ಕು ಎಂಬ ಸಂಖ್ಯೆಯ ಸಂಕೇತ.

**ಲೋಕರ್** = (ಸಾಮಾನ್ಯ)ಜನ : ಲೋಕರಂತೆ ನೀ ಮೃತ್ತಿಕೆ ಮೆದ್ದು ತಾ ಕೋಟಿಸೆ ಜನನಿಯು (ಭರಂದ. ೦-೯೭-೩) ; ಲೋಕರ್ಗೆ ಸಂದೇಹಸಲ್ಲ (ವ್ಯಕುಂಚ. ೪-೩೫). **ಲೋಕಶಿಖಾಮಣಿ** = ಜಗತ್ತಿನಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ಶ್ರೀಕೊಪಣಪುರವರೇಶ್ವರ ಲೋಕಶಿಖಾಮಣಿ ವಿಯಚ್ಚರಾನ್ವಯತಿಳಕಂ (ಶಾಇಸ. XX; ೭೦-೨೭; ೧೧೦೪). [ಸಂ.]

**ಲೋಕಕಂಟಕ** (ನಾ). ಜಗತ್ತಿಗೆ ಕೇಡು ಮಾಡುವವನು : ತಾಮಸರ್ ಲೋಕಕಂಟಕರಾಗೆ ರಕ್ಕಸರೆನಿಸಿ ಮಱುಮೆಯ್ಯೊಳೊಗೆದು . . . ತಿರೆಗೆ ಪ್ರೇಜಿಯಾದರ್ (ಜಾಮ. ೦೦೯-೨೪). [ಸಂ.]

**ಲೋಕಕರ್ತೃ** (ನಾ). ಜಗತ್ತನ್ನು ಸೃಷ್ಟಿಸಿದವನು : ಲೋಕಕರ್ತಂ ನಾನೆ ಈತಂ ಲೋಕಪಾವನಮೂರ್ತಿ ಕಾರಣ ಲೋಕಶಿಕ್ಷಕ ನಾನೆ ಈತನು ಲೋಕರಕ್ಷಕನು (ಬಸವ. ೬೦-೪೦). [ಸಂ. ಲೋಕಕರ್ತೃ]

**ಲೋಕಕಲ್ಯಾಣ** (ನಾ). ಜಗದ ಕ್ಷೇಮ ; ಜಗತ್ತಿನ ಕಲ್ಯಾಣ : ಆತ್ಮಕಲ್ಯಾಣದಂತೆಯೆ ಲೋಕಕಲ್ಯಾಣವೂ ಈತನ ವ್ಯವಹಾರಗಳ ಧ್ಯೇಯವಾಗಿರಬೇಕು (ಜುಗ್ರ. ೪೦ ಪೀಠಿ). [ಸಂ.]

**ಲೋಕಗತಿ** (ನಾ). ಜಗತ್ತಿನ ನಡೆ ; ವಿಶ್ವದ ವ್ಯವಹಾರ : ಲೋಕಗತಿ ಪಱಯಾವಿಲಾಸ ವಿವೇಕಿಗಳಿಗಿದು ಬಯಲು ಭಲುಗುಣ ಸಾಕು ಗರ್ವವ ಬೀಳುಕೊಡು (ಕುಮ್ಯಾಭಿ. ೩-೫೪). [ಸಂ.]

**ಲೋಕಗಾಳ್ಪ** (ನಾ). ಒಬ್ಬಾತನ ಹೆಸರು ; ಲೋಕಗಾಳ್ಪರ್ಪೂಸವುರಂ ಬ್ರಹ್ಮದೆಂ ಕೊಟ್ಟು (ಎಪಿ. ೦೯೪೩. ೦೦-೩; ಸು. ೫ಪಿದು ೫೫). [ ? ]

**ಲೋಕಗುರು** (ನಾ). ೧. ಜಗತ್ತಿಗೆ ಗುರುವೆನಿಸಿರುವವನು ; ಪರಮಾತ್ಮ : ಲೋಕಗುರು ಶಂಖಚಕ್ರಗದಾಕರನತಿಶಯಚತುರ್ಭುಜಂ (ಶಂಕರಾ. ೯-೩೦). ೨. ವಿಶ್ವದ ಗುರು ; ಮಹಾತ್ಮ: ಮನ್ಮನೋಮಂದಿರಕೆ ಓ ಲೋಕಗುರುಗಳೆಲ್ಲ ಬನ್ನಿ (ಅಗ್ನಿಹಂ. ೯-೨). [ಸಂ.]

**ಲೋಕಚಕ್ಷು** (ನಾ). ಜಗತ್ತಿಗೆ ಕಣ್ಣಾದವನು ; ನೇಸರು ; ಸೂರ್ಯ. [ಸಂ. ಲೋಕಚಕ್ಷುಸ್]

**ಲೋಕಚೂಡಾಮಣಿ** (ನಾ). ಜಗತ್ತಿನಲ್ಲಿ ಶ್ರೇಷ್ಠನಾದವನು : ಸುಖಸಾದನ್ಶಿತನುಂ ಲೋಕಚೂಡಾಮಣಿಯುಂ . . . ಪರಮಬ್ರಹ್ಮಸ್ವಕೃಸಂದಂ (ಆದಿಪು. ೦೭-೫೦). [ಸಂ.]

**ಲೋಕಜನನಿ** (ನಾ). ಜಗತ್ತಿನ ತಾಯಿ ; ಲೋಕಮಾತೆ ; ಲಕ್ಷ್ಮಿ : "ಇಂದಿರಾ . . . ಲೋಕಜನನೀ, ಕ್ಷೀರಸಾಗರಕನ್ಯಕಾ – ರ ಲಕ್ಷ್ಮಿಯ ಹೆಸರುಗಳು" (ಸಿದ್ಧಾಂತಿ. ೮೬). [ಸಂ. ಲೋಕಜನನೀ]

**ಲೋಕಜಿತ್ತು** (ನಾ). ೧. ಜಗತ್ತನ್ನು ಗೆದ್ದವನು ; ವಿಶ್ವವನ್ನು ಜಯಿಸಿದವನು. ೨. ಋಷಿ ; ಸಂನ್ಯಾಸಿ. ೩. ಬುದ್ಧ : "ಬುದ್ಧಂ . . . ಲೋಕಜಿದ್ಧನಿ ಸಮಂತಭದ್ರನೆನಲ್ಕೆ ಬೌದ್ಧಂ" (ಕಾಂಗಾ. ೭-೨೩). [ಸಂ. ಲೋಕಜಿತ್]

**ಲೋಕಜ್ಞ** (ನಾ). ಭೂಲೋಕದ ರೀತಿನೀತಿಗಳನ್ನು ಅರಿತವನು: ತಮ್ಮ ಮಾಱಸಿಯ ಭವದ ಜನ್ಮಜನಕಮೋಹಂ ಕಾರಣವಾಗಿ ನಿಮ್ಮಡಿಯಂ ಕಾಣಲ್ ಬಂದು ಲೋಕಜ್ಞರುಂ ಸೇವಾವಿಚಕ್ಷಣರುಮಪ್ಪುದಱಿಂದಂ . . . ಅದೃಶ್ಯರಾಗಿ ನೋಡುತ್ತುಮಿರ್ದರ್ (ಶಾಂತಿಪು. ೯-೫೫ ವ). [ಸಂ.]

**ಲೋಕಟಿಗ** (ನಾ). ಒಬ್ಬಾತನ ಹೆಸರು: ಆತನ ವೇಳೆ ಬಡಗೊಣ್ಡ ದ ಲೋಕಟಿಗನರಸಂಗೆ ಪುತ್ರನಿಮಿತ್ತಂ ಕಾರಣಮಾಗಿ ಹುಯ್ವಗಣ್ಣದಬ್ಬೆಗೆ ತಲೆಯಂ ಪರಿಸಿ (ಎಕ. VIII, ಸೊರಬ. ೪೭೯-೫ ;೯೯೧). [ ? ]

**ಲೋಕಟೆ** (ನಾ). ಒಬ್ಬಾತನ ಹೆಸರು : ರತ್ನಕ್ಷಿತಿಯುಮಪ್ಪ ಮಱಪಾ ಪ್ರವರ್ತಿಸೆ ಲೋಕಟೆ ಬನವಸೆ[ಪ]ನ್ನಿಚ್ಚಾಸಿರಮುಮನಾಳೆ (ಶಾಇಸ. XX, ೮೫-೩ ; ೯೦೬). [ ? ]

**ಲೋಕತಂತ್ರ** (ನಾ). ೧. ಜಗತ್ತಿನ ವ್ಯವಹಾರ : ವಿಶ್ವದ ನಡವಳಿಕೆ : ನಾವು ವನವಾಸಿಗಳಾದರೂ ಲೋಕತಂತ್ರವನ್ನೆಲ್ಲಾ ಬಲ್ಲೆವು (ಶಾಕುಂತ.೫೭-೮). ೨. ಪ್ರಜೆಗಳು ಸಾಕ್ಷಾತ್ತಾಗಿ ಅಥವಾ ಪ್ರತಿನಿಧಿಗಳ ಮೂಲಕ ನಡೆಸುವ ರಾಜ್ಯಭಾರ : ಪ್ರಜಾಪ್ರಭುತ್ವ : "ಪ್ರಜಾಪ್ರಭುತ್ವ, ಜನತಂತ್ರ, ಲೋಕತಂತ್ರ" (Democracy. ಕನ್ನಿ. ೩೦). [ಸಂ.]

**ಲೋಕದೂರ** (ನಾ). ಜಗತ್ತಿನ ವ್ಯವಹಾರದಿಂದ ದೂರವಾದುದು ; ಜಗತ್ತಿನ ಸಂಬಂಧವನ್ನು ಕಳೆದುಕೊಂಡುದು : ರಸಾನುಭವ ಲೋಕಾತಿಶಯ, ಲೋಕೋತ್ತರ ಎಂದರೆ ಲೋಕದೂರವಾಗಲೀ ಲೋಕಭಿನ್ನವಾಗಲೀ ಅಲ್ಲ (ಶಾಂದಶ. ೨೦). [ಸಂ.]

**ಲೋಕಧರ್ಮ** (ನಾ). ಜನತೆಯ ನಡೆ ; ಲೋಕಾಚಾರ ; ಜನರೂಢಿ : ಲೋಕಧರ್ಮದ ರಚನೆ ರಚಿಸುವುದ್ಯೆಸಲೇ ನಮಗಿಹುದು ಮತವಲ್ಲದೊಡೆ ಮಾಣಲೆನುತ್ತ ಮುರಿದೆದ್ದ (ಕುಮ್ಯಾಭಿ. ೨೩-೦೪) ; ಲೋಕದ ನಡವಳಿಕೆಯನ್ನು ಅನುಸರಿಸಿ ಗದ್ಯದಲ್ಲಿ ಮಾತನಾಡುವುದು, ಸ್ವಾಭಾವಿಕವಾಗಿ ನಡೆದಾಡುವುದು ಇವೆಲ್ಲಾ 'ಲೋಕಧರ್ಮ' (ಕ್ಷಿತಿ. ೨೦೭ ಟಿಪ್ಪ). [ಸಂ.]

**ಲೋಕಧರ್ಮಿ** (ನಾ). [ನಾಟ್ಯ] ಎರಡು ಬಗೆಯ ನಾಟ್ಯಸಂಪ್ರದಾಯಗಳಲ್ಲಿ ಒಂದು : ಲೋಕಧರ್ಮಿ ನಾಟ್ಯಧರ್ಮಿಯೆಂಬೆರಡುಂ ಧರ್ಮಿಯುಮಂ . . . ನೆಱೆಯೆ ತೋಱೆ (ಆದಿಪು. ೫-೩೦ ವ). 'ಧರ್ಮಿ' ಪರಾ. [ಸಂ. ಲೋಕಧರ್ಮಿನ್]

**ಲೋಕನಯನ** (ನಾ). ಲೋಕಕ್ಕೆ ಕಣ್ಣೆನಂತಿರುವವನು ; ಸೂರ್ಯ : ಶ್ರೀಕರದ ತತ್ಸರೋವರಮಶೀ[ ಸೀ ]ಕ್ಷಿಸಿ ರತಿ ಲೋಕನಯನದ ತಾಪವಡಸಿ . . . ಸುಯ್ದಾನದೊಡನೆ (ಪಪವಾ. ೯-೩೫). [ಸಂ.]

**ಲೋಕನಾಥ** (ನಾ). ೧. ಜಗತ್ತಿನ ಒಡೆಯ ; ವಿಶ್ವದ ಪ್ರಭು : ಸಭೆಯೊಳ್ ದೇವನಿಕಾಯಮೊಪ್ಪುತ್ತಿರೆ ಬಂದಂ ಲೋಕನಾಥಂ ಸ್ವಯಂಪ್ರಭತೀರ್ಥೇಶ್ವರಂ (ಶಾಂತಿಪು. ೦-೪೦). ೨. ಬ್ರಹ್ಮ. ೩. ವಿಷ್ಣು : ಲೋಕನಾಥನ ನೆಸೆಯೋ ಮನುಜಾ (ಭರಂದ. ದಾ. ೩-೦೦೭ ಆಮುಕ್ಕಳು): ೪. ಶಿವ : ಆ ಕುಲಂಗಳ ಮಾತವೇತಕೆ ಲೋಕನಾಥಪ್ರೋಕ್ತವಾದ ಪ್ರಾಕಟದ ಜಾತಿಗಳಿಲಾ ಅಷ್ಟಾದಶಂಗಳು (ಬಸವ.೫೫-೨೦). ೫. ಬುದ್ಧ. ೬. ರಾಜ ; ದೊರೆ. [ಸಂ.]

**ಲೋಕನಾಥರಸ** (ನಾ). [ವೈದ್ಯಶಾ] ಒಂದು ಬಗೆಯ ಔಷಧೀತೈಲ : ಪಾವಟೆಬೀಜ, ಬಿಳಿಕರ್ಣಿಕೆಬೀಜ . . . ಮರ್ದಿಸಿ ಕಹಿಸೋರೆಕಾಯಲ್ಲಿ

ತುಂಬಿ ಬಿಸಿಲಲ್ಲಿ ಇಟ್ಟಿದ್ದರೆ ತೈಲ ಬರುವುದು . . . ಈ ತೈಲದ ಹೆಸರು ಲೋಕನಾಥರಸ (ಸಕವೈ. ಕಣ.೯೭೦ ।). [ಸಂ.]

**ಲೋಕನಾಯಕ** (ನಾ). ೧. = ಲೋಕನಾಥ ೧ : ಲೋಕನಾಯಕ ಸಿರಿಪುರಂದರವಿಠಲನ ಸಾಕಾರವಾದಂಥ ಪರಮಭಾಗವತರು (ಪುರಂದ. ದಾ. ೩-೦೫-೩). ೨.=ಲೋಕನಾಥ ೪ : ನಾಕು ಬಾಗಿಲ ನಡುವೆ ಏಕಾಕಿ ನಿಂತಿಹನು ತೂಕುಳ್ಳ ಕೈಲಾಸಮಂದಿರದಿ ಶಿವಸಿದ್ಧ ಲೋಕನಾಯಕನ ಲೀಲೆಯಲಿ (ಸಿದ್ಧ ಪು. ೬-೬೭). [ಸಂ.]

**ಲೋಕನಿಷ್ಠ** (ನಾ). ಜಗತ್ತಿಗೆ ಸಂಬಂಧಪಟ್ಟುದು; ಲೌಕಿಕವಾದುದು : ಕಲೆ ಸತ್ಯವನ್ನು ಪ್ರಕಟಿಸುತ್ತದೆ ಎಂದರೆ ಅದು . . . ಲೋಕನಿಷ್ಠವೇ ಅಥವಾ ಲೋಕಾತೀತವೇ—ಈ ಬಗೆಯ ಹಲವು ಸಮಸ್ಯೆಗಳು ಏಳುತ್ತವೆ (ಸೌಂದಸ. ೯೦). [ಸಂ.]

**ಲೋಕನೇತ್ರ** (ನಾ). ೧.=ಲೋಕನಯನ: ಲೋಕನೇತ್ರನ ಕುಲೋದ್ಭವ ಕುಮಾರರ್ಕಳಂ . . . ಆಲೋಕಿಪರು (ಕಾದಸಂ. ೬-೦೫); ನಿಜನೇತ್ರಂ ಲೋಕನೇತ್ರಂ . . . ನಿಜರಮಣಿ ಜಗನ್ಮಂಡಳೀಮಾತೆ ನಿಚ್ಚಂ . . . ನಿಜಮಾದಂ ಸುಪ್ರಮೋದಂ ಕುಡುಗೆಮಗತುಳಶ್ರೀಯುಮಂ ಶೈಲಜೇಶಂ (ರಾಜಶೇ. ೦-೨). ೨. ಚಂದ್ರ : (೬). [ಸಂ.]

**ಲೋಕಪತಿ** (ನಾ). ಜಿನ ; ತೀರ್ಥಂಕರ : ಲೋಕಪತಿಗಿಟ್ಟನನುಸ್ಮೃತ ಮಾತ್ರಪಾಪವಿಚ್ಛೇದನಮುಂ ಜಗತ್ಪ್ರಥಮಮಂಗಳಮುಂ ಹರಿ ಶಾಂತಿನಾಮ್ರ ಮಂ (ಶಾಂತಿಪು. ೦೦-೭೯). [ಸಂ.]

**ಲೋಕಪಾಲ** (ನಾ). ೧. ಜಗತ್ತನ್ನು ಪಾಲಿಸುವವನು; ವಿಶ್ವವನ್ನು ಕಾಪಾಡುವವನು: 'ಲೋಕಪಾಲತ್ವ' ಪರಾ. ೨. ದಿಕ್ಕನ್ನು ಕಾಯುವವನು; ದಿಕ್ಪಾಲ : ನಾಲ್ವರ್ ಲೋಕಪಾಲರುಂ . . . ಅಱುವತ್ತು ಮೂವರ್ ವಲ್ಲಭೆಯರುಂ ತನಗೆ ಪ್ರಸಿದ್ಧಮಾಗೆ (ಶಾಂತಿಪು. ೯-೧೦೦ ವ); ಹರಿಯಿಲ್ಲದ ಪವನಾಧ್ವಂ ಹರಿಯಿಲ್ಲವ ಲೋಕಪಾಲಪರಿಷನ್ಮಲಯುಂ ಹರಿಯಿಲ್ಲದ ಕಾಂತಾರಂ ಹರಿ ನೀನಿಲ್ಲದ ಮದೀಯಗೋಕುಲಮಫಲಂ (ಜಗಚ. ೩-೯೫). ೩. ಅರಸ ; ರಾಜ: "ರಾಜಾ . . . ಲೋಕಪಾಲಃ—ಈ ೧೨ ಅರಸು" (ಕರಾಜು. ೬೯-೨೬೭); ಹರುಷಸಂಕಲಿತಮಹುದೀ ಲೋಕಪಾಲರಂ ಪಡೆದಖಿಳಭೋಗಂಗಳಂ ಚುಂಬಿಸಿ . . . ಸತಪೋರಾಜ್ಯಪಾಲನೆಗೆ ಗಮಿಸುವುದೆ ಸದ್ಧರ್ಮವು (ಕಂಕಾಕಾ. ೨-೧೦-೦೦). [ಸಂ.]

**ಲೋಕಪಾಲಕ** (ನಾ).= ಲೋಕಪಾಲ ೨ : ಇಂದ್ರ ಅಗ್ನಿ . . . ಚಂದ್ರ ಈ ಪದಿಂಬರು ಲೋಕಪಾಲಕರಿಂದಂ (ಕೃಶಿಕಾ. ೬-೯). [ಸಂ.]

**ಲೋಕಪಾಲತ್ವ** (ನಾ). ಜಗತ್ತನ್ನು ಪಾಲಿಸುವಿಕೆ ; ವಿಶ್ವದ ಅಧಿಕಾರ : ಅವನಿಗೆ ಅಮರತ್ವ, ಧನಪತಿತ್ವ, ಲೋಕಪಾಲತ್ವ . . . ಇವುಗಳನ್ನು ಕೊಟ್ಟನು (ದಕಥಾ. ೯೦೩). [ಸಂ.]

**ಲೋಕಪಾವನ** (ನಾ). ಜಗತ್ತನ್ನು ಪವಿತ್ರಗೊಳಿಸುವಂಥದು: ಲೋಕಪಾವನವೆನಿಸಿ ಹರಿವ ಕಾವೇರಿಯಿಂ (ತಿರುಕ. ದೇ. ೨-೩). [ಸಂ.]

**ಲೋಕಪಿತ** (ನಾ). ಜಗತ್ತಿನ ತಂದೆ; ಪ್ರಜಾಪತಿ; ಬ್ರಹ್ಮ: ಲೋಕಪಿತ ನೊಲ್ದು ಚತುರ್ಮುಖನೀಗೆ ರಾಗಮಂ (ಜಗಚ. ೧-೨). [<ಸಂ. ಲೋಕಪಿತೃ]

**ಲೋಕಪೂರಣ** (ನಾ). [ಜೈನ] "ಕೇವಲಿಗಳ ಆತ್ಮವು ಭೂಮಂಡಲದ ವಾಯುತ್ರಯದೊಡನೆ ಲೋಕವನ್ನೆಲ್ಲ ವ್ಯಾಪಿಸುವುದು" (ಜೈಪಕೋ. ೨೨೧). 'ಲೋಕಪೂರಣಕ್ರಿಯೆ' ಪರಾ. [ಸಂ.]

**ಲೋಕಪೂರಣಕ್ರಿಯೆ** (ನಾ). = ಲೋಕಪೂರಣ : ತದನಂತರಕ್ಷಣದೊಳ್ ವ್ಯಾಪ್ತಸಪ್ತಘನರಜ್ಜುಪ್ರಮಾಣಾಶೇಷಜಗತ್ಪ್ರದೇಶಲೋಕಪೂರಣಕ್ರಿಯಾ ಪರಿಸಮಾಪ್ತಿಯಂ ಮಾಡಿ (ಆದಿಪು. ೦೬-೯೯ವ) ; ದಂಡಕವಾಟಪ್ರತರ ಲೋಕಪೂರಣಕ್ರಿಯೆಗಳಂ ಪ್ರತಿಸಮಯಂ ಪ್ರಯೋಗಿಸಿ (ಶಂರಾಮಾ. ೦೬-೭೯ವ). [ಸಂ. ಲೋಕಪೂರಣಕ್ರಿಯಾ]

**ಲೋಕಪ್ರತೀತ** (ಗು). ಜಗತ್ಪ್ರಸಿದ್ಧವಾದ ; ವಿಶ್ವವಿಖ್ಯಾತವಾದ : ಲೋಕಪ್ರತೀತ ಸುಭಗವಿವೇಕಾಳಾಪಂ ಪ್ರಸನ್ನಮದಳವಿಂತಕ್ಕ್ಯಂ (ಶಬಂಶಾ. ೨-೭೫). [ಸಂ.]

**ಲೋಕಪ್ರತೀತಿ** (ನಾ). ಜಗತ್ಪ್ರಸಿದ್ಧವಾದುದು : ನಯವಿದುದಿತ ಯುಕ್ತಿ ವ್ಯಕ್ತಿಲೋಕಪ್ರತೀತ್ಯಾಶ್ರಯಸಕಳಕಳಾಲೀಲಾಕರಾಲ್ಪೋಪಜಲ್ಪಂ (ಶಬಂಶಾ. ೩-೨೧೫). [ಸಂ.]

**ಲೋಕಪ್ರಸಿದ್ಧ** (ನಾ). = ಲೋಕಪ್ರತೀತಿ : ಶ್ರವಣಬೆಳಗೊಳ ಲೋಕಪ್ರಸಿದ್ಧವಾದುದು (ಆಡು). [ಸಂ.]

**ಲೋಕಪ್ರಸಿದ್ಧಿ** (ನಾ). ೧. ಜಗತ್ತಿನಲ್ಲಿ ವ್ಯಾಪಿಸಿದ ಕೀರ್ತಿ ; ವಿಶ್ವದಲ್ಲಿ ಹರಡಿದ ಯಶಸ್ಸು : ಲೋಕರೂಢಿ= ಲೋಕಪ್ರಸಿದ್ಧಿ (ಶಮಕ. ೯. ೨೩೨ ಟೀಕು); ಅದರಂತಹುದೆಷ್ಟೋ ಆಗಲೇಬೇಕಲ್ಲ ಲೋಕಪ್ರಸಿದ್ಧಿಯ ಜಯದಲಿ ಎಂದ (ಕುಗೀಕ. ೩೩-೨೯). ೨. ಜನಬಳಕೆಯಲ್ಲಿರುವುದು ; ಲೋಕಾಚಾರ : ಲೋಕಪ್ರಸಿದ್ಧಿಗೆ ವಿರುದ್ಧವಾದುದು (ಶ್ರಬಿ. ೨೨೮). ೩. [ತರ್ಕಶಾ] ಹನ್ನೆರಡು ವಿಧವಾದ ಪ್ರಮಾಣಗಳಲ್ಲಿ ಒಂದು : ಪ್ರಮಾಣವು ಪ್ರತ್ಯಕ್ಷ . . . ಲಿಪಿ, ಲೋಕಪ್ರಸಿದ್ಧಿ, ಚೇಷ್ಟೆ, ಪ್ರಾತಿಭ ಎಂದು ಹನ್ನೆರಡು ವಿಧವೆಂದು ಕೆಲವರು ಹೇಳುತ್ತಾರೆ (ಹಿಂದಸಾ. ೦೩೩). [ಸಂ.]

**ಲೋಕಬಾಂಧವ** (ನಾ). ಜಗತ್ತಿಗೆ ಬಂಧುವಾದವನು ; ಸೂರ್ಯ : ಮಹಾಲಯದ ವಿಷವನಿಕ್ಕಿದರಂ ಸಲಹಿದೆ ಮತ್ತಾ ಲೋಕಬಾಂಧವನ ಪಲ್ಗಳಿದೆ (ಕದ್ರಾ. ೦೩-೦೨); ಲೋಕಬಾಂಧವನುದಯಿಸುವಾಗಲುಪ್ಪವಡಿಸು ತಲಾ ಕುಮಾರರು ನಿತ್ಯಕೃತ್ಯಂಗಳಂ ರಚಿಸಿ (ಕಾದಸಂ. ೭-೦೫). [ಸಂ.]

**ಲೋಕಬಿಂದುಪೂರ್ವ** (ನಾ). [ಜೈನ] ಆಗಮಗಳ ಹದಿನಾಲ್ಕು ಪೂರ್ವಗಳಲ್ಲಿ ಒಂದು ಬಗೆ; ಮೋಕ್ಷಸಾಧನೆಗೆ ಯೋಗ್ಯವಾದ ಕ್ರಿಯೆಗಳ ವರ್ಣನಾಶಾಸ್ತ್ರ ; ಜಗತ್ತಿನ ತಿಳಿವಳಿಕೆ: ಪೂರ್ವಗಳು ಜೈನ ಶಾಸ್ತ್ರವಿಭಾಗಗಳಾಗಿವೆ. (೧) ಉತ್ಪಾದನಾಪೂರ್ವ . . . (೧೪) ಲೋಕಬಿಂದುಪೂರ್ವ (ಲೋಕದ ತಿಳವಳಿಕೆ) (ಜೈಪಕ. ೯೯೯). 'ಚತುರ್ದಶಪೂರ್ವ' ಪರಾ. [ಸಂ.]

**ಲೋಕಬೆಟ್ಟು** (ನಾ). (?) : ಪಾಂಡೆನಾಡ ಬಂಗಮಂಜು[ವ] ಮೊದಲಾದ ಹಿರಿಯರು ಲೋಕಬೆಟ್ಟೆಂಬ ಬಾಳಿಕೆಯನು ಬಾಳಿ ಬಂದಲ್ಲಿ (ಶಾಇಇ. IX– ii, ೯೬೦–೦೨; 1465). [ ? ]

**ಲೋಕಬ್ಬೆ** (ನಾ). ಒಬ್ಬಾತನ ಹೆಸರು : ತಮ್ಮ ಲೋಕಬ್ಬೆಯಟ್ಟ × ದಗಟ್ಟ ಕನ್ನಿ ಬಾಚನಯಿ್ (ಎಪಿಕ. ೦೯೨೫, ೩೨-೮; ೧). [ ? ]

**ಲೋಕಭಿನ್ನ** (ನಾ). ಜಗತ್ತಿನಿಂದ ಬೇರೆಯಾದುದು ; ವಿಶ್ವಕ್ಕೆ ಸೇರದುದು : ರಸಾನುಭವ ಲೋಕಾತಿಶಯ, ಲೋಕೋತ್ತರ ಎಂದರೆ ಲೋಕದೂರವಾಗಲೀ ಲೋಕಭಿನ್ನವಾಗಲೀ ಅಲ್ಲ (ಸೌಂದಸ. ೨೦). [ಸಂ.]

**ಲೋಕಮತ** (ನಾ). ಜನರ ಅಭಿಪ್ರಾಯ,—ಮತ : "ಜನಸಾಮಾನ್ಯರಲ್ಲಿ ರೂಢಿಯಾಗಿರುವ ಮು. ನೈತಿಕವಿಷಯಗಳ ಮೇಲಿನ ಅಭಿಪ್ರಾಯ : ಜನಾಭಿಪ್ರಾಯ; ಲೋಕಮತ" (Opinion. ಇಂಕಸಿ). [ಸಂ.]

**ಲೋಕಮರ್ಯಾದೆ** (ನಾ). ಜಗತ್ತಿನ ನಡತೆಯ ಇತಿ ಮಿತಿ ; ಲೋಕಾಚಾರ ; ಲೋಕರೂಢಿ,—ಸಂಪ್ರದಾಯ ; ಯಾರೂ ಲೋಕಮರ್ಯಾದೆಯನ್ನು ಮೀರಬಾರದು (ಆಡು). [ಸಂ. ಲೋಕಮರ್ಯಾದಾ]

**ಲೋಕಮಾತೆ** (ನಾ). ಜಗತ್ತಿನ ತಾಯಿ ; ಜಗಜ್ಜನನಿ ; ಲಕ್ಷ್ಮಿ : "ಲೋಕಮಾತೆ ಮನ್ಮಥಮಾತೆಯೆನಲು ಸಿರಿಗಕ್ಕು ನಾಮಂ" (ಮುಂಗರಾ. ೬-೦೮); ಒಜಿಲೆಗಳು ದಳ್ಳುರಿಯ ಕಿಚ್ಚಿಂಗೆಡಗಬಲ್ಲುವೆ ದನುಜ ಕಂಗಳ ತೆಱೆದು ನೋಡಲು ಬಹುದೆ ಸೀತೆಯ ಲೋಕಮಾತೆಯನು (ತೊರೆರಾ. ೯೩-೫೦). [ಸಂ. ಲೋಕಮಾತಾ]

**ಲೋಕಮಾನ್ಯ** (ನಾ). ಜನರಿಂದ ಮಾನ್ಯತೆ ಪಡೆದವನು ; ಜನರಿಗೆ ಪೂಜ್ಯನಾದವನು : ಲೋಕಮಾನ್ಯನು ಕರ್ಣ (ಕುಮಾ.ಭ. ೦೨-೬೦). ‖[ಸಂ.]

**ಲೋಕಮಿತ್ರ** (ನಾ). = **ಲೋಕಬಾಂಧವ** : ನಿಜಪತ್ನಿಯುಗಳಿ ಕೋಟಲೆ ಗೊಂಬವಂ ಮುನ್ನದಾರೆಂದೊಡೇ ಲೋಕಮಿತ್ರಾಸ್ತಮಯದಲ್ಲಿ . ಬಂಧು ಶ್ರಿತಾನೀಕಕ್ಕೆಯಪಾಲಯವನೀಯದಾತಂ (ಶೀಕೃಶ್ರೀ. ೪-೨೨-೬೦). [ಸಂ.]

**ಲೋಕಮೂಢ** (ನಾ). [ಜೈನ] ಲೋಕಮೂಢ, ದೇವತಾಮೂಢ, ಪಾಷಂಡಿಮೂಢವೆಂಬ ಮೂಢತ್ರಯಗಳಲ್ಲಿ ಒಂದು ; ‖ "ಎಲ್ಲಾ ಸ್ಥಳಗಳೂ ಸಮಾನವೆಂಬುದನ್ನು ಮರೆತು ಗಂಗಾಸ್ನಾನಾದಿಗಳಿಂದ ಪಾಪಪರಿಹಾರವಾಗುವುದೆಂಬ, ಮರಳು ಕಲ್ಲುಗಳನ್ನು ರಾಶಿ ಮಾಡುವುದು, ಬೆಂಕಿಯಲ್ಲಿ ಬೀಳುವುದು ಮುಂತಾದ ಮಿಥ್ಯಾ ನಂಬಿಕೆ" (ಕೈಕಲೋ. ೨೨೦) : ಲೋಕಮೂಢಮುಂ ದೇವತಾಮೂಢಮುಂ ಪಾಷಂಡಿಮೂಢಮುಂ ಎಂದು ಮೂಢಂ ತ್ರಿವಿಧಮಕ್ಕು (ಕಸಾರ. ೪೬೪).
[ಸಂ.]

**ಲೋಕಮೂಢತ್ವ** (ನಾ). = **ಲೋಕಮೂಢ** : ಮತ್ತಂ ಲೌಕಿಕ ಪಾರಮಾರ್ಥಿಕ ಹೇಯೋಪಾದೇಯ ತತ್ವಪರಿಜ್ಞಾನರಹಿತರನೇಕಮೂರ್ಖ ಲೋಕಪ್ರವಾಹದಿಂ ಒಂದ ಧರ್ಮಕರ್ಮಾನುಷ್ಠಾನಮಂ ಮಾಳ್ಪುದದುವುಂ ಲೋಕಮೂಢತ್ವಮೆಂಬುದು (ಕಸಾರ. ೪೬೦). [ಸಂ.]

**ಲೋಕಯಾತ್ರೆ** (ನಾ). ೧. ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಪ್ರವಾಸಮಾಡುವುದು ; ಜಗತ್ತನ್ನು ಸುತ್ತುವುದು : ಗಾಲಿಯೊಂದೇ ರಥಕೆ ಜೋಡಾಗಿ ಪೂಡುವೊಡೆ ಸಾಲದೇಳೇ ಹಯಂ ನಡೆಸುವೊಡೆ ಸಾರಥಿಗೆ ಕಾಲಿಲ್ಲ ಲೋಕಯಾತ್ರೆಯನೊಲ್ಲೆನೆಂದೊಡಾಗದೆ ತನಗೆ ತಿರುಗಲೇಕೆ (ಕೃಬಿಕಾ. ೨೬-೨೬). ೨. **ಲೋಕಾಚಾರ** ; **ಲೋಕರೂಢಿ** : ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲದೊಡಾಳ್ದನಾಳ್ ಸರೋಗನರೋಗಂ ಶ್ರಮ ರಹಿತಂ ಕ್ಲೇಶಕೃತಶ್ರಮನೆಂಬೀ ಲೋಕಯಾತ್ರೆ ಕಿಡದೆ ಮಹಾತ್ಮಾ (ಶಾಂತಿಪು. ೬-೦೪೦). ೩. ಪ್ರಪಂಚದಲ್ಲಿರುವ ಬಾಳು ; ಇಹದ ಬದುಕು: ಈ ಜೀವನಕ್ರಮವು . . . ಲೋಕಯಾತ್ರೆಯನ್ನು ನಡೆಸುತ್ತಿದ್ದ ಪ್ರಾಚೀನ ಭಾರತೀಯರೆಲ್ಲರ ಧರ್ಮವಾಗಿದ್ದಿತು (ಭಾರಹ. ೪೪೬).
[ಸಂ. ಲೋಕಯಾತ್ರಾ]

**ಲೋಕಯ್ಯ** (ನಾ). ಒಬ್ಬಾತನ ಹೆಸರು : [ನಾ]ಗವ[ರ್ಮ್ಮ ಸಿ]ಡಿಯ ನೂರನಾಳುತ್ತಿರೆ(ಯು) ಲೋಕಯ್ಯಂ ತು × × × ಚ್ಚಿ ಗಾಮುಂಡ್ಗೆ ಅವುತಮ(ಂ)ಪ್ಪಿಟ್ಟ (ತೌಶಾ. XX, ೦೫-೬ ; ೨೦೪) ; ಕೊವರಸಯ್ಯ ಚಂಪಯ್ಯನುಂ ಲೋಕಯ್ಯನುಂ ಕೊಟ್ಟಾರದ ಮಾರಪ್ಪಲಿಯುಂ (ಎಕ. XII, ಸಿರಾ. ೨೬-೩೦ ; ೬೪೩). [ಲೋಕ+ಅಯ್ಯ₁]

**ಲೋಕರಕ್ಷಕ** (ನಾ). ೧. ಜಗತ್ತನ್ನು ಕಾಪಾಡುವವನು : ಲೋಕಕರ್ತನಂ ನಾನೆ ಈತಂ ಲೋಕಪಾವನಮೂರ್ತಿ ಕಾರಣ ಲೋಕಶಿಕ್ಷಕ ನಾನೆ ಈತನು ಲೋಕರಕ್ಷಕನು (ಚಾಪು. ೦೦-೪೦). ೨. ಜಗತ್ತನ್ನು ಕಾಪಾಡುವಂತ ಹುದು : "ಅಧ್ಯಾತ್ಮತೇಜೋಬಲಂ ಬಲಂ" ಎಂದು ಘೋಷಿಸಿ . . . ಲೋಕನಾಶಕವಲ್ಲದೆ ಪೂರ್ಣವಾಗಿ ಲೋಕರಕ್ಷಕ ಎಂದು ಇಂದಿನ ಯುಗ ದಲ್ಲಿ ಅದರ ಸತ್ಯಸ್ಥಾಪನೆ ಮಾಡಿದ ಗಾಂಧಿ ಭರತಖಂಡದ ಪ್ರಾಚೀನ ಸಂಸ್ಕೃತಿಯ ಪ್ರತೀಕ (ಮುಮ್ಮಾರ. ೦೩೦ ಬಿಕಾಳ). [ಸಂ.]

**ಲೋಕರೂಢಿ** (ನಾ). ಜನಸಾಮಾನ್ಯರ ಪದ್ಧತಿ.– ಸಂಪ್ರದಾಯ : ಈಕ್ಷಿಸಿ ಶಿಕ್ಷಾಸೂತ್ರದ ಲಕ್ಷಣಮಂ ಲೋಕರೂಢಿ ಕಿಡದವೊಲಜಿಾವರ್ ಲಕ್ಷಿಪುದು ನುಡಿಗಳೊಳ್ ಬಹುಳಾಕ್ಷೇಪಣಮಿಲ್ಲದಿರೆಯುಮಜೀಯದ ಕೆಲವಂ (ಕಚುದ. ೨೩೨) ; ಬಿಷ್ಣಳ ಎಂದು ಅವನ ಮಹಾತಾಮಹನ ಹೆಸರಿಕ್ಕಿದುದು ಲೋಕರೂಢಿಗೆ ವಿಹಿತವಾಗಿದೆ (ಶಾಕುಂತಾ. ೭೪). [ಸಂ.]

**ಲೋಕಲುಂಟಾಕ** (ನಾ). ಜಗತ್ತಿಗೆ ತೊಂದರೆ ಕೊಡುವವನು : ಲೋಕಲುಂಟಾ[ಕಾಖಂ.ಡಾ]ಕರಸಂಖ್ಯಾತರ್ ಕಿರಾತರ್ ನೆರೆದು ನಿಖಿಲ ಭೂಚಕ್ರಮಂ ಸೂರೆಗೊಂಡರ್ (ಕಂರಾಕು. ೪-೩೩) ; ರಣಮೇರು ಲೋಕ ಲುಂಟಾಕನಿಷ್ಠಾಘತಾಪಹರವರ್ಷಣಮೇಘನುದಾತ್ತರಾಘವಂ (ಕಂರಾಕು. ೩-೭೨). [ಸಂ.]

**ಲೋಕವಟ್ಟ** (ನಾ). ವಿಶ್ವದ ಸ್ವಾಮಿತ್ವ,– ಅಧಿಕಾರ (?) : ಎಜಿಗಿದ ಜನಕ್ಕೆ ಪೊಂಪುಗಿಲೆಜಿಗಿದವೊಲು ಲೋಕವಟ್ಟಮನೆ ಪೊಂಮಳಿಯಂ ಕಟಿವನುಜಿದೆಜಿಗದಹಿತಂಗೆಜಿಗದ ಬಜಿಸಿಡಿಲೆನಿಪ್ಪನೆಜಿಯಂಗನೃಪಂ (ಎಕ. VI, ಕಡೂರು. ೦೬೪-೨೩; 1173). [ಲೋಕ+ಪಟ್ಟ₃]

**ಲೋಕವಶ್ಯ** (ಗು). ೧. ಜಗತ್ತನ್ನು ವಶಪಡಿಸಿಕೊಳ್ಳುವ. (ನಾ). ೨. ಪ್ರಪಂಚದ ಜನರನ್ನು ವಶಪಡಿಸಿಕೊಳ್ಳುವುದು.– ಜನರ ವಶೀಕರಣ : ಲೋಕವಶ್ಯದ ತಿಲಕವೊ ಜಗದೇಕರತ್ನವೊ . . . ಚಿತ್ರ ಪಾಯನ್ನೂರ್ವಶಿಯ ಬರವು (ಕುಮಾಅ. ೬-೫) ; ಆ ಬೇರಂ . . . ಮಂತ್ರಿಸಿ ಮುಖಮಂ ಪೂಸೆ ಲೋಕವಶ್ಯ (ವಿದ್ಯಾಪ. ೨); ಲೋಕವಶ್ಯಕೆ ಮದ್ದು ಏಕಾಕಿ ಹೋಬೇರು . . . ಮಿಕ್ಕೆಲ್ಲ ಕಾಕುಮದ್ದೆಂದ (ಸರ್ವಜ್ಞ. ೦೭೬೩). ೩. ಇತರರನ್ನು ತಮ್ಮ ಇಷ್ಟಾನುಸಾರವಾಗಿ ನಡೆಸಿ ಕೊಳ್ಳುವ ಶಕ್ತಿ.—ವಿದ್ಯೆ. [ಸಂ.]

**ಲೋಕವಾದ** (ನಾ). ಜನರಾಡುವ ಮಾತು ; ಜನಶ್ರುತಿ: "ಕಿಂವದಂತೀ, ಜನಶ್ರುತಿಃ, ಕೌಲೀನಂ, ಲೋಕವಾದಃ — ಈ ೪ ಜನವಾರ್ತೆ" (ಕಲಾಹ. ೨೪-೦೪೩): ಓದುಗಲಿಸುವರೊಲಿದು ಪೊಗಳಿದೊಡಾವೋದುಗಲಿ ವೆರೋದುಗಳು ಮೇದಿನಿಯೊಳು ಮೇಲೆನಿಪುವೆಂಬುದು ಲೋಕವಾದವ್ಯಸಲೆ (ಹರಿ. ೦-೨೪). [ ಸಂ. ]

**ಲೋಕವಾರ್ತೆ** (ನಾ). = **ಲೋಕವಾದ** : ಪರಮದಯಾಗುಣಂ ನಯನದೊಳ್ . . . ಧೃತಮೌನತೆ ಲೋಕವಾರ್ತೆಯೊಳ್ ದೊರೆವಡೆ ದೊಪ್ಪೆ ಸಂದರಿಮುಗೀಗಜಿವಂ ಸಲೆ ಸರ್ವಸಾಧುಗಳ್ (ಅವಂಪು. ೦-೫); ಜಾತಿದಿಂದರಿದವರು ವೃಷಭಖ್ಯಾತಿಯಲಿ ಕರೆದಪರು ಸರ್ವಜನಾತನನು ಬಸವಣ್ಣನೆಂಬರು ಲೋಕವಾರ್ತೆಯಲಿ (ಬಸಪು. ೩೩-೨೪).
[ಸಂ. ಲೋಕವಾರ್ತಾ]

**ಲೋಕವಿಖ್ಯಾತ** (ನಾ). ಜಗತ್ಪ್ರಸಿದ್ಧವಾದುದು : ದುಷ್ಟರ ದೌಷ್ಟ್ಯವು ಲೋಕವಿಖ್ಯಾತವು ತಿಳಿವುದು ಸುಲಭ ದುಷ್ಟರನು (೩ಂಕಾತ. ೦೭೩-೩೪).
[ ಸಂ. ]

**ಲೋಕವಿಮೂಢ** (ನಾ). = **ಲೋಕಮೂಢ** : ನದಿ ವಾರ್ಧಿಗಳಂ ವಿಶಾವುದುಮುದಿರದೆ ಶಸ್ತ್ರಾಗ್ನಿ ಗಿರಿಗಳಂ ಪಾಯ್ವುದುಮಿಂತಿದು ಲೋಕ ವಿಮೂಢಂ ಮುದದಿಂದಂ ರಾಶಿಮಾಳ್ಪುದುಂ ಕಲು ಮಣಲಂ (ಕಸಾರ. ೪೬೦). [ ಸಂ. ]

**ಲೋಕವಿರುದ್ಧ** (ನಾ). ೧. ಜನಸಾಮಾನ್ಯರ ಪದ್ಧತಿಗೆ ವಿರೋಧ ವಾದುದು; ಲೋಕರೂಢಿಗೆ ವಿರುದ್ಧವಾದುದು : ಯಾರೇ ಆಗಲಿ ಲೋಕವಿರುದ್ಧವಾಗಿ ನಡೆಯಬಾರದು (ರೂಢಿ). ೨. [ಕಾವ್ಯಮೀ] ಒಂದಂ ಬಗೆಯ ವಾಕ್ಯದೋಷ ; ‖ ಲೋಕಪ್ರಸಿದ್ಧಿಗೆ ವಿರುದ್ಧ ವಾದುದು : ಲೋಕಮುದ್ರೂಢ್ಯಾರ್ಥೋಪಮಾಕಾಂಕ್ಷಿತಭೇದರೂಪದಿಂ ಮೂಱಕ್ಕುಂ ಲೋಕವಿರುದ್ಧಂ (ಕಐಾ. ೦-೦೦೪); ಕಾಲ ಸ್ವಭಾವ ದೇಶ ಸಮಾಲಕ್ಷಿತವಸ್ತುರೂಪವಿಪರೀತಮವೆಂತಾ ಲೋ[ಕಾಹಂ. ಕೋ]ಕವಿರುದ್ಧಂ (ಕಾಮ್ಯಾವ. ೪೭೦). [ಸಂ.]

**ಲೋಕವಿರೋಧಿ** (ನಾ). ಜನರ ವಿರೋಧಕ್ಕೆ ಒಳಗಾದವನು : ನ್ಯಾಯನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ ಲೋಕವಿರೋಧಿ ಶರಣನಾರಿ ಗಂಜುವನಲ್ಲ (ಬಸವ. ೭೩೩); ಖಂಡಿತವಾದಿ ಲೋಕವಿರೋಧಿ (ಗಾದೆ).
[ ಸಂ. ಲೋಕವಿರೋಧಿನ್ ]

**ಲೋಕವ್ಯವಹಾರ** (ನಾ). ಪ್ರಪಂಚದ ನಡತೆ,– ಆಚಾರ,– ನಡವಳಿಕೆ; ಅಲಂಕೃತನಾಗಿಯುಂ ನಿಸರ್ಗಸುಂದರನಪ್ಪುದಱಿಂದಮಲಂಕಾರಕ್ಕೆ ತಾನಲಂಕಾರಮಾದೊಡಂ ಲೋಕವ್ಯವಹಾರಾಪೇಕ್ಷೆಯಿಂ ಪ್ರಸಾಧಿತಂ ಮಾಡಿ (ಶಾಂತಿಪು. ೧೧-೩೯ ವ); ಕವಿಮಾರ್ಗಗತಸಮಾಸಮನವನಿನ್ನಱಿವನಿತನೆಯ್ದೆ ಪೇೞ್ದಿಂ ಲೋಕವ್ಯವಹಾರದಿಂದಂ (ಶಮದ. ೧೯೭); ಲೋಕವ್ಯವಹಾರವನ್ನು ಚೆನ್ನಾಗಿ ತಿಳಿದಿರುವ ನೀವೇ . . . ಹೇಳಿದ ಮೇಲೆ ಇನ್ನು ನಾವು ಆಡತಕ್ಕುದೇನು ? (ಶಾಕುಂತ. ೬೬-೨೦). [ಸಂ.]

**ಲೋಕಸಂಗ್ರಹ** (ನಾ). ಜನರನ್ನು ಪರಸ್ಪರ ಹತ್ತಿರ ತರುವುದರ ಮೂಲಕ, ಜನತೆಗೆ ಮಾಡುವ ಸಹಾಯ ; ವಿಶ್ವಕಲ್ಯಾಣ : ಭಾರತೀಯ ರಾಜ್ಯಶಾಸ್ತ್ರದ ಅಂತಿಮಗುರಿ . . . ಲೋಕಸಂಗ್ರಹ (ಭಾರದ. ೩೭೩) ; ಭಕ್ತರು ಲೋಕಸಂಗ್ರಹಕಾರ್ಯದಲ್ಲಿ ತುಂಬ ನೆರವು ನೀಡಿದ್ದಾರೆ (ಧರ್ಮಗಾ. ೧೩೦). [ಸಂ.]

**ಲೋಕಸಂರಕ್ಷಕ** (ನಾ). ಜಗತ್ತನ್ನು ಕಾಪಾಡುವವನು ; ಪರಮಾತ್ಮ : ಲೋಕಸಂರಕ್ಷಕ ಅಸುರಸಂಹಾರಕ ಲೋಕೇಶ ಪುರಂದರವಿಠ್ಠಲ (ಪುರಂದ. ದಾ. ೩-೮೭-೭). [ಸಂ.]

**ಲೋಕಸಂರಕ್ಷಣ** (ನಾ). ಜಗತ್ತನ್ನು ಕಾಪಾಡುವುದು ; ವಿಶ್ವದ ಸಂರಕ್ಷಣೆ : ಲೋಕಸಂರಕ್ಷಣಾಧಿಕಾರವು ವಿಶ್ರಾಂತಿಯಿಲ್ಲದುದು (ಶಾಕುಂತ. ೬೦-೧೯). [ಸಂ.]

**ಲೋಕಸಭೆ** (ನಾ). ಕೇಂದ್ರಸಂಸತ್ತಿನ ಉಭಯಸಭೆಗಳಲ್ಲಿ ಒಂದು ; ಜನರಿಂದ ನೇರವಾಗಿ ಚುನಾಯಿತರಾದ ಸದಸ್ಯರ ಸಭೆ : ಭಾರತ ಸಂಘಕ್ಕೆ ರಾಷ್ಟ್ರಪತಿಯವರೂ ರಾಜ್ಯಪರಿಷತ್ತೆಂಬ ಹೆಸರಿನ ಒಂದು ಸದನವೂ ಲೋಕಸಭೆ ಎಂಬ ಹೆಸರಿನ ಒಂದು ಸದನವೂ ಸೇರಿರುವ ಒಂದು ಸಂಸತ್ತು ಇರತಕ್ಕುದು (ಭಾರಾಸ. ೩೯). [ಸಂ. ಲೋಕಸಭಾ]

**ಲೋಕಸಾಕ್ಷಿ** (ನಾ). ೧. ಜಗತ್ಸಾಕ್ಷಿ; ವಿಶ್ವಸಾಕ್ಷಿ. ೨. ಬ್ರಹ್ಮ. ೩. ಅಗ್ನಿ. [ಸಂ. ಲೋಕಸಾಕ್ಷಿನ್]

**ಲೋಕಸೇವಾಆಯೋಗ** (ನಾ). ಸಾರ್ವಜನಿಕಸೇವೆ ಸಲ್ಲಿಸಲು ಸರ್ಕಾರವು ನೇಮಿಸಿರುವ, ಕೆಲವು ಸದಸ್ಯರನ್ನೊಳಗೊಂಡ ಒಂದು ಸಮಿತಿ, — ಮಂಡಳಿ : ರಾಜ್ಯದ ಲೋಕಸೇವಾಆಯೋಗದೊಡನೆ . . . ವಿಧಾಯಕ ಮಾಡಬಹುದು (ಭಾರಾಸ. ೦೨೩). [ಸಂ.]

**ಲೋಕಸೇವೆ** (ನಾ). ಸಾರ್ವಜನಿಕರಿಗೆ ಸೇವೆ ಸಲ್ಲಿಸುವುದು; ಜನಸೇವೆ: "ಸಾರ್ವಜನಿಕರ ಸೇವೆ; ಸರ್ಕಾರಿ ನೌಕರಿ ; (ಪಾಂ) ಲೋಕಸೇವೆ" (Public service ಪತ್ರಿಕಾ. ೬೬) ; ರಾಜ್ಯದ ಲೋಕಸೇವಾವ್ಯವಸ್ಥೆಯಲ್ಲಿ ನ್ಯಾಯಪಾಲಿಕೆಯನ್ನು . . . ಜರುಗಿಸತಕ್ಕುದು (ಭಾರಾಸ. ೨೩). [ಸಂ. ಲೋಕಸೇವಾ]

**ಲೋಕಸ್ತುತೆ** (ನಾ). ಜಗತ್ತಿನಿಂದ ಹೊಗಳಿಸಿಕೊಂಡವಳು ; ವಿಶ್ವಮಾನ್ಯೆಯಾದವಳು: ಲೋಕಸ್ತುತೆ ಮಣಿಕನಕಪತಾಕೆಯನರ್ಚಿಸುವೆನೆಸೆಯೆ ನಿನ್ನೀ ನಿಲಯಪ್ರಾಕಾರಮಂ (ಲೀಲಾವ. ೭-೯೨). [ಸಂ. ಲೋಕಸ್ತುತಾ]

**ಲೋಕಹಿತ** (ನಾ). ೧. ಜನಹಿತ ; ವಿಶ್ವಕಲ್ಯಾಣ : ಲೋಕಹಿತಾಚರಣಕಳಾನೀಕಪ್ರಯುತಂಗೆ ಯತಿಗೆ ದಾನವನಿರದುಪ್ರೇಕ್ಷಿಸೆ ಮಾಡುವ ಪೀಡೆ ಸುಧಾಕರನಂ ರಾಹು ಪೀಡಿಪುದನನುಕರಿಕುಂ (ಪಾರ್ಶ್ವಪು. ೦೩-೦೨೦) ; ಸಾಹಸಿಗಳ ಲಕ್ಷಣವೇ ಅದು ತಾಯಿ. ಅದರಲ್ಲಿಯೂ ಲೋಕಹಿತದ ದೃಷ್ಟಿ ಇದ್ದರಾಯಿತು (ಸವತಿ. ೦೩). ೨. ಜಗತ್ತಿಗೆ ಒಳ್ಳೆಯದನ್ನು ಮಾಡುವವನು : ಮಹಿಶಂ ರಕ್ಷಿಪ ಧರ್ಮಸಂತತಿನಿಮಿತ್ತಂ ರಾಜ್ಯಮಂ ತಾಳ್ದಿ ನಿಸ್ಪೃಹನಾಗಿರ್ಪವೊಲಿರ್ದನಿನ್ನೆವಮಾಗಳ್ ದ್ರೋಹ ದುರ್ಮೋಹ ನಿಗ್ರಹ ನಿಷ್ಯಾಗ್ರಹನಾದ ಲೋಕಹಿತರಾರೆಲ್ಲಂವದಿಂ ನೀಂ ಬರಂ (ಧರ್ಮಾಮೃ. ೦೩-೬೩). [ಸಂ.]

**ಲೋಕಾಂತ** (ನಾ). ೧. ಜಗತ್ತಿನ ಕೊನೆ ; ವಿಶ್ವದ ತುದಿ. ೨. ಯಾರು ಬೇಕಾದರೂ ಇರಬಹುದಾದ ಸ್ಥಳ ; ಸಾರ್ವಜನಿಕ ಜಾಗ : ಏಕಾಂತದ ಸಂಬಿವು ಲೋಕಾಂತವದೇಕೋ (ವಚಸಂ. ೦೦೯-೯೭) ; 'ಲೋಕಾಂತ'ಕ್ಕಿಂತ ಏಕಾಂತ ಅವರಿಗೆ ಹೆಚ್ಚು ಸೇರುತ್ತಿತ್ತು (ಮೋಚಿಮ. ೯೩ ಶ್ರಾವಣ). ೩. ಎಲ್ಲರಿಗೂ ತಿಳಿದ ವಿಷಯ ; ಜಗಜ್ಜಾಹೀರಾದುದು ; ಸಾರ್ವಜನಿಕವಾದುದು : ಏಕಾಂತರಾಮನನಂತತೇಜೋಮಹಿಮೆಯದು ಲೋಕಾಂತವಾಯಿತ್ತೀ ಚತುರ್ದಶಭುವನಮಧ್ಯದಲಿ (ಬಸವ. ೩೨-೯೩) ; ಒಬ್ಬನಱಿದರೆ ಸ್ವಾಂತ ಇಬ್ಬರಲಿ ಏಕಾಂತ ಇಬ್ಬರಿಂದೊಬ್ಬನಱಿದು ಬೇಱೊಬ್ಬನಿಂ ಹಬ್ಬಿ ಲೋಕಾಂತ (ಸರ್ವಜ್ಞ. ೦೩೩೯) ; ಇಬ್ಬರಿದ್ದರೆ ಏಕಾಂತ, ಮೂವರಿದ್ದರೆ ಲೋಕಾಂತ (ಗಾದೆ). [ಸಂ.]

**ಲೋಕಾಂತರ** (ನಾ). ಬೇರೊಂದು ಲೋಕ ; ಪರಲೋಕ ; ಇನ್ನೊಂದು ಜಗತ್ತು : "ಪರಲೋಕಮುಜಾಗೆ ಲೋಕಾಂತರಮಕ್ಕು" (ವಸ್ತುಕೋ. ೩೯-೯೭) ; ಇಳೆಯ ಭೋಗದ ದೃಷ್ಟಿ ತೀರಿದ ಬಳಿಕ ಲೋಕಾಂತರವನೆಯ್ದುವರು (ಕುವ್ಯಾ ಉ. ೪-೦೮) ; ದೇಹಾತ್ಮಗಳೆರಡೂ . . . ಅವರವರ ಕರ್ಮಾನುಗುಣವಾಗಿ ಲೋಕಾಂತರಗಳಲ್ಲಿ ಸಂಚರಿಸುವವರಾಗಿಯೂ ಇದ್ದಾರೆ (ಪುಣ್ಯಾಶ. ೨೮೦). [ಸಂ.]

**ಲೋಕಾಂತರಿತ** (ನಾ). ಬೇರೆ ಲೋಕಕ್ಕೆ ಹೋದವನು ; ನಿಧನ ಹೊಂದಿದವನು ; ಮರಣ ಹೊಂದಿದವನು : ಪ್ರೇಮಪುತಿ . . . ಇನಿತನ್ಯಾಯಮನಾನೆ ಮಾಡಿದೆನೆನ್ನ ಮಗನ ಮೇಲೆ ದೋಷಮಾವುದುಮಿಲ್ಲೆಂದು ಲೋಕಾಂತರಿತನಾದಂ (ಸುಕುಮಾ. ೦೭೮-೩) ; ಸೋಮಶರ್ಮಂ ಲೋಕಾಂತರಿತ[ನಾದ]ನೆಂಬುದನತಿಬಲಮಹಾರಾಜಂ ಕೇಳ್ದು . . . ಪಿರಿದುಂ ಕುಟ್ಟುಕಡದು (ಸುಕುಮಾ. ೨-೦೦೫). [ಸಂ.]

**ಲೋಕಾಂತಿಕ** (ನಾ). [ಜೈನ] ಬ್ರಹ್ಮಲೋಕದಲ್ಲಿ ವಾಸಿಸುವ ದೇವತೆಗಳ ಒಂದು ಪಂಗಡ : ಬ್ರಹ್ಮಲೋಕನಿಳಯರಪ್ಪ ಲೋಕಾಂತಿಕರುಂ ದಕ್ಷಿಣೇಂದ್ರರುಂ . . . ಮುಕ್ತಿವಧೂವಿವಾಹಮಲ್ಲದೆ ವಧೂವಿವಾಹಮನೊಲ್ಲರ್ (ಶಾಂತಿಪು. ೦೨-೯೩ವ). [ಸಂ.]

**ಲೋಕಾಂತಿಕದೇವ** (ನಾ). = ಲೋಕಾಂತಿಕ : ಎಣ್ಬರುಂ ಲೋಕಾಂತಿಕದೇವರ್ ಬಂದು (ಆದಿಪು. ೯-೧೦ವ) ; ಲೋಕಾಂತಿಕದೇವರ್ ಪರಲೋಕಪ್ರಿಯರಲ್ಲದಂದು ಮುಂ ಬಾರದರೊಲ್ದೀಕೆ ಜಿನಂ ಪರಹಿತಮಂ ಸ್ವೀಕರಿಪುದುಮದನೆ ನುಡಿದು ದೃಢಮೆನಿಸಿದವರ್ (ಪಾರ್ಶ್ವಪು. ೦೩-೬೩). [ಸಂ.]

**ಲೋಕಾಕಾರ** (ನಾ). [ಜೈನ] ಲೋಕದ ಆಕಾರ,–ರೂಪು : ಲೋಕಾಕಾರಮನಭಿನಯಿಪಾಕಾರಂ ನೆಗೞ್ದು ನಿಂದು ವೈಶಾಖಸ್ಥಾನಾಕಾರದೊಳ್ . . . ಚೆಲ್ವಂ ಪಡೆವಂ (ಆದಿಪು. ೭-೦೦೬). [ಸಂ.]

**ಲೋಕಾಕಾರಕಥನ** (ನಾ). [ಜೈನ] ಅಧೋಲೋಕ, ಮಧ್ಯಲೋಕ ಮತ್ತು ಊರ್ಧ್ವಲೋಕಗಳ ವರ್ಣನೆ : ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ . . . ಅವಯವಂಗಳೆಂಟಕ್ಕುಂ (ಆದಿಪು. ೦-೯೨ ವ). [ಸಂ.]

**ಲೋಕಾಕಾಶ** (ನಾ). ೧. ಆಕಾಶ. ೨. [ಜೈನ] ಲೋಕಾಕಾಶ ಮತ್ತು ಅಲೋಕಾಕಾಶ ಎಂಬ ಎರಡು ಬಗೆಯ ಆಕಾಶಗಳಲ್ಲಿ ಒಂದು ; ಜೀವ, ಪುದ್ಗಲಕಾಯ, ಧರ್ಮ, ಅಧರ್ಮ ಇತ್ಯಾದಿ ದ್ರವ್ಯಗಳನ್ನು ಹೊಂದಿರುವ, ಲೋಕಗಳನ್ನು ಒಳಗೊಂಡ ಆಕಾಶಪ್ರದೇಶ : ಲೋಕಾಕಾಶಪ್ರದೇಶಪ್ರಮಾಣಪರಿಮಾಣಮುಮಸ್ಮದಾದ್ಯನುಮೇಯಮುಮಂ ಸರ್ವಜ್ಞಪ್ರತ್ಯಕ್ಷಗೋಚರಮಪ್ಪುದು ಮುಖ್ಯಕಾಲಂ (ಆದಿಪು. ೩-೪೮) ; ಈ ದ್ರವ್ಯಗಳಿರುವ ಸ್ಥಾನಕ್ಕೆ ಲೋಕಾಕಾಶವೆಂದೂ, ಬರಿಯ ಆಕಾಶದ್ರವ್ಯವಿರುವ ಸ್ಥಳಕ್ಕೆ ಅಲೋಕಾಕಾಶವೆಂದೂ ಹೆಸರು (ಭಾರದ. ೦೮೬). 'ಅಲೋಕಾಕಾಶ' ಪರಾ. [ಸಂ.]

**ಲೋಕಾಖ್ಯಾನ** (ನಾ). [ಜೈನ] ಲೋಕದ ಆಕಾರ ವರ್ಣನೆ : ಪುರಾಣ ಕಥೆಗಳೊಳು ಲೋಕಾಖ್ಯಾನಮುಂ ದೇಶಾಖ್ಯಾನಮುಂ . . . ಫಲಾಖ್ಯಾನ ಮುಮೆಂದಷ್ಟವಿಧವರ್ಣನಮಕ್ಕುಂ ಅಲ್ಲಿ ಲೋಕಾಖ್ಯಾನಮೆಂಬುದನಂತಾನಂತಮಪ್ಪಾಕಾಶಬಹುಮಧ್ಯಪ್ರದೇಶದೊಳಸಂಖ್ಯಾತಾತ್ಮಪ್ರದೇಶಾತ್ಮಕಮಾಗಿ . . . ಕುಳಾಚಳ ಸಿದ್ಧಾಲಯ ವಿಮಾನಾದಿಗಳಾಧಾರಭೂತಮಪ್ಪುದಂ ಪೇಳ್ವುದು (ಕಾಪುಂಕ. ೧೨). 'ದೇಶಾಖ್ಯಾನ' ಪರಾ. [ಸಂ.]

**ಲೋಕಾಚಾರ** (ನಾ). ಜಗತ್ತಿನ ರೂಢಿ, –ಸಂಪ್ರದಾಯ : ವೀರಶೈವನ ಬಗೆಯುದಂತೆನಲು ಲಾಲಿಸಾ ಗೌರಿ ಲೋಕಾಚಾರವರ್ಜಿತಂ ಭಾವಿಸಲುದಾರ ಲೋಕಾಲೋಕಪರಿಹರಂ ತಿಥಿಲಗ್ನ ನಕ್ಷತ್ರಯೋಗಕರಣಂ (ಬಸವ ಪು. ೭-೬-೭). [ಸಂ.]

**ಲೋಕಾನುಗ್ರಹ** (ನಾ). ಜಗತ್ತಿಗೆ ಕರುಣೆ ತೋರಿಸುವುದು : ಲೋಕಾನುಗ್ರಹಶಾಸ್ತ್ರಾನೀಕಮನುರುಪುಣ್ಯನದಿಗಳಂ ಶ್ರುತಿತತಿಯಂ ನೀಕರಿಸಿ ಶೈವಜನಮನನೇಕಾಂಗದಿ ನಿಂದಿಸುತ್ತಮಿರ್ಪರ್ ಸವಣರ್ (ತ್ರಿಪುವಿ. ೩೨-೧೧); ಪೂಜ್ಯರಾದ ಕಣ್ವರು ಲೋಕಾನುಗ್ರಹಾರ್ಥವಾಗಿ ಕ್ಷೇಮದಿಂದಿರುವರೆ ? (ಶಾಕುಂತ. ೬೩-೨೬). [ಸಂ.]

**ಲೋಕಾನುಪ್ರೇಕ್ಷೆ** (ನಾ). [ಜೈನ] ಹನ್ನೆರಡು ಬಗೆಯ ಅನುಪ್ರೇಕ್ಷೆಗಳಲ್ಲಿ ಒಂದು : ಲೋಕತ್ರಯದ ತುತ್ತತುದಿಯೊಳು . ಸಿದ್ಧಕ್ಷೇತ್ರಮಕ್ಕುಂ ಅಲ್ಲಿಗೆ ಪೋಪಡೆ ಸಕಲಕರ್ಮಕ್ಷಯಂಗೆಯ್ದಿಡಲ್ಲದೆ ಪೋಗಲ್ಬಾರದೆಂದು ಕರ್ಮನಿರ್ಮೂಲನಾರ್ಥಂ ನಿರ್ಮಲಶರ್ಮಾತ್ಮಕಾತ್ಮತತ್ತ್ವಮಂ ಭಾವಿಸುವುದು ಲೋಕಾನುಪ್ರೇಕ್ಷೆ (ದ್ವಾದಶಾ. ೧೯೭-೩) ; ಲೋಕಾನುಪ್ರೇಕ್ಷೆ–ಲೋಕವೆಂಬುದು ಎಷ್ಟು ದೊಡ್ಡದು, ಅದರಲ್ಲಿರುವ ಜೀವಗಳು ಯಾವ ಯಾವುವು ? ಇದು ಸಾದಿಯೋ ಅನಾದಿಯೋ ಮೊದಲಾದುವನ್ನು ಭಾವಿಸುವುದು (ಕ್ಷತ್ರ. ೮೩). 'ದ್ವಾದಶಾನುಪ್ರೇಕ್ಷೆ' ಪರಾ. [ಸಂ. ಲೋಕಾನುಪ್ರೇಕ್ಷಾ]

**ಲೋಕಾನುಭವ** (ನಾ). ಪ್ರಪಂಚದ ಬಗ್ಗೆ ಇರುವ ಜ್ಞಾನ ; ಲೋಕದ ಆಗುಹೋಗುಗಳಿಂದ ಬರುವ ತಿಳಿವಳಿಕೆ : ಲೋಕಾನುಭವ ಏನೇನೂ ಸಾಲದು (ಮುಂಕ್ತಿ. ೯). [ಸಂ.]

**ಲೋಕಾಪವಾದ** (ನಾ). ಜನರಿಂದ ಬರುವ ದೂರು, — ಅಪವಾದ ; ಜನರು ಮಾಡುವ ನಿಂದೆ, — ಹೀಯಾಳಿಕೆ : ಲೋಕಾಪವಾದಕ ಪರಾಧಿಯಲ್ಲದ ತನ್ನನು ತರಣಿಕುಲಸಂಭವಂ ಬಿಟ್ಟನೆಂದೀ ವನದೊಳಿರಿಸಿ ಪೋದಂ ಸುಮಿತ್ರಾತ್ಮಜಂ (ಜೈಮಿಭಾ. ೧೯-೪೦) ; ಲೋಕಾಪವಾದಕ್ಕೆ ಹೆದರಬೇಕು (ಜೀಶಿಸಂ. XI, ೨೦). [ಸಂ.]

**ಲೋಕಾಭಿರಾಮ** (ಗು). ೧. ಜನರಲ್ಲಿ ಪರಸ್ಪರ ಪ್ರೀತಿಯನ್ನು ಬೆಳೆಸುವ ; ಜನರ ಮನವೊಲಿಸುವಂಥ ; ಜನರಂಜಕವಾದ. (ನಾ). ೨. ಯಾವ ಉದ್ದೇಶವೂ ಇಲ್ಲದುದು : ಸ್ವಾಭಾವಿಕವಾದುದು ; ಸಹಜವಾದುದು : ಈ ಬಗೆಯ ಮಾತುಗಳು ಎಷ್ಟೊ ಸಲ ಕೇವಲ ಲೋಕಾಭಿರಾಮದ, ಅನಿಸಿಕೆಯ ಮಾತುಗಳಾಗಿರುತ್ತವೆ (ವಿಮರ್ಶೆ. ೩೦) ; ಮದುವೆ ಯಾತಕ್ಕೆ ಮಾಡಿಕೊಳ್ಳಲಿಲ್ಲ ಎಂದು ಲೋಕಾಭಿರಾಮವಾಗಿ ಕೇಳಲು (ಕಥಾಪುಂ. IV, ೦೩). [ಸಂ.]

**ಲೋಕಾಯತ** (ಗು). ೧. ನಾಸ್ತಿಕತೆಯಿಂದ ಕೂಡಿದ. (ನಾ). ೨. ನಾಸ್ತಿಕತೆ; ನಿರೀಶ್ವರ ವಾದ; ಚಾರ್ವಾಕ ಮತ : ಲೋಕಾಯತವೆನಿಸಿದ ಚಾರ್ವಾಕೋಕ್ತಿಯಸಹಿತಶಕ್ತಿಯಂ ಭೇದಿಸುವಂ . . . ಜಿನಚಂದ್ರಭೂಭುಜಂ (ಶಾಂತಿಪು. ೯-೧೬೩) ; ವೈದಿಕಸಿದ್ಧಾಂತಕ್ಕೂ ಲೋಕಾಯತವೆಂಬ ಚಾರ್ವಾಕ ಸಿದ್ಧಾಂತಕ್ಕೂ ವ್ಯತ್ಯಾಸವಿಲ್ಲ (ಹಿಂದಶಾ. ೧೩೬). ೩. ನಾಸ್ತಿಕ ; ನಿರೀಶ್ವರ ವಾದಿ ; ಚಾರ್ವಾಕ : ತಗೆಯಲ್ ಜೈಮಿನಿ . . . ಬಿಡಲ್ಪುಗೆ ಲೋಕಾಯತನೆಯ್ದೆ ಸಾಂಖ್ಯನಡಸಲ್ಕಮ್ಮುಮ್ಮ ಷಟ್ತರ್ಕವೀಧಿಗಳೊಳ್ ತೂಳ್ದಿತು ಗೋಪನಂದಿದಿಗಿಭಪ್ರೋದ್ಭಾಸಿಗಂಧದ್ವಿಪಂ (ಎಕ. V, ಚನ್ನರಾ. ೧೯೯-೪೦ : 1094) ; ಇಂತಪ್ಪನರ್ಥ್ಯಮಂ ಭಕ್ತರ್ಗೆ ಕೆಯ್ಯಾರೆ ಕೊಡಲಿಲ್ಲ . . . ಲೋಕಾಯತರ್ಗೆ ಸಾರುತಲಿರ್ದಪುದಕಟ (ಬಸವ. ೩-೧೯೯) ; ನಿರೀಶ್ವರವಾದಿಗಳಾದ ಲೋಕಾಯತರು ಇಂದ್ರಿಯಗಳನ್ನೇ ಆತ್ಮವೆನ್ನುತ್ತಾರೆ (ಅಪ್ಪುಕ. ೩-೯೭ ಟೀಕು). [ಸಂ.]

**ಲೋಕಾಯತದರ್ಶನ** (ನಾ). = ಲೋಕಾಯತ ೨ : ಸ್ಫೂರ್ತ ಚೇತಸ್ಸಿನ . . . ಗುರಿ ಲೋಕಾಯತದರ್ಶನವೂ ಅಲ್ಲ, ಸ್ಫೂರ್ತಪ್ರಾಣಸಿದ್ಧಿ ದರ್ಶನವೂ ಅಲ್ಲ ಅಥವಾ ದೂರಸ್ಥವೂ ಪ್ರತ್ಯೇಕವೂ ಆದ ಆಧ್ಯಾತ್ಮಿಕತೆಯೂ ಅಲ್ಲ (ನವ್ಯಕಾ. ೦೦೪). [ಸಂ.]

**ಲೋಕಾಯತಮತ** (ನಾ). ನಾಸ್ತಿಕತೆ ; ಚಾರ್ವಾಕಮತ : ಚಾರ್ವಾಕ ದರ್ಶನವು . . . ಲೋಕದಲ್ಲಿ ಹರಡಿರುವುದರಿಂದ ಇವನ್ನು ಲೋಕಾಯತ ಮತ ಎಂದು ಕರೆಯುತ್ತಾರೆ (ಹಿಂದಶಾ. ೧೦). [ಸಂ.]

**ಲೋಕಾಯತವಾದಿ** (ನಾ). = ಲೋಕಾಯತ ೩ : ಲೋಕಾಯತ ವಾದಿಯಂತೆ ಅಸಾಧಿತಗುರುಮತನಂ (ಚಂದ್ರಪ್ರ. ೯-೪೨ ವ). [ಸಂ. ಲೋಕಾಯತವಾದಿನ್]

**ಲೋಕಾಯತಿಕ** (ನಾ). ೧. ನಾಸ್ತಿಕತೆ; ನಿರೀಶ್ವರವಾದ; ಚಾರ್ವಾಕ ಮತ ; P "ಇದು ಚಾರ್ವಾಕಮತದ ಮತ್ತೊಂದು ಹೆಸರು. ಇದರಲ್ಲಿ ದೇಹವೇ ಆತ್ಮವೆಂದೂ, ಪರಲೋಕವಿಲ್ಲವೆಂದೂ ಪಾಪ ಪುಣ್ಯಗಳಿಲ್ಲವೆಂದೂ ಇಂದ್ರಿಯಇಚ್ಛೆಯನ್ನೇ ತೃಪ್ತಿಪಡಿಸುವುದು ಸುಖವೆಂದೂ ಬಗೆಯುವ ವಿಚಾರಗಳಿರುತ್ತವೆ. ಇದಕ್ಕೆ ಬೃಹಸ್ಪತಿ ಮತವೆಂದು ಮತ್ತೊಂದು ಹೆಸರು ಇದೆ" (ಆದಿಪು. ಕೈಪಿಡಿ೦ಶಾಸ್ತ್ರ ಶಬ್ದಕೋಶ) : ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕ ಮತವಿಕ್ಷಭಾಭಿಧಾಯಿಗಳ್ ಜೀವಾಭಾವಮನೆ ಪಿಡಿಯಬ್ಬುವಿಡಿದು (ಆದಿಪು. ೨-೭ ವ). ೨. ಚಾರ್ವಾಕಮತಕ್ಕೆ ಸೇರಿದ ವ್ಯಕ್ತಿ ; ನಾಸ್ತಿಕ ; ನಿರೀಶ್ವರ ವಾದಿ : ಚೈತನ್ಯದಿಂದ ಕೂಡಿರುವ ದೇಹವೇ ಆತ್ಮನು ಎಂದು ಸಾಮಾನ್ಯಜನರೂ ಲೋಕಾಯತಿಕರೂ ತಿಳಿದು ಕೊಂಡಿರುವರು (ಬ್ರಹ್ಮಸೂ. ೨೩). [ಸಂ.]

**ಲೋಕಾಯ್ತುಪೊಟಿಲ್** (ನಾ). ಒಂದು ಊರಿನ ಹೆಸರು : ಕೂರವಾಡಿ ಮೂನೂಱರ ಬಳಿಯ ಲೋಕಾಯ್ತುಪೊಟಿಲುಂ ಗುಣ್ಡೋಜಿಸೊಳ್ ಇರ್ಪತ್ತನಾಲ್ಕು ಮತ್ತರ್ಕ್ಕರಿಯ ಕೆಯ್ಯುಂ . . . ಕೊಟ್ಟರ್ (ಎಕ. XI, ಹೊಳಲ್ಕೆ. ೨೩-೧೯ : 968). [ಲೋಕಾಯ್ತು? + ಪೊಟಿಲ್]

**ಲೋಕಾರೂಢಿ** (ನಾ). = ಲೋಕರೂಢಿ : ಲೋಕಾರೂಢಿಯಾಗಿ ಈಗಿನ ಕಾಲದ ಮದುವೆ ಮುಂಜಿ ವಿಚಾರಗಳಲ್ಲಿ ಚರ್ಚೆ ಮಾಡುತ್ತಾ ಇದ್ದರು (ಬಾಗಿನ. ೨) ; ಅದು . . . ಲೋಕಾರೂಢಿಯ ಮಾತಾಗಿ ಹೋಗಿತ್ತು (ಪುನರು. ೪೭೬). P ಇದು ಅಶುದ್ಧರೂಪವಾದರೂ ಪ್ರಯೋಗದಲ್ಲಿ ಅಂಗೀಕೃತವಾಗಿದೆ. [< ಲೋಕರೂಢಿ]

**ಲೋಕಾಲೋಕ** (ನಾ). ಭೂಮಿಯನ್ನು ಗೋಡೆಯಂತೆ ಸುತ್ತುಗಟ್ಟಿ ಅವ್ಯಕ್ತಲೋಕದ ಕತ್ತಲೆಯಿಂದ ಬೇರ್ಪಡಿಸುವುದೆಂದು ಭಾವಿಸಲಾದ, ಪೌರಾಣಿಕಪರ್ವತ ಶ್ರೇಣಿ ; ಚಕ್ರವಾಳ : ಪರಮಾಗಮ ಮೂರ್ತಿ ಚರಾಚರಲೋಕಾಲೋಕಸಂಪ್ರದಾಯಿನಿ ವಿಬುಧೋತ್ಕರ ಮಾನಸಾಬ್ಜವಾಸಿನಿ ಸರಸ್ವತೀದೇವಿ ವರದೆಯಕ್ಕೆಮಗೆಂದುಂ (ಕಾವ್ಯಾವ. ೨ ಟೀಕು) ; ತರಣಿ ಲೋಕಾಲೋಕಪರ್ವತಾಗ್ರಮನಿಂತು ತಿರುಗುವಂ (ಕಾವತಂ. ೯-೦೦). 'ಚಕ್ರವಾಡಿಕೆ' ಪರಾ. [ಸಂ.]

**ಲೋಕಿಗ** (ನಾ). ಜಗತ್ತಿನಲ್ಲಿರುವವನು ; ಮಾನವ ; ಸಾಮಾನ್ಯ ಮನುಷ್ಯ : ಮದ್ವಚನಮನತಿಕ್ರಮಿಸಿ ನಡೆಯದಿರಲೀ ಲೋಕಿಗರ್ ನಾಕಿಗರ್ ಭಯದೊಳು (ಶಬಪು. ೪೦-೦೩) ; ಲೋಕಿಗರ ಮನದ ಕತ್ತಲೆಯ

ನೋಡಿಸಲೆಂದು ಒಳ್ಳನದಿ ನೀ ಒಡಿದ ಪಂಜು (ಕಗದ್ನ. ೬೩).
[ಲೋಕ + – ಇಗ]

**ಲೋಕೇಶ** (ನಾ). ೧. ಜಗತ್ತಿನ ಒಡೆಯ. ೨. ಬ್ರಹ್ಮ. ೩. ವಿಷ್ಣು : ಲೋಕಸಂರಕ್ಷಕ ಅಸುರಸಂಹಾರಕ ಲೋಕೇಶ ಪುರಂದರ ವಿಠ್ಠಲ (ಪುರಂದ. ದಾ. ೩-೮೭-೬). ೪. ಶಿವ. ೫. ಜಿನ ; ತೀರ್ಥಂಕರ : ಸಾಗ ವಿಜ್ಞಾನೋಪಯೋಗಂ ಸುರಪತಿಗುಪವಿಷ್ಟಾಸನಾಕಂಪದಿಂದಂ ಬರೆ ಕಂಡ್ಯೆರಾ ಮಹಾದೇವಿಯರುದರದೊಳಂ ಬರ್ಪ ಲೋಕೇಶನಂ (ಶಾಂತಿಪು. ೯-೦೬೨). [ಸಂ.]

**ಲೋಕೈಕಚಕ್ಷು** (ನಾ). ಜಗತ್ತಿಗೆಲ್ಲ ಒಂದೇ ಕಣ್ಣಿನಂತಿರುವವನು ; ಸೂರ್ಯ : ಲೋಕೈಕಚಕ್ಷು ನವಕಮಲಾಕರಬಾಂಧವನನೇಕದಿತಿಸುತ ಸಮರಾ[ನೀ]ಕಭಯಂಕರನೆರಡು ವನೀಕಂಗಳನಡರೆ ನೋಡುವಂತುದಯಿಸಿದಂ (ಶಂಕಶಾ. ೦೦-೩೦). [ಸಂ. ಲೋಕೈಕಚಕ್ಷುಸ್]

**ಲೋಕೈಕವೀರ** (ನಾ). ಜಗತ್ತಿಗೆಲ್ಲ ಒಬ್ಬನೇ ವೀರ ; ಮಹಾಶೂರ : ನೂಕಿ ಕವಿದುದು ಮುಂದಿ ಮಧ್ಯದೊಳೀಕ ಮೆಲ್ಲನೆ ಬರುತಲಾ ಲೋಕೈಕ ವೀರನ ಕಂಡಳಾ ಬಾಣಸಿನ ಬಾಗಿಲಲ್ಲಿ (ಕುವ್ಯಾಭಾ. ೩-೦೦೯) ; ಕುರುವಂಶ ಶರಧಿಯ ಸುಧಾಸೂತಿ ಲೋಕೈಕವೀರನಾವಾವನು ಕೇಳ್ದರಿಯೆಯಾ ? (ಕಶ್ಶಾಂಗ. ೩೭-೦೦೦೯). [ಸಂ.]

**ಲೋಕೋಕ್ತಿ** (ನಾ). ೧. ಪ್ರಸಿದ್ಧವಾದ ಮಾತು ; ಗಾದೆ ; ನಾಣ್ಣುಡಿ : ಮುಕ್ತಿಯೊಳಾದ ನಂಬುಗೆ ಮನಂಬುಗದಲ್ಪಸುಖಾಶಿಗೆಂಬ ಲೋಕೋಕ್ತಿಯಿಂ (ಶಾಂತಿಪು. ೦-೮೭); "ಮಾನವನು ತನ್ನ ನಡತೆಯಿಂದ ತಾನೆ ಹಾಳಾದ" ಎಂಬುದು ಒಂದು ಲೋಕೋಕ್ತಿ (ಶೀವಾಕ್ಯ. ೨೨೬) ; 'ಮಿಷ್ಟಾನ್ನಮಿತರೇ ಜನಾಃ' ಎಂಬುದು ಲೋಕೋಕ್ತಿ (ಶಿಶಂರ., II, ೨೩೯). ೨. ಜನಸಾಮಾನ್ಯರ ಮಾತು,—ನುಡಿ. [ಸಂ.]

**ಲೋಕೋತ್ತರ** (ಗು). ೧. ಜಗತ್ತಿನಲ್ಲಿಯೆ ಮಿಗಿಲಾದ : ವಿಶ್ವದಲ್ಲಿ ಅತಿಶಯವಾದ : ಪಿರಿದುಂ ಸಮಾಸಮಾಗಿರೆ ವಿಗಟಿಸುವುದು ತಾನದೋಜ ಮಕ್ಕುಂ ಲೋಕೋತ್ತರವರ್ಣನಂ ವಿಶೇಷಣ ಪರಪ್ರಕರ್ಷೋಕ್ತಿಯುಕ್ತ ಮಪ್ಪುದುದಾರಂ (ಕಾವ್ಯಾವ. ೩೦೩). (ನಾ). ೨. ಅಸಾಧಾರಣವಾದುದು; ಅಸಾಮಾನ್ಯವಾದುದು : ಮೊಗಕ್ಕೆ ಮೆಯ್ವೆತ್ತ ಬೆಮರ್ ಮನಂಗೊಳಿಸೆ ಭೂಪತಿಯಂ ಬೆಸವೇಟ್ಟಗುರ್ವು ಲೋಕೋತ್ತರವಾಗೆ ವೀರಭಟನೇಂ ಪೂಣ್ದಾನೋ (ಶಾಂತಿಪು. ೩-೬೮) ; ಮಾಟ್ಪುದಾತ್ಮಹಿತಂ ತಾನಿದು ದುರ್ಗ ಸಿಂಹನ ಮತಂ ಲೋಕೋತ್ತರಂ ಧಾತ್ರಿಯೊಳ್ (ಶಂಕಶಂ. ೦೯೯-೦೯); ರಮಣೀಯವೆಂದರೆ ಲೋಕೋತ್ತರವಾದ ಆನಂದವನ್ನುಂಟುಮಾಡ ತಕ್ಕುದ್ದು (ಕಾರಶಿಶಾ. ೩೯೦). ೩. ಜಗತ್ತಿನಲ್ಲಿ ಶ್ರೇಷ್ಠನಾದವನು,— ಮಿಗಿಲಾದವನು : ಅತುಳತಪಃಶೀಲಮಂ ಮಾಡೆ ಲೋಕೋತ್ತರ ರಾಚಾರ್ಯರೆಮ್ಮಂ ನಿಯಮಿಸುಗೆ ನಿಜಾನುಗ್ರಹಪ್ರೌಢಿಯಿಂದಂ (ಪುಷ್ಪ. ೦-೩); ನನಗೆ ಲೋಕೋತ್ತರನಾದ ಒಬ್ಬ ಮಗನಾಗಬೇಕು (ವಕಥಾ. ೦೩). [ಸಂ.]

**ಲೋಕೋದ್ಧಾರ** (ನಾ). ಜಗತ್ತನ್ನು ಮೇಲಕ್ಕೆತ್ತುವುದು ; ವಿಶ್ವ ವನ್ನು ರಕ್ಷಿಸುವುದು : ಲೋಕೋದ್ಧಾರದ ವೃತ್ತಿಯಿಲ್ಲದೆ, ತಾವು ಅಮರರಾಗಬೇಕು ಎಂಬ ಉದ್ದೇಶದಿಂದ ಅಮೃತಮಂಥನ ಮಾಡಿದರು (ಶಿಶಂಬಾ. ೦೬೦). [ಸಂ.]

**ಲೋಕೋಪಕಾರ** (ನಾ). ೧. ಜನಕ್ಕೆ ಉಪಕಾರ ಮಾಡುವುದು ; ಲೋಕಕ್ಕೆ ಹಿತವನ್ನುಂಟುಮಾಡುವುದು : ಅತಿ ಕುಶಲಜ ಲೀಲಾಚಾರ ಲೋಕೋಪಕಾರೋದಿತ ಪರಮಗುಣೈಕೋದಾರ ಧೀರಾಧಿಕಾರಂ (ಕಶಿರಾ. ೩-೨೦೯); ಯೌವನ ಕೂಡೆ ಲೋಕೋಪಕಾರವೆ ಕೈವಲ್ಯವಹುದು (ಪೋಹಕ. ೩-೩೬); ಸುತನೆ ತಿಳಿ ಲೋಕೋಪಕಾರಕೆ ಹಿತದಿ ಜನಿಸಿದೆವು (ಗಗಶಾ. ೪-೪೪). ೨. ಚಾವುಂಡರಾಯನೆಂಬ ಕವಿಯು ಬರೆದ ಒಂದು ಪ್ರಾಚೀನ ಕನ್ನಡಗ್ರಂಥದ ಹೆಸರು. ೧. ೨ : ಮೇದಿನಿಯುಪಕಾರಂ ಕಲಿಪೋದುಗಳನಿತೊಳಪ್ಪಿ ನೆಲಸಿರ್ದು ಬುಧೋಪಾದೇಯವಾದ ದೂಸಜಾ ನಾದುದು ಲೋಕೋಪಕಾರಮೋನನ್ವರ್ಥಂ (ಲೋಕೋಪ. ೦-೨೩ ಶಿಂ೪೪). [ಸಂ.]

**ಲೋಕೋಪಕಾರಕ** (ಗು). ಜಗತ್ತಿಗೆ ಉಪಕಾರ ಮಾಡುವ ; ವಿಶ್ವಕ್ಕೆ ಹಿತವನ್ನುಂಟುಮಾಡುವ. [ಸಂ.]

**ಲೋಕೋಪಚಾರ** (ನಾ). ಲೌಕಿಕನು ಮಾಡುವ ಉಪಚಾರ,– ಸೇವೆ : ಲೋಕೋಪಚಾರಕ್ಕೆ ಮಜ್ಜನಕ್ಕೆಟಿಸೆವೆಮ್ಮಾ ಮನದ ತಾಮಸ ಬಿಡದು ಮನದ ಕಪಟ ಬಿಡದಯ್ಯಾ (ಬಸವ. ೨೬೦). [ಸಂ.]

**ಲೋಕೋಪಯೋಗಿ** (ಗು). ಸಾರ್ವಜನಿಕರಿಗೆ ಉಪಯೋಗಕರವಾದ,– ಬಳಕೆಗೆ ಬರುವ : 'ಲೋಕೋಪಯೋಗಿಇಲಾಖೆ' ಪರಾ. [ಸಂ. ಲೋಕೋಪಯೋಗಿನ್]

**ಲೋಕೋಪಯೋಗಿಇಲಾಖೆ** (ನಾ). ಸಾರ್ವಜನಿಕರಿಗೆ ಉಪಯುಕ್ತವಾದ ಕಾರ್ಯವನ್ನು ಮಾಡುವ ಇಲಾಖೆ ; ಮರಾಮಂತ್ತು ಇಲಾಖೆ : ಇಂದು ವಿಧಾನಸಭೆಯಲ್ಲಿ ಲೋಕೋಪಯೋಗಿಇಲಾಖೆಯ ಬೇಡಿಕೆಗಳ ಮೇಲಿನ ಚರ್ಚೆ ನಡೆದಿದೆ (ಶೂ೧). [ಲೋಕೋಪಯೋಗಿ + ಇಲಾಖೆ]

**ಲೋಗ** (ನಾ). ೧. ಜಗತ್ತಿನಲ್ಲಿರುವ ಜನ. ೨. ಬೇರೆಯವನು ; ಅನ್ಯ ; ಪರಕೀಯ : ನರಪಂಗೆಂತೆಂದೊಡಂ ಲೋಗನೆ ಗಡ ಜನನೀಭ್ರಾತೃ (ಪುಷ್ಪ. ೬-೪) ; ನೀ ಬೇಟಿನಗೆ ಲೋಗನೆ ಕಂದ (ಕುವ್ಯಾದ್ರೋ. ೦-೨೩) ; ಇವಂ ತನ್ನವನಿವಂ ಲೋಗನೆನ್ನದೆ ನಯಂಬಡಿದು . . . ಅರಸುಗೆಯ್ಯು ತ್ತುಮಿರ್ಕುಂ (ಪುರಾಕ. ೦೦-೬೨). ೩. ಸಾಮಾನ್ಯಮನುಷ್ಯ ; ನಾಡಾಡಿ; ಎಗ್ಗ : ಲೋಗ–ಲೋಕ=ಜನ. ಸಾಮಾನ್ಯ ವ್ಯಕ್ತಿ" (ಕರ್ನಕೋ. ೩೯) ; ಲೋಗನಾದೆನು ನಿನ್ನ ಚರಣಕೆ ಬೇಗೆಯನು ಬರಿಸಿದೆನು (ಶಿಥಾಗ. ೦-೦೩-೨೦).

**ಲೋಗರ್, ಲೋಗರು** (ಬಹುವ) : ರಸಿಗೆ ಸುರಿಯೆ ನೊಳವುಗಳ್ ಮುಸುಕಿಕೊಂಡು ತಿನೆ ಪೇಸಿದನಾಗಿ ಲೋಗರ ಮನೆಗಳೊಳ್ ಭೈಕ್ಷಮಂ ಬೇಡಿ (ಶಶ್ಯರಾ. ೦೨೨-೨೯); ಲೋಗರ ವಸ್ತುವಂ ಕೊಳಲಾಗದು (ಶಂಕಶಂ. ೬೪-೦೯); ಲೋಗರ ಮನೆಯ ಬಾಗಿಲ ಕಾಯ್ದುಕೊಂಡಿಪ್ಪವು ಕೆಲವು ದೈವಂಗಳು (ಬಸವ, ೩೩೩); ಮೋಡಿಗೊಳದೆ ಲೋಗರುಚಿತಮೆನಲೊಯ್ಯನೊಯ್ಯನೆಯನು ವಾಗಿ ನುಡಿವುದು (ಹರಿಶ. ೪-೦೦). [< ಸಂ. ಲೋಕ]

**ಲೋಗು** (ಕ್ರಿ). ಹಿಂಜರಿ ; ಹಿಮ್ಮೆಟ್ಟು : ರಾವಣನ ಬರಹೇಳು ರಣಸಂಭಾ ವನೆಗೆ ಲೋಗಿದಡೆ ಸೀತಾದೇವಿಯಂ ತಂದಿತ್ತು ಬದುಕೆಂದೆನುತಲರುಹೆಂದ (ಆಸಂರಾ. ೩-೬-೦೩); ಮೈದೆಗೆಯೆ ಮರಣ ಸನ್ನಿಹಿತ ರಣಕೊದಗಿದರೆ ಕೈದು ಗಳಗಶನಮತಿದೂರಪಂಥಾನಗರಿಗೈದಲೊಂದೆಡೆಯ ಮುಂಗಡೆಯ ಶತ್ರು ಗಳಿಂಗೆ ಲೋಗಿದಪಕೀರ್ತಿಯಹುದು (ಪಂಶಶಾ. ೬-೨೬-೩೩). [←ತೆಲು. ಲೋಗು]

**ಲೋಗೇಶ್ವರ** (ನಾ). "ಲೋಯಿಸರ (?)" (ಶಿಂಹಂ. ಕೋಶ) : ಶರಸಂಧಾನ ಕ್ರಿಯೆಯಿಂದೆರಡುಂದೆಸೆಗೆಸುತಮಂತೆ ಪರಿಯಿಸಿ ಲೋಗೇಸ್ವರದೊಳಗೆ ಬಂಡಿವರಿಪಂತಿರೆ ಚಕ್ರವ್ಯೂಹದೊಳಗೆ ಪರಿದತ್ತು ರಥ (ಶಿಂಹಂ. ೦೨-೦೨). [< ಲೋಯಿಸರ?]

**ಲೋಚಕ** (ನಾ). ೧. ದಡ್ಡಮನುಷ್ಯ ; ಮೂರ್ಖ. ೨. ಕಣ್ಣಿನ ಪಾಪೆ,– ಹಾಹೆ. ೩. ದೀಪದ ಮಸಿ ; ಕಾಡಿಗೆ. ೪. ಮಾಂಸದ ಗರಣೆ. ೫. ಹಾವಿನ ಪೊರೆ. ೬. ಹೆಂಗಸರು ಹಣೆಯಲ್ಲಿ ಧರಿಸುವ ಆಭರಣ; ಹಣೆಬೊಟ್ಟು. ೭. ಒಂದು ಬಗೆಯ ಕಿವಿಯ ಆಭರಣ. ೮. ಬಾಳೆಗಿಡ. ೯. ಕಪ್ಪು ಅಥವಾ ನೀಲವರ್ಣದ ಉಡುಪು. ೧೦. ಬಿಲ್ಲಿನ ಹಗ್ಗ; ಹೆದೆ. ೧೧. ಸುಕ್ಕುಗಟ್ಟಿದ ಚರ್ಮ. [ಸಂ.]

**ಲೋಚನ** (ಗು). ೧. ಹೊಳೆಯುವ; ಪ್ರಕಾಶಿಸುವ. ೨. ಕಾಣಿಸುವ; ಗೋಚರಿಸುವ. (ನಾ). ೩. ಕಾಣುವಂತೆ ಮಾಡುವ ಅಂಗ ; ಕಣ್ಣು ; ನಯನ : "ದೃಕ್, ದೃಷ್ಟಿಃ, ನೇತ್ರಂ, ಲೋಚನಂ . . . ಅಕ್ಷಿ—ಈ ೯ ಕಣ್" (ಶಬ್ದಮ. ೯೭–೬೬೩) ; ಕಳಕಂಠಲೋಚನಚ್ಛವಿವಿಳಾಸಮುಂ ತಳೆದ ನೀಲ ಪಾಟಳ ಜಂಬೂಫಲಾಳಿಯಂ (ಗಾದಂಪೂ. ೯೬) ; ಬಗೆ ಮಾಜಿ ಲೋಚನದೊಳೊಗೆವ ಸುಖಜಲ (ಶಶಾಕ. ೩–೭೦) ; ಕಾಡು ವೀಳಯಕಂಬು ಲೋಚನಾಂಜನಕಂಬು (ಸರ್ವಜ್ಞ. ೨೬೩). ೪. ದೃಶ್ಯ ; ನೋಟ. ೫. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಯಮಳ, ಲೋಚನ, ದಂಪತಿ ಇಂತಿನಿತುಂ ೨ಕ್ಕೆ ಪೆಸರು (ಕ್ಷಸಾ. ೧೧). [ಸಂ.]

**ಲೋಚನಜಲ, ಲೋಚನಜಳ** (ನಾ). ಕಣ್ಣೀರು ; ಕಂಬನಿ ; ಅಶ್ರು. **ಲೋಚನಜಳ** : ಲೋಚನಜಳನಿಪತನಭಯಸಾಚೀಕೃತವದನೆ ವಿಮುಖ ವಿಧಿಯಂ ತೋರ್ಪಂತೆ (ಲೀಲಾವ. ೭–೯೪). [ಸಂ.]

**ಲೋಚನಜಳ** ' ಲೋಚನಜಲ ' ನೋ.

**ಲೋಚನವಾರಿ** (ನಾ). = ಲೋಚನಜಲ : ಬಸವಯ್ಯಂ ಪುಳಕಿಸು ತೊಂದನೊಂದು ಕಿನ್ನರನ ಗುಣವೃಂದಮಂ ನೆನೆನೆನೆದು ಲೋಚನವಾರಿಯಲಿ ನನೆದು (ಬಸಪು. ೩೬–೯) ; ಹೃದಯಶಿಖಿಯುಲ್ಲಿ ತಳಿತು ಲೋಚನವಾರಿ ತುಳುಕಿತು (ಕುಮಾವ್ಯಾ. ೭–೯). [ಸಂ.]

**ಲೋಚನಶ್ರುತಿಪ** (ನಾ). ಸರ್ಪಗಳ ಅಧಿಪತಿ : ಆದಿಶೇಷ : ಕ್ರತುಭುಜರ ಸುಡಲು ಗರಳವನುಗುಳ್ವ ಲೋಚನಶ್ರುತಿಪ [ಹಾಹಾ. ಲೋಚನದ ಶ್ರುತಿಪ] ನಂತಚಲಾವೃತತ್ವದಿಂ . . . ಒಪ್ಪಿತು ಸಮುದ್ರಂ (ಶಾಪಶಾ. ೧–೨೩). [ಸಂ.]

**ಲೋಚನಾಂಬು** (ನಾ). = ಲೋಚನಜಲ : ಲೋಚನಾಂಬುಗಳುಕ್ಕಿದವು ಕಳವಳಿಸಿದವು ಕರಣೇಂದ್ರಿಯಾದಿಗಳು (ಕುಮಾವ್ಯಾ. ೨೦–೩೩). [ಸಂ.]

**ಲೋಚನಾಂಶು** (ನಾ). ಕಣ್ಣಿನ ಕಾಂತಿ : ನಡು ನಡಪಿತ್ತು ತನ್ನನೆನೆ ಮೆಯ್ ಒಡವಾದುದು ಲೋಚನಾಂಶುಗಳ್ ಬಿಡೆ ತೊಡರ್ದಂತೆ ಗಂಡ ಯುಗಳಂ ಬಿಳಿದಾದುದು (ಕಂದ್ರಪ್ರ. ೩–೦೨೪) ; ಲೋಚನಾಂಶು ಸೆಳೆಮಿಂಚು (ಧಾಶೀ. ೦೪–೯೭). [ಸಂ.]

**ಲೋಚಮಸ್ತಕ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಕಾಳು; ಓಮ: "ಖರಾಶ್ವಾ, ಕಾರವೀ . . . ಲೋಚಮಸ್ತಕಃ—೫ ಓಮದ ಹೆಸರುಗಳು" (ಸಿದ್ಧಾಂತ. ೧೩೨) ; "ಕಲ್ಲಿಕೆಹೂ . . . ಮಯೂರಶಿಖಿ, ಲೋಚಮಸ್ತಕ, ಹೊರೆಯೆಸುಸುವ" (ಸಸ್ಯ. ೩೦). [ಸಂ.]

**ಲೋಚು** (ನಾ). ೧. [ಜೈನ] ಮುನಿಧರ್ಮಗಳಲ್ಲಿ ಒಂದು ; ತನ್ನ ತಲೆಯ ಮತ್ತು ಮುಖದ ಕೂದಲನ್ನು ತಾನೇ ಕಿತ್ತು ತೆಗೆಯುವುದು ಅಥವಾ ಬೇರೆಯವರಿಂದ ಕೀಳಿಸಿಕೊಳ್ಳುವುದು ; ಲುಂಚನಕ್ರಿಯೆ : ಲೋಚಿಂಗಾಜದೆ ತಪಮಂ ಕೊಳಲಂಜಿ ಮೆಲ್ಲನಲ್ಲಿಂ ಜಗುಬ್ಬುವೋಗಿ ತಲೆಯಂ ಬೋಳಿಸಿಕೊಂಡು ಬ್ರಹ್ಮಚಾರಿವೇಷಮಂ ಕೈಕೊಂಡು (ಧರ್ಮಾಮೃ. ೬–೩೩); ಮುನಿಕುವರರು ಬಿಟ್ಟ ವಸ್ತ್ರಾಭರಣ ಲೋಚನ ಕೇಶಗಳನೊಯ್ದು ಸುರರು ವನಧಿಯೊಳಿಂಬಿಟ್ಟರು (ಶಶಿ. ೭೦–೦೦೬). ೨. ಲುಂಚನಕ್ರಿಯೆಯ ಸಂದರ್ಭದಲ್ಲಿ ನಡೆಸುವ ಸಮಾರಂಭ—ಉತ್ಸವ : ಜಿನುಗುಮತಿಗಳ ಸಿದ್ಧ ಸಾಧಕ ಮುನಿಗಳೆಂಬವದಿರುಗಳನು ನಾ ಮುನಿದು ಕಚ್ಚುಟ ಕಂತೆ ಬತ್ತಲೆ ಬೋಳು ಜಡೆ ಲೋಚು ಅನಶನವ್ರತ ನಾರುಬೇರೆಂಬುನಿತಬಿಲಿ ದಂಡಿಸುವೆ ನಾ (ಕ್ಷಕುಂ. ೬–೩೩) ; ತನುವೆರವೆಂಬುದ ದೃಢಮಾಳ್ಪುದಕೆ ಲೋಚು (ಶಶಿ. ೭೦–೯೪) ; ಲೋಚು ಮುಗಿದ ಮೇಲೆ ಜಿನಗಂಧೋದಕ ವನ್ನು ಮುನಿಯ ತಲೆಗೆಲ್ಲ ಸವರಿದರು (ಧಾಶಸಂ. ೦). ೩. ತಲೆಯ ಕೂದಲು,—ಕೇಶ(?): ಅಱಿವೇ ಗುರು ಆಚಾರವೆ ಶಿಷ್ಯ ಜ್ಞಾನವೇ ಲಿಂಗ ಪರಿಣಾಮವೇ ತಪ ಸಮತೆ ಎಂಬುದೇ ಯೋಗ ನೋಡಾ ಈಸುವನಱಿಯದೆ ಲೋಚು ಬೋಳಾದರೇನು ಮಹಾಲಿಂಗ ಕಲ್ಲೇಶ್ವರದೇವರು ನಗುವರು (ಶಶಸಂ. ೦೯೭–೩$_3$) ; ಲೋಚು ಬೋಳಾಗಿ ಜಡೆಗಟ್ಟಿ ದೆಸೆದೆಸೆಗಳಂ ತಿರುಗಿ ಭಿಕ್ಷಾಂದೇಹಿಯಾದ ಸಂದೇಹಿಗಳ ಶಿವನೊಲ್ಲನು (ಶಿವಗೀ. ೩೩–೨೬೦). [ಸಂ. ಲುಂಚ್]

**ಲೋಚುಗೆಯ್** (ಕ್ರಿ). ಜಿನದೀಕ್ಷೆ ಕೈಕೊಂಡವರ ಕೂದಲನ್ನು ಕೀಳು : ಲೋಚುಮಾಡು : ದೇವತೆಗಳ್ ಮಾಡಿದಾಹಾರಮಂ ರಿಸಿಯರ್ಗೆ ಚರಿಗೆಮಾಡಲಾಗದೆಂದು ಬಾರಿಸಿಯವರ್ಗೆ ಲೋಚುಗೆಯ್ದು ಬ್ರತಂಗಳ ನೇಱಿಸಿ (ವಡ್ಡಾರಾ. ೯೦–೨೪) ; ಲೋಚುಗೆಯ್ದುಂಕಕಾಱಂಗೆ . . . ಪಂಚ ಮಹಾವ್ರತಂಗಳನೇಱಿಸಿ (ಬಿಂಹಂ. ೦೦–೫೦ ಪ) ; ಬೆಳುವಲ್ಲ ಮಲಿನ ದೇಹದ ಲೋಚುಗೆಯ್ದ ಬೋಳ್ದಲೆಯ . . . ಜಿನಗುರುಗಳು (ಶಾಂತಪು. ೦೨–೬೯). [ಲೋಚು+ಕೆಯ್$_1$]

**ಲೋಟ** ' ಲೋಟಾ$_1$ ' ನೋ.

**ಲೋಟಕ** (ನಾ). ತುಳಿಯುವವನು ; ಮೆಟ್ಟುವವನು : "ಲೋಟಕಃ, ಲೋಟಮಾನಃ, ಈ ೨ ತುಳಿವಂ" (ಶಾಕಶ. ೦೩೦). [ಸಂ.]

**ಲೋಟನ** (ನಾ). ೧. ಉರುಳುವಿಕೆ ; ಬೀಳುವಿಕೆ : 'ಲೋಟಿಸು' ಪರಾ. ೨. ತುಳಿಯುವಿಕೆ ; ತುಳಿತ : "ಲುಟ್ . . . ಲೋಟುಃ, ಲೋಟನಂ, ಲೋಟನೀಯಂ, ಈ ೭ ತುಳಿ" (ಶಾಕಶ. ೦೩೦). [ಸಂ.]

**ಲೋಟಾ**$_1$, **ಲೋಟ**, **ಲೋಟೆ** (ನಾ). ಮಣ್ಣು ಅಥವಾ ಲೋಹದ ಸಣ್ಣ ಕುಡಿಯುವ ಪಾತ್ರೆ : ಅವನ ಫಲಾರವೆಂದರೆ ಲೋಟಾ ನೀರು (ಶಾಮ್ರ೩. ೦೯) ; ನಮ್ಮ ಲೋಟಾಗಳಲ್ಲಿ ಮತ್ತೊಂದು ಸಲ ಕಾಫಿಯನ್ನು ಬಗ್ಗಿಸಿದಳು (ಪಪದಾ. II. ೯೬೯). **ಲೋಟ** : ಪಕ್ಕದ ಸ್ಟೂಲಿನ ಮೇಲೆ ಹೊಳಪಿನ ಕಂಚಿನ ಕೂಜ, ಲೋಟ (ರಂಗಳ. ೬೦) ; ಅವನ ಹಾಸಿಗೆಯ ಪಕ್ಕದಲ್ಲಿ ಒಂದು ಚಂಬು, ಅದರ ಪಕ್ಕದಲ್ಲಿ ಒಂದು ಲೋಟವಿತ್ತು (ಹೂಕಚು. ೩). **ಲೋಟೆ** : ಒಂದು ಲೋಟೆ ಬಾಯಾರಿಕೆಯನ್ನು ತಾನೇ ತಂದು ಕೊಟ್ಟನು (ಕುಂಗಾಮು. ೬೪). [←ಅರ. ಹಿಂ. ಮರಾ. ಲೋಟಾ]

**ಲೋಟಾ**$_2$ (ನಾ). ಒಂದು ಬಗೆಯ ಪಾರಿವಾಳ : ಲೋಟಾ ಎಂಬ ಪಾರಿವಾಳಗಳು ನೆಲದ ಮೇಲೆ ಉರುಳುತ್ತ ಹೋಗುತ್ತವೆ (ಮುಂಡಿಯ. ೩–೧೦೦). [ ? ]

**ಲೋಟಿಸು** (ಕ್ರಿ). ಉರುಳಿಸು ; ಕೆಡವು ; ಬೀಳಿಸು : ಅಗಡಿಯಲಿ ಲೋಟಿಸಿ ನಿರಂತರ ಲಗಡಿಯಲಿ ಲಾಗಿಸಿ . . . ಹಣಗಿದರು (ಕುಮಾವ್ಯಾಸ. ೨–೯೯); ವಿಗಡರದ ಲೆಕ್ಕಿಸದೆ ಲೋಟಿಸಿ ಮುಗುಚಿದರು (ಕುಮಾವ್ಯಾ. ೦೨–೩೯). [ಲೋಟನ+ — ಇಸು$_3$]

**ಲೋಟು** (ನಾ). (?) : ಜಯಗೋಪಕನ್ಯಕಾಕಾಮುಕಲೆ ಶಾಸ್ತ್ರಪ್ರಭಿಲೋಟ ನೊಳು ತ್ರಿವಳಕುಕ್ಷ ಜಯವನಧಿದಕ್ಷಾ (ತ್ರೀಕೃಶಾ. ೦). [ ? ]

**ಲೋಟೆ** ' ಲೋಟಾ$_1$' ನೋ.

**ಲೋಡನ** (ನಾ). ೧. ಕದಡುವಿಕೆ ; ಕಲಕುವಿಕೆ ; ಮಥನ. ೨. ಪ್ರಚೋದನೆ. [ಸಂ.]

**ಲೋಡಿಗೆ** (ನಾ). ಒರಗಿಕೊಂಡು ಕೂತುಕೊಳ್ಳಲು, ಅರಳೆ ಮೊದಲಾದುವನ್ನು ತುಂಬಿ ಮಾಡಿದ ಮೃದುವಾದ ದಿಂಬು : ಬಳಿಯ ಚೌರಿಯ ಹೊಱಿಯ ಚಿತ್ರಾವಳಿವಿಧಾನದ ಹಾಸುಗಳ ಹೊಂಬಳಿಯ ತೆರೆಸೀರೆಗಳ ಛತ್ರ ವ್ಯಜನ ಸೀಗುರಿಯ ಹೊಳೆವ ಪಟ್ಟೆಯ ಲೋಡಿಗೆಯ . . . ಸುವರ್ಣಾವಳಿಯ ದಿಂಡುಗಳೊಟ್ಟಿದವು (ಕುಮಾವ್ಯಾಗ. ೪–೦೪). [ < ಲೋಡು$_1$ ]

**ಲೋಡು**$_1$ (ನಾ). = ಲೋಡಿಗೆ : ಒಱಗಿಕೊಂಬುದಕೆ ಲೋಡಾಗಲು ಮತ್ತೊಂದು ಮಿಱುಗುವ ಗದ್ದುಗೆಯಾಗೆ (ಶ್ಯಾಪಶ. ೩೩–೯೯) ; ಪಾಸಿನೊಳ್ ನೀಳಮಾದೊಂದು ಲೋಡಂ ಮಲಂಗಿಸಿ. . .ಪೊದೆಯಿಸಿ (ಕಳವ. ೪–೩೪); ಕನ್ನಡೀಮಹಲಿನಲ್ಲಿ ರತ್ನಮಯ ಗಾದಿಯ ಮೇಲೆ ಲೋಡಿಗೆ ಆತುಕೊಂಡು

ಕುಳಿತರು (ಶಂಬಾಳ. ೦೦).

[ ದೇ.॥ ತುಳು. ತೆಲು. ಲೋಡು. / ಮರಾ. ಲೋಡ, ಲೋಢ ]

**ಲೋಡು₂** (ನಾ). ವ್ಯಾಯಾಮ ಮಾಡುವುದಕ್ಕಾಗಿ ಕೈಯಲ್ಲಿ ಹಿಡಿದು ತಿರುಗಿಸುವ ಮರದ ಭಾರವಾದ ಸಾಧನ : ಗರುಡಿಮನೆಯಂ ಪೊಕ್ಕು . . . ತಿರುಹುತ್ತ ಲೋಡು ನಿಡುಸಾಣಂಗಳ (ಕರಕು. ೯-೦೦) ; ಕೈಗಳಿಂದ ತಿರುಗಿಸಲ್ಪಟ್ಟಂಥಾ ಶಿರಸ್ಸಿನ ಸುತ್ತಲು ತಿರುಗಿಸುವದರಿಂದ ವಸ್ತುವಂಥಾ ತೋರನಾಗಿಯಿದ್ದಂಥಾ ಅದಕೆ ಲೋಡುಯೆಂಬ ಹೆಸರು (ಐಶ್ವರ್ಯ. ೨-೩೦) ; ಗರಡಿಮನೆಗೆ ಗಂಭೀರ ಹೋಗವ್ನೆ ಗಂಧದ ಲೋಡ ತಿರುಗುವ ದೂರೆಮಗನಿಗೆ ಮಗಳ ಕೊಡಬೇಕು (ಜಪ್ಯ.ಜಾ. ೫೩).

[ ದೇ.॥ ತೆಲು. ಲೋಡಿ, ಲೋಡೀ]

**ಲೋಡು₃** (ನಾ). ಹೊರೆ; ಹೇರು : 'ಫೈಲ್' 'ವ್ಯಾಗನ್' 'ಲೋಡು' ಬರೆದುಕೊಂಡರು (ಅರಸೋ. ೨೦); ಗಾಡಿಗೆ ಲೋಡು ಜಾಸ್ತಿಯಾಗಿದೆ (ರಾಜ).  [ ← ಇಂ. Load ]

**ಲೋಣ** (ನಾ). ಒಂದು ಬಗೆಯ ಉಪ್ಪು: "ಲವಣೋತ್ಥಂ, ಲವಣಾರಂ– ಈಯೆರಡು ಲೋಣ, ಲವಣ" (೬ಶಧಿ. ೦೯೨).

[ < ಪ್ರಾ. ಲೋಣ. / ಸಂ. ಲವಣ ]

**ಲೋಣಾರ** (ನಾ). ಉಪ್ಪುಮಾಡುವವನು; ಉಪ್ಪಾರ : ಲೋಣಾರರು:– ಇವರ ಜನ್ಮಭಾಷೆ ಕನ್ನಡ . . . ಸೋರುಪ್ಪು ಮಾಡಿ ಮಾರುವರು (ಕಣಗಿ. ೦೬೮).  [← ಮರಾ. ಲೋಣಾರ. / ಸಂ. ಲವಣಕಾರ ]

**ಲೋಣಿಕೆ** (ನಾ). ಒಂದು ಬಗೆಯ ಸಸ್ಯ; ಪುಳ್ಳಂಪುರಿಚೆ : "ಆ ಲೋಣಿಕೆ ಕ್ಷುಲ್ಲಕಾಮ್ಲ ಪುಳ್ಳಂಪುಣಾಸೆ" (ಜುಂಗರಾ. ೯೨-೩೯). [ಸಂ.]

**ಲೋಧ್ರ** (ನಾ). ಒಂದು ಬಗೆಯ ಮರ : "ಗಾಲವಃ, ಶಾಂಬರಃ, ಲೋಧ್ರಃ . . . ಮಾರ್ಜನಃ — ಈ ೬ ಲೋಧ್ರಗಿಡದ ಹೆಸರು. ಇದು ಜಾಲಾರಿಮರದಲ್ಲಿ ಭೇದ, ಅರಗಿನ ಮರ" (ಸಿದ್ಧೌಷ. ೦೦೯); ಚೂತಾವನೀಜಾತ ಲೋಧ್ರಲವಂಗಪ್ರಕರಪ್ರವಾಳರುಚಿತಂ . . . ಕಣ್ಗೊಳಿಸುಗುಂ (ಕಾದಂಪೂ. ೨೦೩) ; ಜಾಜಿ ಬಕುಳಂ ತುಂಬೆ ಲೋಧ್ರವರ್ಗಗಳಗುಳ್ಳ ಕಣಿಗಿಲುಮಶೋಕೆಯುನ್ನತ್ತ (ಶೀಕೃಪು. ೬-೦೦-೦೬) ; ಹಿಪ್ಪಲಿ, ಲೋಧ್ರ, ಭದ್ರಮುಸ್ತೆ. . .ಕೊಡಲು ಪ್ರಳಯಾಗ್ನಿಗೆ ಸಮಾನವಾದ ಉಷ್ಣಜ್ವರವೂ ತಾಪಜ್ವರ ಕಡುಜ್ವರಗಳೂ ಸಹ ಮಾಣುವುವು (ಸಕೌಷ. ೭೮).

[ಸಂ.]

**ಲೋಧ್ರಪುಷ್ಪ** (ನಾ). ಒಂದು ಬಗೆಯ ಮರ ; ಇಪ್ಪೆ; ಮಧೂಕ : "ಇಪ್ಪೆ ಮಧುಕಂ ಲೋಧ್ರಪುಷ್ಪ ಗುಡಪುಷ್ಪಮಕ್ಷಂ" (ಜುಂಗರಾ. ೯೨-೩೮).

[ಸಂ.]

**ಲೋಪ** (ನಾ). ೧. ಚೂರುಮಾಡುವುದು ; ಒಡೆಯುವುದು. ೨. ಹಾಳುಮಾಡುವಿಕೆ ; ನಾಶ. ೩. ಸುಲಿಗೆಮಾಡುವುದು : ಕೊಳ್ಳೆ. ೪. ಇಲ್ಲದಾಗುವುದು : 'ಸ್ವರಮಿರೆ ಪರದೊಳ್ ಪೂರ್ವಸ್ವರಲೋಪಂ (ಶಾಬ್ದಸ. ೩೨) ; ದಕಾರದೆಡೆಗೆ ಒರಿಸು ಲೋಪಂ (ಶಬ್ದಮ.೯೭); ಇಲ್ಲಿಯೂ ರೇಫ ಲೋಪವಾಗಿವೆಯೆಂದು ತಿಳಿಸುವರು (ರಾಣಿಭಿ. ೯೭). ೫. ಕೊರತೆ ; ಊನ : ಚಾಪದಂಶವ ಹೊಂದಿ ಶನಿ ಇರೆ ಪಾಪ ಚಂದ್ರನ ರಕ್ಷಣೆಯು ತಾ ಲೋಪವಿಲ್ಲದೆ ತಾಳಿರಲು ಹನ್ನೊಂದು ವರುಷ (ಕೀರಜ್ಯ. ೨-೦೩); ಲೋಪವೇನೂ ಇಲ್ಲ, ದೀಪಕೆ ಮಾತ್ರ ಬಗೆಯಿಲ್ಲ (ಗಾದೆ). ೬. [ವ್ಯಾಕ] ಕನ್ನಡದ ಲೋಪ, ಆಗಮ ಮತ್ತು ಆದೇಶಗಳೆಂಬ ಸಂಧಿಗಳಲ್ಲಿ ಮೊದಲನೆಯದು ; ಸ್ವರದ ಮುಂದೆ ಸ್ವರ ಬಂದರೆ ಹಿಂದಿನ ಸ್ವರ ಬಿಟ್ಟುಹೋಗುವುದು : ಸ್ವರಮಿದಿರೊಳಿರೆ ವಿಭಕ್ತಿ ಸ್ವರಕಂ ಪ್ರಕೃತಿಸ್ವರಕಮಕ್ಕುಂ ಲೋಪಂ (ಶಬ್ದ. ೫೨) 'ಲೋಪಸಂಧಿ' ನೋಡಾ.

ಲೋಪದೋಷ = ಕುಂದು ಮತ್ತು ಕೊರತೆ ; ಅಂಕುಡೊಂಕು : ಪ್ರಜಾಪ್ರಭುತ್ವದಲ್ಲಿ ಎಷ್ಟೇ ಲೋಪದೋಷಗಳಿದ್ದರೂ ಅದು ಸರ್ವಾಧಿಕಾರ ಪ್ರಭುತ್ವಕ್ಕಿಂತ ಸಾವಿರಪಾಲು ಮೇಲು (ಜಂಜಜಂ. ೦೬೩). [ಸಂ.]

**ಲೋಪಂಬೊರ್ದು** (ಕ್ರಿ). ಲೋಪವನ್ನು ಹೊಂದು ; ಇಲ್ಲದಂತಾಗು : ಇರ್ದುದನರಿಯದೆ ನಯದಿಂ ಪೊರ್ದುವುದಾಗಮಮದೆಯ್ದೆ ಪೋಪುದು ಲೋಪಂಬೊರ್ದಿ ವಿಭಕ್ತಿಯ ಬಟಿವಿಡಿದು (ಶಬ್ದಮ. ೦೬೩).

[ಲೋಪ + ಪೊರ್ದು₁]

**ಲೋಪಗೈಸು** (ಕ್ರಿ). ಇಲ್ಲದಂತೆ ಮಾಡು ; ಅಳಿಸು : ದೀಪ ದಿವದಲಿ ಕಂಡರಾದಡೆ ಲೋಪಗೈಸುವರಾಕ್ಷಣ (ಜಾಂಆರ. ೦೬-೨೭).

[ಲೋಪ + ಕೈಸು (<ಕೆಯ್ಯು₁)]

**ಲೋಪಪ್ರವೃತ್ತಿ** (ನಾ). ಬಿಟ್ಟುಹೋಗುವಿಕೆ ; ಇಲ್ಲವಾಗುವಿಕೆ : ವಿದಿತಂ ದಾಡಿಮ ಕೂಷ್ಮಾಂಡದ ಮತ್ವ ಸ್ಥಾನದಲ್ಲಿ ಬತ್ವಂ ಕೂಷ್ಮಾಂಡದ ಷತ್ವಕ್ಕಂ ಬಿಂದುಗಮಾದಯಿಸುಗುಂ ಲೋಪಪ್ರವೃತ್ತಿ ಲಕ್ಷಣವಿಧಿಯಿಂ (ಶಬ್ದಮ. ೨೮೪).

[ಸಂ.]

**ಲೋಪಸಂಧಿ** (ನಾ). = ಲೋಪ ೬ : ಸ್ವರದ ಮುಂದೆ ಸ್ವರವು ಬಂದರೆ ಸಾಮಾನ್ಯವಾಗಿ ಹಿಂದಿನ ಸ್ವರವು ಬಿಟ್ಟುಹೋಗುತ್ತದೆ. ಹೀಗೆ ವರ್ಣವು ಬಿಟ್ಟು ಹೋಗುವುದಕ್ಕೆ ಲೋಪವೆಂದೂ ಈ ಸಂಧಿಗೆ ಲೋಪಸಂಧಿಯೆಂದೂ ಹೆಸರು (ಜುರ್ರಜು. ೦೬). [ಸಂ.]

**ಲೋಪಿಸು** (ಕ್ರಿ). ಬಿಡು ; ಕಳೆ ; ತೆಗೆದುಹಾಕು : ತಪನಪ್ರತಾಪಮಂ ಲೋಪಿಪ ನಾಲ್ವತ್ತೆಂಟುಕೋಟಿ ಪಟುಯಾಗೆಯಾಸೆಗಂ (ಜಾಕ್ಗಕ್ರ. ೯-೪೦); ಎಲ್ಲಿಯುಮಾಮಂತ್ರಣದೊಳ್ ಬಲ್ಲರ್ ಪ್ರಥಮೈಕವಚನಮಂ ಲೋಪಿಸುವರ್ (ಶಬ್ದ. ೦೨೩); ಪಾಪವಾಸನೆಯನು ಪುಣ್ಯವಾಸನೆಯಿಂದ ಲೋಪಿಸಿ ತನ್ನೊಳು ನಿಂದು (ಶರಶ. ೦೬-೬೬). [ಲೋಪ + —ಇಸು₃]

**ಲೋಪ್ತ್ರ** (ನಾ). ಕದ್ದ ವಸ್ತು ; ಕಳವಿನ ಮಾಲು : "ಲೋಪ್ತ್ರಮೆನೆ ಕಳವಿನೊಡವೆ" (ಜುಂಗರಾ. ೬೭-೫). [ಸಂ.]

**ಲೋಬ** (ನಾ). ೧. ಅತಿಯಾಸೆ ; ಕೃಪಣತೆ : ಲೋಭ – ಲೋಬ (ಶಬ್ದ. ೨೫೫ ಪ್ರಯೋ). ೨. ಅತಿಯಾಸೆಯುಳ್ಳವನು ; ಕೃಪಣ : ಲೋಭಿ : ಹುಸಿವನ ಮಾತುಗುಟ್ಟದಿರು ಲೋಬನ ಮಾತನಡಂಗಿಸಾಚೆಯೊಳ್ಳುಸಿವನ ಮಾತುಗೇಳದಿರು (ಕಇ. I. ೨೫-೯೭ ; 1186).

[ < ಸಂ. ಲೋಭ]

**ಲೋಬಾನ, ಲೋಭಾನ** (ನಾ). ಸುಗಂಧ ದ್ರವ್ಯದಂತೆ ಬಳಸುವ ಒಂದು ಬಗೆಯ ಮರದ ಅಂಟು ; ತುರುಷ್ಕ : ಲೋಬಾನ ಚಂದನ ಗಾಡಿನೊಳ್ಪಿಂದಿ ಮತ್ತೇಭಂಗಳಿರೆ ಕಂಡರವರು (ಚೋಚಕ. ೦೯-೨೦) : ಕನ್ನಡದಲ್ಲಿ ಲೋಬಾನ ಎಂತಲೂ ಹಾಲುಮಡ್ಡಿ ಎಂತಲೂ ಕರೆಯುತ್ತಾರೆ (ಪ್ರಬಾಇ. I. ೪೯ ೪೩೬) ; ಕಾಯಿ ಒಡೆದು ಲೋಬಾನ ಹಾಕಿದ್ದ (ಜುರಿಜು. ೩೭). **ಲೋಭಾನ** : ಲೋಭಾನ [ಧೂಪದಿಂ] [ದೊತ್ತರಿಸಿ] (ಸೂಕರಾ. ೫-೦೫) ; ಕೋಣೆಯಲ್ಲಿ ಲೋಭಾನವು ವಿಶೇಷವಾಗಿ ಸುಡಲ್ಪಟ್ಟಿದ್ದರಿಂದ ಅದರ ವಾಸನೆಯು ಕೋಣೆಯ ತುಂಬ ಇಡಿಗಿತ್ತು (ಕಪ್ರಾ. ೦೦೨) ; ಲೋಭಾನದ ಹೊಗೆಯನ್ನು ಹಾಕಿದ್ದಾರೆ (ದೇಶಿ. ೦೬೦).

[←ಅರ. ಹಿಂ. ಲೋಬಾನ ; ಮರಾ. ಲೋಬಾನ, ಲೋಭಾನ]

**ಲೋಭ** (ನಾ). ೧. ಅತಿಯಾಸೆ ; ದುರಾಸೆ : ಅನೃತಂ ಲೋಭಂ ಭಯಮೆಂಬಿನಿತುಂ ನೀನಿರ್ದ ನಾಡೊಳಿರ್ಕುಮೆ ರವಿನಂದನ (ಗದಾಯು. ೫-೦೭) ; ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಆರು ಶತ್ರುಗಳನ್ನು (ಅಧ್ಯಕ. ೦-೨೨ ೬೮೩) ; ಲೋಭ ನಡಸಿ ನಡಸಿ ಭೋಗ ಕೆಡಿಸಿಕೊಂಡ (ಗಾದೆ). ೨. ಜಿಪುಣತನ; ಕೃಪಣತನ: ಕೊಡೆಯನೀಯನೆ ಲೋಭವೇ ಕರಸ (ಹರಿಶ.೬-೦೩). ೩. ಜಿಪುಣ; ಕೃಪಣ:

'ಕಡುಲೋಭ' ಪರಾ. ೪. (ಉಕ) ಪ್ರೀತಿ ; ವಾತ್ಸಲ್ಯ ; ಅಕ್ಕರೆ : ಅಣ್ಣಾ ಹೋಗಿಬರುತ್ತೇನೆ. ಲೋಭವಿರಲಿ (ಮುಂಡಾ. ೪-೧೯) ; ತಂಗೀ ಇನ್ನು ನಾನು ಹೋಗಿ ಬರುತ್ತೇನವಾ. ಲೋಭವಿರಲಿ (ಉಡಾಕ. ೪೭). ೫. [ಜೈನ] ಐದು ಬಗೆಯ ಅಂತರಾಯಕರ್ಮಗಳಲ್ಲಿ ಒಂದು : ಅಂತರಾಯಕರ್ಮಂ ಪಂಚವಿಧಮಕ್ಕುಂ ದಾನ ಲೋಭ ಭೋಗೋಪಭೋಗವೀರ್ಯಾಂತರಾಯಕರ್ಮಮೆಂದು (ಗೊಪ್ಪ.ಜಾ.೪-೪). 'ಅಂತರಾಯಪಂಚಕ' ಪರಾ. [ಸಂ.]

**ಲೋಭಕ** (ಗು). ಲೋಭದಿಂದ ಕೂಡಿದ ; ಕೃಪಣತನದಿಂದ ಕೂಡಿದ : ಮಮ್ಮಲಮಱುಗುತ್ತುಮಿಾವ ಕಡುಲೋಭಕದಾನಗುಣಂಗಳಂ ಪಳಂಚಿ (ಅಜಿ. ೬೨-೧೭). [ಸಂ.]

**ಲೋಭಾನ** 'ಲೋಬಾನ' ನೋ.

**ಲೋಭಿ** (ನಾ). ಕೃಪಣ ; ಜಿಪುಣ : "ಕದರ್ಯಃ . . . ಮಿತಂಪಚಃ—ಈ ೫ ಲೋಭಿ" (ಹಲಾಯು. ೫೭-೧೯೨); ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ . . . ಮಕರದೊಳಿರೆ ಮೂರ್ಖಂ ಖಳಂ ಲೋಭಿ (ಜಾತಕ. ೦೭-೦೭); ಭೋಗಿಗೆ ಲೋಭಿಗೆ ಯೋಗಂ ತ್ಯಾಗಂ ಹಿತವಾಗದು (ಹರಿಶ್ಚ. ೨-೫); ಪಾಟಿಗೆ ಪರವಾಯು, ಲೋಭಿಗೆ ಚರಾಯು (ಗಾದೆ). [ಸಂ.]

**ಲೋಭಿಗಲಿ** (ನಾ). ಜಿಪುಣನಾದ ಬಂಟ : ಮಾರ್ಗವಿಾಯದ ಬದಿರಿದ ಲೋಭಿಗಲಿಗಳುಮಂ ನೊಂದು ಪಲ್ಗಿರಿದೋಡುವ ಪುಣ್ಗಲಿಗಳುಮಂ . . . ನೋಡಿ (ಗದಾಯು. ೯-೩೪ ಪ). [ಲೋಭಿ + ಕಲಿ]

**ಲೋಭಿತನ** (ನಾ). ಜಿಪುಣತನ ; ಕೃಪಣತ್ವ : (೬). [ಲೋಭಿ + — ತನ]

**ಲೋಭಿಸು** (ಕ್ರಿ). ಅತಿಯಾಸೆಪಡು : ನಿತ್ಯತ್ವಂಬೆತ್ತ ಪಾಂಗಿಂ ಪಳಿವ ಮುಳಿವ ಕಾಮಿಪ್ಪ ಕೋಪಿಪ್ಪ ಲೋಭಿಪ್ಪತ್ಯಂತಂ ಗರ್ವಿಪನ್ನೀ ಮನಕೆ ಪರಮವೈರಾಗ್ಯಮಂ ಕೊಟ್ಟು . . . ರಕ್ಷಿಪ್ಪುದೆನ್ನಂ (ಕಥಾಕ. ೦೩). [ಲೋಭ + — ಇಸು]

**ಲೋಮ** (ನಾ). ೧. ಮನುಷ್ಯ ಅಥವಾ ಯಾವುದೇ ಪ್ರಾಣಿಯ ಮೈಗೂದಲು ; ರೋಮ : "ಲೋಮಮೆನೆ ಮೆಯ್ಯ ಕೂದಲಕ್ಕುಂ" (ಮಂಗರಾ. ೯೯-೫); "ತನೂರುಹಂ, ರೋಮ, ಲೋಮ_ ೩ ಮೈಯೊಳಗೆ, ಹುಟ್ಟಿದ ಕೂದಲು ಹೆಸರುಗಳು. ಮೈಗೂದಲು" (ಕಿಟ್ಟಂಕಿ. ೦೯೭). ೨. ಕೂದಲಿನಂತಿರುವ ಸಣ್ಣ ಬೇರು : ನಿಜವಾದ ಬೇರುಗಳಿಲ್ಲದಿದ್ದರೂ ಅವಕ್ಕೆ ಬದಲಾಗಿ ಹುಟ್ಟಿರುವ ಲೋಮಗಳ ಸಹಾಯದಿಂದ . . . ತನ್ನ ಆಹಾರದ ಏರ್ಪಾಟನ್ನು ತಾನೇ ನಿರ್ವಹಿಸಿಕೊಳ್ಳುತ್ತದೆ (ಹಸುಹೂ. ೦೯೦). ೩. ಬಾಲ ; ಪುಚ್ಛ. ೪. ಒಂದು ಬಗೆಯ ಸಸ್ಯ : "ಲೋಮ ಕರ್ಕಟಕಂ" (ಮಂಗರಾ. ೯೦-೩೪). [ಸಂ.]

**ಲೋಮಕ** (ನಾ). ಒಂದು ಬಗೆಯ ಸಸ್ಯ ; ತೊರೆಗಣಿಗಿಲು : "ತೊರೆಗಣಿಗಿಲಾ ಲೋಮಕಂ" (ಮಂಗರಾ. ೩೪-೦೦). [ಸಂ.]

**ಲೋಮನಾಳ** (ನಾ). ಕೂದಲಿನಷ್ಟು ಸೂಕ್ಷ್ಮವಾದ (ರಕ್ತ)ನಾಳ: ರೋಗಾಣುಗಳು ಲೋಮನಾಳಗಳಲ್ಲಿ ಸೇರಿಕೊಂಡು ರಕ್ತಚಲನೆಗೆ ಅಡ್ಡಿ ಮಾಡುವುದರಿಂದ ಈ ಚುಕ್ಕೆಗಳು ಕಾಣಿಸಿಕೊಳ್ಳುತ್ತವೆ (ಕಾಲರಾ. ೩೦); ಸೆಲ್ಯುಲೋಸನ್ನು ರಸಾಯನಿಕವಸ್ತುಗಳಲ್ಲಿ ಕರಗಿಸಿ ತಯಾರಿಸಿದ ದ್ರವವನ್ನು ಲೋಮನಾಳ (capillaries)ಗಳ ಮೂಲಕ ಹಾಯಿಸಿ ಹೊರ ಹೊರಟ ಎಳೆಗಳನ್ನು ಆರಿಸಿ ಹದಗೊಳಿಸಿದ ಪದಾರ್ಥವೇ ರೆಯಾನ್ ಎಳೆಗಳು (ಗೃಹಶಿ. ೩೦). [ಸಂ. ಲೋಮನಾಲ]

**ಲೋಮಶ** (ಗು). ೧. ಕೂದಲಿನಿಂದ ತುಂಬಿರುವ ; ರೋಮದಿಂದ ಕೂಡಿರುವ. (ನಾ). ೨. ಕೂದಲಿನಿಂದ ತುಂಬಿರುವ ಪ್ರಾಣಿ : ಲೋಮಶ ಎಂದರೆ ತುಂಬ ಕೂದಲು ಬೆಳೆದ ಪ್ರಾಣಿ ಎಂದು ಅರ್ಥ (ಜಾನಪ. ೯೨). ೩. ಒಬ್ಬ ಋಷಿಯ ಹೆಸರು ; ರೋಮಶ : ಕಳುಹಿದನು ಲೋಮಶನನವನೀತಳಕೆ ಸುರಪತಿ (ಕುಮಾವ್ಯಾ. ೯-೨). [ಸಂ.]

**ಲೋಮಶೆ** (ನಾ). ೧. ಒಂದು ಬಗೆಯ ಔಷಧೀಮೂಲಿಕೆ ; ಸುಗಂಧಮುಸ್ತೆ ; ಜಟಾಮಾಂಸಿ : "ಜಟಿಲೆ, ಜಟಿಮಾಂಸಿ, ಸುಗಂಧಮುಸ್ತೆ" (ಸಸ್ಯಶಿ. ೯೫). ೨. ನರಿ. ೩. ಕೋತಿ. [ಸಂ. ಲೋಮಶಾ]

**ಲೋಮಹರ್ಷ** (ನಾ). ಅತಿಯಾದ ಸಂತೋಷ, ಭಯ ಮುಂತಾದುವುಗಳಿಂದ ಮೈಗೂದಲು ನೆಟ್ಟಗಾಗುವುದು. —ಮೈನವಿರೇಳುವುದು. 'ರೋಮಹರ್ಷ' ಪರಾ. [ಸಂ.]

**ಲೋಮಹರ್ಷಣ** (ನಾ). ೧. = ಲೋಮಹರ್ಷ. ೨. ಅತಿಯಾದ ಸಂತೋಷ, ಭಯ ಮುಂತಾದುವು ಮೈಗೂದಲನ್ನು ನೆಟ್ಟಗಾಗುವಂತೆ ಮಾಡುವುದು; ರೋಮಾಂಚಗೊಳಿಸುವುದು. 'ರೋಮಹರ್ಷಣ' ಪರಾ. [ಸಂ.]

**ಲೋಮಿ** (ನಾ). ಕುದುರೆಯ ಗೊರಸಿಗೆ ಹಾಕುವ (ಚಿನ್ನ ಅಥವಾ ಬೆಳ್ಳಿಯ) ಬಳೆ : "ವಳಯಂ ಲೋಮಿವೆಸರಕ್ಕು" (ಮಂಗರಾ. ೬೦-೦೩). [ ? ]

**ಲೋಮಿಕೆ** (ನಾ). ಒಂದು ಬಗೆಯ ಸಸ್ಯ ; ಬೆಂಡೆ : "ಲೋಮಿಕೆಯೆನಲ್ ಬೆಂಡೆ" (ಮಂಗರಾ. ೪೫-೪೭). [ ? ]

**ಲೋಯಿಸರ** 'ಲೋಳೆಸರ' ನೋ.

**ಲೋಲ, ಲೋಳ** (ಗು). ೧. ಅತ್ತಿತ್ತ ಅಲುಗಾಡುವ, _ ಚಲಿಸುವ ; ಚಂಚಲವಾದ : ಚಮರೀಲೋಲಲಾಂಗೂಲಮಾಲಾವಲಿವಿಕ್ಷೇಪಂಗಳಿಂ ತಚ್ಚಮರರುಹ ಮಹಾಶೋಭೆ ಕೈಗಣ್ಗೆ (ಶಂಖಜಾ. ೪-೦೪) ; ಮಹೀಭುಜನ ಮೆಯ್ಸಿರಿಯಂ ಸೆಱಿಗೆಯ್ಯೆ ತತ್ಸರೋಜಾವನೆ ತನ್ನ ಲೋಲನಯನೋತ್ಪಲ ಮಾಲೆ ನೃಪಂಗೆ ಮಾಲೆಯಂ ತಾನೊಸೆದಿಕ್ಕಿದಳ್ (ಶಂಠಾಮು. ೩-೪೪). ೨. ಅಸ್ಥಿರಪ್ರಕಾಶದ ; ಮಿಣುಕುವ : ಲೋಲತಾರೆಗಳೆಸೆವಿರುಳಿನ ಮೊಗವನು ರಾಗದಿಂದೆಳೆಯೆ ಚಂದ್ರಮನು (ಸಂಜಾಕ. ೦೦೦-೯೦). (ನಾ). ೩. ಅಲ್ಲಾಡುವುದು; ಚಲಿಸುವುದು ; ಅಲುಗಾಟ : "ಲೋಲಂ, ಚಪಳಂ . . . ಸಂಚಳಂ—ಈ ೧೦ ಸಂಚಳಂ" (ಹಲಾಯು. ೦೦೫ ೦೦). ೪. ಪ್ರೀತಿ ; ಅಕ್ಕರೆ : ಬಾಲನ ಹಿಗ್ಗವ ಕಂಡು ಲೋಲದಿ ಎತಿಕೊಂಡು ತಲೆ ಮೇಲೆ ಕೈಯ ತಿರುವುತ ಮಲ್ಲಯ್ಯ ಬಾಲಸಿದ್ಧನಿಗೆ ಮುದ್ದಿಟ್ಟನು (ಸಿದ್ಧಕ. ೩-೭೦). ೫. ಆಟವಾಡುವವನು ; ಕ್ರೀಡಾಸಕ್ತ : ಬಾಲನಾ ಲೀಲೆಯನು ಹೇಳಲಿನ್ನೇನು ನಾ ? ಲೋಲ ಹಿಡಿಹಿಡಿದೆಳೆವ ಮುಂಗುರುಳ (ಸಂಪ್ರ. ೪-೫). ೬. ವಿಷಯಲಂಪಟ; ಕಾಮುಕ : ಲೋಲಂಗೀ ವಿಹಗಂಗೀ ಬಾಲೆಯನೀ ಮುಗ್ಧೆಯಂ ವಿಚಾರಿಸದೆಯುಂ . . . ಈವುದೆ (ಶಾರಂಗ. ೭೯). ೭. ಪ್ರೀತಿಯುಳ್ಳವನು : ಲೋಲ ಪುರಂದರವಿಠ್ಠಲ (ಪುರಂದ. ದಾ. ೩-೦೦೯-೩). 'ಸಿರಿಲೋಲ' ಪರಾ. ಲೋಳ : ೧. ಲೋಳ ಕಟಾಕ್ಷ ತೀಕ್ಷ್ಣಕರದಿಂ ತೆಗೆದಿಚ್ಚೆಗೆ ಸಲ್ವ ಮೇಳದಿಂ ಮೇಳಿಸಿ ಕೇಳಿಯಂ (ಶಾಕ್ಯಕ. ೦೦-೬೫) ; ಲೋಳತರಂಗರಾಜಿತವಿಯತ್ತಟನೀತಟಚಾರು ಕಲ್ಪಭೂಜಾಳಿಯ ಬೀಟಲೆಂದೆನೆ (ಕುಸುಮಾ. ೨-೯೯). ೩. "ಲೋಳಂ ಚಲಮುಂ" (ಶಬ್ದಕೋ. ೦೨೯-೬೬). [ಸಂ.]

**ಲೋಲಂಗಿತ** (ನಾ). [ಸಂಗೀತ] ಒಂದು ಬಗೆಯ ಗತಿ (?): ಕಮ್ಮವಣಿ ಲೋಲಂಗಿತ ನುತಶುದ್ಧಸಾಳಂಗ ಸಂಕೀರ್ಣಮುಂ ಯಥೋಚಿತತಾರ ಮಧುರ ಮಂದ್ರಂಗಳಿಂ ಹಾಡಿ (ಜಗನ್ನಾ. ೭-೬). [ಸಂ.]

**ಲೋಲಂಬ, ಲೋಳಂಬ** (ನಾ). ತುಂಬಿಯಲ್ಲಿ ಒಂದು ಬಗೆ ; ದೊಡ್ಡ ದುಂಬಿ: ಲೋಲಂಬ ಕಟಕ (ರಸಕ. ೩೬-೦೦). ಲೋಳಂಬ : ಅಂಬುರುಹ ಲೋಳಂಬ [ಜಾತಾಂ. ರೋಲಂಬ] ಮತ್ಸ್ಯಕಚ್ಛಪ ವಾರಿಕಂಬುಶೀಕರ ಚಕ್ರವಾಕಶೈವಾಲಕಾದಂಬಗಂಭೀರ ಸೈಕತ ಮೃಣಾಳಂಗಳಿವು ತಮಗವಯವಂಗಳಾಗೆ (ಕೃಷಿಜಾ. ೯-೨೮). [ಸಂ.]

**ಲೋಲಂಬಕದಂಬ** (ನಾ). ೧. ದುಂಬಿಗಳ ಗುಂಪು : ಭ್ರಮರಗಳ ಸಮೂಹ. ೨. ದುಂಬಿಗಳಿಂದ ಆವರಿಸಲ್ಪಟ್ಟವನು : ವಿಲಿಪ್ತಯಕ್ಷಕರ್ದಮಾಮೋದಾಕೃಷ್ಟವನಕುಸುಮಾಲೋಲಲೋಲಂಬಕದಂಬನುಂ . . . ಬರ್ಪಾಗಳ್ (ಶಂಧ್ರ ಪು. ೬-೮೪ ಪ). [ಸಂ.]

**ಲೋಲಕ್** 'ಲೋಲಾಕು' ನೋ.

**ಲೋಲಕ** (ನಾ). ಅತ್ತಿತ್ತ ತೂಗಾಡುವ ವಸ್ತು : ಆ ಬಳ್ಳಿಗಳ ಕೆಳಭಾಗದಲ್ಲಿ ತ್ರಿಕೋನಾಕೃತಿಯಾದ ಲೋಲಕಗಳು ಜೋತಾಡುತ್ತಿರುತ್ತವೆ (ಕುಂಂಬಬು. ೬-೯೩); ಆಗಿನ ಕಾಲದಲ್ಲಿ ಗಡಿಯಾರಗಳಿಗೆ ಪೆಂಡುಲಮ್ (Pendulum) ಅಥವಾ ಲೋಲಕಗಳನ್ನು ಉಪಯೋಗಿಸುತ್ತಿರಲಿಲ್ಲ (ಬೌಕಬ. ೨೬). [ಸಂ.]

**ಲೋಲಕ್ಕು** 'ಲೋಲಾಕು' ನೋ.

**ಲೋಲಚಿಬುಕ** (ನಾ). [ನಾಟ್ಯ] ಎಂಟು ಬಗೆಯ ಚಿಬುಕಭೇದಗಳಲ್ಲಿ ಒಂದು ; ಪ "ಅಗಿಯುವಾಗ ಮಾಡುವಂತೆ ಗಡ್ಡವನ್ನು ಅಡ್ಡಲಾಗಿ ಚಲಿಸುವುದು" (ಲಾಕ್ಯರಂ. ೨೮೦ ಗದ್ಯಾನುವಾದ) : ನೆಗಳ್ದಗಿವ ಸಮಯದೊಳ್ ಪೆಚ್ಚುಗೆಯಂ ಚಲಿಸಲ್ಕೆ ಲೋಲಚಿಬುಕಮೆನಿಕ್ಕುಂ (ಲಾಕ್ಯರಂ. ೩-೧೦೨). [ಸಂ.]

**ಲೋಲಜ್ಞಾನ** (ನಾ). ಹತ್ತು ಸಾತ್ವಿಕಲಕ್ಷಣಗಳಲ್ಲಿ ಒಂದು ; ಅಸ್ಥಿರಜ್ಞಾನ ; ಚಂಚಲತೆ : ಹೇಳ್ವ ಕೇಳ್ವಾತ್ವೀಕದಶವನು ಬಾಲಬುದ್ಧಿಯು ಒಂದು ಸಹಜ ಸಂಧೇಳಿಸುತಲಿಹುದೆರಡು ಸತ್ಯವೆಯೆಂಬದದು ಮೂರು ಲೋಲಜ್ಞಾನವು ನಾಲ್ಕು (ಜ್ಞಾಕಸಂ. ೨೬-೪). [ಸಂ.]

**ಲೋಲತೆ, ಲೋಳತೆ** (ನಾ). ೧. ಅಲುಗಾಟ ; ಚಂಚಲತೆ. ೨. ಆಸೆ ; ಬಯಕೆ : ಲೋಲತೆಯಿಂದೀಕ್ಷಿಪ ಗಣಿಕಾಲಿಯಪಾಂಗ ತ್ರಿವರ್ಣರುಚಿಗಳ್ ನೀಳ್ದೆಂ ಲೀಲೆಯನಾಂತುವೋ ಮುತ್ತಿನ ನೀಲದ ಮಾಣಿಕದ ತೋರಣಂಗಳ ತೆಜದಿಂ (ಶಂಧ್ರ ಪು. ೧೧-೪); ಲೋಲತೆಯಂ ಸುರಾಗದ ಸುರಾಗದ ಪೂವನುದಿರ್ಚುತಂ ಲತಾಜಾಳಕಜಾಳಕಂಗಳನೆಬಿಬ್ಬುತವಳ್ಳಿಬಿದಭ್ರುದಭ್ರುಮಂ ಚಾಳಿಸುತುಂ (ಕ್ಷಕ್ಷಪ. ೧೧-೬೬). **ಲೋಳತೆ:** ೨. ರೋಳತೆಯಿಂದೆ ಪುಷ್ಪವತಿಯಂ ಮಧುಭಾಜನೆಯಂ . . . ಸಲೆ ಸೋಂಕುತಿರ್ಪಂ (ಳುಸುಕು. ೧೧-೦೬೮). [ಸಂ. ಲೋಲತಾ]

**ಲೋಲಲೋಚನೆ** (ನಾ). ಚಂಚಲವಾದ ಕಣ್ಣುಗಳನ್ನುಳ್ಳವಳು ; ಚೆಲುವೆ : ಪಾಲು ಸಕ್ಕರೆ ಅಮೃತಾನ್ನವ ನೀನುಂಡು ಲೋಲಲೋಚನೆಯರೂಳಿಗದ ಮೇಲಾದ ಸಿರಿ (ಹಂಸಾಂ. ೪-೩೮) ; ನಿನ್ನ ಚೆಂದುಟಿಗಳಿಂ ಕೇಳಲಾಟವೆನದಂ, ಲೋಲಲೋಚನೆ (ಶಕ್ರಾಂಗ. ೩೭-೧೧೧೬).

[ ಸಂ. ಲೋಲಲೋಚನಾ (ಲೋಲ + ಲೋಚನ + —) ]

**ಲೋಲಾಕು, ಲೋಲಕ್, ಲೋಲಕ್ಕು** (ನಾ). (ಲೋಲಕದಂತೆ ಅಲುಗಾಡುತ್ತಿರುವ) ಒಂದು ಬಗೆಯ ಕಿವಿಯ ಆಭರಣ: ತೂಗುಬಿಟ್ಟ ಎರಡು ಬಿಲ್ಲಿನಾಕಾರದ ಲೋಲಾಕುಗಳು ! (ಅಂಕೂ. ೯) ; ಕಿವಿಯಿಂದ ಚಿನ್ನದ ಲೋಲಾಕು ನೇತಾಡುತ್ತಿರುತ್ತವೆ (ಕ್ರಬಾಇ. II. ೫೩೦). **ಲೋಲಕ್:** ಸೊಟ್ಟ ಬೈತಲೆಯ ಲೋಲಕ್ ಥಳುಕಿನ ಬಳುಕುನಡುವಿನ ಜಾರ್ಜೆಟ್‌ಸೀರೆಯ ಬೆಡಗಿನ ಚೆಲುವೆ (ಜುಜಾಗ. ೨೫). **ಲೋಲಕ್ಕು** : ಬಳೆಗಳು, ಲೋಲಕ್ಕುಗಳು, ಜುಮುಕಿ . . .ಇತ್ಯಾದಿ (ಳಬಳಾ. I. ೬೨೦). [<ಸಂ. ಲೋಲಕ]

**ಲೋಲಾಕ್ಷಿ** (ನಾ). = ಲೋಲಲೋಚನೆ : ಲೋಲಾಕ್ಷಿಯರ್ಕೈದುತ್ತಿರೆ ಸಾಲಿಟ್ಟವರಳಕಗಂಧಕೊಡನ್ನೆತರುತಂ ರೋಲಂಬಮಾಲೆ ಮೇಲದು ನೀಲದ ನಡೆತೋರಣಂಬೊಲೇನೊಪ್ಪಿದುದೋ (ಲಾಜಕೀ. ೨-೧೦೪). [ಸಂ. ಲೋಲಾಕ್ಷೀ]

**ಲೋಲಾಡಿಸು** (ಕ್ರಿ). (ನೀರಿನಲ್ಲಿ) ಮುಳುಗಾಡಿಸು : ಓಲಾಡಿಸು : ಪರಿಪರಿಯಲುಂಡುಣಿಸಿ ಸುಖಸಾಗರದಿ ಲೋಲಾಡಿಸುವ ಮಂಗಳಚರಿತ ಚಿನ್ಮಯಗಾತ್ರ (ಜಾಳಿ. ೨-೦೫) ; ತನ್ನ ಪ್ರಜೆಗಳನ್ನು ಸರ್ವಕಾಲಕ್ಕೂ ಸಂತೋಷದ ಸಾಗರದಲ್ಲಿ ಲೋಲಾಡಿಸುತ್ತಾನೆ (ಜುಂಗಾಪ. ೬೦).

[ಲೋಲಾಡು + —ಇಸು₁]

**ಲೋಲಾಡು** (ಕ್ರಿ). ೧. ಅಲುಗಾಡು ; ಅಲ್ಲಾಡು ; ಚಲಿಸು : ಕೂದಲನ್ನು ಲಂಡವಾಗಿ ಕತ್ತರಿಸಿದ್ದರಿಂದ ಗೊಂಡುಗೊಂಡಾಗಿ ಅವು ಹೆಗಲ ಮೇಲೆ ಲೋಲಾಡುತ್ತಿದ್ದವು (ಹೇಮೂಕ. ೦೯೪). ೨. ಮುಳುಗಾಡು ; ಓಲಾಡು : ಎಲೆ ಶಿರವೆ ನೀನಧೋಕ್ಷಜನ ಶ್ರೀಚರಣದ ಜಲರುಹದೊಳಗಳಿಯಂತೆ ಲೋಲಾಡು (ಪುರಂದ. ಧಾ. ೩-೬೦-೩) ; ಪರಮಾನಂದ ಪಯೋನಿಧಿಯಲ್ಲಿ ಓಲಾಡಿ ತೇಲಾಡಿ ಲೋಲಾಡಬೇಕೆಂಬ ಅವರು . . . ಶಂಭುಲಿಂಗನ ಬೆಟ್ಟವನ್ನು ಆಶ್ರಯಿಸುತ್ತಾರೆ (ಕರಕ. ೫೯೦) ; ಅವಳು ಆನಂದಸಾಗರದಲ್ಲಿ ಲೋಲಾಡಹತ್ತಿದಳು (ಸ್ವಾಂಬಿ. ೦೨೦). ೩. ಸುಖಿಸು ; ಚಕ್ಕಂದವಾಡು : ಮಿಂಡನ್ನ ಕೂಡಿ ಲೋಲಾಡುತಿಹಳು (ಪುರಂದ. ೧-೦೯೯-೩) ; ಶಾಲಿವನಗಳಲ್ಲಿ ಕುಳಿತು ಲೋಲಾಡುವ ಈ ಹಕ್ಕಿಗಳನ್ನು 'ಸೋಗಯ್ಯಲ್' ನಾರಿಯರ ಬಳಗ ಬೇರೆ ಬೇಕು (ಗಾಳಗು. ೭೭).

[ಲೋಲ + ಆಡು₁]

**ಲೋಲಾಪಾಂಗ** (ನಾ). ಚಂಚಲವಾದ ಕಡೆಗಣ್ಣು : ಲೋಲಾಪಾಂಗದಲ್ಲಿ ಕ್ರೂರವಾದದರ ಕಟಾಕ್ಷವು ಮೇಘಗಳ ಮಧ್ಯದಲ್ಲಿ ಕಣ್ಗೊಳಿಸುವ ವಿದ್ಯುದ್ದಾಮವೋ ಎಂಬಂತಿರುವುದು (ಕಾಳಸಂ. ೪೫). [ಸಂ.]

**ಲೋಲಾಪಾಂಗೆ** (ನಾ). ಚಂಚಲವಾದ ಕಡೆಗಣ್ಣುಗಳನ್ನುಳ್ಳವಳು ; ಸುಂದರಿ: ಯಜ್ಞನೆಯ್ದಿದನುತ್ತುಂಗತರಂಗೆಯಂ ಶಫರಲೋಲಾಪಾಂಗೆಯಂ ಗಂಗೆಯಂ (ಹಂಕಸಂ. ೨೫೫-೧೬). [ಸಂ. ಲೋಲಾಪಾಂಗಾ]

**ಲೋಲಾಪ್ತಿ** 'ಲೋಲುಪ್ತಿ' ನೋ.

**ಲೋಲಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ : ಮುಖ್ಯವಾದ ಕೆಲವು ಆಸನಗಳು . . . ೧೦ ಲೋಲಾಸನ (ಶಾರಡ. ೦೬೬). [ಸಂ.]

**ಲೋಲಿತ, ಲೋಳಿತ** (ಗು). ೧. ಅತ್ತಿತ್ತ ಅಲುಗಾಡುವ,– ಚಲಿಸುವ,– ಅಲ್ಲಾಡುವ. (ನಾ). ೨. ಚಂಚಲಮನಸ್ಸಿನವನು : ಜೀವ ಸರ್ವೇಂದ್ರಿಯಂಗಳಲ್ಲಿ ಲೋಲಿತನಾಗದೆ (ವೋಳಪಡ. ೦೨೯-೪೪೮). ೩. [ನಾಟ್ಯ] ಶಿರೋಭೇದಗಳಲ್ಲಿ ಒಂದು ; ಪ "ಹೆದರಿದಂತೆ ಮಬ್ಬು ದೃಷ್ಟಿಯಿಂದ ಕೂಡಿ ತಲೆಯನ್ನು ಎಲ್ಲ ದಿಕ್ಕಿಗೂ ಆಡಿಸುವುದು" (ಲಾಕ್ಯರಂ. ೨೨೨ ಗದ್ಯಾನುವಾದ) : ಬೆದಱಿದವೊಲೆಂಟುದಿಕ್ಕಿಂಗೊದಗದೆ ಚಲಿಸಲ್ಕೆ ಶಿರಮದೇ ಲೋಲಿತಂ (ಲಾಕ್ಯರಂ. ೦-೯೫). **ಲೋಳಿತ** : ೩. ಕರಮೊಂದು ರೇಚಿತದೆ ಬಿತ್ತರಿಸಲ್ಕಿಂತನ್ಯಹಸ್ತಮುಲಪಲ್ಲವದಿಂಗೆರೆ ವಕ್ಷದಲ್ಲಿ ಮತ್ತಂ ಶಿರಮದು ಲೋಳಿತದ ತೆಱದೊಳಿರದುಂ ಕೆಲದೊಳ್ (ಲಾಕ್ಯರಂ. ೪-೦೬೨).

[ಸಂ.]

**ಲೋಲು** (ನಾ). ೧. ಕಾಮುಕತನ ; ಲಂಪಟತ್ವ. ೨. ಮೋಜು ; ಮಜ : ಅವನ ಲೋಲು ಹೇಳತೀರದು (ಜಾಪ). ೩. ತೂಗಾಟ ; ಎಳೆತ ; ಸೆಳೆತ : ಅಮಲಿನ ಲೋಲಿನಲ್ಲಿ ಗಾಢನಿದ್ರೆ ಹೋದರು (ಶಾಂಕಲಾ. ೨೨೮). ೪. ಹಣೆಯಲ್ಲಿ ತೂಗಾಡುವಂತೆ ಕಟ್ಟುವ ಒಂದು ಬಗೆಯ ಆಭರಣ ; ಬೈತಲೆಮಣಿ : ಲತೆಗಳೆನುವ ನಾರಿಯರ ಪಣೆಯೊಳಿರುವ ಮುತ್ತಿನ ಬಟ್ಟಿನ ಕೆಂಪುರತ್ನದ ಲೋಲುಗಳೊ ಯೆಂಬಂತೆ (ಶಿಗಂ೦. ೪೬೮-೨೦). [< ಸಂ. ಲೋಲ]

**ಲೋಲುಪ** (ಗು). ೧. ಅತಿಯಾಸೆಯಿಂದ ಕೂಡಿದ ; ಅಳಿಯಾಸೆಯ : ಜೀವನೋಪಾಯಮುಮಂ ಪಾಲಿಪುದೆ ಬೆಸನಮುದಱಿಂ ಲೋಲುಪ ಮನದಲಿ × × × (ಶಿಇಾ. XX. ೭೦-೩೦; ಸು. 1108). (ನಾ). ೨. ಅತಿಯಾಸೆಯುಳ್ಳವನು : ಲಂಪಟ : "ಲೋಲುಭಂ, ಲೋಲುಪಂ . . . ಲಂಪಟಂ — ಈ ೫ ಅಳಿಪುವವಂ" (ಕಣಾಡು. ೫೬-೦೯೮). ೩. ಹೆಚ್ಚಿನ ಆಸಕ್ತಿಯುಳ್ಳವನು ; ಆಸಕ್ತ : ನೃಪನೀತಂ ತುರಗ

ಪ್ರಿಯಂ ವಿಷಮುವಾಹಾರೋಹಣಾತ್ಯಂತಲೋಲುಪನೊಳ್ದೇಜಿದೆ ವರಾಣ ನೇಜಿದೊಡೆ ಸಾಲ್ದುಂ (ಶಂಕರಶಾ. ೯-೦೦೩). [ಸಂ.]

**ಲೋಲುಪತೆ** (ನಾ). ಅತಿಯಾಸೆ ; ಮೋಹ : ಲೋಲುಪತೆಯವನಿಯ ಲಿಹರೆ ಬರಹೇಳು ಯಮುನಂದನನನು (ಕುಮಾ.ದ್ರೋ. ೪-೨೦) : ಅವಳು ಅಧಿಕಾರಲೋಲುಪತೆಯನ್ನು ತ್ಯಜಿಸಲು ಸಿದ್ಧಳಾಗಿರಲಿಲ್ಲ (ಕುಮಾರಿ. ೨). [ಸಂ. ಲೋಲುಪತಾ]

**ಲೋಲುಪತ್ವ** (ನಾ). = ಲೋಲುಪತೆ. [ಸಂ.]

**ಲೋಲುಪ್ತ** (ನಾ). ೧. ವಿಷಯಾಸಕ್ತ ; ಲಂಪಟ : ಬಾಲ್ಯ ಯೌವನ ದೊಳಗೆ ಲೋಲುಪ್ತನಾಗಿ ನೀನೇಳುತಲೆ ಮದಿಸುತಿರಬೇಡ ಅನುದಿನದಿ ಶೂಲಿಯನು ನೆನೆಯೊ (ಸರ್ವಜ್ಞ. ೨೬೮). ೨. ಆಸಕ್ತಿಯುಳ್ಳವನು : ಇಷ್ಟಲಿಂಗಪೂಜೆಯಲ್ಲಿ ಲೋಲುಪ್ತನಾಗಿರಬೇಕು (ಷಟ್ಸಂ. ೦೬೪). [ಸಂ.]

**ಲೋಲುಪ್ತಿ**, ಲೋಲಾಪ್ತಿ (ನಾ). ೧. =ಲೋಲುಪತೆ : ಪರಸ್ಪರಸ್ಪರ್ಶನ ಲೋಲುಪ್ತಿಯಿಂ ಮನಮೆ ತನುವಾದುದವನಬ್ಜೆಪ್ಪುವಂತೆ (ರಾಜಶೇ. ೧೦-೯೩ ಪ) : ಸಪ್ತರಸನಂ ತಪ್ಪದೆಂದಾ ನೃಪಂ ತಿಳಿದು ಗುಪ್ತದಿಂ ತನ್ನ ಸತಿಯನುಜೆಯಂ ಕರೆಸಿ ಲೋಲುಪ್ತಿಯಿಂ ಬಂದಿವಂಗೀಯಬೇಕೆಣುಗೆಯುಂ ಶಿವಿಯಹುದೆ ನೋಡೆನಲ್ಕೆ (ಕೈವಲ್ಯ. ೯-೯). ೨. ಸುಖ; ಸಂತೋಷ: ಕೈವಲ್ಯ ಸುಂದರೀ ವದನಾರವಿಂದಮಕರಂದಪಾನಲೋಲುಪ್ತಿಗಿದು ಪೊಟ್ಟುಲೆ (ರಾಜಶೇ. ೨೨-೦೪). **ಲೋಲಾಪ್ತಿ** : ೨. ಗೋಳಾಡಲುಂ ಬೇಡ ಲೋಲಾಪ್ತಿಯುಂ ಬೇಡ (ಷಂಕರ. ೨೬೪). ೩. ಸರಸ ; ಚಕ್ಕಂದ : ಅವರ ಲೋಲಾಪ್ತಿ ನಡೆಯುತ್ತಿತ್ತು (ಕೀಚಕ. ೨೦೩). [<ಲೋಲುಪತೆ]

**ಲೋಲುಭ** (ನಾ). = ಲೋಲುಪ ೨: "ಲೋಲುಭಂ, ಲೋಲುಪಂ, ಲೋಲಂ, ಲಾಲಸಂ, ಲಂಪಟಂ- ಈ ೫ ಅಳಿಪುವವಂ" (ಹಲಾಯು. ೩೮-೦೯೩). [ಸಂ.]

**ಲೋಲುವೆ** (ನಾ). = ಲೋಲುಪತೆ : ಲೀಲೆಯ ಕುಜೀತು ಆಡುವರೆಲ್ಲರು ಕಾಲಸಂಹರನ ಬಂಧುಗಳು ಲೀಲಾಂಗನಾಸುಖದ ಕುಜೀತು ಆಡುವವರೆಲ್ಲರು ಲೋಲುವೆಯ ಬಂಧುಗಳು (ಮೋಹನತ. ೦೨-೯೭). [<ಲೋಲುಪತೆ ?]

**ಲೋಲೆ** (ನಾ). ೧. ಲಕ್ಷ್ಮಿ. ೨. ಮಿಂಚು. ೩. ನಾಲಗೆ. ೪. ಹೆಬ್ಬೆಟ್ಟಿ ನಲ್ಲಿರುವ ಒಂದು ನಾಡಿಯ ಹೆಸರು : ಧಮನಿ, ಗಮನಿ, ಲೋಲೆ, ಧೃತಿ, ಸರ್ವಗಾ ಎಂಬೈದು ನಾಮವನುಳ್ಳ ನಾಡಿಯು . . . ಹೆಬ್ಬೆಟ್ಟಿನ ಮೂಲದಲ್ಲಿರುವ ನರದ ಮೇಲೆ ಸಣ್ಣನಾಗಿ ಕಾಣಬರುವುದು (ಸಕಲ. ೦೦). [ಸಂ. ಲೋಲಾ]

**ಲೋಲೇಕ್ಷಣ** (ನಾ). ಚಂಚಲವಾದ ಕಣ್ಣು : ಚಳಮೀನಂ ಪದ್ಮಷಂಡಂ ತರಳಮಧುಕರಾಲಂಕೃತಂ ಪದ್ಮನಾಳಂ ವಿಳಸ್ಯಗೋದ್ಭಾಸಿ ಚಂದ್ರಂ ಸೊಗಯಿಸಿತೆನೆ ಲೋಲೇಕ್ಷಣಂ ಸಂಚಲತ್ಯಂತಳಮುದ್ರ್ಯಾವಿಭ್ರಮಂ ಶೋಭಿಸೆ (ಅಜಪು. ೨-೯೦). [ಸಂ.]

**ಲೋವಿಸರ** 'ಲೋಳೆಸರ' ನೋ.

**ಲೋವೆ** (ನಾ). ೧. ಗೋಡೆಯಿಂದ ಮುಂದಕ್ಕೆ ಚಾಚಿದ ಸೂರಿನ ಭಾಗ ; ಮುಂಜೂರು : "ಮನೆಗೇಜಿಸಿದ ಹೊದಿಕೆ ವಳಭಿಪ್ಪದೆಯನಿಕ್ಕು ಲೋವೆ ಗೋಪಾನಸೀಸಮಾಖ್ಯಂ" (ಮಂಗರಾ. ೩೯-೦೩); ಮಣಿಮಾಡದ ಮುಂದಣ ಪಟ್ಟೆಯ ಮೊಗಸಾಲೆಯ ಲೋವೆಯೊಳ್ ಪಂಚರತ್ನದಿಂ ದಿಕ್ಕಿದ ರಂಗವಲ್ಲಿಯ (ಸುಕುಮಾ.೧೦-೨೨೨ ಪ); ಪಟ್ಟೆಗಳ ಕಂಬಂಗಳಿಂ ಪವಳ ವಲಗೆಗಳ ಮುಚ್ಚಳ್ಗಳಿಂ ನೀಲಮಣಿಯ ಲೋವೆಗಳಿಂ . . . ಪಚ್ಚೆದಾವು ಗೃಹಗೃಹದ್ವಾರಂಗಳೊಳ್ ಮಹಾಮೇರುವೆಗಳು (ಕಬಿಕ್ಕ. ೩-೩); ಲೋವೆ ಯಿಲ್ಲದ ಊಟ ಲೋವೆಯಿಲ್ಲದ ಮನೆಯು ನೋವನಜಿಯದವಳ ಮನೆವಾರ್ತೆ ಸಿಹಿಯಜಿಸಿ ಬೇವು ತಿಂದಂತೆ (ಸರ್ವಜ್ಞ.೦೭೦೯). ೨. ಚಾವಣಿಯ ಚೌಕಟ್ಟು: (*).

**ಲೋವೆಪಟ್ಟಿ** (ನಾ). ಹೊರಕ್ಕೆ ಲೋವೆಯಂತೆ ಬಾಗಿಕೊಂಡಿರುವ ಪಟ್ಟಿ ; ಬಾಗುಪಟ್ಟಿ: ಮೇಲೆಪೀಠಕ್ಕೆ ಲೋವೆಪಟ್ಟಿ (ಎಕ. XIV. ಪಂಚಪ. ೨೭೯-ಕುಟಿ ೦೬೯; 1847). [ಲೋವೆ + ಪಟ್ಟಿ₂]

**ಲೋಷ್ಟ** (ನಾ). ಮಣ್ಣಿನ ಮುದ್ದೆ ; ಹೆಂಟೆ: "ಲೋಷ್ಟಕಃ, ಲೋಷ್ಟಂ_ಈ ೨ ಹೆಟ್ಟೆ" (ಹಲಾಯು. ೯೯-೪೨೨). [ಸಂ.]

**ಲೋಷ್ಟಕ** (ನಾ). = ಲೋಷ್ಟ: "ಲೋಷ್ಟಕಃ, ಲೋಷ್ಟಂ--ಈ ೨ ಹೆಟ್ಟೆ" (ಹಲಾಯು. ೯೯-೪೨೨). [ಸಂ.]

**ಲೋಷ್ಟಭೇದ** (ನಾ). ಮಣ್ಣುಹೆಂಟೆಯನ್ನು ಒಡೆಯುವ ಒಂದು ಬಗೆಯ ಸಾಧನ ; ಹಲುವೆ: "ಲೋಷ್ಟಭೇದಂ ಕೊಜಿಡು" (ಮಂಗರಾ. ೦೦೯-೦). [ಸಂ.]

**ಲೋಷ್ಟಭೇದನ** (ನಾ). = ಲೋಷ್ಟಭೇದ : "ಕೋಟಿ(ಲಿ)ಶಂ, ಲೋಷ್ಟಭೇದನಂ_ಈ ೨ ಹಲಿಕೆ" (ಹಲಾಯು. ೯೯-೪೨೨). [ಸಂ.]

**ಲೋಷ್ಠ** (ನಾ). = ಲೋಷ್ಟ: ಪರಸತಿಯ ನಿಜಜನನಿ ಪರಧನವಿರದೆ ಲೋಷ್ಠವು . . . ಎನುತ ಭಾವಿಸುವೆ (ಕುಮಾ.ಆ. ೩-೨೬); ಪರವಿತ್ತಮಂ ಲೋಷ್ಠದಂತರಿದು (ದಾಸಕೃ. ೩೬-೦೯). [< ಸಂ. ಲೋಷ್ಟ]

**ಲೋಸು** (ನಾ). ಒಂದು ಬಗೆಯ ಔಷಧೀಸಸ್ಯ : "ಅರಿಷ್ಟಃ -ಬೆಳ್ಳುಳ್ಳಿ . . . ಲೋಸು (ಬೇವು?), ಕರಿಯರಿದಳ" (ಓಷಂ. ೩). [?]

**ಲೋಹ** (ಗು). ೧. ಕೆಂಪಾದ ; ಕೆಂಪುಬಣ್ಣದ ; ತಾಮ್ರವರ್ಣದ. (ನಾ). ೨. ಯಾವುದಾದರೂ ಖನಿಜ,- ಧಾತು : ಅಗ್ನಿಯಿಂದ ತಪ್ಪದಾದ ಲೋಹದ ಪುತ್ಥಳಿಯಂತೆ (ಷಟ್ಸಂ. ೦೦೩-೭೦); ಕಾರಿಣ್ಯ ದಲ್ಲಿ ಕಬ್ಬಿಣಕ್ಕೆ ಸರಿಯಾದ ಲೋಹವಿಲ್ಲ (ಮುಂಜಿ. ೪-೦೯೩). ೩. ಕರಿಯ ಬಣ್ಣದ ಲೋಹ ; ಕಬ್ಬಿಣ : "ಗಿರಿಸಾರಂ, ಅಶ್ಮಸಾರಂ, ಲೋಹಂ, ಕಾಳಾಯಸಂ_ ಈ ೪ ಕರ್ಬುನಂ" (ಹಲಾಯು. ೨೮-೦೭) ; ಮಾಧ್ಯಂತಂ ಘೃತಕಪರ್ಪಟ ಶಲ್ಯನಾಗಲೋಹರಜಮನಟ್ಟು ಕಟ್ಟಿ ಕಳೆದಿಕ್ಕುಗುವಮಾವಗಮುಸ್ಥಿವೃದ್ಧಿಯುಂ (ಗೋವೈ. ೯-೦೨೯); ಗಗನಾಗ್ರ ದೊಳ್ ಮುಪ್ಪುರಂಗಳಂ ಮಾಡುವೆಪು ಸೊಗಸಾಗಿ ಕನಕ ಕಲಧೌತ ಲೋಹಂಗಳಿಂ (ಚಂದ್ರ. ೪೦-೦೪). ೪. ಶುದ್ಧಪಡಿಸಿದ ಕಬ್ಬಿಣ : ಉಕ್ಕು. ೫. ಚಿನ್ನ ; ಸುವರ್ಣ . ೬. ತಾಮ್ರ. ೭. ಕಂಚು : "ಕಂಚುಃ — ಲೋಹಂ" (ಕಾಶ್ಯ. ೯೬). ೮. ಕಡಿವಾಣ ; ಖಲೀನ: ಲೋಹಕ್ಕೆ ನಿರಾಳಮಾಗಿ ಮೊಗಮಿತ್ತುದ್ಭಾವಮಂ ಜಾಜುಕಲ್ಪರಿವಂತಾಸೆಯ ಪೈಸರಂ ಮೆಜಿವ ಚಲ್ವಂ ದೇವ ನೀವೇಜಿ ನೋಡಿರೆ ಚಿತ್ರಂಬಡೆದಪ್ಪ ವೆಂದು ಮೆಚಿದರ್ ವಾಹಂಗಳಂ ವಾಹಕರ್ (ಅನಂತ. ೨-೩೦). ೯. ರಕ್ತ ; ನೆತ್ತರು. ೧೦. ಒಂದು ಬಗೆಯ ಆಯುಧ: ೧೧. ಒಂದು ಬಗೆಯ ಸುಗಂಧದ ಮರ ; ಕೃಷ್ಣಾಗರು : "ವಂಶಕಂ, ಅಗರು, ರಾಜಾರ್ಹಂ, ಲೋಹಂ, ಕ್ರಿಮಿಜಂ,ಜೋಂಗಕಂ_೬ ಅಗರು ಗಂಧ, ಶ್ವೇತಾಗರು" (ಸಿದ್ಧಾ.ಆ. ೨೦೭). ೧೨. ಮೀನಿನ ಗಾಳ. [ಸಂ.]

**ಲೋಹಕರ್ಮ** (ನಾ). ಕಬ್ಬಿಣದ ಕೆಲಸ ; ಕಮ್ಮಾರವೃತ್ತಿ : ಹೇಮ ಕರ್ಮ ಲೋಹಕರ್ಮ ಶಿಲಾಕರ್ಮ . . . ಹಸ್ತಕುಶಳತೆಯುಳ್ಳ ವಿಷ ಕರ್ಮನಿರ್ಮಿತಮಪ್ಪ ಗವಟಾಚಾರ್ಯ (ಎಕ. IV. ಕೃಷ್ಣರಾ. ೬೬-೦೦ ; 1116). [ಸಂ. ಲೋಹಕರ್ಮನ್]

**ಲೋಹಕವಚ** (ನಾ). ಲೋಹದಿಂದ ಮಾಡಿದ ರಕ್ಷಾಕವಚ ; ಲೋಹದ ರಕ್ಷಾಸಾಧನ : ಆನೆಗಳು ಲೋಹಕವಚಗಳನ್ನು ಧರಿಸಿ ಬೆಟ್ಟಗಳಂತೆ ಕಾವಲಾಗಿದ್ದವು (ವಕಾ. ೨೬೩). [ಸಂ.]

**ಲೋಹಕಾರ** (ನಾ). ೧. ಲೋಹದ ಕೆಲಸಮಾಡುವವನು. ೨. ಕಬ್ಬಿಣದ ಕೆಲಸಮಾಡುವವನು : ಕಮ್ಮಾರ. ೩. ತಾಮ್ರದ ಕೆಲಸಮಾಡುವ ವನು ; ಬೋಗಾರ : "ವ್ಯೋಕಾರಃ, ಲೋಹಕಾರಃ—ಈ ೨ ಬೋಗಾರಂ"

(ಹರಿಪಾಯು. ೯೭-೯೩೪) ; ಹಿಫಿಸ್ಟಸ್: ದೇವತೆಗಳ ಲೋಹತಂತ್ರಜ್ಞ ; ಸ್ವತಃ ಲೋಹಕಾರದೇವತೆ (ಐಶ್ವಕ್ರಿ. XLVI, ಪಾರಿಕರ ಸಹುಶ್ರ). ೪. ಕಂಚಿನ ಕೆಲಸಮಾಡುವವನು ; ಕಂಚುಗಾರ : "ಲೋಹಕಾರನೆನಲ್ ಕಂಚು ಗಾರಂ" (ಮಂಗರಾ. ೦೦೦ ೦). [ಸಂ.]

**ಲೋಹಕಿಟ್ಟ** (ನಾ). ಕಬ್ಬಿಣದ ಮೇಲೆ ಹತ್ತುವ ಜಂಗು; ತುಕ್ಕು. [ಸಂ.]

**ಲೋಹಖುರವಾಹ** (ನಾ). ಲಾಳ ಕಟ್ಟಿಸಿದ ಕುದುರೆ : ಎರಡುಂ ಪಕ್ಕದೆ ಪಣ್ಣದೋಜೆವಿಡಿಯಂ ಕೈಗೆಯ್ದು ಬಂದೇಱಿ ಚಾಮರಮಂ ಚನ್ನೆಯರಿಕ್ಕೆ ಲೋಹಖುರವಾಹಂ ಸುತ್ತಿ ಕಾಲ್ಗಾಪಿನೊಳ್ ಬಳೆ ಬಂದಂ . . . ವಜ್ರ ಬಾಹುವಹಿಪಂ ವಜ್ರಾಯುಧಂ ಬರ್ಪವೊಲ್ (ಶಂಕರಪು. ೨-೦೧). [ಸಂ.]

**ಲೋಹಚುಂಬಕ** (ನಾ). ಕಬ್ಬಿಣವನ್ನು ಆಕರ್ಷಿಸುವ ಗುಣವುಳ್ಳದ್ದು ; ಸೂಜಿಗಲ್ಲು ; ಅಯಸ್ಕಾಂತ : ಲೋಹಚುಂಬಕಧರ್ಮವು ಒಂದು ಜಾತಿಯ ಕಬ್ಬಿಣದಲ್ಲಿರುತ್ತದೆ ; ಆ ಕಬ್ಬಿಣಕ್ಕೆ ಲೋಹಚುಂಬಕವೆನ್ನುವರು (ಮುಂಬಯಿ. ೩-೨೨೪) ; ಲೋಹಚುಂಬಕವನು ಕಂಡ ಲೋಹದಂತೆ ನುಗ್ಗಿದೆ (ಗಂಗಾಕ. ೦೩-೭). [ಸಂ.]

**ಲೋಹಚುಂಬಕತ್ವ** (ನಾ). ಕಾಂತಶಕ್ತಿ ; ಅಯಸ್ಕಾಂತ ಗುಣ : ಉಷ್ಣತೆ, ಪ್ರಕಾಶ, ವಿದ್ಯುತ್ತು, ಲೋಹಚುಂಬಕತ್ವ ಈ ನಾಲ್ಕು ನಮ್ಮ ಇಂದ್ರಿಯಗಳಿಗೆ ತಿಳಿಯುವಂಥದು (ಮುಂಬಯಿ. ೩-೩೩). [ಸಂ.]

**ಲೋಹಜ** (ಗು). ಕಬ್ಬಿಣದಿಂದ ಆದ : 'ಲೋಹಜಬಂಧ' ಪರಾ. [ಸಂ.]

**ಲೋಹಜಬಂಧ** (ನಾ). ಕಬ್ಬಿಣದಿಂದ ಮಾಡಿದ ಸರಪಣಿ : ತ್ರಿಜಗದ್ಭೂಷಣವಾರಣಂ ಮುಜಾಯ್ದೆ ಪಡಯ್ದಾಲಾನಮಂ ತ್ವಗಜಲೋಹಜಬಂಧಂಗಳ ನೆಲ್ಲಮಂ ಪಱಿವಿನಂ . . . ಬಂದು (ಶಂಕರಪು. ೦೩-೩೦). [ಸಂ.]

**ಲೋಹಜಿತ್ತು** (ನಾ). ಒಂದು ಬಗೆಯ ರತ್ನ; ವಜ್ರ. [ಸಂ. ಲೋಹಜಿತ್]

**ಲೋಹಟಂಕ** (ನಾ). ಕಬ್ಬಿಣದ ಸುತ್ತಿಗೆ : "ಸುತ್ತಿಗೆ ಲೋಹಟಂಕಂ" (ಮಂಗರಾ. ೦೦೩_೬). [ಸಂ.]

**ಲೋಹತೈಲ** (ನಾ). ಗಣಿಗಳಲ್ಲಿ ದೊರೆಯುವ ಎಣ್ಣೆ ; ಖನಿಜತೈಲ : ಸಮುದ್ರದಲ್ಲಿ ಅಥವಾ ಸರೋವರದಲ್ಲಿ ನದಿ ತನ್ನ ಭಾರವನ್ನು ಇಳಿಸಿದಾಗ ತಳದಲ್ಲಿ ಮುಚ್ಚಿಹೋದ ಪ್ರಾಣಿಗಳ, ಸಸ್ಯಗಳ ಭಾಗಗಳಿಂದ ಲೋಹತೈಲ (Mineral oils)ಗಳಾಗುತ್ತವೆ (ಭೂವಿಜ. ೦೩೭). [ಸಂ.]

**ಲೋಹದ್ರವ** (ನಾ). ಕಬ್ಬಿಣದ ದ್ರವ ; ಕರಗಿದ ಕಬ್ಬಿಣ : ಸಮಾಕುಲಿತರ್ ಮೋಹಿಸಿ ಮುಚ್ಚಿವೋಗೆ ಪರಿತಂದುತ್ತಪ್ತಲೋಹದ್ರವಂ ಜಲಮೆಂದಲ್ಲಿಯ ನಾರಕರ್ ತಳಿವುದುಂ (ಶಾಂತಿಪು. ೭-೯೯). [ಸಂ.]

**ಲೋಹನಿಧಿ** (ನಾ). ಚಿನ್ನದ ರೂಪದಲ್ಲಿರುವ ನಿಧಿ ; ತೆಗೆದಿಟ್ಟಿರುವ ಚಿನ್ನ ಮೊದಲಾದ ಲೋಹ : ಹಣದ ಬೆಂಗಾವಲಾದ ತನ್ನ ಲೋಹ ನಿಧಿಯ ಗಾತ್ರವನ್ನೂ ರಚನೆಯನ್ನೂ ಹೇಗೆ ಕಾಪಾಡಿಕೊಳ್ಳುತ್ತಿರಬೇಕು ? (ಹಣಶ್ರ. ೦೭೦). [ಸಂ.]

**ಲೋಹಪರೀಕ್ಷೆ** (ನಾ). "ಒಂದು ಖನಿಜದಲ್ಲಾಗಲಿ, ಲೋಹಮಿಶ್ರಣ ದಲ್ಲಾಗಲಿ ಇರುವ ಒಂದು ಲೋಹದ ಮೊತ್ತವನ್ನು ನಿಷ್ಕರ್ಷಿಸು ವುದು ; ಲೋಹಪರೀಕ್ಷೆ" (Assay, ೩೦೯೭.). [ಸಂ. ಲೋಹಪರೀಕ್ಷಾ]

**ಲೋಹಪೃಷ್ಠ** (ಗು). ೧. ಲೋಹದಂತೆ ಗಟ್ಟಿಯಾದ ಹಿಂಭಾಗವನ್ನು ಹೊಂದಿರುವ. ∥(ನಾ). ೨. ಒಂದು ಬಗೆಯ ಪಕ್ಷಿ ; ಕ್ರೌಂಚಪಕ್ಷಿ ; ಹರಡೆಹಕ್ಕಿ : "ಲೋಹಪೃಷ್ಠ ಕಂಕ ಶಬ್ದಗಳು ಹರಡೇಹಕ್ಕಿಯ ಹೆಸರುಗಳು. ಇದು ಹದ್ದುಗಳಲ್ಲಿ ಭೇದ. ಕಬ್ಬಾರೆಹದ್ದೆಂಬರು . . . ಘಟ್ಟಿಯಾಗಿರುವ ಪಿರ್ರೆಗಳುಳ್ಳದ್ದು" (ಗುರುಬಾ. ೦೯೯). [ಸಂ.]

**ಲೋಹಪ್ರತಿಮೆ** (ನಾ). ೧. ಲೋಹದಿಂದ ಮಾಡಿದ ವಿಗ್ರಹ,— ಬೊಂಬೆ. ೨. ಕಮ್ಮಾರನ ಅಡಿಗಲ್ಲು. [ಸಂ. ಲೋಹಪ್ರತಿಮಾ]

**ಲೋಹಫಲಕ** (ನಾ). ಲೋಹದ ಹಲಗೆ : ಖರೋಷ್ಠಿಲಿಪಿ ಭೂರ್ಜಪತ್ರಗಳ ಮೇಲೆ ಬರೆದಿರುವುದಲ್ಲದೆ ಲೋಹಫಲಕದ ಮೇಲೂ . . . ದೊರೆತಿದೆ (ಪ್ರಾಲಿಪಿ. ೩೦). [ಸಂ.]

**ಲೋಹಭಸ್ಮ** (ನಾ). ೧. ಕಬ್ಬಿಣದ ಕಿಟ್ಟ,— ಜಂಗು. ೨. (ಔಷಧಿಗಾಗಿ) ಕಬ್ಬಿಣದ ಕಿಟ್ಟದಿಂದ ತಯಾರಿಸುವ ಒಂದು ಬಗೆಯ ಭಸ್ಮ : ಲೋಹಭಸ್ಮ : ಇದನ್ನು ಮಾಡುವ ಕ್ರಮ — ಅರಪುಡಿಯನ್ನು ಅಂಬಿಲ ದಲ್ಲಿ ತೊಳೆದು ಅತ್ತಿಯ ತಿಗಡಿನ ರಸದಲ್ಲಿ ಆ ಹುಡಿ ಮುಳುಗುವ ಹಾಗೆ ಹಾಕಿ ಸೂರ್ಯಪುಟದಲ್ಲಿರಿಸಿದರೆ ಆ ಅರಹುಡಿ ಭಸ್ಮವಹುದು (ಐಶ್ವ ಪಿ. ೯೭); ಕಬ್ಬಿಣದ ಕಿಟ್ಟ ತಂದು, ಪುಟಕ್ಕೆ ಹಾಕಿ ಲೋಹಭಸ್ಮ ಮಾಡುವರು (ಮುಂಬಯಿ. ೪-೦೪೩). [ಸಂ. ಲೋಹಭಸ್ಮನ್]

**ಲೋಹಮಂಡೂರ** (ನಾ). = ಲೋಹಭಸ್ಮ ೧ : ಜೇನುತುಪ್ಪದ ಹನಿಸಿ ಲೋಹಮಂಡೂರ ಹಲವಂ ಹಾಕಿ . . . ಸೇವಿಸೆ ಕ್ಷಯರೋಗ ಪಾಂಡುರೋಗ . . . ಸಹ ಗುಣಮಕ್ಕು (ಸಕವೈ. ೨೩೪). [ಸಂ.]

**ಲೋಹಮಾರ್ಗ** (ನಾ). ಕಬ್ಬಿಣದ ಕಂಬಿಯ ಮಾರ್ಗ ; ರೈಲುರಸ್ತೆ : ರೈಲ್ವೆ ಎಂಬ ಲೋಹಮಾರ್ಗವು ಈ ಊರ ಮೇಲೆ ಹಾಯ್ದು . . . ಕೊಡುತ್ತದೆ (ಮುಂಬಯಿ. ೪-೦೯೩). [ಸಂ.]

**ಲೋಹಯುಗ** (ನಾ). ಮಾನವರು ಲೋಹವನ್ನು ಹೆಚ್ಚಾಗಿ ಬಳಕೆಗೆ ತಂದ ಕಾಲ : ಶೈವಸಂಸ್ಕೃತಿಯು . . . ಲೋಹಯುಗಕ್ಕೆ ಹಿಂದಿನ ದೆಂತಲೂ ಅಭಿಪ್ರಾಯಪಟ್ಟಿದ್ದಾರೆ (ಭಾರದ. ೨೦೭). [ಸಂ.]

**ಲೋಹಲ** (ಗು). ೧. ಕಬ್ಬಿಣದಿಂದ ಮಾಡಿದ. ೨. ಅಸ್ಪಷ್ಟವಾಗಿ ಮಾತನಾಡುವ. (ನಾ). ೩. ಅಸ್ಪಷ್ಟವಾಗಿ ಮಾತನಾಡುವವನು : "ಲೋಹಲನನಭಿವ್ಯಕ್ತವ್ಯಾಹಾರಂ" (ವಸ್ತುಕೋ. ೦೦೦-೦೭). [ಸಂ.]

**ಲೋಹವಕ್ಕರಿಕೆ** (ನಾ). (ಆನೆ, ಕುದುರೆ ಮೊದಲಾದುವುಗಳ ಪಕ್ಕಕ್ಕೆ ಕಟ್ಟುವ) ಉಕ್ಕಿನ ಕವಚ : ಕುರುಕ್ಷೇತ್ರದೊಳ್ ವಜ್ರಪ್ರಹರಣದಿನೆ ಱಂಕೆವೆರಸು ಕೆಡೆದ ಪರ್ವತಂಗಳಂತೆ ಲೋಹವಕ್ಕರಿಕೆಗಳ್ವೆರಸು . . . ಕೆಡೆದ ಮದಾಂಧಗಂಧಸಿಂಧುರಂಗಳ್ (ಗದಾಯು. ೬-೨೬ ವ) ; ರಾಜಿಪ ಲೋಹವಕ್ಕರಿಕೆಯ ತೇಜಿಗಳ ಲೆಕ್ಕವಿಲ್ಲದೆ ತಂದೊಪ್ಪಿಸಿ (ಪಾಗಳು. ೦೭-೬೩). [ಲೋಹ+ಪಕ್ಕರಿಕೆ]

**ಲೋಹವಕ್ಕರೆ** (ನಾ). = ಲೋಹವಕ್ಕರಿಕೆ : ಏಱಿಸಿದ ಬಿಸುಗೆಗಳು ಮಿಕ್ಕಿದ ಲೋಹವಕ್ಕರೆಗಳುಮುರ್ಚಿದ ಮೊಗವಡಂಗಳುಂ (ಶಂಕರಾ. ೦೦-೩೦ ವ) ; ಪದಿನೆಣ್ಛಾಸಿರ ಲೋಹವಕ್ಕರೆಯ ಜಾತ್ಯಶ್ವಂಗಳ್ (ಜಮದ. ೬೭ ಶ್ರಯೋ) ; ಕುದುರೆಗಳಿಗೆ ಲೋಹವಕ್ಕರೆ ಉಕ್ಕಿನ ಮೊಗಂಬಗಳನ್ನೂ ಧರಿಯಿಸಿ (ಮಂತ್ರಕ. ೯೮-೦೩). [ಲೋಹ+ಪಕ್ಕರೆ]

**ಲೋಹವರ** (ನಾ). ಲೋಹಗಳಲ್ಲಿ ಶ್ರೇಷ್ಠವಾದುದು ; ಚಿನ್ನ ; ಬಂಗಾರ. [ಸಂ.]

**ಲೋಹಶಾಸ್ತ್ರ** (ನಾ). ಲೋಹಕ್ಕೆ ಸಂಬಂಧಪಟ್ಟ ವಿದ್ಯೆ : ಇವುಗಳಲ್ಲಿ ಕಾಣುವ ಲೋಹಶಾಸ್ತ್ರದ ಸಾಧನೆಯು ಎಲ್ಲರ ಗೌರವಕ್ಕೂ ಪಾತ್ರವಾಗಿದೆ (೩ಲ್ಪಪಾ. ೯೯). [ಸಂ.]

**ಲೋಹಶ್ರವಣೆ** (ನಾ). ಲೋಹದ ಕರ್ಣಾಭರಣವನ್ನು ಹೊಂದಿರುವವಳು: ವಿವಿಧಾಭರಣಾಢ್ಯ ವಿಚಿತ್ರವಸ್ತುಗಳನಜಿಸುವಳ್ ಕಳಾವಿದೆ ಲೋಹಶ್ರವಣೆ ಕಮಲಾಕ್ಷಿ , ಧೂಮ್ರಾಭವರ್ಣೆ ಮೃಗನಿಲಯಮಧ್ಯಮದ್ರೇಕ್ಕಾಣಂ (ಜಾತಕ. ೦೯-೨೯). [ಸಂ. ಲೋಹಶ್ರವಣಾ (ಲೋಹ+ಶ್ರವಣ+—)]

**ಲೋಹಸಿಂಧೂರ** (ನಾ). ಔಷಧಿಗಾಗಿ, ಕಬ್ಬಿಣದ ಹುಡಿಯಿಂದ ತಯಾರಿಸಿದ ಪುಡಿ : ಲೋಹಸಿಂಧೂರ— ಲೋಹದ ಅರಹುಡಿಯನ್ನು ಗೋಮೂತ್ರದಿಂದ ಐದುದಿನ ನೆನೆಯಿಕ್ಕಿ . . . ಖಲ್ವದೊಳಿಕ್ಕಿ ಸೂಕ್ಷ್ಮ ಚೂರ್ಣ ಮಾಡಲು, ಶುದ್ಧಸಿಂಧೂರವಾಗುವುದು (ಸಕವೈ. ೯೩). [ಲೋಹ+ಸಿಂಧೂರ]

**ಲೋಹಾಣ** (ನಾ). ವ್ಯಾಪಾರಿಗಳ ಒಂದು ಪಂಗಡ : ಲೋಹಾಣರು . . . ಕಚ್ಛ ದೇಶದಿಂದ ಕಾನಡಾಜಿಲ್ಲೆಗೆ ಬಂದವರು (ಕಥಾಗ. ೧೦೮). [ ? ]

**ಲೋಹಾಭಿಸಾರ** (ನಾ). ೧. ಆಯುಧಗಳನ್ನು ಹೊಳೆಯುವಂತೆ ಮಾಡುವುದು. ೨. ಯುದ್ಧಪೂರ್ವದಲ್ಲಿ ಸೈನಿಕರನ್ನು ಸಿದ್ಧಗೊಳಿಸಲು ರಾಜರು ಮಾಡುತ್ತಿದ್ದ ಒಂದು ಉತ್ಸವ: "ಲೋಹಾಭಿಸಾರಃ ಅಸ್ತ್ರಭೃತಾಂ ರಾಜ್ಞಾಂ ನೀರಾಜನಾವಿಧಿಃ— ಯುದ್ಧಪ್ರಯಾಣಾದಿಗಳಲ್ಲಿ ಆಯುಧಗಳನ್ನು ಧರಿಸಿದ ಅರಸುಗಳಿಗೆ ರಕ್ಷೆಯಾಗಿ ಆರತಿಯನ್ನು ನಿವಾಳಿಸಿ ಬೆಳಗುವಿಕೆ" (ಸಿದ್ಧಾಂತ. ೨೬೭). [ಸಂ.]

**ಲೋಹಾಭಿಹಾರ** (ನಾ). = ಲೋಹಾಭಿಸಾರ. [ಸಂ.]

**ಲೋಹಾಸನ** (ನಾ). ಒಂದು ಬಗೆಯ ಆಸನ ; ಲೋಹದಿಂದ ಮಾಡಿದ ಪೀಠ : ಆತನುಂ ಪಿರಿಯ ಲೋಹಾಸನಮೇಱಿ ಪಲಂಬರ್ ಪಾರ್ವರ್ಗೆ ವಖ್ಯಾಣಿಸುತ್ತಿರ್ದ (ವಡ್ಡಾರಾ. ೭-೦೩) ; ಸಿಂಹಾಸನದೆರಡೋಳಿಯೊಳಂ ಸಾರ್ಚಿದ ಲೋಹಾಸನದೊಳ್ (ಶಾಂತಿಪು. ೩-೫೦ ವ). ᴾ "ಇದರ ಲಕ್ಷಣ, ಪಂಚಭಿಃ ಸಪ್ತಭಿರ್ವಾಪಿ ನವಭಿರ್ಲೋಹಜೈಃ ಪದೈಃ ಲೋಹಪಟ್ಟಕೃತಾಧಾರೈರ್ಲೋಹಜಾಲಕ ಮೂರ್ಧನಿ ಛದಿಕಾಪಟ್ಟ ಗರ್ಭಸ್ಥಂ ಕಾರ್ಪಾಸೇನ ವಿಮಿಶ್ರಿತಂ ಲೋಹಾಸನಮಿದಂ ಪ್ರೋಕ್ತಮುಪರಿಷ್ಟಾತ್ತುಸಕೀಲಿತಂ." (ವಡ್ಡಾರಾ. ಟಿಪ್ಪಣಿ. ೨೦೦ ಪುಟ). [ಸಂ.]

**ಲೋಹಾಸನಸ್ಥಿತ** (ನಾ). ಲೋಹಾಸನದಲ್ಲಿ ಕುಳಿತಿರುವವನು : ಉರ್ವರಾಮರ ಸಘಾಳ್ಪ್ರತರ ಲೋಹಾಸನಸ್ಥಿತಂ ತದಾಸನದಿನಿೞಿದು (ಸುಕುಮಾ. ೫-೭ ವ). [ಸಂ.]

**ಲೋಹಿತ** (ಗು). ೧. ಕೆಂಪಾದ ; ಕೆಂಬಣ್ಣದ : 'ಲೋಹಿತಲೋಚನ' ಪರಾ. (ನಾ). ೨. ಕೆಂಪುಬಣ್ಣ ; ರಕ್ತವರ್ಣ: "ಅರುಣಃ . . . ಲೋಹಿತಃ —ಈ ೭ ಕೆಂಪು" (ಹಲಾಯು. ೦೨೦-೯೯) ; ತರದಿಂದಂ ಲೋಹಿತಸಿತಹರಿತ[ಂ] . . . ಬಭ್ರುಕ ಮಲಿನವರ್ಣಮಿವು ಗೃಹವರ್ಣಂ (ಜಾತಕ. ೧-೨೦); ಆನೆಯ ರಕ್ತದಿಂದ ಕೆಂಪಾದ ಸಿಂಹದ ಕೇಸರದಂತೆ ಲೋಹಿತವಾಗಿ (ಸೌಂದರ. ೧೯೫). ೩. ನೆತ್ತರು ; ರಕ್ತ : "ಕ್ಷತಜಂ, ಲೋಹಿತಂ . . . ರಕ್ತಂ—ಈ ೭ ನೆತ್ತರು" (ಹಲಾಯು. ೦೦೪-೦೦); ವೈರಿಬಲಲೋಹಿತಬಂಧುರದಂಡಮಿಾ ಭುಜಾದಂಡಂ (ಗದಾಯು. ೦-೭೩); ಅಂಗದನ ಕಣೆ ಮಹೋದರನಂಗದ ಲೋಹಿತ ಮನೀಂಟೆ ಪಿಂಗೆ ದಶಪ್ರಾಣಂಗಳುಂ (ಕಂದಾಖು. ೦೩-೦೨೭) ; ಲೋಹಿತ ಸ್ರೋತದೊಳ್ಮುಳುಗಿ, ಮಜ್ಜೆಯೊಳದ್ದಿ (ಪಪ್ರಾಂಗ. ೩೭-೯೬೮). ೪. ಕೆಂಪು ಲೋಹ : ತಾಮ್ರ. ೫. ಕೋಪ ; ರೋಷ : ಹರಿಯುವ ರಕ್ತದ ವಾಹಿನಿ ನಾನು ! ಲೋಹಿತವಿಪ್ಲವದುರಿ ನಾನು ! (ಶಾಂತಸ. ೦೭-೦೨). ೬. ಆನಂದ ; ಸಂತೋಷ. ೭. ಕೊಡಲಿ ; ಪರಶು. ೮. ಸಮಗ್ರವಾದುದು ; ಅಖಿಲ; ಸಮಸ್ತ. ೯. ಒಂದು ಬಗೆಯ ಮೀನು : "ಶಾಲಃ . . . ಲೋಹಿತಃ, ಪಲ್ಲವಕಃ— ಈ ೬ ಮತ್ಸ್ಯದ ಭೇದಂಗಳ್" (ಹಲಾಯು. ೦೦೯-೩೭) ; ಜಾಲದೊಳ್ಸಿಕ್ಕತ್ತಿಯ್ಯಾಗಿರ್ದ ಮೀನದಂ ಶ್ರಾದ್ಧಕತ್ಯುತ್ತಮಲೋಹಿತಮತ್ಸ್ಯಮುಂಮುತ್ತಮಮೊಂದೊಂದು ಕಡೆಯ ಕ್ಕುಯ್ತನಡಿಸಿದನರಸಂ (ಯಶೋಧ. ೩-೫೦). 'ರೋಹಿತ' ಪರಾ. ೧೦. ಒಂದು ಬಗೆಯ ಸುಗಂಧವಸ್ತು : "ಕುಂಕುಮಕೇಸರಿಲೋಹಿತಂ ಘುಸೃಣಮೆಸೆ ಕುಂಕುಮಂ" (ಮುಂಗರಾ. ೯೯-೨೨). ೧೧. ಗ್ರಹಗಳಲ್ಲಿ ಒಂದು ; ಅಂಗಾರಕ : ಕುಜ. ೧೨. ಒಂದು ಬಗೆಯ ಜಿಂಕೆ ; ಕೆಂಬಣ್ಣದ ಜಿಂಕೆ. ೧೩. ಬ್ರಹ್ಮಪುತ್ರಾ ನದಿ. ೧೪. ಒಂದು ಬಗೆಯ ಬತ್ತ ; ಕೆಂಬಾರೆ. ೧೫. ಬೆಲೆಬಾಳುವ ಒಂದು ಬಗೆಯ ಕೆಂಪುರತ್ನ ; ಮಾಣಿಕ್ಯ. ೧೬. ಕಣ್ಣಿನ ಒಂದು ಬಗೆಯ ರೋಗ ; ಕೆಂಗಣ್ಣು ರೋಗ. ೧೭. ಅಂಕುಶ. ೧೮. ಶಿರೀಷ ಕುಸುಮ. [ಸಂ.]

**ಲೋಹಿತಕ** (ನಾ). ಕೆಂಪುಬಣ್ಣದ ರತ್ನ ; ಮಾಣಿಕ್ಯ : "ಶೋಣರತ್ನಂ, ಲೋಹಿತಕಃ, ಪದ್ಮರಾಗಃ — ೩ ಕೆಂಪುಗಳು, ಕೆಂಪುಕಲ್ಲುಗಳು" (ಸಿದ್ಧಾಂತ. ೩೦೩). [ಸಂ.]

**ಲೋಹಿತಚಂದನ** (ನಾ). ೧. ಒಂದು ಬಗೆಯ ಕೆಂಪುಬಣ್ಣದ ಪುಡಿ; ಕುಂಕುಮ : "ಕುಂಕುಮಂ . . . ಲೋಹಿತಚಂದನಂ . . . ಜಾವಕಂ —ಈ ೭ ಕುಂಕುಮಂ" (ಹಲಾಯು. ೯೯-೩೯೯). ೨. ಒಂದು ಬಗೆಯ ಮರ ; ರಕ್ತಚಂದನ. ೧, ೨ : ಆ ವನಂ . . . ಕಾಂತಾಕದಂಬದಂತೆ ಲೋಹಿತಚಂದನಾಲಂಕೃತಮುಂ . . . ಆಗಿಯುಂ (ಚಂದ್ರಪ್ರ. ೫-೫೨ ವ). [ಸಂ.]

**ಲೋಹಿತಜಳ** (ನಾ). ಕೆನ್ನೀರು ; ರಕ್ತ : ಖಳದುಶ್ಶಾಸನಲೋಹಿತಜಳಮಂ ಕುಡಿವೆಂ (ಗದಾಯು. ೯-೫). [ಸಂ. ಲೋಹಿತಜಲ]

**ಲೋಹಿತಲೋಚನ** (ನಾ). (ಕೋಪದಿಂದ) ಕೆಂಪಾದ ಕಣ್ಣುಗಳುಳ್ಳವನು : ನೆಱೆಯದ ನರಕಾಯುಷ್ಯಮಂ ನೆಱಪುವನೆಂಬಂತೆ ಮುಳಿದು ವಿಘೂರ್ಣಮಾನಲೋಹಿತಲೋಚನಂ . . . ಇಱಿಯಲ್ (ಆದಿಪು. ೨-೦೪ ವ); ಅಕಾಲಸಂಧ್ಯಾಪ್ರದಾನಪ್ರವೀಣಲೋಹಿತಲೋಚನನುಂ . . . ಆಗಿಯುಂ ರಾಜಸೇವಾನಭಿಜ್ಞನುಮೆನಿಸಿದಂ (ಕಾದಂಬ. ೦೭೭). [ಸಂ.]

**ಲೋಹಿತಾಂಗ** (ನಾ). ೧. ಕೆಂಪುಬಣ್ಣದ ಒಂದು ಬಗೆಯ ಸಸ್ಯ. ೨. [ಜ್ಯೋತಿ] ಕೆಂಪುಬಣ್ಣದ ಒಂದು ಗ್ರಹ ; ಮಂಗಳ ; ಕುಜ : "ಲೋಹಿತಾಂಗನಂಗಾರಕಂ ಕುಜಂ" (ವಸ್ತುಕೋ. ೦೩-೭೨). [ಸಂ.]

**ಲೋಹಿತಾಶ್ವ** (ನಾ). ೧. ಕೆಂಪುಬಣ್ಣದ ಕುದುರೆಯುಳ್ಳವನು ; ಅಗ್ನಿ : "ಸಪ್ತಾರ್ಚಿಃ . . . ಲೋಹಿತಾಶ್ವಃ, ಹುತಾಶನಃ — ಈ ೪೦ ಕಿಚ್ಚಿನ ಪೆಸರ್" (ಹಲಾಯು. ೦೨-೩೪) ; ಮಸಗಿರ್ದ ಲೋಹಿತಾಶ್ವಪ್ರಸರಂ ಕಾಳ್ಗರಡಮೆಲ್ಲಮಂ ಮೇಯೆ (ಜಗನ್ನಾ. ೦೭-೩೫). ೨. ಹರಿಶ್ಚಂದ್ರನ ಮಗನ ಹೆಸರು : ಬಂದರಂ ಲೋಹಿತಾಶ್ವಾ ಎಂದು . . . ಕರೆಕರೆದು ಬಿಡೆ ಬೀದಿಗಱುವಿನಂತೆ (ಹರಿಶ್ಚಾ. ೦೨-೦೭). [ಸಂ.]

**ಲೋಹಿನಿ** (ನಾ). ೧. ಕೆಂಪುಬಣ್ಣ : "ದಾಸವಣದ ಹೂವಿನ ಬಣ್ಣಮಂ ಲೋಹಿನಿಯೆಂಬುದು" (ಹಲಾಯು. ೦೨೨-೫೩). ೨. ಕೆಂಪುಬಣ್ಣದವಳು. ೩. ಸಿಟ್ಟಿನಿಂದ ಕೆಂಪಾದವಳು. [ಸಂ. ಲೋಹಿನೀ]

**ಲೋಳ** 'ಲೋಲ' ನೋ.

**ಲೋಳಂಬ** 'ಲೋಲಂಬ' ನೋ.

**ಲೋಳತೆ** 'ಲೋಲತೆ' ನೋ.

**ಲೋಳಸರ** 'ಲೋಳೆಸರ' ನೋ.

**ಲೋಳಿ** 'ಲೋಳೆ' ನೋ.

**ಲೋಳಿತ** 'ಲೋಲಿತ' ನೋ.

**ಲೋಳಿಸರ** 'ಲೋಳೆಸರ' ನೋ.

**ಲೋಳೆ, ಲೋಳಿ** (ನಾ). ೧. ಬಾಯಿಯಿಂದ ಸುರಿಯುವ ದ್ರವ; ಲಾಲಾರಸ ; ಜೊಲ್ಲು : ಕೊರೆವೊಡೆ ಬೆಟ್ಟುಗಳ್ ಬಿರಿವವುಣ್ಮುವ ಲಾಳೆಯು ಲೋಳೆಗಳ್ ಪೊನಲ್ವರಿವುವು (ಶಂಕರಾ. ೪-೦೦೦) ; ಮುದುಕರಂತೆ ಲೋಳೆ ಸುರಿವ ಬಾಯುಂ (ಧರ್ಮಾಮೃ. ೪-೭೫) ; ಬೀಳ್ವ ಲೋಳೆಯ ಬಗಿದ ಗಲ್ಲಗಳ . . . ಮಾನಿಸರು (ಬಸವ. ೯೭-೫೭). 'ಲೊದಳೆ' ಪರಾ. ೨. ಶುಕ್ಲ. ೩. ಹೊಟ್ಟೆಯ ಒಳಗಿರುವ ಜಿಗುಟಾದ ದ್ರವ : "ಹೊಟ್ಟೆಯ ಹಳದಿ ಲೋಳೆ, ಬಂಡಾರ" (Yolk. ಕಕೋಶ.). ೪. ಶ್ಲೇಷ್ಮ. ಲೋಳಿ : ೧. ವಿತತಸ್ಸೃಕ್ವದ ಲೋಳಿಗಳ . . . ಹಯಾವಳಿ ಕಳನ ಗೆಲಿದವು (ಕುಮಾರರಾ. ೩-೪). [ದೇ. ತ. ಮಲ. ನೋಳ ; ತುಳು. ನೋಣೆ; ತೆಲು. ನೊಚ್ಚೆಳ್ಳು. / ಸಂ. ಲಾಲಾ]

**ಲೋಳೆಮೀನು** (ನಾ). ಒಂದು ಬಗೆಯ ಮೀನು : "ಸರಿಸುಮಾರಾಗಿ ಪಾರದರ್ಶಕವಾದ, ಘನದ್ರವದೇಹವುಳ್ಳ ಒಂದು ಸಮುದ್ರ ಮೀನಜಾತಿ:

ಲೋಳೆಮೀನು : ಅಂಬಲಿಮೀನು" (Jelly-fish. ೨೦೪೬); ಲೋಳ್ಳೆಮೀನು (Jelly-Fish) ಕಣ್ಣು ಪಡೆದ ವಿಶ್ವದಲ್ಲಿನ ಮೊದಲ ಜೀವಿ (ಜಿವ್ಯದೃ. ೦).
[ಲೋಳೆ + ಮೀನು (<ಮೀನ್)]

**ಲೋಳೆವಾಯ್**, ಲೋಳೆವಾಯಿ (ನಾ). ಜೊಲ್ಲು ಸುರಿಯುತ್ತಿರುವ ಬಾಯಿ : ಕಲಮಣಿನೂಪುರಂ ತನಗೊಡೆಬಡೆ ಗಾಡಿಗೆ ಲೋಳೆವಾಯಿ ಮನಂಗೊಳೆ (ಅಜಿ. ೩-೬೨); ಚುಂಬಿಸಿದ ಲೋಳೆವಾಯಂ ಬಿಂಬಾಧರೆ . . . ಚುಂಬಿಸಿ (ಮುದ್ರಾ. ೦೦-೩೨); ಅಲರ್ಗಣ್ ಪೊಂಗಿದ ಲೋಳೆ [ಪಾಠಾಂ. ಲಾಳೆ, ತೊಂಡೆ] ವಾಯ್ ನಗೆಮೊಗಂ . . . ಚೆಲ್ವಾಗಿರೆ (ಶಾಪ್ಯಾಪ. ೨೦೬). **ಲೋಳೆವಾಯಿ** : ಕಿರುನಗೆ ಲೋಳೆವಾಯಿ [ಪಾಠಾಂ. ಯ್] ತೊದಳ ದೊಂದಿದ ನಾಲಗೆ . . . ತಳರ್ನಡೆ ಮುದ್ದು ಮೊಗಂ (ಸುಕುಮಾ. ೯-೯೯).
[ಲೋಳೆ + ಬಾಯ್]

**ಲೋಳೆವಾಯಿ** 'ಲೋಳೆವಾಯ್' ನೋ.

**ಲೋಳೆವೊರೆ** (ಕ್ರಿ). ಜೊಲ್ಲಿನ . ಜಿಗುಟು ಹತ್ತಿಕೊಂಡಿರು : ಆಗಳ್ ಬಲದೇವಸ್ವಾಮಿ ಲೋಳೆವೊರೆದ ಮೆಯ್ಯುಂ ಮೊಳೆವೊರೆದ ಕಿಸುಗುಳನಾಗಿ ಪೋಗಿ ಹರಿಗೆ ತೋರ್ಪ್ ಪೇಳ್ಬೊಡೆ (ಬಂಹರಿ. ೯-೩೯ ವ). [ಲೋಳೆ + ಒರ್ಪ್ವ]

**ಲೋಳೆಸರ**, ಲೋಳೆಯಿಸರ, ಲೋವಿಸರ, ಲೋಳಸರ, ಲೋಳೆಸರ (ನಾ). ಅಂಟಾದ ರಸವನ್ನು ಹೊಂದಿರುವ ಒಂದು ಬಗೆಯ ಔಷಧೀ ಸಸ್ಯ; ಕುಮಾರಿ : ಲೋಳೆಸರ, ಮುಸಾಂಬ್ರ (ಷ್ಯಾಶಿಗ. ೩-೬೦). **ಲೋಳೆಯಿಸರ** : "ಲೋಳೆಯಿಸರವದು ಕುಮಾರಿಯಕ್ಕು" (ಮಂಗರಾ. ೪೯-೨೯) ; ತೊಡೆದು ತಿಲತೈಲವಂ ಕರವು(ವು)ಡ ಸಾಸಿವೆ ಲೋಳೆಯಿ ಸರದ ತಿರುಳೆಂಬಿವನಿಟ್ಟಡು ಬಿಗಿತಾಗಿ ಕಟ್ಟಲ್ ನಿತುವೋಗುಡದರ್ದ ಕಪ್ಪಿ ಭಂಗಂಬಡುಗುಂ (ಲೋಕೋಪ. ೯-೦೩೨) ; ಲೋಳೆಯಿಸರದ ಮೇಲೆ ಬಂಡಿ ಪರಿದಂತೆ (ಧರ್ಮಾಮೃ. ೨-೯೯) **ಲೋವಿಸರ** : ಲೋವಿಸರದ ಮೇಲೆ **ಭಂಡಿ** ಪರಿದಂತೆ (ಜಗನ್ನಾಥ. ೩-೦೨೦). **ಲೋಳಸರ** : ಬದರಕ್ಕಿ, ಲೋಳಸರ, ಮುಳಗಳ್ಳಿ ಮುಂತಾದವುಗಳು . . . ನಿರುಪಯುಕ್ತ ಪದಾರ್ಥಗಳು (ಪುಂಡಿಯು. ೩-೨೯೩); ಲೋಳಸರದ ರಸದಲ್ಲಿ ಉದ್ದಿನ ಹಿಟ್ಟು ಅರದು (ಗಂರತ್ನ. ೩-೩). **ಲೋಳೆಸರ** : ಲಿಂಗವನರಿಯದು ಮುಟ್ಟಿದಡೆ ಲೋಳೆ [ಪಾಠಾಂ. ಲೊಯಿ, ಲೋಯಿ]ಸರದ ಮೇಲೆ ಭಂಡಿ ಹರಿದಂತೆ (ಅವಚ. ೦೯೬-೬೬೬) ; ಲೋಳೆಸರದ ಹಳುಕುಗಳಿಗೆ ಅಳಲೆಕಾಯಿಚೂರ್ಣ ವನ್ನು ಹಾಕಿಟ್ಟರೆ ನೀರು ಬರುವುದು (ಸಳವ್ನ. ೩೦. ೩೦೩) ; ಲೋಳೆಸರದ ರಸದಿಂದ ಕಲಸಿ ಮಾಡಿದ ಕಪ್ಪನ್ನು ಸವರಿ ಒಣಗಿದ ಮೇಲೆ . . . ಒರಸಿ (ಗುಜಾಪಾ. ೬). [ದೇ.॥ ತುಳು. ನೋಲಿಸರ. / ಮರಾ. ಲೋಳಸರ್]

**ಲೋಳೆಸುರಿಕ** (ನಾ). ಜೊಲ್ಲು ಸುರಿಸುವವನು ; ಲೋಳೆಬಾಯಿಯು ವನು : ಅವನೊಬ್ಬ ಲೋಳೆಸುರಿಕ (ಕಜಿ).
[ಲೋಳೆ + ಸುರಿ$_1$ + – ಕ$_2$]

**ಲೌಕರಿ** (ನಾ). (ಉಕ) ಉಣ್ಣೆಯ ದಾರ : ಮನೆಯಲ್ಲಿ ಲೌಕರಿ, ರೇಶಿಮೆ ತಂದು ತನ್ನ ಭಾವೀ ತಮ್ಮನಿಗಾಗಿ ಸ್ವೆಟರು, ಕಾಲುಚೀಲ ಹಾಕುತ್ತ . . . ಕಾಲ ಕಳೆಯತೊಡಗಿದಳು (ಗೂಡುಪಾ. ೨೭೬); ಆತ ನನ್ನ ಹೆಳಲಿನ ಲೌಕರಿ ತುದಿ ಹಿಡಿದು ಜಗ್ಗಿದ್ದು (ವೈಪಿ. ೦೩೯). [← ಮರಾ. ಲೋಕರ್]

**ಲೌಕಿಕ** (ಗು). ೧. ಲೋಕಕ್ಕೆ ಸಂಬಂಧಿಸಿದ ; ಪ್ರಾಪಂಚಿಕವಾದ ; ಐಹಿಕವಾದ. (ನಾ). ೨. ಲೋಕಕ್ಕೆ ಸಂಬಂಧಿಸಿದುದು; ಪ್ರಾಪಂಚಿಕ ವಾದುದು; ಐಹಿಕ: ಬೆಳಗುವೆಸಲ್ಲಿ ಲೌಕಿಕವುನಲ್ಲಿ ಜಿನಾಗಮಮಂ (ಶಂಕಭಾ ೦೯-೬೦) ; ಲೌಕಿಕವನ್ನು ಕಳೆವದನರಿಯದೇ ತನಗುನ್ನತದ ಪದವಿ (ಅಬ್ಯುಕ ೩-೯೦). ೩. ಲೋಕದ ನಡತೆ,—ಮಾಡಿಕೆ; ಲೋಕವ್ಯವಹಾರ : ಭರತ ನಾತನ ಹಿಂದೆ ನಡೆದನಮ್ಮನ ಮೆಯ್ಯ ಲೌಕಿಕವನೆಸಗೆ (ಶ್ರೀರಾಮಾ. ೦೦೬-೦೬೦); ಅಪ್ಪನದು ಹೀಗೆ ವೈದಿಕವೃತ್ತಿಯಾದರೆ ಶ್ಯಾಮಕಕ್ಕನದು ಸಂಪೂರ್ಣ ಲೌಕಿಕ (ಹೊಸಕ್ಕಿ. ೨೪೯); ಲೌಕಿಕ ನಡೆಸಿ ಲೋಕ ಮರೆತ (ಗಾದೆ). ೪. ವೈದಿಕವಲ್ಲ ದುದು : ಸಂಸ್ಕೃತಭಾಷೆಯು ವೈದಿಕ ಲೌಕಿಕವೆಂಬುದಾಗಿ ಎರಡು ವಿಧವಾಗಿ ವಿಭಾಗಿಸಲ್ಪಟ್ಟಿರುವುದು (ಭಾರದ. ೪೨೯) ; ವೈದಿಕ ಲೌಕಿಕೋಭಯ ವಿದ್ಯಾನಿಪುಣರು ನನ್ನ ಆ ದೊಡ್ಡಪ್ಪನವರು (೨೦ಶಾಕ. ೦೩-೬೦). ೫. ಲೋಕದ ನಡವಳಿಕೆಯನ್ನು ತಿಳಿದಿರುವವನು; ಲೌಕಿಕರ ಕಂಡು ಆಡುವೆ ಹಾಡುವೆ (ಬಸವ. ೨೯೬). ೬. [ತರ್ಕಶಾ] ಇಂದ್ರಿಯಗಳಿಂದುಂಟಾಗುವ ಪ್ರತ್ಯಕ್ಷಪ್ರಮಾಣ : ಪ್ರತ್ಯಕ್ಷವು ಲೌಕಿಕ, ದಿವ್ಯವೆಂದು ಎರಡುಪ್ರಕಾರ. ಲೌಕಿಕವು - ಚಕ್ಷುರಾದಿ ಇಂದ್ರಿಯಗಳಿಂದ ಬರತಕ್ಕದು–ಐದುವಿಧ (ಹಿಂದಶಾ. ೨೪೦). ೭. ಶಬ್ದದಲ್ಲಿ ಒಂದು ಬಗೆ : ಇದಕ್ಕೆ ಅನುಗುಣವಾಗಿ ಶಬ್ದವನ್ನು ಲೋಕ, ವೇದ ಎಂದು ಎರಡು ವಿಭಾಗಮಾಡಿ ಲೌಕಿಕಶಬ್ದವನ್ನು ಅನುಮಾನ ದಲ್ಲಿ ಸೇರಿಸಿ, ವೈದಿಕಶಬ್ದವೇ ಶಬ್ದಪ್ರಮಾಣವೆಂದು ಪ್ರಾಭಾಕರರು ನಿರ್ಣಯಿ ಸಿರುವರು (ಹಿಂದಶಾ. ೦೪೪). [ಸಂ.]

**ಲೌಕಿಕಕಲೆ** (ನಾ). ಪ್ರಾಪಂಚಿಕವಾದ ಕಲೆ : ಈ ಕಾಲದಲ್ಲಿ ಕಥಕಕಲೆಯು ದೇವಸ್ಥಾನವನ್ನು ಬಿಟ್ಟು ರಾಜಾಸ್ಥಾನವನ್ನು ಸೇರಿ ಲೌಕಿಕಕಲೆಯಾಯಿತು (ಭಾರನೃ. ೩೩೬). [ಸಂ. ಲೌಕಿಕಕಲಾ]

**ಲೌಕಿಕಕಾವ್ಯ** (ನಾ). ಇಹಲೋಕಕ್ಕೆ ಸಂಬಂಧಿಸಿದ ಕಾವ್ಯ; ಐಹಿಕಕಥೆ ಯನ್ನು ಹೇಳುವ ಕಾವ್ಯ: ರನ್ನನೂ ಪಂಪ-ಪೊನ್ನರಂತೆ ಒಂದು ಆಗಮಿಕ ಕಾವ್ಯವನ್ನೂ ಒಂದು ಲೌಕಿಕಕಾವ್ಯವನ್ನೂ ಬರೆದಿರುವನು (ಸಾಹಿಸ. ೨೬).
[ಸಂ.]

**ಲೌಕಿಕಛಂದಸ್ಸು** . (ನಾ). ವೇದದ ಛಂದಸ್ಸಿಗೆ ಭಿನ್ನವಾದ ಛಂದಸ್ಸು ; ಕಾವ್ಯ, ನಾಟಕಾದಿಗಳಲ್ಲಿರುವ ಛಂದಸ್ಸು : ಲೌಕಿಕಛಂದಸ್ಸು ಇತಿಹಾಸ ಪುರಾಣ ಕಾವ್ಯ ನಾಟಕಗಳಲ್ಲಿರುವುದು (ಕ್ಯಾಬಿಡಿ. ೦೦೩).
[ಸಂ. ಲೌಕಿಕಛಂದಸ್]

**ಲೌಕಿಕತ್ವ** (ನಾ). = ಲೌಕಿಕ ೨ : ಲೋಕಭಾವಗಳೆಲ್ಲ ಕವಿಯ ನಿರ್ಲಿಪ್ತ ಪರಿಭಾವನೆಗೆ ಸಂದು ತಮ್ಮ ಲೌಕಿಕತ್ವವನ್ನು ಕಳೆದುಕೊಂಡು ರಸವಾಗುತ್ತವೆ (ಸೌಂದಸ. ೦೯). [ಸಂ.]

**ಲೌಕಿಕಪರಿಣತಿ** (ನಾ). ಲೋಕವ್ಯವಹಾರದ ಪರಿಪಕ್ವವಾದ ಜ್ಞಾನ : ಪ್ರಕಟಂ ಲೋಕೋತ್ತರರ ಲೌಕಿಕಪರಿಣತಿ ಪುನ್ನಿಗಂಗೆ (ಶಾಂತಿಪು. ೦೨-೬೩).
[ಸಂ.]

**ಲೌಕಿಕಪ್ರತ್ಯಕ್ಷ** (ನಾ). ಇಂದ್ರಿಯಗಳಿಂದ ಉಂಟಾಗುವ ಅನುಭವ : ಪ್ರತ್ಯಕ್ಷಜ್ಞಾನದಲ್ಲಿ ಲೌಕಿಕಪ್ರತ್ಯಕ್ಷ, ಅಲೌಕಿಕಪ್ರತ್ಯಕ್ಷ ಎಂದು ಎರಡು ವಿಧ. ಲೌಕಿಕಪ್ರತ್ಯಕ್ಷವು ಆರು ಇಂದ್ರಿಯಗಳಿಂದ ಉಂಟಾಗುವುದರಿಂದ ಆರು ವಿಧ (ಹಿಂದಶಾ. ೦೩೬). [ಸಂ.]

**ಲೌಕಿಕಪ್ರಯೋಜನ** (ನಾ). ಲೋಕದ ವ್ಯವಹಾರಕ್ಕೆ ಸಂಬಂಧಿಸಿದ ಪ್ರಯೋಜನ ; ಪ್ರಾಪಂಚಿಕಲಾಭ : ಇತರ ವಿಧವಾದ ಲೌಕಿಕ ಪ್ರಯೋಜನದ ಗುರಿಯಿಲ್ಲದೆ, ಜ್ಞಾನೈಕದೃಷ್ಟಿಯಿಂದ ವಿಜ್ಞಾನವನ್ನು ಬೆಳಸಿದವರಲ್ಲಿ ಗ್ರೀಕರು ಮೊದಲಿಗರು (ಪಾಶ್ಚಾರ. ೨ ಬಿ೬೪). [ಸಂ.]

**ಲೌಕಿಕವ್ಯವಹಿತ** (ನಾ). ಸಾಮಾನ್ಯಜೀವನಕ್ಕೆ ವಿರುದ್ಧವಾದುದು ; ಲೋಕವ್ಯವಹಾರಕ್ಕೆ ವಿರುದ್ಧವಾದುದು : ಏಕಪತಿ ಬಹುಸತಿಯ ರೆಂಬುದು ಲೋಕಪದ್ಧತಿಯಾದುದದು ತಾನೇಕಸತಿ ಬಹುಪತಿಗಳದು ವೈದಿಕ ವಿರುದ್ಧವಲೆ ಲೌಕಿಕವ್ಯವಹಿತದ ಕರ್ಮವನೀ ಕುಮಾರ್ಗಿಗಳಲ್ಲಿ ಕಂಡವು (ಕುಮ್ಯಾಕ. ೦೯-೯೬). [ಸಂ.]

**ಲೌಕಿಗ** 'ಲೌಕೀಕ' ನೋ.

**ಲೌಕೀಕ**, ಲೌಕಿಗ (ನಾ). ೧. = ಲೌಕಿಕ ೩ : ಅವನು ಲೌಕೀಕದೊಳಗೆ ಮುಳುಗಿ ಪಾರಮಾರ್ಥಿಕ ಮರೆತಿದ್ದಾನೆ (ಜಾ). **ಲೌಕಿಗ**: ೨. = ಲೌಕಿಕ ೫ : ನಿರ್ಮೋಹಿ ಲೌಕಿಗರನು [ಪಾಠಾಂ. ಲೋಕಗಳನು] ಸ್ಮರನೆಂಬ ಕಾಲ

ರುದ್ರಂ ಪ್ರಳಯಮೃಡಿಸಲ್ ಗುರುತರ ಕ್ರೋಧದಿಂ ತೆಱೆದ ಶಿಖಿನೇತ್ರ ದಂತಿರಲೆಸೆದುದುದಯಾದ್ರಿಯೊಳ್ ಚಂದ್ರಮಂಡಲಂ (ಪಂಪಭಾ. ೯-೦೭). [< ಸಂ. ಲೌಹಿಕ]

**ಲೌಡಿ$_1$** ' ಲವುಡಿ$_1$ ' ನೋ.

**ಲೌಡಿ$_2$**, ಲವಡಿ, ಲವುಡಿ$_2$ (ನಾ). ೧. ತೊತ್ತು ; ದಾಸಿ : (†). ೨. ವೇಶ್ಯೆ ; ಸೂಳೆ : ಆ ಬಜಾರಿ ಲೌಡೀನ ಸೊಸೆಯಾಗಿ ಕರಕೋ ಅಂತ ನನಗೆ ಅಂತೀರಾ ? (ರಂಗವ. ೨೩೨) ; ಆ ಕುಲಗೆಟ್ಟ ಲೌಡೀನ ವಹಿಸಿ ಮಾತನಾಡಿದ್ದು ಹೇಗಿದೆ? (ಹೂಹಣ್ಣು. ೪೩). ೩. ದಾಸಿ ಅಥವಾ ಸೂಳೆ ಎಂಬರ್ಥದ ಒಂದು ಬಯ್ಗುಳು : 'ಲೌಡಿಮಗ' ಪರಾ. **ಲವಡಿ :** ೧. ಖರೇ ಏನಂತ ನಾ ಕೇಳವ್ರು,ನೀ ಯಾರ ಲವಡೀ ನನ್ನ ಕೇಳಾಕಿ ಅಂದರೂ ಅಂದರ (ದೀಪಹ. II. ೦೮೭). **ಲವುಡಿ$_2$ :** ೨. ' ಲವುಡಿಮಗ ' ಪರಾ. [← ಪಾರ. ಲವಂಡ್ ; ಹಿಂ. ಲೌಂಡೀ ; ಮರಾ. ಲೌಂಡೀ, ಲವಂಡೀ]

**ಲೌಡಿಗಾಳ** (ನಾ). ದೊಣ್ಣೆಯನ್ನು ಹಿಡಿದಿರುವವನು; ದಡಿಗ ; ಶೂರ: ನೆತ್ತರ್ವೊನಲಿಂ ಕಡಲಾಯ್ತೆನಿಸುವೆನಾಹವದೆಡೆಯೊಳೆನುತ್ತೊರ್ವ ಲೌಡಿಗಾಳಂ ಮೊಱೆದಂ (ಪಕಳು. ೭-೩೩). [ಲೌಡಿ$_1$ (< ಲವುಡಿ$_1$) + – ಗಾಳ(< –ಕಾಳ)]

**ಲೌಡಿಮಗ**, ಲವುಡಿಮಗ (ನಾ). ದಾಸಿ ಅಥವಾ ಸೂಳೆಯ ಮಗ ಎಂಬರ್ಥದ ಒಂದು ಬಯ್ಗುಳು : ಆ ಲೌಡಿಮಗನ ಕೊಲ್ಲಬೇಕು (ರಾಜೇಂದ್ರ. ೨೭೨) ; ಲೌಡೀಮಗನೆ, ನಿಮ್ಮಪ್ಪ ಮಶೀಕಾಣ್ಕೆ ಕೊಡ್ತಿದ್ದ (ಹುಬ್ಬಹ. ೧೭೩). **ಲವುಡಿಮಗ :** ದೊಡ್ಡಬಾಬು ತಡೆದರು . . . ಇಲ್ಲದೆ ಹೋದರೆ ಆ ಲವುಡೀಮಗನಿಗೇ...! (ಸಾಹೇಬ್.೦೨೦). [ಲೌಡಿ$_2$ + ಮಗ]

**ಲೌಡೆ** 'ಲವುಡಿ$_1$' ನೋ.

**ಲೌಭ್ಯ** (ನಾ). ಅತಿಯಾಸೆ ; ಲೋಭ . [ಸಂ.]

**ಲೌಲಿ** (ನಾ). [ಯೋಗ]. ಹೊಟ್ಟೆಯಲ್ಲಿ ಕರುಳನ್ನು ಕಂಬದಂತೆ ನಿಲ್ಲಿಸಿ ಎಡಕ್ಕೆ ಬಲಕ್ಕೆ ಹೊರಳಿಸುವುದು : ಕಂಭವ ' ನಿಲ್ಲಿಸಿ ಯಡಚಾರಿ ಬಲಚಾರಿಯಾಗಿ ಕುಕ್ಷಿಯನು ತಿರಿಗಿಸೂವು ಲೌಲಿಯೆನಿಸೂದು (ಶಿವತ್ರ. ೭-೯). [ ← ಮರಾ. ನೌಲಿ]

**ಲೌಲ್ಯ** (ನಾ). ೧. ಅಸ್ಥಿರತೆ ; ಚಂಚಲತೆ. ೨. ಅತಿಯಾಸೆ ; ಗೀಳು : ಕುಲ್ಯಮಾದ್ಯರ ಲೌ [ಪಾಠಾಂ. ಲಾ]ಲ್ಯವನಘರ ತಾಲ್ಯವಕ್ಷಂಪು . . .ಎನಲೆಸೆದು ಕರಮೆಸೆಯೆ (ಬಸವ. ೪೩-೭೭) ; ತೊಱೆದೆನೋ ! ಶೀಲಮಂ ಲೌಲ್ಯದಿಂದಂ (ವೃಷಭ. ೩೦-೨೩) ; ಶಿಶುಲೀಲಾನುಕಾರಮನಾಗೈದರೇನೆಂಬುದೀ ಚಾಪಲ್ಯತರ ಲೌಲ್ಯಕೆ (ಪಂಪರಾ. ೨-೯-೪೭). ೩. ಆಸೆಯುಳ್ಳವನು ; ಲೋಲುಪ : ಅನಕಂ ಕುಂಡಲಿ ಭಾಭ್ರುವೀರ್ಯನತಿಲೌಲ್ಯಂ ಕೂಬರಂ ಕಾತರಂ (ಮಲ್ಲಿ. ೦-೩೨) ; ಶರಣಾಗತಭಯವಿನಾಶನಂ ಗಣಲೌಲ್ಯನಂ ಸದ್ಭಕ್ತ ಲೌಲ್ಯನನು . . . ಸಾಷ್ಟಾಂಗದಲಿ ನಮಿಸಿ (ಬಸವ. ೪೭-೭೨). [ಸಂ.]

**ಲೌಲ್ಯತ್ವ** (ನಾ). = ಲೌಲ್ಯ ೨ : ಪಡೆದಂ ಪದ್ಮಾಸನಂ ವೇಶ್ಯೆಯಂ ಸಲೆ ಲೌಲ್ಯತ್ವದೆ (ಮಲ್ಲಿ. ೦೦-೦). [ಸಂ.]

**ಲೌಲ್ಯಭಾವ** (ನಾ). ಲಂಪಟತೆ ; ಲೋಲುಪತೆ : ಕಾಯಲ್ಬಂದಡೆ ವಜ್ರಶೃಂಖಳಕೃತದುರ್ಗಂ ಲೌಲ್ಯಭಾವಂ ಪರಸ್ತ್ರೀಯಲ್ಬಂದಡೆ ರಾವಣಾತ್ಮಜ ಚಮೂವಿದ್ರಾವಣಂ ಲಕ್ಷ್ಮಣಂ (ಎಕ. VII, ಶಿಕಾ. ೦೩೭-೩೦ ; 1068). [ಸಂ.]

**ಲೌಲ್ಯರಸ** (ನಾ). [ಕಾವ್ಯವಿ] ಒಂದು ಬಗೆಯ ರಸ : ಆರ್ದ್ರ ಸ್ಥಾಯಿ ಲೌಲ್ಯರಸಮೊಂದೊಡದುವುಂ ಹಾಸದಲ್ಲಿ ಮೇಣ್ ರತಿಯಲ್ಲಿ ಮೇಣ ನ್ಯತ್ರದಲ್ಲಿ ಅಂತರ್ಭಾವಂ (ಛಸಾ.೧-೦೭ ವೃತ್ತಿ); ಆಸೆಯೇ ಸ್ಥಾಯಿಭಾವವಾದ ಲೌಲ್ಯರಸವನ್ನು ನಿರಾಕರಿಸುವುದರಲ್ಲೂ ಇದೇ ಸರಣಿಯನ್ನು ಅನುಸರಿಸ ಬೇಕು (ಭಾರಮಿ. ೪೦೯). [ಸಂ.]

**ಲೌಲ್ಯವಾಹಿತ** (ನಾ). ಪ್ರೀತಿಯನ್ನು ಪ್ರಕಟಿಸುವವನು ; ಅನುರಾಗ ವುಳ್ಳವನು : ಪರರಿಂಗಿತಜ್ಞರ ಲೌಲ್ಯವಾಹಿತರ . . . ಕಪಟಂಗಳಿಲ್ಲದ ಓರಿಯ ವೃದ್ಧರ ಸೇವಿಪರಸಿಗೆ ವೃದ್ಧಿಯಹುದು (ಶಿವ್ಯಕಾಂ. ೦-೯೮). [ಸಂ.]

**ಲೌಲ್ಯೆ** (ನಾ). [ಕಾವ್ಯವಿ] ನಾಲ್ಕು ಬಗೆಯ ನಾಯಿಕೆಯರಲ್ಲಿ ಒಬ್ಬಳು ; ನಲವತ್ತೆರಡು ವರ್ಷಕ್ಕಿಂತ ಹೆಚ್ಚು ವಯಸ್ಸಾದ ಹೆಂಗಸು : ವಯಸವಿಭೇದದಿಂ ಬಾಲೆ ಯೌವನೆ ಪ್ರೌಢೆ ಲೌಲ್ಯೆಯೆಂದಿಂತು ಧರಿತ್ರಿಯೊಳಪ್ಪನಾಲ್ವರ್ಕಾಂತೆಯರ್ . . . ನಾಲ್ವತ್ತೆರಡಾ ಪ್ರೌಢಾಸ್ಪದ ಮಾಕೆಗೆ ವಿಾಹಂದಪ್ಪದಂಗನೆಗಂ ಮೇಲೆ ಲೌಲ್ಯೆಗಬ್ದಂ ವನಿತೆ (ಮಲ್ಲಿ. ೭-೦). [ಸಂ. ಲೌಲ್ಯಾ]

**ಲೌಹ** (ಗು). ೧. ಲೋಹದಿಂದ ಮಾಡಿದ ; ಲೋಹಸಂಬಂಧವಾದ : ನಿಶ್ಚಲಂ ನಿಂದ ಹನುಮನ ಕಿವಿಗೆ ಘೋಂಕನೆಯೆರಗಿದತ್ತು . . . ನೈಶಚರ ಸೈನಿಕರ ಸಕ್ರಮದ ಸಮುದಾಯಪದಹತಿಯ ಲೌಹಘೋಷಂ (ಶ್ರೀರಾದ. ೪೭೭-೭೪) ; ತನ್ನ ಎದೆಯ ಮೇಲೆ ಮಿರುಗುತ್ತಿದ್ದ ಲೌಹಫಲಕ ಗಳಿಂದ . . . ಅವನೊಂದು ಹಕ್ಕಿಯಂತೆ ಕಾಣುತ್ತಿದ್ದನು (ಪುವರು. ೩೩೯). ೨. ತಾಮ್ರದ. ೩. ಕಬ್ಬಿಣದ : ಪ್ರವಹಿಸುವ ಲೌಹ ರೇಖಾನಾಳಗಳ ಹೋಲಿ . . . ಹರಿಯುತಿದೆ ಕಂಬಿದಾರಿ (ಕೋಗಿಲೆ. ೩೩-೦೦). (ನಾ). ೪. ಲೋಹ. ೫. ಕಬ್ಬಿಣ. [ಸಂ.]

**ಲೌಹಿತ್ಯ** (ನಾ). ೧. ಕೆಂಪುಬಣ್ಣ. ೨. ಬ್ರಹ್ಮಪುತ್ರಾನದಿ : ಲೌಹಿತ್ಯ ಮನಂಬುಧಿ ಪರಿವಾಹಮನವನೀಶನೇಱೆ ತತ್ತಟನೃಪಸಂದೋಹದೆಮೆಱಗಿದು ದಧೀಶಗಜಾಹತಕಾಲಾಗುರುದ್ರುಮಂಬೆರಸಾಗಳ್ (ಶಾಂತಿಪು.೦೦-೭೯). [ಸಂ.]

*

**ಮುದ್ರಿಕೆ** (ನಾ). ೧. ಭದ್ರತೆಗಾಗಿ ಮೊಹರುಮಾಡಲು ಬಳಸುವ ಅರಗು, ಸೀಸ ಮುಂತಾದುವುಗಳ ಮೇಲೆ ಒತ್ತುವ, ಚಿಹ್ನೆಯುಳ್ಳ ಲೋಹದ ವಸ್ತು ; ಮುದ್ರೆ ; ಉಂಡಿಗೆ : ಕೋರ್ಟಿನವರು ಆ ಮನೆಯ ಬಾಗಿಲಿಗೆ ಬೀಗಹಾಕಿ ಮುದ್ರಿಕೆಯನ್ನು ಒತ್ತಿದ್ದಾರೆ (ರೂಢಿ). ೨. ಟಿಕೋಟಿ, ದಸ್ತೈವಜು ಮುಂತಾದುವುಗಳ ಮೇಲೆ ಸರಕಾರದ ಪರವಾಗಿ ಹಾಕುವ ಮುದ್ರೆ,— ಛಾಪು : ರೆಜಿಸ್ಟ್ರೇಷನ್ನದ ಮುದ್ರಿಕೆ ಇಲ್ಲದ ಮೂಲಕವೂ ಹಳೆಯ ಮಶಿಯ ಮೂಲಕವೂ ಅದು ಪ್ರತಿಯಂತೆ ತೋರುತ್ತದೆಯಷ್ಟೆ (ಗಂಮೂಡು. ೨೬೪). ೩. ಚಿಹ್ನೆ; ಗುರುತು ; ಅಚ್ಚು: ಅವನ ಮುಂಗೈ ಮೇಲೆ ಜಾನಕಿಬಾಯರ ಅಗ್ರದಂತಗಳು ತಮ್ಮ ಮುದ್ರಿಕೆಗಳನ್ನು ಮೂಡಿಸಿದ್ದವು (ಕಮಜೀ. ೪೮೩). ೪. ಕವಿಯು ತನ್ನ ಕಾವ್ಯದ ಕಡೆಯಲ್ಲಿ ಅಥವಾ ಪ್ರತಿ ಅಧ್ಯಾಯದ ಕಡೆಯಲ್ಲಿ ತನ್ನ ಇಷ್ಟದೈವ ಅಥವಾ ಪ್ರಿಯರ ಹೆಸರಿನಲ್ಲಿ ಮಾಡಿರುವ ಅರ್ಪಣೆ ; ಅಂಕಿತ : ಧ್ವನ್ಯಾಲೋಕದಲ್ಲಿಯೂ ಹೀಗೇಯೇ ಗ್ರಂಥಾದಿಯಲ್ಲಿಯೂ 'ಆನಂದ' ಶಬ್ದವು ಮುದ್ರಿಕೆಯಂತೆ ಬರುತ್ತದೆ (ಧ್ವನ್ಯಾಲೋ. XXVII. ೬೮೦೪); ಭಾಗಣ್ಣನು ನಿತ್ಯವೂ ಮಾಡುತ್ತಿದ್ದ ಕೆಲಸವೆಂದರೆ . . . ವೆಂಕಟಕೃಷ್ಣ ಎಂಬ ಮುದ್ರಿಕೆಯಿಂದ ಕವಿತ್ವ ಮಾಡುವುದು (ಕಥಾ. ೪೨೦). ೫. ಜಪ, ಸಂಧ್ಯಾವಂದನೆ, ಪೂಜೆ ಮುಂತಾದ ಸಮಯಗಳಲ್ಲಿ ಕೈಬೆರಳುಗಳನ್ನು ಒಂದು ನಿರ್ದಿಷ್ಟಕ್ರಮದಲ್ಲಿ ಮಡಿಚಿ ತೋರುವ ವಿನ್ಯಾಸ,— ಕರವಿನ್ಯಾಸ. ೬. (ರಾಜನ ಅಥವಾ ಪ್ರಭುತ್ವದ ಕುರುಹಾಗಿ) ಒಂದು ನಿರ್ದಿಷ್ಟ ಲಾಂಛನವನ್ನು ಕೆತ್ತಿರುವ ಉಂಗುರ ; ಮುದ್ರೆಯುಂಗುರ : "ಊರ್ಮಿಕಮದಾವುಂಗುರ ಮೆನಿಕ್ಕುವಕ್ಕರಂ ಬರೆಯೆ ತಾ ಮುದ್ರಿಕೆಗಳೆಂದೆನಿಕ್ಕುಂ" (ಪಂಗರಾ. ೦೦೦-೨೬); ನಾಡೆ ಧರೆಯೆಲ್ಲಂ ಧರಿಸಿ ಸಲೆ ರೂಢಿಸಿದ ಫಣಿರಾಜನಂ ಪರಿಚೂಡ ನಿಕ್ಕದನೊಂದು ಬೆರಳಿನ ಮುದ್ರಿಕೆಯ ತೆಜದಿ (ಬಸವ. ೩೪-೫೫); ಮೇದಿನಿಯ ಸುತೆಗಂಕಿತದ ಮುದ್ರಿಕೆಯನಿತ್ತು . . . ಲಂಕೆಯಂ ಸುಟ್ಟು ಬಂದೊಸಗೆಯೇಳ್ದನಿಲಜನನಸುರಾರಿ ಮನ್ನಿಸಿದನು (ಕೈವಲ್ಯ. ೦೮-೬). ೭. ಯಾವುದಾದರೊಂದು ನಿರ್ದಿಷ್ಟಚಿಹ್ನೆಯನ್ನುಳ್ಳ ನಾಣ್ಯ : ಮುದ್ರಿಸಿದ ನಾಣ್ಯ. ೮. ಮೊಹರು ಅಥವಾ ರುಜುಮಾಡಿದ ಕಾಗದ,— ಪತ್ರ. ೯. ಅಕ್ಷರ, ಚಿತ್ರ ಅಥವಾ ಸಂಕೇತಗಳಿಂದ ಕೂಡಿರುವ ವಸ್ತು : ಸಂಗೀತ ನರ್ತನಗಳು ಪ್ರಚಾರದಲ್ಲಿದ್ದವೆಂದು ಕೆಲವು ವಿಗ್ರಹಗಳಿಂದಲೂ ಮುದ್ರಿಕೆಗಳಿಂದಲೂ ಊಹಿಸಬಹುದು . . . ಅತಿಸುಂದರವಾಗಿ ಆಭರಣಗಳಂತೆ ತಯಾರಿಸಿದ ಬಳಪದ ಕಲ್ಲಿನ ಮುದ್ರಿಕೆಗಳ ಮೇಲೆ ಮಾತ್ರ ಲಿಪಿ ಕಂಡು ಬರುತ್ತದೆ (ಭಾರತ. ೦೫); ಮೊಹೆಂಜೊದಾರೋ ಮತ್ತು ಹರಪ್ಪಗಳಲ್ಲಿ ದೊರೆತ ಮುದ್ರಿಕೆಗಳ ಮೇಲಿನ ಲಿಪಿಯನ್ನು ಚಿತ್ರಲಿಪಿ (Pictography) ಎಂದು ಕರೆದಿದ್ದಾರೆ (ಪ್ರಾಬಿ. ೨೫). [ಸಂ. ಮುದ್ರಿಕಾ]

**ಮುದ್ರಿಕೆಗುಜುಪು** (ನಾ). ಮೊಹರು ಸಹಿತವಾದ ಗುರುತು,— ಚಿಹ್ನೆ : ರಾಯ ನಿನ್ನ ಕೊಲ್ಲೆಂದು ಕೋಪದಿಂ ಮುದ್ರಿಕೆಗುಜುಪಿತ್ತು ನಿಲ್ಲದೆನ್ನನು ಕಳುಪಿದನು (ಕುಮಾರಾಮ. ೩೫-೦೪೦). [ಮುದ್ರಿಕೆ + ಕುಜುಪು (<ಕುಱುಪು)]

**ಮುದ್ರಿಕೆಯುಂಗುರ** (ನಾ). = ಮುದ್ರಿಕೆ ೬ : ಮುದ್ರಿಕೆಯುಂಗುರಂಗಳು ಚಂದ್ರಾಭರಣ ಭುಜಕೀರ್ತಿ . . . ಪೆಂಡೆಯಂ ಮೊದಲಾದ ಸಕಲಾಭರಣಂಗಳನಾ ಶೌಂಡಿಕಂಗೆ ತೋಜಿಬಲ್ (ನನ್ನಶಾ. ೩-೦೦೦ ವ). [ಮುದ್ರಿಕೆ + ಉಂಗುರ]

**ಮುದ್ರಿತ** (ಗು). ೧. ಮೊಹರುಮಾಡಿದ ; ಮುದ್ರಿಸಿದ. ೨. ಗುರುತು ಮಾಡಿದ ; ಕುರುಹನ್ನುಂಟುಮಾಡಿದ. ೩. ಅಚ್ಚುಮಾಡಿದ ; ಮುದ್ರಣಗೊಳಿಸಿದ. ೪. ಮುಚ್ಚಿಕೊಂಡಿರುವ ; ಮುಗಿದ. ೫. ಆವರಿಸಿದ ; ಆಚ್ಛಾದನೆಯನ್ನುಳ್ಳ : ಚಿತ್ರಕೂಟಾದ್ರಿಯದೊ ಕಣ್ಗೊಳಿಸುತಿಹುದಲ್ಲಿ. ಮೇಘಮುದ್ರಿತಮಹಾಶೃಂಗಶಿವಲಿಂಗದೋಲ್ (ಶ್ರೀರಾಮಾ. ೧೨೬-೩೯). ೬. ಎಲ್ಲೆಯಂತೆ ಸುತ್ತುವರಿದಿರುವ : ಮೇರೆಯಾಗುಳ್ಳ : ಬೆಸಕೆಯ್ದತ್ತು ಸಮುದ್ರಮುದ್ರಿತಧರಾಚಕ್ರಂ ಪ್ರತಾಪಕ್ಕಗುರ್ವಿಸೆ (ಶಂಪಾ. ೦-೦೦೦); ಸಮಸ್ತಸಮುದ್ರಮುದ್ರಿತ ಮೇದಿನಿಯುನಡಿಗೊಟಿಂಗಿಸೊಳ್ ಮಡಂಗಿರಿಸಲ್ಪಗೆದು (ಶಂತಕಂ. ೪೬-೮); ಉದಯಾದ್ರಿ ಅಸ್ತಾದ್ರಿಗಳ ಮಧ್ಯೆ ಶರಧಿಮುದ್ರಿತ ಧರೆಯ ರಾಷ್ಟ್ರರಾಷ್ಟ್ರಂಗಳಂ ಚರಿಸಿ ಬಂದಿಹೆನು ನಾಂ (ಶತ್ರ್ಯಂಗ. ೫೬-೯೭೯). (ನಾ). ೭. [ಸಂಗೀತ] ಹದಿನೈದು ಬಗೆಯ ಗಮಕಗಳಲ್ಲಿ ಒಂದು ; ಬಾಯನ್ನು ಮುಚ್ಚಿಕೊಂಡು ನಡೆಸುವ ಸ್ವರಕಂಪ : ಮುದ್ರಿತ — ತುಟಿಗಳನ್ನು ಮುಚ್ಚಿ ಶ್ರುತಿಲೀನವಾಗಿ ಹಾಡುವುದು (ಸಂಗೀಸಂ. ೨೭); ಬಾಯಿಹಾಡುಗಾರಿಕೆಯ ವಿಶೇಷವಾದ ಸೊಗಸಾದ ಮುದ್ರಿತ ಮುಂತಾದುವನ್ನು ಅವರ ಬಾಯಿಂದ ಕೇಳುವುದೇ ಒಂದು ಅಪರೂಪವಾದ ಆನಂದ (ಸಂಗೀತ. ೬೦). [ಸಂ.]

**ಮುದ್ರಿಸು** (ಕ್ರಿ). ೧. ಮೊಹರುಮಾಡು ; ಮುದ್ರೆಯೊತ್ತು : ನೆಗೆದ ಪಯೋಧರದ್ವಯದೊಳಾಕೆಯ ಗರ್ಭದ ರಾ ಜ ಪು ತ್ರ ನಾ ರೊ ಗಿ ಸು ವ ಪಾಲ್ಗಳಂ ಮಡಗಿ ಮುದ್ರಿಸಿದಂತೆ ವಿಧಾತ್ರನೊಯ್ಯನೊಯ್ಯಗೆ ಕುಚಚೂಚುಕಂಗಳೊಳ್ . . . ಕರ್ಪೂರಕಪದಿಂದಡಿಯಿಟ್ಟುದು ಭೃಂಗ ಭಾಸುರಂ (ಅರ್ಜಪು. ೨-೨೫); ಭದ್ರಮೆನಿಸಿರ್ದ ಕುಸುಮಲಸದ್ರಸಮಂ ಪೀರ್ದ ಪದದೊಳೊಪ್ಪಿತು ಮಧಸಂ ಮುದ್ರಿಸಿದಂಬಿನ ಲಾಕ್ಷಾಮುದ್ರೆಯಿದೆಂಬಂತೆ ತೀವಿದಳಿನಿಕುರುಂಬಂ (ಗಿರಿಜಾ. ೨-೬೫). ೨. ಗುರುತುಮಾಡು ; ಚಿಹ್ನೆಯನ್ನು ಮೂಡಿಸು : ಉಂಡಿಗೆ, ಎಂದರೆ ರಹದಾರಿಗಳನ್ನು ಮುದ್ರಿಸುವ ಕಮ್ಮಟವೇ ಉಂಡಿಗೆಯ ಕಮ್ಮಟವೆಂದು ಅರ್ಥಮಾಡಬಹುದೇ ? (ಕಶಾಶಿ. ೩೮೯ ಅ೨೬). ೩. ಪುಸ್ತಕ ಮುಂತಾದುವನ್ನು ಅಚ್ಚುಹಾಕು,— ಮುದ್ರಣಮಾಡು : ಒಂದು ದಿವಸದಲ್ಲಿ ಒಂದು ಕಲ್ಲ ಮೇಲೆ ಸಾವಿರದಿಂದ ಎರಡುಸಾವಿರದವರೆಗೆ ಕಾಗದಗಳನ್ನು ಮುದ್ರಿಸಿ ತೆಗೆಯಬಹುದು (ಮುಂಬಯಿ. ೪-೨೦೫); ಶ್ರೀ ಜಿ. ಆರ್. ಜೋಯಿಸರವರು . . . ಮೊದಲನೆಯ ಭಾಗವನ್ನು ಮುದ್ರಿಸಿ ಮುಂದುವರಿಯುವುದಕ್ಕಾಗುವುದಿಲ್ಲವೆಂದು ಬಿಟ್ಟರು (ಸಂಗಾಕ. iii. ಮುನ್ನು). ೪. ನಾಣ್ಯವನ್ನು ಟಂಕಿಸು : ನಾಣ್ಯವನ್ನು ಮುದ್ರಿಸುವ ಸ್ಥಳಕ್ಕೆ ಟಂಕಸಾಲೆ ಎನ್ನುತ್ತಾರೆ (ರೂಢಿ). ೫. ಅಚ್ಚೊತ್ತಿದ ಹಾಗೆ ನೆಲಸು,— ಇರು : ಮುದ್ರಿಸಲಾಜ್ಞೆ ಭೂತಳದೊಳ್ (ಎಕ. III (R). ಪಂಜನ. ೨೩೫-೯; 1169): ಪರಾಕ್ರಮಂ ಮುದ್ರಿಸಿದ ತನ್ನಂಗವಟ್ಟವ ಜುಗುಪ್ಸೆಯಿಂದೀಕ್ಷಿಸಿ (ಶತ್ರ್ಯಂಗ. ೦೭-೪೩೯). ೬. (ಬಾಗಿಲು, ಪೆಟ್ಟಿಗೆಯ ಮುಚ್ಚಳ ಮುಂತಾದುವನ್ನು) ಮುಚ್ಚು ; ಹಾಕು : ತೆರೆಯ ದಂತಿರಿಸು : ಲಲನಾಮಂಜೀರನಾದಕ್ಕುಲಿಗುಮೆನುತೆ ಧಾರಾಗೃಹೋತ್ಕೀಲಿತೇಂದ್ರೋಪಲಹಂಸಾಸ್ಯಂಗಳಂ ಮುದ್ರಿಸುವಳ್ (ಕಾದಂಬ. ೩೩೯); ಆಭರಣಂಗಳ ಪೆಟ್ಟಿಗೆಯಂ ತರಿಸಿ ರತ್ನಮಂಜುಳಿಕೆಯ ಮುದ್ರಿಸಿದ ಮುಚ್ಚಳಂ ತೆಗೆದು (ಬಸರ. ೮-೦೭); ಕೆಲರರಿಗಳಂಜಿ ಬರೆ ಕಂಡು ಪೆರ್ಬಾಗಿಲ್ಗಳಂ ಬೇಗ ಮುದ್ರಿಸಿದರ್ (ತಂತ್ರ. ೨೪-೨೫). ೭. ಒಪ್ಪ ಹಾಕು ; ಒಪ್ಪಿಗೆ ನೀಡು : "ಮುದ್ರಿಸು — ಅಂಗೀಕರಣೇ. (ಒಪ್ಪು)" (ಕಮಧಾ). ೮. (ಆಲಂ) ಕವಿ : ಆವರಿಸು : ವ್ಯಾಪಿಸು; ಸುತ್ತುವರಿ : ಮುದ್ರಿಸಿ ದೆಸೆಯಂ ಚೆಲ್ವನ್ನುದ್ರಿತಮೆನೆ ತಮಗೆ ಜೀರಕಾದ್ರವನಮಪಾರಿದ್ರ ಕವಾಟೋತ್ಕರಮುನ್ನಿದ್ರಿತಕಮಲಾಕರಂಗಳಿಂ ಸೊಗಯಿಸುಗುಂ (ಪಂಚ. ೨-೪೭); ಅಂಧಕಾಸುರಂ ಕೋಪದಿಂ ತೆಗೆದೆಸೆಯಲು ಮುದ್ರಿಸಿದಂಧಕಾರ ಭೂಮಿ ದಿಗ್ವಾಲಂ (ಶಬ್ದ. ೫೦-೩೫); ಕೇಸುರಿಯ ಹುಯ ರಶ್ಮಿಕೇಸರಗಳಿನ್ನು ಮುದ್ರಿಸಿತು ಮಂತೆಯಂ ಕೆನ್ನವಿರ ರಾಶಿ (ಶ್ರೀರಾಮಾ. ೧೩-೩೯೦). ೯. ಹೊದೆಸು ; ಆಚ್ಛಾದಿಸು : ಬಸವರಾಜನು ಮುನ್ನ ತಾಂ ಮುದ್ರಿಸಿದ ಮಾಸುಕಂ ತೆಗೆಯಲು (ಬಸವ. ೫೬ ೫೬) ೧೦. ಪಾ ಪಿಸುವಂತೆ ಮ...

ಕರ್ನಾಟಕ ಸರ್ಕಾರದ ಉದಾರ ಧನಸಹಾಯದಿಂದ ಕನ್ನಡಿಗರ ಬಹುದಿನಗಳ ಬೇಡಿಕೆಯಾಗಿದ್ದ ಕನ್ನಡ ನಿಘಂಟಿನ ಎಂಟು ಸಂಪುಟಗಳು ಈಗ ಪುನರ್ಮುದ್ರಣಗೊಂಡು ನಿಮ್ಮ ಕೈಸೇರುತ್ತಿವೆ.

ಸಮಸ್ತ ಕನ್ನಡಿಗರಿಗೆ ಈ ಸಂಪುಟಗಳನ್ನು ಒಪ್ಪಿಸಲು ನೆರವು ನೀಡಿದ ಕರ್ನಾಟಕ ಸರ್ಕಾರವನ್ನು ನಾನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಡಾ. ನಲ್ಲೂರು ಪ್ರಸಾದ್ ಆರ್. ಕೆ.
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು

ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

## ಎಂಟನೆಯ ಸಂಪುಟ

"ಶಬ್ದಪಾರಮಾರ್ಗಮಶಕ್ಯಂ"

—ಕೇಶಿರಾಜ

ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : : ಬೆಂಗಳೂರು-೧೮

೧೯೯೫

KANNADA NIGHANTU - VOL-VIII
Second Edition : 2010
Published by : Kannada Sahitya Parishat
Pampa Mahakavi Road, Chamarajapet, Bangalore - 560 018
Pages : XXXIV + 8 + 7748 to 9021 + VIII Price : Rs. 350=00

ಮೊದಲನೆಯ ಮುದ್ರಣ – ೧೯೯೫
ಎರಡನೆಯ ಮುದ್ರಣ – ೨೦೧೦
ಪ್ರತಿಗಳು : ೨೦೦೦
ಬೆಲೆ : ಮುನ್ನೂರು ಐವತ್ತು ರೂಪಾಯಿಗಳು





ಮುದ್ರಣ: **ರಾಜಾ ಪ್ರಿಂಟರ್ಸ್**
ನಂ.೫೯, ೪ನೆ ಕ್ರಾಸ್, ಲಾಲ್‌ಬಾಗ್ ರಸ್ತೆ
ಕೆ.ಎಸ್. ಗಾರ್ಡನ್, ಗಂಗಾಧರಪ್ಪ ಬ್ಲಾಕ್
ಬೆಂಗಳೂರು– ೫೬೦ ೦೨೭.
ದೂರವಾಣಿ : ೨೨೨೩೪೦೬೬

# ಕನ್ನಡ ನಿಘಂಟು ಸಂಪಾದಕ ಸಮಿತಿ

(೧೯೯೫ನೆಯ ಮೇ ತಿಂಗಳಿನಲ್ಲಿ ಇದ್ದಂತೆ)

**ಅಧ್ಯಕ್ಷರು**

ಡಾ. ಜಿ. ಎಸ್. ಗಾಯಿ, ಪಿಎಚ್.ಡಿ. (೬-೨-೯೫ರ ವರೆಗೆ)

**ಪ್ರಧಾನ ಸಂಪಾದಕರು**

ಶ್ರೀ ಎನ್. ಬಸವಾರಾಧ್ಯ, ಎಂ.ಎ.

**ಸದಸ್ಯರು**

ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.
ಡಾ. ಆರ್.ಸಿ. ಹಿರೇಮಠ, ಎಂ.ಎ., ಪಿಎಚ್.ಡಿ.
ಡಾ. ಹಾ.ಮಾ. ನಾಯಕ, ಎಂ.ಎ., ಪಿಎಚ್.ಡಿ.
ಡಾ. ಜಿ.ಎಸ್. ಶಿವರುದ್ರಪ್ಪ, ಎಂ.ಎ., ಪಿಎಚ್.ಡಿ
ಡಾ. ಎಂ. ಚಿದಾನಂದಮೂರ್ತಿ, ಎಂ.ಎ., ಪಿಎಚ್.ಡಿ.
ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ, ಎಂ.ಎ. ಪಿಎಚ್.ಡಿ.
ಡಾ. ಕೆ.ವಿ. ರಮೇಶ್, ಎಂ.ಎ., ಪಿಎಚ್.ಡಿ.
ಡಾ. ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿಎಚ್.ಡಿ.

**ಕರ್ನಾಟಕ ಸರ್ಕಾರದ ಪ್ರತಿನಿಧಿಗಳು**

ಡಾ. ಸಿದ್ಧಯ್ಯ ಪುರಾಣಿಕ, ಡಿ.ಲಿಟ್. (೫-೯-೯೪ರವರೆಗೆ)

**ಪರಿಷತ್ತಿನ ಅಧ್ಯಕ್ಷರು**

ಶ್ರೀ ಗೊ.ರು. ಚನ್ನಬಸಪ್ಪ

**ಪರಿಷತ್ತಿನ ಗೌರವ ಕಾರ್ಯದರ್ಶಿಗಳು**

ಪ್ರೊ. ಎಸ್. ಶ್ರೀನಿವಾಸನ್, ಎಂ.ಎ.
ಪ್ರೊ. ಎಂ. ಜಿ. ನಾಗರಾಜ್, ಎಂ.ಎಸ್‌ಸಿ., ಎಂ.ಎ., ಎಂ.ಎಡ್.

**ಪರಿಷತ್ತಿನ ಗೌರವ ಕೋಶಾಧಿಕಾರಿಗಳು**

ಪ್ರೊ. ಹೆಚ್.ಆರ್. ದಾಸೇಗೌಡ, ಎಂ.ಎ., ಬಿ.ಎಲ್.

# ಕನ್ನಡ ನಿಘಂಟು ಕಚೇರಿಯ ಸಿಬ್ಬಂದಿ

(೧೯೯೫ನೆಯ ಮೇ ತಿಂಗಳಿನಲ್ಲಿ ಇದ್ದಂತೆ)

ಪ್ರಧಾನ ಸಂಪಾದಕರು

**ಶ್ರೀ ಎನ್. ಬಸವಾರಾಧ್ಯ,** ಎಂ.ಎ.

**ಉಪಸಂಪಾದಕರು**

ಶ್ರೀಮತಿ ಉಮಾದೇವಿ, ಎಂ.ಎ.

ಶ್ರೀಮತಿ ವಿಜಯಲಕ್ಷ್ಮಿ, ಎಂ.ಎ.

ಶ್ರೀಮತಿ ಎಂ.ಎಸ್. ಸುಜಯ, ಎಂ.ಎ.

**ಸಹಾಯಕ ಸಂಪಾದಕರು**

ಶ್ರೀ ಬಿ. ಆರ್. ಬಸವರಾಜ, ಎಂ.ಎ.

**ಪೂರ್ಣಕಾಲದ ಸಹಾಯಕರು**

ಶ್ರೀ ಕೆ. ಆರ್. ಶೇಷಗಿರಿ, ಎಂ.ಎ.

ಬೆರಳಚ್ಚುಗಾರ್ತಿಯರು : ಶ್ರೀಮತಿ ಎ. ನೇತ್ರಾವತಿಬಾಯಿ, ಶ್ರೀಮತಿ ಸಿ. ಎನ್. ವಿಜಯಲಕ್ಷ್ಮಿ

ಸಹಾಯಕರು : ಶ್ರೀ ರಾಘವೇಂದ್ರ ಪ್ರಸಾದ್, ಶ್ರೀ ಆರ್. ಶಂಕರಪ್ಪ, ಶ್ರೀ ರೇವಯ್ಯ,

# ಅಧ್ಯಕ್ಷರ ನುಡಿ

'ನಿಘಂಟು ಎಂದರೆ ಕನ್ನಡ ಸಾಹಿತ್ಯ ಪರಿಷತ್ತಿನ ಬೃಹನ್ನಿಘಂಟು' ಎಂದೇ ಖ್ಯಾತವಾಗಿರುವ ಈ ಮಹಾನಿಘಂಟಿನ ಎಂಟು ಸಂಪುಟಗಳನ್ನು ಅದು ಪ್ರಕಟವಾದ ೧೫ ವರ್ಷಗಳ ನಂತರ ಮತ್ತಷ್ಟು ಸುಂದರವಾಗಿ ಮರುಮುದ್ರಣಗೊಳಿಸಿ ಕನ್ನಡ ಕುಲಕೋಟಿಗೆ ಅರ್ಪಿಸಲು ನನಗೆ ಸಂತೋಷವೆನಿಸುತ್ತದೆ. ಕನ್ನಡ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ಪಡೆದುಕೊಂಡಿರುವುದು ಅದರ ಸಂಪನ್ನತೆ ಮತ್ತು ಅರ್ಹತೆಗಳಿಂದಾಗಿಯೇ ಎಂಬುದನ್ನು ಲೋಕದೆದುರು ಬಿಚ್ಚಿತೋರಿಸುವ ಸಾಧನಗಳಲ್ಲಿ ಮುಖ್ಯವಾದದ್ದು ಈ ಬೃಹತ್ ನಿಘಂಟು. ಕನ್ನಡದ ಸಮಸ್ತ ಜ್ಞಾನವನ್ನೂ ತನ್ನೊಳಗೆ ಐಕ್ಯಗೊಳಿಸಿಕೊಂಡಿರುವ ಈ ನಿಘಂಟಿನ ವಿವಿಧ ಸಂಪುಟಗಳಲ್ಲಿ ಶಬ್ದವೊಂದರ ಅರ್ಥ, ವಿವರಣೆ, ಉದಾಹರಣೆ ಒಮ್ಮೊಮ್ಮೆ ಅರ್ಧಪುಟವನ್ನು ದಾಟಿ ಒಂದು ಪುಟವನ್ನು ಆವರಿಸಿಕೊಂಡಿರುವುದುಂಟು.

ಕ್ರಿ.ಶ.೪೫೦ರ ಹಲ್ಮಿಡಿಶಾಸನದಿಂದ ಪ್ರಾರಂಭವಾಗಿ ಈ ಸಂಪುಟ ಯೋಜನೆ ಅನುಷ್ಠಾನಗೊಂಡ ೧೯೯೫ರವರೆಗೆ ಕನ್ನಡದಲ್ಲಿ ಪ್ರಕಟವಾದ ಎಲ್ಲ ಬಗೆಯ ಸಾಹಿತ್ಯ ಪ್ರಕಾರಗಳಿಂದಲೂ ಉಲ್ಲೇಖಗಳನ್ನು ನೀಡಲಾಗಿರುವುದು, ಕೆಲವೊಮ್ಮೆ ಒಂದೇ ಶಬ್ದಕ್ಕೆ ಬೇರೆ ಬೇರೆ ಅರ್ಥಗಳು ಪ್ರಾಪ್ತವಾಗುವ ಸಂದರ್ಭಗಳನ್ನು ಜೊತೆಗಿರಿಸಿ ಕೊಟ್ಟಿರುವುದು, ಪ್ರತಿಯೊಂದು ಶಬ್ದವನ್ನೂ ನಾಮಪದ ಅಥವಾ ಕ್ರಿಯಾಪದವೆಂದು ಖಚಿತವಾಗಿ ವಿಂಗಡಿಸಿಕೊಂಡಿರುವುದು, ಅರ್ಥ ಸ್ಪಷ್ಟೀಕರಣಕ್ಕೆಂದು ಉದಾಹರಣೆಯಾಗಿ ಕೊಟ್ಟಿರುವ ವಾಕ್ಯ ಅಥವಾ ವಾಕ್ಯತುಂಡುಗಳೇ ಮೂಲಕಾವ್ಯವನ್ನು ಓದಬೇಕೆನ್ನುವ ಆಸಕ್ತಿಯನ್ನು ಹುಟ್ಟಿಸುವುದು – ಈ ಎಲ್ಲ ಅಂಶಗಳು ಇದರ ಅಪೂರ್ವತೆಯನ್ನು ಎತ್ತಿ ಹಿಡಿಯುವ ಸಾಕ್ಷಿಕಲ್ಲುಗಳಾಗಿವೆ. ನಿಘಂಟು ಎನ್ನುವುದೇ ತುಂಬ ವೈಜ್ಞಾನಿಕವಾದ, ಒಂದು ಭಾಷೆಯ ಸೃಜನ ಸಾಹಿತ್ಯದಷ್ಟೇ ಪ್ರಮುಖವಾದ, ಭಾಷೆಯಲ್ಲಿರುವ ಶಬ್ದಗಳನ್ನು ಶುದ್ಧವಾಗಿ ಉಚ್ಚರಿಸಬೇಕೆಂದು ತಿಳಿಸಿಕೊಡುವ ರಚನೆಯಾಗಿರುವುದರಿಂದ ಜ್ಞಾನೇಂದ್ರಿಯಗಳೆಲ್ಲದರ ಎಚ್ಚರದ ದುಡಿಮೆಯನ್ನು ಬಯಸುತ್ತದೆ. ಕನ್ನಡದ ಅಭಿಮಾನವನ್ನು ಮೈತುಂಬಿಕೊಂಡ ಘನ ವಿದ್ವಾಂಸರ ಸತತ ಪರಿಶ್ರಮದಿಂದ ಈ ಯೋಜನೆ ಶಿಸ್ತುಬದ್ಧವಾಗಿ ಯಶಕಂಡಿದೆ. ಮೊದಲ ಮುದ್ರಣದ ೧೦,೦೦೦ ಪ್ರತಿಗಳು ಕೆಲವೇ ವರ್ಷಗಳಲ್ಲಿ ಕನ್ನಡಿಗರ ಮನೆಯ ಕಪಾಟುಗಳನ್ನು, ಗ್ರಂಥಭಂಡಾರಗಳನ್ನು, ಶಾಲೆಕಾಲೇಜುಗಳನ್ನು ಅಲಂಕರಿಸಿದ್ದರಿಂದ ಕನ್ನಡ ಸಾಹಿತ್ಯ ಪರಿಷತ್ತು ಧನ್ಯತಾಭಾವವನ್ನು ತಳೆಯುವಂತಾಯಿತು. ಆದರೆ ನಿಘಂಟುವಿನ ಉಪಯುಕ್ತತೆಯನ್ನು ತಡವಾಗಿ ಅರ್ಥಮಾಡಿಕೊಂಡವರು ಅಂದಿನಿಂದ ಇಂದಿನವರೆಗೆ ಸಾಹಿತ್ಯ ಪರಿಷತ್ತಿಗೆ ದೂರವಾಣಿ ಕರೆ ಮಾಡಿ, ಮಾರಾಟ ವಿಭಾಗದಲ್ಲಿ ವಿಚಾರಿಸಿ, ಪುಸ್ತಕ ಮಳಿಗೆಗಳಲ್ಲಿ ಹುಡುಕಾಡಿ ಸಿಗದೆ ನಿರಾಶರಾಗಿದ್ದಾರೆ. ಮರುಪ್ರಕಟಿಸುವಂತೆ ಒತ್ತಾಯ ಮಾಡಿದ್ದಾರೆ.

ಎಂಟು ಸಂಪುಟಗಳಲ್ಲಿ, ಒಂಬತ್ತು ಸಾವಿರಕ್ಕಿಂತಲೂ ಅಧಿಕ ಪುಟಗಳ ವಿಸ್ತಾರದಲ್ಲಿ ಹರಡಿಕೊಂಡಿರುವ, ಎಲ್ಲರ ಮನೆಯನ್ನೂ ಬೆಳಗಬೇಕಾಗಿರುವ ಈ ನಿಘಂಟನ್ನು ಮುದ್ರಿಸುವುದಾಗಲೀ, ಮುದ್ರಿತ ಪ್ರತಿಗಳನ್ನು ಒಂದೆಡೆ ಜೋಡಿಸಿಡುವುದಾಗಲೀ, ಮಾರಾಟದ ವ್ಯವಸ್ಥೆ ಮಾಡುವುದಾಗಲೀ, ಹೆಚ್ಚಿನ ಪ್ರಮಾಣದಲ್ಲಿ ಒಂದು

ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವುದಾಗಲೀ ಅಷ್ಟೊಂದು ಸುಲಭವಾದ ಕೆಲಸವಲ್ಲ. ಈ ಅಸಾಧ್ಯವನ್ನು ಸಾಧ್ಯವಾಗಿಸುವ ಧೈರ್ಯೋತ್ಸಾಹಗಳು ಪರಿಷತ್ತಿನೊಡಲಲ್ಲಿ ಚಿಮ್ಮುವುದಕ್ಕೆ ಕರ್ನಾಟಕ ರಾಜ್ಯ ಸರ್ಕಾರ ಕಾರಣವಾಯಿತೆಂದರೆ ಅದನ್ನು ಯಾರೂ ಅತಿಶಯೋಕ್ತಿಯೆಂದು ಭಾವಿಸಬೇಕಾಗಿಲ್ಲ. ಕರ್ನಾಟಕ ರಾಜ್ಯ ಸರ್ಕಾರ ಕನ್ನಡ ಸಾಹಿತ್ಯ ಪರಿಷತ್ತಿನ ಮಾತುಗಳನ್ನು ಪ್ರೀತಿಯಿಂದ ಆಲಿಸುತ್ತಿರುವುದು, ಕನ್ನಡ ಸಾಹಿತ್ಯ ಪರಿಷತ್ತನ್ನು ಕನ್ನಡದ ಸಾರ್ವಭೌಮ ಪ್ರತಿನಿಧಿಯೆಂದೇ ಭಾವಿಸುತ್ತಿರುವುದು ಕನ್ನಡದ ಭಾಗ್ಯವೆಂದೇ ಹೇಳಬೇಕು. ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಹಲವು ಒತ್ತಡಗಳ ನಡುವೆಯೂ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳಲ್ಲಿ ಅತ್ಯಂತ ಪ್ರೀತಿಯಿಂದ ಭಾಗವಹಿಸುತ್ತಿರುವುದು, ಸಮಾರಂಭಗಳಲ್ಲಿ ಕೊಟ್ಟ ಆಶ್ವಾಸನೆಗಳನ್ನು ಅತಿಶೀಘ್ರವಾಗಿ ಅನುಷ್ಠಾನಗೊಳಿಸುತ್ತಿರುವುದು, ಪರಿಷತ್ತಿನ ಎಲ್ಲಾ ಯೋಜನೆಗಳಿಗೂ ಹಸಿರು ನಿಶಾನೆ ತೋರುತ್ತಿರುವುದು, ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳು ಮುಖ್ಯಮಂತ್ರಿ – ಕನ್ನಡ ಸಂಸ್ಕೃತಿ ಮಂತ್ರಿಗಳ ಕಚೇರಿಯ ಹೊರಗೆ ಕಡತಗಳೊಂದಿಗೆ ಗಂಟೆಗಟ್ಟಲೆ ಕಾಯುತ್ತಿದ್ದುದನ್ನು ತಪ್ಪಿಸಿರುವುದು, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಿಂದ ತಾಲ್ಲೂಕು ಸಮ್ಮೇಳನಗಳವರೆಗೆ ಎಲ್ಲವೂ ಅದ್ದೂರಿಯಾಗಿ ನಡೆಯಲು ಬೇಕಾದಷ್ಟು ಪ್ರಮಾಣದಲ್ಲಿ ಹಣ ಬಿಡುಗಡೆ ಮಾಡುತ್ತಿರುವುದು – ಇಂಥವನ್ನೆಲ್ಲಾ ಕಂಡಾಗ ಪರಿಷತ್ತಿನ ಅಧ್ಯಕ್ಷನಾಗಿ ನನಗೆ ಮನಸ್ಸು ತುಂಬಿ ಬರುತ್ತದೆ. ಆರುಕೋಟಿ ಕನ್ನಡಿಗರ ಪರವಾಗಿ ಅವರಿಗೆ ಕೃತಜ್ಞತಾ ಕುಸುಮಗಳನ್ನು ಅರ್ಪಿಸಬೇಕೆನ್ನಿಸುತ್ತದೆ. 'ಕನ್ನಡದ ಮುಖ್ಯಮಂತ್ರಿ' 'ಕನ್ನಡಿಗರ ಮುಖ್ಯಮಂತ್ರಿ' ಎಂದು ಅಭಿಮಾನದಿಂದ ನುಡಿಯಬೇಕೆನ್ನಿಸುತ್ತದೆ. ಸನ್ಮಾನ್ಯ ಮುಖ್ಯಮಂತ್ರಿಗಳ ಕನ್ನಡದ ಮೇಲಿನ, ಕನ್ನಡ ಸಾಹಿತ್ಯ ಪರಿಷತ್ತಿನ ಬಗೆಗಿನ ಈ ಅಖಂಡ ಪ್ರೀತಿ ಹೀಗೇ ಮುಂದುವರಿಯಲೆಂದು ಆಶಿಸುತ್ತೇನೆ.

ಕರ್ನಾಟಕ ಸರ್ಕಾರ ನಿಘಂಟು ಯೋಜನೆಯ ಮಹತ್ವವನ್ನು ಮನಗಂಡು ಒಂದು ಕೋಟಿ ರೂಪಾಯಿಗಳನ್ನು ಸಾಹಿತ್ಯ ಪರಿಷತ್ತಿಗೆ ಉದಾರವಾಗಿ ನೀಡಿದೆ. ಸರ್ಕಾರ ಹಣ ನೀಡಿರುವುದು ಪರಿಷತ್ತಿಗಾದರೂ ಇದು ಜನತೆಯ ಹಣ ಮತ್ತು ಇದರ ಅಂತಿಮ ಫಲಾನುಭವಿಗಳೂ ಜನತೆಯೇ. ಈ ಎಚ್ಚರವನ್ನಿರಿಸಿಕೊಂಡೇ ಸಾಹಿತ್ಯ ಪರಿಷತ್ತು ಬಹುಬೇಡಿಕೆಯ ಬೃಹನ್ನಿಘಂಟಿನ ಎಂಟು ಸಂಪುಟಗಳನ್ನು ಪುನರ್ಮುದ್ರಣಗೊಳಿಸುತ್ತಿದೆ. ಸರ್ಕಾರದ ಉದಾರ ಆರ್ಥಿಕ ನೆರವಿನ ಪರಿಣಾಮವಾಗಿ ನಿಘಂಟಿನ ಬೆಲೆಯನ್ನು ಸಾಮಾನ್ಯರೂ ಕೊಳ್ಳಲು ಮನಸ್ಸು ಮಾಡುವಂತೆ ಕಡಿಮೆಗೊಳಿಸಲಾಗಿದೆ. ಭಾಷೆ ಮತ್ತು ಸಾಹಿತ್ಯಾಭಿಮಾನದ ಸಂಕೇತವೆಂಬಂತೆ ಈ ಯೋಜನೆಯ ಯಶಸ್ಸಿನಲ್ಲಿ ಪ್ರಮುಖ ಪಾತ್ರ ನಿರ್ವಹಿಸಿರುವ ರಾಜ್ಯ ಸರ್ಕಾರವನ್ನು ಹಾಗೂ ಕನ್ನಡ ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಜಯರಾಮರಾಜೇ ಅರಸ್ ಮತ್ತು ನಿರ್ದೇಶಕರಾದ ಶ್ರೀ ಮನು ಬಳಿಗಾರ್ ಅವರುಗಳನ್ನು ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ. ನಿಘಂಟು ಯೋಜನೆ ಪ್ರಾರಂಭವಾದಾಗ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣರಿಂದ ಮೊದಲಗೊಂಡು ಮುಕ್ತಾಯವಾದಾಗ ಅಧ್ಯಕ್ಷರಾಗಿದ್ದ ಡಾ. ಸಾ.ಶಿ. ಮರುಳಯ್ಯನವರವರೆಗೆ ಇದನ್ನು ಆಸಕ್ತಿಯಿಂದ ಮುನ್ನಡೆಸಿಕೊಂಡು ಬಂದ ಎಲ್ಲ ಅಧ್ಯಕ್ಷರುಗಳಿಗೂ ನಿಘಂಟು ಸಮಿತಿಯ ಅಧ್ಯಕ್ಷರು, ಸದಸ್ಯರುಗಳು, ಸಂಪಾದಕರು, ಸಿಬ್ಬಂದಿ ವರ್ಗದವರಿಗೂ ಅಂದವಾಗಿ ಮುದ್ರಿಸಿಕೊಟ್ಟ ರಾಜಾ ಪ್ರಿಂಟರ್ಸ್‌ನವರಿಗೂ ಮತ್ತು ಅವರ ಸಿಬ್ಬಂದಿ ವರ್ಗದವರಿಗೂ ಕನ್ನಡ ಸಾಹಿತ್ಯ ಪರಿಷತ್ತು ತುಂಬಾ ಆಭಾರಿಯಾಗಿದೆ. ಮರುಮುದ್ರಣದ ಈ ನಿಘಂಟಿನ ಸಂಪುಟಗಳನ್ನು ಕನ್ನಡ ಜನತೆ ಪ್ರೀತಿ ವಿಶ್ವಾಸಗಳಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಬೆಂಗಳೂರು
೫-೬-೨೦೧೦

**ಡಾ. ನಲ್ಲೂರು ಪ್ರಸಾದ್ ಆರ್.ಕೆ.**
ಅಧ್ಯಕ್ಷರು

# ಅನುಬಂಧ

## ಸಮಾಲೋಚನ ಸಮಿತಿ

(೧೯೪೩ರಲ್ಲಿ ಇದ್ದಂತೆ)

೧. ರಾಜಸೇವಾಸಕ್ತ ಬಿ.ಎಂ. ಶ್ರೀಕಂಠಯ್ಯ, ಎಂ.ಎ., ಬಿ. ಎಲ್, ಬೆಂಗಳೂರು.
೨. ಡಾ॥ ಎಂ. ಗೋವಿಂದ ಪೈ, ಮಂಜೇಶ್ವರ.
೩. ಶ್ರೀ ಎಲ್.ವಿ. ರಾಮಸ್ವಾಮಿ ಅಯ್ಯರ್, ಎಂ.ಎ., ಬಿ.ಎಲ್, ಎರ್ನಾಕುಳಂ.
೪. ಡಾ॥ ಎ. ಎನ್. ಉಪಾಧ್ಯೆ, ಎಂ. ಎ, ಡಿ.ಲಿಟ್, ಕೊಲ್ಹಾಪುರ.
೫. ಆಸ್ಥಾನವಿದ್ವಾನ್ ರಾ. ಅನಂತಕೃಷ್ಣಶರ್ಮ, ಮೈಸೂರು.
೬. ಶ್ರೀ ಪಿ. ಎಂ. ಸೋಮಸುಂದರಂ, ಎಂ. ಎ., ಎಲ್.ಟಿ, ಬೆಂಗಳೂರು.

## ಕನ್ನಡ ನಿಘಂಟು ಸಂಪಾದಕ ಸಮಿತಿ

(೧೯೪೩ ರಿಂದ ೧೯೯೫)

### ಅಧ್ಯಕ್ಷರು

೧. ಡಾ॥ ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ., ಡಿ. ಲಿಟ್. ... (೧೯೪೩ - ೧೯೫೭)
೨. ಪ್ರೊ. ತೀ. ನಂ. ಶ್ರೀಕಂಠಯ್ಯ, ಎಂ.ಎ. ... (೧೯೫೮ - ೧೯೬೬)
೩. ಡಾ॥ ಡಿ. ಎಲ್. ನರಸಿಂಹಾಚಾರ್, ಎಂ.ಎ. ... (೧೯೬೬ - ೧೯೭೧)
೪. ಪ್ರೊ. ಕ. ವೆಂ. ರಾಘವಾಚಾರ್, ಎಂ.ಎ., ಬಿ.ಟಿ. ... (೧೯೭೧ - ೧೯೭೨)
೫. ಪ್ರೊ. ಎಂ. ಮರಿಯಪ್ಪಭಟ್ಟ, ಎಂ.ಎ., ಎಲ್.ಟಿ. ... (೧೯೭೨ - ೧೯೮೦)
೬. ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ. ... (೧೯೮೦- ೧೯೯೨)
೭. ಡಾ॥ ಜಿ. ಎಸ್. ಗಾಯಿ, ಪಿಎಚ್.ಡಿ. ... (೧೯೯೨ - ೧೯೯೫)
೮. ಶ್ರೀ ಎನ್. ಬಸವಾರಾಧ್ಯ, ಎಂ.ಎ. ... (೧೯೯೫ - )

### ಉಪಾಧ್ಯಕ್ಷರು

೧. ಡಾ॥ ಡಿ. ಎಲ್. ನರಸಿಂಹಾಚಾರ್, ಎಂ. ಎ. ... (೧೯೫೮ - ೧೯೬೬)
೨. ಡಾ॥ ರಂ. ಶ್ರೀ. ಮುಗಳಿ, ಎಂ. ಎ., ಬಿ. ಟಿ. ಡಿ. ಲಿಟ್. .. (೧೯೬೬ - ೧೯೬೮)
೩. ಪ್ರೊ. ಡಿ. ಜವರೇಗೌಡ, ಎಂ. ಎ. ... (೧೯೬೮ - ೧೯೬೯)
೪. ಪ್ರೊ. ಕ. ವೆಂ. ರಾಘವಾಚಾರ್, ಎಂ. ಎ., ಬಿ. ಟಿ. ... (೧೯೬೯ - ೧೯೭೧)
೫. ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ. ಎ., ಬಿ. ಟಿ. ... (೧೯೭೧ - ೧೯೮೦)
೬. ಪ್ರೊ. ಸ.ಸ. ಮಾಳವಾಡ, ಎಂ. ಎ. ... (೧೯೮೦ - ೧೯೮೬)

### ಕಾರ್ಯದರ್ಶಿ ಮತ್ತು ಪ್ರಧಾನ ಸಂಪಾದಕರು

ಪ್ರೊ. ತೀ. ನಂ. ಶ್ರೀಕಂಠಯ್ಯ, ಎಂ. ಎ. ... (೧೯೪೩ - ೧೯೫೪)

### ಪ್ರಧಾನ ಸಂಪಾದಕರು

೧. ಪ್ರೊ. ಡಿ. ಎಲ್. ನರಸಿಂಹಾಚಾರ್, ಎಂ.ಎ. ... (೧೯೫೪ - ೧೯೭೧)
೨. ಪ್ರೊ. ಕ. ವೆಂ. ರಾಘವಾಚಾರ್, ಎಂ.ಎ., ಬಿ.ಟಿ. ... (೧೯೭೧ - ೧೯೭೨)
೩. ಪ್ರೊ. ಎಂ. ಮರಿಯಪ್ಪಭಟ್ಟ, ಎಂ.ಎ., ಎಲ್. ಟಿ. ... (೧೯೭೨ - ೧೯೭೩)
೪. ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ. ಎ., ಬಿ.ಟಿ. ... (೧೯೭೩ - ೧೯೯೨)

೫. ಶ್ರೀ ಎನ್. ಬಸವಾರಾಧ್ಯ, ಎಂ. ಎ. ... (೧೯೯೨ - )

## ಸಂಪಾದಕರು

೧. ಡಾ || ಡಿ. ಎಲ್. ನರಸಿಂಹಾಚಾರ್, ಎಂ. ಎ. ... (೧೯೫೪ - ೧೯೫೬)
೨. ಶ್ರೀ ಎಲ್. ಗುಂಡಪ್ಪ, ಎಂ. ಎ. ... (೧೯೫೭ - ೧೯೬೩)
೩. ಶ್ರೀ ಎನ್. ಬಸವಾರಾಧ್ಯ, ಎಂ. ಎ. ... (೧೯೬೩ - ೧೯೭೧)

## ಸಮಿತಿಯ ಸದಸ್ಯರು

೧. ಪ್ರೊ. ತೀ. ನಂ. ಶ್ರೀಕಂಠಯ್ಯ, ಎಂ.ಎ. ... (೧೯೪೩ - ೧೯೫೮)
೨. ಡಾ || ಡಿ. ಎಲ್. ನರಸಿಂಹಾಚಾರ್, ಎಂ. ಎ. ... (೧೯೪೩ - ೧೯೫೪)
೩. ಪ್ರೊ. ಕ. ವೆಂ. ರಾಘವಾಚಾರ್, ಎಂ. ಎ., ಬಿ. ಟಿ. ... (೧೯೪೩ - ೧೯೬೯)
೪. ಡಾ || ರಂ. ಶ್ರೀ. ಮುಗಳಿ, ಎಂ. ಎ., ಬಿ.ಟಿ., ಡಿ.ಲಿಟ್. ... (೧೯೪೪ - ೧೯೭೩)
೫. ಶ್ರೀ ಎನ್. ಲಕ್ಷ್ಮೀನಾರಾಯಣರಾವ್, ಎಂ.ಎ. ... (೧೯೪೪ - ೧೯೭೯)
೬. ವಿದ್ವಾನ್ ಮುಳಿಯ ತಿಮ್ಮಪ್ಪಯ್ಯ ... (೧೯೪೪ - ೧೯೫೦)
೭. ಶ್ರೀ ಕಾ. ಸ. ಧರಣೇಂದ್ರಯ್ಯ, ಎಂ.ಎ., ಬಿ.ಟಿ. ... (೧೯೪೪ - ೧೯೭೧)
೮. ಪ್ರೊ. ಡಿ. ಕೆ. ಭೀಮಸೇನರಾವ್, ಎಂ.ಎ. ... (೧೯೪೪ - ೧೯೬೯)
೯. ಪದ್ಮಭೂಷಣ ಡಾ. ಕೆ. ವಿ. ಪುಟ್ಟಪ್ಪ, ಎಂ.ಎ.,ಡಿ.ಲಿಟ್. ... (೧೯೪೪ - ೧೯೬೨)
೧೦. ಪ್ರೊ. ಕೆ. ಜಿ. ಕುಂದಣಗಾರ, ಎಂ.ಎ. ... (೧೯೪೪ - ೧೯೬೫)
೧೧. ಪ್ರೊ. ಸ. ಸ. ಮಾಳವಾಡ, ಎಂ.ಎ. ... (೧೯೪೪ - ೧೯೮೭)
೧೨. ಪ್ರೊ. ಎಂ. ಮರಿಯಪ್ಪಭಟ್ಟ, ಎಂ.ಎ., ಎಲ್.ಟಿ. ... (೧೯೫೬ - ೧೯೮೦)
೧೩. ಡಾ || ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ. ... (೧೯೬೧ - )
೧೪. ಪ್ರೊ. ಡಿ. ಜವರೇಗೌಡ, ಎಂ.ಎ. ... (೧೯೬೩ - ೧೯೮೨)
೧೫. ಶ್ರೀ ಬಸವರಾಜ ಕಟ್ಟೀಮನಿ, ಎಂ.ಎಲ್.ಸಿ ... (೧೯೬೯ - ೧೯೮೧)
೧೬. ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ. ... (೧೯೬೯ - )
೧೭. ಡಾ || ಜಿ.ಎಸ್. ಗಾಯಿ, ಪಿಎಚ್.ಡಿ. ... (೧೯೭೦ - ೧೯೯೫)
೧೮. ಡಾ || ಎ. ಎನ್.ಉಪಾಧ್ಯೆ, ಎಂ.ಎ., ಡಿ.ಲಿಟ್. ... (೧೯೭೧ - ೧೯೭೫)
೧೯. ಡಾ || ಹಾ. ಮಾ. ನಾಯಕ, ಎಂ.ಎ., ಪಿಎಚ್.ಡಿ. ... (೧೯೭೨ - )
೨೦. ಡಾ || ಜಿ. ಎಸ್. ಶಿವರುದ್ರಪ್ಪ, ಎಂ.ಎ., ಪಿಎಚ್.ಡಿ. ... (೧೯೭೨ - )
೨೧. ಡಾ || ಟಿ. ವಿ. ವೆಂಕಟಾಚಲಶಾಸ್ತ್ರೀ, ಎಂ.ಎ., ಪಿಎಚ್.ಡಿ. ... (೧೯೭೬- )
೨೨. ಡಾ || ಎಂ. ಚಿದಾನಂದಮೂರ್ತಿ, ಎಂ.ಎ., ಪಿಎಚ್.ಡಿ. ... (೧೯೭೬ - )
೨೩. ಶ್ರೀ ಎನ್. ಬಸವಾರಾಧ್ಯ, ಎಂ.ಎ. ... (೧೯೮೨ - )
೨೪. ಡಾ || ಕೆ. ವಿ. ರಮೇಶ್, ಎಂ.ಎ., ಪಿಎಚ್.ಡಿ. ... (೧೯೮೨ - )
೨೫. ಡಾ || ಕೆ. ಕೃಷ್ಣಮೂರ್ತಿ, ಎಂ.ಎ., ಪಿಎಚ್.ಡಿ. ... (೧೯೮೨ - )

## ಮೈಸೂರು ಸರ್ಕಾರದ ಪ್ರತಿನಿಧಿಗಳು

೧. ರಾಜಸೇವಾಸಕ್ತ ಡಿ.ಸಿ. ಸುಬ್ಬರಾಯಪ್ಪ, ಬಿ.ಎ. ... (೧೯೪೯ - ೧೯೬೮)
೨. ಪದ್ಮಶ್ರೀ ಪಂಡಿತರತ್ನಂ ಬಿ. ಶಿವಮೂರ್ತಿಶಾಸ್ತ್ರೀ ... (೧೯೪೯ - ೧೯೭೦)
೩. ಡಾ || ಸಿದ್ಧಯ್ಯಪುರಾಣಿಕ, ಐ.ಎ.ಎಸ್. ... (೧೯೬೧ - ೧೯೯೪)
೪. ಶ್ರೀ ವಿ. ಬಿ. ನಾಯಕ. ಎಂ.ಎ., ಎಲ್ಎಲ್.ಬಿ. ... (೧೯೬೬ - ೧೯೮೨)

## ಉಪಸಂಪಾದಕರು

೧. ಶ್ರೀ ಎನ್. ಬಸವಾರಾಧ್ಯ, ಎಂ.ಎ. ... (೧೯೫೬ - ೧೯೬೩)
೨. ಶ್ರೀ ಎಚ್. ದೇಶಿಕಾಚಾರ್, ಎಂ.ಎ. ... (೧೯೫೫ - ೧೯೬೬)
೩. ಶ್ರೀ ಹೀ. ಚಿ. ಶಾಂತವೀರಯ್ಯ, ಎಂ. ಎ., ಬಿ. ಎಡ್. ... (೧೯೬೭ - ೧೯೯೨)
೪. ಶ್ರೀ ಆರ್.ವಿ. ಕುಲಕರ್ಣಿ, ಎಂ.ಎ., ಬಿ.ಎಡ್. ... (೧೯೬೮ - ೧೯೮೦)

| | | | |
|---|---|---|---|
| ೫. | ಶ್ರೀ ಟಿ.ಆರ್. ಮಹಾದೇವಯ್ಯ, ಎಂ.ಎ. | ... | (೧೯೬೯ - ೧೯೯೨) |
| ೬. | ಶ್ರೀಮತಿ ಮಂಜುಳಾರಾವ್, ಎಂ.ಎ. | ... | (೧೯೯೩ - ೧೯೯೪) |
| ೭. | ಶ್ರೀಮತಿ ಎಂ.ಎನ್. ಜಾನಕಮ್ಮ, ಎಂ.ಎ. | ... | (೧೯೯೩ - ೧೯೯೪) |
| ೮. | ಶ್ರೀಮತಿ ಉಮಾದೇವಿ, ಎಂ.ಎ. | ... | (೧೯೯೩ - ) |
| ೯. | ಶ್ರೀಮತಿ ವಿಜಯಲಕ್ಷ್ಮಿ, ಎಂ.ಎ. | ... | (೧೯೯೫ - ) |
| ೧೦. | ಶ್ರೀಮತಿ ಎಂ.ಎಸ್.ಸುಜಯ, ಎಂ.ಎ. | ... | (೧೯೯೫ - ) |

### ಸಹಾಯಕ ಸಂಪಾದಕರು

| | | | |
|---|---|---|---|
| ೧. | ಶ್ರೀ ಎನ್. ಬಸವಾರಾಧ್ಯ, ಎಂ.ಎ. | ... | (೧೯೫೫ - ೧೯೫೬) |
| ೨. | ಪಂಡಿತ ಎಚ್.ದೇಶಿಕಾಚಾರ್ | ... | (೧೯೫೫ - ೧೯೬೬) |
| ೩. | ಶ್ರೀ ಜಿ. ಚಂದ್ರಶೇಖರಐತಾಳ, ಎಂ.ಎ. | ... | (೧೯೬೨ - ೧೯೬೩) |
| ೪. | ಶ್ರೀ ಹೀ.ಚಿ. ಶಾಂತವೀರಯ್ಯ, ಎಂ.ಎ., ಬಿ.ಎಡ್. | ... | (೧೯೬೨ - ೧೯೬೭) |
| ೫. | ಶ್ರೀ ಎಚ್.ಎ. ಕುಲಕರ್ಣಿ, ಎಂ.ಎ. | ... | (೧೯೬೨ - ೧೯೬೩) |
| ೬. | ಶ್ರೀ ಸಿ. ಓಂಕಾರಪ್ಪ, ಎಂ.ಎ. | ... | (೧೯೬೩ - ೧೯೬೫) |
| ೭. | ಶ್ರೀ ಕೆ. ರಾಘವೇಂದ್ರರಾವ್, ಎಂ.ಎ. | ... | (೧೯೬೪ - ೧೯೬೫) |
| ೮. | ಶ್ರೀ ಜಿ. ಜಿ.ಮಂಜುನಾಥನ್, ಎಂ.ಎ. | ... | (೧೯೬೪ - ೧೯೬೭) |
| ೯. | ಶ್ರೀ ಎಚ್. ಎಂ. ಪರಮೇಶ್ವರಯ್ಯ, ಎಂ.ಎ. | ... | (೧೯೬೫ - ೧೯೬೬) |
| ೧೦. | ಶ್ರೀಮತಿ ಎಂ. ಎನ್. ಲೀಲಾವತಿ, ಎಂ.ಎ. | ... | (೧೯೬೭ - ೧೯೬೯) |
| ೧೧. | ಶ್ರೀ ಆರ್. ವಿ. ಕುಲಕರ್ಣಿ, ಎಂ.ಎ. | ... | (೧೯೬೭ - ೧೯೬೮) |
| ೧೨. | ಶ್ರೀ ಪಿ. ರಾಮಕೃಷ್ಣಭಟ್ಟ, ಎಂ.ಎ. | ... | (೧೯೬೭ - ೧೯೭೩) |
| ೧೩. | ಶ್ರೀ ಕೆ. ಸುಬ್ಬುಕೃಷ್ಣಶಾಸ್ತ್ರೀ | ... | (೧೯೬೭ - ೧೯೬೭) |
| ೧೪. | ವಿದ್ವಾನ್ ಹ.ವೆಂ. ನಾರಾಯಣಶಾಸ್ತ್ರೀ | ... | (೧೯೬೭ - ೧೯೮೦) |
| ೧೫. | ಶ್ರೀಮತಿ ಉಷಾಅಗ್ನಿಹೋತ್ರಿ, ಎಂ.ಎ., ಬಿ.ಎಡ್. | ... | (೧೯೬೭ - ೧೯೭೫) |
| ೧೬. | ಶ್ರೀ ಟಿ. ಆರ್. ಮಹಾದೇವಯ್ಯ, ಎಂ.ಎ. | ... | (೧೯೬೭ - ೧೯೬೮) |
| ೧೭. | ಶ್ರೀ ಟಿ. ಎಸ್. ಕೃಷ್ಣಮೂರ್ತಿ, ಎಂ.ಎ., ಬಿ.ಎಡ್. | ... | (೧೯೬೯ - ೧೯೭೨) |
| ೧೮. | ಶ್ರೀ ಪಿ. ಪದ್ಮನಾಭ ಭಟ್ಟ, ಎಂ.ಎ., ಬಿ.ಟಿ. | ... | (೧೯೭೦ - ೧೯೭೨) |
| ೧೯. | ಶ್ರೀಮತಿ ಮಂಜುಳಾರಾವ್, ಎಂ.ಎ. | ... | (೧೯೭೦ - ೧೯೯೩) |
| ೨೦. | ಶ್ರೀ ಎಚ್. ವಿ. ಶೇಷಾಚಾರ್, ಎಂ.ಎ. | ... | (೧೯೭೦ - ೧೯೭೨) |
| ೨೧. | ಶ್ರೀಮತಿ ಎಂ.ಎನ್.ಜಾನಕಮ್ಮ, ಎಂ.ಎ. | ... | (೧೯೭೦ - ೧೯೯೩) |
| ೨೨. | ಶ್ರೀ ರಾಘವೇಂದ್ರಾಚಾರ್ಯ ಹಡಗಲಿ, ಎಂ.ಎ. | ... | (೧೯೭೦ - ೧೯೭೨) |
| ೨೩. | ಶ್ರೀಮತಿ ಉಷಾಕುಮಾರಿ, ಎಂ.ಎ. | ... | (೧೯೭೦ - ೧೯೭೨) |
| ೨೪. | ಶ್ರೀ ವಸಂತರಾವ್ ಕಟ್ಟಿ, ಎಂ.ಎ., ಬಿ. ಎಡ್. | ... | (೧೯೭೧ - ೧೯೭೨) |
| ೨೫. | ಶ್ರೀಮತಿ ಎಸ್. ವಿಮಲ, ಎಂ.ಎ. | ... | (೧೯೭೨ - ೧೯೭೪) |
| ೨೬. | ಶ್ರೀಮತಿ ಬಿ. ಶಕುಂತಲ, ಎಂ.ಎ. | ... | (೧೯೭೨ - ೧೯೮೨) |
| ೨೭. | ಶ್ರೀಮತಿ ಉಮಾದೇವಿ, ಎಂ.ಎ. | ... | (೧೯೭೨ - ೧೯೯೩) |
| ೨೮. | ಶ್ರೀಮತಿ ವಿಜಯಲಕ್ಷ್ಮಿ, ಎಂ.ಎ. | ... | (೧೯೭೨ - ೧೯೯೫) |
| ೨೯. | ಶ್ರೀಮತಿ ಎಂ. ಎಸ್. ಸುಜಯ, ಎಂ.ಎ. | ... | (೧೯೭೨ - ೧೯೯೫) |
| ೩೦. | ಶ್ರೀ ಟಿ. ತಿಪ್ಪಯ್ಯ, ಎಂ.ಎ. | ... | (೧೯೭೨ - ೧೯೭೫) |
| ೩೧. | ಶ್ರೀ ಬಿ. ಆರ್. ಬಸವರಾಜ, ಎಂ.ಎ. | ... | (೧೯೭೯ - ) |
| ೩೨. | ಶ್ರೀ ಮಹೇಂದ್ರ ಎಂ.ಎ. | ... | (೧೯೮೧ - ೧೯೮೭) |

### ಪ್ರತಿಕಾರರು

೧. ಆಸ್ಥಾನ ವಿದ್ವಾನ್ ಎಂ.ಆರ್. ವರದಾಚಾರ್ ... (೧೯೬೦ - ೧೯೬೮)
೨. ಶ್ರೀ ಎನ್.ಆರ್. ರಂಗಸ್ವಾಮಿ ಅಯ್ಯಂಗಾರ್ ... (೧೯೬೦ - ೧೯೭೪)
೩. ಶ್ರೀಮತಿ ಬಿ. ಎನ್. ಮಾಲತಿ, ಎಂ.ಎ. ... (೧೯೭೫ - ೧೯೭೮)

### ಕರಡಚ್ಚು ತಿದ್ದಿದವರು

ವಿದ್ವಾನ್ ಕೆ. ವೆಂಕಟೇಶಯ್ಯ ... (೧೯೬೦ - ೧೯೭೦)

### ಪಟ್ಟಿಕೆ ವಿಂಗಡಣಕಾರರು

೧. ಶ್ರೀ ಕೆ. ರಾಮಣ್ಣ ... (೧೯೬೦ - ೧೯೭೫)
೨. ಶ್ರೀ ಎನ್.ಎಸ್. ರಾಮಸ್ವಾಮಿ ಅಯ್ಯರ್, ಎಂ.ಎ., ಬಿ.ಟಿ. ... (೧೯೭೬ - ೧೯೮೦)

### ಬೆರಳಚ್ಚುಗಾರರು

೧. ಶ್ರೀ ಜಿ. ದಿವಾಕರಯ್ಯ ... (೧೯೬೩ - ೧೯೬೪)
೨. ಶ್ರೀ ಎಸ್. ಜಿ. ರಾಮಚಂದ್ರಶರ್ಮ ... (೧೯೬೪ - ೧೯೬೫)
೩. ಶ್ರೀ ಅ. ರ. ಆನಂದ್ ... (೧೯೬೫ - ೧೯೬೭)
೪. ಶ್ರೀ ಎನ್. ಲಕ್ಷ್ಮೀಪತಿ ... (೧೯೬೫ - ೧೯೬೮)
೫. ಶ್ರೀಮತಿ ಎಂ. ಕೆ. ಉಷಾದೇವಿ ... (೧೯೬೮ - ೧೯೬೯)
೬. ಶ್ರೀಮತಿ ಆರ್. ರಮಾದೇವಿ ... (೧೯೬೮ - ೧೯೬೮)
೭. ಶ್ರೀಮತಿ ಎ. ನೇತ್ರಾವತಿಬಾಯಿ ... (೧೯೬೯ - )
೮. ಶ್ರೀಮತಿ ಕೆ. ರಮಾ ... (೧೯೬೯ - ೧೯೭೧)
೯. ಶ್ರೀಮತಿ ಸಿ.ಎನ್. ವಿಜಯಲಕ್ಷ್ಮಿ ... (೧೯೭೧ - )

### ಸಹಾಯಕರು

೧. ಶ್ರೀ ಕೆ. ಅನಂತರಾಮಯ್ಯ ... (೧೯೫೮ - ೧೯೬೫)
೨. ಶ್ರೀ ಬಸಪ್ಪ ... (೧೯೬೪ - ೧೯೬೭)
೩. ಶ್ರೀ ಎಂ. ಮುನಿರಾಮ ... (೧೯೬೪ - ೧೯೬೬)
೪. ಶ್ರೀ ರಾಮಯ್ಯ ... (೧೯೬೪ - ೧೯೬೬)
೫. ಶ್ರೀ ಜಿ. ಸಿದ್ದಯ್ಯ ... (೧೯೬೫ - ೧೯೬೫)
೬. ಶ್ರೀ ಮಾದಪ್ಪ ... (೧೯೬೫ - ೧೯೮೭)
೭. ಶ್ರೀ ರಾಘವೇಂದ್ರಪ್ರಸಾದ್ ... (೧೯೬೬ - )
೮. ಶ್ರೀ ವಿ. ಜಯರಾಮಯ್ಯ ... (೧೯೬೭ - ೧೯೬೭ )
೯. ಶ್ರೀ ಶಂಕರಪ್ಪ ... (೧೯೬೮ - )
೧೦. ಶ್ರೀ ರೇವಯ್ಯ ... (೧೯೬೮ - )

## ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರುಗಳು ( ಅಧಿಕಾರ ಪ್ರಯುಕ್ತ )

( ೧೯೪೩ ರಿಂದ ೧೯೯೫ )

೧. ಶ್ರೀ ಒಂಟಮುರಿಯ ಶ್ರೀಮಂತ ಬಸವಪ್ರಭುರಾಜಾ ಲಖಮನಗೌಡ ಸರದೇಸಾಯಿ ಬಹದ್ದೂರ್ ... (೧೯೪೧ - ೧೯೪೬)
೨. ಜಸ್ಟಿಸ್ ಲೋಕೂರ್ ನಾರಾಯಣರಾವ್ ಸ್ವಾಮಿರಾವ್ ... (೧೯೪೭ - ೧೯೪೭)
೩. ಶ್ರೀ ತಿರುಮಲೆ ತಾತಾಚಾರ್ಯಶರ್ಮ ... (೧೯೪೭ - ೧೯೪೯)
೪. ಶ್ರೀ ಉತ್ತಂಗಿ ಚನ್ನಪ್ಪ ... (೧೯೪೯ - ೧೯೫೦)
೫. ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿ ... (೧೯೫೦ - ೧೯೫೩)
೬. ಶ್ರೀ ಎ.ಎನ್. ಮೂರ್ತಿರಾವ್ ... (೧೯೫೩ - ೧೯೫೪)

| | | | |
|---|---|---|---|
| ೭. | ಪದ್ಮಶ್ರೀ ಪಂಡಿತರತ್ನಂ ಬಿ. ಶಿವಮೂರ್ತಿಶಾಸ್ತ್ರೀ | ... | (೧೯೫೪ - ೧೯೬೪) |
| ೮. | ಪ್ರೊ. ಜಿ. ವೆಂಕಟಸುಬ್ಬಯ್ಯ | ... | (೧೯೬೪ - ೧೯೬೯) |
| ೯. | ಶ್ರೀ ಜಿ. ನಾರಾಯಣ | .. | (೧೯೬೯ - ೧೯೭೮) |
| ೧೦. | ಶ್ರೀ ಹಂಪ. ನಾಗರಾಜಯ್ಯ | ... | (೧೯೭೮ - ೧೯೮೬) |
| ೧೧. | ಶ್ರೀ ಹೆಚ್. ಬಿ. ಜ್ವಾಲನಯ್ಯ | ... | (೧೯೮೬ - ೧೯೮೭) |
| ೧೨. | ಶ್ರೀ ಅ. ರ. ಚಂದ್ರಹಾಸಗುಪ್ತ<br>(ಸರ್ಕಾರದ ಆಡಳಿತಾಧಿಕಾರಿಗಳು) | ... | (೧೯೮೭ - ೧೯೮೮) |
| ೧೩. | ಶ್ರೀ ಐ. ಎಂ. ವಿಠ್ಠಲಮೂರ್ತಿ<br>(ಸರ್ಕಾರದ ಆಡಳಿತಾಧಿಕಾರಿಗಳು) | ... | (೧೯೮೮ - ೧೯೮೯) |
| ೧೪. | ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ | ... | (೧೯೮೯ - ೧೯೯೨) |
| ೧೫. | ಶ್ರೀ ಗೊ.ರು. ಚನ್ನಬಸಪ್ಪ | ... | (೧೯೯೨ - ೧೯೯೫) |
| ೧೬. | ಡಾ॥ ಸಾ.ಶಿ. ಮರುಳಯ್ಯ | ... | (೧೯೯೫ - ) |

## ಪರಿಷತ್ತಿನ ಉಪಾಧ್ಯಕ್ಷರು ( ಅಧಿಕಾರ ಪ್ರಯುಕ್ತ ).

| | | |
|---|---|---|
| ರಾಜಸೇವಾಸಕ್ತ ಮಾಸ್ತಿ ವೆಂಕಟೇಶಅಯ್ಯಂಗಾರ್ | ... | (೧೯೪೩ - ೧೯೪೭) |

## ಪರಿಷತ್ತಿನ ಗೌರವ ಕಾರ್ಯದರ್ಶಿಗಳು ( ಅಧಿಕಾರ ಪ್ರಯುಕ್ತ )

( ೧೯೪೩ ರಿಂದ ೧೯೯೫ )

ಶ್ರೀಯುತರಾದ:

| | | | |
|---|---|---|---|
| ೧. | ಬಿ. ವೆಂಕೋಬರಾವ್ | ... | (೧೯೪೩ - ೧೯೪೪) |
| ೨. | ಕ. ವೆಂ. ರಾಘವಾಚಾರ್ | ... | (೧೯೪೪ - ೧೯೪೫) |
| ೩. | ಕೆ. ರೇವಣ್ಣ | ... | (೧೯೪೫ - ೧೯೪೬) |
| ೪. | ಕ.ವೆಂ. ರಾಘವಾಚಾರ್ | ... | (೧೯೪೬ - ೧೯೪೭) |
| ೫. | ಕೆ. ಗೋಪಾಲಕೃಷ್ಣರಾವ್ | ... | (೧೯೪೭ - ೧೯೪೮) |
| ೬. | ಸಿ.ಕೆ. ನಾಗರಾಜರಾವ್ | ... | (೧೯೪೭ - ೧೯೪೭) |
| ೭. | ಎಲ್. ಎಸ್. ಶೇಷಗಿರಿರಾವ್ | ... | (೧೯೪೭ - ೧೯೫೦) |
| ೮. | ಸಿದ್ಧವನಹಳ್ಳಿ ಕೃಷ್ಣಶರ್ಮ | ... | (೧೯೪೯ - ೧೯೫೦) |
| ೯. | ಎಂ.ಎ. ನರಸಿಂಹಾಚಾರ್ | ... | (೧೯೫೦ - ೧೯೫೦) |
| ೧೦. | ಕಾ. ಸ. ಧರಣೇಂದ್ರಯ್ಯ | ... | (೧೯೫೦ - ೧೯೫೨) |
| ೧೧. | ಸಿ.ಕೆ. ನಾಗರಾಜರಾವ್ | ... | (೧೯೫೨ - ೧೯೫೩) |
| ೧೨. | ಎ.ಎನ್. ಮೂರ್ತಿರಾವ್ | ... | (೧೯೫೩ - ೧೯೫೪) |
| ೧೩. | ರಾಜಸೇವಾಸಕ್ತ ಡಿ. ಸಿ. ಸುಬ್ಬರಾಯಪ್ಪ | ... | (೧೯೫೪ - ೧೯೫೬) |
| ೧೪. | ಜಿ. ವೆಂಕಟಸುಬ್ಬಯ್ಯ | ... | (೧೯೫೪ - ೧೯೫೬) |
| ೧೫. | ಡಿ.ಆರ್. ರಾಮಯ್ಯ | ... | (೧೯೫೬ - ೧೯೫೮) |
| ೧೬. | ಸಿ.ಕೆ. ನಾಗರಾಜರಾವ್ | ... | (೧೯೫೬ - ೧೯೫೬) |
| ೧೭. | ಕೆ. ಗೋಪಾಲಕೃಷ್ಣರಾವ್ | ... | (೧೯೫೬ - ೧೯೬೧) |
| ೧೮. | ಜಿ. ಶ್ರೀನಿವಾಸನ್ | ... | (೧೯೫೮ - ೧೯೫೯) |
| ೧೯. | ಡಿ. ಆರ್. ರಾಮಯ್ಯ | ... | (೧೯೫೯ - ೧೯೬೦) |
| ೨೦. | ಅನ್ನದಾನಯ್ಯ ಪುರಾಣಿಕ | ... | (೧೯೬೦ - ೧೯೬೩) |
| ೨೧. | ಕೆ. ಎಂ. ಕೃಷ್ಣರಾವ್ | ... | (೧೯೬೧ - ೧೯೬೪) |
| ೨೨. | ಎಸ್. ಶಂಕರಪ್ಪ | ... | (೧೯೬೩ - ೧೯೬೪) |
| ೨೩. | ಕೆ. ಎಸ್. ನಿರಂಜನ | ... | (೧೯೬೪ - ೧೯೬೫) |

| | | | |
|---|---|---|---|
| ೨೪. | ಹೆಚ್. ಆರ್. ದಾಸೇಗೌಡ | ... | (೧೯೬೪ - ೧೯೬೫) |
| ೨೫. | ಜಿ. ಕೆ. ಗುಂಡೂರಾವ್ | ... | (೧೯೬೫ - ೧೯೬೫) |
| ೨೬. | ಎಂ. ಎಚ್. ಕೃಷ್ಣಯ್ಯ | ... | (೧೯೬೫ - ೧೯೬೫) |
| ೨೭. | ಬಿ. ಎಸ್. ಶಾಸ್ತ್ರೀ | ... | (೧೯೬೫ - ೧೯೬೬) |
| ೨೮. | ವೆಂಕಟೇಶ ಸಾಂಗಲಿ | ... | (೧೯೬೬ - ೧೯೬೭) |
| ೨೯. | ಹಂಪ. ನಾಗರಾಜಯ್ಯ | ... | (೧೯೬೬ - ೧೯೬೯) |
| ೩೦. | ಅ. ರಾ. ಮಿತ್ರ | ... | (೧೯೬೯ - ೧೯೭೦) |
| ೩೧. | ಹಂಪ. ನಾಗರಾಜಯ್ಯ | ... | (೧೯೬೯ - ೧೯೭೪) |
| ೩೨. | ವೆಂಕಟೇಶ ಸಾಂಗಲಿ | ... | (೧೯೭೦ - ೧೯೭೫) |
| ೩೩. | ಜಿ.ಕೆ. ಗುಂಡೂರಾವ್ | ... | (೧೯೭೪ - ೧೯೭೮) |
| ೩೪. | ಡಿ. ಲಿಂಗಯ್ಯ | ... | (೧೯೭೮ - ೧೯೮೨) |
| ೩೫. | ಜಿ. ಅಶ್ವತ್ಥನಾರಾಯಣ | ... | (೧೯೭೮ - ೧೯೭೯) |
| ೩೬. | ಲಕ್ಷ್ಮಣ ತೆಲಗಾವಿ | ... | (೧೯೭೯ - ೧೯೮೬) |
| ೩೭. | ಹೊ.ವೆ. ನಾರಾಯಣಸ್ವಾಮಿ | ... | (೧೯೮೨ - ೧೯೮೪) |
| ೩೮. | ಚಂದ್ರಕಾಂತ ಪಡೆಸೂರ | ... | (೧೯೮೪ - ೧೯೮೭) |
| ೩೯. | ಜಿ. ವಿ. ಶಿವಸ್ವಾಮಿ | ... | (೧೯೮೬ - ೧೯೮೭) |
| ೪೦. | ಡಾ॥ ಸಾ. ಶಿ. ಮರುಳಯ್ಯ | ... | (೧೯೮೯ - ೧೯೮೯) |
| ೪೧. | ಟಿ. ಶ್ರೀನಿವಾಸರಾಜು | ... | (೧೯೮೯ - ೧೯೯೦) |
| ೪೨. | ಗೊ.ರು. ಚನ್ನಬಸಪ್ಪ | ... | (೧೯೮೯ - ೧೯೯೨) |
| ೪೩. | ಟಿ. ರಾಮಯ್ಯ | ... | (೧೯೯೦ - ೧೯೯೨) |
| ೪೪. | ಜಿ. ಚನ್ನವೀರಸ್ವಾಮಿ | ... | (೧೯೯೨ - ೧೯೯೩) |
| ೪೫. | ಪ್ರೊ. ಎಸ್. ಶ್ರೀನಿವಾಸನ್ | ... | (೧೯೯೨ - ೧೯೯೫) |
| ೪೬. | ಪ್ರೊ. ಎಂ. ಜಿ. ನಾಗರಾಜ್ | ... | (೧೯೯೩ - ೧೯೯೫) |
| ೪೭. | ಡಾ॥ ನರಹಳ್ಳಿ ಬಾಲಸುಬ್ರಹ್ಮಣ್ಯ | ... | (೧೯೯೫ -) |
| ೪೮. | ಕೆ.ಆರ್. ಇಕ್ಬಾಲ್ ಅಹಮದ್ | ... | (೧೯೯೫ -) |

## ಪರಿಷತ್ತಿನ ಗೌರವ ಕೋಶಾಧಿಕಾರಿಗಳು ( ಅಧಿಕಾರ ಪ್ರಯುಕ್ತ )

( ೧೯೪೩ ರಿಂದ ೧೯೯೫ )

| | | | |
|---|---|---|---|
| ೧. | ರಾಜಸೇವಾಸಕ್ತ ಡಿ.ಸಿ. ಸುಬ್ಬರಾಯಪ್ಪ | ... | (೧೯೪೦ - ೧೯೪೪) |
| ೨. | ಪ್ರೊ.ಜಿ.ಪಿ. ರಾಜರತ್ನಂ | ... | (೧೯೪೫ - ೧೯೪೫) |
| ೩. | ಶ್ರೀ ಕೆ. ರೇವಣ್ಣ | ... | (೧೯೪೬ - ೧೯೪೭) |
| ೪. | ಶ್ರೀ ಎಂ. ವಾಸುದೇವಮೂರ್ತಿ | ... | (೧೯೪೭ - ೧೯೪೯) |
| ೫. | ಶ್ರೀ ಸಿ.ಕೆ. ನಾಗರಾಜರಾವ್ | ... | (೧೯೪೯ - ೧೯೫೨) |
| ೬. | ಶ್ರೀ ಎಚ್.ಎಸ್. ಸೀತಾರಾಂ | ... | (೧೯೫೨ - ೧೯೫೩) |
| ೭. | ರಾಜಸೇವಾಸಕ್ತ ಡಿ.ಸಿ. ಸುಬ್ಬರಾಯಪ್ಪ | ... | (೧೯೫೩ - ೧೯೫೪) |
| ೮. | ಶ್ರೀ ಎನ್. ವರದರಾಜನ್ | ... | (೧೯೫೪ - ೧೯೫೬) |
| ೯. | ಶ್ರೀ ಎಚ್. ಎಸ್. ಸೀತಾರಾಂ | ... | (೧೯೫೬ - ೧೯೫೭) |
| ೧೦. | ಶ್ರೀ ಜಿ. ಶ್ರೀನಿವಾಸನ್ | ... | (೧೯೫೭ - ೧೯೫೭) |
| ೧೧. | ಶ್ರೀ ಎಚ್. ಎಸ್. ಸೀತಾರಾಂ | ... | (೧೯೫೭ - ೧೯೫೯) |
| ೧೨. | ಶ್ರೀ.ಜಿ. ಶ್ರೀನಿವಾಸನ್ | ... | (೧೯೫೯ - ೧೯೬೦) |
| ೧೩. | ಶ್ರೀ ಆರ್. ಅನಂತರಾಮನ್ | ... | (೧೯೬೩ - ೧೯೬೪) |

| | | | |
|---|---|---|---|
| ೧೪. | ಶ್ರೀ ಎ. ಸಿ. ಬೈರಪ್ಪ | ... | (೧೯೬೪ - ೧೯೬೬) |
| ೧೫. | ಶ್ರೀ ಎಸ್. ವರದರಾಜನ್ | ... | (೧೯೬೬ - ೧೯೭೭) |
| ೧೬. | ಶ್ರೀಮತಿ ಎಸ್. ಪ್ರಮಿಳಾ | ... | (೧೯೭೭ - ೧೯೭೮) |
| ೧೭. | ಶ್ರೀ ಎಂ. ಪಿ. ದೇವರಾಜ್ | ... | (೧೯೭೮ - ೧೯೮೭) |
| ೧೮. | ಶ್ರೀ ಎಸ್. ವಿ. ಶ್ರೀನಿವಾಸರಾವ್ | ... | (೧೯೮೯ - ೧೯೯೨) |
| ೧೯. | ಪ್ರೊ. ಹೆಚ್. ಆರ್. ದಾಸೇಗೌಡ | ... | (೧೯೯೨ - ೧೯೯೫) |
| ೨೦. | ಶ್ರೀ ಎಂ. ಶ್ರೀರಾಮಯ್ಯ | ... | (೧೯೯೫ -) |

### ೧. ಗ್ರಂಥಗಳಿಂದ ಶಬ್ದಗಳನ್ನೂ ಪ್ರಯೋಗಗಳನ್ನೂ ಸಂಗ್ರಹಿಸಿಕೊಟ್ಟ ಸಹಾಯಕರು

ಶ್ರೀಯುತರಾದ:

೧. ಆರ್. ಎಸ್. ರಾಮರಾಯರು
೨. ಜಿ. ವರದರಾಜರಾಯರು
೩. ಡಿ. ಜವರೇಗೌಡರು
೪. ಎನ್. ಪ್ರಹ್ಲಾದರಾಯರು
೫. ಕೆ.ಎಸ್. ಕೃಷ್ಣಮೂರ್ತಿಯವರು
೬. ಟಿ.ಎಸ್. ಶಾಮರಾಯರು
೭. ಕೆ.ಜಿ. ಕುಂದಣಗಾರರು
೮. ಕುರುಗೋಡಪ್ಪನವರು
೯. ಐರಣಿಯವರು
೧೦. ಎಸ್. ಗುಂಡಪ್ಪನವರು
೧೧. ಡಿ. ರೇಣುಕಾಚಾರ್ಯರು
೧೨. ಎಚ್. ಶೇಷಯ್ಯಂಗಾರ್ಯರು
೧೩. ಎಲ್.ಆರ್. ಹೆಗ್ಗಡೆಯವರು
೧೪. ರಂ. ಶ್ರೀ. ಮುಗಳಿಯವರು
೧೫. ಚಿ.ನಾ. ವಿಶ್ವನಾಥಶಾಸ್ತ್ರೀ ಅವರು
೧೬. ಎಂ. ವಿ. ಗೋವಿಂದಯ್ಯನವರು
೧೭. ಎಂ. ಹನುಮಂತರಾಯರು
೧೮. ಟಿ.ವಿ. ಕೃಷ್ಣಪ್ಪನವರು
೧೯. ಎಚ್. ದೇವೀರಪ್ಪನವರು
೨೦. ಎಚ್.ಜಿ. ಆರ್. ಅಡಿಗ ಅವರು
೨೧. ಎಸ್.ಬಿ. ನಾಯಕ ಅವರು
೨೨. ತೀ.ನಂ. ಶ್ರೀಕಂಠಯ್ಯನವರು
೨೩. ಡಿ.ಎಲ್.ನರಸಿಂಹಾಚಾರ್ಯರು
೨೪. ಎಲ್. ಗುಂಡಪ್ಪನವರು
೨೫. ಎಂ. ಆರ್.ವರದಾಚಾರ್ಯರು
೨೬. ಎನ್.ಕೆ. ನರಸಿಂಹಮೂರ್ತಿಯವರು
೨೭. ಎನ್. ಬಸವಾರಾಧ್ಯರು
೨೮. ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು
೨೯. ಎಚ್. ದೇಶಿಕಾಚಾರ್ಯರು
೩೦. ಎಸ್.ವಿ. ವೆಂಕಟನಾರಾಯಣಶಾಸ್ತ್ರೀ ಅವರು
೩೧. ಟಿ.ಎಸ್.ರಘುನಾಥಾಚಾರ್ಯರು
೩೨. ಜಿ. ವೆಂಕಟಸುಬ್ಬಯ್ಯನವರು
೩೩. ಡಿ.ವಿ. ಶೇಷಗಿರಿರಾಯರು
೩೪. ಎಸ್. ಬಸಪ್ಪನವರು
೩೫. ಎಸ್. ಎನ್. ಕೃಷ್ಣಜೋಯಿಸ್ ಅವರು
೩೬. ಎನ್. ಅನಂತರಂಗಾಚಾರ್ಯರು
೩೭. ರಂಗನಾಥಾಚಾರ್ಯರು
೩೮. ಎ.ಕೆ. ಪುಟ್ಟರಾಮು ಅವರು
೩೯. ಕೆ. ಹನುಮಂತರಾಯರು
೪೦. ಆರ್.ಎಲ್. ಅನಂತರಾಮಯ್ಯನವರು
೪೧. ಕೆ. ಎಂ. ಕೃಷ್ಣರಾಯರು
೪೨. ಕೆ. ಶಿವರಾಮ ಐತಾಳರು
೪೩. ವಾ.ದ. ಬೇಂದ್ರೆ ಅವರು
೪೪. ಎಂ. ಚಂದ್ರಶೇಖರ ಅವರು
೪೫. ಮಿರ್ಜಿ ಅಣ್ಣಾರಾಯರು
೪೬. ಜಿ. ಚಂದ್ರಶೇಖರ ಐತಾಳರು
೪೭. ಚಂದ್ರಶೇಖರ ಕಂಬಾರ ಅವರು
೪೮. ಹೀ.ಚಿ.ಶಾಂತವೀರಯ್ಯನವರು
೪೯. ಎಚ್. ಎ. ಕುಲಕರ್ಣಿ ಅವರು
೫೦. ಅ. ರಾ. ಮಿತ್ರ ಅವರು
೫೧. ಟಿ. ಆರ್. ಮಹಾದೇವಯ್ಯ ಅವರು
೫೨. ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ ಅವರು
೫೩. ಕೆ. ವೆಂಕಟೇಶಯ್ಯ ಅವರು
೫೪. ಎಸ್. ಕೃಷ್ಣಭಟ್ಟ ಅವರು
೫೫. ಸಿ. ಓಂಕಾರಪ್ಪ ಅವರು
೫೬. ಟಿ. ಕೇಶವಭಟ್ಟ ಅವರು
೫೭. ಕೆ. ರಾಘವೇಂದ್ರರಾವ್ ಅವರು
೫೮. ಜಿ.ಜಿ. ಮಂಜುನಾಥನ್ ಅವರು

೫೯. ಬಿ. ಎಸ್. ಸಣ್ಣಯ್ಯ ಅವರು
೬೦. ಎಚ್. ಎಂ. ಪರಮೇಶ್ವರಯ್ಯ ಅವರು
೬೧. ಡಿ.ಎನ್. ರಾಮು ಅವರು
೬೨. ಆರ್. ಎಸ್. ನಾರಾಯಣಾಚಾರ್ ಅವರು
೬೩. ಎಚ್. ಎಸ್. ಹರಿಶಂಕರ್ ಅವರು
೬೪. ಕೆ. ಆರ್. ಶೇಷಗಿರಿ ಅವರು
೬೫. ಕೆ. ಎಸ್. ಮಧುಸೂದನ ಅವರು
೬೬. ಎ. ಎನ್. ಭಟ್ಟ ಅವರು

ಶ್ರೀಮತಿಯರಾದ:

೬೭. ಎ. ಎನ್. ಶಾಂತಾ ಅವರು
೬೮. ವಿ. ಅಮೃತ ಅವರು
೬೯. ಎಂ. ಜಿ. ಹಸ್ಮಕಲ್ ಅವರು
೭೦. ಗೌರಮ್ಮನವರು

## ೨. ತಮ್ಮ ಕಡೆಯ ಜನಬಳಕೆಯ ಮಾತುಗಳನ್ನು ಸಂಗ್ರಹಿಸಿ ಕಳಿಸಿಕೊಟ್ಟಿರುವವರು:

ಶ್ರೀಯುತರಾದ:

೧. ಶಾಮಸುಂದರ ಕುಲಕರ್ಣಿಯವರು, ಬೆಳಗಾಂವಿ.
೨. ಜಿ. ರುದ್ರಪ್ಪನವರು, ಬೆಂಗಳೂರು.
೩. ಸುಬ್ಬರಾವ್ ಬಿ. ನಾಯಕರು, ಬೆಂಗಳೂರು.
೪. ಎಚ್. ಜಿ. ಬೆಂಗೇರಿಯವರು, ಹಾವೇರಿ.
೫. ಯ. ನಾ. ಉಡುಪ ಅವರು, ಕೋಟೇಶ್ವರ.
೬. ಎಚ್. ವೆಂಕಣ್ಣಾಚಾರ್ಯರು, ಸಾಗರ.
೭. ಹೀ. ಚಿ. ಶಾಂತವೀರಯ್ಯನವರು, ತಿಪಟೂರು.
೮. ಎಂ.ಎ. ನಾಯ್ಕಅವರು, ಅಂಕೋಲ.
೯. ರಾಮಕೃಷ್ಣ ಎ. ಪೈ ಅವರು, ಅಂಕೋಲ.

# ಪರಿಷತ್ತಿನ ಅಧ್ಯಕ್ಷರ ಕೃತಜ್ಞತೆ

ಕನ್ನಡ ಸಾಹಿತ್ಯ ಪರಿಷತ್ತಿನ ಮಹೋನ್ನತ ಸಾಧನೆ ಸಿದ್ಧಿಗಳಲ್ಲಿ ಕನ್ನಡ ನಿಘಂಟು ನಿರ್ಮಾಣವೂ ಒಂದು. ಇದು ಅರ್ಧಶತಮಾನದ ಹಲವಾರು ವಿದ್ವತ್ ಪ್ರತಿಭೆಗಳ ಅಹೋರಾತ್ರಿ ದುಡಿಮೆಯ ಫಲ; ಸಾರ್ಥಕ ಶ್ರಮದ ಸತ್ಫಲವೂ ಹೌದು. ಚತುಷ್ಕೋಟಿ ಕನ್ನಡಿಗರ ಜೇನುಗನಸು ಇಂದು ನನಸಾಗುತ್ತಿರುವುದು ನಮಗೆ ನಿಮಗೆ ಹರ್ಷ ತಂದ ಸಂಗತಿ. ಆದರೂ ಇದರ ಸಿದ್ಧತೆಯ ಹಿನ್ನೆಲೆಯಲ್ಲಿ ಅವೆಷ್ಟೋ ವ್ಯಕ್ತಿ ಶಕ್ತಿಗಳ ಬೆವರಿನ ಹಳ್ಳ ಹರಿದಿದೆ ಎಂಬುದನ್ನು ಮರೆಯುವಂತಿಲ್ಲ. ಇಂದು ಕೆಲವರಷ್ಟೇ ಉಳಿದು, ಹಲವರು ಅಮರರಾಗಿದ್ದಾರೆ. ಅವರೆಲ್ಲರ ಅಂತರಾತ್ಮಗಳಿಗೆ ಪರಿಷತ್ತಿನ ಅನಂತ ಪ್ರಣಾಮಗಳು ಮೊದಲು ಸಲ್ಲುತ್ತವೆ.

ಕನ್ನಡ ನಿಘಂಟು ರಚನೆಯ ಕಲ್ಪನೆ ಕಣ್ತೆರೆದದ್ದು ೧೯೧೯ ಜುಲೈ ೨೭ರಂದು; ಕಾರ್ಯೋನ್ಮುಖವಾದದ್ದು ೧೯೪೪ ಜನವರಿ ೨೭ ರಂದು. ತಿಂಗಳಿಗೆ ಕೇವಲ ೨೦ ರೂಪಾಯಿಗಳ ಸಂಬಳದ ಒಪ್ಪೊತ್ತಿನ ಕೆಲಸಗಾರರಿಂದ ಹಿಡಿದು ೨೫ ರೂಪಾಯಿಗಳಷ್ಟೇ ರಾಯಧನ ಪಡೆಯುತ್ತಿದ್ದ ವಿದ್ವನ್ಮಣಿಗಳವರೆಗೆ ಸುಮಾರು ೭೭ ಜನರ ಒಂದು ಪಂಡಿತ ತಂಡದಿಂದ ಆರಂಭಗೊಂಡ ಈ ಕಾರ್ಯ ಎಂಟು ಸಂಪುಟಗಳ ಬೃಹತ್ ಪ್ರಮಾಣದಲ್ಲಿ ಇಂದು ಪರಿಣಾಮಗೊಳ್ಳುತ್ತಿದೆ. ಆದರೆ ಹಿಡಿದ ಕಾರ್ಯ ಕೈಗೂಡಿದೆಯೇ ಹೊರತು ಹಾಕಿದ ಯೋಜನೆ ಮುಕ್ತಾಯವಾಗಿಲ್ಲ. ಈಗಾಗಲೇ ರಚಿತವಾಗಿರುವ ಎಂಟು ಸಂಪುಟಗಳ ಪರಿಷ್ಕರಣ ಕಾರ್ಯದ ಅನಿವಾರ್ಯತೆ ಇದೆ. ಹಿಂದಿನ ಸಂಪುಟಗಳಲ್ಲಿ ಸೇರ್ಪಡೆಯಾಗದಿರುವ ಸಹಸ್ರಾರು ಶಬ್ದಗಳು ತಮ್ಮ ತಮ್ಮ ಅರ್ಥಗಳನ್ನು ಹೊತ್ತು ಹೊರಹೊಮ್ಮುವ ಅಗತ್ಯತೆ ಇದೆ. ಅಲ್ಲದೆ ಮೊದಲ ಐದು ಸಂಪುಟಗಳ ಪ್ರತಿಗಳು ಉಪಲಬ್ಧವಿಲ್ಲದೆ, ಅವುಗಳ ಬೇಡಿಕೆ ಬಹಳವಿರುವುದರಿಂದ, ಅವುಗಳ ಮರುಮುದ್ರಣಗಳು ಆಗಲೇಬೇಕಾಗಿದೆ. ಜೊತೆಗೆ 'ಬಿಡಿಕುಳ ನಿಘಂಟು', 'ಕನ್ನಡ ಪಡೆನುಡಿ ನಿಘಂಟು' ಇವುಗಳ ಸೃಷ್ಟಿಯೂ ಆಗಬೇಕಿದೆ. ಈ ಎಡೆಯೇ ನಿವೇದಿಸಿಕೊಳ್ಳುವ ಮತ್ತೊಂದು ಅಂಶವೆಂದರೆ ಕನ್ನಡದ ಸೋದರೀ ಭಾಷೆಗಳ ದ್ವಿಭಾಷಾ ನಿಘಂಟು ನಿರ್ಮಾಣ. ಅಂದರೆ ಕನ್ನಡ - ತೆಲುಗು ನಿಘಂಟು, ಕನ್ನಡ-ಕೊಡಗು, ಕನ್ನಡ-ತಮಿಳು, ಕನ್ನಡ-ಮಲೆಯಾಳಂ, ತುಳು, ನೀಲಗಿರಿ, ತೋಡ, ತೊದವ ಮೊದಲಾದ ದ್ರಾವಿಡ ಭಾಷೆಗಳ ಕನ್ನಡ ನಿಘಂಟು ಪರಿಪೂರ್ಣ ಪ್ರಮಾಣದಲ್ಲಿ ಸಿದ್ಧವಾಗಬೇಕಿದೆ. ಅದು ಆಯಾಯ ಭಾಷೆಯ ಶುದ್ಧ ಶಬ್ದ ಉಚ್ಚಾರಣೆ ಮತ್ತು ನಿಷ್ಪತ್ತಿಗಳಿಂದ ಕೂಡಿರಬೇಕೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಈ ಎಲ್ಲ ಆಲೋಚನೆಗಳನ್ನೂ ದೃಷ್ಟಿಯಲ್ಲಿಟ್ಟುಕೊಂಡು ಕನ್ನಡ ಸಾಹಿತ್ಯ ಪರಿಷತ್ತು ನಿಘಂಟು ವಿಭಾಗವನ್ನು ತನ್ನ ನಿರಂತರಾಂಗವಾಗಿ ಪಡೆಯಲು ಇಚ್ಛಿಸಿ, ತನ್ನ ಯೋಜನೆಯನ್ನು ರಾಜ್ಯಸರ್ಕಾರಕ್ಕೆ ಈಗಾಗಲೇ ಸಲ್ಲಿಸಿದೆ. ನಿಘಂಟುವಿನಂತಹ ತುಂಬು ವೈಜ್ಞಾನಿಕ ರಚನೆ ಒಂದು ಭಾಷೆಯ ಸೃಜನ ಸಾಹಿತ್ಯದಷ್ಟೇ ಪ್ರಮುಖವಾದ್ದರಿಂದ ನಿಘಂಟು ಕಮ್ಮಟ ಕನ್ನಡ ಸಾಹಿತ್ಯ ಪರಿಷತ್ತಿನೊಡನೆ ಸಹಬಾಳ್ವೆ ನಡೆಸಬೇಕೆಂಬುದೇ ನನ್ನ ಅಪೇಕ್ಷೆ. ಇದು ಎಲ್ಲ ಕನ್ನಡಿಗರ ಸದಾಶಯವೂ ಅಹುದು. ನಮ್ಮ ಘನ ಸರ್ಕಾರ ಕನ್ನಡ ಕುಲಕೋಟಿಯ ಆಸೆ ಹಣ್ಣಾಗುವಂತೆಸಗಲು ಅನುವಾಗಬೇಕೆಂದು ಕೇಳಿಕೊಳ್ಳುತ್ತೇನೆ.

ಕಡೆಯದಾಗಿ, ಪರಿಷತ್ತಿನ ಕೃತಜ್ಞತೆಗೆ ಪಾತ್ರರಾದವರು ನಿಘಂಟು ನಿರ್ಮಾಪಕ ವರ್ಗದವರು. ಕಾಲಕಾಲಕ್ಕೂ ಬದಲಾಗುತ್ತ ಬಂದ ಎಲ್ಲ ಸಂಪಾದಕ ಮಂಡಲಿಗಳಿಗೆ, ಸಮಿತಿಗಳ ಸರ್ವಮಾನ್ಯ ಸದಸ್ಯರುಗಳಿಗೆ, ಪರಿಷತ್ತಿನ ಅಧ್ಯಕ್ಷರುಗಳು ಮತ್ತು ಅವರ ಅವಧಿಯ ಪದಾಧಿಕಾರಿಗಳಿಗೆ, ಕಚೇರಿಯ ಸಹಾಯಕ ಸಂಪಾದಕ ವರ್ಗಕ್ಕೆ ಪರಿಷತ್ತಿನ ಪರವಾಗಿ ಅನಂತಾನಂತ ಪ್ರಣಾಮಗಳು. ನಿಘಂಟು ಸೃಷ್ಟಿಯ ಆರಂಭದಿಂದ ಇಂದಿನವರೆಗೂ ನಿರಂತರ ಸೇವೆ ಸಲ್ಲಿಸುತ್ತಾ ಬಂದಿರುವ ಸ್ಥಾಯಿ ಸಂಪಾದಕ ಶ್ರೀ ಎನ್. ಬಸವಾರಾಧ್ಯರಿಗೆ ವಿಶೇಷ ವಂದನೆಗಳು ಸಲ್ಲುತ್ತವೆ. ಲಕ್ಷ ಲಕ್ಷ ಪ್ರಮಾಣದಲ್ಲಿ ಧನಸಹಾಯ ಮಾಡಿದ ಸರ್ಕಾರಗಳನ್ನೂ ನಿರ್ಲಕ್ಷಿಸುವಂತಿಲ್ಲ. ಅಂದಿನಿಂದ ಇಂದಿನವರೆಗಿನ ಎಲ್ಲ ಸರ್ಕಾರಗಳಿಗೂ, ಮುಖ್ಯವಾಗಿ ಇಂದಿನ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಎಚ್. ಡಿ. ದೇವೇಗೌಡ ಅವರಿಗೂ, ಉಪಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಜೆ. ಹೆಚ್. ಪಟೇಲ್ ಅವರಿಗೂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರಾದ ಶ್ರೀಮತಿ ಬಿ. ಟಿ. ಲಲಿತಾನಾಯಕ್ ಅವರಿಗೂ, ಆ ಸರ್ಕಾರಗಳ ಕರಣಗಳಾಗಿ ಕಾರ್ಯನಿರ್ವಹಿಸಿದ ಕನ್ನಡಸಂಸ್ಕೃತಿ ಮತ್ತು ಅಭಿವೃದ್ಧಿ ಇಲಾಖೆಯ ಎಲ್ಲ ಅಧಿಕಾರಿಗಳಿಗೂ, ಮುಖ್ಯವಾಗಿ ಇಂದಿನ ಕಾರ್ಯದರ್ಶಿ ಶ್ರೀ ಅ. ರಾ. ಚಂದ್ರಹಾಸ ಗುಪ್ತ ಅವರಿಗೂ, ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ ಅವರಿಗೂ, ಉಪನಿರ್ದೇಶಕರಾದ ಶ್ರೀ ಕಾ.ತ.ಚಿಕ್ಕಣ್ಣ ಅವರಿಗೂ, ಅವರ ಎಲ್ಲ ಅಧಿಕಾರಿ-ಸಿಬ್ಬಂದಿ ವರ್ಗಕ್ಕೂ ನಮ್ಮ ಕೃತಜ್ಞತೆಗಳು.

ಸರ್ವವಿಧವಿಂದಲೂ ನನ್ನೊಡನೆ ಸಹಕರಿಸಿ ಯೋಜನೆಯನ್ನು ಆಗುಮಾಡಲು ನೆರವಾಗುತ್ತಿರುವ ಪರಿಷತ್ತಿನ ಆಡಳಿತ ವರ್ಗದ ಡಾ॥ ನರಹಳ್ಳಿ ಬಾಲಸುಬ್ರಹ್ಮಣ್ಯ, ಪ್ರೊ॥ ಕೆ.ಆರ್. ಇಕ್ಬಾಲ್ ಅಹಮದ್ ಹಾಗೂ ಶ್ರೀ ಎಂ. ಶ್ರೀರಾಮಯ್ಯ ಇವರುಗಳಿಗೆ, ಪರಿಷತ್ತಿನ ಸಿಬ್ಬಂದಿ ವರ್ಗಕ್ಕೆ, ಕೇವಲ ಇಪ್ಪತ್ತೆಂಟು ದಿನಗಳಲ್ಲಿ ಒಂದು ಸಾವಿರದ ಎರಡು ನೂರು ಪುಟಗಳಿಗೂ ಮಿಕ್ಕ ನಿಘಂಟು ಹೊತ್ತಗೆಯನ್ನು ಮುದ್ರಿಸಿಕೊಟ್ಟಿದ್ದಲ್ಲದೆ, ರಟ್ಟು ಕಾಣದೆ ಅನಾಥವಾಗಿ ಬಿದ್ದಿದ್ದ ಹಿಂದಿನ ೬ ಮತ್ತು ೭ನೆಯ ಸಂಪುಟಗಳಿಗೆ ರಕ್ಷಾಕವಚವನ್ನೊದಗಿಸಿ, ಮಾರುಕಟ್ಟೆಗೆ ಬಿಡಲು ಯೋಗ್ಯವನ್ನಾಗಿಸಿದ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಮಹಮ್ಮದ್ ಸನಾವುಲ್ಲಾ ಮತ್ತು ಉಪನಿರ್ದೇಶಕರಾದ ಶ್ರೀ ರವಿಶಂಕರ್ ಇವರಿಗೆ ಮತ್ತು ಕರಡು ಪರಿಶೀಲಿಸಿದ ಶ್ರೀ ಟಿ. ಆರ್. ಮಹಾದೇವಯ್ಯನವರಿಗೆ ಈ ದಿಸೆಯಲ್ಲಿ ನನಗೆ ನೈಜ ಹಾಗೂ ಋಜುಮಾರ್ಗದರ್ಶನ ಮಾಡುತ್ತಿರುವ ನನ್ನ ನಿಕಟಪೂರ್ವ ಅಧ್ಯಕ್ಷರಾದ ಶ್ರೀ ಗೊ. ರು. ಚನ್ನಬಸಪ್ಪನವರಿಗೆ, ಒಟ್ಟಾರೆ, ಈ ನಿಘಂಟು ಸಂಪುಟಗಳ ರಚನೆಯಲ್ಲಿ ನೆರವಾದ ಎಲ್ಲ ಸೋದರ ಸೋದರಿಯರಿಗೆ ಕೃತಜ್ಞತಾಪೂರ್ವಕ ಪ್ರಣಾಮಗಳನ್ನು ಸಲ್ಲಿಸಿ ವಿರಮಿಸುತ್ತೇನೆ.

" ಓಂ ತತ್ ಸತ್ "

ಯುವನಾಮ ಸಂವತ್ಸರದ
ವಿಜಯದಶಮಿ
೩.೧೦.೧೯೯೫

ಸಾ. ಶಿ. ಮರುಳಯ್ಯ
ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

# ಪರಿಷತ್ತಿನ ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯ ಪರಿಷತ್ತಿನ ೮೦ ವರ್ಷಗಳ ಇತಿಹಾಸದಲ್ಲಿ ಕನ್ನಡ-ಕನ್ನಡ ಬೃಹನ್ನಿಘಂಟುವಿನ ಪ್ರಕಟನೆ ಒಂದು ವಿಶಿಷ್ಟ ಮೈಲಿಗಲ್ಲು, ಸಾಧನೆಗಳ ಕಳಶ. ಕನ್ನಡಕ್ಕೆ ಆಕರವಾದ ಆಧಾರಪೂರ್ಣವಾದ ಸಮಗ್ರ ನಿಘಂಟು ರಚನೆ ಹಾಗೂ ಪ್ರಕಟನೆ, ಪರಿಷತ್ತು ೧೯೧೫ ಮೇ ೫ರಂದು ಸ್ಥಾಪಿತವಾದಾಗಲೇ ಅದರ ಮುಖ್ಯ ಉದ್ದೇಶಗಳಲ್ಲಿ ಒಂದಾಗಿತ್ತು. ನಿಘಂಟು ಒಂದು ಜ್ಞಾನಸಾಗರ. ಇದು ಅಧ್ಯಯನಾಸಕ್ತರ ಬೌದ್ಧಿಕ ಮಟ್ಟದ ವಿಕಾಸಕ್ಕೆ ಆಧಾರ. ಅರಿವಿನ ಬೆಳಕಿನ ನಿರಂತರ ಪ್ರಕಾಶ ಇದರದ್ದು. ಅಂತಾಗಿ ಆಸಕ್ತರ ಜ್ಞಾನದಾಹಕ್ಕೆ ನೀರುಣಿಸುವ ನೆಲೆ. ಉದ್ದೇಶಪೂರ್ಣ ಹಿನ್ನೆಲೆಯೊಂದಿಗೆ ಆರಂಭಗೊಂಡ ನಿಘಂಟು ಯೋಜನೆ ಮೊದಲು ನಾಲ್ಕು ಸಂಪುಟಗಳಲ್ಲಿ ಮುಕ್ತಾಯಗೊಳ್ಳಬಲ್ಲದು ಎಂದು ತಿಳಿಯಲಾಗಿತ್ತು. ಆದರೆ 'ನಿಘಂಟುಗಳ ನಿಘಂಟು' ಕಾರ್ಯದಿಂದ ಆರಂಭವಾಗಿ ಕಾವ್ಯ, ಶಾಸನ, ಹೊಸಹೊಸಶಬ್ದಗಳ ಆಧುನಿಕ ಸೃಷ್ಟಿ, ಹೊಸ ಭಾಷಾಪ್ರಯೋಗಗಳು ಇತ್ಯಾದಿಗಳನ್ನು ಕಾಲಾನುಗುಣವಾಗಿ ಗಮನಿಸುತ್ತ ಬಂದಂತೆ ನಾಲ್ಕು ಸಂಪುಟಗಳ ನಿಘಂಟು ತನ್ನ ವ್ಯಾಪ್ತಿಯನ್ನು ಎಂಟು ಸಂಪುಟಗಳಿಗೆ ವಿಸ್ತರಿಸಿಕೊಳ್ಳಲೇಬೇಕಾಯಿತು.

ನಿಘಂಟುವಿನ ಕೆಲಸ ತಾಳ್ಮೆಗೊಂದು ಸವಾಲು. ಸಮರ್ಪಕತೆ, ನಿರ್ದಿಷ್ಟತೆ ಹಾಗೂ ನಿಕಷದ ಅಂಗಳದಲ್ಲಿ ಅಂಗೀಕಾರದ ಮುದ್ರೆ ಬಿದ್ದಮೇಲೆ ಅದು ಅಧಿಕೃತ ರೂಪುತಾಳುತ್ತದೆ. ಈ ಕೆಲಸವನ್ನು ನಾಡಿನ ಗಣ್ಯವಿದ್ವಾಂಸರಿಂದ ಕೂಡಿರುವ ಸಂಪಾದಕ ಮಂಡಳಿ ಅತ್ಯಂತ ಶಿಸ್ತಿನಿಂದ ಸಮರ್ಪಕವಾಗಿ ಮಾಡಿ, ಪರಿಷತ್ತಿಗೊಂದು ಹೆಸರು ತಂದುಕೊಟ್ಟು, ಸ್ತುತ್ಯಾರ್ಹವಾಗಿದೆ. ಆರಂಭಕ್ಕೆ ಐದುಸಾವಿರ ಪುಟಗಳಿರಬೇಕೆಂದು ಮಾಡಿದ್ದ ಅಂದಾಜು ಈಗ ಸುಮಾರು ಹತ್ತುಸಾವಿರ ಪುಟಗಳವರೆಗೆ ಸುಮಾರು ಎರಡು ಲಕ್ಷ ಪದಗಳನ್ನು ಒಳಗೊಂಡಿರುವ ಈ ಬೃಹನ್ನಿಘಂಟು ಭಾಷೆ ಮತ್ತು ಸಾಹಿತ್ಯಾಸಕ್ತರ ಪಾಲಿಗೆ ಚಿರವಿನೂತನ ಆಸ್ತಿ. ೧೯೯೫ರಲ್ಲಿ ಏಳನೆಯ ಸಂಪುಟವನ್ನು ಬಿಡುಗಡೆ ಮಾಡಿದ ತೃಪ್ತಿಯೊಡನೆ ಇದೀಗ ಎಂಟನೆಯ ಸಂಪುಟವನ್ನೂ ನಾಡವರ ಕೈಗಿಡಲು ನಮಗೆ ಹರ್ಷವಾಗುತ್ತಿದೆ.

ನಿಘಂಟು ಯೋಜನೆಯ ಈ ಕೊನೆಯ ಸಂಪುಟ, ಈವರೆಗೆ ನಿಘಂಟು ಸಿದ್ಧತೆಯ ಕಾರ್ಯದಲ್ಲಿ ದುಡಿದ ನಿಘಂಟು ಸಂಪಾದಕ ಸಮಿತಿಯ ಅಧ್ಯಕ್ಷರು, ಪ್ರಧಾನ ಸಂಪಾದಕರು, ಸದಸ್ಯ ವಿದ್ವಾಂಸರು, ಸರ್ಕಾರದ ಪ್ರತಿನಿಧಿಗಳು, ಪರಿಷತ್ತಿನ ಅಧ್ಯಕ್ಷರು, ಪದಾಧಿಕಾರಿಗಳು, ನಿಘಂಟು ಕಛೇರಿಯ ಮತ್ತು ಪರಿಷತ್ತಿನ ಸಿಬ್ಬಂದಿವರ್ಗ - ಈ ಎಲ್ಲರಿಗೂ ಒಂದು ರೀತಿ ಧನ್ಯತೆಯ ಭಾವ ತರುತ್ತದೆಂದು ನಾನು ಭಾವಿಸಿದ್ದೇನೆ. ಆದರೆ ಇದು ಒಟ್ಟು ಯೋಜನೆಯ ಒಂದು ಆಧಾರಸ್ತಂಭ ಮಾತ್ರ. ಮುಂದಿನ ಹಂತದಲ್ಲಿ ನಡೆಯಬೇಕಾಗಿರುವ ಈ ಎಂಟೂ ಸಂಪುಟಗಳ ಪರಿಷ್ಕರಣ ಒಂದು ರೀತಿಯಲ್ಲಿ ನಿರಂತರ ಕಟ್ಟುವಿಕೆಯ ಕಾರ್ಯ. ಹಾಗೆಯೇ ದ್ವಿಭಾಷಾ, ತ್ರಿಭಾಷಾ ಕೋಶಗಳು, ವಿಷಯ ಕೋಶಗಳು ಇತ್ಯಾದಿ ನಾನಾ ಬಗೆಯ ಅರ್ಥಕೋಶಗಳನ್ನು ರಚಿಸಲು ಮೂಲಸಾಮಗ್ರಿಯನ್ನು ಈ ಎಂಟು ಸಂಪುಟಗಳು ಒದಗಿಸುತ್ತವೆ. ಈ ದಿಸೆಯಲ್ಲಿ ಇನ್ನೂ ಆಗಬೇಕಾದ ಕೆಲಸ ಸಾಕಷ್ಟಿದೆ.

ಭಾಷೆಯ ಜೀವಂತಿಕೆ ಆಯಾ ಕಾಲದ ಹೊಸತುಗಳಲ್ಲಿನ ಹೊಸಶಬ್ದಗಳನ್ನು, ಪ್ರಯೋಗಗಳನ್ನು ತನ್ನ ಮಡಿಲಲ್ಲಿಟ್ಟುಕೊಂಡು ಪೋಷಿಸುವುದಲ್ಲದೆ, ಹೊಸ ಆಯಾಮಗಳನ್ನು ಪಡೆಯುವುದರಲ್ಲಿದೆ. ಹೀಗಾಗಿ ಪ್ರಕಟವಾಗಿರುವ ಸಂಪುಟಗಳಲ್ಲಿ ಸಹಜವಾಗಿ ಹೊಸ ಶಬ್ದಗಳ ಸೇರ್ಪಡೆಗಳಿಗೆ ಗರ್ಭಸ್ಥ ನೆಲೆಯನ್ನು ಒದಗಿಸಿರುವ ಹಿನ್ನೆಲೆ ಇದೆ. ಅಂತೇ ನಿಘಂಟುವಿನ ಪರಿಷ್ಕರಣ ಆಯಾ ಕಾಲೀನ ಅಗತ್ಯವಲ್ಲದೆ ನಿರಂತರ ಕಾರ್ಯವಾಗಿದೆ. ಅನುಬಂಧ ನೀಡಿಕೆ, ಪರಿಷ್ಕರಣ ಇತ್ಯಾದಿಗಳ ಹಿನ್ನೆಲೆಯಲ್ಲಿ ಈ ನಿಘಂಟು ಯೋಜನೆ ಮುಂದಿನ ಹತ್ತುವರ್ಷಗಳ ಕಾಲವಾದರೂ ಮುಂದುವರಿಯುವ ಅವಶ್ಯಕತೆ ಇದೆ. ಈ ಪರಿಷ್ಕರಣ ಕಾರ್ಯವನ್ನು ಕೈಗೆತ್ತಿಗೊಳ್ಳಲು ನೆರವಾಗಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಈಗಾಗಲೇ ಕಳುಹಿಸಲಾಗಿದೆ. ಅನುಬಂಧ ತಯಾರಿಕೆ ಮತ್ತು ಪರಿಷ್ಕರಣ ಕಾರ್ಯದಲ್ಲಿ ಹಾಲಿ ನಿಘಂಟು ಸಂಪಾದಕ ಸಮಿತಿಯನ್ನು ಪುನರ್‌ರಚಿಸಿ, ಸಮಿತಿಯಲ್ಲಿ ಅಧ್ಯಕ್ಷರು, ಪ್ರಧಾನ ಸಂಪಾದಕರು ಮತ್ತು ಎಂಟು ಜನ ಸದಸ್ಯರಿದ್ದು, ಜೊತೆಗೆ ಪರಿಷತ್ತಿನ ಪದಾಧಿಕಾರಿಗಳನ್ನು ಕೂಡಿಕೊಂಡಿರಬೇಕು ಎಂಬ ಅಂಶವನ್ನು ಆ ಪ್ರಸ್ತಾವನೆಯಲ್ಲಿ ತಿಳಿಸಿದೆ. ಹತ್ತು ವರ್ಷಗಳಿಗೆ ಸುಮಾರು ೭೭ ಲಕ್ಷ ರೂ.ಗಳ ಅಂದಾಜು ವೆಚ್ಚದ ವಿವರದ ಪ್ರಸ್ತಾವನೆ ಅದಾಗಿದೆ. ಅನುಬಂಧ ಹಾಗೂ ಪರಿಷ್ಕೃತ ಸಂಪುಟಗಳ ಮುದ್ರಣವೆಚ್ಚ ಮತ್ತು ಸಿಬ್ಬಂದಿ ವೇತನದ ಸಂಭವನೀಯ ಹೆಚ್ಚಳ ಈ ಅಂದಾಜಿನಲ್ಲಿ ಸೇರಿಲ್ಲ. ರಾಜ್ಯಸರ್ಕಾರ ಅವಶ್ಯಕವಾದ ಈ ಕಾರ್ಯಕ್ಕೆ ಪೂರ್ಣನೆರವಾಗುವುದೆಂಬ ಭರವಸೆ ನನ್ನದು.

*ಈಗ ಹಂಪೆಯ ಕನ್ನಡ ವಿಶ್ವವಿದ್ಯಾಲಯದ ಸಹಯೋಗದಲ್ಲಿ ಈವರೆಗ ಪ್ರಕಟವಾಗಿರುವ ನಿಘಂಟಿನ ಏಳುಸಂಪುಟಗಳನ್ನು ಈಗಾಗಲೇ ಗಣಕಯಂತ್ರಕ್ಕೆ ಅಳವಡಿಸಲಾಗಿದ್ದು ಪರಿಷ್ಕರಣ ಕಾರ್ಯಕ್ಕೆ ಸುಲಭವಾಗುವಂತೆ ಮಾಡಲಾಗಿದೆ. ಹಾಗೆಯೇ ಎಂಟನೆಯ ಸಂಪುಟವನ್ನು ಅಳವಡಿಸಿಕೊಡಲೂ ಕನ್ನಡ ವಿಶ್ವವಿದ್ಯಾಲಯ ಒಪ್ಪಿಕೊಂಡಿದೆ. ಇದಕ್ಕಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ನಾನು ಕೃತಜ್ಞತೆ ಸಲ್ಲಿಸುವೆ. ಅನುಬಂಧ ತಯಾರಿಕೆ ಮತ್ತು ಪರಿಷ್ಕರಣ ಕಾರ್ಯಗಳನ್ನು ಪರಿಷತ್ತಿನ ತಜ್ಞ ನಿಘಂಟು ಸಂಪಾದಕ ಮಂಡಳಿಯು ನೋಡಿಕೊಳ್ಳುತ್ತದೆ. ಅಲ್ಲದೆ ಈ ಯೋಜನೆಯ ಪೂರ್ಣನಿರ್ವಹಣೆಯ ಹೊಣೆ ಮೊದಲಿನಂತೆ ಪರಿಷತ್ತಿನದೇ ಆಗಿರಬೇಕೆಂಬ ತಜ್ಞರ ಸಮಿತಿಯ ಸಲಹೆ ಸಹಜವಾಗಿದೆ.*

*ಕನ್ನಡ-ಕನ್ನಡ ನಿಘಂಟು ಸಿದ್ಧತೆಯ ಕಾರ್ಯ ಸಂಪೂರ್ಣವಾಗಿ ಕರ್ನಾಟಕ ಸರ್ಕಾರದ ಯೋಜನೆಯಾಗಿದೆ. ಕನ್ನಡ ಸಾಹಿತ್ಯ ಪರಿಷತ್ತು ಸರ್ಕಾರದ ಪರವಾಗಿ ಅದನ್ನು ನಿರ್ವಹಿಸುತ್ತಿದೆ. ರಾಜ್ಯ ಸರ್ಕಾರವು ಈ ಯೋಜನೆಗೆ ಉದಾರವಾಗಿ ಆರ್ಥಿಕ ನೆರವನ್ನು ನೀಡಿದೆ. ಆರಂಭಕ್ಕೆ ೧೫ ಲಕ್ಷ ರೂ.ಗಳ ಯೋಜನೆಯಾಗಿದ್ದು, ಈ ಕಾರ್ಯ ಮುಗಿಯುವ ವೇಳೆಗೆ ಒಂದು ಕೋಟಿ ರೂ.ಗಳನ್ನು ಮೀರಿದ್ದರೂ, ನಿಗದಿಯಾಗಿದ್ದ ಕಾಲಾವಧಿಯು ಮೀರಿದ್ದರೂ ಅದನ್ನು ವಿಸ್ತರಿಸಲು ಅವಕಾಶ ನೀಡಿ ಅನುದಾನವನ್ನು ಮಂಜೂರು ಮಾಡಿ ರಾಜ್ಯಸರ್ಕಾರ ತುಂಬು ಸಹಕಾರ ನೀಡಿದೆ. ಇದು ಕರ್ನಾಟಕ ರಾಜ್ಯಸರ್ಕಾರದ ಭಾಷೆ ಮತ್ತು ಸಾಹಿತ್ಯಾಭಿಮಾನದ ದ್ಯೋತಕವಾಗಿದೆ. ಇದಕ್ಕಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಸಂಬಂಧಿಸಿದವರಿಗೆಲ್ಲ ಕನ್ನಡ ಸಾಹಿತ್ಯ ಪರಿಷತ್ತು ತುಂಬಾ ಆಭಾರಿಯಾಗಿದೆ.*

*ಕನ್ನಡ-ಕನ್ನಡ ನಿಘಂಟಿನ ಮುದ್ರಣದಂತಹ ಅನುಭವೀ ಹಾಗೂ ಪೂರ್ಣ ಪರಿಶ್ರಮದ ಕಾರ್ಯವನ್ನು ಸರ್ಕಾರಿ ಮುದ್ರಣಾಲಯದವರು ಅಚ್ಚುಕಟ್ಟಾಗಿ ಮಾಡಿಸಿಕೊಟ್ಟಿದ್ದಾರೆ. ಅದಕ್ಕಾಗಿ ಈ ಇಲಾಖೆಯ ನಿರ್ದೇಶಕರಿಗೆ ವಂದನೆ ಸಲ್ಲಿಸುತ್ತೇನೆ. ಈ ಕಾರ್ಯದಲ್ಲಿ ಸಹಕರಿಸಿದ ಮುದ್ರಣ ಇಲಾಖೆಯ ಇತರ ಅಧಿಕಾರಿಗಳು ಹಾಗೂ ಸಿಬ್ಬಂದಿಗಳಿಗೂ ಕೃತಜ್ಞತೆಗಳು.*

*ಪ್ರಸ್ತುತ ಎಂಟನೆಯ ಸಂಪುಟದ ಸಿದ್ಧತೆಯ ಕಾರ್ಯದಲ್ಲಿ, ನಿಘಂಟು ಸಂಪಾದಕ ಮಂಡಳಿಯ ಅಧ್ಯಕ್ಷರಾಗಿದ್ದ ದಿ॥ ಡಾ. ಜಿ.ಎಸ್. ಗಾಯಿ ಅವರ ಸೇವೆಯನ್ನು, ೧೯೫೫ರಿಂದಲೂ ನಿಘಂಟು ಕಾರ್ಯಾಲಯದಲ್ಲಿದ್ದು, ೧೯೭೦ರಲ್ಲಿ ಪ್ರಕಟವಾದ ಮೊದಲ ಸಂಪುಟದ ಸಂಪಾದಕರಾಗಿದ್ದು, ಈಗ ಪ್ರಕಟವಾಗುತ್ತಿರುವ ಕೊನೆಯ (ಎಂಟನೆಯ) ಸಂಪುಟದ ಪ್ರಧಾನ ಸಂಪಾದಕರೂ ಹಾಗೂ ಡಾ॥ ಜಿ.ಎಸ್. ಗಾಯಿ ಅವರ ನಿಧನಾನಂತರ ನಿಘಂಟು ಸಮಿತಿಯ ಅಧ್ಯಕ್ಷರೂ ಆದ ಪ್ರೊ॥ ಎನ್. ಬಸವಾರಾಧ್ಯ ಅವರ ಸತತ ಪರಿಶ್ರಮದ ಸೇವೆಯನ್ನು ಪರಿಷತ್ತು ಅತ್ಯಂತ ಕೃತಜ್ಞತೆಯಿಂದ ಸ್ಮರಿಸುತ್ತದೆ. ೧೯೪೪ರಿಂದ ಈವರೆವಿಗೆ ವಿದ್ವತ್ಪೂರ್ಣ ಸೇವೆ ಸಲ್ಲಿಸಿದ ಸಂಪಾದಕ ಮಂಡಳಿಯ ಎಲ್ಲ ಸದಸ್ಯರಿಗೂ, ನಿಘಂಟು ಸಿಬ್ಬಂದಿ ವರ್ಗಕ್ಕೂ ಪರಿಷತ್ತು ಋಣಿಯಾಗಿದೆ. ಅಲ್ಲದೆ ಪರಿಷತ್ತಿನ ಪದಾಧಿಕಾರಿಗಳಿಗೆ, ಸಿಬ್ಬಂದಿ ವರ್ಗಕ್ಕೆ, ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಈ ಕಾರ್ಯದಲ್ಲಿ ನೆರವಾದ ಸರ್ವರಿಗೂ ಅನಂತ ನಮನಗಳು.*

*ದಿನಾಂಕ: ೧೦-೬-೧೯೯೫*
*ಬೆಂಗಳೂರು-೫೬೦ ೦೧೮*

**ಗೊ.ರು. ಚನ್ನಬಸಪ್ಪ**
**ಅಧ್ಯಕ್ಷ**
**ಕನ್ನಡ ಸಾಹಿತ್ಯ ಪರಿಷತ್ತು**

# ಅರಿಕೆ

ಕನ್ನಡ ಸಾಹಿತ್ಯ ಪರಿಷತ್ತಿಗೆ ಶಾಶ್ವತವಾದ ಕೀರ್ತಿಯನ್ನು ತಂದುಕೊಟ್ಟಿರುವ ಯೋಜನೆಗಳಲ್ಲಿ ಕನ್ನಡ ನಿಘಂಟುಯೋಜನೆ ಅತ್ಯಂತ ಪ್ರಮುಖವಾದುದು. ಕನ್ನಡ ಸಾಹಿತ್ಯ ಪರಿಷತ್ತಿನ ಇತಿಹಾಸದಲ್ಲಿ ಇದೊಂದು ಮೈಲಿಗಲ್ಲು. ಈಗ ಪ್ರಕಟವಾಗುತ್ತಿರುವ ಎಂಟನೆಯ ಸಂಪುಟದೊಂದಿಗೆ ಈ ಯೋಜನೆಯ ಪ್ರಥಮಘಟ್ಟ ಮುಗಿದಂತಾಗುತ್ತದೆ. ಇದಾದ ಮೇಲೆ ಈ ನಿಘಂಟಿನ ಅನುಬಂಧದ ಸಿದ್ಧತೆ, ಪರಿಷ್ಕರಣಕಾರ್ಯ, ದ್ವಿಭಾಷಾ, ತ್ರಿಭಾಷಾ, ಬಹುಭಾಷಾ ನಿಘಂಟುಗಳ ನಿರ್ಮಾಣಕಾರ್ಯವನ್ನು ಕೈಕೊಳ್ಳಬೇಕಾಗಿದೆ. ಈ ಸಂಬಂಧವಾಗಿ ಹತ್ತುವರ್ಷಗಳ ಒಂದು ಯೋಜನೆಯನ್ನು ಪರಿಷತ್ತು ಸರ್ಕಾರಕ್ಕೆ ಈಗಾಗಲೇ ಕಳಿಸಿಕೊಟ್ಟು ಅದರ ಅಂಗೀಕಾರದ ನಿರೀಕ್ಷಣೆಯಲ್ಲಿದೆ.

ಕನ್ನಡ ನಿಘಂಟಿನ ಕಡೆಯದಾದ ಈ ಎಂಟನೆಯ ಸಂಪುಟದಲ್ಲಿ 'ವ' ಕಾರದಿಂದ 'ಱ' ಕಾರದ ವರೆಗಿನ ಅಕ್ಷರಗಳ ಎಲ್ಲ ಶಬ್ದಗಳೂ ಸಮಾವೇಶಗೊಂಡಿವೆ. ಸರ್ವಾಂಗಸುಂದರವಾಗಿ ಪ್ರಕಟವಾಗಿರುವ ಈ ಎಂಟನೆಯ ಸಂಪುಟವನ್ನು ಕನ್ನಡ ಜನತೆಯ ಕೈಯಲ್ಲಿಡಲು ನನಗೆ ತುಂಬ ಸಂತೋಷವೆನಿಸಿದೆ. ಈ ನಿಘಂಟಿನ ರಚನಾಕಾರ್ಯಕ್ಕೆ ಕರ್ನಾಟಕಸರ್ಕಾರವು ನೀಡಿರುವ ಧನಸಹಾಯವನ್ನು ಅತ್ಯಂತ ಕೃತಜ್ಞತೆಯಿಂದ ಕನ್ನಡಿಗರೆಲ್ಲರೂ ನೆನೆಯಬೇಕಾಗಿದೆ.

ಕನ್ನಡ ನಿಘಂಟು ಸಂಪಾದಕ ಸಮಿತಿಯಲ್ಲಿ ನಾಡಿನ ಸುಪ್ರಸಿದ್ಧ ವಿದ್ವಾಂಸರು ಸದಸ್ಯರಾಗಿದ್ದುಕೊಂಡು ತಮ್ಮ ಜ್ಞಾನಾನುಭವಗಳ ಬೆಳಕನ್ನು ಚೆಲ್ಲಿ ಈ ನಿಘಂಟು ಶಾಸ್ತ್ರೀಯವಾಗಿ ರೂಪುಗೊಳ್ಳಲು ಕಾರಣಕರ್ತರಾಗಿದ್ದಾರೆ. ಇವರೆಲ್ಲರಿಗೂ ಗೌರವಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇನೆ. ಈ ಮಹಾಕಾರ್ಯಕ್ಕಾಗಿ ನಿರಂತರವಾಗಿ ದುಡಿದು ಇಂದು ನಮ್ಮ ಮಧ್ಯೆ ಇಲ್ಲದಿರುವ ಸಲಹಾಸಮಿತಿ ಮತ್ತು ಸಂಪಾದಕಸಮಿತಿ ಸದಸ್ಯರಾಗಿದ್ದ ಶ್ರೀಯುತರಾದ ಬೆಳ್ಳಾವೆ ವೆಂಕಟನಾರಣಪ್ಪನವರು, ರಾಜಸೇವಾಸಕ್ತ ಬಿ.ಎಂ. ಶ್ರೀಕಂಠಯ್ಯನವರು, ಎಂ. ಆರ್. ಶ್ರೀನಿವಾಸಮೂರ್ತಿಯವರು, ಎಂ.ಗೋವಿಂದ ಪೈ ಅವರು, ಎಲ್.ವಿ. ರಾಮಸ್ವಾಮಿ ಅಯ್ಯರ್ ಅವರು, ಡಾ॥ ಎ.ಎನ್. ಉಪಾಧ್ಯೆ ಅವರು, ಆಸ್ಥಾನವಿದ್ವಾನ್ ಆರ್. ಅನಂತಕೃಷ್ಣಶರ್ಮ ಅವರು, ಪಿ.ಎಂ. ಸೋಮಸುಂದರಂ ಅವರು, ಡಾ॥ಎ.ಆರ್. ಕೃಷ್ಣಶಾಸ್ತ್ರೀ ಅವರು, ಪ್ರೊ॥ ತೀ.ನಂ. ಶ್ರೀಕಂಠಯ್ಯನವರು, ಪ್ರೊ॥ ಡಿ. ಎಲ್. ನರಸಿಂಹಾಚಾರ್ ಅವರು, ಪ್ರೊ॥ ಕ.ವೆಂ. ರಾಘವಾಚಾರ್ ಅವರು, ಪ್ರೊ॥ಎಂ. ಮರಿಯಪ್ಪಭಟ್ಟ ಅವರು, ಡಾ॥ರಂ. ಶ್ರೀ. ಮುಗಳಿ ಅವರು, ಪ್ರೊ॥ಸ.ಸ. ಮಾಳವಾಡ ಅವರು, ಎನ್. ಲಕ್ಷ್ಮೀನಾರಾಯಣರಾವ್ ಅವರು, ಪ್ರೊ॥ ಕೆ.ಜಿ. ಕುಂದಣಗಾರ ಅವರು, ಪದ್ಮಭೂಷಣ ಡಾ॥ ಕೆ.ವಿ. ಪುಟ್ಟಪ್ಪ ಅವರು, ಪ್ರೊ॥ ಡಿ.ಕೆ. ಭೀಮಸೇನರಾವ್ ಅವರು, ರಾಜಸೇವಾಸಕ್ತ ಡಿ.ಸಿ. ಸುಬ್ಬರಾಯಪ್ಪನವರು, ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರೀ ಅವರು, ಡಾ. ಸಿದ್ಧಯ್ಯಪುರಾಣಿಕ ಅವರು, ಬಸವರಾಜ ಕಟ್ಟೀಮನಿ ಅವರು, ಡಾ॥ಜಿ.ಎಸ್. ಗಾಯಿ ಅವರು – ಈ ಮಹನೀಯರು ಸಲ್ಲಿಸಿರುವ ಅನುಪಮಸೇವೆಯನ್ನು ಅತ್ಯಂತ ಕೃತಜ್ಞತೆಯಿಂದ ನೆನೆಯಬೇಕಾಗಿದೆ. ಶಬ್ದಸಂಗ್ರಹಕಾರ್ಯದಲ್ಲಿ ನೆರವಾದ, ಇಂದು ನಮ್ಮಿಂದ ದೂರವಾಗಿರುವ ಅನೇಕ ವಿದ್ವಾಂಸರ ಸೇವೆಯನ್ನು ಇಲ್ಲಿ ಸ್ಮರಿಸಬೇಕಾಗಿದೆ. ಅಲ್ಲದೆ ಅಧಿಕಾರನಿಮಿತ್ತ ಸಂಪಾದಕ ಸಮಿತಿಯಲ್ಲಿ ಭಾಗವಹಿಸುತ್ತಿದ್ದ ಪರಿಷತ್ತಿನ ಪದಾಧಿಕಾರಿಗಳಲ್ಲಿ ಕೆಲವರು ಕಣ್ಮರೆಯಾಗಿದ್ದಾರೆ. ಅವರ ಸೇವೆಯನ್ನೂ ಇಲ್ಲಿ ದಾಖಲಿಸಬೇಕಾಗಿದೆ. ಅಂತೆಯೇ ನಿಘಂಟುರಚನಾಕಾರ್ಯಕ್ಕೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನೆರವಾಗಿ, ಇಂದು ನಮ್ಮ ಮಧ್ಯೆ ಇಲ್ಲದಿರುವ ಇತರ ಮಹನೀಯರನ್ನೂ ನೆನಪಿಸಿಕೊಳ್ಳಬೇಕಾಗಿದೆ.

೧೯೯೨ ರಿಂದ ಕನ್ನಡ ನಿಘಂಟುಸಂಪಾದಕಸಮಿತಿಯ ಅಧ್ಯಕ್ಷರಾಗಿದ್ದ ಡಾ॥ಜಿ. ಎಸ್. ಗಾಯಿ ಅವರು ಈ ಸಂಪುಟದ ಮುದ್ರಣಪ್ರತಿಯ ಪರಿಶೀಲನೆ, ಕರಡಚ್ಚುಗಳ ತಿದ್ದುಪಡಿ ಮೊದಲಾದ ಕಾರ್ಯಗಳಲ್ಲಿ ವಿಶೇಷವಾದ ನೆರವನ್ನು ನೀಡಿದ್ದಾರೆ. ಎಂಟನೆಯ ಸಂಪುಟವನ್ನು ಕ್ಷಿಪ್ರದಲ್ಲೇ ಹೊರತರಬೇಕೆಂಬ ತೀವ್ರಾಕಾಂಕ್ಷೆಯಿಂದಿದ್ದ ಶ್ರೀಯುತರು ಈ ಸಂಪುಟ ಪ್ರಕಟವಾಗುವುದರೊಳಗಾಗಿ ದೈವಾಧೀನರಾದುದು ದುರ್ದೈವದ ಸಂಗತಿ. ಅವರ ಸೇವೆಯನ್ನೂ, ಸಹಕಾರವನ್ನೂ ವಿಶೇಷವಾಗಿ ಸ್ಮರಿಸಬೇಕಾಗಿದೆ.

ಸಂಗೀತದ ಪಾರಿಭಾಷಿಕಶಬ್ದಗಳಿಗೆ ಪ್ರೊ. ರಾ. ಸತ್ಯನಾರಾಯಣ ಅವರು, ಕೆಲವು ಸಂಸ್ಕೃತಶಬ್ದಗಳ ವಿವರಣೆಗಳ ಬಗೆಗೆ ವಿದ್ವಾನ್ ಎನ್.ರಂಗನಾಥಶರ್ಮಾ ಅವರು, ಜ್ಯೋತಿಷ ಮತ್ತು ಸೂಪಶಾಸ್ತ್ರಕ್ಕೆ ಸಂಬಂಧಿಸಿದ ಕೆಲವು ಶಬ್ದಗಳಿಗೆ ವಿದ್ವಾನ್ ನ. ಕೃಷ್ಣಜೋಯಿಸ್ ಅವರು, ಪ್ರಾದೇಶಿಕಭಾಷಾಪ್ರಭೇದದ ಕೆಲವು ಶಬ್ದಗಳಿಗೆ ಆಯಾ ಭಾಷೆಗಳಲ್ಲಿ ಗ್ರಂಥರಚನೆಮಾಡಿರುವ ಹಲವಾರು ಗ್ರಂಥಕರ್ತರು – ಹೀಗೆಯೇ ಅನೇಕ ಜನ ವಿದ್ವಾಂಸರು ಅರ್ಥಗಳನ್ನೂ ವಿವರಣೆಗಳನ್ನೂ ತಮ್ಮ ಪತ್ರಗಳ ಮೂಲಕ ಬರೆದು ತಿಳಿಸಿದ್ದಾರೆ. ಅವರೆಲ್ಲರ ನೆರವನ್ನು ನಾವು ಅತ್ಯಂತ ಕೃತಜ್ಞತೆಯಿಂದ ನೆನೆಯಬೇಕಾಗಿದೆ.

ಎಂಟನೆಯ ಸಂಪುಟದ ಸಿದ್ಧತೆಯ ಕಾರ್ಯದಲ್ಲಿ ಹಿಂದಿನ ಅಧ್ಯಕ್ಷರೂ ಪ್ರಧಾನಸಂಪಾದಕರೂ ಆಗಿದ್ದ ಪ್ರೊ॥ ಜಿ. ವೆಂಕಟಸುಬ್ಬಯ್ಯನವರು ಸಲ್ಲಿಸಿರುವ ಸೇವೆಯನ್ನು ವಿಶ್ವಾಸದಿಂದ ನೆನೆಯುತ್ತೇನೆ.

ಕನ್ನಡ ನಿಘಂಟಿನ ಸಿಬ್ಬಂದಿವರ್ಗ ನಿಘಂಟು ಕಾರ್ಯದಲ್ಲಿ ಪರಿಣತರಾಗಿದ್ದಾರೆ. ನಿಘಂಟಿನ ಹಸ್ತಪ್ರತಿಯ ಬರವಣಿಗೆ, ಪರಿಷ್ಕರಣ ಕಾರ್ಯ, ಕರಡಚ್ಚು ಪರಿಶೀಲನೆ ಮೊದಲಾದ ಎಲ್ಲ ಹಂತಗಳಲ್ಲೂ ಸಮರ್ಪಣಬುದ್ಧಿಯಿಂದ ದುಡಿದಿದ್ದಾರೆ. ಅವರ ಸಹಕಾರವನ್ನು ತುಂಬುಹೃದಯದಿಂದ ಸ್ಮರಿಸುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಗೊ.ರು. ಚನ್ನಬಸಪ್ಪನವರು, ಗೌ॥ ಕಾರ್ಯದರ್ಶಿಗಳಾದ ಪ್ರೊ॥ ಎಸ್. ಶ್ರೀನಿವಾಸನ್ ಅವರು, ಪ್ರೊ॥ ಎಂ. ಜಿ. ನಾಗರಾಜ್ ಅವರು, ಗೌ॥ ಕೋಶಾಧಿಕಾರಿಗಳಾದ ಪ್ರೊ॥ ಹೆಚ್. ಆರ್. ದಾಸೇಗೌಡ ಅವರು ಮತ್ತು ಇಂದಿನ ಅಧ್ಯಕ್ಷರಾದ ಡಾ॥ ಸಾ.ಶಿ. ಮರುಳಯ್ಯನವರು, ಗೌ॥ ಕಾರ್ಯದರ್ಶಿಗಳಾದ ಡಾ॥ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು, ಪ್ರೊ॥ ಕೆ.ಆರ್. ಇಕ್ಬಾಲ್ ಅಹಮದ್ ಅವರು, ಗೌ॥ ಕೋಶಾಧಿಕಾರಿಗಳಾದ ಶ್ರೀ ಎಂ. ಶ್ರೀರಾಮಯ್ಯನವರು — ಇವರೆಲ್ಲರೂ ಈ ಸಂಪುಟ ಹೊರಬರಲು ಒತ್ತಾಸೆ ನೀಡಿದ್ದಾರೆ. ಇವರೆಲ್ಲರಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಕನ್ನಡ ನಿಘಂಟಿನ ಉಪಸಂಪಾದಕರಾಗಿ ನಿವೃತ್ತಿಹೊಂದಿರುವ ಶ್ರೀ ಟಿ. ಆರ್. ಮಹಾದೇವಯ್ಯನವರು ಎಂಟನೆಯ ಸಂಪುಟದ ಕರಡಚ್ಚನ್ನು ತಿದ್ದುವುದರಲ್ಲಿ ನೆರವಾಗಿದ್ದಾರೆ. ಅವರ ಸಹಕಾರವನ್ನಿಲ್ಲಿ ಸ್ಮರಿಸುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಕನ್ನಡ ನಿಘಂಟಿನ ಸಂಪುಟಗಳನ್ನು ಪರಿಶೀಲಿಸಿದವರಿಗೆ ಕೆಲವು ನ್ಯೂನತೆಗಳೂ ಸ್ಖಾಲಿತ್ಯಗಳೂ ಕಂಡುಬರಬಹುದು. ಈ ನ್ಯೂನತೆಗಳ ಅರಿವು ನಮಗಾಗಿದೆ. ಈ ತೆರನ ಕಾರ್ಯವನ್ನು ಮೊದಲಬಾರಿಗೇ ಸರ್ವಸಮರ್ಪಕವಾಗಿ ನಿರ್ವಹಿಸುವುದು ಕಷ್ಟಸಾಧ್ಯವೆಂಬುದು ಈ ಕಾರ್ಯ ಮಾಡಿದವರಿಗೆಲ್ಲ ತಿಳಿದಿರುವ ಸಂಗತಿಯಾಗಿದೆ. ನಿಘಂಟಿನಲ್ಲಿ ಸಂಭವಿಸಿರಬಹುದಾದ ಈ ನ್ಯೂನತೆಗಳೂ ಸ್ಖಾಲಿತ್ಯಗಳೂ ನಮ್ಮ ಅಶ್ರದ್ಧೆಯಿಂದಾಗಲಿ ಅನವಧಾನದಿಂದಾಗಲಿ ಸಂಭವಿಸಿದವುಗಳಲ್ಲ. ಇವು ಅಗತ್ಯಮಾಹಿತಿಯ ಅಭಾವದಿಂದ, ಪ್ರಾಚೀನಕೃತಿಗಳ ಅಧಿಕೃತ ಸಂಸ್ಕರಣಗಳ ಕೊರತೆಯಿಂದ, ಪಾರಿಭಾಷಿಕ ಪದಗಳ ನಿಶ್ಚಿತಾರ್ಥಗಳನ್ನು ನಿಖರವಾಗಿ ತಿಳಿಸುವ ವಿದ್ವಾಂಸರ ಅಭಾವದಿಂದ ತಲೆದೋರಿರಬಹುದು. ಈ ನಿಘಂಟಿನ ಸಂಪುಟಗಳನ್ನು ಪರಿಶೀಲಿಸುವ ಸಹೃದಯವಿದ್ವಾಂಸರು ತಮಗೆ ಕಂಡುಬಂದ ನ್ಯೂನತೆಗಳನ್ನೂ ಸ್ಖಾಲಿತ್ಯಗಳನ್ನೂ ದಯವಿಟ್ಟು ಬರೆದು ತಿಳಿಸಿ ಈ ನಿಘಂಟಿನ ಉತ್ತಮಿಕೆಗೆ ಭಾಗಿಗಳಾಗಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ.

ಹಲವಾರು ವರ್ಷಗಳು ಅನೇಕವಿದ್ವಾಂಸರು ನಿರಂತರವಾಗಿ ಶ್ರಮಿಸಿದುದರ ಫಲವಾಗಿ ಸರ್ವಾಂಗಸುಂದರವಾಗಿ ಪ್ರಕಟವಾಗಿರುವ ಈ ನಿಘಂಟಿನ ಸಂಪುಟಗಳನ್ನು ಕನ್ನಡ ಜನತೆ ಅತ್ಯಂತ ಪ್ರೀತಿ ವಿಶ್ವಾಸಗಳಿಂದ ಸ್ವಾಗತಿಸುವರು ಎಂದು ನಂಬಿದ್ದೇನೆ. ಕನ್ನಡಿಗರ ಬಹುದಿನದ ಆಸೆ ನೆರವೇರಿದೆ ಎಂಬ ಸಂತೃಪ್ತಿ ಸಮಾಧಾನಗಳಿಂದ ಈ ಕಡೆಯದಾದ ಎಂಟನೆಯ ಸಂಪುಟವನ್ನು ಕನ್ನಡ ಜನತೆಯ ಕೈಯಲ್ಲಿಡುತ್ತಿದ್ದೇನೆ.

ದಿನಾಂಕ : ೫ - ೧೦ - ೧೯೯೫<br>
ಬೆಂಗಳೂರು : ೫೬೦ ೦೧೮

ಎಸ್. ಬಸವಾರಾಧ್ಯ<br>
ಪ್ರಧಾನ ಸಂಪಾದಕ

# ಪೀಠಿಕೆ

ಭರತಖಂಡದಲ್ಲಿ ನಿಘಂಟುರಚನೆ ಕ್ರಿ. ಪೂ.೫ನೆಯ ಶತಮಾನಕ್ಕಿಂತಲೂ ಮೊದಲೇ ಪ್ರಾರಂಭವಾಗಿದ್ದಿತೆಂದು ತಿಳಿದುಬರುತ್ತದೆ. ಸಂಸ್ಕೃತದಲ್ಲಿ 'ವೈದಿಕನಿಘಂಟು' ಮೊಟ್ಟಮೊದಲನೆಯದು. ಲೌಕಿಕ ನಿಘಂಟುಗಳಲ್ಲಿ ವ್ಯಾಡಿ, ವಾಚಸ್ಪತಿ, ವರರುಚಿ, ಕಾತ್ಯ, ಕಾತ್ಯಾಯನ, ಭಾಗುರಿ, ಧನ್ವಂತರಿ, ಅಮರಸಿಂಹ, ಪುರುಷೋತ್ತಮ, ಶಾಶ್ವತ, ಹಲಾಯುಧಭಟ್ಟ – ಇವರೇ ಮೊದಲಾದವರು ರಚಿಸಿರುವ ನಿಘಂಟುಗಳು ಮುಖ್ಯವಾದುವುಗಳು. ೧೮೯೦ರಲ್ಲಿ ವಾಮನ ಶಿವರಾಮ ಆಪ್ಟೆಯವರು, ೧೮೯೯ರಲ್ಲಿ ಪಾಶ್ಚಾತ್ಯ ವಿದ್ವಾಂಸರಾದ ಸರ್ ಮೋನಿಯರ್ ವಿಲಿಯಮ್ಸ್ ಅವರು ಸಾಕಷ್ಟು ಸಮಗ್ರವೂ ವ್ಯಾಪಕವೂ ಆದ ಸಂಸ್ಕೃತ-ಇಂಗ್ಲಿಷ್ ನಿಘಂಟುಗಳನ್ನು ರಚಿಸಿದ್ದಾರೆ.

ಕನ್ನಡದಲ್ಲಿ ನಿಘಂಟುರಚನಾಕಾರ್ಯ ಕ್ರಿ.ಶ. ೧೦ನೆಯ ಶತಮಾನದಲ್ಲಿಯೇ ಪ್ರಾರಂಭವಾಯಿತೆಂದು ತಿಳಿದುಬರುತ್ತದೆ. ರನ್ನನ 'ರನ್ನಕಂದ' ಕನ್ನಡದ ಪ್ರಪ್ರಥಮ ಉಪಲಬ್ಧ ನಿಘಂಟು. ಅನಂತರ ಎರಡನೆಯ ನಾಗವರ್ಮನ 'ಅಭಿನವಾಭಿಧಾನಂ', ತರುವಾಯ 'ಕರ್ಣಾಟಕ ಶಬ್ದಸಾರಂ', 'ಕರ್ಣಾಟಕ ನಿಘಂಟು', ಚತುರಾಸ್ಯ ಬೊಮ್ಮರಸನ 'ಚತುರಾಸ್ಯ ನಿಘಂಟು', ಲಿಂಗಮಂತ್ರಿಯ 'ಕಬ್ಬಿಗರ ಕೈಪಿಡಿ', ವಿರಕ್ತ ತೋಂಟದಾರ್ಯನ 'ಕರ್ಣಾಟಕ ಶಬ್ದಮಂಜರಿ', ಅನಂತರ 'ಭಾರತ ನಿಘಂಟು', ಶೃಂಗಾರಕವಿಯ 'ಕರ್ಣಾಟಕ ಸಂಜೀವನಂ', ಚೆನ್ನಕವಿಯ 'ನಾನಾರ್ಥಕಂದ', ದೇವೋತ್ತಮನ 'ನಾನಾರ್ಥರತ್ನಾಕರ', ಸೂರ್ಯಕವಿಯ 'ಕವಿಕಂಠಹಾರ' – ಮೊದಲಾದ ನಿಘಂಟುಗಳು ಪ್ರಕಟವಾಗಿವೆ.

೧೯ನೆಯ ಶತಮಾನದಲ್ಲಿಯ, ರೆವರೆಂಡ್ ರೀವ್ (ಕ್ರಿ. ಶ.೧೮೩೨) ಅವರ 'ಕನ್ನಡ-ಇಂಗ್ಲಿಷ್' ನಿಘಂಟು ಪಾಶ್ಚಾತ್ಯವಿದ್ವಾಂಸರು ಸಿದ್ಧಪಡಿಸಿದ ನಿಘಂಟುಗಳಲ್ಲಿ ಮೊದಲನೆಯದು. ಅನಂತರ ಡೇನಿಯಲ್ ಸ್ಯಾಂಡರ್‌ಸನ್ (ಕ್ರಿ.ಶ.೧೮೫೮) ಅವರು ರೆವರೆಂಡ್ ರೀವ್ ಅವರ ನಿಘಂಟನ್ನು ಪರಿಷ್ಕರಿಸಿ, ವಿಸ್ತರಿಸಿ 'ಕನ್ನಡ-ಇಂಗ್ಲಿಷ್' ನಿಘಂಟನ್ನು ಪ್ರಕಟಿಸಿದರು. ತರುವಾಯ ಹೆಸರಿಸಬಹುದಾದ ನಿಘಂಟು ಎಂದರೆ ರೆವರೆಂಡ್ ಎಫ್. ಕಿಟ್ಟೆಲ್ (ಕ್ರಿ. ಶ.೧೮೯೪) ಅವರ 'ಕನ್ನಡ-ಇಂಗ್ಲಿಷ್' ನಿಘಂಟು. ಇದರ ರಚನೆಗೆ ಸುಮಾರು ೧೮ ವರ್ಷಗಳ ಕಾಲ ಹಿಡಿದಿದೆ. ಇದು ೧೭೫೨ ಪುಟಗಳನ್ನು ಒಳಗೊಂಡಿದೆ. ಈ ನಿಘಂಟು ಒಂದು ಶಾಸ್ತ್ರೀಯನಿಘಂಟಾಗಿದ್ದು ಪ್ರತಿಶಬ್ದಕ್ಕೂ ಆಕರವನ್ನು ಸೂಚಿಸಿರುವುದು ಇದರ ವೈಶಿಷ್ಟ್ಯವಾಗಿದೆ. ಒಟ್ಟು ೩೬ ಕನ್ನಡ ಗ್ರಂಥಗಳನ್ನು ಆಧಾರವಾಗಿ ಇಟ್ಟುಕೊಂಡಿರುವುದಾಗಿಯೂ ಅವುಗಳಲ್ಲಿಯೂ ಕೆಲವು ಗ್ರಂಥಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳಲು ಸಾಧ್ಯವಾಗಲಿಲ್ಲವೆಂದೂ ಕಿಟ್ಟೆಲ್ಲರು ಹೇಳಿದ್ದಾರೆ. ಈ ನಿಘಂಟಿನ ರಚನೆಯ ಕಾಲಕ್ಕೆ ಅನೇಕ ಪ್ರಾಚೀನ ಕನ್ನಡ ಕಾವ್ಯಗಳು ಬೆಳಕು ಕಂಡಿರಲಿಲ್ಲ. ವಚನಸಾಹಿತ್ಯ, ದಾಸಸಾಹಿತ್ಯ ಕಿಟ್ಟೆಲ್ಲರಿಗೆ ಲಭ್ಯವಾಗಿರಲಿಲ್ಲ. ಕನ್ನಡ ಶಾಸನಗಳನ್ನು ಈ ನಿಘಂಟಿನಲ್ಲಿ ಬಳಸಿಕೊಳ್ಳಲು ಸಾಧ್ಯವಾಗಿರಲಿಲ್ಲ. ಆ ಕಾಲಕ್ಕೆ ಈ ನಿಘಂಟು ಒಂದು ಸಮಗ್ರರಚನೆಯದೆಂದು ಪರಿಗಣಿತವಾಗಿದ್ದರೂ ಈ ಕೆಲವೊಂದು ಅರೆಕೊರೆಗಳೂ ಪರಿಮಿತಿಗಳೂ ಇದ್ದುದಂತೂ ನಿಜ. ಈ ಅರೆಕೊರೆಗಳನ್ನು ಮತ್ತು ಪರಿಮಿತಿಗಳನ್ನು ಗಮನಿಸಿದ ವಿದ್ವಾಂಸರಿಗೆ, ಕನ್ನಡದಲ್ಲಿ ಒಂದು ಪ್ರಮಾಣಭೂತವೂ ಸಮಗ್ರವೂ ಆದ, ಭಾಷಾಶಾಸ್ತ್ರನಿಯಮಗಳಿಗೆ ಅನುಸಾರವಾದ, ಚಾರಿತ್ರಿಕವಿವರಣೆಯಿಂದ ಕೂಡಿದ ನಿಘಂಟಿನ ರಚನೆ ಅವಶ್ಯವೆನಿಸಿತು.

ಕನ್ನಡ ನಿಘಂಟುರಚನೆ ಕನ್ನಡ ಸಾಹಿತ್ಯ ಪರಿಷತ್ತಿನ ಮುಖ್ಯೋದ್ದೇಶಗಳಲ್ಲಿ ಒಂದಾಗಿತ್ತು. ಇದಕ್ಕನುಗುಣವಾಗಿ ದಿ॥ ಬೆಳ್ಳಾವೆ ವೆಂಕಟನಾರಣಪ್ಪನವರು ಹಲವಾರು ವಿದ್ವಾಂಸರ ನೆರವಿನಿಂದ 'ಷಟ್ಪದೀಕಾವ್ಯಗಳ ನಿಘಂಟು', 'ನಿಘಂಟುಗಳ ನಿಘಂಟು' ಮತ್ತು 'ಪಂಪಭಾರತ ನಿಘಂಟು' ಇವುಗಳನ್ನು ಸಿದ್ಧಪಡಿಸಿದರು. ೧೯೪೧ನೆಯ ಇಸವಿ ಡಿಸೆಂಬರ್ ತಿಂಗಳಿನಲ್ಲಿ ಹೈದರಾಬಾದಿನಲ್ಲಿ ಸೇರಿದ್ದ ಕನ್ನಡ ಸಾಹಿತ್ಯ ಪರಿಷತ್ತಿನ ಸಕಲಸದಸ್ಯರ ವಾರ್ಷಿಕಾಧಿವೇಶನದಲ್ಲಿ ದಿ॥ ಡಾ.ರಂ. ಶ್ರೀ. ಮುಗಳಿಯವರು ಕನ್ನಡ ನಿಘಂಟು ರಚನೆಯನ್ನು ಕುರಿತು ಮಾತನಾಡಿ, ಕನ್ನಡ ಸಾಹಿತ್ಯ ಪರಿಷತ್ತು ಆ ಕಾರ್ಯವನ್ನು ಕೈಕೊಳ್ಳಬೇಕೆಂದು ಸೂಚಿಸಿದರು. ಅದರಂತೆ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ನಿಘಂಟು ರಚನಾಕಾರ್ಯವನ್ನು ಕೈಕೊಳ್ಳಬೇಕೆಂಬ ನಿರ್ಣಯ ಮಂಡನೆಯಾಯಿತು. ಆ ನಿರ್ಣಯವನ್ನು ಸಭೆಯು ಒಪ್ಪಿ ಒಂದು ಯೋಜನೆಯನ್ನು ಸಿದ್ಧಪಡಿಸಲು ಡಾ॥ ರಂ. ಶ್ರೀ. ಮುಗಳಿಯವರ ಸಂಚಾಲಕತ್ವದಲ್ಲಿ ಒಂದು ಉಪಸಮಿತಿಯನ್ನು ರಚಿಸಿತು. ಆ ಉಪಸಮಿತಿಯು ರಚಿಸಿದ ಯೋಜನೆಯನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಸಮಿತಿಯು ಹಲವಾರು ಬಾರಿ ಚರ್ಚಿಸಿ ಒಂದು ಸಂಪಾದಕಸಮಿತಿಯನ್ನು ನೇಮಿಸಿತು. ಆ ಸಂಪಾದಕಸಮಿತಿಯಲ್ಲಿ ಪ್ರೊ॥ ಎ. ಆರ್. ಕೃಷ್ಣಶಾಸ್ತ್ರಿಗಳು ಅಧ್ಯಕ್ಷರಾಗಿಯೂ ಪ್ರೊ॥ ಡಿ. ಎಲ್. ನರಸಿಂಹಾಚಾರ್, ಪ್ರೊ॥ ಕ. ವೆಂ. ರಾಘವಾಚಾರ್ ಸದಸ್ಯರಾಗಿಯೂ, ಪ್ರೊ॥ ತೀ.ನಂ. ಶ್ರೀಕಂಠಯ್ಯನವರು ಕಾರ್ಯದರ್ಶಿಗಳಾಗಿಯೂ ಇದ್ದರು. ಈ ಯೋಜನೆಯ ಪ್ರಕಾರ ಸಂಪಾದಕಸಮಿತಿಗೆ ವಿವಿಧಾಂಗಗಳಲ್ಲಿ ಒದಗಬಹುದಾದ ಸಂದೇಹಗಳನ್ನು ಪರ್ಯಾಲೋಚಿಸಿ ಸಲಹೆ ಮಾಡುವುದಕ್ಕೂ ತಮಿಳು, ತೆಲುಗು, ಮಲೆಯಾಳಂ, ಪ್ರಾಕೃತ, ಮರಾಠಿ ಮೊದಲಾದ ಭಾಷೆಗಳಿಗೆ ಸಂಬಂಧಿಸಿದ ವಿಶೇಷಾಂಶಗಳನ್ನು ತಿಳಿಸಿ ಸಹಾಯ ಮಾಡುವುದಕ್ಕೂ ಒಂದು ಸಮಾಲೋಚನ ಸಮಿತಿಯು ಅಸ್ತಿತ್ವಕ್ಕೆ ಬಂದಿತು. ಈ ಸಮಾಲೋಚನ ಸಮಿತಿಯಲ್ಲಿ ರಾಜಸೇವಾಸಕ್ತ ಬಿ.ಎಂ. ಶ್ರೀಕಂಠಯ್ಯನವರು, ಎಂ. ಗೋವಿಂದ ಪೈ ಅವರು, ಎಲ್. ವಿ. ರಾಮಸ್ವಾಮಿ ಅಯ್ಯರ್ ಅವರು, ಡಾ॥ ಎ. ಎನ್. ಉಪಾಧ್ಯೆ ಅವರು, ಆಸ್ಥಾನ ವಿದ್ವಾನ್ ಡಾ॥ ಅನಂತಕೃಷ್ಣಶರ್ಮ ಅವರು ಮತ್ತು ಪಿ.ಎಂ. ಸೋಮಸುಂದರಂ ಅವರು ಸದಸ್ಯರಾಗಿದ್ದರು. ಈ ಎಲ್ಲಾ ಏರ್ಪಾಡುಗಳೊಂದಿಗೆ ದಿನಾಂಕ ೨೭-೧-೧೯೪೪ ರಿಂದ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕನ್ನಡ ನಿಘಂಟು ಕಚೇರಿಯು ಕೆಲಸಮಾಡಲಾರಂಭಿಸಿತು. ಸುಮಾರು ೮೦ಕ್ಕೂ ಹೆಚ್ಚು ಜನ ವಿದ್ವಾಂಸರು ಈ ನಿಘಂಟಿನ ಶಬ್ದಸಂಗ್ರಹಕಾರ್ಯದಲ್ಲಿ ನೆರವಾಗಿದ್ದಾರೆ.

ಈ ನಿಘಂಟಿನಲ್ಲಿ ದೇಶ್ಯ, ತದ್ಭವ ಶಬ್ದಗಳನ್ನು ಮಾತ್ರ ಸೇರಿಸಿಕೊಂಡು ಒಟ್ಟು ಐದುಸಾವಿರ ಪುಟಗಳನ್ನು ೪ ಸಂಪುಟಗಳಲ್ಲಿ ಹೊರತರಬೇಕೆಂದು ಮೊದಲು ನಿರ್ಧರಿಸಲಾಗಿತ್ತು. ಆದರೆ ಹಲವಾರು ಮಹನೀಯರ ಅಭಿಪ್ರಾಯದ ಮೇರೆಗೆ ಕಾವ್ಯಾಧಾರವಿರುವ ಸಂಸ್ಕೃತಶಬ್ದಗಳನ್ನೂ ಅನ್ಯದೇಶ್ಯಶಬ್ದಗಳನ್ನೂ ಇನ್ನಿತರ ಧಾರ್ಮಿಕ, ದಾರ್ಶನಿಕ, ಪಾರಿಭಾಷಿಕ ಶಬ್ದಗಳನ್ನೂ ಈ ನಿಘಂಟಿನಲ್ಲಿ ಸೇರಿಸಬೇಕೆಂದು ತೀರ್ಮಾನವಾಯಿತು. ಅದರ ಪ್ರಕಾರ ಶಬ್ದಗಳನ್ನು ವಿವಿಧಮೂಲಗಳಿಂದ ಸಂಗ್ರಹಿಸಲಾಯಿತು. ಕನ್ನಡದ ಅತ್ಯಂತ ಪ್ರಾಚೀನ ಶಾಸನವಾದ ಸುಮಾರು ೫ನೆಯ ಶತಮಾನದ ಹಲ್ಮಿಡಿ ಶಾಸನದಿಂದ ಹಿಡಿದು ಈವರಗೆ ಉಪಲಬ್ಧವಿರುವ ಸಾವಿರಾರು ಶಾಸನಗಳನ್ನು ಪರಿಶೀಲಿಸಿ ಶಬ್ದಸಂಗ್ರಹ ಮಾಡಲಾಗಿದೆ. ಕನ್ನಡದ ಪ್ರಥಮ ಉಪಲಬ್ಧಕೃತಿಯಾದ 'ಕವಿರಾಜಮಾರ್ಗ' ದಿಂದ ಹಿಡಿದು ೧೯೬೦ನೆಯ ಇಸವಿಯ ವರೆಗಿನ ಮತ್ತು ಆ ತರುವಾಯದ ಕೆಲವು ಗ್ರಂಥಗಳಿಂದಲೂ ಶಬ್ದಗಳನ್ನು ಸಂಗ್ರಹಿಸಲಾಗಿದೆ. ಮುದ್ರಿತ ಗ್ರಂಥಗಳಷ್ಟೇ ಅಲ್ಲದೆ ಮೈಸೂರಿನ ಪ್ರಾಚ್ಯವಿದ್ಯಾಸಂಶೋಧನಾಲಯ ಮತ್ತು ಕನ್ನಡ ಅಧ್ಯಯನಸಂಸ್ಥೆಗಳಲ್ಲಿ ಸಂಗ್ರಹವಾಗಿರುವ ಅಮುದ್ರಿತ ಗ್ರಂಥಗಳಿಂದಲೂ ಶಬ್ದಗಳನ್ನು ಸಂಗ್ರಹಿಸಲಾಗಿದ. ಕಿಟ್ಟೆಲ್ ಅವರ ಕೋಶದಲ್ಲಿರುವ ಪ್ರಯೋಗಸಹಿತವಾಗಿರುವ ಶಬ್ದಗಳನ್ನೂ ಪ್ರಯೋಗಾಧಾರವಿಲ್ಲದಿರುವ ಸಂಸ್ಕೃತಶಬ್ದಗಳನ್ನೂ ಯಥೋಚಿತವಾಗಿ ಸೇರಿಸಿಕೊಳ್ಳಲಾಗಿದೆ. ರೆವರೆಂಡ್ ರೀವ್, ಸ್ಯಾಂಡರ್‌ಸನ್, ಗ್ಯಾರೆಟ್, ಗಂಗಾಧರ ಮಡಿವಾಳೇಶ್ವರ ತೂರಮರಿ, ಗುರುರಾವವಿಠಲಮೋಹರೆ ಮುಂತಾದವರ ಪ್ರಕಟಿತನಿಘಂಟುಗಳಲ್ಲಿ, ಪ್ರಭಣ್ಣ, ಶ್ಯಾಮಣ್ಣ, ಅನಂತನಾರಾಯಣ-ಮುಂತಾದವರ ಅಪ್ರಕಟಿತನಿಘಂಟುಗಳಲ್ಲಿ ಇರುವ ಶಬ್ದಾರ್ಥಪ್ರಯೋಗಗಳನ್ನು ವಿಚಾರಮಾಡಿ ಸೂಕ್ತವೆನಿಸಿದ ಶಬ್ದಗಳನ್ನು ಅಂಗೀಕರಿಸಲಾಗಿದೆ. ಪ್ರಯೋಗಾಧಾರವಿರುವ ಜೈನ, ವೀರಶೈವ, ವೈಷ್ಣವ ಮೊದಲಾದ ಧಾರ್ಮಿಕಶಬ್ದಗಳೂ ಲಕ್ಷಣಗ್ರಂಥಗಳಲ್ಲಿ ಪ್ರಯೋಗವಾಗಿರುವ ಅಲಂಕಾರ, ಛಂದಸ್ಸು, ವ್ಯಾಕರಣ, ಕಾವ್ಯಮೀಮಾಂಸೆ ಮೊದಲಾದ ಪಾರಿಭಾಷಿಕಶಬ್ದಗಳೂ, ಸಂಗೀತ, ನೃತ್ಯ, ಶಿಲ್ಪ, ಚಿತ್ರ, ವಾಸ್ತು ಮುಂತಾದ ಕಲೆಗಳಿಗ ಸಂಬಂಧಿಸಿದ ಶಬ್ದಗಳೂ, ಅಶ್ವಶಾಸ್ತ್ರ, ಗಜಶಾಸ್ತ್ರ, ಗಣಿತಶಾಸ್ತ್ರ, ಸೂಪಶಾಸ್ತ್ರ,ಕಾಮಶಾಸ್ತ್ರ, ಜ್ಯೋತಿಷ, ಖಡ್ಗನೀತಿ, ರಾಜನೀತಿ, ರತ್ನಪರೀಕ್ಷೆ, ತರ್ಕ, ನ್ಯಾಯ, ವೈದ್ಯ- ಮುಂತಾದ ಶಾಸ್ತ್ರಗಳಿಗೆ ಸಂಬಂಧಿಸಿದ ಪಾರಿಭಾಷಿಕಶಬ್ದಗಳೂ, ಹೆಚ್ಚಾಗಿ ಬಳಕೆಯಲ್ಲಿರುವ ವೈಜ್ಞಾನಿಕ ಪರಿಭಾಷೆಯ ಶಬ್ದಗಳೂ, ಪಠ್ಯಪುಸ್ತಕಗಳಲ್ಲಿ ಬಳಕೆಯಾಗಿರುವ ಶಬ್ದಗಳೂ ಒಂದು ಪರಿಮಿತಿಯಲ್ಲಿ ಸೇರ್ಪಡೆಯಾಗಿವೆ. ಉತ್ತರ ಕರ್ನಾಟಕ, ಮೈಸೂರು, ಕರಾವಳಿ ಮೊದಲಾದ ಪ್ರದೇಶಗಳ ಶಬ್ದಗಳನ್ನು ಅವಶ್ಯಕವೆನ್ನಿಸುವಷ್ಟನ್ನು ಈ ನಿಘಂಟು ಒಳಕೊಂಡಿದೆ. ಹೀಗೆ ಸುಮಾರು ಹತ್ತುಲಕ್ಷಪ್ರಯೋಗಗಳ ಪಟ್ಟಿಕೆಗಳನ್ನು ಈವರೆಗೆ ಸಂಗ್ರಹಿಸಿಡಲಾಗಿದೆ. ವಿಪುಲವಾದ ಈ ಶಬ್ದಸಂಗ್ರಹದಿಂದಾಗಿ ಕನ್ನಡ ನಿಘಂಟು ಮೊದಲು ಉದ್ದೇಶಿಸಿದುದಕ್ಕಿಂತ ಮಿಗಿಲಾಗಿ ಬೆಳೆದು ನಾಲ್ಕು ಸಂಪುಟಗಳ ಕಾರ್ಯ ಎಂಟು ಸಂಪುಟಗಳಿಗೆ ವಿಸ್ತಾರಗೊಂಡಿತು.

ಕನ್ನಡ ನಿಘಂಟು ಡೆಮ್ಮಿ ಚತುಷ್ಪತ್ರ ಆಕಾರದಲ್ಲಿ ಪ್ರಕಟವಾಗಿದೆ. ಇದರ ಪ್ರತಿಯೊಂದು ಪುಟದಲ್ಲಿಯೂ ಎರಡೆರಡು ಅಂಕಣಗಳಿದ್ದು, ಒಂದೊಂದು ಅಂಕಣದಲ್ಲಿ ೪೭ಸಾಲುಗಳಿವೆ. ಈ ನಿಘಂಟಿನಲ್ಲಿ ಸುಮಾರು ಎರಡು ಲಕ್ಷಕ್ಕೂ ಮೇಲ್ಪಟ್ಟು ಮುಖ್ಯೋಲ್ಲೇಖಗಳೂ, ಉಪಉಲ್ಲೇಖಗಳೂ, ನುಡಿಗಟ್ಟುಗಳೂ, ದೇಶ್ಯ, ಅನ್ಯದೇಶ್ಯ, ತತ್ಸಮ, ಸಮಸಂಸ್ಕೃತ, ತದ್ಭವ ಶಬ್ದಗಳೂ ಕಾವ್ಯಾಧಾರವಿರುವ ಸಂಸ್ಕೃತ ಶಬ್ದಗಳೂ, ಕಿಟ್ಟೆಲ್ ಅವರ ಕೋಶದ ಕಾವ್ಯಪ್ರಯೋಗಗಳಿಲ್ಲದ ಸಂಸ್ಕೃತಶಬ್ದಗಳೂ ಎಡೆಪಡೆದಿವೆ. ಈ ನಿಘಂಟಿಗೆ ಕಿಟ್ಟೆಲ್ ಅವರ ಕೋಶವನ್ನು ವಿಶೇಷವಾಗಿ ಬಳಸಿಕೊಳ್ಳಲಾಗಿದೆ. ಕೃತ್, ತದ್ಧಿತ ಪ್ರತ್ಯಯಗಳನ್ನೂ ಪ್ರಶ್ನೆ, ಅವಧಾರಣೆ, ಸಂಶಯ ಮುಂತಾದ ಭಾವಸೂಚಕಪ್ರತ್ಯಯಗಳನ್ನೂ ಅವ್ಯಯ, ಅನುಕರಣಶಬ್ದಗಳನ್ನೂ ಪ್ರತ್ಯೇಕ ಉಲ್ಲೇಖಗಳನ್ನಾಗಿ ತೋರಿಸಲಾಗಿದೆ. ಕ್ರಿ.ಶ. ಸುಮಾರು ೧೦೦೦ಕ್ಕೆ ಹಿಂದಿನ ಶಾಸನಗಳಲ್ಲಿ ದೊರೆಯುವ, ಭಾಷಾದೃಷ್ಟಿಯಿಂದ ವೈಶಿಷ್ಟ್ಯ ಕಂಡುಬರುವಂಥ ಅಂಕಿತನಾಮಗಳನ್ನು ಸೇರಿಸಿಕೊಳ್ಳಲಾಗಿದೆ. ದಿನನಿತ್ಯ ಬಳಕೆಯಲ್ಲಿರುವ ರೂಢಿಯ ಅನೇಕ ಶಬ್ದಗಳನ್ನು ಪ್ರಯೋಗಾಧಾರವಿಲ್ಲದಿದ್ದರೂ ಸೇರಿಸಿಕೊಳ್ಳಲಾಗಿದೆ. ಹಲವಾರು ನುಡಿಗಟ್ಟುಗಳೂ ಗಾದೆಗಳೂ ಇದರಲ್ಲಿ ಎಡೆಪಡೆದಿವೆ.

ಮುಖ್ಯೋಲ್ಲೇಖಗಳಾಗಿ ಬರುವ ಶಬ್ದಗಳನ್ನು ಕ್ರಿಯಾಪದ, ನಾಮಪದ, ಗುಣವಾಚಕ, ಅವ್ಯಯ, ಪ್ರತ್ಯಯ, ಸರ್ವನಾಮ, ಉಪಸರ್ಗ ಎಂದು ವಿಂಗಡಿಸಿದೆ. ಮುಖ್ಯಶಬ್ದಗಳ ಪಕ್ಕದಲ್ಲಿಯೇ ಅವುಗಳನ್ನು ದುಂಡುಕಂಸಗಳಲ್ಲಿ (ಕ್ರಿ) (ನಾ) (ಗು) (ಅ) (ಪ್ರ) (ಸ) (ಉಪ) ಎಂದು ಸೂಚಿಸಲಾಗಿದೆ. ತರುವಾಯ ಶಬ್ದಗಳಿಗಿರುವ ಅನೇಕಾರ್ಥಗಳನ್ನು ಸೂಚಿಸಿ ಪ್ರತಿಯೊಂದು ಅರ್ಥಕ್ಕೂ ಕಾಲಾನುಕ್ರಮದಲ್ಲಿ ಪ್ರಯೋಗಗಳನ್ನು ಕೊಡಲಾಗಿದೆ. ಶಬ್ದದ ವಾಚ್ಯಾರ್ಥವನ್ನು ಮೊದಲು ಕೊಟ್ಟು ಅನಂತರ ಲಕ್ಷ್ಯಾರ್ಥಗಳನ್ನು ತೋರಿಸಲಾಗಿದೆ. ಒಂದು ಶಬ್ದಕ್ಕೆ ಹಲವಾರು ಪರ್ಯಾಯ ರೂಪಗಳಿದ್ದರೆ ಅವುಗಳನ್ನು ಮುಖ್ಯಶಬ್ದದೊಂದಿಗೆ ತೋರಿಸಲಾಗಿದೆ. ಪರ್ಯಾಯರೂಪಗಳನ್ನು ವರ್ಣಾನುಕ್ರಮದಲ್ಲಿ ಆಯಾ ಸ್ಥಳಗಳಲ್ಲಿ ಕೊಟ್ಟು ಮುಖ್ಯಶಬ್ದಕ್ಕೆ 'ನೋ' ಎಂದು ನಿರ್ದೇಶಿಸಲಾಗಿದೆ. ಪ್ರತಿಯೊಂದು ಮುಖ್ಯಶಬ್ದಕ್ಕೂ ನಿಷ್ಪತ್ತಿಯನ್ನು ಆ ಶಬ್ದದ ಕೆಳಗೆ ಚೌಕಕಂಸದಲ್ಲಿ ಸೂಚಿಸಿದೆ. ಶಬ್ದ ಸಂಸ್ಕೃತವಾಗಿದ್ದರೆ [ಸಂ] ಎಂದೂ ದೇಶ್ಯವಾಗಿದ್ದರೆ [ದೇ]ಎಂದೂ ಸೂಚಿಸಿ ಇತರ ದ್ರಾವಿಡಭಾಷೆಗಳ ಜ್ಞಾತಿಶಬ್ದಗಳನ್ನು ಸೂಚಿಸಲಾಗಿದೆ. ಅನ್ಯದೇಶ್ಯಶಬ್ದವಾಗಿದ್ದರೆ ಅದು ಯಾವ ಭಾಷೆಯಿಂದ ಬಂದದ್ದು ಎಂಬುದನ್ನು <- ಚಿಹ್ನೆಯ ಮುಂದೆ ಆಧಾರಶಬ್ದಗಳನ್ನು ಕೊಟ್ಟು ತಿಳಿಸಲಾಗಿದೆ. ಶಬ್ದದ ನಿಷ್ಪತ್ತಿ ಖಚಿತವಾಗಿ ಗೊತ್ತಾಗದ ಕಡೆಗಳಲ್ಲಿ [?] ಪ್ರಶ್ನಾರ್ಥಕಚಿಹ್ನೆಯನ್ನು ಹಾಕಲಾಗಿದೆ. ಹೀಗೆ ಈ ನಿಘಂಟು ಭಾಷಾಶಾಸ್ತ್ರನಿಯಮಗಳಿಗೆ ಅನುಸಾರವಾಗಿಯೂ ಕನ್ನಡ ಭಾಷೆಯ ಅವಸ್ಥೆಗಳಿಗೆ ಅನುಗುಣವಾದ ಚಾರಿತ್ರಿಕವಿವರಣೆಯಿಂದ ಕೂಡಿಯೂ ಪ್ರಮಾಣಭೂತವಾಗಿಯೂ ಸಮಗ್ರವಾಗಿಯೂ ಇರುವಂತೆ ನೋಡಿಕೊಳ್ಳಲಾಗಿದೆ.

ಕನ್ನಡ ಭಾಷೆಯಲ್ಲಿ ಈ ಬಗೆಯ ಶಾಸ್ತ್ರೀಯವಾದ ನಿಘಂಟು ಸಿದ್ಧವಾಗುತ್ತಿರುವುದು ಇದೇ ಮೊದಲು. ನಮಗೆ ತಿಳಿದಂತೆ ಈ ತೆರನ ನಿಘಂಟು ಬೇರಾವ ಭಾರತೀಯ ಭಾಷೆಗಳಲ್ಲಿಯೂ ಈವರೆಗೆ ರಚಿತವಾದಂತೆ ಕಂಡುಬಂದಿಲ್ಲ. ಭಾಷಿಕ, ಸಾಹಿತ್ಯಿಕ, ಸಾಮಾಜಿಕ, ಸಾಂಸ್ಕೃತಿಕ ಅಧ್ಯಯನಗಳನ್ನು ಕೈಕೊಳ್ಳುವವರಿಗೆ ಈ ನಿಘಂಟು ಒಂದು ಉಪಯುಕ್ತ ಆಕರಗ್ರಂಥವೆಂದು ಹೇಳಬಹುದಾಗಿದೆ. ಇದು ವಿದ್ವಾಂಸರಿಂದ ಹಿಡಿದು ಅಭ್ಯಾಸಿಗಳವರೆಗೆ ವಿವಿಧವರ್ಗಗಳ ಜನರಿಗೆ ಉಪಯೋಗಕ್ಕೆ ಬರಬಹುದಾಗಿದೆ. ಈ ನಿಘಂಟಿನಿಂದ ಅಗತ್ಯಗಳಿಗನುಸಾರವಾಗಿ ಸಾಮಾನ್ಯಸ್ವರೂಪದ ಹಾಗೂ ವಿಶಿಷ್ಟವಿಷಯಗಳ ಪ್ರತ್ಯೇಕ ನಿಘಂಟುಗಳನ್ನು ಸಿದ್ಧಪಡಿಸಿಕೊಳ್ಳಬಹುದಾಗಿದೆ.

ಪ್ರಮಾಣಭೂತವಾದ ಈ ನಿಘಂಟಿನ ರಚನಾಕಾರ್ಯವು ಬಹಳ ವಿಳಂಬವಾಗಿದೆ ಎಂಬ ಮಾತುಗಳು ಕೇಳಿಬಂದುದೂ ಉಂಟು. ಇಂತಹ ಕಾರ್ಯಗಳು ತ್ವರಿತಗತಿಯಲ್ಲಿ ಆಗುವಂತಹವುಗಳಲ್ಲ ಎಂಬುದಕ್ಕೆ ವಿಶ್ವದ ಪ್ರಮುಖ ನಿಘಂಟುಗಳಾದ 'ಆಕ್ಸ್‌ಫರ್ಡ್' ಮತ್ತು 'ವೆಬ್‌ಸ್ಟರ್' ನಿಘಂಟುಗಳ ರಚನೆಗೆ ತೆಗೆದುಕೊಂಡ ಕಾಲ ಮತ್ತು ತಗುಲಿದ ವೆಚ್ಚವನ್ನು ಗಮನಿಸಬಹುದಾಗಿದೆ.

ಆಕ್ಸ್‌ಫರ್ಡ್ ನಿಘಂಟು ಕ್ರಿ. ಶ. ೧೮೫೭ ರಲ್ಲಿ ಪ್ರಾರಂಭವಾಗಿ ೧೯೨೮ ರಲ್ಲಿ ಮುಕ್ತಾಯವಾಗಿದೆ. ಒಟ್ಟು ಹದಿನೈದು ಸಾವಿರಕ್ಕೂ ಹೆಚ್ಚು ಪುಟಗಳಿರುವ ಈ ನಿಘಂಟಿನಲ್ಲಿ ೪,೧೪,೮೨೫ ಪದಗಳೂ ಸಮಾಸಗಳೂ ಸೇರ್ಪಡೆಯಾಗಿವೆ. ೧೮ ಲಕ್ಷಕ್ಕೂ ಮೀರಿದ ಪ್ರಯೋಗಗಳು ಈ ನಿಘಂಟಿನಲ್ಲಿವೆ. ಈ ನಿಘಂಟಿನ ರಚನಾಕಾರ್ಯದಲ್ಲಿ ೪ ಜನ ಪ್ರಧಾನಸಂಪಾದಕರೂ ೮೪ ಜನ ಉಪಸಂಪಾದಕರೂ ೬೫ ಜನ ಸಹಾಯಕಸಂಪಾದಕರೂ ೨೪ ಜನ ಕರಡಚ್ಚು ತಿದ್ದಿದವರೂ ೧೨೨೭ ಜನ ಖಾಸಗಿ ವಿದ್ವಾಂಸರೂ ದುಡಿದಿದ್ದಾರೆ. ಈ ನಿಘಂಟುರಚನೆಗ ಆ ಕಾಲಕ್ಕೆ ತಗುಲಿದ ವೆಚ್ಚ ೪೦ ಲಕ್ಷ ಪೌಂಡುಗಳು. ಇದು ಮೂರುಸಲ ಪರಿಷ್ಕರಣಗೊಂಡು ೧೬ ಮುದ್ರಣಗಳನ್ನು ಕಂಡಿದೆ. ವಿವಿಧ ಆಕಾರಗಳಲ್ಲಿ ಈ ನಿಘಂಟು ಹೊರಬಂದಿದೆ. ವಿಶ್ವದ ಬೇರಾವ ಭಾಷೆಯಲ್ಲಿಯೂ ಇಷ್ಟು ಸಮಗ್ರವಾದ ಉತ್ಕೃಷ್ಟವಾದ ನಿಘಂಟು ಇಲ್ಲ ಎಂಬ ಕೀರ್ತಿಗೆ ಇದು ಭಾಜನವಾಗಿದೆ.

'ವೆಬ್‌ಸ್ಟರ್' ನಿಘಂಟು 'ಆಕ್ಸ್‌ಫರ್ಡ್' ನಿಘಂಟಿನಷ್ಟೇ ದೊಡ್ಡದು. ಈ ನಿಘಂಟಿನಲ್ಲಿ ಅಮೆರಿಕಾದ ಕಾಗುಣಿತ, ಬ್ರಿಟಿಶ್ ಕಾಗುಣಿತಗಳಿಗೆ ಇರುವ ವ್ಯತ್ಯಾಸಗಳನ್ನು ತೋರಿಸಲಾಗಿದೆ. ಇದರಿಂದ ಎಲ್ಲ ದೇಶಗಳವರೂ ಇದನ್ನು ಬಳಸಬಹುದಾಗಿದೆ. ಮೆರಿಯಮ್ ಪ್ರಕಟಣ ಸಂಸ್ಥೆಯವರು ವೆಬ್‌ಸ್ಟರ್ ಕೋಶದ ಅಸಂಕ್ಷಿಪ್ತ ಆವೃತ್ತಿಯನ್ನು ಮೊದಲ ಬಾರಿಗೆ ೧೮೪೭ ರಲ್ಲಿ ಪ್ರಕಟಿಸಿದರು. ಈ ನಿಘಂಟು ಮುಂದೆ 'ವೆಬ್‌ಸ್ಟರ್ ಇಂಟರ್ ನ್ಯಾಷನಲ್ ಡಿಕ್ಷನರಿ' ಎಂಬ ಹೆಸರಿನಲ್ಲಿ ೧೮೯೦ ರಲ್ಲಿ ಮತ್ತೆ ಅಚ್ಚಾಯಿತು. ೧೯೦೯,೧೯೩೪,೧೯೬೧ ರಲ್ಲಿ ವೆಬ್‌ಸ್ಟರ್ಸ್ I, II, III ನ್ಯೂ ಇಂಟರ್ ನ್ಯಾಷನಲ್ ಡಿಕ್ಷನರಿಗಳು ಕ್ರಮವಾಗಿ ಪ್ರಕಟಗೊಂಡಿವೆ. ಇದರಲ್ಲಿ ನಾಲ್ಕೂವರೆ ಲಕ್ಷಕ್ಕೂ ಮೀರಿ ಶಬ್ದಗಳ ಅರ್ಥಪ್ರಯೋಗಗಳಿವೆ. ಅರುವತ್ತುಲಕ್ಷಕ್ಕೆ ಮೀರಿದ ಉಲ್ಲೇಖಗಳಿವೆ. ಈ ನಿಘಂಟಿನ ತಯಾರಿಕೆಯ ವೆಚ್ಚ ಆ ಕಾಲಕ್ಕೆ ೩೫ಲಕ್ಷ ಡಾಲರುಗಳು. ಈ ಕಾರ್ಯಕ್ಕೆ ಹಿಡಿದ ಸಮಯ ಸುಮಾರು ೬೫ ವರ್ಷಗಳು. ಈ ಯೋಜನೆಯಲ್ಲಿ ಒಬ್ಬ ಪ್ರಧಾನಸಂಪಾದಕರು, ೬೫ ಜನ ಉಪಸಂಪಾದಕರು, ೧೩ಜನ ಸಹಾಯಕ ಸಂಪಾದಕರು, ೩೧ ಜನ ಆಡಳಿತವರ್ಗವಲ್ಲದೆ ವಿವಿಧ ವಿಜ್ಞಾನ ವಿಭಾಗಗಳಿಗೆ ನೆರವಾದ ಸಮಾಲೋಚಕರು ೧೯೬ ಜನ ಇದ್ದರು.

ದೇಶೀಯ ಭಾಷೆಗಳ ಕೆಲವು ನಿಘಂಟುಗಳ ಸ್ಥೂಲಪರಿಚಯ ಇಂತಿದೆ. ಆಂಧ್ರಪ್ರದೇಶ ಸಾಹಿತ್ಯಅಕಾಡಮಿಯ ತೆಲುಗು ಭಾಷೆಯ ಶ್ರೀ ಸೂರ್ಯರಾಯಾಂಧ್ರ ನಿಘಂಟುವು (ಅನುಬಂಧ ಸಂಪುಟವೂ ಸೇರಿ) ೮ ಸಂಪುಟಗಳಲ್ಲಿದೆ. ಇದು ೧೯೩೦ ರಲ್ಲಿ ಆರಂಭಗೊಂಡು ೧೯೬೨ ರಲ್ಲಿ ಮುಕ್ತಾಯಗೊಂಡಿದೆ. ಮದರಾಸು ವಿಶ್ವವಿದ್ಯಾನಿಲಯದ ತಮಿಳುಭಾಷೆಯ ನಿಘಂಟು ೬ ಸಂಪುಟಗಳನ್ನು ಹೊಂದಿದೆ. ಇದು ೧೯೨೪ರಲ್ಲಿ ಆರಂಭಗೊಂಡು ೧೯೩೬ರಲ್ಲಿ ಮುಕ್ತಾಯಗೊಂಡಿದೆ. ರೆವರೆಂಡ್ ಹೆಚ್. ಗುಂಡರ್ಟ್ ಅವರ ಮಲಯಾಳಂ ನಿಘಂಟು (೧ ಸಂಪುಟ) ಮಂಗಳೂರಿನಲ್ಲಿ ೧೮೬೨ ರಲ್ಲಿ ಪ್ರಥಮ ಮುದ್ರಣಗೊಂಡಿತು. ಇದರ ದ್ವಿತೀಯಮುದ್ರಣ ಕೇರಳದ ಕೊಟ್ಟಾಯಂನಲ್ಲಿ ೧೯೬೨ರಲ್ಲಿ ಆಯಿತು. ರೆವರೆಂಡ್. ಎ. ಮ್ಯಾನ್ನೆರ್ ಅವರ ತುಳುನಿಘಂಟು ೧೮೮೬ರಲ್ಲಿ ಪ್ರಥಮವಾಗಿ ಮುದ್ರಣಗೊಂಡಿತು. ರೆವರೆಂಡ್ ಎಫ್. ಕಿಟ್ಟೆಲ್ ಅವರ ಕನ್ನಡ -ಇಂಗ್ಲಿಷ್ ನಿಘಂಟು ೧೮೯೪ರಲ್ಲಿ ಪ್ರಥಮವಾಗಿ ಮುದ್ರಣಗೊಂಡಿತು. ಇದರಲ್ಲಿ ೧೭೫೨ ಪುಟಗಳಿವೆ. ಈ ನಿಘಂಟು ಮದರಾಸ್ ವಿಶ್ವವಿದ್ಯಾನಿಲಯದಿಂದ ಪರಿಷ್ಕೃತಗೊಂಡು, ವಿಸ್ತೃತಗೊಂಡು ನಾಲ್ಕು ಸಂಪುಟಗಳಲ್ಲಿ ೧೯೭೧ ರಲ್ಲಿ ಪ್ರಕಟವಾಯಿತು. ಇದರಲ್ಲಿ ಒಟ್ಟು ೧೭೭೭ ಪುಟಗಳಿವೆ.

ಈ ಪ್ರಮುಖನಿಘಂಟುಗಳ ಕಾರ್ಯವಿಧಾನ, ಇವಕ್ಕೆ ತಗುಲಿರುವ ವೆಚ್ಚ, ಹಿಡಿದ ಸಮಯವನ್ನು ಪರೀಕ್ಷಿಸಿದಾಗ ಕನ್ನಡ ನಿಘಂಟಿಗೆ ಹಿಡಿದಿರುವ ಸಮಯ, ತಗುಲಿರುವ ವೆಚ್ಚ ಅತಿಯಾದುದಲ್ಲವೆಂದು ಮೇಲ್ನೋಟಕ್ಕೇ ಕಂಡುಬರುತ್ತದೆ. ಅಲ್ಲದೆ ಕನ್ನಡ ನಿಘಂಟು ರಚನಾಕಾರ್ಯ ನಿಘಂಟುಕಚೇರಿಯ ಸೀಮಿತ ಸಿಬ್ಬಂದಿವರ್ಗದಿಂದ ಸಿದ್ಧವಾಗಿದೆಯೆಂಬುದನ್ನೂ ಈ ಸಂದರ್ಭದಲ್ಲಿ ಉಲ್ಲೇಖಿಸಬಹುದಾಗಿದೆ. (ಈ ನಿಘಂಟಿನ ಸಂಪಾದಕವರ್ಗ, ಸಿಬ್ಬಂದಿವರ್ಗಗಳ ವಿವರಗಳನ್ನು ಕಡೆಯಲ್ಲಿ ಕೊಟ್ಟಿರುವ ಅನುಬಂಧದಲ್ಲಿ ಕಾಣಬಹುದು).

ಮೊದಲನೆ ಸಂಪುಟದಿಂದ ಹಿಡಿದು ಕಡೆಯ ಸಂಪುಟಗಳವರೆಗೆ ಸಂಪಾದಕಸಮಿತಿಯ ಸದಸ್ಯರು ಒಟ್ಟು ೩೯ ಬಾರಿ ಸಭೆಸೇರಿ ಚರ್ಚಿಸಿ ಸೂಕ್ತ ತೀರ್ಮಾನಗಳನ್ನು ನೀಡಿ ಈ ಬೃಹತ್ ಕಾರ್ಯವನ್ನು ಕೈಗೂಡಿಸಿಕೊಟ್ಟಿದ್ದಾರೆ.

# ನಿಘಂಟಿನ ನಿಯಮಾವಳಿಗಳು

ನಿಘಂಟು ಸಂಪಾದಕಸಮಿತಿಯ ವಿದ್ವಾಂಸರು ಇದರ ರಚನೆಯ ಆರಂಭಕಾಲದಲ್ಲಿ ಹಲವಾರು ಬಾರಿ ಚರ್ಚಿಸಿ ಮಾಡಿರುವ ವಿಧಿವಿಧಾನಗಳನ್ನೂ, ನಿಯಮಾವಳಿಗಳ ರೂಪರೇಖೆಗಳನ್ನೂ ಯಥಾವತ್ತಾಗಿ ಇಲ್ಲಿ ಉದಾಹರಿಸಿದೆ.

ಕ್ರಿ.ಶ. ೧೮೦೦ ರವರೆಗಿನ ಗ್ರಂಥಗಳು ಮತ್ತು ಶಾಸನಗಳಲ್ಲಿ ದೊರೆಯುವ ಮಾತುಗಳನ್ನೂ ಭಾಷಾರೂಢಿಗಳನ್ನೂ ತೆಗೆದುಕೊಳ್ಳತಕ್ಕುದು.

೧. ಸಂಸ್ಕೃತಪದಗಳನ್ನು ಸೇರಿಸಬೇಕಾಗಿಲ್ಲ. ಕನ್ನಡದಲ್ಲಿ ಬೇರೆ ಅರ್ಥವುಳ್ಳ ಸಂಸ್ಕೃತಪದಗಳನ್ನು ಮಾತ್ರ ಸೇರಿಸಬೇಕು. ೨. ತದ್ಭವಗಳನ್ನೂ ಅನ್ಯದೇಶ್ಯಗಳನ್ನೂ ಸೇರಿಸಬೇಕು. ೩. ಪ್ರಯೋಗಗಳನ್ನೂ ಆಕರಗಳನ್ನೂ ಕೊಡಬೇಕು. ೪. ಸಾಧ್ಯವಾದ ಮಟ್ಟಿಗೆ ತಮಿಳು, ತೆಲುಗು ಮತ್ತು ಇತರ ದ್ರಾವಿಡಭಾಷೆಗಳಲ್ಲಿಯ ಮತ್ತು ಮರಾಠಿ ಮುಂತಾದ ಗೌಡಭಾಷೆಗಳಲ್ಲಿಯ ಜ್ಞಾತಿಶಬ್ದಗಳನ್ನು ಸೂಚಿಸಬೇಕು.

ಈ ಕೋಶಕ್ಕಾಗಿ ಹಿಂದಿನ ಸಾಹಿತ್ಯವನ್ನು ಚೆನ್ನಾಗಿ ಶೋಧಿಸಿ ಪ್ರಯೋಗಗಳನ್ನು ವಿಪುಲವಾಗಿ ಸಂಗ್ರಹಿಸಬೇಕು. ಕನ್ನಡದಲ್ಲಿ ಉಳ್ಳ ಗ್ರಾಮ್ಯವಲ್ಲದ ದೇಶ್ಯ ಮತ್ತು ತದ್ಭವಶಬ್ದಗಳೆಲ್ಲವೂ ಈ ಕೋಶದಲ್ಲಿ ಸೇರುವಂತೆ ನೋಡಿಕೊಳ್ಳಬೇಕು.

ಕ್ರಿ.ಶ. ಸು.೧೧೫೦ ರೊಳಗೆ ರಚಿತವಾದ ಕನ್ನಡಗ್ರಂಥಗಳಲ್ಲೂ ಶಾಸನಗಳಲ್ಲೂ ದೊರೆಯುವ ಎಲ್ಲ ದೇಶ್ಯ ಮತ್ತು ತದ್ಭವಪದಗಳನ್ನು ಪ್ರಯೋಗಪಟ್ಟಿಕೆಗಳಲ್ಲಿ ಸಂಗ್ರಹಿಸಬೇಕು. ಅಲ್ಲಿಂದ ಮುಂದೆ ಕ್ರಿ.ಶ. ಸುಮಾರು ೧೫೫೦ರೊಳಗೆ ರಚಿತವಾದ ಎಲ್ಲ ಗ್ರಂಥಗಳನ್ನೂ ಶಾಸನಗಳನ್ನೂ ಶೋಧಿಸಿ ರೂಪ, ಅರ್ಥ, ಅಪೂರ್ವತೆ ಈ ಮೊದಲಾದ ದೃಷ್ಟಿಗಳಿಂದ ಗಮನಾರ್ಹವಾದ ಪದಗಳನ್ನೆಲ್ಲ ಸಂಗ್ರಹಿಸಬೇಕು. ಮುಂದೆ ಕ್ರಿ.ಶ. ಸು.೧೮೦೦ ರ ಒಳಗೆ ರಚಿತವಾದ ಗ್ರಂಥ, ಶಾಸನಗಳಲ್ಲಿ ಮುಖ್ಯವಾದವುಗಳನ್ನು ಆರಿಸಿಕೊಂಡು ಅವುಗಳಲ್ಲಿ ದೊರೆಯುವ ಗಮನಾರ್ಹವಾದ ಪದಗಳನ್ನೆಲ್ಲಾ ಸಂಗ್ರಹಿಸಬೇಕು. ಅಂತೂ ಕನ್ನಡದಲ್ಲಿ ಪ್ರಯೋಗವಾಗಿರುವ ದೇಶ್ಯ ಮತ್ತು ತದ್ಭವಾದಿ ಪದಗಳಲ್ಲಿ ಯಾವುದೂ ಬಿಟ್ಟುಹೋಗದಂತೆ ನೋಡಿಕೊಳ್ಳಬೇಕು.

ಪ್ರಾಚೀನ ಕನ್ನಡಗ್ರಂಥಗಳಲ್ಲಿ ಸಂಸ್ಕೃತಸಮಾಸಶಬ್ದಗಳನ್ನು ಅತಿವಿಪುಲವಾಗಿ ಉಪಯೋಗಿಸಿರುವುದರಿಂದ ಅವುಗಳೆಲ್ಲವನ್ನೂ ಈ ಕೋಶದಲ್ಲಿ ಕೊಡಬೇಕಾದಲ್ಲಿ ಗ್ರಂಥದ ಗಾತ್ರವು ಒಂದಕ್ಕೆ ಎರಡರಷ್ಟಾಗುತ್ತದೆ; ಅವುಗಳಲ್ಲಿ ಕೆಲವನ್ನು ಮಾತ್ರ ಕೊಡಬೇಕೆಂದರೆ ಆಯ್ಕೆಯಲ್ಲಿ ತೊಡಕುಂಟಾಗುತ್ತದೆ; ಪ್ರಯೋಜನವೂ ಕಡಿಮೆಯಾಗುತ್ತದೆ. ಇದರ ಮೇಲೆ ಈಗಾಗಲೇ ದೊರೆಯುವ ಉತ್ತಮವಾದ ಸಂಸ್ಕೃತಕೋಶಗಳು, ಡಾ॥ ಕಿಟ್ಟೆಲ್ ಅವರ ಕನ್ನಡ ನಿಘಂಟು ಮೊದಲಾದುವುಗಳ ಸಹಾಯದಿಂದ ಈ ಸಂಸ್ಕೃತಶಬ್ದಗಳ ಅರ್ಥಗಳನ್ನು ಹೆಚ್ಚು ಶ್ರಮವಿಲ್ಲದೆ ನಿಷ್ಕರ್ಷೆಯಾಗಿ ತಿಳಿದುಕೊಳ್ಳಬಹುದು. ದೇಶ್ಯ ಮತ್ತು ತದ್ಭವಶಬ್ದಗಳನ್ನು ಕುರಿತಾದರೆ ಈ ಸೌಲಭ್ಯ ಸಾಲದು. ಡಾ॥ ಕಿಟ್ಟೆಲ್ ಅವರ ನಿಘಂಟು ರಚನೆಯಾದಾಗಿನಿಂದೀಚೆಗೆ ಅನೇಕ ಪ್ರಾಚೀನಗ್ರಂಥಗಳು ಬೆಳಕಿಗೆ ಬಂದಿವೆ; ಶಾಸನಗಳ ಶಬ್ದಸಂಗ್ರಹಕ್ಕಂತೂ ಅವರು ಕೈಹಾಕಿಯೇ ಇರಲಿಲ್ಲ. ಈ ಕೊರತೆಯನ್ನು ಸಾಧ್ಯವಾದ ಮಟ್ಟಿಗೆ ಪರಿಹರಿಸಿ ಕನ್ನಡದ ವ್ಯಾಸಂಗಕ್ಕೆ ನೆರವಾಗುವಂತೆ ಕೋಶವನ್ನು ರಚಿಸಬೇಕೆಂಬುದೇ ಸಮಿತಿಯ ಮುಖ್ಯೋದ್ದೇಶ. ಗ್ರಂಥದ ಪರಿಮಿತಿ, ಸಂಶೋಧನೆಯ ಆವಶ್ಯಕತೆ – ಈ ಮೊದಲಾದುವುಗಳನ್ನು ಗಮನದಲ್ಲಿಟ್ಟುಕೊಂಡು ಈ ಕೋಶದ ಮಟ್ಟಿಗೆ ಸಂಸ್ಕೃತಪದಗಳನ್ನು ಸೇರಿಸಿಕೊಳ್ಳಬೇಕಾಗಿಲ್ಲವೆಂದು ಹಿಂದೆ ಅಂಗೀಕರಿಸಿದ್ದ ತತ್ತ್ವವನ್ನೇ ಮತ್ತೆ ಸ್ಥಿರೀಕರಿಸಲಾಯಿತು.

ಕನ್ನಡದಲ್ಲಿ ಅರ್ಥವ್ಯತ್ಯಾಸಹೊಂದಿ ಪ್ರಯೋಗವಾಗಿರುವ ಸಂಸ್ಕೃತಶಬ್ದಗಳನ್ನೂ ಅರಿಸಮಾಸ ಮೊದಲಾದುವನ್ನೂ ಕೋಶದಲ್ಲಿ ಸೇರಿಸಬೇಕೆಂದು ಹಿಂದೆಯೇ ಉದ್ದೇಶಿಸಿದ್ದಂತೆ ಈಗಲೂ ತೀರ್ಮಾನಿಸಲಾಯಿತು.

ಕನ್ನಡ ಕಾವ್ಯಗಳಲ್ಲಿ ದೊರೆಯುವ ದೇಶ್ಯ ಮತ್ತು ತದ್ಭವ ಪಾರಿಭಾಷಿಕ ಶಬ್ದಗಳೆಲ್ಲವೂ ಕೋಶದಲ್ಲಿ ಅವಶ್ಯವಾಗಿ ಸೇರಿಯೇ ಸೇರುತ್ತವೆ. ಆದರೆ ಸಂಸ್ಕೃತ ಪಾರಿಭಾಷಿಕ ಶಬ್ದಗಳೆಲ್ಲವನ್ನೂ ಸೇರಿಸುವುದು ನಮ್ಮ ಕೋಶದ ವ್ಯಾಪ್ತಿಗೆ ಮೀರಿದ ವಿಷಯವಾಗುತ್ತದೆ. ಕನ್ನಡ ಕಾವ್ಯಗಳಲ್ಲಿ ದೊರೆಯುವ ಜೈನ, ವೀರಶೈವ ಮೊದಲಾದ ಪಾರಿಭಾಷಿಕಶಬ್ದಗಳನ್ನೆಲ್ಲಾ ಒಳಗೊಂಡ ಬೇರೊಂದು ಕೋಶದ ರಚನೆಯೇ ಆಗಬೇಕು. ಸದ್ಯಕ್ಕೆ ಅದನ್ನು ಕೈಕೊಳ್ಳುವುದು ಶಕ್ಯವಿಲ್ಲ.

ಕಿಟ್ಟೆಲ್ ಕನ್ನಡ ಇಂಗ್ಲಿಷ್ ಕೋಶದಲ್ಲಿರುವ ಸಂಸ್ಕೃತಪದಗಳನ್ನೆಲ್ಲಾ ಈ ಕೋಶದಲ್ಲಿ ಸೇರಿಸತಕ್ಕದ್ದು. ಜೊತೆಗೆ ಕನ್ನಡಕಾವ್ಯಗಳಲ್ಲಿ ದೊರಕುವ ಇತರ ಸಂಸ್ಕೃತಶಬ್ದಗಳನ್ನು ಸಾಧ್ಯವಾದಷ್ಟೂ ಸೇರಿಸತಕ್ಕದ್ದು.

ದೇಶ್ಯಶಬ್ದಗಳ ನಿಷ್ಪತ್ತಿಯಲ್ಲಿ ಇತರ ದ್ರಾವಿಡಭಾಷೆಗಳಲ್ಲಿರುವ ಜ್ಞಾತಿಶಬ್ದಗಳನ್ನು (Cognates) ಸೂಚಿಸತಕ್ಕದ್ದು.

ದೇಶ್ಯಪದಗಳಿಗೆ ಅರ್ಥ ಕೊಡುವಾಗ ಸಂಸ್ಕೃತ ಪರ್ಯಾಯ ಶಬ್ದಗಳನ್ನು ಸೂಚಿಸಬಹುದು.

೧೮೦೦ರಿಂದ ಈಚೆಗೂ ಗ್ರಂಥಸ್ಥವಾದ ಶಬ್ದಸಂಪತ್ತಿಯನ್ನು ಸಂಗ್ರಹಿಸಿ ಸೇರಿಸತಕ್ಕದ್ದು.

ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಪ್ರಚಾರದಲ್ಲಿರುವ ಕ್ರಮಿಕ ಪಠ್ಯಪುಸ್ತಕಗಳಲ್ಲಿ ದೊರಕುವ ಸ್ಥಳೀಯಶಬ್ದಗಳನ್ನೂ ಜನಪದ

ಸಾಹಿತ್ಯದಲ್ಲಿ ಕಾಣುವ ಪದಗಳನ್ನೂ ಸಂಗ್ರಹಿಸಿ ಸೇರಿಸತಕ್ಕದ್ದು. ಈಗ ಪರಿಷತ್ತು ಕೈಗೊಂಡಿರುವುದು ಕನ್ನಡ-ಕನ್ನಡ ಕೋಶ ಮಾತ್ರವಾದ್ದರಿಂದ ಈ ಕೋಶದಲ್ಲಿ ಹಿಂದೀ ಪರ್ಯಾಯಪದಗಳನ್ನು ಸೇರಿಸುವುದು ಸೂಕ್ತವಲ್ಲ, ಆದರೆ ಈ ಕೋಶದ ಕೆಲಸ ಸ್ವಲ್ಪಕಾಲ ಮುಂದುವರಿದ ಮೇಲೆ, ಕನ್ನಡ-ಹಿಂದಿ- ಇಂಗ್ಲಿಷ್ ಕೋಶವೊಂದನ್ನು ತಯಾರಿಸುವ ವಿಷಯವನ್ನು ಪರಿಷತ್ತು ಪರಿಶೀಲಿಸಬೇಕು.

ಒಂದು ಧಾತುವಿನಿಂದ ನಿಷ್ಪನ್ನವಾದ ಎಲ್ಲ ಶಬ್ದಗಳನ್ನೂ ಪೃಥಕ್ಕಾಗಿ ಆಯಾ ಸ್ಥಾನದಲ್ಲಿ ಪ್ರತ್ಯೇಕವಾಗಿ ಕೊಡತಕ್ಕದ್ದು.

ಸಮಾಸಪದಗಳನ್ನು ಸ್ವತಂತ್ರಪದಗಳಂತೆಯೇ ಪರಿಗಣಿಸತಕ್ಕದ್ದು. ಎಂದರೆ ಅವುಗಳನ್ನು (ಪ್ರತ್ಯೇಕವಾಗಿ) ಯಥಾಸ್ಥಾನಗಳಲ್ಲಿ ಕೊಡತಕ್ಕದ್ದು.

ಸಂಜ್ಞಾಶಬ್ದಗಳು ಎಂದರೆ ಅಂಕಿತನಾಮಗಳು ಅಥವಾ ಕೇವಲ ವ್ಯಕ್ತಿಗಳ ಹೆಸರುಗಳು ನಿಘಂಟಿನಲ್ಲಿ ಬರಬೇಕಾದ್ದಿಲ್ಲವೆಂದೂ ಆದ್ದರಿಂದ ಕವಿಚರಿತೆಯಲ್ಲಿ ಬರುವ ಕನ್ನಡಕವಿಗಳ ಹೆಸರುಗಳನ್ನು ಸೇರಿಸುವುದು ಅವಶ್ಯವಲ್ಲವೆಂದೂ ಛಂದಸ್ಸು, ವ್ಯಾಕರಣ, ಅಲಂಕಾರ ಈ ಲಕ್ಷಣಶಾಸ್ತ್ರಗಳಿಗೆ ಸಂಬಂಧಪಟ್ಟ ಲಾಕ್ಷಣಿಕಶಬ್ದಗಳನ್ನು ಸೇರಿಸಬೇಕೆಂದೂ ಸಾಧಾರಣವಾಗಿ ಕನ್ನಡದಲ್ಲಿ ಪ್ರಯೋಗವಿಲ್ಲದ 'ಅಭಿಶುಃ', 'ಅಹಲ್ಲಕಃ', 'ನಿರ್ಲಯಿನೀ', 'ಮಂಕ್ಷು' ಮುಂತಾದ ಸಂಸ್ಕೃತಶಬ್ದಗಳನ್ನು ಬಿಡಬಹುದೆಂದೂ ಅ, ಅತಿಗಳಿಂದ ಮೊದಲಾಗುವ ಎಲ್ಲಾ ಸಂಸ್ಕೃತಶಬ್ದಗಳನ್ನೂ ಕೊಡಬೇಕಾಗಿಲ್ಲವೆಂದೂ ಅರ್ಥವಿಶೇಷವಿರುವ ಅಖ್ಯಾತಿ, ಅಭಾವ, ಅತಿರೇಕ, ಅತಿವ್ಯಾಪ್ತಿ, ಅತಿಸಾರ, ಅತ್ಯುಕ್ತಿ ಮುಂತಾದವುಗಳು ಇರಬಹುದೆಂದೂ ಗ್ರಂಥಾಧಾರವಿಲ್ಲದೇ ಇದ್ದರೂ ರೂಢಿಯಲ್ಲಿರುವ ಅಡಾವುಡಿ, ಪುಢಾರಿ, ತೊಂಚಾವಂಚ, ಚೋಳಿ, ಗಡಿಬಿಡಿ, ಮುಂತಾದ ಶಬ್ದಗಳೂ 'ಬೆಟ್ಟಕ್ಕೆ ಕಲ್ಲು ಹೊರು', 'ಓ ಲಕ್ಷ್ಮಣಾ ಎಂದುಕೊಂಡು ಹೋಗು', 'ಕಣ್ಣಿಗೆ ಎಣ್ಣೆ ಬಿಟ್ಟುಕೊ' ಮುಂತಾದ ನುಡಿಗಟ್ಟುಗಳೂ ಸೇರತಕ್ಕದೆಂದೂ ನಿರ್ಣಯವಾಯಿತು.

ಈಗ ನಿಘಂಟಿನ ವ್ಯಾಪ್ತಿ ವಿಸ್ತಾರವಾಗಿರುವುದರಿಂದ ಸಂಪಾದಕಸಮಿತಿಯ ೧.೬.೧೯೪೬ ನೆಯ ಸಭೆಯ ೯ನೆಯ ನಿರ್ಣಯವನ್ನು ಪುನರ್ವಿಮರ್ಶಿಸಿ ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯಕ್ಕೆ ಸಂಬಂಧಪಟ್ಟ ಧಾರ್ಮಿಕ ಮತ್ತು ದಾರ್ಶನಿಕ ಶಬ್ದಗಳನ್ನು ಸೇರಿಸಬೇಕು.

ಧಾ, ಶಮಧಾ, ಕ್ರಿ ಇವುಗಳನ್ನು ಕ್ರಮವಾಗಿ ಧಾತು, ಶಬ್ದಮಣಿದರ್ಪಣದ ಧಾತುಪಾಠ, ಕ್ರಿಯಾಪದ ಎಂಬ ಅರ್ಥಗಳಲ್ಲಿ ಉಪಯೋಗಿಸಬಹುದು.

ಪ್ರಯೋಗಗಳನ್ನು ಕೊಡುವಾಗ ಅತ್ಯಂತ ಪ್ರಾಚೀನ ಪ್ರಯೋಗಕ್ಕೆ ಶಾಸನದಿಂದ ಮಾತ್ರ ಕಾಲವನ್ನು ಸೂಚಿಸಬಹುದು; ಗ್ರಂಥಪ್ರಯೋಗವಾದರೆ ಬೇಕಿಲ್ಲ.

ನಿಘಂಟಿನ ರಚನೆಯಲ್ಲಿ ಕಿಟ್ಟೆಲ್ ತನ್ನ ನಿಘಂಟಿನಲ್ಲಿ ಅನುಸರಿಸಿರುವ ಕ್ರಮವನ್ನೇ ಸ್ಥೂಲವಾಗಿ ಅನುಸರಿಸಬಹುದು. ಆದರೆ ಪಞ್ಚ-ಪಂಚ, ತನ್ದೆ-ತಂದೆ ಎಂದು ಮುಂತಾಗಿ ಸ್ಪಷ್ಟಪಡಿಸಿ ತೋರಿಸಬೇಕು. ಒಂದು ಶಬ್ದಕ್ಕೆ ಹಲವು ರೂಪಗಳಿದ್ದಾಗ, ಅವುಗಳಲ್ಲಿ ಅತಿ ಪ್ರಾಚೀನ ರೂಪದಿಂದ ಆರಂಭಿಸಿ, ಕಾಲದೃಷ್ಟಿಯಿಂದ ಅರ್ಥಗಳನ್ನೂ ಪ್ರಯೋಗಗಳನ್ನೂ ಆ ಪ್ರಾಚೀನರೂಪದ ಅಡಿಯಲ್ಲಿಯೇ ಕಾಣಿಸತಕ್ಕದ್ದು. ಮಿಕ್ಕ ರೂಪಗಳನ್ನು ಅವುಗಳ ಸ್ಥಾನಗಳಲ್ಲಿ ಕೊಟ್ಟು ಮೂಲಶಬ್ದಕ್ಕೆ ಸಂಬಂಧವನ್ನು 'ನೋ'ಎಂದು ಸೂಚಿಸತಕ್ಕದ್ದು. ಉದಾ. 'ಅಟ್ಕಱ್', 'ಅಕ್ಕಱ್', 'ಅಕ್ಕರು', 'ಅಕ್ಕರ' ಇತ್ಯಾದಿ. ಅಕ್ಕರೆ 'ಅಟ್ಕಱ್' ನೋ.

ಶಬ್ದಗಳನ್ನು ಕೊಡುವಾಗ ಪ್ರಕೃತಿರೂಪದಲ್ಲಿಯೇ ಕೊಡತಕ್ಕದು. ಉದಾ. ಮರ, ನೆಲ, ಕುೞಿ.

ನಾಮವಿಶೇಷ (adjective)ಗಳನ್ನು ವಿಶೇಷಣಕ್ಕೆ ಬದಲಾಗಿ ಗುಣವಾಚಕ (ಗು) ಎಂದು ನಿರ್ದೇಶಿಸತಕ್ಕದ್ದು. ಶಬ್ದಗಳ ಪ್ರಾದೇಶಿಕ ರೂಪಗಳನ್ನು (dialectal forms) ಸಾಮಾನ್ಯವಾಗಿ ಕೊಡಬೇಕಾದ್ದಿಲ್ಲ. ಆದರೆ ೧೮೦೦ ರ ವರೆಗಿನ ಗ್ರಂಥ ಶಾಸನಾದಿಗಳಲ್ಲಿ (ಲಿಪಿಕಾರನ ಪ್ರಮಾದಗಳ ಹೊರತು) ಪ್ರಾದೇಶಿಕರೂಪಗಳು ಕಂಡುಬಂದರೆ ಅವುಗಳನ್ನು ಸೇರಿಸತಕ್ಕದ್ದು. ಉದಾ: 'ಅಡ್ಕೆ', 'ಉಡುಗ'.

ರೇಫದೊಡನೆ ಸೇರಿದ ಸಂಯುಕ್ತಾಕ್ಷರಗಳನ್ನು ಬರೆಯುವಾಗ 'ರ' ಕಾರಕ್ಕೆ ಒತ್ತು ಕೊಟ್ಟಾಗಲಿ, ಅರ್ಕಾವೊತ್ತನ್ನು(ೱ) ಸೇರಿಸಿಯಾಗಲಿ ಬರೆಯಬಹುದು. ಉದಾ: ಸೂರ್‍ಯ, ಸೂರ್ಯ.

ಬಹುಸುಲಭವಾದ ಕ್ರಿಯಾಸಮಾಸಗಳನ್ನೂ ಸಮಾಸಪದಗಳನ್ನೂ ಸುಲಭವೆಂದು ಬಿಟ್ಟುಬಿಡದೆ ನಿಘಂಟಿನಲ್ಲಿ ಕೊಡಬೇಕು. ಉದಾ: ಅಗ್ಗಳಮಾಗು, ಅಗ್ಗಳಪದಾತಿ, ಅಗ್ಗಳಬಲಾಢ್ಯ, ಅಗ್ಗಳವಸ್ತು, ಅಗ್ಗಳವೀರದಳ ಇತ್ಯಾದಿ.

ಕಿಟ್ಟೆಲ್ ನಿಘಂಟಿನಲ್ಲಿ ಕಾಣಿಸಿರುವ ಪ್ರಯೋಗಾಧಾರವಿಲ್ಲದ ಶಬ್ದಗಳನ್ನು ಸೇರಿಸಿಕೊಳ್ಳತಕ್ಕದ್ದು. ಸ್ಯಾಂಡರ್‌ಸನ್ ಮುಂತಾದ ಇತರ ನಿಘಂಟುಗಳಲ್ಲಿನ ಶಬ್ದಾರ್ಥಪ್ರಯೋಗಗಳನ್ನು ವಿಚಾರಮಾಡಿ ಸೂಕ್ತವೆನ್ನಿಸಿದುವನ್ನು ಅಂಗೀಕರಿಸಬಹುದು.

ಅರ್ಥ ಸಂದಿಗ್ಧವಾದ ಕಡೆಗಳಲ್ಲಿ ಹೆಚ್ಚು ಪ್ರಯೋಗಗಳನ್ನು ಕೊಡಬೇಕಾಗುತ್ತದೆ. ಸ್ಪಷ್ಟವಾಗಿರುವ ಕಡೆ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಈ ಮೂರರಿಂದಲೂ ಒಂದೆರಡು ಪ್ರಯೋಗಗಳನ್ನು ಕೊಟ್ಟರೆ ಸಾಕು. ಪ್ರಯೋಗಗಳು ವಿಪುಲವಾಗಿದ್ದು ಸ್ವಾರಸ್ಯವಾಗಿದ್ದರೆ ಶತಮಾನಕ್ಕೊಂದೆರಡರಂತೆ ಕೊಡಲೂಬಹುದು. ಈ ಆಯ್ಕೆಯನ್ನು ಸಂಪಾದಕರ ವಿವೇಚನೆಗೇ ಬಿಡಲಾಗಿದೆ.

ಕ್ರಿಯಾಸಮಾಸಗಳನ್ನು ಕೂಡ ಇತರ ಸಮಾಸಗಳಂತೆಯೇ ಪ್ರತ್ಯೇಕವಾಗಿ ಯಥಾಸ್ಥಾನದಲ್ಲಿಯೇ ಕೊಡತಕ್ಕದ್ದು.

ಧಾತುಗಳಿಂದ ಸಾಧಿತವಾದ ಸಾಧಾರಣ ಕ್ರಿಯಾರೂಪಗಳನ್ನೆಲ್ಲ ಪಟ್ಟಿ ಮಾಡಬೇಕಾಗಿಲ್ಲ. ವಿಶಿಷ್ಟವಾದುವನ್ನು ಮಾತ್ರ ತೋರಿಸಿದರೆ ಸಾಕು.

ಪ್ರಾದೇಶಿಕವೆಂದು ಸ್ಪಷ್ಟವಾಗಿ ಗೊತ್ತಿರುವ ಶಬ್ದಪ್ರಯೋಗಗಳ ವಿಷಯದಲ್ಲಿ ಆ ಸಂಗತಿಯನ್ನು (ಉಕ) ಉತ್ತರಕರ್ನಾಟಕ, (ದಕ) ದಕ್ಷಿಣ ಕರ್ನಾಟಕ ಮತ್ತು (ಕರಾ) ಕರಾವಳಿ ಎಂಬ ಸಂಕೇತಗಳಿಂದ ಸೂಚಿಸತಕ್ಕದ್ದು.

'ಅಮ್', 'ಅನ್' ಅಂತವಾದ ನಾಮವಾಚಕಗಳನ್ನು ಅಕಾರಾಂತವಾಗಿಯೇ ತೋರಿಸಲಾಗುವುದು. ಉದಾ. ಅಗಲ್ದುರದ (ನಾ). ('ಅಗಲ್ಬುರದಂ' ಅಥವಾ 'ಅಗಲ್ಬುರದನ್' ಎಂಬುದಕ್ಕೆ ಬದಲಾಗಿ). ಹೀಗೆಯೇ ನೀಳ್ತೋಳ, ಬಟ್ಟದೊಡೆಯ, ಕೆಂಗಣ್ಣ ಇತ್ಯಾದಿ.

ಭೂತ ಭವಿಷ್ಯತ್ ಕೃದಂತನಾಮಗಳಲ್ಲಿ ನೇರವಾಗಿ ಬರತಕ್ಕವನ್ನು ಧಾತುವಿನ ಕೆಳಗೇ ಕೊಡತಕ್ಕದ್ದು. ಉದಾ. 'ಅಗವಟ್ಟಂ' ಶಬ್ದವನ್ನು 'ಅಗವಡು' ವಿನಲ್ಲಿ ಕೊಡಬೇಕು. ಹೀಗೆಯೇ 'ಬಂದಂ','ಬರ್ಪಂ', 'ಬಂದವನು', 'ಬಂದವಳು', 'ಬಂದುದು' ಇತ್ಯಾದಿ.

ಸಂಸ್ಕೃತಸಮಾಸಗಳಲ್ಲಿ ಎಲ್ಲವನ್ನೂ ಕೊಡಬೇಕಾಗಿಲ್ಲ. ಸಾಧಾರಣವಾಗಿ ಹೆಚ್ಚು ರೂಢಿಯಲ್ಲಿರುವ ಚಿಕ್ಕ ಚಿಕ್ಕವನ್ನು ಮಾತ್ರ ಸೇರಿಸಿಕೊಳ್ಳಬಹುದು. ಸಾಮಾನ್ಯವಾಗಿ ಎರಡಕ್ಕಿಂತ ಹೆಚ್ಚು ಶಬ್ದಗಳು ಕೂಡಿ ಆದ ಸಮಾಸಗಳನ್ನು ಸೇರಿಸುವ ಅಗತ್ಯವಿಲ್ಲ. ಅರ್ಥ ಸೌಕರ್ಯಕ್ಕೋಸ್ಕರ ಅವಶ್ಯವೆನ್ನಿಸಿದರೆ ವಿಶೇಷಸಂದರ್ಭಗಳಲ್ಲಿ ಮಾತ್ರ ದೊಡ್ಡಸಮಾಸಗಳನ್ನು ಕೊಡಬಹುದು.

- ಇಸು,- ಸು; - ಇಚು, - ಚು ಪ್ರತ್ಯಯಗಳು ಸೇರಿದ ರೂಪಗಳಲ್ಲಿ - ಇಸು,- ಚು ಸೇರಿದ ರೂಪಗಳನ್ನು ಮೂಲವಾಗಿ ಇಟ್ಟುಕೊಂಡು -ಸು,- ಇಚು ಸೇರಿದ ರೂಪಗಳನ್ನು ಪರ್ಯಾಯವಾಗಿ ಕೊಡಬೇಕು.

'ಅಗ', 'ನಡೆ' ಮುಂತಾದ ಎಕಾರಾಂತ ಪ್ರಕೃತಿಗಳಿಗೆ ೧೪೦೦ಕ್ಕೂ ಹಿಂದೆ 'ಅಗಿ' 'ನಡಿ' ಎಂಬ ಇಕಾರಾಂತ ರೂಪಗಳ ಪ್ರಯೋಗಗಳು ಕಂಡುಬಂದರೆ ಎರಡೂ ರೂಪಗಳನ್ನು ಉಲ್ಲೇಖಿಸತಕ್ಕದ್ದು. ೧೪೦೦ ರಿಂದೀಚೆಗೆ ಮಾತ್ರ ಕಾಣಬರುವ ಈ ಬಗೆಯ 'ಇ' ಕಾರಾಂತ ರೂಪಗಳನ್ನು ತೆಗೆದುಕೊಳ್ಳಬೇಕಾಗಿಲ್ಲ.

ಶಾಸನಗಳಲ್ಲಿ ಕುಳವಿರಬೇಕಾದ ಕಡೆಗಳಲ್ಲಿ ಱವನ್ನು ಬರೆದಿದ್ದರೆ ಯಥಾವತ್ತಾಗಿ ಉದ್ಧರಿಸಿ ಪಕ್ಕದಲ್ಲಿ ಕಂಸದಲ್ಲಿ ಕುಳವನ್ನು ತೋರಿಸಬೇಕು.

ತದ್ಭವಗಳನ್ನು ಪ್ರತ್ಯೇಕವಾದ ಉಲ್ಲೇಖಗಳಾಗಿಯೇ ಕೊಟ್ಟು ಅರ್ಥಪ್ರಯೋಗಗಳನ್ನು ತೋರಿಸಬೇಕು. ಅವನ್ನು ಮೂಲ ಸಂಸ್ಕೃತ ಶಬ್ದಗಳ ಕೆಳಗೆ ಸೇರಿಸಬಾರದು.

'ವಟ್ಟ', 'ವೆಳ' ಎಂಬಂಥ ಪೂರ್ವದ ಹಳಗನ್ನಡ ರೂಪಗಳನ್ನು 'ಬಟ್ಟ', 'ಬೆಳ' ಮುಂತಾದ ಅವುಗಳ ಹಳಗನ್ನಡ ರೂಪಗಳ ಕೆಳಗೆ ಕೊಟ್ಟು ವಿವರಿಸತಕ್ಕದ್ದು.

ಸು. ೧೬೦೦ರ ವರೆಗಿನ ಗ್ರಂಥಗಳಲ್ಲಿ ಶಕಟರೇಫವನ್ನು ಇಟ್ಟುಕೊಳ್ಳಬಹುದು.

ಜೈನ, ವೀರಶೈವ ಪಾರಿಭಾಷಿಕಶಬ್ದಗಳ ಸಂಗ್ರಹವನ್ನು 'ಹಿಂದೂದರ್ಶನ ಸಾರ' ದಿಂದ, ವಿಶಿಷ್ಟಾದ್ವೈತಕ್ಕೆ ಸಂಬಂಧಿಸಿದ ಪಾರಿಭಾಷಿಕಶಬ್ದಗಳನ್ನು 'ಸನಾತನ ಧರ್ಮ', 'ಹರಿಭಕ್ತಸಾರ','ಶಿವಭಕ್ತಿಸಾರ', 'ಅನುಭವಾಮೃತ' - ಈ ಗ್ರಂಥಗಳಿಂದ ಸಂಗ್ರಹಿಸತಕ್ಕದ್ದು.

ಕವಿರಾಜಮಾರ್ಗ, ಕಾವ್ಯಾವಲೋಕನ, ಭಾಷಾಭೂಷಣ, ಛಂದೋಂಬುಧಿ, ಶಬ್ದಮಣಿದರ್ಪಣ, ಕವಿಜಿಹ್ವಾಬಂಧನ, ರಸರತ್ನಾಕರ, ಉದಯಾದಿತ್ಯಾಲಂಕಾರ, ಶಾರದಾವಿಲಾಸ, ಅಪ್ರತಿಮವೀರಚರಿತೆ - ಈ ಗ್ರಂಥಗಳಿಂದ ಲಾಕ್ಷಣಿಕಶಬ್ದಗಳನ್ನು ಸಂಗ್ರಹಿಸತಕ್ಕದ್ದು.

ಅರ್ಥ ಕೊಡುವಾಗ ಶಬ್ದದ ಒಂದು ಅರ್ಥ ಅದರ ಜ್ಞಾತಿಶಬ್ದದ ಅಥವಾ ಬೇರೊಂದು ಶಬ್ದದ ಅರ್ಥಕ್ಕೆ ಸಮಾನವಾಗಿದ್ದರೆ ಆ ಎರಡನೆಯ ಶಬ್ದವನ್ನು ಮಾತ್ರ ತೋರಿಸಿ ಅದರ ಹಿಂದೆ ಸಮಾನಾರ್ಥಕ ಚಿಹ್ನೆ (=) ಯನ್ನು ಹಾಕಬೇಕು. ಉದಾ. ಅಂಕುಸ ೧. = ಅಂಕುಶ ೧.

ಸಂಸ್ಕೃತದ ಅಂಕಿತನಾಮಗಳನ್ನು ಸಾಮಾನ್ಯವಾಗಿ ಬಿಡತಕ್ಕದ್ದು. ಆದರೆ, ಯಾವುದಾದರೂ ಹೆಸರು ಕೇವಲ ಅಂಕಿತನಾಮವಾಗಿ ಮಾತ್ರ ನಿಲ್ಲದೆ ಅದರಲ್ಲಿ ವಿಶೇಷಾರ್ಥ ಬೆಳೆದು ಬಂದಿದ್ದರೆ ಅಂಥ ಶಬ್ದವನ್ನೂ ಅದರ ವಿಶೇಷಾರ್ಥವನ್ನೂ ಕೊಡಬೇಕು. ಉದಾ: ಹರಿಶ್ಚಂದ್ರ, ಕುಂಭಕರ್ಣ, ಧರ್ಮರಾಯ, ಉತ್ತರಕುಮಾರ, ಆಷಾಢಭೂತಿ ಇತ್ಯಾದಿ.

ಸತ್ಯಹರಿಶ್ಚಂದ್ರ, ರಾಮಬಾಣ, ಸುಗ್ರೀವಾಜ್ಞೆ, ರಾವಣಸಂನ್ಯಾಸಿ, ಕುಂಭಕರ್ಣನಿದ್ರೆ, ದಾನದಲ್ಲಿ ಕರ್ಣ, ದುರ್ಯೋಧನನ ಮಾನ - ಇಂಥ ಶಬ್ದಗಳನ್ನೂ ನುಡಿಗಟ್ಟುಗಳನ್ನೂ ಸೇರಿಸಿಕೊಳ್ಳಬೇಕು. ಇವುಗಳಲ್ಲಿ 'ಸುಗ್ರೀವಾಜ್ಞೆ'ಯಂಥ ಸಮಸ್ತಪದಗಳನ್ನು ಪ್ರತ್ಯೇಕ ಉಲ್ಲೇಖಗಳಾಗಿಯೂ 'ದುರ್ಯೋಧನನ ಮಾನ'ಎಂಬಂಥ ನುಡಿಗಟ್ಟುಗಳನ್ನು 'ಮಾನ' ಮೊದಲಾದ ಪ್ರಧಾನಶಬ್ದಗಳ ಕೆಳಗೂ ತೋರಿಸಬೇಕು.

ಸಾಮಾನ್ಯಾರ್ಥವುಳ್ಳ ಶಬ್ದ ಅಂಕಿತನಾಮವೂ ಆಗಿದ್ದರೆ ಆಗ ಆ ಅಂಕಿತನಾಮಾರ್ಥವನ್ನೂ ಕೊಡಬೇಕು. ಉದಾ : ಅಂಗದ = ೧. ತೋಳ್ಬಳೆ. ೨. ವಾಲಿಯ ಮಗ. ಶಕುನಿ = ೧. ಹಕ್ಕಿ. ೨.ದುರ್ಯೋಧನನ ಸೋದರ ಮಾವ.

ಕನ್ನಡದಲ್ಲಿ ಬಳಸುವ ಸಂಸ್ಕೃತಶಬ್ದಗಳಲ್ಲಿ ವಿಕಾರವಿಲ್ಲದ ಅಥವಾ ಅಂತ್ಯದಲ್ಲಿ ಮಾತ್ರ ವಿಕಾರವಿರುವ ಶಬ್ದರೂಪಗಳನ್ನು ಎಂದರೆ ಕೇಶಿರಾಜನು ಸಮಸಂಸ್ಕೃತವೆಂದು ಭಾವಿಸಿರತಕ್ಕಂಥ ಶಬ್ದಗಳನ್ನು (ಸಂ) ಎಂದು ನಿರ್ದೇಶಿಸತಕ್ಕದ್ದು. ಉಳಿದವನ್ನು ಎಂದರೆ ಹೆಚ್ಚು ವಿಕಾರ ಹೊಂದಿರುವವನ್ನು ತದ್ಭವಗಳೆಂದು ಪರಿಗಣಿಸಿ (ದ್ಭ) ಎಂದು ನಿರ್ದೇಶಿಸತಕ್ಕದ್ದು. ಉದಾ: ರಾಜ (ಸಂ.), ಶ್ರದ್ಧೆ (ಸಂ.), ಮನ (ಸಂ.), ಯಶ (ಸಂ.), ಜಸ (ದ್ಭ), ರಾಯ (ದ್ಭ), ಸಡ್ಡೆ (ದ್ಭ), ಮನಸ್ಸು (ಸಂ.), ಯಶಸ್ಸು (ಸಂ).

ಕೇಶಿರಾಜನು 'ತತ್ಸಮ' ಗಳೆಂದು ಕರೆಯುವ ಶಬ್ದಗಳಲ್ಲಿ ಯಾವುವು ದೇಶ್ಯಗಳೆಂದೇ ನಿಶ್ಚಿತವಾಗಿವೆಯೋ ಅಂಥವನ್ನು (ನಾ) ಎಂದು ಮಾತ್ರ ನಿರ್ದೇಶಿಸಿದರೆ ಸಾಕು. ಉದಾ: ಅಂಗಣ, ಅಂಗಳ (ನಾ).

ಸಮಾಸದ ಒಂದು ಭಾಗವನ್ನು ಎತ್ತಿ ಪ್ರತ್ಯೇಕವಾಗಿ ಉಲ್ಲೇಖಿಸಬಾರದೆಂದು (೧೯೫೪ ನೆಯ ಅಕ್ಟೋಬರ್ ತಿಂಗಳ ಸಭೆಯಲ್ಲಿ) ಮಾಡಿದ್ದ ನಿರ್ಣಯವನ್ನು ಪುನರ್ವಿಮರ್ಶಿಸಿ ಸಮಾಸದ ಏಕದೇಶವಾದ ಶಬ್ದ ಸ್ವತಂತ್ರವಾಗಿ ಪ್ರಯೋಗವಾಗುವ ಸಂಭವವಿರುವಂತೆ ಕಂಡುಬಂದಲ್ಲಿ ಅದಕ್ಕೆ ಸ್ವತಂತ್ರವಾದ ಪ್ರಯೋಗ ಸದ್ಯದಲ್ಲಿ ಸಿಕ್ಕದಿದ್ದರೂ ಅದನ್ನು ಸ್ವತಂತ್ರ ಉಲ್ಲೇಖವಾಗಿ ಕೊಡಬಹುದು- ಎಂದು ನಿರ್ಣಯಿಸಲಾಯಿತು. ಉದಾ: 'ಅಗಸೆವೂಗೊಂಬು' ಎಂಬಲ್ಲಿ 'ಅಗಸೆವೂ', 'ಅಟ್ಟುವಳಿಗೊಳ್'ಎಂಬಲ್ಲಿ 'ಅಟ್ಟುವಳಿ'.

ಶಬ್ದಗಳಿಗೆ ಅರ್ಥವನ್ನು ಕೊಡುವಾಗ ತಿಳಿದಮಟ್ಟಿಗೂ ಮೊದಲು ವಾಚ್ಯಾರ್ಥವನ್ನೂ ಆಮೇಲೆ ಲಕ್ಷ್ಯಾರ್ಥವನ್ನೂ ಕೊಡಲಾಗುತ್ತದೆ. ಎಲ್ಲ ಅರ್ಥಗಳಿಗೂ ಪ್ರಯೋಗಗಳನ್ನು ಕಾಲಾನುಕ್ರಮದಲ್ಲಿ ತೋರಿಸಲಾಗುತ್ತದೆ. ಅರ್ಥದ ಪೌರ್ವಾಪರ್ಯ ಖಚಿತವಾಗಿ ಗೊತ್ತಾಗದ ಕಡೆ ಪ್ರಯೋಗಗಳ ಪ್ರಾಚೀನತೆಯನ್ನು ಅನುಸರಿಸಿ ಅರ್ಥ ಕೊಡಲಾಗುತ್ತದೆ.

ಪ್ರತ್ಯಯಗಳಲ್ಲಿ ಆಖ್ಯಾತ ಮತ್ತು ವಿಭಕ್ತಿಪ್ರತ್ಯಯಗಳನ್ನೂ ಅವುಗಳ ಸಂಬಂಧವಾಗಿ ಸೇರುವ ಆಗಮಗಳನ್ನೂ ಈ ನಿಘಂಟಿನಲ್ಲಿ ಸ್ವತಂತ್ರ ಉಲ್ಲೇಖಗಳಾಗಿ ತೋರಿಸುವುದಿಲ್ಲ. ಕೃತ್, ತದ್ಧಿತ ನಾಮಪ್ರತ್ಯಯಗಳನ್ನು, ಧಾತುಸಾಧಕಗಳಾದ - ಇಸು, -ಸು, - ಚು ಮುಂತಾದ ಪ್ರತ್ಯಯಗಳನ್ನು ಪ್ರಶ್ನೆ ಅವಧಾರಣೆ ಸಂಶಯ ಮುಂತಾದ ಭಾವಸೂಚಕ ಪ್ರತ್ಯಯಗಳನ್ನು ಪ್ರತ್ಯೇಕವಾಗಿ ತೋರಿಸಲಾಗುತ್ತದೆ.

ಕ್ರಿಯಾರೂಪಗಳಲ್ಲಿ ಅಸಾಧಾರಣವಾದುವನ್ನು ಆಯಾ ಧಾತುವಿನ ಕೆಳಗೆ ಸೂಚಿಸಲಾಗುತ್ತದೆ. ಉದಾ: ಆಗು - ಆಯ್ತು, ಆಯಿತ್ತು, ಆದತ್ತು; ಈ - ಇತ್ತು; ಕಾಣ್ - ಕಂಡು; ತೆಱು - ತೆತ್ತು ಇತ್ಯಾದಿ.

ಪ್ರತಿಯೊಂದು ಧಾತುವಿನ ಮುಂದೆಯೂ ಅದರ ಕೆಲವು ನಿರ್ದಿಷ್ಟ ರೂಪಗಳನ್ನು ಕೊಡಬೇಕು. ಉದಾಹರಣೆಗೆ: ಭೂತಕಾಲದ ಪ್ರಥಮೈಕವಚನ ಪುಲ್ಲಿಂಗರೂಪ. ನೋಡು - ನೋಡಿದಂ, ನಡೆ - ನಡೆದಂ ಇತ್ಯಾದಿ.

ಪ್ರತ್ಯಯಗಳಲ್ಲಿ ಶಬ್ದದ ಆದಿಯಲ್ಲಿ ಸೇರುವುದಕ್ಕೆ ಪೂರ್ವಪ್ರತ್ಯಯವೆಂದೂ ಮಧ್ಯದಲ್ಲಿ ಸೇರುವುದಕ್ಕೆ ಮಧ್ಯಪ್ರತ್ಯಯವೆಂದೂ ಅಂತ್ಯದಲ್ಲಿ ಸೇರುವುದಕ್ಕೆ ಪರಪ್ರತ್ಯಯವೆಂದೂ ಹೆಸರು ಕೊಟ್ಟು, ಇವಕ್ಕೆ ಕ್ರಮವಾಗಿ ಪೂ ಪ್ರ; ಮ ಪ್ರ; ಪರಪ್ರ - ಎಂದು ಸಂಕೇತವನ್ನು ಸೂಚಿಸಬಹುದು. 'ಪ್ರ' ಎಂದು ಮಾತ್ರವೇ ತೋರಿಸಿದಲ್ಲಿ ಪರಪ್ರತ್ಯಯ ಎಂದೇ ಅಭಿಪ್ರಾಯ.

ಕೆಲವು ಶಬ್ದಗಳು ಒಂದೇ ಮೂಲದಿಂದ ಬರದಿದ್ದರೂ ಕೆಲವು ಅಂಶಗಳಲ್ಲಿ ಮಾತ್ರ ಪರಸ್ಪರ ಹೋಲುವಂತೆ ಕಂಡುಬಂದಾಗ ಆ ಬಗ್ಗೆ ಗಮನ ಸೆಳೆಯುವುದಕ್ಕಾಗಿ 'ಪರಾ' (ಪರಾಮರ್ಶಿಸಿ) ಎಂದು ಸೂಚಿಸಲಾಗುತ್ತದೆ. ಒಂದೇ ಮೂಲದ ಶಬ್ದಗಳನ್ನು 'ನೋ.' (ನೋಡಿ) ಎಂದು ನಿರ್ದೇಶಿಸಲಾಗುತ್ತದೆ. ಉದಾ: ಅಕಸಾಲು 'ಅಕ್ಕಸಾಲೆ' ನೋ. ಅಟವಣೆ 'ಠವಣೆ' ಪರಾ.

ನಿಘಂಟಿನಲ್ಲಿ ಪ್ರತ್ಯೇಕ ಉಲ್ಲೇಖಗಳಾಗಿ ಒಂದೇ ಶಬ್ದರೂಪವನ್ನು ಹಲವು ಬಾರಿ ಕೊಡಬೇಕಾದ ಸಂದರ್ಭಗಳಲ್ಲಿ ಅನುಸರಿಸತಕ್ಕ ಆನುಪೂರ್ವಿ ರೂಪನಿಷ್ಪತ್ತಿ ಜ್ಞಾತಿಶಬ್ದಗಳು ಮೊದಲಾದುವನ್ನು ತೋರಿಸುವ ಕ್ರಮ, ನಾಮವಾಚಕ, ಕ್ರಿಯಾವಾಚಕಗಳ ಯಾವ ವಿಶೇಷರೂಪಗಳನ್ನು ಅವಶ್ಯವಾಗಿ ತೋರಿಸಬೇಕೆಂಬ ವಿಷಯ, ಪಾರಿಭಾಷಿಕ ಶಬ್ದಗಳನ್ನು ಸಂಗ್ರಹಿಸುವ ವಿಷಯ ಈ ಮೊದಲಾದವನ್ನು ವಿವರವಾಗಿ ಚರ್ಚಿಸಿ ನಿರ್ಣಯಕ್ಕೆ ಬರಲಾಯಿತು.

ನಿಘಂಟಿನಲ್ಲಿ ಪ್ರತ್ಯೇಕ ಉಲ್ಲೇಖವಾಗಿ ಕೊಡುವ ಶಬ್ದಗಳನ್ನು ಒಂದೇ ರೂಪದ ಶಬ್ದಗಳಾಗಿದ್ದರೆ ಈ ಕೆಳಗಿನ ಆನುಪೂರ್ವಿಯಲ್ಲಿ ತೋರಿಸತಕ್ಕುದು.

೧. **ಭಾಷೆ:** ಕನ್ನಡ, ತದ್ಭವ, ಸಂಸ್ಕೃತ, ಅನ್ಯದೇಶ್ಯ. ೨. **ಶಬ್ದಜಾತಿ:** ಒಂದೇ ಶಬ್ದರೂಪ ಬೇರೆ ಬೇರೆ ಜಾತಿಯದಾದರೆ ಅಂದರೆ ವ್ಯಾಕರಣಕ್ಕನುಸಾರವಾಗಿ ಕ್ರಿಯಾವಾಚಕ, ನಾಮವಾಚಕ, ಗುಣವಾಚಕ, ಸರ್ವನಾಮ, ಅವ್ಯಯ, ಪ್ರತ್ಯಯ ಮುಂತಾದ ಬೇರೆ ಬೇರೆ ಪಂಗಡಗಳಿಗೆ ಸೇರಿರುವುದಾದರೆ ಕ್ರಿಯಾವಾಚಕ (ಕ್ರಿ). ನಾಮವಾಚಕ (ನಾ). ಗುಣವಾಚಕ (ಗು). ಸರ್ವನಾಮ (ಸ). ಅವ್ಯಯ (ಅ). ಪ್ರತ್ಯಯ (ಪ್ರ). (ಸಂಖ್ಯಾವಾಚಕ, ಪರಿಮಾಣವಾಚಕ, ಪ್ರಕಾರವಾಚಕ ಇವೆಲ್ಲ ಗುಣವಾಚಕದ ಪ್ರಭೇದಗಳಾದ್ದರಿಂದ ಇವುಗಳನ್ನು ಗುಣವಾಚಕ ಸ್ಥಾನದಲ್ಲಿಯೇ ಕೊಡತಕ್ಕುದು).

ಈ ನಿಘಂಟಿನಲ್ಲಿ ಪ್ರತಿ ಉಲ್ಲೇಖಕ್ಕೂ ಸಂಬಂಧಿಸಿದಂತೆ ಕೊಡುವ ಅಂಶಗಳನ್ನು ಈ ಕೆಳಗೆ ವಿವರಿಸಿರುವಂತೆ ತೋರಿಸಲಾಗುತ್ತದೆ.

ವಾಚಕ: ಉಲ್ಲೇಖಿಸಿರುವ ಶಬ್ದ ವ್ಯಾಕರಣಕ್ಕೆ ಅನುಸಾರವಾಗಿ ಯಾವ ಪಂಗಡಕ್ಕೆ ಸೇರಿದ್ದು ಎಂಬುದನ್ನು (ಕ್ರಿ) ಕ್ರಿಯಾವಾಚಕ, (ನಾ) ನಾಮವಾಚಕ, (ಗು) ಗುಣವಾಚಕ ಮೊದಲಾದ ಸಂಕೇತಗಳಿಂದ ಸಾಧಾರಣ ಕಂಸ ( ) ಗಳೊಳಗೆ ಸೂಚಿಸಲಾಗುತ್ತದೆ.

ಅರ್ಥ: ಶಬ್ದದ ಅರ್ಥ ಸ್ಪಷ್ಟವಾಗುವಂತೆ ಬೇರೆ ಮಾತುಗಳಿಂದ ಆದಷ್ಟು ಸಂಕ್ಷೇಪವಾಗಿ ವಿವರಿಸಲಾಗುತ್ತದೆ. ಅದೇ ಅರ್ಥ ಬರುವ ಬೇರೆ ಶಬ್ದಗಳನ್ನೂ ಸಂಸ್ಕೃತದ ಪರ್ಯಾಯಶಬ್ದಗಳನ್ನೂ ಯಥೋಚಿತವಾಗಿ ಕೊಡಲಾಗುತ್ತದೆ. ಒಂದಕ್ಕಿಂತ ಹೆಚ್ಚು ಅರ್ಥಗಳಿದ್ದರೆ ೧, ೨, ೩ ಮುಂತಾಗಿ ಸಂಖ್ಯೆಗಳನ್ನು ಕೊಟ್ಟು ವಿವರಿಸಿ ಅರ್ಥಭೇದಗಳನ್ನು ತೋರಿಸಲಾಗುತ್ತದೆ. ಸಾದೃಶ್ಯ ವೈದೃಶ್ಯಗಳಿರಬಹುದಾದ ಇತರ ಶಬ್ದಗಳಿಗೆ 'ಹೋ' (=ಹೋಲಿಸು), 'ಪರಾ' (= ಪರಾಮರ್ಶಿಸು) ಮೊದಲಾದ ಸಂಕೇತಗಳ ಮೂಲಕ ಗಮನ ಸೆಳೆಯಲಾಗುತ್ತದೆ.

ಪ್ರಯೋಗ: ಪ್ರತಿಯೊಂದು ಅರ್ಥಕ್ಕೂ ಸಾಧ್ಯವಾದ ಮಟ್ಟಿಗೂ ಶಾಸನ ಕಾವ್ಯಾದಿಗಳಿಂದ ಪ್ರಯೋಗಗಳನ್ನು ಕಾಲಾನುಕ್ರಮದಲ್ಲಿ ಕೊಡಲಾಗುತ್ತದೆ. ಶಾಸನ ಪ್ರಯೋಗಗಳಿಗೆ ಅವುಗಳ ಆಕರದ ಜೊತೆಯಲ್ಲಿಯೇ ಕಾಲವನ್ನು ಸೂಚಿಸಲಾಗುತ್ತದೆ. ಉಳಿದ ಪ್ರಯೋಗಗಳಿಗೆ ಆಕರಗಳನ್ನು ಮಾತ್ರ ಸೂಚಿಸಲಾಗುತ್ತದೆ. ಅವುಗಳ ಕಾಲವನ್ನು ಸಂಕೇತಸೂಚಿಯಿಂದ ತಿಳಿದುಕೊಳ್ಳಬಹುದು.

ಸಂಸ್ಕೃತಶಬ್ದಗಳಿಗೆ ಸಾಮಾನ್ಯವಾಗಿ ಪ್ರಯೋಗಗಳನ್ನು ಕೊಡುವುದಿಲ್ಲ. ಆದರೆ ಸಂಸ್ಕೃತದಲ್ಲಿಲ್ಲದ ಅರ್ಥ ಕನ್ನಡದಲ್ಲಿ ಬೆಳೆದು ಬಂದಿದ್ದರೆ ಆ ಅರ್ಥಕ್ಕೆ ಪ್ರಯೋಗವನ್ನು ಕೊಡಲಾಗುತ್ತದೆ. ಅಲ್ಲದೆ ಶಬ್ದ ಅಪೂರ್ವವಾಗಿದ್ದರೆ, ವಿಶೇಷಾರ್ಥವುಳ್ಳದ್ದಾದರೆ, ಅರ್ಥಶಾಸ್ತ್ರ ಪರಿಭಾಷೆಯಾಗಿದ್ದರೆ ಅದರ ಅರ್ಥವನ್ನು ಖಚಿತಪಡಿಸುವುದಕ್ಕಾಗಿ ಉಚಿತವರಿತು ಪ್ರಯೋಗಗಳನ್ನು ಕೊಡಲಾಗುತ್ತದೆ.

ರೂಪನಿಷ್ಪತ್ತಿ ಮತ್ತು ಜ್ಞಾತಿಶಬ್ದಗಳು: ರೂಪನಿಷ್ಪತ್ತಿಯನ್ನೂ ಜ್ಞಾತಿಶಬ್ದಗಳನ್ನೂ ಚೌಕ ಕಂಸ [ ] ಗಳೊಳಗೆ ಸೂಚಿಸಲಾಗುತ್ತದೆ. ಉಲ್ಲೇಖಿಸಿದ ಶಬ್ದ ಯಾವ ಭಾಷೆಯದು ಎಂಬುದನ್ನು ಇಲ್ಲಿ ಸೂಚಿಸಲಾಗುತ್ತದೆ. ಸೂಚಿಸದೆ ಬಿಟ್ಟ ಶಬ್ದ ದೇಶ್ಯವೆಂದು ಭಾವಿಸತಕ್ಕುದು.

ದೇಶ್ಯ: ದೇಶ್ಯಶಬ್ದಕ್ಕೆ ಅದರ ರಚನೆ ಸ್ಪಷ್ಟವಾಗುವಂತೆ ಪ್ರಕೃತಿ ಪ್ರತ್ಯಯಗಳನ್ನು ವಿಭಜಿಸಿ ತೋರಿಸಲಾಗುತ್ತದೆ. ಉದಾ:

ಅಗಸಗಿತ್ತಿ (ಅಗಸ + - ಗಿತ್ತಿ); ನೋಂಪಿ (ನೋನ್ + - ಪಿ); ಅಣ್ಕ (ಅಣ್ + - ಕೆ).

ಸಮಾಸಗಳಲ್ಲಿ ಸೇರಿರುವ ಬೇರೆ ಬೇರೆ ಪ್ರಕೃತಿರೂಪಗಳನ್ನೂ ಕೊನೆಯಲ್ಲಿ ಸೇರುವ ಅಂತ್ಯಪ್ರತ್ಯಯಗಳನ್ನೂ ನಿರ್ದೇಶಿಸಲಾಗುತ್ತದೆ. ಇದು ವ್ಯಾಕರಣಸಮ್ಮತವಾದ ವಿಗ್ರಹವಾಕ್ಯವೆಂದು ಭಾವಿಸಲಾಗದು. ಖಚಿತವಾಗಿರುವಷ್ಟು ಭಾಗವನ್ನು ತೋರಿಸಿ ಉಳಿದದ್ದನ್ನು ಅಡ್ಡಗೆರೆ (–) ಯ ಮೂಲಕ ಸೂಚಿಸಲಾಗುತ್ತದೆ. ಲೋಪಾಗಮಾದಿ ಸಂಧಿಕಾರ್ಯಗಳನ್ನೂ ಮಧ್ಯದಲ್ಲಿ ಬರುವ ಆಗಮಗಳನ್ನೂ ತೋರಿಸುವುದಿಲ್ಲ.

ತೂಗುಸೊಡರ್ (ತೂಗು + ಸೊಡರ್); ತೂಗುಞ್ಜೊಡರ್ (ತೂಗು + ಸೊಡರ್); ಅಕ್ಕಜಜ್ಗೊಳ್ (ಅಕ್ಕಜ + ಕೊಳ್);

ಅದಿರುದುಟಿ (ಅದಿರು$_1$ + ತುಟಿ); ಮುಕ್ಕಣ್ಣ (< ಮೂ (< ಮೂಱು) + ಕಣ್ + - ಅ$_7$);

ನಾಣಿಲಿ (ನಾಣ್ + ಇಲ್ + - ಇ$_3$); ಬಳೆಗಾಱಿತಿ (ಬಳೆಗಾಱ + - ಇತಿ(<– ಇತ್ತಿ).

ಹೀಗೆ ತೋರಿಸಿರುವ ಶಬ್ದಗಳು ರೂಪದಲ್ಲಿ ಒಂದೇ ಆದರೂ ಬೇರೆ ಬೇರೆ ಮೂಲದವಾಗಿದ್ದು ಒಂದಕ್ಕಿಂತ ಹೆಚ್ಚು ಉಲ್ಲೇಖಗಳಾಗಿ ಪ್ರತ್ಯೇಕಸ್ಥಾನ ಪಡೆದಿದ್ದ ಸಂದರ್ಭದಲ್ಲಿ ಆಯಾ ಉಲ್ಲೇಖದ ಸಂಖ್ಯೆಯನ್ನು ಜೊತೆಯಲ್ಲೇ ಸೂಚಿಸಲಾಗುತ್ತದೆ.

ಅಚ್ಚುಕಟ್ಟು (ಅಚ್ಚು$_2$ + ಕಟ್ಟು$_2$); ಅಚ್ಚರಿವಡೆ (ಅಚ್ಚರಿ + ಪಡೆ$_1$); ಅಚ್ಚರಿಗವಿ (ಅಚ್ಚರಿ + ಕವಿ$_1$);
ಅಚ್ಚಮುತ್ತು (ಅಚ್ಚ$_1$ + ಮುತ್ತು$_2$); ಅಚ್ಚುಮೆಚ್ಚು (ಅಚ್ಚು$_4$ + ಮೆಚ್ಚು$_2$)

**ತದ್ಭವ:** ಸಂಸ್ಕೃತದಿಂದ ಅಥವಾ ಪ್ರಾಕೃತದಿಂದ ಬಂದ ಶಬ್ದಗಳನ್ನು ಮಾತ್ರ ತದ್ಭವ ಎಂದು ಪರಿಗಣಿಸಲಾಗಿದೆ. ತದ್ಭವಗಳಿಗೆ ಅವುಗಳ ಮೂಲಭಾಷೆಯನ್ನು ನಿಷ್ಪತ್ತಿಚಿಹ್ನೆ(<)ಯ ಮೂಲಕ ಸೂಚಿಸಿ ತೋರಿಸಲಾಗುತ್ತದೆ.

**ಬಕುತಿ (< ಸಂ. ಭಕ್ತಿ); ಜತನ (< ಸಂ. ಯತ್ನ)**

ಕನ್ನಡದಲ್ಲಿ ಬಳಕೆ ಇರುವ ಶಬ್ದರೂಪ ಮೂಲಭಾಷೆಯಿಂದ ನೇರವಾಗಿ ಬರದೆ ಬೇರೊಂದು ಭಾಷೆಯ ಮೂಲಕ ಬಂದಿರುವ ಸಂದರ್ಭದಲ್ಲಿ ನೇರಸಂಪರ್ಕವುಳ್ಳ ಭಾಷೆಯನ್ನು ನಿಷ್ಪತ್ತಿಚಿಹ್ನೆಯಿಂದ ಸೂಚಿಸಿ ಆ ಭಾಷೆಯ ಶಬ್ದರೂಪದ ಮುಂದೆ ಓರೆಯಾದ ಲಂಬಗೆರೆಯನ್ನು (/) ಕೊಟ್ಟು ಮೂಲಭಾಷೆಯನ್ನು ಸೂಚಿಸಲಾಗುತ್ತದೆ.

ಕಮ್ಬ (< ಪ್ರಾ. ಕಮ್ಬೋ /ಸಂ. ಸ್ಕಮ್ಭ); ಸಿರಿ (< ಪ್ರಾ. ಸಿರಿ./ ಸಂ. ಶ್ರೀ); ಅರಸ (< ತಮಿ. ಅರಶನ್./ ಸಂ. ರಾಜನ್)

ವೈದಿಕಭಾಷೆಯಲ್ಲಿ ಸ್ಕಮ್ಭ ಎಂಬ ಶಬ್ದ ಪ್ರಾಕೃತದಲ್ಲಿ 'ಕಮ್ಬೋ' ಎಂದು ಪ್ರಯೋಗವಾಗುತ್ತಿದ್ದು ಪ್ರಾಕೃತದ ಮೂಲಕ ಕನ್ನಡಕ್ಕೆ ಬಂದು 'ಕಮ್ಬ' ಆಯಿತು. ಸಂಸ್ಕೃತದ 'ರಾಜನ್' ಶಬ್ದ ತಮಿಳಿನಲ್ಲಿ 'ಅರಶನ್' ಎಂದಾಗಿ ತಮಿಳಿನ ಮೂಲಕ ಕನ್ನಡಕ್ಕೆ ಬಂದು 'ಅರಸ' ಆಯಿತು ಎಂದು ಅಭಿಪ್ರಾಯ.

**ಸಂಸ್ಕೃತ:** ಸಂಸ್ಕೃತಶಬ್ದಗಳ ರಚನೆಯಲ್ಲಿ ಸೇರಿರುವ ಪ್ರಕೃತಿ ಪ್ರತ್ಯಯಗಳನ್ನು ಬಿಡಿಸಿ ತೋರಿಸುವುದಿಲ್ಲ; ಸಿದ್ಧವಾದ ಶಬ್ದರೂಪವನ್ನು ಮಾತ್ರ ಕೊಡಲಾಗುತ್ತದೆ. ನಿಷೇಧರೂಪಗಳನ್ನೂ ಉಪಸರ್ಗ ಸೇರಿದ ರೂಪಗಳನ್ನೂ ಬಿಡಿಸಿ ತೋರಿಸುವುದಿಲ್ಲ; ಕನ್ನಡದಲ್ಲಿ ಬಳಕೆಯಿರುವ ರೂಪಕ್ಕೂ ಸಂಸ್ಕೃತದ ಶಬ್ದರೂಪಕ್ಕೂ ಯಾವ ವ್ಯತ್ಯಾಸವೂ ಇಲ್ಲದ ಪಕ್ಷದಲ್ಲಿ (ಸಂ.)ಎಂದು ಸೂಚಿಸಲಾಗುತ್ತದೆ. ವ್ಯತ್ಯಾಸವಿದ್ದಲ್ಲಿ 'ಸಂ' ಎಂಬ ಸಂಕೇತದ ಜೊತೆಗೆ ಸಂಸ್ಕೃತದ ಶಬ್ದರೂಪವನ್ನೂ ತೋರಿಸಲಾಗುತ್ತದೆ.

ರೂಪಭೇದವಿಲ್ಲದ ಶಬ್ದಗಳು: **ಫಲ (ಸಂ), ಗಣಿತ (ಸಂ), ಪ್ರಯತ್ನ (ಸಂ).**

ಅಂತ್ಯದಲ್ಲಿ ಸ್ವಲ್ಪ ಮಾತ್ರ ವ್ಯತ್ಯಾಸವಿರುವ ಶಬ್ದಗಳು:

**ಅಭಿಮಾನಿ (ಸಂ. ಅಭಿಮಾನಿನ್); ಕಾಮಿ (ಸಂ. ಕಾಮಿನ್); ಕಾಮಿನಿ (ಸಂ. ಕಾಮಿನೀ); ಗಂಗೆ (ಸಂ. ಗಂಗಾ); ಮಾಲೆ (ಸಂ. ಮಾಲಾ).**

ಹೆಚ್ಚು ವ್ಯತ್ಯಾಸವಿರುವ ಶಬ್ದಗಳು:

ವಿದ್ವಾಂಸ (ಸಂ. ವಿದ್ವಸ್); ಹನುಮಂತ (ಸಂ. ಹನುಮತ್); ಧನವಂತ (ಸಂ. ಧನವತ್)

ನಞ್ ಸಮಾಸರೂಪದ ಶಬ್ದಗಳು:

**ಅನನ್ತ (ಸಂ.); ಅನನ್ತರ (ಸಂ.); ಅಜ್ಞಾನ (ಸಂ.)**

ಉಪಸರ್ಗ ಸೇರಿದ ರೂಪಗಳು:

ದುರಭಿಮಾನ (ಸಂ.); ಸಕಾರಣ (ಸಂ.); ನಿಷ್ಕಾರಣ (ಸಂ.); ನಿರಂತರ (ಸಂ.)

ಮೇಲಿನ ಉದಾಹರಣೆಗಳಲ್ಲಿ

**ಅ + ಜ್ಞಾನ, ಅನ್ + ಅನ್ತರ , ದುರ್ + ಅಭಿಮಾನ, ನಿಸ್ + ಕಾರಣ ಮುಂತಾಗಿ ಬಿಡಿಸಿ ತೋರಿಸುವುದಿಲ್ಲ.**

ಸಂಸ್ಕೃತಸಮಾಸಗಳಲ್ಲಿ ಸೇರಿರುವ ಬೇರೆ ಬೇರೆ ಶಬ್ದರೂಪಗಳನ್ನು ಬಿಡಿಸಿ ತೋರಿಸಲಾಗುತ್ತದೆ. ಆದರೆ ರೂಪಸಿದ್ಧಿಗೆ ಸಹಾಯಕವಾದ ಪ್ರತ್ಯಯವೇ ಮೊದಲಾದ ಇತರ ಅಂಶಗಳನ್ನು ನಿರ್ದೇಶಿಸುವುದಿಲ್ಲ. ಅಂಥ ಕಡೆ ಯಾವುದೊ ಅಂಶವನ್ನು ಹೇಳದೆ ಬಿಟ್ಟಿದೆಯೆಂದು ಸೂಚಿಸುವುದಕ್ಕಾಗಿ ಅಡ್ಡಗೆರೆ (—)ಯನ್ನು ಬಳಸಲಾಗುತ್ತದೆ.

ಪಶುಪತಿ (ಸಂ. ಪಶು + ಪತಿ); ಕಂಜಾಕ್ಷ(ಸಂ. ಕಂಜ + ಅಕ್ಷಿನ್ + -); ಪದ್ಮನಾಭ (ಸಂ. ಪದ್ಮ + ನಾಭಿ + - )

ಪಶು, ಪತಿ ಎಂಬ ಎರಡು ಸಂಸ್ಕೃತಶಬ್ದಗಳು ಸೇರಿ 'ಪಶುಪತಿ' ಎಂಬ ಸಮಸ್ತಶಬ್ದವಾಗಿದೆಯೆಂದು ಮೊದಲನೆಯ ನಿಷ್ಪತ್ತಿ ಸೂಚಿಸುತ್ತದೆ. ಎರಡು ಮೂರನೆಯ ಉದಾಹರಣೆಗಳಲ್ಲಿ ಕಂಜ, ಅಕ್ಷಿ ಎಂಬ ಮತ್ತು ಪದ್ಮ, ನಾಭಿ ಎಂಬ ಶಬ್ದಗಳು ಕೂಡಿದಾಗ ಬೇರೆ ಯಾವುದೋ ಪ್ರತ್ಯಯ ಸೇರಿದೆ; 'ಕಂಜದಂತೆ ಅಕ್ಷಿಯುಳ್ಳವನು ಯಾವನೋ ಅವನು' 'ಪದ್ಮದಂತೆ ನಾಭಿಯುಳ್ಳವನು ಯಾವನೋ ಅವನು' ಎಂಬ ಅರ್ಥ ಕೊಡುವಂತೆ ಸೇರಿರುವ ಆ ಪ್ರತ್ಯಯವನ್ನು ಇಲ್ಲಿ ಕೊಡದೆ ಬಿಟ್ಟಿದೆ ಎಂದು ಈ ಅಡ್ಡಗೀಟು (—) ಸೂಚಿಸುತ್ತದೆ. ಉಪಪದ

ಸಮಾಸಗಳಲ್ಲಿ ಪೂರ್ವಪದದ ಪ್ರಕೃತಿರೂಪವನ್ನೂ ಉತ್ತರಪದದ ಧಾತುರೂಪವನ್ನೂ ತೋರಿಸಿ ಶಬ್ದಸಿದ್ಧಿಯಲ್ಲಿ ಆಗಿರಬಹುದಾದ ವ್ಯತ್ಯಾಸಗಳನ್ನು ಸೂಚಿಸಲು ಅಡ್ಡಗೆರೆಯನ್ನು (–) ಬಳಸಲಾಗುತ್ತದೆ. ಉದಾ: ಚಕ್ರಧರ (ಸಂ. ಚಕ್ರ + √ಧೃ + -); ಕುಮ್ಭಕಾರ (ಸಂ. ಕುಮ್ಭ + √ಕೃ + -); ಕ್ಷೇಮಕಾರಿ (ಸಂ. ಕ್ಷೇಮ + √ಕೃ + -); ಸಾಮಗ (ಸಂ. ಸಾಮ + √ಗೈ + -) ನಿತ್ಯಸಮಾಸಗಳನ್ನು ಬಿಡಿಸಿ ತೋರಿಸುವುದಿಲ್ಲ. ದಮ್ಪತಿ (ಸಂ. ದಮ್ಪತೀ).

**ಅನ್ಯದೇಶ್ಯ:** ದೇಶ್ಯ, ತದ್ಭವ ಮತ್ತು ಸಂಸ್ಕೃತಗಳು ಹೊರತಾಗಿ ಬೇರೆ ಭಾಷೆಗಳ ಶಬ್ದಗಳನ್ನು ಅನ್ಯದೇಶ್ಯಗಳೆಂದು ಇಲ್ಲಿ ವ್ಯವಹರಿಸಲಾಗುತ್ತದೆ. ಶಬ್ದ ಯಾವ ಭಾಷೆಯದೆಂದು ಗೊತ್ತಿರುವಾಗ ಆ ಭಾಷೆಯ ಹೆಸರನ್ನು ಸೂಚಿಸಲಾಗುತ್ತದೆ. ಮೂಲಭಾಷೆ ಗೊತ್ತಿಲ್ಲದಾಗ 'ಅನ್ಯದೇ' ಎಂದು ಸೂಚಿಸಲಾಗುತ್ತದೆ. ಕನ್ನಡವಲ್ಲದ ಈ ಅನ್ಯದೇಶ್ಯಶಬ್ದಗಳಿಗೂ ಆಯಾ ಶಬ್ದಕ್ಕೆ ಸಂಬಂಧಪಟ್ಟಂತೆ ಮುಖ್ಯವಾದ ಕೆಲವು ಭಾಷೆಗಳಿಂದ ಮಾತ್ರ ಜ್ಞಾತಿ ಅಥವಾ ಸಂವಾದಿ (Equivalent ) ಶಬ್ದಗಳನ್ನು ಕೊಡಲಾಗುತ್ತದೆ. ಹೀಗೆ ಕೊಡುವಾಗ ಕನ್ನಡಕ್ಕೆ ನೇರಸಂಪರ್ಕವಿರಬಹುದೆಂದು ತೋರುವುದನ್ನು ಮೊದಲೂ ಉಳಿದವನ್ನು ಆಮೇಲೂ ನಿರ್ದೇಶಿಸಲಾಗುತ್ತದೆ.

ಅಕಟಾಯಿಸು (<— ಮರಾ. ಅಖಡಣೇ; ಹಿಂ. ಅಕಡ್‌ನಾ); ಅಕಲು, ಅಕ್ಕಲು, ಅಖಲು (<— ಅರಬ್ಬಿ. ಅಕ್ಕಲ್, ತುರ್ಕಿ. ಅಕಿಲ್, ಅಕ್ಲಿ; ನೇಪಾ. ಅಕ್ಕಲ್, ಅಕಿಲ್, ಅಕಲ್; ಮರಾ. ಅಕ್ಕಲ; ಹಿಂ. ಅಕ್ಲ್) ಕೋರ್ಟು (<— ಇಂ. Court); ರಸ್ತೆ (<— ಹಿಂ. ರಸ್ತಾ, ರಾಸ್ತಾ (ಪಾರಸಿ); ಕಚೇರಿ (ಹಿಂ. ಕಚಹರೀ)

**ಜ್ಞಾತಿಶಬ್ದಗಳು:** ದೇಶ್ಯಶಬ್ದಗಳಿಗೆ ಇತರ ಸೋದರಭಾಷೆಗಳಲ್ಲಿ ದೊರೆಯುವ ಜ್ಞಾತಿಶಬ್ದಗಳನ್ನು ತೋರಿಸಲಾಗುತ್ತದೆ. ಅರ್ಥಭೇದವಿದ್ದಲ್ಲಿ ಮಾತ್ರ ಅರ್ಥವನ್ನು ಬರೆದು ತೋರಿಸಲಾಗುತ್ತದೆ.

ಜ್ಞಾತಿಶಬ್ದಗಳನ್ನು ಈ ಅನುಕ್ರಮದಲ್ಲಿ ಕೊಡಲಾಗುತ್ತದೆ: ತಮಿ (ತಮಿಳು), ಮಲ (ಮಲೆಯಾಳ), ಕೊಡ (ಕೊಡಗು), ತುಳು (ತುಳು), ತೆಲು (ತೆಲುಗು), ಕೋಲಾ (ಕೋಲಾಮಿ), ನಾಯ್ಕಿ, ಪರ್ಜಿ, ಗಡಬ, ಗೊಂಡಿ, ಕುಇ, ಕುವಿ, ಕುರುಖ್, ಮಲ್ತೊ, ಬ್ರಾಹುಇ.

ಮೊದಲು ನಿಷ್ಪತ್ತಿಯನ್ನೂ ಆಮೇಲೆ ಜ್ಞಾತಿ ಮತ್ತು ಸಂವಾದಿ ಶಬ್ದಗಳನ್ನೂ ಕೊಡಲಾಗುತ್ತದೆ. ಜ್ಞಾತಿಶಬ್ದಗಳನ್ನು ಪ್ರಾರಂಭಿಸುವ ಮೊದಲು ಎರಡು ಲಂಬರೇಖೆಗಳಿಂದ ( ‖ ) ಭೇದವನ್ನು ಸೂಚಿಸಲಾಗುತ್ತದೆ.

ಅಚ್ಚುಗಟ್ಟು (ಅಚ್ಚು + ಕಟ್ಟು$_2$ ‖ ತಮಿ. ಅಚ್ಚುಕಟ್ಟು; ತುಳು. ಅಚ್ಚುಕಟ್ = ಅನುಕೂಲ)
ಅಡಿಗಲ್ಲು (ಅಡಿ + ಕಲ್ಲು (< ಕಲ್$_3$) ‖ ತಮಿ. ಅಡ್ಡೈಕ್ಕಲ್; ಮಲ. ಅಡಕ್ಕಲ್ಲು;
ಕೋತ. ಅಣ್ಗಲ್; ತುಳು. ಅಟ್ಟೆ = ಆಧಾರ; ತೆಲು. ಡಾಕಲಿ, ಡಾಕಲ್ಲು, ಡಾಗಲಿ, ಡಾಯಿ.

ನಿಷ್ಪತ್ತಿಯನ್ನು ಕೊಡದೆ ಜ್ಞಾತಿಶಬ್ದಗಳನ್ನು ಮಾತ್ರ ಕೊಡುವಲ್ಲಿಯೂ ಲಂಬರೇಖೆಗಳಿಂದಲೇ ಪ್ರಾರಂಭಿಸಲಾಗುತ್ತದೆ :

ಅಜಮಾಯಿಷಿ ( ‖ ಮರಾ. ಅಜಮಾಸ, ಅಜ್ಮಾಸ್; ಗುಜ. ಅಜಮಾಯಿಷ; ಹಿಂ. ಆಜ್‌ಮಾಈಸ್, ಪಾರ. ಆಝ್ಮಾಯಿಷ್)
ಅಡೆಪ, ಅಡಪ, ಹಡಪ ( ‖ ತಮಿ. ಅಡ್ಡೈಪ್ಪೈ (< ಅಡ್ಡೈ = ವೀಳೆಯದೆಲೆ + ಪೈ = ಚೀಲ) ಮಲ. ಅಡಪ್ಪಮ್ ; ತೆಲು. ಅಡಪಮು, ಹಡಪಮು; ತುಳು. ಅಡಪ, ಹಡಪ).

ಪ್ರತಿಯೊಂದು ಕ್ರಿಯಾವಾಚಕದ ಕೆಳಗೂ ಅದರ ಭೂತನ್ಯೂನರೂಪ ವಿಶಿಷ್ಟರೀತಿಯದಾಗಿದ್ದಲ್ಲಿ ಅದನ್ನು ತೋರಿಸಲಾಗುತ್ತದೆ. ಉಲ್ಲೇಖಿಸಿದ ಶಬ್ದ ಯಾವ ಜಾತಿಯದೆಂದು ಸೂಚಿಸಿದ ಬಳಿಕ ಅರ್ಥವನ್ನು ಪ್ರಾರಂಭಿಸುವುದಕ್ಕೆ ಮೊದಲು ಈ ನ್ಯೂನರೂಪಗಳನ್ನು ತೋರಿಸಿ ಕೊನೆಯಲ್ಲಿ ಪೂರ್ಣವಿರಾಮವನ್ನು ಬಳಸಲಾಗುತ್ತದೆ.

ಅಡು (ಕ್ರಿ). ಅಟ್ಟು, ಬರ್ (ಕ್ರಿ) ಬಂದು, ಇಡು (ಕ್ರಿ). ಇಟ್ಟು, ಸಲ್ (ಕ್ರಿ). ಸಂದು,
ಉಗು (ಕ್ರಿ). ಒಕ್ಕು, ನಿಲ್ (ಕ್ರಿ). ನಿಲ್ತು, ನಿಂತು, ನಿಂದು, ಮಿಗು (ಕ್ರಿ). ಮಿಕ್ಕು,
ಕೊಲ್ (ಕ್ರಿ). ಕೊಂದು, ಸಾ (ಕ್ರಿ). ಸತ್ತು , ಗೆಲು (ಕ್ರಿ). ಗೆತ್ತು, ನೋ (ಕ್ರಿ). ನೊಂದು,
ತೆಱು (ಕ್ರಿ). ತೆತ್ತು, ಓ (ಕ್ರಿ). ಓತು, ಮಾಡು (ಕ್ರಿ). ಮಾಡಿ, ಮಾಡಿದು, ತರ್ (ಕ್ರಿ). ತಂದು,
ಕೇಳ್ (ಕ್ರಿ). ಕೇಳ್ದು, ಕೇಳಿದು, ಕೇಳಿ, ಕದಿ (ಕ್ರಿ). ಕದಿದು, ಕದ್ದು, ಗೆಲ್ (ಕ್ರಿ) ಗೆಲ್ದು, ಗೆಲಿದು, ಗೆದ್ದು.
ಗದಿ (ಕ್ರಿ) ಗದಿದು, ಗೆದ್ದು.

ಅಂತ್ಯಸ್ವರ 'ಇ' ಕಾರವಾಗಿ ಮಾತ್ರ ಮಾರ್ಪಟ್ಟು ಅಥವಾ ಅಂತ್ಯದಲ್ಲಿ 'ದು' ಸೇರಿ ಆಗುವ ಸಾಧಾರಣ ಭೂತನ್ಯೂನ ರೂಪವನ್ನು ತೋರಿಸುವುದಿಲ್ಲ. ಉದಾ:

ಹೋಗು (ಕ್ರಿ), ಆಡು (ಕ್ರಿ), ಬಯಸು (ಕ್ರಿ), ಹರಸು (ಕ್ರಿ), ಹಾರು (ಕ್ರಿ), ಸೋರು (ಕ್ರಿ), ಕಡಿ (ಕ್ರಿ), ಹಿಡಿ (ಕ್ರಿ), ನಡೆ (ಕ್ರಿ), ಕಡೆ (ಕ್ರಿ), ಎಸೆ (ಕ್ರಿ) ಮಸೆ (ಕ್ರಿ) — ಈ ಕ್ರಿಯಾವಾಚಕಗಳ ಭೂತನ್ಯೂನರೂಪಗಳನ್ನು — ಹೋಗಿ, ಆಡಿ, ಬಯಸಿ, ಹರಸಿ, ಹಾರಿ, ಸೋರಿ, ಕಡಿದು, ಹಿಡಿದು, ನಡೆದು, ಕಡೆದು, ಎಸೆದು, ಮಸೆದು — ಎಂದು ತೋರಿಸುವುದಿಲ್ಲ. ಆದರೆ, ಸಾಧಾರಣರೂಪದ ಜೊತೆಗೆ ವಿಶೇಷರೂಪವೂ ಇದ್ದರೆ ಎರಡನ್ನೂ ತೋರಿಸಲಾಗುತ್ತದೆ.

ಮಾಡು (ಕ್ರಿ) ಮಾಡಿದು, ಮಾಡಿ, ಕೇಳು (ಕ್ರಿ) ಕೇಳಿದು, ಕೇಳಿ, ಕೆಯ್ಕೊಳ್ (ಕ್ರಿ) ಕೆಯ್ಕೊಂಡು,
ದಯೆಗೆಯ್ (ಕ್ರಿ) ದಯೆಗೆಯ್ದು, ದಯಮಾಡು (ಕ್ರಿ) ದಯಮಾಡಿ, ಬಟಿಸಲ್ (ಕ್ರಿ) ಬಟಿಸಂದು,
ಎಯ್ತರ್ (ಕ್ರಿ) ಎಯ್ತಂದು, ಬೀಟ್ಕೊಳ್ (ಕ್ರಿ) ಬೀಟ್ಕೊಂಡು (ಈ ನ್ಯೂನರೂಪಗಳನ್ನು ತೋರಿಸುವುದಿಲ್ಲ).

ನಾಮವಾಚಕಗಳಲ್ಲಿಯೂ ವಿಶೇಷರೂಪಗಳು ಕಂಡುಬಂದಲ್ಲಿ ಅವನ್ನೂ ತೋರಿಸಲಾಗಿದೆ. ಅಕ್ಕ, ಅಕ, ಅಕ್ಕಳ್ (ನಾ). ಬಹುವ. ಅಕ್ಕಂಗಳ್, ಅಕ್ಕಗಳು, ಅಕ್ಕಂದಿರು, ಅಕ್ಕದಿರು.

ಮಗ (ನಾ). ಬಹುವ. ಮಕ್ಕಳ್, ಮಗಂದಿರ್.

ಮಗಳ್, ಮಗಳು (ನಾ). ಬಹುವ. ಮಗಳ್ದಿರ್.

ಕನ್ನಡಸಾಹಿತ್ಯದಲ್ಲಿ ಅಡಕವಾದ ನಾನಾ ಧಾರ್ಮಿಕ ಕಾವ್ಯ ಶಾಸ್ತ್ರಗ್ರಂಥಗಳಿಂದ ವಿಪುಲವಾಗಿ ಶಬ್ದಸಂಗ್ರಹ ಮಾಡಲಾಗಿದೆ. ಹೀಗೆ ಸಂಗ್ರಹಿಸಿರುವ ಕನ್ನಡ ಸಂಸ್ಕೃತ ಶಬ್ದರಾಶಿಯಲ್ಲಿ ಬಹುಪಾಲಿನ ಪಾರಿಭಾಷಿಕ ಶಬ್ದಗಳು ಸೇರಿಹೋಗಿವೆಯೆಂದು ನಂಬಬಹುದು. ಆದರೂ ಆಗ ಪಾರಿಭಾಷಿಕ ಶಬ್ದಸಂಗ್ರಹವೊಂದನ್ನೇ ಗುರಿಯಾಗಿಟ್ಟುಕೊಂಡಿರಲಿಲ್ಲವಾದ್ದರಿಂದ ಕೆಲವು ಶಬ್ದಗಳು ಬಿಟ್ಟು ಹೋಗಿರುವುದು ಸಾಧ್ಯ. ಆದ್ದರಿಂದ ಈಗ ಮತ್ತೊಮ್ಮೆ ಪಾರಿಭಾಷಿಕಶಬ್ದಗಳನ್ನು ಸಂಗ್ರಹಿಸುವುದು ಅಗತ್ಯವೆಂದು ಭಾವಿಸಿ ಈ ಕೆಳಗೆ ತೋರಿಸುವ ಗ್ರಂಥಗಳಿಂದ ಶಬ್ದಸಂಗ್ರಹ ಮಾಡಬೇಕೆಂದು ತೀರ್ಮಾನಿಸಲಾಯಿತು.

1) ಜೈನ: (ಅ) ಜೈನಧರ್ಮಪರಿಭಾಷೆ (ಪೂಜಾರರು) (ಆ)ಗೊಮ್ಮಟಸಾರ (ಕೇಶವವರ್ಣಿ) (ಇ) ವಡ್ಡಾರಾಧನೆ.

2) ವೀರಶೈವ: (ಅ) ಚೆನ್ನಬಸವಣ್ಣನವರ ವಚನ (ಆ) ಪ್ರಭುದೇವರ ವಚನ (ಇ) ಶಿವಾನುಭವ ಶಬ್ದಕೋಶ (ಈ) ಸಿದ್ಧಾಂತ ಶಿಖಾಮಣಿ

3) ಎಲ್ಲಾ ಭಾರತೀಯ ದರ್ಶನಗಳಿಗೂ:

(ಅ) ಹಿಂದೂದರ್ಶನಸಾರ (ಪೂರ್ತಿ) (ಆ) ಪಾತಂಜಲಯೋಗಸೂತ್ರ

ದ್ವೈತ: ಪುರಂದರದಾಸರ ಸುಳಾದಿಗಳು. ವಿಶಿಷ್ಟಾದ್ವೈತ: (ಅ) ವೇದಾರ್ಥಸಂಗ್ರಹ (ಆ) ಅರ್ಥಪಂಚಕ

4. ಇಸ್ಲಾಂ: ಇಸ್ಲಾಂಧರ್ಮ (ಮೈಸೂರು ವಿಶ್ವವಿದ್ಯಾನಿಲಯ)

5. ಕ್ರೈಸ್ತ: ಕನ್ನಡ ಬೈಬಲ್ (ಬೈಬಲ್ ಸೊಸೈಟಿ)

6. ಇತರ ಶಾಸ್ತ್ರೀಯ ಪಾರಿಭಾಷಿಕಶಬ್ದಗಳಿಗಾಗಿ ಈ ಕೆಳಗಿನ ಗ್ರಂಥಗಳಿಂದ ಶಬ್ದಸಂಗ್ರಹ ಮಾಡತಕ್ಕುದು.

೧. ಛಂದಸ್ಸು (ಅ) ಛಂದೋಂಬುಧಿ (ಎಂ. ಎ. ರಾಮಾನುಜಅಯ್ಯಂಗಾರ್)

(ಆ) ಕವಿಜಿಹ್ವಾಬಂಧನ (ಇ) ಕನ್ನಡ ಛಂದೋವಿಕಾಸ (ಈ) ಛಂದಸ್ಸಾರ

(ಉ) ಸಮಾಲೋಕನದ ಛಂದಸ್ಸಿನ ಲೇಖನಗಳು

೨. ವ್ಯಾಕರಣ: (ಅ) ಶಬ್ದಮಣಿದರ್ಪಣ (ಆ) ಶಬ್ದಾದರ್ಶ (ಇ) ಕನ್ನಡ ಮಧ್ಯಮ ವ್ಯಾಕರಣ

(ಈ) ಹೊಸಗನ್ನಡ ನುಡಿಗನ್ನಡಿ (ಉ) ನುಡಿಗಟ್ಟು (ಊ) ಕನ್ನಡ ಚೆನ್ನುಡಿ (ಬಸವನಾಳ)

೩. ಅಲಂಕಾರ: (ಅ) ಕವಿರಾಜಮಾರ್ಗ (ಆ) ಕಾವ್ಯಾವಲೋಕನ (ಇ) ರಸರತ್ನಾಕರ

(ಈ) ದಶರೂಪಕ (ಕೆ.ವಿ. ಸುಬ್ಬಣ್ಣ)

(ಉ) ಧ್ವನ್ಯಾಲೋಕ (ಡಾ.ಕೆ. ಕೃಷ್ಣಮೂರ್ತಿ) (ಊ) ಭಾರತೀಯ ಕಾವ್ಯಮೀಮಾಂಸೆ (ತೀನಂಶ್ರೀ)

(ಋ) ಕನ್ನಡ ಕೈಪಿಡಿ (ಛಂದಸ್ಸು, ವ್ಯಾಕರಣ, ಅಲಂಕಾರ ಮೂರಕ್ಕೂ)

೫. ವಿಮರ್ಶೆ: (ಅ) ನವ್ಯತೆ ಹಾಗೂ ಕಾವ್ಯಜೀವನ (ಗೋಕಾಕ್) (ಆ) ಕವಿಕಾವ್ಯಮಹೋನ್ನತಿ

(ಇ) ವಿಭೂತಿಪೂಜೆ (ಕುವೆಂಪು) (ಈ) ಅರಿಸ್ಟಾಟಲನ ಕಾವ್ಯಮೀಮಾಂಸೆ

(ಉ) ಶೈಲಿ (ಎಸ್.ವಿ. ರಂಗಣ್ಣ)

(ಊ) ವಿಮರ್ಶೆಯ ಪೂರ್ವ ಪಶ್ಚಿಮ(ಜಿ. ಎಸ್. ಶಿವರುದ್ರಪ್ಪ)

(ಋ) ಅಂತಿಗೊನೆ ಪೀಠಿಕೆ (ಕ. ವೆಂ. ರಾಘವಾಚಾರ್) ಮತ್ತು ಮುಖ್ಯವಾದ ಇತರ ಗ್ರಂಥಗಳು.

ಕರಿ, ಕರಿದು, ಕರಿಯ, ಕರ್, ಕಾರ್, ಕರು; ಬಿಳಿ, ಬಿಳಿದು, ಬಿಳಿಯ, ಬೆಳ್, ಬೆಳು; ಬಿಸಿ, ಬಿಸಿದು, ಬಿಸಿಯ, ಬಿಸು, ಬೆಂ ಮುಂತಾದ ಗುಣವಾಚಕರೂಪಗಳಲ್ಲಿ ವ್ಯಾಕರಣಕಾರರು ಮೂಲರೂಪವೆಂದು ಅಂಗೀಕರಿಸಿರುವ ಕರಿದು, ಬಿಳಿದು, ಬಿಸಿದು ಮುಂತಾದ ರೂಪಗಳನ್ನು ಪ್ರಧಾನಉಲ್ಲೇಖಗಳಾಗಿ ಕೊಟ್ಟು ಅವುಗಳ ಕೆಳಗೆ ಉಳಿದೆಲ್ಲ ರೂಪಗಳನ್ನೂ ತೋರಿಸತಕ್ಕುದು. ಕರಿ, ಬಿಳಿ ಮುಂತಾದ ರೂಪಗಳನ್ನು ಪ್ರತ್ಯೇಕ ಉಲ್ಲೇಖಗಳಾಗಿ ಕೊಟ್ಟು ಅರ್ಥೋದಾಹರಣೆಗಳಿಗೆ 'ಕರಿದು' ನೋ. , 'ಬಿಳಿದು' ನೋ. ಎಂದು ಮುಂತಾಗಿ ಸೂಚಿಸತಕ್ಕುದು.

ಪ್ರಾಚೀನಗ್ರಂಥದ ಪ್ರತಿಗಳಲ್ಲಿ ಆಯಾ ಲೇಖಕರ ಮನೋಭಾವಕ್ಕನುಸಾರವಾಗಿ ಬೇರೆ ಬೇರೆ ರೂಪಗಳು ಕಂಡುಬರುವುದಾದರೆ ವ್ಯಾಕರಣ ಮತ್ತು ಭಾಷೆಯ ಜಾಯಮಾನಕ್ಕೆ ಅನುಸಾರವಾಗಿ ಯಾವುದು ಶುದ್ಧವೆಂದು ತೋರುತ್ತದೆಯೋ ಆ ರೂಪವನ್ನು ಪ್ರಧಾನವೆಂದು ಅಂಗೀಕರಿಸತಕ್ಕುದು. ಉದಾ: ಕೆಯ್, ಕಯ್, ಕೈ; ಮೆಯ್, ಮಯ್, ಮೈ; ಕೆಯ್ವಾರ, ಕಯ್ವಾರ, ಕೈವಾರ; ಮೆಯ್ಮಳಿ, ಮಯ್ಮಳಿ, ಮೈಯಳಿ; ಬಯ್, ಬೈ ಮುಂತಾದ ರೂಪಭೇದಗಳಲ್ಲಿ 'ಕೆಯ್', 'ಮೆಯ್', 'ಬಯ್' ಮುಂತಾದ ಅತ್ಯಂತ ಪ್ರಾಚೀನವಾದ ರೂಪದ ಕೆಳಗೆ ಉಳಿದ ರೂಪಗಳನ್ನು ಹೊಂದಿಸಿಕೊಟ್ಟು ವರ್ಣಾನುಕ್ರಮದಲ್ಲಿ ಆಯಾ ಸ್ಥಾನದಲ್ಲಿ ತೋರಿಸುವ ಶಬ್ದರೂಪಗಳನ್ನು ಮುಖ್ಯರೂಪಕ್ಕೆ 'ನೋ' ಎಂದು ನಿರ್ದೇಶಿಸತಕ್ಕುದು.

**ಕೀಳ್**, ಕೀಳು (ಕ್ರಿ). ಕಿತ್ತ, ಕಿತ್ತು; **ಕಿತ್ತು** (ಕ್ರಿ). ಕಿತ್ತಿ, ಕಿತ್ತಿದ; **ಗೆಲ್**, ಗೆಲ್ಲು (ಕ್ರಿ). ಗೆಲ್ದು, ಗೆದ್ದ, ಗೆದ್ದು; **ಗೆದಿ** (ಕ್ರಿ). ಗೆದಿಯುತ್ತಾನೆ; **ಕಳ್** (ಕ್ರಿ). ಕಳ್ದು, ಕದ್ದ, ಕದ್ದು; **ಕದಿ** (ಕ್ರಿ). ಕದ್ದ, ಕದಿಯುತ್ತಾನೆ.

ಮೇಲೆ ಸೂಚಿಸಿರುವಂತೆ ಕಿತ್ತು, ಕದಿ, ಗೆದಿ ಮೊದಲಾದ ಕೆಲವು ಕ್ರಿಯಾರೂಪಗಳು ಸ್ವತಂತ್ರಧಾತುಗಳಾಗಿ ಬಳಕೆಯಲ್ಲಿವೆ. ಇವುಗಳಲ್ಲಿ ಗ್ರಾಂಥಿಕವೆಂದು ಪರಿಗಣಿಸಬಹುದಾದ ರೂಪಗಳನ್ನು ಅಂಗೀಕರಿಸಿ ಪ್ರತ್ಯೇಕ ಉಲ್ಲೇಖಗಳಾಗಿ ಕೊಡತಕ್ಕುದು.

ಮಱಸು, ಮಱೆಸು, ಮಱೆಯಿಸು; ಕೊಱಸು, ಕೊಱೆಯಿಸು ಮುಂತಾದ ರೂಪಗಳಲ್ಲಿ 'ಮಱಸು', 'ಕೊಱಸು' ಮುಂತಾದ ರೂಪಗಳನ್ನು ಪ್ರಧಾನವೆಂದು ಗಣಿಸಿ ಉಳಿದುವನ್ನು ಅವುಗಳೇ ಕೆಳಗೆ ಕೊಡತಕ್ಕುದು.

ಅನ್ತಃ ಶುದ್ಧಿ, ಅನ್ತಶ್ಶುದ್ಧಿ; ನಿಃಕಲ, ನಿಷ್ಕಲ; ಅನ್ತಃಸತ್ತ್ವ, ಅನ್ತಸ್ಸತ್ತ್ವ; ನಿಃಕಲಂಕ, ನಿಷ್ಕಲಂಕ; ಅನ್ತಃಸಾರ, ಅನ್ತಸ್ಸಾರ; ದುಃಶೀಲ, ದುಶ್ಶೀಲ; ದುಃಸಂಗ, ದುಸ್ಸಂಗ; ದುಃಸಹ, ದುಸ್ಸಹ- ಈ ರೀತಿಯ ದ್ವಿವಿಧ ರೂಪಗಳನ್ನು ಮೇಲಿನ ಶಬ್ದಗಳಲ್ಲಿರುವಂತೆ ವಿಸರ್ಗದ ಮುಂದೆ 'ಶಷಸ' ಕಾರಗಳು ಬಂದಾಗ ವಿಸರ್ಗವಿದ್ದರೂ ವಿಸರ್ಗವಿಲ್ಲದೆ ದ್ವಿತ್ವವಾದರೂ ಉಚ್ಚಾರದಲ್ಲಿ ಯಾವ ಭೇದವೂ ಕಾಣಿಸುವುದಿಲ್ಲವಾದ್ದರಿಂದ ಅವನ್ನು ಒಂದುಗೂಡಿಸಬಹುದು. 'ಶಷಸ' ಕಾರ ದ್ವಿತ್ವವುಳ್ಳ ರೂಪಗಳನ್ನು ಪ್ರಧಾನ ಉಲ್ಲೇಖಗಳಾಗಿ ತೋರಿಸತಕ್ಕುದು. ವಿಸರ್ಗಸಮೇತವಾದ ರೂಪಗಳನ್ನು ವರ್ಣಾನುಕ್ರಮದಲ್ಲಿ ತೋರಿಸಿ ಪ್ರಧಾನ ಉಲ್ಲೇಖಕ್ಕೆ 'ನೋ' ಎಂದು ನಿರ್ದೇಶಿಸತಕ್ಕುದು. 'ಶಷಸ' ಕಾರಗಳಿಲ್ಲದ ಬೇರೆ ವರ್ಣ ಪರವಾದಾಗ ಉಚ್ಚಾರಭೇದವಿರುವುದರಿಂದ ಆ ರೂಪಗಳನ್ನು ಬೇರೆ ಬೇರೆ ಉಲ್ಲೇಖಗಳಾಗಿಯೇ ತೋರಿಸತಕ್ಕುದು.

ಬಿಱುಗಾಳಿ, ಕೆಮ್ಮಣ್ಣು, ಬೆನ್ನೀರು - ಮುಂತಾದ ಶಬ್ದಗಳನ್ನು ಬಿಡಿಸಿ ತೋರಿಸುವ ಕ್ರಮ: ಬೆಟ್ಟಿತು + ಗಾಳಿ, ಕೆಚ್ಚನೆ + ಮಣ್ಣು,

ಬೆಚ್ಚನೆ+ ನೀರು; ಬಿರುಸು + ಗಾಳಿ, ಕಿಸು + ಮಣ್ಣು, ಬಿಸಿ + ನೀರು, ಬಿಱು + ಗಾಳಿ, ಕೆಂ + ಮಣ್ಣು, ಬೆಂ + ನೀರು – ಇವುಗಳಲ್ಲಿ ಯಾವುದು ಸರಿ?

ಬಿರುಸು + ಗಾಳಿ ಎಂದು ಬಿಡಿಸುವುದು ಸರಿಯಲ್ಲ. ಇಂಥ ಕಡೆ ಸ್ಪಷ್ಟವಾಗಿ ಕಾಣಿಸುವ ಶಬ್ದರೂಪಗಳನ್ನು ಬಿಡಿಸಿ ತೋರಿಸುವುದರ ಜೊತೆಗೆ ವ್ಯಾಕರಣದ ವಿವರಣೆಯಂತೆ ಅವುಗಳ ಮೂಲವನ್ನು ಸಾಧಾರಣ ಕಂಸಗಳೊಳಗೆ ಸೂಚಿಸತಕ್ಕುದು. ಉದಾ: ಬಿಱುಗಾಳಿ: ಬಿಱು (< ಬೆಟ್ಟಿತು) + ಗಾಳಿ; ಕೆಮ್ಮಣ್ಣು : ಕೆಮ್ (< ಕೆಮ್ಮನೆ)+ ಮಣ್ಣು; ಬೆನ್ನೀರು : ಬೆಮ್ (< ಬೆಚ್ಚನೆ) + ನೀರು.

ಅವನ್, ಅವಂ, ಅವನು; ಅವಳ್, ಅವಳು; ಇವನ್, ಇವಂ, ಇವನು; ಇವಳ್, ಇವಳು ಇವನ್ನು ತೋರಿಸುವುದು ಹೇಗೆ? ಯಾವುದನ್ನು ಮೂಲರೂಪವಾಗಿ ಭಾವಿಸಬೇಕು?

ಸರ್ವನಾಮಗಳೆಲ್ಲವನ್ನೂ ಕೊಡತಕ್ಕುದು. ಹಳಗನ್ನಡ ರೂಪಗಳನ್ನು ಮೂಲರೂಪಗಳಾಗಿಟ್ಟುಕೊಂಡು ಉಳಿದುವನ್ನು ಅವುಗಳ ಕೆಳಗೆ ಜೋಡಿಸಿ ಕೊಡತಕ್ಕುದು. ವರ್ಣಾನುಕ್ರಮದಲ್ಲಿ ಬರಬೇಕಾದ ಕಡೆ ಆಯಾ ಶಬ್ದವನ್ನು ಕೊಟ್ಟು, ಅರ್ಥೋದಾಹರಣೆಗಳಿಗೆ ಮೂಲಶಬ್ದವನ್ನು ' ನೋ' ಎಂದು ಸೂಚಿಸತಕ್ಕುದು. ಉದಾ: **ಅವಂ, ಅವನ್, ಅವನು** (ಸ) **ಅವಳ್, ಅವಳು** (ಸ) **ಇವಂ, ಇವನ್, ಇವನು** (ಸ) **ಇವಳ್, ಇವಳು** (ಸ) **ಅವನ್** 'ಅವಂ' ನೋ, **ಇವನ್** 'ಇವಂ' ನೋ, **ಅವನು** 'ಅವಂ' ನೋ, **ಇವಳು** '**ಇವಳ್**' ನೋ.

ತದ್ಭವ, ಸಂಸ್ಕೃತಶಬ್ದಗಳಲ್ಲಿ ಅರ್ಥವಿವರಣೆಯಲ್ಲಿ ಮತ್ತೆ ಮತ್ತೆ ಬರೆದದ್ದನ್ನೆ ಬರೆಯುವ ಅಗತ್ಯವನ್ನು ತಪ್ಪಿಸುವುದಕ್ಕೆ ಯಾವುದಾದರೂ ಒಂದು ಕ್ರಮವನ್ನು ಗೊತ್ತುಮಾಡಬೇಕು. ಮೂಲಶಬ್ದದ ಎಲ್ಲಾ ಅರ್ಥಗಳೂ ತದ್ಭವಕ್ಕೆ ಇದ್ದರೆ, = ಚಿಹ್ನೆಯನ್ನು ಬಳಸಿ ಮೂಲಶಬ್ದವನ್ನು ಸೂಚಿಸಿದರೆ ಸಾಕು. ಕೆಲವು ಅರ್ಥಗಳು ಮಾತ್ರ ಸಮಾನವಾಗಿದ್ದರೆ, = ೧, = ೨, = ೩ ಮುಂತಾಗಿ ಮೂಲಶಬ್ದದೊಂದಿಗೆ ಅರ್ಥಸಂಖ್ಯೆಯನ್ನು ಸೂಚಿಸಬಹುದು. ಹೆಚ್ಚಿನ ಅಥವಾ ಮಾರ್ಪಾಟು ಹೊಂದಿದ ಅರ್ಥವನ್ನು ಪೂರ್ತಿಯಾಗಿ ಬರೆದು ತೋರಿಸಬೇಕು.

ತಕ್ಕ, ಕೆಟ್ಟ ಎಂಬ ಶಬ್ದಗಳು ಗುಣವಾಚಕಗಳಾಗಿ ಬಳಕೆಯಲ್ಲಿವೆ. ಆದರೆ ಇವು ತಗು, ಕಿಡು (ಕೆಡು) ಧಾತುಗಳಿಂದ ಆದ ನಿಷ್ಪನ್ನರೂಪಗಳು, ಇವನ್ನು ಸ್ವತಂತ್ರ ಉಲ್ಲೇಖಗಳಾಗಿ ಕೊಡುವುದೆ? ಅಥವಾ 'ತಗು' 'ಕಿಡು' 'ಕೆಡು' ಧಾತುಗಳ ಜೊತೆಗೆ ಸೇರಿಸಿ ಕೊಡುವುದೇ?

ಇವು ಧಾತುಗಳ ನಿಷ್ಪನ್ನರೂಪಗಳಾದರೂ ಗುಣವಾಚಕಪ್ರಯೋಗಗಳಲ್ಲಿ ಸ್ವತಂತ್ರಶಬ್ದಗಳು. ಇವಕ್ಕೆ ಪ್ರತ್ಯೇಕ ಸ್ಥಾನವುಂಟು. ಆದ್ದರಿಂದ ಇವನ್ನು ಪ್ರತ್ಯೇಕ ಉಲ್ಲೇಖಗಳಾಗಿಯೇ ಕೊಡಬೇಕು. 'ಸಲೆ', 'ಮಿಗೆ' ಮುಂತಾದ ಇಂತಹ ಇತರ ಶಬ್ದಗಳಿಗೂ ಇದೇ ನಿಯಮ ಅನ್ವಯಿಸುತ್ತದೆ.

ಅಕ್ಕಪಕ್ಕ, ಅರಿವೆ ಅಂಚಟೆ, ಅರಿವೆ ಅಂಚಡಿ, ಎದುರು ಬದುರು, ಬಟ್ಟೆಬರೆ, ಬಡಬಗ್ಗ ಮುಂತಾದ ಕೂಡುನುಡಿಗಳಲ್ಲಿನ ಎರಡನೆಯ ಅಂಶವನ್ನು ಪ್ರತ್ಯೇಕ ಉಲ್ಲೇಖವಾಗಿ ಕೊಡಬೇಕೆ? ಅರ್ಥವನ್ನು ಕೊಡುವುದು ಹೇಗೆ?

ಸ್ವತಂತ್ರವಾಗಿ ಪ್ರಯೋಗಿಸಲಾಗದ ಶಬ್ದಗಳನ್ನು ಪ್ರತ್ಯೇಕ ಉಲ್ಲೇಖವಾಗಿ ಕೊಡಬೇಕಾಗಿಲ್ಲ. ಆ ಪ್ರಕಾರ ಇಂಥ ಎರಡನೆಯ ಅಂಶಗಳಿಗೆ ಬೇರೆ ಅರ್ಥವಿದ್ದರೆ, ಸ್ವತಂತ್ರವಾಗಿ ಪ್ರಯೋಗಿಸುವ ಸಾಧ್ಯತೆ ಇದ್ದರೆ ಆಗ ಮಾತ್ರ ಪ್ರತ್ಯೇಕ ಉಲ್ಲೇಖವಾಗಿ ಕೊಡತಕ್ಕುದು. ಇಲ್ಲವಾದರೆ ಕೊಡತಕ್ಕುದಲ್ಲ. ಇದರ ಪ್ರಕಾರ ಮನೆ ಗಿನೆ, ಜನ ಗಿನ, ಬಂದರೆ ಗಿಂದರೆ – ಮುಂತಾದ ಕಡೆಗಳಲ್ಲಿ ಗಿನೆ, ಗಿನ, ಗಿಂದರೆ ಮೊದಲಾದ ರೂಪಗಳನ್ನು ಪ್ರತ್ಯೇಕವಾಗಿ ಕೊಡಬೇಕಾಗಿಲ್ಲ.

ನಿಘಂಟಿನಲ್ಲಿ ಮುಖ್ಯಶಬ್ದಗಳಾಗಿ (Head Entry) ಸೇರ್ಪಡೆಯಾಗುವ ವರ್ಗಪಂಚಮಾಕ್ಷರಸಹಿತವಾದ ಶಬ್ದಗಳನ್ನು ಈಗ ವರ್ಗಪಂಚಮಾಕ್ಷರಸಹಿತ ಮತ್ತು ಬಿಂದುಸಹಿತ ಹೀಗೆ ಎರಡು ರೂಪಗಳಲ್ಲೂ ಕೊಡಲಾಗುತ್ತಿದೆ. ಉದಾಹರಣೆಗೆ ಅಕಲಙ್ಕ = ಅಕಲಂಕ, ಅಕಿಞ್ಚನ = ಅಕಿಂಚನ, ಅಕುಟಿಲಾನ್ತಃಕರಣ = ಅಕುಟಿಲಾಂತಃಕರಣ ಇತ್ಯಾದಿ. ಈ ವಿಧಾನದ ಅಸೌಕರ್ಯ, ವಿಪುಲವಾದ ಪುನರುಕ್ತಿ ಇವನ್ನೆಲ್ಲಾ ಗಮನಿಸಿ ಬಿಂದುಸಹಿತವಾದ ರೂಪವನ್ನು ಮಾತ್ರ ಮುಖ್ಯಶಬ್ದವಾಗಿ ಕೊಡಬೇಕೆಂದೂ ಕನ್ನಡವರ್ಣಮಾಲೆಯಲ್ಲಿ ಬಿಂದುವಿಗಿರುವ ಸ್ಥಾನಕ್ಕೆ ಅನುಗುಣವಾಗಿ ಶಬ್ದರೂಪಗಳನ್ನು ಅಳವಡಿಸಬೇಕೆಂದೂ ತೀರ್ಮಾನಿಸಲಾಯಿತು. ಇದರಂತೆ ಅಂಕ, ಅಂಗ, ಅಂಚೆ, ಅಂಟು, ಅಂದ, ಅಂದು, ಅಂಬು, ಅಂಶ, ಅಂಸ, ಅಕಟ, ಅಕಾರ, ಅಕ್ಕ, ಅಕ್ಕು,– ಈ ಕ್ರಮದಲ್ಲಿ ಮುಖ್ಯಶಬ್ದಗಳು ನಿಘಂಟಿನಲ್ಲಿ ಬರುತ್ತವೆ. ಶಾಸನಗಳಿಂದ ಉದಾಹರಿಸುವಾಗ, ಅಲ್ಲಿ ಶಬ್ದರೂಪವು ವರ್ಗಪಂಚಮಾಕ್ಷರಸಹಿತವಾಗಿದೆಯೆ, ಬಿಂದುಸಹಿತವಾಗಿದೆಯೆ ಎಂಬುದನ್ನು ಗಮನಿಸಿ, ಯಥಾವತ್ತಾಗಿ ಈಗಿನ ಪದ್ಧತಿಯನ್ನೇ ಅನುಸರಿಸಿ ಕೊಡತಕ್ಕುದು.

ಕಿಟ್ಟೆಲ್ ಅವರ ನಿಘಂಟಿನಿಂದ ಶಬ್ದಗಳನ್ನೂ ಅವಕ್ಕಿರುವ ಅರ್ಥಗಳನ್ನೂ ಬೇರಾವ ಪ್ರಯೋಗಗಳೂ ಇಲ್ಲದೆ ಕೇವಲ ಕಿಟ್ಟೆಲ್ ನಿಘಂಟಿನಿಂದಲೇ ಉದ್ಧರಿಸುವಾಗ ಪ್ರತಿಯೊಂದು ಅರ್ಥಕ್ಕೂ (ಕಿ) ಎಂದು ಸೂಚಿಸಬೇಕಾಗಿಲ್ಲ. ಶಬ್ದದ ವಾಚಕವನ್ನು ಕೊಟ್ಟ ಕೂಡಲೇ (ಕಿ) ಎಂದು ಸೂಚಿಸಿದರೆ ಸಾಕು.

ಕಿಟ್ಟೆಲ್ ಅವರು ಬೇರೆ ಬೇರೆ ನಿಘಂಟುಗಳಿಂದ ಶಬ್ದಗಳನ್ನು ಆರಿಸಿಕೊಂಡು ಆ ನಿಘಂಟುಗಳ ಆಕರವನ್ನು ಸೂಚಿಸುವಂತಹ ಶಬ್ದಗಳನ್ನು ಸೇರಿಸಿಕೊಂಡಾಗ ಕಿಟ್ಟೆಲ್ ಅವರು ಯಾವ ಆಕರವನ್ನು ಸೂಚಿಸುತ್ತಾರೋ ಅದೇ ಆಕರವನ್ನು ಸೂಚಿಸಲಾಗುವುದು. ಪ್ರಯೋಗಗಳನ್ನು ಉದ್ಧರಿಸುವಾಗ ಯಾವುದಾದರೂ ಪ್ರಯೋಗದಲ್ಲಿ ಸ್ಪಷ್ಟವಾಗಿ ಒಂದೆರಡು ಅಕ್ಷರಗಳು ಬಿಟ್ಟುಹೋಗಿವೆ ಎಂದು ಮನವರಿಕೆಯಾದಾಗ ಅಂತಹ ಸಂದರ್ಭದಲ್ಲಿ ಬಿಟ್ಟು ಹೋಗಿರುವ ಅಕ್ಷರವನ್ನಾಗಲಿ, ಅಕ್ಷರಗಳನ್ನಾಗಲಿ E∃ ಕಂಸದಲ್ಲಿ ಸೂಚಿಸುವುದಕ್ಕೆ ಬದಲಾಗಿ ಅಕ್ಷರ ಅಥವಾ ಅಕ್ಷರಗಳು ಬಿಟ್ಟು ಹೋಗಿರುವ ಪದವನ್ನೇ E∃ ಕಂಸದಲ್ಲಿ ಸೂಚಿಸಲಾಗುವುದು. ಉದಾಹರಣೆಗೆ– ದರ್ಪEಣ∃ ಇದಕ್ಕೆ ಬದಲಾಗಿ Eದರ್ಪಣ∃ಎಂದು ಸೂಚಿಸಲಾಗುವುದು.

ಸಂಸ್ಕೃತಶಬ್ದಗಳಿಗೆ ಪ್ರಾಚೀನ ಕಾವ್ಯಪ್ರಯೋಗಗಳು ಸಿಕ್ಕಿದಲ್ಲಿ ನಿಘಂಟುಗಳನ್ನು ಉದ್ಧರಿಸಬೇಕಾದ ಅವಶ್ಯಕತೆಯಿಲ್ಲ.

ಹಸ್ತಪ್ರತಿಯಿಂದ ಶಬ್ದಸಂಗ್ರಹ ಮಾಡಿರುವ ರಗಳೆಗಳು, ವಚನಗಳು, ಕಾವ್ಯಗಳು ಮುಂತಾದವುಗಳಿಗೆ ಮುದ್ರಿತ ಸಂಸ್ಕರಣಗಳಿಂದ ಆಕರವನ್ನು ಸೂಚಿಸುವಲ್ಲಿ ಸಂಪಾದಕರ ಅಥವಾ ಸಂಸ್ಥೆಗಳ ಹೆಸರಿನ ಮೊದಲ ಅಕ್ಷರವನ್ನು ಆಕರದ ಜೊತೆಯಲ್ಲಿ ಸೂಚಿಸತಕ್ಕುದು. ಉದಾ: (ಇಹರ. ದೇ); (ಚನ್ನವ. ಕ).

ಸಂಸ್ಕೃತದಲ್ಲಿ ವ್ಯಂಜನಾಂತ ಮತ್ತು ಸ್ವರಾಂತ ಶಬ್ದಗಳಿಗೆ ಬೇರೆ ಬೇರೆ ಅರ್ಥಗಳಿದ್ದರೂ ಅವೆರಡರ ನಿಷ್ಪತ್ತಿ ಒಂದೇ ಆಗಿದ್ದ ಪಕ್ಷದಲ್ಲಿ ಅವನ್ನು ಒಂದೇ ಉಲ್ಲೇಖದ ಕೆಳಗೆ ವಿವೇಚಿಸಿ ನಿಷ್ಪತ್ತಿಯಲ್ಲಿ ಎರಡು ರೂಪಗಳನ್ನೂ ತೋರಿಸಬೇಕು. ಉದಾ. ಕಕುಭ [ಸಂ. ಕಕುಭ್, ಕಕುಭ]

ತದ್ಭವ ಶಬ್ದಗಳಿಗೆ ನಿಷ್ಪತ್ತಿಯನ್ನು ಸೂಚಿಸುವಲ್ಲಿ ಮೂಲ ಸಂಸ್ಕೃತ ಶಬ್ದರೂಪ ಸಂಸ್ಕೃತ ನಿಘಂಟುಗಳಲ್ಲಿ ಸಿಕ್ಕದಿದ್ದಾಗ ನಿಷ್ಪತ್ತಿಯಲ್ಲಿ '*' ಚಿಹ್ನೆಯೊಂದಿಗೆ ಸೂಚಿಸಬೇಕು. ಉದಾ: ಕಂಚಳಿಗೆ * ಸಂ. ಕಾಂಸ್ಯತಾಲಿಕಾ.

ಛಂದಸ್ಸಿನ ನಿಯಮದಂತೆ ಷಟ್ಪದಿಯ ೩ ಮತ್ತು ೬ನೆಯ ಪಾದಗಳ ಕೊನೆಯ ಅಕ್ಷರ ನಿಯತ ದೀರ್ಘಾಕ್ಷರಗಳು. ಆದ್ದರಿಂದ ಪ್ರಯೋಗದಲ್ಲಿ ಇವನ್ನು ದೀರ್ಘಾಕ್ಷರರೂಪದಲ್ಲೇ ಬರೆದು ತೋರಿಸಬೇಕಾದ ಅವಶ್ಯಕತೆಯಿಲ್ಲ.

ಕನ್ನಡ ಕಾವ್ಯಗಳಲ್ಲಿ [illegible]ಬ್ದವಿಲ್ಲದ, ಸಂಸ್ಕೃತನಿಘಂಟುಗಳಲ್ಲಿ ದೊರೆಯದ, ಕೇವಲ ಶಾಸ್ತ್ರಗ್ರಂಥಗಳಲ್ಲಿ ದೊರಕುವ ತೀರ ಪಾರಿಭಾಷಿಕಶಬ್ದಗಳನ್ನು [illegible]ಘಂಟಿನಲ್ಲಿ ಕೊಡಬೇಕಾಗಿಲ್ಲ.

ತದ್ಭವಶಬ್ದಗಳಿಗೆ ನಿಷ್ಪತ್ತಿಯನ್ನು ಸೂಚಿಸುವಾಗ ಅವಕ್ಕೆ ಸದೃಶರೂಪಗಳು ಇತರ ದ್ರಾವಿಡಭಾಷೆಗಳಲ್ಲಿ ಸಿಕ್ಕಿದರೆ ಕೊಡಬೇಕು.

ಯಾವುದಾದರೂ ಒಂದು ಶಬ್ದದ ಮೂಲರೂಪಕ್ಕೆ ಪ್ರಯೋಗ ಸಿಕ್ಕದಿದ್ದರೆ ಅಂತಹ ಸಂದರ್ಭದಲ್ಲಿ ಪ್ರಯೋಗ ಸಿಕ್ಕಿರುವ, ಮೂಲ ರೂಪಕ್ಕೆ ಸಮೀಪವಾಗಿರುವ ರೂಪವನ್ನೇ ಮುಖ್ಯೋಲ್ಲೇಖವಾಗಿ ತೆಗೆದುಕೊಂಡು ಅದರ ಜೊತೆಗೆ ಉಳಿದವನ್ನು ಪರ್ಯಾಯ ರೂಪಗಳಾಗಿ ಕೊಡಬೇಕು.

'ತವಕಕಾರ್ತಿ' ಎಂಬ ಶಬ್ದವಿದ್ದು, 'ತವಕಕಾಱ' ಎಂಬ ಶಬ್ದಕ್ಕೆ ಪ್ರಯೋಗಗಳು ಸಿಗದಿದ್ದರೂ ಆ ರೂಪವನ್ನು ಇರಿಸಿಕೊಳ್ಳಲಾಗಿದೆ. ಈ ಬಗ್ಗೆ ಚರ್ಚೆ ನಡೆದು ನಮಗೆ ಆ ರೂಪಕ್ಕೆ ಪ್ರಯೋಗಗಳು ಸಿಗದೆ ಇದ್ದರೂ, ಕಿಟ್ಟೆಲ್ ಅವರು ಅದನ್ನು ಉಲ್ಲೇಖ ಮಾಡಿರದಿದ್ದರೂ ಅಂಥ ರೂಪವನ್ನು ಇಟ್ಟುಕೊಂಡು ಸ್ತ್ರೀವಾಚಕ ರೂಪವನ್ನು 'ಪರಾ' ಎಂದು ಉಳಿಸಿಕೊಳ್ಳಬೇಕೆಂದೂ ಇಲ್ಲದಿದ್ದರೆ ನಿಷ್ಪತ್ತಿ ಕೊಡುವಾಗ 'ತವಕಕಾಱ' ರೂಪಕ್ಕೆ ಶೂನ್ಯ (೦)ವನ್ನು ತೋರಿಸಬೇಕಾಗುತ್ತದೆಂದೂ ಭಾವಿಸಿ ಮುಂದೆ ಇಂಥ ಶಬ್ದಗಳು ಬಂದಾಗ ಇದೇ ಕ್ರಮವನ್ನು ಅನುಸರಿಸಬೇಕೆಂದು ಆ ಬಗ್ಗೆ ಒಂದು ನಿರ್ಣಯವನ್ನು ಮಾಡಲಾಯಿತು.

## ನಿಯಮಾವಳಿಗಳಲ್ಲಾಗಿರುವ ಕೆಲವು ಬದಲಾವಣೆಗಳು

ಈ ನಿಘಂಟುರಚನೆಯಲ್ಲಿ ಅನುಸರಿಸಿರುವ ವಿಧಿ, ವಿಧಾನಗಳನ್ನೂ ಹಾಗೂ ನಿಯಮಗಳನ್ನೂ ಈ ಹಿಂದೆ ತಿಳಿಸಲಾಗಿದೆ. ಅದರಂತೆಯೇ ಮೊದಲನೆಯ ಸಂಪುಟವನ್ನು ಸಿದ್ಧಪಡಿಸಲಾಗಿದೆ. ಮುಂದಿನ ಸಂಪುಟಗಳನ್ನು ಸಿದ್ಧಪಡಿಸುವಾಗ ಮತ್ತು ನಿಘಂಟು ಸಂಪಾದಕ ಸಮಿತಿ ಕರಡುಪ್ರತಿಗಳನ್ನು ಚರ್ಚಿಸುವಾಗ ಮಾಡಿದ ಸೂಕ್ತವೆನಿಸುವ ಕೆಲವು ತಿದ್ದುಪಡಿಗಳಿಂದ ಹಿಂದಿನ ನಿಯಮಾವಳಿಗಳಲ್ಲಿ ಅಲ್ಪ ಸ್ವಲ್ಪ ಬದಲಾವಣೆಗಳು ಅನಿವಾರ್ಯವಾಗಿ ಆಗಿವೆ. ಇಂತಹ ಬದಲಾವಣೆಗಳು ಸಂದರ್ಭೋಚಿತವಾಗಿ ಆಗಿವೆಯೇ ಹೊರತು ಮೊದಲು ಮಾಡಿದ್ದ ನಿಯಮಾವಳಿಗಳು ತಪ್ಪೆಂದು ಭಾವಿಸುವುದಕ್ಕೆ ಎಡೆಯಿಲ್ಲ. ಈ ಬದಲಾವಣೆಗಳಲ್ಲಿ ಮುಖ್ಯವಾದ ಕೆಲವನ್ನು ಸ್ಥೂಲವಾಗಿ ಈ ಕೆಳಗೆ ವಿವರಿಸಲಾಗಿದೆ.

ಮೊದಲ ಸಂಪುಟದ ನಿಯಮಾವಳಿಗಳಲ್ಲಿ ''ಅಗಡುಮಾಡು, ಅಗ್ಗಳಮಾಡು ಎಂಬಂತಹ ಸುಲಭಕ್ರಿಯಾಸಮಾಸಗಳನ್ನು ಈ ನಿಘಂಟಿನಲ್ಲಿ ಮುಖ್ಯೋಲ್ಲೇಖಗಳಾಗಿಯೇ ಕೊಟ್ಟಿದೆ '' ಎಂದು ಸೂಚಿಸಿದೆ. ಆದರೆ ಮುಂದಿನ ಸಂಪುಟಗಳಲ್ಲಿ 'ಆಗು', 'ಮಾಡು' ಎಂಬಿವು ಸೇರಿದ ಶಬ್ದರೂಪಗಳಲ್ಲಿ ವಿಶೇಷಾರ್ಥಗಳು ಕಂಡುಬಾರದಿರುವುದರಿಂದ ಆ ಶಬ್ದಗಳನ್ನು ಅವುಗಳಿಗೆ ಸಂಬಂಧಿಸಿದ ಮುಖ್ಯಶಬ್ದದ ಕೆಳಗೇ ಪದಸಮುಚ್ಚಯಗಳ ಸ್ಥಾನದಲ್ಲಿ ಕೊಡಲಾಗಿದೆ. ಉದಾಹರಣೆಗೆ:- 'ತಡವಾಗು', 'ತಡಮಾಡು' ಎಂಬಿವುಗಳನ್ನು 'ತಡ' ಎಂಬ ಮುಖ್ಯೋಲ್ಲೇಖದ ಕೆಳಗೆ ಪದಸಮುಚ್ಚಯಗಳಾಗಿ ಕೊಟ್ಟಿದೆ.

''ಒಂದೇ ಅರ್ಥದ ಹಲವಾರು ಶಬ್ದಗಳು ಸಮಾಸದ ಪೂರ್ವೋತ್ತರಪದಗಳಾಗಿ ಸೇರಿ ಆದ ಸಂಸ್ಕೃತಶಬ್ದಗಳು ಕನ್ನಡಕಾವ್ಯಗಳಲ್ಲಿ ವಿಪುಲವಾಗಿ ಸಿಕ್ಕುತ್ತವೆ. ಆದರೆ ಅವನ್ನೆಲ್ಲಾ ಈ ನಿಘಂಟಿನಲ್ಲಿ ಕೊಟ್ಟಿಲ್ಲ'' ಎಂದು ಮೊದಲನೆಯ ಸಂಪುಟದ ನಿಯಮಾವಳಿಗಳಲ್ಲಿ ಹೇಳಿದೆ.

ಉದಾಹರಣೆಗೆ:- ''ಭೂಕಾಂತ, ಭೂಧವ, ಭೂಪತಿ, ಭೂರಮಣ; ರಾಜಕುಮಾರ, ರಾಜಪುತ್ರ, ರಾಜಸುತ, ರಾಜಕುಮಾರಿ, ರಾಜಪುತ್ರಿ, ರಾಜಸುತೆ'' ಎಂಬ ಶಬ್ದಗಳನ್ನು ಸೂಚಿಸಿದೆ. ಆದರೆ ಮುಂದಿನ ಸಂಪುಟಗಳಲ್ಲಿ ಓದುಗರ ಸೌಕರ್ಯಕ್ಕಾಗಿ, ಪ್ರಾಚೀನಕಾವ್ಯಗಳ ಪ್ರಯೋಗಗಳ ಪ್ರಚುರತೆಯನ್ನು ಗಮನಿಸಿ, ಅನಿವಾರ್ಯವಾಗಿ ಭೂಕಾಂತ, ಭೂಧವ, ಭೂಪತಿ ಎಂಬ ಕೆಲವು ಸಮಾಸಶಬ್ದಗಳನ್ನು ಮುಖ್ಯೋಲ್ಲೇಖಗಳಾಗಿ ಕೊಟ್ಟಿದೆ.

''ಗುಣವಾಚಕಗಳೆಲ್ಲ ನಾಮವಾಚಕಗಳ ಪ್ರಭೇದಗಳಾದುದರಿಂದ ಗುಣವಾಚಕಗಳಿಗೆ ಉದಾಹರಣೆಗಳಾಗಿ ಕೊಡುವ ಪ್ರಯೋಗಗಳನ್ನು ಸಂದರ್ಭಕ್ಕೆ ತಕ್ಕಂತೆ (ವಿಶೇಷ್ಯಗಳ ಲಿಂಗವಚನಾದಿಗಳಿಗನುಸಾರವಾಗಿ) ಅವುಗಳಿಗೆ ಕೊಟ್ಟಿರುವ ಅರ್ಥಗಳೊಂದಿಗೆ ಹೊಂದಿಸಿಕೊಳ್ಳಬೇಕು'' ಎಂದು ಮೊದಲನೆಯ ಸಂಪುಟದ ನಿಯಮಾವಳಿಯಲ್ಲಿ ಹೇಳಿದೆ. ಮುಂದಿನ ಸಂಪುಟಗಳಲ್ಲಿ, ಹೆಚ್ಚಿನ ಸ್ಪಷ್ಟತೆಗಾಗಿ ಪ್ರಯೋಗಗಳ ಸಂದರ್ಭಾನುಸಾರವಾಗಿ ಲಿಂಗಾನುಸಾರವಾದ ಅರ್ಥವನ್ನು ಕೊಟ್ಟಿದೆ. ಉದಾಹರಣೆಗೆ :- **ಪ್ರೇರಿತ** (ಗು). ೧. ಉತ್ತೇಜನಗೊಂಡ; ಪ್ರಚೋದನೆಗೊಳಗಾದ. (ನಾ). ೨. ಪ್ರಚೋದಿತವಾದುದು; ಹುರುಪುಗೊಂಡುದು. ೩. ಪ್ರಚೋದನೆಗೊಂಡ ವ್ಯಕ್ತಿ; ಹುರುಪುಗೊಂಡ ವ್ಯಕ್ತಿ.

'ವಿತ್ತು, ವೆಟ್ಟು, ವೆಳೆ' ಮುಂತಾದ ವಕಾರಾದಿಯಾದ ಪೂರ್ವದ ಹಳಗನ್ನಡ ರೂಪಗಳನ್ನು 'ಬಿತ್ತು, ಬೆಟ್ಟು, ಬೆಳೆ' ಮುಂತಾದ ಬಕಾರಾದಿಯಾದ ಹಳಗನ್ನಡ ರೂಪಗಳ ಕೆಳಗೆ ಕೊಟ್ಟು ವಿವರಿಸಿದೆ ಎಂದು ಮೊದಲ ಸಂಪುಟದ ನಿಯಮಾವಳಿಯಲ್ಲಿ ಹೇಳಿರುವುದನ್ನೇ ಮುಂದಿನ ಸಂಪುಟಗಳಲ್ಲಿಯೂ ಅನುಸರಿಸಿದೆ.

ಇಂತಹ ವಕಾರಾದಿಯಾದ ಶಬ್ದರೂಪಗಳಿಗೆ ಹೆಚ್ಚುಮಟ್ಟಿಗೆ ಶಾಸನಪ್ರಯೋಗಗಳು ಇವೆ. ಪ್ರಾಚೀನ ಕಾವ್ಯಪ್ರಯೋಗಗಳು ಸಿಕ್ಕಿರುವ ಸಂದರ್ಭದಲ್ಲಿ ಮಾತ್ರ ಈ ವಕಾರಾದಿಯಾದ ಶಬ್ದರೂಪಗಳನ್ನು ಮುಖ್ಯೋಲ್ಲೇಖಗಳಾಗಿ ಮಾಡಿ ಬಕಾರಾದಿಯಾದ ರೂಪಗಳನ್ನು ಪರ್ಯಾಯಪದಗಳಾಗಿ ತೋರಿಸಿದೆ. ಉದಾಹರಣೆಗೆ:- 'ವಯಲ್', ಬಯಲ್; 'ವರ್', ಬರ್.

ಮೊದಲನೆಯ ಎರಡನೆಯ ಸಂಪುಟಗಳಲ್ಲಿ ಶಕಟರೇಫಾಂತವಾಗಿ ಬರುವ ಕೆಲವು ಧಾತುರೂಪಗಳಲ್ಲಿ ವ್ಯಂಜನಾಂತ ರೂಪಗಳನ್ನು ಮುಖ್ಯೋಲ್ಲೇಖಗಳನ್ನಾಗಿ ಕೊಟ್ಟು ಸ್ವರಾಂತರೂಪಗಳನ್ನು ಪರ್ಯಾಯಪದಗಳನ್ನಾಗಿ ಕಾಣಿಸಿದೆ. ಉದಾಹರಣೆಗೆ:- ಏಱ್, ಏಱು; ಕಾಱ್, ಕಾಱು.

ಶಬ್ದಮಣಿದರ್ಪಣದ ಧಾತುಪಾಠದಲ್ಲಿ ಶಕಟರೇಫಾಂತವಾದ ಶಬ್ದಗಳು ಸ್ವರಾಂತದಲ್ಲಿಯೇ ಇದ್ದು, ಜ್ಞಾತಿಶಬ್ದಗಳೂ ಸಾಮಾನ್ಯವಾಗಿ ಸ್ವರಾಂತದಲ್ಲಿಯೇ ಸಿಕ್ಕಿರುವ ಆಧಾರದ ಮೇಲೆ ಮೂರನೆಯ ಸಂಪುಟದಿಂದೀಚೆಗೆ ಶಕಟರೇಫ ಸ್ವರಾಂತ ಧಾತುಗಳನ್ನು ಮುಖ್ಯೋಲ್ಲೇಖಗಳನ್ನಾಗಿ ಮಾಡಿ ವ್ಯಂಜನಾಂತಧಾತುಗಳನ್ನು ಪರ್ಯಾಯಪದಗಳಾಗಿ ಕೊಟ್ಟಿದೆ. ಉದಾಹರಣೆಗೆ:- ತೋಱು, ತೋಱ್; ಬೀಱು, ಬೀಱ್.

ಮೊದಲನೆಯ ಸಂಪುಟದಲ್ಲಿ ಸಂಧಿಕಾರ್ಯವಾಗದಿರುವ ಕೆಲವು ಶಬ್ದರೂಪಗಳನ್ನು ಮುಖ್ಯೋಲ್ಲೇಖಗಳನ್ನಾಗಿ ಕೊಟ್ಟು ಸಂಧಿಯಾಗಿರುವ ಶಬ್ದರೂಪಗಳನ್ನು ಪರ್ಯಾಯಪದಗಳನ್ನಾಗಿ ಕಾಣಿಸಿದೆ. ಉದಾಹರಣೆಗೆ:- ಅಂಬುಕಂಡಿ, ಅಂಬುಗಂಡಿ; ಅಂಕಕಾೞಿ, ಅಂಕಗಾೞಿ.

ಮುಂದಿನ ಸಂಪುಟಗಳಲ್ಲಿ ಸಂಧಿಯಾದ ಶಬ್ದರೂಪಗಳನ್ನು ಮುಖ್ಯೋಲ್ಲೇಖಗಳನ್ನಾಗಿ ಮಾಡಿ ಸಂಧಿಯಾಗದಿರುವ ರೂಪಗಳನ್ನು ಪರ್ಯಾಯಪದಗಳನ್ನಾಗಿ ಕೊಟ್ಟಿದೆ: ಉದಾಹರಣೆಗೆ:- ಕಲಿಗಾಲ, ಕಲಿಕಾಲ. ' – ಕಾೞ' ಮುಂತಾದ ಪ್ರತ್ಯಯಗಳು ಸೇರಿದ ರೂಪಗಳಿಗೂ ಸಹ ಇದೇ ನಿಯಮವು ಅನ್ವಯವಾಗಿದೆ. ಉದಾಹರಣೆಗೆ:- ಗನ್ನಗಾೞ, ಗನ್ನಕಾೞ.

ಮೊದಲ ನಾಲ್ಕು ಸಂಪುಟಗಳಲ್ಲಿ ದ್ವಿತ್ವಸಹಿತವಾದ ಹಾಗೂ ದ್ವಿತ್ವರಹಿತವಾದ, ತುಕಾರಾಂತವಾದ ಕೆಲವು ಶಬ್ದಗಳಲ್ಲಿ ದ್ವಿತ್ವ ಸಹಿತವಾದುವನ್ನು ಮುಖ್ಯೋಲ್ಲೇಖಗಳನ್ನಾಗಿ ಮಾಡಿ ದ್ವಿತ್ವರಹಿತವಾದುವನ್ನು ಪರ್ಯಾಯರೂಪಗಳಾಗಿ ಕಾಣಿಸಿದೆ. ಉದಾಹರಣೆಗೆ:- ಒಳ್ಳಿತ್ತು, ಒಳ್ಳಿತು; ತಣ್ಣಿತ್ತು, ತಣ್ಣಿತು; ತೆಳ್ಳಿತ್ತು, ತೆಳ್ಳಿತು.

ನಾಲ್ಕನೆಯ ಸಂಪುಟದ 'ದಿಮ್ಮಿತು' ಎಂಬ ಶಬ್ದದ ಚರ್ಚೆಯಲ್ಲಿ ದ್ವಿತ್ವವಿರುವ ತುಕಾರಾಂತ ರೂಪಗಳು ವಿಕಲ್ಪದಿಂದ ಉಂಟಾಗುತ್ತವೆ ಎಂಬ ಶಬ್ದಮಣಿದರ್ಪಣದ ೭೭ನೆಯ ಸೂತ್ರಾನುಸಾರವಾಗಿ ದ್ವಿತ್ವರಹಿತಶಬ್ದರೂಪಗಳನ್ನು ಮುಖ್ಯೋಲ್ಲೇಖಗಳನ್ನಾಗಿ ಮಾಡಬೇಕೆಂದು ತೀರ್ಮಾನಿಸಲಾಗಿದೆ. ಉದಾಹರಣೆಗೆ:- ದಿಮ್ಮಿತು, ದಿಮ್ಮಿತ್ತು; ದೊಡ್ಡಿತು, ದೊಡ್ಡಿತ್ತು; ಮೆಲ್ಲಿತು, ಮೆಲ್ಲಿತ್ತು.

ಮೊದಲನೆಯ ಸಂಪುಟದಲ್ಲಿ 'ಅಲೆಪು', 'ಅಲಪು' ಎಂಬಂತಹ '–ಪು' ಸೇರಿದ ರೂಪಗಳಲ್ಲಿ 'ಅಲೆಪು' ಎಂಬಂತಹ ಎಕಾರಸಹಿತವಾದ ಶಬ್ದಗಳನ್ನು ಮುಖ್ಯೋಲ್ಲೇಖಗಳನ್ನಾಗಿ ಕೊಟ್ಟು 'ಅಲಪು' ಎಂಬಂತಹ ಅಕಾರಸಹಿತವಾದ ಶಬ್ದಗಳನ್ನು ಪರ್ಯಾಯರೂಪಗಳನ್ನಾಗಿ ಕಾಣಿಸಿದೆ.

ಮುಂದಿನ ಸಂಪುಟಗಳಲ್ಲಿ, ಎಕಾರಾಂತವಾದ ಧಾತುಗಳಿಗೆ '- ಪು' ಸೇರಿದ ಶಬ್ದರೂಪಗಳಲ್ಲಿ ಎಕಾರಾಂತವು ಲೋಪವಾಗಿ ಅಕಾರವಾಗುತ್ತದೆಯಾದ್ದರಿಂದ ಅಂತಹವುಗಳನ್ನು ಮುಖ್ಯೋಲ್ಲೇಖಗಳಾಗಿ ಕೊಡಬೇಕೆಂದು ತೀರ್ಮಾನವಾಗಿ ಮುಂದಕ್ಕೆ ಆ ಕ್ರಮವನ್ನೇ ಅನುಸರಿಸಿದೆ. ಉದಾಹರಣೆಗೆ:- ತೆೞಪು, ತೆೞೆಪು; ಪದಪು, ಪದೆಪು; ಪರಪು, ಪರೆಪು.

''ಕರಿ, ಕರಿದು, ಕರಿಯ, ಕರೆ, ಕಾರ್, ಕರು; ಬಿಳಿ, ಬಿಳಿದು, ಬಿಳಿಯ, ಬೆಳ್, ಬೆಳು ಮುಂತಾದ ಗುಣವಾಚಕರೂಪಗಳಲ್ಲಿ ಕರಿದು, ಬಿಳಿದು ಎಂಬ ರೂಪಗಳನ್ನು ವ್ಯಾಕರಣಕಾರರು ಮೂಲರೂಪವೆಂದು ಅಂಗೀಕರಿಸಿದ್ದಾರೆ. ಈ ರೂಪಗಳನ್ನು ಮುಖ್ಯ ಉಲ್ಲೇಖಗಳಾಗಿ ಪರಿಗಣಿಸಿ ಅವುಗಳ ಕೆಳಗೆ ಉಳಿದ ರೂಪಗಳನ್ನು ತೋರಿಸಿದೆ. ಕರಿ, ಬಿಳಿ ಮುಂತಾದ ರೂಪಗಳನ್ನು ಪ್ರತ್ಯೇಕ ಉಲ್ಲೇಖಗಳಾಗಿ ಕೊಟ್ಟು ಅರ್ಥೋದಾಹರಣೆಗಳಿಗೆ 'ಕರಿದು' ನೋ. 'ಬಿಳಿದು' ನೋ. ಎಂದು ಮುಂತಾಗಿ ಸೂಚಿಸಿದೆ'' ಎಂಬುದಾಗಿ ಮೊದಲನೆಯ ಸಂಪುಟದಲ್ಲಿ ಹೇಳಿದೆ.

ಈ ಕ್ರಮವನ್ನು ಅನುಸರಿಸುವಲ್ಲಿ ಕೆಲವು ವ್ಯತ್ಯಾಸಗಳು ತಲೆದೋರಿ, ಕಾರ್, ಬೆಳ್, ಬೆಳು ಇತ್ಯಾದಿ ರೂಪಗಳು 'ಕರಿದು', 'ಬಿಳಿದು' ಮುಂತಾದ ಗುಣವಾಚಕ ಅಥವಾ ನಾಮವಾಚಕ ಶಬ್ದಗಳಿಗೆ ಸಮಾಸದಲ್ಲಿ ಪೂರ್ವರೂಪಗಳಾಗಿ ಆದೇಶವಾಗಿ ಬರುವಂತಹ ರೂಪಗಳಾದುದುರಿಂದ, ಮುಖ್ಯಶಬ್ದದ ಪರ್ಯಾಯರೂಪಗಳಲ್ಲವೆಂದು ಪರಿಗಣಿಸಿ ಅವುಗಳಿಗೆ ಪ್ರತ್ಯೇಕ ಉಲ್ಲೇಖಗಳನ್ನು ಕೊಟ್ಟು ಮೂಲಶಬ್ದಗಳಿಂದ ನಿಷ್ಪತ್ತಿಯನ್ನು ಸೂಚಿಸಲಾಗಿದೆ. ಉದಾಹರಣೆಗೆ:- ಕಾರ್ (ನಾ). ಸಮಾಸದಲ್ಲಿ 'ಕರಿದು' ಎಂಬುದಕ್ಕೆ ಬರುವ ಆದೇಶ. [< ಕರಿದು]

ಮುಂದಿನ ಸಂಪುಟಗಳಲ್ಲಿ ಇಂತಹ ಆದೇಶ ರೂಪಗಳು ಗುಣವಾಚಕ, ನಾಮವಾಚಕ ಶಬ್ದಗಳಿಗೆ ಸಮಾಸದಲ್ಲಿ ಆದೇಶಗಳಾಗಿ ಬರುವ ರೂಪಗಳಷ್ಟೇ ಅಲ್ಲದೆ, ಇವೇ ನಾಮವಾಚಕ, ಗುಣವಾಚಕ ಶಬ್ದಗಳಲ್ಲವೆಂಬ ಕಾರಣದಿಂದ ದುಂಡುಕಂಸದಲ್ಲಿ (ನಾ). (ಗು). ಎಂದು ನಿರ್ದೇಶಿತವಾಗುತ್ತಿದ್ದುವನ್ನು (ಸಪೂರೂ) (ಎಂದರೆ 'ಸಮಾಸದ ಪೂರ್ವರೂಪ') ಎಂದು ಕೊಡಲಾಗಿದೆ. ಉದಾಹರಣೆಗೆ:- 'ನಿಟ್', 'ನಿಡಿ', 'ನಿಡು'.

ಸಂಸ್ಕೃತದ ಉಪಸರ್ಗಗಳು ಸೇರಿದ ಶಬ್ದರೂಪಗಳನ್ನು ನೇರವಾಗಿ [ಸಂ.] ಎಂದು ನಿರ್ದೇಶಿಸಿದ್ದು, ಉಪಸರ್ಗಗಳನ್ನು ಉಲ್ಲೇಖಗಳಾಗಿ ಕೊಟ್ಟಿಲ್ಲ. ಆದರೆ ಕೆಲವೊಮ್ಮೆ ಮಾತ್ರ ಇಂತಹ ಉಪಸರ್ಗಗಳು ದೇಶ್ಯಶಬ್ದಗಳೊಡನೆ ಸೇರಿ ಬಂದಾಗ, ಅವುಗಳನ್ನು ಬಿಡಿಸಿ ತೋರಿಸುವುದಕ್ಕಾಗಿ, ಅವುಗಳ ಉಲ್ಲೇಖವನ್ನು ಕೊಡಲಾಗಿದೆ. ಉದಾಹರಣೆಗೆ:- 'ದುರ್'-. ದುರ್ನಡತೆ [ದುರ್ - + ನಡತೆ]; ದುರ್ನಡೆ [ದುರ್ - + ನಡೆ]

ಮೊದಲನೆಯ ಸಂಪುಟದಲ್ಲಿ ಸಮಸಂಸ್ಕೃತ ರೂಪಗಳನ್ನು ಒಟ್ಟಿಗೆ ಕೊಡಲಾಗಿದೆ. ಉದಾಹರಣೆಗೆ:- ಅನುಕರಣ, ಅನುಕರಣೆ [ಸಂ.]; ಅನುಕಂಪ, ಅನುಕಂಪೆ [ಸಂ. ಅನುಕಂಪಾ]

ಮುಂದಿನ ಸಂಪುಟಗಳಲ್ಲಿ ಅಂತ್ಯದಲ್ಲಿ ಮಾತ್ರ ಅಲ್ಪವಿಕಾರವಿರುವ ಸಮಸಂಸ್ಕೃತ ರೂಪಗಳನ್ನು, ಸಂಸ್ಕೃತ ರೂಪಗಳಂತೆಯೇ ಪ್ರತ್ಯೇಕ ಉಲ್ಲೇಖಗಳಾಗಿ ವಿವೇಚಿಸಲಾಗಿದೆ. ಉದಾಹರಣೆಗೆ:- ಗೋಧ [ಸಂ. ಗೋಧಾ]; ಗೋಧೆ [ಸಂ. ಗೋಧಾ]

ದ್ವಿರುಕ್ತಿಗಳನ್ನು ಆಯಾ ಮುಖ್ಯೋಲ್ಲೇಖಗಳ ಕೆಳಗೆ ಕೊಡಲಾಗಿದೆ. ಅವುಗಳನ್ನು ಪ್ರತ್ಯೇಕ ಉಲ್ಲೇಖಗಳಾಗಿ ಕೊಟ್ಟಿಲ್ಲ. ಆದರೆ ಒಂದೇ ಶಬ್ದರೂಪದ ಮುಖ್ಯೋಲ್ಲೇಖಗಳು ಒಂದಕ್ಕಿಂತ ಹೆಚ್ಚಾಗಿ ಬಂದಿದ್ದರೆ, ಅವುಗಳಿಗೆ ಸಂಬಂಧಿಸಿದ ಒಂದೇ ರೂಪದ ದ್ವಿರುಕ್ತಿಗಳು ಬಂದಿದ್ದಲ್ಲಿ ಮುಖ್ಯೋಲ್ಲೇಖಗಳ ಸಂಖ್ಯೆಗಳಿಗೆ ಅನುಗುಣವಾದ ಸಂಖ್ಯೆಗಳನ್ನು ಅವಕ್ಕೂ ಕೊಟ್ಟು ಉಲ್ಲೇಖಿಸಿ ಮುಖ್ಯೋಲ್ಲೇಖದ ಶಬ್ದಕ್ಕೆ 'ಪರಾ' ಎಂದು ಸೂಚಿಸಿದೆ. ಉದಾಹರಣೆ:- ತರತರ$_1$ 'ತರ$_1$' ಪರಾ; ತರತರ$_2$ 'ತರ$_3$' ಪರಾ.

ಶಬ್ದಾರ್ಥಗಳಿಗೆ ಉದಾಹರಣೆಯಾಗಿ ಕೊಟ್ಟಿರುವ ಕಾವ್ಯಪ್ರಯೋಗಗಳ ಆಕರ, ಸಂಕೇತ, ಕವಿಯ ಕಾಲಗಳನ್ನು ಮೊದಲನೆಯ ಸಂಪುಟದ ಸಂಕ್ಷಿಪ್ತಸೂಚಿಯಲ್ಲಿ ಸೂಚಿಸಿದೆ. ಅಲ್ಲಿ ಸೂಚಿಸಿರುವ ಕವಿಕೃತಿಕಾಲವನ್ನೇ ಅನುಸರಿಸಿ ಕಾಲಾನುಕ್ರಮದಲ್ಲಿ ಪ್ರಯೋಗಗಳನ್ನು ಕೊಟ್ಟಿದೆ.

ಇತ್ತೀಚಿನ ಕಾಲದ ಹೊಸಶೋಧನೆಗಳಿಂದ ಕವಿ ಕೃತಿಗಳ ಕಾಲವಿಚಾರದಲ್ಲಿ ವ್ಯತ್ಯಾಸಗಳು ಉಂಟಾಗಿದ್ದರೂ (ಉದಾಹರಣೆಗೆ - ಮೊದಲನೆಯ ನಾಗವರ್ಮನ 'ಛಂದೋಂಬುಧಿ', ಶಿಶುಮಾಯಣನ 'ಅಂಜನಾಚರಿತೆ', ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ') ಆರಂಭದಿಂದ ಸಂಕೇತಸೂಚಿಯಲ್ಲಿ ಕೊಟ್ಟಿರುವ ಕಾಲಕ್ರಮವನ್ನೇ ಅನುಸರಿಸಿದೆ. ಪರಿಷ್ಕರಣ ಸಂಪುಟಗಳಲ್ಲಿ ಈ ಬದಲಾದ ಕಾಲಕ್ರಮವನ್ನು ಅನುಸರಿಸಲಾಗುವುದು.

ಸಂಸ್ಕೃತದ ಆಕಾರಂತ ಶಬ್ದರೂಪಗಳು ಸಾಮಾನ್ಯವಾಗಿ ಕನ್ನಡದಲ್ಲಿ ಎಕಾರಾಂತಗಳಾಗಿ ಪರಿವರ್ತನಗೊಳ್ಳುವುದರಿಂದಲೂ, ಸಂಸ್ಕೃತದ ದೀರ್ಘಾಂತ ಶಬ್ದರೂಪಗಳನ್ನು ಉಲ್ಲೇಖಿಸಿಲ್ಲವಾದ್ದರಿಂದಲೂ ಅಂತಹ ಶಬ್ದರೂಪಗಳ ಪ್ರಯೋಗಗಳನ್ನು ಎಕಾರಾಂತ ಶಬ್ದರೂಪಗಳಿಗೆ ಉದಾಹರಿಸಲಾಗಿದೆ. ಉದಾಹರಣೆಗೆ:- **ಅಭಿಯೋಗವಾರ್ತೆ:** ಈಗಲೀ ವಿಪ್ರರಲಿ ಖಳರಭಿಯೋಗವಾರ್ತಾಶ್ರವಣ ಬಹುದುರಿತಾಗಮವು ತನಗಾವುದೋ (ಉದ್ಯಾ.ಆ. ೧೯-೫). **ಅವಲೀಢೆ:** "ಹೇಳಾ, ಅವಹೇಳಾ, ಲೀಢಾ, ಅವಜ್ಞಾ, ಅವಲೀಢಾ - ಈ ೫ ಲೀಲೆ" (ಪಲಾಯು. ೧೧೮-೬೦).

ಶಾಸನಗಳಿಗೆ ಕಾಲವನ್ನು ಸೂಚಿಸುವಾಗ ಅವುಗಳ ಸಂಪಾದಕರು ಕೊಟ್ಟಿರುವ ಕಾಲವನ್ನೇ ಸಾಧಾರಣವಾಗಿ ಸ್ವೀಕರಿಸಿದೆ. ಶಕವರ್ಷದ ಕಾಲಕ್ಕೆ ೭೮ ವರ್ಷ ಸೇರಿಸಿ ಕ್ರಿಸ್ತಶಕದ ಕಾಲವನ್ನು ಸೂಚಿಸುವುದು ಕ್ರಮ. ಆದರೆ ಮುದ್ರಣವಾಗದೆ ಇರುವ, ಪ್ರಯೋಗ ಪಟ್ಟಿಕೆಗಳಿಂದ ತೆಗೆದುಕೊಂಡಿರುವ ಶಾಸನಪ್ರಯೋಗಗಳಲ್ಲಿ ಶಕವರ್ಷದ ಕಾಲವೇ ಇದ್ದು ಅವುಗಳನ್ನು ಹಾಗೆಯೇ ಸೂಚಿಸಿದೆ. (ಉದಾ - ಸೌಇಎ = South Indian Epigraphy, ಇಎ = Indian Epigraphy, ಬೊಂಕಶಾ = Bombay Karnataka Inscriptions). ಓದುಗರು ಅಂತಹವುಗಳಿಗೆ ೭೮ನ್ನು ಸೇರಿಸಿ ಕಾಲವನ್ನು ತಿದ್ದಿಕೊಳ್ಳಬೇಕು.

E ∃ ಈ ಕಂಸ (Editorial bracket)ವನ್ನು ಕಾವ್ಯಪ್ರಯೋಗಗಳಲ್ಲಿ ಮಾತ್ರ ಬಳಸಿದೆ. ಸಂಪಾದಕರು ಸಂಯೋಜಿಸಿದ ಪಾಠವನ್ನು ಸೂಚಿಸುವಲ್ಲಿ ಬಳಸುವ ಈ ಚಿಹ್ನೆ ಶಾಸನಪ್ರಯೋಗಗಳಿಗೆ ಅನ್ವಯವಾಗುವುದಿಲ್ಲ.

ಮೊದಲನೆಯ ಸಂಪುಟದಲ್ಲಿ ಕಿಟ್ಟೆಲ್ ಅವರ ಕೋಶದಿಂದ ತೆಗೆದುಕೊಂಡ, ಪ್ರಯೋಗವಿಲ್ಲದ ಸಂಸ್ಕೃತ ಶಬ್ದಗಳಿಗೆ (ಕಿ). ಎಂದು ನಿರ್ದೇಶಿಸಿದೆ. ಮುಂದಿನ ಸಂಪುಟಗಳಲ್ಲಿ, ಅಂತಹ ಶಬ್ದಗಳಿಗೆ ಮೂಲಆಕರ ಸಂಸ್ಕೃತಕೋಶವಾದ್ದರಿಂದ (ಕಿ). ಎಂದು ನಿರ್ದೇಶಿಸುವ ಅಗತ್ಯವಿಲ್ಲವೆಂದು (ಕಿ). ಎಂದು ನಿರ್ದೇಶಿಸಿಲ್ಲ. ಉದಾಹರಣೆಗೆ:- 'ಚಕ್ರಯಾನ', 'ಚಕ್ರಿಕ'.

ಸಂಸ್ಕೃತದ ವ್ಯಂಜನಾಂತರೂಪಗಳ ಪ್ರಯೋಗಗಳನ್ನು ಸ್ವರಾಂತರೂಪಗಳಿಗೇ ಉದಾಹರಿಸಲಾಗಿದೆ. ಉದಾಹರಣೆಗೆ:- 'ಜಗತ್' ಎಂಬ ಪ್ರಯೋಗವನ್ನು 'ಜಗತ್ತು' ಕೆಳಗೆ ಕೊಡಲಾಗಿದೆ.

ಸಂಸ್ಕೃತಸಮಾಸಗಳನ್ನು ನಿಷ್ಪತ್ತಿಭಾಗದಲ್ಲಿ ದುಂಡುಕಂಸಗಳೊಳಗೆ ಬಿಡಿಸಿ ತೋರಿಸಲಾಗಿದೆಯೆಂದು ಮೊದಲ ಸಂಪುಟದಲ್ಲಿ ತಿಳಿಸಿದೆ. ಉದಾಹರಣೆಗೆ:- ಅಂತರ್ವಾಸ [ಸಂ. (ಅಂತರ್ + ವಾಸ)]

ಮುಂದಿನ ಸಂಪುಟಗಳಲ್ಲಿ (೬ ನೆಯ ಸಂಪುಟದ ಮಧ್ಯಭಾಗದಿಂದ) ಸಮಾಸದ ಪೂರ್ವ ಮತ್ತು ಉತ್ತರ ಪದಗಳೆರಡೂ ಸಂಸ್ಕೃತವೇ ಆಗಿರುವುದರಿಂದ ಅವನ್ನೂ [ಸಂ.]ಎಂದೇ ಸೂಚಿಸಬಹುದೆಂದು ತೀರ್ಮಾನವಾಗಿದೆ. ಉದಾಹರಣೆಗೆ: ಬಹಿರ್ದ್ವಾರ [ಸಂ.], ಬಹಿರ್ಯಾನ [ಸಂ.]

ತದ್ಭವಶಬ್ದಗಳ ಮೂಲವನ್ನು ಹೇಳುವಾಗ '< ಸಂ.' ಎಂದು ಹೇಳಿ ಮೂಲ ಸಂಸ್ಕೃತಶಬ್ದವನ್ನು ತೋರಿಸಿದೆ. ಉದಾಹರಣೆಗೆ:- ನೇಮ [< ಸಂ. ನಿಯಮ]. ಸಮಸಂಸ್ಕೃತಶಬ್ದಗಳನ್ನು 'ಸಂ' ಎಂದು ಸೂಚಿಸುವುದರ ಜೊತೆಗೆ ಮೂಲ ಸಂಸ್ಕೃತಶಬ್ದವನ್ನು ತೋರಿಸಿದೆ. ಉದಾಹರಣೆಗೆ:- ಚರ್ಯೆ [ಸಂ. ಚರ್ಯಾ]

ದೇಶ್ಯ ಪ್ರತ್ಯಯ ಮತ್ತು ಮೂಲ ಅವ್ಯಯ ರೂಪಗಳಿಗೆ ನಿಷ್ಪತ್ತಿಯನ್ನು ಕೊಟ್ಟಿಲ್ಲ.

ದೇಶ್ಯ ಮತ್ತು ಸಂಸ್ಕೃತಶಬ್ದಗಳ ನಿಷ್ಪತ್ತಿ ಸಂದೇಹಾಸ್ಪದವಾಗಿದ್ದರೆ [ದೇ.? ]; [ಸಂ.?] ಎಂದು ಸೂಚಿಸಲಾಗಿದೆ.

ಆದೇಶರೂಪಗಳನ್ನು ಮೂಲರೂಪದೊಡನೆ ಕೊಡದೆ ಪ್ರತ್ಯೇಕವಾಗಿ ಕೊಟ್ಟಿದ್ದರೂ ಆದೇಶರೂಪಗಳು ಸೇರಿದ ಸಮಾಸಗಳನ್ನು ಬಿಡಿಸಿ ಕೊಡುವಾಗ ಅವುಗಳ ಮೂಲರೂಪವನ್ನು ದುಂಡುಕಂಸದಲ್ಲಿ ನಿಷ್ಪತ್ತಿಭಾಗದಲ್ಲಿ ತೋರಿಸಿದೆ. ಉದಾಹರಣೆಗೆ:- ನಿಡುಮುಡಿ [ನಿಡು (< ನಿಡಿದು) + ಮುಡಿ$_2$]

## ವಿರಾಮ ಚಿಹ್ನೆಗಳು (Punctuation Marks)

I. ( . ) ಪೂರ್ಣವಿರಾಮ (Full stop)

ಮುಖ್ಯಉಲ್ಲೇಖಗಳ ವಾಚಕ ನಿರ್ದೇಶನವಾದ ಅನಂತರವೂ, ಅರ್ಥಚ್ಛಾಯೆಯನ್ನು ತೋರಿಸುವ ೧,೨ ಮುಂತಾದ ಸಂಖ್ಯೆಗಳ ಮುಂದೆಯೂ, ಅರ್ಥಪ್ರಯೋಗಗಳೇ ಮೊದಲಾದ ಎಲ್ಲ ವಿವರಗಳೂ ಮುಗಿದು ನಿಷ್ಪತ್ತಿಯನ್ನು ಪ್ರಾರಂಭಿಸುವ ಮೊದಲೂ, ಉದ್ಧರಿಸಿದ ಪ್ರಯೋಗಗಳ ಆಕರಗಳ ಸಂಕ್ಷಿಪ್ತ ಸೂಚನೆ ಮುಗಿದ ಮೇಲೆಯೂ, 'ನೋ', 'ಪರಾ', 'ಹೋ' ಮುಂತಾದ ಸಂಕೇತಗಳ ಮುಂದೆಯೂ, ನಿಷ್ಪತ್ತಿಯಲ್ಲಿ ಸಮಾಸಗಳನ್ನು ಬಿಡಿಸಿ ತೋರಿಸಿದ ಮೇಲೆ ಜ್ಞಾತಿ ಅಥವಾ ಸಂವಾದಿ ಶಬ್ದಗಳನ್ನು ಕೊಡುವುದಕ್ಕೆ ಮೊದಲೂ ಪೂರ್ಣವಿರಾಮ ಚಿಹ್ನೆಯನ್ನು ಬಳಸಿದೆ. ಉದಾ- **ಅಂಟರಳೆ** (ನಾ). ಒಂದು ಜಾತಿಯ ಗಿಡ; ಅಂಟವಾಳ. **ಅಂಟಿಕ್ಕು** (ಕ್ರಿ). ೧. ಅಂಟಿಸು. ೨. ನಾಟಿಹಾಕು; ಕಸಿಮಾಡು: (ಕ). ೩. ಬೆಂಕಿಹಚ್ಚು (ಸ್ಕಾಂಡರ್). **ಅಕ್ಕಯ್ಯ** (ನಾ). ಅಕ್ಕನನ್ನು ಪ್ರೀತಿಯಿಂದ ಕರೆಯುವ ಮಾತು: ಅಕ್ಕ ಕೇಳವ್ವ, ಅಕ್ಕಯ್ಯ ನಾನೊಂದ ಕನಸ ಕಂಡೆ (ಮಹಾದೇ. ೧೫-೨). **ಅಟ್ಟುಕುಳಿ** 'ಅಟ್ಟುಗುಳಿ' ನೋ. **ಅಟ್ಟ$_2$** (ಗು). ದಟ್ಟವಾದ; ಒತ್ತಾದ (?): 'ಅಟ್ಟಾಗು' ಪರಾ. **ಅಚ್ಚುಬೆಲ್ಲ** (ನಾ). 'ಉಂಡೆ ಬೆಲ್ಲ' ಹೋ. **ಅಕ್ಕಾಜಿ** (ನಾ). ℙ 'ಅಣ್ಣಾಜಿ' 'ಭಾವಾಜಿ' 'ಮಾವಾಜಿ' ಇತ್ಯಾದಿ ಹೋ. **ಅಟಮಟಿಸು** (ಕ್ರಿ). [ಅಟಮಟ + - ಇಸು$_3$. / ತೆಲು. ಅಟಮಟಿಂಚು]

II. ( , ) ಅಲ್ಪವಿರಾಮ (Comma)

೧. ಪ್ರಧಾನ ಶಬ್ದ ಮತ್ತು ಅದರ ಇತರ ರೂಪಗಳನ್ನು ಒಂದೆಡೆ ಉಲ್ಲೇಖಿಸುವಾಗ ಮಧ್ಯದಲ್ಲಿ ಅಲ್ಪವಿರಾಮವನ್ನು ಬಳಸಲಾಗಿದೆ. ಉದಾ:- **ಅಕ್ಕಲು$_2$, ಅಖಲು. ಅಂಕಕಾಱ, ಅಂಕಂಗಾಱ, ಅಂಕಗಾಱ.**

೨. ಸಂಕೇತಸೂಚನೆಗಳಲ್ಲಿ ಸಂಪುಟ ಭಾಗಗಳನ್ನು ಸೂಚಿಸುವ ಅಂಕಿಗಳ ಮುಂದೆ ಅಲ್ಪವಿರಾಮವನ್ನು ಬಳಸಲಾಗಿದೆ. ಉದಾ:- **ಅಂಕೆ** (ಮೈಆರಿ. ೧೯೩೮, ೧೬-೧೦; 1762). **ಅಕ್ಕಯ್ಯ** (ಎಕ. XIV, ನಾಗಮಂ. ೧೧೧-೩; 961). **ಅಂಬಲಗೊಟ್ಟಗೆ** (ಸೌಇಇ. IX-ii, ೪೪೬-೬೦; 1436).

III. ( ; ) ಅರ್ಧವಿರಾಮ (Semicolon)

೧. ಒಂದೇ ಬಗೆಯ ಅರ್ಥವಿರುವಲ್ಲಿಯೂ, ಅರ್ಥದ ಛಾಯೆ ಸ್ವಲ್ಪಮಟ್ಟಿಗೆ ಭಿನ್ನವಾಗಿರುವಾಗಲೂ ನಡುವೆ ಅರ್ಧವಿರಾಮವನ್ನು ಬಳಸಲಾಗಿದೆ. ಉದಾ:- ಅಗಣಿತ (ಗು). ೧. ಎಣಿಸಿಲ್ಲದ; ಲೆಕ್ಕವಿಲ್ಲದ; ಲೆಕ್ಕಕ್ಕೆ ಮೀರಿದ. **ಅಕ್ಕರಗೊಟ್ಟಿ** (ನಾ). ವಿದ್ವಾಂಸರ ಸಭೆ; ವಿದ್ವಾಂಸರೊಡನೆ ಮಾಡುವ ಚರ್ಚೆ, ಸಲ್ಲಾಪ ಮುಂತಾದವು.

೨. ಪ್ರಯೋಗವನ್ನು ಕೊಡುವಾಗ ಒಂದು ಪ್ರಯೋಗ ಮುಗಿದು ಮತ್ತೊಂದು ಪ್ರಯೋಗ ಪ್ರಾರಂಭವಾಗುವ ಮುನ್ನ ಅವುಗಳ ನಡುವೆ, ಅರ್ಧವಿರಾಮವನ್ನು ಬಳಸಲಾಗಿದೆ. 'ಅಕ್ಕ' ಮೊದಲಾದ ಶಬ್ದಗಳಿಗೆ ಕೊಟ್ಟಿರುವ ಉದಾಹರಣೆಗಳನ್ನು ನೋಡಿ.

೩. ಸಂಕೇತಸೂಚನೆಗಳಲ್ಲಿ ಎಲ್ಲಾ ವಿವರಗಳು ಮುಗಿದ ಮೇಲೆ ಕಾಲನಿರ್ದೇಶಕ್ಕೆ ಮೊದಲು ಈ ಚಿಹ್ನೆಯನ್ನು ಬಳಸಲಾಗಿದೆ. ಉದಾ:- **ಅಕಸಾಲೆವಾಳು** (ನಾ). . . (ಸೌಇಇ. IX-ii, ೧೨೩-೨೬; 1059).

IV. ( : ) ವಿವರಣವಿರಾಮ (Colon)

ಶಬ್ದಕ್ಕೆ ಅರ್ಥವನ್ನು ಕೊಟ್ಟ ಮೇಲೆ ಪ್ರಯೋಗಗಳನ್ನು ಪ್ರಾರಂಭಿಸುವ ಮೊದಲು ವಿವರಣವಿರಾಮವನ್ನು ಉಪಯೋಗಿಸಲಾಗಿದೆ. ಉದಾ:- **ಅಂಕಿಸು$_2$** (ಕ್ರಿ). ಬಳಿ; ಲೇಪಿಸು: ಕುಂಕುಮದೊಳ್ಪುಡಿವೆರೆದ ಕಮ್ಮೆಣ್ಣೆಯ ಪಂಕವನುತ್ತಮಾಂಗದೊಳು ಅಂಕಿಸಿಕೊಂಡವಳಿರ್ದಳು (ಕುರಾಸಾಂ. ೩೩-೯೨). **ಅಕರ$_2$** (ಅ). ತೆರಿಗೆಯಿಲ್ಲದೆ: ಭಟ್ಟಗ್ರಿಗೀಗಟ್ಟೆ ಒಡ್ಡಲಿ ಆಪತ್ತೂನ್ನಿ ವಿಟ್ಟಾರಕರ (ಮೈಆರಿ. ೧೯೩೭, ೧೬-೧೭; ಸು. 450).

## V. (“ ” ‘ ’) ಉದ್ಧರಣಚಿಹ್ನೆಗಳು (Quotation marks)

ನಿಘಂಟು, ವ್ಯಾಕರಣ, ಲಕ್ಷಣಗ್ರಂಥಗಳಿಂದ ಅರ್ಥಕ್ಕೆ ಆಧಾರವನ್ನು ಸೂಚಿಸುವಾಗ ಎರಡೆರಡಿರುವ ಉದ್ಧರಣಚಿಹ್ನೆಗಳನ್ನು ಬಳಸಲಾಗಿದೆ. ಉದಾ:- **ಅಂಕ$_2$** (ನಾ). ೫. ಭಾರವನ್ನು ಎತ್ತುವುದಕ್ಕೆ ಉಪಯೋಗಿಸುವ ಹಾರೆ; ಸನ್ನೆಕೋಲು: “ಅಂಕವೆನೆ ಭಾರವೆತ್ತುವದಕ್ಕುಂ” (ಕಶರ. ೧೦). ೬. ತೊಡೆ: “ಅಂಕಮುತ್ಸಂಗಮಕ್ಕು” (ಮಂಗರಾ. ೯೩-೧೭). ನೋ, ಪರಾ ಇವುಗಳನ್ನು ಸೂಚಿಸುವಲ್ಲಿ ಒಂದೊಂದು ಇರುವ ಉದ್ಧರಣಚಿಹ್ನೆಗಳನ್ನು ಬಳಸಲಾಗಿದೆ. **ಅಂಕಕಾತಿ ‘ಅಂಕಕಾರ್ತಿ’** ನೋ. **ಅಂಕಗದ್ಯಾಣ** (ನಾ). ‘ಅಂಕದೇಟ’, ‘ಅಂಕವಣ’, ‘ಅಂಕಸುಂಕ’ ಪರಾ.

## VI. [ ] ಚೌಕಕಂಸ (Square bracket)

ನಿಷ್ಪತ್ತಿಭಾಗವನ್ನು ಚೌಕಕಂಸದಲ್ಲಿ ತೋರಿಸಲಾಗುವುದು. ಉದಾ – **ಅಂಕುರಿಸು** (ಕ್ರಿ). [ಅಂಕುರ + - ಇಸು$_1$] ಪ್ರಯೋಗಗಳಲ್ಲಿ ಪಾಠಾಂತರಗಳನ್ನು ಸೂಚಿಸುವಲ್ಲಿ ಚೌಕಕಂಸವನ್ನು ಬಳಸಿದೆ. ಉದಾ:- **ಅಂಗಜಾವ** (ನಾ). ಏನು ಕಾರಣ ನೀವು ಬಾಣನ ಬಾಗಿಲ ಕಾಯ್ಬರಿ ? ಡಿಂಗರಿಗನ ಮನೆಗೆ ಅಂಗಜಾವ[ಪಾಠಾಂ. ಜಾಹವ, ಜಾವಹ]ಕ್ಕೆ ಹೋಗಿದ್ದರೊಳರೆ ಕೂಡಲ ಸಂಗಮದೇವಾ (ಬಸವ. ೭೪೨). ಶಾಸನ ಮತ್ತು ಕಾವ್ಯಗಳಿಂದ ಪ್ರಯೋಗಗಳನ್ನು ಉದ್ಧರಿಸುವಾಗ ಅವುಗಳ ಸಂಪಾದಕರು ಚೌಕಕಂಸವನ್ನು ಬಳಸಿದ್ದರೆ ಅವುಗಳನ್ನು ಯಥಾವತ್ತಾಗಿ ಉಳಿಸಿಕೊಳ್ಳಲಾಗಿದೆ. ಉದಾ:- **ಅಗುರ್** (ಕ್ರಿ). ಧರೆಯೆಲ್ಲಂ ಪೊಗಟ್ಟನ್ತಿರೆ [ಪುರಿ]ಗೆರೆಯೊಳಗುರ್ತು ರೋಣಮಂ ಕಾದಮರೇಶ್ವರಪುರಮನೆಯ್ದಿದೋಂ . . . ಪಂಪಯ್ಯಂ (ಸೌಇಇ. XI-i, ೩೬-೨೩; 942).

## VII. E ∃ ಇ ಕಂಸ (Editorial bracket)

E ∃ ಇ ಕಂಸವು ಸಂಪಾದಕರು ಸಂಯೋಜಿಸಿದ ಪಾಠವನ್ನು ಸೂಚಿಸುವಲ್ಲಿ ಬಳಸಿದೆ. ಇದನ್ನು ಸಾಮಾನ್ಯವಾಗಿ ಪ್ರಕೃತ ಶಬ್ದಕ್ಕೆ ಮಾತ್ರ ಉಪಯೋಗಿಸಿದೆ. ಶಾಸನಗಳಿಂದ ಪ್ರಯೋಗಗಳನ್ನು ಎತ್ತಿಕೊಂಡಾಗ ಅವುಗಳನ್ನು ತಿದ್ದಬೇಕಾದ ಸಂದರ್ಭಗಳಲ್ಲಿ E ∃ ಇ ಕಂಸವನ್ನು ಹಾಕಿದೆ. ಉದಾ:- **ಅಚ್ಛವೊ Eವ?∃ತ್ತಳಿಕೆ, ಅಜ್ಜವEವೊ∃ಡೆಯ, ಅಡಗುಶೇEಸೇ∃ಕ.** ಮುಖ್ಯಉಲ್ಲೇಖಕ್ಕೆ ಸಂಬಂಧಿಸಿದಂತೆ ಪ್ರಯೋಗದಲ್ಲಿ ಕ್ವಚಿತ್ತಾಗಿ ಅರ್ಥವಿವರಣೆ ಮಾಡಬೇಕಾದ ಸಂದರ್ಭದಲ್ಲಿ E ∃ ಇ ಕಂಸವನ್ನು ಬಳಸಲಾಗಿದೆ. ಉದಾ:- **ಅಂಕ$_2$** (ನಾ). ೧೩. ಹೆಸರು: ಚೇರಮಾಂಕಂಗೆ ಬೆಸಸಿದ ಭಕ್ತ ಸತ್ಯೇಂದ್ರ ಚೋಳ ಕೃತಿ (ಭಾವಚಂ. ೧-೪೬). E ಚೇರಮಾಂಕ = ಚೇರಮ ಎಂಬ ಹೆಸರುಳ್ಳವನು ∃. **ಅಂಕಕಾಱ** (ನಾ). ೨. ಬಿರುದುಳ್ಳ ವೀರ (ಇದು ಬಿರುದಿನ ಭಾಗವಾಗಿ ಬರುವುದೂ ಉಂಟು): ನೆಲನದಿರೆವಂದು ತಾಗಿದ ಕಕ್ಕಲನ ತಮ್ಮನಪ್ಪ ಬಪ್ಪುವನಂಕಕಾಱನನೊಂದೆ ಮದಾಂಧಗಂಧಸಿಂಧುರದೊಳೋಡಿಸಿದ (ಪಂಪಭಾ. ೯-೫೨ ವ); Eಬಪ್ಪುವನಂಕಕಾಱ: ಬಪ್ಪುವಂ + ಅಂಕಕಾಱ = ಬಪ್ಪುವನೆಂಬ ಅಂಕಕಾಱ; ಇದನ್ನು ಬಪ್ಪುವನ + ಅಂಕಕಾಱ (= ಬಪ್ಪುವ ಎಂಬ ಒಡೆಯನ ಆಶ್ರಯದಲ್ಲಿರುವ ಅಂಕಕಾಱ) ಎಂದು ಬಿಡಿಸುವುದೂ ಸಾಧ್ಯ∃.

## VIII. ( ) ದುಂಡುಕಂಸ (Round bracket)

ಮುಖ್ಯಉಲ್ಲೇಖಗಳ ಶಬ್ದಜಾತಿಯನ್ನು, ಸಂಕ್ಷಿಪ್ತಗಳನ್ನು, ಆಕರಗಳನ್ನು, ಪರ್ಯಾಯಶಬ್ದಗಳ ಮೂಲರೂಪಗಳನ್ನು ಸೂಚಿಸುವಲ್ಲಿ ದುಂಡುಕಂಸವನ್ನು ಬಳಸಲಾಗಿದೆ.

೧. ಮುಖ್ಯ ಉಲ್ಲೇಖಗಳ ಶಬ್ದಜಾತಿ:- **ಅಕ್ಕ** (ನಾ). **ಅಕ್ಕಚ್ಚ** (ನಾ). **ಅಗಲ್ಚು** (ಕ್ರಿ). – **ಅ$_3$** (ಅ). **ಅಕ್ಕುಡ$_2$** (ಗು).
೨. ಸಂಕ್ಷಿಪ್ತ:- **ಅಗಡೀದಿಗಡೀ** (ಗು). (ಉಕ).
೩. ಆಕರ:- **ಅಕ್ಕನ ಚೌರಿ** (ನಾ). ಒಂದು ಬಗೆಯ ಕಾಯಿಪಲ್ಯ (ಸ್ಯಾಂಡರ್).
೪. ಪರ್ಯಾಯ ಶಬ್ದಗಳ ಮೂಲರೂಪ:- **ಅಕ್ಕರೆಮಗ** (ನಾ). [ಅಕ್ಕರ$_1$ (< ಅಟ್ಕಱ್$_2$) + ಮಗ]

## IX. - ಕೂಡುಗೆರೆ (Hyphen)

ಈ ಚಿಹ್ನೆ ಅಕ್ಷರ ಅಥವಾ ಅಕ್ಷರಗಳ ಹಿಂದಿದ್ದರೆ ಪ್ರತ್ಯಯವನ್ನು ಸೂಚಿಸುತ್ತದೆ; ಮುಂದಿದ್ದರೆ ಶಬ್ದದ ಆದ್ಯಂಶವನ್ನು ಸೂಚಿಸುತ್ತದೆ. ಉದಾ:- -ಅ$_2$, -ಅ$_3$, ಅಗ-$_1$.

## X. – ಅಡ್ಡಗೀಟು (Dash)

ಈ ಚಿಹ್ನೆ ಹಿಂದೆ ಕೊಟ್ಟಿರುವ ಶಬ್ದವನ್ನು ಸೇರಿಸಿಕೊಂಡು ಓದಬೇಕೆಂಬುದನ್ನು ಸೂಚಿಸುತ್ತದೆ. ಉದಾ:-**ಅಡಕೆ ತಾಳಿಲ**, ಅಡಕೆದಾಳಿಲ (ನಾ). ಒಂದು ಬಗೆಯ ಪಲ್ಯ,— ತಾಳಿದ. ಇಲ್ಲಿ — ತಾಳಿದ ಎಂಬುದರ ಹಿಂದೆ ಒಂದು ಬಗೆಯ ಎಂಬುದನ್ನು ಸೇರಿಸಿಕೊಂಡು, ಒಂದು ಬಗೆಯ ತಾಳಿದ ಎಂದು ಅರ್ಥಮಾಡಿಕೊಳ್ಳಬೇಕು.

## ೭. ಅಕ್ಷರಗಳ ಗಾತ್ರ

**೧೨ ಪಾಯಿಂಟ್ ದಪ್ಪ ಅಕ್ಷರ** (12 point antic)

೧. ನಿಘಂಟಿನಲ್ಲಿ ಬರುವ ಮುಖ್ಯ ಶಬ್ದಗಳನ್ನು ಉಲ್ಲೇಖಿಸುವಲ್ಲಿ ಈ ಅಳತೆಯ ಅಕ್ಷರಗಳನ್ನು ಬಳಸಲಾಗಿದೆ.

೨. ಮುಖ್ಯ ಶಬ್ದದ ಜೊತೆಯಲ್ಲಿ ಕೊಟ್ಟಿರುವ ಅದರ ಇತರ ರೂಪಗಳಿಗೆ ಅರ್ಥ ಪ್ರಯೋಗಗಳನ್ನು ಕೊಡುವಾಗ ಆ ಒಂದೊಂದು ರೂಪಕ್ಕೂ ಈ ಅಳತೆಯ ಅಕ್ಷರವನ್ನು ಬಳಸಲಾಗಿದೆ. ಉದಾ:- **ಅಕ್ಕಸಾಲೆ** ಶಬ್ದದಲ್ಲಿ **ಅಕಸಾಲ, ಅಕಸಾಲೆ, ಅಕ್ಕಸಾಲ, ಅಕ್ಕಸಾಲಿ, ಅಗಸಾಲ, ಅಗಸಾಲೆ, ಅರ್ಕಸಾಲೆ.**

**೧೨ ಪಾಯಿಂಟ್ ಸಾದಾ ಅಕ್ಷರ** (12 point Roman)

೧. ಮುಖ್ಯಶಬ್ದಗಳಿಗೆ ಅರ್ಥಗಳನ್ನು ಕೊಡುವಾಗ ಈ ಅಳತೆಯ ಅಕ್ಷರಗಳನ್ನು ಬಳಸಿದೆ. ಉದಾ:- **ಅದಕನಗೆ** (ನಾ). ಅದುಮಿಟ್ಟುಕೊಂಡ ನಗೆ; ಪರಿಮಿತವಾದ ನಗೆ.

೨. ಮುಖ್ಯಶಬ್ದದ ಜೊತೆಯಲ್ಲಿ ಕೊಡುವ ಅದರ ಇತರ ರೂಪಗಳಿಗೆ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಿದೆ. ಉದಾ:- **ಅಕ್ಕ**$_1$, ಅಕ$_1$, ಅಕ್ಕಳ್ (ನಾ).

೩. ಒಂದು ಶಬ್ದದ ಅರ್ಥಕ್ಕೆ ಬೇರೆ ಕಡೆ ಆ ಶಬ್ದದ ಮುಖ್ಯರೂಪದ ಕೆಳಗಡೆ 'ನೋಡಿ' ಎಂದು ನಿರ್ದೇಶಿಸುವಾಗ ಈ ಅಳತೆಯ ಅಕ್ಷರಗಳನ್ನು ಬಳಸಿದೆ. ಉದಾ:- **ಅಕ್ಕಡ**$_1$ 'ಅಕ್ಬಡ' ನೋ. **ಅಕಲು** 'ಅಕ್ಕಲು$_2$' ನೋ.

೪. ಬೇರೆ ರೀತಿ ಗೊತ್ತುಮಾಡಿಲ್ಲದ ಎಲ್ಲ ಕಡೆಗಳಿಗೂ ಈ ಅಳತೆಯ ಅಕ್ಷರಗಳನ್ನು ಬಳಸಿದೆ. ಉದಾ:- [ಜೈನ] [ವೀಶೈ] (ಕರಾ) (ದಕ) (ಉಕ) ನೋ. ಪರಾ. ಹೋ. (ಕ್ರಿ). (ನಾ). (ಗು). (ಪ್ರ). ಇತ್ಯಾದಿ.

೫. ವಿಶೇಷಾಂಶಗಳನ್ನು ವಿವರಿಸುವ ಕಡೆ ☞ ಈ ಚಿಹ್ನೆಯ ಮುಂದೆ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಿದೆ.

**೧೦ ಪಾಯಿಂಟ್ ದಪ್ಪ ಅಕ್ಷರ** (10 Point antic)

೧. ನುಡಿಗಟ್ಟುಗಳನ್ನೂ ವಿಶಿಷ್ಟರೂಪಭೇದಗಳನ್ನೂ ನಿರ್ದೇಶಿಸುವಲ್ಲಿ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಲಾಗಿದೆ. ಉದಾ:- **ಅಕ್ಕರ** ಶಬ್ದದ ಕೆಳಗೆ **ಅಕ್ಕರದ ಹೊಲಿಗೆ. ಅಟ್ಟ** ಶಬ್ದದ ಕೆಳಗೆ **ಅಟ್ಟಕ್ಕೇರು.**

೨. ನಿಷ್ಪತ್ತಿ ವಿಭಾಗದಲ್ಲಿ ಭಾಷೆಗಳ ಹೆಸರುಗಳನ್ನು ನಿರ್ದೇಶಿಸುವಲ್ಲಿ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಲಾಗಿದೆ. ಉದಾ:- **ತಮಿ. ಮಲ. ತುಳು. ತೆಲು. ಹಿಂ.**

**೧೦ ಪಾಯಿಂಟ್ ಸಾದಾ ಅಕ್ಷರ** (10 Point Roman)

೧. ಮುಖ್ಯ ಶಬ್ದಗಳಿಗೆ ಅರ್ಥಗಳನ್ನು ಕೊಟ್ಟ ಮೇಲೆ ಪ್ರಯೋಗಗಳನ್ನು ಉದ್ಧರಿಸುವಾಗ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಲಾಗಿದೆ. ಉದಾ:- **ಅಂಗವಟ್ಟ**$_1$ (ನಾ). ಆಗಳಾ ತುಂಗಸ್ತನೆಯ ಮಂಗಳಮಾದಂಗದೊಳಂಗವಟ್ಟಮಂ ಸಂಗಡಿಸಿದಿಂಬಟೆಯಂ (ಬಾಧಪು. ೬ - ೧೦೪ ವ).

೨. ನಿಷ್ಪತ್ತಿವಿಭಾಗದಲ್ಲಿ ಜ್ಞಾತಿಶಬ್ದಗಳನ್ನೂ, ಆ ಶಬ್ದಗಳ ಅರ್ಥಗಳನ್ನೂ ವಿವರಿಸುವಲ್ಲಿ ಈ ಅಳತೆಯ ಅಕ್ಷರಗಳನ್ನು ಬಳಸಿದೆ. ಉದಾ:- **ಅಕ್ಕಿ**$_1$ (ನಾ). [ದೇ. < * ಅರ್ಕಿ. ‖ ತಮಿ. ಅರಿ, ಅರಿಚಿ; ಮಲ. ತುಳು. ಅರಿ; ಕೊಡ. ಅರಿ, ಅಕ್ಕಿ; ತೆಲು. ಅಕ್ಕುಳ್ಳು]

**೮ ಪಾಯಿಂಟ್ ಸಾದಾ ಅಕ್ಷರ** (8 Point Roman)

ಮುಖ್ಯ ಶಬ್ದಗಳಿಗೆ ಕೊಡುವ ಪ್ರಯೋಗಗಳ ಆಕರಗಳನ್ನು ಸೂಚಿಸುವಾಗ ಮತ್ತು 'ಪಾಠಾಂ' ಎಂಬುದನ್ನು ಸೂಚಿಸುವಾಗ ಈ ಅಳತೆಯ ಅಕ್ಷರಗಳನ್ನು ಬಳಸಲಾಗಿದೆ. ಉದಾ:- **ಅಂಕ**$_2$ ಶಬ್ದದಲ್ಲಿ (ಶ್ರೀಪಾಲ. ೪-೧೬); (ಎಕ. X, ಶ್ರೀನಿವಾ. ೨೬-೨೨; 870). **ಅನುವಿಸು**$_2$: ಮನಮನನುವಿಸ[ಪಾಠಾಂ. ಉಪಮಿಸ]ಲಾಜಿದಂತೆಯುಸಿರ್ ಮಿಟ್ಟಿಗೊಳಿಸುವ ಸವಿಯುಂ (ಲೀಲಾವ. ೧೦-೪೫ ವ).

ಎಸ್. ಬಸವಾರಾಧ್ಯ
ಪ್ರಧಾನ ಸಂಪಾದಕ

( ಹಿಂದಿನ ಸಂಪುಟಗಳಿಂದ ಮುಂದುವರಿದ )
ನಿಘಂಟಿನಲ್ಲಿ ಉದಾಹರಿಸಿರುವ ಗ್ರಂಥ, ಶಾಸನ ಮೊದಲಾದುವುಗಳ

# ಸಂಕ್ಷಿಪ್ತಸೂಚಿ

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿಷಯಗಳು |
|---|---|---|---|---|---|
| ೧. | ಆದವ.ಮು. | ಆದಯ್ಯನ ವಚನಗಳು | ಆದಯ್ಯ (ಸಂ॥ ವೀರಭದ್ರಪ್ಪ ಕೊಪ್ಪಳ) | ಸು. ೧೧೬೦ | ಶ್ರೀ ಮುರುಘಾಮಠ, ಧಾರವಾಡ. |
| ೨. | ಇ.ಎ. | ಇಂಡಿಯನ್ ಎಪಿಗ್ರಫಿ | — | — | ಉದಕಮಂಡಲದ ಶಾಸನ ಕಚೇರಿಯಲ್ಲಿ ಸಂಗ್ರಹಿಸಿದುದು, ೧೯೫೬ |
| ೩. | ಇಚಸಾಂ. | ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ | ಮಲ್ಲಿಕಾರ್ಜುನ | ೧೬ ನೆಯ ಶತ ? | ಶ್ರೀ ಮುರುಘಾಮಠ, ಧಾರವಾಡ. |
| ೪. | ಈಹುಲಿ. | ಈಡೊಂದು ಹುಲಿಯೆರಡು | ಕೆದಂಬಾಡಿ ಜತ್ತಪ್ಪರೈ | ೧೯೭೮ | ಕೆದಂಬಾಡಿ ಜತ್ತಪ್ಪರೈ ಸನ್ಮಾನಸಮಿತಿ ಮಂಗಳೂರು, ದಕ್ಷಿಣಕನ್ನಡ. |
| ೫. | ಉಮರ. | ಉಮರನ ಒಸಗೆ | ಅನು: ಡಿ.ವಿ. ಗುಂಡಪ್ಪ | ೧೯೬೨ (೪ನೆಯ ಮುದ್ರಣ) | ಕಾವ್ಯಾಲಯ, ಮೈಸೂರು. |
| ೬. | ಕಥನ. | ಕಥನ ಕವನಗಳು | ಕುವೆಂಪು | ೧೯೩೬ | ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ. |
| ೭. | ಕನ್ನಶಾ. | ಕನ್ನಡ ಗ್ರಂಥ ಸಂಪಾದನ ಶಾಸ್ತ್ರ | ಡಾ.ಎಂ.ಎಂ.ಕಲಬುರ್ಗಿ | ೧೯೭೨ | ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ೮. | ಕವಿವಿ. | ಕನ್ನಡ ವಿಷಯ ವಿಶ್ವಕೋಶ | — | — | ಕನ್ನಡ ಅಧ್ಯಯನಸಂಸ್ಥೆ, ಮೈಸೂರು. |
| ೯. | ಕಸಂಸ್ಕೃ. | ಕನ್ನಡ ಸಂಸ್ಕೃತಿ | ಎಂ. ಮರಿಯಪ್ಪಭಟ್ಟ | ೧೯೭೬ | ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು. |
| ೧೦. | ಕುವ್ಯಾಭಾ. ವಾ. | ಕುಮಾರವ್ಯಾಸಭಾರತ (ಬಜಾರ್ ಎಡಿಷನ್) | ಕೃಷ್ಣಯ್ಯ ಮತ್ತು ವಾಜಪೇಯ ಗೋವಿಂದಯ್ಯ | — | — |
| ೧೧. | ಕೃದೇವ. | ಕೃಷ್ಣದೇವರಾಯ | ತ್ರಿವಿಕ್ರಮ | ೧೯೫೪ | ಸುದರ್ಶನ ಮತ್ತು ಕೋ. ಬೆಂಗಳೂರು. |
| ೧೨. | ಕೆಂಬಾರ. | ಕೆಂಬಾವಿ ಬೋಗಣ್ಣನ ರಗಳೆ | ಹರಿಹರ (ಸಂ॥ ಫ. ಗು. ಹಳಕಟ್ಟಿ) | ೧೨೦೦ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. |
| ೧೩. | ಕೊಲ್ಲಿಮಾ. | ಕೊಲ್ಲಿಪಾಕಿ ಮಾಹಾತ್ಮ್ಯ | ಗುರುಮುದ್ದು ಸಂಗಮದೇವ | ಸು. ೧೭೦೦ | ಹಸ್ತಪ್ರತಿ: ಕೆ. ೧೯೭೫, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. |
| ೧೪. | ಗದಾದ. | ಗದಾಯುದ್ಧ ದರ್ಪಣ | ವ್ಯಾಖ್ಯಾನಕಾರ: ಪ್ರೊ.ಪಿ. ಸುಬ್ರಾಯಭಟ್ಟ | ೧೯೭೫ | ಜನತಾ ಪವರ್‌ಪ್ರೆಸ್, ವಿಟ್ಲ, ದಕ್ಷಿಣಕನ್ನಡ. |
| ೧೫. | ಗಿರಿಕೆ. | ಗಿರಿಕನ್ನಿಕೆ | ಭಾರತೀಸುತ | ೧೯೬೬ | ಶಾರದಾ ಪ್ರಕಟನಾಲಯ, ಬೆಂಗಳೂರು. |
| ೧೬. | ಗುರುಪ. | ಶ್ರೀ ಜಗದ್ಗುರು ಪಂಚಪೀಠಗಳ ಪರಿಚಯ | ವಿರೂಪಾಕ್ಷಶಾಸ್ತ್ರಿ | ೧೯೫೩ | ಗಳಗನಾಥ ಸುರಸ ಗ್ರಂಥಮಾಲೆ, ಹಾವೇರಿ. |
| ೧೭. | ಜೈನಕೋ. | ಜೈನ ಪರಿಭಾಷಾ ರತ್ನಕೋಶ | ತ.ಸು. ಶಾಮರಾಯ, ಹಂ.ಪ. ನಾಗರಾಜಯ್ಯ | ೧೯೮೧ | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| ೧೮. | ತಾತ್ಪನಿ. | ತಾತ್ಪರ್ಯ ನಿರ್ಣಯ ಟೀಕು | ಆನಂದ ತೀರ್ಥಮುನಿ | ? | ಹಸ್ತಪ್ರತಿ: ಕೆ.ಎ.೧೧೯, ಕನ್ನಡ ಅಧ್ಯಯನಸಂಸ್ಥೆ, ಮೈಸೂರು. |
| ೧೯. | ತ್ರೈಲೋಚಿಂ. | ತ್ರೈಲೋಕ್ಯಚಿಂತಾಮಣಿ | ಮಹತ್ತ್ವದೇವಯೋಗಿ | ೧೯೧೪ | ಹಸ್ತಪ್ರತಿ: ಕೆ.ಎ.೨೭೪, ಕನ್ನಡ ಅಧ್ಯಯನಸಂಸ್ಥೆ, ಮೈಸೂರು. |
| ೨೦. | ಧನನಿ. | ಧನವಾಸ್ತು ನಿರ್ಣಯ | ? | ? | ಹಸ್ತಪ್ರತಿ: ಕೆ. ೬೪೪, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. |
| ೨೧. | ಪಂಚತಂ.ಆ. | ಪಂಚತಂತ್ರ | ದುರ್ಗಸಿಂಹ (ಸಂ॥ ಎಸ್. ಅನಂತರಂಗಾಚಾರ್) | ೧೦೩೧ | ಶಾರದಾಮಂದಿರ, ಮೈಸೂರು. |
| ೨೨. | ಪಂಚಾಶೀ. | ಪಂಚಾಶೀತಿ | ? | ? | ಹಸ್ತಪ್ರತಿ: ಕೆ. ೧೮೦, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. |

| ಕ್ರಮ ಸಂಖ್ಯೆ | ಸಂಕ್ಷಿಪ್ತ | ಹೆಸರು | ಕರ್ತೃ | ಕಾಲ | ಇತರ ವಿಷಯಗಳು |
|---|---|---|---|---|---|
| ೨೩. | ಪಂಪದೀ. | ಪಂಪಭಾರತ ದೀಪಿಕೆ | ಡಿ. ಎಲ್. ನರಸಿಂಹಾಚಾರ್ | ೧೯೭೧ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. |
| ೨೪. | ಪದ್ಮಟೀ. | ಪದ್ಮಪುರಾಣದ ಟೀಕು | ಚಿಕುಪಾಧ್ಯಾಯ | ೧೬೭೨ | ಹಸ್ತಪ್ರತಿ: ಕೆ. ೫೩೩, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. |
| ೨೫. | ಪದ್ಮಾಚ. | ಪದ್ಮಾವತಿಯ ಚರಿತೆ | ಪದ್ಮನಾಭ | ಸು. ೧೬೮೦ | ಹಸ್ತಪ್ರತಿ: ಕೆ. ೧೯, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. |
| ೨೬. | ಪದ್ಮಿಪ. | ಪದ್ಮಿನೀ ಪರಿಣಯ | ಚೆನ್ನಯ್ಯ | ಸು. ೧೭೨೦ | ಹಸ್ತಪ್ರತಿ: ಕೆ. ೧೧೫, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. |
| ೨೭. | ಪ್ರಭುಸಾಂ. | ಪ್ರಭುವಿನ ಸಾಂಗತ್ಯ | ಪರ್ವತೇಶ | ಸು. ೧೬೦೦ | ಕೆ. ೫೮೫, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. |
| ೨೮. | ಬರಕೋ. | ಬರಕೋ ಪದಾ ಬರಕೋ | ಶಿಶುನಾಳ ಷರೀಫ (ಸಂ॥ ಶಿವಾನಂದ ಗುಬ್ಬಣ್ಣವರ) | — | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೧೯೮೧ |
| ೨೯. | ಬಾಹೂರ. | ಬಾಹೂರ ಬೊಮ್ಮಯ್ಯನ ರಗಳೆ | ಹರಿಹರ | ೧೨೦೦ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. |
| ೩೦. | ಬೊಂಕಶಾ. | ಬೊಂಬಾಯಿ ಕರ್ನಾಟಕ ಶಾಸನಗಳು | — | — | ಉದಕಮಂಡಲದ ಶಾಸನಕಚೇರಿಯಲ್ಲಿ ಸಂಗ್ರಹಿಸಿದುದು. |
| ೩೧. | ಭಾಹಬ್ಬ. | ಭಾರತೀಯ ಹಬ್ಬಗಳು | ಪಂಡಿತ ಬಿ.ಎ.ಕವಲಿ | ೧೯೬೧ | ಮನೋಹರ ಮುದ್ರಣಾಲಯ, ಧಾರವಾಡ. |
| ೩೨. | ಮಧ್ಯಮ. | ಕನ್ನಡ ಮಧ್ಯಮ ವ್ಯಾಕರಣ | ತೀ.ನಂ.ಶ್ರೀಕಂಠಯ್ಯ | ೧೯೩೯ | ಮೈಸೂರು ಸರ್ಕಾರದ ಮುದ್ರಣಾಲಯ, ಬೆಂಗಳೂರು. |
| ೩೩. | ಮಲ್ಲಕಾ. | ಮಲ್ಲಕವಿ ಸಂಯೋಜಿತ ಕಾವ್ಯಸಾರಂ | ಮಲ್ಲಕವಿ (ಸಂ॥ ಎನ್. ಅನಂತರಂಗಾಚಾರ್) | ? | ಕನ್ನಡ ಸಾಹಿತ್ಯ ಪರಿಷತ್ತು , ಬೆಂಗಳೂರು. |
| ೩೪. | ಮೂರುನಾ. | ಮೂರು ಗ್ರೀಕ್ ನಾಟಕಗಳು | ಅನು॥ ಕ. ವೆಂ. ರಾಘವಾಚಾರ್ | ? | — |
| ೩೫. | ಮೈಎರಿ. | 'ಮೈಸೂರು ಎಪಿಗ್ರಾಫಿಕಲ್ ರಿಪೋರ್ಟ್ | — | — | ಉದಕಮಂಡಲದ ಶಾಸನ ಕಚೇರಿಯಲ್ಲಿ ಸಂಗ್ರಹ ಮಾಡಿದುದು. |
| ೩೬. | ಯೋಗದೀ. | ಯೋಗದೀಪಿಕಾ | ಅನು॥ ಪ್ರೊ.ಬಿ.ಭೀಮಸೇನರಾವ್ | ೧೯೭೦ | ಬೃಂದಾವನ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ ಪ್ರೈ.ಲಿ, ಬೆಂಗಳೂರು. |
| ೩೭. | ರಾಜಾವ. | ರಾಜಾವಳಿ ಕಥಾಸಾರ | ದೇವಚಂದ್ರ | ೧೭೭೧ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. |
| ೩೮. | ರೀವ್ಸ್. | ರೀವ್ಸ್ ಇಂಗ್ಲಿಷ್ ಕನ್ನಡ ನಿಘಂಟು | ರೀವ್ಸ್ | — | — |
| ೩೯. | ವಚಸಾ. | ವಚನ ಧರ್ಮಸಾರ | ಎಂ.ಆರ್.ಶ್ರೀನಿವಾಸಮೂರ್ತಿ | ೧೯೫೬ | ಮೈಸೂರು ವಿಶ್ವವಿದ್ಯಾಲಯ, ಮೈಸೂರು. |
| ೪೦. | ವಿಪಕೀ. | ವಿಜಯದಾಸರ ಪದಕೀರ್ತನೆ ಭಾಗ I | ವಿಜಯದಾಸ | ೧೭೫೦ | ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ, ಲಿಂಗಸೂಗೂರು, ೧೯೫೩ |
| ೪೧. | ವೀಶೈಪಾ. | ವೀರಶೈವ ಪಾರಿಭಾಷಿಕ ಶಬ್ದಗಳು | ಬಿ. ಶಿವಮೂರ್ತಿಶಾಸ್ತ್ರಿ | ೧೯೬೧ | — |
| ೪೨. | ಶಂದಾರ. | ಶಂಕರದಾಸಿಮಯ್ಯನ ರಗಳೆ | ಹರಿಹರ | ೧೨೦೦ | — |
| ೪೩. | ಶಾಸಸಂ. | ಶಾಸನಸಂಗ್ರಹ | (ಸಂ॥ ಅಣ್ಣಿಗೇರಿ) | ೧೯೭೫ | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| ೪೪. | ಶಿವಶ. | ಶಿವಶರಣ ಕಥಾರತ್ನಕೋಶ | ತ.ಸು.ಶಾಮರಾಯ | ೧೯೬೭ | ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು. |
| ೪೫. | ಸಕವ.ಕ. | ಸಕಲ ಪುರಾತನರ ವಚನಗಳು (ಭಾಗ I, II, III) | (ಸಂ॥ ಡಾ. ಎಂ.ಎಸ್.ಸುಂಕಾಪುರ) | ೧೯೭೮ | ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ೪೬. | ಸಾಮಾರ. | ಸಾಮಾಸಿ ಮಾರರ ರಗಳೆ | ಹರಿಹರ | ೧೨೦೦ | ಹಸ್ತಪ್ರತಿ: ಓರಿ., ಮೈಸೂರು. |
| ೪೭. | ಸೌಇಎ. | ಸೌತ್ ಇಂಡಿಯನ್ ಎಪಿಗ್ರಫಿ | — | — | ಉದಕಮಂಡಲದ ಶಾಸನ ಕಚೇರಿಯಲ್ಲಿ ಸಂಗ್ರಹಿಸಿದುದು. |
| ೪೮. | ಹಪಸಂ. | ಹವ್ಯಕ ಪದಸಂಚಯ | ಟಿ. ಕೇಶವಭಟ್ಟ | ೧೯೭೨ | ವಾಗ್ದೇವಿ ಪ್ರಕಾಶನ ಮಂದಿರ, ಬೆಂಗಳೂರು. |

# ಸಂಕ್ಷಿಪ್ತಗಳು ಮತ್ತು ಸಂಕೇತಗಳು

## ೧. ಸಂಕ್ಷಿಪ್ತಗಳು

| | |
|---|---|
| (ಅ) | ಅವ್ಯಯ |
| ಅಡಿಟಿ. | ಅಡಿಟಿಪ್ಪಣಿ |
| [ಅದ್ವೈತ] | ಅದ್ವೈತ ಸಿದ್ಧಾಂತ |
| ಅನು॥ | ಅನುವಾದಕ |
| ಅನ್ಯ. | ಅನ್ಯಭಾಷೀಯ |
| ಅನ್ಯದೇ. | ಅನ್ಯದೇಶ್ಯ |
| ಅರ. | ಅರಬ್ಬಿ ಭಾಷೆ |
| ಅರಿಕೆ | ಅರಿಕೆ |
| [ಅಶಿಷ್ಟ] | ಅಶಿಷ್ಟ ಪ್ರಯೋಗ |
| [ಅಶ್ವಶಾ ] | ಅಶ್ವಶಾಸ್ತ್ರ |
| (ಆಲಂ) | ಆಲಂಕಾರಿಕವಾಗಿ |
| ಇಂ. | ಇಂಗ್ಲಿಷ್ ಭಾಷೆ |
| (ಉಕ) | ಉತ್ತರ ಕರ್ನಾಟಕ |
| ಉಪ- | ಉಪಸರ್ಗ |
| ಉದಾ. | ಉದಾಹರಣೆ |
| (ಏಕ) | ಏಕವಚನ |
| ಒಗಟು | ಒಗಟು |
| ಒರಿ. | ಒರಿಯಾ |
| ಓರಿಇ. | ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ |
| ಓರಿಲೈ. | ಗವರ್ನಮೆಂಟ್ ಓರಿಯಂಟಲ್ ಮ್ಯಾನಸ್ಕ್ರಿಪ್ಟ್ಸ್ ಲೈಬ್ರರಿ |
| ಕ. | ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟಣೆ (ಉದಾ: ಚೆನ್ನವ.ಕ., ಬಸವ. ಕ., ಮಹಾದೇ. ಕ.) |
| (ಕರಾ) | ಕರಾವಳಿಯ ಪ್ರದೇಶ |
| [ಕಾಮಶಾ] | ಕಾಮಶಾಸ್ತ್ರ |
| [ಕಾವ್ಯಮೀ] | ಕಾವ್ಯಮೀಮಾಂಸೆ |
| ಕುಇ. | ಕುಇಭಾಷೆ |
| ಕುರುಖ್ | ಕುರುಖ್‌ಭಾಷೆ |
| ಕುವಿ. | ಕುವಿಭಾಷೆ |
| ಕೃಶಾ. | ಕೃತಕಶಾಸನ |
| ಕೊಡ. | ಕೊಡಗುಭಾಷೆ |
| ಕೋತ. | ಕೋತಭಾಷೆ |
| ಕೋಲಾ. | ಕೋಲಾಮಿಭಾಷೆ |
| (ಕ್ರಿ). | ಕ್ರಿಯಾವಾಚಕ |
| [ಕ್ರೈಸ್ತ] | ಕ್ರೈಸ್ತಧರ್ಮ |
| [ಗಜಶಾ] | ಗಜಶಾಸ್ತ್ರ |
| [ಗಣಿತ] | ಗಣಿತಶಾಸ್ತ್ರ |
| (ಗಾದ) | ಗಾದೆ |
| (ಗು). | ಗುಣವಾಚಕ |
| ಗುಜ. | ಗುಜರಾತಿ ಭಾಷೆ |
| ಗೊಂಡ. | ಗೊಂಡಿಭಾಷೆ |
| [ಗ್ರಂಥಸಂ] | ಗ್ರಂಥಸಂಪಾದನೆ |
| [ಚಿತ್ರಶಾ] | ಚಿತ್ರಶಾಸ್ತ್ರ |
| [ಛಂದ] | ಛಂದಸ್ಸು |
| [ಜೈನ] | ಜೈನಧರ್ಮ |
| ಜೋಗುಳ | ಜೋಗುಳ |
| [ಜ್ಯೋತಿ] | ಜ್ಯೋತಿಶ್ಶಾಸ್ತ್ರ |
| ಟಿ. | ಟಿಪ್ಪಣಿ |
| ಟೀ. | ಟೀಕು (ಕೆ) |
| [ತಂತ್ರಶಾ] | ತಂತ್ರಶಾಸ್ತ್ರ |
| [ತತ್ತ್ವಶಾ] | ತತ್ತ್ವಶಾಸ್ತ್ರ |
| ತಮಿ. | ತಮಿಳುಭಾಷೆ |
| [ತರ್ಕ] | ತರ್ಕಶಾಸ್ತ್ರ |
| ತುಳು. | ತುಳುಭಾಷೆ |
| ತೆಲು. | ತೆಲುಗುಭಾಷೆ |
| (ದಕ) | ದಕ್ಷಿಣ ಕರ್ನಾಟಕ (ಹಳೆಯ ಮೈಸೂರು) |
| ದೇ. | ಎಚ್. ದೇವೀರಪ್ಪನವರ ಸಂಪಾದಿತಕೃತಿ |
| ದೇ.॥ | ದೇಶ್ಯ |

ದೇಶೀ. ದೇಶೀಯ
(ದ್ವಿರುಕ್ತಿ) ದ್ವಿರುಕ್ತಿ
[ದ್ವೈತ] ದ್ವೈತಸಿದ್ಧಾಂತ
(ನಪುಂ). ನಪುಂಸಕಲಿಂಗ
(ನಾ). ನಾಮವಾಚಕ
[ನಾಟ್ಯ] ನಾಟ್ಯಶಾಸ್ತ್ರ
ನಾಯ್ಕಿ. ನಾಯ್ಕಿಭಾಷೆ
ನೇಪಾ. ನೇಪಾಳಿಭಾಷೆ
ನೋ. ನೋಡಿ
[ನ್ಯಾಯ] ನ್ಯಾಯಶಾಸ್ತ್ರ
ಪ. ಪಲ್ಲವಿ
ಪಂಜಾ. ಪಂಜಾಬಿಭಾಷೆ
ಪರಾ. ಪರಾಮರ್ಶಿಸಿ
ಪರಿ. ಪರಿಶಿಷ್ಟ
ಪರ್ಷಿ. ಪರ್ಷಿಭಾಷೆ
[ಪಾಠಾಂ.] ಪಾಠಾಂತರ
ಪಾರ. ಪಾರಸಿಭಾಷೆ
ಪಾಲಿ. ಪಾಲಿಭಾಷೆ
ಪೀ. ಪೀಠಿಕೆ
ಪು. ಪುಟ
(ಪುಂ). ಪುಲ್ಲಿಂಗ
(ಪುಂಸ್ತ್ರೀ). ಪುಲ್ಲಿಂಗ ಮತ್ತು ಸ್ತ್ರೀಲಿಂಗ
ಪೋರ್ಚ್ ಪೋರ್ಚುಗೀಸ್
(ಪ್ರ). ಪ್ರತ್ಯಯ
ಪ್ರಯೋ. ಪ್ರಯೋಗ
ಪ್ರಾ. ಪ್ರಾಕೃತಭಾಷೆ
(ಪ್ರಾದೇ) ಪ್ರಾದೇಶಿಕ
ಬ. ಡಾ॥ ಎಲ್. ಬಸವರಾಜು ಅವರ ಸಂಪಾದಿತಕೃತಿ
(ಬಹುವ) ಬಹುವಚನ
[ಬೌದ್ಧ] ಬೌದ್ಧಧರ್ಮ

ಬ್ರಾಹೂಈ. ಬ್ರಾಹೂಈಭಾಷೆ
(ಭವಿಕೃ) ಭವಿಷ್ಯತ್ ಕೃದಂತ
[ಭಾಷಾಶಾ] ಭಾಷಾಶಾಸ್ತ್ರ
[ಭೂಗೋಳ] ಭೂಗೋಳಶಾಸ್ತ್ರ
(ಭೂತಕೃ) ಭೂತಕೃದಂತ
(ಭೂತನ್ಯೂ) ಭೂತನ್ಯೂನ
[ಭೌತವಿ] ಭೌತವಿಜ್ಞಾನ
ಮರಾ. ಮರಾಠಿಭಾಷೆ
ಮಲ. ಮಲಯಾಳಂಭಾಷೆ
ಮಲ್ತೊ. ಮಲ್ತೊಭಾಷೆ
ಮು. ಮುನ್ನುಡಿ
[ಮುದ್ರಕ] ಮುದ್ರಣಕಲೆ
ಮೂಲದ್ರಾ. ಮೂಲದ್ರಾವಿಡ
[ಯೋಗ] ಯೋಗಶಾಸ್ತ್ರ
[ರಾಜನೀ] ರಾಜನೀತಿ
[ರಾಜ್ಯಶಾ] ರಾಜ್ಯಶಾಸ್ತ್ರ
(ರೂಢಿ) ರೂಢಿ
{ರೇಖಾಗ] ರೇಖಾಗಣಿತ
ವ. ವಚನ
[ವಾಸ್ತು] ವಾಸ್ತುಶಿಲ್ಪ
[ವಿಜ್ಞಾ] ವಿಜ್ಞಾನ
[ವಿಶಿಷ್ಟಾ] ವಿಶಿಷ್ಟಾದ್ವೈತ
[ವೀಶೈ] ವೀರಶೈವಧರ್ಮ
ವೃತ್ತಿ ವೃತ್ತಿ
[ವೇದಾಂತ] ವೇದಾಂತ
[ವೈದ್ಯಶಾ] ವೈದ್ಯಶಾಸ್ತ್ರ
[ವ್ಯಾಕ] ವ್ಯಾಕರಣ
ವ್ಯಾಖ್ಯಾ ವ್ಯಾಖ್ಯಾನ
ಶತ. ಶತಮಾನ
[ಶಿಲ್ಪಶಾ] ಶಿಲ್ಪಶಾಸ್ತ್ರ
[ಶೈವ] ಶೈವಧರ್ಮ

| | |
|---|---|
| (ಸ). | ಸರ್ವನಾಮ |
| (ಸಪೂರೂ) | ಸಮಾಸದ ಪೂರ್ವರೂಪ. |
| ಸಂ. | ಸಂಸ್ಕೃತಭಾಷೆ |
| ಸಂ. ‖ | ಸಂಪಾದಕ, ಸಂಗ್ರಾಹಕ |
| [ಸಂಗೀತ] | ಸಂಗೀತಶಾಸ್ತ್ರ |
| [ಸಾಂಖ್ಯ] | ಸಾಂಖ್ಯಶಾಸ್ತ್ರ |
| [ಸಾಮುದ್ರಿ] | ಸಾಮುದ್ರಿಕಶಾಸ್ತ್ರ |
| ಸಿಂಧಿ. | ಸಿಂಧಿಭಾಷೆ |
| ಸು. | ಸುಮಾರು |
| ಸೂ. | ಸೂಚನೆ |
| (ಸ್ತ್ರೀ). | ಸ್ತ್ರೀಲಿಂಗ |
| ಹ. | ಫ. ಗು. ಹಳಕಟ್ಟಿಯವರ ಸಂಪಾದಿತಕೃತಿ |
| ಹಿಂ. | ಹಿಂದಿ-ಹಿಂದೂಸ್ತಾನಿ-ಉರ್ದುಭಾಷೆ |
| ಹೋ. | ಹೋಲಿಸಿ |
| (R) | Revised Edition |
| (S) | Supplement |

## ೨. ಸಂಕೇತಗಳು

| | |
|---|---|
| . . . | ಗ್ರಂಥಭಾಗವನ್ನು ಉದಾಹರಿಸುವಾಗ ನಡುವೆ ಕೆಲವು ಅಕ್ಷರಗಳನ್ನು ಬಿಡಲಾಗಿದೆ ಎಂದು ಸೂಚಿಸುತ್ತದೆ. |
| x x x | ಪ್ರಯೋಗದಲ್ಲಿ ಗ್ರಂಥಪಾತವಾಗಿರುವುದನ್ನು ಸೂಚಿಸುತ್ತದೆ. |
| ? | ಸಂಪಾದಕೀಯಸಂದೇಹವನ್ನು ಸೂಚಿಸುತ್ತದೆ. |
| E ∃ | ಸಂಪಾದಕೀಯವಾಗಿ ಮಾರ್ಪಡಿಸಿರುವ ಅಥವಾ ಸೇರಿಸಿರುವ ಅಕ್ಷರಗಳನ್ನೂ, ಅರ್ಥವಿವರಣೆ ಇತ್ಯಾದಿಗಳನ್ನೂ ಈ ಚಿಹ್ನೆಗಳ ನಡುವೆ ಕೊಡಲಾಗಿದೆ. |
| ℙ | ಈ ಚಿಹ್ನೆಯ ಮುಂದೆ ವಿಶೇಷಾಂಶಗಳನ್ನು ಕೊಡಲಾಗಿದೆ. |
| o | ಈ ಚಿಹ್ನೆ ಒಂದು ಶಬ್ದದ ಕೆಳಪಕ್ಕದಲ್ಲಿ ಇದ್ದರೆ, ಆ ಶಬ್ದವನ್ನು ಈ ನಿಘಂಟಿನಲ್ಲಿ ವಿಶೇಷಕಾರಣಗಳಿಗಾಗಿ ಪ್ರತಿಪಾದಿಸಿಲ್ಲವೆಂದು ಸೂಚಿಸುತ್ತದೆ. ಉದಾಹರಣೆಗೆ 'ಅಂಕದುವರ' ಶಬ್ದದ ಕೆಳಗೆ 'ದುವರ$_o$' ನೋಡಿ. |
| > | ಒಂದು ರೂಪದಿಂದ ಮತ್ತೊಂದು ನಿಷ್ಪನ್ನವಾಗಿದೆ ಎಂಬುದನ್ನು ಸೂಚಿಸುತ್ತದೆ. |
| < | ಒಂದುರೂಪ ಮತ್ತೊಂದರಿಂದ ನಿಷ್ಪನ್ನವಾಗಿದೆ ಎಂಬುದನ್ನು ಸೂಚಿಸುತ್ತದೆ. ಮತ್ತು ಒಂದು ಶಬ್ದದ ರೂಪವನ್ನು ಮತ್ತೊಂದು ಮುಖ್ಯ ಶಬ್ದದ ರೂಪದ ಕೆಳಗೆ ವಿವೇಚಿಸಲಾಗಿದೆ ಎಂಬುದನ್ನು ಸೂಚಿಸುತ್ತದೆ. |
| ~ | ಒಂದು ಶಬ್ದಕ್ಕೂ ಮತ್ತೊಂದಕ್ಕೂ ಮೂಲ ಸಂಬಂಧವುಂಟು ಎಂಬುದನ್ನು ಸೂಚಿಸುತ್ತದೆ. |
| ← | ಒಂದು ಶಬ್ದ ಬೇರೊಂದು ಭಾಷೆಯ ಶಬ್ದದಿಂದ ಎರವಲಾಗಿ ಬಂದದ್ದು ಎಂಬುದನ್ನು ಸೂಚಿಸುತ್ತದೆ. ಸಂಸ್ಕೃತ, ಪ್ರಾಕೃತ ಭಾಷೆಗಳಿಂದ ಬಂದ ಶಬ್ದಗಳ ವಿಷಯದಲ್ಲಿ ಈ ಚಿಹ್ನೆಯನ್ನು ಉಪಯೋಗಿಸಿಲ್ಲ. |
| * | ಈಗ ದೊರೆಯದ, ಆದರೆ ಹಿಂದೆ ಇದ್ದಿರಬೇಕೆಂದು ಊಹಿಸಲಾಗಿರುವ ರೂಪವನ್ನು ಸೂಚಿಸುತ್ತದೆ. |
| ‖ | ಈ ಚಿಹ್ನೆಯ ಮುಂದೆ ಜ್ಞಾತಿಶಬ್ದಗಳನ್ನು ಕೊಡಲಾಗಿದೆ. |
| | ಈ ಚಿಹ್ನೆಯ ಮುಂದೆ ಹೋಲಿಕೆಗಾಗಿ ಬೇರೆ ಭಾಷೆಗಳ ಶಬ್ದಗಳನ್ನು ಕೊಡಲಾಗಿದೆ. |
| = | ಒಂದು ಶಬ್ದಕ್ಕೂ ಮತ್ತೊಂದು ಶಬ್ದಕ್ಕೂ ಅರ್ಥದಲ್ಲಿ ಯಾವ ವ್ಯತ್ಯಾಸವೂ ಇಲ್ಲ ಎಂಬುದನ್ನು ಸೂಚಿಸುತ್ತದೆ. ಉದಾ: ಅಂಬುಜಸಖ= ಅಂಬುಜಬಂಧು. |
| ≡ | ಒಂದು ಶಬ್ದವನ್ನು ಎರಡು ರೂಪಗಳಲ್ಲಿ ಬರೆಯಬಹುದಾದಾಗ, ಅವುಗಳಿಗೆ ಅರ್ಥ ವ್ಯುತ್ಪತ್ತಿಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ ಎಂಬುದನ್ನು ಸೂಚಿಸುತ್ತದೆ. ಉದಾ: ಅಂತಃಸತ್ತ್ವ ≡ ಅಂತಸ್ಸತ್ತ್ವ. |
| Δ | ಈ ಚಿಹ್ನೆಯೊಂದಿಗಿರುವ ಶಬ್ದವು ಅದರ ಮುಖ್ಯೋಲ್ಲೇಖದ ಪೂರ್ವರೂಪವಿರಬಹುದೆಂಬುದನ್ನು ಸೂಚಿಸುತ್ತದೆ. ಉದಾ: Δ ಪದ್ದು$_2$ 'ಹದ್ದು$_2$' ನೋ. |

## ೩. ಇತರ

| | |
|---|---|
| ಅರಕ | ಅರಕಲಗೂಡು |
| ಅರಸೀ. | ಅರಸೀಕೆರೆ |
| ಆನೆಕ. | ಆನೆಕಲ್ |
| ಇಂಡಿ. | ಇಂಡಿ |
| ಉಡುಪಿ | ಉಡುಪಿ |
| ಎಡತೊ. | ಎಡತೊರೆ (ಕೃಷ್ಣನ. ಕೃಷ್ಣರಾಜನಗರ) |
| ಕಡೂರು. | ಕಡೂರು |
| ಕಾನಕಾ. | ಕಾನಕಾನಹಳ್ಳಿ |
| ಕುಂದಾಪು. | ಕುಂದಾಪುರ |
| ಕುಣಿಗ. | ಕುಣಿಗಲ್ |
| ಕೃಷ್ಣರಾ. | ಕೃಷ್ಣರಾಜಪೇಟೆ |
| ಕೊಪ್ಪ. | ಕೊಪ್ಪ |
| ಕೋಲಾರ. | ಕೋಲಾರ |
| ಗುಂಡ್ಲುಪೇ. | ಗುಂಡ್ಲುಪೇಟೆ |
| ಗುಬ್ಬಿ. | ಗುಬ್ಬಿ |
| ಗೋರೀಬಿ. | ಗೋರೀಬಿದನೂರು |
| ಚನ್ನಗಿ. | ಚನ್ನಗಿರಿ |
| ಚನ್ನಪ. | ಚನ್ನಪಟ್ಟಣ |
| ಚನ್ನರಾ. | ಚನ್ನರಾಯಪಟ್ಟಣ |
| ಚಳ್ಳಕೆ. | ಚಳ್ಳಕೆರೆ |
| ಚಾಮರಾ. | ಚಾಮರಾಜನಗರ |
| ಚಿಂತಾಮ. | ಚಿಂತಾಮಣಿ |
| ಚಿಕ್ಕನಾ. | ಚಿಕ್ಕನಾಯಕನ ಹಳ್ಳಿ |
| ಚಿಕ್ಕಬ. | ಚಿಕ್ಕಬಳ್ಳಾಪುರ |
| ಚಿಕ್ಕಮ. | ಚಿಕ್ಕಮಗಳೂರು |
| ಚಿತ್ರದು. | ಚಿತ್ರದುರ್ಗ |
| ಜಗಳೂ. | ಜಗಳೂರು |
| ತರೀಕೆ. | ತರೀಕೆರೆ |
| ತಿಪಟೂ. | ತಿಪಟೂರು |
| ತಿರುಮ. | ತಿರುಮಕೂಡ್ಲು ನರಸೀಪುರ |
| ತೀರ್ಥಹ. | ತೀರ್ಥಹಳ್ಳಿ |
| ತುಮಕೂ. | ತುಮಕೂರು |
| ದಾವಣ. | ದಾವಣಗೆರೆ |
| ದೇವನ. | ದೇವನಹಳ್ಳಿ |
| ದೊಡ್ಡಬ. | ದೊಡ್ಡಬಳ್ಳಾಪುರ |
| ನಂಜನ. | ನಂಜನಗೂಡು |
| ನಗರ. | ನಗರ |
| ನಾಗಮಂ. | ನಾಗಮಂಗಲ |
| ನೆಲಮಂ. | ನೆಲಮಂಗಲ |
| ಪಾವುಗ. | ಪಾವುಗಡ |
| ಪುಂಗನೂ. | ಪುಂಗನೂರು |
| ಬಂಕಾಪು. | ಬಂಕಾಪುರ |
| ಬಾಗೆಪ. | ಬಾಗೆಪಲ್ಲಿ |
| ಬಾಗೇವಾ. | ಬಾಗೇವಾಡಿ |
| ಬೆಂಗಳೂ. | ಬೆಂಗಳೂರು |
| ಬೇಲೂರು. | ಬೇಲೂರು |
| ಬೌರಿಂಗ್ | ಬೌರಿಂಗ್‌ಪೇಟೆ |
| ಮಂಗಳೂ. | ಮಂಗಳೂರು |
| ಮಂಜರಾ. | ಮಂಜರಾಬಾದ್ |
| ಮಂಡ್ಯ. | ಮಂಡ್ಯ |
| ಮದ್ದಗಿ. | ಮದ್ದಗಿರಿ |
| ಮಳವ. | ಮಳವಳ್ಳಿ |
| ಮಾಗಡಿ. | ಮಾಗಡಿ |
| ಮಾಲೂರು. | ಮಾಲೂರು |

| | |
|---|---|
| ಮುಳಬಾ. | ಮುಳಬಾಗಲು |
| ಮೂಡಗೆ. | ಮೂಡಗೆರೆ |
| ಮೈಸೂರು. | ಮೈಸೂರು |
| ಮೊಳಕಾ. | ಮೊಳಕಾಲುಮುರು |
| ರಾಣಿಬೆ. | ರಾಣಿಬೆನ್ನೂರು |
| ಲಕ್ಷ್ಮೇಶ್ವ. | ಲಕ್ಷ್ಮೇಶ್ವರ |
| ಶಿಕಾರಿ. | ಶಿಕಾರಿಪುರ |
| ಶಿಡ್ಲಘ. | ಶಿಡ್ಲಘಟ್ಟ |
| ಶಿರಾ. | ಶಿರಾ |
| ಶಿವಮೊ. | ಶಿವಮೊಗ್ಗ |
| ಶೃಂಗೇರಿ. | ಶೃಂಗೇರಿ |
| ಶ್ರೀನಿವಾ. | ಶ್ರೀನಿವಾಸಪುರ |
| ಶ್ರೀರಂಗ. | ಶ್ರೀರಂಗಪಟ್ಟಣ |
| ಸಾಗರ. | ಸಾಗರ |
| ಸೊರಬ. | ಸೊರಬ |
| ಹಾನುಗ. | ಹಾನುಗಲ್ಲು |
| ಹಾವೇರಿ. | ಹಾವೇರಿ |
| ಹಾಸನ. | ಹಾಸನ |
| ಹಿರಿಯೂ. | ಹಿರಿಯೂರು |
| ಹುಣಸೂ. | ಹುಣಸೂರು |
| ಹೆಗ್ಗಡ. | ಹೆಗ್ಗಡದೇವನ ಕೋಟೆ |
| ಹೊನ್ನಾಳಿ. | ಹೊನ್ನಾಳಿ |
| ಹೊಸಕೋ. | ಹೊಸಕೋಟೆ |
| ಹೊಳಲ್ಕೆ. | ಹೊಳಲ್ಕೆರೆ |
| ಹೊಳೆನ. | ಹೊಳೆನರಸೀಪುರ |

### ಕನ್ನಡ ಸಾಹಿತ್ಯ ಪರಿಷತ್ತಿನ

### ಕನ್ನಡ ನಿಘಂಟು

| ಸಂಪುಟ | ಬಿಡುಗಡೆಯಾದ ವರ್ಷ | ಪುಟಗಳು | ಶಬ್ದಗಳು |
|---|---|---|---|
| ೧. | ೧೯೭೦ | ೧-೧೩೨೨ | ಅ - ೦೦ (ಉಪಧ್ಮಾನೀಯ). |
| ೨. | ೧೯೭೬ | ೧೩೨೩-೨೪೭೪ | ಕ - ಗಾಢಿಕೆ. |
| ೩. | ೧೯೭೭ | ೨೪೭೫ - ೩೪೮೨ | ಗಾಢಿಸು - ತಿಮಿರ್$_1$. |
| ೪. | ೧೯೭೯ | ೩೪೮೩ - ೪೪೯೦ | ತಿಮಿರ್$_2$ - ನಾಭಿ. |
| ೫. | ೧೯೮೮ | ೪೪೯೧ -೫೪೭೧ | ನಾಭಿಕಮಲ - ಪಟ್ಟಿಟನೆ. |
| ೬. | ೧೯೯೦ | ೫೪೭೨ - ೬೪೮೦ | ಪಾಲುಗ್ಗಮಣ - ಬಿಲ್ಲ$_1$. |
| ೭. | ೧೯೯೩ | ೬೪೮೧ - ೭೭೪೭ | ಬಿಲ್ಲ$_2$ - ಲೌಹಿತ್ಯ. |
| ೮. | ೧೯೯೫ | ೭೭೪೮ - ೯೦೨೧ | ವ - ಟೂಂತ. |

# ವ

ವ₁ (ನಾ). ೧. ಕನ್ನಡ ವರ್ಣಮಾಲೆಯ ನಲವತ್ತೊಂಬತ್ತನೆಯ ಅಕ್ಷರ ; ಅವರ್ಗೀಯವ್ಯಂಜನದ ನಾಲ್ಕನೆಯ ಅಕ್ಷರ : ಕಂಠೋಷ್ಠ್ಯ- ಔ . . . ದಂತೋಷ್ಠ್ಯ-ವ (ಶ್ರಪಿಪಿ. ೫). ೨. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ: "ಘ ಥ ಭ ವಂ ನೆಜೆ ನಾಲ್ಕು" (ಮಂಗರಾ. ೧೦೪-೧೦).

ವ₂ (ಅ). ೧. ಅಥವಾ ; ಇಲ್ಲವೆ : ಒಂದು ರೇಖೆಯಿಂದ ಸುತ್ತಲ್ಪಟ್ಟು ಇರುವ ಪ್ರದೇಶವನ್ನು, ವ ಕ್ಷೇತ್ರವನ್ನು ವರ್ತುಳ, ಪರಿಧಿ - ವ - ವೃತ್ತವೆಂದು ಹೇಳುವುದು (ಭೂಮಿಅ. ೯); ಇಂಡಿಯಾ ಮೈಸ್‌ರಾಯಿ ವ ಗವರ್ನರ್‌ಜನರಲ್‌ಯವರಿಂದ ಮಂಜೂರ್ ಮಾಡಲ್ಪಟ್ಟು (ಗ್ರಾಮಾಕ.೪ ಪೀಠಿಕೆ). ೨. ಮತ್ತು ; ಜೊತೆಗೆ : ಅಲ್ಲಿ ಅಮಲುಮಾಡುವಂಥ ವ ಪಾರುಪತ್ಯಮಾಡುವಂಥ ವ ಮೊಕಸ್ತರು (ರಾಜೇಂದ್ರ. ೧೨೫).

[< ಪ್ರಾ. ವಾಅ. / ಸಂ. ವಾ. / ಅರ. ಮರಾ. ವ]

-ವ₃ (ಪ್ರ).ಒಂದು ಕೃದಂತ ಭಾವವಾಚಕ ಪ್ರತ್ಯಯ : 'ಒಡ್ಡವ' ಪರಾ.

ವಂಕ₁, ಬಂಕು₂, ಬಂಕೆ₂, ವಂಕು (ನಾ). ೧. ಡೊಂಕು; ಕೊಂಕು ; ವಕ್ರ : ವಕ್ರ-ವಂಕ (ಶಬ್ದಾನು. ೬೦ ಪ್ರಯೋ). ೨. ನೀರಿನ ಹರಿವು , —ಪ್ರವಾಹ : ಮನದಾತಂಕವನು ಪರಿಹರಿಸಿ ಮುನ್ನಿನ ವಂಕದಲಿ ಮುಳುಗಿದವನೆದ್ದನು (ನಿಭಾಗ. ೯-೧೬-೪೬). ೩. ಅಗಸೆ ಬಾಗಿಲು ; ಹೆಬ್ಬಾಗಿಲು : ಎತ್ತ ಸುತ್ತಿ ಬಂದಡೂ ವಂಕದ ತಪ್ಪಲಿನಲ್ಲಿ ಹೋಗಬೇಕು (ಮೋಕ್ಷಮಾ. ೧೫೫-೫೮೪); ಕಲಿ ಘಟೋತ್ಕಚ ನೋಡಿ ಬಾಗಿಲೊಳಗಿಪ್ಪಗಳ ಪಡಿಮುಖವ ದಾಂಟಿದನು ವಂಕಮಂ (ತುರಂಗ. ೧೯-೫೦). ೪. ದಾರಿ ; ಮಾರ್ಗ : ಕೋಟೆಯಿದ್ದುದು . . . ಘೋಟಕದ ಮದಕರಿಯ ಕಂಡಿಯ ದಾಟುಗಳ ಹುಲಿಮುಖದ ವಂಕದ ಕೂಟದುರುಶಾಲಾವಿಲಾಸದ ವಿವಿಧ ರಚನೆಯಲಿ (ತೊರರಾ. ೫-೨-೪). ೫. "ಕೋಡು ಬಾಗಿದ ಎತ್ತು" (ಜಾನಕೋ. ೪೪). ೬. ಕುದುರೆಯನ್ನು ಏರುವಾಗ ಮತ್ತು ಸವಾರಿ ಮಾಡುವಾಗ ಕಾಲನ್ನಿಡಲು ಜೀನಿಗೆ ಅಳವಡಿಸಿರುವ ಬಳೆ ; ರಿಕಾಪು: ಹಿಡಿದ ವಾಘೆಯ ಸಡಿಲಿಸಿ ಮದದಿಂದುಬ್ಬಿ ಒಡನೆ ವಂಕವ ಮೆಟ್ಟಿ ನಿಂದು ಕಡುಗಲಿ ತುರಗಾರೋಹಕರೇಜಿದ ಕಡುಹನನ್ನೇನೆಂಬೆನದನು (ಅನಂಚ. ೨೪-೨೯). ೭. (?) : ವಿಳಸಿತ ವಿಯತ್ತಳಂ ಕೊತ್ತಳಮಧಟರ ಗಂಡಗುಂಡಕಟ್ಟಳೆ ಮುಗಿಲಟ್ಟಳೆ ಪಗೆವರಾಳ್ವರೆ? ಬೀಳ್ವಳೆ ಬಗೆದಾಳ್ವರೆ ಮೆಚಿದುವರಿವಿಟಂಕಂ ವಂಕಂ (ಪುಷ್ಪವೃ. ೭-೭೦). ಬಂಕು₂ : ೧. 'ಬಂಕೋಲು' ಪರಾ. ೮. ಒಂದು ಬಗೆಯ ಆಯುಧ : ಖಡ್ಗ . . . ಬಂಕು . . . ಜವದಾಡೆಯೆಂಬ ಬತ್ತೀಸಾಯುಧಪಾಣಿಗಳಾದ ಘನದೇವತೆಗಳಿರ್ಕುಂ (ವಿವೇಕ. ೨೧೪); ಕಯ್ಯು ಮುಟಿಯೆ ಕಯ್ಯ ಹರಿಗೆಯ ತೆಗೆದಿಟ್ಟು ಬಯ್ಯು ಮೂದಲಿಸಿ ಬಂಕಿನೊಳು ಕಾಯ್ದಿಚಿದಿಳಿಯಲು (ಕುರಾಸಾಂ. ೧೨-೬೮). ೯. ಒಂದು ಬಗೆಯ ಆಭರಣ ; ವಂಕಿ : ರನ್ನದ ಬಂಕು, ವಜ್ರದ ಪೆಂಡೆಯ, ಕಂಕಣ ಮೊದಲಾದ ಬಗೆಬಗೆಯಾದ ನಗಗಳು ಅವನ ಮೈಮೇಲೆ ಝಗಝಗಿಸುತ್ತಿದ್ದುವು (ಕುಮಾಸಾಂ. ೩೬೦). ಬಂಕೆ₂ : ೧೦. ಕೊಕ್ಕೆ ; ಕೊಂಡಿ : ದಾರ ಪೋಣಿಸಿ ಇದನ್ನು ಆ ಬಂಕೆಗೆ ತೂಗ ಕಟ್ಟಿರಿ (ಮುಂಬಯಿ. ೫-೫೩). 'ವಂಕಿ' ಪರಾ. ವಂಕು : ೧. ತೆರೆಗಳ ಏರಿಳಿತದಲ್ಲಿ ಕಾಣುವ ವಂಕು . . . ಒಂದು ಬಗೆಯ ರೂಪರುಚಿಯನ್ನುಂಟುಮಾಡಿವೆ (ಸೌಂದಸ. ೨). 'ಕೊಂಕುವಂಕು' ಪರಾ. [< ಪ್ರಾ. ವಂಕ./ ಸಂ. ವಂಕ, ವಕ್ರ]

ವಂಕ₂ 'ಪಕ್ಕ' ನೋ.

ವಂಕದರ 'ವಂಕದಾರ' ನೋ.

ವಂಕದಾರ, ವಂಕದರ, ವಂಕಬಾರ (ನಾ). (ಕೋಟೆ ಮುಂತಾದುವುಗಳ ಹೆಬ್ಬಾಗಿಲಿನ ಸಮೀಪದಲ್ಲಿ ಮಾಡಿರುವ) ಚಿಕ್ಕ ಬಾಗಿಲು ; ಸಾರ್ವಜನಿಕರ ಉಪಯೋಗಕ್ಕಲ್ಲದ ಖಾಸಗಿ ಬಾಗಿಲು ; ಪಕ್ಷದ್ವಾರ : "ವಂಕದರಂ, ವಂಕದಾರಂ, ವಂಕಬಾರಂ - ಈ ೩ ವಕ್ರದ್ವಾರಕ್ಕೆ ಪೆಸರ್" (ಕಶಸಾ. ೫೯-೩೦೦); ಬಗ್ಗವಳ್ಳಿಯ ಬಳ್ಳಿಗಾವಣದೋಳಿಯಿಂ ಸೊಗಯಿಪ್ಪ ಸಮ್ಯಗ್ಗವಾಕ್ಷದ ವಂಕದಾರದ . . . ನಿವೇಶದೊಳ್ . . . ಸುಖಮಿರ್ಪನಂ (ಶಾಂತಿಪು. ೫-೭೯); ವಕ್ರದ್ವಾರ - ವಂಕದರ, ವಂಕದಾರ, ವಂಕಬಾರ (ಶಮದ. ೨೯೬ ಪ್ರಯೋ). ವಂಕದರ : ಕೋಂಟೆಗಾವಗಂ ಕೆಡಪುವ ಗಗ್ಗೆ ವಂಕದರದಿಂ ಪೊಱಮಟ್ಟಲಿವಾಳ್ಗಮಾನ್ಕೆಯಾಳ್ ಗಡಣಿಸೆ ಕಾದುತಿರ್ದುದು ಮಹೇಂದ್ರಪದಾತಿEತಾಕಿತೆನಿ ಮುತ್ತಿ ಸುತ್ತಲುಂ (ಚಂದ್ರಪ್ರ. ೫-೧೦೬); ಇನಿಯಂ ತಾಳ್ದಿದನೆಂದು ವಂಕದರದೊಳ್ನಿಂದಾರಯಲ್ಕಲ್ಲಿ ಬರ್ಪಿನೆಗಂ . . . ಚುಂಬಿಸಿ ಬಳಿಕ್ಕಂತಾತನಂ ಕೂಡಿದಳ್ (ಲೀಲಾವ. ೬-೧೦೯). ವಂಕಬಾರ : ವಕ್ರದ್ವಾರ — ವಂಕದರ, ವಂಕದಾರ, ವಂಕಬಾರ (ಶಮದ. ೨೯೬ ಪ್ರಯೋ); ವಂಕದರಂ, ವಂಕದಾರಂ, ವಂಕಬಾರಂ (ಶಬ್ದಾನು. ೩೬೮ ಪ್ರಯೋ). IP ಸಂಸ್ಕೃತದ 'ಪಕ್ಷ' ಮತ್ತು 'ವಕ್ರ' ಎಂಬ ಎರಡು ಶಬ್ದಗಳಿಗೂ 'ವಂಕ' ಎಂದು ತದ್ಭವವಾಗುವುದರಿಂದ ಅರ್ಥನಿರ್ಧಾರದಲ್ಲಿ ವ್ಯತ್ಯಾಸವಾಗಬಹುದು. ಸಂಸ್ಕೃತ ಸಾಹಿತ್ಯದಲ್ಲಿ 'ಪಕ್ಷದ್ವಾರ' ಎಂಬುದು ಅನೇಕ ಕಡೆಗಳಲ್ಲಿ ಬರುವ ಸಮಾಸ. ಆದರೆ 'ವಕ್ರದ್ವಾರ'ಕ್ಕೆ ಉಲ್ಲೇಖಗಳು ಸಿಕ್ಕಿಲ್ಲ.

[< ಸಂ. ಪಕ್ಷದ್ವಾರ]

ವಂಕಬಾರ 'ವಂಕದಾರ' ನೋ.

ವಂಕವಾಗಿಲು (ನಾ). = ವಂಕದಾರ : ಹುಲಿಮೊಗ ವಂಕವಾಗಿಲು ಕೋಟೆ ಕೊತ್ತಳ ಸಲಿಲಪೂರಿತದ ಪೇರಗಳು ನಲಿನಾಯತಾಕ್ಷಿ ನೋಡುತೆ ಬಂದಳು ಶಿವನೊಲಿದಿರ್ದ ನಂದನದೆಡೆಗೆ (ಮೋಹತ. ೨೪-೨೯). [ವಂಕ₂ (< ಪಕ್ಕ) + ಬಾಗಿಲು (< ಬಾಗಿಲ್)]

ವಂಕಿ, ಬಂಕಿ (ನಾ). ೧. (ವಸ್ತ್ರ, ವಸ್ತು ಮುಂತಾದುವನ್ನು) ತೂಗುಹಾಕಲು ಅಥವಾ ಹಿಡಿದುಕೊಳ್ಳಲು ಅನುಕೂಲವಾಗುವಂತೆ ತುದಿ ಅಥವಾ ಕೊನೆಯನ್ನು ಬಗ್ಗಿಸಿದ ಲೋಹದ ಕೊಂಡಿ , —ಕೊಕ್ಕೆ: ಉಷ್ಣಕಾಲದಲ್ಲಿ ಉಪಯೋಗಿಸುವ ಬಾಳದ ಬೇರಿನ ಪರದೆಗಳನ್ನು ಸುತ್ತಿ, ಮೇಲೆ ಕಬ್ಬಿಣದ ವಂಕಿಗೆ ತಗಲಿಸಿದ್ದಾರೆ(ಮಂಜುಕ. ೪);ಕಟ್ಟಿಗೆಗಳ ತುದಿಗಳಿಗೆ ನೂಲಿನ ಹಗ್ಗಗಳನ್ನು ಕಟ್ಟಿ ಅವುಗಳನ್ನು ಡವಿಕೆಯ ವಂಕಿಗಳಿಗೆ ತೂಗಹಾಕುವರು (ಕಭಾಗ. ೫೭). ೨. ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ ; ತೋಳುಬಂದಿ ; ಕೇಯೂರ : "ಕೇಯೂರಂ, ಅಂಗದಂ — ೨ ಬಾಹುಪುರಿ ಹೆಸರು, ನಾಗಮುರಿಗೆ, ತೋಳುತೊಡಿಗೆ, ಬಾಜೂಬಂದು, ವಂಕಿ" (ಸಿದ್ಧಾಂತಿ. ೨೦೦); ರತ್ನದ ವಂಕಿ ನಾಗಮುರಿಗಳಂ ಧರಿಸಿ (ಸೌಗಂಧಿ. ೮೮-೧೪). ೩. ಮೀನುಹಿಡಿಯುವ ಗಾಳ: ಎರೆಯ ವಂಕಿಯೊ ಕಳೆತ ಮೆಕ್ಕೆಯೊ ಹುರಿಯ ಬಲೆಯೋ . . . ಬಳಕೆಯನೀ ಸಮಂಜಸತರದ ಸಾತ್ವಿಕರೆತ್ತ ಬಲ್ಲರು (ಕುವ್ಯಾಅ. ೮-೭೬). ೪. (ಸುಗಂಧದ್ರವ್ಯಗಳನ್ನು ಇರಿಸುವ) ಕೊಂಬಿನಂತೆ ಬಾಗಿರುವ ಒಂದು ಬಗೆಯ ಭರಣಿ : ಜವಾದಿಯ ವಂಕಿ ಪೊಡರ್ವ ಗಂಧದ ಸಿಪ್ಪು ಕರ್ಪುರದ ನಾಳಿಗಳ ಹಿಡಿದೊಡನೆ ನಡೆದರೊಲಿದು (ಪದ್ಮರಾ. ೮-೭) ; ಜವಾದಿಯ ವಂಕಿ ಕರ್ಪೂರದಿಂದಾದ ತೈಲದ ಕುಪ್ಪಿಗೆಗಳಾ ಗೃಹದೊಳು ಬಿಡಿಬಿಡಿಯಾಗಿಹವು (ಅಂಜಚ. ೩-೧೦೬).೫. ಸುಗಂಧದ್ರವ್ಯಗಳನ್ನು ತೂಕಮಾಡಲು ಬಳಸುವ ಒಂದು ತೂಕ, —ಪ್ರಮಾಣ : ತೂಕಕಟ್ಟಣೆಗೆ . . . ಒಪ್ಪುವ ಜವ್ವಾಜಿಗೆ ವಂಕಿ (ವ್ಯವಹಾ. ಅನುಬಂಧ. ೧, ೩-೧೬). ೬. (ಮೇದರು ಬಳಸುವ) ಒಂದು ಬಗೆಯ ಬಾಗಿದ ಕತ್ತಿ: "ವಂಕಿಯೆನೆ ದೀವಿ ಮೇದರ ಕತ್ತಿಯಕ್ಕು" (ಮಂಗರಾ. ೧೧೩-೮). ೭. ಬಾಗಿರುವ ಒಂದು ಬಗೆಯ ಆಯುಧ : ತುಂಡಿಸುವ ವಂಕಿಯ ನೆಡುವ ಬಲ್ಲೆಹದ ಸೀಳುವಿಟ್ಟಿಯ . . . ಧಾಳಾಧೂಳಿ ಮಸಗಿತು ಮತ್ತೆ ಕರ್ಣನ ರಥದ ಬಳಸಿನಲಿ (ಕುವ್ಯಾಕ. ೧೧-೯); ಪಾಶದಂಕುಶದ ವಂಕಿಯ ಲೌಡಿಯ ಜವದಾಡೆಯ . . . ಪೊಡರ್ಪು ಪಡಿತಳಿಸೆ (ರಾಜಶೇ. ೬-೧೧ ವ). ೮. (ಹೆಂಗಸರು ಬಳಸುವ) ಸಂತಾನನಿರೋಧದ ಒಂದು ಸಾಧನ : ಮಿತಸಂತಾನಯೋಜನೆಯಲ್ಲಿ ಹೆಂಗಸರು

ವಂಕಿ ಧರಿಸುವುದನ್ನು ಜನಪ್ರಿಯಗೊಳಿಸಲಾಗಿದೆ (ರೂಢಿ). ಬಂಕಿ : ೭. ಬಂಕಿಯಂ ತೂಗಿ ತೇಂಕುತ್ತುಂ ಪರಿವ ವೈರಿವೀರರುಮಂ ಮುದ್ಗರಮಂ ತಿರಿಪಿ ಪರಿವ ಮುದ್ಗರಗಲಿಗಳುಮಂ . . . ಕಂಡು (ಲೀಲಾವ. ೫-೧೧೪ ವ).

ವಂಕಿಯ ಕಸವ = ಒಂದು ಬಿರುದು (?) : ಪರಬಲ ಸೂಱೆಗಾಱನು ಮುಸ್ಸಿಡಿಯ ತಿಮ್ಮ ಧುರಧೀರ ವಂಕಿಯ ಕಸವ ಕರಡಿಯ ಕಾಟ ಬಿರಿದಿನ ಸಂಗಮನೆಂಬ ವರಸುಭಟರ ಕಳುಹಿದನು (ಕುಮಾರಾಂ. ೧೯-೬೨). IP 'ಕಸವ' ಎನ್ನುವುದು ಪ್ರಸಿದ್ಧ ವೀರನೊಬ್ಬನ ಹೆಸರಾಗಿರಬಹುದು. [ದೇ. ‖ ತಮಿ. ವಙ್ಕಿ; ಮಲ. ವಂಕಿ; ತುಳು. ವಂಕಿ, ಉಗ್ಗಿ, ಒಗ್ಗಿ; ತೆಲು. ವಂಕಿ, ಒಂಕೆ./ ಸಂ. ವಕ್ರಿನ್]

ವಂಕಿಮ (ಗು). ಬಾಗಿರುವ ; ಕೊಂಕಿರುವ : ಸಾಗರದ ನಾಗರನ ಭೋಗರೇವ ಭೋಗಕುಲಬಲಮವ್ವಳಿಸಿದುದು ನಿರಂತರಂ, ತಟಗತ ಅಶೋಕವನ ವಂಕಿಮ ಶಿಲಾವೇಲೆಯಂ (ಶ್ರೀರಾಮಾ. ೩೩೧-೪). [< ಪ್ರಾ. ವಂಕಿಮ./ ಸಂ. ವಕ್ರಿಮನ್]

ವಂಕು 'ವಂಕ$_1$' ನೋ.

ವಂಕುಡಿ, ಬಂಕುಡಿ (ನಾ). ೧. ಬಾಗಿರುವುದು; ಡೊಂಕಾದುದು; ಸೊಟ್ಟಗಾದುದು. ೨. ಬಾಗಿದ ಅಲಗುಳ್ಳ ಕತ್ತಿ; ಕಠಾರಿ; ಬಾಕು: "ಮುಕ್ಕಂಬಿಯ ಕಠಾರಿ ವಂಕುಡಿಗಳಕ್ಕುಂ" (ಮಂಗರಾ. ೮೮-೩೭); ಉಡೆಯೊಳು ಕಟ್ಟಿದ ವಂಕುಡಿ ಕಯ್ಯೊಳು ಪಿಡಿದ ಸಬಳ ಕಾಲ ತೊಡರು ಬಿಡದೆ ಮೆಱೆಯೆ (ಕುಮಾರಾಂ. ೧೨-೬೪). ಬಂಕುಡಿ : ೧. 'ಬಂಕುಡಿಗಾಲು' ಪರಾ. ೨. ಬೀರಗಚ್ಚೆಯನಮರ್ಚಿ ಬಂಕುಡಿಯಂ ಕಟ್ಟಿ . . . ಆ ಮೂವರುಂ ಗೃಹಮಂ ಪೊಱಮಟ್ಟು ರಾಜವೀಧಿಯೊಳ್ಸರಭಸಂ ಬರ್ಪಾಗಳ್ (ವೃಷವಿ. ೪೨-೨೧ ವ). 'ವಂಕಿ' ಪರಾ. [< ಪ್ರಾ. ವಂಕುಡ, ವಂಕುಣ./ ತೆಲು. ವಂಕಿಣಿ]

ವಂಕ್ಷಣ (ನಾ). ಕಿಬ್ಬೊಟ್ಟೆಯ ಕೆಳಭಾಗಕ್ಕೂ ತೊಡೆಯ ಮೇಲ್ಭಾಗಕ್ಕೂ ನಡುವೆ ಇರುವ ಭಾಗ; ತೊಡೆಯ ಸಂದು: "ತೊಡೆಯ ಸಂಧಿ ವಂಕ್ಷಣವೆಂಬುದು" (ಹಲಾಯು. ೬೬-೩೬೯). [ಸಂ.]

ವಂಖಿಣ (ನಾ). = ವಂಕ್ಷಣ : ಶಕ್ತಿಶಿವನಿಯಾ ಮುಷ್ಕದ ತಕ್ಕೆಡೆ ವಂಖಿಣಮದೆಂಬ ಪೆಸರದಕಕ್ಕುಂ (ಅಶ್ವಶಾ. ೯-೪೯). [< ಸಂ. ವಂಕ್ಷಣ]

ವಂಗ (ನಾ). ೧. ಒಂದು ಬಗೆಯ ಲೋಹ ; ತವರ ; ತ್ರಪು : ವಂಗ ಮಾಕ್ಷಿಕ ಹೇಮಲೋಹಂಗಳನೆಲ್ಲ ಹಿಂಗದೆ ಸಮಭಾಗೆ ಮಾಡಿ (ಸಾಳ್ವಸಾಂ. ೨೦). ೨. ಸೀಸಲೋಹ. ೩. ಬಂಗಾಳಪ್ರಾಂತ ಮತ್ತು ಆ ಪ್ರಾಂತಕ್ಕೆ ಸೇರಿದ ವ್ಯಕ್ತಿ : ಅಂಗ ವಂಗ ಕಳಿಂಗ . . . ತುರುಷ್ಕ ಪ್ರವರ ನಾನಾದ್ವೀಪದೇಶಾಧೀಶ್ವರರುಂ . . . ಕೂಡಿ ನಡೆಯೆ (ಪಂಪಭಾ. ೯-೯೫ ವ); ವಂಗರ ಮುರಿದು ವರನೇಪಾಳ ಕರ್ಪರ ಹೂಣಿಯರನು ವಿಶಾಲ ಕಾಂಭೋಜಾದಿಗಳನಪ್ಪಳಿಸಿದನು ತಿರುಗಿ (ಕುವ್ಯಾಸ. ೩-೨೭). ೪. ಹತ್ತಿ. ೫. ಬದನೆ ಗಿಡ. [ಸಂ.]

ವಂಗಡ, ಪಂಗಡ (ನಾ). ೧. ಗುಂಪು ; ಸಮೂಹ : "ಬಂಬಲ್, ತುಱುಗಲ್, ವಂಗಡಂ . . . ಗುಮ್ಮಿ, ಗೊಂದಣಿ (ಉಂದಲ್) — ಈ ೪೦ ಸಮೂಹಂ" (೯೯ನಾ. ೫೬-೨೨೨); ಮನುಗಳ ವಂಗಡದ ಮುನಿಗಳ ಗೊಂದಣದ ಸುರರ ನೆರವಿಯ . . . ರಥಪ್ರತಾನದ ಪದಾತಿಬಲದಿರ್ಕೆಲದೊಳ್ (೧೦೫. ೧೦-೭೯ ವ); ವಂಗಡದಲೆಂಬತ್ತು ಸಾವಿರ ತುಂಗಗಜಘಟೆ ಕವಿದವು (ಕುವ್ಯಾದ್ರೋ. ೨-೭೮). 'ಒಗ್ಗಡ' ಪರಾ. ೨. ಬೇರೆಯಾದುದು ; ಪ್ರತ್ಯೇಕವಾದುದು : 'ವಂಗಡದೆಗೆ' ಪರಾ. ಪಂಗಡ: ೧. ನಡೆವಡವಿಯೋ ಬಲುಭುಜರ ಪಂಗಡವೊ ಸಬಳವೊ ನಭದ ಕಾಲ್ಗಳೊ . . . ಎನಲಾದುದು ಕುತೂಹಲಿಕೆ (ಕುವ್ಯಾಭೀ. ೪-೪೧). ೩. (ವರ್ಣ, ಮತ, ರಾಜಕೀಯ ಮುಂತಾದ ಕಾರಣಗಳಿಂದ ಬೇರೆ ಬೇರೆಯಾದ) ಜನರ ಗುಂಪು,—ವರ್ಗ: ಇವರಿಗೆ ಅರಿಯದಂತೆ ಆ ವರ್ಗದಲ್ಲಿ ಎರಡು ಪಂಗಡಗಳಾಗಿಬಿಟ್ಟವು (ರಂಗರೋ. ೨೯); ಒಂದು ಪಂಗಡದ ಪುರೋಹಿತ ಅಥವಾ ನಾಯಕನು ಸಾಧಾರಣವಾಗಿ ಖಗೋಳ ಶಾಸ್ತ್ರಜ್ಞನಾಗಿರುತ್ತಿದ್ದನು (ತತ್ವಪ್ರಾ. ೪೮೦).

ಪಂಗಡವಾಗು = ಬೇರೆಯಾಗು ; ಪ್ರತ್ಯೇಕತೆಯನ್ನು ಹೊಂದು : ಪಂಗಡವಾದವ ಸಂಗಡ ಬಂದಾನೆ? (ಗಾದೆ).

[ದೇ. ‖ ತಮಿ. ವಙ್ಕಟ, ವಙ್ಕಿಟ; ತುಳು. ಪಂಗಡ; ತೆಲು. ವಂಗಡ, ವಂಗಸ]

ವಂಗಡದೆಗೆ (ಕ್ರಿ). ಪ್ರತ್ಯೇಕವಾಗು ; ಬೇರೆಯೆಂದು ಭಾವಿಸು : ಆದಿಲಿಂಗವೆಂಬುದು ಬೇಱಿಲ್ಲ ಕಾಣಿರೊ ವಂಗಡದೆಗೆದು ನೀವು ನುಡಿವಿರಿ ಭೋ (ಅವಚಂ. ೨೮೨-೧೨೫೫); ವಂಗಡದೆಗೆದು ನೀವು ನುಡಿಯದಿರಿ (ಪದಗೋ. ೨-೧೬೭). [ವಂಗಡ + ತೆಗೆ$_1$]

ವಂಗಡಿಸು (ಕ್ರಿ). ೧. ಗುಂಪುಗೂಡು ; ಸಂದಣಿಸು : ಈತನೇ ನಮಗರ್ಜುನನು ಕೊಳ್ಳೀತನನು ಹೊಯ್ ಹೊಯ್ಯೆನುತ ಗತಭೀತರಿಟ್ಟಣಿಸಿದರು ಸಮಸಪ್ತಕರು ವಂಗಡಿಸಿ [ಪಾಠಾಂ. ಸೂರಿಯಲಿ] (ಕುವ್ಯಾಕ. ೧೫-೧೮); ಮಧುಸೂದನನ ವಿರಹದಲಿರ್ದರಾ ಗೋಪಿಯರು ವಂಗಡಿಸಿ (ಅಕ್ರೂಚ. ೫-೩). ೨. ಪ್ರತ್ಯೇಕವಾಗಿರಿಸು ; ಬೇರೆ ಮಾಡಿಡು : ವಂಗಡಿಸಿದ ಭೋಜ್ಯವಸ್ತುನಿವಹಂ ಬೞಿದಪ್ಪಿನಮಲ್ಲಿ ವಿಸ್ಮಯಂಬಡೆ ಸಕಲಾಮರರ್ ಸವಿದನಾ ಗಣಬಾಲಕನಾತ್ಮಲೀಲೆಯಿಂ (ವೃಷವಿ. ೫-೮೫).

[ವಂಗಡ + — ಇಸು$_1$]

ವಂಗಭಸ್ಮ (ನಾ). ರಾಸಾಯನಿಕಕ್ರಮದಿಂದ ಸುಟ್ಟು ತಯಾರಿಸಿದ ತವರದ ಪುಡಿ; ತವರದ ಭಸ್ಮ : ವಂಗಭಸ್ಮ, ಜಾಗಗೆಡ್ಡೆ, ಮಂಗರವಳ್ಳಿಬೇರು, ಇವು ಪ್ರತ್ಯೇಕ ೨ ಹಲ ಸಹ ಇವೆಲ್ಲವಂ ಚೂರ್ಣಿಸಿ . . . ತೆಗೆದುಕೊಳ್ಳೆ . . . ಕ್ಷಯಜ್ವರ, ಕ್ರಿಮಿರೋಗ ಮುಂತಾಗಿ ಮಾಣ್ಗುಂ (ಸಕವೈ. ೨೯೭). [ಸಂ.]

ವಂಚ 'ಬಂಚ' ನೋ.

ವಂಚಕ (ಗು). ೧. ಮೋಸಮಾಡುವ ; ವಂಚಿಸುವ ; ಕಪಟತನದ. (ನಾ). ೨. ಮೋಸ ಮಾಡುವವನು ; ಕಪಟಿ : ಕರ್ಮಕಾಂಡ ಭಕ್ತಿಕಾಂಡ ಜ್ಞಾನಕಾಂಡ ಇಂತೀ ತ್ರಿವಿಧದಲ್ಲಿ ವಂಚಕನಾದರೆ ಈಸು ವಿಧದೊಳಗೆ ಅಂಗವಿಲ್ಲ ಮೇಲೆ ಸತ್ಪುರುಷರ ಸಂಗವಿಲ್ಲ (ಬಸವ. ೮೮೮); ಇದಿರುಗಾಣದೆ ಕೊಲೆಗೆ ನಿರ್ಬಂಧದಲಿ ಬೆಸಸುವ ಕೃಷ್ಣನಕಟಾ ಮದಮುಖನೊ ದುರ್ಬೋಧಕನೊ ವಂಚಕನೊ (ಕುವ್ಯಾಭೀ. ೩-೨೮). ೩. ನರಿ ; ಜಂಬುಕ : "ಶಿವಾ . . . ವಂಚಕಃ, ಕ್ರೋಷ್ಟುಃ, ಫೇರುಃ, ಫೇರವಃ, ಜಂಬುಕಃ — ೧೦ ನರಿಯ ಹೆಸರುಗಳು" (ಸಿದ್ಧಾಂತಿ. ೧೫೪). ೪. ಒಂದು ಜಾತಿಯ ಮುಂಗುಸಿ. ೫. ಒಂದು ಜಾತಿಯ ಇಲಿ ; ಮೂಗಿಲಿ. [ಸಂ.]

ವಂಚಕಿ (ನಾ). ಮೋಸಮಾಡುವವಳು ; ವಂಚಿಸುವವಳು : ದುರುಳೆಯರು ಕಷ್ಟೆಯರು ವಂಚಕಿಯರು ಜಗಳಗಂಟಿಯರು (ಬಸವು. ೪೦-೫೩). [ವಂಚಕ + — ಇ$_2$]

ವಂಚನ (ನಾ). ೧. ಮೋಸ ; ಕಪಟ ; ಮೋಸಗಾರಿಕೆ : "ವಂಚನಂ, ಅತಿಸಂಧಾನಂ, ವ್ಯಳೀಕಂ, ಪ್ರತಾರಣಂ — ಈ ೪ ಆಟಿಗೊಳ್ವುದು" (ಹಲಾಯು. ೧೨೩-೬೩). ೨. ಭ್ರಮೆಗೊಳಿಸುವುದು ; ಭ್ರಾಂತಿಯನ್ನುಂಟುಮಾಡುವುದು. ೩. ಅಡ್ಡಿ ; ತಡೆ ; ಪ್ರತಿಬಂಧ. [ಸಂ.]

ವಂಚನೆ (ನಾ). ೧. = ವಂಚನ ೧: "ಮಾಂಚನೆ ವಂಚನೆ" (ಕವಿಕಂ. ೨೧೦); ಅರ್ಥ ಪ್ರಾಣಾಭಿಮಾನದಲ್ಲಿ ವಂಚನೆಯಿಲ್ಲದ ಭಕ್ತಿ ಸಮಯಾಚಾರ (ಬಸವ. ೨೧೭); ಪಳಿವು ವಂಚನೆ . . . ವಿಕೃತಮಾಯಾವಳಿಗಳೆಂಬಿವು ನಿನ್ನೊಳಿಲ್ಲಲೆ ರಾಯ (ಕುವ್ಯಾಸ. ೦-೪೫). ೨.= ವಂಚನ ೨ : ಚಳಬಳಿಕೆ ಚಪ್ಪರಣೆ ವಂಚನೆ ನೇಹವೆಂಬೀ ಪರಿಯ ಮಾಯಾಮಯದ ಮಹಿಳಾಜನ ವಿರಾಜಿಸಿತು (ತೊರರಾ. ೧-೫-೩೨). [ಸಂ. ವಂಚನಾ]

ವಂಚನೆಗಾತಿ (ನಾ). = ವಂಚಕಿ : ವೃಶ್ಚಿಕದೊಳನ್ಯಾಯ ವಂಚನೆಗಾತಿ ಸಲೆ ಧನುವಿನೊಳು ಗಾಡಿಕಾರ್ತಿ (ಶೀಶೈಪು. ೪-೨೧-೨೨). [ವಂಚನೆ + — ಕಾತಿ]

ವಂಚನೆಗಾರ (ನಾ). ಮೋಸಮಾಡುವವನು ; ಕಪಟಿ : ಅವನೊಬ್ಬ ವಂಚನೆಗಾರ (ರೂಢಿ). [ವಂಚನೆ + — ಕಾರ$_1$ (< — ಕಾಱ)]

ವಂಚನೆಗೈ (ಕ್ರಿ). ಮೋಸಮಾಡು ; ವಂಚಿಸು : ಕ್ಷಿತಿಯೊಳಾರುಂಟೆನ್ನವೋಲ್ ನಿಜಸತಿಗೆ ವಂಚನೆಗೈದ ನರನೆಂದತಿಶಯದ ಶೋಕದಲಿ ನಡೆದನು (ನಳಚ. ೬-೩).

[ವಂಚನೆ + ಗೈ (< ಕೆಯ್$_1$)]

ವಂಚಿ (ನಾ). ೧. ಬಿದಿರಿನಿಂದ ರಚಿತವಾದ ಒಂದು ಬಗೆಯ ವಾದ್ಯ; ಕೊಳಲು. ೨. ಕೊಳಲನ್ನು ನುಡಿಸುವವನು ; ವೇಣುವಾದಕ : ವಂಚಿ ದುಗ್ಗಯ್ಯಂಗೆ ಮತ್ತರೊನ್ದು ಕಲುಕುಟಿಗ ಮಾರಸಿಂಘೋಜಂಗೆ ಮತ್ತರ್ನಾಲ್ಕು (ಸೌಇಇ. IX - i, ೮೭-೨೩; 1034). [< ಸಂ. ವಂಶೀ]

ವಂಚಿಗ (ನಾ). = ವಂಚಿ ೨ : ವಂಚಿಗಂಗಂ ಪಟಿಕಾಱಙ್ಗಂ ಪಾತ್ರಕ್ಕಂ

ದೇಸಿಗಭಾತ್ರಭೋಜನಕ್ಕಮೆಂದು ಸಮಕಟ್ಟಿ ತ್ರಿಕಾಳಭೋಗಂ ನಡೆವಂತಾಗಿ . . . ಕುಡೆ (ಸೌಇಇ. IX-i, ೮೦-೧೫; 1018). 'ವಂಸಿಗ' ಪರಾ. [ವಂಚ (< ಬಂಚ) + - ಇಗ]

**ವಂಚಿತ** (ಗು). ೧. ಕಪಟಕ್ಕೊಳಗಾದ ; ಮೋಸಹೋದ. (ನಾ). ೨. ಮೋಸಹೋದವನು ; ವಂಚನೆಗೊಳಗಾದವನು : "ವಿಪ್ರಲಬ್ಧಃ, ವಂಚಿತಃ — ೨ ವಂಚಿಸಿಕೊಂಡವನ ಪೆಸರು" (ಸಿದ್ಧಾಂತಿ. ೩೩೪); ಮನವು ನಪುಂಸಕವೆಂದೆ ನಾನವಳನು ಕರೆತರಲಟ್ಟಿದೆ ಮನವ ರಮಿಸಿತದಲ್ಲಿಯೆ ವಂಚಿತನಾದೆನು ಪಾಣಿನಿಯೆಂತಹ ಕಿತವ (ಇಂಚಾಪ. ೮೭-೧೭). ೩. ಭ್ರಷ್ಟವಾದುದು ; ಚ್ಯುತವಾದುದು : ತುಳಸೀದಾಸನ ರಾಮಾಯಣ ಜನತೆಗೆ ದೊರೆಯದಿದ್ದರೆ, ಇಡೀ ಭಾರತ ತನ್ನ ಧರ್ಮದಿಂದ ವಂಚಿತವಾಗಿ . . . ಕ್ಷುದ್ರಧರ್ಮಗಳ ಪಾಲಾಗುತ್ತಿತ್ತು (ಭಾರದ. ೪೭೨). [ಸಂ.]

**ವಂಚಿಸು** (ಕ್ರಿ). ೧. ಮೋಸಮಾಡು ; ವಂಚನೆಗೊಳಿಸು ; ಠಕ್ಕಿಸು : ಇವನೆನ್ನಂ ವಂಚಿಸಿದನೆಂದು ಸುರಿಗೆಗಿತ್ತು ದಡದಡಿಸುತ್ತಮಿಱಿಯಲು (ಚಾವುಂಪು. ೧೪); ಪೆಱರ ಬಗೆಯನಱಿದು ಸಂಧಾನಂಗೆಯ್ದು ವಂಚಿಸುವುದು ವಂಚನೆಯೆಂಬುದು (ಪಂಚತಂ. ೨೧-೪); ಎಲವೊ ಕೌರವ ಹಿಂದೆ ವಂಚಿಸಿ ಕಳವಿನಲಿ ಜೂಜಾಡಿ ರಾಜ್ಯವ ಗೆಲಿದ ಗರ್ವವನುಗುಳು (ಕುಮಾವ್ಯಾ. ೧೦-೪೯). ೨. ಮರೆಮಾಚು ; ಮುಚ್ಚು ; ಅಡಗಿಸು : "ವಂಚಿಸು—ಅಪಲಾಪೇ" (ಶಮಧಾ); ಬಂದ ಸಮಯವವನಱಿತು ಇದ್ದುದ ವಂಚಿಸದಿದ್ದಡೆ ಕೂಡಲಸಂಗಮದೇವನೊಲಿದು ಸಲಹುವ (ಬಸವ. ೨೧೫), ಜನಪತಿಗೆ ಭಂಡಾರಿ ಹೇಳಿದುದನಿತುಮಂ ವಂಚಿಸದೆ ವಿವರಿಸಿ ಗೋಪಿ ಹೇಳುತ್ತ (ಬಸಪು. ೧೦-೭). ೩. ತಪ್ಪಿಸಿಕೊಳ್ಳು ; ನುಣುಚಿಕೊಳ್ಳು : ಕಡುಕೆಯ್ದು ಕುತ್ತೆ ವಂಚಿಸಿ ಬಿಡೆ ಬೀಸಿದೊಡೊಡನೆ ಬೀಸಿ . . . ವಿಘಾತದಿಂ ಪೊಯ್ದೊಡಾಂಕೆಗೊಂಡಣ್ಣ ಕಾದಿದರ್ ಕಡುಗಲಿಗಳ್ (ಗದಾಯು. ೮-೯); ಬೊಬ್ಬಿಟ್ಟದಿರಾಂತು ರಕ್ಕಸನ ಗಟ್ಟವಾಳಿಕೆಯ ವಂಚಿಸಿ ನೊಸಲೊಡೆವಂತೆ ಹೆಟ್ಟಿದ ವಜ್ರಮುಷ್ಟಿಯಲಿ (ಮೋಹತ. ೧೨-೮೮).
[ವಂಚನ + - ಇಸು$_3$]

**ವಂಚಿಸುಹ** (ನಾ). ಮೋಸಮಾಡುವಿಕೆ ; ವಂಚಿಸುವಿಕೆ : "ವಿಪ್ರಲಂಭಃ, ವಿಸಂವಾದಃ, ವಿಪ್ರಲಾಪಃ — ಈ ೩ ವಂಚಿಸುಹ" (ಹಲಾಯು. ೧೨೩-೬೩).
[ವಂಚಿಸು + - ಹ$_2$ (< - ಪ$_2$)]

**ವಂಜಕ** (ನಾ). ನಿರ್ಗತಿಕ; ದರಿದ್ರ(?) : ಬಂಜೆಗೆ ಮಕ್ಕಳು ವಂಜಕರಿಗೆ ಬೇಡಿತ್ತನೀವ ಕುಂಜರಾಂಬರಧರ (ಸೌಇಇ. XV, ೭೭೨-೧೭; ಸು. 15ನೆಯ ಶ). [?]

**ವಂಜುಲ, ವಂಜುಳ** (ಗು). ೧. ಕೊಂಕಿದ; ಡೊಂಕಾದ. (ನಾ). ೨. ಒಂದು ಬಗೆಯ ಸಸ್ಯ ; ಬೆತ್ತದ ಗಿಡ ; ಹಬ್ಬೆ ಗಿಡ : "ವಂಜುಲಃ ನಿಚುಲಃ — ಈ ೨ ಹಬುಸೇಗಿಡದ ಪೆಸರ್" (ಹಲಾಯು. ೬೨-೪೨). ೩. ಒಂದು ಬಗೆಯ ಸಸ್ಯ ; ನೆಮ್ಮಿಗಿಡ ; ತಿನಿಶ. ೪. ಒಂದು ಬಗೆಯ ಮರ ; ಅಶೋಕವೃಕ್ಷ. ೫. ಒಂದು ಬಗೆಯ ಮರ ಮತ್ತು ಅದರ ಹೂವು ; ಬಕುಳ. ೬. ಒಂದು ಬಗೆಯ ಹಕ್ಕಿ; ಹೊರಸು. ವಂಜುಳ : ೨. ಎಱಗದ ತೀರ ಭೂರುಹಮನೆಯ್ದೆ ಮೊದಲ್ಗಿಡೆ ಕೀೞ್ಟು ಬೆಂಗೆ ಬಿಟ್ಟೆಱಗಿದ ವಂಜುಳಪ್ರಕರಮಂ ಪರಿವರ್ಧಿಪ ಸಿಂಧುತೋಯದಂತೆ . . . ರಾಜ ಲೀಲೆ ಕಣ್ಗೆಸೆದುದು (ಪುಷ್ಪಪು. ೧೩-೭). ೩. "ತಿನಿಶಃ . . . ವಂಜುಳಃ, ಚಿತ್ರಕೃತ್—೭ ಹುಲಿಗೇಮರದ ಪೆಸರುಗಳು. ಹುಲಿಗಲಿ, ನೆಮ್ಮಿ, ಹೊಂಗೆ" (ಸಿದ್ಧಾಂತಿ. ೧೧೭). ೪. ಪನಸ ಬದರೀ ವಕುಳ ವಂಜುಳ . . . ಬಿಲ್ವಾಶ್ವತ್ಥಾದಿ ವೃಕ್ಷಂಗಳು ಸುಮನಸಭರಿತವಾಗಿ ಶೋಭಿಸುತಲಿತ್ತು (ಪುರಾವಿ. ೯೬). ೫. ಬಿಜೂರಂ ವಂಜುಳಮುಂ . . . ಮಂಜುಳ ದುದ್ಯಾನವನದೊಳಿರ್ಪವು ಪೆಂಪಿಂ (ಹಮ್ಮೀರ. ೪-೧೫). ೬. "ಜೀವಂಜೀವಃ . . . ವಂಜುಳಃ, ಕಪೋತಃ — ಈ ೭ ಹೊರಸು" (ಹಲಾಯು. ೪೨-೧೦೦). [ಸಂ.]

**ವಂಜುಳ** 'ವಂಜುಲ' ನೋ.

**ವಂಟ** (ನಾ). ಆಳು; ಸೇವಕ: "ಠಕಾರಕ್ಕೆ ಟಕಾರಂ — ಕಠೋರ್ರ — ಕಟೋರ . . . ವಂಠ - ವಂಟ" (ಶಮದ. ೨೫೫ ಪ್ರಯೋ); ತನಗಿಲ್ಲದ ವಂಟ ತುಂಟ ಚೂಡಾರತ್ನಾ (ಸೀತಿವಾ. ೧೦೨೭). 'ಬಂಟ$_1$' ಪರಾ. [< ಸಂ. ವಂಠ]

**ವಂಟಕ** (ನಾ). ೧. ಭಾಗವಾಗುವಿಕೆ ; ಪಾಲಾಗುವಿಕೆ. ೨. ಪಾಲು ಮಾಡುವವನು ; ಭಾಗಮಾಡುವವನು. ೩. ಭಾಗ ; ಪಾಲು : "ಅಂಶಃ, ಭಾಗಃ, ವಂಟಕಃ — ೩ ಕೆಲವು ಭಾಗಕ್ಕೆ ಹೆಸರು; ಹಿಸ್ಸೆ, ಪಾಲು" (ಸಿದ್ಧಾಂತಿ. ೩೦೨). ೪. ಅವಿವಾಹಿತ ; ಬ್ರಹ್ಮಚಾರಿ : (೬). 'ವಂಠ' ಹೋ. [ಸಂ.]

**ವಂಟಶಾಲೆ** (ನಾ). ಅಡುಗೆಮನೆ ; ಪಾಕಶಾಲೆ : ವಂಟಶಾಲೆಯಲಿ ಅಡಿಗೆ ಮಾಡಬೇಕು (ಎಕ. IX (S), ದೇವನೂ. ೧೭-೩೦; 1697).
[<— ತೆಲು. ವಂಟಶಾಲ, ವಂಟಸಾಲ]

**ವಂಟಿ** 'ವೆಂಟಿ' ನೋ.

**ವಂಟೆ** (ನಾ). ಒಂದು ಬಗೆಯ ಮರ : ವಂಟೆ (ವೊಟಂಬಾ) — ಇದರ ಕಟ್ಟಿಗೆ ಮಿದು. ಕಾಯಿಯನ್ನು ಮಸಾಲೆಯಲ್ಲಿ ಹಾಕುವರು (ಕಭಾಗ. ೪೭); ವಾಟೆಗಿಡ, ವಂಟೆಮರ (ಮೈಡಿ. ೧೦-೧೨). [?]

**ವಂಠ** (ನಾ). ೧. ಆಳು ; ಸೇವಕ. ೨. ಕುಳ್ಳ; ಕುಬ್ಜ. ೩. ಕುಂಟ ; ಹೆಳವ. ೪. ಮದುವೆಯಾಗದವನು ; ಅವಿವಾಹಿತ. ೫. ಒಂದು ಬಗೆಯ ಆಯುಧ ; ಕೊಂತ. [ಸಂ.]

**ವಂಠದೆಱೆ** (ನಾ). ಒಂದು ಬಗೆಯ ತೆರಿಗೆ : ರಾಜಗುರು ಚಂದ್ರಮೌಳಿದೇವರ್ ಸಮಸ್ತ ಶಿವಗಣಸಹಿತಂ ಬಂದುಚಿತಪೂಜೆಯಂ ಸಾನಂದದೆ ಕೈಕೊಂಡು ವಂಠದೆಱೆಮಾನ್ಯಮಿದಕ್ಕೆಂದಾ ಕುಮಾರದೇವಗ್ಗ್ಂದಾ ಸಿದ್ಧೇಶನೊಸೆವ ಧಾರೆಯನೆಱೆದರ್ (ಎಕ. VI, ಕಡೂರು. ೧೨-೩೦; 1233). [ವಂಠ + ತೆಱೆ$_3$]

**ವಂಡು, ಬಂಡು$_1$** (ನಾ). ೧. ಕೆಸರು ; ರಾಡಿ : "ಕೆಸಱುರ್ಬುರ್ಬೇೞೆ ನೀರ್ಬೊಬ್ಬುಳಿಸಿ ಬುಳುಬುಳುಂದೇಂಕಿ ವೆಂದೆವಂತೆಡೆಯ್ದು ಕಂಪಂ ಮಸುಗುತ್ತುಂ ಬತ್ತೆ (ಜಗನ್ಮಿ. ೧೭-೬೪); ಚಕ್ರವಾಳೆ ವಂಡಿನೊಳಗಿಕ್ಕಿತಾ ಬೆಳಸಿನಂತೆ ಬಿಕ್ಕಿ ಬೀಗಿ ಬೆಳದಿಯಲ್ಲೆ ಸತ್ಯಭಾಮಿನಿ (ಶ್ರೀಕೃಪಾ. ೪೧). ೨. (ಮದ್ಯ ಮೊದಲಾದ) ದ್ರವವಸ್ತುವಿನ ತಳದಲ್ಲಿ ನಿಲ್ಲುವ ಗಸಿ ; ಚರಟ. (ಗು). ೩. ಜವುಗಾದ : ವಂಡುಭೂಮಿಯಾಗಿ ಮಡಿಕಟ್ಟು, ನೆಲವಾಗಿದ್ದರೆ ಮೊದಲು ಎಳ್ಳು ಬಿತ್ತಿ ಆ ಬೆಳೆಯನ್ನು ತೆಗೆದುಕೊಂಡು ಪುನಃ . . . ಭೂಮಿಯ ಪರೀಕ್ಷಿಸಿ ಬಿತ್ತಬೇಕು (ಕೃಷಿಪ್ರ. ೨೭). 'ಒಂಡು' ಹೋ. ಬಂಡು$_1$ : ೪. (ಗಟ್ಟಿಯಾದ) ರಸ : ಈ ಕವಳವನು ಹುಣಿಸೆಯ ಹಣ್ಣಿನ ಬಂಡಿನಲ್ಲು ಕಲಸಿ ಲೇಪವ ಮಾಡುವುದು (ಅಶ್ವಟೀ. ೧೦೫-೪).
[ದೇ. ॥ ತಮಿ. ವಣ್ಣಲ್; ತೆಲು. ವಂಡು, ವಂಡ, ವಂಡಲಿ]

**-ವಂತ** (ಪ್ರ). ಇದನ್ನು ಪಡೆದವನು, ಹೊಂದಿದವನು ಅಥವಾ ಇದನ್ನು ಪಡೆದುದು, ಕೂಡಿದುದು ಎಂಬ ಅರ್ಥದಲ್ಲಿ ನಾಮಪದದ ಮುಂದೆ ಬರುವ ತದ್ಧಿತಪ್ರತ್ಯಯ : ಅಲ್ಲಿ ಇದುಂಟೆಂಬರ್ಥದೊಳಿಲ್ಲಿಯುಮುಳ್ಳೊಡೆಯ ವಂತಶಬ್ದಮವಕ್ಕುಂ (ಕಾವ್ಯಾವ ೩೩೩); ವಂತ ಪ್ರತ್ಯಯಕ್ಕೆ — ಸಿರಿವಂತಂ, ಜಯವಂತಂ, ಜಸವಂತಂ, ಹೊನ್ನವಂತಂ (ಶಮದ. ೨೦೭ ಪ್ರಯೋ). 'ಪರಿಮಳವಂತ' ಪರಾ. [< ಸಂ. ಮತ್]

**ವಂತಕಾರಿ** 'ಹೊಂತಕಾಱಿ$_1$' ನೋ.

**ವಂತಿಗೆ, ವತ್ತಿಗೆ** (ನಾ). ೧. (ಧರ್ಮಕಾರ್ಯಕ್ಕಾಗಿ ನೀಡುವ) ಸಹಾಯ ಧನ ; ಕೊಡುಗೆಯ ಹಣ: ಸಂಪಿಗೆಯ ಶಿವಭಟ್ಟರು, ರಾಮನ ಗುಡಿ ಕಟ್ಟಲಿಕ್ಕೆ ಒಂದು ಪೈ ಕೂಡ ಕೊಡದವರು. ಅಂಥವರನ್ನು ಮಾರುತಿಗುಡಿ ಕಟ್ಟಿಸಲಿಕ್ಕೆ "ವಂತಿಗೆ" ಕೊಡಿ ಅಂದರೆ ಹೇಗಾದೀತು (ಪರಾವ. ೭); ಧರ್ಮಮಠವನ್ನು ಕಟ್ಟಿಸಲಿಕ್ಕೆಂದು ಇವರು ವಂತಿಗೆ ಕೂಡಿಸುತ್ತಿರುವರು (ಮೋಜೀವ. ೧೭). ೨. (ಸಾರ್ವಜನಿಕಸಂಸ್ಥೆ, ಸಂಘ, ಸಭೆ, ಸಮಾರಂಭ ಮುಂತಾದ ಕಾರ್ಯಗಳಿಗಾಗಿ ಸಾರ್ವಜನಿಕರಿಂದ ತೆಗೆದುಕೊಳ್ಳುವ) ಚಂದಾಹಣ ; ವರ್ಗಣಿ : ನಮ್ಮಲ್ಲಿ ಕೂಡಿದ ವಂತಿಗೆಯ ಹಣವು ನಲವತ್ತೈದು ರೂಪಾಯಿಗಳು (ಕಪಪು. ೫-೧೮). ೩. ಕೊಡುಗೆ ; ಕಾಣಿಕೆ : ಭೂಗರ್ಭಶಾಸ್ತ್ರ, ಖಗೋಳಶಾಸ್ತ್ರ, ಭೌತಶಾಸ್ತ್ರ ಮುಂತಾದಭಾಗಗಳಲ್ಲೂ ಸಾಕಷ್ಟು ಪರಿಶ್ರಮವಹಿಸಿ, ಜ್ಞಾನಭಂಡಾರಕ್ಕೆ ತನ್ನ ವಂತಿಗೆಯನ್ನು ಸಲ್ಲಿಸಿದನು (ಸಸ್ಯಕ. ೫). **ವತ್ತಿಗೆ** : ೩. ವಿರೂಪಾಕ್ಷನಾಯಕರು ತಮಗೆ ವತ್ತಿಗೆಯಾಗಿ ಪಾಲಿಸಿದ ಹಾಸನದ ಸೀಮೆಯ ನಿಡಿವಿಡಿಯ ಗ್ರಾಮಕ್ಕೆ ಸಲುವಂಥ ಕಾಲುವಳಿಯ ವಿವರ (ಎಕ.V, ಹಾಸನ. ೧೫-೨೦; 1562).
[ದೇ. ॥ ತುಳು. ಒಂತಿಗೆ]

**ವಂತು** (ನಾ). ಸರದಿ ; ಪಾಳಿ : ತಂತಿನಲ್ಲಿ ವನಾಂತರದಲ್ಲಿ ವಂತು ವಂತು ವಂಶಂಗಳಲ್ಲಿ ಪಂಥ ಮಾಡುವಲ್ಲಿ . . . ಕೌಂತೇಯಸಹಾಯ ವಿಜಯವಿಠಲನಂಘ್ರಿಚಿಂತೆ ಮಾಡುವ ಕುಲವಂತಗೆ ಭಯವೆ (ವಿಸಾಹು. ೬೯-೫). 'ಒಂತು$_1$' ಪರಾ.

[ದೇ.॥ ತೆಲು. ವಂತು]

**-ವಂತೆ** (ಪ್ರ). ಇದನ್ನು ಪಡೆದವಳು ಅಥವಾ ಉಳ್ಳವಳು ಎಂಬರ್ಥದಲ್ಲಿ ನಾಮಪದದ ಮುಂದೆ ಬರುವ ಒಂದು ತದ್ಧಿತಪ್ರತ್ಯಯ : 'ಪತಿವಂತೆ' ಪರಾ. [– ವಂತ + – ಎ$_2$]

**ವಂದ** 'ವರ್' ಪರಾ.

**ವಂದಕ** (ನಾ). ೧. ನಮಸ್ಕರಿಸುವವನು ; ವಂದಿಸುವವನು : ಮಾಯೆಯ ಬಲೆಗೆ ಸಿಲುಕದಿರು ಎಂದು ಪಿರಿಯರಸನು ಕರುಣದಲಿ ವಂದಕನ ತಿಳುಹಿದನು (ನಿಭಾಗ. ೧೧-೧೭-೪೮). ೨. ಒಂದು ಬಗೆಯ ಪರಾವಲಂಬೀಸಸ್ಯ : "ಜೀವಂತಿಗೆ, ಬಂದರಿಕೆ, ಬದನಿಕೆ, ರಾಸನಾ, ವಂದಕಗಿಡ" (ಸಸ್ಯನಿ. ೧೩೩). [ಸಂ.]

**ವಂದನ$_1$** (ನಾ). ಸೆರೆ ; ಬಂಧನ : ಬಂಧನ — ವಂದನ (ಶಬ್ದಾನು. ೧೪೪ ಪ್ರಯೋ).

[< ಸಂ. ಬಂಧನ]

**ವಂದನ$_2$** (ನಾ). ೧. (ಗೌರವ, ವಿನಯ, ಭಕ್ತಿ ಮುಂತಾದುವುಗಳನ್ನು ಸೂಚಿಸಲು ಮಾಡುವ) ನಮಸ್ಕಾರ ; ನಮನ : "ನತಂ ವಂದನಂ" (ಮಂಗರಾ. ೧೩೭-೩೯). ೨. ಹೊಗಳಿಕೆ ; ಸ್ತುತಿ. ೩. ಬೇಡುವುದು ; ಪ್ರಾರ್ಥಿಸುವುದು ; ಯಾಚನೆ. ೪. ತೋರಣ ; ವಂದನಮಾಲೆ. ೫. ಮನೋಹರವಾದುದು ; ರಮ್ಯವಾದುದು. ೬. ಪೂಜೆ ; ಆರಾಧನೆ. ೭. ಜಲಜಂತು ; ಜಲಚರ. ೮. ಕತ್ತಲೆ ; ಅಂಧಕಾರ. ೯. ಕಣ್ಣಿಗೆ ಕಾಣಿಸುವುದು; ಗೋಚರ ; ದೃಶ್ಯ. ೧೦. ನೀರು ; ಉದಕ : " ಜಲಚರಗಳು ನಿರ್ಮಲ ಕತ್ತಲೆ ತೋರಣ ಕಾಣಬಹುದು ಇದುಮ್ಮೆನಾಮಂ ಸಲೆ ವಂದನ ಶಬ್ದಂ" (ನಾನಾಕಂ. ೧೧೪); "ಪಯೋಜಂತು ಮನೋಹರಂ ತಿಮಿರ ತೋರಣ ಲೋಚನಗೋಚರಾರ್ಣವೆಂಬಿಂತಿವು ವಂದನಾಖ್ಯಂ" (ನಾನಾರ. ೮೮). ೧೧. [ತತ್ತ್ವಶಾ] ಒಂಬತ್ತು ವಿಧವಾದ ಭಕ್ತಿಗಳಲ್ಲಿ ಒಂದು : ನಮಸ್ಕರಿಸುವುದು : ಶ್ರವಣ, ಕೀರ್ತನ, ಸ್ಮರಣ, ಪಾದಸೇವೆ, ಪೂಜೆ, ವಂದನ, ದಾಸ್ಯ, ಸಖ್ಯ, ಆತ್ಮಾರ್ಪಣಮೆಂಬ ನವವಿಧಮಾಗಿರ್ಪುದೆಂದಱಿದಿಂತು ಪೀಠಸ್ಥಶಿವಲಿಂಗದ ಬಹಿರಂಗದ ಪೂಜೆಯಂ ವಿಸ್ತರಿಸಿ (ವಿವೇಕ. ೯೫); "ಶ್ರವಣಂ, ಕೀರ್ತನಂ, ವಿಷ್ಣೋಃಸ್ಮರಣಂ, ಪಾದಸೇವನಂ, ಅರ್ಚನಂ, ವಂದನಂ, ದಾಸ್ಯಂ, ಸಖ್ಯಂ, ಆತ್ಮನಿವೇದನಂ" ಎಂಬ ೯ ವಿಧ ಭಕ್ತಿಯಿಂದ ಪರಮಾತ್ಮನನ್ನು ಭಜಿಸುತ್ತಾ . . . ಚಿಂತಿಸುವವರಾರೋ, ಅವರೆ ಮುಕ್ತಿಯೋಗ್ಯರು (ಹಸಾರ. ೨೧-೫೧ ತಾತ್ಪರ್ಯ). ೧೨. ಒಂದು ಬಗೆಯ ಸಸ್ಯ :" ಆಮ್ರಸಾರಕಂ — ವಂದನ"(ಓಷಧಿ. ೧೨). [ಸಂ.]

**ವಂದನಂಗೆಯ್** (ಕ್ರಿ). ನಮಸ್ಕರಿಸು ; ವಂದಿಸು : ಮುಂದೆ ಇಬ್ಬರು ಜಂಗಮಕೆ ಒಂದೊಂದು ಜಾಳಿಗೆಯಂ ಸಮರ್ಪಿಸಿ ವಂದನಂಗೆಯ್ದತಿವಿನಯದಿಂ ಜಂಗಮಾವಳಿಗೆ ಬಂದು ಪಾದಾರ್ಚನೆಗಳಂ ಮನವೊಂದಿ ಮಾಡಿ (ಬಸಪು. ೩೦-೨೦). [ವಂದನ$_2$ + ಕೆಯ್$_1$]

**ವಂದನಮಾಲಿಕೆ** (ನಾ). ಹಬ್ಬ , ಹರಿದಿನ ಇತ್ಯಾದಿ ವಿಶೇಷಸಂದರ್ಭಗಳಲ್ಲಿ ಅಲಂಕಾರಕ್ಕಾಗಿ ಬಾಗಿಲು, ಬೀದಿ, ಮುಂತಾದೆಡೆಗಳಲ್ಲಿ ಕಟ್ಟುವ ತಳಿರು, ಹೂವು, ಬಟ್ಟೆ ಮುಂತಾದುವುಗಳ ಮಾಲೆ ; ತೋರಣ : ಹರಿಚಂದನ ವಂದನಮಾಲಿಕೆಗಳ್ ಪರಿವೇಷ್ಟಿಸೆ ಮೆಱೆದುವು ಶಾಲಿಕೆಗಳ್ (ಚಂದ್ರಪು. ೪-೬೩ ರಗಳೆ).

[ಸಂ. ವಂದನಮಾಲಿಕಾ]

**ವಂದನಮಾಲೆ, ವಂದನಮಾಳೆ** (ನಾ). = ವಂದನಮಾಲಿಕೆ : "ಚತುರ್ವಿಂಶತ್ಯರ್ಹತ್ಪ್ರತಿಮಾವಿರಾಜಮಾನಹೇಮದಾಮವಿಲಂಬಿತ ಘಂಟಾಸಮನ್ವಿತ ವಂದನಮಾಲೆಗಳೊಳಂ (ಆದಿಪು. ೧೬-೩೭ ವ) ; ಓರನ್ನಮಾದ ಚಂದನದ ತಳಿರ ವಂದನಮಾಲೆಯೊಳಂ . . . ಚೆಲ್ವಿನ ಕುಲಗೃಹಮುಮಿರ್ಪಂತಿರ್ದ ವಸಂತಗೃಹಮಂ ಪೊಕ್ಕು (ಚಂದ್ರಪು. ೭-೯೫ ವ). **ವಂದನಮಾಳೆ** : ಶೈಳಪುರಂ ವಿರಾಜಿಸಿತೊ ಕಾಶ್ಮೀರಾಕ್ಷತಾಲೀಲೆಯಿಂ ವಿಳಸದ್ವಂದನಮಾಳೆಯಿಂ (ಪುಷ್ಪಪು. ೧೩-೧೧೮).

[ಸಂ. ವಂದನಮಾಲಾ]

**ವಂದನಮಾಳೆ** 'ವಂದನಮಾಲೆ' ನೋ.

**ವಂದನಾರ್ಪಣೆ** (ನಾ). ಸಭೆ, ಸಮಾರಂಭ ಮೊದಲಾದುವುಗಳ ಕೊನೆಯಲ್ಲಿ ಔಪಚಾರಿಕವಾಗಿ ಕೃತಜ್ಞತೆಯನ್ನು ಸಲ್ಲಿಸುವುದು ,–ಆಭಾರವನ್ನು ಸೂಚಿಸುವುದು : ಸಮಾರಂಭದ ಕೊನೆಯಲ್ಲಿ ಸಂಘದ ಕಾರ್ಯದರ್ಶಿಗಳು ವಂದನಾರ್ಪಣೆ ಮಾಡಿದರು (ರೂಢಿ). [ಸಂ. ವಂದನಾರ್ಪಣ]

**ವಂದನೀಯ** (ಗು). ೧. ನಮಸ್ಕರಿಸಲು ಯೋಗ್ಯನಾದ ; ಪೂಜನೀಯ. ೨. ಸ್ತುತಿಸಲು ಅರ್ಹನಾದ. (ನಾ). ೩. ಗೌರವಾರ್ಹನಾದ ವ್ಯಕ್ತಿ ; ಪೂಜನೀಯವ್ಯಕ್ತಿ : ವಂದನೀಯರು ಮುನಿಗಳಿತ್ತಲು ಬಂದಿರೇತಕ್ಕಿರುಳು ನೀವು (ಕಾಶಿರಾ. ೧೯-೬೦); ವಂದನೀಯರ್ಗೆ ವಂದಿಸಿ . . . ಅನ್ಯೋನ್ಯ ಸಂಭಾಷಣೆಗಳಿಂದೆ ಮುದಿತರಾಗಿ ವಂದಿಸಿದರೆಲ್ಲರುಂ ಬಕದಾಲ್ಭ್ಯಮುನಿಗೆ (ಜೈಮಿಭಾ. ೩೩-೨೫). [ಸಂ.]

**ವಂದನೆ** (ನಾ). ೧. ನಮನ ; ನಮಸ್ಕಾರ : ಸಂಧಿಸಿದ ಜನದ ವಂದನೆಗೆ ಮೊದಲೀ ಸ್ವಸ್ತಿಯೆಂದೊಡಾ ಭೂಸುರಂ ಪ್ರಿಯದೊಳಾ ಪ್ರಾಣಿಯಂ ಕೊಂದನಲ್ಲದೆ ಬೇಱೆ ಶಾಪ ಮೇತಕೆ (ಜೈಮಿಭಾ. ೨೬-೩೦). ೨. ಸ್ತುತಿ ; ಸ್ತೋತ್ರ :ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವನ ಮನೆಯಲ್ಲಿ ಕಿಚ್ಚೆದ್ದು ಸುಡುವಾಗ . . . ವಂದನೆಯ ಮಱೆದು ನಿಂದಿಸುತಿರ್ದರಯ್ಯಾ (ಬಸವ. ೫೮೬); ನಿಂದಿಸುವವಗೆ ವಂದನೆ ಇಲ್ಲ (ನೀತಿಚಿಂ. ೬-೨೩). ೩. ಪೂಜೆ ; ಆರಾಧನೆ. ೪. [ತತ್ತ್ವಶಾ] ಒಂಬತ್ತು ಬಗೆಯ ಭಕ್ತಿಗಳಲ್ಲಿ ಒಂದು ; ನವವಿಧಭಕ್ತಿಗಳಲ್ಲಿ ಒಂದು ; ನಮಸ್ಕಾರ : ಭಕ್ತಿ ನವವಿಧ . . . ಗುರು ಪರಮ ನಿರುಪಮ ನಿರಾಮಯ ಪರಮಪದ ಪರಿಪೂರ್ಣನೆಂದರಿಯುವುದೆ ವಂದನೆಯು (ಗಗತಾ. ೩-೫೮). ೫. [ಜೈನ] ಒಬ್ಬ ತೀರ್ಥಂಕರನನ್ನೇ ಪೂಜಿಸುವುದು : ಏಕತೀರ್ಥಕರನಿಬಂಧನಮಪ್ಪ ವಂದನೆಯೆಂಬ ಹದಿನೆಂಟನೆಯ ಮೂಲಗುಣಂ (ಶ್ರಾವಕಾ. ೮೩). [ಸಂ. ವಂದನಾ]

**ವಂದನೆಗೆಯ್, ವಂದನೆಗ್ಯೆ** (ಕ್ರಿ). ನಮನಮಾಡು ; ನಮಸ್ಕರಿಸು :ಬಂದಳಾಕ್ಷಣ ಸಖಿಯೊಡಗೂಡಿ ವಿಲಸಿತದಂದಣವಿಳಿದು ನಾರದಗೆ ವಂದನೆಗೆಯ್ದಳು (ಮೋಹತ. ೪೧-೩೨). **ವಂದನೆಗ್ಯೆ** : ನಿಂತು ವಂದನೆಗ್ಯೆದು ಕೇಳಿದನಿಂತು (ಗಗತಾ. ೧೯-೪).

[ವಂದನೆ + ಕೆಯ್$_1$]

**ವಂದನೆಗ್ಯೆ** 'ವಂದನೆಗೆಯ್' ನೋ.

**ವಂದರಿ** (ನಾ). (ಸಾಮಾನ್ಯವಾಗಿ ಧಾನ್ಯ, ಹಿಟ್ಟು ಮುಂತಾದುವುಗಳನ್ನು ಹಸನು ಮಾಡಲು ಉಪಯೋಗಿಸುವ) ತೂತುಗಳಿರುವ ಒಂದು ಸಲಕರಣೆ ; ಜರಡಿ ; ಒಂದರಿ : ಹೃದಯಂಗಳು ವಂದರಿಯಂತೆ ಛಿದ್ರಮಾಗುವದಂ ನೋಡಿ (ಸೌಗಂಧಿ. ೨೯೬-೧೦); ಋಷಿಗಳು ವಂದರಿಯಿಂದ ಹಿಟ್ಟಿನಂತೆ, ತಮ್ಮ ಹೃದಯಗಳಿಂದ ವಾಣಿಯನ್ನು ಪವಿತ್ರಗೊಳಿಸಿ ಉಚ್ಚರಿಸುತ್ತಾರೆ (ಭಾರದ. ೪೮). [< ಒನಲಿ]

**ವಂದರು** (ನಾ). ಒಂದು ಬಗೆಯ ಭೋಜನಪರಿಕರ (?) : ಆ ಭೋಜನದ ಪರಿಕಾರಮೆನ್ತೆನ್ಡಡೆ ಆರುಮಾನ ಅಕ್ಕಿ ಮಾನ ತುಪ್ಪ ಒಂದುಮಾನ ವಂದರು (ಮೈಆರ. ೧೯೨೭, ೧೫೧-೧೩; 870). [?]

**ವಂದಾಕೆ** (ನಾ). ಒಂದು ಬಗೆಯ ಪರಾವಲಂಬೀಸಸ್ಯ : "ಬದನಿಕೆ (ಬಂದಣಿಕೆ) — ವಂದಾಕಾ" (ತದ್ಭಕೋ. ೨೮). [ಸಂ. ವಂದಾಕಾ]

**ವಂದಾರು** (ಗು). ೧. ಸ್ತುತಿಸುವ ; ಸ್ತೋತ್ರಮಾಡುವ :ವಂ[ ಪಾಠಾಂ. ಮಂ] ದಾರ Eರು3ವಮುನೀಂದ್ರವೃಂದಾರಕವೃಂದಸೌಂದರಮುವಾಸನ್ನಭವ್ಯವ್ಯೋಮಚರ ಭೂಚರನಿಚಯನಿಚಿತಮುಮಾಗಿ (ಆದಿಪು. ೩-೪೫ ವ); ವಂದಾರುಜನಕೆ ವಾಂಛಿತ ಫಲಗಳನೀವ ಮಂದಾರತರುಗೆ ಮಾಧವಗೆ . . . ಆನು ವಂದಿಪೆನು (ಹದಿಬ. ೭-೧). (ನಾ). ೨. ನಮಸ್ಕರಿಸುವವನು ; ವಂದಿಸುವವನು : "ವಂದಾರುಃ, ಅಭಿವಾದಕಃ, — ೨ ಮುಗಿಯುವ ಸ್ವಭಾವವುಳ್ಳವನು, ಕೈಮುಗಿಯುವವನು, ನಮಸ್ಕರಿಸುವವನು" (ಸಿದ್ಧಾಂತಿ. ೩೩೦). ೩. ಹೊಗಳಿಕೆ ; ಸ್ತುತಿ. ೪. ಸ್ತೋತ್ರಮಾಡುವವನು : ಸ್ತುತಿಸುವವನು : ವಂದಾರು ಬಂದ ಫಾಲ್ಗುಣ ನಂದೀಶ್ವರದೊಳ್ ತ್ರಿಪೃಷ್ಠತನಯಂ ತನುವಂ ತಂದುಪವಾಸಕ್ಕಾ ನಿಜನಂದನದ ಸಹಸ್ರಕೂಟಚೈತ್ಯಾಲಯದೊಳ್ ಇರ (ಶಾಂತಿಪು. ೭-೪೦). [ಸಂ.]

**ವಂದಿ** (ನಾ). ೧. (ರಾಜನ ಆಸ್ಥಾನದ) ಸ್ತುತಿಪಾಠಕ ; ಮಂಗಳಪಾಠಕ ; ಹೊಗಳುಭಟ್ಟ : ವಂದಿ ಪೊಗಟೆ ಚಾಗಿ ಕೊಟ್ಟಂ (ಶಮದ. ೫೯ ಪ್ರಯೋ); ಗುರುಸುತ ನಿನ್ನ ಗರ್ವವ ಹೇಳಿಸುವವು ಭೀಮಾಸ್ತ್ರವೆಂದುದು ವಂದಿಸಂದೋಹ (ಕುಮ್ಮಾಕ ೧೫-೧೯). 'ಬಂದಿ$_2$' ಹೋ. ೨. ಸೆರೆಯಾಳು ; ಬಂದಿ : "ಪ್ರಗ್ರಹಃ, ಗ್ರಾಹಕಃ, ವಂದೀ– ಈ ೩ ಬಂದಿ" (ಹಲಾಯು. ೧೫೫-೬೪). 'ವಂದಿಗ್ರಹ' ಪರಾ. ೩. ಲೂಟಿ ; ಸೂರೆ ; ಕೊಳ್ಳೆ : 'ಬಂದಿ$_1$' ಹೋ. [ಸಂ. ವಂದಿ, ವಂದಿನ್]

**ವಂದಿಗ** (ನಾ). ಜೊತೆಯವನು ; ಸಂಗಡಿಗ : ಎನ್ನ ಹವಣೇ ಹಗೆಯ ಗೆಲುವಡೆ ನಿನ್ನ ವಂದಿಗರಿರಲು ನೂಕದು ತನ್ನ ಸಾಹಸವೆಲ್ಲಿ ಪರಿಯಂತಹುದು ಕದನದಲಿ (ಕುಮ್ಮಾದ್ರೋ. ೧-೫), ವಂದಿಗರುಮಾರರಿಯದಂತೈದಿ ಗುರುಪಾದಧ್ವಂದ್ವಕಮಲಂಗಳಿಗೆ ಯೆರಗಿ (ನವಮೋ. ೨೨-೬೭). [< ಒಂದಿಗ]

**ವಂದಿಗೆ** (ನಾ). ಜೊತೆ ; ಸಂಗಡ :ಚಂದದಿಂದವನೊಲಿದ ಮಾತನಾಲಿಸುತಾಗಲಂದು ಕರ್ಕಶವೀರರೈದಿ ಶಬರಿಯ ಪೊರೆಗೆ ವಂದಿಗೆಯೊಳವಳಿತ್ತ ಸತ್ಕಾರಮಂ ಕೊಂಡು ಹೃದಯದಾನಂದದಿಂದೆ (ವೆಂಕಾರಾ. ೧-೨-೨೧). [< ಒಂದಿಗೆ]

**ವಂದಿಗ್ರಹ** (ನಾ).೧. ಸ್ತುತಿಪಾಠಕರ ಮುತ್ತಿಗೆ. ೨. ಬಂಧನದಲ್ಲಿರಿಸುವುದು ; ಸೆರೆಯಲ್ಲಿಡುವುದು. ೧,೨ : ಮಹದ್ವಂದಿಗ್ರಹಂ ತ್ಯಾಗಿಗವ್ರತಯೋಗಂ ಜಳಪಕ್ಷಿ ಗಲ್ಲದೆ ಜನಕ್ಕಿಲ್ಲಲ್ಲಿ ಬೇಟೆಲ್ಲಿಯುಂ (ಪುಷ್ಪಪು. ೨-೨೯). [ಸಂ.]

**ವಂದಿಜನ** (ನಾ). (ರಾಜನ ಆಸ್ಥಾನದ) ಸ್ತುತಿಪಾಠಕರ ಗುಂಪು ; ಮಂಗಳಪಾಠಕರ ಸಮೂಹ : ಇತ್ತ ಪೊನ್ನ ಬುಧ ಮಾಗಧ ವಂದಿಜನಕ್ಕೆ ಕೊಟ್ಟ ಕೋ[ಡೆ]ಡಜಿದೆ ಬೇಡಿ[ವೋ]ಡಿಮಿದು ಚಾಗದ ಬೀರದ ಮಾತು ಕರ್ಣನಾ (ಪಂಪಭಾ. ೧-೯೯). [ಸಂ.]

**ವಂದಿತ** (ಗು). ೧. ನಮಸ್ಕಾರವನ್ನು ಹೊಂದಿದ ; ನಮಿಸಲ್ಪಟ್ಟ : ಶ್ರೀದಿವಿಜೇಂದ್ರವಂದಿತಪದಾಂಬುಜಂ . . . ಆದಿಪರಮೇಶ್ವರನೀಗೆಮಗಿಷ್ಟಸಿದ್ಧಿಯಂ (ನಾಪಾರ. ೧). ೨. ಸ್ತುತಿಸಿದ ; ಕೊಂಡಾಡಿದ : ವಂದಿತಗುಣ ಪಲವೇಕಿನ್ನೊಂದನೆ ಕೇಳ್ಕಥೆಯನತ್ಯಪೂರ್ವಮಿದಂ (ಧರ್ಮಾಮೃ. ೧೨-೨೦೫). [ಸಂ.]

**ವಂದಿಸು** (ಕ್ರಿ). ೧. ತಲೆಬಾಗು ; ನಮಸ್ಕರಿಸು ; ಪ್ರಣಾಮ ಮಾಡು : ಕ್ರಿಯಾಪೂರ್ವಕಂ ವಂದಿಸಿ ಭಟ್ಟಾರರ್ಗೆ ಗುರುಭಕ್ತಿಗೆಯ್ದು . . . ಧರ್ಮಮಂ ಕೇಳ್ದ ತದನಂತರಂ (ವಡ್ಡಾರಾ. ೭೮-೧೫); ಕಂಡನು ಕೌರವೇಶ್ವರನ ಅಂದಣಾವನಿಳಿದರಸನಾತಗೆ ವಂದಿಸಿದನಾ ಮಾದ್ರಪತಿ (ಕುಮ್ಮಾಕ. ೫-೧೩). ೨. ಸ್ತುತಿಸು ; ಸ್ತೋತ್ರಮಾಡು : ತದ್ವಿಷ್ಟಪನಾಥನಂ ನಮಿಸಿ ಪೂಜಿಸಿ ವಂದಿಸಿ ದೇವ ಮಾಳ್ಪುದೆಸ್ನಿಷ್ಟಮನೆಂದು ಬೇಟ್ಟ ಪದದೊಳ್ (ಪುಷ್ಪಪು. ೩-೧೦೩); ನನ್ನ ಕೈಯಲ್ಲಾದದ್ದನ್ನೆಲ್ಲ ಮಾಡುತ್ತೇನೆ. ದೊರೆತದ್ದಕ್ಕೆ ದೇವರನ್ನು ವಂದಿಸುತ್ತೇನೆ (ಇಪ್ಪಾಂಸಂ. ೫೮೭). ೩. ಗೌರವಿಸು ; ಆದರಿಸು ; ಮನ್ನಿಸು : ವಂದಿಸುತುಂ ವಂದ್ಯರನಭಿವಂದಿಸುತುಂ ಬುಧರಂ . . . ಸಾರ್ತಂದಂ (ಪುಷ್ಪಪು. ೫-೫೯). [ವಂದನ$_1$ + – ಇಸು$_3$]

**ವಂದು** 'ವರ್' ಪರಾ.

**ವಂದುಗಿ** (ನಾ). ಸ್ತುತಿಪಾಠಕ (?): ಕೆಳೆಯರ್ವಂದುಗಿಗಳ್ ಅನೇಕರ್ಬ್ಬಾಳ ಕೂಡಿ (ಎಕ. VIII, ಸೊರಬ. ೫೨-೩; 800). [< ಸಂ. ವಂದಿ?]

**ವಂದ್ಯ$_1$** (ನಾ). ೧. ಒಂದು ಬಗೆಯ ಪರಾವಲಂಬೀ ಸಸ್ಯ : ವಂದ್ಯ ತೊಂಡೆಬೇರು . . . ನಶ್ಯತಂ ಮಾಡಲು ಮಾಣ್ಬು (ವಾತಾಟ. ೧೯-೪). ೨. ಗೋರೋಚನ. [ಸಂ. ವಂದ್ಯಾ]

**ವಂದ್ಯ$_2$** (ಗು). ೧. ಹೊಗಳಲು ಅರ್ಹವಾದ ; ಸ್ತುತಿಸಲು ಯೋಗ್ಯವಾದ. (ನಾ). ೨. ನಮಿಸಲು ಯೋಗ್ಯನಾದವನು ; ನಮಸ್ಕರಿಸಲು ಅರ್ಹನಾದವನು : ವಂದಿಸುತುಂ ವಂದ್ಯರನಭಿವಂದಿಸುತುಂ ಬುಧರಂ . . . ಉತ್ತರದಿಗಂತಮಂ ಸಾರ್ತಂದಂ (ಪುಷ್ಪಪು. ೫-೫೯); ಧರಣಿಪತಿ ವಂದ್ಯನಲ್ಲವೆ (ಜೈಮಿಭಾ. ೨೬-೬೧). ೩. ಹೊಗಳಲು ಅರ್ಹನಾದವನು : ಬಂಧು ಬಳಗವ ಸಲಹಿ ಭೂಸುರವೃಂದವನು ನೆಟ ಹೊರೆವಡೆವ ಸುತ ವಂದ್ಯನೈ ಲೋಕಕ್ಕೆ (ಕುಮ್ಮಾಉ. ೩-೮೧). [ಸಂ.]

**ವಂದ್ಯತೆ** (ನಾ).೧. ಹೊಗಳಲು ಅರ್ಹವಾಗಿರುವಿಕೆ . ೨. [ಜೈನ] ಪರಿವ್ರಾಜಕರ ಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು : ವಂದ್ಯತೆಯೆಂಬುದು ಪರಮವಂದ್ಯನಪ್ಪರ್ಹದ್ದೇವನಂ ಭಕ್ತಿಯಿಂ ಬಂದಿಸಿ ತಪದೊಳ್ ನೆಗಳ್ದೊಡೆ ದಿವ್ಯವಿಜಯ ಪರಮಾನುಪಮವಂದನೆಗಳಂ ಪಡೆಗುಂ (ಚಾವುಂಪು. ೫೦.೧). [ಸಂ. ವಂದ್ಯತಾ]

**ವಂದ್ಯೆ** (ನಾ). ನಮಸ್ಕರಿಸಲು ಅರ್ಹಳಾದವಳು. [ಸಂ. ವಂದ್ಯಾ]

**ವಂಧುರ** (ನಾ). ರಥದಲ್ಲಿ ಸಾರಥಿಯು ಕುಳಿತುಕೊಳ್ಳುವ ಸ್ಥಳ. [ಸಂ.]

**ವಂಧ್ಯ** (ಗು). ೧. ಬರಡಾದ ; ಬಂಜರಾದ. ೨. ಪ್ರಯೋಜನವಿಲ್ಲದ ; ನಿಷ್ಫಲವಾದ. (ನಾ). ೩. ಬರಡಾದುದು ; ಬಂಜರು : ಚಂದ್ರತಲವು ಜನರಹಿತವಾದುದೆಂಬುದನ್ನು, ವಂಧ್ಯವೂ ಶೂನ್ಯವೂ ಆದ ಅದರ ಮುಖಭಾವವು ಪ್ರತಿಪಾದಿಸುವುದು (ಜ್ಯೋತಿರ್ವಿ. ೨೨೭). ೪. ಮಕ್ಕಳಿಲ್ಲದವನು ; ಸಂತಾನವಿಲ್ಲದವನು : ವಂಧ್ಯನಪವರ್ಗತ್ವಮಿಲ್ಲೆನುತೊದಱಿದುದು ವೇದಂ (ಶಂಕರಾ. ೧೬-೧೬). [ಸಂ.]

**ವಂಧ್ಯಾಪಕ್ಷಿ** (ನಾ). ಮಕ್ಕಳಿಗೆ ಬರುವ ಒಂದು ಬಗೆಯ ರೋಗ ; ಹಕ್ಕಿರೋಗ : ವಂಧ್ಯಾಪಕ್ಷಿದೋಷಲಕ್ಷಣವೆಂತೆನೆ: — ಬಹುಬಳಲಿಕೆ, ನೆತ್ತಿವಾಯ ಕುಳಿಬಿದ್ದಿಹುದು, ಕಾರುವುದು . . . ಉರಿತಾಪ ಉಂಟಾಗಿಹುದು. ಈ ಲಕ್ಷಣ ಉಂಟಾದರೆ ವಂಧ್ಯಾಪಕ್ಷಿ ಹಿಡಿದಿದೆ ಎಂದು ತಿಳಿವದು (ವೈದ್ಯಸಾ. II, ೧೨). 'ಪಕ್ಷಿಗ್ರಹ' ಹೋ. [?]

**ವಂಧ್ಯಾಲಯ** (ನಾ). ಬಂಜೆಯ ಮನೆ ; ಮಕ್ಕಳಿಲ್ಲದ ಮನೆ : ಸಲೆ ವಂಧ್ಯಾಲಯದಂತಿರೆ ಪಲಕಾಲಂ ಪುಷ್ಪವತಿಯೆನಾದಪೆನೆಂದುಂ ಫಲವತಿಯಾದ ಪೆನಿಲ್ಲೆಂದು ಲತಾಲಲಿತಾಂಗಿ ಬಾಡಿ ಪಾಡಟಿದೆಂಗುಂ (ಸುಕುಮಾ. ೯-೯೮). [ಸಂ.]

**ವಂಧ್ಯೆ** (ನಾ). ೧. ಬಂಜೆ ; ಮಕ್ಕಳಾಗದವಳು : ವಂಧ್ಯಾಸತಿಯಾಗಿ [ಮಾಯ್ದೆ] ಪಿರಿದುಂ ದುಃಖಿಕ್ಕಿದೇಂ ನೋಂತೆನೋ (ಸುಕುಮಾ. ೯-೧೦೩). ೨. ಬಂಜೆಯಾದ ಹಸು ; ಗೊಡ್ಡು ಆಕಳು : "ವಶಾ, ವಂಧ್ಯಾ — ೨ ಬಂಜೆಯಾದ ಆಕಳು" (ಸಿದ್ಧಾಂತಿ. ೨೯೪).

**ವಂಧ್ಯಾಸ್ತನಂಧಯ** = ೧. ಬಂಜೆಯ ಹಾಲು ಕುಡಿಯುವವನು ; ಬಂಜೆಯ ಮಗ. ೨. (ಅಲಂ) ಅಸಂಭವವಾದುದು ; ಅವಾಸ್ತವವಾದುದು : ಕ್ಷಣಿಕಪ್ರತಿಜ್ಞೆ ಜೀವನೊಳೊಣರದು ವಂಧ್ಯಾಸ್ತನಂಧಯಪ್ರತಿಮಮದಂ ಗುಣಿ ದೂಷಿಸೆ ಯುಕ್ತಿಗಳಿಂ ಕ್ಷಣಾರ್ಧಮುಂ ನಿಲ್ಲದು (ಶಾಂತಿಪು. ೮-೧೪೪); ನಿನ್ನ ಕಾಣ್ಕೆಗೆ ಪೊಱಗಾದಾ ವಸ್ತು ಭುವನದೊಳ್ ಪರಿಭಾವಿಸೆ ವಂಧ್ಯಾಸ್ತನಂಧಯೋಪಮಮಲ್ತೇ (ಚಂದ್ರಪು. ೩-೭). [ಸಂ. ವಂಧ್ಯಾ]

**ವಂಪಳ್ಳಿ** (ನಾ). ಒಂದು ಊರಿನ ಹೆಸರು : ಚೋಳಿಗ ಮೊಟವೆರೆಯಾರ್ಮ್ಮಂಗೆ ಕೆಟಿಗೊಡಗೆಯ ರಾಜಾಮಾನಂ ಮೂಗಣ್ಣುಗಗಟ್ಟೆ ವಂಪಳ್ಳಿ ಸಾಮ್ಯವ ದಯಗೆಯ್ದು (ಎಕ. XII, ಮಧ್ಯಗಿ. ೧೦೨-೧೮. ಸು. 900 ?). [< ವನ$_3$ + ಪಳ್ಳಿ$_1$]

**ವಂಶ** (ನಾ). ೧. ಕುಲ ; ಸಂತತಿ : ಆತನಿಂದವ್ಯವಚ್ಛಿನ್ನಮಾಗಿ ಬಂದ ವಂಶಂ ಸೂರ್ಯವಂಶಮೆಂಬುದಾಯ್ತು (ಪಂಪಭಾ. ೧-೭೦ ವ); ಶ್ರೀಮದಮೃತಾಂಶು ವಂಶವ್ಯೋಮಾಮೃತಕಿರಣಂ . . . ಸಾಹಸಭೀಮಂ (ಗದಾಯು. ೩-೧). ೨. ಒಂದು ಬಗೆಯ ಹುಲ್ಲಿನ ಜಾತಿಗೆ ಸೇರಿದ ಸಸ್ಯ ; ಬಿದಿರು : ಶಿಥಿಲತ್ವಂಬಡೆದಿರ್ಪ ವಂಶವೊರೆಯಲ್ ಕಿಚ್ಚೇಳದೇ (ಸೋಮೇಶ. ೮೮); ಕಂಠೀರವನವಿರಳ ಬಹಳವಂಶಶಿಂಶಪಾಶಮಿ ಶಿರೀಷ . . . ಭೂಜರಾಜಿಪರಿಕ್ಷೇಪದೊಳ್ . . . ಉಪಶಮಭಾವಮಂ ಕೆಯ್ಕೊಂಡಿರ್ಪಿನಂ (ವರ್ಧಮಾ. ೫-೭೨ ವ). ೩. ಬಿದಿರಿನಿಂದ ಮಾಡಿದ ವಾದ್ಯ ; ಕೊಳಲು ; ವೇಣು : ಕಾಹಳ ಶಂಖವಂಶ ವೀಣಾಸ್ವರಂಗಳೆಸೆಯೆ (ವಡ್ಡಾರಾ. ೮೪-೧); ಜನಿಯಿಸೆ ವೀಣಾಕ್ವಣಮುರಜನಿನದ ತಾಳಪ್ರಣಾದವಂಶಧ್ವನಿಗಳ್ ಜನಮನೊರಲ್ದಿದುವು (ಆದಿಪು. ೫-೧೩). ೪. ಬೆನ್ನಿನ ಮೂಳೆ ; ಕಶೇರ : "ನಿಟ್ಟೆಲುವಿನಲ್ಲಿಯುಂ ವಂಶಮೆಂಬುದು" (ಹಲಾಯು. ೧೩೪-೧೭). ೫. ಗುಂಪು; ಸಮೂಹ. ೬. ಕಬ್ಬು. ೭. ಒಂದು ಬಗೆಯ ಮರ ; ಮತ್ತಿ. [ಸಂ.]

**ವಂಶಕಥನ** (ನಾ). ಪುರಾಣ, ಕಾವ್ಯ ಇತ್ಯಾದಿಗಳಲ್ಲಿ ಬರುವ ರಾಜಕುಲದ ಚರಿತ್ರೆಯ ನಿರೂಪಣೆ : ಮಹಾಭಾರತದ ೧೮ ಪರ್ವಗಳಲ್ಲಿ ಬರುವ ಕಥಾಸಾರಾಂಶ ಇಷ್ಟು: — ವರ್ಣನೀಯರಾದ ನಾಯಕರುಗಳ ವಂಶಕಥನ, ಉತ್ಪತ್ತಿ ಮತ್ತು ಬಾಲ್ಯ (೧ ಆದಿಪರ್ವ) (ಭಾರದ. ೯೯). 'ವಂಶಾನುಚರಿತ' ಪರಾ. [ಸಂ.]

**ವಂಶಕರ** (ಗು). ೧. ಕುಲವನ್ನು ಬೆಳಗುವ ; ವಂಶವನ್ನು ಊರ್ಜಿತಗೊಳಿಸುವ : ವಂಶಕರಸಂತಾನಮಂ ಕಾಣದಾ ನೃಪತಿ . . . ಕುಟುಕುಕೊಡುತಿರ್ದ ತಾಯ್ಪಕ್ಕಿಯಂ ಕಂಡು, ಕಣ್ ನಟ್ಟು, ಕಾಲ್ ನಟ್ಟು ನಿಂದನು ಮರಂಬಟ್ಟು (ಶ್ರೀರಾಮಾ. ೮-೧೯). (ನಾ). ೨. ಮಗ. [ಸಂ.]

**ವಂಶಚ್ಛೇದ** (ನಾ). ೧. ಕುಲವನ್ನು ನಾಶಪಡಿಸುವುದು : ದುರ್ಯೋಧನಗೆ ನಾನಾಚಂದದಲಿ ಬೋಧಿಸಿ ಸುನೀತಿಯನಂದಗೆಡಿಸಿ ತದೀಯವಂಶಚ್ಛೇದಮಾರ್ಗವನು ಒಂದುಗೂಡಿ . . . ಕಳಿಂಗನೆ ಲೋಕವ ಕೊಂದನೆ (ಕುವ್ಯಾಆ. ೮-೫೪). ೨. ಬಿದಿರನ್ನು ಕತ್ತರಿಸುವುದು : ಸಂಶಯಮೇಂ ನಿಲ್ವುಯ್ ನಿಜವಂಶಾಗತಮಪ್ಪ ವೃತ್ತಿಯೊಳ್ ಕರವಾಳಿಂ ವಂಶಚ್ಛೇದಮುಮಂ ಖರವಂಶಚ್ಛೇದಮುಮನೊಡನೆ ಪಡೆದತಿಬಳನಿಂ (ಪಂರಾಮಾ. ೯-೧೩೪). ೧,೨ : ವಂಶಚ್ಛೇದಂ ಮೇದಜೊಳ್ . . . ಪಂಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗಪಿ. ೨-೧ ವ). [ಸಂ.]

**ವಂಶಚ್ಛೇದಿ** (ನಾ). ಬಿದಿರನ್ನು ಕತ್ತರಿಸಿ ಕುಕ್ಕೆ, ಚಾಪೆ ಮೊದಲಾದುವನ್ನು ಮಾಡುವ ವೃತ್ತಿಯುಳ್ಳವನು ; ಮೇದ : "ವಂಶಚ್ಛೇದಿ ಚಪಕಾರಕಂ" (ಮಂಗರಾ. ೧೧೧-೨). [ಸಂ. ವಂಶಚ್ಛೇದಿನ್]

**ವಂಶಜ** (ನಾ). ೧. ಕುಲದಲ್ಲಿ ಹುಟ್ಟಿದವನು ; ಪೀಳಿಗೆಯಲ್ಲಿ ಬಂದವನು ; ಸಂತಾನ : ವಂಶವಾಚಾರಂ ಮೆಚೆವ ಮದ್ವಂಶಜನೆ ಬೇಕು (ಬಸವು. ೨೪-೭). ೨. ಕುಲಜ ; ಸತ್ಕುಲದಲ್ಲಿ ಜನಿಸಿದವನು : ಶಿಷ್ಟರಶಿಷ್ಟಮೆನೆ ವಂಶಜರವಂಶಮೆನೆ . . . ಪಾಸಜೆಯೊಳ್ ಕೂಸನಪ್ಪಳಿಸಿ ಬಾಲನಿಬರ್ಹಣಗರ್ಹಣಾತಿರೇಕದಿಂ ಗತಶ್ರೀಕವಾಗಿ ನಿಜರಾಜಮಂದಿರಮಂ ಪೊಕ್ಕಂ (ಜಗಪಿ. ೨-೫೩ ವ). ೩. ಬಿದಿರಕ್ಕಿ. [ಸಂ.]

**ವಂಶದೊತ್ತು** (ನಾ). ವಂಶಪಾರಂಪರ್ಯವಾಗಿ ದುಡಿಯುವ ತೊತ್ತು, — ಸೇವಕ ; ಜೀತದಾಳು : ಬಳಿದೊತ್ತು ಬಳಗದೊತ್ತು ವಂಶದೊತ್ತು ನಾನಯ್ಯಾ (ಬಸವ. ೬೫೩). [ವಂಶ + ತೊತ್ತು (< ತೊಟ್ಟು)]

**ವಂಶರೋಚನ** (ನಾ). ಬಿದಿರಿನ ಗಿಣ್ಣುಗಳಲ್ಲಿ ದೊರೆಯುವ, ಔಷಧಿಗೆ ಉಪಯೋಗಿಸುವ ಒಂದು ಬಗೆಯ ಉಪ್ಪು ; ಬಿದಿರುಪ್ಪು : "ತುತ್ಥಾ — ತವಕ್ಷೀರ, ವಂಶರೋಚನ" (ಒಷಧಿ. ೭೦). [ಸಂ. ವಂಶರೋಚನಾ]

**ವಂಶರೋಚನೆ** (ನಾ). = ವಂಶರೋಚನ : "ತ್ವಕ್ಕ್ಷೀರಾ (ತ್ವಕ್ಷೀರಂ), ವಂಶರೋಚನಾ–೨ ತವಕ್ಷೀರದ ಹೆಸರುಗಳು" (ಸಿದ್ಧಾಂತಿ. ೩೦೭). [ಸಂ. ವಂಶರೋಚನಾ]

**ವಂಶಲೋಚನ** (ನಾ). = ವಂಶರೋಚನ : "ತ್ವಕ್ಸಾರಿಕಾ-ವಂಶಲೋಚನ" (ಒಷಧಿ. ೭೭). [ಸಂ. ವಂಶಲೋಚನಾ]

**ವಂಶವಿಹೀನ** (ನಾ). ೧. ಸಂತಾನವಿಲ್ಲದವನು ; ಅಪುತ್ರಕ. ೨. ಹೀನಕುಲದಲ್ಲಿ ಹುಟ್ಟಿದವನು ; ಸತ್ಕುಲಪ್ರಸೂತನಲ್ಲದವನು : ದಾನವಾಂತಕ ಬೆಸಸು ವಂಶವಿಹೀನನ ನಿಮ್ಮಡಿಗಳೊಡನೆ ಸಮಾನಿಸುವರೇ ಸಾಕೆನುತ ರವಿಸೂನು ಕೈಮುಗಿಯೆ (ಕುವ್ಯಾಉ. ೧೦-೪). [ಸಂ.]

**ವಂಶವೃಕ್ಷ** (ನಾ). (ಸಾಮಾನ್ಯವಾಗಿ ರಾಜರು, ಪ್ರಮುಖವ್ಯಕ್ತಿಗಳು ಮುಂತಾದವರ) ಮೂಲಪುರುಷನಿಂದ ಆರಂಭಿಸಿ ಎಲ್ಲ ಪಿತೃಗಳನ್ನೂ ಹೆಸರಿಸಿ ಪ್ರತಿಯೊಬ್ಬನ ಸ್ಥಾನವನ್ನೂ ನಿರ್ದೇಶಿಸುವ ವಿವರ ; ವಂಶಪರಂಪರೆ ; ವಂಶಾವಳಿ ; ☞ ಕೆಲವು ವೇಳೆ ವೃಕ್ಷದ ಆಕಾರದ ನಕಾಶೆಯಲ್ಲಿ ವಂಶಾವಳಿಯು ಸೂಚಿತವಾಗಿರುತ್ತದೆ : ಈ ವಂಶವೃಕ್ಷವನ್ನು ಸಮರ್ಥಿಸುವುದಕ್ಕೆ ಗ್ರಂಥಕರ್ತರು ಈ ರೀತಿ ವಾದಿಸಿದ್ದಾರೆ (ಕರ್ಣಾಇ. ೧೨); ಇವರ ವಂಶವೃಕ್ಷವು ಹೇಮಾವತಿಸ್ತಂಭಶಾಸನದಲ್ಲಿ ಹೇಳಿರುವಂತೆ, ಈಶ್ವರವಂಶಜರೆಂದು . . . ತಿಳಿಯುತ್ತದೆ (ನೊಳಂಬ. ೯). [ಸಂ.]

**ವಂಶವೃದ್ಧಿ** (ನಾ). ೧. ಕುಲದ ಏಳಿಗೆ ; ವಂಶದ ಅಭಿವೃದ್ಧಿ : ಮಕ್ಕಳನ್ನು ಪಡೆಯಲು ಸಾಮರ್ಥ್ಯವಿಲ್ಲದ ಗೃಹಸ್ಥನು ಕೇವಲ ವಂಶವೃದ್ಧಿಯ ಉದ್ದೇಶದಿಂದ ಕೆಲವು ಶಾಸ್ತ್ರಕರ್ಮಗಳೊಡನೆ ಮತ್ತೊಬ್ಬನನ್ನು ತನ್ನ ಪತ್ನಿಯೊಡನೆ ಬಿಡುತ್ತಿದ್ದ (ವಂಶವ್ಯ. ೪೪೨). ೨. ದಟ್ಟವಾಗಿ ಬೆಳೆದ ಬಿದಿರಿನ ಪೊದರು, — ಮೆಳೆ. [ಸಂ.]

**ವಂಶಸ್ಥ** (ನಾ). ೧. ಒಳ್ಳೆಯ ಕುಲಕ್ಕೆ ಸೇರಿದವನು ; ಉತ್ತಮ ಮನೆತನದಿಂದ ಬಂದವನು ; ಸತ್ಕುಲೀನ. ೨. [ಛಂದ] ಒಂದು ಅಕ್ಷರವೃತ್ತದ ಹೆಸರು ; ಪ್ರತಿಪಾದದಲ್ಲಿಯೂ ಹನ್ನೆರಡು ಅಕ್ಷರಗಳನ್ನು ಹೊಂದಿದ್ದು, ಜತಜರಗಣಗಳನ್ನು ಉಳ್ಳ ಜಗತಿ ಛಂದಸ್ಸಿನ ಒಂದು ಭೇದ : ದಿವಾಕರಾಕಾಶ ದಿನೇಶಪಾವಕರ್ಸುವಿಶ್ರಮಂ ಬಂದಿರೆ ಸಪ್ತಸಂಖ್ಯೆಯೊಳ್ ಸವಿಸ್ತರಂ ನಿಲ್ವಿರೆ ಸಂದುದಿಂತುದಾತ್ತವಂಶೆ ವಂಶಸ್ಥಮೆನಿಪ್ಪ ನಾಮದಿಂ (ಛಂದೋಂಬು. ೨-೧೨೮); ನೆಗಳ್ದ ವಂಶಸ್ಥಮಿರಲ್ ಜತಂಜರಂ (ಕೃಪಿಡಿ. ೮೦). [ಸಂ.]

**ವಂಶಸ್ಥಲ** (ನಾ). ಬಿದಿರುಗಳಿರುವ ಜಾಗ ; ಬಿದಿರುಮೆಳೆ : ಸ್ಥಲರಕ್ತಕಮಲಮಂ ಕೋಮಲಪದತಲಪದ್ಮರಾಗರುಚಿಯಿಂ ವಂಶಸ್ಥಲ[ಪಾಠಾಂ.ಳ]ಮಂ ತನುಪ್ರಭಾಮಂಡಲದಿಂದೆಂಟನೆಯ ಕೇಶವಂ ದ್ವಿಗುಣಿಸಿದಂ (ಪಂರಾಮಾ. ೯-೨೦). [ಸಂ.]

**ವಂಶಾನುಚರಿತ** (ನಾ). ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ ಮತ್ತು ವಂಶಾನುಚರಿತ ಎಂಬ ಪುರಾಣದ ಪಂಚಲಕ್ಷಣಗಳಲ್ಲಿ ಒಂದು ; ರಾಜಕುಲದ ಚರಿತ್ರೆಯ ನಿರೂಪಣೆ; ವಂಶಕಥನ : ವಂಶಾನುಚರಿತ – ಸೂರ್ಯ ಚಂದ್ರವಂಶಗಳ ಮತ್ತು ಆ ವಂಶದ ಪ್ರಸಿದ್ಧ ರಾಜರ ಚರಿತ್ರೆ (ಭಾರದ. ೧೩೫). [ಸಂ.]

**ವಂಶಾವತಾರ** (ನಾ). ಕುಲದ ಉಗಮ, — ಆರಂಭ : ಸಮಸ್ತವಸ್ತುವಿಸ್ತಾರ ಹಾರಮಾಗಿರ್ದ ಹಸ್ತಿನಪುರವೆ ನಿಜವಂಶಾವಳಂಬಮಾಗೆ ನೆಗಳ್ದ ಭರತಕುಲತಿಲಕರ ವಂಶಾವತಾರಮೆಂತಾದುದೆಂದೊಡೆ (ಪಂಪಭಾ. ೧-೫೮ ವ); ಶ್ರೀಮತ್ ಶಾಸ್ತ್ರಿವರ್ಮರಸರ ವಂಶಾವತಾರಮೆಂತೆಂದೊಡೆ (ಸೌಇಇ. XX, ೧೮-೧೦; ೯೪೦). [ಸಂ.]

**ವಂಶಾವಳಿ** (ನಾ). ಪೀಳಿಗೆ ; ವಂಶಾನುಕ್ರಮ : ಇಂತೀ ಮೂವರುಂ ಬಂದ ವಂಶಾವಳಿಯುಮಂ ನಿಜಾವಳಿಯುಮನೊಳ್ಳಿತ್ತಾಗಿ ಪೇೞ್ದೀ ನಿನ್ನ ಚೆನ್ನಭಾಷಿತಮದೊಳ್ಳಿತ್ತಾದುದು (ಗದಾಯು. ೨-೮ ವ); ಮೋರೆಸರ ಕದಂಬಕುಲದಲ್ಲಿ ಕದಂಬರ ವಂಶಾವಳಿಯು ಹೀಗೆ ಕೊಡಲ್ಪಟ್ಟಿದೆ (ಕರ್ಣಾಇ. ೧೧). [ಸಂ. ವಂಶಾವಲಿ]

**ವಂಶಾಸನ** (ನಾ). ಬಿದಿರಿನಿಂದ ಹೆಣೆದ ಚಾಪೆ : "ವಂಶಾಸನಂ ಚಾಪೆ" (ಮಂಗರಾ. ೬೨-೨೧); ಬರಿಯ ಧರೆ ಆಸನದಿ ದುಃಖವು ಸರಿಯ ವಂಶಾಸನ ದರಿದ್ರವು (ಗಗಹಾ. ೪-೨೨). [ಸಂ.]

**ವಂಶಿಕ** (ಗು). ೧. ಕುಲಕ್ಕೆ ಸಂಬಂಧಿಸಿದ. ೨. ಬಿದಿರಿಗೆ ಸಂಬಂಧಿಸಿದ. (ನಾ). ೩. ಸಂತತಿಯಿಂದಾದುದು ; ಪೀಳಿಗೆಯಿಂದಾದುದು : ಗುರುಸ್ಥಲ ಭಕ್ತವಂಶಿಕ ಲಿಂಗಸ್ಥಲ ಮಹೇಶ್ವರವಂಶಿಕ ಜಂಗಮಸ್ಥಲ ಪ್ರಸಾದಿವಂಶಿಕ (ಮೋಳಿಮಾ. ೧೩೭-೫೩೭). ೪. ವಂಶದಲ್ಲಿ ಬಂದವನು ; ವಂಶಸ್ಥ : ಅವನ ವಂಶಕ್ಕೆ ಭರತವಂಶವೆಂದೂ ಅವನ ವಂಶಿಕರಿಗೆ 'ಭಾರತ'ರೆಂದೂ ಹೆಸರಾಯಿತು (ವಚಭಾ. ೩೯೬); ಈತನ ವಂಶಿಕರ ವಿಷಯವಾಗಿಯೂ ಕೆಲವು ಸಂಗತಿಗಳು . . . ಕೈಬರೆಹದ ಕಾಗದದ ಗ್ರಂಥದಿಂದ ತಿಳಿದು ಬರುತ್ತವೆ (ಸಶವ್ಯ. V ಪ್ರಸ್ತಾವನ). ೫. ಒಂದು ಬಗೆಯ ಸುಗಂಧದ್ರವ್ಯ ; ಅಗುರುಚಂದನ. [ಸಂ.]

**ವಂಶೋದ್ಧಾರ** (ನಾ). ಕುಲದ ಉದ್ಧಾರ ; ವಂಶದ ಅಭಿವೃದ್ಧಿ : ವಂಶೋದ್ಧಾರಕ್ಕೆ ಪುತ್ರ ಬೇಕು ಎಂಬ ಸಣ್ಣ ಮಾತು ನನಗೆ ತಿಳಿಯದೆ ? (ಚಟಂಬಾ. ೧೭). [ಸಂ.]

**ವಂಶೋದ್ಧಾರಕ** (ನಾ). ಕುಲವನ್ನು ಉದ್ಧರಿಸುವವನು; ವಂಶವನ್ನು ಬೆಳಗುವವನು: ವಂಶೋದ್ಧಾರಕ ಒಬ್ಬ ಮೊಮ್ಮಗ ಹುಟ್ಟಿದರೆ ಸಾಕು ಎಂದರು (ನಟಾ. ೩೭); ಗಂಡುಮಗು ಹುಟ್ಟಿದಾಗ ಅವನು ವಂಶೋದ್ಧಾರಕ ಜನಿಸಿದನೆಂದು ಆನಂದಪಟ್ಟನು (ಋಥಿ). [ಸಂ.]

**ವಂಶೋದ್ಭವ** (ನಾ). (ಒಂದು ನಿರ್ದಿಷ್ಟವಾದ) ಕುಲದಲ್ಲಿ ಹುಟ್ಟಿದವನು, — ಜನಿಸಿದವನು : ಕ್ರಿ. ಶ. ೯೨೨ರ ಕಡಬಗೆರೆ ಶಾಸನದಲ್ಲಿ ಅಯ್ಯಪದೇವನ ಮಗನಾದ ಅಣ್ಣಿಗನು . . . ಕದಂಬವಂಶೋದ್ಭವ ಕಣ್ಣುವಾರ ಮುದುದರ ದೇವಯ್ಯನ

ಮಗನೊಂದಿಗೆ ಕಾದಿದನೆಂದು ಹೇಳಿದೆ (ನೊಳಂಬ. ೩೭); ವ್ಯಜನದವೋಲಿರ್ಪರಿಳೆಯೊಳು ಸುಜನರು ಚಾರುವಂಶೋದ್ಭವರಿವರು (ಇಂಚಾಪ. ೭೦-೩೬). [ಸಂ.]

**ವಂಸ** (ನಾ). ೧. ವಂಶ ; ಕುಲ : ಅಯ್ದುಕೊಳಗ ಗೆಟ್ದೆಯುಮಂ ಈ ವಂಸದ **ಪುಟ್ಟಿದವರ್ ಕಾದಿರಿಸುಗೆ** (ಎಕ. III(R), ಹೆಗ್ಗದ. ೬೦-೩೪; 1057); ಮನ್ನೆಯ ವಾಯದಾಯ ಮಾನ್ಯ ಸಲ್ಲುವು ಸರ್ವನಮಸ್ಯಮೆಂದು ಬಿಟ್ಟಂ ನೆಗಳ್ದಂ ಡಾಕಮಣ್ಣಾಳಿಕನಚ್ಚರಿ ತನ್ನಯ ವಂಸಮುಳ್ಳಿನಂ (ಸೌಇಇ. XX, ೮೫-೩೨ ; 1124). ೨. ಕೊಳಲು : 'ವಂಸಕಾಟಿ' ಪರಾ. [< ಸಂ. ವಂಶ]

**ವಂಸಕಾಟಿ** (ನಾ). ಕೊಳಲನ್ನು ಬಾಜಿಸುವವ[illegible] ಮತ್ತರು ೧೦ ವಂಸಕಾಟಿಂಗೆ ಮತ್ತರು ೫ (ಸೌಇಇ. IX - i, ೧೩೩-೩೦; 1068). [ವಂಸ + – ಕಾಟಿ]

**ವಂಸಿಗ** (ನಾ). = ವಂಸಕಾಟಿ : ಸೂಳೆವಾಳಂಗೆ ಮತ್ತರ್ಪ್ಪನ್ನೆರಡು ವಂಸಿಗರಿರ್ವ್ವರ್ಗ್ಗೆ ಮಾಗಿ ಮತ್ತರಿರ್ಪ್ಪತ್ತನಾಲ್ಕು (ಸೌಇಇ. IX-i, ೧೦೧-೫೧; 1045); ವಂಸಿಗಂಗೆ ಮತ್ತರ್ ೧೦ ಪಾಡುವರಿರ್ಬ್ಬರ್ಗ್ಗಂ ಮತ್ತರ್ ೩೦ (ಸೌಇಇ. XI - i, ೧೦೩-೨; ?). [ವಂಸ + – ಇಗ]

**ವಕಾರ** (ನಾ). 'ವ' ಎಂಬ ಅಕ್ಷರ : ಅನುನಾಸಿಕ ವಕಾರಕ್ಕೆ — ಸೇವಂ, ಸೋವೆ, ಸಾವೆ, ಜಾವಂ (ಶಮದ. ೧೬ ಪ್ರಯೋ). [ಸಂ.]

**ವಕಾಲತ್** 'ವಕಾಲತ್ತು' ನೋ.

**ವಕಾಲತ್‌ನಾಮೆ** 'ವಕಾಲತ್ತುನಾಮೆ' ನೋ.

**ವಕಾಲತಿ** 'ವಕಾಲತ್ತು' ನೋ.

**ವಕಾಲತ್ತು, ವಕಾಲತ್, ವಕಾಲತಿ** (ನಾ). ೧. ನ್ಯಾಯಾಸ್ಥಾನದಲ್ಲಿ ಯಾವುದಾದರೂ ಮೊಕದ್ದಮೆಯಲ್ಲಿ ವಾದಿ ಅಥವಾ ಪ್ರತಿವಾದಿಯ ಪರವಾಗಿ ಪ್ರಶ್ನೋತ್ತರ ಅಥವಾ ವಾದವಿವಾದ ಮಾಡುವ ವೃತ್ತಿ ,—ಉದ್ಯೋಗ ; ವಕೀಲಿ : ಉಚ್ಚತಮನ್ಯಾಯಾಲಯದ ನ್ಯಾಯಾಧೀಶಪದಧಾರಣ ಮಾಡಿದ್ದವರು ಯಾರೊಬ್ಬರೇ ಆಗಲಿ . . . ಯಾವುದೇ ಪ್ರಾಧಿಕಾರಿಯ ಸಮಕ್ಷಮ ವಕಾಲತ್ತನ್ನಾಗಲಿ ಕಾರ್ಯವನ್ನಾಗಲಿ ನಡೆಯಿಸತಕ್ಕುದಲ್ಲ (ಭಾಧಾನ. ೬೮); ನೀವು ಈ ಮೊಕದ್ದಮೆಯಲ್ಲಿ ವಕಾಲತ್ತು ವಹಿಸಬೇಕು(ಚಿತ್ರಕೂ. ೧೫೪). ೨. ಇನ್ನೊಬ್ಬರ ಪರವಾಗಿ ವಾದಿಸುವುದು ; ಪಕ್ಷ ವಹಿಸಿಕೊಳ್ಳುವುದು : ನೀನು ಇಷ್ಟು ಹೊತ್ತೂ ಅವಳ ಪರ ಮಾಡಿದ ವಕಾಲತ್ತು ನೋಡಿ ಅವಳ ನಡತೇನ ಒಪ್ಪಿದೀಯಾ ಅಂದುಕೊಂಡಿದ್ದೆನಮ್ಮ ! (ನಿಂದನೆ. ೧೯೪); ಹಾಗೆಲ್ಲ ಮನಸ್ಸಿದ್ದರೆ, ದೊಡ್ಡಪ್ಪನನ್ನು ಕೇಳಲು ಬೇರೆಯವರ ವಕಾಲತ್ತು ಅಗತ್ಯವಿದೆಯೆ? (ವಾತ್ಸಲ್ಯ. ೧೧೦). ೩. ನ್ಯಾಯಾಲಯದಲ್ಲಿ ತನಗಾಗಿ ಮೊಕದ್ದಮೆ ನಡೆಸಲು ಮತ್ತೊಬ್ಬ ವ್ಯಕ್ತಿಯನ್ನು ನಿಯಮಿಸುವ ಅಧಿಕಾರವನ್ನು ಸೂಚಿಸುವ ಪತ್ರ ,—ದಾಖಲೆ : ತಮ್ಮ ಕಡೆ ಯಾರಾದರೂ ಒಬ್ಬನಿಗೆ ತಮ್ಮ ಹೆಸರಿನ ವಕಾಲತ್ತಿನ ಕಾಗದ ಸಹಾ ಮುಂಬಯಿಗೆ ಕಳುಹಿಸಿ . . . ಹಣ ವರ್ಷಂಪ್ರತಿಯಲ್ಲು ಅವರಿಗೆ ಕೊಡಿಸಬೇಕು (ರಾಜೇಂದ್ರ. ೨೧೪). **ವಕಾಲತ್:** ೩. 'ವಕಾಲತ್‌ನಾಮೆ' ಪರಾ. **ವಕಾಲತಿ :** ೨. ಮೊದಲೇ ಛಂದಸ್ಸಿನ ಸಂಬಂಧದಲ್ಲಿ ವಕಾಲತಿ ಮಾಡುವುದು, ಪ್ರಾಯಶಃ ಅತಿಯೆಂದು, ಅನೇಕರಿಗೆ ಎನ್ನಿಸಬಹುದು (ನಿಬಂಧ. II, ೨೫೨). ೪. ನ್ಯಾಯಶಾಸ್ತ್ರ; ಕಾನೂನುಶಾಸ್ತ್ರ : 'ವಕಾಲತಿ' ಯನ್ನು ಓದಬೇಕೆಂದು ಅವನು ಆಲೋಚಿಸಿದ್ದನು (ಸರಳಾ. ೯೧).

[<— ಅರ. ಹಿಂ. ವಕಾಲತ್; ಮರಾ. ವಕಲಾತ್, ವಕಾಲತ್]

**ವಕಾಲತ್ತುನಾಮೆ, ವಕಾಲತ್‌ನಾಮೆ** (ನಾ). = ವಕಾಲತ್ತು ೩ : ಆದ್ದರಿಂದಲೇ ಒಂದು ಇತಿಹಾಸಕ್ಕೆ ಎರಡು ವಿರುದ್ಧಕಕ್ಷಿಗಳಲ್ಲಿ ವಕಾಲತ್ತುನಾಮೆ ಕೊಟ್ಟಿರುತ್ತದೆ (ನಿಬಂಧ.II, ೨೭೮); ಅವೇ ಪಾತ್ರಗಳಿಂದ ವಕಾಲತ್ತುನಾಮೆ ಹಾಕಿಸಿಕೊಂಡವರಂತೆ ಜಗಳಕ್ಕೆ ನಿಲ್ಲುತ್ತಿದ್ದಾರೆ (ಯಕ್ಷಬ. ೬). **ವಕಾಲತ್‌ನಾಮೆ :** ವಕಾಲತ್‌ನಾಮೆಯ ಮೇಲೂ ಸದರಿ ರೆಗ್ಯುಲೇಷನ್ ಮೇರೆಗೆ ಯಾವ ರುಸುಮನ್ನೂ ವಸೂಲ್ಮಾಡತಕ್ಕದ್ದಲ್ಲ (ಗ್ರಾಮಾಕ. ೪೪).

[ವಕಾಲತ್ತು + ನಾಮೆ$_2$./ ಹಿಂ. ಮರಾ. ವಕಾಲತ್‌ನಾಮಾ]

**ವಕೀಲ** (ನಾ). ೧. ನ್ಯಾಯಶಾಸ್ತ್ರದಲ್ಲಿ ಪದವಿಯನ್ನು ಪಡೆದು, ನ್ಯಾಯಾಸ್ಥಾನದಲ್ಲಿ ವಾದಿ ಅಥವಾ ಪ್ರತಿವಾದಿಯ ಪರವಾಗಿ ಪುರಾವೆಗಳ ಸಹಿತ ವಾದಮಾಡಲು ಶ್ರೇಷ್ಠನ್ಯಾಯಾಲಯದಿಂದ ಅಧಿಕಾರವನ್ನು ಪಡೆದವನು ; ವಕಾಲತ್ತು ಮಾಡುವವನು ; ಲಾಯರು : ಮೊಕದ್ದಮೆಗಳಿಗೆ ಫೀಜು ಏರ್ಪಾಡಾಗಿ ಈ ಬಾಬಿನಿಂದ ವಸೂಲಾದ ಹಣದ ಮೂರು ಪಾಲಿನಲ್ಲಿ . . . ಒಂದು ಪಾಲು ಕಕ್ಷಿಗಾರರ ಕಡೆಯ ವಕೀಲರಿಗೆ ಫೀಜಾಗಿ ಸಲ್ಲುತ್ತಿತ್ತು (ಮಹಾವ. II, ೪೫); ಅವುಗಳನ್ನು ತೆಗೆದುಕೊಂಡು ವಕೀಲರ ಮನೆಗೆ ಹೋಗಿ ಕೋರ್ಟಿನಲ್ಲಿ ದಾವೇ ಮಾಡಬೇಕೇ? (ಮೋಹಿನಿ. ೨೪). ೨. ರಾಯಭಾರಿ ; ಪ್ರತಿನಿಧಿ ; ನಿಯೋಗಿ : ಇಕ್ಕೇರಿಯೊಳಿರ್ಪ ಪಾತುಶಾಹನ ವಕೀಲನಾಗಿರುತಿರ್ದ ಜನ್ನೋಪಂತಂಗೆ ಪರಿಧಾನಮನಿತ್ತು ಒಳಗು ಮಾಡಿಕೊಂಡು (ಕೆಳನೃ. ೬-೩೭); ಮಾವಿನಿಸಾಹೇಬರು ವೀರರಾಜೇಂದ್ರವಡೆಯರವರ ಕಂಡು, ಭೇಟಿ ಆಗಿ ವಕೀಲರಾಗಿ ನಿಂತರು (ರಾಜೇಂದ್ರ. ೧೪೨).

[<— ಅರ. ಹಿಂ. ಮರಾ. ವಕೀಲ್]

**ವಕೀಲತನ** (ನಾ). ವಕಾಲತ್ತು ನಡೆಸುವಿಕೆ : ಇವರನ್ನು ವಕೀಲತನಕ್ಕೆ ಕಳುಹಿಸಿ ಇದ್ದೇನೆಯಂತಾ [illegible] ಸ್ಟ್ಯೂಯರ್ಟ್ ಸಾಹೇಬರು ಸಹಾ ಬರದು ಇದ್ದರು (ರಾಜೇಂದ್ರ. ೧೪೨). [ವಕೀಲ + – ತನ]

**ವಕೀಲಿ** (ನಾ). = ವಕಾಲತ್ತು ೧ : ವಕೀಲಿ ಕಲಿಯಲಿಕ್ಕಂತ ಹೋದಾಗ ಅವರಪ್ಪ ತೀರಿಕೊಂಡು ಎಲ್ಲಾ ಗೋಳಿಗೆ ಹಾಕಿ ಹೋಗ್ಯಾನ (ಅಜನಾ. ೧೧); ರಾಯರು ಮದರಾಸಿನ ವಕೀಲಿ ಪರೀಕ್ಷೆ ಮಾಡಿದ್ದಾರೆ (ರಾಯಕ. ೧). [<— ಅರ. ಹಿಂ. ಮರಾ. ವಕೀಲೀ]

**ವಕೀಲಿವೃತ್ತಿ** (ನಾ). ನ್ಯಾಯವಾದಿಯ ಕೆಲಸ ; ಲಾಯರನ ಉದ್ಯೋಗ : ಕಲ್ಕತ್ತದಲ್ಲಿ ಅವರ ವಕೀಲಿವೃತ್ತಿ ಚೆನ್ನಾಗಿಯೇ ಸಾಗುತ್ತಿತ್ತು (ರಾಜವ. ೬); ಎಲ್. ಎಲ್. ಬಿ.ಯಾಗಿದ್ದರೂ ನನ್ನಂತೆ ವಕೀಲಿವೃತ್ತಿಯನ್ನು ಪ್ರಾರಂಭಿಸಬಹುದಾಗಿತ್ತು (ನಿರ್ದೋಷಿ. ೬). [ವಕೀಲಿ + ವೃತ್ತಿ]

**ವಕುಲ, ವಕುಳ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು ; ನಾಗಕೇಸರ ; ಬಕುಳ : ಬಾಸಣಿಸಿದುದುತ್ಕಟಕುಸುಮಾಸವಸೌರಭದೆ ದೆಸೆಗಳೊಡನಳಿಕುಳಮಂ . . . ವಕುಲಂ[ಪಾಲಾಂ. ೪೦] (ಆದಿಪು. ೬-೯೭). **ವಕುಳ :** ವನಕುಸುಮಗಳಂ ಬಗೆಗೆವಂದುವನಟ್ಟಿಯೊಳಾಯ್ದು ಕೊಯ್ದು ಮೆಲ್ಲನೆ ವಕುಳಾಳವಾಳತಳದೊಳ್ ಸುರಿದು (ಪಂಪಭಾ. ೨-೧೬); ವಕುಳ ಲವಂಗಂ ಜಾದಿ ಮೊದಲಾದನೇಕಂ ಪೂದೋಂಟಂ ಸುರಭಿಪರಿಮಳಾಮೋದಂಗಳ್ (ಎಕ. VIII, ಸಾಗರ. ೧೦೯-೫೦; 1042); IP ಇದೊಂದು ದೋಹದ ವೃಕ್ಷ. ಸುಂದರಸ್ತ್ರೀಯು ಮದ್ಯವನ್ನು ಇದರ ಮೇಲೆ ಉಗುಳಿದಾಗ ಹೂವು ಬಿಡುವುದೆಂಬ ಕವಿಸಮಯವಿದೆ. [ಸಂ.]

**ವಕುಶ** (ನಾ). [ಜೈನ] ಪುಲಾಕ, ವಕುಶ, ಕುಶೀಲ, ನಿರ್ಗ್ರಂಥ, ಸ್ನಾತಕ ಎಂಬ ಐದು ಬಗೆಯ ಮುನಿವರ್ಗಗಳಲ್ಲಿ ಒಂದು ; IP "ವಕುಶ— ನಿರ್ಗ್ರಂಥ ಭೇದ — ಅಖಂಡಿತಬ್ರಹ್ಮಚರ್ಯ ವ್ರತಿಗಳಾಗಿಯೂ ಶರೀರೋಪಕರಣ ಸಂಸ್ಕಾರ ಯಶೋವಿಭೂತಿಗಳಲ್ಲಿ ಅಶಕ್ತರಾದವರು" (ಜೈನಕೋ. ೨೨೩): ಅಖಂಡಿತವ್ರತರುಂ ಶರೀರಸಂಸ್ಕಾರೋಪಕರಣಸುಖಯಶೋವಿಭೂತಿಭೂಷಾನುವರ್ತಿಗಳುಂ ಅವಿವಿಕ್ತ ಪರಿವಾರರುಂ ಸಕಲಚಾರಿತ್ರರುಂ ಅಪ್ಪ ವಕುಶರುಂ (ತತ್ತ್ವಪ್ರ. ೩೫೬). 'ಬಕುಶ' ಪರಾ. [ಸಂ.]

**ವಕುಷ್ಟಕ** (ನಾ). ಒಂದು ಬಗೆಯ ಧಾನ್ಯ ; ಕಾಡುಹೆಸರು : "ವಕುಷ್ಟಕಂ ವನಮುದ್ಗಂ" (ಮಧುಕೋ. ೯೪-೧೭). [?]

**ವಕುಳ** 'ವಕುಲ' ನೋ.

**ವಕೋಟ** (ನಾ). ಒಂದು ಬಗೆಯ ಹಕ್ಕಿ ; ಕೊಕ್ಕರೆ ; ಬಕಪಕ್ಷಿ: 'ಬಕೋಟ' ಪರಾ. [ಸಂ.]

**ವಕ್ಕಣಿಸು** 'ವರ್ಕ್ಖಾಣಿಸು' ನೋ.

**ವಕ್ಕಣೆ** 'ವರ್ಕ್ಖಾಣ' ನೋ.

**ವಕ್ಕರಿಸು, ಒಕ್ಕರಿಸು** (ಕ್ರಿ). ೧. (ತಿರಸ್ಕಾರಾರ್ಥದಲ್ಲಿ) ಉಂಟಾಗು ; ಒದಗು ; ಪ್ರಾಪ್ತವಾಗು : ಅವರಲ್ಲಿ ಕೆಲವರು ಬಹಳ ಪರಿತಾಪದಿಂದ ತಮಗೆಲ್ಲರಿಗೆ ವಕ್ಕರಿಸಿದ್ದ ಒಂದು ಅಸಹ್ಯವಾದ ಯಾತನೆಯನ್ನು ಹೇಳಿಕೊಂಡರು (ಕೆಲನೆ. ೧೪೭); ನಿನಗೆಲ್ಲೋ ಗ್ರಹಚಾರ ವಕ್ಕರಿಸಿದೆ (ನಮ್ಮಳ. ೯). ೨. ನಷ್ಟವನ್ನು ಉಂಟುಮಾಡು ;

ಹಾನಿಮಾಡು : ಈ ಕೆಲಸ ಮಾಡಿ ಮುಗಿಸಿದ್ರೆ ಪಾಪ ಅಪ್ಪೀಗೆ ಏನಾದರೂ ಇನಾಮು ಕೊಡಬೇಕು. ಆದ್ರೆ ಮುನಸಿಪಲ್ ಪ್ರೆಸಿಡೆಂಟ್ರು ಕೈಬಿಟ್ಟಾರೇನಯ್ಯ ನಮಗೇ ವಕ್ಕರಿಸ್ತಾರೆ (ಎಮುಕ. ೫೬). ೩. (ಇನ್ನೊಬ್ಬರ ಮನೆಯಲ್ಲಿ) ಅನಪೇಕ್ಷಿತವಾಗಿ ಬಂದು ನಿಲ್ಲು ; ನಿಸ್ಸಂಕೋಚವಾಗಿ ಬಂದಿರು ; ದಾಕ್ಷಿಣ್ಯವಿಲ್ಲದೆ ಇರು : ಬಂದು ವಕ್ಕರಿಸಿಯೇ ಬಿಟ್ಟ ಅಕ್ಕಟ ಸೊಳ್ಳೆ ಸಂಗೀತಗಾರ (ಚಂಡಮ. ೩೨-೩). ಒಕ್ಕರಿಸು : ೧. ಫಕ್ಕನೆ ವಸಂತದುರು ಘರ್ಮದೊಳು ದಾಕ್ಷಿಣ್ಯಮೊಕ್ಕರಿಸಲೆಳೆಗಾಳಿಯುರೆ ಬಿಡದೆ ಸುಳಿವಂತೆ ನಸುನಗೆಯನುರೆ ಮಿನುಗಿಸಿ ಒಕ್ಕಣಿಸಿದಳ್ (ಪಾರಕು. ೬-೫). ೩. ನಾಡಿದ್ದು ಒಕ್ಕರಿಸುತ್ತಾನಲ್ಲಾ (ಶನಿಸಂ. ೧೦೯); ನಿನ್ನಂಥ ಶನಿ ಒಕ್ಕರಿಸಿದ ಮೇಲೆ ದೇವರನ್ನು ನಂಬೋದಿಲ್ಲ ಅಂದರೆ ಸಾಧ್ಯವೇ? (ನಿಕಲು. ೨೬೪).

[< ವಕ್ರಿಸು./ ತೆಲು. ವಕ್ಕರಿಂಚು, ವಕ್ಕಳಿಂಚು]

ವಕ್ಕಾಣಿಭಟಾರ (ನಾ). ಒಬ್ಬಾತನ ಹೆಸರು : ವಕ್ಕಾಣಿಭಟಾರರ ಶಿಷ್ಯರ್ ಚಿಲ್ಲುಕಭಟಾರರ ಕಾಲಂ ಕರ್ಚ್ಚಿ ಕೊಟ್ಟ . . . ಕಿಟ್ಟೆಡೆ ಮೂನೂಱುಗಣ್ಡುಗಂ (ಎಕ. XII, ಶಿರಾ. ೨೮-೪೦; 943). [< ವಕ್ಕಾಣ + ಭಟಾರ]

ವಕ್ಖಣ 'ವಕ್ಕಾಣ' ನೋ.

ವಕ್ಖಣಶಾಲೆ (ನಾ). ವಿದ್ಯಾರ್ಥಿಗಳಿಗೆ ಗ್ರಂಥಗಳನ್ನು ವ್ಯಾಖ್ಯಾನ ಮಾಡಿ ಹೇಳುವ ಜಾಗ, —ಮಠ : ತಮ್ಮ ವಕ್ಖಣಶಾಲೆಯಲು ತರ್ಕಶಾಸ್ತ್ರಮಂ ವ್ಯಾಖ್ಯಾನ ಮಾಡುವಂತಾಗಿ ಬಿಟ್ಟ ಗದ್ಯಾಣ ೩೦ (ಸೌಇಇ. XI-ii, ೧೫೯-೩೨; 1111).

[ವಕ್ಖಣ (< ವಕ್ಕಾಣ) + ಶಾಲೆ$_3$]

ವಕ್ಖಣಿಸು 'ವಕ್ಕಾಣಿಸು' ನೋ.

ವಕ್ಖಣೆ 'ವಕ್ಕಾಣ' ನೋ.

ವಕ್ಕಾಣ, ಒಕ್ಕಣೆ$_2$, ವಕ್ಕಣೆ, ವಕ್ಖಣ, ವಕ್ಖಣೆ, ವಖಿಣೆ, ವಖ್ಖಣೆ, ವಖ್ಖಾಣ (ನಾ). ೧. ವಿವರಣೆ ; ವಿಶದವಾದ ನಿರೂಪಣೆ ; ವ್ಯಾಖ್ಯಾನ : 'ವಕ್ಕಾಣಿಸು' ಪರಾ. ಒಕ್ಕಣೆ$_2$ : ೧. ಆ ಕಾಗದದ ಒಕ್ಕಣೆಯನ್ನು ಓದಿ ತಿಳಿಸಲು (ಮುದ್ರಾಮಂ. ೧೬); 'ವಿನಯಪೀಠಕ' ದಲ್ಲಿ ಪ್ರಸೇಂದ್ರರಾಜನ ಚಿತ್ರಶಾಲೆಯನ್ನು ವಿವರಿಸುವ ಹಲವು ಒಕ್ಕಣೆಗಳಿವೆ (ಭಾರದ. ೫೨೩). ೨. ಬರವಣಿಗೆ ; ಬರೆಹ ; ಲೇಖನ : ಲೆಕ್ಕಣಿಯನು ಬಿಟ್ಟು ಸೌಟನು ಹಿಡಿದೆನು ಒಕ್ಕಣೆ ನಿಂತಿತು ಹೀಗೆ (ಇಂಚಾಪ. ೪೮-೩೦); ರಾಜಕುಮಾರ ತಾಮ್ರಪಟದ ಒಕ್ಕಣೆಯನ್ನು ಓದಿದ (ಹಾಹುತ್ತ. ೧೦೩). ವಕ್ಕಣೆ : ೧. ತುರುಷ್ಕ ಜನಾಂತದ ನೃಪನ ಲೇಖನವು ಇಂತೆಂದು ಬಂದುದಿದರ ವಕ್ಕಣೆಯನೇಕಾಂತದೊಳೋದಿಕೊಳ್ಳೆನುತ (ಪ್ರಭಂದು. ೩-೧೨). ೩. ಮಾತಿನ ಶೈಲಿ, —ಸರಣಿ : ಬರಸಿದ ರಾಯಸದ ಬಂಧುರದ ವಕ್ಕಣೆಯಿಂದ ಕಳುಹಿದ ಸುರಥಭೂಪತಿಗೆ (ಸನತ್ಕು. ೧೩-೨೦). ವಕ್ಖಣ: ೧. 'ವಕ್ಖಣಶಾಲೆ' ಪರಾ. ವಕ್ಖಣೆ : ೧. 'ವಕ್ಖಣಿಸು' ಪರಾ. ವಖಿಣೆ : ೧. ಶಿಲಾಶಾಸನದ ವಖಿಣೆಯ ವಿವರ (ಸೌಇಎ. ೧೯೨೯, ಕಾರಕಲ್. ೮೮೨-೩೨; 1391); ಧರ್ಮಶಾಸನದ ಪಟಿಯ ವಖಿಣೆಯ ಕ್ರಮವೆಂತೆಂದರೆ . . . ಭೂಮಿಯ ಚತುಸೀಮೆಯ ವಿವರ (ಸೌಇಇ. IX-ii, ೬೦೯-೯; 1544). ವಖ್ಖಣೆ : ೧. 'ವಖ್ಖಣಿಸು' ಪರಾ. ವಖ್ಖಾಣ: ೧. ವರ್ಗದ್ವಿತೀಯಾಕ್ಷರಂಗಳ್ಗೆ — ವಖ್ಖಾಣಂ, ದೆಖ್ಖಾಣಂ (ದೆಖ್ಖಾಳಂ) (ಶಮದ. ೧೫ ಪ್ರಯೋ).

[< ಪ್ರಾ. ವಕ್ಕಾಣ./ ಸಂ. ವ್ಯಾಖ್ಯಾನ./ ತೆಲು. ವಕ್ಕಣ, ವಕ್ಕಾಣ]

ವಕ್ಕಾಣಿಸು, ಒಕ್ಕಣಿಸು, ಒಕ್ಕಾಣಿಸು, ವಕ್ಕಣಿಸು, ವಕ್ಖಣಿಸು, ವಖ್ಖಣಿಸು, ವಖ್ಖಾಣಿಸು, ವಾಖಾಣಿಸು (ಕ್ರಿ). ೧. ವಿಸ್ತರಿಸಿ ಹೇಳು ; ನಿರೂಪಿಸು ; ವ್ಯಾಖ್ಯಾನ ಮಾಡು : ಭಟಾರರಾರಾಧನೆಯಂ ವಕ್ಕಾಣಿಸುವುದಂ ಕೇಳುತ್ತಿರ್ದಂ (ವಡ್ಡಾರಾ. ೮೩-೩); ತಪೋಧನರ್ಗ್ಗೆ ವಕ್ಕಾಣಿಸುತಮಿರ್ಪ್ಪ ಭಟ್ಟರ್ಗೆ ಮತ್ತರ್ ಮೂವತ್ತು (ಎಕ. XV, ೮೯-೪೨; 1060). ಒಕ್ಕಣಿಸು : ೧. ಕಕ್ಕಸದಿಂದೊಂದು ಬವರ ಬಂದಡಸಿತು ಒಕ್ಕಣಿಸಲು ಬಂದೆ ನಿನಗೆ (ಮೋಹತ. ೧೧-೭); ತೃಣವ ಪರ್ವತವ ಮಾಳ್ಪಂತೆ ನೀವವನನೊಕ್ಕಣಿಸುತಿಹಿರಿ ತೋರ ಮಾಡಿ (ಭರಚ. ೨೪-೯). ೨. ಬರೆಯಿಸು ; ಲೇಖಿಸು : ರಾಜಮಹಾರಾಜರುಗಳಿಗೂ . . . ಹೆಗ್ಗಡೆಗಳಿಗೂ ಅವರವರ ಅಂತಸ್ತು ಗೌರವಗಳಿಗೆ ತಕ್ಕಂತೆ ಒಕ್ಕಣಿಸಿದ ಲಗ್ನದ ಓಲೆಗಳನ್ನು ಯೋಗ್ಯರಾದ ರಾಯಸದವರು ಭಟರು ಒಯ್ದರು (ಶಾಂತಲಾ. ೯೬). ಒಕ್ಕಾಣಿಸು: ೧. ಕವಿಮಾರ್ಗದೊಳ್ . . . ಒಖ್ಖಾಣಿಸಲುಂ ಕವಣಿಸಲುಂ ಕಮ್ಮೆಸಲುಮಿವನಂತಾರ್ ಬಲ್ಲರೆನಿಸಿದಂ ಕವಿರತ್ನಂ (ಅಜಿಪು. ೧-೮೨). ವಕ್ಕಣಿಸು : ೧. ಶಿವನ ಈಶಾನಮೂರ್ತಿಯೆಯವಕ್ಕೆಯಧಿದೇವತೆಯೆನುತ್ತಲಖಿಳಾಗಮಂ ವ [ಪಾಠಾಂ. ಒ] ಕ್ಕಣಿಸುತಿರಲ್ (ಲಶೀಸಿ. ೫೫-೬); ಜಕ್ಕಲಬ್ಬೆಯು ಶಿವಪುರಾಣಗಳ ಸ್ತ್ರೀಯರೊಳು ವಕ್ಕಣಿಪರು (ಮದೇಪು. ೨೮-೨೩). ೨. ಲಘುಪ್ರಬಂಧ, ಹರಟೆ — ಈ ಸಾಹಿತ್ಯಪ್ರಕಾರ ಇನ್ನೂ ಕವಲೊಡೆಯುತ್ತಲೆ ಇದೆ -- ಎಂದು ನಾನೊಂದೆಡೆಗೆ ವಕ್ಕಣಿಸಿದಾಗ "ಘೂಕ್" ಎಂದ ಸಮೀಕ್ಷಕರಿದ್ದಾರೆ (ಗಾಳಿಕ Viii, ಮೆಚ್ಚುಗೆಯ ಮಾತು). ವಕ್ಖಣಿಸು: ೧. ಪಂಚಶತಚ್ಛಾತ್ರಸಂಚಯಕ್ಕೆ ಚಂಚದರ್ಥಶಾಸ್ತ್ರಪ್ರಪಂಚಮನ ವಂಚಕತೆಯಿಂ ಕಾಂಚನಮಯಾಸನದೊಳಿರ್ದು ವಕ್ಖಣಿಪ ವಿದ್ವನ್ಮುಖ್ಯನಂ . . . ಕಂಡು (ವರ್ಧಪು. ೧೬-೫ ವ). ೨. ಸಕಲದೇಶಗಳ ಲೆಕ್ಕವಂ ವಖ್ಖಕ್ಖಣಿಸುವ ಕರಣೀಕರಂ (ಸೌಗಂಧಿ. ೧೧-೪). ವಖ್ಖಣಿಸು: ೧. ಅವರ್ಗ್ಗೆ ವ(ಒ)ಖ್ಖಣಿಸುವ ಭಟ್ಟರ್ಗಂ (ಇಆ. VIII, ೨೦-೫೦; 1077). ವಖ್ಖಾಣಿಸು: ೧. ವಿದ್ಯಾರ್ತ್ಥಿಗಳಾಹಾರದಾನಕ್ಕಂ ವಿದ್ಯಾರ್ತ್ಥಿಗಳ್ಗೆ ವಖ್ಖಾಣಿಸುವುಪಾಧ್ಯಾಯರ ಜೀವಿತಕ್ಕಂ . . . ಕೊಟ್ಟರ್ (ಕಇಆ. ೨೨-೭-೩೪; 1083). ವಾಖಾಣಿಸು : ೧. ಸ್ವಾಧ್ಯಾಯಮೆಂಬ ತಪಮಾಗಮಂಗಳಂ ವಾಖಾಣಿಸುವುದುಂ . . . ಧರ್ಮಮನುಪದೇಶಂಗೆಯ್ವುದುಂ ಪಂಚವಿಧಸ್ವಾಧ್ಯಾಯಮುಂ (ಶ್ರಾವಕಾ. ೧೬೩-೧೪). [ವಕ್ಕಾಣ+ — ಇಸು$_3$./ ತೆಲು. ವಕ್ಕಣಿಂಚು, ವಕ್ಕಾಣಿಂಚು]

ವಕ್ತವ್ಯ (ಗು). ೧. ಹೇಳಲು ಯೋಗ್ಯವಾದ ; ಹೇಳಬೇಕಾದ. ೨. ಹೇಳುವ ; ವಿವರಿಸುವ ; ವ್ಯಾಖ್ಯಾನಿಸುವ. (ನಾ). ೩. ಅಧೀನನಾದವನು ; ವಶವರ್ತಿ : "ವಕ್ತವ್ಯಃ — ೧ — ಕುತ್ಸಿತನು — ಹೇಳಿದ ಹಾಗೆ ಮಾಡುವ ಅಧೀನನು, ಹೇಳತಕ್ಕ ಮಾತು ಮುಂತಾದ್ದು" (ಸಿದ್ಧಾಂತಿ ೪೧೧). ೪. ವಿವರಣೆ ; ಹೇಳಿಕೆ ; ನಿರೂಪಣೆ : ತನ್ನ ಸ್ನೇಹಿತರ ಎದುರಿಗೆ ದೇಶಾಭಿಮಾನದ ತತ್ತ್ವಜ್ಞಾನದ ವಕ್ತವ್ಯಗಳ ಸುರುಳಿಗಳನ್ನು ಅಪ್ಪನ ಮುಂದೆ ಬಿಚ್ಚಿ ಇಡಲು ಅವನಿಗೆ ಎದೆಯೇ ಇಲ್ಲ (ಗಂಮಾಯಿ. ೧೬೭). ೫. ಖಂಡನೆ ; ನಿಂದೆ ; ತೆಗಳಿಕೆ. [ಸಂ.]

ವಕ್ತಾರ (ನಾ). ೧. ಚೆನ್ನಾಗಿ ಮಾತನಾಡುವವನು ; ವಾಗ್ಮಿ : ಕೇಳುವ ರಸಿಕರು ದೊರೆಯದ ಊರೊಳು ವಕ್ತಾರ ಮಾಡುವುದೇನು (ಇಂಚಾಪ. ೧೫೮-೭೮); ವಕ್ತಾರನ ಅಭಿಪ್ರಾಯದ ದೃಷ್ಟಿಯಿಂದ ಶಬ್ದಗಳಿಗೆ ವ್ಯಂಜಕತ್ವವಿರುವುದೆಂದು ನೀವೇ ಬಾಯಿಬಿಟ್ಟು ವಿವರಿಸಿರುವಿರಿ (ಧ್ವನ್ಯಾಲೋ. ೨೦೪). ೨. ಭಾಷಣಕಾರ ; ಉಪನ್ಯಾಸಕ : ವೇದಿಕೆಯ ಮೇಲೆ ವೇದವೂ ಕಾಣದತಿಗೂಢತತ್ತ್ವಗಳ ಹೊನ್ನ ಬಲೆ ಬೀಸುವನು ವಕ್ತಾರ (ನಡಬಂ. ೮೯-೪); ರಾಯರು ಹೆಸರಾಂತ ಲೇಖಕರು, ನುರಿತ ವಕ್ತಾರರು (ಜ್ವಾಲಾಮೇ. ೩೯). ೩. ವಿವರಣೆ ನೀಡುವವನು ; ವ್ಯಾಖ್ಯಾನಕಾರ : ಗ್ರೀಕ್‌ರುದ್ರನಾಟಕದ ಮೇಳ ಒಮ್ಮೊಮ್ಮೆ ಕವಿಯ ನಿಯೋಗಿಯೂ ಅವನ ಜೀವನದರ್ಶನದ ವಕ್ತಾರನೂ ಆಗಿರುತ್ತದೆ (ಸಾಹಿಪ್ರ. ೨೪೯); ಅವರು ಅರಬ್ಬೀತತ್ತ್ವಜ್ಞಾನದ ಅಧಿಕೃತ ವಕ್ತಾರರು ಎನ್ನುವ ಹಾಗಿಲ್ಲ (ತತ್ವಪ್ರಾ. ೧೧). ೪. ಒಬ್ಬರ ಅಥವಾ ಒಂದು ವಿಷಯದ ಪರವಾಗಿ ಅಧಿಕೃತವಾಗಿ ಮಾತನಾಡುವ ವ್ಯಕ್ತಿ ; ಪ್ರತಿನಿಧಿತ್ವ ವಹಿಸುವ ವ್ಯಕ್ತಿ. [ಸಂ. ವಕ್ತೃ]

ವಕ್ತೃ (ಗು). ೧. ಚೆನ್ನಾಗಿ ಮಾತನಾಡುವ ; ವಾಗ್ಮಿಯಾದ. ೨. ಪ್ರಾಮಾಣಿಕವಾದ ; ಋಜುತ್ವದ. (ನಾ). ೩. ಒಳ್ಳೆಯ ಮಾತುಗಾರ ; ವಾಗ್ಮಿ. ೪. ಉಪನ್ಯಾಸಕ ; ಭಾಷಣಕಾರ. ೫. ವ್ಯಾಖ್ಯಾನಕಾರ ; ವಿವರಣೆ ನೀಡುವವನು: ಶಬ್ದಪ್ರಾಮಾಣ್ಯವು ಹೇಳುವವರ ಯೋಗ್ಯತೆಯ ಮೇಲೆ ನಿಲ್ಲುತ್ತದೆ . . . ವಕ್ತೃವಿನ ಜ್ಞಾನವನ್ನು ಊಹಿಸಿ ಈ ಜ್ಞಾನಕ್ಕೆ ಪ್ರಾಮಾಣ್ಯವನ್ನು ತಿಳಿಯುವುದು (ಹಿಂದಸಾ. ೨೮); ಶಬ್ದದಿಂದ ಉತ್ಪನ್ನವಾದ ಜ್ಞಾನಪ್ರಾಮಾಣ್ಯವು ವಕ್ತೃವಿನ ಗುಣಾಧೀನವಾದುದು (ಭಾತತ್ತ್ವ. ೨೭೬). [ಸಂ.]

ವಕ್ತೃತ್ವ (ನಾ). ಚೆನ್ನಾಗಿ ಮಾತನಾಡುವ ಸಾಮರ್ಥ್ಯ, —ನೈಪುಣ್ಯ ; ವಾಕ್ಚಾತುರ್ಯ : ವಕ್ತೃತ್ವವು ಒಂದು ಕಲೆ. ಸಂಗೀತದಂತೆ, ಸಾಹಿತ್ಯದಂತೆ, ಶಿಲ್ಪದಂತೆ ವಕ್ತೃತ್ವವೂ ಹುಟ್ಟುಗುಣ (ಸಂಭಾಷಿ. ೩೪); ಶೀನೂನೇ ವಕ್ತೃತ್ವದಲ್ಲಿ ನರಹರಿಗಿಂತ ಮೇಲೆಂದು ಹೆಸರಾಗಿದ್ದನು (ಸಮದೀ. ೧೫೪). [ಸಂ.]

**ವಕ್ತ್ರ** (ನಾ). ೧. ಮನುಷ್ಯನ ಮುಖದಲ್ಲಿ ಆಹಾರ ಪಾನೀಯಾದಿಗಳನ್ನು ಸೇವಿಸುವುದಕ್ಕೂ ಶಬ್ದದ ಉದ್ಗಾರಗಳಿಗೂ ಸಹಾಯಕವಾಗಿರುವ ಒಂದು ಅವಯವ ; ಬಾಯಿ : ವಾಕ್ಶ್ರೀವಕ್ತ್ರದೊಳತುಳಭುಜದೊಳೂರ್ಜಿತವಿಜಯಶ್ರೀ ವಿಸ್ತಾರಿಸೆ ನೆಗಟ್ದಂ ಶ್ರೀವರ್ಮಂ (ಚಂದ್ರಪ್ರ. ೪-೧೦); ಸುಡು ತಾಂಬೂಲವಿಸೀನವಕ್ತ್ರವ (ಸೋಮೇಶ. ೨೧). ೨. ಮುಖ ; ವದನ : ಶ್ರೀಮತೀವಕ್ತ್ರಚಂದ್ರಚ್ಛವಿ ಪೆರ್ಚಂ ಮಾಟ್ಪಿನಂ ಭೋಗಿಸಿದನಖಿಲಭೋಗಂಗಳಂ ವಜ್ರಜಂಘಂ (ಆದಿಪು. ೫-೨೨); ಏನುಮೆನ್ನದೆ ಮದ್ವಕ್ತ್ರಮನಾ ಕಪಿಂಜಳಕನಾಗಳ್ ನೋಡುತಿರ್ದಂ (ಕಾದಂಪೂ. ೮೬೩). ೩. ಪಾತ್ರೆಯ ಬಾಯಿ, —ಮೂತಿ. ೪. ಪಕ್ಷಿಯ ಕೊಕ್ಕು, —ಚಂಚು. ೫. ಬಾಣದ ಅಗ್ರಭಾಗ. ೬. ಪ್ರಾರಂಭ ; ಆರಂಭ. ೭. ಒಂದು ಬಗೆಯ ಗಿಡದ ಬೇರು ; ನಂದಿಬಟ್ಟಲಿನ ಬೇರು. ೮. [ಛಂದ] ಒಂಬತ್ತು ಅಕ್ಷರಗಳ ಬೃಹತಿಛಂದಸ್ಸಿನ ಒಂದು ವರ್ಣಸಮವೃತ್ತ. ೯. ಗಣವಿನ್ಯಾಸದಲ್ಲಿ ವಿಷಮತೆಯುಳ್ಳ ಎಂಟು ಅಕ್ಷರಗಳ ಅನುಷ್ಟುಪ್ ಛಂದಸ್ಸಿನ ವಿಷಮಚತುಷ್ಪದಿಯ ಒಂದು ವರ್ಗ. ೧೦. [ಗಣಿತ] ಬೀಜಗಣಿತದಲ್ಲಿ ಬರುವ ಶ್ರೇಢಿಯ ಮೊದಲನೆಯ ಪರಿಮಾಣ ಅಥವಾ ಅಂಶ. ೧೧. [ನಾಟ್ಯ] (ನಾಲಿಗೆಗೆ ಸಂಬಂಧಿಸಿದ) ಆರು ವಿಧವಾದ ಅಭಿನಯಗಳಲ್ಲಿ ಒಂದು; IP "ಸಿಂಹದಂತೆ ಬಾಯನ್ನು ತೆರೆದು ನಾಲಗೆಯನ್ನು ನೀಡುವುದು. ನರಸಿಂಹಾಭಿನಯದಲ್ಲಿ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೨೬೦ ಗದ್ಯಾನುವಾದ) : ನೀಡಿದ ನಾಲಗೆ ಋಜ್ವಂ ಜೂಢಿಸಿ ಸಿಂಹರೂಪಂ ಜೋಡಿಪ ನಾಲಗೆಯದೆಯ್ದೆ ವಕ್ತ್ರ [ಪಾಠಾಂ. ವಕ್ರ] ಮೆನಿಕ್ಕುಂ (ಲಾಸ್ಯರಂ. ೩-೯೫). [ಸಂ.]

**ವಕ್ತ್ರಶ್ವಾಸ** (ನಾ). (ದುಃಖ, ಆಯಾಸ ಮುಂತಾದುವುಗಳಿಂದ ಬಿಡುವ) ದೀರ್ಘವಾದ ಉಸಿರು; ನಿಟ್ಟುಸಿರು: ತಿದಿವೋಲ್ ದಿಗ್ಗಜರಾಜಿ ಗೋಣ್ಗುಸಿದು ವಕ್ತ್ರಶ್ವಾಸಮಂ ಬೀಱುತಿರ್ಪುದು . . . ಖಳನೃಪಾಲಾಕ್ರಾಂತಿಹೀಣೇಭಾರದಿಂ (ಜಗವಿ. ೧-೩೦). [ಸಂ.]

**ವಕ್ತ್ರಾಂತರ** (ನಾ). ಬಾಯಿಯ ಒಳಭಾಗ : ಹರಿ ನೀಂ ಮಣ್ದಿಂದೆ . . . ತೋಱು ವಕ್ತ್ರಾಂತರಮಂ (ಜಗವಿ. ೩-೬೩). [ಸಂ.]

**ವಕ್ತ್ರೋದರ** (ನಾ). = ವಕ್ತ್ರಾಂತರ : ವಿಸ್ತೃತವಕ್ತ್ರೋದರಭಾಗ ಭೂರಿಕಮಠ ಪ್ರಕ್ಷುಬ್ಧಕಲ್ಲೋಲಕಲ್ಪಿತಕೋಲಾಹಲಕಲ್ಪಕಾಲರಭಸಪ್ರಸ್ಪರ್ಧಿಯಂ ವಾರ್ಧಿಯಂ (ಕಾವ್ಯಸಾ. ೭೫). [ಸಂ.]

**ವಕ್ರ** (ಗು). ೧ ಕೊಂಕಿದ ; ಬಾಗಿದ ; ಡೊಂಕಾದ : 'ವಕ್ರತೆ' ಪರಾ. ೨. ಬಳಸಾದ ; ನೇರವಲ್ಲದ : 'ವಕ್ರೋಕ್ತಿ' ಪರಾ. ೩. ಕಪಟದ ; ಕುಹಕವಾದ. ೪. ಕ್ರೂರವಾದ. (ನಾ). ೫. ಕೊಂಕಿದುದು ; ಬಾಗಿದುದು ; ಡೊಂಕಾದುದು : "ವಕ್ರಂ, ವೃಜಿನಂ, ಭಂಗುರಂ . . . ಊರ್ಮಿಮತ್ — ಈ ೧೨ ಕೊಂಕಿದುದು" (ಹಲಾಯು. ೧೧೭-೧೧); ಭರತಾಭ್ಯುದಯ ಚಂದ್ರೋದಯಕ್ಕುರ್ಬಿದತ್ತವಳ ಹೃಜ್ಜಲಧಿ ಪಾಲು ಕೊರಕಲ್ ಬಂಡೆಯಿಂ ವಕ್ರಮಾಗಿರ್ಪ ಮೊರಡು ದಡದಂತಿರ್ದವಳ ಮೆಯ್ಯನುಚ್ಛ್ವಸಿತ ಹರ್ಷೋರ್ಮಿಮಾಲಾಸಮೂಹದಿಂದವ್ವಳಿಸಿ ಮುಚ್ಚಿ (ಶ್ರೀರಾಮಾ. ೨೬-೭೦೪). ೬. ಕುಟಿಲವಾದುದು : ವಕ್ರಋಜುಮಿಶ್ರಜಗವದರ ಶೋಧನೆ ಧರ್ಮ (ಮಂಕುಕ. ೯೮); ನಮ್ಮ ಮನಸ್ಸು ಸ್ವಭಾವತಃ ವಕ್ರವಾದುದು (ಪರಪ. ೪೬). ೭. (ಹೊಳೆ, ತೊರೆ, ನದಿ ಮುಂತಾದುವುಗಳ) ತಿರುವು ; ಸುತ್ತು; ಮುರಿವು. ೮. ತೊಂದರೆ ; ಅಡ್ಡಿ ; ವಿಘ್ನ : ಇದಕೆ ವಕ್ರವಪ್ಪೊನ್ನಱ್ಚಮಹಾಪಾತಕನಕ್ಕು (ಎಕ. XVI, ಪಾವಗ. ೧೧-೪೪; 754). ೯. [ಜ್ಯೋತಿ] ಮಂಗಳಗ್ರಹ ; ಅಂಗಾರಕ : "ವಕ್ರಃ, ಅಂಗಾರಕಃ, ಭೌಮಃ, ಲೋಹಿತಾಂಗಃ, ಧರಾತ್ಮಜಃ — ಈ ೫ ಮಂಗಳನ ಪೆಸರ್" (ಹಲಾಯು. ೯-೪೬); ಇನಾರ್ಕಿ ವಕ್ರಕ್ಷೀಣೇಂದುಗಳಶುಭಗ್ರಹಂ (ಜಾತತಿ. ೨-೨). ೧೦. ಶನಿಗ್ರಹ. ೧೧. ಗ್ರಹಗಳ ಹಿನ್ನಡೆ. ೧೨. [ಛಂದ] ಎರಡು ಮಾತ್ರೆಗಳ ಕಾಲ ; ಗುರು : ಆದ್ಯಂತದೊಳ್ ಬರೆ ವಕ್ರಂ ಶಿಖಿ (ಛಂದೋಂಬು. ೧-೩೮). ೧೩. [ಸಂಗೀತ] "ಜನ್ಯರಾಗದ ಆರೋಹಣದಲ್ಲಿ ಅಥವಾ ಅವರೋಹಣದಲ್ಲಿ, ಕೆಲವು ವೇಳೆ ಎರಡರಲ್ಲೂ ಸ್ವರಗಳು ಕ್ರಮವಾಗಿ ಅನುಕ್ರಮಿಸದೆ ಹಿಂದು ಮುಂದಾಗಿಬರುವುದೂ ಉಂಟು. ಇಂತಹ ರಾಗಗಳು ವಕ್ರರಾಗಗಳೆನಿಸುತ್ತವೆ" (ಸಂಗೀಚಂ. ೩೨): ಆಧುನಿಕ ಕರ್ಣಾಟಕಸಂಗೀತವೆಂದರೆ ಎಪ್ಪತ್ತೆರಡು ಮೇಳಕರ್ತಗಳ ಯೋಜನೆಯ ಆಶ್ರಯದಲ್ಲಿ ಸಂಪೂರ್ಣ, ಷಾಡವ, ಔಡವ, ಶುದ್ಧ, ವಕ್ರ ಎಂಬ ಭೇದಗಳನ್ನುಳ್ಳ, . . . ಪದ್ಧತಿಯೆನ್ನಬಹುದು (ಕವಿಕೋ. I, ೭೮೭). ೧೪. [ನಾಟ್ಯ] ಗದ್ದದ ಎಂಟು ವಿಧವಾದ ವಿನ್ಯಾಸಗಳಲ್ಲಿ ಒಂದು ; IP "ಗದ್ದವನ್ನು ಅಡ್ಡಲಾಗಿ ಮಾಡುವುದು. ಗ್ರಹಾವೇಶವನ್ನು ತೋರಿಸುವಾಗ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೨೬೧ ಗದ್ಯಾನುವಾದ): ನಿಡುಚಿಬುಕಂ . . . ಕೇಳದ್ದಮಾಗಲ್ ಪಡೆದುದು ಪೆಸರಿಂದ ವಕ್ರಮೆಂದನವರತಂ (ಲಾಸ್ಯರಂ. ೩-೧೦೧). ೧೫. ಹಸ್ತಾಂಗುಲಿಯ ಏಳು ಭೇದಗಳಲ್ಲಿ ಒಂದು ; ಕೊಂಕಿಸಿದ ಕೈಬೆರಳುಗಳ ಅಭಿನಯ : ಸಂಯುತ, ವಿಯುತ, ವಕ್ರ, ವಲಿತ, ಹೆತಿತ, ಕುಂಚನ್ಮೂಲ, ಪ್ರಸ್ಯತ — ಈ ಏಳು ಹಸ್ತಾಂಗುಲಿಯ ಭೇದಂಗಳ್ (ಲಾಸ್ಯರಂ. ೩-೧೧೩ ವ). [ಸಂ.]

**ವಕ್ರಂಬರ್, ವಕ್ರಬರು** (ಕ್ರಿ). ವಿಘ್ನಮಾಡು ; ವಿರುದ್ಧವಾಗಿ ನಡೆ ; ಅಡ್ಡಿಯಾಗು : ಭರತನುಮನಾಂ ಕುಡಲ್ಪಡೆದ ರಾಜ್ಯಂ ನಿನಗಕ್ರಮಮಣಮಲ್ತು ವಕ್ರಂಬಂದೊಡೆಮ್ಮಾಜ್ಞೆಗೆ ತಪ್ಪಿದೆಯೆಂದು ನಿಲೆ ನುಡಿದು (ಪಂರಾಮಾ. ೭-೨೧ ವ). ವಕ್ರಬರು : ಆವನಾದಡೆ ವಕ್ರಬನ್ದವನ ನಷ್ಟಸಂತತಿ ಅಕ್ಕು (ಸೌಇಇ. IX - i, ೧೧೨-೨೩; 1054). [ವಕ್ರ + ಬರ್ (< ವರ್)]

**ವಕ್ರಗಚ್ಛ** (ನಾ). [ಜೈನ] ಜೈನಮುನಿಗಳ ಒಂದು ಗುಂಪು: ಅವರೊಳಗೆ ಗೋಪಣಂದಿಪ್ರವರಗುಣರ್ . . . ವಕ್ರಗಚ್ಛದೊಳ್ ಪೆಸರ್ವಡೆದರ್ (ಎಕ. II, ೬೯-೨೩; 1100).

ವಕ್ರಗಚ್ಛಾಧಿಪ = ವಕ್ರಗಚ್ಛದ ಮುಖ್ಯಸ್ಥನಾದ ಜೈನಯತಿ : ಸ್ಥೇಯಾದ್ವಿಶ್ರುತಬಾಳಚಂದ್ರಮುನಿಪಃ ಶ್ರೀವಕ್ರಗಚ್ಛಾಧಿಪಃ (ಎಕ. II, ೬೯-೧೧೯; 1100). [ಸಂ.]

**ವಕ್ರಗತಿ** (ನಾ). ೧. ಡೊಂಕಾದ ಚಲನೆ, —ಗಮನ. ೨. ಹೀನವಾದ ನಡತೆ : ಕಿಱಿಯಾತಂ ನಿಸರ್ಗದಿಂ ವಕ್ರಗತಿಪರಿಣಾಮದಿನುದ್ವೃತ್ತಚಿತ್ತದಿನುನ್ಮತ್ತನಾದಂ (ಸುಕುಮಾ. ೨-೫೭ ವ). ೧,೨: ವಕ್ರಗತಿ ಫಣೆಯೊಳ್ . . . ಒದವಿರ್ಪುದಲ್ಲದಿಲ್ಲಾ ನಾಡೊಳು (ಕುಸುಮಾ. ೨-೩೮). ೩. (ನೀರಿನ ಪ್ರವಾಹದ) ತಿರುವು ; ಬಾಗು ; ಮುರಿವು : ವಕ್ರಗತಿಯುಳ್ಳ ಆ ನದಿಯು ಅಸ್ಪಷ್ಟವಾಗಿ ತೋರಹತ್ತಿತು (ಸಾವಿತ್ರಿ. ೧). ೪. [ಜ್ಯೋತಿ] (ಗ್ರಹಗಳ) ಹಿನ್ನಡೆ. [ಸಂ.]

**ವಕ್ರಗ್ರೀವ** (ನಾ). ೧. ಕೊಂಕಿದ ಕತ್ತನ್ನುಳ್ಳುದು ; ಒಂಟೆ. ೨. ಬಾಗಿದ ಕೊರಳುಳ್ಳವನು ; ಡೊಂಕಾದ ಕತ್ತುಳ್ಳವನು : ಅಪಸ್ಮಾರಗ್ರಹಗೃಹೀತರಂತೆ ವಕ್ರಗ್ರೀವರಾಗಿಯುಂ ನೆಱೆಗಿವುಡರಂತೆ ಕಿವುಂಡುಗೇಳ್ದುಂ (ಪಂಚತಂ. ೧೯-೧). [ಸಂ.]

**ವಕ್ರಚಾರ** (ನಾ). ೧. = ವಕ್ರಗತಿ ೧. ೨. = ವಕ್ರಗತಿ ೨. ೧,೨: ವಕ್ರಚಾರಂ ಸರ್ಪಂಗಳೊಳ್ . . . ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ). [ಸಂ.]

**ವಕ್ರತುಂಡ** (ನಾ). ೧. ಕೊಂಕಿದ ಸೊಂಡಿಲನ್ನುಳ್ಳವನು ; ಗಣೇಶ : ಲಂಬೋದರಗೇತಕೆ ತರಳೋದರೆ . . . ವಕ್ರತುಂಡಗಕ್ಕರಿಸುವರಿಹರೇ (ಗಣೇಶ. ೫-೧೨೩). ೨. ಕೊಂಕಿದ ಕೊಕ್ಕನ್ನುಳ್ಳುದು ; ಗಿಣಿ. [ಸಂ.]

**ವಕ್ರತೆ** (ನಾ). ೧. ಕೊಂಕು ; ಡೊಂಕು : ಕಾಣಿಸಿತೊಂದು ದಸ್ಯುಶಿಶು . . . ಹಾ, ವಿಕೃತಿ ವಕ್ರತೆ ರೂಹುಗೊಂಡಂತೆ ! (ಶ್ರೀರಾಮಾ. ೨೨-೫೮೦). ೨. ಮೋಸ ; ಕಪಟ ; ವಂಚನೆ. ೩. ಓರೆಯಾಗಿರುವಿಕೆ ; ಕೊಂಕಿರುವಿಕೆ : ನಂಬಿಯಣ್ಣನೇಱುಂಜವ್ವನದುರ ವಣೆಯುಮಂ . . . ನೋಟದ ವಕ್ರತೆಯುಮಂ ಮುಖದ ಕಾಮಕಾರ್ಪಣ್ಯಮುಮಂ ದೃಷ್ಟಿಯ ದೈನ್ಯಮುಮನಱಿದು (ನಂಬಿರ. ೪-೧೧). ೪. (ನಾದದ) ಏರಿಳಿತ ; ತಿರುವು : ಮತ್ತ[ಪಾಠಾಂ. ತ್ತಂ]ವಳಿ ವಕ್ರತೆಯನೀವ ವಹಣಿ . . . ಇಂಪಂ ಕಱೆವ ಸುಧಾರಸಗಾನಂ ನಾನಾರಸದ ಲಹಣಿಯ ರೂಪುವಡೆಯೆ ಪಾಡುವ ಗಾಯಕರೊಳಂ (ಗಿರಿಕ. ೨-೧೦೫ ವ). ೫. ಕುಟಿಲವಾಗಿರುವಿಕೆ ; ಋಜುವಾಗಿಲ್ಲದಿರುವಿಕೆ ; ನೇರವಾಗಿಲ್ಲದಿರುವಿಕೆ. ೬. [ಜ್ಯೋತಿ] ಗ್ರಹಗಳು ಹಿಮ್ಮೆಟ್ಟುವಿಕೆ, —ಹಿಂದೆ ಚಲಿಸುವಿಕೆ. [ಸಂ. ವಕ್ರತಾ]

**ವಕ್ರದೃಷ್ಟಿ** (ನಾ). ೧. ಓರೆಯಾದ ದೃಷ್ಟಿ ; ನೇರವಲ್ಲದ ನೋಟ : ದೃಷ್ಟಿದೋಷ

ಗಳಿಂದ ಮಕ್ಕಳಲ್ಲಿ ತೋರಬಹುದಾದ "ವರಸೆಗಣ್ಣು, ಮೆಳ್ಳಗಣ್ಣು, ವಕ್ರದೃಷ್ಟಿ" ಮುಂತಾದ ನ್ಯೂನತೆಗಳನ್ನು ಮೊದಲಿನಲ್ಲೇ ಸರಿಪಡಿಸಬಹುದು (ನಿಮ್ಮದೃ. ೫೪). ೨. ಸಂಶಯಾತ್ಮಕವಾದ ದೃಷ್ಟಿ ; ಸರಳವಲ್ಲದ ಧೋರಣೆ : ಶ್ರೀ ಅರವಿಂದರ ಮೇಲೆಯೂ ಸರಕಾರದ ವಕ್ರದೃಷ್ಟಿಯು ಬಿತ್ತು (ಕಪಪು. ೭-೮೩); ಸಾಮಾನ್ಯವಾಗಿ ಜನರು ವಾಮಾಚಾರವನ್ನು ವಕ್ರದೃಷ್ಟಿಯಿಂದ ನೋಡುವುದುಂಟು (ಭಾರಜ. ೨೨೭). [ಸಂ.]

**ವಕ್ರದ್ವಾರ** (ನಾ). ೧. = ವಂಕದಾರ : "ವಂಕದರಂ, ವಂಕದಾರಂ, ವಂಕಬಾರಂ — ಈ ೩ ವಕ್ರದ್ವಾರಕ್ಕೆ ಪೆಸರ್" (ಕಶಸಾ. ೫೯-೩೦೦); ವಕ್ರದ್ವಾರ — ವಂಕದರ, ವಂಕದಾರ, ವಂಕಬಾರ (ಶಮದ. ೨೯೭ ಪ್ರಯೋ); ಸೋಪಾನಗಳು, ಗುಪ್ತದ್ವಾರಗಳು, ವಕ್ರದ್ವಾರಗಳು — ಮುಂತಾದುವೆಲ್ಲಾ ನಿಮಗೆ ತಿಳಿದಿರಬೇಕು (ಮಂತ್ರಶ. ೫೩-೩). 'ವಂಕದಾರ' ಪರಾ. ೨. ರಹಸ್ಯವಾದ ಬಾಗಿಲು ; ಗುಪ್ತದ್ವಾರ : ದುರ್ಗದ ವಕ್ರದ್ವಾರದಲ್ಲಿಯ ನಮ್ಮ ಕಾವಲರು ಆ ಬಾಗಿಲು ಅಲ್ಲಾಡುತ್ತಿದ್ದುದನ್ನು ನೋಡಿ . . . ನನಗೆ ವಾರ್ತೆಗೊಟ್ಟರು (ಸುರಗಂ. ೧೨೫-೯). P ಈ ಶಬ್ದದ ಅಸ್ತಿತ್ವವು ಚಿಂತನೀಯ. [ಸಂ.]

**ವಕ್ರನಾಸಿಕ** (ನಾ). ಗೂಬೆ ; ಘೂಕ. [ಸಂ.]

**ವಕ್ರಬರು** 'ವಕ್ರಂಬರ್' ನೋ.

**ವಕ್ರಬುದ್ಧಿ** (ನಾ). ೧. ಕಪಟವಾದ ಮನಸ್ಸು ; ಕುಟಿಲಸ್ವಭಾವ. ೨. ಕಪಟಿಮನಸ್ಸುಳ್ಳವನು ; ಕೆಟ್ಟಬುದ್ಧಿಯುಳ್ಳವನು : "ಕುಚರಃ, ಕುಟಿಲಾಶಯಃ — ಈ ೨ ವಕ್ರಬುದ್ಧಿ" (ಹಲಾಯು. ೬೪-೨೫). [ಸಂ.]

**ವಕ್ರಭಣಿತಿ** (ನಾ). ವ್ಯಂಗ್ಯೋಕ್ತಿ ; ವಕ್ರೋಕ್ತಿ : "ನಿಮ್ಮಷ್ಟು ಸಂಪಾದನೆ ಯಾರಿಗುಂಟು?" ಎಂದು ಅವರಲ್ಲಿ ಒಬ್ಬ ವಕ್ರಭಣಿತಿಯನ್ನು ಹಾರಿಸಿದನು (ಕಂಬಹು. ೧೧). [ಸಂ.]

**ವಕ್ರಭಣಿತೆ** (ನಾ). = ವಕ್ರಭಣಿತಿ : ಶಕ್ರನಳುಕುವ ಬಾಹುಬಲ ರಿಪುಚಕ್ರದೊಳ ಗಿನ್ನಾರಿಗುಂಟದು ವಕ್ರಭಣಿತೆಗೆ ಸಲುವುದಶ್ವತ್ಥಾಮನೆನುತೆಚ್ಚ (ಕುವ್ಯಾವಿ. ೮-೪೧).

[ಸಂ. ವಕ್ರಭಣಿತ]

**ವಕ್ರವಚನ** (ನಾ). ೧. ವ್ಯಂಗ್ಯೋಕ್ತಿ ; ವಕ್ರೋಕ್ತಿ : ಕಳಕಂಠಂ ಪುಗಿಲೆಂಬೀ ಕಳನಿನದಂ ವಕ್ರಮಾಗಿಯುಂ ನೃಪನ ಮನಂಗೊಳಲಾರ್ತುದು ಪುರುಡಿಪ ನಲ್ಲಳ ನಲ್ಮೆಯ ವಕ್ರವಚನದಂದದಿನಾಗಳ್ (ಮಲ್ಲಿಪು. ೬-೧೧). ೨. ಸೊಗಸಾದ ಧ್ವನಿ ; ಇಂಪಾದ ಸ್ವರ : ದಶಕಂಠನಾ ಕಂಬುಕಂಠಿಯ ಕನಲ್ದೊನಲ್ದು ನುಡಿವ ವಚನಮ ಸುಗ್ಗಿಯ ಕಳಕಂಠಿಯೆ ಪುಗಿಲೆಂಬ ವಕ್ರವಚನದಂತೆ ತನಗೆ ಮದನರಾಗಹೇತುವಾಗೆ (ಪಂರಾಮಾ. ೯-೧೮೬ ವ). [ಸಂ.]

**ವಕ್ರವಾಕ್ಯ** (ನಾ). ೧. ಕೊಂಕುನುಡಿ ; ಸರಳವಲ್ಲದ ಮಾತು. ೨. = ವಕ್ರವಚನ ೨. ೧,೨: ವಕ್ರವಾಕ್ಯಂ ಕೋಕಿಲಂಗಳೊಳ್ ಉತ್ಕಂಠತೆ ಮಯೂರಂಗಳೊಳ್ . . . ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ). [ಸಂ.]

**ವಕ್ರಶೃಂಗೆ** (ನಾ). ಬಾಗಿದ ಕೊಂಬುಗಳನ್ನುಳ್ಳ ಹಸು : "ಬಿಳಿಯಾಕಳೇ ಧವಳೆ, ಸೊಟ್ಟಕೊಂಬಾಕಳೇ ವಕ್ರಶೃಂಗೆ" (ಸಿದ್ಧಾಂತಿ. ೨೯೪). [ಸಂ. ವಕ್ರಶೃಂಗ]

**ವಕ್ರಸ್ತ** (ನಾ). ಅಡ್ಡಿಯನ್ನುಂಟುಮಾಡುವವನು; ವಿಘ್ನವನ್ನು ಒಡ್ಡುವವನು: ಯಾ ಧರ್ಮಕ್ಕೆ ವಕ್ರಸ್ತರಾದವರುಯಧೋಗತಿಗಿಳಿವರು (ಸೌಇಇ. XX, ೧೭೭-೩೭; 1190).

[ವಕ್ರ + — ಸ್ತ]

**ವಕ್ರಾಂಗಿ₁** (ನಾ). ಊನವಾದ ಅಂಗವುಳ್ಳವನು : ಮುಂದ್ಕೆದುವ ತುರಂಗಮದ ಕೂಡೆ ನಡೆಯುತ್ತೆ ಬರಿದೊವಲುಡಿಗೆಯವರ ವಕ್ರಾಂಗಿಗಳನೊತ್ತೋಳವರನು . . . ಕಂಡನಾ ಕಲಿಪಾರ್ಥನು (ಜೈಮಿಭಾ. ೧೭-೨೦). [ಸಂ. ವಕ್ರಾಂಗಿನ್]

**ವಕ್ರಾಂಗಿ₂** (ನಾ). ಒಂದು ಬಗೆಯ ಔಷಧೀ ಸಸ್ಯ : "ಕಟುಃ, ಕಟುಂಭರಾ . . . ವಕ್ರಾಂಗೀ, ಶಕುಲಾದನೀ — ೯ ಕಟುಕರೋಹಿಣೀ ಹೆಸರುಗಳು" (ಸಿದ್ಧಾಂತಿ. ೧೩೦).

[ಸಂ. ವಕ್ರಾಂಗೀ]

**ವಕ್ರಿ** (ಗು). ೧. ಬಾಗಿದ ; ಕೊಂಕಿದ ; ಡೊಂಕಾದ. (ನಾ). ೨. ಕೆಟ್ಟ ಬುದ್ಧಿಯುಳ್ಳವನು : "ಕುಚರಂ ನಿಯತಹಾರಿಕಂ ವಿಳಾಸಿಯೆನೆ ವಕ್ರಿಯೆನಿಸಿಕ್ಕು" (ಮಂಗರಾ. ೭೨-೨೩). ೩. ಒಂದು ಬಗೆಯ ಹುಲ್ಲು : "ವಕ್ರಿ ಮಾರುಳಿ ಕಂಬು ಕಸವೆ ಸಂದಂ ಕರಡೆಯಕ್ಕು" (ಮಂಗರಾ. ೩೩-೮). ೪. ಒಂದು ಬಗೆಯ ಬಳ್ಳಿ ; ಮಂಗುರವಳ್ಳಿ ; ಬಕ್ಕುಡಿ : "ಮಂಗುರವಳ್ಳಿ ವಕ್ರಿ ಬಕ್ಕುಡಿಯೆನಿಕ್ಕುಂ" (ಮಂಗರಾ. ೪೩-೪೩). ೫. [ಸಂಗೀತ] ದೋಷವುಳ್ಳ ಗಾಯಕರಲ್ಲಿ, ಒಂದು ವರ್ಗಕ್ಕೆ ಸೇರಿದವನು; ಕತ್ತನ್ನು ಕೊಂಕಿಸಿ ಹಾಡುವವನು ; ಕತ್ತು ಬಗ್ಗಿಸಿಕೊಂಡು ಹಾಡುವವನು : ಗಾಯಕದೋಷಗಳು : ೧. ಸಂದಷ್ಟ- ಹಲ್ಲು ಕಚ್ಚಿ ಹಾಡುವವನು . . . ೧೫. ವಕ್ರಿ — ಕತ್ತು ಕೊಂಕಿಸಿ ಹಾಡುವವನು (ಸಂಗೀಚಂ. ೧೦೩). ೬. [ಜ್ಯೋತಿ] ಗ್ರಹಗಳು ಹಿಂದೆ ಚಲಿಸುವಿಕೆ.

[ಸಂ. ವಕ್ರಿನ್]

**ವಕ್ರಿತ** (ಗು). ಬಾಗಿದ ; ಬಗ್ಗಿದ : ವಕ್ರಿತಕಂಧರಂ ಸ್ಮೇರವಕ್ತ್ರಸರೋರುಹಂ ಲಲಿತಾಯತೇಕ್ಷಣನಾಗಿ . . . ಮುರಾರಿ ಕೈಪಟೆಗಾಡಿದಂ (ಜಗವಿ. ೩-೫೩). [ಸಂ.]

**ವಕ್ರಿಮ** (ಗು). ೧. ಬಳಸಾದ; ಸುತ್ತಾದ: ಆ ದಿವ್ಯವಚನವಕ್ರಿಮಕ್ರಮಮೆ ತಮಗನುಗ್ರಹಪಕ್ಷಮಾಗೆ ಕೃಷ್ಣನಂ ಪರಮಾತ್ಮಸ್ವರೂಪನೆಂದಱಿದು ಗೋಪರ್ ಕೃತಕೃತ್ಯರಾಗಿರ್ಪಿನಂ (ಜಗವಿ. ೪-೧೧೦ ವ). ೨. ಕೊಂಕಿದ ; ಡೊಂಕಾದ : ಶಂಕರನ ವಕ್ರಿಮಲಪನಜನಕನ ಕ್ರೂರಶತ್ರುದಾರುಕ್ರಕಚನಿಭನೋಲಗಕ್ರೀಡೆ ಸೊಗಸೆ ಭೂಚಕ್ರೇಶನೀಕ್ಷಿಸಿದನು (ಉದ್ಭಟೇ. ೭-೧೬). (ನಾ). ೩. ಡೊಂಕು ; ಕೊಂಕು ; ವಕ್ರತೆ : ವಕ್ರಿಮಂ ಸುಚರಿತದೊಳ್ ವಿಚಾರಿಸವೊಡಿಲ್ಲಳಕಾಳಿಯೊಳಲ್ಲದೆಲ್ಲಿಯುಂ. (ಚಂದ್ರಪು. ೧೧-೧೧೯) 'ಕಂಟಕವಕ್ರಿಮ' ಪರಾ. [ಸಂ. ವಕ್ರಿಮನ್]

**ವಕ್ರಿಮೆ** (ನಾ). ಕೊಂಕು; ವಕ್ರತೆ: ಆಂಡಯ್ಯನ 'ಕಬ್ಬಿಗರ ಕಾವ'ದ ರೂಪಕದ ವಕ್ರಿಮೆಯ ಆಕಾಂಕ್ಷೆಯದು (ಸಾಹಿವಿ. ೩೪). [< ಸಂ. ವಕ್ರಿಮನ್]

**ವಕ್ರಿಸು** (ಕ್ರಿ). ೧. ಡೊಂಕಾಗು ; ವಕ್ರವಾಗು : ಬೆಳಕು ಬೇರೆ ಬೇರೆ ವಸ್ತುಗಳಲ್ಲಿ ಹೊಕ್ಕು ಹೊರಡುವಾಗ ವಕ್ರಿಸುವುದಷ್ಟೆ (ಬಾಲಪ್ರ. II, ೯೪೧). ೨. ಪ್ರತಿಭಟಿಸು ; ವಿರೋಧಿಸು ; ಪ್ರತಿಕೂಲವಾಗು : ನಿಮ್ಮ ಕ್ರಮಕಮಲಕ್ಕೆಜಗದೆ ವಕ್ರಿಸಿ ಭೂಚಕ್ರದೊಳಗೆ ಬಾಳ್ವರುಮೊಳರೇ (ಪಂಪಭಾ. ೧೧-೩೦); ಭೂಮಂಡಲದೊಳು ವಕ್ರಿಸುವರಿಲ್ಲ ನಿನ್ನೀ ಸಿರಿಗೆ ರಾಜಧರ್ಮಕ್ರಿಯೆಗೆ ನಳಪುರೂರವ ಹರಿಶ್ಚಂದ್ರಾದಿ ಚಕ್ರವರ್ತಿಗಳೈದೆ ಸೋಲ್ವರು (ಜೈಮಿಭಾ. ೨-೫೨). ೩. (ಅಮಂಗಳವನ್ನು ಸೂಚಿಸಲು) ಸ್ವರವನ್ನು ಮಾಡು ; ಕೂಗು : ಬಿಲ್ಲ ಬಿನ್ನಣಿಯನೊರ್ವನಂ ಕರೆದು ನಿಚ್ಚಂ ವಕ್ರಿಸುತ್ತಿರ್ಪ ನಿಚ್ಚಲವಕ್ಕಿಯನೆಚ್ಚು ಬಾಯೆಂದು ಪೇೞ್ದುದುಂ (ಪಂಚತಂ. ೧೨೭-೧೯); ಕಾಗೆ ವಕ್ರಿಸೆ ಸರಳ ಪ್ರಾರಂಭಕಾರ್ಯಮಂ ಮಾಣದರಾರ್ (ಪಂಚತಂ. ೨೩೪-೭). ೪. (ಗ್ರಹಗತಿಗಳು) ವಿರೋಧವಾಗಿ ಬರು ; ಕ್ರೂರವಾಗು : ನನ್ನ ಆಯದಾರ್ಯಕ್ಕೆ ಸೂರ್ಯಚಂದ್ರಗ್ರಹಗಳೆರಡೂ ವಕ್ರಿಸಿವೆ (ಕಥಾಮಂ. IV, ೧೦೮); ಅಂದ ಮೇಲೆ ಸೊಸೆಯ ಗ್ರಹಚಾರ ವಕ್ರಿಸಿದ ಹಾಗೇ ಎಂದು ಮತ್ತೆ ಹೇಳುವುದೇನು? (ಹೊಸಕ್ಕಿ. ೨೧). ೫. (ಇನ್ನೊಬ್ಬರ ಮನೆಯಲ್ಲಿ) ಅನಪೇಕ್ಷಿತವಾಗಿ ಒತ್ತಾಯದಿಂದ ಹೊಕ್ಕಿರು ; ನಿಸ್ಸಂಕೋಚವಾಗಿ ಬಂದಿರು ; ದಾಕ್ಷಿಣ್ಯವಿಲ್ಲದೆ ಇರು : ಹೇಗಾದರೂ ನೀನು ನಮ್ಮ ಮನೆಗೆ ಶನಿಗ್ರಹದಂತೆ ವಕ್ರಿಸಿರುವೆ (ಲಕ್ಷ್ಮೀಪ್ರ. ೪೪); ಮನೆಯಲ್ಲಿ ಇದ್ದ ಮಕ್ಕಳಿಗೆ ಕೇಳುವವರಿಲ್ಲದಾಗ ಈ ಶನಿ ವಕ್ರಿಸಿತಲ್ಲ ಎಂಬ ಸಿಡುಕು (ಹೊಸಕ್ಕಿ. ೨೮). 'ಒಕ್ಕರಿಸು', 'ವಕ್ಕರಿಸು' ಪರಾ.

[ವಕ್ರ + — ಇಸು./ ತೆಲು. ವಕ್ರಿಂಚು]

**ವಕ್ರೀಕರಣ** (ನಾ). ೧. ಬಾಗುವುದು ; ಬಗ್ಗುವುದು. ೨. [ವಿಜ್ಞಾ] ನೀರು, ವಾಯು, ಗಾಜು ಇತ್ಯಾದಿ ವಿಷಯಗಳಲ್ಲಿ ಭಿನ್ನಸಾಂದ್ರತೆಯುಳ್ಳ ಬೇರೊಂದು ವಾಹಕದ ಮೂಲಕ ಬಂದ ಬೆಳಕು ತನ್ನಲ್ಲಿ ಅಸಮ ಕೋನವಾಗುವಂತೆ ಹೊಕ್ಕಾಗ ಆ ಕಿರಣವನ್ನು ಒಂದು ಗೊತ್ತಾದ ಕೋನದಲ್ಲಿ ಓಲಿಸುವುದು : ಬೆಳಕು ಶೀಘ್ರವಾದ ದಾರಿಯಲ್ಲಿ ಚಲಿಸುವುದು ಈತನಿಗೆ ಗೊತ್ತಿತ್ತು. ಬೆಳಕಿನ ವಕ್ರೀಕರಣ (Refraction) ತಿಳಿದಿತ್ತು (ಶಿಲ್ಪನಾ. ೧೦೧); ಬೆಳಕಿನ ಪ್ರತಿಫಲನ ಮತ್ತು ವಕ್ರೀಕರಣಗಳ ನಿಯಮಾವಳಿಗಳನ್ನೂ ಛಾಯೆಯ ಸ್ವಭಾವವನ್ನೂ ಅರಿತು ವಿವರಣೆ ನೀಡಿದ್ದಾರೆ (ತತ್ವಪ್ರಾ. ೪೯೯). [ಸಂ.]

**ವಕ್ರೀಕರಿಸು** (ಕ್ರಿ). ಓರೆಯಾಗಿಸು ; ಬಾಗಿಸು ; ಡೊಂಕಾಗಿಸು : ಶಂಕುಗಳಿಂದ ವಕ್ರೀಕರಿಸಿದ ಬೆಳಕು ಪ್ರತಿದೃಷ್ಟಿಕೋಲಿನ ಮೇಲೂ ಬೀಳಬಹುದು (ಕೀಟಬೆ. ೫೮). [ವಕ್ರೀಕರಣ + – ಇಸು₁]

**ವಕ್ರೆ** (ನಾ). ಒಂದು ಬಗೆಯ ಔಷಧೀಸಸ್ಯ : ''ಶಿಫಾಹ್ವಾ-ವಕ್ರೆ'' (ಓಷಧಿ. ೧೬೫). [ಸಂ. ವಕ್ರಾ]

**ವಕ್ರೋಕ್ತಿ** (ನಾ). ೧. ಕೊಂಕುಮಾತು. ೨. ದ್ವಂದ್ವಾರ್ಥದ ನುಡಿ : ರಾವಣಾನಾ ದೂದವಿಗೆ ನಿನ್ನ ನುಡಿಗೊಡಂಬಟ್ಟೆನಾಕೆಯಂ ತಾಯೆಂದು ವಕ್ರೋಕ್ತಿಯಿಂ ನುಡಿವುದುಂ (ಪಂರಾಮಾ. ೧೦-೧೯೨ ವ). ೩. [ಕಾವ್ಯಮೀ] ಒಂದು ಬಗೆಯ ಅರ್ಥಾಲಂಕಾರ ; ಶ್ಲೇಷೆ ಅಥವಾ ಕಾಕುವಿನಿಂದ ಅರ್ಥಾಂತರವನ್ನು ಕಲ್ಪಿಸಿ ಹೇಳುವುದು ; IP ಕುಂತಕನೆಂಬ ಅಲಂಕಾರಿಕನು ಇದನ್ನು ಕಾವ್ಯದ ಆತ್ಮವನ್ನಾಗಿ ಅಂಗೀಕರಿಸಿರುತ್ತಾನೆ. ಭಾಮಹನು ಅತಿಶಯೋಕ್ತಿಯನ್ನೇ ವಕ್ರೋಕ್ತಿಯೆಂದು ಹೇಳಿ, ಅದು ಎಲ್ಲಾ ಅಲಂಕಾರಗಳಿಗೂ ಮೂಲವೆಂದು ನಿರೂಪಿಸಿದ್ದಾನೆ : ನುಡಿದುದದೆ ಪದವಿಭಂಗತೆಗೊಡಂಬಡಂ ಪಡೆಯೆ ಮಗುಳ್ದುಮರ್ಥಾಂತರದೊಳ್ ತೊಡರ್ದುರ್ ನಿಲೆ ನುಡಿವ ನುಡಿ ಚೆಲ್ವೊಡರಿಪ ವಕ್ರೋಕ್ತಿ ನಿಯತ ಕಾಕು ಶ್ಲೇಷಂ (ಕಾವ್ಯಾವ. ೬೦೧). i. ಶ್ಲೇಷೆಯ ಮೂಲಕ ವಕ್ರೋಕ್ತಿಗೆ ಉದಾಹರಣೆ : ಕುಮಾರಂ ಪುಷ್ಪದರ್ಶನದಿಂ ಕೆಯ್ಮಾಸಿದನೆಂಬುದೀಕೆಗೆ ಪಾಟಿಯೆ ವಲಮೆಂದು ವಕ್ರೋಕ್ತಿಯಂ ನುಡಿದು (ಶಾಂತಿಪು. ೬-೮೨ ವ). ii. ಕಾಕುವಿನಿಂದ ಬೇರೊಂದು ಅಭಿಪ್ರಾಯವನ್ನು ತಿಳಿಸುವ ವಕ್ರೋಕ್ತಿಗೆ ಉದಾಹರಣೆ : ಈ ತೊಡವೇವುದೊ ರೂಪೆ ಸಾಲದೇ ಎಂದೆಂದೋರೊರ್ವರಾಕೆಯ ರೂಪಂ ವಕ್ರೋಕ್ತಿಯೊಳೆ ಪೊಗಟ್ಟು (ಪಂಪಭಾ. ೩-೪೬ ವ). [ಸಂ.]

**ವಕ್ರೋಕ್ತಿನಿಪುಣ** (ನಾ). ಚಾತುರ್ಯದ ಮಾತುಗಳನ್ನಾಡುವುದರಲ್ಲಿ ಪರಿಣತನಾದವನು : ಪ್ರತ್ಯುತ್ಪನ್ನಪ್ರತಿಭನುಂ ವಕ್ರೋಕ್ತಿನಿಪುಣನುಂ . . . ಪ್ರಸಿದ್ಧನುಮಪ್ಪ ಮಹತ್ತರನ ಕೈಯೊಳ್ ಸನ್ಮಾನದಾನಪುರಸ್ಸರಮಾಗೆ ಕೊಟ್ಟು (ಆದಿಪು. ೧೪-೪೩ ವ). [ಸಂ.]

**ವಕ್ಷ** (ನಾ). ಎದೆ ; ಉರಸ್ಸು : ವಕ್ಷಮಂಬರಚರಶ್ರೀಗೇಹಮೆಂಬೊಂದೆ ರೂಪೆ ಗಡ ನೋಡಲೊಡಂ ಮರುಳ್ಗೊಳಿಸುಗುಂ ವಿದ್ಯಾಧರಸ್ತ್ರೀಯರಂ (ಆದಿಪು. ೧-೭೪); ತುಱುಗಿ ಕರಂಗಳಂ ಕೆದಱಿ ವಕ್ಷದೊಳುಜ್ವಲತಾರಹಾರಮೇಂ ಮೆಱೆದನೋ ಭೂಪಂ (ಪುಷ್ಪಪು. ೩-೬೪). [ಸಂ. ವಕ್ಷಸ್]

**ವಕ್ಷಸ್ಥಲ, ವಕ್ಷಸ್ಥಳ** (ನಾ). = ವಕ್ಷ : ಜಲರಾಶಿಪ್ರಭವೆಯನವಿಕಲಕೃಷ್ಣ ಗುಣಾನುರಕ್ತೆಯಂ ಮಿಗೆ ಲಕ್ಷ್ಮೀಲಲನೆಯನಾಂತು ವಕ್ಷಸ್ಥಲದೊಳ್ (ಕವಿರಾ. ೩-೧೮೧); ಮಂದರಾಚಳಶಿಲಾತಳವಿಶಾಲಮೆನಿಪ ವಿಪುಲವಕ್ಷಸ್ಥಲಮುಂ (ಅಜಿಪು. ೫-೯೨ ವ). **ವಕ್ಷಸ್ಥಳ**: ದಿವ್ಯಾಯುಧಕೆ ಚಾಚಿದನು ವಕ್ಷಸ್ಥಳವನಸುರಾರಾತಿಯಡಹಾಯ್ದು (ಕುಮಾದ್ರೋ. ೩-೬೦). [< ಸಂ. ವಕ್ಷಃಸ್ಥಲ]

**ವಕ್ಷಸ್ಥಳ** 'ವಕ್ಷಸ್ಥಲ' ನೋ.

**ವಕ್ಷಸ್ವಸ್ತಿಕ** (ನಾ). ನೃತ್ಯದ ಒಂದು ಭಂಗಿ; IP ''ಚತುರಸ್ರ ಹಸ್ತವನ್ನು ಮಾಡಿ ಕೈಗಳನ್ನು ಎದೆಯ ಹತ್ತಿರ ನಿಲ್ಲಿಸಿ ಉದ್ವೇಷ್ಟನ ಮಾಡಿ ಪಾರ್ಶ್ವಕ್ಕೆ ತಂದು ಎದೆಯನ್ನು ಸ್ವಲ್ಪ ಬಗ್ಗಿಸಿ ಕೈಗಳನ್ನು ವ್ಯಾವರ್ತ ಮಾಡಿ ಎದೆಗೆ ತಂದು ಮುಂಗೈಗಳನ್ನು ಸ್ವಸ್ತಿಕದಂತೆ ಹಿಡಿದು ಕಾಲುಗಳನ್ನೂ ಸ್ವಸ್ತಿಕದಂತೆ ಮಾಡಿ ನಿಲ್ಲುವುದು'' (ಲಾಸ್ಯರಂ. ೨೮೮ ಗದ್ಯಾನುವಾದ): ಚತುರಸ್ರಂಗಳನಾಂತ ಹಸ್ತಮೆರಡಂ ವಕ್ಷಕ್ಕೆ ತಂದಿಟ್ಟುಮುನ್ನತದಿಂದಂ ಪೊಱಮಂಡಿಸುತ್ತೆ ಪಿರಿದುಂ ವ್ಯಾವರ್ತನಂಗೆಯ್ದು ನಿಶ್ಚಿತಭುಗ್ನಂಬಡೆದಿರ್ಪ ವಕ್ಷದೊಳೆ ನಿಂದುಂ ಸ್ವಸ್ತಿಕಂ ಮಾಡಿ ಕಾಲ್ ಸತತಂ ಸ್ವಸ್ತಿಕಮಾಗೆ ರಂಜಿಸಿತು ವಕ್ಷಸ್ವಸ್ತಿಕಾಖ್ಯಾನದಿಂ (ಲಾಸ್ಯರಂ. ೪-೪೮). [< ಸಂ. ವಕ್ಷಃಸ್ವಸ್ತಿಕ]

**ವಕ್ಷೋಜ** (ನಾ). ಎದೆಯಲ್ಲಿ ಮೂಡಿದುದು ; ಕುಚ ; ಸ್ತನ : ಮಂಡನಾಳಂಕರಣವಚನದಿಂ ವೃತ್ತವಕ್ಷೋಜದಿಂ ಸತ್ಪದದಿಂದೊಪ್ಪಿರ್ದ ವಾಕ್ಸುಂದರಿ ಪರಮವಹೋವೃದ್ಧಿಯಂ ಮಾಡುಗೆಮ್ಮೊಳ್ (ಸುಕುಮಾ. ೧-೭). [ಸಂ.]

**ವಕ್ಷೋರುಹ** (ನಾ). = ವಕ್ಷೋಜ : ಅಂಭೋಜಕುಟ್ಮಳವಕ್ಷೋರುಹದಗ್ರ ಮಾಳ್ಪುದೆಳೆಗರ್ಪಂ (ರಾಜಶೇ. ೪-೩೧). [ಸಂ.]

**ವಖಣೆ** 'ವಕ್ಹಾಣ' ನೋ.

**ವಖಾರ, ವಖಾರು, ವಖಾರೆ** (ನಾ). ಸರಕುಗಳನ್ನು ದಾಸ್ತಾನು ಮಾಡುವ ಸ್ಥಳ ; ಉಗ್ರಾಣ ; ಗೋದಾಮು : ಹದಿನೇಳನೆಯ ಶತಮಾನದಲ್ಲಿ ಇಂಗ್ಲಿಷರು ತಮ್ಮ ಬೇರೆ ಬೇರೆ ವಖಾರಗಳನ್ನು ಸ್ಥಾಪಿಸಿದರು (ಹಿಂದುಃ. ೨೪೨); ಕೆಳಗಿನ ಅಂತಸ್ತಿನಲ್ಲಿ ಕತ್ತಲೆಗವಿದ ವಖಾರಗಳಿವೆ (ಕುಂಹಿಂ. ೧೪೭). **ವಖಾರು** : ಬಳಿಕ ಪೋರ್ಚುಗೀಜರು ಗೋವೆ ಮುಂತಾದ ಪಟ್ಟಣಗಳನ್ನು ಹಿಡುಕೊಂಡು ಅಲ್ಲಿ ತಮ್ಮ ವಖಾರುಗಳನ್ನು ಸ್ಥಾಪಿಸಿ . . . ಲಾಭವನ್ನು ಪಡಕೊಂಡರು (ಮುಂಬಯಿ. ೬-೧೨೫); ಸದ್ಯ ನಳಬಜಾರದಲ್ಲಿ ಫೇಲಭಾಯಿಯ ಕಬ್ಬಿಣದ ವಖಾರಿನಲ್ಲಿದ್ದೇವೆ (ರತ್ನಗೋ. ೬೬). **ವಖಾರೆ** : ಕೊರೆದಂಥ ಕಟ್ಟಿಗೆ ನೀರಲ್ಲಿ ಇರುವದಿಲ್ಲ, ಬಂದರದೊಳಗೆ ವಖಾರೆಗಳಲ್ಲಿರುತ್ತವೆ (ಮುಂಬಯಿ. ೨೦೧). 'ಬಖಾರಿ' ಪರಾ. [<— ಮರಾ. ವಖಾರ./ ಪ್ರಾ. ವಕ್ಖಾರ]

**ವಖಾರು** 'ವಖಾರ' ನೋ.

**ವಖಾರೆ** 'ವಖಾರ' ನೋ.

**ವಖ್ಖಣಿಸು** 'ವಕ್ಹಾಣಿಸು' ನೋ.

**ವಖ್ಖಣೆ** 'ವಕ್ಹಾಣ' ನೋ.

**ವಖ್ಖಾಣ** 'ವಕ್ಹಾಣ' ನೋ.

**ವಖ್ಖಾಣಿಸು** 'ವಕ್ಹಾಣಿಸು' ನೋ.

**ವಗಲೆ** (ನಾ). ತಾಂತ್ರಿಕರು ಪೂಜಿಸುವ ಒಬ್ಬ ದೇವತೆಯ ಹೆಸರು: (೬). 'ಬಗಲೆ' ಪರಾ. [ಸಂ. ವಗಲಾ]

**ವಗೈರೆ** (ನಾ). ಮುಂತಾದುವು ; ಮೊದಲಾದುವು ; ಇತ್ಯಾದಿ : ಬಾನ ವಗೈರೆ ಯರಡು ಯಿಸೆ ಪ್ರಕಾರ (ಮೈಲಿ. ೧೯೨೯, ೯೭-೨೪; 15937); ಪ್ರತಿಗ್ರಾಮಕ್ಕೂ ಹೋಗಿ ಅಲ್ಲಿ ಕೆರೆಗಳಲ್ಲಿರುವ ನೀರಿನ ಆಧಾರ ನೋಡಿ ಇಷ್ಟೇ ಸಾಗುವಳಿ ಆಗಬೇಕೆಂದು ವಗೈರೆ ನಡೆಸತಕ್ಕ ಕ್ರಮ (ಮಹಾವಾಂ.II, ೫೭).
[<— ಅರ. ವಗೈರಹ್, ವಘೈರಾ; ಪಾರ. ವಘೈರಾ; ಹಿಂ. ವಗೈರಹ್; ಮರಾ. ವಗೈರಾ, ವಗೈರೆ]

**ವಗ್ಗ₁** 'ಬಗ್ಗ₁' ನೋ.

**ವಗ್ಗ₂** 'ಬಗ್ಗ₂' ನೋ.

**ವಗ್ಗಯ್ಯ** (ನಾ). ಮೈಲಾರಲಿಂಗನ ಭಕ್ತರು ಇಟ್ಟುಕೊಳ್ಳುವ ಹೆಸರು : ಗುಡ್ಡಾಪುರವೆಂಬಲ್ಲಿ ಮೈಲಾರಲಿಂಗನ ಗುಡಿಯುಂಟು. ಆ ದೇವತೆಯ ಭಕ್ತರು ವಗ್ಗಯ್ಯಗಳೆಂಬ ಹೆಸರು ಧರಿಸುವರು. ಬ್ರಾಹ್ಮಣರಿಂದ ಹೊಲಿಯರವರೆಗೆ ಬೇಕಾದ ಜಾತಿಯವರು ವಗ್ಗಯ್ಯಗಳಾಗಬಹುದು (ಕಭಾಗ. ೨೦೫). [< ಬಗ್ಗ₁ + ಅಯ್ಯ₁]

**ವಗ್ಗಸೇನೆ** (ನಾ). ಒಂದು ಬಗೆಯ ಸೈನ್ಯ: ತುರಗದಳ ಪದಾತಿಬಲ ಬಿಲ್ಲಣಿ ಲಖ್ಖಣಿ ವಗ್ಗಸೇನೆ ಬಹುಪಡೆಯಿಂ ಬೆಳಗವತ್ತಿಯ ಕೋಟೆಯ ಮುತ್ತಿ (ಮೈಲಿ. ೧೯೪೨; ೬೬-೬; ಸು. 1166). [ವಗ್ಗ₂ + ಸೇನೆ]

**ವಚನ** (ನಾ). ೧. ನುಡಿಯುವುದು ; ಮಾತನಾಡುವುದು. ೨. ನುಡಿ ; ಮಾತು : ವಚನದಲ್ಲಿ ನಾಮಾಮೃತ ತುಂಬಿ ನಯನದಲ್ಲಿ ಮೂರುತಿ ತುಂಬಿ . . . ನಿಮ್ಮ ಚರಣಕಮಲದಲಾನು ತುಂಬಿ (ಬಸವ. ೪೯೨); ವಚನದೊಳಿಲ್ಲ ಪೆರ್ಮೊಲೆಯೊಳಲ್ಲದೆ ಕರ್ಕಶವೃತ್ತಿ ವಕ್ರಿಮಂ ಸುಚರಿತದೊಳ್ ವಿಚಾರಿಸುವೊಡಿಲ್ಲ ಳಕಾಳಿಯೊಳಲ್ಲದೆಲ್ಲಿಯುಂ (ಚಂದ್ರಪು. ೧೧-೧೯೯). ೩. ವಾಗ್ದಾನ ; ಭಾಷೆ : ತಾವೇ ಕೊಟ್ಟ ವಚನಗಳನ್ನು ಒಂದೇ ಸವನೆ ಹೇಗೆ ಭಂಗಮಾಡುತ್ತ ಬಂದಿರುವರು (ಪ್ರಬಂಧ. ೫೭). 'ವಚನಭಂಗ' ಪರಾ. ೪. ಹಿತವಚನ ; ಬುದ್ಧಿಮಾತು : ಹಿಸುಣರ ಬಗೆಯ ನೀ ಕೇಳದಿರು ನೀ ಮನ ಬಿಗಿಸದಿರು ಸಲಿಸೆನ್ನ ವಚನವನೆಂದಳಾ ಕುಂತಿ (ಕುಮ್ಮಾಉ. ೧೦-೩೧). ೫. ಕಾವ್ಯದಲ್ಲಿ ಬರುವ ಗದ್ಯಭಾಗ, —ಗದ್ಯರಚನೆ : ಸಾಹಿತ್ಯದಲ್ಲಿ, ಚಂಪೂಗ್ರಂಥಗಳಲ್ಲಿ ಉಪಯೋಗಿಸಿದ ಸಣ್ಣ ದೊಡ್ಡ ಗದ್ಯಭಾಗಗಳಿಗೆ ವಚನ ಎಂದೆನ್ನುವದುಂಟು . . . ಅವು

ವರ್ಣನಾತ್ಮಕವೇ ಇರಲಿ, ಕಥನಾತ್ಮಕವೇ ಇರಲಿ, ಎರಡು ಪದ್ಯಗಳ ಸಂಬಂಧವನ್ನು ಜೋಡಿಸಲು ಉಪಯೋಗಿಸಿದ ಒಂದರ್ಧವಾಕ್ಯ ಇಲ್ಲವೆ ವಾಕ್ಯಶೇಷಗಳೆ ಇರಲಿ, ಆ ಎಲ್ಲ ಗದ್ಯಭಾಗಗಳು 'ವಚನ'ಗಳೆಂದೆ ಕರೆಯಲ್ಪಡುತ್ತಿರುವವು (ವಚರ. ೨ ಪೀಠಿಕೆ). ೬. ಸರ್ವಜ್ಞಕವಿಯ ತ್ರಿಪದಿಬದ್ಧವಾದ ಪದ್ಯ, —ಸೂಕ್ತಿ : ಏಳು ಸಾವಿರದ ಎಪ್ಪತ್ತು ವಚನಗಳ ಹೇಳಿದನು ಕೇಳೊ ಸರ್ವಜ್ಞ (ಸರ್ವಜ್ಞ. ೨೪). ೭. ಶಿವಶರಣರ ಅನುಭಾವದ ನುಡಿ, —ಸೂಕ್ತಿ; IP ಇದು ಮಧ್ಯಕಾಲೀನ ಸಾಹಿತ್ಯದ ಒಂದು ವಿಶಿಷ್ಟಪ್ರಕಾರ. ವೀರಶೈವಧರ್ಮ, ಭಕ್ತಿ, ಸಮಾಜಸುಧಾರಣೆ ಇತ್ಯಾದಿಗಳನ್ನು ಕುರಿತು ರಚಿಸಿದ, ಕೊನೆಯಲ್ಲಿ ಅಂಕಿತವನ್ನು ಹೊಂದಿರುವ, ಗದ್ಯ ಪದ್ಯಗಳ ನಡುವಣ ಮಾದರಿಯ ಸೂಕ್ತಿ-ರಚನೆ. ಆಧುನಿಕಸಾಹಿತ್ಯಕ್ಷೇತ್ರದಲ್ಲೂ ಈ ಬಗೆಯ ಕೆಲವು ರಚನೆಗಳನ್ನು ಕಾಣಬಹುದು : ಆದ್ಯರ ವಚನ ಪರುಷ ಕಂಡಣ್ಣಾ . . . ಕೂಡಲ ಸಂಗನ ಶರಣರ ವಚನ ಬೇವ ಸವಿದಂತೆ (ಬಸವ. ೧೬೧); ಅಱುವತ್ತೆಂಟುಸಾವಿರ ವಚನಂಗಳ ಹಾಡಿ ಹಾಡಿ ಸೋತಿತೆನ್ನ ಮನ ನೋಡಯ್ಯಾ (ಸಿದ್ಧವ. ೪. ೩೫-೧೧೬). ೮. [ವ್ಯಾಕ] ವ್ಯಕ್ತಿ, ವಸ್ತು, ಸಂಗತಿ ಮೊದಲಾದುವುಗಳು ಒಂದೋ ಅಥವಾ ಹಲವೋ ಎಂಬುದನ್ನು ಸೂಚಿಸುವ ಸಂಜ್ಞೆ, —ಪರಿಭಾಷೆ : ಅಭಿರೂಪದಿನಾ ಪ್ರಥಮಾವಿಭಕ್ತಿ ಲಿಂಗಾರ್ಥ ವಚನ ಸಂಬೋಧನದೊಳ್ ಪ್ರಭವಿಪ್ಪುದಾ ದ್ವಿತೀಯಾವಿಭಕ್ತಿ ಕರ್ಮದೊಳನಾಕುಳಂ ವರ್ತಿಸುಗುಂ (ಶಮದ. ೧೨೬); ಕನ್ನಡದಲ್ಲಿ ವಚನಗಳು ಎರಡು — ಏಕವಚನ, ಬಹುವಚನ (ಕೈಪಿಡಿ. ೩೫).

ವಚನ ಕೊಡು = ಭಾಷೆಯನ್ನು ನೀಡು ; ಮಾತು ಕೊಡು : ನಿನ್ನ ಕೈಯಿಂದ ಆಗಲಾರದು, ಮಾಡಲು ವಚನ ಕೊಟ್ಟರೆ ಹೇಳುವೆ (ಕೊತಕಾ. ೪೨). [ಸಂ.]

**ವಚನಕಾರ** (ನಾ). ಅನುಭಾವದ ನುಡಿಗಳನ್ನು ರಚಿಸಿದ ಶಿವಶರಣ ; ವಚನಗಳನ್ನು ರಚನೆ ಮಾಡಿದ ಶಿವಶರಣ : ವಚನಕಾರರು ನಿಜವಾದ ಸಮಾಜಸುಧಾರಕರಿರುವರು (ವಚಶಾ. I, ೧೬ ಮುನ್ನುಡಿ). [ಸಂ.]

**ವಚನಕಾರ್ತಿ** (ನಾ). ಅನುಭಾವದ ನುಡಿಗಳನ್ನು ರಚಿಸಿದ ಶಿವಶರಣೆ ; ವಚನಗಳನ್ನು ರಚನೆ ಮಾಡಿದ ಶಿವಶರಣೆ : ಅನೇಕ ಜನ ಶರಣೆಯರು, ವಚನಕಾರ್ತಿಯರು ತಮ್ಮ ಅನುಭಾವದ ಅಮೃತವಾಣಿಯನ್ನು ಬಿತ್ತರಿಸಿದರು (ಕರ್ನಾಕ. ೧೧೫). [ವಚನಕಾರ + — ತಿ (< — ಇತ್ತಿ)]

**ವಚನಗುಪ್ತಿ** (ನಾ). [ಜೈನ] ಮನ, ವಚನ ಮತ್ತು ಕಾಯ ಎಂಬ ಮೂರು ಬಗೆಯ ಗುಪ್ತಿಗಳಲ್ಲಿ ಒಂದು ; ಮಾತನ್ನು ನಿಗ್ರಹಿಸುವುದು ; ಮಾತಿನ ಮೇಲಿನ ಹಿಡಿತ, —ಸಂಯಮ : ಹಿಂಸಾವಿರತಿ . . . ಪರಿಗ್ರಹವಿರತಿಗಳೆಂಬೀ ಐದು ವ್ರತಗಳ ಸ್ಥಿರತೆಗಾಗಿ ಐದೈದು ಭಾವನೆ(ಚಿಂತನೆ)ಗಳು ಹೇಳಿವೆ. ಹಿಂಸಾವಿರತಿವ್ರತಕ್ಕೆ ವಚನಗುಪ್ತಿ (ವಚನಪ್ರವೃತ್ತಿಯನ್ನು ತಡೆಯುವುದು) (ಜೈನಧ. ೬೮). [ಸಂ.]

**ವಚನಚತುರ** (ನಾ). ಮಾತಿನಲ್ಲಿ ಜಾಣನಾದವನು, —ನಿಪುಣ : ನೀತಿನಿರತನು ಮಾಕಾರವಂತನುಂ ವಚನಚತುರನುಮಪ್ಪುದ್ಭವನೆಂಬ ದೂತಮುಖ್ಯನನಟ್ಟಿದೊಡೆ (ಚಂದ್ರಪ್ರ. ೬-೧೮ ವ). [ಸಂ.]

**ವಚನತ್ರಯ** (ನಾ). [ವ್ಯಾಕ] ಏಕವಚನ, ದ್ವಿವಚನ, ಬಹುವಚನಗಳೆಂಬ ಮೂರು ವಚನಗಳು : ವಚನತ್ರಯಕ್ಕೆ — ಒರ್ವನೆ ಗಂಡನಲ್ತೆ ಜಗತೀತಳದೊಳ್ ಇರ್ಬರೆ ತೋಳ್ಗಳಲ್ತೆ ನೃಪತಿಗೆ ರಣದೊಳ್ (ಶಮದ. ೪೭ ಪ್ರಯೋ). [ಸಂ.]

**ವಚನತ್ರಿತಯ** (ನಾ). = ವಚನತ್ರಯ : ದೊರೆವಡೆದವ್ಯಯ ಸರಿ ಸರ್ವವಿಭಕ್ತಿಗಂ ತ್ರಿಲಿಂಗಕ್ಕಂ ತಾಂ ಸರಿ ವಚನತ್ರಿತಯಕ್ಕಂ ಸರಿಯೆನಿಸಿ ವಿಕಾರಮಿಲ್ಲದರ್ಥಮನೀಗುಂ (ಶಮದ. ೯೦). [ಸಂ.]

**ವಚನದೋಷ** (ನಾ). ೧. ಮಾತಿನಲ್ಲಿ ಉಂಟಾದ ತಪ್ಪು, —ನ್ಯೂನತೆ ; ಮಾತಿನ ಪ್ರಯೋಗದಲ್ಲಿ ತಪ್ಪಾದ ಅರ್ಥ ಬರುವಿಕೆ : ವಚನಪಾತಕವೆನ್ನ ವಚನದೋಷಂಗಳೆನ್ನ ಕಾಡಿ ಕಾಡಿ ಕೆಡಿಸಿಹುವೆನ್ನ (ಬಸವ. ೨೫೨); ವಚನದೋಷಕೆ ಬೇಡಿಕೊಂಬವೋಲ್ಕಾಲ್ಗೆಱಗಿ ಸಂತೈಸಿದಂ ಪ್ರಿಯಳನು (ಜೈಮಿಭಾ. ೨೬-೧೮). ೨. [ಕಾವ್ಯಮಿ] ಕಾವ್ಯದೋಷಗಳಲ್ಲಿ ಒಂದು ; ಕರ್ತೃಪದವನ್ನು ಏಕವಚನದಲ್ಲಿ ಅಥವಾ ಬಹುವಚನದಲ್ಲಿ ಪ್ರಯೋಗಿಸಿ ಕ್ರಿಯಾಪದವನ್ನು ಅದಕ್ಕೆ ಹೊಂದಾಣಿಕೆಯಿಲ್ಲದೆ ಬಹುವಚನದಲ್ಲಿ ಅಥವಾ ಏಕವಚನದಲ್ಲಿ ಪ್ರಯೋಗಿಸುವುದು : ಬಂದುವು ಪಾವುಡಂ ನೃಪತಿಗೆಂಬುದುಮಾನೆಗಳೀ ಪ್ರದೇಶದೊಳ್ ನಿಂದುದುದೆಂಬುದುಂ ವಚನದೋಷವಿಶೇಷಂ (ಕವಿರಾ. ೧-೧೧೮). [ಸಂ.]

**ವಚನಪಲ್ಲಟ** (ನಾ). [ವ್ಯಾಕ] ಏಕವಚನ ಮತ್ತು ಬಹುವಚನ ಪ್ರಯೋಗಗಳಲ್ಲಿ ಒಂದರ ಬದಲು ಇನ್ನೊಂದರ ಪ್ರಯೋಗ : ವಚನಪಲ್ಲಟ— (i) ಜಾತಿವಾಚಕ, ಸಂಖ್ಯೇಯವಾಚಕ, ವಿಧೇಯವಾಚಕಗಳ ಮೇಲೆ ಬಹುವಚನಕ್ಕೆ ಪ್ರತಿಯಾಗಿ ಏಕವಚನವು ವಿಕಲ್ಪದಿಂದ ಬರುವುದು. (ii) ಉಪಹಾಸ, ಗೌರವ ಇವುಗಳನ್ನು ತೋರಿಸುವಾಗ ಏಕವಚನಕ್ಕೆ ಪ್ರತಿಯಾಗಿ ಬಹುವಚನವು ಬರುವುದು (ಕೈಪಿಡಿ. ೫೭). [ಸಂ.]

**ವಚನಪಾತಕ** (ನಾ). (ಕೆಟ್ಟ) ಮಾತಿನಿಂದ ಉಂಟಾಗುವ ಪಾಪ : ವಚನಪಾತಕವೆನ್ನ ವಚನದೋಷಂಗಳೆನ್ನ ಕಾಡಿ ಕಾಡಿ ಕೆಡಿಸಿಹವೆನ್ನ (ಬಸವ. ೨೫೨). [ಸಂ.]

**ವಚನಪ್ರೌಢಿ** (ನಾ). ಮಾತಿನ ನೈಪುಣ್ಯ, —ಪ್ರೌಢಿಮೆ : ವಚನಪ್ರೌಢಿಯನರ್ಥ ಪ್ರಚುರತೆಯಂ ದೋಷದೃಷ್ಟಿಪರನಲ್ಲದವಂ ಶುಚಿಮತಿ ಪೊಗಟ್ಟುಂ ಮಾತ್ಸರ್ಯಚಿತ್ತನುನ್ಮತ್ತನಜಿದೊಡೇಂ ಪೊಗಟ್ಟಪನೇ (ಮಲ್ಲಿಪು. ೧-೨೭). [ಸಂ.]

**ವಚನಭಂಗ** (ನಾ). ಕೊಟ್ಟ ಮಾತನ್ನು ಮುರಿಯುವುದು ; ಭಾಷೆಗೆ ತಪ್ಪಿ ನಡೆಯುವುದು : ಪಾರಿವಾಳವನ್ನು ಬಿಟ್ಟರೆ ವಚನಭಂಗವಾಗುತ್ತದೆ (ಭಾರದ. ೧೦೩). [ಸಂ.]

**ವಚನಭ್ರಷ್ಟ** (ನಾ). ಕೊಟ್ಟ ಮಾತಿಗೆ ಎರವಾದವನು ; ಭಾಷೆಗೆ ತಪ್ಪಿದವನು : ಇದರಿಂದ ತನ್ನ ಸರ್ವನಾಶವಾದರೂ ವಚನಭ್ರಷ್ಟನಾಗಬಾರದು ಎಂಬ ನೀತಿಯು ಬೋಧಿಸಲ್ಪಟ್ಟಿದೆ (ಭಾರದ. ೧೦೩). [ಸಂ.]

**ವಚನರಚನೆ** (ನಾ). ಮಾತಿನ ರೀತಿ, —ಒಕ್ಕಣೆ : ವೀರಪಾಂಡವರದಟನಾ ದನುಜಾರಿ ಹೇಳಿದ ವಚನರಚನೆಯ ಕೌರವಗೆ ಬಂದಱುಹೆ ಕೋಪಿಸಿ ಸಂಜಯನ ಜಱಿದ (ಕುಮ್ಮಾಉ. ೫ ಸೂಚನೆ). [ಸಂ. ವಚನರಚನಾ]

**ವಚನಶಾಸ್ತ್ರ** (ನಾ). ಶಿವಶರಣರು ರಚನೆಮಾಡಿದ ಅನುಭಾವದ ನುಡಿಗಳ ತತ್ತ್ವಸಿದ್ಧಾಂತ : ಇವುಗಳಲ್ಲಿ ವಚನಕಾರರ ಗಮನವೆಲ್ಲಾ ಧರ್ಮದ ಕಡೆಗೆ . . . ಇಂಥ ರಚನೆಗೆ "ವಚನಶಾಸ್ತ್ರ" ಎಂಬ ಹೆಸರು ಸರಿಯಾಗಿ ಒಪ್ಪುತ್ತದೆ (ಕಾವ್ಯಸ. ೧೦೩); ವಚನಕಾರರು ಈ ಸಿದ್ಧಾಂತಗಳ ತತ್ವಗಳನ್ನು ಕನ್ನಡದಲ್ಲಿಯೇ ಸುಲಭವಾಗಿ ಬೋಧಿಸಿದ್ದಾರೆ. ಅವರು ನಿರ್ಮಾಡಿಸಿದ ಈ ಕನ್ನಡವಾಙ್ಮಯಕ್ಕೆ 'ವಚನ ಶಾಸ್ತ್ರ' ಎಂಬ ಹೆಸರು ಉಂಟಾಗಿದೆ (ವಚಶಾ. I, ೧೭ ಮುನ್ನುಡಿ). [ಸಂ.]

**ವಚನಶೂರ** (ನಾ). ಮಾತಿನಲ್ಲಿ ಮಾತ್ರ ಶೂರನಾದವನು ; ನುಡಿಯಲ್ಲಿ ಮಾತ್ರ ಪರಾಕ್ರಮವಂತನಾದವನು : ವಚನಶೂರರು ನಾವು ಪಾರ್ಥಿವನಿಚಯವೇ ಭುಜಶೂರರು (ಕುಮ್ಮಾಉ. ೧೫-೪). [ಸಂ.]

**ವಚನಸಾಹಿತ್ಯ** (ನಾ). ಶಿವಶರಣರು ರಚನೆಮಾಡಿದ ಅನುಭಾವದ ನುಡಿ, —ವಾಙ್ಮಯ : ಆತ್ಮಜ್ಞಾನದ ಉನ್ನತವಿಚಾರಗಳಿಂದಾಗಿ ವಚನಸಾಹಿತ್ಯವು ವಿಶ್ವಸಾಹಿತ್ಯಕ್ಕೆ ಕನ್ನಡಸಾಹಿತ್ಯವು ಕೊಟ್ಟ . . . ಅಮೂಲ್ಯಕಾಣ್ಕೆಯಾಗಿದೆ (ಕರ್ನಾಕ. ೬೫); ವಚನಸಾಹಿತ್ಯದ ಎರಡು ಶೈಲಿಗಳಿಗೆ ಬಸವಣ್ಣ ಮತ್ತು ಅಲ್ಲಮರು ಸೊಗಸಾದ ಪ್ರತಿನಿಧಿಗಳು (ಶೂನ್ಯಕು. ೧೨). [ಸಂ.]

**ವಚನಿಸು** (ಕ್ರಿ). ೧. ಹೇಳು; ನುಡಿ; ಮಾತನಾಡು: ಮತ್ತೆರಡನೆಯ ವರವೇನು ವಚನಿಸು ಕೊಟ್ಟೆ ನಾ ನಿನಗೆ (ಕುಮ್ಮಾಸ. ೧೫-೫೧); ಉಚಿತವಿದು ನಿನಗಲ್ಲವೆಂದಾ ಸಚಿವಪತಿ ನಯನೀತಿಯಿಂದವೆ ವಚನಿಸಿದನನ್ಯಾಯವೆಂದನು ಕಲಿವಿಭೀಷಣನು (ತೊರರಾ. ೩-೧೧-೪೧). ೨. ವಿವರಿಸು ; ವರ್ಣಿಸು : ಅಕಣನಂತೆಸಿವಾತ್ಮಯೋಗ ವಿಂತಿಹುದೆಂದು ಬೇರ್ಕೆಯ್ದು ವಚನಿಸಲರಿದು (ಭರತೇ. ೨-೯೧); ಬಂಧುವಿಂಗರ್ಘ್ಯವನು ಕೊಡುತಿರಲೊಂದು ಚಿತ್ರವದಾಯಿತದನೇನೆಂದು ವಚನಿಸಬಪ್ಪುದೆಲೆ ಭೂಪಾಲ ಕೇಳು (ಕೊಣಗಯ. ೫-೬). ೩. ಭಾಷೆ ನೀಡು ; ಮಾತು ಕೊಡು : ವಚನಿಸಿ ಮಾಡದಿಹ ಬಾಹಿರರು ನಾವಲ್ಲ (ಕುಮ್ಮಾದ್ರೋ. ೧-೪೦). [ವಚನ + — ಇಸು]

**ವಚನೀಯ** (ಗು). ೧. ಹೇಳಲು ಯೋಗ್ಯವಾದ ; ಸೂಚಿಸಲು ಅರ್ಹವಾದ. ೨. ನಿಂದಿಸಲು ಯೋಗ್ಯವಾದ. (ನಾ). ೩. ದೂಷಣೆ ; ನಿಂದೆ. [ಸಂ.]

**ವಚನೀಯತೆ** (ನಾ). ೧. ದೂಷಣೆಗೆ ಗುರಿಯಾದುದು ; ತೆಗಳಿಕೆಗೆ ಈಡಾದುದು. ೨. ಗಾಳಿಸುದ್ದಿ ; ವದಂತಿ. ೩. ನಿಂದೆ ; ಅಪವಾದ : "ವಿಗಾನಂ, ವಚನೀಯತಾ — ಈ ೨ ಜಬ್ಬೆವಾರ್" (ಹಲಾಯು. ೨೪-೧೪೬). [ಸಂ. ವಚನೀಯತಾ]

**ವಚಸ್ಸು** (ನಾ). ೧. ಮಾತು ; ನುಡಿ : ಆಕೆಯ ವಚಸ್ಸಿನಲಿ ತಾವರೆಯ ತಹನೆನುತ ಸಿಂಹವಿರಾವದಲಿ ವಿಕ್ರಮಿಸೆ ವಿಗಡನದಾವರಿಸಿ ಬಲುಬಾಲ ತಡೆದುದು ಪವನಜನ ಪಥವ (ಕುವ್ಯಾಅ. ೧೦-೧೫). ೨. ಪದ ; ಶಬ್ದ. ೩. ಆಜ್ಞೆ ; ಶಾಸನ. ೪. ವಾಕ್ಯ. [ಸಂ. ವಚಸ್]

**ವಚಿಸು** (ಕ್ರಿ). ೧. ಹೇಳು ; ನುಡಿ : ಬಲ ನಿರ್ನಾಮವಾಯ್ತೆಂದುಬ್ಬಿ ವಚಿಸುವ ಕೈಮೆಗಿದಕೋಯೆನುತ ಕವಿದೆಚ್ಚನು ಕಕುತ್ಸ್ಥಜನ (ತೊರರಾ. ೩-೬-೫೪); ಕುಚಿತಬುದ್ಧಿಯ ತನ್ನ ಮನದೊಳು ಮಡಗದೆ ವಚಿಸಿದ ಖಳರಾಯನೊಡನೆ (ಮೋಹತ. ೩೩-೧೩). ೨. ಸಾರು ; ಘೋಷಿಸು : ಸ್ವಾತ್ಮಶಿಕ್ಷಣಮೇ ಸ್ವರಾಜ್ಯವೆನ್ನುತ ವಚಿಸಿ ದೇಶಸೇವೆಯನೀಶಸೇವೆಯೆನಿಸಿ (ಅಮತಂ. ೧೩-೭). ೩. ಧ್ವನಿಮಾಡು ; ಕೂಗು : ಅಖಿಲಪಕ್ಷಿಗಳಲ್ಲಿ ಪಣ್ಣುಗಳ್ ಸವಿದು ಮದಿಸಿ ವಚಿಸುತಲಿರುವ ಮಂಜುಪದ್ಯಗಳ (ಸೌಗಂಧಿ. ೪೪-೯). ೪. ವಿವರಿಸು ; ವರ್ಣಿಸು : ಧರ್ಮಭಾಗವನರಿದು ಶಾಸ್ತ್ರಮಂ ವಚಿಸುತಂ (ಪದ್ಮರಾ. ೯-೩೨); ವಚಿಸಲಚ್ಚರಿಯಮಮ ಲೋಕಪ್ರಚುರನಲ್ಲಾ ಸಿರಿಯೊಳು (ತೊರರಾ. ೬-೨೬-೫೧). ೫. ಪಠಿಸು ; ಜಪಿಸು : ಪರಮಸಂತೋಷದೆ ಶುಚಿವೆತ್ತು ರಣರಂಗದೊಳಗೆ ವಚಿಸಿದ ಶುಕ್ರದೇವರು ಕೊಟ್ಟ ಮಂತ್ರವ (ಮೋಹತ. ೪೦-೪೭). ೬. ವಚನದ ರೂಪದಲ್ಲಿ ಹೇಳು : ವಚಿಸಿ ಅನುಭವಿಯಾಗದವ ಪಿಶಾಚಿಯಯ್ಯಾ ವಚಿಸಿ ಅನುಭವಿಯಾದವ ಪಂಡಿತನಯ್ಯಾ (ಸಿದ್ಧವ. ಕ. ೩೪-೧೦೪); ಅಕ್ಕಮಹಾದೇವಿ ಮುಂತಾದ ಶರಣಶರಣೆಯರು ತಂತಮ್ಮ ವಿಶಿಷ್ಟವ್ಯಕ್ತಿತ್ವದ ಪಡಿನೆಳಲಾದ ವಚನಗಳನ್ನು ರಚಿಸಿದರು, ಅಲ್ಲ ವಚಿಸಿದರು (ತವಾ. ೪). [ವಚನ + – ಇಸು$_{3}$]

**ವಚೋಗುಪ್ತಿ** (ನಾ). = ವಚನಗುಪ್ತಿ : ಆದರೆ ಅವೆಲ್ಲಕ್ಕೂ ಮೂಲ ವಚೋಗುಪ್ತಿ (ಮಾತಿನ ಮೇಲಿನ ಹತೋಟಿ) (ಭಾರದ. ೩೩೦). [ಸಂ.]

**ವಚೋಲಹರಿ** (ನಾ). ಮಾತಿನ ಶೈಲಿ, –ರೀತಿ : ಪದಸಂಚರಣೆಯಲಿ ಲಿಪಿ ತಿರುಗಿ ನೋಡದ ಬರಿದು ಬೇಟೆ ಕುಮಾರವಾಲ್ಮೀಕಿಯ ವಚೋಲಹರಿ (ತೊರರಾ. ೧-೧-೧). [ಸಂ.]

**ವಚೋವಲ್ಲಭ** (ನಾ). ವಾಗ್ದೇವಿಯ ಪತಿ ; ಬ್ರಹ್ಮ : ಕಾಲನೇಮಿಯೆ ಕಂಸಾಸುರನಾಗಿ ಪುಟ್ಟಿದುದ ನಾಂ ಬಲ್ಲೆ ವಚೋವಲ್ಲಭಾ (ಜಗವಿ. ೧-೬೮). [ಸಂ.]

**ವಚೋವಿನ್ಯಾಸ** (ನಾ). ಮಾತಿನ ಜೋಡಣೆ, –ರಚನೆ : ಚರಮುಖಿಪ್ರತಿಪನ್ನ ಬಂಧುರತರವಚೋವಿನ್ಯಾಸ ಕರ್ಣಜ್ವರವೊ ಕರ್ಣಾಮೃತವೊ ಕೇಳಿರೆಯೆಂದನಂಧನೃಪ (ಕುವ್ಯಾಅ. ೧೭-೧೪). [ಸಂ.]

**ವಚೋವಿಸ್ತರ** (ನಾ). (ವಿಷಯವನ್ನು) ವಿವರವಾಗಿ ಹೇಳುವಿಕೆ ; ಮಾತಿನ ಹರವು, –ವ್ಯಾಪ್ತಿ : ಸಂಬೋಧಿಸಿದ ಗುರುಗಳ ವಚೋವಿಸ್ತರಮಂ ಸುಕುಮಾರ ಮುನೀಶ್ವರನವಧಾರಿಸಿ (ಸುಕುಮಾ. ೧೨-೧೩ವ); ನೀ ಮರುಳೆ ವಿದುರ ಭವದ್ವಚೋವಿಸ್ತರಕೆ ಪಡಿಸಣವುಂಟೆ (ಕುವ್ಯಾಸ. ೧೨-೯೨). [ಸಂ.]

**ವಚ್ಚ$_{1}$** (ನಾ). ೧. ಓರೆ ; ಪಕ್ಕ ; ಅರುಗು : ಅವನ ಬಗಲ ಮೇಲೆ ಮಲ್ಹಾರಿ ಅದುಮಿಕೊಂಡಿದ್ದ. ಇದ್ದಕ್ಕಿದ್ದಂತೆಯೇ ಮಲ್ಹಾರಿ ವಚ್ಚವಾದ (ಭೀಮಕಾ. ೪). ೨. ಸುಳಿವು ; ಕುರುಹು ; ಜಾಡು : ನಾಯಕನ ಸೂಕ್ಷ್ಮದೃಷ್ಟಿ ಇವನು ಇಂಥವನೇ ಎಂಬುದನ್ನು ಥಟ್ಟನೆ ಕಂಡುಕೊಂಡಿತು . . . ಆದರೂ 'ವಚ್ಚ' ಕೊಡದೆ ಮಾತನಾಡಿದನು (ಮಲ್ಲಿ. ೧೨೪). [ದೇ. ‖ ತಮಿ. ವಚ್ಚೈ = ಬಾಗು, ಬಗ್ಗು]

**ವಚ್ಚ$_{2}$** 'ಬಚ್ಚ$_{1}$' ನೋ.

**ವಚ್ಚ$_{3}$** (ನಾ). ಎದೆ ; ವಕ್ಷಸ್ಥಲ : ನಲಿನಲಿದು ಚಂಚುವಿಂ ಪಿಡಿದು ಕಿರಣಂಗಳನ್ನೊಲವಿಂದಲೀಂಟಿ ವಚ್ಚದೊಳಿಟ್ಟು ಗಳದೊಳಗೆ ಲಲಿತಹಾರಂಗೈದು . . . ಎಂ ಪ್ರಿಯದಿ ನಲಿದುವೊ ಚಕೋರಿಗಳ್ (ವೆಂಕಾರಾ. ೫-೬-೨೦). [< ಸಂ. ವಕ್ಷಸ್]

**ವಚ್ಚ$_{4}$** (ನಾ). ವತ್ಸನಾಭವೆಂಬ ವಿಷಮೂಲಿಕೆ : ಸಿಲೆಯೊಳು ರನ್ನ ಪುಟ್ಟದೊಲು ಮೀರಿ ವಚ್ಚದೊಳೊಗೆದು ನಿರ್ವಿಷದೋರುವೊಲು ಖಳವಂಶಪಾರಾವಾರದೊಳು ಹರಿಶರಣ ಜನಿಸಿದನು (ಅನಂರಾ. ೪-೪-೧೮). 'ಬಚನಾಗ' ಪರಾ. [< ಸಂ. ವತ್ಸನಾಭ]

**ವಚ್ಚಗೋತ್ರ** (ನಾ). ಒಂದು ಗೋತ್ರದ ಹೆಸರು ; ವತ್ಸಗೋತ್ರ : ಪತ್ತಂಗೆಟೆಯೊಡೆಯ ವಚ್ಚಗೋತ್ರದ ಕಣ್ಣಮ್ಮಯ್ಯನ ಮಗ ನಿರುಗಮ್ಮಯ್ಯನುಂ (ಎಕ. X, ಕೋಲಾರ. ೫೭-೭; 925). [< ಸಂ. ವತ್ಸಗೋತ್ರ]

**ವಚ್ಚೆ** (ನಾ). ಇಚ್ಛೆ; ಅಪೇಕ್ಷೆ : ಹುಚ್ಚನ ಕೈಗೆನ್ನ ಹಿಡಿದುಕೊಟ್ಟರೊಳಿತೆ . . . ಅಚ್ಚುತನ ದಾಸರ ಹೆಮ್ಮನೆ ಮುಂದಿನ ಚೊಚ್ಚಲಾದ ಉಡಿಯಾ ಮಗನಯ್ಯ ನಾನಯ್ಯ ಮುಚ್ಚುಮರೆಯಾತಕೆ ವಚ್ಚೆ ಅರದು Eವಚ್ಚೆ ಅರಿದು∃ ಪೇಳೊ (ಮೋಕ್ಷದೀ. ೮೮-೩). [7./ ತಮಿ. ವಚ್ಚೈ$_{4}$ = ದಯೆ, ಕರುಣೆ]

**ವಜನ** 'ವಜನು' ನೋ.

**ವಜನದಾರ** 'ವಜನುದಾರ' ನೋ.

**ವಜನು, ಒಜ್ಜೆ, ವಜನ, ವಜೆ, ವಜ್ಜೆ** (ನಾ). ೧. ತೂಕ ; ಭಾರ : ತಾಯಿ ಮಕ್ಕಳ ಜಗಳ ನ್ಯಾಯ ಮಾಡುವರಾರೆ ವಾಲೇಗೆ ಮುತ್ತು ವಜನೇನ ಹಡದಮ್ಮ ನಾ ಆಡಿದ ಮಾತು ನಿಜವೇನೆ (ಹಳ್ಳಿಯ. ೯೩). ೨. (ಆಲಂ) ಗೌರವ ; ಘನತೆ ; ದೊಡಸ್ತಿಕೆ : ನೀ ಕೆಲಸಾ ಮಾಡಿಕೋತ ಹೋದ ಹಂಗ ಕಾಯದೆ ಕಾನೂನಿನ ಹಿಡಿತ, ಭಾಷಾದ ವಜನು, ಹಿಂದು-ಮುಂದಿನ ವಿಚಾರ, ಎಲ್ಲಾ ತಾನ ಹಿಡಿತಕ್ಕ ಬರತಾವ (ಗಂಮಾಯಿ. ೧೭೯); ಗದರಿಸಿದರೆ ಆಗಲಿಲ್ಲ ; ಆ ಗದರಿಕೆಗೆ ಒಂದು 'ಇದು' (ವಜನು) ಇರಬೇಕು (ಮೂರುದಾ. ೪೭). ಒಜ್ಜೆ : ೧. ಎತ್ತಲಾರದ ಒಜ್ಜೆ ಕತ್ತು ಮುರಿಯುವಂತೆ ಹೊತ್ತು ನಾ ನಿಲಲಾರೆ ಸಿದ್ಧರಾಮ (ಸಿದ್ಧಪು. ೭-೯೦); ಕುರುಡರನ್ನು ಒಜ್ಜೆ ಹೊರುವ ಪ್ರಾಣಿಗಳಂತೆ ಉಪಯೋಗಿಸುತ್ತಿದ್ದರು (ಕವಪು. ೬-೧೩೨). ೨. ಸುಂಕ ತಪ್ಪಿಸೆ ಹೇರನೊಪ್ಪಿಸಿದೆನಾದೊಡಂ ಶಪಿಸದೆನ್ನೊಜ್ಜೆಯಂ ಹಿಗ್ಗಿಸಿದೆ! (ಹಬ್ಬರ. ೩೫-೨). ೩. ಜವಾಬ್ದಾರಿ ; ಹೊಣೆಗಾರಿಕೆ : ಸಂಸಾರದಲ್ಲಿ ಬಹುಭಾಗದ ಒಜ್ಜೆಯು ಸ್ತ್ರೀಯರ ಮೇಲಿರುವುದು (ಗರತಿ. ೨೬). ವಜನ : ೨. ಪಡದಯ್ಯನ ವಜನ ಕಾಯಂ ಉಳೀಬೇಕಾದರೆ ಅವನಿಂದ ಗೌಡನ ಫಜೀತಿ ಮಾಡಿಸಬೇಕಾಗತದ (ಗ್ರಾಮಾಯ. ೯೪). ವಜೆ : ೧. ಪತ್ತು ಎತ್ತಿನಾ ವಜೆಯ ರತ್ನ ಬಸವಯ್ಯ ಮುತ್ತು ಪತ್ತು ಎತ್ತಿನ ವಜೆಯು ಬಳಿಕ ಬಸವಯ್ಯ (ಶರಲೀ. ೨೭೯-೮). ೪. ಬಿಡಿಕಾಗದಗಳು ಅಥವಾ ಹಾಳೆಗಳು ಹಾರಿ ಹೋಗದಂತೆ ಅವುಗಳ ಮೇಲಿಡುವ ಭಾರದ ವಸ್ತು : ಕಾಗದಗಳು ಗಾಳಿಗೆ ಹಾರದಂತೆ ರಂಗುರಂಗಿನ ಕಾಜಿನ ವಜೆಗಳು ಮೇಜಿನ ಮೇಲೆ. ಮೇಜಿನ ಸುತ್ತಲೂ ನಾಲ್ಕು ಕುರ್ಚಿಗಳು (ದಾಕೂಟ. ೨). ವಜ್ಜೆ : ೩. ಸಂಸಾರದಲ್ಲಿ ಗಂಡ ಹೆಂಡರ ಮೇಲೆ ಬಹಳ ದೊಡ್ಡ ವಜ್ಜೆ ಇರುವದು (ಉತ್ತಗ್ರ. ೮೮); ಸಾಲಿಗರ ಚಿಕ್ಕ ಪುಟ್ಟ ಹಣವನ್ನು ಕೊಟ್ಟು ತಲೆಯ ಮೇಲಿನ ವಜ್ಜೆಯನ್ನು ಸ್ವಲ್ಪ ಕಡಿಮೆಮಾಡಿಕೊಂಡನು (ಚಿತಸ. ೯೨). [<— ಅರ. ವಝ್ನ್, ವಜನ್ ; ಹಿಂ. ಮರಾ. ವಜನ್./ ಪ್ರಾ. ವೋಜ್ಝ./ ತುಳು. ಒಜನ್, ಒಜನೆ]

**ವಜನುದಾರ, ವಜನದಾರ** (ನಾ). ೧. ತೂಕವಾದುದು : (ಕ). ೨. ಗೌರವಾನ್ವಿತ ; ವರ್ಚಸ್ವಿ ; ಘನತೆಯುಳ್ಳವನು : ಆ ವ್ಯಕ್ತಿ ವಜನುದಾರ ಇದ್ದಾನೆ (ರೂಢಿ). ವಜನದಾರ : ೧. ಇಮಾರತಿಯ ಕಟ್ಟಿಗೆಯಲ್ಲಿ ಅನೇಕ ಜಾತಿ ಇದ್ದು . . . ಸಣ್ಣದು, ದೊಡ್ಡದು, ವಜನದಾರ ಮತ್ತು ಹಗುರು ವಗೈರೆ ಅನೇಕ ಭೇದಗಳು (ಮುಂಬವ್ಯಾ. ೨೦೦). [<— ಹಿಂ. ಮರಾ. ವಜನದಾರ್]

**ವಜಾ** (ನಾ). ತೆಗೆದುಹಾಕುವುದು ; ಕಳೆಯುವುದು ; ಬಿಡುವುದು : ಬೇರೀಜು ಕಂಟೀರಾಯಿ . . . ಪೈಕಿ ವಜಾ ಜಾರಿ ಯಿನಾಮತ್ತಿ (ಮೈಆ. ೧೯೩೯, ೪೨-೪೫; 1825); ಹಾಗಿಲ್ಲವಾದರೆ ಕೆಲಸದಿಂದ ವಜಾ ಮಾಡಲ್ಪಡುವರೆಂದು ಮದರಾಸ್ ಗೌರ್ನಮೆಂಟಿನವರು ಒಂದಾನೊಂದು ಕಾಲದಲ್ಲಿ . . . ಹುಕುಂ ಮಾಡಿರುವರು (ಗ್ರಾಮೂಕ. ೪).

ವಜಾ ಮಾಡಿಸು = ಇಲ್ಲವಾಗಿಸು ; ತೆಗೆದುಹಾಕಿಸು : ನಿನ್ನೆ ಮಟ್ಟಿಗಾದರೂ ನಿನ್ನ ಆ ಹಾಳು ಹಿಂದೀಯನ್ನು ವಜಾ ಮಾಡಿಸಿ ನಿನ್ನನ್ನು ಕ್ಲಬ್ಬಿಗೆ ಎಳೆದೊಯ್ಯೋಣವೆಂದು ಹೋಗಿದ್ದೆ (ನಚಿದಾ. II, ೮೬೮). ವಜಾ ಮಾಡು = ತೆಗೆದುಹಾಕು ; ಬಿಟ್ಟುಬಿಡು :

ಈ ವರ್ಷ ಮುಷ್ಕರದ. ಪರಿಣಾಮವಾಗಿ ಮಾಲೀಕ ಅವನನ್ನು ವಜಾ ಮಾಡಿದ್ದನು (ಕುಸರು. ೧೪೯); ಪಾಲುದಾರರು ಇಷ್ಟಬಂದಂತೆ ಅದನ್ನು ವಜಾ ಮಾಡಬಹುದೆಂದೂ ಭಾವಿಸಲಾಗದು (ರಾಜ್ಯಾಂಗ. ೨೧). [<— ಅರ. ವರ್ಝ್‌ಅ; ಹಿಂ. ಮರಾ. ವಜಾ]

**ವಜಾಬಾಕಿ** (ನಾ). ೧. ಕೊಟ್ಟ ಹಣವನ್ನು ಕಳೆದು ಉಳಿದಿರುವುದು. ೨. [ಗಣಿತ] ಕಳೆದು ಉಳಿದ ಅಂಶ ; ಶೇಷ : ತ್ರಿಕೋಣದಲ್ಲಿ ಶಿರಃಕೋಣದಿಂದ ಕೆಳಗಡೆ ಲಂಬ ಮಾಡಿ ಇರುವಾಗ ಉಭಯಪಾರ್ಶ್ವದ ವರ್ಗದ ವಜಾಬಾಕಿ ಕೆಳಗಡೆ ಎರಡು ಖಂಡದ ವರ್ಗದ ವಜಾಬಾಕಿಗೆ ಸಮವಾಗಿದೆ (ಭೂಮಿಅ. ೫೨). 'ಜಾತಾಬಾಕಿ' ಪರಾ. [<— ಅರ. ವರ್ಝ್‌ಅಬಾಕೀ; ಮರಾ. ವಜಾಬಾಕೀ]

**ವಜಾವಟ್ಟ** (ನಾ). (ಕೊಡಬೇಕಾದ ಬಾಕಿ ಹಣವನ್ನು ) ತೆಗೆದುಹಾಕುವುದು ; ಬಿಟ್ಟುಬಿಡುವುದು ; ವಜಾ ಮಾಡುವುದು : ಗ್ರಾಮಮುನಸಿಫ್ ಕೋರ್ಟಿನಲ್ಲಿ ದಾವಾ ತರಬಹುದಾದಂಥ ಯಾವ ಮೊಬಲಗನ್ನಾದರೂ ವಜಾವಟ್ಟ ಮಾಡಬೇಕೆಂಬು ದಾಗಿ ಪ್ರತಿವಾದಿ ಹೇಳಬಹುದು (ಗ್ರಾಮೂಕ. ೨೯). [<— ಮರಾ. ವಜಾವಾಟ್]

**ವಜೀರ** (ನಾ). ೧. ಪ್ರಧಾನಮಂತ್ರಿ ; ಅಮಾತ್ಯ ; ದಿವಾನ : ತಾನಾಳ್ವ ದೇಶದ ಖಾನ ವಜೀರರುಂ ಕರಸಿ (ಮೈಅಾ. ೧೯೩೧, ೧-೧೬; 1310); ವಿಯಪರಾಜರಸಿನವರ ಸೇವಕ ವಜೀರ ಮೊನೆಯಾಳು ಮಾಡಿಸ್ತ ಸ್ತಂಭ (ಎಕ. XV,ಅರಕ. ೧೩೬-೨; 1559). ೨. ಕುದುರೆಯ ಸವಾರರ ಮುಖ್ಯಸ್ಥ : ಒತ್ತಿಗೆ ಸೇರಿ ಮೈದಡವಿದ ಸಹಣಿಗೆ ಹತ್ತು ಸಾವಿರ ಟೆಂಕೆಯನು ಇತ್ತಪೆವೆಂದು ವಜೀರ ಮಲ್ಲುಕರು ನೋವುತ್ತ ಮನದೊಳೆಯ್ದುವರು (ಕುರಾಸಾಂ. ೯-೬೦); ದಿಟ್ಟಸುತ ತುರಗದ ವಜೀರರು ಅಷ್ಟದಿಕ್ಕಲಿ ಕವಿದ ಬಲವನು ಕುಟ್ಟದರು ಅರಿಭಟರ ಸಿರವರಿದಿಟ್ಟರವನಿಯಲಿ (ಶರಲೀ. ೫೫೧). ೩. ಶೂರ ; ಪರಾಕ್ರಮಿ : ಅತ್ಯದ್ಭುತ ಪರಾಕ್ರಮಶಾಲಿಗಳಪ್ಪ ವಜೀರರ್ಕಳೊಂದಾಗಿಯಪರಿಮಿತ ಸೈನ್ಯಸಮೂಹಸಹಿತಂ ತೆರಳ್ದು (ಕೆಳನೃ. ೨-೮).

[<— ಅರ. ವಝೀರ್; ಹಿಂ. ಮರಾ. ವಜೀರ್]

**ವಜೀರಿಕೆ** (ನಾ). ೧. ಸಚಿವನಾಗಿರುವಿಕೆ ; ಮಂತ್ರಿತ್ವ ; ದಿವಾನಗಿರಿ. ೨ ಯಾಜಮಾನ್ಯ ; ಉಸ್ತುವಾರಿಕೆ : ಹೊಕ್ಕು ಚೆನ್ನಣ್ಣನ ವಜೀರಿಕೆ ಲೆಕ್ಕದಲಿ ಹನ್ನೆರಡು ಸಾವಿರ ಕಕ್ಕಸದ ತುರಗಗಳ ದುವ್ವಾಳಿಸುತ ಹೊಗಲೇರಿ ದಿಕ್ಕು ದಿಕ್ಕಲಿ ಹರಿದು ಹೊಡೆದರು ಲೆಕ್ಕವಿಲ್ಲದ ತುರಗದವರನು (ಶರಲೀ. ೫೫೬). [ವಜೀರ + — ಇಕೆ]

**ವಜೀಲ** (ನಾ). = ವಜೀರ ೨ : ಪ್ರಧಾನ ಕೇಸರಿಕಾನ ಗೋವೆಯನಾಳುತ ಯಿದ ನಿಜಾಮುದೀನ್ ಮಲುಕ ಅನೇಕ ವಜೀಲರು ಸಹವಾಗಿ ಗೋವೆಯ ಮುಖದಿಂ ದಂಡೆತಿ ಬಂದು ಮಿಡಿಜೆಯಲ್ಲಿ ಕಾದಿದಲ್ಲಿ (ಕಣ. I, ೬೨-೧೧; 1481).

[ IP ಇದು 'ವಜೀರ' ಎಂಬುದರ ಅಪಲಿಖಿತವಿರಬಹುದು]

**ವಜೆ** 'ವಜನು' ನೋ.

**ವಜ್ಜಡ** (ನಾ). [ನಾಟ್ಯ] ನೃತ್ಯದ ಗತಿಭೇದಗಳಲ್ಲಿ ಒಂದು : ನಟನ ತಾಂಡವ ನಾಟ್ಯ ಪಟುನೃತ್ಯಲಾಸ್ಯದುತ್ಕಟ ನೇರು ತಿರುಪುರು ಲವಣಿಯಾ ದಿಟಮಂಡಿತ ಕುಂಡಲ ಸುಟಿ ಲಾಗ ವೇಗ ಸಂಘಟಿತ ವಜ್ಜಡಗಳ್ ಮಾಳಾಸ ಭರತಮಾತಂಗದ ತಿರುಪು ಭಾಂಡಕ ಕುಹಳರ ಪರಿಯಿಂದಾಡುತಿರಲು (ಭೈರವೇ. ೧-೩೯೪). [?]

**ವಜ್ಜನಿ** (ನಾ). (?) : ಶ್ರೀಮತ್ ಪಂಚಲದೇವ[ಂ] ಸೆಬ್ಬಿ ಮೂವತ್ತನಾಲುತ್ತ[ಂ] ಎಂಭತ್ತನಾಲ್ಕನೆಗ್ಗ೯ಂ ಕಾಲಂ ಕಟ್ಟುಕೊಟ್ಟ ಸ್ಥಿತಿ ರೋಣ[ದ]ಪನ್ನಿರ್ವಱುಗದ್ಯಾಣಂ ಸಿದ್ದಾಯ ಉಪ್ಪು ತುಪ್ಪ ಕಾಣಂ ರಸಂ ವಜ್ಜನಿಯುಂ (ಇಅ. XII, ೨೫೬-೧೬; 974). [?]

**ವಜ್ಜಲು** (ನಾ). ತೇವ ; ಕೆಸರು : ಮಜ್ಜಿಗೆಯನು ಹೊತ್ತು ಬರುತಿರೆ ಗೊಲ್ಲಿತಿ ವಜ್ಜಲ [ಪಾಠಾಂ. ವ್ರಜಲ] ಜಾರಿಬೀಳುತಲಿ ಮಜ ಭಾಪುರೆ ಬಸವಯೆನೆ ಪಿಡಿದನು ಸಜ್ಜನೆ ಭಕ್ತೆಯ ಕೊಡನ (ಬಸಪ. ೨-೯೭). 'ಒಜ್ಜಲು' ಪರಾ. [< ಸಂ. ಉದ್ರಲ]

**ವಜ್ಜಟಿ, ವಜ್ಜೆಟಿ** (ನಾ). ಒಬ್ಬ ನೊಳಂಬರಾಜನ ಹೆಸರು : ಪೊಗಟ್ಟೆನೊ ಧಾತ್ರಿಯೊಳ್ನೆಗಟ್ದ ವಜ್ಜಟನಂ ಬಿಡೆಯಟ್ಟಿದೇೞ್ಗೆಯಂ (ಎಕ. II, ೫೯-೮೪; 974). ವಜ್ಜೆಟಿ : ಕಳ್ವಾನ್ತಕ್ಷುಭಿತಾಬ್ಧಿಭೀಷಣಬಳಂ ಪಾತಾಳಮಲ್ಲಾನುಜಂ ಜೇತುಂ ವಜ್ಜೆಟದೇವಂ (ಎಕ. II (R), ೩೮೮-೫; ಸು. 10ನೆಯ ಶತ?). [< ಸಂ. ವಜ್ರಟ]

**ವಜ್ಜೆ** 'ವಜನು' ನೋ.

**ವಜ್ರ** (ಗು). ೧ ಗಟ್ಟಿಯಾದ ; ದೃಢವಾದ ; ಬಲವಾದ : ಅವುಗಳ ವಜ್ರಮೂತಿಯ ಮೊನೆಯ ಸೊಗಸನ್ನು ಅನುಭವರಸಿಕರೇ ಬಲ್ಲರು (ನಂಟುರು. ೪೪). 'ವಜ್ರಕಾಯ' ಪರಾ. ೨. ಕಠಿಣವಾದ ; ಅಭೇದ್ಯವಾದ : ಈ ವಸುಂಧರಾರಾಜ್ಯಮೋಹಮೆಂಬ ವಜ್ರಲೋಹನಿಗಳಮಂ ಪಱಿಯೆ ಪೊಯ್ದು ರಾಜಕುಂಜರಂಗೆ ನಿನಗಪವರ್ಗಮಾರ್ಗಂ ನಿರರ್ಗಳಮೆ ವಲಂ (ಆದಿಪು. ೯-೬೨ ವ). 'ವಜ್ರಕವಾಟ' ಪರಾ. ೩. ಗಾಢವಾದ ; ಆಳವಾದ : 'ವಜ್ರನಿದ್ರೆ' ಪರಾ. (ನಾ). ೪. ಇಂದ್ರನ ಆಯುಧ ; ವಜ್ರಾಯುಧ ; ಕುಲಿಶ : ಇಳಾತಳದೊಳ್ ಕೆಡೆದತ್ತು ವಜ್ರದಿಂ ಸುರಪತಿ ಪೊಯ್ಯೆ ಬೆಟ್ಟು ಕೆಡೆದಂತೆ ಜಟಾಯು ನಭೋವಿಭಾಗದಿಂ (ಪಂರಾಮಾ. ೯-೧೦೪); ಗಿರಿ ಘನ ವಜ್ರ ಕಿಱಿದೆನ್ನಬಹುದೇ ಬಾರದಯ್ಯಾ (ಬಸವ. ೬). ೫. ದೊಡ್ಡ ಮೋಡಗಳ ಘರ್ಷಣೆಯಿಂದ ಉಂಟಾಗುವ ವಿದ್ಯುದ್ದ್ರವ್ಯ; ಸಿಡಿಲು; ಅಶನಿ: ಅಂಧಕಾರಪತದ್ವಜ್ರವಿಷಾಭಿಚಾರಿಕಜರಾತಂಕಾದಿ ಭೇದಂಗಳಪ್ಪುಪಸರ್ಗಂಗಳಿಂ (ಆದಿಪು. ೧೬-೯); ವಜ್ರಘೋಷಣನಿಷ್ಠುರಭೀಷಣಘೋಷದಿಂ ಚೇದಿನಾಥಂ ಜಗನ್ನಾಥನಂ ನಿರ್ದಾಟಿಸಿ ನುಡಿಯೆಯುಂ (ಜಗವಿ. ೧೬-೪೬ ವ). ೬. ಯಾವುದೇ ವಿನಾಶಕಾರಿಯಾದ ಆಯುಧ — ಅಸ್ತ್ರ. ೭. ನವರತ್ನಗಳಲ್ಲಿ ಒಂದು ; ಹೀರ : ಕರಮೆಸೆದಿರ್ಪುದಾತತ ಗುಹಾದ್ಯಯವಜ್ರಮಯಿಾದರೀ ಪ್ರಭಾಪರಿಚಿತಪಾರ್ಶ್ವಮಗ್ರನಿಭೃತಾಂಬುಧರಂ ವಿಜಯಾರ್ಧಭೂಧರಂ (ಚಂದ್ರಪು. ೬-೨); ಭಂಗವಡೆದೆಸೆಗುಮವರ ಗೃಹಂಗಳ್ ಮಾಣಿಕದ ಸಂಜೆಯಿಂ . . . ಉಜ್ವಲಿಸಿ ಪೊಳೆವ ವಜ್ರದ ಬಿಸಿಲಿಂ (ಸೂಕ್ತಿಸು. ೪-೧೫೧); ವಜ್ರವು ರತ್ನಗಳಲ್ಲಿ ಶ್ರೇಷ್ಠವಾದದ್ದು (ಮುಂಬಯಿ.೪-೧೬೯). ೮. ಸನ್ನೆ ಮೊದಲಾದ ಸಲಕರಣೆಗಳ ತುದಿಯಲ್ಲಿ ಅಳವಡಿಸುವ ಬಹಳ ಗಟ್ಟಿಯಾದ ಸಾಮಗ್ರಿ : ಸನ್ನೆಯ ಮತ್ತೊಂದು ಕೊನೆಯಲ್ಲಿ ಒಂದು ಮೊನಚಾದ ವಜ್ರವಿರುತ್ತದೆ (ವಿಜ್ಞಾವಿ. ೨). ೯. ರತ್ನಗಳನ್ನು ಕೊರೆಯಲು ಅಥವಾ ಕೆತ್ತಲು ಉಪಯೋಗಿಸುವ ಸಾಧನ ; ರತ್ನವೇಧಕ ಸೂಜಿ : ಶಿಲೆಯ ಕಡೆವೊಡೆ ವಜ್ರ ಭುವನವ ಬೆಳಗುವಡೆ ಮಾರ್ತಾಂಡ ದೈತ್ಯರ ಕುಲವ ಸವೆಯಲು ವಿಷ್ಣು (ಗಗತಾ. ೧೬-೫೬). ೧೦. ಒಂದು ಬಗೆಯ ಸೇನಾರಚನೆ, — ವ್ಯೂಹ. ೧೧. ಮರಳು, ಸುಣ್ಣ, ಬೆಲ್ಲ, ಅಳಲೆಕಾಯಿ ಮೊದಲಾದುವುಗಳನ್ನು ಗೊತ್ತಾದ ಪ್ರಮಾಣದಲ್ಲಿ ಕೂಡಿಸಿ ಚೆನ್ನಾಗಿ ಅರೆದು ತಯಾರಿಸುವ, ಜಿಗುಟುಳ್ಳ ಗಟ್ಟಿಯಾದ ಒಂದು ಬಗೆಯ ಗಾರೆ : 'ವಜ್ರಗಾರೆ' ಪರಾ. ೧೨. ಪ್ರಾಣಿಗಳ ಚರ್ಮ ಮತ್ತು ಎಲುಬುಗಳನ್ನು ಬೇಯಿಸಿ ತಯಾರಿಸಿದ, ಬಿಸಿಯಲ್ಲಿರುವಾಗ ಬಲವಾಗಿ ಅಂಟಿಕೊಳ್ಳುವ, ಬಡಗಿ ಮುಂತಾದವರು ಉಪಯೋಗಿಸುವ ಒಂದು ಬಗೆಯ ಗಟ್ಟಿಯಾದ ಅಂಟು : 'ಮರವಜ್ರ' ಪರಾ. ೧೩. ಒಂದು ಬಗೆಯ ಮರ ಮತ್ತು ಅದರ ಕಾಯಿ ; ನೆಲ್ಲಿ ; ಆಮಲಕ. ೧೪. ಒಂದು ಬಗೆಯ ದರ್ಭೆ : 'ವಜ್ರಃ — ವಜ್ರ, ಕುಶೆ' (ಓಷಧಿ. ೧೪೪). ೧೫. ಒಂದು ಬಗೆಯ ಕಳ್ಳಿ ; ಮುಂಡಗಳ್ಳಿ : 'ವಜ್ರಗಳ್ಳಿ' ಪರಾ. ೧೬. ಎಳ್ಳುಹೂವು ; ತಿಲ : 'ವಜ್ರಪುಷ್ಪ' ಪರಾ. ೧೭. ಹದ ಮಾಡಿದ ಕಬ್ಬಿಣ ; ಉಕ್ಕು : 'ವಜ್ರಕವಚ' ಪರಾ. ೧೮. ಒಂದು ನರಕದ ಹೆಸರು : ಐದು ಮಂತ್ರಿನರಕಂಗಳಿಂ ಯುಕ್ತಮಾಗಿ ವಜ್ರವೆಂಬರಸುನರಕವಿಹುದು (ವಿವೇಕ. ೧೫೩). ೧೯. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಹದಿನೈದನೆಯದು : ವಿಷ್ಕಂಭ ಪ್ರೀತಿ . . . ವಜ್ರ ಸಿದ್ಧಿ . . . ವೈಧೃತಿಗಳೆಂಬ ಇಪ್ಪತ್ತೇಳು ಯೋಗಂಗಳುಂ (ವಿವೇಕ. ೨೬೨). ೨೦. [ಕಾವ್ಯಮೀ] ಪ್ರತಿಮುಖವೆಂಬ ಸಂಧಿಯ ಹದಿಮೂರು ಅಂಗಗಳಲ್ಲಿ ಒಂದು : ವಜ್ರಂ ಪ್ರತ್ಯಕ್ಷನಿಷ್ಠುರಂ — (ಒಬ್ಬನ) ಎದುರಿನಲ್ಲೆ ಆಡುವ ನಿಷ್ಠುರವಾಕ್ಯವು ವಜ್ರ (ದಶರೂ. ೩೬). [ಸಂ.]

**ವಜ್ರಕವಚ** (ನಾ). ೧. ವಜ್ರಖಚಿತವಾದ ಕವಚ : ವಜ್ರಿ ವಜ್ರಕವಚಕ್ಕೆ ನಿಜೋಜ್ಜ್ವಳಕುಂಡಳಕ್ಕೆ ಕೆಯ್ಯಾಂತೊಡೆ . . . ಕೊಟ್ಟಂ (ಪಂಪಭಾ. ೯-೬೨). ೨. ಯುದ್ಧದಲ್ಲಿ ಯೋಧರು ಧರಿಸುವ ಗಟ್ಟಿಯಾದ ಹಾಗೂ ಅಭೇದ್ಯವಾದ ಉಕ್ಕಿನ ಕವಚ : ಬಿಲ್ಲು ತೀರು ವಜ್ರಕವಚ . . . ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾಧಿಸಾಧನವಿಶೇಷಗಳಿಂದಲು (ವಿವೇಕ. ೨೬೨). [ಸಂ.]

**ವಜ್ರಕವಾಟ** (ನಾ). ೧. (ವಜ್ರದ ಅಥವಾ ಉಕ್ಕಿನ) ಅಭೇದ್ಯವಾದ ಕದ ; ದುರ್ಭೇದ್ಯವಾದ ಬಾಗಿಲು : ಒಡೆವುದೆ ವಜ್ರಕವಾಟಮನಡರ್ವುದೆ ವಿಜಯಾರ್ಧ ಗಿರಿಯಂ . . . ಎಮ್ಮನೆ ಬೆಸಸಾ (ಆದಿಪು. ೧೩-೨೧). ೨. [ವೈದ್ಯ] ಒಂದು ಬಗೆಯ ಚೂರ್ಣ : ವಜ್ರಕವಾಟ — (ಅತಿಸಾರಕ್ಕೆ) — ಜಾಯಿಕಾಯಿ, ಜಾಯಿಪತ್ರೆ ತೊರೆಸಾಣೆಬೇರು, ಕಸಕಸೆ, ಅಜಮೋದ, ಹಿಪ್ಪಲಿ, ಎಲೆಮದ್ದು . . . ಚೂರ್ಣವಂ ಮಾಡಿ . . . ಕಟ್ಟುಮೊಸರು, ಜೇನುತುಪ್ಪದಲ್ಲಿ ಕೊಡಲು ಎಲ್ಲ ಅತಿಸಾರ ತೀರ್ಗುಂ (ವಿಷ್ಣುವಿ. ೪೮). [ಸಂ.]

**ವಜ್ರಕಾಂಡ** (ನಾ). ೧. ಗಟ್ಟಿಯಾದ ಕಾಂಡ; ದೃಢವಾದ ದಂಟು. ೨. [ಜೈನ] ಷಟ್ಖಂಡಚಕ್ರವರ್ತಿಗೆ ತಾನಾಗಿ ಲಭಿಸಿದ ವಜ್ರದ ಬಿಲ್ಲು : ವಜ್ರಕಾಂಡಮೆಂಬ ಬಿಲ್ಲುಮಮೋಘಮೆಂಬ ಶರನಿಕರಮುಂ . . . ಆತ್ಮೀಯಸಾಮ್ರಾಜ್ಯಪರಿಚ್ಛೇದಮಾಗೆ (ಆದಿಪು. ೧೫-೩ ವ); ವಜ್ರಕಾಂಡಮೆಂಬ ಚಾಪದಿಂದಂ ಸಿಂಹಾಟಕಮೆಂಬ ಕೊಂತದಿಂದಂ . . . ಚಕ್ರಿಯ ನೋಂತ ನೋಂಪಿಯ ಫಲಕ್ಕಾಂ ಸಂಖ್ಯೆ ಲೆಕ್ಕಕ್ಕೆ ಕಂಡಱಿಯೆಂ (ಶಾಂತಿಪು. ೧೧-೬೪ ವ). [ಸಂ.]

**ವಜ್ರಕಾಯ** (ನಾ). ೧. ಬಹಳ ಗಟ್ಟಿಮುಟ್ಟಾದ ದೇಹ ; ದೃಢಶರೀರ. ೨. ವಜ್ರದಷ್ಟು ಧೃಡವಾದ ಶರೀರವುಳ್ಳವನು ; ಕಟ್ಟುಮಸ್ತಾದವನು ; ದೃಢಶರೀರಿ : ಗಾಯಗಳಿಲ್ಲದೆ ರಣವನು ಗೆಲುವರೆ ವಜ್ರಕಾಯನೆ ಹೇಗೆ ನೀನು (ಇಂಚಾಪ. ೮೨-೧೦೦). [ಸಂ.]

**ವಜ್ರಕೀಟ** (ನಾ). ಕಲ್ಲು, ಮರ ಮುಂತಾದುವುಗಳಲ್ಲಿ ತೂತು ಕೊರೆಯುವ ಗಟ್ಟಿಯಾದ ಮೂತಿಯುಳ್ಳ ಒಂದು ಬಗೆಯ ಹುಳು ,—ದುಂಬಿ : ಇಂದ್ರ ನುಪಾಯದೊಳಟ್ಟಿದ ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮಂ . . . ಉರ್ಚಿ ಪೋಗೆಯುಂ (ಪಂಪಭಾ. ೧-೧೧೪ ವ); ಸುರಪತಿಯ ಬೇಳಂಬವನು ವಿಸ್ತರಿಸಲೇತಕೆ ವಜ್ರಕೀಟೋತ್ಕರವ ಕಳುಹಿದರೆನ್ನ ತೊಡೆಗಳನಗಿದವು ಬಳಿಕ (ಕುಮಾರ. ೯-೩೧). [ಸಂ.]

**ವಜ್ರಕೀಟಕ** (ನಾ). = ವಜ್ರಕೀಟ : ಬಡಿಗುಂ ಕಾಲಂ ಮೆಲ್ಲನೆ ಪಡುಗುಂ ಸುಕ್ಕಿರ್ಗು ಮಡರೆ ಸುಯ್ಯುಂ ಕಣ್ಣಂ ಬಿಡುಗು ಮತಿವಿಕಲನಕ್ಕುಂ ಕಡಂಗಿ ತಿನೆ ವಜ್ರಕೀಟಕಂ ಬಸಿಱೊಳಗಂ (ಅಶ್ವಶಾ. ೧೧-೩೮). [ಸಂ.]

**ವಜ್ರಕುಂಡಲ** (ನಾ). ವಜ್ರಖಚಿತವಾದ ಕಿವಿಯ ಆಭರಣ : ಮುದ್ರಸಹಜಾತ ವಿದ್ಧಚ್ಛಿದ್ರಾನ್ವಿತಕರ್ಣಯುಗಳಪಾಳಿಗಳೊಳ್ ಸಂವಿದ್ಯುತರಜಂಗೆ ಹರಿ ವಿಲಸದ್ರುಚಿಮದ್ವಜ್ರಕುಂಡಲಂಗಳನಿಟ್ಟಂ (ಶಾಂತಿಪು. ೧೦-೫೯); ಕಿವಿಯಲಿ ಇಡಿಸಿದನು ನವವಜ್ರಕುಂಡಲವ (ಸಿದ್ಧಪು. ೫-೯೮). [ಸಂ.]

**ವಜ್ರಕುಡ್ಯ** (ನಾ). ರತ್ನಖಚಿತವಾದ ಗೋಡೆ ,—ಭಿತ್ತಿ : ಕರುಮಾಡಂ ಕಣ್ಗೆವಂದತ್ತಮೃತಕರಶಿಲಾನಿರ್ಮಿತಂ . . . ವಜ್ರಕುಡ್ಯಂ ಹರಿನೀಲಸ್ತಂಭ ಮುದ್ಯಿದ್ರುಮಲಸದರರಂ ಮೌಕ್ತಿಕದ್ವಾರಬಂಧಂ (ರಾಜಶೇ. ೨-೧೩೮). [ಸಂ.]

**ವಜ್ರಕ್ಷಾರ** (ನಾ). ಒಂದು ಬಗೆಯ ಲವಣ :ವಜ್ರಕ್ಷಾರ— ವಜ್ರಗಳ್ಳಿಯ ಕೊಂಬು, ಎಕ್ಕೆ, ಉಮ್ಮತ್ತ . . . ತ್ರಿಕಟುಕ, ಇಂಗು, ಉಳ್ಳಿಯಂ ಕೂಡಿ ಅಡುವುದು (ವಿಷ್ಣುವಿ . ೪೮). [ಸಂ.]

**ವಜ್ರಗಚ್ಚು** (ನಾ). ರತ್ನಗಳನ್ನು ಕುಂದಣಿಸಲು ಬಳಸುವ ಅಂಟು : "ವಜ್ರಗಳನ್ನು ಅಂಟಿಸಲು ಉಪಯೋಗಿಸುವ ಅಂಟು ; ವಜ್ರಗಚ್ಚು" (Diamond Cement.ಇಂಕನ). [ವಜ್ರ + ಗಚ್ಚು$_2$]

**ವಜ್ರಗಳ್ಳಿ** (ನಾ). ಒಂದು ಬಗೆಯ ಕಳ್ಳಿ ; ಮೊಂಡಗಳ್ಳಿ : ವಜ್ರಕ್ಷಾರಃ — ವಜ್ರಗಳ್ಳಿಯ ಕೊಂಬು, ಎಕ್ಕೆ, ಉಮ್ಮತ್ತ . . . ಉಳ್ಳಿಯಂ ಕೂಡಿ ಅಡುವುದು (ವಿಷ್ಣುವಿ . ೪೮). [ವಜ್ರ + ಕಳ್ಳಿ$_2$]

**ವಜ್ರಗಾರೆ** (ನಾ). = ವಜ್ರ ೧೧ : ನಾಲ್ಕುಕಡೆಯ ಗೋಡೆಗಳೂ ಬಿಲ್ಲೆ ಕಲ್ಲುಗಳಿಂದ ಕಟ್ಟಿದ್ದುವು. ಮೇಲೆ ವಜ್ರಗಾರೆ ಹಾಕಿತ್ತು (ಚಂಗಾಳ್ವ. ೩೯); ದೇವಾಲಯದ ಗೋಪುರ . . . ಮಾಡುಗಳಲ್ಲಿ ವಜ್ರಗಾರೆಯಿಂದ ಜೋಡಿಸಿದ ಅದ್ಭುತಗಾತ್ರದ ಶಿಲೆಯ ಚಪ್ಪಡಿಗಳನ್ನು ನೋಡಿದರೆ ಇದು ಮಾನವನಿಂದ ಆಗುವ ಕಾರ್ಯವಾಗಿ ಕಂಡುಬರು ವುದಿಲ್ಲ (ದೇವಹಂ . ೪೯). [ವಜ್ರ + ಗಾರೆ$_1$]

**ವಜ್ರಗಿರಿ** (ನಾ). ೧.ವಜ್ರದಿಂದಾದ ಬೆಟ್ಟ ; ವಜ್ರದ ಪರ್ವತ : ನಿನ್ನೀ ಬೆಸಸಿದ ಚಕ್ರಮದೆನ್ನೀ ದೇಹಾದ್ರಿಯಂ ಗೆಲಲ್ ನೆಱೆಯದು ನೀಂ ಬಿನ್ನನಿದೇಕಿರ್ಪೆಯದೆಂತೆನ್ನ ಗೆಲಲ್ ವಜ್ರಗಿರಿಯನಾರ್ಕುಮೆ ವಜ್ರಂ (ಆದಿಪು. ೧೪-೧೨೫). ೨. ಒಂದು ಬಗೆಯ ವನಸ್ಪತಿ : ವಜ್ರಗಿರಿಯ ಬೇರಂ ಆಕಳ ಮಜ್ಜಿಗೆಯಲ್ಲಿ ಕೊಳ್ಳಲು ಪಾಂಡುಕಾಮಾಲೆ ಮಾಣ್ಗುಂ (ವಿಷ್ಣುವಿ. ೧೩೦). [ಸಂ.]

**ವಜ್ರಘುಟಿಕೆ** (ನಾ). ವಜ್ರಕಾಯವನ್ನು ಸಿದ್ಧಿಸುವುದೆನ್ನಲಾದ ಒಂದು ಬಗೆಯ ಗುಳಿಗೆ : ಮುಕ್ತಿಗೆ ದೂರವಾದ ಲಿಂಗಾಂಗಿಗಳ ನೆನಹೆಂಬ ಜೋಡಂ ತೊಟ್ಟು ಅವರ ಕರುಣಪ್ರಸಾದವೆಂಬ ವಜ್ರಘುಟಿಕೆ ಧರಿಸಿ ಗುರುಕರುಣವೆಂಬ ಅಲಗಂ ಪಿಡಿದು ಮುಂದ ಬಿದ್ದರೂ ತಲೆಯಲ್ಲಿ ಜೀವ (ಸರ್ವವ. ೨೦೩-೯೨೪). [ಸಂ. ವಜ್ರಘುಟಿಕಾ]

**ವಜ್ರತನು** (ನಾ). = ವಜ್ರಕಾಯ ೨: ಲಂಘನಾಘಾತಮಂ ನಿತ್ತರಿಸುವೆತ್ತರಕೆ ವಜ್ರತನುವೇರ್ದನೆ ಮಹೇಂದ್ರಮಸ್ತಕಕಲ್ಪಮಾ ಶಕುನಿಶಿಲೆಗಾಂಜನೇಯಂ (ಶ್ರೀರಾಮಾ. ೪೦೩-೪). [ಸಂ.]

**ವಜ್ರತುಂಡ** (ನಾ). ೧. ದೃಢವಾದ ಕೊಕ್ಕು ,—ಚುಂಚು : ವಿನತಾಪುತ್ರನ ವಜ್ರತುಂಡಹತಿಗಂ ಮೆಯ್ಯಾಂತು . . . ನಾಗಾನಂದಮಂ ಮಾಡಿದಂ (ಪಂಪಭಾ. ೪-೨೬). ೨. ಗಟ್ಟಿಯಾದ ಕೊಕ್ಕನ್ನುಳ್ಳುದು ; ಹದ್ದು ; ಗೃಧ್ರ : ಬೆನ್ನ ಶರಧಿಯನೆಳೆಯಲೀಚೆಗೆ ಜಟಾಯುವಗ್ರಜ ಬಾಣತನುವಂ, ಛಟಚ್ಛಟಿಸಿ ಪ್ರಕಟವಾದನು ತಟಿದ್ಗರಿಗಳಿಂ ಗೃಧ್ರಮುಖಿ ವಜ್ರತುಂಡಂ (ಶ್ರೀರಾಮಾ. ೮೦೧-೪೪). ೩. ಗರುಡ. ೪. ಗಣಪತಿ. ೫. ಸೊಳ್ಳೆ. ೬. [ಜೈನ] ಷಟ್ಖಂಡಚಕ್ರವರ್ತಿಯ ವಶದಲ್ಲಿರುವ ಶಕ್ತ್ಯಾಯುಧ : ವಜ್ರತುಂಡಮೆಂಬ ಶಕ್ತಿಯುಂ ಸಿಂಹಾಟಕಮೆಂಬ ಕೊಂತಮುಂ . . . ಆತ್ಮೀಯಸಾಮ್ರಾಜ್ಯಪರಿಚ್ಛೇದಮಾಗೆ(ಆದಿಪು. ೧೫-೩ ವ);ವಜ್ರತುಂಡಮೆಂಬ ಶಕ್ತಿಯಿಂದಂ ಮನೋವೇಗವೆಂಬ ಕಣೆಯಿಂದಂ . . . ನೆಱೆದೈಶ್ವರ್ಯದ ಮೇಗೆ ವಜ್ರ ಬೆಸದಾಳಂತಾಗಿಯುಂ (ಶಾಂತಿಪು. ೧೧-೬೪ ವ). [ಸಂ.]

**ವಜ್ರತೈಲ** (ನಾ). (ಚರ್ಮರೋಗಗಳ ನಿವಾರಣೆಗಾಗಿ ಬಳಸುವ) ಒಂದು ಬಗೆಯ ಎಣ್ಣೆ : ವಜ್ರತೈಲವ ತೆಗವರೆ : — ನರವಿಷ್ಟೆ, ಕೊಡಗವಿಷ್ಟೆ, ನರಿಯ ವಿಷ್ಟೆ . . . ಸುಡುಪುಟವಿಕ್ಕಿ ಆ ತೈಲವಂ ತೆಗೆದು ಆ ತೈಲದಿ ದೀಪವಂ ಹೊತ್ತಿಸಿ, ಆ ತೈಲವಂಬುಕ ಹೊಡೆದವರಿಗೆ ಇಡೆ ಒಂದು ನಾಡಿ ಹೋಪುದು (ವಿಷ್ಣುವಿ. ೨೧೮). [< ಸಂ. ವಜ್ರಕತೈಲ]

**ವಜ್ರದಂಡ** (ನಾ). ೧. ಬಲವಾದ ಗದೆ : ಆ ವಜ್ರಗದೆಯಿಂದಲೆಟಗಿ ಪೊಡೆದಂ ಕೆಡೆಯೆನುತ್ತಾ ದಧೀಚಿಯಂ ಪಾತಕಂ ಮಿಗೆ ಘಾತಕಂ ಪೊಡೆಯಲಾ ವಜ್ರದಂಡದ ಹತಿಗೆ ದಿವ್ಯಮುನಿಯೊಡಲು ಜಜ್ಜರಿಯಾಗೆ (ವಿಶ್ವಪು. ೨-೧೩-೧೯). ೨. (ಇಂದ್ರನ) ವಜ್ರಾಯುಧ : ಬಲಿದು ಪೇರ್ಭಾಗEಪೆರ್ಬೀಗE3ಮುದ್ರೆಯ ವಜ್ರದಂಡದಿಂ ಚಲಿಸದಂದದಿ ಲಾಳವಂಡಿಗೆಯ ಜಡಿದು (ನವಮೋ. ೨೮-೬). [ಸಂ.]

**ವಜ್ರದಂತ** (ನಾ). ೧. ದೃಢವಾದ ಹಲ್ಲು ; ಗಟ್ಟಿಯಾದ ದಂತ. ೨. ದೃಢವಾದ ಹಲ್ಲನ್ನು ಹೊಂದಿರುವುದು ; ಬಹಳ ಗಟ್ಟಿಯಾದ ದಂತವನ್ನು ಪಡೆದಿರುವುದು ; ಹಂದಿ ; ವರಾಹ. ೩. ಇಲಿ ; ಮೂಷಕ. ೪. ಒಂದು ಬಗೆಯ ಸಸ್ಯ : "ಕೇಸರಃ, ವಕುಳಃ — ೨ ಪವಳದ ಹುವ್ವಿನ ಗಿಡ, ವಕುಳವೃಕ್ಷ, ಹಲ್ಲುಮದ್ದು ಗಿಡ, ವಜ್ರದಂತಗಿಡ" (ಸಿದ್ಧಾಂತಿ. ೨೬). [ಸಂ.]

**ವಜ್ರದಂತಿ** (ನಾ). ಒಂದು ಬಗೆಯ ಸಸ್ಯ : ಹಲ್ಲುಕುರುವಿಗೆ : — ವಜ್ರದಂತಿ, ಹಳೆಯ ಬದನೆಯ ಸೊಪ್ಪು, ಸೈಂಧವಲವಣ ಇವಂ ತೂಕವ ಮಾಡಿ ಇಕ್ಕಲು ಹಲ್ಲು ಕುರುವು ಮಾಣ್ಗುಂ (ವಿಷ್ಣುವಿ. ೧೩೬). [ಸಂ. ವಜ್ರದಂತೀ]

**ವಜ್ರದಾಳಿ** (ನಾ). ವಜ್ರಖಚಿತವಾದ ಮಾಂಗಲ್ಯ ,—ತಾಳಿ : ತಿಸರಮಿದಾವುದಕ್ಕ ಧರಣೇಂದ್ರನ ಕೊಟ್ಟುದು ವಜ್ರದಾಳಿ ಕಣ್ಗೆಸೆವುದಿದಾವುದು (ಪಂಪಭಾ. ೪-೮೬). [ವಜ್ರ + ತಾಳಿ$_1$ (= ತಾಲಿ$_1$)]

**ವಜ್ರದುಂಬಿ** (ನಾ). = ವಜ್ರಕೀಟ : ವಜ್ರದುಂಬಿಗಳು ಹೆಚ್ಚಿದಿರನು ಕೊಱೆವೊಡೆಯುಜ್ಜುಗವೆತ್ತ ರೀತಿಯಲಿ ನಿರ್ಜರವೈರಿಯ ನಿಡಿದೋಳ ಶಿಳೀಮುಖ ವೆಜ್ಜವ ಮಾಡಿ ತೋಱಿದುದು (ಮೋಹತ. ೩೫-೪೦). [ವಜ್ರ + ತುಂಬಿ$_1$]

**ವಜ್ರದೇಹ** (ನಾ). ಗಟ್ಟಿಯಾದ ದೇಹ ; ದೃಢವಾದ ಶರೀರ. [ಸಂ.]

**ವಜ್ರದೇಹಿ** (ನಾ). = ವಜ್ರಕಾಯ ೨: ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣನೈಕ್ಯನು ಮೆಲ್ಲಮೆಲ್ಲನೆ ಆದಹೆನೆಂಬನ್ನಬರ ನಾನೇನು ವಜ್ರದೇಹಿಯೆ ನಾನೇನು ಅಮೃತವ ಸೇವಿಸಿದೆನೆ (ಬಸವ. ೬೯೬). [ಸಂ. ವಜ್ರದೇಹಿನ್]

**ವಜ್ರಧರ** (ನಾ). ವಜ್ರಾಯುಧವನ್ನು ಧರಿಸಿದವನು ; ಇಂದ್ರ : ವಜ್ರಧರಂ ಸೆಜೆಗೆಯ್ದು ಪುಷ್ಕಳಾವರ್ತ ಘನಾಘನಂಗಳವೊಲಂಜನಕಾಂತಿಗಳುಗ್ರದಂತಿಗಳ್ ಮಾರ್ತುಡುಗಿಗವೇಟನೆಯಮಂ ತಡವಂದಮನಾಂತು ಕಂಭದೊಳ್ (ಪುಷ್ಪ. ೨-೫೭); ಜಂಭನ ಜಸದ ಝೂಡಿಗೆ ಬೆದಱದಿರಿದ ವಜ್ರಧರನಂತೆ ಪಸರಿಸಿದ ಪರಿವಾರಮಧ್ಯದೊಳ ಸಮಬಲ ಹೊಳಕಿದನು . . . ಕಲಿಭೀಮ (ಕುಮಾ.ಭ. ೭-೩೨). [ಸಂ.]

**ವಜ್ರನಿದ್ರೆ** (ನಾ). ಗಾಢವಾದ ನಿದ್ದೆ : ಘನತಮೌನಂ ವಜ್ರನಿದ್ರೆಯಿಂದೆಚ್ಚರದೊ ಪೇಳೆಂಬೊಲಾ ಬಂಡೆ ಬಿದ್ದಿದ್ದುವಲ್ಲಲ್ಲಿ (ಶ್ರೀರಾಮಾ. ೩೭೪-೭೯). [ಸಂ. ವಜ್ರನಿದ್ರಾ]

**ವಜ್ರನಿರ್ಘೋಷ**(ನಾ). ಸಿಡಿಲಿನ ಜೋರಾದ ಶಬ್ದ, —ಆರ್ಭಟ : "ಸಿಡಿಲ ಧ್ವನಿ (ವಜ್ರನಿರ್ಘೋಷಃ) ಸ್ಫೂರ್ಜಥುವೆಂಬುದು" (ಕಲಾಯು. ೧೧-೫೭). [ಸಂ.]

**ವಜ್ರನೀಲಿ** (ನಾ). ಒಂದು ಬಗೆಯ ಔಷಧೀಸಸ್ಯ : ವಜ್ರನೀಲಿಯ ಬೇರಿನ ತಿಗುಡನು, ಚಿಲ್ಲದ ಬೀಜ ೧೧ನು ಸಹ ಹಾಲು ಶರ್ಕರೆಯಲ್ಲಿ ಬೆರಸಿ ಕೊಡಲು ೮ ದಿನಕ್ಕೆ ಬಸುಮೂತ್ರ ಮಾಣುವುದು (ಸವೈ. ೩೦೫). [ಸಂ. ವಜ್ರನೀಲೀ]

**ವಜ್ರಪಂಜರ** (ನಾ). ೧. (ಪಶು,ಪಕ್ಷಿ ಮುಂತಾದುವುಗಳನ್ನಿಡುವ) ಬಹಳ ದೃಢವಾದ ಗೂಡು ; ಗಟ್ಟಿಯಾದ ಪಂಜರ : ನೆಲಸಿರ್ದ ವಜ್ರಪಂಜರಮಳಱುವಿನಂ ಪಾಯ್ದ ಸಿಂಧುರಾರಾತಿಯನುಮಜ್ಜಳತನುವನಭ್ರಪಥದತ್ತ ಲಂಘಿಸಲ್ಕಿರ್ದುದಂ ಚಮೂಪತಿ ಕಂಡಂ (ಆದಿಪು. ೧೬-೪೫). ೨. (ಆಲಂ) ಬಲವಾದ ರಕ್ಷಣೆ ; ದೃಢವಾದ ಆಶ್ರಯ ; ಭದ್ರವಾದ ನೆಲೆ : ಅಂಜಿದರಂ ನಿಜಬಾಹುವಜ್ರಪಂಜರದೊಳಗಿಟ್ಟು ಕಾವ ಹರಿನನ್ನನಂ (ಸೌತ್ XX. ೭೪-೧೫ ; 1112); ಅಂಜಿದರಾಗದು ಅಳುಕಿದರಾಗದು ವಜ್ರಪಂಜರದೊಳಗಿದ್ದರಾಗದು ತಪ್ಪದುವೋ ಲಲಾಟಲಿಖಿತ (ಬಸವ. ೬೮೭). [ಸಂ.]

**ವಜ್ರಪಾತ** (ನಾ). ಸಿಡಿಲಿನ ಹೊಡೆತ, —ಪೆಟ್ಟು : ಆ ವಜ್ರಪಾತದಿಂ ಮೇಲೆವೆಟ್ಟಪೆನಱಿದು ಪೇಟಲುಂ ಕೇಳಲುಮಿನ್ನಾವಂಗಮೊನಲ್ಲಾಶ್ಚರ್ಯಾ ವಹಮೊಂದಾದುದಾಗಳದನುಸಿರ್ದಪ್ಪೆಂ (ಕಾದಂಪೂ. ೯೩೪); ಮಿಗತವುದುಪಾರಾರಂ ಭಾಗ್ಯಾನರ್ಥವಜ್ರಪಾತಸಂತಪ್ತಮಾನಮಾನಸನುಂ . . . ಆಗಿ (ಚಂದ್ರಪು. ೫-೯ ವ). [ಸಂ.]

**ವಜ್ರಪುಷ್ಪ**(ನಾ). ಎಳ್ಳುಹೂವು ; ತಿಲಪುಷ್ಪ : "ವಜ್ರಪುಷ್ಪಂ, ತಿಲಸ್ಯಯತ್ಪುಷ್ಪಂ - ಎಳ್ಳುಹೂವಿನ ಹೆಸರು" (ಸಿದ್ಧಾಂತಿ.೧೨೯). [ಸಂ.]

**ವಜ್ರಬಯಿಸಣಿಗೆ, ವಜ್ರಬೈಸಣಿಗೆ, ವಜ್ರಬೈಸನಿಗೆ, ವಜ್ರಭಸಣಿಗೆ, ವಜ್ರವೈಸಣಿಗೆ** (ನಾ). (?); IP ನಖರರು ಅಂದರೆ ವರ್ತಕರು ಸೇರುವ ಸಭೆಗೆ ಅಥವಾ ಅಂತಹ ಸಭೆಯಲ್ಲಿ ಹಿರಿಯರಾದವರು ಅಲಂಕರಿಸುತ್ತಿದ್ದ ಪೀಠಕ್ಕೆ ಈ ಹೆಸರಿರಬಹುದು ಅಥವಾ ಅಂತಹ ಸಭೆಯ ಗೌರವವನ್ನು ಸೂಚಿಸುವ ಸಾಧನವಿಶೇಷವಾಗಿರಲೂಬಹುದು : ಹರಿಹರದಲು ವಜ್ರಬಯಿಸಣಿಗೆಯಾಗಿ ಉಳ್ಳಿರ್ದ ಮಹದೇವರಾಯ ಲಕ್ಷ್ಮೀನಾರಾಯಣ ದೇವರಿಗೆ ಕೊಟ್ಟ ಆಯಬಾಯದ ಕ್ರಮವೆಂತೆಂದಡೆ (ಎಕ. XI, ದಾವಣ. ೫೯-೭೯; 1280). ವಜ್ರಬೈಸಣಿಗೆ : ವಜ್ರಬೈಸಣಿಗಿ(ಗೆ)ಯಾಗಿ ಉಳ್ಳಿರ್ದ್ದು ತಂಮ ಸಮಯಾಚಾರದ ತೇಜಮನುದ್ಧರಿಸುವ ರಾಯಶ್ರೇಷ್ಠಿಯಪ್ಪ ಚಾಮುಂಡರಾಜ ಮಾಡಿಸಿದ ತ್ರಿಕೂಟ [ಪ್ರಾಸಾದ]ಕ್ಕೆ (ಎಇ. XIX, ೨೫-೬೨; 1245). ವಜ್ರಬೈಸನಿಗೆ : ಮಹಾವಡ್ಡ ವ್ಯವಹಾರಿಯ ವಜ್ರಬೈಸನಿಗೆ . . . ಇತ್ಯಾದಿ ರಾಜಲಾಂಛನಗಳು . . . ಶೋಭಿಸುತ್ತಿದ್ದವು (ರೂಲೇಖಾ. ೨೫೭). ವಜ್ರಭಸಣಿಗೆ : ಆ ನಾಡಪ್ರಭು ವಿನಾಯಕದೇವರಲಿ ವಜಭಸಣಿಗೆಯನಿಕ್ಕಿ ಎಲೆಯೂರ ಪೋಚಸೆಟ್ಟಿಯರ ಚಲುವಾಡಿ ಮಲಿಸೆಟಿಗೆ ಕೊಟ್ಟ ತೇಜ (ಮೈಆ. ೧೯೨೭, ೧೧೯-೧೩?). IP ಇಲ್ಲಿ ಬಂದಿರುವ 'ವಜಭಸಣಗೆ' ಎಂಬುದು 'ವಜ್ರಭಸಣಿಗೆ'ಯ ಅಪಲಿಖಿತ. ವಜ್ರವೈಸಣಿಗೆ : ಶ್ರೀವಿರೂಪಾಕ್ಷದೇವರ ದಿವ್ಯಶ್ರೀಪಾದಪದ್ಮದ ಸನ್ನಿಧಿಯಲಿ ವಜ್ರವೈಸಣಿಗೆಯನಿಕ್ಕಿ ಉಳ್ಳಿರ್ದು (ಎಕ. V, ಬೇಲೂರು. ೭೫-೭೮?). [ವಜ್ರ + ಬಯಿಸಣಿಗೆ]

**ವಜ್ರಬೈಸಣಿಗೆ** 'ವಜ್ರಬಯಿಸಣಿಗೆ' ನೋ.

**ವಜ್ರಬೈಸನಿಗೆ** 'ವಜ್ರಬಯಿಸಣಿಗೆ' ನೋ.

**ವಜ್ರಭಸಣಿಗೆ** 'ವಜ್ರಬಯಿಸಣಿಗೆ' ನೋ.

**ವಜ್ರಮಕುಟ** (ನಾ). ರತ್ನಖಚಿತವಾದ ಕಿರೀಟ, —ಶಿರೋಭೂಷಣ : ವಜ್ರಮಕುಟದ ಹೊಳಹುಗಳ ಹೊಗೆ ಮಿಾಸೆಗೆದರಿನ ಬಿರುದಿನುಬ್ಬಟೆಯ . . . ರಾವ್ತರ ಗಡಣ ನಾಲಗೆದಳೆದುದೆನೆ ಹೊಳೆಹೊಳೆವಡಾಯುಧದ ಭಟರು ನೂಕಿದರು (ಕುಮಾದ್ರೋ. ೫-೭೦). [ಸಂ.]

**ವಜ್ರಮಹೋತ್ಸವ** (ನಾ). ಸಂಘ, ಸಂಸ್ಥೆ ಮುಂತಾದುವುಗಳಿಗೆ ಅರುವತ್ತು ವರ್ಷ ತುಂಬಿದಾಗ ಆಚರಿಸುವ ಉತ್ಸವ, —ಹಬ್ಬ : ಸಾಹಿತ್ಯಪರಿಷತ್ತಿನ ವಜ್ರಮಹೋತ್ಸವದ ಸುಂದರ್ಭದ ನೆನಪಿಗಾಗಿ 'ವಜ್ರಮಹೋತ್ಸವಭವನ'ವನ್ನು ಕಟ್ಟಿದ್ದಾರೆ (ರೂಢಿ). [ಸಂ.]

**ವಜ್ರಮುಷ್ಟಿ** (ನಾ). ೧. ಬಿಗಿಯಾದ ಹಿಡಿ ; ಬಲವಾದ ಮುಷ್ಟಿ. ೨. ಒಂದು ಬಗೆಯ ಆಯುಧ : ವಜ್ರಮುಷ್ಟಿಯ ಪೊಯ್ಲೊಳಂ ಬಾಣ ಕೋಲೊಳಮುಚ್ಚಳಿಸಿದ ಕಪಾಲದೊಡುಗಳಂ ಗಂಗೆಗಟ್ಟುತ್ತುಂ, ಮುಸುಂಡಿ ಬಿಂಡಿವಾಳ ವಜ್ರಮುಷ್ಟಿ ಮುದ್ಗರ ಚಕ್ರಪರಶುತೋಮರ ಪಾಶಾಂಕುಶಾದಿ ಶಸ್ತ್ರಾಸ್ತ್ರಂಗಳೊಳೆಚ್ಚುಮಿಟ್ಟುಮಿಱಿದುಂ ಪೊಯ್ದು . . . ಕಾದುವಾಗಳ್ (ಪಂಪರಾಮಾ. ೧೩-೭೬ ವ); ಬರಿಕೈಯ ಲೌಡಿಯ ವಜ್ರಮುಷ್ಟಿಗಳ ನಾಳವಿಲುಗಳ ರಾಯಜೋಧರ ಮೇಳವಣಿಗೆಗಳ ಚಿತ್ರಗತಿ ಶುಂಡಾಲವನು ನೋಡಿದರು ಗಜಸೇನಾಸಮುದ್ರದಲಿ (ಕುಮಾಉ. ೧೧-೧೯). ೩. ವಜ್ರಾಯುಧವನ್ನು ಧರಿಸಿದವನು ; ಇಂದ್ರ. ೪. (ಆಲಂ) ಬಿಡಿಸಿಕೊಳ್ಳಲಾರದಂತಹ ಬಲವಾದ ಹಿಡಿತ, —ಅಂಕೆ : ಗೊತ್ತಿಲ್ಲದೆ ಸಾವಿನೆಡೆಗೆ ಅವರು ಜಾರಿದ್ದರು. ಅದರ ವಜ್ರಮುಷ್ಟಿಯಲ್ಲಿ ಸಿಕ್ಕಿದ್ದರು (ಸಮಜೀ. ೬೩೯). ೫. ಬಲವಾದ ಕಟ್ಟುಪಾಡು, —ನಿಯಮ, —ನಿರ್ಬಂಧ : ನಾಟ್ಯನಿಬಂಧನೆಗಳ ವಜ್ರಮುಷ್ಟಿಯಿಂದ ತನ್ನ ಪ್ರತಿಭೆಯನ್ನು ಬಿಡಿಸಿಕೊಳ್ಳಲು ಅವನಿಗೆ ಸಾಧ್ಯವಾಗಲಿಲ್ಲ (ಕಾವ್ಯಸ. ೨೧). [ಸಂ.]

**ವಜ್ರಯೋಗ** (ನಾ). [ಜ್ಯೋತಿ] ಲಗ್ನ ಮತ್ತು ಸಪ್ತಮಸ್ಥಾನಗಳಲ್ಲಿ ಶುಭಗ್ರಹಗಳೂ, ಚತುರ್ಥ ಮತ್ತು ದಶಮಸ್ಥಾನಗಳಲ್ಲಿ ಪಾಪಗ್ರಹಗಳೂ ಇರುವ ಯೋಗ : ಉದಯದೊಳಸ್ತದೊಳ್ ನಿಲೆ ಶುಭಗ್ರಹಮುಗ್ರಗಣಂ ಚತುರ್ಥಕರ್ಮದೊಳಿರೆ ವಜ್ರಯೋಗಮದು (ಜಾತಕ. ೧೩-೬); ವಜ್ರಯೋಗಕ್ಕೆ ತನೂ ೬ ಗಳಿಗೆ ಮೇಲೆ ತ್ಯಾಜ್ಯ (ಭಾಸ್ಕರ. ೭೦-೪). [ಸಂ.]

**ವಜ್ರಲೇಪ** (ನಾ). ಗಟ್ಟಿಯಾಗಿ ಅಂಟಿಕೊಳ್ಳುವ ಲೇಪನದ್ರವ್ಯ : ಉರದಿಂ ಪೆರ್ಮೊಲೆ ಬೆಂಗೆ ಮೂಡೆ ಬೆಮರಂಬುಂ ವಜ್ರಲೇಪಂಬೊಲಾಗಿರೆ ಕೀಲ್ಗೊಟ್ಟ ಬೆಡಂಗನೀಯೆ ಪುಳಕಂ ತೋಳ್ ತಳ್ತು ಗಂಟಿಕ್ಕಿದಂತಿರೆ (ಜಗಱ. ೧೧-೬೦); ಪಾಪ ಹೋಯಿತು ಎಂದು ಸೋಪಾನಗಳನೇಱೆ ಕೋಪಕರ್ಮಗಳ ಬಿಡದಿರೆ ಅದು ವಜ್ರಲೇಪದಂತಿಹುದು (ಸರ್ವಜ್ಞ. ೯೩೧). [ಸಂ.]

**ವಜ್ರವಹ್ನಿ** (ನಾ). ಸಿಡಿಲಿನಿಂದುಂಟಾಗುವ ಬೆಂಕಿ : ಮೇರುಗಿರಿಯಂ ಮರಲೊತ್ತುವ ವಜ್ರವಹ್ನಿಯಂ ತಳದೊಳಗಿರ್ದಿಲಾಗೆ ಪೊಸೆದಿಕ್ಕುವ ಸಿಂಗದ ಕೇಸರಂಗಳಂ ಸೆಳೆವಳವಂ ಸಮಂತು ತಳೆದಂ ರಣದೋಹಳನಾ ಕುಮಾರಕಂ (ಚಂದ್ರಪು. ೬-೨೮). [ಸಂ.]

**ವಜ್ರವಿಡಿ** (ನಾ). ಬಲವಾದ ಹಿಡಿತ ; ಬಿಗಿಯಾದ ಪಟ್ಟು : 'ವಜ್ರವಿಡಿವಿಡಿ' ಪರಾ. [ವಜ್ರ + ಪಿಡಿ$_2$]

**ವಜ್ರವಿಡಿವಿಡಿ** (ಕ್ರಿ). ಬಲವಾದ ಹಿಡಿತವನ್ನು ಹಿಡಿ ; ಬಿಗಿಯಾದ ಪಟ್ಟನ್ನು ಹಿಡಿ : ಒಂದೆಡೆಯೊಳ್ ಹಿಂಡನಗಲ್ದು ಗಂಡುಗೆದಱಿ ವಜ್ರವಿಡಿ[ವಿ]ಡಿದು ಬಿಗಿಬಿಗಿದು ಬಳೆದ ದೇಹಂಗೊಂಡಷ್ಟಾಂಗಪುಷ್ಟವಾಗಿ . . . ಕೈವಱಿದ ದಂತಿ ಕಾಡೊಳ್ ಪೊಕ್ಕಂತೆ ಪೆಱಮೆಟ್ಟಿ ನಡೆನಡೆದು (ನಂಬರ. ೧೮-೧೦). [ವಜ್ರವಿಡಿ + ಪಿಡಿ$_1$]

**ವಜ್ರವೈಸಣಿಗೆ** 'ವಜ್ರಬಯಿಸಣಿಗೆ' ನೋ.

**ವಜ್ರಹತಿ** (ನಾ). ವಜ್ರಾಯುಧದ ಹೊಡೆತ, —ಪೆಟ್ಟು : ನಿಷ್ಠುರತೆಗಲ್ಲದೆ ಮನವನೀಯದು ಮಹಿಯ ಮೂಢಜನ . . . ವಜ್ರಹತಿಗಬ್ಬರಿಸಿದಲ್ಲದೆ ಗಿರಿಗಳೊಡೆಯವು (ಕುಮಾಉ. ೯-೪೫). [ಸಂ.]

**ವಜ್ರಹರೀತಕೀಲೇಹ್ಯ** (ನಾ). (ಅಳಲೆಕಾಯಿಯನ್ನು ಸೇರಿಸಿ ತಯಾರಿಸುವ) ಒಂದು ಬಗೆಯ ಲೇಹ್ಯ : ವಜ್ರಹರೀತಕೀಲೇಹ್ಯ – ಚಿತ್ರಮೂಲದ ಸೊಪ್ಪಿನ ರಸ ೮ ಹಲ, ಗಂಟುಭಾರಂಗಿ, ಬಜೆ, ಶುಂಠಿ . . . ಇವನ್ನೆಲ್ಲ ಕಷಾಯವ ಮಾಡಿಸಿ ಲೇಹ್ಯಪಾಕದಲ್ಲಿಳುಹಿ ತ್ರಾಣವರಿತು ದಿನಂಪ್ರತಿಯೂ ಪ್ರಾತಃಕಾಲಧಲ್ಲಿ ಸೇವಿಸೆ ಗ್ರಹಣಿ, ಅಗ್ನಿಮಾಂದ್ಯ, ಆಮಶೂಲೆ, ಗುಲ್ಮಶೂಲೆ, ಮಹೋದರ, ಗೆಂಡೆ ಇವೆಲ್ಲ ಪರಿಹರಮಕ್ಕುಂ (ಸರವೈ. ೩೪೧). [ಸಂ.]

**ವಜ್ರಹಸ್ತ** (ನಾ). ೧. ಬಲಿಷ್ಠವಾದ ಕೈ : ಅರ್ಜುನನ ಮುಖವನ್ನು ಇಂದ್ರನು ಪ್ರೇಮದಿಂದ ತನ್ನ ಪುಣ್ಯಗಂಧವುಳ್ಳ ಕೈಯಿಂದ ತಡವುತ್ತ . . . ಅವನ ತೋಳುಗಳನ್ನು ತನ್ನ ವಜ್ರಹಸ್ತದಿಂದ ಮತ್ತೆ ಮತ್ತೆ ತಟ್ಟುತ್ತ . . . ನೋಡಿ ಸಂತೋಷಿಸುತ್ತ ಇದ್ದನು (ವಚಭಾ. ೧೨೭). ೨. ವಜ್ರಾಯುಧವನ್ನು ಧರಿಸಿದವನು ; ಇಂದ್ರ. [ಸಂ.]

**ವಜ್ರಹಳಿ** (ನಾ). (ಕುದುರೆಯ ಗೊರಸಿಗೆ ಹಾಕುವ) ಗಟ್ಟಿಯಾದ ಲೋಹದ ಸಾಧನ ,– ಲಾಳ : ಹೊಸ ವಜ್ರಹಳಿವೆತ್ತ ರಥವಾಜಿನಿಚಯ . . . ಸಂದಳಿಸಿತು ಖಳರಾಯನೊಡನೆ (ಮೋಹತ. ೪೦-೬). [ವಜ್ರ + ಹಳಿ$_4$ (< ಪಟ್ಟಿ$_3$)]

**ವಜ್ರಾಂಗ** (ನಾ). ೧. ಗಟ್ಟಿಯಾದ ದೇಹ ; ದೃಢವಾದ ಶರೀರ. ೨. ದೃಢವಾದ ಶರೀರವುಳ್ಳವನು : ಇದು ಚಿತ್ರಂ ವಜ್ರಾಂಗಂಗೆ ದೃಢೀಕೃತಮಾ ದ್ರವಪ್ರಭಾವಂ ನಿಸ್ನೇಹದವಂಗೆ ಭುವನಭವನಪ್ರದೀಪಕತೆ ನಿನಗೆ ಜಿನ ಜಗತ್ತ್ರಯಮಿತ್ರಾ (ಚಂದ್ರಪು. ೭-೧೨). ೩. ಹಾವು ; ಸರ್ಪ. [ಸಂ.]

**ವಜ್ರಾಂಗಿ$_1$** (ನಾ). ೧. ದೃಢವಾದ ದೇಹವುಳ್ಳವನು. ೨.= ವಜ್ರಕವಚ ೨: ವಿವಿಧವಜ್ರಾಂಗಿಗಳ ಸೀಸಕ ಕವಚಗಳ ತೊಟ್ಟತುಳಬಲರೇಱಿದರು ತೇಜಿಗಳ (ಕುವ್ಯಾಭೀ. ೪-೫೦); ಬಿಗಿದ ವಜ್ರಾಂಗಿ ಬತ್ತಳಿಕೆಯಿಂ ಇರದುಳಿದ ಸದಳಿಗರ ಸಾಧನಸಮಗ್ರಮುಂ . . . ಪರಿಶೋಭೆವಿಡಿದು ರಂಜಿಸುತಿರ್ದುದು (ಚಿಬಪು. ೪೧-೫೭). [ಸಂ. ವಜ್ರಾಂಗಿನ್]

**ವಜ್ರಾಂಗಿ$_2$** (ನಾ) ಒಂದು ಬಗೆಯ ವನಸ್ಪತಿ : "ಕಂಜುಃ, ಪಾರಾವಾರಃ – ಈ ಎರಡು ವಜ್ರಾಂಗಿ" (ನಾಚಿರಾ. ೧೩೪). [ಸಂ.ವಜ್ರಾಂಗೀ]

**ವಜ್ರಾಕರ** (ನಾ). ವಜ್ರದ ಗಣಿ : ಆ ವಾಹಿನೀವ್ಯೂಹಂ . . . ವಜ್ರಾಕರದಂತ ನೇಕಪವಿತತಿವಿಳಸಿತಮುಂ ಲಂಕಾಧಿಪತಿಯಂತತಿಪ್ರಬಲಬಾಹಾವಳೀವಳಯಿತಮುಂ . . . ಎನಿಸಿ (ಚಂದ್ರಪು. ೧೦-೩೦ ವ). [ಸಂ.]

**ವಜ್ರಾಗ್ನಿ** (ನಾ). = ವಜ್ರವಹ್ನಿ : ಗಿರಿದುರ್ಗಕ್ಕುಗ್ರವಜ್ರಾಗ್ನಿ ಕಾನನದುರ್ಗಕ್ಕೆ ಮಹಾದವಾಗ್ನಿ . . . ಎನೆ ತನ್ನುದ್ಯತ್ಪ್ರತಾಪಾಗ್ನಿ ನೀಳ್ದೆನಸುಂ ಪರ್ವಿ ವಿಗುರ್ವಿಸಲ್ ನೃಪಸುತಂ ವಿಕ್ರಾಂತಮಂ ತೋಱಿದಂ (ಪುಷ್ಪಪು. ೫-೫೦). [ಸಂ.]

**ವಜ್ರಾಘಾತ** (ನಾ). ೧. ಸಿಡಿಲಿನ ಹೊಡೆತ, – ಪೆಟ್ಟು. ೨. (ಆಲಂ) ಆಕಸ್ಮಿಕ ಘಟನೆಯಿಂದ ಉಂಟಾಗುವ ಆಘಾತ : ಭಗತ್‌ಸಿಂಗ್‌ನ ರಕ್ಷಣೆಯ ಯೋಜನೆಗೆ ವಜ್ರಾಘಾತವಾದಂತಾಯಿತು (ಆತ್ಮಾರ್ಪ. ೧೪೫); ಈ ಸುದ್ದಿಯನ್ನು ಕೇಳಿ ಅವನ ಬಾಲಹೃದಯದ ಮೇಲೆ ವಜ್ರಾಘಾತವೇ ಆದಂತಾಯಿತು (ರಂಗರೋ. ೧೯೧). [ಸಂ.]

**ವಜ್ರಾಭಿಘಾತ** (ನಾ). ೧. = ವಜ್ರಾಘಾತ ೧. ೨. = ವಜ್ರಾಘಾತ ೨: ವಜ್ರಾಭಿಘಾತಾಭೀಳನಿಷ್ಠುರರೊದಗಿದರು ಕೌರವವೃಕೋದರರು (ಕುವ್ಯಾಗ. ೭-೧). [ಸಂ.]

**ವಜ್ರಾಯುಧ** (ನಾ). ೧. ದೃಢವಾದ ಆಯುಧ,–ಶಸ್ತ್ರ. ೨. ಇಂದ್ರನ ಆಯುಧ ; ಕುಲಿಶ : ಮಱಿದು ವಜ್ರಾಯುಧದ ಕೊನೆಯಲಿ ತುಱುಗಿಯೈರಾವತದ ಮೇಲಕೆ ತೆಱನಱಿಯದಲೆ ಕೊಂಡು ಕುಂಭಸ್ಥಳಕೆ ಹಾಕಿದನು (ಸಂಭಪ. ೫-೬೫); ಅವನು ಯಥೇಚ್ಛವಾಗಿ ಸೋಮಪಾನ ಮಾಡಿ, ತನಗಾಗಿಯೇ ತ್ವಷ್ಟೃವು ತಯಾರಿಸಿದ ವಜ್ರಾಯುಧವನ್ನು ಬೀಸುತ್ತಾ . . . ಯುದ್ಧಕ್ಕೆ ಹೊರಟು (ಭಾರದ. ೨೧). ೩. ಇಂದ್ರ ; ದೇವೇಂದ್ರ. [ಸಂ.]

**ವಜ್ರಾವಲಂಬಿ** (ನಾ). ೧. ವಜ್ರಾಯುಧಧಾರಿಯಾದ ಇಂದ್ರ. ೨. ವಜ್ರವೆಂಬ ರತ್ನಗಳನ್ನು ಹೊಂದಿರುವುದು. ೧,೨: ಆ ಮಹಾರ್ಣವಂ . . . ವಜ್ರಾವಲಂ [ಪಾಠಾಂ. ಳಂ]ಬಿಯಾಗಿಯುಂ ಕುಲಶೈಲಪಾನಸ್ವಭಾವಯುಕ್ತಮುಂ . . . ಎನಿಸಿದುದು (ಜಗವಿ. ೧-೪೪ ವ). [ಸಂ. ವಜ್ರಾವಲಂಬಿನ್]

**ವಜ್ರಾಸನ** (ನಾ). ೧. ರತ್ನಖಚಿತವಾದ ಪೀಠ. ೨. [ಯೋಗ] ಒಂದು ಬಗೆಯ ಆಸನ : ನಾವು ನಮ್ಮ ಎಡದ ಹಿಂಬಡವನ್ನು ವೃಷಣ ಗುದಗಳ ಮಧ್ಯದಲ್ಲಿರುವ ಆಧಾರಚಕ್ರದಲ್ಲಿಯ ಸುಷುಮ್ನೆಗೆ ಒತ್ತಬೇಕು . . . ಈ ಕವಿಗಳು ಎಡದ ಹಿಂಬಡವನ್ನು ಒತ್ತಲು ಹೇಳಿರುವರು. ಆದರೆ ಜ್ಞಾನೇಶ್ವರರು ಬಲದ ಹಿಂಬಡವನ್ನು ಒತ್ತಲು ಹೇಳಿರುವರು, ಅದನ್ನವರು ವಜ್ರಾಸನವೆಂದು ಕರೆದಿರುವರು (ಪರಪ. ೯೫). ೩. [ವಾಸ್ತು] ದೇಹದ ಮತ್ತು ಅರ್ಧ ಹಾಯಿಸಿದ ಪಾದಗಳ ಮಧ್ಯದ ಕುಳಿಯಲ್ಲಿ ಕೈಗಳನ್ನು ಮೇಲ್ಮುಖವಾಗಿ ಇರಿಸಿ ಕುಳ್ಳಿರಿಸಿದ ಆಕೃತಿಯ ಭಂಗಿ : 'ವಜ್ರಾಸನಸ್ಥ' ಪರಾ. [ಸಂ.]

**ವಜ್ರಾಸನಸ್ಥ** (ನಾ). ೧. ವಜ್ರಾಸನವನ್ನು ಹಾಕಿ ಕುಳಿತುಕೊಂಡ ವ್ಯಕ್ತಿ. ೨. ವಜ್ರಾಸನದ ಭಂಗಿಯಲ್ಲಿ ಆಸೀನಗೊಂಡ ಮೂರ್ತಿ,–ವಿಗ್ರಹ :ಎಲ್ಲರೂ "ವಜ್ರಾಸನಸ್ಥ" ರಾದರೂ, ಅವರವರ ಭಂಗಿಗಳು ಮಾತ್ರ ಬೇರೆ ಬೇರೆಯಾಗಿರುತ್ತವೆ (ಭಾರದ. ೫೧೪). [ಸಂ.]

**ವಜ್ರಾಸ್ತ್ರ** (ನಾ). ೧. ಇಂದ್ರನ ಆಯುಧ; ವಜ್ರಾಯುಧ; ಕುಲಿಶ. ೨. ಇಂದ್ರನ ವಜ್ರಾಯುಧದ ಶಕ್ತಿಯುಳ್ಳ ಒಂದು ಬಗೆಯ ಮಂತ್ರಾಸ್ತ್ರ ; ಐಂದ್ರಶರ : ಪರ್ಬತಕೆ ವಜ್ರಾಸ್ತ್ರ ತಿಮಿರದ ಹಬ್ಬುಗೆಗೆ ರವಿಬಾಣ ಹಾವುಗಳೊಬ್ಬುಳಿಗೆ ಗರುಡಾಸ್ತ್ರವನು ಗಂಧರ್ವಪತಿಯೆಚ್ಚ (ಕುವ್ಯಾಅ. ೧೯-೩೫); ಅರ್ಜುನನು . . . ವಜ್ರಾಸ್ತ್ರದಿಂದ ಸಂಶಪ್ತಕರ ಸೇನೆಯನ್ನೆಲ್ಲಾ ಪುಡಿಗುಟ್ಟಿ ಭೀಮಸೇನನ ಸಹಾಯಕ್ಕೆ ಬಂದನು (ವಚಭಾ. ೨೮೨). [ಸಂ.]

**ವಜ್ರಾಸ್ಥಿ** (ನಾ). ದೃಢವಾದ ಮೂಳೆ ; ಬಲಿಷ್ಠವಾದ ಎಲುಬು : ದಧೀಚಿ . . . ತಪವಿರಲ್ಪಗೆವನಿತಕೆಯ್ತಂದು ಶಿವನೆಂದನೆಲೆ ಮುನಿಪ ನಿನ್ನಿಷ್ಟವಾವುದೆನೆ ದೇವ ದುಷ್ಟನ ಜಯಿಸಲು ಅವಯವದೊಳೆನಗೆ ವಜ್ರಾಸ್ಥಿಯಂ ಪಾಲಿಸೆನೆ (ವೀಶೈಪು. ೨-೧೩-೨೪). [ಸಂ.]

**ವಜ್ರಿ$_1$** (ನಾ). ೧. ವಜ್ರಾಯುಧವನ್ನು ಧರಿಸಿದವನು ; ದೇವೇಂದ್ರ : ವಜ್ರಿ ವಜ್ರಕವಚಕ್ಕೆ ನಿಜೋಜ್ವಳಕುಂಡಳಕ್ಕೆ ಕೆಯ್ಯಾಂತೊಡೆ . . . ಕೊಟ್ಟಂ (ಪಂಪಭಾ. ೯-೬೨); ಆಯ್ತು ವಜ್ರಿಗಾಸನಕಂಪಂ (ಪುಷ್ಪಪು. ೯-೫೦). ೨. [ಜೈನ] ಹದಿನಾರನೆಯ ತೀರ್ಥಂಕರನಾದ ಶಾಂತೀಶ್ವರನ ಒಂದು ಹೆಸರು : ನೆಱೆದೈಶ್ವರ್ಯದ ಮೇಗೆ ವಜ್ರಿ ಬೆಸದಾಳಂತಾಗಿಯುಂ ಕಲ್ಪಮಂ ನೆಱೆಯಭ್ಯಂತರಸಿದ್ಧಿಯಂ ಪಡೆಯಂ (ಶಾಂತಿಪು. ೧೧-೮೫ ವ). ೩. [ಬೌದ್ಧ] ವಜ್ರಯಾನವೆಂಬ ಪಂಥದ ಒಬ್ಬ ದೇವತೆ : ಇಲ್ಲಿ ಬರುವ 'ವಜ್ರಿ' ಅಥವಾ 'ವಜ್ರಾ' ಬೌದ್ಧಧರ್ಮದ ವಜ್ರಯಾನದ ಆರಾಧ್ಯ ದೇವತೆಗಳಲ್ಲೊಬ್ಬಳು (ಕಶಾಅ. ೧೧೭). [ಸಂ. ವಜ್ರಿನ್]

**ವಜ್ರಿ$_2$** (ನಾ). ಒಂದು ಬಗೆಯ ವನಸ್ಪತಿ ; ಮೊಂಡಗಳ್ಳಿ : "ಮಹಾತರು ವಜ್ರಿಯೆಂದೊಡೆಲೆಗಳ್ಳಿಯಕ್ಕು" (ಮಂಗರಾ. ೪೧-೩೪); "ಗೋಧೂಮಃ – ಗೋಧಿ, ವಜ್ರಿ, ಕ್ಷಾರ" (ಓಷಧಿ. ೫೦). [ಸಂ. ವಜ್ರೀ]

**ವಜ್ರಿ** (ನಾ). ೧. ಒಂದು ಬಗೆಯ ಸಸ್ಯ ; ಕಳ್ಳಿಗಿಡ. ೨. ಒಂದು ಬಗೆಯ ಸಸ್ಯ ; ಅಮೃತಬಳ್ಳಿ. ೩. ಎಳ್ಳಿನ ಗಿಡದ ಹೂವು. ೪. ಹದಮಾಡಿದ ಕಬ್ಬಿಣ ; ಉಕ್ಕು. ೫. ನೇಗಿಲಿನ ತುದಿಗೆ ಸೇರಿಸುವ ಉಕ್ಕಿನ ಮೂತಿ : ನಿಷಧದ ವಿದೇಹದ ಜಿತ್ತEತ್ಕ3ಯ ವಜ್ರಿಯ ಪೊಲೆಯ ಕೆಚ್ಚಲ . . . ಕೂಟದಂತೆ ಮಹಾಪುರುಷರ ಸಮ್ಯಕ್ತ್ವದೊಳಾದ ಕೂಟಮುಮತಿಶಯಮೊಂದುಂಡುರುಳಿ ಭಟ್ಟಾರಕರ ಸಮ್ಯಕ್ತ್ವಕ್ಕೆ ಮೆಚ್ಚಿ (ಧರ್ಮಾಮೃ. ೫-೧೯೯). [ಸಂ. ವಜ್ರಾ]

**ವಜ್ರೋತ್ಸವ** (ನಾ). = ವಜ್ರಮಹೋತ್ಸವ : ಶಾಲೆಯ ವಾರ್ಷಿಕೋತ್ಸವ, ರಜತೋತ್ಸವ, ಸುವರ್ಣೋತ್ಸವ, ವಜ್ರೋತ್ಸವ, ಶತಮಾನೋತ್ಸವ ಮುಂತಾದ ಸ್ಮಾರಕಗಳನ್ನು ಆಚರಿಸುವುದು (ಶಿಕ್ಷದ. ೩೨೦). [ಸಂ.]

**ವಜ್ರೋಳಿ** (ನಾ). [ಯೋಗ] ಶರೀರವನ್ನು ದೃಢವಾಗಿಯೂ ಅಭೇದ್ಯವಾಗಿಯೂ ಮಾಡುವ ಒಂದು ಬಗೆಯ ಸಿದ್ಧಿ : ಈ ಪ್ರಕ್ರಿಯೆಗಳಿಂದ ವಜ್ರೋಳಿಯೆಂಬ ಸಿದ್ಧಿಯು ಪ್ರಾಪ್ತವಾಗುತ್ತದೆ. ವಜ್ರೋಳಿಯಿಂದ ಶರೀರವು ವಜ್ರದಂತೆ ಅಚ್ಛೇದ್ಯ ಮತ್ತು ಅಭೇದ್ಯ ವಾಗುವುದು (ಕರ್ನಾಸಂ. ೧೨೪). [ಸಂ. ವಜ್ರೋಲೀ = ಒಂದು ಬಗೆಯ ಅಂಗುಲಿ ವಿನ್ಯಾಸ]

**ವಜ್ಜೆಟಿ** 'ವಜ್ಜಟಿ' ನೋ.

**ವಟ₁** (ನಾ). (ವಿಶೇಷವಾಗಿ ಕಪ್ಪೆಯ ಧ್ವನಿಗೆ ಅನ್ವಯಿಸುವ ಮತ್ತು ಅಸ್ಫುಟವಾಗಿ, ಅರ್ಥರಹಿತವಾಗಿ ಶೀಘ್ರವಾಗಿ ತನಗೆ ತಾನೆ ಮಾತನಾಡುವುದನ್ನು ಸೂಚಿಸುವ) ಒಂದು ಅನುಕರಣ ಶಬ್ದ : 'ವಟಗುಟ್ಟು' ಪರಾ. **ವಟವಟ** (ದ್ವಿರುಕ್ತಿ): ಕಪ್ಪೆಗಳ ವಟವಟಧ್ವನಿಯನ್ನು ಕೇಳಿದಾಗ ನೆಕ್ಕುದೋವನಿಗೆ . . . ಸಂಗೀತದ ನೆನಪಾಯಿತು (ಪುನರು. ೨೬೭); ನಿನ್ನ ವಟವಟ ಮಾತು ನಿಲ್ಲಿಸಮ್ಮಾ (ಮೂರುದಾ. ೪೭).

**ವಟ₂** 'ವಟ್ಟ'ನೋ.

**ವಟ₃** (ನಾ). ೧. ಒಂದು ಬಗೆಯ ಮರ ; ಆಲ : ಹಿಮವದ್ಗಿರೀಂದ್ರ ತಟನಿಕಟವರ್ತಿಗಳಪ್ಪಗಸ್ತ್ಯ ವಟಮುಂ ವಸಿಷ್ಠಪರ್ವತಂಗಳೆಂಬ ತೀರ್ಥಂಗಳೊಳೋಲಾಡುತ್ತುಂ . . . ಮೂಡಣದೆಸೆಗೆ ವಂದು (ಪಂಪಭಾ. ೪-೧೮ ವ); ಮಹಾಟವಿಯ ವಟವರಶಿರಾಗ್ರದೊಳಿರೆ ಜಟಾಯು ನೋಡಿದನ್ . . . ಮೂವರಂ ಮನುಜರಂ, ಪಂಚವಟ್ಯಭಿಮುಖಿಗಳಂ(ಶ್ರೀರಾಮಾ. ೧೯೪-೧). ೨. ಹುರಿ ; ಹಗ್ಗ : "ಕೋಲುಕಣ್ಣಿಗಳು ವಟರಂ ವಟಮೆನಿಕ್ಕುಂ" (ಮಂಗರಾ. ೧೧೨-೫). ೩. ಚಿಕ್ಕಗುಳಿಗೆ ; ಸಣ್ಣಗೋಳ. ೪. ಒಂದು ಬಗೆಯ ತಿನಿಸು ; ವಡೆ. ೫. ಕವಡೆ. ೬. ಸಮಾನತೆ ; ಸಾದೃಶ್ಯ. ೭. ಗುಂಡಾಗಿರುವ ಆಕಾರ ; ವರ್ತುಲ. ೮. ಕಾಮ ; ಮನ್ಮಥ. ೯. ಆನೆಯ ಮದಜಲ. ೧೦. ಎಂಜಲು ; ಉಚ್ಛಿಷ್ಟ : "ಮದನಂ ತರು ಸರವಾನೆಯ ಮದ ವುಚ್ಛಿಷ್ಟ್ಯೆದು ಶಬ್ದ ವಟಮಕ್ಕುಂ" (ನಾನಾಕಂ. ೧೨೨); "ಮದವೋಚ್ಛಿಷ್ಟಮದಂ ಕುಜಾತವಿವರಂ ನಾದಂ ವಟಾಖ್ಯಾನಮುಂ" (ನಾನಾರ. ೯೭). [ಸಂ.]

**ವಟಕ** (ನಾ). ೧. ಗುಳಿಗೆ ; ಮಾತ್ರೆ : ತಾಳೀಶವಟಕ–ತಾಳೀಸಪತ್ರ, ಮೆಣಸು, ಶುಂಠಿ, ಹಿಪ್ಪಲಿ, ತವಕ್ಷೀರ . . . ಪುಟಪಾಕಂಗೆಯ್ದು ತಾರೆಕಾಯಷ್ಟು ವಟಕಂ ಮಾಡಿ ನಿತ್ಯವೂ ಒಂದು ವಟಕವಂ ಸೇವಿಸೆ . . . ದಾಹಜ್ವರ, ವಾಂತ್ಯಾತಿಸಾರ, ಮೂಲವ್ಯಾಧಿ, ಮೊದಲಾದುವೆಲ್ಲವೂ ಮಾಣ್ಗುಂ (ಸಕವೈ. ೨೬೪); ಕವಳದ ಕಡ್ಡಿ ಶುಂಠಿ ಗಂಟುಭಾರಂಗೀ ಕಟುಕರೋಹಿಣಿ ಇವಂ ಚೂರ್ಣಿಸಿ ಹಳಿಬೆಲ್ಲ ಬೆರಸಿ ವಟಕವ ಮಾಡಿಕೊಡುವುದು (ದ್ರಾಕ್ಷಾಚೂ. ೮-೩). ೨. ತುತ್ತು; ಕವಳ. ೩. ಒಂದು ಬಗೆಯ ತಿನಿಸು; ವಡೆ. ೪. ಎಂಟು ಮಾಷಗಳ ಒಂದು ತೂಕ. [ಸಂ.]

**ವಟಗುಟ್ಟು** (ಕ್ರಿ). ವಟವಟ ಎಂದು ಶಬ್ದಮಾಡು ; ಅರ್ಥರಹಿತವಾಗಿ ಗೊಣಗುಟ್ಟು : ಕುಳಿತ ಕಡೆಯಿಂದಲೇ ಮುದುಕಿ ವಟಗುಟ್ಟಿದಳು (ಕಲ್ಪಿತಾ. ೭೭); ಅವನಿಗೆ ಬಾಯಿಮುಚ್ಚಿಕೊಂಡಿರಲು ಆಗದೆ ಕಪ್ಪೆಯಂತೆ ಏನೇನೋ ವಟಗುಟ್ಟುತ್ತಾ ನನ್ನನ್ನು ಹಾಸ್ಯಮಾಡುತ್ತಿದ್ದ (ಶಾಲಿಮ. ೬೯). [ವಟ₁ + ಕುಟ್ಟು₁]

**ವಟಗುಡು** (ಕ್ರಿ). = ವಟಗುಟ್ಟು : ಅಲ್ಲಿಯೇ ಸುಖವಾಗಿ ಬಿದ್ದಿರಬಹುದೆಂದು ವಟಗುಡುತ್ತಿದ್ದಳು (ನಾಕಥೆ. ೪೫); ಅವರು ತೀರ ಹುಚ್ಚನಂತೆ . . . ಮೂರುದಿನ ವಟಗುಡುತ್ತ ಸುತ್ತಾಡಿದರು (ಸ್ಮೃತಿಚಿ. ೬೨). [ವಟ₁ + ಕುಡು₁ (< ಕೊಡು₁)]

**ವಟಪೂರ್ಣಿಮೆ** (ನಾ). ಜ್ಯೇಷ್ಠಮಾಸದ ಹುಣ್ಣಿಮೆ ; P ಮುತ್ತೈದೆಯರು ಸಾವಿತ್ರೀದೇವಿಯನ್ನು ಕುರಿತು, ಆಲದ ಮರವನ್ನು ಪೂಜಿಸುವ ದಿನ : ಜ್ಯೇಷ್ಠಶುದ್ಧಹುಣ್ಣಿವೆಗೆ ವಟಪೂರ್ಣಿಮಾ ಎಂದು ಹೆಸರು (ಭಾಹಬ್ಬ. ೮೮). [ಸಂ. ವಟಪೂರ್ಣಿಮಾ]

**ವಟರ** (ಗು). ೧. ಕೆಡುಕನಾದ ; ದುಷ್ಟನಾದ. (ನಾ). ೨. ಕಳ್ಳ ; ಚೋರ. ೩. ಮೂರ್ಖ. ೪. ಹಗ್ಗ ; ರಜ್ಜು : "ಕೋಲುಕಣ್ಣಿಗಳು ವಟರಂ ವಟಮೆನಿಕ್ಕು" (ಮಂಗರಾ. ೧೧೨-೫). ೫. ಗಂಡುಕೋಳಿ ; ಹುಂಜ. ೬. ಬಟ್ಟೆ ; ವಸ್ತ್ರ. ೭. ಚಾಪೆ. ೮. ಪೇಟ. ೯. ಕಡೆಗೋಲು ; ಮಂತು. ೧೦. ಸುವಾಸನೆಯುಳ್ಳ ಒಂದು ಬಗೆಯ ಹುಲ್ಲು. [ಸಂ.]

**ವಟವಟಿಸು** (ಕ್ರಿ). = ವಟಗುಟ್ಟು : ಗಂಗವ್ವ . . . ಅತ್ತ ಇತ್ತ ಹೋದಂತೆ ಮಾಡಿದಳು. ಏನೋ ವಿಚಾರಿಸಿದಳು. ವಟವಟಿಸಿದಳು (ಆತೋಕ. ೧೨೯); ನಾಡೋದಿಯವರು . . . ಕಟಕಟನೆ ಹಲ್ಲು ಕಡಿದು ಬಾಯಿಯಿಂದ ಏನೋ ವಟವಟಿಸಿಕೊಂಡರು (ಶಾಬಸ್ಸೂ. ೨೪). [< ವಟ₁ + – ಇಸು₁]

**ವಟಸಾವಿತ್ರೀವ್ರತ** (ನಾ). ಜ್ಯೇಷ್ಠಮಾಸದ ಶುಕ್ಲಪಕ್ಷದ ಪೌರ್ಣಿಮೆಯಂದು ಮುತ್ತೈದೆಯರು ಮುತ್ತೈದೆತನದ ಭದ್ರತೆಗಾಗಿ ವಟವೃಕ್ಷವನ್ನು ಪೂಜಿಸುವ ವ್ರತ: ಸಾವಿತ್ರಿಯಂತೆ ತಾವೂ ದೀರ್ಘಸುಮಂಗಲಿಯರಾಗಬೇಕೆಂದು ಮುತ್ತೈದೆಯರು ವಟಸಾವಿತ್ರೀವ್ರತವನ್ನು ಆಚರಿಸುತ್ತಾರೆ (ಭಾಹಬ್ಬ. ೯೧). [ಸಂ.]

**ವಟಾಣಿ** 'ಬಟಾಣಿ' ನೋ.

**ವಟಾಯಿಸು** (ಕ್ರಿ). ೧. ಹುಂಡಿ, ಚೆಕ್ಕು ಮೊದಲಾದುವುಗಳನ್ನು ವಟ್ಟವನ್ನು ಕೊಟ್ಟು ಮುರಿಸು : ಬಿಲ್ಲನ್ನು ಅವರು ಮುಂಚಿತವಾಗಿ ವಟಾಯಿಸುತ್ತಾರೆ (ಬಾಲಪ್ರ. II, ೮೮೭); ಹುಂಡಿಗಳನ್ನೂ ಚೆಕ್ಕುಗಳನ್ನೂ ವಟಾಯಿಸುವ ನೆವದಿಂದ ನನ್ನ ಬೊಕ್ಕಸವನ್ನೆಲ್ಲ ಬರಿದಾಗಿ ಮಾಡಿದೆ? (ವಿಧಿವ್ಯ. ೧೯೧). ೨. ಒಂದು ದೇಶದ ನಾಣ್ಯಕ್ಕೆ ಬದಲಾಗಿ ಬೇರೆ ದೇಶದ ನಾಣ್ಯವನ್ನು ಕೊಡು ,–ವಿನಿಮಯ ಮಾಡು : ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಪ್ರವೇಶಿಸುವಾಗ ಖರ್ಚಿಗೆ ನಮ್ಮ ಕೈಯಲ್ಲಿದ್ದ ಪ್ರಯಾಣಿಕರ ಚೆಕ್ಕುಗಳನ್ನು ವಟಾಯಿಸುವ ಬೇಂಕರರು ಗಡಿಯಲ್ಲಿ ಸಿಕ್ಕಿ ನಮಗೆ ಆಯಾಯ ದೇಶದ ಹಣವನ್ನು ಕೊಡುವರು (ಪ್ರವಾಸಿ. ೧೨೯). [< ವಟಾವ + – ಇಸು₁]

**ವಟಾರ** 'ವಟ್ಟಾರ₁' ನೋ.

**ವಟಾವ** (ನಾ). ನಾಣ್ಯವನ್ನು ಇತರ ನಾಣ್ಯಕ್ಕೆ ವಿನಿಮಯ ಮಾಡಿಕೊಡಲು ತೆಗೆದುಕೊಳ್ಳುವ ದಲಾಲಿಹಣ ; ವಟ್ಟ ; ಕಮಿಷನ್ನು : ನಜರಾಣೆ ಎರಡು ಮೋಹರು ಇಲ್ಲದಿದ್ದರೆ ನಾನು ಕೊಡುತ್ತೇನೆ, ಮೂವತ್ತೈದು ರೂಪಾಯಿ ಹಾಗೂ ಎರಡು ರೂಪಾಯಿ ವಟಾವ (ಕುರಿಹಿಂ.೫೩). [<— ಮರಾ. ವಟವ, ವಟಾವ]

**ವಟಿ** (ನಾ). ೧. ಆಲದ ಮರ ; ವಟವೃಕ್ಷ : ಆ ಸಚಿವನಿಂತು ನಿರ್ಮಲಚಿತ್ತದಿಂ ಬೆಸಸಲಾ ಸುಮಶರನರಸಿ . . . ಕೇಳಿ ತಿಳಿದು ತನ್ನಂ ಪಡೆದ ವಟಿಯ ಸಮುಗ್ಗೆಯ್ದು ವಲಿದು (ನವಮೋ. ೮-೫೪). 'ಕಿಱುವಟಿ' ಪರಾ. ೨. ಹುರಿ ; ಹಗ್ಗ : "ತಂತ್ರಿ ಗುಣಂ ವಟಿ" (ವಸ್ತುಕೋ. ೫೧-೩೫). [ಸಂ. ವಟೀ]

**ವಟಿಕೆ** (ನಾ). ೧. ಗುಳಿಗೆ ; ಮಾತ್ರೆ. ೨. ಚದುರಂಗದಾಟದಲ್ಲಿ ಕನಿಷ್ಠನಡೆಯ ಕಾಯಿ ; ಪೇದೆ. ೩. = ವಟಕ ೩. [ಸಂ. ವಟಿಕಾ]

**ವಟು** (ನಾ). ೧. (ಚಿಕ್ಕವಯಸ್ಸಿನ) ಬಾಲಕ ; ಹುಡುಗ ; ಮಾಣಿ: "ವಟುಃ, ಮಾಣವಕಃ — ಈ ೨ ಮಾಣಿ" (ಹಲಾಯು. ೮೩-೩೪೮). ೨. ಉಪನಯನ ಹೊಂದಿದ ಹುಡುಗ ; ವೇದಾಧ್ಯಯನ ಮಾಡುವ ಬ್ರಹ್ಮಚಾರಿ : ಇಂದ್ರಂ . . . ವಟುವಾಕೃತಿಯೊಳೆ ಬೇಡಿದನಾ ಸಹಜಕವಚಮಂ ಕುಂಡಳಮಂ (ಪಂಪಭಾ. ೧-೧೧೦); ವಟು ಮರದುದ್ದವಾದಂ . . . ಕರಂ ಬಳೆದಂ ಮನದಂತೆ ವಾಮನಂ (ಅರ್ಧನೇ. ೬-೨೪). [ಸಂ.]

**ವಟುಕ** (ನಾ). ೧. = ವಟು ೧: ಆ ವಟುಕನುಂ ಪೊಯ್ದು ತಾಗಿದ ರಾವಣನೊಯ್ಯನೆ ಮುಟ್ಟಿ ನೋಡುತ್ತಾವಗಂ ನಡುನಡುಗಿ (ಬಸಪು. ೫೦-೬). ೨. = ವಟು ೨: ವನಧಿಮೇಖಲೆಯೊಳೀ ಬ್ರಹ್ಮಬಂಧುವ ಕಂಡು . . . ಅನುವಿಡಿದು ವಟುಕ ಬಾಡಬರೆಡೆಯಲನಿತಿನಿತು ಶ್ರುತ್ಯಾದಿಗಳ ಕಲಿತನು (ವೆಂಕರಾ. ೫-೨೧-೪೩); ಎಲ್ಲೆ ಭಾಗವುಚ್ಛನೆಂಬ ವಟುಕನೇ , ಶಕಟದಾಸನೂ ಸಿದ್ಧಾರ್ಥಕನೂ ಎಲ್ಲಿ ಹೋಗಿರುವರೋ, ಹಿಡಿದು ತರುವಂತೆ ಬಾಗುರಾಯಣನಿಗೆ ಹೇಳಿ ಬಾರೆಂದೆನಲು (ಮುದ್ರಾಮಂ. ೩೦೩). [ಸಂ.]

**ವಟ್ಟಸುಳಿ** 'ವಟ್ಟಸುಳಿ' ನೋ.

**ವಟ್ಟ**, **ವಟ₂**, **ವಡ್ಡ₂**(ನಾ). ೧. ಕೊಡಬೇಕಾದ ಮೊತ್ತದಿಂದ ಖೋತಮಾಡಿದ ಮೊಬಲಗು ; ಸೋಡಿ ; ತಳ್ಳುಪಡಿ : ವಿಶೇಷ ವಟ್ಟ ಕೊಟ್ಟು ನಾನು ಹಣವನ್ನು ತರಬೇಕಾಗಿ ಬಂತು (ಗಲಿಪ್ರ. ೭೮); ವಟ್ಟ (discount) ಕೊಟ್ಟರೆ ಸುಮಾರು ಎಲ್ಲ ದೇಶದ ಹುಂಡಿಗಳನ್ನು ಕೊಳ್ಳಲು ಸಿದ್ಧರಾಗಿರುವರು (ಹಣಪ್ರ. ೭೧). ೨. ಸಾಲ ಕೊಡುವವನು, ಹಣ ಕೊಡುವಾಗ ಅಸಲಿನಿಂದ ಮುರಿದುಕೊಳ್ಳುವ ಹಣ,—ಬಡ್ಡಿ ; ಉತ್ತಾರ : ನೂಱೆಪ್ಪತಯ್ದು ಪೊನ್ನುಂ ಮಾಱೊಪ್ಪುವುದರ್ಕೆ ವಟ್ಟಮಿಪ್ಪೊಣ ವಡ್ಡಂ ಮೂಱುಂ ವೀಸಮೆನಲ್ಕೇೞ್ನೂಱುಂ ಪೊನ್ನಟ್ಟಮುಱಿದು ತಾವೆನಿತಕ್ಕುಂ (ವ್ಯವಹಾ. ೨೭-೧೨); ಲೆಕ್ಕ, ಬರಹ, ಕ್ರಯ, ಬಡ್ಡಿ, ವಟ್ಟ . . . ವಜ್ರದ

ಮುಂಜಾಡಿ, ಪಚ್ಚಯರತಿ ಮೊದಲಾದವಂ ಬೇಱ ಬೇಱ ಲಕ್ಷಿಸಿ (ಏವೇಕ. ೮). ೩. ಒಂದು ನಾಣ್ಯವನ್ನು, ಅದಕ್ಕಿಂತ ಕಡಮೆ ಬೆಲೆಯ ನಾಣ್ಯಗಳಿಗೆ ಪರಿವರ್ತಿಸುವಾಗ, ಚಿಲ್ಲರೆ ಕೊಡುವವನು ಮುರಿದುಕೊಳ್ಳುವ ಹಣ : ಪಟ್ಟಣದೊಳು ಜನ ಕೊಟ್ಟ ಹಣವನೆಡೆವಟ್ಟ ಬಾಹಿರವಟ್ಟವೆಂದು ದಿಟ್ಟತನದೆ ಪೆಸರಿಟ್ಟು ವಟ್ಟವ ಕೊಂಬ ಸೆಟ್ಟಿಗಳಿರುತಿಹರಲ್ಲಿ (ಅಂಜಚ. ೩-೮೩); ಸಲ್ಲದ ಹೊನ್ನಿಗೆ ವಟ್ಟವಿಲ್ಲ (ಗಾದೆ). ೪. ಒಂದು ಬಗೆಯ ತೆರಿಗೆ : ಹಂನೆರಡಱ ಬಳಿಯ ಪಿರಿಯ ಪೆಂಬಱಿತಿಯ ವಟ್ಟಂ ಪಾರಿಕಾಯಮುಮಂ . . . ದೇವರಂಗಭೋಗಕ್ಕೆ ಧಾರಾಪೂರ್ವಕಂ ಮಾಡಿ ಕೊಟ್ಟರ್ (ಕಳಲಿ. ೫೭-೪೪-೧೯; 1170); ಹೊಂಬಳಿ ಮಗಮೆ ವಟ್ಟ ಕಟ್ಟಿಗೆ ಸಹ ಸರ್ವಾಬಾಧೆಪರಿಹಾರವಾಗಿ ಸರ್ವಮಾನ್ಯವಾಗಿ ಆಚಂದ್ರತಾರಕವಾಗಿ ಭೋಗಿಸೂದೆಂದು . . . ಕೊಟ್ಟ ತಾಮ್ರಶಾಸನ (ಮೈಆರಿ. ೧೯೩೩, ೨೩-೪೯; 1384). 'ದೇವರಾಯವಟ್ಟ', 'ನಾಡುವಟ್ಟ' ಪರಾ. ೫. (ಯಾವುದಾದರೂ ಕಾರ್ಯಕ್ಕಾಗಿ) ಜಮೀನು ಮುಂತಾದುವುಗಳಲ್ಲಿ ಪಾಲನ್ನು ಅಥವಾ ಆದಾಯವನ್ನು ಬಿಟ್ಟು ಕೊಡುವುದು: 'ಬಿತ್ತುವಟ್ಟ' ಪರಾ. ೬. (ವ್ಯಾಪಾರದಲ್ಲಿ) ಮಧ್ಯಸ್ಥಿಕೆಯಿಂದ ಬರುವ ಲಾಭ ; ದಳ್ಳಾಳಿತನದಿಂದ ದೊರೆಯುವ ಹಣ ; ದಲ್ಲಾಳಿ. ೭. ತಕ್ಕಡಿಯ ತಟ್ಟೆಗಳ ಸಮತೋಲನಕ್ಕಾಗಿ ಹಾಕುವ ಹೆಚ್ಚಿನ ತೂಕ ; ಪೇರು ; ಕಾಣೆ : ತಕ್ಕಡಿಗೆ, ತೂಗುವ ಮುನ್ನ ವಟ್ಟ ಹಾಕು (ರೂಢಿ). ೮. ವ್ಯಾಪಾರದಲ್ಲಿ ಸಿಗುವ ಲಾಭ : ವಟ್ಟ ಇಲ್ಲದ ವ್ಯಾಪಾರ ಸೆಟ್ಟಿಗೇಕೆ? (ರೂಢಿ). ೯. ವ್ಯಾಪಾರದಲ್ಲಿ ಕೊಡುವ ಕೊಸರು,—ಹೆಚ್ಚು : ವ್ಯಾಪಾರದಲ್ಲಿ 'ವಟ್ಟ' (Extra) ಎಂಬುದು ಬೆಲೆಯಿಲ್ಲದೆ ಸಲ್ಲುವ ಹೆಚ್ಚಿನದು (ಸಂಶೋಧ. ೨೭). ೧೦. ನಷ್ಟ ; ಹಾನಿ : ಉಟ್ಟುದಂ ಬಿಗಿದೆಯ್ದಿ ಬಾ ಮುಸುಕಿಟ್ಟೆನುತ ಪೊಡಗೊಂಡು ಹೋದಡೆ ವಟ್ಟವೇ ನಿನಗೆನುತ ಮಂದಿಯೊಳು ಹುಗದಿರೆನುತ (ಬಸಪು. ೫-೩೩). ವಟ್ಟ$_2$ : ೪. 'ಕಟಳೆವಟ' ಪರಾ. ವಡ್ಡ$_2$ : ೧೧. (?) : ಅಂಗಡಿಯ ಬಡಗಣಾಳಿಗೆ ವಡ್ಡದಿಂ ಬಡಗಣಪುರದ ಕೇರಿಯುಮಂ ಸರ್ವನಮಸ್ಯಂ ಸರ್ವಬಾಧಾಪರಿಹಾರಮಾಗಿ ಕೊಟ್ಟರ್ (ಎಕ. VII, ಶಿಕಾರಿ. ೧೫೧-೭೭; 1047).

[< ಪ್ರಾ. ವಟ್ಟಾ / ಓಂ. ಮರಾ. ಬಟ್ಟಾ / ತಮಿ. ವಟ್ಟ]

**ವಟ್ಟಂದೆಱು** (ಕ್ರಿ). (ತೂಕ ಸಮವಿಲ್ಲದಾಗ, ತಕ್ಕಡಿಯ ಪರಡಿಗೆ ಹಾಕುವ ಕಾಣೆಯನ್ನು) ಸಮತೋಲನಕ್ಕಾಗಿ ಕೊಡು,—ನೀಡು : ವಟ್ಟಂದೆತ್ತುದು ಬೆಳ್ಳಿಯ ಬೆಟ್ಟಂ ಬಿಣ್ಪಂಗೆನಿಪ್ಪ ಕೋಟಿಶಿಲೆಯಂ ಬಟ್ಟಾಡಿದ ಬಾಹಾಬಲವಿಟ್ಟಳವೆಂಟ ನೆಯ ಕೇಶವಂಗಿದಿರಂಟೆ (ಪಂರಾಮಾ. ೧೨-೬೮). [ವಟ್ಟ + ತೆಱು$_1$]

**ವಟ್ಟಪಟ್ಟಿ** (ನಾ). ವ್ಯಾಪಾರದಲ್ಲಿ ಕೊಡುವ ರಿಯಾಯತಿ ಅಥವಾ ಸೋಡಿಯ ವಿಷಯವನ್ನು ನಮೂದಿಸಿರುವ ಪತ್ರ : ಬರೆದ ಪತ್ರಗಳೂ ಖರೀದಿಯ ಮತ್ತು ಮಾರಾಟದ ಪಟ್ಟಿಗಳೂ ವಟ್ಟಪಟ್ಟಿಗಳೂ ಕಾಪಿಬುಕ್ಕಿನಲ್ಲಿ ಛಾಪಿಸುವದು (ಮುಂಬವ್ಯಾ. ೨೬೯). [ವಟ್ಟ + ಪಟ್ಟಿ$_2$]

**ವಟ್ಟಳೆ** (ನಾ). ಭಾಗ ; ವಿಭಾಗ (?): ಅಕ್ಕಾಮ್ಮಿಕಾಪುರವೆನ್ನು ಅಗ್ರಹಾರವನು ಮಾಡಿ ಇಪ್ಪತ್ತುಯೆರಡು ವೃತ್ತಿಯ ವಟ್ಟಳೆಯನೂ ಮಾಡಿ ಬ್ರಾಹ್ಮರು ಧಾರೆಯೆನೆಱದು ಕೊಟ್ಟ ವೃತ್ತಿಗಳ ಗಣ ಸಂಖ್ಯೆಯ ವಿವರ (ಎಕ. VIII, ತೀರ್ಥಹ. ೨೧೮-೪೩; 1515). [?]

**ವಟ್ಟಾರ$_1$, ವಟಾರ, ವಟ್ಟರ, ವಠಾರ, ವಠ್ಠಾರ** (ನಾ). ೧. (ದೇವಸ್ಥಾನ, ಶಾಲೆ, ಮಠ, ಆಸ್ಪತ್ರೆ, ಮನೆ ಮೊದಲಾದುವುಗಳ) ಅಂಗಳ ; ಸುತ್ತುಗಟ್ಟುಳ್ಳ ಆವರಣ : ಸಿದ್ಧೇಶ್ವರದೇವರ ಕೇರಿಗೆ ಮೂಡಲು ಕೋಟೆಯೇ ಮೇರೆ ತೆಂಕಲು ಕರುವನ ಸತ್ರದ ವಟ್ಟಾರವೇ ಮೇರೆ (ಸೌಇಇ. XI - ii. ೧೮೨-೯; 1098). ವಟಾರ : ೧. ಚಿಕಿತ್ಸಾಮಂದಿರದ ಸಮೀಪದಲ್ಲೇ ವಿಶ್ವವಿದ್ಯಾನಿಲಯದ ವಟಾರವೂ ಇತ್ತು (ಅಳನಿ. ೧೮೬); ಬೇರೆ ಇನ್ನಾವ ಸದ್ದೂ ಇರದೆ ನಿಶ್ಶಬ್ದವಾಗಿದ್ದ ಹಳೆಮನೆಯ ಆ ವಟಾರದಲ್ಲಿ ಸುಬ್ಬಣ್ಣಹೆಗ್ಗಡೆಯವರ ಕುಟ್ಟೋರಲಿನ ಸದ್ದೊಂದೇ ಸಾಮ್ರಾಟವಾಗಿತ್ತು (ಮಲೆಮ. ೪೦). ೨. ಕೆಲವು ಪುಟ್ಟಮನೆಗಳನ್ನು ಒಳಗೊಂಡ ಆವಾರ,—ಪ್ರದೇಶ : ಅವನ ತಾಯಿ ನಿಜವಾದೊಂದು ಕಾಗೆಯನ್ನು ಕೊಂದು, ಒಂದು ಪಗ್ಗಕ್ಕೆ ಕಟ್ಟಿದುದರಿಂದ ಒಂದೇ ಒಂದು ಕಾಗೆ ಆ ವಟಾರಕ್ಕೆ ಬರುತ್ತಿರಲಿಲ್ಲ (ಸ್ವಪ್ನಹೊ. ೨). ೩. ಮನೆತನ ; ಕುಲ ; ಒಕ್ಕಲು: ಒಬ್ಬ ಪ್ರಸಿದ್ಧಪುರುಷನಿಂದ ಅವರ ಮಕ್ಕಳು ಮೊಮ್ಮಕ್ಕಳುಗಳನ್ನು ಇಂತವರ ತೆಂಡೆ, ವಟಾರ, ಪಟ್ಟಡೆ ಎಂಬುದಾಗಿ ಕರೆಯುವ ವಾಡಿಕೆ. ಒಂದು ವಟಾರದಿಂದ ಇನ್ನೊಂದು ವಟಾರಕ್ಕೆ ಕೊಡುವಳಿ ತರುವಳಿ ಉಂಟು (ಹುಟ್ಟುಹ. ೧೮). ವಟ್ಟರ : ೪. ಮನೆ ; ನಿವಾಸ : ಊರೊಡೆಯ ಸಂಬಿರದೇವರಸರ ವಟ್ಟರದ ಮೂ x x x ದಂಗಡಿಯ ನಿವೇಶನದಿಂದುವಂ ಪ್ರಭುಮುಖ್ಯ ಮಹಾಜನಂಗಳಿಗೆ ಪಾದಪೂಜೆಯಂ ಕೊಟ್ಟು (ಕೊಲ್ಹಾಶಾ. ೧೩-೪೯; 1166). ವಠಾರ : ೧. ಹೇಱಂಗೆ ೫೦ ಹಸರ x x x ಡಕೆ ಅರಿಸಿನ ಮೆಳಸು ದೇವರ ವಠಾರದಲಾರಿದ್ದಡಂ ಸರ್ಬಾ x x x (ಸೌಇಇ. IX - i, ೩೬೦-೫೭; ?); ಶಾಲಾವಠಾರ ದಲ್ಲಿದ್ದ ರಾಶಿರಾಶಿ ಕಸವನ್ನು ದೂರಕ್ಕೆ ಒಯ್ದು ಬೆಂಕಿ ಹಾಕಲಾಯ್ತು (ಕಾವೇರಿ. ೧೧೮). ೨. ಈ ವಠಾರದ ಜನರಿಗೆ ದಿನದಲ್ಲಿ ಗಡಿಯಾರ ನೋಡುವ ಅಗತ್ಯ ಬೀಳುವುದಿಲ್ಲ (ನಾಟಕೆ. ೧); ವಠಾರದ ಎಲ್ಲ ಮಕ್ಕಳಿಗೂ ರಾಯರ ಮೇಲೆ ಅಪಾರ ಸಲಿಗೆ (ಕಂಬಹು. ೧೨೧). ೩. ಈ ಒಕ್ಕಲುಗಳ ಸಮುದಾಯಕ್ಕೆ ಬೋರೆದೇವರ ವಠಾರ ಎನ್ನುವರು (ಬೋರೆದೇ. ೯). ೪. ವಠಾರ ಕಣ ತಿಪ್ಪೆ ಸಹ ನಾನು ಧರ್ಮಾದೀಕ್ಷಿತರ ಮೊಂಮಗನಾದ ಶಾಂಭಟರ ಕಡೆಯಿಂದಾ . . . ಶುದ್ಧ ಕ್ರಯಕ್ಕೆ ನಾನು ತೆಗದುಕೊಂಡು (ಎಕ. IX, ಬೆಂಗಳೂ. ೩-೯; 1855). ವಠ್ಠಾರ : ೧. ಆ ದೇವರ ವಠ್ಠಾರದ ಚತುಸ್ಸೀಮೆ ಮತೆಉಾ ವಠ್ಠಾರವೊಂದು ಸುತ್ತಲೂ ನಟ್ಟ ಕಲ್ಲು (ಮೈಆರಿ. ೧೯೩೭, ೩೮-೪; 1238).

[< ಸಂ. ವೃತ್ತಾಗಾರ./ ತಮಿ. ವಟ್ಟಾರ; ತುಳು. ವಟಾರ; ತೆಲು. ವಟಾರ; ವಟಾರು]

**ವಟ್ಟಾರ$_2$** (ನಾ). ಒಂದು ಊರಿನ ಹೆಸರು : ಮಟ್ಟಂ ತನ್ನ ಭಾಗಮುಂ ಕುಡೆ ಆ ವಟ್ಟಾರ ಕುಪ್ಪ[ಂ] ದೇಗುಲಮಂ ಮಾಡಿಸಿ ಸರ್ವ್ವಬಾಧಪರಿಹಾರಮ್ ಶಂಕರಂ ನಾಱ್ಗಾಮುಣ್ಡುಗೆಯ್ಯೆ ಗಾಡಿಯಮ್ಮನಾ ಬಾಱ[ಂ] ಪರಿಪಾಲಿಸಿ ನಿಲೆ ಪಡೆದೊಂ (ಎಇ. VII, ೨೧೩-೧೪; 874); IP ಇಲ್ಲಿ ಬಳಕೆಯಾಗಿರುವ ವಟ್ಟಾರ ಶಬ್ದವು 'ಭಟ್ಟಾರ' ಅಥವಾ 'ಬಟ್ಟಾರ' ಎಂಬುದರ ಅಪಲಿಖಿತ ವಿರಬಹುದೆಂಬ ಅಭಿಪ್ರಾಯವೂ ಇದೆ ; ದಕ್ಷಿಣತಃ ವಟ್ಟಾರಂ ನಾಮಗ್ರಾಮಃ (ಇಏ. XVI, ೨೪-೬೬; 1009). [?]

**ವಟ್ಟೆಱು** (ಕ್ರಿ). (?) : ವಟ್ಟೆಱ[ಪಾಠಾಂ. ವಟ್ಟೆಪರಿ]ದು ನಾಂದು ಪೊಟ್ಟಯಿಸಿದದ್ಮಳಮುಂ ದಂಡೆಯೊಳ್ಕೋದು ಕೈದುವಂ ಕಾಣದೊನಕೆಯನೆತ್ತಿ ಪರಿವರಿಗಳುಮಂ (ಲೀಲಾವ. ೫-೧೧೪ ವ). [?]

**ವಟ್ಟೂರ್** (ನಾ). ಒಂದು ದೇಶದ ಹೆಸರು : ವಂಗಾಙ್ಗ ಕಳಿಙ್ಗ ವಟ್ಟೂರ ಮಗಧ . . . ಪ್ರಭೃತಿರನೇಕವರನೃಪತಿಸಮೂಹಾವಮರ್ದ್ದಲಬ್ಧವಿಜಯೇ (ಇಏ. XIX, ೧೭-೭; 602). [? + ಊರ್]

**ವಟ್ಟೃಸುಳಿ** 'ವಟ್ಟೃಸುೞಿ' ನೋ.

**ವಟ್ಟೃಸುೞಿ, ವಟ್ಟಸುಳಿ, ವಟ್ಟೃಸುಳಿ** (ನಾ). [ವ್ಯಾಕ] ವ್ಯಂಜನದೊಡನೆ ಸೇರುವ ವೃತ್ತಾಕಾರವಾಗಿರುವ 'ಋ' ಕಾರದ ಚಿಹ್ನೆ : "ವಟ್ಟೃಸುೞಿ" ಪದಚ್ಛೇದ ಮಾಡಿದಾಗ "ವಟ್ಟ + ಋ ಸುೞಿ" ಎಂದಾಗುವುದಷ್ಟೆ (ಸಂಶೋಧ. ೨೦೪). ವಟ್ಟೃಸುಳಿ : ಈ 'ಋ' ಸ್ವರ ಸಂಕೇತವನ್ನು . . . ಮೈಸೂರ ಕಡೆ 'ವಟ್ರಸುಳಿ', 'ವಟ್ಟಸುಳಿ' ಮುಂತಾಗಿ ಇವನ್ನು ಕರೆಯುವರು. (ಸಂಶೋಧ. ೨೦೦). ವಟ್ಟೃಸುಳಿ : ಋತ್ವದ ಸ್ವರಚಿಹ್ನೆಯನ್ನು ಕನ್ನಡಸೀಮೆಯ ಕೆಲವೆಡೆ "ವಟ್ಟೃಸುಳಿ" (ವಟ್ರಸುಳಿ) ಎನ್ನುತ್ತಾರೆ (ಸಂಶೋಧ. ೨೬). [< ಬಟ್ಟು + ಋ + ಸುೞಿ$_2$./ ತೆಲು. ವಟ್ರು ವಸುಡಿ, ವಟ್ರುಸುಡಿ]

**ವಟ್ಟೆಬುಲ್ಲು** (ನಾ). ಒಂದು ಬಗೆಯ ಹುಲ್ಲು : "ಇಲೌವಃ – ವಟ್ಟೆಬುಲ್ಲು" (ಓಷಧಿ. ೧೩). [<— ತಮಿ. ವಟ್ಟಪ್ಪುಲ್]

**ವಟ್ಟರ** 'ವಟ್ಟಾರ$_1$' ನೋ.

**ವಠಾರ** 'ವಟ್ಟಾರ$_1$' ನೋ.

**ವಠ್ಠಾರ** 'ವಟ್ಟಾರ$_1$' ನೋ.

**- ವಡ** (ನಾ). ಒಂದು ತದ್ಧಿತಭಾವನಾಮಪ್ರತ್ಯಯ: 'ಪುಲ್ಲವಡ' ಪರಾ.

**ವಡಂಜಿ** (ನಾ). ಒಂದು ಬಗೆಯ ಬಟ್ಟೆ : ಮಾಂದಳಿರ ಪಟ್ಟೆ ಸಣ್ಣವಡಂಜಿಯುಂ ಪೊಂಬಟ್ಟೆ ಸಿರಿಗಣೆ ಗುಜ್ಜರಾಷ್ಟ್ರದ ಪಟ್ಟೆ (ಬಸವು. ೧೧-೨೬). [?]

**ವಡಕಂಡ** (ನಾ). ಉತ್ತರ ದಿಕ್ಕಿನ ಸ್ಥಳ ; ಬಡಗುದಿಕ್ಕಿನ ಪ್ರದೇಶ : ವಾಣಗ ತೋಟ್ಟಂ ತೆನ್ಕಣ್ಣಾಮುಂ ವಡಕಣ್ಣಾಮುಂ ವಿನಿತೇಶ್ವರಕ್ಕಂ ಪೊಯ್ದಾರ್ (ಎಕ. IV, ಚಾಮರಾ. ೬೩-೭; 750). [< ಬಡಗು + ಕಂಡ$_1$]

**ವಡಕರೆನಾಡು** (ನಾ). ಒಂದು ಪ್ರದೇಶದ ಹೆಸರು ; ತಲಕಾಡಿನ ಸುತ್ತಲಿನ ಪ್ರದೇಶ : ಸ್ವಸ್ತಿಶ್ರೀ ವಿಕ್ರಮಾದಿತ್ಯರಸಂ ವಡ[ಕರೆ]ನಾಡು ಮುನೂಱುಮಾನಾಳು ತಿಟ್ಟು ಸುಗ್ಗಿಯುಳ್ಳನ್ನು ಪೊನ್ನಿಟ್ಟ ಧರ್ಮಕೆಡೆವಕ್ಕ ಪೊನ್ನಾನ್ಕೊಳ್ವೆನೆನ್ದೋನುಂ . . . ಸಾಸಿರ್ವ್ವರ್ಪ್ಪಾರ್ವ್ವ[ರು]ಮನ್ಕೊನ್ದೋನ್ ಸಲ್ಲತಿಗೆ ಸಲ್ವೋನಕ್ಕೆ (ಮೈಆರ್. ೧೯೩೩, ೫೯-೧; ಸು. ೩ನೆಯ ಶತ?). [< ಬಡಗು + ಕರೆ ? + ನಾಡು]

**ವಡಗಣ** ‘ಬಡಗು’ ಪರಾ.

**ವಡಗಯ್** ‘ಬಡಗಾಯ್’ ನೋ.

**ವಡಗಯ್ಗೇರಿ** (ನಾ). ಉತ್ತರದಿಕ್ಕಿನ ಪ್ರದೇಶದಲ್ಲಿರುವ ಬೀದಿ,– ಓಣಿ : ವಡಗಯ್‌ಗೇರಿ ಮನೆ ಭಣತು ಭೂಮಿದಾನಮೆ ಕೊಟ್ಟಮ್ (ಮೈಆರ್. ೧೯೧೯, ೧೧-೧೭; 5ನೆಯ ಶತ). [ವಡಗಯ್ (< ಬಡಗಾಯ್) + ಕೇರಿ]

**ವಡಗಾಯ್** ‘ಬಡಗಾಯ್’ ನೋ.

**ವಡಗು** ‘ಬಡಗು’ ನೋ.

**ವಡಪದ್ರಕ** (ನಾ). ಒಂದು ಊರಿನ ಹೆಸರು : ಆನ್ಕೊಟ್ಟಕ ಚತುರಶೀತ್ಯನ್ನ (ನ್ತ)ರ್ಗ್ಗತ ವಡಪದ್ರಕಾಭಿಧಾನಗ್ರಾಮೇ(ಮ): (ಇಆ. XII, ೧೬೦-೯೭; 812). [< ಸಂ. ವಟಪತ್ರಕ?]

**ವಡಬ** (ನಾ). ಸಮುದ್ರದಲ್ಲಿರುವ ಬೆಂಕಿ ; ಬಡಬಾಗ್ನಿ : ಕಡಲ ತೆರೆಗಳ ತಱುಬಿ ತುಡುಕುವ ವಡಬನಂದದಿ (ಕುವ್ಯಾಸ. ೧೫-೩೧); ಕಡಲೊಡಲ ವಡಬಂ ಬಿಡದೆ ತೀಡುವ ಬಿಱುಗಾಳಿಯ ತೀಟದಿಂ ‹ದಳ್ವಿಸಲ್ (ರಾಮಾಶ್ವ. ೨-೨೮). [ಸಂ. ವಡಬ, ವಡಬಾ]

**ವಡಬಶಿಖಿ** (ನಾ). = ವಡಬ: ವಡಬಶಿಖಿ ಪೀರ್ವ ಬಾಧೆಗೆ ಸೆಡೆದಿರದೇಳ್ತಂದು ಪುರದ ಕೋಂಟೆಯ ಮಱೆಯೊಕ್ಕತಗಿದ ಕಡಲೆನೆ ಗುಣ್ಪಂ ಪಡೆದೆಸೆದುದು ಬಹಳಜಳಧಿಪರಿಖಾವಳಯಂ (ತ್ರಿಪುವಿ. ೧೭-೧೪); ಕಂಬನಿಯ ಕಡಲೊಳಗೆ ಡಾವರಿಪ ವಡಬಶಿಖಿಯೆಂಬಿನಂ ಕಾಣಿಸುವಳಲ್ಲಿ ಚಟ್ಟಗವನೊಡಲನಿಂಬುಗೊಟ್ಟಂ(ಜೈಮಿಭಾ. ೧೩-೫೯). [ಸಂ. ವಡಬಶಿಖಿನ್]

**ವಡಬಾಗ್ನಿ** (ನಾ). = ವಡಬ : ವಡಬಾಗ್ನಿ ಜಡೆವೊತ್ತುದೋ ಸಿಡಿಲು ಹೊಸ ಭಸಿತವಿಡಕಲಿತುದೋ (ಹರಿಕಾ. ೮-೧); ಮಹಾವಾರ್ಧಿಜಲವನೊಂದೇ ಸಾರಿ ಸುರಿ ಗೊಂಬ ತಾವರದೊಳಿದ್ದ ವಡಬಾಗ್ನಿಯೋ . . . ಭಾವಿಸುವೊಡರಿದೆಂಬೋಲಾದುದು ಧನಂಜಯನ ಪಾವಕಾಸ್ತ್ರಂ (ಜೈಮಿಭಾ. ೧೩-೧೦). [ಸಂ.]

**ವಡಬಾಜ್ವಾಲೆ** (ನಾ). ಬಡಬಾಗ್ನಿಯ ಜ್ವಾಲೆ,–ಉರಿ : ಅವನೆನ್ನಂ ಸಮುದ್ರಮಧ್ಯದೊಳ್ ಬಿಸುಟು ಪೋಗಲ್ ವಡಬಾಜ್ವಾಲೆಯೊಳುಣ್ಬಿಡಂ ವಿಷಧರಂ ಬಾಯ್ಬಿಟ್ಟು ಮೇಲ್ವಾಯ್ದೊಡಂ . . . ನಿಜಲಲಾಟಪ್ರಾಪ್ತಸಿದ್ಧಾಕ್ಷರಂ ತೊಡೆವನ್ನಂ ಭಯಮೇಕೆ ದೇಹಿಗೆ (ದಶಕು. ೧೨ ೫೩). [ಸಂ. ವಡಬಾಜ್ವಾಲಾ]

**ವಡಬಾನಲ, ವಡಬಾನಳ** (ನಾ). = ವಡಬ : ಜಲನಿಧಿಯನುಱೆ ಕುಡಿವ ವಡ ಬಾ[ಪಾಠಾಂ. ಕಲ್ಪಾ]ನಲನ ನುಂಗುವ . . . ಕೋಟಿದಾವಾನಳಬಲಾನ್ವಿತಭಟರ ನಳನರ್ಬುದವ ತೋಱಿಸಿದ (ತೊರಾರಾ. ೪-೭-೧೯). **ವಡಬಾನಳ** : ಮಾನವಗತಿಯೆಂಬ ಮದಮುಖದಾನವ ನಾನಾಖಚರರೆಲ್ಲರನು ವಿನುಳಿಯದೆ ತಿಂದು ತಿರುಗಿ ನೋಡುತ ವಡಬಾನಳನಂತಿರುತಿಹನು (ತ್ರಿಪುಸಾಂ. ೫-೫೭); ಶರನಿಧಿಯ ವಡಬಾನಳನ ದಳ್ಳುರಿಯ ವರ್ಮವ ತಿಳಿವ ತುಂಬಿಗೆ ಮರಳುದಲೆಯುಂಟಾದಡದು ಭವಭವದ ಪುಣ್ಯಫಲ (ಕುವ್ಯಾದ್ರೋ. ೪-೨೭). [ಸಂ.]

**ವಡಬಾನಲಚೂರ್ಣ** (ನಾ). ಅಜೀರ್ಣವನ್ನು ಗುಣಪಡಿಸಲು ಉಪಯೋಗಿಸುವ ಒಂದು ಬಗೆಯ ಪುಡಿ,– ಚೂರ್ಣ : ವಡಬಾನಲಚೂರ್ಣಕ್ಕೆ ಯೋಗ :– ಸೈಂಧವಲವಣ ೧ ತೂಕ, ಕಬ್ಬುಪ್ಪು ೧ ತೂಕ . . . ಇಷ್ಟನ್ನೂ ಕುಟ್ಟಿ ಸಣ್ಣನಾಗಿ ಮಾಡಿ ಗರುಗದ ರಸದಲ್ಲಿ ಮೂಱುದಿನ ನೆನೆಯಿಕ್ಕಿ ಅದಂ ಗರುಗದ ರಸದಲ್ಲಿ ಇಂಗುವ ಹಾಗೆ ಅಡುವುದು (ವೈವಿ. ೪೮). [ಸಂ.]

**ವಡಬಾನಳ** ‘ವಡಬಾನಲ’ ನೋ.

**ವಡಬಾಮುಖಿ** (ನಾ). ೧. = ವಡಬ : “ವಾರಿಧಿಯ ಕಿಚ್ಚು ವಡಬಾಮುಖಂ ಬಾಡಬಂ” (ಮಂಗರಾ. ೧೪-೯). ೨. ಅಧೋಲೋಕದ ದ್ವಾರ. ೩. ಪಾತಾಳ : “ಪಾತಾಳಮೆನಲು ವಡಬಾಮುಖಿಮೆನಲು ಬಲಿನಿಕೇತನಮೆನಲು ನಾಗಲೋಕ ಮೆನಲೊಪ್ಪುವ . . . ಪಾತಾಳಲೋಕಕ್ಕೆ ನಾಮಂ” (ಮಂಗರಾ. ೧೧೭-೧). [ಸಂ.]

**ವಡಬೆ** (ನಾ). ೧. ಹೆಣ್ಣುಕುದುರೆ: “ವಾಜಿನಿ ವಡಬೆ ವಾಮಿಯೆನೆ ಹೆಣ್ಣನಿಕ್ಕುಂ” (ಮಂಗರಾ. ೮೧-೧೨). ೨. (ಹೆಣ್ಣುಕುದುರೆಯ ರೂಪದಿಂದಿದ್ದು) ಸೂರ್ಯನಿಂದ ಅಶ್ವಿನೀದೇವತೆಗಳಿಗೆ ಜನ್ಮವಿತ್ತ ಅಶ್ವಿನಿ ಎಂಬ ಅಪ್ಸರೆ. ೩. ದಾಸಿ; ಸೇವಕಿ. ೪. ಸೂಳೆ; ವೇಶ್ಯೆ. [ಸಂ. ವಡಬಾ]

**ವಡವಡ** (ನಾ). ಒಂದೇ ಸಮನೆ ಮಾತನಾಡುವುದನ್ನು ಸೂಚಿಸುವ ಒಂದು ಅನುಕರಣಪದ : ಅವರು ವಡವಡ ಮಾತನಾಡುತ್ತಿದ್ದುದನ್ನು ಕೇಳಿ ತಲೆಚಿಟ್ಟು ಬಂದಿತು (ರೂಢಿ).

**ವಡವುರ** (ನಾ). ಒಂದು ಊರಿನ ಹೆಸರು : ಪೂರ್ವತಃ ವಡವುರಗ್ರಾಮಃ (ಇಆ. XI, ೧೫೯-೪೦; 806). [?]

**ವಡಹ** (ನಾ). ಒಂದು ಊರಿನ ಹೆಸರು : ಉತ್ತರತಃ ವಡಹಗ್ರಾಮಃ (ಇಆ. VI, ೬೮-೯; 808). [?]

**ವಡಹು** (ನಾ). (?): ಕೊಂಡಲಿಗಣಪರ ಸ್ಥನ ತೋಟದ ಭರಣ ಆಕೆ ಗ ೩ ಗದೆ ಬೀಜವರಿ ಖ ೬ ವಡಹಿನ ಹಾದ ಖ ೧೩ ಉಭಯಂ ಖ ೧೯ಕೆ ಗ ೯ (ಮೈಆರ್. ೧೯೨೯, ೯೨-೨೯; 1667). [?]

**ವಡಾರ** (ನಾ). (?): ಆಯದ ಸಿವುದು ೨೦ ನೆಗಿಯಕ್ಕೆ ಸಿವುದು ೮ ಗದ್ದೆಗಳ ಕೋರ್‍ರಿ ಗೆಯ್ವರೆ ಆದಂತ್ಕ ವಡಾರ ಖ ೧ಕ್ಕೆ ಕಯಸಾಂಮ್ಯಲ್ (ಎಕ. XI, ಹಿರಿಯೂ. ೮೮-೧೮; 1589). [?]

**ವಡಿ$_1$** (ನಾ). ಕಾವು ; ಬಿಸಿ ; ಉಷ್ಣ : ಸಿಡಿಲ ಮಾರ್ಪೊಡವೊಡನೆ ಸಿಂಹದ ಕಡುಬಲ್ಪು ಕಡೆಗಾಲದಗ್ನಿಯ ವಡಿಯು ಶರಬನ ಬೆಡಗು ಪೆರ್ಬುಲಿ ಲಂಘನವು . . . ಲಘು ಗೊಂಡಿತು (ನಾಗಪ. ೮-೨೩). [ದೇ. ‖ ತೆಲು. ವಡ, ವಡಗಾಲಿ]

**ವಡಿ$_2$** (ನಾ). ೧. [ಛಂದ] ಪಾದದ ಮೊದಲಕ್ಷರ ಮತ್ತು ಪಾದಮಧ್ಯದ ಯತಿಯ ಮುಂದಿನ ಅಕ್ಷರವು ಸಜಾತೀಯವಾಗಿರುವಿಕೆ ; “ಪಾದದ ಮೊದಲಕ್ಷರವೂ ಪಾದದ ಮಧ್ಯದ ಯತಿಯ ಮುಂದಿನ ಮೊದಲಕ್ಷರವೂ, ಒಂದೇ ಆಗಲಿ ಸಜಾತಿಯಾದುದಾಗಲಿ ಇರುವುದು ವಡಿ” (ಕೈಪಿಡಿ. ೧೫೪): ವಡಿಯೆಂಬುದು ತೆಲುಗಿಂ ಪೇಳ್ವೆಡೆಗಲ್ಲದೆ ಕನ್ನಡಕ್ಕೆ ಪೇಳಿದುದಿಲ್ಲಂ . . . ಪದಪದ್ಯದ ಮೊದಲಕ್ಷರವದು ತಪ್ಪದೆ ನಡುವೆ ಯತಿವಿಲಾಸದೊಳಿಡಲುಂ ವಿದಿತದೆ ವಡಿಯಪ್ಪುದು (ಕವಿಜಿ. ೨-೧೮); ತೆಲುಗಿನ ‘ವಡಿ’ ಶಬ್ದದ ಮೂಲವೇನೆಂಬುದು ಇನ್ನೂ ನಿರ್ಣಯವಾಗಿಲ್ಲ. ‘ವಡಿ’ (ವಳಿ) ಶಬ್ದವು ಸಾಮೀಪ್ಯ, ದಾರಿ ಎಂಬರ್ಥಗಳುಳ್ಳ ‘ವಟಿ’ ಎಂಬ ದ್ರಾವಿಡಶಬ್ದದಿಂದ ಬಂದಿರಬಹುದೆಂದು ತೆಲುಗುವಿದ್ವಾಂಸರು ಕೆಲವರು ತರ್ಕಿಸುವರು (ಕಮದ. ಮ. ೯೬ ಅವತರಣಿಕೆ). ೨. [ಸಂಗೀತ] ತಾಳದ ಲಯ : ವಡಿ ತಪ್ಪದೆ ಕೋಲಚಾರಿಗಳಿಂದ ಜಕ್ಕುಡಿ ಮೆಱೆದುವು ದೇವಾಲಯದಿ (ಮೋಹತ. ೧೮-೭). [<— ತೆಲು. ವಡಿ]

**ವಡಿ$_3$** (ನಾ). ಒಂದು ಬಗೆಯ ಬಾಗಿದ ಕತ್ತಿ ,–ಖಡ್ಗ : ‘ವಡಿಕತ್ತಿ’ ಪರಾ. [ದೇ. ‖ ತಮಿ. ವಟಿ; ಮಲ. ವಡಿ = ಸಣ್ಣ ಬೆತ್ತ; ಕೊಡ. ವಡಿ]

**ವಡಿಕತ್ತಿ** (ನಾ). (ಕೊಡಗರು ಬಳಸುವ) ಒಂದು ಬಗೆಯ ಬಾಗಿದ ಕರವಾಳ,–ಖಡ್ಗ : ನಾಲ್ಕರು ವಡಿಕತ್ತಿಗಳನ್ನು ಬೀಸಿ ನಮ್ಮನ್ನು ಕೆತ್ತುವುದಕ್ಕೆ ಬಂದರು (ಹುಲಿಹಾ. ೨೨೭). [ವಡಿ$_3$ + ಕತ್ತಿ]

**ವಡಿಕಲು** (ನಾ). (?) : ಮೂಲಸ್ಥನದೇವರ್ಗ್ಗೆ ಗಾಣ ಮಾನ್ಯ ದೇವರ ಕಂಮ ತವಗೆ ವಡಿಕಲ ಮಾನ್ಯ ಬರಸೆ ಹರಿಕಟು ಇನ ಮಾಡುವರ್ಸತ್ತವರ ಗುಡಿಯ x x ಕಟುಗೆ ಮೂಲಸ್ಥಾನದೇವರ್ಗಲದೆ ಮೆಲದೆ ದೇ[ವ]ರ್ಗ್ಗೆ ಸಾಲದು (ಸೌಇಇ. IX - i, ೨೯೧-೩೪; 11ನೆಯ ಶತ). [?]

**ವಡಿಕೆ** (ನಾ). (ಉಪ್ಪನ್ನು ತಯಾರಿಸಲು) ಉಪ್ಪುನೀರನ್ನು ತಡೆದು ನಿಲ್ಲಿಸುವ ಪಾತಿ ; ಉಪ್ಪುಮಡಿ : ಸರ್ವಮಾನ್ಯ ಬ್ರಂಹ್ಮಸ್ವವಾಗಿ ಕ್ರಯಕ್ಕೆ ಕೊಂಡ ಕವಲಹೊಂಡ ಮುಂಡಗದೆಯಲಗದ ಸಿಂನೆ ಉಪ್ಪಿನ ವಡಿಕೆ ಜಾಳಿಗ (ಎಕ. VIII, ಸಾಗರ. ೪-೧೩; 1566). [IP ಇದು 'ಮಡಿಕೆ' ಎಂಬುದರ ಅಪಲಿಪಿತವಿರಬಹುದು]

**– ವಡಿಗ** (ಪ್ರ). 'ಇದರಲ್ಲಿ ವರ್ತಿಸುವವನು' ಎಂಬ ಅರ್ಥದಲ್ಲಿ ಸೇರುವ ತದ್ಧಿತಪ್ರತ್ಯಯ : ಇದನಿವನಿಕ್ಕುವನೆಂಬೆಡೆಯೊಳ್ ವಡಿಗ ಪ್ರತ್ಯಯಮಕ್ಕುಂ . . . ವಡಿಗಕ್ಕೆ—ಕುಂಚವಡಿಗಂ, ಪುಲ್ಲವಡಿಗಂ, ಕಲ್ಲಡಿಗಂ (ಶಮದ. ೧೯೮ ಪ್ರಯೋ); ಮಾಲೆಯಿಂ ಜೀವಿಸುವಂ, ಮಾಲೆವಡಿಗಂ. ಏವಂ ಕಂಚುವಡಿಗಂ, ಪಱೆವಡಿಗಂ, ಪೂವಡಿಗಂ (ಶಬ್ದಾನು. ೪೧೬ ಪ್ರಯೋ).

**ವಡಿಬೀಸು** (ನಾ). ಕತ್ತಿವರಸೆಗಳಲ್ಲಿ ಒಂದು ಬಗೆ : ಆ ಸ್ಥಾನದಲ್ಲಿಯೇ ನಿಂತು ಶೀಘ್ರಗಮನದ ಆದಿಯಲ್ಲಿ ಮುಂದಕ್ಕೆ ಬಂಡಿಗೋಲನ್ನು ಚಾಚಿ ಯರಡು ಪಾರ್ಶ್ವಗಳಲ್ಲಿ ಪ್ರತ್ಯೇಕವಾಗಿ ಮೊದಲ ಹಾಗೆ ಬೀಸು ಆವುದು ಮಾಡಲು ತಕ್ಕಂಥಾದು ಅದು ವಡಿಬೀಸು ವೆಂದು ನುಡಿಯಲ್ಪಡುವುದು (ಖಡ್ಗಟೀ. ೫-೨೧). [ವಡಿ$_3$ + ಬೀಸು$_2$]

**ವಡಿಯನಕಂಟಿ** (ನಾ). ಒಂದು ಬಗೆಯ ಮುಳ್ಳುಗಿಡ : ವಡಿಯನಕಂಟ, ಎಕ್ಕಿಯ ಗಿಡಗಳು, ಮುಳಗಲಕಂಟಿ ಮುಂತಾದ ಗಿಡಗಳಿದ್ದರೆ ಅವುಗಳ ಬೇರುಸಹಿತ ಅಗಿದು ತೆಗೆಯಬೇಕು (ಕೃಷಿಪ್ರ. ೨೫).

[< ವಡಿಯ$_1$ (IP <— ತೆಲು. ವಡಿಯ = ನಾಗದಂತಿ) + ಕಂಟಿ$_2$]

**ವಡಿಲ ?** (ನಾ). ಒಂದು ಬಗೆಯ ವೃತ್ತಿ (?) : ಮಠಕೆ ಕೊಡುವ ಹಣ ೪ ವಡಿಲವರು ತಾ ಬದ್ಧ ಬಾಳಿನ ಮೇಲೆ (ಸೌಇಂ. ೧೯೩೨, ಉಡುಪಿ. ೩೩೫-೧೧; 1407). [?]

**ವಡು** (ನಾ). ಅಡ್ಡಗಟ್ಟೆ ; ಅಣೆ: ಯಿಂಗುಳವಾಡಿ ಕುಣಿಗಿಹಳ್ಳಿಯ ಮಣ್ಣುಂ ಕಂದರ ಕಾಡುಕೋಡಿ ಹೊಂನಪ್ಪನ ವಡುಂ ಕಾರಿನಡ ಜಯತದ ಪಾಲ್ಲು ಕೇಸ್ವರಗೆ ಕೊಟ್ಟ ಕೊಡಗೆ (ಮೈಆರ್. ೧೯೩೦, ೩೪-೯; 1380); ರಾಮಯ್ಯನು ಮಹನ್ತಯ್ಯನು ಸಹ ವಡುವ ಕಟಿಸಿದ ಬೆಗೆ ಕೊಡಗಿ ಹಾಕಿಕೊಟ್ಟ ಕ್ರಮವೆನ್ತೆಂದರೆ (ಎಕ. XI, ಹೊಳಲ್ಕೆ. ೧೨೬-೪; 1692?). [< ಒಡ್ಡು$_2$]

**ವಡುಗವಟಿ** (ನಾ). ಒಂದು ಪ್ರದೇಶದ ಹೆಸರು : ಶ್ರೀಮಹಾವಲಿವಾಣರಸರ್ ವಿಜಯಾದಿತ್ಯನ್ . . . ವಡುಗವಟಿ ಪನ್ನಿಚ್ಚಾಶಿರಮುಮ್ ಮಣ್ಣೆಯಿನ್ನೂಡಾಯುಮ್ ಪೃಥುವೀರಾಜ್ಯಂಗೆ[ಯೆ] (ಸೌಇಇ. IX-i, ೫-೫; ಸು. 9ನೆಯ ಶತ). [?]

**ವಡೆ, ಒಡೆ$_3$, ವೊಡೆ** (ನಾ). ಕಡಲೆ, ಉದ್ದು ಮುಂತಾದ ಬೇಳೆಗಳನ್ನು ಕೆಲವು ಗಂಟೆಗಳ ಕಾಲ ನೀರಿನಲ್ಲಿ ನೆನೆಯಿಸಿ, ನಂತರ ರುಬ್ಬಿದ ಹಿಟ್ಟಿಗೆ ಸೊಪ್ಪು, ಉಪ್ಪು, ಕಾರ ಮುಂತಾದ ಸಂಬಾರಪದಾರ್ಥಗಳನ್ನು ಮಿಶ್ರಮಾಡಿ ಕರಿದು ತಯಾರಿಸುವ ಒಂದು ಬಗೆಯ ಖಾದ್ಯವಿಶೇಷ : ದಧಿಯಾಮ್ಲ ದುಗ್ಧಾದಿಯಲಿ ವ[ಪಾಠಾಂ. ವೊ]ಡೆಗಳಂ ಕಲಸಲದು ಕದಂಬಕಮಕ್ಕು (ಮಂಗರಾ. ೬೫-೬); ವ [ಪಾಠಾಂ. ವೊ] ಡೆಗೆ ಕಲಸುವ ತೆಱದಿ ಕಲಸಿದುದ್ದಿನ ಹಿಟ್ಟ ಕಡಲೆಯಂದದೊಳಗುಂಡೆಯ ಮಾಡಿ . . . ಸಕ್ಕರೆಯ ಪಾಕದೊಳಗಿಕ್ಕಿ ಕಟ್ಟುವುದು ಲಡ್ಡುಗೆಯನು (ಸೂಪಶಾ. ೧-೫೭); ಸುಖೀನುಂಡೆ ವಡೆ ಗಾರಿಗೆಯ . . . ಬಡಿಸಿದರೊಲವಿಂ (ಮೋಹತ. ೩-೫೨). **ಒಡೆ$_3$:** ಸಂಡಿಗೆಗಳುದ್ದಿನೊಡೆ ಶರ್ಕರೆಯ ಜೇನ್‌ಬುರುಡೆ ಪಪ್ಪಳಂ (ಪರಶು. ೧೫-೩೨); ವಾಸನೆಯನ್ನು ಎರಚುತ್ತಿದ್ದ ಉದ್ದಿನ ಒಡೆಗಳನ್ನು ಸಾಹೇಬರು ಅರೆಕ್ಷಣ ನೋಡಿ, ಒಂದನ್ನು . . . ತಿಂದರು (ಮಾಗಮಾಂ. ೩೩). **ವೊಡೆ :** ಕರ್ಪೂರಾಯಕ್ಕೆ ವೊಡೆಗೆ ಉದ್ದು ಪ ೧ ಅಕ್ಕಿ ಹಂ ‖ ತುಪ್ಪಂ (ಎಕ. VI, ಮೂಡಗೆ. ೪೦-೧೫; 1552).

[ದೇ. ‖ ತಮಿ. ವಟೈ; ತೆಲು. ವಡ; ತುಳು. ವಡೆ./ ಸಂ. ವಡಾ]

**ವಡ್ಡ$_1$** (ಗು). ೧. ಹಿರಿಯ ; ಪೂಜ್ಯ : 'ವಡ್ಡಾರಾಧನೆ' ಪರಾ. ೨. ಹಳೆಯದಾದ ; ಪ್ರಾಚೀನ : 'ವಡ್ಡಾಚಾರ' ಪರಾ. ೩. ದೊಡ್ಡ ; ಬೃಹತ್ತಾದ : 'ವಡ್ಡದಾರಿ' ಪರಾ. [< ಪ್ರಾ. ವಡ್ಡ./ ಸಂ. ವೃದ್ಧ]

**ವಡ್ಡ$_2$** 'ವಟ್ಟ' ನೋ.

**ವಡ್ಡಂತಿ** (ನಾ). ಹುಟ್ಟುಹಬ್ಬ ; ಜನ್ಮದಿನ : "ವಡ್ಡಂತಿ (ಒಡ್ಡಂತಿ) – ವರ್ಧಂತಿ" (ತದ್ಭಕೋ. ೩೯); ಹರಿದಿನವಿಂದು ಯಜ್ಞಾರಂಭದಿನ ವಡ್ಡಂತಿ ಲೇಸೆಂದು . . . ತಿಂದು ಕೊಬ್ಬಿದ ನಿಮಗೆ ಸುಭಟರ ಮಾತದೇಕೆಂದ (ಕುಮಾವ್ಯಾ. ೭-೧೩); ವಡ್ಡಂತಿ ಇಂದು ಯಜ್ಞಾರಂಭದಿನ ಜನ್ಮಗೋಚರಗ್ರಹಕಷ್ಟವೆಂದೆನುತಲಿ ಎಂದು ನಾನಾ ಪರಿಯಲರಮನೆಯ ರೊಕ್ಕವಂ ತಿಂದು . . . ರಾಜಗುರುತನದಿಂದಲೆಲ್ಲರಂ ಮರೆತಿಹಿರಿ (ತುರಂಗ. ೩೭-೧೪). 'ಒಡ್ಡಂತಿ' ಪರಾ. [< ವರ್ಧಂತಿ]

**ವಡ್ಡದಾರಿ** (ನಾ). ದೊಡ್ಡರಸ್ತೆ ; ಹೆದ್ದಾರಿ : ತೆಂಕಲು ಮೂತೆನೆಯ ಪಂಸಿನ ದಾರಿಯ ಪತ್ತಿರೆ ಪಡುವಲು ಟಕ್ಕಳಿಗೆಯ ವಡ್ಡದಾರಿಯಿಂ ಬಡಗಲು (ಕೊಲ್ಲಾ.ಶಾ. ೧೩-೩೦; 1166). [ವಡ್ಡ$_1$ + ದಾರಿ]

**ವಡ್ಡಬೆವಹಾರಿ, ವಡ್ಡಬ್ಯವಹಾರಿ, ವಡ್ಡವ್ಯವಹಾರಿ** (ನಾ). ಹಿರಿಯ ವರ್ತಕ ; ವರ್ತಕರ ಮುಖಂಡ : ಮಲೆಯಾಳ ವಡ್ಡಬೆವಹಾರಿ ಕೊಮರ ಮೂರ್ಕ್ಕಶ್ರೀಸಯಂಬುಕಲಿಸ್ವಾಮಿದೇವರ್ಗೆ ನಂದಾದೀವಿಗೆಯ ನಡೆಸುವನ್ತಾಗಿ . . . ಬಿಟ್ಟ ಗದ್ಯಾಣವಯ್ದು (ಸೌಇಇ. IX - i, ೧೭೭-೧೯; 1106); ಶ್ರೀ ಭೀಮೇಶ್ವರದೇವ ಲಬ್ಧವರಪ್ರಸಾದಂ ವಡ್ಡಬೆವಹಾರಿ ಬೀಚಿಸೆಟ್ಟಿಯರು ಮಾಡಿಸಿದ ಪ್ರತಿಷ್ಠೆ (ಸೌಇಇ. IX - i, ೨೩೦-೧೫; 1134). **ವಡ್ಡಬ್ಯವಹಾರಿ :** ಗೊಂಮಟದೇವರ ಸುತ್ತಾಲಯದೊಳು ವಡ್ಡಬ್ಯವಹಾರಿ ಮೊಸಳೆಯ ಬಸವಿಸೆಟ್ಟಿಯರು . . . ವರಿಸನಿಬನ್ಧಿಯಾಗಿ ಕೊಡುವ ಪಡಿ (ಎಕ. II, ೨೩೫-೩; ಸು 1185); ಶ್ರೀಮನ್ಮಹಾವಡ್ಡ ಬ್ಯವಹಾರಿ ಸಿಂಕಸೆಟ್ಟಿಯ ಮಗ ಸಿಂದಿಸೆಟ್ಟಿ (ಮೈಆರ್. ೧೯೪೬, ೩೧-೬; 1314). **ವಡ್ಡವ್ಯವಹಾರಿ :** ಶ್ರೀನಿಡುಂಗಾಲ್ನಾಡ ಶ್ರೀಮನ್ಮಹಾಮಲೆಯಾಳ ವಡ್ಡವ್ಯವಹಾರಿ . . . ಶ್ರೀಮತ್ಸಿವಶಕ್ತಿಪಣ್ಡಿತರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕ(ಂ)ಮ್ಮಾಡಿ . . . ಬಿಟ್ಟ ಗದ್ಯಾಣಂ ೧೪ (ಸೌಇಇ. IX-i, ೧೮೯-೨೧; ಸು. 1113); ಅಲ್ಲಿಗೋರ್ಬ ವಡ್ಡವ್ಯವಹಾರಿ ಬಂದು ಬೀಡುಬಿಡುವುದುಂ (ದಕು. ೪-೭೮ ವ). [< ಸಂ. ವೃದ್ಧವ್ಯವಹಾರಿನ್]

**ವಡ್ಡಬ್ಯವಹಾರಿ** 'ವಡ್ಡಬೆವಹಾರಿ' ನೋ.

**ವಡ್ಡಮರ** (ನಾ). ಹಳೆಯ ಮರ : ದೇವರಿಗೆ x x x ರಿರೆ ಬಡಗಲು ರಾಜಬೀದಿಯಿಂ ಪತ್ತಿರೆ ಮೂಡಲು ವಡ್ಡಮರದ ಮನೆಯಿಂ ಪತ್ತಿರೆ . . . ಪ್ರಭುಮುಖ್ಯ ಮಹಾಜನಂಗಳಿಗೆ ಪಾದಪೂಜೆಯಂ ಕೊಟ್ಟು (ಕೊಲ್ಲಾ.ಶಾ. ೧೩-೪೫; 1166).

[ವಡ್ಡ$_1$ + ಮರ$_1$]

**ವಡ್ಡರಾಗಿ** (ನಾ). ನೆನೆಯಿಸಿ ಒಣಗಿಸಿದ ರಾಗಿ : ವಡ್ಡರಾಗಿ ಬೀಸಿ ಹುರಿಹಿಟ್ಟು ಮಾಡು (ರೂಢಿ).

ವಡ್ಡರಾಗಿ ಹಿಟ್ಟು = ವಡ್ಡರಾಗಿಯನ್ನು ಬೀಸಿ ಮಾಡಿದ ಹಿಟ್ಟು: ವಡ್ಡರಾಗಿ ಹಿಟ್ಟು ಬಹಳ ಪೌಷ್ಟಿಕವಾದ ಆಹಾರ (ರೂಢಿ). [ವಡ್ಡ$_?$ + ರಾಗಿ$_1$]

**ವಡ್ಡರಾವುತ್ತ** (ನಾ). ಹಿರಿಯ ರಾವುತ ; ಅಶ್ವಾರೋಹಿ : ವಡ್ಡರಾವುತ್ತರ ಮೊತ್ತಮೊದ್ದುಗೊಂಡು ಮುಮ್ಮಳಿಯಾಗಿ ಕಾದುವ ಬೇವಸದೆಸಕದಿಂ ಮಾಮಸಕಂ ಮಸಗಿ (ಬಾಧಪು. ೧೩-೮೪ ವ). [ವಡ್ಡ$_1$ + ರಾವುತ್ತ (< ರಾವುತ)]

**ವಡ್ಡರಾವುಳ, ವಡ್ಡಲಾಉಳ, ವಡ್ಡಲಾಗುಳ, ವಡ್ಡಲಾವುಳ, ವಡ್ಡೆರಾವುಳ** (ನಾ). ಒಂದು ಬಗೆಯ ತೆರಿಗೆ : ಶ್ರೀಮತ್ ವಡ್ಡರಾವುಳದ ಪೆರ್ಗ್ಗಡೆ ಸೋಮನಾಥಯ್ಯಂಗಳ ಬೆಸದೆ (ಸೌಇಇ. XX, ೩೪-೭; 1053); ಸಾಸಿರ ಪೇಱುವತ್ತಿಂಗೆ ಪೆರ್ಜುಂಕ ಬಿಲ್ಕೊಡೆ ವಡ್ಡರಾವುಳವೊಳಗಾಗಿ ಸುಂಕವೆಲ್ಲಂ [ಪ]ರಿಹಾರಂ ಮಾಡಿಬಿಟ್ಟಂ (ಎಇ. XXVIII, ೩೫-೫೦; 1082). **ವಡ್ಡಲಾಉಳ :** ಗವರೇಶ್ವರದೇವರ್ಗ್ಗೆ ಮೂಱುಲಕ್ಕ ಅಡಕೆಯ ಸುಂಕ ವಡ್ಡಲಾಉಳ ಹೆಜ್ಜುಂಕಮಂ ಬಿಟ್ಟರು (ಸೌಇಇ. IX - i, 238-4; 1142). **ವಡ್ಡಲಾಗುಳ:** ಪನ್ನಿರ್ಚ್ಛಾಸಿರದ ವಡ್ಡಲಾಗುಳದ ಸುಂಕವೆರ್ಗ್ಗಡೆ ಸಂಗವಯ್ಯನುಂ ಬನವಾಸಿ ಪನ್ನಿರ್ಚ್ಛಾಸಿರದ ಸುಂಕವೆರ್ಗ್ಗಡೆ(ಡೆ) ಚಾವುಣ್ಡಮಯ್ಯನುಂ . . . ಅನ್ತನಿಬರುವಿಟ್ಟು (ಎಇ. XVI, ೭೮-೩೨; 1037). **ವಡ್ಡಲಾವುಳ :** ವಡ್ಡಲಾವುಳದ ಸುಂಕದವರು ಪೇರಿಂಗೆ ಕೊಳ್ವ ವೀಸವಂ ಪತ್ತು (ಎಇ. XVI, ೭೯-೩೭; 1037); ಸಪ್ತಾಧ್ಧಿಲಕ್ಷೆಯ ವಡ್ಡಲಾವುಳದ ಸುಂಕಮುಮಂ ಪಡೆದು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ (ಸೌಇಇ. IX - i, ೨೨೫-೯; 1127). **ವಡ್ಡೆರಾವುಳ :** ಶ್ರೀಮತ್ ವಡ್ಡೆರಾವುಳದ ದಂಡನಾಯಕಂ ನಾರಣಮಯ್ಯಂಗಳ್ (ಕಇ. ೧೦೩-೮-೧೭; 1076).

[ವಡ್ಡ? + ರಾವುಳ./ ತೆಲು. ವಡ್ಡರಾವಳಮು]

ವಡ್ಡಲಾಉಳ 'ವಡ್ಡರಾವುಳ' ನೋ.

ವಡ್ಡಲಾಗುಳ 'ವಡ್ಡರಾವುಳ' ನೋ.

ವಡ್ಡಲಾವುಳ 'ವಡ್ಡರಾವುಳ' ನೋ.

ವಡ್ಡವಾರ, ವೊಡ್ಡವಾರ (ನಾ). ಒಂದು ವಾರದ ಹೆಸರು ; ಶನಿವಾರ ; IP ಕೆಲವರು ಇದನ್ನು ಶನಿವಾರವೆಂದು, ಕೆಲವರು ಗುರುವಾರವೆಂದು, ಕೆಲವರು ಸೋಮವಾರವೆಂದು, ಕೆಲವರು ಮಂಗಳವಾರವೆಂದೂ ಅಭಿಪ್ರಾಯಪಡುತ್ತಾರೆ : ಕಳಶಜನನಿಂತು ಕೊಲಿಸಿದ ಖಳನೆ ಗಡಂ ಧರ್ಮನಂದನಂ ಕ್ರೂರದಿನಂಗಳ ಪೆಸರಂ ಮಱೆಯಿಸಿ ಮಂಗಳವಾರಂ ವಡ್ಡ [ಪಾಠಾ. ಕಡ್ಡ]ವಾರಮೆಂಬಂತೆ ವಲಂ (ಗದಾಯು. ೩-೨೬); ಫಾಲ್ಗುಣಸುದ್ಧ ಪಂಚಮಿ ವಡ್ಡವಾರದಮ್ದು . . . ಕೊಟ್ಟ ಕರಿಯ ನೆಲಂ (ಕಇಅ. ೧೨೦-೨೬-೬; 1055); ಸಿದ್ಧಾರ್ತ್ಥಿಸಂವತ್ಸರದ ಜ್ಯೇಷ್ಠದಮಾವಾಸೆ ವಡ್ಡವಾರ ಸೂರ್ಯ್ಯಗ್ರಹಣದಂದು (ಸೌಇಇ. IX - i, ೧೪೫-೨೬; 1079); ಕಾರ್ತ್ತಿಕಪುಣ್ಣಮೆ ವಡ್ಡವಾರದಂದಿನ ಸೋಮಗ್ರಹಣಪರ್ವ್ವನಿಮಿತ್ತಂ . . . ಭೂಮಿಯನಿಪ್ಪತ್ತುನಾಲ್ಕು ಮತ್ತರನಿತ್ತಂ (ಕೊಲ್ಹಾಶಾ. ೩-೪೦; 1079); ಜೇಷ್ಠಬಹುಳಚ್ಚಟ್ಟಿ ವಡ್ಡವಾರಂ ಶಾಶನ ನಿಂದುದು (ಎಕ. VII, ಶಿವಮೊ. ೧೦-೩; 1085?); ಶ್ರಾವಣಬಹುಳ ೫ ವಡ್ಡವಾರದಂದು (ಎಇ. XVIII, ೨೦೦-೨; 1107); ಸರ್ವ್ವಜಿತುಸಂವತ್ಸರದ ಫಾಲ್ಗುಣ ಪೌರ್ಣ್ನಮಿ ವಡ್ಡವಾರದಂದು (ಎಕ. VIII, ಶಿವಮೊ. ೫೧-೧೬; 1108?); ಶ್ರಾವಣಸುದ್ಧ ೭ ವಡ್ಡವಾರ [ದಂದು] (ಸೌಇಇ. VIII, ೩೭೦-೭; 1124); ಮಾಘಬಹುಳ ೧೪ ವಡ್ಡವಾರದಂದು ಶಿವರಾತ್ರಿಯ ಪರ್ವನಿಮಿತ್ತವಾಗಿ ಕೊಟ್ಟ ಸುಂಕ (ಎಇ. XIX, ೩೮-೪೭; 1144); ವೈಸಾಖಬಹುಳಪುಣ್ಣಮಿ ವಡ್ಡವಾರ (ಎಕ. IX, ಚನ್ನಪ. ೬೪-೮; 1176); ಜ್ಯೇಷ್ಠಸುದ್ಧ ೩ ವಡ್ಡವಾರ ಉತ್ತರಾಯಣ (ಮೈಆರಿ. ೧೯೨೮; ೯-೪೦; 1183); ಪುಶ್ಯ(ಷ್ಯ) ಬಹುಳ ೧೦ ವಡ್ಡವಾರ ವುತ್ತರಾಯಣ ಸಂಕ್ರಮಣ ವ್ಯತೀಪಾತದಲು (ಇಅ. XII, ೯೭-೩೪; 1187); ವೈಶಾಖಬಹುಳ ೭ವಡ್ಡವಾರ ಉತ್ತರಾಯಣ (ಎಕ. VI, ಕಡೂರು. ೭೭-೨೭; 1194); ಸಕವರ್ಷಂ ೧೧೧೮ ನಳಸಂವತ್ಸರದ ಜೇಷ್ಠಸುದ್ಧ ೧೩ ವಡ್ಡವಾರದಂದು ಧಾರಾಪೂರ್ವಕಂ ಮಾಡಿ (ಎಕ. XIV, ಗುಂಡ್ಲುಪೇ. ೨೭-೧೮; 1196); ಶ್ರೀವೀರವಜ್ರದೇವ ವರ್ಷದ ೯ನೆಯ ಖಿಷುಸಂವತ್ಸರದ ದ್ವಿತಿಯವೈಶಾಖ ಶು ೧ ವಡ್ಡವಾರದಂದು (ಕಕುಲ. ೬-೭೦; 1303); ಮಾಘಸುದ್ಧತ್ರಯೋದಶಿ ವಡ್ಡವಾರ ರೋಹಿಣೀನಕ್ಷತ್ರ ಕರ್ಕಟಕ ಲಗ್ನದಲ್ಲಿ (ಎಕ. V, ಹಾಸನ. ೬೫-೩೬; 1557?); ಫಾಲ್ಗುಣ ಬಹುಳದಮಾವಾಸ್ಯೆ ವಡ್ಡವಾರದಂದು ಸೂರ್ಯ್ಯಗ್ರಹಣನಿಮಿತ್ತಂ (ಮೈಆರಿ. ೧೯೩೫, ೪೯-೮೨; 17ನೆಯ ಶತ?); ತದ್ವರ್ಷಾಭ್ಯನ್ತರದ ಕಾರ್ತ್ತಿಕಪೌರ್ಣ್ನಮಾಸಿ ವಡ್ಡವಾರದಂದು (ಶಾಸಪ. ೭೭-೮); ಚೈತ್ರಶುದ್ಧಪಂಚಮಿ ವಡ್ಡವಾರ (ಶನಿವಾರ) ವಿಜಯನಾರಾಯಣಪ್ರತಿಷ್ಠೆ ಮಾಡಿದರೆಂದೂ . . . ಕಂಡುಬರುತ್ತದೆ (ಹೊಯ್ಸವಾ. ೨೧). **ವೊಡ್ಡವಾರ** : ಜಯಸಂವತ್ಸರದ ಕಾರ್ತಿಕ ಸುದ್ಧಪಂಚಮಿ ವೊಡ್ಡವಾರದಂದು ಹವಾಳಿ ಪಾಳೆಯದಲು (ಎಕ. V, ಹಾಸನ. ೨೯-೩; 1174).

[< ಸಂ. ವೃದ್ಧವಾರ./ ತೆಲು. ವಡ್ಡವಾರ = ಶನಿವಾರ]

ವಡ್ಡವ್ಯವಹಾರಿ 'ವಡ್ಡಬೆವಹಾರಿ' ನೋ.

ವಡ್ಡಳಭತ್ತ (ನಾ). ಒಂದು ಬಗೆಯ ಭತ್ತ : ಭೂಮಿಯಲು . . . ವಡ್ಡಳಭತ್ತ ಮೂಡೆ ೭೭ (ಸೌಇಎ. ೧೯೨೯, ಮಂಗಳೂರು. ೪೬೪-೪೧; 1325).

[ವಡ್ಡಳ? (IP <— ತೆಲು. ವಡ್ಲು = ಭತ್ತ) + ಭತ್ತ$_1$ (< ಬತ್ತ)]

ವಡ್ಡಾಗರ (ನಾ). ದೊಡ್ಡ ಸ್ಥಳ ; ಹಿರಿದಾದ ನೆಲೆ : ಪುರಿಗೆಱೆಯ ೪೮ ಸಾಸಿರ ಮತ್ತರ್ಭೂಮಿಯಿಂದೊಳಗೆಲೆಯಂ ಮಾಱುವ ತಳದೊಕ್ಕಲು ವಡ್ಡಾಗರವಾಡಿಯಾಗಿ ಪೇಱನಲುಂ ತಲೆವೊಱೆಯಲೆಲ್ಲಿ ತಂದಡಂ ದೇವರ್ಗ್ಗೆ ಪನ್ನಾಯದ ಸುಂಕಮುಮಂ . . . ಬಿಟ್ಟರ್ (ಎಇ. XVI, ೩೩-೩೭; 1102); IP ಈ ಪ್ರಯೋಗದಲ್ಲಿರುವ 'ವಡ್ಡಾಗರವಾಡಿಯಾಗಿ' ಎಂಬುದು 'ವಡ್ಡಾಗರವಾದಿಯಾಗಿ' ಎಂದಿರಬಹುದು; ಕರಿಗಳ ಕಣಿ ಶಬರರ ನಿಧಿ ಮರಗಳ ವಡ್ಡಾಗರಂ ದವಾಗ್ನಿಯ ಸತ್ರಂ ಹರಿಣಂಗಳ ಹರವರಿ (ಚಂದ್ರಪ್ರ. ೫-೪೭). [ವಡ್ಡ$_1$ + ಆಗರ$_1$]

ವಡ್ಡಾಚಾರ (ನಾ). ಪ್ರಾಚೀನ ಸಂಪ್ರದಾಯ : ವಡ್ಡಾಚಾರವ ನುಡಿನುಡಿದಂದೆಡ್ಡವೆ ಪೊಗಳ್ವಂಗೆ ಗುಡ್ಡಶಾಸ್ತ್ರನ್ವಿತ ಸಂವಡ್ಡಿಯನೆನ್ದು ಪೊಗಳ್ದುದು ವಡ್ಡಬ್ಯವಹಾರಿ ಮುದ್ದನಂ ಧರೆ ಸತತಂ (ಸೌಇಇ. IX - i, ೨೯೭-೫೯; 1177). [< ಸಂ. ವೃದ್ಧಾಚಾರ]

ವಡ್ಡಾರಾಧನೆ (ನಾ). ೧. ಹಿರಿಯರ ಆರಾಧನೆ ; ಪೂಜ್ಯರ ಆರಾಧನೆ. ೨. ಕನ್ನಡ ಸಾಹಿತ್ಯದ ಒಂದು ಪ್ರಾಚೀನ ಗದ್ಯಗ್ರಂಥದ ಪ್ರಚಲಿತ ಹೆಸರು : ಈ ಪೇಟ್ದ ಪತ್ತೊಂಭತ್ತು ಕಥೆಗ[ಳಂ] ಶಿವಕೋಟ್ಯಾಚಾರ್ಯರ್ ಪೇಟ್ದೂ[ರ್] ವಡ್ಡಾರಾಧನೆ ಸಂಪೂರ್ಣಂ (ವಡ್ಡಾರಾ. ೧೯೪-೧೩); ವಡ್ಡಾರಾಧನೆಯ ಗದ್ಯಶೈಲಿ ಇಡೀ ಕನ್ನಡ ಸಾಹಿತ್ಯದಲ್ಲಿ ಅಪೂರ್ವವಾಗಿದೆ (ಕಸಾಚ. ೭೪).

[ವಡ್ಡ$_1$ + ಆರಾಧನೆ./ ಸಂ. ವೃದ್ಧಾರಾಧನಾ]

ವಡ್ಡಿ$_1$ 'ಬಡ್ಡಿ$_2$' ನೋ.

ವಡ್ಡಿ$_2$ (ನಾ). ಓಡ್ರದೇಶ; IP ಈಗಿನ ಒರಿಸ್ಸಾ : ವರಕೌಶಲ ಪಲ್ಲವ ವಡ್ಡಿ ಕಾಶ್ಮೀರ ಕುರುಜಾಂಗಣ ಹಮ್ಮೀರ (ಜ್ಞಾನಚ. ೩೭-೧೦೪). [< ಪ್ರಾ. ಓಡ್ಡ./ ಸಂ. ಓಡ್ರ]

ವಡ್ಡಿನಾಯಕ (ನಾ). ೧. ಬಡ್ಡಿವ್ಯಾಪಾರದ ಮುಖಂಡ. ೨. ತಿರುಪತಿಯ ವೆಂಕಟೇಶ್ವರನನ್ನು ಧನಾಕರ್ಷಣೆ ಮಾಡುವನೆಂದು ಆಲಂಕಾರಿಕವಾಗಿ ಕರೆದಿರುವ ಹೆಸರು : ಎನ್ನ ಗುಡ್ಡದಂತಹ ಪಾಪ ತರಿದು ಕಾಯೊ ವಡ್ಡಿನಾಯಕ ಸಾರೆ ಕರೆದು (ಜಗದಾ. ೩೨೫). [ವಡ್ಡಿ$_1$ (< ಬಡ್ಡಿ$_2$) + ನಾಯಕ]

ವಡ್ಡೆರಾವುಳ 'ವಡ್ಡರಾವುಳ' ನೋ.

ವಡ್ರ (ಗು). ೧. ದೊಡ್ಡದಾದ ; ವಿಶಾಲವಾದ. (ನಾ). ೨. ದೊಡ್ಡದು ; ವಿಶಾಲವಾದುದು : "ವಿಶಂಕಟಂ, ಪೃಥು, ಬೃಹತ್ . . . ವಡ್ರ, ಉರು, ವಿಪುಲಂ - ೯ ವಿಶಾಲವಾದದ್ದು, ಅಗಲವಾದದ್ದು, ದೊಡ್ಡದು" (ಸಿದ್ಧಾಂತಿ. ೩೩೯).

[ಸಂ.]

ವಣಖಾಣ (ನಾ). (ದನಗಳಿಗೆ ಹಾಕುವ) ಅಡವಿಯ ಹುಲ್ಲು ; ವನದ ಮೇವು : ಕಳುಕು ಕಂಡಿಕೆ ವಣಖಾಣ ನಿಬನ್ದಿ ನೂಲ ಹದಿಕೆ ಅಡಕೆಯ ಸುಂಕ ಬೆಳ್ಳಾಯ ಸುಂಕ . . . ಸರ್ವಬಾಧಾಪರಿಹಾರವಾಗಿ . . . ಅಶೇಷಮಹಾಜನಂಗಳ್ಗೆ ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಎಕ. VI, ತರೀಕೆ. ೨೦-೨೯; 1185).

[ವಣ್ (IP <— ಸಂ. ವನ) + ಖಾಣ]

ವಣಪ್ರಮಾಣ (ನಾ). (?) : ಆ ಚೆಂನ್ನಪಟ್ಟಣದ ಚಾವಡಿಗೆ ಸಲುವ ಕಿಱುಗವರ ಸ್ಥಳದ ಸುಳ್ಳೆರಿಯ ಕಾಲುವಳಿ ಹಿರಿಯಕಮನೆಯ ವಣಪ್ರಮಾಣನಲ್ಲಿ ಕುಳ ಬಳಿ ಸಾಂಮ್ಯ ಸಹ ವರಹ ನಾಲ್ವತ್ತು ಹೊನು ತೆಱುವ ಬೆಟ್ಟಹಳಿಯೆಂಬ ಗ್ರಾವಲು ಹಿಂದೆ ಹತೆಂಟು ಕಾಲದಿಂದ ನಾಮನಷ್ಟವಾಗಿ ನಿನಾಮವಾಯಿತು (ಎಕ. IX (S), ಚನ್ನಪ. ೨೯೯-೯; 1397).

[ವಣ? + ಪ್ರಮಾಣ]

ವಣಾರ (ನಾ). ಒಬ್ಬ ಕ್ಷುದ್ರದೇವತೆಯ ಹೆಸರು (?): ಕ್ಷೇತ್ರಪಾಲ ವಣಾರ ಭೈರವ ಮೈಲಾರ . . . ಮಾರಿ ಮಸಣಿ ಸೊಸಣಿ ಮೊದಲಾದ ದೈತ್ಯರು ವರಮನೀಗುಮೆಂಬಾಸೆಯೊಳ್ ಓರ್ವರಂ ಕಂಡೊರ್ವರೆಱಗುವುದುಂ (ಪದ್ಯಸಾ. II, ೮೨೦ ವ). [?]

ವಣಿಕ$_1$ (ನಾ). ವರ್ತಕ ; ವ್ಯಾಪಾರಿ : "ವೈದೇಹಕಃ, ಸಾರ್ಥವಾಹಃ, ನೈಗಮಃ, ವಾಣಿಜಃ, ವಣಿಕಃ . . . ಕ್ರಯವಿಕ್ರಯಿಕಃ — ೯ ವರ್ತಕತನ ಮಾಡುವವನ ಹೆಸರು, ಕೊಂಡು ಮಾರುವ ವ್ಯಾಪಾರಿಯು, ದುಕಾನ್‌ದಾರ" (ಸಿದ್ಧಾಂತಿ. ೨೯೭).

[ಸಂ. ವಣಿಜ್]

ವಣಿಕ$_2$ (ನಾ). (?): ಕಣಿಕದ ಬಟುವ ತೆಗೆದು ವಣಿಕ ಸೂಸಲನಿಕ್ಕಿ ಮಣಿದು ಪೈಕವದ ವರ್ತುಳ ಭಾಷಣಂಗೈದು ಲಣಿತ ಗವಿಯಿಂ ಪಚನಿಸುತ್ತ ಷರ್ಕರೆಗೂಡಿ . . . ನವ ಹೂರಗೆಯನರ್ಪಿಸಿದರಣಿವೆತ್ತು ಬಿಸಿಯ ಘೃತದಿ (ಲಿಂಗಪು. ೮-೧೦). [?]

ವಣಿಕಾತೃಣ (ನಾ). ಒಂದು ಬಗೆಯ ಹುಲ್ಲು : "ದುಗ್ಧಿಕಾಃ — ವಣಿಕಾತೃಣ" (ಓಷಧಿ. ೭೮). [ಸಂ.]

ವಣಿಕೆ (ನಾ). = ವಣಿಕಾತೃಣ: "ವಣಿಕಾ — ವಣಿಕಾತೃಣ" (ಓಷಧಿ. ೧೪೬).

[ಸಂ. ವಣಿಕಾ]

**ವಣಿಗ₁** (ನಾ). = ವಣಿಕ₁ : ಸಾಸಿರ್ಬರುಂ ಸ್ಥಳದ ಸಮಸ್ತ[ಹೊ]ನ್ನ ವಣಿಗರುಂ ತಮ್ಮ ಧರ್ಮ್ಮವಾಗಿ ಶ್ರೀಸಿದ್ಧೇಶ್ವರದೇವರಂಗಣಾದ ಮಠದ ಕಟುಕಲ್ಲು . . . ಹೇರಿಂಗೆ ಇರ್ಪತ್ತೈದೆಲೆಯ [೦] . . . ಬಿಟ್ಟರು (ಕಇಳ. ೧೫-೪-೧೯೯; ಸು. 1093).
[< ಸಂ. ವಣಿಜ್]

**-ವಣಿಗ₂** (ಪ್ರ). ಒಂದು ತದ್ಧಿತಪ್ರತ್ಯಯ : ಕೈಕೊಳ್ಳುದು ವಣಿಗ ಪ್ರತ್ಯಯಮುಣ್ಬುದು ಜೀವಿತಮಾಗಿ ಬಱಿದೆ ತಿನುತಿರ್ಪವನೊಳ್ . . . ವಣಿಗ ಪ್ರತ್ಯಯಕ್ಕೆ — ಕೂಳ್ವಣಿಗಂ (ಶಮದ. ೨೦೬); ಗ ಪ್ರತ್ಯಯೋ ವಣಿಗ ಪ್ರತ್ಯಯಶ್ಚ ವಾ ಭವತಃ . . . ಲಂಚದಿಂ ಜೀವಿಸುವಂ ಲಂಚಗಂ, ಲಂಚವಣಿಗಂ (ಶಬ್ದಾನು. ೪೫ ವೃತ್ತಿ).

**-ವಣಿಗೆ** (ಪ್ರ). (ಧಾತುಗಳಿಗೆ ಹತ್ತುವ) ಒಂದು ಭಾವನಾಮಪ್ರತ್ಯಯ : 'ನೆಱವಣಿಗೆ', 'ಬರವಣಿಗೆ' ಪರಾ.

**ವಣಿಗ್ಗೇಹ** (ನಾ). ವರ್ತಕನ ಮನೆ ; ವ್ಯಾಪಾರಿಯ ಗೃಹ : ಶ್ರೀನಿವಾಸ ದ್ವಿಜಾಧೀಶಪವಿತ್ರಾವಾಸವಿಸ್ತಾರದಿನೆಸೆವ ವಣಿಗ್ಗೇಹಸಂದೋಹದಿಂ ಶೋಭಿಪುದೆತ್ತಂ ನೋರ್ಪ್ಪಡಂ (ಕಇ. V, ೨೬-೨೬; 1147). [ಸಂ.]

**ವಣಿಗ್ವರ** (ನಾ). ಪ್ರಸಿದ್ಧನಾದ ವರ್ತಕ : ಈ ವಾನರಂ ಪೂರ್ವಜನ್ಮದೊಳ್ ಧ್ಯಾನಪುರದೊಳ್ ವಣಿಗ್ವರಂ [ಪಾಠಾಂ. ವಣಿಗ್ವಂಶಂ] ಕುಬೇರದತ್ತಂಗಂ ತದ್ವನಿತೆ ವಸುದತ್ತೆಗಂ ನಾಗದತ್ತನೆಂಬೊಂ ಮಗನಪ್ರತ್ಯಾಖ್ಯಾನಮಾಯೆಯಂ ಕೈಕೊಂಡು (ಆದಿಪು. ೫-೧೭ ವ); ವಣಿಗ್ವರರ್ ಗಂಧಿಗರ್ . . . ಜೂಜುಗಾಱರ್ ಮುಖ್ಯರೊದಗಿ ಬರುತಿರ್ದರೀಂ ವಣ್ಣಿಸುವೆನು (ಚೆಬಸ. ೪೭-೪೧). [ಸಂ.]

**ವಣಿಗ್ವಾಟ** (ನಾ). ವ್ಯಾಪಾರಸ್ಥರ ಬೀದಿ ; ಅಂಗಡಿಬೀದಿ : ಪಾಲ ಮುನ್ನೀರನಪಾಯಸ್ಥಾನಮೆಂದಾ ಪುರವರದ ವಣಿಗ್ವಾಟಹರ್ಮ್ಯಂಗಳೊಳ್ ಮುನ್ನಿನ ಸಂಚಾರಿಸ್ವಭಾವಂ ಪಱಿಪಡೆ ಪದದಿಂ ಲಕ್ಷ್ಮಿ ನಿಶ್ಚಿಂತಮಿರ್ಪಳ್ (ಪಂರಾಮಾ. ೧-೧೨೨); ವಣಿಗ್ವಾಟಪಂಕ್ತಿಗಳ್ಶೋಭಾಯಮಾನಮಾದುವು ರಾಜಮಾರ್ಗದೊಳ್ವಹುಳಧನಸಂಪತ್ತು ಮಾಜದಿಂದೆ (ಜೈಮಿಭಾ. ೬-೧೪). [ಸಂ.]

**ವಣಿಗ್ವಿಟ** (ನಾ). ವ್ಯಾಪಾರಿಯಾದ ವಿಟ : ಪೆಂಡಿರ ಬೇಟಮಮೇಳಿದಿಟಂ ಮಾಡದೆ ನುಡಿಯೆ ನಿರಾಕರಿಸಿ ಮತ್ತೊರ್ವಂ ಕೇಣಿಕಾಱವಿಟನಪ್ಪ ವಣಿಗ್ವಿಟನಿಂತೆಂದಂ (ಶಾಂತಿಪು. ೮-೯೬ ವ). [ಸಂ.]

**ವಣಿಗ್ವಿದ್ಯೆ** (ನಾ). ವ್ಯಾಪಾರವಿದ್ಯೆ ; ವಾಣಿಜ್ಯವಿದ್ಯೆ : ಅಸಿಮಷಿಕೃಷಿ ವಣಿಗ್ವಿದ್ಯಾಶಿಲ್ಪಕರ್ಮಂಗಳಿಂ ಶುದ್ಧವೃತ್ತಿಯಿಂದರ್ಥೋಪಾರ್ಜನಂಗೆಯ್ವ ವಾರ್ತೆಯುಂ . . . ನಿಮಗಿವು ಕುಲಾಚಾರಂಗಳೆಂದಱಿಯೆ ಪೇೞ್ದು ಕೈಕೊಳಿಸಿ (ಆದಿಪು. ೧೫-೧೩ ವ); ವಾರ್ತೆಯೆಂಬುದಸಿಮಷಿಕೃಷಿವಣಿಗ್ವಿದ್ಯಾದಿಕರ್ಮಂಗಳೊಳ್ ವಿಶುದ್ಧಿವೃತ್ತಿಯಿನರ್ಥೋಪಾರ್ಜನಂಗೆಯ್ವುದಕ್ಕುಂ (ಆಜಿಪು. ೧೨-೧ ವ). [ಸಂ. ವಣಿಗ್ವಿದ್ಯಾ]

**ವಣಿಜ** (ನಾ). ೧. ವ್ಯಾಪಾರ ; ವಾಣಿಜ್ಯ. ೨. ವ್ಯಾಪಾರಿ ; ವರ್ತಕ : ಒರ್ವಂ ನಡುವಿರುಳ್ಪೋಗಿ ವಣಿಜರನೊಟ್ಟಯ್ಸಿ ವಂಚಿಸಿ ಕುಱಿದಂದೆನೆಂದಂ (ಸುಕುಮಾ. ೬-೧೫); ತಾರಾಗಣದೊಳು ಚಂದಿರನಿಪ್ಪ ಗಣನೆಯಿಂದೊಪ್ಪುತಿಹನು ಸಣ್ಣಣಾಖ್ಯದ ವಣಿಜ ಶಿರೋಮಣಿಯಲ್ಲಿ (ನಾಗಕು. ೧-೪೧). ೩. [ಜ್ಯೋತಿ] ವಿಳನೆಯ ರಾಶಿ ; ತುಲಾರಾಶಿ.
[ಸಂ. ವಣಿಜ್]

**ವಣಿಜಕ** (ನಾ). = ವಣಿಜ ೨. [ಸಂ.]

**ವಣಿಜಾಕರಣ** (ನಾ). [ಜ್ಯೋತಿ] ದಿನದಲ್ಲಿ ಬರುವ ಬವಕರಣ, ಬಾಲವಕರಣ, ಕೌಲವಕರಣ, ತೈತುಲೆಕರಣ, ಗರಜೆಕರಣ, ವಣಿಜಾಕರಣ, ಭದ್ರೆ ಎಂಬ ಏಳು ಚರಕರಣಗಳಲ್ಲಿ ಒಂದು : ಗರಜಾಕರಣಕ್ಕೆ ಕಲ್ಯೋ ೧೧ ಗಳಿಗೆ ಮೇಲೆ ತ್ಯಾಜ್ಯಾ ವಣಿಜಾಕರಣಕ್ಕೆ ನಾಗಿ ತ್ಯಾಜ್ಯಾ ಇಲ್ಲಾ (ಭಾಸ್ಕರ. ೭೦-೬). [ಸಂ.]

**ವಣಿಜೆ** (ನಾ). = ವಣಿಜಾಕರಣ : ವಣಿಜೆ ಬವಕರಣ ಬಾಲವಕರಣ ಭದ್ರಾಕರಣ — ನಾಲ್ಕಱಿಲ್ಲಿ ಸಂಕ್ರಮವಾದೊಡೆ ಅರ್ಘವು [ಕುಂದುವದು] (ಲೋಕೋಪ. ೧-೨೭ ಟೀಕು); ವರತೈತುಲೆಯುಭಯಕುಲವ ತಾಂ ಸಲಹುವದು ಗರಜೆ ವಣಿಜೆಗಳೆಂಬ ಕರಣ ವಾಣಿಜ್ಯ ಮುಖ ಪರಿಪರಿಯ ಕರ್ಮಫಲಮಂ ಕೊಡುವುದ್ಮೆ ಶಕುನಿಯೆಂಬ ಕರಣದಿ ನೋಡು (ಚತುಪು. ೬-೧-೨೯). [ಸಂ. ವಣಿಜ]

**ವಣಿಜ್ಯ** (ನಾ). ವ್ಯಾಪಾರ ಮಾಡುವ ವೃತ್ತಿ : "ವಣಿಜ್ಯಂ, ವಾಣಿಜ್ಯಂ, ವಣಿಕ್ತ್ವಂ – ಈ ೩ ಹರದು" (ಹಲಾಯು. ೧೫-೭೬). [ಸಂ.]

**ವಣಿಜ್ಯೆ** (ನಾ). = ವಣಿಜ್ಯ : "ವಾಣಿಜ್ಯಂ, ವಣಿಜ್ಯಾ — ೨ ವರ್ತಕದ ಪೆಸರು, ವಾಣಿಜ್ಯ, ವ್ಯಾಪಾರ" (ಸಿದ್ಧಾಂತಿ. ೨೯೭). [ಸಂ. ವಣಿಜ್ಯಾ]

**ವಣ್ಣ** 'ಬಣ್ಣ' ನೋ.

**ವಣ್ಣಾಕ** (ನಾ). ಮಡಿವಾಳ ; ಅಗಸ : ನಗರೂರ ಬೆಳ್ಳಿಯರುಂ ಮರವೂರ ವಣ್ಣಾಕರುಂ ಕಲ್ಲದುಪಿನ ಮಾದಡಿಯು ಮೊದೂರ ಜಿಯಚಾಯರುಂ ನರಸಾಕ್ಷಿ (ಮೈಆರಿ. ೧೯೨೭; ೧೧೬-೪೫; 726 ?). IP ಇದು 'ವಣ್ಣಾತ' ಎಂಬುದರ ಅಪಲಿಖಿತ ವಿರಬಹುದು. [<— ತಮಿ. ವಣ್ಣಾತ್ತಾನ್]

**ವಣ್ಣಿಸು** 'ಬಣ್ಣಿಸು' ನೋ.

**ವತಂಸ** (ನಾ). ಕಿವಿಯಲ್ಲಿ ಧರಿಸುವ ಆಭರಣ : ನಾರೀಲೋಕಮಿದೆಂಬಿನಂ ನೆರೆದು ಬಂದತ್ತತ್ತಮುತ್ತಂ . . . ಕನನ್ಮಣಿವತಂಸಾಸ್ಫಾಲಿತಾಂಸಂ ಲಸದ್ದೋರ್ದಾಂದೋಳನಜಾತಕಂಕಣಝಣತ್ಕಾರಂ ಪುರಸ್ತ್ರೀಜನಂ (ಚಂದ್ರಪ್ರ. ೧೧-೩). [ಸಂ.]

**ವತನ, ವತನು** (ನಾ). ೧. ವಂಶಪರಂಪರೆಯಾಗಿ ಬಂದ ಆಸ್ತಿ, —ಭೂಮಿ ; ಹಿರಿಯರಿಂದ ಬಂದ ಸ್ವತ್ತು : ಜಾಗೀರದಾರರ ವತನದಲ್ಲಿ ಹಿಂದೆ ಎಂದೂ ಪಾಲಾಗಿರಲಿಲ್ಲ (ಗ್ರಾಮಾಯ. ೯); ನೀನು ಪಿತೂರಿಯಾಗಿಲ್ಲವೆಂಬುದನ್ನು . . . ತೋರಿಸದಿದ್ದರೆ ನಿನ್ನ ವತನವನ್ನೇ ಖಾಲಸಾ ಮಾಡಿಸಿ ಬಿಡುವೆನು (ಹಬ್ಬ.ಟ. ೨೭೩). ೨. ಇನಾಮಾಗಿ ಪಡೆದ ಭೂಮಿ ; ಜಹಗೀರು : ಲಡಾಯಿ ಮಾಡಾಕ ನಮ ಗೂಡ ಕೂಡಿದರ ವಿಳೂರ ವತನಾವ ಕೊಡತೇವಿ (ಲೋಕಗೀ. ೨೨೦); ಆಕೆಯ ಮನೆತನದವರಿಗೆ ಬಾದಶಹನಿಂದ ವಂಶಪರಂಪರೆಯಿಂದ 'ವತನ' ಸಿಕ್ಕಿತೆಂದೂ, ಹಲಸಂಗಿಕೋಟೆಯ ಇತಿಹಾಸವಿದೆ (ಕಪಪು.೬-೨೨). ೩. ವಂಶಪರಂಪರಾಗತವಾದ ಉದ್ಯೋಗದಿಂದ ಬರುವ ಆದಾಯ, —ಗಳಿಕೆ : ಜೋಯಿಸರು . . . ಒಕ್ಕಲಿಗರಿಗೆ ಪಂಚಾಂಗ ಹೇಳುವದೇ ಇವರ ಮುಖ್ಯಉದ್ಯೋಗವು. ಆದರೂ ತಕ್ಕಮಟ್ಟಿಗೆ ವತನ ಸಂಪಾದಿಸಿಕೊಂಡು ಇವರು ಸುಖಿಯಾಗಿದ್ದಾರೆ (ಕಭಾಗೆ. ೮೬). ೪. ವಂಶಪರಂಪರೆಯಾಗಿ ಬಂದ ಉದ್ಯೋಗ, —ಕಸುಬು : 'ವತನದಾರ' ಪರಾ. ವತನು : ೧. ಏಕಾಕಿಯಾದ ಒಬ್ಬ ಮೂಲಗಾರನು ಅನುಭವಿಸಿದಂಥಾ ಒಂದು ವತನಿನ ಪರಾಧೀನವು . . . ಅವನ ವಾರಿಸ್ದಾರನು ಅಭ್ಯಂತರಿಸಬಹುದು (ಪಾಶ್ಚಾವಿ. ೪೪೬).
[<— ಅರ. ಹಿಂ. ಮರಾ. ವತನ್./ ಪ್ರಾ. ವತ್ತಣ./ ಸಂ. ವರ್ತನ]

**ವತನದಾರ** (ನಾ). ೧. ವಂಶಪರಂಪರೆಯಾಗಿ ಬಂದ ಭೂಮಿಯನ್ನುಳ್ಳವನು, —ಸ್ವತ್ತನ್ನು ಹೊಂದಿರುವವನು : ವತನದಾರರೂ ವ್ಯಾಪಾರಸ್ಥರೂ ಹೊರ್ತಾಗಿ ಮಿಕ್ಕಾದವರೆಲ್ಲರು ಆಲಸ್ಯ, ಶರೆ — ಈ ಯೆರಡು ಕಾರಣಗಳಿಂದ ಬಡತನದ ಸ್ಥಿತಿಯಲ್ಲಿ ಇದ್ದಾರೆ (ಕಭಾಗೆ. ೨೨೮); ರಂಗಪ್ಪ ವತನದಾರನೂ ಅಲ್ಲ, ಯಾವೊಬ್ಬ ಉದ್ಯೋಗಿಯೂ ಅಲ್ಲ (ಮುಗಿಯು. ೨೨೬). ೨. ಜಹಗೀರನ್ನು ಪಡೆದಿರುವವನು; ಜಹಗೀರುದಾರ: ನರಸಿಂಗರಾಯ ದೇಸಾಯರಿಗಿಂತ ಎಷ್ಟೋ ಚಿಕ್ಕವನಾದರೂ ಸರಿಜೋಡಿಯ ವತನದಾರರು ಎಂಬ ಸಲಿಗೆ (ನಿರಾಭ. ೧೧೪); ಎಲ್ಲ ದೊಡ್ಡ ವತನದಾರರ ಮಕ್ಕಳೂ ಚಿಕ್ಕವಯಸ್ಸಿನಲ್ಲೇ ಆಸ್ತಿಪಾಸ್ತಿಯ ಬಗ್ಗೆ ಜಾಗೃತರಾಗುತ್ತಾರೆ (ಗಂಮಾಯ. ೫೦). ೩. ವಂಶಪರಂಪರೆಯಾಗಿ ಬಂದ ಅಧಿಕಾರದಲ್ಲಿರುವವನು, — ಉದ್ಯೋಗದಲ್ಲಿರುವವನು : ಆದರ ನಿತ್ಯದ ಕರ್ಚಿನಲ್ಲಿ ಎರಡು ಮಧ್ಯಮವರ್ಗದ ಕೆಳಕಾರಕೂನರನ್ನು . . . ಎಂಟು ವತನದಾರ ಕುಲಕರ್ಣಿಗಳನ್ನಾಗಲೀ ಸಾಕಬಹುದಿತ್ತು (ಹುಚ್ಚುಹು. ೬೧). [ವತನ + — ದಾರ್₄./ ಮರಾ. ವತನ್‌ದಾರ್]

**ವತನಪತ್ರ** (ನಾ). ಜಮೀನಿಗೆ ಸಂಬಂಧಿಸಿದ ಕಾಗದ, —ಪತ್ರ ; ಪಟ್ಟೆ ; ದಸ್ತಾವೇಜು : ನನ್ನ ಹೊಲದ ಬಗ್ಗೆ ವತನಪತ್ರ ಆದದ್ದು ಖರೆ ಅದೆ (ರೂಢಿ).
[ವತನ + ಪತ್ರ]

**ವತನು** 'ವತನ' ನೋ.

**ವತಿ** (ನಾ). ಕಡೆ ; ಪರ ; ಪಕ್ಷ.
ವತಿಯಿಂದ = ಪರವಾಗಿ ; ಕಡೆಯಿಂದ : ಅತ್ತ ಅಮೇರಿಕೆಯಲ್ಲಿ ಹಿಂದೂಸ್ಥಾನದ

ವಿರುದ್ಧವಾಗಿ ಪ್ರಚಾರಕಾರ್ಯಗಳು ಬ್ರಿಟಿಷ್ ಸರಕಾರದವರ ವತಿಯಿಂದಲೇ ವ್ಯವಸ್ಥೆಯಾಗುತ್ತಿದ್ದುವಂತೆ (ಸ್ವಾತಂ. ೨೮); ಸೈನ್ಸ್ ಅಸೋಸಿಯೇಷನ್ನದ ವತಿಯಿಂದ ಒಂದು ಟ್ರಿಪ್ಪಿನ ಗೊಂದಲ ಪ್ರಾರಂಭವಾಯಿತು (ಸ್ವಪ್ನದ. ೨೨).

[<— ಮರಾ. ವತೀ, ವತೀನೇಂ]

**ವತ್ತ** 'ಬತ್ತ' ನೋ.

**ವತ್ತಾ** (ನಾ). (ಸ್ಥೂಲವಾದ ಶರೀರದ) ಬೊಜ್ಜು ; ಕೊಬ್ಬು (?): ಜಟ್ಟಿಸ್ಥಾಧನೆಯಲ್ಲಿ ವತ್ತಾ ನಾಶವು ಆಗುವುದು. ಇದು ಸಾಧನೆಯ ಗುಣವು (ಖಿದ್ಮಟೀ. ೫-೮೩). [?]

**ವತ್ತಿಗೆ** 'ವಂತಿಗೆ' ನೋ.

**ವತ್ತುಗಾಯಿ** (ನಾ). ಒಂದು ಬಗೆಯ ತೆರಿಗೆ, –ಸುಂಕ : ನಾರಾಯಣಭಟ್ಟರು ಎಱದು ಕೊಟ್ಟ ಸ್ಥಳಗಳಿಗೆ ಮುಡಗಡಿ . . . ಏಸೆ ಒಸಗೆ ಬಿಡಾರ ವತ್ತುಗಾಯಿ ಮೊದಲಾಗಿ ಆಉದೂ ಸಲ್ಲ (ಶಾ. I, ೫೪-೫; 1433?); ಶಾಸನಗಳಲ್ಲಿ ಬರುವ ತೆರುವಣಗಳು :– ತೆರು . . . ಬಿಡಾರ, ವತ್ತುಗಾಯಿ, ಅರವಸ್ತು (ತುಳುನಾ. ೨೭೧). [?]

**ವತ್ಮ** (ನಾ). = ವಕಾರ : ಪರದೊಳ್ ಪಬಮಂಗಳ್ ನೆಲಸಿರೆ ವತ್ಮಂ (ಶಮದ. ೨೯೨). [ಸಂ.]

**ವತ್ಸ** (ನಾ). ೧. ಹಸು, ಎಮ್ಮೆ ಮೊದಲಾದುವುಗಳ ಎಳೆಯ ಕರು : "ಕರವೆಳೆಗಱು ವತ್ಸ" (ವಸ್ತುಕೋ. ೮೯-೩); ಪರಿವಾರಸುರಭಿಯೆನಿಸುವ ನರಸಿಂಹ ನರೇಂದ್ರಮಹಿಷಿ ಚಾಗಲೆ ನಿಚ್ಚಂ ಪರಿಜನವತ್ಸಸ್ನೇಹದೆ ತೊರೆದಮೃತಮನಱಿದು ಕಱೆವುತಿರ್ಪುದು ಸಹಜಂ (ಎಕ. V, ಬೇಲೂರು. ೧೯೩-೫೬; 1161). ೨. ಗಂಡುಕರು ; ಹೋರಿಕರು : "ವತ್ಸದೊಳು ಹೋರಿ" (ಶಬ್ದಮಂ. ೩೪). ೩. ಮಗು ; ಶಿಶು : ವಿವಿಧ ರಕ್ಷಾವಿಧಿಯಿಂ ವತ್ಸಂಗೆ ನೆಗಟ್ಟಿ ಸಕಲಸುಹೃತ್ಸಂತತಿ ಪರಸೆ ನಂದನಿರ್ದಂ ಸುಖದಿಂ (ಜಗವಿ. ೩-೨೬); ನಂಬಿಯಣ್ಣನಾ ದೇವಾಲಯಕ್ಕೆ ಒಂದು ತಾಯ ಹೋಬಳಿಯನಾ ವತ್ಸನಱವಂದದಿಂ (ನಂಬಿರ. ೧೧-೭೧). ೪. ಮಗ ; ಪುತ್ರ. ೫. ಮಗನೆಂದು ಭಾವಿಸಿ ಸಂಬೋಧಿಸುವ ಅಕ್ಕರೆಯ ನುಡಿ : ವತ್ಸ ನಾರದನೆ, ಇದೆಲ್ಲಿಂದ ಭಂದಿತು? (ಶಾಕುಂತ. ೫೧-೪); ದಿಟವೊರೆದೆ, ಹೇ ವತ್ಸ, ಗಿರಿವನ ಪ್ರೀತಿ ತಾಂ ದೈವಕೃಪೆ ದಲ್ (ಶ್ರೀರಾಮಾ. ೩೨-೧೧೬). ೬. ಬಾಲಕ; ಹುಡುಗ. ೭. ಗುರುತು; ಲಾಂಛನ. ೧,೪,೭: ಭವದೀಯ ಮನೋಹರಬಾಲ್ಯವಿನೋದಾಮೃತದೊಳೆಯ್ದೆ ತೀವಿದ ಮತ್ಸ್ವಾಂತವನಿಂತೀ ವಿಷದಿಂ ತೀವುವುದೇ ಶ್ರೀವತ್ಸವತ್ಸವತ್ಸಸವತ್ಸಾ (ಜಗವಿ. ೩-೯೨). ೮. ಎದೆ ; ವಕ್ಷಸ್ಥಲ : "ಭುಜಮಧ್ಯಂ, ಉರಃ, ವಕ್ಷಃ, ಹೃದಯಂ, ವತ್ಸಃ — ಈ ೫ ಉರಂ" (ಹಲಾಯು. ೮೭-೩೭೩). ೯. ವರ್ಷ ; ಸಂವತ್ಸರ : "ಆ ವತ್ಸರಪ್ರತತಿಯಲಿ ವತ್ಸಮೆಂಬುದು" (ಮಂಗರಾ. ೧೪೧-೧೩). ೧೦. ಒಂದು ದೇಶದ ಹೆಸರು. [ಸಂ.]

**ವತ್ಸಕ** (ನಾ). ೧. = ವತ್ಸ ೧. ೨. ಒಂದು ಬಗೆಯ ಔಷಧೀಸಸ್ಯ ; "ಗಿರಿಮಲ್ಲಿಕಾ" (ಪಂಡಿತ. ೨೮೫) : "ಕೋಡಸಿಂಗೆ, ಕೋಡಮುರುಕ, ವತ್ಸಕ" (ಸಸ್ಯನಿ. ೧೩೬). [ಸಂ.]

**ವತ್ಸಕಾಮೆ** (ನಾ). ೧. ಕರುವಿಗಾಗಿ ಹಾತೊರೆಯುತ್ತಿರುವ ಹಸು : "ವತ್ಸಕಾಮಾ, (ತು)ವತ್ಸಲಾ — ಈ ೨ ಕಡುಗಂದಿ" (ಹಲಾಯು. ೪೫-೧೧೬). ೨. ಪುತ್ರಸಂತಾನವನ್ನು ಅಪೇಕ್ಷಿಸುವ ಹೆಂಗಸು. [ಸಂ. ವತ್ಸಕಾಮಾ]

**ವತ್ಸಕುಲ** (ನಾ). ೧. ಕರುಗಳ ಗುಂಪು, – ಸಮೂಹ : ಪಸುರ್ವುಲ್ಲೊಳ್ ತಾಂಗಿ ಕಾಳಿಂದಿಯೊಳ್ ತಿಳಿನೀರೂಡಿ ಮುರಾರಿ ವತ್ಸಕುಲಮಂ ಕಾದಂ ಮಹೋತ್ಸಾಹದಿಂ (ಜಗವಿ. ೩-೭೧). ೨. (ವತ್ಸನೆಂಬ ಋಷಿಯು ಮೂಲಪುರುಷನಾಗಿರುವ ಕುಲದ) ಒಂದು ಗೋತ್ರದ ಹೆಸರು : 'ವತ್ಸಕುಲತಿಲಕ' ಪರಾ. [ಸಂ.]

**ವತ್ಸಕುಲತಿಲಕ** (ನಾ). ವತ್ಸಕುಲಗೋತ್ರದವರಲ್ಲಿ ಶ್ರೇಷ್ಠನಾದವನು : ವತ್ಸಕುಲತಿಲಕನಭಿಜನವತ್ಸಲನಭಿಮಾನಮೂರ್ತಿ . . . ಪಂಪಂ (ಆದಿಪು. ೧ ೩೦). [ಸಂ.]

**ವತ್ಸಗೋತ್ರ** (ನಾ). = ವತ್ಸಕುಲ ೨ : ನಯಶಾಲಿ ವತ್ಸಗೋತ್ರಶ್ರಯಣೀಯನ ನೇಕಸಕಳಶಾಸ್ತ್ರಾರ್ಥವಿನಿಶ್ಚಯಮತಿ ಕೃತಿ ಮಾಧವಸೋಮಯಾಜಿ ಸಲೆ ನೆಗಟ್ಟನಾ ಸಮುದ್ರಂಬರೆಗಂ (ಪಂಪಭಾ. ೧೪-೬೨). [ಸಂ.]

**ವತ್ಸತರ** (ನಾ). ಪಳಗಿಸಲು ಅರ್ಹವಾದ ವಯಸ್ಸಿನ ಹೋರಿ, –ಗೂಳಿ : "ದಮ್ಯಃ, ವತ್ಸತರಃ — ೨ ಹೊರುವದಕ್ಕೂ, ಎಳೆಯುವದಕ್ಕೂ, ಉಳುವದಕ್ಕೂ ತಿದ್ದಲ್ಪಟ್ಟ ಹೋರಿಗಳ" (ಸಿದ್ಧಾಂತಿ. ೨೯೨). [ಸಂ.]

**ವತ್ಸನಾಭ** (ನಾ). ೧. ಒಂದು ಬಗೆಯ ಉಗ್ರವಾದ ವಿಷ : "ಶೃಂಗಿಕಃ, ವತ್ಸನಾಭ(ಗ್ರ)ಃ . . . ವಿಸ್ಫುಲಿಂಗಃ — ಈ ೭ ವಿಷಭೇದಂಗಳ್" (ಹಲಾಯು. ೧೦೬-೨೫). ೨. (?) : ವಿಮುಲವಾಹನಂ ವಿರಕ್ತಚಿತ್ತನಾಗಿಯುಂ . . . ದೀಕ್ಷಾಭರಮಂ ಕೆಯ್ಕೊಂಡು ಗೆಲ್ದಂಗೊಳಲೆ ಬಗೆದನುತ್ಸಾಹದಿಂ ಜೈನಧರ್ಮೋದ್ಧರಣಂ ಭವ್ಯಾಬ್ಜಮಿತ್ರಂ ವಿನಯನಿಧಿ ಸುಹೃದ್ವತ್ಸಲಂ ವತ್ಸನಾಭಂ (ಅಜಿಪು. ೨-೧೧೬). [ಸಂ.]

**ವತ್ಸನಾಭಿ** (ನಾ). ೧. ಒಂದು ಬಗೆಯ ವಿಷಯುಕ್ತವಾದ ಸಸ್ಯ ; ಬಚನಾಗ ; ಕಡಗೋಲಮಂಡೆ : "ರಕ್ತಶೃಂಗಿಕಂ — ವತ್ಸನಾಭ" (ಒಷಧಿ. ೧೩೫); ವತ್ಸನಾಭಿ, ಕಣಗಿಲ ಮುಂತಾದ ವಿಷವೃಕ್ಷಗಳು ಯಾವ ನೀರಿನ ದಂಡೆಯಲ್ಲಿ ಬೆಳೆಯುತ್ತವೋ ಅದನ್ನು ಸರ್ವಥಾ ಕುಡಿಯಬಾರದು (ಮುಂಬಯಿ. ೫-೧೫೩). ೨. ವತ್ಸನಾಭಿಗಿಡದ ಬೇರಿನಿಂದ ತಯಾರಿಸಿದ ಕಟುವಾದ ವಿಷ : ಕಾಳಕೂಟಂ ವತ್ಸನಾಭಿಯಂ ಸಿಂಗಿಯಂ ಹಾಲಾಹಲಂಗಳಂ ಕಬ್ಬುನದ ಕೋವಿಯೊಳು ಮೇಳವಿಸಿ ಕಡುಗಾಸೆ . . . ಭುಗಿಲಿಡುವ ವಿಷವ ಕೇಳಬಹುದೇ (ಸಿದ್ಧರಾ. ೫-೧೪); ಕಾಲಕೂಟಂ ವತ್ಸನಾಭಿಯು ಹಾಲಹಲಮುಂ ಸಿಂಗಿ ಮೊದಲಾಭೀಳಗರಳಂಗಳನವೆಲ್ಲಂ ಕಲಸಿ ಅಜ್ಜಿಂಸುಸಲು (ಬಸವು. ೫೮-೫೫). [< ಸಂ. ವತ್ಸನಾಭ]

**ವತ್ಸರ** (ನಾ). ವರ್ಷ ; ಸಂವತ್ಸರ : ಇತ್ತ ಬಲದೇವನುಂ ಪುರುಷೋತ್ತಮನುಮನೇಕವತ್ಸರಂ ರಾಜ್ಯಸುಖಾಯತ್ತಮನರ್ ನಿರವಧಿಸಂಪತ್ತಿಗೆ ನೆಲೆಯೆನಿಸಿ ನಾಡೆ ನಲಿಯುತ್ತಿರ್ದರ್ (ಪಂಚಾಮಾ. ೧೬-೪೬); ದುರ್ಮತಿ ವತ್ಸರದೊಳ್, ಸುತ್ತೇಂ, ಅತಿಪಾತಂ ಮಧುಪಾನವ್ಯಸನದೊಳ್, ಮಧುಪಾನವ್ಯಸನಮಾಟಿಡಿಯೊಳ್ ಆಱಡಿ ಪಾದರಿಯೊಳ್ ಪಾವರೆ ಬನದೊಳಲ್ಲದಿಲ್ಲಂ (ರಾಮಾಶ್ವ. ೮-೧). [ಸಂ.]

**ವತ್ಸಲ, ವತ್ಸಳ** (ಗು). ೧. ಅಕ್ಕರೆಯಿಂದ ಕೂಡಿದ ; ಮಮತೆಯನ್ನು ಹೊಂದಿರುವ. (ನಾ). ೨. ಅಕ್ಕರೆಯ ಭಾವನೆ ; ವಾತ್ಸಲ್ಯ ಮನೋಭಾವ. ೩. ಅಕ್ಕರೆ ಇರುವವನು ; ಪ್ರೀತಿಯುಳ್ಳವನು : "ಸ್ನಿಗ್ಧಃ, ವತ್ಸಲಃ — ಸ್ನೇಹವುಳ್ಳವನ ಹೆಸರುಗಳು" (ಸಿದ್ಧಾಂತಿ. ೩೨೬). **ವತ್ಸಳ** : ೩. ವತ್ಸಳರೆನಿಸುವ ಬುಧರಿನಮತ್ಸರರಿಂ ಕೃತಿ ಕೃತಾರ್ಥಮಕ್ಕುಮಮೋಘಂ (ಜಗವಿ. ೧-೧೧). [ಸಂ.]

**ವತ್ಸಲತ್ವ** (ನಾ). ಪ್ರೀತಿ ; ಅಕ್ಕರೆ ; ವಾತ್ಸಲ್ಯ : ಮಾದಿರಾಜನ ರೂಪನಾಕ್ಷಣದೆ ಸಂಗಮೇಶ್ವರನಲ್ಲಿ ಕಂಡಪ್ಪಾಂಗವೆಱಗಿ ನಮಿಸುವ ಮಾತ್ರದಿ ಮುಂಗಡೆಯೊಳಿರೆ ಬಸವನಚ್ಚರಿವಡುತ ಪೊಡಮಡಲು ಹಿಂಗದಚಲಿತವತ್ಸಲತ್ವಂ ಸಾಂಗಮಾಗಿರಲು (ಬಸವು. ೨೦-೩೪). [ಸಂ.]

**ವತ್ಸಲಾಂಛನ** (ನಾ). ೧. ವಿಷ್ಣುವಿನ ವಕ್ಷಸ್ಥಳದಲ್ಲಿರುವ ಶ್ರೀವತ್ಸ ಎಂಬ ಚಿಹ್ನೆ, –ಕುರುಹು. ೨. ವಿಷ್ಣು : ಚತುರ್ಮುಖನ ನಾಲಗೆಯ ಹಾಸಿ ತುಟಿದಿಂಬು ಮಾಡಿದಾಕೆ ವತ್ಸಲಾಂಛನನ ಹೃದಯಕಮಲದಲಿ ಮನೆಯ ಹೂಡಿದಾಕೆ . . . ಹೀಗೆ ಕುಣಿಯೆ ಆನಂದಲಹರಿ ಈ ಜೀವ ಸೇರಿದಾಕೆ (ಹಾಡುಪಾ. ೫೯-೨). [ಸಂ.]

**ವತ್ಸಲೆ** (ನಾ). = ವತ್ಸಕಾಮೆ ೧ : "ವತ್ಸಕಾಮಾ (ತು), ವತ್ಸಲಾ [ಪಾಠಾಂ. ಳಾ] — ಈ ೨ ಕಡುಗಂದಿ" (ಹಲಾಯು. ೪೫ ೧೧೬). [ಸಂ. ವತ್ಸಲಾ]

**ವತ್ಸಳ** 'ವತ್ಸಲ' ನೋ.

**ವತ್ಸಾದನಿ** (ನಾ). ಒಂದು ಬಗೆಯ ಬಳ್ಳಿ ; ಅಮೃತಬಳ್ಳಿ : "ಅಮೃತಾ, ವತ್ಸಾದನೀ, ಗುಳೂಚೀ — ಈ ೩ ಅಮರ್ದುವಳ್ಳಿ" (ಹಲಾಯು. ೧೧೧-೪೭೧). [ಸಂ. ವತ್ಸಾದನೀ]

**ವತ್ಸೆ** (ನಾ). ೧. ಹೆಣ್ಣುಕರು. ೨. ಮಗಳು ; ಪುತ್ರಿ. ೩. ಮಗಳೆಂದು ಭಾವಿಸಿ ಸಂಬೋಧಿಸುವ ಅಕ್ಕರೆಯ ನುಡಿ : ಎಲೆ ವತ್ಸೆ, ವೀರನಾದ ಮಗನನ್ನು ಪಡೆ! (ಶಾಕುಂತ. ೫೦-೧೨); ವತ್ಸೆ! ನಾನು ದಾರಿಯನ್ನು ತೋರಿಸುವೆನು (ಕಪಾಕುಂ. ೧೨೬). 'ವತ್ಸ' ನೋ. [ಸಂ. ವತ್ಸಾ]

**ವದ** (ಗು). ೧. ಹೇಳುವ ; ಮಾತಾಡುವ. (ನಾ). ೨. ಚೆನ್ನಾಗಿ ಮಾತನಾಡುವವನು ; ಚತುರತೆಯಿಂದ ಮಾತನಾಡುವವನು : ''ವದಃ, ವದಾವದಃ, ವಕ್ತಾ — ೩ ಮಾತು ಕಲಿತವನ ಪೆಸರು'' (ಸಿದ್ಧಾಂತಿ. ೩೩೨). [ಸಂ.]

**ವದಂತಿ** (ನಾ). ೧. ಜನರು ಆಡಿಕೊಳ್ಳುವ ಮಾತು ; ಜನವಾರ್ತೆ ; ಗಾಳಿಸುದ್ದಿ : ಮತ್ತೆ ವೃಷಭಾಸುರನು ಪಡೆಗಳ ಮೊತ್ತವನ್ನೊಡಗೊಂಡು ಯುದ್ಧಕ್ಕುತ್ತಮನೆ ಬರುತಿಪ್ಪನೆಂಬ ವದಂತಿಯಾಗಿಹುದು (ಅರ್ಜಾವಿ. ೧೦-೨); ಒಂದು ದಿನ ಇದ್ದಕ್ಕಿದ್ದಂತೆ ಕರುಣಾ ಊರಿಗೆ ಬರುತ್ತಾಳೆ ಎಂಬ ವದಂತಿ ಹುಟ್ಟಿತು (ಶಿವರಾ. ೫೨). ೨. ಸುದ್ದಿ ; ವರ್ತಮಾನ. [ಸಂ. ವದಂತೀ/ IP ಇದು ಸಂಸ್ಕೃತದಲ್ಲಿ ಒಂದು ಬಹುವಚನದ ಕ್ರಿಯಾರೂಪ]

**ವದಣೆಗುಪ್ಪೆ** 'ಬದಣೆಗುಪ್ಪೆ' ನೋ.

**ವದನ** (ನಾ). ೧. ಮುಖ ; ಮೋರೆ; ಆನನ : ವದನಂ ಪೂರ್ಣಶಶಾಂಕನಂತೆಸೆಯೆ ಮೇಘಶ್ಯಾಮಳಾಂಗಂ ತ್ರಿಭಂಗದಿನಿಂಬಾಗಿರೆ . . . ತಾನಾಗಳಾಡಿದಳ್ (ಜಗವಿ. ೩-೧೬); ಒಸೆದು ನಂದೀಶ್ವರನ ವದನಮಂ ನೋಡುತುಂ (ನಂಬಿರ. ೧-೧೮). ೨. ಬಾಯಿ ; ಆಸ್ಯ : ''ವದನಂ ಮುಖಂ . . . ಬಾಯಿಯೆನೆ ಕಬಳಿಕಂ'' (ಮಂಗರಾ. ೯೩-೧); ಹೃದಯದಯಾಮೃತವಾಹಿನಿ.ವದನದೆ ಕಡೆಗೋಡಿವರಿದುದೆನೆ . . . ಮಹೀವಧುಗೆ ವನಜಭವನಿಂತೆಂದಂ (ಜಗವಿ. ೧-೨೮). ೩. ಮಾತನಾಡುವಿಕೆ ; ಹೇಳುವಿಕೆ. ೪. ಎದುರಿನ ಭಾಗ ; ಅಗ್ರಭಾಗ. [ಸಂ.]

**ವದನಕೂಟ**(ನಾ). ಮುತ್ತು ; ಚುಂಬನ : ''ವದನಕೂಟಂ ಮುತ್ತು ಚುಂಬನಂ'' (ಮಂಗರಾ. ೯೭-೧೬). [ವದನ + ಕೂಟ$_1$]

**ವದನತಿಲಕ** (ನಾ). ಮುಖದ ಮೇಲ್ಭಾಗ ಅಥವಾ ಹಣೆಯ ಮೇಲಿಡುವ ಬೊಟ್ಟು : ಏಂ ಸೊಗಯಿಸಿದುದೊ ವನಯುವತಿವದನತಿಲಕಂ ತಿಲಕಂ (ಶಾಂತಿಪು. ೭-೧೩೩). [ಸಂ.]

**ವದನಪಂಚಕ** (ನಾ). ೧. ಐದು ಮುಖಗಳು. ೨. ಐದು ಮುಖಗಳನ್ನು ಹೊಂದಿದವನು ; ಶಿವ ; ಈಶ್ವರ : ವದನಪಂಚಕ ವಿಧೃತಮದನಯತಿಹೃತ್ಕಂಜ . . . ಸುಖದ ನಮ್ಮಭಾಗ್ಯಸುಪ್ರದ ಜಯತು (ವೀಶ್ವಪು. ೪-೧-೧). [ಸಂ.]

**ವದನರಸ** (ನಾ). ಬಾಯಿಯ ರಸ ; ಲಾಲಾಜಲ; ಜೊಲ್ಲು : ವದನರಸಂ ಮದನರಸಂ ಪೊದಟ್ಟುದೆನಿಸುವಿನಮಮರಿ ನರ್ತಿಸೆ (ಆದಿಪು. ೭-೧೯). [ಸಂ.]

**ವದನವಿಕಾಸ** (ನಾ). (ಸಂತೋಷದಿಂದ) ಮುಖ ಅರಳುವುದು : ವದನವಿಕಾಸದಿಂ ಬರವಿನೇಟ್ಟರದಿಂದಮೆ ಕಾರ್ಯಸಿದ್ಧಿಯಾದುದನಱಿದು (ಪಂರಾಮಾ. ೧೧-೧೬೨). [ಸಂ.]

**ವದನಿ** (ನಾ). ಒಂದು ಬಗೆಯ ಸಸ್ಯ ; ಮೂಕೊರತಿ ಗಿಡ : ''ಆ ವದನಿಯೆನಲು ಮೂಕೊಱತಿ'' (ಮಂಗರಾ. ೩೭-೨೦). [?]

**ವದನೆ** (ನಾ). ಸುಂದರವಾದ ಮುಖವುಳ್ಳ ಹೆಂಗಸು; ಸುಂದರಿ : ಚಿತ್ತವೆರಡಾಗದಲೆ ಉತ್ತಮದೊಳಿರಬೇಕು ಚಿತ್ತ ವದನೆಯರ ಸುಳಿದಿರಲು ಅವರ ಮಹತ್ವವೆತ್ತಣದು (ಸರ್ವಜ್ಞ. ೫೩೫); ವದನೆ ಯೋಗಿಗೆ ಹೊಲ್ಲ ಬದನೆ ರೋಗಿಗೆ ಹೊಲ್ಲ (ಸರ್ವಜ್ಞ. ೧೨೯೩).

[ವದನ + – ಎ$_2$]

**ವದನ್ಯ** (ನಾ). ದಾನಿ ; ಉದಾರಿ : ''ದಾನಿ ವದನ್ಯಂ'' (ವಸ್ತುಕೋ. ೧೦೦-೧೪). [ಸಂ.]

**ವದರೆ** (ನಾ). ೧. ಹತ್ತಿಯ ಗಿಡ. ೨. ಗೆಡ್ಡೆಗಳನ್ನು ಬಿಡುವ ಒಂದು ಬಗೆಯ ಸಸ್ಯ. [ಸಂ. ವದರ]

**ವದಾನ್ಯ** (ನಾ). ೧. ನಿರರ್ಗಳವಾಗಿ ಮಾತನಾಡುವವನು ; ವಾಕ್ಪಟು ; ವಾಗ್ಮಿ : ''ವದಾನ್ಯಃ- ೧. ಚೆನ್ನಾಗಿ ಮಾತಾಡುವವನು'' (ಸಿದ್ಧಾಂತಿ. ೪೧೨). ೨. ಪ್ರಿಯವಾಗಿ ಮಾತನಾಡುವವನು : ''ವದಾನ್ಯಂ ಪ್ರಿಯವಾದಿ'' (ವಸ್ತುಕೋ. ೧೦೦-೧೪); ಅನ್ಯರನು ನಿನ್ನವರ ಮಾಡಿಯನನ್ಯರನು ಬಾಹಿರರ ಮಾಡಿ ವದಾನ್ಯರನು ನಿಗ್ರಹಿಸೆಯೆಲೆ ಭೂಪಾಲ (ಕುವ್ಯಾಸ. ೧-೨೯); ಸುರತರು ವದಾನ್ಯನುನ್ನತಶಾಸ್ತ್ರಾನೀಕನಿಪುಣನತಿಗಂಭೀರಂ . . . ಪ್ರಿಯೋನ್ನತವಾಕ್ಯಂ (ಲಾಸ್ಯರಂ. ೧-೩೨). ೩. ದಾನಿ ; ಉದಾರಿ : ''ಪ್ರಿಯವಚನಂಬೆರಸಿ ಕೊಡುವವನಂ ವದಾನ್ಯನೆಂಬುದು'' (ಹಲಾಯು. ೬೦-೨೧೧). [ಸಂ.]

**ವದಾನ್ಯತೆ** (ನಾ). ಧಾರಾಳವಾಗಿ ದಾನಮಾಡುವಿಕೆ ; ಉದಾರತೆ : ಕಲಿತನಮಿಲ್ಲ ಚಾಗಿಗೆ ವದಾನ್ಯತೆ ಮೆಯ್ಗಲಿಗಿಲ್ಲ ಚಾಗಿ ಮೆಯ್ಗಲಿಯೆನಿಪಂಗೆ ಶೌಚಗುಣಮಿಲ್ಲ ಕರಂ ಕಲಿ ಚಾಗಿ ಶೌಚಿಗಂ (ಎಕ. VII, ಶಿಕಾರಿ. ೧೩೬-೩೨; 1068); ಅಂತು ನಿಜವದಾನ್ಯತಾಗುಣ ವಿಶುದ್ಧಸಿಸ್ನಿಗ್ಧರಸಪ್ರವಾಹಕ್ಕೆ ಸೇತುಗಟ್ಟುವಂತೆ ಪಟ್ಟಮಂ ಕಟ್ಟಿ (ಪಂರಾಮಾ. ೭-೨೨ ವ).

[ಸಂ. ವದಾನ್ಯತಾ]

**ವದಾನ್ಯತ್ವ** (ನಾ). = ವದಾನ್ಯತೆ : ವಿದ್ಯೋಪಶಮಗಂಭೀರಸ್ಥಿರವದಾನ್ಯತ್ವ ಸಾಧುಜನಸಹಾಯತಾದಿಗುಣನಿಧಾನನಂ ಸನ್ನನ್ನನಂ ಮತ್ತೊರ್ವನನಲ್ಲಿಯುಂ ಕಂಡುಂ ಕೇಳ್ದುಮಱಿಯೆಂ (ಶಾಂತಿಪು. ೩-೭೫ ವ). [ಸಂ.]

**ವದಾನ್ಯೆ** (ನಾ). ಕೊಡುಗೈಯವಳು ; ದಾನ ಮಾಡುವವಳು : ಜನಾರ್ದನ ವಂದ್ಯೆ ವದಾನ್ಯೆ ಮಾನ್ಯೆ . . . ಪರಾತ್ಪರೆ ಪಾಲಿಪುದೆನ್ನನಂಬಿಕೇ (ರಾಜಶೇ. ೧೩-೧೬೧).

[ಸಂ. ವದಾನ್ಯಾ]

**ವದಾವದ** (ನಾ). ೧. ಚೆನ್ನಾಗಿ ಮಾತನಾಡುವವನು ; ವಾಗ್ಮಿ : ''ವದಃ, ವದಾವದಃ, ವಕ್ತಾ — ೩ ಮಾತು ಕಲಿತವನ ಪೆಸರು''(ಸಿದ್ಧಾಂತಿ. ೩೩೨). ೨. ಅತಿಯಾಗಿ ಮಾತನಾಡುವವನು. [ಸಂ.]

**ವದಿಸು** (ಕ್ರಿ). ಹೇಳು ; ನುಡಿ : ಕಣ್ಗುಡಿತೆಗಳಿಂದಾಕೆ ಪವಣ್ಗಿಟಿದಾ ಬಾಷ್ಪವಾರಿಯಂ ಸುರಿಯುತ್ತಂ ಕಣ್ಗೊಳಿಸದಿರ್ಕುಮೇ ಪೇೞ್ ಮಾಣ್ಗಂ ಮದನಾಗ್ನಿಯೆಂದು ವದಿಪ್ಪುವ ತೆಱದಿಂ (ಕಾದಂಉ.೫೧೮); ಆಗಲೇ ನಾನು ವದಿಸಿದ ಮಹದ್‌ಕಾರ್ಯ ಅಂದರೆ . . . ಮುತ್ತಲ ಎಲೆಯ ಸಂಗ್ರಹ (ದೀಪಹ. II, ೨).

[ವದ + – ಇಸು$_3$]

**ವದ್ದಿಪೆಣೆಮನೆ** (ನಾ). ಒಬ್ಬಾತನ ಹೆಸರು : ಕೊವಲಾಲನಾಡಾಳ ವದ್ದಿಪೆಣೆಮನೆಯು ಬೇಡಿಕೊಂಡು ಪಟ್ಟಂಗಟ್ಟಿ (ಮೈಆರ್.೧೯೨೪, ೮೫-೪; 788). [?]

**ವದ್ಧ್ರಿ** (ನಾ). ಚರ್ಮದಿಂದ ತಯಾರಿಸಿದ ಪಟ್ಟಿ ; ಮಿಣೆ : ''ವಧ್ರೀಸಂಜ್ಞೆಯದು ವರತ್ರೆಯೆನಿಕ್ಕುಂ'' (ವಸ್ತುಕೋ. ೫೧ ೩೭). [< ಸಂ. ವಧ್ರೀ]

**ವದ್ಯ** (ಗು). ೧. ಮಾತನಾಡಲು ಯೋಗ್ಯವಾದ ,—ಪ್ರಶಸ್ತವಾದ. (ನಾ). ೨. ಮಾತನಾಡುವುದು. ೩. ನುಡಿ ; ಮಾತು. ೪. ಚಾಂದ್ರಮಾನಮಾಸದ ಎರಡನೆಯ ಪಕ್ಷ ; ಕೃಷ್ಣಪಕ್ಷ : ಇವರು ಪ್ರತಿವರ್ಷ ಭಾದ್ರಪದ ವದ್ಯದಲ್ಲಿ ತಮ್ಮ ತಮ್ಮ ಬಳಗದ ಹಿರಿಮನುಷ್ಯನ ಮನೆಗೆ ಅಕ್ಕಿ, ತೆಂಗಿನಕಾಯಿ, ಬೆಲ್ಲ, ತಕ್ಕೊಂಡು ಹೋಗಿ ಅಡಿಗೇ ಮಾಡಿ . . . ಉಣ್ಣುವರು (ಕಭಾಗ. ೧೮೦); ''ರಾಜಮುಖಿ ನಿನ್ನಲ್ಲಿ ರಾಜಕಳೆಯಿಹುದು!'' ''ಸಾಜಮಾದರು ಪಕ್ಷವಿದು ವದ್ಯವಹುದು!'' (ಗರು. ೩೫-೬).

[ಸಂ.]

**ವಧ** (ನಾ). ಕೊಲ್ಲುವುದು; ಕೊಲೆ : ವಧಮುಂ ಬಂಧನಮುಂ ಪರಾಭವಮುಮಂಗಚ್ಛೇದಮುಂ ಪೊರ್ದುಗುಂ (ಪಂರಾಮಾ. ೧೨-೫೯); ದಿವಿಜವಧಪಟುಗೆ ನಿನಗಭಿಭವಮಿಾ ಶಿಶುವಧಮೆನಲ್ಕೆ ಮಾಣ್ಬೆನೆ . . . ಎಂದೊದಱಿ ಪಾಸಱೆಯೊಳ್ ಕೂಸನಪ್ಪಳಿಸಿ (ಜಗವಿ. ೨-೫೪). [ಸಂ.]

**ವಧಕಾರ** (ನಾ). ೧. ಕೊಲೆಯನ್ನು ಮಾಡುವವನು ; ಕೊಲೆಗಾರ ; ಕೊಲೆಗಡುಕ. ೨. ವಧ್ಯಸ್ಥಾನದಲ್ಲಿ ಅಪರಾಧಿಗಳಿಗೆ ಮರಣದಂಡನೆ ಮುಂತಾದ ಶಿಕ್ಷೆಗಳನ್ನು ಕಾರ್ಯಗತಗೊಳಿಸಲು ನಿಯಮಿತನಾಗಿರುವವನು : ಸರಕಾರಿ ವಧಕಾರನು ಕಾದ ಕಬ್ಬಿಣದಿಂದ ಹೆಗಲಿನ ಮೇಲೆ ಕಾಯಿಸಿಟ್ಟ ಮೂರು ನೈದಿಲೆಗಳ ಗುಚ್ಛದ ಗುರುತು ! ಆಗಿನ ಕಾಲದಲ್ಲಿ ಅಪರಾಧಿಗಳ ಹೆಗಲ ಮೇಲೆ ಇಂತಹ ಗುರುತನ್ನು ಸರಕಾರಿ ವಧಕಾರರು ಕಾಯಿಸಿಡುತ್ತಿದ್ದರು (ಯೋಧರು. ೭೮). [ಸಂ.]

**ವಧಕಾಲ** (ನಾ). ಕೊಲ್ಲುವ ಸಮಯ ; ಸಂಹಾರದ ವೇಳೆ : ಕರ್ಣನ ವಧಕಾಲವು ಸಮಿಾಪಿಸಿದ್ದರಿಂದ ಹೀಗೆ ಸರ್ಪಾಸ್ತ್ರ ವ್ಯರ್ಥವಾದದ್ದಲ್ಲದೆ, ಪರಶುರಾಮನು ಹೇಳಿಕೊಟ್ಟ ಮಹಾಸ್ತ್ರವೂ ಮರೆತು ಹೋಯಿತು (ವಚಭಾ. ೨೯೯). [ಸಂ.]

**ವಧಾರ್ಥ** 'ವಧಾರ್ಥಂ' ನೋ.

**ವಧಾರ್ಥಂ, ವಧಾರ್ಥ** (ಅ). ಕೊಲ್ಲುವುದಕ್ಕಾಗಿ ; ಕೊಲ್ಲುವ ಉದ್ದೇಶಕ್ಕಾಗಿ : ಆ ನೆಗಟ್ದಿಂದ್ರಂ . . . ಮುರಾಂತಕಂಗಾನತನಾಗಿ ಪುಯ್ಯಲಿಡೆ ಕೇಳ್ದು ಮದೀಯ

ವಧಾರ್ಥಮಾ ಸುಧಾಂಭೋನಿಧಿತಳ್ಪನಿಂದು ಗಡ ಪುಟ್ಟಿದಂ(ಜಗನ. ೩-೨೦). **ವಧಾರ್ಥ :** 'ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುವೆ?' ಎಂದನು – ಕಾಪಾಲಿ – ಪೂಜಾಸ್ಥಾನಕ್ಕೆ . . . ವಧಾರ್ಥವಾಗಿ (ಕಪಾಕು. ೨೪). [ಸಂ.]

**ವಧಿಯಿಸು** 'ವಧಿಸು' ನೋ.

**ವಧಿಸು, ವಧಿಯಿಸು (ಕ್ರಿ).** ಕೊಲ್ಲು ; ಸಂಹರಿಸು ; ಸಾಯಿಸು : ಕಂಡು ಮಱುಗದೆ ಸೊನೆಗಾಱನ ದಂಡಿಯಲಿ ಮಗನಂ ವಧಿಸಿ ಆ ಮುಂಡವಂ ಪಿಂಗಡಿಸಿ (ಬಸವು. ೨೪-೨೦); ಪುರಹರನು ಕರೆದರ್ಜುನನ ಸುರಪುರಕೆ ಪೋಗುತೆ ನೀನು ಬಳಿಕಾ ಸುರಸಮಿತಿಗಳ ವೈರಿಗಳ ವಧಿಸೆಂದು ಬೆಸಸುತ್ತ (ಕುಮಾ.ಆ. ೬೦೧. ೭-೧೧೨); ವಿಧುಹಾಸನಂ ಪಲವುಪಾಯದಿಂದೀಗ ನಾಂ ವಧಿಸದಿರ್ದೊಡೆ ತನ್ನ ಸಂತತಿಗೆ ಧರೆಯನಾಳ್ವಧಿಕ ಸಂಪದಮಾಗದು (ಜೈಮಿಭಾ. ೩೧-೩೭). **ವಧಿಯಿಸು :** ಸಾಸಿಗನ್ನೆ ಹರಿ ನೀಂ ಪೇಣ್ಣೊಸಂ ವಧಿಯಿಸಿದೆ (ಜಗನ. ೧೭-೪೨); ರಾತ್ರಿಯೊಳೇಕಾಂತದೊಳಿರ್ದ ಸ್ಥೂಳಾಚಾರ್ಯರಂ ವಧಿಯಿಸಲವರ್ ಸಮಾಧಿಯಿಂ ಸ್ವರ್ಗಸ್ಥರಾದರ್ (ರಾಜಾವ. ೯೦-೯).

[ವಧ + – ಇಸು₁]

**ವಧು (ನಾ).** ೧. ಮದುವೆಯ ಹೆಣ್ಣು ; ಮದುವಣಗಿತ್ತಿ ; ಮದುಮಗಳು : ಎಲ್ಲ ಕನ್ಯೆಯರಿಗೂ ಪ್ರಭುಗಳು ಮಾಂಗಲ್ಯಗಳನ್ನು ಕಟ್ಟಿದರು. ಮುಖ್ಯವಧುಗಳಿಬ್ಬರೂ ಈಗ ಪ್ರಭುಗಳ ಎಡಪಾರ್ಶ್ವದಲ್ಲಿ ಬಂದು ಕುಳಿತರು (ಶಾಂತಲಾ. ೧೧೧). ೨. ಹೆಂಗಸು ; ಸ್ತ್ರೀ : ಲಚ್ಚಿ ವಧುವಿಗೆ ಚಂದ ಅಜ್ಜ ಅಜ್ಜಿಗೆ ಚಂದ ಮಜ್ಜಿಗೆ ಊಟಕೆ ಚಂದ (ಇಂಚಾಪ. ೯೪-೫೬). ೩. ಹೆಂಡತಿ ; ಸತಿ : "ದಾರಂ ಕಳತ್ರಂ . . . ವಧು ಕ್ಷೇತ್ರಮಾ ಭಾರ್ಯೆ . . . ಹೆಂಡಿತಿಗೆ ನಾಮಮಕ್ಕುಂ" (ಮಂಗರಾ. ೯೦ ೬); ಆರಿಗೆ ವಧುವಾದೆ ಅಂಬುಜಾಕ್ಷಿ ಕ್ಷೀರಾಬ್ಧಿ ಕನ್ನಿಕೆ ಶ್ರೀಮಹಾಲಕುಮಿ (ಪುರಂದ.೩-೧೨೭ ಪಲ್ಲವಿ). ೪. ಮಗನ ಹೆಂಡತಿ ; ಸೊಸೆ. ೫. ಒಂದು ಬಗೆಯ ಗಂಧದ್ರವ್ಯ : "ಮರುಸ್ಥಾಲಾ, ಮಾಲಾಪಿಶುನ, ಸ್ಪೃಕ್ಕಾ . . . ವಧೂಃ ,ಕೋಟಿವರ್ಷಾ, ಲಂಕೋಪಿಕಾ — ೧೦ ಸ್ಪೃಕ್ಕಯೆಂಬ ಗ್ರಂಧ್ಯದ್ರವ್ಯ, ಸಂಕೇಬೇರು" (ಸಿದ್ಧಾಂತಿ. ೧೪೩).

**ವಧೂವರರ್, ವಧೂವರರು** = ಮದುಮಗ ಮತ್ತು ಮದುಮಗಳು : ಅಂತು ನೆಱೆಯೆ ಕೈಗೆಯ್ದು ವಧೂವರರಿರ್ವರುಮಂ . . . ಹಾಟಕಪೀಠದ ಮೇಲೆ ಪಾಸಿದ ದುಗುಲದ ದಳಿಂಬದೊಳಿರಿಸಿದಾಗಳ್ (ಆದಿಪು. ೪-೪೨ ವ); ಅಂತಾ ವಧೂವರರಂ, ಮಂಗಳ ಪಸದನಂಗೊಳಿಸಿ ತಂದು . . . ಇದಿರೊಳ್ ನಿಱಿಸುವುದುಂ (ಲೀಲಾವ. ೧೩-೧ ವ); ವಧೂವರರು ಹಸೆಯ ಮೇಲೆ ಕುಳಿತಿದ್ದಾರೆ (ರೂಢಿ). [ಸಂ. ವಧು, ವಧೂ]

**ವಧುತಾತ (ನಾ).** ಹೆಂಡತಿಯ ತಂದೆ ; ಮಾವ : "ವಧುತಾತನೆನೆ ಹೆಣ್ಣ ಕೊಟ್ಟವನಕ್ಕು" (ಮಂಗರಾ. ೯೨-೧೩). [ಸಂ.]

**ವಧುವಿಂಡು (ನಾ).** ಸ್ತ್ರೀಯರ ಸಮೂಹ : ಗಂಡು ಮೆಚ್ಚುವುದಂಗನೆಯರ್ಗೆ ವಂವವಧುವಿಂಡೊಲಿವುದು ಪುರುಷರಿಗೆ (ಮೋಹತ. ೨೬-೨೬). [ವಧು + ಪಿಂಡು₂]

**ವಧೂಗೃಹ (ನಾ).** ೧. ಮದುವಣಗಿತ್ತಿಯ ಮನೆ. ೨. [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಒಂದು ; ಕನ್ಯಾರಾಶಿ : ಕುಸುಮಘಟಾನ್ವಿತೆ ಕೊಳಿಗೊಂಡ ಸೀರೆಯಂ ಪೊದೆದು ವಸ್ತ್ರಮಂ ಧನಮನಪೇಕ್ಷಿಸಿ ಗುರುಕುಲಕ್ಕೆ ಮನಸಂತಸದಿಂ ಪೋಪಳ್ ವಧೂಗೃಹಾದಿತ್ರ್ಯಂಶಂ (ಜಾತತಿ. ೧೯-೧೬). [ಸಂ.]

**ವಧೂಜನ (ನಾ).** ೧. ಸ್ತ್ರೀಯರು ; ಹೆಂಗಸರು : ನರಾಮರವಧೂಜನಂಬೆರಸಿ ರಾಗದಿಂದಾಡೆ (ಆದಿಪು. ೬-೨೧); ಪಿಡಿದೆತ್ತಿದ ಪೊನ್ನ ಕಳಶಮೆನಿಸಿದುದದಱೊಳಿರ್ದಿರ್ದ ವಧೂಜನದ ಕುಚಕಳಶಂ(ರಾಜಶೇ. ೧೧-೮೮). ೨. ಹೊಸದಾಗಿ ಮದುವೆಯಾಗಿರುವ ಹೆಣ್ಣುಮಕ್ಕಳು : ವಧೂಜನಕ್ಕೆ ಹೇಳತಕ್ಕ ಉಪದೇಶವು ಇಷ್ಟು ತಾನೆ; ಇದರ ಮೇಲೇನಿರುವುದು? (ಶಾಕುಂತ. ೫೭-೪). [ಸಂ.]

**ವಧೂಟಿ (ನಾ).** ೧. ತರುಣಿ ; ಯುವತಿ : ವಧೂಟೀಜನನೇತ್ರಾಕರ್ಷಣಾಲೇಪನ ಕವಜಯಮಂ ಮಾನಿನೀಚಿತ್ತಸಮ್ಮೋಹನರೂಪಕ್ಕೆಗ್ಗನುತ್ಪಾದಿಸುವುದು ನೃಪರೂಪಂ (ಮಲ್ಲಿಪು. ೩-೩೧); ಆ ವಧೂಟಿ ತಾಂ ತನ್ನಯ ತಾಯ ತಂದೆಯನಗಲ್ದಿರಲಾಱದೆ . . . ತವರ್ಮನೆಯೊಳ್ ಪಲಕಾಲಮಿರ್ಪುದುಂ (ಪದ್ಮಸಾ. ll, ೫೯೨). ೨. ಸ್ತ್ರೀ ; ಹೆಂಗಸು : ಗುರುಲಗ್ನದಿವಾಕರ . . . ಸಮಮಂದಿರದ ಸಮಾಂಶಕದೊಳಿರೆ ವಧೂಟೀಜನ್ಮಂ (ಜಾತತಿ. ೩-೧೧); ರುಕ್ಮಿಣೀದೇವಿ ಮೊದಲಾಗಿಹ ವಧೂಟಿಯರ ವರ್ಗಮುಂ ನೃಪತಿ ಸತ್ಕರಿಸಿದಂ (ಜೈಮಿಭಾ. ೩೪-೩೦). ೩. ಸೊಸೆ. [ಸಂ. ವಧೂಟೀ]

**ವಧೂಬಂಧು (ನಾ).** ಮದುವಣಗಿತ್ತಿಯ ಬಳಗದ ವ್ಯಕ್ತಿ ; ಹೆಣ್ಣಿನ ಸಂಬಂಧಿಕ : ಭಾಗ್ಯಾಧೀನಮಿನ್ನಿಂತರಿಂ ಪೆರತೆಲ್ಲಂ ಬಗೆಯಲ್ಕದಂ ನುಡಿವುದಲ್ಲಂ ದಲ್ ವಧೂಬಂಧುಗಳ್ (ಶಾಕುಂತ. ೫೬-೯೫). [ಸಂ.]

**ವಧೆ (ನಾ).** ಕೊಲೆ ; ಸಂಹಾರ : ಹಿಡಿಂಬವಧೆ ಬಕಾಸುರವಧೆ . . . ಪೆಱವುಮುಪಾಖ್ಯಾನ ಕಥೆಗಳೊಳಮೊಂದುಂ ಕುಂದಲೀಯದೆ ಪೇೞ್ದಂ (ಪಂಪಭಾ. ೧೪-೫೨ ವ); ಪರಹಿಂಸೆ ಲೋಗರ ಹಳಿವುದೇ ವಧೆ ಶಸ್ತ್ರವಧೆ ವಧೆಯಲ್ಲ (ಕುಮಾ.ಕ. ೧೭-೨೬). [ಸಂ. ವಧ]

**ವಧ್ಯ (ಗು).** ೧. ಕೊಲ್ಲಲು ಯೋಗ್ಯವಾದ ; ಕೊಲೆಗೆ ಅರ್ಹವಾದ. ೨. ದೇಹದಂಡನೆಗೆ ಗುರಿಯಾದ ; ದೈಹಿಕಶಿಕ್ಷೆಗೆ ಒಳಗಾದ. (ನಾ). ೩. ಕೊಲ್ಲಬೇಕಾದುದು ; ವಧೆಗೆ ಅರ್ಹವಾದುದು. ೪. ಅಪ್ರಿಯವಾದುದು : ಪದ್ಯಂ ವಧ್ಯಂ, ಗದ್ಯಂ ಹೃದ್ಯಂ (ರಾಮಾಶ್ವ. ೫-೧೪); ವಿಜ್ಞಾನಿಗಳ 'ಆಕಲು' ಹೃದ್ಯವಿದ್ದರು ವಧ್ಯ (ಅರಳು. ೪೨೦-೭). ೫. ಮರಣದಂಡನೆಗೆ ಗುರಿಯಾದವನು. ೬. ಕೊಲೆಗೆ ಅರ್ಹವಾದ ವ್ಯಕ್ತಿ : ಮಾಯಾಪರರು ಮಾಯೋಪಾಯವಧ್ಯರು (ಕುಮಾ.ಗ. ೫-೬). ೭. ವೈರಿ ; ಶತ್ರು. [ಸಂ.]

**ವಧ್ಯಮಾಲೆ (ನಾ).** (ಸಂಪ್ರದಾಯದಂತೆ) ಮರಣದಂಡನೆಗೆ ಗುರಿಯಾದ ವ್ಯಕ್ತಿಯ ಕುತ್ತಿಗೆಗೆ ಹಾಕುವ (ಕೆಂಪು ಹೂವಿನ) ಹಾರ : ಈ ನನ್ನ ಕೊರಳಿಗೆ ವಧ್ಯಮಾಲೆಯನ್ನು ಹಾಕಿ ; ಮೃತ್ಯುಲೋಕದ ದಾರಿಯನ್ನು ನನಗೆ ತೋರಿಸಿ (ರಾಕ್ಷಮು. ೧೦೨). [ಸಂ. ವಧ್ಯಮಾಲಾ]

**ವಧ್ಯಶಿಲೆ (ನಾ).** ಕೊಲೆ ಮಾಡುವುದಕ್ಕೆಂದು ಇಟ್ಟಿರುವ ಶಿಲೆ ; ತಲೆಯನ್ನು ಕತ್ತರಿಸಲೆಂದು ಸಿದ್ಧಮಾಡಿಟ್ಟಿರುವ ಕಲ್ಲು : ಅಸುರಂ ಕನ್ನೆಯನುಯ್ದು ವಧ್ಯಶಿಲೆಯೊಳ್ ಪೊಯ್ಯಲ್ಕೆ ಕೈಯಿಂ ಸಿಡಿಲ್ದು ಸಿಡಿಲ್ ಪೋಪವೊಲಂಬರಕ್ಕೆ ನೆಗೆದೆಂದಳ್ (ಜಗನ. ೩-೧೪); ಕೆಂಪುಬಟ್ಟೆಯನ್ನು . . . ಹೊದ್ದುಕೊಂಡು ಜೀಮೂತವಾಹನ ವಧ್ಯಶಿಲೆಯನ್ನೇರಿದನು (ಕಪಪು. ೭-೧೦೪). [ಸಂ. ವಧ್ಯಶಿಲಾ]

**ವಧ್ಯಾಭಾವ (ನಾ).** ಕೊಲೆಗೆ ಅರ್ಹನಾದ ವ್ಯಕ್ತಿಯು ಇಲ್ಲದಿರುವಿಕೆ : ವಧ್ಯಾಭಾವದಿಂ ಹಿರಣ್ಯನೊಳ್ ಪ್ರಧಾನವ್ಯಾಪಾರಮಂ ನುಡಿಯುತಿರ್ದ ಶಶಿಪ್ರಭಾ ಪ್ರಿಯನ ರಥಕ್ಕಾಗಿ ಬೇಗನೆ ಬಂದು (ಚಂದ್ರಪ್ರ. ೬-೩೮ ವ). [ಸಂ.]

**ವಧ್ರಿ (ನಾ).** ತೊಗಲಿನ ಪಟ್ಟಿ ; ಚರ್ಮದ ಬಾರು : "ನಧ್ರೀ, ವಧ್ರೀ, ವರತ್ರಾ-೩ ತೊಗಲ ಮಿಣಿಯ ಪೆಸರು, ತೊಗಲ ಹಗ್ಗ" (ಸಿದ್ಧಾಂತಿ. ೩೧೫). [ಸಂ. ವಧ್ರೀ]

**ವನ (ನಾ).** ೧. ಕಾಡು ; ಅರಣ್ಯ : ವನದೊಳ್ ದಾವಾಗ್ನಿ ಪೂರ್ವಾಚಲದೊಳ ಹಿಮಕ್ಕಿರಣ್ಮಂಡಲಂ ವಾರ್ಧಿಯೊಳ್ ಭೋಂಕೆನೆ ಬಂದೌರ್ವಾನಳಂ ಪುಟ್ಟುವವೊಲ್ (ಆದಿಪು. ೭-೧೩); ಅನಿಬರನಾವ ವನದಲಿ ಕಂಡೆ ಕೂಡೆನಿತುಂಟು ಪರಿವಾರ (ಕುಮಾ.ಆ. ೧-೨೦). ೨. ನೀರು ; ಉದಕ : "ವನಂ ವಾರಿ ಘನರಸಮೆನಲ್ ನೀರಿಂಗೆ ಪೆಸರಕ್ಕು"(ಮಂಗರಾ. ೧೨೦-೧); ವನಘನರಾಶಿಯಾಶಾದಿಗಂತದೊಳ್ ವರ್ಷದಾಶೀರ್ವಾದ ಮುದ್ರೆಯಿಂದೆರ್ದುದೆನೆ ಬಂದನೋಲಗಕೆ ವಿಶ್ವಾಮಿತ್ರಮುನಿವರಂ (ಶ್ರೀರಾಮಾ. ೨೮-೮). ೩. ತೋಟ ; ಉದ್ಯಾನವನ : "ಆರವಿ. ಕಾನನಂ, ವನಂ — ಈ ೩ ತೋಟಕ್ಕೂ ಹೆಸರೆಂದು ಕೆಲವರನ್ನುವರು" (ಸಿದ್ಧಾಂತಿ. ...). ೪. ಬೆಳಕು ; ರಶ್ಮಿ ; ಪ್ರಕಾಶ : "ವನಮುತ್ಸಾಹನಪ್ರಕಾಶನ ವಚನಂ" (ವಸ್ತುಕೋ. ೧೨೪-೩೭). ೫. ವಾಸಸ್ಥಳ ; ಮನೆ. ೬. ಮೋಡ. ೭. ಮರದ ಪಾತ್ರೆ. ೮. ಗುಂಪು ; ಸಮೂಹ : 'ವನಜವನ' ಪರಾ. ೯. ನೀರಿನ ಬುಗ್ಗೆ. ೧೦. ಹೇರಳ ; ಸಮೃದ್ಧಿ. "ವನ-೧. ನೀರು. ೨. ಅರಣ್ಯ, ಕಾಡು. ೩. ಮನೆ. ೪. ಉಗಮ, ಬುಗ್ಗೆ. ೫. ಜೋಗು, ಝರ. ೬. ಸಮೂಹ. ೭. ಮರಿಗೆ. ೮. ಮೇಘ. ೯. ಕಿರಣ" (ನಾನಾಶ. ೨೨೬). [ಸಂ.]

**ವನಕರಿ (ನಾ).** ಅಡವಿಯ ಆನೆ ; ಕಾಡಾನೆ : ವನಕರಿಕುಂಭಪಾಟನಪಟಿಷ್ಠ ಕಠೋರನಖಪ್ರಹಾರಭೇದನಗಳಿತಾಸ್ರರಕ್ತನವಮೌಕ್ತಿಕಪಂಕ್ತಿವಿಳಾಸಭಾಸುರಾನನಂ (ಪಂಪಭಾ. ೧೩-೫೧); ಅಂತು ದೀನಜನತಾಕಲ್ಪಾಂಘ್ರಿಪಂ ವನಕರಿ ಕದಡೆ ತಿಳಿದ ಸರೋವರದಂತೆ ಪ್ರಸನ್ನಾಂತರಂಗನಾಗಿರ್ಪನ್ನೆಗಂ (ಶಾಂತಿಪು. ೫-೧೪೬ ವ). [ಸಂ.ವನಕರಿನ್]

**ವನಕುಸುಮ** (ನಾ). ಕಾಡಿನ ಗಿಡ, ಮರ, ಬಳ್ಳಿಗಳಲ್ಲಿ ಬಿಡುವ ಹೂವು ; ಕಾಡುಹೂವು : ವನಕುಸುಮಂಗಳಂ ಬಗೆಗೆ ಪಂದುವನಜ್ಜೆಯೊಳಾಯ್ದು ಕೊಯ್ದು . . . ತೊಟ್ಟು ಕರಮೊಪ್ಪಿದಳಾಕೆ ಬಸಂತಕಾಂತೆವೋಲ್ (ಪಂಪಭಾ. ೨-೧೬); ವನಕುಸುಮಾಸವಂಬೆರಸು ತನ್ನೊದವಂದ ನರೇಂದ್ರಸುಂದರೀಜನಮುಖಸೌರಭಕ್ಕೆ ಬಗೆ ಸೋಲಲೊಡಂ (ಮಲ್ಲಿಪು. ೫-೮೫). [ಸಂ.]

**ವನಕೇಳಿ** (ನಾ). ತೋಟದಲ್ಲಿ ತಿರುಗಾಡುವಿಕೆ ; ವನವಿಹಾರ : ವನಕೇಳೀವಿಭವಂ ಸಲೀಲಸಲಿಲಕ್ರೀಡಾವಿಳಾಸಂ ಸಮಸ್ತನಿಜಾಂತಃಪುರದೊಳ್ ಪೊದಟ್ಟೆಸೆಯೆ (ಆದಿಪು. ೧೧-೧೫೩); ವನಕೇಳಿಗೆಳಸಿ ಮನಸಿಜನನುಪಮತನ್ಮೂರ್ತಿವೆತ್ತು ಪುಗುವಂತಿರೆ ಮೋಹನರೂಪರುಂದ್ರಕಂದರ್ಪನರೇಂದ್ರಂ ಬಂದು ವಿಪುಳವನಮಂ ಪೊಕ್ಕಂ (ಕುಸುಮಾ. ೯-೧೦). [ಸಂ. ವನಕೇಲಿ]

**ವನಕ್ರೀಡೆ** (ನಾ).= ವನಕೇಳಿ : ಅಂತು ಬಂದ ಬಸಂತದೊಳ್ ಮಾದ್ರಿ ತಾಂ . . . ವನಕ್ರೀಡಾನಿಮಿತ್ತದಿಂ ಪೋಗಿ(ಪಂಪಭಾ. ೨-೧೫ ವ); ಅಬಲೆಯರೋರೋರ್ವರೊಂದೊಂದು ಪಾಂಗಿಂ ಬಗೆಗೊಂಡೇಟ್ಟನ್ನೆಗಂ ತನ್ನೊದನೆ ಹರಿ ವನಕ್ರೀಡೆಗೆಂದೆಟ್ಟನಾಗಳ್ (ಜಗವಿ. ೧೪-೪೭); ಬನದೊಳ್ ಪೂಗೊಯ್ದು . . . ಮರನದರ್ವಾ ಕಾವಣಕ್ಕೊಪ್ಪ ತಂತಮ್ಮಿನಿಯರ್ ಸಯ್ತುಂಬುದಂ ವರ್ಣಿಸುಗೆ ಕವಿ ವನಕ್ರೀಡೆಯೊಳ್ ನಾಡೆ ರಮ್ಯಂ (ಸೂಕ್ತಿಸು. ೧೧-೧). [ಸಂ. ವನಕ್ರೀಡಾ]

**ವನಗಜ** (ನಾ). = ವನಕರಿ : ವನಗಜಯೂಥಮಳ್ಕಿ ಪೆಜಗಿರ್ದಿರದೊಡ್ಡಟಿದೋಡುವಲ್ಲಿ ದಂತಿನಿ ಮೊಲೆಯೂಡೆ ನಿಂದು(ಶಾಂತಿಪು. ೨-೧೦೫); ವನಗಜಯೂಥಮಂ ಭರದಿನಟ್ಟುವ ಕೇಸರಿಯಂತೆ ದೈತ್ಯರುಳ್ಳನಿಬರುಮಂ ಮಹಾರಣದೊಳದ್ಭುತಮಾಗೆ ಕರುತ್ತು ಕಾದಿ (ಪಂರಾಮಾ. ೧೪-೧೩೩). [ಸಂ.]

**ವನಚರ** (ನಾ).೧. ಕಾಡಿನಲ್ಲಿ ಸಂಚರಿಸುವವನು ; ಬೇಡ : ವನಚರನಾಗಿ ಶಂಭು ಗಿರಿಜಾತೆಯನೋತು ಪುಳಿಂದಿ ಮಾಡಿ . . . ಕವಿದನಾ ಬನಮಂ (ಪಂಪಭಾ. ೮-೧೪); ವನಚರನಾಗಿ ಕಾನನಚರಂ ಪೆಸರಿಂದೆ ಕುರಂಗನಾಗಿ ನೆಟ್ಟನೆ ಗಜಸಿಂಹಮಂ ಕೊಲುವನಶ್ರಮದಿಂದಮೆ ಬೇಡನಾಗಿ (ಪಾರ್ಶ್ವಪು. ೧೨-೬೬). ೨. ಕಾಡಿನಲ್ಲಿ ವಾಸಿಸುವ ಮೃಗ, ಪಕ್ಷಿ ಮುಂತಾದ ಜೀವಿ ; ವನ್ಯಜೀವಿ : ವನವಿಗ ವನಮೃಗ ವನತರು ವನಚರ ವನವನಜನಿವಹಮುಳ್ಳನಿತುಂ ಸೀರನಿತುಮಣಮುಟಿದು ದಿಲ್ಲೆಂಬಿನಮುಂಡಂ ದಹನನಳುರ್ದು ಖಾಂಡವವನಮಂ (ಪಂಪಭಾ. ೫-೯೭); ಕೋಗಿಲೆ ಗಿಳಿಯೇ ಕಂಡಿರೆ ಪೇಟಿಮೆಮ್ಮ ಪತಿಯಂ ಶ್ರೀರೂಪಕಂದರ್ಪನಂ ಎಂದು ವನತರುಲತಾ ವನಚರಂಗಳಂ ಕಂಡತಿಪ್ರಲಾಪಂಗೆಯ್ದಾಗಳ್ (ಸುಕುಮಾ. ೧೨-೨೧ ವ). ೩. ನೀರಿನಲ್ಲಿ ಸಂಚರಿಸುವ ಮೀನು ಮೊದಲಾದ ಜಲಚರ : ವನಚರಪಾಲಿEಲೆ౩ ಪಾವನ ಸುಶೀಲಿEಲೆ౩ . . . ಸೇವಿತಮಲಪ್ರಹರಿ ಸ್ಫುಟವೇಣಿ ರಾಜಿಕುಂ (ಹಮ್ಮೀರ. ೧-೫೫). [ಸಂ.]

**ವನಚರಿ** (ನಾ). ಬೇಡಿತಿ ; ಕಿರಾತಸ್ತ್ರೀ : ವನಚರಿ ಬರೆ ವಿದ್ಯುಲ್ಲೇಖೆ ಬರ್ಪಂತೆ (ಅಜಿಪು. ೯-೩೨); ಮನೋನುರಾಗದಿಂ ವನಚರಿ ಪಾಡಿದಳ್ ಮಧುರಗೀತಿಗಳಂ (ಲೀಲಾವ. ೮-೩೨); ನೀರದರುಚಿಯಂ ಪೋಲ್ವ ಶರೀರದ ವನಚರಿ ತಮಾಳಲತೆವನೆಯೊಲ್ಪೊಕ್ಕು . . . ಕಾರಿರುಳಿನ ಸಿರಿಯ ತೆಜದಿನೆಸೆವುತ್ತಿರ್ದಳ್ (ತ್ರಿಪುಪು. ೨೭-೬೯). [ಸಂ. ವನಚರೀ]

**ವನಜ** (ನಾ). ೧. ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : ವನಜಾನೀಕಮೆ ಪಳ್ಳಿವೋಪ ತೆಜದಿಂ ಕಿಟ್ಟೆರ್ದು ಭೂಪಂ ತಪೋವನಮಂ . . . ಪೊಕ್ಕಂ (ಆದಿಪು. ೪-೮೩); ವನಜಂಗಳ್ ದಳವೇಜೆ ಚೂತಲತೆಗಳ್ ನೀರೇಜೆ . . . ಪುಂಡ್ರೇಕ್ಷುಚಾಪನ ಚಾಪಂ ಗೊಲೆಗೇಜೆ ಬಂದುದು ವಸಂತಂ ಸಂತತೋತ್ಸಾಹದಿಂ (ಧರ್ಮಾಮೃ. ೧೩-೧೦). ೨. ಆನೆ ; ಗಜ. ೩. ಕೊನ್ನಾರಿಗಡ್ಡೆ. ೪. [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಒಂಬತ್ತನೆಯದಾದ ಬೃಹತಿಛಂದಸ್ಸಿನ ಒಂದು ವೃತ್ತ : ಆಗಳಗ್ನಿಮರುದ್ವಯಸಂಯೋಗಮಾಗಿರೆ ಭಾವಿಸು ಭೂಭಾಗದೊಳ್ಮೃಗನೇತ್ರೆ ನೀಂ ನಾಗವರ್ಮನಿನೀ ವನಜಂ (ಛಂದೋಂಬು. ೨-೧೧೧). [ಸಂ.]

**ವನಜಜ** (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ : ವನಜಜ ಬನ್ನಿಮಿತ್ತ ಹರ ಕುಳ್ಳಿರಿಮುನ್ನತಪೀಠದೊಳ್ (ಜಗವಿ. ೩-೫೯); ವನಜಜನಮಾವಾಸೆಯ ನನುದಿನವಿರಿಸದದೇಕೆ ಹುಣ್ಣುಮೆಯನೆಸಗಿದಂ (ನಳಚಂ. ೨೦೬). [ಸಂ.]

**ವನಜದಳ** (ನಾ). ೧. ತಾವರೆ ಹೂವಿನ ಎಸಳು ; ಕಮಲಪುಷ್ಪದ ದಳ : ವನಜದಳಂಗಳೊಳೊಂದೊಂದನೆ ಮುಗಿಯಿಸಿ . . . ಪೂಗೊಳದೊಳಗೆ ಪೊಳೆದವಿಂದುಕರಂಗಳ್ (ಕಾದಂಬ. ೪೨೦). ೨. [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹದಿನೇಳನೆಯ ಅತ್ಯಷ್ಟಿಛಂದಸ್ಸಿನ ಒಂದು ವೃತ್ತ : ವನಜದಳಂ ನನನ ನನಗಗಂ (ಛಂದೋಂಬು. ೨-೧೬೬ ಅಧಿಕಪಾಠ). [ಸಂ. ವನಜದಲ]

**ವನಜನಾಭ**(ನಾ). ಹೊಕ್ಕುಳಲ್ಲಿ ತಾವರೆಯ ಹೂವಿರುವವನು ; ಪದ್ಮನಾಭ ; ವಿಷ್ಣು : ಎನ್ನ ಪಗೆಯೆನಿಸಿರ್ದ ವನಜನಾಭಂ ಮತ್ತೊಂದು ತಾಣದೊಳ್ ಪುಟ್ಟಿದಂ (ಜಗವಿ. ೩-೨೨ ವ); ತಂದಿರಿಸಿದರು ಫಲವನು ವನಜನಾಭನ ಹೇಳಿಕೆಯಲಾಕ್ಷಣಕೆ (ಕುಮಾರ. ೩-೨೫); ವನಜನಾಭನ ಧ್ಯಾನಕೆ ಸರಿಯುಂಟೆ (ಪುರಂದ. ೧-೨೯-೨). [ಸಂ.]

**ವನಜಭವ** (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ : ಅನುರೂಪಮಾಗೆ ಪುಟ್ಟಿಸಿ ವನಜಭವಂ ಚೂತರಾಜನಂ ಮಲ್ಲಿಗೆಯಂ ವನಮಿಥುನಂಗಳೊಳೇಂ ಮುನ್ನಿನ ತನ್ನ ಜಡಸ್ವಭಾವಮಂ ಮಾಜಿದನೋ (ಮಲ್ಲಿಪು. ೬-೪೩); ವನಜಭವನಲಿ ವರವ ಬೇಡಿದೆ (ಕೌಶಿರಾ. ೨೩-೨೩). [ಸಂ.]

**ವನಜಭವಾಂಡ** (ನಾ). ಬ್ರಹ್ಮಾಂಡ : ಧನುವಿನ ಟಂಕೃತಂ ವಿಶಿಖಭೀಂಕೃತ ಮುತ್ಕಟಕೋಪ ಹೂಂಕೃತಂ ವನಜಭವಾಂಡಮಂ ಪುದಿಯೆ (ಜಗವಿ. ೧೫-೫). [ಸಂ.]

**ವನಜಮಿತ್ರ** (ನಾ). ತಾವರೆಯ ಗೆಳೆಯ ; ಸೂರ್ಯ.

ವನಜಮಿತ್ರಪುತ್ರ = ಸೂರ್ಯನ ಮಗ ; ಯಮ : ವನಜಮಿತ್ರಪುತ್ರಂ ದರಹಸಿತ ವದನಾರವಿಂದನಾಗಿ . . . ಆಟೋಪದಿಂ ಮುಟ್ಟೆವರ್ಪುದುಂ (ಜಗವಿ. ೭-೨೬ ವ). [ಸಂ.]

**ವನಜವನ** (ನಾ). ತಾವರೆ ಹೂವುಗಳ ಗುಂಪು, — ಸಮೂಹ : ವನಜವನಕ್ಕೆ ವಿಕಾಸಂ ದಿನಪತಿಯಿಂದಲ್ಲದುಟಿದಜೆಂದಕ್ಕುಮೆ (ಮಲ್ಲಿಪು. ೯-೯೪); ಅನುನಯದಿಂ ವನಜವನಮಂ ದಿನಪ ಪೊಗುವಂತೆ . . . ಅಯೋಧ್ಯಾಪುರವನಿನಕುಲ ಹರಿಶ್ಚಂದ್ರ ಭೂವರಂ ಪೊಗಲು (ಹರಿಕಾ. ೧೪-೨೫). [ಸಂ.]

**ವನಜವಲ್ಲಿ** (ನಾ). ತಾವರೆಯ ಬಳ್ಳಿ ; ಕಮಲಿನಿ : ನವವನಜವಲ್ಲಿಗೆಜಗುವ ಝುಷದ್ವಯಂಗಳೆವೆನೆ ಪಾರ್ಥಿವನ ನಯನಂಗಳೆಜಗಿದುವವಯವದಿಂ ನಿಂದ ಗಾಯಿಕಾಯುವತಿಯರೊಳ್ (ಶಾಂತಿಪು. ೩-೫೩). [ಸಂ. ವನಜವಲ್ಲೀ]

**ವನಜಶರ** (ನಾ). ೧. ತಾವರೆಯ ಹೂವಿನ ಬಾಣ.೨. ತಾವರೆ ಹೂವನ್ನು ಬಾಣವಾಗಿ ಉಳ್ಳವನು ; ಮನ್ಮಥ.

ವನಜಶರಹರ = ಮನ್ಮಥನನ್ನು ನಾಶಮಾಡಿದವನು ; ಶಿವ : ವನಜಶರಹರ ನಿಮಗೆ ಮನಸು ಮುನ್ನೆಜಗಿಹುದು ತನುವೆಜಗಲೇತಕ್ಕೆ (ಪ್ರೌಢರಾ. ೭-೩೭). [ಸಂ.]

**ವನಜಸಂಭವ** (ನಾ). ೧. = ವನಜಜ : ವಿಷ್ಣುಗೆ ಪಿರಿಯರ್ ಮತ್ತಿಲ್ಲ ದೇವರಿದುವೆ ಯಥಾರ್ಥಂ ಎನೆ ವನಜಸಂಭವನದಂ ಮನದೆ ಕೊಂಡು (ಜಗವಿ. ೧-೩೩ ವ); ಮನುಜರ ಮಾತೇನು ಘನವಲ್ಲ ವನಜಸಂಭವಗೂ ನಿಶ್ಚಯವಿಲ್ಲ (ಪುರಂದ. ಧಾ. ೬-೪). ೨. [ಛಂದ] ಅಂಶಗಣಗಳಲ್ಲಿ ಒಂದು ಗಣದ ಹೆಸರು ; ಬ್ರಹ್ಮಗಣ : ವನಜಸಂಭವಗಣಮಕ್ಕೆ ಮೊದಲೊಳತ್ತಲ್ ವನರುಹೋದರ ಗಣಯುಗಳಮದಕ್ಕೆ (ಛಂದೋಂಬು. ೫-೨೫).

ವನಜಸಂಭವಜನಕ = ಬ್ರಹ್ಮನ ತಂದೆ ; ವಿಷ್ಣು : ಸನಕಾದಿ ಮುನಿವಂದ್ಯ ವನಜಸಂಭವಜನಕ ಫಣಿಶಾಯಿ ಪ್ರಹ್ಲಾದಗೊಲಿದ ಶ್ರೀಕೃಷ್ಣ (ಪುರಂದ. ೧-೯೩-೨). [ಸಂ.]

**ವನಜಾಕ್ಷ** (ನಾ). ಕಮಲದಂತೆ ಸುಂದರವಾದ ಕಣ್ಣುಗಳುಳ್ಳವನು ; ವಿಷ್ಣು : ವನಜಾಕ್ಷನಿಂ ತವರ್ಮನೆ ತನಗದು ಗೆಂಟಾದ ಪೇದದಿಂದಿರ್ದಂತಾ ತನುಮಧ್ಯೆ ಪಾಗುಡಂಬೆರಸು ನಯಾನ್ವಿತರಪ್ಪ ನರರನಟ್ಟಿದೊಡೆ (ನೇಮಿಪು. ೮-೪೦); ವನಜಾಕ್ಷಂ ಪೊಗಳುತ್ತಿರಲನುಪಮ ಮೆಜೆಮಿಂಡದೇವಗಚಳಿತಪದಮಂ ವಿನಯದಿನಿತ್ತುಂ (ತ್ರಿಪುಪು. ೬-೧೭). [ಸಂ. (ವನಜ + ಅಕ್ಷಿ + —)]

**ವನಜಾಕ್ಷಿ** (ನಾ). ಕಮಲದಂತೆ ಸುಂದರವಾದ ಕಣ್ಣುಳ್ಳವಳು ; ಕಮಲಾಕ್ಷಿ : ವನಜಾಕ್ಷಿ ದೋಷಿಯಲ್ಲದ ನಿನಗೆ ಕರಂ ಪೊಲ್ಲಗೆಯ್ದಂ (ಪಂಚತಂ. ೭೭-೧೯); ವನಜಾಕ್ಷಿ ಕೇಳೊತ್ತೆಯವಳಾದ ಬಳಿಕ ಇಂದಿನ ರಾತ್ರಿಯವನೊಡನೆ ಸುಖಮಿರ್ದು ನಾಳೆ ಬರೆ ಅನುವ ಪೇಳುವೆನು (ಪ್ರೌಢರಾ. ೯-೩೨). [ಸಂ. ವನಜಾಕ್ಷೀ]

**ವನಜಾತ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : ತ್ರಿಜಗದಗ್ರದೊಳು ಪೂತಶಿಲೆಯೊಳಿಪ್ಪ ಸಿದ್ಧರ ಪದವನಜಾತಗಳಿಗೆಱಗುವೆನು (ತ್ರಿಪುಸಾಂ. ೧-೮); ಪೂತಾತ್ಮ ಮುನಿಹೃದಯ ವನಜಾತ ಯಮತಾತ . . . ಸಂಗಮೇಶ್ವರ ಓತು ರಕ್ಷಿಸೆನ್ನಂ (ಪ್ರೌಢರಾ. ೯-೧). [ಸಂ.]

**ವನಜಾತಾಹಿತ** (ನಾ). ತಾವರೆಹೂವಿನ ವೈರಿ; ಚಂದ್ರ : ಆ ಶುಕ್ರನಿಂ ವನಜಾತಾಹಿತನಾ ವನೇಜರಿಪುವಿಂ ಪಂಕೇಜಮಿತ್ರಂ ಬಲಾಢ್ಯನೆನಿಕ್ಕುಂ (ಜಾತತಿ. ೨-೧೨).

**ವನಜಾತಾಹಿತ ಸೂನು** = ಚಂದ್ರನ ಮಗ ; ಬುಧ : ವನಜಾತಾಹಿತಸೂನುದಂಪತಿ ನವಾಂಶಸ್ಥಾಯಿ . . . ವಿಲಗ್ನಕ್ಷೇತ್ರಮಂ ವೀಕ್ಷಿಸಲ್ ಜನಿಯಿಕ್ಕುಂ ಪುರುಷತ್ರಯಂ (ಜಾತತಿ. ೩-೧೪). [ಸಂ.]

**ವನಜಾರಿ** (ನಾ). = ವನಜಾತಾಹಿತ : ವನಜಾರಿಯಿನುಪಚಯದೊಳ್ ಜನನಾಧಿಪನಿರೆ ಶುಭಗ್ರಹಂ ನೆಲಸಿರೆ . . . ಭೂಪತಿಯಕ್ಕುಂ (ಜಾತತಿ. ೧೨-೮); ವನಜಾರಿಯ ಕಂದಿಪವೋಲ್ ದಿನಮದು ಕುಮುದಿನಿಯ ಪಿರಿದು ಕಂದಿಸಿದಪುದೇಂ (ಶಾಕುಂತ. ೩೮-೬೮). [ಸಂ.]

**ವನಜಾಲಯೆ** (ನಾ). ಕಮಲವನ್ನು ನೆಲೆಯಾಗಿ ಉಳ್ಳವಳು ; ಲಕ್ಷ್ಮಿ : ವನವನಧಿಯಲ್ಲಿ ಜನಿಸಿದ ಘನಮೌಕ್ತಿಕದಂತೆ ಮೆಱೆವ ಮಲ್ಲಿಗೆಮುಗುಳಂ ವನಜಾಲಯೆಯಂತೊಪ್ಪುವ ವನಜಾನನೆಯೊರ್ವಳಾಯ್ದಳತಿಸಂಭ್ರಮದಿಂ (ರಾಜಶೇ. ೧೦-೩೬). [ಸಂ. ವನಜಾಲಯಾ]

**ವನಜಾಸ್ತ್ರ** (ನಾ). ೧. = ವನಜಶರ ೧. ೨. = ವನಜಶರ ೨ : ವನಜಾಸ್ತ್ರ ನಿನ್ನಯ ಪೊಳೆವ ಬೆರಳುಗಳ . . . ತೋರು (ನವಮೋ. ೭-೧೬). [ಸಂ.]

**ವನಜೋದರ** (ನಾ). ಹೊಕ್ಕುಳಲ್ಲಿ ಕಮಲವನ್ನು ಉಳ್ಳವನು ; ಕಮಲನಾಭ ; ವಿಷ್ಣು : ವನಜೋದರನುಂ ವಿಸ್ಮಯಮಿನಿತೊಗೆಯಲ್ ಮನದೊಳಂದು ಘನಜಘನೆಯ ಸಂಜನಿತಮನಃಕ್ಷತಮಂ ಭೋಂಕನೆ ಕಳೆದಂ ಪಾದಪದ್ಮದೊಳ್ ಬಿಟ್ಟಾಗಳ್ (ನೇಮಿಪು. ೭-೬೯); ವನಜೋದರನುದರದ ಲೋಕಶ್ಲಿಕಾಯದೊಳಾತನಾಜ್ಞೆಯಿಂ . . . ನೆಱೆ ಕಂಡಂ (ಜಗವಿ. ೫-೧೦೫). [ಸಂ.]

**ವನತರು** (ನಾ). ಅರಣ್ಯದಲ್ಲಿರುವ ಮರ : ವನತರುಪತ್ರಂಗಳನೊಯ್ಯನೆ ನೆಲೆಯಿಂ ಪತ್ತುವಿಡಿಸಿ ಕಳಿಕೆಗಮುತ್ಪತ್ತಿನಿಮಿತ್ತಮಾಗಿ ಶಿಶಿರಮುಮಿನಿಸಿನಿಸನೆ ತನ್ನ ನೆಱನನಱಿಪಿದುದೀಗಳ್ (ಆದಿಪು. ೧೧-೮೯); ವನತರುಲತಾಲತಾಂತಮನನಿತಂ ತವೆ ಕೊಂಡಿರೆಂದು ಪುಯ್ಯಲ್ಚುವವೊಲ್ ಜಿನುಗುತ್ತಮಳಿಗಣಂ ಬಱಿಯನೆ ಬರೆ ಬಂದುದು ವಿಲಾಸಿನೀಜನಮಾಗಳ್ (ಶಾಂತೀಶ್ವ. ೧೦-೧೪೫). [ಸಂ.]

**ವನತಿಕ್ತಕೆ** (ನಾ). ಒಂದು ಬಗೆಯ ಔಷಧೀಸಸ್ಯ ; ಅಗರುಶುಂಠಿ: ಪಾಠಾ, ಅಂಬಷ್ಠಾ, ವಿದ್ಧಕರ್ಣೀ. . . ವನತಿಕ್ತಕಾ — ೧೦ ಅಗರುಶೊಂಠಿ ಹೆಸರು, ಅಗಲುಶೊಂಠಿ'' (ಸಿದ್ಧಾಂತಿ. ೧೩೧). [ಸಂ. ವನತಿಕ್ತಕಾ]

**ವನದಂತಿ** (ನಾ). = ವನಕರಿ : ಗಜಪ್ರಿಯಾಂಬರಚರರ್ ಜೀಯಯ್ಯ ಭಾಷ್ಪೆಂದು ಜೀಕರಿಪನ್ನಂ ವನದಂತಿ ಪೋರ್ವುದು ನಿಷಾದ್ಯಾರೂಢದಿಂ ಪೋರ್ವವೋಲ್ (ಶಾಂತಿಪು. ೨-೧೧೦); ಹೊಸಮದದ ವನದಂತಿ ಕದಳಿಯ ಕುಸುರಿಱಿದಂದದಲಿ ಘನಪೌರುಷವ ಮಾಡಿದನೆಂದನವನೀಪಾಲನನುಜಂಗೆ (ಕುಮಾದ್ರೋ. ೮-೨೨). [ಸಂ. ವನದಂತಿನ್]

**ವನದಹನ** (ನಾ). ಕಾಡಿನಲ್ಲಿ ಉಂಟಾಗುವ ಬೆಂಕಿ ; ದಾವಾಗ್ನಿ ; ಕಾಳ್ಗಿಚ್ಚು : ವನದಹನಂ ವನಾಂತರಮನೊರ್ಬುಳಸಾಗಿರೆ ಮುತ್ತಿ ಸುತ್ತಿ ಸುತ್ತಿನ ನಡುವಿರ್ದEರ್ದು3 ಮಾಮರನನಜ್ಪಿದುದೀ ಮರನಂ ತಗುಳ್ದುದೆಂಬನೊಳಿಕೆಯಾಗೆ (ಆದಿಪು. ೯-೫೯); ಹಿಳಿದುರಿವ ಹೆಬ್ಬಿದಿರ ಗಂಟಿನ ಠಳಠಳತ್ಕಾರದಿ ದಿಶಾಮಂಡಳದ ಮೂಲೆಗಳೊಡೆದು ದದ್ಭುತವಾಯ್ತು ವನದಹನ (ಕುಮಾಆ. ೨೦-೫೭). [ಸಂ.]

**ವನದುರ್ಗ** (ನಾ). (ಶತ್ರುಗಳು ಪ್ರವೇಶಿಸಲು ಸಾಧ್ಯವಾಗದ ಹಾಗೆ) ದಟ್ಟವಾದ ಕಾಡಿನಲ್ಲಿ ರಚಿಸಿದ ಕೋಟೆ : ಉದಗ್ರತರುಗಹನದುಷ್ಪ್ರವೇಶಮಪ್ಪ ವನದುರ್ಗದುನ್ನತಿಯುಮನೊಳಕೊಂಡು (ಆದಿಪು. ೧೩-೫೭); ಗಿರಿದುರ್ಗ್ಗ ವನದುರ್ಗ್ಗ ಜಲದುರ್ಗ್ಗಾದ್ಯನೇಕದುರ್ಗ್ಗಂಗಳನಶ್ರಮದಿಂ ಕೊಣ್ಡ ಚಂಡಪ್ರತಾಪದಿಂ (ಎಕ. II, ೧೪೩-೪೩; 1131). [ಸಂ.]

**ವನದುರ್ಗೆ** (ನಾ). ಪಾರ್ವತಿಯ ಹೆಸರುಗಳಲ್ಲಿ ಒಂದು; ಚಾಮುಂಡಿ: ವನದುರ್ಗಾ ಭದ್ರಕಾಳೀ ಚಾಮುಂಡಾಂಬಾ ಗತಿರ್ಮಮ (ಎಕ XIV, ಮೈಸೂರು. ೧೩೩-೨೪; 1857). [ಸಂ. ವನದುರ್ಗಾ]

**ವನದೇವತೆ** (ನಾ). ಅರಣ್ಯದ ಅಭಿಮಾನಿದೇವತೆ : ವನದೇವತೆಗಳ್ಗೆಲ್ಲಂ ಕರುಣಮಾಗೆ ಪಳಯಿಸುವ ಮಾದ್ರಿಯ ಸರಮಂ ಕುಂತಿ ಕೇಳ್ದು (ಪಂಪಭಾ. ೨-೨೨ ವ); ವನದೇವತೆಯರಿರಾ ನಂದನದೇವತೆಯರಿರ . . . ವನಿತೆಯನೊಳಕೊಳ್ಳಿರೇ ಅನಾಥೆಯನೆನ್ನಂ (ಗಿರಿಕ. ೮-೭೭). [ಸಂ. ವನದೇವತಾ]

**ವನದೇವಿ** (ನಾ). ೧. = ವನದೇವತೆ : ವನದೇವೀಪ್ರಾಸಾದಮಿದೆನಿಪಗಕುಳದೊಳ್ ಕಪೋತಸಂಹತಿ ನೆಗೆದತ್ತೆನಿಪ್ಪುವು . . . ಧೂಮತತಿ ತದ್ದಿನದೊಳ್ (ಕಾದಂಪೂ. ೧೪೫); ಪೂವಿನೊಳಾದ ಬೆಡಂಗು ನಾಡೆ ರಂಜಿಸೆ ವನದೇವಿಯರ್ ನಲಿದು ಮನ್ಮಥರಾಜನ ಬರ್ಪುದಕ್ಕೆ ರಾಗಿಸಿ ಮನಮೊಲ್ದು (ಧರ್ಮಾಮೃ. ೧೩-೧೩). ೨. ಪಾರ್ವತಿ; ಚಾಮುಂಡಿ: ''ಚಾಮುಂಡಿ ಚರ್ಚೆ ಭೈರವಿಯೆನಲು ವನದೇವಿ'' (ಮಂಗರಾ. ೫-೧೪). [ಸಂ. ವನದೇವೀ]

**ವನಧಿ** (ನಾ). ಕಡಲು ; ಸಮುದ್ರ : ವನಧಿಪರೀತಭೂತಳದೊಳೀತನೆ ಸೋಲದ ಗಂಡಂ (ಪಂಪಭಾ. ೧-೨೬); ಹಳದಿಯ ಪೈರು ಬೆಳೆಬೆಳೆದು ಹಬ್ಬಿಯಿರೆ ಶಾಲಿವನ ವನಧಿಯ ಸುವಿಸ್ತೀರ್ಣಲಂಬಾಯಮಾನ ಸೈಕತವೇಲೆಯನು ಹೋಲಿ (ಚಿತ್ರಾಂಗ. ೫೨-೧೪೩೩). [ಸಂ.]

**ವನಧಿಪೀತ** (ನಾ). ಸಮುದ್ರವ ನೀರನ್ನೆಲ್ಲ ಕುಡಿದವನು ; ಅಗಸ್ತ್ಯಮುನಿ : ''ವನಧಿಪೀತ [ಪಾಠಾಂ. ಪಿತ್ಸ] ನಗಸ್ತಿ ಘಟಯೋನಿಯೆನಲಗಸ್ತ್ಯನೆನಿಕ್ಕು'' (ಮಂಗರಾ. ೭೬-೧೦). [ಸಂ.]

**ವನಧಿಸಂಭವ** (ನಾ). ಸಮುದ್ರದಿಂದ ಜನಿಸಿದವನು ; ಚಂದ್ರ : ಅನುದಿನದೊಳವಗಡಿಪ ಸಂಸಾರಸಾಗರಕೆ ವನಧಿಸಂಭವನೆನಿಸುವೀ ಕಥಾಕುತುಕಮಂ ಮನದಂದು ಕೇಳ್ವುದು (ನಂದಿಮಾ. ೩-೨). [ಸಂ.]

**ವನನರ** (ನಾ). ೧. ಕಾಡುಮನುಷ್ಯ. ೨. ಕಾಡಿನಲ್ಲಿರುವ ಮನುಷ್ಯಾಕಾರದ ಪ್ರಾಣಿ ; ವಾನರ ; ಕಪಿ : ಕೀರ್ತಿಗೆ ಕೃತಜ್ಞತೆಗೆ ಪೆರ್ಚೆ ವನನರಬಲಂ ಕೊರಳೆತ್ತಿ ಕೈವಿಲಿಸಿ ಕೈವಾರಗೆಯ್ಕಲಾ ಘೇ ಉಘೇಧ್ವನಿಗೆ (ಶ್ರೀರಾಮಾ. ೩೯೩-೮೪೮). [ಸಂ.]

**ವನನಾಗಾರಿ** (ನಾ). ಕಾಡಾನೆಯ ಶತ್ರು ; ಸಿಂಹ : ಅಶ್ವಗ್ರೀವಂ ಆ ತ್ರಿಪೃಷ್ಠಂಗಿದಿರ್ಚೆ ವನನಾಗಾರಿಯನಾಂತ ದಂತಿಶಿಶುವೋಲ್ . . . ನೀಡಿಲ್ಲದಳ್ಕಾಡುಗುಂ (ಶಾಂತಿಪು. ೫-೨೭). [ಸಂ.]

**ವನನಿಧಿ** (ನಾ). = ವನಧಿ : ವನನಿಧಿಯಿಂದಂ ಚಂದ್ರಂ . . . ಒಗೆವಂತೆ ಪುಟ್ಟಿದನನಿವಾರ್ಯಸುತೇಜನೆನಿಪನಿನಜನ ತನಯಂ (ಪಂಪಭಾ. ೧-೧೨೧); ವನನಿಧಿ ಪೊಸಮುತ್ತಿನ ಮಣಿಗಳನಿದೆ ಚಲ್ಲಿದನೆನೆ ಮಣಿನಿಭತಾರೆಗಳ್ಮನಂಗೊಳಿಸಿರ್ದುವು (ರಾಜಶೇ. ೧೧-೩೯). [ಸಂ.]

**ವನನಿವಾಸ** (ನಾ). ಕಾಡಿನಲ್ಲಿ ವಾಸಮಾಡುವಿಕೆ; ಅರಣ್ಯವಾಸ : ಪುರುವಂಶದವರಿಗೆ ವನನಿವಾಸವು ಮುಪ್ಪಿನಲ್ಲಿ ಕುಲವ್ರತವಾಗಿರುವುದಷ್ಟೆ? (ಶಾಕುಂತ. ೧೦೬-೧೯). [ಸಂ.]

**ವನಪಥ** (ನಾ). ಕಾಡಿನ ದಾರಿ ; ಅರಣ್ಯಮಾರ್ಗ : ಮನುಮಾರ್ಗನಿಪುಣನೆನಿಸಿದ ನಿನಗಾಮಿಾ ರಾಜಮಾರ್ಗಮಂ ತೋಱೆ ಜಗಜ್ಜನಕೆ ನಗೆಯಲ್ತೆ ಕಳಭಂ ವನಪಥಮಂ ಯೂಥಪತಿಗೆ ತೋರ್ಪಂತಕ್ಕುಂ (ಆದಿಪು. ೮-೧೨). [ಸಂ.]

**ವನಪಾಲ** (ನಾ). ವನವನ್ನು ರಕ್ಷಿಸುವವನು ; ಉದ್ಯಾನಪಾಲಕ : ಬನದೊಡಮೆಯೊಳಾದೊಲವುಂ ವನಪಾಲನೊಳಾದ ಮೆಚ್ಚುಮೆಕ್ಕೆಕ್ಕೆಯಿನಂದನುಪಿಸೆ (ಮಲ್ಲಿಪು. ೫-೬೦); ವನಪಾಲಂ ಕಾಣ್ಕೆಗೈದಂ ವಿಚಕಿಲದರಲಂ ಪಚ್ಚೆಯಂ ಬಾಳೆವಣ್ಣೊಳ್ಗೊನೆಯಂ (ರಾಜಶೇ. ೧೦-೨). [ಸಂ.]

**ವನಪಾಲಕ** (ನಾ). = ವನಪಾಲ : ವನಪಾಲಕರಂ ಘಾತಿಸಿ ಕೆಯ್ಕೊಂಡು ಬನಮನಿರೆಯಿರೆ . . . ವಿಶ್ವನಂದಿ ತಡೆಯದೆ ಬಂದಂ (ಶಾಂತಿಪು. ೭-೫೭); ಥಾಳಿಯಿಟ್ಟರು ಸುರವನಕೆ . . . ನಡುಗಿದರು ವನಪಾಲಕರು ನಿಂದೋಣಗಿದವು ಹರಿಚಂದನಾದಿಗಳು (ಕುವ್ಯಾಅ. ೨೦-೨೩). [ಸಂ.]

**ವನಪಾಲಿಕೆ** (ನಾ). ತೋಟವನ್ನು ರಕ್ಷಿಸುವವಳು ; ಉದ್ಯಾನಪಾಲಿಕೆ : ಇಂತು ವನಪಾಲಿಕೆ ತಂದಿತ್ತ ಕಾಣ್ಕೆಯಂ ಕೈಕೊಂಡು (ಉದ್ಭಟ. ೯-೧೨ವ); ಮನ್ಮಥನ ಕಳಮವನಮೋಯೆನಲ್ ಕಳಮವನದೊಳ್ ಕಳಮವನಪಾಲಿಕೆಯರೊಪ್ಪುಗುಂ (ಪದ್ಮರಾ. ೮-೧೭). [ಸಂ. ವನಪಾಲಿಕಾ]

**ವನಪ್ರಸ್ಥ** (ನಾ). ೧. ಎತ್ತರವಾದ ಪ್ರದೇಶದಲ್ಲಿರುವ ವನ ; ಪ್ರಸ್ಥಭೂಮಿಯಲ್ಲಿರುವ ಕಾಡು. ೨. ವಾನಪ್ರಸ್ಥಜೀವನವನ್ನು ನಡೆಸುವಿಕೆ. [ಸಂ.]

**ವನಪ್ರಿಯ** (ನಾ). ೧. ಕೋಗಿಲೆ : "ವನಪ್ರಿಯಃ, ಪರಭೃತಃ, ಕೋಕಿಲಃ, ಪಿಕಃ — ೪ ಕೋಗಿಲೆ" (ಸಿದ್ಧಾಂತಿ. ೧೫೯). ೨. ಲವಂಗಪಟ್ಟೆ ; ದಾಲ್ಚಿನ್ನಿ. [ಸಂ.]

**ವನಭೂಮಿ** (ನಾ). ಕಾಡಿನ ನೆಲ ; ಕಾಡುಪ್ರದೇಶ; ಅರಣ್ಯಸ್ಥಳ : ಏಲಾಲವಂಗ ಲವಲೀವೇಲಾವನಭೂಮಿಯೊಳ್ ನಿಧೀಶ್ವರ ಸೈನ್ಯ ವ್ಯಾಲಗಜಂಗಳ್ . . . ಕಣ್ಗೆವಂದುವು (ಆದಿಪು. ೧೩-೨); ಭೂರಿಜಂಬುಮಧೂಕವನಸಸ್ಫಾರರಸಪೂರಾನುಕಲಿತವಿಹಾರ ಸುರಮಹಿಳಾಭಿರಂಜಿಸುವಖಿಳವನಭೂಮಿ (ಕುವ್ಯಾಅ. ೪-೩೮). [ಸಂ.]

**ವನಭೋಜನ** (ನಾ). (ವನವಿಹಾರದ ಸಮಯದಲ್ಲಿ) ಉದ್ಯಾನವನದಲ್ಲಿ ಎಲ್ಲರೂ ಒಟ್ಟಿಗೆ ಮಾಡುವ ಊಟ, — ಸಾಮೂಹಿಕ ಭೋಜನ : ವನಭೋಜನದ ಬಳಿಗೈತರಲರ್ಭಕರು (ಕೃಷ್ಣಗೋ. ೨-೮೧); ಅಪರೂಪದಿನಗಳಲ್ಲಿ ಪ್ರಭುಗಳೂ ಇವರ ಸಂಗಡ ಸೇರಿ . . . ಅರಣ್ಯಗಳಲ್ಲಿ ಸಂಚರಿಸಿ . . . ಎಲ್ಲರೂ ಸೇರಿ ವನಭೋಜನ ಮಾಡಿದುದುಂಟು (ಶಾಂತಲಾ. ೧೨೨). [ಸಂ.]

**ವನಮಂಜರಿ** (ನಾ). ೧. ಕಾಡಿನ ಹೂವುಗಳ ಗೊಂಚಲು. ೨. [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಇಪ್ಪತ್ತೆರಡನೆಯದಾದ ಆಕೃತಿ ಛಂದಸ್ಸಿನ ಒಂದು ವೃತ್ತ : ಭೂತಗಣಾಧಿಪನುಂ ಪಡೆದಾ ಕಡೆಯೊಳ್ನಿಲೆ . . . ನಾಕಿಗನಿಂದಮಿದೇ ಸಕಳೋರ್ವೀತಲದೊಳ್ವನಮಂಜರಿ ಯೆಂಬುದು ನಾಮದೊಳ್ (ಛಂದೋಂಬು. ೨-೧೮೫); ಏಟ್ ಭಗಣಂಗಳುಮೊರ್ಗುರುವುಂ ಬರಲಾ ವನಮಂಜರಿಯಪ್ಪುದು ಕೇಳ್ (ಕೈಪಿಡಿ. ೮೮). [ಸಂ. ವನಮಂಜರೀ]

**ವನಮಕ್ಷಿಕೆ** (ನಾ). ಕಾಡುನೊಣ : "ದಂಶಃ, ವನಮಕ್ಷಿಕಾ — ೨ ಕಾಡುನೊಣ" (ಸಿದ್ಧಾಂತಿ. ೧೬೧). [ಸಂ. ವನಮಕ್ಷಿಕಾ]

**ವನಮಯೂರ** (ನಾ). ೧. ಕಾಡಿನಲ್ಲಿರುವ ನವಿಲು. ೨. [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹದಿನಾಲ್ಕನೆಯದಾದ ಶಕ್ವರಿ ಛಂದಸ್ಸಿನ ಒಂದು ವೃತ್ತ : ಬಂದಿರೆ ಶಶಾಂಕದಿವಸೇಶಮರುದಿಂದ್ರರ್ . . . ಯತಿ ಪದಾರ್ಥದೊಳೆ ಸಿಂದಂದೆಂದುಮಿದ ಕೇಳ ಪೆಸರಿಂ ವನಮಯೂರಂ (ಛಂದೋಂಬು. ೨-೧೪೯); ಒಪ್ಪೆ ಭಜಸಂನಗಗಮುಂ ವನಮಯೂರಂ (ಕೈಪಿಡಿ. ೮೨). [ಸಂ.]

**ವನಮಹತ್ತರ** (ನಾ). ಉದ್ಯಾನದ ರಕ್ಷಣೆಯನ್ನು ವಹಿಸಿಕೊಂಡಿರುವವನು ; ವನಪಾಲಕ: ಆಗಳರಸನವಸರೋಚಿತಫಳಪ್ರಾಪ್ತಿಗೆ ಸಂತಸಂಬಟ್ಟು ವನಮಹತ್ತರಂಗೆ ಪೆಟ್ಟುಗೊಟ್ಟು (ಮಲ್ಲಿಪು. ೪-೩೪); ವನಮಹತ್ತರಂ ವಿಚಿತ್ರಪುಷ್ಪಫಲಹಸ್ತಂ ಬಂದು ಬಾಗಿಲೊಳಿರ್ದವನೆಂಬುದುಂ (ಚಂದ್ರಪು. ೨-೭೫). [ಸಂ.]

**ವನಮಹಿಷ** (ನಾ). ಅಡವಿಯ ಕೋಣ ; ಕಾಡುಕೋಣ : ದವನಕಂ ಬಂದು ಮಹಾಪ್ರತಿಹಾರನಪ್ಪ ಸುಭದ್ರನೆಂಬುದೊಂದು ವನಮಹಿಷನ ಸಾರೆವಂದು . . . ನಿಲ್ಲೆಂಬುದುಂ (ಪಂಚತಂ. ೩೩-೮); ಇದೊ ಇಲ್ಲಿ ವನಮಹಿಷನುದ್ದಿಕೊಂಡ ಮರದಿಗುಡು (ಚಂದ್ರಸ. ೨೮-೮). [ಸಂ.]

**ವನಮಹಿಷಿ** (ನಾ). ಅಡವಿಯ ಎಮ್ಮೆ ; ಕಾಡೆಮ್ಮೆ : ದೆಸೆಗಳ್ಗೆ ಬೆರ್ಚಿ ಮೂಂಕಿಱಿವ ವನಮಹಿಷಿಗಳಿಂ ಮದಹಸ್ತಿಯಂತೆ ಮರವಾಯ್ವ ಪುಲಿಗಳಿನತಿಭಯಂಕರಾಕಾರಮಪ್ಪ ದ್ವೈತವನಕ್ಕೆ ಬಂದು (ಪಂಪಭಾ. ೭-೨೯ ವ). [ಸಂ. ವನಮಹಿಷೀ]

**ವನಮಹೋತ್ಸವ** (ನಾ). ಕಾಡಿನ ಅಭಿವೃದ್ಧಿಗಾಗಿ ಸರ್ಕಾರವು ಪ್ರತಿವರ್ಷವೂ ನಿರ್ದಿಷ್ಟ ದಿನದಂದು ಗಿಡಗಳನ್ನು ನೆಟ್ಟು ಆಚರಿಸಲು ಹಮ್ಮಿಕೊಂಡಿರುವ ಉತ್ಸವದ ರೀತಿಯ ಒಂದು ಕಾರ್ಯಕ್ರಮ : ಭಾರತವು ವನಮಹೋತ್ಸವವನ್ನು ಪ್ರಾರಂಭಿಸಿದುದಕ್ಕಿಂತ ಬಹುಪೂರ್ವದಲ್ಲಿಯೇ ಅವು ಅಲ್ಲಿ ಬೆಳೆಯುತ್ತಲಿದ್ದವು (ಪ್ರಬಂಧ. ೯೫). [ಸಂ.]

**ವನಮಾಲಾಧರ** (ನಾ). ೧. ವನಮಾಲೆಯೆಂಬ ಕಾಡುಹೂವುಗಳ ಹಾರವನ್ನು ಧರಿಸಿದವನು ; ವಿಷ್ಣು. ೨. ವನಮಾಲೆಯೆಂಬ ಸ್ತ್ರೀಯನ್ನು ಹೊಂದಿದವನು; ವನಮಾಲೆಯೆಂಬುವವಳ ಗಂಡ. ೧, ೨: ಶ್ರೀಧರನೆನೆ ಸಕಲಧರಿತ್ರೀಧರನೆನೆ ಸಂದದೊಂದು ಸೊಬಗಿಂ ವನಮಾಲಾಧರನಾದನೆನಲ್ ಮಧುರಾಧರೆ ವನಮಾಲೆ ವಲ್ಲಭಾಗ್ರಣಿಯಾದಳ್ (ಪುಷ್ಪಪು. ೩-೨೨). [ಸಂ.]

**ವನಮಾಲಾಸ್ಪದ** (ನಾ). ೧. ವನಮಾಲೆಯನ್ನು ಧರಿಸಿದವನು ; ಕೃಷ್ಣ. ೨. ಜಲರಾಶಿಗೆ ಅಧಿಪತಿಯಾಗಿರುವವನು ; ವರುಣ. ೧, ೨: ಕುಂಭಕರ್ಣಾವತಾರಂ ದಂತವಕ್ತ್ರಂ ನಿಸರ್ಗವೈರದಿಂದಸುರವೈರಿಯ ಪೆಸರ್ಗಳ್ ತನಗಸಹ್ಯಂಗಳಾಗೆ . . . ವನಮಾಲಾಸ್ಪದನೆಂದು ಯಾದಃಪತಿಯನದಿರ್ಪೆಯುಂ . . . ಮಾಣದೆ (ಜಗವಿ. ೯-೫೩ ವ). [ಸಂ.]

**ವನಮಾಲಿ, ವನಮಾಳಿ** (ನಾ) = ವನಮಾಲಾಧರ ೧: ರಾಜಭವನದೊಳ್ ವನಮಾಲಿ ಲೀಲೆಯಿಂದಿರ್ದಂ (ಜಗವಿ. ೧೭-೬೦ ವ); ವನಮಾಲಿ ಪೊಗಳುತಿರಲು . . . ಅಗತನಯಾವರನೊಪ್ಪುತಿರ್ದನಾಸ್ಥಾಯಿಕೆಯೊಳ್ (ತ್ರಿಪುವಿ. ೧೩-೨೭). **ವನಮಾಳಿ** : ಕಾಳಿಯನಂ ಮರ್ದಿಪ ವನಮಾಳಿಗೆ ಸುಗಿದೀಗಳುಗುೞುತಿರ್ದನೊ ರಾಹುವ್ಯಾಳಂ ಮುನ್ನುಂಡಮರ್ದಂ ಪೇೞನಿಸಿದುದರಲ ಸುರಿವ ಬಲ್ಸರಿ ಸುರರಾ (ಜಗವಿ.೩-೧೦೧). [ಸಂ. ವನಮಾಲಿನ್]

**ವನಮಾಲೆ, ವನಮಾಳೆ** (ನಾ). ೧. ಕಾಡುಗಳ ಸಾಲು ; ವನಪಂಕ್ತಿ : ವನಮಾಲೆಯಾಳ್ ವಿಹಾರಿಸಿ ವನಮಾಲೆಯೊಳೆಸಗುವಬ್ಧಿನೀಮಾರುತನಿಂ ವನಮಾಲೆ ಪೊಳೆಯೆ ಕೃಷ್ಣಂ ವನಮಾಲಯಮಾಯ್ತು ಲೀಲೆಗೆಂದೆನೆ ಸುೞಿದಂ (ಜಗವಿ. ೧೪-೬೨); ವನಮಾಲಿಪರಿಶೋಭೆಯಿಂದನಿಮಿಷೋದ್ಯತ್ಪ್ರೀತಿಯಿಂ . . . ವಾರಿಧಿ ವಾರಿಜಾಕ್ಷನವೊಲೇಂ ಚೆಲ್ವಾಯ್ತೊ ಭೂಭಾಗದೊಳ್ (ದಶಕು. ೧-೧೮). ೨. ಕಾಡಿನ ಹೂವುಗಳಿಂದ ರಚಿಸಿದ ಮಾಲೆ, — ಹಾರ ; IP ಎಲ್ಲ ಋತುಗಳ ಹೂವುಗಳಿಂದ ಕೂಡಿದ್ದು, ಮಧ್ಯದಲ್ಲಿ ಕದಂಬಹೂಗಳನ್ನುಳ್ಳ, ಕಾಲಿನವರೆಗೂ ನೇಲುವಂತೆ ಇರುವ ಒಂದು ಬಗೆಯ ವಿಶೇಷವಾದ ಹಾರ ; ಇದನ್ನು ಕೃಷ್ಣನು ಧರಿಸುತ್ತಿದ್ದನೆಂಬ ಪ್ರತೀತಿಯಿದೆ : ವನಮಾಲಿಯೊಳೆಸಗುವಬ್ಧಿನೀಮಾರುತನಿಂ ವನಮಾಲೆ ಪೊಳೆಯೆ ಕೃಷ್ಣಂ ಮನಮಾಲಯಮಾಯ್ತು ಲೀಲೆಗೆಂದೆನೆ ಸುೞಿದಂ (ಜಗವಿ. ೧೪-೬೨). ೧, ೨: ಹರಿಯಂತೆ ಚಾರುವನಮಾಲಾಭಿರಂಜಿತಂ ಹರನಂತೆ ಭೋಗಿನಿಕರಾಲಂಕೃತಂ . . . ಎನೆ ತಾರಕಾಂಬಕನ ಪೊಂಗೋಂಟೆ ಕಣ್ಗೆಸೆದುದು (ಚಿಬಪು. ೪೧-೧೯). ೩. ನೀರಿನ ಸಮೂಹ ; ಜಲರಾಶಿ : ವನಮಾಲೆಯೊಳ್ ವಿಹಾರಿಸಿ ವನಮಾಲೆಯೊಳೆಸಗುವಬ್ಧಿನೀಮಾರುತನಿಂ ವನಮಾಲೆ ಪೊಳೆಯೆ (ಜಗವಿ. ೧೪-೬೨). **ವನಮಾಳೆ** : ೧, ೨: ವನಮಾಳಾಮಂಡನಂ ವಾರಿರುಹನಯನಂ . . . ಮಾರ್ತಾಂಡನಂತಾ ವಿಷಯದ ಖಿಳಸದ್ವಸ್ತುಸಂಭೂತಪೂತಂ (ಶಾಂತೀಶ್ವ. ೧೩-೧೨೯). [ಸಂ. ವನಮಾಲಾ]

**ವನಮಾಳಿ** 'ವನಮಾಲಿ' ನೋ.

**ವನಮಾಳೆ** 'ವನಮಾಲೆ' ನೋ.

**ವನಮುದ್ಗ** (ನಾ). ಕಾಡು ಹೆಸರುಕಾಳು : "ಮಕುಷ್ಟಕಃ, ಮಯಷ್ಟಕಃ, ವನಮುದ್ಗಃ — ೩ ಕಾಡು ಹೆಸರುಕಾಳು" (ಸಿದ್ಧಾಂತಿ. ೨೩೯). [ಸಂ.]

**ವನಮೃಗ** (ನಾ). ೧. ಕಾಡುಪ್ರಾಣಿ ; ವನ್ಯಮೃಗ : ವನಚರಿ ಬರೆ ವಿದ್ಯುಲ್ಲೇಖೆ ಬರ್ಪಂತೆ ಬೆನ್ನಂ ವನಮೃಗರುಧಿರೋಲ್ಲಿಪ್ತಾಂಗನುತ್ತುಂಗಚಾಪಂ . . . ಕಿರಾತಂ

ಜನಿಯಿಸಿದನಿದಂ ಸಾಮ್ಯಂ ಬರಲ್ ಶೋಣಾಮೇಘಂ (ಆದಿಪು. ೯-೩೨); ಟಂಕಾರರವಂ ಕಿವಿಯಂ ಭೋಂಕೆನೆ ಮಿಗೆ ತೀವೆ ಪುಗಲ್ ದೆಸೆಗಾಣದೆ ತಳ್ಳಂಕಗೊಳ್ಳುತಿರ್ಪ ವನಮೃಗಮಂ ಕವಿತಂದೆಚ್ಚುದಾಗ ವನಚರನಿಕರಂ (ಪಾರ್ಶ್ವಪು. ೧೨-೭೭). ೨. ಕಾಡಿನಲ್ಲಿರುವ ಜಿಂಕೆ ಮುಂತಾದ ಸಾಧುಪ್ರಾಣಿ : ಮುನಿದಯ್ ನೂಱುಂ ಕುನ್ನಿಗಳನಿತುಮನೊರ್ಮೊದಲೆ ತೋಱೆ ಕೊಳ್ಕೊಳಿಸೆ ಮಹಾಮುನಿ ತಳರದೆ ಮೇರುವೊಲಿರೆ ವನಮೃಗದವೊಲುರ್ಕನುಱಿದು ಸುಱಿದುವು ನಾಯ್ಗಳ್ (ಯಶೋಚ. ೪-೮೩). [ಸಂ.]

ವನರಾಜಿಕ್ರೀಡೆ (ನಾ). ಕಾಡುಗಳಲ್ಲಿ ವಿಹರಿಸುವಿಕೆ ; ವನವಿಹಾರ : ವನರಾಜಿ ಕ್ರೀಡೆಯಂ ಯೌವನವನದೊಳೆ ತೋಱಲ್ . . . ಬಲ್ಲ ವಿದ್ಯಾಧರಸ್ತ್ರೀಜನದಿಂದಂ ಕಣ್ಗೆವಂದಂ ಸುಕವಿಜನೋಮಾನಸೋತ್ತಂಸಹಂಸಂ (ಆದಿಪು. ೧-೮೩).
[ಸಂ. ವನರಾಜಿಕ್ರೀಡಾ]

ವನರಾಶಿ (ನಾ). ೧. ಕಾಡುಗಳ ಸಮೂಹ ; ವನಪಂಕ್ತಿ. ೨. ನೀರಿನ ರಾಶಿ ; ಸಮುದ್ರ. ೧,೨: ವನರಾಶಿಯೊಳಗೆ ಬೆಳೆದೆಸೆವನೇಕ ವಿದ್ರುಮದ ಲತೆಯ ಪೊಂಪುಳಿಯವೊಲಾ ವನರಾಶಿಯೊಳಗೆ ಬೆಳೆದೆಸೆವನೇಕ ವಿದ್ರುಮದ ಲತೆಯ ಪೊಂಪುಳಿ ರಯ್ಯಂ (ಪುಷ್ಪಪು. ೯-೨೧). [ಸಂ.]

ವನರುಗ್ಬಾಂಧವ (ನಾ). ಕಮಲದ ಗೆಳೆಯ ; ಸೂರ್ಯ : ವಿಷ್ಣುವೇ ವನರುಗ್ಬಾಂಧವಬಿಂಬದೊಳ್ ನೆಲಸಿ ರಕ್ಷಿಕ್ಕುಂ ಜಗದ್ವ್ರಾತಮಂ (ವಿಷ್ಣುಪು. ೨-೨-೧೮೭).
[ಸಂ.]

ವನರುಹ (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ : ವನರುಹಮೆಡ್ಡಮಪ್ಪ ಮೊಗಮಾದ ತಳಿರ್ತಳಮಾದ ಕೋಕಿಳಧ್ವನಿ ಸರಮಾದ . . . ಮಲ್ಲಿಗೆಯ ತುಂಬಿಯ ಕೂಟಮೆ ನೋಟಮಾದ ನಂದನವನಲಕ್ಷ್ಮಿ ಕಣ್ಗೆಸೆದು ತನ್ನನೆ ನೋಡಿಸಿದಳ್ ತದಾರ್ಯರಿಂ (ಶಾಂತಿಪು. ೭-೧೧); ಎನಗಾಗದ ವನರುಹಮಂ ಮನೆಮಾಡಿದಳೆಂದು ಕಂಡು ಮುಳಿವಂ ಶಶಿ (ರಾಜಶೇ.೧೨-೧೯). [ಸಂ.]

ವನರುಹನಾಭ (ನಾ). ಹೊಕ್ಕುಳಲ್ಲಿ ತಾವರೆಯನ್ನುಳ್ಳವನು ; ಪದ್ಮನಾಭ ; ವಿಷ್ಣು : ವನರುಹನಾಭನಾಭಿ ಸಿತಪಂಕಜಬೀಜಮೊ ಪದ್ಮಗರ್ಭನಾನನದೆ ಪೊದಳ್ದ ವೇದವಿಮಳಾಕ್ಷರಮಾಲೆಯೊ . . . ಎನಲ್ ವನಿತೆಯ ಮೌಕ್ತಿಕಾಕ್ಷವಲಯಂ ಕೊರಲೊಳ್ ಕರಮೊಪ್ಪಿ ತೋಱುಗುಂ (ಕಾದಂಪೂ. ೭೭೪); ವನರುಹನಾಭಂ ದುರ್ಯೋಧನನೆಂದೊಡೆ ಕೇಳ್ದು ಭೀಮಸೇನನ ಜಡಿದಂ (ಗದಾಯು. ೭-೪೨). [ಸಂ.]

ವನರುಹಭವ (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ : ವನರುಹಭವನೆನಿಸಿದ ದಂಡನಾಯಕಂ ಕೇಶಿ ತಿರ್ದೆ ಪೇೞ್ದಂ ಕವಿರನ್ನನ ಪೇೞ್ದ ಕೃತಿ ಯಶಶ್ರೀವನಿತೆಗಲಂಕೃತಿ ಯೆನಿಪ್ಪುದೊಂದಚ್ಚರಿಯೇ (ಗದಾಯು. ೧-೫೧). [ಸಂ.]

ವನರುಹಭವಾಂಡ (ನಾ). ಬ್ರಹ್ಮಾಂಡ : ವನರುಹಭವಾಂಡದೊಳಗೈವತ್ತು ಕೋಟಿಯೋಜನದ ವಿಸ್ತೀರ್ಣದಿಳೆಯಂ ಸಪ್ತಶರನಿಧಿಗಳನುವೇಷ್ಟಿಸಿರಲ್ (ಜೈಮಿಭಾ. ೨-೧). [ಸಂ.]

ವನರುಹಮಿತ್ರ (ನಾ). ತಾವರೆಯ ಮಿತ್ರ ; ಸೂರ್ಯ : ವನರುಹಮಿತ್ರನಸ್ತಗಿರಿ ಮಸ್ತಕದಲ್ಲಿರೆ ನೋಡಿ ಬಾಡಿ ಬೆಚ್ಚನೆ ಬಿಸುಸುಯ್ದು ಬೇವಸದೆ ಬೆರ್ಚಿದುವಕ್ಕಟ ಜಕ್ಕವಕ್ಕಿಗಳ್ (ರಾಜಶೇ. ೧೩-೨೮). [ಸಂ.]

ವನರುಹವಿಷ್ಟರ (ನಾ). ಕಮಲವನ್ನು ಆಸನವಾಗಿ ಉಳ್ಳವನು ; ಬ್ರಹ್ಮ : ವನರುಹವಿಷ್ಟರಂ ರುಚಿರರೇಚಕಪೂರಕಕುಂಭಕಕ್ರಿಯಾಮನಮಿರೆ ನೆತ್ತಿಯೊಳ್ಪರ ನಿಮೀಲಿತದೃಷ್ಟಿ ನಿವಿಷ್ಟನಾಗೆ . . . ಮಿನುಗುತುಮಿರ್ದಂ (ಗದಾಯು. ೭-೧೫). [ಸಂ.]

ವನರುಹೋದರ (ನಾ). ೧. ನಾಭಿಯಲ್ಲಿ ತಾವರೆಯನ್ನುಳ್ಳವನು ; ವಿಷ್ಣು. ೨. [ಛಂದ] ಅಂಶಗಣಗಳಲ್ಲಿ ಒಂದು ; ವಿಷ್ಣುಗಣ : ವನಜಸಂಭವಗಣಮಕ್ಕೆ ಮೊದಲೊಳತ್ತಲ್ ವನರುಹೋದರಗಣಯುಗಳಮದಕ್ಕೆ ರುದ್ರನದಱಿಂತ್ಮದೊಳಂದಿರ್ಕೆ ನಾಲ್ಕೆ ಗಣ (ಛಂದೋಂಬು. ೫-೨೫೫). [ಸಂ.]

ವನಲತೆ (ನಾ). ೧. ಕಾಡಿನಲ್ಲಿರುವ ಬಳ್ಳಿ ; ಅರಣ್ಯಲತೆ : ಭರತನ ಕಣ್ಗೆಱಕಮನೆ ಪಡೆದು ಚೆಲ್ಪಿಂ ಮಱಿಸಿದುವುದ್ಯಾನಲತೆಗಳಂ ವನಲತೆಗಳ್ (ಆದಿಪು. ೧೧-೯೩). ೨. ಉದ್ಯಾನದಲ್ಲಿರುವ ಬಳ್ಳಿ : ವನಲತೆ ಕಾಮಿನೀನಿಕರಮಾದುದೊ ಕೈರವಮಿತ್ರಲೇಖೆ ಮಾನಿನಿಯರ ತಂಡಮಾದುದೊ . . . ತಾನೆನಲ್ಕಧೂಜನಮಿರದಂಬು ಕೇಳಿಗೊಲವಿಂ ನಡೆದತ್ತವನೀಶನಾಜ್ಞೆಯಿಂ (ತ್ರಿಪುವಿ. ೨೪-೭೫); ತನ್ನೀತನುವಲ್ಲಿಶ್ರೇಣಿ ಮುಂ ರಂಜಿಸೆ ವನಲತೆ ತಾಂ ಪಿಂತೆ ಬಂದಂ ಬಸಂತಂ (ರಾಜಶೇ. ೯-೪೪). ೩. [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಇಪ್ಪತ್ತಾರನೆಯದಾದ ಉತ್ಕೃತಿ ಛಂದಸ್ಸಿನ ಒಂದು ವೃತ್ತ : ಅದಿತಿಜನಿವಹಮೆ ಮದಗಜಡೆದೆಗಳೊಳೊದವಿರೆ ಮೃದುಪದರಚನೆಯೊಳೊದವಿದೊಡಿದನಱಿವುದು ವನಲತೆ ಪೆಸರಿಂದಂ (ಛಂದೋಂಬು. ೨-೧೯೯). [ಸಂ. ವನಲತಾ]

ವನವಲ್ಲರಿ (ನಾ). ಕಾಡಿನಲ್ಲಿರುವ ಬಳ್ಳಿ ; ಅರಣ್ಯದ ಲತೆ: ಗಿರಿಗಳಿರ ತರುಗಳಿರ ವನವಲ್ಲರಿಗಳಿರ ಮೃಗಗಳಿರ ರಾಮನ ತರುಣಿಯನು ರಾವಣನು ಕಳವಿನಲೊಯ್ದನೆಂಬುದನು ತರಣಿಕುಲಜಂಗಱುಹುವುದುಮಯೆಂದರಸಿ . . . ಒದಱಿದಳು ದೆಸೆದೆಸೆಗೆ ಬಾಯ್ಬಿಡುತ (ತೊರರಾ. ೩-೧೦-೩೩).
[ಸಂ. ವನವಲ್ಲರೀ = ಒಂದು ಬಗೆಯ ಹುಲ್ಲು]

ವನವಶಿ 'ವನವಾಸೆ' ನೋ.

ವನವಸಿ 'ವನವಾಸೆ' ನೋ.

ವನವಹ್ನಿ (ನಾ). ಕಾಡಿನ ಬೆಂಕಿ ; ದಾವಾನಲ ; ಕಾಳ್ಗಿಚ್ಚು : ಆ ಮಹಾವನವಹ್ನಿ ಭೂತಸ್ತೋಮ ಸಂಪ್ರತಿ ಕರ್ಮಶೌರ್ಯೋದ್ದಾಮವವಗಾಹಿಸುತ ಬರುತಿರೆ ಮುಂದೆ ಚೂಣಿಯಲಿ ಧೂಮವಿಳಿದುದು (ಕುಮಾವ್ಯಾ. ೨೦-೫೯). [ಸಂ.]

ವನವಾಟ (ನಾ). ೧. (ಕಾಡಿನಲ್ಲಿರುವ) ಮರಗಳ ಗುಂಪು, —ಶ್ರೇಣಿ, —ತೋಪು. ೨. ದೇವಲೋಕದ ಒಂದು ವೃಕ್ಷಪಂಕ್ತಿಯ ಹೆಸರು : ವರ್ತುಳಶ್ರೇಣಿ ವನವಾಟಚಕ್ರಾವರ್ತ ತೋಪು ಸಾಲು ಗೋಪುರಚಿತ್ರ ನರ್ತನವಾಟಿ ಕ್ರೀಡಾರಾಜಿ ಚಿತ್ರವ್ಯೂಹ ಕೋಣ ಕ್ರಮಗಳೆಂಬ ಹನ್ನೊಂದುವೃಕ್ಷಸನ್ನಿವೇಶಗಳುಂ ನಂದನೀಯಗಳಾಗಿರ್ಕುಂ (ವಿವೇಕ. ೨೧೧). [ಸಂ.]

ವನವಾಟಿ (ನಾ). = ವನವಾಟ ೧: ಗೋವತ್ಸಲೀಲೆ ತೊರೆಕರೆಯ ಮೇಲೆ ವನವಾಟಿ ಸೆಜ್ಜೆಸಾಲೆ (ಸೂರ್ಯವಾ. ೩೫-೧). [ಸಂ. ವನವಾಟೀ]

ವನವಾಶಿ 'ವನವಾಸೆ' ನೋ.

ವನವಾಸ (ನಾ). ೧. ಕಾಡಿನಲ್ಲಿ ವಾಸಮಾಡುವುದು ; ಅರಣ್ಯದಲ್ಲಿ ಜೀವಿಸುವುದು : ನೀಗಿದುದೀಗಳೆಮ್ಮ ವನವಾಸಪರಿಶ್ರಮಮಿಾಗಳಾಳ್ವೆವಾ ಸಾಗರಮೇಖಳಾವೃತಧರಿತ್ರಿಯಂ (ಪಂಪಭಾ. ೭-೭೦); ಕೇಳಿಕೆಯ ನವಿಲುಗಳ ತುಂಬಿಯ ಮೇಳವದ ಗೀತದ ವಿನೋದವಲಾಳಿದರು ವನವಾಸಸಾಮ್ರಾಜ್ಯವನು ಸೊಗಸಿನಲಿ (ಕುಮಾವ್ಯಾ. ೧೧-೧). ೨. ಕಾಡಿನಲ್ಲಿ ವಾಸಿಸುವವನು ; ಬೇಡ ; ಕಿರಾತ. ೩. ಒಂದು ದೇಶದ ಹೆಸರು ; ಈಗಿನ ಬನವಾಸಿ : ವನವಾಸದೇಶಾಧಿಪತಿ ಕುನ್ದರಾಜವಿಜ್ಞಾಪನದಿಂದಂ ಕಲಿದೇವೇಶ್ವರಸ್ಸಯಂಭುದೇವರ ಗನ್ಧ ದೀಪ ಧೂಪ ನಿವೇದ್ಯಕ್ಕಂ . . . ಅಳೆದು ಕೊಟ್ಟ ಗಟ್ಟೆ ಮತ್ತರೆರಡು (ಮೈಎಂ. ೧೯೨೯, ೬೫-೫; 1024). 'ವನವಾಸಿ$_2$' ಪರ್ಯಾ. ೪. (ಆಲಂ) ಬಹಳ ಕಷ್ಟದ ಬದುಕು ; ತೊಂದರೆಯ ಜೀವನ : ತಮಗೂ ತಮ್ಮ ಕುಟುಂಬಕ್ಕೂ ತಕ್ಕ ವಾಸದ ಮನೆ ದೊರಕದೆ 'ವನವಾಸ' ಮಾಡಬೇಕಾಗಿ ಬಂದಾಗ (ಶಿಕ್ಷದ. ೭೭೭); 'ನಿನಗೂ ವನವಾಸಾ, ಬಿಂದಗೂ ವನವಾಸಾ' ಮಾತು ಮುಗಿಸುವಷ್ಟರಲ್ಲಿ ಅವರ ಕಂಠ ತುಂಬಿ ಬಂದಿತ್ತು (ವೈನಿ. ೪೨೧).
[ಸಂ.]

ವನವಾಸಿ$_1$ (ನಾ). ೧. ಕಾಡಿನಲ್ಲಿ ವಾಸಮಾಡುವವನು ; ಬೇಡ ; ಕಿರಾತ. ೨. ಕಾಡಿನಲ್ಲಿ ವಾಸಿಸುತ್ತ ವಾನಪ್ರಸ್ಥಜೀವನವನ್ನು ಮಾಡುವಂಥದು : ಕಾನನದೊಳಿಹ ಕಾಗೆ ವನವಾಸಿಯೆ (ಪುರಂದ. ೩-೧೯-೨). ೩. ತಪಸ್ವಿ ; ಋಷಿ.
[ಸಂ. ವನವಾಸಿನ್]

ವನವಾಸಿ$_2$ (ನಾ). ಒಂದು ನಾಡಿನ ಹೆಸರು ; ಬನವಾಸಿನಾಡು ; IP ಈಗಿನ ಉತ್ತರಕನ್ನಡಜಿಲ್ಲೆಯ ಸಿರಸಿತಾಲ್ಲೂಕಿನ ಒಂದು ಊರಿನ ಹೆಸರು : ಕಿಸುವೊೞಲ್ಪಾಮಸ್ಥಾನಮಧಿವಸತಿ ವಿಜಯಸ್ಕಂಧಾವಾರೇ ಆಲುಪೇಂದ್ರಂ ದ್ರಷ್ಟುಂ

ವನವಾಸೀಮಾಯಾತವತಿ ವಿಜಯಾದಿತ್ಯವಲ್ಲಭೇಂದ್ರೇ (ಎಇ. XXXII, ೩೨-೩೨; 708); ಆರಂಕುಸವಿಟ್ಟೊಡಂ ನೆನೆವುದೆನ್ನ ಮನಂ ವನವಾಸಿದೇಶಮಂ (ಪಂಪಭಾ. ೪-೩೦).

ವನವಾಸಿಪನ್ನಿರ್ಚ್ಛಾಸಿರ = ಹನ್ನೆರಡುಸಾವಿರ ಗ್ರಾಮಗಳಿಂದ ಕೂಡಿದ ವನವಾಸಿ ಎಂಬ ನಾಡು : ಶ್ರೀಮನ್ಮಹಾಮಣ್ಡಳೇಶ್ವರ ಕೀರ್ತ್ತಿವರ್ಮ್ಮದೇವರ್ವ್ವನವಾಸಿಪನ್ನಿರ್ಚ್ಛಾಸಿರಮನೇಕಛತ್ರಛಾ[ಯೆ]ಯಿಂದಮಾಳುತ್ತಮಿರೆ (ಸೌಇಇ. XX, ೪೧-೧೫; 1068). [ಸಂ ವನವಾಸೀ]

ವನವಾಸೆ, ವನವಶಿ, ವನವಸಿ, ವನವಾಶಿ (ನಾ). = ವನವಾಸಿ₂: ಕೊಯತೂರುಚಂಗಿ ವನವಾಸೆ ಹಾನುಂಕಲಕೊಂಡ ಶ್ರೀ ನಾರಸಿಂಹದೇವರು ಪೃಥಿವಿರಾಜ್ಯಂಗೆಯುತ್ತಿರೆ (ಎಕ. IV (R), ಚಾಮರಾ. ೧೪೩-೨; 1169). ವನವಶಿ : ಕೊಯಿತ್ತೂರ್ ಉಚ್ಚಙ್ಗಿ ವನವಶಿ ಪಾನುಙ್ಗಲ್ ಕಡಿಯಾಗಕೊಣ್ಡ ಶನಿವಾರಸಿದ್ಧಿ ಗಿರಿದುರ್ಗ್ಗಮಲ್ಲ ಪ್ರತಾಪಪೊಯ್ಸಳ ವೀರವಲ್ಲಾಳದೇವನ್ (ಎಕ. IV (R), ಚಾಮರಾ. ೪೧೯-೪; 12ನೆಯ ಶತ). ವನವಸಿ : ಕೊಯಾಜೂರ್ ವನವಸಿಪಲಸಿ[ಗೆ]ಪಾನುಙ್ಗಲುಚ್ಚಙ್ಗಿ ಪೆಟ್ಟುಙ್ಗೆಯಾದಿಯಾಗಕೊಣ್ಡ ಭುಜಬಲ ವೀರಗಂಗ ವಿಷ್ಣುವರ್ದ್ಧನ (ಎಕ. III (R), ಗುಂಡ್ಲುಪೇ, ೧೧೧ ೭; 1188). ವನವಾಶಿ : ಎಡೆದೊಱೆನಾಡುಂ ತುಡರ್ವ್ವನವೇಲಿಯುಂ [ಪಡ]ರ್ವ್ವನವಾಶಿಯುಂ (ಎಕ. III (R), ನಂಜನ. ೨೧೧-೪; 1021). 'ಬನವಾಸಿ' ಪರಾ. [< ಸಂ. ವನವಾಸೀ]

ವನವಿಹರಣ (ನಾ). ವಿನೋದಕ್ಕಾಗಿ ಉದ್ಯಾನವನದಲ್ಲಿ ಸುತ್ತಾಡುವುದು ; ವನವಿಹಾರ : ಅರಸನಾಕೆಯರ ವನವಿಹರಣಶ್ರಮಮಂ ವನಜವನವಿಹರಣಶ್ರಮದಿಂ ಕಳೆಯಲೆಂದುಮಲ್ಲಿಂ ಪೊಱಮಟ್ಟು ನಡೆವಲ್ಲಿ (ಚಂದ್ರಪ್ರ. ೭-೧೧೬ ವ); ವನವಿಹರಣಸಮುಚಿತಪರಿಮಿತ ಪರಿಜನಾವೃತನುಂ . . . ನಡೆತರ್ಪಾಗಳ್ (ರಾಜಶೇ. ೧೦-೧೫ ವ). [ಸಂ.]

ವನವಿಹಾರ (ನಾ). = ವನವಿಹರಣ : ಅಂತು ವನವಿಹಾರಾನಂತರಂ ಭರತೇಶಚಕ್ರವರ್ತಿ . . . ಅಂತಃಪುರಕರಿಣೀಗಣಂಬೆರಸು ಗಂಗಾಜಲಕ್ರೀಡಾಸಕ್ತಚಿತ್ತನಾಗಿ ತತ್ಪರಿಸರಪ್ರದೇಶಮನೆಯ್ದೆವಂದು (ಆದಿಪು.೧೧-೧೩೫ ವ); ಮೃಗಶಿಶುನೇತ್ರೆಗೂಡಿ ನೃಪಪುಂಗವನುದ್ಭಟ ಭೂಮಿಪಾಲನೊಯ್ಯಗೆ ನಡೆತಂದನು ವನವಿಹಾರವಿನೋದವಿಲಾಸಮಾನಸಂ (ಉದ್ಭಟ. ೯-೮೧). [ಸಂ.]

ವನವೃಕ್ಷ (ನಾ). = ವನತರು ೧: ವನವೃಕ್ಷಗ್ರಸನಕ್ಕೆ ಮುಂಬರಿವ ದಾವಜ್ವಾಲೆಯೆಂಬಂತೆ ಬಲ್ಮನಿಸಿಂ ಖೇಚರವೀರಸೈನ್ಯಸಹಿತಂ ಮೇಲೆತ್ತಿ ಬಂದಾಜಿಯೊಳ್ . . . ಸೂಱೆಗೊಂಡಂ (ಕುಸುಮಾ. ೧೪-೮೬). [ಸಂ.]

ವನವೃಕ್ಷನ್ಯಾಯ (ನಾ). [ತರ್ಕಶಾ] ಅನೇಕ ಮರಗಳ ಸಮೂಹದಲ್ಲಿ, ಒಂದು ಮರವು ಆ ಸಮೂಹದ ಅಂಗ ಎಂಬಂತೆ ಅನೇಕ ವಸ್ತುಗಳ ಸಮಷ್ಟಿರೂಪದಲ್ಲಿ, ಒಂದು ವಸ್ತುವು ಅದರ ಅಂಗ ಎಂಬುದನ್ನು ಸ್ಪಷ್ಟಪಡಿಸುವ ದೃಷ್ಟಾಂತ : ಹಿರಣ್ಯಗರ್ಭನ ಲಿಂಗಶರೀರ ವನವೃಕ್ಷನ್ಯಾಯದಿಂದ ಸಕಲಜೀವಲಿಂಗಶರೀರಗಳ ಸಮಷ್ಟಿ ಸಮೂಹ . . . ವನವೃಕ್ಷನ್ಯಾಯದಿಂದ ಸಮಸ್ತ ಸ್ಥೂಲಶರೀರಸಮಷ್ಟಿಯೇ ವಿರಾಟ್ಪುರುಷನು (ಹಿಂದಸಾ. ೧೯೬). [ಸಂ.]

ವನಶಿಖಿ (ನಾ). = ವನವಹ್ನಿ : ಲಯಾನಲಲುಠತ್ಪಾಪಾಗ್ನಿಕೋಪಾಗ್ನಿಶೋಷಿತ ಯುದ್ಧೋದ್ಧತಜೀವನಂ ವನಶಿಖಿಪ್ರೋದ್ಯತ್ಪ್ರತಾಪಂ. . . . ಭರತಶ್ರೀಮಚ್ಚಮೂವಲ್ಲಭಂ (ಎಕ. VI, ಚಿಕ್ಕಮ. ೧೬೧-೯೧; 1137). [ಸಂ. ವನಶಿಖಿನ್]

ವನಶೃಂಗಾಟ (ನಾ). ಒಂದು ಬಗೆಯ ಮುಳ್ಳಿನ ಗಿಡ ; ನೆಗ್ಗಿಲು : "ಪಲಂಕಷಾ . . . ಗೋಕ್ಷುರಕಃ, ವನಶೃಂಗಾಟಃ — ೭ ಪಲ್ಲೇರುಗಿಡದ ಹೆಸರುಗಳು, ನೆಗ್ಗಲು ಹೆಸರುಗಳು" (ಸಿದ್ಧಾಂತಿ. ೧೩೪). [ಸಂ.]

ವನಷಂಡ (ನಾ). ೧. ಉದ್ಯಾನವನದಲ್ಲಿರುವ ಮರಗಳ ಗುಂಪು,— ಸಮೂಹ : ವಾಪೀಕೂಪಸರೋವರಸಮನ್ವಿತವನಷಂಡಮಧ್ಯಗತಪಂಚಪಂಚಪ್ರಾಸಾದಪಂಕ್ತಿಗಳುಮಂ (ಚಾವುಂಪು. ೪೪); ಏಕೈಕಜಿನಗೃಹಾಂತರಿತವಾಪೀಕೂಪಕಮಲಾಕರಮಂಡಿತವನಷಂಡಮಧ್ಯಗತಪಂಚಪಂಚಪ್ರಾಸಾದಪಂಕ್ತಿಗಳಿಂದಂ (ಅಜಿಪು. ೭-೨೦ ವ). ೨. ಮರಗಳ ಗುಂಪಿನಿಂದ ಕೂಡಿದುದು ; ಕಾಡು : ಚಂಡಮುನಿಪತಿ ದಕ್ಷಿಣದ ಭೂಮಂಡಲದ ಪಥವಿಡಿದು ಗಿರಿವನಷಂಡವನು ಕಳಿದೈದಿದನು ಕಾಕುತ್ಸ್ಥಭೂಪತಿಯ (ತೊರರಾ. ೩-೨-೭). [ಸಂ.]

ವನಸಂಪಗೆ , ವನಸಂಪಿಗೆ (ನಾ). ಕಾಡುಸಂಪಿಗೆಮರ ಮತ್ತು ಅದರ ಹೂವು : "ಯಮಳಚ್ಛದಃ,—ಕಂಚಿವಾಳ, ವನಸಂಪಗೆ" (ಓಷಧಿ. ೧೩೧). ವನಸಂಪಿಗೆ : ಹಾಲೆ ಹೊಂಗೇತಕಿ ವನಸಂಪಿಗೆ ಹಿಂತಾಲ ಹೆಮ್ಮರ ಕಮ್ಮರಗಳು . . . ಅಡರಿ ಮುಸುಕಿಹವು (ಕಂನವಿ. ೧೮-೩೬); ಪುಷ್ಪವೃಕ್ಷಗಳಲ್ಲಿ ದೊಡ್ಡವೃಕ್ಷಗಳಾಗತಕ್ಕ ಸುಂದರಪುಷ್ಪ ಗಿಡಗಳು ಸಂಪಿಗೆ ವನಸಂಪಿಗೆ ನಾಗಸಂಪಿಗೆ ಕೋಲಸಂಪಿಗೆ ಕೆಂಡಸಂಪಿಗೆ ದುಂಡುಸಂಪಿಗೆ ಇವುಗಳೆಲ್ಲ ಬೀಜಗಳಾಗಿವೆ (ಕೃಷಿಪ್ರ. ೨೦೦). [< ಸಂ. ವನಚಂಪಕ]

ವನಸಂಪಿಗೆ 'ವನಸಂಪಗೆ' ನೋ.

ವನಸಿಂಹನ್ಯಾಯ (ನಾ). [ತರ್ಕಶಾ] ಲೌಕಿಕನ್ಯಾಯಗಳಲ್ಲಿ ಒಂದು ; ವನದಿಂದ ಸಿಂಹಕ್ಕೂ ಸಿಂಹದಿಂದ ವನಕ್ಕೂ ಪರಸ್ಪರ ರಕ್ಷಣೆ ಒದಗಿ, ಇವೆರಡೂ ಒಟ್ಟಾಗಿದ್ದಲ್ಲಿ ಜಯಿಸಲಶಕ್ಯವಾಗುತ್ತದೆ ಎಂಬ ದೃಷ್ಟಾಂತ : ಘನದೋರ್ದಂಡಪ್ರಭಾವಾರ್ಜಿತಧರಣಿಗುಹಾಸಿಂಹರಿರ್ ನೀಮುಮಿಾಗಳ್ ವನಸಿಂಹನ್ಯಾಯದಿಂ ದುರ್ಗದೊಳೆ ಬಲಿದು ನಿಂದಲ್ಲಿ ಬಂದೊತ್ತಿ ಚಕ್ರೇಶ್ವರನ ತಂತ್ರಂ ನಿಲ್ಕುಂ (ಆದಿಪು. ೧೩-೫೮). [ಸಂ.]

ವನಸುಮ (ನಾ). ಕಾಡಿನಲ್ಲಿ ಅರಳುವ ಹೂವು : ವನಸುಮದೊಲೆನ್ನ ಜೀವನವು ವಿಕಸಿಸುವಂತೆ ಮನವನನುಗೊಳಿಸು ಗುರುವೇ (ಕಪವು. ೭-೧೩೫). [ಸಂ.]

ವನಸೂರಣ (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಅದರ ಗೆಡ್ಡೆ : "ಉದ್ಗ— ವನಸೂರಣ" (ಓಷಧಿ. ೧೫). [ಸಂ.]

ವನಸೌತೆ (ನಾ). ಒಂದು ಬಗೆಯ ಸೌತೆಬಳ್ಳಿ ಮತ್ತು ಅದರ ಕಾಯಿ ; ಕಾಡುಸೌತೆ : "ಮರುಜಾ — ವನಸೌತೆ" (ಓಷಧಿ. ೧೧೮). [ವನ + ಸೌತೆ (< ಸವುಂತೆ)]

ವನಸ್ಥ (ಗು). ೧. ಕಾಡಿನಲ್ಲಿರುವ ; ಅರಣ್ಯದಲ್ಲಿ ವಾಸಮಾಡುವ. (ನಾ). ೨. ತಪಸ್ವಿ ; ಋಷಿ. [ಸಂ.]

ವನಸ್ಥಲ, ವನಸ್ಥಳ (ನಾ). ಕಾಡಿನ ಪ್ರದೇಶ ; ಅರಣ್ಯಸ್ಥಳ : ಎಲೆ ವನಸ್ಥಲ [ಪಾಂಬಾ.ಳ]ಗಳಿರ ವೃಕ್ಷಂಗಳಿರ ಮೃಗಂಗಳಿರ . . . ಪಂಚಭೂತಂಗಳಿರ ದೆಸೆಗಳಿರ ಕಾವ್ಪದು (ಧರ್ಮಿಬಾ. ೧೯-೨೮). ವನಸ್ಥಳ : ಬೆದಱೆ ಮನಂ ವನಸ್ಥಳದೊಳೊಂದಿಭಮಿರ್ದುದು . . . ನೀಳನಗೇಂದ್ರಮೆಂಬಿನಂ (ಪಂರಾಮಾ. ೧೦-೧೫೯). [ಸಂ.]

ವನಸ್ಥಲಿ, ವನಸ್ಥಳಿ (ನಾ). = ವನಸ್ಥಲ : ಬೀಳ್ಕೊಂಡರಾ ಪರಿಚಯದ ವನಸ್ಥಲಿಗಳಂ, ಪುಲಿನಸ್ಥಲಿಗಳಂ, ಜಲಸ್ಥಲಿಗಳಂ (ಶ್ರೀರಾಮಾ. ೨೯-೩೨); ಈ ವನಸ್ಥಲಿಯೆಲ್ಲವೂ ಚೇತನವಾಗಿರುವಂತೆ ಕಾಣುತ್ತಿರುವುದೇಕೆ ಬಲ್ಲೆಯಾ ? (ಮಹಾನಾ. ೨೩೩). ವನಸ್ಥಳಿ : ಬೆದಱೆ ಮನಂ ವನಸ್ಥಳಿಯೊಳೊಂದಿಭಮಿರ್ದುದು . . . ನೀಳನಗೇಂದ್ರಮೆಂಬಿನಂ (ಮಲ್ಲಿಪು. ೧೦-೮೮); ಆ ತರುಣಿ . . . ವನಸ್ಥಳಿಯಂತೆ ಪೃಥುಲಕುಚಾಲಂಕೃತೆಯುಂ . . . ಎನಿಸಿರ್ದಳ್ (ರಾಜಶೇ. ೭-೬೧ ವ). [ಸಂ. ವನಸ್ಥಲೀ]

ವನಸ್ಥಳ 'ವನಸ್ಥಲ' ನೋ.

ವನಸ್ಥಳಿ 'ವನಸ್ಥಲಿ' ನೋ.

ವನಸ್ಥಿತ (ಗು). ೧. ಕಾಡಿನಲ್ಲಿರುವ; ಅರಣ್ಯದಲ್ಲಿರುವ : ಆತ್ತವಿರಾಗವರ್ತನೆ . . . ಮಾನಸಂಪತ್ತಿ ಕರಂ ವಿರಾಜಿಸೆ ವನಸ್ಥಿತಶಾಖಿನಿಕಾಯಮಾವಗಂ ಪೆತ್ತುದು ಚೆಲ್ವನಾ ಮುನಿಪನೊಳ್ ತಳೆದಂತೆ ತಪೋನಿಯೋಗಮಂ (ಚಂದ್ರಪ್ರ. ೨-೧೦೩). (ನಾ). ೨. ಕಾಡಿನಲ್ಲಿರುವವನು : ಕತೆಯಂ ಕೇಳೆಲೆ ಕಂದ ಹುಂ ರಘುಜನೆಂಬಂ ಹುಂ ಸಕಾಂತಂ ವನಸ್ಥಿತನಾದಂ ಗುರು ಪೇೞೆ (ಜಗವಿ. ೩-೬೧). [ಸಂ.]

ವನಸ್ಪತಿ (ನಾ). ೧. ಹೂವುಗಳನ್ನು ಬಿಡದೆ ಫಲವನ್ನು ನೀಡುವ ಆಲ, ಅರಳಿ ಮುಂತಾದ ಮರ : " ಪೂವಾಗದೆ ಕಾಯಹ ಮರನಂ ವನಸ್ಪತಿಯೆಂಬುದು" (ಹಲಾಯು. ೩೦-೨೫). ೨. ಮರ ; ವೃಕ್ಷ : ನೇಸಱ್ ಮೂಡಲೊಡನೆ ಗೂಡುಗಳಿಂ ಗಿಳಿಗಳೆಲ್ಲಂ ಕುಟುಕುಗೊಳಲೆಂದು ಪೋಗೆ ಶಾಬಕನಿಕರಸನಾಥಮಾಗಿಯುಂ ನಿಶ್ಶಬ್ದತೆಯಿಂ ಶೂನ್ಯದಂತಿರ್ದ ಶಾಲ್ಮಲಿವನಸ್ಪತಿಯೊಳ್ (ಕಾದಂಪೂ. ೧೫೧); ಆ ಮಾಯಿದೇವರಸಂ ಸಂತೆಯುಮಂ ವನಸ್ಪತಿಯುಮಂ ಸರ್ವ್ವಾರ್ತ್ಥವಂ ಮಾಡಿದ ನೆರವೀ ಸಂತೆಯುಮಂ

ವನಸ್ಪತಿಯುಮಂ . . . ಉಪೇಕ್ಷಿಸಲ್ನರಕವಕ್ಕುಂ (ಸೌಇಇ. XX, ೧೭೫-೪೪; 1190). ೩. ಮರ, ಗಿಡ, ಬಳ್ಳಿ ಮುಂತಾದ ಸಸ್ಯಜಾತಿ : ವನಸ್ಪತಿಗಳಿಂದ ಪುಷ್ಪಗಳನ್ನು ಕೊಯ್ದುಕೊಂಡು ಬನ್ನಿರಿ (ಶಾಕುಂತ. ೫೧-೮); ಶಹಾಮೃಗ . . . ಅದು ವನಸ್ಪತಿಗಳನ್ನು ತಿಂದು ಬದುಕುವುದು (ಮುಂಬಯಿ. ೪-೧೮೭). ೪. ಆಹಾರಪದಾರ್ಥಗಳ ತಯಾರಿಕೆಯಲ್ಲಿ ಬಳಸುವ, ಸಸ್ಯಮೂಲವಾದ ಒಂದು ಬಗೆಯ ಜಿಡ್ಡಿನ ಪದಾರ್ಥ : ಜಲಜನಕವನ್ನು ತೈಲದೊಂದಿಗೆ ಸಂಯೋಗ ಮಾಡಿ ಕೃತಕವಾದ ಕೊಬ್ಬುಗಳಾದ ಡಾಲ್ಡ, ವನಸ್ಪತಿ, ಪಕಾವ್ ಇವುಗಳನ್ನು ತಯಾರುಮಾಡುವರು (ಗೃಹವಿ. ೧೪). ೫. ಒಂದು ಬಗೆಯ ಸಸ್ಯ ; ಸೋಮಲತೆ. ೬. ಮರದ ಕಂಬ, ಗಣೆ, ತೊಲೆ ಮುಂತಾದುವು. ೭. [ಸಂಗೀತ] ಒಂದು ಬಗೆಯ ಲಯವಾದ್ಯ: ಆ ವಾದ್ಯಗಳ ಸಮೂಹದಲ್ಲಿ . . . ಭೂಮಿದುಂದುಭಿ, ವನಸ್ಪತಿ, ಔದುಂಬರ ಮುಂತಾದ ಲಯವಾದ್ಯಗಳೂ . . . ಹೆಸರಿಸಲ್ಪಟ್ಟಿವೆ (ಸಂಗೀಚಂ. ೧೦೮). ೮. [ಜೈನ] ಐದು ಬಗೆಯ ಸ್ಥಾವರಜೀವಗಳಲ್ಲಿ ಒಂದು ; ಗಿಡ, ಮರ, ಬಳ್ಳಿಗಳಲ್ಲಿರುವ ಜೀವ : ಸ್ಪರ್ಶನೇಂದ್ರಿಯಮಾತ್ರಂಗಳ್ ಸ್ಥಾವರಂಗಳೆಂಬುವವು ಪೃಥಿವ್ಯಪ್ತೇಜೋವಾಯು ವನಸ್ಪತಿಭೇದದಿಂ ಪಂಚವಿಧಂ (ಆದಿಪು. ೧೦-೬೩ ವ). [ಸಂ.]

**ವನಸ್ಪತ್ಯ** (ನಾ). ಹೂವುಬಿಟ್ಟು ಅನಂತರ ಫಲ ಕೊಡುವ ಮಾವು ಮುಂತಾದ ಮರ : "ಕುಸುಮಫಲವಪ್ಪ ತರು ವನಸ್ಪತ್ಯಮದು" (ಮಂಗರಾ. ೩೨-೨).
[< ಸಂ. ವಾನಸ್ಪತ್ಯ]

**ವನಸ್ಪರ್ಧಿ** (ನಾ). ಉದ್ಯಾನದೊಡನೆ ಸ್ಪರ್ಧಿಸುವುದು : ರಮಣೀಸಸ್ಮೇರ ವಕ್ತ್ರಾಂಬುರುಹವಿಸರದೊಳ್ . . . ಮಾನಿನೀಮಂದಹಾಸೋದ್ಗಮದೊಳ್ಸಾನಿರ್ದನಾಸ್ಥಾನದೊಳತುಳ ವನಸ್ಪರ್ಧಿಯೊಳ್ಪುವಸಂತಂ (ರಾಜಶೇ. ೯-೭೭). [ಸಂ. ವನಸ್ಪರ್ಧಿನ್]

**ವನಾಂತ** (ನಾ). ೧. ಕಾಡಿನ ಗಡಿ, –ಎಲ್ಲೆ. ೨. ಕಾಡು ; ಅರಣ್ಯಪ್ರದೇಶ : ಅಲರ್ಗಳ ಕೀಟೆಸಟುಬ್ ಕಟಲದಂತು . . . ನಲಿವಾಡುವ ಸೋಗೆಯ ಸೋಗೆ ಸೂಸದಂತೆಲರೊಲವುಣ್ಮೆ ತೀಡಿದುದು ತಣ್ಣನೆ ಪಣ್ಣನೆ ತದ್ವನಾಂತದೊಳ್ (ಚಂದ್ರಪು. ೨-೧೦೧); ಕಪೋತದ ಬೊಟ್ಟಿನ ಕೆಂಡದಬ್ಬಿನೀವರನಭಿಧಾನಮಂ ತಳೆದ ಭೂರುಹಮೊಪ್ಪುಗುಮಾ ವನಾಂತದೊಳ್ (ರಾಜಶೇ. ೫-೫೭). [ಸಂ.]

**ವನಾಂತರ** (ನಾ). ೧. ಕಾಡಿನ ಮಧ್ಯಪ್ರದೇಶ ; ಅರಣ್ಯದ ಒಳಭಾಗ : ವನದಹನಂ ವನಾಂತರಮನೊರ್ಬಳಸಾಗಿರೆ ಮುತ್ತಿ ಸುತ್ತಿ ಸುತ್ತಿನ ನಡುವಿರ್ದ ಮಾಮರನನಟ್ಟಿದುದು (ಆದಿಪು. ೯-೫೯); ಪರಮಪಂಚವಟಿಪ್ರದೇಶದ ಘನವನಾಂತರಕೆ ಹರಿಸಿ ಕಳುಹಿದನು (ತೊರರಾ. ೩-೧-೨೫). ೨. ಉದ್ಯಾನವನದ ಮಧ್ಯಭಾಗ ; ತೋಟದ ಒಳಭಾಗ : ಸತ್ಯಭಾಮೆಯುಂ ಬರುತಿರ್ದು ಸವತಿಯಿರ್ದೆಡೆಗಾಂ ಪೋಪುದು ಪೆಂಪಲ್ತೆಂದು ಹರಿಯಲ್ಲಿಗೆ ತನ್ನ ತಂದರಸಿಯನಟ್ಟುವುದೆಂದಟ್ಟಿ ತಾನಾ ವನಾಂತರಮಂ ಪೊಕ್ಕು (ನೇಮಿಪು. ೭-೬೨ ವ); ಈಶ್ವರನಗಜೆಗೂಡಿ ಸವಿಯರ್ಪೆರಸಿ ತೊಳತೊಳಪ ನಂದನದ ಸಿರಿಯನೀಕ್ಷಿಸಿ ತಲೆಯನೊಲೆದೊಲೆದು ಪೊಗಳುತ್ತಲೈತರಲ್ ತದ್ವನಾಂತರದೊಳು (ಚೆಬಪು. ೪೫-೪೪). ೩. ಇನ್ನೊಂದು ಕಾಡು ; ಬೇರೊಂದು ಅರಣ್ಯ. [ಸಂ.]

**ವನಾಂತರಾಳ** (ನಾ). ೧. ಕಾಡಿನ ಮಧ್ಯಭಾಗ ; ಕಾಡಿನ ನಡುವಿನ ಪ್ರದೇಶ : ಮೃಗಗಣಮೆ ಸುಖಿಂ ಬಾಳ್ಗುಂ ಸೊಗಯಿಸುವ ವನಾಂತರಾಳದೊಳ್ ಬಹುತೃಣದೊಳ್ (ಕವಿರಾ. ೩-೧೩೯). ೨. ಉದ್ಯಾನವನದ ಮಧ್ಯಭಾಗ ; ತೋಟದ ನಡುವಿನ ಪ್ರದೇಶ : ಸುರತಮಕರಧ್ವಜನ ಸುಭದ್ರೆಯ ವಿರಹಪರಿತಾಪದೊಳಾದ ಪಡೆಮಾತಂ ಕರ್ಣಪರಂಪರೆಯಿಂ ಕೇಳ್ದು ಸಂತಸಂಬಟ್ಟು ಚಕ್ರಿ . . . ಆ ವನಾಂತರಾಳಕ್ಕೊರ್ವನೆ ಬರ್ದು (ಪಂಪಭಾ. ೫-೧೯ ವ); ಕಾಂತೆಯರ್ . . . ಬಂದು ನಿಂದು ಶೋಭಿಸಿದರ ಲಂಪಿನಿಂದಲರ್ಗಳಂ ತಿಱಿಯುತ್ತೆ ವನಾಂತರಾಳದೊಳ್ (ಉದ್ಭಟ. ೯-೩೩).
[ಸಂ. ವನಾಂತರಾಲ]

**ವನಾಯು** (ನಾ). ೧. ಒಂದು ದೇಶದ ಹೆಸರು. ೨. ಜಿಂಕೆ ; ಹರಿಣ : "ಹರಿಣಂ ವನಾಯುವೇಣಂ ಕುರಂಗಮೃಗ" (ವಸ್ತುಕೋ. ೪೦-೨). ೩. ಕಾಡಿನಲ್ಲಿ ವಾಸಮಾಡುವ ಪ್ರಾಣಿ ; ನರಿ : "ದಂತಿ ವನಾಯು ತಾರಗೆ ಪಶುವ್ರಜ ಬೆಳ್ಳಗಮುಂ ಮೃಗಾಪಿಕ್ಕೆ" (ನಾನಾರ. ೮೨). [< ಸಂ. ವಾನಾಯು]

**ವನಾಯುಜ** (ನಾ). ಪರ್ಶಿಯನ್‌ದೇಶದಲ್ಲಿ ಹುಟ್ಟಿದ ಕುದುರೆ ; ಪಾರಸಿಕದೇಶದ ಕುದುರೆ : "ಪಾರಸೀಕದೇಶದಲ್ಲಿ ಹುಟ್ಟಿದುವು ವನಾಯುಜಂಗಳೆಂಬುದು" (ಹಲಾಯು. ೭೨-೨೮೫). [ಸಂ.]

**ವನಾಲಯ** (ನಾ). ೧. ಕಾಡಿನಲ್ಲಿರುವ ಮನೆ : ಸೋದರರು ಸಹಿತ ವನಾಲಯವ ಹೊಱವಂಟು ಸಾರಿದರೊಂದು ವಟಕುಜವ (ಕುಮಾವ್ಯಾ. ೧-೧). ೨. ಕಾಡನ್ನು ಮನೆಯಾಗಿ ಉಳ್ಳ ಪ್ರಾಣಿ ; ವಾನರ ; ಕೋತಿ : ಸಾಲ್ದುಮಿ ಕಿತವಸೌಜನ್ಯ ಮೆಲವೋ ವನಾಲಯಾ! (ಶ್ರೀರಾಮಾ. ೪೩೮-೨೨೫). [ಸಂ.]

**ವನಾವಸಥ** (ನಾ). ೧. ಕಾಡಿನಲ್ಲಿರುವ ಮನೆ. ೨. ಕಾಡಿನಲ್ಲಿ ವಾಸಮಾಡುತ್ತಿರುವವನು ; ಆರಣ್ಯಕ : ನಿಯತಂ ಭಾವನರುಂ ವನಾವಸಥರುಂ ಜ್ಯೋತಿಷ್ಕರುಂ ಕಲ್ಪವಾಸರುಮಾಗಿರ್ದ ಚತುರ್ವಿಧಾಮರರುದಾರರ್ ಸ್ತೋಮದೊಳ್ ಕೂಡೆ (ಪುಷ್ಪಪು. ೧೦-೧೩). [ಸಂ.]

**ವನಾಶ್ರಯ** (ನಾ). ೧. ಕಾಡನ್ನು ಆಶ್ರಯವಾಗಿ ಉಳ್ಳುದು ; ಅರಣ್ಯದಲ್ಲಿ ವಾಸಮಾಡುವಂಥದು. ೨. ಕಾಡಿನಲ್ಲಿ ವಾಸಮಾಡುವವನು, –ಆಶ್ರಯ ಪಡೆಯುವವನು. ೩. ಒಂದು ಬಗೆಯ ಪಕ್ಷಿ ; ಕಾಡುಕಾಗೆ ; ಡೊಂಬಕಾಗೆ : "ಶಿತಿಕಾಕಂ ವನಾಶ್ರಯಂ ಮೌಕುಳಿ ದ್ರೋಣಮಾ ಕಾಕೋಳಘನೆ ಕಾಡಕಾಗೆ" (ಮಂಗರಾ. ೫೧-೪). [ಸಂ.]

**ವನಿತ** (ಗು). ೧. ಪ್ರಾರ್ಥಿಸಿದ ; ಬೇಡಿದ. ೨. ಇಚ್ಛಿಸಿದ ; ಬಯಸಿದ ; ಪ್ರೀತಿಸಿದ. ೩. ಸೇವಿಸಿದ ; ಆರಾಧಿಸಿದ. [ಸಂ.]

**ವನಿತಾವೃತ್ತಿ** (ನಾ). ೧. ಹೆಣ್ಣಾಗಿರುವಿಕೆ ; ಹೆಣ್ಣುತನ ; ಸ್ತ್ರೀತ್ವ : ಉತ್ತಮಗುಣತತಿ ವನಿತಾವೃತ್ತಿಯನೊಳಕೊಣ್ಡುದೆಂದು ಜಗಮೆಲ್ಲಂ ಕಯ್ಕೆತ್ತುವಿನಂ ಅಮಳಗುಣಸಂಪತ್ತಿಗೆ ಜಗದೊಳಗೆ ಪೋಚಿಕಬ್ಬೆಯೆ ನೋಂತಳ್ (ಎಕ. II, ೧೧೮-೧೮; 1120). ೨. ಹೆಣ್ಣಿನ ರೀತಿ, –ನಡತೆ. [ಸಂ.]

**ವನಿತಾಸಕ್ತಿ** (ನಾ). ೧. ಹೆಣ್ಣಿನ ವಿಷಯದಲ್ಲಿ ತೋರುವ ಆಸಕ್ತಿ ; ಸ್ತ್ರೀಲೋಲುಪತೆ. ೨. ಹೆಣ್ಣಿನ ವಿಷಯದಲ್ಲಿ ತೋರುವ ಅನಾಸಕ್ತಿ ; ವೈರಾಗ್ಯ : ಮುಕ್ತಿಶ್ರೀಯೊಳ್ ತನಗಾಸಕ್ತಿಯೊಳಿರದೊಸೆದು ನೆರೆದನಜರಂ ವನಿತಾಸಕ್ತಿಯ ವರಂಗೆ ನೆರೆವನು[ರಕ್ತಿ]ಯನೊದವಿಸುವ ಮೆಚ್ಚದೇನಚ್ಚರಿಯೋ (ಶಾಂತಿಪು. ೧೨-೩೪). [ಸಂ. (ವನಿತಾ + ಸಕ್ತಿ); (ವನಿತಾ + ಅಸಕ್ತಿ)]

**ವನಿತೆ** (ನಾ). ೧. ಹೆಂಗಸು ; ಮಹಿಳೆ : ದೇವವನಿತೆಯರೆ ಪರಿವಿಡಿಯೊಳಡಿಗುಟ್ಟೆಯುಂ ದೇವಗಣಿಕೆಯರ ಕೊಳೆ ಪಾಡೆ ದನಿಮುಟ್ಟೆಯುಂ (ಆದಿಪು. ೭-೨೭ ರಗಳೆ); ವನಿತೆಯ ವದನಶ್ರೀಚಂದನರಸಮಂ ನಳಿನದಳದೆ ತೀವಿಪಳೆನೆ ಲೋಚನರುಚಿಯಿರೆ (ರಾಜಶೇ. ೭-೫೦). ೨. ಹೆಂಡತಿ ; ಪತ್ನಿ : ಪ್ರಭಾಕರೀಪುರೀನಾಥಂ ಮಹಾಸೇನಂಗಂ ತದ್ವನಿತೆ ವಸುಂಧರೆಗಂ ಜಯಸೇನನೆಂಬ ತನೂಜನಾಗಿ ಗುರುಪುರುಷಾರ್ಥಮಂ ನೆಱೆಯೆ ಸಾಧಿಸಿ (ಆದಿಪು. ೩-೭೭ ವ); ವನಿತೆಯ ನೇಟಲೊಳಗಿರೆ ಲೋಚನಚಂದ್ರಿಕೆಯಿಂದ ಮೊಸರ್ವ ಶಶಿಮಣಿಮುಕುರಂ ನೆನೆಯಿಸಿತು ಹೃದಯಮಂ ಕಾಮಿನಿ ಪುಗೆ ನಡೆ ನೋಡಿ ಸೋಲ್ತು ಬೆಮರ್ವುದು ಪತಿಯಂ (ಲೀಲಾವ. ೧೨-೮೭). ೩. ನಲ್ಲೆ ; ಪ್ರಿಯೆ. ೪. ಒಂದು ಬಗೆಯ ಸುಗಂಧದ ಬೇರು ; ಕರ್ಪೂರಶುಂಠಿ : "ವನಿತೆ ಷಡ್ಗ್ರಂಥಿ ಕರ್ಪೂರಶುಂಠಿ" (ಮಂಗರಾ. ೪೧-೩೩). ೫. [ಜ್ಯೋತಿ] ಹನ್ನೆರಡುರಾಶಿಗಳಲ್ಲಿ ಆರನೆಯದು ; ಕನ್ಯಾರಾಶಿ : ವನಿತೆಯೊಳು ಕಮಲಾರಿಯಿದ್ದನು ಕನಕಮನ್ಮಥನೆಡೆಯೊಳಿದ್ದನು ಧನುವಿನೊಳಗಿನತನುಜನಿದ್ದನು ಭಗಣಚಕ್ರದಲಿ (ಕಾಶಿರಾ. ೧೩-೪೮). [ಸಂ. ವನಿತಾ]

**ವನೀಪಕ** (ನಾ). ಬೇಡುವವನು ; ಯಾಚಕ ; ಭಿಕ್ಷುಕ : ಎಡಱಱಿದೀವ ಕಲ್ಪತರುವೆಂದು ವನೀಪಕಕೋಟಿ ಸಂತಸಂಬಡೆ . . . ವಾರಣಾವತಮನೆಯ್ದಿದನಮ್ಮನ ಗಂಧವಾರಣಂ (ಪಂಪಭಾ. ೨-೯೮); ಅಂತವನಿಪನಿಕರಂ ಕೈಯಾಂತವನಿಪನಿಕರ ೯ವನೀಪಕರು೩ಮೊಂದುಕೋಟಿಗೆ ಮಿಗಿಲೆಂಬಂತಾದೊಡಮೊಳಸೋರದೆ ಚಿಂತಿಸದಾಂತಿಱಿ ಗುಮಿಗುಮಿಱಿವ ಬೆಡಂಗಂ (ಗದಾಯು. ೧-೧೫). [ಸಂ.]

**ವನೇಚರ** (ನಾ). ೧. ಕಾಡಿನಲ್ಲಿ ಸಂಚರಿಸುವವನು ; ಬೇಡ ; ಶಬರ : ತದೀಯ ಮುನಿರಾಜಪೂಜಿತಚ್ಛಾಯೆಯುಂ . . . ಮೆಟ್ಟದು ಮುಟ್ಟದು ವನ್ಯಮೃಗವನೇಚರನಿಕರಂ

(ಶಾಂತಿಪು. ೧೧-೧೧೧); ವನದೊಳ್ ವನೇಚರಂ ತನತ್ತು ಬಿಲ್ಲಾನದನಂತು ಕೀಸುವಂ (ರಾವ್ಯಾವ. ೩೫೮). ೨. ತಪಸ್ವಿ ; ತಾಪಸ. ೩. ಅಸುರ ; ರಾಕ್ಷಸ. ೪. ಕಾಡುಮೃಗ ; ಹಿಂಸ್ರಪ್ರಾಣಿ. [ಸಂ.]

**ವನೇಚರಪತಿ** (ನಾ). ಬೇಡರ ಒಡೆಯ ; ಕಿರಾತನಾಯಕ : ಇದಿರೊಳ್ ಗರ್ಜಿಸಿ ಪುಲಿ ನಿಲೆ ಬೆದಱಿ ಕರಂ ಶಬರಿ ಬಱಿಯನಪ್ಪಲೊಡಂ ರೋಷದಿನಲರ್ದುದೊಂದು ಕಣ್ ರಾಗದೆ ಮುಗುಳ್ದುದದೊಂದು ಕಣ್ ವನೇಚರಪತಿಯಾ (ಚಂದ್ರಪು. ೫-೫೯). [ಸಂ.]

**ವನೇಚರಿ** (ನಾ). ಕಾಡಿನಲ್ಲಿ ಸಂಚರಿಸುವವಳು ; ಬೇಡಿತಿ ; ಶಬರಿ : ವನೇಚರಿ ಜನತಾವಿಲೋಚನವಶೀಕರಣಾಂಜನದಿಂ ಮನೋಭವಂ ವಿರಚಿಸಿ ಬಣ್ಣಮಂ ಬರೆದ ಚಿತ್ರದ ಪೆಣ್ಣೆನೆ ಕಣ್ಗೆ ವಂದಳೋ (ಮಲ್ಲಿಪು. ೧೦-೬೫). [ಸಂ. ವನೇಚರೀ]

**ವನೇಜ** (ಗು). ೧. ಕಾಡಿನಲ್ಲಿ ಹುಟ್ಟಿದ ಅಥವಾ ಕಾಡಿನಲ್ಲಿರುವ. (ನಾ). ೨. ತಾವರೆ ; ಕಮಲ : "ಚಂದ್ರ ಪತಂಗ . . . ವನೇಜ ಭೂಪ ಪಶುಪಾಲಕ ಸೌರಭಮಿಂತು ಗೋಪಶಬ್ದಂ" (ನಾನಾರ. ೫೪). [ಸಂ.]

**ವನೇಜಮಿತ್ರ** (ನಾ). ತಾವರೆಯ ಗೆಳೆಯ ; ಸೂರ್ಯ : "ವಾಸವ . . . ವನೇಜಮಿತ್ರ ಸಂಕಾಶಮಿವರ್ಕಮಕ್ಕು" (ನಾನಾರ. ೧೪). [ಸಂ.]

**ವನೇಜರಿಪು** (ನಾ). ತಾವರೆಯ ವೈರಿ ; ಚಂದ್ರ : ವನೇಜರಿಪುವಿಂ ಪಂಕೇಜಮಿತ್ರಂ ಬಲಾಢ್ಯಂ (ಜಾತಿ. ೨-೧೨). [ಸಂ.]

**ವನೇಜಾಕರ** (ನಾ). ತಾವರೆಯ ಕೊಳ ; ಕಮಲಸರೋವರ : ಅವಳವಯವ ನವಲಾವಣ್ಯವನೇಜಾಕರದೊಳಾಳ್ದ ಮದನದ್ವಿಪದೊಪ್ಪುವಚಳಕುಂಭಸ್ಥಳಮೆಂಬ ಪೊಲೆಸೆದುದು ಲಾಸ್ಯಕಂಪಿತಂ ಘನಜಘನಂ (ರಾಜಶೇ. ೧೨-೮೪). [ಸಂ.]

**ವನೇಜಾತ** (ಗು). ೧. ಕಾಡಿನಲ್ಲಿ ಹುಟ್ಟಿದ : ಜಾತಿವನೇಜಾತಪ್ರಸೂನಾವಳಿಯನಿಟ್ಟಿಸಿ ಸಂಪತ್ತುವೆತ್ತಿರ್ದುದೆತ್ತಂ (ಜಗವಿ. ೪-೬೫). (ನಾ). ೨. ತಾವರೆ ; ಕಮಲ : "ಕೇತನ . . . ವನೇಜಾತ ಮೃಗಾರಿ ಕಲ್ಪಕುಜಶ್ರೇಷ್ಠಂ ಪುಂಡರೀಕಾಹ್ವಯಂ" (ನಾನಾರ. ೧೯). [ಸಂ.]

**ವನೇಭ** (ನಾ). ಕಾಡಾನೆ : ಮದಗಂಧಮಂದೆ ಸಪ್ತಚ್ಛದಗಂಧಮನೀ ವನೇಭಮಾಘ್ರಾಣಿಸಿ ಪೆರ್ಚಿದ ಮಸಕದಿಂದೆ ಪಾಯಲ್ಕದಿರ್ಪುಗೆಯ್ದಪುದು ನೋಡ ವನವೇದಿಕೆಯಂ (ಆದಿಪು. ೧೧-೬೨). [ಸಂ.]

**ವನೇರುಹ** (ನಾ). ತಾವರೆ ; ಕಮಲ : ಲಸದ್ವನೇರುಹಗೃಹಾಕೃಪಾನಯನಪಾತ ಸಾರಥ್ಯಕಂ (ವಸ್ತುವಂ. ೪-೨೫). [ಸಂ.]

**ವನೋತ್ಥ** (ನಾ). ಕಾಡಿನಲ್ಲಿ ಹುಟ್ಟಿದುದು : ನೀಳಮೇಘೋತ್ಕರಮೆಂಬಂತಿರ್ದುದು . . . ಹಸ್ತಿಯೂಥಂ ವನೋತ್ಥಂ (ಚಂದ್ರಪು. ೫-೬೨). [ಸಂ.]

**ವನೋದ್ದೇಶ** (ನಾ). ವನಸ್ಥಳ ; ಉದ್ಯಾನಪ್ರದೇಶ : ಸುಧರ್ಮಾಚಾರ್ಯರನಾ ವನೋದ್ದೇಶದೊಳ್ ಕಾಣದೆ . . . ಪೋಗಿ (ಸುಕುಮಾ. ೩-೨೩ ವ). [ಸಂ.]

**ವನೋರಣ** (ನಾ). ಕಾಡುಕುರಿ : "ಆ ಕೊಂಡಗುಱಿ ವನೋರಣಮಟವ್ಯವಿಯೆನಿಕ್ಕು" (ಮಂಗರಾ. ೪೮-೮). [ಸಂ.]

**ವನೌಕಸ** (ನಾ). ೧. ಕಾಡಿನಲ್ಲಿ ವಾಸಿಸುವವನು : ಮುನಿ ವನೌಕಸರೆಲ್ಲ ಕೇಳುವುದೆನ್ನ ಹುಯ್ಯಲನು (ಕಾಶಿರಾ. ೬-೩೭). ೨. ಕಾಡಿನಲ್ಲಿರುವ ತಪಸ್ವಿ : ಆ ವನೌಕಸರಿಗೆರ್ದೆ ಮರುಗಿದತ್ತು (ಶ್ರೀರಾಮಾ. ೧೬೯-೪೭೭). ೩. ಕೋತಿ ; ಕಪಿ : "ಆ ವನೌಕಸಂ ಮರ್ಕಟಂ ಬಲಿಮುಖಂ . . . ಕೋಡಗಕ್ಕೆ ಪೆಸರಕ್ಕು" (ಮಂಗರಾ. ೪೮-೯). [ಸಂ. ವನೌಕಸ್]

**ವನೌಷಧಿ** (ನಾ). ಕಾಡಿನಲ್ಲಿ ಬೆಳೆಯುವ ಔಷಧಿಸಸ್ಯ ; ವನಸ್ಪತಿ : ಸಸ್ಯಶಾಸ್ತ್ರದ ಅಧ್ಯಯನಕ್ಕೆ ಮೊದಲನೆಯ ಕಾರಣ ಆಹಾರಸಮಸ್ಯೆ ; ಎರಡನೆಯ ಕಾರಣ ಖಾಯಿಲೆಯನ್ನು ಗುಣಪಡಿಸಿ ಆಯುಷ್ಯವನ್ನು ಹೆಚ್ಚಿಸುವ ವನೌಷಧಿಗಳ ಅನ್ವೇಷಣೆ (ತತ್ವಪ್ರಾ. ೫೦೭). [ಸಂ.]

**ವನ್ಯ** (ಗು). ೧. ಕಾಡಿನಲ್ಲಿ ಹುಟ್ಟಿದ ಅಥವಾ ಬೆಳೆದ : ತುಂಗವನ್ಯ ಮತಂಗಜದಂತಾಘಾತನಿಪಾತಿತಸಲ್ಲಕೀಭಂಗಮಂ . . . ನೃಪನೆಯ್ದಿದನುದ್ಯಚ್ಛೃಂಗಮನಾ ಶತಶೃಂಗಮಂ (ಪಂಪಭಾ. ೧-೧೧೫); ವನ್ಯಕುಸುಮದ ಚಿತ್ರಹಾರ ಕೇಯೂರ ಕರ್ಣಪೂರದ ಭೂಷಣಂಗಳೊಳಂ . . . ಬರೆ (ಜಗವಿ. ೪-೮೦ ವ). ೨. ಕ್ರೂರವಾದ ; ಉಗ್ರವಾದ. (ನಾ). ೩. ಕ್ರೂರಮೃಗ ; ಕಾಡುಪ್ರಾಣಿ. ೪. ಕಾಡುಸಸ್ಯ. ೫. ಕಾಡುಮನುಷ್ಯ ; ಅನಾಗರಿಕ ; ಅಸಂಸ್ಕೃತವ್ಯಕ್ತಿ : ಎನ್ನನೀ ಪರಿ ಬಯ್ದು ವರ್ತಿಸುತಿರ್ಪೆ ಸಾಮಾನ್ಯನೊಲ್ ವನ್ಯನೊಲ್ (ಶ್ರೀರಾಮಾ. ೭೩-೫೧೭). ೬. ಕಾಡಿನಲ್ಲಿ ಬೆಳೆದ ಹಣ್ಣು, ಗೆಡ್ಡೆ ಮುಂತಾದುವು. [ಸಂ.]

**ವನ್ಯಮೃಗ** (ನಾ). ಕಾಡುಮೃಗ ; ಕ್ರೂರಪ್ರಾಣಿ : ಉದಯಾಸ್ತಮಯಗತಾರ್ಕಂ ತದೀಯ ಮುನಿರಾಜಪೂಜಿತಚ್ಛಾಯೆಯನಾ ತ್ರಿದಶಪತಿರಕ್ಷೆಯಂ ಮೆಟ್ಟದು ಮುಟ್ಟದು ವನ್ಯಮೃಗ ವನೇಚರನಿಕರಂ (ಶಾಂತಿಪು. ೧೧-೧೧೧); ವನ್ಯಮೃಗಗಳ ನಡುವೆ ಗೋವು ಬಂದೇನಹುದು (ಮಂಕುಕ. ೩೦೯). [ಸಂ.]

**ವನ್ಯಾಹಾರ** (ನಾ). ಕಾಡಿನಲ್ಲಿ ದೊರೆಯುವ ಗೆಡ್ಡೆ, ಗೆಣಸು ಮುಂತಾದ ಆಹಾರ : ಈ ಮಹಿಯನುಳಿದು ಪದಿನಾಲ್ಕುವರುಷಂ ಮುನಿಸ್ತೋಮದೊಡವೆರೆದು ವನ್ಯಾಹಾರನಿಯಮದಿಂ ರಾಮನಿರವೇಳ್ಕು (ವೆಂಕಾರಾ. ೨-೮-೧೬). [ಸಂ.]

**ವನ್ಯೆ** (ನಾ). ೧. ದಟ್ಟವಾದ ಕಾಡು ; ಮಹಾರಣ್ಯ. ೨. ಜಲಪ್ರವಾಹ ; ಮಹಾಪೂರ. [ಸಂ. ವನ್ಯಾ]

**ವಪನ** (ನಾ). ೧. ಬೀಜವನ್ನು ಭೂಮಿಯಲ್ಲಿ ಬಿತ್ತುವಿಕೆ ; ಬಿತ್ತನೆ. ೨. ತಲೆಯನ್ನು ಬೋಳಿಸುವಿಕೆ ; ಮುಂಡನ : ವಪನ . . . ಮೊದಲಾದ ಪ್ರಾಯಶ್ಚಿತ್ತಂಗಳಂ ಕೊಂಡು (ವಿವೇಕ. ೧೩೬); ವಿಧವೆಯಾದರೆ ಆಕೆಗೆ ವಪನ ಮಾಡಿಸಬೇಕೆಂಬುದು ನಿಜವಾದ ಧರ್ಮವೆ ಅಥವಾ ಬರಿಯ ಲೋಕರೂಢಿಯೆ? (ಜೀವಸಾ. ೯೨). ೩. ಕ್ಷೌರಮಾಡುವ ಕತ್ತಿ. ೪. ವೀರ್ಯ ; ಶುಕ್ಲ. [ಸಂ.]

**ವಪು** (ನಾ). ೧. ದೇಹ ; ಶರೀರ : ಉಪವಾಸಪ್ರಚುರತೆಯಿಂ ವಪು ಗಿಡಿಗಿಡಿಜಂತ್ರ ಮಾದುದು (ಸುಕುಮಾ. ೪-೪); ಈ ನಗದೇವತೆ . . . ಬಂದಾವಿರ್ಭವಿಸಿದೊಡೆನಗೆ ಮಹಾವಪುವಾಯ್ತು (ಜಗವಿ. ೪-೯೦). ೨. ಸಾರ ; ಸತ್ವ. ೩. ಸುಂದರವಾದ ಆಕಾರ; ಸುರೂಪ.

ವಪುವರ್ಜಿತಮದಾಪಹ = ಅನಂಗನ ಅಹಂಕಾರವನ್ನು ಮುರಿದವನು ; ಶಿವ : ವಪುವರ್ಜಿತಮದಾಪಹನೆ . . . ಸಂಗಮೇಶ್ವರ ರಕ್ಷಿಸೆನ್ನ (ಪ್ರಾಥರಾ. ೭-೧). [ಸಂ. ವಪುಸ್]

**ವಪುಜಲ** (ನಾ). ದೇಹದಿಂದ ಹೊರಬರುವ ನೀರು ; ಮೂತ್ರ : "ವಪುಜಲಮೆನಲ್ಕೆ ಮೂತ್ರಮಕ್ಕುಂ" (ಮಂಗರಾ. ೯೭-೧೪). [ಸಂ.]

**ವಪುಷ್ಮ** (ನಾ). ಸುಂದರವಾದುದು : ಕನತ್ಕನಕಮಂಡನಮಂಡಿತಮಂ ವಪುಷ್ಮಮಂ ಸಂಪದುಪೇತಮಂ ತರಿಸಿ ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇವಂ ಪೊಱಮಟ್ಟನೇಱಿ ಜಯಮಂ ಜಯಪರ್ವತಯಾನನಾಗಮಂ (ಶಾಂತಿಪು. ೧೦-೧೪೪ ಆ). [< ಸಂ. ವಪುಷ್ಮತ್]

**ವಪುಷ್ಮಂತ** (ಗು). ೧. ದೇಹವುಳ್ಳ ; ಸಶರೀರಿಯಾದ. ೨. ಚೆಲುವಾದ ; ಸುಂದರವಾದ. (ನಾ). ೩. ಸುಂದರವಾದ ಆಕಾರವುಳ್ಳವನು : ಮೂಱನೆಯ ವಕ್ತೃವೆಂಬೊಂ ಪ್ರವಯಸ್ಕನುಂ ವಪುಷ್ಮಂತನುಂ ಆರೋಗನುಂ . . . ಚಾರಿತ್ರವಂತನು ಮೆಂದಷ್ಟಗುಣಸಮನ್ವಿತನಕ್ಕುಂ (ಚಾವುಂಪು. ೫). [ಸಂ. ವಪುಷ್ಮತ್]

**ವಪುಸಿದ್ಧಿ** (ನಾ). ಮುಪ್ಪು, ವ್ಯಾಧಿ ಮುಂತಾದುವುಗಳಿಂದ ದೇಹವನ್ನು ರಕ್ಷಿಸಿಕೊಳ್ಳುವ ಸಿದ್ಧಿ ; ಕಾಯಸಿದ್ಧಿ (?): "ವಪುಸಿದ್ಧಿಯೊಳು ಮಜ್ಜನದೊಳು . . . ಅಸ್ತಮಯದೊಳ್ ಪ್ರವರ್ತಿಪುದು ನಿರ್ವಾಣನಾಮಂ" (ಮಂಗರಾ. ೧೪೮-೪೩). [ಸಂ.]

**ವಪೆ** (ನಾ). ೧. ಪೊಳ್ಳು ; ಟೊಳ್ಳು. ೨. ರಂಧ್ರ ; ಬಿಲ. ೩. ಮೂಳೆಯ ಪೊಳ್ಳುಭಾಗದಲ್ಲಿರುವ ಕೊಬ್ಬು ; ಮೇದಸ್ಸು : "ವಸೆ ಮೇದಂ ವಪೆ" (ವಸ್ತುಕೋ. ೬೨-೨೮). ೪. ಜಠರವನ್ನು ಹೊಟ್ಟೆಯಲ್ಲಿರುವ ಇತರ ಅಂಗಗಳೊಂದಿಗೆ ಸಂಬಂಧಿಸುವ ಸೂಕ್ಷ್ಮವಾದ ಚರ್ಮದ ಪೊರೆ : ಹೆರವಸ್ತುಗಳಿಗೆ ವಿಶೇಷವಾಗಿ ಆತಂಕವಾಗುವ ಜಾಗಗಳು ಎರಡಿವೆ : ಅನ್ನನಾಳದ ಮೇಲ್ಭಾಗದಲ್ಲಿ . . . ಒಂದು, ಕೆಳಭಾಗ ವಪೆಯ ಮೂಲಕ ಹೊಟ್ಟೆಗೆ ತೂರುವೆಡೆ ಇನ್ನೊಂದು (ಕಾಕೋ. I, ೩೪೪). ೫. ಕೊಬ್ಬಿ ಮೇಲೆದ್ದು ಕಾಣುವ ಹೊಕ್ಕುಳು. ೬. ಮಣ್ಣಿನ ಒಡ್ಡು , — ರಾಶಿ :

ಸಮಸ್ತಲತೆಗಳು ವಪೆಗಳಿಂದಲೂ ವೃದ್ಧಿಯಂ ಹೊಂದಿ ದಷ್ಪವಾದ ಫಲಗಳಂ ಧರಿಸುವವು (ಸೌಗಂಧಿ. ೪೩೪-೧೨). [ಸಂ. ವಪಾ]

**ವಪ್ತೃ** (ನಾ). ೧. ಕತ್ತರಿಸುವವನು ; ಬೋಳಿಸುವವನು. ೨. ಬೀಜವನ್ನು ಬಿತ್ತುವವನು. ೩. ತಂದೆ ; ಜನಕ. ೪. ಕವಿ. [ಸಂ.]

**ವಪ್ರ** (ನಾ). ೧. ಮಣ್ಣಿನ ದಿಣ್ಣೆ, –ದಿಬ್ಬ. ೨. ಹೊಲ, ಗದ್ದೆ ಮುಂತಾದ ಭೂಮಿ ; ಕ್ಷೇತ್ರ : "ವಪ್ರಂ, ಕ್ಷೇತ್ರಂ, ಕೇದಾರಂ—ಈ ೩ ಕೆಯ್" (ಹಲಾಯು. ೯೪-೪೨೦). ೩. ಸುತ್ತುಗೋಡೆ ; ಪ್ರಾಕಾರ : ಪರಿಖಾತ್ರಿತಯಕ್ಕೆ ಚತುಶ್ಶರಾಸನಾಂತರದೆ ಸುರಶರಾಸನಭಾಭಾಸುರಮೊಪ್ಪಿ ತೋಱುಗುಂ ಪಂಚರತ್ನ ಪಾಂಶೂಚ್ಚದೀಪ್ತಿದೀಪ್ರಂ ವಪ್ರಂ (ಆದಿಪು. ೬-೧೦೩); ಮುಗಿಲಂ ಮುಟ್ಟೆರ್ದುದೆಂಬಂತಿರೆ ಕರಮೆಸೆಗುಂ ವಿಶ್ರುತೋತ್ತುಂಗವಪ್ರಂ (ಸುಕುಮಾ. ೧೦-೫೨). ೪. ಬೆಟ್ಟದ ತಪ್ಪಲು, –ಇಳಿಜಾರು ಪ್ರದೇಶ : "ಬೆಟ್ಟದ ತಪ್ಪಲಲ್ಲಿಯುಂ ವಪ್ರಮೆಂಬುದು" (ಹಲಾಯು. ೧೩೫-೨೪). ೫. ದಡ ; ತೀರ : ಭೋಜನಂಗೆಯ್ದೊರಗಿದರ್ ನದೀವಪ್ರದಾ ಸಮತಲದೊಳೊಂದು ಶಾದ್ವಲದಿ (ಶ್ರೀರಾಮಾ. ೧೩೯-೩೯೪). ೬. ಪರಿವೇಷ ; ಪರಿವೃತ್ತ. ೭. ಕೋಟೆಯ ಹೆಬ್ಬಾಗಿಲು. ೮. ದೂಳು ; ರಜ. ೯. ತಂದೆ ; ಜನಕ. ೧೦. ಹೋರಿ, ಆನೆ ಮೊದಲಾದುವು ಮಣ್ಣುಗುಡ್ಡೆಗೆ ತಿವಿಯುವ ಆಟ ; ವಪ್ರಕ್ರೀಡೆ. ೧೧. ಒಂದು ಬಗೆಯ ಲೋಹ ; ಸೀಸ. ೧೨. ಕಂದಕ ; ಅಗಳು. ೧೩. ಸಮೂಹ ; ರಾಶಿ. [ಸಂ.]

**ವಮಥು** (ನಾ). ೧. ಓಕರಿಕೆ ; ವಾಂತಿ. ೨. ಆನೆಯ ಸೊಂಡಿಲಿನಿಂದ ಚಿಮ್ಮುವ ನೀರಿನ ತುಂತುರು : "ವಮಥುಃ, ಕರಶೀಕರಃ — ಈ ೨ ಆನೆಯ ಕೆಯ್ಯ ತುಂತುರ್ವನಿ" (ಹಲಾಯು. ೩೬-೬೩). [ಸಂ.]

**ವಮನ** (ನಾ). ೧. ಕಾರಿಕೆ ; ವಾಂತಿ : ಸಲಿಲಕ್ರೀಡೆಯಿನುಷ್ಣದಿಂ ವಮನದಿಂ ನಿಷ್ಠೀವದಿಂ ನಸ್ಯದಿಂ ಲಲನಾಸೇವೆಯಿನಾವಗಂ ಪ್ರಶಮಿಕುಂ ವ್ಯಾಯಾಮದಿಂ ಮೇಣ್ ಕಫಂ (ಲೋಕೋಪ. ೯-೬); ಈ ಜ್ವರವು ಊಟವಾದ ಮೇಲೆ ಕಾಣಿಸಿದರೆ ವಮನಮಾಡಿಸಲು ಶಮನವಾಗುವುದು (ಸಕವೈ. ೬೨). ೨. ವಾಂತಿ ಮಾಡಿಸುವ ದ್ರವ್ಯ. ೩. ಆಹುತಿ ಕೊಡುವುದು; ಬಲಿಯನ್ನರ್ಪಿಸುವುದು. ೪. ನೋವು ; ಬಾಧೆ. [ಸಂ.]

**ವಮನಕಾರಿ** (ನಾ). ವಾಂತಿಮಾಡಿಸುವ ಔಷಧ : "ವಿರೇಚಕವಾಗಿಯೂ ವಮನಕಾರಿಯಾಗಿಯೂ ಉಪಯೋಗಿಸುವ ದ.ಅಮೆರಿಕದ ಒಂದು ಗುಲ್ಮದ ಬೇರು" (Ipecacuanha. ಇಂಕನಿ). [ಸಂ. ವಮನಕಾರಿನ್]

**ವಮನದ್ರವ್ಯ** (ನಾ). ವಾಂತಿಮಾಡಿಸುವ ಔಷಧಿಪದಾರ್ಥ : ವರ್ಧನಾನಿ = ವಮನದ್ರವ್ಯಂಗಳು (ವಿಷ್ವೈವಿ. ೫೯). [ಸಂ.]

**ವಮನಿಸು** (ಕ್ರಿ). ಕಾರು ; ವಾಂತಿಮಾಡು : ನೆನಪಿನೀ ಕೇತಕಿಯ ಬನದೆಡೆಗೆ ಸುಳಿಯದಿರು ಉರಗ ಹಾಲಾಹಲವ ವಮನಿಸೀತು (ಪಿಪಾಸೆ. ೫೪-೭).

[ವಮನ + – ಇಸು$_3$]

**ವಮಿ** (ನಾ). ೧. ವಾಂತಿ; ಓಕರಿಕೆ : "ಪ್ರಛರ್ದಿಕಾ, ವಮಿಃ, ವಮಥುಃ — ೩ ಕಕ್ಕುರೋಗ, ವಾಂತಿ, ವಮನ" (ಸಿದ್ಧಾಂತಿ. ೧೮೪). ೨. ವಾಂತಿ ಮಾಡಿಸುವ ಔಷಧ ದ್ರವ್ಯ. ೩. ಬೆಂಕಿ ; ಅಗ್ನಿ. ೪. ವಂಚಕ ; ಮೋಸಗಾರ. [ಸಂ.]

**ವಮ್ರಿ** (ನಾ). ಇರುವೆ. [ಸಂ. ವಮ್ರಾ]

**ವಮ್ರಾಕೂಟ** (ನಾ). ಇರುವೆಯು ಕಟ್ಟಿದ ಮಣ್ಣಿನ ಗೂಡು ; ಹುತ್ತ ; ವಲ್ಮೀಕ : "ವಮ್ರಾಕೂಟಂ, ನಾಕುಃ, ವಲ್ಮೀಕಃ, ವಾಮಲೂರಃ — ಈ ೪ ಹುತ್ತು" (ಹಲಾಯು. ೧೦೮-೨೨). [ಸಂ.]

**ವಯ** (ನಾ). ೧. ಪ್ರಾಯ ; ವಯಸ್ಸು : ವಯಮಿರ್ಕೆ ನೀನ್ ನೋಡು ಗುಣಮನ್ (ಅಂತಿಗೊ. ೩೩-೬೭೨); ವಯ ಬಿರುಸು ಆಗಿದೆ. ಮದಿವಿ ಆಗಿಲ್ಲೆಂದರೆ, ಏನೋ ಕುಂದು ಕಾಣಿಸುತ್ತದೆ (ಚಿಟ್ಟಹೊ. ೪೧). ೨. ಹರಯ ; ಯೌವನ. ೩. ಪಕ್ಷಿ : 'ವಯೋಧಿಕ' ಪರಾ. [ಸಂ. ವಯಸ್]

**ವಯಃಪರಿಣತ** (ನಾ). ವಯಸ್ಸಾದವನು ; ವಯೋವೃದ್ಧ : ವಯಃಪರಿಣತನಾದೊಡಂ ಬಿಸುಡಲಾರ್ಪನೆ ರಾಗಿ ನಿಸರ್ಗಭಾವಮಂ (ಮಲ್ಲಿಪು. ೭-೧೨). [ಸಂ.]

**ವಯಃಪರಿಣತಿ** (ನಾ). ವಯಸ್ಸಿನಿಂದ ಉಂಟಾದ ಪರಿಪಕ್ವತೆ ; ಪ್ರೌಢತೆ : ವಯಃಪರಿಣತಿವೆತ್ತುಮೇನುದಯಕಾಲದ ರಾಗಮನಸ್ತಕಾಲದೊಳ್ ಪರಿಹರಿಸಲ್ಕಣಂ ನೆಱೆದನಿಲ್ಲ ದಿನಾಧಿಪನಂತೆ ದಲ್ (ಮಲ್ಲಿಪು. ೭-೧೨). [ಸಂ.]

**ವಯಃಪ್ರಾಪ್ತ** (ಗು). ೧. ವಯಸ್ಸಿಗೆ ಬಂದ ; ಪ್ರೌಢನಾದ : ಭವಾನೀಚರಣನನ್ನು ಆಕೆ ಓರ್ವ ವಯಃಪ್ರಾಪ್ತಬಾಲಕನ ಹಾಗೆಯೇ ಕಾಣುತ್ತಿದ್ದಳೆಂದರೆ ತಪ್ಪಲ್ಲ (ಇಪ್ಪತ. ೩೬೩). (ನಾ). ೨. ವಯಸ್ಸಿಗೆ ಬಂದವನು ; ಯೌವನಕ್ಕೆ ಕಾಲಿಟ್ಟವನು : ಆತನ ಮಗನಾದ ಪೂರ್ಣವರ್ಧನಕುಮಾರನು ಆಗತಾನೆ ವಯಃಪ್ರಾಪ್ತನಾಗಿದ್ದನು (ಹತ್ತುಮ. ೨೦). [IP ಸಂಸ್ಕೃತದಲ್ಲಿ ಪ್ರಾಪ್ತವಯಃ ಎಂಬುದು ಸರಿಯಾದ ರೂಪ]

**ವಯಃಪ್ರಾಪ್ತೆ** (ನಾ). ವಯಸ್ಸಿಗೆ ಬಂದವಳು ; ಯುವತಿ ; ತರುಣಿ : ಉತ್ಪಲುನ್ನೀಸೆಯು ಕ್ರಮವಾಗಿ ವಯಃಪ್ರಾಪ್ತೆಯಾಗುತ್ತಿದ್ದಳು (ಕಪಾಕುಂ. ೬೩).

[ ವಯಃಪ್ರಾಪ್ತ + – ಎ$_2$]

**ವಯಃಸ್ಥ** (ಗು). ೧. ಪ್ರಾಯಕ್ಕೆ ಬಂದ ; ತಾರುಣ್ಯಾವಸ್ಥೆಯ. ೨. ವಯಸ್ಸಾದ ; ಮುದಿಯಾದ. (ನಾ). ೩. ಓರಗೆಯವನು ; ಸಂಗಡಿಗ. [ಸಂ.]

**ವಯಃಸ್ಥೆ** (ನಾ). ೧. ಓರಗೆಯವಳು ; ಗೆಳತಿ. ೨. ಒಂದು ಬಗೆಯ ಸಸ್ಯ ; ಹೊನ್ನಗನ್ನೆ ; ಸೋಮಲತೆ. ೩. ನೆಲ್ಲಿಯ ಮರ ; ಆಮಲಕವೃಕ್ಷ. ೪. ಕಾಕೋಳಿಸೊಪ್ಪು. ೫. ಸಣ್ಣ ಯಾಲಕ್ಕಿ. [ಸಂ. ವಯಃಸ್ಥಾ]

**ವಯನು** 'ವಯಿನ' ನೋ.

**ವಯಲ್, ಬಯಲ್, ಬಯಲು, ಬೈಲು** (ನಾ). ೧. ವಿಸ್ತಾರವಾಗಿಯೂ ಸಮತಟ್ಟಾಗಿಯೂ ಇರುವ ಭೂಮಿ ; ಮೈದಾನ : ದುಣ್ಣುಸಮುದ್ರದಾ ವಯಲುಳ್ಕೆಱುದಾರಾ ಮೇಗೆ ಪದಿರ್ಕ್ಕಣ್ಣುಗಂ ಮಣ್ಣಂ (ಎಕ. IV, ನಾಗಮಂ. ೮೫-೬೫; 776). ೨. ಕಾಳಗ ಮಾಡುವ ಸ್ಥಳ ; ಯುದ್ಧಭೂಮಿ ; ರಣರಂಗ : ಮೀಱುವೆವೆಂಬ [ಮಾ]ಂಡಳಿಕರೀಯದ[ರೆ]ಂಬದಟರ್ ವಯಲ್ಗೆ ಮೆಯ್ದೋಱುವವೆಂಬ ಪೂಣಿಗರಡಂಗಿ [ಕು]ನುಂಗಿ ಸಿಡಿಲ್ದು ಜೋಲ್ದು ಕಾಯ್ದು[ಜೆ] ನಭಕ್ಕೆ ಪಾಱಿದುದು . . . ತೇಜದ ದಳ್ಳುರಿ ಪಾಂಡುರಾಜನಾ (ಪಂಪಭಾ. ೧-೧೦೯). **ಬಯಲ್** : ೧. ಬಯಲೊಳ್ ಪರ್ವುಗೆದೋಱಿ ನುಣ್ಪಸಲೆಯೊಳ್ ಮೆಯ್ದೋಱಿ . . . ಯಥಾಸಾರನಿಪಾತಮುಣ್ಮಿದುದು ಮೇಘೋನ್ಮುಕ್ತಧಾರಾರವಂ (ಕಾದಂಬ. ೫೩೩); ನಯದಿಂ ವೈಹಾಳಿಯ ಬಯಲೊಪ್ಪಿಸ್ತು ಪಟ್ಟಣದ ವನದೆಡೆಯೊಳ್ (ಗಿರಿಕ. ೨-೭೪). ೩. ನೆಲ ; ಭೂಮಿ : ಬಯಲೊಳಿಕ್ಕಿದ ಮೀನಂತೆ ಮಿಡುಕಿ ತಳಾಱನಂತೆ ನಿದ್ರೆಗೆಟ್ಟು (ಧರ್ಮಾಮೃ. ೧-೧೬೮); ಹರಿ ಪೋತಂದದಿವಚ್ಚೆಗಳ್ ಬಯಲೊಳಿಲ್ಲಿಂದಿತ್ತವಿನ್ನಿಲ್ಲ (ಜಗವಿ. ೫-೩೧). ೪. ಏನೂ ಇಲ್ಲದಿರುವ ಸ್ಥಳ ; ಬರಿದಾದ ಜಾಗ ; ಶೂನ್ಯ : ಬಯಲನಪ್ಪಿದ ತೋಳ್ ಬಂಜೆಯಾಗೆ ಬಾಡಿದ ಲತೆಯಂತೆ ಕಂದಿ ಕುಂದುವ . . . ಪೊಚ್ಚಪೊಸ ಹರೆಯದ ಮುಗ್ಧಾಂಗನೆಯರೊಳಂ (ಗಿರಿಕ. ೨-೧೦೫ ವ); ಮಲ್ಲಿಗೆಯಲರಂ ಕೊಯ್ಕಲ್ ಮೆಲ್ಲನೆ ಕೈಯಿಕ್ಕಲೊಗೆದ ನಖರದ್ಯುತಿಯಂ ಮಲ್ಲೀಕುಟ್ಮಲಮೆಂದಾ ನಲ್ಲಳ್ಬಯಲಂ ತುಡುಂಕಿ ಕೌತುಕಮಾಂತಳ್ (ಉದ್ಭಟ. ೯-೬೨). ೫. ವ್ಯರ್ಥವಾದುದು ; ನಿರರ್ಥಕವಾದುದು : ತಾನವಿಚಾರಕ್ಕೆಂದೊಡೆಂಟಂ ನಿಮಿರ್ಪುದು ಬಯಲಂ ಭಾವಿಸುತ್ತಿರ್ಪುದಾತ್ಮೋದ್ಭವ ಮೂಲಚ್ಛೇದನೋಪಾಯವನೆಣಿಸದು ಮದ್‌ಬುದ್ಧಿ (ರಕ್ಷಾಶ. ೧೫); ನಾಟಕಸ್ತ್ರೀಯಂತೆ ಬಯಲ ಡಂಭವ ತೋಱಿ (ಪುರಂದ. ೨-೨೫-೪). ೬. (ರಹಸ್ಯ ಮುಂತಾದುವು) ಪ್ರಕಟವಾಗುವುದು ; ಬಹಿರಂಗವಾಗುವುದು : 'ಬಯಲ್ಬು', 'ಬಯಲ್ಪಡಿಸು' ಪರಾ. ೭. ಸಾವು ; ಮರಣ : 'ಬಯಲ್ಗೊಳಿಸು' ಪರಾ. **ಬಯಲು** : ೧. ಒಳ್ಳೆಯ ಹವೆಯ ಬಯಲಲ್ಲಿ ಸ್ವಲ್ಪ ಹೊತ್ತು ತಿರುಗಾಡಿ ಬಂದು ವಿಶ್ರಾಂತಿ ತಕ್ಕೊಂಡ ಬಳಿಕ ತಮ್ಮ ತಮ್ಮ ಉದ್ಯೋಗಗಳನ್ನು ಕೈಕೊಳ್ಳಬಹುದು (ಮುಂಬಯಿ. ೪-೨೫); ಬಯಲಿನ ಮತ್ತು ಶಾಲೆಯೊಳಗಣ ಆಟಗಳು ಈ ಎಲ್ಲ ಸಂದರ್ಭಗಳಲ್ಲೂ ಸಾಮೂಹಿಕಜೀವನಕ್ಕೆ ಅವಕಾಶವನ್ನು ಕಲ್ಪಿಸಿಕೊಳ್ಳಬಹುದು (ಶಿಕ್ಷದ. ೩೧೯). ೪. ನಿನ್ನ ಹೊಯಿದೊಡೆ ಬಯಲ ಹೊಯಿದಂತೆ ನುಣುಚಿ ನುಣ್ಣನೆ ಕಡೆಗೆ ಖಂಡೆಯ ಜುಣುಗಿ ಹೋಯಿತಿದಾವ ಮಹಿಮೆಯ ಗುಣವೊ (ಪ್ರಭುಲೀ. ೧೯-೩೬); ಬನದೊಳಗೆ ಭೂಪನನಜಿಸಿ ಕಾಣದೆ ಬಯಲನಪ್ಪುವಳುರವಣಿಪ ಕಣ್ಣೀರಿನಲಿ ನಡೆತಂದಳಿಂದುಮುಖಿ (ನಳಚ. ೫-೩೨).

೫. ಸೂರ್ಯನಾರೋಗಣೆಗೆ ಸೊಡರೇ ಸಾಕಿದೇತಕೆ ಬಯಲ ಭಂಡತನ (ಕುವ್ಯಾದ್ರೋ. ೪-೨೮); ಬಯಲಿಗೆ ಕೆಟ್ಟು ಪೋಗುತಿಹ ಕಾಯಮನೀಶನ ಭಕ್ತರಿಚ್ಛೆಗಂ ಪ್ರಿಯದೊಳಗಿತ್ತು (ನನ್ನಚಾ. ೬-೧೦೮). ೮. ಜಮೀನು; ಕೃಷಿಭೂಮಿ : ಊರಿಂ ಮೂಡ ಸವಸಿ(?)ಂಗೆ ಗ[ರ್]ದ್ದೆಯುಂ ಬಯಲುಮಂ ಬಿಟ್ಟನ್ (ಇಇ. XVIII, ೩೧೨-೧೭; ಸು. 11ನೆಯ ಶತ); ಯಿಂತೀ ಚತುಃಸೀಮೆಯಿಂದೊಳಗುಳ್ಳ ಮನೆ ಬಾವಿ ಮನೆಬಾಗಿಲ ಗದ್ದೆ ಮನೆಯ ಹಿಂದಣ ಬೆಟ್ಟು ತಿಪ್ಪೆ ಮಕ್ಕಿ ಮೆಕ್ಕೆ ಬಯಲು . . . ಯಿಂತೀ ಅಷ್ಟಭೋಗ ತೇಜಸ್ಸಾ(ಂ)ಮ್ಯ ಸಹಿತವಾಗಿ . . . ಧಾರೆಯನೆರದು ಕೊಟ್ಟರು(ಸೌಇಇ. IX-ii, ೪೩೨-೧೭; 1400). ೯. ಸ್ಪಷ್ಟವಾದುದು ; ವ್ಯಕ್ತವಾದುದು : ಲೋಕಗತಿ ಮಾಯಾವಿಲಾಸ ವಿವೇಕಗಳಿಗಿದು ಬಯಲು ಫಲುಗುಣ ಸಾಕು ಗರ್ವವ ಬೀಳುಕೊಡು ಸೆಳೆ ಶರವ ಹಿಡಿ ಧನುವ (ಕುವ್ಯಾಭೀ. ೩-೫೯). ೧೦. ಬಾನು; ಆಕಾಶ: ಬಯಲಿಂಗೆ ಕಡೆಯಿಲ್ಲ ಮರುತಂಗೆ ತಡೆಯಿಲ್ಲ ರುಚಿಗೆ ಖಂಡಿತವಿಲ್ಲ (ಸರ್ವವ. ೭-೨೮); ಪೊಡವಿ ಮುನಿವಡೆ ಬಯಲು ಬಡಿವಡೆ . . . ಬಿಡದಡುವ ಮಡಕೆಯುಂಬೆಡೆ ಹರಸಿ ರಕ್ಷಿಸುವ ನೀವೆನಗೆ ಶಾಪವೀವಡೆ ಧಟ್ಟಿಸಿ ನುಡಿದು ರಕ್ಷಿಸುವರಾರು (ಹರಿಕಾ. ೮-೪೧). ೧೧. ಹಿಡಿತಕ್ಕೆ ಸಿಕ್ಕದಿರುವುದು,— ಹೊರತಾದುದು : ಬೇಂಟೆಯೊಳಲಗುಗಾಣಸದಿರ್ದ ಮೃಗವಿಲ್ಲಿಂದು ಪರಿಯಂತ ಬಳಕೆಗಿದು ಬಯಲೆಂಬ ಬಗೆ ಮಿಗೆ ಹೊಳಕುತಿದೆ ಹೃದಯದಲಿ ಮಾತಿದನಿಳಿಕೆಗಾಣದ ಮನೆಗೆ ಬಿಜಯಂಗೈಯಿ ನೀವು(ತೊರರಾ. ೩-೮-೩೯). ೧೨. [ವೀಶೈ] ಆಕಾರವಿಲ್ಲದುದು; ನಿರಾಕಾರವಾದುದು : ಆರೂ ಅಱಿಯದ ಬಯಲೊಳಗೆ ಬಯಲಾಗಿ ನಿಂದ ನಿಲವ ಹಿಡಿದೆನ್ನ ಕರದಲ್ಲಿ ತೋಱಿದ ಗುರುವೇ (ಮಹಾದೇ. ಬ. ೨೨-೪೦); ಸೃಷ್ಟಿಪೂರ್ವದ ಪರವಸ್ತುವನ್ನೂ ಶೂನ್ಯವೆಂದೇ ನಿರ್ದೇಶಿಸುತ್ತಾರೆ. ಅದನ್ನು ಅಚ್ಚಗನ್ನಡಶಬ್ದ 'ಬಯಲು' ಎಂದೂ ನಿರ್ದೇಶಿಸುತ್ತಾರೆ (ಶೂನ್ಯಕು. ೩೦). ೧೩. ಶೂನ್ಯದಲ್ಲಿ ಒಂದಾಗುವುದು; ಐಕ್ಯ ; ಮುಕ್ತಿ : ಬಸವನಿರವನಱಿದು . . . ಬಸವನ ಬಯಲ ವಿಚಾರವ ತಿಳಿದು ಭ್ರಮೆಯನಳಿದು ಆನು ಬದುಕಿದೆನಯ್ಯಾ (ನೀಲವ. ಕ. ೨೩-೬೯). ಬೈಲು: ೧. ಬೈಲಾ ಬಾವಿಗೆ ಬಂದಳೋರ್ವ ಬಾಲೆ (ಪುರಂದ. ೧-೩೭ ಪಲ್ಲವಿ); ಕೋಟೆ ಚೆನ್ನಯರು ಬಲ್ಲಾಳನ ಆಳುಗಳೊಂದಿಗೆ ಪಾಲೆ ದಾಟಿ, ಬೈಲು ಕಳೆದು, ಬೆಟ್ಟ ಹತ್ತಿ . . . ರಾಜಾಂಗಣಕ್ಕೆ ಬಂದು . . . ಉಪ್ಪರಿಗೆಯನ್ನು ಏರಿದರು (ಕೋಟಿಚೆ. ೧೪); ಗುಡಿಗಳ ಮುಂದಿನ ಬೈಲುಜಾಗದಲ್ಲಿ ಹೂದೋಟಗಳ ನಿರ್ಮಾಣವಾಗಬೇಕು (ಹಬ್ಬಬ. ೨೮). ೩. ನೀರಿನೊಳಗಣ ಕಪ್ಪೆ ಬೈಲಿಗೆ ಹಾಕಿದ ಹಾಗೆ (ಗಾದೆ). ೮. ಇಲ್ಲಿಯ (ಉ.ಕ.ಜಿಲ್ಲೆ) ಗದ್ದೇಭೂಮಿಯಲ್ಲಿ ಮಕ್ಕಿ ಬೈಲು ಕಾರು ಎಂದು ಮೂರು ವಿಧವು (ಮುಂಬಯಿ. ೫-೨೧೨). ೧೦. ಆತ್ಮನ ಇರವು ಘಟ ಮಠದೊಳಗೆ ಗ್ರಹಿಸಿಪ್ಪ ಬೈಲಿನ ಇರವಿನಂತೆ (ಮೋಳಿಮಾ. ೯೦-೩೫೭).

ಬಚ್ಚಬಯಲ್, ಬಚ್ಚಬಯಲು, ಬಟ್ಟಬಯಲ್, ಬಟ್ಟಬಯಲು, ಬಟ್ಟಬೈಲು = (ದ್ವಿರುಕ್ತಿ): ಬಚ್ಚಬಯಲ ತೆಱದಿಂ ಬಗೆಗೊಳಿಸಿ ಪಳಚ್ಚನೆಸೆವ ಪಳಿಕಿನ ಮಾಡಗಳೊಳ್ (ಜಯಕಾ. ೧೦-೫೩); ಬಚ್ಚಬಯಲಂತೆ ಬಗೆಗೊಳಿಪ ಬಡನಡುವಿನ ಪಳಚ್ಚನೊಪ್ಪುವ ಪೂರ್ಣಚಂದ್ರಮಂಡಲಕೆ ಪಡಿಯಚ್ಚಾದ ಮುಖ (ಸಮ್ಯಕ್‌ಕೌ. ೩-೭); ಸಚ್ಚಿದಾನಂದನ ಸಂಗ ಬಚ್ಚಬಯಲು (ಮೋಳಿಮಾ. ೬-೨೧); ಆ ಬಲಂ ನಡೆದುದು ಪೆರ್ದೊಱೆ ಪೆರ್ವಟ್ಟು ಪೆರ್ವಟ್ಟುಗಳೆಂಬತಡಿಗೆಡೆದಳ್ಳೆ ಬಟ್ಟಬಯಲಪ್ಪಿನೆಗಂ (ಮಹಾಪು. ೧೧-೧೧೦); ಭಕ್ತಿಸ್ಥಲವನಳಿದು ಭಾವವಡಗಿ ಬಟ್ಟಬಯಲ ಕೂಡಿ ಸಂಗಯ್ಯನಲ್ಲಿ ಸ್ವಯಲಿಂಗಿಯಾದ ನಮ್ಮ ಬಸವಯ್ಯನು (ನೀಲವ. ಕ. ೭-೯); ಹಳುವ ತಪ್ಪಿದ ಹಕ್ಕಿ ಬಟ್ಟಬಯಲೊಳು ಸಿಕ್ಕಿಕೊಂಡು ತೊಳಲಾಡುವುದು ಗೂಡಿಗಾಗಿ (ಗಂ. ೮೩-೨); ಬಟ್ಟಬೈಲಾಗಿರುವ ಯಾವ ಸ್ಥಳದಲ್ಲಾದರು ನಿಂತುಕೊಂಡು ಸುತ್ತಲೂ ನೋಡಿದರೆ (ಭೂಗೋಳ. ೧). ಬಯಲ ಕುದುರೆಯ ಕೋಡು = (ಆಲಂ) ಬಿಸಿಲುಗುದುರೆಯ ಕೊಂಬಿನಂತೆ ಅಸಂಭವವಾದುದು ; ಭ್ರಮೆ : ಝಾಡಿಸುತ್ತಿದೆ ಬಯಲ ಕುದುರೆಯ ಕೋಡು ಮಱುಮೊನೆಗೊಂಡು ಜಗವನು ಮಾಡಲೀಸದು ನಿನ್ನ ಪದಕಮಲದಲಿ ನಿಜಮತಿಯ (ನಿಭಾಗ. ೩-೪-೨೬). ಬಯಲ ನೀರ್, ಬಯಲ ನೀರು = ಬಿಸಿಲುಗುದುರೆ ; ಮರೀಚಿಕೆ ; ಮೃಗಜಲ (?): ಬಯಲ ನೀರಂತೆ ಮಾರ್ಗಂ ಬಿಟ್ಟು ನಡೆಯದೆ (ಧರ್ಮಾಮೃ. ೫-೯೯); ನೆಲದ ಮಡಕೆಯಲ್ಲಿ ಬಯಲ ನೀರ ತುಂಬಿ (ಸಕವ. ಕ. I, ೬೧-೩೩). ಬಯಲ ಬಯಲ್ = (ಆಲಂ) ಸಂಪೂರ್ಣವಾಗಿ ನಿರರ್ಥಕವಾದುದು : ಆನಿದನಱಿಯಲೆ ನಿನಗಿತ್ತೀ ನಳಿನಮುಮುರಿಗೆ ತೋಱಿದಲರಂತಿರೆ ಪರಿಮ್ಲಾನಮಿನಿತಾಯ್ತು ನೋಡಿದೆನೆನೆಂದಲೆ ಬಯಲ ಬಯಲೊಳಡಗಲ್ ಬಗೆವೈ (ಲೀಲಾವ. ೪-೬೩). ಬಯಲ ರವ = ಅಶರೀರವಾಣಿ; ಆಕಾಶವಾಣಿ: ಪ್ರಿಯತಮೆಯನಗಲ್ದ ಶರೀರಿಯ ಜೀವನಮೇವುದೆಂದು ಮರಣವನಾಂ ನಿಶ್ಚಯಮಂ ಮಾಡುವ ಪದದೊಳ್ ಬಯಲ ರವಂ ಪುಟ್ಟಿತಂತರಿಕ್ಷದೊಳಾಗಳ್ (ದಶಕು. ೪-೪೭). ಬಯಲಾಗು, ಬೈಲಾಗು = ೧. ಬರಿದಾಗು; ಖಾಲಿಯಾಗು : ಮೊನೆಯಂಬಲ್ಲಿವು ನಂಜಿನಂಬುಗಳೆನಲ್ . . . ಬೇಗದಿನುರ್ಚಿ ಪೋಗೆ ಪೆಣನಂ ಸಾಲಿಟ್ಟವೊಲಾಗೆ ಮೇದಿನಿಯೊಳ್ ಖೇಚರಸೇನೆ ಬೀೞೆ ಬಯಲಾದತ್ತಾಗಸಂ(ಪಂಪಾಭಾ. ೯-೬೯). ೨. ವ್ಯರ್ಥವಾಗು ; ನಿಷ್ಪ್ರಯೋಜಕವಾಗು: ನಿರ್ಧನಿಕ ಬಯಸಿದ ಬಯಕೆ ಬಯಲಹುದಲ್ಲದೇ ಬೇೞೆ ಧನಿಕನಂತೆ ಸಮಸ್ತಸುಖ ಸಂಜನಿಸುವುದೆ (ಕುವ್ಯಾಉ. ೪-೫೫); ಹರಿ ಕೊಟ್ಟ ವರ ಬಯಲಾಯ್ತು (ಮೋಹತ. ೪-೮೨). ೩. (ಗುಟ್ಟು, ಸುದ್ದಿ ಮುಂತಾದುವು) ಬಹಿರಂಗವಾಗು ; ಪ್ರಕಟವಾಗು : ಅವನ ಗೋಪ್ಯಕಾರ್ಯಗಳೆಲ್ಲ ಗೂಢಚಾರರಿಂದ ಬಯಲಾದವು (ಹಾಹುತ್ತ. ೮೭); ಚಿಕ್ಕರಾಯನ ಲಗ್ನದ ವಿಚಾರವನ್ನು ಮುಂದಕ್ಕೆ ಹಾಕುತ್ತ ಬಂದಿದ್ದರ ಇಂಗಿತವು ಈಗ್ಗೆ ಬೈಲಾಯಿತು (ಯದ್ಯಮ. ೪). ೪. ಲೀನವಾಗು ; ಐಕ್ಯವಾಗು : ಆರೂ ಅಱಿಯದ ಬಯಲೊಳಗೆ ಬಯಲಾಗಿ ನಿಂದ ನಿಲವ ಹಿಡಿದೆನ್ನ ಕರದಲ್ಲಿ ತೋಱಿದ ಗುರುವೇ (ಮಹಾದೇ.ಬ. ೨೨-೪೦); ಸಂಗನ ಬಸವಣ್ಣನು ಕಪ್ಪಡಿಯ ಸಂಗಯ್ಯನೊಳಗೆ ಬಯಲಾದನು (ಅಖಂಡೇ. ೩೨೬-೨೮). ೫. ಕಾಣದಾಗು ; ಮಾಯವಾಗು : ಭೂತದಂತೆ ತಾಗುವ ಶಸ್ತ್ರಕೆ ಸಿಕ್ಕದೆ ಬಯಲಾಗಿ ತಾಗಿ ಗರ್ಜಿಪ ಸಿಂಗದಂತೆ . . . ಹದಿನಾಱುಸಹಸ್ರವಿದ್ಯವನು ತುದಿಮೊದಲಿಂದೆ ವಿಸ್ತರಿಸಿದ ಕೌಟಿಲ್ಯನಿಧಿ ಶಂಬರಾಸುರಖಳನು (ಮೋಹತ. ೧೧-೬೮); ನಿನಗೊಂದು ಚಿಂತೆ ಎಡೆಗೊಂಡ ವೇಳೆಯೊಳೆನ್ನ ನೆನೆವುದೆಂದು ನುಡಿದಳು ಬಯಲಾದಳೊಡನೆ (ಭರತೇ. ೭-೬೨). ೬. ಸಾಯು ; ಮರಣಹೊಂದು : ಕಿನ್ನರೇಶ್ವರ ಗೊಮ್ಮಿದೇವಾ . . . ನೀನಿಂದು ಬಯಲಾದೈ (ಬಸವು. ೩೬-೨); ಇಷ್ಟು ದಿನಗಳಾದರೂ ಏಕೆ ಬದುಕಿ ಇರಬೇಕು? ಹೆಂಡತಿ ಮಗುಗಳಂತೆ ಬಯಲಾಗಬಹುದಿತ್ತಲ್ಲ? (ಫಲಸಂ. ೩೯). ಬಯಲಿಗಿಕ್ಕು = ಗುಟ್ಟನ್ನು ರಟ್ಟುಮಾಡು ; ರಹಸ್ಯವನ್ನು ಪ್ರಕಟಗೊಳಿಸು : ಅಯ್ಯ ಭಕ್ತಂ ನೋಡ ಬಯಲಿಗಿಕ್ಕಿದನಿದಂ ಎಂತುಸುರದಿರ್ಪೆನಿನ್ನೆಂತು ಪೇಳುವೆನಿದಂ (ತಿರುರ. ದೇ. ೨೦-೭).ಬಯಲಿಗೆ ಬರು = ಬೆಳಕಿಗೆ ಬರು ; ಪ್ರಕಟವಾಗು : ಪ್ರಾಧ್ಯಾಪಕ ಟಿ. ಬರೊ . . . ೧೯೫೭ ಮತ್ತು ೧೯೫೮ ರ ಅವಧಿಯಲ್ಲಿ ನಡಸಿದ ಸಂಶೋಧನೆಯ ಫಲವಾಗಿ ಪೆಂಗುಭಾಷೆ ಬಯಲಿಗೆ ಬಂದಿತು (ದ್ರಾವಿವಿ. ೧೭೨). ಬಯಲಿಗೆಳೆ = ಬಯಲಿಗಿಕ್ಕು : ಶಕುಂತಲೆ . . . ದುಷ್ಯಂತನ ಮಿಥ್ಯಾಚಾರವನ್ನು ಬಯಲಿಗೆಳೆಯುವಳು (ಕಾವ್ಯಸ. ೨೪); ಈ ರಹಸ್ಯವು ಕಾರ್ಡಿನಲನಿಗೆ ಚೆನ್ನಾಗಿ ಗೊತ್ತಿದ್ದುದರಿಂದ . . . ಬಯಲಿಗೆಳೆಯಲು ಸಂದರ್ಭವನ್ನು ಕಾಯುತ್ತಿದ್ದನು (ಯೋಧರು. ೩೭). ಬಯಲ್ಮಾಡು, ಬಯಲು ಮಾಡು, ಬೈಲುಮಾಡು = ೧. ಕಾಣದಂತೆ ಮಾಡು ; ಇಲ್ಲವಾಗಿಸು : ಹೂಸುವ ಜಗವನೊಂದೆವೆಯಾಟದೆ ಬಯಲ್ಮಾಡುವ ಮರಳಿ ಸೃಷ್ಟಿಸುವ ನೋಡುವ ತಾನಲ್ಲದವನಂತೆಯೊಳಹೊಱಗಾಡುವ ಚೇಷ್ಟಕನೀತ (ಮೋಹತ. ೧೩-೭೯). ೨. ಬಹಿರಂಗಪಡಿಸು ; ಪ್ರಕಟಗೊಳಿಸು : ನಿರ್ಮಲೆಯಾಡಿದ ಮಾತು ಪ್ರಭಾಕರನ ನಡತೆಯನ್ನು ಬಯಲುಮಾಡಿಬಿಟ್ಟಿತು (ತೀವೋಡ. ೧೧೭); ಯಡತೊರೆಯವರು ಎದುರುಬಿದ್ದು ತಮ್ಮ ಮನೋಭಾವವನ್ನು ಬೈಲುಮಾಡುವರು (ಕಲಸ. ೩೧೦). ೩. ಖಾಲಿಮಾಡು ; ಬರಿದುಮಾಡು : ಕತ್ತಿ ಹಿಡಿದಿರುವರ ಕೈಗಳನ್ನು ಕಡಿದು ಬಂಡಿಗಳಂ ಬಯಲುಮಾಡಿ . . . ಓಡಿಹೋದರು (ಮಹಾಪಾ. I, ೮೬).

[ದೇ. ‖ ತಮಿ. ಮಲ. ವಯಲ್; ತುಳು. ಬಯಲು, ಬೈಲು; ತೆಲು. ಬಯಲು, ಬೈಲು]

ವಯಸ್₁ (ನಾ). ವಯಸ್ಸು ; ಪ್ರಾಯ : ವಯಸಮನೀ ಶೀಲಮನೀ ವಿನಯಮನೆಯ್ದೆ ವಿದ್ಯೆಯಿಂ ಪುದಿದೊಡೆ ಮತ್ತೀವೇಟ್ಟುದೊ ನೀಮೆ ಜಗತ್ಪಾವನೆಯರಿರಕ್ಕ ನಿಮಗ ಮಗ್ಗಳರೊಳರೇ (ಆದಿಪು. ೮-೫೮); ಉದಯಂ ಮೊದಲಾಗಿ ಸುರೇಜ್ಯಂ ನಿಂದ ರಾಶಿವರಮೆಣಿಸಿ . . . ವಯಸಮನಱೆ ವಯೋನುಮಾನಕ್ರಮದಿಂ (ಜಾತಕ. ೨೪-೩).

[ಸಂ. ವಯಸ್]

**ವಯಸ$_2$** (ನಾ). [ಅಶ್ವಶಾ] ಕುದುರೆಯ ನಡೆಗಳಲ್ಲಿ ಒಂದು ಬಗೆ : ದಾರಿ ಗತಿ . . . ಭೌಮಂ ವೈಹಾಯಸಂ ವಯಸ ಯಂತ್ರ ಕ್ಷೇತ್ರ ವಹಳಿ ಸತ್ಯಂ ದಾರಿ ಯೆಂಬ ಭೇದಂಗಳಿಂದಶ್ವಮನೇಱಲು ರೇಚಿಗನೃಪತಿ ತಾನೆ ಬಲ್ಲಂ (ಮದತಿ. ೧-೨೧). [?]

**ವಯಸ್ಕ** (ನಾ). ೧. ಹರೆಯದವನು ; ಸಮಾನಪ್ರಾಯದವನು : 'ಸಮವಯಸ್ಕ' ಪರ್ಯಾ. ೨. ತಾರುಣ್ಯವನ್ನು ದಾಟಿದವನು ; ಪ್ರೌಢ ; ಹಿರಿಯ : ಆ ಚಲನಚಿತ್ರವನ್ನು ನೋಡಲು ವಯಸ್ಕರಿಗೆ ಮಾತ್ರ ಪ್ರವೇಶವುಂಟು (ರೂಢಿ).

**ವಯಸ್ಕಮತಾಧಿಕಾರ** = (ಆಯಾದೇಶಕ್ಕೆ ಅನ್ವಯಿಸುವಂತೆ) ಪ್ರೌಢವಯಸ್ಸಿನವರಿಗೆ ಮಾತ್ರ ದೊರೆಯುವ, ಮತವನ್ನು ಚಲಾಯಿಸುವ ಅಧಿಕಾರ : ಲೋಕಸಭೆಗೂ ಪ್ರತಿಯೊಂದು ರಾಜ್ಯದ ವಿಧಾನಸಭೆಗೂ ನಡೆಯಬೇಕಾದ ನಿರ್ವಾಚನಗಳು ವಯಸ್ಕಮತಾಧಿಕಾರದ ಆಧಾರದ ಮೇಲೆ ಇರತಕ್ಕದು (ಭಾಧಾನ. ೧೯೨). **ವಯಸ್ಕರ ಶಿಕ್ಷಣ** = ಪ್ರೌಢವಯಸ್ಸಿನವರಿಗೆ ಮಾಡಿಸುವ ವಿದ್ಯಾಭ್ಯಾಸ : ವಯಸ್ಕರ ಶಿಕ್ಷಣವನ್ನು . . . ಅರುಣೋದಯದಲ್ಲಿ ಆರಂಭಿಸಿದರೆ ಒಳಿತಲ್ಲವೆ? (ಗಾಳಿಪ. ೧೭೦). [ಸಂ.]

**ವಯಸ್ಥ** (ನಾ). ಪ್ರಾಯಕ್ಕೆ ಬಂದವನು ; ತರುಣ ; ಯುವಕ : "ವಯಸ್ಥಃ, ತರುಣಃ, ಯುವಾ — ೩ ಪ್ರಾಯದ ಹುಡುಗನ ಹೆಸರುಗಳು" (ಸಿದ್ಧಾಂತಿ. ೧೭೯). [ಸಂ.]

**ವಯಸ್ಥೆ** (ನಾ). ೧. ಪ್ರಾಯಕ್ಕೆ ಬಂದವಳು ; ತರುಣಿ. ೨. ಓರಗೆಯವಳು ; ಸಂಗಾತಿ. ೩. ನೆಲ್ಲಿಯ ಮರ ; ಆಮಲಕವೃಕ್ಷ : "ತಿಷ್ಯಫಲಾ, ಆಮಲಕೀ, ಅಮೃತಾ, ವಯಸ್ಥಾ — ೪ ನೆಲ್ಲೀಮರ" (ಸಿದ್ಧಾಂತಿ. ೧೨೫). ೪. ಕಾಕೋಳಿಸೊಪ್ಪು : "ವಾಯಸೋಲೀ, ಸ್ವಾದುರಸಾ, ವಯಸ್ಥಾ — ೩ ಕಾಕೋಳಿಸೊಪ್ಪು" (ಸಿದ್ಧಾಂತಿ. ೧೪೫). ೫. ಹೊನಗೊನೆಸೊಪ್ಪು : "ಬ್ರಾಹ್ಮೀ, ಮತ್ಸ್ಯಾಕ್ಷೀ, ವಯಸ್ಥಾ, ಸೋಮವಲ್ಲರೀ — ೪ ಹೊನಗೊನೇಸೊಪ್ಪು" (ಸಿದ್ಧಾಂತಿ. ೧೪೪). ೬. ಅಳಲೆಗಿಡ. ೭. ಸಣ್ಣ ಯಾಲಕ್ಕಿ. [ಸಂ.ವಯಸ್ಥಾ]

**ವಯಸ್ಯ** (ನಾ). ಓರಗೆಯವನು ; ಗೆಳೆಯ : ತದೀಯ ವಯಸ್ಯನಾತನೆಗ್ಗಂ ಗೊರ್ಕೊಂಡು ದೋಷಾನ್ವೇಷಣಮಂ ಬಾರಿಸಿ . . . ಬುದ್ಧಿವೇೞ್ದೊಡಂಬಡಿಸಿದಂ (ಶಾಂತಿಪು. ೮-೭೯ ವ); ಕ್ಷಣಮಗಲ್ದು ನಿಲಲಾಱದೆ ಮೆಯ್ಮಱುಗಿ ಮದೀಯ ವಯಸ್ಯನನಱಸುತ್ತುಂ . . . ಚಿಂತಿಸಿದೆಂ (ಕಾದಂಪೂ. ೬೨೪). [ಸಂ.]

**ವಯಸ್ಯೆ** (ನಾ). ಗೆಳತಿ ; ಸ್ನೇಹಿತೆ : ಶಶಿಪ್ರಭಾದೇವಿಯ ವಯಸ್ಯೆ ಕನಕಪ್ರಭೆಯೆಂಬಳ್ ಬಂದು ಪೊಡೆಮಟ್ಟು ಕುಳ್ಳಿರ್ದು (ಚಂದ್ರಪ್ರ. ೫-೧೨೨ ವ); ಕಡೆಗಣ್ಣಿಂ ನೋಡಿದಳ್ ವಯಸ್ಯೆಯ ಮೊಗಮಂ (ಪುಷ್ಪಪು. ೩-೭೩). [ಸಂ. ವಯಸ್ಯಾ]

**ವಯಸ್ಸು** (ನಾ). ೧. ಬಾಲ್ಯ, ಯೌವನ ಮತ್ತು ವೃದ್ಧಾಪ್ಯ — ಎಂಬ ಬದುಕಿನ ಮೂರು ಅವಸ್ಥೆಗಳು. ೨. ಯಾವುದೇ ವ್ಯಕ್ತಿ ಅಥವಾ ಜೀವಿ ತಾನು ಹುಟ್ಟಿದಂದಿನಿಂದ ಕಳೆದಿರುವ ಜೀವಿತದ ಅವಧಿ, —ಕಾಲ ; ಪ್ರಾಯ : ಚಿಕ್ಕವಯಸ್ಸಿನಲ್ಲೇ ಬಾಳಿನ ಕಹಿ ಸಿಹಿ ಅನುಭವಗಳನ್ನು ಕಂಡಿದ್ದೀಯೆ (ಮನೋನಂ. ೬೧). ೩. ಹರೆಯ ; ಯೌವನ ; ತಾರುಣ್ಯ.

**ವಯಸ್ಸಾಗು** = ೧. ಪ್ರಾಯವಾಗು : ನಿನಗೆಷ್ಟು ವಯಸ್ಸಾಗಿದೆ? (ರೂಢಿ). ೨. ಮುಪ್ಪು ಬರು ; ವೃದ್ಧಾಪ್ಯವುಂಟಾಗು : ವಯಸ್ಸಾದ ಮೇಲೆ ನಿದ್ದೆ ಎಂಟು ತಾಸಿನಿಂದ ಆರಕ್ಕೆ, ಐದಕ್ಕೆ ಇಳಿವುದೆಂದು ಕೇಳಿದ್ದೇನೆ (ಗಾಳಿಪ. ೧೭೫). **ವಯಸ್ಸಿಗೆ ಬರು** = ಪ್ರಾಪ್ತವಯಸ್ಸನ್ನು ಹೊಂದು ; ಪ್ರಾಯಕ್ಕೆ ಬರು : ರವಿವರ್ಮನು ವಯಸ್ಸಿಗೆ ಬಂದ ಮೇಲೆ . . . ತನ್ನ ರಾಜ್ಯವನ್ನು ಸ್ವಾಧೀನಪಡಿಸಿಕೊಂಡನು (ಕರ್ನಾಅ. ೧೨). **ವಯಸ್ಸು ಮೀರು** = ಯೌವನವು ಕಳೆದು ಹೋಗು ; ತಾರುಣ್ಯಾವಸ್ಥೆಯನ್ನು ದಾಟು : ವಯಸ್ಸು ಮೀರಿದ ತರುವಾಯ ಸುಂದರಿಯರಾದ ತರುಣಿಯರನ್ನು ಮದುವೆಯಾದ ಪ್ರಭಾಕರನಂಥವರು ಇಲ್ಲದ ಅನುಮಾನವನ್ನೂ ಭಯವನ್ನೂ ಹೊಂದುವುದು ಸಹಜವೇ (ಕವಿಕ. ೩೭). [ಸಂ. ವಯಸ್]

**ವಯಿದ್ಯ** 'ಬೈದ್ಯ' ನೋ.

**ವಯಿನ**, **ವಯನು**, **ವೈನ** (ನಾ). ೧. ಹಾದಿ ; ಮಾರ್ಗ : ಸಂಕಲ್ಪವೆತ್ತಲತ್ತಲೆ ವಯಿನ! ತಡೆದರೇಂ ತಡೆದಪನೆ? (ಹಚ್ಚಿರ. ೧೯-೭೨). ೨. ಹಂಚಿಕೆ; ಯುಕ್ತಿ ; ಉಪಾಯ : (೬). ೩. ಅಚ್ಚುಕಟ್ಟು ; ಒಪ್ಪ ; ಚೆನ್ನು : ಅಪರಂಜಿಯಂತೆ ವಯಿನವಾಗಿದ್ದ ಸಂಸಾರ (ಮಹಾಗ. ೨); ನಿನಗಾದರೂ ವಯಿನಾದ ಕಡೆ ನಿಮ್ಮಪ್ಪ ಗಂಡನ್ನ ತರಲಮ್ಮ! (ಮಹಾಗ. ೩೧). **ವಯನು** : ೩. ಬಹಳಷ್ಟು ಮುರುಡು, ಒಂದೆರಡು ವಯನು (ಚಂದ್ರಮಾ. ೧೭-೪). **ವೈನ** : ೨. ಅರಸಿ ಕೇಳೇ ನಾನು ವೈನದಿ ತರುವೆ ನಾನವನನ್ನು ಕಾತುರಗರೆಯದಿರು ಬರುವವನಕ (ಜಿನಭಾ. ೨೯-೧೩); ದೊಡ್ಡಕಾರ್ಯಗಳಲ್ಲಿ ಜಯ ಸಿಕ್ಕುವಂತೆ ವೈನಂಗಳನ್ನು ಮಾಡುವ ಸಾಮರ್ಥ್ಯವುಳ್ಳವನು (ವಾಗ್ಭಪಿ. ೮೫). ೩. ಏನು ಕಾರಣ ಗಿರಿಜೆ ಕೊಂದಳು ದಾನವನ . . . ವೈನದಿಂ ವಿಸ್ತರಿಸಿಯೆನ್ನಜ್ಞಾನಕಲ್ಮಷ ತಿಮಿರಕತಿಸುಜ್ಞಾನದೀಪ್ತಿಯನೊಲಿದು ಕೃಪೆಮಾಡು (ಅಂಬಿಕಾ. ೭-೩); ವೈನದಿಂ ಹಿಮಕರಂ ಎಂದೆನಿಸಿ ನಿಶಿಕರಂ (ಪರಶು. ೨೧-೨೫); ಈ ಕಾಫಿ ವೈನವಾಗಿಲ್ಲ (ಟೈಸರ್ವೆ. ೫೮). ೪. ರೀತಿ ; ಕ್ರಮ ; ಬಗೆ : ತಾನಾ ಲಂಕೆಯ ಶಿಬಿಗಾಹುತಿಯನಿತ್ತ ವೈನವೆಲ್ಲವ ತಿಳಿಹಿದನು (ಹನುಮ. ೮೮); ಇವುಗಳ ವೈನವನ್ನು ಆಖ್ಯಾತಪ್ರಕರಣದ ಕಳನೇ ಸೂತ್ರದಲ್ಲಿ ವಿಸ್ತಾರವಾಗಿ ಹೇಳಿಧೇವೆ (ಹೊಸಗ. ೬೨). ೫. ಜೋಕೆ ; ಎಚ್ಚರ : ವಾನರಾಧಿಪರೊಂದು ಬಿಲವ ಕಂಡದರೊತ್ತ ವೈನದಿಂ ಸಾರ್ದಿಟ್ಟಿಸಿದರೆಲ್ಲರೊಂದಾಗಿ ಜಾವಪರಿಯಂತರೊಲಿದು (ವೆಂಕಾರಾ. ೪-೧೭-೪೧). ೬. ಸಮಾಧಾನ ; ನೆಮ್ಮದಿ : ದಿವಸ್ಪತಿಮುಖ್ಯರುಂ ಪದುಳದಿಂದೆ ವಿಚಾರಿಸುತ್ತಿರೆ ವೈನಮಾದಪುದಾತ್ಮದೊಳ್ ಮುದದೆ ನೀವಿರಿಂ (ಹಾಲಾಸ್ಯ. ೧-೨-೧೮).

**ವೈನವಾಗಿ**, **ವೈನಾಗಿ** = ೧. ಅಚ್ಚುಕಟ್ಟಾಗಿ ; ಒಪ್ಪವಾಗಿ ; ಚೆನ್ನಾಗಿ : ಸ್ವರವೆತ್ತಿ ಅಳುತ್ತ ಬೈವ ಬಗೆಗಳನು ವೈನವಾಗಿ ಕೇಳಿದೆನು (ವಚಕಾ. ೩೫); ಮನೆಗೆಲಸ ವೈನಾಗಿ ನೋಡಿಕೊಂಡು ಹೋಗ್ತಾಳೆ (ಹೊಸ್ಸ. ೨೧೯). ೨. ಅಂದವಾಗಿ ; ಸೊಗಸಾಗಿ : ತಲೆ ಬಾಚಕೊಂಡ್ರೆ ನೀನು ವೈನಾಗಿ ಕಾಣ್ತೀಯ (ನಮ್ಮೂರು. ೨೬೧); ನಮ್ಮೂರ ಕೆಂಚನೇ ಅದಕ್ಕಿಂತ ವೈನಾಗಿ ಕುಣೀತಾನೆ (ಗರುಡಾ. ೪೧). ೩. ಸುಖವಾಗಿ ; ನೆಮ್ಮದಿಯಾಗಿ : ನೀನೂ . . . ವೈನಾಗಿ ಮನೇಲಿ ಬೆಚ್ಗೆ ಕೂರ್ಬೇಕು , ನಾ ಇಡ್ಡೋರ್ ಬಡ್ಡೋರ್ ಕಾಲ್ಹಿಡಿದು ದುಡಿಬೇಕು (ಪಂಜಪಂ. ೧೩).

[ದೇ. || ತಮಿ. ವಯಣಮ್; ತುಳು. ವಯನ, ವಯಿನ; ತೆಲು. ವಯಿನ, ವೈನ]

**ವಯಿರ** 'ಬೇರ$_1$' ನೋ.

**ವಯಿರಮುಡಿ**, **ವೈರಮುಡಿ**, **ವೈರ್ಮುಡಿ** (ನಾ). ೧. ವಜ್ರಗಳನ್ನು ಹುದುಗಿಸಿರುವ ಕಿರೀಟ : ಬ್ರಹ್ಮೋತ್ಸವಕಾಲದಲ್ಲಿ ವಯಿರಮುಡಿಯಂ ಧರಿಸಿ ತೆಗೆದ ನಂತರ . . . ಶ್ರೀರಂಗಪಟ್ಟಣದ ಬೊಕ್ಕಸಕ್ಕೆ ತರುವಂತೆಯೂ . . . ನಿಬಂಧನೆ ಮಾಡಿ (ಮಹಾವಂ. I, ೪೧); ನಮ್ಮ ಕೀರ್ತಿಯ ವಯಿರಮುಡಿಹರಳು ಕಳೆದಿಹುದು (ಅಮುತಂ. ೩೭-೧೨). ೨. (ಅಲಂ) ಶ್ರೇಷ್ಠ ವ್ಯಕ್ತಿ : ಕಾಯಿ, ತಾಯಿ . . . ಹೊನ್ನುನಡೆಯ, ಹೊನ್ನುನುಡಿಯ, ಕನ್ನಡಿಗರ ವಯಿರಮುಡಿಯ, ಒಡೆಯ ಕೃಷ್ಣನ (ಹೊಂಗಳು. ೯-೧೧). **ವೈರಮುಡಿ**: ೧. ಗರುಡಾರೋಹಣವಂಗ್ಯದುಜೆ ರಂಜಿಪ ವೈರಮುಡಿಯ ಧರಿಸಿದ ಚೆಲುವಾ ನರಹರಿ ನಾರಾಯಣ ನೀಂ ವರವ ಕರುಣಿಸಿ ಶರಣಾಗತನ ಪೊರೆ ದೊರೆಯೇ (ಮೈಸೂಮ. ೨-೭೭); ಆ ನವರತ್ನರಂಜಿತಕಿರೀಟ . . . ಅತೀವಕಾಂತಿಯಿಂ ಭಾನುವಿನಂತೆ ವೈರಮುಡಿಯೆಂಬ ಶುಭಾಖ್ಯಮನಾಂತು ರಂಜಿಕುಂ (ಚಿಕ್ಕದೇ. ೭೫). ೩. ಮೇಲುಕೋಟೆಯ ಶ್ರೀರಂಗನಾಥನಿಗೆ ವಜ್ರದ ಕಿರೀಟವನ್ನು ತೊಡಿಸಿ, ನಡೆಸುವ ಒಂದು ಉತ್ಸವ : ಪೋರ್ಣಿಮೆಗೆ ನಂಜನಗೂಡಿಗೂ ವೈರಮುಡಿಗಾಗಿ ಮೇಲುಕೋಟೆಗೂ . . . ನಮ್ಮವರು ತಂಡತಂಡವಾಗಿ ಹೋಗಿಬಂದು ಪುಣ್ಯಸಂಪಾದನೆ ಮಾಡುತ್ತಿದ್ದರು (ಹುಟ್ಟಿಹ. ೭೪); ಮೈಸೂರು ದಸರ, ಬೆಂಗಳೂರು ಕರಗ, ಮೇಲುಕೋಟೆ ವೈರಮುಡಿ— ಸಾಕು ಇವುಗಳಲ್ಲಿ ಯಾವುದಾದರೂ ಒಂದಕ್ಕೆ ತಲೆದೂಗುತ್ತೀರಿ (ನಾಡಿಗೇ. ೧೧೭). **ವೈರ್ಮುಡಿ** : ೩. ಚಲುವರಾಯನ ಚೆಲುವದರುಶನ . . . ವೈರ್ಮುಡಿಯಾ ಲಲಿತಮಾದುತ್ಸವವ ನೋಡಿದರುಳಿವುದೆ ಬಹುಪಾತಕಂಗಳು (ಅರ್ಚಾವಿ. ೨೮-೨೧).

[<— ತಮಿ. ವಯಿರಮುಟಿ]

**ವಯಿಸಾಖಿ** 'ಬೇಸಗೆ' ನೋ.

**ವಯೋಗುಣ** (ನಾ). ವಯಸ್ಸಿಗೆ ಅನುಗುಣವಾದ ದೈಹಿಕ ಹಾಗೂ ಮಾನಸಿಕ ಪ್ರವೃತ್ತಿ, –ವರ್ತನೆ ; ವಯೋಧರ್ಮ : ನೀತಿನಿಯಮಗಳು ವಯೋಗುಣಕ್ಕೆ ತಕ್ಕವೂ ಆಗಿರಬೇಕು (ಶಿಕ್ಷದ. ೩೨). [ಸಂ.]

**ವಯೋಧರ್ಮ** (ನಾ). = ವಯೋಗುಣ : ಚಿಕಿತ್ಸೆಯಂ ಮಾಡುವಲ್ಲಿ ದೇಶಕಾಲ, ವಯೋಧರ್ಮ, ಅಗ್ನಿ ಬಲಾಬಲಗಳನ್ನು ನೋಡಿಕೊಂಡು ಚಿಕಿತ್ಸೆಯಂ ನಡೆಯಿಸುವುದು (ಸಕವ್ಯ. ೨೪೦); ವಯೋಧರ್ಮಕ್ಕೆ ತಕ್ಕಂತೆ ಹೆಣ್ಣಿನ ಹಂಬಲ ಸಹಜವಾಗಿ ಬಂದಿರಬೇಕು (ಹೊಸಕ್ಕ. ೧೭). [ಸಂ.]

**ವಯೋಧಿಕ** (ನಾ). ೧. ವಯಸ್ಸಿನಿಂದ ಹಿರಿಯನಾದ ವ್ಯಕ್ತಿ ; ವಯೋವೃದ್ಧ : ಉಭಯಕುಲಸಹಾಯತ್ವಮಿತರೇತರೋಪಕಾರದಿಂ ಸಂಗತದೊಳಾದುದುಮನಲ್ಲಿಯ ವಯೋಧಿಕರೀಗಳುಮಾಗಳುಮಱಿವರ್ (ಶಾಂತಿಪು. ೨-೭೭ ವ). ೨. ಪಕ್ಷಿಗಳಲ್ಲಿ ಶ್ರೇಷ್ಠವಾದುದು. ೧, ೨: ವಯೋಧಿಕನಾಗಿ ತಾರ್ಕ್ಷ್ಯನಲ್ತು . . . ಎನೆ ವೃದ್ಧನಿದೇಂ ವಿರುದ್ಧನೋ (ಪುಷ್ಪಪು. ೧೩-೩೫). [ಸಂ.]

**ವಯೋನುರೂಪ** (ನಾ). ವಯಸ್ಸಿಗೆ ತಕ್ಕುದು ; ವಯಸ್ಸಿಗೆ ಅನುಗುಣವಾದುದು : ದೇವಿಯರುಂ . . . ವಯೋನುರೂಪದಿಂ ಕುಮಾರಂಗನುಷ್ಠಿಸುತ್ತಿರ್ಪನ್ನೆಗಂ (ಚಾವುಂಪು. ೩೪). [ಸಂ.]

**ವಯೋವೃದ್ಧ** (ನಾ). ವಯಸ್ಸಿನಿಂದ ಹಿರಿಯನಾದವನು ; ಮುದುಕ : ವಯೋವೃದ್ಧನುಂ ಬುದ್ಧಿವೃದ್ಧನುಂ ಪ್ರಸಿದ್ಧನುಮಪ್ಪ ಮಹತ್ತರನ ಕೈಯೊಳ್ ಸನ್ಮಾನದಾನಪುರಸ್ಸರಮಾಗೆ ಕೊಟ್ಟು . . . ಪೋಗಲ್ವೇೞ್ದುದುಂ (ಆದಿಪು. ೧೪-೪೩ ವ); ಜ್ಞಾನವೃದ್ಧಂ ತಪೋವೃದ್ಧಂ ವಯೋವೃದ್ಧನೀ ನರೇಶ್ವರಂ (ಜೈಮಿಭಾ. ೩೨-೧೦). [ಸಂ.]

**ವಯೋವೃದ್ಧೆ** (ನಾ). ವಯಸ್ಸಾದವಳು ; ಮುದುಕಿ : ಗಾವಿಲ ವಯೋವೃದ್ಧೆಯರ ಸಂಭೋಗಾಂತರಂಗಳಲಿ . . . ಆಯುಷವಿಳಿದು ಹೋಗದೆ ದಿನದಿನದೊಳು (ಕುವ್ಯಾಉ. ೩-೫೭). [ಸಂ. ವಯೋವೃದ್ಧಾ]

**ವಯ್ಜುಂಭ** (ನಾ). ಒಂದು ವಂಶ ಮತ್ತು ಆ ವಂಶಕ್ಕೆ ಸೇರಿದ ಒಬ್ಬಾತನ ಹೆಸರು : ಸ್ವಸ್ತಿಶ್ರೀವಯ್ಜುಂಭಮಹಾರಾಜರ್ ಪ್ರಿತುವೀರಾಜ್ಯಂಗೆಯೆ (ಮೈಆರ. ೧೯೨೮, ೩೩-೧; 900). [?]

**ವಯ್ಯಾರ** 'ವೈಯಾರ' ನೋ.

**ವಯ್ಯಾರಿ** 'ವೈಯಾರಿ' ನೋ.

**ವರ್, ಬರ್, ಬರು$_1$** (ಕ್ರಿ). ಬಂದ$_1$, ವಂದ (ಭೂತಕೃ). ಬಂದು$_1$, ವಂದು (ಭೂತನ್ಯೂ). ಬಪ್ಪ$_1$, ಬರ್ಪ, ಬಹ, ಬಹುದು, ವರ್ಪ, ವಹುದು (ವರ್ತಕೃ). ಬಾಹ (ಭವಿಕೃ). ಬಾ$_2$, ಬಾರ$_4$ (ವಿಧ್ಯರ್ಥ). ವಾರ$_1$ (ನಿಷೇಧಾರ್ಥ). ೧. ಆಗಮಿಸು ; ಬಿಜಯಮಾಡು : ಸಸಿಮತಿ ಶ್ರೀಗನ್ತಿಯರ್ವ್ವನ್ದು ಮೇಲೆ ಅಱಿದಾಯುಷ್ಯಮನೆನ್ತು ನೋಡೆನಗೆ ತಾನಿನ್ತೆನ್ದು ಕಟ್ವಪ್ಪಿನುಳ್ ತೋಱಿದಾರಾಧನೆ ನೋನ್ತು ತೀರ್ತ್ಥಗಿರಿ ಮೇಲ್ಸ್ವರ್ಗ್ಗಾಲಯಕ್ಕೇಱಿದಾರ್ (ಎಕ. II, ೭೬-೨; ಸು. 700); ನೆಲಕ್ಕೆ ವರುತ್ತಿರ್ದ ವಿಮಾನಮಡೆಯಿಂದಂ ಮೇಗೆ ಮಗುೞ್ದುದಂ ಕಂಡುದಱಿಂ ದೇವರ್ಕಳುಂ ವಿದ್ಯಾಧರರ್ಕಳುಮಿಲ್ಲಿಂದಿತ್ತೀ ಕ್ಷೇತ್ರಕ್ಕೆ ವಾರರ್ (ವಡ್ಡಾರಾ. ೮೬-೧೦). ಬರ್: ೧. ಆಗ್ನೇಯದಿನನ್ತೆ ಬನ್ದು ಕಾಗಣಿತಟಾಕಂ ಪುನ ದಕ್ಷಿಣಸ್ಯದಿಸಿ ಬಹುಶ್ಮಹಿಯೆ . . . ಕೆಂತಜಿಮ್ಬಿನ ದಿಶೆಇಂ ಪೂರ್ಬ್ಬದೆ ಕೂಡಿತ್ತು ಸೀಮಾನ್ತರಂ (ಎಕ. I, ೧-೨೩; 466); ತದಾಶ್ರಮದ ತರುಗಳ ಮೇಗಿರ್ದು ಪುಗಿಲ್ ಪುಗಿಲೆಂದಿತ್ತ ಬನ್ನಿಮಿರಿಮೆಂಬ ಪೊಂಬಣ್ಣದ ಕೋಗಿಲೆಗಳುಮಂ . . . ನೋಡಿ (ಪಂಪಭಾ. ೧-೧೧೫ ವ); ಬಾರೆಲೆ ತಂದೆ ಬಾರರಸ ಬಾ ಪೊರೆವಾಟ್ಟನೆ ಬಾಯೆನುತ್ತೆ . . . ಧಾತ್ರೀರಮಣರ್ ಮರಲ್ದು ಕರೆಯುತ್ತಿರೆಯುಂ (ಕಾದಂಪೂ. ೩೬೧); ನಗುತ್ತುಂ ಬರ್ಪ ನರಿಯಂ ಪಿಂಗಳಕಂ ದೂರಾಂತರದೊಳ್ ಕಂಡಿವಂ ತಡೆದು ಬರ್ಪ ಬರವೇ ಕಾರ್ಯಸಿದ್ಧಿಯಂ ಪೇಟ್ವಪ್ಪುದೆಂದು ಬಗೆವಿನಂ (ಪಂಚತಂ. ೫೫-೫); ಪ್ರಭುದೇವರು . . . ಅನಿಮಿಷದೇವರು ತಮಗೆ ಗುರುವೆಂದಱಿದು ಬಪ್ಪಲ್ಲಿ (ಶೂನ್ಯಸಂ. I, ೧೦-೨೮); ಹೊದಱುಗಿಡಿಗಳ ಹೊಗೆಯ ಹೇರಾಳದಲಿ ಬಹ ದಿವ್ಯಾಯುಧಕೆ ಚಾಚಿದನು ವಕ್ಷಸ್ಥಳವನಸುರಾರಾತಿಯಡಹಾಯ್ದು (ಕುವ್ಯಾದ್ರೋ. ೩-೬೦); ಆದಂಥಾದ್ದನು ದೇವತಾಸೇವೆಗೆ ನಡದು ಬಾಹ ರೀತಿ ಬಿಟ್ಟದೇವೆ (ಎಕ. VII, ಶಿವಮೊ. ೮೨-೩೧; 1683). ೨. ಚಿಗುರು ; ಕೊನರು : ಸುಂದರಿ ಜೀವಲೋಕದ ಸುಖಕ್ಕೆ ಪರಾಙ್ಮುಖಿಯರ್ಕಳಾಗಿ ನಿನ್ನೊಂದಿಗರೀ ತಪಕ್ಕೆಳಸಿದಂದು ಮನೋಜನ ಬಲ್ಲ ಬಲ್ಮೆ ಪೂರ್ಣೇಂದುವಿನುಜ್ಜಳಿಕ್ಕೆ . . . ಬಂದೆಳಮಾವಿನೇಟ್ಗೆ ಬನೆದಂದು ನಿರರ್ಥಕಮಾಗದಿರ್ಕುಮೆ (ಕಾದಂಉ. ೫೫೪); ಮರನೆಲ್ಲಂ ಬಂದ ಮಂದಾರಮಾವನಗಂ ಮತ್ತಮಮೆಂದು ಬೀಗಿ ಬಳೆದಂತಿರ್ಕುಂ . . . ಶ್ರೀಕಂದರಂ ಮಂದರಂ (ಅರ್ಧನೇ. ೧-೫...). ೩. ಫಲಪುಷ್ಪಗಳಿಂದ ಕೂಡಿರು ; ಹೂವು, ಹಣ್ಣುಗಳಿಂದ ತುಂಬಿರು : ಸೊಗಯಿಸಿ ಬಂದ ಮಾಮರನೆ ತಳ್ತೆಲೆವಳ್ಳಿಯೆ ಪೂತ ಜಾತಿಸಂಪಗೆಯೆ ಕುಕಿಲ್ವ ಕೋಗಿಲೆಯೆ . . . ನೋಟ್ಪೊಡಾವ ಬೆಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಪಂಪಭಾ. ೪-೨೮); ಪಂಜರಾಂತರದ ಕನ್ನಡವಕ್ಕಿಯನೊಂದು ಬಂದ ಮಾಮರದೊಳ್ ಸಾರ್ಚುವ (ಕಾದಂಉ. ೫೯೪); ನನೆಯಂಬನೋಲಗದ ಸಾಲೆವೊಲಿರ್ದುವು ಬಂದ ಮಾವುಗಳ್ (ಕಬ್ಬಿಕಾ. ೬೧). ೪. ಪ್ರವಾಹವುಂಟಾಗು ; ನೆರೆಯುಂಟಾಗು : ಕಲ್ಲ ದೋಣಿಯನೇಱಿ ಬಂದ ತೊಱೆಯೊಳ್ ಪೋಪೆನೆಂಬನುಂ ಕ್ರೂರನಪ್ಪಾಪ್ತನಂ ಪಿಡಿದು ಮೋಕ್ಷಕ್ಕೆ ಪೋಪೆನೆಂಬನುಂ ಕರಮೆಗ್ಗರಲ್ಲದೆ ಚತುರರಲ್ಲರ್ (ಧರ್ಮಾಮೃ. ೭-೩..). ೫. (ಪರಂಪರೆಯಿಂದ) ಮುಂದುವರಿ ; ನಡೆದುಬರು ; ಸಾಗು : ವೀರಜಿನೇಂದ್ರನಿಂ ಗಣಧರಾಗ್ರಣಿಯಿಂ ಕ್ರಮದಿಂದೆ ಬಂದ ವಿಸ್ತಾರದ ಜೈನಧರ್ಮದ ಮೊದಲ್ ಪರಮೇಶ್ವರರೆಂಬಿನಂ ಸದಾಚಾರಸಮೇತರಾದರೆಮಗೀಗೆ ಶಿವಾಸ್ಪದಮುಖ್ಯಸೌಖ್ಯಮಂ (ಶಾಂತಿಪು. ೧-೩); ಸ್ಯೆಗೊಟ್ಟ ಗಂಗನಿಂ ಬಂದ ಧರ್ಮ್ಮಮಂ ಸಮುದ್ಧರಿಸಿದಂ (ಇಆ. XVIII, ೩೧೨-೨೬; 11ನೆಯ ಶತ); ಇಪ್ಪತ್ತನಾಲ್ಕುಸಂವತ್ಸರ ೨೪ ಪರ್ಯ್ಯನ್ತರವು ಬನ್ದನ್ತಹ ವೃಣ್ಣಿಗೆಯನು ಹನ್ನೆರಡು ವಳ್ಳುಕದವರೊಳಗೆ ಆರುಂ ಅಳಿಹಲಾಗದು (ಎಕ. VI, ಕಡೂರು. ೧೩೩-೭; 1247 ?). ೬. ಸೇರು ; ಕೂಡು : ಬರೆ ಗರ್ಭಕ್ಕರಿವಸ್ತು ವಾಹನಚಯಂ ಕಯ್ಗೆಯ್ದೆ ವಂದತ್ತು ಪುಟ್ಟೆ ರಣೋತ್ಸಾಹದೆ ಚಕ್ರವರ್ತಿವಿಭವಂ ಪುಟ್ಟಿತ್ತು (ಗದಾಯು. ೧-೧೨); ಸಚರಾಚರಂಗಳು ಪಸರಕ್ಕೆ ಬಾರದಂದು . . . ಸೌರಾಷ್ಟ್ರಸೋಮೇಶ್ವರಾ ಆನು ನೀನು ಇಲ್ಲದಂದು ಅಂದೇನೊ ಇಂದೇನೊ (ಆದವ. ೧-೧); ಆ ಭೂಮಿಗೆ ಬಂದ ತೋಟ ಆರವೆ ಕಮ್ಮಿ ಮನೆ ಸಹಿತವಾಗಿ ಆ ಮೂಱೂರ ಗ್ರಾಮಾನುಮತದಿಂದ . . . ಕೊಟ್ಟರು (ಎಇ. XXVII, ೧೭೨-೬೧; 1256). ೭. ದೊರಕು ; ಪ್ರಾಪ್ತವಾಗು ; ಲಭಿಸು : ಬಪ್ಪುದಂ ಕರೆದರ್ತ್ಥಿಪ್ರಕರಕ್ಕೆ ಕೊಟ್ಟು ವಿಮಳಶ್ರೀಕೀರ್ತಿಯಂ ತಾಳ್ದಿದಂ ನಿರುತಂ ಶ್ರೀ ಬುಧಚಂದ್ರದೇವಮುನಿಪಂ ವಾತ್ಸಲ್ಯರತ್ನಾಕರಂ (ಎಕ. VII, ಶಿವಮೊ. ೪-೭೭; 1122); ಎಮಗೀ ಪೆಟ್ಟಿಗೆಗಳೆಂತು ಬಕ್ಕೆಂದು . . . ಸಖಿಯರು ನೆರೆದು ಪೆಟ್ಟಿಗೆಗಳುಮನೊಡೆದು ಚೆಲ್ಲಿದರು ಕನಕ ರತ್ನಾಭರಣಜಾಲಮಂ (ನಂಬಿರ. ೧೫-೬೦); ಕುಮಾರನನಿಕ್ಕಿ ಬಹ ರಾಜ್ಯವನು ಸುಡುಸುಡಲೇತಕೆಂದುದು ನಿಖಿಳಪರಿವಾರ (ಕುವ್ಯಾದ್ರೋ. ೪-೪೭). ೮. ಹುಟ್ಟು ; ಜನಿಸು : ದಾಕ್ಷಾಯಣಿ ತನ್ನ ಬಸಿಱೊಳ್ ಬರ್ಪ ವರಮಂ ಬಯಸಿ ಮೇನೆ ತಪದೊಳಿರಲಿತ್ತಲ್ ದಾಕ್ಷಾಯಣಿ . . . ನಿಜಯೋಗದೊಳ್ ಸಂದು ಮೇನೆಯ ಘನಪುಣ್ಯೋದರದೊಳ್ ಪೊಕ್ಕು ಕರುಣದಿಂ ಬಂದಪೆನೆಂದು ಬೆಸಸೆ (ಗಿರಿಕ. ಕಥಾಗರ್ಭಂ. ೧); ಇನಿತಲ್ಲದಂದಿನ ನರಸಿಂಹ ಕಲಿಯುಗದನುಜರ ಸಂಹರಿಸುವೊಡೆ ಮನುಜಾವತಾರದೆ ಬಂದರಸನ ಕಥೆ ವಿನುತವಿಜಯ ಕೇಳ್ದರಿಗೆ (ಕಂನವಿ. ೧-೧೮). ೯. ತೋಚು ; ತೋರು : ನಿಮ್ಮ ಚಿತ್ತಕ್ಕೆ ಬಹುದ ಮಾಡುವುದು (ಕುವ್ಯಾಕ. ೧-೨೯). ೧೦. ಉಂಟಾಗು ; ಒದಗು ; ಸಂಭವಿಸು : ಸಂಧಿಗಳುಂ ಕೆಲವೆಡೆಯೊಳ್ ಬಂದು ವಿರೂಪಂಗಳಾಗಿ ಸಮನಿಸಿ ಕವಿತಾಬಂಧನದೊಳಾಗೆ ದೋಷಾಬಂಧುಗೆ ಶಶಲಕ್ಷ್ಮದಂತೆ ಕಱೆಯಂ ತರ್ಕುಂ (ಕವಿರಾ. ೧-೯೮); ನೆಱೆಗೊಳೆ ಗಾಡಿ ನೋಟ್ಪ ಬಗೆ ಬರ್ಪುದುಮಾನೆ ದ[ಲ]ಂದು ದಂತಿಯಂ ನಿಱಿಸಿ ಮರಲ್ದು ನೋಡುವುದುಮೆನ್ನುಮನಾ ಸತಿ ಸೋಲದತ್ತ ಮತ್ತೆಱಿಗಿ ಬೞಲ್ದು ಜೋಲ್ದಳಿ ನೋಡಿದಳ್ (ಪಂಪಭಾ. ೪-೭೬); ಕೊಂದವನು ದುಶ್ಶಾಸನನ ಮಗ ಬಂದುದಪರಾಧವು ಜಯದ್ರಥಗೆ (ಕುವ್ಯಾದ್ರೋ. ೮-೫೯). ೧೧. ಸಾಧ್ಯವಾಗು ; ಶಕ್ಯವಾಗು : ಇಂತು ಬರೆಯಲ್ ಬ್ರಹ್ಮಂಗಮೇಂ ಬರ್ಕುಮೇ (ಆದಿಪು. ೪-೪); ನೀರಟ್ಟೆ ಪೆರ್ಚೆ ನಿಲಲುಂ ಸೈರಿಸಲುಂ ಬಾರದಳ್ಕಿ ತನ್ನಿಂದಂ ತಾನೋರಂತೆ ಕುದಿದು ಮಱುಗುವ ಸಾರಂಗದ ಪೋರಿಯಂದಮಂ ನೆಱೆ ಪೋಲ್ತಂ (ಧರ್ಮಾಮೃ. ೧-೧೫೯); ಹೆಮ್ಮರನಿರ್ದೆ...

ಱಿಂದಲೆತ್ತಬಱುದೇ ಬಲ್ಕಾರಮಂ (ಸೋಮೇಶ. ೭೬). ೧೨. ಹಿಡಿತಕ್ಕೆ ಸಿಕ್ಕು, — ಸಿಲುಕು : ಬಳಸುವೇಱುವ ಸುಱಿವಗಲ್ಲಿನ್ನಿತ್ತಪ್ಪ ಚಾರಣದೋಷಮಲ್ಲದೆ ಪೊಟ್ಟವಟ್ಟಳೆಗೆ ಸಮನಾಗೆ ಗಿರಿಗೆಯ ಕೋಲ್ಮುಟ್ಟ ಮಿಗಲುಂ ನೆಲಲುಮಣಮಿಾಯದಿನ್ನೊನ್ದಳವಿಯೊಳ್ ಬರೆ ಪೊಱಗೊಳಗೆಡದೊಳಂ ಬಲದೊಳಂ . . . ಚಾರಿಸುವೊಱೆಯಂ ರಟ್ಟಕನ್ದರ್ಪ್ಪನನ್ತಾವಂ ಬಲ್ಲಂ (ಎಕ. II, ೧೩೩-೯೨; 982). ಬರು₁ : ೧. ನಳಿನಲೋಚನ ಬರುತ ಕಂಡನು ವರಸರೋವರವ (ಕುಮಾದ್ರೋ ೮-೨); ಅವು ಹಣ್ಣಾದವೆಂದರೆ ಬಿಸಲಿಗೂ ಗಾಳಿಗೂ ಅರಳಿ ಒಳಗಿನ ಹತ್ತಿ ಹೊರಗೆ ಬರುತ್ತದೆ (ಮುಂಬಯಿ. ೪-೨೬). ೯. ನಿನ್ನ ಮನಸ್ಸಿಗೆ ಬಂದ ಹಾಗೆ ಮಾಡು (ರೂಢಿ). ೧೦. ಬಂದದ್ದೆಲ್ಲ ಬರಲಿ ಗೋವಿಂದನ ದಯ ನಮಗಿರಲಿ (ಪುರಂದ. ೨-೭೪ ಪಲ್ಲವಿ).

ಬರುಬರು, ಬರಬರು (ದ್ವಿರುಕ್ತಿ): ಬಂದುಬಂದರುಹನ ನಿಳಯಮಂ ಮುಂದೆ ಕಾಣುತ್ತವೆ ಶಿವಾಲಯವೆಂದು ಮನೆಯಿಂದೆಂದುವುಂ ಹೊಱವಂಟಱಿಯಳಾಗಿ (ಬಸವು. ೫೨-೨೨); ಆ ಮುನೀಂದ್ರರು ಸರಸಿಜಾಕ್ಷನ ದರುಶನಕೆ ಬರಬರಲು [ಪಾಠಾಂ. ಸಂದರುಶನಕೆ ಬರಲು] (ತೊರರಾ. ೧-೮-೧೯); ಬರಬರಲು ತತ್ಕೋಸಲದ ರುಂಪರಿ ವಿರಾಜಿಸಿತಮುಮ ಹರಹಿನ ಹರಿವ ಹೊಳೆಗಾಲುವೆಯ ಕೆಱೆದುಂಬುಗಳ ನೀರುಗಳ (ತೊರರಾ. ೧-೯-೫). ಬಂತುಪ್ಪು = (ಉಕ) ತಿಳ್ಳಿ ಮೊದಲಾದ ಆಟಗಳಲ್ಲಿ ಹೊಂದುವ ಸೋಲು : “ತಿರುಗುಪ್ಪು, ಹೊಳ್ಳುಪ್ಪು”, “ಬಂತುಪ್ಪು” . . . ಮುಂತಾದ ಗುಲ್ಲುಬೊಬ್ಬೆಗಳು ಆಟಕ್ಕೆ ಬೇರೊಂದು ರುಚಿಯನ್ನು ತಂದಿರುವವು (ನರಾಭ. ೯೬). ಬಂದ ದಾರಿಗೆ ಸುಂಕವಿಲ್ಲ = (ಆಲಂ) ಉಪಯೋಗವಿಲ್ಲದಂತಾಗು ; ನಿರರ್ಥಕವಾಗು : ಹೊರಗಿನಿಂದ ಬಂದವರು ೧೫ ದಿನಕ್ಕಿಂತಲೂ ಹೆಚ್ಚಿಗೆ ಇರಲು ಪರವಾನಿಗೆ ಇಲ್ಲದ್ದರಿಂದ ನಾನು ಶಕ್ಯವಿದ್ದ ಮಟ್ಟಿಗೆ ಕೆಲವು ಸ್ಥಳಗಳನ್ನಷ್ಟೇ ನೋಡಿಕೊಂಡು “ಬಂದ ದಾರಿಗೆ ಸುಂಕವಿಲ್ಲವೆಂಬಂತೆ” ಹಾಗೇ ಹಿಂದಿರುಗಿದೆನು (ಕೈಲಾಸ. ೪೮); ಇದನ್ನು ಕೇಳಿಕೊಂಡು ವೈದ್ಯನು ಬಂದ ದಾರಿಗೆ ಸುಂಕವಿಲ್ಲದೆ ಹೋಗಬೇಕಾಯಿತು (ಭಜ್ಯೋತಿ. ೧೧೩). ಬಂದ ದಾರಿ ಹಿಡಿ = (ಆಲಂ) ೧. (ಬಂದ ಕೆಲಸವು ಪೂರೈಸದೆ) ಮರಳು ; ವಾಪಸ್ಸಾಗು : ಹುಡುಗಿಯರೆಲ್ಲ ಬಂದ ದಾರಿ ಹಿಡಿದು ಹಿಂದೆ ಹೋದರು (ಕಾಲೂರ. ೧೦. ಕಥಾಸಾರ). ೨. ಸಾಯು ; ಮರಣವನ್ನು ಹೊಂದು: ಅವು ಕ್ರಮೇಣ ಹೊಟ್ಟೆಗಿಲ್ಲದೆ ನರಳಿ ಗೋತ ಹೊಡೆಯುತ್ತಿದ್ದುವು. ಈ ರೀತಿ ಐದು ಮಕ್ಕಳು ಬಂದ ದಾರಿ ಹಿಡಿದಿದ್ದುವು (ಪುನರು. ೭). ಬಂದ ಬರವು = ಆಗಮಿಸಿದ ಕಾರಣ : ಬಂದ ಬರವಾವುದೆಲ್ಲಿಂ ಬಂದಿರ್ ಭವದೀಯನಾಮಮೇಣ್ (ಶಾಂತಿಪು. ೨-೧೯). ಬರಗೊಡು, ಬರಗುಡು = ೧. ಆಗಮಿಸಲು ಅವಕಾಶ ಮಾಡಿಕೊಡು ; ಬರಲು ಬಿಡು : ಮಗಳ ಗಂಡನ ಕೂಡೆ ಮಹದಾದಿ ದೈತ್ಯ ಜಗಳಕ್ಕೆ ಬರಗೊಡೆನೆನುತ ನೆಗಳಾನೆ ಮಿಾನ್ಗಳನೊಳಕೊಂಡು ಬಂದು ಪೇರಗಳಾದುದಬ್ಧಿ ದ್ವಾರಕೆಗೆ (ಮೋಹತ. ೩-೫). ೨. ಉಂಟಾಗಲು ಅವಕಾಶ ಕೊಡು ; ಒದಗಲು ಆಸ್ಪದ ನೀಡು : ನಮ್ಮ ಕಡೆಗೆ ಜೀನಸು ಕಳುಹಿಸಬೇಡಿರೆಂದು ನಮ್ಮಿಂದ ಹೇಳಿಸಿಕೊಳ್ಳುವ ಪ್ರಸಂಗ ಮಾತ್ರ ಬರಗೊಡಬಾರದು (ಮುಂಬವ್ಯಾ. ೪); ದೇಶಾಧಿಪ ಕೃಷ್ಣರಾಯಂಗೆ ಖಳರಿಂದ ಮೋಸವ ಬರಗುಡೆನೆಂದು ಶೇಷ ಮಂಡಳಿಸಿದಂದದಿ ವಜ್ರದಾಳ್ಪೆರಿ ಲೇಸಾದುದು (ಮೋಹತ. ೩-೮). ಬರತೆಗೆ, ಬರೆತೆಗೆ = ೧. ಹತ್ತಿರ ಬರುವಂತೆ ಸೆಳೆದುಕೊಳ್ಳು, — ಎಳೆ : ಬರತೆಗೆದುದೊ ನೃಪನ ಗುಣೋತ್ಕರಮೆನೆ ಕಟುಪಲ್ಕೆ ಕಡೆಯ ಬಾಗಿಲ್ವಾಡಂಬರೆಗಂ ಬಂದುದು ಕಾದಂಬರಿ ಪೊಱತಾಗಱಿಳ ಕನ್ಯಕಾನಿಕುರುಂಬಂ (ಕಾದಂಬ. ೧೭೯); ಸುತೆಯಪ್ಪುದನಱಿದು . . . ಮನದೊಳ್ ಲೋಕತ್ರಿತಯಮನಾಳ್ದಂತೆ ವಣಿಕ್ಪತಿ ಬರೆತೆಗೆದಪ್ಪಿಕೊಂಡು . . . ಪೇಟ್ಟುದುಂ (ಧರ್ಮಾಮೃ. ೩-೨೪೦). ೨. ಪಕ್ಕಕ್ಕೆ ಸರಿಸು ; ಓರೆಮಾಡು : ಅಳಿಮಾಲಾಕೇಶಮಂ ಮೆಲ್ಲನೆ ಬರತೆಗೆದಬ್ಜಾನನಾಮೋದಮಂ ಪೀರ್ದು ಲತಾಂಗಾಲಿಂಗಮಂ ಸಂಗಳಿಸಿ . . . ನಿಚ್ಚಂ ವನಶ್ರೀಗೊಲವಂ ಮಾಡುತ್ತುಮಿರ್ಕುಂ ಚತುರವಿಟನ ಪೋಲ್ ದಕ್ಷಿಣಾಶಾಸಮಿಾರಂ (ಜಗವಿ. ೯-೯೧). ಬರಪಾರ್, ಬರವಾರ್, ಬರವಾರು = ಆಗಮನವನ್ನು ನಿರೀಕ್ಷಿಸು ; ಬರವನ್ನು ಎದುರುನೋಡು : ಪ್ರಿಯೆಯ ಬರಪಾರ್ವಪೊಲಪ್ರಿಯಗಗನಚರೇಂದ್ರ ರುಂದ್ರಸೇನೆಯ ಬರಪಾರ್ವಾಯ ಮೂರ್ತಿಯುಮಂ ನಯಮೂರ್ತಿಯುಮಂ ಪೋಲ್ಪರನಪಾರಪೌರುಷಪರರಂ . . . ಕಂಡು (ಶಾಂತಿಪು. ೩-೭೫); ಬರಪಾರದೆ ದೂದವಿಯರ ಹರಿಸದೆ . . . ಮನವೊಲ್ದಾಗಳ್ ನೆರೆಯಲ್ ದೊರೆಕೊಳ್ವ ರತಮೆ ಸಂಕಲ್ಪರತಂ (ಕಾದಂಬ. ೩೧೮); ಪೊಱಲ್ದಾಂ ಪೋದಪೆಂ ಭೋಜಭೂಭುಜನೆನ್ನಂ ಬರವಾರ್ಗುಮೆಂದು ಸರಥಂ ಬೀೞ್ಕೊಂಡು ಪೋದಂ (ಜಗವಿ. ೫-೧೧೪); ಘನಸಮಯಕ್ಕೆ ಬರ್ಪನೆನೆ ತಾಂ ಬರವಾರುತುಮಿರ್ಪುದೆಂದು ಮೆಲ್ಲನೆ ಪಲವಂದದಿಂ ನಿಲಿಸಿ ಮತ್ಪತಿ ಪೋಗೆ (ರಸರ. ೩-೧೫೮). ಬರಬರ = ಕ್ರಮವಾಗಿ ; ಕ್ರಮೇಣ : ಬರಬರ ಭಕ್ತಿಯರೆಯಾಯಿತ್ತು ಕಾಣಿರಣ್ಣಾ ಮೊದಲ ದಿನ ಹಣೆ ಮುಟ್ಟ ಮಱುದಿನ ಕೈಯ ಮುಟ್ಟ ಮೂಱೆಂಬ ದಿನಕ್ಕೆ ತೂಕಡಿಕೆ ಕಾಣಿರಣ್ಣಾ (ಬಸವ. ೨೨೦); ಭಕ್ತನೆನಿಸುವೆನಯ್ಯಾ ಮೆಲ್ಲಮೆಲ್ಲನೆ . . . ಎಡಹುಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯಾ (ಬಸವ. ೮೯೨). ಬರಬರುತ್ತ, ಬರಬರುತ್ತೆ, ಬರುತ್ತಾ ಬರುತ್ತಾ = ೧. ಕ್ರಮವಾಗಿ ; ಕ್ರಮೇಣ : ಅಡವೀಕುರಿಗಳು ಮನುಷ್ಯರಿಗೆ ಮೊದಲು ಹೆದರಿದಾಗ್ಯೂ ಬರಬರುತ್ತ ಈಲಾಗುತ್ತವೆ (ಮುಂಬಯಿ. ೩-೧೦); ಬರುತ್ತಾ ಬರುತ್ತಾ ರಾಯರ ಕುದುರೆ ಕತ್ತೆಯಾಯಿತು (ಗಾದೆ). ೨. ಆಗಮಿಸುತ್ತಿರಲು ; ಬರುತ್ತಿರುವಾಗ : ಅಡವಿಯಲ್ಲಿ ಒಂದು ನರಿಯಾಹಾರಂಬಡೆಯದೆ ಬರಬರುತ್ತೆ ಒಂದು ಸತ್ತ ಎತ್ತಂ ಕಂಡು (ಪಂಚತಂ. ೧೯-೬). ಬರಮಾಡಿಕೊಳ್ಳು = ಆಗಮನವನ್ನು ಬಯಸು ; ಸ್ವಾಗತಿಸು : ಇಂದುಗತಿಯು ಜನಕನನ್ನು ಒಳ್ಳೇ ಆದರದಿಂದ ಬರಮಾಡಿಕೊಂಡು ತನ್ನ ಮನೋಗತವನ್ನು ತಿಳಿಸಿದನು (ಸಾಹಿಸ. ೮೮); ಈ ಗ್ರಂಥವನ್ನು ಕನ್ನಡಿಗರೆಲ್ಲರೂ ಬರಮಾಡಿಕೊಂಡು . . . ಈ ಲೇಖಕನಿಗೆ ಪ್ರೋತ್ಸಾಹ ನೀಡಲೆಂದು ಆಶಿಸುತ್ತೇನೆ (ಸಂಶೋಧ. XI, ಅಂಕಿ). ಬರಮಾಡು = ಬರುವಂತೆ ಮಾಡು ; ಕರೆಸಿಕೊಳ್ಳು : ಮಧ್ಯೆ ಮತ್ತಾರೋ ಪ್ರವೇಶಿಸಿದುದರಿಂದ ಆತನಿಗೆ ನಾನು ಬರಮಾಡಿದ ಕಾರಣವನ್ನು ತಿಳಿಸಲಾಗಲಿಲ್ಲ (ರೂಢಿ). ಬರವೇೞ್, ಬರಂಪೇಳ್, ಬರಹೇಳು = ಬರಬೇಕೆಂದು ತಿಳಿಸು : ಆ ವಧೂವರರಂ ಪೋ ಬರವೇೞೆಂಬಂತಿರ್ದುದು ಸುರವಾರಸ್ತ್ರೀವಿಲಾಸಪರಿಣಯನಗೃಹಂ (ಆದಿಪು. ೮-೧೯); ಅಭಿವನಶ್ರೀಸ್ಥಳವನೆ ಮಾಡಿ ಕಪಿಲಸಿದ್ಧಮಲ್ಲಿಕಾರ್ಜುನದೇವನೆ ನೆಲಸಿ ನಿಂದು ಪುಣ್ಯ(ಪುಣ್ಯ)ಪಾಪಂಗಳಂ ಬರಂಪೇಳ್ವ [ಬೆ]ಸಂ ಪೇಳುತ್ತವಿರಲು (ಎಇ XXIII, ೧೯೪-೧೦; 1265); ತೆಗೆಸು ದೊದ್ದೆಯನುರವಣಿಸದಿರಿ ವಿಗಡಸುಭಟರು . . . ಭೀಮಾರ್ಜುನರ ಬರಹೇಳು (ಕುಮಾದ್ರೋ ೧-೫೩). ಬರಸೆಳೆ, ಬರೆಸೆಳೆ = ಹತ್ತಿರಕ್ಕೆ ಬರಮಾಡಿಕೊಳ್ಳು : ಇಳಿದು ರಥವನು ಸಂಜಯನ ಬರಸೆಳೆದು ತಕ್ಕೈಸಿದರು (ಕುಮಾಗ. ೪-೨); ಬರಸೆಳೆದಪ್ಪಿ ಬೈದೊಡೆ ತೊಟ್ಟ ತೊಡಿಗೆಯ ಮುಱಿದಿಟ್ಟೆ ಗಡ ದೆಸೆದೆಸೆಗೆ (ಕುರಾಸಾಂ. ೩೫-೧೦೧); ತರುಣಫಣಿರಮಣಿಯಂ ಬಿಡದೆ ಪಿಡಿದುರುಳೆ ಬರೆಸೆಳೆವ ಸೋಗೆಯಂತೆ ಗೋಣ್ ತೆಗೆಯೆ ಬಿಟ್ಟು ಲಂಬಿಸುವ ಸೋರ್ಮುಡಿಯೊಳಂ (ವರ್ಧಪು. ೯-೬೦ ವ); ಮೃಡನು ಸೌಂದರನ ಬರೆಸೆಳೆದಪ್ಪಿ ಸನ್ನಿಧಿಯೊಳೆಡೆಗೊಟ್ಟು ಕುಳ್ಳಿರಿಸಿದಂ (ಸೌಂದಪು. ೬-೨೬). ಬರಹೋಗು, ಬರುಹೋಗು = ಬಂದು ಹೋಗು ; ವಾಪಸ್ಸಾಗು : ಕುದುರೆಯ ಮೇಲೆ ಇಲ್ಲವೆ ರಥಗಳೊಳಗೆ ಕೂತುಕೊಂಡು ಬರಹೋಗುವವರು (ಮುಂಬಯಿ. ೫-೩೦೦); ಬರುಹೋಗುವ ಪಾಂಥಸ್ಥರು ಇಳುಕೊಳ್ಳುವುದಕ್ಕಾಗಿ (ಮುಂಬಯಿ. ೪-೧೫೧). ಬರೆಪೀರ್ = ಚೆನ್ನಾಗಿ ಹೀರು ; ಅತಿಶಯವಾಗಿ ಪಾನಮಾಡು: ದರದಳಿತಕಮಲಕುಟ್ಮಳಪರಿಮಳವೆನಿಸಿರ್ದ ಸಹಜಮುಖಸೌರಭಮಂ ಬರೆಪೀರುತಿರ್ಪುದೆಂಬಂತಿರೆ ನಾಸಿಕ ನೀಳ್ಪುವೆತ್ತುದೀ ಬಾಲಕನಾ (ಕಾದಂಪೂ. ೪೨೧); ತರುಣಿಯ ಮುಖೇಂದುಕಮಲಾಕರದೊಳ್ ದೃಗ್ಲೋಳಕಾಂಕ ನೀಳಾಬ್ಜಮುಳಂಕರಿಸೆ ವಿಟರಾಹುಭೃಂಗಂ ಬರೆ[ಪಾಠಾಂ. ಪರಿ]ಪೀರ್ದತ್ತಧರಚಂದ್ರಿಕಾಪರಿಮಳಮಂ (ಕಾವ್ಯಾವ. ೬೯೪). ಬರೆವರೆ = ಆಗಮಿಸುತ್ತಿರಲು ; ಬರುತ್ತಿರಲು : ದುರ್ಯೋಧನಂಗಂ ಭೀಮಂಗಮುನುವರಂ ಪೊಣರ್ದಿರ್ದುದರಸನಂ ಬೇಗಂ ಪೋಗಿ ಕೆಯ್ಕೊಳ್ವಮೆಂದು ಬರೆವರೆ (ಪಂಪಭಾ. ೧೨-೧೧೮ ವ); ಪೆಣದಿನಿಗಳ ತಂಡಂ ಬಲ್ವೆಣಗಳನಱಸುತ್ತುಮಲ್ಲಿ ಬರೆವರೆ (ಗದಾಯು. ೪-೧೫); ಅಲ್ಲಿಂ ತಳರ್ದು ಮಧುಲಕ್ಷ್ಮೀಮಧುರತರವಿಳಾಸಮಂ ಬಗೆಗೊಂಡು ಪೊಗಳುತಂ ಬರೆವರೆ (ರಾಜಶೇ. ೧೦-೩೧ ವ). ಬಾಗರೆ = ಬಾಯೆಂದು ಕರೆ ; ಆಮಂತ್ರಿಸು : ಬಾಲನಂ ಬಾಗರೆದಳೊಡನಂಬಿಕೆ (ವಂಕಾರಾ. ೧-೧೦-೬); ಎದ್ದವರಿಗೆ ನಡಿಗೆ ಸ್ವಾಗತವೀಯುತ್ತಿತ್ತು.

ಏಳದವರಿಗೆ ಪಂಚರಸಾಯನಗಳು ಬಾಗರೆಯುತ್ತಿದ್ದವು (ರಕ್ತಧ್ವ. ೩೩೫).

[ದೇ. ‖ ತಮಿ. ಮಲ. ವರು; ತುಳು. ಕೊಡ. ಬರ್; ತೆಲು. ವಚ್ಚು; ಕೋಲಾ. ನಾಯ್ಕಿ, ಗಡಬ. ವರ್; ಪರ್ಜಿ. ವೆರ್; ಮಲ್ತೊ. ಬರೆ; ತೊದ. ಪೊರ್]

**ವರ$_1$** (ಗು). ೧. ಬಯಸತಕ್ಕ ; ಅಪೇಕ್ಷಣೀಯವಾದ. ೨. ಶ್ರೇಷ್ಠವಾದ ; ಉತ್ತಮವಾದ : ಪಿರಿಯರ ಮಗಳೆಂದು ಬೆಚ್ಚಗಲಿತೆನೆಂದು ವರರೂಪವತಿ ತಾನೆಂದು . . . ಬಚಿದೆ ಬೆಟಿಯದನುಸರಿಸುವುದಾತ್ಮವಲ್ಲಭನ(ಹರಿಚ. ೩-೩೧); ವರತಪಸ್ವಿನಿಯಾಗಿ . . . ಎಲೆವನೆಯೊಳಿರುತಿಹಳಂತೆ! (ಚಿತ್ರಾಂಗ. ೭೨-೧೯೮). (ನಾ). ೩. ಬಯಕೆ ; ಅಪೇಕ್ಷೆ. ೪. ಶ್ರೇಷ್ಠವಾದುದು ; ಉತ್ತಮವಾದುದು. ೫. ಆರಿಸುವುದು ; ಆಯ್ಕೆ. ೬. ಬೇಡಿಕೊಳ್ಳುವಿಕೆ ; ಅನುಗ್ರಹಯಾಚನೆ. ೭. (ದೇವರು, ಗುರುಹಿರಿಯರುಗಳಿಂದ ದೊರಕುವ) ಇಷ್ಟಾರ್ಥದ ಪೂರೈಕೆ ; ಅನುಗ್ರಹ : ಅಳ್ಳನೊಲ್ಲದ ಆಳಿನಲ್ಲಿ ಸಿರಿ ತೊಲಗಿದ ಅರಸಿನಲ್ಲಿ ವರವಿಲ್ಲದ ದೈವದಲ್ಲಿ ಫಲವೇನೊ (ಬಸವ. ೫೬೪); ಅರಿದ ಬೇಡಿದೆ ತನಗೆ ನೂಕದ ವರವ ವಚನಿಸಿ ಮಾಡದಿಹ ಬಾಹಿರರು ನಾವಲ್ಲ (ಕುಮಾರವ್ಯಾಸ ೧-೪೦); ದೇವರು ವರ ಕೊಟ್ಟರೂ ಪೂಜಾರಿ ಕೊಡ (ಗಾದೆ). ೮. ದಾನ ; ಧರ್ಮ. ೯. ಉಡುಗೊರೆ. ೧೦. ವರದಕ್ಷಿಣೆ. ೧೧. ಮದುವೆಯಾಗುವ ಹುಡುಗ ; ಮದುಮಗ : ನೃಪಕನ್ನಿಕೆಗೆ ವರನಾರು ಲಗ್ನವದೆಂದು (ಕುಮಾರ. ೧೧-೮); ವರನ ವಿಚಾರದ ಮಾತಂ ಪಿರಿಯರ್ ಪೇಳ್ವಾಗಲಾವಗಂ ಕನ್ನಿಕೆಯರ್ ಗುರುಲಜ್ಜಾನತವದನೆಯರುರೆ ಸೂಚಿಪರಲ್ತೆ ತಮ್ಮ ಮನದಿಂಗಿತಮಂ(ಧ್ವನ್ಯಾಲೋ. ೨೪೪). ೧೨. ಗಂಡ ; ಪತಿ : ರೇವಗವುಂಡನ ತಂಗೆ ಮೈಲಮಂ ಗೋಮಿನಿಯನ್ನಳಾಕೆಯ ವರಂ ಹರಿಯಂಣನನೆನಿಪ್ಪ ದುಗ್ಗಣಂ (ಸೌ‌ಇ. IX - i, ೨೪೯-೩೫; 1147). ೧೩. ಕುಂಕುಮಕೇಸರಿ. [ಸಂ.]

**-ವರ$_2$** 'ವರಂ' ನೋ.

**-ವರಂ, - ಬರ$_4$,- ಬರಂ, - ವರ$_2$** (ಪ್ರ). ವರೆಗೆ, ತನಕ, ಪರ್ಯಂತ ಎಂಬ ಅವ್ಯಯಾರ್ಥವನ್ನು ಸಾಧಿಸುವ ಒಂದು ಸೀಮಾರ್ಥಪ್ರತ್ಯಯ : ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ (ಕವಿರಾ. ೧-೩೬); ಮನ್ಮಥನ ಮೋಹನಯಂತ್ರಮಿದಪ್ಪುದಲ್ಲದಂದಿನಿತುವರಂ ಮನಂಗೊಳಿಸದು (ಆದಿಪು. ೪-೪೧); ಅನ್ನೆಗಮಿನ್ನೆಗಮೆನ್ನೆಗಮೆನ್ನದೆ ಕಡೆಗುಂಟು ಲೋಪಮಿದಿರೊಳ್ ಸೀಮೋತ್ಪನ್ನಂ ವರಂ ವರೆಗಮಿರೆ (ಶಮದ. ೨೪೮). 'ಅನ್ನೆವರಂ', '-ವರೆ$_2$', '-ವರೆಗಂ' ಪರಾ. **-ಬರ$_4$** : ಅಲ್ಲಿಂಬರ ತೋಟವೊಳಗಾಗಿ ಪಡುವಣ ಮೇರೆ ಅಡ್ಡಗಟ್ಟಲಿಂ ಬರ ತೆಂಕಣ ಮೇರೆ (ಸೌ‌ಇ. IX - i, ೨೭೩-೬೫; 1179); ನಾವೀಸು ದಿನಂಬರ ನಿನ್ನ ಈಸು ವಿವೇಕಿಯೆಂದಱಿಯೆವು (ಕುರಾಸಾಂ. ೧-೪೪). **-ಬರಂ** : ಪಂಚಮಹಾಪಾತಕರನೆಮ್ಮನೇಟಿಂಟುವರುಷಂಬರಂ ಪಗೆವರಂ ಬಗೆವಂತೆ ದಂಡಿಸಿದಂ (ವಡ್ಡಾರಾ. ೪-೧೯); ನರಲೋಕಂಬರಮುಣ್ಮಿ ಪೊಣ್ಮಿದ ಪಯಃಪೂರಂಗಳಿಂದಂ . . . ವಿಶ್ವಾವನೀಭಾಗಮುಂ ನರನಾರೀಜನಮುಂ ಪವಿತ್ರತರಮಾಯ್ತು (ಆದಿಪು. ೭-೧೦೧); ಕನ್ನಮಯ್ಯಂಬರಮಾಗಂ ಸುಕವಿ ಬಗೆವೊಡಿನ್ನುಂ ಮುನ್ನುಂ (ಪಂಚತಂ. ೫-೮). **-ವರ$_2$** : 'ಅನ್ನೆವರ' ಪರಾ. [ದೇ. ‖ ತಮಿ. ತೆಲು. ವರ]

**ವರಂಗೊಡು** (ಕ್ರಿ). ಅನುಗ್ರಹಮಾಡು ; ವರವನ್ನು ಕೊಡು : ಮಾತಾಡಿದಂದರ್ಥರಾಜ್ಯದ ಪೆಂಪಂ ದಯೆಗೆಯ್ವವರ್ ಬೆಸಸಿದಂದಾಗಳ್ ವರಂಗೊಟ್ಟವರ್ . . . ಭೂಪರ್ ಧರಾಚಕ್ರದೊಳ್ (ಕಾದಂಪೂ. ೫೬೯).

[ವರ$_1$ + ಕೊಡು$_1$]

**ವರಂಡ** (ನಾ). ೧. ಮನೆ ಮೊದಲಾದ ಕಟ್ಟಡಗಳ ಮುಂದುಗಡೆ ಕಂಬಗಳ ಮೇಲೆ ಚಾವಣಿಯನ್ನು ಕೂರಿಸಿ ಮಾಡಿರುವ ಕೈಸಾಲೆ,—ಮೊಗಸಾಲೆ. 'ವರಾಂಡ' ಪರಾ. ೨. ಗುಂಪು ; ಸಮೂಹ. ೩. ಮುಖದ ಮೇಲೆ ಏಳುವ ಗುಳ್ಳೆ ; ಮೊಡವೆ. [ಸಂ.]

**ವರಂಬಡೆ** (ಕ್ರಿ). (ದೇವರು, ಗುರುಹಿರಿಯರು ಮೊದಲಾದವರಿಂದ) ಇಷ್ಟಾರ್ಥವು ನೆರವೇರುವಂತೆ ಆಶ್ವಾಸನೆಯನ್ನು ಪಡೆ ; ವರವನ್ನು ಪಡೆ : ವರಂಬಡೆದ ಸಂತಸಂ ಮನದೊಳಾಗಲ್ . . . ಗರ್ಭಮಂ ತಾಳ್ದಿ (ಶಂಪಭಾ. ೧-೮೬); ಪದ್ಮಾವತೀದೇವಿಯಂ ಭಕ್ತಿಪೂರ್ವ್ವಕಮಾಹ್ವಾನಂಗೆಯ್ದು ವರಂಬಡೆದು (ಎಕ. VII, ಶಿವಮೊ. ೪-೨೯; 1122). [ವರ$_1$ + ಪಡೆ$_1$]

**ವರಕ** (ನಾ). ೧. ಹೊದಿಕೆ ; ಆವರಣ. ೨. ಬೇಡಿಕೆ ; ಕೋರಿಕೆ. ೩. ಬೇಡುವವನು ; ಅರ್ಥಿ. ೪. ಮದುವೆಗಾಗಿ ಹೆಣ್ಣನ್ನು ಕೇಳುವವನು. [ಸಂ.]

**ವರಕರ** (ನಾ). ವರವನ್ನು ಕೊಡುವ ಕೈ ; ಅನುಗ್ರಹಹಸ್ತ : ಹರಿಯ ವರಕರದನು ಗ್ರಹನಿರೂಪಣಂ ಗುರುಕರಾಬ್ಜದಿಂ (ವಸ್ತ್ರಮ. ೧-೩). [ಸಂ.]

**ವರಕವಿ** (ನಾ). ಶ್ರೇಷ್ಠನಾದ ಕವಿ : ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋಱಬಾರದು (ಕನಕ. ೩೩-೧). [ಸಂ.]

**ವರಕು$_1$, ವರಖು, ವರ್ಖ** (ನಾ). ಬೆಳ್ಳಿ , ಬಂಗಾರ ಮುಂತಾದ ಲೋಹಗಳ ಬಹುಸೂಕ್ಷ್ಮವಾದ ತಗಡು ,—ರೇಕು : ೧೦ನೇ ಲಿಯೋ ಎಂಬ ಧರ್ಮಾಧ್ಯಕ್ಷನು ಒಂದು ಸಮಾರಂಭಕಾಲದಲ್ಲಿ ಒಬ್ಬ ಹುಡುಗನ ಮೈತುಂಬ ಬಂಗಾರದ ವರಕು ಹಚ್ಚಿಸಿದನಂತೆ (ಮುಂಬಯಿ. ೫-೧೭೦); ಆಭರಣಗಳನ್ನು . . . ಚಿನ್ನದ ವರಕಿನ ಜತೆಗೆ ಕನ್ನಡಿ ಚೂರುಗಳ ಆಕಾರಗಳನ್ನು ಕತ್ತರಿಸಿ ಅಂಟಿಸಿ ಮಾಡುತ್ತಿದ್ದರು (ಯಕ್ಷಬ. ೧೫೭). **ವರಖು** : ವರಖು (ಭಂಗಾರ ವ ಬೆಳ್ಳಿ ವರ್ಣದ್ದು) (ಮುಂಬವ್ಯಾ. ೧೭೫). **ವರ್ಖ** : ಪುಡಿಗಳ ಮೇಲೆ ಕಿಮ್ಮತ್ತು ಆಗತಕ್ಕ ಜಿನಸಗಳು . . . ಭಂಗಾರ ಮತ್ತು ಬೆಳ್ಳಿ ವರ್ಖ (ಮುಂಬವ್ಯಾ. ೧೭೬); ಬಂಗಾರದ ವರ್ಖ ಹಚ್ಚಿದ ತ್ರಯೋದಶಗುಣಯುಕ್ತ ತಾಂಬೂಲವನ್ನು ಇಟ್ಟಿದ್ದರು (ಮಂಜುಕ. ೨೧). 'ರೇಕು' ಪರಾ.

[<— ಅರ. ಹಿಂ. ವರಕ್; ಮರಾ. ವರಖ್./ ತುಳು. ವರಕ್, ವರಕ; ತೆಲು. ವರಕು]

**ವರಕು$_2$** (ನಾ). (?) : ಸಾಣೆ ವರಕು ಮಿಾಟುಗಳಿಂ ಹದಗೊಳಿಸಿ (ವಿವೇಕ. ೨೩೭). [?]

**ವರಖು** 'ವರಕು$_1$' ನೋ.

**ವರಗುಣ** (ನಾ). ಉತ್ತಮವಾದ ಗುಣಗಳುಳ್ಳವನು : ಜಗವಯ್ದೆ ಬಣ್ಣಿಕುಂ ವರಗುಣ ದಂಡನಾಥಮುಖಮಂಡನನಂ ವಿಭು ನಾಗದೇವನಂ (ಕಇ. IV, ೧೩-೪೪; 1165). [ಸಂ. ವರಗುಣಿನ್]

**ವರಗುರು** (ನಾ). ೧. ಶ್ರೇಷ್ಠನಾದ ಗುರು. ೨. ಹಿರಿಯರಲ್ಲಿ ಹಿರಿಯನಾದವನು ; ಪರಮಗುರು : ವರಗುರು ವಿಶ್ವಕ್ಕೆಲ್ಲ ಗಿರಿಜಾಮನೋವಲ್ಲಭ ಪರಮಕಾರುಣಿಕ (ಬಸವ. ೫೬೪). [ಸಂ.]

**ವರಚಕ್ರಿ** (ನಾ). ೧. ಶ್ರೇಷ್ಠವಾದ ಚಕ್ರಾಯುಧವುಳ್ಳವನು ; ವಿಷ್ಣು. ೨. ಚಕ್ರವಾಕಪಕ್ಷಿಗಳನ್ನು ಒಳಗೊಂಡುದು. ೧, ೨: ಹಂಸಲೋಚನಶೋಭಿಯಂತೆ ವರಚಕ್ರಿ ವರಚಕ್ರಿಯವೊಲು ಅನಿಮಿಷಾಶ್ರಯಮೂರ್ತಿಯೆನೆ . . . ರಂಜಿಸುವ ಕಾಸಾರಮಂ ಸರ್ವಮಂಗಳೆ ಕಂಡಳು (ಜೈಮಿಭಾ. ೧೫-೧೨). [ಸಂ. ವರಚಕ್ರಿನ್]

**ವರಟ** (ನಾ). ೧. ಹಂಸ. ೨. ಒಂದು ಬಗೆಯ ಹುಳು ; ಕಣಜ ; ಕಡಂದುರು. ೩. ಒಂದು ಬಗೆಯ ಧಾನ್ಯ. ೪. ಮಲ್ಲಿಗೆಹೂವು. [ಸಂ.]

**ವರಟೆ** (ನಾ). ೧. ಹೆಣ್ಣಂಚೆ ; ಹಂಸೆ : ರಕ್ತಪಂಕರುಹದೊಳಿರ್ಪ ಸದ್ವರಟೆಯಂತೆ . . . ತತ್ಕಮಲಾಕ್ಷಿಯೊಪ್ಪಿದಳ್ (ಉದ್ಭಟ. ೫-೫೬). ೨. ಕಡಜೀರಿಗೆ ಹುಳು ; ಕಡಂದುರು ; ಕಣಜ. [ಸಂ. ವರಟಾ]

**ವರಡ, ವರಾಡ** (ನಾ). ೧. ಒಂದು ಬಗೆಯ ತೆರಿಗೆ : ಪೊಸಗೆ ಅಸಂತಾಯ ಆಕರ ಅನ್ಯಾಯ ಕಾಣಿಕೆ ಕಡಾಯ ಬಿಟ್ಟಿ ಬಿಡಾರ ಅಸೆ ಅಪ್ಪಣೆ ವರಡ ಸರಡ ಸರ್ವ ಬಾಧಾಪರಿಹಾರವಾಗಿ . . . ಧರ್ಮ್ಮವನು ಮಾಡಿ (ಕಇ. III, ೯-೬೨; 1538). **ವರಾಡ** : ೧. ಅಪುತ್ರಿಕವಿನಾಮವ ಮಾಡಿಕೊಂಬಲ್ಲಿ ಗ್ರಾಮವರಾಡದಲ್ಲಿ ಅರಮನೆಗೆ ಸಲ್ಲಿಸಿದ್ದುದು (ಎಕ. VIII, ಸಾಗರ. ೫೭-೯; 1562); ನೆರೆವರಿ ವರಾಡ ಕಡ . . . ಪರಿವಿಡಿಯಂ ಸಲಿಸಿ ಸೀಮೆಯಂ ರಕ್ಷಿಸಿದಂ (ಕೆಳದಿ. ೭-೨೯). ೨. ಸಾರ್ವಜನಿಕರಿಂದ ಪಡೆಯುವ ವಂತಿಗೆ ; ಚಂದಾ : ಮೊದಲನೆಯ ವರ್ಷ ನಾವು ಹೊರಗಿನಿಂದ ವಂತಿಗೆ ವರಾಡಗಳನ್ನು ಬಿಡಬೇಕಾದೀತು (ಡಿದಾಲು. ೧೨೪). [?./ ತುಳು. ಒರಡ, ಒರಾಡ]

**ವರಣ** (ನಾ). ೧. ಸುತ್ತುವರಿಯುವುದು. ೨. ಸುತ್ತಲಿನ ಆವರಣ ,— ಗೋಡೆ. ೩. ಕೋಟೆಯ ಪ್ರಾಕಾರ : "ಪ್ರಾಕಾರಃ, ವರಣಃ, ಸಾಲಃ — ೩ ಕೋಟೆಯ

ಹೆಸರುಗಳು" (ಸಿದ್ಧಾಂತಿ. ೯೯). ೪. ಪೂಜೆ ; ಅರ್ಚನೆ. ೫. ಪೂಜಾದ್ರವ್ಯ ; ಅರ್ಚನೆಯ ಸಲಕರಣೆ : ಭಟ್ಟರೇ ಸನ್ನಿಧಾನಕ್ಕೆ ಹೋಗಿ, ಸಂಕಲ್ಪ ಯಾರ ಹೆಸರಿನಲ್ಲಿ ಆಗಬೇಕು ತಿಳಿದುಕೊಂಡು ವರಣ ತೆಗೆದುಕೊಂಡು ಬನ್ನಿ (ಕೃಷ್ಣಭೂ. ೬೩). ೬. ಪೂಜಾರ್ಹನಾದ ವ್ಯಕ್ತಿ ; ಪೂಜ್ಯ : ಜನಕಂ . . . ದಾಮೋದರಂ ಪೆತ್ತ ತಾಯ್ ವಿನಯಾಳಂಕೃತೆ ವೀರಕಬ್ಬೆ ವರ[ಣಂ] [ಪಾಠಾಂ. ನಂ] ಶ್ರೀವೀರಭಟ್ಟಾರಕಂ (ವರ್ಧಮಾ. ೧-೨೩). ೭. ಆರಿಸುವಿಕೆ ; ಆಯ್ಕೆ : ನೆರೆದಿದ್ದ ಜನರೆಲ್ಲರೂ ಕೃಷ್ಣನ ವರಣಕ್ಕೆ ಅಭಿಮತರಾಗಿ ಹರ್ಷದಿಂದುದ್ಘೋಷಿಸಿದರು (ಭೀಷ್ಮ.ಟ. ೧೮೮). 'ವರಿಸು₂' ಪರಾ. ೮. ಮದುವೆಗೆ ಕನ್ನೆಯನ್ನು ಆರಿಸುವಿಕೆ. ೯. ಬೇಡಿಕೆ ; ಯಾಚನೆ. ೧೦. ಒಂದು ಬಗೆಯ ಮರ. ೧೧. ಸಂಕ ; ಸೇತುವೆ. ೧೨. ಒಂಟೆ ; ಉಷ್ಟ್ರ. ೧೩. ಹೊಲಗದ್ದೆಗಳ ಬದು, —ಒಡ್ಡು : ವರಣವೆಂದರೆ ಗದ್ದೆಗಳ ತೆವರು (ಹಿಂದಸಾ. ೯೪). 'ವರಣಭೇದ' ಪರಾ. ೧೪. ಹಣದ ಭಾಗ, —ಪಾಲು (?): ಕಟ್ಟೆಯ ಸೋಮನಾಥದೇವರಿಗೆ ನಂದಾದೀವಿಗೆಗಂ ಧೂಪಕ್ಕಂ ವಡ್ಡರಾವುಳದಲೂ ಹೆಜ್ಜುಂಕದಲೂ ತಿಂಗಳಿಂಗೆ ಸಲ್ಲ ವರಣಮಂ ಕೊಟ್ಟರು (ಕಇಲ. ೩೭-೪೯-೧೭; 1134).
[ಸಂ.]

**ವರಣಭೇದ** (ನಾ). ನೀರು ಬಿಡುವುದಕ್ಕಾಗಿ ಗದ್ದೆಯಲ್ಲಿ ಕಟ್ಟಿದ ಒಡ್ಡನ್ನು ಒಡೆಯುವುದು: ಸಂಸ್ಕಾರವೆಂಬ ಕರ್ಮವು ವರಣಭೇದದಂತೆ ಪ್ರತಿಬಂಧಕ ನಿವಾರಣೆಯನ್ನು ಮಾತ್ರ ಮಾಡುವುದು . . . ವರಣವೆಂದರೆ ಗದ್ದೆಗಳ ತೆವರು. ರೈತನು ಗದ್ದೆಗೆ ನೀರನ್ನು ಹಾಯಿಸಬೇಕಾದರೆ ತೆವರನ್ನು ಮಾತ್ರ ತೆಗೆಯುತ್ತಾನೆ. ನೀರು ತನ್ನ ಸ್ವಭಾವದಿಂದಲೇ ಗದ್ದೆಯನ್ನು ಹಾಯುತ್ತದೆ. ಇದೇ ವರಣಭೇದ (ಹಿಂದಸಾ. ೯೪).
[ಸಂ.]

**ವರಣಮಾಲಿಕೆ** (ನಾ). ಸ್ವಯಂವರ ಸಮಯದಲ್ಲಿ ವರಿಸಿದುದರ ಸಂಕೇತವಾಗಿ ವಧುವು ವರನ ಕೊರಳಿಗೆ ಹಾಕುವ ಹಾರ : ಸಂಯುಕ್ತೆ ಸ್ವಯಂವರೋಚಿತವಾದ ವಸ್ತ್ರಾಭರಣಗಳಿಂದ ಅಲಂಕೃತೆಯಾಗಿ ವರಣಮಾಲಿಕೆಯನ್ನು ಕೈಯಲ್ಲಿ ಹಿಡಿದು ಧಾತ್ರೀಸಮೇತಳಾಗಿ ಸಭಾಮಂಟಪಕ್ಕೆ ಬಂದು ನಿಂತಳು (ಆರ್ಯಕೀ. ೪).
[ಸಂ. ವರಣಮಾಲಿಕಾ]

**ವರಣಮಾಲೆ** (ನಾ). = ವರಣಮಾಲಿಕೆ : ಭಕ್ತಿಶುಕ್ತಿಯಲಿ ಮುತ್ತುಗಳ ರಚಿಸಿ ಕೋದಿಹೆ ವರಣಮಾಲೆಯಂ (ಚಿತ್ರಾಂಗ. ೩೭- ೧೧೧೪). [ಸಂ. ವರಣಮಾಲಾ]

**ವರತ್ರೆ** (ನಾ). ೧. ಚರ್ಮದ ಪಟ್ಟಿ : ರಥಶಕಟಾದಿಗಳಂ ಲೋಹರಜ್ಜು ವರತ್ರಾದಿಗಳಿಂ ತೆಗೆದು ಕಟ್ಟುವುದು ಆಲಾಪನಬಂಧಂ (ತತ್ತ್ವಪ್ರ. ೨೪೩). ೨. ಆನೆ ಅಥವಾ ಕುದುರೆಯ ತಂಗುಪಟ್ಟಿ : ಒಗೆದಂಭೋದಗಜಕ್ಕಮರ್ತ್ಯಪತಿ ಬೀಸುತ್ತಿರ್ಪ ಮುಕ್ತಾವರತ್ರೆಗಳೋ . . . ಪೇಟೆನೆ ಮಿಂಚುಗಳ್ಳಿರ್ದುದು (ಶಾಂತೀಶ್ವ. ೧೨-೪೨). [ಸಂ. ವರತ್ರಾ]

**ವರದ** (ಗು). ೧. ಅನುಗ್ರಹವನ್ನು ದಯಪಾಲಿಸುವ ; ಇಷ್ಟಾರ್ಥವನ್ನು ಪೂರೈಸುವ. (ನಾ). ೨. ಅನುಗ್ರಹಿಸುವಂತಹುದು ; ವರವನ್ನು ನೀಡುವಂತಹುದು : ವರದಂ ಪದ್ಮಾಂಕಿತಂ ತೋಳೆರಡು ನಿಶಿತವಜ್ರಪ್ರಭಾಭಾಸುರಂ ತೋಳೆರಡು (ಆದಿಪು. ೧-೭). ೩. ಬೇಡಿದುದನ್ನು ಕೊಡುವವನು ; ವರವನ್ನು ಅನುಗ್ರಹಿಸುವವನು : ಪರಮೇಶ್ವರ ಉಮಾವರ ಹರಿಣಧರಧರ ವರದನಾಗು (ಬಸವ. ೫೩-೪೭); ವರದನಾದ್ಯೆ ಶಂಭು ಕರುಣಾಕರ ಹಸಾದವು (ಕುಮಾರಿ. ೨೨-೪೫).
[ಸಂ.]

**ವರದಕ್ಷಿಣೆ** (ನಾ). ೧. ಮದುವೆಯಲ್ಲಿ ಕನ್ಯಾಪಿತನು ವರನಿಗೆ ಗೌರವಯುತವಾಗಿ ಕೊಡುವ ಧನ. ೨. ಹೆಣ್ಣನ್ನು ತಂದುಕೊಳ್ಳಲು ವರನ ಕಡೆಯವರು ನಿಗದಿಪಡಿಸುವ ಹಣ, ಒಡವೆ, ವಸ್ತು ಮುಂತಾದುವು: ಶ್ರೀಮಂತರ ಮಗ, ಬೇಕಾದಷ್ಟು ವರದಕ್ಷಿಣೆ ಕೊಟ್ಟು ಹೆಣ್ಣು ಕೊಡುತ್ತಾರೆ (ತೇಮೊಡ. ೯೯); ನಾನು ವರದಕ್ಷಿಣೆಗೆ ನನ್ನ ಮಗನನ್ನು ಮಾರಿಕೊಳ್ಳುವವನಲ್ಲ (ಸ್ಮೃತಿಚಿ. ೨೦).
[ಸಂ. ವರದಕ್ಷಿಣಾ]

**ವರದಹಸ್ತ** (ನಾ). ಅನುಗ್ರಹವನ್ನು ನೀಡುವ ಕೈ: ದೇವಿಯ ವರದಹಸ್ತದಲ್ಲಿದ್ದ ಈ ಪುಷ್ಪವು ತಾನಾಗಿ ಶೇಷೆಯ ತಟ್ಟೆಗೆ ಉರುಳಿತು (ಶಾಂತಲಾ. ೨೫). [ಸಂ.]

**ವರದಾನ** (ನಾ). ೧. ಬೇಡಿದುದನ್ನು ನೀಡುವಿಕೆ ; ಅನುಗ್ರಹ : ಗೌತಮನ ವರದಾನವು ಉದಂಕನಿಗೆ ದೊರೆಯಲಿಲ್ಲ (ಮಹಾಸ. ೬೩). ೨. ಉತ್ತಮವಾದ ದಾನಗುಣ. ೩. ಉತ್ಕೃಷ್ಟವಾದ ಮದೋದಕ. ೧, ೨, ೩ : ವರದಾನಂ ನತಭದ್ರಲಕ್ಷಣಪದಂ . . . ದೇವ ಗಣಪಂ ರಕ್ಷಿಕ್ಕೆ (ಜಗವಿ. ೧-೫). [ಸಂ.]

**ವರದಾನಿ** (ನಾ). ಅತಿಶಯವಾದ ದಾನಗುಣವುಳ್ಳ ದೇವತೆ ಅಥವಾ ವ್ಯಕ್ತಿ : ಭಕ್ತರಿಗೆ ಬೇಡಿದ್ದ ಕುಡುವ ವರದಾನಿ ನೀ ನೋಡಯ್ಯ (ಸಮಾವ. ೧೨-೪೫); ಸೂನು ಬದುಕಿದಡಿಂದು ನಿನ್ನಂ ನೋಣುವೆವ್ವೆ ಗುಡ್ಡವ್ವೆ ತಾಯ್ವರದಾನಿ ಎನ್ನದೆ (ಬಸವ. ೪೮-೧೯). [ಸಂ. ವರದಾನಿನ್]

**ವರದಿ** (ನಾ). ೧. ಸುದ್ದಿ ; ವರ್ತಮಾನ ; ಸಮಾಚಾರ. ೨. ನಡೆದ ಸಂಗತಿ, ನೆರವೇರಿಸಿದ ಕಾರ್ಯಕ್ರಮ ಅಥವಾ ನಡೆಸಿದ ತನಿಖೆ ಮುಂತಾದ ವಿವರಗಳ (ಲಿಖಿತ) ನಿರೂಪಣೆ, —ಹೇಳಿಕೆ ; ರಿಪೋರ್ಟು : ಪೋಲೀಸಠಾಣೆಗೂ ವರದಿ ಕೊಡಲಾಯಿತು (ಶ್ಯಾಮುತಾ. ೧೫); ಬಾಹ್ಯಪರೀಕ್ಷೆಯ ವರದಿ . . . ಇಪ್ಪತ್ತೇಳು ಪ್ಯಾರಾಗಳನ್ನೊಳಗೊಂಡಿತ್ತು (ಪುನರು. ೮೮).

ವರದಿಮಾಡು = ವಿಚಾರವನ್ನು ತಿಳಿಸು ; ಸುದ್ದಿಯನ್ನು ಕೊಡು : ಯುಧಿಷ್ಠಿರನು ಕಳುಹಿಸಿದ್ದ ಚೇಡನು . . . ದುರ್ಯೋಧನನ ಆಡಳಿತಕ್ರಮವನ್ನು ಅವನಿಗೆ ವರದಿ ಮಾಡುವ ಸನ್ನಿವೇಶದಿಂದ ಕಾವ್ಯವನ್ನು ಪ್ರಾರಂಭಿಸಿದ್ದಾನೆ (ಭಾರಡ. ೪೫೨); ಪೋಲೀಸರಿಗೆ ವರದಿ ಮಾಡಿದೆವು (ನಡೆದಾ. II, ೯೦೪).
[<— ಮರಾ. ವರದೀ, ವರ್ದೀ]

**ವರದಿಕಾರ** 'ವರದಿಗಾರ' ನೋ.

**ವರದಿಗಾರ, ವರದಿಕಾರ** (ನಾ). ೧. ಸುದ್ದಿ, ಶೋಧನೆ ಮೊದಲಾದ ವಿಷಯಗಳ ವಿವರಣೆಯನ್ನು ಬರೆದು ತಿಳಿಸುವವನು : ಬ್ರಿಟಿಷರ ಆಡಳಿತದಲ್ಲಿ ಸರ್ಕಾರಿ ವರದಿಗಾರರ ತಪ್ಪುವರದಿಗಳಿಂದಲೆ ಅನೇಕ ಹಿಂದೀಯರು ಶಿಕ್ಷೆಗೆ ಗುರಿಯಾಗಿದ್ದರು (ಸ್ವಾವೀರ. ೮೦). ೨. ವರ್ತಮಾನ ಪತ್ರಿಕೆ, ದೂರದರ್ಶನ ಮೊದಲಾದುವುಗಳಿಗೆ ಸುದ್ದಿಯನ್ನು ಸಂಗ್ರಹಿಸುವವನು ; ಬಾತಮಿದಾರ : ನನ್ನ ಸ್ನೇಹಿತ ಒಂದು ದಿನಪತ್ರಿಕೆಯ ವರದಿಗಾರನಾಗಿದ್ದಾನೆ (ರೂಢಿ). **ವರದಿಕಾರ**: ೧. ಕವಿಚರಿತೆಕಾರರೂ ಪುರಾತತ್ತ್ವಇಲಾಖೆಯ ವರದಿಕಾರರೂ ಮಂಗರಸನಿಗೂ ನಂಜುಂಡನಿಗೂ ಇರುವ ಬಾಂಧವ್ಯವನ್ನು ಕುರಿತು ಪ್ರಸ್ತಾಪಿಸಿರುವುದರಿಂದ . . . ವಿವರಗಳನ್ನು ಮೊದಲು ಇಲ್ಲಿ ಸಂಗ್ರಹಿಸಬಹುದು (ಕುಮಾಸಾಂ. ೧೭).
[ವರದಿ + — ಗಾರ (< — ಕಾಱ)]

**ವರದಿಗಾರ್ತಿ** (ನಾ). ವರ್ತಮಾನಪತ್ರಿಕೆ, ದೂರದರ್ಶನ ಮೊದಲಾದುವುಗಳಿಗಾಗಿ ಸುದ್ದಿಯನ್ನು ಸಂಗ್ರಹಿಸುವವಳು : ನನ್ನ ಸ್ನೇಹಿತೆ ಬೆಂಗಳೂರು ದೂರದರ್ಶನದ ವರದಿಗಾರ್ತಿಯಾಗಿ ಕೆಲಸಮಾಡುತ್ತಿದ್ದಾಳೆ (ರೂಢಿ).
[ವರದಿಗಾರ + — ತಿ₁ (< — ಇತ್ತಿ)]

**ವರದಿಗೊಡು** (ಕ್ರಿ). ಸುದ್ದಿಯನ್ನು ತಲುಪಿಸು; ಬಾತಮಿಕೊಡು: ಬೇಹಿನ ಚಾವಡಿಗೆ ಹೋಗಿ ನೀವು ವರದಿಗೊಟ್ಟುದಾಯ್ತೇನು? (ಚಿಕ್ಕಭ. ೫೦-೧೫).
[ವರದಿ + ಕೊಡು₁]

**ವರದಿಸು** (ಕ್ರಿ). ವಿಷಯವನ್ನು ತಲುಪಿಸು, —ನಿರೂಪಿಸು : ಅವಳ ಜಡೆಯಲ್ಲಿ ಅರೆಬಿರಿದ ಗುಲಾಬಿಹೂ ಎಲೆಸಹಿತ ಇತ್ತೋ ಇಲ್ಲವೋ ಎಂಬುದನ್ನು ಸವಿವರವಾಗಿ ವರದಿಸುತ್ತಾರೆ (ರೂಪಸು. ೩೯). [ವರದಿ + — ಇಸು₁]

**ವರದೆ** (ನಾ). ೧. ವರವನ್ನು ಕೊಡುವವಳು ; ಅನುಗ್ರಹವನ್ನು ನೀಡುವವಳು : ಸರಸ್ವತೀದೇವಿ ವರದೆಯಕ್ಕೆಮಗೆಂದುಂ (ಕಾವ್ಯಾವ. ೨); ಅಜನ ಪಟ್ಟದ ರಾಣಿ ವರದೆ ಕಲ್ಯಾಣಿ . . . ಅಮಲಸುಮತಿಯಂ ತಾಯೆನಗೆ ತಾಯೆ (ಜೈಮಿಭಾ. ೧-೪). ೨. ಕನ್ನಡನಾಡಿನ ಶಿವಮೊಗ್ಗಜಿಲ್ಲೆಯಲ್ಲಿ ಹುಟ್ಟುವ ಒಂದು ನದಿಯ ಹೆಸರು : ಪ್ರಸಿದ್ಧವರದಾ ಪುಣ್ಯಾಂಬು . . . ಯಮುನಾನೀಲೋರ್ಮಿನೀರಂ ಭುಜೋತ್ತುಂಗಂಗೀಗರಿಗಂಗೆ ಮಂಗಳ ಮಹಾಶ್ರೀಯಂ ಜಯಶ್ರೀಯುಮಂ (ಪಂಪಭಾ. ೧೪-೩೦). [ಸಂ. ವರದಾ]

ವರನಾಳಿ (ನಾ). ಒಂದು ಬಗೆಯ ವಿದ್ಯೆ : ಭಾರಣೆ ವರನಾಳಿ ಕಡಲೋಟ ಮುಂತಾದ ಚಾರುಕೌಶಲ್ಯವಿದ್ಯೆಗಳ ಧಾರುಣಿ ಪೊಗಳೆ ಪೇಳ್ದೀಲಾಚಾರ್ಯರ ಚಾರುಚರಣ ಶರಣೆನಗೆ (ನಾಗಕು. ೧-೧೨). [?]

ವರಪೂಜೆ (ನಾ). ಮದುವೆಯ ಸಮಯದಲ್ಲಿ ಕನ್ಯೆಯ ತಾಯಿತಂದೆಯರು ವಿಧ್ಯುಕ್ತವಾಗಿ ವರನಿಗೆ ಮಾಡುವ ಪೂಜೆ ,—ಆದರ ಸತ್ಕಾರ ಮತ್ತು ಆಗಿನ ಸಮಾರಂಭ : ಮುಂದೆ ಕಾಶಿಯಾತ್ರೆ ಹೊರಟುಬಿಟ್ಟಿದ್ದ ಶ್ರೀನಿವಾಸನನ್ನು ಕರೆದು ಅವನ ಅತ್ತೆಮಾವಂದಿರು ವರಪೂಜೆ ಮಾಡಿ ಹಿಂದಕ್ಕೆ ಎಳೆದುಕೊಂಡು ಬಂದರು (ಅವತಂ. ೧೭). [ಸಂ. ವರಪೂಜಾ]

ವರಪ್ರದಾನ (ನಾ). ವರವನ್ನು ಅನುಗ್ರಹಿಸುವಿಕೆ ; ವರದಾನ : ಆತನಿಗೆ ಕಾಮರೂಪ, ಕಾಮಸಂಚಾರ, ವರಪ್ರದಾನ . . . ಬಿಟ್ಟು ಉಳಿದ ದೇವಧರ್ಮಗಳೆಲ್ಲ ಬರುವುವು (ಮಹಾಅ. ೧೧೪). [ಸಂ.]

ವರಪ್ರಸಾದ (ನಾ). ದೇವರು ಅಥವಾ ಗುರುಜನರಿಂದ ದೊರಕುವ ಅನುಗ್ರಹ ,—ಇಷ್ಟಾರ್ಥಸಿದ್ಧಿ : ಪೊರ್ದಲೊಡಂ ವಿನೇಯಜನಸಂಘಾತಕ್ಕೆ ಮಾಣಿಕ್ಯದೇವಪದಾಂಭೋಜವರಪ್ರಸಾದಮೆ ಜಯಂ (ಆದಿಪು. ೧೬-೭); ಶ್ರೀರಾಮನ ದಂಡಕಾರಣ್ಯಪ್ರವಾಸವು ಋಷಿಗಳಿಗೆ ಒಂದು ವರಪ್ರಸಾದದಂತೆಯೆ ಆಯಿತು (ಭಾರದ. ೮೯). [ಸಂ.]

ವರಮಾನ (ನಾ). ಗಳಿಕೆ ; ಆದಾಯ ; ಉತ್ಪನ್ನ : ಅವನ ಮಾಸಿಕವರಮಾನ ಇನ್ನೂರು ರೂಪಾಯಿಗಳಿರಬಹುದು (ಆಳಾ. ೩೦); ಬರುವ ವರಮಾನ ದಿನದಿನದ ವೆಚ್ಚಕ್ಕೆ ಸಾಲದಾದರೆ . . . ಕೂಡಿಡಲು ಸಾಧ್ಯವಿಲ್ಲ (ಹಣಪ್ರ. ೧೨). [?]

ವರಮಾನತೆರಿಗೆ (ನಾ). ಗಳಿಸುವ ಆದಾಯದ ಮೇಲೆ ಹಾಕುವ ತೆರಿಗೆ : ದುಡ್ಡಿದ್ದವನು ವರಮಾನತೆರಿಗೆಯಿಂದ ಹೇಗೆ ತಪ್ಪಿಸಿಕೊಳ್ಳಬೇಕೆಂಬುದನ್ನು ಚಿಂತಿಸುತ್ತಾನೆ (ಪಂಜಪಂ. ೨೦೪). [ವರಮಾನ + ತೆರಿಗೆ (< ತೆಱಿಗೆ)]

ವರಮುಖಿ₁ (ನಾ). ಅನುಗ್ರಹದ ಕಡೆಗೆ ದೃಷ್ಟಿಯುಳ್ಳ ವ್ಯಕ್ತಿ ; ವರವನ್ನು ಯಾಚಿಸುವವನು : ಗಂಗೆವಾಳುಕರಲ್ಲ ವರಮುಖಿಗಳಾಗಿ ಮೂರ್ತಿಯಳಿದು ಹೋದರು (ಅವಚಂ. ೩೮-೧೬೩). [ಸಂ. ವರಮುಖಿನ್]

ವರಮುಖಿ₂ (ನಾ). ಸುಂದರವಾದ ಮುಖವುಳ್ಳವಳು : ಉರುಮಣಿಮಯ ಖಚಿತಾವತಂಸಗಳಿಂ ತರುಣಿಯ ಕರ್ಣಾಯುಗಳಂಗಳು ವರಮುಖಿ ಲಕ್ಷ್ಮಿಗೆ ನೀರಾಜಿಪ ಪಾತ್ರೆಯಿರವೆನೆ ಕಣ್ಗೆ ರಾಜಿಸಿದವು (ತ್ರಿಭುತಿ. ೨೦-೫೮).

[ಸಂ. ವರಮುಖೀ = ಒಂದು ಬಗೆಯ ಔಷಧದ್ರವ್ಯ]

ವರಯಿತ (ನಾ). ೧. ಕನ್ಯಾರ್ಥಿ ; ಮದುಮಗ ; ವರ. ೨. ಗಂಡ ; ಪತಿ : "ವರಯಿತಂ ಭರ್ತೃ ಧವಂ . . . ರಮಣನೆನೆ ಗಂಡನೆನಿಸಿಕ್ಕು" (ಮಂಗರಾ. ೯೧-೭).

[ಸಂ. ವರಯಿತೃ]

ವರಯೋಗ್ಯೆ (ನಾ). ಮದುವೆಯ ವಯಸ್ಸಿಗೆ ಬಂದವಳು ; ವಿವಾಹಯೋಗ್ಯಳಾದವಳು : ಅಂತು ವರಯೋಗ್ಯೆಯಾದ ಪತಿಂವರೆಯನಱಿದು ಅಪರಾಜಿತಂ . . . ತದನುರೂಪ ವರಾನ್ವೇಷಣವ್ಯಾಪಾರಪಾರಾಯಣನಾಗಿ (ಶಾಂತಿಪು. ೪-೮೮ ವ). [ಸಂ. ವರಯೋಗ್ಯಾ]

ವರರತ್ನ (ನಾ). ೧. ಶ್ರೇಷ್ಠವಾದ ರತ್ನ. ೨. [ಜೈನ] ಮೋಕ್ಷವನ್ನು ಪಡೆಯಲು ಸಾಧನವಾದ ಸಮ್ಯಗ್ದರ್ಶನ, ಸಮ್ಯಕ್‌ಜ್ಞಾನ ಮತ್ತು ಸಮ್ಯಕ್‌ಚಾರಿತ್ರ ಎಂಬ ರತ್ನತ್ರಯ. ೩. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : "ಹರನಯನ ವಹ್ನಿ ಪುರ ಶಿಖಿ ವರರತ್ನಂ . . . ಮಾರ್ಗತ್ರಯವದು ಮೂಱಱ ನಾಮಂ" (ವ್ಯವಹಾ. ೯-೩). [ಸಂ.]

ವರರುಚಿ (ನಾ). ೧. ಅತಿಶಯವಾದ ಕಾಂತಿ ,—ಪ್ರಭೆ. ೨. ಶ್ರೇಷ್ಠವಾದ ಅಭಿರುಚಿ ,—ಆಸಕ್ತಿ. ೩. ಪ್ರಸಿದ್ಧನಾದ ಒಬ್ಬ ಸಂಸ್ಕೃತ ವೈಯಾಕರಣಿಯ ಹೆಸರು ; IP ಸಂಸ್ಕೃತ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಈ ಹೆಸರಿನ ಬೇರೆ ವ್ಯಕ್ತಿಗಳೂ ಇದ್ದಾರೆ : ವರರುಚಿಯ ಜಾಣ್ಮೆ ಗೋಪಾಲಿಕನ ಬೆಡಗು ಭಾಗುರಿಯ ಗೂಢತೆ ಇಂತಿವೆಲ್ಲವನು ಸಂಪರಿಸಿಯಭಿನವಮಂಗನುಸುರಿದಂ (ಮಂಗರಾ. ೨-೪). [ಸಂ.]

ವರಲೆ (ನಾ). ೧. ಹೆಣ್ಣುಹಂಸ : ಕೊಟ್ಟುಗ ವರಲೆ ಕೊಂಚೆ . . . ಮೊದಲಾದಖಿಳಖಗಕುಲ ಬಿದ್ದುದುರಿಯೊಳಗೆ (ಕುವ್ಯಾಅ. ೨೦-೫೩). ೨. ಕ್ಷಣಜ ; ಕಡಂದುರು : ಪರಶುರಾಮನ ಬಾಣ ಮುನ್ನೂಱು ಗಾವುದ ಹೋಗುವದೆಂದು ದೇವೇಂದ್ರ ವರಲೆಯಾಗಿ ಬಿಲ್ಲ ಹೆದೆಯ ಕಡಿಯಲು (ಭೈರಸೂ. I, ೮೪).

[ಸಂ. ವರಲಾ]

ವರವರ್ಣಿನಿ (ನಾ). ೧. ಅತಿಶಯವಾದ ಮೈಕಾಂತಿಯುಳ್ಳವಳು ; ಸುಂದರಳಾದ ಸ್ತ್ರೀ : ವರವರ್ಣಿನಿಯೆ, ಮುನಿಯೆನಾಂ ನಿನ್ನ ಕೊರಳಿನ ಸುಧೆಯ ಗರಳಕ್ಕೆ (ಶ್ರೀರಾಮಾ. ೨೧೬-೪೯೪). ೨. ಶ್ರೇಷ್ಠಳಾದ ಹೆಂಗುಸು. ೩. ಲಕ್ಷ್ಮಿ. ೪. ದುರ್ಗೆ. ೫. ಸರಸ್ವತಿ. ೬. ಹೆಂಗುಸು ; ಸ್ತ್ರೀ : "ಮಹಿಳೆಯಬಳೆ ರಾಮೆ ವರವರ್ಣಿನಿಯೆನಲ್ಕೆ ಹೆಂಗೂಸೆನಿಕ್ಕು" (ಮಂಗರಾ. ೮೯-೧). ೭. ಪ್ರಿಯಂಗುಬಳ್ಳಿ. ೮. ಅರಿಸಿನ. ೯. ಅರಗು ; ಲಾಕ್ಷ. ೧೦. ಗೋರೋಚನ. ೧೧. ಕಟುಕರೋಹಿಣಿ.

[ಸಂ. ವರವರ್ಣಿನೀ]

-ವರವಿಗೆ '-ವರೆಗಂ' ನೋ.

ವರವಿಡಿ (ಕ್ರಿ). ವರವನ್ನು ಪಡೆ ; ಅನುಗ್ರಹವನ್ನು ಹೊಂದು : ಭೂಧವ ಶಮಿಯನರ್ಚಿಸಿ ವರವಿಡಿದು ವಿನೋದದೆ ನಡೆತಂದನಾಗ (ಕಂಪವಿ. ೨೨-೯೯).

[ವರ₁ + ಪಿಡಿ₁]

ವರವೀ (ಕ್ರಿ). ವರವನ್ನು ಕೊಡು ,—ಅನುಗ್ರಹಿಸು : ನರನಾಗಿ ಬಂದು ವರವೀವ ಗುರುವಿಂಗೆ ಸರಿಯಾರ ಕಾಣೆ (ಸರ್ವಜ್ಞ. ೪೯). [ವರ₁ + ಈ₂]

ವರವು, ಬರ್₂, ಬರವು (ನಾ). ಬರುವಿಕೆ ; ಆಗಮನ : ತನಗೆ ಮೃತ್ಯು ವರವಾಪನಱಿದ ಪೆರ್ತ್ಮಾಣವಂಶದೊನ್ ಕಾಲನಿಗೇಕಸುದೆ . . . ಸುರ X ಗ ಗತಿಯುಳ್ಳೆಲೆಕೊಣ್ಣಾನ್ (ಎಕ. II, ೯೯-೧; ಸು. 700). ಬರ್₂ : ಸರವು— ನರಂ, ನೆರಂ, ಬರಂ, ಎಟ್ಟರಂ, ನೊಳಂ ಎಂದಱಿವುದು (ಶಮದ. ೪೬ ಪ್ರಯೋ); ಪೆಣ್ಗಳಳ್ಳಿರಿಯುವೆದೆಯಿಂದ ಪಡೆಯಿಲರ ಬರಮಂ ಅಳ್ಳಿಯಂ ಕೊಳ್ಳಿಯಿಂದಿರಿವವೋಲ್ ಪೇಳಿದರ್ (ಕಾಲೂರ. ೧೫೦-೩೫೦). 'ನಲ್ಬರ' ಪರಾ. ಬರವು: ಗು[ರುಜನ]ದ ಪರಕೆಯುಂ ಬಂಧುರಪುಣ್ಯಫಳಾನುಬಂಧಮುಂ ನೆರೆದೆನ್ನೊಳ್ ವರಮಾನುಭಾವಭರಮಂ ದೊರೆಕೊಂ[ಡು]ವವಿಂದು ಬರವಿನೊಳ್ ನಿಮ್ಮಡಿಯಾ (ಕವಿರಾ. ೩-೨೦೫); ದಂಡಕನೃಪತಿ . . . ರಿಸಿಯರ್ಕಳ ಬರವಂ ಕೇಳ್ದು ಬಂದು ಬಂದಿಸಿಯಭಿನಂದನಭಟಾರರ ಪಕ್ಕದೆ ವಿಚಾರಿಸಿ ಧರ್ಮಮಂ ಕೇಳ್ದು ಮೆಚ್ಚಿ (ವಡ್ಡಾರಾ. ೧೭೬-೮); ಸ್ತ್ರೀಯರಿಗೆ ನಿಜಪತಿಯ ಬರವಿನ ಪ್ರೀಯ ದೊರೆಕೊಂಬಂತೆ ಕಮಲದಳಾಯತಾಂಬಕ ಸತತ ಕದನೋತ್ಸಾಹ ತನಗೆಂದ (ಕುವ್ಯಾಅ. ೬೦೧೪. ೪-೪೦). [ದೇ. ॥ ತಮಿ. ವರವು]

ವರಶೆ 'ವರಿಸೆ' ನೋ.

ವರಶೆವಿನಿಯೋಗ (ನಾ). ಅಗ್ರಮರ್ಯಾದೆಯ ಒಂದು ವಿಧಿ : ವರಕಾಲಸ್ವಾಮಿಗಳವರಿಗೆ ಮೊದಲು ತೀರ್ಥ ತಿರುಮಾಲೆ ವರಶೆವಿನಿಯೋಗ ಶ್ರೀಶಟಗೋಪ ಮುಂತಾದ ಸಕಲಮರಿಯಾದೆ (ಮೈಐ. ೧೮೩೭; ೧೯-೭; 1811).

[ವರಶೆ (< ವರಿಸೆ) + ವಿನಿಯೋಗ]

ವರಸಾಮ್ಯ (ನಾ). ವಧೂವರರು ಪರಸ್ಪರ ಅನುರೂಪರಾಗಿರುವುದು ,—ಹೊಂದುವಂತಿರುವುದು : ತನಗೂ ಅವಳಿಗೂ ವರಸಾಮ್ಯ ಸ್ವಲ್ಪವೂ ಸರಿಹೋಗುವುದಿಲ್ಲ (ಸೋತುಗೆ. ೩೭); ಇನ್ನೂ ಚಿಕ್ಕ ವಯಸ್ಸು ಎನ್ನುವುದನ್ನು ಬಿಟ್ಟರೆ ಅವರಿಬ್ಬರಿಗೂ ಚೆನ್ನಾಗಿ ವರಸಾಮ್ಯವಾಗುತ್ತಿತ್ತು (ವಂಶವೃ.೪೮೫). [ಸಂ.]

ವರಸೆ 'ವರಿಸೆ' ನೋ.

ವರಸೆದಪ್ಪು (ಕ್ರಿ). ಕ್ರಮವು ತಪ್ಪು ; ರೀತಿಗೆಡು : ವರವೇದಾಂತಶಾಸ್ತ್ರೋಕ್ತರ ರಹಸ್ಯವನು ವರಸೆದಪ್ಪದೆ ಕ್ರಮದಲೆಲ್ಲವನರಸಿ ಪೇಳುವೆವು (ಗಗತಾ. ೨-೪೩); ವರಸೆದಪ್ಪದೆ ಪೂಜೆಯಂಗೈದು (ಯಟೋರ. ೧೦೦). [ವರಸೆ (< ವರಿಸೆ) + ತಪ್ಪು₁]

ವರಸೆದಾರ (ನಾ). ಅಂಗಸಾಧಕ ; ಪೈಲವಾನ : ವರಸೆದಾರ ಕುಸ್ತಿಗೆ ಜನರೆದುರು ಆಖಾಡಕ್ಕೆ ಇಳಿಯುವಾಗಲೂ ಬಟ್ಟೆಯನ್ನು ಹೊದ್ದೇ ಇರಬೇಕು (ಭೀಮಕಾ. ೩೨).

[ವರಸೆ (< ವರಿಸೆ) + -ದಾರ್₄]

**ವರಸೆದಿರುಹು** (ನಾ). ಕತ್ತಿಯನ್ನು ಚಕ್ರಾಕಾರವಾಗಿ ತಿರುಗಿಸುವುದು, – ತಿರುವುವುದು : ಪ್ರಚಣ್ಣವೇಗದಿಂದ ಥಳಥಳಿಸುತ್ತಿರುವ ಆ ವರಸೆದಿರುಹಿನ ಮಣ್ಡಲಗಳನ್ನೊಡೆದು ಭೇದಿಸಿಬಿಡುವಾಸೆಯಿಂದ . . . ಹೋರಾಡುತ್ತಿರುವರು (ಬಿರುಗಂ. ೨೨-೧೭). [ವರಸೆ (< ವರಿಸೆ) + ತಿರುಹು₂ (< ತಿರಿಪು₂)]

**ವರಹ, ವರಹಾ** (ನಾ). ೧. ಹಂದಿ; ವರಾಹ; ಸೂಕರ: ಕಾಡೆಮ್ಮೆಯ ಕೋಡು ವರಹ ದಂತಿಯ ದಾಡೆ . . . ಇತ್ತರೊಲಿದು (ನವಮೋ. ೧೯-೭೪). ೨. ಹಿಂದೆ ನಮ್ಮ ದೇಶದಲ್ಲಿ ಬಳಕೆಯಲ್ಲಿದ್ದ ವರಾಹದ ಮುದ್ರೆಯನ್ನು ಹೊಂದಿದ್ದ ಒಂದು ನಿರ್ದಿಷ್ಟಬೆಲೆಯ ಚಿನ್ನದ ನಾಣ್ಯ; IP ಇದರ ಬೆಲೆಯ ಬಗೆಗೆ ಭಿನ್ನಾಭಿಪ್ರಾಯಗಳಿವೆ : ನಾಲ್ವತ್ತು ವರಹಂನು ಸೋಮೇಶ್ವರದೇವರ ಭಂಡಾರಕ್ಕೆ ಮಾಸಪಸಡಿಯಾಗಿ ಸಲಿಸುವಿರಿ (ಮೈಆ. ೧೯೪೬, ೨೯-೧೮; 1530); ವರಹವೆಂದೆನಲು ಪಣ ಹತ್ತು (ಭಾಸ್ಕರ. ೭೭-೨); ರೊಕ್ಕ ಎರಡು ವರಹ ಕೊಟ್ಟು ಅಕ್ಕರೆಯ ಕರು ಸಾಕಿದೆ (ಕಪು. ೧೮-೯). ೩. ವರಹದ ನಾಣ್ಯದ ತೂಕಪ್ರಮಾಣ ; IP ಇದರ ತೂಕದ ಬಗೆಗೆ ಭಿನ್ನಾಭಿಪ್ರಾಯಗಳಿವೆ : ಹಿಪ್ಪಲಿ ನಾಲ್ಕು ವರಹ ತೂಕ, ಸಕ್ಕರೆ ಐದು ವರಹ ತೂಕ (ವೈದ್ಯಸಾ. I, ೧೧೪ ಟೀಕು); ಶುದ್ಧಿಮಾಡಿದ ನೇಪಾಳ ೧೦ ವರಹತೂಕ ಮೆಣಸು ಗದ್ಯಾಣ ೧ ತೂಕ . . . ತಿಲಪ್ರಮಾಣವಂ ಕಣ್ಣಿಗೆಚ್ಚಲು ಸನ್ನಿಪಾತಂ ಗುಣಮಕ್ಕುಂ (ಸಕವೈ. ೧೮೦). **ವರಹಾ** : ೧. 'ವರಹಾಕಟ್ಟು' ಪರಾ. ೨. ಸದರಿ ಬರದ ವರಹಾ ಒಂದಕ್ಕೆ ರೂಪಾಯಿ ಮೂರರ ಪ್ರಕಾರ ರಾಜರವರು ವರ್ಷಂಪ್ರತಿಯಲಲ್ಲಿ ತಲಚೇರಿಗೆ ಇಪ್ಪತ್ತನಾಲ್ಕುಸಾವಿರ ರೂಪಾಯಿ ಕೊಡಬೇಕು (ರಾಜೇಂದ್ರ. ೫೪). ೩. ಒಂದು ವರಹಾ ತೂಕ ಬಜೆಯನ್ನು ಬಿಸಿನೀರಿನಲ್ಲಿ ಅರೆದು ಕುಡಿಸಲು ವಮನವಾಗಿ ವಾತಜ್ವರವು ಶಮನವಾಗುವುದು (ಸಕವೈ. ೬೨). [< ಸಂ. ವರಾಹ]

**ವರಹಮುದ್ರೆ** (ನಾ). ವರಾಹದ ಗುರುತುಳ್ಳ ರಾಜಚಿಹ್ನೆ, – ಲಾಂಛನ : ಮೆರೆವ ಪದವಿ ವರಹಮುದ್ರೆ, ಆಳು ಚಿನ್ನ, ಏನೆ ಇರಲಿ! (ಇಂಗೀತ. ೩೭-೭). [< ಸಂ. ವರಾಹಮುದ್ರಾ]

**ವರಹಾ** 'ವರಹ' ನೋ.

**ವರಹಾಕಟ್ಟು** (ನಾ). ಚಿನ್ನ, ಮುತ್ತು ಮೊದಲಾದುವುಗಳಿಂದಾದ ಆಭರಣಗಳನ್ನು ತೊಳೆಯಲು, ಕಾಡುಹಂದಿಯ ಕೂದಲಿಂದ ಮಾಡಿದ ಕಟ್ಟು, – ಬ್ರಶ್ಶು ; ವರಾಹಕೂರ್ಚ : (ಓ). 'ವರಾಹಕೇಶ' ಪರಾ. [ವರಹಾ (< ವರಹ) + ಕಟ್ಟು₂]

**ವರಹಾಕೂರ್ಚ** (ನಾ). = ವರಹಾಕಟ್ಟು: (ಓ). [< ಸಂ. ವರಾಹಕೂರ್ಚ]

**ವರಹಾಬಣ್ಣ** (ನಾ). ವರಹವೆಂಬ ನಾಣ್ಯದ ಬಣ್ಣ ; ಅಪ್ಪಟಚಿನ್ನದ ಬಣ್ಣ : (ಓ). [ವರಹಾ (< ವರಹ) + ಬಣ್ಣ]

**ವರಹಾವತಾರ** (ನಾ). ೧. ವಿಷ್ಣುವಿನ ಹತ್ತು ಅವತಾರಗಳಲ್ಲಿ ಮೂರನೆಯದು : ಸುರರುಲಿಯೆ ಬಾಹಾಬಲದಿಂ ವರಹಾವತಾರಮಂ ಹರಿ ತಾಳ್ದಂ (ದಶಾವ. ೪-೪೨). ೨. ವರಾಹದ ಅವತಾರವನ್ನು ತಾಳಿದ ವಿಷ್ಣು : ಮಂಗಳಂ ಜಯಮಂಗಳಂ . . . ಧರೆಯನುದ್ಧರಿಸಿದ ಥರಹಾವತಾರಗೆ ತರಳನ ಕಾಯ್ದ ನರಸಿಂಹಗೆ (ಪುರಂದ. ೧-೨೩೧-೧). [< ಸಂ. ವರಾಹಾವತಾರ]

**ವರಹೀನ** (ನಾ). ರೂಪ, ಧನ, ವಯಸ್ಸು ಮುಂತಾದುವು ಯಾವುದೂ ಇಲ್ಲದವನು ; ಸರ್ವದರಿದ್ರ : ಕುಲಹೀನನಾದರೂ ವರಹೀನನಾಗಬಾರದು (ಗಾದೆ). [ಸಂ.]

**ವರಾಂಗ** (ನಾ). ೧. ಶ್ರೇಷ್ಠವಾದ ಅಂಗ ; ತಲೆ ; ಶಿರಸ್ಸು. ೨. ಯೋನಿ ; ಭಗ : ವರಾಂಗ ರಸನಾ ವೃಷಣೇಕ್ಷಣ ಶುಕ್ಲ ಸತ್ವಮಾಭ್ಯಂತರಮಾವ ಲಕ್ಷಣಮುಮಿಂತಿವೆ ಬಲ್ಲಿದನೋದಿನಿಷ್ಪದೊಳ್ (ಲೋಕೋಪ. ೧೧-೬೩); ಚರಣಾಂಗುಷ್ಠಾದಿ ವರಾಂಗಪರ್ಯಂತ ಕಲಾಭಿಜ್ಞ ಪಂಚಭದ್ರ ವಿದಗ್ಧ ವಿಟನಾಯಕರಂ ನೋಡಿ (ಹಮ್ಮೀ. ೨-೯೨ ವ). ೩. ಸುಂದರವಾದ ದೇಹ; ಸುರೂಪ. ೪. ಸುಂದರವಾದ ಆಕಾರವುಳ್ಳವನು; ರೂಪವಂತ. ೫. ವಿಷ್ಣು. ೬. ಆನೆ. ೭. ಲವಂಗಪಟ್ಟೆ ; ದಾಲ್ಚಿನ್ನಿ. [ಸಂ.]

**ವರಾಂಗಕ** (ನಾ). ೧. ಶ್ರೇಷ್ಠವಾದ ಅವಯವಗಳುಳ್ಳವನು. ೨. ಲವಂಗಪಟ್ಟೆ ; ದಾಲ್ಚಿನ್ನಿ. ೩. ಲವಂಗ : "ತ್ವಕ್, ಪತ್ರಂ, ಉತ್ಕಟಂ, ಭೃಂಗಂ, ತ್ವಚಂ, ಚೋಚಂ, ವರಾಂಗಕಂ – ೭ ಲವಂಗ" (ಸಿದ್ಧಾಂತಿ. ೧೪೫). [ಸಂ.]

**ವರಾಂಗಿ** (ನಾ). ೧. ಚೆಲುವೆ ; ಸುಂದರಿ : ಜಡೆ ಮರವಾವೆಂದು ಪುಲ್ಲಿಡಿಯಲೊಡರ್ಚೆ ವರಾಂಗಿ ಬೆದರ್ದೀಕ್ಷಿಸೆ ಕಣ್ಬುಡಿವೆಳಗುಗಂಡು ಮಿಂಚೆಂದೊಡನದು ಗಜಿಗೆದರ್ದು ನರ್ತಿಸಿತಾಗಳ್ (ರಾಜಶೇ. ೧೦-೪೦). ೨. ಅರಿಸಿನ. [ಸಂ. ವರಾಂಗೀ]

**ವರಾಂಡ** (ನಾ). = ವರಂಡ ೧ : ಆ ಒಳಅಂಗಳದ ನಾಲ್ಕು ಕಡೆಗಳಲ್ಲಿಯೂ ವರಾಂಡಗಳಿವೆ (ಭಾರದ. ೪೯೩); ಮನೆಯ ವರಾಂಡದಲ್ಲಿ ಸರೋಜ ಕಂಡುಬರಲಿಲ್ಲ (ಮಹಾಗ. ೧೨). [<— ಇಂ. verandah. / ಸಂ. ವರಂಡ]

**ವರಾಕ** (ಗು). ೧. ಕರುಣಾಜನಕವಾದ ; ದೀನವಾದ : ಉದ್ಯತ್ಕಂತುಚೇತಂ ತೊಟಲಲವಿರತಂ ಚಕ್ರವಾಕಂ ವರಾಕಂ (ಚಂದ್ರಪ್ರ. ೮-೧೦). ೨. ಹೀನನಾದ ; ಅಧಮನಾದ : ಬ್ರಹ್ಮಚರ್ಯನಿಷ್ಠಾಗರಿಮಂ ಕರಗುವಿನಮೆಳಸೆ ಕಣ್ಗಳ್ ವರಾಕಭಿಕ್ಷಾಕನಾಕೆಗಂದಿಂತೆಂದಂ (ಪಂಪರಾಮಾ. ೮-೬೧). (ನಾ). ೩. ಕರುಣಾಜನಕ ಸ್ಥಿತಿಯಲ್ಲಿರುವವನು ; ದೀನನಾದವನು. ೪. ಹೀನನಾದವನು ; ಅಧಮವ್ಯಕ್ತಿ ; ನೀಚ: ಅಪರ್ಣಾಪರಮೇಶರೆಂಬ ನಿಗಮೋಕ್ತಿಯನಾಕರ್ಣಿಸಿ ತನ್ನುತಿಗೆಯ್ಕದ ದುರ್ಣರಕೃತಿಕರನೆ ಲಬ್ಧವರ್ಣವರಾಕಂ (ರಾಜಶೇ. ೧-೨೦); ನಸಿದಾಯುಷಂ ಜಸಂ ಬಲಸಂಪದಗಳೆಲ್ಲ ಕುಸಿದು ಪೋಗದೆ ಮಾಣದನುಪದ ವಿಪದ್ಭಾವ ಪೊಸಗದಿಹುದೆ ವರಾಕ ತಿಳಿಯದೆ ದುರಾಧ್ಮತೆಯನಾಳೆ ಕೇಳ್ ಲೇಸೊದಗುಗುಮೆ (ವೆಂಕಾರಾ. ೫-೯-೨೩). ೫. ಶಿವ ; ಪರಮೇಶ್ವರ. ೬. ಯುದ್ಧ ; ಕದನ. ೭. ಅಶುದ್ಧವಾದುದು ; ದೋಷಯುಕ್ತವಾದುದು. [ಸಂ.]

**ವರಾಕಿ** (ನಾ). ೧. ದೀನಳಾದವಳು. ೨. ನೀಚಳಾದವಳು ; ಅಧಮೆ ; ಹೀನೆ : ಲಿಂಗದ ಪಾವನಾಂಗಮಂ ತೊಲಗದೆ ಬಾಯುಗುಳ್ ಸಿಡಿಯೆ ತೂಂತಿಜಿದಪ್ಪೆ ಮಾಕಿ (ವೃಷವಿ. ೯-೫೭); ಮಹಾನರಕ ನಿನಗಲ್ಲದೇಂ ಸುಖಮಹುದೆ ದುರ್ಮೇಧೆ ಕೇಕಯಾನ್ವಯ ವರಾಕಿ (ವೆಂಕಾರಾ. ೨-೬-೫೧). [ಸಂ. ವರಾಕೀ]

**ವರಾಟ** (ನಾ). ೧. ಕವಡೆ ; ಕಪರ್ದ : "ಕಪರ್ದಃ, ವರಾಟಃ – ಈ ೨ ಕವಡಿಕೆ" (ಹಲಾಯು. ೧೧೯-೪೨). ೨. ಹಗ್ಗ ; ರಜ್ಜು. ೩. ಒಂದು ದೇಶದ ಹೆಸರು : ವರಾಟನರೇಶ್ವರಾಟವೀಪಟು ವೀತಿಹೋತ್ರ ಪರಾಕು (ಯಾದಚಂ. ೩-೧ ವ). 'ವರಾಳ' ಪರಾ. [ಸಂ.]

**ವರಾಟಕ** (ನಾ). ೧. = ವರಾಟ ೧ : "ಕಪರ್ದಂ ವರಾಟಕಮೆನಲ್ಕವಡೆಯಕ್ಕುಂ" (ಮಂಗರಾ. ೧೨೨-೯); ೨೦ ವರಾಟಕ – ೧ ಕಾಕಿನಿ, ೪ ಕಾಕಿನಿ – ೧ ಪಣ (ಗಣಚ. ೨೮೨ ಅಡಿಟ). ೨. = ವರಾಟ ೨. ೩. ತಾವರೆಯ ಬೀಜಕೋಶ. [ಸಂ.]

**ವರಾಡ** 'ವರಡ' ನೋ.

**ವರಾಡಿಸು** (ಕ್ರಿ). ಚಂದಾಕೂಡಿಸು ; ವಂತಿಗೆಯನ್ನು ಸೇರಿಸು (?): ಕೋಟೆ ಬಿರಾಡ ಸ್ಥಳದ ಸೇನಬೋವನ ಸಂಬಳದ ಬಗೆ ಸಹ ವರಾಡಿಸಿ ಬಾಹ ಸಿಸ್ತಿನಿಂದ (ಎಕ. VIII, ತೀರ್ಥಹ. ೭೯-೬೦; 1702); ಮಹಾಜನಂಗಳು ವರಾಡಿಸಿ ಕೊಡುತ್ತಿದ್ದ ಬಗೆಲು ಗ ೪೨ (ಮೈಆ. ೧೯೪೩, ೪೪-೪೭; 1711). [ವರಾಡ (< ವರಡ) + – ಇಸು₁]

**ವರಾತ₁, ಬರಾತ₂, ವರಾತು** (ನಾ). ಮೇಲಿಂದ ಮೇಲೆ ಮಾಡುವ ಒತ್ತಾಯ ; ಪದೇಪದೇ ಕೇಳಿ ಪೀಡಿಸುವಿಕೆ ; ತಗಾದೆ : ಆ ದಳವಾಯಿ ಬೋಣಿ ಮುತ್ತಣ್ಣನು ಹಣಕ್ಕೆ ವರಾತ ಮಾಡಿದಲ್ಲಿ (ರಾಜೇಂದ್ರ. ೧೧); ಅಮಿಲಾನು ವರಾತ ಮಾಡಿದಾಗ ಹಣವನ್ನು ಕಟ್ಟಬೇಕು (ಕಭವಿ. ೩೦೨). **ಬರಾತ₂** : ಅವನಿಗೆ ಮದುವೆ ಮಾಡಬೇಕಾಗಿದೆ. ಬೇಕಾದಷ್ಟು ಕಡೆಯಿಂದ ಹೆಣ್ಣಿನವರು ಬರಾತ ಮಾಡುತ್ತಿರುವರು (ದಾನಚಿಂ. ೪೨); ಸಾಹುಕಾರರು ತಮಗೆಲ್ಲಿ ಅರಮನೆಯಿಂದ ಬರಾತ ಬರುವುದೋ . . . ಎಂದು ಆದಷ್ಟು ಬಡತನವನ್ನು ವ್ಯಾಪಾರದಲ್ಲಿ ನಷ್ಟವನ್ನು ಮೇಲೆ ಹಾಕಿಕೊಳ್ಳತೊಡಗಿದರು (ಚಡೇವ. ೩೩೧). **ವರಾತು** : ಕೆಲವು ದಿವಸದ ಮೇಲೆ ಆ ಮುನಿಯು ಹಿಂತಿರುಗಿ ಬಂದು ದ್ರವ್ಯವನ್ನು ಕೊಡು, ಕೊಡು

ಎಂದು ವರಾತುಮಾಡಿದನು (ನೀಚಟು. V, ೧೫); ದುಡ್ಡುಬೇಕು ಅಂತ ಅವನು ವರಾತು ಮಾಡುತ್ತಿದ್ದ (ಅನಾಥ. ೧೫೨). [<— ಅರ. ಬರಾತ್; ಮರಾ. ವರಾತ್ = ತಗಾದೆಪತ್ರ]

ವರಾತ್ತ$_2$ (ನಾ). (ವಿವಾಹಕ್ಕೆ ಹೊರಟ ಮದುಮಗನ) ಮೆರವಣಿಗೆ; ದಿಬ್ಬಣ : ವರಾತ ಹೊರಟಿತು. ಮುಂದೆ ಬಣ್ಣಬಣ್ಣದ ಸಮವೇಷದಲ್ಲಿದ್ದ ಬ್ಯಾಂಡಿನವರು (ಅನ್ನ. ೨೪೫); ಎಲ್ಲಿ ಹೊಂಟಿತು ವರಾತಾ? ಸಿನೇಮಾದ ತಯಾರೀ ಕಾಣಸ್ತದ (ದೀಪಹ. I, ೧೭೩). [<— ಮರಾ. ವರಾತ ; ಹಿಂ. ಬರಾತ್, ಬಾರಾತ್./ ಸಂ. ವರಯಾತ್ರಾ]

ವರಾತಹಿಡಿ (ಕ್ರಿ). ಹಟಹಿಡಿ ; ಮೊಂಡುಹಿಡಿ : ಆಕೆ "ಡಾಕ್ಟರರನ್ನು ಕರೆಯಿಸುವುದಿದ್ದರೆ ಮೋಡಗಾಂವಕರ ಬೇಡವೇ ಬೇಡ" ಎಂದು ವರಾತಹಿಡಿಯತೊಡಗಿದಳು (ಜಾರುದಾ. ೬೨). [ವರಾತ$_1$ + ಹಿಡಿ$_1$ (< ಪಿಡಿ$_1$)]

ವರಾತು 'ವರಾತ$_1$' ನೋ.

ವರಾಯಿ (ನಾ). ಒಂದು ಬಗೆಯ ತೃಣಧಾನ್ಯ : ವರಾಯಿ ಅಕ್ಕಿ . . . ಫರಾಳದ ಅಕ್ಕಿ ನೋಡಿರಿ (ಮುಂಬ್ಯಾ. ೧೭೫).

[<— ಮರಾ. ವರಈ, ವರಾಈ, ವರೀ./ ಪ್ರಾ. ವರಇಅ./ ಸಂ. ವ್ರೀಹಿ]

ವರಾರೋಹ (ಗು). ೧. ಉತ್ತಮವಾದ ನಿತಂಬವುಳ್ಳ. (ನಾ). ೨. ವಾಹನಗಳನ್ನು ಏರುವುದು ; ಸವಾರಿ. ೩. ಆನೆ ಅಥವಾ ಕುದುರೆಯನ್ನೇರುವವನು ; ಸವಾರ. ೪. ಶ್ರೇಷ್ಠನಾದ ಸವಾರ. [ಸಂ.]

ವರಾರೋಹೆ (ನಾ). ೧. ಲಾವಣ್ಯವತಿಯಾದ ಉತ್ತಮ ಸ್ತ್ರೀ : "ವರಾರೋಹಾ ಮುಖ್ಯವಪ್ಪ ಸ್ತ್ರೀ" (ಹಲಾಯು. ೮೦-೩೩೫); ಭಾರ್ಯೆಯಹಳೆನಗೀ ವರಾರೋಹೆ (ಶ್ರೀರಾಮಾ. ೧೮೧-೧೪೪). ೨. ನಿತಂಬ. [ಸಂ. ವರಾರೋಹಾ]

ವರಾರ್ಥಿ (ಗು). ೧. ಅನುಗ್ರಹವನ್ನು ಬಯಸುವ. (ನಾ). ೨. ಮದುವೆಗಾಗಿ ವರನನ್ನು ಹುಡುಕುವವನು : ವರಾರ್ಥಿಗಳು ಡಾ. ರಾಯರನ್ನು ಕಾಣುತ್ತಿದ್ದರು (ವಂಶವೃ. ೧೫೨). [ಸಂ. ವರಾರ್ಥಿನ್]

ವರಾಹ (ನಾ). ೧. ಹಂದಿ ; ಸೂಕರ : ಈ ತೆಱದಿಂ ಪುಲಿಯಾದನತೀತಭವಾಂತರದೊಳೀ ವರಾಹನುಂ (ಆದಿಪು. ೫-೧೬); ವರಾಹನೆತ್ತಿದ ದೋಱುಗಳ . . . ಕಡವೆ ತುಳಿದ ಹಜ್ಜೆಗಳ ಚಿಹ್ನದ ಬೇಡನಾಯಕರು ನೆರೆದರು (ಹಟಕಾ. ೫-೫). ೨. ವಿಷ್ಣುವಿನ ಹತ್ತು ಅವತಾರಗಳಲ್ಲಿ ಮೂರನೆಯದು ; IP ಹಿರಣ್ಯಾಕ್ಷನೆಂಬ ರಾಕ್ಷಸನನ್ನು ಕೊಲ್ಲಲು ಎತ್ತಿದ ಅವತಾರ : ಆದಿವರಾಹರೂಪದೊಳ್ ನೀನಂದೆತ್ತಿದ್ದೆ ಗೋಮಿನೀಧವ ದಂಷ್ಟ್ರಾಗ್ರದ ನೀಲಜಾಲಮಣಿಯೆಂಬಂತಾಗೆ ಭೂಗೋಳಮಂ (ಜಗಎ. ೧-೫೭); ಹರಿ ವರಾಹದ ರೂಪ ತಾಳಿಯೆ . . . ಧರೆಯ ಸಂಸ್ಥಾಪಿಸಿದುದು ಮೂರನೆಯ ಅವತಾರ (ಗಗತಾ. ೧೯-೨೪). ೩. ವರಾಹದ ಅವತಾರವನ್ನು ಎತ್ತಿದ ವಿಷ್ಣು : ಅರಿ ಹಿರಣ್ಯಾಕ್ಷನ ಬಲಕೆ ಕೋಡೆಱಗಿ ನಿಂದ ವರಾಹನಂತಿರೆ ಪರಬಲಾಂತಕ ಭೀಮ ನಿಂದನು ತಱುಬಿ ಪರಬಲವ (ಕುವ್ಯಾಕ. ೧೫-೮); ವರಾಹನು ಕೆರಳುತತಿವೇಗದಲಿ ಜಲದಿಂದೆಬ್ಬಿ ಧಾರಿಣಿಯ . . . ಸತ್ವದೊಳಿರಿಸಿಯಂಕಕೆ ನಿಂದನಸುರಾಂತಕನು (ಪ್ರಹ್ಲಾಚ. ೩-೩೩). ೪. ವರಹವೆಂಬ ಚಿನ್ನದ ನಾಣ್ಯ : ಅದರ ಮೇಲೆ ವರಾಹದೇವರ ಆಕೃತಿ ಇದ್ದ ಕಾರಣ ಅದಕ್ಕೆ ವರಾಹವೆಂಬ ಹೆಸರು ಬಿತ್ತು (ಕಭಾಗ. ೨೮೦). ೫. ಒಂದು ಪರ್ವತದ ಹೆಸರು. ೬. ಹದಿನೆಂಟು ಮಹಾಪುರಾಣಗಳಲ್ಲಿ ಒಂದು : ಶಿವ ಸ್ಕಂದ . . . ವರಾಹ . . . ಬ್ರಹ್ಮಾಂಡವೆಂಬ ಪತ್ತೇ ಶಿವಪುರಾಣಂಗಳು (ವಿವೇಕ. ೯). ೭. ಹಂದಿಯಾಕಾರದಲ್ಲಿ ರಚಿಸಿದ ಸೇನಾವ್ಯೂಹ. ೮. ಒಂದು ನಿರ್ದಿಷ್ಟವಾದ ಅಳತೆ. ೯. ಟಗರು. ೧೦. ಎತ್ತು; ಹೋರಿ. ೧೧. ಮೊಸಳೆ. ೧೨. ಮೋಡ ; ಮೇಘ. ೧೩. ಒಂದು ಬಗೆಯ ಔಷಧಿಸಸ್ಯ : "ವರಾಹಃ — ಬೋನಗಾರೆ, ವರಾಹ" (ಓಷಧಿ. ೧೪೫). ೧೪. [ನಾಟ್ಯ] ಸಂಯುತಹಸ್ತಗಳಲ್ಲಿ ಒಂದು : ೧. ಅಂಜಲಿ. ೨. ಕಪೋತ . . . ೧೯. ವರಾಹ (ಅಭಾನ್ಯ. ೪೮). [ಸಂ.]

ವರಾಹಕೆಱೆ (ನಾ). ಒಂದು ಕೆರೆಯ ಹೆಸರು : ಮೂಡಣ ದೆಸೆಯ ವ[ರಾಹ]ಕೆಱೆಯಂ ಮೂಡಣ ಪಳ್ಳ ಅದಱ ತೆಙ್ಕಣ ದೆಸೆ [ಮಣ್ಣಗೆಱೆ] ಗೊಟ್ಟಂ (ಸೌಇಇ. XI-i, ೯ ೨೭; 862). [ವರಾಹ + ಕೆಱೆ]

ವರಾಹಕೇಶ (ನಾ). = ವರಹಾಕಟ್ಟು : ನವರಾತ್ರಿಗೊಮ್ಮೆ ದೇವತೆಗಳ ಪರಿವಾರವೆಲ್ಲ . . . ವರಾಹಕೇಶದ ತಿಕ್ಕಾಟದಿಂದ ಶುದ್ಧರಾಗಿ ಪೂಜೆ ಪಡೆದು ಮತ್ತೆ ಸ್ವಸ್ಥಾನಕ್ಕೆ ತೆರಳುತ್ತಿದ್ದರು (ಗಂಮಾಯಿ. ೧೭೮). [ಸಂ.]

ವರಾಹಗಿರಿ (ನಾ). ಐವತ್ತುನಾಲ್ಕು ಕುಲಪರ್ವತಗಳಲ್ಲಿ ಒಂದು : ಶಂಖಕೂಟ . . . ವರಾಹಗಿರಿ ಮಯೂರನಗ ಚಾರುಧಿ ಶೈಲೇಂದ್ರವೆಂಬ ಹದಿನೇಳು ಕುಲಗೋತ್ರಂಗಳೀ ಪೂರ್ವೋಕ್ತ ಸುಪಾರ್ಶ್ವಮೆಂಬ ಕೀಲಕಪರ್ವತಕ್ಕೆ ಬಡಗಣದಿಕ್ಕಿನಲ್ಲಿಹವು (ವಿವೇಕ. ೧೭೩). [ಸಂ.]

ವರಾಹಚರ್ವಿತ (ನಾ). [ಕಾಮಶಾ] ಹದಿನಾರು ಬಗೆಯ ದಂತಕ್ಷತಗಳಲ್ಲಿ ಒಂದು : ದಂತಹತಿ . . . ವರಾಹಚರ್ವಿತ ಪವಳಮಣಿ ಕಳಾದಂತವುರುಬಿಂದುಮಾಲ್ಯಂ ಸಪ್ತಬಿಂದು ತಂದಿಂತು ಪೆಸರ್ವೆತ್ತ ಪದಿನಾಱುಮಂ ಬಿತ್ತರಿಪುದುಚಿತಸಂಸ್ಥಾನಮಱಿದು (ಮನ್ಮಿವಿ. ೧೩-೧೦); ತರದೆ ಬೆನ್ನೊಳು ಪಯೋಧರದೊಳೆ ರದಕ್ಷತಂ ನೆರೆದಿರೆ ವರಾಹಚರ್ವಿತಮಂತದು (ಜನವ. ೭-೩೩). [ಸಂ.]

ವರಾಹಚರ್ವಿತಕ (ನಾ). ೧. ವಾರಾಹಿಗಡ್ಡೆಯನ್ನು ತಿನ್ನುವುದು. ೨. = ವರಾಹಚರ್ವಿತ. ೧, ೨: ಪರಿಕಿಸೆ ವೃಕ್ಷಾರೋಹಣ ವರಾಹಚರ್ವಿತಕ ವೇಣುದಾರಿತಕಂಗಳ್ ಕರಮೆಸೆಯೆ ಕಾಮಶಾಸ್ತ್ರದ ದೊರೆಯಾದುದು ಶಬರಶಿಶುಗಳುಜ್ಜುಗಮದಱೊಳ್ (ಚಂದ್ರಪ್ರ. ೫-೫೫). [ಸಂ.]

ವರಾಹಪುರಾಣ (ನಾ). ಹದಿನೆಂಟು ಮಹಾಪುರಾಣಗಳಲ್ಲಿ ಒಂದು : ಬ್ರಹ್ಮಪುರಾಣ ಪದ್ಮಪುರಾಣ . . . ವ[ಪಾಠಾಂ. ವಾ]ರಾಹಪುರಾಣ . . . ಬ್ರಹ್ಮಾಂಡಪುರಾಣವೆಂಬವೇ . . . ಹದಿನೆಂಟು ಮೂಲಪುರಾಣಂಗಳ್ (ವಿವೇಕ. ೮). [ಸಂ.]

ವರಾಹಮತ (ನಾ). ಗದಾಯುದ್ಧದಲ್ಲಿ ಒಂದು ವರಸೆ : ಬವರಿ ಮತ್ಸ್ಯೋದ್ಧತಿ ವಿಲಂಘನ ವಿವಳಿತಾಂಗ ವರಾಹಮತ ಸಂಪ್ಲವನ ಪಾರಿಪ್ಲವ . . . ಲಘುವಿನ್ಯಸ್ತವೆಂಬೀ ವಿವರದಲಿ ಕಾದಿದರು (ಕುವ್ಯಾಗ. ೬-೨೫). [ಸಂ.]

ವರಾಹಮುದ್ರೆ (ನಾ). ಹಂದಿಯ ಚಿಹ್ನೆಯುಳ್ಳ ಲಾಂಛನ : ತಾರಕವೈರಿಯೊಳ್ ಪಡೆದ ಮಾಯೂರಧ್ವಜಂ ಪದ್ಮಲೋಚನನಿಂ ಪೆತ್ತ ವರಾಹಮುದ್ರೆ ಭಗವತ್ಕಾತ್ಯಾಯನೀ ದೇವಿ ಇತ್ತ ನುತಭತ್ರಮಿಪ್ಪೊಪ್ಪೆ (ಕಇಅ. ೨-೨-೨೫; 1058). [ಸಂ. ವರಾಹಮುದ್ರಾ]

ವರಾಳ (ನಾ). ೧. ಕವಡೆ : "ವರಾಳಂ ವರಾಟದೊಳಗಾದುದದು ಕವಡೆ" (ಸಂಜೀವ. ೨೯); ಗುಳಿಗೆ ವರಾಳಂ ರಗಳೆ ಪುಳಂ ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟ್ಟಿಯುಂ ಕುಳಂಗಳಾದುವು (ಶಮದ. ೨೨ ವೃತ್ತಿ). ೨. ಹಗ್ಗ ; ರಜ್ಜು. ೩. ಒಂದು ದೇಶದ ಹೆಸರು ; ವರಾಟ : ಸವಲಕ್ಕ ವಿಂಜದ ವರಾಳದ . . . ನೃಪರಂ ಪಳಂಚಲೆದು ವೀರಶಿಖಾಮಣಿ ನಾಗವಮ್ಮನಂದದೆ ನೆಲನಂ ನಿಮಿರ್ಚಿದವರಾಗ್ರಳ ಚಕ್ರಿಯ ದಂಡನಾಯಕರ್ (ನಾಂದೇಡ್. ೩-೧೫ ಪದ್ಯ; 1047); ಅಂಗ ವರಾಳ ಸಿಂಗಳಿಕ . . . ಯಾದವಮಹೀಭುಜಮೌಳಿಮಣಿಬ್ರಜಪ್ರಭಾಲಿಂಗಿತಪಾದಪೀಠಂ (ಸೌಇಇ. XX, ೪೬-೫; 1072). ೪. ವರಾಟದೇಶದ ರಾಜ : ವರಾಳನಂ ತುಳಿವ ಗಂಧಗಜಂ . . . ವೀರವಿಷ್ಣುಭೂಪಾಳಕಂ (ಎಕ. VII, ಶಿವಮೊ. ೫-೭; 1218). ೫. [ಸಂಗೀತ] ಒಂದು ರಾಗದ ಹೆಸರು. 'ವರಾಳಿ' ಪರ್ಯಾ. [< ಸಂ. ವರಾಟ]

ವರಾಳಿ (ನಾ). [ಸಂಗೀತ] ಒಂದು ರಾಗದ ಹೆಸರು : ಗೌಳ ವರಾಳಿ ವಸಂತಭೈರವಿ[ಯರಿ]ದೊಳವನವನೊಲ್ದು ಪಾಡಿದ (ತ್ರಿಭುತಿ. ೬-೩೦); ಶ್ರೀರಾಗ ಭೈರವಿ ವರಾಳಿ . . . ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹಮ್ಮೀರ. ೨-೯೦); ವರಾಳಿ : — ೩೯ನೇ ಮೇಳಕರ್ತ ಝಾಲವರಾಳಿಯಲ್ಲಿ ಜನ್ಯ. ವಕ್ರರಾಗಾಂಗರಾಗ, ಕರುಣಾರಸಪ್ರಧಾನರಾಗ (ಸಂಗೀಚಂ. ೧೫೮). [ಸಂ. ವರಾಲೀ]

ವರಾಳಿಗುಟ್ಟು (ಕ್ರಿ). (?): ಆಲಸವು ನಿದ್ರೆಗಳು ಕವಿದುವು ಮೇಲುಗಾಳಗವೆಂದು ಖಳರು ವರಾಳಿಗುಟ್ಟಿತು ಹುಟ್ಟಿದುವು ಕುಱಿ ಕೋಣ ಕಾಟಗಳು . . . ಬೀಸಿದನು ಖಳನಿಂದ್ರಜಾಲವನು (ಕೌಶಿರಾ. ೨೨-೩೨). [?]

ವರಿ$_1$ (ನಾ). ೧. ಸುಂಕ ; ತೆರಿಗೆ ; ಕರ : ಗದೆಯ ಮೇಲೆ ರೊಕ್ಕ ಭತವನೂ ವರಿಯನಿಕಿ [ಅತ್ತಿ]ಕೆಱೆಯನೂ (ಸೌಇವಿ. ೧೯೩೪, ಪುಂಗನೂ. ೧೫೭-೧೪; 1419);

ಅಡದೆಜೆ ಮೂದಾಜಿಕೆ ಪೋಜನ ವರಿ . . . ನಾಯಿಂದನ ವರಿ (ಎಕ. XIV, ಗುಂಡ್ಲುಪೇ. ೧೨೯-೯೯; 1521). ೨. ಚಂದಾ ; ವಂತಿಗೆ : ಜನರಿಂದ ಕಂದಾಯ, ಕಾಣಿಕೆ ಮೊದಲಾದ ವರಿಗಳನ್ನು ತೆಗೆದುಕೊಳ್ಳುತಾ . . . ಇದ್ದ ಮುಖಂಡರನ್ನು ಪಾಳಯಗಾರರು ಎಂಬ ಹೆಸರಿನಿಂದ ಕರೆಯುತಿದ್ದರು (ಪಾಳೆಗಾ. ೨); ಆತ . . . ಗ್ರಾಮದ ಸಕಲಜನರಿಂದಲೂ 'ವರಿ' ಎತ್ತುತ್ತಾನೆ. 'ವರಿ' ಎಂದರೆ ಹಬ್ಬದ ಖರ್ಚಗಾಗಿ ಹಳ್ಳಿಯ ಪ್ರತಿಯೊಬ್ಬ ನಿವಾಸಿಯೂ ಯಜಮಾನನ ಕೈಗೆ ಕೊಡಬೇಕಾದ ಹಣ (ಸರ್ವಮಂ. ೧೯೦). [ದೇ. ॥ ತಮಿ. ಮಲ. ತೆಲು. ವರಿ./ ಸಂ. ಬಲಿ]

-ವರಿ$_2$ (ಪ್ರ). ಒಂದು ನಾಮವಾಚಕಪ್ರತ್ಯಯ : 'ಇಳಿವರಿ', 'ಮೇಲುವರಿ$_2$', 'ಹೆಚ್ಚುವರಿ' ಪರಾ.

ವರಿಜ (ನಾ). (?): ಪರತತ್ವವುಂ ಬಸವಣ್ಣನೂ ಯೋಹದದೊಳಂ ವರಿಜವಿಲ್ಲೆಂದೆನುತ ಸಕಲ ಮಾಹೇಶ್ವರರು ಪೇಳ್ವರೈ (ವೀಶೈಪು. ೮-೧೭-೧೮). [?]

ವರಿಯಿಸು 'ವರಿಸು$_2$' ನೋ.

ವರಿವರಲ್ ? (ನಾ). (?): ಬಿಸಿಲಂ ಬೆನ್ನೊಳಿಕ್ಕಿ ನೀರ್ನೆಟಲನಜಿಸಿ ಗುಗ್ಗುರಿಗಲ್ಲ ವರಿವರಲ ತಟಿಮೊರಬಿನ ನುಚ್ಚುವಣಲ ನೀರಜಿದು ಪರಿದು ದಿಂಟೆಯ ದರಿಯ ಕುಳಿಯ ಕುತ್ತುಜ ಕುಟಿವಳ್ಳಮಂ ಕಂಡು (ಲೀಲಾವ. ೬-೪೨ ವ). [?]

ವರಿವಸಿತ (ಗು). ಪೂಜಿಸಿದ ; ಸೇವಿಸಿದ. [ಸಂ.]

ವರಿವಸ್ಯಿತ (ಗು). = ವರಿವಸಿತ. [ಸಂ.]

ವರಿವಸ್ಯೆ (ನಾ). ೧. ಸೇವೆ ; ಪರಿಚರ್ಯೆ : "ವರಿವಸ್ಯಾ, ಶುಶ್ರೂಷಾ, ಪರಿಚರ್ಯಾ, ಉಪಾಸನು — ೪ ಶುಶ್ರೂಷೆಗೆ ಹೆಸರುಗಳು" (ಸಿದ್ಧಾಂತಿ. ೨೨೫). ೨. ಗೌರವ ; ಮನ್ನಣೆ. [ಸಂ. ವರಿವಸ್ಯಾ]

-ವರಿವಿಗೆ '-ವರೆಗಂ' ನೋ.

ವರಿಶ 'ಬರಿಸ' ನೋ.

ವರಿಷ 'ಬರಿಸ' ನೋ.

ವರಿಷ್ಠ (ಗು). ೧. ಅತ್ಯುತ್ತಮವಾದ ; ಸರ್ವೋತ್ಕೃಷ್ಟವಾದ : ಅಮಳತತ್ವ ವರಿಷ್ಠಗೋಷ್ಠೀವಾಗ್ಭರಿಷ್ಠಯಶಃಪ್ರತಿಷ್ಠಿತನು (ಬಸಪು. ೨೧-೪). ೨. ಹಿರಿದಾದ ; ದೊಡ್ಡ : ಒಡೆದುದೊ ಕೂರ್ಮಪೃಷ್ಠವಹಿರಾಜವರಿಷ್ಠತನುಪ್ರತಿಷ್ಠೆಯಿಂದುಡಿದುದೊ ಶೇಷಕಂಠ ಕಠಿಣಾಸ್ಥಿ ಧರಾಭರದಿಂ(ಮಲ್ಲಿಪು. ೮-೧೩೧). ೩. ಅಗಲವಾದ ; ಹರವಾದ. ೪. ಭಾರವಾದ ; ತೂಕವುಳ್ಳ. ೫. ಮೇಲಿನ ; ಮೇಲುಮಟ್ಟದ : ಯಾವ ಮಾಸ್ತರರಾದರೂ ತಮ್ಮ ವರಿಷ್ಠ ಅಧಿಕಾರಿಯ ಅಪ್ಪಣೆಯನ್ನು ತೆಗೆದುಕೊಳ್ಳದೆ ಸಾಲಿಯನ್ನು ಬಿಟ್ಟು ಹೋಗಬಾರದು(ಪಾಠ್ಶಾವಿ. ೪೪೩). (ನಾ). ೬. ಶ್ರೇಷ್ಠನಾದವನು ; ಅಗ್ರಗಣ್ಯ : ವಸಿಷ್ಠಗೋತ್ರವರಿಷ್ಠನುಂ . . . ಎನಿಸಿದ . . . ಮಧುಪಪರಸಂ ನಿಜಜನಕನೆನಿಸಿದ (ಕಇಲಿ. ೫-೨-೧೫೫; 1058). ೭. ಹಿರಿದಾದುದು ; ದೊಡ್ಡದು : "ಬೃಹತ್ . . . ವಿಶಾಲಂ, ಪೃಥುಲಂ, ವಿಪುಳಂ, ಭದ್ರಂ, ವರಿಷ್ಠಂ — ಈ ೧೨ ಹಿರಿದು" (ಹಲಾಯು. ೧೧೬-೧೪). ೮. ಮೇಲಧಿಕಾರಿ ; ಮುಖ್ಯಸ್ಥ : ನವಕರರ ರಜೆ ರುಜುಕಟ್ಟಾಗಬೇಕಾದರೆ, 'ಉಹುಂ' ಎಂಬ ವರಿಷ್ಠನೆ ಬೇಕು (ಗಾಳಿಪ. ೫೮). ೯. ತಾಮ್ರ. ೧೦. ಮೆಣಸು. ೧೧. ಒಂದು ಬಗೆಯ ಪಕ್ಷಿ ; ತಿತ್ತಿರಿ. [ಸಂ.]

ವರಿಸ 'ಬರಿಸ' ನೋ.

ವರಿಸು$_1$, ಬರಸು$_1$, ಬರಿಯಿಸು, ಬರಿಸು (ಕ್ರಿ). ೧. ಬರುವಂತೆ ಮಾಡು ; ಬರಮಾಡು ; ಕರೆಯಿಸು : ಆ ಪೊಟ್ಟಿಂಗನ್ನನಲ್ಲಿಗೆ ವರಿಸವಂಗೆ ತಕ್ಕುದನಾನೆ ಬಲ್ಲೆಂ (ಪಂಪಭಾ. ೮-೭೨ ವ); ಬಿಕ್ಕಿಗನೆಟ್ಟತ್ತರ ಮಂನೆಯ ಬಿಕ್ಕಿಯುಂ ಬೀರಭಟ್ಟನುಮಂ ಬಾಳ್ಗುಳಿಗೆ ವರಿಸಿ (ಸೌಇಇ. IX - i, ೮೦-೨೪; 1018); ಅಗ್ನಿಭೂತಿಯುಂ ವಾಯುಭೂತಿಯುಮಂ ತನ್ನಲ್ಲಿಗೆ ವರಿಸಿ . . . ದಾನಸನ್ಮಾನಪುರಸ್ಸರಮವರ ಪೂರ್ವವೃತ್ತಿಯುಮಂ ಕಮ್ಮವಟ್ಟಿಯುಮನಿತ್ತು ಬೀಡಿಂಗೆಪೋಗಿಮೆಂಬುದುಂ (ಸುಕುಮಾ. ೨-೧೩ ವ). ಬರಸು$_1$ : ೧. ತೆಂಕಣಗಾಳಿ ಮಂಕುಮಳೆ ಬರಸೀತು (ಗಾದೆ). ಬರಿಯಿಸು : ೨. ಉಂಟುಮಾಡು; ಒದಗಿಸು : ಸಲೆ ವಾಯೂದ್ಭವವೇಳೆಯೊಳ್ ನೆಗಟ್ದ ಭೂಕಂಪಾದಿಯುಂ ಶಕ್ರಮಂಡಲವಾ ವಾಸವವೇಳೆಯೊಳ್ ಬರಿಯಿಸಿರ್ದುತ್ಪಾತಮುಂ ವಾಯುಮಂಡಲಮಾರಯ್ಯೆ ಪರಸ್ಪರಂ ಕಿಡಿಸುಗುಂ (ಲೋಕೋಪ. ೪-೮೭). ಬರಿಸು : ೧. ಬರಿಸುವೆನಿಂದು ನಂದನವನಾಂತರದಲ್ಲಿಗೆ ಕಾಂತನಂ ಸಮಂತಿರಿಸುವೆಂ (ಕವಿರಾ. ೨-೧೦೪); ನಮ್ಮ ಪುರಾತನಪುಣ್ಯಮಿಲ್ಲಿಗೆ ಬರಿಸಿದುದೀ ಮುನೀಶ್ವರರಂ (ಆದಿಪು. ೫-೬೬); ಸಕಲಸುಭಟರ ಬರಿಸಿದನು ತರಿಸಿದನು ಪಟ್ಟಕೆ ಬೇಹ ವಸ್ತುಗಳ (ಕುಮಾಭೀ. ೧-೨೯). ೨. ಇಲ್ಲದ ಗುಣಗಳ ಬ[ಪಾಠಾಂ.ತ]ರಿಸೋದು ರೊಕ್ಕ (ಪುರಂದ. ೨-೪೮-೩); ಚಿಂತಾಮಣಿ ಮೊದಲಾದ ಬಗೆಬಗೆ ತರ್ಕಶಾಸ್ತ್ರಗಳ ಅಗಣಿತವಾಗಿ ಬಣ್ಣಿಸಿ ನರಸೇಂದ್ರಗೆ ಮಿಗೆ ಹರುಷವ ಬರಿಸಿದಳು (ಕಂಪವಿ. ೮-೭೩). ೩. ಅಂಕುರಿಸುವಂತೆ ಮಾಡು ; ಹುಟ್ಟಿಸು : ಮೊಳಕೆ ಬರಿಸಿದ ಧಾನ್ಯಗಳಲ್ಲಿ 'ಸಿ' ಜೀವಾತು ಇದೆ (ಆಡುಸಾ. ೬೪).

ಬರಿಸಿಕೊಳ್, ಬರಿಸಿಕೊಳ್ಳು = ೧. ಬರಮಾಡಿಕೊಳ್ಳು ; ಕರೆಯಿಸು : ನರೇಂದ್ರಂ ಲಲಿತಾಂಗನಂ ಬರಿಸಿಕೊಂಡು (ಧರ್ಮಾಮೃ. ೨-೯೪); ಅಗ್ರಜನಾತ್ಮಜರನು ತನ್ನ ಪೊರೆಗೆ ಬರಿಸಿಕೊಂಡು . . . ಸಲಹಿದಳೊಲಿದು (ಕಂಪವಿ. ೪-೭೯). ೨. ಉಂಟುಮಾಡಿಕೊಳ್ಳು: ದಾರಿಯಲ್ಲಿನ ಲೈಟುಕಂಬಕ್ಕೆ ಡಿಕ್ಕಿಹೊಡೆದು ಹಣೆಯಲ್ಲಿ ಬೋರೆ ಬರಿಸಿಕೊಂಡ (ಶಾಲೆಮ. ೨೧೮). [ವರ್ + — ಇಸು$_3$]

ವರಿಸು$_2$, ವರಿಯಿಸು (ಕ್ರಿ). ೧. ಆಯ್ದುಕೊಳ್ಳು ; ಆರಿಸು ; ಆಯ್ಕೆಮಾಡು : ವರಿಸದ ಕಾಂತೆಯಂ ವರಿಸಿಕೊಂಡ ಮನಃಪ್ರಿಯನಂ ನಿಜಸ್ವಯಂವರಸದನಕ್ಕೆ ಸೀಳ್ದು ಪೊಸತೋರಣಮಂ ಸಮಕಟ್ಟಿ ಪೋಪೆವು (ನಳಚಂ. ೪೧೧). ೨. ಮದುವೆಯಾಗು ; ಕೈಹಿಡಿ : ವರಿಸಿದವನೋ ಕೆಲವುದಿನ ಪತಿಕರಿಸಿದವನೋ (ಬಸವು. ೪೦-೪೩); ಎಲವೊ ಮಟ್ಟೆಯ ಮದನ ದರ್ಪೆಯ ತಿಲದ ಮನ್ಮಥ . . . ನಳಿನಮುಖಿಯನು ವರಿಸು ಬಾ (ಕುಮಾಆ. ೧೫-೨೧); ವೈದೇಹಿಯನು ವರಿಸುವಡೆ ಈಶದತ್ತ ಮಹೋಗ್ರತರಬಾಣಾಸನವ ತೆಗೆದೇಜಿಸುವ ಬಲುಸಾಸಿಗರು ಬಹುದು (ತೊರರಾ. ೧-೧೩-೧೨). ೩. ಒಪ್ಪಿಕೊಳ್ಳು ; ಅಂಗೀಕರಿಸು : ಕೌರವನ ಸಿರಿ ಪಣ್ಯಾಂಗನಾವಿಭ್ರಮವ ವರಿಸಿತಲಾ (ಕುಮಾಗ. ೪-೬೦); ಕಾಮ್ಯಾಧ್ವರಕೆ ಮುನಿವರವಿಭಾಂಡುಕುಮಾರಕನ ನೀ ಕರೆಸಿಕೋ ತನ್ಮುನಿವರನ ನಾಚಾರ್ಯಭಾವದಲಿ ವರಿಸು (ತೊರರಾ. ೧-೫-೯); ಎಲೆ ಬೃಹಸ್ಪತಿ ಮತ್ಪಿತಾಮಹಂ ಕ್ರತುಗಳ್ಗೆ ಸಲೆ ನಿನ್ನ ತಾತನಂ ವರಿಸಿರ್ದನದಜಿಂದೆ ಕುಲಧರ್ಮಮಂ ಬಿಡದೆ ನೀನೆನಗೆ ಯಜ್ಞಮಂ ಮಾಡಿಸು (ಜೈಮಿಭಾ. ೫-೨೫). ೪. ಕವಿ ; ಆವರಿಸು : ಹರಗುಸಿರುವೆನೆ ತಮೋಗುಣವಾತನ ವರಿಸಿಹುದಜಗೆ ಪೇಳುವೆನೆ ಪರಿಹರಿಪೊಡೆ ಶಕ್ತನಲ್ಲವು (ಕಂಪವಿ. ೪-೧೮). ವರಿಯಿಸು : ೧. ಅರಮಗಳಾರಂ ವರಿಯಿಪಳವನೇ ವರನು (ಜಯಕಾ. ೩-೬೬). [ವರಣ + — ಇಸು$_3$]

ವರಿಸೆ, ಒರಸೆ, ವರಶೆ, ವರಸೆ (ನಾ). ೧. ಸಾಲು ; ಶ್ರೇಣಿ ; ಪಂಕ್ತಿ : ಗುರುಗಳು . . . ಎಲ್ಲರನ್ನೂ ವರಿಸೆಯಾಗಿ ನಿಲ್ಲಿಸಿ . . . ಲೆಕ್ಕಮಾಡಿ ನೋಡಿದರು (ನಗೆಗ. ೧೦). ೨. ಸರದಿ ; ಪಾಳಿ : ಹಗಲಿರುಳ ವರಿಸೆಯೆ ಕಣಾ ಬಾಗಿಲಂತೆ (ಗಿಳಿವಿಂ. ೧೧೮-೧೧); ಸಾರಿನ ವರಿಸೆಯಾದ ಮೇಲೆ ಹುರಿದ ಮಾಂಸವನ್ನು ಬಡಿಸಲಾಯಿತು (ಪುನರು. ೨೯೦). ೩. ಚಾಳಿ ; ವರ್ತನೆ ; ನಡವಳಿಕೆ : ತಾಯಿಯ ವರಿಸೆ ಈಗ ಮಗಳಿಗೂ ಬಂತು (ಮಹಾಗ. ೨೨೪). ಒರಸೆ : ೨. ಸನ್ನೆಯು ತಿರುಪುಗಳ ತುದಿಗಳಿಗೆ ಬಡಿಯುವುದರಿಂದಾಗುವ ಒರಸೆಯಾದ ಎರಡು 'ಟಿಕ್' ಸದ್ದುಗಳ ನಡುವಿನ ಅವಧಿಯು ಅತ್ಯಲ್ಪವಾದರೆ ಅದಕ್ಕೆ ಚುಕ್ಕೆಯೆಂತಲೂ . . . ಸಂಕೇತ (ವಿಜ್ಞಾವಿ. ೨೫). ವರಶೆ : ೨. 'ವರಶೆವಿನಿಯೋಗ' ಪರಾ. ವರಸೆ : ೧. ಆ ಕುಮಾರಕನು . . . ಬೆಳಗುತಲಿರುವ ಮೊನೆಗಳುಂಟಾದ ಹಲ್ಲುಗಳ ವರಸೆಯಿಂದೊಪ್ಪುತ (ಕೃವಾಲ. ೧೬೧); ಒಂದು ವರಸೆ ಇಟ್ಟಿಗೆಗಳ ಅಂತರಪ್ರದೇಶಕ್ಕೆ ಸರಿಯಾಗಿ ಮೇಲಣ (ಅಥವಾ ಕೆಳಗಣ) ವರಸೆಯ ಅಂತರಪ್ರದೇಶವು ಸೇರಕೂಡದು (ಗಣಿಚ. ೧೯೫). ೨. ಇವರು ವರಸೆಯಾಗಿ ಮೇವಾಡವನ್ನು ಆಳಿದರು (ಆರ್ಯಕೀ. ೨೩). ೩. ಎಲ್ಲರೂ ಒಂದೇ ರೀತಿ ಅಲ್ಲ. ಜಾತಿಗೊಂದು ವರಸೆ! (ಅನ್ನಾವ. ೬೯). ೪. ಧಾಟಿ; ಶೈಲಿ: ನನೀಲಾಲನ ದನಿಯಿದ್ದಂತೆ! ಪೂರ್ತಿ ಅದೇ ರೀತಿಯದೇ ಮಾತಿನ ವರಸೆ! (ಸಾಹೆಟ್. ೨೩೮). ೫. ಕತ್ತಿ, ದೊಣ್ಣೆ ಮುಂತಾದುವುಗಳ ಪ್ರಯೋಗದಲ್ಲಿ ತೋರುವ ಕ್ರಮಬದ್ಧವಾದ ಕೌಶಲ, —ಚಮತ್ಕಾರ: ರೀತಿ ತಿಳಿದು ವರಸೆಗಳ ನೂತನ ಕತ್ತಿ ಕಠಾರಿದೊಣ್ಣೆಯ ಸಾಧಕೋತ್ತಮರಾಜಕುವರರು . . .

ಬೀದಿಯೊಳರ್ತಿಯೊಳೆಡೆಯಾಡುತಿರ್ಪ (ಅವಿ. ೭-೧೮); ನೀನು ಇನ್ನೂ ಸರಿಯಾಗಿ ವರಸೆ ಕಲೀಬೇಕು (ಭೀಮಕಾ. ೬). ೬. ನಂಟು ; ಸಂಬಂಧ ; ವಾವೆ : ಶ್ರೀರಂಗಮ್ಮನು ದೂರದವಳಲ್ಲ. ಶ್ರೀದೇವಿಗೆ ದಾಯಾದಿ ವರಸೆಯಲ್ಲಿ ಅಕ್ಕನಾಗಬೇಕು (ಶ್ರೀರಾಯ. ೧೦೭); ಬೆಟ್ಟದ ಅರಸರು ದೊರೆಗಳಿಗೆ ವರಸೆಯಲ್ಲಿ ಚಿಕ್ಕಪ್ಪನಂತಿದ್ದರು (ಒಡೆಕ. ೩೪). ೭. ಹಂಚಿಕೆ ; ಯುಕ್ತಿ ; ಉಪಾಯ : ಪೆರ್ಬುಲಿಗಳನು ವರಸೆಯಿಂ ಗೂಡುಗಳೊಳಗೆ ತುಂಬಿಕೊಂಡು (ಕೃಷ್ಣವಿ. ೨-೬೭); ರಾಮಣ್ಣ ಪುನಃ "ನನಗೆ ಕೇಳಿಸಲೇ ಇಲ್ಲ" ಅಂತ ವರಸೆ ತೆಗೆದ (ಸುವಸಂ. ೫೯). ೮. ರೀತಿ ; ಗತಿ ; ಭಂಗಿ : ಮೆರವಣಿಗೆ ಸಮಯದಲ್ಲಿ ಗುಡ್ಡನ ಜೊತೆಯಲ್ಲಿ ವಿವಿಧ ವರಸೆಯಲ್ಲಿ ಹೆಜ್ಜೆ ಇಟ್ಟು ಕುಣಿಯುವುದು (ಚೋರಿದೇ. ೩೭). ೯. ಜೋಡಿ; ಜೊತೆ : ಸುಕುಮಾರಿ ನೀನಾರು ಗಾಡಿಯುತನವನೇನು ವರಸೆಯ ಮಾಡಿಕೊಂಡಿಹೆ ನೀನು ಮಾರ್ಗದಿ ಗೂಡಿದನು ನಮಗೀತನು (ಜನಭಾ. ೧೬-೫೦); ಮದುವೆಯ ಗಂಡು ಹೆಣ್ಣಿನ ವರಸೆ ಅನುರೂಪವಾಗಿದೆ (ರೂಢಿ). ೧೦. [ಸಂಗೀತ] ರಾಗ ; ಮಟ್ಟು : ಸಿನೀಮಾಗಳಲ್ಲಿ ಕನಿಷ್ಠಪಕ್ಷ ಅರ್ಧಕ್ಕರ್ಧ ಹಿಂದೂಸ್ತಾನೀ ವರಸೆಗಳೇ ಕೇಳಬರುತ್ತಿವೆ (ಗಾನಕ. ೫೫). [ದೇ. ‖ ತಮಿ. ವರಿಚೈ; ತೆಲು. ವರುಸ]

**ವರುಣ** (ನಾ). ೧. ದ್ವಾದಶಾದಿತ್ಯರಲ್ಲಿ ಒಬ್ಬ : ಧಾತಾ . . . ವರುಣ . . . ವಿಷ್ಣುಗಳೆಂಬವರೇ ಕ್ರಮದಿಂ ದ್ವಾದಶಾದಿತ್ಯರು (ವಿವೇಕ. ೨೬೭). ೨. ನೀರಿನ ಅಧಿದೇವತೆಯೂ ಪಶ್ಚಿಮದಿಕ್ಪಾಲಕನೂ ಆಗಿರುವ ಒಬ್ಬ ದೇವತೆ : "ವರುಣಂ ಪಶ್ಚಿಮದಿಕ್ಪತಿ . . . ಪ್ರಚೇತಸಂ ಪೆಸರಿಂದಂ" (ವಸ್ತುಕೋ. ೮-೪೩); "ಪಚ್ಚಿಮದ ದೆಸೆಗೊಡೆಯ ಮುನ್ನೀರೆಱೆಯ ನೀರೊಟ್ಟಿಲಾಣ್ಮಂ ನೆಗಟ್ದೀರನೆನೆ ವರುಣನು" (ಕಬ್ಬಿಗ. ೧೪). ೩. ಒಂದು ಬಗೆಯ ಮರ ; ಬಿಲ್ವಪತ್ರೆ : "ವರುಣ : – ವರುಣ, ನವಿಲಡಿಯ ಮರ" (ಓಷಧಿ. ೧೪೫). ೪. ಸಮುದ್ರ. ೫. ನೀರು. ೬. ಸೂರ್ಯ. ೭. ವಿಷ್ಣು. [ಸಂ.]

**ವರುಣಪಾಶ** (ನಾ). ೧. ವರುಣನ ಆಯುಧವಾದ ಹಗ್ಗ : "ವಾರುಣೀ = ಮದ್ಯವುಂ, ವರುಣಪಾಶವುಂ" (ಕಾಶಕ್ಕ. ೨೯೯); ವರುಣಪಾಶಕ್ಕಿಂತಲೂ ಬಿಗಿಯಾದ ನಿಮ್ಮ ಸ್ತೋತ್ರಪಾಶದಿಂದ ನಮ್ಮನ್ನು ನೀವು ಬಂಧಿಸಿರುವಾಗ ನಿಮ್ಮ ಆಶ್ರಮವೇ ನಮ್ಮ ಪಾಲಿಗೆ ಅಮರಾವತಿಯಾಗಿದೆ (ಚತಂಬಾ. ೪). ೨. ಒಂದು ಬಗೆಯ ಮೀನು. [ಸಂ.]

**ವರುಣಬಾಣ** (ನಾ). ಮಂತ್ರಿಸಿ ಬಿಟ್ಟಾಗ ಮಳೆಯನ್ನು ಸುರಿಸುವುದೆಂದು ನಂಬಲಾದ ಒಂದು ಬಗೆಯ ಬಾಣ : ಉರಿಯ ಬಾಣಕೆ ವರುಣಬಾಣವ . . . ತುಡುಕಿದನು (ಕೌಶಿರಾ. ೨೨-೩೧). [ಸಂ.]

**ವರುಣಾತ್ಮಜೆ** (ನಾ). ಸಮುದ್ರದಲ್ಲಿ ಹುಟ್ಟಿದುದು ; ಮದ್ಯ ಮುಂತಾದ ಮಾದಕಪೇಯ : "ಸುರಾ . . . ವರುಣಾತ್ಮಜಾ . . . ಮದ್ಯಂ — ೧೫ ಹೆಂಡದ ಪೆಸರು, ದೇವಯೋಗ್ಯವಾದ ಮದ್ಯಕ್ಕೂ ಹೆಸರುಗಳು" (ಸಿದ್ಧಾಂತಿ. ೩೧೮). [ಸಂ. ವರುಣಾತ್ಮಜಾ]

**ವರುಣಾನಿ** (ನಾ). ವರುಣನ ಹೆಂಡತಿ : ಸಹದೇವನುಂ . . . ವರುಣನ ಮಕರಮುಂ ವರುಣಾನಿಯ ಕೊರಲೊಳ[ಿ್ದ] ಮಿನುಗುಮುಱಿಯೆಯುಱಿದ ವಸ್ತುಗಳೆಲ್ಲಮಂ ತಂದು ಮುಂದಿಟ್ಟಂ (ಪಂಪಭಾ. ೬-೩೨ ವ); ಮುನ್ನಿನ ಕಾಯ್ದುಗೆಟ್ಟು . . . ಚಂಡಕಿರಣಂ ವರುಣಾನಿಯ ಕೈಯ ಕೆಂಬರಲ್ಲನ್ನಡಿಯಂತೆ ದಿಟ್ಟಿಗಳವಟ್ಟಿರೆ (ಪಂಪರಾಮಾ. ೮-೨). [ಸಂ.ವರುಣಾನೀ]

**ವರುಣಾಲಯ** (ನಾ). ವರುಣನ ವಾಸಸ್ಥಾನ ; ಕಡಲು ; ಸಮುದ್ರ : ಅರುಣೋದಯಪ್ರಭೆಯ, ಗಿರಿಶೃಂಗದುನ್ನತಿಯ ವರುಣಾಲಯಾಯತಿಯ ನಿರುಕಿಸಿದೊಡ ಹುದೇಂ? ಬೆರಗು, ಬರಿಬೆರಗು, ನುಡಿಗರಿದೆನಿಪ್ಪಾನಂಧ (ಮಂಕುಕ. ೪೯೫). [ಸಂ.]

**ವರುಣಾಶೆ** (ನಾ). ಪಡುವಣ ದಿಕ್ಕು ; ಪಶ್ಚಿಮ : ತನ್ನಹೀಧರಾವರುಣಾಶಾವಿಶೇಷಕ ಮಾಗಿರ್ದ ಲೋಹಿತಾಕ್ಷ . . . ಸರ್ವತೋಭದ್ರಂಗಳೆಂಬ ದ್ವಿಗುಣ ಚತುಃಕೂಟಂಗಳೊಳಂ (ಆದಿಪು. ೭-೩ ವ); ವರುಣಾಶಾವನಚೂತವಲ್ಲಿ ಗಗನಾಲಂಬಕ್ಕೆ ಪರ್ಬಿರ್ದು ಭಾಸ್ಕರಚೈತ್ರಂ ಬರೆ ಸಂಜೆಗೆಂಪೆನಿಪ ಭಾಸ್ವತ್ಪಲ್ಲವಂದಾಳ್ದು (ರಾಜಶೇ. ೧೩-೧೧೨). [ಸಂ. ವರುಣಾಶಾ]

**ವರುಣಾಸ್ತ್ರ** (ನಾ). = ವರುಣಬಾಣ : ಬಲಮೆಲ್ಲಮಂ ಸುಡುವ ಪಾವಕಜ್ವಾಲೆಯಂ ಕಲಿಲಕ್ಷ್ಮಣಂ ಕಂಡು ವರುಣಾಸ್ತ್ರದಿಂದದಂ ನಿಲಿಸಲ್ಕೆ (ಜೈಮಿಭಾ. ೨೦-೫೭). [ಸಂ.]

**ವರುತ್ರ** (ನಾ). ಹೊದೆಯುವ ವಸ್ತ್ರ ; ಉತ್ತರೀಯ. [ಸಂ.]

**ವರುಶ** 'ಬರಿಸ' ನೋ.

**ವರುಷ** 'ಬರಿಸ' ನೋ.

**ವರುಷಂಗರೆ** (ಕ್ರಿ). ಮಳೆಯನ್ನು ಸುರಿಸು ; ವರ್ಷಿಸು : ಎಲೆ ಕಾಂತ ನಿನ್ನ ಸವಿವಚನವರುಷಂಗರೆಯೆ ನಲವಿಂದೆನ್ನ ಹೃದ್ಧರಣಿಯತಿಪದಗೊಂಡು . . . ಸುಜ್ಞಾನಲತೆ ಪರ್ಬಿ ಪಲ್ಲವಿಸುತೆ (ನವಮೋ. ೬-೩). [ವರುಷ (< ಬರಿಸ) + ಕರೆ$_2$ (< ಕಱೆ$_1$)]

**ವರೂಥ** (ನಾ). ೧. ಘರ್ಷಣೆಯಿಂದ ರಥಕ್ಕೆ ಧಕ್ಕೆಯಾಗದಿರುವಂತೆ ಸುತ್ತಲೂ ಅಳವಡಿಸುವ ಮರದ ಆವರಣ ಅಥವಾ ಚರ್ಮದ ಹೊದಿಕೆ : "ವರೂಥಃ, ರಥಗೋಪನಂ — ಈ ೨ ರಥದ ಕಟ್ಟುವಂಜರ" (ಹಲಾಯು. ೭೪-೨೯೫). ೨. ಕವಚ ; ಚಿಲಕುತ್ತು. ೩. ಗುರಾಣಿ ; ಢಾಲು. ೪. ರಕ್ಷಣೆ ; ಕಾಪು. ೫. ಗುಂಪು ; ಸಮೂಹ. ೬. ಚರ್ಮ. ೭. ಮನೆ. ೮. ಸೈನ್ಯ ; ಪಡೆ. ೯. ತೇರು ; ರಥ : ಅಂತುಭಯವರೂಥಿನಿಯ ವಿರೂಥಂಗಳ್ ಮಲ್ಲಾಮಲ್ಲಿಯಾಗೆ ಕಾದುವಾಗಳ್ (ಪಂಪಭಾ. ೧೧-೯೦ ವ ); ನರರಿಂ ನರರಂ ಹರಿಯಿಂ ಹರಿಯಂ ವರೂಥಮಂ ತದ್ವರೂಥದಿಂದಿಟ್ಟು . . . ಮರುತ್ಸುತಂ ಮೋದಿ ತವಿಸಿದಂ ಮಾರ್ಬಲಮಂ (ಗದಾಯು. ೩-೮). [ಸಂ.]

**ವರೂಥಿನಿ** (ನಾ). ಪಡೆ ; ಸೈನ್ಯ : ಸರಿತ್ಸುತನ ಸುರಿವ ಸರಲ ಮೞೆಯೊಳೞಿದ ನಿಜವರೂಥಿನಿಯ ಸಾವುಂ ನೋವುಮೇವಮಂ ಮಾಡೆ (ಪಂಪಭಾ. ೧೧-೧೮ ವ); ಲಂಕೆಗೆತ್ತಿದಂ ಧರೆ ಕಿಱಿದೀ ವರೂಥಿನಿಗೆನಲ್ ವಿಲಯಾಂತಕನಂತೆ ಖೇಚರಂ (ಪಂರಾಮಾ. ೧೦-೧೧೩). [ಸಂ. ವರೂಥಿನೀ]

**ವರೂಥಿನೀಪತಿ** (ನಾ). ಸೈನ್ಯದ ಮುಖಂಡ ; ದಳಪತಿ : ಮುನ್ನಿನ ಮಾಟ್ಕೆಯೊಳೆ ವರೂಥಿನೀಪತಿಯಂ ಬೆಸಸಿದೊಡೆ (ಆದಿಪು. ೧೩-೭೮ ವ). [ಸಂ.]

**ವರೆ$_1$** 'ಬರೆ$_1$' ನೋ.

**-ವರೆ$_2$, -ವಾರೆ$_2$** (ಅ). ತನಕ ; ವರೆಗೆ : ಕೊಡಗೆಯಾಗಿ ಚಂದ್ರಾದಿತ್ಯವರೆ ಅನುಭವಿಸಿ ಸುಖದಿಂ ಬಾಹರು (ಎಕ. X (S), ಚಿಕ್ಕಬ. ೮-೧೨; 1500); ಅಲ್ಲಿಂದ ಇಲ್ಲಿವರೆ ಹೊರಳಿ ನೋಡಿ (ಭಾವಗೀ. ೩೮೯). **-ವಾರೆ$_2$** : ಮಹಾಜನ(ಅ) ಐವ[ದಿ]ನ್ನ X [ಕಾ]ಲಂ ಕಟ್ಟಿ ತುಪ್ಪದ [ತೆ]ಱೆಯ ಚನ್ದ್ರ ಸೂರ್ಯ[ವಾರೆ] ದಾನಗೊಟ್ಟ (ಸೌಇಇ. XI-i, ೧೩-೧೧; 869); ನೀನಲ್ಲದನ್ಯದೈವವುಂಟೆಂಬವನ ಬಾಯ ಕೆನ್ನೆವಾರೆ ಸೀಳದಲ್ಲದೆ ಎನ್ನ ಮುನಿಸು ಹೋಗದಯ್ಯಾ (ಬಸವ. ೭೫೦). '– ವರಂ' ಪರಾ.

[ದೇ. ‖ ತಮಿ. ವರೈ, ವರೈವು = ಮಿತಿ, ಸೀಮೆ; ಮಲ. ವರೇ; ತೆಲು. ವರ = ಮೇರೆ]

**- ವರೆಗಂ, - ವರವಿಗೆ, - ವರಿವಿಗೆ, - ವರೆಗೆ** (ಅ). ತನಕ : ಚಂದ್ರಾದಿತ್ಯರ ಕಾಲಂ ವರೆಗಂ . . . ರಾಜ್ಯಾಭಿವಿ(ವೃ)ದ್ಧಿ ಸಲುತ್ತಿರೆ (ಇಇ. XII, ೨೧೯-೧೪; 814); ಆಯುಂ ಶ್ರೀಯುಂ . . . ನೃಪತಿ ನಿನಗೆ ನಿಜಸಂತತಿಯುಂ ನ್ಯಾಯದೆ ಪೆರ್ಚುವುದಕ್ಕೀ ತೋಯಧಿಧರ[ಣೀಧ]ರಾಧರ ಸ್ಥಿತಿವರೆಗಂ (ಕವಿರಾ. ೩-೨೦೭); ಇನ್ನೆವರೆಗಮಿರ್ದೆವಿನ್ನೆಮಗೆ ನಿತ್ತರಿಸಲ್ ನೆಱವಿಲ್ಲ (ಆದಿಪು. ೯-೮೯); ಅನ್ನೆಗಮಿನ್ನೆಗಮೆನ್ನೆಗಮೆನ್ನದೆ ಕಡೆಗುಂಟು ಲೋಪಮಿದಿರೊಳ್ ಸೀಮೋತ್ಪನ್ನಂ ವರಂ ವರೆಗಮಿರೆ (ಶಮದ. ೨೪೮). **- ವರವಿಗೆ** : ಮುಖ್ಯಅತಿಥಿಗಳು ಬರುವ ವರವಿಗೆ ಕಾರ್ಯಕ್ರಮವನ್ನು ಪ್ರಾರಂಭಿಸುವಂತಿಲ್ಲ (ರೂಢಿ). **- ವರಿವಿಗೆ** : ನೀನು ಎಲ್ಲಿಯವರಿವಿಗೆ ನನ್ನ ಜೊತೆ ಬರಲು ಸಾಧ್ಯವಾಗತ್ತೆ? (ರೂಢಿ). **- ವರೆಗೆ** : ಹನ್ನೆರಡುಯೋಜನವರೆಗೆ [ಪಾಠಾಂ. ತರದ, ವರೆಯ] ಭೋಜನಶಾಲೆಗಳು ವಿಸ್ತರಿಸಿದವು (ತೊರರಾ. ೧-೭-೭); ಆ ಕಲ್ಲುಕಟ್ಟೆಯವರೆಗೆ (ತನಕ) ನೀವಿಬ್ಬರೂ ಓಡಿ (ಮಧ್ಯಮ. ೧೫೮). '– ವರಂ' ಪರಾ. [< – ವರೆ$_2$ / ತಮಿ. ವರೈಕ್ಕುಮ್; ತೆಲು. ವರಕು]

**- ವರೆಗೆ** 'ವರೆಗಂ' ನೋ.

**ವರೇಕು** (ನಾ). [ಸಂಗೀತ] ರಾಗವನ್ನು ವಿಸ್ತಾರವಾಗಿ ಹಾಡುವಿಕೆ (?) : ಸುಬ್ಬಣ್ಣ ತನ್ನಷ್ಟಕ್ಕೆ ತಾನೇ ಕುಳಿತು ಪಿಟೀಲನ್ನು ನುಡಿಸುತ್ತ ತನಗೆ ತೋರಿದ ಸಂಗತಿ ವರೇಕುಗಳನ್ನು ಹಾಕುತ್ತ . . . ಗಾನಯೋಗದಲ್ಲಿ ಮಗ್ನನಾಗಿರುವನು (ಸುಬ್ಬಣ್ಣ. ೯); ಅವಳ ಹಾಡಿಕೆಯಲ್ಲಿ . . . ವರೇಕುಗಳು ಅವರಿಗೆ ತುಂಬ ಮೆಚ್ಚಿಕೆಯಾದವು (ರೂಪಸ. ೯೯). [?]

**ವರೇಣ್ಯ** (ಗು). ೧. ಬಯಸತಕ್ಕ ; ಅಪೇಕ್ಷಣೀಯವಾದ. ೨. ಮುಖ್ಯವಾದ ; ಪ್ರಧಾನವಾದ. ೩. ಅತ್ಯುತ್ತಮನಾದ ; ಶ್ರೇಷ್ಠನಾದ. (ನಾ). ೪. ಮುಖ್ಯವಾದುದು ; ಪ್ರಧಾನವಾದುದು :"ಪ್ರಶಸ್ತಂವರಂ ರಮಣೀಯಮಪರಂ ವರೇಣ್ಯಂ" (ಮಂಗರಾ. ೧೩-೨). ೫. ಶ್ರೇಷ್ಠನಾದವನು ; ಉತ್ತಮ ; ಅಗ್ರೇಸರ : ವಾಗ್ಮಿಪ್ರವರಂ ವರೇಣ್ಯನವನೀ ದೇವಾನ್ವಯಕ್ಕೆ (ಸುಕುಮಾ. ೨-೩೮); ಅಖಿಳಕಳಾನೈಪುಣ್ಯಾ ಜನವರೇಣ್ಯನುಮೆನಿಸಿ ಪೊಗಳ್ತೆವಡೆದು (ರಾಜಶೇ. ೪-೮೨ ವ). ೬. ಪಿತೃದೇವತೆಗಳ ಒಂದು ವಿಶಿಷ್ಟಪಂಗಡ. ೭. ಕುಂಕುಮಕೇಸರಿ. [ಸಂ.]

**ವರೇಯುಗ್ರಾಮ** (ನಾ). ಒಂದು ಊರಿನ ಹೆಸರು : ಮಾಜುಚ್ಚಮಜುಮನ್ಸೋ ವರೇಯುಗ್ರಾಮೇ (ಇಐ. VI, ೮೬-೨೫; 690). [ ? + ಗ್ರಾಮ]

**ವರೋಪಚಾರ** (ನಾ). ಮದುವೆಯ ಕಾಲದಲ್ಲಿ ಹೆಣ್ಣಿನ ಮನೆಯವರು ಮದುಮಗನಿಗೆ ಕೊಡುವ ಉಡುಗೊರೆ : ವರದಕ್ಷಿಣೆ, ವರೋಪಚಾರ . . . ಅವನಿಗೆ ಏನೂ ಬೇಕಿಲ್ಲವಂತೆ (ನಡಿದಾ. II, ೧೦೦೧); ವರೋಪಚಾರ, ಬೀಗ, ಬೀಗಿತ್ತಿಯರ ಉಪಚಾರ . . . ಸಂಪ್ರದಾಯವನ್ನು ಅವರೂ ಬಲ್ಲರು (ದೂರಸ. ೧೪೬). [ಸಂ.]

**ವರ್ಕರ** (ನಾ). ೧. ಯಾವುದಾದರೂ ಪ್ರಾಣಿಯ ಮರಿ. ೨. ಕುರಿಮರಿ. [ಸಂ.]

**ವರ್ಕುಣಿಕೆ** (ನಾ). ಕುದುರೆಯ ಕಣ್ಣಿನ ಮೇಲಿನ ಚರ್ಮದ ಪೊರೆ: ಕಣ್ಣಂ ಮುಚ್ಚಿಹ ಪೊಟ್ಟೆಯೆ ಸನ್ನುತ ವರ್ಕುಣಿಕೆ (ಅಶ್ವಶಾ. ೯-೧೫). [?]

**ವರ್ಖಿ** 'ವರಕು₁' ನೋ.

**ವರ್ಗ** (ನಾ). ೧. ತೆಗೆದುಹಾಕುವಿಕೆ; ವರ್ಜನ. ೨. ಸಮಾನಧರ್ಮ, ಜಾತಿ ಮುಂತಾದುವುಗಳಿಗೆ ಸೇರಿದ ಮನುಷ್ಯರ ಪ್ರತ್ಯೇಕ ವಿಭಾಗ : ದಾಸಿಯ ವರ್ಗದಲ್ಲಿಪ್ಪೆನು ಶಿವಶರಣರ ಮನೆಯಲ್ಲಿ (ಬಸವ. ೪೬೨). ೩. ಒಂದೇ ಜಾತಿಗೆ ಸೇರಿದ ಪ್ರಾಣಿಸಮೂಹ. ೪. ಒಂದು ಗುಂಪಿಗೆ ಸೇರಿಸಲಾದ ವಸ್ತು, ವಿಷಯ ಮುಂತಾದುವು. ೫. ಗುಂಪು ; ಸಮೂಹ ; ಶ್ರೇಣಿ : ರವಿ ಮುಖ್ಯಂ ಗ್ರಹವರ್ಗದೊಳ್ (ಸೋಮೇಶ. ೪); ಮುಂದನಱಿಯದ ಗುರುವು ಹಿಂದನಱಿಯದ ಶಿಷ್ಯ ಸಂದೆರಡುವರ್ಗವಱಿಯದಿರ್ದುಪದೇಶ ಕೊಂದುಕೊಂಡಂತೆ (ಸರ್ವಜ್ಞ. ೮೪). 'ವರ್ಗಕಲಹ' ಪರಾ. ೬. ವಿಭಾಗ ; ಪಕ್ಷ ; ಪಂಗಡ. ೭. ಧರ್ಮ, ಅರ್ಥ ಮತ್ತು ಕಾಮ ಎಂಬ ಮೂರು ಪುರುಷಾರ್ಥಗಳು ; ತ್ರಿವರ್ಗ. ೮. ವರ್ಗೀಕೃತವಾದ ಶಬ್ದಗಳ ಒಂದು ಗುಂಪು. ೯. ಗ್ರಂಥದಲ್ಲಿನ ಪ್ರಕರಣ ; ಅಧ್ಯಾಯ. ೧೦. ಪ್ರಾಂತ್ಯ ; ಪ್ರದೇಶ. ೧೧. ಶಾಲೆಯ ತರಗತಿ ; ಇಯತ್ತೆ : ಅವನು ತನ್ನ ವರ್ಗದೊಳಗೆ ಓದುವ ಪುಸ್ತಕಗಳನ್ನೂ ಗಡಿಯಾಲವನ್ನೂ ಮಾರಿಕೊಂಡನು (ಮುಂಬಯಿ. ೪-೧೯೨); ಮಕ್ಕಳು ಗದ್ದಲಮಾಡದೆ ಸಾಲಾಗಿ ತಮ್ಮ ತಮ್ಮ ವರ್ಗಗಳಿಗೆ ಹೋಗುವರು (ಕಪಪು. ೫-೩). ೧೨. ಮೇಲಧಿಕಾರಿ ಅಥವಾ ಸರ್ಕಾರವು ತನ್ನ ನೌಕರನನ್ನು ಒಂದು ವಿಭಾಗದಿಂದ ಅಥವಾ ಊರಿನಿಂದ ಮತ್ತೊಂದು ವಿಭಾಗಕ್ಕೆ ಅಥವಾ ಊರಿಗೆ ಕಳಿಸುವುದು : ಪರವೂರಿಗೆ ವರ್ಗವಾದಾಗ ಅಗಲುವಿಕೆಯ ಕಣ್ಣೀರು ಸುರಿಸಿ ಹೋಗದವರು ಒಬ್ಬರೂ ಇರಲಿಲ್ಲ (ಕಂಬಹು. ೧೨೧); ನನಗೆ ಬೆಂಗಳೂರಿನಿಂದ ಇಲ್ಲಿಗೆ ವರ್ಗವಾದಾಗ . . . ಯತ್ನವಿಲ್ಲದೆ ರೈಲನ್ನು ಹತ್ತಿದೆ (ರಾಯಚ. ೨). ೧೩. ಕಂದಾಯದ ದಾಖಲೆಯಲ್ಲಿ ಪ್ರತ್ಯೇಕಸಂಖ್ಯೆಯಿರುವ ಜಮೀನಿನ ಒಡೆತನದ ನಮೂದು ; ಪಟ್ಟಾ : 'ವರ್ಗದಾರ' ಪರಾ. ೧೪. ಖಾತೆವಾರು ಜೋಡಿಸಿ ಬರೆದ ಲೆಕ್ಕ ; ವರ್ಗೀಕೃತವಾದ ಲೆಕ್ಕ : ವಾಸಪ್ಪಯ್ಯನವರ ಅಂಗಡಿಗೆ ಹೋಗಿ ಕುಳಿತು ಅವರ ಹಳೆಯ ಲೆಕ್ಕಗಳನ್ನು ನಕಲು ತೆಗೆಯುವುದಕ್ಕೊ, ವರ್ಗ, ಊಳಿಗಗಳನ್ನು ಇರಿಸುವುದಕ್ಕೊ ಸಹಾಯಮಾಡುತ್ತಿದ್ದರು (ಜಾಯಿದಾ. ೩). ೧೫. [ಗಣಿತ] ಒಂದು ಸಂಖ್ಯೆಯನ್ನು ಅದೇ ಸಂಖ್ಯೆಯಿಂದ ಗುಣಿಸಿದಾಗ ಬರುವ ಲಬ್ಧ: ನಾಲ್ಕೆಂಬುದು ಎರಡರ ವರ್ಗ (ಜ್ಯೋತಿರ್ವಿ. ೨೬೩). ೧೬. [ವ್ಯಾಕ] ಕಕಾರದಿಂದ ಮಕಾರದವರೆಗೆ ಇರುವ ಐದೈದು ವ್ಯಂಜನಗಳ ಒಂದೊಂದು ಗುಂಪು ; ಕವರ್ಗ ಮುಂತಾದುವು : ಎಯ್ದೆ ಕಕಾರದಿನಿರ್ಪತ್ತ್ಯುಕ್ಕರಮೆಯ್ದುವನ್ನೆಗಂ ಪರಿವಿಡಿಯಿಂದಯ್ದುಯ್ದುಗೆಯ್ದು ವರ್ಣದಿನಯ್ದುಂ ವರ್ಗಂಗಳಕ್ಕುಂ (ಕಾವ್ಯಾವ. ೧೫); ಕಕಾರಂ ಮೊದಲಾಗಿ ಮಕಾರಪರ್ಯಂತಮ್ಮಯ್ದೈದುವರ್ಣಂಗಳೊಂದೊಂದು ವರ್ಗಮಾಗಿ, ವರ್ಗಮೈದಕ್ಕುಂ (ಶಮದ. ೧೩ ವೃತ್ತಿ).

**ವರ್ಗಮಾಡು** = ೧. ನೌಕರನನ್ನು ಬೇರೆ ಸ್ಥಳಕ್ಕೆ ಕಳಿಸು , —ವರ್ಗಾಯಿಸು : ಸಾಹೇಬನು ಸಿಟ್ಟಾಗಿ ತನಗೆ ಬೇಗನೆ ವರ್ಗಮಾಡಿದರೆ ಹೇಗೆ? (ಕೊತಕಾ. ೪೧). ೨. [ಗಣಿತ] ಒಂದು ಸಂಖ್ಯೆಯನ್ನು ಅದರಿಂದಲೇ ಗುಣಿಸು : ಉಳಿದದ್ದನ್ನು ಅದರ ವರ್ಗಮಾಡಬೇಕು. ಲಾಂಬಿಗೂ ಕೂಡ ವರ್ಗಮಾಡಬೇಕು (ಭೂಮಿಟ. ೪೩). [ಸಂ.]

**ವರ್ಗಂಗೊಳ್** (ಕ್ರಿ). ಗುಣಿಸಲ್ಪಡು : "ವರ್ಗಮೆಂದುಂ ಕೃತಿಯೆಂದುಂ ವರ್ಗಂಗೊಂಬುದರ್ಕೆ ಹೆಸರು" (ವ್ಯವಹಾ. ೧೧-೨೪). [ವರ್ಗ + ಕೊಳ್₁]

**ವರ್ಗಕಲಹ** (ನಾ). ಸಮಾಜದ ವಿವಿಧಶ್ರೇಣಿಗಳಲ್ಲುಂಟಾಗುವ ಜಗಳ : ಸರ್ವರಿಗೂ ದೊರೆಯಬೇಕಾದ ಮೂಲಭೂತಹಕ್ಕುಗಳಿಗೆ ಭಂಗ ಬಂದು ವರ್ಗಕಲಹ ಪ್ರಾರಂಭವಾಗುತ್ತದೆ (ನವ್ಯಕಾ. ೧೮). [ಸಂ.]

**ವರ್ಗಣಿ** (ನಾ). ಚಂದಾ ; ವಂತಿಗೆ : ವರ್ಗಣಿ ಕೊಟ್ಟು ಸದಸ್ಯರಾಗುವುದೊಂದನ್ನು ಬಿಟ್ಟು ಗ್ರೀಸಿಯವರು ಇನ್ನೆಲ್ಲ ವಿಧದಲ್ಲೂ ವನಿತಾಸಮಾಜದ ಸಹಾಯಕರಾಗಿದ್ದಾರೆ (ದೇಜ್ಞೋತಿ. ೨೨); ವಕೀಲರ ಗುಂಪು ವರ್ಗಣಿ ಕೂಡಿಸಿ ಮದುವೆಯ ವೆಚ್ಚದ ಭಾರವನ್ನು ಸಹ ವಹಿಸಲು ಒಪ್ಪಿದೆ (ಇಪ್ಪತ. ೪೬೯). [<— ಮರಾ. ವರ್ಗಣೀ]

**ವರ್ಗಣಿದಾರ** (ನಾ). ೧. ನಿಯಮಿತಕಾಲಕ್ಕೆ ನಿಗದಿಯಾದ ಹಣವನ್ನು ಕೊಟ್ಟು, ಪತ್ರಿಕೆ ಮೊದಲಾದುವನ್ನು ಪಡೆಯುವವನು ; ಚಂದಾದಾರ : 'ಸಿಟಿವಾಯಿಸ್' . . . ಹೊರಗಣ ಊರುಗಳಲ್ಲಿ ವರ್ಗಣಿದಾರರಿಲ್ಲದಿದ್ದರೂ . . . ಮುಂಬಯಿ ನಾಗರಿಕರು ವಿಶ್ವಾಸವಾಗಿ ಓದುವಂಥ ಪ್ರಸಿದ್ಧಪತ್ರಿಕೆ (ಒಂಟಿದ. ೩). ೨. ಉತ್ಸವ, ಸಮಾರಂಭ ಮುಂತಾದ ಸಾರ್ವಜನಿಕಕಾರ್ಯ ಅಥವಾ ಧರ್ಮಕಾರ್ಯಗಳಿಗಾಗಿ ವಂತಿಗೆ ಕೂಡಿಸುವವನು : ನನ್ನ ಕಿಸೆಯೊಳಗಿಂದ ಒಂದು ರೂಪಾಯಿ ತೆಗೆದು ಅವಳಿಗೆ ಕೊಟ್ಟು ದಾರಿಗೆ ಹಚ್ಚು. ಈ ವರ್ಗಣಿದಾರರ ಕಾಟ ಹೆಚ್ಚಾಯಿತು (ಚಂದುಟ. ೮೫). [<— ಮರಾ. ವರ್ಗಣೀದಾರ್]

**ವರ್ಗತ್ರಯ** (ನಾ). ಧರ್ಮ, ಅರ್ಥ ಮತ್ತು ಕಾಮವೆಂಬ ಮೂರು ಪುರುಷಾರ್ಥಗಳು ; ತ್ರಿವರ್ಗ : ಮುನಿಯಂ ಸಂಧಿಸಿ ವರ್ಗತ್ರಯಾನ್ವಿತಂ ನೆಗಳ್ಗೆ ಬುಧಂ (ಮದತಿ. ೧-೫೮); ಜಯಮಂ ಧರ್ಮಕ್ಕೆ ಧರ್ಮಾನ್ವಯಮನಸದಳಂ ಸಾಧುವರ್ಗಕ್ಕೆ ವರ್ಗತ್ರಯಮಂ ತನ್ನಂತರಂಗಕ್ಕೊಡರಿಸೆ (ಎಕ. VII, ಶಿಕಾರಿ. ೧೩೬-೧೦; 1068). [ಸಂ.]

**ವರ್ಗದಾರ** (ನಾ). ಪಟ್ಟಾಸಹಿತವಾಗಿ ಭೂಮಿಯನ್ನು ಪಡೆದಿರುವವನು ; ಜಮೀನಿನ ಒಡೆಯ : ಒಬ್ಬನ ಆಸ್ತಿಯ ಬಾಂದಗಲ್ಲು ದಾಟಿದ ಮೇಲೆ . . . ಮತ್ತೊಬ್ಬ ವರ್ಗದಾರನ ಸೊತ್ತು ಸರ್ವಸ್ವವೂ ಇರುತ್ತದೆ (ಪರಾವ. ೧೮). [ವರ್ಗ + — ದಾರ₄]

**ವರ್ಗಪರೀಕ್ಷೆ** (ನಾ). ತರಗತಿಯಲ್ಲೇ ನಡೆಯುವ ಪರೀಕ್ಷೆ : ವರ್ಗಪರೀಕ್ಷೆಯಲ್ಲಿ ಅವಳು ಚೆನ್ನಾಗಿ ಮಾಡಿದ್ದಾಳೆ (ದೂರಸ. ೨೫೦). [ಸಂ. ವರ್ಗಪರೀಕ್ಷಾ]

**ವರ್ಗಪ್ರಾಸ** (ನಾ). [ಛಂದ] ಅನುನಾಸಿಕವೊಂದನ್ನು ಬಿಟ್ಟು ಒಂದು ವರ್ಗದ ಮೊದಲ ನಾಲ್ಕು ಅಕ್ಷರಗಳು ಕ್ರಮವಾಗಿ ನಾಲ್ಕುಸಾಲುಗಳಲ್ಲಿರುವ ಒಂದು ಬಗೆಯ ಪ್ರಾಸ ; ಉದಾ : ಸಕಲಜನವಿನುತನಂ ಶತಮಖಸದೃಶ ವಿಶಾಲವಿವಿಧವಿಭವೋದಯನಂ ಪ್ರಗತಗುಣಗಣನನರಿಬಲವಿಘಟನನಂ ಕಂಡನಣುವನಾ ರಾಘವನಂ (ಕವಿರಾ. ೨-೩೮): ವರ್ಗದಕ್ಕರಂಗಳ್ ನಾಲ್ಕುಂ ಸಂತಮಿರೆ ಪೇೞ್ದ ತಾಣದೊಳಂತಕ್ಕುಂ ಪ್ರಾಕ್ತನೋಕ್ತವರ್ಗಪ್ರಾಸಂ (ಕವಿರಾ. ೨-೩೩). [ಸಂ.]

**ವರ್ಗಭೇದ** (ನಾ). ಸಮಾಜದಲ್ಲಿರುವ ಉಚ್ಚವರ್ಗ ಮತ್ತು ಕೆಳವರ್ಗಗಳೆಂಬ ಭೇದ : ವರ್ಗಭೇದವನ್ನು ನಮ್ಮ ಜನ ಸಂತೋಷದಿಂದ ಕಹಿಯಿಲ್ಲದೆ ಕಾಯ್ತಾರೆ. ಆದ್ದರಿಂದ ಈ ದೇಶಕ್ಕೆ ಮಾರ್ಕ್ಸಿಸಂ ಕೂಡ ವಿನಾಯಿತಿ (ಹೊಸಕ್ಕ. ೨೪೧). [ಸಂ.]

**ವರ್ಗಮೂಲ** (ನಾ). [ಗಣಿತ] ಸಮಾನವಾದ ಎರಡುಸಂಖ್ಯೆಗಳನ್ನು ಗುಣಿಸಿದಾಗ ಬರುವ ಸಂಖ್ಯೆಗೆ ಮೂಲಸಂಖ್ಯೆ ; ವರ್ಗಮಾಡಿದ ಲಬ್ಧಕ್ಕೆ ಮೂಲವಾದ ಸಂಖ್ಯೆ; ಉದಾ : ನಾಲ್ಕರ ವರ್ಗ ಹದಿನಾರು ; ಹದಿನಾರರ ವರ್ಗಮೂಲ ನಾಲ್ಕು : ಉಗ್ಗಡದ ಘನವರ್ಗಮೂಲವನಱಿದೊಡೀ ಭವದ ಹಗ್ಗ

ಹರಿದೇಜುವೆನೆ ಮುಕ್ತಿಯ (ಪ್ರಶ್ನಾಚ. ೭-೧೯); ಇವುಗಳ ಮೇಲೆ ಗುಣಾಕಾರ ಕೋಷ್ಟಕಗಳು, ವರ್ಗಗಳ ಮತ್ತು ವರ್ಗಮೂಲಗಳ ಕೋಷ್ಟಕಗಳು . . . ಮುಂತಾದುವು ಬರೆಯಲ್ಪಟ್ಟಿವೆ (ಗಣಿಚ. ೧೩). [ಸಂ.]

**ವರ್ಗಾಕ್ಷರ** (ನಾ). [ವ್ಯಾಕ] ಕಕಾರದಿಂದ ಮಕಾರದ ವರೆಗಿನ ಇಪ್ಪತ್ತೈದು ಅಕ್ಷರಗಳ ಸಮೂಹ ; ವರ್ಗೀಯಾಕ್ಷರ : ೨೫ ವರ್ಗಾಕ್ಷರಂಗಳಿರ್ಪತ್ತೈದಱ ಕಡೆಯಕ್ಕರಂಗಳವರ್ಗಾಂಗಳ್ (ಶಮದ. ೧೩ ವೃತ್ತಿ). [ಸಂ.]

**ವರ್ಗಾಯಿಸು** 'ವರ್ಗಿಸು' ನೋ.

**ವರ್ಗಾವಣೆ** (ನಾ). ೧. ವರ್ಗಾಯಿಸುವಿಕೆ ; ವರ್ಗಮಾಡುವಿಕೆ : ಅವನ ಹುದ್ದೆಯ ವರ್ಗಾವಣೆಗೆ ಅವಳೇ ಮುಖ್ಯಕಾರಣಳಾಗಿದ್ದಳು (ಪುನರು. ೨೨೨). ೨. ಅಧಿಕಾರ, ವಸ್ತು ಮುಂತಾದುವು ಒಬ್ಬನ ವಶದಿಂದ ಮತ್ತೊಬ್ಬನ ವಶಕ್ಕೆ ಹೋಗುವುದು; ಹಸ್ತಾಂತರ : ಎಲ್ಫಿನ್‌ಸ್ಟನ್ . . . ಎಂದು ಜನ ತಮ್ಮ ಆಡಳಿತವನ್ನು ತಾವೇ ನೋಡಿಕೊಳ್ಳಲು ಸಮರ್ಥರಾಗಿ ಅವರ ಕೈಗೆ — ತಾನಾಗಿಯೋ ಅಥವಾ ಬಲಾತ್ಕಾರದಿಂದಲೋ — ಅಧಿಕಾರ ವರ್ಗಾವಣೆಯಾಗಬಹುದು ಎಂದು ಯೋಚಿಸುತ್ತಿದ್ದನು (ದಾದಾನ. V, ೬೮೬). [< ವರ್ಗ + — ಅಣೆ]

**ವರ್ಗಾವರ್ಗಿ** (ನಾ). ನೌಕರಿ ಮುಂತಾದುವಕ್ಕೆ ಸಂಬಂಧಿಸಿದಂತೆ ಇಬ್ಬರು ನೌಕರರಿಗೆ ಪರಸ್ಪರ ಪ್ರಯೋಜನವಾಗುವಂತೆ ಒದಗುವ ವರ್ಗ : ಅವರೇನು ಮಾಡಬಹುದು? ವರ್ಗಾವರ್ಗಿ ಮಾಡಬಹುದು (ಕೊತಕಾ. ೪೨).

[<— ಮರಾ. ವರ್ಗಾವರ್ಗೀ]

**ವರ್ಗಿಸು, ವರ್ಗಾಯಿಸು** (ಕ್ರಿ). ೧. ಜೊತೆಮಾಡು ; ಕೂಡಿಸು ; ಸೇರಿಸು : ದುರ್ಗಂಧವೊಡಲ ಮೂಳರಿಗೆ ಮೂಳರ ತಂದು ವರ್ಗಿಸಿ ಸರಿಮಾಡಬಹುದು (ಭರಚ. ೯-೯೩). ೨. [ಗಣಿತ] ಗುಣಿಸು ; ಗುಣಾಕಾರ ಮಾಡು : ವರ್ತಿಸು ವರ್ಗಿಸು ಈಡಿಟ್ . . . ಕಾದಿಸು ಪೂಜಿಸು ಉತ್ತಮದಿಂ ಪೇಟೆ ಮೊದಲ ಗುಣಕಾರಂಗಳ್ (ವ್ಯವಹಾ. ೧೦-೫). ವರ್ಗಾಯಿಸು : ೩. ನೌಕರನನ್ನು ಕೆಲಸದ ಮೇಲೆ ಬೇರೆ ಜಾಗಕ್ಕೆ ಕಳಿಸು ; ವರ್ಗಮಾಡು : ಮೊಪಾಸನು . . . ಕೆಲಕಾಲದ ಮೇಲೆ ಅಲ್ಲಿಂದ ಶಿಕ್ಷಣಮಂತ್ರಿಮಂಡಲಕ್ಕೆ ವರ್ಗಾಯಿಸಲ್ಪಟ್ಟನು (ಮೊಪಾಸಾ. ೪ ಮುನ್ನುಡಿ); ಇಬ್ಬರನ್ನು ವರ್ಗಾಯಿಸಿದರೆ . . . ಕೆಲಸ ನಡೆಸಲು ಒಬ್ಬರಾದರೂ ಉಳಿಯುವರು (ಘೂರಾಣ. ೨೨೦). ೪. ಅಧಿಕಾರ, ವಸ್ತು ಮುಂತಾದುವನ್ನು ಬೇರೆ ಸ್ಥಳಕ್ಕೆ ತೆಗೆದುಕೊಂಡು ಹೋಗುವಂತೆ ಮಾಡು ; ಸ್ಥಳಾಂತರಿಸು : ಸಾಕಷ್ಟು ಬೆಳೆದಿರುವ ಸಸಿಗಳನ್ನು ಹದಮಾಡಿರುವ ಜಮೀನಿಗೆ ವರ್ಗಾಯಿಸಬೇಕು (ತರಚಿ. ೬); ನಾಲ್ಕನೆಯ ಕಲೀಫ ಅಲಿ ಸರ್ಕಾರದ ಕೇಂದ್ರವನ್ನು ಇರಾಕಿನಲ್ಲಿಯ ಕೂಫಾಪಟ್ಟಣಕ್ಕೆ ವರ್ಗಾಯಿಸಿದನು (ಇಸ್ಲಾಂಸಂ. ೧೪). ೫. ಅಧಿಕಾರ, ವಸ್ತು ಮುಂತಾದುವನ್ನು ಇನ್ನೊಬ್ಬನ ವಶಕ್ಕೆ ಕೊಡು ; ಹಸ್ತಾಂತರಿಸು : ೧೮೫೮ರಲ್ಲಿ ಡಿಲ್ಲೀ ಡಿವಿಜನ್ ಪಂಜಾಬುಅಧಿಕಾರಕ್ಕೆ ವರ್ಗಾಯಿಸಲ್ಪಟ್ಟಿತು (ಭೂಗೋಳ. ೫೯); ಆ ವೆಚ್ಚವನ್ನು . . . ಸರಕಾರದ ಲೆಕ್ಕಕ್ಕೆ ವರ್ಗಾಯಿಸತಕ್ಕದ್ದು (ಪುನರು. ೧೧೧). ☞ ಈ ರೂಪವನ್ನು ಬಹುಶಃ ಹಿಂದೀಮೂಲದಿಂದ ಬಂದಿರುವ 'ದಬಾಯಿಸು', 'ಬದಲಾಯಿಸು' ಮುಂತಾದ ರೂಪಗಳ ಸಾದೃಶ್ಯದಿಂದ ಮಾಡಿಕೊಂಡಿರಬಹುದು.

[ವರ್ಗ + — ಇಸು₃]

**ವರ್ಗೀಕರಣ** (ನಾ). (ವಿಶೇಷವಾಗಿ ವಿಜ್ಞಾನವಿಭಾಗಗಳಿಗೆ ಸಂಬಂಧಿಸಿದಂತೆ ಮಾಡುವ) ವಿಂಗಡಣೆ ; ಪೃಥಕ್ಕರಣೆ : ಜೀವನಿಗೆ ಸಂಬಂಧಪಟ್ಟ ಸಿದ್ಧಾಂತಗಳ ಶ್ರೇಷ್ಠ ವರ್ಗೀಕರಣವಿದು (ಜೀವಾತ್ಮ. ೧೮); ನಾವು ಸದಾ ಮಾನವಜಾತಿಯನ್ನು ಇದೇ ರೀತಿಯಲ್ಲಿ ವರ್ಗೀಕರಣ ಮಾಡುತ್ತೇವೆ (ಪುನರು. ೨೫೩). [ಸಂ.]

**ವರ್ಗೀಕರಿಸು** (ಕ್ರಿ). ವರ್ಗಗಳನ್ನಾಗಿ ವಿಭಾಗಿಸು, —ವಿಂಗಡಿಸು : ಈ ಜಾನಪದ ನೃತ್ಯಗಳನ್ನು ಭಾರತದ ಆಡಳಿತ ವಿಭಾಗಗಳಂತಲ್ಲದೆ, ಭೌಗೋಳಿಕ ಪ್ರದೇಶಗಳ ರೀತ್ಯ ವರ್ಗೀಕರಿಸಿದ್ದೇವೆ (ಭಾರಜಾ. ೨೫); ವರ್ಣಗ್ರಾಹಿಯನ್ನು ಆಧರಿಸಿಯೂ ರಂಗುಗಳನ್ನು ವರ್ಗೀಕರಿಸಬಹುದು (ಕವಿಕೋ. XI,೮೨೬).

[ವರ್ಗೀಕರಣ + — ಇಸು₃]

**ವರ್ಗೀಯ** (ಗು). ೧. ಒಂದು ಗುಂಪಿಗೆ ಸೇರಿದ. (ನಾ). ೨. [ವ್ಯಾಕ] ಅಕ್ಷರಗಳ ಒಂದು ಗುಂಪಿಗೆ ಸೇರಿದ ಅಕ್ಷರವರ್ಗ : ವ್ಯಂಜನಗಳು: — ವರ್ಗೀಯ : ಕ ಖ ಗ ಘ ಙ (ಕೃಪಿಡಿ. ೩). [ಸಂ.]

**ವರ್ಗೀಯವ್ಯಂಜನ** (ನಾ). [ವ್ಯಾಕ] 'ಕ' ಕಾರದಿಂದ 'ಮ' ಕಾರದ ವರೆಗೆ, ಐದೈದಕ್ಷರಗಳ ಗುಂಪಾಗಿ ವಿಭಾಗಿಸಲ್ಪಟ್ಟಿರುವ ವ್ಯಂಜನ : ವ್ಯಂಜನಗಳಲ್ಲಿ ವರ್ಗೀಯವ್ಯಂಜನಗಳೆಂದೂ ಅವರ್ಗೀಯವ್ಯಂಜನಗಳೆಂದೂ ಎರಡುವಿಧ (ಶಬ್ದಾದ. ೧); ವರ್ಗಗಳಿಗೆ ಸೇರುವುದರಿಂದ ಈ ೨೫ ವ್ಯಂಜನಗಳಿಗೂ ವರ್ಗೀಯವ್ಯಂಜನಗಳೆಂದು ಹೆಸರು (ಮಧ್ಯಮ. ೧೩). [ಸಂ.]

**ವರ್ಗೋದಿತ** (ನಾ). = ವರ್ಗಪ್ರಾಸ : ವಿನುತಪ್ರಾಸಂ ಶಾಂತೋಪನತಂ ವರ್ಗೋದಿತಂ ಸಮೀಪಗತಂ ಮತ್ತನುಗತಮಂತಗತಂ ಸಂಜನಿತ ವಿಭೇದೋಕ್ತಿಯಿಂದ ಮಿಂತಾಱು (ಕವಿರಾ. ೨-೩೧). [ಸಂ.]

**ವರ್ಚಸ್ಕ** (ನಾ). ಮಲ ; ಅಮೇಧ್ಯ : "ಶಮಲಂ ವರ್ಚಸ್ಕಂ . . . ಪುರೀಷಮುಚ್ಚಾರಂ" (ವಸ್ತುಕೋ. ೭೨-೩೧). [ಸಂ.]

**ವರ್ಚಸ್ವಿ** (ನಾ). ೧. ಶಕ್ತಿಯುತವಾದುದು ; ಪ್ರಭಾವಿಯಾದುದು : ವಾಲ್ಮೀಕಿಯ ಉಪಮೆಗಳು ಸಾಮಾನ್ಯವಾಗಿ . . . ವರ್ಚಸ್ವಿಯಾದ ಉಪಮೆಗಳಾಗಿವೆ (ಭಾರದ. ೯೨). ೨. ಕಾಂತಿಯಿಂದ ಕೂಡಿದುದು ; ತೇಜಃಪೂರ್ಣವಾದುದು : ವರ್ಚಸ್ವಿಯಾದ ಸುಂದರರೂಪು, ಬಹು ಒಳ್ಳೆಯ ನಡತೆಯುಳ್ಳ ಹುಡುಗ (ಶಾಂತಲಾ. ೧೬). ೩. ಸಮರ್ಥ ; ಪ್ರಭಾವಶಾಲಿ : "ವರ್ಚಸ್ವೀ = ಪ್ರಭಾವವಂತಂ" (ಕಾಶಕ. ೨೩೬). ೪. ತೇಜಸ್ಸಿನಿಂದ ಕೂಡಿರುವವನು ; ತೇಜಸ್ವಿ : ವರ್ಚಸ್ವಿಯಾದ ಅವರನ್ನು ಕಂಡಕೂಡಲೆ ಗೌರವ ಹುಟ್ಟಿತು (ರೂಢಿ). ೫. ಚಂದ್ರ. [ಸಂ. ವರ್ಚಸ್ವಿನ್]

**ವರ್ಚಸ್ಸು** (ನಾ). ೧. ಶಕ್ತಿ ; ಸಾಮರ್ಥ್ಯ : ಎನ್ನ ವರ್ಚಸ್ಸಿಗೆ ವಕಾರವಾಗಿ ಬಂದೆಯಯ್ಯ ಬಸವಣ್ಣ (ಮೋಳಿಮಾ. ೨೦-೮೦); ವ್ಯಾಸಮುನಿಗಳ ವಾಗ್ಝರಿಯು ಗೀತೆಯಲ್ಲಿ ವಿಶೇಷವರ್ಚಸ್ಸಿನಿಂದ ಹರಿದಿದೆ (ಧರ್ಮಸಾ. ೧೧೧). ೨. ಕಾಂತಿ ; ತೇಜಸ್ಸು : "ವರ್ಚಃ, ತೇಜಃ . . . ರಶ್ಮಿಃ — ಈ ೧೧ ದೀಪ್ತಿ" (ಹಲಾಯು. ೧೨-೬೫). ೩. ಪ್ರಭಾವ : ಕೇಶವನ ಮೇಲಿದ್ದ ಭೀಮೂನ ವರ್ಚಸ್ಸನ್ನು ನೋಡಿ ಇವನೇ ಇದರಲ್ಲಿ ಹಾದಿ ತೋರಿಸಬಲ್ಲನೆಂದು ಅವರಿಗೆ ಮನವರಿಕೆಯಾಗಿತ್ತು (ಸಮಜೀ. ೨೦೦). ೪. ರೂಪ ; ಆಕಾರ. ೫. ಅಮೇಧ್ಯ ; ಮಲ . ೬. ವೀರ್ಯ ; ರೇತಸ್ಸು . ೭. ಬುಧಗ್ರಹ. [ಸಂ. ವರ್ಚಸ್]

**ವರ್ಜ** (ನಾ). ಬಿಡುವುದು ; ತ್ಯಾಜ್ಯ : ಹಸಿವೆಯಾದ ಹೊರತು ನಾನು ಕೂಳು ತಿನ್ನುವುದನ್ನು ವರ್ಜಮಾಡಿದೆನು (ಪ್ರೇಮವಿ. ೫೭). [ಸಂ.]

**ವರ್ಜನ** (ನಾ). ೧. ಬಿಡುವುದು ; ತ್ಯಜಿಸುವುದು : 'ವರ್ಜಿಸು' ಪರಾ. ೨. ಹಿಂಸಿಸುವುದು. ೩. ಕೊಲೆ ; ವಧೆ : "ವರ್ಜನಂ ಪ್ರಶಮನಂ . . . ಪ್ರಮಾಪಣಂ ಕೊಲೆಗೆ ನಾಮಂ" (ಮಂಗರಾ. ೮೮-೩೯). ೪. ಗ್ರಂಥಸಂಪಾದನೆ ಮಾಡುವಾಗ ಕವಿಯ ಪಾಠವನ್ನು ತಪ್ಪೆಂದು ತೀರ್ಮಾನಿಸಿ ಬಿಟ್ಟುಬಿಡುವುದು : ಕವಿ ಹೀಗೆ ಎಂದಿಗೂ ಬರೆದಿರಲಾರ ಎಂದು ತೀರ್ಮಾನಮಾಡಿ ಪಾಠವನ್ನು ಬಿಡುವುದು ವರ್ಜನ (ಕನ್ನಸಂ. ೧೭೭). [ಸಂ.]

**ವರ್ಜನೀಯ** (ಗು). ೧. ಬಿಡಬೇಕಾದ ; ತ್ಯಜಿಸಬೇಕಾದ. ೨. ಅಯೋಗ್ಯವಾದ ; ಉಚಿತವಲ್ಲದ. [ಸಂ.]

**ವರ್ಜನೆ** (ನಾ). ಬಿಡುವಿಕೆ ; ತ್ಯಾಜ್ಯ : ಆ ರಸಗಳಲ್ಲಿಯೂ ಶೃಂಗಾರದಲ್ಲಿ ಹೇಗೋ ಹಾಗೆ ಉಕ್ತದೋಷಗಳ ವರ್ಜನೆ ಕಂಡುಬರುತ್ತದೆ (ಧ್ವನ್ಯಾಲೋ. ೭೪ ಅಡಿಟಿ); ಮದ್ಯಮಾಂಸಗಳ . . . ವರ್ಜನೆ ಶ್ರೇಯಸ್ಕರ (ತತ್ವಪ್ರಾ. ೧೧೮). [ಸಂ. ವರ್ಜನ]

**ವರ್ಜಿತ** (ಗು). ಬಿಟ್ಟ ; ಹೊರತುಪಡಿಸಿದ ; ತ್ಯಜಿಸಿದ : ವರ್ಜಿತಪ್ರಜ್ಞಾನಪರನಂ . . . ಎನ್ನಂ ಸಲಹು (ಬಸವು. ೨೨-೫೦). [ಸಂ.]

**ವರ್ಜಿಸು** (ಕ್ರಿ). ೧. ಬಿಡು ; ತೊರೆ ; ತ್ಯಜಿಸು : ನಿನ್ನಸುವಂ ಪತಿಕಾರ್ಯದೆ ವರ್ಜಿ [ಪಾಠಾಂ. ನಟ್ಟ]ಸಿದ್ದೈ ನಿನ್ನನ್ನನಾವನಂಗಾಧಿಪತೀ (ಗದಾಯು. ೫-೨೨); ಬೆಸನಂಗಳೇೞುಮಂ ವರ್ಜಿಸಿ ಪಂಚೌದುಂಬರಂಗಳಂ ತೊಱೆದು ಮನಂಬೊಸೆದು

ಪದಾರ್ಥದೊಳೊಳಪೊಕ್ಕಿಸಗುವ ಸದ್ಯಷ್ಟಿ ತಾನವಂ ದರ್ಶನಿಕಂ (ಶಾಸ್ತ್ರಟೀ. ೫೫-೨); ಕೋಪಾವೇಶದಿಂದ ಅವನು ತನ್ನನ್ನು ವರ್ಜಿಸಿದ್ದನು (ಒಂಟಿರು. ೭೪). ೨. ನಾಶಮಾಡು ; ಧ್ವಂಸಗೊಳಿಸು: ಅಜಮಿಳನಿಗೆ ನಿಜಪುರವನು ಕೊಟ್ಟಾನೆ ಕುಜನರನು ವರ್ಜಿಸಿದಾನೆ (ಕನಕ. ೧೮೭-೩). [ವರ್ಜನ + – ಇಸು]

**ವರ್ಜ್ಯ** (ಗು). ೧. ಬಿಡಬೇಕಾದ ; ತ್ಯಜಿಸಲು ಯೋಗ್ಯವಾದ. ೨. ಇಲ್ಲದ ; ರಹಿತ : ವನಿತಾಪಶುಪಂಡಕವರ್ಜ್ಯನಿವಾಸೋದ್ದೇಶದೆಡೆಗಳೊಳ್ ಚರಿಯಿಸುತುಂ ಮುನಿಪತಿ ವಿವಿಕ್ತಶಯ್ಯಾಸನಮೆಂಬಯ್ದನೆಯ ತಪದೊಳುಪಗತನಾದೊಂ (ಸುಕುಮಾ. ೪-೮). (ನಾ). ೩. ಬಿಡಬೇಕಾದುದು ; ನಿಷಿದ್ಧ : ನಮ್ಮ ಆಚಾರ ವ್ಯವಹಾರಗಳಲ್ಲಾಗಲಿ ಮಂಗಳಸಮಾರಂಭಗಳಲ್ಲಾಗಲಿ ತಾಳಿಯ ಸೋಂಕು ವರ್ಜ್ಯ! (ಶಾಸಗಿ. ೧೯); ಈ ಹಾಳು ಇಸ್ಪೇಟುಆಟ ವರ್ಜ್ಯ! (ನಡೆದಾ. II, ೮೬೪). [ಸಂ.]

**ವರ್ಣ** (ನಾ). ೧. ಬಿಳಿ, ಕೆಂಪು, ಹಸುರು ಮೊದಲಾದ ಬಣ್ಣ ; ರಂಗು : ವಿಕಚಕರ್ಣಿಕಾರ ವರ್ಣಮುಂ . . . ದೀರ್ಘಾಯುಷ್ಯಮುಂ ತನಗನುಸಂಗತಮಾಗೆ (ಶಾಂತಿಪು. ೧೦-೯೪ ವ); ಸುರಕಾರ್ಮುಕದ ವರ್ಣಗಳ ಮೆರೆದು ಮೋಹಿಸುವ ನಾನಾಕುಸುಮತತಿಯ ಕೇಸರದ ಧೂಳಿಯಂ ಕೆದರುತಿಹ ಗಾಳಿಯಂ ಕೆಳೆಗೊಂಡು (ಚಿತ್ರಾಂಗ. ೭೨-೧೯೬೧). ೨. ಬಣ್ಣದ ದ್ರವ , ಪುಡಿ ಮುಂತಾದುವು : ಅಕಟ ರೇಖೆಯಿನಪ್ಪವರ್ಣದ ಮಿಶ್ರವರ್ಣದೊಳಾದ ಕೌತುಕಮೆ ವೃಕ್ಷ ಲತಾದಿ ಜಾತಿಯೊಳೋಜೆಯಂ ಗೆಡೆಗೊಂಡ ಚಿತ್ರಿಕನ ಭಾವಮೆ (ಮಲ್ಲಿಪು. ೫-೪೩). 'ವರ್ಣಪೂರ' ಪರಾ. ೩. (ದೇಹದ) ಹೊಳಪು ; ಕಾಂತಿ. ೪. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ಪ್ರಕಾರದ ಪ್ರಾಚೀನ ಸಾಮಾಜಿಕ ವ್ಯವಸ್ಥೆಯಲ್ಲಿನ ಒಂದು ಪಂಗಡ : ತನ್ನ ಮುನ್ನ ಪಡೆದ ವರ್ಣತ್ರಯಕ್ಕಂ ಭರತನಿಂದಮಿನ್ನಪ್ಪ ವಿಪ್ರವರ್ಣಕ್ಕಂ ಯಥೋಚಿತವೃತ್ತಿಗಳನಱುಪಲು (ಆದಿಪು. ೮-೭೨ ವ); ವಿಶ್ವಜಗ[ನ್ನು]ತಂ ಸಕಳವರ್ಣ್ಣಶ್ರೇಷ್ಠಮಿಾ ವರ್ಣ್ಣಮೆಂದೆನಸುಂ ಕೈಕೊಳೆ ಪೆಂಪುವೆತ್ತು (ಕಇಆ. ೩-೨-೫೬; 1058). ೫. ಅಕ್ಷರ : ಕಲಿಸಿದಾತಂ ವರ್ಣಮಾತ್ರಂ ಗುರು (ಸೋಮೇಶ. ೮); ಅಕ್ಕರವುಂ ವರ್ಣಮುಮೆಂದಕ್ಕುಂ ಶುದ್ಧಾಕ್ಷರಕ್ಕೆ ನಾಮಂ (ಶಮದ. ೨). ೬. ಕೀರ್ತಿ ; ಯಶಸ್ಸು. ೭. ಸದ್ಗುಣ. ೮. ಹೊಗಳಿಕೆ ; ಸ್ತುತಿ. ೯. ವೇಷಭೂಷಣ ; ಅಲಂಕಾರ. ೧೦. ರೂಪ ; ಆಕೃತಿ : ನಾನಾವರ್ಣದ ಸಂಸಾರ ಹಾವು ಹಾವಡಿಗನ ಸ್ನೇಹದಂತೆ (ಬಸವ. ೧೨). 'ವರ್ಣಶೂನ್ಯ' ಪರಾ. ೧೧. ಮೇಲುಹೊದಿಕೆ. ೧೨. ಆನೆಗೆ ಹೊದೆಸುವ ಬಣ್ಣದ ಬಟ್ಟೆ : "ವರ್ಣಃ , ಪರಿಸ್ತೋಮಃ , ಕುಥಃ , ಕುಥಾ , ವಮತಂ – ಈ ೫ ಪರಿಸ್ತೋಮಂ" (ಹಲಾಯು. ೫೧-೧೫೩). ೧೩. ಗುಣ ; ಸ್ವಭಾವ. ೧೪. ದೇಹಕ್ಕೆ ಗಂಧಾದಿ ಅನುಲೇಪನಗಳನ್ನು ಬಳಿಯುವುದು ; ಉದ್ವರ್ತನ. ೧೫. ಚಿನ್ನ ; ಬಂಗಾರ. ೧೬. ಕುಂಕುಮಕೇಸರಿ : "ಕುಂಕುಮಂ ಘುಸೃಣಂ ವರ್ಣಂ . . . ಜಾಪಕಂ – ಈ ೭ ಕುಂಕುಮಂ" (ಹಲಾಯು. ೮೯-೩೮೯). ೧೭. ಅಂದ ; ಶೋಭೆ : 'ವರ್ಣದಾಸಿ' ಪರಾ. ೧೮. ವ್ರತ ; ನೇಮ. ೧೯. [ಸಂಗೀತ] ಹಾಡುವ ಮನೋಧರ್ಮ : ರಾಗ ರೂಪ ತಾಳಲು ಅವಶ್ಯವಾಗಿ ನಾಲ್ಕು ಅವಯವಗಳುಂಟು. ಕ್ರಮವಾಗಿ ಅವು (೧) ವರ್ಣ, (೨) ಆರೋಹ, (೩) ಅವರೋಹ, (೪) ಸಂಚಾರಿ. ಹಾಡಬೇಕೆಂಬ ಮನೋಭಾವವೇ ವರ್ಣ (ಸಂಗೀಚಂ.೨೨). ೨೦. [ಕಾವ್ಯಮಿಾ] ಹಾಡುವುದಕ್ಕೆ ಅನುಕೂಲವಾಗುವಂತಿರುವ ದೇಶೀಯಬಂಧದ ಕಾವ್ಯರಚನೆ; ಹಾಡುಗಬ್ಬ : ನಿಬದ್ಧಗಾಯನದಲ್ಲಿ (೧) ಬರೀ ರಾಗಲಯಪ್ರಧಾನವಾದ ಪ್ರೌಢಬಂಧಗಳೂ (ಧ್ರುವ, ಪದ, ವರ್ಣ, ಗೀತ . . . ಇತ್ಯಾದಿ) . . . ಕೃತಿಗಳೂ ಸೇರುತ್ತವೆ (ಭಾರದ. ೫೪೨); ಪರಮೇಶ್ವರಭಾಗವತರೂ ಸ್ವಾತಿತಿರುನಾಳರೂ ಸುಂದರವಾದ ವರ್ಣಗಳನ್ನು, ಕೀರ್ತನೆಗಳನ್ನು ರಚಿಸುವುದರಲ್ಲಿ ಬಹಳ ಗಂಟೆಗಳ ಕಾಲ ಜೊತೆಯಲ್ಲಿ ಕಳೆಯುತ್ತಿದ್ದರು (ಸಂಗೀತ. ೪೪). "ಶ್ವೇತ ಮೊದಲಾದ ವರ್ಣಂಗಳೊಳು ವಿಪ್ರಾದಿ ಜಾತಿಯೊಳು ವ್ರತದೊಳಕ್ಷರದೊಳು ವಿಶೋಭೆಯೊಳು ಗೀತದೊಳು ವೇಷದೊಳು ಶ್ರುತಿಯೊಳು ನಿರಂತರಂ ವರ್ಣಾಭಿಧಾನಮಕ್ಕುಂ" (ಮಂಗರಾ. ೧೪೩-೩೫). ೨೧. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ. ೨೨. [ಭಾಷಾಶಾ] ಧ್ವನಿಮಾ ; ಮೂಲಾಕ್ಷರ. ೨೩. [ದ್ವೈತ] ಇಪ್ಪತ್ತು ದ್ರವ್ಯಗಳಲ್ಲಿ ಒಂದು : ಪರಮಾತ್ಮ, ಲಕ್ಷ್ಮಿ . . . ವರ್ಣ, ಅಂಧಕಾರ, ಕಾಲ, ವಾಸನಾ, ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಹಿಂದಸಾ. ೨೭೫). [ಸಂ.]

**ವರ್ಣಕ** (ನಾ). ೧. ನಾಟ್ಯ ಮುಂತಾದ ಸಂದರ್ಭಗಳಲ್ಲಿ ಪಾತ್ರಧಾರಿಯು ಹಾಕಿಕೊಳ್ಳುವ ಮುಖವಾಡ, ವೇಷ, ಭೂಷಣ ಮುಂತಾದುವು. ೨. ಚಿತ್ರಣ ಮೊದಲಾದುವುಗಳಿಗಾಗಿ ಬಳಸುವ ಬಣ್ಣ, – ರಂಗು. ೩. ಮೈಗೆ ಲೇಪಿಸುವ ಸುಗಂಧದ್ರವ್ಯ ; ಅಂಗರಾಗ. ೪. ಅಕ್ಷರ ; ವರ್ಣ. ೫. ಗಂಧ ; ಚಂದನ. ೬. ಹೊಗಳುಭಟ್ಟ ; ಸ್ತುತಿಪಾಠಕ. ೭. ಬಣ್ಣನೆ ; ವರ್ಣನೆ : ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇೞ್ವೊಡೆ ಪಂಪನೆ ಪೇೞ್ಗುಂ (ಪಂಪಭಾ. ೧-೧೧); ನಗರಾರ್ಣವಸರಿದಟವೀನಗ . . . ಸಲಿಲಕ್ರೀಡಾದಿಗಳಾದಿಯಾಗೆ ಸರಸೋಕ್ತಿಗಳಿಂ ವರ್ಣಿಸುಗೆ ವರ್ಣಕಂಗಳನದಱೊಳ್ (ಕಾವ್ಯಾವ. ೯೫೬). ೮. ವ್ಯಾಖ್ಯಾನ ಕ್ರಮ : ವರ್ಣಕ ಎಂದರೆ ವ್ಯಾಖ್ಯಾನ ಮಾಡುವ ಬಗೆ (ಬ್ರಹ್ಮಭಾ. ೩೦). ೯. [ಕಾವ್ಯಮಿಾ] ದೇಶೀಯಬಂಧದ ಕಾವ್ಯರಚನೆಗಳಲ್ಲಿ ಒಂದು ಪ್ರಕಾರ ; ಹಾಡುಗಬ್ಬ : ವರ್ಣಕಕ್ಕಿಲ್ಲ ಲಕ್ಷಣಮೆಂಬ ಜನರ ನಾಣ್ನುಡಿಯನಲ್ಲೆನಿಸಿ ಪೇೞ್ದಂ ವಿನೂತನಕಾವ್ಯಮಂ (ಚಿಬಪು. ೧-೨೮); ಯಾವುದೊಂದು ವಿಶೇಷಕಾವ್ಯಲಕ್ಷಣವನ್ನಾಗಲಿ ಸಂಸ್ಕೃತಕಾವ್ಯದ ಮಾದರಿಯನ್ನಾಗಲಿ ಇಟ್ಟುಕೊಳ್ಳದೆ ಬರೆದಿರುವ ಪದ್ಯಕಾವ್ಯಕ್ಕೆ 'ವರ್ಣಕ'ವೆಂದೂ ಹೆಸರು ಸಲ್ಲುವಂತೆ ಹೇಳಬೇಕಾಗುತ್ತದೆ (ಕೃಪಿಡಿ. ೧೮೪). [ಸಂ.]

**ವರ್ಣಕಕವಿ** (ನಾ). ೧. ದೇಶೀಯಬಂಧದಲ್ಲಿ ಕಾವ್ಯರಚನೆ ಮಾಡುವವನು ; ಹಾಡುಗಬ್ಬವನ್ನು ರಚಿಸುವವನು : ಪಳಚ್ಚನಾದಚ್ಚವೆಳ್ದಂಗಳೊಳ್ ವಸ್ತುಕಕವಿಗಳ ಕಾವ್ಯಗೋಷ್ಠಿಯುಂ ವರ್ಣಕಕವಿಗಳ ಗೀತಗೋಷ್ಠಿಯುಂ ಮನಂಗೊಳಿಸೆ (ಪುಷ್ಪಪು. ೮-೧೫ ವ). ೨. ಭಾವಗೀತೆಗಳನ್ನು ಬರೆಯುವ ಕವಿ : ಅವಳು . . . ಶೆಲೇ , ಕೀಟ್ಸ , ಟೆನಿಸನ್ನರಂತೆ ವರ್ಣಕಕವಿಗಳ (Lyrical poets) ಸಾಲಿಗೆ ಸೇರಿದವಳಾಗಿದ್ದಳು (ಪ್ರಬಂಧ. ೭೬). [ಸಂ.]

**ವರ್ಣಕಕೃತಿ** (ನಾ). = ವರ್ಣಕ ೯ : ಅಱುವತ್ತೇೞುಂ ಕಂದದೊಳ್ [ಪಾಠಾಂ. ಕಂದದ . ಉರುತರ ಭಾರತದ ಕೃತಿಯೊಳಿರುತಿಹ ಶಬ್ದಾರ್ಥರಹಸ್ಯ ಪರಿಷ್ಕೃತಿಗೋ] ಉಱುವ ಮಹಾಭಾರತದೀ ವರ್ಣಕಕೃತಿಯೊಳ್ ತುಱುಗಿಹ ಶಬ್ದಾರ್ಥಕ್ಕೋಲ್ಕರಮಾಗಿಯೆ ಪೇಳ್ದೆನಖಿಲಶಬ್ದಾಂತರಮಂ (ಭಾರನಿ. ೬೮). [ಸಂ.]

**ವರ್ಣಕರ್ಮ** (ನಾ). ಬಣ್ಣದ ಕೆಲಸ ; ವರ್ಣಚಿತ್ರಣ : ಕಂಡು ನಿಷ್ಪಂದಳಾದಳು ಕನ್ಯೆ . . . ಕುಂಚಿಗೆಯ ವರ್ಣಕರ್ಮಂ ಚಿತ್ರಸ್ಥವಾದಂತೆವೋಲ್ (ಚಿತ್ರಾಂಗ. ೭-೧೭೦). [ಸಂ. ವರ್ಣಕರ್ಮನ್]

**ವರ್ಣಕವಿತ್ವ** (ನಾ). = ವರ್ಣಕ ೯: ವರ್ಣ್ಣಕವಿತ್ವದೊಳ್ ನೆಗರ್ದ್ದ(ಳ್ದ) ವೇದಾಂತಂಗಳೊಳು . . . ಸಮಸ್ತಕಳೆಯೊಳು ವಾಗೀಶನಿಂದಂ ಯಶೋಧಿಕರಾದರ್ (ಎಇ. XVIII, ೧೭೪-೧೮; 1067). [ಸಂ.]

**ವರ್ಣಕಾರ** (ನಾ). ಬಣ್ಣ ಹಾಕುವವನು ; ಬಣ್ಣಗಾರ : ಅವನ ಸಮಕಾಲೀನ ಮಿಾರಕನೆಂಬವನು ಸಹ ವರ್ಣಕಾರ(Colourist) ರಲ್ಲಿ ಬಹಳ ಪ್ರಸಿದ್ಧನು (ಭಾಚಿತ್ರ. ೨೯). [ಸಂ.]

**ವರ್ಣಕೃತಿ** (ನಾ). = ವರ್ಣಕ ೯ : ಬಗೆವೊಡೆ . . . ವರ್ಣಕೃತ್ಯಳಂಕೃತಿಗಾದಂ ಸೊಗಯಿಪ ನಾಯಕಮಣಿ ತಾನೆ ಗಡಂ ಚಂದ್ರಪ್ರಭಾಭಿರಾಮಂ ನಾಮಂ (ಚಂದ್ರಪು. ೧೨-೨೦೨). [ಸಂ.]

**ವರ್ಣಗಣ** (ನಾ). [ಛಂದ] ಅಕ್ಷರವೃತ್ತದ ಪ್ರಸ್ತಾರಕ್ರಮದಲ್ಲಿ ಬಳಸುವ ಮ, ಯ, ರ, ಸ, ತ, ಜ, ಭ ಮತ್ತು ನ ಎಂಬ ಎಂಟುವಿಧದ ಗಣಗಳಲ್ಲಿ ಒಂದು ; ಅಕ್ಷರಗಣ : ಗಣವೆಂದರೆ ಕೆಲವು ನಿಯಮಗಳಿಗನುಸಾರವಾಗಿ ವಿಂಗಡಿಸಿದ ಅಕ್ಷರಗಳ ಗುಂಪು. ಅದು ವರ್ಣಗಣ, ಮಾತ್ರಾಗಣ ಎಂದು ಎರಡು ವಿಧ (ಕೃಪಿಡಿ. ೬೯); ಮಾತ್ರಾಗಣ ಹಾಗು ವರ್ಣಗಣಗಳ ಲೆಕ್ಕಾಚಾರವನ್ನು ಮಿಾರಿದ ಲಯ ಈ ವೃತ್ತದಲ್ಲಿ ನುಡಿಯುತ್ತದೆ (ಛಂದೋವಿ. ೪೫). [ಸಂ.]

**ವರ್ಣಚತುಷ್ಕ** (ನಾ). ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳು ; ಚಾತುರ್ವರ್ಣ್ಯ : ವದನಂ ತೋಳ್ ತೊಡೆ ಪಾದಮೆಂಬಿವನಿವಂ ಶುಶ್ರೂಷೆಗೆಯ್ವಲ್ಕೆ ಲಾಭದಲಂಪಿಂ ನಡೆಯಲ್ಕೆ ಕೈದುವಿಡಿಯಲ್ಕೋದಲ್ಕದಂ ಬೇಱೆ ತೋಱಿದೊಡಾ ವರ್ಣಚತುಷ್ಕಮಂ ಕುಮತಿಗಳ್ ತತ್ಸ್ಥಾನದೊಳ್ ಮುನ್ನ ಪುಟ್ಟಿದುವೆಂಬರ್ (ಆದಿಪು. ೮-೭೩). [ಸಂ.]

**ವರ್ಣಚಿತ್ರ** (ನಾ). ೧. ಬಣ್ಣಗಳಿಂದ ರಚಿತವಾದ ಚಿತ್ರ : ಶ್ರೀಮಂತ ಅನುಕೂಲಸ್ಥ ಮನೆತನಗಳ ಸ್ತ್ರೀಪುರುಷರು . . . ವರ್ಣಚಿತ್ರಗಳನ್ನು ರಚಿಸುತ್ತಿದ್ದರು (ಭಾರದ. ೫೨೪). ೨. ಬಣ್ಣದ ಚಲನಚಿತ್ರ : ಇತ್ತೀಚೆಗೆ ಆಗ್ಫಾಕಲರ್ ಇಲ್ಲವೆ ಗೇವಾಕಲರ್ ವಿಧಾನ ವರ್ಣಚಿತ್ರಗಳ ತಯಾರಿಕೆಯಲ್ಲಿ ಹೆಚ್ಚುಹೆಚ್ಚಾಗಿ ಉಪಯೋಗಿಸಲ್ಪಡುತ್ತದೆ (ಕವಿಕೋ. VII. ೨೩೩). ೩. [ಕಾವ್ಯಮಿ] ಕನಿಷ್ಠಸಂಖ್ಯೆಯ ವ್ಯಂಜನಗಳನ್ನುಪಯೋಗಿಸಿ ರಚಿಸಿದ ಒಂದು ಬಗೆಯ ಪದ್ಯರಚನೆ ; ಚಿತ್ರಕವಿತ್ವದ ಒಂದು ಪ್ರಕಾರ. [ಸಂ.]

**ವರ್ಣಚ್ಛವಿ** (ನಾ). ಬಣ್ಣದ ಹೊಳಪು ; ವರ್ಣಕಾಂತಿ : ಉದಯದರುಣನ ಕರುವ ಹಿಡಿದಂದದಲಿ ವರ್ಣಚ್ಛವಿಯಲೊಪ್ಪುವ ಕುದುರೆಗಳ ತಳತಳಿಸಿ ಬೆಳಗುವ ಕೊಡನ ಹಳವಿಗೆಯ ಗದಗದಿಪ ಮಣಿಮಯದ ತೇರಿನ ಕದನಕೋಳಾಹಳನು . . . ನೋಡ್ಕೆ ದ್ರೋಣನವನು (ಕುವ್ಯಾವಿ. ೬-೫೪). [ಸಂ.]

**ವರ್ಣಚ್ಯುತಕ** (ನಾ). [ಕಾವ್ಯಮಿ] ಚಿತ್ರಕವಿತ್ವದ ಒಂದು ಪ್ರಕಾರ ; ಒಂದು ಪದ್ಯದ ಅರ್ಥವು ಸ್ಪಷ್ಟವಾಗಲು ಅಗತ್ಯವಾಗಿ ಬೇಕಾದ ಯಾವುದೇ ಒಂದು ಅಕ್ಷರವು ಪದ್ಯದ ಯಾವುದೇ ಒಂದು ಸ್ಥಾನದಲ್ಲಿ ಲೋಪವಾಗಿರುವಂತೆ ರಚಿಸಿದ ಪದ್ಯ : ತಳಮಳ[ಗೊ]ತ್ತುಂ ಜನಿತನಿಜಭೀತಿ ಮನಂಗೊಳೆ ಕಳವಳಿಸಿ ಚಲಿತ ನಿಲಲ್ಕಾದೆ [ಮೊ]ಕ್ಕಳ[ಮೊ]ಳಗೆ ಸುಟೆದರರಸಂ ಮನದೊಳ್ ಮುಳಿದಸಿಯನೆ ನೋ[ಡೆ] ಪರಿವಾರದವರ್ (ವರ್ಣಚ್ಯುತಕಂ) (ಕವಿರಾ. ೨-೧೫೧). IP ಈ ಪದ್ಯದಲ್ಲಿ 'ಮುಳಿದಸಿಯನೆ' ಎಂಬಲ್ಲಿ 'ದ' ಅಕ್ಷರದ ನಂತರ 'ರ' ಎಂಬ ಅಕ್ಷರವನ್ನು ಸಂಯೋಜಿಸಬೇಕು. ಇಲ್ಲಿ 'ರ' ವರ್ಣಚ್ಯುತವಾಗಿದೆ. [ಸಂ.]

**ವರ್ಣಛಂದಸ್ಸು** (ನಾ). [ಛಂದ] ಅಕ್ಷರಗಣಗಳಿಂದಾದ ವೃತ್ತಗಳುಳ್ಳ ಛಂದಸ್ಸು ; ಅಕ್ಷರಛಂದಸ್ಸು : ವೃತ್ತ ಅಥವಾ ವರ್ಣಛಂದಸ್ಸು ಮುಖ್ಯವಾಗಿ ಸಂಸ್ಕೃತಛಂದಸ್ಸು (ಛಂದೋವಿ. ೪೪). [ಸಂ. ವರ್ಣಛಂದಸ್]

**ವರ್ಣತ್ರಯ** (ನಾ). ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ಎಂಬ ಮೂರು ವರ್ಣಗಳು : ತನ್ನ ಮುನ್ನ ಪಡೆದ ವರ್ಣತ್ರಯಕ್ಕಂ ಭರತನಿಂದಮಿನ್ನಪ್ಪ ವಿಪ್ರವರ್ಣಕ್ಕಂ ಯಥೋಚಿತವೃತ್ತಿಗಳನಱಿಪಲು (ಆದಿಪು. ೮-೭೨ ವ); ಉಳಿದ ವರ್ಣತ್ರಯಕೆ ಬೆಸಕೈವಳತೆಯಲಿ ಶೂದ್ರನು ಕೃತಾರ್ಥನು (ಕುವ್ಯಾವಿ. ೭-೧೭). [ಸಂ.]

**ವರ್ಣದಾಸಿ** (ನಾ). ಚೆಲುವೆಯಾದ ದಾಸಿ ; ಸುಂದರಳಾದ ಸೇವಕಿ : ಒಂದೊಂದು ರಥದಲ್ಲಿಯೂ ಸರ್ವಾಲಂಕಾರಭೂಷಿತೆಯರಾದ ಮೂವರು ಮೂವರು ವರ್ಣದಾಸಿಯರನ್ನು ಇರಿಸಿ, ಅಂಥ ಐದುನೂರು ರಥಗಳನ್ನು ಕೊಟ್ಟನು (ಹತ್ತುಮ. ೩೧). [ಸಂ. ವರ್ಣದಾಸೀ]

**ವರ್ಣದ್ವೇಷ** (ನಾ). ೧. ವಿಭಿನ್ನಜಾತಿಗಳಲ್ಲಿ ಪರಸ್ಪರ ಉಂಟಾಗುವ ವೈರ ; ಜಾತಿದ್ವೇಷ. ೨. ಸಾಮಾನ್ಯವಾಗಿ ಬಿಳಿಯರಿಗೆ ಕಪ್ಪುಜನಾಂಗಗಳ ಮೇಲೆ ಇರುವ ದ್ವೇಷ : ಬೇರೆ ಕಡೆಗೆ ಮನೆ ಹಿಡಿಯಬೇಕೆಂದರೆ ಇಂಗ್ಲೆಂಡದ ವರ್ಣದ್ವೇಷ ಅಡ್ಡಬರುತ್ತದೆ (ಹೊಸಕ್ಕಿ. ೨೦೦); ವರ್ಣದ್ವೇಷದಿಂದ ಮೊದಲುಗೊಂಡು ಮಿತಿಮೀರಿದ ಅಹಂಕಾರದವರೆಗೆ ಎಲ್ಲ ದುರ್ಗುಣಗಳೂ ಇಂಥ ಸಮಾಜರಚನೆಯಲ್ಲಿ ಮನೆ ಮಾಡಿಕೊಂಡಿರುತ್ತವೆ (ನವ್ಯಕಾ. ೧೯). [ಸಂ.]

**ವರ್ಣಧರ್ಮ** (ನಾ). ಆಯಾಯ ವರ್ಣದವರು ಪಾಲಿಸಬೇಕಾದ ಅವರವರ ಆಚಾರ, —ಧರ್ಮ : ಮೊದಲೊಳಾಂ ಬ್ರಾಹ್ಮಣಂ, ವರ್ಣಧರ್ಮವನಧಃಪಾತಿಸಲೆ? (ಹರಿಶ್ಚ. ೧೪-೬೬); ವರ್ಣಗಳೂ ವರ್ಣಧರ್ಮಗಳೂ ವಿಧಿವತ್ತಾದುವುಗಳು (ಭಾರದ. ೧೧೬). [ಸಂ.]

**ವರ್ಣನ** (ನಾ). ೧. ಬಣ್ಣಹಾಕುವುದು ; ಬಣ್ಣತುಂಬುವುದು : "ವರ್ಣನಂ, ವರ್ಣನೀಯಂ = ಬಣ್ಣನೆ" (ಕಾಶಕ್ಕ. ೨೯೦). ೨. ಬಣ್ಣಿಸಿ ಹೇಳುವುದು ; ವರ್ಣನೆ : ಅನುಗುಣಮಾಗೆ ವರ್ಣನಂ . . . ಸಯ್ತು ಪೇೞ್ವುದಿಂಪೆನಿಸೆ ಕವೀಶ್ವರಂ ಕೃತಿಯಂ (ಪುಷ್ಪಪು. ೧-೩೯); ವರ್ಣನದಿಂದ್ರಿಯನಂದನವನು ದಾಂಟುತೆ ದರ್ಶನಮುಕ್ತಿಯ ಸೇರಿ ವ್ಯಕ್ತಿತೆ ಮೈಮರೆವುದು ಸೌಂದರ್ಯಸಮಾಧಿಯೊಳಾನಂದವ ಹೀರಿ (ಪಕ್ಷಿಕಾ. ೨೪-೧೧). ೩. ಹೇಳಿಕೆ ; ಉಕ್ತಿ. ೪. ಹೊಗಳಿಕೆ ; ಸ್ತುತಿ ; ಸ್ತೋತ್ರ : "ಅರ್ಥವಾದಃ, ಪ್ರಶಂಸಾ . . . ಶ್ಲಾಘಾ, ವರ್ಣನಂ – ಈ ೧೦ ಸ್ತುತಿಯ ನಾಮಂ" (ಹಲಾಯು. ೨೪-೧೪೪). [ಸಂ.]

**ವರ್ಣನಾತ್ಮಕ** (ಗು). ೧. ವರ್ಣನೆಗಳಿಂದ ತುಂಬಿದ. ೨. ವಿವರವಾದ ; ವ್ಯಾಖ್ಯಾನದಿಂದ ಕೂಡಿದ : ವರ್ಣನಾತ್ಮಕ ವ್ಯಾಕರಣವನ್ನು ಬರೆದ ಕೇಶಿರಾಜನ ಕಾಲಕ್ಕಾಗಲೆ ಪಾಠ ಆಗಿಹೋಗಿತ್ತು (ದ್ರಾವಿ. ೩೩೭). [ಸಂ.]

**ವರ್ಣನಾವೈಖರಿ** (ನಾ). ಬಣ್ಣಿಸುವ ರೀತಿ ; ವರ್ಣನೆಯ ಶೈಲಿ : ಆಂಡಯ್ಯನ . . . ಪ್ರತಿಭೆಯು ಪ್ರಕಟವಾಗಿರುವುದು ವರ್ಣನಾವೈಖರಿಯಲ್ಲಲ್ಲ, ಅಚ್ಚಗನ್ನಡದ ವಿರಚನೆಯಲ್ಲಿ ! (ಸಾಹಿಸ. ೧೭೦). [ಸಂ. ವರ್ಣನಾವೈಖರೀ]

**ವರ್ಣನೆ** (ನಾ). ೧. ವಿಷಯವೊಂದನ್ನು ವಿಸ್ತಾರವಾಗಿ ನಿರೂಪಿಸುವುದು, — ಬಣ್ಣಿಸಿ ಹೇಳುವುದು : ಅವುಗಳ ವರ್ಣನೆಯನ್ನು ಮುಂದಿನ ಅಧ್ಯಾಯದಲ್ಲಿ ಎತ್ತಿಕೊಳ್ಳುತ್ತೇವೆ (ನಕ್ಷತ್ರ. ೭೦); ಗುಣವರ್ಮನ ಶೃಂಗಾರಿಕವರ್ಣನೆಗಳಲ್ಲಿ ಉತ್ಥಾನವೆನ್ನುವಷ್ಟು ಬಿಚ್ಚುಬಗೆಯಿದೆ (ಕಸಾಚ. ೫೧). ೨. ಹೊಗಳಿಕೆ ; ಪ್ರಶಂಸೆ : "ನುತಿಯರ್ಥವಾದಂ ವಿಕೀರ್ತನಂ ವರ್ಣನೆ ಸ್ತುತಿ . . . ಶ್ಲಾಘೆಯೆನಲು ಕೊಂಡಾಟಮಕ್ಕುಂ" (ಮಂಗರಾ. ೨೬-೩). [ಸಂ. ವರ್ಣನಾ]

**ವರ್ಣಪಂಚಕ** (ನಾ). ೧. ಐದು ಅಕ್ಷರಗಳ ಸಮೂಹ. ೨. 'ನಮಃ ಶಿವಾಯ' ಎಂಬ ಐದು ಅಕ್ಷರಗಳುಳ್ಳ ಮಹಾಮಂತ್ರ ; ಪಂಚಾಕ್ಷರಿ : ವರ್ಣಪಂಚಕವೆತ್ತ ಕಾಂತಿಜಿತಾರ್ಣವೋದ್ಭವಧೈರ್ಯ . . . ವರ್ಣಿಸುವೆ ನಾನೊಲಿದು ನೀನಾಕರ್ಣಿಸಯ್ಯ ಮದೀಯ ವಿಜ್ಞಾಪನವನು (ಬಸವು. ೫-೧). [ಸಂ.]

**ವರ್ಣಪಲ್ಲಟ** (ನಾ). ೧. ಬಣ್ಣಗಳಲ್ಲುಂಟಾಗುವ ವ್ಯತ್ಯಾಸ : ಮಸೂರಗಳು ಉಂಟುಮಾಡುವ ಪ್ರತಿಬಿಂಬಗಳಲ್ಲಿ ಬೇರೆ ಬೇರೆ ಬಣ್ಣದ ಕಿರಣಗಳು ಒಂದೇಕಡೆ ಸಂಧಿಸದೆ ಇರುವುದರಿಂದ ಉಂಟಾಗುವ ನ್ಯೂನತೆಗೆ ವರ್ಣಪಲ್ಲಟವೆಂದು (Chromatic Aberration) ಹೆಸರು (ಭೌತವಿ. ೧೮೮). ೨. [ಭಾಷಾಶಾ] ಒಂದು ಪದದಲ್ಲಿ ಸ್ವರ ಅಥವಾ ಸ್ವರಸಹಿತ ವ್ಯಂಜನಗಳ ಸ್ಥಾನಗಳಲ್ಲಿ ಉಂಟಾಗುವ ವ್ಯತ್ಯಾಸ ; ಅಕ್ಷರಪಲ್ಲಟ : 'ಪಾದರಸ' ವರ್ಣಪಲ್ಲಟವನ್ನು ಪಡೆದು 'ಪಾರದ' ವಾಯಿತು (ಭಾಷಾಶಾ. ೧೨೯). IP "ಭಾಷೆಯಲ್ಲಿ ನಡೆದ ಮೂರನೆಯ ಬದಲಾವಣೆಯೆಂದರೆ Metathesis ಇಲ್ಲವೆ ಅಕ್ಷರಪಲ್ಲಟ. ಇಂಥ ಶಬ್ದಗಳಲ್ಲಿ ಹಳಗನ್ನಡದ ರೂಪಗಳಿಗೂ ಇಂದಿನ ರೂಪಗಳಿಗೂ ತುಂಬಾ ವ್ಯತ್ಯಾಸ ಕಂಡುಬರುತ್ತದೆ. ೧೩ನೆಯ ಶತಮಾನದ ಕೇಶಿರಾಜನೇ ಮಲರ್, ಅಲರ್ — ಮೊದಲಾದ ಶಬ್ದಗಳು 'ಅರಲ್' ಆಗುತ್ತದೆಂದೂ, 'ಮರಲ್' ಎಂಬುದಂತೂ 'ಮಳಲ್', 'ಮಣಲ್' ಎಂದು ಕೂಡ ಆಗುತ್ತದೆಂದೂ ತನ್ನ ಕಾಲದಲ್ಲೇ ಒಪ್ಪಿತವಾದ ಅಕ್ಷರಪಲ್ಲಟಗಳನ್ನು ಹೇಳಿದ್ದಾನೆ" (ಭಾಷಾಶಾ. ೧೨೮). [ವರ್ಣ + ಪಲ್ಲಟ]

**ವರ್ಣಪುಷ್ಪ** (ನಾ). ೧. ಬಣ್ಣದ ಹೂವು. ೨. ಒಂದು ಬಗೆಯ ಹೂವು ; ನೆಲರುದ್ರಾಕ್ಷಿ ಹೂವು : "ವರ್ಣಪುಷ್ಪಂ, ಅಮ್ಲಾತಕಂ — ಈ ೨ ಬಣ್ಣದ ಹೂ" (ಹಲಾಯು. ೩೫-೫೪). [ಸಂ.]

**ವರ್ಣಪೂರ** (ಗು). ೧. ಬಣ್ಣವನ್ನು ತುಂಬಿದ ; ಬಣ್ಣವಿಟ್ಟ. (ನಾ). ೨. ಬಣ್ಣದಿಂದ ತುಂಬಿದುದು ; ವರ್ಣಮಯವಾದುದು : ಬಳಸಿದ ನಂದನಂಗಳ ಪಸುರ್ಪಿನ . . . ನೀಳನೀರಚಾಕಳಿತತಟಾಕ ಮಂಗಳದ ಕರ್ಪಿನ ನೇರ್ಪಮರ್ದಂಗಜಂಗೆ ಮಂಗಳಕರವರ್ಣಪೂರಪರಿಮಂಡಳಮಾಯ್ತು ಸುರಮ್ಯಮಂಡಳಂ (ಅನಂಪು. ೧೧-೬). ೩. ವಿಧವಿಧವಾದ ಬಣ್ಣಗಳಿಂದ ಕೂಡಿದ ವಸ್ತ್ರ, ಚಿತ್ರ ಮುಂತಾದುವು : "ಬಣ್ಣವುರವೆಂದು ವರ್ಣಪೂರಂ" (ಕಕಸಾ. ೬೩-೪೦೩). ೪. ಹಾಸುಗಂಬಳಿ ; ಜಮಖಾನೆ : 'ನವರತ್ನವರ್ಣಪೂರ' ಪರಾ. [ಸಂ.]

ವರ್ಣಭೇದ (ನಾ). ಬಿಳಿಯರು ಕಪ್ಪುಜನಾಂಗಗಳನ್ನು ಕೀಳಾಗಿ ಕಾಣುವ ಪ್ರವೃತ್ತಿ : ವರ್ಣಭೇದನೀತಿಯಿಂದ ಆಫ್ರಿಕಾದ ಜನರು ಅಪಾರಕಷ್ಟಕ್ಕೀಡಾಗಿದ್ದಾರೆ (ರೂಢಿ). [ಸಂ.]

ವರ್ಣಮಾಲೆ (ನಾ). [ವ್ಯಾಕ] ಒಂದು ಭಾಷೆಯ ಮೂಲಾಕ್ಷರಗಳ ವ್ಯವಸ್ಥಿತವಾದ ಯಾದಿ ; ಅಕ್ಷರಮಾಲೆ : ಸ್ವರಗಳನ್ನೂ ಅನುಸ್ವಾರವಿಸರ್ಗಗಳನ್ನೂ ವ್ಯಂಜನಗಳನ್ನೂ ಒಂದು ಕ್ರಮದಲ್ಲಿ ಜೋಡಿಸಿಕೊಡುವ ಪದ್ಧತಿ ಹಿಂದಿನಿಂದ ಬಂದಿದೆ. ಈ ಜೋಡಣೆಗೆ ಕನ್ನಡ ವರ್ಣಮಾಲೆ ಎಂದು ಹೆಸರು (ಮಧ್ಯಮಾ. ೧೨); 'ಅಕ್ಷರ' ಎಂಬುದು ಭಾರತೀಯ ವರ್ಣಮಾಲೆಗೆ ಲಕ್ಷಣ–ಲಕ್ಷ್ಯಗಳೆರಡೂ ಆಗಿದೆ (ಸಂಶೋಧ. ೯).

[ಸಂ. ವರ್ಣಮಾಲಾ]

ವರ್ಣಲಾಭ (ನಾ). ೧. [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು ; ಜೈನಬ್ರಾಹ್ಮಣನಿಂದ ಅನುಗ್ರಹೀತನಾಗಿ ಬ್ರಾಹ್ಮಣತ್ವವನ್ನು ಪಡೆಯುವುದು : ಮಾತಾಪಿತೃಮತದಿಂ . . . ಬೇಱೊಂದುಮನೆಯೊಳ್ ಸ್ವತಂತ್ರನಾಗಿರ್ದು . . . ಧರ್ಮಮುಮನುಪಾರ್ಜಿಸುವಂತು ಮಕ್ಕಳಂ ಗೃಹಧರ್ಮದೊಳನುಷ್ಠಿಸುವುದು ವರ್ಣಲಾಭಕ್ರಿಯೆ (ಚಾವುಂಪು. ೨೧೬); ವಿವಾಹಿತನು ನಾಲ್ಕುಜನ ಜೈನಬ್ರಾಹ್ಮಣರಂ ತನ್ನ ಮನೆಗೆ ಕರೆತಂದು ಪೂಜಿಸಿ . . . ಅವರುಗಳಿಂ "ನೀನೂ ಬ್ರಾಹ್ಮಣನಾದೆ" ಯೆಂದು ಅನ್ನಿಸಿಕೊಳ್ಳುವುದೇ ವರ್ಣಲಾಭವೆಂಬ ೧೩ನೇ ಕರ್ಮವು (ಪುರುಚ. ೨೧೭). ೨. ತಂದೆಯ ಆಜ್ಞೆಯಂತೆ ಮದುವೆಯಾದ ಮಗನು ಪ್ರತ್ಯೇಕಸಂಸಾರವನ್ನು ಹೂಡುವಿಕೆ : ಆದಾನಪ್ರೀತಿ . . . ವಿವಾಹ ವರ್ಣಲಾಭ . . . ನಿರ್ವೃತಿಯೆಂಬಯ್ವತ್ತೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ); ವಿವಾಹಿತನಾಗಿ ಗೃಹಸ್ಥಾಶ್ರಮವಂ ಪಾಲಿಸುತ ಸ್ವಾತಂತ್ರ್ಯವಂ ವಹಿಸದೆ ಪಿತ್ರಾಜ್ಞೆಯಂ ಮೀರದೆ ಇರುವ ಪುತ್ರನಂ ತಂದೆಯು ನೋಡಿ ಶುಭದಿನದೊಳ್ ದೇವ, ಗುರು, ಅಗ್ನಿ, ದ್ವಿಜಸಾಕ್ಷಿಯಾಗಿ ಕೆಲವು ದ್ರವ್ಯಂಗಳಂ ಕೊಟ್ಟು ಎಲೈ ಪುತ್ರನೇ ಈ ದ್ರವ್ಯಮಂ ಸ್ವೀಕರಿಸಿ ಪ್ರತ್ಯೇಕವಾಗಿ ವಾಸಮಾಡು . . . ಎಂದು ಆಜ್ಞಾಪಿಸಬೇಕು. ಆ ಪುತ್ರನು ಪಿತೃವಾಕ್ಯವಂ ಪರಿಪಾಲಿಸುವುದೇ ವರ್ಣಲಾಭವೆಂಬ ೧೮ನೆಯ ಕರ್ಮವು (ಪುರುಚ. ೨೦೯).

[ಸಂ.]

ವರ್ಣವಿಕಾರ (ನಾ). ೧. ಬಣ್ಣಗೆಡುವಿಕೆ ; ನಿಸ್ತೇಜತೆ : ಅವಳು ಹೇಗೆ ಮೂಳೆ ಬಿಟ್ಟುಕೊಂಡು ವರ್ಣವಿಕಾರವಾಗಿದ್ದ ಬೆರಳುಗಳಿಂದ ತನ್ನ ಕೈಯನ್ನು ಅದುಮಿದ್ದಳು (ಪುನರು. ೧೩೦). ೨. [ವ್ಯಾಕ] ಸಮಾಸ, ಸಂಧಿ ಮುಂತಾದ ಕ್ರಿಯೆಗಳಾಗುವಾಗ ಉಂಟಾಗುವ ಅಕ್ಷರಸ್ವರೂಪಗಳ ವ್ಯತ್ಯಾಸ : ಪೂರ್ವಕಾಲದಿಂದಲೇ ಬಂದ ವಿದ್ಯಾಸಂಪತ್ತನ್ನು ರಕ್ಷಿಸಬೇಕಾದರೆ ಲೋಪ, ಆಗಮ, ಆದೇಶಾದಿ ವರ್ಣವಿಕಾರಗಳ ಪರಿಜ್ಞಾನ ಅವಶ್ಯ (ಸಂಶೋಧ. ೩೯). [ಸಂ.]

ವರ್ಣವಿಪರ್ಯಾಯ (ನಾ). = ವರ್ಣಪಲ್ಲಟ ೨: ಕೆಲವು ಶಬ್ದಗಳಲ್ಲಿ ವರ್ಣವಿಪರ್ಯಯವು ಕಂಡುಬರುತ್ತದೆ. ಉದಾ :- ಅಲರ್ > ಅರಳು; ನೆಳಲ್ > ನೆರಳು (ಕೈಪಿಡಿ. ೩೨೨); ಈ 'ವರ್ಣವಿಪರ್ಯಯ'ವು (Metathesis) ಭಾಷಾಶಾಸ್ತ್ರಾಂತರ್ಗತವಾದ ಒಂದು ಲಕ್ಷಣ (ಸಂಶೋಧ. ೮೫). [ಸಂ.]

ವರ್ಣವಿಭಾಗ (ನಾ). ೧. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ಪ್ರತ್ಯೇಕ ಭಾಗ: ಬ್ರಾಹ್ಮಣಾದಿ ವರ್ಣವಿಭಾಗವು ಯಾವಾಗ ಪ್ರಾರಂಭವಾಯಿತೆಂದು ವಿಚಾರಿಸಿದರೆ ಮಹಾಭಾರತಾದಿ ಪುರಾಣಗಳಿಂದ ಹೀಗೆ ತಿಳಿದುಬರುತ್ತದೆ (ಹಿಂದಸಾ. ೧೫೭). ೨. [ಭಾಷಾಶಾ] ಧ್ವನಿಭೇದ; ಧ್ವನಿ ವಿಭಜನೆ: "ಅಕ್ಷರ" ಎಂಬ ಶಬ್ದವನ್ನು ವರ್ಣವಿಭಾಗ (ಧ್ವನಿಯ ವಿಂಗಡಣೆ) ಮಾಡಿದರೆ . . . ಆರುಧ್ವನಿಗಳ ಸಮಾಮ್ನಾಯ ಕಾಣುತ್ತದೆ (ಸಂಶೋಧ. ೮).

[ಸಂ.]

ವರ್ಣವಿಳಾಸತೆ (ನಾ). ಶಬ್ದಸೌಂದರ್ಯ: ಶಿವಕರ್ಣಾಕಾರಶ್ರೀಭವಮಾ ಶ್ರೀಕಾರ ಮಪ್ಪುದಲ್ಲದೊಡುರುವರ್ಣವಿಳಾಸತೆ ಶಾಸ್ತ್ರಾದಿಶ್ರವಣತೆ ಶುಭಕರಣಭಾವಮೇಂ ಸಮನಿಪ್ಪುದೇ (ರಾಜಶೇ. ೧೪-೧೨೫). [ಸಂ. ವರ್ಣವಿಲಾಸತಾ]

ವರ್ಣವೃತ್ತ (ನಾ). [ಛಂದ] ಅಕ್ಷರಗಣಗಳಿಂದ ರಚಿತವಾದ ವೃತ್ತ; ಅಕ್ಷರ ವೃತ್ತ: ವರ್ಣಗಣನಿಯಮಕ್ಕೊಳಪಟ್ಟ ಪದ್ಯವು ವರ್ಣವೃತ್ತವು (ಕೈಪಿಡಿ. ೬೯). [ಸಂ.]

ವರ್ಣವ್ಯತ್ಯಯ (ನಾ). ೧. [ಕಾವ್ಯಮೀ] ಕಾವ್ಯರಚನೆಯಲ್ಲಿ ಅಕ್ಷರಗಳನ್ನು ಪಲ್ಲಟಗೊಳಿಸಿ ರಚಿಸುವ ಒಂದು ಪ್ರಕಾರ ; ☞ "ವರ್ಣವ್ಯತ್ಯಯ ಎಂದರೆ ಅಕ್ಷರಗಳ ಸ್ಥಾನಗಳು ಹಿಂದುಮುಂದಾಗುವುದು" (ಕವಿರಾ. ೨-೧೪೭ ಟಿಪ್ಪಣಿಗಳು). ಇದಕ್ಕೆ 'ಕವಿರಾ. ೨-೧೪೮' ರಲ್ಲಿ ಒಂದು ದೃಷ್ಟಾಂತವಿದೆ : "ಅವನಾಮಕತ್ವಕ್ಕುಚಯಂ ಕ್ರವನೊಚರಾಮಯದಷ್ಟಪಾಯದೆಗಳೊಳ್ ಸೆವಿಸೆವಮಲಹೈವಸುಮುಕ್ತಿಮಹಾದೇವ ನಿನ್ನನ್ನನಪ್ಪೊನಸಹಾಯಗುಣಂ". ೨. = ವರ್ಣಪಲ್ಲಟ ೨: ಒಂದು ಪದದಲ್ಲಿರುವ ಧ್ವನಿಗಳು ಸ್ಥಾನಪಲ್ಲಟವಾಗುವುದೇ ಅಕ್ಷರಪಲ್ಲಟ ಅಥವಾ ವರ್ಣವ್ಯತ್ಯಯ (ಭಾಷಾವಿ. ೪೪). [ಸಂ.]

ವರ್ಣವ್ಯವಸ್ಥೆ (ನಾ). ಪ್ರಾಚೀನ ಹಿಂದೂಸಾಮಾಜಿಕ ವ್ಯವಸ್ಥೆ : ಅವರವರ ವೃತ್ತಿವ್ಯವಸ್ಥೆಯೇ ಹಿಂದೆ ವರ್ಣವ್ಯವಸ್ಥೆಯಾಗಿತ್ತು (ಹಿಂದಸಾ. ೧೫೮). [ಸಂ. ವರ್ಣವ್ಯವಸ್ಥಾ]

ವರ್ಣಶಿಲ್ಪ (ನಾ). ೧. ಬಣ್ಣದ ಚಿತ್ರ. ೨. ಬಣ್ಣದ ಚಿತ್ರವನ್ನು ಬರೆಯುವುದು ; ವರ್ಣಚಿತ್ರಣ. ೩. ಧ್ವನಿಯ ಕೌಶಲಪೂರ್ಣವಾದ ರಚನೆ : ಅವರ ಶಾರೀರದ ಧ್ವನಿಯ ವರ್ಣಶಿಲ್ಪವನ್ನು ನಿರುಕಿಸಿದರೆ ಬಹುಬಣ್ಣಗಳ ವಿನ್ಯಾಸವನ್ನು ಕಾಣಬಹುದು (ಸಂಗೀತ. ೩). [ಸಂ.]

ವರ್ಣಶಿಲ್ಪಿ (ನಾ). ಬಣ್ಣದ ಚಿತ್ರಗಳನ್ನು ರಚಿಸುವ ಕಲಾವಿದ ; ವರ್ಣಚಿತ್ರಕಾರ : ಪ್ರಕೃತಿ ಒಂದು ಅದ್ಭುತವರ್ಣಶಿಲ್ಪಿ. ಅದು ಆಕೃತಿಗಳನ್ನು ರೂಪಿಸುವುದು ರೇಖೆಗಳಿಂದ, ಬಣ್ಣಗಳಿಂದ (ಸೌಂದಸ. ೧); ವರ್ಣಶಿಲ್ಪಿಗೆ ಬಣ್ಣ – ಕಾಗದ, ಕವಿಗೆ ಭಾಷೆ ಇವೆಲ್ಲವೂ ಅವನ ಭಾವಾಭಿವ್ಯಕ್ತಿಯ ಮಾಧ್ಯಮಗಳು (ಸೌಂದಸ. ೭೨). [ಸಂ. ವರ್ಣಶಿಲ್ಪಿನ್]

ವರ್ಣಶೂನ್ಯ (ಗು). ೧. ಬಣ್ಣವಿಲ್ಲದ ; ವರ್ಣರಹಿತವಾದ. (ನಾ). ೨. ಬಣ್ಣವಿಲ್ಲದವನು. ೩. ಆಕಾರವಿಲ್ಲದವನು ; ನಿರಾಕಾರ ಸ್ವರೂಪನಾದವನು. ೨, ೩ : ಈ ವರ್ಣಮಿಾ ವರ್ಣಶೂನ್ಯನ ಭೃತ್ಯಂಗೆಸೆವಂದಮಚ್ಚರಿ (ಜಗವಿ. ೧-೫೧). [ಸಂ.]

ವರ್ಣಸಂಕರ (ನಾ). ೧. (ವಿವಾಹ ಸಂಬಂಧದಿಂದ) ಬೇರೆ ಬೇರೆ ಜಾತಿಗಳು ಒಂದುಗೂಡುವಿಕೆ ; ಜಾತಿಸಂಕರ : ಪ್ರಜಾಪತಿಯುಂ . . . ಯಥಾ ಯೋಗ್ಯಮುಪದೇಶಂಗೆಯ್ದು ವರ್ಣಸಂಕರಮಾಗಲೀಯದೆ ತಂತಮ್ಮ ಜಾತಿಗಳೊಳ್ ನಣ್ಪುಮಂ ಕೊಳ್ಕೊಡೆಯುಮಂ ನಿಯೋಜಿಸಿ (ಆದಿಪು. ೮-೬೪ ವ). ೨. ಸ್ವಧರ್ಮವನ್ನು ಬಿಡುವುದು ; ಜಾತಿಕೆಡುವುದು : ದೇಶದ ವಿಭಜನೆಯ ಸಂದರ್ಭದಲ್ಲಿ ಅನೇಕ ಕಡೆ ವರ್ಣಸಂಕರಕ್ಕೆ ಆಸ್ಪದವಾಯಿತು (ರೂಢಿ). ೩. ಬೇರೆ ಬೇರೆ ಬಣ್ಣಗಳ ಬೆರಕೆ ; ವರ್ಣಮಿಶ್ರಣ. ೧, ೩: ವರ್ಣಸಂಕರಂ ಚಿತ್ರದೊಳ್ . . . ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ). ೪. ಅಕ್ಷರಗಳ ಹಾಗೂ ಪದಗಳ ಅಕ್ರಮವಾದ ಯೋಜನೆ. ೩, ೪: ಗುರುಲಘುಗಣನಂ ಕೆಟ್ಟುದು ಪಿರಿದಾದುದು ವರ್ಣಸಂಕರಂ ದಾನವನಿಂ ದೊರೆಯಾದುದು ಭೂವಲಯಂ ಪರಿಣತನಲ್ಲದನ ಕವಿತೆಗಂ ಚಿತ್ರಕ್ಕಂ (ಅನಂಪು. ೧೩-೩೧). [ಸಂ.]

ವರ್ಣಸಂಕರತೆ (ನಾ). ಬಣ್ಣಗಳ ಬೆರಕೆ : ರಾಜಿಸುತಿರ್ದುವಂದು . . . ಷಟ್ಪದೀ ರಾಜಿಯ ವರ್ಣಸಂಕರತೆಯಿಂದೆ ಕೊಳಂಗಳನಂಗರಾಜನೀರಾಜನಲೀಲೆಗೆಂದು ರತಿ ತೀವಿದ ಬಣ್ಣವುರಂಗಳಂದದಿಂ (ಜಗವಿ. ೪-೭೫). [ಸಂ. ವರ್ಣಸಂಕರತಾ]

ವರ್ಣಸಂಯೋಜನೆ (ನಾ). ಬಣ್ಣಗಳು ಒಂದಕ್ಕೊಂದು ಹೊಂದುವಂತೆ ಬಳಸುವ ರೀತಿ, – ವಿನ್ಯಾಸ : ಅಜಂತಾಚಿತ್ರಗಳಲ್ಲಿನ ಸುಸಮೃದ್ಧ ಸತ್ವಪೂರ್ಣತೆ . . . ಸೊಗಸಾದ ವರ್ಣಸಂಯೋಜನಾವೈಖರಿ . . . ಇವು ಜಗತ್ತಿನ ಕಲೆಯಲ್ಲಿಯೆ ಅಸಮಾನವಾದುವು (ಭಾರದ. ೫೨೫). [ಸಂ. ವರ್ಣಸಂಯೋಜನ]

ವರ್ಣಾಂಧತೆ (ನಾ). ಬೇರೆ ಬೇರೆ ಬಣ್ಣಗಳ ವ್ಯತ್ಯಾಸವನ್ನು ತಿಳಿಯಲಾಗದ ಒಂದು ಬಗೆಯ ಕಣ್ಣಿನ ದೋಷ ; ಬಣ್ಣಗುರುಡು : ಕಾಡುಮೃಗಗಳಿಗೆ ಕಣ್ಣುದೃಷ್ಟಿ ಮಂದ . . . ವರ್ಣಾಂಧತೆಯೂ ಉಂಟು (ಹಸುಹೊ. ೧೬೩).

[ಸಂ. ವರ್ಣಾಂಧತಾ]

**ವರ್ಣಾಢ್ವ** (ನಾ). [ವೀಶೈ] ಮಹಾಲಿಂಗದಲ್ಲಿ ಉತ್ಪತ್ತಿಯಾದ ಸಾದಾಖ್ಯಗಳು ಜಗತ್ತಿನಲ್ಲಿ ಪ್ರಕಟವಾಗಲು ಸಹಾಯಕವಾಗಿರುವ ಆರು ಬಗೆಯ ಮಾರ್ಗಗಳಲ್ಲಿ ಒಂದು : ವರ್ಣಾಢ್ವ, ಪದಾಢ್ವ, ಮಂತ್ರಾಢ್ವ (ಇವು ಮೂರು ಶಬ್ದಾಢ್ವಗಳು), ತತ್ವಾಢ್ವ, ಕಲಾಢ್ವ, ಭುವನಾಢ್ವ (ಇವು ಮೂರು ಅರ್ಥಾಢ್ವಗಳು) (ಶಿವಾಸೂ. ೨ ಅಡಿಟ); ಮಂತ್ರಾಢ್ವ, ಪದಾಢ್ವ, ವರ್ಣಾಢ್ವಗಳು ನಾದಾತ್ಮಕವಾಗಿವೆ . . . ಐವತ್ತೆರಡಕ್ಷರಗಳೇ ವರ್ಣಾಢ್ವ (ಶಿವಾಕೋ. ೨೨). 'ಪದಾಢ್ವ' ಪರಾ. [ಸಂ. ವರ್ಣಾಢ್ವನ್]

**ವರ್ಣಾನುಕ್ರಮ** (ನಾ). ಅಕ್ಷರಾನುಗುಣವಾದ ಜೋಡಣೆ ; ಅಕ್ಷರಾನುಕ್ರಮ : ಉಲ್ಲೇಖಪತ್ರಗಳನ್ನು . . . ವರ್ಣಾನುಗುಣವಾಗಿ ಹೊಂದಿಸಿಡುವುದೇ ವರ್ಣಾನುಕ್ರಮ (ಗ್ರಂಥಾಲ. ೪೮). [ಸಂ.]

**ವರ್ಣಾಭಿಮಾನ** (ನಾ). ತನ್ನ ಜಾತಿಯ ಮೇಲಿರುವ ಅಭಿಮಾನ : ಆರ್ಯರೀ ವರ್ಣಾಭಿಮಾನದತಿದರ್ಪದಿಂದಾರ್ಯತೆಯೆ ಅತಿವೃಷ್ಟಿಯಾಗೆ ಕೆಯ್ಗೊಲು ನೆರೆಯ ಪಾಲೊ ಅಥವಾ ಕೊಳೆಯ ಪಾಲೊ ತಾನಾಗುವುದು ನಿಶ್ಚಯಂ! (ಹಟ್ಟರ. ೩೨-೨೫). [ಸಂ.]

**ವರ್ಣಾಲ್ಪತೆ** (ನಾ). ವಜ್ರದ ಐದುದೋಷಗಳಲ್ಲಿ ಒಂದು ; ಹೊಳಪು ಕಡಮೆಯಾಗಿರುವುದು : ವರ್ಣಾಲ್ಪತೆ ರೇಖೆ ತ್ರಾಸಂ ಕಾಕಪದಂ ಬಿಂದುವೆಂಬಿವೈದು ದೋಷಂಗಳನುಳಿದ ಬಜ್ಜರಮಂ ತೊಡವುಗಳೊಳ್ ಕೇವಣಿಸಿ ರಣಾಗ್ರದಲ್ಲಿ ತಳೆಯಲ್ ಘಾಯಂಬಡೆಯದೆ ಜಯಮಾದಪುದು (ಹಾಲಾಸ್ಯ. ೨-೧-೫೫ ವ). [ಸಂ. ವರ್ಣಾಲ್ಪತಾ]

**ವರ್ಣಾವೃತ್ತಿ** (ನಾ). [ಭಾಷಾಶಾ] ಏಕರೂಪದ ವರ್ಣ ಅಥವಾ ವರ್ಣಗಳು ಮತ್ತೆಮತ್ತೆ ಬರುವಂತೆ ಪದಗಳನ್ನು ಜೋಡಿಸಿ ರಚಿಸಿದ ಒಂದು ಬಗೆಯ ಶಬ್ದಾಲಂಕಾರ : ಇವು ವರ್ಣಾವೃತ್ತಿಗೆ ಸಲ್ಬುವು ಸಂದುಂ ಪ್ರಾಸದೆಡೆಗೆ ಸಲ್ಲವು (ಶಮದ. ೧೯); ಏಕಸ್ಥಾನಿಗಳನಱಿದು ವರ್ಣಾವೃತ್ತಿಯಂ ಮಾೞ್ಪುದು (ಶಮದ. ೩೦ ವೃತ್ತಿ). [ಸಂ.]

**ವರ್ಣಾಶ್ರಮ** (ನಾ). ೧. ಜಾತಿಯ ಆಚಾರ, — ಸಂಪ್ರದಾಯ ; ಜಾತಿಧರ್ಮ : ಎಲ್ಲಿಯವು ವರ್ಣಾಶ್ರಮಂಗಳವೆಲ್ಲಿ ನೀತಿಗಳು ಎಲ್ಲಿಯ ಧರ್ಮಪ್ರವೃದ್ಧಿಗಳು (ಬಸವು. ೫೫-೬); ಅಪೂರ್ವನ ವರ್ಣಾಶ್ರಮದಂತೆ, ನಿನ್ನ ಕ್ರಿಸ್ತಧರ್ಮವೂ ಅಸತ್ಯವಾಗಿದೆ (ಅಕಾರ. ೨೬೬). ೨. ಬ್ರಾಹ್ಮಣಾದಿ ವರ್ಣಗಳಲ್ಲಿರುವ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸ ಎಂಬ ಜೀವನದ ನಾಲ್ಕು ಘಟ್ಟಗಳು. [ಸಂ.]

**ವರ್ಣಾಶ್ರಮಧರ್ಮ** (ನಾ). = ವರ್ಣಾಶ್ರಮ ೧ : ಟೀಪುಸುಲ್ತಾನನು . . . ವರ್ಣಾಶ್ರಮಧರ್ಮಗಳನ್ನು ಕೆಡಿಸುತ್ತ . . . ಅನೇಕ ಧರ್ಮಕಾರ್ಯಗಳನ್ನು ನಾಶಮಾಡಿದನು (ಮಹಾವಂ. I, ೨೩೪); ಮನುಷ್ಯನ ಮುನ್ನಡೆಯಾದಂತೆ ಭಾರತದ ವರ್ಣಾಶ್ರಮಧರ್ಮ ಸುಳ್ಳಾಗುತ್ತಿದೆ (ಅಕಾರ. ೨೬೬). [ಸಂ.]

**ವರ್ಣಾಶ್ರಮವ್ಯವಸ್ಥೆ** (ನಾ). ಆಯಾ ಜಾತಿಪದ್ಧತಿಗಳು ಕ್ರಮದಲ್ಲಿರುವಂತೆ ಮಾಡುವ ಏರ್ಪಾಟು, — ವ್ಯವಸ್ಥೆ : ಪದ್ಮನಾಭಮಹೀಭುಜಂ . . . ವರ್ಣಾಶ್ರಮವ್ಯವಸ್ಥೆಗಳಂ ಸ್ವಸ್ಥಂ ಮಾಡಿಯುಂ . . . ಸಾಮ್ರಾಜ್ಯಮಂ . . . ನಿಜಾಯತ್ತಮುಮೆನಿಸಿದಂ (ಚಂದ್ರಪು. ೨-೬೦ ವ). [ಸಂ. ವರ್ಣಾಶ್ರಮವ್ಯವಸ್ಥಾ]

**ವರ್ಣಿ** (ಗು). ೧. ಬಣ್ಣವನ್ನು ಹೊಂದಿದ ; ಬಣ್ಣವುಳ್ಳ. ೨. ಯಾವುದಾದರೊಂದು ಜಾತಿಗೆ ಸೇರಿದ. (ನಾ). ೩. ಚಿತ್ರಕಾರ. ೪. ಚತುರ್ವರ್ಣಗಳಲ್ಲಿ ಒಂದು ವರ್ಣಕ್ಕೆ ಸೇರಿದವನು. ೫. ವರ್ಣಾಶ್ರಮದ ಮೊದಲನೆಯ ಘಟ್ಟದಲ್ಲಿರುವವನು ; ಬ್ರಹ್ಮಚಾರಿ : ಯತಿಮೂರ್ತಿಯ ಬಲಿ ತಾಪಸಸುತನುವ ಸುರಧೇನು ವರ್ಣಿವೇಷದ ನಿಧಿ . . . ಕ್ಷಿತಿಯೊಳಗೀಶಾನಶಕ್ತಿ ದಾನವಿನೋದಂ (ಎಕ. V, ಬೇಲೂರು. ೧೧೯-೪೨; ಸು. 1185); ಸ್ವಸ್ತದಿಂದಾರಿಸುತಾ ವರ್ಣಿಯನಿಬರ್ಗೆ ಹಸ್ತಮಂ ಮುಗಿಮುಗಿದು ಬೀಳ್ಕೊಟ್ಟು (ಪರಶು. ೧೫-೩೯). ೬. ಯಾವುದಾದರೊಂದು ಜಾತಿಗೆ ಸೇರಿದವನು : "ವರ್ಣಿ = ಜಾತಿಮಂತಂ" (ಕಾಶಕ್ಯ. ೨೯೦); ಬ್ರಾಹ್ಮಣಾದಿ ವರ್ಣಿಗಳುಂ . . . ಸರ್ವದಾ ಶ್ರೀಮದ್ವಿಭೂತಿಯನೇ ಧಾರಣಂಗೆಯ್ಯಲ್ವೇಕ್ಕುದು (ವಿವೇಕ. ೭೨). ೭. ಬರಹಗಾರ; ಲೇಖಕ. [ಸಂ. ವರ್ಣಿನ್]

**ವರ್ಣಿಕಾಭಂಗ** (ನಾ). ಚಿತ್ರರಚನೆಯ ಆರು ಅಂಗಗಳಲ್ಲಿ ಒಂದು ; "ಆಯಾ ಅಂಗಕ್ಕೆ ಮತ್ತು ಆಯಾ ಭಾವಕ್ಕೆ ಉಚಿತವಾದ ವರ್ಣವೈವಿಧ್ಯಗಳನ್ನು ಪಯೋಗಿಸುವ ಕ್ರಮ" (ಸೌಂದಸ. ೧೩೦) : ಚಿತ್ರದಲ್ಲಿ ಮೊದಲ 'ಅಂಗ' 'ರೂಪಭೇದಾಃ' . . . ಕಡೆಯ ಅಂಗ 'ವರ್ಣಿಕಾಭಂಗ' (ಸೌಂದಸ. ೧೩೦). [ಸಂ.]

**ವರ್ಣಿಕೆ** (ನಾ). ೧. ಬಣ್ಣ ; ವರ್ಣ. ೨. ಮಸಿ ; ಶಾಯಿ. ೩. ಬಣ್ಣಹಾಕುವ ಕುಂಚ. ೪. ಲೇಖನಿ. ೫. ನಾಟಕದಲ್ಲಿಯ ಪಾತ್ರ. ೬. ನಾಟಕದ ಪಾತ್ರಕ್ಕೆ ಬಣ್ಣಗಳನ್ನುಪಯೋಗಿಸಿ ಮಾಡುವ ಪ್ರಸಾಧನ, ವೇಷಭೂಷಣ ಮುಂತಾದುವು : ಪಾತ್ರಗಳನ್ನು ರೂಪಿಸುವಲ್ಲಿ ವರ್ಣಿಕೆಯ(Make-up) ಕೆಲವು ಕ್ರಮಗಳು, ಇದರಂತೆ ಇನ್ನೂ ಹಲವು ನಿಯಮಗಳಿದ್ದೇ ಇವೆ (ಬಾಲಪ್ರ. III, ೧೨೮೪). [ಸಂ. ವರ್ಣಿಕಾ]

**ವರ್ಣಿತ** (ಗು). ೧. ಬಣ್ಣ ಬಳಿದ ; ಬಣ್ಣ ತುಂಬಿದ. ೨. ಬಣ್ಣಿಸಿದ ; ವರ್ಣನೆ ಮಾಡಿದ. ೩. ಹೊಗಳಿದ ; ಸ್ತುತಿಸಿದ. [ಸಂ.]

**ವರ್ಣಿನಾಥ** (ನಾ). ಬ್ರಹ್ಮಚಾರಿಗಳಲ್ಲಿ ಶ್ರೇಷ್ಠನಾದವನು ; ಯತೀಂದ್ರ : ಬೇಗಮೆಂದರ್ . . . ವರ್ಣಿನಾಥರ್ (ಸುಕುಮಾ. ೭-೪೮). [ಸಂ.]

**ವರ್ಣಿನಿ** (ನಾ). ೧. ಚತುರ್ವರ್ಣಗಳಲ್ಲಿ ಯಾವುದಾದರೊಂದು ವರ್ಣಕ್ಕೆ ಸೇರಿದವಳು. ೨. ಹೆಂಗಸು ; ಸ್ತ್ರೀ : "ರಾಮಾ . . . ವರ್ಣಿನೀ, ಸ್ತ್ರೀ . . . ಯುವತಿಃ — ಈ ೨೮ ಸ್ತ್ರೀಯರ್" (ಹಲಾಯು. ೭೯-೩೨೮). ೩. ಅರಿಸಿನ. [ಸಂ. ವರ್ಣಿನೀ]

**ವರ್ಣಿಸು** (ಕ್ರಿ). ೧. ಹೊಗಳು ; ಶ್ಲಾಘಿಸು : "ವರ್ಣಿಸು — ಸ್ತೋತ್ರೇ" (ಶಮಧಾ). ೨. ಬಣ್ಣಿಸಿ ಹೇಳು ; ವಿಸ್ತಾರವಾಗಿ ನಿರೂಪಿಸು : ನೆಗೞ್ದ ಕವಿತಾಗುಣಾರ್ಣವನ ವರ್ಣಿಸುವುದಂ ಪೊಗೞ್ದು ಬಗೆದೋದುವರ್ ಮನದೊಳಾಟಿಸುವುದಂ ಪಡೆವರ್ (ಆದಿಪು. ೭-೨೭ ರಗಳೆ); ಪರಮಮಾಹೇಶ್ವರರ ವಿಸ್ಮಯಚರಿತವಂ ವರ್ಣಿಸುವಡಾ ನೇತಱಿವನು (ಬಸವು. ೬೧-೭೭). [ವರ್ಣನ + — ಇಸು]

**ವರ್ಣೀಯ** (ನಾ). ಚತುರ್ವರ್ಣಗಳಲ್ಲಿ ಯಾವುದಾದರೊಂದು ವರ್ಣಕ್ಕೆ ಸೇರಿದವನು : ಆಯಾ ವರ್ಣೀಯರಿಗೆ ಉಕ್ತವಾಗಿದ್ದ ಕರ್ಮಗಳು ಕಾಲಕಾಲಕ್ಕೆ ಬದಲಾವಣೆಗಳಾಗುತ್ತಿದ್ದುದೂ ಕಂಡುಬರುತ್ತದೆ (ಭಾರದ. ೫೫). [ಸಂ.]

**ವರ್ಣೀಶ್ವರ** (ನಾ). = ವರ್ಣಿನಾಥ : ಸಪ್ತರ್ಧಿಗಳುಂ ಕ್ರಮಕ್ರಮದಿನಾ ವರ್ಣೀಶ್ವರಂಗಾದುವು (ಸುಕುಮಾ. ೮-೪೫). [ಸಂ.]

**ವರ್ಣೋತ್ತಮ** (ನಾ). ಮೊದಲನೆಯ ವರ್ಣಕ್ಕೆ ಸೇರಿದವನು ; ಬ್ರಾಹ್ಮಣ : ನಾಮಪ್ಪೊಡೆ ವರ್ಣೋತ್ತಮರ್ ನಮಗತ್ತಲಾರುಮಿಲ್ಲ (ಸುಕುಮಾ. ೮-೧ ವ); ಅರಸುಗಳು ವರ್ಣೋತ್ತಮರ ದೆಸೆಗಂಜಬೇಕು (ಕುವ್ಯಾಉ. ೩-೧೨). [ಸಂ.]

**ವರ್ಣೋತ್ತಮತ್ವ** (ನಾ). ಬ್ರಾಹ್ಮಣತ್ವ ; ಬ್ರಾಹ್ಮಣಿಕೆ : ಅತಿಬಾಲವಿದ್ಯಾಕುಲಾವಧಿವರ್ಣೋತ್ತಮತ್ವ . . . ಪ್ರಜಾಸಂಬಂಧಾಂತರಮೆಂಬ ಪತ್ತುಮಧಿಕಾರಂಗಳುಮನಱಿಪಿ (ಆದಿಪು. ೧೫-೧೬ ವ); ವರ್ಣೋತ್ತಮತ್ವಮೆಂಬುದು ವರ್ಣಂಗಳ್ಗೆಲ್ಲ ಮುತ್ತಮನಾಗಿ ತನ್ನುಮಂ ಪೆಱರುಮನುದ್ಧರಿಸುಗುಂ (ಚಾವುಂಪು. ೨೩೬). [ಸಂ.]

**ವರ್ತಕ** (ಗು). ೧. ಇರುವ ; ವರ್ತಿಸುವ. ೨. ತೊಡಗಿರುವ ; ಮಗ್ನವಾದ. ೩. ವೃತ್ತಿಯನ್ನು ಕೈಕೊಂಡ, — ಅನುಸರಿಸುವ. (ನಾ). ೪. ನಡತೆ ; ವರ್ತನೆ : ಕೂಸು ಹೇತು ಕಲಸಿ ತಮ್ಮಪ್ಪನ ಬಾಯಲ್ಲಿ ಇಕ್ಕಿ ಮಿಕ್ಕುದ ತೊಡೆದಂತಾಯಿತ್ತು ವರ್ತಕ (ಸರ್ವಶ. ೬೨-೩೩೧); ಉಪಯೋಗವಿಲ್ಲದ ಕೌಪೀನವನ್ನು ಕೊಟ್ಟು ಕಳುಹಿಸುತ್ತಿರುವಿರಿ. ನೀವು ಮಾಡುವ ಈ ಪರಿ ವರ್ತಕವು ಬಲು ಚಂದಾಗಿರುವದು (ಪುರಾವಿ. ೭೫). ೫. ವಾಣಿಜ್ಯ ; ವ್ಯಾಪಾರ : ಪ್ರತಿವರ್ಷದಲ್ಲಿಯೂ ಸುಮಾರು ೧೪೫ ಕೋಟಿರೂಪಾಯಿಗಳ ಪರಾಯಿದೇಶದ ವರ್ತಕವು ನಡಿಯುತ್ತದೆ (ಭೂಗೋಳ. ೩೯). ೬. ವರ್ತಿಸುವುದು ; ಪ್ರವೃತ್ತಿಪರವಾದುದು : ವೇದಚೋದಿತ ಜಾತಿಗಳು ಎರಡಾದಿಯಲಿ ವರ್ತಕ ನಿವರ್ತಕ (ಬಸವು. ೫೫-೧೯). ೭. ವ್ಯವಹರಿಸುವವನು : "ವರ್ತಕಃ, ವರ್ತಮಾನಃ — ಈ ೨ ವ್ಯವಹರಿಸುವಂ" (ಕಾಶಕ್ಯ. ೧೩೩). ೮. ವ್ಯಾಪಾರ ಮಾಡುವವನು; ವ್ಯಾಪಾರಸ್ಥ : ಒಬ್ಬ ದೈವುಳ್ಳ ವರ್ತಕನ ಬಳಿಗೆ ಹೋಗಿ . . . ಹೇಳಿಕೊಂಡನು (ಮುಂಬಯಿ. ೪-೫೦); ಮಲೆಯಾಳದ ಬಹುಭಾಗ . . . ಕ್ರಿ. ಪೂ. ದಿಂದಲೂ

ಹೊರನಾಡಿನ ವರ್ತಕರ ಸಂಪರ್ಕಕ್ಕೆ ಪಕ್ಕಾಗಿದೆ (ದ್ರಾವಿ. ೧೨೦). ೯. ಕುದುರೆಯ ಗೊರಸು, —ಖುರಪುಟ : "ವರ್ತಕಃ — ಕುದುರೆಯ ಕಾಲುಗೊರಸು" (ಸಿದ್ಧಾಂತಿ. ೩೭೪). ೧೦. ಒಂದು ಬಗೆಯ ಹಕ್ಕಿ ; ಪುರಲೆ ; ಲಾವಕ್ಕಿ : ಗೂಳಿಗೆ ವರ್ತಕವೇ ಸಮಜೋಳಿ (ಉದ್ಭಟ. ४-೮೮); ಕಂಕವರ್ತಕ ಕುರರೀಪ್ಲವಪ್ರಕರದಿಂದೆ ವಿರಾಜಿಕುಮುನ್ನತಂ ವನಂ (ಹಮ್ಮೀರ. ४-೭೨). ೧೧. ಒಂದು ಬಗೆಯ ಮಣ್ಣು ಹುಳು : "ವರ್ತಕಃ . . . ವ್ಯಾಪಾರದ ಹುಳು" (ಸಿದ್ಧಾಂತಿ. ೩೭೪). [ಸಂ.]

**ವರ್ತಕತನ** (ನಾ). ವಾಣಿಜ್ಯ ; ವ್ಯಾಪಾರವೃತ್ತಿ : ನಮ್ಮ ರಾಜ್ಯದಲ್ಲಿ ವರ್ತಕತನ ಮಾಡಿಕೊಂಡಿರುವವರು . . . ಮೊದಲಾದವರಿಗೆ . . . ನಾನು ಕೇಳಿದೆನೆಂದು ಹೇಳು (ಕೃವಾಲು. ४೦). [ವರ್ತಕ + — ತನ]

**ವರ್ತಕಧರ್ಮ** (ನಾ). ವಾಣಿಜ್ಯದ ರೀತಿ, ರಹಸ್ಯ ಮುಂತಾದುವು ; ವ್ಯಾಪಾರಧರ್ಮ : ವರ್ತಕಧರ್ಮ, ವಣಿಗ್ಧರ್ಮ ಎಂಬಿವುಗಳಲ್ಲಿ ವಾಣಿಜ್ಯದ ವೃದ್ಧಿಗಾಗಿಯೂ ಲಾಭದ ಪ್ರಾಪ್ತಿಗಾಗಿಯೂ ಕಂಡು ಕಾಣದ ಹಾಗೆಯೂ ಗೋಪ್ಯವಾಗಿಯೂ ಮಾಡುವ ಗುಟ್ಟುಗಳು (ಆರ್ಯಧ. ೧೨). [ಸಂ.]

**ವರ್ತಕನಾವೆ** (ನಾ). ವ್ಯಾಪಾರಿಗಳನ್ನೂ ವ್ಯಾಪಾರದ ಸರಕುಗಳನ್ನೂ ಒಯ್ಯುವ ಹಡಗು ; ವ್ಯಾಪಾರೀನೌಕೆ : ಅದು ದ್ವಾರಕೆಯಿಂದ ಅಮೂಲ್ಯವಸ್ತುಗಳನ್ನು ಹೇರಿಕೊಂಡು ಬರುತ್ತಿದ್ದ ಒಂದು ವರ್ತಕನಾವೆಯಾಗಿದ್ದಿತು (ಭಾರದ. ೨೭೨). [ವರ್ತಕ + ನಾವೆ]

**ವರ್ತಕಿ** (ನಾ). ೧. ಒಂದು ಬಗೆಯ ಸಸ್ಯ : "ಆ ವರ್ತಕಿ[ಪಾಠಾಂ. ತಿ್ರಕೆ]ಯೆನಲ್ಕೆ ಮುರುಡಸೆ" (ಮಂಗರಾ. ४೨-३८). ೨. ಪುರುಲೆಹಕ್ಕಿ ; ಲಾವಕ್ಕಿ. [ಸಂ. ವರ್ತಕೀ]

**ವರ್ತನ** (ಗು). ೧. ಇರುವ ; ವಾಸಮಾಡುವ. ೨. ನೆಲೆನಿಂತ ; ತಳವೂರಿದ. ೩. ತಿರುಗಿಸುವ ; ಹೊರಳಿಸುವ. ४. ನಿಯಮಿಸುವ. (ನಾ). ೫. ಮುಂದೆ ಹೋಗುವಿಕೆ. ೬. ನಡತೆ ; ನಡವಳಿಕೆ : ಮುನ್ನಿಲ್ಲದ ತನ್ನ ವರ್ತನ ಮಿಡೊಂದಾಶ್ಚರ್ಯಮಂ ತೋಱಿದಪ್ಪುದು (ಸುಕುಮಾ. ೨-೫೩). ೭. ಧರ್ಮ ; ಚಾರಿತ್ರ. ೮. ಬಳಕೆ ; ಉಪಯೋಗ ; ಪ್ರಯೋಜನ : "ವರ್ತನಂ ಬಳಕೆ" (ಕಾಶಕ್ಯ. ೨೮೧). ೯. ವ್ಯವಹಾರ ; ವ್ಯಾಪಾರ : "ವೃತ್ತಂ, ವೃತ್ತಿಃ, ವರ್ತನಂ . . . ಈ ೬ ವ್ಯವಹಾರಂ" (ಕಾಶಕ್ಯ. ೧೩೩). ೧೦. ಕಸುಬು ; ವೃತ್ತಿ : ಜಳಸ್ಥಳಯಾತ್ರಾದಿಯಂ ವೈಶ್ಯಂ ಶುಶ್ರೂಷಾದಿಯಂ ಶೂದ್ರಂ ವರ್ತನಂ ಮಾಡಿ (ಚಾವುಂಪು. ೩೬). ೧೧. ತಿರುತಿರುಗಿ ಬರುವುದು ; ಆವರ್ತನ : ವರ್ತನಮಿಂತೀ ತೆಱನೆ ರಹಟಘಟಿಕಾನ್ಯಾಯಂ (ಪಂಪರಾಮಾ. ೧-೫೭). ೧೨. ತಿರುಗುವಿಕೆ : ತ್ರಿಭುವನದಗ್ರದಲ್ಲಿ ಮೂವತ್ತಾಱುಲ್ಲೋಕ ಅದಱ ಮಧ್ಯದಲ್ಲಿ ಇಪ್ಪತ್ತೈದು ಮಹಾಮೇರುವೆ ಹದಿನಾಱುವರ್ತನದ ಕೊಂಡಿ (ಮೋಳಿಮಾ. ೫೨-೭೮೫). ೧೩. ನೇಮಕ ; ನೇಮಕಾತಿ. [ಸಂ.]

**ವರ್ತನಿ** (ನಾ). ದಾರಿ; ಹಾದಿ ; ಮಾರ್ಗ. [ಸಂ.]

**ವರ್ತನೆ** (ನಾ). ೧. ವೃತ್ತಿ ; ಉದ್ಯೋಗ. ೨. ರೂಢಿ ; ಪರಿಪಾಟ ; ಸಂಪ್ರದಾಯ : ವರ್ತನೆಯ ನರ್ತನಕೆ ಪರಿವರ್ತನೆಯ ಸೊಬಗು. ಕಂದವೃತ್ತಗಳ ಝರಿ ತೊರೆಯ ನಡುವೆ ಹಸುರಿಗೆ ಗದ್ಯದುದ್ಯಾನ (ನೆಲಮು. ೩೩-೩). ೩. ಸ್ವಭಾವ ; ಗುಣ. ४. ನಡವಳಿಕೆ ; ನಡತೆ : ಈ ಸುತ್ತುಬಳಸಿನ ವರ್ತನೆಯಿಂದ ಏನು ಪ್ರಯೋಜನ? (ಚಿಕರಾ. ೧೦೨); ಅವರು ಒಳ್ಳೆಯ ವರ್ತನೆ ಕಲಿಯಬೇಕು (ಶಿಕ್ಷದ. ೧೦೭). ೫. ನಿಯಮಿತವಾಗಿ ಗೊತ್ತುಪಡಿಸಿದುದು ; ನಿತ್ಯಗಟ್ಟಳೆ : ವರ್ತನೆಯವಳು ಹಾಲನ್ನು ತಂದು ಕೊಟ್ಟಳು (ಅವತಂ. ೨೦೭); ಇಲ್ಲಿ ವರ್ತನೆಹಾಲು ಹಾಕುತ್ತಾರೆಯೇ? (ರಂಗವ. ೮೮). ೬. ಗ್ರಾಮಾಧಿಕಾರಿಗಳಿಗೆ ಸಲ್ಲುವ ಹಣದ ರೂಪದ ಕಾಣಿಕೆ : ನಂನಮ್ಮ ವರ್ತನೆ ಉಡುಗರೆಯನು ಚೊಕ್ಕನಾಥದೇವರಿಗೆ . . . ಧಾರೆಯನೆಱದು ಕೊಟ್ಟೆವಾಗಿ (ಎಕ. IX, ಬೆಂಗಳೂ. ೮-೨೫; 1440); ಐದಾಯಿಪಂಚಾಳದವರಿಂದ ವರ್ತನೆ ವರುಷ ೧ಕ್ಕೆ ಮನೆ ೧ಕೆ ೩(ಎಕ. XII, ಮಧ್ಯಗಿ. ೩೧-೧೧; 1656?). ೭. ಉದ್ದವನ್ನು ಅಳೆಯುವ ಒಂದು ಪ್ರಮಾಣ ; ಇನ್ನೂರು ಯೋಜನ : "ಆ ದಂಡಮೆರಡುಸಾಸಿರಮಾಗೆ ಕ್ರೋಶಮಕ್ಕವು ನಾಲ್ಕುವರಲು ಯೋಜನಮಕ್ಕುಮಿಪ್ಪತ್ತು ವೆಳ್ಪಮಕ್ಕಿವು ಹತ್ತು ವರ್ತನಾಖ್ಯಂ" (ಮಂಗರಾ. ೯೬-೧೧).

**ವರ್ತನೆ ಮನೆ** = ಹಾಲು, ತರಕಾರಿ ಮುಂತಾದುವನ್ನು ದಿನಗಟ್ಟಳೆಯಾಗಿ ಮಾರಿ (ತಿಂಗಳಿಗೊಮ್ಮೆ) ಒಟ್ಟಾಗಿ ಹಣವನ್ನು ಪಡೆಯುವ ಕರಾರಿನ ಮೇಲೆ ಗೊತ್ತುಮಾಡಿಕೊಂಡ ಮನೆ : ಏನೋ ವರ್ತನೆಮನೆ ಅಂತ ನಾನು ಅಭಿಮಾನ ಇಟ್ಟುಕೊಂಡಿದ್ದರೆ ದರ್ಬಾರು ಮಾಡುತ್ತಾಳೆ ಇವಳು (ಹೂಹಣ್ಣು. ೧೦೮).
[ಸಂ. ವರ್ತನ]

**ವರ್ತಮಾನ** (ಗು). ೧. ಸುತ್ತುವ ; ತಿರುಗುವ. ೨. ಈಗ ಇರುವ ; ಚಾಲ್ತಿಯಲ್ಲಿರುವ. ೩. ಈಗಿನ ; ಈ ಕಾಲದ. (ನಾ). ४. ವರ್ತಿಸುವವನು ; ವ್ಯವಹರಿಸುವವನು : "ವರ್ತಕಃ, ವರ್ತಮಾನಃ — ಈ ೨ ವ್ಯವಹರಿಸುವಂ" (ಕಾಶಕ್ಯ. ೧೩೩). ೫. ಘಟನೆ ; ವಿದ್ಯಮಾನ : ಇಂತಪ್ಪ ಭಾಷೆ ವ್ರತನೇಮಂಗಳ ನಾನಱಿಯೆನಯ್ಯಾ ಅಘಟಿತಘಟಿತ ವರ್ತಮಾನವ ನಾನಱಿಯೆನಯ್ಯಾ (ಬಸವ. ೫೧೧). ೬. ಸುದ್ದಿ ; ಸಮಾಚಾರ ; ವೃತ್ತಾಂತ : ಸಲೆ ವರ್ತಮಾನಮಿಂತೆಂದಱಿಪುತ್ತಲಿರ್ದ ಸಹದೇವನು (ಕಜೆಕಂ. ೨೦); ಹೈದರಲ್ಲಿಖಾನಬಹದರವರು ಈ ವರ್ತಮಾನ ಕೇಳಿ (ಹೈದರ. ४೩). ೭. ಇರುವಿಕೆ : ಆ ಮಾರ್ಗದಲ್ಲಿ ಸೂರ್ಯಪ್ರಕಾಶದ ವರ್ತಮಾನವೇ ಇರುವುದಿಲ್ಲ (ಮುಂಬಯಿ. ೬-४೨). ೮. [ವ್ಯಾಕ] ಮೂರು ಕಾಲಗಳಲ್ಲಿ ಒಂದು ; ಈಗ ನಡೆಯುವುದನ್ನು ಸೂಚಿಸುವ ಕಾಲ : ಭೂತವತಿ ವರ್ತಮಾನಂ ಖ್ಯಾತಭವಿಷ್ಯಂತಿ ಸರ್ವಸಾಧನಿಯೆಂಬಾಖ್ಯಾತವಿಭಕ್ತಿಗಳಕ್ಕುಂ (ಕಾವ್ಯಾವ. ೩೭४); ಪ್ರಥಮಪುರುಷದ ವರ್ತಮಾನ ಭವಿಷ್ಯಂತಿಗಾದ ಗುಂ ಎಂಬುದು ಪರಮಾದೊಡಂ ಕ್ರಿಯಾಪದದೊಳ್ ಶಿಥಿಲತ್ವಮುಂಟು (ಶಮದ. ४४ ವೃತ್ತಿ).
[ಸಂ.]

**ವರ್ತಮಾನಕಾಲ** (ನಾ). [ವ್ಯಾಕ] ಈಗ ಇರುವ ಕಾಲ ; ಚಾಲ್ತಿಯಲ್ಲಿರುವ ಕಾಲ : ಈಗ, ಈ ಗಳಿಗೆಯಲ್ಲಿ, ನಡೆಯುತ್ತಿರುವುದು ವರ್ತಮಾನಕಾಲ (ಮಧ್ಯಮ. ೭೩).
[ಸಂ.]

**ವರ್ತಮಾನಕ್ರಿಯೆ** (ನಾ). [ವ್ಯಾಕ] ವರ್ತಮಾನಕಾಲದ ಅರ್ಥವನ್ನು ತಿಳಿಸುವ ಕ್ರಿಯಾಪದ : ವರ್ತಮಾನಕ್ರಿಯೆಯುಂ ವಿಧಿಕ್ರಿಯೆಯುಂ ಮಧ್ಯಮಪುರುಷಕ್ರಿಯೆಯುಂ ಉತ್ತಮಪುರುಷಕ್ರಿಯೆಯುಂ ಕೃಲ್ಲಿಂಗಮಾಗವು (ಶಮದ. ೭೩ ವೃತ್ತಿ).
[ಸಂ. ವರ್ತಮಾನಕ್ರಿಯಾ]

**ವರ್ತಮಾನಗತಿ** (ನಾ). [ವ್ಯಾಕ] ವರ್ತಮಾನಕಾಲದ ಅಪೂರ್ಣಕ್ರಿಯಾರೂಪ : ಕ್ರಿಯೆ ತಾಂ ಕ್ರಿಯಾರ್ಥಮಪ್ಪಲ್ಲಿಯಲಕ್ಕುಂ ವರ್ತಮಾನಗತಿಗುತ್ತುಮುತುಂ ದ್ವಯಮಕ್ಕುಂ (ಕಾವ್ಯಾವ. ४೦೭). [ಸಂ.]

**ವರ್ತಮಾನನ್ಯೂನ** (ನಾ). = ವರ್ತಮಾನಗತಿ : ಧಾತುವಿಗೆ — ಉತ್ತಾ ಅಥವಾ — ಉತ್ತ ಎಂಬ ಪ್ರತ್ಯಯವನ್ನು ಸೇರಿಸಿದರೆ ವರ್ತಮಾನನ್ಯೂನರೂಪಗಳಾಗುತ್ತವೆ (ಮಧ್ಯಮ. ೧೧೧). [ಸಂ.]

**ವರ್ತಮಾನಪತ್ರ** (ನಾ). ಎಲ್ಲ ಪ್ರಕಾರದ ಪ್ರಚಲಿತ ವಿದ್ಯಮಾನವನ್ನು ಒಳಗೊಂಡು ಪ್ರತಿನಿತ್ಯ ಅಥವಾ ವಾರಕ್ಕೊಮ್ಮೆ ಪ್ರಕಟಗೊಳ್ಳುವ ಪತ್ರಿಕೆ : ದೇಶದ ಮೇಲೆ ನಡೆದ ಸುದ್ದಿಯನ್ನು ತಿಳಿದುಕೊಳ್ಳುವುದಕ್ಕಾಗಿ ವರ್ತಮಾನಪತ್ರಗಳನ್ನು ತರಿಸುತ್ತಾರೆ (ಮುಂಬಯಿ. ४-೮೩). [ಸಂ.]

**ವರ್ತಮಾನಪತ್ರಿಕೆ** (ನಾ). = ವರ್ತಮಾನಪತ್ರ : ಓದುಗಾರಿಕೆಯ ಅಭಿವೃದ್ಧಿಯಾಗಲು ವರ್ತಮಾನಪತ್ರಿಕೆಗಳನ್ನು ತರಿಸುತ್ತಿದ್ದರು (ಹುಟ್ಟಿಹ. ೭).
[ಸಂ. ವರ್ತಮಾನಪತ್ರಿಕಾ]

**ವರ್ತಿ** (ನಾ). ೧. ದೀಪದ ಬತ್ತಿ : ಸಮೀರಣನೇರಣೆಗನಾಗೆ ನಿದಾಘದ ದೀಪ್ತಿ ವರ್ತಿಯೊಳ್ ಕಾಸೆ (ಆದಿಪು. ೬-೭೦); ವರ್ತಿ ಉರೀತೋ ತೈಲ ಉರೀತೋ? (ಗಾದೆ). ೨. ಸೀರೆ ಮೊದಲಾದ ವಸ್ತ್ರಗಳ ಅಂಚು, — ಕರೆ : "ವರ್ತಿಃ, ವಸ್ತಿಃ, ದಶಾ, ಸಿಚ : — ಈ ४ ಸೀರೆಯ ಕರೆ" (ಹಲಾಯು. ೯೦-೩೯೭). ೩. ಮೂಗುಪೆಟ್ಟಿನಿಂದ ಉಂಟಾದ ಬಾವು, — ಊತ. ४. ಲೇಪನಕ್ಕಾಗಿ ಸುಗಂಧವಸ್ತುಗಳನ್ನು ಅರೆದು ಮಾಡಿದ ಬಿಲ್ಲೆ : "ಗಾತ್ರಾನುಲೇಪನೀ — ಮೈಯ ಪೂಸಲೆಂದು ಮಾಡಿದ ಗುಳಿಗೆ, ವರ್ತಿಯೆನಿಸುಗು" (ನಾಚಿರಾ. ೧೨೫). ೫. ಬಣ್ಣಬಣ್ಣಗಳಿಂದ ಕೂಡಿದ

ಹೊಳಪಿನ ಕಾಗದ ; ಬೇಗಡೆ : ಹಿಂದೆ ನವರಾತ್ರಿಯಲ್ಲಿ ಗೊಂಬೆಗಳನ್ನು ಕೂರಿಸುವಾಗ ಪಟ್ಟದ ಗೊಂಬೆಗಳಿಗೆ ವರ್ತಿಯಿಂದ ಮಾಡಿದ ಸೀರೆ, ಕುಪ್ಪಸ, ಪೇಟಾ ಮುಂತಾದುವುಗಳನ್ನು ಮಾಡಿ ಅಲಂಕರಿಸುತ್ತಿದ್ದರು (ರೂಢಿ). [ಸಂ.]

**ವರ್ತಿಕೆ** (ನಾ). ೧. ಬಣ್ಣ ಬಳಿಯುವ ಕುಂಚ. ೨. ಅರಳೆಯ ಹಂಜಿ : "ಹಂಜಿ [ಪಾಠಾಂ.ಚಿ] ವರ್ತಿಕೆಯಕ್ಕು" (ಮಂಗರಾ. ೬೧-೨೦). ೩. ದೀಪದ ಬತ್ತಿ. ೪. ಪುರುಲೆಹಕ್ಕಿ ; ಲಾವಕ್ಕಿ. [ಸಂ. ವರ್ತಿಕಾ]

**ವರ್ತಿಸು** (ಕ್ರಿ). ೧. ವರ್ತುಲಾಕಾರವಾಗಿ ತಿರುಗು : (೩). ೨. ನಡೆಯಿಸು ; ಚಲಾಯಿಸು : (೩). ೩. ಚಲಿಸು ; ಸರಿ ; ಗಮಿಸು. ೪. ಇರು ; ನೆಲಸು ; ವಾಸಿಸು : ಅಲರ್ದಿರ್ದ ಪುಂಡರೀಕದ ಕೆಲದೊಳ್ ವರ್ತಿಸುವ ಹಂಸಯುಗಮನೆ ಭೂಭೃತ್ತಿಲಕನ ಸಿತಾತಪತ್ರದ ಕೆಲದೊಳ್ ನರ್ತಿಸಿತು ಧವಳಚಾಮರಯುಗಳಂ (ಕಾದಂಪೂ. ೪೬೨); ಕಾಪುರುಷರ್ ತಾವಾರ್ತಪರೆ ಶಾಂತರೂಪಿಂ ವರ್ತಿಸಿ ಜಿನರಾಜನಂತು ಮುಕ್ತಿಯನೀಯಲ್ (ಸಮಪ. ೧-೧೨೪). ೫. ಬದುಕು ; ಜೀವಿಸು ; ಜೀವಂತವಾಗಿರು : ಕೃಚ್ಛ್ರಚಾಂದ್ರಾಯಣಪರ್ಣಭಕ್ಷ ಜಲಭಕ್ಷ ಸಮೀರಣಭಕ್ಷವೃತ್ತಿಯೊಳ್ ಕಾಯಮನೆಯ್ದೆ ಸಾರ್ಚಿ ಒಟಿಕಂ ಮುನಿಗಳ್ ನಿಜಜೀವನಕ್ಕೆ ಯೋಗಾಯತಸೌಖ್ಯಮೆಂಬಮೃತಸೇವೆಯೆ ಕಾರಣವಾಗೆ ವರ್ತಿಪರ್ (ಜಗವ. ೧೭-೫೮). ೬. ನಡೆ ; ಚಾಲ್ತಿಯಲ್ಲಿರು : ಶಂಭವತೀರ್ಥನಾಥಸಂತಾನದಶಲಕ್ಷಕೋಟಿಸಾಗರೋಪಮಂ ವರ್ತಿಸುವಂದಾ ಕಾಲದೊಳ್ ತ್ರಿಜ್ಞಾನಧರಂ ಪುಟ್ಟಲೊಡಂ (ಚಾವುಂಪು. ೧೦೩). ೭. ನಡೆದುಕೊಳ್ಳು ; ಆಚರಿಸು : ಆತಂ ಸ್ವತಂತ್ರನವನಾಜ್ಞೆಯಿಂ ಸರ್ವಮುಂ ವರ್ತಿಸುವುದು (ಪದ್ಮರಾ. ೧೦-೨೫೨); ವ್ಯಕ್ತಿಗಳೂ ಪಂಗಡಗಳೂ ತಮ್ಮ ಮೇಲಿನ ಹೊಣೆಯನ್ನು ಅರಿತು ವರ್ತಿಸಬೇಕಾಗುತ್ತದೆ (ಶಿಕ್ಷದ. ೩೧೯). ೮. ವ್ಯವಹರಿಸು : ಈ ರೀತಿ ವರ್ತಿಸುವ ವ್ಯಾಪಾರಿಯೆ ಯಶಸ್ಸು ದೊರಕಿಸುತ್ತಾನೆ (ರತ್ನಗೋ. ೨೦). ೯. ಬಳಕೆಯಾಗು ; ವಿನಿಯೋಗವಾಗು ; ಉಪಯೋಗವಾಗು : ದೊರೆಕೊಂಡ ಸಂಖ್ಯೆಯೊಳಮನುಕರಣದೊಳಂ ವರ್ತಿಕುಂ ಮಹಾಪ್ರಾಣಂಗಳ್ (ಕಾವ್ಯಾವ. ೨೨). ೧೦. ಉಂಟಾಗು ; ಸಂಭವಿಸು : ಸೂತ್ರಕ್ಕರ್ಥವೃತ್ತಿ ವರ್ತಿಸೆ ಬರೆದಂ (ಶಮದ. ೬ ಪೀಠಿಕೆ); ಕುರುಪತಿಯ ನೇಮದಲಿಂದಿನೀ ವೃತ್ತಾಂತ ವರ್ತಿಸಿ[ಪಾಠಾಂ. ಪಸರಿಸಿ]ತಿಲ್ಲಿಪರಿಯಂತ (ಕುವ್ಯಾಗ. ೪-೨೯); ವರ್ತಿಸಿತು ಪದಪಿನಿಂ ಜಯರವಂ ಲೋಕದೊಳ್ (ಚಿಬಪು. ೪೦-೩೨). ೧೧. ತೊಡಗು ; ಉಪಕ್ರಮಿಸು : ಎಲೆಲೆ ರಿಪುಸಂವರ್ತನೊಳು ಕೊಳುಗುಳಕೆ ವರ್ತಿಸಲರಿದು (ಕುವ್ಯಾದ್ರೋ. ೧೨-೧೦). ೧೨. ಆಚರಿಸುವಂತೆ ಮಾಡು ; ನಡೆದುಕೊಳ್ಳುವಂತೆ ಮಾಡು : ಅಭ್ಯಾಸವೆನ್ನ ವರ್ತಿಸಿತ್ತಯ್ಯಾ ಭಕ್ತಿಸಾಧ್ಯವಾಗದು ನಾನೇವೆನಯ್ಯಾ (ಬಸವ. ೫೧೨). ೧೩. ಇತರರು ನುಡಿದಂತೆ ನುಡಿ ; ಅನುಕರಿಸು : ಶಬ್ದಸಂಭಾಷಣೆಯ ನುಡಿಯ ವರ್ತಿ[ಪಾಠಾಂ. ರ್ಚಿ]ಸಿ ನುಡಿವೆ ... ಎನ್ನ ಮನದಲೊಂದು ಹೃದಯದಲೊಂದು ವಚನದಲೊಂದು ನೋಡಾ (ಬಸವ. ೨೮೯). ೧೪. [ಗಣಿತ] ಗುಣಿಸು ; ಗುಣಾಕಾರ ಮಾಡು : ವರ್ತಿಸು ವರ್ಗಿಸು ... ಕಾದಿಸು ಪೂಜಿಸು ಉತ್ತಮದಿಂ ಪೇಟ್ ಮೊದಲ ಗುಣಕಾರಂಗಳ್ (ವ್ಯವಹಾ. ೧೦-೫೧).

[ವರ್ತನ + – ಇಸು₃]

**ವರ್ತುಕ** (ನಾ). ಒಂದು ತೂಕದ ಪ್ರಮಾಣ: ೨೮ ಗುಂಜಿಗೆ ೧ ವರ್ತುಕ ೩½ ವರ್ತುಕಕ್ಕೆ ೧ ತೊಲಿ (ಕಭಾಗ. ೨೮೯).

[IP ಇದು 'ವರಹ + ತೂಕ' ಎಂಬುದರ ಸವಕಳಿರೂಪವಾಗಿರಬಹುದು]

**ವರ್ತುಲ, ವರ್ತುಳ** (ಗು). ೧. ದುಂಡಾದ ; ಮಂಡಲಾಕಾರದ ; ಗೋಲಾಕಾರವಾದ : ನಕ್ಷತ್ರಪ್ರಸವದ ಸಂತುಷ್ಟಿ ; ಗ್ರಹನಿರ್ಮಾಣದ ವರ್ತುಲವೃಷ್ಟಿ (ಕೊಲಗಿಲ. ೫೦-೫೯). (ನಾ). ೨. ಗುಂಡಾಗಿರುವುದು ; ಗೋಳಾಕಾರವಾದುದು : "ವರ್ತುಲಂ ನಿಸ್ತಲಂ ವೃತ್ತಮೆನೆ ಬಟ್ಟಕ್ಕು" (ಮಂಗರಾ. ೧೩೨-೨೫). ೩. ಚೆಂಡು. ೪. ಒಂದು ಬಗೆಯ ಕಾಳು ; ಬಟಾಣಿ. ವರ್ತುಳ : ೨. "ನಿಸ್ತಲಂ, ವರ್ತುಳಂ, ವೃತ್ತಂ – ಈ ೩ ಬಟ್ಟಿತ್ತು" (ಹಲಾಯು. ೧೨೪-೬೮); ಇಂತೀ ತ್ರಿವಿಧಭೇದ ವರ್ತುಳ ಗೋಮುಖಿ ಗೋಳಕಾಕಾರ ಕೂಡಿದ ಲಿಂಗವಾದಲ್ಲಿ (ಮೋಳಿಮಾ. ೭-೨೫).

[ಸಂ.]

**ವರ್ತುಲನೃತ್ಯ** (ನಾ). ಮಂಡಲಾಕಾರವಾಗಿ ಮಾಡುವ ಕುಣಿತ ; ರಿಂಗಣ ಗುಣಿತ : ಮೂವರೂ ಒಬ್ಬರೊಬ್ಬರ ಕೈವಿಡಿದು ವರ್ತುಲನೃತ್ಯವೆಸಗುತ್ತಾರೆ (ಚಂದ್ರಸ. ೧-೧೮). [ಸಂ.]

**ವರ್ತುಳ** 'ವರ್ತುಲ' ನೋ.

**ವರ್ತುಳವಾಯು** (ನಾ). ಚಕ್ರಾಕಾರವಾಗಿ ಸುತ್ತುತ್ತ ಹೋಗುವ ಗಾಳಿ ; ಸುಂಟರಗಾಳಿ : ವರ್ತುಳವಾಯುವಲ್ಲಿ ಎದ್ದ ತೃಣ ಪರ್ಣ ಕುಂಪಟಿ ಮುಂತಾದವನೆಲ್ಲವನು ದಂಡ ಸಾಕಾಗ ಮುಂತಾಗಿ ತೋಚಿ ಸಂಚಾರ ನಿಂದ ಮತ್ತೆ ಅವು ಮುನ್ನಿನ ಸಂಚದಂತೆ ನಿಂದವು (ಸಕವ. II, ೩೬೬-೩೮). [ಸಂ. ವರ್ತುಲವಾಯು]

**ವರ್ತ್ಮ** (ನಾ). ೧. ಹಾದಿ ; ದಾರಿ ; ಮಾರ್ಗ : "ಅಧ್ವಾ ... ವರ್ತ್ಮ, ವರ್ತ್ಮನೀ ... ನಿಗಮಃ – ಈ ೧೨ ಬಟ್ಟೆ" (ಹಲಾಯು. ೪೩-೧೦೫); ಕರಿಕುವರಿಸುತ್ತಟವಿಯಂ, ಕೃಷ್ಣಮಂ, ವರ್ತ್ಮಮಂ ನಿರ್ಮಿಸುತೆ ದಾಳಿಡುವುದಾ ಕಿರ್ಚು (ಶ್ರೀರಾಮಾ. ೭೧೩-೧೦೬). ೨. ಕಣ್ಣಿನ ರೆಪ್ಪೆ; ಕಣ್ಣೆವೆ: "ಕಣ್ಣ ಮುರಿದೆವೆಯ ವರ್ತ್ಮಮೆಂಬುದು" (ಮಂಗರಾ. ೧೩೯-೫). [ಸಂ. ವರ್ತ್ಮನ್]

**ವರ್ತ್ಮನಿ** (ನಾ). ಹಾದಿ ; ಮಾರ್ಗ. [ಸಂ.]

**ವರ್ಧಂತಿ** (ನಾ). ಹುಟ್ಟುಹಬ್ಬ ; ಜನ್ಮದಿನೋತ್ಸವ : ನಮ್ಮ ಮೈಸೂರು ಮಹಾರಾಜರವರ ವರ್ಧಂತಿಉತ್ಸವವನ್ನು ಮಾಡಿಸುತ್ತೇನೆ (ಹಿಂಕಥೆ. ೨೨).

[ಸಂ. ವರ್ಧಂತೀ]

**ವರ್ಧಕ** (ಗು). ೧. ಬೆಳಸುವ ; ವೃದ್ಧಿಗೊಳಿಸುವ. ೨. ಕತ್ತರಿಸುವ ; ವಿಭಜಿಸುವ. (ನಾ). ೩. ಹಿರಿಯ ; ವಯಸ್ಕ : "ವರ್ಧಕಃ, ವರ್ಧಮಾನಃ, ವೃದ್ಧಃ – ಈ ೩ ಪಿರಿಯಂ" (ಕಾಶಕ್ಯ ೧೩೩). ೪. ಮರಗೆಲಸದವನು ; ಬಡಗಿ. ೫. ಒಂದು ಬಗೆಯ ಸಸ್ಯ ; ಭಾರಂಗಿ. ೬. ವೃದ್ಧಿಗೊಳಿಸುವ ಸಲಕರಣೆ : ಆ ಪ್ರವಾಹವನ್ನು ... ವರ್ಧಕ ಎಂಬ ಮತ್ತೊಂದು ಉಪಕರಣಕ್ಕೆ ಕೊಂಡೊಯ್ದು ಅಲ್ಲಿ ಅದರ ಬಲವನ್ನು ಸಾಕಷ್ಟು ವರ್ಧಿಸುತ್ತಾರೆ (ವಿಜ್ಞಾವಿ. ೩೬). ೭. ಛಾಯಾಚಿತ್ರಗಳ ಮೂಲಬಿಂಬವನ್ನು ಪ್ರತಿತೆಗೆಯುವುದಕ್ಕೆ ಮೊದಲು ಅದನ್ನು ಸ್ಥಿರಗೊಳಿಸಲು ಬಳಸುವ ದ್ರಾವಕ : ಅದನ್ನು ಒಮ್ಮೆಗೇ, ವರ್ಧಕ (Developer) ಎಂಬ ನೀರಲ್ಲಿ ಮುಳುಗಿಸಿ, ಅತ್ತಿತ್ತ ಎಳೆಯಬೇಕು (ಬಾಲಪ್ರ. II, ೯೫೫). [ಸಂ.]

**ವರ್ಧಕಿ** (ನಾ). ಮರಗೆಲಸ ಮಾಡುವವನು ; ಬಡಗಿ : "ತ್ವಷ್ಟಾ, ಕಾಷ್ಠತಟ್, ತಕ್ಷಾ, ರಥಕಾರಃ, ವರ್ಧಕೀ – ಈ ೫ ಬಡಗಿ" (ಹಲಾಯು. ೯೬-೪೩೩). [ಸಂ.]

**ವರ್ಧನ** (ಗು). ೧. ಹಚ್ಚಿಸುವ ; ವೃದ್ಧಿಗೊಳಿಸುವ. ೨. ಹೆಚ್ಚಾಗುವ ; ವೃದ್ಧಿಹೊಂದುವ. (ನಾ). ೩. ಬೆಳವಣಿಗೆ ; ಅಭಿವೃದ್ಧಿ ; ಹೆಚ್ಚಳ : "ವರ್ಧನಂ = ಪೆರ್ಚುಗೆ" (ಕಾಶಕ್ಯ ೨೮೧). ೪. ದೊಡ್ಡದು ; ಹಿರಿದು : "ವೃಧ್ ... ವರ್ಧಿ, ವರ್ಧನಂ ... ವಾರ್ಧಕ್ಯಂ – ಈ ೧೦ ಪಿರಿದು" (ಕಾಶಕ್ಯ ೧೩೩). ೫. ಏಳಿಗೆಯನ್ನುಂಟುಮಾಡುವವನು ; ಅಭಿವೃದ್ಧಿಗೊಳಿಸುವವನು. ೬. ಕತ್ತರಿಸುವಿಕೆ ; ಛೇದನ : "ಕಲ್ಪನಂ, ಕರ್ತನಂ, ವರ್ಧನಂ, ಛೇದನಂ – ಈ ೪ ಕಡಿಹ" (ಹಲಾಯು. ೧೨೦-೪೪). [ಸಂ.]

**ವರ್ಧನಿ** (ನಾ). ೧. ಕಸಪೊರಕೆ : "ಸಮ್ಮಾರ್ಜನೀ, ವರ್ಧನೀ – ಈ ೨ ಕಸಕಿಲ್" (ಹಲಾಯು. ೫೦-೧೪೬). ೨. ಹಿಡಿ ಮತ್ತು ಮೂತಿಯಿರುವ ಒಂದು ಬಗೆಯ ಸಣ್ಣ ಪಾತ್ರೆ; ಗಳಂತಿಗೆ: "ವರ್ಧನೀ, ಗಳಂತಿಕಾ – ಈ ೨ ಗಣತಿಗೆ" (ಹಲಾಯು. ೫೩-೧೬೨). [ಸಂ. ವರ್ಧನೀ]

**ವರ್ಧನೆ** (ನಾ). ಬೆಳವಣಿಗೆ ; ಅಭಿವೃದ್ಧಿ : ತಾವು ನಾವು ದೋಸ್ತಾರರಾದ್ದರಿಂದಾ ಬಾಯಾಚಾರಕ್ಕೆ ಸಲುವಾಗಿ ಬಹಳ ಫಲವಾಗಿ ಇರುವಂಥಾದ್ದು ವರ್ಧನೆ ಆಗಿ ಇರಬೇಕು (ರಾಜೇಂದ್ರ. ೧೬೦). [ಸಂ. ವರ್ಧನ]

**ವರ್ಧಮಾನ** (ಗು). ೧. ಬೆಳೆಯುತ್ತಿರುವ ; ಹೆಚ್ಚುತ್ತಿರುವ : ವಿಂಧ್ಯಾಚಳದಂತೆ ವರ್ಧಮಾನೋತ್ಸೇಧನುಮಂಧಕಾರಾತಿಯಂತೆ ಭೈರವಾಕಾರನುಮಾಗಿ (ಪಂಪಭಾ. ೧೧-೧೧೭ ವ). (ನಾ). ೨. ಏಳಿಗೆ ; ಉತ್ಕರ್ಷ. ೩. ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ ; ಹರಳು ; ಔಡಲ : ವರ್ಧಮಾನ – ಬದ್ದವಣ

(ಶಮದ. ೨೮೬ ಪ್ರಯೋ). ೪. ಮುಚ್ಚುಳ ; ಶ್ರಾವೆ : "ಶಾಳಾಜಿರಃ, ವರ್ಧಮಾನಃ, ಶರಾವಃ – ಈ ೩ ಶ್ರಾವೆ" (ಹಲಾಯು. ೫೨-೧೬೦). ೫. ದಕ್ಷಿಣಕ್ಕೆ ಬಾಗಿಲು ಇಲ್ಲದ ಒಂದು ಬಗೆಯ ಕಟ್ಟಡ : "ಸ್ವಸ್ತಿಕಃ, ವರ್ಧಮಾನಃ, ನಂದ್ಯಾವರ್ತಃ – ಈ ೩ ಮೊದಲಾಗುಳ್ಳುವು ಅರಮನೆಯ ಛಂದಂಗಳ್" (ಹಲಾಯು. ೫೧-೧೫೦); ಸ್ವಸ್ತಿಕವರ್ಧಮಾನ ನಂದ್ಯಾವರ್ತ ಸರ್ವತೋಭದ್ರ ವಳಭಿಚ್ಛಂದಮೆಂಬಯ್ದುಂ ಪ್ರಾಸಾದಂಗಳೊಳಂ . . . ತದ್ಭೂಮಿ ಕಣ್ಗೊಪ್ಪುಗುಂ (ಚಂದ್ರಪ್ರ. ೧೫-೨೧). ೬. ಒಗಟು ; ಒಡಪು. ೫,೬: ಅದು ಸಂಯುತಹಸ್ತದಂತೆ ವಿಸ್ತೃತಸ್ವಸ್ತಿಕೋಪೇತಮುಂ ಶುದ್ಧಪ್ರಸಿದ್ಧಪ್ರಬಂಧದಂತೆ ವರ್ಧಮಾನಮಾನಿತಮುಂ . . . ಎನಿಪುದು (ಚಂದ್ರಪ್ರ. ೧೧-೬೯ ವ). ೭. [ನಾಟ್ಯ] ಇಪ್ಪತ್ತುಮೂರು ದೇಶೀಯಸ್ಥಾನಕಗಳಲ್ಲಿ ಒಂದು ; ☞ "ಪಾದಗಳನ್ನು ಅಡ್ಡಮಾಡಿ ಹಿಮ್ಮಡಿಗಳನ್ನು ಸೇರಿಸುವುದು" (ಲಾಸ್ಯರಂ. ೩೨೯ ಗದ್ಯಾನುವಾದ): ಚರಣದ ಮಡದೊಳ್ ಪತ್ತಿರೆ ಪಿರಿದಡ್ಡದೆ ಪದಮೆ ವರ್ಧಮಾನಮೆನಿಕ್ಕುಂ (ಲಾಸ್ಯರಂ. ೭-೩೪). ೮. ಸಂಯುತಹಸ್ತಗಳಲ್ಲಿ ಒಂದು ; ☞ "ಹಂಸಪಕ್ಷಹಸ್ತಗಳೆರಡನ್ನು ಒಂದಕ್ಕೊಂದು ಹಿಮ್ಮುಖವಾಗಿರುವಂತೆ ಮುಂಗೈಗಳಲ್ಲಿ ಕೂಡಿಸಿ ಹಿಡಿಯುವುದು" (ಲಾಸ್ಯರಂ. ೨೪೫ ಗದ್ಯಾನುವಾದ). 'ವರ್ಧಮಾನಹಸ್ತ' ಪರಾ. ೯. [ಜೈನ] ವರ್ತಮಾನತೀರ್ಥಂಕರರಲ್ಲಿ ಇಪ್ಪತ್ತುನಾಲ್ಕನೆಯವನಾದ ಮಹಾವೀರತೀರ್ಥಂಕರ : ಮಾಟ್ಕೆಮಗಟ್ಕಜಿಂದೆ ಶುಭಮಂ ಶ್ರೀವರ್ಧಮಾನಂ ಜಿನಂ (ವರ್ಧಪು. ೧-೧). ೨,೯ : ವದನಂ ಚಂದ್ರಪ್ರಭಂ ವಿಕ್ರಮಭುಜಮಜಿತಂ ಪಾಣಿ ಪದ್ಮಪ್ರಭಂ ಸಂಪದಮೆಂದುಂ ವರ್ಧಮಾನಂ (ಅರ್ಧನೇ. ೧-೪೩). ೧೦. ಅವಧಿಜ್ಞಾನದ ಪ್ರಕಾರಗಳಲ್ಲಿ ಒಂದು ; ಸಮ್ಯಗ್ದರ್ಶನಾದಿ ಗುಣಗಳ ಅಭಿವೃದ್ಧಿಯಿಂದ ಪ್ರಾಪ್ತವಾಗುವ ಅಸಂಖ್ಯಾತಲೋಕಗಳ ಜ್ಞಾನ : ಹೀಯಮಾನವರ್ಧಮಾನಾವಸ್ಥಿತಾನುಗಾಮ್ಯ ನನುಗಾಮಿಸ್ವರೂಪದಿಂ ಷಟ್ಪ್ರಕಾರಮಪ್ಪ ದೇಶವರಮಸರ್ವಾವಧಿಜ್ಞಾನಮುಂ (ಸುಕುಮಾ. ೮-೪ ವ); ವರ್ಧಮಾನಮೆಂಬುದು . . . ಅಸಂಖ್ಯಾತಲೋಕಂಬರಂ ನಿರಂತರಂ ಪೆರ್ಚುವುದು (ತತ್ತ್ವಪ್ರ. ೬೮). [ಸಂ.]

**ವರ್ಧಮಾನಕ** (ನಾ). ೧. ಒಂದು ಬಗೆಯ ಪಾತ್ರೆ. ೨. ಮುಚ್ಚುಳ : "ಶರಾವಮದು ವರ್ಧಮಾನಕಂ ತಾನಕ್ಕುಂ" (ವಸ್ತುಕೋ. ೫೦-೨೯). ೩. [ಅಶ್ವಶಾ] ಕುದುರೆಯ ಮೈಮೇಲಿರುವ ಒಂದು ಬಗೆಯ ಗುರುತು,– ಚಿಹ್ನೆ : ಶ್ರೀವೃಕ್ಷಂ ಕನ್ನಡಿ ನಂದ್ಯಾವರ್ತಂ ವರ್ಧಮಾನಕಂ ಸ್ವಸ್ತಿಕಮೆಂಬೀ ವಿವಿಧಲಾಂಛನಂಗಳ ನಾವರಿಸಿದ ವಾಜಿಗಾಯ್ತು ತ್ರಿಂಶದ್ವರ್ಷಂ (ಅಶ್ವಶಾ. ೫-೩೬). [ಸಂ.]

**ವರ್ಧಮಾನಹಸ್ತ** (ನಾ). = ವರ್ಧಮಾನ ೮ : ಸಲೆ ಹಂಸಪಕ್ಷಮೆರಡುಂ ಸುಲಭದೆ ಮುಂಗಯ್ಯನೊಂದಕೊಂದೊಂದಿ ಕರಂ ನೆಲೆಗೊಂಡು ತಿರುಗೆ ಮೊಗಮಂ . . . ವರ್ಧಮಾನಹಸ್ತಮೆನಿಕ್ಕುಂ (ಲಾಸ್ಯರಂ. ೨-೩೬). [ಸಂ.]

**ವರ್ಧಿತ** (ಗು). ೧. ಬೆಳೆದ ; ಅಭಿವೃದ್ಧಿಹೊಂದಿದ. ೨. ದೊಡ್ಡದಾದ ; ಹಿಗ್ಗಿದ. ೩. ಕತ್ತರಿಸಿದ ; ಸೀಳಿದ. ೪. ತುಂಬಿದ ; ಪೂರ್ತಿಯಾದ. (ನಾ). ೫. ಬೆಳೆದವನು ; ಅಭಿವೃದ್ಧಿಹೊಂದಿದವನು : ಅತುಳಿತಗುರುಭಕ್ತಿಪ್ರಬುದ್ಧನು ಕಲಿತ ಗುರುಭಕ್ತಿಸ್ಥಿತನು ಗುರುಭಕ್ತಿವರ್ಧಿತಮ (ಬಸವು. ೪೦-೧). [ಸಂ.]

**ವರ್ಧಿಷ್ಣು** (ಗು). ೧. ಬೆಳೆಯುವ ; ಅಭಿವೃದ್ಧಿಗೊಳ್ಳುವ. (ನಾ). ೨. ಏಳಿಗೆಯಾಗುತ್ತ ಇರುವುದು ; ಬೆಳೆಯುತ್ತಿರುವುದು : ಒಂದು ಅವಧಿಯವರೆಗೆ ವರ್ಧಿಷ್ಣುವಾಗಿದ್ದು ಅನಂತರ ಹೊಸಪೀಳಿಗೆಯ ಕಣ್ಣಿಗೇ ಬೀಳದಿರುವ ಅನೇಕ ಪುಸ್ತಕಗಳ ಚರಿತ್ರೆ ಇಂತಹುದು (ಸಾಹಿಪ್ರ. ೩೧೦). ೩. ಬೆಳೆಯುತ್ತ ಹೋಗುವವನು ; ಎತ್ತರವಾಗುತ್ತ ಹೋಗುವವನು : ಇದೇನೆಂದು ಜಾತಾದ್ಭುತಂ ನೋಟ್ಪರ ಕಣ್ಣುಂ ಚೇತಮುಂ ಕಾಲ್ಗಿಡೆ ಕಡುಜವದಿಂ ವಿಷ್ಣು ವರ್ಧಿಷ್ಣುವಾದಂ (ಅರ್ಧನೇ. ೬-೨೮). [ಸಂ.]

**ವರ್ಧಿಸು** (ಕ್ರಿ). ಬೆಳೆ ; ಅಭಿವೃದ್ಧಿಗೊಳ್ಳು : ಇಳೆಯೊಳದಂಕುರಿಸಿ ಹರಿತ್ಕುಳದೊಳ್ ವರ್ಧಿಸಿಯೆ ನೀಳ್ದು ಗಗನಕ್ಕಸುಹೃತ್ಕುಳನಾರೀ[ನಯನಾಂ]ಬುವೆ ಬೆಳಸಿದುದೆನೆ ಕೀರ್ತಿವಲ್ಲಿಯಂ ಸತ್ತಿಗನಾ (ಗದಾಯು. ೧೦-೯); ದಿಶಾವ್ಯೋಮಾವಧಿ ಸ್ಥೂಲಮಪ್ಪೊಡಲಿಂ ವರ್ಧಿಸಿ . . . ಆರಭಟೆಯಿಂದಿರ್ದಂ ನಿಕುಂಭಾಸುರಂ (ಜಗವಿ. ೧೫-೩೨); ಬಾಲಾರ್ಕಶುಕ್ಲಪಕ್ಷಚಂದ್ರರಂದದೆ ಮೇಲೆ ವರ್ಧಿಸಿ ಸುತರಿರಲು (ಕಂನವಿ. ೩-೧೧). [ವರ್ಧನ + – ಇಸು$_3$]

**ವರ್ಣಣೆ** (ನಾ). ಕುದುರೆಯ ಒಂದು ಅಂಗ (?): ಬೆಡ(ದು)ವಿನ ಸಮೀಪದೆಡೆಯುಂ ಪಡೆವುದು ವರ್ನ[ಪಾಠಾಂ. ನ್ನ]ಣಿಯದೆಂಬ ಪೆಸರಂ (ಅಶ್ವಶಾ. ೯-೨೬); ಬೇಡುವರ್ಬೆಡವಿತೆನ ಸಮೀಪದೆಡೆಗಂ ಪಡೆವುದು ವರ್ನಣೆಯದೆಂಬ ಪೆಸರುಂ (ಅಶ್ವವೈ. ೮-೨೫). [?]

**ವರ್ಪ** 'ವರ್' ಪರಾ.

**ವರ್ಮ$_1$** (ನಾ). ೧. ಹಗೆತನ ; ವೈರ : ಆ ನಿಂಗೀ ಕಾಲಾಗ ಹೌದಲ್ಲೊ ಇಷ್ಟು ನಿಮ್ಮದೂ ಅವರದೂ ವರ್ಮ? (ಮಿಂಚುಹು. ೮೮); ಅವನ ವರ್ಮಾ ಕಟಗೊಂಡರ ನಾಳೆ ಈ ಊರಾಗ ನಿಂತು ನೀರ ಕುಡೀದ್ಹಾಂಗ ಮಾಡ್ಯಾನು (ಗ್ರಾಮಾಯ. ೧೮೩). ೨. ಭಾಷೆ ; ಆಣೆ ; ಮಾತು : 'ವರ್ಮಗೆಡು' ಪರಾ. ೩. ಗರ್ವ ; ಅಹಂಕಾರ : ಸರ್ವಾಂತರ್ಯಾಮಿ ಶಿವನಿರಲು ತನ್ನೊಳಗೆ ವರ್ಮವಿಹುದೇಕೆ (ಸರ್ವಜ್ಞ. ೪೪೧). [<— ತಮಿ. ವರ್ಮ, ವನ್ಮ]

**ವರ್ಮ$_2$** (ನಾ). ಗುಟ್ಟು ; ರಹಸ್ಯ : ವ[ಪಾಠಾಂ. ಕ]ರ್ಮವನರಿಯದ ಮಾಟ ಸಯಿದಾನದ ಕೇಡು (ಬಸವ. ೧೯೦); ಬೊಮ್ಮವೆಂದಿನ ಪರಿಯಲಿಪ್ಪುದು ವರ್ಮವನರಿಯದ ಮೂಢರುಗಳಾ ಬೊಮ್ಮ ಹುಟ್ಟಿತು ಹೊಂದಿತೆಂಬರು (ಸದ್ಗುರು. ೭-೩೦). [< ಸಂ. ಮರ್ಮನ್]

**ವರ್ಮ$_3$** (ನಾ). ೧. ಅಂಗರಕ್ಷೆಗಾಗಿ ತೊಡುವ ಉಕ್ಕಿನ ಕವಚ ; ಮೈಜೋಡು : "ಕವಚಂ ಜಗರಂ ಸನ್ನಾಹವುರಚ್ಛದಮಂಗರಕ್ಷೆ ಕಂಕಟಕಂ ವರ್ಮವಿನಿತ್ತುಂ [ಕವಚಾಖ್ಯಂ]" (ವಸ್ತುಕೋ. ೮೪-೧೨); ಶರನಿಧಿಯ ವಡಬಾನಳನ ದಳ್ಳುರಿಯ ವರ್ಮವ ತಿವಿವ ತುಂಬಿಗೆ ಮರಳುದಲೆಯುಂಟಾದಡದು ಭವಭವದ ಪುಣ್ಯಫಲ (ಕುಮಾರವ್ಯಾ ದ್ರೋ. ೪-೪೬). ೨. ಆಶ್ರಯ ; ಮರೆ ; ರಕ್ಷಣೆ : 'ವರ್ಮಿಗ$_2$' ಪರಾ. ೩. ಕತ್ತಿಯ ಒರೆ : "ವರ್ಮ, ಕೋಶಂ – ೨ ಕತ್ತಿ ಮೊದಲಾದುವನ್ನು ಇಡುವ ಒರೆ" (ಧನಂನಿ. ೧೮೪-೫೫). ೪. ತೊಗಟೆ. ೫. ಕ್ಷತ್ರಿಯರ ಹೆಸರಿನ ಕೊನೆಯಲ್ಲಿ ಸೇರುವ ಒಂದು ಪದ. [ಸಂ. ವರ್ಮನ್]

**ವರ್ಮಗೆಡು** (ಕ್ರಿ). ಮಾತಿಗೆ ತಪ್ಪು; ವಚನಭಂಗಮಾಡು: ವರ್ಮಗೆಟ್ಟು ನುಡಿವ ಕರ್ಮಜೀವಿಗಳ ಬಾಯಲ್ಲಿ ಬಾಲ್ಹುಳ ಸುರಿಯದೆ ಮಾಣ್ಬುವೆ ಹೇಳಾ (ಅಖಂಡೇ. ೨೭೭-೭). [ವರ್ಮ$_1$ + ಕೆಡು$_1$]

**ವರ್ಮಜ್ಞ** (ನಾ). ರಹಸ್ಯವನ್ನು ಬಲ್ಲವನು ; ಸತ್ಯವನ್ನು ತಿಳಿದವನು : ವರ್ಮಜ್ಞ ಮಡಿವಾಳ ಮಾಚರಸ ಕಿನ್ನರನ ನಿರ್ಮೋಹಿ ಕಲಕ್ಯಾತ ಬ್ರಹ್ಮಯ್ಯ (ನವಮೋ. ೧-೧೪). [< ಸಂ. ಮರ್ಮಜ್ಞ]

**ವರ್ಮವರ** (ನಾ). ಮೈಜೋಡು ; ಕವಚ : ಬಿಲ್ಲು ತೀರು ಹದೆ ಬತ್ತಳಿಕೆ ಶಿರಸ್ತ್ರಾಣ ಮಧ್ಯತ್ರಾಣ ಪದತ್ರಾಣ ವರ್ಮವರ . . . ಮುಂತಾದ ಶತ್ರುಜಯಾತ್ಮರಕ್ಷಾದಿ ಸಾಧನವಿಶೇಷಗಳಿಂದಲೂ (ವಿವೇಕ. ೨೬೨). [< ವರ್ಮ$_3$]

**ವರ್ಮಿಗ$_1$** (ನಾ). ರಹಸ್ಯವನ್ನರಿತವನು ; ಮರ್ಮಜ್ಞ ; ಜ್ಞಾನಿ : ಕರ್ಮಕ್ಕೆ ಕರ್ಮವನಿತ್ತು ತಾ ವರ್ಮಿಗನಾಗಬಲ್ಲಡೆ ಹೊಳೆಯಲ್ಲಿ ಹಾಕಿದ ಸೋರೆಯಂತೆ ಅನಿಲ ಕೊಂಡು ಹೋಹ ಎಲೆಯಂತೆ ಎತಕ್ಕೂ ಹೊಜಗಾಗಿ ಜಗದಾಶೆ ಇಲ್ಲದಿರ್ಪ ವೇಷಕ್ಕೆ ಒಳಗಲ್ಲದಾತನ ಜಗದೀಶನೆಂಬೆ (ಮೋಳಿಮಾ. ೧೯೭-೭೩೩). [ವರ್ಮ$_2$ + – ಇಗ]

**ವರ್ಮಿಗ$_2$** (ನಾ). ಆಸರೆಕೊಡುವವನು ; ಆಶ್ರಯದಾತ : ನಿರ್ಮಲರ ಮನ ಕಲಕಿ ದೋಷಕೆ ವರ್ಮಿಗರು ನೀವಾದಿರೆಲೆ ಪಾತಕರೆ ಬಿಡಿರೂರ (ಬಿಜ್ಜಪು. ೧೦೬-೭೧). [ವರ್ಮ$_3$ + – ಇಗ]

**ವರ್ಮಿತ** (ನಾ). ಕವಚವನ್ನು ತೊಟ್ಟಿರುವವನು : "ವರ್ಮಿತಃ, ಕವಚಿತಃ, ಸನ್ನದ್ಧಃ, ದಂಶಿತಃ – ಈ ೪ ಕವಚದೊಟ್ಟವಂ" (ಹಲಾಯು. ೭೬-೩೦೬). [ಸಂ.]

**ವರ್ಯ** (ಗು). ೧. ಆರಿಸಿಕೊಳ್ಳಬೇಕಾದ ; ಆಯಬೇಕಾದ. ೨. ಯೋಗ್ಯವಾದ ; ಅರ್ಹವಾದ. ೩. ಉತ್ತಮವಾದ ; ಮಿಗಿಲಾದ ; ಮೇಲಾದ. (ನಾ).

೪. ಶ್ರೇಷ್ಠನಾದವನು : ಧುರಧರೆಯೊಳು ಮಾಜೂಂತರನಿರದಿಕ್ಕಿ ಪರಾಕ್ರಮೈಕಲಕ್ಷ್ಮಿಗೆ ನಿಜಬಂಧುರಭುಜಮಂ ನೆಲಮಾಡಲು ಧರಿತ್ರಿಯೊಳು ವರ್ಯನಾರ್ಯ್ಯಮಲ್ಲನೆ ಬಲ್ಲಂ (ಸೌಇಇ. XX, ೨೦೬-೬;7). [ಸಂ.]

**ವರ್ಯಜನ** (ನಾ). ಉತ್ತಮಮಟ್ಟದ ಜನ ; ಶ್ರೇಷ್ಠಜನ : ಅಪ್ರತಿಕಂಗೆಜಗದ ವೀರವ್ರತಮಂ ಕೇಳ್ದು ಹರ್ಷಮಂ ತಾಳ್ದದ ನಿನ್ನಬ್ರಹ್ಮಣ್ಯಂ ವರ್ಯಜನವ್ರೀಡಾಕರಮದಂ ವಿಚಾರಿಸವೇಡಾ (ಪಂರಾಮಾ. ೬-೫೧). [ಸಂ.]

**ವರ್ಯೆ** (ನಾ). ೧. ತನ್ನ ಪತಿಯನ್ನು ತಾನೇ ಆರಿಸಿಕೊಳ್ಳುವವಳು ; ಸ್ವಯಂವರೆ. ೨. ಮದುವೆಗೆ ಯೋಗ್ಯಳಾದ ಕನ್ಯೆ : "ವರ್ಯಾ, ಪತಿಂವರಾ — ಈ ೨ ಕುಡಲ್ ನೆಣೆದ ಕೂಸು" (ಹಲಾಯು. ೭೯-೩೯). [ಸಂ. ವರ್ಯಾ]

**ವರ್ಷ** (ನಾ). ೧. ಮಳೆ ; ವೃಷ್ಟಿ : ಸಮುದಗ್ರಗ್ರಾವವರ್ಷಂ ಕಱೆಯೆ . . . ಗೋಪಗೋಪೀತತಿ ಮಱೆವುಗೆ ಗೋವರ್ಧನಾದ್ರೀಂದ್ರಮಂ . . . ಕೊಡೆವೊಲಂದೆತ್ತಿ ನಿಂದಂ ಮುಕುಂದಂ (ಜಗವಿ. ४-೮೯); ಶರನಿಧಿ ಕವಿದಂತೆ ಕಱೆದುದಿಳಿಯೊಳ್ ವರ್ಷಂ (ಗಿಂಕ. ೯-೫೧). ೨. ಮಳೆಯಂತೆ ಸುರಿಸುವಿಕೆ : 'ಪುಷ್ಪವರ್ಷ', 'ಶರವರ್ಷ' ಪರಾ. ೩. ವೀರ್ಯವು ಚಿಮ್ಮುವಿಕೆ. ೪. ಕಾಲಮಾನದ ಒಂದು ಪ್ರಮಾಣ ; ಹನ್ನೆರಡುತಿಂಗಳುಗಳ ಅವಧಿ ; ಸಂವತ್ಸರ : ಪರಮಾಯುಷ್ಯಮದಯ್ಪುರುಳ್ಪೆರಸು ನೂಱೆರ್ಪತ್ತುವರ್ಷಂ ನರದ್ವಿರದೌಘಕ್ಕೆ (ಲೋಕೋಪ. ೧೧-೧೦೫); ಮೂವತ್ತು ವರ್ಷಗಳ ಹಿಂದೆ . . . ಕಥಾಸಂಗ್ರಹವೊಂದನ್ನು ಪ್ರಕಟಿಸಿತ್ತು (ಹೂಸಕ್ಕಿ. ೨೭೭). ೫. ಭೂಮಂಡಲದ ಒಂಭತ್ತು ವಿಭಾಗಗಳಲ್ಲಿ ಒಂದು : ಜಂಬೂದ್ವೀಪದ ನವವರ್ಷಂಗಳೊಳ್ ಭಾರತವರ್ಷಮೊಂದನುೞಿದು ಮಿಕ್ಕಿನೆಂಟುವರ್ಷಂಗಳುಂ . . . ಭೂಸ್ವರ್ಗಂಗಳೆನಿಪುವು (ಚಿಕವಿ. ೩೧-೧೭). 'ನವವರ್ಷ$_1$' ಪರಾ. ೬. ಭಾರತದೇಶ. ೭. ಮೋಡ. ೮. ದಿವಸ.

**ವರ್ಷಂಪ್ರತಿ** = ಪ್ರತಿಯೊಂದು ವರ್ಷವೂ ; ವರ್ಷವರ್ಷವೂ : ಅವನಿಗೆ ವರ್ಷಂಪ್ರತಿ ಹದಿನೆಂಟುಸಹಸ್ರರೂಬಲ್ ವರಮಾನ ಬರುತ್ತಿತ್ತು (ಪುನರು. ೩೪೦). **ವರ್ಷಗಟ್ಟಳೆ$_2$** = ಹಲವಾರು ವರ್ಷಗಳ ತನಕ : ವರ್ಷಗಟ್ಟಳೆ ಶೂಲದ ಮೊನೆಯ ಮೇಲೆ ಕುಳಿತು ಸಮಾಧಿಮಗ್ನನಾಗಿದ್ದೆ (ಸಚಿದಾ. I, ೫೫೧). **ವರ್ಷತೊಡಕು** = ಯುಗಾದಿಯ ಮರುದಿನ; ಆ ಜನರು ಈ ದಿನವನ್ನು ಸಂತೋಷದಿಂದ ಕಳೆದರೆ, ವರ್ಷವೆಲ್ಲಾ ಸಂತೋಷದಿಂದ ಕೂಡಿರುತ್ತದೆ ಎಂಬ ನಂಬಿಕೆಯಿಂದ ಈ ದಿನವನ್ನು ಹಬ್ಬದ ಸಂಭ್ರಮದಲ್ಲಿ ಕಳೆಯುತ್ತಾರೆ : ಯುಗಾದಿಹಬ್ಬ ಆದ ಮಾರನೆಯ ದಿನ ಬಾಡಿನ 'ವರ್ಷತೊಡಕು' ಮಾಡದ ಹೊರತು ನನ್ನೂರಿನವರ ತೊಡಕು ವರ್ಷವೆಲ್ಲಾ ಪರಿಹಾರವಾಗುವುದೇ ಇಲ್ಲ (ನನ್ನೂರು. ೩೩). **ವರ್ಷದ ಹೆಚ್ಚು** = ಮಗುವಿಗೆ (ಮೊದಲನೆಯ) ವರ್ಷ ತುಂಬಿದಾಗ ಮಾಡುವ ಹಬ್ಬ , — ಉತ್ಸವ : ಪಕ್ಕದ ಮನೆಯಾಕೆಯ ಮಗುವಿನ ವರ್ಷದ ಹೆಚ್ಚಿಗೆ ಕರೆದಿದ್ದಾರೆ (ರೂಢಿ). **ವರ್ಷಾಕಾಲ$_2$** = ಹಲವಾರು ವರ್ಷಗಳು ; ಎಷ್ಟೋ ವರ್ಷಗಳ ಕಾಲ : ವರ್ಷಾಕಾಲ ಕಷ್ಟಪಟ್ಟಿದ್ದಕ್ಕೆ ಈಗ ಫಲ ಸಿಕ್ಕಿದೆ (ರೂಢಿ). [ಸಂ.]

**ವರ್ಷಕಾರಿ** (ನಾ). ಮಳೆಯನ್ನು ಸುರಿಸುವಂತಹುದು : ಕರಭದ ಕರಡಿಯ ಮೇಣ್ ವಾನರನೊಟ್ಟೆಯ ಪೋಲ್ಕೆಯಪ್ಪ ಮುಗಿಲಿಂದಂ ಭೋರ್ಗರೆದೆಱಗಿ ಕೊಂಡು ಪೆರ್ಮಱೆ ಧರೆಯೊಳ್ ವರವರ್ಷಕಾರಿಯಾಗದು (ಜಟ್ಟಿಮ. ೬-४).
[ಸಂ. ವರ್ಷಕಾರಿನ್]

**ವರ್ಷಕಾಲ** (ನಾ). ಮಳೆಗಾಲ ; ವರ್ಷಾಕಾಲ : ಮಯೂರನ ನಾಟ್ಯವೀಕ್ಷಣಂ ಕೂಡುವ ಮುಗ್ಧ ತಿಂಗಳೊಳು ಭೋಗಿಗಳಿರ್ಪರು ವರ್ಷಕಾಲದೊಳ್ (ಮಲ್ಲಿಕಾ. ೧೦-೨೦೨). [ಸಂ.]

**ವರ್ಷಗಂತಿ** 'ವರ್ಷಗಂದಿ' ನೋ.

**ವರ್ಷಗಂದಿ, ವರ್ಷಗಂತಿ** (ನಾ). ವರ್ಷಕ್ಕೊಮ್ಮೆ ಕರುಹಾಕುವ ಹಸು : "ಪ್ರತಿವತ್ಸರಂಗೌಃ, ಸಮಾಂಸಮೀನಾ — ಈ ೨ ವರ್ಷಗಂದಿಯಪ್ಪ ಪಸು" (ಹಲಾಯು. ४೫-೧೧೭). **ವರ್ಷಗಂತಿ** : ಆವುದಾನೊಂದು ವರ್ಷಗಂತಿಯಾಕಳುಂಟು ಅದು ಸಮಾಂಸಮೀನೆ (ನಾಚಿರಾ.೬). [ವರ್ಷ + ಕಂದಿ$_1$]

**ವರ್ಷಗಟ್ಟಳೆ$_1$** (ನಾ). ವ್ಯಕ್ತಿಯು ಸತ್ತು ಒಂದು ವರ್ಷ ಕಳೆದಾಗ ಮಾಡುವ ತಿಥಿ ; ವಾರ್ಷಿಕಶ್ರಾದ್ಧ : ನಾಳೆ ನಮ್ಮ ತಾತನ ವರ್ಷಗಟ್ಟಳೆಯಾದ್ದರಿಂದ ಊರಿಗೆ ಹೋಗಬೇಕು (ರೂಢಿ). [ವರ್ಷ + ಕಟ್ಟಳೆ$_1$]

**ವರ್ಷಗಟ್ಟಳೆ$_2$** 'ವರ್ಷ' ಪರಾ.

**ವರ್ಷಜ** (ಗು). ೧. ಮಳೆಯಿಂದ ಉಂಟಾದ. ೨. ಮಳೆಗಾಲದಲ್ಲಿ ಹುಟ್ಟಿದ : 'ವರ್ಷಜಧನು' ಪರಾ. [ಸಂ.]

**ವರ್ಷಜಧನು** (ನಾ). ಮಳೆಬಿಲ್ಲು ; ಕಾಮನ ಬಿಲ್ಲು : ಹರಿ ವರ್ಷಜಧನುವಂ ಸಂಹರಿಸಲೊಡಂ ಜೈತ್ರಚಾಪಮಂ ಜಿನಚಂದ್ರಂ ಧರಿಯಿಸಿದಂ (ಶಾಂತಿಪು. ೧೦-೧೩೫).
[ಸಂ. ವರ್ಷಜಧನುಸ್]

**ವರ್ಷಣ** (ನಾ). ಮಳೆ ; ವೃಷ್ಟಿ : ಮಣಿಘಂಟಿಕಾರವಂ ಕಿಂಕಿಣೀರವಂ ಕಱೆಯೆ ಬೀಱೆ ಕರ್ಣಾಮೃತವರ್ಷಣಮಂ ಜನನೇತ್ರಾಕರ್ಷಣಮಾದುದು ತಡತಡಾದ ಜಿನಬಾಳಕನಾ (ಮಲ್ಲಿಪು. ೧೩-೫೮). [ಸಂ.]

**ವರ್ಷಧರ** (ನಾ). ೧. ನೀರನ್ನು ಧರಿಸಿರುವಂಥದು ; ಮೋಡ. ೨. ಅಂತಃಪುರದ ಸೇವಕರಲ್ಲೊಬ್ಬನಾದ ನಪುಂಸಕ ; ಖೋಜಾ : ಅಂತಃಪುರಪರಿವಾರಜನ ನಿರ್ದಯಸಂಮರ್ದನಿಪತಿತಕುಬ್ಜವಾಮನವರ್ಷಧರನಿಕುರುಂಬಮುಂ . . . ಆಗಿ (ಆದಿಪು. ೮-೩೫ ವ); ಬರ್ಬರಶಾಕಬಧಿರವರ್ಷಧರ . . . ಖಂಜರಂಜಕ ಸಮಾಜಮುಮಂ (ಚಂದ್ರಪ್ರ. ೬-೮೫ ವ). [ಸಂ.]

**ವರ್ಷಧಾರೆ** (ನಾ). ಮಳೆಯ ಸುರಿತ , — ಧಾರೆ : ಮುಸಲ — ವರ್ಷಧಾರೆ ಮುಗಿಲಿನಿಂದ ಸೋರೆ ಕುಣಿವ ನವಿಲು ನನ್ನ ಮನಂ, ನಲ್ಮೆಯುಕ್ಕಿ ಮೀರೆ! (ಪಕ್ಷಿಕಾ. ೩೫-೧). [ಸಂ. ವರ್ಷಧಾರಾ]

**ವರ್ಷನಗ** (ನಾ). ಭೂಮಿಯ ಒಂಬತ್ತು ಪರ್ವತಗಳನ್ನು ಒಂದರಿಂದ ಮತ್ತೊಂದನ್ನು ಪ್ರತ್ಯೇಕಿಸುವಂತೆ ಅಡ್ಡನಿಂತಿರುವ ಸಾಲುಪರ್ವತ : ಪಕ್ಷಚ್ಛೇದೋದ್ಯುಕ್ತನಪ್ಪ ಸುರರಾಜನ ಸೇನಾನಿಯೊಳ್ ತಾಗುವ ಪದದ ವರ್ಷನಗದಂತೆ ಬಂದು ತಾಗುವುದುಂ (ಶಾಂತಿಪು. ೧೦-೧೩೩ ವ). [ಸಂ.]

**ವರ್ಷಪರ್ವತ** (ನಾ). = ವರ್ಷನಗ : ಮೂವತ್ತೆರಡುಂ ವರ್ಷಂಗಳುಂ, ಅನಿತುಂ ವರ್ಷಪರ್ವತಂಗಳುಂ . . . ಇನಿತುಂ ಭೂಸ್ವರ್ಗಂಗಳೆನಿಪುವು (ಚಿಕವಿ. ೩೧-೧೭).
[ಸಂ.]

**ವರ್ಷಫಲ** (ನಾ). ಯುಗಾದಿಯ ದಿನದಂದು ಪೂರ್ವಭಾವಿಯಾಗಿ ಹೇಳುವ ಪ್ರಸಕ್ತವರ್ಷದ ಮಳೆ, ಬೆಳೆ ಮೊದಲಾದುವುಗಳ ಫಲ : ಯುಗಾದಿಯಂದು ಪಂಚಾಂಗಪೂಜೆಯ ನಂತರ ಜೋಯಿಸರು ವರ್ಷಫಲವನ್ನು ತಿಳಿಸುತ್ತಾರೆ (ರೂಢಿ).
[ಸಂ.]

**ವರ್ಷರ್ತು** (ನಾ). ಶ್ರಾವಣ ಮತ್ತು ಭಾದ್ರಪದ ಮಾಸ ; ಮಳೆಗಾಲ : ವರ್ಷರ್ತು ಹರ್ಷಮನೆರಚುವಂತೆ ಕಾರ್ಮುಗಿಲ್ ಮುತ್ತಿ ಗಗನವನ್ನೆದೆ ಮಳೆಗರೆಯೆ (ಚಿತ್ರಾಂಗ. ೭೧-೧೯೫೭). [ಸಂ.]

**ವರ್ಷವರ** (ನಾ). = ವರ್ಷಧರ ೨ : "ಕ್ಲೀಬವ್ಯಪದೇಶಂ ವರ್ಷವರಂ ನಪುಂಸಕಂ" (ವಸ್ತುಕೋ. ೫೬-೨೬); ಇದಿರ್ವರ್ಪ ವರ್ಷ[ವಾಠಾಂ. ಪುರುಷ]ವರನಂ ಕಾದಂಬರೀದೇವಿಯಿಲ್ಲಿರ್ದಳೆಂಬುದುಂ (ಕಾದಂಋ. ೨೦೮). [ಸಂ.]

**ವರ್ಷವರ್ಧಂತಿ** (ನಾ). ವರ್ಷದ ಹುಟ್ಟುಹಬ್ಬ. [ಸಂ. ವರ್ಷವರ್ಧಂತೀ]

**ವರ್ಷವರ್ಧನದಿನ** (ನಾ). = ವರ್ಷವರ್ಧಂತಿ : ಕಟಕಕಟಿಸೂತ್ರಕುಂಡಲಹಟತ್ಕಿರೀಟಾಂಗದಾದಿ ಮಣಿಭೂಷಣ ಭಾಜಟಿಲಿತಮೂರ್ತ್ಯುತ್ಕರ್ಷಂ ಸ್ಫುಟಹರ್ಷಂ ತನ್ನ ವರ್ಷವರ್ಧನದಿನದೊಳ್ . . . ಒಡ್ಡೋಲಗಂಗೊಟ್ಟಿರೆ (ಆದಿಪು. ೨-೨); ಒಂದು ದಿವಸಂ ತನ್ನ ವರ್ಷವರ್ಧನದಿನದೊಳು ಮಹಾಸನಾಸೀನನೋಲಗಂಗೊಟ್ಟಿರ್ಪುದುಂ (ಚಾವುಂಪು. ೧೩). [ಸಂ.]

**ವರ್ಷವಾಚಕ** (ನಾ). ಸಂವತ್ಸರಸೂಚಕವಾದುದು ; ವರ್ಷಸಂಬಂಧಿಯಾದುದು: ಈವರೆಂಬುದು ಈಷದ್ಭೂತಕಾಲಂ ; ಮೊನೆಯೇದೆಂದು ಭೂತಕಾಲಂ ; ಇವು ವರ್ಷವಾಚಕಂಗಳಾಗಿ ಕಾಲೋಪಯುಕ್ತಂಗಳು (ಶಮದ. ೩೨೨ ವೃತ್ತಿ). [ಸಂ.]

**ವರ್ಷಾಂತ** (ನಾ). ಮಳೆಗಾಲದ ಕೊನೆ : ಕರಮೊಪ್ಪಿತ್ತುಷ್ಣೇತರಕಿರಣಂ ವರ್ಷಾಂತಸಮಯಜಳಧರಪಥದೊಳ್ (ಕವಿರಾ. ೨-೭೮). [ಸಂ.]

**ವರ್ಷಾಂತರ** (ನಾ). ೧. ಇನ್ನೊಂದು ವರ್ಷ ; ಬೇರೊಂದು ವರ್ಷ. ೨. ಬಹಳ ಕಾಲ ; ದೀರ್ಘಸಮಯ : ವರ್ಷಾಂತರಗಳ ಹಿಂದೆಯೇ ಆಗಬೇಕಾಗಿದ್ದ ಈ ಕೆಲಸ ಈಗ ಮುಕ್ತಾಯದ ಘಟ್ಟಕ್ಕೆ ಬಂದಿದೆ (ಬಳಕೆ). [ಸಂ.]

**ವರ್ಷಾಕಾಲ₁** (ನಾ). ಮಳೆಗಾಲ : ಕಾಲವು ಸಂಕ್ಷೇಪದಿಂದ ಶೀತಕಾಲ, ಉಷ್ಣಕಾಲ, ವರ್ಷಾಕಾಲವೆಂದು ಮೂರುತೆರನಾಗಿರುವುದು (ಸಂಸ್ಕೃ. ೧೫); ವರ್ಷಾಕಾಲದೊಳೊಂದು ದೆವಸಂ . . . ಮುದ್ದಣನರಮನೆಯಿಂ ಪೊಱಮಟ್ಟು (ರಾಮಾಶ್ವ. ೪-೬). [ಸಂ.]

**ವರ್ಷಾಕಾಲ₂** 'ವರ್ಷ' ಪರಾ.

**ವರ್ಷಾಗಮ** (ನಾ). ಮಳೆಗಾಲದ ಆರಂಭ : ಆ ಪಾಹಿಸೇವ್ಯೂಹಂ . . . ವರ್ಷಾಗಮಸಮಯದಂತೆ ಬಹಳತರವಾರಿಧರಪರೀತಮುಂ (ಚಂದ್ರಪ್ರ. ೧೦-೩೦ ವ). [ಸಂ.]

**ವರ್ಷಾಬ್ದಿಕ** (ನಾ). = ವರ್ಷಗಟ್ಟಳೆ₁ : ನನ್ನ ಅತ್ತೆಯವರ ವರ್ಷಾಬ್ದಿಕವಾದ ಮೇಲೆ ಮಾಡುವುದೇ ಸರಿ (ಶಾಂತಲಾ. ೧೯೧). [ಸಂ.]

**ವರ್ಷಾಭು** (ಗು). ೧. ಮಳೆಯಲ್ಲಿ ಹುಟ್ಟಿದ. (ನಾ). ೨. ಕಪ್ಪೆ : "ಭೇಕಂ ಶಾಲೂರಂ ಮಂಡೂಕಂ ವರ್ಷಾಭು ದರ್ದುರಂ" (ವಸ್ತುಕೋ. ೨೩-೮); ತರಕ್ಷು ಪಶುಮೃಗ ಬಿಲಶಯಃ ವರ್ಷಾಭು ನಕುಲ ಭುಜಂಗಜಾತಿಗಳು ಕುಲದ ವೈರವ ಮಱೆದು ಬೆರಸಿಪವು . . . ಋಷ್ಯಶೃಂಗನ ಬಲದಲೆಡದಲಿ (ಕಾಶಿರಾ. ೧-೩೦). ೩. ಹೆಣ್ಣು ಕಪ್ಪೆ: "ಭೇಕಿ ವರ್ಷಾಭು[ಪಾಠಾಂ. ಭ್ವಿ]ಯೆನೆ ಪೆಣ್ಗಪ್ಪೆಯಕ್ಕುಂ"(ಮಂಗರಾ. ೧೨೨-೮). ೪. ಸಣ್ಣ ಕಪ್ಪೆ. ೫. ಒಂದು ಬಗೆಯ ಹುಲ್ಲು ; ಹಂದಿಹುಲ್ಲು. ೬. ಮಣ್ಣುಹುಳು ; ಎರೆಹುಳು. ೭. ಹೊನ್ನೆಹುಳು. ಇಂದ್ರಗೋಪ. [ಸಂ. ವರ್ಷಾಭೂ]

**ವರ್ಷಾಭ್ರ** (ನಾ). ಮಳೆಗಾಲದ ಮೋಡ ; ಕಾರ್ಮೋಡ : ಕಾಮರೂಪಿಣಿ . . . ಸಿಡಿದಳಂಬರಕೊಡನೆ ವರ್ಷಾಭ್ರವೇಷದಿಂ (ಶ್ರೀರಾಮಾ. ೨೦೯-೪೦೬). [ಸಂ.]

**ವರ್ಷಾಭ್ವಿ** (ನಾ). ಹೆಣ್ಣುಕಪ್ಪೆ : "ಭೇಕಿ ವರ್ಷಾಭ್ವಿ[ಪಾಠಾಂ. ಭು]ಯೆನೆ ಪೆಣ್ಗಪ್ಪೆಯಕ್ಕುಂ" (ಮಂಗರಾ. ೧೨೨-೮). [ಸಂ. ವರ್ಷಾಭ್ವೀ]

**ವರ್ಷಾಲಯ** (ನಾ). ಮಳೆಗಾಲದಲ್ಲಿ ವಾಸಮಾಡುವ ಮನೆ : ಗೃಹಕೂಟಾಂಕ(ದ) ವರ್ಷಾಲಯದಿಂದಂ ಮಹಾಘರ್ಮಾಂತಾಭಿಧೇಯ ಧಾರಾಗೃಹದಿಂದಂ (ಶಾಂತಿಪು. ೧೧-೮೪ ವ). [ಸಂ.]

**ವರ್ಷಾವಾಸ** (ನಾ). ೧. = ವರ್ಷಾಲಯ : ಮಹಾಘರ್ಮಾಂತಮೆಂಬ ಧಾರಾಗೃಹಮುಂ ಗೃಹಕೂಟಮೆಂಬ ವರ್ಷಾವಾಸಮುಂ (ಆದಿಪು. ೧೫-೩ ವ); ಗೃಹಕೂಟಮೆಂಬ ವರ್ಷಾವಾಸಮುಂ ಪುಷ್ಕರಾವತಿಯುಮೆಂಬ ಶಯನಸದನಮುಂ (ಆದಿಪು. ೧೦-೧ ವ). ೨. [ಬೌದ್ಧ] "ಮಳೆಗಾಲದ ನಾಲ್ಕುತಿಂಗಳು ಹೊರಗೆ ಸಂಚಾರಕ್ಕೆ ಹೋಗದೆ ಆರಾಮದಲ್ಲಿ ವಾಸಮಾಡುವುದು" (ಬುದ್ಧಪ. ಮಿಲಿಂದ. ಪದವಿಷಯಸೂಚಿ. ೧೩೩) : ನಾಗಸೇನನು . . . ವರ್ಷಾವಾಸಕ್ಕೆ ಅಲ್ಲಿ ನಿಂತನು (ಬುದ್ಧಪ. ಮಿಲಿಂದ. ೨೩). [ಸಂ.]

**ವರ್ಷಾಶನ** (ನಾ). (ಅಶಕ್ತರು, ವಿಧವೆಯರು ಮುಂತಾದವರಿಗೆ) ಉದರನಿರ್ವಾಹಕ್ಕಾಗಿ ವರ್ಷಕ್ಕೊಮ್ಮೆ ನೀಡುವ ಧನ ಅಥವಾ ಧಾನ್ಯರೂಪದ ನಿಯಮಿತವಾದ ಕೊಡುಗೆ ; ಜೀವನಾಂಶ ; ಪೋಟಿಗೆ (ಉಕ) : ರಾಜರಾಗಿದ್ದವರು ಸಹಾಯಮಾಡಿದರಲ್ಲ ಎನ್ನುವುದಾದರೆ ಕೆಲವು ಲಕ್ಷ ವರ್ಷಾಶನ ಕೊಡೋಣವಂತೆ (ಚಕರಾ. ೧೦೨); ಬ್ರಿಟಿಷರು . . . ಅವರಿಗೆ ವರ್ಷಾಶನ ಕೊಟ್ಟು ಬೈಲಹೊಂಗಲದ ಕೋಟೆಯಲ್ಲಿ ಇಟ್ಟರು (ಕಪವು. ೪-೧೪). [ಸಂ.]

**ವರ್ಷಿಷ್ಠ** (ಗು). ೧. ವಯಸ್ಸಿನಿಂದ ಅತ್ಯಂತ ಹಿರಿಯತನವುಳ್ಳ. ೨. ಬಹಳ ಹಳೆಯದಾದ. ೩. ಅತ್ಯಂತ ಸಮರ್ಥವಾದ, — ಬಲಿಷ್ಠವಾದ. ೪. ಅತಿ ದೊಡ್ಡ ; ಬೃಹತ್ತಾದ. ೫. ಅತ್ಯುತ್ತಮವಾದ. [ಸಂ.]

**ವರ್ಷಿಸು** (ಕ್ರಿ). ಮಳೆಯಂತೆ ಸುರಿಸು, — ಕರೆ : ದಾನೋದಕವಂ ವರ್ಷಿಸುತ (ಸೌಗಂಧಿ. ೫೨-೧೮); ಯುಧಿಷ್ಠಿರನು ನಡುಗದೆ ಅಂಬುಮಳೆಯನ್ನು ವರ್ಷಿಸಿದನು (ವ್ಯಾಸಪಿ. ೩೭೯). [ವರ್ಷ + — ಇಸು₃]

**ವರ್ಷೀಯ** (ನಾ). ವಯಸ್ಸಾದವನು ; ಮುದುಕ : "ವೃದ್ಧಂ ಸ್ಥವಿರಂ ತಾಂ ವರ್ಷೀಯಂ . . . ದಶಮಿಸ್ಥಂ" (ವಸ್ತುಕೋ. ೫೬-೨೭). [ಸಂ. ವರ್ಷೀಯಸ್]

**ವರ್ಷೋಪಲ** (ನಾ). ಆಲಿಕಲ್ಲು ; ಆಣೆಕಲ್ಲು : "ಆಲಿವರಲು ಮುಗಿಲ್ಗಲ್ಲೆಂದುಂ ತೋಱೆ ವರ್ಷೋಪಲಾಖ್ಯಂ" (ಸವಿಕಂ. ೬೧). [ಸಂ.]

**ವರ್ಷ್ಮ** (ನಾ). ೧. ದೇಹ; ಶರೀರ: "ತನುಃ . . . ವರ್ಷ್ಮ, ಪುರಂ, ಪಿಂಡಂ, ಕ್ಷೇತ್ರಂ, ಗಾತ್ರಃ, ಅಪಘನಃ, ಮೂರ್ತಿಃ — ಈ ೧೭ ಶರೀರಂ" (ಹಲಾಯು. ೮೪-೩೫೬); ಘನಲಿಂಗದೊಳು ವರ್ಷ್ಮ ಬಯಲಾಗೆ (ಪ್ರಭುಪು. ೨-೯೮). ೨. ಅಳತೆ ; ಪ್ರಮಾಣ. ೩. ಎತ್ತರ ; ಔನ್ನತ್ಯ. ೪. ಸುಂದರವಾದ ರೂಪ, — ಆಕಾರ. [ಸಂ. ವರ್ಷ್ಮನ್]

**ವಲ್** (ಅ). ದಿಟವಾಗಿ ; ನಿಜವಾಗಿ (?): ಶ್ರೀ ಭದ್ರವಾಹುಸಚನ್ದ್ರಗುಪ್ತಮುನಿನ್ದ್ರಯುಗ್ಮದಿನೊಪ್ಪೆ ವಲ್(ಎಕ. II, ೩೧-೧; ಸು. 650); ಶ್ರೀಗತಿಬೀಷ್ಣಾವಿರಹಂ ಶುಭಾಂಗದೆ ಘನಮ್ಮಾಱಿಟ್ಟಮಾನ್ನಿಟ್ಟು ವಲ್ ಯತಿಯಂ ಪೇೞ್ದ ವಿಧಾನದಿನ್ದು ತೊಱದೆ ಕಟ್ಟಪ್ಪಿನಾ ಶೈಲದುಳ್ . . . ಸುಭಮುಮ್ ಸ್ವರ್ಲೋಕದಿಂ ನಿಶ್ಚಿತಮ್ (ಎಕ. II, ೭೭-೧; ಸು. 700). [IP ಇದು 'ದಲ್' ಎಂಬುದರ ಅಪಲಿಖಿತವಿರಬಹುದು]

**ವಲ** (ನಾ). ಒಂದು ಬಗೆಯ ದ್ವಿದಳಧಾನ್ಯ; ಅವರೆ: "ಕೂಗುರಿಯವರೆಗಳು ವಲಾಖ್ಯಂ" (ಮಂಗರಾ. ೪೫-೪೮). [IP ಇದು 'ವಲ್ಲ' ಎಂದಿರಬಹುದೆ?]

**ವಲಂ, ವಲ್ಲಂ** (ಅ). ದಿಟವಾಗಿ ; ನಿಶ್ಚಯವಾಗಿ ; ಖಂಡಿತವಾಗಿ : "ಏಗಂ ವಲಂ ವೆಂ ದಲ್ ತಾಗುಗುಮತಿನಿಶ್ಚಯಾರ್ಥಮಾ" (ಶಮದ. ೩೦೬); ಪುರುಪರಮೇಶ್ವರನಿಳೆಗವತರಿಸಿದನಿಂದರಸುವಡೆದವೆಂಬಂತೆ ವಲಂ[ಪಾಠಾಂ. ವೊಲೀ] ಪರಮಾನಂದಪರಂಪರೆ ದೊರೆಕೊಂಡತ್ತಿಂತು ಪಂಚಭೂತಂಗಳೊಳಂ (ಆದಿಪು. ೭-೩೬); ಮೃತ್ಯುಂಜಯಂಗಧಿಕದೈವಮಿಲ್ಲಿದು ವಲಂ ಶ್ರುತ್ಯುಕ್ತಿ (ಪದ್ಮರಾ. ೧೦-೨೯). **ವಲ್ಲಂ** : ಏಗಂ, ವರಂ, ವಲಂ, ವಲ್ಲಂ, ವೆಂ (ಶಬ್ದಾನು. ೨೦ ಪ್ರಯೋ).

**ವಲಕ್ಷ, ವಳಕ್ಷ** (ನಾ). ೧. ಬಿಳಿಯ ಬಣ್ಣ ; ಶ್ವೇತವರ್ಣ. **ವಳಕ್ಷ** : ೧. ತರಕ್ಷುರಾಕ್ಷಸ ವಿಪಕ್ಷ ವಳಕ್ಷ ಸರಕ್ಷ ದೇಹ . . . ರಕ್ಷಿಪುದು (ರಾಜಶೇ. ೧-೧೦). ೨. ಬಿಳಿಯ ಬಣ್ಣವುಳ್ಳದು ; ಬಿಳುಪಾದುದು : ಉಕ್ಷಪತಿ ಮುಂದೆ ಬಂದು ವಳಕ್ಷಂ . . . ಮುಂದೆ ನಡೆಯೆ ನಡೆದರ್ ವಿಭುಗಳ್ (ನೇಮಿಪು. ೬-೭೨). [ಸಂ.]

**ವಲಗ್ನ** (ನಾ). ಸೊಂಟ ; ನಡು : "ಅವಲಗ್ನಂ ವಲಗ್ನಮಾ ಮಧ್ಯಮೆನೆ ನಡುವೆನಿಕ್ಕುಂ" (ಮಂಗರಾ. ೯೬-೧೩). [ಸಂ.]

**ವಲಜ, ವಳಜ** (ನಾ). ೧. ಹೊಲ : "ವಲಜಂ — ೧ ಹೊಲ, ಊರುಬಾಗಿಲು ೨ ಕ್ಕೂ ಹೆಸರು" (ಸಿದ್ಧಾಂತ. ೩೫೦). ೨. (ಊರು, ಮನೆ ಮುಂತಾದುವುಗಳ) ಹೆಬ್ಬಾಗಿಲು; ಮಹಾದ್ವಾರ : "ದ್ವಾರಂ ದ್ವಾರ್ವಲಜಂ" (ವಸ್ತುಕೋ. ೪೭-೧೨). **ವಳಜ** : ೨. "ದ್ವಾಃ, ದ್ವಾರಂ, ವಳಜಂ — ಈ ೩ ಬಾಗಿಲ್" (ಹಲಾಯು. ೫೦-೧೯೫). [ಸಂ.]

**ವಲಜೆ** (ನಾ). ಚೆಲುವೆ; ಸುಂದರಿ. [ಸಂ. ವಲಜಾ]

**ವಲಟ** (ನಾ). ಸುವಾಸನೆಯುಳ್ಳ ಮಣ್ಣು : "ಆಢಕೀ . . . ವೃತ್ತಾಳಿಕಂ, ಸುರಾಷ್ಟ್ರಜಂ — ಈ ೬ ವಲಟಮಣ್ಣೆಂಬ ಗಂಧದ್ರವ್ಯ" (ನಾಚಿರಾ. ೧೧೧). [ಸಂ.]

**ವಲನ, ವಳನ** (ನಾ). ೧. ಚಲನೆ ; ಸರಿದಾಡುವಿಕೆ : 'ಚಲನವಲನ' ಪರಾ. ೨. ಅಲುಗಾಟ ; ಸ್ಪಂದನ : ಕಿನ್ನರೀ ಕರಕಿಸಲಯವ[ಪಾಠಾಂ. ಚ, ಚಾ]ಲನಸಮುತ್ಪನ್ನಕಾಕಲೀಕಲರವಮಿಲಿತಮಧುಕರತಂತ್ರೀಸಮಂಚಿತವಿಪಂಚೀಮಂದ್ರತಾರಮಧುರಮೂರ್ಛನಾಸನಾಥ (ಆದಿಪು. ೧೧-೭೪ ವ). ೩. ಸುತ್ತು ತಿರುಗುವಿಕೆ ; ಗುಂಡಗೆ ಚಲಿಸುವಿಕೆ : ಹಾಗಾದರೆ ನಿನ್ನ ಕೆಲಸವೇನು ಈಗ? ಸರಳರೇಷೆ. ನಿನ್ನ ರೇಷೆಯ ವಲನ ನನಗೇಕೆ? (ರಕ್ತಧ್ವ. ೨೬೮). ೪. [ನಾಟ್ಯ] ಕಣ್ಣನ್ನು ವೃತ್ತಾಕಾರವಾಗಿ ಚಲಿಸುವುದು : ಭ್ರಮಣ, ವಲನ, ಪಾತ . . . ಪ್ರಾಕೃತ — ಈ ಒಂಬತ್ತು [ಸ್ವನಿಷ್ಠ] ಆಲಿಯ ಭೇದಂಗಳ್ (ಲಾಸ್ಯರಂ. ೩-೫೪ ವ); ಭರದಿಂ ಮೂಱುಂ ಮೂಲೆಯನಿರದೊಂದಲ್ ತಾರೆ ವಲನಮೆಂದೆನಿಸಿರ್ಕುಂ (ಲಾಸ್ಯರಂ. ೩-೫೫). **ವಳನ** : ೧. ಚಳದನಿಳಾಹತಕ್ಷುಭಿತ ಭಂಗುರತುಂಗತರಂಗಮಾಳಿಕಾವಳನಸಮುಚ್ಚಳನ್ನಗಣಾತ್ತ . . . ಬಾಡವಾನಳಾವಿಳಜಳಮಂ ಮನಂ ಬಯಸಿ ನೋಡಿದನರ್ಣವಮಂ ಗುಣಾರ್ಣವಂ (ಪಂಪಭಾ. ೪-೨೫). [ಸಂ.]

**ವಲಭಿ, ವಳಭಿ** (ನಾ). ೧. ಮನೆಯ ಚಾವಣಿ, –ಸೂರು : "ಆಚ್ಛಾದನಂ, ವಲಭಿಃ – ಈ ೨ ಮನೆಯ ಹೊ(ದಿ)ದಿಕೆ" (ಹಲಾಯು. ೫೧–೧೪೮); ರಮಣೀಯತಾಗುಣ ಪತಾಕೆಯನ ಪಡೆಯುತ್ತ, ವಿವಿಕ್ತತಾಕಾರಣದೆ ರಾಗವನು ಪೆರ್ಚಿಸುತ ಪರಿನಮ್ರವಲಿಗಳಿಂ ಸೊಗಯಿಸುವ ವಲಭಿಗಳ ವಧುಗಳೊಂದಿಗೆ ಸೇವಿಸಿದರಲ್ಲಿ ಯುವಜನರು (ಧ್ವನ್ಯಾಲೋ. ೧೧೯). **ವಳಭಿ** : ೧. ಸೆಜ್ಜೆವನೆಯ ವಜ್ರದ ವಳಭಿಗಡರ್ದು ಪಣ್ಣಿದ ಕಣ್ಣೆಸಲೆಯಂತೆ ಕವಲ್ತು ದಾಂಗುಡಿವೋದ ಮಾಧವೀಲತೆಯ ಕೆಲದೊಳ್ (ಧರ್ಮನಾ. ೨–೬೨ ವ). ೨. ಮನೆಯ ಎತ್ತರವಾದ ಭಾಗ ; ಉಪ್ಪರಿಗೆ : ರಾಜಭವನಂ ಪದ್ಮರಾಗಮಾಣಿಕ್ಯಕಳಶವಪ್ರಗಳಿಂ ರಾಜಹಂಸವಸದಂತೆಯುಂ . . . ನಿರಂತರಚಂದ್ರಕಾಂತ ವಳಭೀವಳಯದಿಂ ಸಶಾರದಾಭ್ರಸಮುದಯದಂತೆಯುಂ . . . ಎಸೆವುದು (ಚಂದ್ರಪ್ರ. ೧೧–೭೮ ವ). 'ವಲಭಿಚ್ಛಂದ' ಪರಾ. ೩. ಒಂದು ಪಟ್ಟಣದ ಹೆಸರು; IP ಈಗಿನ ಸೌರಾಷ್ಟ್ರದ ಒಂದು ಪಟ್ಟಣ : ಸುರಥಮೆಂಬುದು ನಾಡಲ್ಲಿ ವಳಭಿ[ಪಾಠಾಂ. ಳಂಬೆ]ಯೆಂಬುದು ಪೊಟಲ್ (ವಡ್ಡಾರಾ. ೯೩–೪). [ಸಂ. ವಲಭೀ]

**ವಲಭಿಚ್ಛಂದ, ವಳಭಿಚ್ಛಂದ** (ನಾ). ಮುಂದಕ್ಕೆ ಚಾಚಿದ ಛಾವಣಿಯ ಭಾಗ : ಸಮೆದ ಚೆಲ್ವಿಂಗೆ ಸರ್ವತೋಭದ್ರಮೆನಿಸಿದ ಸರ್ವತೋಭದ್ರಂಗಳೊಳಂ ಛಂದೋವಿದ್ಯೆಯಂತೆ ನಾನಾಚ್ಛಂದಮಪ್ಪ ವಲ[ಪಾಠಾಂ. ಳ]ಭಿಚ್ಛಂದಂಗಳೊಳಂ . . . ಕೃತ ಸುಕೃತಜನಕ್ಕೆ ತಜ್ಜನ್ಮಭೂಮಿಯುಮಿರ್ಪಂತಿರ್ದ ನಗರಲಲನೆಯ ಲಪನಕ್ಕೆ ಲೀಲಾಲಲಾಮಲಕ್ಷ್ಮಿಯಂ ತಾಳೆ (ಆದಿಪು. ೬–೧೦೭ ವ). **ವಳಭಿಚ್ಛಂದ** : ಅತಿಲಲಿತಮತಿವಳಭಿಚ್ಛಂದಂಗಳಿಂ ಛಂದೋವಿದ್ಯೆಯುಮಂ ಸರ್ವತೋಭದ್ರಾಹ್ವಯ ವಿಶೇಷದಿಂ ನೋಂಪಿಯ ವಿಶೇಷಮಂ... ಸ್ವಸ್ತಿಕವಿಸ್ತಾರದಿಂ ವಿವಾಹಮುಮನನುಕರಿಸಿ ಶೋಭಿಸುವುದು (ಸುಕುಮಾ. ೧೦–೫೦ ವ); "ಉಪ್ಪರಿಗೆಯ ಸೊಗಸು" (ಸುಕುಮಾ. ಕೋಶ). [< ಸಂ. ವಲಭಿಚ್ಛದ]

**ವಲಯ, ವಳಯ** (ನಾ). ೧. ಕಡಗ ; ಬಳೆ : "ವಲಯಮೆನಲು ಕಂಕಣಮಕ್ಕುಂ" (ಮಂಗರಾ. ೧೦೦–೨೬); ಸರೋರುಹಕರ್ಣಪೂರಮುತ್ಪಲಕಟಕಂ ಮೃಣಾಲವಲಯಂ . . . ಇಂದುಮಂಡಲಮಧುರಾಸ್ಯೆಗೊಪ್ಪಿದುದು (ರಾಜಶೇ. ೪–೪೩). ೨. ಸಿಂಬೆ ; ಸುರುಳಿ. ೩. ವರ್ತುಲ ; ಪರಿಧಿ ; ಮಂಡಲ : ರಘುಜಂ... ಬೀಳ್ಕೊಂಡನಾಶ್ರಮಸ್ನೇಹಮಯ ವಲಯಮಂ ಬಾಷ್ಪಲೋಚನನಾಗಿ (ಶ್ರೀರಾಮಾ. ೧೩೮–೩೬೪); ಹೀಗೆ ಕೆಲಕಾಲ ಕಳೆದ ಮೇಲೆ ಶಿಬಿರದವರಲ್ಲಿ ಏನೋ ಒಂದು ಸಂಶಯದ ವಲಯ ಏರ್ಪಟ್ಟಿತು (ಗೋಪುರ. ೭೩). ೪. ವಿಭಾಗ ; ಪ್ರದೇಶ : ಪ್ರತಿಯೊಂದು ವಲಯದಲ್ಲಿಯೂ ವಾಯುಗುಣಕ್ಕನುಗುಣವಾಗಿ ಬೆಳೆಗಳಲ್ಲಿಯೂ ಪ್ರಾಣಿಗಳಲ್ಲಿಯೂ ತೋರಿಬರುವ ವ್ಯತ್ಯಾಸಗಳು . . . ವಿವರಿಸಲ್ಪಡುವುವು (ಭೂವಿವ. ೨೪). 'ಉಷ್ಣವಲಯ' ಪರಾ. ೫. ಗುಂಪು ; ಸಮೂಹ : ಹರಿಯಿಲ್ಲದ ಪವನಾಧ್ವಂ ಹರಿಯಿಲ್ಲದ ಲೋಕಪಾಲಪರಿಷದ್ವಲಯಂ . . . ಹರಿ ನೀನಿಲ್ಲದ ಮದೀಯ ಗೋಕುಲಮಫಲಂ (ಜಗವಿ. ೭–೯೫). ೬. ಒಂದು ಬಗೆಯ ಗಂಟಲು ರೋಗ : ಕೊರಳ ಹೊರಗೂ ಒಳಗೂ ದಪ್ಪವಾಗಿ ಉನ್ನತವಾಗಿದ್ದ ಗಂಟು ಕಟ್ಟುವುದು. ಅದರಿಂದ ಜ್ವರ, ಮೂರ್ಛೆ, ವೇದನೆಗಳುಂಟಾಗಿಹವು. ಅದು ವಲಯವೆಂಬ ಕಂಠರೋಗ (ವೈದ್ಯಸಾ. II, ೧೧೮). **ವಳಯ** : ೧. ಸರಸಪ್ಪುಣಾಳನಾಳವಳಯಂಗಳೊಳುಜ್ಜ್ವಳವೃತ್ತಮೌಕ್ತಿಕಾಭರಣಗಣಂಗಳೊಳ್ ಶಶಿಕರಂಗಳೊಳಾಡಿದೆ (ಪಂಪಭಾ. ೫–೧೭); ಮಂಜುಘೋಷಮಂ ಬೀಱುವ ಸಿಂಜನೀವಳಯಕಾಂಚಿಗಳೆಂಬಿವಱಿಂದದೊಂದು ಚೆಲ್ವೇಱಿರೆ ಭೋಗಿಭಾಮಿನಿಯರಾ ಮಡುವಿಂ ಪೊಱಮಟ್ಟರ್ (ಜಗವಿ. ೭–೧೦೨). ೩. ತನುಮಧ್ಯ ವಳಯದಲ್ಲಿ ಸಕಲಬ್ರಹ್ಮಾಂಡ ಜಲಮಯವಾಗಿಪ್ಪಲ್ಲಿ ಭಕ್ತಿಕಾರಣ ಬಸವನವಗ್ರಹಿಸಿಪ್ಪಲ್ಲಿ ಅದೆತ್ತಲಿದ್ದೆ (ಸಿದ್ಧವ. ಕ. ೨–೩). ೭. (ಸೈನ್ಯದ) ಮಂಡಲಾಕಾರವಾದ ವ್ಯೂಹ ; ವರ್ತುಲಾಕಾರವಾದ ರಚನೆ : ರಿಪುವಳಯಧೂಳೀಪಟನು ಹೊಕ್ಕನು ರಣವನಾ ದ್ರೋಣ ಹರಿಗೆ ಹಲಗೆ ಕೃಪಾಣ ತೋಮರ ಪರಶು ಕಕ್ಕಡೆ ಕೊಂತ ಮುದ್ಗರ ಸುರಗಿಯತಿಬಳಪಾಯ್ದುಳವನಿರಿಸಿದನು ವಳಯದಲಿ (ಕುಮಾರವ್ಯಾ. ದ್ರೋ. ೪–೧೫). ೮. ಅಂಗಳ ; ಆವರಣ : ಕರೆಸಿದನು ಬಳಿಕವಿಳಪೃಥ್ವೀಶ್ವರರನುಪಮ ತುರಗಮೇಧಾಧ್ವರದ ಶಾಲಾವರಣಸೌಧಾವಳಿಯ ವಳಯದಲಿ ಹರುಷದಲಿ ಕುಳ್ಳಿರ್ದರುರುವಿಷ್ಟರಗಳಲಿ (ತೊರವೆ. ೧–೭–೩೦). ೯. ಕುದುರೆಯ ಗೊರಸಿಗೆ ಹಾಕುವ ಬಳೆ : "ವಳಯಂ ಲೋಮಿವೆಸರಕ್ಕುಂ" (ಮಂಗರಾ. ೮೦–೧೩). [ಸಂ.]

**ವಲಯಶಾಸನ** (ನಾ). ಪರಿಧಿಗೆ ಸಂಬಂಧಿಸಿದ ಶಾಸನ ; ಎಲ್ಲೆಗೆ ಸೇರಿದ ಶಾಸನ : ಬೆಳ್ಳುರಿಗೆ ಸಲುವ ಶ್ರೀರಂಗಪುರದಿಂ ಜೀವಗಲ್ಲಿನ್ದಂ ನೈಋತ್ಯ ದಾಸನಕೆರೆಯೊಳಗೆ ನಟ್ಟ ಕಲ್ಲಿಂದ ಪಡುವ ಮಿಶ್ರವಾಗಿ ನೈಋತ್ಯ ಇನ್ತೀ ವಲಯಶಾಸನವೊಳಗಾದ ಅದ್ದಗೆರೆಯ ಹಳ್ಳಿ ಸಹವಾಗಿ ಚಾಕೇನಹಳ್ಳಿಗೆ ಪ್ರತಿನಾಮವಾದ ದೇಮುಸಮುದ್ರವೆಂಬ ಅಗ್ರಹಾರದ ವಲಯಶಾಸನದಾನಪಾಲನಯೋರ್ಮಧ್ಯೇ ದಾನಾಚ್ಛ್ರೇಯೋನುಪಾಲನಮ್ (ಎಕ. III (R), ಹೆಗ್ಗಡ. ೮೯–೨೬; 1493). [ಸಂ.]

**ವಲಯಾಕಾರ, ವಳಯಾಕಾರ** (ನಾ). ಮಂಡಲಾಕಾರವಾದುದು ; ವರ್ತುಲಾಕಾರವಾದುದು : ಪರ್ಯಾಯಯಿಂದಪ್ಪದೇಂ ಸುತ್ತಿಱಿದುವೊ ವಲ[ಪಾಠಾಂ. ಳ]ಯಾಕಾರದೊಂದೊಂದನತ್ಯಾಶ್ಚರ್ಯಂ ದ್ವೀಪಾಬ್ಧಿವರ್ಗಕ್ರಮಮದುವುಮಸಂಖ್ಯಾತಂ (ಆದಿಪು. ೧–೪೮). **ವಳಯಾಕಾರ** : ವಳಯಾಕಾರದೆ ಬಳಸಿದ ಜಳಧಿದ್ವೀಪಂಗಳಿಂದೆ ಕಡೆಯೊಳ್ ವಿಚಳಜ್ಜಳಚರಸಂಕುಳಕೋಳಾಹಳಮಿರ್ದತ್ತರ್ಣವಂ (ಆದಿಪು. ೧೧–೧೯). [ಸಂ.]

**ವಲಯಾಕೃತಿ, ವಳಯಾಕೃತಿ** (ನಾ). = ವಲಯಾಕಾರ : ವಲ[ಪಾಠಾಂ. ಳ]ಯಾಕೃತಿಯಿಂದಿದನೇಂ ಬಳಸಿದುದೊ ಸುರೇಂದ್ರಚಾಪಮಂಡಲಮೆನೆ ಬಳ್ಳಿಳ ಬಳೆದ ಪಂಚರತ್ನದ ಬೆಳಗಿಂದಂ ಬೆಳಪುದಲ್ಲಿ ಧೂಳೀಸಾಳಂ (ಆದಿಪು. ೧೦–೨೩). **ವಳಯಾಕೃತಿ** : ಮೇಲಿನ 'ಆದಿಪು' ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ವಲಯಿತ, ವಳಯಿತ** (ಗು). ೧. ಸುತ್ತುಗಟ್ಟಿರುವ ; ಆವೃತವಾದ. (ನಾ). ೨. ಸುತ್ತುಗಟ್ಟಿದುದು : "ವೇಷ್ಟಿತಂ, ವಲಯಿತಂ . . . ಆವೃತಂ – ೫ ಈಚಿನವರೆಗೆ ಅದ್ದವಾಗಿರುವಂತೆ ಸುತ್ತಿಕೊಳ್ಳಲ್ಪಟ್ಟುದು" (ಸಿದ್ಧಾಂತ. ೩೪೭). **ವಳಯಿತ** : ೨. "ನಿವೃತಂ, ವೇಷ್ಟಿತಂ, ಪರಿವಿಷ್ಟಂ, ವಳಯಿತಂ, ಪರಿಕ್ಷಿಪ್ತಂ– ಈ ೫ ಸುತ್ತಲ್ಪಟ್ಟುದು" (ಹಲಾಯು. ೧೧೮–೨೭). [ಸಂ.]

**ವಲವರ್ಮ** (ನಾ). ಒಬ್ಬಾತನ ಹೆಸರು : ಕಂಗಪಾದಿ ಕೊಟ್ಟವಳ್ಳಿಪಾದಿ ವಲ್ಲಭಪಾದಿಯು ಮೂಱುಪಾದಿ ವಲವರ್ಮ್ಮನಾ ಮೇಕೆ ಮ x x x ಕೆಯ್ದನ್ದು (ಎಕ. XII, ಮಧುಗಿ. ೯೩–೨; ಸು. 750). [ವಲ್ಲ + ವರ್ಮ]

**ವಲಸಿಗ** (ನಾ). ಗುಳೆ ಬಂದವನು ; ನೆಲಸಲು ಬಂದವನು : ಸಿಪಾಯಿಗಳು ಅಥವಾ ವಲಸಿಗರು ತೋರ್ಪಡಿಸಿಕೊಳ್ಳದೆ ಸಣ್ಣಸಣ್ಣ ತಂಡಗಳಲ್ಲಿ ಒಂದು ಪ್ರದೇಶವನ್ನು ಕ್ರಮೇಣ ಆಕ್ರಮಿಸುವುದು (Infiltration. ೯೦೫೧). [ವಲಸೆ + –ಇಗ]

**ವಲಸಿಗೆ** (ನಾ). ವಲಸೆ ಬಂದ ವ್ಯಕ್ತಿಯ ನಡವಳಿಕೆ, –ದೇಶಾಚಾರ : ಇಂಥಾ ಆಚಾರ, ವಲಸಿಗೆ, ಪದ್ಧತಿ ಅಥವಾ ಅಭ್ಯಾಸ ಇವುಗಳಲ್ಲಿ ಮನುಷ್ಯ ಮನುಷ್ಯರಿಗೆ ಭೇದವಿದೆ (ಆಡುಟು. ೩೨). [ವಲಸೆ + –ಇಗೆ]

**ವಲಸೆ, ಒಲಸೆ** (ನಾ). (ಆಕ್ರಮಣ, ಬರಗಾಲ ಮುಂತಾದ ಕಷ್ಟಪ್ರಸಂಗಗಳಲ್ಲಿ) ಜನರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ನೆಲಸಲು ಹೋಗುವುದು, –ಗುಳೆಹೋಗುವುದು : ಜಯಸಿಂಹನು ಉತ್ತರದಿಂದ ದಕ್ಷಿಣಕ್ಕೆ ವಲಸೆ ಹೊರಟು . . . ಐಹೊಳೆಯಲ್ಲಿ ಬಂದು ನೆಲಸಿದನು (ಮೈವಾಸ್ತು. ೬); ಈ "ಬುದ್ಧಿಜೀವಿ" ನವಶಿಕ್ಷಿತವರ್ಗವು ಕೇವಲ ಚಾಕರಿಯ ಆಸೆ, ಕಚೇರಿಯ ವಲಸೆಗಳಿಗೆ ಮನಸೋತು. . . ಬ್ರಿಟಿಷ್‌ಸಾಮ್ರಾಜ್ಯದ ಒಂದು ಆಧಾರವಾಗಿ ಉಳಿದದ್ದು ದೀರ್ಘ ಪರಿಣಾಮ(ಮಾವಾದ. ೯೫). **ಒಲಸೆ** : ರಣವಿಜಯಭೇರಿಗಳ ಹೊಯ್ಲಲಿ ಕುಣಿದುವಮರರ ಗರ್ಭ ರಿಪುಪಟ್ಟಣದಲಂದೊಲಸೆಗಳ ತೆಗೆದುವು ಗಿರಿಗುಹಾಂತರಕೆ (ಕೋಳಯ. ೧೭–೨೨).

ವಲಸೆ ಬರು = ಜನರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ನೆಲಸಲು ಬರು ; ಒಕ್ಕಲು ಬರು : ಅನೇಕಜನ ಪಾರಸಿಕರು . . . ಫಲಪುಷ್ಪಸಮೃದ್ಧವಾದ ಇಂಡಿಯಾದೇಶಕ್ಕೆ ವಲಸೆಬಂದು ಗುಜರಾತಿನ ನಾನಾಭಾಗಗಳಲ್ಲಿ ನೆಲಸಿದರು (ಭಾಗ್ಯಶಿ. ೧); ಇನ್ನಿತರ ದೇಶಗಳ ಜನರೂ ವಲಸೆಬಂದು ನೆಲಸುತ್ತಿರುತ್ತಾರೆ (ಶಿಕ್ಷದ. ೩೯೯). ವಲಸೆಯಾಗು = ಜನರು ಒಂದು ಪ್ರದೇಶದಿಂದ ಮತ್ತೊಂದು

ಪ್ರದೇಶಕ್ಕೆ ನೆಲಸಲು ಹೋಗು ; ಗುಳೆ ಹೋಗು : ದಕ್ಷಿಣಆಫ್ರಿಕದಲ್ಲಿ ವಲಸೆಯಾಗಿದ್ದ ಹಿಂದಿಯರು ಪಡುತ್ತಿದ್ದ ಕಷ್ಟಗಳನ್ನು ಕೇಳಿ ಭಾರತಸರ್ಕಾರವೂ ಪ್ರಜೆಗಳೂ ತುಂಬಾ ವ್ಯಾಕುಲಗೊಂಡಿದ್ದರು (ಸ್ವಾವೀರ. ೪೧). **ವಲಸೆಹೋಗು** = **ವಲಸೆಯಾಗು** : ಈಗ ರಾಜಸ್ಥಾನವೆಂದು ಪ್ರಸಿದ್ಧವಾಗಿರುವ ಪ್ರದೇಶಕ್ಕೆ ವಲಸೆಹೋಗಿ ಅಲ್ಲಿ ನೆಲೆಗೊಂಡರು (ಆರ್ಯಕೀ. ೧೩). [ದೇ. ll ತಮಿ. ವಲಚೈ, ವಲಚಲ್;ತೆಲು. ವಲಸ]

**ವಲಸೆಗಾರ** (ನಾ). ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗಿ ನೆಲಸುವವನು ; ಗುಳೆ ತೆಗೆದು ಬಂದವನು : ಹೊಸದಾಗಿ ನಿರ್ಮಿಸಲ್ಪಟ್ಟ ಪ್ರದೇಶದಲ್ಲಿ ಮೊದಲು ವಲಸೆಗಾರರು (Nomads) ನಂತರದಲ್ಲಿ ದನಗಾರರು (Herdsmen) ಮುಂದಕ್ಕೆ ಬರುವುದು ಸಹಜವು (ತುಳುನಾ. ೨೪).

[ವಲಸೆ + – ಗಾರ (< – ಕಾಱ)]

**ವಲಸೆದೆಗೆ** (ಕ್ರಿ). ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ನೆಲಸಲು ತೆರಳು ; ಗುಳೆ ತೆಗೆ : ಕೆಂಬಾವಿ ಭೋಗಣ್ಣನಭವನಂತ್ಯಜನಾಗಿ ತಾಂ ಬರಲ್ ಪೂಜಿಸಿದನೆಂದು ವಿಪ್ರರ್ ನಗರಮಂ ಬಿಟ್ಟು ಪೂಜಿಸಲ್ಕೂರ ಲಿಂಗಂಗಳಾತನ ಕೂಡೆ ವಲಸೆದೆಗೆಯೆ (ಚೆಬಪು. ೫೭-೨೩). [ವಲಸೆ + ತೆಗ್]

**ವಲಾಗ್ರ** (ನಾ). ಬಾದಾಮಿ : (೬).

[<— ತೆಲು. ವಳಾಗ್ರ = ಉತ್ತಮಜಾತಿಯ ಅಡಕೆ]

**ವಲಿ₁, ವಳಿ₂** (ನಾ). ೧. ದೇಹದ ಮೇಲಿನ ಚರ್ಮದ ಸುಕ್ಕು, –ಮಡಿಕೆ. ೨. (ಹೆಂಗಸಿನ) ಹೊಕ್ಕುಳಿನ ಮೇಲುಭಾಗದಲ್ಲಿ ಅಡ್ಡಲಾಗಿರುವ ಮೂರು ರೇಖೆಗಳು, –ಗೆರೆಗಳು : 'ತ್ರಿವಲಿ₁' ಪರಾ. ೩. ಅಲೆ ; ತರಂಗ : ಸರೋರುಹಿಣೀವನಂಗಳೊಳ್ ವಲಿ ತಲೆದೋಱಿದಂತು ನಲಿದಾಡುವ ಸೋಗೆಯ ಸೋಗೆ ಸೂಸದಂತೆಲರೊಲವುಣ್ಮೆ ತೀಡಿದುದು . . . ತದ್ವನಾಂತದೊಳ್ (ಚಂದ್ರಪ್ರ. ೨-೧೧೧); ವೇದವೇದಾಂತಗಳ ತತ್ತ್ವನಿರ್ಝರಘೋಷ ಶಾಂತಿಶರಧಿಯ ಮೇಲೆ ವಲಿಯ ನೆಬ್ಬಿಸುತಲಿದೆ (ನಕ್ಕ. ೬೧-೪). ೪. ಹೊರಳುವಿಕೆ ; ಕೊಂಕು : ಆಹಾ, ಕೊಳದಿ ಬಾಲರವಿಯ ಅಂಬೆಗಾಲ ಲೀಲೆ, ಅಲೆಯ ವಲಿಯ ಮೇಲೆ (ನವಬಂ. ೧-೨೦). **ವಳಿ₂** : ೨. ವಳಿಗಳೊಗೆದು ಮೆಯ್ಯಂ ಕೊಂಡೆರಟ್ಟೂಱು ನಾಲ್ಕಗ್ಗಳಿಸಿರೆ . . . ಶುದ್ಧನಕ್ಕುಂ (ಲೋಕೋಪ. ೧೧-೭); ನಡೆ ಮೆಲ್ಲನಾದುದು ವಳಿಯಡಂಗಿದುವು . . . ಲತಾತನ್ವಿಗಂದು (ಪದ್ಮರಾ. ೪-೨೯). ೩. ಆ ಸ್ಥಲ ಸುರಧನುವಿನ ಕೆಲವಳಿಯಂತೆ ಮರೀಚಿಕಾಜಲದ ವಳಿಯಂತೆ (ಮೋಳಿಮಾ. ೧೧೩-೪೪೬); ನೆಲೆಮೊಲೆ ಪೊಣರ್ವಕ್ಕಿಗಳಂ ವಳಿ ವಳಿಗಳನಾಸ್ಯಬಿಂಬಮಂಬುರುಹಮನಗ್ಗಲಿಸೆ ಕಲಹಂಸಯಾನೆಯರಲರ್ಗೊಳಕೆ ಬಿರ್ದುವಂದಂತಿರ್ದರ್ (ಅನಂಪು. ೭-೨೬). ೫. ಗೆರೆ ; ಸಾಲು : ಈ ಕಲಮಿನಲ್ಲಿ ೭೧ನೇ ಪಾನಿನಲ್ಲಿ ೨೨ನೇ ವಳಿಯಲ್ಲಿ . . . "ಸವಡ ಇದ್ದಲ್ಲಿ ಹಾಕಲಾದೀತೆಂದು" ಓದಿರಿ (ಮುಂಬ್ವಾ. ೨೮ ಪ್ರಸ್ತಾವನೆ). ೬. [ಸಂಗೀತ] ತಂತೀವಾದ್ಯವನ್ನು ನುಡಿಸುವಾಗ ತಂತಿಯನ್ನು ಜಗ್ಗಿ ನುಡಿಸುವುದು : "ವಳಿ – ವೀಣೆಯ ಒಂದು ಸ್ವರಸ್ಥಾನದಲ್ಲೇ ಎರಡು ಅಥವಾ ಮೂರು ಮುಂದಿನ ಸ್ವರಗಳು ನುಡಿಯುವಂತೆ ತಂತಿಯನ್ನು ನಿರ್ಣಯದಿಂದ ಜಗ್ಗಿಸುವುದು" (ಸಂಗೀಚಂ. ೨೬). ೭. ಒಂದು ಬಗೆಯ ಗಮಕ : ರೀತಿ ನೂತನಂಬಡೆಯೆ ವಳಿ ವಿಳಾಸಂಬಡೆಯೆ . . . ಪಾಡುತ್ತಿರೆಯುಂ (ಶಾಂತೀಶ್ವ. ೧೬-೭೭ ವ). [ಸಂ.]

**ವಲಿ₂** (ನಾ). ೧. ಸಾಧು ; ಫಕೀರ : ಇದರ ಮುಖ್ಯತತ್ತ್ವ ವಲಿ ಅಥವಾ ಸಾಧುವಿನಿಂದ ಸರಿಯಾದ ಅಧ್ಯಾತ್ಮಶಿಕ್ಷಣ ಪಡೆಯುವುದು (ಇಸ್ಲಾಂಸಂ. ೨೭೨). ೨. ಸ್ನೇಹಿತ ; ಮಿತ್ರ : ವಲಿ ಎಂದರೆ ಮಿತ್ರ, ವಿಲಾಯತ್ ಅಂದರೆ ಮೈತ್ರಿ (ಇಸ್ಲಾಂಸಂ. ೨೭೨).

[<— ಅರ. ಹಿಂ. ಮರಾ. ವಲೀ]

**ವಲಿ₃** (ನಾ). ೧. ಹೊತ್ತು ; ಸಲ ; ಬಾರಿ : ಶ್ರೀಮತು ಇ ಬೀರಕಲ್ಲ ಪ್ರತಿಷ್ಠೆಯ ಮೂರು ವಲಿ ಪೂಜೆ ನಮಸ್ಕಾರ ಮಾಡುವ ಸ್ಥನಿಕರಿಗೆ . . . ಮಾಚೆಯ ದ(೦)ಣ್ಣಾಯ್ಕರು ಧಾರಾಪೂರ್ಬ್ಬಕವಾಗಿ ಕೊಟ್ಟ ದತ್ತಿ (ಸೌಇಇ. IX-i. ೩೪೪-೭; 1320). ೨. (?) : ಬಿಸಜೆ ಪುಟ್ಟುವ ಗೊತ್ತಿದೆಂದು ಕೆಸರಂ ವಲಿ ಆಗ್ರಾಣಿಸುವುದಂದಮೆ ವರ್ಣಕುಲದೊಳು (ತಿರುಶ. ೭-೬೦). [?]

**ವಲಿತ, ವಳಿತ** (ಗು). ೧. ಸುತ್ತುವರಿಯಲ್ಪಟ್ಟ ; ಸುತ್ತುಗಟ್ಟಲ್ಪಟ್ಟ. ೨. ಹೊರಳಿದ ; ತಿರುಗಿದ ; ಕೊಂಕಿದ : ಸ್ಖಲಿತಗತಿ ಲುಲಿತಕುಂತಲೆ ವಲಿತನಿಜಗ್ರೀವೆ ಮಗುಳ್ದು ನೋಡಿದಳೊರ್ವಳ್ . . . ಲಲಿತಾಂಗನನೊಲ್ದು ಸಗರಚಕ್ರೇಶ್ವರನಂ (ಆದಿಪು. ೯-೩೮); ಕೆಳದಿಯರೊಳು ನೆವವಾಂತು ಅಲ್ಲಲ್ಲಿ ನಿಂತು ತಳರುತಲೆ ಹಿಂದಿರುಗಿದರಸಿಯ ವಲಿತಕಂಧರವಾದ ವದನೇಂದುವೆದೆಯೊಳಿದೆ ನಿಂದು (ಶಾಕುಂತ. ೧೮ ಅಂಟ). ೩. ಸುಕ್ಕುಗಟ್ಟಿದ : 'ವಲಿಮುಖ' ಪರಾ. (ನಾ). ೪. ಚರ್ಮದ ಮೇಲಿನ ಮಡಿಕೆ, –ಸುಕ್ಕು : "ವಲಿತಂ – ಮಯ್ಯ ತೆರೆ" (ಕಾಶಕ್ಕ. ೧೧೩); ವಲಿತ ಪಲಿತ ಪ್ರಸಾದವವ್ವಾ ಆಧಿ ವ್ಯಾಧಿ ಪ್ರಸಾದವವ್ವಾ . . . ಕೂಡಲಚನ್ನಸಂಗನ ಪ್ರಸಾದವವ್ವಾ (ಚನ್ನವ. ಕ. ೬೫೫-೧೪೮೧). ೫. [ನಾಟ್ಯ] ಕೊರಳನ್ನು ತಿರುಗಿಸುವ ಒಂಬತ್ತು ವಿಧವಾದ ಭೇದಗಳಲ್ಲಿ ಒಂದು ; IP "ಕೆಳಕ್ಕೆ ಮಾಡಿರುವ ಮುಖವನ್ನು ನೆಟ್ಟಗೆ ಮೇಲಕ್ಕೆತ್ತುವುದು" (ಲಾಸ್ಯರಂ. ೨೫೯ ಗದ್ಯಾನುವಾದ) : ಕೆಳಮೊಗದಿಂ ಕೊಂಕದೆ ನೆಗಳ್ದೆತ್ತಿ ನೋಡೆ ವಲಿತಮೆನಿಕ್ಕುಂ(ಲಾಸ್ಯರಂ. ೨-೧೧೫). ೬. ಮೂವತ್ತು ವಿಧವಾದ ನೃತ್ಯಹಸ್ತಗಳಲ್ಲಿ ಒಂದು ; IP "ಲತಾಹಸ್ತಗಳೆರಡನ್ನು ಮೊಳಕೈಗಳಲ್ಲಿ ಸ್ವಸ್ತಿಕದಂತೆ ಹಿಡಿಯುವುದು" (ಲಾಸ್ಯರಂ. ೨೫೪ ಗದ್ಯಾನುವಾದ) : ಪೊಳೆವ ಲತಾಕರಮೆರಡುಂ ಮೊಳಕೈ ಸ್ವಸ್ತಿಕಮವಾಗೆ ವಲಿತಂ (ಲಾಸ್ಯರಂ. ೨-೭೬). ೭. ನೃತ್ಯದಲ್ಲಿ ತೊಡೆಯನ್ನು ಚಲಿಸುವ ಐದು ವಿಧವಾದ ಭೇದಗಳಲ್ಲಿ ಒಂದು ; IP "ಹೆಂಗಸರು ಜಾಗ್ರತೆಯಾಗಿ ನಡೆಯುವಾಗ ಆಗುವಂತೆ ಮೊಳಕಾಲನ್ನು ಒಳಕ್ಕೆ ಮಾಡುವುದು" (ಲಾಸ್ಯರಂ. ೨೬೨ ಗದ್ಯಾನುವಾದ): ಮೊಳಕಾಲೊಡನೊಳಗತ್ತಂ ಸರಿಯಲ್ಕೆ ವಲಿತಮೆಂದೆನಿಸಿರ್ಕುಂ (ಲಾಸ್ಯರಂ. ೨-೧೫೯). ೮. ನೃತ್ಯದಲ್ಲಿ ಕೈಬೆರಳುಗಳನ್ನು ಚಲಿಸುವ ಏಳು ವಿಧವಾದ ಭೇದಗಳಲ್ಲಿ ಒಂದು : ಸಂಯುತ, ವಿಯುತ, ವಕ್ರ, ವಲಿತ, ಪತಿತ, ಕುಂಚನ್ಮೂಲ, ಪ್ರಸೃತ – ಈ ಏಳು ಹಸ್ತಾಂಗುಲಿಯ ಭೇದಂಗಳ್ (ಲಾಸ್ಯರಂ. ೩-೧೧೩ ವ). **ವಳಿತ** : ೧. ವ[ಪಾಠಾಂ. ಮಿ]ಳಿತಶಿಳೀಮುಖಮುತ್ಪಳದಳನಯನಂ ಕಂಜರಂಜಿತಂ ಜಯಲಕ್ಷ್ಮೀವಿಳಸಿತಮೆನೆ ದಿಟ್ಟಿಗೆ ಕೊಳುಗುಳಮಂ ಪೋಲ್ದತ್ತು ಪೂಗೊಳಂ ಕೌರವನಾ (ಗದಾಯು. ೬-೧೩). ೨. ಎಳವುಲ್ಗೆತ್ತು ಹರಿನ್ಮಣಿವಳಯಾಂಶುಗೆ ಸಾರ್ದ ದೀವದೆರಲೆಗೆ ಶಶಿಮಂಡಳದೆರಲೆಯ ಪದವಿಯನಾಳುಳವಳಿತಕಟಾಕ್ಷರುಚಿಯಿನ ಒಲೆಯರೀವರ್ (ವರ್ಧಪು. ೧-೭೫). ೯. ಸಂಸ್ಥಾನದ ಪೂರ್ಣಹಕ್ಕನ್ನು ಪಡೆಯದಿದ್ದರೂ ವ್ಯವಸ್ಥಿತವಾಗಿರುವ ದೇಶಭಾಗ ; ಅಧೀನ ಪ್ರಾಂತ : ಯಾ ತಳಕಾಡಿಗೆ ಶೇರಿದ ಮಳವಳೀಸ್ಥಳದ ನೆಲಮಾಕನಹಳಿಗೆ ವಳಿತವಾದ ಗುಳಘಟಗ್ರಾಮವನ್ನು (ಎಕ. XIV, ತಿರುಮ. ೨೦೮-೪; 994) ; ಪುಂಮತ್ತೂರ ವಳಿತವಾದ ಕೊಣಗಲಾಪುರ ಗ್ರಾಮವಂನ್ನು ನಾರಾಯಣಪುರವೆಂಬ್ಬ ಅಗ್ರಹಾರವಂ ಮಾಡಿ ಸರ್ವಮಾಂನ್ಯವಾಗಿ . . . ಕೊಟ್ಟೆವಾಗಿ (ಎಕ. XIV, ಚಾಮರಾ. ೨೬೮-೧೬; 1397). ೧೦. ಅಧೀನ ; ಅಂಕೆ ; ವಶ : ಆ ಕೂಚಿರಾಜಂ ಬೇತೂರು ಪ್ರಭೃತಿಗ್ರಾಮಂಗಳಂ ವಳಿತಮಾಗಿ ಪಡೆದು ಸುಖದಿನಿರ್ಪ್ಪುದುಂ (ಎಕ. XI, ದಾವಣ. ೧೩-೫೪; 1271); ೧೧. ಅಧಿಕಾರ ; ಆಳ್ವಿಕೆ : ಬಾಚೆಯನಾಯಕನ ವಳಿತದ ಸ್ಥಳಂ (ಮುಂಬಯಿ. X, ೨೫೫ -೪೬; 1219); ನರನ ತೆರಳಿಚಿ ತಂದು ತನ್ನೊಡನಱುಹಿದಗೆ ನೂಱಾನೆ ಹಯಸಾವಿರದ ವಳಿತವ ಬರಸಿಕೊಡುವೆನು(ಕುವ್ಯಾಕ. ೮-೩೬). ೧೨. ಭೂಮಿ ; ರಾಜ್ಯ.

[ಸಂ.]

**ವಲಿತೆ** (ನಾ). ಸುಕ್ಕುಗಟ್ಟಿದ ಚರ್ಮವುಳ್ಳವಳು : ಕಿರುಗ್ಗಿದ ಕಣ್ಗಳಿಂ . . . ದಿಟ್ಟಿಸುತ್ತಾ ಶಿಥಿಲೆಯಾ ವಲಿತೆ ಆ ಸ್ಥವಿರೆ ಮೇಲೆಳ್ದಳತ್ರಿಭಾರ್ಯೆ (ಶ್ರೀರಾಮಾ. ೧೭೬-೧೪).

[ಸಂ. ವಲಿತಾ]

**ವಲಿಮುಖ** (ನಾ). ಸುಕ್ಕುಗಟ್ಟಿದ ಮುಖವುಳ್ಳ ಪ್ರಾಣಿ ; ಕಪಿ ; ಕೋತಿ : ವಲಿಮುಖ ನೀತಿಬಹಿರ್ಮುಖ ಮಲಿನಾತ್ಮನನೆನ್ನ ಮಾತುಗೇಳದೆ ನೀನೀ ಖಿಲನನೊಳಕೊಂಡೊಡೆಲೆ ಕಂಬಲಕಂ ಶಿವಭೂತಿಗಾದ ಕಥೆಯಂತಕ್ಕುಂ (ಪಂಚತಂ. ೧೦೮-೧೭೮); ಶಿವ ಶಿವ ವಲಿಮುಖರ ದೆಸೆಗೂಡೆ ದಳಪತಿ ನೀಲ ಹರಿತಂದ (ಕೌಶಿರಾ. ೨೦-೪೧). [ಸಂ.]

**ವಲಿಮುಖಕೇತನ** (ನಾ). ೧. ಕಪಿಯ ಲಾಂಛನವುಳ್ಳ ಪತಾಕೆ ; ಕಪಿಧ್ವಜ. ೨. ಕಪಿಧ್ವಜವುಳ್ಳವನು : ವಲಿಮುಖಕೇತನನಂ ಚಕಿತಲೋಚನಂ ರತ್ನಜಟಿ ನಿಜಪ್ರಾಣಭಯಾಕುಲಚಿತ್ತಂ ಪೌಲಸ್ತ್ಯಂ ಕೊಲಲಟ್ಟಿದ ತೀಕ್ಷ್ಣಪುರುಷನೆಂದೀಕ್ಷಿಸಿದಂ (ಪಂರಾಮಾ. ೧೦-೫೧). [ಸಂ.]

**ವಲಿಯ, ವಲೆಯ, ವಲ್ಲಿಯ** (ನಾ). ಒಂದು ಬಗೆಯ ಹಕ್ಕಿ : ಬೆಳ್ಳಕ್ಕಿ ವಲಿಯಂ ಚಿಟ್ಟೆ ಜೂಗ ಹದ್ದೆಂಬಿವಂ ಸಾಳುವಂಗಳು ನೆಗೆದು ತಾಗಿ ಪೊಡೆಪೊಡೆದಿಳಿಯೊಳ್ಕೆದಡೆ ಹಕ್ಕಿಗಳ ಮಳೆಗರೆಯುವಂತಾದುದು (ಹಚಂರಾ. ೫-೪೩); ವಾಯಸ ವಲಿಯ ಹುದುಗಿದ ಹರಡೆ ಹಸುಬಗಳಳಿದುದಕೆ ಕಡೆಯಿಲ್ಲ ಬೇಂಟೆಯೊಳೂರ್ಮಿಳಾಪತಿಯ (ತೊರರಾ. ೩-೩-೧೭). ವಲೆಯ : "ವ್ಯಾಘ್ರಾಟಃ, ಭರದ್ವಾಜಃ— ಈ ೨ ವಲೆಯಸ ಹಕ್ಕಿ" (ನಾಚಿರಾ. ೧೧೪). ವಲ್ಲಿಯ : "ಖಂಜನಃ — ವಲ್ಲಿಯಪಕ್ಕಿ" (ಒಷಧಿ. ೪೩).
[ದೇ. ‖ ತಮಿ. ವಲಿಯನ್, ವಲಿಯಾನ್]

**ವಲೀಕ, ವಳೀಕ** (ನಾ). ಹುಲ್ಲು, ತೆಂಗಿನ ಗರಿ ಮುಂತಾದುವುಗಳಿಂದ ಮಾಡಿದ ಛಾವಣಿ ,—ಸೂರು. ವಳೀಕ : "ನೀವ್ರಂ, ವಳೀಕಂ (ಪಟಲಾಂತಂ) — ಈ ೨ ಸೂ(ಜು)ರು" (ಹಲಾಯು. ೫೦-೧೪೮). [ಸಂ.]

**ವಲೀಮುಖ** (ನಾ). = ವಲಿಮುಖಿ : 'ವಲೀಮುಖಧ್ವಜ' ಪರಾ. [ಸಂ.]

**ವಲೀಮುಖಧ್ವಜ** (ನಾ). = ವಲಿಮುಖಕೇತನ ೧ : ಜಾಂಬವಾಂಗದ ಸುಷೇಣಪ್ರಮುಖನಿಖಿಳವಲೀಮುಖಧ್ವಜಪ್ರಧಾನರ್ ರಣರಸಿಕರಾಗಿ ನಡೆದರ್ (ಪಂರಾಮಾ. ೧೩-೨೬ ವ). [ಸಂ.]

**ವಲೀವರ** (ನಾ). ಒಂದು ಬಗೆಯ ಮರ : ವಲೀವರ, ಚಲ್ಲಾನೆ, ಮರದ ಎಣ್ಣೆ, ಅಣ್ಣ-ತಮ್ಮನ ಮರ, ಗೂಗ (ವ್ಯಾಟಿಗಿ. ೩೦-೬೦೭). [?]

**ವಲುಕಲ** (ನಾ). ನಾರಿನಿಂದ ಮಾಡಿದ ಬಟ್ಟೆ ; ನಾರುಮಡಿ : ಜನಕಪುತ್ರಿಯ ಹಳುವಕಟ್ಟುವುದಕಟ ಸಾಲದೆ ವಲುಕಲವನಿತ್ತವಳು ಛೀ ತೆಗೆ (ರಾಮಾಸಂ. ೨-೨-೩೭).
[< ಸಂ. ವಲ್ಕಲ]

**ವಲುಮ್ಮೆನೆ** (ಅ). ಬಲವಾಗಿ ; ಉಗ್ರವಾಗಿ : ತನಗಿದಿರಾದ ದಂತಿಹಯ ಮಾನವಸೇನೆಯನೆಚ್ಚನಂತವೀರ್ಯನ ಶರವೃಷ್ಟಿಯೊಳ್ ಗಗನದಿಂ ನವ ಲೋಹಿತವೃಷ್ಟಿಗಳ್ ವಲುಮ್ಮೆನೆ ಕೊಳೆ ನಾಂದು ಕೆಂಪೆಸೆದು ತೊಟ್ಟನೆ ಬೆಳ್ಳಿಯ ಬೆಟ್ಟಮಲ್ಲು ಜಾದಿನ ನಗಮೆಂಬ ಶಂಕೆಯನೆ ಮಾಡಿದುದಾ ವಿಜಯಾರ್ಧಪರ್ವತಂ (ಶಾಂತಿಪು. ೪-೩೩).

**ವಲೆಯ** 'ವಲಿಯ' ನೋ.

**ವಲ್ಕ** (ನಾ). ೧. ಮರದ ತೊಗಟೆ ,—ತಿಗುಡು : "ತ್ವಗ್ವಲ್ಕಲಂ ವಲ್ಕವೆನೆ ಮರದ ತಿಗುಡಕ್ಕು " (ಮಂಗರಾ. ೩೨-೩); ಬಟಲೆ ಪೆಗಲಿಂ ಚಂಚದ್ವಲ್ಕಾಂಚಲಂ ಪೆಗಲಿಂಗೆ ಬಂದೆಬಲೆ ಜಡೆಗಳ್ (ಕಾದಂಉ. ೭೧೩). ೨. ಮರದ ತೊಗಟೆಯಿಂದ ಮಾಡಿದ ಬಟ್ಟೆ ; ನಾರುಮಡಿ : ಜನಪನಾ ಸಮಯ ಭೂಷಣವೆನಿತನಿತ ತೆಗೆದಿಟ್ಟು ವಲ್ಕಾಜಿನಗಳನು ಧರಿಸಿದನು (ತಿಮ್ಮಮ. ೧-೧೭). ೩. ಮೀನಿನ ಚರ್ಮದ ರಕ್ಷಣೆಗಾಗಿ ಒಂದರ ಮೇಲೊಂದರಂತೆ ಇರುವ ಪೊರೆ ; ಶಲ್ಕ. [ಸಂ.]

**ವಲ್ಕಂದಳೆ** (ಕ್ರಿ). ನಾರುಮಡಿಯನ್ನು ಉಡು ,—ಧರಿಸು : ಸಳಿಳದೊಳಿ ನಾಂದ ವಲ್ಕಂದಳೆದಾಶ್ರಮತರುಗಳಲ್ಲಿ ಹಯಖುರಹತಿಯಿಂದಲುರ್ದೆಲ್ದ ಧೂಳಿ ಪರಿಣತ ಜಳಜಸಬಾಭಂ ಪತಂಗತತಿವೊಲ್ ಬೀಳ್ಗುಂ (ಶಾಕುಂತ. ೧೭-೩೨).
[ವಲ್ಕ + ತಳೆ]

**ವಲ್ಕನಿ** (ನಾ). ಒಂದು ಬಗೆಯ ವನಸ್ಪತಿ ; ಭಾರಂಗಿ : "ಭಾರಂಗಿ ವಲ್ಕನಿ [ಪಾಠಾಂ. ರ್ಕನಿ, ಲ್ಕಿನಿ]ಯಕ್ಕು" (ಮಂಗರಾ. ೩೭-೧೯). [?]

**ವಲ್ಕಲ** (ನಾ). ೧. ಮರದ ತೊಗಟೆ. ೨. ನಾರುಮಡಿ : ಅಂತು ವಲ್ಕಲಾವೃತ ಕಟಿತಟನುಮಾಗಿರ್ದ ಜಟಾಕಲಾಪನುಮಾಗಿ ತಪೋವನಕ್ಕೆ ಪೋಪ ಭಾರ್ಗವಂ . . . ಕುಂಭಸಂಭವನಂ ಕಂಡು (ಪಂಪಭಾ. ೨-೪೫ ವ); ವಾರಿಜಮುಖಿಯರ್ ಸಖಿಯರ್ ತಾರಾಚಲನಾಥನರಸಿಗನುನಯದಿಂದಂ . . . ವಲ್ಕಲಮನೊಪ್ಪಲುಡಿಸುತ್ತಿರ್ದರ್ (ಗಿರಿಕ. ೯-೫). [ಸಂ.]

**ವಲ್ಕಲವಸನ** (ನಾ). ೧. ನಾರುಮಡಿ. ೨. ನಾರುಮಡಿಯನ್ನು ಧರಿಸಿದವನು : ಆಗಳವರ್ಗಳಾ ರೂಪಿನೊಳದಂ ನೆಗಟಲಂಜಿ ವಲ್ಕಲವಸನರುಂ . . . ಜಟಾಧರರುಂ ಏಕದಂಡಿ ತ್ರಿದಂಡಿಗಳಪ್ಪ ಪರಿವ್ರಾಜಕರುಮಾಗಿ (ಆದಿಪು. ೯-೫೩ ವ).
[ಸಂ.]

**ವಲ್ಕೆ** (ನಾ). = ವಲ್ಕಲ ೧ : "ತ್ವಕ್, ವಲ್ಕಾ, ವಲ್ಕಲಂ — ಈ ೩ ಮರದ ಹೊಜಸೊಪ್ಪು" (ಹಲಾಯು. ೩೦-೨೯). [ಸಂ. ವಲ್ಕ]

**ವಲ್ಗನ** (ನಾ). ೧. ನಡೆಯುವುದು ; ಚಲಿಸುವುದು. ೨. ನೆಗೆಯುವಿಕೆ ; ಜಿಗಿತ : ವಲ್ಗನವಾಡುತ ಬಿಲ್ಲಳವೆದೆಗೆ ಸರಳ್ಗಳ ಸಾರ್ಚಿ ತುಯ್ದೆಸೆವ ಬಿಲ್ಗಾಣರ ಕೊಂಡಾಡಿದರು . . . ಅಮರಿಯರು (ಚಂಪ್ರಸಾಂ. ೮-೪೨). ೩. ಮಲ್ಲಯುದ್ಧದಲ್ಲಿ ಚಿಮ್ಮಿ ನೆಗೆಯುವ ಒಂದು ಪಟ್ಟು ,—ವರಸೆ : ಲಲಿತವಲ್ಗನಾವಷ್ಟಂಭದಿಂ ಮುಷ್ಟಿಕನೊಳ್ ಮುಸಲಪಾಣಿಯುಂ ಚಾಣೂರನೊಳ್ ಚಕ್ರಪಾಣಿಯುಂ ಪೊಣರೆ (ಜಗವಿ. ೬-೬೨ ವ). 'ವಲ್ಗಿಸು' ಪರಾ. ೪. [ಅಶ್ವಶಾ] ಕುದುರೆಯ ಐದು ವಿಧವಾದ ನಡಗೆಗಳಲ್ಲಿ ಒಂದು ; ಕಾಲನ್ನು ಚಿಮ್ಮುತ್ತ ಓಡುವುದು : ವಾಜಿರಾಜವಲ್ಗನದಿನುರಸ್ಥಲಂಬಿಡಿದು ಲಕ್ಷ್ಮಿಯ ಕೇಕರದಂತೆ ತೋರಮುತ್ತಿನ ತಿಸರಂ ತೆಜಂಬೊಳೆಯೆ (ಪಂರಾಮಾ. ೫-೧೦೯); ಆತಂ ಬೇಗಂ ಸುಶಿಕ್ಷಿತಮಪ್ಪ ಕುದಿರೆಯ ಬೆಂಗವಾಯ್ದೊಡೆ ಅದು ಲಂಘನ ವಲ್ಗನ ನೀಚೈರ್ಗತಾದಿಗಳೊಳಪ್ಪ ಕ್ರಿಯೆಗಳೊಡಂಬಡೆ ಬಲ್ಲರಚ್ಚರಿವಡೆ ಪರಿದೊಡೆ (ಜೀವಸಂ. ೫೩-೩೦ ವ). [ಸಂ.]

**ವಲ್ಗನಗೈ** (ಕ್ರಿ). ನೆಗೆ ; ಜಿಗಿ : ಕಲ್ಗಳ ಮಜಗೆಗಳೊಳಗೆ ನಿಂದಲ್ಲಲ್ಲಿ ಬಿಲ್ಗಾಜರು ಬೀದಿವರಿದು ವಲ್ಗನಗೈವುತ ಕುವರನ ಮೇಲೆ ಸರಲ್ಗಳ ಮಳೆಯ ಕಜೆದರು (ಕುರಾಸಾಂ. ೪೫-೧೦೭). [ವಲ್ಗನ + ಕೈ (< ಕೆಯ್)]

**ವಲ್ಗನೆ** (ನಾ). ನೆಗೆದಾಟ ; ಹಾರಾಟ : ಸಾಕು ಮಾಡು ನಿನ್ನ ವಲ್ಗನೆಯನ್ನ! ಅವಳೆಂದು ಬರುತ್ತಾಳೋ ಎಂದು ಅಂದಿನಿಂದ ಹಂಬಲಿಸುತ್ತಿರಲಿಲ್ಲವೇ ನೀನು? (ಮಾಡಿಮ. ೧೫೭). [ಸಂ. ವಲ್ಗನ]

**ವಲ್ಗಿತ** (ಗು). ೧. ಚಲಿಸುವ. ೨. ಹಾರಿದ ; ನೆಗೆದ. (ನಾ). ೩. = ವಲ್ಗನ ೪ : ಅಡ್ಡಲಾಗಿ ಮಣಿತವ ತೋಜಿಸುವುದು ವಲ್ಗಿತವೆನಿಸಿಕೊಂಬುವುದು (ಅಶ್ವಟೀ. ೨೫-೩); ದೌರಿತಕ ಆಸ್ಕಂದಿತ ಪ್ಲುತ ವಲ್ಗಿತ ಚಾರುರೇಚಿತಗಳು (ದ್ವಾನಚ. ೪-೫೩).
[ಸಂ.]

**ವಲ್ಗಿಸು** (ಕ್ರಿ). ಮಲ್ಲಯುದ್ಧದಲ್ಲಿ ವಲ್ಗನವೆಂಬ ವರಸೆಯಿಂದ ಹೋರಾಡು : ಸ್ಫೋಟದ್ಭುಜದ್ವಂದ್ವಮಂ ಪದೆದಾಸ್ಫೋಟಿಸಿ ನಿಂದು ವಲ್ಗಿಸುತುಮಾ ಚಾಣೂರನಂ ನೋಡಿ ಕೋಪದೆ ಪೊರ್ಕಾತನ ತೋಳ್ಗಳಂ ಪಿಡಿದು . . . ಕುಕ್ಕುಜಿಸಿದಂ ಭೂಭಾಗದೊಳ್ ಮಾಧವಂ (ವಿಷ್ಣುಪು. ೫-೫-೬೩). [ವಲ್ಗನ + — ಇಸು]

**ವಲ್ಗು** (ಗು). ೧. ಸುಂದರವಾದ ; ಚೆಲುವಾದ : 'ವಲ್ಗುರೂಪೆ' ಪರಾ. (ನಾ). ೨. ಸೌಂದರ್ಯ ; ಚೆಲುವು : ಋಗ್ವೇದದಲ್ಲಿ 'ಸೌಂದರ್ಯ'ದ ಅರ್ಥವನ್ನು ವಿವಿಧವಾಗಿ ಪ್ರಕಟಪಡಿಸುವ ಪದಗಳಿವೆ . . . ಆ ಪದಗಳು ಇವು ; ಪ್ಸರಸ್, ಪೆಶಸ್, ಅಪ್ಸಸ್, ದೃಶ್, ಶ್ರೀ, ವಪುಸ್, ವಲ್ಗು (ಸೌಂದಸ. ೪೩). ೩. ಒಳ್ಳೆಯದು ; ಉತ್ತಮವಾದುದು : "ಪ್ರಾಗ್ಯಂ . . . ಸಾಧು, ವಲ್ಗು, ಚಾರು, ಸುಷಮಂ, ವಾಮಂ, ಶುಭಂ, ಪೇಶಲಂ — ಈ ೨೯ ಒಳ್ಳಿತು" (ಹಲಾಯು. ೧೧೪-೪).
[ಸಂ.]

**ವಲ್ಗುತೆ** (ನಾ). ಅಂದ ; ಸೌಂದರ್ಯ : ನೆಲದ ಸಿರಿ ಬಲ್ಬಿಜ್ಜೆ, ಮೈಬಲ್ಮೆ, ರಣಕೀರ್ತಿ, ಮೇಣ್ ಅರಸುಕುವರಿಯತನಂ ತೃಣವಾಗಿ ಋಣವಾಗಿ ಕಾಣಿಸಿದುವಬಲೆಯರ ಗುಣವಾದ ಫಲ್ಗುಣನ ಮೋಹಿಸುವ ವಲ್ಗುತೆಯ ಮುಂದೆ (ಚಿತ್ರಾಂಗ. ೨೫-೬೯೩).
[ಸಂ. ವಲ್ಗುತಾ]

**ವಲ್ಗುರೂಪೆ** (ನಾ). ಸುಂದರರೂಪವನ್ನು ಉಳ್ಳವಳು ; ಚೆಲುವೆ : ವಲ್ಗುರೂಪೆ ಸುಭದ್ರೆ ಕಣ್ಮುಂದೆ ಸುಳಿವನಕ ಫಲ್ಗುಣನು ಸಂನ್ಯಾಸಿ (ಮಂಕುಕ. ೨೭೭).
[ಸಂ. ವಲ್ಗುರೂಪಾ]

**ವಲ್ಗುಲ** (ನಾ). ತೊಗಲುಬಾವಲಿ. [ಸಂ.]

**ವಲ್ಲೂದರ** (ನಾ). ಅಂದವಾದ ಉದರ : ಸ್ಫುರದಧರ ಮಣಿಬಂಧ ವಲ್ಲೂದರದ ನಾಭಿಸರೋಜಕಾಂತಿಯ . . . ಸುಭೂರಿಭಾಗ್ಯದ ಲಕ್ಷಣದ ಮೂರ್ತಿಯನು ನೆನೆ (ನಿಭಾಗ. ೩-೧೩-೩೫). [ಸಂ.]

**ವಲ್ಗೆ** (ನಾ). ಕುದುರೆಯ ಕಡಿವಾಣ,—ಲಗಾಮು ; ವಾಘೆ : "ವಲ್ಗಾ, ರಶ್ಮಿಃ, ಕಶಾ — ಈ ೩ ವಾಗೆ" (ಹಲಾಯು. ೭೩-೨೮೮). [ಸಂ. ವಲ್ಗಾ]

**ವಲ್ಭನ** (ನಾ). ೧. ತಿನ್ನುವಿಕೆ ; ಭುಜಿಸುವುದು. ೨. ಆಹಾರ ; ಉಣಿಸು. ೩. ಊಟ ; ಭೋಜನ : "ವಲ್ಭನಂ, ಅಭ್ಯವಹಾರಃ . . . ಆಹಾರಃ, ಭೋಜನಂ, ಸ್ವದನಂ — ಈ ೧೧ ಊಟಂ" (ಹಲಾಯು. ೫೪-೧೭೦). [ಸಂ.]

**ವಲ್ಮೀಕ** (ನಾ). ೧. ಹುತ್ತ : ಆ ವಿಷಯಂ . . . ವಲ್ಮೀಕಾನೀಕದಂತೆ ಭಾಸ್ವದ್ಭೋಗಿಸಮಾಜವಿರಾಜಿತಮುಂ . . . ಎನಿಪುದು (ವರ್ಧಪು. ೧-೪೬ ವ); ಅಮಿತೋದ್ಯದ್ಭುಲ್ಮವಲ್ಮೀಕಮನುಡಿದಿಡಿಯುತ್ತುಂ . . . ನಡೆದುದು ಬಳವತ್ಕಾಳಕಾಯಂ ಲುಲಾಯಂ (ಪುಷ್ಪಪು. ೫-೭೫). ೨. ಕೊರಳು, ಎದೆ ಮುಂತಾದ ಕೆಲವು ಅಂಗಗಳು ಆನೆಯ ಚರ್ಮದಂತೆ ಒರಟಾಗಿ, ಊದಿಕೊಳ್ಳುವ ಒಂದು ಬಗೆಯ ರೋಗ : 'ಪಾದವಲ್ಮೀಕ' ಪರಾ. ೩. ವಾಲ್ಮೀಕಿ ಋಷಿ. [ಸಂ.]

**ವಲ್ಲ** (ನಾ). ೧. ಒಂದು ಬಗೆಯ ದ್ವಿದಳಧಾನ್ಯ ; ಅವರೆ : "ವಲ್ಲಃ, ನಿಷ್ಪಾವಕಃ — ಈ ೨ ಅವರೆ" (ಹಲಾಯು. ೯೬-೪೩೦). ೨. ಗೋಧಿಯ ಒಂದು ಪ್ರಕಾರ. ೩. ಗುಂಜಿಗಳ ಒಂದು ಪ್ರಮಾಣ. ೪. ಧಾನ್ಯಗಳನ್ನು ಮೊರದಲ್ಲಿ ಹಾಕಿ ಒನೆಯುವುದು. ೫. ತಡೆಯುವಿಕೆ ; ನಿಷೇಧ. [ಸಂ.]

**ವಲ್ಲಂ** 'ವಲಂ' ನೋ.

**ವಲ್ಲಕಿ** (ನಾ). ೧. ಒಂದು ಬಗೆಯ ತಂತೀವಾದ್ಯ : ಗಾಯಕೀಜನ ಗೀತಾನ್ವಿತವಲ್ಲಕೀಕ್ವಣಿತದೊಳ್ . . . ಪೊಂಪುಟಿವೋಗುತಿರ್ಪುವೆರಡುಂ ವಿದ್ಯಾಧರಶ್ರೇಣಿಗಳ್ (ಆದಿಪು. ೧-೭೦); ಸುರಮುನೀಶ್ವರ . . . ಮೊರೆವ ವಲ್ಲಕಿ ಸಹಿತ ನಾಮಾಮೃತವ ಬೀಱಿದನು (ಕಾಶಿರಾ. ೧೯-೫೦). ೨. [ಜ್ಯೋತಿ] ಸಂಖ್ಯಾಯೋಗಗಳಲ್ಲಿ ಒಂದು ; ಏಳುಗ್ರಹಗಳೂ ಏಳುರಾಶಿಗಳಲ್ಲಿರುವ ಒಂದು ಯೋಗ : ಸಪ್ತಗ್ರಹಂ . . . ನಿಲೆ ಸಪ್ತಮಾಲಯದೊಳಕ್ಕುಂ ವಲ್ಲಕೀಸಂಜ್ಞಕಂ (ಜಾತತಿ. ೧೩-೫). 'ವಲ್ಲಕೀಯೋಗ' ಪರಾ. [ಸಂ. ವಲ್ಲಕೀ]

**ವಲ್ಲಕೀಯೋಗ** (ನಾ). [ಜ್ಯೋತಿ] ಜಾತಕನ ಜನ್ಮಕಾಲದಲ್ಲಿ ಏಳುಗ್ರಹಗಳೂ ಏಳುರಾಶಿಗಳಲ್ಲಿರುವುದು ; ಈ ಯೋಗದಲ್ಲಿ ಹುಟ್ಟಿದ ವ್ಯಕ್ತಿಯು ಸ್ವಂಗೀತಗಾರನೂ ನರ್ತಕನೂ ಆಗುತ್ತಾನೆಂಬ ನಂಬಿಕೆಯಿದೆ : ವಲ್ಲಕೀಯೋಗಜಾತನರಂ ಗಾಯಕ ನರ್ತಕಪ್ರಿಯತಮಂ ನಿಷ್ಣಾತಂ (ಜಾತತಿ. ೧೩-೧೬). [ಸಂ.]

**ವಲ್ಲಡಿ** (ಕ್ರಿ). (?) : ಉಳ್ಳಾಗಲು ನಿನ್ನ ಉಳ್ಳಿಪ್ಪನೆಂದು ಎಲ್ಲ ಬಳಗ ಬಂಧು ಸೊಲ್ಲುಸೊಲ್ಲಿಗೆ ಪಾಡಿ ಬೆಲ್ಲಕ್ಕೆ ನೊಣಗಳು ವಲ್ಲಡಿಯದಂತೆ ಒಳ್ಳೇತನದಲ್ಲಿ ಉಲ್ಲಾಸರಾಗಿ ಗಲ್ಲಭೆ ಇಂದಲಿ ಚಲ್ಲವರಿದಿಪ್ಪರು (ವಿಸಾಸು. ೫೦-೨). [?]

**ವಲ್ಲಭ** (ನಾ). ೧. ಕಾದಲ ; ನಲ್ಲ ; ಪ್ರಿಯತಮ : ವಲ್ಲಭನ ತೋಳ ಸೋಂಕುಂ ಮಲ್ಲಿಗೆಯುಂ ಕುಂದದಿರ್ಕೆ ಸಂತತಂ (ಜಗವಿ. ೧೪-೭೭); ಪತಿಯ ನಿರೀಕ್ಷಿಪವು ಸಲೆ ಕಂಬನಿಯ ತುಂಬಿದವು ಸುಯ್ಯುವು ಹಂಬಲಿಸಿದವು ಚಕ್ರವಾಕಗಳಲ್ಲಿ ವಲ್ಲಭರ (ತಮ್ಮಅ. ೭-೯೫). ೨. ಗಂಡ ; ಪತಿ : ಬಂದಳದೊಂದು ವಿಭ್ರಮಂ . . . ಅದೊಂದು ದೇಸೆ ಪೊಸತಾಗಿರ ವಲ್ಲಭನಲ್ಲಿಗಟ್ಟುಜಿಂ (ಜಗವಿ. ೨-೮೦); ಈಕೆ ಗಂಧರ್ವರ ರಮಣ . . . ಬಲ್ಲಿದರಿವಳ ವಲ್ಲಭರು (ಕುಮ್ಮಾವಿ. ೨-೧೪). ೩. ಒಡೆಯ ; ಪ್ರಭು : "ಬಲ್ಲಹಂ ವಲ್ಲಭ ತಾನಧಿಪತಿಗೆ ನಾಮಮಕ್ಕುಂ" (ಕವಿಕಾ. ೧೪೮); ಎನ್ನ ವಲ್ಲಭೆದ್ದನೆದ್ದನು ಎನ್ನ ರತುನದ ಬೊಂಬೆಯೆದ್ದನು (ಕಾಶಿರಾ. ೨೨-೭೭). ೪. ರಾಷ್ಟ್ರಕೂಟರಾಜರ ಹೆಸರು. ೫. ಗೊಲ್ಲ ; ಗೋವಳ : ಗೋಪಾಲಕರೂ ದನ ಮೇಯಿಸುವವರೂ . . . ಎರುವನ್, ಗೌಳ, ಗೋಪಾಲ, ಕೊಂಡಿ, ಸಾಬಲಿ, ವಲ್ಲಭ (ತುಳುನಾ. ೧೭೦). [ಸಂ.]

**ವಲ್ಲಭಗಾಮುಂಡ** (ನಾ). ಒಬ್ಬಾತನ ಹೆಸರು : x x x ಗಾದಿಯರ ದಿಣ್ಣಗಗಾಮುಣ್ಡರುಮೆನ್ನುವರು ವಲ್ಲಭಗಾಮುಣ್ಡರುಂ ರುದ್ರವಚ್ಚರು ರುಣ್ಡಮಾರಮ್ಮನುಂ . . . ಕೊಟ್ಟದು (ಎಕ. II (R), ೩೮-೭; 8ನೆಯ ಶತ). [ವಲ್ಲಭ + ಗಾಮುಂಡ]

**ವಲ್ಲಭಜನ** (ನಾ). ಪ್ರಿಯಜನ ; ಆಪ್ತೇಷ್ಟರು : ಕರುಣಿಸಿ ಬಿಡು ವಲ್ಲಭಜನ ನಿರೀಕ್ಷಣೋತ್ಸುಕನಂ (ಕಾದಂಸಂ. ೭೩೮). [ಸಂ.]

**ವಲ್ಲಭಪಾದಿ** (ನಾ). ಒಂದು ಸ್ಥಳದ ಹೆಸರು : ಕಂಗಪಾದಿ ಕೊಟ್ಟವಳ್ಳಿಪಾದಿ ವಲ್ಲಭಪಾದಿಯು ಮೂಜುಪಾದಿ ವಲವಮ್ಮನಾ ಮೇಕಿಮ x x x ಕೆಯ್ಯನ್ನು (ಎಕ. XII, ಮಧ್ಯಗಿ. ೯೩-೨; ಸು. 750). [ವಲ್ಲಭ + < ಪಾಡಿ₂]

**ವಲ್ಲಭಿಕೆ** (ನಾ). ಹೆಂಡತಿ ; ಪತ್ನಿ : ತ್ರಿಷಷ್ಟಿಸಂಖ್ಯಾತ ವಲ್ಲಭಿಕಾವಿಭ್ರಮಭ್ರೂಲತಾ ತ್ರಿಭಾಗಭಾಜನನುಮಾಗಿ (ಆದಿಪು. ೬-೧೩ ವ). [ಸಂ. ವಲ್ಲಭಿಕಾ]

**ವಲ್ಲಭೆ** (ನಾ). = ವಲ್ಲಭಿಕೆ : ವಲ್ಲಭೆಯರ್ ಪೊಲ್ಲದೆನೆ ಪುರಸ್ತ್ರೀಯರನ್ನಾಯಮೆನೆ . . . ಪಾಸಟಿಯೊಳ್ ಕೂಸಪ್ಪಳಿಸಿ (ಜಗವಿ. ೨-೫೩ ವ); ವಲ್ಲಭೆಯ ಬರವೇನು ಮುಖದಲಿ ತಲ್ಲಣವೆ ತಲೆದೋಱುತಿದೆ ತಳುವಿಲ್ಲದುಸುರು (ಕುಮ್ಮಾವಿ. ೩-೪೦). [ಸಂ. ವಲ್ಲಭಾ]

**ವಲ್ಲಭೋದ್ಯಾನ** (ನಾ). ರಾಜೋದ್ಯಾನ : ಜನತಾವಲ್ಲಭಂ ವಲ್ಲಭೋದ್ಯಾನದಿಂ ಪೊಱಮಟ್ಟು (ಅನಂಪು. ೭-೫೪ ವ). [ಸಂ.]

**ವಲ್ಲರಿ** (ನಾ). ೧. ಲತೆ ; ಬಳ್ಳಿ : ವಧೂವರರಾಗವಿಷಯವಲ್ಲರಿ ಫಲಿತಮಾದುದು (ಜಗವಿ. ೨-೫೨ ವ); ವರತರುವಲ್ಲರೀಪ್ರಕರದಿಂ ಕರದಿಂ ಕರೆದಿಂಬುವೆತ್ತು (ರಾಜಶೇ. ೫-೭೬). ೨. ಗೊಂಚಲು ; ಗೊಂಡೆ : ತಲೆಯೊಳ್ ಸೀರೆಯನಿಕ್ಕಿ ಕೆಮ್ಮ[ನೆ]ನಿತಂ ಪೂರ್ಣಿರ್ಪಮುಗ್ರಾರಿ ವಂಶಲತಾವಲ್ಲರಿಗಳ್ಗೆ ದಾವಶಿಖಿವೊಲ್ ಮೆಯ್ದೋಱಿ (ಪಂಪಭಾ. ೩-೩೩); ನಲ್ಲನನಗಲಿ ಚೈತನ್ಯಗುಂದಿದ ಹೆಣ್ಣ ಕೊಲ್ಲದೆ ಬಿಡೆನೆಂಬ ಸ್ಮರನ ಬಿಲ್ಲಿನಂಗಡಿಯೆಸೆದವು ಅಶೋಕೆಯ ವಲ್ಲರಿ ಸಹಿತಿಟ್ಟುಕೊಂಡು (ಅಬ್ಬಲೂ. ೩-೭೨). [ಸಂ. ವಲ್ಲರೀ]

**ವಲ್ಲವ₁** (ನಾ). ಒಂದು ರಾಜಮನೆತನ ಮತ್ತು ಆ ಮನೆತನಕ್ಕೆ ಸೇರಿದವನು ; ಪಲ್ಲವ : ವೆಳ್ಗುಳಿ ಚಳುಕ್ಕಿಯರ್ ವಲ್ಲವರ್ ಕೌಶಲರ್ ವಙ್ಗಣರ್ (ಎಕ. IV (R), ಚಾಮರಾ. ೧೩೨-೪೦; 1049). [< ಸಂ. ಪಲ್ಲವ]

**ವಲ್ಲವ₂** (ನಾ). ೧. ದನ ಕಾಯುವವನು ; ಗೊಲ್ಲ : "ಗೋಪಾಳಃ, ವಲ್ಲವಃ— ಈ ೨ ತುಱುಕಾಱಂ" (ಹಲಾಯು. ೯೬-೪೩೩); ಬರುತಿರ್ದರ್ ಪೊತ್ತದಿಂ ವಲ್ಲವರಳಿಕಲಲತ್ಪಲ್ಲವರ್ ಲೀಲೆಯಿಂದಂ (ಲೀಲಾವ. ೫-೯೪). ೨. ಅಡುಗೆಯವನು ; ಬಾಣಸಿಗ : "ಸೂಪಕಾರಂ ವಲ್ಲವಂ ಸೂದನೆಂದೆನಲು ಭೂಪರ್ಗಳ(ಡು)ಡಿಗೆಯವನಕ್ಕು" (ಮಂಗರಾ. ೮೦-೮). 'ಬಲ್ಲವ₂' ಪರಾ. [ಸಂ.]

**ವಲ್ಲವ₃** (ನಾ). (?) : ಕಳಕಳಿಪ ದರಹಾಸಕೌಮುದಿಯ ಸೌಮುದಿಯ ಪೊಳೆಪೊಳೆವ ಬಿಂಬೋಷ್ಠಪಲ್ಲವದ ವಲ್ಲವದ ನಲವಿನಿಂ ನೋಳ್ಪ ಯತಿತತಿಯ ಸುರತತಿಯ ಸಂತತಿಗೆ ಹರಿಯ್ಮಿತರೆ (ಮಂಕಾರಾ. ೧-೮-೨೬). [?]

**ವಲ್ಲವಿ** (ನಾ). ದನಕಾಯುವವಳು ; ಗೊಲ್ಲಿತಿ : ಸುಲಭಗುರುವಂ ಕಂಡು ವಂದಿಪಂದಪೊಯೆನಲ್ ಕಳವಮಾಳಿಯೆಸೆದುವಲ್ಲಲ್ಲಿ ಚೆಲ್ವಂಗೆಯ್ಯುತುಂ ಕಾಯ್ವ ವಲ್ಲವಿಯರಿಂ (ಪದ್ಮರಾ. ೮-೧೪); ಸರಿ ಯಾವುದೀ ವಲ್ಲವಿಯರ ಭಾಗ್ಯಕೆ (ಕೃಷ್ಣಗೋ. ೩-೭೪). [ಸಂ. ವಲ್ಲವೀ]

**ವಲ್ಲಹ** 'ಬಲ್ಲಹ₁' ನೋ.

**ವಲ್ಲಾಂಡ** (ನಾ). ಒಂದು ಬಗೆಯ ಸಸ್ಯ : "ಪಂಚಕ್ರಮಃ — ವಲ್ಲಾಂಡ" (ಓಷಧಿ. ೯೨). [?]

**ವಲ್ಲಿ₁, ಒಲ್ಲಿ** (ನಾ). ಹೊದೆಯುವ ವಸ್ತ್ರ ; ಉತ್ತರೀಯ : ನವನಿಕಾರಿಯ ವಲ್ಲಿ ಸೀರೆಗಳವಯವದ ರಕುತದಲಿ ತೋದವು (ಕುಮ್ಮಾವಿ. ೮-೭೫); ಹರಿಕರುಣವೆ ಅಂಗಿ ಗುರುಕರುಣ ಮುಂಡಾಸು ಹರಿದಾಸರ ದಯವೆಂಬೊ ವಲ್ಲಿ (ಪುರಂದ. ೨-೧೫-೧); ಒಡ್ಡರಿಗೆಲ್ಲ . . . . ಒಂದೊಂದು ವಲ್ಲಿ ಒಂದೊಂದು ಅಂಗಿ ಕೊಡಿಸಿ ಕಳಿಸಿಕೊಟ್ಟರು (ಬಳಭಾ. ೧೬೪).

ಒಲ್ಲಿ : ಒಯ್ಯನೆ ಸಾರ್ದೊಲ್ಲಿಯನೆತ್ತಿಯಾಣ್ಮನ ಮಯ್ಯಾಡದೆಚ್ಚಱುಣ್ಮದವೊಲು ಶಯ್ಯೆಯೊಳವಳೊಂದಿದಳಾಗ ಕಾಮನ ಕಯ್ಯಸಿ ಮಱಿದೊಱೆವೊಗುವಂತೆ (ಸೊಬಸೋ. ೧೮-೮೧); ಬಿಗಿದುಟ್ಟ ಕಾಸೆ ಸುತ್ತಿದ ಚಂದ್ರಗಾವಿಯ ಮಿಗೆ ರಂಗುವೆತ್ತೊಲ್ಲಿ ಮೆಱೆಯೆ (ನಾಗಕು. ೮-೧೩); ನಲ್ಲ ಒಲ್ಲಿಯನೊಲ್ಲ ನೆಲ್ಲಕ್ಕಿ ಬೋನೊಲ್ಲ (ಸರ್ವಜ್ಞ. ೧೫೧೮). [ದೇ. ॥ ಮಲ. ಒಲ್ಲಿ, ಒಲ್ಲಿಯಲ್ ; ತುಳು. ಒಲ್ಲಿ, ಒಲ್ಲೆ ; ತೆಲು. ಒಲ್ಲಿಯ, ಒಲ್ಲೆ]

ವಲ್ಲಿ₂ (ನಾ). ೧. ಲತೆ ; ಬಳ್ಳಿ : ತರುಗುಲ್ಮಾಂಘ್ರಿಪವಲ್ಲಿಗಳ್ಗೆ ಜವೆಯೋರೊಂದೊಬ್ಬಳಂ ನಾಲ್ಕುಳಂ . . . ಇಕ್ಕುಗೆ ಸಾರ್ವಕಾಲಫಲಮಕ್ಕುಂ (ಲೋಕೋಪ. ೬-೬೦); ಸ್ಫಟಿಕವೆಂದೆಂಬ ಕಂದದಿನೊಗೆದು ನಾಡೆ ಥಳಥಳಿಟಲೆಂಬ ಕಿಡಿಗಳೇ ಮೊಳಗಳಾ ಸೂರ್ಯನುತ್ಕಟದ ಕಿರಣಂಗಳೇ ವಲ್ಲಿಯಗ್ರದ ಭಾಸ್ಕರನೆ ಫಳಂ (ಭಾವಚಿಂ. ೫-೬). ೨. ಭೂಮಿ. [ಸಂ.]

ವಲ್ಲಿಪಾಟು, ವಲ್ಲಿವಾಟ (ನಾ). ಎದೆಯ ಮೇಲೆ ಬರುವಂತೆ ಎಡಭುಜದ ಮೇಲೆ ಹೊದೆಯುವ ವಸ್ತ್ರ ; ಉತ್ತರೀಯ : ಉಡಿಯ ಸುತ್ತಿದ ವಲ್ಲಿಪಾಟನ ಕರದಲಿ ಪಿಡಿದು ರಂಜಿಪ ರನ್ನಸೆಳೆಯ ಕಡುಜಾಣ ಭರತಾಚಾರ್ಯನು ರಾಜಿಪ ಬೆಡಗನದೇನ ಬಣ್ಣಿಸುವೆ (ಕಂಪವಿ. ೮-೫೭). ವಲ್ಲಿವಾಟ : ಚಿನ್ನಗಂಬಿಯ ಪಟ್ಟೆಪಚ್ಚಡಂಗಳನೊಲಿದು ಚೆನ್ನಾಗಿ ವಲ್ಲಿವಾಟವ ಪೊದೆದು (ನವಮೋ. ೧೭-೫೭). [ದೇ. ॥ ತಮಿ. ವಲ್ಲವಾಟ್ಟು, ವಲ್ಲವಟ್ಟು ; ತೆಲು. ವಲ್ಲೆವಾಟು, ವಲೆವಾಟು]

ವಲ್ಲಿಮಾಟ (ನಾ). ಬಳ್ಳಿಗಳನ್ನು ಹಬ್ಬಿಸಿದ ಮನೆ ; ಬಳ್ಳಿಮಾಡ ; ಲತಾಗೃಹ : ವಲ್ಲಿಮಾಟ – ಬಳ್ಳಿಮಾಡ (ಶಮದ. ೨೮೨ ಪ್ರಯೋ.). [ವಲ್ಲಿ₂ + ಮಾಟ₁]

ವಲ್ಲಿಯ 'ವಲಿಯ' ನೋ.

ವಲ್ಲಿವಾಟ 'ವಲ್ಲಿಪಾಟು' ನೋ.

ವಲ್ಲಿವೇಷ್ಟ (ನಾ). [ಕಾಮಶಾ] ಆಲಿಂಗನದ ಒಂದು ಪ್ರಭೇದ : ತಿಲತಂಡುಲಿತ ಪಾಲು ಜಲ ವಲ್ಲಿವೇಷ್ಟಾದಿ ಲಲಿತಾಲಿಂಗನ ಭ್ರಾಂತಾಂತ್ಯರಿತ ಚಲಜಿಹ್ವಾಪಾನವೆಂಬ ಲಘುಚುಂಬನಮಲೆವೊಲೆವ ಹುದುಕುವ ತುಡುಕುವ (ಭೃಂಗಸ೦. I, ೨೯೬). [ಸಂ.]

ವಲ್ಲೀವನ (ನಾ). ಬಳ್ಳಿಗಳಿಂದ ಕೂಡಿದ ಉದ್ಯಾನ ; ಲತಾವನ : ದೇವೀವಿಳಾಸಮಂ ನಿಜವಿಳಾಸದಿಂ ನಗುವವಲ್ಲಿ ವಲ್ಲೀವನಂ (ಆದಿಪು. ೧೦-೨೭); ಪುಷ್ಪಾಮೋದದಿಂದಾದುದಟ್ಟಮೆ ಭೃಂಗಕ್ಕೆನೆ ತಾಂಗದಾರ ಬಗೆಯಂ ತತ್ಪುಲ್ಲ ವಲ್ಲೀವನಂ (ಮಲ್ಲಿಪು. ೧೪-೧೫೨). [ಸಂ.]

ವಲ್ಲೂರ (ನಾ). ೧. ಒಣಗಿಸಿದ ಮಾಂಸ : "ಹವಣಱಿದು ಮಾಂಸಮಂ ತುಂಡು ಗೆಯ್ದುಪ್ಪುಡಿದವಱಲ್ಲಿ ವಲ್ಲೂರಮೆನಿಸಿಕ್ಕು" (ಮಂಗರಾ. ೬೫-೫). ೨. ಪೊದೆ. ೩. ಉಸುಬಿನ ಬಯಲು ; ಮರಳುಗಾಡು. ೪. ಬಿತ್ತದೆ ಹಾಳಾದ ಜಮೀನು ; ಪಾಳುಭೂಮಿ. [ಸಂ.]

ವಶ₁ (ನಾ). ಕೊಬ್ಬು ; ನೆಣ : ಕೂಡೆ ವಿರೋಧಿಯಂ ತಱಿದು ತದ್ವಶ [ಪಾಠಾಂ. ದ್ರಸ]ಮಾಂಸದೆ ಭೂತಭೋಜನಂ ಮಾಡದೆ . . . ಸಂಧಿಮಾಡುವನೆ ಪಾಂಡವರೊಳ್ ಫಣಿರಾಜಕೇತನಂ (ಗದಾಯು. ೫-೪೯). 'ಬಸೆ₂' ಪರಾ. [ಸಂ. ವಶಾ]

ವಶ₂ (ಗು). ೧. ಅಧೀನವಾದ ; ಹತೋಟಿಗೆ ಒಳಪಟ್ಟ. ೨. ನಿಗ್ರಹಗೊಳಿಸಿದ ; ಅಂಕೆಗೆ ಒಳಪಡಿಸಿದ. ೩. ಆಕರ್ಷಣೆಗೆ ಸಿಲುಕಿದ ; ಮರುಳಾದ. (ನಾ). ೪. ಆಸೆ ; ಇಚ್ಛೆ ; ಬಯಕೆ. ೫. ಅಧೀನ ; ಅಂಕೆ ; ಹತೋಟಿ : ಆ ಗಜಂ ವಶಕ್ಕೆ ಕಂಭಕ್ಕೊಳಗಾಗಿ ಕಟ್ಟುವಟ್ಟು ತನ್ನಂ ನೆನೆಯಲೊಡಂ (ಪಂಚತಂ. ಅ. ೨೧೮-೧೫); ನೀ ಹುಟ್ಟಿಸಿದಲ್ಲಿ ಹುಟ್ಟದೆ ನೀ ಕೊಂದಲ್ಲಿ ಸಾಯದೆ ಎನ್ನ ವಶವೇ ಅಯ್ಯಾ ನೀವಿರಿಸಿದಲ್ಲಿರದೆ ಎನ್ನ ವಶವೇ ಅಯ್ಯಾ (ಬಸವ. ೫೭). ೬. ಒಡೆತನ ; ಅಧಿಕಾರ. ೭. ಹುಟ್ಟು ; ಜನ್ಮ. ೮. ವೇಶ್ಯಾಗೃಹ. ೯. [ತತ್ತ್ವಶಾ] ಮನಸ್ಸಿನ ಹದಿನಾರು ವಿಕಾರಗಳಲ್ಲಿ ಒಂದು : ಐತರೇಯೋಪನಿಷತ್ತಿನಲ್ಲಿ ಸಂಜ್ಞಾನ (ಚೇತನಭಾವ), ಅಜ್ಞಾನ (ಈಶ್ವರಭಾವ) . . . ಕಾಮ, ವಶ ಈ ಹದಿನಾರು ಮನಸ್ಸಿನ ವಿಕಾರ ಗಳೆಂದಿರುವವು (ಅಮೃತ. ೬-೨೬ ೬೬೫).

ವಶಂಮಾಡು, ವಶಮಾಡು = ೧. ಸ್ವಾಧೀನಕ್ಕೆ ತಂದುಕೊಳ್ಳು ; ಅಧೀನಗೊಳಿಸು : ವಿವಿಧಾಲಂಕಾರದಿಂ ರಂಜಿಸ ತಮಗೆ ವಶಂಮಾಡಿ ಶಬ್ದಂಗಳಂ ತಮ್ಮ ವಚಸ್ಸಂಪತ್ತಿ ಕರ್ಣಾಮೃತಮೆನೆ ರಸಭಾವಂಗಳಂ ತೋಱೆ (ಮಲ್ಲಿಪು. ೧-೨೩); ಮೃತ್ಯು . . . ಮೂರ್ತಿತ್ರಯಂಗಳ ತನಗೆ ನೆಱೆ ವಶಮಾಡಿಕೊಂಡಿಹಳು (ಕುಮಾರ್ಡ್ರೋ. ೭-೩೫). ೨. ಸೆಳೆ ; ಆಕರ್ಷಿಸು ; ಮರುಳುಗೊಳಿಸು : ಎಲೆ ನೃಪಕುಲತಿಲಕ ಶ್ಯಾಮೆ ಸುಲೋಚನೆಯಂ ನಿನ್ನೀ ಚೆಲ್ವಿಂ ವಶಮಾಡುವೊಡೆ ಈ ಮಣಿಮುದ್ರಿಕೆ ನಿನಗಾಯ್ತು (ಜಯಕಾ. ೪-೭). ವಶವಾಗು = ಅಂಕೆಗೆ ಒಳಪಡು ; ಅಧೀನವಾಗು : ಮರ್ತ್ಯರಿಗೆ ತೊತ್ತಾಗಿ . . . ಕಾಲಂಗೆ ವಶವಾಗಿ ಮಾಡುವ ಭಕ್ತಿಗೆ ನಾಚರು ನೋಡಾ (ಆದಯ. ೧೧-೧೯). [ಸಂ.]

ವಶತಪ್ಪು (ಕ್ರಿ). ಸ್ವಾಧೀನತೆಯನ್ನು ಕಳೆದುಕೊಳ್ಳು ; ಎಚ್ಚರವಿಲ್ಲದಾಗು : ಎಲ್ಲವೂ ವ್ಯರ್ಥವಾಗಲು ಶಕ್ತಿಗುಂದಿ ವಶತಪ್ಪಿ ಬಿದ್ದಳು (ಬ್ನೊಉ. ೫). [ವಶ₂ + ತಪ್ಪು₁]

ವಶತ್ವ (ನಾ). ಸ್ವಾಧೀನಪಡಿಸಿಕೊಳ್ಳುವಿಕೆ ; ವಶದಲ್ಲಿಟ್ಟುಕೊಳ್ಳುವಿಕೆ : ಆ ಪರಬ್ರಹ್ಮನಲಿ ತ್ರಿಜಗದ್ವ್ಯಾಪಕತ್ವ . . . ವಶತ್ವ ಈಶತ್ವಾದಿ ಗುಣಾಗಳಿಗೆ ಲೋಪವಿಲ್ಲ (ಹಸಾರ. ೧೭-೨೩). [ಸಂ.]

ವಶಪಡಿಸು (ಕ್ರಿ). ಆಕರ್ಷಿಸು ; ಮರುಳುಗೊಳಿಸು : ಕಾಮಸೂತ್ರಗಳನ್ನು ರಚಿಸಿರುವ ವಾತ್ಸ್ಯಾಯನನು ಪರಸ್ತ್ರೀಯರನ್ನು ವಶಪಡಿಸಿಕೊಳ್ಳಲು ಅನೇಕ ಬಗೆಯಾದ ಉಪಾಯಗಳನ್ನು ಹೇಳಿದ್ದಾನೆ (ಭಾರದ. ೪೪೯). [ವಶಪಡು + – ಇಸು₁]

ವಶಪಡು (ಕ್ರಿ). ಅಧೀನಗೊಳ್ಳು ; ವಶವಾಗು : ಕಟ್ಟುನಿಟ್ಟಾದ ನಿಯಮಸಂಯಮಗಳು ಮನಸ್ಸನ್ನು ವಶಪಡುವಂತೆ ಮಾಡಿದ್ದವು (ರೂಢಿ). [ವಶ₂ + ಪಡು₁]

ವಶವರ್ತಿ (ನಾ). ೧. ಹಿಡಿತಕ್ಕೆ ಒಳಪಟ್ಟುದು ; ಸ್ವಾಧೀನ : ಲೋಕತ್ರಯಂ ತನಗೆ ವಶವರ್ತಿಯಾದುದಿನ್ನೇಕೆ ಧಾವತಿಯೆಂದು ಸುಖದಿಂದೆ ಪವಡಿಸಿದನೋ ಕಬ್ಬುವಿಲ್ಲಂ (ಪ್ರಮಿಳಾ. ೩೦-೨೦); ಹಸಿವು ಕೊಂಡಾ ಯೋಗಿ ವಸುಧೆಗೀಶ್ವರನಕ್ಕು ಪಶುಪತಿಯಕ್ಕು ಕೈಲಾಸವಾತಂಗೆ ವಶವರ್ತಿಯಕ್ಕು (ಸರ್ವಜ್ಞ. ೪೯೦). ೨. ಅಂಕೆಗೆ ಒಳಪಟ್ಟವನು ; ಅಧೀನ : ವಶವರ್ತಿ ಮಾಟ್ಟುಮಂಗಜಮಿಶಿಖಿದಿನೀಕ್ಷಿಸಿದ ವಿಟರನವಯವದೊಳ್ . . . ಸಮುದಾಯಶೋಭೆಗಳ್ ರುಕ್ಮಿಣಿಯಾ (ಜಗವಿ. ೧೦-೧೮). [ಸಂ. ವಶವರ್ತಿನ್]

ವಶಿ₁ 'ಬಸೆ₁' ನೋ.

ವಶಿ₂ (ನಾ). ೧. ಅಧೀನನಾದವನು : ವೇಳೆಯುಮಾದುದು ವಶಿಯಹನಿನಿಯನು ಆದರು ಒಡವೆಯನಿಡಳು (ಗಾಥಾಸ. ೧೦-೩೯). ೨. ಇಂದ್ರಿಯವನ್ನು ನಿಗ್ರಹಿಸಿದವನು ; ಯತಿ : ಧನವ ಕೊಟ್ಟಡೆ ದಾನಿಯಾದ ತನುವ ಕೊಟ್ಟಡೆ ವೀರನಾದ ಮನವ ಕೊಟ್ಟಡೆ ವಶಿಯಾದ (ಚನ್ನವ. ಕ. ೫೩೦-೧೧೪೦). [ಸಂ. ವಶಿನ್]

ವಶಿ₃ (ನಾ). ನೇಗಿಲ ಗುಳವನ್ನು ಭದ್ರವಾಗಿ ಹಿಡಿಯುವ ಒಂದು ಸಾಧನ ; ಜಿಗುಳೆ : "ವಶಿ[ಪಾಠಾಂ. ಸಿ]ಯೆನಲು ಜಿಗುಟೆದೋಳಂ ಕೂಂಟೆ ಹರಿಕೆ ಕೋಟಿಶಮಕ್ಕುಂ" (ಮಂಗರಾ. ೧೧೯-೧). [?]

ವಶಿಕ (ಗು). ಬರಿದಾದ ; ಖಾಲಿಯಾದ. [ಸಂ.]

ವಶಿತ್ವ (ನಾ). ೧. ಅಂಕೆ ; ಹತೋಟಿ. ೨. ನಿಗ್ರಹ ; ದಮನ : ಪ್ರಕಟಿತದ ಪರಿವಿಡಿಯ ಕುಣಿಕೆಗಳಲಿ ವಶಿತ್ವದಲಿ ವೆಂಟಣಿಸಿ ರೇಚಕ ಪೂರಕದ ರಿಂಗಣಾವನಱಿವುದು ಯೋಗಸಿದ್ಧಿಗೆ ಲಕ್ಷಣವನು (ಕುಮಾರ. ೪-೯). ೩. [ಯೋಗ] ಅಷ್ಟಸಿದ್ಧಿಗಳಲ್ಲಿ ಒಂದು ; ತನ್ನ ಇಚ್ಛೆಯಂತೆ ಇತರರನ್ನೂ ಇತರ ವಸ್ತುಗಳನ್ನೂ ಅಧೀನಗೊಳಿಸುವ ಅತಿಮಾನುಷ ಶಕ್ತಿ : ದಿಕ್ಪಾಲರೊಡಗೂಡಿದ ಜಗಮಂ ತನ್ನಧೀನಮಾಗಿ ನಡಸುವ ತನವೇ ವಶಿತ್ವಮೆಂದು ನಿಶ್ಚಿತಮಕ್ಕುಂ (ವಿವೇಕ. ೨೯೦). [ಸಂ.]

ವಶಿಷ್ಠ (ನಾ). ೧. ಸಪ್ತಋಷಿಗಳಲ್ಲಿ ಒಬ್ಬ ; ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮನ ಮಾನಸಪುತ್ರನೂ ಸೂರ್ಯವಂಶದ ಚಕ್ರವರ್ತಿಗಳ ಪುರೋಹಿತನೂ ಆಗಿದ್ದ ಪ್ರಸಿದ್ಧನಾದ ಋಷಿ. ೨. [ಜ್ಯೋತಿ] ಸಪ್ತರ್ಷಿಮಂಡಲದ ಏಳುನಕ್ಷತ್ರಗಳಲ್ಲಿ ಒಂದು : ಸಪ್ತರ್ಷಿಮಂಡಲ -- ಕೆಳಭಾಗದಲ್ಲಿ ಬಲಗಡೆಯಿಂದ ಎರಡನೆಯ ನಕ್ಷತ್ರವೇ ವಶಿಷ್ಠ (ಆಕಾಶ. ೬೮). 'ವಸಿಷ್ಠ' ಪರಾ. [ಸಂ.]

ವಶೀಕರಣ (ನಾ). ೧. (ಮಂತ್ರ , ತಂತ್ರಗಳಿಂದ ಮೋಡಿ ಮಾಡಿ ಇತರರನ್ನು) ಅಧೀನಮಾಡಿಕೊಳ್ಳುವಿಕೆ ; ವಶಪಡಿಸಿಕೊಳ್ಳುವಿಕೆ : ಮಾರಣ ವಶೀಕರಣ ದ್ವೇಷಣಾದಿಗಳ್ಗೆ ಪೆಱವುಮಿಾ ದೊರೆಯವರ್ಕೆ ಪಿರಿಗುಮಾಗಮಂಗಳೆ ಪ್ರಮಾಣಂಗಳ್

(ಕಾದಂಬ. ೭೪೬); ಮಂತ್ರಸಿದ್ಧಿಯೊ ಮೇಣು ಶಾಬರಯಂತ್ರರಕ್ಷೆಯೊ ಮೇಣ್ ವರೌಷಧತಂತ್ರತಿಲಕವೊ ರಮಣರಿವರ್ಗೆವರ ವಶೀಕರಣ (ಕುವ್ಯಾಅ. ೧೫-೨೨). ೨. (ಮಂತ್ರ, ತಂತ್ರಗಳಿಂದ ಇತರರನ್ನು) ವಶಪಡಿಸಿಕೊಳ್ಳುವ ವಿದ್ಯೆ : ಇನ್ನೊಬ್ಬರಿಗೆ ಕೆಟ್ಟದು ಮಾಡುವುದಕ್ಕೆ, ಶತ್ರುಗಳ ಮೇಲೆ ಜಯ ಗಳಿಸುವುದಕ್ಕೆ ಅಭಿಚಾರಿಕಕರ್ಮಗಳೂ ಉಂಟು — ಮಾರಣ, ವಶೀಕರಣ, ಮೋಹನ, ಸ್ತಂಭನ ಉಚ್ಚಾಟನ ಇತ್ಯಾದಿ (ಭಾರದ. ೨೮). [ಸಂ.]

**ವಶೀಕರಣಸಾಯಕ** (ನಾ). (ಶತ್ರುಗಳನ್ನು) ವಶಗೊಳಿಸುವ ಅಸ್ತ್ರ : ವಶೀಕರಣಸಾಯಕದಿಂ ಭುವನತ್ರಯಂಗಳಂ ಸೋಲಿಪರಾರೊ ನೀಂ ಪುಗೆ ಯಮಾನನಮಂ ರತಿಜೀವಿತೇಶ್ವರಾ (ಮಲ್ಲಿಪು. ೧೪-೪೮). [ಸಂ.]

**ವಶೀಕರಣೌಷಧ** (ನಾ). ವಶಪಡಿಸಿಕೊಳ್ಳುವ ಔಷಧ, —ಮದ್ದು : ಮನಸಿಜನಂಗನಾಜನ ವಶೀಕರಣೌಷಧಮಂಗಜನ್ಮನಂಬಿನ ಮದಶಕ್ತಿ ಮನ್ಮಥನ ಮೋಹನಯಂತ್ರಮಿದಪ್ಪುದು (ಆದಿಪು. ೪-೪೧). [ಸಂ.]

**ವಶೀಕರಿಸು** (ಕ್ರಿ). ವಶಪಡಿಸಿಕೊಳ್ಳು ; ಅಧೀನಗೊಳಿಸು : ಈ ಮೂವರತಿಬಳರು ಘೋರತರಸುತಪಃಪ್ರಭಾವಿಸ್ತಾರಿಗಳಸಂಖ್ಯಾತಯುಗದಲಿ ವಾರಿಜೋದ್ಭವನನು ವಶೀಕರಿಸಿದರು ಭಕುತಿಯಲಿ (ಕುವ್ಯಾಕ. ೬-೨); ಅವರೆಗೆ ಹೇಗಾದರೂ ಚಂಚಲಿಸುತ್ತಿರುವ ಮನಸ್ಸನ್ನು ವಶೀಕರಿಸು (ಗುರುಶ. ೮೦). [ವಶೀಕರಣ + — ಇಸು$_3$]

**ವಶೀಕಾರ** (ನಾ). = ವಶೀಕರಣ. [ಸಂ.]

**ವಶೀಕಾರಿಣಿ** (ನಾ). ವಶೀಕರಣಶಕ್ತಿಯುಳ್ಳ ಒಂದು ಬಗೆಯ ವಿದ್ಯೆ : ಅಮಿತತೇಜನುಂ . . . ಉತ್ಪಾದಿನೀ ವಶೀಕಾರಿಣಿ[ಪಾಠಾಂ. ಕರಣಿ] ಅವೇಶಿನಿ . . . ಅಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಚಾವುಂಪು. ೧೯೫). [ಸಂ. ವಶೀಕಾರಿಣೀ]

**ವಶೀಕೃತ** (ಗು). ೧. ವಶಪಡಿಸಿಕೊಂಡ ; ಸ್ವಾಧೀನಕ್ಕೊಳಪಡಿಸಿದ : ವಶೀಕೃತವಧೂವರ್ಗನುಂ . . . ಆಗಿ . . . ಪಲಕಾಲಮರಸುಗೆಯುತುಮಿರೆ (ಚಂದ್ರಪು. ೪-೨೮ ವ) ; ನುತವಶೀಕೃತಭರ್ಗ ನಿತ್ಯಾಶ್ರಿತ ಮಹೇಶ್ವರಭಕ್ತವರ್ಗ ಸುಹಿತಘನಪ್ರತಿವೀರಮಾರ್ಗ ಬಹಿಷ್ಕೃತ ಸ್ವರ್ಗ (ಬಸಪು. ೩೬-೩೮). (ನಾ). ೨. ಸ್ವಾಧೀನ ; ವಶ : ನಿತಂಬಿನಿ ನಾನಾಪ್ರಕಾರದ ತತ್ತುಪಣಂಗಳಿಂ ಜೊತ್ತಿಸಿ ವಶೀಕೃತಂ ಮಾಡಿ(ಸುಕುಮಾ. ೭-೧೩ ವ). ೩. ವಶವಾದ ವ್ಯಕ್ತಿ ; ಅಧೀನನಾದವನು : ವಿಸ್ಮಯೋದಿತ ವಶೀಕೃತನಾದನುದಾರಮನ್ಮಥಂ (ಕಾವ್ಯಸಾ. ೫೩೫). [ಸಂ.]

**ವಶೀಲಾ** 'ವಸೀಲು' ನೋ.

**ವಶೀಲಿ** 'ವಸೀಲು' ನೋ.

**ವಶೀಲೆ** 'ವಸೀಲು' ನೋ.

**ವಶೆ** (ನಾ). ೧. ಗೊಡ್ಡುಹೆಂಗಸು ; ಬಂಜೆ. ೨. ಬಂಜೆಯಾದ ಹಸು ; ಗೊಡ್ಡಾಕಳು : "ವಶೆಯೆನೆ ಬಂಜೆಯಕ್ಕು" (ಮಂಗರಾ. ೫೪-೪). ೩. ಹೆಂಗಸು ; ಸ್ತ್ರೀ. ೪. ಹೆಂಡತಿ ; ಪತ್ನಿ. ೫. ಆಕಳು ; ಹಸು. ೬. ಹೆಣ್ಣಾನೆ : ಮುನಿಯಂತೆ ಕರಿಯಂತೆ ಶಶಿಯಂತೆ ಭಟನಂತೆ ವನಕುಸುಮದಂತೆಯೀಶಾನ್ಯವೈಭವದಂತೆ ಘನತರವ್ರತವಶಾರೋಹಿಣೀಧೇನು ಸಂಸುರಭಿವೃಷಯುಕ್ತಮಾಗಿ . . . ವ್ರಜಮೆಸೆದುದು (ಚೆಬಪು. ೧೧-೧೮). ೫,೬ : ಮದಮಾತಂಗದ ವೋಲ್ ವಶಾವಿಳಸಿತಂ . . . ಶ್ರೀಮದ್ದಯಾಮೂಲಧರ್ಮದ ವೊಲ್ ವಿಶ್ರುತಸುವ್ರತಾಚರಿತಮೇಂ ಚೆಲ್ವಾಯ್ತೊ ಗವ್ಯಾಶ್ರಯಂ (ಲೀಲಾವ. ೫-೧೦೩). ೭. ಮಗಳು. ೮. ಗಂಡನ ತಂಗಿ. ೯. ಸೂಳೆ ; ವೇಶ್ಯೆ. [ಸಂ. ವಶಾ]

**ವಶ್ಯ** (ಗು). ೧. ಅಧೀನಗೊಳಿಸಬಹುದಾದ ; ಅಂಕೆಗೆ ಒಳಪಡಿಸಬಹುದಾದ. ೨. ಪಳಗಿಸಿದ ; ಹತೋಟಿಗೆ ತಂದ. ೩. ವಿನಯದಿಂದ ಕೂಡಿದ ; ನಮ್ರವಾದ. (ನಾ). ೪. ವಶಮಾಡಿಕೊಳ್ಳುವಿಕೆ ; ಅಧೀನಗೊಳಿಸುವಿಕೆ : ವಶ್ಯವ ಬಲ್ಲೆವೆಂದೆಂಬಿರಯ್ಯಾ ಬುದ್ಧಿಯನಱಿಯದ ಮನುಜರು ಕೇಳಿರಯ್ಯಾ (ಬಸವ. ೭೮). ೫. ವಶಪಡಿಸಿಕೊಳ್ಳುವ ವಸ್ತು ಮುಂತಾದುವು : ವಶ್ಯವಾವುದೆಂದಱಿಯದೆ ಮರುಳುಗೊಂಬಿರೆಲೆ ಗಾವಿಲಮನುಜರಿರಾ (ಬಸವ. ೭೮). ೬. ವಶೀಕರಣ ಶಕ್ತಿಯುಳ್ಳ ವಿದ್ಯೆ : ಯಂತ್ರ ಮಂತ್ರ ತಂತ್ರ ಸಿದ್ಧಿ ವಾದ ವಶ್ಯವ ಸಾಧಿಸುವ ಅಣ್ಣಗಳ ಕಣ್ಮನಕ್ಕೆ ಗಾಢಕತ್ತಲೆಗವಿಸಿ ಹೋಱಗಾದನು ನೋಡಾ ಪರಶಿವನು (ಅಖಂಡೇ. ೬೩-೨೦); ಅರಸುಮಕ್ಕಳು . . . ಪರಿಪರಿಯ ವಶ್ಯಗಳ ತಂತ್ರವ ಮೆರೆವ ತಿಲಕವು ಯಂತ್ರಮಂತ್ರವ ಜಪಿಸುತಿಹರಲ್ಲಿ . (ನಾಗಷ. ೬-೧೮). ೭. ಅಧೀನಕ್ಕೊಳಗಾದ ವ್ಯಕ್ತಿ ; ವಿಧೇಯಕವಾದ ವ್ಯಕ್ತಿ : ಗಂಡನ ಮೇಲೆ ಕೋಪ ಬಂದರೂ ಅದಕ್ಕೆ ಅವಕಾಶ ಕೊಡಲಾರದ ವಶ್ಯಳಾದ ಹೆಂಡತಿಯಂತೆ (ಮಹಾಣ. ೨೮). [ಸಂ.]

**ವಶ್ಯತಿಲಕ** (ನಾ). ಇತರರನ್ನು ತನ್ನೆಡೆಗೆ ಸೆಳೆಯುವ ಶಕ್ತಿಯುಳ್ಳ ತಿಲಕ : ತಿಗುರ ಗೆಲುವುದು ವಶ್ಯತಿಲಕಾದಿಗಳನಿಡುವುದು ಮೋಹನದ ಮದ್ದುಗಳ ಮಾಯೆಯ ಬೀಸುವುದು (ಕುವ್ಯಾಅ. ೧೩-೨). [ಸಂ.]

**ವಶ್ಯದೀಪ** (ನಾ). ವಶೀಕರಣ ಶಕ್ತಿಯುಳ್ಳ ದೀಪದ ಕುಡಿ : ಸಂಪೂರ್ಣವಾಗಿರುವ ಈ ನಿನ್ನ ದೇಹದ ಐಶ್ವರ್ಯವೆಂಬ ನಿಧಿಗೆ ವಶ್ಯದೀಪವನ್ನೆರಗಿಸಿಕೊಳ್ಳುವ ಆನ್ತರಿಕ ಮಹಿಮೆಯನ್ನು ಬಲ್ಲವನಿಂದ — ಅನುಭವಗೊಂಡು ಒದವಿಸಿಕೊಳ್ಳಲೊಲ್ಲದೆ ನನ್ನನ್ನು ಹೀಗೆ ಹಾಳುಮಾಡುತ್ತಿರುವೆ ನೀನು (ಮಂತ್ರಶ. ೫೯-೯). [ಸಂ.]

**ವಶ್ಯಮೂಲಿಕೆ** (ನಾ). ವಶೀಕರಣ ಶಕ್ತಿಯುಳ್ಳ ಮೂಲಿಕೆ, —ಬೇರು : ಚಿತ್ತೋದ್ಭವವಶ್ಯಮೂಲಿಕೆ ಜಿನೇಶೇಂದೂದಯಾದ್ರೀಂದ್ರಚೂಳಿಕೆಯೆಂಬೆಂ ಪೊಗಟಲ್ಕೆ ಮತ್ತಱಿಯೆ ನಾನಾ ಲಕ್ಷ್ಮಣಾದೇವಿಯಂ (ಚಂದ್ರಪು. ೧೧-೧೧೧). [ಸಂ. ವಶ್ಯಮೂಲಿಕಾ]

**ವಶ್ಯವಾಣಿ** (ನಾ). ೧. ವಾಗ್ದೇವಿಯನ್ನು ವಶಪಡಿಸಿಕೊಂಡವನು : ಅವನೀಶ್ವರಚಕ್ರವರ್ತಿ ಹರ್ಷನರೇಂದ್ರಪ್ರವರಂ ಕುಡೆ ಪಡೆದಂ ವಶ್ಯವಾಣಿ ಕವಿಚಕ್ರವರ್ತಿವೆಸರುಂ ಬಾಣಂ (ಪಂಚತಂ. ಅ. ೩-೧೬). ೨. ತನ್ನ ಮಾತಿನಿಂದ ಇತರರನ್ನು ವಶಪಡಿಸಿಕೊಳ್ಳುವವನು. [ಸಂ. ವಶ್ಯವಾಣೀ]

**ವಶ್ಯಸುಪ್ತಿ** (ನಾ). (ಮನೋರೋಗದಿಂದ ಬಳಲುತ್ತಿರುವ ರೋಗಿಗೆ) ಬಾಹ್ಯಪ್ರಚೋದನೆಯನ್ನುಂಟುಮಾಡಿ, ಕೃತಕವಾಗಿ ಬರಿಸುವ ಗಾಢನಿದ್ರೆಯಂಥ ಸ್ಥಿತಿ ; ಹಿಪ್ನೋಟಿಸಂ : ಬಾಹ್ಯಪ್ರಚೋದನೆಗೆ ಮಾತ್ರ ಗಮನಕೊಡುವ ಗಾಢನಿದ್ರೆಯಂಥ ಸ್ಥಿತಿ(ಯನ್ನು ಕೃತಕವಾಗಿ ಬರಿಸುವುದು); ವಶ್ಯಸುಪ್ತಿ (ಯನ್ನುಂಟುಮಾಡುವುದು) (Hypnotism. ೫೦೮೩). [ಸಂ.]

**ವಶ್ಯಾಂಜನ** (ನಾ). ಮಂತ್ರಸಿದ್ಧರ ವಶೀಕರಣಶಕ್ತಿಯನ್ನು ಹೊಂದಿರುವ ಲೇಪನ, ಅಂಜನ, ಮುಲಾಮು ಮುಂತಾದುವು : ವನಿತಾವಶ್ಯಾಂಜನಕ್ಕೀಳಿದಿಕೆ ಯನಬಲೋನ್ಮಾದಚೂರ್ಣಕ್ಕಸತ್ಕೀರ್ತನಮಂ . . . ಉತ್ಪಾದಿಸುವುದು ನೃಪರೂಪಂ ಜನಾಶ್ಚರ್ಯರೂಪಂ(ಮಲ್ಲಿಪು. ೩-೩೧);ಚಿತ್ತಜೋದ್ಭವ ವಶ್ಯಾಂಜನಮಂಜರೀನಿಕರಮೋ (ಚಂದ್ರಪು. ೫-೫೬). [ಸಂ.]

**ವಶ್ಯಾಕ್ಷರ** (ನಾ). ವಶಪಡಿಸಿಕೊಳ್ಳುವ ಶಕ್ತಿಯುಳ್ಳ ಮಾತು, —ನುಡಿ : ಇಂಪುವೆತ್ತ ನುಡಿಯಂ ವಶ್ಯಾಕ್ಷರಂ ಸುಯ್ಯೊಳುಣ್ಮಿದ ಕಂಪಂ ಮೃಗನಾಭಿ ಸೋಂಕಿನೊದವಂ ಮಂದಾನಿಳಂ ಕೊಟ್ಟವೊಲ್ಪದೆದೋರೊರ್ವರೊಳೊರ್ವರಂದು ಪಡೆದರ್ ಪಂಚೇಂದ್ರಿಯಪ್ರೀತಿಯಂ (ಮಲ್ಲಿಪು. ೩-೯೦). [ಸಂ.]

**ವಷಟ್ಕಾರ** (ನಾ). ೧. ಯಜ್ಞದಲ್ಲಿ ದೇವತೆಗಳನ್ನು ಉದ್ದೇಶಿಸಿ ಹವಿಸ್ಸನ್ನು ಅರ್ಪಿಸುವಾಗ ಹೇಳುವ ಮಂತ್ರಾಕ್ಷರ : ಚಾರುತರಯಜ್ಞವಿದ್ಯಾಪಾರಗರ ರವಂಗಳಿಂ ಸ್ವಧಾಕಾರ ವಷಟ್ಕಾರ ಸ್ವಾಹಾಕಾರೋಂಕಾರಧ್ವನಿ ನೆಗೆಟೆ ನೆಗೆಬ್ದುದಾಹುತಿಧೂಮಂ (ಪಂಪಭಾ. ೬-೩೪). ೨. (ಆಲಂ) ಬಯ್ಗುಳು ; ಛೀಮಾರಿ :ಸ್ವಾಮಿ, ನಿನಗೆ ವಷಟ್ಕಾರ ಬೇಕಾಗಿದೆ ಅಂತ ಕಾಣುತ್ತೆ(ಸ್ವಾಮಿಸ್ಟೀ. ೧೫೬). [ಸಂ.]

**ವಷಟ್ಕೃತ** (ನಾ). ದೇವತೆಗಳಿಗಾಗಿ ವಷಟ್ಕಾರವೆಂಬ ಮಂತ್ರೋಚ್ಚಾರಣೆ ಯೊಂದಿಗೆ ಅಗ್ನಿಗೆ ಅರ್ಪಿಸುವ ಹವಿಸ್ಸು, —ಆಹುತಿ : "ಹುತಂ, ವಷಟ್ಕೃತಂ — ಈ ೨ ಬೇಳ್ವ ಹವಿ" (ಹಲಾಯು. ೬೯-೨೬೩). [ಸಂ.]

**ವಷಟ್ಕೃತಿ** (ನಾ). = ವಷಟ್ಕಾರ ೧: ವ್ಯಾಹೃತಿಯ ಶಿಕ್ಷಾಕ್ಷತದ ವಿಮಳಾಹುತಿ ಸ್ವಾಹಾವಷಟ್ಕೃತಿ ಸೋಹಿ ತಂದುದು ಸುರರ ಸುಹವಿರ್ಭಾಗಭೋಗಿಗಳ (ಕುವ್ಯಾಸ. ೭-೩೩). [ಸಂ.]

**ವಷ್ಕಯಿಣಿ** (ನಾ). ಬಹುಕಾಲದ ನಂತರ ಕರುಹಾಕಿದ ಹಸು : "ಕಡೆಗಂದಿ ವಷ್ಕಯಿಣಿ[ಪಾಠಾಂ. ಬಷ್ಕಯಣಿ]ಯಕ್ಕುಂ" (ಮಂಗರಾ. ೫೪-೪). [ಸಂ. ವಷ್ಕಯಿಣೀ]

**ವಸ**₁ (ನಾ). ಅಧೀನವಾದುದು ; ಅಂಕೆಗೆ ಸಿಕ್ಕಿದುದು : ಬಸವರಾಜನ ಘನಚರಿತವಂ ಬಸವರಾಜನೆ ಬಲ್ಲನಲ್ಲದೆ ವಸ[ಪಾಠಾಂ. ಶ]ಮೆ ಯಾರಿಗೆ ಗಣಿದಿಸಲು (ಬಸಪು. ೬-೮). 'ಬಸ₁' ಪರಾ. 'ಪರವಸ', 'ಬಿದಿವಸ' ಹೋ. [< ಸಂ. ವಶ]

**ವಸ**₂ (ನಾ). ಬಟ್ಟೆ ; ವಸ್ತ್ರ : 'ವಸಗ್ರಂಥಿ' ಪರಾ. [< ಸಂ. ವಾಸಸ್]

**ವಸಂತ** (ನಾ). ೧. ಆರುಋತುಗಳಲ್ಲಿ ಒಂದು ; ಚೈತ್ರ ಮತ್ತು ವೈಶಾಖಮಾಸಗಳಲ್ಲಿ (ಎಂದರೆ ಮಾರ್ಚಿ ತಿಂಗಳ ಮಧ್ಯದಿಂದ ಮೇ ತಿಂಗಳ ವರೆಗೆ) ಬರುವ ಋತು ; ಬಸಂತ : ಅಂತು ಭುವನಕ್ಕೆಲ್ಲಮೊಸಗೆವರ್ಪಂತೆ ಬಂದ ವಸಂತದೊಳೊಂದುದಿವಸಂ . . . ಬೇಂಟೆಯನೊರ್ವಂ ಬಂದು ಪೊಡವಟ್ಟು ಕಂಡಿಂತೆಂದಂ (ಪಂಪಭಾ. ೫-೩೫ ವ) ; ಶಶಿ ವಸಂತನ ಬಲುಹು ಮಾನ್ಯರನಿಱಿಯದೇ ತಂಗಾಳಿ ಧಾರ್ಮಿಕನೆ (ಕುವ್ಯಾವಿ. ೨-೩೦). ೨. ಕಾಮದೇವನ ಸಹಚರನೆಂದು ಭಾವಿಸಲಾದ ವಸಂತಮಾಸದ ಅಧಿದೇವತೆ : ಸ್ಮರನಂ ಪೂಜಿಪ ರತಿಯಂ ಪಿರಿದರ್ಚಿಪ ಪರಕೆಯಂ ವಸಂತಂಗೆತ್ತುವ ನೆರೆದಿಂದುವನೊಲಿಸುವ ವಾರಿರುಹದಳಾಕ್ಷಿಯರ ಕಳಕಳಂ ಮನೆಮನೆಯೊಳ್ (ಜಗವಿ. ೨-೩೧). ೩. ಉತ್ಸವಕಾಲದಲ್ಲಿ ಪರಸ್ಪರ ಎರಚಾಡುವ, (ಅರಿಸಿನ, ಸುಣ್ಣ ಬೆರಸಿದ) ಬಣ್ಣದ ನೀರು ; ಓಕುಳಿ : ಚರಪು ಹಂಚಿಕೊಂಡು ವಸಂತ ಹುಯಿದುಕೊಂಡು ಸ್ನಾನಕ್ಕೆ ಹೊರಡುವುದು (ನಾಲ್ಕುಕ. ೨) ; ಯುವತಿಯು ಎಡಗೈಯಲ್ಲಿ ವೀಳೆಯದೆಲೆ ಹಿಡಿದು ಬಲಗೈಯಲ್ಲಿ ಜೀರ್ಕೊಳವೆಯಲ್ಲಿ ವಸಂತದ ನೀರನ್ನು ತುಂಬಿ ಪ್ರಿಯನ ಆಗಮನವನ್ನು ನಿರೀಕ್ಷಿಸುತ್ತಿರುವಳು (ಹೊಯ್ಸವಾ. ೨೮). 'ವಸಂತವಾಡು' ಪರಾ. ೪. ಆಮಶಂಕೆ ; ಅತಿಸಾರ. ೫. ಸಿಡುಬುರೋಗ. ೬. (ಆಲಂ) ಉಲ್ಲಾಸ ; ವಿಲಾಸ : ಎಸೆವ ವಸಂತಮಾಸದೆ ವಸಂತಮನಾಂತ ಕುಜಾತಪಲ್ಲವಪ್ರಸರದಿನಾ ವಸಂತಸಮಯಂ . . . ರಂಜಿಸುವಂತಿರಲ್ (ಕಾದಂಪೂ. ೭೧೯). 'ವಸಂತರಾಜ್ಯ' ಪರಾ. ೭. [ಸಂಗೀತ] ಒಂದು ರಾಗದ ಹೆಸರು : ನೀಲೋತ್ಪಳಿನಿ . . . ವಸಂತ . . . ವಸಂತಬಂಗಾಳ ಉಪಾಂಗಮೆಂಬ ಇಪ್ಪತ್ತೆರಡು ಕ್ರಿಯಾಂಗದಿಂದಾದ ರಾಗಂಗಳು (ವಿವೇಕ. ೧೮೮) ; ವಸಂತ — ೧೭ನೇ ಮೇಳಕರ್ತ ಸೂರ್ಯಕಾಂತದಲ್ಲಿ ಜನ್ಯ . . . ಸಾಯಂಕಾಲದಲ್ಲಿ ಹಾಡಬೇಕಾದ ರಾಗ (ಸಂಗೀಚಂ. ೧೬೦). [ಸಂ.]

**ವಸಂತಕ** (ನಾ). = ವಸಂತ ೨ : ಯೋಗಿಗಂ ವಿಯೋಗಿಗಮರಿದಾಯ್ತು ಪೊಕ್ಕ ಪುಗಿಲಿಂತು ವಸಂತಕಚಕ್ರವರ್ತಿಯಾ (ಪಂಪಭಾ. ೫-೩೫) ; ಮನೆಯನಿವಕ್ಕೆ ಮರ್ಚಿಸಿದ ಮರ್ಚಿಸಿ ಕೂರಿಸಿದೆಯ್ದೆ ಕೂರ್ತು ನಚ್ಚಿನ ರುಚಿ ಬೆರ್ಚು ಬಿಚ್ಚತಿಕೆಯಂ ಬಗೆ ಕೂಡಿದ ಕೆಯ್ಗೆ ಮಾಡಿದೋಪನನುಟಿದೊತ್ತೆಗಿರ್ದೆಡೆಯೊಳೊಂದೆನಗಿತ್ತಪುದೋ ವಸಂತಕಂ ಮನಸಿಜಮಾರ್ಗಣಕ್ಕೆ ಗುಱಿಯೊಡ್ಡಿದನೆಂಬ ಮನಃಪ್ರವೃತ್ತಿಯಂ (ಶಾಂತಿಪು. ೮-೮೧). [ಸಂ.]

**ವಸಂತಕಾಲ** (ನಾ). = ವಸಂತ ೧ : ವಸಂತಕಾಲದಲ್ಲಿ ಒಂದುದಿನ ಮೂರುಸಂಜೆಯ ಮುಂದೆ ಗೋಪೀನಾಥಶಾಸ್ತ್ರಿಯು . . . ವರ್ತಮಾನಪತ್ರವನ್ನು ಓದುತ್ತಾ ಕುಳಿತಿದ್ದನು (ಮುಂಬಯಿ. ೪-೧೭೯). [ಸಂ.]

**ವಸಂತಕುಸುಮ** (ನಾ). ೧. ಪ್ರಮೇಹರೋಗ ನಿವಾರಣೆಯ ಶಕ್ತಿಯುಳ್ಳ ಒಂದು ಬಗೆಯ ಔಷಧೀಸಸ್ಯ. ೨. ವಸಂತಋತುವಿನ ಮೊದಲಲ್ಲಿ, ಮಾಸಲುಹಳದಿಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ: (ಮೈಟಿಗಿ. ೬೪-೧೩೦೨). [ಸಂ.]

**ವಸಂತಗೃಹ** (ನಾ). ವಸಂತಕಾಲದಲ್ಲಿ, ಉದ್ಯಾನವನದಲ್ಲಿ ಕ್ರೀಡಿಸಲು ನಿರ್ಮಿಸಿದ ಮನೆ : ಕಂತುವೆ ವಜ್ರಾಯುಧಂಗೆ ಬೀಡಂ ಮಾಡಿಟ್ಟಂತೆ ಸೊಗಯಿಸಿದುವುದ್ಯಾನಾಂತರದೊಳ್ ಸಂತತಂ ವಸಂತಗೃಹಂಗಳ್ (ಶಾಂತಿಪು. ೮-೧೩). [ಸಂ.]

**ವಸಂತಗೌರಿ** (ನಾ). ಚೈತ್ರಮಾಸದಲ್ಲಿ ಮಾಡುವ ಗೌರಿಯ ಹಬ್ಬ : ಗೌರಿಗೆ ತೊಟ್ಟಿಲವಿರುವುದರಿಂದ . . . ಉಯ್ಯಾಲೆಗೌರಿ ಎಂದೂ ವಸಂತಕಾಲದಲ್ಲಿ ಬರುವುದರಿಂದ ವಸಂತಗೌರಿಯೆಂದೂ ಚೈತ್ರಗೌರಿಯ ಬೇರೆಬೇರೆ ಹೆಸರುಗಳು (ಭಾಹಬ್ಬ. ೬೨). [ಸಂ. ವಸಂತಗೌರೀ]

**ವಸಂತಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು : ಸೌರಾಷ್ಟ್ರಗೌಳ . . . ವಸಂತಗೌಳ . . . ಮೋಹನಗೌಳವೆಂಬಷ್ಟಗೌಳಂಗಳೇ ಸಾಳಗದ ಮಿಶ್ರರಾಗಂಗಳು (ವಿವೇಕ. ೧೮೯). [ಸಂ. ವಸಂತಗೌಲ]

**ವಸಂತತಿಲಕ** (ನಾ). [ಛಂದ] ಒಂದು ವೃತ್ತದ ಹೆಸರು ; ಒಂದು ಪಾದದಲ್ಲಿ ಹದಿನಾಲ್ಕುಅಕ್ಷರಗಳನ್ನು ಹೊಂದಿರುವ ಶಕ್ವರೀಛಂದಸ್ಸಿನ ಒಂದು ಅಕ್ಷರಸಮವೃತ್ತ : ವ್ಯೋಮೇಂದು ಭಾನುಗಣಯುಗ್ಮದಿನತ್ತಲಕ್ಕುಂ . . . ನಾಮಂ ವಸಂತತಿಲಕಂ (ಛಂದೋಂಬು. ೨-೧೪೬) ; ೧೪ನೆಯ ಶಕ್ವರಿಯಲ್ಲಿ :- (೧) ಅಕ್ಕುಂ ವಸಂತತಿಲಕಂ ತಭಜಂಜಗಂಗಂ (ಕೈಪಿಡಿ. ೮೨). [ಸಂ.]

**ವಸಂತದೂತ** (ನಾ). ೧. ಕೋಗಿಲೆ. ೨. ಮಾವಿನ ಮರ. ೩. ಚೈತ್ರಮಾಸ. ೪. [ಸಂಗೀತ] ಒಂದು ರಾಗದ ಹೆಸರು. [ಸಂ.]

**ವಸಂತದೂತಿ** (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ಹೂವು ; ಇರವಂತಿಗೆ : ಇದಿರೊಳ್ ನನೆದೋಱಿ ವಸಂತದೂತಿಯೆನೆ ತಾನೆ ನೆಗಟ್ದ ಮಾಧವಿಯೆನೆ ಸಂದದಿರ್ಮುತ್ತೆಯ ಪೂಗೊಂಚಲ ಪುದುವಿನೊಳೆಱಗಿದ ಮದಾಳಿಗಳ್ ಮೞೆದ ಪುವೇ (ಆದಿಪು. ೧೧-೧೦೮) ; ನನೆದೋಱಿತ್ತು ವಸಂತದೂತಿ (ಮಲ್ಲಿಪು. ೫-೬) ; ನಿನಗೆ ವಸಂತದೂತಿವೆಸರೊಪ್ಪುವುದೆಂತೆನೆ ಮುಂತೆ ಬಂದು ನೀನೆನಗೆ ವಸಂತನಾಗಮನಮಂ ನೆಱ ಸೂಚಿಸಿ ಕೊಟ್ಟೆಯೆಂದು ನಂದನವನಲಕ್ಷ್ಮಿ ಕೀರರವದಿಂ ಪೊಗಟ್ದಿತ್ತ ಪಸಾಯದಚ್ಚಮುತ್ತಿನ ಪೊಸವಚ್ಚಮಂ ತಳೆದವೋಲದಿರ್ಮುತ್ತೆ ಮುಗುಳ್ತುದೆತ್ತಲುಂ (ಚಂದ್ರಪು. ೭-೪೧). ೨. ಹೆಣ್ಣುಕೋಗಿಲೆ. [ಸಂ. ವಸಂತದೂತೀ]

**ವಸಂತದೂತಿಕೆ** (ನಾ). = ವಸಂತದೂತಿ ೧ : "ಅದಿರ್ಮುತ್ತೆಯದಿರ್ಗಂತಿ ಮೆಂಥೆಯಮೆಂದು ಚೆಲ್ವನಾಂತು ಮಿನುಗುವ ವಸಂತದೂತಿಕೆಗೆ ಪೆಸರಕ್ಕು" (ಕಬ್ಬಿಕೈ. ೧೭). [ಸಂ. ವಸಂತದೂತಿಕಾ]

**ವಸಂತದ್ರುಮ** (ನಾ). ವಸಂತಕಾಲದಲ್ಲಿ ಚಿಗುರುವ ಮರ ; ಮಾವಿನ ಮರ. [ಸಂ.]

**ವಸಂತಪಂಚಮಿ** (ನಾ). ಮಾಘಶುದ್ಧಪಂಚಮಿ ಮತ್ತು ಅಂದು ಆಚರಿಸುವ ಸರಸ್ವತೀಪೂಜೆ : ಮಾಘಶುದ್ಧ ೫ನೆಯ ದಿವಸ ವಸಂತಪಂಚಮಿಯ ಹಬ್ಬ . . . ಸರಸ್ವತೀಪೂಜೆ ಈ ದಿವಸ ನಡೆಯುವುದು (ಭಾಹಬ್ಬ. ೧೭೦). [ಸಂ. ವಸಂತಪಂಚಮೀ]

**ವಸಂತಪೂರ್ಣಿಮಿ** (ನಾ). ವಸಂತಋತುವಿನಲ್ಲಿ ಬರುವ ಹುಣ್ಣಿಮೆ : ಅಂದಿದೊ ವಸಂತಪೂರ್ಣಿಮಿಯ ಭೃಗುವಾರದಾ ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳುವಿಲ್ಲ (ಗೊಲ್ಲಥಾ. ೧೧-೨೭೧). [< ಸಂ. ವಸಂತಪೂರ್ಣಿಮಾ]

**ವಸಂತಪ್ರಿಯ** (ನಾ). ವಸಂತನ ಗೆಳೆಯ ; ಮನ್ಮಥ : ವಿಯೋಗಿಮಥನಕ್ಕೆಂದುಂ ವಸಂತಪ್ರಿಯಂ ಮುಳಿಸಿಂದಾರ್ದಲರಂಬುವೊಯ್ದು ತೆಗೆದಿರ್ಪಂ ಬಿಲ್ಲನುದ್ಯಾನದೊಳ್ (ಜಗವಿ. ೨-೧೬). [ಸಂ.]

**ವಸಂತಬಂಗಾಳ** (ನಾ). [ಸಂಗೀತ] ಒಂದು ರಾಗದ ಹೆಸರು : ನೀಲೋತ್ಪಳಿನಿ . . . ವಸಂತಬಂಗಾಳ ಉಪಾಂಗಮೆಂಬ ಇಪ್ಪತ್ತೆರಡು ಕ್ರಿಯಾಂಗದಿಂದಾದ ರಾಗಂಗಳು (ವಿವೇಕ. ೧೮೮). [ಸಂ. ವಸಂತಬಂಗಾಲ]

**ವಸಂತಭೈರವಿ** (ನಾ). [ಸಂಗೀತ] ಒಂದು ರಾಗದ ಹೆಸರು : ವಸಂತಭೈರವಿ ಶಾಂತಮಲಹರಿ ನಾದರಾಮಶ್ರೀ ಎಂಬವೇ ರಾಮಕ್ರೀಯ ಮಿತ್ರರಾಗಂಗಳು (ವಿವೇಕ. ೧೮೯) ; ವಸಂತಭೈರವಿ ಗೌಳಮನಾ ವೀಣೆಯಲ್ಲಿ ಮುನಿ ಬಾಜಿಸಿದಂ (ವೀರವಿ. ೬-೮೯). [ಸಂ. ವಸಂತಭೈರವೀ]

**ವಸಂತಮಂಟಪ** (ನಾ). ಬೇಸಗೆಯ ದಿನಗಳಲ್ಲಿ ವಿಶ್ರಮಿಸಲೆಂದು ಉದ್ಯಾನವನಗಳಲ್ಲಿ, ಬೀದಿಯ ಬದಿಗಳಲ್ಲಿ ಹಾಗೂ ದೇವಾಲಯಗಳಲ್ಲಿ ರಚಿಸಿರುವ ಮಂಟಪ : (೩). [ವಸಂತ + ಮಂಟಪ]

**ವಸಂತಮಂಡಪ** (ನಾ). = ವಸಂತಮಂಟಪ : ದೇವಾಲಯದ ಹೊರಗಡೆ ಪೂರ್ವದಲ್ಲಿ ವಸಂತಮಂಡಪ, ಮಾಸ್ತಿಕಲ್, ೧೮ ಅಡಿ ಎತ್ತರದ ಚೆನ್ನಾಗಿ ಅಲಂಕರಿಸಿರುವ ದ್ವಾರ ಇವೆ (ಹೊಯ್ಸವಾ. ೯೨). [ಸಂ.]

**ವಸಂತಮಾಲಿಕೆ** (ನಾ). [ಛಂದ] ಅರ್ಧಸಮವೃತ್ತಗಳಲ್ಲಿ ಒಂದು : ವಸಂತಮಾಲಿಕೆ :- ಇದರ ವಿಷಮಪಾದಗಳಲ್ಲಿ ಸಸಜಗಣಗಳೂ ಎರಡು ಗುರುಗಳೂ ಸಮಪಾದಗಳಲ್ಲಿ ಸಭರಯಗಣಗಳೂ ಬರುವುವು (ಕೈಪಿಡಿ. ೮೯). [ಸಂ. ವಸಂತಮಾಲಿಕಾ]

**ವಸಂತಮಾಲು** (ನಾ). ಬೇಸಗೆಯ ದಿನಗಳಲ್ಲಿ ವಿಶ್ರಮಿಸಿಕೊಳ್ಳುವುದಕ್ಕಾಗಿ ಕಟ್ಟಿರುವ ಭವನ : ಈ ಪರಿಯಯಿಂಪುಕಂಪಂ ಸೊಂಪುತಂಪಿನಿಂದಾ ಪರಿ ವಿರಾಜಿಪ ವಸಂತಮಾಲನು ಪೊಕ್ಕು ಭೂಪ ಬಾಣಾಖ್ಯನಾತ್ಮಜೆ ವೃಷಾದೇವಿ ಮಣಿಮಂಚಮುಮನೇರಲೊಡನೆ (ನವಮೋ. ೨೨-೪೫).

[ವಸಂತ + ಮಾಲು$_4$ (< ಮಹಾಲು)]

**ವಸಂತಮಾಸ** (ನಾ). ಚೈತ್ರಮಾಸ ; ಮಧುಮಾಸ : ಬಂದ ಮಾವಿನ ಪೊಸಪೂವಿನೊಳ್ ಪೊರೆದು ಪೊಣ್ಮಿದ [ಕ]ಂಪು ಮೊಗಂಗಳಂ ಚಳಿಲ್ಲನೆ ಕೊಳೆ ಪೊಯ್ಯೆ ತೀಡಿದುದು ತೆಂಕಣ ಗಾಳಿ ವಸಂತಮಾಸದೊಳ್ (ಪಂಪಭಾ. ೫-೩೪) ; ಎಸೆವ ವಸಂತಮಾಸದೆ ವಸಂತಮನಾಂತ ಕುಜಾತಪಲ್ಲವಪ್ರಸರದಿನಾ ವಸಂತಸಮಯಂ ರಂಜಿಸುವಂತಿರಲ್ (ಕಾದಂಪೂ. ೭೦೯).

[ಸಂ.]

**ವಸಂತರಾಗ** (ನಾ). [ಸಂಗೀತ] ಒಂದು ರಾಗದ ಹೆಸರು : ಸೌರಾಷ್ಟ್ರಗೌಳ ಘಳಮಂಜರಿ ಮೇಘರಂಜೀ . . . ತೋಡಿ ಮಕರಂದಿ ವಸಂತರಾಗಂ (ಹಮ್ಮೀ.ರ. ೨-೬೦) ; ವಸಂತರಾಗವು . . . ಯಾವಾಗಲೂ ಹಾಡುವಂತಹುದು (ಚತುಪ್ರ. ೧೩೭). [ಸಂ.]

**ವಸಂತರಾಜ್ಯ** (ನಾ). (ಆಲಂ) ಸುಖ ಮತ್ತು ಸಂತೋಷದಿಂದ ಕೂಡಿದ ರಾಜ್ಯ : ಹರಿಯ ಬಿನ್ನಹವ ಲಾಲಿಸಿ ಕೃಪಾದೃಷ್ಟಿಯಿಂ ಕುರುರಾಜಗೆ ವಸಂತರಾಜ್ಯವಂ ಕೊಟ್ಟು ಶಂಕರನು ಸಕಲೋರ್ವಿಯಂ ಪಾಲಿಸುತ ರಜತಾಚಲದೊಳಗೆಸೆದಿರ್ದನು (ಭಕ್ತಾಚ. ೩-೫೫). [ಸಂ.]

**ವಸಂತವರಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ವಸಂತವರಾಳಿ . . . ನಾಗವರಾಳಿ ಎಂಬವೇ ಸಪ್ತವರಾಳಿಗಳು (ವಿವೇಕ. ೧೮೯). [ಸಂ. ವಸಂತವರಾಲೀ]

**ವಸಂತವಾಡು** (ಕ್ರಿ). ಬಣ್ಣದ ನೀರನ್ನು ಎರಚಾಡು ; ಓಕುಳಿಯಾಡು : ಸತಿ ಪುರುಷರಿಗೆ ನಾಗವಲ್ಲಿಯ ಶಾಸ್ತ್ರವಂ ಮಾಡಿ ವಸಂತವಾಡಿ . . . ಸಜ್ಜೆಗೃಹಕಂ ಕಳುಹಿಸಿ ಸಂತೋಷದಿಂದಿರಲು (ಯನಳ. ೫೭). [ವಸಂತ + ಆಡು$_1$]

**ವಸಂತಸಖ** (ನಾ). = ವಸಂತಪ್ರಿಯ : ಅನಂತರಮೊದರ್ಚಿದ ವಸಂತಸಖಸುಖಪರಮ ಕೋಟಿಯೆನಿಸಿದ ರತಾಂತಸುಖದೊಳಿನಿತಾನುಂ ಬೇಗಮಿರೆ (ಚಂದ್ರಪ್ರ. ೮-೬೯ ವ). [ಸಂ.]

**ವಸಂತಸಮಯ** (ನಾ). ವಸಂತಋತುವಿನ ಕಾಲ; ವಸಂತಮಾಸ : ಪರಿತಾಪಮನೆನಗೆ ನಿಶಾಕರನಾಗಿಸುಗುಂ ವಸಂತಸಮಯಾನುಗತಂ (ಕವಿರಾ. ೩-೩೯) ; ಒಂದುದಿವಸಂ ವಸಂತಸಮಯದೊಳ್ ನಾಮಿರ್ವರುಂ ವನವಿಹಾರನಿಮಿತ್ತಂ ಪೋಗಿ (ಶಾಂತಿಪು. ೪-೯೪ ವ). [ಸಂ.]

**ವಸಂತೋತ್ಸವ** (ನಾ). ವಸಂತಋತುವಿನ ಆಗಮನವನ್ನು ಸೂಚಿಸಲು ಆಚರಿಸುವ ಹಬ್ಬ : ಕೇಳಿ ಕೀರಕೇಳಿ ಪಿಕಾಳಿಕೇಳಿ ಸಮ್ಮದಾಳಿಕುಳಾಂದೋಳಾ ರಾವಾವಿರ್ಭೂತವಸಂತೋತ್ಸವಂ ಪೊಂಪುಳಿವೋಪುದುಂ (ಶಾಂತಿಪು. ೭-೧೪೩ ವ); ಆ ವಸಂತೋತ್ಸವಕೆ ಮಾಡಲಿ ನೇಪುರವನೊತ್ತೆಯನಿರಿಸಿ ತಾನೀ ವನಿತೆ ಗುರುಪೂಜೆಯಂ ಮಾಡಲಿ ದವನದಲ್ಲಿ (ಬಸಪು. ೪೨-೧೧). [ಸಂ.]

**ವಸಗ್ರಂಥಿ** (ನಾ). ಬಟ್ಟೆಯ ಗಂಟು : ಕರದಲ್ಲಿ ತದ್ವಸಗ್ರಂಥಿಯಂ ಪಿಡಿದು ಶಿವಹರಶಂಭು ಸಲಹು ನೀನೆಂಬ ರವದೊಳಗೆ ಮತಕರದೆ ನಡೆತಂದು ಕೈಕೊಳ್ಳಿ ನಿಮ್ಮಮಳವಸ್ತ್ರಂಗಳಂ ಬೇಗನೆನಲು (ಶಿಲಿಚಿ. ೭-೨೦). [ವಸ್ತ್ರ$_2$ + ಗ್ರಂಥಿ]

**ವಸಡು** (ನಾ). ಹಲ್ಲುಗಳಿಗೆ ಆಧಾರವಾಗಿರುವ ಮಾಂಸಖಂಡ ; ಒಸಡು : ಗಟ್ಟಿಯಾದ ಆಹಾರ ಪದಾರ್ಥಗಳನ್ನು ಕೊಟ್ಟರೆ, ಮಗುವು ಅದನ್ನು ಅಗಿದು ಅಗಿದು ಅದರ ವಸಡು ಬಲವಾಗುತ್ತದೆ (ಗೃಹವಿ. ೧೩೫). [< ಒಸಡು]

**ವಸತಿ** (ನಾ). ೧. ವಾಸಮಾಡುವಿಕೆ ; ನೆಲಸುವಿಕೆ ; ವಾಸ್ತವ್ಯ : ಅಶನಕೆ ನಡೆಯಿತು ವಾರಾನ್ನದೇರ್ಪಾಡು ವಸತಿಗೆ ಗೆಳೆಯರ ಬೀಡು (ಇಂಚಾಪ. ೨೭-೨೨). ೨. ವಾಸಮಾಡುವ ಸ್ಥಳ ; ಮನೆ ; ನಿವಾಸ : ಚೈತನ್ಯ ನಿದ್ರಿಸಿರುವೆಡೆಯಿಲ್ಲ ಜಡಲೋಕ ಕಲ್ಲು ಕಡ್ಡಿ ಕಸ ಆದಗರ್ವ ಚೈತನ್ಯವೆಚ್ಚರಲು ಜಂತು ಜಗ ಜಡವೆ ಜೀವದ ವಸತಿ (ಮಂಚುಕ. ೧೦೬). ೩. (ಪ್ರವಾಸದ ಮಧ್ಯೆ) ತಂಗುವಿಕೆ ; ಇಳಿದುಕೊಳ್ಳುವಿಕೆ : ಈ ಹೊತ್ತು ಪ್ರಯಾಗಕ್ಷೇತ್ರದಲ್ಲಿ ಭಾಗೀರಥಿತಟಾಕದ ಮೇಲೆ ವಸತಿಮಾಡುತ್ತಾರೆ (ಮಂಚುಕ. ೨೦೧). ೪. (ಪ್ರವಾಸಿಗರು) ಇಳಿದುಕೊಳ್ಳಲು ತಕ್ಕುದಾಗಿರುವ ಸ್ಥಳಾವಕಾಶ, —ಸ್ಥಳಾನುಕೂಲ : ಆ ಚಾವಡಿಯಲ್ಲಿ ತಂಗಲು ವಸತಿ ಇದೆಯೋ ಎಂದು ಅಲ್ಲಿದ್ದವರನ್ನು ವಿಚಾರಿಸಿದೆವು (ಪ್ರತಾಪ. ೪೫). ೫. ಅನುಕೂಲ ; ಸೌಕರ್ಯ : ಚಿಕ್ಕದೇವರಾಜ ಒಡೆಯರವರು . . . ೧೨ ಸಾವಿರ ಮಗ್ಗದ ಜನಗಳನ್ನೂ ತಂದಿರಿಸಿ . . . ಇಲ್ಲಿ ಆದ ಜವಳಿ ಎಲ್ಲ ಸೀಮೆಗಳಿಗೂ ಹೋಗುವಂತೆಯೂ ಶ್ರೀರಂಗಪಟ್ಟಣದ ಅರಮನೆಗೂ ಬರುವಂತೆಯೂ ನಿಬಂಧನೆ ಮಾಡಿ ಪೇಟೆಯನ್ನು ವಸತಿಮಾಡಿಸಿದರು (ಮಹಾವಂ. I, ೧೧೦). ೬. ರಾತ್ರಿ ; ಇರುಳು : "ತಮಿ, ತಮಿಸ್ರಾ . . . ವಸತಿ:, ವಾಸತೇಯೀ , ಶ್ಯಾಮಾ , ರಾತ್ರಿ: — ಈ ೧೯ ಇರುಳಿನ ಪೆಸರ್" (ಹಲಾಯು. ೧೮-೧೦೬). ೭. ರೀತಿ ; ಬಗೆ : ಬಸುಟ ನಖದಲಿ ಸೀಳಿ . . . ಹೊಸ ರಣವ ಮಾಡಿದನು ಕಾಳಪ್ರಸರಕಾಗಲು ನೋಡಿ ದೇವನ ವಸತಿಗಂಜಿತು ಬ್ರಹ್ಮರುದ್ರಾದ್ಯಮರಗಣವೈದೆ (ಸಂಥವ. ೬-೧೧೭). ೮. ಜಿನಾಲಯ ; ಬಸದಿ : "ಜಿನಗೃಹದಲ್ಲಿಯುಂ ವಸತಿಯೆಂಬುದು" (ಹಲಾಯು. ೧೩೪-೨೧).

ವಸತಿಹೋಗು = ನೆಲಸಲು ಹೋಗು ; ಬಿಡಾರ ಮಾಡು : ಆ ಸಂಸಾರ ಬಯಲಿನ ಒಂದು ಕಡೆಯಿಂದ ಮತ್ತೊಂದು ಕಾಡಿಗೆ ವಸತಿಹೋಗುತ್ತಿದ್ದರು (ಮಲೆನಾ. ೨೦೪). [ಸಂ.]

**ವಸತಿಗೃಹ** (ನಾ). (ಪ್ರವಾಸಿಗರು) ತಂಗುವ ಸ್ಥಳ ; ಬಿಡಾರದ ಮನೆ : ನಮ್ಮ ಮನೆಗೆ ಅದೊಂದೇ ವಸತಿಗೃಹ (ಮಹಾತ್ಮಾ. ೮೫) ; ಸಾಧಾರಣವಾದ ವಸತಿಗೃಹವೊಂದರಲ್ಲಿ ಒಂದೆರಡು ಕೋಣೆಗಳನ್ನು ಬಾಡಿಗೆಗೆ ಗೊತ್ತುಮಾಡಿಕೊಂಡನು (ಪುನರು. ೩೦೯). [ಸಂ.]

**ವಸತೆ** (ನಾ). ಒಡೆತನ ; ಸ್ವಾಮ್ಯ (?) : ಇನ್ನೀ ಮಠಮುಮಂ ಕೆಯ್ಯುಮ ನಾವವಾಂತರ ವಸತೆ ನ್ಯಾಯಂಗಳು ಪುಟ್ಟಿದಡಂ ಸಾಸಿರ್ವ್ವರುಂ ಸ[ದ್]ಧರ್ಮದಿಂ ಪ್ರತಿಪಾಳಿಪರ್ (ಎಂ. XVIII, ೨೦೦-೪೫; 1162).

[IP ಇದು 'ವಸತಿ' ಎಂಬುದರ ಅಪಲಿಖಿತವಿರಬಹುದು]

**ವಸಥ** (ನಾ). = ವಸತಿ ೨ : "ಚಾವಡಿಯು ಮೇರೆಯಾಗರ ವಸದಂ[ಥಂ]" (ಕವಿಕಂ. ೧೩೫) ; ವಸಥಕ್ಕೆಯ್ದಿ ಮಗನ ವದನಮನೀಕ್ಷಿಸಿಯೆರೆವರ್ಗಮರಮಹೀ ರುಹದಂತೊಸೆದಿತ್ತಂ ರಾಜಪ್ರಭರಾಜಂ (ಜಯಕಾ. ೨-೬೦). [ಸಂ.]

**ವಸದಿ** 'ಬಸದಿ' ನೋ.

**ವಸನ** (ನಾ). ೧. ವಾಸಿಸುವಿಕೆ ; ನೆಲಸುವಿಕೆ : 'ವಸಿಸು' ಪರಾ. ೨. ವಾಸಸ್ಥಳ ; ಮನೆ ; ನೆಲೆ. ೩. ಬಟ್ಟೆ ; ವಸ್ತ್ರ : ಬೆಳ್ದಿಂಗಳಂತಿರೆ ತೋಱುತ್ತಿಸೆವುತ್ತರೀಯವಸನಂ ರಾಜೇಂದ್ರಚಂದ್ರಾಂಕನಾ (ಕಾದಂಪೂ. ೨೮) ; ಮೈದೋರೆ ತಾರೆಗಳ್ ನಿಶೆಯ ವಸನದ ಕಾಂತಿಕುಸುಮಗಳ್ (ಚಿತ್ರಾಂಗ. ೨-೩೭). ೪. ಬಟ್ಟೆಯನ್ನು ಧರಿಸುವಿಕೆ. ೫. ನಡುಕಟ್ಟು ; ಡಾಬು. [ಸಂ.]

**ವಸನಛತ್ರ** (ನಾ). ಬಟ್ಟೆಯಿಂದ ಮಾಡಿದ ಛತ್ರಿ : ಕಲಶಕನ್ನಡಿ . . . ಜಲಧಿವಸನಛತ್ರ ಉರ್ವೀಲಲನೆಯರನೀಕ್ಷಿಸುವುದವನಿಪತಿಲಕರುಶ್ಚವಡಿಸುವ ಸಮಯದೊಳು (ಕುಮಾ.ಉ. ೩-೧೦೬). [ಸಂ.]

**ವಸನಬಂಧಿಕೆ** (ನಾ). ಬಟ್ಟೆಗಳನ್ನು ಹೊಲಿದು ಸೇರಿಸುವ ಸಾಧನ ; ಸೂಜಿ : "ಸೂಜಿ . . . ವಸನಬಂಧಿಕೆ [ಪಾಠಾಂ. ನಿ]ಯಕ್ಕು" (ಮಂಗರಾ. ೬೧-೧೯).

[ಸಂ. ವಸನಬಂಧಿಕಾ]

**ವಸನವಿಹೀನ** (ನಾ). ಬಟ್ಟೆಯಿಲ್ಲದವನು ; ದಿಗಂಬರ : ವಸನವಿಹೀನಂ ಕುಟಿಯೊಳಗೆ ಸರ್ಪನಿಂ ಕಟ್ಟುಪಟ್ಟನಂ ಚೋರವಿಭಾವಸುಗಳ ಭಯದಿಂದಾಕ್ರಂದಿಸುವಂ ಕಾನನದೊಳನಿಮಿಷಾಂತ್ಯಕ್ಕಂಶಂ (ಜಾತಕ. ೧೯-೩೭). [ಸಂ.]

**ವಸನಾಂಗ** (ನಾ). [ಜೈನ] ಭೋಗಭೂಮಿಯ ನಿವಾಸಿಗಳಿಗೆ ಬಯಸಿದ ವಸ್ತ್ರಗಳನ್ನು ನೀಡುವ ಕಲ್ಪವೃಕ್ಷ : ಕುಡುಗುಂ ಚಿತ್ರಾವಟ್ ಪಟ್ಟೆಯದವಟ್ಟೆ ಸುವರ್ಣಚೇಲಮುಂ ಶಿವಟಂ ಪೂವಡೆ ಕರ್ಪುರಂ ನೆರೆವಂ ಮಣಲೆಡೆಯಂಟೆ

ರತ್ನಂಗವಸನಮಂ ವಸನಾಂಗಂ(ಶಾಂತಿಪು. ೬-೧೧೧); ವಸನಾಂಗಾತೋದ್ಯಾಂಗಪ್ರಸವಾಂಗ . . . ವಿಭೂಷಣಾಂಗ ದಶಕಲ್ಪಕುಜಂ ಸೊಗಯಿಸುವುವು (ಚಂದ್ರಪ್ರ. ೩-೩೪). 'ದಶಾಂಗ' ಪರಾ. [ಸಂ.]

**ವಸನಾಂಗಕುಜ** (ನಾ). = ವಸನಾಂಗ : ಪಟಿ ಚಿತ್ರವಟಿ ಜೋಗಂ ಪಟೆಯಂ ದೇವಾಂಗಮೆಂಬ ವಸನಂಗಳನೇಂ ಘಟಿಯಿಸುವುವೊ . . . ವಸನಾಂಗಕುಜಂ (ಆದಿಪು. ೫-೩೪). [ಸಂ.]

**ವಸನಾಂಚಲ** (ನಾ). ಬಟ್ಟೆಯ ಕೊನೆ ; ವಸ್ತ್ರದ ಅಂಚು : ಝಳದ ಝೂಡಿಗೆ ಬೆವರಿ ವಸನಾಂಚಲದ ಗಾಳಿಗೆ ಮೊಗವನೆತ್ತಿದರು (ಕುಮಾರವ್ಯಾ. ೧೯-೧೮). [ಸಂ.]

**ವಸನಾಶ್ರಯ** (ನಾ). ಕೊಳೆಬಟ್ಟೆಯಲ್ಲಿ ಹುಟ್ಟಿಕೊಳ್ಳುವ ಒಂದು ಬಗೆಯ ಹೇನು ; ಕೂರೆ : "ವಸನಾಶ್ರಯಂ ಕೂಱೆಯಕ್ಕು" (ಮಂಗರಾ. ೪೯-೧೪). [ಸಂ.]

**ವಸಲೆ** (ನಾ). ಜಮೀನಿನ ತುಂಡು ; ಪಟ್ಟಿ ; ತಾಕು : ಶಂಕುವಿನ ಸಹಾಯದಿಂದ ಕಂಡುಹಿಡಿಯುವ ತ್ರಿಕೋಣ ಚತುಷ್ಕೋಣಗಳಿಗೆ "ವಸಲೆ"ಯೆಂದು ಹೇಳುವುದೂ ಉಂಟು. ವಸಲೆಯೆಂಬುದು "ತಾಕು"ಯೆಂದು ತಿಳಿವುದು (ಭೂಮಿಆ. ೩) ; ವಿಸ್ತಾರವಾದ ಒಂದು ಭೂಮಿಯಲ್ಲಿ ಲಾಂಬಿ ರುಂದಿ ಕಂಡುಹಿಡಿದು ಶಂಕು ಹತ್ತಿಸಿ ಸಣ್ಣಸಣ್ಣ ತ್ರಿಕೋಣ ಚೌಕೋಣಗಳಾಗಿ ವಿಂಗಡಿಸಲ್ಪಡುತ್ತದೆ. ಹಾಗೆ ವಿಂಗಡಿಸಲ್ಪಟ್ಟ ಒಂದು ಸಣ್ಣಸಣ್ಣ ತಾಕಿಗೂ ವಸಲೆಯೆಂಬ ಹೆಸರು (ಭೂಮಿಆ. ೧೩).
[<— ಅರ. ವಸಲೀ ; ಮರಾ. ವಸಲಾ]

**ವಸವಂತ** 'ಬಸಂತ' ನೋ.

**ವಸವೂರ್** (ನಾ). ಒಂದು ಊರಿನ ಹೆಸರು : ಕಣ್ಣು ನಾಟ್ಟೂಮಿಗರ್ಕ್ಕಳುಂ ನಿನ್ನು ವಸವೂರ ಎಱಿದು ಕೊಟ್ಟೆಯಂ ಕೊಳ್ಳಲ್ಲಿ (ಎಕ. VIII, ಸೊರಬ. ೧-೪; 797?); ನಾಡಾಳೆ ಬಿಟ್ಟಗ ಎಱಿಗೆಗೊಳ್ಳಿನಾಡ ನಾಟ್ಟೂಮಿಗರ್ವ್ವಸವೂರುಳ್ಳಾ, ನಾಡ ನಾಟ್ಟೂಮಿಗರ್ (ಎಕ. VIII, ಸೊರಬ. ೫೪೨-೨ ; ಸು. 800). [?]

**ವಸಹಾತು** 'ವಸಾಹತು' ನೋ.

**ವಸಹಾವ್ಯಮಂತ್ರ** (ನಾ). (?) : ವಸಹಾವ್ಯಮಂತ್ರಮಂ ಮೇಣಿಸೆವೋಂ ಹ್ರೀಂ ವಃ ಎನಿಪ್ಪ ಮಂತ್ರದಿನಭಿಮಂತ್ರಿಸಿ ಜಲಮಂ ಮೊಗದೊಳ್ ತಳಿಯೆ ಸಾಧ್ಯ ಮೆಂದಟಿಗೆ ತೆಱೆದೊಡಕ್ಷಿದ್ವಯಮಂ (ಲೋಕೋಪ. ೧೦-೧೦). "ವಾಯುಮಂತ್ರ" (ಲೋಕೋಪ. ೧೦-೧೦ ಟೀಕು). [? + ಮಂತ್ರ]

**ವಸಾ** (ನಾ). ಒಂದು ಅಳತೆಯ ಪ್ರಮಾಣ : ಹದಿನಾರು ಆಣೆ ಅಂದರೆ ೧ ವಿಶ್ವಾಸಿ, ೨೪ ವಿಶ್ವಾಸಿ ಅಂದರೆ ೧ ವಸಾ, ೨೪ ವಸಾ ಅಂದರೆ ೧ ಖಂಡಗ (ಮುಂಬಯ್ಯಾ. ೧೩೦). [<— ಮರಾ. ವಸಾ]

**ವಸಾರೆ₁** (ನಾ). ಹೊರಅಂಗಳ ; ಪಡಸಾಲೆ ; ಜಗಲಿ : ಹಿಂದಿನ ಕಾಲದಿಂದಲೂ . . . ಪಾಠಶಾಲೆಗಳಿದ್ದುವು. ಅವು ಅಲ್ಲಲ್ಲಿ ದೊರೆತ ಮಂಟಪ, ಛತ್ರ, ದೇವಾಲಯ ಪ್ರಾಕಾರ, ಸರ್ಕಾರದ ಖಾಲಿಕಟ್ಟಡದ ವಸಾರೆ ಇಂತಹ ಸ್ಥಳಗಳಲ್ಲಿ ನೆಲಸಿದ್ದುವು (ಮಹಾಮಂ. II, ೫೧) ; ವಸಾರೆಯಲ್ಲಿ ವ್ಯಾಸಪೀಠದ ಮುಂದೆ ಕುಳಿತಿದ್ದ ಸ್ವಾಮಿಗಳು ಅಮ್ಮನ ಹಾಡುಗಳನ್ನು ಕೇಳಿದರು (ಕಥವಿ. ೫೦೫). [<— ತೆಲು. ವಸಾರ, ವಸಾರಾ]

**ವಸಾರೆ₂** (ನಾ). ಒಂದು ಬಗೆಯ ಔಷಧದ್ರವ್ಯ : "ಕಾಂಪಿಲ್ಯಃ, ಕರ್ಕಶಃ, ಚಂದ್ರಃ, ರಕ್ತಾಂಗಃ, ರೋಚನೀ — ೫ ಕಂಪಿಲ್ಲದ ಹೆಸರು, ರೋಚನೀಯೆಂಬುವ ಓಷಧಿ. ಇದನ್ನು ಘಟ್ಟದ ಕೆಳಗೆ ವಸಾರೆಯನ್ನುವರು" (ಸಿದ್ಧಾಂತಿ. ೧೪೬). [<— ಮರಾ. ವಶಾಡೀ]

**ವಸಾಹತ** 'ವಸಾಹತು' ನೋ.

**ವಸಾಹತು, ವಸಹಾತು, ವಸಾಹತ, ವಸಾಹತ್ತು** (ನಾ). (ಬೇರೆ ಕಡೆಗೆ ಹೋಗಿ) ನೆಲಸುವ ಸ್ಥಳ ; ಪಾಳೆಯ ; ಬೀಡು : ವಾಡಿಕೆಯಂತೆ ವಸಾಹತಿನ ಸಂಸಾರಗಳು ಹಾಲುಸಕ್ಕರೆಯಾಗಿದ್ದುವು (ಸಾವಿಸ. ೪೪); ಪೋರ್ಚುಗೀಸರು ಇಂಡಿಯಾ ದಲ್ಲೇ ನೆಲೆಸಿ ಇಲ್ಲಿಯೆ ವಸಾಹತುಗಳನ್ನು ಸ್ಥಾಪಿಸಿಕೊಂಡು ಇರಬೇಕೆಂದು ಅಲ್ಬುಕರ್ಕನ ಆಸೆಯಾಗಿತ್ತು (ಪ್ರವಾಇ. II, ೨೫೯). ವಸಹಾತು : ಈ ತರದ ಹಗೆತನವು ಆಫ್ರಿಕಾ, ಫಿಜಿ ಮೊದಲಾದ ವಸಹಾತುಗಳಲ್ಲಿ ಮೈದೋರಿರುವುದು (ವಿಚಾಮಂ. ೪೬). ವಸಾಹತ : ಈ ವಸಾಹತಗಳು ಕ್ರಮದಿಂದ ರಚಿಸಲ್ಪಟ್ಟಿರಲಿಲ್ಲ (ದಭಾಇ. ೨೪೩). ವಸಾಹತ್ತು : ವಸಾಹತ್ತುನಿಮಿತ್ತವಾಗಿ ಸಂಚರಿಸಿದ್ದ ಪಾಶ್ಚಾತ್ಯರು ಈ ದೇಶದ ವೇದ, ಮತ, ಧರ್ಮ, ಸಾಹಿತ್ಯ ಇತ್ಯಾದಿಗಳ ಬಗ್ಗೆ ಆಗಲೇ ಸಾಕಷ್ಟು ಅಭ್ಯಸಿಸಿ ದ್ದರು (ಪಾಶ್ಚಾವಿ. ೨೨೪). [<— ಅರ. ವುಸ್‌ಅತ್ ; ಹಿಂ. ವಸಅತ್ ; ಮರಾ. ವಸಾಹತ್, ವಸಾತ್, ವಸಾದ್]

**ವಸಾಹತುಗಾರ** (ನಾ). ಬೇರೆಕಡೆಗೆ ಹೋಗಿ ನೆಲೆನಿಲ್ಲುವವನು, — ಬೀಡು ಬಿಡುವವನು : ಆರ್ಯರು ಅಮೇರಿಕೆಯ ಯುರೋಪಿಯನ್ ವಸಾಹತುಗಾರರಂತೆ ಇಲ್ಲಿಯ ಮೊದಲಿನ ಜನಾಂಗವನ್ನು ಸಂಪೂರ್ಣವಾಗಿ ನಾಮಶೇಷ ಮಾಡಲಿಲ್ಲ (ಕರ್ಣಾಪು. ೭೯). [ವಸಾಹತು + — ಗಾರ (< — ಕಾಱ)]

**ವಸಾಹತುಗಿರಿ** (ನಾ). ಬೇರೆಕಡೆಗೆ ಹೋಗಿ ನೆಲೆಯೂರುವಿಕೆ ; ವಸಾಹತನ್ನು ಸ್ಥಾಪಿಸುವಿಕೆ : ಅನೇಕ ಪಾಶ್ಚಾತ್ಯರಾಷ್ಟ್ರಗಳು ತಾವಾಗಿ ವಸಾಹತುಗಿರಿಯ ನಾಶ ವನ್ನು ಮಾಡಿವೆ (ಏಶಿಸಂ. ೨೮). [ವಸಾಹತು + — ಗಿರಿ₂]

**ವಸಾಹತುಷಾಹಿ** (ನಾ). = ವಸಾಹತುಗಿರಿ : ಮಹಾಯುದ್ಧದ ನಂತರ ಏಷ್ಯಾಖಂಡದಲ್ಲೆಲ್ಲಾ ಕೋಲಾಹಲವುಂಟಾಗಿ ಪಾಶ್ಚಾತ್ಯರಾಷ್ಟ್ರಗಳು ತಾವಾಗಿಯೇ ವಸಾಹತುಷಾಹಿಗಳನ್ನು ಧ್ವಂಸಮಾಡಿದುವು(ರೂಢಿ). [<— ಮರಾ. ವಸಾಹತ್‌ಷಾಹೀ]

**ವಸಾಹತ್ತು** 'ವಸಾಹತು' ನೋ.

**ವಸಿ₁** (ನಾ). ಸ್ವಲ್ಪ ; ತುಸು ; ಕೊಂಚ : ವಸಿ ಅಂಬಲಿ ಬಸಗಂಡರೆ ಹೊಟ್ಟೆ ತುಂಬತ್ತೆತೆ? (ಮುಸುಗ. ೧೪೯) ; ನಿಂತಾವ ವಸಿ ಮಾತಾಡೋದೈತೆ (ಚಂಡತೋ. ೪೫).
[< ಒಪ್ಪಚ್ಚಿ]

**ವಸಿ₂** (ನಾ). ಮಂತ್ರ (?) : ಜ್ಞಾನಾರೂಢನಾದಲ್ಲಿ ಮಾನವರನಾಶ್ರಯಿಸಲಾಗದು . . . ಪೂಜೆಗೆ ಸಿಕ್ಕಿ ಬಾರಿಸಲಾಗದು ಸಾಧಕ ವಸಿ ಹೇಳಿ ಸಾವಂತೆ ಮಾಡಲಾಗದು (ತೋಂಟಮಾ. ೯೭-೩೮೩). [<— ತಮಿ. ವಚಿ?]

**ವಸಿಗೆ** 'ಪಸುಗೆ' ನೋ.

**ವಸಿಗೆಗೆಯಿ** (ನಾ). ಹಂಚಿದ ಭೂಮಿ ; ಭಾಗ ಮಾಡಿದ ಭೂಮಿ : ಅನ್ತು ಮೂವತ್ತು ಮತ್ತರೊಳಗೆ ಬಮ್ಮಂಜಗೆ ವಸಿಗೆಯಿ ಮ X X X ಕ[ಮ್ಮಾ]ಱಿಗೆ ಮಾನ್ಯದ X X X ಗೆ X X X ತಿಱುವರು (ಸೌಇಇ. XI-i, ೮೬-೫೧; 1050).
[ವಸಿಗೆ (< ಪಸುಗೆ) + ಕೆಯಿ (< ಕೆಯ್₁)]

**ವಸಿಯಿಸು** 'ವಸಿಸು' ನೋ.

**ವಸಿರ** (ನಾ). ೧. (ಕ್ಷಾರವಾದ ಕಾಳುಗಳನ್ನು ಬಿಡುವ) ಒಂದು ಬಗೆಯ ಸಸ್ಯ ; ಗಜಹಿಪ್ಪಲಿ : "ಕರಿಪಿಪ್ಪಲೀ . . . ವಸಿರಃ — ೫ ಗಜಪಿಪ್ಪಲೀ ಹೆಸರುಗಳು" (ಸಿದ್ಧಾಂತಿ. ೧೩೪). ೨. ಸಮುದ್ರದ ಉಪ್ಪು ; ಕಡಲುಪ್ಪು. [ಸಂ.]

**ವಸಿಷ್ಠ** (ಗು). ೧. ಅಧಿಕ ಶ್ರೀಮಂತಿಕೆಯುಳ್ಳ. (ನಾ). ೨. ಸಪ್ತಋಷಿಗಳಲ್ಲಿ ಒಬ್ಬ ; ವಶಿಷ್ಠ : ವ್ಯಾಸ ಕಶ್ಯಪ ವಸಿಷ್ಠ . . . ನಾರದಪ್ರಮುಖರಪ್ಪ ದಿವ್ಯಮುನಿಪತಿಗಳುಮೇಕಾದಶರುದ್ರರುಂ . . . ಪಾಂಡುರಾಜನುಮಂ ಕೊಂತಿಯುಮಂ ಪರಸಿ (ಪಂಪಭಾ. ೧-೧೪೭ ವ) ; ಏನೆಂದಡಂ ಹರಿಶ್ಚಂದ್ರನೇ ಸತ್ಯಸಂಧಾನನೆಂದಾ ವಸಿಷ್ಠಂ ನುಡಿಯಲು (ಹಚಕಾ. ೨-೧೩) ; ಕುಲಜರೆಲ್ಲರೊಳಗಗ್ರಜನ್ಮನು ಋಷಿ ವಸಿಷ್ಠನಲಾ (ಬಸವಪು. ೫೭-೭೨). ೩. ಪ್ರಜಾಪತಿಗಳಲ್ಲಿ ಒಬ್ಬ. [ಸಂ.]

**ವಸಿಷ್ಠದರ್ಭೆ** (ನಾ). ಒಂದು ಬಗೆಯ ಹುಲ್ಲು : "ಕುಶಂ, ಕುಥಃ, ದರ್ಭಃ, ಪವಿತ್ರಂ — ೪ ದರ್ಭೆಹುಲ್ಲಿನ ಹೆಸರುಗಳು, ವಿಶ್ವಾಮಿತ್ರದರ್ಭೆ, ಬ್ರಹ್ಮದರ್ಭೆ, ವಸಿಷ್ಠದರ್ಭೆ, ತೃಣದರ್ಭೆ" (ಸಿದ್ಧಾಂತಿ. ೧೫೧). 'ಕೌಶಿಕದರ್ಭೆ' ಪರಾ. [ಸಂ. ವಸಿಷ್ಠದರ್ಭ]

**ವಸಿಷ್ಠಸ್ಮೃತಿ** (ನಾ). ಹತ್ತೊಂಬತ್ತು ಧರ್ಮಶಾಸ್ತ್ರಗಳಲ್ಲಿ ಹತ್ತೊಂಬತ್ತನೆ ಯದು ; ವಸಿಷ್ಠನಿಂದ ಉಕ್ತವಾದ ಧರ್ಮಶಾಸ್ತ್ರ : ಮನುಸ್ಮೃತಿ . . . ಗೌತಮಸ್ಮೃತಿ ಶಾತಾತಪಸ್ಮೃತಿ ವಸಿ[ಪಾಠಾಂ. ಶಿ]ಷ್ಠಸ್ಮೃತಿಗಳೆಂಬಿವೇ ಆಯಾಯಾ ನಾಮಧೇಯಮುಳ್ಳವರಿಂದುಕ್ತಮಾದ ಹತ್ತೊಂಬತ್ತು ಧರ್ಮಶಾಸ್ತ್ರಂಗಳು (ಏವೆಕ. ೬).
[ಸಂ.]

**ವಸಿಸು, ವಸಿಯಿಸು** (ಕ್ರಿ). ೧. ನೆಲಸು ; ವಾಸಮಾಡು : ಬಸವನಂ ಕೀರ್ತಿಸುವರೆಡೆಯಲಿ ವಸಿಸಿದಾ ಪ್ರಾಣಗಳಿಗಾದಡೆಯೆಸೆಯದೇ ಶಿವಭಕ್ತಿ

(ಬಸವು. ೭-೨೪); ವಸಿಸಿಯಿರೆ ಹದಿನಾಱುಸಾವಿರವಿಷಮವತ್ಸರವಾಗೆ ಸುರರುಬ್ಬಸದಿ ಹರಿಯನು ಸಾರೆ ಕರುಣಾಕರನು ತಾನಱಿದ (ಸಂಭಪ. ೫-೭೦). ೨. ಜೀವಿಸು ; ಬದುಕು : ಬಸವ ಬಸವೆಂದನಿಶ ಭಜಿಸುತೆ ವಸಿಸಿ ಮೆರೆದಾ ವೀರ ಮಡಿವಳ ಶರಣುಶರಣಾರ್ಥಿ (ಮಡಿಭ. ೬). **ವಸಿಯಿಸು :** ೧. ಪದ್ಮೆಯೆಂಬ ಕೊಳದೊಳ್ ವಸಿಯಿಸಿರ್ಪ ಶ್ರೀಯಾದೇವತೆ ಕಂಡು (ವಡ್ಡಾರಾ. ೧೦೭-೧೮); ಇದಱೊಳ್ ಮಧ್ಯಮಕೂಟದೊಳ್ ವಸಿಯಿಪಂ (ಆದಿಪು. ೧೩-೧೬). [ವಸನ + — ಇಸು]

**ವಸೀಲಿ** 'ವಸೀಲು' ನೋ.

**ವಸೀಲು, ವಶೀಲಾ, ವಶೀಲಿ, ವಶೀಲೆ, ವಸೀಲಿ** (ನಾ). ೧. ಬೆಂಬಲ ; ಸಹಾಯ ; ನೆರವು : "ವಸೀಲು — ಸಹಾಯ" (ಜಾನಕೋ. ೪೪). **ವಶೀಲಾ :** ೨. (ವರ್ಚಸ್ಸುಳ್ಳ ವ್ಯಕ್ತಿಗಳ) ಪ್ರಭಾವ ; ಶಿಫಾರಸ್ಸು : ಸರಕಾರ ನೌಕರನನ್ನು ವಶೀಲಾ ಮಾಡುವದಾಗಿ ಇನಾಂ ಪಡೆಯೋಣ ೧ ಸಂವತ್ಸರ ಬರಿ ಶ್ಮೆದು ಜುಮ್ಮಾನೆ (ಗ್ರಾಮಾಕ. ೧೮೧). **ವಶೀಲಿ :** ೧. ಏನಾದರೊಂದು ಲೆಕ್ಕ ಬಂದಾಗ ನಾನು ನೇರವಾಗಿ ಅಂಕಗಣಿತದ ಬಳಿಗೆ ಹೋಗದೆ ಬೀಜಗಣಿತದ ವಶೀಲಿಯಿಂದಲೆ ಹಗುರಾಗಿ ಕೆಲಸ ಮಾಡಿಸಿಕೊಳ್ಳುತ್ತೇನೆ (ಗಾಳಿಪ. ೧೬೭) ; ಇದಕ್ಕಾಗಿ ಅವನು ಹುಡುಗರ ವಶೀಲಿ ಸಂಪಾದಿಸಿದ್ದ (ಛಲಸಂ. ೧೭). ೨. ಅವರು ಲಕ್ಷ್ಮಿಯ ವಶೀಲಿಯಿಂದ ಬಂದದ್ದರಿಂದ ಅನೇಕರ ಲಕ್ಷ್ಯ ಅವರ ಕಡೆಗೆ ಹೋಯಿತು (ಇತ್ರೀ. ೧೧೯) ; ಮಧ್ವರಾಯರ ವಶೀಲಿಯಿಂದ ಅಲ್ಲಲ್ಲಿ ಕೆಲಸಕ್ಕೆ ಹತ್ತಿದ್ದಾರೆ (ಅನ್ನ. ೪೭). **ವಶೀಲೆ :** ೧. ನಾವು ಲಾಚಾರಿಯಿಂದಾ ವಶೀಲೆ ಇಲ್ಲದೆ, ನಮ್ಮ ಕುಟುಂಬ ಮಕ್ಕಳನ್ನು ಆ ಸಿದ್ಧೇಶ್ವರನ ಬೆಟ್ಟದ ಬೆನ್ನಿನ ಆಶ್ರಯದಲ್ಲಿ ಮೂರು ವರ್ಷ ಮಡಗಿ (ರಾಜೇಂದ್ರ. ೨೪೬). ೨. ವಶೀಲೆ ಇಲ್ಲವೆ ಮುಂಗೈ ಜೋರಿಲ್ಲದೆ ನೌಕರಿ ದೊರೆಯದೆಂಬುದು ಖಂಡಿತವೇ (ಪೋಜೀವ. ೨); ಶೀಲಕೆ ಬೆಲೆ ಕೊಡು, ವಶೀಲೆ ನಿಲ್ಲಿಸು, ಗುಣಗೌರವ ಮಾಡು (ಸೂರ್ಯಪಾ. ೯೯-೯). **ವಸೀಲಿ :** ೧. ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ ಮತ್ತು ಅನ್ಯದೇಶೀಯವೆಂದು ಗುರುತಿಸಲಾಗದ ಶಬ್ದಗಳೆಂದರೆ — ಕಚೇರಿ ... ವಸೀಲಿ (ವಸೀಲಾ), ಕಿಮ್ಮತ್ತು (ಕೀಮತ್)(ಭಾಷಾಶಾ. ೧೬೭). ೨. ಕಲೆಕ್ಟರಸಾಹೇಬರ ವರೆಗೆ ವಸೀಲಿ ಒಯ್ದು ನಿನಗೆ ಕೆಲಸ ಕೊಡಿಸುವ ಜವಾಬ್ದಾರಿಯನ್ನು ನಾನು ಹೊತ್ತುಕೊಳ್ಳುತ್ತೇನೆ (ಅರಯೂ. ೫೦) ; ನನ್ನ ತ್ಯಾಗ, ಸೇವೆ, ಜಾತಿ ಮತ್ತು ವಸೀಲಿಗಳೆಲ್ಲವೂ ಉಪಯೋಗವಾದರೆ ನಾನೇ ಮಂತ್ರಿಯಾಗಿಬಿಡುತ್ತೇನೆ (ಹನ್ನೊಂದ. ೧೬).

ವಶೀಲಿ ಹಚ್ಚು = ಪ್ರಭಾವ ಬೀರು ; ಶಿಫಾರಸುಮಾಡು : ಒಬ್ಬರು ಹಾಗೆ ಅತ್ತಿತ್ತ ಸುಳಿದಾಡಿ ಆ ಕ್ಷೌರದವನ ಕಿವಿಯೊಳಗೆ ಮೆಲ್ಲನೆ ಏನೋ ನುಡಿಯುತ್ತಿದ್ದರು. ಸರಿ. ತಮ್ಮ ತಲೆಯನ್ನು ಶೀಘ್ರವಾಗಿ ಸ್ವೀಕರಿಸಬೇಕೆಂದು ವಶೀಲಿಹಚ್ಚುತ್ತಿರ ಬಹುದು (ಮುಂಗಾಪು. ೮೭).

[<— ಅರ. ಹಿಂ. ವಸೀಲಾ ; ಪಾರ. ವಸೀಲ , ವಸೀಲತ್; ಮರಾ. ವಶಿಲಾ]

**ವಸೀಲುದಾರ** (ನಾ). ಪ್ರಭಾವವುಳ್ಳವನು ; ವರ್ಚಸ್ಸುಳ್ಳವನು : (ಶ).

[<— ಮರಾ. ವಶಿಲೇದಾರ್]

**ವಸು** (ಗು). ೧. ಸಂಪತ್ತಿನಿಂದ ಕೂಡಿದ ; ಶ್ರೀಮಂತವಾದ. ೨. ಸಿಹಿಯಾದ ; ಸವಿಯಾದ. ೩. ಬಿಳಿಯ. ೪. ಒಣಗಿರುವ ; ಶುಷ್ಕವಾದ. (ನಾ). ೫. ಐಶ್ವರ್ಯ ; ಸಂಪತ್ತು : ವಸುವಂ ಸನ್ಮಾರ್ಗದೊಳಾರ್ಜಿಸುವಂ ವರ್ಧಿಸುವಂ (ಪುಷ್ಪಪು. ೩-೯); ವಸುವನಸುವನೊಡಲನೊಡಮೆಯುಮನೆಲ್ಲಮುಮನೊಪ್ಪಿಸು (ರಾಮಾಶ್ವ. ೧೪೨-೨೫). ೬. ಬೆಲೆಯುಳ್ಳ ಮಣಿ ,—ರತ್ನ : ನಿರತಿಶಯವಸು[ಪಾಠಾಂ. ಸ್ತು] ವಸನಮಣಿಭರಣಂಗಳಿಂ ಪೂಜಿಸಿ (ರಾಜಶೇ. ೪-೧೦೨ ವ). ೭. ಚಿನ್ನ ; ಬಂಗಾರ : "ವಸು ರಜತಮಾಗಿರ್ಪ ಧನಮದಕುಪ್ಯ ತದನ್ಯಂ ಕುಪ್ಯಮಕ್ಕು" (ಮಂಗರಾ. ೧೭-೧೬). ೮. ನೀರು. ೯. ವಸ್ತು ; ಪದಾರ್ಥ. ೧೦. ಒಂದು ಬಗೆಯ ಔಷಧೀಮೂಲಿಕೆ. ೧೧. ಸರೋವರ. ೧೨. ಒಂದು ಬಗೆಯ ಮರ ; ಕೊಕ್ಕರೆಮರ : "ವಸು ಚಿನ್ನಧಾರೆ" (ಮಂಗರಾ. ೪೦-೩೨). ೧೩. ದೇವತೆಗಳ ಒಂದು ವರ್ಗ : ಮೇಲೆ ವಿದ್ಯಾಧರ . . . ವಸು ಗಂಧರ್ವ ಭೂತಗಣ . . . ದಿಕ್ಪಾಲತತಿ ನೆರೆದುದು ವಿಮಾನದಲಿ (ಕುವ್ಯಾಅ. ೧೨-೨೪); ದಿಕ್ಪಾಲಕರು ವಸುಗಳು . . . ಆವರಾದರು ಪೂಜಿಸಲಿಬೇಕೀ ಮಹಾಗಣಪತಿಯ (ಗಗತಾ. ೫ ೧೦). 'ಅಷ್ಟವಸು' ಪರಾ. ೧೪. ಕುಬೇರ : ಅಸಮಾಕ್ಷ ನತಪಕ್ಷ ಲಸದಮಳಹಸ್ತ ಧೃತವಸುವಿಶದ ಶಶಿಕಾಂತ ಸುಸಮಸರ್ವಾಂಗ ಗರ್ವಿಸಿದವಿಳದಾನವಪ್ರಸರಾಭ್ರನಿರಸನಶ್ವಸನಮರುದಶನಭೂಷ (ಚೆಬಪು. ೪೮-೧). ೧೫. ಶಿವ. ೧೬. ಅಗ್ನಿ : "ಸಪ್ತಾರ್ಚಿಃ . . . ವಸುಃ . . . ವಹ್ನಿಃ . . . ಹುತಾಶನಃ — ಈ ೪೦ ಕಿಚ್ಚಿನ ಪೆಸರ್" (ಹಲಾಯು. ೧೨-೬೨). ೧೭. ಕಡಿವಾಣ ; ಲಗಾಮು. ೧೮. ದನಕರುಗಳ ಕೊರಳಿಗೆ ಕಟ್ಟುವ ಹಗ್ಗ ; ಕಣ್ಣಿ. ೧೯. ಎತ್ತಿನ ಕೊರಳಿಗೆ ನೊಗವನ್ನು ಸೇರಿಸಿ ಕಟ್ಟುವ ಹಗ್ಗ ; ಜೊತ್ತಗೆ. ೨೦. ಬೆಳಕಿನ ಕಿರಣ ,— ರಶ್ಮಿ : "ಉಸ್ರಃ , ಧಾಮ , ವಸುಃ . . . ಗೋಃ — ಈ ೩೨ ರಶ್ಮಿಗಳ ಪೆಸರ್" (ಹಲಾಯು. ೮-೩೯). ೨೧. ಸೂರ್ಯ. ೨೨. ಬೆಳಕು; ಕಾಂತಿ. ೨೩. ಮುಖ್ಯವಾದುದು. ೨೪. ಬಟ್ಟೆ ; ವಸ್ತ್ರ. ೨೫. ಥಾಲು ; ಗುರಾಣಿ : ಶರಧಿಯಂತಬುಜಾಕ್ಷನಂತೆ ಕೇಸರಿಯಂತೆ ಸರಸಿರುಹದಂತೆ ವಸುಚಕ್ರಪಂಚಾಸ್ಯರಣದುರುರಸೋನ್ನಗ್ನಾಳಿಯಿಂದೆ ಶೋಭಿತವಾಗಿ ಪದೆ ಪದೆಪಿನಿಂ ನಡೆದುದು (ಚೆಬಪು. ೪೧-೫೫). "ರತ್ನ, ಥಾಲು" (ಚೆಬಪು. ಕೋಶ). ೨೬. ಕಾಡು ; ಅರಣ್ಯ. ೨೭. ಹತ್ತಿರ ; ಸಮೀಪ. ೨೮. ಗಾಳಿ. ೨೯. ಪರ್ವತ ; ಬೆಟ್ಟ. ೩೦. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : "ಕರಿ ನಾಗ ವಸುವೆಂಟು" (ಮಂಗರಾ. ೧೦೪-೮); ಜ್ವಾಲೆ ವಾಯು ದಿನೇಶ ಯುಗ್ಮ ಶಶಾಂಕ ಪಾವಕರೆಂಬವರ್ಣೀಳಿಯಿಂ ಬರೆ ವಿಶ್ರಮಂ ವಸುಸಂಖ್ಯೆಯೊಳ್ಕಲೆ . . . ಮಲ್ಲಿಕಾಮಾಲೆಯೆಂಬುದು ನಿಶ್ಚಯಂ (ಛಂದೋಂಬು. ೨-೧೬೮) ; "ಗುಣವಿಟಪ ದೇವಭೇದಂ ಗಣನಾಂಶುಕ ರತ್ನ ಕಿರಣ ನಿಕಟಂ ಸುಸಮೀರಣ ಮುಖ್ಯಂ ಬೆಟ್ಟಂಗಳ್ ಏಣಿಸಲ್ಪನ್ನೊಂದು ನಾಮ ವಸು ಶಬ್ದಂಗಳ್" (ನಾನಾಕಂ. ೪೯); "ಅನಲ ಗುಣಾಂಶು ರತ್ನ ನಿಕಟಂ ವಸು ಪೀಟಕ ಮುಖ್ಯ ವಸ್ತ್ರ ಕಾನನ ಸುರಭೇದ ಸಂಖ್ಯೆ ವಸುವಕ್ಕು" (ನಾನಾರ. ೧೮). [ಸಂ.]

**ವಸುಂಧಪತಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬಿಸೆಯ ಸತ್ತಿಬಿಯೂರ ವಸುನೃಪತಿತನಯ (ಎಕ XVI, ಪಾವುಗ. ೧೨-೧ ; ಸು. 754). [ವಸುಂಧ, + ಪತಿ]

**ವಸುಂಧರೆ** (ನಾ). ೧. ದ್ರವ್ಯವನ್ನು ಹೊಂದಿರುವವಳು ; ಭೂಮಿ : ಮಕುಟಬದ್ಧಾಧೀಶರಾಗಳ್ ವಸುಂಧರೆಯಂ ಪರ್ವಿರೆ ಮೈಯನಿಕ್ಕೆಯುಮುದಾತ್ತೋತ್ಸಾಹದಿಂ ರಾಜಮಂದಿರಮಂ ಪೊಕ್ಕನುದಾರಸಾರವಿಭವಂ (ಆದಿಪು. ೧೨-೧೩೯); ನಿಜಾಬ್ಜಾಲಕ್ಷ್ಮಿಯ ಮೇಲೆ ವಸುಂಧರಾಭಾರಮಂ ನಿಱಿಸಿ ಸುಖದಿನಿರೆ (ಮಲ್ಲಿಪು. ೩-೨೩ ವ). ೨. ರಾಜ್ಯ ; ದೇಶ. [ಸಂ. ವಸುಂಧರಾ]

**ವಸುಕ** (ನಾ). ೧. ಒಂದು ಬಗೆಯ ಮರ ; ಕೊಕ್ಕರೆಮರ. ೨. ಎಕ್ಕದ ಗಿಡ : "ಅರ್ಕಾಹ್ವಃ, ವಸುಕಃ . . . ಅರ್ಕಪರ್ಣಾಃ — ೭ ಎಕ್ಕಗಿಡ" (ಸಿದ್ಧಾಂತಿ. ೧೫೧). ೩. ಒಂದು ಬಗೆಯ ಉಪ್ಪು ; ಸಮುದ್ರದ ಉಪ್ಪು : "ವಸುಕಮುಪ್ಪುಪ್ಪು" (ಮಂಗರಾ. ೪೩-೪೧). [ಸಂ.]

**ವಸುಕರ** (ನಾ). (ಪ್ರಕಾಶಮಾನವಾದ) ಕಿರಣಗಳುಳ್ಳವನು ; ಸೂರ್ಯ : "ನಿಶಿವೈರಿ . . . ವಸುಕರಂ ಪೂಷ್ಣನೆನೆ ಸೂರ್ಯನಕ್ಕುಂ" (ಮಂಗರಾ. ೧೦-೨). [ಸಂ.]

**ವಸುಕಾಂತಿ** (ನಾ). ಒಂದು ಬಗೆಯ ಸಸ್ಯ; ಹೊನ್ನಗನ್ನೆ : "ವಸುಕಾಂತಿ [ಪಾಠಾಂ. ತೆ]ಯೆನೆ ಹೊನ್ನಗೊನ್ನೆ" (ಮಂಗರಾ. ೪೦-೩೩). [ಸಂ.]

**ವಸುಗರ್ಭ** (ನಾ). ಹಿರಣ್ಯಗರ್ಭ ; ಬ್ರಹ್ಮ : ಬಿಸಜಾಕ್ಷನೆಂತಂತೆ ಸರ್ವಮಂಗಳ ಹೃದಯ ವಸುಗರ್ಭನಂತೆ ಮೃದುಮಧುರವಾಣಿವದನೆಸೆನಿಸಿ (ಸಹಮೋ. ೩-೨೦). [ಸಂ.]

**ವಸುಜಾಲಕ** (ನಾ). ಹಳದಿಹೂವುಗಳನ್ನು ಬಿಡುವ ಒಂದು ಬಗೆಯ ಔಷಧೀಸಸ್ಯ : "ವಸುಜಾಲಕಂ ಹೊಮ್ಮುಗುಳು" (ಮಂಗರಾ. ೪೨-೩೯). [ಸಂ.]

**ವಸುಧಾಚಕ್ರ** (ನಾ). ಭೂಮಂಡಲ ; ಭೂವಲಯ : ಚಕ್ರಂ ಪ್ರಸನ್ನದಶದಿಕ್ಚಕ್ರಂ ಮುಂದಾಗಿ ನಡೆಯೆ ನಭದೊಳ್ ರಥಚಕ್ರಾಕ್ರಮಣಕವಿಳವಸುಧಾಚಕ್ರಂ ಪಡೆಗಳ್ಕೆಯಾಗಿ ನಡುಗೆ ಸುರರ್ಕಳ್ (ಶಾಂತಿಪು. ೩-೧೧೨) ; ವಸುಧಾಚಕ್ರಂ ಪದಾಕ್ರಾಂತಿಯಿನದಿರೆ ಭುಜಾಕ್ರಾಂತಿಯಿಂ ದಿಗ್ಗಜಂಗಳ್ ಬೆಸೆಯಿಂ ಪಿಮ್ಮೆಟ್ಟೆ . . . ಯುದ್ಧಂ ದಂತವಕ್ರಾಬ್ಯುತಜನಿತಮಗುರ್ವಾದುದು (ಜಗಎ. ೯-೭೭). [ಸಂ.]

**ವಸುಧಾಜನ** (ನಾ). ಭೂಮಿಯ ಮೇಲೆ ವಾಸಿಸುವ ಜನ : ವಸುಧಾಜನಮನವರತಂ ಸ್ವಸಮೀಹಿತಸಕಲಹಿತಮನೆಸಗುವ ಜಿನನೊಳ್ ವಸುಧೈಕ ಬಾಂಧವಾಖ್ಯೆಯನಸಮೋತ್ಸವದಿಂದೆ ಕೀರ್ತಿಸಿತ್ತಭಿಮತವಂ (ವರ್ಧಪು. ೧೪-೭೩); ವಸುಧಾಜನಮಚ್ಚರಿವಡೆ ವಸುಧಾರಾದಿ ಪ್ರಭೇದಪಂಚಾಶ್ಚರ್ಯಂ ವಸು ಮಿತ್ರಾವನಿಪನೃಪಾವಸಥಾಂಗಣದೊಳ್ ವಿಚಿತ್ರಮಾದತ್ತಾಗಳ್ (ಶಾಂತೀಶ್ವ. ೧೬-೧೦). [ಸಂ.]

**ವಸುಧಾತಳ** (ನಾ). ೧. ಭೂಮಿ ; ಭೂತಳ : ವಸುಧಾತಳದೊಳಗೆಲ್ಲಿಯು ಮಸದೃಶಮಾಗಿರ್ಪ ರೂಪಿನೊಳ್ಪಿನೊಳಾತಂ ವಸುದೇವನಂದದಂತೆಂದೊಸೆದು ನೃಪಂ ನೋಡಿ ಕೂಡೆ ಸಾರಥಿ ಬಂದಂ (ಬಂಹರಿ. ೫-೨೨). ೨. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : ವಸುಧಾತಳಂ . . . ಒಂದಱ ನಾಮಂ (ವ್ಯವಹಾ. ೯-೧). [ಸಂ. ವಸುಧಾತಲ]

**ವಸುಧಾಧಿಪತಿ** (ನಾ). ಭೂಮಿಯ ಒಡೆಯ ; ದೊರೆ : ವಸುಧಾಧಿಪತಿಯ ಕಟಕದೊಳೆಸೆದೊಪ್ಪೆ ಸುವರ್ಣರಚನೆ ಕೇವಣದೊಳ್ ಸೇರಿಸಿದುದಱಿಂದೀಗಳ್ ರಂಜಿಸಿದ ಮಹಾರತ್ನಮೆನಿಸಿದಂ ಕವಿರತ್ನಂ (ಗದಾಯು. ೧-೪೧). [ಸಂ.]

**ವಸುಧಾಮರ** (ನಾ). ಭೂಮಿಯ ಮೇಲಿರುವ ದೇವತೆಯೆಂದು ಭಾವಿಸಲ್ಪಡುವವನು ; ಬ್ರಾಹ್ಮಣ : ಆ ವಸುಧಾಮರಾಗ್ರಣಿಗೆ ಕಾಶ್ಯಪಿಯಿಂಬೊಳು ದಾತ್ರಕೀರ್ತಿಲಕ್ಷ್ಮೀವಿಭವಾಭಿರಾಮೆ (ಸುಕುಮಾ. ೨-೪) ; ರಘುರಾಮಂ ಪುರದೊಡೆಯನ ಖಿಲವಸುಧೆಗೆ ಕಲ್ಪಾರಾಮಮೆನೆ ಕೊಟ್ಟಪಂ ವಸುಧಾಮರ ನೀಂ ಪೋಗಿ ಬೇಡಿಕೊಳ್ ಕಸವರಮಂ (ಪಂರಾಮಾ. ೭-೧೩೬). [ಸಂ.]

**ವಸುಧಾಯೋಗ** (ನಾ). [ಜ್ಯೋತಿ] ಜಾತಕನಲ್ಲಿ ಕಂಡುಬರುವ ಭೂಮಿಯನ್ನು ಹೊಂದುವ ಯೋಗ ,—ಅದೃಷ್ಟ : ಚಂದ್ರನಿಂದ ಮುಂದೆ ೩ ರಲ್ಲಿ ೭ರಲ್ಲಿ ೧೧ನೆಯ ರಾಶಿಯಲ್ಲಿ ಶುಭಗ್ರಹವಿರಲು ವಸುಧಾಯೋಗಂ, ಬಹುತೆರದ ಭೂಮಿಲಾಭಮಕ್ಕುಂ (ಆಯುಟೀ. ೨೫-೫). [ಸಂ.]

**ವಸುಧಾರೆ** (ನಾ). ೧. ವಸುಗಳಿಗೆ ಎರೆಯುವ ತುಪ್ಪದ ಧಾರೆ. ೨. ಹೋಮಕ್ಕೆ ತುಪ್ಪವನ್ನು ಎರೆಯುವ ಪಾತ್ರೆ. ೩. ಕುಬೇರನ ರಾಜಧಾನಿ. ೪. ಗಂಗಾನದಿ. ೫. [ಜೈನ] ಪಂಚಾಶ್ಚರ್ಯಗಳಲ್ಲಿ ಒಂದು ; ಚಿನ್ನದ ಮಳೆ ಸುರಿಯುವುದು ; ಸುವರ್ಣವೃಷ್ಟಿ : ವಸುಧಾರೆ ನಾಡೆಯುಂ ಕಣ್ಗೆಸದಳಮಾಯ್ತು (ಆದಿಪು. ೧೦-೨); ವಸುಧಾರೆ ಕಱೆಯೆ ಧರಣಿಗೆ ವಸುಮತಿವೆಸರಾಯ್ತು ರತ್ನವೃಷ್ಟಿಗಳಿಂ ಚಿತ್ರಿಸೆ ಚಿತ್ರಮಾದುದು (ಮಲ್ಲಿಪು. ೧೧-೭೪). [ಸಂ. ವಸುಧಾರಾ]

**ವಸುಧಾವಳಯ** (ನಾ). = ವಸುಧಾಚಕ್ರ : ಭಾವಿಸಿದ ಜನಪದಂ ವಸುಧಾವಳಯ ವಿಲೀನವಿಶದವಿಷಯವಿಶೇಷಂ (ಕವಿರಾ. ೧-೩೬). [ಸಂ. ವಸುಧಾವಲಯ]

**ವಸುಧೆ** (ನಾ). ೧. ಸಂಪತ್ತಿನಿಂದ ಕೂಡಿರುವಂಥದು ; ಭೂಮಿ : ವಸುಧೆಯನೇನಿವಳ್ದಿರರುಣಾಬ್ಜದಲಂಗಳೊಳಟ್ಟಿಯಿಂದಮರ್ಚಿಸಿದರೋ ಪೇೞಿಮೆಂಬಿ ನೆಗಮುಣ್ಮುವ ಪ್ಪಾದತಲಂಗಳೊಂದು ಕೆಂಪೆಸೆವಿನಂ (ಆದಿಪು. ೭-೨೨) ; ವಸುಧಾಂಗನೆ ಮೇಲ್ಗೊಂಡಲೊ ಪೊಸಪಸುರ್ವಟ್ಟೆಯ ವಿಳಾಸದಿಂದೆಸೆವ ದುಕೂಲಸಿಚಯಕಮನೆನೆ ತನ್ನದಿಯೆಸೆದುದು (ಜಗವಿ. ೮-೯). ೨. ರಾಜ್ಯ ; ದೇಶ. ೩. ನೆಲ ; ಜಮೀನು. ೪. ಸ್ವರ್ಗ.

ವಸುಧೈಕಕುಟುಂಬಕ = ಜಗತ್ತನ್ನು ಒಂದೇ ಕುಟುಂಬವೆಂದು ಭಾವಿಸುವವನು ; ಒಂದು ಬಿರುದು : ಮುನಿಪಸಹಸ್ರಭೋಜನಕರಂ . . . ಕವಿ ವಾದಿ ವಾಗ್ಮಿ ಗಮಕಂ ವಸುಧೈಕಕುಟುಂಬಕಂ ಸಭಾಜನಸುಜನೈಕಭಾಜನಮುಖಿಂ ಜಿನಚಂದ್ರಮುನೀಂದ್ರನುರ್ವಿಯೊಳ್ (ಶಾಂತಿಪು. ೧-೨೬). ವಸುಧೈಕಕುಡುಂಬಕ = **ವಸುಧೈಕಕುಟುಂಬಕ** : ಪರಮತಘೋನಿಧಾನ ವಸುಧೈಕಕುಡುಂಬ[ಕ] (ಎಕ. II, ೬೯-೫೪; ಸು. 1100). ವಸುಧೈಕಬಾಂಧವ = ಜಗತ್ತಿಗೆಲ್ಲಾ ಒಬ್ಬನೇ ಬಂಧುವಾದವನು ; ಒಂದು ಬಿರುದು : ವಸುಧೈಕಬಾಂಧವ ಶ್ರೀಕರಣದ ರೇಚಮಯ್ಯದಣ್ಣಾಯಕರು ಶಾನ್ತಿನಾಥದೇವರ ಪ್ರತಿಷ್ಠೆಯಂ ಮಾಡಿ ಧಾರಾಪೂರ್ವ್ವಕಂ ಕೊಟ್ಟರು (ಎಕ. II, ೩೮೦-೨; ಸು. 1200). ವಸುಧೈಕಮಲ್ಲ = ಜಗತ್ತಿಗೆಲ್ಲಾ ಒಬ್ಬನೇ ಆದ ಪರಾಕ್ರಮಿ ; ಒಂದು ಬಿರುದು : ತ್ರಿಭುವನಮಲ್ಲನೆನಿಸಿದ ವಿಕ್ರಮಾದಿತ್ಯದೇವನಾತನ ತಮ್ಮಂ ವಸುಧೈಕಮಲ್ಲ ನೆನಿಸಿದಯ್ಯಣದೇವಂ (ಸೌಇಇ. XX, ೧೯-೨೫; 1015). [ಸಂ. ವಸುಧಾ]

**ವಸುಧೇಶ** (ನಾ). = ವಸುಧಾಧಿಪತಿ : ವಸುಧೇಶನೊತ್ತಿದಂಬುಪ್ರಸನ್ನಧಾರೆಗೆ ಮೃಗಾಕ್ಷಿ ವದನಮನಿರದೊಡ್ಡಿಸೆ ಧಾರೆ ಚಿಕುರದೊಳ್ ನಿಲೆ ಪೊಸತಲರ್ದ ಸನಾಳಕಮಳಮೆನಿಸಿದುದು ಮೊಗಂ (ಶಾಂತಿಪು. ೮-೩೭) ; ಬಿಸಜಾರಿ ಹರಿಯೊಳಿರೆ ವೀಕ್ಷಿಸೆ ಕನಕಾದಿಗ್ರಹಂ ಮಹೀನಾಥಂ ಜೋಯಿಸಿಗಂ ವಿತ್ತಾಧೀಶಂ ವಸುಧೇಶಂ ನಾವಿದಂ ನರೇಶ್ವರನಕ್ಕುಂ (ಜಾತತಿ. ೨೦-೫). [ಸಂ.]

**ವಸುಭಟ** (ನಾ). ಒಂದು ಬಗೆಯ ಗಿಡ : ರಸವುಂಟಂಗಡಿಯಲ್ಲಿ ಕಿಸುವುಂಟು ಸಾಲೆಯಲಿ ವಸುಭಟನು ಎಂಬ ಗಿಡನುಂಟು ವಾದಿಗಳು ಹಸಿದರೇಕೆಂದ (ಸರ್ವಜ್ಞ. ೧೯೬೧). [< ಸಂ. ವಸುಭಟ್ಟ]

**ವಸುಮಣಿ** (ನಾ). ಹೊಳೆಯುವ ಮಣಿ ,— ರತ್ನ : ವಸುಮಣಿಯಂ ತೈಜಸದಿಂದೆಸೆವ ಸುವಸ್ತುಂಗಳಧಿಕಸೌಗಂಧಂಗಳ ಪ್ರಸರದ ಪಸರಂ ವಿಕ್ರಯವಸರಂ ಮೆಱೆದಿರ್ಪವು (ನನ್ನಚಾ. ೨-೨೫). [ಸಂ.]

**ವಸುಮತಿ** (ನಾ). ೧. = ವಸುಧೆ ೧ : ಹರಂ ತೊತ್ತುಗೊಂಡನೆಂಬ ಕೌತುಕದ ಪೆಸರು ವಸುಮತಿಯಂ ತೀವೆ (ನಂಚರಿ. ೮-೧೯) ; ವಿಷಯಲಂಪಟರಕ್ಷ್ಲೀಲಾವ್ಯಸನಕೋಸುಗ ಪೊತ್ತೆಯಿಟ್ಟರು ವಸುಮತಿಯನು (ಕುವ್ಯಾಅ. ೧೬-೧೧). ೨. ದೇಶ. ೩. ಶ್ರೀಮಂತ ಹೆಂಗಸು. ೪. ಲೋಕದ ಜನ : ಪಸರಿಸೆ ಜರಾಯುಪಟಲಂ ಪಸುಗೂಸು ಗಳೊದಲೊಳವನಗಲ್ಚುವ ಮತಿಯಂ ವಸುಮತಿಗಱಿಪಿ ಮಹಾತ್ಮಂ ಪ್ರಸೇನ ಜಿನ್ನಾಮಧೇಯಮಂ ಪ್ರಕಟಿಸಿದಂ (ಆದಿಪು. ೬-೬೫) ; ಅವನೀಶ್ವರನಾಗಳ್ . . . ಮೆಱೆದಂ ತಣಿವನ್ನಮಿತ್ತು ವಸುಮತಿಗೆ ವಸ್ತ್ರಭೂಷಾವಳಿಯಂ (ಪಂರಾಮಾ. ೩-೧೦೩). [ಸಂ. ವಸುಮತೀ]

**ವಸುಮತೀಗೀರ್ವಾಣ** (ನಾ). = ವಸುಧಾಮರ : ಚವುಷಷ್ಟಿಕಳಾನ್ವಿತ ವಸುಮತೀಗೀರ್ವಾಣರುಂ (ಕಇಅ. ೯೪-೭೫-೨೫; 1124). [ಸಂ.]

**ವಸುಮತೀಪತಿ** (ನಾ). = ವಸುಧಾಧಿಪತಿ : ವಸುಮತೀಪತಿ ಬಳಿಕಲತಿಸಂತಸದ ಲಾತ್ಮಜೆಗವಿಲವಿಭವದಿ ಹೆಸರನಿಟ್ಟನು ಮಾಯೆಯೆಂಬ ನವೀನನಾಮವನು (ಪ್ರಭುಲಿ. ೩-೨೪). [ಸಂ.]

**ವಸುಮದ** (ನಾ). ಐಶ್ವರ್ಯದಿಂದುಂಟಾಗುವ ಗರ್ವ ಧನಮದ : ಮೃಗಗಣಮೆ ಸುಖಂ ಬಾಟ್ಟುಂ ಸೊಗಯಿಸುವ ವನಾಂತರಾಳದೊಳ್ ಬಹುತೃಣದೊಳ್ ಬಗೆದಳಿಪಿ ಸುಟಿದು ನೋಡದೆ ಮೊಗಮಂ ವಸುಮದವಿರಾಮಕಲುಷಾಯತರಾ (ಕವಿರಾ. ೩-೧೩೯). [ಸಂ.]

**ವಸುವಿಭೇದಕ** (ನಾ). ಚಿನ್ನವನ್ನು ಎಳೆಎಳೆಯಾಗಿ ಸೀಳುವವನು : ಅಕ್ಕಸಾಲಿಗ ; ಚಿನಿವಾರ : ಮಸಗಿ ಮುಂದಣ ಬಡಗಿ ಕಮ್ಮರ ವಸುವಿಭೇದಕ ತಾಮ್ರಮರ್ದನ. . . ಎಸೆವ ಹರದರ ಕೇರಿಗಳಲುಬ್ಬಿಸಿದನುಬ್ಬೆಱಿದಬ್ಬರಿಸಿ ಕಪಿ ಹವ್ಯವಾಹನನ (ತೊರರಾ. ೫-೮-೫೨). [ಸಂ.]

**ವಸುವಿರಹಿತ** (ನಾ). ೧. ಐಶ್ವರ್ಯವನ್ನು ತ್ಯಜಿಸಿದವನು ,—ತೊರೆದವನು. ೨. ಕಿರಣರಹಿತನಾದವನು. ೧,೨ : ವಸುವಿರಹಿತನಂಬರವಂ ಬಿಸುಟೆಯ್ದಿದನಾತ್ಮ ಬಂಧುಚಕ್ರದೊಳಟಲರ್ವಿಸೆಯಸ್ತಸಮಯರವಿಯಂತೆ ಸಚಿವನಾ ನಗಮನಪರಶೋಭಾ ಪರಮಂ (ಪಾರ್ಶ್ವಪು. ೪-೪೯). [ಸಂ.]

**ವಸುವೀರ್ಯ** (ನಾ). ಬಂಗಾರವನ್ನು ರೇತಸ್ಸಾಗಿ ಉಳ್ಳವನು ; ಅಗ್ನಿ : "ವಸುಸಿತೇತರಗತಿ . . . ವಸುವೀರ್ಯನಾಶುಶುಕ್ಷಣಿ ವಹ್ನಿ ಶಿಖಿ . . . ಶುಚಿ ವಿರೋಚನನೆನಿಕ್ಕುಂ" (ಮಂಗರಾ. ೧೪-೬). [ಸಂ.]

**ವಸುಹರ** (ನಾ). ಧನಹಾನಿ ; ದ್ರವ್ಯನಾಶ : ಕೂರಲೆವೇೞ್ಟುದು ಸತಿಯರ್ ಕೂರದೊಡವರಿಂದ ವಸುಹರಂ ವಸುಹರಮಿನ್ನಾರೈವಡುಱಿದ ಸಾಹಸ ಯಾರಳವೊ ವಿಹಿತವಾಕ್ಯಮಂ ಕೇಳ್ದಱಿಯಾ (ಮದತಿ. ೧-೭೨). [ಸಂ.]

**ವಸುಹೀನ** (ನಾ). ಐಶ್ವರ್ಯವಿಲ್ಲದವನು ; ಬಡವ : ವಸುಹೀನಂ ದುಶ್ಶಿಕ್ಷಂ ವ್ಯಸನಯುತಂ ದೇಶಕಾಲಬಲರಹಿತಂ . . . ಅನ್ಯಾಯಿಯೆನಿಪ ನರನೊಳೆಂದುಂ ವಿಜಿಗೀಷುಗಳಪ್ಪ ಮಹೀಭುಜರೆಂದುಂ ಸಂಧಿಮಾಡರ್ (ಪಂಚತಂ. ೨೨೧-೧೧). [ಸಂ.]

**ವಸೂಲ್** 'ವಸೂಲು' ನೋ.

**ವಸೂಲ್‌ಬಾಕಿ** 'ವಸೂಲುಬಾಕಿ' ನೋ.

**ವಸೂಲಾತಿ** (ನಾ). ತೆರಬೇಕಾದ ಹಣವನ್ನು ವಸೂಲುಮಾಡುವುದು : ಈ ಸೈನ್ಯವನ್ನು ರೆವಿನ್ಯೂವಸೂಲಾತಿಕೆಲಸದಲ್ಲಿ ಉಪಯೋಗಿಸಬಾರದು (ಚಾಮುವಂ. ೨೬೬).

[<— ಮರಾ. ವಸೂಲಾತಿ]

**ವಸೂಲಿ** 'ವಸೂಲು' ನೋ.

**ವಸೂಲು, ವಸೂಲ್, ವಸೂಲಿ, ವಸೂಲ್ಲು** (ನಾ). ಕೊಟ್ಟ ಸಾಲದ ಹಣ, ವಸ್ತು ಅಥವಾ ತೆರಿಗೆ ಬಾಕಿ ಮುಂತಾದುವನ್ನು (ಒತ್ತಾಯದಿಂದ) ವಾಪಸ್ಸು ಪಡೆಯುವುದು : ಹೋದ ತಿಂಗಳು ನಿನಗೆ ಕೊಟ್ಟ ಸಾಲವೇ ವಸೂಲು ಆಗದೆ ನಿಂತಿದೆ (ರೂಢಿ). **ವಸೂಲ್** : ನಿನಗೆ ಕೊಟ್ಟ ದುಡ್ಡು ಕೊನೆಗೂ ವಸೂಲ್ ಆಗಲೇ ಇಲ್ಲ (ರೂಢಿ). **ವಸೂಲಿ** : ವಸೂಲಿಯು ಮುಗಿದದ್ದೇ ಕಾಣುತ್ತಿರಲಿಲ್ಲ (ಹುಟ್ಟಹ. ೫); ಹೊಲದ ವಸೂಲಿಯ ಕೆಲಸವನ್ನು ತಂದೆ ಬದುಕಿ ಇರುವವರೆಗೆ ಅವರೇ ಮಾಡುತ್ತಿದ್ದರು (ಜನಜೀ. ೩೨). **ವಸೂಲ್ಲು** : ಸುತ್ತೂರುಮಠದ ವಡೆರ ಮೂಲಮತ್ರವಂನ್ನು ಅಪ್ಪಹರ್‍ಸಿಕೊಂಡಿರುವಂತ್ಹಾದ್ದಂನ್ನು ವಿಚಾರಣೆ ಮಾಡಿ ತಂಮ್ಮ ವಡವೆ ತಾಉ ವಸೂಲ್ಲು ಮಾಡಿಕೊಳುವಲ್ಲು (ಮೈಅರ. ೧೯೩೦, ೪೩-೧೬ ; 1812).

ವಸೂಲಾಗು, ವಸೂಲಿಯಾಗು = ಬರಬೇಕಾದ ಹಣ ಅಥವಾ ಪದಾರ್ಥಗಳು ವಾಪಸ್ಸು ಬರು : ಅವರಿಂದ ವಸೂಲಾದಂಥ ಹಣವನ್ನು ನಮಗೆ ಕೊಡಿ (ರಾಜೇಂದ್ರ. ೯) ; ಹಾಗೆ ಕೊಟ್ಟಾಗ ಮಾತ್ರ ಸಾಲ ವಸೂಲಿಯಾಗದೆ ಹೋಯಿತು (ಮುಂಗಾಮು. ೬೧). ವಸೂಲು ಮಾಡು, ವಸೂಲಿ ಮಾಡು, ವಸೂಲ್ಮಾಡು, = ಬರಬೇಕಾದ ತೆರಿಗೆಯ ಹಣವನ್ನು ಅಥವಾ ಇತರ ಪದಾರ್ಥಗಳನ್ನು ಹಿಂದಕ್ಕೆ ಪಡೆದುಕೊಳ್ಳು : ಇಲ್ಲಿಗೆ ಬರುವ ಸಾಮಾನುಗಳ ಮೇಲೆ ರಾಜನ ಕಡೆಯವರು ಸುಂಕ ವಸೂಲುಮಾಡುತ್ತಾರೆ (ಪ್ರವಾ. II, ೨೬೫); ವಿಶೇಷಸಂದರ್ಭಗಳಲ್ಲಿ ಮಾತ್ರ ಪ್ರಜೆಗಳಿಂದ ಹಣ ವಸೂಲಿಮಾಡುತ್ತಿದ್ದರು (ಗಲಿಪ್ರ. ೨೧) ; ನಮ್ಮೂರಿನಲ್ಲಿ ಚಂದಾಹಣವನ್ನು ವಸೂಲ್ಮಾಡಲು ನನ್ನನ್ನು ಬೇಡಿಕೊಂಡಿದ್ದಾರೆ (ರಾಯಕ. ೫೧).

[<— ಅರ. ವಸೂಲ್, ವುಸುಲ್; ಹಿಂ. ವಸೂಲ್, ವಸೂಲೀ; ಮರಾ. ವಸೂಲ್]

**ವಸೂಲುಬಾಕಿ, ವಸೂಲ್‌ಬಾಕಿ** (ನಾ). ೧. ಹಣ ಅಥವಾ ದವಸವನ್ನು ಸಲ್ಲಿಸಬೇಕಾದಲ್ಲಿ ಸಂದಾಯವಾಗದೆ ಉಳಿದ ಬಾಕಿ :(೩). **ವಸೂಲ್‌ಬಾಕಿ** : ೨. ಹಳೆಯ ಮತ್ತು ಹೊಸಪದ್ಧತಿಗಳಿಗನುಗುಣವಾಗಿ ಪ್ರತಿ ಹಿಡುವಳಿದಾರನಿಗಿರುವ ಸಮಗ್ರ ಹಿಡುವಳಿಯ ವಿವರಣೆಗಳನ್ನೊಳಗೊಂಡ ನಿರೂಪಣೆಯ ತಖ್ತೆ : (ರೈಸ್‌ಗೆ. II, ೫೬೫). [<— ಮರಾ. ವಸೂಲ್‌ಬಾಕೀ]

**ವಸೂಲ್ಲು** 'ವಸೂಲು' ನೋ.

**ವಸೆ** (ನಾ). ನೆಣ ; ಕೊಬ್ಬು : ವೃಕಸೂಕರಮೃಗವೃಷಜಂಬುಕವಸೆಯಂ ಪಂಚಪಲ್ಲವಪ್ರಯುತಂ ಕಾಸಿ (ಲೋಕೋಪ. ೬-೨೬) ; ಕರುಳಿನ ಕುಸುರಿಗಳ ತಲೆಮಿದುಳ ಮೆತ್ತಿಗೆ ವಸೆಯ ತೊರಳೆಯ ತೊಂಗಲಲಿ ರಂಜಿಸಿತು ರಣಭೂಮಿ (ಕುವ್ಯಾಕ. ೧೯-೨೦). [ಸಂ. ವಸಾ]

**ವಸ್ತ$_{1}$** (ನಾ). ೧. ವಸ್ತು ; ಪದಾರ್ಥ : ಅಲೌಕೀಕವಸ್ತವೊ ಅಮಂದನಂದಾನೊ ಮೂಲಾಧಾರನೊ ಸಕಲಗುಣಪರಿಪೂರ್ಣನೊ (ತೀರ್ಥಮ. ೨೩-೩); ವಸ್ತ ಮುಂದಿಟ್ಟಿರಲು ವಶಮಾಡಿಕ್ಕೊಳ್ಳದೆ ಅಸ್ತಮಾನವಿಡಿದು ಬಳಲಿ ಸೊರಗಿದಂತೆ (ವಿಸಾಸು. ೪೭-೨). ೨. ಚಿನ್ನ, ಬೆಳ್ಳಿ ಮುಂತಾದುವುಗಳಿಂದಾದ ಒಡವೆ, —ಆಭರಣ : ನಮ್ಮ ದೇಶದವರು ಚಿನ್ನದ ವಸ್ತಗಳನ್ನು ಮಾಡಿಸಿ ಇಟ್ಟುಕೊಳ್ಳುತ್ತಾರೆ (ಮುಂಬಯಿ. ೪-೧೦೨); ಈ ಬಟ್ಟೆ, ಈ ವಸ್ತ ಎಲ್ಲಾ ನಿನಗಂತೆ ಅವ್ವ! (ಎರಸಿ. ೭೦).

[< ಸಂ. ವಸ್ತು./ ಮರಾ. ವಸ್ತ್]

**ವಸ್ತ$_{2}$** (ನಾ). ೧. ವಾಸಿಸುವ ಸ್ಥಳ ; ನಿವಾಸ ; ಮನೆ. ೨. ಗಂಡುಆಡು ; ಮೇಕೆ. [ಸಂ.]

**ವಸ್ತಕಾರ** (ನಾ). ಚಿನ್ನ, ಬೆಳ್ಳಿಗಳಿಂದ ಮಾಡಿದ ಒಡವೆ, —ಆಭರಣ : ಜಾತಿಯ ತೆರುಹು ೯ ವರಹ ಚಿಂನ ೫ ವರಹ . . . ಧರ್ಮ್ಮದ ಮಾಂತಣಿಗೆ ಚಿಂನ ೭ ವರಹ ವಸ್ತಕಾರ ೭೦ (ಎಕ. IV (R), ಎಳಂದೂ. ೨-೧೬ ; 17ನೆಯ ಶತಾ.). 'ವಸ್ತುಗಾರ' ಪರಾ.

[< ವಸ್ತ$_{1}$]

**ವಸ್ತಗಾರಪೆಟ್ಟಿಗೆ** (ನಾ). (ಮದುವೆಯ ಸಂದರ್ಭದಲ್ಲಿ ಗಂಡಿನವರು ಹೆಣ್ಣಿಗೆ ಕೊಡುವ) ಒಡವೆ ಮತ್ತು ಉಡುಗೆ ತೊಡುಗೆಗಳಿರುವ ಪೆಟ್ಟಿಗೆ : ವಸ್ತಗಾರಪೆಟ್ಟಿಗೆ ಬೂವ್ವದ ಪೆಟ್ಟಿಗೆ ಅಡ್ಡಪೆಟ್ಟಿಗೆ ಇವುಗಳನ್ನೂ ಬೀದಿಯಲ್ಲಿ ಮೆರವಣಿಗೆ ಮಾಡಿಸಿ ಹೆಣ್ಣಿನ ಮನೆಯಲ್ಲಿಟ್ಟರು (ಹುಟ್ಟಹ. ೧೦) ; ವಸ್ತಗಾರಪೆಟ್ಟಿಗೆ, ಬುವ್ವದ ಪೆಟ್ಟಿಗೆ, ಅಡ್ಡಪೆಟ್ಟಿಗೆ ಇವುಗಳ ಮೆರವಣಿಗೆ ಆಗುತ್ತದೆ. ಈ ಪೆಟ್ಟಿಗೆಯಲ್ಲಿ ಗಂಡಿನ ಕಡೆಯವರು ಹೆಣ್ಣಿಗೆ ಕೊಡಬೇಕಾದ ಎಲ್ಲಾ ಉಡುಗೆರೆಗಳನ್ನೂ ಇಟ್ಟಿರುತ್ತಾರೆ (ಹಳ್ಳಿಬಾ. ೬೧). [ವಸ್ತ$_{1}$ + < ಆಗಾರ + ಪೆಟ್ಟಿಗೆ]

**ವಸ್ತಾದ** (ನಾ). ೧. ವಿಶೇಷವಾಗಿ ಗಾಯನ, ನರ್ತನ ಅಥವಾ ವ್ಯಾಯಾಮವನ್ನು ಕಲಿಸುವ ಗುರು, —ಶಿಕ್ಷಕ. ೨. ಪಳಗಿಸ ಬಲ್ಲವನು ; ತರಬೇತು ಕೊಡತಕ್ಕವನು : ಕೆಲವು ಜಾತಿಯ ಕುದುರೆಗಳನ್ನು ವಸ್ತಾದರು ಮಾತ್ರವೆ ಪಳಗಿಸಬಲ್ಲರಂತೆ (ಜ್ವಾಲಾಮೇ. ೩). ೩. ಪರಿಣಿತ ; ನಿಷ್ಣಾತ : ಈ ಯಂತ್ರವನ್ನು ವಸ್ತಾದ ರಂಗಯ್ಯನೊಬ್ಬ ಮಾತ್ರ ನಡೆಸಬಲ್ಲ (ಜ್ವಾಲಾಮೇ. ೩). ೪. ಸದೆಬಡಿಯುವವನು; ಬಗ್ಗುಬಡಿಯುವವನು. ೫. ಒಡೆಯ ; ಯಜಮಾನ : "ವಸ್ತಾದ – ಗುರು ; ಸದೆಬಡೆಯುವವ ; ಒಡೆಯ" (ಜಾನಕೋ. ೪೫). 'ಉಸ್ತಾದ' ಪರಾ. [<— ಮರಾ. ವಸ್ತಾದ್./ ತೆಲು. ವಸ್ತಾದು]

**ವಸ್ತಾದಿ** (ಗು). ೧. ನುರಿತ ; ಪಳಗಿದ : ಅವನ ಬಾಯಿಂದ – ಎಂಥ ವಸ್ತಾದಿ ಕಳ್ಳನಿವನು ಎಂಬ ಪ್ರಶಂಸೋದ್ಗಾರವು ಹೊರಟು ಹೋಯಿತು (ಕಳ್ಳಸಾ. ೧೨). (ನಾ). ೨. ಸಮರ್ಥವ್ಯಕ್ತಿ : ಅನ್ನಬೇಕು ರಾಧಾದೇವಿಗೆ ವಸ್ತಾದಿಯೆಂದು (ಸ್ಕೂಲಮಿ. ೧೭೮). ೩. ಕುಸ್ತಿ, ಕತ್ತಿವರಸೆ ಮುಂತಾದುವನ್ನು ಮಾಡುವವನು ; ಮಲ್ಲ : ಈಗ ವಸ್ತಾದಿ ಬಂದಿದ್ದಾನೆ, ತೋರಿಸಬಾರದೇ ಗಂಡಸುತನವನ್ನು? (ಮಾಧವ. I, ೨೪); ದ್ವಿತೀಯರು ಮಾತ್ರ ತಮ್ಮ ವಸ್ತಾದಿಗಳನ್ನು ಹುರಿದುಂಬಿಸುತ್ತಾರೆ (ಪ್ರವಾ. II, ೨೮೩). ೪. ಆಸಾಮಿ ; ವ್ಯಕ್ತಿ : ನಿಮ್ಮ ಕಾಯಿದೆಯನ್ನು ಮೀರಿದೆನೆಂದು ಪೋಲೀಸಠಾಣೆಯ ಹೊರಗಿನ ಕಟ್ಟೆಯನ್ನು ಕೊಟ್ಟರೂ ಅಲ್ಲಿ ಮಲಗುವೆ. ಒಳ್ಳೇ ವಸ್ತಾದಿ. ಪೋಲೀಸರು ನಗಹತ್ತಿದರು (ಜಯಂತ. ೩೪೧) ; ಇಪ್ಪತ್ತು ಜನ ನಂಬರುಗಳ ಪೈಕಿ ಒಂದು ಡಜನ್ ನಂಬರುಗಳು . . . ಹೆಬ್ಬೆಟ್ಟಿನ ವಸ್ತಾದಿಗಳು (ನಮ್ಮಳ್ಳಿ. ೩೦). [<— ಮರಾ. ವಸ್ತಾದೀ]

**ವಸ್ತಿ$_{1}$** (ನಾ). (ಭಾರಿಮಳೆ ಬಂದು ಗೋಡೆಗಳಲ್ಲಿ ನೀರಿಳಿದುದರಿಂದುಂಟಾಗುವ) ತೇವ ; ಒದ್ದೆ : (೩). [< ಬಸಿ$_{1}$]

**ವಸ್ತಿ$_{2}$** 'ಬಸದಿ' ನೋ.

**ವಸ್ತಿ$_{3}$** (ನಾ). ೧. ವಾಸಿಸುವಿಕೆ ; ನೆಲಸುವಿಕೆ. ೨. ವಾಸ್ತವ್ಯ; ಮೊಕ್ಕಾಮು : ವಸ್ತಿಗಾಜಿನು ವಸ್ತಿಗೆ ಬಂದ ಹೊತ್ತಾಜಿ ಎದ್ದು ಹೊಟಟು ಹೋದ (ಪುರಂದ. ೩-೯-೪); ನಾರ್ವೇಕರರು . . . ಆ ಜಿಲ್ಲೆಯಲ್ಲಿಯೇ ಇವರ ವಸ್ತಿ ಬಹಳ ಇರುತ್ತದೆ (ಕಭಾಗ. ೧೦೫). ೩. ಹೊಕ್ಕುಳಿನ ಕೆಳಭಾಗ ; ಕಿಬ್ಬೊಟ್ಟೆ : "ವಸ್ತಿಃ ನಾಭೇರಧಃ – ಹೊಕ್ಕುಳು ಕೆಳಗಣ ಕಿರಿಹೊಟ್ಟೆ, ಕಿಬ್ಬೊಟ್ಟೆ" (ಸಿದ್ಧಾಂತಿ. ೧೯೦). ೪. ಮಲವಿಸರ್ಜನೆಯನ್ನು ಮಾಡಿಸುವ ಕ್ರಿಯೆಯಲ್ಲಿ ಬಳಸುವ ಒಂದು ಸಲಕರಣೆ ; ಪಿಚಕಾರಿ : ದ್ರವವನ್ನಾಗಲಿ ಅನಿಲವನ್ನಾಗಲಿ ಮಲನಾಳದೊಳಕ್ಕೆ ನುಗ್ಗಿಸುವುದು ; ಇದಕ್ಕಾಗಿ ಉಪಯೋಗಿಸುವ ಸಲಕರಣೆ ; ಪಿಚಕಾರಿ : ವಸ್ತಿ (Enema: ಇಂಆ). ೫. ಪಿಚಕಾರಿಯ ಸಹಾಯದಿಂದ ದ್ರವ ಅಥವಾ ಅನಿಲವನ್ನು ಮಲನಾಳದ ಒಳಹೋಗಿಸಿ ಮಲವಿಸರ್ಜನೆಯಾಗುವಂತೆ ಮಾಡುವುದು : ಅದಚೊಳಗೆ ಎಣ್ಣೆಯನೆಚಿದು ವಸ್ತಿಯ ಹಿಡಿವುದು (ಅಶ್ವಟೀ. ೯೬-೪); ಕಹಿಪಡವಲ, ಮಗ್ಗಾರೆಸೊಪ್ಪು . . . ಇವನಿಕ್ಕಿ ಅಟ್ಟ ತೈಲದಿಂದ ವಸ್ತಿಯಂ ಮಾಡಲೆಲ್ಲ ಜ್ವರ ದೋಷಂಗಳುಂ ಸಹ ಮಾಣ್ಗುಂ

(ಸಕವ್ಯ. ೧೨೯). ೬. ಬಟ್ಟೆಯ ಅಂಚು : "ವರ್ತಿಃ, ವಸ್ತಿಃ, ದಶಾ, ಸಿಚಃ — ಈ ೪ ಸೀರೆಯ ಕರೆ" (ಹಲಾಯು. ೯೦-೩೯೭). ೭. [ಯೋಗ] ಬಾಯಿಯಿಂದ ಮೂರುಮೊಳ ಬಟ್ಟೆಯನ್ನು ನುಂಗಿ ಮಲನಾಳದಿಂದ ಹೊರತೆಗೆಯುವ ಒಂದು ಕ್ರಿಯೆ : ಕುಳಿತಡೆ ನಾಭಿಪ್ರಮಾಣಮಾಗುವ ಜಲದಲ್ಲಿ ಕುಳಿತು ಆಧಾರಕುಂಚನದಿಂದೆ ಉದರವ ಪೂರಿಸಿ ಬಿಡುವುದು ವಸ್ತಿ ಎನಿಸೂದು (ಶಿವಪ್ರ. ೬-೬); ವಸ್ತಿಗುಣ :- ಹೃದ್ರೋಗಹರ, ಇಂದ್ರಿಯಬಾಹುಳ್ಯ, ಹಸ್ತಿಪಾದಗಳ ವಿದಾಹ . . . ಮೂರ್ಛೆರೋಗ ಮುಂತಾಗಿ ಗುಣವಾಗುವುವು (ಸಕವ್ಯ. ೩೧).

ವಸ್ತಿಮಾಡು = ಬಿಡಾರ ಹೂಡು ; ನೆಲಸು ; ಮೊಕ್ಕಾಮುಮಾಡು : ಎತ್ತಿನ ಬಂಡಿಯ ಪ್ರವಾಸಿಗಳಿಗೆ ಪ್ಲೇಗಿನ ಭಯ ಬಹಳವಾದ್ದರಿಂದ ಅವರು ನಡುವೆಯೇ ದಾಂಡೇಗರದ ಗುಡಿಸಲಿನಲ್ಲಿ ಹತ್ತು ದಿವಸ ವಸ್ತಿಮಾಡಬೇಕಾಗುತ್ತಿತ್ತು (ಸ್ಮೃತಿಚಿ. ೨೬೭). ವಸ್ತಿಹೂಡು = ವಸ್ತಿಮಾಡು : ಯಾವಾಗ ಅಲ್ಲಿ ವಸ್ತಿ ಹೂಡುತಿ (ಹಳ್ಳಹಾ. ೫೮). [ಸಂ.]

**ವಸ್ತಿಕರ್ಮ** (ನಾ). = ವಸ್ತಿ$_3$ ೫ : ವಸ್ತಿಕರ್ಮವನ್ನು ಸಾಯಂಕಾಲದಲ್ಲಿ ಮಾಡುವುದು (ಸಕವ್ಯ. ೨೫). [ಸಂ. ವಸ್ತಿಕರ್ಮನ್]

**ವಸ್ತಿಕಾರ** (ನಾ). = ವಸ್ತಿಗಾಜಿ : ಅವನು ಬಿಭಾಯತರಂತೆ ಪರದೇಶದ ವಸ್ತಿಕಾರನಂತೆ ಗಣನೆ ಇಲ್ಲದೆ ಇರುವನು (ಕೃಷಿಪ್ರ. ೨೧೩). [ಸಂ.]

**ವಸ್ತಿಕುಹರ** (ನಾ). (ಕಶೇರುಕ ಪ್ರಾಣಿಗಳ) ಕಿಬ್ಬೊಟ್ಟೆಯಲ್ಲಿ ಎಲುಬುಗಳು ಸುತ್ತುವರಿದುದರಿಂದ ಆದ ಬೋಗುಣಿಯಾಕಾರದ ಕುಳಿ : ತೊಡೆಗಳಲ್ಲಿನ ಮಾಂಸಖಂಡಗಳನ್ನು ಬಿಗಿಗೊಳಿಸುವುದರ ಮೂಲಕ ವಸ್ತಿಕುಹರದ ಭಾಗವನ್ನು (Pelvic region) ಮೇಲೇಳಿಸಬೇಕು (ಯೋಗದೀ. ೨೬೦) ; ಪ್ರಾಣಿದೇಹಕ್ಕೆ ಮುಖ್ಯವಾದ ಸಮತೋಲನ ಅದರ ವಸ್ತಿಕುಹರದಿಂದಲೇ (ಪಕ್ಷಿ. ೬). [ಸಂ.]

**ವಸ್ತಿಗಾಜಿ** (ನಾ). ಪ್ರಯಾಣದ ಮಧ್ಯೆ ತಾತ್ಕಾಲಿಕವಾಗಿ ಒಂದೆಡೆಯಲ್ಲಿ ಇಳಿದುಕೊಳ್ಳುವವನು, —ತಂಗುವವನು : ವಸ್ತಿಗಾಜಿನು ವಸ್ತಿಗೆ ಬಂದ ಹೊತ್ತಾಜೆ ಎದ್ದು ಹೋಜಟುಹೋದ (ಪುರಂದ. ೩-೯-೪). [ವಸ್ತಿ$_3$ + — ರಾಜಿ]

**ವಸ್ತಿಬಡು** (ಕ್ರಿ). ಇಳಿದುಕೊಳ್ಳು ; ತಂಗು : ವಸ್ತೀಕಾರನಂತೆ ವಸ್ತಿಬಡುವೆನೆಂದು ನುಡಿವುದು ಘನತನವೆ (ವಿಸಾಹು. ೪೭-೨). [ವಸ್ತಿ$_3$ + ಪಡು$_1$]

**ವಸ್ತಿಶೋಧನ** (ನಾ). = ವಸ್ತಿ$_3$ ೫ : ದ್ರಾಕ್ಷಾದಿ ಮಧುರದ್ರವ್ಯಗಳಿಂದ ಹಳೆಯ ಸಗಣಿಯ ಸಂಸ್ಕಾರದ ದೆಸೆಯಿಂದ ಶುದ್ಧವಾಗಿ ಸಾಧಿಸಲ್ಪಟ್ಟ ತುಪ್ಪದಿಂ ಕೂಡಿದ ವಸ್ತಿಶೋಧನವು ಈ ಬಸುರಿಯಲ್ಲಿ ಯೋಗ್ಯವು (ಬಾಹಟೀ. ೨-೧-೬೬). [ಸಂ.]

**ವಸ್ತಿಸ್ಥಾನ** (ನಾ). ಕೆಳಹೊಟ್ಟೆ ; ಕಿಬ್ಬೊಟ್ಟೆ : ನಾಭಿಯ ಕೆಳಗಣ ವಸ್ತಿಸ್ಥಾನವೆಂಬ ಸ್ಥಳದಲ್ಲಿ ಆಶ್ರೈಸಿರ್ಪ ವಾತಾದಿ ದೋಷಗಳಿಂದ ಮೂತ್ರ ತಡೆವುದು (ಸಕವ್ಯ. ೩೬೯). [ಸಂ.]

**ವಸ್ತು** (ನಾ). ೧. (ಇಂದ್ರಿಯಗೋಚರವಾದ) ಪದಾರ್ಥ ; ದ್ರವ್ಯ : ಈ ಪೊಟಲೊಳ್ ಮಹಾವಸ್ತುವರ್ಗಂಗಳಂ ಬಿಲಲ್ ನೆಜೆವನ್ನರಪ್ಪ . . . ಪರದರಾರ್ (ಸುಕುಮಾ. ೧೦-೧೧೭ ವ) ; ಸಿರ ಹಜಿದರೇನು ಕರುಳು ಕುಪ್ಪಳಿಸಿದರೇನು ಇಂತಪ್ಪ ಸಮಸ್ತವಸ್ತುವೆಲ್ಲವೂ ಹೋದರೇನು (ಬಸವ. ೬೯೦). ೨. ಧನ ; ಸಂಪತ್ತು : ಹಡೆದೊಡವೆ ವಸ್ತುವನು ಮೃಡಭಕ್ತರಿಗಲ್ಲದೆ ಕಡಬಡ್ಡಿಯ ಕೊಡಲಾಗದು (ಬಸವ. ೨೨೯) ; ನಿತ್ಯಾನಂದಗುಣಾಭಿರಾಮಸುತನಂ ಕಂಡುರ್ಬಿ . . . ತಾಯ್ತಂದೆಗಳ್ ಕೃತ್ಯೋದಾರದೊಳಿತ್ತರಂದು ಸಕಲಗ್ರಾನಂದದಿಂ ವಸ್ತುವಂ (ಹಮ್ಮೀರ. ೨-೨೪). ೩. ಚಿನ್ನ ; ಬಂಗಾರ : "ಆ ಕನಕಂ ಹಿರಣ್ಯಮರ್ಥಂ ವಸ್ತು ಖುರ್ಕಮಾರೈಸ್ವಂ ಸುವರ್ಣಮೆನಲು" (ಮಂಗರಾ. ೧೬-೧೭). ೪. ಅಸ್ತಿತ್ವ ; ಸತ್ಯ. ೫. ಯಾವುದಾದರೊಂದು ವಿಷಯದ ಸಾರ, —ತಿರುಳು. ೬. [ಕಾವ್ಯಮೀ] ಕಾವ್ಯ, ಕಾದಂಬರಿ, ನಾಟಕ ಮುಂತಾದುವುಗಳ ಕಥಾಭಾಗ : 'ವಸ್ತು'ವೆಂದರೆ ಕಾವ್ಯದಲ್ಲಿರತಕ್ಕ ಕಥಾಭಾಗ. ಇದಕ್ಕೆ 'ಇತಿವೃತ್ತ'ವೆಂದೂ ಹೆಸರು (ಕೈಪಿಡಿ. ೨೦೫) ; ಹಾಗೆ ಹಬ್ಬಿದ್ದ ಕಥೆಯನ್ನೇ . . . ವಾಲ್ಮೀಕಿಯು ಒಂದು ಮಹಾಕಾವ್ಯಕ್ಕೆ ವಸ್ತುವನ್ನಾಗಿ ಉಪಯೋಗಿಸಿಕೊಂಡಿರಬೇಕೆಂದು ತರ್ಕಿಸುತ್ತಾರೆ (ಭಾರದ. ೮೬). ೭. [ಸಂಗೀತ] ಒಂದು ಬಗೆಯ ಹಾಡಿನ ರಚನೆ, —ಬಂಧ : ಪಂಚತಾಲೇಶ್ವರ, ವರ್ಣಸ್ವರ, ವಸ್ತುವೆಂಬ ಹೆಸರಿನದು (ಚತುಪ್ರ. ೮೩). ೮. [ತತ್ತ್ವಶಾ] ಆತ್ಮ ; ಪರಬ್ರಹ್ಮ : ಬುದ್ಧಿಯಜಿವುದೊ ವಸ್ತುವನು (ಅಮೃತ. ೩-೧೨೧); ವಸ್ತುವು ಏನು ಎಂದರೆ ಸಚ್ಚಿದಾನಂದಸ್ವರೂಪವಾದ ಬ್ರಹ್ಮವು (ಈಶ್ವಸ್ಯ. ೧೦-೧೪). ೯. [ಜೈನ] ಆಗಮಗ್ರಂಥಗಳಾದ ಪೂರ್ವಗಳಲ್ಲಿ ಇರುವ ಪ್ರಕರಣಗಳ ಹೆಸರು : ಇನ್ನು ಪ್ರತಿಯೊಂದು ಪೂರ್ವದಲ್ಲೂ ಅನೇಕ ಪ್ರಕರಣಗಳಿವೆ. ಈ ಪ್ರಕರಣಗಳಿಗೆ 'ವಸ್ತು'ಗಳೆಂದು ಹೆಸರು. ಈ ಪ್ರತಿಯೊಂದು ವಸ್ತುಗಳಲ್ಲೂ ಮತ್ತೆ ಇಪ್ಪತ್ತು ಇಪ್ಪತ್ತು ವಿಭಾಗಗಳಿವೆ (ಜೈನಪ. ೧೩೬). ೧೦. (ಆಲಂ) ಪ್ರಾಣದಂತೆ ಬಹುಪ್ರಿಯವಾದ ವ್ಯಕ್ತಿ : ನನ್ನ ವಸ್ತುವನ್ನು ಕಳೆದುಕೊಂಡು ತಲೆಗೆ ಮುಸುಕೆಳೆದುಕೊಂಡು . . . ನಿನ್ನ ಪ್ರಾಣಕ್ಕೆ ತಗುಲಿಬಿದ್ದಿದ್ದೇನೆ (ಮಹಾಗ. ೨). [ಸಂ.]

**ವಸ್ತುಕ** (ನಾ). ೧. ವಿಷಯದ ಸಾರ, —ತಿರುಳು. ೨. ವಸ್ತುವಿನಿಂದಾದ ಪದಾರ್ಥ, —ರಚನೆ : ವಸ್ತುವ ವಸ್ತುಕದಂತೆ ಘಟ ಆತ್ಮನಂತೆ ಉಭಯಕ್ಕೂ ಭಿನ್ನವಿಲ್ಲದೆ ಸಿದ್ಧಿಯಾಗಿ ಆ ಸಿದ್ಧಿ ಪ್ರಸಿದ್ಧಿಯಾಗಿ ಆ ಪ್ರಸಿದ್ಧಿ ಪ್ರಸನ್ನವಾಗಿ ಆ ಪ್ರಸನ್ನ ಪ್ರಸಂಗಕ್ಕೆ ಒಡಲಜಿತುದು (ಸರ್ವವ. ೯೮-೫೩೬). ೩. [ಕಾವ್ಯಮೀ] ವಸ್ತುಪ್ರಧಾನವಾದ, ಪ್ರಾಚೀನಕಾಲದ ಮಾರ್ಗೀಯವಾದ ಒಂದು ಬಗೆಯ ಕಾವ್ಯಪ್ರಕಾರ ; ಸಂಪ್ರದಾಯನಿಷ್ಠೆಯ ಮಾರ್ಗಶೈಲಿಯಲ್ಲಿ ರಚಿಸಿದ ಕಾವ್ಯಪ್ರಕಾರ : ಪ್ರಾಸ ಯತಿ ಗಣ ಗದ್ಯ ಪದ್ಯ ಸಮಾಸಯುತ ವಸ್ತುಕದ ಮುಂದೆ ವಿಳಾಸಮೇ ಸಾಮಾನ್ಯಮೀ ವರ್ಣಕಕವಿತೆಯೆಂದು ಓಸರಿಸದಿರಿ (ಬಸಪು. ೧-೨೧) ; ಕನ್ನಡ ಸಾಂಪ್ರದಾಯಿಕ ಕಾವ್ಯಗಳಲ್ಲಿ 'ವಸ್ತುಕ' ಎಂದೂ 'ವರ್ಣಕ' ಎಂದೂ ಲಾಕ್ಷಣಿಕರು ಎರಡು ಜಾತಿಗಳನ್ನು ಮಾಡಿರುವರು (ಕರ್ನಾಜ. ೬). ೪. ಗದ್ಯಪದ್ಯಮಿಶ್ರವಾದ ಒಂದು ಬಗೆಯ ಕಾವ್ಯಪ್ರಕಾರ ; ಚಂಪು : ಚಿಕದೇವರಾಜವಿಜಯಂ ಮುಂತಾದುವು ಗದ್ಯಪದ್ಯೋಭಯಾತ್ಮಕವಾದ ಕಾವ್ಯಂಗಳ್ ಇದರ್ಕೆ ಚಂಪುವೆಂದುಂ ವಸ್ತುಕಮೆಂದುಂ ಪೆಸರ್ (ಅಪ್ರತಿ. ೧-೨೩ ವ) ; ಸಂಸ್ಕೃತಚಂಪೂಲಕ್ಷಣವನ್ನೂ ಸರಣಿಯನ್ನೂ ಅನುಸರಿಸಿ ಬರೆದಿರುವ ಗದ್ಯಪದ್ಯಾತ್ಮಕವಾದ ಕಾವ್ಯಕ್ಕೆ 'ವಸ್ತುಕ'ವೆಂದೂ . . . ಹೆಸರು ಸಲ್ಲುವಂತೆ ಹೇಳಬೇಕಾಗುತ್ತದೆ (ಕೈಪಿಡಿ. ೧೮೪). 'ವರ್ಣಕ' ಪರಾ. [ಸಂ.]

**ವಸ್ತುಕಮಾರ್ಗ** (ನಾ). ಸಂಪ್ರದಾಯನಿಷ್ಠವಾದ ವಸ್ತುಕಕಾವ್ಯದ ರೀತಿ ; ಮಾರ್ಗಶೈಲಿ : ಮದನಾರಿಯ ಶಬರಲೀಲೆಯಂ ವಸ್ತುಕಮಾರ್ಗದೊಳೊರೆದಂ (ಶಬಶಂ. ೫-೫೯). [ಸಂ.]

**ವಸ್ತುಕವಿ** (ನಾ). ವಸ್ತುಕಮಾರ್ಗದಲ್ಲಿ ಕಾವ್ಯ ರಚಿಸುವವನು ; ಮಾರ್ಗೀಯಶೈಲಿಯಲ್ಲಿ ಕೃತಿರಚನೆ ಮಾಡುವವನು : ಪವಮಾನಚತುಷ್ಕಯುತಂ ಯತಿಯುಂ ದಿವಸಾಧಿಪನೊಳ್ನಿಲೆ ವಸ್ತುಕವಿಪ್ರವರಸ್ತುತಮಪ್ಪುದು ತೋಟಕಮೆಂದ ವಧಾರಿಸು ನೀನಿದಂ (ಛಂದೋಂಬು. ೨-೧೨೬) ; ಮಿಗಿಲಾಗಿರ್ದಭಿಧಾನಸಂಹತಿಗಳಂ ಮೆಯ್ ಮೆಯ್ಕೊಳಿಟ್ಟಟ್ಟಜಿಂ ಪೊಗಟಿಪ್ಪೋರಂತೆ ಸಮಸ್ತವಸ್ತುಕವಿಗಳ್ ಚೆಲ್ವಪ್ಪಿನಂ ಬಂಧುರೋಕ್ತಿಗಳಿಂ ನೀನಭಿವರ್ಣಿಸಿಂತಿದಂ (ಸುಕುಮಾ. ೧-೫೭). [ಸಂ.]

**ವಸ್ತುಕಾರ** 'ವಸ್ತುಗಾರ' ನೋ.

**ವಸ್ತುಕಾವ್ಯ** (ನಾ). ಸಂಪ್ರದಾಯನಿಷ್ಠವಾದ ಮಾರ್ಗಶೈಲಿಯ ಕಾವ್ಯ ; ವಸ್ತುಪ್ರಧಾನವಾದ ಕಾವ್ಯ : "ವಸ್ತುಕೃತಿ" ಎಂದರೆ ಸವಿಸ್ತರವಾದ ಕಥಾವಸ್ತುವನ್ನುಳ್ಳ ದೀರ್ಘಕಾವ್ಯವೆಂದು ತೋರುತ್ತದೆ ; "ವಸ್ತುಕಾವ್ಯ", "ವಸ್ತುಕ" ಎಂದು ಕರೆಯುವುದೂ ಇದೇ ಆಗಿರಬೇಕು (ಭಾರಮೀ. ೪೭೯). 'ವಸ್ತುವಿದ್ಯೆ' ಪರಾ. [ಸಂ.]

**ವಸ್ತುಕೃತಿ** (ನಾ). = ವಸ್ತುಕಾವ್ಯ : ಆದಿಪುರಾಣವಸ್ತುಕೃತಿಯಂ ಪೇಟ್ದಂ ಬೆಡಂಗಪ್ಪ ಮಾರ್ಗದೊಳಂ ದೇಸೆಯೊಳಂ ಪೊದಟ್ದಿಸೆವಿನಂ ಸಂಸಾರಸಾರೋದಯಂ (ಆದಿಪು. ೧೬-೭೮); ನಾನಾರಸಮಿರ್ಪ ವಸ್ತುಕೃತಿಯಂ ಪೇಟ್ದಗ್ಗಳಂ ಮೆಚ್ಚಿಪಂ (ಚಂದ್ರಪು. ೧-೫೧). 'ವಸ್ತುವಿದ್ಯೆ' ಪರಾ. [ಸಂ.]

**ವಸ್ತುಕೋಶ** (ನಾ). ೧. ಬೇರೆ ಬೇರೆ ಮೂಲಗಳಿಂದ ಸಂಗ್ರಹಿಸಿದ ಲೇಖನಾದಿ ಭಾಗಗಳ ಸಂಗ್ರಹ. ೨. ಎರಡನೆಯ ನಾಗವರ್ಮನು ರಚಿಸಿದ ಒಂದು ಕನ್ನಡ ನಿಘಂಟಿನ ಹೆಸರು : ಇದು . . . ಶ್ರೀನಾಗವರ್ಮವಿರಚಿತಮಪ್ಪ ವಸ್ತುಕೋಶದೊಳ್ ನಾನಾರ್ಥಕಾಂಡಂ (ವಸ್ತುಕೋ. ೧೪೧-೧೩೬ ಗದ್ಯ). [ಸಂ.]

**ವಸ್ತುಗತ** (ಗು). ನೈಜವಾದ ; ಸಹಜವಾದ ; ಕಾಲ್ಪನಿಕವಲ್ಲದ : ಮಿಗೆ ವಸ್ತುಗತಸ್ಥಿತಿಯುಂ ಬಗೆದಗ್ಗಳಮಾಗೆ ಪೇಟ್ಪೊಡಕ್ಕುಮುದಾರಂ (ಕವಿರಾ. ೨-೭೯). [ಸಂ.]

**ವಸ್ತುಗಾರ, ವಸ್ತುಕಾರ** (ನಾ). ೧. (ಚಿನ್ನದ) ಒಡವೆಗಳನ್ನಿಡುವ ಪೆಟ್ಟಿಗೆ : ವರನಿಗೆ ಎಣ್ಣೊಸ್ತ್ರವಂ ಮಾಡಿ ಹಸೆಯ ಮೇಲೆ ಕುಳ್ಳಿರಿಸಿ ಕಸ್ತೂ ಬಳಿಗೆ ಮಂಗಳ ಸಾಮಗ್ರಿಗಳೊಡನೆ ತೈಲವಂ ತುಂಬಿದ ಪಾತ್ರೆಯನ್ನಿರಿಸಿ ವಸ್ತುಗಾರವೆಂಬ ಭಾಂಡವಂ ಕಳುಹಿಸಿ ಕೊಡಬೇಕು (ಪುರುಚ. ೨೦೭). **ವಸ್ತುಕಾರ** : ೨. (ಚಿನ್ನದ) ಒಡವೆ ; ಆಭರಣ : ತಂದ ಬಹುವಿಧವಸ್ತುಕಾರವನಂದು ಕೊಟ್ಟನು ಗಜರಥಾಶ್ವವನಿಂದು ವದನೆಯರಿಗೆ ವಿಚಿತ್ರಾಂಬರ ವಿಭೂಷಣವ (ಕುವ್ಯಾಅ. ೧೭-೫); ಅತಿಹರುಷದೊಳೊರ್ವರ ಮನೆಯಿಂದ ವಸ್ತುಕಾರವನು ಅನುರಾಗದಿಂದಿತ್ತು ನೈಯೇಜಿಸಿ ಮತ್ತೆ ವಿನುತಭೂಷಣವಿತ್ತರಾಗ(ಶ್ರೀಪಾಲ. ೧೦-೫೭); ಮಂಗಳವೆನಿಸಿರ್ಪ ವಸ್ತುಕಾರೋತ್ಕರಮಂ ಮಂಗಳಭೂಷಣ ಧರಿಸಿರ್ದಂಗನೆಯರ್ಕಣ್ಗೆ ಸೊಗಸನೀವುತ್ತಿರ್ದರ್ (ವೀರವಿ. ೯-೪೦). 'ವಸ್ತ್ರಕಾರ' ಪಠಾ. [< ವಸ್ತು]

**ವಸ್ತುಗೀತ** (ನಾ). ಒಂದು ಬಗೆಯ ಹಾಡಿನ ರಚನೆ : ಚಚ್ಚಪುಟ ಚಾಚುಪುಟಾದಿ ಸಕಲತಾಳಸಂಚಾರಸಮುದಿತವಪ್ಪಿರ್ಪತ್ತೆಂಟು ವಸ್ತುಗೀತದೊಳಮತಿಪ್ರವೀಣನಪ್ಪ ಗಾಣಂ ಪಾಡಲೊಡರಿಸುವುದುಂ (ಮಲ್ಲಿಪು. ೮-೨೭). [ಸಂ.]

**ವಸ್ತುತಂತ್ರ** (ನಾ). ಪ್ರಯತ್ನವಿಲ್ಲದೆ ಪ್ರಮಾಣಾದಿಗಳಿಂದ ತಾನಾಗಿ ಉಂಟಾಗುವ ಜ್ಞಾನ : ಪ್ರಮಾಣಾದಿಗಳಿಂದ ಬರತಕ್ಕ ಜ್ಞಾನವು ವಸ್ತುತಂತ್ರವೆನ್ನಲ್ಪಡುವುದು . . . ಯಾವುದು ನೂರು ವಿಧಾಯಕಶಾಸ್ತ್ರದಿಂದ ಮಾಡಲಶಕ್ಯವೋ ನೂರುನಿಷೇಧಶಾಸ್ತ್ರಗಳಿಂದ ತಡೆಯಲಶಕ್ಯವೊ ಅದು ವಸ್ತುತಂತ್ರವೆಂದು ವಿವರಿಸುತ್ತಾರೆ (ಹಿಂದಸಾ. ೨೨೭). [ಸಂ.]

**ವಸ್ತುತಃ** (ಅ). ನಿಜವಾಗಿ ; ವಾಸ್ತವವಾಗಿ : ಈ ವಿಂಗಡಣೆ ಕೇವಲ ನನ್ನ ಕಲ್ಪನೆ. ವಸ್ತುತಃ ಅವು ಎರಡಲ್ಲ (ಜೀವಾತ್ಮ. ೩೭). [ಸಂ. ವಸ್ತುತಸ್]

**ವಸ್ತುತತ್ತ್ವ** (ನಾ). ಸ್ವಾಭಾವಿಕವಾಗಿರುವಂತಹುದು ; ಸಹಜವಾದುದು : ಮೂಲಕಂ ಬಾಲಂ ದೋಷಹರಮಬಾಲಂ ದೋಷಕರಮದಱಿಂ ಪ್ರತ್ಯಕ್ಷಪರಿಚ್ಛೇದ್ಯಂ ವಸ್ತುತತ್ತ್ವ... ದಿಂ ವ್ಯಭಿಚರಿಸುಗುಂ (ಶಾಂತಿಪು. ೮-೧೨೮ ವ). [ಸಂ.]

**ವಸ್ತುತ್ವ** (ನಾ). ವಸ್ತುವಾಗಿರುವಿಕೆ ; ದ್ರವ್ಯತ್ವ : ಜ್ಞಾನಾದಿ ಚೈತನ್ಯಧರ್ಮ ವ್ಯತಿರಿಕ್ತವಾದ ಅಸ್ತಿತ್ವ, ನಾಸ್ತಿತ್ವ, ವಸ್ತುತ್ವ — ಮೊದಲಾದ ಧರ್ಮಗಳು ಅಜೀವದ್ರವ್ಯದಲ್ಲಿಯೂ ಇವೆ (ಭಾರದ. ೧೮೦) ; ಅಲ್ಲಿಗೆ ಆದರ ವಸ್ತುತ್ವ ಮುಗಿಯಿತು (ಭಾವಗೀ. ೮). [ಸಂ.]

**ವಸ್ತುಧ್ವನಿ** (ನಾ). [ಕಾವ್ಯಮೀ] ಧ್ವನಿಯ ಒಂದು ಪ್ರಕಾರ ; ಯಾವ ವ್ಯತಿರೇಕವೂ ಅಲಂಕಾರವೂ ಇಲ್ಲದೆ ಸೂಚಿತವಾಗುವ ಧ್ವನಿ : ಧ್ವನಿತವಾದ ಅರ್ಥಸಮುದಾಯದಲ್ಲಿ, ರಸಧ್ವನಿಯೂ ಅಲಂಕಾರಧ್ವನಿಯೂ ಅಲ್ಲದಿರುವುದಕ್ಕೆಲ್ಲ ವಸ್ತುಧ್ವನಿಯೆಂದು ಹೆಸರು (ಭಾರಮೀ. ೨೭೩) ; ವಿಭಾವ, ಅನುಭಾವಗಳು ಕೂಡ ವ್ಯಂಗ್ಯವಾದಾಗ 'ವಸ್ತುಧ್ವನಿ'ಗೆ ಅವಕಾಶವಿದ್ದೇ ಇದೆ (ಧ್ವನ್ಯಾಲೋ. ೫೯ ಅಡಿಟ). [ಸಂ.]

**ವಸ್ತುನಿಷ್ಠ** (ಗು). ೧. ವಾಸ್ತವವಾದ ; ನೈಜವಾದ : ಜೀವನದ ಬಹಿರ್ಮುಖಗಳನ್ನೇ ದರ್ಶಿಸುವ ವಸ್ತುನಿಷ್ಠಕಲ್ಪನೆ (Objective Imagination) ಮನಸ್ಸಿನ ಮತ್ತು ಭಾವನೆಯ ಪರಿಣಾಮಗಳನ್ನು ದರ್ಶಿಸುವ ಭಾವನಿಷ್ಠಕಲ್ಪನೆ . . . ಇವೆಲ್ಲ ಕವಿಯ ಕಾವ್ಯಸೃಷ್ಟಿಯ ಉಪಕರಣಗಳು ಮಾತ್ರ (ಸೌಂದಸ. ೩೦). ೨. [ಕಾವ್ಯಮೀ] ವಸ್ತುಪ್ರಧಾನವಾದ : 'ವಸ್ತುನಿಷ್ಠಕಾವ್ಯ' ಪಠಾ. (ನಾ). ೩. ವಾಸ್ತವಿಕವಾದುದು ; ನೈಜವಾದುದು : ಸೌಂದರ್ಯ ಎನ್ನುವುದು ವಸ್ತುನಿಷ್ಠವೋ ಮನೋನಿಷ್ಠವೋ ಎಂಬ ಎರಡು ಪ್ರಶ್ನೆಗಳೇಳುತ್ತವೆ (ಸೌಂದಸ. ೬೬) ; ವಸ್ತುನಿಷ್ಠವಾದ ಸತ್ಯದ ಗೆಲುವು ಕತೆಯ ಎದ್ದುಕಾಣುವ ವೈಶಿಷ್ಟ್ಯವಾಗಿದೆ (ಹೊಸಕ್ಷ. ೨೯೨). [ಸಂ.]

**ವಸ್ತುನಿಷ್ಠಕಾವ್ಯ** (ನಾ). [ಕಾವ್ಯಮೀ] ವಸ್ತುಪ್ರಧಾನವಾದ ಕಾವ್ಯ : ಕವಿಪ್ರಜ್ಞೆ ತನ್ನ ಸುಪ್ತಶಕ್ತಿಯ ವಿಕಾಸಕ್ಕಾಗಿ ತನ್ನಿಂದ ಆಚೆಗೆ ನಡೆದು ಬಾಹ್ಯಜಗತ್ತಿನ ರಾಗಗಳು ಮತ್ತು ಕ್ರಿಯೆಗಳೊಂದಿಗೆ ಬೆರೆತು ಕಾವ್ಯವನ್ನು ಸೃಷ್ಟಿಸುವುದು. ಇದನ್ನು 'ವಸ್ತುನಿಷ್ಠ' ಕಾವ್ಯ ಎಂದು ಕರೆಯಬಹುದು (ಸೌಂದಸ. ೧). [ಸಂ.]

**ವಸ್ತುಪರಿಚ್ಛೇದ** (ನಾ). [ಅದ್ವೈತ] ಸಾವಯವವಸ್ತುಗಳಲ್ಲಿರುವ ಸಜಾತೀಯ ಮತ್ತು ವಿಜಾತೀಯ ಭೇದ ; IP ಒಂದು ಮರಕ್ಕೂ ಮತ್ತೊಂದು ಮರಕ್ಕೂ ಇರುವ ವ್ಯತ್ಯಾಸ — ಸಜಾತೀಯ ಭೇದ. ಮರಕ್ಕೂ ಶಿಲೆಗೂ ಇರುವ ಭೇದ — ವಿಜಾತೀಯ ಭೇದ. ನಿರವಯವಾದ ಬ್ರಹ್ಮಕ್ಕೆ ಈ ಭೇದಗಳು ಇಲ್ಲ : ಒಂದು ವಸ್ತುವಿಹುದು ಒಂದು ವಸ್ತುವಿದಲ್ಲವೆಂಬುದೇ ವಸ್ತುಪರಿಚ್ಛೇದಮಕ್ಕುಂ (ವಿವೇಕ. ೨೫) ; ಬ್ರಹ್ಮವು . . . ಸಜಾತೀಯ ವಿಜಾತೀಯ ಭೇದರಹಿತವಾದ್ದರಿಂದ ವಸ್ತುಪರಿಚ್ಛೇದವಿಲ್ಲದ್ದು (ಭಾರದ. ೨೩೩). [ಸಂ.]

**ವಸ್ತುಪುರುಷ** (ನಾ). (ನಿರ್ದಿಷ್ಟವಾದ) ಪದಾರ್ಥದ ನೈಜತೆಯನ್ನು ಪರೀಕ್ಷಿಸುವವನು ; ನುರಿತವನು ; ಪರಿಣತ : ದೊರೆಯಱಿವ ವಸ್ತುಪುರುಷರ್ ಪರಿಕಿಸಿ ಬೆಲೆಮಾಡೆ ಗಂಗಮಂಡಲ ಚಕ್ರೇಶ್ವರ ಕಟಕೋತ್ತಮನಾಯಕ ವಿರಚನೆಯಿನ ನರ್ಘರತ್ನಮಾದಂ ರತ್ನಂ (ಗದಾಯು. ೧-೪೦) ; ಯಶೋಭದ್ರಾಂಬಿಕೆಯುಂ ಕಂಡು ರತ್ನಕಂಬಲಮಂ ನಿಮಿರ್ಚಿ ತೋರ್ಪುದುಮಪೂರ್ವವಸ್ತುವಪ್ಪುದನಱಿದು ವಸ್ತುಪುರುಷರಿಂ ಬೆಲೆಯಿಡಿಸಿ (ಸುಕುಮಾ. ೧೦-೧೧೭ ವ). [ಸಂ.]

**ವಸ್ತುಪ್ರದರ್ಶನ** (ನಾ). ೧. ಕಲೆ, ವಿಜ್ಞಾನ ಮುಂತಾದ ಕ್ಷೇತ್ರಗಳಿಗೆ ಸಂಬಂಧಿಸಿದ ನಾನಾ ಬಗೆಯ ಪದಾರ್ಥಗಳನ್ನು ಜನರ ನೋಟಕ್ಕಾಗಿಯೂ ಮಾರಾಟಕ್ಕಾಗಿಯೂ ಜೋಡಿಸಿಡುವುದು : ಶಾಲೆಯಲ್ಲಿ ವಸ್ತುಪ್ರದರ್ಶನ ಏರ್ಪಡಿಸಬೇಕೆಂದು ಗುರುಗಳೂ ಹುಡುಗರೂ ನಿರ್ಧರಿಸಿದರು (ಕಪಪು. ೪-೩೭). ೨. = ವಸ್ತುಪ್ರದರ್ಶನಶಾಲೆ : ವಸ್ತುಪ್ರದರ್ಶನದ ಬಳಿ ಸುನಂದ ಗಾಡಿಯಿಂದಿಳಿದು ಟಿಕೇಟು ತೆಗೆಯಲು ಹೊರಟಳು (ದೂಟ್ಟು. ೧೨೦). [ಸಂ.]

**ವಸ್ತುಪ್ರದರ್ಶನಶಾಲೆ** (ನಾ). ಕಲೆ, ವಿಜ್ಞಾನ ಮುಂತಾದ ಕ್ಷೇತ್ರಗಳಿಗೆ ಸಂಬಂಧಿಸಿದ ನಾನಾಪ್ರಕಾರದ ವಸ್ತುಗಳನ್ನು ಪ್ರದರ್ಶನ ಹಾಗೂ ಮಾರಾಟಕ್ಕಾಗಿ ಜೋಡಿಸಿಟ್ಟಿರುವ ಸ್ಥಳ : ಪ್ರತಿವರ್ಷವೂ ಮೈಸೂರುಅರಮನೆಯ ಎದುರು ಮೈದಾನದಲ್ಲಿ ವಸ್ತುಪ್ರದರ್ಶನಶಾಲೆಯನ್ನು ತೆರೆಯುವುದು ವಾಡಿಕೆ (ರೂಢಿ). [ಸಂ. ವಸ್ತುಪ್ರದರ್ಶನಶಾಲಾ]

**ವಸ್ತುಪ್ರದರ್ಶನಾಲಯ** (ನಾ). = ವಸ್ತುಪ್ರದರ್ಶನಶಾಲೆ : ವಸ್ತುಪ್ರದರ್ಶನಾಲಯದಲ್ಲಿ ಪ್ರತಿದಿನ ಸಂಜೆ ಮನರಂಜನೆಕಾರ್ಯಕ್ರಮಗಳನ್ನು ಏರ್ಪಡಿಸಿರುತ್ತಾರೆ (ರೂಢಿ). [ಸಂ.]

**ವಸ್ತುಬಂಧ** (ನಾ). = ವಸ್ತುಕಾವ್ಯ : ಇದು ಚೋದ್ಯಂ ಕವಿಹೃದ್ಗತಂ ನವರಸಂ ನಿರ್ದೋಷಮೆಂದೀಗಳಾದುದು . . . ವಿದಿತ ಶ್ರೀಕವಿನಾಗವರ್ಮನ ವಚಸ್ಸಂದೋಹದಿಂ ದೋಷಮೊಂದದಲಂಕಾರದ ವಸ್ತುಬಂಧಮಿದು ತಾನೇಂ ಮಾಡದೇಂಗೆಯ್ಯದೋ (ಕಾದಂಬ. ೮೨೫). [ಸಂ.]

**ವಸ್ತುಬಾಹ್ಯ** (ನಾ). ಪದಾರ್ಥಗಳ ಹೊರರೂಪವನ್ನು ಮಾತ್ರ ಬಲ್ಲವನು : ಸುಖದುಃಖಗಳೆಂಬುದು ಸ್ವಪ್ನೇಂದ್ರಜಾಲಸನ್ನಿಭಂಗಳುಂ ಜೀವಿತಮರಣಂಗಳೆಂಬ[ವಿ]ಟ್ಟಳಮುಂ ಪುಸಿಯ ಪೊಟ್ಟಳಮುಮಕ್ಕುಮದ[ನ]ಕರ್ಣಹೃದಯನುಮನೇಡಮೂಕನುಂ ತತ್ತ್ವಾಂಧನುಂ ವಸ್ತುಬಾಹ್ಯನುಂ ನಂಬುಗುಂ (ಶಾಂತಿಪು. ೮-೧೩೨ ವ). [ಸಂ.]

**ವಸ್ತುಭಂಡ** (ನಾ). (ವ್ಯಾಪಾರದ) ಪದಾರ್ಥಗಳ ಸರಕು, —ಮಾಲು : ಎತ್ತೈದಜ ಮೇಲೆ ವಸ್ತುಭಂಡವ ತುಂಬಿ ನಿತ್ಯನಿರಾಳಪಟ್ಟಣದಲ್ಲಿಗೆ ಮುಕ್ತಿಸೋಪಾನಕ್ಕೆ ನಡೆಯೆಂದು (ಶಿವಗೀ. ೧೯೦-೯೪೯). [ಸಂ.]

**ವಸ್ತುಭಾವ** (ನಾ). ಸಹಜಭಾವ ; ನೈಜತೆ : ಸತ್ಯಕ್ಕೆ ನಿಜರೂಪಾಗಿ ಕೃತ್ಯಕ್ಕೆ ತಪ್ಪದೆ ವಸ್ತುಭಾವದಲ್ಲಿ ಇದ್ದಾತನ ಭಕ್ತಿ ನಿಃಕಳಂಕ ಮಲ್ಲಿಕಾರ್ಜುನನ ನಿಶ್ಚಯದ ನಿಜವಾಸ (ಮೋಳಿಮಾ. ೧೮-೬೭). [ಸಂ.]

**ವಸ್ತುಮಾಡು** (ಕ್ರಿ). ಕೃತಿರಚನೆಯ ಮುಖ್ಯಕಥಾವಿಷಯವನ್ನಾಗಿಸು : ಬೇಟಮನೆ ವಸ್ತುಮಾಡಿಯೆ ಕವಿತ್ವ ವರ್ಣಕಕವಿತ್ವ ಕಾಯತತ್ತ್ವವಿದನೆನಿಸಿದತಿವಿದಗ್ಧನೊರ್ವ ನಿಂತೆಂದಂ (ಆದಿಪು. ೧೨-೨೨ ವ). [ವಸ್ತು + ಮಾಡು]

**ವಸ್ತುಯುದ್ಧ (ನಾ).** ಯುದ್ಧವೇ ಪ್ರಧಾನಕೃತಿವಸ್ತುವಾದುದು : ಗಾಂಧಾರಿಯ ಪುತ್ರರೊಳ್ ಮೊದಲಿಗಂ ದುರ್ಯೋಧನಂ ಧರ್ಮಯುದ್ಧದೊಳಂತಾತನನಿಕ್ಕಿ ಕ್ರೋಂದನವಜಿಗ್ ಭೀಮಂ ಜಯೋದ್ದಾಮನೆಂಬುದನೆಂಬಂತಿದು ವಸ್ತುಯುದ್ಧಮೆನಿಸಲ್ ಪೇಳ್ದಂ ಗದಾಯುದ್ಧಮಂ (ಗದಾಯು. ೧-೩೩) ; "ವಸ್ತುಯುದ್ಧಂ — ಯುದ್ಧವಿರೂಪಣೆಯೇ ಪ್ರಧಾನವಸ್ತುವಾದ ಕಾವ್ಯ(?)" (ಗದಾಸಂ. ೯೩ ಟಿಪ್ಪಣಿ). [ಸಂ.]

**ವಸ್ತುವಾಚಕ (ನಾ).** [ವ್ಯಾಕ] ಭಾವನಾಮವಲ್ಲದ ನಾಮವಾಚಕ : ಭಾವನಾಮವನ್ನೇ ಒಂದು ಸ್ವತಂತ್ರವಾದ ವರ್ಗವಾಗಿ ಇಟ್ಟುಕೊಂಡು, ಮಿಕ್ಕ ನಾಮವಾಚಕಗಳನ್ನೆಲ್ಲಾ 'ವಸ್ತುವಾಚಕ'ಗಳೆಂದು ಕರೆಯುವುದುಂಟು (ಮಧ್ಯಮ. ೨೭). [ಸಂ.]

**ವಸ್ತುವಿದ (ನಾ).** ತತ್ತ್ವವನ್ನು ತಿಳಿದವನು : ವಸ್ತುವಿದರ್ ನಿನ್ನವೋಲಾರ್ ಪೆಱರ್ ಭುವನದೊಳ್ ಶಬ್ದಂದಧಾತ್ರೀಶ್ವರಾ (ಆದಿಪು. ೧೩-೫೮). [ಸಂ.]

**ವಸ್ತುವಿದ್ಯೆ (ನಾ).** ಕಾವ್ಯಲಕ್ಷಣದ ಕಲೆ (?) : ಪುದಿದ ಜಸಂ ಪೊದಟ್ಟ ಚಳಮೊಂದಿದಳಂಕೃತಿ ಕೃತ ದೇಸಿಯೆಂಬುದನೆನೆ ವಸ್ತುವಿದ್ಯೆಯೆನೆ ಕಬ್ಬಮೆ ಮುನ್ನಮವಂತಿವಲ್ಲದಲ್ಲದೆ ಪೆಱವಿಲ್ಲ ಕಬ್ಬಮೆನೆ ಮುನ್ನಿನ ಕಬ್ಬಮನೆಲ್ಲಮಿಕ್ಕಿ ಮೆಟ್ಟಿ ಮಿಪ್ಪ ಸಮಸ್ತಭಾರತಮುಮಾದಿಪುರಾಣಮಹಾಪ್ರಬಂಧಮುಂ (ಪಂಪಭಾ. ೧೪-೫೧); "ವಸ್ತುವಿದ್ಯೆಯೆನೆ — ಶಿಲ್ಪವಿದ್ಯೆಯೆನಲು (?)" (ಪಂಪದೀ. ೫೭೬). 'ವಸ್ತುಕಾವ್ಯ', 'ವಸ್ತುಕೃತಿ' ಪರಾ. [ಸಂ. ವಸ್ತುವಿದ್ಯಾ]

**ವಸ್ತುಸಂಗ್ರಹಾಲಯ (ನಾ).** ಅಪೂರ್ವವಾದ ಪದಾರ್ಥಗಳನ್ನು ಪ್ರದರ್ಶನಕ್ಕಾಗಿ ಸಂಗ್ರಹಿಸಿಡುವ ಸ್ಥಳ ; ಮ್ಯೂಸಿಯಂ : ವಸ್ತುಸಂಗ್ರಹಾಲಯಗಳಲ್ಲಿ ಇಡಲಾಗಿರುವ ಅವರ ಶಿಲ್ಪಕೃತಿಗಳು . . . ಉತ್ತಮಮಾದರಿಗಳಾಗಿವೆ (ನೊಳಂಬ. ೭೪) ; ಈ ಅವಶೇಷಗಳನ್ನು ಕಾಯ್ದು ಪ್ರದರ್ಶಿಸುವುದಕ್ಕಾಗಿಯೇ ಒಂದು ಪ್ರಾಚ್ಯ ವಸ್ತುಸಂಗ್ರಹಾಲಯವನ್ನು ಈಗ ನಿರ್ಮಿಸಿದ್ದಾರೆ (ಕವಿಕೋ. I, ೧೬೦). [ಸಂ.]

**ವಸ್ತುಸ್ತವ (ನಾ).** (ಮಹಾಪುರುಷನ) ಚರಿತ್ರೆಯನ್ನು ಕುರಿತ ನಿರೂಪಣೆಯಿರುವ ಸ್ತೋತ್ರ : ಫಣಿಪ್ರಭುಗಾಮೆತ್ತಮುತ್ತಳಗಮಲ್ತೆ ರೂಪಸ್ತವಂ ಗುಣಸ್ತವಮುದಾತ್ತವೃತ್ತ ಭವದೀಯ ವಸ್ತುಸ್ತವಂ (ಆದಿಪು. ೧೩-೯೦); ವಸ್ತುಸ್ತವ ರೂಪಸ್ತವ ಗುಣಸ್ತವಂಗಳಿಂದ್ರಂ ಭವರಿಪುವಂ ಸ್ತುತಿಯಿಸಿ (ಪುಷ್ಪಪು. ೧೧-೫೮). 'ಗುಣಸ್ತವ' ಪರಾ. [ಸಂ.]

**ವಸ್ತುಸ್ಥಿತಿ (ನಾ).** ೧. ವಾಸ್ತವ ಸಂಗತಿ ; ನಿಜವಾದ ಸ್ಥಿತಿ : ತಱಿಸಂದು ಪಲವುಕೊಱಿದಿಂ ಕೆಱೆದಿರೆ ಸೆಗಟ್ಟಿದ್ದುರ್ದೊಂದು ವಸ್ತುಸ್ಥಿತಿಯಂ ಮಱಿಸಿ ಪೆಱತೊಂದು ಮಾಟ್ಕೆಯನಱಿಪುವುದುತ್ಪ್ರೇಕ್ಷೆಯೆಂಬುದಿಂತದಱ ತೆಱಂ (ಕವಿರಾ. ೩-೧೧೪) ; ನೀನು ನಿಜವಾಗಿಯೂ ವಸ್ತ್ರ ಮಗನೇ ಎಂಬ ವಸ್ತುಸ್ಥಿತಿ ಇತ್ತೀಚೆಗೆ ನನಗೆ ತಿಳಿಯಿತು (ಕಮ್ಮಪು.೧೧೬). ೨. [ಜೈನ] ಜೀವಾದಿ ತತ್ತ್ವ, ಲೋಕಸ್ವರೂಪ ಮೊದಲಾದುವುಗಳ ಯಥಾವತ್ತಾದ ನಿರೂಪಣೆ : ಭರತಂ ಬೆಸಗೊಂಡಂ ಜಿನನವಿಳವಸ್ತುಸ್ಥಿತಿಯಂ (ಆದಿಪು. ೧೪-೬೨). [ಸಂ.]

**ವಸ್ತುಸ್ವಭಾವ (ನಾ).** ಒಂದು ಪದಾರ್ಥದ ನಿಜವಾದ ಗುಣ,— ಸಹಜಸ್ವಭಾವ : ವಸ್ತುಸ್ವಭಾವಕಥನಂ ವಾಸ್ತವಮುಪಮಾದ್ಯಶೇಷವಕ್ರೋಕ್ತಿ ವಿಪರ್ಯಸ್ತಂ ಸಮಸ್ತಲೋಕಮನಸ್ತೋಭನಕಾರಿ ಚಾರುತರಪುರುಷಾರ್ಥಂ (ಕಾವ್ಯಾವ.೩೧೬) ; ಕೈವಲ್ಯದೊಳಗಿದ್ದ ಸಿದ್ಧರು ವಸ್ತುಸ್ವಭಾವವೆಂದೀಕ್ಷಿಸುತಿಹರು ಜೀವಕಲ್ಲದೆ ಮುಕ್ತಿ ಪುದ್ಗಲಕಿಲ್ಲ ನಿರ್ಜೀವತತ್ವವಿದು ನಿಶ್ಚಯಿಸು (ಭರತ. ೬೮-೪೫). [ಸಂ.]

**ವಸ್ತೂತ್ಪ್ರೇಕ್ಷೆ (ನಾ).** [ಕಾವ್ಯಮೀ] ಯಾವುದಾದರೊಂದು ವಸ್ತುವನ್ನು ಉತ್ಪ್ರೇಕ್ಷಿಸಿ ಹೇಳುವ ಒಂದು ಅಲಂಕಾರ : ವಸ್ತುಸ್ವರೂಪದಿಂದೊಂದು ವಸ್ತುವಂ ಪೆಱತೊಂದು ವಸ್ತುವೆಂದೆನೆ ವಸ್ತೂತ್ಪ್ರೇಕ್ಷೆ (ಅಪ್ರತಿ. ೪೯-೧೮);ಆವುದಾನೊಂದು ವಸ್ತುವಿಗೆ ವಸ್ತ್ವಂತರ ತಾದಾತ್ಮ್ಯಸಂಭಾವನಾ ಪೇಳಲ್ಕೆ ವಸ್ತೂತ್ಪ್ರೇಕ್ಷಾ (ಕುವಲ. ೨೭). [ಸಂ. ವಸ್ತೂತ್ಪ್ರೇಕ್ಷಾ]

**ವಸ್ತೂಪಮಾನ (ನಾ).** [ಕಾವ್ಯಮೀ] ಉಪಮಾಲಂಕಾರಗಳಲ್ಲಿ ಒಂದು ವಿಧ : ವನರುಹದಂತೆ ಮುಖಂ ಲೋಚನಮೆಸೆವುತ್ಪಳದವೋಲ್ ತಳಂ ತಳಿರಂತೆಂದನುರೂಪಮಾಗಿ ಪೇಳ್ದೊಡದೆನಸುಂ ವಸ್ತೂಪಮಾನಮೆಂಬುದು ಪೆಸರಿಂ (ಕವಿರಾ. ೩-೬೦). [ಸಂ.]

**ವಸ್ತೂಪಮೆ (ನಾ).** = ವಸ್ತೂಪಮಾನ : ವಸ್ತೂಪಮೆಗೆ : ಅಳಿಕುಳದಂತಳಕಚಯಂ . . . ಬೆಡಂಗುವೆತ್ತು ತೋರ್ಕುಂ ಸತಿಯಾ (ಕಾವ್ಯಾವ. ೬೬೯). [ಸಂ. ವಸ್ತೂಪಮಾ]

**ವಸ್ತ್ಯ (ನಾ).** ವಾಸಿಸುವ ಸ್ಥಳ ; ನಿವಾಸ ; ಮನೆ : "ಆವಾಸಃ . . . ವಸ್ತ್ಯಂ . . . ಆಲಯಃ — ಈ ೩೧ ಮನೆ" (ಹಲಾಯು. ೪೯-೧೩೭). [ಸಂ.]

**ವಸ್ತ್ರ (ನಾ).** ೧. ಬಟ್ಟೆ ; ಅರಿವೆ : ದಾಸ ತನ್ನ ವಸ್ತ್ರವ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ (ಬಸವ. ೬೮೦); ದುಕೂಲವನುಗಿದು ಹಾಯ್ಕಿದರಿದ್ದರಿವರೊಂದೊಂದು ವಸ್ತ್ರದಲಿ (ಕುಮ್ಮಾಸ. ೧೪-೧೦೧). ೨. ಉಡುಪು ; ಉಡುಗೆ. [ಸಂ.]

**ವಸ್ತ್ರಗಾಣಿಕೆ (ನಾ).** ಪುಡಿ ಅಥವಾ ದ್ರವಪದಾರ್ಥವನ್ನು ಬಟ್ಟೆಯ ಮೂಲಕ ಶೋಧಿಸುವಿಕೆ ; ಸೋಸುವಿಕೆ: ಕಿರುನೆಲ್ಲಿ ಸಹಮೂಲವನ್ನು ತಂದು ನೆರಳಲ್ಲಿ ಒಣಗಿಸಿ ನೆಗ್ಗಿಲು ಸಹಮೂಲವನ್ನು ಅದೇ ರೀತಿ ಒಣಗಿಸಿ ಇಡಿದು ವಸ್ತ್ರಗಾಣಿಕೆ ಮಾಡಿ ಇಟ್ಟುಕೊಳ್ಳುವುದು (ಕಾಮಶಾ. ೨೬೫). [?./ ಮರಾ. ವಸ್ತ್ರಗಾಳ]

**ವಸ್ತ್ರಗಾಲಿತ, ವಸ್ತ್ರಗಾಳಿತ (ನಾ).** = ವಸ್ತ್ರಗಾಣಿಕೆ : ಬರಿ ಇದ್ದಲಿನ ಪುಡಿಯನ್ನು ವಸ್ತ್ರಗಾಲಿತ ಮಾಡಿ ಅದಕ್ಕೆ ನೀರು, ಗೋಂದು, ಸಕ್ಕರೆ ಮುಂತಾದುವನ್ನು ಹದವರಿತು ಬೆರಸಿ ಮಸಿಯನ್ನು ಮಾಡುತ್ತಿದ್ದುದೂ ಉಂಟು (ಕನ್ನಸಂ. ೪೪). ವಸ್ತ್ರಗಾಳಿತ : ನೆಲದಾಳ, ತುಱುವೆ, ನೆಗ್ಗಿಲು . . . ಇವಂ ವಸ್ತ್ರಗಾಳಿತವ ಮಾಡಿ (ವಿಷ್ಣುವಿ. ೪೯) ; ಚವ್ಯ, ಉಳ್ಳಿ, ಇಲ್ಲಣ ಇವುಗಳನ್ನೆಲ್ಲಾ . . . ಚೂರ್ಣಿಸಿ ವಸ್ತ್ರಗಾಳಿತವಂ ಮಾಡಿ ಹಾಕಿ ಪಾಕದಲ್ಲಿಳುಹಿಕೊಂಡು (ಸಕವೈ. ೭೧). [ಸಂ.]

**ವಸ್ತ್ರಗಾಳಿತ** 'ವಸ್ತ್ರಗಾಲಿತ' ನೋ.

**ವಸ್ತ್ರಗಾಳಿಸು (ಕ್ರಿ).** ಪುಡಿ ಅಥವಾ ದ್ರವಪದಾರ್ಥವನ್ನು ಬಟ್ಟೆಯ ಮೂಲಕ ಶೋಧಿಸು ,— ಸೋಸು : ಶುಂಠಿ ೨ ಸೇ ಲೋಹಭಸ್ಮ ಪಡಿ ೧ ಎಲ್ಲವನ್ನೂ ಚೂರ್ಣಮಾಡಿ ವಸ್ತ್ರಗಾಳಿಸಿ ಲೇಹ್ಯಪಾಕ ಮಾಡಿ . . . ಸೇವಿಸುವುದರಿಂದ ಕಾಸ, ಶ್ವಾಸ . . . ಗುಣವಾಗುವುವು (ಸಕವೈ. ಪು. ೪೩೯). [ವಸ್ತ್ರ + ಗಾಳಿಸು$_2$]

**ವಸ್ತ್ರದಾನ (ನಾ).** ಬಟ್ಟೆಯನ್ನು ಧರ್ಮಾರ್ಥವಾಗಿ ನೀಡುವಿಕೆ : ಆದರದಿಂ ಗೋದಾನಂ ಸ್ತ್ರೀದಾನಂ ವಸ್ತ್ರದಾನಂ . . . ಶ್ರೀದಾನಂಗುಡುತುಮೊಪ್ಪಿದಂ ಗಿರಿರಾಜಂ (ಗಿರಿಕ. ೩-೬೩); ಓವಿ ಗುಂಡಯ್ಯಂಗೆ ಹರೆಯವನೀವ ಠಾವಿನೊಳಾವ ಗರಳಗ್ರೀವಸಹಿತಂ ಹೋದೆ ದಾಸನ ವಸ್ತ್ರದಾನಕ್ಕೆ (ಬಸಪು. ೨೪-೭೨). [ಸಂ.]

**ವಸ್ತ್ರನಿವಾಳಿ (ನಾ).** ಬಟ್ಟೆಯಿಂದ ಇಳಿತೆಗೆದು ದೃಷ್ಟಿ ನಿವಾಳಿಸುವುದು : ಕಾಮಿನಿಯರುಪ್ಪಾರತಿಗಳಭಿರಾಮವಸ್ತ್ರನಿವಾಳಿ ರತ್ನಸ್ತೋಮ ಬಣ್ಣದ ಸೊಡರು ಸುಳಿದವು ಹರುಷದೊಗ್ಗಿನಲಿ (ಕುಮ್ಮಾವಿ. ೯-೨೭). [ಸಂ.]

**ವಸ್ತ್ರಭಿನ್ನಕ (ನಾ).** ಬಟ್ಟೆಯನ್ನು ಕತ್ತರಿಸುವವನು ; ಸಿಂಪಿಗ : ಹರುಷಂದಳೆದು ಕರೆ ಎನೆ ಕರೆದು ತಂದರು ವಸ್ತ್ರಭಿನ್ನಕನ (ಶಂಕರಾ. ೭-೬೬); ಇಂಥ ಚಿತ್ರಪತ್ರವನ್ನು ಹೊಲಿಯುವ ವಸ್ತ್ರಭಿನ್ನಕನಾಗಿ ಶಂಕರದಾಸಿಮಯ್ಯ ಸಂತೋಷಸಾಮ್ರಾಜ್ಯವನ್ನು ಸೂರೆಗೊಂಡಿದ್ದನು (ಶರಚ. ೫೫). [ಸಂ.]

**ವಸ್ತ್ರಮೃಗ (ನಾ).** ಕೊಳೆಬಟ್ಟೆಯಲ್ಲಿ ಉತ್ಪತ್ತಿಯಾಗುವ ಒಂದು ಬಗೆಯ ಕ್ರಿಮಿ ; ಕೂರೆ : ಡುಂಡುಕನೆಂಬ ತಿಗುಣೆ ಮಾಡಿದ ದೋಷದಿಂ ಮಂದವಿಸರ್ಪಿಣಿಯೆಂಬ ವಸ್ತ್ರಮೃಗಂ ಕೆಟ್ಟುದು (ಪಂಚತಂ. ೧೨೨-೧೭). [ಸಂ.]

**ವಸ್ತ್ರಾಂಗ (ನಾ).** [ಜೈನ] ದಶಾಂಗಕಲ್ಪಕುಜಗಳಲ್ಲಿ ಒಂದು ; ಬಯಸಿದ ಬಟ್ಟೆಯನ್ನು ನೀಡುವುದೆಂದು ಭಾವಿಸಲಾದ ಮರ : ಭಾಜನಾಂಗದ ವಸ್ತ್ರಾಂಗದ ಭೂಷಣಾಂಗದಳವಂ ಚಕ್ರೇಶ್ವರಂ ತಾಳ್ದಿದಂ (ಆದಿಪು. ೪-೩೫) ; ಗೀರ್ವಾಣವ್ರಜಂ ತಂದು ನೀಡಿದ ವಸ್ತ್ರಾಂಗ ವಿಭೂಷಣಾಂಗ . . . ದೀಪಾಂಗವೃಕ್ಷದ ದಿವ್ಯಾಂಬರದಿಂದಲಂಕರಣದಿಂ ಪೂಮಾಲೆಯಿಂದಂಗರಾಗದಿನುದ್ಭಾಜಿಸುವಂತು ಪೂಜಿಸಿದನಿಂದ್ರಂ (ಪುಷ್ಪಪು. ೧೨-೧೩). [ಸಂ.]

**ವಸ್ತ್ರಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ : ಸ್ಥಿರಸುಖದಿಂ ನಿಶ್ಚಲಾತ್ಮಕಮಾದಾಸನದಲ್ಲಿ ಸಿದ್ಧಾಸನ . . . ವಸ್ತ್ರಾಸನ . . . ಅರ್ಧಾಸನಾದಿ ಎಂಭತ್ತುನಾಲ್ಕು ಆಸನಭೇದಂಗಳು (ವಿವೇಕ. ೧೩೧). [ಸಂ.]

**ವಸ್ನ** (ನಾ). ೧. ವಾಸಿಸುವಿಕೆ. ೨. ಸಿರಿ ; ಸಂಪತ್ತು. ೩. ವೇತನ. ೪. ಬಟ್ಟೆ ; ಅರಿವೆ. ೫. ಚರ್ಮ ; ತೊಗಲು. ೬. ಬೆಲೆ ; ಕಿಮ್ಮತ್ತು : "ಮೂಲ್ಯಂ, ವಸ್ನಃ, ಅವಕ್ರಯಃ — ೩ ಬೆಲೆ, ಕ್ರಯದ ಕಿಮ್ಮತ್ತು" (ಸಿದ್ಧಾಂತಿ. ೨೯೭). ೭. ಸಾವು ; ಮರಣ. [ಸಂ.]

**ವಸ್ಸ** (ನಾ). ಮಳೆಗಾಲ ; ವರ್ಷಾಕಾಲ : ಮಳೆಗಾಲದಲ್ಲಿ ನಾಲ್ಕುತಿಂಗಳು ಮಾತ್ರ ಒಂದು ಕಡೆ ಮುನಿಗಳು ವಾಸಿಸಬೇಕು. ಇದಕ್ಕೆ 'ಚಾತುರ್ಮಾಸ್ಯ' ವೆನ್ನುತ್ತಾರೆ. (ಹಿಂದುಗಳಲ್ಲೂ ಈ ಪದ್ಧತಿ ಇದೆ. ಬೌದ್ಧರು ಇದನ್ನು 'ವಸ್ಸ' ಎಂದು ಕರೆಯುತ್ತಾರೆ. ವಸ್ಸ < ಸಂ. ವಾಸ) (ಕಶಾಅ. ೮೫). [< ಪ್ರಾ. ವಸ್ಸ./ ಸಂ. ವರ್ಷ]

**ವಸ್ಸಾವಾಸ** (ನಾ). ಮಳೆಗಾಲದ ನಾಲ್ಕು ತಿಂಗಳು ಒಂದೇ ಕಡೆಯಲ್ಲಿ ಮಾಡುವ ವಾಸ ; ಚಾತುರ್ಮಾಸ್ಯ : ಆಷಾಢದ ಹುಣ್ಣಿಮೆಯಿಂದ ಹಿಡಿದು ಮಾರ್ಗಶಿರದ ಹತ್ತನೆ ದಿನದ ತನಕ (ಜೂನ್ ಮಧ್ಯಭಾಗದಿಂದ ಅಕ್ಟೋಬರ್ ಮಧ್ಯದವರೆಗೆ) ಅವರು 'ವಸ್ಸಾವಾಸ' (= ವರ್ಷಾವಾಸ)ವನ್ನು ಪಾಲಿಸುತ್ತಿದ್ದರು (ಕಶಾಅ. ೮೫). [< ಸಂ. ವರ್ಷಾವಾಸ]

**ವಹ** (ನಾ). ೧. ಸರಕುಗಳನ್ನು ಹೊತ್ತು ಸಾಗಿಸುವಿಕೆ ; ಸಾಗಾಣಿಕೆ. ೨. ದಾರಿ ; ಮಾರ್ಗ. ೩. ವಾಹನ. ೪. ಗಾಳಿ. ೫. ಕುದುರೆ. ೬. ಎತ್ತಿನ ಹೆಗಲು : "ಸ್ಕಂದವೇಶಃ, ವಹಃ — ಈ ೨ ಹೆಗಲ್" (ಹಲಾಯು. ೪೪-೧೧೨). [ಸಂ.]

**ವಹಣಿ, ವಹವಣಿ, ವಹಳಿ$_1$** (ನಾ). ೧. ಬೆಡಗು ; ಒಯ್ಯಾರ : ಮಣಿದುಂಬಿವಿಂದು ಮುಂದೆ ಮಂಡಳಿಸಿ ಕಟ್ಟಿ ಬರೆ ಕಟ್ಟಿ ಒಂದು ರೂಪು ರೇಖೆವಡೆಯೆ . . . ನವಣಿ ಬಹುವಿಕೆವಡೆಯೆ ಬಹುವಿಧದ ವಹಣಿಯ ಮಾರಚಿತ್ರದ ಗತಿಗಳೊಳ್ ಮೆರೆದು (ಅನಂಪು. ೨-೨೮ ವ); ಸರಸಹಾಸ್ಯದ ಹಾಸಕದ ವಹ[ಪಾಠಾಂ. ದಹ, ಹವ]ಣಿಗಳ ವೈಸಿಕದ ಸರಳಿಸುವ ಕುಕ್ಕುರಕದಂಬದ ವಿರಚಿತಾಡಂಬರದ ನವಶಾಬರಿಯಿರ್ದೆದಿದರು (ತೊರರಾ. ೧-೫-೪೦). ೨. ನಡಗೆ ; ಗತಿ : ನಿಂದು ನಾನಾಪರಿಯ ವಹಣಿಗಳಿಂದ ತಾಳ ಸಮೇಳ ಸದ್ಗತಿಯಿಂದ . . . ಬಾರಿಸುತಿರ್ದನ್ನೆ ಹಲವಂದದಲಿ ಮದ್ದಳೆಯ (ಪ್ರಭುಲಿ. ೫-೯). ೩. ರೀವಿ ; ಗತ್ತು ; ವೈಖರಿ : ಚಾಣೂರಮುಖ್ಯರು ನಡೆದು ಬಹ ವಹ[ಪಾಠಾಂ. ಹವ]ಣಿಯ ತದಾಸ್ಥಾನವನು ಮೆಚ್ಚಿಸಿತು (ಸಾಳ್ವಭಾ. ೨೨-೫೭); ಹೂಡಿದನು ದಂಡೆಯನು ವಹಣಿಯ ಮಾಡುತವೆ ಚಾಣೂರಮಲ್ಲನು ರೂಢಿಸಿದ ನೀಳಾದ್ರಿಯೊಳು ತೊಡರುವವೊಲಿದಿರೊದಗೆ (ಸಾಳ್ವಭಾ. ೨೨-೬೫). ೪. ಪ್ರವಾಹ ; ಹರಿವು : "ವಹಣಿ — ವಹನ = ಪ್ರವಾಹ, ತೆರೆ" (ಶಬ್ದಕೋ. ೬೯). ೫. ಓಟ ; ಶೈಲಿ : ಕವಿತೆಯ ವ[ಪಾಠಾಂ. ರ]ಹಣಿ ಲೇಸ್ಸೆ (ತೊರರಾ. ೧-೨-೧೭). ೬. ಮಾರ್ಗ ; ಪದ್ಧತಿ : ನಮ್ಮ ಮಹಿಮೆಯ ಕೆಡಿಸಬೇಕೆಂಬುದಲ್ಲದೆ ಬೇಱೆ ವಹಣಿಯುಂಟೇ[ಪಾಠಾಂ. ವಹಿಣಿಯುಂಟೇ, ವಿಹರಿಸಲುಂಟೇ] ದಾನವಗೆ (ಕುರಾಸಾಂ. ೧೮-೧೬೧). ೭. ರೀತಿ ; ಬಗೆ : ಉದ್ರೇಕದಿಂದಲಿ ಸಿದ್ಧರಾಮನನೇಕ ವಹಣಿಯಲಣಕವಾಡುತಲಿರ್ದನಲ್ಲಮನ (ಪ್ರಭುಲಿ. ೧೩-೨೬); ಶೌರ್ಯದ ವಹಣಿ ಯೊಳ್ಮಾತುಂಟು ವಹಣಿ ವಿಹಿತೋಕ್ತಿಗಳಲೇನೆಂದ(ಕೋಗಯು. ೨೨-೧೦). ೮. [ಸಂಗೀತ] ಹಾಡುಗಾರಿಕೆಯ ಒಂದು ಪ್ರಕಾರ ;IP ಹೃದಯ, ಕಂಠ ಮತ್ತು ಶಿರಸ್ಸುಗಳಲ್ಲಿ ಹುಟ್ಟುವ ಮಂದ್ರ, ಮಧ್ಯ ಮತ್ತು ತಾರಗಳೆಂಬ ಸ್ಥಾನಗಳಲ್ಲಿ ಹುಟ್ಟಿ ಲೇಶಮಾತ್ರ ಸ್ಥಿರವಾಗಿ ಕಂಪಿಸುವ ಸ್ವರವಿಶೇಷ : ವಳಿ ವಹಣಿಯೊಳ್ಪೆರಸೆ ವಹಣಿ ತಿರುಪಿನೊಳೆಸೆಯೆ ಸುಳಿಸುಳಿದು ತಿರುಪು ಪೋಪಿಡೆಯೊಳಡಗುತ ಹೊಳೆಯೆ . . . ಪಂಚಮುಖದೊಳಗೆಲ್ಲ ಕೊಳಲ ದನಿ ತೊಳಲುತ್ತಿರೆ (ಅನಾರ. ದೇ. ೧೮೧-೨೨); ಗತಿ ಗಹಗಹಿಸಲ್ ಕಳಸೋನ್ನತಿ ಗಮಕಂ ವಹಣಿ . . . ಜತಿ ನೇವಣಿ ಮಿಗೆ ಸೊಂಪಾಹತ ಕಂಪಿತಮುಣ್ಮೆ ಪಾಡಿದಂ ಮುನಿಋಷಭಂ (ಏರವಿ. ೬-೯೦). **ವಹವಣಿ** : ೮. ವಳಿ ವಿಳಾಸಂಬಡೆಯೆ ವಹವಣಿ ಬಹಳಂಬಡೆಯೆ ತಿರಿಪು ತೊಮ್ಮೆವಡೆಯೆ . . . ಪಾಡುತ್ತಿರೆಯುಂ (ಶಾಂತೀಶ್ವ. ೧೭-೭೭ ವ). **ವಹಳಿ$_1$** : ೮. 'ವಹಳಿಕೆ' ಪರಾ. [< ಪ್ರಾ. ವಹಣ./ ಸಂ. ವಹನ./ ಮರಾ. ವಾಹಣ, ವಾಹಣೇ, ವಾಹಾಣ]

**ವಹನ** (ನಾ). ೧. ಹೊರುವಿಕೆ : ಬಳಿಕ ಕಡೆಯಲಿ ಹರಿಯ ವಹನವನೊಲಿದು ತಾ ಶ್ರೀಗರುಡನಾದನು ನಳಿನನಾಭಂಗಧಿಕಪ್ರೀತನು ಸುರಸಮೂಹದಲಿ (ಸಂಭಪು. ೫-೪೧). ೨. ಸಾಗಾಣಿಕೆ ; ರವಾನೆ. ೩. ಹರಿಯುವುದು ; ಪ್ರವಹಿಸುವುದು. ೪. ಸಾಗಾಣಿಕೆ ಹಾಗೂ ಸಂಚಾರದ ಸಾಧನ ; ವಾಹನ. ೫. ದೋಣಿ ; ಹರಿಗೋಲು. [ಸಂ.]

**ವಹನಕರ್ಮ** (ನಾ). ಹೊರುವಿಕೆ ; ಒಯ್ಯುವಿಕೆ : ವಹನಕರ್ಮ-ಆಯುಧ, ಕವಚ, ಧಾನ್ಯ ಮುಂತಾದುವನ್ನು ಹೊರುವುದು (ಕಶಾಅ. ೨೫೭). [ಸಂ. ವಹನಕರ್ಮನ್]

**ವಹನಪತ್ರ** (ನಾ). ಒಬ್ಬ ವ್ಯಕ್ತಿ ಯಾವುದೇ ಹಕ್ಕುಬಾಧ್ಯತೆಯನ್ನು ಮತ್ತೊಬ್ಬ ವ್ಯಕ್ತಿಗೆ ವರ್ಗಾಯಿಸುವ ಪತ್ರ : ವಿನಿಮಯಪತ್ರಗಳು, ಚೆಕ್ಕುಗಳು, ಪ್ರಾಮಿಸರಿ ನೋಟುಗಳು, ವಹನಪತ್ರಗಳು . . . ಇವುಗಳ ವಿಷಯದಲ್ಲಿ ಮುದ್ರಾಂಕಶುಲ್ಕದ ದರಗಳು (ಭಾಧಾನ. ೨೮೬). [ಸಂ.]

**ವಹಮಾನ$_1$** (ನಾ). ನಡತೆ ; ಚಾರಿತ್ರ್ಯ : ನಿಂದಿಸರಲೇ ಪ್ರಜೆಗಳೆನ್ನೆಗಂ . . . ಜಱೆದು ನಿಜವಂಶದೇಳ್ಗೆಯಂ ಕುಂದಿಸರಲೇ ಪೋಡಿಗಳೆದು ವಹಮಾನದೊಳ್ಪಂಧಿಸರಲೇ ಕೊಂಕುಕೊಂಚೆತಗಳನು (ಜೈಮಿಭಾ. ೧೮-೪೨); ಸಕಲಭೋಗವನೆಲ್ಲ ಭೋಗಿಸುತೆ ಸ್ತ್ರೀಯರ ಸುನಿಕರಕ್ಕೆ ಪಟ್ಟದಂಗನೆಯಾಗಿಯಿರುವೆನಲ್ ವಿಕಳತೆಯೊಳಿಂತು ವಹಮಾನವಿಲ್ಲದೆ ದಿಗಂಬರಿಯಾಗಿ ಪೋದಲ್(ಪ್ರಭುಪು. ೮-೭೦); ಮಾನಿಯಾದ ಮಹಾತ್ಮರಿಗೆ ವಹಮಾನವೇ ಕೇಳ್ ಸಂಚಿತಾರ್ಥಂ ಮಾನಮಿಗಾಗಳೆ ಪ್ರಾಣಮಿಹದೊಳು ಸುಖವ ಸಾರ್ಚುವುದು (ಶಂಕದಾ. ೧೨-೨೧). [< ವಹಣಿ]

**ವಹಮಾನ$_2$** (ನಾ). ದಾನ ; ಕೊಡುಗೆ (?) : ಸಂಕಿಮಯ್ಯನಾಯಕರುಂ ಮಹದೇವಭಟ್ಟರುಂ ತಮ್ಮ ಅಕಸಾಲದಲು ತಮಗೆ ದೀಪಾವಳಿಯ ಪರ್ವ್ವದಲುಡಲು ಕುಡುವ ವಹಮಾನಮಂ ಸವಕಟ್ಟುವ ಪನ್ನಿರ್ವ್ವರಿಗೆ ಬಿಟ್ಟರ್ (ಸೌಇಇ. XI-ii, ೧೮೭-೫; 1104); ತಂಮ ತಾಯಿಗೆ ತಪ್ಪಿದವರು ತಂಮ ವಹಮಾನವನು ಹದಿನೆಂಟು ಜಾತಿಗೆ ಕೊಟ್ಟವರು (ಎಕ. XI, ಹೊಳಲ್ಕೆ. ೧೧೨-೩೦; 1554). [?]

**ವಹಮಾನಿಕೆ** (ನಾ). ನಡತೆ ; ಚಾರಿತ್ರ್ಯ : ನೋಡಿದರೆ ಹಿತವೆ ಮಾತಾಡಲಮೃತದ ಸೋನೆ ಕೂಡೆ ವಹಮಾನಿಕೆಯ ನಟಿಸಿ ಜಗದೊಳಗೆ ಮಾಡದುದ ಮಾಡಿ ಕೆಡಿಸುವಳು (ಗುರುಟೀಲ. ೮-೮೫). [ವಹಮಾನ$_1$ + — ಇಕೆ]

**ವಹವಣಿ** 'ವಹಣಿ' ನೋ.

**ವಹಳಿ$_1$** 'ವಹಣಿ' ನೋ.

**ವಹಳಿ$_2$** 'ವಾಹಳಿ' ನೋ.

**ವಹಳಿಕೆ** (ನಾ). = ವಹಣಿ ೮ : ಠಾಯೆ ಲವಣಿ ವಹಳಿಕೆ ಡಾಳಂಗಳಕಾರ ಪರಂಪರೆಯ ಆಯತಿಯಿಂ ರಂಜಿಪ ತ್ರಿಸ್ಥಾನೋಪಾಯಸ್ವರದ ಚತುರ್ವಿಧದಂಡಿಯ ಗಾಯಕಿ ಪಾಡಿದಳತಿಚದುರಿಂದ (ಜಯಕಾ. ೧೪-೪೩). [ವಹಳಿ$_1$ (< ವಹಣಿ) + — ಇಕೆ]

**ವಹಿ** (ನಾ). ೧. ಜಮಾಖರ್ಚುಗಳನ್ನು ಬರೆದಿಡುವ ಪುಸ್ತಕ ; ಲೆಕ್ಕದ ಪುಸ್ತಕ ; ಕಡತ : ಅಂದವಳಿಯ ಗ್ರಾಮವನು ಕುಳವ ಕಡಿದು ನಾಡಿಗೆ ಉತ್ತಾರ ಕೊಟ್ಟು ಗೋವೆಗುತ್ತಿಯ ಕರಣೀಕರ ವಹಿಗೆ ಬರೆಸಿ (ಮೈಆರ. ೧೯೩೪, ೨೭-೧೧; 1430); ವಹಿಗಳೆಳುಹಿದವರರೆ ಸಂಗರಮಹಿಯ ಸೀಮಾವಳಯದಲಿ ತಹ ಬಹ ಕೃತಾಂತನ ದೂತರೇಕೆಯ ಕೋಳಲು ಪಿತೃಪತಿಯ (ತೊರರಾ. ೬-೪೫-೬೩). ೨. ಪುಸ್ತಕ ; ಹೊತ್ತಿಗೆ : ಭಕ್ತವಿಜಯವೆಂದ ಕೂಡಲೆ ಅದು ನಿಖಿಲಭಾರತೀಯ ಸಾಧುಸಂತರ ದಿವ್ಯಚರಿತ್ರೆಗಳ ವಿವರಣೆಯ ವಹಿ ಎಂಬ ಭಾವನೆ ನನಗಾಯಿತು (ಕಭವಿ. I, ಮುನ್ನುಡಿ). [<— ಮರಾ. ವಹೀ./ ಪ್ರಾ. ವಹಿಆ]

**ವಹಿಕ** (ನಾ). (ಮನುಷ್ಯನನ್ನು) ಹೊರುವವನು ; ವಾಹಕ : "ಮನುಷ್ಯರ ಹೊಱುವವರ್ ವಹಿಕರಕ್ಕು" (ಮಂಗರಾ. ೧೧೨-೬). [< ಸಂ. ವಾಹಿಕ]

**ವಹಿತ್ರ** (ನಾ). ದೋಣಿ ; ಹರಿಗೋಲು : ಸಿದ್ಧೇಷ್ವಶಿಷ್ಯನಿಕಾಯಕ್ಕೆ ವಹಿತ್ರಮೆಂದು ಪೊಗಟ್ಟುಂ ವಿದ್ವಜ್ಜನಂ ದುರ್ಗನಂ (ಪಂಚತಂ. ೧೦-೨೨); ಉತ್ತರಿಸಲ್ಕೊರ್ಚಿದಂ ಭವಜಲರಾಶಿಯಂ ದಶರಥಂ ಜಿನರೂಪವಹಿತ್ರಯಾತ್ರೆಯಿಂ(ಪಂರಾಮಾ. ೬-೬೬). [ಸಂ.]

**ವಹಿತ್ರಕ** (ನಾ). = ವಹಿತ್ರ. [ಸಂ.]

**ವಹಿನಿ, ವೈನಿ** (ನಾ). ಅಣ್ಣನ ಹೆಂಡತಿ ; ಅತ್ತಿಗೆ : ವಹಿನೀ, ವಹಿನೀ, ದಾದಾನ ಮಸಿದೌತಿ ಉರುಳಿ ಹೋಯಿತು (ಸ್ಮೃತಿಚಿ. ೫೯). **ವೈನಿ** : ವೈನಿ (ಅಣ್ಣನ ಹೆಂಡತಿ) - ವೈನಿ ಬಂದಳು (ಸುವರ್ಣ. ೩೨೫); ಅಂತೂ ಸುಂದರಕ್ಕ ನಡುವೆ ಬಂದು ಹೋದ ನಿಮಿತ್ತ ವೈನಿಯೊಡನೆ ಏನಾದರೂ ಮಾತನಾಡುವುದಕ್ಕೆ ಪ್ರವೇಶ ದೊರೆತಂತಾಯಿತು (ವೈನಿ. ೨೫).

[<— ಮರಾ. ವಹಿನೀ/ ಪ್ರಾ. ವಹುಣ್ಣೀ = ಗಂಡನ ಅಣ್ಣನ ಸೊಸೆ]

**ವಹಿಲ, ವೈಲ$_1$** (ನಾ). ಬೇಗ ; ತ್ವರೆ : ಏ ಮಲ್ಲಣಿ ಮಲ್ಲಣಿಯೆನುತಾ ಮಲ್ಲಣಕವಿವರಂ ವಹಿಲದೊಳ್ನಿಲ್ಲುದ್ದಾಮವಿಕಲತೆಯನಾಂತು (ಉದ್ಭಟ. ೧೨-೫೬); ಯಮುನಾ ವರನದಿಯ ತೀರಕ್ಕೆ ಬಂದನು ಭೀಷ್ಮ ವಹಿಲದಲಿ (ಕುಮ್ಯಾಳ. ೨-೨೬). **ವೈಲ$_1$** : ವೈಲಾದಿ ಮಿಗೆ ಶ್ರೀಲಕ್ಷ್ಮಿಯ ನೆನೆವುತಾ ರಾಯ ಬಂದನು ತನ್ನ ಪುರಕೆ (ಬಿಜ್ಜರಾ. ೩-೯೦); ನಿಲ್ಲದಲ್ಲಿಂದ ರಾಘವ ಪೊರಟು . . . ತೆರಳಿದಂ ಮಿಥಿಲಾಪುರಿಗೆ ವೈಲದೆ (ಪರಹು. ೨-೪).

[< ಪ್ರಾ. ವಹಿಲ್ಲ./ ಮರಾ. ವಹಿಲಾ./ ತೆಲು. ವೈಡಮು, ವೈಳಮು]

**ವಹಿಲತನ** (ನಾ). = ವಹಿಲ : ವಹಿಲತನಂ ಪದಗತಿಯಿಂ ಬಹುವಿಕೆ ಕೈಮಾಟ್ಪ ನವಣೆಯಿಂ ಸುಚರಮಿವಂ ಬಹುಭಂಜನೆಯೊಡ್ಡಣದಿಂದಹವುಹಮಿಕೆ ಮಿಕ್ಕು ಮೆಱೆದುವಿರ್ವರ ಮೆಯ್ಯೊಳ್ (ಅನಂಪು. ೧೧-೫೯). [ವಹಿಲ + – ತನ]

**ವಹಿವಾಟ್** ‘ವಹಿವಾಟು’ ನೋ.

**ವಹಿವಾಟ್‌ದಾರ** (ನಾ). ಜಮೀನಿನ ವ್ಯವಹಾರವನ್ನು ನೋಡಿಕೊಳ್ಳುವವನು ; ಹಿಡುವಳಿದಾರ : ನದೀ ಅಥವ ಕಾಲುವೆ ದಡದಲ್ಲಿರುವ ನಂಬರುಗಳ ವಹಿವಾಟ್‌ದಾರರಾದವರಿಗೆ ನದೀದಡದಲ್ಲಿರುವಂತ ಜಮೀನಿನ ಪೈಕಿ ಕೆಲ ಗುಂಟೆ ಭೂಮಿಯನ್ನು ಸಾಗುವಳಿಮಾಡುವ ಹಕ್ಕುಂಟು (ಭೂಮಿಅ. ೩೭).

[ವಹಿವಾಟ್ (< ವಹಿವಾಟು) + – ದಾರ$_4$]

**ವಹಿವಾಟ** ‘ವಹಿವಾಟು’ ನೋ.

**ವಹಿವಾಟಿ** ‘ವಹಿವಾಟು’ ನೋ.

**ವಹಿವಾಟಿಸು** (ಕ್ರಿ). ಬಳಸು ; ವ್ಯವಹರಿಸು : ಪಟ್ಟಣವು ತುಂಬಿದಾಗ ಇದರಲ್ಲಿ ಅರಕಿಲ್ಲೆ ಹೊರ್ತಾಗಿ ೩೩ ಪೇಟೆಗಳಿದ್ದವು. ಅವುಗಳಲ್ಲಿ . . . ೨೩ ಪೇಟೆಗಳ ಹೆಸರುಗಳನ್ನು ಮ್ಯುನಿಸಿಪಾಲಿಟಿಯವರು ಈಗ್ಯೂ ವಹಿವಾಟಿಸುತ್ತಾರೆ (ಕಭಾಗ. ೫೨೯).

[ವಹಿವಾಟು + – ಇಸು$_3$]

**ವಹಿವಾಟು, ವಹಿವಾಟ್, ವಹಿವಾಟ, ವಹಿವಾಟಿ, ವೈವಟ್ಟು, ವೈವಾಟ, ವೈವಾಟಿ, ವೈವಾಟು** (ನಾ). ೧. ಕಾರ್ಯಭಾರ ; ಕಾರುಭಾರು ; ವ್ಯವಹಾರ : ಗೋಬಿಲೆಕುಟುಂಬದ ಎಲ್ಲಾ ವಹಿವಾಟನ್ನು ಮಾಮಾನೇ ನೋಡಬೇಕಾಯಿತು (ಸ್ಮೃತಿಚಿ. ೩೦); ಈಗ ಅವರ ಮಗನು ಊರಿನಲ್ಲಿ ವಹಿವಾಟನ್ನು ನೋಡಿಕೊಳ್ಳುತ್ತಿದ್ದಾನೆ (ವಂಶವೃ. ೩೭). ೨. ಬಳಕೆ ; ರೂಢಿ : ‘ವಹಿವಾಟಿಸು’ ಪರಾ. **ವಹಿವಾಟ್** : ೧. ‘ವಹಿವಾಟ್‌ದಾರ’ ಪರಾ. **ವಹಿವಾಟ** : ೧. ಕೋರ್ಟು ಕಚೇರಿ ವಹಿವಾಟ ಇದ್ದಾಂಗ ಕಾಣೂದಿಲ್ಲ (ಗ್ರಾಮಾಯ. ೩೩೫). ೨. ನಿತ್ಯದ ವಹಿವಾಟದ ದಾರಿ. ರಾತ್ರಿಯಾದರೇನಾಯಿತು . . . ದನ ಹಿಂಡುವ ಹೊತ್ತಿಗೆ ಮನೆ ಮುಟ್ಟುತ್ತೇನೆ (ಶ್ಯಾಮತಾ. ೧೩). **ವಹಿವಾಟಿ** : ೨. ನಮ್ಮನೀಗೆ ಬಾರೋ ಅಂದರ ಮೊದಲಿಂದನ ವಹಿವಾಟೀ ಅಂತ ಆ ಮಲ್ಲೇಶಿ ಮನಿಗೇ ಹ್ವಾದ (ನಡೆದಾ. I, ೨೭೭). **ವೈವಟ್ಟು** : ೧. ಪೇಷ್ವೆಯಾಗಿ ನೇಮಿಸಿ ರಾಜ್ಯದ ವೈವಟ್ಟನ್ನು ಅವರ ಕೈಗೆ ಬಿಡುತ್ತೇನೆ (ಮುಹುಗ. ४೯); ರಾಮಯ್ಯಗೌಡರು ಮನೆ ವೈವಟ್ಟಿನ ಗೋಜಿಗೇ ಹೋಗುವುದಿಲ್ಲವಂತೆ (ಕಾನೂರು. ೫೯೩). **ವೈವಾಟ** : ೧. ಮನೇ ವೈವಾಟವೆಲ್ಲವನ್ನು ಅವನ ಮಗನೇ ನೋಡಿಕೊಂಡು ಹೋಗುತ್ತಾನೆ (ಎಮುಕ. ೧); ಆ ಕಾಲದಲ್ಲಿ ಈಗಿನಂತೆ ವ್ಯಾಪಾರ ವೈವಾಟದ ಅನುಕೂಲತೆಗಾಗಿ ದೊಡ್ಡ ದೊಡ್ಡ ಬ್ಯಾಂಕುಗಳು ತಲೆಯೆತ್ತಿದ್ದಿಲ್ಲ (ಏಥಿವೈ. ೩೩). **ವೈವಾಟಿ** : ೧. ಅವನ — ಶ್ಯಾಮರಾಯನ ವೈವಾಟ ಬೆಳೆದಿತು (ದೀಪಹ. II, ೧೪೩). **ವೈವಾಟು** : ೧. ದೇವಸ್ಥಾನದ ವೈವಾಟು ನೋಡುತ್ತಾರೆ (ಸಂಸ್ಕಾರ. ೧೩೦); ನಾನು ಒಂದು ವೇಳೆ ಬಾರದಿದ್ದರೆ ನನ್ನ ವೈವಾಟುಗಳೆಲ್ಲ ನಿಮ್ಮ ಕೈಯಲ್ಲಿ ಭದ್ರವಾಗಿದೆ (ನಿಷ್ಕಾಮ. ೧೫೧).

[<— ಮರಾ. ವಹಿವಾಟ್, ವಹಿವಟ್]

**ವಹಿಸು** (ಕ್ರಿ). ೧. ಸಾಗು ; ಮುಂದುವರಿ : ಕವಿತೆಯ ವಹಣಿ ಲೇಸ್ಸೆ ಶೋಕಮುಖಿ ಸನ್ನಿಹಿತ ತಚ್ಛ್ಲೋಕಪ್ರಬಂಧಸುಕಾವ್ಯರಚನೆಯಲಿ ವಹಿಸಲೀ ಪದ್ಧತಿ ಪರಿಶ್ರುತವಹುದು (ತೊರರಾ. ೧-೨-೧೭). ೨. ಹರಿ ; ಪ್ರವಹಿಸು : ಹಲವು ಸಮತಲದೆ ವಹಿಸುತಲೆ, ಪ್ರಪಾತದಲೆ ಇಳಿದು ನೆಲ ಮೆಟ್ಟಿ ಭೈರವನ ತೆರೆ ಮೊರೆದು (ಕಎಪು. ೩೧-೩). ೩. (ಗಾಳಿಯಂತೆ) ಬೀಸು ; ತೀಡು ; ಸುಳಿ : ಚಿನ್ನ ಬೆಳ್ಳಿಗಳ ತುಂಗಘಟದೊಳ್ವಹಿಪ ಸಿಲ್ಪ ದಶಾಂಗಮುಖ್ಯದ ಸಱುವೊಗೆಗಳಿಂ ತೊಂಗಲಿಪ ಸರಘಂಟೆಯಿಂ ಮೆಱೆವುದನರಸ ಕಂಡ (ಸಾಳ್ವಭಾ. ४-४೧). ४. ನಿರ್ಣಯಿಸು ; ನಿರ್ಧರಿಸು : ಮಹಿಜೆಯಮಳಾಭರಣಗಳು ತಾನಹವೆ ನೋಡೆನಲೊಗುವ ದೃಗುವಾರಿಗಳ ಧಾರೆಯಲಿ ಅಹುದಿದಲ್ಲೆಂಬೆಣಿಕೆ ಮನದಲಿ ವಹಿಸಲರಿಯದೆ ನೂಪುರಂಗಳಿವಹುದೆನುತ ಕೆಲತೆಗೆದು ತಲೆಗುತ್ತಿದನು ಸೌಮಿತ್ರಿ (ತೊರರಾ. ४-೨-೮). ೫. ತಾಳು ; ಕೈಗೊಳ್ಳು : ಜಗದೊಳ್ಸ್ವಧರ್ಮಮಂ ವಹಿಸ ದವರಾರು (ಜೈಮಿಭಾ. ೮-४४); ಮನೆಯ ಯಾವ ಭಾಗದಲ್ಲಿಯೂ ಆಹಾರವಸ್ತುಗಳು ಬಿದ್ದಿರದೆ ಚೊಕ್ಕಟವಾಗಿರುವಂತೆ ಜಾಗರೂಕತೆ ವಹಿಸುವುದು ಮುಖ್ಯ (ಅಡುಸಾ. ४೯). ೬. (ಕಾರ್ಯಭಾರವನ್ನು ಬೇರೆಯವರಿಗೆ) ಒಪ್ಪಿಸು ; ಪರಭಾರೆ ಮಾಡು : ಅಹುದಕ್ಕ ನೀವು ಹಿತವೆಯನೆನಗೆ ನಿಮ್ಮ ಮಹಿಪನೊಬ್ಬನೆ ಹಿತವಲ್ಲ ವಹಿಸಿಬಿಟ್ಟೆನ್ಮ್ ಹೋರಿಸುತ ತಾ ನೋಡುತುತ್ಸಾಹದೊಳಿದ್ದಪನು (ಭರಚ. ೧४-೮೭); ಯಾರಿಗಾದರೂ ವಹಿಸಿದರೆ ಆಯ್ತು (ಮುನಿಮಾ. ೮೦). ೭. ಅಂಗೀಕರಿಸು ; ಒಪ್ಪಿಕೊಳ್ಳು : ಮಗಳು ಕಿಟ್ಟಿಯ ಪಕ್ಷವನ್ನು ವಹಿಸಿದ್ದನ್ನು ಕಂಡು ರಾಯರು ತಮ್ಮ ಮನಸ್ಸಿನಲ್ಲಿಯೇ ನಗ ಹತ್ತಿದರು (ದಾಸಹು. ೭४). ೮. ಘಟನೆ, ಸಂದರ್ಭ ಮುಂತಾದುವುಗಳ ಕಾರ್ಯಭಾರವನ್ನು ಹೊರು : ಅವನು ಒಂದು ಸ್ತ್ರೀಪಾತ್ರವನ್ನು ವಹಿಸಿದ್ದನು (ಬೆಟ್ಟಹೊ. ೧೬). ‘ಪಾತ್ರವಹಿಸು’ ಪರಾ.

ವಹಿಸಿಕೊಡು = ಹೊರುವಂತೆ ಮಾಡು ; ಹೊರಿಸು : ಇದು ನಮ್ಮ ತಂದೆ ನನಗೆ ವಹಿಸಿಕೊಟ್ಟಿರುವ ಕೆಲಸ (ವಚಭಾ. ೩). **ವಹಿಸಿಕೊಳ್ಳು** = ೧. ಒಪ್ಪಿಕೊಳ್ಳು ; ಅಂಗೀಕರಿಸು : ಸಹಜಮೆಂದಂ ಶುಂಭನೊಪ್ಪಿದಂ ಶರಭನದನಹುದೆಂದನಂಧಕಾಸುರನುಳಿದರೆಲ್ಲರುಂ ವಹಿಸಿಕೊಂಡರ್ ಗಗನಮೂರ್ಧ್ನಿಮತಮೇ ತಮ್ಮ ಮತಮೆಂದು (ಚೆಬಪು. ೫೦-೮). ೨. ಪಕ್ಷಹಿಡಿ ; ಪಕ್ಷವನ್ನು ಸಮರ್ಥಿಸು : ಸುದೇಷ್ಣೆ . . . ತಮ್ಮನನ್ನು ವಹಿಸಿಕೊಂಡು ಮಾತನಾಡಿದಳು (ನೀತಿಚಂ. IX, ೮); ಸಾವಿತ್ರಮ್ಮನವರು . . . ವಹಿಸಿಕೊಂಡು ಬರುತ್ತಿದ್ದುದರಿಂದ ಹೆಚ್ಚಾಗಿ ಅವಳನ್ನು ದಂಡಿಸುವುದೂ ಸಹ ಸಾಧ್ಯವಿಲ್ಲವಾಗುತ್ತಿತ್ತು (ಕೊನಬೇ. ೩೯). [ವಹನ + – ಇಸು$_3$]

**ವಹುದು** ‘ವರ್’ ಪರಾ.

**ವಹ್ನಿ** (ನಾ). ೧. ಬೆಂಕಿ ; ಕಿಚ್ಚು : ವಹ್ನಿ ಧರೆಯೊಳಗೆ ತೀವಿದ ಚಿಹ್ನಮಿದೆಂಬಂತೆ ಬಿಸಿಲ ಬೇಗೆ ಕರಂ ಮಧ್ಯಾಹ್ನದೊಳಳುರ್ದೊಡೆ (೧೧ಕ. ೯-೨೦); ಮುನಿಯು ತನ್ನರ್ಧ ಕಾವನವರಿಗೆ ಕೊಟ್ಟು ಬಲುವಹ್ನಿ ಪುಟ ಮಾಡಿ ಬಿಲ್ಲನೇಱಿಸಿಕೊಂಡು ನೆಲದಲ್ಲಿ ಕಾಯ್ದಿರ್ದು ಶುಕ್ರನುದಿಸಲು ಬೆಳಗಿತೆಂದು ನಿದ್ರಿಸಲು (ಪ್ರಾಥರಾ. ೮-೬೯). ೨. ಯಾಗದ ಹವಿಸ್ಸನ್ನು ದೇವತೆಗಳಿಗೆ ಮುಟ್ಟಿಸುವವನು ; ಅಷ್ಟದಿಕ್ಪಾಲಕರಲ್ಲಿ ಒಬ್ಬ ; ಆಗ್ನೇಯ ದಿಕ್ಕಿನ ಅಧಿಪತಿ : ತೊಡೆವೆಂ ಶಕ್ರನ ನಾಮಮಂ ತುಡುಕಿ ನೀರೊಳ್ ಮೆಟ್ಟುವೆಂ ವಹ್ನಿಯಂ (ಜಗವಿ. ೩-೨೧). ೩. ಒಂದು ಬಗೆಯ ಸಸ್ಯ ; ಚಿತ್ರಮೂಲಿಕೆ ; “ಚಿತ್ರಕ” (ಪಂಡಿತ. ೨೭೧). ४. ಗಾಡಿ, ನೇಗಿಲು ಮುಂತಾದುವನ್ನು ಎಳೆಯುವ ಎತ್ತು, ಕುದುರೆ ಮೊದಲಾದುವು. ೫. ದೇಹದಲ್ಲಿ ಆಹಾರವನ್ನು ಪಚನಮಾಡುವ ಶಕ್ತಿ ; ಜಠರಾಗ್ನಿ. ೬. ಜಠರರಸ. ೭. ಪಚನಕ್ರಿಯೆ. ೮. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : ಪುರಬಾಣವಹ್ನಿಶರಗಣಮಿರೆ ನಾಲ್ಕುಂ ಪದದೊಳೋಜೆ ಯುಗ್ಮಗಳೊಳ್ ಪನ್ನೆರಡಿರ್ಪತ್ತೊಳಿಯೆ ಪನ್ನೆರಡಿರ್ಪತ್ತಾಗೆ ಮಾತ್ರೆಗಳ್ (ಛಂದೋಂಬು. ४-೨೩೦); ಹರನಯನ ವಹ್ನಿ ಪುರಶಿಖಿ . . . ಮಾರ್ಗತ್ರಯಮದು ಮೂಱಱ ನಾಮಂ (ವ್ಯವಹಾ. ೯-೩). ೯. [ಛಂದ] ಅಕ್ಷರಗಣಗಳಲ್ಲಿ ಒಂದು ; ರಗಣ (– ∪ –) : ಆದಿಯ ಮಧ್ಯಾಂತದೆ ಗುರುವಾದೊಡೆ ಶಶಿ ಸೂರ್ಯ ವಾಯು ಗುರುವಿರೆ ಧರೆ ಮತ್ತಾದಿಯ ಮಧ್ಯಾಂತದೆ ಲಘುವಾದೊಡೆ ಜಲ ವಹ್ನಿ ಗಗನ ಲಘುವಿಂ ನಾಕಂ (ಛಂದೋಂಬು. ೧ ೩೭ ಅಡಿಪದ್ಯ). ೧೦. [ಜೈನ] ಎಂಟು ಜನ ಲೋಕಾಂತಿಕ ದೇವರುಗಳಲ್ಲಿ ಒಬ್ಬ : ಬ್ರಹ್ಮಕಲ್ಪಾಂತವಾಸಿಗಳುಮಪ್ಪ ಸಾರಸ್ವತಾದಿತ್ಯ

ವಷ್ಣ್ಯರುಣಗರ್ದತೋಯತುಷಿತಾವ್ಯಾಬಾಧಾರಿಷ್ಟರೆಂದೆಣ್ಬರುಂ ಲೋಕಾಂತಿಕದೇವರ್ ಬಂದು (ಆದಿಪು. ೯-೬೦ ವ); ಬ್ರಹ್ಮಕಲ್ಪಾಂತರವಾಸಿಗಳಪ್ಪ ಸಾರಸ್ವತನುಮಾದಿತ್ಯನುಂ ವಹ್ನಿಯುಂ ವರುಣನುಂ ಗರ್ದತೋಯನುಂ ತುಷಿತತೋಯನುಮವ್ಯಾಬಾಧನುಂ ಅರಿಷ್ಟನುಮೆಂಬೆಣ್ಬರುಂ ಲೋಕಾಂತಿಕದೇವರಜಿತದೇವಾಂತಿಕಕ್ಕೆ ಬಂದು (ಅಜಿಪು. ೬-೭೦ ವ). [ಸಂ.]

ವಹ್ನಿಜ (ನಾ). ಅಗ್ನಿಯ ಮಗ ; ಸ್ಕಂದ ; ಕಾರ್ತಿಕೇಯ : "ಗೌರೀಸುತಂ . . . ಷಡಾನನಂ ವಹ್ನಿಜಂ ತಾರಕರಿಪು ಸ್ವಾಮಿ ಕಾರ್ತಿಕೇಯಂ" (ಮಂಗರಾ. ೫-೧೬). [ಸಂ.]

ವಹ್ನಿಜ್ವಾಲೆ (ನಾ). ಬೆಂಕಿಯ ಉರಿ ; ಅಗ್ನಿಶಿಖೆ ; ಕಾಲರುದ್ರನ ನೊಸಲ ವಹ್ನಿಜ್ವಾಲೆಯೋ ಕೌರವನ ಸೇನಾಜಾಲವೋ ಶಿವಯೆನುತ ಹೆದರಿದನಂದು ಸುಕುಮಾರ (ಕುವ್ಯಾವಿ. ೬-೫). [ಸಂ. ವಹ್ನಿಜ್ವಾಲಾ]

ವಹ್ನಿರೇತಸ್ಸು (ನಾ). ೧. ಶಿವ. ೨. ಚಿನ್ನ. [ಸಂ. ವಹ್ನಿರೇತಸ್]

ವಹ್ನಿಶಿಖಿ (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು : "ಕಮಲೋತ್ತರಂ, ಕುಸುಂಭಂ, ವಹ್ನಿಶಿಖಿಂ, ಮಹಾರಜನಂ — ೪ ಕುಸುಂಬಾಬಣ್ಣದ ಹುವ್ವು" (ಸಿದ್ಧಾಂತಿ. ೩೦೬). [ಸಂ.]

ವಹ್ನಿಸಖಿ (ನಾ). ಅಗ್ನಿಯ ಸ್ನೇಹಿತ ; ವಾಯು : ವಹ್ನಿಸಖಿನಾನೆಂಬೊಂದಹಂಕಾರಮಂ ತಳೆದಾ ಮಾರುತನಂ ಕರಂ ಪಿಡಿದು ತನ್ನೈಕಿಲ್ಗಳಿಂ ಸಾಂದಿ . . . ಖಿಂ ಪರ್ಬಿತ್ತೊ ಹೈಮಾಗಮಂ (ರಾಜಶೇ. ೯-೭). [ಸಂ.]

ವಹ್ನಿಸೂಕ್ತ (ನಾ). ಅಗ್ನಿಯನ್ನು ಕುರಿತ ಸ್ತೋತ್ರಭಾಗ : ಸಹದೇವನುಪವಾಸದಲಿ ಮಿಂದು ಕುಶಾಗ್ರಸಂಸ್ತರಣದಲಿ ಪವಡಿಸಿ ಬೇಡಿಕೊಂಡನು ವಹ್ನಿಸೂಕ್ತದಲಿ (ಕುವ್ಯಾಸ. ೫-೧೬). [ಸಂ.]

-ವಳ, —ವಳ್ಳ, —ವಾಳ$_3$ (ಪ್ರ). ಪುಲ್ಲಿಂಗನಾಮವಾಚಕಗಳಿಗೆ ಹತ್ತುವ ಒಂದು ತದ್ಧಿತಪ್ರತ್ಯಯ : ಕೆಯ್ಕೊಂಡಿದನೀತಂ ನಡೆಯಿಪನೆನೆ ತೊದಳೇಂ ವಳಮೆಂದು ವಳ್ಳಮೆಂದಿವು ನೆಗಳ್ಗುಂ (ಕಾವ್ಯಾವ. ೩೨೪); ಇಲ್ಲಿ ಈತನಧಿಕಾರಿಯೆಂಬರ್ಥದಲ್ಲಿ ವಳ ವಳ್ಳಯೆಂಬೀ ಪ್ರತ್ಯಯಗಳು ಬರುತ್ತವೆ (ಭಾಷಾಭೂ. ೧೭೬ ತಾತ್ಪರ್ಯ); ನಡೆಯಿಸುವನೀತನಿದನೆಂಬೆಡೆಯೊಳ್ ವಳ ವಳ್ಳಮಕ್ಕುಂ . . . ವಳಕ್ಕೆ—ಅಡಪವಳಂ, ಮಾಸವಳಂ . . . ವಳ್ಳಕ್ಕೆ — ಅಡಪವಳ್ಳಂ, ಮಾಸವಳ್ಳಂ (ಶಮದ. ೧೯೮). -ವಳ್ಳ : ಈ ನಿಯೋಗಮನೀತಂ ನಡೆಯಿಸುವನೆಂಬಲ್ಲಿ ವಳ ವಳ್ಳ ಆಯ್ತು ಪ್ರತ್ಯಯಂಗಳಕ್ಕುಂ (ಶಮದ. ೧೯೮ ವೃತ್ತಿ); ವಳ್ಳ - ಇದರಲ್ಲಿ ಅಧಿಕಾರವುಳ್ಳ — ಪಡೆವಳ್ಳ (ಕೈಪಿಡಿ. ೧೯). -ವಾಳ$_3$ : 'ಮಡಿವಾಳ$_1$' ಪರಾ.

ವಳಕು (ನಾ). ತಂಟೆ ; ತಕರಾರು ; ವಿವಾದ : ನೆಟ್ಟನಾ ಕೂಟಸಾಕ್ಷಿಗಳ ನುಡಿದಾತನಳವಟ್ಟ ಬೆವಹಾರದೊಳು ಜೂಜಿನೊಳು ವಳಕಿನೊಳು ಕಟ್ಟದೆ ಸಹಾಯ ಸೂಚನೆಗಳಂ ಪರಪಕ್ಷಗಳ ಮಾಡಿದವನು . . . ನರಕಪುಂಜದೊಳು ಬೀಳ್ವರು (ವೀಶೈಪು. ೪-೧೭-೩೫). [ದೇ. ‖ ತಮಿ. ವಟಕ್ಕು ; ತೆಲು. ವಳುಕು]

ವಳಕ್ಷ 'ವಲಕ್ಷ' ನೋ.

ವಳಕ್ಷಪಕ್ಷ (ನಾ). ತಿಂಗಳಿನ ಮೊದಲನೆಯ ಅರ್ಧಭಾಗ ; ಶುಕ್ಲಪಕ್ಷ : ವಳಕ್ಷಪಕ್ಷ ಚಂದ್ರಮನಂತೆ ದಿನಕ್ರಮಂ ವೃದ್ಧಿಗೊಂಡೊಪ್ಪುವ ಕುವರಂಗೆ ಜಾತಕರ್ಮಾದಿ ಸಂಸ್ಕಾರಂಗೆಯ್ದು (ಅದ್ಭುತ. ೫-೧೩). [ಸಂ. ವಲಕ್ಷಪಕ್ಷ]

ವಳಜ 'ವಲಜ' ನೋ.

ವಳನ 'ವಲನ' ನೋ.

ವಳಭಿ 'ವಲಭಿ' ನೋ.

ವಳಭಿಚ್ಛಂದ 'ವಲಭಿಚ್ಛಂದ' ನೋ.

ವಳಭಿಚ್ಛದೆ (ನಾ). ಮನೆಯ ಮೇಲಿನ ಹೊದಿಕೆ ; ಛಾವಣಿ : "ಮನೆಗೇಱಿಸಿದ ಹೊದಿಕೆ ವಳಭಿಚ್ಛದೆಯೆನಿಕ್ಕು" (ಮಂಗರಾ. ೫೯-೧೩). [ಸಂ. ವಲಭಿಚ್ಛದ]

ವಳಯ 'ವಲಯ' ನೋ.

ವಳಯಂದಪ್ಪು (ಕ್ರಿ). ವೃತ್ತಾಕಾರದ ಆವರಣವನ್ನು ದಾಟು, —ಮೀರು : ಬಳಸುವೇಱುವ ಸುಟಿವಲ್ಲಿನ್ನಪ್ಪ ಚಾರಣದೋಷಮಲ್ಲದೆ ಪೊಟ್ಟವಟ್ಟಳಿಗೆ ಸಮನಾಗೆ ಗಿರಿಗೆಯ ಕೋಲ್ಮುಟ್ಟ ಮಿಗಲುಂ ನೆಲಲುಮಣಮಿಾಯದಿನ್ನೊನ್ನಳವಿಯೊಳ್ ಬರೆ ಪೊಱಗೊಳಗೆಡದೊಳಂ ಬಲದೊಳಂ ಕಡುಗಡುಪಿನ್ನೆ ಬರ್ಪ್ಪ ವಳಯನ್ನಪ್ಪದೆ ಚಾರಿಸುವೋಜೆಯಂ ರಟ್ಟಕನ್ನರ್ಪನನ್ತಾವಂ ಬಲ್ಲಂ (ಎಕ. II, ೧೩೩-೯೪; 982).

[ವಳಯ (= ವಲಯ) + ತಪ್ಪು$_1$]

ವಳಯಗ್ರಹಣ (ನಾ). ಸೂರ್ಯಬಿಂಬದ ಮಧ್ಯಭಾಗ ಮಾತ್ರ ಚಂದ್ರನಿಂದ ಮರೆಯಾಗಿ, ಸುತ್ತಲೂ ಬಳೆಯಾಕಾರದ ಬೆಳಕು ಕಾಣಿಸುವ ಸೂರ್ಯ ಗ್ರಹಣ ; ಪಾರ್ಶ್ವಗ್ರಹಣ : ಸುದ್ಧಪಕ್ಷದ ಪಾಡಿವದ ಬುಧವಾರಂ ವಳಯಗ್ರಹಣದೊಳೆಲ್ಲವೀಶ್ವರಯ್ಯಗೆ ಕೊಟ್ಟರ್ (ಎಕ. VIII, ಸೊರಬ. ೭೧-೩೫; 938).

[ಸಂ. ವಲಯಗ್ರಹಣ]

ವಳಯಾಕಾರ 'ವಲಯಾಕಾರ' ನೋ.

ವಳಯಾಕೃತಿ 'ವಲಯಾಕೃತಿ' ನೋ.

ವಳಯಿತ 'ವಲಯಿತ' ನೋ.

ವಳರ್ಕ್ಷದೇಹ (ನಾ). ಬೆಳ್ಳಗಿರುವ ದೇಹ ; ಗೌರವರ್ಣದ ಶರೀರ : ಅಹಿನಾಥವಳರ್ಕ್ಷದೇಹದೊಳ್ ಸಾತ್ತ್ವಿಕಮೂರ್ತಿ ನಿನ್ನಭಯಹಸ್ತಸರೋಜದ ಕೆಂಪು ಕೂಡೆ ನಿತ್ಯತ್ವಮನೊಪ್ಪುಗೊಳ್ಗೆ ನಿಜನೀಲಸರೋಜನಿಭಾಂಗಕಾಂತಿಯಿಂ (ವಸ್ತವಂ, ೮೯).

[ಸಂ. ವಲರ್ಕ್ಷದೇಹ]

ವಳವಾಳಿ (ನಾ). ಪ್ರತಿಜ್ಞೆಯನ್ನು ಪಾಲಿಸುವವನು ; ವೇಳೆವಾಳಿ : ಕವಡೆಯ ಬಿಂಮಂ ಜೋಳವಾಳಿ ವಳವಾಳಿಯಂ ಮೆಱದಿದಿರಾಂತ ಮಾರ್ವಲವಂ ತಳಿತಿಱಿದು (ಎಕ. VIII, ಸಾಗರ. ೧೨೫-೧೨; 1216); ಆ ಬಲ್ಲನ ಜೋಳವಾಳಿ ವಳವಾಳಿಯಂ ಮೆಱದು ಸುರಲೋಕಪ್ರಾಪ್ತನಾದಡೆ (ಎಕ. VIII, ಸಾಗರ. ೨೭-೧೧; 1241).

[ IP ಇದು 'ವೇಳೆವಾಳಿ' ಎಂಬುದರ ಅಪಲಿಖಿತ]

ವಳಾವಳಿ (ನಾ). ೧. ತಳಮಳ ; ಚಡಪಡಿಕೆ ; ಕಾತರ : ಅಱಿಯದೆ ವಳಾವಳಿಯಿಂದ ನಾ ಮಾಡಿದಹೆನೆಂದು ಪ್ರತಿಜ್ಞೆಯಿಂದ ಕೈಕೊಂಡು ಇಲ್ಲದುದನುಂಟು ಮಾಡಿ (ಚನ್ನವ. ಕ. ೩೨೮-೬೮೩). ೨. ಗಡಿಬಿಡಿ ; ಸಂಭ್ರಮ : ನೀವು ಮಾಡಿದ ಯಜ್ಞಮುಖದ ವಳಾವಳಿಯೊಳಾವಿರಲು ಮುತ್ತಿತು ದೇವರಿಪುಬಲನಿಕರವಸ್ಮದ್ದ್ವಾರಕಾಪುರಿಯ (ಕುವ್ಯಾಅ. ೨-೨೩); ನಾನಂದು ನಿಮ್ಮ ಯಜ್ಞದ ವಳಾವಳಿಯೊಳಗೆ ತಾನಿರಲ್ಕತ್ತದನು ತಿಳಿದು ದ್ವಾರಾವತಿಯ ದಾನವನು ಸಾಲ್ವನೆಂಬುವ ಮುತ್ತಿದನು (ತುರಂಗ. ೨೬-೨೨). [ <— ಆರ. ವಲ್ವಾಲ್; ಮರಾ. ವಳವಳ್, ವಳವಳಾ]

ವಳಿ$_1$ (ಕ್ರಿ). ತಿರುಗು ; ಬಾಗು : ನಡೆಯುವಾಗ ಇದ್ದಕ್ಕಿದ್ದ ಹಾಗೆ ಕಾಲು ವಳಿಯಿತು (ರೂಢಿ). 'ವಳಿಯಿಸು' ಪರಾ. [ದೇ. ‖ ತಮಿ. ವಲಿ]

ವಳಿ$_2$ 'ವಲಿ$_1$' ನೋ.

-ವಳಿ$_3$ (ಪ್ರ). ಕ್ರಿಯಾವಾಚಕಗಳನ್ನು ನಾಮವಾಚಕಗಳಾಗಿ ಪರಿವರ್ತಿಸುವ ಒಂದು ಭಾವವಾಚಕ ಕೃತ್ಪ್ರತ್ಯಯ : ನಡೆವಳಿ, ನುಡಿವಳಿ, ಸಲ್ವಳಿ — ಎಂಬಂತೆ, ವಳಿ ಪ್ರತ್ಯಯಂ ಮುಂತಾದುಱಿದ ಪ್ರತ್ಯಯಂಗಳಂ ಶಾಬ್ದಿಕರಿನನ್ನಿತರಱಿವುದು (ಶಮದ. ೨೧೫ ಪ್ರಯೋ); ವಳಿ—ನಡೆ, ನುಡಿ—ನಡೆವಳಿ, ನುಡಿವಳಿ (ಕೈಪಿಡಿ. ೧೭).

ವಳಿಕಾಜಿ (ನಾ). ಒಂದು ಕುಲಕ್ಕೆ ಸೇರಿದವನು ; ಪೀಳಿಗೆಯವನು ; ವಂಶಸ್ಥ (?) : ಯಿಾ ದಿನಂ ಮೊದಲಾಗಿ ಪ್ರಾಕುನಾಡವರ ಹೆಸರ ಪುಣ್ಯಕೂ ಆ ಪಾಡ ವಳಿಕಾಜಿಪ್ರಭುಗಳ ಮನೆಯಲು ಯಿದ್ದರೂ ಸಮ (ಸೌಇಇ. IX-ii, ೪೩೩-೮೪; 1408).

[< ಬಱಿ$_3$ + — ಕಾಜಿ]

ವಳಿಗ (ನಾ). ಒಬ್ಬಾತನ ಹೆಸರು : ಆತನ ತಮ್ಮ ವಳಿಗಜ್ಜ್ಗೆ ಮಣಿಗಜ್ಜ್ಗೆ ಇಬ್ಬರ್ಗ್ಗೆ ಇಟ್ಟು x x ಕಾದು ನಡೆದು ಬಾಟ್ದೆಡೆಯೊಳಂ x x ಪರಿಹಾರ ಕೊಟ್ಟು (ಎಕ. IV (R), ಚಾಮರಾ. ೧೧೫-೭; ಸು. 10ನೆಯ ಶತ). [?]

ವಳಿಗೆ (ನಾ). ೧. ಕವಳ ; ತುತ್ತು : "ಚೇವಣಂ, ವಳಿಗೆ, ಕವಳಂ — ಈ ೩ ತುತ್ತಿಂಗೆ ಪೆಸರ್" (ಕಶಸಾ. ೬೫-೪೫೩); ಭ್ರಮೆಗೊಂಡು ಕಾಮುಕಂ ವಳಿಗೆಯನೆತ್ತಿ ಬೊಟ್ಟೆಡಲೊಡರ್ಚೆ ಬಟ್ಟಿಕ್ಕೆ ಪೊಗಲ್ತಿಗಿಕ್ಕಿದಂ (ಅನಂಪು. ೧೧-೨೮); ಆಳಮಾಳಮಂತೆ ಠಮಾಳಂ ವಳಿಗೆ . . . ವೇಳಿ ಜಟಸಂದೇಹಂ (ಶಮದ. ನ. ೩೫).

೨. ಉಂಡೆ ; ಮುದ್ದೆ : ತೂಗುವುದು ಮೂಱು ಪೊಂಪ(ಣ್ಪ)ಣಮಾಗಿರೆ ಮಾಡುವುದು ವ[ಪಾಠಾಂ. ಗು]ಳಿಗೆಯಂ ಕೆಯ್ಯಿಂದಂ ನಾಗಸುದಪ್ಪಗೆ ಪೂಸುವುದಾಗಳೆ ತತ್ಕಾನನಸ್ಯಲೇಪನ ವಿಧಿಯಿಂ (ಖಮದ. ೫-೪೭). [< ಸಂ. ವಟಿಕಾ]

**ವಳಿಗೊಳಿಸು** (ಕ್ರಿ). ಅಲೆಗಳೇಳುವಂತೆ ಮಾಡು ; ತರಂಗಗಳೇಳುವಂತೆ ಮಾಡು : ಬಳಸಿ ಚಲಿಮಿಲಿಪ ವಿಹಗಂಗಳ ಕಳಕಳದೊಡನೆ ತೋರ್ದುರ್ ಸರಸೀಜಳಮಂ ವಳಿಗೊಳಿಸಿ ಕುಮುದಮುಖಮಂ ಪೆಳಱಿಸಿ ತೀಡಿತ್ತು ಸುಪ್ರಭಾತಸಮೀರಂ (ಶಾಂತೀಶ್ವ. ೧೧-೯೫). [ವಳಿ$_2$ (= ವಲಿ$_1$) + ಕೊಳ್$_1$ + – ಇಸು$_3$]

**ವಳಿತ** 'ವಲಿತ' ನೋ.

**ವಳಿತ್ರಯ** (ನಾ). (ಸಾಮಾನ್ಯವಾಗಿ ಹೆಂಗಸರ) ಹೊಟ್ಟೆಯ ಮೇಲಿರುವ ಮೂರು ಗೆರೆಗಳು ; ತ್ರಿವಳಿ : ನೀರೊಳಗಣ ರೇಖೆಯಂತೆ ಕಿಡೆ ಚಾರುವಳಿತ್ರಯಮಾ ಶಿರೀಷಕೋಮಳೆ ನವಮೇಘದಂತೆ ಗುರುಗರ್ಭಭರಾನ್ವಿತೆಯಾದಮೊಪ್ಪಿದಳ್ (ಕಾವ್ಯಸಾ. ೩೭೦ ಶೂದ್ರಕ) ; ಆಕೆಯ ವಳಿತ್ರಯಂಗಳುಂ ಪಗೆವರ ಶಕ್ತಿತ್ರಯಂಗಳುಮೊಡನೊಡನೆ ಕೆಟ್ಟುವು (ಪಂಪಭಾ. ೧-೧೪೧ ವ). [ಸಂ. ವಲಿತ್ರಯ]

**ವಳಿದೆರೆ**(ನಾ). ಹೊಟ್ಟೆಯ ಮೇಲಿರುವ ಚರ್ಮದ ಮಡಿಕೆ : ಸುಳಿನಾಭಿಯಿಂದ ವಳಿದೆರೆಗಳಿಂ ಪೆಂಪಾಂತು ನಳಿನಜಾಂಡಕೆ ಬಹುಸ್ಥಲವನೀಯುವ ಜಠರ (ಮಲ್ಲಾರಿ. ೫-೧೪). [ವಳಿ$_2$ (= ವಲಿ$_1$) + ತೆರೆ$_1$]

**ವಳಿಯಿಸು** (ಕ್ರಿ). ಬಾಗಿಸು ; ಬಗ್ಗಿಸು ; ಹೊರಳಿಸು : ನಿಖಿಳತುರಗಬಳದ ವಳಿಯಿಪ ವಾಳಜಾಳದ ಕೊನೆಗಳಿಂ ಬಿಡದೆ ಸಿಡಿವಕ್ಕಿಗಳ ಗಡಣಮಂ ಪಡೆದು ಪಗಲೊಳ್ ಪಗಿಲ್ತು ತೋರ್ಪ ತಾರಕಂಗಳುಂ (ವರ್ಧಪು. ೮-೪೦ ವ). [ವಳಿ$_1$ + – ಇಸು$_3$]

**ವಳಿಯೆಱ್** (ನಾ). ಒಂದು ಊರಿನ ಹೆಸರು : ಉಪ್ಪವಳ್ಳಿಯ ಪೋಚಿಗಾಮುಣ್ಡ ವಳಿಯೆಱ ಮುದ್ದ ಮಾಗುಣ್ಡೆಯೆಱಗ (ಎಕ. XV, ಬೇಲೂರು. ೩೦೮-೧೩; 971). [?]

**ವಳಿರೇಖೆ** (ನಾ). ಹೊಟ್ಟೆಯ ಮೇಲಿನ ಚರ್ಮದ ಮಡಿಕೆಯಿಂದಾದ ಗೆರೆ : ವಳಿರೇಖೆ ಮಸುಳೆ ಗರ್ಭಂ ಬಳೆವುದುಮೊಡವಳೆದು ಸತಿಯ ಮಧ್ಯಂ ಚೆಲ್ವಂ ತಳೆದುದು (ಪಂರಾಮಾ. ೪-೪); ವಳಿರೇಖೆವಡೆದ ಬಡನಡು ತೊಲೆಯೆನೆ ಕುಚಜಘನಭಾರಮಂ ಕರತಲದೊಳ್ ನಿಲಿಸೆ ಲತಾಂಗಿಗೆ ನೀಸಲ್ ಕಲಿಪ ವಿಟಂ ತೂಗುವಂಗಜಂಗೆಣೆಯಾದಂ (ಅನಂಪು. ೭-೩೯). [ಸಂ. ವಲಿರೇಖಾ]

**ವಳೀಕ** 'ವಲೀಕ' ನೋ.

**ವಳುಂಗವಮ್ಮ** (ನಾ). ಒಬ್ಬಾತನ ಹೆಸರು : ಮಹಾಬಲಿಬಾಣರಸರ ಕರಣಿಗ ವಳುಂಗವಮ್ಮನ ಕಂಬಂ (ಎಕ. X, ಮುಳಬಾ. ೧೨೪-೨; ಸು. ೮೯೦?). [?]

**ವಳ್ಳಿ$_1$** 'ಬಳ್ಳಿ$_1$' ನೋ.

**ವಳ್ಳಿ$_2$** 'ಬಳ್ಳಿ$_2$' ನೋ.

**ವಳೆಯ** (ನಾ). ೧. ಮಂಡಲ ; ಆವರಣ ; ಸುತ್ತು : ಕರ್ನಿಕಾಮಧ್ಯ ಅಕ್ಷರದ ವಳೆಯವ ಮೊದಲುಗೊಂಡು ನಾಲ್ಕನೆಯ ವಳೆಯದಲ್ಲಿ ಜಿನಸ್ತುತಿ ರಿಯಂಯಂಬ ಪ್ರಬಂಧದ ನಾಮವನೋದಿಕೊಂಬುದು . . . ಎಂಟನೆಯ ವಳೆಯದಲ್ಲಿ ಸೂರಿ ವಿರಚಿತಾಯೆಂದು ಕವಿನಾಮವನೋದಿಕೊಂಬುದು (ಎಕ. VII, ಶಿಕಾ. ೨೨೯-೮೬; 1100); ಕಪಿಲಸಿದ್ಧಮಲ್ಲೇಶ್ವರದೇವರ ಕ್ಷೇತ್ರದ ಚತುರಾಶ್ರಯದ ನಾಲ್ಕುಂ ದೆಸೆಯ ವಳೆಯದೊಳಗೆ(ಎಇ. XXIII, ೧೯೫-೪೮; 1265). ೨. ಕುದುರೆಯ ತುಂಟತನವನ್ನು ಅಡಗಿಸಲು ಕಟ್ಟುವ ಸೊಂಟಪಟ್ಟಿ ; ತಂಗುಪಟ್ಟಿ : 'ಕುದುರೆವಳೆಯ' ಪರಾ. [< ಸಂ. ವಲಯ]

**ವಳೆಯಶಾಸನ** (ನಾ). ತಾಮ್ರಶಾಸನದ ಬಳೆ : ಯಿ ಗೊಪಗೊಂಡನ ಹಳಿಯನೂ . . . ಶ್ರೀವೆಂಕಟಾದ್ರಿಗರ್ಪಿತವಾಗಿ ಧಾರೆಯನೆಱದು ದಾನಪತ್ರಶಾಸನವನೂ ಕೊಟ್ಟು ವಳೆಯಶಾಸನಕೆ ಅಪ್ಪಣೆಯನು ಕೊಡಿಸಲಾಗಿ . . . ಹೆಬ್ಬಾರುವಉಪಾಧ್ಯರು ಯಿ ಅಗ್ರಹಾರಕೆ ವಳೆಯಶಾಸನವನು x x x ಧ್ವಜಸೇವೆಯನೂ ನಿತ್ಯವಾಗಿ ನಡಸಿ (ಎಕ. XVI, ಪಾವುಗ. ೧೦೨-೧೨; 1541). [ವಳೆಯ + ಶಾಸನ]

**-ವಳ್ಳ** '-ವಳ' ನೋ.

**ವಳ್ಳಾವಿ** (ನಾ). ಒಂದು ಪ್ರದೇಶದ ಹೆಸರು : ವಳ್ಳಾವಿವಿಷಯ ಪಳ್ಳಿಗ್ರಾಮೆ ಕೆಜಿಗಾಲೂರ್ಪೊಸವಳ್ಳಿ ಮಿಾದುಣ್ಣವಳ್ಳಿ ಕಾಚಾಪ್ಪಳಿ ಕಾತುಳ್ಳಮುಳಿಯಂ (ಮೈಆ. ೧೯೩೦, ೩-೧೮; ಸು. 475). [?]

**ವಳ್ಳಿಗ್ರಾಮೆ, ಬಳ್ಳಿಗಾಮೆ, ಬಳ್ಳಿಗಾವೆ** (ನಾ). ಒಂದು ಊರಿನ ಹೆಸರು : ವಳ್ಳಿಗಾಮೆಯರ ದಾಸದಿಯುಂ ಅಮಲಿಯರ ದೇವದಿಯುಂ . . . ಮುಖವಾಗೆ ಎರಡುಂ ನಾಟ್ಕೆ ರಾಜಶ್ರಾವಿತಮಾಗೆ ಪ್ರಸಾದಂ ಕೆಯ್ಯಾರ್ (ಇಇ.XIX, ೧೪೪-೬; 7ನೆಯ ಶತ). **ಬಳ್ಳಿಗಾಮೆ** : ಜಿಡ್ಡೂರಾಳ್ಗೆಯೆಪ್ಪತ್ತರ್ಕಂ ಬಳ್ಳಿಗಾಮೆಯ ಬಾಟಿಗೆ ಸಹಿತ ನಾಲ್ವಾವುಣ್ಣುಗೆಯ್ಯೆ (ಮೈಆ. ೧೯೨೯, ೭೮-೭; 964). **ಬಳ್ಳಿಗಾವೆ** : ಬಳ್ಳಿಗಾವೆಯ ತಳದ ಹುಲ್ಲೆಯ ಬಯಲೊಳ್ (ಮೈಆ. ೧೯೨೯, ೬೫-೮; 1024?); ರಾಜಧಾನಿ ಬಳ್ಳಿಗಾವೆಯ ನೆಲೆವೀಡಿನೊಳ್(ಎಕ. VII, ಶಿಕಾ. ೧೨೦-೧೧; 1048). [< ವಳ್ಳಿ$_2$ + ಗಾಮ್ಮ$_0$ (< ಗಾಮ)]

**ವಳ್ಳಿಯೋಗ** (ನಾ). ಒಂದು ಬಗೆಯ ಕಾಯಿ : ವಳ್ಳಿಯೋಗ:- ಈ ಕಾಯಂ ನೀರಲ್ಲಿ ತೇದು ನಸ್ಯಂಗೈಯಲು ಸರ್ವವಿಷ ಹರ (ವಿಷ್ವವಿ. ೭). [?]

**ವೞಿ** (ನಾ). ದಾರಿ ; ಮಾರ್ಗ : ಇೞಿಯದ ಬೀರಂ . . . ಕೇ[ಳ್ದ] ಮಾತಱಿಯದ ಮಾತು ತಮ್ಮ ಬಱುವಾತುಗಳೊಳ್ ಪುದಿದೆಗ್ಗರೆಯ್ದೆ ಕಣ್ದೆಱೆವಿನಮಾರ್ ಕೆಱರ್ ವ[ಪಾಠಾಂ. ಪ]ೞಿಯದೇನೆಳೆಯಂ ಕಿಡಿಸಲ್ಕೆ ಬಲ್ಲರೋ (ಪಂಪಭಾ. ೪-೯೫); "ವೞಿಯದೇಂ— ಬೇರೆ ಮಾರ್ಗವೇನಿದೆ?" (ಪಂಪದೀ. ೧೭೧). 'ಬೞಿ$_3$' ಪರಾ. [ದೇ. ‖ ತಮಿ. ಮಲ. ವೞಿ]

**ವೞಿಗಟ್ಟ** (ನಾ). ಒಬ್ಬಾತನ ಹೆಸರು : ವೞಿಗಟ್ಟನ ಮಗ ಪುಲಿಕಡ್ಡಅರಸರ್ ಸಿಯಗೆಲ್ಲರ್ಕ್ಕಾಗಿ ಕೊಮಾರನ್ ಕಿರ್ಕ್ಕೊಳತ್ತು ಬಗಬಳ್ಳಿಯುಳೆಱಿದು ಬಿಟ್ಟೊಂ (ಎಕ. XVI, ತುಮಕೂ. ೯೧-೮; ಸು. 775). [?]

**ವೞಿತ** (ನಾ). ಅಧೀನ ಪ್ರಾಂತ : ಅಧಿಕರಿಗವುಣ್ಡನೂ ಚರಮಗವುಣ್ಡನು ಶಿವಯಗವುಣ್ಡನು ಮುವರುಮಿಟ್ಟು ಇಗ್ಗಲಿಯೂರಾ ಗವತೆಯ ವಿಡಿಸಿದರದಡೆ ಬಿಟದು ವೞಿತಕೆ ಮದಿಗೆರೆ (ಮೈಆ. ೧೯೩೦, ೪೦-೯, ೮ನೆಯ ಶತ); ಶ್ರೀದಾಸಿರಾಜನೂರ್ಜ್ಜಿತನಾದಂ ವಿಖ್ಯಾತಕೀರ್ತ್ತಿಮಾರ್ತ್ತಣ್ಡನಿಭಂ ಚರಿತಂ ಸನ್ಮುನಿ ಮೂಳಸೂತ್ರವೞಿತಂ (ಕಇ. I, ೨೭-೨೪; 1161). [ II? ಇದು 'ವಳಿತ' ಎಂಬುದರ ಅಪಲಿಖಿತ]

**ವೞುರೂರ್** (ನಾ). ಒಂದು ಊರಿನ ಹೆಸರು : ವೞುರೂರುಪ್ಪವಪಯ್ಯ (ಎಕ. IV, ಗುಂಡ್ಲುಪೇ. ೫೭-೮; ಸು. ೯೦೦?). [? + ಊರ್]

**ವಾಂಗಿಭಾತು** 'ವಾಂಗೀಭಾತು' ನೋ.

**ವಾಂಗೀಬಾತ್** 'ವಾಂಗೀಭಾತು' ನೋ.

**ವಾಂಗೀಭಾತು, ವಾಂಗಿಭಾತು, ವಾಂಗೀಬಾತ್** (ನಾ). ಸಾಮಾನ್ಯವಾಗಿ ಬದನೆಕಾಯಿ ಹಾಕಿ ತಯಾರಿಸುವ ಒಂದು ಬಗೆಯ ಕಲಸನ್ನ : ಖಾರದ ಎರಡು ತಿಂಡಿ, ಉಪ್ಪೇರಿ, ವಾಂಗೀಭಾತು (ರೂಪಸಂ. ೧೭). **ವಾಂಗಿಭಾತು** : ಈಗಿನ ಸಪ್ಪೆಕಾಲದಲ್ಲೂ ಈ ಪಠಿಂಗ ರೈತರಿಂದ ಕೀರು, ವಾಂಗಿಭಾತು ವಸೂಲ್ ಮಾಡೋ ಧೀರ ಶೇಕದಾರನಿದ್ದಾನಲ್ಲ (ಕಲಸ. ೬೩); ಬೆಳಗಿನ ವಾಂಗಿಭಾತು ಸ್ವಲ್ಪ ನಿಮಗಾಗಿ ಇಟ್ಟಿದ್ದೀನಿ (ಕೀಲುಗೊಂ. ೭೧). **ವಾಂಗೀಬಾತ್** : ಬರ್ತೀನಿ . . . ಏನ್ಮಾಡಿಸುತ್ತೀರೋ . . . ಕೀರು . . . ವಾಂಗೀಬಾತ್ (ಅನ್ನಾವ. ೫೭). [<— ಮರಾ. ವಾಂಗೀಭಾತ್]

**ವಾಂಚಲ್ಯ, ವಾಂಛಲ್ಯ** (ನಾ). ಪ್ರೀತಿ ; ಮಮತೆ : ಮಿತ್ರನಮ ಕೈಸೆರೆಯ ದಿವಿಜರ ಮಿತ್ರೆಯರು ತಾವು ಪಿಡಿದರೆಂದೇ ಮಿತ್ರವಾಂಚಲ್ಯದಲಿ ಪೊಕ್ಕನೊ ಕೊಳವನೆಂಬಂತೆ (ಅಂಬಿಕಾ. ೮-೨೭); ಅವಳಿಗೆ ಕಾಪಿಲೆ ಕಸಾಲೆಯಾದರೆ ನೋಡಿಕೊಳ್ಳಲಿಲ್ಲವೇ? ನನಗೇನು ವಾಂಚಲ್ಯವಿಲ್ಲವೇ? (ತಾಯಿಕ. ೧೨). **ವಾಂಛಲ್ಯ** : ಏಂ ಕಾರಣದಿ ಮೌನದಿಂದಿಹನಯ್ಯ ವಾಂಛಲ್ಯ(ಚಾಂಚಲ್ಯ)ಮುಕ್ಕೆ ಮನದಿ (ಮಂಕಾರಾ. ೨-೮-೫); ಕೊಡಗಿನ ರಾಜಧಿಗೂ . . . ಇಂಗ್ರೇಜಿಬಹಾದ್ದರ ಕಂಪನಿಸರಕಾರಕ್ಕೂ ಮಿತ್ರತ್ವ ವಾಂಛಲ್ಯವಿಟ್ಟು ನಡೆಯಬೇಕೆಂಬ ಅಪೇಕ್ಷೆ ನಮಗೆ ಇದೆ (ರಾಜೇಂದ್ರ. ೫೪); ತಾಯಿಗೇ ಇಲ್ಲದ ವಾಂಛಲ್ಯ ನಿಮಗೆಲ್ಲಿಂದ ಬರಬೇಕು? (ಸಂಧ್ಯಾರಾ. ೪೫). [< ಸಂ. ವಾತ್ಸಲ್ಯ]

**ವಾಂಛನೀಯ** (ಗು). ೧. ಅಪೇಕ್ಷಣೀಯವಾದ ; ಇಚ್ಛಿಸತಕ್ಕ : ರಾಷ್ಟ್ರದ ಜನಬಲ ಹೇಗೆ ಉಳಿಯುತ್ತದೆ, ವಾಂಛನೀಯದರಕ್ಕಿಂತ ಹೆಚ್ಚೇ, ಕಡಿಮೆಯೇ

(ಕವಿಕೋ.೬,೯೧೯). (ನಾ). ೨. ಅಪೇಕ್ಷಣೀಯವಾದುದು : ಹರುಷಗಡಲಲೆಗಳೊಳು ಮನವಾರೆ ಮಿಂದು . . . ಮೆರೆವಾ ಜೀವನಂ ವಾಂಛನೀಯಮಲ್ತೆ (ಭಾರಂಗ. ೩-೧೮). [ಸಂ.]

**ವಾಂಛಲ್ಯ** 'ವಾಂಚಲ್ಯ' ನೋ.

**ವಾಂಛಿತ** (ಗು). ೧. ಬಯಸಿದ ; ಅಪೇಕ್ಷಿಪಟ್ಟ : ಆದಕ್ಕೆ ವಾಂಛಿತ ಮೃತ್ಯು ಅಥವಾ ಪುನರ್‌ಜನ್ಮ ಪ್ರಾಪ್ತವಾಗುತ್ತದೆ (ಆಶ್ರಮ. ೯೪). 'ವಾಂಛಿತಫಲ' ಪರ್ಯಾ. (ನಾ). ೨. ಆಸೆ ; ಬಯಕೆ : ಮಿತ್ರಾ ನಿನ್ನ ವಾಂಛಿತವು ಪೂರ್ಣವಾಗಲಿಲ್ಲವೇನು? (ಮಂಜುಕ.೩೨);ಗೋದಮ್ಮನವರೊಮ್ಮೆ ತಮ್ಮ ವಾಂಛಿತವನ್ನು ವೃಂದಮ್ಮನವರೆದುರಿಗೆ ವ್ಯಕ್ತಪಡಿಸಿದರು (ಗೃಹಲ. ೨೭೧). ೩. ಬಯಸಿದುದು ; ಅಪೇಕ್ಷಿಸಿದುದು : ತ್ರಾಹಿ ಮಾಂ ಭಕ್ತಕುಲವಾಂಛಿತದ ಸುರವೃಕ್ಷ (ಹಚಕಾ. ೫-೭೮); ಘಡ ಸುರಧೇನುಗಳಲಾ ಕಚಿಯರೇ ಪರಬಲಕ್ಕೆ ವಾಂಛಿತವ (ಉಪ್ಪಾಭೀ. ೮-೬೭). [ಸಂ.]

**ವಾಂಛಿತಫಲ** (ನಾ). = ವಾಂಛಿತ ೩ : ವಾಂಛಿತಫಲವೀವನಾದ ಮುಖ್ಯಪ್ರಾಣ ಮಹಾನುಭಾವ (ಪುರಂದ. ೨-೧೯೦-೩); ವಂದಾರುಜನಕೆ ವಾಂಛಿತಫಲಗಳನೀವ ಮಂದಾರತರುಗೆ ಮಾಧವಗೆ . . . ವಂದಿಪೆನು (ಹದಿಬ. ೭-೧). [ಸಂ.]

**ವಾಂಛಿಸು** (ಕ್ರಿ). ಬಯಸು ; ಅಪೇಕ್ಷಿಪಡು : ಒಬ್ಬ ಸಭ್ಯಗೃಹಸ್ಥರು ನನ್ನ ಮೈತ್ರಿಯನ್ನು ವಾಂಛಿಸಿ . . . ನಾವಿಬ್ಬರೂ ದೈವವಶಾತ್ ಮಿತ್ರರಾದೆವು (ಕೋದಂಡ. ೪). [ವಾಂಛೆ + – ಇಸು]

**ವಾಂಛೆ** (ನಾ). ಆಸೆ ; ಬಯಕೆ : ಇಂದ್ರಿಯಸುಖವಾಂಛೆಯಂ ಬಿಸುಟ್ಟು . . . ನಿಜಶುದ್ಧಾತ್ಮಭಾವನಾಜನಿತ ಪರಮಸುಖಾಮೃತರಸಸಂತೃಪ್ತರಪ್ಪ ಪುರುಷರಿಂದಾ ಪುಣ್ಯಂ ಪರಿಹರಿಸಿ ಪಡುಗುಂ(ಪಾರ. ೯೧); ಮನವುಂ ನೆನಹುಂ ವಾಂಛೆಯುಮನವರತಂ ಭಿನ್ನವಿಲ್ಲದಿರ್ಕುಂ ನಿಜದಿಂ (ಹಮ್ಮಿ.ರ. ೨-೩೯). [ಸಂ. ವಾಂಛಾ]

**ವಾಂದೆರ್ಕು** (ನಾ). ಒಂದು ಸ್ಥಳದ ಹೆಸರು (?) : ತಸ್ಯಸೀಮಾನ್ತರಂ ಕೊಳ್ತಿನಿ ತೊಡೆವಿ ಪೇರಿರ್ಪ್ಪೆಪು ವಾಣ್ಡೆರ್ಕ್ಕು ತುಳ್ಳಿಲುಂ . . . ಮುದುಪುಣುಸೆ ಮಾಳ್ದೆಯುಳ್ ಕೂಡಿತ್ತು ಸೀಮೆ (ಎಕ. XVI, ಗುಬ್ಬಿ. ೭೫-೫೦; 733). [?]

**ವಾಂತ** (ನಾ). ವಕಾರದಿಂದ ಕೊನೆಯಾಗುವ ಶಬ್ದ : ವಾಂತಕ್ಕೆ – ಅವಿ . . . ಅಟ್ಟು (ಶಮಥಾ). [ಸಂ.]

**ವಾಂತಶನ** (ನಾ). ಹೊಲಸು ತಿನ್ನುವ ಪಿಶಾಚಿ : ಬ್ರಹ್ಮಸ್ವ ದೇವಸ್ವಾಪಹಾರವ ಮಾಡಿದಾ ಕಡುಪಾಪಿ ವಾಂತಶನಹನು (ನಿಭಾಗ. ೫-೧೨-೯). [< ಸಂ. ವಾಂತಾಶನ]

**ವಾಂತಿ** (ನಾ). ಕಾರಿಕೆ ; ವಮನ : ಆ ಮದ್ದು ವಾಂತಿಗೆ ಸಲ್ಲ (ಸರ್ವವ. ೧೯-೯೧); ಅರಳಿ . . . ಈ ಹಣ್ಣಿನಿಂ ಕರಕು ಮಾಡಿ ಬೆಣ್ಣೆಯಲ್ಲಿ ಕಲಸಿ ನುಂಗಿಸಲು ಮಕ್ಕಳ ವಾಂತಿ ಗುಣ (ವಿಷ್ಣುವಿ. ೧); ಶಿವನ ರೇತಸ್ಸನಮರರು ಕೊಂಡು ನದಿಯಲ್ಲಿಯವರೆಲ್ಲರುಂ ವಾಂತಿಯಂ ಮಾಡಲು (ವೀಶೈಪು. ೩-೨೦-೪೧).

**ವಾಂತಿಮಾಡು** = ೧. ಕಾರಿಕೊಳ್ಳು ; ಕಕ್ಕು : ಎಂದೂ ವಾಂತಿಮಾಡಿಕೊಳ್ಳದಿದ್ದ ಭೀಮಪ್ಪ ಅಂದು ವಾಂತಿಮಾಡಿಕೊಂಡಿದ್ದ (ಮಣ್ಣುಹ. ೧೨೭); ಯಾರು ಯಾರೋ ವಾಂತಿಮಾಡಿಕೊಳ್ಳುವದು, ಯಾರದೋ ಮೈ ಮೇಲೆ ಸಿಡಿಯುವದು (ಶ್ಯಾಮತಾ. ೨೫). ೨. (ಆಲಂ) ಒಪ್ಪಿಸು ; ಅರ್ಪಿಸು : ಮೂರುತಿಂಗಳುಗಳಿಂದ ಹಗಲಿರುಳೂ ಓದಿದ್ದೆಲ್ಲವನ್ನೂ ಪರೀಕ್ಷೆಯ ದಿನ ವಾಂತಿಮಾಡಿದ್ದಾಯ್ತು (ರೂಢಿ). **ವಾಂತಿಯಾಗು** = ಕಾರಿಕೊಳ್ಳು ; ವಮನವಾಗು : ಖಣಾತೂರ್ಯ, ಸ್ವೇಚ್ಛಾತೂರ್ಯ ಇಂತೀ ಮಾಟದಲ್ಲಿ ಮಾಡೆ ಉಂಡ ಓಗರ ವಾಂತಿಯಾದಂತೆ (ಮೋಳಿಮಾ. ೨೮-೧೧೮); ಕುಡಿದ ವಿಷವು ಹೊಟ್ಟೆಯೊಳಗೆ ನಿಲ್ಲದೆ, ದುಂಡರಿಸಿ, ವಾಂತಿಯಾಗಿ ಹೊರಗೆ ಬಿತ್ತು (ಮುಂಬಯಿ. ೫-೭೨). [ಸಂ.]

**ವಾಂತಿಭೇದಿ** (ನಾ). ವಮನ ಮತ್ತು ಅತಿಸಾರವು ಮುಖ್ಯಲಕ್ಷಣಗಳಾಗಿರುವ ಒಂದು ಬಗೆಯ ರೋಗ ; ಕಾಲರಾ : ವಿಷಮಜ್ವರ, ವಾಂತಿಭೇದಿ, ಆಮಶಂಕೆ, ಕ್ಷಯ ಮೊದಲಾದ ರೋಗಗಳು . . . ನೀರಿನ ಮೂಲಕ ಹರಡುವ ಸಂಭವವಿದೆ (ಆಯುಸಾ. ೮೪). [ಸಂ.]

**ವಾಂತಿಭ್ರಮೆ** (ನಾ). ಹೊಟ್ಟೆತೊಳಸಿ, ಓಕರಿಕೆ ಬರುವಂತಾಗುವುದು ; ಉಬ್ಬಳಿಕೆ : ವಾಂತಿಭ್ರಮೆಯಿಂದ ಕೊರಳು, ತುಟಿ, ಬಾಯಿ, ಮೂಗು ಸಹ ಒಣಗುತ್ತ . . . ಕಣ್ಣುಗಳು, ದೇಹ ಇವುಗಳು ಅರಿಸಿನವರ್ಣವಾಗಿ ಲಕ್ಷಣಗಳುಂಟಾಗುವುದೆ . . . ಪೈತ್ಯಜ್ವರವೆನಿಸಿಕೊಳ್ಳುವುದು (ಸಸವೈ. ೭೬). [ಸಂ. ವಾಂತಿಭ್ರಮ]

**ವಾಂತಿಭ್ರಾಂತಿ** (ನಾ). = ವಾಂತಿಭೇದಿ : ರಾಗಿಯನ್ನು ಮಸಿಯಾಗುವಂತೆ ಹುರಿದು ನಿಂಬೆಹಣ್ಣಿನ ಹುಳಿಯಲ್ಲಿ ಅರೆದುಕೊಟ್ಟರೆ ವಾಂತಿಭ್ರಾಂತಿ ನಿಲ್ಲುವುದು (ಸಸವೈ. ಪರಿ. ೪೧೯); ಆ ಹೆಣಗಳು ಕೊಳೆತು ನೀರೆಲ್ಲ ಕೆಟ್ಟು, ಕುಡಿಯುವವರಿಗೆ ವಾಂತಿಭ್ರಾಂತಿ ಮುಂತಾದ ರೋಗಗಳು ಉದ್ಭವಿಸುತ್ತಿದ್ದವು (ಮುಂಬಯಿ. ೪-೧೨೮). [ಸಂ.]

**ವಾಂತ್ಯಾತಿಸಾರ** (ನಾ). = ವಾಂತಿಭೇದಿ : ತಾಳೀಶವಟಕ . . . ಒಂದು ವಟಕವಂ ಸೇವಿಸೆ, ಅರುಚಿ . . . ವಾಂತ್ಯಾತಿಸಾರ, ಮೂಲವ್ಯಾಧಿ ಮೊದಲಾದುವೆಲ್ಲವೂ ಮಾಣ್ಗುಂ (ಸಸವೈ. ೨೬೪). [IP ಇದು 'ವಾಂತ್ಯತಿಸಾರ' ಎಂದಿರಬೇಕು]

**ವಾಂಶ** (ನಾ). ೧. ಬಿದಿರಿನಿಂದ ತಯಾರಿಸಿದುದು. ೨. ಕೊಳಲು ; ವೇಣು : ಒಪ್ಪುವ ವಾಂಶ ವೈಣ ಗೇಯಾದಿಗಳಿಂಪು ಪೊಂಪುಟಿ ಸುರೇಶ್ವರಗಾಯಕವಾದನೋದಿತಂ (ಶಾಂತಿಪು. ೧೨-೨೨). [ಸಂ.]

**ವಾಂಶಿ** (ನಾ). ಬಿದಿರಿನಿಂದ ಉಂಟಾದುದು ; ಬಿದಿರಿನಲ್ಲಿ ಹುಟ್ಟಿದುದು : "ವಾಂಶೀ – ವಂಶರೋಚನ, ಬಿದಿರುಪ್ಪು" (ಓಷಧಿ. ೧೪೯). [ಸಂ. ವಾಂಶೀ]

**ವಾಂಶಿಕ** (ಗು). ೧. ಬಿದಿರಿಗೆ ಸಂಬಂಧಿಸಿದ ; ಬಿದಿರಿನ. ೨. ವಂಶಕ್ಕೆ ಸಂಬಂಧಿಸಿದ ; ಕುಲಕ್ಕೆ ಸಂಬಂಧಪಟ್ಟ : ಒಬ್ಬ ವಿಭೂತಿಮಂತನಾದ ವ್ಯಕ್ತಿಯು . . . ತನ್ನ ವಾಂಶಿಕ ಹಾಗು ಸಮಕಾಲಿಕಜೀವನದೊಳಗೂ ಸತ್ವಪರೀಕ್ಷೆಯ ಸಂಧಿಕಾಲದಲ್ಲಿ . . . ವಿಭೂತಿವಾನ್ ಪುರುಷನಿಗೆ ಶರಣುಹೋಗುವನು (ಪ್ರಬುಂಧ. ೪೨). (ನಾ). ೩. ಬಿದಿರನ್ನು ಕಡಿಯುವವನು ; ಮೇದ . ೪. ಕೊಳಲು ನುಡಿಸುವವನು ; ವೇಣುವಾದಕ : ಮಾರ್ದಂಗಿಕವಾಂಶಿಕಪ್ರಹನ್ಯಮಾನವಾದ್ಯ ಮೃದಂಗವಂಶನಿನದ ಲಯಚ್ಛಂದಸುಂದರನಟತ್ಸುಂದರೀಸಂದೋಹಮುಮಭೂತಪೂರ್ವ ರಮಣೀಯಮುಮಾಗೆ (ಆದಿಪು. ೭-೩೭ ವ) ; ರಾಗಶುದ್ಧಿಯ ಪರಿಣತಿಯಂ ಮೆಚ್ಚಿದು ವಾಂಶಿಕಂ ಬಾಜಿಸಿದಂ (ಮಲ್ಲಿಪು. ೮-೨೩). [ಸಂ.]

**ವಾಂಶೆ** (ನಾ). [ಸಂಗೀತ]ಮಧ್ಯಮಸ್ವರದಿಂದ ಹುಟ್ಟುವ ನಾಲ್ಕು ಶ್ರುತಿಗಳಲ್ಲಿ ಒಂದು : ರಂಜಕಿ ಪೂರ್ಣೆ ಆಲಂಕಾರಿಣೆ ವಾಂಶೆಯೆಂಬ ನಾಲ್ಕು ಶ್ರುತಿಗಳೇ ಮಧ್ಯಮಸ್ವರದಿಂ ಪುಟ್ಟಿದವು (ವಿವೇಕ. ೨೩೨). [< ಸಂ. ವಾಂಶೀ]

**ವಾಂಶ್ಯ** (ನಾ). ಒಂದು ಬಗೆಯ ಸಸ್ಯ : "ವಾಂಶ್ಯಂ – ಕೋಷ್ಠ" (ಓಷಧಿ. ೧೪೯); ಯತ್ವಲೋಪಕ್ಕೆ – ಅಮಾವಾಸ್ಯಾ – ಅಮಾಸೆ, ಅವಸೆ . . . ವಾಂಶ್ಯ – ವಾಸ (ಶಮದ. ೨೮೨ ಪ್ರಯೋ.). [ಸಂ.]

**ವಾಂಸ** (ನಾ). = ವಾಂಶ್ಯ : "ವಾಂಸ : – ತಮಾಲಪತ್ರ, ಗಂಧ" (ಓಷಧಿ. ೧೪೯). [< ಸಂ. ವಾಂಶ್ಯ]

**ವಾಃಕಣ** (ನಾ). ನೀರಿನ ಹನಿ ; ಜಲಬಿಂದು : ಜೈನೋಕ್ತಿವಾರಾಶಿವಾಃಕಣದಿಂದಂ ಪಡೆದಿರ್ದ ಸಿದ್ಧಪದಮಂ ಕೈಕೊಳ್ಳುದರ್ಕದ್ದಮೊದ್ದಣಮೊದ್ದಿರ್ದಘಸೈನ್ಯಮಂ ತುಟಿಯಿಸಲ್ (ಶಾಂತಿಪು. ೧-೭); ತಳರ್ದ ವಿಯೋಗಿನೀನಯನವಾಃಕಣಸಂಕುಳದಂತೆ ತಾರಕಾವಳಿ ಮಸುಳ್ದತ್ತು (ಜಗವಿ. ೧೬-೧೩೫). [ಸಂ.]

**ವಾಃಕಣಿಕೆ** (ನಾ). = ವಾಃಕಣ : ಅನಿಮಿಷಚಾಪದಂತೆ ಸಿರಿ . . . ತೃಣಾಗ್ರಗತವಾಃಕಣಿಕಾಗಣದಂತೆ [ಪಾಠಾಂ. ವಾಃಕಣಸಂಚಯದಂತೆ] ಸಂದ ಜೀವನಂ (ಪಂಚತಂ. ೫೯-೧೫). [ಸಂ. ವಾಃಕಣಿಕಾ]

**ವಾಃಕಿಟಿ** (ನಾ). ನೀರುಹಂದಿ ; ಕಡಲುಹಂದಿ. [ಸಂ.]

**ವಾಃಕೇಲಿ, ವಾಃಕೇಳಿ** (ನಾ). ನೀರಾಟ ; ಜಲಕ್ರೀಡೆ. **ವಾಃಕೇಳಿ** : ಮನೋಜಂ ಸ್ವಚ್ಛ ವಾಃಕೇಳಿಸಮ್ಮದಕೆಂದೋವಿದ ಪದ್ಮಷಂಡಮೆಸೆಗುಂ ತನ್ನಂದನೋಪಾಂತದೊಳ್ (ಚಂದ್ರಪು. ೧-೧೦೪). [ಸಂ.]

**ವಾಃಕೇಳಿ** 'ವಾಃಕೇಲಿ' ನೋ.

ವಾಕರಿ (ನಾ). ಓಕರಿಕೆ ; ಉಬ್ಬಳಿಕೆ : ಕಟುವಿನಿಂದ ತನು ವಿಭ್ರಮಗೊಂಬುವುದು ವಗರಿನಿಂದ ವಾಕರಿ ನಿಲುವುದು (ಉದ್ಯೋಪ್ರ. ೬-೨೯-೧೮). [< ಓಕರ./ ತೆಲು. ವಾಕರ]

ವಾಕರಿಕೆ, ವಾಕಳಿಕೆ (ನಾ). = ವಾಕರಿ : ಗಟ್ಟಿಯಾದ ವಸ್ತುಗಳನ್ನು ನುಂಗಲು ಹೋದರೆ ವಾಕರಿಕೆ ಎನ್ನುತ್ತಾನೆ (ಮನೋಂ. ೭೯). ವಾಕಳಿಕೆ : (೩).

ವಾಕರಿಕೆಯಾಗು = (ಆಲಂ) ಜುಗುಪ್ಸೆಯಾಗು ; ಅಸಹ್ಯವುಂಟಾಗು : ಗಂಡನೆಂದರೆ ಅವಳಿಗೆ ವಾಕರಿಕೆಯಾಗುವ ಹಾಗೆ ಆಗಿದೆ (ನಾಪೂಲಿ. ೩೦೭).

[< ಓಕರಿಕೆ]

ವಾಕರಿಕೆಬರು (ಕ್ರಿ). ೧. ವಾಂತಿಯಾಗುವ ಹಾಗಾಗು ; ಹೊಟ್ಟೆ ತೊಳಸಿ ಬರು : ತಿಥಿಮನೆ ಊಟ ಮಾಡಿದ್ದೇನೆ. ಅದಕ್ಕೇ ವಾಕರಿಕೆಬರುತ್ತೆ (ಮನೋಂ. ೭೭); ಚಂಪಕಳಿಗೆ ತಲೆ ಸುತ್ತಿತು. ಶ್ಯಾಮಲಿಗೆ ವಾಕರಿಕೆಬಂದಿತು (ಹಸುಹೂ. ೬೩). ೨. (ಆಲಂ) ಹೇಸಿಕೆಯಾಗು ; ಜುಗುಪ್ಸೆಯಾಗು : ಮುಗಿದ ಮೇಲೆ ಮೈಲಿಗೆಯಾಯಿತೆಂದು ವಾಕರಿಕೆಬರುವುದಿಲ್ಲ (ಪ್ರಶ್ನೆ. ೫೫). [ವಾಕರಿಕೆ + ಬರು$_1$ (< ವರ್)]

ವಾಕರಿಸು, ವಾಕಳಿಸು, ವಾಗಡಿಸು (ಕ್ರಿ). ೧. ಓಕರಿಕೆಯುಂಟಾಗು ; ವಾಂತಿಯಾಗುವಂತೆ ಆಗು : ಆಸೆಯಿಂದ ಊಟಕ್ಕೆ ಕುಳಿತ ಶಾಮು . . . ವಾಕರಿಸುತ್ತಾ ಹೋಗುತ್ತಾನೆ (ಮನೋಂ. ೭೩). ೨. (ಆಲಂ) ಹೊರದೂಡು ; ಹೊರಗೆ ಹಾಕು : ಕಾಣದೆ ಇರುವ ಈ ದೆವ್ವವನ್ನು ಮನಸ್ಸು ನುಂಗಲೂ ಆರದೆ, ವಾಕರಿಸಲೂ ಆರದೆ, ಅದಕ್ಕೆ ಬದಲಿಕ್ರಿಯೆಯಾಗಿ ದೇಹವು ಹೀಗೆ ವಾಂತಿ ಮಾಡಿಕೊಳುತ್ತಿದೆಯೆ? (ಮನೋಂ. ೮೫). ೩. ಹಿಂದಿರುಗಿಸು ; ಹಿಂದಕ್ಕೆ ಕೊಡು : ಅವಳ ಭೂಕಾಂತ ಧನಸೇನನ ಕೈಯ ಕೊಡಲವ ವಾಕರಿಸಿದ ಪಾಪಕಂಜಿ (ನನ್ನಕಾ. ೪-೩೮). ವಾಕಳಿಸು : (೩). ವಾಗಡಿಸು : ೧. ಉಣಲಿಚ್ಚೆಯಾಗದೆ ಮಂದಿ ಕೌತುಕಂದೋರಿ ವಾಗಡಿಸುತ್ತೆಯರೆಯ ಮೃತ್ತಿಕೆ ಭಸ್ಮಮಂ ಬಯಸುತೆ (ನವಮೋ. ೧೫-೬).

[< ಓಕರಿಸು]

ವಾಕಳಿಕೆ 'ವಾಕರಿಕೆ' ನೋ.

ವಾಕಳಿಸು 'ವಾಕರಿಸು' ನೋ.

ವಾಕು$_1$ (ನಾ). ಮಾತು ; ನುಡಿ : ಭೂಕಾಂತೆ ನಡನಡುಗುವಳು ನಿಷ್ಠುರವಾದ ವಾಕು ಬೇಡೆಚ್ಚರಿಕೆ (ಪುರಂದ. ೨-೪೫-೩); ಚಕ್ರಿಯೆಲ್ಲರ ಮೃದುವಾಕಿಂದ ತಿಳುಹಿ ನಿಲ್ಲಿಸಿದ (ಭರಚ. ೫೯-೧೦). [< ಸಂ. ವಾಚ್]

ವಾಕು$_2$ (ನಾ). ೧. ಬಳೆ ; ಕಂಕಣ : "ಆವಾಪಕಃ, ಪಾರಿಹಾರ್ಯಃ— ೨ ಸೂಡಿಗವೆಂಬ ಕಡಗ . . . ವಾಕು, ತೋಡೆ, ಬಳೆ" (ಸಿದ್ಧಾಂತಿ. ೨೦೦). ೨. ತೋಳಿಗೆ ತೊಡುವ ಒಂದು ಬಗೆಯ ಆಭರಣ : ಅರಳೆಲೆ ಮಾಗಾಯಿ ಪುಲಿಯುಗುರುಡಿದಾರ ಬೆರಳುಂಗುರ ವಾಕಿನಿಂದ ಕೊರಳ ಪಾದಕೆ ಗೆಜ್ಜೆಯಿಂದುಗೆ ಇಟ್ಟಂದು ತರಳನೊಪ್ಪಿದ (ಪೂಜ್ಯಚ. ೭-೪೫). 'ಕೈವಾಕು' ಪರಾ. [<— ಮರಾ. ವಾಕ , ವಾಂಕ]

ವಾಕುಚಿ (ನಾ). ಒಂದು ಬಗೆಯ ಔಷಧೀಸಸ್ಯ : "ಸೋಮವಲ್ಲಿ ವಾಕುಚಿಯಕ್ಕುಂ" (ವಸ್ತುಕೋ. ೩೭-೨೮); ದೇವದಾಳಿಯ ಬೇರು . . . ವಾಕುಚಿಯ ಬೀಜ, ಮಡುವಾಗಲ ಗೆಡ್ಡೆ, ಇವಿಷ್ಟನು ಸಮಾನವಾಗಿ ಕೂಡಿಸಿಕೊಂಡು ಚೂರ್ಣಿಸಿ ತುಪ್ಪದಲ್ಲಿ ಅಟ್ಟು ಸೇವಿಸಲು ಸರ್ವಕೀಟಕವಿಷ ಪರಿಹರವಹುದು (ವೈದ್ಯಸಾ. II, ೨೨೪).

[ಸಂ. ವಾರುಚೀ]

ವಾಕುಶಾಸ್ತ್ರ (ನಾ). ಶಬ್ದಶಾಸ್ತ್ರ : ವಸ್ತುವ ವಾಕುಶಾಸ್ತ್ರ ವಿಂಡಿಸಬಲ್ಲುದೇ (ವಚಸಂ. ೬-೧೪). [ವಾಕು$_1$ + ಶಾಸ್ತ್ರ]

ವಾಕುಜಿ 'ಬಾಗುಜಿ' ನೋ.

ವಾಕುಸಿದ್ಧಿ (ನಾ). ಮಾತಿನ ಪರಿಣತಿ ; ವಾಕ್ಸಿದ್ಧಿ : ವಾಕುಸಿದ್ಧಿಗೆಯಧಿಪತಿಯ . . . ವಿನಾಯಕನಂಘ್ರಿಗೊಂದಿಸುವೆ (ಅಬ್ಬಲೂ. ೧-೬). [ವಾಕು$_1$ + ಸಿದ್ಧಿ]

ವಾಕ್ಕಲಹ (ನಾ). ಮಾತಿನ ಜಗಳ ; ವಾಗ್ವಾದ : ಅವರಿಬ್ಬರ ವಾಕ್ಕಲಹ ನಿಂತು, ಯಾವಾಗ ಕೈ ಕೈ ಮಿಲಾಯಿಸುತ್ತೋ ನೋಡಬೇಕು (ರುಧಿ). [ಸಂ.]

ವಾಕ್ಕಿಲ್ (ನಾ). ಬಾಗಿಲು : ಸ್ವಸ್ತಿಶ್ರೀಮನ್‌ಕೊಂಗೊಣಿಮುತ್ತರಸರ್ಕ್ಕೆ ಇಪ್ಪತ್ತಾಆರನೆ ವರ್ಷದು x x x ಪುಲಿ ನೋಡಿ ಆಪ್ಪದ ವಾಕ್ಕಿಲುಳ್ ಸಗು x x x ನೆಡೆ ಎಟುದು ವಿಟ್ಟೊ (ಎಕ. X, ಕೋಲಾರ. ೭೮-೨; 751). 'ಬಾಗಿಲ್' ಪರಾ.

[ದೇ. ‖ ತಮಿ. ವಾಯಿಲ್; ಮಲ. ವಾಕಿಲ್; ತೆಲು. ವಾಕಿಲಿ; ಪಾಯ್ಕಿ. ವಾಕಲ್]

ವಾಕ್ಕು (ನಾ). ೧. ಮಾತು ; ನುಡಿ : ವಾಕ್ಕಿನೊಳಿಲ್ಲ ಮೇಣ್ ಪರಿಚಯಂ ಬಗೆ ಮೊಕ್ಕಳಮಂತುಟಲ್ತೆ (ಸೂಕ್ತಿಸು. ೧-೩೭); ಸೂರ್ಯನು ನಕ್ಕು ಲೋಕೋಪಕಾರದಲ್ಲಿ ನಿರತನಾಗಿ ಗಂಭೀರವಾದ ವಾಕ್ಕು ನುಡಿದನು (ಅರ್ಕಮಾ. ೨೦). ೨. ವಾಕ್ಕು, ಪಾಣಿ, ಪಾದ, ಪಾಯು ಮತ್ತು ಉಪಸ್ಥ ಎಂಬ ಐದು ಕರ್ಮೇಂದ್ರಿಯಗಳಲ್ಲಿ ಒಂದು : ವಾಕ್ಕು ಮೊದಲಾದ ಕರ್ಮೇಂದ್ರಿಯಗಳು ಐದು (ಹಿಂದಸಾ. ೫೫). ೩. ನುಡಿಯ ಅಧಿದೇವತೆ ; ಸರಸ್ವತಿ : ಕಾಂತಿಯೆಂಬ ಗುಣದೊಳನ್ವಿತೆಯಪ್ಪ ವಾಕ್ಕೆಂಬ ದೇವಿಗೆ . . . ಶಾಸ್ತ್ರಪ್ರಾರಂಭದಲ್ಲಿ ನಮಸ್ಕರಿಸುವಾತನಪ್ಪಂ (ಶಮದ. ೧ ವೃತ್ತಿ). 'ವಾಕು$_1$' ಪರಾ. [ಸಂ. ವಾಚ್]

ವಾಕ್ಕುಟಿಲ (ನಾ). ೧. ಮಾತಿನಿಂದ ಮಾಡುವ ಮೋಸ ,—ವಂಚನೆ. ೨. ಮಾತಿನಲ್ಲಿ ವಂಚಿಸುವವನು. [ಸಂ.]

ವಾಕ್ಕೋವಿದ (ನಾ). ಮಾತಿನಲ್ಲಿ ಜಾಣನಾದವನು ; ವಾಕ್ಪಟು : ಬಿನ್ನವಿಸಿದಂ ವಾಕ್ಕೋವಿದಂ ಸೌವಿದಂ (ಶಾಂತಿಪು. ೩-೬೫); ಅವನವಳದೆಂಬಿವಿರ್ದಂತೆವೊಲಿರ್ದಪುವಾವ ನಾವಳಾವುದು ತಾನೆಂಬಿವವಂ ಪಾರದೆ ನಿಲಲಱಿಯವನ್ನಯಂ ತಾಗುವಲ್ಲಿ ವಾಕ್ಕೋವಿದರಿಂ (ಶಮದ. ೧೪೩). [ಸಂ.]

ವಾಕ್ಚತುರ (ನಾ). ಮಾತಿನಲ್ಲಿ ಚತುರತೆಯುಳ್ಳವನು : ಅವರು ವಾಕ್ಚತುರರಾಗಿದ್ದುದರಿಂದ, ಅವರ ಒಂದೊಂದು ಭಾಷಣವೂ . . . ಕಲಾಸೌಧವಾಗಿರುತ್ತಿತ್ತು (ಕಬಾ. ಪೀಠಿಕೆ. XXi); ವಾಕ್ಚತುರರಾದ ಗಂಗರಾಜರು ನಮ್ರತೆಯಿಂದ . . . ಎಂದರು (ಶಾಂತಲಾ. ೧೯). [ಸಂ.]

ವಾಕ್ಚಮತ್ಕೃತಿ (ನಾ). ಮಾತಿನಲ್ಲಿ ತೋರಿಸುವ ಚಾತುರ್ಯ ,—ಜಾಣತನ : ನನ್ನ ಪತ್ನಿಯು ರೂಪವತಿಯೆಂದೂ ವಾಕ್ಚಮತ್ಕೃತಿಯುಳ್ಳವಳೆಂದೂ . . . ಚತುರೆಯೆಂದೂ ಬಲ್ಲೆನು (ಕವಿಕ. ೪೪). [ಸಂ.]

ವಾಕ್ಚಾಟು (ನಾ). = ವಾಕ್ಚಮತ್ಕೃತಿ : ಕುಮುದಚಂದ್ರನ ಒಳ್ನುಡಿ ಪ್ರಭಾಚಂದ್ರನ ರಮಣೀಯವಾದ ವಾಕ್ಚಾಟು (ಜ್ಞಾನಚ. ೧-೩೭). [ಸಂ.]

ವಾಕ್ಚಾತುರ್ಯ (ನಾ). = ವಾಕ್ಚಮತ್ಕೃತಿ : ವಾಕ್ಚಾತುರ್ಯವಿದ್ದವನಾದರೆ ನಾರ ಸೇರುವನೇ ? (ಗಾದೆ). [ಸಂ.]

ವಾಕ್ಚಾಪಲ್ಯ (ನಾ). ಮಾತನಾಡುವ ಚಪಲತೆ. [ಸಂ.]

ವಾಕ್ಛ್ರೀ (ನಾ). ಮಾತಿನ ಅಧಿದೇವತೆ ; ಸರಸ್ವತಿ : ಶ್ರೀಗಂ ಧರಿತ್ರಿಗಂ ವಾಕ್ಛ್ರೀಗಂ ಸಲೆ ಸವತಿಯೆನಿಸಲಾ ಪುಣ್ಯಸುಧಾಭೋಗಿಗೆ ಮಾದೇವಿ ಮನೋವೇಗೆ ಮನೋನಯನೆ ತನ್ನುದಾಸ್ಪದಮೆನಿಕುಂ(ಶಾಂತಿಪು. ೯-೮೫); ಶ್ರೀ ವಕ್ಷಸ್ಥಳದೊಳ್ ವಾಕ್ಛ್ರೀ ವಕ್ತ್ರದೊಳತುಳ ಭುಜದೊಳೂರ್ಜಿತವಿಜಯಶ್ರೀ ವಿಸ್ತಾರಿಸೆ ನೆಗಟ್ಟಂ ಶ್ರೀವರ್ಮಂ (ಚಂದ್ರಪು. ೪-೧೦).

[ಸಂ.]

ವಾಕ್ಛ್ರೀಯುತ (ನಾ). ವಿದ್ವಾಂಸ : ಶ್ರೀಯುತನೊಳುದಾರತೆ ವಾಕ್ಛ್ರೀಯುತ ನೊಳಮತ್ಸರತ್ವಮಾಗದುದಾರಂ ಶ್ರೀಯುತನಮತ್ಸರಂ ವಾಕ್ಛ್ರೀಯುತನಾದೊಡೆ ಕೃತಾರ್ಥರಾಗರೆ ಕವಿಗಳ್ (ಗದಾಯು. ೧-೪೯). [ಸಂ.]

ವಾಕ್ಪಟಲ (ನಾ). ಧ್ವನಿಯು ಹೊರಡುವ ಅಂಗ : ಆ ಕಾಲದ ಸುಮಾರಿಗೆ ಮಕ್ಕಳ ವಾಕ್ಪಟಲಗಳು ಸ್ಫುಟಗೊಂಡು ಧ್ವನಿ ಬದಲಾಯಿಸುವುದು (ಶಿಕ್ಷದ. ೧೫೫). [ಸಂ.]

ವಾಕ್ಪಟು (ನಾ). ವಾಕ್ಚಾತುರ್ಯವುಳ್ಳವನು ; ವಾಗ್ಮಿ : ಇದನ್ನು ಬಿಡಿಸುವುದರಲ್ಲಿ ಪ್ರತ್ಯಕ್ಷವಾಗುವ ನೈಪುಣ್ಯ ವಾಕ್ಪಟುವಿನ ವರ್ಗವನ್ನು ಸ್ಥಾಪಿಸಲು ಉತ್ಕೃಷ್ಟ ಸಲಕರಣೆ (ಕಬಾ. ಪೀಠಿಕೆ. XVi); ಇದನ್ನು ನೋಡಿ . . . ವಾಕ್ಪಟುಗಳಾಗಿದ್ದ ಹಲವರ ನಾಲಗೆ ಬಿಗಿಯಿತು (ನಂಟರು. ೨೯). [ಸಂ.]

ವಾಕ್ಪತಿ (ನಾ). ೧. ನಿರರ್ಗಳವಾಗಿ ಮಾತನಾಡಬಲ್ಲವನು ; ವಾಕ್ಪಟು ; ವಾಗ್ಮಿ : "ವಾಗೀಶಃ, ವಾಕ್ಪತಿಃ — ೨ ನಿರ್ದೋಷವಾಗಿ ಮಾತು ಕಲಿತವನ ಹೆಸರುಗಳು" (ಸಿದ್ಧಾಂತಿ. ೩೩೨). ೨. ಮಾತಿನ ಒಡೆಯ ; ಬೃಹಸ್ಪತಿ : "ಅಂಗಿರಸ . . . ವಾಕ್ಪತಿ ಜೀವಂ ಗುರುವೆಂಬಿನಿತುಮಿವು ಬೃಹಸ್ಪತಿನಾಮಂ" (ವಸ್ತುಕೋ. ೧೩-೭೩);

ವಾಕ್ಪತಿಯೇ ಎದುರಿಗೆ ಬಂದಿರುವಾಗ ಆತನಪ್ಪಣೆಯಿಲ್ಲದೆ ವಾಕ್ಕು ಎಂತು ರೂಪಗೊಂಡು ಹೊರಬೀಳುವುದು? (ಮಹಾಣ. ೧೧೧). ೩. ಸರಸ್ವತಿಯ ಗಂಡ ; ಬ್ರಹ್ಮ : ನೆಱೆಯೆ ಪೊಗಟಲ್ಕೆ ವಾಕ್ಪತಿ ನೆಱೆಯಂ ಸುರಪತಿಯ ನೃತ್ಯಮಂ (ಅಜಿಪು. ೫-೫೧). ೪. ಪರಮಾರವಂಶದ ಒಬ್ಬ ದೊರೆಯ ಹೆಸರು. ೫. [ಜ್ಯೋತಿ] ನವಗ್ರಹಗಳಲ್ಲಿ ಐದನೆಯದಾದ ಬೃಹಸ್ಪತಿ ಗ್ರಹ ; ಗುರು : ಆ ಧರ್ಮಮಂದಿರದೊಳ್ ವಾಕ್ಪತಿಯಿರ್ದನೆಂದಱಿಗೆ ತಜ್ಜಂ ಜನ್ಮತತ್ಕಾಲದೊಳ್ (ಜಾತತಿ. ೨೪-೨). [ಸಂ.]

**ವಾಕ್ಪರಿಣತ** (ನಾ). ಮಾತಿನಲ್ಲಿ ಪರಿಣತಿ ಹೊಂದಿದವನು ; ವಾಕ್ಸಿದ್ಧಿಯುಳ್ಳವನು : ಒರ್ದೆಂಬೀ ರೇಫಕ್ಕಾಚರಿಪರ್ ಭಾವಾರ್ಥಮಪ್ಪುದೊಂದು ಪುಕಾರಂ ಪರಮಾಗೆ ಬಿಂದುವಂ ವಾಕ್ಪರಿಣತರಿಂ ಸಿದ್ಧಮಾಯ್ತು ಪೆಂಪೆಂಬ ಪದಂ (ಶಮದ. ೨೧೨). [ಸಂ.]

**ವಾಕ್ಪಾಟವ** (ನಾ). ಮಾತಿನ ಜಾಣತನ ; ನುಡಿಯ ಚತುರತೆ : ರಾಜಕೀಟಕವಾಕ್ಪಾಟವಮಲ್ಲದಿಲ್ಲ ಪೆಱತುಂ ವಾಕ್ಪಾಟವಂ ಸುತ್ತಲುಂ (ಶಾಂತಿಪು. ೩-೩). [ಸಂ.]

**ವಾಕ್ಪಾರುಷ್ಯ** (ನಾ). ಕಠಿಣವಾದ ಮಾತು ; ಬಿರುಸುನುಡಿ : ಅನೂನಬಳರಪ್ಪ ದಾನವಮಾನವರೆನಿಬರಾನುಂ ವಾಕ್ಪಾರುಷ್ಯದಿಂ ಕೆಟ್ಟರೆಂದು ವಾಕ್ಪಾರುಷ್ಯ ಮನೋದುಃಖಂ ತ್ರಿದೋಷಸಮುದಿತರೋಗಂ ಸಮನಿಸುಗುಂ (ಜಾತತಿ. ೯-೨೪). [ಸಂ.]

**ವಾಕ್ಪೌರುಷ** (ನಾ). ೧. ಮಾತನ್ನಾಡುವ ಸಾಮರ್ಥ್ಯ, —ಶಕ್ತಿ. ೨. ಬಡಾಯಿ ಕೊಚ್ಚುವುದು : ನಿನ್ನದು ಬರೀ ವಾಕ್ಪೌರುಷವೇ ಹೊರತು ಕಣ್ಣಿಗೆ ಕಾಣುವಂಥ ಕೆಲಸವನ್ನು ಮಾಡಿದ್ದನ್ನು ನಾನು ನೋಡಿಯೇ ಇಲ್ಲ (ರೂಢಿ). [ಸಂ.]

**ವಾಕ್ಪ್ರಗುಂಭನ** (ನಾ). ಶಬ್ದಗಳನ್ನು ವ್ಯವಸ್ಥಿತವಾಗಿ ಜೋಡಿಸುವಿಕೆ : ವಿಳಾಸವತೀನಯನತ್ರಿಭಾಗದೊಳ್ ಸಂಗಳಿಸಿತ್ತೊ ಮೋಹನಮನಗ್ಗಳ ನಿನ್ನಯ ವಾಕ್ಪ್ರಗುಂಭನಂ (ಚಂದ್ರಪ್ರ. ೧-೫೯). [ಸಂ.]

**ವಾಕ್ಪ್ರಣಿಧಿ** (ನಾ). ಮಾತಿನಿಂದ ಮಾಡುವ ಪ್ರಚೋದನೆ ; ಮಾತಿನಿಂದ ಚೋದಿಸುವುದು : ವಿಸಟಂಬರ್ಪಾನೆಯುಂ ವಾಕ್ಪ್ರಣಿಧಿಯೊಳೆ ಬೆಸಂಬೆತ್ತು . . . ನೀರೂಡಿಸಿದಂ (ಚಂದ್ರಪ್ರ. ೯-೯೫). [ಸಂ.]

**ವಾಕ್ಪ್ರೌಢ** (ನಾ). = ವಾಕ್ಕೋವಿದ : ವಾಕ್ಕೋವಿದರಿಂ = ವಾಕ್ಪ್ರೌಢರಿಂದೆ (ಶಮದ. ೧೪೩ ಟೀಕೆ). [ಸಂ.]

**ವಾಕ್ಪ್ರೌಢಿ** (ನಾ). ಮಾತಿನ ನೈಪುಣ್ಯ, —ಪ್ರೌಢಿಮೆ : ಸುತತ್ತ್ವಾಭ್ಯುಪಯುಕ್ತಂ ಮಾಟ್ಕೆ ಜೈನಂ ವಚನಮಮಳವಾಕ್ಪ್ರೌಢಿಯಂ ನಮ್ಮೊಳೆಂದುಂ (ಚಂದ್ರಪ್ರ. ೧-೧). [ಸಂ.]

**ವಾಕ್ಯ** (ನಾ). ೧. ಮಾತು ; ನುಡಿ ; ಸೊಲ್ಲು : ಪಾವನಮೆನಿಸಿದ ವಾಕ್ಯೋಪಹಾರಂಗಳಿಂದರ್ಚಿಸಿದಂ ಶ್ರೀಮಲ್ಲಿಭಟ್ಟಾರಕಪದಯುಗಮಂ ಭಾರತೀ ಕರ್ಣಪೂರಂ (ಮಲ್ಲಿಪು. ೧೪-೨೯೩); ಭಟರು . . . ಕಟುವಚನವಿಕ್ಷೇಪ ರೋಷಸ್ಫುಟನವೇಲ್ಲಿತವಾಕ್ಯಭಂಗೀಘಟನವಿಘಟನದಿಂದ ಮೂದಲಿಸಿದರು ಮುಳಿಸಿನಲಿ (ಜಿವ್ಯಾಗ. ೫-೫೫). ೨. ಆಜ್ಞೆ ; ಆಣತಿ. ೩. ಹೇಳಿಕೆ ; ದೃಢವಚನ. ೪. [ವ್ಯಾಕ] ಒಂದು ಪೂರ್ಣಾರ್ಥವನ್ನು ಕೊಡುವಂತೆ ಸಮಂಜಸವಾಗಿ ಬಳಕೆಯಾದ ಪದಗಳ ಸರಣಿ ; ಪೂರ್ಣಾರ್ಥಬೋಧಕ ಪದವ್ಯವಸ್ಥೆ : ವಿದಿತಾರ್ಥಂ ಕ್ಷೋದಕ್ಷಮಮುದಾತ್ತಶಬ್ದಂ ಪರಸ್ಪರಂ ಸಾಪೇಕ್ಷಂ ಪದಸಮುದಾಯಂ ವಾಕ್ಯಂ (ಕಾವ್ಯಾವ. ೪೫೩); ವಾಕ್ಯ ಎಂದರೆ ಒಂದು ಅರ್ಥವನ್ನು ಪೂರ್ಣವಾಗಿ ಹೇಳುವ, ಪರಸ್ಪರ ಸಂಬಂಧವುಳ್ಳ ಶಬ್ದಗಳ ಸಮುದಾಯ (ಕೈಪಿಡಿ. ೩೩). [ಸಂ.]

**ವಾಕ್ಯದೀಪಕ** (ನಾ). [ಕಾವ್ಯಮೀ] ವಾಕ್ಯದ ಒಂದು ಕ್ರಿಯೆಗೆ ಅನೇಕ ಕರ್ತೃಗಳ ಸಂಬಂಧವಿರುವುದು : ವಾಕ್ಯದೀಪಕಂ ಪ್ರತ್ಯೇಕಂ ಸಂಬಂಧಕಾರಣಂ : ಆತನುಮವನುಂ ಬಂದನೆಂಬಲ್ಲಿ ಬಂದನೆಂಬುದು ಪ್ರತ್ಯೇಕಂ ವರ್ತಿಸುವುದು, ಆತನುಂ ಬಂದಂ ಅವನುಂ ಬಂದಂ ಎಂದು (ಶಮದ. ನ. ೧೫೭ ಪ್ರಯೋ). 'ದೀಪಕಾಲಂಕಾರ' ಪರಾ. [ಸಂ.]

**ವಾಕ್ಯದೋಷ** (ನಾ). [ಕಾವ್ಯಮೀ] ವಾಕ್ಯದ ಅರ್ಥ, ರಸಗಳಿಗೆ ಕುಂದನ್ನುಂಟು ಮಾಡುವಂಥ ದೋಷ ; ಕಾವ್ಯರಮಣೀಯತೆಗೆ ಭಂಗ ತರುವ ವಾಕ್ಯದ ದೋಷ : ವ್ಯವಹಿತಮೇಕಾರ್ಥಂ ವ್ಯರ್ಥವಪಕ್ರಮಮಖಿಳಲೋಕಶಾಸ್ತ್ರವಿರುದ್ಧಂ ಸುವಿದಿತ ಯತಿಭಂಗಂ ಭಿನ್ನವೃತ್ತಮೆಂದಿಂತು ವಾಕ್ಯದೋಷಮಿವಕ್ಕುಂ (ಕಾವ್ಯಾವ. ೪೫೫). [ಸಂ.]

**ವಾಕ್ಯನಿರ್ವಾಹ** (ನಾ). ವಾಕ್ಯದ ಮುಗಿತಾಯ, — ಕೊನೆ : ಪ್ರಥಮೈಕವಚನಮಂ ಮೊದಲೊಳ್ ಪಲವಂ ಪೇೞ್ದು ವಾಕ್ಯನಿರ್ವಾಹದೊಳ್ ಕ್ರಿಯಾಬಹುವಚನಮಂ ಪುಗಿಸುವರ್ (ಶಮದ. ೧೪೨ ವೃತ್ತಿ). [ಸಂ.]

**ವಾಕ್ಯಪರಿವರ್ತನ** (ನಾ). [ವ್ಯಾಕ] "ಸಾಮಾನ್ಯ, ಸಂಯೋಜಿತ, ಮಿಶ್ರ ಎಂಬ ಮೂರು ಬಗೆಯ ವಾಕ್ಯಗಳಲ್ಲಿ ಒಂದನ್ನು ಕೊಟ್ಟರೆ, ಅದರಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿ ಮತ್ತೊಂದು ಬಗೆಯ ವಾಕ್ಯವಾಗಿ ಅನೇಕ ಸಂದರ್ಭಗಳಲ್ಲಿ ಮಾರ್ಪಡಿಸಬಹುದು. ಹೀಗೆ ಮಾರ್ಪಡಿಸುವುದಕ್ಕೆ ವಾಕ್ಯಪರಿವರ್ತನವೆಂದು ಹೆಸರು" (ಮಧ್ಯಮ. ೧೯೮). [ಸಂ.]

**ವಾಕ್ಯಮಾಲೆ** (ನಾ). ಅನೇಕ ವಿಭಕ್ತ್ಯರ್ಥಪದಗಳು ಕೂಡಿ ಆದ ವಾಕ್ಯ ರೂಪದ ಒಂದು ನಾಮಪದ : ಸಮುಪಾತ್ತಕ್ರಿಯೆಯುಂ ವಾಕ್ಯಮಾಲೆಯುಂ ಸುಕವಿರಚಿತನಾಮಮುದಾದಂದಮರ್ಗುಂ ಲಿಂಗಂ (ಶಮದ. ೭೫). [ಸಂ. ವಾಕ್ಯಮಾಲಾ]

**ವಾಕ್ಯವಿಚಿತ್ರ** (ನಾ). ಮನೋಹರವಾಗಿ ಮಾತನ್ನಾಡುವವನು : ಫಲ್ಗುಣಮಿತ್ರ ವಾಕ್ಯವಿಚಿತ್ರ ರಕ್ಷಿಸು (ಹರಿಸಾ. ೯). [ಸಂ.]

**ವಾಕ್ಯವಿಭಜನೆ** (ನಾ). [ವ್ಯಾಕ] "ವಾಕ್ಯದಲ್ಲಿ ಜೋಡಣೆ ಹೊಂದಿರುವ ಅಂಗಗಳನ್ನೆಲ್ಲಾ ಬೇರ್ಪಡಿಸಿ ಅವುಗಳ ಸಂಬಂಧವನ್ನು ತೋರಿಸುವುದಕ್ಕೆ ವಾಕ್ಯವಿಭಜನೆ ಎಂದು ಹೆಸರು" (ಮಧ್ಯಮ. ೧೯೯). [ಸಂ. ವಾಕ್ಯವಿಭಜನ]

**ವಾಕ್ಯವೃಂದ** (ನಾ). ವಾಕ್ಯಗಳ ಗುಂಪು: ಯಾವ ದೇಶದಲ್ಲಿ ಗ್ರಂಥಸಮಾಲೋಚನೆಯು ಸಾಧಾರಣವಾಗಿ ಮೂರು ವಾಕ್ಯವೃಂದ(ಪ್ಯಾರಾ)ಗಳಲ್ಲಿ ಮುಗಿದು ಹೋಗುವುದೋ ಆ ದೇಶದಲ್ಲಿ ಒಂದು ಪ್ರಾಚೀನಗ್ರಂಥದ ಸಮಾಲೋಚನೆಯು ಉದ್ದವಾದರೆ ಆ ದೋಷವು ಅಕ್ಷಮ್ಯವಲ್ಲ (ಬಂಕಿಮ. ೪೫೭). [ಸಂ.]

**ವಾಕ್ಯವೇಷ್ಟನ** (ನಾ). ಬೇರೆ ಕಡೆಗಳಿಂದ ವಾಕ್ಯಗಳನ್ನು ಪ್ರತ್ಯೇಕಿಸಿ ತೆಗೆದುಕೊಂಡು ಆವರಣದಲ್ಲಿಡುವುದು : ಕರೆಗತ್ತದಿರ್ಗೆಯಲ್ಲದೆ ಪರಮಿರೆ ಪದ್ಯಾರ್ಥವಾಕ್ಯವೇಷ್ಟನದೆಡೆಗಂ ಸ್ಫುರದನುಕೃತಿಗಂ ಸ್ವರಮವು ಪರಮಿರೆ ಋತ್ವಕ್ಕಮಂತೆ ಸಂಧಿವಿಕಲ್ಪಂ (ಶಮದ. ೬೧); ಮಾಂಟೇನನ ಪ್ರಬಂಧ ಚಿಂತನೆಗಳ, ವಾಕ್ಯವೇಷ್ಟನಗಳ ಮತ್ತು ಉಪಕಥೆಗಳ ಒಂದು ಸಂಕೀರ್ಣರಚನೆಯಗಿರುತ್ತದೆ (ಸಾಹಿಪ್ರ. ೩೩೪). [ಸಂ.]

**ವಾಕ್ಯಶೇಷ** (ನಾ). ಹೇಳಬೇಕಾದ ಮಾತಿನಲ್ಲಿ ಹೇಳದೆ ಬಿಟ್ಟ ಭಾಗ : ಪದನಿರ್ಧಾರದಲ್ಲಿ ವಿಪರ್ಯಯ, ವಾಕ್ಯಶೇಷ, ಅನುಮತ . . . ಇವುಗಳ ಅರ್ಥಪ್ರಯೋಗಗಳು ; ಶಾಸ್ತ್ರಗ್ರಂಥಗಳಲ್ಲಿ ವಿಧವಿಧವಾಗಿವೆ (ಭಾರದ. ೩೬೯). [ಸಂ.]

**ವಾಕ್ಯಾನ್ವಯ** (ನಾ). [ವ್ಯಾಕ] ವಾಕ್ಯವು ಕರ್ತೃ, ಕರ್ಮ ಮತ್ತು ಕ್ರಿಯಾನುಸಾರವಾಗಿ ಸಮಂಜಸವಾಗಿ ಹೊಂದಿಕೊಳ್ಳುವಿಕೆ : ಪರತಂತ್ರಕ್ಕೆ : ಅವನಧಿಕಪುಣ್ಯನವನೆ ಸೇವ್ಯಂ . . . ತಾನವಂ ಚದುರಂ, ತಾನವಳ್ ಚದುರೆ, ತಾನದು ಪಿರಿದು ; ಇದು ವಾಕ್ಯಾನ್ವಯಂ (ಶಮದ. ನ. ೧೫೪ ಪ್ರಯೋ). [ಸಂ.]

**ವಾಕ್ಯಾರ್ಥ** (ನಾ). ಇಡಿಯಾದ ವಾಕ್ಯದ ಒಟ್ಟು ಅರ್ಥ ; ವಾಕ್ಯದ ತಾತ್ಪರ್ಯಾರ್ಥ ; ಯಥಾರ್ಥ : ಉಪೇಕ್ಷೆಗೆಯ್ಯದೆ ಸದಭಿಮತೋದಾತ್ತಕೀರ್ತಿಯಂ ಬಯಸುವವಂ ಪದವಾಕ್ಯಾರ್ಥಂಗಳೊಳೊಂದದಂತು ಪಿಂಗಿಸುಗೆ ದೋಷಮಂ ಕೃತಿಯಿಂದಂ (ಕಾವ್ಯಾವ. ೪೨೯); ವರ್ಣರಸಗಂಧಸ್ಪರ್ಶನಾಮಂಗಳೆಂಬಿನಮೆಪ್ಪತ್ತೆರಡೆಂಬ ತತ್ಪ್ರಕೃತಿಯಿಂ ಬೇಱಿರ್ದು ವಾಕ್ಯಾರ್ಥದಿಂ ಧ್ವನಿ ಬೇಱಿರ್ದೆಸೆವಂತದೇನೆಸೆದನೋ ಕಾಲಾಂತರಾನಂತಕಂ (ಅನಂಪು. ೧೪-೫೨). [ಸಂ.]

**ವಾಕ್ಯೋಪಮೆ** (ನಾ). [ಕಾವ್ಯಮೀ] ಉಪಮಾಲಂಕಾರದ ಒಂದು ಭೇದ ; ಒಂದು ವಾಕ್ಯಾರ್ಥವನ್ನು ಮತ್ತೊಂದು ವಾಕ್ಯಾರ್ಥದೊಂದಿಗೆ ಹೋಲಿಸುವುದು ; ಒಂದು ವಾಕ್ಯದಿಂದ ಬೇರೊಂದು ವಾಕ್ಯದ ವಸ್ತುಗಳ

ಹೋಲಿಕೆಯನ್ನು ಹೇಳುವುದು : ಭವದೀಯ ವದನಮಾಲೋಲವಿಲೋಚನ ಮುದಿತರಾಗಮಣಿವಿಳಸಿತಮಂ ಪ್ರವಿಕಸಿತಾಂಬುಜವನಮಂ ಸವಿಶೇಷಂ ಪೋಲ್ಕುಮೆಂಗೆ ವಾಕ್ಯೋಪಮೆಯಂ (ಕವಿರಾ. ೩-೮೨). [ಸಂ. ವಾಕ್ಯೋಪಮಾ]

**ವಾಕ್ಶಕ್ತಿ** (ನಾ). ೧. ಮಾತನ್ನಾಡುವ ಸಾಮರ್ಥ್ಯ, –ಶಕ್ತಿ. ೨. ಮಾತಿನ ಚಾತುರ್ಯ ; ವಾಕ್ಚತುರತೆ : ಅವರ ವಾಕ್ಶಕ್ತಿಯನ್ನು ಕಂಡು ಸಭೆ ಬೆರಗಾಯಿತು (ರೂಢಿ). [ಸಂ.]

**ವಾಕ್ಶ್ರೀ** (ನಾ). ೧. ಮಾತಿನ ಬೆಡಗು, –ಅಂದ. ೨. ಸರಸ್ವತಿ ; ವಾಣಿ : ಶ್ರೀವಧುವಿಂಗಗಲೆಗೆ ವಾಕ್‌ಶ್ರೀವಧುವಿಂಗಜನನಜನಂ ಕುಸುಮಾಸ್ತ್ರಾವಳಿಯಿಂದೊಲ್ಮೆಸಿದ ಭಾವೋದ್ಭವನೀಗೆ ನಮಗೆ ಸುಖಸಂಪದಮಂ (ಮದಕ ೧-೧); ಶ್ರೀರಾಮಾರಮಣಂ ವಾಕ್ಶ್ರೀರಾಮಾವಲ್ಲಭಂ ಯಶಃಶ್ರೀಕಾಂತಂ ವೀರಶ್ರೀಪತಿ ಮುನಿವೃಂದಾರಕಪದ ವಿನತನಾದನಭಿನವಪಂಪಂ (ಪಂರಾಮಾ. ೧೫-೧). 'ವಾಕ್ಶ್ರೀ' ಪರಾ. [ಸಂ.]

**ವಾಕ್ಸರಣಿ** (ನಾ). ಮಾತಿನ ಓಘ, –ನಿರಂತರತೆ : ಭಾಷೆಯೂ ನಿರ್ದಿಷ್ಟವಾದ ಶಬ್ದರೂಪದಿಂದ, ವಾಕ್ಸರಣಿಯಿಂದ ಉಚ್ಚಾರಣದಿಂದ ಮತ್ತು ಅರ್ಥವಾಹಕತೆಯಿಂದ ಒಪ್ಪುವುದು (ಸಂಕೋಧ. ೬೬). [ಸಂ.]

**ವಾಕ್ಸಾರ** (ನಾ). ಮಾತೇ ಸತ್ತ್ವವಾಗುಳ್ಳವನು ; ಮಾತಿನ ಮಲ್ಲ : ಆರಯ ನೃಪರಾರುಂ ವಾಕ್ಸಾರರ್ ಕರ್ತವ್ಯಸಾರರಲ್ಲರದಂತಂತಾರುಮನರಿವೆಂ ಕೇಳ್ ಕ್ಷಿತಿಸಾರಂ ನಿನ್ನನ್ನನಾವನಿಜೀವಬೆಡಂಗಾ (ಗದಾಯು. ೨-೬). [ಸಂ.]

**ವಾಕ್ಸೌಂದರ್ಯ** (ನಾ). ಮಾತಿನ ರಮಣೀಯತೆ ; ನುಡಿಯ ಸೊಗಸು : ದೆಸೆಗ ಪೊಣ್ಮುವ ನಿಜವಾಕ್ಸೌಂದರ್ಯದೆ ಪೋಲ್ತಂ ಪುರುನಂದನನಂ ಪೊಗಟ್ಟು ಮಾಗಧಂ ಮಾಗಧನಂ (ಆದಿಪು. ೧೨-೧೧೫). [ಸಂ.]

**ವಾಕ್ಸ್ವಾತಂತ್ರ್ಯ** (ನಾ). ಮಾತನ್ನಾಡುವ ಹಕ್ಕು, –ಸ್ವತಂತ್ರತೆ : ಸಮಸ್ತ ನಾಗರಿಕರಿಗೂ ವಾಕ್‌ಸ್ವಾತಂತ್ರ್ಯಕ್ಕೆ ಮತ್ತು ಅಭಿವ್ಯಕ್ತಿಸ್ವಾತಂತ್ರ್ಯಕ್ಕೆ . . . ಅಧಿಕಾರವಿರತಕ್ಕುದು (ಭಾಥಾವ. ೧೦). [ಸಂ.]

**ವಾಖಾಣಿಸು** 'ವಕ್ಕಾಣಿಸು' ನೋ.

**ವಾಗಗೋಚರ** (ನಾ). ಮಾತಿಗೆ ಸಿಲುಕದವನು ; ನುಡಿಗೆ ಅತೀತನಾದವನು ; ಪರಮಾತ್ಮ : ಶ್ರೀ ಗಜಾನನ . . . ಆಗಿಸ್ಕೆ ಬೇಗಿದನು ಭಕ್ತರ ವಾಗಗೋಚರ ದೇವಿ ರುಕ್ಮಿಣಿ ನಾಗವೇಣಿಯ ಪರಿಣಯದ ಶುಭಕಲಿತವಹ ಕೃತಿಯಾ (ಕರ್ನಾಕ. ೩೧೨). [ಸಂ.]

**ವಾಗಡಿಸು** 'ವಾಕರಿಸು' ನೋ.

**ವಾಗತ್ಯ₁** (ನಾ). ೧. ಅಮಂಗಳಕರವಾದುದು ; ಅಶುಭವಾದುದು : ವಾಂತಿಭೇದಿ ಎಂದು ಹೇಳುವುದಕ್ಕೇ ಜನಗಳಿಗೆ ವಾಗತ್ಯ, ಬಾಯಿ ಬರದು (ಕಲನ. ೨೪೯); ಏಕಾದಶಿಯ ದಿನ ಉಪವಾಸವನ್ನು ಬಿಟ್ಟಿದ್ದಳು. ಮುತ್ತೈದೆಯರು ಉಪವಾಸಮಾಡುವುದು ವಾಗತ್ಯವೆಂದು (ಎರಸ. ೯೮). ೨. ಆಡಬಾರದ ಮಾತು ; ಅವಾಚ್ಯ : ಗಂಗೆಗೆ ಈ ಮಾತು ವಾಗತ್ಯವೆನಿಸಿತು (ಬದುರ. ೪೧); ಒಬ್ಬಿಬ್ಬರಿಗೆ 'ಹಮಾಲಿ ಬರುತ್ತೀಯೇನು?' ಅಂದು ಕೇಳದರೇನೇ ಅವರಿಗೆ ವಾಗತ್ಯವೆನಿಸಿತು (ಮುಂಗಾಪು. ೧೦೩). ೩. ಅಸಮಾಧಾನ ; ಅಸಹನೆ : "ಮತ್ತೆ ಕನಸು ಅಂತೀಯಲ್ಲೆ ಅತ್ತಿಗಿ" ಎಂದು ಅದೊಂದು ಬಗೆಯ ವಾಗತ್ಯದಿಂದ ಆಕ್ಷೇಪಿಸಿದಳು ನಾಗಮ್ಮ (ದಾಕೂಟ. ೧೧೯); ಅದಕ್ಕೇಕೆ ವಾಗತ್ಯ? ಪ್ರಸಂಗವೇ ಅಂತಹುದಿತ್ತು (ಶಿವಭಾ. ೯೧). 'ವಾಗತ್ಯಪಡು' ಪರಾ. ೪. ಬೇಡವಾದುದು ; ಅನಗತ್ಯವಾದುದು : ಶ್ರೀಕಾಂತನ ಮಡದಿ ಲಕ್ಷ್ಮಿಗೆ ಈ ಕುತೂಹಲವೇ 'ವಾಗತ್ಯ'ವೆನಿಸಿತು (ನಡದಾ. II, ೧೧೬೭). 'ಆಗಾತ್ಯ' ಪರಾ. [<— ತೆಲು. ಓಗಾತ್ಯಮು]

**ವಾಗತ್ಯ₂, ವಾಗಾತ್ಯ** (ನಾ). ೧. ರೀತಿ ; ಸಂಪ್ರದಾಯ : "ಕುಂಕುಮ ಹಚ್ಚಿಕೊಂಡು ಹೋಗರಿ" ಎಂದು ಸೊಸೆ ಕೂಗಿದಳು. ವಾಗತ್ಯಕ್ಕಾಗಿ ಆಗ ತಿರುಗಿ ಬಂದು . . . ಉಪದೇಶ ಮಾಡಿ ಹೊರಟುಹೋದಳು (ನಿರಾಟ. ೫೫); ಏನೇ ಆದ್ರೂ ಇದು ವಾಗತ್ಯವಾ, ಯಾಕ ತುಂಗವ್ವಾ? (ಬೀಳಕ. ೨೪). ವಾಗಾತ್ಯ : ೨. ಒಪ್ಪ ; ಅಚ್ಚುಕಟ್ಟು : ಗೌಡರ ಹೊಲದ ಕಮತಾ ವಾಗಾತ್ಯದಿಂದ ಮಾಡಿಸಿಗೊಂಡ ಇದ್ದಬಿಡು (ಗ್ರಾಮಾಯ. ೪೫೪).
[<— ತೆಲು. ಓಗಿತಮು]

**ವಾಗತ್ಯಪಡು** (ಕ್ರಿ). ಅಸಮಾಧಾನಗೊಳ್ಳು ; ಅಸಹನೆಯಿಂದ ಕೂಡಿರು : ವಾಗತ್ಯಪಡುವುದೆ ವಿಧಿನಿಷೇಧಾಚರಣೆ ರೋಗಾನುಭವವೆಲ್ಲ ಉಗ್ರತಪವು (ವಿದಾಕ್ಕೃ. ೨೫-೨). [ವಾಗತ್ಯ₁ + ಪಡು₁]

**ವಾಗದ್ವೈತ** (ನಾ). ಮಾತಿನಲ್ಲಿ ಮಾತ್ರ ಇರುವ ಅದ್ವೈತತತ್ತ್ವ : ಗುರು ಹಿರಿಯರು ತೋರಿದ ಉಪದೇಶದಿಂದ ವಾಗದ್ವೈತವ ಕಲಿತು ವಾದಿಪರಲ್ಲದೆ ಆಗುಹೋಗೆಂಬುದನರಿಯರು (ಅವಚಂ. ೧೬-೬೯); ಇಂತೀ ವಾಗದ್ವೈತದ ಮಾತಿನ ಮಾಲೆ ಸ್ವಯಂದ್ವೈತವ ಮುಟ್ಟಬಲ್ಲುದೇ (ಮೋಳಿಮಾ. ೯-೩೨). [ಸಂ.]

**ವಾಗದ್ವೈತಿ** (ನಾ). ವಾಗದ್ವೈತವನ್ನು ಪ್ರತಿಪಾದಿಸುವವನು : ಇಂತಹ ವಾಗದ್ವೈತಿಗಳು ಜಿಹ್ವಾಲಂಪಟರ್ಕಾಗಿ, ಜಿಹ್ವೆಯ ಕೊನೆಯಲ್ಲಿ ನುಡಿವರಲ್ಲದೆ ಇವರ ಜ್ಞಾನವೇ ಗಟ್ಟಿಕೊಂಡು ನುಡಿಯಾಗಿಲ್ಲ (ಮೋಳಿಮಾ. ೭ ಪ್ರಸ್ತಾವನೆ).
[ಸಂ. ವಾಗದ್ವೈತಿನ್]

**ವಾಗಧಿಪ** (ನಾ). ಮಾತಿನ ಮೇಲೆ ಪ್ರಭುತ್ವವುಳ್ಳವನು ; ವಿದ್ವಾಂಸ : ಶಬ್ದ ತತ್ತ್ವಾಂಬುಧಿ ವಿವಿಧವಿಧಾನಾಲಂಕ್ರಿಯಾವೀ[ಚಿಮಾಲಾ]ವಿಧುರಗತಿವಿಲೋಢ್ಯಂ ತಳ್ತು ನಿಲ್ತಪ್ಪುದಾ ವಾಗಧಿಪ ವಚನಮಾಲಾಪಾವನೀಯಗ[ಭೀರಂ] (ಕವಿರಾ. ೨-೧೫೪). [ಸಂ.]

**ವಾಗನೀಸ** (ನಾ). ದೊಡ್ಡ ಮನೆತನಗಳಲ್ಲಿ ಖಾಸಗಿ ಲೆಕ್ಕ, ಕಾಗದಪತ್ರ, ಭೋಜನ ಮೊದಲಾದುವುಗಳ ಮೇಲ್ವಿಚಾರಣೆಯನ್ನು ನೋಡಿ ಕೊಳ್ಳುವವನು : ತನ್ನ ಕಾರಭಾರಿಯನ್ನೂ ವಾಗನೀಸನನ್ನೂ ಕರೆಸಿ ಏನೇನು ಮಾಡಬೇಕೆಂಬುದನ್ನು ಅವರಿಗೆ ಹೇಳಿದನು (ಛತ್ರಪ. ೧೨೨).
[<— ಪಾರ. ವಾಕ್‌ನವೀಸ್; ಮರಾ. ವಾಕ್‌ನವೀಸ್, ವಾಕನೀಸ್, ವಾಕೆನೀಸ್]

**ವಾಗಾಡಂಬರ** (ನಾ). ಮಾತಿನಲ್ಲಿಯ ಅಟ್ಟಹಾಸ ; ಬಡಾಯಿ : ಕದನಕರ್ಕಶ ಕ್ಷತ್ರಿಯಂಗೆ . . . ನಿಷ್ಕಾರಣಕಾಯಕಂಪನಮುಂ ನಿರಾಲಂಬನ ವಾಗಾಡಂಬರಮುಂ ತಕ್ಕುದಲ್ತು (ಆದಿಪು. ೧೪-೮೧ವ); ಇಂಥ ವಾಗಾಡಂಬರದಿಂದ ಕಲಾಸಿದ್ಧಿಯಾಗುತ್ತದೆಯೆ? (ಒಂಟಿದ. ೧೨). [ಸಂ.]

**ವಾಗಾತ್ಯ** 'ವಾಗತ್ಯ₂' ನೋ.

**ವಾಗಿಂದ್ರಿಯ** (ನಾ). ಮಾತನಾಡಲು ಸಹಾಯಕವಾದ ಇಂದ್ರಿಯ ; ನಾಲಗೆ : ವರ್ಣೋಚ್ಚಾರಣೆಗೆ ಸಾಧನವಾಗಿಯೂ ಇಂದ್ರಿಯವಾಗಿಯೂ ಇರುವುದು ವಾಗಿಂದ್ರಿಯವೆನಿಸಿಕೊಳ್ಳುವುದು (ತತ್ತ್ವಶು. ೭). [ಸಂ.]

**ವಾಗೀನು** 'ವ್ಯಾಗನ್' ನೋ.

**ವಾಗೀಶ** (ನಾ). ೧. ಮಾತಿನ ಮೇಲೆ ಪ್ರಭುತ್ವವುಳ್ಳವನು : "ವಾಗೀಶಃ, ವಾಕ್ಪತಿಃ – ೨ ನಿರ್ದೋಷವಾಗಿ ಮಾತು ಕಲಿತವನ ಹೆಸರುಗಳು" (ಸಿದ್ಧಾಂತಿ. ೩೩೨). ೨. ದೇವತೆಗಳ ಗುರು ; ಬೃಹಸ್ಪತಿ : ವಾಗೀಶನ ಕಥೆಯಂ ಬಲ್ವಾಗೀಶನ ಭಕ್ತರೆಡೆಯೊಳೋದುವನವನಾ ವಾಗೀಶಮುಖ್ಯ ಸುರಗುರು ವಾಗೀಶಕೃಪಾವಿಶೇಷದಿಂ ಸುಖಿಮಿರ್ಕುಂ (ವೃಷವಿ. ೩೪-೧೩೩). ೩. ವಾಣೀಪತಿ ; ಬ್ರಹ್ಮ : 'ವಾಗೀಶಪಿತ' ಪರಾ. [ಸಂ.]

**ವಾಗೀಶಪಿತ** (ನಾ). ಬ್ರಹ್ಮನ ತಂದೆ ; ವಿಷ್ಣು : ಸದ್ವಾಗೀಶಪಿತಪರಂಧಾಮ . . . ಪಾಲಿಸೊ ಪೂರ್ಣಕಾಮ (ಮೋಹತ. ೧-೧). [< ಸಂ. ವಾಗೀಶಪಿತೃ]

**ವಾಗೀಶ್ವರ** (ನಾ). ೧. ಮಾತಿನ ಮೇಲೆ ಪ್ರಭುತ್ವವುಳ್ಳವನು. ೨. ವಾಣೀಪತಿ ; ಬ್ರಹ್ಮ. ೩. ಪರಮಾತ್ಮ : ಪರಮಗುಣ ಪರಶಕ್ತಿ ವಾಗೀಶ್ವರ . . . ಪರೋತ್ತಮ ಕರುಣಿಸುವುದೆಂದ (ಕುವ್ಯಾಅ. ೬-೮೭). [ಸಂ.]

**ವಾಗೀಶ್ವರಿ** (ನಾ). ನುಡಿಯ ಅಧಿದೇವತೆ ; ಸರಸ್ವತಿ. [ಸಂ. ವಾಗೀಶ್ವರೀ]

**ವಾಗು** (ನಾ). ಒಂದು ಬಗೆಯ ದೊಡ್ಡ ಮೀನು : "ವಾಗುಃ – ಮತ್ಸ್ಯಭೇದ" (ಒಷಧಿ. ೧೪೯). [< ಸಂ. ವಾಗುಸ]

**ವಾಗುಂಜಿ** 'ಬಾಗುಜಿ' ನೋ.

**ವಾಗುಜಿ** (ನಾ). ಒಂದು ಬಗೆಯ ಸಸ್ಯ ; ಕಾಡುಜೀರಿಗೆ : "ಅವಲ್ಗುಜಃ . . . ವಾಗುಜೀ, ಪೂತಿಫಲೀ – ೮ ಬಾಹುಜಿಗೆಯ ಹೆಸರುಗಳು" (ಸಿದ್ಧಾಂತಿ. ೧೩೩).
[ಸಂ. ವಾಗುಜೀ]

**ವಾಗುರ** (ನಾ). (ಮೃಗಗಳು ಹಾಗೂ ಜಲಚರಗಳನ್ನು ಹಿಡಿಯಲು ಬಳಸುವ) ಬಲೆ ; ಜಾಲ : “ಮೃಗಜಾಲಿಕಂ ವಾಗುರಂ ಬೆಳ್ಮುರವೆನಿಸಿಕ್ಕು” (ಮಂಗರಾ. ೧೨-೫). [ಸಂ. ವಾಗುರಾ]

**ವಾಗುರಿ** (ನಾ). = ವಾಗುರ : ಬೇಡರ ಕೋಲ್ಗೆ ವಾಗುರಿಗೆ ಶಸ್ತ್ರಕೆ ಕೂಳಿಗೆರಲ್ದ ನಾಯ ಕೂರ್ದಾಡೆಗೆ ನೇಣ್ಗೆ ಚಮ್ಮಟಗೆಗಂಶುಕಕಿಟ್ಟೊಳಗಾಗಿ ಬೆಟ್ಟದರ್ (ಅನಂಪು. ೯-೪೩); ನಿನ್ನ ಭುಜಬಲ ವಾಗುರಿಯ ವೇಢೆಯಲಿ ಬೀಳದು ಕೃಷ್ಣಬುದ್ಧಿಮೃಗ (ಕುವ್ಯಾಗ. ೮-೬೨). IP ಇದು ‘ವಾಗುರೆ’ಯೆಂದಿರಬಹುದೇ? [< ಸಂ. ವಾಗುರಾ]

**ವಾಗುರಿಕ** (ನಾ). ೧. ಬಲೆಯನ್ನು ಬೀಸಿ, ಜಿಂಕೆ ಮೊದಲಾದ ವನಚರಪ್ರಾಣಿಗಳನ್ನು ಹಿಡಿಯುವವನು ; ಬೇಟೆಗಾರ ; ವ್ಯಾಧ : “ಮೃಗಯುಃ, ಲುಬ್ಧಕಃ, ವ್ಯಾಧಃ, ವಾಗುರಿಕಃ — ಈ ೪ ಮಾವುಲಿಗಂ” (ಹಲಾಯು. ೯೮-೪೪೨). ೨. ಗಾಳ ಅಥವಾ ಬಲೆಯನ್ನು ಬೀಸಿ ಮೀನು ಮೊದಲಾದ ಜಲಚರಗಳನ್ನು ಹಿಡಿಯುವವನು ; ಮೀನುಗಾರ ; ಬೆಸ್ತ : ಮರದೊಳ್ ಕೀಲಿಸಿ ನಿಲೆ ಭೀಕರ ಕಾಳಿಂದೀಪ್ರವಾಹದೊಳ್ ತಂದು ಬಿಡಲ್ ಬರೆ ಕೌಶಾಂಬಿಗದಂ ವಾಗುರಿಕಂ ಕಂಡೊರ್ವನೊಯ್ದು ನಡಪಿದಂ (ನೇಮಿಪು. ೫-೧೧೦); ಸಮದ ಮತ್ಸ್ಯಕೂರ್ಮಂಗಳಂ . . . ತ್ರಿವಿಕ್ರಮಕಂಕಾಳದಂಡಮೆಂಬ ಗಾಳಮನಿಟ್ಟು ಸೆಳೆವ ವಾಗುರಿಕನುಂ . . . ತಾನೆ ನಿಜಮೆನಿಸಿ ರಂಜಿಪನವಂ (ವೃಷವಿ. ೧೨-೨೬ ವ). [ಸಂ.]

**ವಾಗುರಿಕೆ** (ನಾ). ಬೇಡರ ಹೆಂಗಸು ; ಬೇಡಿತಿ : ವಾಗುರಿಕೆಯ ಮೊಲೆವೆಟ್ಟದ ಮೇಗಣ ಪರಿಪಕ್ವಬಿಂಬಫಲರಸಮಂ ಪೀರ್ದಾಗಳುಮೆರ್ದೆ ತಣ್ಣನೆ ತಣಿದೋಗಡಿ ಸಿರಲುಟಿದ ಪಣ್ಣನೊಲ್ಲಂ ಭಿಲ್ಲಂ (ಅರ್ಧನೇ. ೩-೫೬). [ಸಂ. ವಾಗುರಿಕಾ]

**ವಾಗುರೆ** (ನಾ). = ವಾಗುರ : ಆ ವನಚರನ ಮನಃಪ್ರಿಯೆ . . . ದೃಕ್‌ಶಫರೀವಾಗುರೆ ಪೆಸರೊಳಾಕೆ ವಾಗುರೆಯೆಂಬಳ್ (ಅರ್ಧನೇ. ೩-೫೫); ಬೀಸಿದೊಳ್ವಲೆವೊಲೊಪ್ಪಿರೆ ಸಂಜೆಯ ಕೆಂಪು ಸಿಲ್ಕಿ ತದ್ವಾಗುರೆಯಲ್ಲಿ ಕಾಲುಡುಗಿ ಪಶ್ಚಿಮವಾರ್ಧಿಗೆ ಬಿಳ್ದುದೆಂಬಿನಂ ಬೇಗದೊಳಲ್ಲಿ ತತ್ಖಗಮಡಂಗಿದುದಾಪ್ಲುತಲೋಹಿತಾಂಶುಕಂ (ವೃಷವಿ. ೧೦-೬೭). [ಸಂ. ವಾಗುರಾ]

**ವಾಗುಷಿ** ‘ಬಾಗುಜಿ’ ನೋ.

**ವಾಗುಸ** (ನಾ). ಒಂದು ಬಗೆಯ ದೊಡ್ಡ ಮೀನು : “ಶೃಂಗಿ, ಮದ್ಗುರ, ವಾಗುಸ, ನಂದ್ಯಾವರ್ತ — ಈ ೪ ಮೊದಲಾಗುಳ್ಳವು ಹೆಮ್ಮೀನು” (ನಾಚಿರಾ. ೬). [ಸಂ.]

**ವಾಗುಳ** (ನಾ). ಒಂದು ಬಗೆಯ ಸಸ್ಯ : “ದ್ರೋಣ : — ತುಂಬೆ, ದೊಡ್ಡಕಾಗೆ, ವಾಗುಳ” (ಓಷಧಿ. ೮೦). [< ಸಂ. ವಾಗುಣ]

**ವಾಗೆ** (ನಾ). ಲಗಾಮು ; ಕಡಿವಾಣ : ವಾರುವ ಮುಗ್ಗಿದಡೆ ವಾಗೆಯಲಿ ಆದರಿಸಬೇಕಲ್ಲದೆ ಅದ ಗಾರುಮಾಡಿ ಹೊಯ್ಯುವರೇ ಮಿಡಿಯನು (ಮೋಳಿಮಾ. ೫೨-೨೧೪); ವಾಗೆಯ ಬಾಗುಂ ಗಾಢಮುಂ ನೂಂಕುವ ಬಿಡುವ ಪೊಡರ್ಪುಂ ಪೊದಟ್ಟೊಪ್ಪಿರಲ್ (ಕುಸುಮಾ. ೭-೭೫). [ಸಂ. ವಾಗಾ]

**ವಾಗ್ಗುಂಫ** (ನಾ). (ಕಾವ್ಯಲಕ್ಷಣಕ್ಕೆ ಅನುಗುಣವಾದ) ಮಾತಿನ ರಚನೆ ; ನುಡಿಯ ಜೋಡಣೆ : ಉಪನ್ಯಾಸದ ವಿನ್ಯಾಸಂ ಬಲಂಚೆತ್ತೆಸೆಯೆ ನೃಪಸಭಾಮಧ್ಯದೊಳ್ ಪೆರ್ಚೆ ವಾಗ್ಗುಂಫದೊಳಾಗಳ್ ಬೆಟ್ಟೆನಲ್ಪಿಟ್ಟೆನಲೆಡೆಗುಡದಾಶ್ಚರ್ಯಮಂ ತಾಳ್ದಿನಿಂದು (ಸುಕುಮಾ. ೨-೧೫); ಅತಿ ಬಾಣಂ ಹರಿಯಂತಧಃಕೃತಮಯೂರಂ ತಾರಕಾರಾತಿಯಂತೆ . . . ಭಾರತದಂತಾತ್ತಧನಂಜಯ್ಯೆ [ಕವಿಭವಂ] ವಾಗ್ಗುಂಫದೊಳ್ ನಾಕಿಗಂ (ವಸ್ತುಕೋ. ೧೪೧-೧೩೬). [ಸಂ.]

**ವಾಗ್ಗುಪ್ತಿ** (ನಾ). [ಜೈನ] ಮೂರು ಬಗೆಯ ಗುಪ್ತಿಗಳಲ್ಲಿ ಒಂದು ; ಮಾತನ್ನು ಲೌಕಿಕವಿಷಯಗಳಲ್ಲಿ ಪ್ರವರ್ತಿಸದಂತೆ ನಿಗ್ರಹಿಸುವುದು ; ಮಾತಿನ ಮೇಲಿನ ನಿಗ್ರಹ : ವಾಗ್ಗುಪ್ತಿ-ವಚನದ ಅಡಕಮುಂ, ಮನೋಗುಪ್ತಿ — ಮನದ ಅಡಕಮುಂ ಈರ್ಯಾಸಮತಿ . . . ನಡೆವಲ್ಲಿಯೊಳಪ್ಪ ಅಡಕಮುಂ (ತತ್ತ್ವಪ್ರ. ೨೬೯). ‘ಕಾಯಗುಪ್ತಿ’, ‘ವಚನಗುಪ್ತಿ’ ಪರಾ. [ಸಂ.]

**ವಾಗ್ಗೇಯಕಾರ** (ನಾ). ಸಂಗೀತಲಕ್ಷಣಬದ್ಧವಾದ ಸಾಹಿತ್ಯವನ್ನು ರಚಿಸುವವನು ; ಸಂಗೀತಕೃತಿಗಳನ್ನು ರಚಿಸುವವನು : ಈ ಪಾರಿಭಾಷಿಕ ಶಬ್ದವನ್ನು ಹೊಸಸಾಹಿತ್ಯಕ್ಕೆ ವಾಗ್ಗೇಯಕಾರರು ಕೊಟ್ಟದ್ದು ಒಳ್ಳೆ ಮಾರ್ಮಿಕವಾದ ಶಾಸ್ತ್ರಜ್ಞಾನದ ನಿದರ್ಶನವಾಗಿದೆ (ಜಗದಾ. ೬೫); ಪಲ್ಲವಿ ಶೇಷಯ್ಯರ್ . . . ಸ್ವತಃ ಒಳ್ಳೆಯ ಚತುರರಾದ ವಾಗ್ಗೇಯಕಾರರು (ಸಂಗೀತ. ೪೭). [ಸಂ.]

**ವಾಗ್ಜಾಲ** (ನಾ). ೧. ಮಾತಿನ ಸರಣಿ ; ಶಬ್ದಸಮೂಹ : ಶರಣರ ವಾಗ್ಜಾಲವ ಕಲಿತುಕೊಂಡು ನುಡಿವ ಕಾಕುಮನುಜರೆತ್ತ ಬಲ್ಲರು ನಿಮ್ಮ ನೆಲೆಯ (ಲಿಂಗವ. ೭-೨೫); ಈ ವಿಚಿತ್ರ ವಾಗ್ಜಾಲಕ್ಕೆ ಉದಾಹರಣೆಯನ್ನು ಬೇರೆಯಾಗಿ ಏಕೆ ಕೊಡಬೇಕು? (ನಂಟರು. ೨೧). ೨. ಆಡಂಬರದ ಮಾತು. [ಸಂ.]

**ವಾಗ್ದತ್ತ** (ಗು). ಮಾತು ಕೊಟ್ಟ ; ವಚನ ನೀಡಿದ. [ಸಂ.]

**ವಾಗ್ದರಿದ್ರ** (ಗು). ೧. ಕಡಮೆ ಮಾತನಾಡುವ ; ಅಲ್ಪಭಾಷಿಯಾದ. ೨. ಮಾತಾಡಲು ಶಕ್ತಿ ಸಾಲದ ; ವಾಗ್ಬಲವಿಲ್ಲದ. [ಸಂ.]

**ವಾಗ್ದಾನ** (ನಾ). ೧. ಮಾತು ; ಭಾಷೆ ; ವಚನ. ೨. ವಿವಾಹಸಂಬಂಧದಲ್ಲಿ ಪೂರ್ವಭಾವಿಯಾಗಿ ಮಾಡಿಕೊಳ್ಳುವ ಮಾತು ; ನಿಶ್ಚಯ.

**ವಾಗ್ದಾನ ಮಾಡು** = ವಚನ ನೀಡು ; ಭಾಷೆಕೊಡು : ಮಾಸ್ಲೋವಳ ಬಗ್ಗೆ ವಿವೇಕ ಹೇಳುವುದಾಗಿ ವಾಗ್ದಾನ ಮಾಡಿದ್ದರಿಂದ ಅವನವಳನ್ನು ನೋಡಲೇಬೇಕಾಗಿತ್ತು (ಪುನರು. ೨೨೨). [ಸಂ.]

**ವಾಗ್ದೃಷ್ಟ** (ನಾ). ಮಾತಿನ ಸಾಕ್ಷಿ,- ಪ್ರಮಾಣ : ನ್ಯಾಯ ವೈಶೇಷಿಕ ಮುಖ್ಯಾನೇಕವಾದ ವಾಗ್‌ದೃಷ್ಟಾದಿ ವಿಧಿಯುಕ್ತಾದಿಗಳನೊಡಬಡಿಸುತಂ (ಬಸವು. ೫೧-೧೨). [ಸಂ.]

**ವಾಗ್ದೇವತೆ** (ನಾ). ಮಾತಿನ ಅಧಿದೇವತೆ ; ಸರಸ್ವತಿ : ರಣಬ್ಯಾಪಾರದೊಳು ಖಿಳ್ಗದೇವತೆ . . . ವಾಗ್ದೇವತೆ ವಿದ್ದಿಯೊಳು (ಎಕ. V, ಹಾಸನ. ೧೧೬-೩೨ ; 1123); ಉದಾತ್ತವಾಗ್ದೇವತೆಗುದ್ಭವಹೇತು ಕೋಶಗೃಹಮೆನೆ ಭುವನದೊಳಿದು ಪರೆದು ನಿಲ್ವುದೊಂದಚ್ಚರಿಯೇ (ಕಾವ್ಯಾವ. ೪). [ಸಂ. ವಾಗ್ದೇವತಾ]

**ವಾಗ್ದೇವಿ** (ನಾ). = ವಾಗ್ದೇವತೆ : ಅರಾತೀಯಕವೀಶ್ವರರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂಡಾರದ ಮುದ್ರೆಯನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ (ಗದಾಯು. ೧-೩೮); ಶ್ರೀವಾಗ್ದೇವಿಗೆ . . . ಇಳಾವಂದ್ಯಗೆ ಶಾಸ್ತ್ರಮುಖಿದೊಳವನತನಪ್ಪೆಂ (ಶಮದ. ೧. ೬೮೬). [ಸಂ. ವಾಗ್ದೇವೀ]

**ವಾಗ್ದೋಷಕ** (ನಾ). ಬಯ್ಯುವವನು ; ನಿಂದಕ : ಮೊದಲಲಾ ಮಾಹಿಷಿಕನನು ಮಧ್ಯದಲಿ ವೃಷಲೀವಲ್ಲಭನನಂತ್ಯದಲಿ ವಾಗ್ದೋಷಕನ ಕಂಡವರುಗಳ ಭಾಗ್ಯನಿಧಿ ಕದಡಿ ಹರಿವುದು (ಕುವ್ಯಾಉ. ೪-೪೮). [ಸಂ.]

**ವಾಗ್ಬಂಧನ** (ನಾ). (ಮಂತ್ರಾದಿ ಪ್ರಯೋಗಗಳಿಂದ) ಮಾತನ್ನು ತಡೆಹಿಡಿಯುವಿಕೆ ; ಮೌನಗೊಳಿಸುವುದು : ‘ವಾಗ್ಬಂಧನಂಗೈ’ ಪರಾ. [ಸಂ.]

**ವಾಗ್ಬಂಧನಂಗೈ** (ಕ್ರಿ). ಮಾತನ್ನು ತಡೆಹಿಡಿ ; ಮೌನಗೊಳಿಸು : ನುಡಿಯ ಸತ್ಯಂಗೆಯ್ವುದನುಮಾನಮೆನಿಸಿದರೆ ಬಿಡುವೆನಸುಗಳ ತೃಣೋಪಮಮಾಗಿ ಭವದೀಯ ದಡಿಯಡೆಯಲೆಂದು ವಾಗ್ಬಂಧನಂಗೈದು ಮತ್ತುಸುರ್ದಳಿಷ್ಟಾರ್ಥದಿರವ (ಮಂಕಾರಾ. ೨-೬-೨೦). [ವಾಗ್ಬಂಧನ + ಗೈ (< ಕೆಯ್$_1$)]

**ವಾಗ್ಬಲ, ವಾಗ್ಬಳ** (ನಾ). ನುಡಿಯ ಶಕ್ತಿ ; ಮಾತಿನ ಸಾಮರ್ಥ್ಯ : ತಲೆದೋಱದೆ ವೈಷ್ಣವಡಂಗಡಂಗು ವಾಗ್ಬಲದ ಪೊಡಪ್ಪುವೇಡ ಗಡ (ಎಕ. II, ೬೯-೩೯; ಸು. 1100). ವಾಗ್ಬಳ : ದಿಟನುಡಿವನ್ಯವಾದಿಮುಖಮುದ್ರಿತನುದ್ಧ[ತ]ವಾದಿ ವಾಗ್ಬಳೋದ್ಭಟ ಜಯಕಾಳದಣ್ಣಂ (ಎಕ. II, ೬೯-೪೮; ಸು. 1100). [ಸಂ.]

**ವಾಗ್ಬಳ** ‘ವಾಗ್ಬಲ’ ನೋ.

**ವಾಗ್ಬಾಣ** (ನಾ). (ಆಲಂ) (ಬಾಣದಂತೆ ಮನಕ್ಕೆ ನಾಟುವ) ತೀಕ್ಷ್ಣವಾದ ಮಾತು ; ಚುಚ್ಚುನುಡಿ : ಮರ್ಮದೊಳೂರಿದ ಖಳರ ವಾಗ್ಬಾಣದೆ ಸಂತರು ಬಹು ನರಳುವರು (ಇಂಚಾಪ. ೭೩-೫೫) ; ನಿನ್ನ ಮನಸ್ಸಿಗೆ ತೋರಿದ ಹಾಗೆಲ್ಲಾ ಮಾತನಾಡಿ ವಾಗ್ಬಾಣಗಳಿಂದ ನನ್ನನ್ನು ಖಂಡಿಸುತ್ತಿದ್ದೀಯೆ (ವಚಭಾ. ೨೬೪). [ಸಂ.]

**ವಾಗ್ಬ್ರಹ್ಮ** (ನಾ). ಬರಿಮಾತಿನ ಬ್ರಹ್ಮತತ್ತ್ವ : ವಾಗ್‌ಬ್ರಹ್ಮವ ನುಡಿವವರ ಕಂಡು ವಿಶೇಷವನ್ನು ಈಚೆಯಲ್ಲಿ ನುಡಿಯದೆ . . . ಹೊಚ್ ಇಲ್ಲದೆ ವರ್ಣಭೇದವಿಲ್ಲದೆ ಕೂಡಬೇಕು (ಮದೇವ. ೨೮೦-೪೩). [ಸಂ. ವಾಗ್ಬ್ರಹ್ಮನ್]

**ವಾಗ್ಮಿ** (ಗು). ೧. ಬಹಳ ಮಾತನಾಡುವ ; ಹರಟೆ ಹೊಡೆಯುವ. ೨. ಚೆನ್ನಾಗಿ ಮಾತನಾಡುವ ; ವಾಕ್ಪಟುವಾದ. (ನಾ). ೩. ಚೆನ್ನಾಗಿ ಮಾತನಾಡುವವನು ; ವಾಕ್ಪಟು : ಕವಿ ಗಮಕಿ ವಾದಿ ವಾಗ್ಮಿಪ್ರವರರ ಪಂಡಿತರ ನೆಗಟ್ದ ಮಾತಜೀವರ ಸಬ್ಬವದವರೊಡನಂತೊಸೆದನ್ನವಾಸದೋಲಗದೊಳಿರ್ದನಾಗಳ್ ಪರಿಗಂ (ಪಂಪಭಾ. ೩-೮೦); ಕವಿ ಗಮಕಿ ವಾದಿ ವಾಗ್ಮಿಗಳವಂದಿರಂ ಗೆಲ್ದು ಕನಕನನ್ನಿ ತ್ರೈವಿದ್ಯವಿಳಾಸಂ ತ್ರಿಭುವನಮಲ್ಲ ವಾದಿರಾಜಂ ದಲೆನಿಸಿದಂ (ಎಕ. VII, ಶಿವಮೊ. ೪-೬೧ ; 1122). ೪. ವಿದ್ವಾಂಸ ; ಪಂಡಿತ : "ಸೂರಿ ಬುಧಂ ಕವಿ ವಾಗ್ಮಿ . . . ವಿದ್ವಾಂಸಂ" (ವಸ್ತುಕೋ. ೯೮-೪). ೫. ಅನೇಕರ ಪ್ರಶ್ನೆಗಳಿಗೆ ತಕ್ಷಣ ಏಕಕಾಲದಲ್ಲಿ ಉತ್ತರ ಹೇಳಬಲ್ಲವನು ; ಅವಧಾನಿ : "ಮೇಳ್ಕಿಸಿ ನಾನಾರವಕ್ಕೆ ಪ್ರತಿಗೈವವಂ ಚರ್ಮಣಂ ವಾಗ್ಮಿಯಕ್ಕುಂ" (ಪಂಗರಾ. ೧೦೬-೧೬). ೬. ಬೃಹಸ್ಪತಿಯ ಹೆಸರುಗಳಲ್ಲಿ ಒಂದು. ೭. ಗಿಣಿ. 'ಚರ್ಮಣ' ಪರಾ. [ಸಂ. ವಾಗ್ಮಿನ್]

**ವಾಗ್ಮಿತೆ** (ನಾ). ಉತ್ತಮವಾದ ಮಾತುಗಾರಿಕೆ ; ವಾಕ್ಚಾತುರ್ಯ : ವಾಗ್ಮಿತೆಯಲ್ಲಿ ಅವರ ಐಹಿಕಸಾಹಸಗಳ ಚರಿತ್ರೆ ಅಡಗಿತ್ತು (ಕಬಸಾ. XIV, ೬೮೫); ತಾಳಮದ್ದಳೆ ಕೂಟಗಳಿಂದ ನಮ್ಮಲ್ಲಿ ವಾಗ್ಮಿತೆ ಬೆಳೆದಿದೆಯೆಂಬುದು ನಿಜ . . . ಆದರೆ ಬಾಯ್ತುಂಬ ಮಾತನಾಡುವುದೆಂಬುದೇ ವಾಗ್ಮಿತೆಯಲ್ಲ (ಯಕ್ಷಟ. ೧೨೮). [ಸಂ. ವಾಗ್ಮಿತಾ]

**ವಾಗ್ಮಿತ್ವ** (ನಾ). = ವಾಗ್ಮಿತೆ : ಅವನೀತಳದೊಳ್ ಕವಿ ಗಮಕಿ ವಾದಿ ವಾಗ್ಮಿತ್ವ ತತ್ತ್ವಪಾರಗರೆಂದೇನವಯವದಿಂ ಬಣ್ಣಿಸುವುದೊ ಭುವನಂ ಶ್ರೀಪೂಜ್ಯಪಾದ ಭಟ್ಟಾರಕರಂ (ಸುಕುಮಾ. ೧-೧೭). [ಸಂ.]

**ವಾಗ್ಯ** 'ವಾಘೆ' ನೋ.

**ವಾಗ್ಯತ** (ನಾ). ಮಾತಿನಲ್ಲಿ ಸಂಯಮವುಳ್ಳವನು ; ಮಿತಭಾಷಿ [ಸಂ.]

**ವಾಗ್ಯದಂಡೆ** (ನಾ). ಕಡಿವಾಣದ ಹಗ್ಗ : ವಾಗ್ಯದಂಡೆಗೆ ವಾಮಕರವಿಕ್ಕಿ ಬಲಗೈಯ ಯೋಗ್ಯದ ಕುಂಚವ ನೆಗಹಿ ವಾಗ್ಯೋಗ ಹುಮ್ಮನೆ ಪೋಪ ವಾಹನದೊಂದು ಭಾಗ್ಯ ಸಾಲದೆ ರಾಜಸವಿನ (ಭರಚ. ೪೮-೨೫). [ವಾಗ್ಯ (< ವಾಘೆ) + ದಂಡೈ (< ದಂಡಿ)]

**ವಾಗ್ಯುದ್ಧ** (ನಾ). ಮಾತಿನ ಜಗಳ ; ವಾಕ್ಕಲಹ : ಇದುವರೆಗೂ ನಡೆದ ವಾಗ್ಯುದ್ಧದಲ್ಲಿ ಇಬ್ಬರೂ ಸೋಲಲಿಲ್ಲ (ರೂಢಿ). [ಸಂ.]

**ವಾಗ್ಯೋಗ** (ನಾ). ೧. ರೂಢಿಯಲ್ಲಿರುವ ಮಾತಿನ ಸರಿಯಾದ ಕ್ರಮ: ಅನೃತಭಾಷಣಂ ಪರುಷಾಸಭ್ಯವಚನಂ ಮೊದಲಾಗುಳ್ಳುದು ಅಶುಭವಾಗ್ಯೋಗಂ (ತತ್ತ್ವಪ್ರ. ೨೫೩). ೨. ಭಾಷೆಯ ನಿಯಮಗಳನ್ನು ತಿಳಿಸುವ ಶಾಸ್ತ್ರ ; ವ್ಯಾಕರಣ: ಮಹಾಭಾಷ್ಯದಲ್ಲಿ ವ್ಯಾಕರಣವನ್ನು "ವಾಗ್ಯೋಗ" ಎಂತಲೂ ಕರೆದಿದೆ (ಸಂಶೋಧ. ೪೦). [ಸಂ.]

**ವಾಗ್ರಮಣ** (ನಾ). ಸರಸ್ವತಿಯ ಗಂಡ ; ಬ್ರಹ್ಮ : ನಮದಮರಕನಕಮೌಳಿಗಳಮ ರ್ದೊರಸಿದೊಡುದಿರ್ದ ರೇಣು ಪುಗೆ ಬಾಯ್ಗಳೊಳಾಗಮಮಂ ಪದೆದೋದುವ ವಾಗ್ರಮಣಂ ತಳೆದಂ ಹಿರಣ್ಯಗರ್ಭಾಖ್ಯತೆಯಂ (ರಾಜಶೇ. ೧೪-೧೬೧). [ಸಂ.]

**ವಾಗ್ರಮಣಿ** (ನಾ). ಮಾತಿನ ಅಧಿದೇವತೆ ; ಸರಸ್ವತಿ : ಶ್ರೀರಮಣೀಮನೋರಮಣಂ ವಾಗ್ರಮಣೀರಮಣಾದ್ರಿರಾಜಪುತ್ರೀರಮಣೀಮನೋರಮಣಂ . . . ಈಗಭೀಷ್ಟಮಂ (ಕಶಾಇ. ೧-೨-೧; 1058). [ಸಂ. ವಾಗ್ರಮಣೀ]

**ವಾಗ್ರಮ್ಯ** (ನಾ). ಮಾತಿನ ಮೋಹಕತೆ ; ಶಬ್ದದ ರಂಜಕತೆ : ದಿಗ್ರಮಣನುತ ಶಂಭು ಸಕಲ ಗಣತತಿವೆರಸಿ ವಾಗ್ರಮ್ಯದಿಂದ ಸತ್ಕರಿಸಿ (ವೀಶೈಪು. ೩-೧೫-೪೨). [ಸಂ.]

**ವಾಗ್ವಧು** (ನಾ). ಮಾತಿನ ಅಧಿದೇವತೆ ; ಸರಸ್ವತಿ ; ವಾಣಿ : ಸಂಸಾರಸಾರೋದಯ ವಿರಚಿತದೊಳ್ ವಾಗ್ವಧೂಮುದ್ರೆಯೊಳ್ ಮುದ್ರಿಸಿ ನಿಂದತ್ತಾದಿತೀರ್ಥೇಶ್ವರನ ಚರಿತದೊಳ್ ವಾಕ್ಯಮಾಣಿಕ್ಯಕೋಶಂ (ಆದಿಪು. ೧೬-೬೯); ವಕ್ತ್ರಪಂಕಜವರರಾಜಹಂಸ ವಧು ವಾಗ್ವಧು ರಂಜಿಸೆ . . . ವಿರಾಜಿಸಿದಂ ಕವಿತಾಮನೋಹರಂ (ಪಂರಾಮಾ. ೧-೧೪). [ಸಂ.ವಾಗ್ವಧೂ]

**ವಾಗ್ವಧೂಟಿ** (ನಾ). = ವಾಗ್ವಧು : ಮಾಘನಂದ್ಯಾಖ್ಯವಾಚಂ ಯಮಿರಾಜಂ ವಾಗ್ವಧೂಟೀನಿಟಿಳತಟಘಟನ್ನೂತ್ನಸದ್ರತ್ನವ XXX (ಎಕ. II, ೬೪-೬೭; 1163). [ಸಂ.]

**ವಾಗ್ವನಿತೆ** (ನಾ). = ವಾಗ್ವಧು : ಜಿನವಚನವಿನಿರ್ಗತವಾಗ್ವನಿತೆಗೆ ಮಾಂಗಲ್ಯಕಾರಣಂ ಮಂಡನಮೆನಿಪ್ಪ ತನ ವಾಗ್ವಿಲಾಸಮಾದತ್ತೆನಿಸಿದನೀತನೆ ಸರಸ್ವತೀಮುಖಮುಕುರಂ (ಸುಕುಮಾ. ೧-೫೦). [ಸಂ. ವಾಗ್ವನಿತಾ]

**ವಾಗ್ವರ** (ನಾ). ೧. ವಾಣೀಪತಿ ; ಬ್ರಹ್ಮ : ತಳೆದೀ ಲೋಕಸಂಸ್ತುತ್ಯ ವಾಣಿಶ್ರೀಯಂ ವಕ್ತ್ರಾಬ್ಜದೊಳ್ ವಾಗ್ವರನೆನೆ ಮೆರೆದಂ . . . ನಾರಸಿಂಹಕ್ಷಿತೀಶಂ (ಎಕ. XII, ತುಮಕೂ. ೩೮-೪; 1160); ಶ್ರೀವರ ವಾಗ್ವರಪ್ರಮುಖನಿರ್ಜರರಾದೊಡಮೊರ್ಮೆ ತೀವ್ರಗರ್ವಾವಿಳರಾಗಿ ಮಾರ್ಮಲೆಯೆ (ವೃಷವಿ. ೧೨-೫೭). ೨. ದೇವತೆಗಳ ಗುರು ; ಬೃಹಸ್ಪತಿ : ದೇವದೇವ ಜಯ ವಾಗ್ವರ ವಾಗ್ವರವಂದ್ಯ ಶಂಕರಾ (ಶಟಶಂ. ೫-೨೭). [ಸಂ.]

**ವಾಗ್ವಾದ** (ನಾ). ಚರ್ಚೆ ; ವಿವಾದ : ಕ್ರಮವಾಗಿ ಗುತ್ತಿಗೆ ಕೊಡಲಾರದ ದುರ್ಬಲರನ್ನು ಹೊರಚ್ಚುಮಾಡಬೇಕೆಂಬ ರೈತರಿಗೂ ಈ ಕಾರಣದಿಂದಲೆ ಹೊರಗಾಗುವ ರೈತರಿಗೂ ತೀವ್ರ ವಾಗ್ವಾದ ತಲೆದೋರಿತು (ಪುನರು. ೨೬೦). [ಸಂ.]

**ವಾಗ್ವಿದ** (ನಾ). ಮಾತಿನ ಮೇಲೆ ಪ್ರಭುತ್ವವುಳ್ಳವನು ; ವಿದ್ವಾಂಸ ; ಪಂಡಿತ : ಕಲಾರ್ಥಂ ಪತ್ತುವುದಂದಿಂದುಂದೆಂದೆತ್ತಂ ನುಡಿವವ್ವಯಂಗಳೊಳ್ ವಾಗ್ವಿದರಿಂ (ಶಮದ. ೩೧೯). [ಸಂ. ವಾಗ್ವಿದ್]

**ವಾಗ್ವಿದಗ್ಧತೆ** (ನಾ). ಮಾತಿನ ಕೌಶಲ ; ವಾಕ್ಚಾತುರ್ಯ : ವಾಗ್ವಿದಗ್ಧತಾ ನಿಪುಣತೆಯೊಳ್ ಪಸರಿಸಿದಾ ಬಗೆ ಮನಮಂ ಪೊಸತಾಗೆ ನೆಗಟ್ದಲಚಿಯನಾ ರಚನೆಯೊಳೇಂ ಬಸನಂ (ಕವಿರಾ. ೧-೧೧); ವ್ಯವಹಾರಚಾತುರ್ಯ, ವಾಗ್ವಿದಗ್ಧತೆ . . . ಇವೂ ವಂಶಗತ (ಶಿಕ್ಷದ. ೯೦). [ಸಂ. ವಾಗ್ವಿದಗ್ಧತಾ]

**ವಾಗ್ವಿಭವ** (ನಾ). ೧. ಮಾತಿನ ವೈಭವ ; ವಾಕ್ಸಂಪತ್ತು : ಸುಭಗಕವಿ ಪಂಪನಿಂ ವಾಗ್ವಿಭವೋನ್ನತಿ ನೆಗಟ್ದು (ಅಜಿಪು. ೧೨-೩೯); ವಾಗ್ವಿಭವಮದಪ್ರತರ್ಕ್ಯಮೆನೆ ಸಂದೆಸಕಂ ದೆಸೆಯಂತನೆಯ್ದೆ (ಕಾವ್ಯಾವ. ೪೨೩). ೨. ವಾಕ್ಸಂಪತ್ತುಳ್ಳವನು ; ವಾಕ್ಪಟು : ಶೂರನಾಗಿಯುಂ ತನುರಕ್ಷೈಕವಿಶಾರದಂ ಪ್ರಶಾಸ್ತ್ರಪ್ರವೀಣವಾಗ್ವಿಭವನಾಗಿಯುಂ ಕೃತಮಂತ್ರಂ (ಶಾಂತಿಪು. ೨-೪೩). [ಸಂ.]

**ವಾಗ್ವಿಲಾಸ, ವಾಗ್ವಿಳಾಸ** (ನಾ). ಮಾತಿನ ಬೆಡಗು, — ಲಾಲಿತ್ಯ : ಜಿನವಚನ ವಿನಿರ್ಗತವಾಗ್ವನಿತೆಗೆ ಮಾಂಗಲ್ಯಕಾರಣಂ ಮಂಡನಮಾತನ ವಾಗ್ವಿಲಾಸಮಾದತ್ತೆನಿಸಿದ ನೀತನೆ ಸರಸ್ವತೀಮುಖಮುಕುರಂ (ಸುಕುಮಾ. ೧-೫೦). ವಾಗ್ವಿಳಾಸ : ದೇವ ಬಿಜಯಂಗೆಯ್ದು ಕರುಣಮಂ ಕರುಣಿಪುದು . . . ಎಂದು ಪರವೆಯರ ತಾಯ್ ಬಿನ್ನಪಂ ಗೆಯ್ಯುತಿರೆ ಎಂದನಭವಂ ವಾಗ್ವಿಳಾಸಮಂ ಚೆಲ್ಲುತಿರೆ (ನಂಬಿರ. ೧೫-೧೮೪). [ಸಂ.]

**ವಾಗ್ವಿವಾದ** (ನಾ). ಚರ್ಚೆ ; ವಾದ : ಸಭಾಮಂಡಲಿಯ ಸೌಹೃದ ವಾಗ್ವಿವಾದದ ಕಳಕಳಿಕೆ ದಿಗುತಟವ ಗಬ್ಬರಿಸಿದುದು ಗಾಢದಲಿ (ಕುವ್ಯಾಭೀ. ೧-೪೨). [ಸಂ.]

**ವಾಗ್ವಿಸ್ತರ** (ನಾ). ಮಾತಿನ ಹರಹು, — ವ್ಯಾಪ್ತಿ : ಪಾರ್ಥನ ಕರುಣ ರಸದಾಳಾಪ ವಾಗ್ವಿಸ್ತರಕೆ ಮನದಲಿ ಮಱುಗಿದನು ಮುರವೈರಿ ನಸುನಗುತ (ಕುವ್ಯಾಕ. ೨೭-೩೦). [ಸಂ.]

**ವಾಗ್ವಿಳಾಸ** 'ವಾಗ್ವಿಲಾಸ' ನೋ.

**ವಾಗ್ವೀರ** (ನಾ). ೧. ಮಾತಿನ ಮೇಲೆ ಪ್ರಭುತ್ವವುಳ್ಳವನು ; ಪಂಡಿತ. ೨. (ಆಲಂ) ಮಾತಿನಲ್ಲಿ ಮಾತ್ರ ಶೂರನಾಗಿರುವವನು ; ಬಡಾಯಿಗಾರ : ವಾಗ್ವೀರನಾದ ಉತ್ತರಕುಮಾರನು ನಾಯಕತ್ವವನ್ನು ವಹಿಸಿಕೊಂಡು ವಿಜಯವನ್ನು ಸಂಪಾದಿಸಿಕೊಂಡು ಬರಬೇಕು (ಪ್ರಬಂಧ. ೨೭). [ಸಂ.]

**ವಾಗ್ವೃತ್ತಿ** (ನಾ). ೧. ಮಾತಿನ ಚರ್ಯೆ ; ನುಡಿಯ ರೀತಿ : ಪದವಂ ಕೆಯ್ದೊಳುಂಟುಮಾಡಿ ನಯಮಂ ವಾಗ್ವೃತ್ತಿಯೊಳ್ ತೋಱಿ . . . ಕಾಮಿನಿ . . . ಉನಸುಂ ಮನಂಗೊಳಿಸಿದಳ್ ನಾನಾಪ್ರಕಾರಂಗಳಿಂ (ಸುಕುಮಾ. ೭-೧೧). ೨. ಮಾತಿನ ಆಶಯ, — ಬಯಕೆ : ಇನ್ನಾಸೆಗೆಯ್ದೊಡೆ ನಿಮ್ಮಾಜ್ಞೆಗೆ ತಪ್ಪಿದಂ ಸಲಿಸಿಮೋರ್ಮಿಂಗೆನ್ನ ವಾಗ್ವೃತ್ತಿಯುಂ (ಪಂರಾಮಾ. ೬-೧೨೩). [ಸಂ.]

**ವಾಗ್ವೈಖರಿ** (ನಾ). ಮಾತಿನ ರೀತಿ, — ಶೈಲಿ : ಸುಧೆ ಸುರಿವ ವಾಗ್ವೈಖರಿಯ ಭಸ್ಮೋದ್ಧೂಳಧಾರಣೆಯ (ಗಗತಾ. ೩-೩); ನಿನ್ನ ವಾಗ್ವೈಖರಿಗೆ ನಾನೇನು ತಾನೇ ಪ್ರತಿಯಾಗಿ ಬಹುಮತಿಯನ್ನು ಕೊಟ್ಟೇನು (ಕವಿಕ. ೩೧). [ಸಂ. ವಾಗ್ವೈಖರೀ]

**ವಾಗ್ವೈಭವ** (ನಾ). = ವಾಗ್ವಿಭವ ೧ : ನೀನೆಮ್ಮಾ ರಾಭಸಿಕವೃತ್ತಿಯಂ ವಾಗ್ವೈಭವದಿಂ ಕಳೆದು ಪೊರೆದೆಯೆಮ್ಮನಂದ್ಯಾ (ಶಾಂತಿಪು. ೬-೯೦); "ಶ್ರೀ" ಯವರು . . . ವಾಗ್ವೈಭವಶಾಲಿಗಳು (ಕಜಸಾ. XIV, ೭೮೮). [ಸಂ.]

**ವಾಗ್ವ್ಯಾಪಾರ** (ನಾ). ವಾಗಿಂದ್ರಿಯದ ಮೂಲಕ ನಡೆಯುವ ವ್ಯವಹಾರ ; ಮಾತಿನ ಬಳಕೆ : ಅವರು ತಮ್ಮ ಮನೋವ್ಯಾಪಾರವನ್ನು ಪರಮಶಿವನ ಪದಂಗಳಲ್ಲಿಯು, ವಾಗ್ವ್ಯಾಪಾರವನ್ನು ಶಿವಭಕ್ತರಲ್ಲಿಯು . . . ಇರಿಸಿದವರಾಗಿ (ಪುರಾಪ. ೨೬೨). [ಸಂ.]

**ವಾಘೆ, ವಾಗ್ಯ** (ನಾ). ಕಡಿವಾಣ ; ಲಗಾಮು : "ಕುಶೆ ರಶ್ಮಿಯೆನೆ ವಾಘೆಯುಕ್ಕು" (ಮಂಗರಾ. ೮೧-೧೨); ಸುಕಳಾಶ್ವಮಂ ಬೇಗದಿಂ ಬೆಂಗವಾಯ್ದು ರಾಘೆಯೊಳಾಂಕಿ ವಾಘೆಯೊಳ್ ನಿಲಿಸಿ ಕೆಲಬಲಕ್ಕಿಕ್ಕಿ (ಗಿರಿಕ. ೨-೧೦೫ ವ); ತೆಗೆ ತೆಗೆ ಸಾರು ವಾಘೆಯ ಮರಳಿ ಹಿಡಿ ತೇಜಿಗಳ ತಿರುಹು (ಕುವ್ಯಾವಿ. ೬-೧೦). ವಾಗ್ಯ : ವಾರುವವನೇರುವೆಡೆ ವಾಗ್ಯದ ದಾರವನು ಹಿಡಿದಲ್ಲದಾಗದು (ಆಚಷ. ೧-೨೫).

[< ಸಂ. ವಾಗಾ. / ಮರಾ. ವಾಘಾ, ವಾಗಾ]

**ವಾಙ್ಮಯ** (ಗು). ೧. ಮಾತುಗಳಿಂದ ಕೂಡಿದ, — ತುಂಬಿದ. ೨. ಮಾತಿನ ಚಾತುರ್ಯದಿಂದ ಕೂಡಿದ ; ವಾಗ್ವೈಖರಿಯಿಂದ ಕೂಡಿದ. (ನಾ). ೩. ಶಬ್ದದಿಂದ ಕೂಡಿದುದು. ೪. ಭಾಷೆ ; ಮಾತು ; ನುಡಿ. ೫. ಮಾತಿನ ಚಾತುರ್ಯ ; ವಾಗ್ವೈಖರಿ. ೬. ಕಾವ್ಯ, ನಾಟಕ ಮುಂತಾದ ಸಾಹಿತ್ಯ ರಚನೆ : ವಾಙ್ಮಯಮನಿತರ್ಕಮಂಬಿ[ಕೆ]ಸರಸ್ವತಿ ಮನ್ಮುಖಪದ್ಮರಂಗದೇೞ್ಗೆಯನೆಡೆಗೊಂಡು ಕೊಂಡುಕೊನೆದೀಗರಿಗಂಗೆ ವಿಶುದ್ಧಬುದ್ಧಿಯಂ (ಪಂಪಭಾ. ೧-೫). ೭. ಒಂದು ಭಾಷೆಯಲ್ಲಿರುವ ಗ್ರಂಥಸಂಪತ್ತಿ : ಶಾಸ್ತ್ರಗ್ರಂಥಗಳು ವಾಙ್ಮಯ ; ಕವಿತೆ, ಕಾದಂಬರಿಗಳು ಸಾಹಿತ್ಯ (ಸಾಹಿವಿ. ೯೧); ಪ್ರಚಾರವಾದಗಳೇ ತುಂಬಿದ ಬರವಣಿಗೆಯನ್ನು ವಾಙ್ಮಯವೆಂದು ಹೇಳಬಹುದಾದರೂ ಅದನ್ನು ಸಾಹಿತ್ಯವೆಂದು ಕರೆಯುವುದು ಸರಿಯಾಗಲಿಕ್ಕಿಲ್ಲ (ಸಾಸಮಾ. ೧೯). [ಸಂ.]

**ವಾಙ್ಮಲ** (ನಾ). ಮಾತಿನಲ್ಲಿರುವ ದೋಷ ; ವಾಕ್ಕಿನಲ್ಲಿರುವ ಕಳಂಕ : ಪೂಜ್ಯಪಾದಯತಿಪತಿಯ ಗುಣಸ್ತವನಂಗಳೊಮ್ಮೆ ನಾಲಗೆಗೆ ವಂದ ಮಾನವನ ವಾಙ್ಮಲ ನಿಂದಪುದೇ (ಮಲ್ಲಿಪು. ೧-೧೪). [ಸಂ.]

**ವಾಙ್ಮಹಿಮೆ** (ನಾ). ಮಾತಿನ ಪ್ರಭಾವ ; ನುಡಿಯ ಮಹತ್ವ : ಗೌತಮನ ವಾಙ್ಮಹಿಮೆಯೋ ಮೇಣಾಹಲ್ಯೆಯ ತಪೋಬಲಮೋ ಕಾಣೆನ್ (ಶ್ರೀರಾಮಾ. ೨೫-೨೦೬).

[ಸಂ. ವಾಙ್ಮಹಿಮನ್]

**ವಾಙ್ಮಾಧುರ್ಯ** (ನಾ). ಮಾತಿನ ಸವಿ, — ಇಂಪು ; ನುಡಿಯ ಮಾಧುರ್ಯ.

[ಸಂ.]

**ವಾಙ್ಮುಖ** (ನಾ). ಮಾತು, ಪ್ರಬಂಧ, ಭಾಷಣ ಮುಂತಾದುವುಗಳ ಆರಂಭ ; ಪೀಠಿಕೆ : "ಉಪನ್ಯಾಸಃ, ವಾಙ್ಮುಖಂ — ೨ ವಾಕ್ಯಾರಂಭದ ಹೆಸರುಗಳು" (ಸಿದ್ಧಾಂತಿ. ೫೨). [ಸಂ.]

**ವಾಚ** (ನಾ). ೧. ಮಾತು ; ನುಡಿ : ಯೋಚಿಸಿ ನೋಡಲು ಸೋಜಿಗವಾಗಿದೆ ವಾಚಕ್ಕೆ ನಿಲುಕದ ಪರಿಯೆ (ವಿದ್ಯಾಕ್ಯ. ೯-೪). ೨. (?) : ಆಚೆಗೌಂಡನ ಮನೆಗೆ ತೆರಳುತ ವಾಚದಲಿ ಕುಳ್ಳಿರುವ ದೊರೆಗಳ ಕಾಚ ಕಟ್ಟಲಿಕ್ಕಿಲ್ಲದಚುವೆಯ ಹಾಗೆ ಮಾಡುವೆನು (ರೇವಣಾ. ೧-೧೪). [ಸಂ. ವಾಚ್]

**ವಾಚಂಯಮ** (ನಾ). ೧. ಮೌನವ್ರತವನ್ನು ಪಾಲಿಸುವವನು. ೨. ಮುನಿ ; ಋಷಿ : "ಋಷಿಃ, ತ್ರಿಕಾಲದರ್ಶೀ, ಮುನಿಃ, ವಾಚಂಯಮಃ — ಈ ೪ ಋಷಿಗಳ್" (ಹಲಾಯು. ೬೮-೨೫೮). [ಸಂ.]

**ವಾಚಂಯಮವಿಧಿ** (ನಾ). ಮೌನವನ್ನು ಪಾಲಿಸುವಿಕೆ ; ಮೌನವ್ರತ : "ವಾಚಂಯಮವಿಧಿ (ಮೌನಂ)" (ವಸ್ತುಕೋ. ೫೭೬-೩೫). [ಸಂ.]

**ವಾಚಂಯಮಿ** (ನಾ). = ವಾಚಂಯಮ ೨ : ಪಂಡಿತತತಿವಿನತಂ ಮಾಘನಂದಾಖ್ಯ ವಾಚಂಯಮಿರಾಜಂ (ಎಕ. II, ೬೪-೬೭; 1163); ಬೀಳ್ಕೊಂಡರನಿಬರಂ ವಾಚಂಯಮಿಗಳಂ (ಶ್ರೀರಾಮಾ. ೧೭೬-೯೦). [ಸಂ. ವಾಚಂಯಮಿನ್]

**ವಾಚಕ** (ಗು). ೧. ಮಾತನಾಡುವ ; ಹೇಳುವ : ವಾಚಕಚಪಳತ್ವದಿಂದ ಮಾತನಾಡಿದಡೇನು ತ್ರಿವಿಧದ ಆಸೆ ಬಿಡದನ್ನಕ್ಕ (ಸಕವ. ಕ. I, ೩೭೮-೧೩೭೯). ೨. ಓದುವ ; ವಾಚಿಸುವ. ೩. ಸೂಚಿಸುವ ; ತಿಳಿಸುವ : 'ಪರಿಮಾಣವಾಚಕ' ಪರಾ. (ನಾ). ೪. ಮಾತಿಗೆ ಸಂಬಂಧಿಸಿದುದು : ಮಾನಸ ವಾಚಕ ಕಾಯಕಾಧೀನ ದಿನಿರ್ದಪುದಂತದಂ ನೀನತಿಭಕ್ತಿಯಿನಾಲಿಸೌ (ಹಾಲಾಸ್ಯ. ೧-೧೦-೨೧); ಸತ್ಯಮಿತಹಿತ ಭಾಷಣಾದಿಗಳು ವಾಚಕವು (ಹಿಂದಸಾ. ೮೯). ೫. ಮಾತು ; ನುಡಿ : ವಾಚ್ಯ ವಾಚಕ ವಿಶೇಷ ವಿಶೇಷಣ ಲಕ್ಷ್ಯ ಲಕ್ಷಣಪ್ರಚುರತೆ ಕಾಳಿದಾಸನುಮನೇಳಿಸಿತೀ ಕೃತಿ ನಾಗವರ್ಮನಾ (ಛಂದೋಂಬು. ೧-೭). ೬. ಸಂದೇಶ ; ನಿರೂಪ : ಸನ್ನಿಧಾನದಲ್ಲಿ ಹೇಳಲು ಭಯವಾಗುತ್ತದೆ. ಆದರೂ ಮಂಡಲೇಶ್ವರರ ವಾಚಕವನ್ನು ಹೇಳುವವನು ನಾನು (ಶ್ರೀರಾಯ. ೨೪೪). ೭. ಓದುವವನು ; ಓದುಗ : ಆಳಿಕೆಯ ಕಾಲಗಳನ್ನು ತೋರಿಸುವ ವಂಶವೃಕ್ಷವನ್ನು ವಾಚಕರ ಸೌಕರ್ಯಕ್ಕಾಗಿ ಕೊಟ್ಟಿದೆ (ಕರ್ನಾಅ. ೧೫). ೮. ಕಾವ್ಯವನ್ನು ಸಹೃದಯರ ಮನಮುಟ್ಟುವಂತೆ ರಾಗವಾಗಿ ಓದುವವನು ; ಗಮಕಿ : ಮಾನಿತಪದಮಂ ಪದಸಂಧಾನಮನರ್ಥಪ್ರತೀತಿಯಂ ಕವಿಹೃದಯಸ್ಥಾನಮನಱಿದೋದದೆ ಕಣ್ಕೇನೆಯ ಕರಡಿಯುವೊಲುಳ್ಳಪಂ ವಾಚಕನೇ (ಛಂದೋಂಬು. ೧-೩೦ ಅಡಿಪದ್ಯ); ಪ್ರಕಟಿಸಿದತ್ತು ಪದ್ಮಜನ ಪಕ್ಕದೊಳ್ . . . ವಾಚಕಕೋಟಿಪುಣ್ಯಪಾಠಕತತಿ ಗಾಯಕಪ್ರತತಿ (ಪುಷ್ಪಪು. ೫-೨೧). ೯. ಮಾತನಾಡುವವನು : ವೇಷಗಳ್ಪರ ನಿಹಿತವ ನೋಡಿ ವಾಚಕರ ಪರಿಹಾಸಕನೀತಿಯ ತಿಳಿದು ಮತ್ತಾವ ರೀತಿನೀತಿಗಳಲ್ಲಿಯೂ ಮಾತ ತಾರದೆ . . . ಇಪ್ಪಾತ ತ್ರಿವಿಧದವನಲ್ಲ (ಸರ್ವವ. ೧೨೨-೬೨೪). ೧೦. [ಕಾವ್ಯಮೀ] ಪದಗಳಿಗೆ ಮುಖ್ಯವಾದ ಸಾಂಕೇತಿಕಾರ್ಥವನ್ನು ಬೋಧಿಸುವ ಶಬ್ದ : ರಾಷ್ಟ್ರಕ್ಕಂ ಗೋಚರದೆಡೆಗಂ ವಿಷಯಂ ವಾಚಕವೆಂದಱಿಗೆ ವಸ್ತುತತ್ತ್ವಸ್ಥಿತಿಯಿಂ (ವಸ್ತುಕೋ. ೧೨೭-೫೯); ಆ ವೈಖರೀರೂಪ ಶಬ್ದಸಮೂಹವೇ ವಾಚಕವೆಂದು ಲಾಕ್ಷಣಿಕವೆಂದು ವ್ಯಂಜಕವೆಂದು ತ್ರಿವಿಧವಾಗಿಹುದು. ಅದಱಲ್ಲಿ ವೃದ್ಧಸಂಕೇತಸಿದ್ಧಮಾಗಿ ಇದು ಘಟವಿದು ಪಟವೆಂಬ ರೀತಿಯಿಂ ಮುಖ್ಯಾರ್ಥಮಂ ಗೋಚರಿಪ ವಾಣಿಯೇ ವಾಚಕಶಬ್ದವೆನಿಸುವದು (ವಿವೇಕ. ೧೭೧). [ಸಂ.]

**ವಾಚಕಗುರು** (ನಾ). ಎಂಟುಬಗೆಯ ಗುರುಗಳಲ್ಲಿ ಒಬ್ಬ ; ತತ್ವವನ್ನು ಬೋಧಿಸಿ ಆತ್ಮಜ್ಞಾನವನ್ನು ನೀಡುವ ಗುರು : ವೇದದನುಮತವೆನಿಸಿದ ತತ್ವಸಂಪ್ರೀತಿಯನೆ ಬೋಧಿಸಿ ತಿಳುಹುವ ಕುಶಲನೆ ವಾಚಕಗುರುವಹನು (ಕೈವಲ್ಯ. ೮-೧-೨); ಆ ಶ್ರೀಗುರುವೇ ಸಾಧಕರಾದ ಶಿಷ್ಯರಧಿಕಾರಭೇದದಿಂ ಬೋಧಕಗುರು ವೇದಕಗುರು ನಿಷಿದ್ಧಗುರು ಕಾಮ್ಯಗುರು ಸೂಚಕಗುರು ವಾಚಕಗುರು ಕಾರಕಗುರು ವಿಹಿತಗುರುವೆಂದೆಂಟುತೆಱನಾಗಿರ್ಪರವರಲ್ಲಿ . . . ವಿಷಯಂಗಳ ಮಿಥ್ಯಾತ್ವದರ್ಶನದಿಂದಾತ್ಮಾನುರಾಗಪ್ರದನೇ ವಾಚಕಗುರು (ವಿವೇಕ. ೧೯). [ಸಂ.]

**ವಾಚಕತ್ವ** (ನಾ). ಅರ್ಥಗರ್ಭಿತವಾದುದು ; ಅರ್ಥದಿಂದ ಕೂಡಿದುದು : ಗುಣವೃತ್ತಿ, ವಾಚಕತ್ವ, ಇವೇ ಮೊದಲಾದ ಶಬ್ದವ್ಯಾಪಾರಗಳೆಲ್ಲವುಗಳಿಂದಲೂ ವಿಲಕ್ಷಣವಾದುದೇ ವ್ಯಂಜಕತ್ವ (ಧ್ವನ್ಯಾಲೋ. ೨೦೭); ಅರ್ಥವನ್ನು ಸ್ಮರಣಕ್ಕೆ ತರಲು ಅನುಕೂಲವಾದ ಪದಾರ್ಥದ ಸಂಬಂಧಕ್ಕೆ ಶಕ್ತಿ ಎಂದು ಹೆಸರು. ಇದಕ್ಕೆ ಸಮಯ, ಸಂಗತಿ, ಸಂಕೇತ, ವಾಚಕತ್ವ ಎಂಬೀ ಮುಂತಾಗಿ ನಾಮಾಂತರಗಳು (ಭಾತತ್ತ್ವ. ೮೪೬). [ಸಂ.]

**ವಾಚಕದೋಷ** (ನಾ). ಮಾತಿನ ಮೂಲಕ ಉಂಟಾಗುವ ಪಾಪ : ಚಾಂಡಾಲಾದಿ ಹೀನಯೋನಿಯನೈದಿ ಅನುಚಿತತ್ವ ನಿಷ್ಠುರತ್ವ ಪುಸಿ ಪೈಶೂನ್ಯವೆಂಬೀ ನಾಲ್ಕು ವಾಚಕ ದೋಷಂಗಳಿಂ ಪಶುಪಕ್ಷಿಗಾಗಿ ಪುಟ್ಟಿ (ವಿವೇಕ. ೧೯೮). [ಸಂ.]

**ವಾಚನ** (ನಾ). ೧. ಓದುವುದು ; ಪಠನ : ಒಳ್ಳೆಯ ವಾಚನ ಎಲ್ಲ ವಿದ್ವತ್ತಿಗಿಂತಲೂ ಉತ್ತಮವಾದುದು (ಸಾಹಿಪ್ರ. ೫೮). ೨. ಹೇಳುವುದು ; ಘೋಷಿಸುವುದು. ೩. ಮಾತು ; ನುಡಿ : ತದೇಕಚಿತ್ತನಾಗಿ ನನ್ನ ವಾಚನವನ್ನು ಕೇಳುತ್ತ ಕುಳಿತ ವಿಶ್ವಾಸ ತಟ್ಟನೇ ತನ್ನ ಮಾತು ಮಿಂಚಿಸಿದ (ದೀಪಹ. II, ೪). [ಸಂ.]

ವಾಚನಾಲಯ (ನಾ). ಪುಸ್ತಕ, ವೃತ್ತಪತ್ರಿಕೆ, ನಿಯತಕಾಲಿಕ ಮುಂತಾದುವುಗಳನ್ನು ಸಂಗ್ರಹಿಸಿ ಸಾರ್ವಜನಿಕರಿಗೆ ಓದಲು ಅನುಕೂಲ ಮಾಡಿಕೊಡುವ ಸ್ಥಳ : ವಾಚನಾಲಯದೊಳು ಆಕೆ ಬಂದಾಳೆಂದರಾಕೆ ಹೋದಳು ತನ್ನ ಮನೆಗೆ (ಚಂದ್ರವೀ. ೧೬೩-೪೯). [ಸಂ.]

ವಾಚನೆ (ನಾ). ೧. ಓದುವುದು ; ವಾಚಿಸುವುದು. ೨. ಮಾತು ; ನುಡಿ : ವಾ[ವಾತಾಂ. ಯೋ]ಚನೆಗೆಯಳವಲ್ಲ ಲೋಕಕಗೋಚರವು ತಾನಲ್ಲ ಧರ್ಮವು ಯೋಚಿಸಲಿಕೆತ್ತಾಗಿ ಹುಟ್ಟಿತು ಭೂಮಿಮಧ್ಯದಲಿ (ಸಂಭವ. ೫-೨೮). ೩. [ಜೈನ] ಸ್ವಾಧ್ಯಾಯದ ಐದು ಅಂಗಗಳಲ್ಲಿ ಮೊದಲನೆಯದು ; ಆಗಮಗ್ರಂಥಗಳನ್ನು ಓದುವುದು : ವಾಚನೆಯುಂ ಪೃಚ್ಛನೆಯುಮನುಪ್ರೇಕ್ಷೆಯುಮಾಮಯಮುಂ ಧರ್ಮೋಪದೇಶಮುಮೆಂಬ ಪಂಚವಿಧಸ್ವಾಧ್ಯಾಯದೊಳಂ ನೆಜೆದು ನಿಸ್ಸಂಗರಾಗಿ (ಅಜಪು. ೧೨-೪ ವ); ಸ್ವಾಧ್ಯಾಯಮೆಂಬಗ್ಗಳಿಕೆಯ ತಪಮಂ ವಾಚನಾ ಪೃಚ್ಛನಾನುಪ್ರೇಕ್ಷಾಮ್ನಾಯೋಪದೇಶಕ್ರಮಪರಿಗಣನಾವ್ಯಕ್ತಸೂಕ್ತಿಮುಕ್ತಾವತಂಸಂ (ಮಲ್ಲಿಪು. ೧೧-೪೨). [ಸಂ. ವಾಚನಾ]

ವಾಚಸ್ಪತಿ (ನಾ). ೧. ಮಾತಿನ ಅಧಿಪತಿ ; ಬೃಹಸ್ಪತಿ : ಈ ಮಾತಮೋಘಂ ಮಂದರಾಚಳನಿಶ್ಚಳಮಿದಂ ಚಳಿಯಿಸಲ್ ನಿಮ್ಮ ನೆಚ್ಚಿನ ವಾಚಸ್ಪತಿಗಮಶಕ್ಯಂ (ಶಾಂತಿಪು. ೮-೧೩೭ ವ); ಆ ನೆಗಳ್ದ ನಾರಸಿಂಹಧರಾನಾಥಂಗಮರಪತಿಗೆ ವಾಚಸ್ಪತಿವೋಲ್ ತಾನೆಸೆದಂ . . . ಹುಳ್ಳಚಮೂಪಂ (ಎಕ. II (R), ೪೭೬-೨೯; 1158). ೨. ಮಾತಿನ ಮೇಲೆ ಪ್ರಭುತ್ವವಿರುವವನು ; ವಾಕ್ಪಟು : ಆ ಭಗವಂತನ ಕೃಪೆಯಿಂದ ಮೂಕನು ವಾಚಸ್ಪತಿಯಾಗುವನು (ತುಳಸೀ. ೧). ೩. ಬ್ರಹ್ಮ. ೪. ಒಬ್ಬ ಪ್ರಸಿದ್ಧ ಸಂಸ್ಕೃತ ನಿಘಂಟುಕಾರನ ಹೆಸರು. [ಸಂ.]

ವಾಚಳಕ (ನಾ). ಗಳಹುವವನು ; ಹರಟುವವನು : ವೇದಶಾಸ್ತ್ರಾಗಮಪುರಾಣಕವಿತ್ವಗಳೆಂಬ ನುಡಿಗಳಿಂದೆ ವಾಚಳಕರಾದವರಿಗೆ ತಾರಕಬ್ರಹ್ಮವು ಸಾಕ್ಷಾತ್ಕಾರವಾಗದು (ಅಖಂಡೇ. ೨೨೩-೬೫). [< ಸಂ. ವಾಚಾಲಕ]

ವಾಚಾಟ (ಗು). ೧. ಅತಿಯಾಗಿ ಮಾತನಾಡುವ ; ಹರಟುವ. (ನಾ). ೨. ವಾಗ್ವಾದ ; ಚರ್ಚೆ ; ತರ್ಕ : ಈ ವಾಚಾಟವನ್ನು ನೋಡುತ್ತ ಕುಳಿತಿದ್ದ ಹುಡುಗರಲ್ಲಿ ಒಬ್ಬ, ಎದ್ದು ನಿಂತು . . . ಧೈರ್ಯದಿಂದ ನುಡಿದಾಗ (ಚಲಿಮು. ೯೮). ೩. ಬಹಳ ಮಾತನಾಡುವವನು ; ಹರಟುವವನು : ಬಟಿ ಬೊಬ್ಬಾಟವೇತಕೆ ವಿಜಯಸಿರಿ ವಾಚಾಟರಿಗೆ ಮೆಚ್ಚುವಳೆ ತೋಱು ದ್ಯೂತಕೌಶಲವ (ಜಿವ್ಯಾಸ. ೧೩-೪೭). [ಸಂ.]

ವಾಚಾಮಗೋಚರ$_1$ (ನಾ). ೧. ಮಾತಿಗೆ ಸಿಗದುದು ; ಶಬ್ದಕ್ಕೆ ನಿಲುಕದುದು: ಶ್ರೀಚೋಳದೇಶವೊಪ್ಪಿಪ್ಪುದು ಧರಾತಳಕೆ ವಾಚಾಮಗೋಚರಮದಱ ವಿಸ್ತರಂ ಜಗಕೆ (ತಿರುರ. ದೀ. ೧-೬). ೨. ನುಡಿಯಬಾರದುದು ; ಅವಾಚ್ಯವಾದುದು : ತುಂಬಿದ ಸಭೆಯಲ್ಲಿ ಅವರು ನಿಮ್ಮನ್ನು ವಾಚಮಗೋಚರವಾಗಿ ಅವಮಾನ ಪಡಿಸಿದರು (ವಚಭಾ. ೨೪೧); ಸಂಪಾದಕನು . . . ಪತ್ರಿಕೆಯಲ್ಲಿ ವಾಚಾಮಗೋಚರವಾಗಿ ಮೋಹನನನ್ನು ಕೆಲವು ವರ್ಷಗಳಿಂದ ಬಯ್ಯುತ್ತಿದ್ದನು (ಸಂಪಜಾ. ೨೨೭).
[IP ಸಂಸ್ಕೃತದಲ್ಲಿ 'ವಾಚಾಂ' ಮತ್ತು 'ಅಗೋಚರ' ಎಂಬುವು ಎರಡು ಬೇರೆ ಬೇರೆ ಪದಗಳು]

ವಾಚಾಮಗೋಚರ$_2$ (ಅ). ಅವಾಚ್ಯವಾಗಿ ; ಬಾಯಿಗೆ ಬಂದಂತೆ : ವ್ಯಾಸರಾಯರನ್ನೂ ಅವರ ಮತವನ್ನೂ ವಾಚಾಮಗೋಚರ ನಿಂದಿಸಿದ ಪಂಡಿತರನ್ನು . . . ಅವಮಾನಿಸದೆ ಸನ್ಮಾನ ಮಾಡುತ್ತಲೇ ಬಂದರು. (ಕಭವಿ. ೯೧); ಶ್ಯಾಮ ಕಕ್ಕನನ್ನು ಒಂದು ದಿನ ಕರೆದು, ನಿನ್ನಂತಹ ಠಕ್ಕ ಬೇರೊಬ್ಬನಿಲ್ಲೆಂದು ವಾಚಾಮಗೋಚರ ಬೈದ (ಹೊಸಕ್ಕಿ. ೨೫೦). [< ವಾಚಾಮಗೋಚರ$_1$]

ವಾಚಾಮತೀತ (ನಾ). ೧. ಮಾತಿಗೆ ಮೀರಿದುದು ; ಶಬ್ದಕ್ಕೆ ನಿಲುಕದುದು : ಆಚಾರಮುಖದಿಂದ ಗುರುಸಮರ್ಪಣೆಗಳಂ ವಾಚಾಮತೀತಮೆನೆಯರ್ಪಿಸುವ (ಏಕೈಪು. ೩-೧೮-೨). ೨. ಮಾತಿಗೆ ನಿಲುಕದವನು ; ಪರಮಾತ್ಮ : ಆ ಕುಲಚ್ಛರೆಯರಿಂ ಭೋಗಮಂ ಪೂಜೆಗಳ ಕೈಕೊಳ್ಳುತಾ ವಾಚಮತೀತನೊಪ್ಪುತಿರಲು (ಏಕೈಪು. ೪-೧೦-೩೨). [IP ಸಂಸ್ಕೃತದಲ್ಲಿ 'ವಾಚಾಂ' ಮತ್ತು 'ಅತೀತ' ಎಂಬುವು ಎರಡು ಬೇರೆ ಬೇರೆ ಪದಗಳು]

ವಾಚಾಲ, ವಾಚಾಳ (ಗು). ೧. ಅತಿಯಾಗಿ ಮಾತನಾಡುವ ; ಹರಟುವ ; ಗಳಹುವ. (ನಾ). ೨. ನಾದ ; ಧ್ವನಿ : ಕಳಕೇಳೀಕೀರಪಾರಾವತಕುಹರಣವಾಚಾಲ ಮುಜ್ಜೃಂಭಮಾಣೋತ್ಪಳರಾಜಂ. . . ಬಂದೊಯ್ಯನೇನೂದಿದುದೊ ಪವನವಧೂಗೇಹದಿಂ ಗಂಧವಾಹಂ (ಚಂದ್ರಪು. ೮-೪೫). ೩. ಅತಿಯಾಗಿ ಮಾತನಾಡುವವನು ; ಹರಟೆಮಲ್ಲ : ಗಟಪನೆಂದು ವಾಚಾಲಂ [ವಾತಾಂ. ಸೊರಹಂ] (ಶಮದ. ನ. ೩೩ ವೃತ್ತಿ). ಬಾದಶಹನ ಪ್ರಸನ್ನವೃತ್ತಿಯನ್ನು ಕಂಡು, ವಾಚಾಲನಾದ ಸಭಿಕನೊಬ್ಬನು ಎದ್ದು ನಿಂತು (ಕಸಂಹಾ. ೭೦). ವಾಚಾಳ : ೧. ಪರವಾಚಾಳನೃಪಾಳಜಾಳಕುಳನಾಶೋತ್ಪಾತನಿರ್ಘಾತ ವಾತರವಂ . . . ತಾನೆನೆ ಘೂರ್ಣಿಸಿತು . . . ಭೇರೀರವಂ (ಪುಷ್ಪಪು. ೫-೭). ೩. ''ವಾಚಾಳಂ ಜಲ್ಪಾಕಂ ವಾಚಾಟಂ ವಾವದೂಕನಕ್ಕುಂ ಗಟಪಂ'' (ವಸ್ತುಕೋ. ೧೦೦-೧೩). ೪. ಚೆನ್ನಾಗಿ ಮಾತನಾಡುವವನು ; ವಾಕ್ಪಟು : ನರಯುಗ್ಮೋದಯದೊಳ್ ಬುಧಂ ನೆಲಸೆ ವಾಚಾಳಂ ಕಲಾವೇದಿ ಸೌಖ್ಯರತಂ ಶಾಸ್ತ್ರವಿದಂ ಪ್ರಿಯಂವದನೆನಿಕ್ಕುಂ (ಜಾತತಿ. ೧೭-೨೩). ೫. ಚೆನ್ನಾಗಿ ಮಾತನಾಡುವಂತಹುದು ; ಮಾತುಗಾರಿಕೆಯನ್ನು ಬಲ್ಲುದು : ಆತಂ ತನ್ನ ಮಗಳಪ್ಪ ಸುಮತಿಗೆ ಬಟಿವಟಿಗೊಟ್ಟು ಮಗಳೊಡನೆ ವಾಚಾಳನಪ್ಪ ಗಿಳಿಯುಮನಟ್ಟಿದೊಡೆ (ವಡ್ಡಾರಾ. ೧೦೮-೨೩). [ಸಂ.]

ವಾಚಾಲಕ, ವಾಚಾಳಕ (ಗು). ೧. ಅತಿಯಾಗಿ ಮಾತನಾಡುವ ; ವಾಚಾಲ. ವಾಚಾಳಕ (ನಾ). ೨. ಅತಿಯಾಗಿ ಮಾತನಾಡುವವನು ; ಹರಟುವವನು : ಅರ್ಪಿತಾವಧಾನಿಯ ಕಟ್ಟು ಹೀಂಗಲ್ಲದೆ ಮಿಕ್ಕಿದುದೆಲ್ಲವೂ ವಾಚಾಳಕರ ಕಟ್ಟುಕದ ಮಾತು (ಸರ್ವವ. ೧೧೨-೬೧೧); ಬೇಚರತ್ನದ ನೆಲೆಯ ಭೂಚರರು ಬಲ್ಲರೆ ವಾಚಾಳಕರ ಮಾತಿಗಿದು ಸಲ್ಲದು (ಪದಗೋ. ೧೦೨). ೩. ಮಾತುಗಾರ ; ವಾಕ್ಪಟು : ಬಂದಿರುವ ನೂರುಮಂದಿಯಲ್ಲಿ ಕೇಳಿದ ಮಾತುಗಳಿಗೆಲ್ಲಾ ಸರಿಯಾದ ಉತ್ತರವನ್ನು ಹೇಳುವ ವಾಚಾಳಕನು ಒಬ್ಬನೇ (ರೂಢಿ). [ಸಂ.]

ವಾಚಾಲಗಿತ್ತಿ (ನಾ). ಅತಿಯಾಗಿ ಮಾತನಾಡುವವಳು ; ಮಾತುಗಾತಿ: ವಾಚಾಲಗಿತ್ತಿಯಾದಾ ಸಾಗರೆಯು ಬಿಕ್ಕಿ ಬಿಕ್ಕಿ ಅತ್ತಳು (ದೇವೀಚಾ. ೯೫). [ವಾಚಾಲ + – ಗಿತ್ತಿ]

ವಾಚಾಲತೆ, ವಾಚಾಳತೆ (ನಾ). ೧. ಅತಿಯಾಗಿ ಮಾತನಾಡುವಿಕೆ ; ಹರಟುವಿಕೆ : ಕೆಲವು ಸಲ ಪ್ರಮಾಣ ಮೀರಿದ ದೀರ್ಘತೆ, ವಾಚಾಲತೆಗಳೂ ತೋರಿವೆ (ಕಸಾಚ. ೧೩೨). ವಾಚಾಳತೆ : ೨. ನಿರರ್ಗಳವಾದ ಮಾತುಗಾರಿಕೆ ; ವಾಕ್ಪಟುತ್ವ : ನಿಜವಾದ ಜಾಣತನ ಮೌಢ್ಯದಂತೆ ಕಾಣುವುದು. ನಿಜವಾದ ವಾಚಾಳತೆ ಬಿಕ್ಕಳಿಸುವಿಕೆಯಂತೆ ಕಾಣುವುದು (ತತ್ವಪ್ರಾ. ೬೦೪). [ಸಂ. ವಾಚಾಲತಾ]

ವಾಚಾಲತ್ವ (ನಾ). = ವಾಚಾಲತೆ ೨ : ವಾಚಾಲತ್ವಮನೆಸಗಲ್ಗೋಚರಮೇ ಕಬ್ಬಿಗಡಲನುತ್ತರಿಸುವ ಚಾಣ್ಕೀಚರ್ಗೆ ಸರ್ವಶಾಸ್ತ್ರವಿಲೋಚನಮಪ್ಪದಟಸುಕವಿ ಪಂಚಾಸ್ಯನವೋಲ್ (ಉದ್ಭಟ. ೧-೨೨). [ಸಂ.]

ವಾಚಾಲಿತ (ನಾ). ಶಬ್ದದಿಂದ ಕೂಡಿದುದು ; ನಾದದಿಂದ ತುಂಬಿದುದು : ನೆಯ್ದಿಲ್ಗೊಳಂ ಮೇಲ್ಮರಲ್ದರಲುತ್ತಿರ್ದುವು ಚಂಚರೀಕಮಧುರವ್ಯಾಹಾರವಾಚಾಲಿತಂ (ಪಂಚಾಮಾ. ೭-೬). [ಸಂ.]

ವಾಚಾಳ 'ವಾಚಾಲ' ನೋ.

ವಾಚಾಳಕ 'ವಾಚಾಲಕ' ನೋ.

ವಾಚಾಳತನ (ನಾ). ೧. ವ್ಯರ್ಥವಾದ ಮಾತು ; ಹರಟೆ : ವಾಚಾಳತನದೊಳಾನು ಕಾಳುಗೆಡೆದು ಕಳನೊಳಗೆ ಹೇಳದೆ ಹೆಱಸಾರಿ ಜೀವವುಳಿಯಲೆಂಬ ಮೊಳರ ಕುಲದವನಲ್ಲ (ತ್ರಿಪುಸಾಂ. ೧೨-೧೩೯). ೨. = ವಾಚಾಲತೆ ೨ : ಅವನು ಎಲ್ಲವನ್ನೂ . . . ಭಾವಪೂರಿತವಾಗಿ ಒಳ್ಳೆಯ ವಾಚಾಳತನದಿಂದ ಹೇಳುತ್ತಿರುವಾಗ ಕಾಲ ಕಳೆದು ಹೋದುದೇ ಒಲೆನಿನ್‌ಗೆ ತಿಳಿಯಲಿಲ್ಲ (ಮಲೆನಾ. ೭೯). [ವಾಚಾಳ (< ವಾಚಾಲ) + – ತನ]

ವಾಚಾಳತೆ 'ವಾಚಾಲತೆ' ನೋ.

ವಾಚಾಳಿ (ಗು). ೧. ಅತಿಯಾಗಿ ಮಾತನಾಡುವ : ಬಲ್ಲಿದ ವಾಚಾಳಿ ನಾರದಮುನಿ ನಿನ್ನ ಬೊಲ್ಲೆಯ ಮಾತದಂತಿರಲಿ ಎಲ್ಲಿಂದ ಬಂದೆ ಸುದ್ದಿಯ ಪೇಳ್ವುದು (ಮೋಹತ. ೩೬-೧೪); ತಮ್ಮ ವಾಚಾಳಿ ಧರ್ಮಪತ್ನಿಯವರಲ್ಲಿಯಾದರೂ ಒಂದು ಕತಾಕೃತಿ ನಿಲುವನ್ನು ಕೇಳಬೇಕೆಂದು ಮನಸ್ಸು ಮಾಡಿದರು (ಕಾವೇರಿ. ೧೯). (ನಾ). ೨. ಬಹಳ ಮಾತನಾಡುವ ವ್ಯಕ್ತಿ ; ಮಾತಾಳಿ : ವಾಚಾಳಿ ಮೌನವದೇಕೆ ಹೇಳೆಲೆ ಹಿಮರೋಚಿ ಮಸ್ತಕನೊಳು ಸೆಣಸಿ ನಾಚಿದೆನೆನಬೇಡ (ಮೋಹತ. ೯-೧೨); ವಾಚಾಳಿಯಾದ ವಸುಧಾ — ಈಗ ಸದ್ಗೃಹಿಣಿ (ವಾತ್ಸಲ್ಯ. ೨೨೨).

[ಸಂ. ವಾಚಾಲೀ/ ಮರಾ. ವಾಚಾಳೀ/ ತುಳು. ವಾಚಾಲೆ = ಮಾತುಗಾರಿಕೆ]

ವಾಚಾಳಿತನ (ನಾ). ಬಹಳ ಮಾತನಾಡುವಿಕೆ : ಅಂಥ ನಾಲ್ಕೆಂಟು ಮಾತುಗಳು ಉಂಟುಮಾಡುವಂಥ ಪರಿಣಾಮ, ಘಂಟೆಗಟ್ಟಳೆ ಕೊರೆಯುವ ವಾಚಾಳಿತನದಿಂದ ಉಂಟಾಗಲಾರದು (ಯಕ್ಷಬ. ೧೨೪). [ವಾಚಾಳಿ + – ತನ]

ವಾಚಾಳೆ (ನಾ). ಅತಿಯಾಗಿ ಮಾತನಾಡುವವಳು : ಅಂತಪುರಕ್ಕೆ ಪೋಪ ವಾಚಾಳೆಯನೊರ್ವಳಂ ಚಟುಳಚೇಟಿಕೆಯಂ ವಸುದೇವವಲ್ಲಭಂ ಹಿಡಿದು ಹಿಟಕವಾಡೆ (ಅರ್ಥನೇ. ೫-೬). [ವಾಚಾಳ (< ವಾಚಾಲ) + – ಎ$_2$]

ವಾಚಿ (ನಾ). ೧. ಅತಿಶಯವಾದುದು. ೨. ಸಚಿವ ; ಮಂತ್ರಿ. ೩. ಸರಸ್ವತಿ. ೪. ಗುಣ ; ಸ್ವಭಾವ : "ವಿಶೇಷಂ ಸಚಿವಂ ಸರಸ್ವತಿ ಗುಣಂಗಳ್ ವಾಚಿಯಕ್ಕುಂ" (ನಾನಾರ. ೧೦೪). ೫. [ವ್ಯಾಕ] ಒಂದು ಶಬ್ದದ ಅರ್ಥವ್ಯಾಪ್ತಿಯನ್ನು ಅಥವಾ ಅದರ ವ್ಯಾಖ್ಯೆಯನ್ನು ಹೇಳುವ ಇನ್ನೊಂದು ಶಬ್ದ ; ಗುಣವಾಚಕ; ವಿಶೇಷಣ. [ಸಂ. ವಾಚಿನ್]

ವಾಚಿಕ (ಗು). ೧. ಮಾತಿನಿಂದಾದ ; ಶಾಬ್ದಿಕವಾದ : ಇವುಗಳಲ್ಲದೆ ಬೇರೆ ಕವಿಕಥಿತ ಕಾಯಿಕ ವಾಚಿಕ ಮಾನಸಿಕ ಉಪಪಾತಕಗಳೂ ನನಗೆ ತಟ್ಟಲಿ (ತುಳಸೀ. ೧-೧೬); ಭಾಷಣವೆಲ್ಲವೂ ವಾಚಿಕ ಅನುಭವವಾಗಿದೆ (ಪ್ರಬಂಧ. ೩೬). ೨. ಮಾತಿನ ಮೂಲಕ ತಿಳಿಸಿದ. (ನಾ). ೩. ಮಾತಿಗೆ ಸಂಬಂಧಿಸಿದುದು ; ಶಾಬ್ದಿಕವಾದುದು : ಪಾರುಷ್ಯ (ಕಾಠಿಣ್ಯ), ಅನೃತ, ಪೈಶೂನ್ಯ, ಅಸಂಬದ್ಧಪ್ರಲಾಪ ಈ ನಾಲ್ಕು ವಾಚಿಕವು (ಆರ್ಯಧ. ೧೧೯). ೪. ವಾರ್ತೆ ; ಸುದ್ದಿ ; ಸಮಾಚಾರ. ೫. ಹೇಳಿ ಕಳುಹಿಸಿದ ಮಾತು ; ಸಂದೇಶ : "ಸಂದೇಶವಾಕ್, ವಾಚಿಕಂ – ೨ ಹೇಳಿ ಕಳುಹಿಸುವ ಮಾತಿನ ಹೆಸರು" (ಸಿದ್ಧಾಂತಿ. ೫೪). ೬. [ನಾಟ್ಯ] ಆಂಗಿಕ, ವಾಚಿಕ, ಆಹಾರ್ಯಕ ಮತ್ತು ಸಾತ್ವಿಕಗಳೆಂಬ ನಾಲ್ಕು ಬಗೆಯ ಅಭಿನಯಗಳಲ್ಲಿ ಒಂದು ; ಭಾವಗಳನ್ನು ಮಾತಿನ ಮೂಲಕ ವ್ಯಕ್ತಗೊಳಿಸುವ ಅಭಿನಯ : ಅಂಗೋಪಾಂಗಂಗಳೊಳೆಸೆವಾಂಗಿಕಮಂ ಗಾನಪರ್ಕದೊಳ್ ವಾಚಿಕ[ಪಾಠಾಂ. ಚಿಕ, ಚಿತ]ಮಂ ತುಂಗಕುಚೆ ಮೆರೆದಳ್ (ಆದಿಪು. ೯-೨೮); ಕಾವ್ಯನಾಟಕಾರ್ಥದ ಪೆಂಪಂ ಸಂಗಳಿಸಿ ಪೇಳೆ ವಾಚಿಕವು (ಲಾಸ್ಯರಂ. ೧-೫೧). ೭. [ಯೋಗ] ಕರ್ಮಯೋಗದ ಮೂರು ಬಗೆಗಳಲ್ಲಿ ಒಂದು : ಇವುಗಳು ಶಾರೀರ, ವಾಚಿಕ, ಮಾನಸಿಕವೆಂದು ಮೂರುಪ್ರಕಾರ . . . ವಾಚಿಕವೆಂದರೆ ಸತ್ಯವಾಗಿಯೂ, ಹಿತವಾಗಿಯೂ, ಪ್ರಿಯವಾಗಿಯೂ ಇರತಕ್ಕ ಪರಾಪವಾದಸಂಬಂಧವಿಲ್ಲದ ಮಾತುಗಳನ್ನಾಡುತ್ತಾ ಸಚ್ಛಾಸ್ತ್ರಪಾಠಪ್ರವಚನ ಪಾರಾಯಣಾದಿಗಳಲ್ಲಿ ಕಾಲಕ್ಷೇಪವನ್ನು ಮಾಡುತ್ತಿರುವುದು (ಹಿಂದಸಾ. ೯೯). ೮. [ವೀಶೈ] ಗುರುವು ತನ್ನ ಶಿಷ್ಯನಿಗೆ ಪಂಚಾಕ್ಷರೀಮಂತ್ರವನ್ನು ಉಚ್ಚರಿಸಿ ಮಾಡುವ ದೀಕ್ಷೆ : ಉನ್ನತಧ್ವನಿಯೊಳುಚ್ಚರಿಸಿ ಪಂಚಾಕ್ಷರಿಯ ತನ್ನ ಶಿಷ್ಯಂಗೆ ಗುರು ಮಾಳ್ಪ ದೀಕ್ಷೆಯೇ ವಾಚಿಕಂ (ವೀಶೈಪು. ೬-೬-೬೬). [ಸಂ.]

ವಾಚಿಸು (ಕ್ರಿ). ೧. ಓದು ; ಪಠಿಸು : ಪಲವು ಕಪ್ಪಡಂಗಳೊಳ್ ಸುತ್ತಿರ್ಪುದೊಂದೋಲೆಯೊಳ್ ಬರೆದಿರ್ದ ಗಾಹೆಯಂ . . . ವಾಚಿಸಿ ನೋಡಿ (ಪಂಚತಂ. ೧೯೩-೫); ವಾಚಿಸದ ವೇದಾರ್ಥನಿಚಯವನು . . . ನೀಚನಹ ಭೂಸುರನ ಕರುಳನು ತೋಚುವಳಲ್ಲ ಮೃತ್ಯು (ಕುವ್ಯಾಉ. ೪-೯೮); ಋಣಗಳೆಲ್ಲವು ಪೂರ್ವಸಂಚಿತಾಂಶಗಳು ಹಣೆಯೊಳದು ಲಿಖಿತ ಮಿರೆಯಂ ವಾಚಿಸುವನಿಲ್ಲ (ಮಂಕುಕ. ೧೬೦). ೨. ಸೂಚಿಸು ; ತಿಳಿಸು : ವರದ್ರುಪದತನುಜಾಸ್ವಯಂವರಕರಸುಗಳು ಬಹುದೆಂದು ವಾಚಿಸಿತಖಿಳಲೇಖಾರ್ಥ (ಕುವ್ಯಾಆ. ೧೧-೧೫); ಈಯಶೇಷಮಹೋತ್ಸವದ ಸುಶ್ರೇಯವನು ಕೈಕೊಂಡು ಬಂಧುನಿಕಾಯಸಹಿತ್ಯೈತಹುದೆನುತ ವಾಚಿಸುದುದಾ ಲಿಖಿತ (ತೊರರಾ. ೧-೧೬-೬). ೩. ಹೇಳು ; ನುಡಿ : ಕಾಣುತ ಸ್ಮರಪಿತನ ತಾಗಿದನು ವಾಚಿಸಿ ತನ್ನ ವಿಕ್ರಮವ (ಕೋಳಾಯ. ೨೨-೫೪). ೪. ವ್ಯಾಖ್ಯಾನಮಾಡು ; ವಿವರಿಸು : ವಾಚಿಪ ಶ್ರುತಿಗಳ್ಗೆ ನಿರುಪಮನೆನಿಸಿ ಅತಿ ರೌದ್ರಾಕಾರವಡೆದಭವನ ಕಂಡು ರತಿರಾಜ ಹವಣಿಸಿ ನಿಂದ (ಮೋಹತ. ೭-೨೬); ಆಱು ಶಾಸ್ತ್ರವು ನಾಲ್ಕು ವೇದಪುರಾಣದ ಸಾರದರ್ಥವ ನಿರ್ಣೈಸಿ ತೋಱಿ ವಾಚಿಸುವ ಬ್ರಾಹ್ಮಣವೀಧಿ ಬಹುಶೃಂಗಾರದ ಮೆಱೆದುವರ್ತಿಯಲಿ (ಕಂವಿ. ೬-೪೧). [ವಾಚನ + – ಇಸು$_1$]

ವಾಚು (ನಾ). ಮುಂಗೈಗೆ ಕಟ್ಟಿಕೊಳ್ಳುವ ಅಥವಾ ಜೇಬಿನಲ್ಲಿಟ್ಟುಕೊಳ್ಳುವ ಚಿಕ್ಕ ಗಾತ್ರದ ಗಡಿಯಾರ : "ಹೋಯ್, ಗಂಟೆ ಎಷ್ಟಾಯ್ತು?" ಎಂದು ದಾರಿಯಲ್ಲಿ ಹೋಗುತ್ತಿದ್ದವನ ಕೈಯಲ್ಲಿಯ ವಾಚು ನೋಡಿ ಕೇಳಿದಳು (ಹೊಸಕ್ಕಿ. ೫೦).

[<— ಇಂ. Watch]

ವಾಚಿ (ನಾ). ೧. ಮಾತು ; ನುಡಿ. ೨. ಪವಿತ್ರವಾದ ಮಾತು ; ಸೂಕ್ತಿ. ೩. ಪ್ರತಿಜ್ಞೆ ; ಶಪಥ. [ಸಂ. ವಾಚಾ]

ವಾಚ್ಯ (ಗು). ೧. ಹೇಳಬಹುದಾದ ; ಹೇಳಲು ಯೋಗ್ಯವಾದ. ೨. ದೂಷಣೆಗೆ ಯೋಗ್ಯವಾದ ; ನಿಂದಿಸಲು ಅರ್ಹವಾದ. ೩. [ವ್ಯಾಕ] ವಿಶೇಷಕ ; ಆಖ್ಯಾತಕ. (ನಾ). ೪. ವಿಶೇಷಣ ; ಗುಣವಾಚಕ. ೫. ಕ್ರಿಯಾಪದ ಪ್ರಯೋಗ. ೬. [ಕಾವ್ಯಮಿ] ಶಬ್ದದ ನೇರವಾದ ಅರ್ಥ ; ಶಾಬ್ದಿಕವಾದ ಅರ್ಥ : ವಾಚ್ಯ ವಾಚಕವಿಶೇಷ್ಯ ವಿಶೇಷಣ ಲಕ್ಷ್ಯಲಕ್ಷಣಪ್ರಚುರತೆ ಕಾಳಿದಾಸನು ಮನೇಳಿಸಿತೀ ಕೃತಿ ನಾಗವರ್ಮನಾ (ಛಂದೋಂಬು. ೧-೭); ಅರ್ಥವು ಮುಖ್ಯವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರು ವಿಧ (ಕೃಪಿಡಿ. ೧೭೭). ೭. ನೇರವಾದ ಅರ್ಥದಿಂದ ಕೂಡಿದುದು ; ಸ್ಪಷ್ಟವಾಗಿ ವ್ಯಕ್ತವಾದುದು : ಲಲಿತಂ ಪ್ರತೀಯಮಾನೋಪಲಕ್ಷಿತಂ ವಾಚ್ಯಮಾದೊಡೊಪ್ಪದು ಕೃತಿ (ಲೀಲಾವ. ೧-೭೭); ಧ್ವನಿಯಿಂದ ಕೂಡಿದ ಮಾತನ್ನೂ ವಾಚ್ಯಕ್ಕಿಂತ ಮೇಲೆನ್ನಬಹುದು (ಧ್ವನ್ಯಾಲೋ. VIII, ಮುನ್ನುಡಿ). [ಸಂ.]

ವಾಚ್ಯತ್ವ (ನಾ). = ವಾಚ್ಯ ೬ : ವಾಚಕವಾಚ್ಯತ್ವದಿನಾ ಸೂಚಕಮಾ ಸೂತ್ರದಲ್ಲಿ ಶಬ್ದಾರ್ಥತ್ವದೊಳ್ಮೆ ಚತುರತೆಯಿಂ ತಿಳಿಯ್ಮೆ ಗೋಚರಮಲ್ಲಿದು ಮದೀಯ ದಯೆಯಿಂದೆ ವಿನಾ (ಹಾಲಾಸ್ಯ. ೧-೭-೩೦). [ಸಂ.]

ವಾಚ್ಯಲಿಂಗ (ನಾ). ಒಂಬತ್ತು ಲಿಂಗಗಳಲ್ಲಿ ಒಂದು ; ವಿಶೇಷ್ಯದ ಲಿಂಗಕ್ಕೆ ಅನುಸಾರವಾಗಿರುವ ವಿಶೇಷ್ಯಾಧೀನಲಿಂಗ : ಬಗೆ ನೀನಾನ್ನಾನೆಂಬುಕ್ತಿಗಳುಂ ಗುಣವಚನಸರ್ವನಾಮಬಹುವ್ರೀಹಿಗಳುಂ ಕೃತ್ತದ್ಧಿತಸಂಖ್ಯೆಗಳುಂ ಸಲೆ ವಾಚ್ಯ ಲಿಂಗಮೆಂದೀ ಕ್ರಮದಿಂ (ಶಮದ. ೮೯); ಆನ್, ನಾನ್, ನೀನ್, ತಾನ್ ಎಂಬ ಶಬ್ದಗಳೂ ಈ ಜಾತಿಯವು. ಇವು 'ವಾಚ್ಯಲಿಂಗ'ಗಳು (ಕೃಪಿಡಿ. ೩೩). [ಸಂ.]

ವಾಚ್ಯಲಿಂಗಕ (ಗು). [ವ್ಯಾಕ] ವಿಶೇಷಣವಾಗಿರುವ. [ಸಂ.]

ವಾಚ್ಯಾಯನ (ನಾ). ವಾಚ್ಯನೆಂಬ ವೈದಿಕಮಹರ್ಷಿಯ ಪರಂಪರೆಗೆ ಸೇರಿದ ವ್ಯಕ್ತಿ : ಬುಧರ ಮತಿಸಂಪಾದನೆಗೆ ಮುಖಿಗೊಡದ ವಾಚ್ಯಾಯನರ ಚೇತನಕೆ ಹೋದ ಹೊಲಬಳವಡದ . . . ಶಿವನನು ಕಂಡನಬುಜಭವ (ಕುವ್ಯಾಕ. ೬-೧೭).

[ಸಂ.]

ವಾಚ್ಯಾರ್ಥ (ನಾ). ಶಬ್ದವನ್ನು ಕೇಳಿದ ಕೂಡಲೆ ತೋರುವ ಅರ್ಥ ; ನೇರವಾಗಿ ತಿಳಿಯುವ ಅರ್ಥ : ಪದಗಳಿಗೆ ವಾಚ್ಯಾರ್ಥ ಲಕ್ಷ್ಯಾರ್ಥಮೆಂದರ್ಥದ್ವಯಮಿಪ್ಪುದು (ವಿವೇಕ. ೪೪); ಒಂದು ಶಬ್ದವನ್ನು ಕೇಳಿದ ಕೂಡಲೇ ತಟ್ಟನೆ ಮನಸ್ಸಿಗೆ ಹೊಳೆಯುವ ಅದರ ಸುಪ್ರಸಿದ್ಧವಾದ ಅರ್ಥವು ಮುಖ್ಯಾರ್ಥ ಅಥವಾ ವಾಚ್ಯಾರ್ಥವೆನ್ನಿಸುತ್ತದೆ (ಕೃಪಿಡಿ. ೧೭೬). [ಸಂ.]

ವಾಜ$_1$ (ನಾ). ೧. ಶಿಲ್ಪಿ ; ಕುಶಲಕರ್ಮಿ : (ಚ). ೨. ಅಕ್ಕಸಾಲಿಗ ; ಚಿನಿವಾರ : ವಾಜನ ಕೇರಿಯಲ್ಲಿ ಸೂಜಿಯ ಮಾರುವ ಸೋಜಿಗದ ಹೆಣ್ಣೆ (ಕರಿಕ. ೫೫-೧೦); ಆವೇಶನಂ, ಶಿಲ್ಪಶಾಲಾ — ೨ ಅಕ್ಕಸಾಲಿಗರ ಕಾರ್ಖಾನೆ, ಪಟ್ಟಡಿಮನೆ, ವಾಜರ ಮನೆ (ಸಿದ್ಧಾಂತಿ. ೧೦೦). 'ಓಜ$_1$' ಪರಾ. ೩. ಬಡಗಿ : ಇದನ್ನು ಮಾಡುವವ ಹಾಗೂ ಇದರ ಯೋಗಕ್ಷೇಮ ನೋಡಿಕೊಳ್ಳುವವ ವಾಜರವನು (ಚೋರಿದೇ. ೨೫). [< ಒವಜ಼ು]

**ವಾಜ₂** (ನಾ). ೧. ಪಕ್ಷಿಯ ಗರಿ, — ರೆಕ್ಕೆ : "ಪತ್ರ ತನೂರುಹ ವಾಜ ಪತತ್ರಚ್ಛದ ಪಿಂಛ ಪಕ್ಷನಾಮಂ ಗಱಿ" (ವಸ್ತುಕೋ. ೪೧-೧೦). ೨. ಬಾಣದ ಗರಿ : "ಬಾಣದ ಗಱಿ ಪತ್ರಪಾಳಿ ವಾಜಮೆನಿಕ್ಕುಂ" (ವಸ್ತುಕೋ. ೮೫-೧೯). ೩. ಯುದ್ಧ ; ಕದನ. ೪. ತುಪ್ಪ. ೫. (ಅನ್ನ, ಮೇಲೋಗರ ಮುಂತಾದ) ಆಹಾರಪದಾರ್ಥ. ೬. ಯಜ್ಞ ; ಯಾಗ. ೭. ಯಜ್ಞದ ಕಡೆಯ ಮಂತ್ರ. ೮. ಶಕ್ತಿ ; ಬಲ ; ಕಸುವು : ಲಿಂಗವನೊಂದು ಶಿಶುಗೆ ಗುರು ಧರಿಸೆ ವಾಜದೆ ಪಿಡಿಯಲು (ವೀಶೈಪು. ೮-೧-೩೫). ೯. ವೇಗ ; ರಭಸ. ೧೦. ಕುದುರೆಯ ನಡಗೆಗಳಲ್ಲಿ ಒಂದು ಬಗೆ : "ರಂಹಃ, ತರಃ . . . ಜವಃ, ವಾಜಃ — ಈ ೮ ಕುದಿರೆಯ ವೇಗಂ" (ಹಲಾಯು. ೬೩-೨೮೯). ೧೧. ಒಂದು ಬಗೆಯ ಮರ : "ತರುಭೇದಂ ಘೃತ ಶಾಕಮಶ್ವಗತಿಯುಂ ತೂರ್ಣಂ ಮಖಾಂತ್ಯಂ ಛದಂ ನಿರುತಂ ವಾಜ [ಪಾಠಾಂ. ಜ]ಯೆನಿಕ್ಕು" (ನಾನಾರ. ೧೨೫). [ಸಂ.]

**ವಾಜನಿಕ** (ಗು). ಯಜ್ಞಕ್ಕೆ ಸಂಬಂಧಿಸಿದ ; ಯಾಗಕ್ಕೆ ಸಂಬಂಧಪಟ್ಟ (?) : ಭೀಮ ಫಲುಗುಣರು ಮನದೊಳಗೆ ಕೌರವನ ಕರುಳನು ತನಿರಕುತದಲಿ ಕುದಿಸಿದರು ವಾಜನಿಕರ್ಮಕ್ರಿಯೆಗೆ [ಪಾಠಾಂ. ನಿಜಜನಿತಕರ್ಮಕ್ರಮವ, ವಾಚನಿತಕರ್ಮಕ್ರಿಯೆ]ಗೆ ನೆನೆವುದನಱಿದನಾ ಭೂಪ (ಕುವ್ಯಾಸ. ೧೪-೭೫). [ಸಂ.]

**ವಾಜಪೇಯ** (ನಾ). ಒಂದು ಬಗೆಯ ಯಜ್ಞ : ಅಗ್ನಿಷ್ಟೋಮ . . . ವಾಜಪೇಯ ಪೌಂಡರೀಕಾದಿ ಮಹಾಕ್ರತುಗಳಂ (ವಿವೇಕ. ೧೩೪); ನೂಱಶ್ವಮೇಧಂಗಳನನಿತೆ ವಾಜಪೇಯಂಗಳನೆಸಗಿ (ಅದ್ಭುತ. ೭-೧೭). [ಸಂ.]

**ವಾಜಬಿ₁**, ವಾಜಮಿ, ವಾಜವಿ, ವಾಜಿಬಿ, ವಾಜಿಮಿ, ವಾಜ್ಮಿ (ಗು). ೧. ತಕ್ಕ ; ಅರ್ಹವಾದ ; ಯೋಗ್ಯವಾದ : ಈ ಅಮರಸೂಳ್ಳದ ಮಾತನ್ನು ವಾಜಬಿ ದರಿಯಾಪ್ತು ಮಾಡುವ ಬಗ್ಗೆ, ಮಲೆವಾರಿ ಕಮಿಷಾನ್‌ಸಾಹೇಬರು ಕೇಪ್ಟನ್ ಮಾವಿನಿಸಾಹೇಬರವರನ್ನು . . . ಕಳುಹಿಸಿಕೊಟ್ಟದ್ದರಿಂದ (ರಾಜೇಂದ್ರ. ೧೧೪); ಬಾಕಿ ನಿಂತದ್ದರಲ್ಲಿ ವಾಜಬಿ ಅಳತೆ ಮಾಡಿಸಿ ಸಮವಾಗಿ ಎರಡು ರಾಶಿ ಮಾಡಿಸಿ (ಮಹಾವಂ. II, ೬೪). ೨. ವಾಡಿಕೆಯಾಗಿರುವ ; ರೂಢಿಯಲ್ಲಿರುವ : ಕುಲ್ಲು ಆದ ದವಸಕ್ಕೆ ವಾಜಬಿ ಆಯ ವಗೈರೆ ಹೋಗಲಾಗಿ (ಮಹಾವಂ. II, ೬೪). (ನಾ). ೩. ಸಮಂಜಸವಾದುದು ; ಯೋಗ್ಯವಾದುದು ; ತಕ್ಕುದು : ಕಾಲುಪಾಲು ಹೊಲ ಯಿ ಕಾಜಿಗೆ ಸಲುವುದು ವಾಜಬಿಯಾಗಿಯಿದ್ದಲ್ಲಿ ಯಿಾಗಲೂ ಯಿವಗೆ ಬಿಡಿಸಿ ಕೊಡುವುದು (ಎಕ. VII (S), ಚನ್ನಗಿ. ೮೫-೨೭; 1821). ೪. ಕಾನೂನುಬದ್ಧವಾದುದು : ಯಿ ವಿಷಯವಾಗಿ ತಕ್ಕೆಬಕ್ಕೆಗಳ ಮಾಡಿದಲ್ಲಿ ನೀವು ವಾಜಬಿಯಿದ್ದ ಮೇರೆಗೆ ಚಂನ್ನಾಗಿ ದರ್ಯಾಪ್ತು ಮಾಡಿ ಸಾಬಕ್ಕು ಮಾಮುಲ್ಲು ಪ್ರಕಾರಕ್ಕೆ ನಡೆದುಕೊಳುವ ಹಾಗೆ . . . ಜೋರ ತಾಕಿಯಿತು ಮಾಡುವದು (ಮೈಆರಿ. ೧೯೩೦, ೪೩-೩೧; 1812). **ವಾಜಮಿ** : ೧. ನಾಕ ಮಂದಿ ಏನ ಹೇಳತಾರ ವಾಜಮಿ ಧಾರಣೆಗೆ ಕೊಡತೇವೆ (ಅನ್ನ. ೧೦೩); ಆಚಾರೆಪ್ಪ ಹೇಳೂದೆಲ್ಲ ವಾಜಮಿ ಮಾತು (ಗ್ರಾಮಾಯ. ೪೮). ೩. ಅವಳ ಮೊದಲ ಬಾಣಂತಿತನ ತೌರಿನಲ್ಲಿ ಆಗುವದು, ರೂಢಿಯಂತೆ, ಸಂಪ್ರದಾಯದಂತೆ ವಾಜಮಿ (ದಿಅಹ. I, ೧೯). **ವಾಜವಿ** : ೧. ವಾಜವೀ ಮಾತು. ಇದೇನು ಯಾರೋ ಒಳಗೆ ಬರುತ್ತಿರುವ ಹಾಗಿದೆ (ಶಿವಪ. ೭೦). **ವಾಜಿಬಿ** : ೧. ಸ್ವಾಮಿಗಳವರಿಗೂ ಇವರ ಪರಿವಾರಕ್ಕು ಸಹಾ ವಾಜಿಬಿ ಖರೀದಿಗೆ ಬೇಕಾದ ಸಾಮಾನು ಕೊಡಿಸಿಕೊಟ್ಟು (ಗುರುಪ. ೧೦). **ವಾಜಮಿ** : ೧. "ವಾಜಿಮಿ = ಯೋಗ್ಯ" (ಜಾನಕೋ. ೪೪). ೩. ವಾಜಿಮಿಯಲ್ಲದ ಒಂದೂ ಮಾತನ್ನು ನಾನು ಅನ್ನುವವನಲ್ಲ (ಮರಮ. ೧೪೯). **ವಾಜ್ಮಿ** : ೩. ವಾಜ್ಮಿ ಹೌದಲ್ಲೊ ನಾ ಅಂಬೋದು? (ಮಿಂಚುಹು. ೭); ನಿನಗ ಸಿಟ್ಟು ಬರೋದು ವಾಜ್ಮಿ, ನಾಚಿಕೆ ಆಗೋದೂ ವಾಜ್ಮಿ (ಪುರುಷ. ೧೪೩).

[<— ಅರ. ಹಿಂ. ವಾಜಿಬ್, ವಾಜಿಬೀ./ ಮರಾ. ವಾಜಬೀ, ವಾಜಬ್, ವಾಜವೀ, ವಾಜಿಬ್, ವಾಜಿಬೀ, ವಾಜೀಬ್, ವಾಜೀಬಿ./ ತುಳು. ವಾಜಬಿ, ವಾಜ್ಮಿ]

**ವಾಜಬಿ₂** (ಅ). ೧. ಸರಿಯಾಗಿ ; ಸಮಂಜಸವಾಗಿ : ಕಾಲು ಪಾಲು, ಹೊಲಾ ಬಿಟ್ಟುಕೊಡದೆ ಯಿರುವದಕ್ಕೆ ಕಾರಣವೇನು ಸ್ಥಳದಲ್ಲಿ ವಾಜಬಿ ವಿಚಾರ್‍ಸಿ . . . ಕೊಡುವುದು (ಎಕ. VIII (S), ಚನ್ನಗಿ. ೮೫-೯೨; 1891). ೨. ವಾಡಿಕೆಯಾಗಿ ; ರೂಢಿಯಾಗಿ : ಮಾರ್ಗದಲ್ಲಿ ಮಾರ್‍ಕೊಂಡ ಗೋಣಿಗೆ ವಾಜಬಿ ಬರತಕ ಸುಂಕ್ಯಾ ತೆಗೆದುಕೊಳುವದು (ಮೈಆರಿ. ೧೯೩೪, ೨೦-೮; 1816). [< ವಾಜಬಿ₁]

**ವಾಜಮಿ** 'ವಾಜಬಿ₁' ನೋ.

**ವಾಜವಿ** 'ವಾಜಬಿ₁' ನೋ.

**ವಾಜಸನಿ** (ನಾ). ವಾಜಸನೇಯಿಸಂಹಿತೆಯಿಂದ ವರ್ಣಿಸಲ್ಪಡುವವನು ; ವಿಷ್ಣು : ವಾಜಸನೇಯಾದಿ ಸಕಲೋಪನಿಷತ್ಪ್ರತಿಪಾದ್ಯನಾಗಿರ್ಪುದರಿಂದ ವಾಜಸನಿಯೆಂದು ಪೆಸರ್ (ಭಾರತಂಉ. ೪೩). [ಸಂ. ವಾಜಸನಿ]

**ವಾಜಸನೇಯ** (ನಾ). ೧. ವಾಜಸನೇಯಿಸಂಹಿತೆ ಅಥವಾ ಶುಕ್ಲ ಯಜುರ್ವೇದವನ್ನು ರಚಿಸಿದ ಋಷಿ ; ಯಾಜ್ಞವಲ್ಕ್ಯ. ೨. ಉಪನಿಷತ್ತುಗಳಲ್ಲಿ ಒಂದು ; ವಾಜಸನೇಯಿಸಂಹಿತೆ : ಶ್ರೀರುದ್ರ, ಬೃಹದಾರಣ್ಯಕ . . . ವಾಜಸನೇಯ[ಪಾಠಾಂ. ವಾಜಸನಯ, ವಾಜಸನೀಯ] . . . ಮುಂಡಕವೆಂಬಿವು ಮೊದಲಾದವೇ ಉಪನಿಷತ್ತುಗಳು (ವಿವೇಕ. ೫). [ಸಂ.]

**ವಾಜಿ** (ಗು). ೧. ರಭಸವಾದ ; ವೇಗವುಳ್ಳ. ೨. ಕಸುವುಳ್ಳ ; ಸಮರ್ಥವಾದ. ೩. ರೆಕ್ಕೆಗಳುಳ್ಳ. (ನಾ). ೪. ರಭಸ ; ವೇಗ : ಮೊತ್ತದ ತುರಗಂಗಳು ಬೆಂದೇಳೆ ರಥತತಿ ವಾಜಿಯೊಳ್ಕೈತರೆ [ಪಾಠಾಂ. ನಾಲ್ದೆಸೆಗೆಯ್ತರೆ] ಕವಿದು (ಹಟಕಾ. ೧೨-೩೦ ರಗಳೆ); ೫. ಕುದುರೆ ; ಅಶ್ವ : ಸೇನಾಪತಿ ಸ್ಥಪತಿ ಗೃಹಪತಿ ಪುರೋಹಿತ ಗಜ ವಾಜಿ ಸ್ತ್ರೀರತ್ನಗಳೆಂಬೇೞುಂ ಜೀವರತ್ನಂಗಳುಮಂ . . . ಅರ್ಚಿಸಿ (ಚಂದ್ರಪು. ೬-೧೧೧ ವ); ಪವನಜವಮಂ ಮುಂಚಿ ವಾಜಿಗಳೋಟಂಗೊಂಡುವು (ರಾಮಾಶ್ವ. ೩೦-೨). ೬. ಬಾಣ ; ಶರ : "ವಾಜೀ— ಕುದುರೆ, ಬಾಣ, ಪಕ್ಷಿ" (ಸಿದ್ಧಾಂತಿ. ೪೦೦). ೭. ರೆಕ್ಕೆಗಳುಳ್ಳುದು ; ಪಕ್ಷಿ ; ಹಕ್ಕಿ : ಸಂಚರಿಪ ಸಕಲ ಮೃಗರಾಜಿಗಳ ವಾಜಿಗಳ ತಡಿವಿಡಿದ ವೃಕ್ಷಂಗಳ . . . ಕಂಡಳು (ಚಿಬಪು. ೩೪-೨೦). ೮. ಎಲುಬು. ೯. ಶತ್ರು : "ತುರಗ ವಿಯಚ್ಚರಾಸ್ಥಿ ರಿಪುಮಾರ್ಗಣಮೆಂಬಿವು ವಾಜಿಯಕ್ಕುಂ" (ನಾನಾರ. ೬೬). ೧೦. ಒಂದು ಬಗೆಯ ಸಸ್ಯ : 'ವಾಜಿದಂತಕ' ಪರಾ. ೧೧. ದುಂಬಿ. ೧೨. ಮೇಲೋಗರ. ೧೩. ಯಜ್ಞ. ೧೪. ರೆಕ್ಕೆ ; ಗರಿ : "ತರುವಿನೊಳುಂ ತುಂಬಿಯೊಳುಂ ತುರಗದೊಳುಂ ಶಾಬಿದೊಳಗೆ ಯಜ್ಞದಿ ಗರಿಯೊಳ್ ಸರಿಗಾರು ವಾಜಿ ಶಬ್ದಂ" (ನಾನಾಕಂ. ೧೪೭). [ಸಂ. ವಾಜಿನ್]

**ವಾಜಿಕರಿ** (ನಾ). ಒಂದು ಬಗೆಯ ಸಸ್ಯ ; ವಾಜಿಗಂಧ : "ವಾಜಿಕರೀ, ವಾಜಿಗಂಧ — ಈಯೆರಡುಂ ಅಂಗುರು" (ಓಷಧಿ. ೧೫೧). [?]

**ವಾಜಿಖಿರ** (ನಾ). ಒಂದು ಬಗೆಯ ಸಸ್ಯ : "ವಾಜಿಖಿರಾ — ಕರಿಯ ಗಿರಿಕರ್ಣಿಕೆ" (ಓಷಧಿ. ೧೫೧). [?]

**ವಾಜಿಗಂಧ** (ನಾ). ಒಂದು ಬಗೆಯ ಸಸ್ಯ ; ಅಂಗುರದ ಗಿಡ ; ಅಶ್ವಗಂಧ : "ವಾಜಿಕರೀ, ವಾಜಿಗಂಧ — ಈ ಯೆರಡುಂ ಅಂಗುರು" (ಓಷಧಿ. ೧೫೧). [ಸಂ. ವಾಜಿಗಂಧಾ]

**ವಾಜಿತರ** (ನಾ). ಒಂದು ಬಗೆಯ ಕತ್ತೆ ; ಹೇಸರಗತ್ತೆ : "ಚಕ್ರಿಪತಿ ವಾಜಿತರ ಮೆನಲು ಪೇಸರಗತ್ತೆಯಕ್ಕು" (ಮಂಗರಾ. ೫೫-೯). 'ಅಶ್ವತರ' ಪರಾ. [ಸಂ.]

**ವಾಜಿದಂತಕ** (ನಾ). ಒಂದು ಬಗೆಯ ಸಸ್ಯ ; ಆಡುಸೋಗೆ : "ವೈದ್ಯಮಾತಾ . . . ವಾಜಿದಂತಕಃ — ೮ ಅಡ್ಡಸರದ ಗಿಡ, ಆಡುಸೋಗೇಗಿಡದ ಹೆಸರು" (ಸಿದ್ಧಾಂತಿ. ೧೩೫). [ಸಂ.]

**ವಾಜಿದಂತಿಕೆ** (ನಾ). ಒಂದು ಬಗೆಯ ಸಸ್ಯ : "ವಾಜಿದಂತಿಕಾ — ಕುರುಟಗೆ" (ಓಷಧಿ. ೧೫೧). [ಸಂ. ವಾಜಿದಂತಿಕಾ]

**ವಾಜಿನಾಮ** (ನಾ). ಒಂದು ಬಗೆಯ ಸಸ್ಯ ; ಕಪಿಪಡವಲಕಾಯಿ : "ವಾಜಿನಾಮ — ಕಪಿಪಡಲ" (ಓಷಧಿ. ೧೫೧). [ಸಂ.ವಾಜಿನಾಮನ್]

**ವಾಜಿನಿ** (ನಾ). ೧. ಹೆಣ್ಣುಕುದುರೆ : "ಅರ್ವತೀ . . . ವಾಮಿ, ಪ್ರಸೂತಾ, ವಾಜಿನೀ — ಈ ೫ ಪೋಟಿಗೆ" (ಹಲಾಯು. ೬೨-೨೮೬). ೨. = ವಾಜಿಗಂಧ. [ಸಂ. ವಾಜಿನೀ]

**ವಾಜಿಪ** (ನಾ). ಕುದುರೆಗಳನ್ನು ನೋಡಿಕೊಳ್ಳುವವನು ; ಕಾಸ್ತಾರ: ಪೋದುದು ಬೊಮ್ಮಂಗೆ ಶಿರಸ್ಸು ಭಾರ್ಗವನು ಕಣ್ಣಾಣಂ ನಳಂ ವಾಜಿಪಂ . . . ವಿಧಿಯುಂ ಮಿಾಱುವನಾವನ್ನೆ (ಸೋಮೇಶ. ೨೭). [ಸಂ.]

**ವಾಜಿಬಳ** (ನಾ). ಚತುರಂಗಬಲದಲ್ಲಿ ಒಂದು ; ಕುದುರೆಯ ಪಡೆ, — ಸೈನ್ಯ : ಬಳವದರಾತಿಸೇನೆ ಕಿಡೆ ವಾಜಿಬಳಂ ಪೆಜಪಿಂಗೆ (ಎಕ. VIII, ಸೊರಬ. ೧೮೪-೭; 1032). [ಸಂ. ವಾಜಿಬಲ]

**ವಾಜಿಬಿ** 'ವಾಜಬಿ₁' ನೋ.

**ವಾಜಿಭೋಜನ** (ನಾ). ಕುದುರೆಯ ಆಹಾರವಾದ ಹುರುಳಿ, ಕಡಲೆ ಮುಂತಾದ ಧಾನ್ಯ : "ವಾಜಿಭೋಜನಃ — ಕಡಲೆ, ಹೆಸರು, ಹುರುಳಿ" (ಓಷಧಿ. ೧೫೧). [ಸಂ.]

**ವಾಜಿಮಿ** 'ವಾಜಬಿ₁' ನೋ.

**ವಾಜಿಮೇಧ** (ನಾ). (ಚಕ್ರವರ್ತಿಸಾಮಂತರು ದಿಗ್ವಿಜಯದ ನಂತರದಲ್ಲಿ) ಕುದುರೆಯನ್ನು ಬಲಿಯನ್ನಾಗಿ ಅರ್ಪಿಸಿ ಮಾಡುವ ಯಾಗ ; ಅಶ್ವಮೇಧ : ರಾಘವಂ ಪಿಂತೆ ರಾವಣನಂ ಮಥಿಸಿ ವಾಜಿಮೇಧದೊಳ್ಸಾರ್ವರಂ ತಣಿಪಿದಂ (ಜೈಮಿಭಾ. ೨-೨೫). [ಸಂ.]

**ವಾಜಿಮೇಧಗೆಯ್** (ಕ್ರಿ). ಅಶ್ವಮೇಧಯಾಗವನ್ನು ಮಾಡು : ಕುಲಿಶಧರನ ಗೆದ್ದು ಕುವಲಯದೊಳು ಭುಜಬಲವಿಕ್ರಮದಲಿ ಸೌಭಾಗ್ಯದುನ್ನತಿಯಿಂದ ಬಲಿ ವಾಜಿಮೇಧಗೆಯ್ಯಲು (ಪುರಂದ. ಧಾ. ೧-೧೩೩-೫). [ವಾಜಿಮೇಧ + ಕೆಯ್₁]

**ವಾಜಿರಾಜಿ** (ನಾ). ೧. ಕುದುರೆಗಳ ಗುಂಪು. ೨. ಪಕ್ಷಿಗಳ ಸಮೂಹ. ೧,೨ : ನಾಗಪೂಗಂಗಳಂ ವಾಜಿರಾಜಿಗಳೊಳೆಂಬಾಗಿರ್ದ ಸ್ಯಂದನೋದ್ಯ್ರಮಗಳಿಂದೆ . . . ಪುಂಡರೀಕಾಳಿಯಿಂ ಶರಕುಲದೊಳಾ ಗಿರೀಂದ್ರನ ಮಹಾಸೈನ್ಯಮೆನೆ ಬಳಸಿದ ಕಾನನಂ ಕಣ್ಗೆಸೆದುದು (ಚಿಬಪು. ೫೩-೧೫). [ಸಂ.]

**ವಾಜಿವದನ** (ನಾ). ಕುದುರೆಯ ಮುಖವನ್ನು ಧರಿಸಿದ ವಿಷ್ಣುವಿನ ಒಂದು ರೂಪ ; ಹಯವದನ : ವಾಜಿವದನ ಭಾರ್ಗವ ಕೃಷ್ಣದೇವರ ನೆನೆದು ಮೂಜಗದೊಳು ಚೇತನ ಜಡವ್ಯಾಪ್ತಿಯ ತಿಳಿಯೆ . . . ವಾಜಪೇಯಯಜ್ಞಫಲ ಬರುವದು ಜನಕೆ (ವಿಠಾಕೃ. ೬೧-೨೪). [ಸಂ.]

**ವಾಜಿವಲ್ಲಭ** (ನಾ). ಒಂದು ಬಗೆಯ ಸಸ್ಯ ; ನೆಲಗುಂಬಳ : "ವಾಜಿವಲ್ಲಭ - ನೆಲಗುಂಬಳ" (ಓಷಧಿ. ೧೫೨). [?]

**ವಾಜಿಶಾಲಹರ** (ನಾ). ಯಜ್ಞಶಾಲೆಯನ್ನು ಧ್ವಂಸಮಾಡಿದವನು ; ಶಿವ : ಚಕ್ರಾ[illegible]ವಾಹನಾನನ ವಾಜಿಶಾಲಹರ ಶುಕ್ರಶಿಷ್ಯಾಧಿಪಶಿರೋಮಾಲ . . . ಸಂಗಮೇಶ ರಕ್ಷಿಪುದೆನ್ನನು (ಪ್ರೌಢರಾ. ೮-೧). [ಸಂ.]

**ವಾಜಿಶಾಲೆ** (ನಾ). ಕುದುರೆಯ ಲಾಯ ; ಅಶ್ವಶಾಲೆ : "ವಾಜಿಶಾಲಾ, ಮಂದುರಾ — ಈ ೨ ಕುದಿರೆಯ ಮಂದಿ(ದು)ರಂ" (ಹಲಾಯು. ೫೦-೧೪೧). [ಸಂ. ವಾಜಿಶಾಲಾ]

**ವಾಜೀಕರ** (ಗು). ಕಾಮೋದ್ದೀಪನಗೊಳಿಸುವ ; ಸಂಭೋಗದ ಅಭಿಲಾಷೆಯನ್ನು ತೀವ್ರಗೊಳಿಸುವ : ವಾಜೀಕರ ಔಷಧಯೋಗಗಳನ್ನು ಸೇವಿಸಲು ಇಚ್ಛಿಸುವ ಪುರುಷನು ಮೊದಲು ಶರೀರವನ್ನು ವಿರೇಚನಾದಿಗಳಿಂದ ಶೋಧಿಸಿಕೊಂಡು . . . ವಾಜೀಕರಯೋಗಗಳನ್ನು ಸೇವಿಸಬೇಕು (ವೈದ್ಯಸಾ. II, ೨೪೭). [ಸಂ.]

**ವಾಜೀಕರಣ** (ನಾ). ೧. ಕಾಮೋದ್ದೀಪನೆ ; ಭೋಗಾಭಿಲಾಷೆ : ವಿಧವಿಧವಾದ ಪುಷ್ಟಿಕರವಾದ ಆಹಾರಗಳ ಭೋಜನವ ಮಾಡುವುದರಿಂದಲೂ . . . ಮಾನವರಿಗೆ ವಾಜೀಕರಣವಹುದು (ವೈದ್ಯಸಾ. II, ೨೪೭). ೨. ಕಾಮೋದ್ದೀಪನಸಾಧನೆಗಳಿಂದ ಸಂಭೋಗದ ಅಭಿಲಾಷೆಯನ್ನು ತೀವ್ರಗೊಳಿಸುವುದು. ೩. = ವಾಜೀಕರಣ ತಂತ್ರ : ಮನುಷ್ಯ . . . ಸತ್ಸಂತಾನವನ್ನು ಪಡೆಯುವುದಕ್ಕೋಸ್ಕರ ವಾಜೀಕರಣವೆಂಬ ವಿಧಿಯುಂಟು (ಕವಿಕೋ. I, ೮೫೦). [ಸಂ.]

**ವಾಜೀಕರಣತಂತ್ರ** (ನಾ). [ವೈದ್ಯಶಾ] ಆಯುರ್ವೇದದ ಒಂದು ಅಂಗ; ಕಾಮೋದ್ದೀಪನವನ್ನು ಸಾಧಿಸುವ ಪ್ರಯೋಗಗಳನ್ನು ತಿಳಿಸುವ ಶಾಸ್ತ್ರೀಯ ವಾದ ಕ್ರಮ ; ವೀರ್ಯವೃದ್ಧಿ ಮಾಡುವ ಸಾಧನಗಳನ್ನು ತಿಳಿಸುವ ತಂತ್ರ, — ಶಾಸ್ತ್ರ : ಆಯುರ್ವೇದವನ್ನು ಶಲ್ಯ, ಶಾಲಾಕ್ಯ, ಕಾಯಚಿಕಿತ್ಸಾ, ಕೌಮಾರಭೃತ್ಯ, ಅಗದತಂತ್ರ (ವಿಷಚಿಕಿತ್ಸಾ), ರಸಾಯನತಂತ್ರ ಮತ್ತು ವಾಜೀಕರಣ ತಂತ್ರಗಳೆಂದು ಎಂಟು ವಿಧವಾಗಿ ಮಾಡಿದ್ದಾರೆ (ಕವಿಕೋ. I, ೮೫೦). [ಸಂ.]

**ವಾಜೀಕರದ್ರವ್ಯ** (ನಾ). [ವೈದ್ಯಶಾ] ಕಾಮೋದ್ದೀಪನವನ್ನುಂಟುಮಾಡುವ ವಸ್ತು : ಯಾವ ದ್ರವ್ಯವು ತನ್ನ ಗುಣಗಳ ಪ್ರಭಾವದಿಂದ ತನ್ನನ್ನು ಸೇವಿಸುವ ಪುರುಷನನ್ನು ಸಂಭೋಗದಲ್ಲಿ ಕುದುರೆಯಂತೆ ಸಮರ್ಥನನ್ನಾಗಿ ಮಾಡುವದೋ ಆ ದ್ರವ್ಯವನ್ನು ವಾಜೀಕರದ್ರವ್ಯವೆಂದು ವೈದ್ಯಶ್ರೇಷ್ಠರಾದ ಋಷಿಗಳು ಹೇಳಿರುವರು (ವೈದ್ಯಸಾ. II, ೨೪೬). [ಸಂ.]

**ವಾಜೀಶ** (ನಾ). ೧. ಕುದುರೆಗಳಲ್ಲಿ ಉತ್ತಮವಾದುದು ; ಶ್ರೇಷ್ಠವಾದ ಕುದುರೆ. ೨. ಪಕ್ಷಿಗಳ ಒಡೆಯ ; ಗರುಡ. ೧, ೨ : ಸ್ವಸ್ತಿಶ್ರೀಪ್ರಿಯನಿರ್ಜ್ಜಿನೋಲ್ಜ್ಜಿತಯಶಂ ವಾಜೀಶಯಾನೋತ್ಸವಂ . . . ಎಸೆದಂ ಶ್ರೀವಿಷ್ಣುಸಾಮ್ರಾಜ್ಯಯಂ (ಎಕ. V, ಬೇಲೂರು. ೧೧೪-೩; 1173). [ಸಂ.]

**ವಾಜುಪೇಯಾಜಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ನೆಕುಣ್ಣರಾ ವಾಜುಪೇಯಾಜಿಯಾ ಮಗನ್ ಜನ್ನನ್ನೊಟ್ಟದು (ಎಕ. VII,ಶಿಕಾ. ೫೫-೫೯; ಪು. 890 ?). 'ಸೋಮಯಾಜಿ' ಪರಾ. [< ಸಂ. ವಾಜಪೇಯಯಾಜಿನ್]

**ವಾಜ್ಯಿ** 'ವಾಜಬಿ₁' ನೋ.

**ವಾಟ₁** (ನಾ). (ನೆಲ, ಭಾವಣೆ ಮುಂತಾದುವುಗಳ) ಇಳಿಜಾರು ; ಇಳುಕಲು: ಪ್ರವಣಃ — ಕ್ರಮದಿಂದ ವಾಟವಾಗಿ ಇಳಿಯತಕ್ಕ ನೆಲ (ಸಿದ್ಧಾಂತಿ. ೩೮೮). [ದೇ. II ತಮಿ. ಮಲ. ವಾಟ್ಟಮ್; ತೆಲು. ವಾಟಮು]

**ವಾಟ₂** (ನಾ). ೧. ಕಟ್ಟುಡದ ಸುತ್ತಲೂ ಇರುವ ಬೇಲಿ, — ಆವರಣ ; ಪೌಳಿ. ೨. ಆವರಣವುಳ್ಳ ಪ್ರದೇಶ ; ಅಂಗಳ : ಗೋಪುರಂಗಳನುಳ್ಳ ವಾಟಂಗಳಗಣಿತಂ [ಪಾಠಾಂ. ಗೋಪುರಗಳುಳ್ಳ ಕವಾಟಂಗಳಗಣಿತಂ] ಗೃಹಮಸಂಖ್ಯಾತಂಗಳು (ಚಿಬಪು. ೨೪೭). ೩. ಊರು ಅಥವಾ ಹಳ್ಳಿಯನ್ನು ಸುತ್ತುಗಟ್ಟಿರುವ ಆವರಣ, — ಪ್ರಾಕಾರ, — ಗೋಡೆ ಇತ್ಯಾದಿ : (ಓ). ೪. ಮಾರ್ಗ ; ಹಾದಿ : ಸ್ವಸ್ತ್ಯನವರ ತಪರಮಕಲ್ಯಾ[ಣಾಭ್ಯು]ದಯ ಸಹಸ್ರಫಳಭೋಗಭಾಗಿನಿ ವಾಟ[ಕ್ಕೆ] ಮದದ್ವಿರದಗಾಮಿನಿ ರಾಯಜಗದಲ[ಮನೋ]ಜರತಿ (ಕಇಆ. ೯೧-೧-೬೭; 1082); ಮುಂದೆಸೆದುದು ಗಣಿಕಾಚಯವಾಟ ಜತಿಗಳೆರ್ದೆಗಾಟ ವಿಟರ ಕಣ್ಣಾಮದೂಟ (ಉದ್ಭದೇ. ೪-೧೫). ೫ ನೆಲೆ ; ಆಗರ ; ವಾಸಸ್ಥಾನ : ಕರಿತುರಗದೇರಾಟ ಶರಚಾಪಗಳ ಕೂಟ ಸರಿದೂರಿಗಳೊಡನಾಟ ಸಕಲಕಲೆಗಳ ವಾಟ . . . ಭಾವಜ್ಞರುಗಳ ದೊರೆಯಾತ (ವೆಂಕಾರಾ. ೨-೧-೨೭); ನಾರಿಯರ್ ತಮ್ಮ ತಮ್ಮ ವಾಟ ಹೊಂದಲು (ಪ್ರಸಭಾ. ೬೫-೯). ೬. ಮಠ ; ಆಶ್ರಮ : ಅವರ ಸಾಮಾಜಿಕಜೀವನವನ್ನು ಕಾಣಬೇಕಾದರೆ ಅವರ "ವಾಟ"ಗಳಿಗೆ ಹೋಗಬೇಕು. ವಾಟಗಳೆಂದರೆ ಬುದ್ಧಸನ್ಯಾಸಿಯರಿರುವ ಮಠಗಳು (ಬಾಲಪ್ರ. I, ೩೮೪). ೭. ಗ್ರಾಮ ; ಹಳ್ಳಿ : ಪಟ್ಟಿ ಮತ್ತು ವಾಟೀ, ವಾಟಗಳಿಗೆ ದನಗಾರರ ಹಟ್ಟಿ(ಗ್ರಾಮ) ಮತ್ತು ತೋಟವೆಂದು ಎರಡೂ ಅರ್ಥಗಳಿದ್ದುದು ಕೋಶಗಳಿಂದ ನಿದರ್ಶನಕ್ಕೆ ಬರುತ್ತಿದೆ (ಕರ್ನಾಪೂ. ೫). ೮. ತೋಟ ; ವನ : ಪಟ್ಟಿ ಮತ್ತು ವಾಟೀ, ವಾಟಗಳಿಗೆ ದನಗಾರರ ಹಟ್ಟಿ (ಗ್ರಾಮ) ಮತ್ತು ತೋಟವೆಂದು ಎರಡು ಅರ್ಥಗಳಿದ್ದುದು ಕೋಶಗಳಿಂದ ನಿದರ್ಶನಕ್ಕೆ ಬರುತ್ತಿದೆ (ಕರ್ನಾಪೂ. ೫). ೯. ವಟವೃಕ್ಷದಿಂದ ತಯಾರಾದುದು. ೧೦. ಒಂದು ಬಗೆಯ ಸಸ್ಯ: "ವಾಟ — ಗುಳ್ಳ, ಕಲ್ಲಂಗಡಲೆ, ಕುರುಟಿಗೆ" (ಓಷಧಿ. ೧೫೯). [ಸಂ.]

**ವಾಟಕ** (ನಾ). ತೋಟ ; ಉದ್ಯಾನ : "ವಾಟಕಮೆನೆ ಬಾಡಗಮದು" (ಚತುನಿ. ೧೧೮). [ಸಂ.]

**ವಾಟಗ** (ನಾ). ನೀರು ಕುಡಿಯುವ ಪಾತ್ರೆ ; ಲೋಟ : ನೀರು ಕುಡಿಯಬೇಕೆಂದು ಕೈಯಲ್ಲಿ ಎತ್ತಿದ ವಾಟಗ ಹಾಗೆಯೇ ಇರುತ್ತಿದ್ದಿತು (ಅಕ್ಕಾಡಿ. ೨೧); ಕಳುವೂಟ ಆದ ಮೇಲೆ ನಮ್ಮ ಕಡೆಯ ಎರಡು ಬೆಳ್ಳಿಯ ವಾಟಗಗಳು ಕಣ್ಮರೆಯಾಗಿ ಈ ಜಗಳದ ನಾಟಕ ಸಮಾಪ್ತಿಯಾದಂತಾಯಿತು (ವೈನಿ. ೨೮). [<— ಮರಾ. ವಾಟಗಾ]

**ವಾಟಣೆ** (ನಾ). ಪಾಲು ; ಹಿಸ್ಸೆ : ಇಂಥವನಿಗೆ ಅಣ್ಣ ತಮ್ಮಂದಿರ ವಾಟಣೆಯಂಥ ಪ್ರಶ್ನೆಯಲ್ಲಿ ಮಾತಾಡಗೊಡುವುದಿಲ್ಲ (ಮನಟಿ. ೫); ನಾವು ಅಣ್ಣ ತಮ್ಮಂದಿರು ಇನ್ನೂ ವಾಟಣೆ ಮಾಡಿಕೊಂಡಿರುವದಿಲ್ಲ (ಗಂಮಾಯಿ. ೨೧೦). [<— ಮರಾ. ವಾಟಣೀ, ವಾಂಟಣೀ]

**ವಾಟಾಘಾಟ**, ವಾಟಾಘಾಟಿ (ನಾ). ವಾದ ವಿವಾದ ; ಚರ್ಚೆ : ಅಕ್ಕ ಅತ್ತೆಯ ಮನೆಗೆ (ಪಾಪ, ಅತ್ತೆಯಿಲ್ಲದ ಅತ್ತೆಯ ಮನೆ) ಹೋಗುವ . . . ವಾಟಾಘಾಟ ನಡೆದು . . . ಮರುದಿನ ಅಕ್ಕ ಹೊರಡುವುದೆಂದು ಗೊತ್ತಾಯಿತು (ವೈಣಿ. ೨೨೮). ವಾಟಾಘಾಟಿ : ಫಲಕಿ ಜಾತಿಯ ಗೋದಿಕಾಳು ಕೂಡಿದ್ದ ಮಾಲವನ್ನು ಅತ್ತ ಕಡೆಗೆ ಕಳಿಹಿಸಬಾರದೆಂಬದರ ಬಗ್ಗೆ ವಾಟಾಘಾಟಿಯು ನಡದಿರುತ್ತದೆಂದು ವರ್ತಮಾನಪತ್ರಗಳ ಮೇಲಿಂದ ಕೇಳಬಲ್ಲೆವು (ಮುಂಬವ್ಯಾ. ೯೭); 'ಮಗುವಿಗೆ ಹೆಸರೇನಿಡಬೇಕು?' ಎನ್ನುವ ಒಗಟು ಕುರಿತು ದೀರ್ಘಕಾಲ 'ವಾಟಾಘಾಟ'ಯಾಗಿ ಕೊನೆಗೆ . . . ನಾಮಕರಣಮಾಡಿದರು (ಹೋಚನ. ೧೧). [<— ಮರಾ. ವಾಟಘಾಟ್, ವಾಟಾಘಾಟ್]

**ವಾಟಾಘಾಟಿ** 'ವಾಟಾಘಾಟ' ನೋ.

**ವಾಟಿ** (ನಾ). ೧. ನೆಲೆ ; ಹಕ್ಕೆ : ಈಟಿಯ ಪಿಡಿಯುತ ವಾಟಿಯೊಳಿರುತಿಹ ಕೂಟದ ಮೃಗಗಳ ನೋಟದಿ ನೋಡುತ (ಹಮಚ. ೧೮-೧೩). ೨. ತೋಟ ; ವನ : ಮೆರೆವ ಷಟ್ಪದಪದ್ಮಾಕರವಾಟಿಗಳ ಮುಂದೆ ತರಳನೊರೆದ ನುಡಿಯಂತೆ (ಕರಟಾ. ೧-೭); ಆ ದೇವಾಲಯವನ್ನು ಅದರ ಪಕ್ಕದ ವಾಟಿಯನ್ನು . . . : ಶಾಲೆಗಾಗಿ ಕೊಟ್ಟರೆ ಎಂದು ಸುದ್ದಿ ಬಂದಿತು (ಸಣ್ಣಕ. ೮-೯೭). ೩. ನಿವೇಶನ. ೪. ಮನೆ ; ನಿವಾಸ. ೫. ಹಾದಿ ; ಮಾರ್ಗ : "ವಾಟೀ = ಬೀದಿಯುಂ, ತೋಟಮುಂ" (ಕಾಶಕ್ಕ. ೧೩೭). ೬. ಪದಾರ್ಥಗಳನ್ನು ಮಾರುವ ಸ್ಥಳ ; ಅಂಗಡಿ : ನನ್ನ ವಾಟಿಯಲ್ಲಿ ಕುಡಿಯುವುದಕ್ಕೆ ಬಂದವರು ನನ್ನೊಂದಿಗೆ ಮಾತನಾಡಬಾರದೆ? (ಸಣ್ಣಕ. ೮-೧೧೯). ೭. ಟೊಂಕ. [ಸಂ. ವಾಟೀ]

**ವಾಟಿಕಾರ** (ನಾ). ಅಂಗಡಿಯ ಯಜಮಾನ ; ಅಂಗಡಿಕಾರ : ಇವನು ಇತ್ತ ವಾಟಿಕಾರನೊಂದಿಗೆ ಮಾತನಾಡುತ್ತಿರುವಾಗ ಅತ್ತ ಮಾರ್ಲೊಪೀಲ್ ಕಿವಿಯಲ್ಲಿ . . . ಎಂದನು (ಸಣ್ಣಕ. ೮-೧೧೧). [ವಾಟಿ + - ಕಾರ (< - ಕಾಱ)]

**ವಾಟಿಕೆ** (ನಾ). ೧. ತೋಟ ; ಉದ್ಯಾನ. ೨. ಆವರಣ ; ಪ್ರಾಕಾರ. [ಸಂ. ವಾಟಿಕಾ]

**ವಾಟಿಸು** (ಕ್ರಿ). ಆವರಿಸು ; ಮುತ್ತು ; ಕವಿ : ಕೋಟೆ ವಾಟಿಸಿದ ಕಟ್ಟಿಲೆಯಂ ಸುತ್ತಿ ಮುತ್ತಿದ ಬೆಳ್ದಿಂಗಳೆ ಬೀಡುವಿಟ್ಟಂತೆ ಕಟ್ಟಲಿಸುವೆಲೆವಳ್ಳಿಯಂ ಬಳಸಿ ಕಟಿಯ ಪೂತ ಮಲ್ಲಿಗೆಗಳುಂ . . . ಎಸೆಯೆ (ಲೀಲಾವ. ೬-೬೦ ವ). [ವಾಟ$_2$ + - ಇಸು$_1$]

**ವಾಟಿಹುಳಿ** (ನಾ). ಒಂದು ಬಗೆಯ ಹುಳಿಯ ಹಣ್ಣು ; ಆಮಸೋಲು : ಬೇವಿನ ಕಡ್ಡಿ, ಹುಣಿಸೆಕಡ್ಡಿ, ಜೀರಿಗೆ, ವಾಟಿಹುಳಿ ಇವಂ ಸಮನಾಗಿ ಅರೆದು ಸಕ್ಕರೆ ವೆರಸಿ ಸೇವಿಸಲು ಸಕಲಪೈತ್ಯರೋಗಗಳು ಗುಣಮಕ್ಕುಂ (ಸಕವೈ. ೧೩೪). [<— ತುಳು. ವಾಟೆಪುಳಿ, ಓಂಟೆಪುಳಿ, ಓಟೆಪುಳಿ]

**ವಾಟೆ$_1$** (ನಾ). ೧. ಒಂದು ಬಗೆಯ ತೆಳ್ಳನೆಯ ಬಿದಿರು : ಮಂಟಪದ ಒಂದು ಭಾಗ, ಬಿದಿರುಗೂಟಗಳನ್ನು ನೆಟ್ಟು ವಾಟೆಯ ತಟ್ಟೆಗಳನ್ನು ಮರೆಕಟ್ಟಿದುದರಿಂದ, ನಿವಾಸ ಯೋಗ್ಯವಾದ ಕೋಣೆಯಾಗಿ ಪರಿವರ್ತಿತವಾಗಿತ್ತು (ಮಲೆಮ. ೬೭೫); ಕೆಲವು ಕಡೆಗಳಲ್ಲಿ ಗುರಗಿಬಿದಿರು, ಕೆಂಜಗಿ, ವಾಟೆ, ಕ್ಯಾದಿಗೆ . . . ಮುಂತಾದ ಗಿಡಬಳ್ಳಿ ಪೊದೆಗಳಿದ್ದವು (ಪಂಜಪಂ. ೨). ೨. ಒಂದು ಬಗೆಯ ಸಸ್ಯ : (ವೃಕ್ಷಿಗಿ. ೫೩-೧೧೮೨). [< ಓಟೆ$_1$]

**ವಾಟೆ$_2$** (ನಾ). ೧. (ಮಾವು ಮುಂತಾದ) ಹಣ್ಣಿನೊಳಗಿರುವ ಓಟೆ ; ಗೊರಟೆ : ಆ ವೃಕ್ಷಗಳು ವಾಟೆಯಿಲ್ಲದೆ ತಿರುಳುಗಳಿಂದ ತುಂಬಿರುವ ಫಲಂಗಳಂ ಧರಿಸುವವು (ಸೌಗಂಧಿ. ೪೩೭-೧೦). ೨. (ತೆಂಗಿನ) ಚಿಪ್ಪು ; ಪರಟೆ : (೬). ೩. ತೊಗಟೆ ; ಸಿಪ್ಪೆ : ಆ ವಾ[ಪಾಠಾಂ. ಪೋ]ಟೆಯೊಳಗೆಯುಟ್ಟಿನ ಹುಡಿಯ ತಡಹಿಕೊಂಡು ಗೊಂದಣದ ಸಂಭಾರಮಂ ಮೆತ್ತಿ (ಸೂಪಶಾ. ೪-೭೪); ಬಿಲ್ವಪತ್ರೆವಾಟೆಯ ರಸ . . . ಒಣಶುಂಠಿರಸದಿಂದಾದರೂ ಇವೆಲ್ಲವಂ ಸಮಭಾಗವಾಗಿ ಕೂಡಿ ಅರೆದು ಕದಡಿ ಹೊಟ್ಟೆಗೆ ತೆಗೆದುಕೊಳ್ಳಲು ವಾಂತಿ ವಿರೇಕಂ ನಿಲ್ಲುವುದು (ಸಕವೈ. ೨೬೭). [< ಓಟೆ$_2$]

**ವಾಟೆ$_3$** (ನಾ). (?) : ನಾಟ ವದನದಿ ಪೊಕ್ಕು ವಕ್ತ್ರ ಮೇಲಾಗಿ . . . ವಾಟೆ ಹರವರಿಯಾಗಲುಳಿದ ದಳ ನಿಲದೆ ಕಾಲಾಟಗೊಳಲು (ಜನಮು. ೨೮-೯). [?]

**ವಾಟೆಗಿಡ** (ನಾ). ಒಂದು ಬಗೆಯ ಹುಳಿಯ ಹಣ್ಣು ಬಿಡುವ ಸಸ್ಯ : ವಾಟೆಗಿಡ, ವಂಟೆಮರ (ವೃಕ್ಷಿಗಿ. ೧೦-೧೬೨). 'ವಾಟಿಹುಳಿ' ಪರಾ. [ವಾಟೆ$_1$ + ಗಿಡ (< ಗಿಡು)]

**ವಾಟೆಬಾಳೆ** (ನಾ). ಒಂದು ಬಗೆಯ ಬಾಳೆ ; ಕಪ್ಪುರಬಾಳೆ ; ಬಾಳೆಯ ಗೊನೆಗಳಲ್ಲಿ ಒಂದು ವಾಟೆಬಾಳೆಯ ಗೊನೆಯ ಎರಡು ಹೆಣಿಗೆ ಚೆನ್ನಾಗಿ ಕಳಿತು ಹಣ್ಣಾಗಿ . . . ಕಂಗೊಳಿಸುತ್ತಿದ್ದುವು (ಮಲೆಮ. ೬೩೫). [ವಾಟೆ$_1$ + ಬಾಳೆ$_1$ (< ಬಾೞೆ)]

**ವಾಟೆಹಿಂಡಲು** (ನಾ). ಬಿದಿರಿನ ಪೊದರು ; ಬಿದಿರುಮೆಳೆ : ಆ ವಾಟೆಹಿಂಡಲ ಹತ್ರ ಮಟ್ಟಿನಲ್ಲಿ ಕತ್ತಲಾದ ಮ್ಯಾಲೆ ಅವರಿಬ್ಬರೂ ಒಟ್ಟಾಗ್ತಾರಂತೆ (ಮಲೆಮ. ೪೬೬). [ವಾಟೆ$_1$ + ಹಿಂಡಲು (< ಹಿಂಡಿಲ್)]

**ವಾಟೋಳಿ** (ನಾ). ಹಾಳು ; ನಾಶ : ಮನೀ ಹೊಲಾ ಎಲ್ಲಾ ನಾಲ್ಕ ದಿನದಾಗ ವಾಟೋಳಿ ಮಾಡಿ ಇಡತಾನ (ನಿಸರ್ಗ. ೨೧೩). [<— ಮರಾ. ವಾಟೋಳಾ]

**ವಾಟ್ಯಾರಣಿ** (ನಾ). ಒಂದು ಬಗೆಯ ಸಸ್ಯ : "ವಾಟ್ಯಾರಣಃ – ಬಿಳಿಯ ಲೊಕ್ಕಿ, ತುರುವೆ, ಕಳ್ಳಂಗಡಲೆ" (ಓಷಧಿ. ೧೫೧). [?/ ಸಂ. ವಾಟ್ಯಾಯನೀ = ಬಿಳಿಯ ಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ]

**ವಾಟ್ಯಾಲಕ** (ನಾ). ಒಂದು ಬಗೆಯ ಸಸ್ಯ : "ಬಲಾ, ವಾಟ್ಯಾಲಕಃ – ೨ ಚಟ್ಟುಪಹರಳು ಗಿಡ, ಹರಳ ಬೀಜವು" (ಸಿದ್ಧಾಂತಿ. ೧೩೬). [ಸಂ.]

**ವಾಟ್ಯೆ** (ನಾ). ಒಂದು ಬಗೆಯ ಸಸ್ಯ : "ವಾಟ್ಯಾ – ಹತ್ತಿ, ನೆಲದಾಳು" (ಓಷಧಿ. ೧೪೯). [ಸಂ. ವಾಟ್ಯಾ]

**ವಾಡ** 'ಭಾಡ' ನೋ.

**ವಾಡಬ** (ನಾ). ೧. ಬೀಜದ ಕುದುರೆ. ೨. ಸಮುದ್ರದೊಳಗಿರುವ ಕುದುರೆಯ ಮುಖದಿಂದ ಹುಟ್ಟಿದುದೆಂದು ಭಾವಿಸಲಾದ ಬೆಂಕಿ; ಬಡಬಾನಲ : ಗಗನಾರ್ಣವದ ವಾಡಬಗಣವೊ ಕೌತುಕವೆನಿಸಲೆಚ್ಚಾಡಿದರು ಬಿಲ್ಲವರು (ಕುವ್ಯಾಭೀ. ೪-೧೬); ಘನನಿನದದೊಳಿದಿರಾದರು ರಿಪುಬಲವನಧಿವಾಡಬ ರೆನಿಸುವರು (ತ್ರಿಪುಸಾಂ. ೨೧-೨೩೯). ೧, ೨ : ಧುರದಂತೆ ಮುಖದಂತೆ ವಾಡ ಬಾನ್ವಿತಂ . . . ತಾನೆಂದುದಧಿ ಕಂಗೆ ಮಂಗಳಮಾದುದು (ಚಬಪು. ೨೨-೮). ೩. ಬ್ರಾಹ್ಮಣ. ೪. ಪಾತಾಳ ಲೋಕಗಳಲ್ಲಿ ಒಂದು ; ಅತಳ. ೫. ಘನವಾದುದು ; ಅಧಿಕವಾದುದು. "ಅತಳಂ ತುರಗಂ ಘನ ವಿಪ್ರೇಶಂ ವಡಬಂ ಘನಸಿಜಶರಸಂಖ್ಯೆಯಿಂದ ವಾಡಬ ಶಬ್ದಂ" (ನಾನಾಕಂ. ೪೩). [ಸಂ.]

**ವಾಡವ** (ನಾ). ೧. ಬೀಜದ ಕುದುರೆ. ೨. = ವಾಡಬ ೨. ೩. ಬ್ರಾಹ್ಮಣ. ೨, ೩ : ಆ ಸಮುದ್ರಂ . . . ಮಹಾಗ್ರಹಾರದಂತೆ ವಾಡವೋಪೇತಪ್ರಖ್ಯಾತಮುಂ . . . ಪಯೋಜಾತನೇತ್ರನಂತೆ ಪೀತಾಂಬರಮುಮಾಗಿರ್ಪುದು (ಕುಸುಮಾ. ೧-೨೨ ವ). ೪. ಪಾತಾಳಲೋಕಗಳಲ್ಲಿ ಒಂದು ; ಅತಳ. ೫. ಕುದುರೆಯ ಲಾಯ ; ಅಶ್ವಶಾಲೆ. ೬. ಹೆಣ್ಣುಕುದುರೆಗಳ ತಂಡ. ೭. ದೇಶ ; ರಾಷ್ಟ್ರ. "ದಾನವಾವಾಸ ಜನಾಂತ ವಿಪ್ರ ತುರಗಂ ಬಡಬಾನಲ ವಾ[ಪಾಠಾಂ. ಬಾ]ಡವಾಹ್ವಯಂ" (ನಾನಾರ. ೧೪). [ಸಂ.]

**ವಾಡವಾಗ್ನಿ** (ನಾ). = ವಾಡಬ ೨. [ಸಂ.]

**ವಾಡವಾನಲ** (ನಾ). = ವಾಡಬ ೨. [ಸಂ.]

**ವಾಡವೇಯ** (ನಾ). ೧. ಎತ್ತು ; ವೃಷಭ. ೨. ಬ್ರಾಹ್ಮಣ. ೩. ಬೀಜದ ಕುದುರೆ. [ಸಂ.]

**ವಾಡವ್ಯ** (ನಾ). ಬ್ರಾಹ್ಮಣರ ಸಮುದಾಯ. [ಸಂ.]

**ವಾಡಿ** 'ಪಾಡಿ$_2$' ನೋ.

**ವಾಡಿಕೆ** (ನಾ). ರೂಢಿ ; ಅಭ್ಯಾಸ ; ಪದ್ಧತಿ : ಪುತ್ರೋತ್ಪತ್ತಿಯನ್ನು ಕುರಿತ ಚಿಂತೆಗಾಗಿ ಆ ಕಾಲದಲ್ಲಿ ಈ ರೀತಿಯಾಗಿ ಅರಸರುಗಳು ಇಬ್ಬರು ಮೂವರು ಮಡದಿಯರನ್ನು ಮಾಡಿಕೊಳ್ಳುವುದು ವಾಡಿಕೆಯಿತ್ತು (ವ್ಯಾಸಚಿ. ೪೩); ಗತಿಸಿದವರ ಅಸ್ಥಿಯನ್ನೂ ಬೂದಿಯನ್ನೂ ಗಂಗೆಯಲ್ಲಿ ಬಿಡುವುದು ಜನರ ವಾಡಿಕೆ (ನನದಿ. ೧೧).

ವಾಡಿಕೆಯಾಗಿ = ಪದ್ಧತಿಯಂತೆ ; ಸಾಮಾನ್ಯವಾಗಿ : ವಾಡಿಕೆಯಾಗಿ ಗಿಡದ ಟೊಂಗೆಗಳ ಕುಡಿಯಲ್ಲಿ ಮೊಗ್ಗೆಗಳಾಗುವವು (ಮುಂಬಯು. ೩-೩೭); ಆ ಸ್ಥಿತಿಯ ವರ್ಣನೆಯು ಐಕ್ಯದ ಭಾಷೆಯಲ್ಲಿಯೆ ವಾಡಿಕೆಯಾಗಿ ಮಾಡಲ್ಪಟ್ಟಿರುವದು (ವಚರ. ೧೭).

ವಾಡಿಕೆಯಾಗು = ಪದ್ಧತಿಯಾಗು ; ಚಾಲ್ತಿಯಲ್ಲಿರು : ದಸರೆಯ ಹಬ್ಬದಲ್ಲಿ

ನಾವು ಪರಸ್ಪರ ಬನ್ನಿಯ ಎಸಳುಗಳನ್ನು ಕೊಡುತ್ತ 'ಬಂಗಾರವನ್ನು ತೆಗೆದುಕೊಂಡು ಬಂಗಾರದಂತೆ ಇರೋಣ' ಎನ್ನುವುದು ವಾಡಿಕೆಯಾಗಿದೆ (ರಂಗರೋ. ೧೧೨).

[ದೇ. ‖ ತಮಿ. ವಾಟಿಕ್ಕೈ ; ತುಳು. ವಾಡಿಕೆ, ವಾಡಿಗೆ ; ತೆಲು ವಾಡುಕ]

ವಾಡುವರದು (ನಾ). ಒಂದು ಬಗೆಯ ಸಸ್ಯ : ವಡುವಾರದ ಗಿಡ, ಎಡತರಿ, ವಾಡುವರಡು, ಒದವಿನ, ಒಡತರೆ (ಮೃಔಗಿ. ೩೦-೫೮೦). [?]

ವಾಡೆ₁ (ನಾ). ೧. ಬಾವಿಯ ಒಳಭಾಗದ ಗೋಡೆಯನ್ನು ಕಟ್ಟಲು ಉಪಯೋಗಿಸುವ ಸುಟ್ಟ ಮಣ್ಣಿನ ವರ್ತುಳ, — ಬಿಲ್ಲೆ : (ಓ). ೨. ದವಸ ಧಾನ್ಯಗಳನ್ನು ಸಂಗ್ರಹಿಸಿಡುವ ಸ್ಥಳ : ಕಣಜದಲ್ಲಿ, ಹಗೆವುಗಳಲ್ಲಿ, ವಾಡೆಗಳಲ್ಲಿ ಬೇಕಾದ ಧಾನ್ಯಗಳಿವೆ. ನೀನು ಬೇಕಾದುದಂ ತೆಗೆದುಕೊ (ಹುಕಸ. ೨೦೮); ಈ ಸೇನೆಗಳ ಪಡಗೂಡಿ ನಡೆದರೆ ಬ್ಯಾಡರ ಭಯವಿಲ್ಲವೆಂದು ವಾಡೆಗಳ ಸರಕುಗಳಂ ಗಾಡಿಗಳ ಮೇಲೆ ತುಂಬಿ ಕೂಡೆ ಬರುವ ನಾಡುನಾಡಿನ ಘನವರ್ತಕರು ಕೆಲಂಬರು (ಸೌಗಂಧಿ. ೧೮೩-೯). [< ಒಡ್ಡೆ₁]

ವಾಡೆ₂ 'ಬಾಡ' ನೋ.

ವಾಡೆಮಡಿಗೆ (ನಾ). ಒಂದು ಬಗೆಯ ಸಸ್ಯ : ಗುರುವಾಡೆ, ಜಂಗಮ, ವಾಡೆಮಡಿಗೆ (ಮೃಔಗಿ. ೩೯-೭೮೦). [?]

ವಾಧಾವಾ (ಗು). ೧. ಹೆಚ್ಚುವರಿಯಾಗಿರುವ ; ಅಧಿಕವಾದ : ಆನಂದಪ್ಪನ ಈ 'ವಾಧಾವಾ' ಭೂಮಿಯಲ್ಲಿ ಅತಿಕ್ರಮಣ ಮಾಡಿ ಕಾಲು ಕೆದರಿ ಜಗಳ ತೆಗೆಯುವಲ್ಲಿ ಜಿಗಳೂರಿನ ಬೀರಪ್ಪ ಹೆಸರಾಗಿದ್ದ (ಮನಟಿ. ೧೩೮). (ನಾ). ೨. ಹೆಚ್ಚಾದುದು ; ಅಧಿಕವಾದುದು : ಮೊದಲಿನ ಹಳ್ಳವಿದ್ದ ಸ್ಥಳದಲ್ಲಿ 'ವಾಧಾವಾ' ಆದ ಮಡಿಕಟ್ಟು ೨ ಎಕರೆ ಭೂಮಿ ಮಾತ್ರ ಅವನದಾಗಿ ಉಳಿದಿತ್ತು (ಮನಟಿ. ೧೩೮).

[<— ಮರಾ. ವಾಧಾವಾ, ವಾಧವಾ, ವಾಧವ]

ವಾಣ₁ 'ಬಾಣ₂' ನೋ.

ವಾಣ₂ (ನಾ). ೧. ಬಾಣ ; ಶರ. ೨. ನೂರು ತಂತಿಗಳಿರುವ ಒಂದು ಬಗೆಯ ವಾದ್ಯ : ಅಷ್ಟು ಪ್ರಾಚೀನಕಾಲದಲ್ಲೆ ವೀಣೆಯೂ ನೂರುತಂತಿಗಳ ವಾಣವೆಂಬ ವಾದ್ಯವೂ . . . ಇದ್ದುವು (ಭಾರದ. ೩೫೦). [ಸಂ.]

ವಾಣರ (ನಾ). ಕಪಿ ; ವಾನರ : ಸುಗ್ರೀವಂ ವೀರರ ಸಾಸಕೆ ಪೊಗಟ್ಟು ಒಡನೆಯೆ ಸೀತೆಯಂ ಪಿಂತರ್ಪ ಕಜ್ಜಮನಣಿಗೆಯ್ದು, ಪಲವೆಡೆಯ ವಾಣರರಂ ನೆರೆಯಿಸಿದಂ (ಅದ್ಭುತ. ೩೭-೭). [< ಸಂ. ವಾನರ]

ವಾಣರಸ 'ಬಾಣರಸ' ನೋ.

ವಾಣರಾಸಿ 'ಬಾರಣಾಸಿ' ನೋ.

ವಾಣಿ₁ 'ಬಾಣಿಗ' ನೋ.

ವಾಣಿ₂ (ನಾ). ಸೊಕ್ಕಿದವಳು ; ಪಾನಮತ್ತೆ : "ವಾಣಿಯೆನೆ ಮುಗ್ಧೆಯಕ್ಕು" (ಮಂಗರಾ. ೯೦-೭). ‖ ಇಲ್ಲಿ ಮಂಗರಾಜನು 'ಮುಗ್ಧೆ' ಎಂಬ ಶಬ್ದವನ್ನು 'ಪಾನಮತ್ತೆ' ಎಂಬರ್ಥದಲ್ಲಿ ಬಳಸಿದಂತೆ ತೋರುತ್ತದೆ. 'ವಾಣಿನಿ' ಪರಾ.

[< ಸಂ. ವಾಣಿನೀ]

ವಾಣಿ₃ (ನಾ). ೧. ಶಬ್ದ ; ಧ್ವನಿ : ಕಡಲ ವಾಣಿಯವಳ ವಾಣಿ ಕೂಗಿ ರೇಗಿ ಬರುವಳು (ವಾಂಟಜ. ೧೧-೧). ೨. ಮಾತು ; ನುಡಿ : ಪರಮಜಿನೇಂದ್ರವಾಣಿಯೆ ಸರಸ್ವತಿ ಬೇಟೊಂದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು (ಆದಿಪು. ೧-೯); ವಾಣಿ ಚಿಗುರಿನ ಹಾಗೆ ವಾಣಿ ಜೇನಿನ ಹಾಗೆ ಮನವೇಕೆ ಕಲ್ಲಿನ ಹಾಗೆ (ಇಂಬಾಪ. ೮೩-೨). ೩. ಗಾನ ; ಸಂಗೀತ : ಕರ್ಣಾಟಕ ಜನದ ಕರ್ಣವೀಣಾತುಂಬಿ ನಿನ್ನ ವಾಣಿಗೆ ವಿಕಂಪಿಸಿ, ಜೇಂಕೃತಿಯ ಬೀರಿ, ರಸದ ನವನೀತಮಂ ಹೃದಯದಿ ಮಥಿಸುವಂತೆ ಗಾನ ಗೆಯ್ (ಶ್ರೀರಾಮಾ. ೫-೧೨೭). ೪. ನವಿಲಿನ ಧ್ವನಿ : "ವಾಣೀ, ಕೇಕಾ — ಈ ೨ ನವಿಲ ಧ್ವನಿ" (ಹಲಾಯು. ೪೦-೮೯). ೫. ನುಡಿಯ ಅಧಿದೇವತೆ ; ಸರಸ್ವತಿ : ಪಿರಿದುಂ ಸಂತೋಷದಿಂ ವಾಣಿ ಬಂದು ಸಮಂತಿರ್ಕೆ ನವಿನಸೌರಭದ ಪೋಲ್ ಜಿಹ್ವಾಗ್ರದೊಳ್ ರುದ್ರನಾ (ಜಗವಿ. ೧-೭); ಲಕ್ಷ್ಮಿಗಿತ್ತುರಮನಾನನಮಂ ಪರವಾಣಿಗಿತ್ತು ಕೂರ್ಪತಿಶಯ ಮಾಗೆ ಮಾಡಿ (ಪುಷ್ಪಪು. ೩-೧೩).

ವಾಣಿಯರಸ = ಸರಸ್ವತಿಯ ಪತಿ ; ಬ್ರಹ್ಮ : ನೃಪನ ಪೆಣನೊಳು ಪ್ರಾಣವಂ ತುಂಬುವ ಸಮರ್ಥರು ಮೇಣೊಳರೆ ನೀವಲ್ಲದನ್ಯರು ವೇಮನಾರಾಧ್ಯ ವಾಣಿಯರಸನ ಹರಿಯ ವಶವೇ (ಬಸಪು. ೪೭-೭೮). [ಸಂ. ವಾಣೀ]

ವಾಣಿ₄ (ನಾ). ೧. ನೇಯುವುದು ; ನೇಯ್ಗೆ : "ವಾಣಿಃ, ವ್ಯೂತಿಃ— ೨ ನೇಯುವುದರ ಪೆಸರು" (ಸಿದ್ಧಾಂತಿ. ೩೧೫). ೨. ನೇಯುವ ಸಾಧನ ; ಮಗ್ಗ. [ಸಂ.]

ವಾಣಿಗ (ನಾ). ವ್ಯಾಪಾರ ಮಾಡುವವನು ; ವ್ಯಾಪಾರಿ : ಸೂಳೆಗೆಯ್ವ ವಿಟರ ತಲೆಗಳ ಮೇಲೆ ಹುಲ್ಲಂ ಕಟ್ಟಿದೆಯೆಲೋ ಖೂಳ ವಾಣಿಗನಾದೆ (ಬಸಪು. ೨೮-೨೦).

[< ಸಂ. ವಣಿಜ್]

ವಾಣಿಗತೋಟ (ನಾ). ಒಂದು ತೋಟದ ಹೆಸರು : ಮಟ್ಟುವರುಂ ದೇವೆನ್ನರು ವೆಲೆಕೊಣ್ಣು ವಾಣಿಗತೋಟ್ಟಂ ತೆನ್ನಣ್ಣಮುಂ ವಡಕಣ್ಣಮುಂ ವಿನಿತೀಶ್ವರಕ್ಕಂ ಪೊಯ್ದಾರ್ (ಎಕ. IV (R), ಚಾಮರಾ. ೧೪೭-೭; 750). [ವಾಣಿಗ + ತೋಟ₁ (< ತೋಂಟ)]

ವಾಣಿಗಿತ್ತಿ (ನಾ). ವ್ಯಾಪಾರ ಮಾಡುವವಳು : ಓಣಿಯೊಳಗೊಬ್ಬ ವಾಣಿಗಿತ್ತಿಯು ಕುಳಿತು ಕಾಣದೆ ಮೂರು ಲೋಕಂಗಳಲ್ಲಿ ನಡದಾಡುತ್ತಿಪ್ಪಳು ನೋಡ ಆ ವಾಣಿಗಿತ್ತಿಯ ಕೊಂಡು ಮೂರುಲೋಕವ ನುಂಗಿದಲ್ಲದೆ ಪ್ರಾಣಲಿಂಗದ ಸಂಬಂಧವು ಕಾಣಸದು ನೋಡ (ನಿರಾಗೋ. ೧೧-೪೩). [ವಾಣಿಗ + — ಇತ್ತಿ]

ವಾಣಿಜ₁ 'ವಾಣಿಯ₁' ನೋ.

ವಾಣಿಜ₂ (ನಾ). ೧. ವ್ಯಾಪಾರಮಾಡುವವನು ; ವರ್ತಕ : ಅಣಿಮುತ್ತಿಗೆ ವೆಗ್ಗಳ ಬೆಲೆಗಟ್ಟುವ ವಾಣಿಜರಿರ್ದರಿಕ್ಕೆಲದಿ (ಮೋಹತ. ೩-೪೯); ಇತ್ತರದಂಗಡಿಗೇರಿಲಿ ಮಾಟುವರರ್ತಿಯಿಂದಲ್ಲಿ ವಾಣಿಜರು (ಬಸಪು. ೧-೪೯). ೨. ಒಂದು ಬಗೆಯ ಸಸ್ಯ : "ವಾಣಿಜಃ = ನವಿ" (ಓಷಧಿ. ೧೫೦). [ಸಂ.]

ವಾಣಿಜತನ (ನಾ). ವ್ಯಾಪಾರ ; ವಾಣಿಜ್ಯ : ರೇಣು ಮಾಣಿಕವಾದರೂ ವಾಣಿಜತನ ಬಿಟ್ಟಾನೇ? (ಗಾದೆ). [ವಾಣಿಜ₂ + — ತನ]

ವಾಣಿಜಿಕ (ನಾ). ವ್ಯಾಪಾರಿ ; ವರ್ತಕ : ಬಿತ್ತರದೊಳಗೈತಹ ವಾಣಿಜಿಕರ ಮೊತ್ತವ ಬಣ್ಣಿಪರಾರು (ಕಜಪ. ೧೧-೩೯). [ಸಂ.]

ವಾಣಿಜ್ಯ (ನಾ). ೧. ಕೊಳ್ಳುವ ಹಾಗೂ ಮಾರುವ ವ್ಯವಹಾರ ; ವ್ಯಾಪಾರ : ಅಸಿ ಮಸಿ ಕೃಷಿ ವಾಣಿಜ್ಯ ಮುಂತಾದ ಕಾಯಕವ ಮಾಡಿ (ಸರ್ವವ. ೧೮೯-೮೮೪); ಆರಂಭವದು ಬೇಡ ವಾಣಿಜ್ಯವದು ಬೇಡ (ವಿವಾರ. ದೇ. ೧೫೫-೧೧೭). ೨. (ವ್ಯಾಪಾರದ ವಿಷಯಕ್ಕೆ ಸಂಬಂಧಿಸಿದ) ಲೆಕ್ಕಪತ್ರಗಳನ್ನು ತಿಳಿಸುವ ಶಾಸ್ತ್ರ : ಅವರು ಚರಿತ್ರೆ, ಭೂಗೋಳ, ವಾಣಿಜ್ಯ, ವ್ಯವಸಾಯ ಮೊದಲಾದ ನಾನಾಲೋಕವ್ಯಾಪಾರ ವಿಷಯಗಳನ್ನು ವಿದ್ಯಾರ್ಥಿಗಳಿಗೆ ಬೋಧಿಸಬೇಕಾಗಿರವುದಷ್ಟೆ? (ಸಾಹಿಶ. ೬೧). [ಸಂ.]

ವಾಣಿಜ್ಯತನ (ನಾ). = ವಾಣಿಜತನ : (ಓ). [ವಾಣಿಜ್ಯ + — ತನ]

ವಾಣಿಜ್ಯಮಾರುತ (ನಾ). "೩೦° ಉ.ಅಕ್ಷಾಂಶ ಮತ್ತು ೩೦° ದ.ಅಕ್ಷಾಂಶ ಗಳ ನಡುವೆ ಭೂಮಧ್ಯರೇಖೆಯ ಕಡೆಗೆ, ಭೂಮಿಯ ಸುತ್ತುಚಲನೆಯಿಂದ ಪಶ್ಚಿಮಕ್ಕೆ ತಿರುಗಿ ಸದಾ ಬೀಸುವ ಅಟ್ಲಾಂಟಿಕ್ ಮತ್ತು ಪೆಸಿಫಿಕ್ ಸಾಗರಗಳ ಒಂದು ಮಾರುತ" (Trade-wind. ಇಂಕನ): ಉಷ್ಣವಲಯ (Torrid Zone)ದಲ್ಲಿ ಹೆಚ್ಚಿನ ಒತ್ತಡವಿರುವ ಕಡೆಯಿಂದ ಸಮಭಾಜಕವೃತ್ತದ ಕಡೆಗೆ ಮಾರುತಗಳು ಬೀಸುತ್ತವೆ. ಇವೇ ಬಹುಮುಖ್ಯವಾದ ವಾಣಿಜ್ಯಮಾರುತಗಳು (Trade winds) (ಭೂಮಿವ. ೫೯). [ಸಂ.]

ವಾಣಿಜ್ಯವೀಧಿ (ನಾ). ವ್ಯಾಪಾರ ನಡೆಯುವ ಬೀದಿ, — ಕೇರಿ ; ಮಾರುಕಟ್ಟೆ : ಜನವಲ್ಲಾಡಿದುದು ಕ್ರಯವಿಕ್ರಯದ ವಾಣಿಜ್ಯವೀಧಿಯಲಿ (ಕುವ್ಯಾಗ. ೪-೧೧).

[ವಾಣಿಜ್ಯ + ವೀಧಿ]

ವಾಣಿಜ್ಯೋದ್ಯಮಿ (ನಾ). ದೊಡ್ಡ ವ್ಯಾಪಾರಸ್ಥ : ವಾಣಿಜ್ಯೋದ್ಯಮಿ ಗ್ರಿಗರಿ ಎಫಿಮೊವಿಚ್ ಕುಲಷೋವ್ . . . ಇಬ್ಬರನ್ನುಳಿದು ಎಲ್ಲರೂ ಹಾಜರಾಗಿದ್ದರು (ಪುನರು. ೩೦). [ಸಂ. ವಾಣಿಜ್ಯೋದ್ಯಮಿನ್]

ವಾಣಿನಿ (ನಾ). ೧. ಕುಡಿತದಿಂದ ಮತ್ತೇರಿದವಳು; "ಸೊಕ್ಕಿದವಳು" (ನಾಟಕಾಶ): "ವಿದಗ್ಧೆಯುಂ ಮುಗ್ಧೆಯಮಾಗಿರ್ಪವಳ್ ವಾಣಿನಿಯೆಂಬುದು" (ಹಲಾಯು. ೫೦-೩೩೫).

IP 'ಹಲಾಯು' ೮೦-೩೩೫ ರ ಮೂಲಶ್ಲೋಕದಲ್ಲಿ "ಸ್ತ್ರೀ ವಿದಗ್ಧಾ ಚ ಮತ್ತಾ ಚ ವಾಣಿನೀತ್ಯಭಿಧೀಯತೇ" ಎಂದಿದೆ. 'ಹಲಾಯುಧ'ದ ಟೀಕಾಕಾರನು 'ಮುಗ್ಧೆ' ಎಂಬ ಶಬ್ದವನ್ನು 'ಪಾನಮತ್ತೆ' ಎಂಬರ್ಥದಲ್ಲಿ ಬಳಸಿದಂತೆ ತೋರುತ್ತದೆ. ' ವಾಣಿ₃' ಪರಾ. ೨. ನೃತ್ಯಗಾತಿ ; ನರ್ತಕಿ : "ವಾಣಿನೀ — ನಟ್ಟುವವಳು, ದೂತಿಕೆ" (ಸಿದ್ಧಾಂತಿ. ೪೦೧). ೩. ಬುದ್ಧಿಶಾಲಿಯಾದ ಹೆಂಗಸು. [ಸಂ. ವಾಣಿನೀ. / ತೆಲು. ವಾಣಿನಿ]

**ವಾಣಿಯ₁, ವಾಣಿಜ₁** (ನಾ). ೧. ವ್ಯಾಪಾರ ; ವಾಣಿಜ್ಯ : ನಿಮ್ಮ ದೇಶದೊಳುಳ್ಳ ಸಕಲವಸ್ತುಗಳ ವಾಣಿಯವ ಮಾಡದೆ ಸುಯಜ್ಞದ ಕಾಣಿಕೆಯನೀವುದು (ಕುವ್ಯಾಸ. ೩-೬೫); ಎಸೆವ ಸುರತ್ನಜಾತಿಗಳನಾಣೆಯ ವಾಣಿಯ ರೀತಿ ಧಾತ ನಿಟ್ಟಿಸಲರಿದಾ ಪುಟಂಗಳಿಡದೆತ್ತುವ ರಂಗಂ (ನನ್ನಚಾ. ೨-೨೨). ೨. ವಿನಿಮಯ ; ಅದಲುಬದಲು: ಕೌರವರ ನೂರ್ವರ ಗೋಣಬನ ಕಾಳಗದೊಳೆನ್ನಯ ಕೇಣಿ ತನ್ನಯ ಗದೆಗೆ ದುರಿಯೋಧನನ ತೊಡೆಗಳಿಗೆ ವಾಣಿಯವು ದುಶ್ಶಾಸನನ ತನಿಶೋಣಿತವ ತಾ ಕುಡಿಯದಿರೆ ನಿಸ್ವಾಣಿ (ಕುವ್ಯಾಸ. ೧೫-೩೭). ೩. (ಆಲಂ) ಚೌಕಾಸಿ : ಗಿಡುಗನೆಜಗುವ ಶುಕನ ಶೋಕವ ಮಾಣಿಸೈ ವಾಣಿಯವೆ ಭಕುತರಲಿ . . . ಸಲಹು (ಕುವ್ಯಾಸ ೧೯-೧೧೩). ವಾಣಿಜ₁ : ೧. ಅರೆದಾಡಿನ ಪಾಲೊಳದಂ ಪೊರೆದಾಸವದಿಂದೆ ತೀವಿ ಸೊರೆಯೊಳ್ ತಿಂಗಳ್ವರೆಗಂ ಧಾನ್ಯದ ರಾಸಿಯೊಳಿರಿಸುಗೆ ವಾಣಿಜದ ಹಿಂಗು ಕಡು ಲೇಸಕ್ಕುಂ (ಲೋಕೋಪ. ೬-೭೧) ; ಶೃಂಗಿಯ ಬೇರುಂ ವಾಣಿಜದಿಂಗುಂ ಬೆಳ್ಳುಳ್ಳಿ ತಿಗಡೆ ಸೈಂಧವಮಾ ಪಂಚಾಂಗಮುಮಂ ಸಮಭಾಗೆ ತುರಂಗಕ್ಕೆಡೆ[ಯಲದು] ಸರ್ವಶೂಲಾಪಹರಂ (ಅಶ್ವಶಾ. ೧೧-೯).

[< ಪ್ರಾ. ವಾಣಿಅ ; ವಾಣಿಜ್ಜ. / ಸಂ. ವಾಣಿಜ್ಯ]

**ವಾಣಿಯ₂** 'ಬಾಣಿಗ' ನೋ.

**ವಾಣೀಪತಿ** (ನಾ) ಬ್ರಹ್ಮ : ವಾಣೀಪತಿಗೆ ಚಾತುರ್ಯಮಂ . . . ಕೊಟ್ಟ ಗುರುಮೂರ್ತಿ ಪಂಪಾಪತಿ ವಿರೂಪಾಕ್ಷನೆಮಗಿಷ್ಟಸಿದ್ಧಿಯಂ ಮಾಳ್ಕೆ (ಹಚಕಾ. ೧-೧) ; ವಾಣೀಪತಿಯು ನಮಗೆ ದೀರ್ಘಾಯು ಕೊಡಲಿ (ಪುರಂದ. ಧಾ. ೧-೧ ಪಲ್ಲವಿ). [ಸಂ.]

**ವಾತ** (ಗು). ೧. ಬೀಸಿದ ; ತೀಡಿದ. (ನಾ). ೨. ಗಾಳಿ ; ವಾಯು: ಗಂಗಾತರಂಗೋಪಮಾನಚಳಚ್ಚಾಮರವಾತಪೀತನಿಜಘರ್ಮಾಂಭಃಕಣಂ . . . ಇರ್ದನಂದು ಸುಖದಿಂ ವಿದ್ವಿಷ್ಟವಿದ್ರಾವಣಂ (ಪಂಪಭಾ. ೩-೮೫); ವಾತದಿನೊಂದನೊಂದೊರಸೆ ನಂದನದೊಳ್ಸುರಿವಾಮ್ರಭೂರುಹವ್ರಾತದ ತಳ್ತ ಪಣ್ಗಳ ಮಹಾರಸದಿಂ ವರಗಂಧಶಾಲಿಗಳ್ . . . ಒಳ್ಪೆಳಸಾಗಿ ರಂಜಿಕುಂ (ತ್ರಿಪುವಿ. ೨-೩೭). ೩. ಶರೀರದಲ್ಲಿರುವ ವಾತ, ಪಿತ್ತ, ಕಫಗಳೆಂಬ ಮೂರು ಬಗೆಯ ಧಾತುಗಳಲ್ಲಿ ಒಂದು : ವಾತಂ ಪಿತ್ತಂ ಕಫಮೆಂಬೀ ತೆಱದಿಂ ಮೂಱು ದೋಷಂ (ಕಾವ್ಯಾವ. ೪೭೦); ವಾತ ಪಿತ್ತ ಶ್ಲೇಷ್ಮಾದಿ ದೋಷತ್ರಯವಾದ ವಸ್ತುಗಳವು (ಸಕವೈ. ೭ ಪೀಠಿಕೆ). ೪. ಗಾಳಿಯ ಅಧಿದೇವತೆ ; ವಾಯುದೇವ : "ಪವಮಾನಂ ಶ್ವಸನಂ . . . ವಾಯು ವಾತಮನಿಲಂ ಸಮೀರಣಂ ಪೃಷದಶ್ವಂ" (ವಸ್ತುಕೋ. ೮-೪೪). 'ವಾತಜ' ಪರಾ. ೫. ಕೀಲುಗಳು ಊದಿಕೊಂಡು ಉರಿ ಮತ್ತು ನೋವು ಉಂಟಾಗುವ ಒಂದು ಬಗೆಯ ರೋಗ ; ಸಂಧಿವಾತ : ಗಣಿಕೆಯಂ ಸಮೂಲವಂ ಅಂಬಿಲದಲ್ಲಿ ಅರೆದು ನೆತ್ತಿಗೆ ಒತ್ತಲು ಮೈಯ ಪೂಸಲು ಜಲಗದ ಶೋಫ ವಾತ ಗುಣ (ವಿವೈವಿ. ೪); ಇವೊತ್ತು ಬೆಳಗ್ಗೆ ನನ್ನ ಬಲಹೆಗಲಿನಲ್ಲಿ ಇದ್ದಕ್ಕಿದ್ದ ಹಾಗೆಯೇ, ವಾತದ ಹಾಗಾಗಿದೆ (ನಿಬಂಧ. II. ೧೪೮). ೬. ಒಂದು ಬಗೆಯ ಸಸ್ಯ : "ವಾತಃ = ಕರಿಯ ಲೊಕ್ಕಿ" (ಒಷಧಿ. ೧೫೦). ೭. (ಕಂಸನ ಪ್ರೇರಣೆಯಿಂದ ಬಲರಾಮ, ಕೃಷ್ಣರನ್ನು ಕೊಲ್ಲಲು ಬಂದ) ಬಿರುಗಾಳಿಯ ರೂಪದ ಒಬ್ಬ ರಾಕ್ಷಸನ ಹೆಸರು ; ತೃಣಾವರ್ತ : ವಾತ ಶಕಟಾದಿ ದೈತ್ಯರ ಘಾತಿಸಿದ ರಂಗ ನಿನ್ನ ಪೋತತನಕಂಜುವೆನು (ಪುರಂದ. ಧಾ. ೪-೫೦-೧). ೮. ಎರಡು ಲಘುಗಳು ಮತ್ತು ಒಂದು ಗುರು ಇರುವ ಅಕ್ಷರಗಣ ; ಸಗಣ ; (UU –): ಮಗಣಂ ಭೂಮಿಯನಿಕ್ಕುಂ ಯಗಣಂ ಜಲ ರಗಣಮಗ್ನಿ ಸಗಣಂ ವಾತಂ (ಛಂದೋಂಬು. ೧-೩೯ ಆದಿಪದ್ಯ). [ಸಂ.]

**ವಾತಕ** (ನಾ). ಒಂದು ಬಗೆಯ ವೃಕ್ಷ ; ಮೊಳಗಿನ ಮರ : "ಮೊಟಗಿನ ಮರ - ವಾತಕ, ಶೀತಲೆ, ಅಪರಾಜಿತೆ, ಅಶನಪರ್ಣಿ" (ನಾಚರಾ. ೩). [ಸಂ.]

**ವಾತಕಿ₁** (ಗು). ೧. ವಾತರೋಗವನ್ನು ಹೊಂದಿದ ; ಸಂಧಿವಾತದ. (ನಾ). ೨. ವಾತರೋಗವನ್ನು ಉಳ್ಳವನು ; ಸಂಧಿವಾತವುಳ್ಳವನು : "ವಾತವ್ಯಾಧಿಪರೀತಂ ವಾತಕಿ" (ವಸ್ತುಕೋ. ೭೩-೩೭). [ಸಂ. ವಾತಕಿನ್]

**ವಾತಕಿ₂** (ನಾ). ಒಂದು ಬಗೆಯ ಸಸ್ಯ : "ವಾತಕೀ-ಹೆಗ್ಗುಳ್ಳ" (ಒಷಧಿ. ೧೫೦). [?]

**ವಾತಕ್ಷಯ** (ನಾ). ವಾತಪ್ರಕೋಪದಿಂದ ಉಂಟಾಗುವ ಒಂದು ಬಗೆಯ ಕ್ಷಯ : ವೀರಭದ್ರರಸ . . . ನಾಲ್ಕುಗುಂಜಿಪ್ರಮಾಣವನ್ನು ತಾಮ್ರದ ಬಟ್ಟಲಲ್ಲಿ ಇರಿಸಿ ಹಿಪ್ಪಲಿ ಬಿಸಿನೀರಲ್ಲಿ ಕೊಡುವುದು. ವಾತಕ್ಷಯಂ ಕೆಡುವುದು (ವಿವೈವಿ. ೫೦); ಕೊರಳಿನಲ್ಲಿಯೂ ಪಾರ್ಶ್ವಗಳಲ್ಲಿಯೂ ಕುಯ್ಯುತ್ತಾ . . . ಮೈ ತಣ್ಣನಾಗಿರ್ಪುದೆ ವಾತಕ್ಷಯ ಲಕ್ಷಣಂ (ಸಕವೈ. ೨೪೭). [ಸಂ.]

**ವಾತಖಾಸ** (ನಾ). ವಾತಪ್ರಕೋಪದಿಂದ ಉಂಟಾಗುವ ಕೆಮ್ಮು : ಅಳ್ಳೆಯಲ್ಲಿ ಶೂಲವು ಮಂಡೆನೋವು ಸಹ ಉಂಟಾಗಿಹುದೆ ವಾತಖಾಸಮೆಂದು ಪೇಳುವುದು (ಸಕವೈ. ೨೦೭). [ವಾತ + ಖಾಸ₁]

**ವಾತಗವಾಕ್ಷ** (ನಾ). ಕಟ್ಟಡಗಳ ಒಳಗೆ ಗಾಳಿ ಬರಲು ಗೋಡೆಯಲ್ಲಿ ಮಾಡಿರುವ ಕಂಡಿ ; ವಾತಾಯನ : ಆತನನಾಗಳ್ ನೋಡುವ ಕೌತೂಹಳದಿಂ ಸುಧಾಗೃಹಾಗ್ರಂಗಳೊಳಿರ್ದಾ ತರಳೇಕ್ಷಣೆಯರ್ಕಳ್ ವಾತಗವಾಕ್ಷಂಗಳೆಡೆಗೆ ತಡೆಯದೆ ನಡೆದರ್ (ಶಾಂತಿಪು. ೬-೫). [ಸಂ.]

**ವಾತಗುಲ್ಮ** (ನಾ). ೧. ಕೀಲುಗಳು ಊದಿಕೊಂಡು ಉರಿಯೂ ನೋವೂ ಉಂಟಾಗುವ ಒಂದು ಬಗೆಯ ರೋಗ ; ಸಂಧಿವಾತ : ವಾಯಿವಿಳಂಗ . . . ಚಿತ್ರಮೂಲ, ಇವುಗಳ ಕಲ್ಕಮಂ ತುಪ್ಪ ನಾಲ್ಕುಮಡಿ ಹಾಲಲ್ಲಿ ಅಟ್ಟುಕೊಡಲು ವಾತಗುಲ್ಮ ಮಾಣ್ಗುಂ (ವಿವೈವಿ. ೮೧). ೨. ಅತಿಬಿರುಸಿನಿಂದ ಬೀಸುವ ಗಾಳಿ ; ಬಿರುಗಾಳಿ. ೧ , ೨ : ಮಿಗೆ ವಾತಗುಲ್ಮ ಪರಿವೃತರಾಗಿಯುಂ ನಿರೋಗಿಗಳು . . . ಕುಲಗೋತ್ರಮಧ್ಯಸ್ಥಿತಿಗಳಾಗಿಯುಂ ಸೊಗಯಿಪೇಕಾಕಿಗಳೆನಿಸಿ ಶಿವನನೊಲಿಸಿದ ಮುನೀಶ್ವರರು ಕಣ್ಗೆಸೆದರು (ಹಚಕಾ. ೬-೩೭). [ಸಂ.]

**ವಾತಘ್ನ** (ನಾ). ಒಂದು ಬಗೆಯ ಸಸ್ಯ: "ವಾತಘ್ನಂ-ಕೋಷ್ಠ" (ಒಷಧಿ. ೧೫೦). [ಸಂ.]

**ವಾತಘ್ನಿ** (ನಾ). ಒಂದು ಬಗೆಯ ಸಸ್ಯ ; ಸಾಲಪರ್ಣಿ : "ವಾತಘ್ನೀ- ಒಂದೆಲೆಹೊನ್ನೆ, ಸುರಹೊನ್ನೆ, ಕಳ್ಳಂಗಡಲೆ" (ಒಷಧಿ. ೧೫೦). [ಸಂ. ವಾತಘ್ನೀ]

**ವಾತಜ** (ಗು). ೧. ವಾಯುವಿನಿಂದ ಹುಟ್ಟಿದ. (ನಾ). ೨. ವಾಯುವಿನ ಮಗ ; ಹನುಮಂತ : ವಾತಜನ ಮೂಲಿಕೆಗೆ ಕಪಿಬಲ ಚೇತರಿಸಿದುದು (ತೊರಿರಾ. ೩೭-೨೦). ೩. ಭೀಮ : ಆತನು . . . ವಾತಜನನಟಿಸಿದನು ಮೂದಲಿಸಿದನು ಸರಳಿನಲಿ (ಕುವ್ಯಾಕ. ೨೦-೧೯). [ಸಂ.]

**ವಾತಜನ್ಯ** (ಗು). ವಾತಪ್ರಕೋಪದಿಂದ ಉಂಟಾದ : ಈ ಉಪದ್ರವಗಳುಂಟಾದುದೆ ವಾತಜನ್ಯವಿಷೂಚಿಯೆಂದರಿವುದು (ಸಕವೈ. ೩೫೭). [ಸಂ.]

**ವಾತಜಾತ** (ನಾ). ವಾಯುದೇವರ ಅವತಾರವೆಂದು ಪರಿಗಣಿಸಲಾದ ಮಧ್ವಾಚಾರ್ಯ : ಭೂತಲದೊಳಪ್ರತಿಮನೆನಿಪ ಶ್ರೀಯತಿವರನ ಪ್ರೀತಿಯಿಂ ಭಜಿಸೆ ಇಷ್ಟಾರ್ಥಗಳ ಸಲಿಸುವ ವಾತಜಾತನ ಸ್ಮರಿಸಿರೈ (ಪುರಂದ. ಧಾ. ೧-೪೭ ಅನುಪಲ್ಲವಿ). [ಸಂ.]

**ವಾತಜಿಹ್ವೆ** (ನಾ). ವಾತರೋಗದಿಂದ ನಾಲಗೆಗೆ ಉಂಟಾಗುವ ಒಂದು ಬಗೆಯ ರೋಗ : ವಾತಜಿಹ್ವೆ ಎಂಬುದು ಮರದ ಎಲೆಯ ಹಾಗೆ ನೀಲವರ್ಣವಾಗಿ ಬಹಳ ಒಡೆದುಕೊಂಡಿಹುದು (ವೃದ್ಧಸಾ. II. ೧೦೭). [ಸಂ. ವಾತಜಿಹ್ವಾ]

**ವಾತಜ್ವರ** (ನಾ). ವಾತದೋಷದಿಂದ ಉಂಟಾಗುವ ಜ್ವರ : ಸಾಸಿವೆಪ್ರಮಾಣದಲ್ಲಿ ಗುಳಿಗೆಯಂ ಮಾಡಿ ನೆಳಲಲ್ಲಾಱಿಸಿ ರಾಸ್ನೆ, ಕಾರಗೆಣಸಿನ ರಸಗಳಲ್ಲಿ ಕೊಡಲು ವಾತಜ್ವರ ಹರ (ವಿವೈವಿ. ೧೩) ; ಮೈ ನಡುಗುತ್ತ . . . ಶರೀರವೆಲ್ಲವೂ ಭಾರವಾಗಿರುವುದೇ ವಾತಜ್ವರವೆನಿಸಿಕೊಂಬುದು (ಸಕವೈ. ೬೨). [ಸಂ.]

**ವಾತದಂತ** (ನಾ). ಶ್ಲೇಷ್ಮವಾತಗಳಿಂದ ಉಂಟಾಗುವ ಒಂದು ಬಗೆಯ ಹಲ್ಲಿನ ರೋಗ : ವಾತದಂತ ಎಂಬ ದಂತರೋಗದಲ್ಲಿ ದಂತಗಳು ಸಡಿಲಿ ಬೀಳುವುವು . . . ಈ ರೋಗ ಶ್ಲೇಷ್ಮವಾತಗಳಿಂದ ಉಂಟಾಗುವುದು (ವೃದ್ಧಸಾ. II. ೧೨೨). [ಸಂ.]

**ವಾತಧಾತು** (ನಾ). ೧. ಶರೀರದಲ್ಲಿರುವ ವಾತ, ಪಿತ್ತ ಮತ್ತು ಕಫಗಳೆಂಬ ಮೂರು ಬಗೆಯ ದ್ರವ್ಯಗಳಲ್ಲಿ ಒಂದು. ೨. ಮಣಿಕಟ್ಟಿನ ಬಳಿ ಇರುವ ಮೂರು ಬಗೆಯ ನಾಡಿಗಳಲ್ಲಿ ಒಂದು : (೩). [ಸಂ.]

**ವಾತನಯನ** (ನಾ). ವಾತದಿಂದ ಉಂಟಾಗುವ ಒಂದು ಬಗೆಯ ಕಣ್ಣು ರೋಗ : ವಾತನಯನಕ್ಕೆ ಉಬ್ಬೆಯ ಔಷಧಿ — ಲೊಕ್ಕಿಯ ಕಗ್ಗಿ . . . ಅಡಿನ ಹಿಕ್ಕೆ ಇಷ್ಟನ್ನೂ ಕದಡಿ ಅಂಬಿಲವ ಹಾಕಿ ಕಾಸಿ ಉಬ್ಬೆಯಿಂ ಕೊಂಬುದು (ವಿಷ್ಣವಿ. ೧೮೦). [ಸಂ.]

**ವಾತನಾಡಿ** (ನಾ). = ವಾತಧಾತು ೨. [ಸಂ.]

**ವಾತನಾರಾಯಣ, ವಾತನಾರಾಯಣೆ** (ನಾ). ತಿನ್ನಬಹುದಾದ ಹಣ್ಣುಗಳನ್ನು ಬಿಡುವ ಹಾಗೂ ಸಂಧಿವಾತದ ಚಿಕಿತ್ಸೆಗೆ ಬಳಸುವ ಬೇರುಗಳುಳ್ಳ ಒಂದು ಬಗೆಯ ಸಸ್ಯ : ಸಣ್‌ಕತ್ತಿ, ಸಂಕೇಶ್ವರಿ, ವಾತನಾರಾಯಣ, ಕೆಂಪುಕೆಂಚಗ, ನೀರಂಗಿ (ಮೃಶಿ. ೨೯-೫೬). ವಾತನಾರಾಯಣೆ : (೩).

[<— ತಮಿ. ವಾತನಾರಾಯಣ]

**ವಾತನಾರಾಯಣೆ** 'ವಾತನಾರಾಯಣ' ನೋ.

**ವಾತನಾಶನ** (ನಾ). ಒಂದು ಬಗೆಯ ಸಸ್ಯ ; ಹರಳುಗಿಡ : "ವಾತಾನಾಶನಃ - ಔಡಲ" (ಓಷಧಿ. ೧೫೦). [ಸಂ.]

**ವಾತನೀಯ** (ನಾ). ಒಂದು ಬಗೆಯ ಸಸ್ಯ : "ವಾತನೀಯಃ - ಹೆಬ್ಬಿದಿರು" (ಓಷಧಿ. ೧೫೦). [?]

**ವಾತಪಾತಕ** (ನಾ). ಒಂದು ಬಗೆಯ ಮರ ; ಮುತ್ತುಗದ ಮರ : "ವಾತಪಾತಕಃ - ಮುತ್ತುಗ" (ಓಷಧಿ. ೧೫೦). [< ಸಂ. ವಾತಪೋಥಕ]

**ವಾತಪಿತ್ತಜ್ವರ** (ನಾ). ವಾಯು ಮತ್ತು ಪಿತ್ತದ ಪ್ರಕೋಪದಿಂದ ಉಂಟಾಗುವ ಜ್ವರ ; ಸಂಧಿವಾತದಿಂದ ಕೂಡಿದ ಜ್ವರ : ವಾತಜ್ವರ, ಪಿತ್ತಜ್ವರ, ಶ್ಲೇಷ್ಮಜ್ವರ, ವಾತಪಿತ್ತಜ್ವರಂ . . . ಆಗಂತುಕಜ್ವರವೆಂದು ಎಂಟು ಪ್ರಕಾರವಾಗಿರುವುದು (ಸಕವೈ. ೭೨). [ಸಂ.]

**ವಾತಪೂರಣ** (ನಾ). ೧. ಬಾವುಟ; ಪತಾಕೆ: ದೆಸೆಗೆ ಬೆಸೆದು ಬಿಜ್ಜನೆ ಬೀಗುವ ಪೊಸ ಸಿರಿವಂತನಂತೆ ವಾತಪೂರಣಂಗಳೊಳಂ ಪರಭಾಗಂಬಡೆದು (ಶಾಂತಿಪು. ೧೦-೨೧ ವ); ವ್ಯಾಸಹಸ್ತೋಪೇತಪೂರಣವಾತಪೂರಣರಾಜಿ ರಾಜಿಸಲು (ಬಸಪು. ೬-೨೧). ೨. ಹಾವು; ಸರ್ಪ (?) : ಸಂಗರಾರ್ಜುನಂ ಸಿದ್ಧನಂತಾ ಸಿದ್ಧಕ್ಷೇತ್ರಮಂ ಪುಗುತಂದನ ದೆಂತಪ್ಪುದೆಂದೊಡೆ ಇಂದ್ರಜಾಲಿಗನಂತುರಿಯನುಗಟ್ಟಿ ಬಳ್ಳುಗಳಿಂ ವಾತಪೂರಣಂಗಳಿಂ ನೊಂದಂತೆ ದೆಸೆದೆಸೆಗೆ ಪೊಂಗುವ ಗೂಗೆಗಳಿಂ . . . ಅತಿ ಭಯಂಕರಾಕಾರಮಪ್ಪುದು (ಕಾವ್ಯಸಾ. ೫೨೮ ಶೂದ್ರಕ). [ಸಂ.]

**ವಾತಪೋಥ** (ನಾ). ಒಂದು ಬಗೆಯ ಮರ ; ಪಲಾಶ ; ಮುತ್ತುಗ : "ಪಲಾಶಃ, ಕಿಂಶುಕಃ, ಪರ್ಣಃ, ವಾತಪೋಥಃ - ೪ ಮುತ್ತುಗದ ಗಿಡ" (ಸಿದ್ಧಾಂತಿ. ೧೧೮). [ಸಂ.]

**ವಾತಪ್ರಕೃತಿ** (ನಾ). ವಾತಪ್ರಕೃತಿ, ಪಿತ್ತಪ್ರಕೃತಿ, ಶ್ಲೇಷ್ಮಪ್ರಕೃತಿ, ಮಿಶ್ರಪ್ರಕೃತಿ ಎಂಬ ದೇಹದ ನಾಲ್ಕು ಬಗೆಯ ಸ್ಥಿತಿಗಳಲ್ಲಿ ಒಂದು ; ವಾತಪ್ರಧಾನವಾದ ದೇಹಸ್ಥಿತಿ : ಸ್ವಪ್ನದಲ್ಲೂ ಆಕಾಶದಲ್ಲೂ ತಾನು ಹಾರಿಯಾಡುವುದ ಕಾಣ್ಬನು: ಅಂಥವನನ್ನು ವಾತಪ್ರಕೃತಿಯುಳ್ಳವನೆಂದು ನಿಶ್ಚೈಸುವುದು (ಸಕವೈ. ೧೭) ; ಕಪ್ಪಾದವಳು ಉಷ್ಣಮುಂ ಸೀತಳಮಿಶ್ರವಾದ ದೇಹವುಳ್ಳವಳು ಹಲವಂ ನುಡಿವಳು, ಈ ಸ್ತ್ರೀ ವಾತಪ್ರಕೃತಿಯವಳು (ಕಾಮಶಾ. ೨೧೪). [ಸಂ.]

**ವಾತಪ್ರಕೋಪ** (ನಾ). ೧. ಗಾಳಿಯ ಆಧಿಕ್ಯ,—ಹೆಚ್ಚಳ. ೨. ತೀವ್ರವಾದ ವಾತದೋಷ : ವಾತಪ್ರಕೋಪದ ಚಕ್ಷುರೋಗಂಗಳೆಲ್ಲ ಕೆಡುಗು (ವಿಷ್ಣವಿ. ೧೯೨) ; ಮುಖವಿಕಾರವುಂಟಾಗಿ . . . ಉಂಡ ಅನ್ನ ದಕ್ಕದ ಲಕ್ಷಣವೆ ವಾತಪ್ರಕೋಪವೆಂದರಿದು ಚಿಕಿತ್ಸೆಯಂ ಮಾಡುವಲ್ಲಿ . . . ಪ್ರಯೋಗಂಗೈವುದು (ಸಕವೈ. ೧೩೦). [ಸಂ.]

**ವಾತಪ್ರಮಿ** (ನಾ). ೧. ಬಹಳ ವೇಗದಿಂದ ಚಲಿಸುವ ಒಂದು ಜಿಂಕೆ : "ನ್ಯಂಕು ಕೃಷ್ಣಸಾರಂ ವಾತಪ್ರಮಿಯೆನೆ ಚೆಳ್ಳಿಗ" (ವಸ್ತುಕೋ. ೪೧-೭). ೨. ಒಂದು ಬಗೆಯ ಮರ ; ಮುತ್ತುಗ: "ವಾತಪ್ರಮೀಃ, ವಾತಮೃಗಃ, ವಾತಪೋತೋತ್ಥಃ - ಈ ಮೂಱುಂ ಮುತ್ತುಗ" (ಓಷಧಿ. ೧೫೦). [ಸಂ. ವಾತಪ್ರಮೀ]

**ವಾತಪ್ರಮೇಹ** (ನಾ). ಒಂದು ಬಗೆಯ ಮೂತ್ರರೋಗ : ಮೂತ್ರ ಕೆಂಚನೆ ಪೋಪುದುಂ . . . ವಾತಪ್ರಮೇಹದ ಲಕ್ಷಣ (ವಿಷ್ಣವಿ. ೧೫೬). [ಸಂ.]

**ವಾತಫಲ** (ನಾ). ಒಂದು ಬಗೆಯ ಸಸ್ಯ ; ಬೆಲ್ಲವತ್ತ : "ವಾತಸಾರಃ, ವಾತಫಲಃ - ಈಯೆರಡುಂ ಬೆಲ್ಲವತ್ತ" (ಓಷಧಿ. ೧೫೦). [ಸಂ.]

**ವಾತಬರ್ಬರ** (ನಾ). ಒಂದು ಬಗೆಯ ಸಸ್ಯ : "ವಾತಬರ್ಬರಃ - ಕಕ್ಕೊರಲೆ" (ಓಷಧಿ. ೧೫೦). [?]

**ವಾತಭುಕು** (ನಾ). ಗಾಳಿಯನ್ನೇ ಆಹಾರವಾಗಿ ಉಳ್ಳುದು ; ಹಾವು : ಮಸ್ತಕದೊಳಗ್ಗಿಯ ಮುಡಿವನಂತೆ ಕೆನ್ನೆಯ ವಾತಭುಕುವಿನಿಂ ಕೆದಕುವನವೊಲ್ . . . ಬಲುದುರ್ಘಟದ ಯುಕುತಿಯಂತಿಚ್ಚೈಪರೇ (ಪತಿಲ. ೨-೨೩). [ಸಂ. ವಾತಭುಜ್]

**ವಾತಮಂಡಳಿ** (ನಾ). ವರ್ತುಲಾಕಾರವಾಗಿ ಸುತ್ತಿ ಬರುವ ಗಾಳಿ ; ಸುಂಟರ ಗಾಳಿ : "ವಾತೂಳಂ ವಾತ್ಯೆ ವಾತಮಂಡಳಿಯಕ್ಕುಂ" (ವಸ್ತುಕೋ. ೮-೪೫).

[ಸಂ.ವಾತಮಂಡಲೀ]

**ವಾತಮೂಲವ್ಯಾಧಿ** (ನಾ). ವಾತರೋಗದಿಂದುಂಟಾಗುವ ಮೊಳೆರೋಗ : ಹಿಕ್ಕೆ ಹಿಕ್ಕೆಯಾಗಿ ಮಲ ಪೋಪುದು ; ವಿಷ್ಟಸ್ತಂಭ ಮಾಡುತಿರ್ಕುಂ ; ಮೈ ವಿವರ್ಣಮಕ್ಕು; ಮಾಂಸದಂತೆ ಪೋಪುದು ; ಕಲ್ಲ ಮೊಳೆ ತೋರ್ಕುಂ ; ಸರ್ವಗುದಶೂಲೆಯಕ್ಕುಂ. ಇದು ವಾತಮೂಲವ್ಯಾಧಿಯ ಲಕ್ಷಣ (ವಿಷ್ಣವಿ. ೧೯೦). [ಸಂ.]

**ವಾತಮೃಗ** (ನಾ). ೧. = ವಾತಪ್ರಮಿ ೧ : "ವಾತಪ್ರಮೀಃ, ವಾತಮೃಗಃ - ೨ ವಾಯು ಮೃಗದ ಹೆಸರು, ಗಾಳಿಗೆಯೆದುರಾಗಿ ನೆಡಿಯುವ ಸ್ವಭಾವವುಳ್ಳ ಹುಲ್ಲೆಯೆಂಬುವ ಮೃಗ" (ಸಿದ್ಧಾಂತಿ. ೧೫೪). ೨. = ವಾತಪ್ರಮಿ ೨ : "ವಾತಪ್ರಮೀಃ, ವಾತಮೃಗಃ, ವಾತಪೋತೋತ್ಥಃ— ಈ ಮೂಱುಂ ಮುತ್ತುಗ" (ಓಷಧಿ. ೧೫೦). [ಸಂ.]

**ವಾತಮೈ** (ನಾ). ವಾತದಿಂದ ಕೂಡಿದ ಶರೀರ,—ದೇಹ : ಸಪ್ಪನ ಮಾರಿ, ಬಟ್ಟಿನ ಮೂಗು, ತುಸು ವಾತಮೈ (ಪಾಲ. ೧೩). [ವಾತ + ಮೈ (< ಮೆಯ್)]

**ವಾತರೋಗ** (ನಾ). ವಾತದೋಷದಿಂದುಂಟಾಗುವ ವ್ಯಾಧಿ ; ಸಂಧಿವಾತ: ಲಾಗಿಸಿ ಝುಳಪಿಸಿ ಜಡದನುವಿಂ ಬಹುವಿಧವೆನಿಸುವ ವಾತರೋಗಾದ್ರಿಯ ಹೊಡೆ (ಕಲ್ಯಾಣಕ. ೩೩) ; ಬಹಳ ನೀರು ಉಂಟಾದ ದೇಶವು ಅನುಪದೇಶವೆನಿಸಿಕೊಂಡು ಶ್ಲೇಷ್ಮವ್ಯಾಧಿ ವಾತರೋಗಗಳನ್ನುಂಟುಮಾಡುವುದು (ಸಕವೈ. ೧೫). [ಸಂ.]

**ವಾತರೋಗಿ** (ನಾ). ವಾತರೋಗವುಳ್ಳವನು ; ಸಂಧಿವಾತವನ್ನು ಹೊಂದಿದವನು : "ವಾತಕೀ, ವಾತರೋಗೀ — ೨ ವಾತರೋಗದವನ ಹೆಸರುಗಳು" (ಸಿದ್ಧಾಂತಿ. ೧೮೫). [ಸಂ.]

**ವಾತವಲಯ** (ನಾ). [ಜೈನ] ಅನಂತವಾದ ಲೋಕವನ್ನು ಸುತ್ತಿರುವ ವಾಯು ಸಮೂಹ : ತದನಂತರ ಸಮಯದೊಳ್ ವಾತವಲ[ಪಾಠಾಂ. ೪]ಯಮುಟಿಯೆ ಜೀವಪ್ರದೇಶಂಗಳಿಂ ಲೋಕಪ್ರದೇಶಮಂ ಪರ್ವಿ (ಆದಿಪು. ೧೬-೪೯ ವ). [ಸಂ.]

**ವಾತವಾಜಿ** (ನಾ). ಒಂದು ಬಗೆಯ ಸಸ್ಯ : "ವಾತವಾಜಿ—ಕಾಡ ಪಾರಿವಾಳ" (ಓಷಧಿ. ೧೫೦). [?]

**ವಾತವೃಷೆ** (ನಾ). ಒಂದು ಬಗೆಯ ಧಾನ್ಯ : "ವಾತವೃಷಾ — ಕಂಚಿನ ಧಾನ್ಯ" (ಓಷಧಿ. ೧೫೦). [?]

**ವಾತಶರೀರ** (ನಾ). = ವಾತಮೈ. [ಸಂ.]

**ವಾತಶರೀರಿ** (ನಾ). ವಾತದ ಮೈಯನ್ನು ಹೊಂದಿದವನು. [ಸಂ. ವಾತಶರೀರಿನ್]

**ವಾತಶೋಣಿತ** (ನಾ). ಶರೀರದಲ್ಲಿ ವಾಯು ಮತ್ತು ರಕ್ತವು ಕೆಟ್ಟುಹೋಗುವ ಒಂದು ಬಗೆಯ ಸಂಧಿವಾತ ರೋಗ : ಗ್ರಹಣೀಗಜಕೇಸರಿಲೇಹ್ಯ . . . ಸೇವಿಸಲು ವಾತಗ್ರಹಣಿ . . . ವಾತಶೋಣಿತ, ಪಾಂಡುಕೃಶತ್ವ ಮುಂತಾದ ಸಕಲ ರೋಗಗಳೂ ಗುಣಮಕ್ಕುಂ (ಸಕವೈ. ೩೪೦). [ಸಂ.]

**ವಾತಶ್ಲೇಷ್ಮಜ್ವರ** (ನಾ). ವಾತಪ್ರಕೋಪ ಮತ್ತು ಶ್ಲೇಷ್ಮದಿಂದ ಉಂಟಾಗುವ ಜ್ವರ : ಗುಳಿಗೆಯಂ ಅಲ್ಲದ ರಸದಲ್ಲಿ ಕೊಳ್ಳೆ . . . ವಾತಶ್ಲೇಷ್ಮಜ್ವರ, ತ್ರಿದೋಷಜ್ವರ ಇವೆಲ್ಲಾ ಮಾಣುವುವು (ವಿಷ್ಣವಿ. ೪೩). [ಸಂ.]

**ವಾತಸನ್ನಿ** (ನಾ). ವಾತಪ್ರಕೋಪದಿಂದ ಉಂಟಾಗುವ ಸನ್ನಿಪಾತ:

ಅತಿಕಡಿದಾದ ಜ್ವರ ಉಂಟಾಗಿ ಮಹಾವೇಗವಾದ ನಾಡಿಗಳನುಳ್ಳುದಾಗಿರ್ಪುದೆ ವಾತಸನ್ನಿಯ ಲಕ್ಷಣವೆಂದರಿವುದು (ಸಠವೈ. ೧೭೧). [ವಾತ + ಸನ್ನಿ]

**ವಾತಸಾರ** (ನಾ). = ವಾತಫಲ : "ವಾತಸಾರಃ, ವಾತಫಲಃ - ಈಯೆರಡುಂ ಬೆಲ್ಲವತ್ತ" (ಓಷಧಿ. ೧೫೧). [ಸಂ.]

**ವಾತಸುತ** (ನಾ). ೧. ವಾಯುವಿನ ಮಗ. ೨. ಹನುಮಂತ : ವಾತಸುತ ಬಳಿಕನ್ನಯದ ಪರಿಜಾತದಭ್ಯುದಯವನು ಬಹುರೂಪಾತಿಶಯವಹ ಪರಿಯ ಬಿನ್ನೈಸಿದನು ರಘುಪತಿಗೆ (ತೊರರಾ. ೪-೧-೧೬). ೩. ಭೀಮ : ವಾತಸುತ ಪರಬಲಭಯಂಕರ ಸೋತನೋ ಪ್ರತಿಮಲ್ಲನೆಂದರು ಕೃಷ್ಣ ಫಲುಗುಣರು (ಕುವ್ಯಾಸ. ೨-೧೧೨). [ಸಂ.]

**ವಾತಹ** (ನಾ). ೧. ಒಂದು ಬಗೆಯ ಸಸ್ಯ. ೨. ಬೆಳ್ಳುಳ್ಳಿ ; ಲಶುನ : "ವಾತಹಾ - ಬೆಳ್ಳುಳ್ಳಿ" (ಓಷಧಿ. ೧೫೦). [ಸಂ.ವಾತಹನ್]

**ವಾತಾಜೀರ್ಣ** (ನಾ). ವಾತಪ್ರಕೋಪದಿಂದ ಉಂಟಾಗುವ ಅಜೀರ್ಣ : ಕಲ್ಲುಪ್ಪು, ಗಾಜುಲವಣ . . . ಅಂಬಿಲದಲ್ಲಿ ಕುಡಿಯೆ ವಾತಾಜೀರ್ಣ ಪರಿಹರ (ಸಠವೈ. ೩೭೫). [ಸಂ.]

**ವಾತಾತಪಿಕ** (ನಾ). [ವೈದ್ಯಶಾ] ರಸಾಯನವಿಧಿಯ ಎರಡು ಪ್ರಯೋಗಗಳಲ್ಲಿ ಒಂದು ಬಗೆ; ಅನಿಲರೂಪದಿಂದ ದ್ರವ್ಯಗಳನ್ನು ಬಿಸಿಮಾಡುವ ಕ್ರಿಯೆ : ಈ ರಸಾಯನವಿಧಿಯ ಪ್ರಯೋಗವನ್ನು ಕುಟೀಪ್ರಾವೇಶಿಕ, ವಾತಾತಪಿಕವೆಂದು ಎರಡು ತೆಱನಾಗಿ ಋಷಿಗಳು ಹೇಳಿರುವರು (ವೈದ್ಯಸಾ. II, ೨೫೩). [ಸಂ.]

**ವಾತಾತಿಸಾರ** (ನಾ). ವಾತದೋಷದಿಂದ ಉಂಟಾಗುವ ಭೇದಿ : ಕೆಂಪಾಗಿ ನೊರೆಗೂಡಿ ಅಡಿಗಡಿಗೆ ಅಲ್ಪಸ್ವಲ್ಪವಾಗಿ ಒಂದೊಂದು ವೇಳೆ ಕೂಗುತ ಹೊಟ್ಟೆ ಕಳವುದೆ ವಾತಾತಿಸಾರ ಲಕ್ಷಣ (ಸಠವೈ. ೩೦೭). [ಸಂ.]

**ವಾತಾಪಿ** (ನಾ). ೧. ಒಂದು ಊರಿನ ಹೆಸರು ; P ಚಾಲುಕ್ಯರ ರಾಜಧಾನಿಯಾಗಿದ್ದ, ಇಂದಿನ ಬಿಜಾಪುರ ಜಿಲ್ಲೆಯ ಬಾದಾಮಿ : ಚಲಿಕ್ಯೋ ವಲ್ಲಭೇಶ್ವರಃ ಧರಾಧರೇಂದ್ರ ವಾತಾಪಿಮಜೇಯಂ ಭೂತಯೇಭುವಃ (ಎಇ. XXVII, ೮-೪; 543) ; ವಾತಾಪೀ ವಾಸ್ತವ್ಯಾಯ ವತ್ಸಗೋತ್ರಾಯ ತ್ರೈತ್ರ್ಯಚರಣಾಯ ನಾಗಶರ್ಮ್ಮಣಃ ಪುತ್ರಾಯ ಬಾಣಶರ್ಮ್ಮಣೇ (ಎಕ. V (R), ಕೃಷ್ಣರಾ. ೪೮-೩೩ ; ಸು. 725). 'ಬಾದಾಮಿ$_1$' ಪರಾ. ೨. (ಅನೇಕ ಋಷಿಗಳ ಹೊಟ್ಟೆಯೊಳಗೆ ಆಹಾರರೂಪದಲ್ಲಿ ಪ್ರವೇಶಿಸಿ, ಅನಂತರ ಅವರ ಹೊಟ್ಟೆಯನ್ನು ಸೀಳಿ ಹೊರಕ್ಕೆ ಬರುತ್ತಿದ್ದನೆಂದೂ ಇದನ್ನು ತಿಳಿದ ಅಗಸ್ತ್ಯಮುನಿ ಇವನನ್ನು ತನ್ನ ಹೊಟ್ಟೆಯಲ್ಲಿಯೇ ಜೀರ್ಣಿಸಿಕೊಂಡನೆಂದೂ ಹೇಳಲಾಗುವ) ಒಬ್ಬ ರಾಕ್ಷಸನ ಹೆಸರು : ವಾತಾಪಿ ಇಲ್ವಲರ ಕಥೆಯನ್ನು 'ವಾತಾಪಿ' ಎಂಬ ರೂಪದ ವಿವರಣೆಗಾಗಿ ಸೃಷ್ಟಿಸಿ ಅನ್ವಯಿಸಿಕೊಂಡಿರಬಹುದು (ಸಂಶೋತ. ೧೩೭).

ವಾತಾಪಿಗಣಪತಿ = ಬಾದಾಮಿಯಲ್ಲಿ ಪ್ರಸಿದ್ಧವಾಗಿರುವ ಗಣಪತಿಯ ದೇವಸ್ಥಾನ ಮತ್ತು ಅಲ್ಲಿಯ ಗಣಪತಿ : ಮುತ್ತುಸ್ವಾಮಿ ದೀಕ್ಷಿತರು ಈ ರಾಗದಲ್ಲಿ ವಿಘ್ನೇಶ್ವರನ ಮೇಲೆ 'ವಾತಾಪಿಗಣಪತಿಂ ಭಜೇಹಂ' ಕೃತಿಯನ್ನು ಅಮೋಘವಾಗಿ ರಚಿಸಿದ್ದಾರೆ (ಸಂಗೀಚಂ. ೧೪೦). [ಸಂ.]

**ವಾತಾಪ್ತ** (ನಾ). ವಾಯುವಿನ ಗೆಳೆಯ ; ಅಗ್ನಿ : ಉರಿಯದಿರು ವಾತಾಪ್ತ . . . ದುರ್ಗರ್ವಮಂ ಹರಿಯಜೇಂದ್ರರ್ ಬಿಟ್ಟು ಪೂರ್ವಸ್ಮೃತಿಯ ಮಾಳ್ಪುದು (ವಿಕೋಪು. ೨-೬೩). [ಸಂ.]

ವಾತಾಪ್ತನೇತ್ರ = ಅಗ್ನಿಯನ್ನು ಕಣ್ಣಾಗಿ ಉಳ್ಳವನು ; ಶಿವ : ವಾತಾಪ್ತನೇತ್ರನಂ ತನ್ನೊಳುಂ ಕಾಣ್ಬ ಪಳುಕಿನ ಕನ್ನಡಿಯೊಳು ಪೊಳೆವ ಭೂತಳವ ಬೆಳಗುವ ದ್ವಾದಶಾತ್ಮಪ್ರಭೆಗಳೋತು ರವಿಕಾಂತದಮಲಪ್ರಭೆಯ ನುಂಗಿ ಮಿಗೆ ತಾ ತೋಱಲಾ ಪಳುಕು ಕಾಣಿಸದ ಮಾಳ್ಕೆಯಿಂ ಶಿವನೊಳಿಹ ಗುರುಧುರೀಣಂ (ವಿಕೋಪು. ೭-೨೪). [ಸಂ.]

**ವಾತಾಯನ** (ನಾ). ಕಟ್ಟಡಗಳಲ್ಲಿ ಗಾಳಿ, ಬೆಳಕು ಬರುವಂತೆ ಗೋಡೆಯಲ್ಲಿ ಮಾಡಿರುವ ಕಿಂಡಿ ; ಗವಾಕ್ಷಿ : ಪ್ರಾಸಾದಲಕ್ಷ್ಮಿಯ ಕರ್ಣೋತ್ಪಲಂಗಳಂತೆ ವಾತಾಯನವಿವರಂಗಳೊಳ್ ಪಾರವತಂಗಳೆಸೆಯೆಯುಂ (ಕಾದಂಪೂ. ೫೧೩); ನಿಧುವನ ನಿಕೇತನದ ವಾತಾಯನಂಗಳೊಳ್ನುಸುಳ್ದು . . . ರಂಜಿಸಿಯುಂ (ರಾಜಶೇ. ೧೨-೩೯ ವ). [ಸಂ.]

**ವಾತಾಯನಿತ** (ಗು). ರಂಧ್ರಗಳಿಂದ ಕೂಡಿದ ; ತೂತಾದ : ಮೊನೆಯಲಗಿನಂಬುಗಳ ಬಿಱುಸರಿಗನಿಬರಂಗವ ತೆತ್ತು ವಾತಾಯನಿತವಿಗ್ರಹವಾಯ್ತು ನಿಗ್ರಹದತಿಮಹಾರಥರು (ಕುವ್ಯಾದ್ರೋ. ೧೨-೨೨). [ಸಂ.]

**ವಾತಾಯು** (ನಾ). ಜಿಂಕೆ ; ಎರಳೆ : ಮಾಯೆಯಲಿ ಮಾರೀಚನಾ ವಾತಾಯುವಾಗಿಯೆ ಸುಳಿಯಲು (ತೊರರಾ. ೩-೮-೧೬); ಘನಕಾರುಣ್ಯರಸಾನ್ವಿತಂ ಪೊರೆದನಾ ವಾತಾಯುವಂ ಮೋಹದಿಂ (ವಿಷ್ಣುಪು. ೨-೩-೧೨). [ಸಂ.]

**ವಾತಾರಿ** (ನಾ). ೧. ಹರಳುಗಿಡ ಮತ್ತು ಅದರ ಬೀಜ : ಜಳದೊಳ್ ರಾಶ್ನೆ . . . ತಗ್ಗಿ ವಾತಾರಿ ನೆಗ್ಗಿಲೆರಟ್ಟುಳ್ಳಮೆನಿಪ್ಪಿವಂ ಕುಡೆ ಕಷಾಯಂ ಮಾಡಿ (ಲೋಕೋಪ. ೯-೨೩೮). ೨. ಒಂದು ಬಗೆಯ ಸಸ್ಯ : "ವಾತಾರಿ – ನೀಲವೃಕ್ಷ, ಗೇರು, ಹೆಮ್ಮರ" (ಓಷಧಿ ೧೫೦). [ಸಂ.]

**ವಾತಾಲಿ** (ನಾ). ಬಿರುಗಾಳಿ ; ಚಂಡಮಾರುತ : ಗಡಗಡನೆ ಪೊಡವಿ ನಡುಗಿತು . . . ಮುಂಗಾರ ವಾತಾಲಿಗೊಲೆವ ಕದಲಿಕೆಯಂತೆ (ವೃಶಾಪಿ. ೪೮-೬೮೦). [ಸಂ. ವಾತಾಲಿ, ವಾತಾಲೀ]

**ವಾತಾವರಣ** (ನಾ). ೧. (ಭೂಮಿಯ ಸುತ್ತಲೂ ಇರುವ) ಗಾಳಿಯಿಂದ ಕೂಡಿದ ಪ್ರದೇಶ ; ವಾಯುವಲಯ : ನಮ್ಮ ಭೂಮಿಯಿಂದ ಹೊರಕ್ಕೆ ಹೊರಟುಹೋಗಬಹುದಾದ ಉಷ್ಣವು ನಮ್ಮ ವಾತಾವರಣದಲ್ಲಿರುವ ನೀರಿನ ಆವಿಯಿಂದ ತಡೆಯಲ್ಪಡುವುದು (ಭೌತಶಾ. ೨೯೭); ಭೂಮಿಯನ್ನು ಒಂದು ವಾಯುವಿನ ಪೊರೆ ಆವರಿಸಿದೆ. ಇದನ್ನು ಭೂಮಿಯ ವಾತಾವರಣ ಎನ್ನುತ್ತಾರೆ (ಆಕಾಶ. ೧೮). ೨. ಹವಾಮಾನ ; ವಾಯುಗುಣ : ಆ ದೇಶದ ವಾತಾವರಣ ನಮಗೆ ಒಗ್ಗಲಿಲ್ಲ (ರೂಢಿ). ೩. (ಅಲಂ) ಪರಿಸ್ಥಿತಿ ; ಸನ್ನಿವೇಶ : ಚಿಕ್ಕಪುಟ್ಟ ಸಂಗತಿಗಳನ್ನು ಭೂತಗನ್ನಡಿಯಲ್ಲಿ ತೋರಿಸಿ ವಾತಾವರಣವನ್ನು ಕೆದಕತೊಡಗಿದಳು (ಭಾರಥಿ. ೧೬೦). [ಸಂ.]

**ವಾತಾಶನ** (ನಾ). ೧. ಗಾಳಿಯೊಂದು ಮಾತ್ರ ಆಹಾರವಾಗಿರುವುದು : ತ್ರಿದಿನಕ್ಕೊರ್ಮೆ ಫಲಾದನಂ ನೆಗಳ್ದುದಾತಂಗೊಂದು ತಿಂಗಳ್ ದ್ವಿಮಾಸದೊಳಾಱುಂ ದಿನಕೊರ್ಮೆ ತತ್ಫಳಚಯಾಹಾರಂ . . . ಮಾಸಪಂಚಕದೊಳಾಯ್ತಾತಂಗೆ ವಾತಾಶನಂ (ಶಬತಂ. ೨-೯೯). ೨. ಹಾವು. [< ಸಂ. ವಾತಾಶಿನ್]

**ವಾತಾಹತಿ** (ನಾ). ಗಾಳಿಯ ಹೊಡೆತ, — ಪೆಟ್ಟು : ಮನುವಂಶಮಂಡನಂ . . . ದೀಪಂ ವಾತಾಹತಿಯಿಂ ನಂದುವಂತೆ ಮೂರ್ಛೆಗೆ ಸಂದಂ (ಪಂರಾಮಾ. ೯-೧೧೬). [ಸಂ.]

**ವಾತಾಹಾರ** (ನಾ). ಗಾಳಿಯನ್ನೇ ಆಹಾರವಾಗಿ ಉಳ್ಳವನು : ಅವನು . . . ವಾತಾಹಾರನಾಗಿ ಉಗ್ರತಪಸ್ಸನ್ನು ಹಿಡಿದಿದ್ದಾನೆ (ವಚಭಾ. ೩೭೪). [ಸಂ.]

**ವಾತಿ$_1$** (ನಾ). ೧. ಗಾಳಿ ; ವಾಯು. ೨. ವಾಯುಪುತ್ರ ; ಹನುಮಂತ : ವಾತಿ ಪರವೆಣ್ಗೆ ಶರಣಾಯಾತಂಗಸುರಂ ಬಿಯಕ್ಕೆ ಗುಪ್ತಂ ರಿಪುಸಂಘಾತಕ್ಕೆ ಪರಾಕ್ರಮನೆನೆ ಭೂತಲಮೇನೆಂದು ಕೇಶಿಯಂ ಬಣ್ಣಿಪುದೋ (ಕಾವ್ಯಾವ. ೭೫೭); ಶರಧಿಮಧ್ಯದ ಮತ್ಸ್ಯಕೇಶನಿದಿರೊಳ್ ವಾತಿಯುರು ಜಯಸ್ತಂಭದೊಳ್ ರಾಮನಾಧಿಕ್ಯಮಂ ಬರೆಯುತಿರೆ (ಪದ್ಮರಾ. ೧೧-೧೬೪). ೩. ಸೂರ್ಯ. ೪. ಚಂದ್ರ. [ಸಂ.]

**ವಾತಿ$_2$** (ನಾ). ಒಂದು ಬಗೆಯ ಹಕ್ಕಿ : "ವಾತೀ - ಕೆಂದಲೆಗವ ಹಕ್ಕಿ" (ಓಷಧಿ. ೧೪೯). [?]

**ವಾತಿಕ** (ನಾ). ೧. ವಾತಪ್ರಕೃತಿಯುಳ್ಳುದು ; ವಾತವುಳ್ಳುದು : ವಾತಪ್ರಕೃತಿಯ ಗುಣಂಗಳ್ ಮಾತಾಪಿತೃಗಳ್ಗೆ ಮುನ್ನಮುಳ್ಳೊಡೆ ಮಱಿಯುಂ ವಾತಿಕನಕ್ಕುಂ (ಅಶ್ವಶಾ. ೯-೮೬). ೨. ಚಾತಕಪಕ್ಷಿ. [ಸಂ.]

**ವಾತುಲ** (ಗು). ೧. ವಾತರೋಗದಿಂದ ಬಾಧಿತವಾದ ; ವಾತರೋಗಕ್ಕೆ ಒಳಗಾದ. ೨. ಹುಚ್ಚಿನಿಂದ ಕೂಡಿದ. (ನಾ). ೩. ಬಿರುಗಾಳಿ. ೪. ಇಪ್ಪತ್ತೆಂಟು ಬಗೆಯ ಶೈವಾಗಮಗಳಲ್ಲಿ ಒಂದು : ಕಾಮಿಕ, ಯೋಗಜ . . . ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು . . . 'ಸಿದ್ಧಾಂತ'ಗಳೆಂಬ ಸಂಜ್ಞೆಯನ್ನು ಪಡೆದಿವೆ (ಭಾರದ. ೭೨). [ಸಂ.]

**ವಾತುಲಾಗಮ, ವಾತುಳಾಗಮ** (ನಾ). ಇಪ್ಪತ್ತೆಂಟು ಬಗೆಯ ಶೈವಾಗಮಗಳಲ್ಲಿ ಒಂದು : ಶಿವಾಗಮಗಳಲ್ಲಿ ವಾತುಲಾಗಮವೇ ಸರ್ವೋತ್ಕೃಷ್ಟವಾದುದು (ಶಿವಾಸೂ. ೯-೨೫ ಟೀಕೆ). **ವಾತುಳಾಗಮ** : ಶೈವಾಗಮವು ಕಾಮಿಕಾಗಮ ಮೊದಲು ವಾತುಳಾಗಮದವರೆಗೆ ಇಪ್ಪತ್ತೆಂಟು ಎಂದು ಪರಿಗಣಿತವಾಗಿದೆ (ಭಾರದ. ೭೨); ಶೈವಾಗಮದಲ್ಲಿ . . . 'ಶೈವಾಗಮ', 'ದೇವ್ಯಾಗಮ' ಅಥವಾ ಶಾಕ್ತಾಗಮ, ವಾತುಳಾಗಮ ಅಥವಾ ತಾಂತ್ರಿಕಾಗಮ' ಮತ್ತು 'ವೀರಶೈವಾಗಮ' ಎಂದು ನಾಲ್ಕು ಒಳಭೇದಗಳಿವೆ (ಭಾರದ. ೭೪). [ಸಂ.]

**ವಾತುಳಾಗಮ** 'ವಾತುಲಾಗಮ' ನೋ.

**ವಾತೂಲ, ವಾತೂಳ** (ಗು). ೧. = ವಾತುಲ ೧. ೨. = ವಾತುಲ ೨. (ನಾ). ೩. ಸುಂಟರಗಾಳಿ ; ಬಿರುಗಾಳಿ. ೪. = ವಾತುಲ ೪ : 'ವಾತೂಲಾಗಮ' ಪರಾ. **ವಾತೂಳ** : ೩. ''ವಾತೂಳಂ ವಾತ್ಯೆ ವಾತಮಂಡಳಿಯುಕ್ಕುಂ'' (ವಸ್ತುಕೋ. ೮-೪೫). ೪. ವಾತೂಲದೊಳು ಸೇರಿದಾಜಿನೆಯ ಲೀಲೆಯ ಮಹಾಬ್ರಹ್ಮಾಂಡ ಪುರಾಣದಲ್ಲಿ ಭಿಕ್ಷಾಟಣವನೆಂದು ಪೇಳುತ್ತಿರ್ದನಾಚಾರ್ಯನು (ವೀಶೈಪು. ೨-೨-೪). [ಸಂ.]

**ವಾತೂಲಾಗಮ** (ನಾ). = ವಾತುಲ ೪ : ಆ ಸಿದ್ಧಾಂತಭೇದಂಗಳಾವವೆಂದೊಡೆ ಕಾಮಿಕಾಗಮ ಯೋಗಜಾಗಮ . . . ಕಿರಣಾಗಮ ವಾತೂಲಾಗಮವೆಂಬವೇ ಇಪ್ಪತ್ತೆಂಟು ದಿವ್ಯಾಗಮಂಗಳಕ್ಕುಂ (ವಿವೇಕ. ೬೨). 'ವಾತುಲಾಗಮ' ಪರಾ. [ಸಂ.]

**ವಾತೂಲಿಕೆ, ವಾತೂಳಿಕೆ** (ನಾ). ವರ್ತುಲಾಕಾರವಾಗಿ ಸುತ್ತಿ ಬರುವ ಗಾಳಿ ; ಸುಂಟರಗಾಳಿ : ಅವಿರಳವಾತೂಲಿ [ಪಾಠಾಂ. ಳಿ] ಕಾಭ್ರಮಣಪರಿಗತತೂಳಿಕಾತಳಮಪ್ಪ ಮನಕ್ಕೆಂತಾನುಂ ಕಾಲಲಬ್ಧಿವಶದಿಂ ನಿವೃತ್ತಿಪರಿಣತಿಯೊಳ್ ಪರಿಣಮಿಸಿದ ಸುಸ್ಥತೆಯಂ ವ್ಯರ್ಥಂ ಮಾಡದೆ (ಚಂದ್ರಪು. ೪-೧೮ ವ). **ವಾತೂಳಿಕೆ** : ನೆಗಪುತ್ತುಂ ಗಗನತಳಕ್ಕಗಣಿತ ವಾತೂಳಿಕಾಳಿಯಂ ಕಾಯ್ಪು ಸಮಂತೊಗೆದ ಕಡುವಿಸಿಲ ಪಸರಮನುಗುಟುತ್ತುಂ ಬಂದುದತುಳಭೀಷ್ಮಂ ಗ್ರೀಷ್ಮಂ (ಕುಸುಮಾ. ೮-೧೧೪) ; ಆ ಗಂಗಾತರಂಗಿಣೀ ತುಂಗವಾತೂಳಿಕಾಸಂಗದಿಂದಳ್ಳಾಡುತ್ತುಮಿರ್ದ ತೀರದ್ವಯಪರ್ಯಂತಕಾಂತಾರ ತರುನಿಕರಶಾಖಾಶಿಖಾವಳಯಾಗ್ರಂಗಳಿಂದುದಿರ್ದು ಬಿಬ್ಬಿ (ಬಾಧಪು. ೧೦-೭೧ ವ). [ಸಂ. ವಾತೂಲಿಕಾ]

**ವಾತೂಳ** 'ವಾತೂಲ' ನೋ.

**ವಾತೂಳಿ** (ನಾ). = ವಾತೂಲಿಕೆ : ವಾತೂಳೀಜಾಳನೋನ್ಮೀಳಿತಜಟಿಳತರಸ್ಥೂಳಧೂಳೀ ಪ್ರಜಾಳಪ್ರೋತಕ್ಷೋಣೀತಳಂ . . . ಲೋಕಕ್ಕುರ್ವರಂ ಪಡೆದು ಬಿಡದೆ ಬಂದತ್ತು ದುರ್ಗ್ರೀಷ್ಮಕಾಲಂ (ಬಾಧಪು. ೪-೭೬). [ಸಂ. ವಾತೂಲೀ]

**ವಾತೂಳಿಕೆ** 'ವಾತೂಲಿಕೆ' ನೋ.

**ವಾತೋದರ** (ನಾ). ಹೊಟ್ಟೆಯಲ್ಲಿ ಗಾಳಿ ತುಂಬಿಕೊಂಡು ಊದಿಕೊಳ್ಳುವ ಒಂದು ಬಗೆಯ ರೋಗ : ಈ ಎಣ್ಣೆಯಂ ಹಾಲಲ್ಲಿ ತೆಗೆದುಕೊಳ್ಳೆ ವಾತೋದರ ಮಾಣ್ಗುಂ (ವಿಷ್ಯವಿ. ೪). [ಸಂ.]

**ವಾತೋದರಿ** (ನಾ). ಹೊಟ್ಟೆಯಲ್ಲಿ ಗಾಳಿ ತುಂಬಿಕೊಂಡು ಊದಿಕೊಳ್ಳುವ ಒಂದು ಬಗೆಯ ರೋಗ : ಅಂತಪ್ಪ ರೇಬೆಯ(ಯ್ದುಂ) ಚಿಂತಿಸದಾ ಪ್ರೋಥಮಧ್ಯದೊಳ್ ತೋರ್ಪೊಡೆ ಬಾಳ್ಗುಂ ತುರಗಮೇಕವಿಂಶತಿವರುಷಂ ಸಾಯ್ಗುಂ ಬಟಿಕ್ಕೆ ವಾತೋದರಿಯೊಳ್ (ಅಶ್ವಶಾ. ೫-೨೭). [ಸಂ. ವಾತೋದರಿನ್]

**ವಾತ್ಯೆ** (ನಾ). = ವಾತೂಲಿಕೆ : ''ಸುಟ್ಟುರೆಘಾಳಿಯಂ ವಾತ್ಯಾ ಎಂಬುದು '' (ಹಲಾಯು. ೧೪-೭೭). [ಸಂ.ವಾತ್ಯಾ]

**ವಾತ್ಸಕ** (ನಾ). ಕರುಗಳ ಹಿಂಡು : ''ವಾತ್ಸಕಂ, ಧೈನುಕಂ - ಈ ೨ ಕ್ರಮದಿಂದ ಕರುಗಳ ಹಿಂಡಿಗೂ ಆಕಳ ಹಿಂಡಿಗೂ ಬೇರೆಬೇರೆ ಹೆಸರು. ಎಳೆಕರುಗಳ ಹಿಂಡು, ವಾತ್ಸಕ'' (ಸಿದ್ಧಾಂತಿ. ೨೯೨). [ಸಂ.]

**ವಾತ್ಸಲ್ಯ** (ನಾ). ೧. (ಹಿರಿಯರು ಕಿರಿಯರ ಬಗ್ಗೆ ತೋರುವ) ಮಮತೆ; ಅಕ್ಕರೆ; ವಾಂಛಲ್ಯ : ಅಣ್ಣದೇವನೊಳಿಡಿದ ವಾತ್ಸಲ್ಯಮೆಂಬ ಬಲ್ಗಣ್ಣೆಯೊಳ್ಕಟ್ಟುವಡೆದು (ಜೈಮಿಭಾ. ೧೮-೬೦) ; ತಾಯಿ ಮಕ್ಕಳನ್ನು ಪ್ರೀತಿಸುತ್ತಾಳೆ : ಇದು ವಾತ್ಸಲ್ಯ (ಧರ್ಮಸಾ. ೨೩). ೨. [ಜೈನ] ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಏಳನೆಯದು ; ತನ್ನ ಸಹಯೋಗಿಗಳನ್ನೂ ಸತ್ಯಮಾರ್ಗಾವಲಂಬಿಗಳನ್ನೂ ಅತ್ಯಂತ ಸ್ನೇಹದಿಂದ ಕಾಣುವುದು : ಜಿನಪ್ರಣೀತಮಪ್ಪ ಧರ್ಮಾಮೃತಂಗಳೊಳ್ ಮಿಥ್ಯಾನುರಾಗಮಂ ಪತ್ತುವಿಡಿಸುವುದು ವಾತ್ಸಲ್ಯಂ (ಚಾವುಂಪು. ೨೪೧) ; ಜಿನಪ್ರಣೀತ ಧರ್ಮಾಮೃತದೊಳ್ ನಿತ್ಯಾನುರಾಗತೆ ವಾತ್ಸಲ್ಯಂ (ತತ್ತ್ವಪ್ರ. ೨೬೫). [ಸಂ.]

**ವಾತ್ಸ್ಯಾಯನ** (ನಾ). ೧. ಕಾಮಶಾಸ್ತ್ರವನ್ನು ರಚಿಸಿದ ಒಬ್ಬ ಮುನಿಯ ಹೆಸರು : ಪುಲ್ಲಶರನುಮಂ ಚಲ್ಲದೊಳ್ ಪದವಡಿಸಲುಂ ವಾತ್ಸ್ಯಾಯನನುಮಂ ಮತ್ಸರದೊಳ್ ಗೆಲಲುಂ . . . ಬಲ್ಲವರಾಗಿ ಮದನನ ಪರಿಚಾರಿಕೆಯರಂಬೆತ್ತುವಂತೆ ಪೂವನೆತ್ತುವ ಪುಷ್ಪಲಾವಿಕಾಚತುಷ್ಪಥದೊಳ್ (ಶಾಂತಿಪು. ೮-೭೨ ವ) ; ವಾತ್ಸ್ಯಯನನಂ ಪೊಱವೊಱಸು ಮೂಟ್ಬಿ ಕಂಡವರಂ ಮೂವಣ್ಣಂಬರಿವ ನವವಾರವಿಳಾಸಿನಿಯರಿರುತಿರ್ಪ ನೆಲೆವನೆಗಳಿನೊಪ್ಪುವ ಸೂಳೆಗೇರಿ ಸೊಗಯಿಸುತಿರೆ (ಜಗವಿ. ೨-೨೧ ಅಡಿವದ್ಯ). ೨. ಕಾಮಶಾಸ್ತ್ರ : ಸತ್ಕಾವ್ಯನಾಟಕವಾತ್ಸ್ಯಾಯನನೃತ್ತಗೀತ . . . ವಾದ್ಯಕಕುನೋದ್ಯದ್‌ಹೃದ್ಯವಿದ್ಯಾಕದಂಬಕಮುಂ ಚಂದ್ರಕವೀಂದ್ರನೊರ್ವನೆ ಬಲ್ಲಂ ಪೆಱರ್ಬಲ್ಲರೇ (ಮದತಿ. ೧-೫೧); ಪಂಡಿತವಕ್ಕಿಗಳಂ ನಿಜಕರಾಗ್ರದಿಂ ಪಿಡಿದೊಡಗೊಂಡು ಪೋಗಿ ನಿಜಗೃಹದೊಳೋವಿಯಾ ಗಿಳಿಯ ಮುದ್ದುತನಕ್ಕೊಲ್ದು ವಾತ್ಸ್ಯಾಯನಮನೋದಿಸಿ ರಸಾಲರಮಣನೆಂಬ ಪೊಸವೆಸರಿಟ್ಟು (ರಾಜಶೇ. ೧-೧೩೫ ವ). ೩. ಪ್ರಸಿದ್ಧ ನ್ಯಾಯ ಶಾಸ್ತ್ರಕಾರನೊಬ್ಬನ ಹೆಸರು. [ಸಂ.]

**ವಾದ** (ನಾ). ೧. ಮಾತನಾಡುವುದು ; ಮಾತನಾಡುವಿಕೆ. ೨. ಮಾತು ; ಸಂಭಾಷಣೆ : ''ವಾದಃ, ವಾದನಂ, ವಾದನೀಯಂ - ಈ ೩ ಮಾತು'' (ಕಾಶಕ್ಕ. ೨೯೮). ೩. ವಿವರಣೆ ; ವ್ಯಾಖ್ಯಾನ. ೪. ಚರ್ಚೆ ; ವಿವಾದ : ವೇದಶ್ರುತಿಗಳ ತಿಳಿಯಲಱಿಯದೆ ವಾದವ ಮಾಡುವರೆಲ್ಲಾ ಕೇಳಿ (ಬಸವ. ೫೪೫); ರಾವಣ ಕೇಳು ರಾಮನ ಬಲದೊಳೊಂದತಿವಾದ ಘಟ್ಟಿತು (ಕಾಶಿರಾ. ೧೮-೨೬). ೫. ತತ್ತ್ವನಿರ್ಣಯಕ್ಕಾಗಿ ಮಂಡಿಸುವ ಮಾತು ; ಪ್ರತಿಪಾದನೆ : ವೈಷ್ಣವವಾದಿ ಹರಿಯೆ ಪರವೆಂದು ಭೂವರಗೃಹದ್ವಾರದೊಳ್ ಬರೆದು ಪತ್ರಂಗಟ್ಟೆ ಕೇಳ್ದು ವಾದಕ್ಕೆ ನೃಪಸಭೆಗೆಯ್ದಿದಂ ಗುರುವರಂ (ಪದ್ಮರಾ. ೯ ಸೂಚನೆ) ; ವಾದಕ್ಕೆಂದುಜ್ಜುಗಿಸಿದ ವಾದಿಗಳಂ ಜಯಿಸಲೆಂದು ಬಸವಾಧಿಪನಾಮೋದಂ ಮಿಗೆ ಬರಲಟ್ಟಿದ (ವೃಷವಿ. ೩೭-೬೬). ೬. ವಾಗ್ಯುದ್ಧ ; ವಾಕ್ಕಲಹ : ನಿಮ್ಮ ವಾದ ಬಿಡಿಸಲು ನನಗೆ ಸಾಧ್ಯನಿಲ್ಲ (ರೂಢಿ). ೭. ಸಿದ್ಧಾಂತ ; ಮತ : ಯಾವ 'ವಾದ'ಕ್ಕೂ ಮಾರುಹೋಗದೆ ಸಾಹಿತ್ಯವು ಮಾನವೀಯವ್ಯಕ್ತಿತ್ವದ ಮೂಲದ್ರವ್ಯದ ಉದಾತ್ತೀಕರಣ ಇಲ್ಲವೆ ಊರ್ಧ್ವಮುಖತೆಯ ಕಡೆಗೇ ತನ್ನ ಲಕ್ಷ್ಯವನ್ನು ಪೂರೈಸಬೇಕು (ನವ್ಯಕಾ. ೧೯). ೮. ಧ್ವನಿ ; ನಾದ. ೯. ಬೀದಿಮಾತು ; ಗಾಳಿಸುದ್ದಿ. ೧೦. ಕೀಳುಲೋಹಗಳನ್ನು ಚಿನ್ನವನ್ನಾಗಿ ಮಾರ್ಪಡಿಸುವ ಒಂದು ಬಗೆಯ ವಿದ್ಯೆ ; ರಸವಾದ : ವಾದದ ಹೇಮ ಸ್ವಯ ಹೇಮವ ಕೂಡಿ ವೇದಿಸಲಿಕ್ಕೆ ವಿಭೇದವಾದುದಿಲ್ಲ (ಸಕವ. ಕ. II, ೫೦೩-೧೪೪೮); ವಾದ ವಶ್ಯ ವಯೋನಿರೋಧನ . . . ಸಾಧಿಸಿಹ ಘುಟಿಕಾಪಾದುಕಾಸಿದ್ಧಿಗಳ ಪಡೆದಿಹ ಸಾಧಕರು ಮೊದಲಾಗಿ ಕಾಲಾಧೀನರಾಗಿಹರು (ಅಮೃತ. ೨-೩೭). ೧೧. [ನ್ಯಾಯ] ನ್ಯಾಯದರ್ಶನದ ಹದಿನಾರು ಬಗೆಯ ಪದಾರ್ಥಗಳಲ್ಲಿ ಒಂದು : ಗೌತಮೋಕ್ತನ್ಯಾಯವು ಪ್ರಮಾಣ ಪ್ರಮೇಯ . . . ವಾದ ಜಲ್ಪ ವಿತಂಡ . . . ನಿಗ್ರಹಸ್ಥಾನಗಳೆಂಬ ಷೋಡಶಪದಾರ್ಥಂಗಳಂ ನಿರೂಪಿಸುತ್ತಲೀ ಪ್ರಪಂಚಕೆ ಪರಮೇಶ್ವರ ಕರ್ತೃಕಮಂ ನಿಶ್ಚಯಿಸುವುದು (ವಿವೇಕ. ೧೦).

**ವಾದಮಾಡು** = ಚರ್ಚಿಸು ; ಚರ್ಚೆಮಾಡು : ಅರಸನು ವಾದಿರಾಜರಿಗೆ ಮಾಡುತ್ತಿರುವ ಸತ್ಕಾರಕ್ಕೆ ಸಹಿಸದೆ ಅವರೊಡನೆ ತಾನು ವಾದಮಾಡಬೇಕೆಂದನು (ಕಭವಿ. ೧೬೦). **ವಾದಹೂಡು** = ಚರ್ಚೆಗೆ ತೊಡಗು ; ವಾದಿಸು : ನಾವು ಹಾಗೆ ಮಾಡೋದು ತಪ್ಪು, ಅನಾರೋಗ್ಯ ಎಂದೆಲ್ಲಾ ವಾದಹೂಡಿದರು (ಮನೋಸಂ. ೨-೪) ; ಅವನು ಅಲ್ಲಿದ್ದ ವಕೀಲನೊಬ್ಬನೊಡನೆ ವಾದಹೂಡಿ, ಅದರಲ್ಲಿಯೇ ಮಗ್ನನಾಗಿದ್ದನು (ಪುನರು. ೧೩೮). [ಸಂ.]

ವಾದಂಗೆಯ್ (ಕ್ರಿ). ತತ್ತ್ವನಿರ್ಣಯಕ್ಕಾಗಿ ವಾದಮಾಡು ; ಮಂಡಿಸು : ವಾದಂಗೆಯ್ವಣ್ಮಿದ ಪರವಾದಿಗಳಂ ಗೆಲ್ದು ಜಸಮನಾಳ್ದಿರುತುಂ ಸಮ್ಮೋದದೆ ಪಸೆನಿಂದಂ ಮಹಿಮೋದಧಿ (ವೃಷವಿ. ೩೯-೩೪). [ವಾದ + ಕೆಯ್₁]

ವಾದಕ (ನಾ). ೧. ಮಾತನಾಡುವವನು. ೨. ವೀಣೆ ಮೊದಲಾದ ವಾದ್ಯಗಳನ್ನು ನುಡಿಸುವವನು,—ಬಾಜಿಸುವವನು : ನಾನಾತೋದ್ಯ ವಾದ್ಯಂಗಳನೆ ಮೆಚ್ಚಿದು ಮೆಚ್ಚಂಗೊಳಲ್ ವಾದಕರ್ ಬಂದಿರೆ . . . ಚೆಲ್ವಾಪ್ತುದಾಸ್ಥಾನರಂಗಂ (ಆದಿಪು. ೨-೩) ; ಪಾತ್ರವಾಡೆ ವಾದಕಂ ಬಾಜಿಸಿದಂ (ಶಮದ. ೨೪೯ ಪ್ರಯೋ.). [ಸಂ.]

ವಾದಕಿ (ನಾ). ವಾದ್ಯಗಳನ್ನು ನುಡಿಸುವವಳು, —ಬಾಜಿಸುವವಳು : ಕುಡುಪುಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪೂರ್ವಿಂ ಜತಿಯಂ ತೊಡರದೆ ನಡೆಯಿಸಿ ಪೂರ್ವಿದೆ ಕುದುಪೆನೆ ನರ್ತಕಿಯೆ ಸಭೆಗೆ ವಾದಿಕಿಯಾದಳ್ (ಆದಿಪು. ೯-೩೨). [ವಾದಕ + - ಇ₃]

ವಾದಕ್ಕಿ (ನಾ). ಜೀರಿಗೆ ಜಾತಿಗೆ ಸೇರಿದ ಒಂದು ಬಗೆಯ ಕಾಳು ; ಓಮು ; ಅಜವಾನ : ಚವ್ಯ, ಹಿಪ್ಪಲೀಮೂಲ . . . ವಾದಕ್ಕಿ, ಜೀರಿಗೆ . . . ಇವಿಷ್ಟನು ಅಷ್ಟಾವಶೇಷವಾಗಿ ಕಷಾಯವ ಕಾಸಿ ಜೇನುತುಪ್ಪ ಬೆರಸಿ ಕೊಡಿಸಲು ತ್ರಿದೋಷದಿಂದ ಉಂಟಾದ ಸ್ವರಭಂಗ ಶಮನವಹುದು (ವೈದ್ಯಸಾ. I, ೧೭೭). [< ಓದಕ್ಕಿ]

ವಾದಗೋಷ್ಠಿ (ನಾ). ಚರ್ಚೆ ನಡೆಯುವ ಸಭೆ ; ಚರ್ಚಾಕೂಟ : ಹಿಂದಿನ ಕಾಲದ ವಾದಗೋಷ್ಠಿಗಳ ಒಂದು ವಿಸ್ತೃತಚಿತ್ರವನ್ನು ಪದ್ಮಣಾಂಕನ ಪದ್ಮರಾಜಪುರಾಣದಲ್ಲಿ ನೋಡಬಹುದು (ಕಶಾಅ. ೨೪೩ ಅಡಿಟಿ). [ಸಂ.]

ವಾದಗ್ರಸ್ತ (ಗು). ವಾದಕ್ಕೆ ಗುರಿಯಾದ ; ಚರ್ಚಾಸ್ಪದವಾದ : ಕವಿರಾಜಮಾರ್ಗ . . . ರಚನಕಾರನು ಯಾರೆಂಬ ವಿಷಯವು ಮಾತ್ರ ತುಂಬ ವಾದಗ್ರಸ್ತವಾಗಿದೆ (ಕಸಾಚ. ೫೨). [ಸಂ.]

ವಾದನ (ನಾ). ೧. ಧ್ವನಿಯುಂಟಾಗುವುದು. ೨. ವಾದ್ಯಗಳನ್ನು ನುಡಿಸುವಿಕೆ,—ಬಾಜಿಸುವಿಕೆ : ವಾದನಮಿಲ್ಲದೆಯುಂ ಮಿಗೆ ನಾದಂಗೆಯ್ವುವು ಸುರಾನಕಾನೀಕಂಗಳ್ (ವರ್ಧಪು. ೧೩-೮೦); ವಾದನಕ್ಕೆಂದು ತೆಗೆದುಕೊಂಡ ಕೊಳಲು ಚಿಗುರಿದರೆ ಅದು ವೇಣುವಾಗಿರುವುದೆಂತು ? (ಮಹಾಣಾ. ೫೫). ೩. ವಾದ್ಯಸಂಗೀತ. [ಸಂ.]

ವಾದನದಂಡ (ನಾ). ವಾದ್ಯವನ್ನು ನುಡಿಸಲು ಉಪಯೋಗಿಸುವ ಕಮಾನು, ಕುಡುಹು ಮುಂತಾದುವು : ವಾದನದಂಡಂ ಕುಡುಮಿಂಚಾದುದು ನೇಣಾದುದಮರಚಾಪಂ ವರದಂಭೋದಮದು ಥಕ್ಕೆಯಾದುದು ವಾದಕನಾದುದು ನಟತ್ಕಲಾಪಿಗೆ ಗಗನಂ (ಸೂಕ್ತಿಸು. ೧೦-೧೬೭); ತನು ವಾದ್ಯಂ ನಾಲಗೆ ವಾದನದಂಡಂ (ಶಮದ. ೩೪). [ಸಂ.]

ವಾದಪುಲಿ (ನಾ). ಒಬ್ಬಾತನ ಹೆಸರು : ಅರಬದ್ದಗಿಯರ ವಾದಪುಲಿ ಮಾಡಿದಾನ್ (ಎಕ. VIII, ಸೊರಬ. ೧೦-೯; 800). [?]

ವಾದವಿವಾದ (ನಾ). ೧. ಯಾವುದಾದರೊಂದು ವಿಷಯಕ್ಕೆ, ಒಬ್ಬರು ಹೇಳಿದುದಕ್ಕೆ ಪ್ರತಿಯಾಗಿ ಮತ್ತೊಬ್ಬರು ಹೇಳುವ ಹೇಳಿಕೆ : ಈ ವಾದವಿವಾದಗಳನ್ನು ವಿವರವಾಗಿ ಪರಿಶೀಲಿಸಿ ನೋಡದ ಹೊರತು ಈ ವಿವರಣೆಯೂ ಸ್ಪಷ್ಟವಾಗುವುದಿಲ್ಲ (ದ್ರಾವಿವಿ. ೨೨). ೨. ಜಗಳ ; ವಾಕ್ಕಲಹ ; ವಾಗ್ಯುದ್ಧ : (ಮುಂಬಯಿ. ೩). [ಸಂ.]

ವಾದಸರಣಿ (ನಾ). ವಾದವನ್ನು ಮಂಡಿಸುವ ಕ್ರಮ,—ರೀತಿ : ಅವನ ಇಡೀ ಭಾವ - ಭಂಗಿ-ವಾದಸರಣಿ-ನೆಚ್ಚು ಎಲ್ಲವನ್ನೂ ಕಂಡು, ನಗೆ ಧರ್ಮವೀರರಾದ ಆ ಹುತಾತ್ಮರ ನೆನಪಾಯಿತು (ವೀರಯೋ. ೧೭) ; ಧೈರಕ್ಟರನಿಗೂ ಇವನ ವಾದಸರಣಿ ಹಿಡಿಸಲಿಲ್ಲ (ಹಸುಹೊ. ೨೫). [ಸಂ.]

ವಾದಿ (ನಾ). ೧. ಮಾತನಾಡುವವನು. ೨. ತತ್ತ್ವನಿರ್ಣಯಕ್ಕಾಗಿ ವಾದಿಸುವವನು ; ತಾರ್ಕಿಕ : ಮೊದಲೊಳ್ ಮುಳ್ ಮೇಗೆ ವಿಚಿತ್ರದಳಿತರಕ್ತಪ್ರಸೂನಮೆಂಬಿನಿತಜೊಳಾಗದು ಶಾಲ್ಮಲಿವನರುಹಮಾಪ್ಪುದಂತರಂ ನಿನಗಮಿದಿರ ವಾದಿಗಮಧಿಪಾ (ಶಾಂತಿಪು. ೮-೧೫೨); ವೇದ ಸ್ವಯಂಭುವೆಂಬ ವಾದಿ ನೀ ಕೇಳೆಲವೋ (ಬಸವ. ೫೩೧). ೩. ವಿಷಯವನ್ನು ವಿಶದವಾಗಿ ನಿರೂಪಿಸುವವನು ; ವ್ಯಾಖ್ಯಾನಕಾರ : ''ನೃಪನಲ್ಲಿ ವಾದಿಯಲಿ ನರೇಂದ್ರನೆಂದೆನಿಸು'' (ಮುಂಗಾರಾ. ೧೪೪-೨೭). ೪. ಒಂದು ಮತ ಅಥವಾ ಸಿದ್ಧಾಂತವನ್ನು ಬೋಧಿಸುವವನು : ಧರ್ಮ ವೇದಾಂತ ಸಿದ್ಧಾಂತಗಳಲ್ಲಿ ಪ್ರಮಾಣ ಪ್ರಮೇಯೋಪನ್ಯಾಸ ದೃಷ್ಟಾಂತ ಸಮನ್ವಯದಿ ಸದ್ಯುಕ್ತಿ ನಿರೂಪಕರಾದ ವಾದಿಗಳಿಂ (ವಿವೇಕ. ೨೨೬). ೫. ನ್ಯಾಯಾಸ್ಥಾನ, ಆಯೋಗ ಮೊದಲಾದ ನ್ಯಾಯನಿರ್ಣಯಸ್ಥಾನಗಳಲ್ಲಿ ದಾವಾ ಹಾಕುವವನು ; ಫಿರ್ಯಾದಿ: ವಾದಿಯು ತನ್ನ ದಾವಾ ಅರ್ಜಿಯಲ್ಲಿ ಅಂಥಾ ಮನುಷ್ಯನನ್ನು ನೇಮಿಸಿದ್ದರೆ, ಪ್ರತಿವಾದಿಯು ಸಹ ಒಬ್ಬನನ್ನು ನೇಮಿಸಬೇಕೆಂದು . . . ತಿಳಿಸತಕ್ಕದ್ದು (ಗ್ರಾಮಾಕ. ೧೭) ; ವಾದಿ ಮತ್ತು ಪ್ರತಿವಾದಿಗಳು ಸಂಕಟದಿಂದ ಸುತ್ತಾಡುತ್ತಿದ್ದರು (ಪುಜರು. ೨೩). ೬. ಅಸಂಬದ್ಧವಾಗಿ ಮಾತನಾಡುವವನು ; ವಿತಂಡವಾದಿ : ನಿನ್ನಂಥ ವಾದಿಗಳ ಹತ್ತಿರ ಮಾತನಾಡಿ ಉಪಯೋಗವಿಲ್ಲ (ರೂಢಿ). ೭. [ಸಂಗೀತ] ವಾದಿ, ಸಂವಾದಿ, ವಿವಾದಿ ಮತ್ತು ಅನುವಾದಿ ಎಂಬ ನಾಲ್ಕು ಮುಖ್ಯ ಸ್ವರಗಳಲ್ಲಿ ಒಂದು : ಈ ಸ್ವರವು ವಾದಿ, ಸಂವಾದಿ, ಹಾಗೆಯೇ ವಿವಾದಿ ನಂತರ ಅನುವಾದಿ (ಎಂಬ) ನಾಲ್ಕು ವಿಧದ್ದೆಂದು ಹೇಳಿದೆ (ಚತುಪ್ರ. ೩೨). 'ವಾದಿಸ್ವರ' ಪರಾ.

ವಾದಿಕೋಳಾಹಳ = ತಾರ್ಕಿಕರಲ್ಲಿ ಕೋಲಾಹಲವನ್ನುಂಟುಮಾಡುವವನು ; ಒಂದು ಬಿರುದು : ಇನ್ತು ನಿರವದ್ಯಸ್ಯಾದ್ವಾದಭೂಸಣರುಂ ಗಣಪೋಷಣಸಮೇತರುಮಾಗಿ ವಾದೀಭಸಿಂಹ ವಾದಿಕೋಳಾಹಳ ತಾರ್ಕಿಕಚಕ್ರವರ್ತ್ತಿಯೆಂಬ ನಿಜಾನ್ವಯನಾಮಂಗಳನೊಳಕೊಂಡು (ಎಕ. II (R), ೫೭೯-೩೪; 1124). ವಾದಿಚಕ್ರಾಂಕುಶ = ತಾರ್ಕಿಕರ ಸಮೂಹಕ್ಕೆ ಅಂಕುಶದಂತಿರುವವನು ; ಒಂದು ಬಿರುದು : ಪೋ ಸಾಲ್ವುದು ವಾದಿ ವೃಥಾಯಾಸಂ ವಿಬುಧೋಪಹಾಸಮನು ಮಾನೋಪನ್ಯಾಸಂ ನಿಂನೀ ತೇಥೇವಾಸಂ ಸಂದಪುದೇ ವಾದಿಚಕ್ರಾಂಕುಶನೊಳ್ (ಎಕ. II (R), ೮೧-೪೦; 12ನೆಯ ಶತ). ವಾದಿಚತುರ್ಮುಖ = ತಾರ್ಕಿಕರ ಗುಂಪಿನಲ್ಲಿ ಬ್ರಹ್ಮನಂತಿರುವವನು ; ಒಂದು ಬಿರುದು : ವಾದಿಚತುರ್ಮ್ಮುಖ ರಾಮಚಂದ್ರ ತ್ರೈವಿದ್ಯದೇವರುಂ ವಾದಿವಜ್ರಾಂಕುಶ ಶ್ರೀಮದಕಳಂಕತ್ರೈವಿದ್ಯದೇವರುಮಾ ಪರಮೇಶ್ವರನ ಗುಡ್ಡುಗಳು (ಎಕ. II (R), ೭೦-೯೮; 1163). ವಾದಿಚೂಡಾಮಣಿ = ತಾರ್ಕಿಕರಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : [ಪೊಂಬೊಳಲ] ಕರ್ತೃ ವಾದಿಚೂಡಾಮಣಿ ಕ[ನ್ನೆ]ಯ ದೇವರು ಪುತ್ರಂ ಚಟ್ಟಪಾರ್ಯ್ಯಂ ಪೇಳ್ದಂ (ಸೌಇಇ. XX , ೭೪-೪೪; 1112). ವಾದಿವಜ್ರಾಂಕುಶ = ತಾರ್ಕಿಕರಿಗೆ ವಜ್ರಾಂಕುಶದಂತಿರುವವನು ; ಒಂದು ಬಿರುದು : ಪೋ ಸಾಲ್ವುದು ವಾದಿ ವೃಥಾಯಾಸಂ ವಿಬುಧೋಪಹಾಸಮನು ಮಾನೋಪನ್ಯಾಸಂ ನಿಂನೀ ತೇಥೇವಾಸಂ ಸಂದಪುದೆ ವಾದಿವಜ್ರಾಂಕುಶನೊಳ್ (ಎಕ. II (R), ೧೭೩-೧೫೫; 1145); ವಾದಿವಜ್ರಾಂಕುಶ ಎಂದು ಹೆಸರಾದ ಶುಭಕೀರ್ತಿಗಳು ಬೌದ್ಧರನ್ನೂ ಮೀಮಾಂಸಕರನ್ನೂ ಸೋಲಿಸಿದ್ದರು (ಕಶಾಅ. ೧೦೭). ವಾದೀಭಸಿಂಹ = ತಾರ್ಕಿಕನೆಂಬ ಆನೆಗೆ ಸಿಂಹದಂತಿರುವವನು ; ಒಂದು ಬಿರುದು : ಇನ್ತು ನಿರವದ್ಯ ಸ್ಯಾದ್ವಾದಭೂಸಣರುಂ ಗಣಪೋಷಣಸಮೇತರುಮಾಗಿ ವಾದೀಭಸಿಂಹ ವಾದಿಕೋಳಾಹಳ ತಾರ್ಕ್ಕಿಕ ಚಕ್ರವರ್ತ್ತಿಯೆಂಬ ನಿಜಾನ್ವಯನಾಮಂಗಳನೊಳಕೊಂಡು (ಎಕ. II (R), ೫೭೯-೩೪; 1124). [ಸಂ.ವಾದಿನ್]

ವಾದಿತ (ಗು). ೧. ವಾದ್ಯಗಳನ್ನು ನುಡಿಸಿದ,—ಬಾರಿಸಿದ : ಯುಗಪದ್ವಾದಿತ ದೇವದುಂದುಭಿಗಳಿಂದಾಯ್ತೆಯ್ದೆ ಶಬ್ದಾತ್ಮಕಂ (ಆದಿಪು. ೧೦-೨೧); ವಾದಿತ ವಲ್ಲಕೀಗುಣರವೋದ್ಭವನೂತನದಿವ್ಯಗೀತಸಾರೋದಿತಮೋದೆ . . . ಪಾಲಿಸು ಶಾರದೆಯೆಮ್ಮ ನಾವಗಂ (ಯಾದಚಂ. ೧-೬). (ನಾ). ೨. ವಾದ್ಯಗಳನ್ನು ನುಡಿಸುವಿಕೆ,—ಬಾರಿಸುವಿಕೆ : ''ವಾದಿತದೊಳ್ ತಾಳದ ಸಮನಾದುದು ಲಯಂ'' (ವಸ್ತುಕೋ. ೭೯-೨೪). ೩. ವಾದ್ಯಸಂಗೀತ. [ಸಂ.]

ವಾದಿತ್ರ (ನಾ). ೧. ವಾದ್ಯ : ಕಣ್ಗೊಪ್ಪುವ ಜಯಗಜಮಂ ಲೀಲೆಯಿಂದೇಱಿ ವಾದಿತ್ರಾರಾವಂ ವಂದಿವೃಂದಧ್ವನಿ ಜಯಜಯಕೋಲಾಹಲಂ ಮಂಗಲಾಲಂಕಾರಂ ಯಾತ್ರೋತ್ಸವಪ್ರಸ್ತುತಮೆನೆ ತಳರ್ದಂ ರಾಗದಿಂ ರಾಜರಾಜಂ (ಆದಿಪು. ೧೩-೪೩). ೨. ವಾದ್ಯಸಂಗೀತ : ದಿವಿಜವಾದಕಕರಹತತತವಿತತಘನಸುಷಿರಾವನದ್ಧವಾದಿತ್ರಂ ಸಂಗೀತತೂರ್ಯಮಾಗೆ (ಶಾಂತಿಪು. ೧೦-೬೦ ವ). [ಸಂ.]

ವಾದಿರಾಜಗುಳ್ಳ (ನಾ). ಒಂದು ಬಗೆಯ ಬದನೆಯ ಕಾಯಿ : ''ಕ್ಷುದ್ರವೃಂತಾಕಃ - ವಾದಿರಾಜಗುಳ್ಳ'' (ಚಾಮುಂಡಾ. ೧೯-೧೦೮) ; ಮಧ್ವಮತಸ್ಥರು ಬದನೆಕಾಯಿಯನ್ನು

ನಿಷಿದ್ಧವೆಂದು ತಿರಸ್ಕರಿಸಿದ್ದರೂ ವಾದಿರಾಜರಿಂದ ಪರಿಗೃಹೀತವಾದುದೆಂದು ವಾದಿರಾಜಗುಳ್ಳವನ್ನು ಬಳಸುತ್ತಾರೆ (ರೂಢಿ). [ವಾದಿರಾಜ್ಯ + ಗುಳ್ಳ]

**ವಾದಿಸು** (ಕ್ರಿ). ೧. ಚರ್ಚೆಮಾಡು ; ಚರ್ಚಿಸು : ಆ ಮಧುವನಾ ಕೈಟಭನ ಮುಜಿದೀ ಮಹಾತ್ಮಕನೊಡನೆ ವಾದಿಸುವೀ ಮರುಳನೇನೆಂಬೆನ್ನೆ ಶಿಶುಪಾಲಬಾಲಕನ (ಕುವ್ಯಾಸ. ೯-೩೦). ೨. ತತ್ತ್ವನಿರ್ಣಯಕ್ಕಾಗಿ ಪ್ರತಿಪಾದಿಸು, —ವಾದಮಾಡು : ಉಚಿತಾಲೋಚನೆಯಿಂದ ತನ್ನ ನಿಜವಂ ತಾಂ ಕಾಣದೇ ವಾದಿಪಾ ವಚನಬ್ರಹ್ಮದೆ ಮುಕ್ತಿಯೇ (ಸೋಮೇಶ. ೯೮) ; ಭಾರತಿಗಳು ವಾದಿಸುತಿಹ ತಾರ್ಕಿಕರು ವಾಚಕರು ವಿನೋದಿಗಳೆಸೆದರರ್ತಿಯಲಿ (ಕಂನವಿ. ೮-೨೬).

ವಾದಿಸಾಡು = ಚರ್ಚಿಸು ; ಚರ್ಚೆಮಾಡು : ಆತನ ಶಿಷ್ಯರೂ ಅಧಿಕಾರಿಯೂ ವಾದಿಸಾಡಹತ್ತಿದರು (ಧರ್ಮರ. ೧೩೯). [ವಾದ + – ಇಸು]

**ವಾದಿಸ್ವರ** (ನಾ) = ವಾದಿ ೭ : ಒಂದು ರಾಗದ ಸ್ವರೂಪಪ್ರತ್ಯೇಕತೆ ಎತ್ತಿ ತೋರಲು ಯಾವ ಸ್ವರ ಪದೇ ಪದೇ ಉಪಯೋಗವಾಗುವುದೋ ಆ ಸ್ವರ, ವಾದಿಸ್ವರ, ಈ ಸ್ವರವೇ ಆ ರಾಗದ ಜೀವಸ್ವರವೂ ಹೌದು (ಸಂಗೀತಂ. ೨೦). [ಸಂ.]

**ವಾದೀಂದ್ರ** (ನಾ). ವಾದಿಗಳಲ್ಲಿ ಶ್ರೇಷ್ಠನಾದವನು, – ಪ್ರಸಿದ್ಧನಾದವನು : ಸ್ವಸಂವಿತ್ಪರಂಪರೆ ಪೋಕುಂ ಪ್ರಳಯಕ್ಕೆ ತತ್ಕ್ಷಣೆಕ ಮಿಥ್ಯಾವಾದಿವಾದೀಂದ್ರರಿಂ (ಶಾಂತಿಪು. ೮-೧೪೫). [ಸಂ.]

**ವಾದು** 'ಬಾದು₁' ನೋ.

**ವಾದುಗುಟ್ಟು** 'ಬಾದುಗುಟ್ಟು' ನೋ.

**ವಾದುಗೆಯ್** 'ಬಾದುಗೆಯ್' ನೋ.

**ವಾದ್ಯ** (ನಾ). ೧. ನುಡಿಸುವ, ಊದುವ ಅಥವಾ ಹೊಡೆದು ಬಾರಿಸುವ ವೀಣೆ, ಕೊಳಲು, ತಬಲ ಮುಂತಾದ ಸಂಗೀತ ಸಾಧನ : ವಾದ್ಯಕ್ಕೆ ಬಂಧವಲ್ಲದೆ ನಾದಕ್ಕೆ ಬಂಧವುಂಟೆ (ಸಕವ. ಕ. I, ೪೬೩-೪೪) ; ಮೊಳಗಿದವು ಬಜಿಸಿಡಿಲ ಕಣ್ಣೆಯ ಕಳಚಿದಂತಿರೆ ವಾದ್ಯಚಯವು (ಕುವ್ಯಾದ್ರೋ. ೧೧-೫). ೨. ವಾದ್ಯಸಂಗೀತ. ೩. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ಕುಸುಮ ಶರಬಾಣಮಿಂದ್ರಿಯವಿಷಗಣ ರಥ ಪಂಚಭೂತಮಾರ್ಗಣಸಹಿತಂ ಶಶಿಮುಖಿಯರು ವಸುಧೀಶರು ಸಕಲಕುಶಲಭಕ್ಷ್ಯಗಳ್ ವಾದ್ಯವೈದಱ ಪೆಸರುಂ (ಭಾಸ್ಕರ. ೭೩-೯).

ವಾದ್ಯವಿದ್ಯಾಧರ = ವಾದ್ಯಗಳನ್ನು ನುಡಿಸುವುದರಲ್ಲಿ ವಿದ್ಯಾಧರನಂತಿರುವವನು ; ಒಂದು ಬಿರುದು : ವಾದ್ಯವಿದ್ಯಾಧರ [ನೊ]ಳ್ಪರಸಂಕ[ಶಂಕ]ರಂ ಕಪ್ಪುರವರ್ಷನ್ರಿಪಗೆ ನೆಗರ್ದ್ದನೆಬೆಗಮಹೀಶ ತದನುಜ (ಸೌಇಇ. XX, ೫೦-೧೫ ; 11ನೆಯ ಶತ). [ಸಂ.]

**ವಾದ್ಯಕಾರ** (ನಾ). ವೀಣೆ ಮೊದಲಾದ ಸಂಗೀತವಾದ್ಯಗಳನ್ನು ಬಾಜಿಸುವವನು, – ನುಡಿಸುವವನು : ಇಂದು ನಾವು . . . ಒಂದು ಸಂಗೀತಕಾರ್ಯಕ್ರಮವನ್ನು ನೋಡಿದಲ್ಲಿ ನಮಗೆ ಕಾಣುವುದು ತಂಬೂರಿ, ಗಾಯಕರು ಮತ್ತು ವಾದ್ಯಕಾರರು (ಭಾರದ. ೫೩೫). [ಸಂ.]

**ವಾದ್ಯಕೋಣ** (ನಾ). [ಸಂಗೀತ] ವಾದ್ಯಗಳನ್ನು ನುಡಿಸುವ ಕೋಲು, ಕುಡುಪು, ಮುಂತಾದ ಸಾಧನ : "ಅಪಕೃತ್ಯಂ ವಾದ್ಯಕೋಣಂ ಗುಡಂ ಅಪಮಾನಂ ಪಡೆಯಂತಕಂ ಮದನಶಿಕ್ಕೋಪಾಯ ದಂಡಾಪ್ಪಯಂ" (ನಾನಾರ. ೧೨೮). [ಸಂ.]

**ವಾದ್ಯಗಾರ** (ನಾ). = ವಾದ್ಯಕಾರ : ವಾದ್ಯಗಾರರೆಲ್ಲರೂ ಒಂದು ಬಾಗಿಲಲ್ಲಿ ಕುಳಿತರು (ಕವಿಕ. ೪೯); ಅವುಗಳ ಮಧ್ಯೆ ನೃತ್ಯಗಾರರ, ನೃತ್ಯಗಾತಿಯರ, ವಾದ್ಯಗಾರರ ಚಿತ್ರಗಳು ಇತ್ಯಾದಿ ಕೆತ್ತನೆ ಇರುತ್ತದೆ (ನೊಳಂಬ. ೧೧೫).

[ವಾದ್ಯ + - ಗಾರ (<– ಕಾಱ)]

**ವಾದ್ಯಗೋಷ್ಠಿ** (ನಾ). ಅನೇಕ ವಾದ್ಯಗಳ ವಾದನಕಚೇರಿ : ವಾದ್ಯಗೋಷ್ಠಿಯಲ್ಲಿಯೂ ಇತರ ಭಾಗಗಳ ನೃತ್ಯಶಾಲೆಗಳಲ್ಲಿಯೂ . . . ಅನೇಕ ಬಗೆಯ ಘನವಾದ್ಯಗಳು ಕಾಣಬರುತ್ತವೆ (ಭಾರದ. ೫೪೫). [ಸಂ.]

**ವಾದ್ಯಭಾಂಡ** (ನಾ). ೧. (ಜಲತರಂಗವೆಂಬ) ವಾದ್ಯಕ್ಕೆ ಬಳಸುವ ಬಟ್ಟಲು. ೨. ವಾದ್ಯಸಮೂಹ. [ಸಂ.]

**ವಾದ್ಯಮೇಳ** (ನಾ). ವಾದ್ಯಗಳ ಸಮೂಹ, – ಗುಂಪು : ಈ ವೀರಗಾಥವನ್ನು ವಾದ್ಯಮೇಳದೊಂದಿಗೆ ಹಾಡದ ಮನೆಯಿಲ್ಲ, ಗ್ರಾಮವಿಲ್ಲ (ಭಾರದ. ೪೫೭).

[ಸಂ. ವಾದ್ಯಮೇಲ]

**ವಾದ್ಯವಿತಾನ** (ನಾ). = ವಾದ್ಯಮೇಳ : ವರಸುದತಿಯರು ಸೂಸಿದರು ಸೇಸೆಯನುದಿತ ಮಂಗಳಘೋಷವಾದ್ಯವಿತಾನರಭಸದಲಿ (ಕುವ್ಯಾವಿ. ೯-೨೪). [ಸಂ.]

**ವಾಧ್ರೀಣಸ** (ನಾ). ಮೂಗಿನ ಮೇಲೆ ಕೊಂಬುಳ್ಳ ಒಂದು ಬಗೆಯ ಪ್ರಾಣಿ ; ಖಡ್ಗಮೃಗ; ಘೇಂಡಾಮೃಗ. [ಸಂ.]

**ವಾನ** (ಗು). ೧. (ಜೋರಾಗಿ) ಬೀಸಿದ. ೨. ಒಣಗಿದ ; ಶುಷ್ಕವಾದ. ೩. ಕಾಡಿಗೆ ಸಂಬಂಧಸಿದ. (ನಾ). ೪. ಬೀಸುವಿಕೆ. ೫. ಒಣಗಿದ ಅಥವಾ ಒಣಗಿಸಿದ ಹಣ್ಣು, ಕಾಯಿ ಮುಂತಾದವು : "ವಾನಂ, ಶುಷ್ಕಂ – ಈ ೨ ಒಣಗಿದ ಕಾಯ್" (ಹಲಾಯು. ೩೧-೩೫). ೬. ಮರಗಿಡಗಳ ಗುಂಪು. ೭. ನೇಯುವಿಕೆ ಅಥವಾ ಹೊಲಿಯುವಿಕೆ. ೮. ಬದುಕುವಿಕೆ ; ಜೀವಿಸುವಿಕೆ. ೯. ಗತಿ ; ಚಲನೆ. ೧೦. ಸುಗಂಧದ್ರವ್ಯ. ೧೧. ಕರ್ಮದ ಫಲ. ೧೨. ಕೊರತೆಯಿಲ್ಲದಂಥದು; ಅಭಿವೃದ್ಧಿಯುಳ್ಳುದು. ೧೩. ಬೆಟ್ಟದ ತಪ್ಪಲು ; ಸಾನು : "ಅಕ್ಷೀಣ ಶಲಾಟು ಕರ್ಮಫಲ ಸಾಧನ ವಾನಶಬ್ದ" (ನಾನಾರ. ೯೧). ೧೪. ಆನೆಯ ಮದ : "ಕರಿಯ ಮದ ಗಿರಿಯ ತಪ್ಪಲು ವರಚಲ್ಲುವುದಾರಕರ್ಮಗಳ್ ಕಾಯಾಱುಂ ಧರೆಯೊಳು ವಾನಾಖ್ಯಂ" (ನಾನಾಕಂ. ೧೧೩). ೧೫. ಮಾದಕಪಾನೀಯ : "ಮೈರೇಯಮಾಸವಂ . . . ವಾನಂ ಕಲ್ಕಂ ವಾರುಣಿ ಕಾದಂಬರಿಯದು . . . ಕಳ್ಳುಂ" (ವಸ್ತುಕೋ. ೯೨-೫). ೧೬. ಗೋಡೆಯಲ್ಲಿ ಕೊರೆದ ತೂತು ; ಕನ್ನ. ೧೭. (ಬಿದಿರಿನ) ಕಡ್ಡಿಯ ಚಾಪೆ. [ಸಂ.]

**ವಾನಪ್ರಸ್ಥ** (ನಾ). ೧. ಬ್ರಾಹ್ಮಣನು ಆಚರಿಸಬೇಕಾದ ಚತುರಾಶ್ರಮಗಳಲ್ಲಿ ಮೂರನೆಯದು ; ದ್ವಿಜನು ಬ್ರಹ್ಮಚರ್ಯ ಮತ್ತು ಗೃಹಸ್ಥಾಶ್ರಮಗಳನ್ನು ತೀರಿಸಿಕೊಂಡು ತಪಸ್ಸು ಮತ್ತು ಪೂಜಾದಿ ಕಾರ್ಯಗಳಲ್ಲಿ ನಿರತನಾಗಲು ಕಾಡಿಗೆ ಹೋಗಿ ಜೀವಿಸುವುದು : ಪುರುಕುಲಜರ್ ಬಳಿಕಂ ವಾನಪ್ರಸ್ಥಕ್ಕೆಳವಡೆ ತಾಂ ವೃಕ್ಷಮೂಲಮಂ ಮನೆಗೈವರ್ (ಶಾಕುಂತ. ೧೦೬-೧೮೩) ; ಮನುಷ್ಯನ ಆಧ್ಯಾತ್ಮಸಂಪತ್ತಿಗೆ ಅನುಕೂಲಿಸುವ ಜೀವನದ ಹಂತಗಳಿಗೆ ಆಶ್ರಮಗಳೆಂದು ಹೆಸರು. ಇವು ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸವೆಂದು ನಾಲ್ಕು (ಭಾತತ್ತ್ವ. ೭೮). ೨. ಚತುರಾಶ್ರಮಗಳಲ್ಲಿ ಮೂರನೆಯ ಆಶ್ರಮದಲ್ಲಿ ಇರುವವನು : ಬ್ರಹ್ಮಚಾರಿಯುಂ ಗೃಹಸ್ಥನುಂ ವಾನಪ್ರಸ್ಥನುಂ ಭಿಕ್ಷುಕನುಮೆಂದು ನಾಲ್ವರಪ್ಪರ್ (ಚಾವುಂಪು. ೨೨೭); ಬ್ರಹ್ಮಚಾರಿಯುಂ ಗೃಹಸ್ಥನುಂ ವಾನಪ್ರಸ್ಥನುಂ ಭಿಕ್ಷುಕನುಮೆಂದು ಜೈನಾಗಮದೊಳ್ ಆಶ್ರಮಂ ಚತುರ್ವಿಧಂ (ತತ್ತ್ವಪ್ರ. ೨೮೭). ೩. ಮುತ್ತುಗದ ಮರ. ೪. ಹಿಪ್ಪೆಯ ಮರ : "ಮಧೂಕಃ, ಗುಡಪುಷ್ಪಃ, ಮಧುದ್ರುಮ, ವಾನಪ್ರಸ್ಥಃ, ಮಧುಷ್ಠೀವಃ– ೫ ಯಿಪ್ಪೇಗಿಡ, ಹಿಪ್ಪೇಮರ" (ಸಿದ್ಧಾಂತಿ. ೧೧೮). [ಸಂ.]

**ವಾನಬ್ಯಂತರ** (ನಾ). [ಜೈನ] ಭವನವಾಸಿಗ, ವಾನವ್ಯಂತರ, ಜ್ಯೋತಿಷ್ಕ ಮತ್ತು ಕಲ್ಪವಾಸಿ ಎಂಬ ನಾಲ್ಕು ವಿಧವಾದ ದೇವತೆಗಳಲ್ಲಿರುವ ಒಂದು ವರ್ಗ ಮತ್ತು ಆ ವರ್ಗಕ್ಕೆ ಸೇರಿದ ದೇವತೆ : ಕಿನ್ನರ ಕಿಂಪುರುಷ ಮಹೋರಗ ಗಂಧರ್ವ ಯಕ್ಷರಾಕ್ಷಸಭೂತಪಿಶಾಚಾಭಿಧಾನದಿನಷ್ಟವಿಧರಪ್ಪ ವಾನಬ್ಯಂತರರುಂ . . . ಒಂದಾಗಿ (ಸುಕುಮಾ. ೮-೬೬ ವ). [< ವಾನವ್ಯಂತರ]

**ವಾನರ** (ನಾ). ಕಪಿ ; ಮಂಗ : ವಾನರವಾರಣೋಷ್ಟ್ರಖರಮತ್ಸ್ಯಕಲೇವರ ಪೂತಿಗಂಧಮೇನೇನೊಳವುಳ್ಳುವೊಂದೆಡೆಗೆ ಬಂದುಮಿವಂದಿನ ಮೆಯ್ಯ ಗಂಧದುದ್ದಾನಿಗೆ ವಾರದೆಂಬಿನಮದೇಂ ನೆಱ ಪೋಲ್ತುದೊ . . . ಪಾಂಗವಂದಿರಾ (ಆದಿಪು. ೫-೯೦) ; ಶಿಂಶುಮಾರಕನ ವಾನರನ . . . ಗುಣವಾ ನರೇಂದ್ರನೊಳಿರಲುಬೇಹುದು (ಕುವ್ಯಾಉ. ೩-೧೦೯). [ಸಂ.]

**ವಾನರಕುಲ** (ನಾ). ೧. ಕಪಿಯ ವಂಶ ; ಕಪಿಕುಲ : ಏನು ಮರುಳಾದೆಯೇ ಎಲೆ ಭಾರತೀ ವಾನರಕುಲದೊಳಗೆ ಶ್ರೇಷ್ಠನಾದವಗೆ (ಪುರಂದ. ಧಾ. ೧-೧೫ ಅನುಪಲ್ಲವಿ).

೨. ಕಪಿಕುಲಕ್ಕೆ ಸೇರಿದವನು : ವಾನರಕುಲಂ, ನರವರಂ, ವಾಲಿಯ ಸಹೋದರಂ ಸುಗ್ರೀವನಲ್ತೆ ಆ ಓಜೋನ್ನಿತಂ? (ಶ್ರೀರಾಮಾ. ೨೬೮-೧೧). [ಸಂ.]

ವಾನರಚಿಹ್ನ (ನಾ). ೧. ತನ್ನ ಬಾವುಟದಲ್ಲಿ ಕಪಿಯ ಲಾಂಛನವನ್ನುಳ್ಳವನು ; ಅರ್ಜುನ : ವಾನರಚಿಹ್ನ ನಿನ್ನ ಕುಲದೇವತೆಯುಂ ನೆನೆಯೆಂದೆನುತ್ತೆ ಸಂಧಾನಿಸಿ ನಾರಿಯೊಳ್ ವಿಷಮಬಾಣಮನಾರ್ದಿಸೆ (ಮಹಾನೇ. ೧೨-೨೨೯). ೨. [ಜೈನ]ಸುಗ್ರೀವ : ವಾನರಚಿಹ್ನಂ ತನ್ನಭಿಮಾನಂ ನಿಂದತ್ತು ಪೂಣ್ಕೆ ಸಂದತ್ತೆನಗೆಂದೇನೆಸೆದನೊ ದಶವದನಂ ಜಾನಕಿಯುಂ ಲಂಕೆಗುಯ್ವನೆಂದಱಿಪಲೊಡಂ (ಪಂರಾಮಾ. ೧೦-೫೨). [ಸಂ.]

ವಾನರಧ್ವಜ (ನಾ). ೧. ಕಪಿಯ ಲಾಂಛನವಿರುವ ಬಾವುಟ ; ಕಪಿಧ್ವಜ : ತಳತಳಿಸಿತಾ ಬೆಂಕೆ ತುಂತುರ್ಮುಗಿಲ ನಡುವೆ ವಾನರಧ್ವಜದ ಚಿಹ್ನೆಯ ಚಿತ್ರದಾಕಾರಂ (ಶ್ರೀರಾಮಾ. ೩೯೯-೧೦೧೩). ೨. ಕಪಿಧ್ವಜದ ಲಾಂಛನವುಳ್ಳವನು : ಮಹಾಸಾಮಂತ XXX ವಾನರಧ್ವಜ ವೃಷಭಲಾಂಛನ [ಶೋ]ಣಿತಪುರಾಧೀಶ್ವರ . . . ಶ್ರೀಮತ್ ಕಚ್ಚಾಗನಿರ್ಗುನ್ನದೇವನು (ಎಕ. IV(R), ಚಾಮರಾ. ೧೧೪-೨ ; ಸು.10ನೆಯ ಶತ). ೩. ಅರ್ಜುನ. [ಸಂ.]

ವಾನರಧ್ವಜಿನಿ (ನಾ). ಕಪಿಗಳ ಸೈನ್ಯ : ದಶಶಿರಗೆ ಘೇ ಎಂದು ರಾಕ್ಷಸಧ್ವಜಿನಿ ; ದಶರಥಸುತಗೆ ಘೇ ಎಂದು ವಾನರಧ್ವಜಿನಿ ! (ಶ್ರೀರಾಮಾ. ೭೯೫-೩೭೫). [ಸಂ. ವಾನರಧ್ವಜಿನೀ]

ವಾನರಪತಾಕ (ನಾ). = ವಾನರಚಿಹ್ನ ೧ : ಹರಿಯ ಚಕ್ರವ ತುಡುಕಿಸುವೆ ವಾನರಪತಾಕನ ರಥವ ಹಿಂದಕೆ ಮುರಿಯಲಿಸುವೆನು (ಕುವ್ಯಾಭೀ. ೧-೪೧). [ಸಂ.]

ವಾನರಬಲ (ನಾ). = ವಾನರಧ್ವಜಿನಿ : ಜಳದಕಾಳಮುಂ . . . ವಾನರಬಲಸಹಿತಂ ತೇಜೋನಿಧಿ ದಶರಥತನೂಭವಂ . . . ಋಷ್ಯಮೂಕನಗದೊಳ್ ಕಟಿದಂ (ಪಂಚತಂ. ೨೩೭-೧೩) [ಸಂ.]

ವಾನರರೂಪು (ನಾ). ಕಪಿಯ ಆಕೃತಿ : ಹನುಮಂ . . .ವಾನರವಿದ್ಯೆಯುಂ ತಳೆದು ವಾನರರೂಪುಮನಾಂತು ವಿದ್ವಿಷತ್ಸೇನೆಯೊಳಾನೆಯುಂ ಕುದುರೆಯುಂ . . .ತವೆ ಕೊಂದಂ (ಪಂರಾಮಾ. ೧೦-೨೧೮). [ವಾನರ + ರೂಪು]

ವಾನರವಿದ್ಯೆ (ನಾ). [ಜೈನ] ವಾನರರೂಪವನ್ನು ಹೊಂದುವ ಒಂದು ಬಗೆಯ ವಿದ್ಯೆ : ಹನುಮಂ. . .ವಾನರವಿದ್ಯೆಯುಂ ತಳೆದು ವಾನರರೂಪುಮನಾಂತು ವಿದ್ವಿಷತ್ಸೇನೆಯೊಳಾನೆಯುಂ ಕುದುರೆಯುಂ . . . ತವೆ ಕೊಂದಂ (ಪಂರಾಮಾ. ೧೦-೨೧೮). [ಸಂ. ವಾನರವಿದ್ಯಾ]

ವಾನರಸತ್ತ್ವ (ನಾ). [ಕಾಮಶಾ] ಸ್ತ್ರೀಯರ ಹನ್ನೆರಡು ಬಗೆಯ ಮನೋಧರ್ಮಗಳಲ್ಲಿ ಒಂದು ; ಕಪಿಗಳಂತೆ ಚಂಚಲಸ್ವಭಾವದಿಂದ ಕೂಡಿರುವುದು : ಕಣ್ಗಳ ತಿರುಗುತಿರ್ಪಳು ಉಗುರೊತ್ತು ಪಲ್ಗಚ್ಚುಗಳಿಗೆ ಪ್ರಿಯಳು ಚಂಚಲಚಿತ್ತದವಳು ಇವಳು ವಾನರಸತ್ತ್ವದ ಸ್ತ್ರೀ (ಕಾಮಶಾ. ೨೧೬). [ಸಂ.]

ವಾನರಿ (ನಾ). ೧. ಹೆಣ್ಣುಕೋತಿ ; ಹೆಣ್ಣುಕಪಿ : ನೋಡು, ನಡೆ ಒಳಗೆ, ಅತ್ತಿಗೆಗೆ ಬದಲೊರ್ವ ವಾನರಿಯ (ಶ್ರೀರಾಮಾ. ೧೪೮-೧೮೫); ಅವನು ಹೆಂಗಸನ್ನು ಉಚ್ಚಾಸನದಲ್ಲಿ ಕುಳ್ಳಿರಿಸಿದರೆ ಅದು ವಾನರಿಯಾಗುತ್ತದೆ (ಬಂಕಿಮ. ೧೧). ೨. ನಸುಗುನ್ನಿಗಿಡ : "ವಾನರೀ - ನಸುಕುನ್ನಿ" (ಓಷಧಿ. ೧೫೦). [ಸಂ. ವಾನರೀ]

ವಾನವ್ಯಂತರ (ನಾ). = ವಾನಬ್ಯಂತರ : ಯಾನಾಮಾನಾರೂಢಕಲ್ಪಜಜ್ಯೋತಿಷ್ಕ ವಾನವ್ಯಂತರಭವನಾಮರನಿಕಾಯಪರಿವೇಷ್ಟಿತಂ . . . ಅನೇಕಾಲಂಕಾರರತ್ನ ಪ್ರಭಾಪ್ರಸರದೊಳಂ ಗಗನತಳಮನಳಂಕರಿಸಿ (ಆದಿಪು. ೧೧-೧೮ ವ) ; ದೇವಗತಿ ನಾಲ್ಕರ್ಕುಮೆಂತೆನೆ ಭವನವಾಸಿಗ ವಾನವ್ಯಂತರ ಜ್ಯೋತಿಷ್ಕ ಕಲ್ಪವಾಸಿ ಭೇದಭಿನ್ನತ್ವದಿಂ (ಶಾಂತಿಪು. ೧೨-೬). [ಸಂ.]

ವಾನವ್ಯಂತರಿಗ (ನಾ). = ವಾನಬ್ಯಂತರ : ಭೇರೀರವದಿಂ ವಾನವ್ಯಂತರಿಗರುಂ . . . ಘಂಟಾಟಂಕಾರದಿಂ ಕಲ್ಪಾಮರರುಮಱಿದು ತಂತಮ್ಮಾಸನಂಗಳಿಂದಿೞಿದು ತೀರ್ಥಕರಂಗೆ ಕರಂಗಳಂ ಮುಗಿಯೆ (ಅಜಪು. ೪-೭ ವ). [ವಾನವ್ಯಂತರ + - ಇಗ]

ವಾನಸ್ಪತ್ಯ (ನಾ). (ಮಾವು ಮೊದಲಾದ) ಹೂವುಗಳಿಂದ ಕಾಯಾಗಿ ಹಣ್ಣುಬಿಡುವ ಮರ : "ಪೂವಾಗಿ ಕಾಯಹ ಮರನಂ ವಾನಸ್ಪತ್ಯಮೆಂಬುದು" (ಹಲಾಯು. ೩೦-೨೫). [ಸಂ.]

ವಾನಾಯು (ನಾ). ೧. ಭಾರತದ ವಾಯವ್ಯದಿಕ್ಕಿನಲ್ಲಿರುವ ಒಂದು ದೇಶ. ೨. ಜಿಂಕೆ. [ಸಂ.]

ವಾನಾಯುಜ (ನಾ). ವಾನಾಯು ದೇಶದಲ್ಲಿ ಹುಟ್ಟಿದ ಕುದುರೆ : ಆಜಾನೇಯಂ ವಿನುತಕುಲೇಜಾತಂ ತುರಗಸಮಿತಿ ಬಾಹ್ಲೀಕಂ ಕಾಂಭೋಜಹಯಂ ವಾನಾಯುಜ ವಾಜಿಕುಳಂ ಪಾರಸೀಕಮೆಂದಱಿಗವಱೊಳ್ (ವಸ್ತುಕೋ. ೮೬-೯); ಲಾಯದಲಿ ಲಂಬಿಸಿದವೊಲು ವಾನಾಯುಜದ ಸಾಲೆಸೆದುದು (ಕುವ್ಯಾದ್ರೋ. ೧೭-೯). [ಸಂ.]

ವಾನೀರ (ನಾ). ಒಂದು ಬಗೆಯ ಬೆತ್ತ ; ಲಾಳದ ಗಿಡ : "ವಾನೀರಃ . . . ವೇತಸಃ- ಈ ೫ ಹ(ಬ್ಬೆ)ಬ್ಬೆಯ ಮರಂ" (ಹಲಾಯು. ೩೩-೪೮). [ಸಂ.]

ವಾನೇಚರ (ಗು). ವನದಲ್ಲಿ ತಿರುಗುವ, -ಅಲೆದಾಡುವ : ನಿರ್ಮಳಜಳರುಚಿಯಂ ಸ್ಫಾಟಿಕಗ್ರಾವಬದ್ಧಾವನಿಯೊಳ್ ವಾನೇಚರಸ್ತ್ರೀಭ್ರಮುಮನತುಳನೀಳಾತ್ಮಪಾಂಚಾಳಿಕಾ ದರ್ಶನದೊಳ್ ತಾಳುತ್ತಮೆತ್ತಂ ಸುೞಿವುದು ಮಹಿಭೃದ್ಗೇಹದೇಣೀಸಮೂಹಂ (ಚಂದ್ರಪ್ರ. ೧-೧೪೭). [< ಸಂ. ವನೇಚರ]

ವಾನೇಯ (ಗು). ೧. ಕಾಡಿನಲ್ಲಿರುವ ; ಅರಣ್ಯದ : 'ವಾನೇಯನಾಗ' ಪರಾ. ೨. ನೀರಿಗೆ ಸಂಬಂಧಿಸಿದ. (ನಾ). ೩. ಒಂದು ಬಗೆಯ ಸುವಾಸನೆಯ ಹುಲ್ಲು ; ನಾಗರಮುಸ್ತೆ : "ವಾನೇಯಂ-ಗೇಕು" (ಓಷಧಿ. ೧೫೦). ೪. ಒಂದು ಜಾತಿಯ ಕುದುರೆ ; ವಾನೇಯಪ್ರದೇಶಕ್ಕೆ ಸೇರಿದ ಕುದುರೆ : ಬಿಸಕಾಂಭೋಜಕ ಬಾಹ್ಲೀಕ ಸೈಂಧವಾರಟ್ಟ ತ್ರೈತಿಲಂ ವಾನೇಯಂ ಪೆಸರ ಕ್ಷೇತ್ರದ ಹಯಕಾ ಪೆಸರೆ ಪೆಸರ್ ಜಾತಿಗಳ್ ಗುಣಾಧಾರಂಗಳ್ (ಅಶ್ವಶಾ. ೭-೭೬). [ಸಂ.]

ವಾನೇಯನಾಗ (ನಾ). ಕಾಡಾನೆ : ಚಳಚ್ಚಂದನಶಾಖಾಂದೋಳದಿಂದಂ ಚಕಿತಚಕಿತ ಮಾಯ್ಯುಚ್ಚರತ್ಕೀಚಕಪ್ರಸ್ವನಿತಂ ವಾನೇಯನಾಗಸ್ಫುಟಿತಕಟಮದಾಮೋದಭಾರಂ ಸಮೀರಂ (ಅರ್ಧನೇ. ೫-೯೬). [ಸಂ.]

ವಾನ್ಪಯಿರು (ನಾ). ಮಳೆಯ ನೀರಿನಿಂದ ಬೆಳೆಯುವ ಬೆಳೆ ; ಕುಷ್ಕಿಬೆಳೆ : ಯಿ‌ಾ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ ವಾನ್‌ಪಯಿರು ಪುನ್‌ಪಯಿರು . . . ಕಟಳೆವಟ ಏರಿ ಮಾನಬೆಲೆ ಸಂತೆ ಉಂಟಾದ ಹಲ ಉಪಾಧಿಗಳೂ ಸಹ ಸೇರ್‍ಸಿ ಕೊಟ್ಟೆವಾಗಿ (ಸೌಇಇ. IX-ii, ೪೬೩-೭ ; 1470). [<– ತಮಿ. ವಾನ್ಪಯಿರ್]

ವಾಪನ (ನಾ). ೧. ನೆಲದಲ್ಲಿ ಬೀಜವನ್ನು ಬಿತ್ತುವಿಕೆ. ೨. ಕೂದಲನ್ನು ಬೋಳಿಸುವಿಕೆ ; ಮುಂಡನ ಮಾಡುವಿಕೆ. ೩. ಬಟ್ಟೆಯನ್ನು ನೇಯುವಿಕೆ. [ಸಂ.]

ವಾಪರಿಸು (ಕ್ರಿ). ಬಳಕೆಗೆ ತರು ; ಉಪಯೋಗಿಸು : ಆಮೇಲೆ ಅದನ್ನು ವಾಪರಿಸುವವರು ಏನೂ ತಕರಾರಿಲ್ಲದೆ, ಮಾಲಿಕರಿಗೆ ಅದನ್ನು ನಪಾಸಮಾಡಿ ವಾಪಸ ಕೊಡದೆ ಇದ್ದರೆ ಪುಣ್ಯ (ಸಾಹಿತ್ಯಾಂ. ೨೬). [ವಾಪರು (Ⅱ <– ಮರಾ. ವಾಪರ್) + – ಇಸು]

ವಾಪಸ್ 'ವಾಪಸು' ನೋ.

ವಾಪಸು, ವಾಪಸ್, ವಾಪಸ್ಸು (ಅ). ಮರಳಿ ; ಹಿಂದಕ್ಕೆ : ಅಸಲು ಸನದು ಶ್ರೀಸ್ವಾಮಿಗಳವರ ಮಠಕೆ ವಾಪಸು ಕೊಡುವುದು (ಮೈಐಂ. ೧೯೩೪, ೫೨-೧೬ ; 1812); ರೂಪಾಯಿಗಳನ್ನೆಲ್ಲ ವಾಪಸು ಪಡೆಯಬೇಕೆಂಬ ಇಚ್ಛೆ ಅವರಿಗಿರಲಿಲ್ಲ (ಪಂಚೆ. ೪೪). ವಾಪಸ್ : ದಹನಕ್ರಿಯೆ ಮುಗಿಸಿಕೊಂಡು ಜನರೆಲ್ಲ ವಾಪಸ್ ಬಂದರೂ ಇನ್ನೂ ಆಡುತ್ತಲೇ ಇದ್ದ (ವಾಡಿಗೇ. ೧೨). ವಾಪಸ್ಸು : ಅವರು ವಾಪಸ್ಸು ಮನೆಗೆ ಬಂದಾಗ ಸುನಂದ, ಶೇಬಿರ ಬಂದಿರಲಿಲ್ಲ (ದೂಟ್ಟಿ. ೩೦); ಮದುವೆ ಮುಗಿದ ನಂತರ ಎಲ್ಲರೂ ವಾಪಸ್ಸು ಮನೆಗೆ ಬಂದರು (ಕೊನೆಭೇ. ೫೮).

ವಾಪಸ್‌ಮಾಡು =. (ಒಮ್ಮೆ ಕೊಟ್ಟ ವಸ್ತು, ಹಣ ಮುಂತಾದುವನ್ನು) ಹಿಂದಕ್ಕೆ ಕೊಡು ; ಹಿಂದಿರುಗಿಸು : ಈ ರೀತಿ ಪ್ರತಿಯನ್ನು ಓದಿ ಪರೀಕ್ಷಿಸಿದ ನಂತರ ಮುದ್ರಣಾಕ್ಷರಸಂಯೋಜಕನಿಗೆ ವಾಪಸ್ ಮಾಡಬೇಕು (ಮುದ್ರಕ. ೩೧). ವಾಪಸಾತಿ= ಮರಳಿಬರುವುದು ; ಹಿಂತಿರುಗುವುದು : ಒದಗಿಸಿದ ಹಣಕಾಸಿನ ವಾಪಸಾತಿಗೆ ಸರ್ಕಾರದ ಗ್ಯಾರಂಟಿಯನ್ನು ಕೋರುವುದೂ ಇಲ್ಲ ; ಒಪ್ಪುವುದೂ ಇಲ್ಲ (ಅಂಚಸಂ. ೧೧೬).

[<– ಪಾರ. ಹಿಂ. ಮರಾ. ವಾಪಸ್]

**ವಾಪಸ್ಸು** 'ವಾಪಸು' ನೋ.

**ವಾಪಿ₁** (ನಾ). ೧. ಬೀಜವನ್ನು ಬಿತ್ತುವಿಕೆ. ೨. ಬೀಜವನ್ನು ಬಿತ್ತುವ ಸಲಕರಣೆ; ಕೂರಿಗೆ : "ವಾ[ಪಾಠಾಂ. ವ್ಯಾ]ಪಿ ಕೂಱಿಗೆ ಸದ್ದೆಯಡ್ಡೆಯಕ್ಕುಂ" (ಮಂಗರಾ. ೧೦೯-೧). ೩. ಒಂದು ಬಗೆಯ ಆಯುಧ : ಯಾವ ಯಾವ ಆಯುಧಂಗಳು ಎಂದರೆ ಗರಗಸ . . . ವಾಪಿ ಗಂಡುಗತ್ತರಿ (ಧನನಿ. ೧೭-೫). [ಸಂ. ವಾಪಿನ್]

**ವಾಪಿ₂** (ನಾ). ೧. ಬಾವಿ ; ಕೂಪ : ಆ ಮಾನಸ್ತಂಭಂಬರಮೊಕ್ಕೆಕ ಜಿನಗೃಹಾಂತರಿತ ವಾಪೀಕೂಪಕಮಲಾಕರಮಂಡಿತವನಷಂಡಮಧ್ಯಗತಪಂಚಪಂಚಪ್ರಾಸಾದಪಂಕ್ತಿಗಳಿಂದಂ (ಆದಿಪು. ೭-೨೦ ವ); ಕ್ಷಿತಿಜಂ ಹತ್ತಱೊಳಿನಜಂ ಚತುರ್ಥದೊಳ್ ಚಂದ್ರನಸ್ತದೊಳ್ ನಿಲೆ ವಾಪೀಪತನದೆ . . . ಮಡಿಗುಂ (ಜಾತತಿ. ೨೩-೪). ೨. ಚಿಕ್ಕಹೊಂಡ ; ಕುಂಟೆ : "ನಿಪಾನಂ, ಉದಪಾನಂ, ವಾಪೀ, ಆಹುಂವಃ- ಈ ೪ ಬೆಂಚೆ" (ಹಲಾಯು. ೧೧೩-೬೨). ೩. [ಜ್ಯೋತಿ] ಜನನಕಾಲಕ್ಕೆ ಲಗ್ನಕುಂಡಲಿಯಲ್ಲಿ ಇರುವ ಗ್ರಹಗಳ ಸ್ಥಾನದಿಂದ ತಿಳಿದುಕೊಳ್ಳುವ ಆಕೃತಿಯೋಗಗಳಲ್ಲಿ ಒಂದು : ಗ್ರಹಂಗಳಿಲ್ಲದೆ ಬಱಿದಾಗೆ ಕೇಂದ್ರಮನಿತುಂ ದೊರೆಕೊಂಡುದೆ ವಾಪಿನಾಮದಿಂ (ಜಾತತಿ. ೧೩-೬). [ಸಂ. ವಾಪಿ, ವಾಪೀ]

**ವಾಪಿತ** (ಗು). ೧. ಬೀಜವನ್ನು ಬಿತ್ತಿದ. ೨. ಕೂದಲನ್ನು ಬೋಳಿಸಿದ. [ಸಂ.]

**ವಾಪಿತೆ** (ನಾ). ೧. ಕೂದಲನ್ನು ತೆಗೆಸಿಕೊಂಡವಳು ; ವಿಧವೆ. ೨. ಸಂನ್ಯಾಸಿನಿ. [ವಾಪಿತ + - ಎ₂]

**ವಾಪೀಮೂಲ** (ನಾ). ಬಾವಿಯ ಮೂಲ, - ಬುಡ : ಪದ್ಮರಾಗಮಣಿಯುಂ ಗೃಧ್ರಂ ತಂದು ವಾಪೀಮೂಲದ ವಂಶಸ್ತಂಭದೊಳಿಕ್ಕಿದುದನಱಿದು (ಚಾವುಂಪು. ೬೦). [ಸಂ.]

**ವಾಪೀಯೋಗ** (ನಾ). = ವಾಪಿ₂ ೩ : ಮನುಜಂ . . . ಸ್ವಲ್ಪಸೌಖ್ಯಕ್ಕೆ ಭಾಜನನಕ್ಕುಂ ಬಹುಯೋಗದೊಳ್ ನೆಗಟ್ದ ವಾಪೀಯೋಗದೊಳ್ ಪುಟ್ಟಿದಂ (ಜಾತತಿ. ೧೩-೧೭); ನಾಲ್ಕು ಕೇಂದ್ರಗಳಲ್ಲೂ ಗ್ರಹವಿಲ್ಲದೆ ನಾಲ್ಕು ಪಣಫರಗಳಲ್ಲಾಗಲೀ ನಾಲ್ಕು ಆಪೋಕ್ಲಿಮ ರಾಶಿಗಳಲ್ಲಾಗಲೀ ಎಲ್ಲ ಗ್ರಹಗಳೂ ಇದ್ದರೆ ವಾಪೀಯೋಗ (ಜಾತತಿ. ೧೩-೬ ಟೀಕು). [ಸಂ.]

**ವಾಪೇಯ** (ನಾ). ಒಂದು ಬಗೆಯ ಮರ ; ಹೊನ್ನೆಮರ : "ವಾಪೇಯಃ- ಹೊನ್ನೆ" (ಓಷಧಿ. ೧೫೦). [ < ಸಂ. ವಾಪ್ಯ]

**ವಾಮ** (ಗು). ೧. ಎಡಗಡೆಯ ; ಎಡಭಾಗದ : 'ವಾಮಪದ' ಪರಾ. ೨. ಚೆಲುವಾದ ; ಮನೋಹರವಾದ : ಪ್ರಮದಾಹಸ್ತವಿನ್ಯಸ್ತವಾಮಕ್ರಮಕಮಳನುಂ . . . ಆಗಿ (ಪಂಪಭಾ. ೯-೨೮ ವ); ವಾಮನನನುಳಿದದಾವಂ ಭೂಮಿಯೊಳಂತನ್ಯದೇವತೆಯ ನೀಪ್ಸಿಸುಗುಂ ವಾಮಪ್ರದೀಪಮಿರ್ದುಂ ತಾಮಸೆಯೊಳ್ ಕಾಮಿಪಂತೆ ಮಿಂಚುಂಬುಳುವಂ (ಯಾದಚಂ. ೧೬-೩೮). ೩. ವಿರೋಧವಾದ ; ಪ್ರತಿಕೂಲವಾದ. ೪. ಕೊಂಕಾದ ; ವಕ್ರವಾದ. ೫. ಕೀಳಾದ ; ನೀಚ : 'ವಾಮಸುಖಿ' ಪರಾ. ೬. ಕೆಟ್ಟ ; ದುಷ್ಟ : 'ವಾಮಮಾರ್ಗ' ಪಾರಾ. ೭. ಕುಳ್ಳಾದ ; ಗಿಡ್ಡಾದ. (ನಾ). ೮. ಬಲಭಾಗವಲ್ಲದುದು ; ಎಡಭಾಗ : ವಾಮಂ ಕರತಳಮದು ಕೆಂದಾಮರೆಯರಲೆ ನಿಪುದುಚಿತಪರ್ಯಂಕದೊಳುದ್ದಾಮಮುಪದೇಶಹಸ್ತಮವಾಮಂ ಮಾರ್ದವಮನಭಿನಯಿಪ್ಪುದು ಮುನಿಯಾ (ಆದಿಪು. ೫-೬೯); ಪರಮಋಷಿಗಳ ಹೋಮದಲಿ ಶಿಖಿವರನ ಬಲಗೊಂಡರು ಕುಮಾರಿಯ ವರಿಸೆ ವೈದಿಕದಿಂದ ಬಂದಳು ವರನ ವಾಮದಲಿ (ಕುಮಾವ್ಯಾ. ೧೦-೭೭). ೯. ಸುಂದರವಾದುದು ; ಚೆಲುವಾದುದು : "ಕಮನೀಯಂ ಚಾರುರಮ್ಯಂ ರುಚಿರಮತಿಮನೋಹಾರಿ . . . ಸುಮನೋಜ್ಞಂ ವಲ್ಗು ವಾಮಂ ಪ್ರಿಯಮದು ಮಧುರಂ ಮಂಜುಳಂ ಮಂಜುಸೌಮ್ಯಂ" (ಮುತ್ತುಕೋ. ೧೦೭-೫೮). ೧೦. ಸುಂದರವಾದ ವಸ್ತು ; ಚೆಲುವಾದ ವಸ್ತು : 'ವಾಮ' ಎಂದರೆ ಸುಂದರವಸ್ತು (ಸೌಂದಸ. ೪೩ಅಡಿಟಿ). ೧೧. ಬಯಸಿದ ವಸ್ತು ; ಪ್ರಿಯವಸ್ತು : ವಾಮಗಳೆಂದರೆ ಕಾಮಿತವಾದ ವಸ್ತುಗಳು (ಬ್ರಹ್ಮಭಾ. ೨೯೧). ೧೨. ಒಳ್ಳಿತು ; ಶುಭ : "ಪ್ರಾಗ್ರ್ಯಂ, ಪ್ರಾಗ್ರಹರಂ, ಪ್ರವೇಕಂ . . . ಚಾಪು, ಸುಷಮಂ, ವಾಮಂ, ಶುಭಂ, ಪೇಶಲಂ- ೨೯ ಒಳ್ಳಿತು" (ಹಲಾಯು. ೧೧೪-೪). ೧೩. ವಿರೋಧ ; ಪ್ರತಿಕೂಲತೆ : "ಪ್ರತಿಕೂಲದಲ್ಲಿಯುಂ ವಾಮಮೆಂಬುದು" (ಹಲ್ಲಾಯು. ೧೩೪-೨೨). ೧೪. ಕೇಡು ; ಹಾನಿ. ೧೫. ಸಂಪತ್ತು ; ಆಸ್ತಿ. ೧೬. ಶಿವ ; ಈಶ್ವರ. ೧೭. ಕಾಮ ; ಮನ್ಮಥ. ೧೮. ಕೆಚ್ಚಲು. ೧೯. ಸ್ತನ. ೨೦. [ವೀಶೈ] ನಾಲ್ಕುಬಗೆಯ ಶೈವಪ್ರಭೇದಗಳಲ್ಲಿ ಒಂದು : ಆ ಶೈವವೇ ವಾಮ ದಕ್ಷಿಣ ಮಿಶ್ರ ಸಿದ್ಧಾಂತವೆಂದು ನಾಲ್ಕು ತೆಱನಾಗಿರ್ಪುದವಱಲ್ಲಿ ಶಕ್ತಿಪರವಾದುದೇ ವಾಮವೆನಿಸುವುದು . . . ಪರಶಿವ ಪರವಾದುದೇ ಸಿದ್ಧಾಂತಮಕ್ಕುಂ (ವಿವೇಕ. ೬೭). [ಸಂ.]

**ವಾಮಕುಕ್ಷಿ** (ನಾ). ೧. ಹೊಟ್ಟೆಯ ಎಡಭಾಗ, - ಎಡಪಕ್ಕ. ೨. (ಸಾಮಾನ್ಯವಾಗಿ ಮಧ್ಯಾಹ್ನದ ಊಟವಾದ ಮೇಲೆ) ಎಡಮಗ್ಗುಲಿಗೆ ತಿರುಗಿ ಮಲಗುವುದು : ಸೋಮವಾರ ಮಧ್ಯಾಹ್ನ ವಾಮಕುಕ್ಷಿಯನ್ನು ತೀರಿಸಿ ಉಜ್ವಲಾ ಚಹಾದ ಸಿದ್ಧತೆಯಲ್ಲಿದ್ದಳು (ಸಂಜೀವಿ. ೧೫೦); ವಾಮಕುಕ್ಷಿಗೆಂದು ಮಂಚದ ಮೇಲೆ ಅಡ್ಡವಾದ ನಿರ್ಮಲೆಯ ತಾಯಿ ಎದ್ದು ಕಿಡಕಿಯಿಂದ ಹೊರಗೆ ನೋಡಿದಾಗ . . . ನಿರ್ಮಲೆ ಮನೆಯ ಕಡೆಗೆ ಓಡಿಬರುತ್ತಿದ್ದಳು (ಮೂರುದಾ. ೨೬೫).

ವಾಮಕುಕ್ಷಿಮಾಡು = (ಮಧ್ಯಾಹ್ನ) ಎಡಮಗ್ಗುಲಾಗಿ ಮಲಗು : ಒಂದು ದಿನ ಅಪರಾಹ್ನಕಾಲದಲ್ಲಿ ಸಂತನು ತನ್ನ ಶಯನಾಗಾರದಲ್ಲಿ ವಾಮಕುಕ್ಷಿಮಾಡುತ್ತಿರಲು (ಅಂಬಿಕೆ. ೧೬೭). ವಾಮಕುಕ್ಷಿಯ ಗೆಯ್ = ವಾಮಕುಕ್ಷಿಮಾಡು : ಮಾವೀರ ! ಮಾಧೀರ ! ನಾವಣಂ ವಾಮಕುಕ್ಷಿಯ ಗೆಯ್ವ ! (ಹೆಬ್ಬೆರ. ೪೯-೨೫೯). ವಾಮಕುಕ್ಷಿಯಾಗು = ವಾಮಕುಕ್ಷಿಮಾಡು : ನಮ್ಮ ಮಧ್ಯಾಹ್ನದ ಊಟವಾಗಿ ವಾಮಕುಕ್ಷಿಯಾಗಿ ಎದ್ದ ಮೇಲೆ ಅವಳ ನ್ಯಾಯವಿಚಾರಣೆಯಾಗಲಿ (ಹುಚ್ಚಾಟ. ೬೬); ಮಧ್ಯಾಹ್ನ ಊಟವಾದ ಮೇಲೆ . . . ಅವನು ಎಂದೂ ವಾಮಕುಕ್ಷಿಯಾಗುವುದಿಲ್ಲ (ದೀಪಹ. II, ೨). [ಸಂ.]

**ವಾಮಕ್ಷೇಮ** (ನಾ). ಕಷ್ಟ ಮತ್ತು ಸುಖ ; ಆಗುಹೋಗು ; ಯೋಗಕ್ಷೇಮ : ಎನ್ನ ವಾಮ [ಪಾಠಾಂ. ಯೋಗ] ಕ್ಷೇಮ ನಿಮ್ಮದಯ್ಯಾ ಎನ್ನ ಹಾನಿವೃದ್ಧಿ ನಿಮ್ಮದಯ್ಯಾ (ಬಸವ. ೬೦); ಲಿಂಗಪೂಜೆಯ ಮಾಡುವ ಭಕ್ತರ ವಾಮಕ್ಷೇಮ ತನ್ನದೆಂದು ಶಿವನು ರಕ್ಷಿಪನು (ಭೈರಸೂ. I, ೩೧೫). 'ಯೋಗಕ್ಷೇಮ' ಪರಾ. [ಸಂ.]

**ವಾಮದೇವ** (ನಾ). ೧. ಶಿವ ; ಈಶ್ವರ : "ಈಶಾನಃ . . ಧೂರ್ಜಟಿಃ, ವಾಮದೇವಃ . . . ನೀಲಲೋಹಿತಃ- ಈ ೪೫ ಮಹಾದೇವರ ಪೆಸರ್" (ಹಲಾಯು. ೩-೧೨); ವಾಮದೇವಮುಕಾರವಿಂದ ಆದಿ ಶ್ರೀಶೈಲನಾಮಾದಿಪ XXತಾಧಿಪತಿಯಾದಂತ ಶ್ರೀಮಲ್ಲಿಕಾರ್ಜುನಸ್ವಾಮಿಯವರ ಅಂಗರಂಗವೈಭವ ಅಮ್ರುತಪಡಿ ದೀಪಾರಾದನೆ ಸೇವಿಗೆ (ಎಕ. V(R), ತಿರುಮ. ೧೩೯-೬; 1673). ೨. ಒಬ್ಬ ಋಷಿಯ ಹೆಸರು : ವಾಮದೇವಾತ್ರಿ ಗಾಲವ ಗುರುವಸಿಷ್ಠ ವಿಶ್ವಾಮಿತ್ರರಂ ಕರೆಸಿ ಹಯಮೇಧಲಕ್ಷಣವನಾ ಮುನಿಗಳಂ ಕೇಳ್ದು (ಜೈಮಿಭಾ. ೨೦-೩). ೩. [ವೀಶೈ] ಉಪಾಸನೆಗೆ ಯೋಗ್ಯರಾದ ನಾಲ್ಕುವಿಧ ಬ್ರಹ್ಮಮೂರ್ತಿಗಳಲ್ಲಿ ಒಂದು ಮೂರ್ತಿ : ತತ್ಪುರುಷ ಅಘೋರ ವಾಮದೇವ ಸದ್ಯೋಜಾತರೆಂಬ ಚತುರ್ವಿಧಬ್ರಹ್ಮಮೂರ್ತ್ಯುಪಾಸನೆಗಳಿಂ (ವಿವೇಕ. ೬೮). ೪. ಈಶ್ವರನ ಐದು ಮುಖಗಳಲ್ಲಿ ಒಂದು : ಮಣ್ಣೆಲ್ಲ ಮಹಾದೇವನ ಸದ್ಯೋಜಾತ ಮುಖ ನೋಡಾ ನೀರೆಲ್ಲ ವಾಮದೇವಮುಖ ನೋಡಾ (ಸಿದ್ಧವ. ೯೮-೫೮೫); ಅಲರ್ದ ದಾಸಳದ ಪೊಸಗೆಂಪಂ ಪಳಿಕೆಯ್ದು ವಾಮದೇವೋಜ್ಜ್ವಳವದನಂ ಸೊಗಯಿಸಿರ್ದುದ ಗಜಾಧವನಾ (ಶಬತಂ. ೫-೪). [ಸಂ.]

**ವಾಮನ** (ಗು). ೧. ಕುಳ್ಳಾದ ; ಗಿಡ್ಡಾದ. (ನಾ). ೨. ಕುಳ್ಳು ; ಗಿಡ್ಡು. ೩. ಎತ್ತರವಿಲ್ಲದ ಮನುಷ್ಯ ; ಕುಳ್ಳ : ಕುಬ್ಜವಾಮನಬಧಿರಮೂಕಕಿರಾತೋನ್ಮತ್ತ ಜಡಜನಂಗಳುಮಂ . . . ಕೊಟ್ಟು (ಆದಿಪು. ೪-೫೪ ವ) ; ಆಸ್ಥಾನವಲ್ಲಭನ ಮನಮನಱಿದು ನಗಿಸುವ ಕುಬ್ಜವಾಮನಬಧಿರಮೂಕರ್ ಮೊದಲಾದ ಪಲತೆಱದ ಸಬ್ಬವಗಾಱರಿಂ ಹಾಸ್ಯರಸಮುಂ . . . ನೆಗಟುತ್ತುಮಿರೆ (ಜಗನ್ನಾ. ೨-೩೯ ವ). ೪. ವಿಷ್ಣುವಿನ ದಶಾವತಾರಗಳಲ್ಲಿ ಐದನೆಯದು ; ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ತುಳಿಯಲು ವಿಷ್ಣುವು ಧರಿಸಿದ ಕುಬ್ಜಾವತಾರ : ವಾಮನಪದಹತಿವಿದಳಿತ ಜೀಮೂತವಿಮುಕ್ತಬಹುಳಧಾರೆಗಳಿಂದಂ ತಾ ಮುನಿಜನಾಪಕಾರಕ ಧೂಮಧ್ವಜನೆಯ್ದೆ ನಂದಿ ಪೋದತ್ತಾಗಳ್ (ಅರ್ಧನೇ. ೬-೩೫); ಕ್ಷಿತಿಯ ಈರಡಿಗೆಯ್ದ ವಾಮನ ತ್ರಿವಿಯತಿವಂಶಜನನ ಭಾರ್ಗವರೂಪ ತ್ರಿವಿ (ಪುರಂದ. ಧಾ. ೧-೧೬೫-೫). ೫. ಅಷ್ಟದಿಗ್ಗಜಗಳಲ್ಲಿ ಒಂದು ; ದಕ್ಷಿಣದಿಕ್ಕಿನ ದಿಗ್ಗಜ : ತಡಂಗೆಡದುದಂಜನ ಮುರ್ಕುಡಿಗಿತ್ತು ವಾಮನಂ . . . ಇರದಾಲಿಸಿ ತತ್ಪಟಹಪ್ರಣಾದಮಂ (ಪುಷ್ಪಪು. ೫-೮);

ಆ ಕೂರ್ಮನ ಬೆನ್ನರುಗಿನೊಳಿಂದ್ರಾದಿ ದಿಕ್ಕಿಂಟರಲ್ಲಿ ಕ್ರಮದಿಂದೈರಾವತ ಪುಂಡರೀಕ ವಾಮನ . . . ಸುಪ್ರತೀಕಮೆಂದೆಂಟು ದಿಗ್ಗಜಗಳಾದೊಡೆ (ಏವೇಕ. ೧೪೯). ೬. 'ಕಾವ್ಯಾಲಂಕಾರಸೂತ್ರವೃತ್ತಿ'ಎಂಬ ಸಂಸ್ಕೃತ ಅಲಂಕಾರಗ್ರಂಥದ ಕರ್ತೃವಿನ ಹೆಸರು : ವಾಮನನುಂ ರುದ್ರಟನುಂ ಭಾಮಹನುಂ ದಂಡಿಯುಂ ಮನಂಗೊಳೆ ಪೇೞ್ದಂತೀ ಮಹಿಗೆ ನೆಗೞೆ ಪೇೞ್ದಂ ದಾಮೋದರತನಯನೀ ವಚೋಲಂಕೃತಿಯಂ (ಕಾವ್ಯಾವ. ೯೬೧). ೭. ಒಂದು ಬಗೆಯ ಗಿಡ ; ಅಂಕೋಷ್ಠಗಿಡ : "ವಾಮನಂ-ಕೋಷ್ಠ"(ಓಷಧಿ. ೧೫೦). ೮. ಹದಿನೆಂಟು ಮಹಾಪುರಾಣಗಳಲ್ಲಿ ಒಂದು : ಪರಮಶೈವ ಸ್ಕಂದ ಲೈಂಗ್ಯಾವಿರಳ ನಾರದ ಮತ್ಸ್ಯಕೂರ್ಮಸ್ಫುರಿತ ವಾಮನ . . . ಸಾಂಗದಿಂದ ಷ್ಟಾದಶಪುರಾಣಂಗಳೊಳೆಸೆವ ಭಸಿತಸೇವಾಸಂಗವಾಯಿತ್ತು (ಬಸವು. ೪೩-೭೬). [ಸಂ.]

ವಾಮನಪುರಾಣ (ನಾ). ಹದಿನೆಂಟು ಮಹಾಪುರಾಣಗಳಲ್ಲಿ ಒಂದು ; ವಿಷ್ಣುವಿನ ವಾಮನಾವತಾರವನ್ನು ಕುರಿತ ಪುರಾಣ : ಬ್ರಹ್ಮಪುರಾಣ ಪದ್ಮಪುರಾಣ . . . ವಾಮನಪುರಾಣ ಕೂರ್ಮಪುರಾಣ ಮತ್ಸ್ಯಪುರಾಣ ಗಾರುಡಪುರಾಣ ಬ್ರಹ್ಮಾಂಡಪುರಾಣವೆಂಬವೇ . . . ಹದಿನೆಂಟು ಮೂಲಪುರಾಣಂಗಳು (ಏವೇಕ. ೯). [ಸಂ.]

ವಾಮನಮುದ್ರೆ (ನಾ). (ಸಾಮಾನ್ಯವಾಗಿ ಗಡಿಕಲ್ಲಿನ ಮೇಲೆ ಕೆತ್ತಲ್ಪಟ್ಟ) ವಿಷ್ಣುವಿನ ವಾಮನಾವತಾರದ ಚಿತ್ರ,-ಲಾಂಛನ : ವಾಮನಮುದ್ರೆಯ ನಾಲ್ಕು ಕಲ್ಲೊಳಗಣ ನಿವೇಶನದೊಳಗೆ ನಮ್ಮ ಹಂನೆರಡು ಮನೆಯಿಂ ಮೂಡಲುಕ್ಕಂ ಬಟ್ಟೆಗೆಂದು . . . ಕೊಟ್ಟರು (ಎಇ. XIX , ೨೫-೫೦; 1245); ಆಯಿಘಂಡುಗಗದ್ದೆಯ ಚತುಸೀಮೆಗೆ ವಾಮನಮುದ್ರೆಯ ಕಲ್ಲ ನೆಡಿಸಿ (ಎಕ. VI (R), ಕೃಷ್ಣರಾ. ೯೬-೧೧; 1424).

ವಾಮನಮುದ್ರೆಕಲು, ವಾಮನಮುದ್ರೆಕಲ್ಲು = ವಾಮನನ ಲಾಂಛನವನ್ನು ಕೆತ್ತಿರುವ ಕಲ್ಲು : ಮೂಡ ಅಲತಾಳಿನಲಿ ನೆಟ ವಾಮನಮುದ್ರೆ ಕಲು (ಎಕ. IV (R), ಪಿರಿಯಾ. ೧೧೪-೮೨; 1567); ಈ ಗ್ರಾಮಗಳ ಚತುಃಸೀಮೆಯ ಗಡಿಗಳಲಿ ಸ್ಥಾಪಿತವ ಮಾಡಿಸಿ ಕೊಟ್ಟು ವಾಮನಮುದ್ರೆ ಕಲ್ಲುಗಳ ಚತುಃ ಸೀಮೆ ಭೂಮಿ (ಎಕ, VII, ಶಿವಮೊ. ೨-೧೩೫; 1641). ವಾಮನಮುದ್ರೆಶಿಲೆ = ವಾಮನಮುದ್ರೆಕಲು : ಸ್ವಾಮಿಯವರ ಬುದ್ಧಿನಿರೂಪದ ಮೇರೆಗೆ ವಾಮನಮುದ್ರೆಶಿಲಾಪ್ರತಿಷ್ಠೆ (ಎಕ. XII, ಚಿಕ್ಕನಾ. ೪೫-೨೪; 1832?); ಹೂವಿನ ಕೆರೆಗ್ರಾಮಕ್ಕೆ ಸಲುವ ಚತುಸ್ಸೀಮೆಗೂ ವಾಮನಮುದ್ರೆ ಶಿಲಾಪ್ರತಿಷ್ಠೆಯನ್ನು ಮಾಡಿಸಿ (ತುಳುನಾ. ೨೬೯). [ಸಂ. ವಾಮನಮುದ್ರಾ]

ವಾಮನಾಕಾರ (ನಾ). ವಿಷ್ಣುವಿನ ಐದನೆಯ ಅವತಾರವಾದ ಕುಬ್ಜರೂಪ : ಬಲಿಯಂ ಮೆಯ್ಯಿ ರಸಾತಳಕ್ಕಿೞಿಪಿದ್ದೆ ನೀಂ ವಾಮನಾಕಾರದಿಂ (ಜಗವಿ. ೧-೫೯). [ಸಂ.]

ವಾಮನಾವತಾರ (ನಾ). ೧. = ವಾಮನ ೪ : ಈ ಮೇಲಿನ ವಾಕ್ಯಗಳಲ್ಲಿ ವಾಮನಾವತಾರವು ಸಂಪೂರ್ಣರೂಪದಿಂದ ಹೇಳಿದಂತಾಗುತ್ತದೆ (ಭಾರದ. ೧೪೫). ೨. (ಆಲಂ) ಕುಳ್ಳಾಗಿರುವವನು ; ಕುಬ್ಜ : ವಯಸ್ಸಿನಿಂದ ದೊಡ್ಡವನಿರಬಹುದೇ. ಅದರೆ ಈ ವಾಮನಾವತಾರ ಅವಳ ಭುಜಕ್ಕೂ ಮುಟ್ಟುತ್ತಾನೋ, ಇಲ್ಲವೋ (ಮೂರುದಾ. ೪೮). [ಸಂ.]

ವಾಮನಿ (ನಾ). ಒಂದು ಬಗೆಯ ಸಸ್ಯ : "ವಾಮನೀ- ಹತ್ತಿ , ತೊಂಡೆ" (ಓಷಧಿ. ೧೪೯). [ < ಸಂ. ವಾಮನ]

ವಾಮನೆ (ನಾ). ಒಂದು ಬಗೆಯ ಸಸ್ಯ ; ಅಗಳುಶುಂಠಿ: "ವಾಮನಾ - ಅಗುಳುಶುಂಠಿ" (ಓಷಧಿ. ೧೪೯). [ಸಂ. ವಾಮನ]

ವಾಮನೇತ್ರೆ (ನಾ) . ೧. ಸುಂದರವಾದ ಕಣ್ಣುಗಳುಳ್ಳವಳು ; ಮನೋಹರವಾದ ಕಣ್ಣುಗಳುಳ್ಳವಳು. ೨. ಹೆಂಗಸು ; ಸ್ತ್ರೀ : "ರಾಮಾ, ವಾಮಾ, ವಾಮನೇತ್ರಾ, ಪುರಂಧ್ರೀ . . . ಯುವತೀಃ- ಈ ೨೮ ಸ್ತ್ರೀಯರ್" (ಹಲಾಯು. ೭೯-೩೨೭).
[ಸಂ. ವಾಮನೇತ್ರಾ]

ವಾಮಪಂಥ (ನಾ). ಸಮಾಜವಾದಿ ಅಥವಾ ಕಮ್ಯುನಿಸ್ಟ್‌ಧೋರಣೆಯುಳ್ಳ ರಾಜಕೀಯಪಕ್ಷ ; ಎಡಪಕ್ಷ : ವಾಮಪಂಥದ ಸದಸ್ಯರು ಇಂದು ವಿಧಾನ ಸಭೆಯ ಕಲಾಪಗಳಿಗೆ ಬಹಿಷ್ಕಾರ ಹಾಕಿದರು (ರೂಢಿ). [ಸಂ.]

ವಾಮಪಕ್ಷ (ನಾ). = ವಾಮಪಂಥ : ಚುನಾವಣೆಯ ಕಾಲದಲ್ಲಿ ವಾಮಪಕ್ಷದವರು ಭರದಿಂದ ಕೆಲಸ ನಿರ್ವಹಿಸಿದರು (ರೂಢಿ). [ಸಂ.]

ವಾಮಪದ (ನಾ). ಎಡಗಾಲು : ಕನಕಮಣಿಖಚಿತಸಿಂಹಾಸನದೊಳ್ ನೀಡಿರ್ದ ವಾಮಪದನಖರುಚಿ ಕಾಂಚನಹರಿಪೀಠಮುಮಂ ಮುತ್ತಿನ ಪೀಠಮಿದೆನಿಸಿತವನಿಪತಿಯಡಿ ಮೊದಲೊಳ್ (ಶಾಂತಿಪು. ೩-೪೭); ಕುಪಿತಪ್ರಮದಾಜನವಾಮಪದಾಲಕ್ತಕದೆ ಪಲ್ಲವಿಪ್ಪುದಶೋಕಂ (ಚಂದ್ರಪ್ರ. ೨-೧೧). [ಸಂ.]

ವಾಮಪಾದ (ನಾ). = ವಾಮಪದ : ಪರಿವಾರಪರಿವೃತನುತ್ತುಂಗಸಿಂಹಾಸನಾಸೀನನಧಸ್ಸ್ಥಿತಮಣಿಮಯಪೀಠವೇದಿಕಾವಿನ್ಯಸ್ತವಾಮಪಾದಂ . . . ಒಡ್ಡೋಲಗಂಗೊಟ್ಟಿರೆ (ಆದಿಪು. ೨-೨ ವ). [ಸಂ.]

ವಾಮಭಾಗ (ನಾ). ಎಡಭಾಗ ; ಎಡಪಾರ್ಶ್ವ : ಬಲಗೆಲದೆಡೆಯೊಳು ಗರ್ಭಂ ನಿಲೆ ಪುರುಷಂ ವಾಮಭಾಗದಿಂ ಸ್ತ್ರೀಯೆರಡುಂ ಕೆಲದೊಳಮಳ್ಗಳು . . . ಪುಟ್ಟುವರೆಂದುಂ (ಮದತಿ. ೧-೮೪); ಮಂತ್ರಿಗಳು ಮೆಚಿದರು ವಾಮಭಾಗದಲಿ (ಕುಮ್ಯಾಉ. ೮-೩೫). [ಸಂ.]

ವಾಮಭುಜ (ನಾ). ಎಡಹೆಗಲು : ಪಂಚದ್ರೌಪದೀಸುತ ಸೋಮಕಾದಿಗಳು . . . ಅತಿಚಿಂತಿಸಿದರಂದಿರುಳುಪಹತಿಯ ಸೂಚಿಸುವ ವಾಮಭುಜಾಕ್ಷಿಕಂಪದಲಿ (ಕುಮ್ಯಾಗ. ೮-೬); ವಾಮಭುಜದಿಂ ಜಗುಳ್ದತ್ತು ವೀರತೂರ್ಯಂ ನಿದ್ರೆಗಂಕುಶವೆನಲ್ ನಗರರಕ್ಷಕರಾ (ಶ್ರೀರಾಮಾ. ೪೬೪-೫೧೦). [ಸಂ.]

ವಾಮಮಾರ್ಗ (ನಾ). ೧. ಅಡ್ಡದಾರಿ ; ದುರ್ಮಾರ್ಗ : ಸೋತ ಮನಸ್ಸು ವಾಮಮಾರ್ಗದಿಂದ ಸಾಗಲು ಮುಂದುವರಿಯಹತ್ತಿತು (ಅಪವಾ. ೧೦); ಹಣವನ್ನು ವಾಮಮಾರ್ಗದಿಂದ ಸಂಪಾದಿಸಿ ಊರಲ್ಲೊಬ್ಬ ಗಣ್ಯವ್ಯಕ್ತಿಯಾಗತೊಡಗಿದನು (ಕುರುಕಾ. ೧೪೦). ೨. = ವಾಮಾಚಾರ ೨ : ಆ ಮಂತ್ರವಾದಿಯು ವಾಮಮಾರ್ಗದಿಂದ ಕ್ಷುದ್ರದೇವತೆಗಳನ್ನು ಒಲಿಸಿಕೊಂಡಿದ್ದಾನೆಂಬ ಪ್ರತೀತಿ ಇದೆ (ರೂಢಿ). [ಸಂ.]

ವಾಮಯ್ಯದೇವ (ನಾ). ಒಬ್ಬಾತನ ಹೆಸರು : ಪೃಥಿವೀಗಾಮುಣ್ಡಸ್ವಾಮಿಯ ಮಗಂ ಗಾಮುಣ್ಡಸ್ವಾಮಿಯ ತಮ್ಮಂ ವಾಮಯ್ಯದೇವಂಗೆ ಕೊಟ್ಟ ಕೊಡಂಗೆ (ಎಕ. X, ಮುಳಬಾ. ೧೦೮-೭; ಸು. 950). [ವಾಮ + ಅಯ್ಯ + ದೇವ]

ವಾಮಲೂರ (ನಾ). ಹುತ್ತ ; ವಲ್ಮೀಕ : ಸುರನಂದನ ವಾಮಲೂರುದರತೆ ಬಂಧುರವರಮೃತ್ತಿಕಾತತಿಗಳುಂ ಸುರರಾಜನದೊಂದು ಪೇೞ್ಕೆಯಿಂ ಸುರಪಥದಿಂದೆ ಬಂದುವಭಿಷೇಕಮಹೋತ್ಸವದೊಳ್ ಮುಕುಂದನಾ (ಜಗವಿ. ೮-೧೧೩). [ಸಂ.]

ವಾಮಲೋಚನೆ (ನಾ). ಸುಂದರವಾದ ಕಣ್ಣುಗಳುಳ್ಳವಳು : ವಿಯೋಗಮಂ ಮಾಡಿದ ವಾಮಲೋಚನೆಯುರಂಗದೊಳಾಲಿಯ ಸೂಸುನೀರ್ಗಳಟ್ಟೆಡದೆ ತಂದು ಪೆರ್ಮೊಲೆಯೊಳೊತ್ತಿದ ಪಂಕಜಪತ್ರಜಾಳಮಿರ್ಪೊಡದೆ ಪಾಸಿದೊಳ್ದಳಿರ್ಗಳುಂ ನೆಱೆ ಬಾಡದೆ ಸೈತು ಪೋಕುಮೇ (ಚಂದ್ರಪ್ರ. ೨-೨೪); ವಾಮಲೋಚನೆಯಿರ್ದೆಡೆಗಲರ್ವಟ್ಟೆಯಿಂದಾ ಮಹಿಮನು ಬಂದನಾಗ (ಶ್ರೀಪಾಲ. ೯-೫೧). [ಸಂ. ವಾಮಲೋಚನಾ]

ವಾಮವಿದ್ಧ (ನಾ). [ನಾಟ್ಯ] ಹತ್ತು ಬಗೆಯ ಆಕಾಶಮಂಡಲಗಳಲ್ಲಿ ಒಂದು: ಅತಿಕ್ರಾಂತ, ದಂಡಪಾದ, ಕ್ರಾಂತ, ಲಲಿತಸಂಚರ, ಸೂಚೀವಿದ್ಧ, ವಾಮವಿದ್ಧ, ವಿಚಿತ್ರ, ವಿಹೃತ, ಅಲಾತ, ಲಲಿತ ಈ ಹತ್ತು ಆಕಾಶಮಂಡಲಂಗಳ್ (ಲಾಸ್ಯರಂ. ೮-೪ ವ). [ಸಂ.]

ವಾಮಶರೀರ (ನಾ). ಶರೀರದ ಎಡಭಾಗ ; ವಾಮಾಂಗ : "ಸವ್ಯಂ ವಾಮಶರೀರಂ" (ವಸ್ತುಕೋ. ೧೧೪-೧೫). [ಸಂ.]

ವಾಮಸುಖ (ನಾ). ಕೀಳಾದ ಸುಖ ; ಕ್ಷುದ್ರವಾದ ಸುಖ : ಎಸಗುವ ವಾಮಸುಖಂಗಳ ದೆಸೆಗೆಸಗದೆ ಮಸಗದೆಸಗದಿರ್ದೆಡೆಯಿಂದಿರ್ದಸದೃಶದಿವಿಜ ಸುಖಾಮೃತರಸದಿಂ ತನ್ನಿಂದೆ ತಾನೆ ತಣ್ಣನೆ ತಣಿದಂ (ಸುಕುಮಾ. ೧೨-೪೮). [ಸಂ.]

ವಾಮಾಂಕ (ನಾ). ಎಡತೊಡೆ : ವಾಮಾಂಕದೊಳಿಟ್ಟೊಳ್ಪಿಂ ಭೂಮಿಗೆ ತಾಂ ಶ್ಲೋಕಯುಗಳಮಂ ಸೊಲ್ಲಿಸಿದಾ ಶ್ರೀಮದ್ವರಾಹಮೂರ್ತ್ಯಭಿರಾಮಕ್ಷೇತ್ರಮನಭೀಕ್ಷಿಸಿದನವನೀಶಂ (ಯಾದಚಂ. ೧೬-೧೬೬). [ಸಂ.]

ವಾಮಾಂಗ (ನಾ). ೧. ದೇಹದ ಎಡಭಾಗ,- ಎಡಪಾರ್ಶ್ವ : ಸುಮ್ಮಾನದಿಂ ಜನೇಶ್ವರನ ದಕ್ಷಿಣಭಾಗಮಮ್ಮೆಲ್ಪೆನೆಂದು ಪೊಕ್ಕಣಸಿತಲ್ಲದೆ ಸಿಂಹವೆಮ್ಮೊಡನೆ ವಾಮಾಂಗಮೆಂದಾಡಿತಿಲ್ಲ (ಜೈಮಿಭಾ. ೨೬-೫೭). ೨. ಸುಂದರವಾದ ಅಂಗವುಳ್ಳವನು ; ಚೆಲುವ : ವಾಮಾಂಗಸೋಮವಾಹನರೋಮೋಜ್ವಲಕೂಪಕೋಟಿಶಿವಲಿಂಗಧರಾ . . . ಬಸವೇಶ ನಮೋ (ಹಮ್ಮಿರ. ೫-೬). [ಸಂ.]

**ವಾಮಾಂಗಿ** (ನಾ). ೧. ಸುಂದರವಾದ ದೇಹವುಳ್ಳವಳು ; ಚೆಲುವೆ. ೨. (ಶಾಸ್ತ್ರಗಳ ಪ್ರಕಾರ ಗಂಡನ) ದೇಹದ ಎಡಭಾಗವಾಗಿರುವವಳು ; ಅರ್ಧಾಂಗಿ ; ಹೆಂಡತಿ : ಜೀಮೂತಕೇತು ತಪಮಂ ಪ್ರೇಮದೊಳಂ ಮಾಡೆ ಪುತ್ರನಂ ಪಡೆಯಲ್ಕಂ ವಾಮಾಂಗಿಯ ಮುಡಿಯರಲಂ ಹೇಮಾಚಲದಿಂಬಿನಲ್ಲಿ ಶಂಕರನಿತ್ತಂ (ಹಮ್ಮಿರ. ೨-೧೫) ; ಅಂಗನೆ ಪುರುಷನಾರ್ಧಾಂಗಮೆಂಬುದಕೆ ನಿನ್ನ ವಾಮಾಂಗಿಯಾದ ಕಾಂತೆಯಂ ಬೇಡಿದೊಡೆ (ಜೈಮಿಭಾ. ೨೬-೫೬). [ಸಂ. ವಾಮಾಂಗೀ]

**ವಾಮಾಂಘ್ರಿ** (ನಾ). ಎಡಗಾಲು,- ಪಾದ : ಕಲಿಕರ್ಣನಾಯುಷ ಹೋಯಿತಿದೆಯೆಂದೊರಸಿದನು ವಾಮಾಂಘ್ರಿಯಲಿ ನೆಲನ (ಕುವ್ಯಾಕ. ೧೬-೧೫);ಪೆಂಡೆಯದ ವಾಮಾಂಘ್ರಿ ಮೆಟ್ಟಿದಿರೆ ಹಿಂಡುದೇವರ ಹಾಹೆದೊಡರಲಿ ಗಂಡುಗಲಿ . . . ಖಡ್ಗವ ಕೊಂಡು ಝಳಪಿಸಿದ (ಕಾಶಿರಾ. ೪೧-೩). [ಸಂ.]

**ವಾಮಾಕ್ಷಿ** (ನಾ). ೧. ಸುಂದರವಾದ ಕಣ್ಣುಗಳುಳ್ಳವಳು. ೨. ಹೆಂಗಸು ; ಸ್ತ್ರೀ: ವಾಮಕರಾಂಬುಜದಿಂ ತದ್ವಾಮಾಕ್ಷಿಯ ಮುಖಮನೆತ್ತಿ ಮುದ್ದಿಸುತೆ ಕಲಾರಾಮು ಬಿಗಿಯಪ್ಪಿದಂ (ಉದ್ಭಟ. ೮-೧೦೪). [ಸಂ. ವಾಮಾಕ್ಷೀ (ವಾಮ + ಅಕ್ಷಿ + -)]

**ವಾಮಾಚಾರ** (ನಾ). ೧. ದುರಾಚಾರ ; ದುರ್ಮಾರ್ಗ. ೨. (ವೇದ ವಿರುದ್ಧವಾದ) ತಂತ್ರಶಾಸ್ತ್ರಕ್ಕೆ ಸಂಬಂಧಿಸಿದ ಆಚಾರ ; ಪಂಚಮಕಾರಗಳಿಂದ ಕೂಡಿದ ಶಕ್ತಿಪೂಜೆ : ವಾಮಾಚಾರದಲ್ಲಿ ಉದಾತ್ತಅರ್ಥದ ಅವನತಿಯೊಡನೆ, ಪಂಚಮಕಾರಗಳ ಶಬ್ದಪ್ರತಿಮೆಗಳು ಇಂದಿಗೂ ಪೂಜ್ಯವಾಗಿ ಉಳಿದಿವೆ! (ಕರ್ನಾಟ. ೧೨೭); ಸಾಮಾನ್ಯವಾಗಿ ಜನರು ವಾಮಾಚಾರವನ್ನು ವಕ್ರದೃಷ್ಟಿಯಿಂದ ನೋಡುವುದುಂಟು. ವಾಮಾಚಾರವು ಅತಿರಹಸ್ಯವಾದುದು (ಭಾರದ. ೨೨೭). ೩. ಮಾಟ ; ಅಭಿಚಾರ. [ಸಂ.]

**ವಾಮಾನಿಕೆ** (ನಾ). ೧. ಅನುಚಿತವಾದುದು ; ನಿಷಿದ್ಧವಾದುದು : ಫರಂಗಿಯವರ ಹೆಂಗಸರು ಹೀಗೆಯೇ ವಿನೋದವಾಗಿ ಕಾಲಾ ಕಳೆಯುತಾ ಇರುತ್ತಾರಲ್ಲ. ಅವರಲ್ಲಿ ಇದು ವಾಮಾನಿಕೆಯಲ್ಲ (ಆದೂಟ. ೮೮). ೨. ಅಳುಕು ; ಹಿಂಜರಿಕೆ : ಮೇಲೆ ಬಿದ್ದು ಕೊಂಡು ನಾವೇ ಹೋಗಿ, ಹೇಗಿದೀರಿ ? ಎಂದು ರೋಗಿಯನ್ನು ಕೇಳುವುದಕ್ಕೆ ಏನೋ ವಾಮಾನಿಕೆ (ಮನೋಸಂ. ೬೬). [< ವಾಮ + - ಇಕೆ]

**ವಾಮಾರ್ಧ** (ನಾ). ಎಡಗಡೆಯ ಅರ್ಧಭಾಗ ; ಎಡಪಾರ್ಶ್ವ : ಸಿಂಹವು ದೊರೆಯ ಬಲಭಾಗವನ್ನು ಅಪೇಕ್ಷಿಸಿತಲ್ಲದೆ ವಾಮಾರ್ಧವನ್ನಲ್ಲ (ನೀತಿಚಿಂ. XIII, ೨೭). [ಸಂ.]

**ವಾಮಾರ್ಧಾಂಗ** (ನಾ). ಹೆಂಡತಿಯನ್ನು ತನ್ನ ಶರೀರದ ಎಡಗಡೆಯ ಅರ್ಧಭಾಗವಾಗಿ ಧರಿಸಿದವನು ; ಅರ್ಧನಾರೀಶ್ವರ ; ಶಿವ : ವಾಮಾರ್ಧಾಂಗ ಮಹಿಮೋತ್ತುಂಗ ಕೂಡಲಸಂಗಮೇಶ್ವರಲಿಂಗ ಮಾಂ ತ್ರಾಹಿ (ಬಸವು. ೬೦-೪೯). [ಸಂ.]

**ವಾಮಿ** (ನಾ). ೧. ಹೆಣ್ಣುಕುದುರೆ : "ಅರ್ವತೀ, ವ(ವಾ)ಡ(ಬ)ಬಾ, ವಾಮಿ, ಪ್ರಸೂತಾ ಈ ೫ ಡ, ವಾಜಿನೀ- ಈ ೫ ಘೋಟಿಗೆ" (ಹಲಾಯು. ೬೨-೨೮೬). ೨. ಈದ ಕುದುರೆ. ೩. ಹೆಣ್ಣಾನೆ : "ವಾಮಿ- ಈದ ಕುದುರೆ, ಹೆಣ್ಣಾನೆ" (ಓಷಧಿ. ೧೪೯). ೪. ಹೆಣ್ಣುಕತ್ತೆ. ೫. ಹೆಣ್ಣುನರಿ. [ಸಂ. ವಾಮಿ]

**ವಾಮೆ** (ನಾ). ೧. ಹೆಂಗಸು ; ಸ್ತ್ರೀ : ಕಾಮರೂಪಿನ ವಾಮೆಯುಸಿರ್ದರಾಲಿಸುತಾಗ ರಾಮದೂತಂ ನುಡಿದಂ (ವೆಂಕಾರಾ. ೫-೧-೪೮). ೨. ಸುಂದರಿ ; ಚೆಲುವೆ : ಮುಟ್ಟಿದೊಡೆ ಸುಖದ ಸೋಂಕಂ ಪುಟ್ಟಿಸುವಾ ವಾಮೆ ವಾಮೆಯಾದೊಡೆ ಮುನ್ನಂ ಬಟ್ಟಿದುವೆನಿಸುವ ಮೊಲೆ ನಿರ್ವಟ್ಟಿದುವಾದುವು ನೃಪಂಗೆ ಬೆನ್ ಸೋಂಕಲೊಡಂ (ಯಶೋಚ. ೨-೫೮). ೩. ಹೆಂಡತಿ ; ಪತ್ನಿ : ಉದಗ್ರಬಲೋದ್ಭಟದೇವಂ ವಾಮೆಯೊಡನೆ ಮೇಳಿಸುತುರ್ವಿಯ ನುರ್ವಿಂ ಪಾಲಿಸುತಿರ್ದಂ (ಉದ್ಭಟ. ೨. ಸೂಚನೆ). ೪. ಗೌರಿ ; ಪಾರ್ವತಿ : ವಾಮೆ ಮಹಾಜ್ಯೇಷ್ಠಗುಣಸ್ತೋಮಾನ್ವಿತೆ ರೌದ್ರಿ ಕಾಳಿ . . . ಸರ್ವಭೂತದಮನಿ (ಹಾಲಾಸ್ಯ. ೪-೧೭-೧೮); ಸಂಕ್ಷೇಪವಾಗಿ ಶಕ್ತಿಯು . . . ವಾಮಾ, ಜ್ಯೇಷ್ಠಾ, ರೌದ್ರೀ ಎಂಬ ಸಂಜ್ಞೆಗಳಿಂದಲೂ ಇರುತ್ತಾಳೆ (ಭಾರದ. ೨೨೨). ೫. ಲಕ್ಷ್ಮಿ. ೬. ಸರಸ್ವತಿ. ೭. ಒಂಟೆ : "ವಾಮಾ-ಒಂಟೆ, ಸ್ತ್ರೀ" (ಓಷಧಿ. ೧೪೯). ೮.(ಆಲಂ) ಅಮಂಗಳ ; ಅಶುಭ : ಒಳ್ಳೆಯ ಕೆಲಸಕ್ಕೆಂದು ಹೊರಟಾಗ ಬೆಕ್ಕು ಅಡ್ಡಬಂದರೆ ವಾಮೆ (ರೂಢಿ). [ಸಂ.ವಾಮಾ]

**ವಾಯ** (ನಾ). ೧. ಮೋಸ ; ಕಪಟ : ಹರಿಶ್ಚಂದ್ರರಾಯನನುಪಾಯದಿಂ ತನ್ನಾಶ್ರಮಕ್ಕೊಯ್ದು ವಾಯದಪರಾಧಮಂ ಹೊರಿಸಿ ಸಾಮ್ರಾಜ್ಯಮಂ ಕೊಂಡ ವಿಶ್ವಾಮಿತ್ರನು (ಹಚಕಾ. ೮ ಸೂಚನೆ); ವಾಯಕಂಜದಿರಂಜದಿರಿ ಫಡ ಬಾಯ ಬಿಟ್ಟರೆ ಹೋಹುದೇ ನಿಮ್ಮಾಯುಷಕೆ ಹೊಣೆ ತಾನು ಹೇಳಿತ ಮಾಡಿ ಬೇಗದಲಿ (ಕುವ್ಯಾದ್ರೋ. ೧೯-೩೭). ೨. ಕಾರಣ ; ನಿಮಿತ್ತ : ಕಾಯವಿಲ್ಲದ ಹೆಣನ ವಾಯವಿಲ್ಲದೆ ಜವನೆಳೆದೊಯ್ದನೆಂಬ ವಾಯಕ್ಕೆ ವಾಯವನೇನೆಂಬೆ (ಅವಚಂ. ೧೨೯-೫೮೮);ಹರಿಬಕಿಲ್ಲದ ನಾಯಕರ ಸುಡು ಹೊಟ್ಟೆಹೊರೆಕರ ವಾಯಕಿವದಿರ ಸಂತವಿಟ್ಟನು ಸ್ವಾಮಿಕಂಟಕರ (ಕುವ್ಯಾದ್ರೋ. ೧೧-೫೮). ೩. ಉಪಾಯ ; ತಂತ್ರ ; ಹಂಚಿಕೆ : ನಿಮ್ಮೂರಿಗೆಮ್ಮವರನು ನೀ ಕರಸಿ ವಾಯದಲಿ ಜೂಜಾಡಿ ಕಪಟದ ದಾಯದಲಿ ಸೋಲಿಸಿ ಯುಧಿಷ್ಠಿರರಾಯನರಸಿಯ ಸುಲಿಸಿತಕೆ ಫಲವಾಯ್ತೆ (ಕುವ್ಯಾಗ. ೮-೧೨);ವಾಯಕರ್ಜುನನ ತಲೆ ಬಿಳ್ದಪುದೆ ಕೃಷ್ಣನ ಸಹಾಯಮಿರಲು (ಜೈಮಿಭಾ. ೯-೨೨). ೪. ಹುಸಿ ; ಸುಳ್ಳು : ವಾಯವಳಿದುದು ಸತ್ಯವುಳಿದುದಿದು ಸೋಜಿಗಂ (ವಾಗೀರ. ದೇ. ೨೭೯-೧೪); ಆಯುಧಂಗಳಲೇನು ನೀ ನಾಗಾಯುತದ ಬಲನೆಂಬರಾ ನುಡಿ ವಾಯವೋ ಕಲಿಭೀಮ ದಿಟವೋ ನೋಡಬೇಹುದಲೆ (ಕುವ್ಯಾಸ. ೨-೯೩). ೫. ಹಾಳು ; ನಾಶ : ಆಗಮ ಬಲ್ಲಿತ್ತೆಂಬೆನೆ ವಾಯ ಹೊಂದಿತ್ತು ಇದು ಕಾರಣ ಕೂಡಲಸಂಗಯ್ಯನೇ ನಿತ್ಯ ಉಳಿದ ದೈವವೆಲ್ಲಾ ಅನಿತ್ಯ (ಬಸವ. ೫೫೨);ಬೇಯದ ಕೊಡದೊಳು ತುಂಬಿದ ನೀರು ಕೊಡದೊಡನೆ ವಾಯವಪ್ಪಂತೆಪೋಲ್ . . . ಕಾಯಕದೊಳುಚ್ ವಾಚಕದೊಳು ಮಾನಸದೊಳಗೆ ಹೇಯವೆಂದೆನಿಸಿ ಶುದ್ಧತೆಯಿಲ್ಲದಿರ್ದೊಡವು ವಾಯವಪ್ಪುವು ತಾನು ಮಾಡಿದ ಸಮಸ್ತಭಕ್ತಿಗಳೊಡನೆ ಸತ್ಯಮಾಗಿ (ಸಿದ್ಧೇಪು. ೨೨-೪೦). ೬. ಭ್ರಮೆ ; ಭ್ರಾಂತಿ; ಮಿಥ್ಯೆ : ಕಾಯದ ಕಳವಳದ ವಾಯವೆಂದರಿಯಬಲ್ಲಡೆ ದೇವ ಗುಹೇಶ್ವರನ ನಿಲವುತಾನೆ (ಅವಚಂ. ೮೭-೩೮೬); ಎನ್ನ ಸತಿಯೆಂಬುದಿದು ತಾ[ನೆ]ಲ್ಲ ವಾಯವಿದು ಎಂದು ಬಸವಂ ಭಕ್ತಿಯಿಂ ನುಡಿವುತಿರಲು (ಬಸರ. ೧೩-೨೪). ೭. ತೋರಿಕೆ ; ನಟನೆ ; ಸೋಗು : ಈ ವಾಯದ ಮಾತಿಂಗಾನು ಬೆದಗಾದೆನು (ಅವಚಂ. ೧೯೧-೮೬೩); ವಾಯದ ಬೇಟದೊಳ್ ನಮೆವ ನಾಣಿಲಿಯೆನ್ನವೊಲನ್ಯಳಾವಳ್ (ಕುಸುಮಾ. ೧೩-೮೪). ೮. ವ್ಯರ್ಥ ; ನಿಷ್ಫಲ ; ನಿಷ್ಪ್ರಯೋಜಕ : ಮಾಯದ ಸಂಸಾರವ ನಚ್ಚಿ ವಾಯಕ್ಕೆ ಕೆಟ್ಟು ಬಚುದೋರ್ವೊಗಬೇಡ (ಬಸವ.೬೨೪); ಆಯತಾಕ್ಷನು ಪರಶುರಾಮನೊಳಾಯುಧದ ಶ್ರಮಗಲಿತು ಬಳಿಕದು ವಾಯವಾದೊಡೆ ಬಂದನಾ ಗಜಪುರಿಗೆ ಕಲಿಕರ್ಣ (ಕುವ್ಯಾಆ. ೬-೪೨). ೯. ಹಟ ; ದುರಭಿಮಾನ : ಕಾಯದ ಕಳವಳಕ್ಕಂಜಿ ಪ್ರಾಣ ಹೋದಲ್ಲಿ ಭವ ಹಿಂಗದು ಪ್ರಕೃತಿ ಬಿಡದು ವಾಯಕ್ಕಾದರೆ ಸತ್ತು ದೇವರ ಕೂಡಿದೆವೆಂಬರು (ಸರ್ವಮ. ೧೧-೫೨); ವಾಯ ಕಿಂತಕಟ ಸುಕುಮಾರನಂ ಕೊಂದನೀ ರಾಯನಚ್ಚಿವಂ ನೆಚ್ಚಿ ಸುಡಲಿ (ಜೈಮಿಭಾ. ೧೧-೩೪). [< ಪ್ರಾ. ವಾಯ. / ಸಂ. ವ್ಯಾಜ./ ಮರಾ. ವಾಯ]

**ವಾಯದ** 'ವಾಯಿದೆ' ನೋ.

**ವಾಯದೆಶ್ವರ** 'ವಾಯಿದೆಶ್ವರ' ನೋ.

**ವಾಯನ** (ನಾ). ಮದುವೆ, ಹಬ್ಬ, ವ್ರತ ಮುಂತಾದ ಶುಭಪ್ರಸಂಗಗಳಲ್ಲಿ ದೇವರಿಗೆ ಅರ್ಪಿಸುವ ಹಾಗೂ ವಿಶೇಷವಾಗಿ ಬ್ರಾಹ್ಮಣ, ಮುತ್ತೈದೆಯರಿಗೆ ಕೊಡುವ ಹಣ್ಣುಕಾಯಿ, ಆಹಾರಪದಾರ್ಥ ಮೊದಲಾದುವುಗಳ ಕಾಣಿಕೆ; ಬಾಗಿನ ; ಉಪಾಯನ : ಶ್ರೀಪಾದರಾಯರು . . . ದೇವಿಗೆ ಅರ್ಘ್ಯವಿತ್ತು ವಾಯನಗಳನ್ನರ್ಪಿಸಿದರು (ಕಭವಿ. ೨೯). 'ಬಾಯನ' ಪರಾ. [ಸಂ.]

**ವಾಯವಿಡಂಗ** 'ವಾಯುವಿಳಂಗ' ನೋ.

**ವಾಯುವಿಡಂಗ** 'ವಾಯುವಿಳಂಗ' ನೋ.

**ವಾಯವ್ಯ** (ಗು). ೧. ಗಾಳಿಗೆ ಸಂಬಂಧಿಸಿದ ; ವಾಯುವಿಗೆ ಸಂಬಂಧಪಟ್ಟ. (ನಾ). ೨. ಎಂಟುದಿಕ್ಕುಗಳಲ್ಲಿ ಒಂದು ; ಪಶ್ಚಿಮ ಮತ್ತು ಉತ್ತರಗಳ ನಡುವಿರುವ ವಿದಿಕ್ಕು : ಪಡುವ ವರದಸಮುದ್ರದ ಸೀಮೆಯಿಂ ನಟ್ಟ ಕಲ್ಲಿಂದಂ ಸೀ ಬಸುಳಿಮರವೊಳಗಾಗಿ ವಾಯವ್ಯ ಸಣಬದ ಸೀಮೆಯಿಂ (ಎಕ. III(R), ಹೆಗ್ಗಡ. ೮೯-೨೨೭; 1493); ವಾಯವ್ಯದ ಉಸಿರಾಟದಲು ಅಗೊ ಅದರಾಚೆಗೆ ಅಡಕಿಲವಾಗಿವೆ ವಿಶದದಲಿ ಹಲ ದಿನ್ನೆಗಳು (ಅರಳು. ೨೦೪-೩). ೩. ವಾಯವ್ಯದಿಕ್ಕಿನ ದೇವತೆ : ವಿಜ್ಞಾನದಲ್

ಬ್ರಹ್ಮನನ್ನರ್ಯ್ಯಮ ವರುಣ ವಾಯವ್ಯ ಚೇರ ಚೋಟಿ ಪಾಣ್ಡ್ಯರ್ಕ್ಕಳನ್ನಡೆಗೊಣ್ಡು ಕನ್ನರದೇವನ ಕರು ಮಾಂ XXX(ಎಇ. III (ಶಿ), ಹೆಗ್ಗಡ. ೫೯-೧೫ ; 1033) ; ತ್ರಿಪುರವನಾ ಪರಿವೃಢನಾಳುತಿರಲು . . . ವಾಯವ್ಯನ ಮರುಳು ಮಾಡುತ ಧನದನನು ದೊರೆಗೆಡಿಸಿದನು (ತ್ರಿಪುಸಾ. ೬-೬೬). ೪. ಒಂದು ಬಗೆಯ ಸಸ್ಯ ; ಕಡಸಿಗೆ : "ವಾಯವ್ಯಾ - ಕಡಸಿಗನು" (ಓಷಧಿ. ೧೫೦). [ಸಂ.]

ವಾಯವ್ಯಸ್ನಾನ (ನಾ). ದಿವ್ಯ, ವಾರುಣ, ವಾಯವ್ಯ, ಮಾನಸ ಮತ್ತು ಆಗ್ನೇಯಗಳೆಂಬ ಐದು ವಿಧವಾದ ಸ್ನಾನಗಳಲ್ಲಿ ಒಂದು ; ಗೋವುಗಳ ಪಾದಧೂಳಿಯ ಸ್ಪರ್ಶ : ದಿವ್ಯಸ್ನಾನ ವಾರುಣಸ್ನಾನ ವಾಯವ್ಯಸ್ನಾನ ಆಗ್ನೇಯಸ್ನಾನವೆಂಬ ಪಂಚವಿಧಸ್ನಾನಂಗಳೊಳಗೆ (ವಿವೇಕ. ೧೨೩) ; ಗೋವುಗಳ ಪಾದ ಧೂಳಿಯ ಸ್ಪರ್ಶವೇ ವಾಯವ್ಯಸ್ನಾನವು (ಅಣ್ಣಾವಿ. ೪-೬೪). [ಸಂ.]

ವಾಯವ್ಯಾಸ್ತ್ರ (ನಾ). ವಾಯುವನ್ನು ಅಭಿಮಂತ್ರಿಸಿ ಬಿಡುವ ಒಂದು ಬಗೆಯ ಅಸ್ತ್ರ : ಪೊಡವಿಪತಿ ಕೋದಂಡ ಧರಿಸುತ ತೊಡಚಿ ವಾಯವ್ಯಾಸ್ತ್ರದಿಂದವೆ ಕಡಿಯೆ (ಶಾತಿರಾ. ೨೫-೪೫) ; ವಾಯವ್ಯಾಸ್ತ್ರದಿಂದೆ ಶೋಷಿಸಿದನಾ ಜಲವನರ್ಜುನಂ (ದ್ವಿಮಿಭಾ. ೧೩-೧೫). [ಸಂ.]

ವಾಯಸ (ನಾ). ೧. ಕಾಗೆ : ವಾಯಸದಂತೆ ನೋಡು ಬಕದಂತಿರೆ ಮೆಲ್ಲನೆ ಮೆಟ್ಟು (ಕಾವ್ಯಾವ. ೪೦೨) ; ಸುಗೀತದ ರಸದ ಮಧುವಿಂಗಾಂತ ಕಿವಿ ವಾಯಸ ಸೃಗಾಲಧ್ವನಿಗೆ ಸೊಗಸಿತೆ (ಕುವ್ಯಾಗ. ೩-೨೦). ೨. ಒಂದು ಬಗೆಯ ಸಸ್ಯ : "ವಲಃ - ಆವರೆ, ವಾಯಸ" (ಓಷಧಿ. ೧೫೫). ೩. ಒಂದು ನರಕದ ಹೆಸರು : ಸರ್ಪ ಕೂರ್ಮ ವಾಯಸ ಗೃಧ್ರ ಉಲೂಕವೆಂಬೈದು ಮಂತ್ರಿರನರಕಂಗಳಂ ಸಂಯೋಗಿಸಿ ಪದ್ಮವೆಂಬರಸುನರಕವಿಹುದು (ವಿವೇಕ. ೧೫೩). [ಸಂ.]

ವಾಯಸಾದಿನಿ (ನಾ). ಒಂದು ಬಗೆಯ ಗಿಡ : "ವಾಯಸಾದಿನೀ - ಕಾಗಿದೊಂಡೆ" (ಓಷಧಿ. ೧೫೦). [< ಸಂ. ವಾಯಸಾದಿನೀ]

ವಾಯಸಾರಾತಿ (ನಾ). ಕಾಗೆಯ ವೈರಿ ; ಗೂಬೆ : "ಉಲೂಕಃ, ವಾಯಸಾರತಿಃ, ಪೇಚಕಃ - ೩ ಗೂಗೆ, ಗೂಬೆ" (ಸಿದ್ಧಾಂತಿ. ೧೫೩). [ಸಂ.]

ವಾಯಸಾರಿ (ನಾ). ೧. = ವಾಯಸಾರಾತಿ. ೨. ಗುಗ್ಗುಳ ; ಅಗರುಚಂದನ. ೩. ಒಂದು ಬಗೆಯ ಕಬ್ಬು ; ಹೆಗ್ಗಬ್ಬು : "ವಾಯಸಾರಿಃ- ಹೆಗ್ಗಬ್ಬು, ಗುಗ್ಗುಳ, ಗೂಗೆ" (ಓಷಧಿ. ೧೫೧). [ಸಂ.]

ವಾಯಸಿ (ನಾ). ೧. ಹೆಣ್ಣುಕಾಗೆ. ೨. ಒಂದು ಬಗೆಯ ಸಸ್ಯ ; IP ಅನೇಕ ಬಗೆಯ ಸಸ್ಯಗಳಿಗೆ ಈ ಹೆಸರಿದೆ : "ವಾಯಸೀ - ಕಂಗುಂಗೆ, ಕಾಡದೊಂಡೆ, ಕಾಡತ್ರಿ, ಚೀಲೈತ, ಬಲ್ಲಿಗಣಕೆ, ಕೊಡಸಿಗ, ಹೆಣ್ಣುಕಾಗೆ" (ಓಷಧಿ. ೧೫೦). ೩. ಗಣಿಕೆಯ ಗಿಡ ಮತ್ತು ಅದರ ಸೊಪ್ಪು; ಕಾಕಮಾಚಿ : "ವಾಯಸಿ ಕಾಕಮಾಚಿ ಪೆಸರಿಂ" (ವನ್ಯಕೋ. ೩೬-೨೬). [ಸಂ. ವಾಯಸೀ]

ವಾಯಸೋಲಿ (ನಾ). ಜ್ವರವನ್ನು ಹೋಗಲಾಡಿಸಿ ತಂಪನ್ನುಂಟುಮಾಡುವ, ಸಿಹಿಯಾಗಿರುವ ಒಂದು ಬಗೆಯ ಮೂಲಿಕೆ : "ವಾಸೀರಕಃ-ಮೊದೆ, ವಾಯಸೋಲಿ, ಕೋಟಿ" (ಓಷಧಿ. ೧೫೧). [ಸಂ. ವಾಯಸೋಲೀ]

ವಾಯಾಬ್ಯ (ನಾ). ಪಶ್ಚಿಮ ಮತ್ತು ಉತ್ತರ ದಿಕ್ಕುಗಳ ನಡುವೆ ಇರುವ ದಿಕ್ಕು; ವಾಯವ್ಯದಿಕ್ಕು : ಕೂಡಿದ ಠಾವು ವಾಯಾಬ್ಯದ ಮೂಲೆ (ಎಕ. VI, ಕಡೂರು. ೪೯-೨೨; 1291) ; ಆ ಪುರದ ವಾಯಾಬ್ಯದ ಕೋಣೆಯ ನಗರೇಪಿ ಬ್ರಹ್ಮಪುರಿಯ ನಾಲಕಲ್ಲ ದೇವದಾನದ ಒತ್ತಿನ ಮೂಲೆಯ ಲಿಂಗಮುದ್ರೆಯ ಕಲ್ಲು (ಎಕ. XI, ಚಿತ್ರದು. ೪-೩೯ ; 1328);
[IP ಇದು 'ವಾಯವ್ಯ' ಎಂಬುದರ ಅಪಲಿಖಿತ]

ವಾಯಿದೆ, ವಾಯದೆ, ವಾಯ್ದೆ (ನಾ). ೧. ಮಾತು ; ವಾಗ್ದಾನ: ಫಾಯಿದೆ ನೋಡಿ ವಾಯಿದೆ ಕಳಕೊಂಡ (ಗಾದೆ). ೨. ಕಾಲಾವಕಾಶ ; ಅವಧಿ ; ಗಡುವು: ಸಾಲ ತೀರಿಸುವ ವಾಯಿದೆಯನ್ನು ಮುಂದಕ್ಕೆ ಹಾಕಬೇಕಾಗುವುದು (ಹಣಪ್ರ. ೧೫೬) ; ಮೂರೂರಾತ್ರಿ ವಾಯಿದೆ ಕೊಟ್ಟು, ಆ ವಾಯಿದೆ ಕಳೆದ ಮೇಲೆ ನಗರದಲ್ಲಿ ಒಂದು ಪಿಳ್ಳೆಯೂ ಇರಕೂಡದೆಂದು ಡಂಗುರ ಹೊಡೆಸಿದನು (ಪ್ರವಾಣಿ. II, ೮೨). ೩. ಒಪ್ಪಿಗೆ ; ಒಡಂಬಡಿಕೆ : (೬). ವಾಯದೆ: ೨. ಆ ಕಡೆಯಿಂದ ಗಾಳಿ ಬೀಸುತ್ತಿತ್ತು. ಇನ್ನು ಮೇಲೆ ಆ ಕಡೆಯಿಂದ ಬೀಸುವುದಿಲ್ಲ, ಅದರ ವಾಯದೆ ಮುಗಿದು ಹೋಯಿತು (ಹಂಕಥೆ.೨೫). ವಾಯ್ದೆ : ೨. ಒಂದು ತಿಂಗಳ ವಾಯ್ದೆ ಕೊಟ್ಟು ಆ ಮಹಾನುಭಾವನಿಗೆ ಕೋರ್ಟಿನ ನೋಟೀಸು ಕೊಡುತ್ತೆ (ಏಕಾಂಗಿ. ೧೯೭) ; ನಾಳೆಯವರೆಗೆ ವಾಯ್ದೆ ಇದೆ (ದೇಶಭು. ೬೫).

ವಾಯಿದೆ ಗೇಣ = "ಸಾಲ ಕೊಡಲು ಕೊಟ್ಟ ಮುದ್ದತು ಗೇಣಿ" (ಜಾನಕೋ. ೪೪). [<— ಅರ. ವಾಅದಾ, ವಾಇದಾ, ವಾದಾ ; ಹಿಂ. ವಾಇದಾ, ವಾದಾ ; ಮರಾ. ವಾಈದಾ, ವಾಯದಾ]

ವಾಯಿದೆಜ್ವರ, ವಾಯದೆಜ್ವರ (ನಾ). ನಿಯಮಿತ ದಿನಗಳ ವರೆಗೆ ಇರುವ ಜ್ವರ ; ಕಟ್ಟಿಲೆಜ್ವರ : ಮೂರು ದಿನ ಕಳೆದು ಹೋಗಿದೆ. ಇದು ವಾಯಿದೆಜ್ವರ. ಇಪ್ಪತ್ತು ದಿನ ಕಳೆಯಬೇಕು (ಕಾವೇಂ. ೨೦೫). ವಾಯದೆಜ್ವರ : ಅವರ ಮಗ ಚಂದ್ರಶೇಖರ ವಾಯದೆಜ್ವರ ಬಂದು ಮಲಗಿದವನು ಮತ್ತೆ ಮೇಲಕ್ಕೇಳಲಿಲ್ಲ (ಬೆಳುಮು.೯).
[ವಾಯಿದೆ + ಜ್ವರ]

ವಾಯಿಧಾರೆ 'ಬಾಯ್ಧಾರೆ' ನೋ.

ವಾಯಿಲ್ (ನಾ). ಒಂದು ಬಗೆಯ ತೆಳುವಾದ ಮತ್ತು ಅರೆಪಾರದರ್ಶಕವಾದ ಹತ್ತಿಯ ಅಥವಾ ಉಣ್ಣೆಯ ಬಟ್ಟೆ : ಲಾಂಗ್‌ಕ್ಲಾತ್, ಚೀಟಿ, ವಾಯಿಲ್, ಮಸ್ಲಿನ್, ಮಲ್ ಇವನ್ನು ಸಾದಾನೇಯ್ಗೆ ಉಪಯೋಗಿಸಿ ನೇಯುವರು (ಗೃಹವಿ. ೭೩).
[<— ಇಂ. Voile]

ವಾಯಿವಡಂಗ 'ವಾಯುವಿಳಂಗ' ನೋ.

ವಾಯಿವಿಡಂಗ 'ವಾಯುವಿಳಂಗ' ನೋ.

ವಾಯಿವಿಳಂಗ 'ವಾಯುವಿಳಂಗ' ನೋ.

ವಾಯು (ನಾ). ೧. ಗಾಳಿ ; ಅನಿಲ : "ಪವನಃ, ಶ್ವಸನಃ, ವಾಯುಃ, ಮರುತ್ . . . ಗಂಧವಹಃ, ಹರಿಃ, ಮಹಾಬಲಃ — ಈ ೨೦ ಗಾಳಿಯ ಪೆಸರ್" (ಹಲಾಯು. ೧೪-೭೫); ಮನ ಮುಟ್ಟದ ಮಜ್ಜನ ತನು ತಾಗದ ದೇಹಾರ . . . ವಾಯು ತಾಗದ ಲಿಂಗದ ಠಾವ ತೋಱು ಗುಹೇಶ್ವರ (ಅವಚಂ. ೯೪-೪೧೯) ; ಭೂಮಿಯನ್ನು ಎಲ್ಲಾ ಕಡೆಯೂ ವಾಯು ಆವರಿಸಿಕೊಂಡಿದೆ (ಭೂವಿವ.೪೨). ೨. ಪ್ರಪಂಚದಲ್ಲಿ ಪದಾರ್ಥಗಳ ಮೂಲ ವಸ್ತುಗಳೆನಿಸಿದ ಪೃಥ್ವಿ, ಅಪ್ಪು, ತೇಜಸ್ಸು, ವಾಯು ಮತ್ತು ಆಕಾಶ ಎಂಬ ಪಂಚಮಹಾಭೂತಗಳಲ್ಲಿ ಒಂದು : ಪೃಥಿವಿಯಪ್ಪುತೇಜವಾಯುವಾಕಾಶ ನಿರಂಜನದೇವಾ ನಿಮ್ಮ ಮಹಿಮೆಯ ಪ್ರಣವಸ್ವರೂಪಂಗಲ್ಲದೆ ಕಾಣಲಾರಿಗೆಯೂ ಬಾರದಯ್ಯಾ (ಬಸವ. ೮೧೫) ; ಈ ಪ್ರಕಾರ ಶಬ್ದ, ಸ್ಪರುಶ, ರೂಪ, ರಸ, ಗಂಧಗಳೆಂಬೈದು ಅಪ್ಪು ತತ್ತ್ವಾಂಶದಿಂದ ಪಂಚಭೂತಗಳ ಚೇಷ್ಟೆ ಹೇತುಗಳಾಗಿಹವೂ. ಪೃಥ್ವಿಯ ಭಾಗವೆ ವಾಯುವೆನಿಸಿಕೊಂಡಿತು (ನಾನಾಸು. ೧೨-೪) ೩. ದೇಹದಲ್ಲಿರುವ ಮುಖ್ಯವಾದ ಪ್ರಾಣ, ಅಪಾನ, ಸಮಾನ, ಉದಾನ ಮತ್ತು ವ್ಯಾನ ಎಂಬ ಐದು ಬಗೆಯ ವಾಯುಗಳಲ್ಲಿ ಪ್ರತಿಯೊಂದು. ೪. ಗಾಳಿಯ ಅಧಿದೇವತೆ ; ಮಾರುತ : ಮಂತ್ರಾಕ್ಷರನಿಯಮದಿನಭಿಮಂತ್ರಿಸಿ ಬರಿಸಿದೊಡೆ ವಾಯುದೇವಂ ಬಂದೇಂ ಮಂತ್ರಂ ಪೇೞೆನೆ (ಪಂಪಭಾ. ೧-೧೨೪) ; ವಾಯುವಿಗೆ ಸಮರಿಲ್ಲ ಜಗದೊಳು ವಾಯುದೇವರೆ ಬ್ರಹ್ಮರು (ಪುರಂದ.ಧಾ. ೧-೫-೬). ೫. [ವೈದ್ಯಶಾ] ವಾತಪ್ರಕೋಪದಿಂದ ಉಂಟಾಗುವ, ದೇಹದ ಕೀಲುಗಳು ಹಿಡಿದುಕೊಳ್ಳುವ ಒಂದು ಬಗೆಯ ರೋಗ,—ವ್ಯಾಧಿ ; ಸಂಧಿವಾತ : ಬಚೆಯಲ್ಲಿ ಒಂದು ಗುಳಿಗೆಯಂ ಕೊಡಲು ವಾಯುಮಾಣ್ಗುಂ (ವಿಷ್ಣುವಿ. ೩೪). ೬. [ಛಂದ] ಒಂದು ಅಕ್ಷರಗಣದ ಹೆಸರು ; ಸಗಣ : ಆದಿಯ ಮಧ್ಯಾಂತದೆ ಗುರುವಾದೊಡೆ ಶಶಿ ಸೂರ್ಯ ವಾಯು ಗುರುವಿರೆ ಧರೆ ಮತ್ತಾದಿಯ ಮಧ್ಯಾಂತದೆ ಲಘುವಾದೊಡೆ ಜಲವಹ್ನಿಗಗನ ಲಘುವಿಂ ನಾಕಂ (ಛಂದೋಂಬು. ೧-೩೭ ಅಧಿಪದ್ಯ).

ವಾಯುಕುಮಾರ (ನಾ). ವಾಯುವಿನ ಮಗ ; ಹನುಮಂತ :ವಾಯುಕುಮಾರಗೆ ಮಂಗಳ ರಘುರಾಯಸೇವಕಗೆ ಮಂಗಳ . . . ಸಂಜೀವರಾಯಗೆ ಮಂಗಳ (ಪುರಂದ.ಧಾ. ೩-೧೬೭ ಪಲ್ಲವಿ). [ಸಂ.]

ವಾಯುಗುಣ (ನಾ). ೧. ವಾಯುವಿನ ಗುಣ ; ಗಾಳಿಯ ರುಚಿ : ವಾಯುಗುಣವ

ಸರ್ಪ ಬಲ್ಲುದು ಮಧುರಗುಣವನಿಬುಹೆ ಬಲ್ಲುದು (ಮದಿಮಾ. ೪೦-೫೫). ೨. ವಾತಾವರಣ ; ಹವಾಮಾನ : ಒಂದು ಪ್ರದೇಶದಲ್ಲಿ ಗಾಳಿಯು ಯಾವ ಕಡೆಯಿಂದ ಬೀಸುವುದು, ಅದರಲ್ಲಿ ಎಷ್ಟು ಶಾಖವಿದೆ ಮತ್ತು ಎಷ್ಟು ತೇವವಿದೆ ಎಂಬೀ ವಿಷಯಗಳನ್ನು ತಿಳಿದರೆ ಆ ಪ್ರದೇಶದ ವಾಯುಗುಣವನ್ನು ಅಥವಾ ಹವವನ್ನು ತಿಳಿದಂತಾಗುವುದು (ಭೂರಹ.೩೩). [ಸಂ.]

ವಾಯುಗುಲ್ಮ (ನಾ). ೧. ಅತಿ ತೀವ್ರವಾಗಿ ಬೀಸುವ ಗಾಳಿ ; ಸುಂಟರಗಾಳಿ ; ಬಿರುಗಾಳಿ. ೨. [ವೈದ್ಯಶಾ] (ಅಂತ್ರಪಟಲದ ಮಡಿಕೆ ಜಡ್ಡುಗಟ್ಟುವುದರಿಂದ ಉಂಟಾಗುವ) ತೀವ್ರವಾದ ಸಂಧಿವಾತ ; ವಾತಗುಲ್ಮ : ಮಂಗರ xxx ಬಳ್ಳಿ, ರಕ್ತಸಿಗಡ್ಡೆ . . . ಇವು ಸ್ವಮಾನಂಗೊಂಡು ಅರೆದು . . . ಸೇವಿಸೆ ಹೊಟ್ಟೆಯಲ್ಲಿರುವ ಗಡ್ಡೆ, ಅಡ್ಡಗ್ಗೆ, ಗರ, ವಾಯುಗುಲ್ಮಂ, ಇವು ಮಾಣುವುವು (ವಿಷ್ಣು. ೨೦೦). [ಸಂ.]

ವಾಯುಜ (ನಾ). ೧. ವಾಯುವಿನ ಮಗ ; ಹನುಮಂತ : ಪಠನಾರಿಗೆ ವಾಯುಜ ಸ್ವಯಂ ತಾನೆನಲುರ್ವರೆಗೆ ಗಿರಿಜಾತ್ಮಭವನೆನೆ ವರವಿಕ್ರಮನುನ್ನತೋನ್ನತಂ ತಾನೆನಿಕುಂ (ಮದತಿ.೧೦-೧೪); ಕಾದಡರಿದೊಂದು ಮಲೆನಾಡಾಗಿ ನೆತ್ತಿಯ ಬಯಲ್ ಸೀಮೆಗೇರುತಿರೆ ವಾಯುಜನ ಕಪಿ ಮಹಾಕಾಯಮ್, ಇಳಿದುದು ಕಂದರದ ಕಡೆಗೆ (ಶ್ರೀರಾಮಾ. ೪೦೪-೩೭). ೨. ಭೀಮ. [ಸಂ.]

ವಾಯುನಂದನ (ನಾ). ವಾಯುದೇವನ ಮಗ ; ಭೀಮ : ವಾಯುನಂದನ ಧನಂಜಯನೊಳೆರವಿಲ್ಲ ಮಾದ್ರೇಯರೊಳ್ತಪ್ಪಿಲ್ಲ (ಜೈಮಿಭಾ. ೨-೫೪). [ಸಂ.]

ವಾಯುಪಂಚಕ (ನಾ). ದೇಹದಲ್ಲಿರುವ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎಂಬ ಐದು ಬಗೆಯ ವಾಯುಗಳು : ವಿಚಾರಿಸೆ ಸಮಾನೋದಾನವಾ ವ್ಯಾನಮಂತಪಾನಂ ಪ್ರಾಣವೂ ಈ ವಾಯುಪಂಚಕಮುಂ (ವೀಶೈಪು. ೭-೩-೧೪); ಪ್ರಾಣೋಪಾನವ್ಯಾನೋದಾನಸಮಾನಗಳೈದನ್ನು ವಾಯುವಿನ ಅಯಿದು ಭಾಗಗಳಿಂದ ಉತ್ಪನ್ನವಾದವುಗಳಾದ್ದರಿಂದ ವಾಯುವಂಶವಾದ್ದರಿಂದಲು ವಾಯುಪಂಚಕವೆಂದು ಹೇಳುವರು (ವೇದಾಂಪು. ಸಾಂಖ್ಯಸೂತ್ರ). [ಸಂ.]

ವಾಯುಪಟ್ಟ (ನಾ). [ದ್ವೈತ] ವಾಯುದೇವನ ಅಧಿಕಾರ, –ಪಟ್ಟ : ಶ್ರೀವಾದಿರಾಜರು, ತಮ್ಮ ಗುರುಗಳಂತೆ . . . ಸುಪ್ರಸಿದ್ಧರಾಗಿದ್ದಾರೆ. ದ್ವೈತಿಗಳ ನಂಬಿಕೆಯ ಪ್ರಕಾರ ಮುಂದಿನ ವಾಯುಪಟ್ಟ ಇವರದು (ಜಗದಾ. ೯೮). [ಸಂ.]

ವಾಯುಪಡೆ (ನಾ). ಮೂರುಬಗೆಯ ಸೇನಾಬಲಗಳಲ್ಲಿ ಒಂದು; ವಿಮಾನದ ಮೂಲಕ ಆಕಾಶದಲ್ಲಿದ್ದು ಯುದ್ಧಮಾಡುವ ಸೈನ್ಯ : ನಮ್ಮ ಭಾರತದ ವಾಯುಪಡೆಯಲ್ಲಿ ಅನೇಕ ಸಮರ್ಥನಾಯಕರಿದ್ದಾರೆ (ರೂಢಿ). [ವಾಯು + ಪಡೆ$_2$]

ವಾಯುಪಥ (ನಾ). ವಾಯುವು ಚಲಿಸುವ ದಾರಿ ; ಆಕಾಶಮಾರ್ಗ : ಪಾಲ್ಗಡಲನುಪಾಯದಿಂ ಕಡೆಯೆ ರಾಹುಗೆ ವಾಯುಪಥಾಗ್ರಮೆಂಬ ಪೆರ್ಮಡಕೆಯೊಳಿಕ್ಕಿ ಕೊಟ್ಟ ಪೊಸಬೆಣ್ಣೆವೊಲಿರ್ದುದು ಚಂದ್ರಮಂಡಲಂ (ಕಾವ್ಯಸಾ. ೯೩೮ ಶೂದ್ರಕ) ; ವಾಯುಪಥದೊಳ್ ಶಿತಾಸ್ತ್ರಂಗಳ್ ಪೊಂ[ಕ]ೊಂಗಿಡಿಸೆ ಸುಗಿದಂ ಭಾರ್ಗವನಿದೇಂ ಪ್ರತಿಜ್ಞಾಗಾಂಗೇಯಂಗದಿರದಿರ್ದಿನ್ನಿಲ್ಲನ್ನರೊಳರೇ (ಪಂಪಭಾ. ೧-೮೦). [ಸಂ.]

ವಾಯುಪಥಿಕ (ನಾ). ಆಕಾಶಮಾರ್ಗದಲ್ಲಿ ಸಂಚರಿಸುವವನು ; ದೇವತೆ : ಮೂದೇವರ ದೇವನ ಗೃಹದೊಳು ಬಲುಭೇದದ ಧ್ವಜನಿಕರಗಳು ವಾದಿಸಿ ವಾಯುಪಥಿಕರೊಡನವರಿಗೆ ಹಾದಿಯ ಕೊಡದಿರುತಿಹವು (ತ್ರಿಪುಸಾಂ. ೭-೭೮). [ಸಂ.]

ವಾಯುಪುತ್ರ (ನಾ). ೧. ವಾಯುದೇವನ ಮಗ. ೨. ಹನುಮಂತ. ೩. ಭೀಮ : "ಕುರುವೈರಿ ವಾಯುಪುತ್ರಂ ವೃಕೋದರನೆನಲು ಭೀಮನಕ್ಕುಂ" (ಮಂಗರಾ. ೭೮-೩). [ಸಂ.]

ವಾಯುಪುರಾಣ (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು : ಯಾವ ಪುರಾಣ ಯಾವ ಕಲ್ಪಕ್ಕೆ ಸೇರಿದ್ದು? — ಬ್ರಾಹ್ಮಕಲ್ಪ — ಬ್ರಹ್ಮಪುರಾಣ . . . ಶ್ವೇತಕಲ್ಪ - ಶೈವ ಅಥವಾ ವಾಯುಪುರಾಣ (ಭಾರಗ. ೧೪೭). [ಸಂ.]

ವಾಯುಪ್ರಾಣಿ (ನಾ). [ವೀಶೈ] ಉಸಿರಾಡುವ ಜೀವಿ ; ಶರೀರಧಾರಿ : ಆದಿ ಅನಾದಿಯ ನಿತ್ಯಾನಿತ್ಯವ ತಿಳಿಯಲರಿಯದೆ ವಾಯುಕ್ಕೆ ಪರಬ್ರಹ್ಮವ ನುಡಿವ ವಾಯುಪ್ರಾಣಿಗಳವರೆತ್ತ ಬಲ್ಲರೋ ಆ ಪರಬ್ರಹ್ಮದ ನಿಜದ ನಿಲವ (ಮಹಾದೇ. ಬ. ೧೧೧-೨೬೫) ; ಎನಿಸಿದನು ಮಂತ್ರಪಿಂಡ ಎನಿಸದೆ ಮಾಂಸಪಿಂಡ ಎನಿಸದೆ ವಾಯುಪ್ರಾಣಿ ಎಂದು ಬಸವಣ್ಣ ಎನಿಸಿದನು ಲಿಂಗಪ್ರಾಣಿ ಎಂದು (ಸಿದ್ಧಪು. ೨೬-೯೯). [ಸಂ.]

ವಾಯುಬಲ (ನಾ). ೧. ಗಾಳಿಯ ಬಲ, – ಶಕ್ತಿ : ವಾಯುಬಲದಿಂದ ನಡೆಯುವ ಯಂತ್ರಗಳನ್ನು ಇಂದು ಇಲ್ಲಿ ಪ್ರದರ್ಶನಕ್ಕಿಟ್ಟಿದ್ದಾರೆ (ರೂಢಿ). ೨. ವಾಯುದೇವನ ಬಲ, –ಸಾಮರ್ಥ್ಯ : ಕೃಷ್ಣನು, "ನಿನ್ನಲ್ಲಿರುವ ವಾಯುಬಲವನ್ನು ತೋರಿಸು ಭೀಮ"! ಎಂದನು (ವಚಭಾ. ೭೯). [ಸಂ.]

ವಾಯುಭಕ್ಷ (ನಾ). ಗಾಳಿಯನ್ನು ಆಹಾರವಾಗಿ ಸೇವಿಸುವಂಥದು; ಹಾವು : "ವಾಯುಭಕ್ಷಃ – ಸರ್ಪ" (ಒಷಧಿ. ೧೫೧). [ಸಂ.]

ವಾಯುಭುಗ್ಭೂಷ (ನಾ). ಗಾಳಿಯನ್ನು ಸೇವಿಸುವ ಸರ್ಪವನ್ನು ಆಭರಣವಾಗಿ ಉಳ್ಳವನು ; ನಾಗಭೂಷಣ ; ಶಿವ : ವಾಯುಭುಗ್ಭೂಷನುತ್ತಮವೇಷನಘತಿಮಿರಪೂಷಂ . . . ಪಂಪಾವಿರೂಪಾಕ್ಷನೆಮಗೀಗೆ ಭಕ್ತಿಜ್ಞಾನಸಂಪದವನು (ಹಚಕಾ ೧-೮). [ಸಂ.]

ವಾಯುಮಂಡಲ (ನಾ). (ಭೂಮಿಯ ಸುತ್ತ ಇರುವ) ವಾತಾವರಣ : ಕೃಷ್ಣವರ್ಣಮನುಳ್ಳುದು ವಾಯುಮಂಡಲಮನುಳ್ಳುದು ತನ್ನ ನಾಲ್ಕು ದಿಕ್ಕಿನೊಳಂ (ಪ್ರತಿಷ್ಠಾ. ೧೦-೫೪) ; ವಾಯುಮಂಡಲದ ಮೇಲುಭಾಗದಲ್ಲಿ ಗಾಳಿಯ ಚಲನೆಯನ್ನು ಗಮನಿಸಿ (ಭೂವಿವ. ೯೭). [ಸಂ.]

ವಾಯುಮಾರ್ಗ (ನಾ). ಗಾಳಿಯು ಚಲಿಸುವ ದಾರಿ, – ಪಥ ; ಆಕಾಶಮಾರ್ಗ : ವಾಯುಮಾರ್ಗದ ಮೂಲಕ ಇಂದು ಅವರು ಹೊರದೇಶಕ್ಕೆ ಹೊರಟರು (ರೂಢಿ). [ಸಂ.]

ವಾಯುಮೃಗ (ನಾ). ಗಾಳಿಗೆ ಎದುರಾಗಿ ನಡೆಯುವ ಸ್ವಭಾವವುಳ್ಳ ಒಂದು ಬಗೆಯ ಹುಲ್ಲೆ : "ವಾತಪ್ರಮೀಃ, ವಾತಮೃಗಃ — ೨ ವಾಯುಮೃಗದ ಹೆಸರು, ಗಾಳಿಗೆಯೆದುರಾಗಿ ನಡಿಯುವ ಸ್ವಭಾವವುಳ್ಳ ಹುಲ್ಲೆಯೆಂಬುವ ಮೃಗ. ಇದು ಕಡಹದ ಜಾತಿಯಲ್ಲಿ ಭೇದವು" (ಸಿದ್ಧಾಂತಿ. ೧೫೪). [ಸಂ.]

ವಾಯುಯಾನ (ನಾ). ೧. ವಾಯುಮಾರ್ಗದಲ್ಲಿ ಮಾಡುವ ಪ್ರಯಾಣ. ೨. ಆಕಾಶದಲ್ಲಿ ಪ್ರಯಾಣಮಾಡುವ ವಿಮಾನ ಮೊದಲಾದ ಸಾಧನ : ಮಿಶ್ರಲೋಹಗಳು . . . ವಾಯುಯಾನದಲ್ಲಿ ಇದರ ಉಪಯೋಗವು ವಿಶೇಷವಾಗಿದೆ (ಶಿಲ್ಪಸಾ. ೩೧೭). [ಸಂ.]

ವಾಯುರಯ (ನಾ). ೧. ವಾಯುವೇಗ ; ಅತ್ಯಂತ ವೇಗ. ೨. ವಾಯುವೇಗವನ್ನುಳ್ಳುದು ; ಅತ್ಯಂತ ವೇಗವಾಗಿ ಚಲಿಸುವಂತಹುದು : ಮಿಂಟಿ ದಾಂಟಿ ಕಂಟಳಿಸಿ ಪೊದಳ್ದು ಪಾಯ್ದು ಪರಿಯಿಟ್ಟುದು ವಾಯುರಯಂ ಹಯದ್ವಯಂ (ರಾಜಶೇ. ೧೩-೯೧). [ಸಂ.]

ವಾಯುರೋಗ (ನಾ). = ವಾಯು ೫ : ಸಂಗ್ರಹಣಿ, ಅಷ್ಟಾದಶಕುಷ್ಠ, ವಾಯುರೋಗಂಗಳಿಗೆ ಅನುಪಾನದಲ್ಲಿ ಕೊಡುವುದು (ವಿಷ್ಣು. ೫೦). [ಸಂ.]

ವಾಯುಲಿಂಗ (ನಾ). [ವೀಶೈ] ಈಶ್ವರನ ಐದು ಲಿಂಗಸ್ವರೂಪಗಳಲ್ಲಿ ಒಂದು ; ವಾಯುಸ್ವರೂಪವಾದ ಲಿಂಗ : ವಾಯುಲಿಂಗವೆಂದರೆ ಚಲಿಸುವ ವಾಯುವೇ ಲಿಂಗವಾಗಿಯೂ ಆಕಾಶಲಿಂಗವೆಂದರೆ ಬಯಲೇ ಲಿಂಗವಾಗಿಯೂ ಹಿಂದೆ ತಿಳಿಸಿದ ಕ್ಷೇತ್ರಗಳಲ್ಲಿ ಈಗಲೂ ಕಾಣುತ್ತಿವೆ (ಶಕ್ತವಿ. ೩೦). [ಸಂ.]

ವಾಯುವಿಕಾರ (ನಾ). ದೇಹದಲ್ಲಿ ವಾತಪ್ರಕೋಪದಿಂದ ಉಂಟಾಗುವ ರೋಗ ; ವಾತಕ್ಷೋಭೆ : ಕ್ಷೀರಧಾರಾ (ನೊರೆಹಾಲು) ಗುಣ — ಇದನ್ನು ಸೇವಿಸಲು . . . ವಾಯುವಿಕಾರ, ನೇತ್ರರೋಗ, ವಿಷರೋಗ ಸಹ ಗುಣಮಕ್ಕುಂ (ಸಕವ್ಯ. ೨೮). [ಸಂ.]

ವಾಯುವಿಹಾರ (ನಾ). ಗಾಳಿಸೇವನೆಗೆಂದು ವಿಹರಿಸುವಿಕೆ, – ಸಂಚರಿಸುವಿಕೆ : ಅವರು ಪ್ರತಿದಿನವೂ ವಾಯುವಿಹಾರಕ್ಕೆ ಹೋಗುವ ಪದ್ಧತಿಯನ್ನು ರೂಢಿಸಿಕೊಂಡು ಬಂದಿದ್ದಾರೆ (ರೂಢಿ). [ಸಂ.]

ವಾಯುವಿಳಂಗ, ವಾಯವಡಂಗ, ವಾಯವಿಡಂಗ, ವಾಯಿವಡಂಗ, ವಾಯಿವಿಡಂಗ, ವಾಯಿವಿಳಂಗ (ನಾ). ಒಂದು ಬಗೆಯ ಮರ ಮತ್ತು ಕ್ರಿಮಿನಾಶಕಗುಣವುಳ್ಳ ಅದರ ಕಾಯಿ ; ಕ್ರಿಮಿಘ್ನ : ಮಣಶಿಲೆ, ಗಂಧಕ,

ಗೋಮೂತ್ರ , ವಾಯುವಿಳಂಗ , ಸಾಸುವೆವಿಣ್ಣೆ, ಪಾದರಸ ಇವಿಷ್ಟನು ಸಮಾಂಶವಾಗಿ ಮರ್ದಿಸಿ ಮಂಡೆಗೆ ಇಕ್ಕಿಸಲು ಹೇನು ಸತ್ತು ಹೋಹುದು (ವೈದ್ಯಸಾ.II, ೧೪೩) ; ಶುಂಠಿ, ಭದ್ರಮುಸ್ತೆ, ವಾಯುವಿಳಂಗ, ದೇವದಾರು, ಬೆಲ್ಲವತ್ತದ ಬೇರು ಇವುಗಳನ್ನು ಕಷಾಯ ಕಾಯಿಸಿ ಕುಡಿಯೆ ಶ್ಲೇಷ್ಮಜ್ವರ ಶಮನವಾಗುವುದು (ಸಕವೈ. ೯೦). **ವಾಯುವಡಂಗ** : ''ವೇಲ್ಲ — ವಾಯವಡಂಗ'' (ಗಂಗಾಮ. ೨೯೬). **ವಾಯುವಿಡಂಗ** : ''ಕೃಮಿಘ್ನ — ವಾಯವಿಡಂಗ'' (ಗಂಗಾಮ. ೯೫). **ವಾಯಿವಡಂಗ** : ''ಮೋಘ . . . ವಾಯಿವಡಂಗದ ಗಿಡ'' (ಗಂಗಾಮ. ೨೬೪). **ವಾಯಿವಿಡಂಗ** : ''ತಂಡುಲ . . . ವಾಯಿವಿಡಂಗ'' (ಗಂಗಾಮ. ೧೪೬). **ವಾಯಿವಿಳಂಗ** : ಪಂಚಲವಣ, ಯವಕ್ಷಾರ . . . ವಾಯಿವಿಳಂಗ, ತಾರೇಕಾಯಿ, ನೆಲ್ಲಿಯಕಾಯಿ, ಇವುಗಳ ಸಮಾನ ಚೂರ್ಣವಂ ಮಾಡಿ ತುಪ್ಪದಲ್ಲಿ ಮೆಲ್ಲುವುದು (ವಿಷ್ಣುವಿ. ೧೬೮). [ದೇ. ‖ ತಮಿ. ವಾಯುವಿಳಙ್ಕಮ್, ವಾಯ್ವಿಲಙ್ಕಮ್ ; ತುಳು. ವಾಯಿಲಾಂಗ್, ವಾಯಿವಿಲಂಗ ; ತೆಲು. ವಾಯುವಿಳಂಗ, ವಾಯಿವಿಳಂಗ. / ಸಂ. ವಿಡಂಗ. / ಹಿಂ. ವಾಯವಿಡಂಗ ; ಮರಾ. ವಾವಡಿಂಗ, ವಾವಡಂಗ ; ಗುಜ. ವಾವಢೀಂಗ]

ವಾಯುವೇಗ (ನಾ). ೧. ಗಾಳಿಯ ವೇಗ. ೨. ಅತ್ಯಂತವೇಗ : ಜವನುಂ ತಾಂ ವಾಯುವೇಗಯುತನುಂ ಯಮನುಂ (ವಸ್ತುಕೋ. ೧೧೮-೩) ; ಮುನಿದು ರಾವಣ ತೇರನಟ್ಟಿದ ವಾಯುವೇಗದಲಿ (ತೊರಾ. ೩೭-೨೧). [ಸಂ.]

ವಾಯುವೇಗಿ (ನಾ). ೧. ಗಾಳಿಯಂತೆ ತೀವ್ರಗತಿಯುಳ್ಳುದು. ೨. ಅತ್ಯಂತ ವೇಗವಾಗಿ ಚಲಿಸುವ ಒಂದು ಜಾತಿಯ ಕುದುರೆ : ವಾಯುವೇಗಿಯನತುಳ ಬಲಿಯನಬೇಯಮುಖನಂ ತನ್ನಿ (ಬಸವು. ೫೯-೩೯). [ಸಂ. ವಾಯುವೇಗಿನ್]

ವಾಯುಸಂಚಾರ (ನಾ). ೧. ಗಾಳಿಯ ಚಲನೆ, —ಓಟ : ಅನೇಕ ಸಾಧಾರಣಪ್ರಾಣಿಗಳಲ್ಲಿ ವಾಯುಸಂಚಾರ ಚರ್ಮದ ಮೂಲಕ (ಕೀಟಬೆ. ೩೬). ೨. ತಿರುಗಾಟ ; ವಾಯುವಿಹಾರ : ಸಂಜೆ ವಾಯುಸಂಚಾರಕ್ಕೆಂದು ಹೊರಟು ಅವರು ಮನೆ ತಲುಪಿದಾಗ ರಾತ್ರಿ ಎಂಟು ಗಂಟೆಯಾಯಿತು (ರೂಢಿ). [ಸಂ.]

ವಾಯುಸಖಿ (ನಾ). ಗಾಳಿಯ ಮಿತ್ರ ; ಬೆಂಕಿ : ಮತ್ತೆಯಾಹವನೀಯ ಗಾರುಹಪತ್ಯ ದಕ್ಷಿಣ ವಾಯುಸಖಿರಾದರು ತ್ರಿವೇಣುಕವಾ ರಥಾಗ್ರದಲಿ (ಕುವ್ಯಾಕ. ೭-೪). [ಸಂ.]

ವಾಯುಸುತ (ನಾ). ೧. ವಾಯುವಿನ ಮಗ : ಗೆಂಟರೊಳರೆಯ ಮೇಲೆ ಕುಳಿತಿರ್ಪನೆಕ್ಕಟಿಯೊಳಾ ದಿವ್ಯತೇಜಸ್ವಿ . . . ವಾಯುಸುತನಾಂಜನೇಯಂ! (ಶ್ರೀ ರಾಮಾ. ೩೯೭-೯೪೩). ೨. ಹನುಮಂತ : ರಾಜಸೂಯವ ಕೊಳಲು ವಾಯುಸುತ ಬಂದಿಹನು (ಪುರಂದ. ಥಾ. ೧-೧೭೫-೪). ೩. ಭೀಮ : ರುದ್ರನೊಳು . . . ವಾಯುಸುತನೊಳು ಭಟನೊಳುಗ್ರದೊಳು ತೋಳ್ಗಳೊಳು ಭೀಮನಾಮಂ (ಮಂಗರಾ. ೧೪೯-೪೮); ವಾಯುಸುತ ಖಾತಿಯಲಿ ಹಲಗೆಯಡಾಯುಧವ ಕೊಂಡರಿಭಟನ ಮೇಲ್ಪಾಯಿದಡೆ . . . ಹಗೆ ಮಾಯವಾದನು (ಕುವ್ಯಾದ್ರೋ. ೧೩-೫೭). [ಸಂ.]

ವಾಯುಸೇನೆ (ನಾ). = ವಾಯುಪಡೆ : ಲಕ್ಷ್ಮೀನಾರಾಯಣರಿವರೊಳು ಹಿರಿಯರು . . . ವಾಯುಸೇನೆಯೊಳಧಿಕಾರಿಯಾಗಿರುವರು (ಇಂಬಾಪ. ೭೪-೫೮). [ಸಂ. ವಾಯುಸೇನಾ]

ವಾಯುಸೇವನೆ (ನಾ). (ಸ್ವಚ್ಛವಾದ) ಗಾಳಿಯನ್ನು ಸೇವಿಸುವುದು : ವಾಯುಸೇವನೆಗಾಗಿ ಅವರು ಪ್ರತಿದಿನ ಲಾಲ್‌ಬಾಗಿಗೆ ಹೋಗುವರು (ರೂಢಿ). [ಸಂ. ವಾಯುಸೇವನ]

ವಾಯುಸ್ತಂಭ (ನಾ). ಪಾರ್ಥಿವಸಿದ್ಧಿ, ಅಪ್ತತ್ತ್ವ, ತೈಜಸ, ವಾಯು, ಅಂಬರ, ಮಾನಸ, ಅಹಂಕಾರ ಮತ್ತು ಬುದ್ಧಿ ಎಂಬ ಅಷ್ಟಸಿದ್ಧಿಗಳಲ್ಲಿ ಒಂದು ; ಗಾಳಿಯಲ್ಲಿ ನಿರಾಧಾರವಾಗಿ ದೇಹವನ್ನು ಎತ್ತಿ ನಿಲ್ಲಿಸುವ ಒಂದು ಬಗೆಯ ವಿದ್ಯೆ : 'ಜಲಸ್ತಂಭ' ಪರಾ. [ಸಂ.]

ವಾಯುಸ್ತಂಭನ (ನಾ). = ವಾಯುಸ್ತಂಭ : ವಾಯುಸ್ತಂಭನ ವಾದ ವಶ್ಯ ಅಂಜನಾಸಿದ್ಧಿ ಘುಟಿಕಾಸಿದ್ಧಿ ಮಂತ್ರತಂತ್ರಸಿದ್ಧಿ ಇವೆಲ್ಲವ ಕಲಿತಡೇನೋ . . . ಲಿಂಗವಂತ ನೆನಿಸಿಕೊಂಬುದಿಲ್ಲ (ಮಡಿವಾ. ೪೩-೬೧). 'ಜಲಸ್ತಂಭನ' ಪರಾ. [ಸಂ.]

ವಾಯುಹತಿ (ನಾ). ಗಾಳಿಯ ಹೊಡೆತ, —ಪೆಟ್ಟು : ವಾಯುಹತಿಯಲಿ ಮೇಘದೊಡ್ಡಿಂಗಾಯಸವು ಕರ್ಣಾಸ್ತ್ರಹತಿಯಲಪಾಯವರಿರಾಯರಿಗಪೂರ್ವವೆ (ಕುವ್ಯಾಕ. ೧೪-೬). [ಸಂ.]

ವಾಯ್ಕಾಲು 'ಬಾಯ್ಕಾಲ್' ನೋ.

ವಾಯ್ದೆ 'ವಾಯಿದೆ' ನೋ.

ವಾರ₁ 'ಬರ್' ಪರಾ.

ವಾರ₂ (ನಾ). ೧. ಭೂಮಿಯ ಮಾಲೀಕರಿಗೆ, ಗೇಣಿದಾರನು ಸಲ್ಲಿಸುವ ಫಸಲಿನ ಅರ್ಧಭಾಗ ; ಕೋರು : ಕೊಟ್ಟಗುತ್ತಗ ವಾರವುಂಟೆಂದಟ್ಟಿ ನಿನ್ನವರಿಂದವೆನ್ನಂ ಕಟ್ಟಿ ಕುಟ್ಟಿಪುದರಸ ಧರ್ಮವೆ (ಬಸವು. ೨೭-೫೨) ; ಮಾದಸೆಟಿ ಆದಿಯಾಗಿ ಮಾಡಿಕೊಂಡ ತೋಟಕೆ ಕೊಟ ವಾರ ಗ ೨೫ (ಸೌಇ. IX-ii, ೪೭೬-೨೮; 1506) ; ಬ್ರಾಹ್ಮಣರು . . . ಹೊಲಗದ್ದೆಗಳನ್ನು ವಾರಕ್ಕೋ ಗುತ್ತಿಗೆಗೋ ಕೊಡುತ್ತಿದ್ದರು (ಕಳುಹು. ೯೨). ೨. ವಾರಕ್ಕೆ ತೆಗೆದುಕೊಂಡ ಭೂಮಿಯ ಫಸಲಿನ ಮೇಲೆ ಹಾಕುವ ತೆರಿಗೆ, —ಕಂದಾಯ: ಸುವರ್ನಾದಾಯ ವಾರ ಕಾರುಸೇಸೆ ಸಿದ್ಧಾಯ . . . ಯೇನುಳ ಸರ್ವ್ವಸ್ವಾಮ್ಯವನೂ ನೀಉ ಆಗುಮಾಡಿಕೊಂಡು (ಸೌಇ. IX-ii, ೪೪೦-೨೪; 1419); ಸರಕಾರದ ವಾರದ ಭೂಮಿಯಲಿ ಆಗಲಿ ಯಿವರು ಮಾಡಿಯಿರುವ ಕಂದಾಯದ xxx ಭೂಮಿಯಲಿ ಆಗಲಿ ನಡತಿಕೊಂಡು ಬರುವದು (ಮೈಲ. ೧೯೩೦, ೪೨-೬; 1822).

ವಾರಕ್ಕೆ ಕೊಡು = ಭೂಮಿಯ ಒಡೆತನವನ್ನು ಉಳಿಸಿಕೊಂಡು, ಅದರಲ್ಲಿ ಬರುವ ಫಸಲಿನ ಅರ್ಧಭಾಗವನ್ನು ತೆಗೆದುಕೊಳ್ಳುವ ಕರಾರಿನ ಮೇಲೆ ಭೂಮಿಯನ್ನು ಬೇರೊಬ್ಬನಿಗೆ ಸಾಗುವಳಿಗೆ ಕೊಡು : ನಾವು ನಮ್ಮ ಹೊಲಗಳನ್ನೆಲ್ಲಾ ವಾರಕ್ಕೆ ಕೊಟ್ಟಿದ್ದೇವೆ (ರೂಢಿ). ವಾರದ ದವಸ = ಭೂಮಿಯನ್ನು ವಾರಕ್ಕೆ ತೆಗೆದುಕೊಂಡ ಗೇಣಿದಾರನು ಜಮೀನಿನ ಮಾಲೀಕರಿಗೆ ಸಲ್ಲಿಸಬೇಕಾದ ದವಸ , —ಧಾನ್ಯ : ಆಗ ಕೆಲವು ರೈತರು ಅರಮನೆಗೆ ಕೊಡತಕ್ಕ ಕಂದಾಯ, ವಾರದ ದವಸ ಮುಂತಾದುವನ್ನು ನಾವು ಕೊಡುವುದಿಲ್ಲ, ವಿಸ್ಮತ್ತ್ರ ಕಂದಾಯವನ್ನು ಸಲ್ಲಿಸದೆ ದಂಗೆಯೇಳುವ ಯೋಚನೆಯಲ್ಲಿದ್ದರು (ಒಡೆಕ. ೫೧).

[ದೇ. ‖ ತಮಿ. ಮಲ. ವಾರಮ್ ; ಕೊಡ. ವಾರ ; ತೆಲು. ವಾರಕಮು = ಬೆಳೆಯು ಬಂದ ನಂತರ ಬಡ್ಡಿಯಿಲ್ಲದೆ ಹಿಂದಕ್ಕೆ ಪಡೆಯುವ ಕರಾರಿನ ಮೇಲೆ ಬೆಳೆಗಾರರಿಗೆ ವ್ಯವಸಾಯಕ್ಕಾಗಿ ಮುಂಗಡವಾಗಿ ಕೊಡುವ ಹಣ]

ವಾರ₃ (ನಾ). ೧. ಹೊದಿಕೆ ; ಆಚ್ಛಾದನೆ. ೨. ಗುಂಪು ; ಸಮೂಹ : ಚಾಪದುತ್ಕಟದ ಯೋಧರ ವಾರಂ . . . ಆರ್ಭಟಿಸಿ ಭೀಕರದಿಂದೆ ಕಡಂಗಿ ಸಂಗರಕ್ಕುರವಣಿಸಾರ್ದು ಪೊಕ್ಕು (ಹಮ್ಮಿರ. ೩-೪೦) ; ಸುಧೆಯ ರಸದಿಂಪನಾ ದೇವತೆಗಳ ವಾರ ಬಲ್ಲಂತೆ . . . ದುರ್ಜೀವಿಗಳ್ ತಿಳಿಯಬಲ್ಲರೆ ಮಹೀತಳದೊಳು (ನಂದಿಮಾ. ೧-೨೧). ೩. ರಾಶಿ ; ಒಟ್ಟಿಲು. ೪. ದೊಡ್ಡ ಸಂಖ್ಯೆ. ೫. ಸರತಿ ; ಪಾಳಿ : ವಾರಂ ಬಂದುದು ನಿಂದುದು ಜನವಿಂದೇರಯ್ಯಮೆನಲ್ಕೊಯ್ಯನೆನುತೆ ಪೂಣ್ಬಾರಯೆ (ಉದ್ಭದೇ. ೫-೧೨). ೬. ಭಾನುವಾರದಿಂದ ಶನಿವಾರದ ವರೆಗಿನ ಅಥವಾ ಯಾವುದೇ ಏಳು ದಿನಗಳ ಅವಧಿ ; ಸಪ್ತಾಹ : ಹಾಲ ಧಾರೆಗು ಸಹ ಅಕ್ಕಿಮೂಡೆ ೧೦ ತಿಂಗಳು ತಿಂಗಳು ತಪ್ಪದೆ ತಿಂಗಳಲ್ಲಿ ೧೭ ಹೋಹಾಗ ನಡವ ವಾರ ೧ ಮತ್ತಂ ಇಪ್ಪತ್ತೈದು ೨೫ ಹೋಹಾಗ ನಡವ ವಾರ ೧ ಅಂತು ತಿಂಗಳಲ್ಲಿ ಯೆರಡು ವಾರ ಸಮುದಾಯ ನಡವುದಕ್ಕೆ ಅಕ್ಕಿಮೂಡೆ ೧೨ (ಎಇ. XX, ೯೪-೪೯; 1556) ; ಅವರು ಊರಿನಿಂದ ಬರುವುದಕ್ಕೆ ಇನ್ನೂ ಒಂದು ವಾರವಾಗುತ್ತದೆ (ರೂಢಿ). ೭. ಭಾನುವಾರ ಮುಂತಾಗಿ ಸೂರ್ಯ ಮೊದಲಾದ ಗ್ರಹಗಳು ಅಧಿಪತಿಗಳಾಗಿರುವ ಸಪ್ತಾಹದ ಪ್ರತಿಯೊಂದು ದಿವಸ : ಪ್ರಶಸ್ತ ದಿವಸ ವಾರ ನಕ್ಷತ್ರ ಮುಹೂರ್ತದೊಳ್ ಮುಂಜಿಬಂಧನಕ್ರಿಯೆಯುಂ ಮಾಡಿದ ಬಳಿಕ್ಕೆ (ಪದ್ಮಾರಾ. ೭೩-೨೧) ; ವಾರವೆಂದಚಿಯೆ ದಿನವೆಂದಚಿಯೆ ಏನೆಂದಚಿಯೆನಯ್ಯಾ (ಬಸವ. ೪೯೦). ೮. ನಿರ್ದಿಷ್ಟದಿನಗಳಲ್ಲಿ ಆಚರಿಸುವ ಉಪವಾಸ, ವ್ರತ ಮುಂತಾದ ಕಟ್ಟಳೆ : ಊರಲ್ಲಿ ರೋಗಾದಿಗಳು ಹಬ್ಬಿದರೆ, ಏನಾದರೂ ಸಂಭವಿಸಿದರೆ ಈ ದೇವತೆಗಳೇ ಮೂಲಕಾರಣರೆಂದು ತಿಳಿದು ವಾರಗಳನ್ನು ಆಚರಿಸುವರು (ಕನ್ನಜಾ. ೧೫). ೯. ಅವಕಾಶ ; ಆಸ್ಪದ; ಸಂದರ್ಭ : ''ಅವಸರಮುಂ ವಿಸರಮುಮಚಿ ವಾರಂ'' (ವಸ್ತುಕೋ. ೧೨೫-೪೬).

೧೦. ಶಿವ; ಈಶ್ವರ. ೧೧. ಬಾಗಿಲು; ದ್ವಾರ. ೧೨. ನದಿಯ ಇನ್ನೊಂದು ತೀರ.

ವಾರವಾರ (ದ್ವಿರುಕ್ತಿ) : ವಾರವಾರಕೆ ಪೂಜೆಗೊಂಬುವ ಹಾರ ಮುಕುಟಾಭರಣ ಕುಂಡಲಧಾರ ಭುಜಕೇಯೂರಭೂಷಿತ (ಪುರಂದ. ೨-೧೩೮-೧). ವಾರಂಪ್ರತಿ = ಪ್ರತಿವಾರವೂ ; ಎಲ್ಲ ಸಪ್ತಾಹದಲ್ಲೂ : ಅವನು ವಾರಂಪ್ರತಿ ಕೆಲಸದ ಮೇಲೆ ಹಳ್ಳಿಯಿಂದ ಪಟ್ಟಣಕ್ಕೆ ಬರುತ್ತಾನೆ (ರೂಢಿ). ವಾರಕೊಡು = ಪ್ರತಿಸಪ್ತಾಹದಲ್ಲೂ ಒಂದು ನಿರ್ದಿಷ್ಟದಿನದಂದು (ಬಡ ವಿದ್ಯಾರ್ಥಿ ಮುಂತಾದವರಿಗೆ ಉಚಿತವಾಗಿ) ಊಟವನ್ನು ನೀಡು : ಅವರ ಮನೆಯಲ್ಲಿ ಇಬ್ಬರು ಓದುವ ಹುಡುಗರಿಗೆ ವಾರಕೊಟ್ಟಿದ್ದಾರೆ (ರೂಢಿ). ವಾರಮಾಡು = (ಹರಕೆ ಮುಂತಾದುವನ್ನು ತೀರಿಸಲು) ಪ್ರತಿಸಪ್ತಾಹದಲ್ಲೂ ನಿರ್ದಿಷ್ಟದಿನದಂದು ವ್ರತ, ಉಪವಾಸ ಮುಂತಾದುವನ್ನು ಆಚರಿಸು : ಗುರುವಾರ ಅವರು ವಾರ ಮಾಡುವುದರಿಂದ ಅಂದು ಒಂದೇ ಹೊತ್ತು ಊಟಮಾಡುತ್ತಾರೆ (ರೂಢಿ). [ಸಂ.]

ವಾರಂವಾರ (ಅ). ಪದೇ ಪದೇ ; ಪುನಃ ಪುನಃ ; ಮತ್ತೆಮತ್ತೆ : ಕುಸುಮಬಾಣನ ಮತ್ತು ನನ್ನಯ ಕುಸುಮದಾಸ್ತರಣವನು ಪ್ರೇಮದೆ ಪಸರಿಸುವುದಕೆ ನೀನು ವಾರಂವಾರ ನೆರವಾದೆ (ಪಾರ್ವಪ. ೭) ; ಒಂದು ಅತಿ ಕೋಮಲ ಉತ್ತರೀಯದ ಸೆರಗು ವಾರಂವಾರ ಹಾರಿ ಬಂದು ನನ್ನ ಗಲ್ಲಕ್ಕೆ ತಾಕುತ್ತಿತ್ತು (ಇಪ್ಪ೬. ೧೫೨). [ಸಂ. ವಾರಂವಾರಂ]

ವಾರಕ$_1$ (ಗು). ೧. ತಡೆಯುವ ; ನಿವಾರಿಸುವ. (ನಾ). ೨. ತಡೆಯುವವನು ; ಅಡ್ಡಿಪಡಿಸುವವನು : ಬಾರಿಪ ನಿಮ್ಮ ತರ್ಜನದಿನೀ ಜನದೊಂದುಲಿ ಮಾಣ್ಗೆ ಮಾಣೆವಾವಾರೆಮಗಿಲ್ಲ ವಾರಕರೆನುತ್ತುಮೆ ಮಾರ್ಜಡಿವಂದದಿಂ ಪ್ರತೀಹಾರಿಯರಂ ಪೊದಟ್ಟುವೆಳವೆಂಡಿರ ನೂಪುರದಿಂಚರಂ (ಪುಷ್ಪ. ೭-೩೫). ೩. ಒಂದು ಜಾತಿಯ ಶ್ರೇಷ್ಠವಾದ ಕುದುರೆ ; ಜಾತ್ಯಶ್ವ. ೪. ಕುದುರೆಯ ನಡಗೆಯಲ್ಲಿ ಒಂದು ಬಗೆ ; ಒಂದು ಬಗೆಯ ಅಶ್ವಗತಿ. [ಸಂ.]

ವಾರಕ$_2$ (ನಾ). ಬಳುವಳಿ ಅಥವಾ ಕಾಣಿಕೆಯಾಗಿ ಕೊಡುವ ಒಡವೆ, ವಸ್ತು ಮುಂತಾದುವು : ಏನಯ್ಯ ಅರಸರ ವಾರಕದ ಮಾಣಿಕದುಂಗುರಮಂ ಕಿಡಿಸಿ ಬಂದಿರೆ (ವಡ್ಡಾರಾ. ೫-೧೦) ; ನಿಮ್ಮ ವಾರಕದೊಡವೆಯ ನಿಮಗರ್ಪಿಸಲಱಿಯದ ಕರ್ಮಿ ನಾನಯ್ಯಾ (ಗಣಭಾ. ೪೩-೬೧) ; ಇವದಿರ ತಲೆಗಳಿವು ವಾರಕದವಿವನರೆಗಳಿಗೆಯಲಿ ತಾ ಕೊಂಬೆನು ದ್ರೋ. ೧೨-೨೯).

ವಾರಕದ ಚಿನ್ನ = ಬಳುವಳಿ ಅಥವಾ ಕಾಣಿಕೆಯಾಗಿ ಕೊಡುವ ಚಿನ್ನ : ಧರ್ಮನು ತನ್ನ ಭಂಡಾರವೆಲ್ಲಾ ತೀರಲು ದಳವಾಯಿ ಮೊದಲಾದ ರಾಜ್ಯದ ವಾರಕದ ಚಿನ್ನವನ್ನೆಲ್ಲಾ ಸೋತನು (ಭೈರಸೂ. 1, ೧೦೧).

[?. / ಸಂ. ವಾಲಕ = ಉಂಗುರ, ಬಳೆ ಮೊದಲಾದ ಆಭರಣ]

ವಾರಕ$_3$ (ನಾ). (ಶರೀರದ) ಅರ್ಧಭಾಗ : ಪಂಚಮುಖದ ಚೆಲ್ವಿಂ ಪಾರ್ವತೀವಾರಕದೊಡಲ ಭಸ್ಮಾಂಗದಿಂದಂ ಸಕಲಪ್ರಮಥರ ಗಡಣದಿಂ ಪ್ರತ್ಯಕ್ಷನಾದ ಶಿವ (ಶಂಕದಾ. ೫-೬೧). [?]

ವಾರಕರಿ (ನಾ). (ಪ್ರತಿವರ್ಷವೂ) ನಿಶ್ಚಿತವಾದ ದಿನದಂದು ತೀರ್ಥಕ್ಷೇತ್ರಕ್ಕೆ ಹೋಗುವ ಭಕ್ತ : ಅಂದು ಪಂಢರಪುರದಲ್ಲಿ ಲಕ್ಷಗಟ್ಟಿ ವಾರಕರೀ ಜನರು ಕಲೆತಿದ್ದರು (ಹಂಸಾ. ೧೪೩.) ; ಪ್ರತಿದ್ವಾದಶಿಗೆ ಪಂಢರಪುರಕ್ಕೆ ಹೋಗುವವರೂ ಕೆಲವರುಂಟು. ಅವರಿಗೆ ''ವಾರಕರಿ'' ಯೆಂದೆನ್ನುತ್ತಾರೆ (ಕಭಾಗ. ೧೫೨). [<— ಮರಾ. ವಾರಕರೀ]

ವಾರಕಾಂತೆ (ನಾ). ಸೂಳೆ; ವೇಶ್ಯೆ: ವಾರಕಾಂತೆಯರ ಭೂಷಣಕಾಂತಿಯ ಕೆಂಬಿಸಿಲ್ಗೆಳಾವಗಮೆಸೆಯುತ್ತಿರಲ್ (ಕಾದಂಪೂ.೩.೦೨). [ಸಂ. ವಾರಕಾಂತಾ]

ವಾರಗಾರ (ನಾ). ಭೂಮಿಯ ಒಡೆಯನಿಗೆ ಅದರ ಬೆಳೆಯಲ್ಲಿ ಅರ್ಧ ಭಾಗವನ್ನು ಕೊಡುವ ಒಪ್ಪಂದದಿಂದ ಭೂಮಿಯನ್ನು ಸಾಗುವಳಿ ಮಾಡುವವನು ; ಕೋರು ಕೊಡುವವನು : ವಾರಗಾರ್ರೇನು ಬಿತ್ತಿದ್ದಾರೋ ಇಲ್ಲವೊ ತಿನ್ನಕ್ಕಾದರೂ ನಾರು ರಾಗಿಕಾಳಾಗಬೇಕಲ್ಲ (ಚಂಗಾಳ್ಳ. ೨೦೮).

[ವಾರ$_2$ + - ಗಾರ ( < - ಕಾಱ)]

ವಾರಗುತ್ತಿಗೆ (ನಾ). ''[ರೈತನು ತಾನು ಬೆಳೆದದ್ದರಲ್ಲಿ ಒಂದು ಭಾಗವನ್ನು (ಸಾ.ಅರ್ಧವನ್ನು)ಜಮೀನ್ದಾರನಿಗೆ ಕೊಡುವಂತೆಯೂ ಜಮೀನ್ದಾರನು ರೈತನ ಉಳುಮೆಗೆ ಬೇಕಾದ ಪಶುಗಳನ್ನೂ ಬಿತ್ತನೆಯ ಕಾಳನ್ನೂ ಕೊಡುವಂತೆಯೂ ಮಾಡಿಕೊಂಡ] ವಾರಗುತ್ತಿಗೆ'' (Metayage. ೯೦೫೨).

[ವಾರ$_2$ + ಗುತ್ತಿಗೆ (< ಗುತ್ತಗೆ]

ವಾರಗೇರಿ (ನಾ). ಸೂಳೆಯರ ಬೀದಿ ; ವೇಶ್ಯಾವೀಥಿ : ವಾರಗೇರಿಯೊಳೇಱುಂ ಜೌವನದ ನೀಱೆಯರ ಕೋಲುದಱ ಸೆಱಂಗಮೋಸರಿಸಿ . . . ಪಕ್ಕಿಮೂವಿಲಂ ಕೈದೋಱಲೊಡಂ (ಲೀಲಾಶ್ವ. ೨-೧೬). [IP ಇಲ್ಲಿ 'ವಾರಸ್ತ್ರೀಯರ ಕೇರಿ' - ಎಂಬರ್ಥದಲ್ಲಿ ಮಧ್ಯಮಪದಲೋಪವಾಗಿ 'ವಾರಗೇರಿ' ಎಂದು ಪ್ರಯೋಗವಾಗಿರಬಹುದು. (ಗ್ರಂಥದಲ್ಲಿ 'ಕೇರಿ' ಶಬ್ದವನ್ನು 'ಱ' ಬಳಸಿ ಪ್ರಯೋಗಿಸಿರುವುದೂ ತಪ್ಪು) ಸಂಸ್ಕೃತದಲ್ಲಿ 'ವಾರಾ' ಶಬ್ದಕ್ಕೆ 'ವೇಶ್ಯೆ' ಎಂಬರ್ಥವಿದೆಯೇ ಹೊರತು 'ವಾರ' ಶಬ್ದಕ್ಕಿಲ್ಲ. ಆದರೆ ಯಾವ ಸಂಸ್ಕೃತಕೋಶಕಾರರೂ 'ವಾರಕಾಂತೆ', 'ವಾರಸ್ತ್ರೀ' ಮುಂತಾದ ಶಬ್ದಗಳನ್ನು 'ವಾರಾ' ಶಬ್ದದಿಂದ ನಿಷ್ಪನ್ನ ಮಾಡಿಲ್ಲ. 'ವಾರ=ಸಮೂಹ, ಸರದಿ' ಎಂಬರ್ಥಗಳಿಂದ 'ಸಮೂಹಕ್ಕೆ ಒದಗುವ ಸ್ತ್ರೀ', 'ಸರದಿಯ ಮೇಲೆ ದೊರಕುವ ಸ್ತ್ರೀ' – ಮುಂತಾಗಿ ಅರ್ಥೈಸಿದ್ದಾರೆ. ಇದು ಇನ್ನೂ ಪರಿಶೀಲನಾರ್ಹವಾಗಿದೆ]

ವಾರಣ (ನಾ). ೧. ತಡೆಗಟ್ಟುವಿಕೆ ; ನಿರೋಧ. ೨. ಕಳೆಯುವಿಕೆ ; ನಿವಾರಣೆ. ೩. ಮರೆಮಾಡುವಿಕೆ ; ಮುಚ್ಚುವಿಕೆ. ೪. ಕಾಪಾಡುವಿಕೆ ; ರಕ್ಷಣೆ. ೫. ಅಡ್ಡಿ ; ತಡೆ. ೬. ಕೆರೆಯ ಏರಿ ; ಕಟ್ಟೆ. ೭. ಆನೆ ; ಗಜ : ಅಂತು ವಿಕ್ರಿಯಾಬಲದಿಂ ಗೀರ್ವಾಣವಾರಣಂ ವಿಗುರ್ವಿಸೆ (ಆದಿಪು.೪-೨೩ ವ) ; ವಜ್ರಬಾಹುಕುಮಾರಂ ವಾರಣಮನೇಱಿದಂ ದಿಗ್ವಾರಣಮಂ ದಿಕ್ಕುಮಾರರೇಱುವ ತೆಱದಿಂ (ಪಂರಾಮಾ. ೨-೯). ೮. ಆನೆಯ ಸೊಂಡಿಲು. ೯. ಯುದ್ಧಕವಚ. ೧೦. ಬಾಗಿಲು ; ದ್ವಾರ. ೧೧. ಒಂಟೆ : ''ಕರಭದಲ್ಲಿಯುಂ ವಾರಣಮೆಂಬುದು'' (ಹಲಾಯು. ೧೩೨-೯). ೧೨. ಮೋಡ ; ಮೇಘ. ೧೩. ಕಡಲು ; ಸಮುದ್ರ. ''ತಟಾಕಬಂಧನಂ ಜಲಧರ ಶೀಘ್ರಗಾಮಿ ಗಜಮೆಂಬಿವು ವಾರಣಶಬ್ದ'' (ನಾನಾರ. ೧೦೦). [ಸಂ.]

ವಾರಣಬುಸೆ (ನಾ). ಬಾಳೆಯ ಗಿಡ : ''ಕದಳೀ, ವಾರಣಬುಸಾ, ರಂಭಾ . . . ಬಾಳೆಗಿಡದ ಹೆಸರುಗಳು'' (ಸಿದ್ಧಾಂತಿ. ೧೩೭). [ಸಂ. ವಾರಣಬುಸಾ]

ವಾರಣಮುಖ (ನಾ). ಆನೆಯ ಮುಖವುಳ್ಳವನು ; ಗಣೇಶ : ವೀರಗಣಮುಂ ಪ್ರಮಥಸಾರನಿವಹಂ ಸಮದವಾರಣಮುಖಂ ನವಮಯೂರಪತಿವಾಹಂ ಸೇರಿ ನೆರೆದೊಪ್ಪಿರೆ (ರಾಜಶೇ. ೧೪-೮೮). [ಸಂ.]

ವಾರಣರಣ (ನಾ). ಆನೆಗಳ ಯುದ್ಧ : ವಾರಣರಣದೆ ಮದೀಯಾಘೋರಣರಣ ವಿದ್ಯೆ ಮೆಱೆಗುಂ (ಜಗವಿ. ೧೩-೧೦೯). [ಸಂ.]

ವಾರಣವಾಹನ (ನಾ). ೧. ಆನೆಯನ್ನು ವಾಹನವಾಗಿ ಹೊಂದಿರುವುದು. ೨. ಮೋಡವನ್ನು ವಾಹನವಾಗಿ ಉಳ್ಳವನು ; ಇಂದ್ರ. ೩. ಕುಬೇರ : ವಾರಣವಾಹನಂ ಪೃಥುತರಾಷ್ಟಭುಜಂ ವಿಜಯಾಂಗನಾಗೃಹದ್ವಾರದನೇಕಶಾಖೆಯೆನೆ . . . ಕುಬೇರಯಕ್ಷನೊಸೆದೀ ಕೃತಿಗೀಗೆ ಗುಣಪ್ರತಿಷ್ಠೆಯಂ (ಮಲ್ಲಿಪು. ೧-೮). [ಸಂ.]

ವಾರಣವೈರಿ (ನಾ). ಆನೆಯ ಶತ್ರು ; ಸಿಂಹ : ವಾರಣವೈರಿಯನೇಱಿ ಮಹಾರಣದೊಳಗುರ್ವಿಪ(ವ)ರ್ವ ತಾ(ರಾ)ರಯ ಬಲದಿ(ಬ)ಂ ಬೇರಿಂದೆ ಕಿಡಿಸಿ ಯಕ್ಷಕುಮಾರಿ ಸದಾ ಕೂರ್ತು ರಕ್ಷಿಸುಗೆ (ಅಭ್ಯುಮ. ೧-೭). [ಸಂ.]

ವಾರಣಶಿ 'ಬಾರಣಾಸಿ' ನೋ.

ವಾರಣಶಿಕ್ಷೆ (ನಾ). ಆನೆಗಳನ್ನು ಪಳಗಿಸುವ ವಿದ್ಯೆ ; ಆನೆಗಳಿಗೆ ತರಬೇತು ನೀಡುವ ವಿದ್ಯೆ : ವಾರಣಶಿಕ್ಷೆಯಂ ತುರಗಶಿಕ್ಷೆಯನೊಪ್ಪುವ ಚಾಪವಿದ್ಯೆಯಂ . . . ಈತನಲ್ಲದಿಳೆಯೊಳ್ ಮಿಗೆ ಬಲ್ಲವರಾರ್ (ದಶಕು. ೧೧-೯೬). [ಸಂ. ವಾರಣಶಿಕ್ಷಾ]

ವಾರಣಸೈನ್ಯ (ನಾ). ಆನೆಗಳ ಪಡೆ ; ಗಜಸೈನ್ಯ : ವಾರಣಸೈನ್ಯಶಿರಸ್ಸಿಂದೂರಂ ಪ್ರತಿಕೂಲಮಾರುತಾಹತಿಯಿಂದುತ್ಸಾರಿತವಾಗಿರ್ದಪುದೆನೆ ದಾರುಣಮಾದತ್ತು ಸುತ್ತಲುಂ ದಿಗ್ದಾಹಂ (ಜಗವಿ. ೧೮-೪೭). [ಸಂ.]

ವಾರಣಹಸ್ತ (ನಾ). ೧. ಆನೆಯ ಸೊಂಡಿಲು : ''ವಾರಣಹಸ್ತದಗ್ರ . . . ಪುಷ್ಕರಮೆನಿಸಿರ್ಕು'' (ನಾನಾರ. ೨೮). ೨. ಒಂದು ಬಗೆಯ ತಂತೀವಾದ್ಯ. [ಸಂ.]

ವಾರಣಾಗ್ರ (ನಾ). (?): ಹೃದಯಸರೋಜದ್ವಾದಶದಳಂಗಳ ಮ್ಯಾಲೆ ಪದವಿಟ್ಟು

ಚರಿಸುತಿಹ ಹಂಸನ ಗತಿಯ ನಿಲಿಸಿ ವಿಧು ಸೂರ್ಯರೆಡೆಯಾಡುತಿರ್ಪಿಡಪಿಂಗಳ ಸುಷುಮ್ನಾಮಾರ್ಗವನು ತಡೆದು ಮುದದಿ ಚರಣಾಂಗುಷ್ಠವಾರಣಾಗ್ರಪರಿಯಂತ ಪದುಳದೆ ಸತ್ರಾಣಗೊಳಿಸಿರ್ಪ ಪ್ರಾಣವಾಯದನು ಪಶ್ಚಿಮಮಾರ್ಗದೊಳ್ನಡಿಸಿ ತ್ರಿಕೂಟಸ್ಥಾನದೊಳು ನಿಲ್ಲಿಸುತ್ತೆ (ನವಮೋ. ೬-೨೭). [ಸಂ.]

ವಾರಣಾರೋಹಕ (ನಾ). ಆನೆಯ ಸವಾರಿ ಮಾಡುವವನು ; ಮಾವುತ: ಓರಣಿಸಿ ನಿಂದ ವಾರಣಾರೋಹಕವ್ಯೂಹದಿಂ ಕಿಷ್ಕಿಂಧತೆಯನಪ್ಪುಗೈದ ಮಂದಸೌಂದರ್ಯ ಮನೋಳಕೊಂಡು (ರಾಜಶೇ. ೫-೧೯ ವ). [ಸಂ.]

ವಾರಣಾಸಿ 'ಬಾರಣಾಸಿ' ನೋ.

ವಾರಣಾಸ್ಯ (ನಾ). = ವಾರಣಮುಖಿ : ಆ ವನಿತೆಗೆ ವಾರಣಾಸ್ಯಂ ತನ್ನ ಕೊಡಲಿಯುಗ್ರದೊಳು ಪೂಜಾರಚಿತವಮಾಗಿರ್ದ ಪುಷ್ಪವಂ ಕರುಣಿಸಲ್ಕೆ (ವೀಶೈಪು. ೩-೧೫-೧೦) ; ಚೂತಫಲಮಂ ಶಂಭು ಪಿಡಿದಿರಲು ಶರಜನ್ಮ ವಾರಣಾಸ್ಯರು ಬೇಡೆ (ಪ್ರಾಭರಾ. ೧-೧೧). [ಸಂ.]

ವಾರಣಿ (ನಾ). ಸೂಳೆ ; ವೇಶ್ಯೆ: ಕೇಳು ವಾರಣಿಯರೊಳು ಹರಳಿಸುವ ಸತಿಯರುಂ ನಾಳಿಕಾಹಂಸಿಯಂತತಿವಿಲಕ್ಷಣ (ಪ್ರಭುಪು. ೫-೭೨). [?]

ವಾರಣಿಸು (ಕ್ರಿ). ತಡೆಗಟ್ಟು ; ವಿರೋಧಿಸು : ಮೂಲೋಕದ ಹುಟ್ಟಿನಲ್ಲಿ ಒಂದು ವಾರಣ ಬಂದು ಊರೆಲ್ಲರ ಬಚಿಕ್ಕೈವುತ್ತದೆ ಅದಾರಿಗೂ ಅಶಕ್ಯ ಆ ವಾರಣವ ವಾರಣಿಸು [ಪಾಠಾಂ. ವಾರಿಸು]ವರಿಲ್ಲ (ಸಕವ.ಕ. I, ೩೬-೧೯); ಅಣದಡಬುಜಭವಾಂಡ ಘಟ ವಾರ [ಪಾಠಾಂ. ಸ]ಣಿಪ ಕುಕ್ಕಿದಡುಗುರಲಿಳೆ ಬಿಜ್ಜಣಿಪ . . . ಕಡುಕಾಹುರದ ಸಿಂಗಣಿಕೆಗಳನರ್ಬು ದವನತಿಬಲ ತಾರ ತೋಱಿಸಿದ (ತೊರರಾ. ೪-೭-೨೩). [ವಾರಣ + - ಇಸು₁]

ವಾರಣೇಂದ್ರ (ನಾ). ಉತ್ತಮವಾದ ಆನೆ : ವಾರಣೇಂದ್ರ ಮಣಿಹೇಮ ವರಸ್ತ್ರೀ ಸಾರವಸ್ತುಚಯಮಂ ಕ್ರಮದಿಂ ಕೆಯ್ಯಾರಲಾಟಸುವೊಡಿಂ ತಡವಲ್ಲೇಕಾರಣಂ ಕುರುಪತೀ ಎಮಗೀಗಳ್ (ಕಾವ್ಯಾವ. ೧೩೩). [ಸಂ.]

ವಾರತೆ, ವಾರುತಿ, ವಾರ್ತಿ (ನಾ). ಸುದ್ದಿ ; ಸಮಾಚಾರ : ಇಂತು ಜಸವೆತ್ತೆಸೆವ ಗುರುವರನ ವಾರತೆ ದಿಗಂತಂಗಳೊಳ್ ತೀವೆ (ಪದ್ಮರಾ. ೯-೪) ; ನಿಜಸುತೆ ರತಿವೇಗೆ ಯನೊಸೆದು ಸುಕಾಂತಂಗೆ ಪ್ರೇಮದಿ ಧಾರೆಯೆಱೆದ ವಾರತೆಯಂ . . . ಕೇಳ್ದು (ಜಯಕಾ. ೧೨-೬೦). ವಾರುತಿ : ನಿನ್ನ ವಾರುತಿ ಕೇಳುವುದು ಒಂದಾನಂದ (ವಿಜಾಸು. ೯-೬); ಸ್ವಪ್ನದಲ್ಲಿ ಇದೆ ವಾರುತಿ ಪೇಳಲಾಯ್ತು (ತೀರ್ಥಮಾ. ೩೩೭). ವಾರ್ತಿ : ಭವತಾರ ನಿನ್ನಾಳಿಗೆ ಬರುವುದು ಕೀರ್ತಿ ನಿನ್ನ ವಾರ್ತಿ ಭವ್ಯ ಕೇಳಿದರಿಂದ ಮುಕ್ತಿ (ಮೋಕ್ಷದೀ. ೨೨). [< ಸಂ. ವಾರ್ತಾ]

ವಾರತೆಕೇಳು 'ವಾರತೆಗೇಳು' ನೋ.

ವಾರತೆಗೇಳು, ವಾರತೆಕೇಳು (ಕ್ರಿ). ಸುದ್ದಿಯನ್ನು ಕೇಳು ; ಸಮಾಚಾರವನ್ನು ತಿಳಿ : ಧೀರ ಲಲಿತ ನಿನ್ನ ವಾರತೆಗೇಳಿ ಕುಮಾರಿ ಹೆಗ್ಗರ ಹೊಡೆದಂತೆ ಆರೊಯ್ದರೋ ನಿನ್ನನೆಂದು ಹಮ್ಮೈಸುತ ಧಾರುಣಿಯೊಳು ಪೊರಳಿದಳು (ಶ್ರೀಪಾಲ. ೭-೭೩) ; ಕಡುಚೆಲ್ವ ನಿನ್ನ ವಾರತೆಗೇಳಿದಾಕ್ಷಣ ಕುಡುವಿಲ್ಲನಲಗೊಳಗಾದೆ (ಕಂಸವ. ೧೦-೩೪). ವಾರತೆಕೇಳು : ಧಾರುಣಿಯೊಳ್ ದಯವಾರುಧಿಯೆಂದೆಂಬ ವಾರತೆಕೇಳಿ ವಂದಿಪೆನು (ಕರಚಾ. ೧-೩).

[ವಾರತೆ + ಕೇಳು (< ಕೇಳ್)]

ವಾರದೊಡಿಗೆ (ನಾ). ಬಹುಮಾನವಾಗಿ ಕೊಡುವ ಆಭರಣ (?) : ವಾರದೊಡಿ [ಪಾಠಾಂ.ದಡಿ]ಗೆಯ ಬಂಗಾರವ ದುಗುಲದ ಸೀರೆಯ ದಿಂಡುವಿಂಡುಗಳ ಆ ರಾಮಚಂದ್ರ ವೈದೇಹಿಗೆ ಕೊಟ್ಟನು (ರಾಮವಿ. ೮-೪೦). [< ವಾರ$ಕ_2$ ? + ತೊಡಿಗೆ ( < ತೊಡುಗೆ)]

ವಾರನಾಯಕ (ನಾ). (ಸೈನಿಕರ) ಗುಂಪಿನ ಅಧಿಪತಿ ; ಸೇನಾನಾಯಕ : ಭೂರಿವಿಕ್ರಮವ ನುಡಿದು ನಿನ್ನ ಬೋಳೈಪ ವಾರನಾಯಕರ ಪಂಥವನು ತೋಱುವೆ ಈ ಸಮರದೊಳು (ತ್ರಿಪುಸಾಂ. ೧೫-೧೭೮). [ಸಂ.]

ವಾರನಾರಿ (ನಾ). = ವಾರಕಾಂತೆ : ಇವಳೇಂ ಕುಲನಾರಿಯೊ ವಾರನಾರಿಯೋ (ಪಂಪಭಾ. ೮-೬೨) ; ವಾರನಾರಿಯರನುಭವಂಗಳು ಕ್ರೂರವಲ್ಲದೆ ಮಾರ್ದವಂಗಳೆ (ಬಸವು. ೪೦-೮೦). [ಸಂ. ವಾರನಾರೀ]

ವಾರಪತ್ರಿಕೆ (ನಾ). ವಾರಕ್ಕೆ ಒಮ್ಮೆ ಪ್ರಕಟವಾಗುವ ಪತ್ರಿಕೆ; ಸಾಪ್ತಾಹಿಕ: ಕನ್ನಡದಲ್ಲಿ ಈಗ ಅನೇಕ ವಾರಪತ್ರಿಕೆಗಳು ಪ್ರಕಟವಾಗುತ್ತಿವೆ (ರೂಢಿ). [ಸಂ. ವಾರಪತ್ರಿಕಾ]

ವಾರಮಲ್ಲಿಗೆ (ನಾ). ಒಂದು ಬಗೆಯ ಮಲ್ಲಿಗೆ: (ವ್ಯುಟಿಗಿ. ೪೭-೯೩೯). 'ನಿತ್ಯಮಲ್ಲಿಗೆ' ಪರಾ. [ವಾರ₁ + ಮಲ್ಲಿಗೆ]

ವಾರಮುಖ್ಯೆ (ನಾ). ಸೂಳೆಯರಲ್ಲಿ ಪ್ರಮುಖಳಾದವಳು : "ರಾಜಕುಳಪ್ರತಿಬದ್ಧಾ ವಾರಸ್ತ್ರೀ, ವಾರಮುಖ್ಯಾ — ಈ ೩ ವಿಳಾಸಿನಿಯರ್" (ಹಲಾಯು. ೮೦-೩೩೭). 'ವಾರಗೇರಿ' ಪರಾ. [ಸಂ. ವಾರಮುಖ್ಯಾ]

ವಾರಲ್ (ನಾ). ಸುಲಿಗೆ ; ಲೂಟಿ (?) : ಕೊಳಗುಪ್ಪೆ ಪೆಟ್ಟುವಸಿ ಅರ್ಧಂ ಕಾನಸೊಪ್ಪಿನರ್ಧಂ ವಾರಲರ್ಧಂ ಕರ್ಸಪಿಣ್ಣಂ ನೂಱಿರ್ಪ್ಪತ್ತೆನ್ನು(ಣ್ಬು)ಕೊಂಬೆಗಾರೊಡಂ ಪಡೆಯಂ ಮೆಣ್ಣು (ಎಣ್ಬು) ಮೂಡೆ ಜಮಳಿ ಒನ್ದು ಇದು ಗೋಪ(ಪಾ)ಲದೇವರಾ ದತ್ತಿ (ಎಇ. XXI, ೭೮-೧೫; ೫ನೆಯ ಶತ). [ದೇ. ॥ ತಮಿ. ವಾರಲ್]

ವಾರವದಂಬುಲ? (ನಾ). (?) : ಇತ್ತೊಡೆ ಬೇಟಮಿಾಯದೊಡೆ ಕಾಟಮದುಂ ಬೆಲೆವೆಣ್ಣ ಬಾಳುಕಂಬತ್ತುವ ಬೇಟಮಂ ಸುಡು ಪರಾಕಿಯ ನೋಂಪಿಯ ಗಂಡರೀವ ಕಟ್ಟುತ್ತುರಿ ಕಪ್ಪುರಂ ತುಡುಗೆ ವಾ[ಪಾಠಾಂ.ದಾ, ದ್ವಾ]ರವದಂಬುಲಮಚ್ಚವಾಸಿಗಂ ಸುತ್ತುವ ಬಣ್ಣ ಸಣ್ಣಮಿವು ಬೇಟದ ಕೂಟದ ಸುಗ್ಗಿಯೆನ್ನಿರೇ (ಅನಂಪು. ೮-೪೭). [? + ತಂಬುಲ]

ವಾರವಧು (ನಾ). = ವಾರಕಾಂತೆ : ವಾರವಧೂಜನಮಾರಂ ಮಾರಾನ್ವಕಪದಪ [ಯೋ] XXX ನಮಳಂ ಕಾರುಣ್ಯಪರಂ ಧರ್ಮಾಧಾರಂ ಬೀರಣನನ್ಯವನಿತಾದೂ[ರಂ] (ಸೌಇಇ. XI-ii, ೧೨೧-೧೯ ; 1072) ; ಪ್ರತ್ಯಹಮೊಪ್ಪುಗುಂ . . . ಚತುರಖೇಚರವಾರವಧೂ ನಿಧಾನಮಾದಿತ್ಯಪುರಂ ಪುರಂದರಪುರಪ್ರತಿಮಂ ಪುರರತ್ನಗೋಪುರಂ (ಚಂದ್ರಪು. ೬-೫).

[ಸಂ. ವಾರವಧೂ]

ವಾರವನಿತೆ (ನಾ). = ವಾರಕಾಂತೆ : ಪರಿವಾರವಾರವನಿತಾಪರಿವೃತನರಮನೆಯೊಳ ರಸಂ ಅಂಬರತಳದೊಳ್ ವರತಾರಾಪರಿಗತಶಶಧರನಂತೊಪ್ಪಿರೆ (ಕವಿರಾ. ೨-೧೦); ಒರ್ವಳನಂಗರಾಗರಸರಸಿಕತೆಯಿಂದಮಪ್ಸರಃಸಮುದಯದೊಳಮರವಾರವನಿತೆಯಾದಳ್ (ಶಾಂತಿಪು. ೬-೮೫ ವ). [ಸಂ. ವಾರವನಿತಾ]

ವಾರವಾಣ (ನಾ). ೧. ರವಿಕೆ ; ಕುಪ್ಪಸ : "ಕಂಚುಕಃ, ವಾರವಾಣಃ, ಕೂರ್ಪಾಸಃ, ನಿಚೋಳಕಃ — ಈ ೪ ಕುಪ್ಪಸಂ" (ಹಲಾಯು. ೯೧-೩೯೮). ೨. ಕವಚ ; ಅಂಗರಕ್ಷೆ : "ಕವಚಂ ಕಂಚುಕಿ ವಾರವಾಣಮೆನಿಕ್ಕುಂ" (ನಾನಾರ. ೯೮) ; ಭರದಿಂ ಕೋಡಗಮೆಯ್ದೆ ಮೆಯ್ಯುರೆದರಣ್ಣಂಗಳ್ಪೆಲಜ್ಜರ್ ಬಿಗುರ್ತಿರ್ಪವಂ ಕಾಣದೆ ಗುಜ್ಜರಲ್ಲಿ ನುಗುಳ್ದರ್ ತದ್ವಾರವಾಣಂಗಳೊಳ್ ಸರಿದರ್ ತಾಂ ಪೊಱಗಾವ[ಲರ್] (ಮಿತ್ರಗೋ. ೨೧-೪೦). [ಸಂ.]

ವಾರವಾಣಕ (ನಾ). = ವಾರವಾಣ ೧ : "ವಾರವಾಣಕಂ ಕಂಚುಕಂ ಕೂರ್ಪಾಸಕಂ ನಿಚೋಲಕಂ" (ವಸ್ತುಕೋ. ೭೮-೨೧). [ಸಂ.]

ವಾರವಾಳಿ (ನಾ). ಪ್ರತಿನಿತ್ಯದ ಸರದಿ (?) : ಪರಿಯದೆ ವಾರವಾಳಿಯುಣಸಿಂಗೆ ಸಮರ್ಥರನಾಸೆವಟ್ಟು ಬಂದೆರೆಯದೆ . . . ವೀರವೃತ್ತಿಯನೆ ಪಾಟಿಸಿ ಮೋಕ್ಷಸುಖಕ್ಕೆ ಚಿತ್ತಮಂ ತಿರಿಪುತುಮಿರ್ದ ಜೈನಮುನಿಪುಂಗವರಿಂ ಮಿಗಿಲಾರೊ ಲೋಕದೊಳ್ (ಧರ್ಮಾಮೃ. ೧೨-೫೦). [< ಸಂ. ವಾರಪಾಲಿ ?]

ವಾರವಿಲಾಸಿನಿ, ವಾರವಿಳಾಸಿನಿ (ನಾ). = ವಾರಕಾಂತೆ : ವಾರವಿಲಾಸಿನೀ ಲಟಹನರ್ತನ ಚಂಚಲಕಾಂಚಿದಾಮಮಂಜೀರಕಕಂಕಣೀರಣಿತದಿಂ . . . ಅಂದದೇಂ ಸೊಗಯಿಸಿರ್ದುದೊ ತತ್ಪುರಂ (ಆದಿಪು. ೮-೫೦). ವಾರವಿಳಾಸಿನಿ : ವಾರವಿಳಾಸಿನೀ ನಿಕರಮಿಕ್ಕುವ ಚಾಮರದಿಂ ಸುರತ್ನಕೋಟೀರ ಮರೀಚಿಯಿಂ ಪದಕಕಾಂತಿಯಿನಿರ್ಮಡಿ ಚೆಲ್ವುವೆತ್ತ ಧಾತ್ರೀರಮಣರ್ ಸ್ವಯಂವರಕೆ ಬಂದರ್ (ನಳಚಂ. ೩೦೦).

[ಸಂ. ವಾರವಿಲಾಸಿನೀ]

ವಾರವಿಳಾಸಿನಿ 'ವಾರವಿಲಾಸಿನಿ' ನೋ.

ವಾರಶಿಖಿ (ನಾ). ಓರೆಯಾಗಿರುವ ಶಿಖೆ,—ಕೂದಲುಗಂಟು (?) : ದೊರೆಗಳವರು . . . ಈ ದೇವಸ್ಥಾನದ ಕಂಭದಲ್ಲಿ ಸಿಂಹಾಸನದ ಮೇಲೆ ವಾರಶಿಖಿಸಹಿತವಾಗಿರುವಂತೆ ತಮ್ಮ ಭಕ್ತವಿಗ್ರಹವನ್ನು ಮಾಡಿಸಿ, ದೇವಸ್ಥಾನದ ಮುಂಭಾಗದಲ್ಲಿ ಕಾಶಿ ಕೆಲಸದ ಕಲ್ಲಿನಿಂದ ದೊಡ್ಡದಾಗಿ ಕಲ್ಯಾಣಿ ಎಂಬ ಸರೋವರವನ್ನು ಕಟ್ಟಿಸಿದರು (ಮಹಾವಂ. I, ೧೩೮).

[< ಓರೆ₁? + < ಶಿಖೆ ?]

ವಾರಶೂಲ (ನಾ). ಶುಭಕಾರ್ಯಗಳನ್ನು ನಡೆಸುವ ಅಥವಾ ಶುಭಕಾರ್ಯಗಳಿಗೆ

ಹೊರಡುವ ಸಂದರ್ಭಗಳಲ್ಲಿ ತ್ಯಜಿಸಬೇಕಾದ ಅಮಂಗಳಕರವಾದ ದಿನ : "ತಿಥಿ ವಾರಘಟಿಕಾಖ್ಯೆಯಿಂ ರಾಹುಯೋಗಿಣಿ ವಾರಶೂಲಂಗಳು" (ಮಂಗರಾ. ೧೮-೨೦). [ಸಂ.]

**ವಾರಶೂಲೆ** (ನಾ). = ವಾರಶೂಲ : (೭). [ಸಂ. ವಾರಶೂಲ]

**ವಾರಸ** 'ವಾರಸು' ನೋ.

**ವಾರಸತಿ** (ನಾ). = ವಾರಕಾಂತೆ : ವಾರಸತಿಯರ ಮೊತ್ತದಲಿ ಪೆಸರೆನಿಸಿ ನಿಮ್ನುವನೀ ಕಟಕದೊಳಗೆ ವೃತ್ತಕುಚೆ ನಿನಗೊಸಗೆಗಳನೊಳ್ಳಿತ್ತೆನಲು ಮಾಡಿಸುವೆನು (ಬಸವು. ೨೮-೨೩). [ಸಂ. ವಾರಸತೀ ]

**ವಾರಸದಾರ** 'ವಾರಸುದಾರ' ನೋ.

**ವಾರಸು, ವಾರಸ** (ನಾ). ವಂಶಪರಂಪರೆಯಿಂದ ಬರುವ ಆಸ್ತಿಯ ಹಕ್ಕು ; ಪಿತ್ರಾರ್ಜಿತಹಕ್ಕು : ತಂದೆಯಿಂದ ಮಗನಿಗೆ ಮಗನಿಂದ ಮೊಮ್ಮಗನಿಗೆ ಹೀಗೆ ವಾರಸು ಹಕ್ಕುಂಟು (ಪ್ರವಾ೯. II, ೪೮೦). ವಾರಸ : ಬಾಲಭುಜಂಗನು ಏಳು ಎಂಟು ವರ್ಷದ ವನಿರಬಹುದು, ಆಗ ತಮಣದೀಕ್ಷಿತರು ಆತನ ವಾರಸಾ ವಿಚಾರಮಾಡಿಸುವುದಕ್ಕಾಗಿ ಆತನನ್ನು ಕರಕೊಂಡು . . . ಹೋದರು (ಕಲಿಕು. ೨೮) ; ಈ ಅವಧಿಯಲ್ಲಿಯೇ ಎಲ್ಲಿ ಗೌಡರ ಮನೆತನದ ವಾರಸಾ ಪ್ರಕರಣವೂ ತಲೆಯೆತ್ತುವದೋ ಎಂದು ಅವರಿಗೆ ದೂರದ ಚಿಂತೆಯುಂಟಾಗಿತ್ತು (ಗ್ರಾಮಾಯ. ೨೦೭). 'ವಾರಸದಾರ' ಪರಾ.
[<— ಅರ. ಹಿಂ. ವಾರಿಸ್ = ಹಕ್ಕುದಾರ ; ಮರಾ. ವಾರಸ್, ವಾರೀಸ್ = ಉತ್ತರಾಧಿಕಾರಿ]

**ವಾರಸುದಾರ, ವಾರಸದಾರ** (ನಾ). ೧. ವಂಶಪರಂಪರೆಯಿಂದ ಬರುವ ಆಸ್ತಿಯ ಹಕ್ಕು ಪಡೆದವನು ; ಪಿತ್ರಾರ್ಜಿತ ಆಸ್ತಿಯ ಹಕ್ಕುದಾರ : ತಮ್ಮ ಆಸ್ತಿಪಾಸ್ತಿಗೆ ವಾರಸುದಾರನಾದ ಸೋದರಸಂಬಂಧಿಯನ್ನು ಕಂಡರೆ ಆವನ ಚಿಕ್ಕತಾಯಿಯರಿಗೆ ತುಂಬ ವಾತ್ಸಲ್ಯ (ಪುನರು. ೫೪); ಸಂತತಿಯಾಗಲಿ ವಾರಸುದಾರರಾಗಲಿ ಇಲ್ಲದೆ ಇದ್ದ ಪಕ್ಷದಲ್ಲಿ . . . ರಾಜನನ್ನು ನೇಮಿಸುವುದು ರಾಜನೀತಿಗೆ ವಿರುದ್ಧ (ಪ್ರತಾಪ. ೧೦೮). ೨. ಪೋಷಕ ; ಮೇಲ್ವಿಚಾರಕ : ಆ ಬಾಲಕನಿಗೆ ತಂದೆ ತಾಯಂದಿರಿಲ್ಲ, ನಾವೇ ಅವನ ವಾರಸುದಾರರು (ರೂಢಿ). ವಾರಸದಾರ : ೧. ಅವನ ಹೊಟ್ಟೆಯಿಂದ ಯಾರೂ ಮಕ್ಕಳಿಲ್ಲ. ನಾವೇ ಅವನಿಗೆ ವಾರಸದಾರರು (ಮೋಹಿನೀ. ೭೧); ತಂದೆಯ ಧನಕ್ಕೆ ಮಕ್ಕಳೇ ವಾರಸದಾರರಲ್ಲವೇ ? (ಸಾಲಂಸಾ. ೭೫). ೨. ನಾವು ಹಿರಿದಾದ ಸಂಸ್ಕೃತಿಯ ವಾರಸದಾರರು (ಭಾರಸಂ. ೧೦೨).
[ವಾರಸು + - ದಾರ್$_4$. / ಮರಾ. ವಾರಸ್‌ದಾರ್, ವಾರಸೇದಾರ್, ವಾರೀಸ್‌ದಾರ್]

**ವಾರಸೌಂದರಿ** (ನಾ). = ವಾರಕಾಂತೆ : ವಾರಸೌಂದರಿಯರ್ ಚಾಮರಮಿಕ್ಕೆಯುಂ (ಆದಿಪು. ೧೨-೧೨೯). [ಸಂ. ವಾರಸೌಂದರೀ]

**ವಾರಸ್ತ್ರೀ** (ನಾ). = ವಾರಕಾಂತೆ : ವಾರಸ್ತ್ರೀನಿಕುರುಂಬದಿಂ . . . ವೀರರಿಂದೋ ರಂತೊಪ್ಪಿದುದುನ್ನತಿಕ್ಕೆಯೊದವಿಂ ಭೂಪಾಲನೊಡ್ಡೋಲಗಂ (ಧರ್ಮಾಮೃ. ೪-೧೫೧). [ಸಂ.]

**ವಾರಾಂಗನೆ** (ನಾ). = ವಾರಕಾಂತೆ : ಸಲೆ ಪೊಂದಳಿರ್ಗಳ್ ತೋರಣಮೆನೆ ಕರಮೆಸೆವುವು ವಾರಾಂಗನೆಯರ ನಿವಾಸದೊಳಗುಂ ಪೊಜಗುಂ (ಸುಕುಮಾ. ೯-೭೧) ; ಒಬ್ಬಳು ಪ್ರೌಢವತಿಯೆಂಬಿಂದುಮುಖಿ ವಾರಾಂಗನಾಮಣಿಯೊಂದು ದಿನದಲಿ ತನ್ನ ಸದನಾಂಗಣದೊಳೊಪ್ಪೆಸೆದು (ಬಸವು. ೪೦-೩). [ಸಂ. ವಾರಾಂಗನಾ]

**ವಾರಾಕರ** (ನಾ). ನೀರಿಗೆ ಆಶ್ರಯವಾದುದು ; ಸಮುದ್ರ : ಈ ಕೃತಿ ರಸಿಕಜನದ ಶ್ರುತಿ ಮಂಡನದಾಕೃತಿ . . . ಶ್ರೀಕರಮೊಪ್ಪುವ ಭಕ್ತಿಸುಧಾವಾರಾಕರಮಥನಂ (ಉದ್ಭಟ. ೧-೨೭). [ಸಂ.]

**ವಾರಾಣಸಿ** (ನಾ). ಗಂಗಾನದೀತೀರದಲ್ಲಿರುವ, ಹಿಂದೂಗಳ ಪ್ರಸಿದ್ಧವಾದ ಯಾತ್ರಾಸ್ಥಳ ; ಕಾಶೀಕ್ಷೇತ್ರ : ಬಹುಳೋಪಾಯದೊಳಾರ್ಜಿಸುತ್ತ ಧನಮಂ ತನ್ನಾಳ್ದನಂ ದೈವವೆಂದಹಿತರ್ ತನ್ನವರನ್ಕರೆನ್ನದಣುಮಾತ್ರಂ ಪೋಗದೊಲ್ ತ್ರಾಸಿನಂತಿಹನೊಕ್ಕಲ್ಗತಿಪ್ರೀತಿಪಾತ್ರನಿಳೆ ಮೆಚ್ಚಲ್ ಶಾನುಭಾಗಾಖ್ಯನೀ ಮಹಿವಾರಾಣಸಿಯಪ್ಪನ್ನೆ (ಸೋಮೇಶ. ೭೨) ; ಜಯಭೂಪಾಲಂ ಲೀಲೆಯಿನೆಯ್ತಂದಂ ವಾರಾಣಸಿಪೆಸರ ನಗರಿಗಂದು (ಜಯಕಾ. ೩ ಸೂಚನ). [ಸಂ. ವಾರಾಣಸೀ]

**ವಾರಾನ್ನ** (ನಾ). ವಾರದಲ್ಲಿ ಒಂದು ದಿನ ಸರದಿಯ ಪ್ರಕಾರ (ಬಡವಿದ್ಯಾರ್ಥಿ ಮುಂತಾದವರಿಗೆ) ಉಚಿತವಾಗಿ ನೀಡುವ ಅಥವಾ ಬೇರೆಯವರ ಮನೆಯಲ್ಲಿ ಉಚಿತವಾಗಿ ಪಡೆಯುವ ಊಟ : ನಾಲ್ಕಾರು ವಿದ್ಯಾರ್ಥಿಗಳಿಗೆ ವಾರಾನ್ನ ನೀಡುತ್ತಿದ್ದರು (ನಡೆದಾ. II, ೯೫೫) ; ತಾವು ವಾರಾನ್ನ ಮಾಡಿಕೊಂಡು ಬೀದಿಯ ದೀಪದ ಕೆಳಗೆ ಓದಿ ಬುದ್ಧಿವಂತರಾದುದನ್ನು ವಿವರಿಸಿದರು (ನಾಡಿಗೇ. ೧೯). [ಸಂ.]

**ವಾರಾಶಿ** (ನಾ). = ವಾರಾಕರ : ಭವವಾರಾಶಿನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ವಲಂ ಪೊತ್ತೆತ್ತುಗುಂ (ಆದಿಪು. ೨-೬) ; ವಾರಾಶಿಧೀರಸ್ವರಮಂ ತಳ್ಪೊಯ್ವಜೇಂದ್ರಾದ್ಯಮರ ಜಯಜಯಧ್ವಾನ ದಿಂದಾಗಳೆಟ್ಟುದರದಿಂ ಕುಳ್ಳಿರ್ದಂ . . . ಮುಕುಂದಂ (ಜಗವಿ. ೧-೫೩). [ಸಂ.]

**ವಾರಾಶಿದುರ್ಗ** (ನಾ). ಸಮುದ್ರದ ಮಧ್ಯದಲ್ಲಿರುವ ಕೋಟೆ ; ಜಲದುರ್ಗ : ಆ ಜರಾಸಂಧನ ಪರಾಕ್ರಮತೇಜದಿಂ ನಿಲಲಾಜಿದಂಜಿ ಪಯೋಜನಾಭನು ನಿರ್ಮಿಸನೆ ವಾರಾಶಿ [ಪಾಠಾಂ. ಚೌರಾಸಿ] ದುರ್ಗಗಳ (ಬಸವು. ೫೪-೩೬). [ಸಂ.]

**ವಾರಾಸಿ** (ನಾ). = ವಾರಾಕರ : ವಾರಾಸಿಯೊಳ್ ಘೂರ್ಣನಪ್ರಸರಂ ಕಾನನದೊಳ್ ಮೃಗೇಂದ್ರರುತಿ ಮೆಯ್ವೆರ್ಚಲ್ಕೆ (ಪುಷ್ಪಪು. ೮-೨೫); ಚಾರ್ವಾಕ ಜಿನಬೌದ್ಧಕುಮತ ಮತವಾರಾಸಿಗೌರ್ವಾನಲಂ . . . ಪಾಲ್ಕುರಿಕೆ ಸೋಮೇಶಂ (ಉದ್ಭಟ. ೨-೭೨). [< ಸಂ. ವಾರಾಶಿ]

**ವಾರಾಹ** (ಗು). ೧. ವರಾಹಕ್ಕೆ ಸಂಬಂಧಿಸಿದ. (ನಾ). ೨. ಹಂದಿ ; ವರಾಹ. ೩. ವರಾಹಾವತಾರದ ವಿಷ್ಣು : ರೂಢಿಯನು ಕದ್ದೊಯ್ದ ದನುಜನ ದಾಡೆಯಿಂದಲಿ ಸೀಳಿಯವನಿಯ ಕೂಡೆ ನೆಗಹಿದ ಸೀತೆಯರಸನುದಾರ ವಾರಾಹ (ಕಾಶಿರಾ. ೧೪-೨೮). ೪. ಹದಿನೆಂಟು ಮಹಾಪುರಾಣಗಳಲ್ಲಿ ಒಂದು ; ವರಾಹಪುರಾಣ : ಪರಮಶೈವ ಸ್ಕಂದ ಲೈಂಗ್ಯಾವಿರಳ ನಾರದ . . . ಬ್ರಹ್ಮಾಂಡ ವಾರಾಹ . . . ಸಾಂಗದಿಂದಷ್ಟಾದಶಪುರಾಣಂ (ಬಸವು. ೪೩-೬೬). ೫. ಒಂದು ಬಗೆಯ ಮರ. [ಸಂ.]

**ವಾರಾಹಿ** (ನಾ). ೧. ಹೆಣ್ಣುಹಂದಿ. ೨. ಸಪ್ತಮಾತೃಕೆಯರಲ್ಲಿ ಒಬ್ಬಳು : "ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಮಾಹೇಂದ್ರೀ, ಚಾಮುಂಡಾ — ಈ ೭ ಸಪ್ತಮಾತೃಕೆಯರ ಪೆಸರ್" (ಹಲಾಯು. ೪-೧೭). ೩. ಒಂದು ಬಗೆಯ ಸಸ್ಯ ; ಹಂದಿಗೆಡ್ಡೆ : " ಕೌಮಾರಿ-ವಾರಾಹಿ" (ಓಷಧಿ. ೪೨). ೪. ಕರ್ನಾಟಕದ ಶಿವಮೊಗ್ಗಜಿಲ್ಲೆಯಲ್ಲಿ ಹುಟ್ಟಿ , ದಕ್ಷಿಣಕನ್ನಡಜಿಲ್ಲೆಯಲ್ಲಿ ಹರಿದು, ಅರಬ್ಬಿ ಸಮುದ್ರವನ್ನು ಸೇರುವ ಪಶ್ಚಿಮವಾಹಿನಿಯಾದ ಒಂದು ನದಿ ಮತ್ತು ಅದಕ್ಕೆ ಸಂಬಂಧಿಸಿದ ಜಲವಿದ್ಯುತ್ ಯೋಜನೆಯ ಹೆಸರು. ೫. [ಸಂಗೀತ] ಸ್ವರದ ಒಬ್ಬ ಅಧಿದೇವತೆ : ಬ್ರಾಹ್ಮಿ ಮಾಹೇಶ್ವರಿ ಕೌಮಾರಿ ವೈಷ್ಣವಿ ವಾರಾಹಿ ಮಾಹೇಂದ್ರಿ ಚಾಮುಂಡಿಯೆಂಬವರೇ ಕ್ರಮದಿಂದಾ ಷಡ್ಜಾದಿ ಸ್ವರಾಧಿದೇವತೆಗಳು (ವಿವೇಕ. ೫೧). [ಸಂ. ವಾರಾಹೀ]

**ವಾರಿ$_1$** 'ಬಾರಿ$_1$' ನೋ.

**ವಾರಿ$_2$** (ನಾ). ೧. ನೀರು ; ಜಲ : ವಾರಿಯನಬ್ದಮಾಲೆ ಮೊಗೆದಂಬುಧಿಯಿಂ ತರಲಲ್ಲಿ ಕೂಡೆ (ಕುಸುಮಾ. ೭-೨೨) ; ವಾರಿಯನೊಪ್ಪೆ ಸೂಸೆ ಪೆಜಿಮೆಟ್ಟುವ ತಪ್ಪಿಸಿಕೊಳ್ವ . . . ಸಲಿಲಕೇಳಿಯೊಳಿರ್ದುದು ಕಾಮಿನೀಜನಂ (ನಳಚಂ. ೧೪೦). ೨. ಆನೆಯನ್ನು ಕಟ್ಟುವ ಸ್ಥಳ ; ಕರೋಟಿ. ೩. ಆನೆಯನ್ನು ಹಿಡಿಯಲು ಮಾಡಿರುವ ತಗ್ಗಾದ ಸ್ಥಳ,—ಹಳ್ಳ : "ಆನೆಯ ಹಿಡಿವ ಠಾವು ವಾರಿಯೆಂಬುದು" (ಹಲಾಯು. ೩೭-೭೦). ೪. ಒಂದು ಬಗೆಯ ಸಸ್ಯ ; ಮುಡಿವಾಳ. ೫. ಹಿಡಿಯುವಿಕೆ : ಓರೊಂದೆಡೆ ಯೊಳನಂಗನ ವಾರಿಗೆ ವಿಟಕುಂಜರಪ್ರಲೋಚನವಿಧಿಯಿಂ ವಾರಸ್ತ್ರೀಯರ್ ಗಣಿಕಾವಾರದ ಪಿಡಿಗಳೆನೆ ಕೂರ್ತು ಕಣ್ಗೆಸೆದಿರ್ದರ್ (ವರ್ಧಮಾ. ೮-೮೨). ೬. ದೈವದ ಹಾಗೂ ಅರಸರ ಸಂಬಂಧದಲ್ಲಿ ಕೈಕೊಳ್ಳುವ ಅಖಂಡವಾದ ನಿಷ್ಠೆ : ವಾರಿಯ ನಿನ್ನ ಲೆಂಕರದೆ ಸತ್ತಪರಕ್ಕಟ ಮಾಣಿಸೆಂ ಗಳಾ (ವರ್ಧಪು. ೯-೭೭) ; ತಾಳುಗೆಯನುರ್ಚಿ ನೆತ್ತಿಯ ಗಾಳಂ ಗಗನದೊಳೆಟಲ್ವ ವಾರಿಯ ಬೀರರ್ ಪಾಳಿಯೊಳೆಸೆದರ್ (ಯಶೋಚ. ೧-೫೫). [ಸಂ.]

**ವಾರಿಕಲ್, ವಾರಿಕಲ್ಲು** (ನಾ). ನೀರ್ಗಲ್ಲು ; ಆಲಿಕಲ್ಲು : ಇರದೆ ಹಸ್ತಾಗ್ರದಿಂ ತೆಗೆದಿಡುವ ಗುಂಡುಗಳ್ ಪರಿಕಿಸಲ್ ವಾರಿಕಲ್ ಕಣ್ಗಳೇ ಮಿಂಚುಗಳ್ . . . ಎನಲ್

ದುಷ್ಕರಿ ವಿಲಯಕಾಲದ ಮಹಾಮೇಘದಂತೆ ಗರ್ಜಿಸುತೆ ನಡೆತರುತಿರ್ದನು (ಚಿಬಪು. ೨೮-೨೧). ವಾರಿಕಲ್ಲು : ಇಷ್ಟಭಾವವನಱಿವ ಚಿತ್ತ ದೃಷ್ಟವನಱಿವುದಕ್ಕೆ ಶ್ರುತದೃಷ್ಟವೆಂತುಟೆಂದಡೆ ವಾರಿಕಲ್ಲು ನೋಡ ನೋಡಲಿಕ್ಕೆ ನೀರಾದಂತೆ (ಮೋಳಿಮಾ. ೭೫-೨೯೬); ವಾರಿಕಲ್ಲು ಪುತ್ಥಳಿ ಅಪ್ಪುವನೊಡಗೂಡಿದಂತೆ ಮಾಡಿತ್ತೆನ್ನ . . . ಶ್ರೀಗುರುವಿನ ಉಪದೇಶ (ಅಬಿಂಜೇ. ೨೦-೧೦). [ವಾರ್ + ಕಲ್]

ವಾರಿಕಲ್ಲು 'ವಾರಿಕಲ್' ನೋ.

ವಾರಿಕಾಱ (ನಾ). ಗ್ರಾಮಾಧಿಕಾರಿ : ಇ ಧರ್ಮ್ಮವ ವಾರಿಕಾಱರೆತ್ತಿ ನಡಿಸುವರು ಶ್ರೀ ಶ್ರೀ (ಸೌಇಇ. IX-i, ೩೪೪-೫೦; 1228); ಸಮಸ್ತ ವಾರಿಕಾಱರುಂ ವರುಷಂಪ್ರತಿ ಆರಯ್ದು ಪ್ರತಿಪಾಳಿಸಿ ನಡಸುವರು (ಸೌಇಇ. XVIII, ೨೩೫-೯ ; 1254). [ವಾರಿ? + ಕಾಱ]

ವಾರಿಕೇಳಿ (ನಾ). ನೀರಿನಲ್ಲಿ ಆಡುವುದು ; ನೀರಾಟ ; ಜಲಕ್ರೀಡೆ : ದಿಶಾಗಜರಾಜಿಯ ವಾರಿಕೇಳಿಕಾಸಾರಮೊ . . . ಭಾವಿಪಂದದೆನೆ ಕೌತುಕಮಾಯ್ತು ಮಹಾಸರೋವರಂ (ಚಂದ್ರಪು. ೫-೩೮) ; ಮೊರೆವ ಮಱಿದುಂಬಿಗಳ ಸೊಗಸಿನ ಸರಸಿಗಿಳಿದರು ತಮ್ಮೊಳೊಬ್ಬೊಬ್ಬರ ನಿರೀಕ್ಷಿಸಿ ವಾರಿಕೇಳಿಗೆ ಮಾಡಿದರು ಮನವ (ತೊರರಾ. ೨-೭-೪). [ಸಂ. ವಾರಿಕೇಲಿ]

ವಾರಿಜ (ನಾ). ನೀರಿನಲ್ಲಿ ಹುಟ್ಟಿದುದು ; ಕಮಲ : ವಾರಿಜ ಮಲಯಜ . . . ಕರ್ಪೂರ ಮೃಣಾಲಾದಿಗಳುಂ ಬಾರಿಸಲಾಱವೆ ದಲವನ ದಾಹಜ್ವರಮಂ (ಆದಿಪು. ೨-೧೩) ; ಭೂರಿಭೂರುಹಶಿಖರಿಯನಡರಿತು ಹಕ್ಕಿ ವಾರಿಜ ಮುಗಿದುವಲ್ಲಲ್ಲಿ (ಮೋಹತ. ೧೮-೬). [ಸಂ.]

ವಾರಿಜಗಂಧಿ (ನಾ). ೧. ಕಮಲದ ಹೂವಿನ ವಾಸನೆಯುಳ್ಳದು ; ತಾವರೆಯ ಗಂಧವುಳ್ಳದು : ವಾರಿಜಗಂಧಿವಿಭಾತಸಮೀರಂ ನಿಜಸುರಭಿ ನಿನ್ನ ಸುಯ್ಯಿಂದಱಿಯೊಳ ದೆಂತೋರಂತಕ್ಕುಮೊ ಪರಗುಣಹಾರಿಗೆ ನಿಜಗುಣಮದೇಕೆ ಸಮನಿಸಿದಪುದೋ (ಶಾಂತಿಪು. ೫-೮೫). ೨. ಕಮಲದ ಹೂವಿನ ಸುವಾಸನೆಯುಳ್ಳವಳು : ವಾರಿಜಗಂಧಿ ಕೇಳ್ ನಿನಗಾನೊಳಗಾಗಿ ಸಾರಸತ್ವಸ್ಥಿತಿಯ ವಿಸ್ತರಿಪೆ (ಮೋಹತ. ೩೯-೨). [ಸಂ. ವಾರಿಜಗಂಧೀ (ವಾರಿಜ + ಗಂಧ + -)]

ವಾರಿಜದಳಲೋಚನ (ನಾ). ಕಮಲದ ದಳದಂತೆ ಕಣ್ಣುಗಳುಳ್ಳವನು ; ಕೃಷ್ಣ : ವಾರಿಜದಳಲೋಚನ ಭೂರಮಣ ಅಚ್ಯುತಾನಂತ . . . ಪುರಂದರವಿಠಲ ಸರ್ವೋತ್ತಮ (ಪುರಂದ. ಧಾ. ೪-೧೦೭-೫). [ಸಂ. ವಾರಿಜದಲಲೋಚನ]

ವಾರಿಜನಾಭ (ನಾ). ಹೊಕ್ಕುಳಲ್ಲಿ ಕಮಲವುಳ್ಳವನು ; ವಿಷ್ಣು : ಅಜೇಯಂ ಪೋಲ್ಕುಮಾ ಮತ್ತಗಜಂ ವಾರಿಜನಾಭನಂ (ಕವಿರಾ. ೨-೧೩೪); ವಾರಿಜನಾಭನ ಕರುಣವೆ ಸ್ಥಿರ ಸಂಸಾರವು ಎರವು (ಪುರಂದ. ಧಾ. ೫-೨೬ ಪಲ್ಲವಿ). [ಸಂ. (ವಾರಿಜ + ನಾಭಿ + -)]

ವಾರಿಜನೇತ್ರ (ನಾ). ಕಮಲದಂತೆ ಕಣ್ಣುಳ್ಳವನು ; ಕೃಷ್ಣ : ವಾರಿಜನೇತ್ರನೊಮ್ಮೆ ಕುಲವರ್ಧನವಾಗಲೆವೇಳ್ಕುಮೆಂದು ತದ್ವಾರಕಿಯೆಂಬ ತನ್ನ ಪುರಮಂ ಜಲರಾಶಿಯೊಳಾಳಿಪಲ್ಲಿ (ಯಾದವಚಂ. ೨-೧೭). [ಸಂ.]

ವಾರಿಜನೇತ್ರೆ (ನಾ). ಕಮಲದಂತಹ ಕಣ್ಣುಳ್ಳವಳು ; ಸುಂದರಿ : ವಾರಿಜನೇತ್ರೆ ದಿವ್ಯಗುಣಭೂಷಣೆ ಭವ್ಯಜನಾನುರಾಗೆ ನಿಷ್ಕಾರಣಮೇಕೆ ಪೂಣ್ಕೆ (ಧರ್ಮಾಮೃ. ೮-೧೮೩). [ಸಂ. ವಾರಿಜನೇತ್ರಾ (ವಾರಿಜ + ನೇತ್ರ + -)]

ವಾರಿಜಬಾಂಧವ (ನಾ). ತಾವರೆಯ ಮಿತ್ರ ; ಸೂರ್ಯ : ವಿಮಲಂ ಹಯ . . . ವಾರಿಜಬಾಂಧವ ವಾರಿಜೋದ್ಭವ ವಾರಿಜವೈರಿ ವಾರಿಜವಿಲೋಚನ ವಾರಿಜ ಹಂಸವಾಚಕಂ (ನಾನಾರ. ೯). [ಸಂ.]

ವಾರಿಜಭವ (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ : ಶ್ರೀರಮಣವಿಬುಧಪತಿ ವಾರಿಜಭವಾದಿಬೃಂದಾರಕಪ್ರಚಯಕೋಟೀರಮಾಣಿಕ್ಯಪ್ರಭಾರಾಜಿತಾಂಘ್ರಿಯುಗ . . . ಪಾಲಿಪುದೆನಗೆ ಚಾರುಮತಿಯಂ (ಅಭ್ಯುಕೈ. ೧). [ಸಂ.]

ವಾರಿಜಭವಾಂಡ (ನಾ). ಕಮಲದಲ್ಲಿ ಹುಟ್ಟಿದ ಬ್ರಹ್ಮನು ಸೃಷ್ಟಿಸಿದ ವಿಶ್ವ ; ಬ್ರಹ್ಮಾಂಡ : ಈ ಬಲದಬ್ಬರಣೆ ವಾರಿಜಭವಾಂಡವ ಗಬ್ಬರಿಸೆ ಘಾಡಿಸಿತು ಶಲ್ಯನ ರಥದ ಬಳಸಿನಲಿ (ಕುಮ್ಹಾಶ. ೨-೬೦). [ಸಂ.]

ವಾರಿಜಮಿತ್ರ (ನಾ). = ವಾರಿಜಬಾಂಧವ : ವಾರಿಜಮಿತ್ರನಿಂ ಬಹನೆ ಕೂ ಶಶಿ ನೀಂ ಪೆಱಸಾರು ಸಾರು ಕೂ . . . ತಾರೆ ತಮಂಧ ಸಾರೆನುತೆ ಕೂಗುತಲಿರ್ದುದು ತಾಮ್ರಚೂಡನುಂ (ಸೂಕ್ತಿಸು. ೯-೨೮) ; ವಾರಿಜಮಿತ್ರಂ ಕರದಿಂ ವಾರುಣಿಯಂ ಪಿಡಿದು ಸೇವಿಸಿದ ಕಾರಣದಿಂದೋರಂತಂಬರಮಂ ಬಿಟ್ಟಾರಯ್ಯದೆ ನಡುಗಿ ಕೆಡೆದನಸ್ತಾಚಳದೊಳ್ (ಬಾಢಪು. ೫-೩). [ಸಂ.]

ವಾರಿಜಮುಖಿ (ನಾ). ಕಮಲದಂತೆ ಮುಖವುಳ್ಳವಳು ; ಸುಂದರಿ : ವಾರಿಜಮುಖಿ ಭೂಪಂ ಗಂಭೀರವಾಹಿನಿಯ ತೀರದೊಳ್ ನಿಮ್ಮ ಮುಖಾಂಭೋರುಹದೊಳ್ ಪಡಿಯಿಟ್ಟಂಭೋರುಹಮಂ ಮೆಚ್ಚಲೊಲ್ಲಸಿಲ್ಲೊರ್ಮೆ ಗಡಂ (ಶಂರಾಮಾ. ೧೧-೯೫); ವಾರಿಜಮುಖಿಯರ್ಪಾಡಿದರಾರಯ್ದುತಿರಾಗಜಾತಿರೀತಿಯನಱಿದುಂ (ಹಮ್ಮಿರ. ೨-೯೫). [ಸಂ. ವಾರಿಜಮುಖೀ(ವಾರಿಜ + ಮುಖ + - )]

ವಾರಿಜರಿಪು (ನಾ). ೧. ಕಮಲದ ಶತ್ರು ; ಚಂದ್ರ. ೨. [ಛಂದ] ಚಂದ್ರಗಣ : ಮರುದರ್ಕ ವಾಯು ಲಘು ಮುಂದೆ ಬರೆ ಸುರಮರುದ್ದಿನೇಶಗಂ ವಾರಿಜರಿಪು ಸುರಪಾರ್ಕಲಗಂ ಮರುದರ್ಕವಾಯು ರವಿಯಿಾಶನುದ್ಗತಂ (ಛಂದೋಂಬು. ೩-೨೧೨). [ಸಂ.]

ವಾರಿಜವಿರೋಧಿ (ನಾ). = ವಾರಿಜರಿಪು ೧ : ಆ ರಾತ್ರಿಯೊಳು ಜಲಂಧರನ ಮುಖ ಶಶಿಗೆ ಮುರಾರಿಯಿಕ್ಕಿದ ಚಕ್ರಮೆನಲು ತೇಜಂಗುಂದಿ ವಾರಿಜವಿರೋಧಿಯಾ ಪರಿವೇಷದಿಂದೊಪ್ಪುತಿರ್ಪ ವೇಳೆಯೊಳು (ಭಾವಚಿಂ. ೬-೫). [ಸಂ. ವಾರಿಜವಿರೋಧಿನ್]

ವಾರಿಜವಿಲೋಚನ (ನಾ). = ವಾರಿಜನೇತ್ರ : ತ್ರಿಜಗ ತಲ್ಲಣಿಸಿದುದು ವರ ವಾರಿಜವಿಲೋಚನ ಕೇಳಿದನು (ಕುಮ್ಹಾದ್ರೋ. ೧೩-೧೭). [ಸಂ.]

ವಾರಿಜವೈರಿ (ನಾ). = ವಾರಿಜರಿಪು ೧ : "ವಿಮಲಂ ಹಯ ಮುಖ್ಯ . . . ವಾರಿಜವೈರಿ ವಾರಿಜವಿಲೋಚನ ವಾರಿಜ ಹಂಸವಾಚಕಂ" (ನಾನಾರ. ೯). [ಸಂ.]

ವಾರಿಜಸಂಭವ (ನಾ). = ವಾರಿಜಭವ : ವಾರಿಜಸಂಭವಾಂಡಮಕಳಂಕ ಗುಣಾಂಕ ವೃಷೇಂದ್ರನುದ್ಯಶಃಪೂರಮಲುಂಬಮಾಗಿ ಸಲೆ ತೆಕ್ಕನೆ ತೀವೆ (ವೃಷವಿ. ೫-೫೫). [ಸಂ.]

ವಾರಿಜಸದ್ಮೆ (ನಾ). ಕಮಲವನ್ನೇ ಮನೆಯಾಗುಳ್ಳವಳು ; ಲಕ್ಷ್ಮಿ : ವಾರಿಜಸದ್ಮೆ ಸದ್ಮದೊಳಗಿರ್ದಪೊಲಿಂ ನುತಿಸಿದ್ದ ಪಾರದಂ ಪಾರದೆ ಬಂದು ತೋರ್ಕೆ (ಎಕ. VIII, ಸೊರಬ. ೨೬೧-೨೬; 1408). [ಸಂ. ವಾರಿಜಸದ್ಮಾ (ವಾರಿಜ + ಸದ್ಮ + -)]

ವಾರಿಜಾಂಬಕ (ನಾ). = ವಾರಿಜನೇತ್ರ : ವಾರಿಜಾಂಬಕನ ಪದಪಲ್ಲವಕೆ ಮಣಿಯುತಿರಲಾ ರಾಯನಂ ತೆಗೆದು ತಳ್ಕೈಸಲ್ (ಜೈಮಿಭಾ. ೨-೪೯). [ಸಂ.]

ವಾರಿಜಾಕ್ಷ (ನಾ). = ವಾರಿಜನೇತ್ರ : ವಾರಿಜಾಕ್ಷನು ಸುತನನರ್ಥಿಸಿ . . . ಮಾರಹರನಂ ಬಹುಯುಗಂಗಳೊಳೋಲಯಿಸಿದನಲಾ (ಬಸಪು. ೫೪-೪೧) ; ನಾರಿಯರ ಮನೆಗೆ ಪೋಪ ವಾರಿಜಾಕ್ಷನೆ ಬಾರೊ (ಪುರಂದ. ಧಾ. ೪-೮೨-೪). [ಸಂ. (ವಾರಿಜ + ಅಕ್ಷಿ + -)]

ವಾರಿಜಾಕ್ಷಿ (ನಾ). = ವಾರಿಜನೇತ್ರೆ. [ಸಂ. ವಾರಿಜಾಕ್ಷೀ]

ವಾರಿಜಾನನೆ (ನಾ). = ವಾರಿಜಮುಖಿ : ವಾರಿಜಾನನೆ ಸೆಂಡನಿರ್ಕಿಲದೊಳ್ ನಿಮಿರ್ದು ಕರಾಗ್ರದಿಂ ಚಾಚೆ ಮೆಟ್ಟುತೆ ಪೊಯ್ಯಲ್ (ದಶಕು. ೧೨-೩೦) ; ಚಾರುದ್ರಾಕ್ಷಾರಾಮದಲ್ಲಿಗೆ ವಾರಿಜಾನನೆ ಹೋಗು (ಬಸಪು. ४೦-೨೯). [ಸಂ. ವಾರಿಜಾನನಾ (ವಾರಿಜ + ಆನನ + - )]

ವಾರಿಜಾರಾತಿ (ನಾ). = ವಾರಿಜರಿಪು ೧ : ನಿಡುಗಣ್ಣಂಕಜಪತ್ರಮಂ ಪಳಿಯೆ ವಕ್ತ್ರಂ ವಾರಿಜಾರಾತಿಯಂ ಜಡಿಯಲ್ . . . ನರೇಂದ್ರಸೂನು ತಳೆದಂ ತಾರುಣ್ಯಲಾವಣ್ಯಮಂ (ರಾಜಶೇ. ४-೧೦೭). [ಸಂ.]

ವಾರಿಜಾಸನ (ನಾ). ಕಮಲವನ್ನು ಪೀಠವಾಗಿ ಉಳ್ಳವನು ; ಬ್ರಹ್ಮ : ವಾರಿಜಾಸನ ಮಸ್ತಕೃಂತನ ವಾಸುದೇವ ದೃಗರ್ಚಿತಾಶೂರ ಶುಂಭನಿಶುಂಭಮುಖ್ಯಕುದೈತ್ಯಹಾರಿಣಿ (ಹಾಲಾಸ್ಯ. ४-೫-೧೭). [ಸಂ.]

ವಾರಿಜಾಸನೆ (ನಾ). ಕಮಲವನ್ನೇ ಪೀಠವನ್ನಾಗಿ ಉಳ್ಳವಳು; ಸರಸ್ವತಿ : ವಾರಿಜಾಸನೆ ಸಕಲಶಾಸ್ತ್ರವಿಚಾರದುದ್ಭವೆ ವಚನರಚನೋದ್ಧಾರೆ . . . ಸಿದ್ಧಿದಾಯಕಿಯೆ (ಕುಮ್ಹಾಆ. ೧-೫). [ಸಂ. ವಾರಿಜಾಸನಾ (ವಾರಿಜ + ಆಸನ + -)]

ವಾರಿಜೋದರ (ನಾ). = ವಾರಿಜನಾಭ : ವಾರಿಜೋದರ ಕೃಷ್ಣ ಬಂದನು (ಕುಮ್ಹಾಉ. ೮-೫೪). [ಸಂ.]

**ವಾರಿಜೋದ್ಭವ** (ನಾ). = ವಾರಿಜಭವ : ವಾರಿಜೋದ್ಭವನನ್ನರಪ್ಪ ಧರಾಮರರ್ವಲರುಂ ಸದಾಚಾರರಪ್ಪರೆ ನೋಡ ಕೂರ್ತು ಜಿನೇಂದ್ರದೀಕ್ಷೆಯ ನಾಂತರ್ (ಧರ್ಮಾಮೃ. ೮-೬೦) ; ವಾರಿಜೋದ್ಭವಸೂನು . . . ಬರೆ (ಸಾಳ್ವಭಾ. ೩೦-೨). [ಸಂ.]

**ವಾರಿಡು** (ಕ್ರಿ). (ಆಲಂ) ನೀರಿನಂತೆ ಪ್ರವಹಿಸು ; ನೀರಿನ ಪ್ರವಾಹದಂತೆ ಹರಿ : ಒಡೆದು ನಾನಾಥಟ್ಟುಗಳ ಮೈವಿಡಿದು ವಾರಿಡುವರುಣಜಲದಲಿ ಕಡಿಕುಗಳು ಬೆಂಡೇಳೆ ದಂತಿಗಳಟ್ಟೆ ಕೊಡೆನೆಗೆಯೆ (ಕುಮಾರ್ಭಾ. ೪-೮). [ವಾರಿ$_2$ + ಇಡು]

**ವಾರಿತ** (ಗು). ೧. ಅಡ್ಡಿಪಡಿಸಲ್ಪಟ್ಟ ; ತಡೆದ ; ಪ್ರತಿರೋಧಿಸಿದ. ೨. ನಿವಾರಿಸಲ್ಪಟ್ಟ ; ತೆಗೆದು ಹಾಕಿದ : ವಾರಿತಾಹಂಕಾರನಂ ಹೂಂಕಾರ ಮದಧಿಕ್ಕಾರನಂ ಗತಮಾರಕರ್ಮವಿಕಾರನಂ ವೀರಾವತಾರನನು ಲೋಕಪಾವನ ಕಾರಕನನಾಲೋಕಿಸುತ್ತೆ (ಬಸವ. ೫-೧೬). [ಸಂ.]

**ವಾರಿದ** (ನಾ). ನೀರನ್ನು ಕೊಡುವಂತಹುದು ; ಮೋಡ ; ಮೇಘ : ವಾರಿದಂ ತನ್ನೊಳೆ ಕತಿಪಯ ವಾರ್ಬಿಂದುವಂ ಪೇಱಿ ತಂದಂತದಱಿಂದಂ ಲೋಕಮಂ ತೀವುವುದು . . . ಎನೆ ಪೆಂಪರ್ಣವಕ್ಕೇನೊ ಚೋದ್ಯಂ (ಜಗವಿ. ೧-೪೫). ಉರಗಬಲದುರವಣೆಯೊ ವಾರಿದತರುಗಳುಪಶಾಖೆಗಳೊ ಕಾಲನ ಹರವರಿಯೊ ಹೆಬ್ಬೆಳೆಸ ಮುತ್ತುವ ವಿಹಗಸಂತತಿಯೊ . . . ಅಬ್ಬರಿಸಿ ಗಬ್ಬರಿಸಿದುವು ದಿಗುತಟವನು ಶರವ್ರಾತ (ಕುಮಾರ್ಭಾ. ೪-೧೫). [ಸಂ.]

**ವಾರಿದಪಥ** (ನಾ). ಮೋಡಗಳು ಸಂಚರಿಸುವ ಮಾರ್ಗ ; ಆಕಾಶ : "ತಾರಾಪಥಂ ವ್ಯೋಮಮಂತರಿಕ್ಷಂ ನಭಂ ವಾರಿದಪಥಂ . . . ಗಗನಮಕ್ಕುಂ" (ಮಂಗರಾ. ೯-೩೧). [ಸಂ.]

**ವಾರಿಧರ** (ನಾ). ೧. ನೀರನ್ನು ಧರಿಸಿರುವುದು ; ಮೋಡ : ಪಾರಾವಾರಗಂಭೀರಂ ವಾರಿಧರೋದಾರಂ . . . ಆರಯೆ ಚಿಕದೇವರಾಯನತಿರವಿತೇಜಂ (ಅಪ್ರತಿ. ೩೪-೧೫). ೨. ಮದೋದಕವನ್ನು ಸುರಿಸುವ ಆನೆ. ೧,೨ : ಆ ವಾಹಿನೀವ್ಯೂಹಂ . . . ವರ್ಷಾಗಮಸಮಯದಂತೆ ಬಹಳತರವಾರಿಧರಪರೀತಮುಂ . . . ದೆಸೆ ಬೆಸಲಾದಂತೆಯುಂ ಕತಿಪಯಪ್ರಯಾಣಂಗಳಂ ನಡೆಯೆ ನಡೆಯೆ (ಚಂದ್ರಪ್ರ. ೧೦-೩೦ ವ). [ಸಂ.]

**ವಾರಿಧಿ** (ನಾ). ೧. ಕಡಲು ; ಸಮುದ್ರ : ವಾರಿಧಿಯಿಂ ಸುಖನಿಧಿ ಕಂಠೀರವವಿಷ್ಟರ ದಿನಧಿಕನಮರಾಲಯದಿಂ ಧೀರಂ ಫಣಿಗೃಹದಿಂದಂ ವೀರಂ ಮಣಿಗಣದಿನಜರ ನನಲನಿನನಘಂ (ಶಾಂತಿಪು. ೯-೨೧೧) ; ಆ ವಾರಿಧಿಯಿಂದಪಾರಮಹಿಮಂ . . . ಪುಟ್ಟುಗುಂ ನಂದನಂ (ಜಗವಿ. ೨-೮೩). ೨. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : ಕುಟ್ಮಲಮೆಂಬ ಮಯೂರಂ — ಭಜಸನಗಗಂ—ಯತಿ ಪಂಚಮದೊಳ್ ಅಥವಾ ವಾರಿಧಿಯೊಳ್ (ಛಂದೋಂಬು. ೨-೧೫೨ ಅಡಿಟ). [ಸಂ.]

**ವಾರಿಧಿಗರ್ಭ** (ನಾ). ಸಮುದ್ರದಲ್ಲಿ ಹುಟ್ಟಿದವನು ; ಚಂದ್ರ : ವಾರಿಧಿಗರ್ಭನಂ . . . ದುರಿತೋಪಹಾರಿಯಂ ಕಾರಣಮಿಲ್ಲದೀಯಧಮನೆಂಜಲಮಾಡಿದನೆಂದು ಶಂಖಿವಾಚಾರಧರಂಗೆ ಪುಯ್ಯಲಿಡುವಂದದೊಲಿರ್ದುದು ಸುಪ್ರಭಾತದೊಳ್ (ಸೂಕ್ತಿಸು. ೯-೨೫). [ಸಂ.]

**ವಾರಿನಾಥ** (ನಾ). ೧. ಸಮುದ್ರ. ೨. ಸಮುದ್ರದ ದೇವತೆ; ವರುಣ. ೩. ಮೋಡ ; ಮೇಘ. [ಸಂ.]

**ವಾರಿನಿಧಾನ** (ನಾ). ಕಡಲು ; ಸಮುದ್ರ : ಆ ನೆಗಟ್ದ ಮಹಾವಾರಿನಿಧಾನಂ ಪರಿವೇಷ್ಟಿಸಿರ್ದ ಜಂಬೂದ್ವೀಪಂ ತಾನೆಸೆದುದು ವೃತ್ತತೆಯಿಂ ದಾನವಮರ್ದನನ ಕೂರ್ಮಮೂರ್ತಿಯ ತೆಱದಿಂ (ಜಗವಿ. ೧-೨೪). [ಸಂ.]

**ವಾರಿನಿಧಿ** (ನಾ). = ವಾರಿಧಿ ೧ : ತರುಣೇಂದು ದಿನಕ್ರಮದಿಂ ಪರಿವರ್ಧಿಸಿ ವಾರಿನಿಧಿಯನೊದವಿಪ ತೆಱದಿಂ (ಜಗವಿ. ೩-೪೦) ; ವಾರಿನಿಧಿ ಮುನಿ ಕುಡಿದ ಕಪಿ ಕಯ್ಯಾರೆ ಕಟ್ಟಿದ ಕುಂದುಗಳೆವೊಡೆ ಸೇರಿತೀ ಪುರಸಿರಿಯನೆನೆ ಜಳಖಾತಿಕೆಯು ಬಳಸಿ ಹೊಂಗೋಂಟೆ ಕಂಜಿಪುದು (ಸಾಳ್ವಭಾ. ೨-೬). [ಸಂ.]

**ವಾರಿನಿರ್ಗಮ** (ನಾ). ೧. ನೀರು ಹೊರಬರುವ ಸ್ಥಳ. ೨. ನೀರಿನ ಸುಳಿ : "ವಾರಿನಿರ್ಗಮಂ ಪುಟಭೇದಂ" (ವಸ್ತುಕೋ. ೨೫-೧೮). [ಸಂ.]

**ವಾರಿಪಂಚಕ** (ನಾ). [ವೀಶೈ] ಕರಣಹಸಿಗೆಯ ಪಂಚೀಕರಣಗಳಲ್ಲಿನ ಒಂದು ಪಂಚಕ : ಸಾರೆ ಬುದ್ಧಿಯಪಾನವಾಯು ಜಿಹ್ವೇಂದ್ರಿಯಮುಮಾ ರಸಂ ಗುಹ್ಯೇಂದ್ರಿಯಂಗಳೈದು ನೋಡೆ ವಾರಿಪಂಚಕವಿನ್ನು ಹಂಕಾರವಾವ್ಯಾನವಾಯು ನೇತ್ರೇಂದ್ರಿಯದೊಳು (ವೀಶೈಪು. ೭-೩-೧೨). [ಸಂ.]

**ವಾರಿಫೇನ** (ನಾ). ೧. ನೀರಿನಲ್ಲಿ ಬರುವ ನೊರೆ ; ಬುರುಗು ; ಬುದ್ಬುದ. ೨. ಒಂದು ಬಗೆಯ ಸಸ್ಯ ; ಕಡಲ ನಾಲಗೆ : "ವಾರಿಫೇನಂ ಕಡಲನಾಲಗೆಯದಕ್ಕು" (ಮಂಗರಾ. ೪೩-೪೨). [ಸಂ.]

**ವಾರಿಬಂಧ** (ನಾ). ಆನೆಗಳನ್ನು ಹಿಡಿಯುವುದು : ಈಗಿನ 'ಖೆಡ್ಡಾ' ಕಾರ್ಯಕ್ರಮದಂತೆ ಅವುಗಳನ್ನು ಹಿಡಿಯುತ್ತಿದ್ದಂತೆ ಊಹಿಸಬಹುದು. ಇದನ್ನು ಅಭಿಲಷಿತಾರ್ಥಚಿಂತಾಮಣಿಯಲ್ಲಿ 'ವಾರಿಬಂಧ'ವೆಂದು ಕರೆದಿದೆ (ಕಶಾಅ. ೨೬೩). [ಸಂ.]

**ವಾರಿಭರ** (ನಾ). ನೀರಿನ ಹೊಡೆತ,—ರಭಸ : ವಾರಿಭರಂಗಳಿಂ ಗಳಿತಮಾಗೆ ಮನೋಹರಿಯಂಗರಾಗಂ . . . ತಳೆದನುಜ್ಜ್ವಳಕುಂಕುಮಪಂಕದಿಂ ಪ್ರಿಯಂ (ಲೀಲಾವ. ೧೩-೧೪೯). [ಸಂ.]

**ವಾರಿಯಂತ್ರ** (ನಾ). ೧. ನೀರನ್ನು ಚೆಲ್ಲುವ ಯಂತ್ರ ; ಜೀರ್ಕೊಳವೆ : ನೃಪಕರವಾರಿಯಂತ್ರಮುಖಮುಕ್ತಮೃಗೋದ್ಭವಮಿಶ್ರಧಾರೆಗಳ್ ದ್ವಿಪಪತಿಕುಂಭಸನ್ನಿಭ ಕುಚಾಚಲಮಂ ಮುಗಿಲಂತೆ ಮುತ್ತೆ (ರಾಜಶೇ. ೧೦-೭೫). ೨. ನೀರನ್ನು ಮೇಲೆತ್ತುವ ಯಂತ್ರ , — ಚಕ್ರ. [ಸಂ.]

**ವಾರಿರಮ್ಯ** (ನಾ). ಕಡಲು ; ಸಮುದ್ರ : "ವಾರಾಶಿ ಸಿಂಧು . . . ಉದ್ಯತ್ಸಮುದ್ರಕಕ್ಕುಂ ವಾರಿರಮ್ಯಂ" (ಮಂಗರಾ. ೧೨೦-೨). [ಸಂ.]

**ವಾರಿರುಹ**(ನಾ). = ವಾರಿಜ : ವಾರಿರುಹಕ್ಕಿನಂ ಕುವಲಯಕ್ಕಮೃತಾಂಶು . . . ಈಶ್ವರಭಕ್ತಿಗೆ ಭಕ್ತನಾಸೆಮಾಳ್ಪೋರಗೆಯಾಗಿ ಸಂಕಿಲಿಯೊಳಂ ನೆರೆವಾಸೆಯೊಳಿರ್ದ ಸೌಂದರಂ (ನಂಬಿರ. ೧೪-೨) ; ದರವಿಕಸದ್ವಾರಿರುಹಮನಾ ಕಾಂತೆ ನಿಶೆಯ ಕಡೆಯೊಳ್ ಕಂಡಳ್ (ಪುಷ್ಪಪು. ೩-೧೨೦). [ಸಂ.]

**ವಾರಿರುಹಸಂಭವ** (ನಾ). = ವಾರಿಜಭವ : ಇಂದ್ರನಳ್ತಿ ಮಿಗೆ ನಿರ್ಜರರಂ ನೆಱೆ ಕೂಡಿಕೊಂಡು ಬಂದಾತುರನಾಗಿ ವಾರಿರುಹಸಂಭವನಂ ನುತಿಗೆಯ್ದು (ಲಾಸ್ಕರಂ. ೧-೨). [ಸಂ.]

**ವಾರಿರುಹಾಕರ** (ನಾ). ಕಮಲಗಳಿರುವ ಸರೋವರ ; ತಾವರೆಯ ಕೊಳ : ಉಗುರ್ವಿಸಿಯಪ್ಪುವೊರ್ಮೆ ಪುಗೆ ವಾರಿರುಹಾಕರವಾರಿ ಸುಯ್ಯ ಬೆಂಕೆಗಳೊಳೆ ಪೊಕ್ಕ ನಂದನವನಂ ಕೊರಗಿರ್ಪುವು . . . ಮದೀಯ ವಿಯೋಗದೊಳೆನ್ನ ನಲ್ಲಳಾ (ಶಾಂತಿಪು. ೮-೯೫). [ಸಂ.]

**ವಾರಿವಾಹ** (ನಾ). ಮೋಡ ; ಜಲದ : "ಸ್ತನಯಿತ್ನು ವಾರಿವಾಹಂ ಘನಾಘನಂ ಧೂಮಯೋನಿ ಮೇಘಂ ಜಲದಂ" (ವಸ್ತುಕೋ. ೧೦-೫೮). [ಸಂ.]

**ವಾರಿವಾಹವಾಹ** (ನಾ). ಮೋಡವನ್ನು ವಾಹನವನ್ನಾಗಿ ಉಳ್ಳವನು ; ಇಂದ್ರ : ವಾರಿವಾಹವಾಹನೊಳೊದವಿದ ವೈರದಿಂ ವಾರಿಧಿಯೊಳ್ಪೊಕ್ಕ ಭೂರಿಭೂಧರಂಗಳ್ ಪಳಂಚಲೆಂದು ಪಟುತೆಯಿಂದಿದಿರ್ಚಿ ನಿಂದವೆಂಬಂತೆ ಸಾರ್ತಂದು (ರಾಜಶೇ. ೧-೧೦೨ ವ). [ಸಂ.]

**ವಾರಿವಿಹಾರ** (ನಾ). = ವಾರಿಕೇಳಿ : ಲಲಿತಲತಾಂಗಿಯರ್ ತುಮುಳಕೇಳಿಯ ವಾರಿವಿಹಾರದೊಳ್ ಪಳಂಚಲೆವವನೀಶನಂದನನನಾಱದೆ . . . ಒಡ್ಡಿದರ್ . . . ಅಬ್ಜವಿಚಿತ್ರಪತ್ರಮಂ (ಶಾಂತಿಪು. ೮-೩೮). [ಸಂ.]

**ವಾರಿಶತ್ರ** (ನಾ). ನೀರನ್ನು ದಾನಮಾಡುವ ಸ್ಥಳ ; ಅರವಂಟಿಗೆ : ಭೈರವದೇವರ್ಗ್ಗಲ್ಲಿಯ ವಾರಿಶತ್ರಕ್ಕಂ ಸರ್ವನಮಶ್ಯಮಾಗೆ ಬಿಟ್ಟ ಕನ್ನೆ ಮುನ್ನುಱಱ ಬಳಿಯ ದುದ್ದಿಯಾಲು (ಸೌಇಇ. IX-i, ೧೧೯-೩೧; 1057). [ವಾರಿ$_2$ + ಶತ್ರ]

**ವಾರಿಶಿಲೆ** (ನಾ). = ವಾರಿಕಲ್ : ಅಱಿವು ಮಹದಲ್ಲಿ ಬೆರಸುವಾಗ ವಾರಿಶಿಲೆ ನೋಡ ನೋಡಲಿಕ್ಕೆ ನೀರಾದಂತೆ ಇರಬೇಕು (ಮೋಳಿಮಾ. ೨೭೦-೫); ಬಜ್ಜರದ ರತ್ನವೃಷ್ಟಿಯನುಜ್ಜ್ವವದಿಂದಮರರೆಯ್ದೆ ಸುಂದರಪತಿಗಂ ಸಜ್ಜೆನಿಸಿ ಕರೆದರೋ ಎನೆ ಪಜ್ಜಳಿಸಿದ ವಾರಿಶಿಲೆಗಳೇನೊಪ್ಪಿದವೋ (ಹಾಲಾಸ್ಯ. ೨-೩-೮). [ಸಂ. ವಾರಿಶಿಲಾ]

ವಾರಿಶೂಕ (ನಾ). ನೀರಿನ ಮೇಲಿನ ಪಾಚಿ ; ಹಾವಸೆ : "ವಾರಿಶೂಕಂ ಶೈವಳಂ ಸೇವಾಳಮೆನೆ ಹಾವಸೆಗೆ ಪೆಸರು" (ಮಂಗರಾ. ೧೨೪-೧೮). [ಸಂ.]

ವಾರಿಷ 'ಬರಿಸ' ನೋ.

ವಾರಿಸು (ಕ್ರಿ). ೧. ಬೇಡವೆಂದು ಹೇಳು; ನಿರೋಧಿಸು ; ತಡೆ: "ಬಾರಿಪುದನೆ ವಾರಿಪುದದು" (ಚತುಃ. ೭೭); ಶ್ರೀವರ್ಧನಂ ಮೊದಲಾಗಿ ಅನಿಬರುಂ . . . ಕೈದುಗಳತ್ತ ಕೈಯಂ ನೀಡಲ್ ಬಗೆವನ್ನೆಗಂ ಭಟ್ಟಾರರ್ ವಾರಿಸಿದರ್ (ವಡ್ಡಾರಾ. ೯೯-೧೮); ವನವಾಸದೊಳಿರ್ಪೆನೆಂದು ದುರ್ವಾರಪರಾಕ್ರಮಂ ತಳರೆ ಬಾರಿಸಿ ವಾರಿಸಿ ಕುಂತಿ ಮಾದ್ರಿಯರ್ ಬೆನ್ನಬೆನ್ನನೆ ಬರೆ (ಪಂಪಭಾ. ೧-೧೧೪). ೨. ಇಲ್ಲದಂತೆ ಮಾಡು ; ನಿವಾರಿಸು : ತೊಡೆಯುತ್ತುಂ ತೊಡೆವಾಯಂ ಶ್ರಮಜಲಕಣಮಂ ಮೇಲುದಿಂ ವಾರಿಸುತ್ತುಂ (ಸೂಕ್ತಿಸು. ೮-೧೭೭); ಹಸಿವು ನೀರಡಕೆ ಸಂತಾಪವ ನೆಟೆ ವಾರಿಸಿಕೊಂಡು ಬಲಗೂಡಿ ತೆರಳ್ದು (ಮೋಹತ. ೧೯-೭೦). 'ಬಾರಿಸು₂' ಪರಾ. [< ವಾರಣ + - ಇಸು]

ವಾರಿಸೇಚನ (ನಾ). ನೀರನ್ನು ಚಿಮುಕಿಸುವುದು ; ಜಲವನ್ನು ಸಿಂಪಡಿಸುವುದು : ವೀರರತಿಸಾಮ್ರಾಜ್ಯಪಟ್ಟದೊಳ್ ಬೆಮರ್ವನಿಯ ವಾರಿಸೇಚನದಿಂದೆ ಕೃತಕೃತ್ಯನಾದಂತೆ ರಾರಾಜಿಸಿದನು (ಜೈಮಿಭಾ. ೧೧-೨೪). [ಸಂ.]

ವಾರು (ನಾ). ಉದ್ದವನ್ನು ಅಳೆಯುವ ಒಂದು ಅಳತೆ ; ಒಂದು ಗಜ : ಹತ್ತವಾರೀನ ಹೂವಿನ ಶಾಲ್ಗೋಳು (ಮಲ್ಲಿಗೆ. ೧೩) ; ಒಂದು ವಾರು ಕೆಂಪು ಅರಿವೆಗೆ ಹತ್ತಾಣೆ (ಚಿನಬಾ. ೧೮೫). [<— ಮರಾ. ವಾರ್]

ವಾರುಣ (ಗು). ೧. ವರುಣನಿಗೆ ಸೇರಿದ, —ಸಂಬಂಧಪಟ್ಟ. (ನಾ). ೨. ಒಂದು ಬಗೆಯ ಅಸ್ತ್ರ ; ವಾರುಣಾಸ್ತ್ರ. ೩. ನೀರು. ೪. ಒಂದು ಊರಿನ ಹೆಸರು: ಆಚನ ಚಮುಂಡರನು ಆ ಭತರಕರು ವಾರುಣದ ಸಾಂಥಿನಾಥಸ್ವಮಿಯ ಮಡಿಸಿದರು (ಎಕ. V (R), ಮೈಸೂರು. ೧೮೦-೩; 10 ನೆಯ ಶತ). [ಸಂ.]

ವಾರುಣಪತ್ರಿ (ನಾ). ವರುಣಮಂತ್ರದಿಂದ ಅಭಿಮಂತ್ರಿಸಿ ಬಿಡುವ ಬಾಣ,- ಅಸ್ತ್ರ ; ವಾರುಣಾಸ್ತ್ರ : ಜ್ವಳನಪತತ್ರಿಯಂ ಕಡಿದು ವಾರುಣಪತ್ರಿಯನೈಂದ್ರಬಾಣಮಂ ಕಳೆದು . . . ಕಾದಿದನೇಂ ಕಲಿಯೋ ಗುಣಾರ್ಣವಂ (ಪಂಪಭಾ. ೧೧-೯೩).
[ಸಂ. ವಾರುಣಪತ್ರಿನ್]

ವಾರುಣಪುರಾಣ (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು : ಸನತ್ಕುಮಾರಪುರಾಣ ನಾರಸಿಂಹಪುರಾಣ . . . ವಾರುಣಪುರಾಣ . . . ಭಾರ್ಗವಪುರಾಣವೆಂಬುವೇ . . . ಹದಿನೆಂಟು ಉಪಪುರಾಣಂಗಳ್ (ವಿವೇಕ. ೭). [ಸಂ.]

ವಾರುಣಸ್ನಾನ (ನಾ). ಐದು ಬಗೆಯ ಸ್ನಾನಗಳಲ್ಲಿ ಒಂದು ; ನೀರಿನಿಂದ ಮಾಡುವ ಸ್ನಾನ : ದಿವ್ಯಸ್ನಾನ ವಾರುಣಸ್ನಾನ ವಾಯವ್ಯಸ್ನಾನ ಮಾನಸಸ್ನಾನ ಆಗ್ನೇಯಸ್ನಾನವೆಂಬ ಪಂಚವಿಧಸ್ನಾನಂಗಳ್ (ವಿವೇಕ. ೧೫೫); ಜಲದಿಂದ ಮಾಡುವ ಸ್ನಾನವೇ ವಾರುಣಸ್ನಾನ (ಅಷ್ಟಾವಿ. ೪). [ಸಂ.]

ವಾರುಣಾಸ್ತ್ರ (ನಾ). = ವಾರುಣಪತ್ರಿ : ಅನಲಾಸ್ತ್ರದಿನಿಸೆ ದಿವಿಜಂ ದನುಜೇಂದ್ರಂ ವಾರುಣಾಸ್ತ್ರದಿಂ ಖಂಡಿಸಿದಂ (ಪಂರಾಮಾ. ೧೦-೨೦೭) ; ಸುಧನ್ವಂ ಕೆರಳ್ದು ಕೋದಂಡಕರತಿವೇಗದೊಳ್ವಾರುಣಾಸ್ತ್ರಮಂ . . . ತೆಗೆದೆಚ್ಚಂ (ಜೈಮಿಭಾ. ೧೩-೧೩). [ಸಂ.]

ವಾರುಣಿ (ನಾ). ೧. ವರುಣನ ದಿಕ್ಕು ; ಪಶ್ಚಿಮ ; ಪಡುವಲು : "ವಾರುಣೀ, ಪ್ರತೀಚೀ, (ಪ್ರತ್ಯಕ್) – ಈ ೩ ಪಡುವಣ ದೆಸೆ" (ಹಲಾಯು. ೧೭-೧೦೧). ೨. ವರುಣನ ಹೆಂಡತಿ : ಉಂಬೂಷೆ . . . ವಾರುಣ್ಯಾದರ್ಶೆ ಶ್ರೀ ಹ್ರೀ ಧೃತಿಯೆಂಬೆಣ್ಬರುಂ ದಿಕ್ಕನ್ಯೆಯರಂ ಮರುದೇವಿಮಹಾದೇವಿಗೆ ಚಾಮರಮನಿಕ್ಕಲುಂ . . . ಸೌಧರ್ಮೇಂದ್ರಂ ಬೆಸಸುವುದುಂ (ಆದಿಪು. ೭-೩ ವ) ; ವಾರುಣಿ [ಪಾಠಾಂ. ಧಾರಿಣಿ] ಕಳ್ಳನೀಂಟಿ ಮಱದಿಕ್ಕಿದ ಬಟ್ಟಲೊ . . . ಪೇಟೆನಲ್ಕೆ ನೀಹಾರಮಯೂಖಮಂಡಲಮದೇನೆಸೆದಿರ್ದುದೊ ಪಶ್ಚಿಮಾದ್ರಿಯೊಳ್ (ಲೀಲಾವ . ೩-೩). ೩. ಪಶ್ಚಿಮ ದಿಕ್ಕನ್ಯೆ ; ಪಶ್ಚಿಮಾಂಗನೆ. ೪. ಹೆಂಡ ; ಮದ್ಯ : ಆಮಂ ಗಡ ವಾರುಣಿಯಂ ಸೇವಿಸಿ ನಾಣ್ಗೆಡದನುಚಿದನಂಬರಮಂ ರಾಜೀವಸಖಂ ವಾರುಣಿಯಂ ಸೇವಿಸಲೊಡವೂತ್ಮತೇಜಮಸ್ತಮಿಸುವಿನಂ (ಪಂರಾಮಾ. ೧೧-೧೭೯). ೩, ೪ : ತುಂಬಿದ ರಕ್ತತೆಯಿಂ ನಿಜಬಿಂಬಂ ವಾರುಣಿಯನೊಸೆದು ಸೇವಿಸೆ ನಾಣ್ಗೆಟ್ಟಂಬೋಲ್ ತೇಜಂ ಮಸುಳ್ದಿನಮಂಬರಮಂ ಬಿಸುಟನಾಗಳಂಬುಜಮಿತ್ರಂ (ಪಂಪಭಾ. ೩-೨೩) ; ದಿನಲಕ್ಷ್ಮೀಕಾಂತೆ ಮೆಯ್ಮುಟ್ಟಟೀದು ಗಗನರಂಗಾಗ್ರದಿಂ ವಾರುಣೀಸೇವನೆಗೆಯ್ವುರ್ಪಲ್ಲಿ (ಕಾದಂಪು. ೫೦೭). ೫. ಒಂದು ಬಗೆಯ ಗರಿಕೆ ಹುಲ್ಲು ; ದೂರ್ವೆ. ೬. ಒಂದು ನಾಡಿಯ ಹೆಸರು : ತರಳ ತಿಳಿ ನಾಡಿಗಳ ಚೌದಶಗಳಿಗೆ ನಾವುಗಳಾಯುರು ಸುಷುಮ್ನೆಯು ಪಿಂಗಳೆಯು ಯಿಡಾ ಸರಸ್ವತಿ ಪೂಷ ವಾರುಣಿ (ಗುರುಜಾ. ೯-೧೧). ೭. ಒಂದು ಬಗೆಯ ಗಿಡ ಮತ್ತು ಅದರ ಕಹಿಹಣ್ಣು ; ಹಾವುಮೆಕ್ಕೆ : "ವಾರುಣಿ[ಪಾಠಾಂ. ಳಿ] ಬಲಿರ್ಬುಧ್ನಾಕ್ಷಿ ಹಾವುಮೆಕ್ಕೆ" (ಮಂಗರಾ. ೪೪-೪೪). ೮. ಒಂದು ಬಗೆಯ ಮರ; ಬಯಿನೆ : "ವಾರುಣಿ [ಪಾಠಾಂ. ವಾರಣ]ಮೆನಲ್ ಬಯನೆ" (ಮಂಗರಾ. ೩೫-೧೫). ೯. [ಜ್ಯೋತಿ] ಒಂದು ನಕ್ಷತ್ರದ ಹೆಸರು; ಶತಭಿಷ ನಕ್ಷತ್ರ: ನುತ ವೈಶಾಖದ ಬಹುಳ ಪ್ರತಿಪದಿಯೊಳ್ ಚೌತಿವೆರಸು ವಾರುಣಿಗಿ(ಮಿ)ವಱೊಳ್ ಸತತಂ ಮಱ ಕೊಳ್ಳದೊಡೊಳ್ಳಿತು ಕೊಂಡೊಡೆ ಪೊಲ್ಲವೆಂದನೊಳ್ಪಿನ ಬಟ್ಟಂ (ಜ್ಯೋನು. ೮-೯೯). ೧೦. ಚೈತ್ರಕೃಷ್ಣತ್ರಯೋದಶಿ. [ಸಂ. ವಾರುಣೀ]

ವಾರುಣಿನಾಡಿ (ನಾ). = ವಾರುಣಿ ೬ : ಗೋದೆ ವಾರುಣಿನಾಡಿಯಲ್ಲಿ . . . ಪುಟ್ಟಿಪಾದು ಅಲ್ಲಿಗಲ್ಲಿ ಪೊಂದಿಕೊಂಡಿಪ್ಪವು (ಹಸಾರ. ೮-೧೯ ತಾತ್ಪರ್ಯ).
[ಸಂ. ವಾರುಣೀನಾಡಿ]

ವಾರುತಿ 'ವಾರತೆ' ನೋ.

ವಾರುಧಿ (ನಾ). ಕಡಲು ; ಸಮುದ್ರ : ಕೂಡಲಸಂಗನ ಶರಣರು ರಸದ ವಾರುಧಿಗಳು (ಬಸವ. ೭೯೧) ; ಅಖಿಳಜಗದಳಲುರಿಯ ನಂದಿಸುವ ಪಾರದಿಯೆ ಸಂಸಾರವಾರುಧಿಯನುತ್ತರಿಪ ಗುರುಪಾದವ ತಂದು ತೋಱಿತ್ತಲಾ (ಹಟಕಾ. ೫-೮೪).
[< ಸಂ. ವಾರ್ಧಿ, ವಾರಿಧಿ]

ವಾರುವ (ನಾ). ಕುದುರೆ ; ಅಶ್ವ : ವಾರುವ ಮುಗ್ಗಿದಡೆ ವಾಗೆಯಲಿ ಆದರಿಸಬೇಕಲ್ಲದೆ ಅದ ಗಾರುಮಾಡಿ ಹೊಯ್ಯುವರೇ ಮಿಡಿಯನು (ತೋಂಟಮಾ. ೫೨-೨೧೪) ; ಪಲವುಂ ವಿಧಂಗಳಿಂ ತುಱುಗಿ ಮೆಟ್ಟುವ ವಾರುವದೊಂದು ವಲ್ಗನಕ್ಕಲುಗೆ ಕದಂಪಿನೊಳ್ ಕನಕಕುಂಡಲಂ (ಚಂದ್ರಪ್ರ. ೩-೫೧) ; ಬರಬರಲ್ ವಾರುವನ ಮಱ ಗರ್ದಭಾಕಾರ ಮಾದೊಲಾಯ್ತು (ಚಿಬಪು. ೩೧-೨೦). 'ವಾವುರ' ಪರಾ.
[?. / ತೆಲು. ವಾರುವ, ವಾವುರ. / ಸಂ. ವಾಡವ]

ವಾರುವದಳ (ನಾ). ಕುದುರೆಯ ಸೈನ್ಯ ; ಅಶ್ವದಳ : ವಾರುವದಳ ಸಹ ರಣಧೂಳಿಖಾನ ಮುಂದೋರಂತೆ ನಡೆದನುಬ್ಬಿನಲಿ (ಕಂನವಿ. ೧೧-೯೩).
[ವಾರುವ + ದಳ₂ (= ದಲ)]

ವಾರುವಸೇನೆ (ನಾ). = ವಾರುವದಳ : ಆನೆಗಳು ಮುಗ್ಗಿದವು ವಾರುವಸೇನೆ ಕಾಲನು ನಿಗುರಿದುವು (ಮೂಲರಾ. ೧-೪೧). [ವಾರುವ + ಸೇನೆ]

ವಾರೆ₁ (ನಾ). ವೇಶ್ಯೆ ; ವಾರಸ್ತ್ರೀ : ನಾರಿಯ ನಯನಾಪಹಾರಿಯ ಚಿತ್ತಾನುಸಾರಿಯ ಸುಖಿಸೌಖ್ಯತೆಯ ವಾರೆಯ ರಂಗನ ವಿರಹೆಯ ರತಿಸುಖಿವಾರಿಯದೆಂದು ಘಟಿಪುದೊ (ಶತಸಾಂ. ೨೩-೧೭). [ಸಂ. ವಾರಾ]

- ವಾರೆ₂ '- ವರೆ₂' ನೋ.

ವಾರ್ಚರ (ನಾ). ನೀರಿನಲ್ಲಿ ಚಲಿಸುವುದು ; ಜಲಚರ ; ಮೀನು : ವಾರ್ಚರ ಕಮಠ ಕಿಟಿ ನರಸಿಂಹ ವಾಮನಾಬ್ಜಾಚ್ಯುತ ಮಹಾವತಾರಾಪಹರ ಕಥೆಗಳಂ . . . ನಿಚ್ಚನಿಚ್ಚಂ ಪಠಿಸುವರ್ (ರಾಘಚ. ೧-೩೬). [ಸಂ.]

ವಾರ್ಚರಧ್ವಜ (ನಾ). ಮೀನನ್ನು ಧ್ವಜದಲ್ಲಿ ಉಳ್ಳವನು ; ಮನ್ಮಥ ; ಮೀನಕೇತನ : ವಾರ್ಚರಧ್ವಜ ಯಮ ತ್ರಿಪುರದಹನಜ ಮಸ್ತಹೃತಿ ದಕ್ಷಾಧ್ವರಗಳ . . . ಪೌರಾಣಕಾವ್ಯಂಗಳಂ ಬಿಡದೆ ನಿಚ್ಚನಿಚ್ಚಂ ಪಠಿಸುವರ್ (ರಾಘಚ. ೧-೩೬). [ಸಂ.]

ವಾರ್ಡು (ನಾ). ೧. ಪಟ್ಟಣದ ಆಡಳಿತವಿಭಾಗ : ಈಗ ಮೂರುಸಲವಾದರೂ ಈ ವಾರ್ಡಿಗೆ ಅವರೊಬ್ಬರು ಆರಿಸಿ ಬರಲೇಬೇಕು (ಅಪನಾ. ೮೮). ೨. ಆಸ್ಪತ್ರೆ ಮೊದಲಾದ ಕಡೆ ರೋಗಿಗಳಿಗೆ ಚಿಕಿತ್ಸೆಗಾಗಿ ನಿಗದಿ ಮಾಡಿರುವ ಸ್ಥಳ, – ಭಾಗ : ಉಳಿದ ವಾರ್ಡುಗಳಲ್ಲಿ ಪೇಶಂಟರು ನಿಮ್ಮ ದಾರಿ ಕಾಯುತ್ತಿರಬಹುದು (ವಿಜಯಾ. ೧೯) ; ಆಸ್ಪತ್ರೆಯಲ್ಲಿ ಮೂಲೆಯ ವಾರ್ಡೊಂದರಲ್ಲಿ ಆವಾಸಸ್ಥಾನವಾಗಿದ್ದ ಈ ದೇಹದಿಂದ ತುಂಬ ನೊಂದು ಅಗಲಿದೆ (ಎಮುಕ. ೭೪). [<— ಇಂ. ward]

ವಾರ್ತ (ಗು). ೧. ಉತ್ತಮಸ್ಥಿತಿಯಲ್ಲಿರುವ ; ಆರೋಗ್ಯವಾದ: (ಶ). ೨. ಸಾರವಿಲ್ಲದ ; ಸತ್ತ್ವರಹಿತವಾದ: (ಶ). (ನಾ). ೩. ಆರೋಗ್ಯ ; ಕ್ಷೇಮ: (ಶ). ೪. ಕೆಲಸಕ್ಕೆ ಬಾರದ ವಸ್ತು: (ಶ). ೫. ಕೀಳುತನ ; ಕ್ಷುದ್ರತನ: (ಶ). ೬. ಸಮಾಚಾರ ; ವಾರ್ತೆ: (ಶ). ೭. ವೈದಿಕಪದ್ಧತಿ: (ಶ). ೮. ಜಾಣ್ಮೆ; ಚಾತುರ್ಯ: (ಶ). ೯. ನೋಡಿದುದು ; ಪ್ರತ್ಯಕ್ಷ: (ಶ). ೧೦. ಆರೋಗ್ಯವಂತ ; ಸ್ವಸ್ಥವಾಗಿರುವವನು: "ಕಲ್ಪನೆನೆ ವಾರ್ತನೆನೆ ಕುತ್ತವಿಲ್ಲದನಕ್ಕು" (ಮಂಗರಾ. ೭೧-೧೯). ೧೧. ವೃತ್ತಿನಿರತನಾದವನು ; ಉದ್ಯೋಗಶೀಲ ವ್ಯಕ್ತಿ. [< ಸಂ. ವಾರ್ತ್ತ]

ವಾರ್ತಾಇಲಾಖೆ (ನಾ). (ಕೇಂದ್ರ ಹಾಗೂ ರಾಜ್ಯ ಸರ್ಕಾರದ) ಸಮಾಚಾರವನ್ನು ತಿಳಿಸುವ ಇಲಾಖೆ : ಭಾರತಸರ್ಕಾರದ ವಾರ್ತಾಇಲಾಖೆಯವರು ಚಿತ್ರಪ್ರದರ್ಶನವನ್ನು . . . ನಡೆಸಿದರು (ನಿಟ್ಟೂಶಾಂ. iv, ಅರಿಕೆ). [(ಸಂ. ವಾರ್ತಾ) + ಇಲಾಖೆ]

ವಾರ್ತಾಕ (ನಾ). ಒಂದು ಬಗೆಯ ಸಸ್ಯ ಮತ್ತು ತರಕಾರಿಯಾಗಿ ಬಳಸುವ ಅದರ ಕಾಯಿ ; ಬದನೆ : ಹಗರಣಿಗರು ಕಂಗೊಳಿಪ ಸರ್ವಾಂಗಭಸಿತವಾರ್ತಾಕಫಲ ಲಿಂಗಕುರುವಣೆಯ ಜೆಡೆಗಳ ಧರಿಸಿ ಬರಲು (ಲಶಿಚಂ. ೩೨-೧) ; ಬಸವಣ್ಣನಂ ಬಂದಿವಿಡಿಯ ವೇಳ್ಕೆಂದು ಸಂತಸದೆ ತಸ್ಕರರೆಯ್ದೆ ತಮ್ಮ ಕಂಠಂಗಳೊಳಗೆಸೆವ ವಾರ್ತಾಕದೊಳ್ಮಿಡಿಗಳಂ ಧೌತವಸ್ತ್ರಂಗಳಿಂ ಕಟ್ಟಿಕೊಂಡು ಮಿಸುಪ ಭಕ್ತರ ನಡುವೆ ಬಂದಿರಲ್ (ಆರಾಚ. ೧-೧೩-೧೭). [ಸಂ.]

ವಾರ್ತಾಚರ (ನಾ). ಸಮಾಚಾರವನ್ನು ತೆಗೆದುಕೊಂಡು ಹೋಗುವವನು ; ಸುದ್ದಿಯನ್ನು ತಲಪಿಸುವವನು ; ದೂತ : ನಿಜಾಗಮನವಾರ್ತೆಯಂ ಜನಕನಲ್ಲಿಗೆ ವಾರ್ತಾಚರರ ಕೈಯೊಳಟ್ಟುವುದುಂ (ಚಂದ್ರಪ್ರ. ೬-೮೭ ವ). [ಸಂ.]

ವಾರ್ತಾಪ್ರಪಂಚ (ನಾ). ಸಮಾಚಾರದ ವಿವರ ; ಸುದ್ದಿಯ ವಿಸ್ತಾರ : ವೀರನೊಳಂಬಂ ವೀರಮೇಳಾಪಕದೊಳಿರ್ದ್ದು ವಾರ್ತಾಪ್ರಪಂಚಮಂ ತಂತಮ್ಮ ಸುದ್ದಿಕಾಜಿರಿಂ ಕೇಟ್ಟು (ಸೌಇಇ. XX, ೪೯-೨೩; 1076). [ಸಂ.]

ವಾರ್ತಾಫಲಕ (ನಾ). ಸಮಾಚಾರವನ್ನು ಬರೆದಿರುವ ಹಲಗೆ ; ಸುದ್ದಿಯ ಹಲಗೆ : ದಾರಿಯ ಒಂದು ಚೌಕದಲ್ಲಿ ವಾರ್ತಾಫಲಕ ಇತ್ತು (ಕಥಕ. ೪೪). [ಸಂ.]

ವಾರ್ತಾಭಾರ (ನಾ). ಗಹನವಾದ ಸುದ್ದಿ,-ಸಮಾಚಾರ : ಊರೊಳಗೆ ಗುಜುಗುಜಿಸಿ ವಾರ್ತಾಭಾರ ಮಸಗಿತು ನೆರೆದ ನೆರವಿಯೊಳು (ಕುವ್ಯಾವಿ. ೩-೧೦೬). [ಸಂ.]

ವಾರ್ತಾವಹ (ನಾ). ೧. ಸಮಾಚಾರವನ್ನು ಅಥವಾ ಸುದ್ದಿಯನ್ನು ಮುಟ್ಟಿಸುವವನು. ೨. ಕಾವಡಿಯನ್ನು ಹೊರುವವನು : "ವಾರ್ತವಹಃ, ವೈವಧಿಕಃ-೨ ಕಾವಡಿ ಹೊರುವವನ ಪೆಸರು" (ಸಿದ್ಧಾಂತಿ. ೩೧೨). [ಸಂ.]

ವಾರ್ತಾವಾಹಕ (ಗು). ೧. ಸಮಾಚಾರವನ್ನು ಸಾಗಿಸುವ ; ಸುದ್ದಿಯನ್ನು ಒಯ್ಯುವ : ಪ್ರಯಾಣಸೌಕರ್ಯಗಳೂ ವಾರ್ತಾವಾಹಕಸಾಧನಗಳೂ ಇಲ್ಲದೆ ಇದ್ದುದೂ ಆ ಏಕಚಕ್ರಾಧಿಪತ್ಯದ ಕನಸು ಬರಿಯ ಕನಸಾಗಿಯೇ ಉಳಿದುಕೊಂಡದ್ದಕ್ಕೆ ಕಾರಣಗಳೆಂದು ತೋರುತ್ತದೆ (ರಾಜ್ಯಶಾ. ೧೦). (ನಾ). ೨. ಸುದ್ದಿಯನ್ನು ಒಯ್ಯುವಂತಹುದು ; ಸಮಾಚಾರವನ್ನು ತಲಪಿಸುವಂತಹುದು. ೩. ಸುದ್ದಿಯನ್ನು ಒಯ್ಯುವವನು ; ಸಮಾಚಾರವನ್ನು ತಲಪಿಸುವವನು. [ಸಂ.]

ವಾರ್ತಾಹರ (ನಾ). = ವಾರ್ತಾಚರ : ತಾರಾಪೀಡದೇವನುಂ ವಿಲಾಸವತೀ ಮಹಾದೇವಿಯುಮಾರ್ಯಶುಕನಾಸನುಂ ವಾರ್ತಾಹರರನಟ್ಟಿದೊಡೆ (ಕಾದಂಬ. ೬೩೩) ; ನಿಜಾಗಮನವಾರ್ತೆಯಂ ಜನಕನಲ್ಲಿಗೆ ವಾರ್ತಾಹ [ಪಾಠಾಂ. ಚ] ರರ ಕೈಯೊಳಟ್ಟುವುದುಂ (ಚಂದ್ರಪ್ರ. ೬-೮೭ ವ). [ಸಂ.]

ವಾರ್ತಿ 'ವಾರತೆ' ನೋ.

ವಾರ್ತಿಕ (ನಾ). ೧. ಸಮಾಚಾರಕ್ಕೆ ಸಂಬಂಧಿಸಿದುದು; ಸುದ್ದಿಗೆ ಸೇರಿದುದು. ೨. ಉದ್ಯೋಗಕ್ಕೆ ಸಂಬಂಧಿಸಿದುದು ; ವ್ಯವಹಾರಕ್ಕೆ ಸೇರಿದುದು. ೩. ಸಮಾಚಾರವನ್ನು ತರುವವನು ; ಸುದ್ದಿಗಾರ. ೪. ಬೇಹುಗಾರ ; ಗುಪ್ತಚಾರ. ೫. ಗುರು ; ಮಹೋಪಾಧ್ಯಾಯ. ೬. ವೈಶ್ಯ : ವಾರ್ತಿಕರಕೀರ್ತಿಯೆನೆ ಮಾರ್ಗಣರಮಾರ್ಗಮೆನೆ . . . ಕೈಕೊಳ್ಳದೆ . . . ಕೂಸನಪ್ಪಳಿಸಿ (ಜಗವಿ. ೨-೫೩ ವ). ೭. ಮೂಲ ಶಾಸ್ತ್ರಗ್ರಂಥಕ್ಕೆ ಬರೆದ ಟೀಕೆ, - ವ್ಯಾಖ್ಯಾನ : ವಾರ್ತಿಕವೆಂದರೆ ಮೂಲಕಾರರು ಹೇಳಿರುವುದರಲ್ಲಿ ಹೇಳಬೇಕಾದುದನ್ನು ಬಿಟ್ಟಿರುವುದು, ತಪ್ಪು ಹೇಳಿರುವುದು, ಹೇಳಿದುದನ್ನೇ ಪುನಃ ಹೇಳುವುದು ಇವೇ ಮೊದಲಾದ ದೋಷಗಳನ್ನು ಪರಿಹರಿಸುವ ಗ್ರಂಥ (ಹಿಂದಸಾ. ೧೫೦); ಶ್ರೀಹರ್ಷನು ಬರೆದ ಒಂದು ವಾರ್ತಿಕವಿದ್ದಂತೆ ತಿಳಿದು ಬರುತ್ತದೆ (ಭಾರಮಿಾ. ೨೦). ೮. ಪಾಣಿನಿಯ ಸೂತ್ರಗಳಿಗೆ ಕಾತ್ಯಾಯನನು ಬರೆದ ಪ್ರಸಿದ್ಧವಾದ ಟೀಕೆ. [< ಸಂ. ವಾರ್ತ್ತಿಕ]

ವಾರ್ತಿಕಕಾರ (ನಾ). ೧. ಮೂಲಶಾಸ್ತ್ರಗ್ರಂಥಗಳಿಗೆ ಟಿಪ್ಪಣಿ ಬರೆಯುವವನು; ಟೀಕಾಕಾರ; ವ್ಯಾಖ್ಯಾನಕಾರ : ಹಿಂದಿನ ವೃತ್ತಿಕಾರ ವಾರ್ತಿಕಕಾರರ ಅಭಿಪ್ರಾಯಗಳು ಕೆಲವು ವಾರ್ತಿಕ ವ್ಯಾಖ್ಯಾನಕಾರರಿಂದ ನಿರಾಕರಿಸಲ್ಪಟ್ಟಿರುವುವು (ಹಿಂದಸಾ. ೧೫೦). ೨. ಪಾಣಿನಿಯ ಸೂತ್ರಗಳಿಗೆ ಪ್ರಸಿದ್ಧವಾದ ಟೀಕೆಯನ್ನು ಬರೆದ ಕಾತ್ಯಾಯನ. [< ಸಂ. ವಾರ್ತ್ತಿಕಕಾರ]

ವಾರ್ತೆ (ನಾ). ೧. ನೆಲಸಿರುವಿಕೆ ; ವಾಸಿಸುವಿಕೆ. ೨. ಜೀವನೋಪಾಯ ಮಾರ್ಗ ; ವೃತ್ತಿ ; ಉದ್ಯೋಗ : "ಜೀವನಂ, ವೃತ್ತಿಃ, ಆಜೀವಃ, ವಾರ್ತಾ—ಈ ೪ ಬಾಳ್ಕೆ" (ಹಲಾಯು. ೬೩-೪೧೭). ೩. ಕೃಷಿ; ವ್ಯವಸಾಯ. ೪. ಜೀವನಕ್ರಮ, - ಧೋರಣೆ : ಅಸಿ ಮಷಿ ಕೃಷಿ ವಣಿಗ್ವಿದ್ಯಾಶಿಲ್ಪಕರ್ಮಂಗಳಿಂ ಶುದ್ಧವೃತ್ತಿಯಿಂದ ಧರ್ಮೋಪಾರ್ಜನಂಗೆಯ್ವ ವಾರ್ತೆಯುಂ (ಆದಿಪು. ೧೫-೧೩ ವ). ೫. ಒಂದು ಬಗೆಯ ವಿದ್ಯೆ : ನ್ಯಾಯಶಾಸ್ತ್ರದಲ್ಲಿ ವಿದ್ಯೆ ಆನ್ವೀಕ್ಷಕೀ ತ್ರಯೀ ವಾರ್ತಾ ದಂಡನೀತಿ ಎಂದು ಸಾಮಾನ್ಯವಾಗಿ ನಾಲ್ಕುವಿಧವೆಂದು ವಿಂಗಡಿಸಿರುವರು . . . ವಾರ್ತಾ ಎಂಬುದು ಕೃಷಿ ವಾಣಿಜ್ಯ ಶಿಲ್ಪ ಮೊದಲಾದ ವಿದ್ಯೆ (ಹಿಂದಸಾ. ೧೧೨). ೬. ಸುದ್ದಿ ; ಸಮಾಚಾರ ; ವೃತ್ತಾಂತ : ದೂತಂ ದಕ್ಷನ ವಾರ್ತೆಯಂ ನುಡಿದು ಮೇಗಂ ನೋಟ್ಪೊಡಿಲ್ಲೆಂಗೆ (ಲೋಕೋಪ. ೧೦-೬) ; ಮಗನು ರಣದಲಿ ಮಡಿದ ಬೀಡುಗಳೊಳಾದುದು ವಾರ್ತೆ (ಕುವ್ಯಾದ್ರೋ. ೭-೧) ; ಕಲಕಂಠನುಲಿ ಘೋಷಿಸಿತು ಜಗಕೆ ರಾಮಾಗಮನವಾರ್ತೆಯಂ (ಶ್ರೀರಾಮಾ. ೧೫-೪೦೪). ೭. ಮಾತು ; ನುಡಿ. ೮. ಬದನೆಗಿಡ. ೯. ದುರ್ಗೆಯ ಒಂದು ಹೆಸರು. ೧೦. ಬಹಿರಂಗಪಡಿಸುವುದು ; ಪ್ರಕಟಣೆ. ೧೧. ಸಮಾನವಾಗಿರುವಿಕೆ ; ಸಮತೆ. ೧೨. ಕೀಳುತನ ; ಕ್ಷುಲ್ಲಕತನ : "ಸಮದಲ್ಲಿ ಪ್ರತ್ಯಕ್ಷದಲ್ಲಿ ಹೊಲ್ಲೆಹನುಡಿವ ಗುಮಿತದಲಿ ವಾರ್ತೆಯೆಂಬುದು" (ಮಂಗರಾ. ೧೫೫-೭೦). [ಸಂ. ವಾರ್ತಾ]

ವಾರ್ತೆಗೇಳ್ (ಕ್ರಿ). ಸಮಾಚಾರವನ್ನು ಕೇಳು ; ಸುದ್ದಿಯನ್ನು ಆಲಿಸು : ಅಂತಾ ದೆಸೆಯಿನೆಸೆವ ವಿಹಗನಿನಾದಮುಮಂ ವಾರ್ತೆಗೇಳಲಾನೊಡರಿಸಿದೆಂ (ಕಾದಂಪೂ. ೬೯೦). [ವಾರ್ತೆ + ಕೇಳ್]

ವಾರ್ಧಕ (ನಾ). ೧. ಹೆಚ್ಚಳ ; ಅಭಿವೃದ್ಧಿ. ೨. ವಯಸ್ಸಾಗಿರುವಿಕೆ ; ಮುದಿತನ ; ಮುಪ್ಪು : "ವಾರ್ಧಕಂ ಅಂದರೆ ಮುದುಕತನಕ್ಕು ಪೆಸರಾಗುವುದು" (ಸಿದ್ಧಾಂತಿ. ೧೭೯) ; ಬಾಲ್ಯದೊಳ್ ವಿದ್ಯಾಭೂಮಿಯರ್ಥ ಮಿತ್ರರೆಂಬಿವನುಪಾರ್ಜಿಸಿ ಬಳಿಯಂ ಜವ್ವನದೊಳು ಕಾಮಭೋಗಮನನುಭವಿಸಿ ವಾರ್ಧಕದೊಳು ಧರ್ಮಮೋಕ್ಷಂಗಳಂ ಸೇವಿಸುವುದು (ಮದತಿ. ೧-೫೮ ವ). ೩. ವಯಸ್ಸಾದವನು ; ಮುದುಕ ; ವೃದ್ಧ : ಧರ್ಮಜ್ಞರಧರ್ಮಮೆನೆ ವಾರ್ಧಕ[ಪಾಠಾಂ. ವೃದ್ಧ]ರಸಂಬದ್ಧಮೆನೆ ಪಾಸಜೆಯೊಳ್ ಕೂಸನಪ್ಪಳಿಸಿ (ಜಗವಿ. ೨-೫೩ ವ). ೪. ಮುದುಕರ ಗುಂಪು ; ವೃದ್ಧರ ಸಮೂಹ : "ವಾರ್ಧಕಂ . . . ಮುದುಕರ ಗುಂಪಿಗೆ ಹೆಸರು" (ಸಿದ್ಧಾಂತಿ. ೧೭೯). ೫. [ಛಂದ] ಒಂದು ಷಟ್ಪದಿಯ ಹೆಸರು : ಷಟ್ಪದಿ . . . ಇದು ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ ಎಂದಾರು ವಿಧವು (ಕೃಪಿಡಿ. ೯೫). 'ವಾರ್ಧಕಷಟ್ಪದಿ' ಪರಾ. [ಸಂ.]

ವಾರ್ಧಕಷಟ್ಪದಿ (ನಾ). [ಛಂದ] ಒಂದು ಷಟ್ಪದಿಯ ಹೆಸರು ; "ಪಂಚಮಾತ್ರಾಗಣವು ಒಂದೆರಡು ನಾಲ್ಕೈದನೆಯ ಪಾದಗಳಲ್ಲಿ ನಾಲ್ಕು ನಾಲ್ಕೂ, ಮೂರಾರನೆಯ ಪಾದಗಳಲ್ಲಿ ಆರಾರೂ ಒಂದು ಗುರುವೂ ಇದ್ದರೆ ವಾರ್ಧಕಷಟ್ಪದಿಯಾಗುವುದು" (ಕೃಪಿಡಿ. ೯೭) : ವಾರ್ಧಕಷಟ್ಪದಿಯ ಚರಣದಲ್ಲಿ ಕುಸುಮಷಟ್ಪದಿಯ ಚರಣದ ಇಮ್ಮಡಿ ಗಣಗಳು ಸೇರಿರುತ್ತವೆ (ಛಂದೋವಿ. ೧೮೪). [ಸಂ. ವಾರ್ಧಕಷಟ್ಪದೀ]

**ವಾರ್ಧಕ್ಯ** (ನಾ). ವಯಸ್ಸಾಗಿರುವಿಕೆ ; ಮುಪ್ಪು ; ಮುದಿತನ : ಭೀಮವ್ವ ವಾರ್ಧಕ್ಯದಲ್ಲಿ ಉಡುಪಿ, ಕಾಶಿ, ಪ್ರಯಾಗಗಳ ತೀರ್ಥಯಾತ್ರೆಯನ್ನು ಮಾಡಿ ಬಂದಳು (ಕರ್ನಾಕ. ೨೮೫). [ಸಂ.]

**ವಾರ್ಧರ** (ನಾ). ನೀರನ್ನು ಧರಿಸಿರುವುದು ; ಮೋಡ : ಶರಧಿಯ ರತ್ನಮಂ ನೆರೆಯೆ ಕಳ್ದು ಜಳಾಹರಣಕ್ಕೆ ಬರ್ಪ ವಾರ್ಧರಕುಳಮೊಯ್ಯು ಕೊಟ್ಟೊಡವರಿಂದ ಮಲಂಕೃತಮಾದುದಕ್ಕುಮಂಬರತಳಂ (ಪುಷ್ಪಪು. ೪-೯೧) ; ಸುರಧನು ರನ್ನವಲ್ಲಣದ ಮಾಳ್ಕೆಯೊಳೊಪ್ಪಿರೆ ಬಳ್ಳಿಮಿಂಚು ವಿಸ್ಫುರಿತವಿಲೀನದಂತಿರೆ ಘನಧ್ವನಿ ಹೇಷಿತಮಾಗೆ ತುಂಗವಾರ್ಧರಮದು ತೋಱೆ ನೀಲತುರಗಂಬೊಲದಂ ಪದೆದೇಱೆ (ಶಬಶಂ. ೨-೩೮). [ಸಂ.]

**ವಾರ್ಧಿ** (ನಾ). ೧. ಕಡಲು; ಸಮುದ್ರ : ಅದಱೊಳ್ ವಾರ್ಧಿಯೇೞುಂ ಕುಲೋರ್ವೀಧರವೇೞುಂ . . . ಕೂಡೆ ಕಂಡು (ಜಗವಿ. ೩-೬೨); ಗಗನಮಂ ಪೃಥ್ವಿಯಂ ವಾರ್ಧಿಯಂ . . . ಕಾಮಿಸಿದನ್ (ಶ್ರೀರಾಮಾ. ೧೨-೩೦೭). ೨. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : ಕರ ಪುರ ವಾರ್ಧಿಯಾಗೆ ಗುರು (ಛಂದೋಂಬು. ೫-೨೮೧). [ಸಂ.]

**ವಾರ್ಧಿಕ** (ನಾ). ೧. = ವಾರ್ಧಕ ೨ : ಭವವ ಬಳಸುವ ತನುವಿನಲಿ ಕೌಮಾರ ಯೌವನ ವಾರ್ಧಿಕಂಗಳಲಿ ತನು ವಿಕಾರಿಸುವದು (ಕುವ್ಯಾಭಿ. ೩-೪೪). ೨. ಒಂದು ಬಗೆಯ ಹಕ್ಕಿ : "ವಾರ್ಧಿಕಃ - ಕೆಂದಲೆಗನ ಹಕ್ಕಿ" (ಒಷಧಿ. ೧೫೦). ೩. = ವಾರ್ಧಕ ಷಟ್ಪದಿ : ವಾರ್ಧಿಕದ ಷಟ್ಪದಿಯ ಮೊದಲ ಪದದೇಳಿಗೆಯುಮಿರ್ಪತ್ತು ಮಾತ್ರೆಯಿಂ ದೆಸೆದಿರ್ಕುಂ (ಛಂದೋಂಬು. ೫-೨೪೯ ಅಡಿಪದ್ಯ) ; ಷಟ್ಪದಿಗಳಲ್ಲಿ ವಾರ್ಧಿಕ ದೊಡ್ಡದು. ಅದು ಐದುಮಾತ್ರೆಗಳ ಗಣದಿಂದ ರಚಿತವಾಗುತ್ತದೆ (ಸಂಶೋಧ. ೧೩೫). [< ಸಂ. ವಾರ್ಧಕ]

**ವಾರ್ಧಿಕೆ** (ನಾ). ವಯಸ್ಸಾದವಳು ; ಮುದುಕಿ ; ವೃದ್ಧೆ : ಶಿರದೊಳಗೊಂದು ಕಪ್ಪಿನ ಕುರುಳಿಲ್ಲೆನೆ ನರೆತ ವಾರ್ಧಿಕೆಯಲ್ತೆ ನಾನು (ಭರಚ. ೫೯-೧೧). [ಸಂ. ವಾರ್ಧಿಕಾ]

**ವಾರ್ಧಿವಿಭು** (ನಾ). ಸಮುದ್ರದ ಒಡೆಯ ; ವರುಣ : "ಪ್ರಚೇತಸಂ ವಾರ್ಧಿವಿಭು ಪಾಶಿ ಪ್ರತ್ಯಗ್ದಿಶಾರಮಣನೆನೆ ವರುಣನಕ್ಕುಂ" (ಮಂಗರಾ. ೧೫-೧೦). [ಸಂ.]

**ವಾರ್ಧುಷಿಕ** (ನಾ). ಬಡ್ಡಿಯ ಹಣದಿಂದ ಜೀವನ ನಡೆಸುವವನು : ಅಂತ್ಯದೊಳು ವಾರ್ಧುಷಿಕನನು [ವಾಠಾಂ. ವಾಗ್ದೋಷಕನ] ಕಂಡವರುಗಳ ಭಾಗ್ಯನಿಧಿ ಕದಡಿ ಹರಿವುದು (ಕುವ್ಯಾಉ. ಓ೦೪. ೪-೪೯); ಲೋಭಿ ಚೋರ ಮಲ್ಲ ವಾರ್ಧುಷಿಕ ಪತಿತ ವ್ರಾತ್ಯ ಸೋಮವಿಕ್ರಯಿಯರಾದಿಯಾದ ದುರಾಚಾರಿಗಳ ಮನೆಗಳೊಳೋರ್ಮೆಯುಂ ತಿರಿದುಂಡ ದೇಹಮಂ ಪೊರೆಯಲಾಗದು (ಭಾರಶಾಂ. ೩೭-೨೬೫). [ಸಂ.]

**ವಾರ್ಬಿಂದು** (ನಾ). ನೀರಿನ ಹನಿ ; ಜಲಕಣ : ವಾರಿದಂ ತನ್ನೊಳೆ ಕತಿಪಯ ವಾರ್ಬಿಂದುವಂ ಪೇೞೆ ತಂದಂತದಱಿಂದಂ ಲೋಕಮಂ ತೀವುವುದು (ಜಗವಿ. ೧-೪೫) ; ದೂದವಿಗವಳಿಂತೆಂದಳ್ ಗರಗರಿಕೆ ಕೊರಲೊಳೀ ಕ್ಷಣದೊಳ್ವಾರ್ಬಿಂದು ಮಿಡುಕಿರ್ದೆಯೊ ಳೊದವೆ ಪುಳಿಂದನ ಕಣೆಗಟ್ಟಿ ನಿಂದ ವನಹರಿಣಿಯವೊಲ್ (ಯಶೋಚ. ೨-೪೧). [ಸಂ.]

**ವಾರ್ಮಾನುಷಿ** (ನಾ). ಅಪ್ಸರೆ ; ಜಲಕನ್ಯೆ : ಜಿತಶತ್ರುವೆಂಬ ಪೆಸರಾಯ್ತನ್ವರ್ಥಂ . . . ಭುಜೋತ್ಪಾತಾಸಿಧಾರಾಂಬುವಿಂದಿತ್ತಂ ಶ್ರೀವಧುಗಂ ಜಯಪ್ರಮದೆಗಂ ವಾರ್ಮಾನುಷೀಜನ್ಮಮಂ (ಪಂರಾಮಾ. ೧೦-೭೩). [ಸಂ. ವಾರ್ಮಾನುಷೀ]

**ವಾರ್ಲಿಪಿ** (ನಾ). ನೀರಿನಿಂದ ಬರೆದ ಅಕ್ಷರ ; ಜಲಲಿಪಿ : ಗರಳು ಸುಧೆ ಕರ್ಮಪಾಶ ಮಂಬುರುಹಗುಣಂ ಸರೋಜಭವ ದುರ್ಲಿಪಿ ವಾರ್ಲಿಪಿ ಕಾಯಜಂ ತೃಣಾಂಕುರಮಣೆ ಮಾದಿಸಿದ್ದಿಯಣುವಪ್ಪುದು ಭಕ್ತಿರತಂಗೆ ಲೋಕದೊಳ್ (ವೃಷವಿ. ೩-೬೨). [ಸಂ.]

**ವಾರ್ವಾಂಛೆ** (ನಾ). ನೀರನ್ನು ಕುಡಿಯಬೇಕೆಂಬ ಹಂಬಲ ; ನೀರಡಕೆ : ಉಗ್ರಗ್ರೀಷ್ಮದೊಳ್ ಸಾಮಜವಿತತಿ ತೊಱಲ್ದತ್ತು ವಾರ್ವಾಂಛೆಯಿಂದಂ (ಚಂದ್ರಪು. ೯-೬೯). [ಸಂ. ವಾರ್ವಾಂಛಾ]

**ವಾರ್ಷ** (ಗು). ೧. ಮಳೆಗಾಲಕ್ಕೆ ಸಂಬಂಧಿಸಿದ. ೨. ಒಂದು ವರ್ಷಕ್ಕೆ ಸಂಬಂಧಿಸಿದ ; ವಾರ್ಷಿಕ. (ನಾ). ೩. ಒಂದು ಬಗೆಯ ಸಸ್ಯ : "ವಾರ್ಷಃ - ಮಳಲುದರಸಿ" (ಒಷಧಿ. ೧೫೦). ೪. (?) : "ಮಾನದೊಳಂ ವಾರ್ಷಂ" (ವಸ್ತುಕೋ. ೧೩೮-೨೨೦). [ಸಂ.]

**ವಾರ್ಷಿಕ** (ಗು). ೧. ವರ್ಷಕ್ಕೊಮ್ಮೆ ಬರುವ. ೨. ಒಂದು ವರ್ಷಕ್ಕೆ ಸಂಬಂಧಿಸಿದ ; ಒಂದು ವರ್ಷದ : ಈ ಪ್ರಕಾಶನಕ್ಕೆ ದೊರೆಯಬಹುದಾದ ವಾರ್ಷಿಕ, ಪ್ರೇರಕ, ಪೋಷಕ ಸದಸ್ಯರ ಸಹಾಯವೇ ಕರಾವಲಂಬನ (ಸಂಶೋಧ. VI. ೮೦೪). ೩. ಮಳೆಗಾಲಕ್ಕೆ ಸಂಬಂಧಿಸಿದ ; ವರ್ಷಾಕಾಲದ. (ನಾ). ೪. ಒಂದು ಬಗೆಯ ಔಷಧೀಸಸ್ಯ ; ನೀರಾಮೆಬಳ್ಳಿ : "ವಾರ್ಷಿಕಂ - ತ್ರಾಯಮಾಣೆ ಎಂಬ ಗಂಧದ್ರವ್ಯ, ದರಸಿ, ಬಿದಿರುಪ್ಪು" (ಒಷಧಿ. ೧೫೦). [ಸಂ.]

**ವಾರ್ಷಿಕಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ : "ಮುಕ್ತಬಂಧಃ – ವಾರ್ಷಿಕಮಲ್ಲಿಗೆ" (ಒಷಧಿ. ೧೨೬). [< ಸಂ. ವಾರ್ಷಿಕಮಲ್ಲಿಕಾ]

**ವಾರ್ಷಿಕವರದಿ** (ನಾ). ಯಾವುದೇ ಸಂಸ್ಥೆಯು ಪ್ರತಿವರ್ಷವೂ ಲೆಕ್ಕಪತ್ರವಿಭಾಗದವರ ಪರಿಶೀಲನೆಗಾಗಿ ಆಯಾ ವರ್ಷದ ತನ್ನ ಕೆಲಸಗಳ ಬಗೆಗೆ ಮತ್ತು ಹಣಕಾಸಿನ ಆಯವ್ಯಯಗಳ ಬಗೆಗೆ ಸಿದ್ಧಪಡಿಸಬೇಕಾದ ವಿವರ : ಶಾಲೆಯ ಮಂತ್ರಿಮಂಡಲದ ಸಹಕಾರಮಂತ್ರಿಯು ವಾರ್ಷಿಕವರದಿಯನ್ನು ಓದಿದನು (ಕವಪು. ೫-೨೧). [ವಾರ್ಷಿಕ + ವರದಿ]

**ವಾರ್ಷಿಕೆ** (ನಾ). ಒಂದು ಬಗೆಯ ಔಷಧೀಸಸ್ಯ : "ವಾರ್ಷಿಕಾ – ಅಗುಳುಶುಂಠಿ" (ಒಷಧಿ. ೧೫೦). [ಸಂ. ವಾರ್ಷಿಕ]

**ವಾರ್ಷಿಕೋತ್ಸವ** (ನಾ). ಸಂಘ, ಸಂಸ್ಥೆ ಹಾಗೂ ವಿದ್ಯಾಶಾಲೆಗಳು ವರ್ಷಕ್ಕೊಮ್ಮೆ ನಡೆಸುವ ಸಾಂಸ್ಕೃತಿಕಸಮಾರಂಭ : ನಮ್ಮ ಶಾಲೆಯ ವಾರ್ಷಿಕೋತ್ಸವ ಬಂದಾಗ ನೀವಿಬ್ಬರೂ ಸೇರಿ ಲೋಬ್ಸಿಕ್‌ನ ಚಟುವಟಿಕೆಯನ್ನು ತೋರಿಸಬಹುದು (ಶಾಲೆಮ. ೧೮೩). [ಸಂ.]

**ವಾರ್ಷ್ಣೇಯ** (ನಾ). ೧. ವೃಷ್ಣಿವಂಶದಲ್ಲಿ ಹುಟ್ಟಿದವನು ; ಯಾದವ. ೨. ಕೃಷ್ಣ : ದ್ರೋಣಾಚಾರ್ಯನಿರಲಾಗಿ ವಾರ್ಷ್ಣೇಯನು ಹೇಗೆ ಪೂಜ್ಯನು ? (ಭೀಷ್ಮಚ. ೧೦೩). [ಸಂ.]

**ವಾರ್ಹತ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಫಲ ; ಹೆಗ್ಗುಳ್ಳ. [ಸಂ.]

**ವಾಲ್, ವಾಲು₃** (ನಾ) ಉತ್ಸವಸಮಯದಲ್ಲಿ ದೇವರು, ರಾಜ ಮುಂತಾದವರಿಗೆ ಹಿಡಿಯುವ ಛತ್ರಿ ; ಆಪ್ತಾಗಿರಿ : ಇರ್ಕಲದೊಳ್ ವಿರಾಜಿಪ ಸುಚಾಮರವೃಂದದೆ ವಾಲ್ಗಳಿಂದೆ . . . ಧವಳಾಂಬುರಾಂಚಳಾತರ್ಕಿತ ಮಸ್ತವೇಷ್ಟನಯುತಂ (ಹಾಲಾಸ್ಯ. ೨-೧೪-೪೬). ವಾಲು₃ : ಸಾಧಾರಣ ಬಿರುದುಗಳು . . . ಭಂಗಾರದ ಚೆತ್ತ ಕನಕಚಾಮರ ೨ ವಾಲುಗಳು ೨ ನೃಸಿಂಹಮುಖಿ (ಗುರುದ. ೧೧). [?]

**ವಾಲ, ವಾಳ₂** (ನಾ). ೧. ಕೂದಲು ; ಕೇಶ : ಚಮರಮೃಗೀಗಣ ವಾಲಮುಮತಿಕೃಪಣನ ಪಣಮುಂ ಬಾೞಲ್ಕೆ ಸಾರವಾರುಮನೆಂದುಂ (ಲೀಲಾವ. ೧-೪೯). ೨. ಬಾಲ ; ಪುಚ್ಛ : ದೀರ್ಘವಾಲಂ ಪೃಥುಸ್ಕಂಧಂ ಸುನಾಸಾಪುಟಮಮರ್ದ ತುರಂಗಂಗಳಂ ಕಾಣ್ಕೆಗೈದಂ (ರಾಜಶೇ. ೧೨-೧೦೧). ೩. ಒಂದು ಬಗೆಯ ಸುವಾಸನೆಯ ಬೇರು ; ಲಾಮಂಚ ; ಮುಡಿವಾಳ : ವಾಲ ನಿರಿ ಚಮರಿ ದೃಢಮೂಲ ಮುತ್ತಿನ ಝಳ್ಳಿ ಸಾಲಿಡಿದ ಪರಿಮಳದ ಕುಸುಮತತಿಯಾ ಮಾಲೆಯಿಂ ಸಿಂಗರದ ಮೇಲುಕಟ್ಟೆಸೆಯಲ್ ನಿಜಾಲಯಂ ಕಣ್ಗೆ ಮಂಗಳಮಾದುದು (ಮನೋವಿ. ೧-೨೬). ವಾಳ₂ : ೧. "ಕೇಶಃ . . . ಶಿರೋರುಹಃ, ವಾಳಃ - ಈ ೭ ತಲೆಯ ನವಿರ್" (ಹಲಾಯು. ೮೭-೩೭೬). ೨. ಪೊಸತಾದಜನಪೊಡ್ಡು ಪೆಸರಾಂತು ವಾಳವಾ ಮಿಸುಪ ಕುಂಚವದಾಗಿ ಪಿಡಿದು (ಭೈರವೇ. ೫-೫೫). ೩. ಬಾಳದ ಬೇರು (ವಾಳ) (ಮುಂಬವ್ಯಾ. ೧೪೯). ೪. ಚೇಳಿನ ಕೊಂಡಿ : "ಆ ದ್ರುತಪುಚ್ಛ ವಾಳಮೆನೆ ಚೇೞ ಬಾಲಕ್ಕೆ ನಾಮಂ" (ಮಂಗರಾ. ೧೧೯-೫). [ಸಂ.]

**ವಾಲಕ, ವಾಳಕ₂** (ನಾ). ೧. ಎಳೆಯ ವಯಸ್ಸಿನವನು ; ಬಾಲಕ ; ಹುಡುಗ. ೨. ಬಳೆ ; ಕಂಕಣ. ೩. ಉಂಗುರ. ೪. ಉಂಗುರವನ್ನಿಡುವ ಬೆರಳು ; ಅನಾಮಿಕ. ೫. (ಆನೆ ಅಥವಾ ಕುದುರೆಯ) ಬಾಲ; ಲಾಂಗೂಲ. ೬. ಒಂದು ಬಗೆಯ ಸುವಾಸನೆಯ ಬೇರು; ಲಾಮಂಚ. ವಾಳಕ₂ : ೬. "ವಾಳಕಂ – ಮುಡಿವಾಳ" (ಒಷಧಿ. ೧೫೦). [ಸಂ.]

**ವಾಲಗ₁** (ನಾ). ೧. ರಾಜನ ಸಭೆ; ದರ್ಬಾರು: ಬೇಗದಿಂದೆಚ್ಚೆತ್ತಾ ಮಱುವಾಲಗ ವಿತ್ತು ವಾಲಗ ಹರಿಸಿ ವಜ್ರಾಯುಧನಂದದಿ (ಬಿಜ್ಜರಾ. ೪-೭೭) ; ವೃಷಭಾಂಕ ತಾಂ ವಿಶ್ರಮಂದಿರನ ವಾಲಗವ ಪೊಗಿಸಲ್ಕೆ (ಪರಶು. ೧೧-೨). ೨. ಸೇವೆ ; ಊಳಿಗ ; ಕೈಂಕರ್ಯ : ಹರಿಸುರೇಂದ್ರಾದಿಗಳಿಂದ ವಾಲಗವ ಕೊಂಬಾತನು (ಭೈರಸೂ. I, ೧೧೭) ; ಆಲದೆಲೆಯ ಮೇಲೆ ಪರಮಪುರುಷನಂದು ಕಾಲವರಿತು ಬಂದು ಪವಡಿಸಲು ವಾಲಗವನು ಮಾಡಿ ಕೊಂಡಾಡಿ ಜೀವರ ಮೂಲಕರ್ಮಂಗಳ ತೀರುವಂತೆ ಮಾಡಿದ (ವಿದಾಕ್ಕ. ೨೯-೧) ; ಈ ದೇವದಾಸಿಯರು ಜೋಗತಿಯರಾಗಿ ದೇವತೆಯ ವಾಲಗ ಮಾಡಿ ಚೌರಿ ಬೀಸುವರು (ಕನ್ನಡಾ. ೧೪). 'ಓಲಗ₁', 'ಓಲಗ₂' ಪರಾ.

[ದೇ. ‖ ತಮಿ. ಮಲ. ಓಲಕ್ಕಮ್; ತುಳು. ತೆಲು. ಓಲಗ]

**ವಾಲಗ₂** (ನಾ). ೧. ಸಾಗಸ್ವರ : ಶೇಷನ ವಾಲಗಕ್ಕೆ ಒಂಬು ವೈಭವದ ಸ್ಥಾನವೇ ಇತ್ತು (ಕಂಚಹು. ೧೦೨) ; ಕೋಗಿಲೆಯು ವಾಲಗವನ್ನು ಮಾಡುತ್ತ ಮುಂದೆ ಮುಂದೆ ಹೊರಟಿತು (ಕಮಕ. ೮೨). ೨. (ಅಲಂ) ಕೂಗು ; ಅರಚಾಟ : ಸಂಜೆಯ ಮುಂದೆ ನರಿಗಳ ವಾಲಗವು ಆರಂಭವಾದ ಕೂಡಲೇ . . . ಹೊರಟ (ಕುಂಹಿಂ. ೭೭). [< ಓಲಗ₃]

**ವಾಲಗಂಗೊಳ್** (ಕ್ರಿ). ಸಭೆಯನ್ನು ನಡೆಸು ; ದರ್ಬಾರು ಜರುಗಿಸು : ಇಂತಪ್ಪ ಸಡಗರದಿ ವಾಲಗಂಗೊಂಡು ಭೂಕಾಂತ ಬಾಹಾಖ್ಯ . . . ಪ್ರಮುಖರ ಬೀಳ್ಕೊಟ್ಟೋಲವಿನಿಂ (ನವಮೋ. ೨೧-೧೧). [ವಾಲಗ₁ + ಕೊಳ್₁]

**ವಾಲಘ್ನ** (ನಾ). ಒಂದು ಬಗೆಯ ಹುಲ್ಲು : "ವಾಲಘ್ನ — ತೃಣ" (ಓಷಧಿ. ೧೫೦). 'ವಾಲುಕ್ಕ' ಪರಾ. [ಸಂ. ?]

**ವಾಲಚಿತ್ರ** (ನಾ). ಕುಂಚದಿಂದ ಚಿತ್ರಿಸಿದ ಪಟ (?) : ಆಲವಟ್ಟವು ಸಾಲುಸತ್ತಿಗೆ ಚಿಮ್ಮುವ ವಾಲಚಿತ್ರದ ಪಟದಿಂದ ಬಾಲೆಯರಾಡುವ ಬಹುಬಗೆಪಾತ್ರದ ಕೋಲಾಟವೆಸೆದುವರ್ತಿಯಲಿ (ಕಂನವಿ. ೯-೬೨). [ವಾಲ ? + ಚಿತ್ರ]

**ವಾಲಧಿ, ವಾಳಧಿ** (ನಾ). ಕೂದಲಿನಿಂದ ತುಂಬಿದ ಬಾಲ, - ಪುಚ್ಛ : ಪೀನ ಮಾಂಸಕಟಶ್ಲಿಷ್ಟನುಮತಿದೀರ್ಘಸ್ನಿಗ್ಧಕೃಷ್ಣಮದನುಮನಪೂರ್ವದೀರ್ಘವಾಲಧಿಯುಂ . . . ಅಪ್ಪ ವಿಜಯಪರ್ವತಗಜೇಂದ್ರಂ ಬಂದು ಮುಂದೆ ನಿಲ್ವುದುಂ (ಆದಿಪು. ೧೨-೫೬ ವ) ; ಕಳಚಿದನು ದಾಡೆಗಳ ಭರಿಕೈಗಳನು ತುಂಡಿಸಿ ವಾಲಧಿಯ ಬರಸೆಳೆದು ಕೊಡಹಿದನಾನೆಗಳ ನಾನಾವಿಧಾನದಲಿ (ಕುವ್ಯಾಗ. ೦-೫೮). ವಾಳಧಿ : ಧರಾತಳಪರಿಲಂಬಿವಾಳಧಿ . . . ಬಂದುದಂದು ಮುಹುರುತ್ಥಬೃಹದ್ರವನೊಂದು ಪುಂಗವಂ (ಚಂದ್ರಪು. ೨-೨೮) ; ವಾಳಧಿಯಿಂದುರಿ ನೆಗೆದೊಡೆ ಕಾಳಿಗಮುಂ ಪಿರಿದು ಭಯಮುಮಧಿಪತಿಗಕ್ಕುಂ (ಅಶ್ವಶಾ. ೪-೬೯). [ಸಂ.]

**ವಾಲಬ್ಬೆ** (ನಾ). ಒಬ್ಬ ದೇವತೆಯ ಹೆಸರು : ಮಲಯ್ಯಂ ವಾಲಬ್ಬೆಯಂ ಮಾಡಿಸಿದಂ ಮಾಡಿದಂ ಕಲ್ಲಚಾರಿ (ಎಕ. IV (R), ಎಳಂದೂ. ೧೮೬-೨; 1000). [ವಾಲು₁ + ಅಬ್ಬೆ₁]

**ವಾಲವ್ಯಜನ** (ನಾ). ಚಮರೀಮೃಗದ ಕೂದಲಿನಿಂದ ಮಾಡಿದ ಚಾಮರ : "ಚಾಮರಂ, ಪ್ರಕೀರ್ಣಕಂ — ೨ ಬೀಸುವ ಚೌರಿಗಳು . . . ವಾಲವ್ಯಜನದ ಪೆಸರು" (ಸಿದ್ಧಾಂತಿ. ೨೪೪). [ಸಂ.]

**ವಾಲಹಸ್ತ** (ನಾ). = ವಾಲಧಿ : "ಲೋಮಪುಚ್ಛಂ, ಲಾಂಗೂಲಂ, ವಾಲಹಸ್ತಃ, ವಾಳಧಿಃ — ಈ ೪ ಬಾಲಂ" (ಹಲಾಯು. ೭೨-೨೮೭). [ಸಂ.]

**ವಾಲಾಗ್ರ, ವಾಳಾಗ್ರ** (ನಾ). ೧. ಬಾಲದ ತುದಿ, — ಕೊನೆ : ಆ ಮಹೀಧರದ ಚೂಲಿಕಾಗ್ರದಿಂ ವಾಲಾಗ್ರಮಾತ್ರಾಂತರಿತಮಾಗಿ . . . ವಿಮಾನಂಗಳ್ ಕಿಕ್ಕಿಱಿಗಿಱಿದಿರೆ (ಸುಕುಮಾ. ೧೧-೬೦ ವ) ; ದೆಸೆದೆಸೆಗೆ ವಾಲಾಗ್ರಮಂ ನೀಡಿ ತೆಗೆತೆಗೆದಿಳೆಯೊಳಪ್ಪಳಿಸಿ ಕೊಂದನವರೆಲ್ಲರಂ ಕಲಿಹನುಮನು (ಜೈಮಿಭಾ. ೧೬-೪೧). ೨. ಸೂಕ್ಷ್ಮವಾದ ಒಂದು ಬಗೆಯ ಅಳತೆ : ತನ್ನಿಚಿತವಾಲಾಗ್ರಂಗಳಂ ಪ್ರತಿಸಮಯದಿಂ ಒಂದೊಂದಂ ಅಪಕರ್ಷಣಂ ಮಾಡಿದೊಡೆಂದಿಂಗೆ ತೀರ್ಗುಮಾ ಕಾಲಮಂ ಅದ್ಧಾಪಲ್ಯೋಪಮ ಮೆಂಬುದು (ತತ್ತ್ವಪ್ರ. ೧೭೫) ; ಆ ತ್ರಸರೇಣುಗಳೆಂಟಾಗಲೊಂದು ವಾಲಾಗ್ರವೆನಿಸುಗುಂ (ವಿವೇಕ. ೨೯೮). ವಾಳಾಗ್ರ : ೩. ತಲೆಯ ಕೂದಲಿನ ತುದಿ : ದೇವರ್ಕಳ್ ಸನತ್ಕುಮಾರಚಕ್ರವರ್ತಿಯ ರೂಪಂ ವಾಳಾಗ್ರದಿಂ ತೊಟ್ಟು ನಖಾಗ್ರಂಬರೆಗಂ . . . ನೀಡುಂ ಭಾವಿಸಿ ನೋಡಿ (ವಡ್ಡಾರಾ. ೭೭-೨). [ಸಂ.]

**ವಾಲಾಯ₁** (ನಾ). ಸದಾಕಾಲ ; ನಿರಂತರ : ಮೂರ್ಲೋಕಕೆ ಮುಖ್ಯನ ಭಾವಶೋಷನ ವಾಲಾಯದಿ ನೆರೆ ನಂಬಲು (ಹನುಮ. ೭೫).

[ದೇ. ‖ ತಮಿ. ವಾಲಾಯಮ್ = ಸಮಾನವಾಗಿರುವಿಕೆ, ಪದ್ಧತಿ, ಸಲಿಗೆ ; ತೆಲು. ವಾಲಾಯ]

**ವಾಲಾಯ₂** (ಅ). ನಿರಂತರವಾಗಿ ; ಯಾವಾಗಲೂ : ಏಳೇಳು ಲೋಕವನ್ನು ಆಳುವ ಸಮರ್ಥರು ಶ್ರೀಲೋಲ ನಿನ್ನ ದಾಸರೆಂದರಾಗೆ ಪಾಲಿಸುತಿಪ್ಪರು ಎಲ್ಲೆಲ್ಲಿ ಚರಿಸಿದರು ವಾಲಾಯ ಬೆನ್ನ ಬಿಡದೆ ನಿತ್ಯ (ವಿಸಾಸು. ೮-೧) ; ಮೂಲೋಕಪೂಜ್ಯರೆಂದೆನಿಸಿರ್ಪ ಸತ್ಕಥೆಯ ವಾಲಾ[ಪಾಠಾಂ. ರಾರಾ]ಯ ಕೇಳುತಂ ಬಧಿರತೆಯನಾಂತು (ವೆಂಕಾರಾ. ೨-೯-೪೬). 'ಓಲಾಯ' ಪರಾ. [< ವಾಲಾಯ₁]

**ವಾಲಿಶ** (ನಾ). ಬಲೆ ; ಗಾಳ : ಒಂದು ದಿನ ಒಬ್ಬ ಮೀನುಗಾರನು ವಾಲಿಶವನ್ನು ತೆಗೆದುಕೊಂಡು ತನ್ನ ಮಗನೊಡನೆ ಮೀನುಗಳನ್ನು ಹಿಡಿಯಲು ಕೊಳಕ್ಕೆ ಹೋದನು (ಬುದ್ಧಜಾ. ೧೪೩). [< ಸಂ. ಬಲಿಶ]

**ವಾಲು₁** (ಕ್ರಿ). ೧. ಒಂದು ಪಕ್ಕಕ್ಕೆ ಬಾಗು ; ಓರೆಯಾಗು : ಅವನು ಕುದುರೆಯ ಮೇಲೆ ಒಂದು ಕಡೆಗೆ ಸ್ವಲ್ಪ ವಾಲಿ ಕುಳಿತಿದ್ದನು (ಮಲೆನಾ. ೧೪೭). ೨. ತಿರುಗು ; ಹೊರಳು : ಕೆಲವರು ಯುಕ್ತಿಯಿಂದ ತಮ್ಮ ಮೇಲೆ ತಪ್ಪು ಹೊರಬಾರದೆಂದೂ ಅದು ಜನರ ಮೇಲೆಯೇ ವಾಲಬೇಕೆಂದೂ . . . ಅವರ ಬಾಯಿಂದ ನುಡಿಸುವರು (ಪಿಶಾಪ. ೮೯). ೩. ಆಕರ್ಷಿತವಾಗು ; ಒಲವನ್ನು ಹೊಂದು ; ಒಲಿ : ಅರಮನೆಯ ಜನ ಕೂಡ ತಮ್ಮ ಕಡೆಗೆ ವಾಲಿದ್ದಾರೆ (ಚಿಕರಾ. ೨೩೪). 'ಓಲು₁' ಪರಾ. [ದೇ. ‖ ತೆಲು. ವಾಲು, ವ್ರಾಲು]

**ವಾಲು₂** (ನಾ). ಕತ್ತಿ ; ಖಡ್ಗ : ನಡು ಸುತ್ತಿದ ವಾಲು ನುಂಗೂರಲು ಹತ್ತಿದ ಮಣಿ ದಂಡೆ ತೋಳ ರಕ್ಷೆಗಳು ರಾಜೋತ್ತುಂಗನಣುಗಗೊಪ್ಪಿದುವು (ಭರಚ. ೨೫-೨೬) ; ಹಗಲು ಪಂಜುಗಳು ಹಾಕುವ ವಾಲು ಚಮರಾವು . . . ಮುಗಿಲಪನಿಯು ಮುನಿದಲೆ ಕಾದಿ ಗೆಲುವೆನೆಂಬಗಣಿತದವರೊದಗಿದರು (ಅಮುಸಾಂ. ೨-೯೫). [< ಬಾಳ್₁ / ತೆಲು. ವಾಲು]

**ವಾಲು₃** 'ವಾಲ್' ನೋ.

**ವಾಲುಕ, ವಾಳುಕ** (ನಾ). ೧. ಮರಳು ; ಉಸುಕು : ಮಹಾಸುಕ್ಷೇತ್ರವಾಸದ ವಾಲುಕದ ಮಱೆಯ ಅಪ್ಪುವಿನಂತೆ (ಮೋಳಿಮಾ. ೮೨-೩೭). ೨. ಒಂದು ಬಗೆಯ ಔಷಧೀಸಸ್ಯ : ಬೂರದ ಕಾಯಿ ರಸದಿಂ ಸೋಂಕಿಸಲು ಅಂಗುರವ ತೇದು ವಾಲುಕದಲ್ಲಿ ಹಾಕಿ ಮರ್ದಿಸಿ ತೊಡೆಯಲು ಬಂಗು ಮಾಣ್ಬುಂ (ವಿವೈವಿ. ೧೩೦). ವಾಳುಕ : ೧. "ವಾಳುಕಮೆನಲ್ ಸಿಕತಮೆನೆ ಮಳಲಕ್ಕು" (ಮಂಗರಾ. ೧೨೨-೧೧). ೩. ಒಂದು ಬಗೆಯ ಸೌತೆ : "ವಾಳು[ಪಾಠಾಂ. ಲು]ಕಮೆನಲ್ ಸೌತೆ" (ಮಂಗರಾ. ೪೪-೪೭). [ಸಂ. ವಾಲುಕಾ]

**ವಾಲುಕಪ್ರಭೆ** (ನಾ). [ಜೈನ] ಏಳು ನರಕಗಳಲ್ಲಿ ಒಂದು ; ಮರಳಿನಿಂದ ತುಂಬಿರುವ ನರಕ : ಅಲ್ಲಿಂದತ್ತಲೇಕರಜ್ಜುಪ್ರಮಾಣಾಂತರದೊಳ್ ಮೇಘೆಯೆಂಬ ಪೆಸರ ವಾಲುಕಪ್ರಭೆಯೆಂಬ ಮೂಱನೆಯ ನರಕಮಿರ್ದುದು (ಅಜಿಪು. ೧೧-೭ ವ) ; ಮೂಱನೆಯ ವಾಲುಕಪ್ರಭೆಯೊಳ್ ಪುಟ್ಟಿ ದುರಂತದುಃಖದಿಂ ಬೇವುದು ಜೀವಂ ಪತ್ತುಸಾಗರಾಂತಂಬರೆಗಂ (ಮಲ್ಲಿಪು. ೧೩-೧೪೮). [< ಸಂ. ವಾಲುಕಾಪ್ರಭಾ]

**ವಾಲುಕಾಪ್ರಭೆ, ವಾಳುಕಾಪ್ರಭೆ** (ನಾ). = ವಾಲುಕಪ್ರಭೆ : ವಾಲುಕಾಪ್ರಭೆಯೊಳ್ . . . ಪಂಚದಶಲಕ್ಷಬಿಲಂಗಳಪ್ಪುವು (ತತ್ತ್ವಪ್ರ. ೧೨೦). ವಾಳುಕಾಪ್ರಭೆ : ಅಲ್ಲಿಂ ಕೆಟಗೇಕರಜ್ಜ್ವಂತರದೊಳಷ್ಟವಿಂಶತಿಸಹಸ್ರಯೋಜನಬಾಹಲ್ಯದಿಂ ವಾಳುಕಾಪ್ರಭೆಯೆಂಬ ಮೂಱನೆಯ ನರಕಂ (ಸುಕುಮಾ. ೧೧-೪೧ ವ). [ಸಂ. ವಾಲುಕಾಪ್ರಭಾ]

**ವಾಲುಕಾಸ್ತಂಭ** (ನಾ). (ಸುಂಟರಗಾಳಿಯಿಂದ ಮೇಲಕ್ಕೇಳುವ) ಕಂಬದಾಕಾರದ ಮರಳಿನ ಸಮೂಹ : ಸುಟ್ಟರಗಾಳಿಯಿಂದುಂಟಾಗುವ ವಾಲುಕಾಸ್ತಂಭಗಳು (ಮುಂಬಯಿ. ೫-೭) ; ಈ ಭಯಂಕರವಾದ ಬಿರುಗಾಳಿ . . . ಮರಳುಗಾಡುಗಳಲ್ಲಿ - ಮುಖ್ಯವಾಗಿ ಸಹಾರಾಮರುಭೂಮಿಯಲ್ಲಿ ಕಾಣಿಸಿಕೊಂಡಾಗ ಭಯಂಕರವಾದ ವಾಲುಕಾಸ್ತಂಭ (Sand Spouts) ಅಥವಾ ಮರಳಿನ ಸ್ತಂಭಗಳನ್ನು ಉಂಟುಮಾಡುತ್ತದೆ (ಭೂವಿವ. ೭೭). [ಸಂ.]

**ವಾಲುಕಿ, ವಾಳುಕಿ** (ನಾ). ಒಂದು ಬಗೆಯ ಸೌತೆ : "ವಾಲುಕೀ - ಮಳಲಸೌತೆ" (ಓಷಧಿ. ೧೫೦). ವಾಳುಕಿ : "ವಾಳು[ಪಾಠಾಂ. ಲು]ಕೀ, ಕರ್ಕಟೀ - ಈ ೨ ಸೌಂತೆ" (ಹಲಾಯು. ೩೫-೫೭). [ಸಂ. ವಾಲುಕೀ]

ವಾಲುಕ್ಯ (ನಾ). ಒಂದು ಬಗೆಯ ಹುಲ್ಲು : "ವಾಲುಕ್ಯಂ - ಭೂತೃಣಂ" (ಓಷಧಿ. ೧೫೦). 'ವಾಲಘ್ನ' ಪರಾ. [ಸಂ.?]

ವಾಲುರ್ಸಿ (ನಾ). ಒಂದು ಬಗೆಯ ಸಸ್ಯ : ವಾಲುರ್ಸಿ, ಮಳೆಪಗಡೆ (ವೈಟಿಗಿ. ೭೮-೧೬೦೪). [?]

ವಾಲುವರಿ (ನಾ). ಒಂದು ಬಗೆಯ ತೆರಿಗೆ (?) : ವಾಸಿಲುವರಿ ವಾಲುವರಿ . . . ಬಳಕುನೀರು ಊರ ಸಂತೆ ಮೊದಲಾದ ಹಲ ಉಪಾಧಿಗಳು ಸಹ . . . ಸಂವತ್ಸರಂ ಪ್ರತಿಊ ತಪ್ಪದೆ ನಡಸುವುದಕ್ಕೆ ಕೊಟ್ಟು (ಸೌಇಇ. IX-ii, ೪೬೬-೬; ಸು. 1472).

[ವಾಲು ? + ವರಿ$_1$]

ವಾಲೆ (ನಾ). ೧. ಪತ್ರ ; ಕಾಗದ : ಚರರುತ್ಪ್ರೇಕ್ಷೆಯಂ ನುಡಿದಂದು ವಾಲೆಗಳೀಯೆ ಭ್ರಾಮಕದಿಂದವೋದಿಸಿ ಕೇಳಿ ನೃಪ ರುತು ವಿದರ್ಭನುತ್ತರವ (ಅಂಬಿಕಾ. ೪೮-೨೬). ೨. ಕಿವಿಯಲ್ಲಿ ಧರಿಸುವ ಒಡವೆ ; ಕರ್ಣಾಭರಣ : ಕಿವಿಗೆ ವಾಲೆಯನ್ನಿಟ್ಟ ಮಾತ್ರದಲ್ಲಿ ಸಕಲ ಚಿಂತೆಯನ್ನೂ ಪರಿಹರಿಸುವ ಲಕ್ಷಣವನ್ನುಳ್ಳದ್ದಾಗಿ . . . ಪೂರ್ಣಚಂದ್ರನೋಪಾದಿಯಲ್ಲಿ ಒಪ್ಪಿಸಲ್ಪಟ್ಟಿರುವುದೇ ತಾಟಂಕಗುಣ (ಸಕವೈ. ೩೭) ; ವಾಲೆ ಮೂಗುತಿ ಹೊನ್ನ ಹೂವು ತೂಗುವ ತುಂಬು (ವಿದಾಕ್ಕ. ೧೧-೩). ೩. ಒಂದು ಬಗೆಯ ಮರ ; ತಾಳೆ : ವಾಲೆ ಹೆದ್ದರಣ ತ್ವಾರಣ . . . ಮೊದಲಾದ ಗಗನಮಂ ತುಡುಕುವ ವೃಕ್ಷಂಗಳ್ (ಸೌಗಂಧಿ. ೫೪-೫). [< ಓಲೆ]

ವಾಲ್ಮೀಕಿ (ನಾ). ೧. ಹುತ್ತದಲ್ಲಿ ವಾಸಿಸುವುದು ; ಹಾವು : ಮಯೂರಂ ತಾಂಡವಕ್ಕಾರಂಭಿಸಲೊಡಂ ತಾನುಂ ವಾಲ್ಮೀಕಿಯೆನೆ ಪುತ್ತಿನೊಂದು ವ್ಯಾಳಂ ಪೊಱಮಟ್ಟು ತೀಡುವ ತಂಬೆಲರ್ಗೆ ಮೆಯ್ಯೊಡ್ಡಿ ಪರಿದು (ರಾಮಾಶ್ವ. ೪೨-೧೯). ೨. ರಾಮಾಯಣವನ್ನು ರಚಿಸಿದ ಒಬ್ಬ ಪ್ರಸಿದ್ಧ ಋಷಿ : ನೆಗಟ್ಟಿರ್ ವ್ಯಾಸರ್ವಾಲ್ಮೀಕಿಗಳೆನೆ ನೆಗಟ್ಟುಭಯಕವಿಗಳೆಮಗಭಿವಂದ್ಯರ್ (ಗದಾಯು. ೧-೮) ; ವಾಲ್ಮೀಕಿಮುನಿವರಂ ತನ್ನ ಶಿಷ್ಯರ್ವೆರಸಿ ನಡೆತಂದು . . . ಗದ್ಗದಕಂಠಿಯಾಗಿ ರೋದಿಸುತಿರ್ದ ವೈದೇಹಿಯಂ ಕಂಡನು (ಕೃಮಿಭಾ. ೧೯-೩೮). [ಸಂ.]

ವಾಲ್ಲವ (ನಾ). ಒಡೆಯ ; ಸ್ವಾಮಿ : ಸ್ವಸ್ತಿಶ್ರೀ ಅಕಾಲವರಿಷಾ (ವರ್ಷ) ಪ್ರಿಥುವೀ (ಪೃಥ್ವೀ) ವಾಲ್ಲವ (ವಲ್ಲಭ) ಮಾರಜಾದಿ (ಮಹಾರಾಜಾಧಿ) ರಾ [ಜ] ಪರಮೇಶ್ವರಾ (ರ) (ಎಇ. XXI, ೨೦೮-೧; 883).

[IP ಇದು ಸಂಸ್ಕೃತದ 'ವಲ್ಲಭ' ಎಂಬ ಶಬ್ದದ ಅಪಲಿಪಿತವಿರಬಹುದು]

ವಾವದೂಕ (ಗು). ೧. ನಿರರ್ಗಳವಾಗಿ ಮಾತನಾಡುವ ; ವಾಚಾಳತನವುಳ್ಳ. ೨. ಅತಿಯಾಗಿ ಮಾತನಾಡುವ ; ಹರಟುವ. (ನಾ). ೩. ಅತಿಯಾಗಿ ಮಾತನಾಡುವವನು ; ಹರಟೆಮಲ್ಲ. ೪. ವಾದಮಾಡುವವನು ; ವಾದಿ : ಅನೇಕೋಪಪತ್ತಿಗಳಿಂ ಚಾರ್ವಾಕಕಾರುಣಿಕವಾವದೂಕನಂ ಕರುಣರಸಾಸ್ಪದಂ ಮಾಡಿ (ಶಾಂತಿಪು. ೮-೧೪೭ ವ) ; ತರ್ಕಮಂ ಬಿಟ್ಟು ತಾನುಮುರುತರವಾವದೂಕರುಂ ಸರಿದು ಪೋಗರೆ (ಆರಾಟ. ೪-೧-೯). [ಸಂ.]

ವಾವಲ್, ಬಾವಲ್, ಬಾವಲಿ$_1$, ಬಾವಲು, ಬಾವುಲಿ$_1$, ಬಾವುಲು (ನಾ). ಹಗಲಿನಲ್ಲಿ ಮರಗಿಡಗಳಿಗೆ ತಲೆಕೆಳಗಾಗಿ ನೇತುಬಿದ್ದಿದ್ದು, ರಾತ್ರಿಯಲ್ಲಿ ಹಾರಾಡುವ, ಅಗಲವಾದ ರೆಕ್ಕೆಗಳುಳ್ಳ, ನರಿಮುಖದ ಒಂದು ಬಗೆಯ ಪಕ್ಷಿ ; ಕಪ್ಪಟದ ಹಕ್ಕಿ : ಪುರುಳಿ . . . ವಾವಲ್ ದುರಿಸೆ ಗಿಳಿ ಪರ್ದು (ಸೂಕ್ತಿಸು. ೩-೧೪೭). ಬಾವಲ್ : "ಪದಮಸ್ತಕಂ ಬಾವಲೆನಿಸಿಕ್ಕು" (ಮಂಗರಾ. ೫೨-೧೧) ; ಮೆಯ್ ಬಾತ ಬಾವಲ ನಾತಕ್ಕೆಣೆಯಾಗಿ ನಾಟೆ (ಸುಕುಮಾ. ೪-೪೭) ; ತಲೆಕೆಟಗಾಗಿರ್ಪುವು ಬಾವಲಂತೆ ವೀಭತ್ಸಕುತ್ಸಿತಾಕಾರಂಗಳ್ . . . ಮಹಾಪೂತಿಗಂಧಭರಿತಾವನಿಗಳ್ (ವರ್ಧಪು. ೧೧-೪). ಬಾವಲಿ$_1$ : ಕವಿದ ಕಿವಿಗಳಿಂ ಬಾವ[ಲಾಂಬಂ ದ]ಲಿಪಿಂಡು ಪಕ್ಕಮಂ ಬಡಿವಂತೆಯುಂ . . . ಮುಗಿಲವರ್ಣಮಾಗಿ ಬರ್ಪ ಗೋರುಲಮಂ . . . ನೋಡುತ್ತುಮಿರೆ (ಲೀಲಾವ. ೫-೮೫ ವ); ಬಾವಲಿ ಕೀರಂಚೆ ಪರಡೆ ಪರ್ದು ಹಸುಬಂ ಗಿಡುಗಂ (ಸೂಕ್ತಿಸು. ೩-೧೪೫). ಬಾವಲು : ಒತ್ತಿ ತೆಗೆವುದೆಂದು ಭೂವರನುಸುರೆ ಜಟ್ಟಿಗಳು ತಾವೊತ್ತಿ ಹಿಡಿಯಲೆತ್ತಿದನಾಗ ತೂಗುತ ಬಾವಲಂತಿದ್ದರಂದವರು (ಭರಟ. ೪೯-೧೦೩). ಬಾವುಲಿ$_1$ : ರಣಪದ್ದು ಬಾವುಲಿ ಪಂಗ ಗರುಡ ಮೊದಲಾದ . . . ಖಗಮೃಗದ ನೆರವಿಯಾರಣ್ಯದೊಳು ಬರುತಿರ್ದಳು (ನವಮೋ. ೮-೧೦). ಬಾವುಲು : ಊಸರವಳ್ಳಿಯಂತೆ ಎನ್ನಿರವು ಬಾವುಲ ಬಾಳುವೆಯ ತೆಱನಂತೆ (ಬಸವ. ೨೯೨) ; ಬಾವುಲು ತಲೆಕೆಳಗಾಗಿದ್ದಡೆ ತಪಸ್ವಿಯೆ (ಸಕವ. ಕ.II, ೫೯೦-೧೬೪೯) ; ಪುರುಷೋತ್ತಮನೆ ನಿನ್ನೊಂದು ಮಾಯೆಯ ಕತ್ತಲೆಯ ಬಾವುಲುಗಳಾವು (ನಿಭಾಗ. ೯-೧೦-೨೩).

[ದೇ. ‖ ತಮಿ. ಮಲ. ವಾವಲ್, ವವ್ವಾಲ್ ; ತುಳು. ಬಾವಲಿ, ಬಾವೊಲಿ ; ಕೋಲಾ. ವೆಲವೆ ; ಕುವಿ. ಬಾಪ್ಲ]

ವಾವಿ$_1$, ವಾವೆ (ನಾ). ೧. ನಂಟು ; ಸಂಬಂಧ : ವಾವಿ ವೀರಾವೇಶವುಪಮೆ ವೂಹೆಗಳಿಂದೀ ವೇಳೆ ವೈಷಮ್ಯದೊಳು ತಾವೌಚಿತ್ಯವಂದಗಳಿಂದು ನಡೆವರ್ಗೆ ಶ್ರೀವಲ್ಲಭನೀನೊಲಿವೆ (ಶತಸಾಂ. ೭೭-೯೭); ಹೇವಗೇಡಿಗಳಿಗೆ ವಾವಿಯೇನು? ವರಸೆಯೇನು? (ಗಾದೆ). ೨. ಕ್ರಮ ; ರೀತಿ : ಭಾವಿಸುತೆ ತರಬೇಕೊ ಉದ್ದಂಡಿಕೆಯೊಳೀಗ ಸೇವಕರ ಬಿಟ್ಟು ಹಿಡಿತರಿಸಬೇಕೋ ಇದಱ ವಾವಿಯಂ ಪೇಳು (ಪ್ರಭುಪು. ೮-೨೭). ವಾವೆ : ೧. ವಾವೆಯು ತಪ್ಪೀತು ಮನಭಾವವ ಜಱೆವಾರು ಮಾನ್ಯರು (ಕಾಲಸಂ. ೧೩೫-೨೨); ವಾವೆಯೆಲ್ಲಿ ಹುದಯ್ಯ ವೈಕುಂಠಪತಿಗೆ (ಪುರಂದ. ಧಾ. ೩-೧೦೦ ಪಲ್ಲವಿ) ; ಆ ವೀರಭದ್ರನಾಯಕಂ . . . ವಾವೆಯಿಂ ತಮಗೆ ಚಿಕ್ಕಪ್ಪಂದಿರಾದ ಶಿವಪ್ಪನಾಯಕ ವೆಂಕಟಪ್ಪನಾಯಕರುಮಂ . . . ಪ್ರೀತಿಯಿಂ ನಡೆಸಿಕೊಳುತ್ತುಂ (ಕೆಳನೃ. ೬-೧೫) ; ಅವಳು ವಾವೆಯಲಿ ಈತನಿಗೆ ಮಗಳಂತೆ (ನವರಾ. III. ೪೭).

ವಾವೆವರಸೆ = ಸಂಬಂಧದ ಕ್ರಮ, —ರೀತಿ : ವಾವೆವರಸೆಯು ತಪ್ಪಿ ವೈರಿವರ್ಗವು ಹೆಚ್ಚಿ . . . ಕಾವರಾರ್ಯೆ ಸಾಧುಸಜ್ಜನರನೀಗ (ಕನಕ. ಧಾ. ೧೩೦-೨) ; ವಿವಾಹಾದಿ ಬಂಧನಗಳೂ ವಾವೆವರಸೆಗಳಾವುವೂ ಇರಕೂಡದೆಂದು ವಾದಿಸುವರೆಷ್ಟೋ ಮಂದಿಯುಂಟು (ಜೀವಾತ್ಮ. ೨೬೪). [ದೇ. ‖ ತೆಲು. ವಾವಿ. / ಸಂ. ಜಾಮಿ]

ವಾವಿ$_2$ 'ಬಾವಿ' ನೋ.

ವಾವಿಲಿ (ನಾ). ಒಂದು ಬಗೆಯ ಗಿಡ ; ಲೊಕ್ಕಿ : "ಸಿಂಧುಕಃ, ಸಿಂಧುವಾರ, ಇಂದ್ರಸುರಸಃ, ನಿರ್ಗುಂಡೀ, ಇಂದ್ರಾಣಿಕಾ - ವಾವಿಲೀಗಿಡದ ಹೆಸರುಗಳು" (ಸಿದ್ಧಾಂತಿ. ೧೨೭). [<— ತೆಲು. ವಾವಿಲಿ. / ಸಂ. ವಾವಲ]

ವಾವಿಲಿಗೆ (ನಾ). ಸುಂಕ; ತೆರಿಗೆ (?) : ಹದಿನೆಂಟು ಕಂಯ ಮನೆಯ ನಿವೇಶಣಮಂ ಊರೊಳಗಣ ಗಾಣಂಗಳಲ್ಲಿ ಗಾಣವಾವಿಲಿಗೆಯುಂ (ಕಇಅ. ೪೬-೪-೨೨; 1152). 'ಗಾಣವಾವಿಲಿಗೆ' ಪರಾ. [?]

ವಾವಿವರ್ತನ, ವಾವೆವರ್ತನ (ನಾ). ಸಂಬಂಧಮಾಡುವಾಗ ಅನುಸರಿಸಬೇಕಾದ ಕ್ರಮ, —ನಿಯಮ : ಸೋದರಭಾವನಳಿಯನೊ ಮೈದುನನೊ ಮೇಣಾವನೋ ನಿನಗೆ ವಾವಿವರ್ತನಗಳನು ಕಂಡೆವು (ಉತ್ತರಾ. ೧೦-೬೫). ವಾವೆವರ್ತನ : ವಾವೆವರ್ತನವಿಲ್ಲ ಸತ್ಯಕೆ ಪಾವಕನ ಮುಟ್ಟುವರು ಪೆಣ್ಣಳನಾವ ಪರಿಯಲಿ ನಂಬಬಹುದೈ (-ಟ. ೩-೨೫). [ವಾವಿ$_1$ + ವರ್ತನ]

ವಾವಿವರ್ತನೆ, ವಾವೆವರ್ತನೆ (ನಾ). = ವಾವಿವರ್ತನ : ಅವರು ವಾವಿವರ್ತನೆಗಳನ್ನೆಣಿಸದೆ ಯಾವ ಪುರುಷನನ್ನು ನೋಡಿದರೂ ಬಯಸುವರು (ಕೃವಾಅ. ೨೧೭) ; ಆ ವಿದೇಹಜೆಯವಳಿಮಕ್ಕಳು ದೇವ ನಿನಗನ್ಯರೆ ವಿಚಾರಿಸು ವಾವಿವರ್ತನೆಯುಂಟೆ ಪೇಳೆ (ಅರ್ಜುವಿ. ೪-೧೦). ವಾವೆವರ್ತನೆ : ಯದುರಾಯರು ಆದಿಯಾಗಿ ನಮ್ಮ ಅರಮನೆಯ ಸಂಪ್ರದಾಯವನ್ನೂ ೧೩ ಮತ್ತು ೧೮ ಮನೆತನಗಳ ವಾವೆವರ್ತನೆ, ಗೋತ್ರ ಸೂತ್ರಗಳನ್ನೂ ಚೆನ್ನಾಗಿ ತಿಳಿದಿರುವ ಅಪ್ಪಾಜಯ್ಯನಿಗೆ ಸಮುಖದ ಒಟ್ಟು ಕರಣೀಕತನವನ್ನು ನೇಮಕ ಮಾಡಿದೇವೆ (ಮಹಾವಂ. I, ೧೩೦).

[ವಾವಿ$_1$ + ವರ್ತನೆ]

ವಾವಿವರ್ತನೆದಪ್ಪು (ಕ್ರಿ). ಸಂಬಂಧಮಾಡುವಲ್ಲಿ ಅನುಸರಿಸುವ ಕ್ರಮವು ತಪ್ಪಿಹೋಗು : ಅವರಿಗೆ ನಾನಿನ್ನು ಮಗಳಾಗಬೇಕೆಂದು ವಾವಿವರ್ತನೆದಪ್ಪಿ ಕೇಳುವರೆ (ಯನಳ. ೪೭). [ವಾವಿವರ್ತನೆ + ತಪ್ಪು$_1$]

ವಾವುರ (ನಾ). ೧. ಸವಾರಿಮಾಡುವ ಸಾಧನ ; ವಾಹನ : ಚೇತೋಭವನು ಗಿಳಿವಾವುರವನಾರೋಹಿಸಿದನರ್ಥಿಯಲಿ (ಅನಂರಾ. ೧-೧೯-೧೧). ೨. ಕುದುರೆ : ಬಗಸೆಗಂಗಳ ನೋಟದಂಬುಗಳುಗಿವ ಪುಬ್ಬಿನ ಚಾಪಕೆಳೆಚಿಗುರುಗಳ ಸಿಂಜಿನಿದೊಡಿಸಿ

ಮದನಂಗಿತ್ತು ಸವಿಯೊಗುವಾ ಸೊಗಸುನುಡಿವಾವುರವನೇರಿಸಿ ಬಗೆಬಗೆಯ ವೈಯಾಳಿಸುತ ವಿರಹಿಗಳ ಕಳವಳಗೊಳಿಸುತ್ತೈತಂದುದು ಸಖೀನಿವಹಾ (ಆನಂರಾ. ೧-೨೩-೧೪). 'ವಾರುವ' ಪರಾ. [<— ತೆಲು. ವಾವುರ]

**ವಾವೆ** 'ವಾವಿ₁' ನೋ.

**ವಾವೆವರ್ತನ** 'ವಾವಿವರ್ತನ' ನೋ.

**ವಾವೆವರ್ತನೆ** 'ವಾವಿವರ್ತನೆ' ನೋ.

**ವಾಶಿ** (ನಾ). ೧. ಅಬ್ಬರ ; ಕಿರಿಚಾಟ ; ಆರ್ಭಟಿ. ೨. ಆಕ್ರಮಣಕ್ಕೆ ಮುನ್ನ ಸೈನಿಕರು ಕೂಗುವ ಕೂಗು ; ರಣಘೋಷ. ೩. ಶಬ್ದ ; ಧ್ವನಿ. ೪. ಹಾಡುವುದು. ೫. ಮರ ಮೊದಲಾದುವನ್ನು ಕೆತ್ತಲು ಅಥವಾ ಕಡಿಯಲು ಬಳಸುವ, ಅಗಲವಾದ ಬಾಯುಳ್ಳ ಒಂದು ಬಗೆಯ ಸಾಧನ ; ಬಾಚಿ ; ಕೊಡಲಿ. [ಸಂ. ವಾಶೀ]

**ವಾಶಿಕೆ** (ನಾ). ಆಡುಸೋಗೆಯ ಗಿಡ ; "ಅಡಸಾಲದ ಗಿಡ" : (ಗಂಗಾಮ. ೨೮೬). [ಸಂ. ವಾಶಿಕಾ]

**ವಾಶಿತ** (ಗು). ೧. ಅಬ್ಬರಿಸಿದ ; ಕಿರಿಚಿದ ; ಗರ್ಜಿಸಿದ. ೨. ಹಾಡಿದ ; ಪದ ಹೇಳಿದ. ೩. ಕಂಪುಳ್ಳ ; ಸುವಾಸನೆಯುಳ್ಳ. (ನಾ). ೪. ಪಕ್ಷಿ ಅಥವಾ ಪ್ರಾಣಿಯ ಕೂಗು, — ಧ್ವನಿ : "ವಾಶಿತಂ, ರುತಂ — ೨ ತಿರಶ್ಚಾಂ-ಮೃಗ ಪಕ್ಷ್ಯಾದಿಗಳ ಧ್ವನಿಗೆ ಹೆಸರುಗಳು" (ಸಿದ್ಧಾಂತಿ. ೫೩). [ಸಂ.]

**ವಾಶಿತೆ** (ನಾ). ೧. ಹೆಣ್ಣಾನೆ ; ಪಿಡಿ : "ವಾಶಿತಾ — ಹೆಣ್ಣಾನೆ" (ಒಷಧಿ. ೧೪೯). ೨. ಹೆಂಗಸು ; ಸ್ತ್ರೀ. [ಸಂ. ವಾಶಿತಾ]

**ವಾಶ್ಚರ** (ನಾ). ೧. ನೀರಿನಲ್ಲಿ ಚಲಿಸುವಂಥದು. ೨. ಮೀನು : ವಾಶ್ಚರಪತಾಕಾವಲೇಪ ವನದಾವನಿಭಸಾಶ್ಚರ್ಯಸೌಂದರ್ಯ ಭಾಸುರಾರ್ಯಾಧಿಪತಿ . . . ರಕ್ಷಿಪುದು ಲೋಕವನಜಸ್ರಮುಂ ನೀಲಕಂಠ (ಆರಾಚ. ೧-೧೧-೧) ; ಪದ್ಮಪರಾಗವಾಸೆ ವಾಶ್ಚರಚಪಲಾಕ್ಷಿ ಪೊಚ್ಚಪೊಸವೆಣ್ಣಲೆ ಸಿಂಗರವಾಂತು ತೋಱಿದಳ್ (ರಾಜಶೇ. ೨-೬). [ಸಂ.]

**ವಾಶ್ಚರಲಗ್ನ** (ನಾ). [ಜ್ಯೋತಿ] ಮೀನರಾಶಿಯ ಮುಹೂರ್ತ, — ಲಗ್ನ : ವಾ[ಪಾಠಾಂ.ಪು]ಶ್ಚರಲಗ್ನಮಪ್ಪ ಗೃಹದೊಳ್ ಚಂದ್ರಂ ನಿಲಲ್ ಕೂಡೆ ಭಾಸ್ಕರಿಜನ್ಮಂ ತಮದೊಳ್ . . . ತದ್ಬಾಲಕಂ ಪುಟ್ಟುಗುಂ (ಜಾತಕ. ೪-೨೩). [ಸಂ.]

**ವಾಶ್ಚಾರ** (ನಾ). ೧. ಜಲಚರ. ೨. ಮೀನು : ವಾಶ್ಚಾರಪದರಿಪು ಹರಿಶ್ಚಂದ್ರಶುಚಿದೃಕ್ಷ ವಾಶ್ಚಾಕ್ಷಿಪದಭೋಗಿ ಪುಂಶ್ಚಾಂಕ ಸದ್ಭಕ್ತವಾತ್ಸಲ್ಯ . . . ಪೊರೆಗೆ ಮತ್‌ಸ್ವಾಮಿ ಸಿದ್ಧನಂಜ (ಗುರುಚಾ. ೧-೫). [ಸಂ.]

**ವಾಷ್ಪಣ** (ನಾ). ನೀರಿನ ಹನಿ ; ಜಲಬಿಂದು : ಕೊಳದೊಳೆ ಮಿಂದು . . . ಮಂಜುಳಗತಿ ಮತ್ತಹಸ್ತಿ ಪಿಡಿಯಿರ್ಪೆಡೆಗೆಯ್ದಿ ಭುಜಂಗಲೀಲೆಯಿಂ ತಳೆದೆಳೆಮುತ್ತ ನೊತ್ತಗುಡುವಂತಿರೆ ಸೂಸಿತು ವಾಷ್ಪಣೌಘಮಂ (ರಾಜಶೇ. ೫-೬೬). [ಸಂ.]

**ವಾಷ್ಪ** (ನಾ). ೧. ಕಣ್ಣೀರು ; ಕಂಬನಿ. ೨. ಆವಿ ; ಹಬೆ : "ಉಷ್ಮಂ ವಾ[ಪಾಠಾಂ. ಬಾ]ಷ್ಪಮೆನೆ ಸೆಗಳಿಯಕ್ಕು" (ಮಂಗರಾ. ೧೪-೮). [ಸಂ.]

**ವಾಸ₁** (ನಾ). ಬಿದಿರಿನಿಂದ ಮಾಡಿದ ಒಂದು ಬಗೆಯ ಊದುವ ವಾದ್ಯ ; ಕೊಳಲು : ಶಬ್ದದಿಂದ ಸಪ್ತಸ್ವರದೊಳಗಾದ ನಾನಾಘೋಷವಾಸಂಗಳಲ್ಲಿ . . . ಗುರುಪ್ರಸಾದಿಗೆ ಲಿಂಗಪ್ರಸಾದವಿಲ್ಲ (ಸಕವ. ೩. III, ೧೪೫-೨೦೫) ; ಬಾಜಿಸಿದಂ ಮುರವೈರಿ ವಾಸಮಂ (ಜಗವಿ. ೫-೩) ; ದಂಡಿಗೆಯ ತಾಳದಾವುಜದ ಲಸತ್‌ಸಂಗೀತದ ವಾಸದ ನಿನದಂಗಳ್ಪರೆದಳುರ್ದು ಸವಿಯನೇಂ ಸೂಸಿದುವೋ (ರಾಜಶೇ. ೧೨-೬೦). [< ಸಂ. ವಾಂಶ]

**ವಾಸ₂** (ಗು). ೧. ಸುವಾಸನೆಯಿಂದ ಕೂಡಿರುವ ; ಸುಗಂಧಭರಿತವಾದ. (ನಾ). ೨. ಸುವಾಸನೆ ; ಪರಿಮಳ. ೩. ಸುಗಂಧದ್ರವ್ಯ. ೪. ಒಂದು ಬಗೆಯ ಔಷಧೀಸಸ್ಯ ; ಆಡುಸೋಗೆ : ವಾಸದ ರಸದೊಳು ತ್ರಿಕಟುಕಚೂರ್ಣವ ಲೇಸಾಗಿ ಸೇರಿಸಿ . . . ಕೊಡೆ ಶ್ವಾಸ ಕಾಸಗಳಾಕ್ಷಣವಳಿಗು (ಸಾಳ್ವಸಾಂ. ೧೯). ೫. ನೆಲಸುವುದು ; ವಾಸ್ತವ್ಯ : ವಾಸಕೆ ಯೋಗ್ಯವಲ್ಲ ಗೋಕುಲವಿನ್ನು ಬೇಸಱವಾಯಿತಲ್ಲ (ಪುರಂದ. ೪-೧೦೭ ಪಲ್ಲವಿ). ೬. ವಾಸಮಾಡುವ ಸ್ಥಳ ; ಮನೆ ; ನಿವಾಸ : ರಕ್ತದ ಹುತ್ತ ಕೀವಿನ ಬಾವಿ ರೋಮದ ಸೀಮೆ ತ್ವಕ್ಕಿನಿಕ್ಕೆ ಮಾಂಸದ ವಾಸ . . . ಎಲುವಿನ ಬಲುಹಿಂದಪ್ಪ ಈ ಕಾಯ ಹೇಯ (ಆದವ. ೧೫-೩೪) ; ಫಣಿ ತನ್ನನೆ ಮುಟ್ಟುವುದೆಂಬ ಭೀತಿಯಿಂ ಕಡಲೊಳು ವಾಸಮಂ ರಚಿಸಿ ಪೊಕ್ಕಿರುತಿರ್ಪ ಪರೀಕ್ಷಿತಂಗೆ ಮುಂದಡಸಿದುದೊಂದು ಸರ್ಪ (ಕಚಿಂ. ೨೭) ; ವಾಸ ತಪ್ಪಿದರೂ ಹಾಸಲಿಕ್ಕೆ ತಪ್ಪಲಿಲ್ಲ (ಗಾದೆ). ೭. ಮಲಗುವ ಮನೆ ; ಶಯ್ಯಾಗೃಹ : ವಾಸದ ದೀಪಕ್ಕೆ ವಾಯು ವಿರೋಧವಲ್ಲದೆ ಮಹಾಹೇತುವಿನ ವಹ್ನಿಗೆ ಅದು ಪ್ರೀತಿಯ ಸಂಗ (ಸಕವ. ೩. I, ೧೯೫-೭೪೭). ೮. ಮನೆ ಕಟ್ಟುವ ಸ್ಥಳ ; ನಿವೇಶನ. ೯. ಅರಿವೆ ; ಬಟ್ಟೆ : ಧವಳವಾಸೋನ್ನಿತಂ ಮತ್ತಮೊರ್ವಂ ಬರುತಿರ್ದಂ (ಕಾದಂಪೂ. ೩೬) ; ಮಹಾನುಭಾವಿಗಳ ಸಂಗ ಮಣಿದ ಅಲಗಿನ ಮೊನೆಯ ಗುಣದಂತಿರಬೇಕು ರೂಹುಗೊಂಡಡೆ ನೆಲನ ಕಲ್ಲು ವಾಸದಂತಿರಬೇಕು (ಮೋಳಿಮಾ. ೮೮-೩೫೧).

ವಾಸವಸ್ತ್ರಶೇಷ = ಅಪರಕ್ರಿಯೆಯ ವಿಧಿಯಲ್ಲಿ ಬಳಸುವ ಪ್ರೇತವಸ್ತ್ರದ ಭಾಗ : ಪ್ರಭುಗಳು ಪುರೋಹಿತರ ಸಲಹೆಯಂತೆ ಸ್ನಾನಮಾಡಿ, ವಾಸವಸ್ತ್ರಶೇಷವನ್ನುಟ್ಟು ಉತ್ತರಕ್ರಿಯಾಧಿಕಾರತ್ವದ ದರ್ಭೆಗಳನ್ನು ಸ್ವೀಕರಿಸಿ . . . ಪಿತೃಭೂಮಿಗೆ ಬರಿಗಾಲಿನಲ್ಲಿ ಹೊರಟರು (ಶಾಂತಲಾ. ೧೮೫). ವಾಸಾದಿಘೃತ = ಆಡುಸೋಗೆ ಮುಂತಾದ ಔಷಧೀಸಸ್ಯಗಳಿಂದ ಮಾಡಿದ ಒಂದು ಬಗೆಯ ತುಪ್ಪ: ವಾಸಾದಿಘೃತ — ಆಡುಸೋಗೆ, ದಾಸಾಳ, ಅಮರದವಳ್ಳಿ ಈ ಮೂರನ್ನು ಕಷಾಯವಿಕ್ಕಿ ತುಪ್ಪವ ಹೊಯ್ದು . . . ಇಳುಹಿಕೊಂಡು ಸೇವಿಸಲು ರಕ್ತಸ್ರಾವ ಪರಿಹರ (ಸಕವೈ. ೨೦೩). ವಾಸಾದಿಲೇಹ್ಯ = ಆಡುಸೋಗೆ ಮುಂತಾದ ಔಷಧೀಸಸ್ಯಗಳಿಂದ ಮಾಡಿದ ಒಂದು ಬಗೆಯ ಲೇಹ್ಯ: ವಾಸಾದಿಲೇಹ್ಯ - ಆಡುಸೋಗೆ ಸೇ ೧೨, ನೆಲಗುಳ್ಳ, ಹೆಗ್ಗುಳ್ಳ, ಕಳ್ಳಂಗಡಲೆ . . . ತವಕ್ಷೀರ ಇವನ್ನು ಬಗೆಯೊಂದಕ್ಕೆ ಒಂದು ಸೇರಿನಂತೆ ಹಾಕಿ ಚೂರ್ಣಮಾಡಿ (ಸಕವೈ. ಪರಿ. ೪೩೯). [ಸಂ.]

**ವಾಸಂತ** (ಗು). ೧. ವಸಂತಋತುವಿನ ; ಚೈತ್ರಮಾಸದ : ವಾಸಂತಕಾಂತಾರ ರಂಗಮಂ ಶೃಂಗಾರಗೆಯ್ಯಲ್ಕೆ ಬಂಗಾರದಂಗದಾ ಶೃಂಗಿ . . . ಸಾರ್ದುದು ಹತ್ತೆ (ಶ್ರೀರಾಮಾ. ೨೩೧-೧೧೧). (ನಾ). ೨. ವಸಂತಋತು ; ಚೈತ್ರಮಾಸ : ಆಕೆ ತೋರಿದಳ್, ಪೂವಾಗಿ ಪೋಗಿ ಮಿಡಿಗಾಯ್ಗಳಂ ಪಡೆದೊಡಲ ವಾಸಂತದಂತ್ಯದ ರಸಾಲದೋಲ್ (ಚಿತ್ರಾಂಗ. ೫೦-೧೩೬೯). ೩. ಒಂದು ಬಗೆಯ ಸಸ್ಯ : "ವಾಸಂತಃ - ತಿಲಕವೃಕ್ಷ, ತಾರೆ, ಕರಿಯ ಹೆಸರು" (ಒಷಧಿ. ೧೪೯). [ಸಂ.]

**ವಾಸಂತಿ** (ನಾ). ೧. ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು : ಸುರಹೊನ್ನೆಯ ವಾಸಂತಿಯ ಸುರಗಿಯ ಚಂಪಕದ . . . ನಸುಬಿರಿದರಲಿಂದರ್ಚಿಸಿದ ನವನಿಪತಿ ಜಿನಪತಿಯಂ (ಪಂರಾಮಾ. ೧೨-೪) ; ಈ ಕೋಮಳೆ ಕಾಮಕ್ಕಿಷ್ಟೆ ಚಿತ್ತಕ್ಕೆಳಲ ನೊಲವುಮಂ ಪುಟ್ಟಿಪಳ್ ನೋಡೆ ಪತ್ರಾವಳಿ ಶೋಭಿಪಂಬೆತ್ತ ಚೈತ್ರಾಗಮಪವನಪರಿಸ್ಪೃಷ್ಟ ವಾಸಂತಿಯಾಪೋಲ್ (ಶಾಕುಂತ. ೩೫-೬೧). ೨. ಒಂದು ಬಗೆಯ ಮಲ್ಲಿಗೆ : "ಜಾತಿ ಮಾಳತಿ ವಾಸಂತಿ ಮಾಧವಿ . . . ಕುಂದಂ ಕೇತಕ್ಯಾಪ್ಪಯಂ" (ವಸ್ತುಕೋ. ೩೮-೩೪). [ಸಂ. ವಾಸಂತೀ]

**ವಾಸಂತಿಕ** (ಗು). ೧. ವಸಂತಕಾಲದ ; ಚೈತ್ರಮಾಸಕ್ಕೆ ಸಂಬಂಧಿಸಿದ. (ನಾ). ೨. ವಸಂತಋತು ; ಚೈತ್ರಮಾಸ. ೩. (ನಾಟಕದಲ್ಲಿಯ) ಹಾಸ್ಯಗಾರ ; ವಿದೂಷಕ : "ವೈಹಾಸಿಕಃ, ಕೇಳಿಕರಃ, ವಾಸಂತಿಕಃ — ಈ ೩ ನಗಿಸುವಾತಂ" (ಹಲಾಯು. ೬೧-೨೭೮). ೪. ಅಭಿನಯಿಸುವವನು ; ನಟ. [ಸಂ.]

**ವಾಸಂತಿಕೆ** (ನಾ). ೧. = ವಾಸಂತಿಕ ೨ : ಬಲ್ಲಂ ಗೊಲೆಗೆತ್ತಿ ಹೂಡಿದನ ಮೋಘಾಸ್ತ್ರಂಗಳಂ ದರ್ಪಕಂ ದಿಗಿಲೆಂದಿತ್ತು ವಿಯೋಗಿವೃಂದಹೃದಯಂ ವಾಸಂತಿಕಾ ಮಾಸದೊಳ್ (ಗಿರಿಕ. ೭-೩೭). ೨. ಒಂದು ಬಗೆಯ ಗಿಡ ಮತ್ತು ಅದರ ಹೂವು; ಸೇವಂತಿಗೆ : ವಾಸಂತಿಕಾಪುಷ್ಪವು ಅಂದರೆ ಸೇವಂತಿಗೆ ಹೂವನ್ನು ಧರಿಸಿದಲ್ಲಿ . . . ಶರೀರಕ್ಕೆ ತಂಪನ್ನುಂಟುಮಾಡುವುದು (ಸಕವೈ. ೪೩). ೩. ಸಪ್ತಮಾತೃಕೆಯರಲ್ಲಿ ಒಬ್ಬಳು ; ವೈಷ್ಣವಿ : ವಾಸಂತಿಕಾದೇವಿಲಬ್ಧವರಪ್ರಸಾದಂ ಯಾದವಕುಳಾಂಬರ ದ್ಯುಮಣಿ ಮಂಡಳಿಕಚೂಡಾಮಣಿ . . . ಪ್ರತಾಪಹೊಯ್ಸಳಬಲ್ಲಾಳದೇವರು (ಎಕ. II (R), ೫೬೫-೨೫; 1173) ; ವೈಷ್ಣವಿಯು ಹಿಂದಿನ ಕೈಗಳಲ್ಲಿ ಶಂಖ ಚಕ್ರ ಎಲುಹಿಡೆಸರ್ಪದ

ಛತ್ರವನ್ನು ಹೊಂದಿರುವಳು. ಇದನ್ನೇ ವಾಸಂತಿಕಾ ಎಂದು ಕರೆಯುವರು (ಹೊಯ್ಸವಾ. ೮೮).
[ಸಂ. ವಾಸಂತಿಕಾ]

ವಾಸಕ (ಗು). ೧. ವಾಸಕ್ಕಾಗಿ ಕಟ್ಟಿದ. ೨. ವಾಸನೆ ಕಟ್ಟಿದ ; ಸುಗಂಧಗೊಳಿಸಿದ. (ನಾ). ೩. ವಾಸಸ್ಥಾನ ; ನೆಲೆ; ಮನೆ. ೪. ಮಲಗುವ ಮನೆ ; ಶಯನಗೃಹ : 'ವಾಸಕಸಜ್ಜಿಕೆ' ಪರಾ. ೫. ಸುಗಂಧ ; ಸುವಾಸನೆ. ೬. ಸುಗಂಧದಿಂದ ಕೂಡಿರುವುದು ; ಸುವಾಸನೆಯಿಂದ ತುಂಬಿರುವುದು. ೭. ಒಂದು ಬಗೆಯ ಸಸ್ಯ ; ಆಡುಸೋಗೆ : "ವಾಸಕಃ- ತಾರೆ, ಆಡಸೋಗೆ" (ಓಷಧಿ. ೧೪೯). ೮. ಬಟ್ಟೆ ; ವಸ್ತ್ರ. ೯. ಒಂದು ಬಗೆಯ ಪಕ್ಷಿ : ಆ ವನಂಗಳೊಳು ಶುಕ ಪಿಕ . . . ಗಿಡಗ ರುಕ್ಮಕ ವಾಸಕ ಮೊದಲಾದ ಚಿತ್ರರೂಪಶಕ್ತಿಗಳುಳ್ಳ ಪಕ್ಷಿಕುಲಂಗಳುಂ (ವಿವೇಕ. ೨೧೨).
[ಸಂ.]

ವಾಸಕಸಜ್ಜಿಕೆ (ನಾ). [ಕಾವ್ಯಮೀ] ಶೃಂಗಾರನಾಯಿಕೆಯರಲ್ಲಿ ಒಂದು ಪ್ರಭೇದ ; ಶಯನಗೃಹವನ್ನು ಶೃಂಗರಿಸಿ, ವೇಷಭೂಷಣಗಳಿಂದ ಅಲಂಕೃತಳಾಗಿ ಗಂಡನ ಅಥವಾ ಪ್ರಿಯಕರನ ಬರವನ್ನು ನಿರೀಕ್ಷಿಸುತ್ತಿರುವ ಹೆಣ್ಣು : ಮಗಧಸೌಂದರಿ ತನ್ನ ಪಾಳೆಯದೊಳಂ ವಾಸಕಸಜ್ಜಿಕೆಯಾಗಿ (ಅರ್ಜುನ. ೩-೧೦೭ ವ) ; ತನ್ನಂ ಮಂದಿರಮಂ ವಾಸಕಸಜ್ಜಿಕೆ ಪುರುಷನ ಬರವಱಿದು ಸಿಂಗರಂಗೆಯಲಕ್ಕುಂ (ರಸರ. ೩-೯೯ ಸೂತ್ರ). [ಸಂ. ವಾಸಕಸಜ್ಜಿಕಾ]

ವಾಸಕಾಲು (ನಾ). ಬಾಗಿಲಿನ ಚೌಕಟ್ಟು : ಬಾಗಿಲುವಾಡ ; ಬಾಗಿಲ ಚೌಕಟ್ಟು ; ವಾಸಕಾಲು (Door-case. ಇಂಕನ). [ <— ತಮಿ. ವಾಚಟ್‌ಕಾಲ್]

ವಾಸಕಾಜಿ 'ವಾಸಗಾಜಿ' ನೋ.

ವಾಸಗಾಜಿ, ವಾಸಕಾಜಿ (ನಾ). ಕೊಳಲನ್ನು ಊದುವವನು ; ವೇಣುವಾದಕ : "ವೇಣುಧ್ಮ, ವೈಣವಿಕ - ವಾಸಗಾಜಿ" (ನಾಚಿರಾ. ೩). ವಾಸಕಾಜಿ : ಜಗತೀಶಂ ನೋಟ್ಟ ಕಣ್ಗಂ ನುಡಿವ ದನಿಗಮಿಂಬಾಗಿ ಕುಳ್ಳಿರ್ದರಂದೋಳಿಗಳಿಂ ದಂಡಾಧಿಪರ್ . . . ನೆತ್ತಕರ್ ವಾಸಕಾಜಿರ್ ನಗೆಕಾಜಿರ್ ವಾದ್ಯಕರ್ (ಅನಂಪು. ೨-೨೬).
[ವಾಸ₁ + - ರಾಜಿ]

ವಾಸಗೃಹ (ನಾ). ೧. ವಾಸಿಸುವ ಸ್ಥಳ; ಮನೆ. ೨. ಮಲಗುವ ಕೋಣೆ ; ಶಯ್ಯಾಗಾರ : "ಗರ್ಭಾಗಾರಂ, ವಾಸಗೃಹಂ - ೨ ಮಲಗುವ ಮನೆ" (ಸಿದ್ಧಾಂತಿ. ೧೦೧). [ಸಂ.]

ವಾಸಚ್ಛಲ (ನಾ). ಬಟ್ಟೆಗೆ ಪರ್ಯಾಯವಾದುದು : ಬಿಳನ ತೆಳುದೊಗಲುಗಿದು ವಾಸಚ್ಛಲವ ಸಲಿಸಿದವನ ಜಠರದೊಳೊಳಗರುಳನುಗಿದಬುಜವದನೆಯ ಮುಡಿಗೆ ಮುಡಿಸಿದನು (ಕುವ್ಯಾಕ. ೧೯-೮೩). [ಸಂ.]

ವಾಸತೇಯಿ (ನಾ). ಇರುಳು ; ರಾತ್ರಿ : "ತಮಿ, ತಮಿಸ್ರಾ . . . ವಾಸತೇಯೀ, ಶ್ಯಾಮಾ, ರಾತ್ರಿಃ - ಈ ೧೯ ಇರುಳಿನ ಪೆಸರ್" (ಹಲಾಯು. ೧೮-೧೦೮). [ಸಂ. ವಾಸತೇಯೀ]

ವಾಸನ (ನಾ). ೧. ವಾಸವಾಗಿರುವುದು ; ವಾಸ್ತವ್ಯ. ೨. ವಾಸಸ್ಥಳ; ಮನೆ. ೩. ಸುಗಂಧ ; ಸುವಾಸನೆ : 'ವಾಸನಿಸು' ಪರಾ. ೪. ಸುಗಂಧವನ್ನು ಕೂಡಿಸುವುದು. ೫. ಮುಚ್ಚಿರುವುದು ; ಆಚ್ಛಾದನಗೊಂಡಿರುವುದು. ೬. ಹೊದಿಕೆ ; ಆವರಣ ; ಮುಸುಕು. ೭. ಬಟ್ಟೆ ; ವಸ್ತ್ರ. ೮. ಪೆಟ್ಟಿಗೆ ; ಭರಣಿ. ೯. ಅರಿವು ; ತಿಳಿವು. ೧೦. (ಧ್ಯಾನದ) ಒಂದು ಭಂಗಿ. ೧೧. ಸಂಸ್ಕಾರ : "ವಾಸನಮು ಸಂಸ್ಕಾರಮಕ್ಕುಂ" (ಮಂಗರಾ. ೧೩೫-೩೭). [ಸಂ.]

ವಾಸನಾಕ್ಷಯ (ನಾ). ೧. ರಾಗದ್ವೇಷಾದಿಗಳು ಇಲ್ಲದಿರುವಂಥದು : ಪರಶಿವತಂತ್ರದುರುಗೌಣ ಮುಖ್ಯಗಳ್ವಾಸನಾಕ್ಷಯನಾಸಿಕಂ . . . ರಾಮನಾಥಾರ್ಯರಿಂಗೆ (ವಿಶೋಪು. ೧-೫೯). ೨. ರಾಗದ್ವೇಷಾದಿಗಳ ನಾಶ, - ಕೊನೆ : ಮೊದಲ ಭೂಮಿ ಸುವೇಚ್ಛೆ ಯೆರಡನೆಯದು ಸದಾತ್ಮವಿಚಾರ ಮೂಱನೆಪುದು ಕಣಾ ನಿಸ್ಸಂಗ ನಾಲ್ಕದು ವಾಸನಾಕ್ಷಯವು . . . ತುರಿಯಾತೀತವೇ ಏಳನೆಯ ಭೂಮಿಕೆಯು (ಅಮೃತ. ೬-೭).
[ಸಂ.]

ವಾಸನಾನಂದ (ನಾ). ಎಂಟು ಬಗೆಯ ಆನಂದಗಳಲ್ಲಿ ಒಂದು : ನಿದ್ರೆ ತಿಳಿದಾಕ್ಷಣದಲ್ಲಿ ತೋರ್ಪುದೇ ವಾಸನಾನಂದವೆನಿಸುವುದು (ವಿವೇಕ. ೨೪). [ಸಂ.]

ವಾಸನಾಬಲ (ನಾ). ಹಿಂದಿನ ಜನ್ಮದ ಸಂಸ್ಕಾರದ ಪ್ರಭಾವ : ಬುದ್ಧಿ ಮೂಲತಃ ಸತ್ವಗುಣಯುಕ್ತವಾದುದರಿಂದ, ಕೇವಲ ಆನಂದಕ್ಕೆ ಮಾತ್ರ ಎಡೆಗೊಡುವಂತಿದ್ದರೂ ಆದರ ವಾಸನಾಬಲದಿಂದ ಆನಂದದ ಬದಲು ತದ್ವಿರುದ್ಧವಾದ ಅನುಭವಗಳು ಜೀವಕ್ಕೆ ಒದಗುತ್ತವೆ (ಸೌಂದಸ. ೧೧೧). [ಸಂ.]

ವಾಸನಾವಾಸನ (ನಾ). ಸುಗಂಧಕ್ಕೆ ಆಶ್ರಯವಾಗಿರುವುದು : ವಾಸನಾವಾಸನ [ಪಾಂಡು.ದ] ಪರಿಮಳೋಚ್ಛ್ವಾಸನಾಸಿಕವಂ ನೆನೆವನಳಿಯೂಸೆಯಲಿ (ಬಸವು. ೪೨-೨೬). [ಸಂ.]

ವಾಸನಿಸು (ಕ್ರಿ). ೧. ಕಂಪುಬೀರು ; ಸುವಾಸನೆ ಹರಡು : ಪದ್ಮಪುಷ್ಪವು ಅರಳಿ ವಾಸನಿಸಿತು (ಚನ್ನಸಾ. ೫೫). ೨. ಸುಗಂಧ ಬೀರುವಂತೆ ಮಾಡು ; ಕಂಪುಗೊಳಿಸು : (೩). ೩. (ನೆತ್ತಿಯನ್ನು) ಮೂಸಿ ನೋಡು ; ಆಘ್ರಾಣಿಸು : ತನ್ನೆದೆಯಲ್ಲಿ ತಕ್ಕವಿಸುತ್ತ ವಾಸನಿಸುತ್ತ ಚುಂಬಿಸುತ ಫುಲ್ಲಮುಖಸರಸೀರುಹನಪ್ರತಿಮಭರುತರ ದೇವನಾತ್ರಿತವಲ್ಲಭನ ಮೊಗ ನೋಡಿ ನಗುತಿಂತೆಂದನವನೀಶ (ನಿಭಾಗ. ೧೦-೯೦-೨೨) ; ಕವರ್ಚುಗಿಂದ ನೆಲನ ವಾಸನಿಸಿ ಮೇಘಾಳಿಯನಾರ್ಕವ ಚತುಷ್ಪದಿ ವೇಗದಿ ನಡೆದುವಾಕ್ಷಣದಿ (ಮೋಹತ. ೧೯-೧೩) ; ಝಾಳಿಸುವ ಕಣ್ಣೀರನೊರೆಸಿ ಮಂಡೆಯ ನಿಗರ ವಾಸನಿಸಿ ನುಡಿದನು (ತುರಂಗ. ೨೬-೧೮) ; ನೆತ್ತಿಯ ವಾಸನಿಸಿದರೆ ಸತ್ತಿಗೆ ಹಿಡಿದ ಹಾಗೆಯೇ ? (ಗಾದೆ). 'ವಾಸಿಸು' ಪರಾ. [ವಾಸನ + - ಇಸು₃]

ವಾಸನೆ₁ (ನಾ). ೧. ಹಿಂದಿನ ಸ್ಮರಣೆಯಿಂದ ಉಂಟಾಗುವ ತಿಳಿವಳಿಕೆ,— ಜ್ಞಾನ. ೨. ಜನ್ಮಾಂತರದ ವಿಷಯವನ್ನು ಸ್ಮರಣೆಗೆ ತರುವ ಒಂದು ಬಗೆಯ ಶಕ್ತಿ. ೩. ಹಿಂದಿನ ಒಳ್ಳೆಯ ಅಥವಾ ಕೆಟ್ಟ ಕ್ರಿಯೆಗಳಿಂದ ಮನಸ್ಸಿನ ಮೇಲೆ ಅಗೋಚರವಾಗಿ ಉಂಟಾಗುವ ಪ್ರಭಾವ ,—ಪರಿಣಾಮ ,—ಸಂಸ್ಕಾರ ಮತ್ತು ಅದರಿಂದ ಉಂಟಾಗುವ ನೋವು, ನಲಿವು ಮುಂತಾದ ಭಾವನೆ : ಉಪನಯನಂ ಗೆಯ್ಯದೆಯುಂ ಸ್ವಪೂರ್ವವಾಸನೆಯ ಬಲದಿನಂತಾತಂ ವೇದಪುರಾಣ ವೇದಿಯಾದಂ (ವರ್ಧಮಾ. ೬-೧೮) ; ನಾಟಕದಲ್ಲಿ ಪಾತ್ರವಹಿಸಿದ ವಾಸನೆ ಅವನ ಸಾಮಾನ್ಯ ನಡತೆಗೂ ಅಂಟಿಕೊಂಡಿತ್ತು (ಆಲಹೂ. ೯೧). ೪. ಬಯಕೆ ; ಆಕಾಂಕ್ಷೆ ; ಆಸೆ : ಗುರುವಿಂಗೆ ತನುವನರ್ಪಿಸಿದಲ್ಲದೆ ತನುವಿನ ವಾಸನೆ ಹಱಿಯದು ಲಿಂಗಕ್ಕೆ ಮನವನರ್ಪಿಸಿದಲ್ಲದೆ ಮನದ ವಾಸನೆ ಹಱಿಯದು (ಅಖಂಡೇ. ೭೭-೫೫) ; ಅಡವಿಯನು ಹೊಗಬಹುದು ಮಡದಿಯನು ಬಿಡಬಹುದು ಬಿಡದೆ ಧ್ಯಾನದೊಳಿರಬಹುದು ವಾಸನೆಯ ಕೊಡಹಲಳವಲ್ಲ (ಸರ್ವಜ್ಞ. ೫೫೦). ೫. ಊಹೆ ; ಕಲ್ಪನೆ. ೬. ಅಜ್ಞಾನ ; ಮೌಢ್ಯ. ೭. (ಆಲಂ) ಸಹವಾಸ ; ಜೊತೆ ; ಒಡನಾಟ : ದಾಮೋದರಭಟ್ಟರಂ ಪ್ರೇಮದಿಂ ಸೋಂಕಿದೆನೆ ಕೇಶವಘ್ಯಸರ ವಾಸನೆಯುಂಟೆ (ಬಸರ. ೧೦-೪೬). ೮. [ದ್ವೈತ] ಇಪ್ಪತ್ತು ಬಗೆಯ ದ್ರವ್ಯಗಳಲ್ಲಿ ಒಂದು : ಪರಮಾತ್ಮ, ಲಕ್ಷ್ಮಿ, ಜೀವಾತ್ಮ . . . ವರ್ಣ, ಅಂಧಕಾರಕಾಲ, ವಾಸನಾ, ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಹಿಂದಸಾ. ೨೭೫).
[ಸಂ. ವಾಸನಾ]

ವಾಸನೆ₂ (ನಾ) ೧. ಕಂಪು ; ಗಂಧ : "ಸೊವಡೆಂದು . . . ನಾತಮುಮೆಂದು ಸಲೆ ವಾಸನೆಗೆ ಪೆಸರ್" (ಕಬ್ಬಿಕೈ. ೫೪) ; ಆಸವದಾಭ್ರದ ಫಣೆಯ ನಿವಾಸದ ನೆಲ್ಲರಳ ಬೆಲ್ಲವತ್ತದರಿಪ್ಪಾಭಾಸದ ಮದ್ಯದ ಪಲಸಿನ ವಾಸನೆ ನಿಶ್ವಾಸಮೆನೆ ಹಯಂಗಳ್ ಶುಭದಂ (ಅಶ್ವಶಾ. ೩-೧೯) ; ವಾಸನೆ ಮೇಲಿಂದ ಸುಟ್ಟ ಕುಸಬಿಯ ಎಣ್ಣೆಯೋ ಒಂದೆತ್ತಿನ ಘಾಣದ್ದೋ ಇದರ ಪರೀಕ್ಷೆ ಮಾಡುತ್ತಾರೆ (ಮುಂಬವ್ಯಾ. ೩೭). ೨. ಸುಗಂಧ ; ಪರಿಮಳ : ವಾಸನೆಯಿಂದಮ ಸಮೆದ ವಿಳಾಸಮನೊಳಕೊಂಡು ಗಂಧಕುಟಿ ಸೊಗಯಿಪ್ಪುದಾ ವಾಸನೆ ಸೋಂಕಿದರಂ ಸುಖವಾಸನೆವೆರಸಮೃತಪದಮನಿರದೆಯ್ದಿಸುಗುಂ (ಪಾರ್ಶ್ವಪು. ೧೬-೭೩) ; ಧೂಪ ವಾಸನೆಯಿಂದ ಮುನ್ನ ಉಮಾಪತಿಯ ಮುಂದೆಸೆಯೊಳುದಿತ ವ್ಯಾಪಿತಾಂತರ್ಗತಸುವಾಸನೆ ರಂಜಿಸುತ್ತಿರಲು (ಬಸವು. ೩೩-೭). ೩. ಕೆಟ್ಟನಾತ ; ದುರ್ಗಂಧ : ಕೆಟ್ಟು ಹೋದ ಹಣ್ಣಿನಿಂದ ವಾಸನೆ ಬರುತ್ತಿದೆ (ರೂಢಿ). ೪. ಸುಗಂಧಗೊಳಿಸುವುದು. ೫. ವಾಸಿಸುವುದು. ೬. ನೆಲೆ ; ಆಶ್ರಯ. ೭. ಬಟ್ಟೆ ; ವಸ್ತ್ರ. ೮. (ಆಲಂ) ಜಾಡು ; ಸುಳಿವು : ಆಕೆಯ ಹತ್ತಿರ ದುಡ್ಡಿನ ವಾಸನೆ ಸಿಕ್ಕಿದ ಕೂಡಲೆ ಆತ ಎಲ್ಲವನ್ನೂ ತೆಗೆದುಕೊಂಡು ಬಿಡುತ್ತಾನೆ (ರೂಢಿ).
[ಸಂ. ವಾಸನ]

**ವಾಸನೆಗಟ್ಟು** (ಕ್ರಿ). ಸುವಾಸನೆಯ ದ್ರವ್ಯವನ್ನು ಹಾಕು ; ಬಣ್ಣ ಕಟ್ಟು : ಇವಳು ವಾಸನೆಗಟ್ಟಿದ ಮದ್ಯದಂತೆ ನನ್ನನ್ನು ಉನ್ಮಾದಗೊಳಿಸುತ್ತಿದ್ದಾಳೆ (ವಚಭಾ. ೧೪೯). [ವಾಸನೆ$_2$ + ಕಟ್ಟು$_1$]

**ವಾಸನೆವಿಡಿ, ವಾಸನೆಹಿಡಿ** (ಕ್ರಿ). ೧. ಪರಿಮಳವನ್ನು ಗ್ರಹಿಸು : ನಾಸಿಕೇಂದ್ರಿಯ ನಿನ್ನ ತನುಗಂಧಕೆಳಸಿ ಮೇಲ್ಪೂಸಿದ ಪುಣಗು ಕಸ್ತುರಿಯ ವಾಸನೆವಿಡಿಯದು (ಕಂನವಿ. ೯-೧೮೨). ವಾಸನೆಹಿಡಿ : ೨. (ಆಲಂ) ಪತ್ತೆಹಚ್ಚು ; ಜಾಡುಹಿಡಿ : ಅವನು ಲಂಚದ ವಾಸನೆಹಿಡಿದು, ಅದು ಪರರ ಕೈಗೆ ನುಣುಚಿಕೊಂಡು ಹೋಗದಿರಲೆಂದು ತವಕಗೊಂಡನು (ಪುನರು. ೫೦೮). [ವಾಸನೆ$_2$ + ಪಿಡಿ$_1$]

**ವಾಸನೆಹಿಡಿ** 'ವಾಸನೆವಿಡಿ' ನೋ.

**ವಾಸನೆಹುಲ್ಲು** (ನಾ). ನಿಂಬೆವಾಸನೆಯುಳ್ಳ ಒಂದು ಬಗೆಯ ಹುಲ್ಲು : (ಕ). [ವಾಸನೆ$_2$ + ಹುಲ್ಲು (< ಪುಲ್)]

**ವಾಸಭವನ** (ನಾ). ಮಲಗುವ ಮನೆ ; ಶಯ್ಯಾಗೃಹ : "ಪ್ರಘಣಾಂತರದೊಳ್ ವಾಸಭವನಮೆನೆ ಪೆಸರ್ವಡೆಗುಂ" (ವಸ್ತುಕೋ. ೪೮-೧೮). [ಸಂ.]

**ವಾಸಯಷ್ಟಿ** (ನಾ). ಪಕ್ಷಿಗಳು ಹಾರಿ ಬಂದು ಕುಳಿತುಕೊಳ್ಳುವುದಕ್ಕೆ ಇಟ್ಟಿರುವ ಕೋಲು : ದಿನಾಂತಂ ಮನೋಹರಮಾಗಿರ್ದುದು ವಾಸಯಷ್ಟಿಗತಶುಂಭತ್ತಾಮ್ರಚೂಡವ್ರಜಂ (ಪಂಚತಂ. ಅ. ೧೬೫-೨೦). [ಸಂ.]

**ವಾಸರ$_1$, ಬಾಸರ$_1$** (ನಾ). ೧. ಓರೆಯಾಗಿರುವುದು ; ಏರುಪೇರು : (ಕ). ೨. ಪೇರುಕಟ್ಟುವುದಕ್ಕಾಗಿ ತಕ್ಕಡಿಯ ಪರಡೆಯಲ್ಲಿಡುವ ಹೆಚ್ಚಿನ ತೂಕ ; ಕಾಣೆ : ತ್ರಾಸಿನ ಗುಣದಿಂದ ವಾಸರದಣೆಯಿಂದ ಕಾಸಿ ಕರಗುವದಟಿಂದ ವೀಸವೀಸವ ನಾನಾಬಗೆ ಗಳಿಸುವ ಜಗದೀಶನಾದರೆ ಬಿಡಬೇಡ (ಅಮುಸಾಂ. ೩-೧೧೮). ೩. ಲೋಪ ; ದೋಷ : ನೀವಾಜ್ಞೆಮಾಡಿದ ನುಡಿಗೆ ವಾಸರವು ಇನಿತು ಬಂದರೆ ನಿಮ್ಮ ಸೇವಕನಿನಿತು ಅಲ್ಲವು (ಜ್ಞಾನಸಿಂ. ೩-೧೮). ಬಾಸರ$_1$ : ೨. 'ಬಾಸರ' ಅಂದರೆ 'ಕಾಣೆ' – ಹೆಚ್ಚಿನ ತೂಕ (ಪರಪ. ೨೧೧). [< ಓಸರ$_1$]

**ವಾಸರ$_2$** (ನಾ). ೧. ಹಗಲು ; ಬೆಳಗು : ಅನುಚರನವೊಲಾಲೋಕಮಂ ಪತ್ತುವಿಟ್ಟೋಸರಿಸಿತ್ತಾವೇಗದೊಳ್ ವಾಸರಮನುಚರಿವೊಲ್ ಸಂಜೆ ಸಂಜಾತರಕ್ತಾಂಬರದಿಂದಂ ಬಾಸಣಿಪ್ಪಂತೆಸೆದುದಸದಳಂ ಸಾಂದ್ರಶೋಣಾಂಶುಜಾಲಂ (ಕಾದಂಬ. ೮೧೬) ; ವಾಸರಮುಖದರ್ಶನದಿಂದೋಸರಿಸುವ ಚಕ್ರವಾಕದರ್ದೆಯದವಟಲುಂತಾ ಸಮಯದೊಳವನಿಪನಟಲೋಸರಿಸಿದುದಾ (ಚಂದ್ರಪು. ೫-೨೧). ೨. ದಿನ; ದಿವಸ: ಅನ್ನೆಗಮಾಷಾಢ ಪೌರ್ಣಮಾಸೀವಾಸರ ಸಾಯಂತನ ಸಮಯದೊಳ್ (ಆದಿಪು. ೬-೫೧ ವ) ; ಪಾಶುಪತಶರವೆನ್ನ ಸತ್ವವಿಳಾಸವದೆ ಫಲುಗುಣನ ಕೈಯಲಿ . . . ಆ ಸುಭಟನೊಬ್ಬನನುಳಿಯೆ ಮಿಕ್ಕೀಸು ಪಾಂಡವರುಗಳನೊಂದೇ ವಾಸರದಲವಗಡಿಸು ಹೋಗು (ಕುವ್ಯಾಅ. ೨೨-೪೬). [ಸಂ.]

**ವಾಸರಂಬರಂ** (ಅ). ದಿನದ ವರೆಗೆ ; ದಿವಸದ ತನಕ : ವಾಗೀಶನಾಯ್ನಾರೆಂಬ ಹರಭಕ್ತಂ . . . ತನುಜೆಯಂ ಪಿಳ್ಳೆನಾಯ್ನಾರ್ಗಲ್ಲದಾರ್ಗೆ ಕುಡೆನೆಂದು ನುಡಿದು ಹರಿಸದಿಂದಿರ್ಪನಿತಟೊಳಗವಳ್ ಸಾಯಲ್ಕೆ . . . ಇವಳನುರುಘಟದೊಳಿರಿಸುವೆಂ ಪಿಳ್ಳೆನಾಯ್ನಾರ್ ಬರ್ಪ ವಾಸರಂಬರಮೆನುತ್ತೆ (ಆರಾಚ. ೨-೨-೪೪). [ವಾಸರ$_2$ + - ಬರಂ (< - ವರಂ)]

**ವಾಸರಕರ** (ನಾ). ಬೆಳಗನ್ನುಂಟುಮಾಡುವವನು ; ಸೂರ್ಯ : ಆ ಸೇನಾರಜದಿಂ ಪರಿಧೂಸರಮಾದುದು ನಿಜಾಂಗಮಂ ತೊಳೆಯಲ್ಕೆಂದೋಸರಿಸದೆ ಪೊಕ್ಕಂತಿರೆ ವಾಸರಕರನಪರವಾರಿನಿಧಿಯೊಳ್ ಪೊಕ್ಕಂ (ರಾಜಶೇ. ೬-೨೬). [ಸಂ.]

**ವಾಸರಪತಿ** (ನಾ). ಹಗಲಿನ ಒಡೆಯ ; ಸೂರ್ಯ : ವಾಸರ [ಪಾಠಾಂ. ವ]ಪತಿ ಬಿಸುಗದಿರಿಂ ಪೇಸದೆ ತವೆ ಪೀರ್ಗುಮೆಂಬ ಮಱುಕದೊಳಂಭೋಜಾಸನನಂಬುಜವನಮಂ ಬಾಸಣಿಸಿದನೆನಿಪ್ಪುವಿಡಿದ ತಾವರೆಯೆಲೆಗಳ್ (ಕಾವ್ಯಾವ. ೨೩೬). [ಸಂ.]

**ವಾಸರವ** (ನಾ). ಕೊಳಲಿನ ನಾದ , –ಧ್ವನಿ : "ತತ್ತರುರು ಪಿತೃತಂ ವಾಸರವವಕ್ಕು" (ಮಂಗರಾ. ೨೪-೮). [ವಾಸ$_1$ + ರವ]

**ವಾಸರಾಧಿಪ** (ನಾ). = ವಾಸರಪತಿ : ಸಿರಿಶೈಲದೊಳ್ ಪಸಿರ್ಪರ್ . . . ಅಘತಿಮಿರಸಂದೋಹವಾಸರಾಧಿಪರೂಪರು (ಆರಾಚ. ೧-೧-೬೬). [ಸಂ.]

**ವಾಸವ** (ಗು). ೧. ದೇವೇಂದ್ರನಿಗೆ ಸಂಬಂಧಿಸಿದ. ೨. ವಸುಗಳಿಗೆ ಸಂಬಂಧಿಸಿದ. (ನಾ). ೩. ಇಂದ್ರ : ಭಾಸುರದೇವಕೋಟಿವಿಭುವಪ್ಪ ಮಹರ್ದ್ಧಿಕನಪ್ಪ ವಾಸವಂಗಾಸನಕಂಪಮಂ ಪಡೆದು ತೀರ್ಥಕರತ್ವಮನಿತ್ತು (ಆದಿಪು. ೧೬-೮೦) ; ದೇಶಾಧಿಪತಿ ಹರಿಶ್ಚಂದ್ರರಾಯನ ಸತ್ಯ ವಾಸವನ ಸಭೆಯೊಳಗೆ ನೆಗಳ್ದ ಪ್ರಸಂಗದಿಂ ಕೌಶಿಕ ವಸಿಷ್ಠಮುನಿಗಳಿಗೆ ಘನತರದ ಸಂವಾದಮಂ ಮಾಡಿತೆಂದು (ಹಚಕಾ. ೧ ಸೂಚನಾಪದ್ಯ). ೪. ಒಂದು ಬಗೆಯ ಸಸ್ಯ ಮತ್ತು ಅದರ ಬೀಜ : "ವಾಸವಃ – ಕೊಡಸಿಗನ ಬೀಜ , ಇಂದ್ರಗೋಪದ ಹುಳು" (ಓಷಧಿ. ೧೪೯). [ಸಂ.]

**ವಾಸವಗಜ** (ನಾ). ಇಂದ್ರನ ಆನೆ; ಐರಾವತ : ಅದೇಂ ಗೆಲೆವಂದುದೊ ವಾಸವಗಜವಿಲಾಸಮಂ (ಅಜಿಪು. ೫-೬೬) ; ವಾಸವಗಜದೊಡನಡರ್ವ ವಿಳಾಸದ ಸುರಜನದ ಹಾರಿ ಪೋಲ್ತುದು ಗಿರಿಗಬ್ಬಾಸನನೆ ಪಂಚರತ್ನದ ಸೂಸಕಮಂ ಮಾಲೆವೂವ ನೆಟಲಿಕ್ಕಿದವೋಲ್ (ಪುಷ್ಪಪು. ೧೦-೬೮). [ಸಂ.]

**ವಾಸವಚಾಪ** (ನಾ). ಕಾಮನ ಬಿಲ್ಲು ; ಇಂದ್ರಧನುಸ್ಸು : ವಾಸವಚಾಪಮೆಂಬ ಮಣಿಮಂಟಪದೊಳ್ ಮೊಟಗೆಂಬ ವಾದ್ಯಮಂ ಗೋಸನೆಮೇಘಮೆಂಬ ತೆರೆಯಿಂದೆ ತಟನ್ನಟಿ ಬಂದು ನಾಟ್ಯವಿನ್ಯಾಸದೆ ಕೊಂಕಿ ನಿಂದು (ಅನಂಪು. ೯-೧೨). [ಸಂ.]

**ವಾಸವತಿ** (ನಾ). ಹೆಚ್ಚು ಬಟ್ಟೆಗಳಿರುವ ಮನೆ, – ಗೃಹ : "ಬಹುವಸ್ತ್ರ ವರ್ತಿಸಿಹ ಮನೆ ವಾಸವತಿಯಕ್ಕುಂ" (ಮಂಗರಾ. ೫೮-೯). [ಸಂ. ವಾಸವತೀ]

**ವಾಸವಸ್ತ್ರೀ** (ನಾ). ೧. ಇಂದ್ರನ ಹೆಂಡತಿ ; ಶಚೀದೇವಿ. ೨. ಸ್ವರ್ಗಲೋಕದ ಹೆಣ್ಣು ; ಅಪ್ಸರೆ : ವಾಸವಸ್ತ್ರೀಯರ ಮುಖಾಬ್ಜಾಸವಸಂಬಂಧಿಗಳಪ್ಪ ಶೇಷಾಕ್ಷತಂಗಳನೀಶ್ವರನ[ಂ] ಗೆಲ್ದ ಗೆಲ್ಲಕ್ಕೆ ಸೇಸೆಗೊಳ್ವಂತೆ ಸೇಸೆಗೊಳುತ್ತುಂ . . . ದೇವವಿಮಾನಮಂ ಪೊಕ್ಕಾಗಳ್ (ಪಂಪಭಾ. ೮-೨೬ ವ). [ಸಂ.]

**ವಾಸವಾಂಗನೆ** (ನಾ). ಇಂದ್ರನ ಹೆಂಡತಿ ; ಶಚೀದೇವಿ : ವಾಸವಾಂಗನೆಗೆ ಪಾಸಟಿ ಚಾಗಲದೇವಿ ಧಾತ್ರಿಯೊಳ್ (ಎಕ. VIII, ನಗರ. ೪೬-೧೧೪; 1063). [ಸಂ. ವಾಸವಾಂಗನಾ]

**ವಾಸವಾಶೆ** (ನಾ). ಇಂದ್ರನ ದಿಕ್ಕು ; ಪೂರ್ವದಿಕ್ಕು : ಬಾಲದಿವಾಕರ ಗರ್ಭವಾಸವಾಶೆಗೆ . . . ದೊರೆಯಾಗಿ ಗರ್ಭನಿಲಯಾರ್ಭಕನುನ್ನತಿಯಂ ನಿಮಿರ್ಚಿದಳ್ (ಆದಿಪು. ೮-೩೦). [ಸಂ. ವಾಸವಾಶಾ]

**ವಾಸವಾಸನ** (ನಾ). [ಯೋಗ] ಒಂದು ಬಗೆಯ ಆಸನ : ಸ್ಥಿರಸುಖದಿಂ ನಿಶ್ಚಲಾತ್ಮಕಮಾದಾಸನದಲ್ಲಿ ಸಿದ್ಧಾಸನ . . . ವಾಸವಾಸನ . . . ಅರ್ಧಾಸನಾದಿ ಎಂಭತ್ತು ನಾಲ್ಕು ಆಸನಭೇದಂಗಳು (ವಿವೇಕ. ೧೩೧). [ಸಂ.]

**ವಾಸಸ** (ನಾ). ಅರಿವೆ ; ಬಟ್ಟೆ ; ವಸ್ತ್ರ : ಸುರಗರ್ಣಮಲಭ್ಯಮೆಂದೆನಿಪ ವಾಸಸದೊಂದುಡೆ ಸಾರಸೌರಭಕ್ಕಿರದೆಡೆಯಾದ ಪೂಸುವನುಲೇಪನಮುಜ್ವಲಕಲ್ಪವಲ್ಲರೀ . . . ಕಣ್ಗೆಸೆದಳ್ ಶಿವದೇವಿಯಾವಗಂ (ಮಹಾನೀ. ೮-೫೬). [< ಸಂ. ವಾಸಸ್]

**ವಾಸಸ್ಥಲ, ವಾಸಸ್ಥಳ** (ನಾ). ವಾಸಿಸುವ ಜಾಗ ; ನೆಲಸುವ ಪ್ರದೇಶ : ಬೇಸಗೆಯಲ್ಲಿ ಪಕ್ಷಿಗಳು ತಮ್ಮ ವಾಸಸ್ಥಲವನ್ನು ಬಿಟ್ಟು ತಂಪಾದ ಜಾಗವನ್ನು ಹುಡುಕುತ್ತ ಹೊರಡುವುವು (ರೂಢಿ). ವಾಸಸ್ಥಳ : ನಿಮ್ಮ ವಾಸಸ್ಥಳ ಯಾವುದು ? (ರೂಢಿ). [ಸಂ.]

**ವಾಸಸ್ಥಳ** 'ವಾಸಸ್ಥಲ' ನೋ.

**ವಾಸಸ್ಥಾನ** (ನಾ). = ವಾಸಸ್ಥಲ : ದೂರದಲ್ಲಿ ಕಾಡುಜನದ ವಾಸಸ್ಥಾನದ ಸಮೀಪದ ಮರಗಳು ಕಾಣುತ್ತಿದ್ದುವು (ಮಲೆನಾ. ೨೦೩). [ಸಂ.]

**ವಾಸಸ್ಸು** (ನಾ). ೧. ಬಟ್ಟೆ ; ವಸ್ತ್ರ : ದೆಸೆಗಳೇ ವಾಸಸ್ಸು ರಾಜ್ಯಪ್ರಸರಣವು ನಿರ್ಲಜ್ಜೆ ಜಟೆ ರಂಜಿಸುವ ಧೂಳೀದೂಸರದ ಗಂಗಾಧರನವೋಲು (ಕುವ್ಯಾಉ. ೪-೧೧೧) ; ಚಿತೆಯ ಮೇಲಿನಿಂದ ಒಂದು ವಾಸಸ್ಸನ್ನು ತಂದು ನಮ್ಮಮ್ಮನ ಕತ್ತಿಗೆ ಹಾಕಿದರು (ಮೂಮರಾ. ೧೧೩). ೨. ತೆರೆ ; ಪರದೆ. ೩. ಮೇಲುಹೊದಿಕೆ ; ಆಚ್ಛಾದನೆ. [ಸಂ. ವಾಸಸ್]

**ವಾಸಾಕೋಷ್ಠ** (ನಾ). ಕುದುರೆಯ ಒಂದು ಅವಯವ : ಆಸನದಿಂ ಕೆಟಗಣ ಬಱಿಗಾಸನ್ನಂ ಕೋಷ್ಠಮೆಂಬ ಪೆಸರದಕಕ್ಕುಂ ವಾಸಾಕೋಷ್ಠದ ಕೆಲ ರೇಖಾಸೆಯೆ ತಾಂ ಕುಕ್ಷಿಯೆಂಬ ಪೆಸರಂ ಪಡೆಗುಂ (ಅಶ್ವಶಾ. ೯-೪೦). [ವಾಸಾ$_?$ + ಕೋಷ್ಠ$_2$]

**ವಾಸಾಗಾರ** (ನಾ). ೧. ಮನೆ ; ನಿವಾಸ. ೨. ಮಲಗುವ ಕೋಣೆ ; ಶಯನಗೃಹ : "ಶಯನಸ್ಥಾನಂ, ವಾಸಾಗಾರಂ – ಈ ೨ ಸೆಜ್ಜೆಯ ಮನೆ" (ಹಲಾಯು. ೪೯-೧೪೦).

[ಸಂ.]

**ವಾಸಾಘೃತ** (ನಾ). ಆಡುಸೋಗೆ ಮುಂತಾದುವನ್ನು ಸೇರಿಸಿ ತಯಾರಿಸಿದ, ದೀರ್ಘಕಾಲದ ಜ್ವರವನ್ನು ಗುಣಪಡಿಸುವ ಒಂದು ಬಗೆಯ ತುಪ್ಪ : ವಾಸಾಘೃತ - ಆಡುಸೋಗೆ, ಅಮರದವಳ್ಳಿ, ತಾರೆಕಾಯಿ, ನೆಲ್ಲಿಚಟ್ಟು, ಗಂಡುತುರುಚೆ ಇವು ಪ್ರತ್ಯೇಕ ಮೂರು ಪಲಂಗಳನ್ನು ಸೇರಿಸಿ ಚೆನ್ನಾಗಿ ಅರೆದು ಒಂದು ಕೊಳಗ ನೀರಿನಲ್ಲಿ ಹಾಕಿ ಚೆನ್ನಾಗಿ ಕಾಯಿಸಿ . . . ಅರ್ಧಪಾವು ತುಪ್ಪ ಸೇರಿಸಿ ಚಿಕ್ಕಣಪಾಕದಲ್ಲಿ ತೆಗೆದು ಶೋಧಿಸಿಕೊಂಡು ಬಂದ ಘೃತವನ್ನು ಸೇವಿಸಲು ಜೀರ್ಣಜ್ವರಂ ಗುಣಮಕ್ಕುಂ (ಸಕವ್ಯ. ೧೧೪). [< ವಾಸ$_2$ + ಘೃತ]

**ವಾಸಿ$_1$, ವಾಸೆ$_1$** (ನಾ). ೧. ಪ್ರತಿಜ್ಞೆ ; ಶಪಥ ; ಸಂಕಲ್ಪ : ಸಿರಿಯಾಳನಂದದಲಿ ಆ ಸುತನನರ್ತಿಸೆನು ಹೊಮ್ಮಳೆ ಸೂಸವೇಳೆನು ಚೋಳನಂತಿದು ವಾಸಿ (ಬಸವು. ೯-೩೩) ; ಯಜ್ಞತುರಗಮಿದು ನಿರ್ವಹಿಸಲಾರ್ಪರಾರಾದೊಡಂ ತಡೆಯಲೆಂದಿರ್ದ ಲೇಖಿನವನೋದಿ . . . ತನಗುರ್ವ ತೋಳ್ಗಳಿವೇತಕೆಂದು ಸಲೆ ವಾಸಿಯಂ ತೊಟ್ಟು ಲವನುರಿದೆದ್ದನು (ಜೈಮಿಭಾ. ೨೦-೭). ೨. ಹುರುಡು ; ಸ್ಪರ್ಧೆ ; ಮೇಲಾಟ : "ವಾಸಿಯೆ ಪಂಥಂ" (ಭಾರನಿ. ೧೨) ; ಕೊಕ್ಕು ಬೆಕ್ಕಸಂಬಡೆ ನುಡಿಗುಂ ನೀರ್ಗಾಗೆ ವಾಸಿಯಿಂದಂ (ಜೀವಸಂ. ೧೬೪-೩೧) ; ಬಿಡು ವಾಸಿಯಂ ತನ್ನೊಡನೆ ಗೋತ್ರಹತ್ಯಾದೋಷಮಂ ಕಳೆದುಕೊಂಬ ಮಬಿಕೆ ಏಸು ಹರಿಗಳ್ಪೇೞು ನಿನಗೈಸನೀವೆ ನಾನು (ಜೈಮಿಭಾ. ೨೫-೩೨). ೩. ಛಲ ; ಹಠ : ವಾಸಿಯೇ ಮಕ್ಕಳುಗಳೊಡನೆಂದಿರ್ದಡತಿವೆಗ್ಗಳನು ನೀನೆಂದಂಬ ಸುರಿದನು ಪವನಜನ ಮೇಲೆ (ಕುವ್ಯಾದ್ರೋ. ೧೩-೧೦) ; ಆಹವವಿದೀಗ ಬಲ್ಲರೆ ನಿಲು ಪಲಾಯನವ ಮಾಡದಿರು ವಾಸಿ ನಿನಗುಂಟಾದರೆ ಈಗಿಲ್ಲಿ ಕಾಳೆಗಂಗೊಟ್ಟೆನ್ನ ಜಯಿಸಿ ನೀ ಪೋಗು (ತುರಂಗ. ೭೩-೩೨). ೪. ಕೀರ್ತಿ; ಹೆಸರು : ಆ ಜಂಗಮ ಹೆಣ್ಣ ಬೇಡಿದರೆ ಸಂಸಾರಿ ಎಂದು ಹೊನ್ನ ಬೇಡಿದರೆ ಆಶಕನೆಂದು ಮಣ್ಣ ಬೇಡಿದರೆ ಬದ್ಧಕನೆಂದು ಇಷ್ಟಕ್ಕೆ ನೊಂದ ಮತ್ತೆ ಭಕ್ತಿವಾಸಿಗೆ ಹೋರಲೇಕೆ (ಮೋಳಿಮಾ. ೫೩-೨೧೯) ; ವಾಸಿಯನು ಬಿಸುಟಿಕಟ ಜೀವದಲಾಸೆ ಮಾಡಿದೆವು (ಕುವ್ಯಾಕ. ೧೩-೩). ೫. ಗುಣಮಟ್ಟ ; ದರ್ಜೆ : ಚಿನ್ನವ ಕೊಂಬಲ್ಲಿ ಆದಱ ಬಣ್ಣವ ಕಂಡು ಬಣ್ಣ ವಾಸಿಯ ಕುಱುಹಿಟ್ಟು ಅದು ತನಗೆ ಚೆನ್ನಾದಡೆ ಕೊಂಬ ಅಲ್ಲದೊಡೊಲ್ಲ (ಸಕವ. ಕ. II, ೨೪೨-೫). ೬. ಕೆಚ್ಚು ; ಸ್ಥೈರ್ಯ : ಬೀಸಿ ಬಿಡೆ ಮಾಧವಂ ಭೂತಳಕೆ ಬಿದ್ದು ಮಿಗೆ ಗಾಸಿಯಾದಂ ದೇಹಬಲಮಿಳಿದುದುಜೆ ಮನದ ವಾಸಿ ಪಯ್ಸರವಾಯ್ತು (ಚೆಬಪು. ೨೫-೩೫). ೭. (ತನ್ನ ಶೌರ್ಯದ ಬಗ್ಗೆ ಇರುವ) ಆತ್ಮವಿಶ್ವಾಸ ; ಅಭಿಮಾನ : ನಿಶ್ಚಟಭಾಷೆಯ ನುಡಿದ ಮತ್ತೆ ರಣದಲ್ಲಿ ವಾಸಿಗೆ ಸಾಯಬೇಕು (ವೋಳಿವಮಾ. ೩೬-೧೫೨); ಆ ಹರಿಬದಲಿ ಕೆಡುಹುವುದರಿ ಯನವಗಡಿಸಿದೊಡೆ ಸಾವರು ವಾಸಿಯು [ಪಾಠಾಂ. ಪಂಥವು]ಳ್ಳವರು (ಕುವ್ಯಾಉ. ೬-೨೪). ೮. ಘನತೆ ; ಮೇಲ್ಮೆ ; ಹಿರಿಮೆ : ಕೊಟ್ಟರೆ ವಾಸವಾದ್ಯರು ನಗರೇ ಸೀತೆಯನಂಜಿ ರಾಘವಗೆ ವಾಸಿಯಿಲ್ಲದ ಬದುಕು ಬೇಯಲಿ (ಕಾಶಿರಾ. ೨೩-೩) ; ನೃಪರನು ಜಱೆದು ತಂದೆನು ವಾಸಿಗೋಸುಗ ನಿನ್ನ ನಾನು (ನಿಭಾಗ. ೧೦-೮೭-೧೫). ೯. ಅಹಂಕಾರ ; ಗರ್ವ; ಮದ : ಕೊಡುವುದು ಕನ್ನೆಯ ನಡೆವುದು ನಣ್ಪನು ಪಡೆವುದು ಬೇಡಿದ ನಾಡ ಒಡೆಯನೆ ಬಂದ ಸೌಜನ್ಯವ ಮೆಱೆವುದು ಬಿಡುವುದು ವಾಸಿ ದೂಸಕವ (ವರ್ಧಚ. ೬-೬೩); ಆ ಶೂರ್ಪನಖಿಯ ನುಡಿ ಕೇಳುತ್ತ ಕನಲುತಂ ವಾಸಿಯಿಂ ಖರದೂಷಣಾದಿಗಳು ಬಲವೆರಸಿ ಬೇಸರದೆ ರಣಮುಖಿಕೆ ಬರಲು (ವಂಕಾರಾ. ೧-೨-೧೮). ೧೦. ಗೊಡವೆ ; ವಿಚಾರ : ಗಂಗವಳ್ಳಿಯ ದೊರೆಯನ್ನು ವಧಿಸೆಂದು ರಾಜಾಜ್ಞೆಯಾಗಿದೆ. ಧರ್ಮಾಧರ್ಮ ವಾಸಿ ನಿನಗೇಕೆ? (ಹಾಹುತ್ತ. ೧೯). ೧೧. ಭಾಗ ; ಪಾಲು : 'ಅರೆವಾಸಿ', 'ಕಾಲುವಾಸಿ' ಪರಾ. ೧೨. ದೇಹಸ್ಥಿತಿಯಲ್ಲಿ ಉಂಟಾಗುವ ಸುಧಾರಣೆ, — ಗುಣ : ವಾಸಿ ಆಗೋ ತರಹಾನೇ ಇಲ್ಲ (ಮುನಿಮಾ. ೧೫) ; ವಾಸಿ ಆಗದ ರೋಗಕ್ಕೆ ರಾತ್ರಿಮದ್ದು ಮಾಡಿದರೂ ವ್ಯರ್ಥ (ಗಾದೆ). ೧೩. ಮೇಲು; ಉತ್ತಮ : ರಾಜಸೂಯವು ನನಗೆ ಮೀರಿದ್ದು ಎಂದು ಅದರ ಯೋಚನೆಯನ್ನು ಬಿಟ್ಟುಬಿಡುವುದೇ ವಾಸಿ (ವಚಭಾ. ೭೬) ; ಇನ್ನು ಮೇಲೆ ತಾನು ಎಚ್ಚರಿಕೆಯಿಂದಿರುವುದು ವಾಸಿ (ದೂಚೆಟ್ಟಿ. ೧೩೬). ೧೪. ಸಾಲವಾಗಿ ಕೊಟ್ಟ ಹಣಕ್ಕೆ ಹಣ ಅಥವಾ ಧಾನ್ಯದ ರೂಪದಲ್ಲಿ ಕೊಡುವ ಬಡ್ಡಿ (?) : ಬಂಗಪಂಜು[ವ] ಮೊದಲಾದ ಹಿರಿಯರು ಲೋಕಬೆಟ್ಟೆಂಬ ಬಾಳಿಕೆಯನು ಬಾಳಿ ಬಂದಲ್ಲಿ ಅಲ್ಲಿಯ ತೆರು [ಸಿ]ದ್ಧಾಯ ಬಡ್ಡಿ ವಾಸಿ ಹೊಂನು ಭತ್ತವನು ಕಾಲಕಾಲಕ್ಕೆ ನಡಸತೀರದೆಯಿರಲಾಗಿ (ಸೌಇಇ. IX - ii, ೪೬೦-೧೩; 1465) ; ನೀಉು ಕಟೆಸ್ತ ಕೆಱೆಯ ಕೆಳಗಣ ಗದೆಯ ಅಳತೆಯ ಕೋಲಿನ ವಾಸಿಗೆ ನಾಉು ಹೆಚ ಕಟಿದು ಖಂಡುಗ ಸಹಕಾರ ಭಾಗ ೧೬ . . . ೮ ಖಂಡುಗದ ಮರ್ಯಾದೆಯಲೂ ಕಡುಗುತ್ತಗೆಯಾಗಿ ಸಲ್ಲಿಸಲುಳವರು (ಎಕ. X. ಮುಳಬಾ. ೧೭೩-೬, 1503). 'ತಲವಾಸಿ' ಪರಾ. ೧೫. ಬಯಕೆ ; ಆಸೆ (?) : ಬರಿಯ ಭಾಷೆಯಿಂ ಪೋಗಾಡಿಕೊಳಲು ಪರನಾರಿಯರ ವಾಸಿಯಂ ಕಲಿತೆ ಯಾ ಮತಿಯಿಂ ಭವಧ್ವಂಶ ನಾಶಮಾಗದೆ ಪೋಗುವುದೆ ಮೂಢ (ವಂಕಾರಾ. ೫-೯-೨೪). ವಾಸೆ$_1$ : ೨. ಅರೊಡನೆ ಸಮರಂಗಕ್ರೋಧಮದಾರೊಡನೆ ಮನ್ಮಥನ ವೆಥೆಯ ವಿಕಾರವಾರೊಡನುಬ್ಬುಗೊಬ್ಬಿನ ವಾಸೆ ಭೇಸಗಳು (ಅಂಬಿಕಾ. ೨೫-೫೫). ೭. ವಾಸೆಯಿಲ್ಲದೆ ಮಂತ್ರಮಂ ಪರಿಗ್ರಹಿಸುವಭಿಲಾಷೆಯಿಂದೊಱಲ್ದು ಅತುಳಾಯಮ್ಮನಾಲಯದಿ ದಾಸಗೆಲಸ ಮಾಡಿ (ತಿರುಶ. ೩-೪೪).

ವಾಸಿಪಂಥ = ಪಣ ಮತ್ತು ಪ್ರತಿಜ್ಞೆ : ರಾಜನಿಯೋಗದವರೆಲ್ಲಾ ಹರಕಪೀಶ್ವರ ಬಾಣನೆಂದು ನುತಿಸುತ್ತಿರಲು ಮಯೂರಂಗೆ ವಾಸಿಪಂಥಂ ಪುಟ್ಟಿ ಹರಿಯಿಂದಲೆನ್ನಂಗ ಸುವರ್ಣವಾಯಿತ್ತು ಒಂದು ದಿನಕ್ಕೆ ಹರನಿಂದ ಪರವಿಲ್ಲೆಂಬುದೇನು ಕಾರಣವೆಂದು ಮಯೂರ ಸೂರ್ಯನ ನುತಿಸಿ ಕೇಳಲು (ಬೈರಸೂ. I, ೪೬).

[ದೇ. ‖ ತಮಿ. ವಾಚಿ; ತುಳು. ವಾಸಿ, ವಾಶಿ; ತೆಲು. ವಾಸಿ]

**ವಾಸಿ$_2$** (ನಾ). ೧. ವಾಸ ಮಾಡುವುದು. ೨. ವಾಸಿಸಿರುವವನು ; ನೆಲಸಿರುವವನು : ಧಾರಿಣಿಯ ವಾಸಿಗಳ್ಗಿಹುದೊಂದು ಹಿತವಾರ್ತೆ ಆರಯ್ಯುದಾರ್ತರ್ ಅತ್ಯಾರ್ತರಾ ಪದವ (ಮಂಕುಕ. ೩೬೭) 'ನಗರವಾಸಿ' ಹೋ. ೩. ಪರಿಮಳದಿಂದ ಕೂಡಿರುವುದು ; ಸುವಾಸನೆಯುಳ್ಳುದು. ೪. ಬಟ್ಟೆಯನ್ನು ಧರಿಸಿರುವುದು. ೫. ಬಟ್ಟೆ ; ಅರಿವೆ ; ವಸ್ತ್ರ (?) : ವಾಸಿಯನೊದರಿ, ರಾಮನ ಸುವಾಸಿನಿಯನೊರ್ಕಯ್ಯೊಳ ವುಂಚಿಟ್ಟು ಘೋರವಜ್ರಾಸಿಯಂ ಕೊಂಡು ಖೇಚರಂ ಪಾಯ್ದನ್ ವಿಹಂಗೇಶನಂ (ಶ್ರೀರಾಮಾ. ೨೪೯-೫೭೧). [ಸಂ. ವಾಸಿನ್]

**ವಾಸಿ$_3$** (ನಾ). ಮರವನ್ನು ಕೆತ್ತುವ, ಅಗಲ ಬಾಯಿಯಿರುವ ಒಂದು ಬಗೆಯ ಕಬ್ಬಿಣದ ಸಾಧನ ; ಬಾಚಿ ; ಉಳಿ. [ಸಂ.]

**ವಾಸಿಗ** (ನಾ). ಹೆಸರು ಗಳಿಸಿದವನು ; ಕೀರ್ತಿಶಾಲಿ : ದೇಶವೆಮ್ಮದು ಹೇಳುವೊಡೆ ಪರದೇಶ ಬಿರುದಿನ ಬಿಂಕಕಾಱರ ವಾಸಿಗರನಲ್ಲೆನಿಸುವಲ್ಲಮನೆಂಬ ಪೆಸರೆನಗೆ (ಪ್ರಭುಲಿ. ೫-೧೩). [ವಾಸಿ$_1$ + - ಗ$_2$]

**ವಾಸಿತ** (ಗು). ೧. ಪರಿಮಳದಿಂದ ಕೂಡಿದ ; ಸುವಾಸನೆಯುಳ್ಳ : ವಿತತೋದ್ವೃತ್ತಪಟವಾಸವಾಸಿತ ದಿಶಾಕಾಂತಾಗಣಂ ನಿರ್ಭರೋತ್ಥಿತ ಪಿಷ್ಟಾತಕಪಿಂಜರೀಕೃತ ವಿಯಚ್ಚಕ್ರಂ (ಆದಿಪು. ೭-೩೮) ; ಗರಳೇಂದೀವರವಾಸಿತೋಗ್ರವಿಷಮಂ ಪುಣ್ಯಾಮೃತಂ ನಿರ್ವಿಷೀಕರಣಂಗೆಯ್ವುವೊಲೊರ್ಮೆಗೊರ್ಮೆಗೆರ್ದೆಯೊಳ್ ಬೈತಿಟ್ಟೆಯೊಳ್ . . . ನಾಲ್ವರಂದಿರ್ವರಿರ್ವರೆ ಯುಗ್ಮದ್ವಯಮಾದರ್ (ಶಾಂತಿಪು. ೬-೧೨೩). (ನಾ). ೨. ವಾಸನೆ ಕಟ್ಟಿದ ವಸ್ತು ; ಸುಗಂಧಗೊಳಿಸಿದ ಪದಾರ್ಥ : "ಭಾವಿತಂ, ವಾಸಿತಂ ೨ ವಾಸನೆ ಕಟ್ಟಿದ ವಸ್ತುವಿನ ಹೆಸರುಗಳು" (ಸಿದ್ಧಾಂತಿ. ೨೦೯). [ಸಂ.]

**ವಾಸಿತೆ** (ನಾ). ೧. ಹೆಂಗಸು : "ರಾಮಾ, ವಾಮಾ, ವಾಮನೇತ್ರಾ . . . ವಾಸಿತಾ, ವರ್ಣಿನೀ, ಸ್ತ್ರೀ, ಸೀಮಂತಿನೀ, ಅಂಗನಾ . . . ಯುವತಿಃ – ಈ ೨೮ ಸ್ತ್ರೀಯರ್" (ಹಲಾಯು. ೭೯-೩೨೭). ೨. ಹೆಣ್ಣು ಆನೆ : "ವಾಸಿತಾ – ೧. ಹೆಂಗುಸು. ೨. ಹೆಣ್ಣಾನೆ" (ಸಿದ್ಧಾಂತಿ. ೨೯೨). [ಸಂ.ವಾಸಿತಾ]

**ವಾಸಿತೋಱು, ವಾಸೆದೋಱು** (ಕ್ರಿ) ೧. ಸಮಾಧಾನವುಂಟಾಗು : ವಾಸಿತೋಱಿತು ಮನಕೆ ಜನಕಮಹೀಶಸುತೆ ನಿನಗಂದು ಭವಬಾಣಾಸನದ ಭಾರಣೆಯ ಬಿಗುವಿನ ಜಗುಳುದಲೆಯಿಂದ ದಾಶರಥಿಗಾ ರಮಣಿ ರಾಣೀವಾಸವಾದಳು (ತೊರರಾ. ೩-೭-೧೭). ವಾಸೆದೋಱು : ೨. ಉಚಿತವಾಗು; ತಕ್ಕುದಾಗಿರು : ಕೇಸರಿ ಮುಂದಾನೆ ಬಿರುದ ಹೊಗಳಿದರೆ ವಾಸೆದೋಱದು (ಸೌಂದಕಾ. ೪-೬). [ವಾಸಿ$_1$ + ತೋಱು]

**ವಾಸಿನಿ** (ನಾ). ೧. ವಾಸಿಸುವವಳು ; ಇರುವವಳು : ಪರಮಾಗಮಮೂರ್ತಿ . . . ವಿಬುಧೋತ್ಕರಮಾನಸಾಬ್ಜವಾಸಿನಿ ಸರಸ್ವತೀದೇವಿ ವರದೆಯಕ್ಕೆಮಗೆಂದುಂ (ರಾಜ್ಯಾವ. ೨). ೨. ಉಡುಪನ್ನು ಧರಿಸಿದವಳು. ೩. ಮರಾಟಿಮೊಗ್ಗು : "ವಾಸಿನೀ – ಧಾತಕೀಕುಸುಮ" (ಓಷಧಿ. ೧೪೯). [ಸಂ. ವಾಸಿನೀ]

**ವಾಸಿಬೀಳು** (ಕ್ರಿ). ಮಾತುಕತೆ ನಡೆ ; ಒಪ್ಪಂದವಾಗು : ಇನಜನ ದಾಶರಥಿ ಪತಿಕರಿಸಿದನು ಗಡ ಪರಮಮೈತ್ರಿಯಲಿ ವಾಸಿಬಿದ್ದುದು ಗಡ ಜಲಧೀಯ ಮಹೀಶನಲಿ ತಮ್ಮನಲಿ (ತೊರರಾ. ೪-೪-೮). [ವಾಸಿ$_{1}$ + ಬೀಳು$_{1}$ (< ಬೀೞ್$_{1}$)]

**ವಾಸಿಲುವಿರಿ** (ನಾ). ಒಂದು ಬಗೆಯ ತೆರಿಗೆ : ಯಿಾ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ ವಾನ್‌ಪಯಿರು ಪುನ್‌ಪಯಿರು ವಾಸಿಲುವರಿ ವಾಲುವರಿ . . . ಮಿಾನ ಬೆಲೆ ಸಂತೆ ಉಂಟಾದ ಹಲ ಉಪಾಧಿಗಳೂ ಸಹ ಸೇರ್‍ಸಿ ಕೊಟ್ಟೆವಾಗಿ (ಸೌಇಇ. IX - ii, ೪೬೩-೬; 1470); ವಾಸಿಲುವರಿ ವಾಲುವರಿ ಶಕುಕಡಿಮೆ ತಳೆಕಡಮೆ . . . ಮೊದಲಾದ ಹಲ ಉಪಾಧಿಗಳು ಸಹ . . . ಸಂವತ್ಸರಂಪ್ರತ್ರಿಊ ತಪ್ಪದೆ ನಡಸುವುದಕ್ಕೆ ಕೊಟ್ಟು (ಸೌಇಇ. IX - ii, ೪೬೬-೬; ಸು. 1472). [<— ತಮಿ. ವಾಚಲ್‌ವರಿ]

**ವಾಸಿವಟ್ಟ** (ನಾ). ಗೌರವದ ಸ್ಥಾನ, – ಪದವಿ ; ಪ್ರತಿಷ್ಠೆ : ಆ ಜಂಗಮ ಮುಂದೆ ಬಂದು ನಿಂದಿರಲು ತಾ ಕುಳಿತಂತೆ ಇದ್ದು . . . ಲೇಸ ನುಡಿಯದೆ ವಾಸಿವಟ್ಟಕ್ಕೆ ಕೂಳನಿಕ್ಕುವ ಧಾತರಿಗೆಲ್ಲಿಹುದೋ ಜಂಗಮಲಿಂಗದ ಪೂಜೆ (ಮೋಳಿಮಾ. ೩೦-೧೨೬) ; ವಾಸಿವಟ್ಟವ ನೋಡಿದನೆ ಲಕ್ಷ್ಮೀಶನವರಲಿ (ಕುವ್ಯಾಕ. ೫-೩೧) ; ಬಹಳ ದ್ವೇಷಗಳನಿಟ್ಟಹುದು ಮನದಲಿ ವಾಸಿವಟ್ಟವ ಮಾಡುವುದು ಹಿರಿಯರನು ಕಂಡವರ ದೂಷಿಸುವುದು . . . ಪರರ ವಿನಾಶವನೆ ಬಯಸುವುದಧರ್ಮ (ಪ್ರಹ್ಲಾಚ. ೯-೭). [ವಾಸಿ$_{1}$ + ಪಟ್ಟ$_{3}$?]

**ವಾಸಿವಾಳಿಕೆ** (ನಾ). ಛಲದಿಂದ ಕೂಡಿದ ಬಾಳು, —ಬದುಕು : ವಾಸಿ ಲೇಸಭಿಮಾನವರ್ಗದ ವಾ[ಪಾಠಾಂ. ರಾ]ಸಿವಾಳಿಕೆ ಲೇಸು (ತೊರರಾ. ೪-೨-೪೧).
[ವಾಸಿ$_{1}$ + ಬಾಳಿಕೆ$_{1}$ (< ಬಾೞ್ಕೆ)]

**ವಾಸಿಷ್ಠ** (ಗು). ೧. ವಸಿಷ್ಠನಿಗೆ ಸಂಬಂಧಿಸಿದ. ೨. ವಸಿಷ್ಠನಿಂದ ರಚಿತವಾದ: 'ವಾಸಿಷ್ಠಪುರಾಣ' ಪರಾ. (ನಾ). ೩. ವಸಿಷ್ಠನ ಮಗ. [ಸಂ.]

**ವಾಸಿಷ್ಠಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು : ಸನತ್ಕುಮಾರಪುರಾಣ . . . ವಾಸಿಷ್ಠಪುರಾಣ ಶೃಂಗ್ಯಪುರಾಣ . . . ಭಾರ್ಗವ ಪುರಾಣವೆಂಬವೇ ಆಯಾಯ ನಾಮಧೇಯಮುಳ್ಳವರಿಂ ನಿರೂಪಿತಂಗಳಾದ ಹದಿನೆಂಟು ಉಪಪುರಾಣಂಗಳು (ವಿವೇಕ. ೯). [ಸಂ.]

**ವಾಸಿಸು** (ಕ್ರಿ). ೧. ವಾಸಮಾಡು ; ನೆಲೆಗೊಳ್ಳು ; ಇರು : ಒಂದೆ ಮನದಲಿ ಸಿಂಧುಶಯನ ಮುಕುಂದ ಎನೆ ಎಂದೆಂದು ವಾಸಿಪನಾ ಮಂದಿರದೊಳಗೆ (ಪುರಂದ. ೧-೧೫೭-೧) ; ಪಟ್ಟಣಗಳಲ್ಲಿ ವಾಸಿಸುವ . . . ಕುಟುಂಬಗಳ ಆದಾಯವನ್ನನುಸರಿಸಿ ಒಲೆಯನ್ನು ಅನುಗೊಳಿಸಬಹುದು (ಅಡುಸಾ. ೨೪). ೨. ಮೂಸು ; ಆಘ್ರಾಣಿಸು : "ವಾಸಿಸು-ಆಘ್ರಾಣೇ" (ಶಮಧಾ) ; ಸುಣೆ . . . ನಭಮಂ ನುಂಗಲೊಡರ್ಚಿದಂತೆ ಮೇಘಮಂ ನೋಡಿ ದೆಸೆದೆಸೆಯಂ ವಾಸಿಸಿ ನಲವೞಿದು (ಪಂಚತಂ. ೪೬-೭) ; ಹೊಸತೊಂದು ತಾವರೆಯರಲ ಕೈವಿಡಿದು ವಾಸಿಸುತ ಮಾತಾಡಿದರೇನು (ಭರಚ. ೪೨-೨೩). ೩. ಮೂಸುವಂತೆ ಮಾಡು ; ಆಘ್ರಾಣಿಸುವಂತೆ ಮಾಡು : ಘ್ರಾಣದಾಹಾರವ ಜಂಗಮವ ವಾಸಿಸುವೆ ಜಿಹ್ವೆಯಾಹಾರವ ಜಂಗಮವನೂಡಿಸುವೆ (ಬಸವ. ೪೨೯). ೪. ಪರಿಮಳವನ್ನು ಬೀರು ; ಸುಗಂಧಯುಕ್ತವಾಗು : ಆ ಸಕಳಸ್ತ್ರೀನಿವಹದ ಪೂಸಿದ ಮೃಗಮದದ ಪುಡಿಯ ಪೂವಿನ ರಜದಿಂ ವಾಸಿಸಿದ ನೀರ ಕದಡಿಂದಾಸವದೊಳ್ ಸೊರ್ಕಿ ಬೆಂಡು ಮುಗುಟ್ಟುವು ಮಿಾಂಗಳ್ (ಪಂಪಭಾ. ೫-೬೫) ; ವಾಸಿಸಲ್ಕೆ ಪಸರಿಸಿದ ಪಲವುಮಲರ ನರವಿಯ ಸೀರ್ವೂಗಳೊಳಗೆ ಪರಿವ ಚಂದನರಸಪ್ರವಾಹಕೃತಕವಾಹಿನಿಗಳುಂ . . . ಮನೋಹರಂಗಳೆನಿಸಿರ್ದುವು (ಚಂದ್ರಪ್ರ. ೧-೧೦೫ ವ). ೫. ಗಮಗಮಿಸುವಂತೆ ಮಾಡು ; ವಾಸನೆಕಟ್ಟು ; ಸುಗಂಧಗೊಳಿಸು : ಕಮಳನೀಳೋತ್ಪಳದೊಳ್ ವಾಸಿಸಿದಕ್ಕಿಯೊಳ್ ಪೆಱವಕ್ಕಿಯಂ ನೀವುಂ ಬಂದೊಡೆ ಬೆರಸಿಯಟ್ಟುದು ಕೂಟುಮಪ್ಪುದಱಿಂ ವಾಸಿಸಿದಕ್ಕಿಯ ಕೂಟಂ ನುಂಗುಗುಮುಟೞಿದ ಕೂಟನುಗುಟ್ಟುಂ (ವಡ್ಡಾರಾ. ೨೭-೭) ; ಬಿಸಿಲೊಳದನಿಟ್ಟು ಚಂಪಕಕುಸುಮದಿನಿಂಬಾಗೆ ನಿಚ್ಚಲುಂ ವಿಧಿಯಿಂ ವಾಸಿಸಿದೊಡೆ ಚಂಪಕತೈಲಂ ವಸುಧಾಧಿಪ ಯೋಗ್ಯಮಕ್ಕುಂ (ಲೋಕೋಪ. ೭-೧೭). ೬. (ಆಲಂ) ಅನುಭವಿಸು (?) : ನಿಲೆ ವಾಸಿಸಿ ಪಲವು ಭವಂ ನೆಲಸಿದ ಮಿಥ್ಯಾತ್ವದೊಂದು ದುರ್ವಾಸನೆಯಂ ಸಲೆ ವಾಸಿಸಿದಾತಂ ಪೊರ್ದಲೊಲ್ಲನತಿವಿಮಳಜೈನನುದ್ವಾಸನೆಯಂ (ಸಮಪ. ೮-೨೩೪). 'ವಾಸನಿಸು' ಪರಾ.
[ವಾಸನ + - ಇಸು$_{3}$]

**ವಾಸು$_{1}$** (ಕ್ರಿ). ಪಠಿಸು ; ವಾಚನಮಾಡು : ಸಂಜೆಯ ವಂದನೆಯ ಅಂಜದಲೆ ವಾಸುವದು ಸಂಜೆಯಂಜಿಕೆಯನೊಡಗೂಡಲಾ ಸಂಜೆ ನಂಜಿನಂತಕ್ಕು (ಸರ್ವಜ್ಞ. ೯೨೩).
[< ವಾಚಿಸು. / ತಮಿ. ವಾಚಿ]

**ವಾಸು$_{2}$** (ನಾ). ೧. ಸರ್ವವ್ಯಾಪಕನಾದವನು ; ಪರಮಾತ್ಮ ; ಭಗವಂತ. ೨. ಆತ್ಮ ; ಜೀವ. ೩. ವಿಷ್ಣು. ೪. [ಜ್ಯೋತಿ] ಪುನರ್ವಸು ನಕ್ಷತ್ರ. [ಸಂ.]

**ವಾಸುಕಿ** (ನಾ). ೧. ಅಷ್ಟಫಣಿಗಳಲ್ಲಿ ಒಂದು ; P ದೇವತೆಗಳೂ ರಾಕ್ಷಸರೂ ಕ್ಷೀರಸಾಗರವನ್ನು ಕಡೆಯುವಾಗ ವಾಸುಕಿಯನ್ನು ಮಂದರಪರ್ವತಕ್ಕೆ ಹಗ್ಗದಂತೆ ಸುತ್ತಿ ಕಡೆದರು ಎಂದು ಭಾವಿಸಲಾಗಿದೆ : ತಮ್ಮ ತಮ್ಮ ಪೆಡೆಗಳಿಂದಾ ಇಂದ್ರಾಗ್ನಿ ಮೊದಲಾದೆಂಟುದಿಕ್ಕಿನ ಭೂಮಿಯಂ ಕ್ರಮದಿಂ ಪೊತ್ತು ಅನಂತ ತಕ್ಷಕ ವಾಸುಕಿ . . . ಕಾಳವೆಂಬಷ್ಟಕುಲಫಣಿಗಳಿರ್ಪುಂ (ವಿವೇಕ. ೧೫೦). ೨. ಒಂದು ಬಗೆಯ ಹಾವು : ಬೆನ್ನಿನಲ್ಲಿ ನೈದಲಪುಷ್ಪದ ಆಕಾರವುಳ್ಳದು ವಾಸುಕಿಯೆನಿಸಿಕೊಂಬದು (ವಿಷಚಿ. ೨-೬). [ಸಂ.]

**ವಾಸುಗಿ, ಬಾಸುಗಿ** (ನಾ). ೧. = ವಾಸುಕಿ ೧ : ಕನ್ನಡಂಗಳೊಳೆಂದುಂ ವಾಸುಗಿಯುಮಱಿಯಲಾಱದೆ ಬೇಸಱುಗುಂ ದೇಶಿ ಬೇಱೆವೇಱಪ್ಪುದಱಿಂ (ಕವಿರಾ. ೧-೪೬) ; ನಡೆಗಲ್ಪಂದುಂ ಬೆಣ್ಪಿಂ ಕೊಡೆ ನೆಗೆದಪ್ಪುದುರ್ವಿಯೆಂದು ವಾಸುಗಿ ಪಲವುಂ ಪೆಡೆಯಂ ಶಿಶು ನಡೆವೆಡೆಯೊಳ್ ಪಡೆದಾಂತು ಸಹಸ್ರಫಣನೆನಲ್ ಪೆಸರ್ವಡೆದಂ (ಪಂರಾಮಾ. ೩-೧೨೯). ೨. ಒಂದು ಬಗೆಯ ವೀಣೆ : ವಾಸುಗಿಯ ನಾಗಸರವೀಣೆ ತುಂಬುರವೀಣೆಯಾ ಸುನಾರದವೀಣೆ . . . ಗಾನ ಸಂಗೀತರಸ ರಚನೆ ಪ್ರಚುರವೆತ್ತು (ನವಮೋ. ೧೭-೪೨). ಬಾಸುಗಿ : ೧. ರಕ್ಕಸರ್ಕಳಱಿಯರೆ ದಿಟದಿಂ ಮಾನಸರಱಿಯರೆ ಬಾಸುಗಿ ತಾನಱಿಯನೆ (ಕಬ್ಬಿಕಾ. ೧೮೭) ; ವಾಸುಕಿ – ಬಾಸುಗಿ (ಶಮದ. ೨೫೫ ಪ್ರಯೆ೦) ; ಆವನ ಭಕ್ತ್ಯತಿಶಯಂಬೇಳ್ವೊಡೆ . . . ನಾಲಗಿರ್ಚ್ಛಾಸಿರಮನುಳ್ಳ ಬಾಸುಗಿಗಳವೆ (ಪದ್ಮರಾ. ೪-೧೪). [< ಸಂ. ವಾಸುಕಿ. / ಪ್ರಾ. ವಾಸುಇ, ವಾಸುಗಿ]

**ವಾಸುಗಿವಕ್ಕಿ** (ನಾ). ಒಂದು ಬಗೆಯ ಹಕ್ಕಿ : ತೋಱಿತು ವಾಯಸನೆಡಗಡೆಯೆಡದಿಂದೆ ಹಾಱಿತು ಹಂಗ ದಕ್ಷಿಣಕೆ ದೂಱಿತು ಬಲದ ಭಾಗದಲ್ಲಿ ಮುಂಗಟ್ಟೆ ಪಾಱಿತು ವಾಸುಗಿವಕ್ಕಿ (ಮೋಹತ. ೬-೨೫). [ವಾಸುಗಿ? + ಪಕ್ಕಿ]

**ವಾಸುದೇವ** (ನಾ). ೧. ವಿಷ್ಣು : ಕ್ರಿ.ಪೂ. ಒಂದು ಮತ್ತು ಎರಡನೆಯ ಶತಮಾನದ ಕೆಲವು ಶಾಸನಗಳು ಗರುಡವಾಹನನಾದ ವಾಸುದೇವನ ಮತ್ತು ಸಂಕರ್ಷಣನ ಪೂಜೆಯ ಅಂಶಗಳನ್ನು ಸೂಚಿಸುತ್ತವೆ (ಭಾರದ. ೨೮೩). ೨. ವಸುದೇವನ ಮಗ ; ಕೃಷ್ಣ : ಅತುಳ ಗೀತಾನಕಧ್ವಾನಮುಣ್ಮುತ್ತಿರೆ ಪೊಕ್ಕಂ ವಾಸವಾವಾಸಮನಿೞಿಪ ನಿಜಾವಾಸಮಂ ವಾಸುದೇವಂ (ಜಗವಿ. ೯-೧೩೪) ; ಕಂಡೆ ನಾ ಗೋವಿಂದನ . . . ಶ್ರೀಕೃಷ್ಣನ ವಾಸುದೇವ ಅಚ್ಯುತಾನಂತನ (ಪುರಂದ. ೧-೯೦-೧). ೩. [ಜೈನ] ಅರ್ಧಚಕ್ರವರ್ತಿಗಳಲ್ಲಿ ಒಬ್ಬ; P "ಇವರಿಗೆ ನಾರಾಯಣ ಎಂದು ಹೆಸರಿದೆ. ಇವರು ತ್ರಿಖಂಡಕ್ಕೆ ಒಡೆಯರಾಗಿರುತ್ತಾರೆ" (ಆದಿಪು. ಜೈನ ಪಾರಿಭಾಷಿಕ ಶಬ್ದ ಕೋಶ) : ಸುಖದುಃಖಾದಿಗಳುಮಂ ತೀರ್ಥಕರಚಕ್ರಧರಬಲದೇವ ವಾಸುದೇವಪ್ರತಿವಾಸುದೇವಕಥಾಸಂಬಂಧಮುಮಂ ನಿರ್ಣಯಮಾಡಿದಾಗಳ್ (ಆದಿಪು. ೧೦-೬೩ ವ). ೪. [ತತ್ತ್ವಶಾ] ಪರಮಾತ್ಮನ ಒಂದು ರೂಪ : ವ್ಯೂಹಗಳು ನಾಲ್ಕು – ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂದು (ಭಾತತ್ತ್ವ. ೭೦೩). [ಸಂ.]

**ವಾಸುಪೂಜ್ಯ** (ನಾ). [ಜೈನ] ಹನ್ನೆರಡನೆಯ ತೀರ್ಥಂಕರನ ಹೆಸರು: ಶ್ರೀವಾಸುಪೂಜ್ಯಜಿನನಂ ದೇವಂ ಮಹಿಮಾತಿಶೇಷಭಾಸುರನಂ ಭಾವಿಸುವಂ ದ್ವಾದಶನಂ ಕೇವಳಬೋಧಪ್ರಭಾವಲಾಭನಿಮಿತ್ತಂ (ಬಾಧಪು. ೧೭-೫೯೩). [ಸಂ.]

**ವಾಸೆ$_{1}$** 'ವಾಸಿ$_{1}$' ನೋ.

**ವಾಸೆ$_{2}$** (ನಾ). ಒಂದು ಬಗೆಯ ಸಸ್ಯ ; ಆಡುಸೋಗೆ : "ವಾಸಾ-ಆಡಸೋಗೆ" (ಓಷಧಿ. ೧೪೯). [ಸಂ. ವಾಸ]

ವಾಸೆದೋರು 'ವಾಸಿತೋಱು' ನೋ.

ವಾಸೋದಕ (ನಾ). ಸತ್ತವರಿಗೆ ಸಂಸ್ಕಾರಸಮಯದಲ್ಲಿ ಒದ್ದೆಬಟ್ಟೆಯನ್ನು ಹಿಂಡಿ ಕೊಡುವ ತರ್ಪಣ : ಪ್ರಭುಗಳು ಪುರೋಹಿತರ ಸಲಹೆಯಂತೆ ಸ್ನಾನಮಾಡಿ . . . ವಾಸೋದಕಕುಂಭವನ್ನು ಕೈಯಲ್ಲಿ ಹಿಡಿದು . . . ಪಿತೃಭೂಮಿಗೆ ಬರಿಗಾಲಿನಲ್ಲಿ ಹೊರಟರು (ಶಾಂತಲಾ. ೧೮೫). [ಸಂ.]

ವಾಸ್ತವ (ಗು). ೧. ನೈಜವಾದ ; ಯಥಾರ್ಥವಾದ : ವಾಸ್ತವಭಕ್ತಿಯುತಂ ರೂಪಸ್ತವನಮಣಿಪ್ರವಾಳಮಂ ಜಿನನಾಸ್ಥಾನಸ್ತವನಮನೊದವಿಸಿ ಭುವನಸ್ತುತನಾದ ಗ್ಗಳಂಗಮಗ್ಗಳರೊಳರೇ (ಪಾರ್ಶ್ವಪು. ೧-೬೧) ; ವಾಸ್ತವಸಂಗತಿ ಬೇರೆಯೇ ಇರುವಂತಿದೆ (ಚೋರದ. ೬). (ನಾ). ೨. ಸ್ವಾಭಾವಿಕವಾದುದು ; ಸಹಜವಾದುದು : ಮೊಘಲ್‌ಕಲೆ ನಿರೂಪಣಾತ್ಮಕವೂ ಸಾಹಿತ್ಯಿಕವೂ ವಾಸ್ತವವೂ ಆಗಿತ್ತು (ಭಾರದ. ೫೪೯) ; ವಾಸ್ತವವಾಗಿ ಭಿನ್ನರಾಗಿರುವ ಜೀವ ಜಗತ್ತುಗಳು ನಿತ್ಯಸತ್ಯವಸ್ತುವೆನಿಸಿದ ಪರಮಾತ್ಮನಿಗೆ ಶರೀರವಾಗಲಾರವು (ಶಕ್ತಿವಿ. ೧೭). ೩. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ಬಗೆ ; ವಸ್ತುವಿನ ಸ್ವಭಾವವನ್ನು ಹೇಳುವಾಗ ಇದ್ದುದನ್ನು ಇದ್ದಂತೆ ಹೇಳುವುದು : ವಸ್ತುಸ್ವಭಾವಕಥನಂ ವಾಸ್ತವಮುಪಮಾದ್ಯಶೇಷವಕ್ರೋಕ್ತಿವಿಪರ್ಯಸ್ತಂ ಸಮಸ್ತಲೋಕಮನಸ್ತೋಭನಕಾರಿ ಚಾರುತರಪುರುಷಾರ್ಥಂ (ಕಾವ್ಯಾವ. ೬೦೭) ; ಸಾದೃಶ್ಯಮೂಲಕವಲ್ಲದೆ ಇರುವ ಅರ್ಥಾಲಂಕಾರಗಳೂ ಎಷ್ಟೋ ಇರುವುದರಿಂದ ವಾಮನಮತವನ್ನು ಒಪ್ಪದೆ ರುದ್ರಟನು ೧. ವಾಸ್ತವ, ೨. ಔಪಮ್ಯ, ೩. ಅತಿಶಯ, ೪. ಶ್ಲೇಷ – ಇವುಗಳನ್ನು ಅನುಸರಿಸಿ ವಿಭಾಗಮಾಡುತ್ತಾನೆ (ಕೃಪಿಡಿ. ೨೫೨). [ಸಂ.]

ವಾಸ್ತವಂ (ಅ). ನಿಜವಾಗಿ ; ದಿಟವಾಗಿ : ಹುಡುಕುತಿರೆ ಕಣ್ಗೆ ಬೀಳ್ದುದದೊ ವಾಸ್ತವಂ ಸ್ವರ್ಣನಿಧಿರಾಶಿ (ಶ್ರೀರಾಮಾ. ೬೪-೨೮೦). [< ವಾಸ್ತವ]

ವಾಸ್ತವಿಕ (ಗು). ೧. ನಿಜವಾದ ; ದಿಟವಾದ : ಪ್ರತಿನಿಮಿಷವನ್ನು ಉಪಯುಕ್ತವಾದ ಕೆಲಸದಲ್ಲಿ ವೆಚ್ಚಮಾಡುವುದರಿಂದ ವಾಸ್ತವಿಕಸುಖವೂ ಮರ್ಯಾದೆಯೂ ದ್ರವ್ಯವೂ ದೊರೆಯುವವು (ಮುಂಬಯಿ. ೪-೧೯೦). (ನಾ). ೨. ನಿಜವಾದುದು ; ವಾಸ್ತವವಾದುದು : ಮಾಂತ್ರಿಕ ದೈವಿಕ ನೈಸರ್ಗಿಕ ಯೌಕ್ತಿಕ ವಾಸ್ತವಿಕಗಳೆಂಬ ಪಂಚಭೇದಸಾಧನಗಳಿಂದಲುಂ (ವಿವೇಕ. ೨೬೩); ನೀನು ಹೇಳಿದ್ದು ವಾಸ್ತವಿಕವೇ ಸರಿ (ಮುಂಬಯಿ. ೪-೬೮). ೩. ಸಹಜವಾದುದು ; ಸ್ವಾಭಾವಿಕವಾದುದು : ಶಿಕ್ಷಣತತ್ವವನ್ನು ಆದಷ್ಟು ವಾಸ್ತವಿಕಮಾರ್ಗದಲ್ಲಿ ರೂಪಿಸುವುದು ಬಳಕೆಗೆ ಬರುತ್ತಿದೆ (ಶಿಕ್ಷದ. ೪೦೮). ೪. ಸರಿಯಾದುದು ; ಉಚಿತವಾದುದು ; ಯೋಗ್ಯವಾದುದು : ಅವರ ಅಭಿಪ್ರಾಯವು ವಾಸ್ತವಿಕವಿದೆ (ಮುಂಬಯಿ. ೪-೭೪) ; ಅವರ ಮುಂದಿನ ಶಿಕ್ಷಣಕ್ಕೆ ವಾಸ್ತವಿಕವೂ ಫಲದಾಯಕವೂ ಆದ ಸಲಹೆ ನೀಡುವಂತಿರಬೇಕು (ಶಿಕ್ಷದ. ೩೬೨). [ಸಂ.]

ವಾಸ್ತವಿಕತೆ (ನಾ). ಸಹಜವಾದುದು ; ಸ್ವಾಭಾವಿಕವಾದುದು : ಇಂಗ್ಲಿಷಿನ 'Realism' ಎಂಬುದಕ್ಕೆ ಸಮಾನವಾದ ನಮ್ಮ "ವಾಸ್ತವಿಕತೆ" (ಸಮಾಲೋ. ೧೧೧).

[ಸಂ. ವಾಸ್ತವಿಕತಾ]

ವಾಸ್ತವ್ಯ (ಗು). ೧. ವಾಸಿಸುವ ; ನೆಲಸುವ. ೨. ವಾಸಿಸಲು ಯೋಗ್ಯವಾದ. (ನಾ). ೩. ವಾಸ ; ಮೊಕ್ಕಾಮು : ತುಳುವರೆಂದರೆ ತುಳುಭಾಷೆಯ ನ್ನಾಡುವವರೋ? ಅಥವಾ ತುಳುದೇಶದಲ್ಲಿ ವಾಸ್ತವ್ಯ ಮಾಡಿಕೊಂಡಿರುವವರೋ? (ತುಳುನಾ. ೯) ; ಬಸವಂತಿಗೆ ಮಾತುಕೊಟ್ಟಂತೆ, ಅಂದಿನಿಂದಲೇ ನನ್ನ ವಾಡೆಯ ವಾಸ್ತವ್ಯ ಸುರುವಾಯಿತು (ದೀಪಹ. II, ೧೭೩). ೪. ವಾಸಮಾಡುತ್ತಿರುವವನು : "ವಾಸ್ತವ್ಯಃ, ಮನೆಯೊಳಿರಲ್ತಕ್ಕಂ" (ಕಾಶಕ್ಕ. ೧೭೧). [ಸಂ.]

ವಾಸ್ತು (ನಾ). ೧. ಮನೆ ಮುಂತಾದ ಕಟ್ಟಡಗಳನ್ನು ಕಟ್ಟಲು ಯೋಗ್ಯವಾದ ಜಾಗ ; ಗೃಹನಿರ್ಮಾಣಕ್ಕೆ ತಕ್ಕ ಸ್ಥಳ, – ನಿವೇಶನ : ಆ ವರನಿಧಿಲಾಭದಿನುಂ ಪಾವನಪರಿಪಕ್ವಪುಣ್ಯದಿನುಮನೆ ಮತ್ತಂ ಆ ವಾಸ್ತುವಿನೊಳ್ ವಾಸ್ತುಸುಕೋವಿದರೊಳ್ಪಿನೆ ನೆಗಳ್ಚಿದರ್ ಸಿರಿವೊಳಲಂ (ಸೌನಂದ. ೧-೪೧). ೨. ಮನೆ ; ನಿವಾಸ : ಸ್ವಸ್ತಿಶ್ರೀಯಿರ್ಪುತ್ತಮವಾಸ್ತು ಜಯಶ್ರೀಯ ವಿಲಸಿತಾವಾಸಂ ಲೋಕಸ್ತುತ್ಯ ಯಶೋವನಿತೆಯ ವಿಸ್ತಾರಸ್ತನಮೆಸೆವ ಹೊಯ್ಸಳವಂಶಂ (ಎಕ. V, ಅರಸೀ. ೩೮-೨; 1174). ೩. ಮನೆಯ ಒಡೆಯ, –ಯಜಮಾನ : "ವಾಸ್ತುಃ - ಮನೆಯೊಡೆಯಂ" (ಕಾಶಕ್ಕ. ೧೭೧). ೪. ಅರುವತ್ತುನಾಲ್ಕು ಕಲೆಗಳಲ್ಲಿ ಒಂದು ; ಕಟ್ಟಡ ನಿರ್ಮಾಣ ವಿದ್ಯೆ : ಶಿಲಾಕರ್ಮಮುತ್ಕರಣಂ ಚಿತ್ರವಿವಕ್ಷೆ ವಾಸ್ತು ಶಕುನಜ್ಞಾನಂ . . . ಯಂತ್ರಪ್ರಯೋಗಮಖಿಲವ್ಯಾಹೋತ್ಕರಮೆಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪಪು. ೪-೫೯) ; ವಾಸ್ತುಶಿಲ್ಪದಲ್ಲಿ ಶಿಲ್ಪವೂ ಅಡಕವಾಗಿದೆ. ಪಾಶ್ಚಾತ್ಯ (European) ಸಂಪ್ರದಾಯದಲ್ಲಿ ವಾಸ್ತು ಬೇರೆ (Architecture), ಶಿಲ್ಪ ಬೇರೆ (Sculpture). ಆದರೆ ಭಾರತೀಯ ವಾಸ್ತುಶಿಲ್ಪದಲ್ಲಿ ಈ ಭೇದವಿಲ್ಲ (ಭಾರದ. ೪೯೨).

[ಸಂ.]

ವಾಸ್ತುಕ (ನಾ). ಒಂದು ಬಗೆಯ ಸೊಪ್ಪಿನ ಗಿಡ ; ಚಕ್ಕೋತ : "ವಾಸ್ತುಕಮೆಂಬುದು ಚಕ್ಕವತ್ತ" (ಹಲಾಯು. ೨೭-೧೦). [ಸಂ.]

ವಾಸ್ತುಕರ್ಮ (ನಾ). ೧. ಕಟ್ಟಡನಿರ್ಮಾಣ ವಿದ್ಯೆ ; ವಾಸ್ತುಶಿಲ್ಪ. ೨. ಗೃಹಪ್ರವೇಶಕ್ಕೆ ಮೊದಲು ಗೃಹಶಾಂತಿಗಾಗಿ ಮಾಡುವ ಪೂಜಾದಿ ವಿಧಿ : ಅಖಿಲಚಿತ್ತ ಋಷಿಗಳಿಗೆ ವಾಸ್ತುಕರ್ಮಾದಿ ಬಲಿಶಾಂತಿಕರ್ಮಂಗಳಂ ನೆಗಳ್ದಾ ಜಿತೇಂದ್ರಿಯರ್ . . . ಸುಪವಿತ್ರ ಸತ್ರವೇಶ್ಮಂಬೊಕ್ಕರ್ (ಶ್ರೀರಾಮಾ. ೧೪೪-೬೮). [ಸಂ. ವಾಸ್ತುಕರ್ಮನ್]

ವಾಸ್ತುಕಲೆ (ನಾ). = ವಾಸ್ತು ೪ : ಪುರಾತನಪಟ್ಟಣಗಳೂ ಕಟ್ಟಡಗಳೂ . . . ವಾಸ್ತುಕಲೆಯು ಕ್ರಮೇಣ ಹೇಗೆ ವೃದ್ಧಿಹೊಂದಿತೆಂಬುದನ್ನು ತೋರಿಸಿಕೊಡುತ್ತವೆ (ಮೈವಾಸ್ತು. ೨೨). [ಸಂ. ವಾಸ್ತುಕಲಾ]

ವಾಸ್ತುಕ್ರಮ (ನಾ). ಕಟ್ಟಡನಿರ್ಮಾಣ ಶಾಸ್ತ್ರ : ಎಸೆದುವಲ್ಲಲ್ಲಿ ವಾಸ್ತುಕ್ರಮಂಬಿಡಿದು ರಂಜಿಸುವ ಮಜ್ಜನಶಾಲೆಯುಂ . . . ಭೋಜನಶಾಲೆಯುಂ (ಚಿಬಪು. ೫-೪೯). [ಸಂ.]

ವಾಸ್ತುಪತಿ (ನಾ). ೧. ಕಟ್ಟಡ ಮನೆ ಮುಂತಾದುವುಗಳ ಶಂಕುಸ್ಥಾಪನೆಯಲ್ಲಿ ಅಧಿಷ್ಠಿಸುವ ದೇವತೆ; ಗೃಹಾಧಿದೇವತೆ. ೨. (ಆಲಂ) ನಿರ್ಮಾಣಕರ್ತೃ ; ಶಿಲ್ಪಿ : ಶ್ರೀಕರ್ಣಾಟಕರಾಜ್ಯವಾಸ್ತುಪತಿಯಂ . . . ವಿದ್ಯಾರಣ್ಯವರೇಣ್ಯನಂ ಚತುರಚಾತುರ್ವರ್ಣ್ಯದ್ಯನಂ ವಂದಿಪೆಂ (ಗಿಳಿವಿಂ. ೫೧-೧). [ಸಂ.]

ವಾಸ್ತುವಿದ್ಯೆ (ನಾ). = ವಾಸ್ತು ೪ : ಅನಂತವಿಜಯಂಗೆ ವಿಚಿತ್ರಕಲೆಯುಮಂ ವಾಸ್ತುವಿದ್ಯೆಯುಮನುಪದೇಶಂಗೆಯ್ದು (ಆದಿಪು. ೮-೬೦ ವ); ಇದುವರಗೂ ವಾಸ್ತುವಿದ್ಯೆ ಎಲ್ಲಾ ಗುಹಾಂತರ್ದೇವಾಲಯಗಳಲ್ಲಿ ವ್ಯಕ್ತವಾಗಿತ್ತು (ಮೈವಾಸ್ತು. ೬೫). [ಸಂ. ವಾಸ್ತುವಿದ್ಯಾ]

ವಾಸ್ತುವಿಧೇಯ (ನಾ). ವಾಸ್ತುಶಾಸ್ತ್ರಕ್ಕೆ ಅನುಗುಣವಾದುದು : ರಾಯನಾಜ್ಞೆಯೊಳಭಪುರದ ಹೊಱಗಾಯತದ ಭೂಮಿಯಲಿ ವಾಸ್ತುವಿಧೇಯವೆನಲೞವಡಿಸಿದರು ಹನ್ನೆರಡುಯೋಜನವ (ಕುವ್ಯಾಅ. ೭-೧೩). [ಸಂ.]

ವಾಸ್ತುಶಾಂತಿ (ನಾ). ಕಟ್ಟಡನಿರ್ಮಾಣಕ್ಕಾಗಿ ಪಾಯವನ್ನು ಹಾಕುವಾಗ ಅಥವಾ ಹೊಸಮನೆಯನ್ನು ಪ್ರವೇಶಿಸುವಾಗ ಮಾಡುವ ಶುದ್ಧಿಕಾರ್ಯದ ವಿಧಿ ; ಗೃಹಶಾಂತಿ : ಒಂದು ತಿಂಗಳಲ್ಲಿ ಮನೆ ಸಿದ್ಧವಾಯಿತು. ಆದರ ವಾಸ್ತುಶಾಂತಿಗೆ ನಮ್ಮಲ್ಲಿ ಏನಿತ್ತು? (ಸ್ಮೃತಿಚಿ. ೩೨೭). [ಸಂ.]

ವಾಸ್ತುಶಾಸ್ತ್ರ (ನಾ). ವಾಸ್ತುಕಲೆಯನ್ನು ವಿವರವಾಗಿ ತಿಳಿಸುವ ಶಾಸ್ತ್ರ : ಸಕಲಕಲಾವಿದರಿಗೆ ಅನುಗುಣವಾದ ವಸತಿಕಲ್ಪನೆ ಮುಂತಾದ ಎಲ್ಲಾ ವಿಷಯಗಳ ಪ್ರತಿಪಾದನೆ ಇರುವ ಭಾಗವನ್ನು ವಾಸ್ತುಪ್ರಕರಣವೆಂದು ಉಲ್ಲೇಖಿಸಿದ್ದಾರೆ. ಅದೇ ಭಾಗವನ್ನು ಪ್ರತ್ಯೇಕವಾಗಿ ಮತ್ತಷ್ಟು ವಿಸ್ತಾರವಾಗಿ ತಿಳಿಸುವ ಶಾಸ್ತ್ರವನ್ನು ವಾಸ್ತುಶಾಸ್ತ್ರವೆಂದು ಕರೆಯುತ್ತಾರೆ (ಭಾರದ. ೭೭) ; ವಾಸ್ತುಶಾಸ್ತ್ರವು ಬ್ರಹ್ಮ, ವಿಷ್ಣು, ಮಹೇಶ್ವರರಿಂದ ಇಂದ್ರ, ಬೃಹಸ್ಪತಿ, ನಾರದರಿಗೆ ಅನುಗ್ರಹಿಸಲ್ಪಟ್ಟಿತೆಂದೂ ಅವರ ಮೂಲಕ ಅನೇಕ ಋಷಿಗಳಿಗೆ ಬಂದಿತೆಂದೂ ಶಾಸ್ತ್ರ ಹೇಳಿದೆ (ಮೈವಾಸ್ತು. ೨೧). [ಸಂ.]

ವಾಸ್ತುಶಿಲ್ಪ (ನಾ). ಕಟ್ಟಡಗಳ ನಕ್ಷೆಯನ್ನು ತಯಾರಿಸಿ, ನಿರ್ಮಾಣಮಾಡುವ ಕಲೆ ; ಗೃಹನಿರ್ಮಾಣ ಕಲೆ : ಇವರ ಕಾಲವೇ ಕರ್ನಾಟಕವಾಸ್ತುಶಿಲ್ಪದ ವೈಭವದ ಕಾಲ (ಮೈವಾಸ್ತು. ೧೩) ; ಸುಮಾರು ೫೦ ವರ್ಷಗಳಿಗಿಂತ ಹಿಂದೆ ಭಾರತೀಯವಾಸ್ತುಶಿಲ್ಪದ ವಿಚಾರದಲ್ಲಿ ಪಾಶ್ಚಾತ್ಯವಿದ್ವಾಂಸರಲ್ಲಿ ಅನೇಕ ತಪ್ಪುಭಾವನೆಗಳು ಹರಡಿದ್ದವು (ಭಾರದ. ೪೯೧). [ಸಂ.]

ವಾಸ್ತುಶಿಲ್ಪಿ (ನಾ). ಕಟ್ಟಡಗಳನ್ನು ನಿರ್ಮಾಣಮಾಡುವವನು.

[ಸಂ. ವಾಸ್ತುಶಿಲ್ಪಿನ್]

**ವಾಸ್ತೋಷ್ಪತಿ** (ನಾ). ೧. ಮನೆಯ ಅಥವಾ ನಿವೇಶನದ ಅಧಿದೇವತೆ. ೨. ಇಂದ್ರ ; ದೇವೇಂದ್ರ : ವಾಸ್ತೋಷ್ಪತಿ ವಿಧಿಮುಖ್ಯ ಸುರಸ್ತೋಮಾಂಬಕ ಚಕೋರಕಕ್ಕುಂ ಯತ್ಸ್ವಜಸ್ತತಿ ಚಂದ್ರಿಕೆಯಾಗ ಕೌಸ್ತುಭಮಿಷ್ಟಿತಮನೆಮಗೆ ಹರಿವಕ್ಷಸ್ಥಂ (ದಿವ್ಯಚ. ೧-೧೦). [ಸಂ.]

**ವಾಹ** (ಗು). ೧. ಹೊರುವ ; ಒಯ್ಯುವ. (ನಾ). ೨. ಹೊರುವುದು. ೩. ಭಾರವನ್ನು ಹೊರುವ ಆಳು ,–ಸೇವಕ. ೪. ಭಾರವನ್ನು ಹೊರುವ (ಎತ್ತು, ಕತ್ತೆ ಮುಂತಾದ) ಪ್ರಾಣಿ. ೫. ಕುದುರೆ ; ಅಶ್ವ : ಈ ನಭಸ್ಥಲದೊಳ್ ಪೋಗುತಮೆನ್ನನಿಂತುರದೆ ನೀಂ ನಿನ್ನೊಂದು ವಿದ್ಯಾತಪೋಬಲದಿಂ ದಾಂಟಿದೆ ವಾಹದಂತಿರದಜೆಂ ವಾಹತ್ವಮಂ ತಾಳ್ದಿ ಭೂತಲದೊಳ್ ಪೋ ನೆಲಸೆಂದು ಕೊಟ್ಟನೆನಗಾ ವೈಮಾನಿಕಂ ಶಾಪಮಂ (ಕಾದಂಬು. ೬೧೩) ; ಚಿತ್ರಾಂಗದನಚ್ಚರಿದಾಳ್ದಿ ವಾಹಮಂ ಬರಿಸಿ ನೊಸಲೊಳಸೆವ ಒಲೆಯಿರೆ ಕೊಂಡಿಂತು ವಾಚಿಸಿದಂ (ರಾಮಾಶ್ವ. ೧೨೪-೧೫). ೬. ಬಂಡಿ, ಗಾಡಿ , ರೈಲು ಮುಂತಾದ ಸಂಚಾರಸಾಧನ ; ವಾಹನ. ೭. ಗಾಳಿ ; ವಾಯು. ೮. ತೋಳು ; ಬಾಹು. ೯. ಪ್ರವಹಿಸುವಂಥದು ; ಪ್ರವಾಹ : ಭರತವಾಹಿನಿ ದಾಂಟಿದತ್ತು ಮಂದಾಕಿನಿಯ ವಾಹಮಂ (ಶ್ರೀರಾಮಾ. ೧೬೪-೫೯೮). ೧೦. (ಸುಮಾರು ಒಂದು ಟನ್ ತೂಕಕ್ಕೆ ಸಮವಾದ) ಒಂದು ಅಳತೆಯ ಪ್ರಮಾಣ : ಒಂದು ಸೊಲ್ಲಗೆಯೇ ನಿಟುಂಜವದು ನಾಲ್ಕಾಗಲೊಂದು ಕುಡಬವದು ನಾಲ್ಕಾಗಲೊಂದು ಪ್ರಸ್ಥವಾ ಪ್ರಸ್ಥವೆರಡಾಗಲೊಂದು ವಾಹವದು (ವಿವೇಕ. ೮). [ಸಂ.]

**ವಾಹಕ** (ಗು). ೧. ಭಾರವನ್ನು ಹೊರುವ. ೨. (ಸುದ್ದಿ , ಪತ್ರ , ವಿದ್ಯುತ್ತು ಮುಂತಾದುವನ್ನು ) ಒಯ್ಯುವ ; ಸಾಗಿಸುವ. (ನಾ). ೩. ಭಾರವನ್ನು ಹೊರುವ ಸಾಧನ : ಬೈಸಿಕಲ್, ಮೊ. ಗಳಲ್ಲಿ ಸಾಮಾನು ಹೇರುವ ಭಾಗ : ಹೊರಿಗೆ ; ವಾಹಕ (Carrier. ೨೦೫೩). ೪. ಭಾರವನ್ನು ಹೊರುವವನು. ೫. (ವಿದ್ಯುತ್ತು, ಸಂದೇಶ ಮುಂತಾದುವನ್ನು ) ಒಯ್ಯುವ ಸಾಧನ : ಉಕ್ಕಿನ ಹಾದಿಯು ಒಂದು ಕಂಬಿಯ ವಿದ್ಯುತ್ತನ್ನು ಸಾಗಿಸುವ ವಾಹಕವಾಗುವುದು (ವಿಜ್ಞಾವಿ. ೫೩) ; ಒಂದು ವಾಹಕದಲ್ಲಿ (ಕಂಡಕ್ಟರ್) ವಿದ್ಯುತ್‌ಪ್ರವಾಹ ಹರಿಯಲು ಎಲೆಕ್ಟ್ರಾನುಗಳ (ಋಣವಿದ್ಯುತ್ಕಣಗಳ) ಚಲನೆಂಬೀ ಕಾರಣ (ಕವಿಕೋ.I, ೬೫೩). ೬. ಮಾಧ್ಯಮ ; ಮಧ್ಯವರ್ತಿ : ವಚನಕಾರರಿಂದ ಕನ್ನಡಭಾಷೆಗೆ ಒದಗಿದ ಪುಷ್ಟಿ ಎಷ್ಟು ವಿಧವಾದುದು, ಅದರಲ್ಲೂ ತತ್ವಶಾಸ್ತ್ರದ ವಾಹಕವಾಗಿ ಅದು ಪಡೆದುಕೊಂಡ ಶಕ್ತಿಯೇನು ಎಂಬುದರ ಮೇಲೂ ಕೆಲಸ ನಡೆಯಬೇಕಾಗಿದೆ (ಶೂನ್ಯಸಂ. ೧೩೬) ; ಕೇಶವರಾಯರ ಓಟಿಯುಂ ಗುಂಗು ಅವರ ನೆನಹುಗಳಿಗೆ ಸಹಜವಾದ ವಾಹಕವಾಗಿದೆ (ಸಮಚೀ. ೨೫ ಟೀಕಿ). ೭. ನಡೆಸುವವನು ; ಸಾಗಿಸುವವನು : ಸಕಲಬ್ರಹ್ಮಾಂಡಗಳೆಂಬ ಯಂತ್ರಗಳ ವಾಹಕ ನಮ್ಮ ಕೂಡಲ ಚನ್ನಸಂಗಯ್ಯ (ಚನ್ನವ. ಕ. ೨೫೦-೫೪೨). ೮. ರಥವನ್ನು ನಡೆಸುವವನು ; ಸಾರಥಿ : ನಾನಾಚಂದದಾಪತ್ತಿನಲಿ ಹರಿ ನಿಜಭಕ್ತಸಂತತಿಯ ಮುಂದೆ ನಿಲುವಪೋಲವನಿಪಾಲರ ದುಂದುಗದ ಹೊತ್ತಿನಲಿ ಗಜಹಯವೃಂದದವನೆ ಬಾಚುವನು ವಾಹಕನು (ಕುಮ್ಮಾರು. ೩-೧೦) ; ಎಯ್ದುವಂಬನುಂ ಖಂಡಿಸಿ ಕೂಡೆ ಪೊಕ್ಕು ತಿವಿದೊತ್ತಿ ವಿದಾರಿಸೆ ದಿವ್ಯವಾಹಕರ್ ಚಂಡನ ದಂಡುವೋಡಿದುದು (ಹಮ್ಮೀರ. ೩-೪೪). ೯. ಕುದುರೆ ಸವಾರ ; ರಾವುತ : ವಾಜಿಯುಂ ವಾಹಕರುಂ ಮರುಳ್ಪಡೆಯುಮಾಗಡೆ ತಮ್ಮೊಡನಾಡೆ ರಾಗದಿಂ ವಾಹಕರಟ್ಟೆಯುಂ ತುರಗದಟ್ಟೆಯುಮಾಡಿದುವಾಜಿರಂಗದೊಳ್ (ಪಂರಾಮಾ. ೧೩-೬೫) ; ಬೊಲ್ಲನ ಕೂಡೆ ಮಂಗಳನ್ನಿರದೆ ಕೊಂಗನನಸಮನಂ ತನ್ನಿ ಬೋರನನಿರಿಸದಿರಿ ವಾಹಕರಿರಾ ನೀವು (ಬಸವು. ೫೯-೪೦). [ಸಂ.]

**ವಾಹಕತ್ವ** (ನಾ). ೧. ಕುದುರೆ ಮುಂತಾದ ಪ್ರಾಣಿ ಅಥವಾ ವಾಹನವನ್ನು ಏರಿ ಮಾಡುವ ಸವಾರಿ : ಜನಪತಿಪುತ್ರನಂ ಶುಭಮುಹೂರ್ತದೊಳೋರಗೆಗೊಂಡ ಮಂತ್ರಿಪುತ್ರನೊಳೊಡಗೂಡಿ . . . ಓದಲಿಟ್ಟು ಮುದಮೊಂದಿರೆ ಕಲ್ತರನೂನವಿದ್ಯೆಯಂ ಘನತರಶಸ್ತ್ರಶಾಸ್ತ್ರಹಯಹಸ್ತಿವಿಶೇಷಕವಾಹಕತ್ವಮಂ (ರಾಜಶೇ. ೪-೭೬) ; ಪೊಸತುದ್ವೇಗಾಶ್ವಮೆಂದೇಱಿದೊಡೆ ಸಮನಿಕುಂ ವಾಹಕತ್ವಕ್ಕೆ ಭಂಗಂ (ರಾಜಶೇ. ೧೩-೨೫). ೨. (ಶಾಖ , ವಿದ್ಯುತ್ತು ಮೊದಲಾದುವನ್ನು ) ಸಾಗಿಸುವುದು ; ವಹನ : ವಾಹಕತ್ವ (Conductivity. ೨೦೫೩). [ಸಂ.]

**ವಾಹನ** (ನಾ). ೧. ಹೊರುವಿಕೆ : 'ವಾಹಿಸು' ಪರಾ. ೨. (ಕುದುರೆಯಂತೆ) ನಡೆಸುವಿಕೆ. ೩. (ರಥ, ಬಂಡಿ, ರೈಲು ಮುಂತಾದ) ಒಯ್ಯುವ ಸಾಧನ : ಜಂಗಮದ ಸನ್ನಿಧಿಯಲ್ಲಿ ನಾನು ವಾಹನವನೇಱಲಮ್ಮೆ ಏಱಿದರೆ ಭವ ಹಿಂಗದು (ಬಸವ. ೩೯೬) ; ವಾಹನಮುಂಟು ದಿವ್ಯರಥವಾಂ ವೆರವಾಹವಕೇಳಿಗೆಂಬೊಡಿಲ್ಲಾಹವಮೆನ್ನನೇಕೆ ಬರವೇಟ್ಟನೆವಲ್ ತಿಳಿದೆಂ ಸ್ವಚಿಹ್ನಮಂ (ಜಗವಿ. ೮-೮೧) ; ಈ ಕಡೆಗಳಲ್ಲಿ ಓಡಾಡುವ ಬಸ್ಸು ಇತರ ವಾಹನಗಳನ್ನು ನಡೆಸುವವರೂ ಬಹುವಾಗಿ ತುಳು ಮಾತನಾಡುವವರು (ದ್ರಾವಿ. ೩೮೮). ೪. ರಥಕ್ಕೆ ಹೂಡುವ ಕುದುರೆ, ಎತ್ತು ಮುಂತಾದ ಪ್ರಾಣಿ :"ವಾಹನಂ, ಧೋರಣಂ, ಯುಗ್ಯಂ, ಯಾನಂ, ಪತ್ರಂ–ಈ ೫ ರಥವ ಹೂಡುವ ಕುದಿರೆ" (ಹಲಾಯು. ೭೪-೨೯೫). ೫. [ಜೈನ] ಪಾರಿವ್ರಾಜ್ಯಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು : ವಾಹನಮೆಂಬುದು ಪರಮಪದ ವಾಹನನಪ್ಪ ಜಿನಪತಿಯಂ ಪೊರ್ದಿ ಮಣಿಸುವರ್ಣಪಾದುಕಾದಿ ವಾಹನಪರಿತ್ಯಾಗಂಗೆಯ್ದು ಮಹಾತಪದೊಳ್ ನೆಗಳ್ದೊಡೆ ದಿವ್ಯವಾಹನಂಗಳಧಿಪತಿಯಕ್ಕುಂ (ಚಾವುಂಪು. ೨೩೧). [ಸಂ.]

**ವಾಹನಸೌಕರ್ಯ** (ನಾ). ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಲು ಇರುವ ವಾಹನದ ಅನುಕೂಲತೆ ,–ಸೌಲಭ್ಯ : ಮೈಸೂರಿನಲ್ಲಿ ಚಾಮುಂಡಿ ಬೆಟ್ಟದ ಕೆಳಗಿನಿಂದ ಮೇಲಕ್ಕೆ ಹೋಗಲು ವಾಹನಸೌಕರ್ಯವಿದೆ (ರೂಢಿ). [ಸಂ.]

**ವಾಹನಹೀನ** (ನಾ). ವಾಹನವನ್ನು ಕಳೆದುಕೊಂಡಿರುವವನು : ಶಸ್ತ್ರಹೀನರ ಕೂಡೆ ವಾಹನಹೀನರಲಿ ಕೈಮಾಡಲನುಚಿತ (ಕುಮಾ.ಕ. ೨೬-೧೬). [ಸಂ.]

**ವಾಹಸ** (ನಾ). ಒಂದು ಬಗೆಯ ಹಾವು ; ದಾಸರಹಾವು ; ಹೆಬ್ಬಾವು : "ತ್ರಿಲಿಂಗಃ, ಗೋನಾಸಃ, ವಾಹಸಃ, ಅಜಗರಃ, ಶಯುಃ — ಈ ೫ ಪೆರ್ಬಾವು (ಹೆಬ್ಬಾವು)" (ಹಲಾಯು. ೧೦೬-೨೦). [ಸಂ.]

**ವಾಹಳಿ, ವಹಳಿ$_2$, ವಾಹಾಳಿ, ವಾಳಿ$_1$** (ನಾ). ೧. ಕುದುರೆಸವಾರಿಯನ್ನು ಪ್ರದರ್ಶಿಸುವ ಅಥವಾ ಆಟವನ್ನು ಆಡುವ ಬಯಲು ,–ಮೈದಾನ : ವಿಭುಗಟ್ಟಿಯ ಸೆಂಡನಾಡಲಾನೆಯ ಪರಿ ನೋಡಲೆಂದೊಲೆದು ಮಾಡಿದ ವಾಹಳಿಗಳ್ ಮನೋಹರಂ (ಶಾಂತಿಪು. ೯-೧೪೪) ; ಕದನಕ್ಷೋಣೀತಳಂ ವಾಹಳಿ . . . ನಾಳೆ ಸೆಂಡಾಡದೆ ಮಾಣಂ (ವರ್ಧಮಾ. ೪-೨೧). ೨. ಕುದುರೆ , ವಾಹನ ಮುಂತಾದುವುಗಳ ಸವಾರಿ : ಹರಿದಶ್ವಂ ಬಂದಪಂ ವಾಹಳಿಗೆನುತರುಣಂ . . . ಕುಂಕುಮಘನರಸಮಂ ಸಿಂಪಿಸುತಿರ್ದನೆಂಬಂತಿರಲೆತ್ತಂ ನೀಳ್ದು ಪೊಣ್ಮುತ್ತುದಯಸಮಯದೊಳ್ ಶೋಣಸೂರ್ಯಾಂಶುಜಾಲಂ (ಕಾದಂಪೂ. ೧೪೧) ; ರಾಯಕುವರರ ಕಳಕಳದಿಂದರಸುಗಳ ವಿಳಸಿತ ವರವಾಜಿಗಳ ವಾಹಳಿಗಳಿಂದೆಳಸಿಹುದಾ ಬಹಿರ್ವಳೆಯ (ಕುರಾಸಾಂ. ೪-೮೧). ೩. ಕುದುರೆಯ ನಡಗೆಯ ಒಂದು ಭೇದ (?) : ಭಂಜಳಿ ಮುರಳಿ ಝಳಂಪಿ ವಾಹಳಿ [ಪಾಠಾಂ. ಹಿಣಿ] ರೂಪು ರಂಜಿಪ ರೇಜೆಯೆಂದೆಂಬ ಮಂಜುಳಮಾದ ಷಡಂಗದೊಳಾಹಯ ರಂಜನೆವಡೆದುದು (ಶ್ರೀಪಾಲ. ೪-೧೨). **ವಹಳಿ$_2$** : ೩. ದಾರೆಗತಿಲಯವೊಯ್ದು ಕಾಯಕ್ಷಂ . . . ಹರಿ ಬಂಧನಮಂ ಭೌಮಂ ವೈಹಾಯಸಂ ವಯಸ ಯಂತ್ರಕ್ಷೇತ್ರವಹಳಿ ಸತ್ಕಂ ದಾರಿಮೆಂಬ ಭೇದಂಗಳಿಂದಶ್ವಮನೇಱಲು ರೇಚಿಗನೃಪತಿ ತಾನೆ ಬಲ್ಲಂ (ಮದು. ೧-೨೧). **ವಾಹಾಳಿ** : ೪. ವಾಹನದಂತೆ ಬಳಸುವ ಆನೆ, ಕುದುರೆ ಮುಂತಾದ ಪ್ರಾಣಿ ! ಪರಿವಾರಂ ಪ್ರಿಯಕಾಮಿನೀಸಮುದಯಂ ವಾಹಾಳಿ ಶಾಸ್ತ್ರೋತ್ಕರಂ ಬೆರಸಾಹ್ವಾನವಿಧಾನದಿಂ ಬರಿಸಿ ತಾಂ ದಿಕ್ಪಾಳರಂ ಪಾದರಂ . . . ನಿಲಿಸಿದಂ ಪೂರ್ವಾದಿ ದಿಗ್ಭಾಗದೊಳ್ (ವರ್ಧಮಾ. ೧೨-೨೫). **ವಾಳಿ$_1$** : ೨. ವಾಹಳಿ, ವಾಳಿ (ಶಬ್ದಾನು. ೧೬೦ ಪ್ರಯೋ). ೫. "ಕುದುರೆ ಸವಾರಿ ಮುಂತಾದ ದೃಶ್ಯ ; ದೃಶ್ಯವಾದೀಜಗತ್ತಿನ ಆಗುಹೋಗು" (ಅವಚಂ. ಕೋಶ): ನಿತ್ಯನಿರಾಕಾರಘನವು ಶಕ್ತಿಯಿಲ್ಲದಿದ್ದರೆ ವಾಳಿ [ಪಾಠಾಂ. ಆಗಳೇ] ಬಯಲಾದಹುದು (ಅವಚಂ. ೧೯೮-೮೯). 'ವೈಹಾಳಿ' ಪರಾ. [?. / ಸಂ. ವಾಹ್ಯಾಲೀ = ಕುದುರೆಗಳ ಓಡಾಟದ ಮಾರ್ಗ. / ತಮಿ. ವಾಳಿ = ಕುದುರೆಯಂತೆ ಚಕ್ರಾಕಾರವಾಗಿ ಸುತ್ತುವಿಕೆ; ತೆಲು. ವಯಾಳಿ, ವಯ್ಯಾಳಿ = ನಾಗಾಲೋಟ , ರಥ; ವಾಹ್ಯಾಳಿ = ಸವಾರಿ, ವಿಹಾರ ; ವಾಳಿ = ಮೃಗಗಳು ಸಂಚರಿಸುವ ದಾರಿ]

ವಾಹಳಿತನ (ನಾ). ಕುದುರೆಸವಾರಿ ; ಅಶ್ವಾರೋಹಣ : ವಾಹಳಿತನದೊಳ್ ನಳನನಿಳಿಕ್ಕೆವ ಶಾಳಿಹೋತ್ರನನಾಳಿಗೊಳ್ಳ ಘೋಳಾಯಿಲರ್ ನೆರೆದು (ರಾಜಶೇ. ೬-೧೧ ವ).
[ವಾಹಳಿ + - ತನ]

ವಾಹಾರೋಹಣ (ನಾ). ಕುದುರೆಸವಾರಿ : ನೃಪನೀತಂ ತುರಗಪ್ರಿಯಂ ವಿಷಮವಾಹಾರೋಹಣಾತ್ಯಂತಲೋಲುಪಂ (ಪಂಪಾರಾಮಾ. ೪-೧೦೫) ; ವಾಹಾರೋಹಣಲೀಲೆ ತನ್ನ ಮನಮಂ ತರ್ಕೈಸೆ ಬಾಲ್ಯಾದಿ ಸಸ್ನೇಹರ್ ತನ್ನ ಸಮಾನರಪ್ಪ ಕುವರರ್ ಸ್ವಪ್ರೇರಣಾಜಾತಸೋತ್ಸಾಹರ್ ಭೋಂಕೆನೆ ವಾಜಿಶಾಲೆಯೊಳಗಿಂದಂತಪ್ಪುದುಂ (ಮಹಾನೇ. ೪-೫). [ಸಂ.]

ವಾಹಾಳಿ 'ವಾಹಳಿ' ನೋ.

ವಾಹಿ (ಗು). ೧. ಹೊರುವ ; ಒಯ್ಯುವ. (ನಾ). ೨. ತೇರು ; ರಥ.
[ಸಂ. ವಾಹಿನ್]

ವಾಹಿಕ (ನಾ). ೧. ಎತ್ತುಗಳು ಎಳೆಯುವ ಬಂಡಿ, ರಥ ಮುಂತಾದುವು. ೨. ದೊಡ್ಡಭೇರಿ ; ನಗಾರಿ. ೩. ಒಂದು ಬಗೆಯ ಸಸ್ಯ. [ಸಂ.]

ವಾಹಿಕೆ (ನಾ). ಒಂದು ಬಗೆಯ ಸಸ್ಯ : "ವಾಹಿಕಾ - ಚಿತ್ರಮೂಲ" (ಓಷಧಿ. ೧೫೦). [ಸಂ. ವಾಹಿಕ]

ವಾಹಿತ್ಥ (ನಾ). ಆನೆಯ ಕುಂಭಸ್ಥಳದ ಕೆಳಗಿನ ಭಾಗ : "ವಾಹಿತ್ಥಂ, ಕುಂಭಸ್ಯ ಅಧಃ - ಆನೆ ಕುಂಭಸ್ಥಳದ ಕೆಳಗಡೇ ಪ್ರದೇಶಕ್ಕೆ ಹೆಸರುಗಳು" (ಸಿದ್ಧಾಂತಿ. ೨೪೭).
[ಸಂ.]

ವಾಹಿನಿ (ನಾ). ೧. ಹರಿಯುವಂಥದು ; ಹೊಳೆ ; ನದಿ : ವಾಹಿನಿಯೊಳೋಡುವುದು ಯಾನಪಾತಂಗಳೊಳ್ . . . ಅಲ್ಲದಿಲ್ಲ (ಉದ್ಭಟಕಾ. ೨-೧೫) ; ಮೋಹಿನಿ ಸಂಧ್ಯಾವಳಿಯರಿಬ್ಬರು ಬೇಹುಶಾಹಿನವರು . . . ಸಂತೋಷದ ವಾಹಿನಿಯೊಳ ಗೋಲಾಡಿದರು (ರುಕ್ಮಾಂಗ. ೫-೫). ೨. ಪಡೆ ; ದಳ ; ಸೈನ್ಯ : "ಪೃತನಾ, ಸೇನಾ, ಧ್ವಜಿನೀ, ಪತಾಕಿನೀ, ವಾಹಿನೀ, ಬಳಂ . . . ಅನೀಕಂ - ಈ ೧೦ ಪಡೆ" (ಹಲಾಯು. ೭೫-೩೦೩) ; ನಿನಗೆ ಸಹಾಯಂ ದಶರಥಜನನಾಥಂ ತತ್ಸಹಾಯದಿಂ ಲುಬ್ಧಕವಾಹಿನಿಯಂ ಮರ್ದಿಸು (ಪಂಪಾರಾಮಾ. ೪-೪೨) ; ಆ ನಾಕಾಧಿಪನ ಸಿರಿಯ ಜಡೆದುದಂದವರ ವಾಹಿನಿ ಸಕಲಜನಮೋಹಿನಿ (ಭಾವಚಿಂ. ೮-೧೫). ೧, ೨ : ವಿದಳಿತವಾದ ಕಂಟಕಕದಂಬದಿನುರ್ಬಿದ ವಾಹಿನೀಸಮೂಹದಿಂ . . . ಮಹೋದ್ಧತರಾಜಹಂಸತೇಜದಿನೆಸೆದತ್ತು ರಾಜ್ಯವಿಭವಂ ಜಳದಾಗಮಚಕ್ರವರ್ತಿಯಾ (ಜಗವಿ. ೪-೩೫). ೩. ಸೈನ್ಯದ ಒಂದು ತುಕಡಿ ; ಎಂಬತ್ತೊಂದು ಆನೆಗಳು, ಎಂಬತ್ತೊಂದು ರಥಗಳು, ಇನ್ನೂರುನಲವತ್ತು ಮೂರು ಕುದುರೆಗಳು ಮತ್ತು ನಾನೂರೈದು ಪದಾತಿಗಳುಳ್ಳ ಒಂದು ಸೇನಾವಿಭಾಗ : ತ್ರಿಗುಣಿಸು ಗುಲ್ಮಮನದು ನೆಟ್ಟಗೆ ವಾಹಿನಿಯಕ್ಕುಮಂತೆ ತದ್ವಾಹಿನಿಯಂ ತ್ರಿಗುಣಿಪುದುಂ ಪೃತನೆಯದಂ ತ್ರಿಗುಣಿಸೆ ಪೆಜತೇನೋ ಚಮುವೆನಲ್ಕೆ ಸರ್ವಡೆಗುಂ (ಪಂಪಾರಾಮಾ. ೧೩-೭) ; ಈ ಗಣವೆಂಬ ಬಲದ ಲೆಕ್ಕವನಿಕ್ಕಿ ಮತ್ತೊಮ್ಮೆ ೩ ಱಿಂದ ಗುಣಿಸಲು ಬಂದ ಲಬ್ಧ ಆನೆ ೮೧ ರಥ ೮೧ ಕುದುರೆ ೨೪೩ ಕಾಲಾಳು ೪೦೫. ಇದು ವಾಹಿನಿಯೆಂಬ ಬಲವಹುದು (ವ್ಯವಹಾ. ಅನುಬಂಧ. ೧-೧೦). [ಸಂ. ವಾಹಿನೀ]

ವಾಹಿನೀಕ (ನಾ). ೧. ಪ್ರವಾಹವುಳ್ಳುದು ; ಹರಿಯುವಂಥದು. ೨. ಪಡೆ ; ಸೈನ್ಯ. ೧, ೨ : ಆ ಘನಸಮಯಂ . . . ವಿಪಕ್ಷಗತಿವಿರೋಧಕಮಾಗಿಯುಂ ಪರಿಗತಭಂಗವಾಹಿನೀಕಮುಮೆನಿಸಿರ್ದುದು (ರಾಜಶೇ. ೮-೧೦೫ ವ). [ಸಂ.]

ವಾಹಿನೀಪತಿ (ನಾ). ೧. ನದಿಗಳ ಒಡೆಯ ; ಕಡಲು ; ಸಮುದ್ರ. ೨. ಸೇನೆಯ ಒಡೆಯ ; ದಳಪತಿ : ವಿಕ್ರಾಂತವಿಜಯನೆಂಬ ವಾಹಿನೀಪತಿಗೆ ಬಲಮಂ ಕೂಡಿಸೆಂದು ಪೇಳ್ವು (ಹಮ್ಮೀರ. ೩-೮ ವ). ೧, ೨ : ಆ ಮೂರ್ಧಾಭಿಷಿಕ್ತಮುಖ್ಯಂ . . . ಅನೂನವಾಹಿನೀಪತಿಯಾಗಿಯುಂ ಅಭಂಗಾನುಷಂಗನುಂ ವಿನೀತವಿನತಾನಂದನ ನಾಗಿಯುಂ ಅಪಕ್ಷಪಾತಪ್ರಚಾರನುಂ . . . ಎನಿಪಂ (ಚಂದ್ರಪ್ರ. ೨-೭ ವ). [ಸಂ.]

ವಾಹಿನೀಪ್ರಿಯ (ನಾ). ೧. = ವಾಹಿನೀಪತಿ ೧. ೨. = ವಾಹಿನೀಪತಿ ೨. ೧, ೨ : ಶ್ರೀಜನ್ಮನಿಳಯನಖಿಲಮಹೀಜೀವನಮೂರ್ತಿ ವಾಹಿನೀಪ್ರಿಯನೇಂ ರಾರಾಜಿಸಿದನೊ (ಚಂದ್ರಪ್ರ. ೫-೧). [ಸಂ.]

ವಾಹಿನೀರಮಣ (ನಾ). ೧. = ವಾಹಿನೀಪತಿ ೧. ೨. = ವಾಹಿನೀಪತಿ ೨. ೧, ೨ : ಪರಚಕ್ರಭಯಂಕರಶೀಲೆ ವಾಹಿನೀರಮಣಸಮೃದ್ಧಿಸಲ್ಲಲಿತ ರಾಜ್ಯರಮಾವಧು ವಂದು ಲೀಲೆಯಿಂ (ಪುಷ್ಪಪು. ೪-೮೭). [ಸಂ.]

ವಾಹಿಸು (ಕ್ರಿ). ಹೊರುವಂತೆ ಮಾಡು ; ಹೊರಿಸು ; ಹೇರು : "ಅಹಿತಂ ನಿಹಿತಂ ತಿರೋಹಿತಂ ನ್ಯಸ್ತಮೆನೆ ವಾಹಿಸಲ್ಕಕ್ಕು" (ಮಂಗರಾ. ೧೩೭-೪೦). [ವಾಹನ + - ಇಸು]

ವಾಹ್ಯ (ಗು). ೧. ಹೊರತಕ್ಕ ; ಹೊರಬೇಕಾದ. (ನಾ). ೨. ವಾಹನ ; ಬಂಡಿ ; ರಥ. ೩. ಭಾರವನ್ನು ಹೊರುವ ಎತ್ತು, ಕುದುರೆ ಮುಂತಾದ ಪ್ರಾಣಿ. [ಸಂ.]

ವಾಹ್ಯಕ (ನಾ). ಬಂಡಿ ; ರಥ : 'ಕಂಬಲಿವಾಹ್ಯಕ' ಪರಾ. [ಸಂ.]

ವಾಹ್ಯಾಳಿ (ನಾ). ಕುದುರೆಸವಾರಿ : ಅತ್ಯಕ್ಕೈತ್ವಂ — ವಾಹ್ಯಾಳಿ — ವೈಹಾಳಿ, ವೈಹ್ಯಾಳಿ. ಬಹುಳದಿನಿಲ್ಲಿ ಪದಮಧ್ಯಲೋಪಮಿಲ್ಲ (ಶಮದ. ೨೭೫ ಪ್ರಯೋ).
[ಸಂ. ವಾಹ್ಯಾಲೀ = ಕುದುರೆಗಳ ಓಡಾಟದ ಮಾರ್ಗ]

ವಾಹ್ಯಾಳಿಸು (ಕ್ರಿ). ಕುದುರೆಯನ್ನು ಏರು ; ಅಶ್ವಾರೋಹಣ ಮಾಡು : ಲೀಲೆಯಿಂದೀ ಕಡೆಗೆ ಬಹ ನಿನ್ನಾಳುತನವನು ತೋರೆನಲು ವಾಹ್ಯಾಳಿಸುತ ಪುಷ್ಪಕದ ರಣಸನ್ನದ್ಧನಾಗಿರ್ದ (ಆನಂರಾ. ೧-೧೩-೩). [ವಾಹ್ಯಾಳಿ + - ಇಸು]

ವಾಳ$_1$ (ನಾ). ಮೈಮೇಲೆ ಬೆಳೆಯುವ ದುರ್ಮಾಂಸದ ಗಡ್ಡೆ, — ಗ್ರಂಥಿ : ಬೆನ್ನಿಗೆ ವಾಳ ಆಗಿದೆಯೊ (ಅಶ್ವಮೇ. ೯೦) ; ಅವರ ಬೆನ್ನಿನ ಮೇಲೆ ಒಂದು ಸಣ್ಣ ಗಂಟಿನ ಹಾಗೆ ಆಗಿ, ಅದು ದೊಡ್ಡದಾಗುತ್ತಾಗುತ್ತ ದೊಡ್ಡ ವಾಳವಾಯಿತು (ಕಲಿಕು. ೮೨). 'ತೊಡೆವಾಳ' ಹೋ. [<— ತುಳು. ವಾಳ, ವಾಳೆ, ವಾಳ್ಕ. / ಮರಾ. ವಾಳಾ]

ವಾಳ$_2$ 'ವಾಲ' ನೋ.

- ವಾಳ$_3$ '- ವಳ' ನೋ.

ವಾಳಕ$_1$ (ನಾ). ಸೌತೆಕಾಯಿ : 'ವಾಳಕಾಭಾತು' ಪರಾ. [< ಸಂ. ವಾಲುಕಾ]

ವಾಳಕ$_2$ 'ವಾಲಕ' ನೋ.

ವಾಳಕಾಭಾತು (ನಾ). ಸೌತೆಕಾಯಿ ಹಾಕಿ ಮಾಡಿದ ಒಂದು ಬಗೆಯ ಕಲಸನ್ನ : ಹಪ್ಪಳ ಸಂಡಿಗಿ . . . ವಾಂಗೇಭಾತ ವಾಳಕಾಭಾತ ಮಿರ್ಚೀಭಾತ . . . ಎಲ್ಲಾ ಅನುಕೂಲಪ್ರಕಾರ ದಿನಂಪ್ರತಿ ಇದ್ದೇ ಇರತಾವ (ತಿದ್ದುರು. ೫೪).
[< ವಾಳಕ$_1$ + ಭಾತು]

ವಾಳದಂಡ (ನಾ). ಬಾಲ ; ಪುಚ್ಛ : ಶೃಂಗಯುಗಳದಭಂಗಂಗೆ ಕಕುದ್ವಳಯದ ಪ್ರಕೃತಿರಹಿತಂಗೆ ವಾಳದಂಡದ[ಪಾಠಾಂ. ಡೆಯ] ಬೋಳೆಯಂಗೆ ಬಸವಣ್ಣಂ ಮೈಯಿಕ್ಕಿ ಕುಳ್ಳಿರ್ದು (ಬಸವ. ೪-೭೧) ; ಆ ಸ್ಮೃತಿಪುರಾಣಾಂಗಳೆಂಬವೇ ಸುಳಿ ತೀರ್ಥಜಾಳವೇ ವಾಳದಂಡಂ ಸುನಿರ್ಮಳ ಪರಮಶೈವಾಗಮಂ ಪ್ರಾಣವಾದ ವೃಷಭಂ ಶಿವಂ ನೆನೆಯೆ ಪುಟ್ಟಿ (ವೀಶೈಪು. ೨-೧-೪೭). [ಸಂ. ವಾಲದಂಡ]

ವಾಳಧಿ 'ವಾಲಧಿ' ನೋ.

ವಾಳಪ್ರಕರ (ನಾ). ಬಾಲದಲ್ಲಿನ ಒತ್ತಾಗಿರುವ ಕೂದಲು : ತುರಂಗಂ ಬಾಲು ಕೆದಱುತ್ತಿರೆ ವಾಳಪ್ರಕರದಿಂದೆ ತಾಂ ಪೇಟ್ದುಂ ತನ್ನರಸಂಗೆ ಶುಭಾಶುಭಮನೆರಡುಂ ತೆಱದಿಂದಮಪ್ಪುದಂ ಪ್ರಕಟಿಸುಗುಂ (ಅಶ್ವಶಾ. ೪-೫೯). [ಸಂ. ವಾಲಪ್ರಕರ]

ವಾಳವಾಯಜ (ನಾ). ನವರತ್ನಗಳಲ್ಲಿ ಒಂದು ; ವೈಡೂರ್ಯ : "ವೈಡೂರ್ಯಂ, ವಾಳವಾಯಜಂ—ಈ ೨ ವೈಡೂರ್ಯಂ" (ಹಲಾಯು. ೨೯-೨೨). [ಸಂ. ವಾಲವಾಯಜ]

ವಾಳಾಂದೋಳ (ನಾ). (ಚಾಮರದ) ಕೂದಲಿನ ಅಲುಗಾಟ, — ತೂಗಾಟ : ಕ್ರಮದಿಂ ಸೂೞ್ನಿಡದೆ ಸನತ್ಕುಮಾರ ಮಾಹೇಂದ್ರರಿಕ್ಕಿದರ್ ಚಾಮರಮಂ ವಿಮಲಜ್ಞಾನಿಗೆ ಶರದಿಂದುಮಯೂಖಸ್ತೋಮಮೆನಿಸೆ ವಾಳಾಂದೋಳಂ (ಮಹಾನೇ. ೮-೯೪).
[ಸಂ. ವಾಲಾಂದೋಲ]

ವಾಳಾಗ್ರ 'ವಾಲಾಗ್ರ' ನೋ.

ವಾಳಾದಾನ (ನಾ). ಬಾಲ ; ಪುಚ್ಛ : ವಾಳಧಿಯಿಂದುರಿ ನೆಗೆದೊಡೆ ಕಾಳೆಗಮುಂ ಪಿರಿದು ಭಯಮುಮಧಿಪತಿಗಕ್ಕುಂ ವಾಳಾದಾನಮುಮಂತಾ ವಾಳಧಿಯುಂ ಜ್ವಲಿತಮಾಗಲಪಜಯಮಕ್ಕುಂ (ಅಶ್ವಶಾ. ೪-೬೯). [< ಸಂ. ವಾಲಧಾನ]

**ವಾಳಾವಳಿ** (ನಾ). "ಒಡೆಯ ಸತ್ತರೆ ತಾನೂ ಸಾಯುವೆನೆಂಬ ಲೆಂಕನ ಆಡಂಬರ" (ಅವಚಂ. ಕೋಶ) : ಹೇಳ ಕೇಳಲಿಲ್ಲದ ವಾ [ಪಾಠಾಂ. ಮ,ವ] ಳಾವಳಿಯ ಬಱಿಯ ಶಬ್ದ ಬಯಲ ಹೋರಟೆ ಅಂಗಸುಖಿಗಳಿಗೆ ಲಿಂಗವಿಲ್ಲಾಗಿ ಗುಹೇಶ್ವರನೆಂಬ ಶೀಲ ಸೀಮೆಯ ಮಿಱಿ ಕಾಡಿತ್ತು (ಅವಚಂ. ೭೪-೩೨೭). "ವಳಾವಳಿ = ಅವಿರತವಾದ ಮನಸ್ಸಿನ ಉದ್ವೇಗ, ಕಳವಳ, ಆಡಂಬರ" (ಅವಚಂ. ಕ. ಕೋಶ).

[☞ ಇದು 'ವೇಳೆವಾಳಿ' ಎಂಬುದರ ಅಪಲಿಖಿತವಿರಬಹುದೇ ?]

**ವಾಳಿ$_1$** 'ವಾಹಳಿ' ನೋ.

**ವಾಳಿ$_2$** (ಗು). ೧. ಮಾತುಕೇಳದ ; ಚಂಡಿ ಸ್ವಭಾವದ : "ವಾಳಿ—ಇರಕಳು ; ಎಡಹುರಿ ; ಚಂಡಿ" (ಜಾನಕೋ. ೪೫). 'ವಾಳಿಯಾವು' ಪರಾ. ೨. ಕೀಳಾದ; ನೀಚತನದಿಂದ ಕೂಡಿದ : ಕೀಳು ಮೇಲೆಂಬುವದು ವಾಳಿಜನಕಲ್ಲದಲೆ ಕೀಳು ಶರಣರಿಗೆ ಸಮರಸವು ಕಾಯಕವು ಆಳ್ವ ದಂಡಿಗೆಯು ತಳ್ಳುದಕೆ (ಕನ್ನಜಾ. ೨೮೩). (ನಾ). ೩. ಕೀಳು ; ಹೀನಾಯವಾದುದು : 'ವಾಳಿಸು' ಪರಾ. [?]

**ವಾಳಿಕಾರ** (ನಾ). ತೋಟಿ, ತಳವಾರ ಮುಂತಾದ ಗ್ರಾಮನೌಕರ : ವಿಭವಸಂವತ್ಸರ ಪುಷ್ಯ ಬ ೧ ಲು ವಾಳಿಕಾರ ಬಿಟ್ಟ ಮಾನಿಯ (ಎಕ. X, ಶ್ರೀನಿವಾ. ೨೪-೩;?).

[< ಒಲೆಕಾಱ]

**ವಾಳಿಯಾವು** (ನಾ). ಅಗಡುದನ ; ತುಂಟಹಸು : ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲು ವಾಳಿ[ಪಾಠಾಂ. ಒಱಿ, ಓಱಿ, ವಱಿ]ಯಾವಿನ ಬೆನ್ನಲ್ಲಿ ಹರಿಯಲದೇಕಯ್ಯಾ (ಬಸವ. ೭೫೪) ; ಹಾಲುಹಳ್ಳವಿರಲಿಕ್ಕೆ ವಾಳಿಯ Eಯಾ3 ವ ತರಲೇಕೆ (ಕನಕ. ಧಾ. ೩೭-೨).

[ವಾಳಿ$_2$ + ಆವು]

**ವಾಳಿಸು** (ಕ್ರಿ). ಕೀಳಾಗಿ ಮಾತನಾಡು ; ಹೀನಾಯವಾಗಿ ನುಡಿ : ಸುರಾಸುರ ಮಾನವರದಱಿಂದ ವಾಳಿಸಿ ಕಾಳುಗರಾದರು (ಯೋಗಾಂವಿ. ೩-೪) ; ಕೇಳ ಭಾಗೀರಥಿ ಏಳುಮಕ್ಕಳ ಕೊಂದಿ, ಬಹಳಕೀರ್ತಿಯ ಪಡೆದಿ ಲೋಕದೊಳಗ ತಾಳ ಈ ಮಾತಿಗೆ ವಾಳಿಸುವರ ನಿನಗ, ಕೇಳಿ ನಾಚಿಕಿ ಹ್ಯಾಂಗ ಬರಲಿಲ್ಲವ (ಕರ್ನಾಕ. ೨೩೮).

[ವಾಳಿ$_2$ + - ಇಸು$_3$ ./ ತೆಲು. ವಾಲಿಂಚು]

**ವಾಳುಕ** 'ವಾಲುಕ' ನೋ.

**ವಾಳುಕಪ್ರಕರ** (ನಾ). ಮರಳಿನ ರಾಶಿ : ಅಮಿತಾಂಭೋನಿಧಿ ವಾಳುಕಪ್ರಕರಮಂ ಪುಂಜೀಕೃತಂ ಮಾಡಿ (ಸುಕುಮಾ. ೫-೩೩). [< ಸಂ. ವಾಲುಕಾಪ್ರಕರ]

**ವಾಳುಕಾಪ್ರಭೆ** 'ವಾಲುಕಾಪ್ರಭೆ' ನೋ.

**ವಾಳುಕಿ** 'ವಾಲುಕಿ' ನೋ.

**ವಾಳೆ** (ನಾ). (?) : ವಾಳೆ (ಲಾಳೆ)= ಲಿಂಗವತ್ತಿಗೆ (ಶಮದ.ಪರಿ. ೨). [?]

**ವಾಳೆಯ** (ನಾ). ಯೋಗ್ಯವಾದುದು ; ಸರಿಯಾದುದು : ಕಡುಹಿನ ಕಾಳಕೂಟದ ನದಿಗೆ ನಂಜಿನ ಹೊನಲು ಬೆರೆಸಿದರೆ ವಾಳೆಯವೆ (ಕುವ್ಯಾಸ. ೧೪-೭೧). [?]

**ವಾಳೆಜೆಯ** (ನಾ). ಒಬ್ಬಾತನ ಹೆಸರು : ಕೆಳೆಯ ವಾಳೆಜೆಯನ್ ನಿಱಿಸಿದ (ಎಇ. IX, ೨೦-೧೩; ಸು.800). [?]

**ವಾಳೋದ್ಘಾತ** (ನಾ). ಬಾಲದ ಹೊಡೆತ,—ಪೆಟ್ಟು : ವದನೋಗ್ರಸ್ವನದಿಂದಮೊಂದೆರಡು ವಾಳೋದ್ಘಾತದಿಂ ಮೂಱುನಾಲ್ಕು ಸುರುಳ್ಸುರುಳ್ವಿನೆಗ ವೇಣಶ್ರೇಣಿಯಂ ಪಾಯ್ದು ಕೊಂದುದನೇವೇಳ್ವುದೊ ಶತ್ರುಸಂಹರಣಕೇಳೀಶೀಘ್ರಮಂ ವ್ಯಾಘ್ರಮಂ (ಪುಷ್ಪಪು. ೫-೭೧). [ಸಂ. ವಾಲೋದ್ಘಾತ]

**ವಾಳ್ಗಟ್ಟು** 'ಬಾಳ್ಗಟ್ಟು' ನೋ.

**ವಾಱ್ತೆ** 'ಬಾಱ್ತೆ' ನೋ.

**ವಾಱ್ತೆಗೊಳ್** (ಕ್ರಿ). ಸುದ್ದಿಯನ್ನು ಕೇಳು ; ಸಮಾಚಾರವನ್ನು ತಿಳಿ : ಇಂದಿನ ಬಂದಾ ಕಾಱಾದ ವಾಱ್ತೆಗೊಂಡೊಡೆ ಪಾಱಾದುದು ಮನಮುಮೆರ್ದೆಯುಮೇನಂ ಪೇೞ್ವೆಂ (ಪಂಪಭಾ. ೪-೭೭). [ವಾಱ್ತೆ (< ಬಾಱ್ತೆ) + ಕೊಳ್$_1$]

**ವಿ$_1$** (ನಾ). ೧. ಹಕ್ಕಿ ; ಪಕ್ಷಿ : "ಶಕುನಿ . . . ಪಕ್ಷಿ ವಿ ವಿಗಂ ವಿಹಾಯಸಂ ಪತಗಂ ಪತಂಗಂ . . . ಶಕುಂತಿಯೆನೆ ಪಕ್ಷಿ" (ಮಂಗರಾ. ೫೦-೧). 'ವಿಪತಾಕ' ಪರಾ. ೨. ಕುದುರೆ. ೩. ಹೋಗುವವನು. ೪. ಲಗಾಮು. ೫. ಸೋಮರಸ. [ಸಂ.]

**- ವಿ$_2$** (ಪ್ರ). ಧಾತುಗಳಿಂದ ಭಾವನಾಮಗಳನ್ನು ನಿರ್ಮಿಸುವ ಒಂದು ಕೃತ್ಪ್ರತ್ಯಯ : ವಕಾರಕ್ಕೆ—ತೊಟವಿ, ಅಳವಿ, ಬಳವಿ (ಶಮದ. ೨೧೦ ಪ್ರಯೋ).

**ವಿಂಖ** (ನಾ). ೧. ನಡಗೆ ; ಚಲನೆ : "ಗತಿಃ, ವಿಂಖಃ, ವಿಹಾರಃ, ಪರಿಸರ್ಪಃ, ಪರಿಕ್ರಮಃ — ಈ ೫ ನಡೆಹ" (ಹಲಾಯು . ೧೨೦-೪೧). ೨. ಕುದುರೆಯ ಗೊರಸು, - ಖುರಪುಟ. [ಸಂ.]

**ವಿಂಗಡ, ವಿಂಗಡಿ** (ನಾ). ೧. ಹಂಚುವಿಕೆ ; ವಿಭಾಗಿಸುವಿಕೆ : "ಪೃಷ-ವಿಭಾಗೇ, ವಿಂಗಡದೊಳ್" (ಕಾಶಕೃ. ೧೯೨). ೨. ವಿಭಾಗ : ಬಿರಾಡದಿಂದ . . . ವಿಂಗಡ ಹಂದಿಗದ್ದೆಗ್ರಾಮದಲು (ಮೈಆರಿ. ೧೯೪೩, ೪೪-೧೯; 1708). ೩. ಪ್ರತ್ಯೇಕವಾದುದು ; ಒಂಟಿಯಾದುದು : ಹಂಗಿನರಮನೆಯಿಂದ ವಿಂಗಡದ ಗುಡಿ ಲೇಸು (ಸರ್ವಜ್ಞ. ೧೫೩೪). ೪. ಪ್ರತ್ಯೇಕತೆ ; ಭಿನ್ನತೆ : ವಿಂಗಡವು ಬಾಳ ಸಂಗಡವೇ ಬೇಕು, ಪಂಗಡವು ಏಕೆ ನನಗೆ ? (ಅರಳು. ೬೩-೧೦). **ವಿಂಗಡಿ**: ೨. ಸಕಲಸುವರ್ನಾದಾಯ ದವಸಾದಾಯ ಸಹ ಕಂ ಗು ೧೩೭ ೩ % ವಿಂಗಡಿ ಮಣಿಹ ಸುಂಕ (ಎಕ. IX, ನೆಲಮಂ. ೫೧-೧೪; 1663).

[< ಸಂ. ವಿಘಟನ. / ತುಳು. ವಿಂಗಡ; ತೆಲು. ವಿಂಗಡ, ವಿಂಗಳ. / ಮರಾ. ವಿಘಡ]

**ವಿಂಗಡಣೆ** (ನಾ). ಹಂಚುವಿಕೆ ; ವಿಭಾಗ ಮಾಡುವಿಕೆ : ಸಸ್ಯಗಳ ವಿಕಾಸ, ವಂಶಾವಳಿಯ ಮೂಲ, ವರ್ಗೀಕರಣ, ವಿಂಗಡಣೆ ಅಥವಾ ಹಂಚಿಕೆ ಮುಂತಾದ ಅನೇಕ ಮೂಲಭೂತತತ್ವಗಳಿಗೆ ಹೊಂದಿಸಿದುದರಿಂದ ಆ ತತ್ವಗಳು . . . ಸಸ್ಯಶಾಸ್ತ್ರದ ತತ್ವಗಳಿಗೆ ಅನುಗುಣವಾಗಿವೆ (ಸಸ್ಯಕ. ೫೪). [ವಿಂಗಡ + - ಅಣೆ$_1$]

**ವಿಂಗಡಿ** 'ವಿಂಗಡ' ನೋ.

**ವಿಂಗಡಿಸು** (ಕ್ರಿ). ೧. ಹಂಚು ; ವಿಭಾಗಮಾಡು : ಆ ಅಗ್ರಹಾರದ ಹಳ್ಳಿಗಳಿಗೆಯೂ ತಂಮ ಭಂಡಾರಸ್ಥಲದ ಒಕ್ಕಲುಗಳಿಗೆಯೂ ಸಂಪಾಜವಾಗದ ಹಾಗೆ ಆ ಧರ್ಮಸ್ಥಲಕ್ಕೆ ತೆಱುವ ಒಕ್ಕಲುಗಳನು ವಿಂಗಡಿಸಿ ಕುಡ ಹೇಳಿ (ಮೈಆರಿ. ೧೯೩೨ , ೪೨-೨೨ ; 1418) ; ಮಡದಿಯರು ಮೂವರಿಗೆ . . . ವಿಂಗಡಿಸಿ ಕೊಟ್ಟನು ನೃಪತಿ ಪರಮೋದನವನುಚಿತದಲಿ (ತೊರರಾ. ೧-೭-೫೭). ೨. ಪ್ರತ್ಯೇಕಿಸು ; ಬೇರೆಮಾಡು : ದೊರೆರಾಯ ನರಸರಾಜೇಂದ್ರ ಸಾಕಿದ ಬಲು ಗುರಿಕಾಱ ಮನ್ನೆಯರುಗಳ ಓರಿದು ವಿಂಗಡಿಸುತಾಱೇಳು ಪೌಜುಗಳಿಂದರಿಬಲಾಂಬುಧಿಯನು ಮೊಗೆದ (ಕಂಠವಿ. ೧೮-೯೯). ೩. ಭೇದಮಾಡು ; ಪಕ್ಷಪಾತ ತೋರಿಸು : ಜಂಗಮವೆಂದು ವಂದಿಸಿ ಮಾಡಿ ಪಂಕ್ತಿಯಲ್ಲಿ ವಿಂಗಡಿಸಿ ಲೆಕ್ಕವ ಮಾಡುವ ದಂಡದ ಮನೆಯಲ್ಲಿ ಕೂಳನುಂಬ ಜಂಗಮವು ಬಂಡುಗೆಲೆದು ಬೇಡಿ ತಂದ ಭಂಡಡೊಂಬರ ಎಂಜಲ ತಿಂದಂತೆ (ಮೋಳಿಮಾ. ೧೮೮-೭೦೭). ೪. ಕತ್ತರಿಸು ; ತುಂಡು ಮಾಡು : ಬಿಡದೆ ನೂಱೆಂಭತ್ತು ಪರಿಯಂತಡಸಿ ಸಾರಥಿಸಹಿತ ರಥವಂಗಡವ ವಿಂಗಡಿಸಿದನು ಸಂಗರರಂಗಮಧ್ಯದಲಿ (ತೊರರಾ. ೩-೬-೪೬). ೫. ಇಲ್ಲವಾಗು ; ಕಳೆದು ಹೋಗು (?) : ಬಿಡಬೀಸದಿರು ಬಿಸುಡದಿರು ಕಡೆಗೆ ಸದ್ಗುರುವೆ ಒಡಲೊಡವೆ ಮಡದಿ ವಿಂಗಡಿಸಿ ಬಿಟ್ಟವು ಗುರುವೆ (ದೀಕ್ಷಾಬೋ. ೧೪-೨೨೨) ; ಸರಸಿಜಗಂಧಿಯ ಧವಳಶೋಭನ ಶ್ರುತಿವೆರಸಿ ಪಾಡುವ ರಾಗರಸದಿ ಪರೆದುದು ಮನಸ್ತಾಪ ವಿಂಗಡಿಸಲು ಎಣ್ಣೆಯರಿಸಿನಗೊಟ್ಟರೆಲ್ಲರಿಗೆ (ಮೋಹತ. ೧೭-೪೦).

[ವಿಂಗಡ + - ಇಸು$_3$ ./ ತೆಲು. ವಿಂಗಡಿಂಚು, ವಿಂಗಳಿಂಚು]

**ವಿಂಗೀತ** (ನಾ). ಕೆಟ್ಟ ಸಂಗೀತ (?) : ಸ್ವರಭೇದವಿಲ್ಲದಿಹ ಸಂಗೀತ ವಿಂಗೀತ ಸರಸವಿಲ್ಲದ ಸತಿಯ ಭೋಗ ತನುರೋಗ (ಕನಕ. ೪೨-೧).

[☞ ಇಲ್ಲಿ ಪ್ರತಿಧ್ವನಿಶಬ್ದವನ್ನು ಸ್ವತಂತ್ರವಾಗಿ, ವಿರುದ್ಧಾರ್ಥದಲ್ಲಿ ಕಲ್ಪಿಸಲಾಗಿದೆ]

**ವಿಂಜ$_1$** (ನಾ). ವಿಂಧ್ಯದೇಶ : ಪೂಣ್ದು ಪೋಗಿ ಡಂಗದ ಸವಲಕ್ಕವಿಂಜದ ವರಾಳದ ಲಂಜಿಯ ಚಕ್ರಗೊಟ್ಟದಗ್ಗದ ನೃಪರಂ ಪಳಂಚಲೆದು ವೀರಶಿಖಾಮಣಿ ನಾಗವರ್ಮ್ಮನಂದದೆ ನೆಲನಂ ನಿಮಿರ್ಚ್ಚಿದವರಾಗ್ಗ್ರಳ ಚಕ್ರಿಯ ದಂಡನಾಯಕರು (ನಾಂದೇಡ್. ೩-೧೫ ; 1147). 'ಬಿಂಜ' ಪರಾ. [< ಸಂ. ವಿಂಧ್ಯ]

**ವಿಂಜ$_2$** (ನಾ). ಒಬ್ಬಾತನ ಹೆಸರು : ರಣಸ [ಸಾ]ಗರನಾ ಆಳು ವಿಞ್ಜನ್ ಪ್ರ[ಹಾ]ರ ಭೂಷಣನಾ ಮಗನ್ (ಎಇ. IX, ೧೮-೨; ಸು. ೬೦೦). [?]

**ವಿಂದಾಣ** 'ಬಿನ್ನಾಣ' ನೋ.

**ವಿಂದಾಣಗೊಳ್** (ಕ್ರಿ). ಮಲ್ಲಯುದ್ಧದ ವರಸೆಯನ್ನು ತೋರಿಸು;

ಪಟ್ಟುಹಾಕು : ಮೋಹಮಲ್ಲನ ಕೆಡಹಿ ವಿಂದಾಣಗೊಂಡು ನೆಗ್ಗೊತ್ತಿ ಗೋಣ ಮುಱಿದು ಹಾಕಿದ ಬಲ್ಲಿದನ ನಿರ್ವಾಣಪೂಜೆಯ ಮಾಡಿದರು (ಶ್ರೀಪಾಲ. ೧೪-೯೪).

[ವಿಂದಾಣ (< ಬಿನ್ನಾಣ) + ಕೊಳ್$_1$]

**ವಿಂಧ್ಯ** (ನಾ). ೧. ಏಳು ಕುಲಪರ್ವತಗಳಲ್ಲಿ ಒಂದು ; ಉತ್ತರ ಹಿಂದೂಸ್ಥಾನ ಮತ್ತು ದಖ್ಖಿನ್ನಿನ ಮಧ್ಯದಲ್ಲಿರುವ ನೀಳವಾದ ಪರ್ವತಾವಳಿ : ಬಳೆಯಲ್ಕಣ್ಮದುದಿಲ್ಲ ವಿಂಧ್ಯಗಿರಿಯುಂ ತನ್ನಾಜ್ಞೆಯಿಂದೆ (ಪಂಪಭಾ. ४-೨೦) ; ವಿಂಧ್ಯಂ ನಗಮುಗಿಪತ ಸೌಗಂಧ್ಯಂ . . . ಈ ಭರತಭೂಗ ಭೂಷಣಮೆಸಗುಂ (ವರ್ಧಪು. ೧೬-೫೦). ೨. ಕಾಡು ; ಅಡವಿ : ಹಿಂಡನಗಲಿ ಓಡಿಪಡೆವ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯ (ಮಹಾದೇ. ಬ. ೧೩೮-೩೧೩). ೩. ಬೇಟೆಗಾರ ; ಬೇಡ. ೪. ಒಂದು ದೇಶದ ಹೆಸರು : ನಡೆದುದು ಭೂರಿಬಲ . . . ವಿಂಧ್ಯ ಬೋಟಕ ಪಾರಶಿಕ ಸಾಂಬ್ರಾಣಿ ಹುರುಮಂಜಿಗಳ ಬಳಿವಿಡಿದು (ತೊರರಾ. ४-೯-४). [ಸಂ.]

**ವಿಂಶತಿ** (ನಾ). ಒಂದು ಸಂಖ್ಯೆ ; ಇಪ್ಪತ್ತು : ವಿಂಶತಿಸಹಸ್ರವರ್ಷ ಪರ್ಯಂತಸ್ಮೃತಾಹಾರನುಂ ವಿಂಶತಿಸಮುದ್ರೋಪಮಾಯುಷ್ಯನುಂ . . . ಆಗಿ ಮಣಿಚೂಳಾಮರೇಶ್ವರನಿರೆ (ಶಾಂತಿಪು. ೭-೭೭ ವ) ; ಕರಿ ದಶ ರವಿ ಮನುಜರಾಜರ್ ಬರೆ ವಿಂಶತಿಮಾತ್ರೆಯಿಂದೆ ಷಟ್ಪದಿ ನಡೆಗುಂ (ಛಂದೋಂಬು. ೫-೨೫೯ ಅಟಿಪದ್ಯ). [ಸಂ.]

**ವಿಕಂಕತ** (ನಾ). ಒಂದು ಬಗೆಯ ಮರ ; ಹುಳಿಬೇಲ : "ಸ್ವಾದುಕಂಟಕಃ, ವಿಕಂಕತಃ . . . ವ್ಯಾಘ್ರಪಾತ್ - ಈ ಹಲುಮಾಣಿಕ ಮರದ ಹೆಸರು ; ನಾಯಿಬೇಲ" (ಸಿದ್ಧಾಂತಿ. ೧೨೦). [ಸಂ.]

**ವಿಕಂಪಿಸು** (ಕ್ರಿ). ಅತಿಯಾಗಿ ನಡುಗು : ವಿಕಂಪಿಸಿದಳುತ್ಕಂಠೆ ನಿಂದುದು ಹರಿವ ಕಾಲಮಂತೆ ನಿಂದುದು ಸೃಷ್ಟಿ (ಚಿತ್ರಾಂಗ. ४೦-೧೧೦೨); ತೆಳುಗಾಳಿಗೊಯ್ಯನೆಯ ನಿರಿನಿರಿ ವಿಕಂಪಿಸುವ ಪಟಿಕನಿರ್ಮಲ ನದಿಯ ಪುಲಕಿತಮುಕುರದಲ್ಲಿ ಮಜ್ಜನಕ್ಕುಜ್ಜುಗಿಸಿ (ಶ್ರೀರಾಮಾ. ೧-೯). [ವಿಕಂಪನ$_2$ + - ಇಸು$_3$]

**ವಿಕಚ** (ಗು). ೧. ಅರಳಿದ ; ಬಿರಿದ : ಮಧುಕರಮದು ಭೋಂಕನೆ ಪಾಯ್ದೊಂಕೆ ನಾಂದೊಡೆ ಜಿನುಂಗಿ ನೆಲಸಿದುದು ವಿಕಚಕನಕಾಬ್ಜಿನಿಯೊಳ್ (ಆದಿಪು. ೧೧-೬೦); ವಿಕಚಕರ್ಣಿಕಾರವರ್ಣಮುಂ . . . ತನುಗನುಸಂಗತಮಾಗೆ (ಶಾಂತಿಪು. ೧೦-೯४ ವ). ೨. ವಿಸ್ತಾರಗೊಂಡ ; ಹರಡಿದ ; ವಿಸ್ತೃತವಾದ : ವಿಕಚಪಕ್ಷ ಮಂಡಿತ ಶಿಖಂಡಿವಾಹನನುಂ . . . ಎನಿಸಿದ ಕಾರ್ತಿಕೇಯನುಮಂ (ಕಾದಂಪೂ. ४೧೩). ೩. ಪ್ರಕಟವಾದ ; ಸುಸ್ಪಷ್ಟವಾದ. ೪. ಹೊಳೆಯುವ. ೫. ಕೂದಲಿಲ್ಲದ ; ಬೋಳಾದ. (ನಾ). ೬. ಅರಳಿದುದು ; ಬಿರಿದುದು. [ಸಂ.]

**ವಿಕಚತೆ** (ನಾ). ೧. ಅರಳಿದುದು ; ವಿಕಾಸಗೊಂಡುದು. ೨. ಕೂದಲಿಲ್ಲದಿರುವಿಕೆ ; ಬಕ್ಕತನ. ೧,೨ : ಸಾಯಂತನ ತರಣಿಯಂತೆ ಪರಿಹೃತಾಂಬರನುಂ ದಿನಮುಖಸರೋಜಾಕರದಂತೆ ವಿಕಚತಾಸಮೇತನುಂ . . . ಆಗಲೊಡಂ (ಚಂದ್ರಪು. ೯-४೨ ವ). [< ಸಂ. ವಿಕಚತ]

**ವಿಕಚನ** (ನಾ). ಅರಳುವಿಕೆ ; ವಿಕಾಸ : ಆದ್ಯರನುಭವಸೂರ್ಯನುದಯಂ ವೇದ್ಯವಾಗೆ ಮಂದಿಯ ಮಾನಸಮಧ್ಯದೊಳ್ಸಂವಿತ್ಸರೋಜಂ ವಿಕಚನಮನ್ನೆದಿ (ಕ್ಷೇತ್ರಸು. ೧-೩). 'ವಿಕಚಿಸು' ಪರಾ [< ವಿಕಚ]

**ವಿಕಚಿಸು** (ಕ್ರಿ). ಅರಳಿಸು ; ವಿಕಾಸಗೊಳಿಸು : ಧ್ವಾಂತದಿಂದಂ ಮುಗಿದ ಹೃದಯನೀರೇಜವಮಂ ಜೈನವಾಕ್ಯಾಮ xx ಭಾನುಜ್ಯೋತಿಯಿನ್ದಂ ವಿಕಚಿಸಿ (ಎಕ. VII, ಶಿಕಾರಿ. ೧೯೬-೧೭; 1212). [ವಿಕಚ + - ಇಸು$_3$]

**ವಿಕಜ್ಜಲ, ವಿಕಜ್ಜಳ** (ನಾ). ಕಾಡಿಗೆಯ ಲೇಪವನ್ನು ಕಳೆದುಕೊಂಡುದು. ವಿಕಜ್ಜಳ : ವಿಕಜ್ಜಳಕೃತರೇಖಿಕಾರಚನಮಾದುದು ಲೋಚನಯುಗ್ಮಂ . . . ಇಂದುಮಂಡಳಲಲಿತಾಸ್ಯೆ ಪೇೞ್ ನಿಜಮನಃಪ್ರಿಯನಪ್ಪಿದನೋ ಅಗಲ್ದನೋ (ಚಂದ್ರಪು. ೮-೭೬). [ಸಂ.]

**ವಿಕಜ್ಜಳ** 'ವಿಕಜ್ಜಲ' ನೋ.

**ವಿಕಟ** (ಗು). ೧. ವಿಕಾರವಾದ ; ಕುರೂಪಗೊಂಡ : ವಿಕಟಾಂಗೋಪಾಂಗ ಜಾತ್ಯಂಧಕಿಯೆನಿಸಿದ ಮಾತಂಗಿ ತಾನೆತ್ತಲಾತ್ಯಂತಿಕಸದ್ಧರ್ಮೋಪದೇಶಂ ಸಮನಿಸುವುದೆತ್ತ (ಸುಕುಮಾ. ೫-४೮). ೨. ಭೀಕರವಾದ ; ಭಯಾನಕವಾದ : ಬೆಳೆದಿರ್ದ ಬಿದಿರುಮೆಳೆ ಪವನಸಂಘರ್ಷಣೆಗೆ ಘೀಂಕರಿಸಲಿಭದಂತೆವೊಲ್ ವಿಕಟರವಗೈದು, ಕಂಪಿಸಿತು ಕಾಂತಾರಮಾ ಕೀಚಕಧ್ವನಿಗೆ (ಚಿತ್ರಾಂಗ. ೫೧-೧೩೯೧). ೩. ಉಗ್ರವಾದ ; ಕ್ರೂರವಾದ : ಪ್ರಕುಪಿತ ಮೃಗಪತಿಶಿಶುಸನ್ನಿಕಾಶರತಿವಿಕಟಭೀಷಣಭ್ರೂಭಂಗರ್ ನಕುಲಸಹದೇವರಿರ್ವರು ಮಿರಾಲಕಾಲಾಗ್ನಿರೂಪಮಂ ಕೆಯ್ಕೊಂಡರ್ (ಪಂಪಭಾ. ೭-೮). ೪. ತೋರವಾದ ; ದಪ್ಪವಾದ : ಜಗುನೆಯ ಮಡುವಂ ತಮ್ಮರಸಿಯರ ವಿಕಟನಿತಂಬಬಿಂಬಗಳ ಘಟ್ಟಣೆಯೊಳಮರೆ ಬಗಿದೊಗೆದ ಮೊಗೆಗಳಳ್ಳೇಜಿನೊಳಳ್ಳಾಡಿ ತಳ್ಪಂಕಂಗುಟ್ಟಿ ನೀರಾಟಮಾಡುವಾಗಳ್ (ಪಂಪಭಾ. ೫-೬೨ ವ). ೫. ದೊಡ್ಡ ; ಭಾರಿಯಾದ : ಅತಿವಿಕಟಶಾಲ್ಮಲಿವಿಟಪಿಯೊಳಿದಿರುಂ ಬಱೆಯುಮುರ್ಚುವುದುಂ (ಸುಕುಮಾ. ೧೧-४೭ ವ); ಬಲಗರ್ವಮಂ ತಾಳ್ದಿದಂ ಬಲಾಚ್ಯುತರ ಕೂಟದಿಂ ಜನಕನುಗ್ರವನ್ಯದ್ವಿಪಂ ಬಲಂಬಡೆದುದೆಂಬಿನಂ ವಿಕಟದಂತಕೂಟಂಗಳಿಂ (ಪಂರಾಮಾ. ४-೫೩). ೬. ಸೊಕ್ಕಿದ ; ಉನ್ಮತ್ತ. ೭. ಚೆಲುವಾದ ; ಅಂದವಾದ : ದೇದೀಪ್ಯಮಾನಪ್ರಭಮೇಂ ಕಣ್ಗೆಂಬು ವೆತ್ತಿರ್ದುದೊ ವಿಕಟಘಟಿದ್ರತ್ನಕೂಟಂ ಕಿರೀಟಂ (ಚಂದ್ರಪು. ೨-೫೬). (ನಾ). ೮. ವಿಕಾರವಾದುದು ; ವಿಕೃತವಾದುದು : ಅನ್ಯಾಯ ವಿಕಟಂಗಳೆನಿತೂ ಸೃಷ್ಟಿಕ್ರಮದಿ! ಸೊನ್ನೆ ಜನವಾಕ್ಕಲ್ಲಿ (ಮಂಕುತ. ೨೩४). ೯. ಡೊಂಕಾದುದು ; ವಕ್ರವಾದುದು : ಕಟಮುಂ ವಿಕಟಮಾಗದಿರೆ ಪರಿ ಶುಭದಂ (ಅಶ್ವಶಾ. ೧-೨೮). ೧೦. ಅಂದಗೇಡಿಯಾದವನು ; ಕುರೂಪಿ : ಅಲ್ಲಿರ್ದೊರ್ಡುರ್ವಿಯುತಂ ನೋಡುವೊಡುಗ್ರರತನ್ಮನುಷ್ಯಂ ವಿಕಟನೆನಿಕುಂ (ಜಾತತಿ. ೨೧-೨೨). ೧೧. ಶ್ರೇಷ್ಠವಾದುದು ; ಉತ್ತಮವಾದುದು : "ಒಳ್ಪಿತಟಿಲ್ಲಿಯುಂ ವಿಕಟಮೆಂಬುದು" (ಹಲಾಯು. ೧೩೨-೮). ೧೨. ವಿಡಂಬನೆ : 'ವಿಕಟಕವಿ' ಪರಾ. ೧೩. ಒಂದು ನರಕದ ಹೆಸರು : ಸಂಕಟ ವಿಸಂಕಟ ಸುವಿಶಾಲ ಕಟ ವಿಕಟವೆಂಬೈದು ಮಂತ್ರಿನರಕಂಗಳಿಂ ಮೋಹಿಸಿ ವಿಕರಾಳವೆಂಬರಸುನರಕವಿಹುದು (ವಿವೇಕ. ೧೫೩). ೧೪. [ನಾಟ್ಯ] ನೃತ್ಯದ ಮೂರು ಭೇದಗಳಲ್ಲಿ ಒಂದು : ಪರಿಪರಿಯ ರೂಪನಾಂತುದು ತರುಣೀ ಕೇಳ್ ವಿಕಟಮೆನಿಪುದು (ಲಾಸ್ಯರಂ. ೧-೬೮). [ಸಂ.]

**ವಿಕಟಕಟಾಕ್ಷ** (ನಾ). ಉಗ್ರವಾದ ಕಣ್ಣುಗಳುಳ್ಳವನು ; ಶಿವ : ಪಟುಕೋಪಾಟೋಪ ಬದ್ಧಭ್ರುಕುಟಿ . . . ಪದ್ಮರಾಗಾರುಣವಿಕಟಕಟಾಕ್ಷಂ (ರಾಜಶೇ. ೬-೮೯). [ಸಂ.]

**ವಿಕಟಕವಿ** (ನಾ). ೧. ಉತ್ತಮನಾದ ಕವಿ ; ಶ್ರೇಷ್ಠಕವಿ : ಆ ಪರಿ ತಾನಿಲ್ಲದಿರೆಯುಮಾ ಪರಿಯಿರ್ಪಂತೆ ವಸ್ತುಜಾತಮನೆಲ್ಲಂ ಸ್ಥಾಪಿಸಿ ಹೃದಯವ ಸೆಳೆವಾಲಾಪಂ ವಿಕಟಕವಿಸಿದ್ಧಮೆಸೆವುದು ಧರೆಯೊಳ್ (ಧ್ವನ್ಯಾಲೋ. ೨४೩). ೨. ವಿಡಂಬನೆ ಮಾಡುವ ಕವಿ ; ಹಾಸ್ಯಕವಿ : ಅವರೊಳಗೆ ವಿದ್ವತ್ಕವಿಯಾಗಿಯೂ ವಿಕಟಕವಿಯಾಗಿಯೂ ಪ್ರಸಿದ್ಧವಾದ ತೆನ್ನಾಲ ರಾಮಕೃಷ್ಣನಿರುವನು (ಕಥಾಮಂ. IV, ४೩). [ಸಂ.]

**ವಿಕಟಕವಿತ್ವ** (ನಾ). ಹಾಸ್ಯಕವಿತ್ವ : ಒಬ್ಬ ಅರಸುಗಳೆ, ಹಜಾಮರೆ, ಹಾರುವರೆ, ತುರುಕರೆ . . . ಹೊಲೆಯರೆ — ಇವರೆಲ್ಲರನ್ನು ಒಂದು ಮಾಲೆಯಲ್ಲಿ ಪೋಣಿಸಿದ ವಿಕಟಕವಿತ್ವವು ಪ್ರಶಂಸನೀಯವೆಂದು ಯಾರು ಹೇಳಲಿಕ್ಕಿಲ್ಲ? (ಗರುಡಾ. ೬, ಮುನ್ನುಡಿ). [ಸಂ.]

**ವಿಕಟಗಾತ್ರ** (ನಾ). ದೊಡ್ಡ ದೇಹವುಳ್ಳುದು : ಮೃದುಕಳಶವೃತ್ತಪುಷ್ಕರಗೋತ್ರನಂ ಸುಸಂವೃತಪ್ರೋಹಪಳಿಹಸ್ತವಿಕಟಗಾತ್ರನಂ . . . ಸಂಪದುಪೇತಮಂ ತರಿಸಿ (ಶಾಂತಿಪು. ೧೦-೧೫೩ ವ). [ಸಂ.]

**ವಿಕಟತೆ** (ನಾ). ಪ್ರತಿಕೂಲವಾಗಿರುವುದು ; ವಿಪರೀತತೆ ; ವಿಪರ್ಯಾಸ : ಪ್ರಕಟಪಾಪರಿಗಹುದು ಸಾಮ್ರಾಜ್ಯಕವು ಧರ್ಮಾತ್ಮರಿಗೆಯಿ ಪರಿ ವಿಕಟತೆಯಸುರರಾಜ್ಯವೆಂದುದು ಪೌರಜನ ಮಱುಗಿ (ಕುಮಾ.ಆ. ೮-೮೯). [ಸಂ. ವಿಕಟತಾ]

**ವಿಕಟನೃತ್ತ** (ನಾ). [ನಾಟ್ಯ] ವಿಷಮ, ವಿಕಟ ಮತ್ತು ಲಘುವೆಂಬ ನೃತ್ತದ ಮೂರು ಭೇದಗಳಲ್ಲಿ ಒಂದು : ನೃತ್ತವು ವಿಷಮ, ವಿಕಟ, ಲಘು ಎಂದು ಮೂರು ವಿಧ . . . ವಿಧವಿಧವಾದ ರೂಪವನ್ನು ಹೊಂದಿರುವುದೇ ವಿಕಟನೃತ್ತವು (ಲಾಸ್ಯರಂ. ೨೧೯ ಗದ್ಯಾನುವಾದ). [ಸಂ.]

**ವಿಕಟಬಂಧ** (ನಾ). ದೀರ್ಘಸಮಾಸಗಳ ಕ್ಲಿಷ್ಟವಾದ ಶೈಲಿ : 'ಸಂದಾನಿತಕ' ವೇ ಮೊದಲಾದುವಲ್ಲಿ ವಿಕಟಬಂಧವೇ ಉಚಿತವಾಗುವುದರಿಂದ ಮಧ್ಯಮಸಮಾಸ ಮತ್ತು ದೀರ್ಘಸಮಾಸದ ಸಂಘಟನೆಗಳೇ ಬರುತ್ತವೆ (ಧ್ವನ್ಯಾಲೋ. ೧४೨). [ಸಂ.]

**ವಿಕಟಮುಖಿ** (ನಾ). ಕೋಪದಿಂದ ಉಗ್ರವಾದ ಮುಖವುಳ್ಳವಳು : ಮರಳಿ ಸಂಜ್ಞಾಲಬ್ಧೆಯಾಗಿಯುಂ ಕಣ್ಮರಳಿ ವಿಕಟಮುಖಿಯಾವಿಷ್ಟೆಯಾಗಿ, ಭೂತಿನಿಯಂತೆ ಸೌಮಿತ್ರಿಯಂ ನೋಡಿ (ಶ್ರೀರಾಮಾ. ೨೪೧-೩೫೩). [ಸಂ. ವಿಕಟಮುಖೀ]

**ವಿಕಟಾಂಗ** (ನಾ). ೧. ವಿಕಾರಗೊಂಡ ಅಂಗ : ವಿಕಟಾಂಗದ ಮುನಿರೂಪಂ ಪ್ರಕಟಯಶಂ ಬಂದು (ನೇಮಿಪು. ೧-೧೮೧) ; ವಿಕಟಾಂಗೋಗ್ರ ವಿರೂಪ ವಿಷ್ಫುರಕರ ಕ್ರೂರಾರಿ ಶೀತೋಷ್ಣ ದುಷ್ಕರುವಸ್ತುಸ್ಥಿತಿಯೆಂತುಟೆಂದಱಿಯಂ (ಜೀವಸಂ. ೧೮೦-೩೬). ೨. ವಿಕಾರವಾದ ದೇಹವುಳ್ಳವನು ; ಅಂದಗೇಡಿ : ಆ ರಣದಲ್ಲಿ ರಣಭೀಮಂ ವೇಣನಾದಂ ಮದನವಿಲಾಸಂ ಕದನದೊಳಳಿದಂ ವಿಜಯಚೂಡಂ ವಿಕಟಾಂಗನಾದಂ (ತಮ್ಮೊರ. ೩-೫೨ ವ) ; ಕಾಲುಗುರಿನಿಂದ ನೆತ್ತಿಯ ತನಕ ನನ್ನಂ ಹೋಲುತಿಹನಾತ ವಿಕಟಾಂಗ ಕರಿಯಣ್ಣಂ (ಕವಿಪು. ೧೧-೧). [ಸಂ.]

**ವಿಕಟಾಂಗಿ** (ನಾ). = ವಿಕಟಾಂಗ ೨ : ಉಡುರಾಜಂ ನಿಲೆ ಲಗ್ನದೊಳ್ ಕಿವುಡನುನ್ಮತ್ತಂ ಪರಪ್ರೇಷಿತಂ ಜಡನಂಧಂ ವಿಕಟಾಂಗಿ ಮೂಕಂ (ಜಾತಿತಿ. ೧೮-೬). [ಸಂ. ವಿಕಟಾಂಗಿನ್]

**ವಿಕಟಾಕ್ಷರ** (ನಾ). ಕರ್ಕಶವಾದ ಅಕ್ಷರ ; ಶ್ರುತಿಕಟುವಾದ ಅಕ್ಷರ : ಕನ್ನಡದ ಮಾತಿನೊಳಾ ವಿಕಟಾಕ್ಷರಂಗಳೊಳ್ ತೊಡರದೆ ಸಕ್ಕದದ ಪದಂ ಪವಣಾಗಿರೆ ಮೆಲ್ಪುವೆತ್ತು . . . ನಿಲೆ ಪೇೞ್ವುದು ನೀತಿನಿರಂತರಕ್ರಮಂ (ಕವಿರಾ. ೧-೧೪೯). [ಸಂ.]

**ವಿಕತ್ಥನ** (ಗು). ೧. ತನ್ನನ್ನು ತಾನೇ ಹೊಗಳಿಕೊಂಡು ಮಾತಾಡುವ ; ಬಡಾಯಿಕೊಚ್ಚುವ. ೨. ಹೊಗಳಿದಂತೆ ಮಾಡಿ ಅಪಹಾಸ್ಯಮಾಡುವ; ವ್ಯಂಗ್ಯವಾಗಿ ಹೊಗಳುವ. (ನಾ). ೩. ಆತ್ಮಸ್ತುತಿ ; ಬಡಾಯಿ. ೪. ಇಲ್ಲದುದನ್ನು ಹೊಗಳುವುದು ; ಮಿಥ್ಯಾಸ್ತುತಿ. ೫. ಮೆಚ್ಚಿ ಹೊಗಳುವಿಕೆ ; ಶ್ಲಾಘನೆ : "ಅರ್ಥವಾದಃ . . . ವಿಕತ್ಥನಂ, ಸ್ತವಃ, ಶ್ಲಾಘಾ, ವರ್ಣನಂ – ಈ ೧೦ ಸ್ತುತಿಯ ನಾಮಂ" (ಹಲಾಯು. ೨೪-೧೪೪). [ಸಂ.]

**ವಿಕಥೆ** (ನಾ). [ಜೈನ] ಪಾಪಕರ್ಮಕ್ಕೆ ಕಾರಣವಾಗುವಂಥ ಕಥೆ : ಅಱಿವುಳ್ಳಂ ವಿಕಥೆಯೊಳ್ ಮನಂ ನಿಱಿಸುಗುಮೇ (ಪಂರಾಮಾ. ೩-೬). [ಸಂ. ವಿಕಥಾ]

**ವಿಕರಣ** (ನಾ). ಅನೇಕ ರೂಪಗಳನ್ನು ತಾಳುವ ಸಾಮರ್ಥ್ಯ ; ವಿಕ್ರಿಯೆ ; ಮಾಯಾಶಕ್ತಿ : ದೇವಿಯೊಳೊರ್ವರೊರ್ವರ್ ದೇವಿಯ ಪರಿವಾರರಪ್ಸರೋಗಣಮುಂ ತದ್ದೇವಿ ವಿಕರಣಸಂಭವದೇವಿಯರುಂ ಪಲಬರೆನಗೆ ಪೊಗಟಲಳುಂಬಂ (ಆದಿಪು. ೬-೧೫) ; ವಿಕರಣಸಂಭವದೇವೀಪ್ರಕರಂ ಸಕಲೋಪಕರಣನಿಕರಾತ್ತಕರಂ ಬಂದಿದಿರೊಳ್ ನಿಂದುದು ನಲವಿಂದಂ (ಚಂದ್ರಪ್ರ. ೪-೬೩ ರಗಳೆ). [ಸಂ.]

**ವಿಕರಾಲ, ವಿಕರಾಳ** (ಗು). ೧. ಅತಿಭಯಾನಕವಾದ ; ಅತ್ಯಂತ ಭೀಕರವಾದ. ವಿಕರಾಳ : ೧. ಕತ್ತಲಿನ ನರದಲ್ಲಿ ತತ್ತರಿಸಿ ತೊಳಲುತಿದೆ ಬಳ್ಳುಗಳ ವಿಕರಾಳ ಕೂಗು (ನಡಬೂ. ೧೦೨-೨) ; ಗಂಗವ್ವನದೊಂದು ಅಕರಾಳ ವಿಕರಾಳ ಚಿತ್ರವು ಆಕೆಯ ಬಗೆಯಲ್ಲಿ ಮನೆಮಾಡಿಕೊಂಡುಬಿಟ್ಟಿತ್ತು (ಗಂವಾಯು. ೧೫೦). (ನಾ). ೨. ಅತಿಭಯಾನಕವಾದುದು ; ವಿಕಾರವಾದುದು : ಗತಕಾಲದ ಭೂತಗನ್ನಡಿಯಲ್ಲಿ ಭವಿಷ್ಯದ ಚಿತ್ರ ವಿಕರಾಳವಾಗಿ ಕಾಣಿಸುತ್ತದೆ (ಹೊಸಕ್ಕಿ. ೨೮೩). ೩. ಒಂದು ನರಕದ ಹೆಸರು : ವಿಕರಾಳ ಪ್ರಕಂಪ ಪದ್ಮ ಸುವಕ್ತ್ರ ಕಾಲವೆಂಬೈದು ಮುಂತ್ರಿನರಕಂಗಳಿಂ ಕೂಡಿ ಅಘೋರವೆಂಬರಸುನರಕವಿಹುದು (ವಿವೇಕ. ೧೫೨). [ಸಂ.]

**ವಿಕರಾಳ** 'ವಿಕರಾಲ' ನೋ.

**ವಿಕರಾಳಾಲೋಕ** (ನಾ). ಕ್ರೂರವಾದ ಕಣ್ಣುಗಳುಳ್ಳವನು : ವಿಕರಾಳಾಲೋಕ ನೀಪಜ್ಜಳಗತನಳಿನೀಶ್ಯಾಮಂ . . . ಒಪ್ಪಿದಂ ದ್ವೀಪಿಲಾಂಗೂಲಕೃತೋಷ್ಣೀಷಂ ಶಿರೋಳಂಕೃತ ವರವಿಕಸತ್ಕಿಂಕಿರಾತಂ ಕಿರಾತಂ (ಚಂದ್ರಪ್ರ. ೫-೫೭). [ಸಂ. ವಿಕರಾಲಾಲೋಕ]

**ವಿಕರಿಸು** (ಕ್ರಿ). ೧. ಬೇರೆ ರೂಪ ತಾಳು ; ಬದಲಾಗು : ಹರನಾಜ್ಞೆಯಿಂ ಪ್ರಕೃತಿ ವಿಕರಿಸುದದಱಿಂ ವರಮಹತ್ತ್ವಂ ಜನಿಸಿತು (ಲಶಿಚ. ೨೬-೩) ; ನೀನು ಚೇಷ್ಟಿಸದಿರಲ್ ದೇಹ ನೆಱೆ ವಿಕರಿಪುದೆ (ವಿಕೋಪು. ೧೪-೯೮). ೨. ವಿಕೃತವಾದ ಸಹವಾಸವನ್ನು ಹೊಂದು ; ವ್ಯಭಿಚಾರ ಮಾಡು : ಸುಕುಮಾರನೆಂಬನೊರ್ವಂ ವಿಪ್ರಸೂನು ಕುಬ್ಜಕೆಯೊಳಿರ್ದಲ್ಲಿಯ ಸಮಸ್ತಪರವಧುಗಳೋಳ್ ವಿಕರಿಸಿ ನೃಪಂ ಪೊಱಮಡಿಸೆ ಪರವಿಷಯಕೆ ಬಂದಿರೆ (ಪದ್ಮರಾ. ೧೧-೧೫೭). [ವಿಕಾರ + - ಇಸು$_3$]

**ವಿಕರ್ಣ** (ನಾ). ೧. ಒಂದು ಬಗೆಯ ಬಾಣ : ಕೊಂದನಂಕದ ವಿಕರ್ಣನನೊಂದೆ ವಿಕರ್ಣದಿಂ ನರಂ (ಪಂಪಭಾ. ೮-೧೦೭) ; ಮೆಯ್ಯೊಳ[ಟ್ಟಿ]ಡಿದ ವಿಕರ್ಣಕೋಟಿಯೊಳಣಂ ನೆಲ ಮುಟ್ಟದೆ ಮೋಡೆ ಬೆಟ್ಟಿದಂಬಡಿಸಿದನಯ್ಯ ಶೌಚಗುಣದುನ್ನತಿಯಂ ಸುರಸಿಂಧುನಂದನಂ (ಪಂಪಭಾ. ೧೧-೪೭). ೨. ಕರ್ಣನ ಒಬ್ಬ ಮಗನ ಹೆಸರು : ಅಂಗರಾಜಂ . . . . ವಿಕರ್ಣಂಬೆರಸರ್ಣವನಿನಾದದಿಂದಾರುತ್ತುಂ ಬಂದು ಗುಣಾರ್ಣವನೊಳ್ ತಾಗೆ (ಪಂಪಭಾ. ೮-೧೦೭ ವ). ೩. ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬನ ಹೆಸರು. [ಸಂ.]

**ವಿಕರ್ತನ** (ನಾ). ೧. ಸೂರ್ಯ ; ರವಿ : "ಸೂರಃ . . . ವಿಕರ್ತನಃ, ಅರ್ಕಃ . . . ಹರಿಃ – ೧೨ ಸೂರ್ಯನ ನಾಮಂಗಳು" (ಸಿದ್ಧಾಂತಿ. ೩೨). 'ವಿಕರ್ತನೋದ್ಭವ' ಪರಾ. ೨. ಒಂದು ಬಗೆಯ ಸಸ್ಯ ; ಎಕ್ಕ. ೩. ತಂದೆಯ ರಾಜ್ಯವನ್ನು ಆಕ್ರಮಿಸಿಕೊಂಡ ಮಗ. [ಸಂ.]

**ವಿಕರ್ತನೋದ್ಭವ** (ನಾ). ೧. ಸೂರ್ಯನ ಮಗ. ೨. ಶನಿ : ತೇಜದಿಂ ದಿನರಾಜ ತಾರಕರಾಜ . . . ವಿಕರ್ತನೋದ್ಭವ ರಾಹುಕೇತುಗಳ ಒಡೆಯೊಳು ಸುರರಾಜ ಶಿಖಿ ಯಮರಾಜ ರಾಕ್ಷಸರಾಜ ವಾರಿಧಿರಾಜ ಮಾರುತರಾಜ ರಾಜೇಶಾನರೊಲ್ಸೆಸೆ (ಬಸವು. ೧೦-೩೦). [ಸಂ.]

**ವಿಕರ್ಮ** (ಗು). ೧. ಕರ್ಮವಿಲ್ಲದ ; ಕರ್ಮರಹಿತವಾದ. ೨. ಆಕ್ರಮವಾಗಿ ವರ್ತಿಸುವ. (ನಾ). ೩. ಅನೇಕ ಬಗೆಯ ಕರ್ಮ ; ವಿಧವಿಧವಾದ ಕಾರ್ಯ. ೪. ನ್ಯಾಯಸಮ್ಮತವಲ್ಲದ ಕಾರ್ಯ : ನಿಮ್ಮ ನಾವೊಲ್ಸೆಸಿ ನಿಮಗೆ ವಿಕರ್ಮವನು ಮಾಡುವುದು ನಮಗದು ಧರ್ಮವಲ್ಲ (ಕುವ್ಯಾವಿ. ೩-೨). ೫. ಪ್ರಾರಬ್ಧಕರ್ಮ ; ಘನವಿಕರ್ಮದ ವಿಲಗದಲಿ ನಿಜತನುಜಶೋಕದ ತಗಹಿನೊಳಗರ್ಜುನನು ಧೈರ್ಯದರಿದ್ರನಾದನು (ಕುವ್ಯಾದ್ರೋ. ೮-೩೨). [ಸಂ. ವಿಕರ್ಮನ್]

**ವಿಕರ್ಷಕ** (ನಾ). ಅಸಹ್ಯಕರವಾದುದು; ತಿರಸ್ಕರಣೀಯವಾದುದು: ಮಾರ್ದವತೆಯೂ ವಿಕರ್ಷಕವೂ ಆದ ಭಾವ ಅವಳ ಕಣ್ಣುಗಳಲ್ಲಿ ಬರೆದಂತಿತ್ತು (ಪುನರು. ೧೯೬). [ಸಂ.]

**ವಿಕರ್ಷಣೆ** (ನಾ). ದೂರ ತಳ್ಳುವುದು ; ದೂರ ಸರಿಯುವಂತೆ ಮಾಡುವುದು : ಒಂದು ಚೇತನದಲ್ಲಿ ಧರ್ಮಾರ್ಥಕಾಮಸಂಬದ್ಧವಾದ ಆಕರ್ಷಣೆಗೂ ಮುಕ್ತಿಯ ವಿಕರ್ಷಣೆಗೂ ಉಂಟಾಗುವ ಘರ್ಷಣೆಯಿಂದ ಕಾವೂ ಹುಟ್ಟುತ್ತದೆ, ಕಲೆ ಉದಿಸುತ್ತದೆ (ಕಾವ್ಯಕು. ೧) ; ಸಾಮಾನ್ಯ ಪರಮಾಣುಗಳಿಗೂ ಈ ಹೊಸಬಗೆಯ ಪರಮಾಣುಗಳಿಗೂ ಮಧ್ಯೆ ಇರುವ ಆಕರ್ಷಣೆಯು ಒಂದು ಅವಧಿಕ ಅಂತರದ ಒಳಗೆ ವಿಕರ್ಷಣೆಯಾಗಿ ಪರಿವರ್ತಿತವಾಗುತ್ತಿದೆ ಎಂದೇಕೆ ಊಹಿಸಬಾರದು? (ನಿತಲು. ೨೩೨). [ಸಂ. ವಿಕರ್ಷಣ]

**ವಿಕರ್ಷಿಸು** (ಕ್ರಿ). ದೂರಕ್ಕೆ ತಳ್ಳು ; ಆಕರ್ಷಣೆ ಇಲ್ಲದಂತೆ ಮಾಡು : "ಹಿಂದಕ್ಕೆ ಅಟ್ಟು . . . ಅಂಗೀಕರಿಸದಿರು ; ಹತ್ತಿರ ಬರಗೊಡದಿರು ; ವಿಕರ್ಷಿಸು" (Repel. ಇಂಕನಿ). [< ವಿಕರ್ಷಣೆ + - ಇಸು$_3$]

**ವಿಕಲ, ವಿಕಳ** (ಗು). ೧. ಊನವಾದ ; ಅಂಗಹೀನವಾದ. ೨. ಬೆದರಿದ ; ಗಾಬರಿಯಾದ. ೩. ಉದ್ವಿಗ್ನವಾದ ; ಖಿನ್ನವಾದ. ೪. ನಿಷ್ಪ್ರಯೋಜಕವಾದ. ೫. ಕೊರತೆಯುಳ್ಳ. ೬. ಒಣಗಿದ ; ಬತ್ತಿದ. (ನಾ). ೭. ಊನವಾದುದು ; ಅಸಮಗ್ರವಾದುದು : ಒಂದು ಸುಸಂಬದ್ಧತೆಯ ನಿಯಮಕ್ಕೆ ಒಳಗಾಗುವ ಆಪತ್ತಿಯನ್ನು ಸ್ವೀಕರಿಸದಿದ್ದರೆ ಆ ಕಲೆಯು, ವಿಕಲವಾಗುತ್ತದೆ! (ಕರ್ನಾಟ. ೪೯೯). ೮. ಭ್ರಮೆ ; ಭ್ರಾಂತಿ : ವಿಕಲವಡೆಗೊಂಡವರ್ ಬಾಯ್ದೆಱೆಯೊಳಕ್ಷರಂ ಸಕಲೀಕರಿಸಿ ತೋಱೆಯಡಗಿ ಪ್ರವಾಹಮಿರ್ದಕಲಂಕ ಸುಸ್ಥಲವನಱಿಯದ ಕವೀಂದ್ರರ ಕವಿತ್ವವೇತಕ್ಕೆ (ವಿಕೋಪು. ೧-೩೮). ೯. ಹತ್ತು ಬಗೆಯ ಕಾಮಾವಸ್ಥೆಗಳಲ್ಲಿ ಒಂದು ; ಹಂಬಲಿಸಿ ಕೊರಗುವಿಕೆ ; ಖಿನ್ನತೆ : ಅಭಿಲಾಷೆ ಚಿಂತೆ ಸಂಸ್ಮೃತಿ ವಿಭುಗುಣನುತಿ ಸಂತಾಪನ ಕ್ರಿಯಾದ್ವೇಷ ವಿಕಲ[ಪಾಠಾಂ. ೪] ಮೌನ ಮೂರ್ಛೆ ಮರಣಮೆಂಬ ದಶಾವಸ್ಥಾದಿ ವಿಚಾರಪರರಿಂ (ವಿವೇಕ. ೧೮೪). ೧೦. [ಸಂಗೀತ] "ವಿಕಲಸ್ವರಸ್ಥಾನ ಶುದ್ಧವಿಲ್ಲದೆ ಹಾಡುವವನು" (ಸಂಗೀಚಂ. ೧೦೩). ವಿಕಳ : ೮. ಅಕಟ ಮಗಳಿಗಿದಾವ ದೆಸೆಯಲಿ ವಿಕಳ ಬಂದುದೊ (ಪ್ರಭುಲೀ. ೫-೬೦). ೯. ಸತಿ ಭೂವರನ ಕೇಳಿದಳವನಿಪತಿಯ ವಿಯೋಗ ವಿಕಳದಲಿ (ಜೀವಂಚ. ೫-೧೩). ೧೧. ಕೊರತೆ ; ಕಡಿಮೆ : ಸಕಲಲಕ್ಷಣವು ವಸ್ತುಕಕೆ

ವರ್ಣಕಶಿಷ್ಟು ವಿಕಳವಾದರು ದೋಷವಿಲ್ಲ (ಭರಚ. ೧-೯). ೧೨. ಭ್ರಾಂತಿಗೊಂಡವನು ; ಭ್ರಮೆಹೊಂದಿದವನು : ವಿಕಳನಾದೆನು ಪಂಚೇಂದ್ರಿಯಧಾತುವಿನಿಂದ ಮತಿಗೆಟ್ಟೆನು ಮನದ ವಿಕಾರದಿಂದ (ಬಸವ. ೪೬). [ಸಂ.]

**ವಿಕಲತೆ, ವಿಕಳತೆ** (ನಾ). ೧. ದುಗುಡ ; ದುಃಖ ; ವ್ಯಾಕುಲತೆ : ವಿಭೀಷಣನೆಂದೆಂಬುತ್ತಮ ಬಲವಾಸುದೇವ ಮರಣಮವೆಯ್ದಲ್ ಚಿತ್ತದ ವಿಕಲತೆ ಯಿಂದಾನತ್ತೊಡೆ ಲಲಿತಾಂಗನೆಯ್ದಿ ಬೋಧಿಸಿದೆನ್ನಂ (ಆದಿಪು. ೫-೨). ೨. ದಿಗ್ಭ್ರಮೆ ; ದಿಗ್ಭ್ರಾಂತಿ. ವಿಕಳತೆ : ೨. ಇದು ಕೆಂಡವೋ ಉರಿಯೋ ಆಗಲಾಪುದೆನುತ್ತ ಭೂಸುರರಾಗ ವಿಕಳ[ಪಾಠಾಂ. ಲ]ತೆಯಿಂದ ಭಯಯುತರಾಗುತಿರೆ (ಬಸಪು. ೫೬-೩೦). ೩. ಹಂಬಲಿಸಿ ಕೊರಗುವ ಸ್ಥಿತಿ ; ಖಿನ್ನತೆ ; ವಿಕಳಾವಸ್ಥೆ : ಭಕ್ತಿರತಿಯ ವಿಕಳತೆಯ ಯುಕ್ತಿಯನೇನ ಬೆಸಗೊಂಬಿರಯ್ಯಾ (ಬಸವ. ೫೧೬). ೪. ಭ್ರಮೆ ; ಭ್ರಾಂತಿ ; ಮರುಳುತನ : ವಿಕಳತೆಯನತಿಗಳೆದವರ್ ಸಾತ್ವಿಕರೆನಿಸುತುತ್ಕೃಷ್ಟವಾಗಿಹ ಮುಕುತಿವನೆಗ್ಗೆದುವರು (ಕಾವೇಮು. ೪೭-೫೬) ; ನೀವು ವಿಕಳತೆಯಿಂದ ಭ್ರಮಿಸಲಿನಿತಾಯ್ತು (ನವಮೋ. ೮-೫೦). ೫. ಅಸಂಪೂರ್ಣವಾಗಿರುವಿಕೆ ; ಅಸಮಗ್ರತೆ : ನಿರ್ಘಟದಲ್ಲಿ ಘಟ ಹುಟ್ಟಿ ಪ್ರಕಟಿಸುವುದ ಕಂಡೆ ನಿರ್ವಿಕಳತೆಯಲ್ಲಿ ವಿಕಳತೆಯು ಹುಟ್ಟಿ . . . ಆ ಉಭಯದ ಗತಿಗೆಟ್ಟವರ ಕಂಡೆ (ಮೋಳಿಮಾ. ೧೦-೩೬). 'ನಿರ್ವಿಕಳತೆ' ಪರಾ.

[ಸಂ. ವಿಕಲತಾ]

**ವಿಕಲಭಾಷೆ** (ನಾ). ಭ್ರಾಂತಿಜನ್ಯವಾದ ಮಾತು : ರಾಘವನ ಸುದ್ದಿಯನೀಕೆಗೆ ಪೇಳ್ವುದಾಗದೇ ಕರ್ಣಪಿಶಾಚಮಿಾ ವಿಕಲ[ಪಾಠಾಂ. ಳ]ಭಾಷೆ ನಿರನ್ನವಿಕಾರಮಾಗದೇ (ಪಂರಾಮಾ. ೧೧-೯೧). [ಸಂ. ವಿಕಲಭಾಷಾ]

**ವಿಕಲಾಂಗ, ವಿಕಳಾಂಗ** (ನಾ). ಅಂಗಹೀನನಾದವನು ; ಅಂಗವಿಕಲ : "ವಿಕಲಾಂಗಃ, ಪೋಲಗಂಡ : – ಈ ೨ ಅಂಗಹೀನಂ" (ಹಲಾಯು. ೬೪-೨೩೩). ವಿಕಳಾಂಗ : "ಪೋಲಗಂಡ ವಿಕಳಾಂಗನಕ್ಕು" (ಮಂಗರಾ. ೬೩-೨೫). [ಸಂ.]

**ವಿಕಾಲಾಕ್ಷ** (ನಾ). ದೃಷ್ಟಿದೋಷವುಳ್ಳವನು : ಉದಯಸ್ಥಂ ದಿನನಾಥನಾಗೆ ವಿಕಲಾಕ್ಷಂ ನಿರ್ಭಯಂ ನಿರ್ದಯಂ (ಜಾತತಿ. ೧೮-೧). [ಸಂ.]

**ವಿಕಲಾಕ್ಷರ** (ನಾ). [ವ್ಯಾಕ] ಸ್ವರರಹಿತವಾದ ಅಕ್ಷರ ; ವ್ಯಂಜನಾಕ್ಷರ : ವಿಕಲಾಕ್ಷರಂ ಪಂಚೋತ್ತರತ್ರಿಂಶವದಕೆ ಸ್ವರಮೊದಗೆ ಸಕಲಾಕ್ಷರಾಹ್ವಯಮಕ್ಕು (ರಾಘಚ. ೨-೫೬). [ಸಂ.]

**ವಿಕಲಿತ, ವಿಕಳಿತ** (ಗು). ೧. ಗೊಂದಲಗೊಂಡ ; ವಿಚಲಿತವಾದ : ಜಯಂತರು . . . ಆ ವಿಕಲಿತ ಮನಸ್ಸಿನಲ್ಲಿಯೇ ಅಲ್ಲಿಂದೆದ್ದು . . . ಕಾಲೇಜ್ ಆವರಣದಿಂದ ಹೊರಬಿದ್ದರು (ಒಂಟಿದ. ೮೭). (ನಾ). ೨. ವಿಚಲಿತನಾದವನು : ವಿಕಲಿತನಾಗಿ ರಕ್ಕಸ ಭರದಿ ದುಃಖಿದಿ ಸುಯ್ದು ಮಂತ್ರಿ ಪ್ರಕರಕಿಂತೆಂದ (ಕೌಶಿರಾ. ೨೩-೨೨). ವಿಕಳಿತ : ೧. ಶೋಕರಿ ಮಿಗೆ ಫಣಿರಾಜಪತಾಕಂ ವಿಕಳಿತವಿವೇಕಶೂನ್ಯಂ [ಪಾಠಾಂ. ವಿಗಳಿತವಿವೇಕ ನವಿರಳ] ಬಾಷ್ಪೋದ್ರೇಕಂ . . . ಮೂರ್ಛೆಗೆ ಸಂದಂ (ಗದಾಯು. ೩-೭೭). [ಸಂ.]

**ವಿಕಲೆ** (ನಾ). ೧. ಮುಟ್ಟಾಗಿರುವ ಹೆಂಗಸು. ೨. ಒಂದು ವಿಘಳಿಗೆಯ ಅರವತ್ತನೆಯ ಒಂದು ಅಂಶ : ಒಂದು ಅಂಶಕ್ಕಿಂತಲೂ ಕಡಿಮೆಯಾದ ಕೋಣವನ್ನು ಅಳೆಯಬೇಕಾಗಿ ಬರುವುದರಿಂದ ಈ ಅಂಶವನ್ನು ೬೦ ಸಮಭಾಗಗಳಾಗಿ ವಿಭಾಗಿಸಿ ಪ್ರತಿಯೊಂದಕ್ಕೂ ೧ ಕಲೆ (Minute) ಎಂಬ ಹೆಸರನ್ನು ಕೊಟ್ಟಿದೆ. ಇಂತಹ ಪ್ರತಿಯೊಂದು ಕಲೆಯೂ ೬೦ ವಿಕಲೆಗಳಾಗಿ (Seconds) ವಿಭಾಗವಾಗಿದೆ (ಜ್ಯೋತಿರ್ವಿ. ೨೬೦).

[ಸಂ. ವಿಕಲಾ]

**ವಿಕಲೇಕ್ಷಣ** (ನಾ). ದೋಷಪೂರ್ಣವಾದ ದೃಷ್ಟಿಯುಳ್ಳವನು : ಕುಜಂ . . . ನೆಲಸೆ ಕುಳೀರಮಂದಿರದೊಳರ್ಥಯುತಂ ವಿಕಲೇಕ್ಷಣಂ ಬುಧಂ ಜಲನಿಧಿಯಾನ ಲಬ್ಧಧನನಕ್ಕುಮವಂ (ಜಾತತಿ. ೧೭-೧೯). [ಸಂ.]

**ವಿಕಲ್ಪ** (ನಾ). ೧. ಒಂದಕ್ಕಿಂತ ಹೆಚ್ಚು ವಸ್ತು, ವಿಷಯಗಳಲ್ಲಿ ಒಂದನ್ನು ಮಾತ್ರ ಆಯ್ದುಕೊಳ್ಳುವ ಅವಕಾಶ ; ಐಚ್ಛಿಕತೆ. ೨. ಅನಿಶ್ಚಿತತೆ ; ಸಂದಿಗ್ಧತೆ : ಭವಬಂಧನವೆಲ್ಲಿಯದೊ ಸಂಕಲ್ಪ ವಿಕಲ್ಪವೆಂಬ ಸಂದೇಹ ಕಳೆದುಳಿದವಂಗೆ (ಬಸವ. ೮೭೦). ೩. ಸಂದೇಹ ; ಅನುಮಾನ ; ಸಂಶಯ : ಚಾಡಿಗಳಿಂದ ಯಜಮಾನನ ಮನಸ್ಸಿನಲ್ಲಿ ಜಗನ್ನಾಥನ ವಿಷಯಕ್ಕೆ ವಿಕಲ್ಪ ಬರದಿದ್ದರೂ . . . ಪರೀಕ್ಷಿಸಿ ನೋಡ ಬೇಕೆಂಬ ಲವಲವಿಕೆ ಹುಟ್ಟಿತು (ಮುಂಬಯಿ. ೪-೫೦). ೪. ಸಂಚು ; ಉಪಾಯ ; ತಂತ್ರ. ೫. ಎರಡುಯುಗಗಳ ನಡುವಣ ಕಾಲಾವಧಿ,—ಯುಗ : ಭುವನಜನಜೀವ ನೋಪಾಯವೃತ್ತಿಯಿಂ ತೋಱ ಕೊಟ್ಟು ಕೃತಕೃಷಿಕರ್ಮ ವ್ಯವಹೃತಿಯಿಂ ಕೃತಯುಗಮೆಂಬ ವಿಕಲ್ಪಮನಾದಿಕಾಲದೊಳ್ ಪುಟ್ಟಿಸಿದಂ (ಪಂರಾಮಾ. ೧-೯೩). ೬. ಪ್ರಕಾರ ; ವಿಧ ; ಬಗೆ : ಅವಱ ವಿಕಲ್ಪಮೆ ಪೆಱವು ಪೂಜಾವಿಶೇಷಮಕ್ಕುಂ (ಅಜಪು. ೧೨-೧೭) ; ಕೋಲೆಯ ವಿಕಲ್ಪಕೋಟಿಗಳೆ ದುಷ್ಕೃತಂ (ಪಂರಾಮಾ. ೫-೮). ೭. ತಪ್ಪು ; ದೋಷ ; ಪ್ರಮಾದ : 'ವಿಕಲ್ಪಾರ್ಥ' ಪರಾ. ೮. ಭೇದ ; ಭಿನ್ನತೆ ; ವ್ಯತ್ಯಾಸ : ಅದು ದಿವಿಜೇಂದ್ರಲೋಕಮಿದು . . . ಮನುಷ್ಯಲೋಕಮೆಂಬಿದುವೆ ವಿಕಲ್ಪಮಲ್ಲಿ ಸುರಕಾಂತೆ ದಲಿಲ್ಲಿ ಮನುಷ್ಯಕಾಂತೆಯೆಂಬಿದುವೆ ವಿಕಲ್ಪಂ (ಆದಿಪು. ೪-೧೯) ; ಎಲ್ಲಾ ಬಗೆಯಲ್ಲೂ ಅವರಿಗೂ ನಮಗೂ ಸ್ನೇಹವೇ ಹೊರ್ತು ವಿಕಲ್ಪ ಯೋಚಿಸಲಿಕ್ಕೆ ಇಲ್ಲಾ (ರಾಜೇಂದ್ರ, ೪೫). ೯. ಕಲ್ಪಿತವಾದ ಸಂಗತಿ ; ಹೀಗೆ ಇದ್ದಿರಬಹುದೆಂಬ ತಾರ್ಕಿಕವಾದ ಗ್ರಹಿಕೆ : ಬರಿಯ ಶಬ್ದದಿಂದ, ವಿಷಯವಿಲ್ಲದೇ ಉಂಟಾಗತಕ್ಕ ಜ್ಞಾನಕ್ಕೆ ವಿಕಲ್ಪವೆಂದು ಹೆಸರು (ಹಿಂದಸಾ. ೧೦೪) ; 'ಮೊಲದ ಕೊಂಬು' ಎಂಬ ಮಾತನ್ನು ಕೇಳಿ ಉಂಟಾಗುವ ಪ್ರತ್ಯಯಕ್ಕೆ ಗೋಚರವಾಗುವ ವಸ್ತುವು ಲೋಕದಲ್ಲಿ ಎಲ್ಲಿಯೂ ಇರುವುದಿಲ್ಲ. ಆದರೂ ಇಂಥದೊಂದು ವಸ್ತುವು ನಿಜವಾಗಿದ್ದಂತೆ ನಾವು ತತ್ಕಾಲಕ್ಕೆ ಕಲ್ಪಿಸಿಕೊಳ್ಳಬಹುದಾಗಿ ರುವುದು. ಈ ಬಗೆಯ ಪ್ರತ್ಯಯಕ್ಕೆ 'ವಿಕಲ್ಪ'ವೆಂದು ಹೆಸರು (ಬ್ರಹ್ಮಭಾ. ೩). ೧೦. [ವ್ಯಾಕ] ಒಂದು ಅಕ್ಷರ ಅಥವಾ ಪದದ ಜಾಗದಲ್ಲಿ ಅದರ ಇನ್ನೊಂದು ರೂಪ ಪರ್ಯಾಯವಾಗಿ ಬರುವುದು ಮತ್ತು ಒಂದು ಸಲ ಬರುವ ಅಥವಾ ಬಾರದ ಐಚ್ಛಿಕಸ್ಥಿತಿ : ಕುಳದ ನಿಯಾಮದೊಳೆಂದುಂ ಕ್ಷಳಕ್ಕೆ ಲಾಕ್ಷರವಿಕಲ್ಪಮಿಲ್ಲ ವಿಕಲ್ಪಂ ಕ್ಷಳನಲ್ಲದಿಲ್ಲ ಸಂಸ್ಕೃತದೊಳಾ ಲಕಾರಕ್ಕೆ ಪೇೞ್ದೆನದಱಿಂ ಕ್ಷಳನು (ಶಮದ. ೫) ; ಸಮಾಸವಲ್ಲದಲ್ಲಿಯೂ ವಕಾರ ವಿಕಲ್ಪವಾಗಿ ಬರುವುದುಂಟು (ಕೃಷಿಡಿ. ೧೧). 'ಸಂಧಿವಿಕಲ್ಪ' ಪರಾ. ೧೧. [ವೇದಾಂತ] ಚಿತ್ತವೃತ್ತಿಯ ಐದು ಪ್ರಕಾರಗಳಲ್ಲಿ ಒಂದು : ಚಿತ್ತವೃತ್ತಿಪ್ರಮಾಣ, ವಿಪರ್ಯಯ, ವಿಕಲ್ಪ, ನಿದ್ರಾ, ಸ್ಮೃತಿಗಳೆಂದು ಐದು ಪ್ರಕಾರ . . . ಬರಿಯ ಶಬ್ದದಿಂದ ವಿಷಯವಿಲ್ಲದೇ ಉಂಟಾಗತಕ್ಕ ಜ್ಞಾನಕ್ಕೆ ವಿಕಲ್ಪವೆಂದು ಹೆಸರು (ಹಿಂದಸಾ. ೧೦೪). ೧೨. = ವಿಕಲ್ಪಾಲಂಕಾರ : ಸಮಾಸೋಕ್ತಿ ಪರ್ಯಾಯೋಕ್ತಿ ಆಕ್ಷೇಪ . . . ಪರಿಸಂಖ್ಯೆ ವಿಕಲ್ಪ ಸಮುಚ್ಚಯ . . . ಭಾವಿಕ ಉದಾತ್ತವೆಂಬ ಅಱವತ್ತ್ನೆದಲಂಕಾರಗಳಿಂದೊಡಗೂಡಿ (ವಿವೇಕ. ೧೭೯). ೧೩. [ಗಣಿತ] ಸಾಲಾಗಿಟ್ಟ (ವಸ್ತು) ಶ್ರೇಣಿಯಲ್ಲಿ ಆಯಾವಸ್ತುಗಳ ಸ್ಥಾನಪಲ್ಲಟ ಮಾಡುವುದರಿಂದ ಉಂಟಾಗುವ ಬೇರೆಬೇರೆ ಗುಂಪುಗಳ ಗಣನೆ : ವಿಕಲ್ಪ ಎಂಬುದು ಬೀಜಗಣಿತದ ಒಂದು ಶಾಖೆ (permutations and combinations). ಈ ಶಾಖೆಯನ್ನು ಜೈನರು ವಿಶೇಷವಾಗಿ ಬೆಳಸಿದರು (ಗಣಿಚ. ೨೦೩). [ಸಂ.]

**ವಿಕಲ್ಪಗತಿ** (ನಾ). = ವಿಕಲ್ಪ ೧೦ : ಪಗಲಿರುಳೆಂಬಲ್ಲಿ ವಿಕಲ್ಪಗತಿಯಿನಾ ವ್ಯಂಜನಾಂತ್ಯದೊಳೆ ಪೇೞ್ದಿರ್ ಸೂರಿಗಳ್ (ಶಮದ. ೧೦೯). [ಸಂ.]

**ವಿಕಲ್ಪಬಿಂದು** (ನಾ). [ವ್ಯಾಕ] ಒಂದು ಪದವು ಅಬಿಂದುಕ ಅಥವಾ ಸಬಿಂದುಕ ಆಗಿರಬಹುದಾದ ರೂಪ ಮತ್ತು ಹಾಗೆ ಇರುವ ಪದ : ವಿಕಲ್ಪಬಿಂದುಗೆ – ಕದಂಪು, ಕದಪು ; ಕೊಡಂಕೆ, ಕೊಡಕೆ (ಶಮದ. ೬೬ ಪ್ರಯೋ). [ಸಂ.]

**ವಿಕಲ್ಪಾರ್ಥ** (ನಾ). ೧. ಅಥವಾ ಎಂಬ ಅರ್ಥ : ಘಟಿಯಿಪುದು ವಿಕಲ್ಪಾರ್ಥಂ ಕಟಿಲದೆ ಮೇಣೆಂಬ ಶಬ್ದದೊಳ್ (ಶಮದ. ೩೦೫). ೨. ತಪ್ಪುಕಲ್ಪನೆ ; ವಿಪರೀತಾರ್ಥ : ನಿಮ್ಮನ್ನೇ ಕಂಡು ಮಾತನಾಡಿದರೆ ಸರಿಹೋಗುವುದೆಂದು ಅವರೊಂದಿಗೆ ಇಲ್ಲಿಗೆ ಬಂದೆವು. ನೀವು ವಿಕಲ್ಪಾರ್ಥ ಮಾಡಿಕೊಳ್ಳಬಾರದು (ಕುರುಕಾ. ೪೭). [ಸಂ.]

**ವಿಕಲ್ಪಾಲಂಕಾರ** (ನಾ). [ಕಾವ್ಯಮಿಾ] ಸಮಾನಬಲವುಳ್ಳ ಯಾವುದಾದರೂ ಎರಡು ಕಾರ್ಯವಿಧಾನಗಳಿಗೆ ಪರಸ್ಪರ ವಿರೋಧವುಂಟಾಗಿ ಯಾವು ದಾದರೂ ಎರಡು ಕಾರ್ಯ ನಿಶ್ಚಿತವಾದಾಗ ಅದನ್ನು ಆಯ್ದುಕೊಳ್ಳುವುದು ; ಒಂದು ಬಗೆಯ ಅಲಂಕಾರ : ಸಮಬಲಮಾಗಿಯೊಂದರ್ಕೊಂದು ವಿರುದ್ಧಮಾಗಿರ್ಪ ಕಜ್ಜಂಗಳೊಳಾವುದನಾದೊಡಮೊಂದನೆಸಗಲ್ವೇೞ್ಬುದೆಂಬುದು ವಿಕಲ್ಪಾಲಂಕಾರಂ

ಎಂತೆನೆ : – ದೊರೆದೊರೆಗಳಿರಾ ಕೇಳಿಂ ಪರಿಪರಿಯೊಳ್ಪನ್ನಬಟ್ಟು ಬಸವಟಿಯುದಿರಿಂ ನರಪತಿಯಡಿನೆಟಲೊಳ್ಕೇಣ್ ಸುರಪತಿಯಡಿನೆಟಲೊಳಾದೊಡಂ ಸೊಗವಾಟಿಂ (ಅಪ್ರತಿ. ೧೦೦-೧೧) ; ಸಂಧಿ ವಿಗ್ರಹವೆರಡು ಒಮ್ಮೆಲೆ ಪ್ರಾಪ್ತವಾದಡೆ ಎರಡರೊಳು ಒಂದಾಗುವುದೆಂದು ಪೇಳಲ್ಕೆ ವಿಕಲ್ಪಾಲಂಕಾರವೆನಿಸುವುದು (ಕುವಲ. ೧೦೫) ; ಒಂದನ್ನು ಸಮ್ಮತಿಸಿದಲ್ಲಿ ಮತ್ತೊಂದನ್ನು ಸಮ್ಮತಿಸಲಾಗದ ಪಕ್ಷದ್ವಯದಲ್ಲಿ ಯಾವುದಾದರೂ ಒಂದು ಪಕ್ಷವನ್ನು ಸಮ್ಮತಿಸುವುದಕ್ಕಿರುವ ಸಂದರ್ಭವನ್ನು ತೋರ್ಪಡಿಸುವುದೇ ವಿಕಲ್ಪಾಲಂಕಾರವೆನ್ನಿಸಿಕೊಳ್ಳುವದು (ಕೃವಿ. ೩೪೪). [ಸಂ.]

**ವಿಕಲ್ಪಿತ** (ಗು) ೧. ಸಿದ್ಧವಾದ ; ಅಣಿಯಾದ. ೨. ವಿಭಾಗವಾದ. (ನಾ). ೩. ಪ್ರತ್ಯೇಕ ವಿಭಾಗವಾಗಿ ಮಾಡಿದುದು ; ವಿಶಿಷ್ಟಪ್ರಕಾರವಾಗಿ ವ್ಯವಸ್ಥೆಮಾಡಿದುದು : ನೀತಿನಿರಂತರಾನುಗತವೃತ್ತಿವಿಕಲ್ಪಿತಮಂ ತದೀಯ ನಿರ್ಣೀತಿಯನೀ ತೆಱತ್ತು ತಱಿಸಲ್ಕೆ ಬುಧೋತ್ತಮರ್ (ಕವಿರಾ. ೨-೧೦೧) ; ಗಜತುರಗರಥಪದಾತಿಮಹೋಕ್ಷಗಂಧರ್ವನಟೀವಿಕಲ್ಪಿತಮಾದೇಟುಂ ಪಡೆಯುಂ . . . ತನಗೆ ಪ್ರಸಿದ್ಧಮಾಗೆ (ಶಾಂತಿಪು. ೪-೧೧೧ ವ). [ಸಂ.]

**ವಿಕಲ್ಪಿಸು** (ಕ್ರಿ). ೧. ಬಗೆಬಗೆಯಾಗಿ ಊಹಿಸು,—ಕಲ್ಪಿಸು : ಕೋಪದಾಗ್ರಹ ನೆನ್ನನಗಲ್ಪನೊ ಕಾಣದೆನ್ನನೆಲ್ಲಿರದಱಸುತ್ತಮಿರ್ದಪನೊ ಬಾಲತಮಾಲವನಾಂತ ರಾಳದೊಳ್ ಎಂದು ವಿಕಲ್ಪಿಸುತ್ತಮಿರ್ದು (ಕಾದಂಪೂ. ೬೩). ೨. ಬೇರೆ ರೀತಿಯಾಗಿಸು ; ವ್ಯತ್ಯಾಸಗೊಳಿಸು : ಆತನಿಂ ಪಿರಿಯನೆಂಬಂತಪ್ಪವಱೊಳಪಾದಾನಮಂ ಮಱೆಮಾಡಿ ವಿಕಲ್ಪಿಸುವರ್-ಕೃಷ್ಣನಿಂ ಪಿರಿಯಂ ಬಲಭದ್ರಂ. ದುರ್ಯೋಧನನಿಂ ಕಿಱಿಯಳ್ ದುಶ್ಶಳೆ- ಎಂಬಂತೆ (ಶಮದ. ೧೫೧ ಪ್ರಯೋ) ; ಮನುಷ್ಯನು ಸಂಕಲ್ಪಿಸಿದ್ದನ್ನು ವಿಧಾತನು ವಿಕಲ್ಪಿಸುತ್ತಾನೆ ಎಂದು ಅರಿಯೆ (ಬಂಕಮ. ೨೦೭). [ವಿಕಲ್ಪ + - ಇಸು]

**ವಿಕಸನ** (ನಾ). ೧. ಅರಳುವಿಕೆ ; ವಿಕಾಸ : ವಿಲೋಚನಂಗಳಲ್ಲಮಿವಳಿಗಳ್ ಮುದಮಲ್ಲಿದು ವಿಕಸನಂ (ಕವಿರಾ. ೩-೨೪) ; ಹರಿಕರಾಬ್ಜವಿಕಸನಭಾಸ್ವನ್ಮಂಡಲ ದಂತೊಪ್ಪುವ ಕೋದಂಡಂ ಶಾರ್ಙ್ಗಾಬ್ಜಮೋಪ್ಪುಗಮ್ಮಂ ನಿಚ್ಚಂ (ವಿಷ್ಣುಪು. ೧-೧-೧೨). ೨. ಬೆಳವಣಿಗೆ ; ವೃದ್ಧಿ ; ಅಭ್ಯುದಯ : ಸಾಮಾಜಿಕಜೀವನದ ವಿಕಸನಕ್ಕೂ ತಕ್ಕಷ್ಟು ಗಮನ ಕೊಡಬೇಕು (ಶಿಕ್ಷದ. ೧೩೭). [ಸಂ.]

**ವಿಕಸಿತ** (ಗು). ೧. ಅರಳಿದ ; ವಿಕಾಸವಾದ : ವಿಕಸಿತ ನಾಸಾಪುಟನತಿ ವಿಕಂಪಿತಾ ತಾಮ್ರ ದಶನವಸನಂಬದ್ಧಭ್ರುಕುಟಿಪುಟಂ ಭರತೇಶ್ವರನಕಾಲ ಯಮರಾಜಲೀಲೆಯಂ ಕೈಕೊಂಡಂ (ಆದಿಪು. ೧೪-೨೪) ; ವಿಕಸಿತನೀಲನೀರಜದಳಂಬೊಲಿರಲ್ ಗಱಿ . . . ಪೂವಿನಿಂ ಸಮೆದ ಪಕ್ಕಿಯಿದೆಂಬಿನಮಾಗಳೊಂದು ಸಾರಿಕೆ ಪರಿತಂದುದು (ಕಾದಂಪೂ. ೬೦). ೨. ಅಭಿವೃದ್ಧಿ ಹೊಂದಿದ. (ನಾ). ೩. ಅರಳಿದುದು ; ಪ್ರಫುಲ್ಲವಾದುದು : ವಿಕಸಿತಮಾದ ಕಾಂಚನಸರೋರುಹಷಂಡದ ಪರ್ಬುಮಂ . . . ಶುಕತತಿ ನೋಡಿ ನೋಡಿ ನೆಱೆ ನಿಟ್ಟಿಸಲಾಱದೆ ಮಂಜುಳಾರವಂ ಪ್ರಕಟಿಸೆ ಪರ್ಬುಗೊಂಡು ಸುಟೆದಾಡುವುದಲ್ಲಿಯ ಕೆಯ್ಯೊಲಂಗಳೊಳ್ (ಜಗಿವ. ೨-೮) ; ಪರ್ವತಾಗ್ರದಲಿ ವನಜ ವಿಕಸಿತವಾದೊಡೆಯು ಸಜ್ಜನರುಗಳು ನುಡಿದೆರೆದನಾದರು (ಕುವ್ಯಾಉ. ೩-೧೨೬). [ಸಂ.]

**ವಿಕಸಿತವಡೆ** (ಕ್ರಿ). ೧. ಅಗಲವಾಗು ; ವಿಸ್ತಾರವಾಗು : ವಿಕಸಿತವಡೆ ದಂತರಾಳಗರ್ಭದ ಗೃಹ ಶುಕನಾಸಿಯ ಮಂದಿರದ ಬಕುತವತ್ಸಲ ಶ್ರೀರಂಗೇಶ ಸಾಹಸ್ರಮುಖಿನ ತಲ್ಪದೊಳೆಸೆದಿಹನು (ಕಂವಿ. ೭-೯೩). [ವಿಕಸಿತ + ಪಡೆ]

**ವಿಕಸಿಸು** (ಕ್ರಿ). ೧. ಅರಳು ; ಬಿರಿ : ಸಾಂದೀಪನಿಸವ ವಿದ್ಯೆ ಮುಕುಂದನ ಸಂಗತಿಯೊಳತಿವಿಕಾಸಮನೊಳಕೊಂಡಂದೆಸೆದುದು ಪೂಗೊಳದರವಿಂದಿನಿ ದಿನಕರನ ಸಂಗದಿಂ ವಿಕಸಿಪವೋಲ್ (ಜಗಿವ. ೭-೯). ೨. ಬೆಳವಣಿಗೆ ಹೊಂದು ; ಅಭಿವೃದ್ಧಿಯಾಗು : ವ್ಯಕ್ತಿತ್ವ ಪರಿಪೂರ್ಣವಾಗಿ ವಿಕಸಿಸುವಂತೆ ಸನ್ನಿವೇಶವನ್ನು ಕಲ್ಪಿಸಬೇಕು (ಶಿಕ್ಷದ. ೩೭). [ವಿಕಸನ + - ಇಸು]

**ವಿಕಸೆ** (ನಾ). ಒಂದು ಬಗೆಯ ಸಸ್ಯ ; ಮಂಜಿಷ್ಠೆ : "ಕಾಡುಬಳ್ಳಿ, ಸೋಮಲತೆ . . . ವಿಕಸೆ, ಬಿಂಗಿ, ಮಂಜಿಷ್ಠ, ಯೋಜನವಲ್ಲಿ" (ಸನ್ನಿ. ೧೧೪). [ಸಂ. ವಿಕಸಾ]

**ವಿಕಸ್ವರ** (ಗು). ೧. ಅರಳುವ ; ವಿಕಾಸವಾಗುವ ; ವಿಸ್ತಾರವಾಗುವ. ೨. (ಧ್ವನಿಯಂತೆ) ಗಟ್ಟಿಯಾದ ; ಘನವಾದ. (ನಾ). ೩. ಅರಳಿದುದು ; ಪ್ರಫುಲ್ಲವಾದುದು : ಆಕೆಯ ವದನಬಿಂಬವು ಶಾರದಾಂಭೋಜದಂತೆ ವಿಕಸ್ವರವಾಗಿ ಲಾವಣ್ಯಪೋಷಕವಾಗಿ ಒಪ್ಪುತ್ತಿದ್ದಿತು (ಲಕ್ಷ್ಮೀಪ್ರ. ೫೬). [ಸಂ.]

**ವಿಕಸ್ವರಾಲಂಕಾರ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ; ಒಂದು ವಿಶೇಷಸಂಗತಿಯನ್ನು ಸಾಮಾನ್ಯದಿಂದಲೂ, ಇನ್ನೊಂದು ವಿಶೇಷದಿಂದಲೂ ಪುಷ್ಟೀಕರಿಸಿ ಹೇಳುವುದು : ಒಂದು ವಿಶೇಷಮಂ ಸಮರ್ಥಿಸುವುದಕ್ಕೆ ಸಾಮಾನ್ಯಮಂ ಅದಂ ಸಮರ್ಥಿಸುವುದರ್ಕೊಂದು ವಿಶೇಷಮಂ ಪೇಟೆಯದು ವಿಕಸ್ವರಾಲಂಕಾರಂ - ಎಂತೆನೆ — ತನ್ನಂ ನೆಱೆ ನೆಮ್ಮಿದರಂ ತನ್ನವೊಲುನ್ನತನೆನಿಕ್ಕುಮಿಾಯಪ್ರತಿಮಂ ಮುನ್ನೆಗಟ್ಟ ಪಿರಿಯರುಂ ಶ್ರೀಮನ್ನಾರಾಯಣ ನುಮೆಣಸಲಂತೆ ಪೊಲ್ಮೆಸೆ (ಅಪ್ರತಿ. ೧೦೬-೨೨) ; ಮೊದಲು ವಿಶೇಷವ ಪೇಳಿ, ಅದಕ್ಕೆ ದೃಷ್ಟಾಂತಭೂತವಾದ ಸಾಮಾನ್ಯವ ಪೇಳಿದಕ್ಕೂ ತೃಪ್ತಿಬಡದೆ ಪುನಃ ಉಪಮಾರೀತಿಯಿಂದಲಾಗಲಿ ಅಥವಾ ಅರ್ಥಾಂತರನ್ಯಾಸರೀತಿಯಿಂದಾಗಲಿ ವಿಶೇಷವು ವರ್ಣಿಸೆ ವಿಕಸ್ವರಾಲಂಕಾರವೆನಿಪ್ಪುದು (ಕುವಲ. ೧೧೮). [ಸಂ.]

**ವಿಕಳ** 'ವಿಕಲ' ನೋ.

**ವಿಕಳಗೊಳ್** (ಕ್ರಿ). ಮರುಳಾಗು ; ಭ್ರಾಂತಿಹೊಂದು : ಅಕಟ ಬಸವಯ್ಯ ಭಕ್ತಿಯ ಮರುಳು ತಲೆಗೇಱೆ ವಿಕಳಗೊಂಡಿತೊ ಪೇಳು ಸುಮ್ಮನಿರದೇತಕ್ಕೆ . . . ಕರವೆತ್ತಿ ಪಿಟಿಪನೆಂದೆಂಬುದೇನು (ಪ್ರಾಭರಾ. ೨೧-೩) ; ನಾ ನಿನ್ನ ಸಮ್ಮುಖದಿ ಸಾಕಾರದಿಂ ನಿಂದಿರಲು ಗೆಲ್ಲದೆ ವಿಕಳಗೊಂಡವರಂದದಿ ನಿರಾಯುಧನುಮಾಗಿ ನಿಲ್ಲುವರೆ ಕಲಿವೀರಭಟರು (ನವಮೋ. ೧೨-೫೦). [ವಿಕಳ (= ವಿಕಲ) + ಕೊಳ್]

**ವಿಕಳಗೊಳಿಸು** (ಕ್ರಿ). ೧. ಭ್ರಮೆಗೊಳಿಸು ; ಬುದ್ಧಿಯನ್ನು ಕೆಡಿಸು ; ಮತಿಗೆಡಿಸು : ಅಕಟ ಮರುಳಾದ್ಯೆ . . . ಶೂರ್ಪಣಾದಿ ನಿನ್ನ ವಿಕಳಗೊಳಿಸಿದಳಂಗಜನ ಮೋಹಕರದ ಮದ್ದಿನಲಿ (ತೊರರಾ. ೩-೭-೩೪). ೨. ಕಳವಳಕ್ಕೆ ಈಡುಮಾಡು ; ಗಾಸಿಗೊಳಿಸು : ನಕುಳನನು ನೋಯಿಸಿದ ಸಹದೇವಕನ ಘಾಯಂಬಡಿಸಿದನು ಸಾತ್ಯಕಿಯ ಮಸೆಗಾಣಿಸಿದನಾ ಪಾಂಚಾಲ ಕೈಕೆಯರ ವಿಕಳಗೊಳಿಸಿದನು (ಕುವ್ಯಾಕ. ೧೩-೪೦). [ವಿಕಳಗೊಳ್ + - ಇಸು]

**ವಿಕಳತನ** (ನಾ). ಭ್ರಮೆ ; ಭ್ರಾಂತಿ : ಯುಕುತಿ ತೋಱದೆ ಮತ್ತೆ ಜೂಜಿನ ವಿಕಳತನಕೆಡೆಗೊಂಡು ಕೌರವ ಶಕುನಿಗಳ ದುರ್ನೀತಿಗೊಳಗಾದನು ಮಹೀಪಾಲ (ಕುವ್ಯಾಸ. ೬೦೫. ೧೭-೪೭) ; ನೀ ನಿನ್ನ ವಿಷಯದ ವಿಕಳತನವನು ಬಿಟ್ಟು ಸಲೆ ಸಾತ್ವಿಕದ ಬುದ್ಧಿಯಲೀಕ್ಷಿಸು (ಪ್ರಭುಲೀ. ೭-೨೦). [ವಿಕಳ (= ವಿಕಲ) + - ತನ]

**ವಿಕಳತೆ** 'ವಿಕಲತೆ' ನೋ.

**ವಿಕಳತೆಗೊಳ್** (ಕ್ರಿ). ಭ್ರಾಂತನಾಗು ; ಬುದ್ಧಿಗೆಡು ; ಮತಿಗೆಡು : ಅಂಗದ ನಿರಾಭಾರಿಗಳೆಲ್ಲರು ಕೂಡಿ ಲಿಂಗದ ಹೊಲಬ ಬಲ್ಲೆವೆಂದು . . . ಕೀಳರೊಳಗೆ ಸಕಲಭೋಗವ ಮಾಡುವ ವಿಕಳತೆಗೊಂಡವರ ನೋಡಾ (ಮೋಳಮಾ. ೧೭೦-೩೩೪) ; ಅಕಟ ನಾ ಪಾಪಿಯಾದೆನು ಈಸುಕಾಲವು ಸಕಲಜೀವಿಯನೆಲ್ಲ ಕೊಂದೆ ವಿಕಳತೆಗೊಂಡೆನು (ನನ್ನರಾ. ೮-೧೨೨). [ವಿಕಳತೆ (= ವಿಕಲತೆ) + ಕೊಳ್]

**ವಿಕಳತ್ವ** (ನಾ). ದಿಗ್ಭ್ರಮೆ ; ದಿಗ್ಭ್ರಾಂತಿ ; ಕಕ್ಕಾಬಿಕ್ಕಿ : "ಬೆಬ್ಬಳಮೆಂದೆನೆ ವಿಕಳತ್ವಮೆಂದು ತಿಳಿಗೆ ವಿದ್ವರ್" (ಭಾರು. ೫೨). [ಸಂ. ವಿಕಲತ್ವ]

**ವಿಕಳಧ್ವನಿ** (ನಾ). ೧. ದುಃಖದ ಧ್ವನಿ. ೨. ಪಕ್ಷಿಗಳ ಇಂಪಾದ ನಿನಾದ ; ಹಕ್ಕಿಗಳ ಇಂಚರ. ೧, ೨ : ಆ ವನಂ ವನಧಿಯಂತೆ ವಲ್ಲಕಿಯಂತೆ ವರಪ್ರವಾಳ ಮಂಡಿತಮುಂ . . . ವಿರಹಿಯಂತೆ ವಿಧಿವಾಹನದಂತೆ ವಿಕಳಧ್ವನಿವಿಳಸಿತಮುಂ . . . ಎನಿಸಿದುದು (ರಾಜಶೇ. ೨-೭೮ ವ).

[ಸಂ. ವಿಕಲಧ್ವನಿ (ವಿಕಲ + ಧ್ವನಿ); (ವಿ + ಕಲ + ಧ್ವನಿ]

**ವಿಕಳಪಾಣಿ** (ನಾ). ಒಂದು ಕೈಯುಳ್ಳವನು : "ವಿಕಳಹಸ್ತಂ ವಿಕಳಪಾಣಿ ಯೊರ್ಕೈಯನಕ್ಕು" (ಮಂಗರಾ. ೧೧೫-೬). [ಸಂ. ವಿಕಲಪಾಣಿ]

**ವಿಕಳಮತಿ** (ನಾ). ಭ್ರಾಂತಿಗೊಂಡವನು ; ಮತಿಗೆಟ್ಟವನು : ಸ್ವಕರಸ್ಥನಾದ ಹರಿಯಂ ಬಿಟ್ಟು ಕಟ್ಟಿದಂ ಗರ್ದಭಾಕೃತಿಹರಿಯನು ವಿಕಳ[ಪಾಠಾಂ. ಲ]ಮತಿ ಯಾಗಿರ್ದನೀತಂ (ದ್ವಿಮಿಭಾ. ೨೫-೬೦). [ಸಂ. ವಿಕಲಮತಿ]

ವಿಕಳವ್ರತ (ನಾ). ವ್ರತಕೆಟ್ಟವನು ; ವ್ರತಗೇಡಿ : ಸ್ಖಲಿತವಚನನ ಯೋಗಿನಿಂದಾಕುಳನ ವಿಕಳವ್ರತನ ಲೋಕಾವಳಿಗಳಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ (ಕುವ್ಯಾದ್ರೋ. ೮-೩೮). [ಸಂ. ವಿಕಲವ್ರತ]

ವಿಕಳಹಸ್ತ (ನಾ). = ವಿಕಳಪಾಣಿ : "ವಿಕಳ[ಪಾಠಾಂ. ವಿಕ]ಹಸ್ತಂ ವಿಕಳಪಾಣಿಯೊರ್ಕೈಯನಕ್ಕು" (ಮಂಗರಾ. ೧೧೫-೬). [ಸಂ. ವಿಕಲಹಸ್ತ]

ವಿಕಳಾಂಗ 'ವಿಕಲಾಂಗ' ನೋ.

ವಿಕಳಾವಸ್ಥೆ (ನಾ). ಖಿನ್ನತೆ ; ಹಂಬಲಿಸಿ ಕೊರಗುವ ಅವಸ್ಥೆ : ಹಗಲು ನಾಲ್ಕುಜಾವ ನಿಮ್ಮ ಕಳವಳದಲ್ಲಿಪ್ಪೆನು ಇರುಳು ನಾಲ್ಕುಜಾವ ಲಿಂಗದ ವಿಕಳಾವಸ್ಥೆಯಲ್ಲಿಪ್ಪೆನು ಹಗಲಿರುಳು ನಿಮ್ಮ ಹಂಬಲದಲ್ಲಿ ಮೈಮರೆದೊರಗಿದೆನು (ಮಹಾದೇ. ಬ. ೩೭-೭೯); ಪನ್ನಗೇಂದ್ರಾಭರಣ ಕೇಳು ನಿನ್ನ ವಿಕಳಾವಸ್ಥೆಯಲ್ಲಿ ಎನ್ನ ಪ್ರಾಣಬಿಡುವ ಹಾಗೆ ಎಂದಿಗಪ್ಪುದೋ (ಸುಸಾರ. ೭೧ ಪಲ್ಲವಿ). [ಸಂ. ವಿಕಲಾವಸ್ಥಾ]

ವಿಕಳಿತ 'ವಿಕಲಿತ' ನೋ.

ವಿಕಳಿಸು (ಕ್ರಿ). ವಿಕಳಾವಸ್ಥೆಯನ್ನು ಹೊಂದು ; ಹಂಬಲಿಸಿ ಕೊರಗು ; ಖಿನ್ನವಾಗು : ಭುಕ್ತಿಯನುಳಿವ ವಿಕಳಿ[ಪಾಠಾಂ. ಲಿ]ಸುವ ನುಡಿಯಡಗಿ ಸುಮ್ಮನಿರ್ಪ ಕಡುಸೊರಗಿ ಮೂರ್ಛಿಸುವ . . . ಬಿಡುಗಂಗಳ ಸುಚಾಣೆಯರ್ ಸಲೆ ದಶಾವಸ್ಥೆಯೊಳ್ ಕಣ್ಗೆಸೆದರು (ಚಿಬಪು. ೧೯-೩೧). [ವಿಕಳ (= ವಿಕಲ) + - ಇಸು₃]

ವಿಕಳೇಂದ್ರಿಯ (ನಾ). ೧. ನಿಷ್ಕ್ರಿಯವಾದ ಇಂದ್ರಿಯ. ೨. [ಜೈನ] ತ್ರಸಕಾಯಗಳಲ್ಲಿ ಒಂದು ಭೇದ ; ದ್ವೀಂದ್ರಿಯ, ತ್ರೀಂದ್ರಿಯ ಹಾಗೂ ಚತುರಿಂದ್ರಿಯಗಳ ಜೀವ : ಸೂಕ್ಷ್ಮವನಸ್ಪತಿಕಾಯಂಗಳ್ . . . ಪುಟ್ಟುತ್ತುಂ ಸಾವುತ್ತುಮಿರ್ಕುಮವಱೊಳೇಕೇಂದ್ರಿಯಂಗಳಲ್ಲದೆ ವಿಕಳೇಂದ್ರಿಯಂಗಳುಂ ಸಕಳೇಂದ್ರಿಯಂಗಳುಂ ಪುಟ್ಟುವುವಲ್ಲವು (ಸುಕುಮಾ. ೧೧-೫೦ ವ). [ಸಂ. ವಿಕಲೇಂದ್ರಿಯ]

ವಿಕಳೇಂದ್ರಿಯಜಾತಿ (ನಾ). [ಜೈನ] ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು : ಏಕೇಂದ್ರಿಯಂ ವಿಕಳೇಂ [ಪಾಠಾಂ. ಲೇಂ]ದ್ರಿಯಜಾತ್ಯಾತಪೋದ್ಯೋತಸ್ಥಾವರ ಸಾಧಾರಣ ಸೂಕ್ಷ್ಮಂಗಳೆಂಬ ಪದಿನಾಱುಪ್ರಕೃತಿಗಳುಮಂ (ಆಪು. ೧೧-೧೪ ವ) ; ಏಕೇಂದ್ರಿಯ ವಿಕಳೇಂದ್ರಿಯಜಾತ್ಯಾತಪೋದ್ಯೋತಸ್ಥಾವರ ಸಾಧಾರಣಸೂಕ್ಷ್ಮಂಗಳೆಂಬ ಷೋಡಶ ಕರ್ಮಪ್ರಕೃತಿಗೆ ವಿಳಯಂ ಮಾಡಿ (ಶಾಂತಿಪು. ೧೧-೧೧೧ ವ). [ಸಂ. ವಿಕಲೇಂದ್ರಿಯಜಾತಿ]

ವಿಕಾರ (ನಾ). ೧. ಬದಲಾವಣೆ ; ಮಾರ್ಪಾಟು ; ಸ್ಥಿತ್ಯಂತರ : ಅನ್ಯಗರ್ಭಿಣೀಜನದ ವಿಕಾರಮಾಸತಿಯೊಳಾಗವೆ ತಾಂ ನೆಲಸಿರ್ಪ ತಾಣದೊಳ್ ಜನನವಿಕಾರಿ ಜಾಡ್ಯದ ವಿಕಾರಮನೇಕಿರಲೀವನೆಂಬಿನಂ (ಪುಷ್ಪಪು. ೯-೧೧೭). ೨. ಬೇರೆಯ ಆಕಾರವನ್ನು ಹೊಂದುವಿಕೆ ; ರೂಪಾಂತರ : ಬಂಗಾರದಿಂದ ಉಂಗುರ ಉಡಿದಾರಗಳಾಗುತ್ತವೆ. ಅವು ಆಗುವುದಕ್ಕೆ ಮುಂಚೆ ಬಂಗಾರವು ಅವುಗಳ ಸಾಮ್ಯಾವಸ್ಥೆಯಾಗಿತ್ತು. ವಿಕಾರವಾಗುತ್ತಲೆ ವಿಷಮತ್ವಕ್ಕೆ ಆರಂಭವಾಗುತ್ತದೆ (ಜೀವಾತ್ಮ. ೧೫೫). ೩. ಮನಸ್ಸಿನ ವಿಕೃತಿ ; ಚಿತ್ತವೃತ್ತಿಯ ವ್ಯತ್ಯಾಸ : ಎಲ್ಲಿ ಹೊಕ್ಕಲ್ಲಿ ನಿನ್ನ ವಿಕಾರವ ಮಾಣೆ (ಬಸವ. ೭೩೯) ; ಕೌರವೇಂದ್ರನ ಮತವೊ ನಿನ್ನ ವಿಕಾರವೋ ಹೆಂಗಳ್ಳವಿದ್ಯೆಯನಾರು ಕಲಿಸಿದರು (ಕುವ್ಯಾಆ. ೨೨-೩೬). ೪. ವಿದ್ರೂಪತೆ ; ಕುರೂಪ : ಕೂದಲುದುರಿದ ಬೋಳುಪುರ್ಬಿನ ವಿಕಾರದಾ . . . ಸ್ಥವಿರೆಯಂ ಕಂಡೊಡನೆ ಕೈಕೆ ನಡೆದಳ್ ಬಳಿಗೆ (ಶ್ರೀರಾಮಾ. ೨೧-೫೫೧). ೫. ವ್ಯಾಧಿ ; ರೋಗ. [ಸಂ.]

ವಿಕಾರಚೇಷ್ಟೆ (ನಾ). ಅಸಹಜವಾದ ನಡವಳಿಕೆ ; ಅಸ್ವಾಭಾವಿಕವಾದ ನಡತೆ : ನೋಟಂ ನೃಪಸುತನೊಳ್ ಕಣ್ಕೇಟಂ ಮನದೊಳ್ ವಿಕಾರಚೇಷ್ಟೆಗಳೊಡಲೊಳ್ ನಾಟಿ ಬೆದಱಿದಳನಂಗನ ಬೇಟೆಯೊಳೊಳಗಾದ ಹರಿಣಿಯನೆ ತರುಣಿ ಕರಂ (ಚಂದ್ರಪ್ರ. ೫-೧೨೧). [ಸಂ. ವಿಕಾರಚೇಷ್ಟಾ]

ವಿಕಾರತೆ (ನಾ). ಖಿನ್ನತೆ ; ವ್ಯಾಕುಲತೆ : ತಿರುಗಿ ನೋಡುತ ತಲೆಯ ದೆಸೆಯಲಿ ಕುರುಕುಲೇಶನನತಿವಿಕಾರತೆಯಿರವ ಕಂಡಂ (ಕುವ್ಯಾಅ. ೧-೫೫). [ಸಂ. ವಿಕಾರತಾ]

ವಿಕಾರಿ (ಗು). ೧. ವಕ್ರಸ್ವಭಾವದ ; ವಿಕೃತಸ್ವಭಾವದ : ಕಾಳು ನುಡಿದೆ ವಿಕಾರಿತರುವಲಿ ನೀನೆ ಕುಡಿದೆಯೊ ನಿನ್ನ ಸಂಗಡದ ಓರಗೆಯ ಮಕ್ಕಳಿಗೆ ಕೊಟ್ಟೆಯೊ (ಬಸವು. ೧೪-೨೭) ; ವಿಕಾರಿವಿಪ್ರನ ಕಾಳುಶಾಪದ ಫಲವಲಾ (ಕುವ್ಯಾಕ. ೯-೧೨). (ನಾ). ೨. ವಕ್ರಸ್ವಭಾವದ ವ್ಯಕ್ತಿ : ತಪವ ಮಾಡಿ ವಿಕಾರಿಗಳು ಬ್ರಹ್ಮಂಗೆ ಬಂದಿಯನಿಕ್ಕಿದರು (ಕುವ್ಯಾಕ. ೬-೧೩) ; ಕೌರವರು ದುಷ್ಟರು . . . ಸೈಂಧವನು ವಿಕಾರಿಗಳ ಗುರು (ರಾಜಸೂ. ೪೮). ೩. ಅರುವತ್ತು ಸಂವತ್ಸರಗಳಲ್ಲಿ ಒಂದು ; ಮೂವತ್ತುಮೂರನೆಯ ಸಂವತ್ಸರ : ವಿಕಾರಿಸಂವತ್ಸರದ ವೈಶಾಖಶುಧ ೧೫ಲು . . . ಶೃಂಗಾರಮ್ಮನು ಮಾಡಿದನ್ನಾ ಶೃಂಗಾರಸಾಗರದ ಅಗ್ರಹಾರದ ಗ್ರಾಮಕೆ ಶುಭಮಸ್ತು (ಎಕ. XII, ಕುಣಿಗ. ೨೯-೧; 1599). [ಸಂ. ವಿಕಾರಿನ್]

ವಿಕಾರಿಸು (ಕ್ರಿ). ಬೇರೆ ಬೇರೆ ರೂಪವಾಗು ; ರೂಪಾಂತರ ಹೊಂದು : ಜಲದೊಳಗೆ ಪ್ರತಿಬಿಂಬ ವಿಕಾರಿಸುತಿದ್ದರೇನು ಆ ವಿಕಾರ ಜಲಕಲ್ಲದೆ ಸೂರ್ಯಂಗಿಲ್ಲದಂತಿಪ್ಪನಯ್ಯ ಸೌರಾಷ್ಟ್ರಸೋಮೇಶ್ವರನು (ಆದವ. ೩-೯). [ವಿಕಾರ + - ಇಸು₃]

ವಿಕಾರ್ಯ (ಗು). ೧. ಬದಲಾಗುವ ; ರೂಪಾಂತರಗೊಳ್ಳುವ. (ನಾ). ೨. ರೂಪಾಂತರ ಹೊಂದುವುದು ; ಬದಲಾಗುವುದು : ವಿಕಾರ್ಯಮೆಂದು ರೂಪಾಂತರನುನೆಯ್ದುವುದು (ಶಮದ. ೧೨೭ ವೃತ್ತಿ). ೩. ರೂಪಾಂತರವಾದುದು ; ಬೇರೆ ರೂಪವನ್ನು ತಾಳಿದುದು. ೪. ರೂಪಾಂತರ ಹೊಂದುವವನು ; ಬದಲಾವಣೆಯಾಗುವವನು : ಹಾಲು ಮೊಸರಂದದ ವಿಕಾರ್ಯನು ಕೇಳು ಸ್ವರ್ಗದವೋಲು ಪ್ರಾಪ್ಯನು (ಅಮೃತ. ೬-೨೧). [ಸಂ.]

ವಿಕಾಶ (ನಾ). ೧. ಪ್ರಕಟವಾಗುವಿಕೆ ; ಪ್ರದರ್ಶನ. ೨. ಅರಳುವಿಕೆ ; ವಿಕಾಸ : 'ವಿಕಾಶಿಸು' ಪರಾ. ೩. ಮುಕ್ತವಾದ ಮಾರ್ಗ. [ಸಂ.]

ವಿಕಾಶಿಸು (ಕ್ರಿ). ಅರಳಿಸು ; ವಿಕಾಸಗೊಳಿಸು : ಗಿರಿಜಾನಯನ ಕುಮುದಚಂದ್ರಮ ವಿಕಾಶಿಸು ನಿನ್ನ ಭಕ್ತಹೃತ್ಕುಮುದಮಂ ಪಂಪಾವಿರೂಪಾಕ್ಷ (ಚಿಬಪು. ೪-೧). [ವಿಕಾಶ + - ಇಸು₃]

ವಿಕಾಶ್ಯ (ನಾ). [ನಾಟ್ಯ] ವಿವರ್ತಿತ, ಕಂಪಿತ, ವಿಸೃಷ್ಟ, ನಿಗ್ರಹೀತ, ಸಂದಷ್ಟ, ಸಮುದ್ಗ, ಉದ್ವೃತ್ತ, ವಿಕಾಶ್ಯ, ಆಯತ ಮತ್ತು ರೇಚಿ ಎಂಬ ಹತ್ತು ಬಗೆಯ ಅಧರಭೇದಗಳಲ್ಲಿ ಒಂದು ; ▮ "ಮೇಲಿನ ಹಲ್ಲುಗಳು ಕಾಣುವಂತೆ ಮುಗುಳ್ನಗೆ ನಕ್ಕು ತುಟಿಗಳನ್ನು ವಿರಳಮಾಡುವುದು. ಮಂದಹಾಸದಲ್ಲಿ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೨೭೯ ಗದ್ಯಾನುವಾದ) : ಸಂತತ ಮುಗುಳ್ನಗೆಯಿಂ ಪಲ್ಲಂ ತೋಱಲ್ ಕೇಳ್ ವಿಕಾಶ್ಯದಧರಮೆನಿಕ್ಕುಂ (ಲಾಸ್ಯರಂ. ೩-೮೫). [ಸಂ.]

ವಿಕಾಸ (ನಾ). ೧. ಅರಳುವಿಕೆ ; ವಿಕಸನ : "ಉನ್ಮೀಲಿತಂ . . . ವ್ಯಾಕೋಚಂ, ವಿಕಾಸಃ - ಈ ೯ ಅಲರ್ವುದರ್ಕೆ ಪೆಸರ್" (ಹಲಾಯು. ೩೧-೩೩). ೨. ವಿಸ್ತಾರ ; ವೈಶಾಲ್ಯ : 'ವಿಕಾಸಗೊಳ್ಳು' ಪರಾ. ೩. ಗಗನ ; ಆಕಾಶ :(೩). ೪. ಪ್ರಕಟನ ; ಪ್ರದರ್ಶನ. ೫. ಬೆಳವಣಿಗೆ ; ಅಭಿವೃದ್ಧಿ : ಜೀವನವಿಕಾಸವಿಲ್ಲದೆ ಸಾಹಿತ್ಯದ ಉದಯವೂ ಇಲ್ಲ, ವಿಕಾಸವೂ ಇಲ್ಲ (ಕಸಾಚ. ೩). ೬. ಮುದ ; ಉಲ್ಲಾಸ : ಸರೋಜಪತ್ರವೀಜನಪವನಂ ವಿಕಾಸಮನೊಡರ್ಚೆ (ಮಲ್ಲಿಪು. ೪-೧೦೯). ೭. ಕ್ರಮವಾಗಿ ಬೆಳೆದು ಮಾರ್ಪಡುವಿಕೆ, – ಉತ್ತಮಾವಸ್ಥೆಯನ್ನು ಹೊಂದುವಿಕೆ ; ಉತ್ಕ್ರಾಂತಿ : ವಿಕಾಸ, ವಿಕಸನ, ಪರಿಣಾಮ (Evolution. ಇಂಕಕ). [ಸಂ.]

ವಿಕಾಸಗೊಳಿಸು (ಕ್ರಿ). ಅರಳಿಸು ; ಹಿಗ್ಗಿಸು : ಅಲೌಕಿಕವ್ಯಕ್ತಿಗಳು ಕುಂಠಿತವಾದ ಜೀವನವನ್ನೂ ಸಾಹಿತ್ಯವನ್ನೂ ತಮ್ಮ ಆಂತರಿಕಬಲದಿಂದ ವಿಕಾಸಗೊಳಿಸಬಹುದು (ಕಸಾಚ. ೩). [ವಿಕಾಸ + ಕೊಳ್₁ + - ಇಸು₃]

ವಿಕಾಸಗೊಳ್ಳು (ಕ್ರಿ). ೧. ವಿಸ್ತಾರವಾಗು ; ಹಿಗ್ಗು : ಆಂಟಿಮೊನಿ . . . ಪೆಡಸಾದ ಲೋಹವಾದರೂ ಕರಗಿ ಗಟ್ಟಿಯಾಗುವಾಗ ವಿಕಾಸಗೊಳ್ಳುವ ಗುಣವನ್ನು ಪಡೆದಿದೆ (ಕವಿಕೋ. I, ೧೯೬). ೨. ಬೆಳೆದು ಮಾರ್ಪಡು : ಬ್ರಾಹ್ಮಿಲಿಪಿ ಪಹ್‌ಲವಿಯ ಅರಮೇಯಿಕ್ . . . ಲಿಪಿಯಿಂದ ವಿಕಾಸಗೊಂಡಿದೆ (ದ್ರಾವಿವಿ. ೪೯). [ವಿಕಾಸ + ಕೊಳ್ಳು₁ (< ಕೊಳ್₁)]

ವಿಕಾಸನ (ನಾ). ವಿಸ್ತರಿಸುವಿಕೆ ; ಅರಳುವಿಕೆ : ಶಶ್ವದ್ವಿಕಾಸನಹ್ರಾಸನಕ್ರಮಗಳಿಂ

ವಿಶ್ವದಲಿ ನರ್ತಿಸುತೆ ಪೌರುಷೋನ್ನತಿಯೊಳ್ ಸ್ವಸ್ವರೂಪವನರಸುವಾಟ ಪರಚೇತನದ ಹೃಷ್ಟದ್ವಿಲಾಸವೆಲೊ (ಮಂಕುತ. ೫೩೧). [ಸಂ.]

ವಿಕಾಸಲಕ್ಷ್ಮಿ (ನಾ). ೧. ಅರಳುವ ಶೋಭೆ. ೨. ಸಂತೋಷದ ಸಮೃದ್ಧಿ, – ಆಧಿಕ್ಯ. ೧,೨ : ಲಕ್ಷ್ಮೀಮಹಾದೇವಿ ಕಮಳಿನೀಲಕ್ಷ್ಮಿಯಂತೆ ವಿಕಾಸಲಕ್ಷ್ಮಿಯನಪ್ಪುಕೆಯ್ಯು (ಮಲ್ಲಿಪು. ೪-೫೯). [ಸಂ. ವಿಕಾಸಲಕ್ಷ್ಮೀ]

ವಿಕಾಸವಾದ (ನಾ). [ವಿಜ್ಞಾನ] ಜೀವವು ಕ್ರಮಕ್ರಮವಾಗಿ ಮಾರ್ಪಡುತ್ತ ಬೆಳವಣಿಗೆ ಹೊಂದುವುದೆಂಬ ವಾದ ; ಉತ್ಕ್ರಾಂತಿವಾದ : "ಗರ್ಭಧಾರಣವಾಗುವುದರಿಂದ ಭ್ರೂಣವು ಹೊಸದಾಗಿ ಸೃಷ್ಟಿಯಾಗುವುದಿಲ್ಲವೆಂದೂ, ಹಿಂದಿನಿಂದ ಬಂದದ್ದೇ ವಿಕಾಸವಾಗುವುದೆಂದೂ ಹೇಳುವ ವಾದ ; ವಿಕಾಸವಾದ ; ಪರಿಣಾಮವಾದ" (Theory of Evolution. ೧೦೮೨) ; ಡಾರ್ವಿನ್ನನು ವಿಕಾಸವಾದವನ್ನು ಆರಂಭಿಸಿದ (ಜೀವಾತ್ಮ. ೧೬೦). 'ಪರಿಣಾಮವಾದ' ಪರಾ. [ಸಂ.]

ವಿಕಾಸಿ (ಗು). ೧. ಅರಳುವ ; ಹಿಗ್ಗುವ. ೨. ಸ್ಫುಟವಾಗುವ ; ಪ್ರಕಟವಾಗುವ ; ಗೋಚರಿಸುವ : ಆ ದಿವ್ಯಾನುಭಾವಂ ಐರಾವತಗಜಕುಂಭಸ್ಥಾರಣವಿಶ್ಲಥ ವಿಕಾಸಿಕೇಯೂರಂ ಕೇಯೂರದೊಳೊರಸೆ ಸುರೇಂದ್ರನೊಳೋರಾಸನಮಿರ್ಪನರ್ಹ ದಾಸ್ಥಾಯಿಕೆಯೊಳ್ (ಶಾಂತಿಪು. ೫-೧೫೩). [ಸಂ. ವಿಕಾಸಿನ್]

ವಿಕಾಸಿಸು (ಕ್ರಿ). ಅರಳಿಸು ; ಹಿಗ್ಗಿಸು : ಮಾಯಿದೇವಾರ್ಯ ದೇಶಿಕೋದ್ಯಾನು ಮಮ್ಮ ಪಾಂಬುಜಮಂ ವಿಕಾಸಿಸುಗೆ ನಿಜತೇಜದಿಂ (ಪದ್ಮರಾ. ೧-೧೮).

[ವಿಕಾಸನ + - ಇಸು]

ವಿಕಾಳಿಸು (ಕ್ರಿ). ಅತಿಶಯವಾಗು : ಕಾಳಿಮದ ಕೂಟಮನಗಿಲ್ಲೆಂಬ ಮುಳಿಸತಿ ವಿಕಾಳಿಸಲಮಲಕೀರ್ತಿಕಾಂತೆ ಪೊಜಮಟ್ಟು ಲೋಕಾಳಿಯಂ ತಿರುಗುವಳೆನಲ್ಕೆ ರಾಮನ ಯಶೋವಿಸ್ತರವನೇವೊಗಳ್ವೆನು (ಜೈಮಿಭಾ. ೧೮-೧೪). 'ವಿಟಾಳಿಸು', 'ವಿತಾಳಿಸು' ಪರಾ. [ವಿಕಾಳ ? + - ಇಸು]

ವಿಕಿರ (ನಾ). ೧. ಎರಚಿದ ವಸ್ತು ; ಚೆಲ್ಲಿದ ಪದಾರ್ಥ. ೨. ಹಕ್ಕಿ ; ಪಕ್ಷಿ : "ವಿಕಿರಂ ನಗೌಕಸಂ ವಾಜಿ ದ್ವಿಜಂ ಪಕ್ಷಿ" (ಮಂಗರಾ. ೫೦-೧). ೩. ಬಾವಿ ; ಕೂಪ. ೪. ವೃಕ್ಷ ; ಮರ. ೫. ಹಬ್ಬುಗೆ ; ಪ್ರಸಾರ : ಆಯತಾಕ್ಷಿಯರಾಗಳಲ್ಲಗಳಂ ಚೆಲ್ಲಿದರ್ . . . ಕಟಾಕ್ಷದ ಮರೀಚಿಗಳ ವೀಚಿಗಳ ವಿಕಿರದೊಡನೆ (ಜೈಮಿಭಾ. ೨೯-೧೧).

[ಸಂ.]

ವಿಕಿರಣ (ನಾ). ೧. ಚೆದರುವಿಕೆ ; ಕೆದರುವಿಕೆ : ಕೇಶವ ತನ್ನ ವ್ಯಕ್ತಿತ್ವದಲ್ಲಿ ಘಟಕಗಳ ವಿಕಿರಣದಿಂದ ತ್ರಸ್ತನಾಗಿದ್ದಾನೆ (ಹೊಸಕ್ಕ. ೨೯೭). ೨. ಪ್ರಸಾರ ; ಹರಡಿಕೆ. ೩. ಹರಿದು ಹಾಕುವಿಕೆ ; ಛಿನ್ನವಿಚ್ಛಿನ್ನಗೊಳಿಸುವಿಕೆ. ೪. ಕೊಲೆ; ಹಿಂಸೆ. ೫. ಅರಿವು ; ಜ್ಞಾನ. ೬. ಎಕ್ಕದ ಗಿಡ ; ಅರ್ಕ. ೭. [ಭೌತಶಾ] ಮಾಧ್ಯಮದ ಸಹಾಯವಿಲ್ಲದೆ ಬೆಳಕಿನ ಕಿರಣಗಳಂತೆ ಪ್ರಸರಿಸುವಿಕೆ : ನಿರ್ವಾಯುಸ್ಥಳದಲ್ಲಿಯೂ (vaccum) ಅನಿಲಗಳಲ್ಲಿಯೂ ಶಾಖವು ವಿಕಿರಣದ (Radiation) ಮೂಲಕ ಹರಡುತ್ತದೆ (ಶಿಲ್ಪನಾ. ೧೨೧). [ಸಂ.]

ವಿಕೀರಣ (ನಾ). ಎಕ್ಕದ ಗಿಡ ; ಅರ್ಕ : "ಅರ್ಕಾಹ್ವಃ . . . ವಿಕೀರಣಃ, ಮಂದಾರಃ, ಅರ್ಕಪರ್ಣಃ — ೭ ಎಕ್ಕೆಗಿಡ, ಯಕ್ಕೇಗಿಡ, ಸೂರ್ಯವೃಕ್ಷ" (ನಿಘಂತಿ. ೧೩೦). [ಸಂ.]

ವಿಕೀರ್ಣ (ಗು). ೧. ಚೆದರಿದ ; ಕೆದರಿದ ; ಹರಡಿದ : ಪಾನಪ್ರದೇಶದಂತೆ ಪರಿಗತಮಧುಕೋಶಶತಮುಂ ವಿಕೀರ್ಣವಿವಿಧಕುಸುಮಮುಂ . . . ಮುನಿಜನಸೇವಿತಮುಮೆನಿಪುದು (ಕಾದಂಪೂ. ೧೧೦). ೨. ಆವರಿಸಿದ ; ತುಂಬಿದ : ಸಿಂಹಗಜವೃಷಭಗರುಡಮಯೂರಚಂದ್ರಾರ್ಕಹಂಸಾರವಿಂದಚಕ್ರಾಭಿಧಾನಧ್ವಜ ವಿಕೀರ್ಣಪತಾಕಾವನೀಪರಿವೃತಮುಂ (ತತ್ತ್ವಪ್ರ. ೧೬೨) ; ಬುಧತಾತನ ತಿಳಿಜೊನ್ನಂ ವಿದಿತಾಶಾವಳಿವಿಕೀರ್ಣಪೂರ್ಣವಿಲಾಸಂ (ಹರಿವ್ಯಾ. ೨-೬೩). ೩. ವಿಶಾಲವಾದ : ಧನುರ್ಗುಣವೇಗತಾಡನಾಕಳಿತವಿಕೀರ್ಣಕೋಷ್ಠಮನೆ ಕೂರ್ಮವಿನಿಷ್ಠುರ ಪೃಷ್ಠಭಾಗ ಮೆಂದಳಘುತರಾಂಸಮಂ ದಿಗಿಭಕುಂಭಮಿದೆಂದು ಧರಿತ್ರಿ ಬಂದು ನಿಶ್ಚಳತೆಯಿನಿರ್ಪಳಲ್ತೆ ಭುಜಮಂಡಳದೊಳ್ ವಸುಧಾಧಿನಾಥನಾ (ಚಂದ್ರಪು. ೩-೨೧). ೪. ಸೀಳಿದ ; ಹರಿದ. ೫. ಹೆಸರಾದ ; ಪ್ರಸಿದ್ಧವಾದ ; ವಿಖ್ಯಾತವಾದ. [ಸಂ.]

ವಿಕುದ್ರಕ (ನಾ). [ನಾಟ್ಯ] ನೃತ್ಯದ ಒಂದು ಭಂಗಿ : ವಿಕುದ್ರಕ ಕುದ್ರಕಮೆಂಬ ಭೇದದೊಳ್ ಪರಿಣತಿ ರಂಜಿಸುತ್ತುಮಿರೆ ರಂಜಿಸಿದರ್ ಪೊಸದೇಸೆಕಾರ್ತಿಯರ್ (ಆದಿಪು. ೫-೩೧). 'ಕುದ್ರಕ' ಪರಾ. [?]

ವಿಕುರ್ವಾಣ (ಗು). ೧. ಮನಃಸ್ಥಿತಿ ಅಥವಾ ರೂಪವನ್ನು ಬದಲಿಸುವ. ೨. ಸಂತೋಷಪಡುವ ; ಹರ್ಷಗೊಂಡಿರುವ. (ನಾ). ೩. ಸಂತೋಷದಿಂದ ಕೂಡಿರುವವನು : "ಹರ್ಷಮಾಣಃ, ವಿಕುರ್ವಾಣಃ, ಪ್ರಮನಾಃ, ಹೃಷ್ಟಮಾನಸಃ — ೪ ಸಂತೋಷದಿಂದ ಕೂಡಿದ ಮನಸ್ಸುಳ್ಳವನು" (ನಿಘಂತಿ. ೩೦೪). [ಸಂ.]

ವಿಕೂಣಿತ (ನಾ). [ನಾಟ್ಯ] ನಾಟ್ಯಮುದ್ರೆಯಲ್ಲಿ ತೋರುವ ಮೂಗಿನ ಆರು ವಿನ್ಯಾಸಗಳಲ್ಲಿ ಒಂದು ; IP "ಮೂಗನ್ನು ಸಂಕುಚಿಸುವುದು ಎಂದರೆ ಮುದುರಿಸುವುದು. ಹಾಸ್ಯ, ಅಸೂಯೆ, ಜುಗುಪ್ಸೆ ಇವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೨೭೭ ಗದ್ಯಾನುವಾದ) : ಪತ್ತಲ್ ಹಾಸ ಜುಗುಪ್ಸಾವೃತ್ತಿಯೊಳೆ ವಿಕೂಣಿತಾಖ್ಯನಾಸಿಕಮೆನಿಕುಂ (ಲಾಸ್ಯರಂ. ೩-೭೪).

[ಸಂ. ವಿಕೂಣಿತಾ]

ವಿಕೃತ (ಗು). ೧. ಬದಲಾದ ; ರೂಪಾಂತರ ಹೊಂದಿದ ; ವ್ಯತ್ಯಾಸವಾದ. ೨. ಭಯಂಕರವಾದ : ಚೀರಿದತ್ತೊಂದು ರಣಶಕುನಿ, ಕಿವಿಗೊಟ್ಟು ಕೇಳ್, ದುಶ್ಶಕುನಗರ್ಭಿತವಿಕೃತ ವಿಕಟರವದಿಂದೆ! (ಚಿತ್ರಾಂಗ. ೬೦-೨೨೧೭). ೩. ವಿಕಾರರೂಪವನ್ನು ತಳೆದ. ೪. ರೋಗಿಷ್ಠವಾದ. ೫. ಕೆಟ್ಟ ; ದುಷ್ಟ : ಇದೇನಘಟಮಾನಮೋ ವಿಕೃತಘೋರ ಸಂಸಾರಂ (ಸುಕುಮಾ. ೪-೬೧). ೬. ಅಸಹ್ಯ ಬರುವಂತಹ ; ಜುಗುಪ್ಸೆಯನ್ನುಂಟು ಮಾಡುವ. (ನಾ). ೭. ಬದಲಾದವನು ; ಬದಲಾವಣೆಗೆ ಒಳಪಟ್ಟವನು : ಸಂಕುಚಿತದೃಷ್ಟಿಗೆ ವಿಕೃತನಾದಂತೆ ಕಂಡರೂ ಆ ಮೂಲವಸ್ತುವು ಅಥವಾ ಪರಮಾತ್ಮನೂ ಅಚ್ಚು ಅಳಿಯದೆ ಇದ್ದಕ್ಕಿದ್ದ ಹಾಗೆಯೆ ಇರುವನು (ವಚರ. ೯). ೮. ಕುರೂಪ ; ವಿದ್ರೂಪತೆ : ಶ್ರೀ ಎಂದರೆ ಸೌಂದರ್ಯವೆಂಬ ಅರ್ಥವಿರುವಂತೆ ಅಶ್ರೀ ಎಂದರೆ ವಿಕೃತವೆಂದೂ ಅರ್ಥವಿದೆ (ಸಂಧಕ. ೪೪). ೯. ಜುಗುಪ್ಸೆ ; ಅಸಹ್ಯ : ವಿಕೃತಕ್ಕೆ ಸಂದ ನಾಗ್ನ್ಯಮುಮಪಹಿಂಸೆಯೆಂಬ ಜನವಾದಮುಮಲ್ಲದೆ ಪೇಟ ಜೀವತತ್ತ್ವಮುಮನಜೀವತತ್ತ್ವ[ಮು]ಮನೆತ್ತ ಟಿವರ್ ಜಿನತತ್ತ್ವತಾತ್ವಿಕರ್ (ಶಾಂತಿಪು. ೮-೧೩೨). ೧೦. ವಿಚಿತ್ರವಾದುದು ; ಅಸಾಮಾನ್ಯವಾದುದು : ಜಂಭಾರಿ ವಿಕೃತಮಾಡುವ ರಂಭಾನಟಿಯಂತೆ ಲಾಸ್ಯದೊಳ್ ತಾಂಡವಮುಜ್ಜೃಂಭಿಸೆ ಗಣಿಕೆಯರೊಡನಾರಂಭಿಸಿದರಪೂರ್ವ ನರ್ತನಾರಂಭಣಮಂ (ಶಾಂತಿಪು. ೧೧-೬೪). ೧೧. ರೋಗಿ ; ಕಾಯಿಲೆ ಇರುವವನು : "ಗ್ಲಾನಃ, ಗ್ಲಾಸ್ನುಃ, ಆಮಯಾವೀ, ವಿಕೃತಃ . . . ಅಭ್ಯಾಂತಃ -೯ ರೋಗ ಉಳ್ಳವನ ಹೆಸರುಗಳು" (ನಿಘಂತಿ. ೧೮೫). ೧೨. ಮನಸ್ಸಿನ ವಿಕಾರ ; ಮನೋವಿಕಾರ : ಲಿಂಗ ಮೂರ್ತಿ ಯೊಳರ್ಚನಾಸಕ್ತಂಗೆ ನಿದ್ರಾಹಾರಮೈಥುನಸಂಗಭಯವಿಕೃತಂಗಳೆಂದುಂ ಹೊಂದದು (ಬಸವ. ೪೩-೯೨). ೧೩. ದೀನನಾದವನು ; ದೈನ್ಯಾವಸ್ಥೆಗೆ ಗುರಿಯಾದವನು : "ವಿಕೃತಃ, ವಿಪ್ರಲಬ್ಧಃ — ಈ ೨ ದೈನ್ಯಂಬಟ್ಟವಂ" (ಹಲಾಯು. ೧೩-೨೨೮) ; "ವಿಕೃತಂ ವಿಪ್ರಲಬ್ಧನೆನೆ ಸಲೆ ದೈನ್ಯನಕ್ಕು" (ಮಂಗರಾ. ೭೨-೨೧). [ಸಂ.]

ವಿಕೃತಕಾಮ (ನಾ). ಅಶ್ಲೀಲವಾದ ಕಾಮಚೇಷ್ಟೆ ; ಅಸಭ್ಯವಾದ ಲೈಂಗಿಕಭಾವ : ನೆರೆಯಲ್ಲಿರುವ ಮ್ಯಾಥೂಸ್‍ನ ವಿಕೃತಧರ್ಮಶ್ರದ್ಧೆ, ವೆಸ್ಟ್ ಇಂಡಿಯನ್‍ನ ವಿಕೃತಕಾಮ ಅವನಿಗೆ ಅಪ್ರಿಯವಾಗಿವೆ (ಹೊಸಕ್ಕ. ೨೯೦). [ಸಂ.]

ವಿಕೃತದಂತ (ನಾ). ೧. ವಕ್ರವಾದ ಹಲ್ಲು. ೨. ವಕ್ರವಾದ ಹಲ್ಲುಳ್ಳವನು : ಚಾಪವೃಷಮೇಷವಾಗಿರೆ ಪಾಪಾಲೋಕನದೆ ವಿಕೃತದಂತನೆನಿಸ್ಕುಂ (ಜಾತತಿ. ೨೧-೨೦).

[ಸಂ.]

ವಿಕೃತವೇಷಿ (ನಾ). ಅಸ್ವಾಭಾವಿಕವಾದ ವೇಷವನ್ನು ತೊಟ್ಟವನು : ಸುದತಿಯರು ಮೈಮಜೆತಿವನ ಬೆಂಬತ್ತಿ ಪೋಪುದು ಚೋದ್ಯವೀ ವಿಕೃತವೇಷಿ ಯಾರು (ವಿಠ್ಠಪು. ೫-೧-೧೯) [ಸಂ. ವಿಕೃತವೇಷಿನ್]

ವಿಕೃತಾಂಗ (ನಾ). ೧. ವಿಕಾರವಾದ ದೇಹ ಭಂಗಿ : ವಿಕೃತಾಂಗ ವೇಷಭಾಷಾಪ್ರಕಾರ ಕೃತಹಾಸಹೇತುಕಂ ಹಾಸ್ಯಂ (ಕಾವ್ಯಾವ. ೮೦೯). ೨. ವಿರೂಪಗೊಂಡ

ಶರೀರವುಳ್ಳವನು ; ವಿಕಾರವಾದ ಶರೀರವುಳ್ಳವನು: ವಿಕೃತಾಂಗರ್ ವಿಕೃತಾಯುಧರ್ ವಿಕೃತವೇಷರ್ ಪೂಣ್ಕೆಯಿಂ ದಾನವಾಂತಕನೊಳ್ ತಳ್ತಿಱಿದು . . . ದೆಸೆಬಿಟ್ಟಿಂ ಪಾಱಿದರ್ ಬೇಗದಿಂ (ಜಗವಿ. ೧೮-೧೨). [ಸಂ.]

ವಿಕೃತಾಂಗಿ (ನಾ). ವಿದ್ರೂಪವಾದ ದೇಹವುಳ್ಳವನು : ವಿನಾದುದೋಯೆನುತ್ತಂ ಪಿತಾಮಹನ ದೈನ್ಯಾನನವನೀಕ್ಷಿಸುತ ನುಡಿದನಾ ವಿಷ್ಣು ವಿಕೃತಾಂಗಿಗಳ ಪರಿಕಿಸುತ್ತ (ವೀಶೈಪು. ೩-೧೬-೩೦). [ಸಂ. ವಿಕೃತಾಂಗಿನ್]

ವಿಕೃತಿ (ನಾ). ೧. (ಮನಸ್ಸು, ಉದ್ದೇಶ, ಆಕಾರ, ವಸ್ತು ಮೊದಲಾದುವುಗಳ) ಬದಲಾವಣೆ ; ವ್ಯತ್ಯಾಸ ; ಮಾರ್ಪಾಡು. ೨. ಬೇನೆ ; ರೋಗ. ೩. ಉದ್ರೇಕ ; ಉದ್ವೇಗ. ೪. ಕೋಪ; ಕ್ರೋಧ. ೫. ಭಟ್ಟಿಯಿಳಿಸಿದ ದ್ರವ ; ಅರ್ಕ. ೬. ಕುರೂಪ ; ವಿಕಾರ : ಕಾಣಿಸಿತೊಂದು ದಸ್ಕು ಶಿಶು, ಮುಳ್ ಮಣ್ಣು ತರಗೆಲೆಯಿಡಿದ ನೆಲದ ಮೇಲಿರುವೆ ಮುತ್ತಿ, ಹಾ, ವಿಕೃತಿ ವಕ್ರತೆ ರೂಹುಗೊಂಡಂತೆ! (ಶ್ರೀರಾಮಾ. ೨೨-೫೫೦). ೭. ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತುನಾಲ್ಕನೆಯ ಸಂವತ್ಸರ : ಮತ್ತಮಾ ವರ್ಷವೇ ಪ್ರಭವ . . . ವಿಕೃತಿ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೫೬). ೮. [ಛಂದ] ಪ್ರತಿಪಾದದಲ್ಲಿ ಇಪ್ಪತ್ತುಮೂರು ಅಕ್ಷರಗಳಿರುವ ಒಂದು ಛಂದೋವೃತ್ತ : ಉಕ್ತೆ ಅತ್ಯುಕ್ತೆ . . . ವಿಕೃತಿ ಸಂಕೃತಿ ಅತಿಕೃತಿ ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೧-೪೬ ವ). ೯. [ವ್ಯಾಕ] ದೀರ್ಘಸ್ವರ : ಸಪ್ತವರ್ಣಂ ಪ್ರಕೃತಿ ನವವರ್ಣಮದು ವಿಕೃತಿ ಷೋಡಶಂ ಸ್ವರಗಳೆನಿಸಿದುವು (ರಾಘಚ. ೨-೫೬). ೧೦. [ಸಾಂಖ್ಯ] ಮೂಲವಸ್ತುವಿನಿಂದ ಉದ್ಭವಿಸಿದ ಇನ್ನೊಂದು ರೂಪ ; ಪ್ರಕೃತಿಯಿಂದ ಹುಟ್ಟಿದುದು : ಪುರುಷನು ಪ್ರಕೃತಿಯೂ ಅಲ್ಲ ವಿಕೃತಿಯೂ ಅಲ್ಲ ಎಂದು ಸಾಂಖ್ಯರು ಹೇಳುತ್ತಾರೆ (ಬ್ರಹ್ಮಭಾ. ೯೮ ಅಡಿಟಿ). ೧೧. [ಯೋಗ] ಪ್ರಕೃತಿ, ಪ್ರಕೃತಿವಿಕೃತಿ, ವಿಕೃತಿ ಮತ್ತು ಉದಾಸೀನವೆಂಬ ನಾಲ್ಕುಬಗೆಯಾದ ವ್ಯಾವಹಾರಿಕ ವಸ್ತು : ಭುವನದಿಂ ಧರೆ ಧರಣಿಯಿಂದುದ್ಭವಿಸಿತೋಷಧಿ ಓಷಧಿಗಳಿಂದವತರಿಸಿ ತಾನಾದಿಪುರುಷಪ್ರಕೃತಿವಿಕೃತಿಗಳು (ಕುಮ್ಯಾಉ. ೪-೬) ; ವಿಕೃತಿಯೆಂದರೆ ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಮನಸ್ಸು, ಪ್ರಾಣ ಎಂದು ಹನ್ನೆರಡು (ಹಿಂದಸಾ. ೧೯೪). ೧೨. ನಲವತ್ತೈದು ಬಗೆಯ ಮಂತ್ರ ಸಾಧನಗಳಲ್ಲಿ ಒಂದು : ಮಾತೃಕಾಚಕ್ರ ಸರ್ವತೋಭದ್ರ . . . ವಿಕೃತಿ . . . ಎಂಬ ಪಂಚಚತ್ವಾರಿಂಶನ್ಮಂತ್ರಸಾಧನಗಳೊಳು ಪ್ರಚ್ಛೆಗೊಂಡು (ವಿವೇಕ. ೬೦). ೧೩. [ಸಂಗೀತ] ಒಂದು ಬಗೆಯ ಹಾಡಿನ ರೀತಿ (?) : ದರು ಪರಿ ವಿಕೃತಿ ವಿಂದಾಣವೆಂಬ ಚತುರ್ವಿಧದಂಡಿಯಲ್ಲಿ . . . ಪಾಡಿ ಮೋಹಿಸುವ ಗಾಯಕರಿಂ (ವಿವೇಕ. ೧೯೦). [ಸಂ.]

ವಿಕೃತಿದೋಱು (ಕ್ರಿ). (ಹಾಸ್ಯಕ್ಕಾಗಿ) ಮುಖ, ಮೈ ಮೊದಲಾದುವುಗಳಲ್ಲಿ ವಿಕಾರಗಳನ್ನು ತೋರು; ವಕ್ರಭಂಗಿ, ವಕ್ರಮುದ್ರೆಗಳನ್ನು ತೋರು : ಬಹುವಿಧವಿಕಟವೇಷದಿಂ ವಿಕೃತಿ[ಪಾಠಾಂ.ತ]ದೋಱಿ ನಗೆಯಂ ಬೀಱಿ ನಲಿದು ನರ್ತಿಪ ಭೃಂಗಿರಿಟಿಯಿಂ (ಶಟಶಂ. ೧-೭೯ ವ). [ವಿಕೃತಿ + ತೋಱು]

ವಿಕೃತಿಸ್ವರ (ನಾ). ೧. = ವಿಕೃತಿ ೯ : ಸಿದ್ಧನಂಜೇಶನೆಂಬ ವೀರಶೈವಕವಿ . . . ಹ್ರಸ್ವಸ್ವರಗಳನ್ನು ''ಪ್ರಕೃತಿಸ್ವರ''ಗಳೆಂದೂ, ದೀರ್ಘಸ್ವರಗಳನ್ನು ''ವಿಕೃತಿಸ್ವರ''ಗಳೆಂದೂ ಹೆಸರಿಸಿದ್ದಾನೆ (ಸಂಶೋಧ. ೧೬). ೨. [ಸಂಗೀತ] ರಿ, ಗ, ಮ, ಧ ಮತ್ತು ನಿ ಎಂಬ ಸ್ವರಗಳು : ಉಳಿದ ಋಷಭ, ಗಾಂಧಾರ, ಮಧ್ಯಮ, ಧೈವತ, ನಿಷಾದಗಳು ಷಡ್ಜದಲ್ಲಿ ಕಾಣಿಸಿರುವ ನಿರ್ದಿಷ್ಟಶ್ರುತಿಗಳನ್ನೇ ಅಲ್ಲದೆ, ವ್ಯತ್ಯಸ್ತ ಶ್ರುತಿಸಂಖ್ಯೆಗಳನ್ನೂ ಹೊಂದಿ, ಧ್ವನಿಭೇದ ಪ್ರಕಟಿಸುವ ಕಾರಣ ವಿಕೃತಿಸ್ವರಗಳೆನಿಸಿಕೊಂಡಿವೆ (ಸಂಗೀತಂ. ೧೫). [ಸಂ.]

ವಿಕೃಷ್ಟ (ಗು). ೧. ಎಳೆದಾಡಿದ. ೨. ಸೆಳೆದುಕೊಂಡ ; ಆಕರ್ಷಿಸಿದ. ೩. ವಿಸ್ತರಿಸಿದ ; ನೀಳಗೊಳಿಸಿದ. ೪. ಶಬ್ದಮಾಡಿದ ; ಧ್ವನಿ ಮಾಡಿದ. (ನಾ). ೫. [ನಾಟ್ಯ] ಮೂಗಿನ ಆರು ಬಗೆಯ ವಿನ್ಯಾಸಗಳಲ್ಲಿ ಒಂದು ; IP ''ಮೂಗನ್ನು ಅರಳಿಸುವುದು, ರೋಷ, ಪೀಡೆ, ಪದರಿಕೆ, ವಾಸನೆ ನೋಡುವುದು ಇವುಗಳಲ್ಲಿ ಇದನ್ನು ವಿನಿಯೋಗಿಸಬೇಕು'' (ಲಾಸ್ಯರಂ. ೨೭೬ ಗದ್ಯಾನುವಾದ) : ಅತ್ಯಂತರೋಷದಿಂದೌನ್ನತ್ಯದೆ ಮೂಗರಲ್ವ ಭಾವಮದುವೆ ವಿಕೃಷ್ಟಂ (ಲಾಸ್ಯರಂ. ೩-೭೪). [ಸಂ.]

ವಿಕೃಷ್ಟಿ (ನಾ). [ನಾಟ್ಯ] ಇಪ್ಪತ್ತು ಬಗೆಯ ಕೈಚಲನೆಗಳಲ್ಲಿ ಒಂದು : ಧೂನನ, ಶ್ಲೇಷ . . . ಆಕೃಷ್ಟಿ, ವಿಕೃಷ್ಟಿ . . . ತರ್ಜನ – ಈ ಇಪ್ಪತ್ತು ಕರಕರ್ಮಭೇದಂಗಳ್ (ಲಾಸ್ಯರಂ. ೪-೧೩ ವ). [ಸಂ.]

ವಿಕೇಂದ್ರೀಕರಣ (ನಾ). ಒಂದು ಕೇಂದ್ರದಲ್ಲಿ ಒಟ್ಟುಗೂಡಿಸಿರುವ ಆಡಳಿತಾಧಿಕಾರ, ಉದ್ದಿಮೆ, ವ್ಯವಸಾಯ ಇತ್ಯಾದಿ ವ್ಯವಸ್ಥಿತ ಕಾರ್ಯಕಲಾಪಗಳನ್ನು ಪ್ರತ್ಯೇಕಿಸಿ ಬೇರೆ ಬೇರೆ ಸ್ಥಳಗಳಿಗೆ ಹಂಚುವಿಕೆ ; ಸ್ಥಳೀಯ ಅಧಿಕಾರಕ್ಕೆ ಕೆಲವು ಬಾಬುಗಳನ್ನು ವರ್ಗಾಯಿಸುವಿಕೆ : ಆಡಳಿತದಲ್ಲಿ ವಿಕೇಂದ್ರೀಕರಣವನ್ನು ತರುವುದು ಪ್ರಜಾಪ್ರಭುತ್ವದ ಬಹುಮುಖ್ಯವಾದ ಅಂಶ (ರೂಢಿ). 'ವಿಕೇಂದ್ರೀಕರಿಸು' ಪರಾ. [ಸಂ.]

ವಿಕೇಂದ್ರೀಕರಿಸು (ಕ್ರಿ). ಒಂದು ಕೇಂದ್ರದಲ್ಲಿಯೆ ಒಟ್ಟುಗೂಡಿರುವ ಅಧಿಕಾರ ಮೊದಲಾದುವನ್ನು ಬೇರೆ ಬೇರೆ ಕೇಂದ್ರಗಳಿಗೆ ಹಂಚು, – ವಿಂಗಡಿಸು : ಜವಾಬ್ದಾರಿಯನ್ನು ಅಗತ್ಯವರಿತು, ಔಚಿತ್ಯವರಿತು ವಿಕೇಂದ್ರೀಕರಿಸುವುದು ಒಳ್ಳೆಯದು (ಶಿಕ್ಷದ. ೩೧೯). [ವಿಕೇಂದ್ರೀಕರಣ + – ಇಸು]

ವಿಕೋಪ (ನಾ). ೧. ಅತಿಶಯವಾದ ಸಂತಾಪ, – ಕ್ಷೋಭೆ. ೨. ಅನರ್ಥ ; ದುಷ್ಪರಿಣಾಮ. ೩. ಕೋಪ ; ಕ್ರೋಧ.

ವಿಕೋಪಕ್ಕೆ ಮುಟ್ಟು = ಪರಿಸ್ಥಿತಿ ಕೈಮೀರು, – ಹತೋಟಿ ತಪ್ಪು, – ಗಂಭೀರವಾಗು : ಗುಸುಗುಸು ಮಾತು ಒಂದು ದಿನ ವಿಕೋಪಕ್ಕೆ ಮುಟ್ಟಿ ದೊಡ್ಡ ಅನಾಹುತವಾಗುವದರಲ್ಲಿತ್ತಲ್ಲ (ಮೂರುದಾ. ೧೫೨). ವಿಕೋಪಕ್ಕೆ ಹೋಗು = ವಿಕೋಪಕ್ಕೆ ಮುಟ್ಟು : ಪ್ರಸಂಗ ವಿಕೋಪಕ್ಕೆ ಹೋಗಬಹುದೆಂದು ಸಂಕ್ಷೇಪವಾಗಿ ಬರೆಯಲಾಗಿದ್ದಿತು (ರಂಗರೂ. ೭೦). [ಸಂ.]

ವಿಕೋಶ (ಗು). ೧. ಹೊದಿಕೆಯಿಲ್ಲದ ; ಆವರಣವಿಲ್ಲದ. ೨. ಒರೆಯಿಂದ ಹೊರಕ್ಕೆ ತೆಗೆದಿರುವ. (ನಾ). ೩. [ನಾಟ್ಯ] ಇಪ್ಪತ್ತು ಬಗೆಯ ಸಂಚಾರಿದೃಷ್ಟಿಗಳಲ್ಲಿ ಒಂದು ; IP ''ರೆಪ್ಪೆಗಳನ್ನರಳಿಸಿ ಬಡಿಯದೆ ಆಲಿಗಳನ್ನು ತಿರುಗಿಸುವುದು'' (ಲಾಸ್ಯರಂ. ೨೭೧ ಗದ್ಯಾನುವಾದ) : ಶೂನ್ಯ, ಮಲಿನ, ಶ್ರಾಂತ . . . ವಿಕೋಶ, ವಿಭ್ರಾಂತ, ವಿಪ್ಲುತ, ತ್ರಸ್ತ, ಮದಿರೆ – ಈ ಇಪ್ಪತ್ತು ಸಂಚಾರಿದೃಷ್ಟಿಗಳು (ಲಾಸ್ಯರಂ. ೩-೮ ವ). [ಸಂ.]

ವಿಕೋಶದೃಷ್ಟಿ (ನಾ). = ವಿಕೋಶ ೩ : ಅಲರ್ದೆವೆಪ್ಪೊಯ್ಯದೆಯಾಲಿಗಳೊಲವಿಂ ತಿರುಗಲ್ ವಿಕೋಶದೃಷ್ಟಿಯೆನಿಕ್ಕುಂ (ಲಾಸ್ಯರಂ. ೩-೩೬). [ಸಂ.]

ವಿಕ್ಕ (ನಾ). ಆನೆಯ ಮರಿ ; ಮರಿಯಾನೆ : ನಡುವಿರ್ದೆಟ್ಟರೆ ಪೋತವಿಕ್ಕಕಳಭಂಗಳ್ [ಪಾಠಾಂ. ಚಿಕ್ಕಪೋತಕಲಭಂಗಳ್] ಕೂಡೆ ಸಾರ್ದಿರ್ಕೆಲಂಬಿಡದಿಂಬಿಂದೆಳೆಯಾನೆಗಳ್ ಬರೆ . . . ಯೂಥತತಿಯಿಂ ಚೆಲ್ವಾದುದಾ ಕಾನನಂ (ಜಗವಿ. ೧೬-೫); ಕದುಪಿನ ವಿ [ಪಾಠಾಂ. ಚಿ]ಕ್ಕಪೋತಕರಿಣಿ ಗಣಮುಂ ನವಪಲ್ಲವಂಗಳಂ ಮುದಗೊಳೆ ಮುನ್ನೆ ಮೇಯಿಸಿ ಬೞಿಕ್ಕದು ಮೇದು . . . ಒಲೆದೂಡಿ ಪೊಡೆಬ್ಬ ಶಯ್ಯೆಯೊಳ್ ಮದಕರಿ ಮುನ್ನಮೊಯ್ಯರಿಸಿ ತಾಂ ಬೞಿಕಿರ್ಪುದು ರಮ್ಯಶಯ್ಯೆಯೊಳ್ (ಪಾರ್ಶ್ವಪು. ೪-೧೧೩). 'ಬಿಕ್ಕ' ಪರಾ. [ಸಂ.]

ವಿಕ್ಕಿರ (ನಾ). ಹಕ್ಕಿ ; ಪಕ್ಷಿ : ವಿಷ್ಕರ-ವಿಕ್ಕಿರ (ಶಮದ. ೫೫ ಪ್ರಯೋ) ; ಗರಿಯ ವಿಕ್ಕಿರನೊ ಕಿನ್ನರನೊ ಬಗೆವೆದೆಯ ಮಾಧುರಿಯನರುಹಿಮಗೆ (ಗೀಎಂ. ೭-೬೩). 'ವಿಕಿರ' ಪರಾ. [ಸಂ. ವಿಷ್ಕರ]

ವಿಕ್ರಮ (ನಾ). ೧. ಹೆಜ್ಜೆಯಿಡುವಿಕೆ ; ಪಾದನ್ಯಾಸ. ೨. ಹೆಜ್ಜೆ ; ಪಾದ ; ಅಡಿ : ಜಲದಾಧ್ವಂಬರಮೆತ್ತಿದಂಘ್ರಿಯ ನಖಾಂಶುಶ್ರೇಣಿ ತಾರಾಗಣಚ್ಛಲದಿಂದಿರ್ಪಿನಮಿನ್ನುಮಂದವನಿಚಕ್ರಂ ವಿಕ್ರಮಕ್ಕೆಯ್ದದಾ ಬಲಿಯಂ . . . ಮೆಟ್ಟಿ ರಸಾತಳಕ್ಕಿೞಿಪಿದೈ ನೀಂ ವಾಮನಾಕಾರದಿಂ (ಜಗವಿ. ೧-೫೯). ೩. ಪ್ರಯಾಣ ; ಸಂಚಾರ : ಭೂಪಾಲಕರು . . . ಗಂಗಾಕೂಲದುತ್ತರಭಾಗದಲಿ ಮಾಡಿದರು ವಿಕ್ರಮವ (ಕುಮ್ಯಾಅ. ೧-೧). ೪. ಪರಾಕ್ರಮ ; ಶೌರ್ಯ : ವಿಕ್ರಮ[ಂ] ಕ್ರಮಮಮಾಂ ವಿಕ್ರಮದಾತನೆಂ (ಪಂಪಭಾ. ೧೧-೯೨). ೨, ೪: ಆಕ್ರಮಿಪೆಡೆಯೊಳು ಮೂಱುಂ ವಿಕ್ರಮದಾಯಾಸಮಾಯ್ತು ಮುಂ ಚಕ್ರಿಗೆನುತ್ತಾಕ್ರಾಂತಸಮಸ್ತಜಗಚ್ಚಕ್ರಂ ನೃಪನೊಂದೆ ವಿಕ್ರಮಂ ನಗುತಿರ್ಕುಂ (ಕಾದಂಪೂ. ೯) ; ಅಂಬುಜನಾಭನಂತೆ ವಿಸ್ತಾರಿತವಿಕ್ರಮಮಂ ದ್ಯುಮಣಿಯಂತಿರೆ

ಸತ್ವದವರ್ತಿಯೆಂಬುದೀ ಧಾರಿಣಿ ಮಾಚಿದೇವನರಪಾಳನಂ (ಎಕ. XI, ದಾವಣ. ೪೩-೫೭; 1164). ೫. ಶೂರ ; ಪರಾಕ್ರಮಿ : ಆಕ್ರಮಿಸಿದುದೀಗ ದ್ವಿಗುಣವಾದುದು ಬುದ್ಧಿ ವಿಕ್ರಮರಾದೆವೆನ್ನೊಡೆಯ (ಭರಚ. ೬೯-೧೪೩). ೬. ವಿಷ್ಣುವಿನ ಒಂದು ಅವತಾರ ; ತ್ರಿವಿಕ್ರಮ : ಒಂದಡಿಯನಿಟ್ಟು ಹರಿ ಮತ್ತೊಂದಡಿಗಡಿಯತ್ತುವಾಗಳುಂ ವಿಕ್ರಮನಾದಂದಿನ ಸಂಸ್ಕಾರಂ ಬಿಡದೆಂದೆನೆ ಬಗೆಗೊಳಿಸಿದಂ ತಳರ್ನಡೆವೆಡೆಯೊಳ್ (ಜಗವಿ. ೩-೪೨). ೭. ಅರುವತ್ತು ಸಂವತ್ಸರಗಳಲ್ಲಿ ಒಂದು ; ಹದಿನಾಲ್ಕನೆಯ ಸಂವತ್ಸರದ ಹೆಸರು : ಸಡಗರದ ತಿಟ್ಟಮ್ಮಂ ವಿಕ್ರಮಮೆಂಬ ವರ್ಷದೊ[ಳ್] ಗೋಶಹಸ್ರಮಿಟ್ಟೊ[ಂ] (ಸೌಇಇ. XX, ೧೬-೪; 920). ೮. ಉಜ್ಜಯಿನಿಯ ಪ್ರಸಿದ್ಧರಾಜನಾಗಿದ್ದ ವಿಕ್ರಮಾದಿತ್ಯನ ಹೆಸರು : 'ವಿಕ್ರಮಶಕ' ಪರಾ. ೯. ಕಲ್ಯಾಣಿ ಚಾಲುಕ್ಯರ ರಾಜನಾಗಿದ್ದ ಆರನೆಯ ವಿಕ್ರಮಾದಿತ್ಯನ ಹೆಸರು: 'ವಿಕ್ರಮವರ್ಷ' ಪರಾ. ೧೦. ಸಾಹಸಕೃತ್ಯ, ಕ್ರೀಡೆ, ವಿದ್ಯೆ ಇತ್ಯಾದಿಗಳಲ್ಲಿ ಸಾಧಿಸುವ ಅತ್ಯುಚ್ಚವಾದ ಮಟ್ಟ ; ಹಿಂದಿನ ದಾಖಲೆಗಳನ್ನು ಮೀರಿಸುವ ದಾಖಲೆ : ವಿಕ್ರಮ ಸ್ಥಾಪಿಸುವ ಮಕ್ಕಳೂ ಆಗಾಗ ಹುಟ್ಟುತ್ತಾರೆಂಬುದು ಅವರಿಗೆ ತಿಳಿದಿದೆ (ಗಾಳಿಪ. ೧೮೩). ೧೧. [ಅಶ್ವಶಾ] ಕುದುರೆಯ ಐದು ಬಗೆಯ ನಡಗೆಗಳಲ್ಲಿ ಒಂದು : ಬಿಂಕಂಬಡೆದುದು ವಿಕ್ರಮಮಂಕಿತಮುಪಕಂಠಮುಪಜ ಮುಪಜವಮೆಂಬಯ್ದುಂ ಕಣ್ಗೊಳಿಸುವ ಧಾರೆಗಳಿಂ ಕುದುರೆಯ ಕಾಲ್ಗೆ ಕೋಡಗಜಿ ಯೊಳವಕ್ಕುಂ (ಮಲ್ಲಿಪು. ೯-೩೭). [ಸಂ.]

ವಿಕ್ರಮದರಿದ್ರ (ನಾ). ಪರಾಕ್ರಮಹೀನನಾದವನು ; ಹೇಡಿ : ನಿಮಗೆ ಸದರವೆ ಪಾರ್ಥನೆಲೆ ವಿಕ್ರಮದರಿದ್ರರಿಂ ವೃಥಾಸಂಭ್ರಮಿತರಿರಾ (ಕುಮಾದ್ರೋ. ೧-೭೦). [ಸಂ.]

ವಿಕ್ರಮವರ್ಷ (ನಾ). ಕಲ್ಯಾಣದ ಚಾಲುಕ್ಯರಾಜ ಆರನೆಯ ವಿಕ್ರಮಾದಿತ್ಯನು ತನ್ನ ಹೆಸರಿನಲ್ಲಿ ಸ್ಥಾಪಿಸಿದ ಶಕ : ಎಸೆವ ಸಕವರ್ಷಮಂ ಮಾಣಿಸಿ ವಿಕ್ರಮವರ್ಷಮೆಂದು ತನ್ನಯ ಪೆಸರಂ ವಸುಮತಿ ನೆಗಳ್ಚಿದ ಸಾಹಸಿಗಂ ಜಗದೇಕದಾನಿ ಧರ್ಮವಿನೋದ (ಸೌಇಇ. XX, ೯೩-೨೯; 11, 12 ನೆಯ ಶತ). [ಸಂ.]

ವಿಕ್ರಮಶಕ (ನಾ). ಉತ್ತರಭಾರತದಲ್ಲಿ ಪ್ರಚಲಿತವಿರುವ ಒಂದು ಶಕ ; ಉಜ್ಜಯಿನಿಯ ಅರಸನಾಗಿದ್ದ ವಿಕ್ರಮಾದಿತ್ಯನಿಂದ ಕ್ರಿಸ್ತಪೂರ್ವ ಐವತ್ತೇಳರಲ್ಲಿ ಸ್ಥಾಪಿತವಾಯಿತೆಂದು ಹೇಳಲಾದ ಶಕ : ಭರತಖಂಡದಲ್ಲಿ ಪ್ರಸಿದ್ಧವಾಗಿರುವ ಶಕಗಳು ಎರಡು — ಉತ್ತರಭಾರತದಲ್ಲಿ ವಿಕ್ರಮಶಕ, ದಕ್ಷಿಣಭಾರತದಲ್ಲಿ ಶಾಲಿವಾಹನಶಕ (ಕಶಾಅ. ೫೨). [ಸಂ.]

ವಿಕ್ರಮಹೀನ (ನಾ). ಶೌರ್ಯವಿಲ್ಲದವನು ; ಹೇಡಿ : ವಿಕ್ರಮಹೀನಂ ಗುಚ್ಛಕುಲಕ್ರಮವೇಬಾಲ್ತೆ (ನೇಮಿಪು. ೧೨-೫೩). [ಸಂ.]

ವಿಕ್ರಯ (ನಾ). ಮಾರಾಟ ; ಬಿಕರಿ : "ಕ್ರಯಂ ವಿಕ್ರಯಂ ಕೊಳ್ಳುಕೊಡುಹಂ" (ಮಂಗರಾ. ೧೦೨-೨) ; ಹೋಟಲಾಹಾರವಿಕ್ರಯದ ಮನೆ, ಮದ್ಯಮಂ ಮಾರುವಂಗಡಿ . . . ಇಂತು ಹಬ್ಬಿದೆ ಪಟ್ಟಣದ ಬೃಹಜ್ಜೀವನಂ (ಪಕ್ಷಿಕಾ. ೨೯-೪೧). [ಸಂ.]

ವಿಕ್ರಯಶಾಲೆ (ನಾ). ಮಾರಾಟದ ಸ್ಥಳ ; ಅಂಗಡಿ : "ಪಣ್ಯಂ, ವಿಕ್ರಯಶಾಲಾ, ಆಪಣಃ, ವಿಪಣಿಃ — ಈ ೪ ಅಂಗಡಿ" (ಹಲಾಯು. ೫೦-೧೪೧). [ಸಂ. ವಿಕ್ರಯಶಾಲಾ]

ವಿಕ್ರಯಿಕ (ನಾ). ಮಾರಾಟ ಮಾಡುವವನು ; ವ್ಯಾಪಾರಿ : "ವಿಕ್ರೇತಾ, ವಿಕ್ರಯಿಕಃ — ೨ ಮಾರುವವನ ಹೆಸರುಗಳು" (ಸಿದ್ಧಾಂತಿ. ೨೯೭). [ಸಂ.]

ವಿಕ್ರಯಿಸು (ಕ್ರಿ). ಮಾರು ; ಮಾರಾಟ ಮಾಡು : ಕಟ್ಟಿಗೆಗಳಂ ಕೈಯಾರೆ ಕಡಿಕಡಿದೊಟ್ಟಿ . . . ಮೋಳಿಗೆಮಾರ ವಿಭುವಂಗಡಿಯೊಳಗೆ ವಿಕ್ರಯಿಸಿಯದಜಿಂದ ಒಸೆದು ಜಂಗಮಕೋಟಿಗಾರಾಧಿಸುತ್ತಿರಲು (ಬಸಪು. ೩೦-೪); ಅದರ ಮೇಲಿನ ರತ್ನಗಳನ್ನು ಬಿಡಿಸಿ ಅವುಗಳನ್ನೂ, ಚಿನ್ನವನ್ನೂ ಬಿಡಿಬಿಡಿಯಾಗಿ ವಿಕ್ರಯಿಸಲಾಗುವುವು (ರತ್ನಗೋ. ೯). [ವಿಕ್ರಯ + - ಇಸು]

ವಿಕ್ರಾಂತ (ಗು). ೧. ಹೆಜ್ಜೆಯಿಟ್ಟ ; ದಾಟಿ ಹೋದ. ೨. ಪರಾಕ್ರಮಿಯಾದ ; ಶೂರನಾದ : ಪುಷ್ಕಲಂ ಶತ್ರುಘ್ನನಿಂ ಬೆಸನಾಂತು ತಳ್ಳದೆ ಮಾಜುಂತ ವಿಕ್ರಾಂತರಾಜಪುತ್ರನಂ ಸರಲ ಸೋನೆಯಿಂ . . . ತಡೆದಂ (ರಾಮಾಶ್ವ. ೯೨-೧೧). (ನಾ). ೩. ಶೂರ ; ಪರಾಕ್ರಮಿ: ವಿಕ್ರಾಂತಾರಾತಿಗಳಂ ಕಳಲ್ಚಿ ಧರೆಯಂ ನಿಷ್ಕಂಟಕಂ ಮಾಡಿ (ಎಕ. VII, ಶಿಕಾರಿ. ೧೩೭-೧೪ ; 1068). ೪. ಶೌರ್ಯ ; ಪರಾಕ್ರಮ : ಅತರ್ಕ್ಯಂ ವಿಕ್ರಾಂತಂ ಭುಜಬಲಮುಸಾವಮಾನ್ಯಮಧಿಕಂ ಪ್ರತಾಪಂ ಪೋಗೀತಂಗೆಣೆಯೆ ದ್ವಿಜರ್(ಪಂಪಭಾ. ೧-೮೦) ; ಅಗಣಿತದೋರ್ಬಲದಿಂ ಸಂಯುಗದೊಳ್ ಮಾಜುಂತ ವೈರಿರಾಜನನೇನುಂ ಬಗೆಯದುಬಿದಿಜಿವ ವಿಕ್ರಾಂತಗುಣಮನುತ್ಸಾಹಶಕ್ತಿಯೆಂಬರ್ ವಿಬುಧರ್ (ಪಂಚತಂ. ೨೯೫-೫). ೫. ಹೆಜ್ಜೆಯಿಡುವುದು. [ಸಂ.]

ವಿಕ್ರಿಯರ್ದ್ಧಿ (ನಾ). [ಜೈನ] ತಪಸ್ಸಿನಿಂದ ದೊರೆಯುವ ಎಂಟು ಬಗೆಯ ಸಿದ್ಧಿಗಳಲ್ಲಿ ಒಂದು : ಇರ್ಪತ್ತುಸಾಸಿರದಾಜುನೂರ್ವರ್ ವಿಕ್ರಿಯರ್ದ್ಧಿಪ್ರಾಪ್ತರುಂ (ಆದಿಪು. ೧೬-೪೦ ವ ). 'ಕ್ರಿಯಾಗೋಚರರ್ದ್ಧಿ' ಪರಾ. [ಸಂ.]

ವಿಕ್ರಿಯಾಗಜ (ನಾ). ರೂಪಪರಾವರ್ತನೆಯ ಶಕ್ತಿಯನ್ನು ಹೊಂದಿದ ಆನೆ : ಮುನ್ನಮೆ ಪಾಂಡುಕಮೇಖಳಾವನಕ್ಕಡರ್ದುದಿದೇಂ ಮನಃಪವನವೇಗಿಯೊ ಶಕ್ರನ ವಿಕ್ರಿಯಾಗಜಂ (ಮಲ್ಲಿಪು. ೧೨-೯೪). [ಸಂ.]

ವಿಕ್ರಿಯಾಬಲ, ವಿಕ್ರಿಯಾಬಳ (ನಾ). ಬೇಕಾದ ರೂಪ, ಆಕಾರ ಮುಂತಾದುವನ್ನು ತಾಳುವ ಶಕ್ತಿ ; ಮಾಯಾಶಕ್ತಿ : ಅಂತು ವಿಕ್ರಿಯಾಬಲದೆ ಗೀರ್ವಾಣವಾರಣಂ ವಿಗುರ್ವಿಸೆ (ಆಜಿಪು. ೪-೫೩ ವ) ; ಬಲದೇವಾಕೃತಿಯಂ ಸರಾಗನಮರಂ ನಿಷ್ಪ್ರಾಣಮಂ ವಿಕ್ರಿಯಾಬಲದಿಂ ನಿರ್ಮಿಸೆ ಕಂಡು ಲಕ್ಷ್ಮಣನದಂ . . . ಬಿಟ್ಟಂ ಧರಾತಳದೊಳ್ (ಪಂರಾಮಾ. ೧೬-೪೯). ವಿಕ್ರಿಯಾಬಳ : ಸೂಕ್ಷ್ಮಾಂಗನಾಗಿರ್ಪನಾಗಳ್ ದಿಗ್ವ್ಯಾಪಕನಪ್ಪನಿಂತು ಪಲವುಂ ಚೋದ್ಯಂಗಳಂ ವಿಕ್ರಿಯಾಬಳದಿಂದಾಡಿ ಮಹೇಂದ್ರಜಾಲಿಗನುಮಂ ಪೋಲ್ವಂ ಸುರಾಧೀಶ್ವರಂ (ಆದಿಪು. ೭-೧೨೨). [ಸಂ.]

ವಿಕ್ರಿಯಾಬಳ 'ವಿಕ್ರಿಯಾಬಲ' ನೋ.

ವಿಕ್ರಿಯಾಶಕ್ತಿ (ನಾ). = ವಿಕ್ರಿಯಾಬಲ : ವಾಹನಾಮರವಿಕ್ರಿಯಾಶಕ್ತಿಸಂಜನಿತ ವಾಜಿಸಾಮಜಾದ್ಯನೇಕಯಾನಂಗಳನೇಜಿ ಪೋಗಿ (ಚಂದ್ರಪ್ರ. ೪-೭೬ ವ). [ಸಂ.]

ವಿಕ್ರಿಯೆ (ನಾ). ೧. ಬದಲಾವಣೆ ; ವ್ಯತ್ಯಾಸ : ಪುನಃ ಪುನಃ ಯಂತ್ರವು ಕೆಲಸ ಮಾಡಬೇಕಾದರೆ ಅದರಲ್ಲಿ ನಡೆಯುವ ವಿಕ್ರಿಯೆಗಳಿಂದ (changes) ಕಾರ್ಮಿಕದ್ರವ್ಯವು ಅದು ಮೊದಲಿದ್ದ ಸ್ಥಿತಿಗೇ ಪುನಃ ತರಲ್ಪಡಬೇಕು (ಭೌತವಿ. ೫೦). ೨. ಸಹಜಸ್ಥಿತಿಯ ಪರಿವರ್ತನೆ ; ಪ್ರಕೃತಿವಿಕಾರ : "ವಿಕೃತಿ, ವಿಕ್ರಿಯಾ — ೨ ಪರಿಣಾಮರೂಪವಾಗಲಿ, ವಿವರ್ತರೂಪವಾಗಲಿ ಸೋಪಾಧಿಕ ಪ್ರಕೃತಿಯಿಂದ ಹುಟ್ಟುವ ವಿಕಾರಗಳೆಲ್ಲಕ್ಕೂ ಕಾರ್ಯ ಪ್ರಪಂಚಮಾತ್ರಕ್ಕೂ ಹೆಸರುಗಳು" (ಸಿದ್ಧಾಂತಿ. ೩೬೦). ೩. ವ್ಯಾಧಿ ; ರೋಗ. ೪. (ಕೋಪ, ಈರ್ಷ್ಯೆ ಮೊದಲಾದ) ಮನೋವಿಕಾರ. ೫. ಇಷ್ಟ ಬಂದಂತೆ ಬದಲಾವಣೆಗಳನ್ನು ತಟ್ಟನೆ ನಿರ್ಮಿಸುವ ಅದ್ಭುತಶಕ್ತಿ ; ಮಾಯೆ : ಅವಧಿಯಿಂ ಧರಣೇಂದ್ರನಜಿದು ವಿಕ್ರಿಯೆಯಿಂ ದೇವರ್ ಬೆಸಸಿದಂತು ಮಾಡಿ (ಚಾವುಂಪು. ೩೫); ಸಪ್ತಧಾತುದ್ರವಮಂ ವಿಧಿಯಿಂ ತಂದೆಜೆವರ್ ಸಪ್ತಧಾತುಗಳ್ ಕರಗುವಿನೆಗಂ ವಿಕ್ರಿಯೆಯಿಂದಂ (ಸುಕುಮಾ. ೧೧-೪೫). [ಸಂ. ವಿಕ್ರಿಯಾ]

ವಿಕ್ರುಷ್ಟ (ಗು). ೧. ಗಟ್ಟಿಯಾಗಿ ಕೂಗಿದ ; ಭಾವಾವೇಶದಿಂದ ಉದ್ಗರಿಸಿದ. ೨. ಬಿರುಸಾದ ; ಕರ್ಕಶವಾದ. (ನಾ). ೩. ಸಹಾಯ ಯಾಚನೆಯ ಕೂಗು. ೪. ಬಿರುದನಿ ; ಕಠೋರವಾದ ಧ್ವನಿ : "ಬೆಟ್ಟಿತಪ್ಪ ಧ್ವನಿಯಂ ವಿಕ್ರು(ಕೃ)ಷ್ಟಮೆಂಬುದು" (ಹಲಾಯು. ೫೩-೧೯೯). [ಸಂ.]

ವಿಕ್ರೇಯ (ಗು). ಮಾರಲು ಯೋಗ್ಯವಾದ ; ವಿಕ್ರಯಿಸಲು ಅರ್ಹವಾದ. [ಸಂ.]

ವಿಕ್ಲಬ (ಗು). ೧. ಭಯಪಟ್ಟ ; ಗಾಬರಿಗೊಂಡ. ೨. ಹೆದರುವ ಸ್ವಭಾವವುಳ್ಳ ; ಭೀರುವಾದ. ೩. ಸಂತ್ರಸ್ತವಾದ ; ವಿಹ್ವಲವಾದ. (ನಾ). ೪. ದುಃಖ ; ವಿಷಾದ : ಅಸ್ಮನ್ಮನೋ[ಸ]ಬಳಂ(?) ತೀರ್ವಡೆ ತೀರ್ಗುಮಾ ಪರಮಹಂಸಸ್ವಾಮಿಯಿಂದೆಂದು ವಿಕ್ಲಬದಿಂ ತಾಂ ಬರವೇಳ್ದುದುಂ (ಸುಕುಮಾ. ೩-೬); ಆರುಮನರ್ದಿರ್ಪದೆ ಪುತ್ರವಿಯೋಗವಿಕ್ಲಬಂ (ಚಂದ್ರಪ್ರ. ೫-೧೯). [< ಸಂ. ವಿಕ್ಲವ]

ವಿಕ್ಲಿಷ್ಟ (ಗು). ೧. ತುಂಬಾ ನೊಂದುಕೊಂಡ ; ಅತಿದುಃಖಿತವಾದ. ೨. ಗಾಯಗೊಂಡ. ೩. ನಾಶವಾದ. (ನಾ). ೪. ಅಸ್ಪಷ್ಟವಾದ ಉಚ್ಚಾರಣೆ ; ತಪ್ಪುಉಚ್ಚಾರಣೆ ; ಉಚ್ಚಾರದೋಷ. [ಸಂ.]

ವಿಕ್ಷತ (ಗು). ೧. ಹರಿದ. ೨. ಏಟು ಬಿದ್ದ ; ಗಾಯವಾದ : ಬ್ರಹ್ಮದಂಡೆಯ

ಬೇರು, ದೇವದಾರು, ತುಪ್ಪದಲ್ಲಿ ಅರೆದು ಪೂಸುಗೆ, ವಿಕ್ಷತಕ್ಷುದ್ರವ್ರಣಗಳು ತೀರ್ಗುಂ (ವಿಷ್ಣುವಿ. ೧೯೪). (ನಾ). ೩. ಗಾಯ ; ಹುಣ್ಣು. [ಸಂ.]

ವಿಕ್ಷಿಪ್ತ (ಗು). ೧. ಚೆದರಿದ ; ಹರಡಿದ. ೨. ಬೇಡವೆಂದು ತೆಗೆದುಹಾಕಿದ ; ಪರಿತ್ಯಕ್ತ. ೩. ಕಳಿಸಿದ ; ರವಾನಿಸಿದ. ೪. ಉದ್ವಿಗ್ನ ; ವಿಹ್ವಲವಾದ. ೫. ಕಕ್ಕಾಬಿಕ್ಕಿಯಾದ ; ದಿಗ್ಭ್ರಾಂತವಾದ. ೬. ವಿಚಿತ್ರ ಸ್ವಭಾವದ ; ಮನಸ್ಸಿನ ಲಹರಿ ಬಂದಂತೆ ನಡೆದುಕೊಳ್ಳುವ : ಅವ್ವನ ವಿಕ್ಷಿಪ್ತ ಸ್ವಭಾವದಿಂದ ಮನೆಯಲ್ಲಿ ಎಲ್ಲರೂ ಬೇಸತ್ತಿದ್ದರು (ಹೊಸಕ್ಕಿ. ೧೯೬). (ನಾ). ೭. ವಿಚಿತ್ರಸ್ವಭಾವದ ವ್ಯಕ್ತಿ : ಟಿಳಕರು ವಿಕ್ಷಿಪ್ತರಾದ ಸಂತರು (ಸ್ಮೃತಿಚಿ. ೪) ; ಈ ಗುಲಗಂಜಿ ಕಣ್ಣಿನ . . . ನಿಷ್ಠುರವಾದಿಯಾದ ವಿಕ್ಷಿಪ್ತನು ಬ್ಯಾಂಕಿನಲ್ಲಿ ಪರಿಚಿತವ್ಯಕ್ತಿಯಾಗಿರಬೇಕು (ಗಂಮಾಯಿ. ೨೬೦). ೮. [ಯೋಗ] ಚಿತ್ತಸ್ಥಿತಿಯ ಐದು ವಿಧಗಳಲ್ಲಿ ಒಂದು ; ಅಸ್ಥಿರತೆ ; ಚಂಚಲತೆ : ವಿಕ್ಷಿಪ್ತವೆಂದರೆ ಯಾವುದರಲ್ಲಿಯೂ ಸ್ಥಿರವಾಗಿ ನಿಲ್ಲದೆ ಚಂಚಲವಾಗಿರುವುದು (ಹಿಂದಸಾ. ೧೦೨). ೯. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; P "ವಿದ್ಯುದ್ಭ್ರಾಂತ ಮತ್ತು ದಂಡಪಾದಚಾರಿಗಳನ್ನು ಕ್ರಮವಾಗಿ ಮಾಡಿ, ಕೈಗಳನ್ನು ಮುಂದುಗಡೆ, ಹಿಂದುಗಡೆ ಮತ್ತು ಪಾರ್ಶ್ವಗಳು ಇವುಗಳಲ್ಲಿ ಉದ್ವೇಷ್ಟಿತ ಮತ್ತು ಅಪವೇಷ್ಟಿತಗಳಿಂದ ರೇಚಿತ ಮಾಡುವುದು" (ಲಾಸ್ಯರಂ. ೨೯೯ ಗದ್ಯಾನುವಾದ) : ಮಿಗೆ ವಿದ್ಯುದ್ಭ್ರಾಂತಮುಮಂ ನೆಗಳ್ದಿರ್ದಾ ದಂಡಪಾದ ಚಾರಿಯುಮಂ ತೊಟ್ಟಗೆ ಸಮೆದುಂ ಕ್ರಮದಿಂದಂ ಸೊಗೆಯಿಪ್ಪುದ್ವೇಷ್ಟಿತಮುಮನಪ ವೇಷ್ಟಿತಮಂ ಸರಿಯಾಗಿ ಕೈಗಳಂ ಬಿತ್ತರದಿಂದಂ ಮುಂತೆ ಪಿಂತೆ ರೇಚಿತಮನದಂ ವಿರಚಿಸಿ ಕೈಯೆರಡಂ ಕೇಳ್ ಬರಿಯೆರಡಕ್ಕೆಯ್ದಿಸಲ್ಕೆ ವಿಕ್ಷಿಪ್ತಾಖ್ಯಂ (ಲಾಸ್ಯರಂ. ೪-೧೨೪). [ಸಂ.]

ವಿಕ್ಷಿಪ್ತತನ (ನಾ). ವಿಚಿತ್ರವಾದ ಸ್ವಭಾವ : ವಿಕ್ಷಿಪ್ತತನವನ್ನು ಅವಲಂಬಿಸಿ, ನಾಟ್ಯಸಂಸ್ಥೆಯು ಕೆಟ್ಟರೆ ಸಮಾಜವು ಕೆಟ್ಟೀತು (ಪ್ರಬಂಧ. ೨೪). [ವಿಕ್ಷಿಪ್ತ + - ತನ]

ವಿಕ್ಷಿಪ್ತತೆ (ನಾ). ೧. ನಿಯಮರಾಹಿತ್ಯ ; ನಿಯಮರಹಿತತೆ : ಛಂದಸ್ಸಿನ ನಾವೀನ್ಯದೊಡನೆ, ವೃತ್ತದ ವಿಕ್ಷಿಪ್ತತೆ, ಅತಿವ್ಯಾಪ್ತತೆಯೂ ಸರಳರಗಳೆ ಮೊದಲಾದವುಗಳಲ್ಲಿ ಕಂಡುಬರುತ್ತವೆ (ಸಾಹಿವಿ. ೬೮). ೨. ಚಿತ್ತಲಹರಿ ಬಂದಂತೆ ನಡೆದುಕೊಳ್ಳುವ ರೀತಿ : ತಾಯಿಯ ವಿಕ್ಷಿಪ್ತತೆಯು ಅವನನ್ನು ಖಿನ್ನನನ್ನಾಗಿಸಿತ್ತು (ಸಮಜೀ. ೨೬೧).

[ಸಂ. ವಿಕ್ಷಿಪ್ತತಾ]

ವಿಕ್ಷುಬ್ಧತೆ (ನಾ). ಕ್ಷೋಭೆ ; ವಿಪ್ಲವ ; ಅಶಾಂತಿ : ಅಂದಂದಿಗೆ ಸಮಾಜಸಾಗರದ ವಿಕ್ಷುಬ್ಧತೆಗಳನ್ನು ತಡೆದು ನಿಲ್ಲಿಸುವ ಸೀಮೆ(ಎಲ್ಲೆ)ಯೆನಿಸಿರುವ ಸ್ಮೃತಿಗಳು . . . ಅಂದಂದಿನ ಸ್ಥಿತಿಗತಿಗಳನ್ನು ನಿರ್ದೇಶಿಸಲು ಮಾರ್ಗದರ್ಶಕವಾಗಿವೆ (ಭಾರದ. ೬೧).

[ಸಂ. ವಿಕ್ಷುಬ್ಧತಾ]

ವಿಕ್ಷೇಪ (ನಾ). ೧. ಚೆದರುವಿಕೆ ; ಹರಡುವಿಕೆ : ಪುಷ್ಪಾಂಜಳಿವಿಕ್ಷೇಪಂಗೆಯ್ದಿಱಿಗಿ ಪೊಡವಟ್ಟು (ಶಾಂತಿಪು. ೧೦-೬೧ ವ). ೨. ಚಲನೆ ; ಅಲುಗಾಟ : ಚಮರೀಲೋಲಲಾಂಗೂಲಮಾಲಾವಲಿವಿಕ್ಷೇಪಂಗಳಿಂ ತಚ್ಚಮರರುಹ ಮಹಾಶೋಭೆ ಕೈಗಣ್ಮೆ (ಪಂಪಭಾ. ೯-೧೪) ; ಚಮರೀಜಕಾಂತೆಯರ್ ಸಿತಚಮರದ ವಿಕ್ಷೇಪದಿಂದಮೆಸೆದರ್ (ಕಾದಂಪೂ. ೪೭೩). 'ಕಟಾಕ್ಷವಿಕ್ಷೇಪ' ಪರಾ. ೩. ಕಳಿಸುವಿಕೆ ; ರವಾನೆ. ೪. ಇಡುವಿಕೆ ; ಇರಿಸುವುದು : 'ಕ್ರಮವಿಕ್ಷೇಪ' ಪರಾ. ೫. ಬೇರೆ ಕಡೆಗೆ ತಿರುಗಿಸುವುದು ; ಗತಿಯನ್ನು ಬದಲಿಸುವುದು. ೬. (ಬೇರೆಯವರ ಮತ, ವಾದ ಮುಂತಾದವುಗಳ) ಖಂಡನೆ ; ನಿರಾಕರಣೆ. ೭. ಭಯ ; ಗಾಬರಿ. ೮. ಕಕ್ಕಾಬಿಕ್ಕಿ ; ದಿಗ್ಭ್ರಮೆ. ೯. ಅಡ್ಡಿ ; ವಿಘ್ನ : ಪರಪರಿಣಯ[ಕರಣಮದಿ]ತ್ವರಿಕಾಗಮನಂ ಭುಜಂಗ[ವಿಕೃ]ತ ಮನಂಗಾಂತರಕೇಳಿ ಕಾಮತೀವ್ರಾತುರತೆ ಚತುರ್ಥವ್ರತಕ್ಕೆ ವಿಕ್ಷೇಪಂಗಳ್ (ವರ್ಧಮಾ. ೭-೧೧). ೧೦. ಚಿತ್ತಚಾಂಚಲ್ಯ ; ಚಿತ್ತವಿಭ್ರಮೆ : ಲಯ ವಿಕ್ಷೇಪವು ಕಷಾಯಗಳು ಮೊದಲಾದಂತರಾಯಗಳಗಣಿತಗಳಾಗಿಹವು ಯೋಗಾಭ್ಯಾಸಕಾಲದಲಿ (ಅಮೃತ. ೬-೮೧). ೧೧. ಗದೆಯನ್ನು ಬೀಸುವುದು ; ಗದೆಯ ಆಘಾತ : ಆವರ್ತನಾದಿಗಳಪ್ಪ ಮೂವತ್ತೆರಡು ಗದಾವಿಕ್ಷೇಪದೊಳಮತಿಪರಿಚಿತರಾಗಿ ಕಾದುವಾಗಳ್ (ಪಂಪಭಾ. ೧೩-೯೨ ವ ). ೧೨. ಗದಾಯುದ್ಧದಲ್ಲಿ ಒಂದು ವರಸೆ : ಬವರಿಮತ್ಸ್ಯೋದ್ಗತಿ . . . ಪಾರಿಪ್ಲವ ಗದಾಪರಿರಂಭ ವಿಕ್ಷೇಪ . . . ಎಂಬೀ ವಿವರದಲಿ ಕಾದಿದರು (ಕುವ್ಯಾಗ. ೬-೨೫). ೧೩. [ಕಾವ್ಯಮೀ] ಕಾವ್ಯಾನಂದದಲ್ಲಿ ಪರ್ಯವಸಾನವಾಗುವ ಚಿತ್ತದ ನಾಲ್ಕು ಅವಸ್ಥೆಗಳಲ್ಲಿ ಒಂದು : ಕಾವ್ಯಾರ್ಥವನ್ನು ಗ್ರಹಿಸುವುದರಿಂದ ಆಗುವ ಆನಂದವು (ಚಿತ್ತ) ವಿಕಾಸ, ವಿಸ್ತಾರ, ಕ್ಷೋಭ ಮತ್ತು ವಿಕ್ಷೇಪವೆಂದು ನಾಲ್ಕು ವಿಧ (ಕೃಬಿ. ೨೦೦). ೧೪. [ನಾಟ್ಯ] ಹತ್ತೊಂಬತ್ತು ಪ್ರಕಾರದ ದೇಶೀಯ ಆಕಾಶಚಾರಿಗಳಲ್ಲಿ ಒಂದು; IP "ಕಾಲನ್ನು ಮುಂದಕ್ಕೆ ನೀಡಿ ಜಾಗ್ರತೆ ಹಿಂದಕ್ಕೆ ತರುವುದು" (ಲಾಸ್ಯರಂ. ೩೨೪ ಗದ್ಯಾನುವಾದ) : ಮುಂತೆತ್ತಿದ ಪದಕುಂಚಿತಮಂ ತಳೆದುಂ ನೀಡೆ ಕೇಳ್ ಪುರಾಕ್ಷಿಪ್ತಾಖ್ಯಂ ಮುಂತಾಗಸಕೆತ್ತುತ್ತಂ ಕಾಂತೇ ತವೆ ತೆಗೆಯೆ ಕೂಡೆ ವಿಕ್ಷಿಪ್ತಾಖ್ಯಂ (ಲಾಸ್ಯರಂ. ೬-೯೧). ೧೫. [ವೇದಾಂತ] ಭ್ರಾಂತಿಯನ್ನು ಹುಟ್ಟಿಸುವ ಶಕ್ತಿ ; ಮಾಯೆ : ತಾನೇ ಕರ್ಮ ಕರ್ತೃ ತಾನೇ ಕರ್ಮಫಲಭೋಕ್ತೃವೆಂದು ಬಗೆದು ದೇಹಾಭಿಮಾನಿಯಾದ ಚಿದಾಭಾಸಜೀವನು ತಾನೇ ವಿಕ್ಷೇಪವೆನಿಸುವುದು (ವಿವೇಚ. ೪೩); ಅಹಂಕಾರ ಮಮಕಾರಗಳಿಂದ ಸಕಲವ್ಯಾಪಾರಗಳು ಮಾಡುವದೇ ವಿಕ್ಷೇಪ (ನಾನಾಗು. ೨೮-೭). [ಸಂ.]

ವಿಕ್ಷೇಪಣ (ನಾ). ೧. ಅಲುಗಾಟ ; ಚಲನೆ : ಈ ಕಳಾಳಾಪ ಸುರೇಂದ್ರಕಾಂತೆ ಯೆನುತುಂ ನಡೆನೋಟ್ಪವರ್ಗಕ್ಷಿಪಕ್ಷ್ಮವಿಕ್ಷೇಪಣವೊಂದೆ ಮಾಡುವುದಿವಳ್ ಮನುಜಾಂಗನೆಯೆಂಬ ಭೇದಮಂ (ಆದಿಪು. ೩-೨೦). ೨. (ಹೂವು ಮೊದಲಾದುವನ್ನು) ಚೆಲ್ಲುವಿಕೆ ; ಸೂಸುವಿಕೆ : ಚತುಃಕೋಣ ಕಳಶಂಗಳನಿಟ್ಟು ಪುಷ್ಪಾಕ್ಷತವಿಕ್ಷೇಪಣಂಗೆಯ್ದು (ಆದಿಪು. ೪-೫೦ ವ). [ಸಂ.]

ವಿಕ್ಷೇಪಣಿ (ನಾ). [ಜೈನ] ಆಕ್ಷೇಪಿಣಿ, ವಿಕ್ಷೇಪಣಿ, ಸಂವೇದನಿ ಮತ್ತು ನಿರ್ವೇದನಿ ಎಂಬ ನಾಲ್ಕು ಬಗೆಯ ಧರ್ಮಕಥೆಗಳಲ್ಲಿ ಒಂದು ; ಮಿಥ್ಯಾವಾದವನ್ನು ಖಂಡನೆಮಾಡುವ ಕಾಲದಲ್ಲಿ ಹೇಳುವ ಕಥೆ : ನಿಜಮತನಿರೂಪಣದೊಳ್ಪರಮತದೂಷಣಂಗೆಯ್ವುದು ಮೇಣ್ ಪರಮತಕಥನದೊಳ್ ನಿಜಮತಪ್ರಕಾಶನಂಗೆಯ್ವುದು ವಿಕ್ಷೇಪಣಿಯೆಂಬುದು (ಚಾವುಂಪು. ೩೮೦).

[< ಸಂ. ವಿಕ್ಷೇಪಿಣೀ]

ವಿಕ್ಷೇಪಶಕ್ತಿ (ನಾ). [ವೇದಾಂತ] ಭ್ರಾಂತಿಯನ್ನು ಹುಟ್ಟಿಸುವ ಶಕ್ತಿ ; ಮಾಯೆ : ಆವರಣ ವಿಕ್ಷೇಪಶಕ್ತಿಗಳಾವರಿಸೆ ಪರವಸ್ತುವನು ಜಗಜೀವರೂಪಾಗಿಹುದು ಸ್ವಾಪ್ನಪದಾರ್ಥದಂದದಲಿ (ಅಮೃತ. ೫-೫೭) ; ಅವಿದ್ಯೆಗೆ ಆವರಣಶಕ್ತಿ, ವಿಕ್ಷೇಪಶಕ್ತಿ ಎಂದೆರಡು ಸ್ವಭಾವಗಳು ಇರುವುವು. ಆವರಣಶಕ್ತಿಯಿಂದ ವಸ್ತುಸ್ವರೂಪವು ಮುಚ್ಚಲ್ಪಡುವುದು. ವಿಕ್ಷೇಪಶಕ್ತಿಯಿಂದ ವಸ್ತು ವಿಚಿತ್ರವಾಗಿ ಕಾಣುವುದು (ಹಿಂದುಸಾ. ೨೧೩).

[ಸಂ.]

ವಿಕ್ಷೋಭ (ನಾ). ೧. ಚಂಚಲತೆ ; ಅಸ್ಥಿರತೆ ; ಹೊಯ್ದಾಟ. ೨. ಮನಸ್ಸಿನ ಉದ್ವಿಗ್ನತೆ ; ವ್ಯಗ್ರತೆ. ೩. ಘರ್ಷಣೆ ; ತಿಕ್ಕಾಟ : ತಂತುಗಳ ಕಂಪನ-ವಿಕ್ಷೋಭದಿಂದ ತಂತುಕಂಪನ ಮಾತ್ರವೇರ್ಪಡುತ್ತದೆ (ಜೀವಾತ್ಮ. ೧೧೧). ೪. ಆನೆಯ ವಕ್ಷಭಾಗದ ಪಾರ್ಶ್ವ : ಆ ದಿವಿಜಗಜಂ . . . ಪೀನೋಪಚಿತಮಾಂಸ ವಿಕ್ಷೋಭನುಮಜಕುಕ್ಷಿಯುಂ . . . ಎನಿಸಿ (ಆದಿಪು. ೪-೨೦ ವ). [ಸಂ.]

ವಿಕ್ಷೋಭಿತ (ಗು). ಕ್ಷೋಭೆಗೊಂಡ ; ಹೊಯ್ದಾಡುವ : ಚಿರವಿಕ್ಷೋಭಿತ ಸಿಂಧುತೋಯಶಿಶಿರಂ . . . ಚಕ್ರಿಯನಾಱಿಸಿತ್ತು ವಿಜಯಾರ್ಧೋಪಾಂತಮಂದಾನಿಳಂ (ಆದಿಪು. ೧೩-೯) ; ತಿಮಿವಿಕ್ಷೋಭಿತದೀರ್ಘಿಕಾಂಬು ಕುದಿವಂತಾಯ್ತುಷ್ಣದಿಂ (ಶಾಂತಿಪು. ೮-೯). [ಸಂ.]

ವಿಖಂಡ (ನಾ). ಭಾಗ ; ವಿಭಾಗ ; ಖಂಡ : ನವನವವ್ಯೂಹಂಗಳಬುಜೋದ್ಭವನ ಪಾಳಿ ವಿಖಂಡನವರಸ ನವವಿಧಗ್ರಹನಾಟಕಂಗಳ ಲಕ್ಷಣವನಱಿದು . . . ನವರಸವನಾರೈದು ನಡೆವುದು (ಕುವ್ಯಾಉ. ೪-೩೭). [ಸಂ.]

ವಿಖ್ಯಾತ (ಗು). ೧. ಹೆಸರುವಾಸಿಯಾದ ; ಖ್ಯಾತವಾದ ; ಪ್ರಸಿದ್ಧವಾದ : ಪರಮಸುಖಪದಶ್ರೀಧರ್ಮಕಾಮಾರ್ಥಮೋಕ್ಷಸ್ಥಿರವಿಷಯ ವಿಶೇಷಾಖ್ಯಾನ ವಿಖ್ಯಾತತತ್ತ್ವಂ (ಕವಿರಾ. ೩-೨೧೦); ಆತಂಗಮಾಕೆಗಂ ವಿಖ್ಯಾತಯಶಂ ಪುಟ್ಟಿದಂ

(ಶಮದ. ೧೧೩ ಪ್ರಯೋ). ೨. ಹೆಸರಿಸಿದ ; ಕರೆದ. (ನಾ). ೩. ಪ್ರಸಿದ್ಧಿ ; ಖ್ಯಾತಿ : ವಿಖ್ಯಾತದಿಂ ಸರಸಿ ಕಾಸಾರ ಕೊಳನು (ಮಂಗರಾ. ೩-೧೯). ೪. ಹೆಸರಾದವನು ; ಪ್ರಸಿದ್ಧನಾದವನು : ಧಾತ್ರೀತನಯಂ . . . ಚಾಪಾನಿಮೇಷಸ್ಸನಾಗಿರ ವಿಖ್ಯಾತನನೇಕಶತ್ರುಸಚಿವರಂ ಸ್ವಲ್ಪಾತ್ಮಜಂ ಶೂರಂ (ಜಾತತಿ. ೧೭-೨೦) ; ಎನ್ನ ಭಂಡಾರಕ್ಕೆ ಬರೆಯಿಸುವೆನೀತನಂ ಉನ್ನತಜ್ಞಾನಯುತ ಗಣಕವಿಖ್ಯಾತನಂ (ಬಸರ. ೫-೧೦೨). [ಸಂ.]

**ವಿಖ್ಯಾತದಾನ** (ನಾ). ೧. ಶ್ರೇಷ್ಠವಾದ ದಾನ. ೨. ಪ್ರಸಿದ್ಧನಾದ ದಾನಿ ; ಉತ್ತಮದಾನಿಯೆಂದು ಪ್ರಸಿದ್ಧನಾದವನು : ಆ ಮೂರ್ಧಾಭಿಷಿಕ್ತಮುಖ್ಯಂ ವಿಖ್ಯಾತದಾನನಾಗಿಯುಮಮದವೃತ್ತಿವರ್ತನನುಂ . . . ಎನಿಪಂ (ಚಂದ್ರಪ್ರ. ೨-೮). [ಸಂ.]

**ವಿಖ್ಯಾತಿ** (ನಾ). ಹೆಸರುವಾಸಿ ; ಪ್ರಖ್ಯಾತಿ ; ಪ್ರಸಿದ್ಧಿ : ವಿಖ್ಯಾತಿ ಕಳೆ ಸೌಭಾಗ್ಯ . . . ದಾಕ್ಷಿಣ್ಯಮೆಂಬಿವು ಮಹಾತಿಶಯಮನೆ ಪೆರ್ಚಿದುವು ಯುಧಿಷ್ಠಿರನರೇಶ್ವರನಾಳ್ವ ಭೂತಳದೊಳ್ (ಜೈಮಿಭಾ. ೨-೬). [ಸಂ.]

**ವಿಖ್ಯಾತಿವೆಱು** (ಕ್ರಿ). ಹೆಸರನ್ನು ಹೊಂದು ; ಪ್ರಸಿದ್ಧಿಯನ್ನು ಪಡೆ : ಸನ್ಮುನಿವಲ್ಲಭರ ಜನ್ಮಂಗಳೆಲ್ಲವಿವು ಘನಶಿವಾರ್ಚನೆಯಿಂದ ಪಾವನವೆನಿಸಿ ವಿಖ್ಯಾತಿವೆತ್ತರು (ಬಸಪು. ೫೭-೭೩). [ವಿಖ್ಯಾತಿ + ವೆಱು$_1$]

**ವಿಗಡ** (ಗು). ೧. ಉಗ್ರವಾದ ; ಭೀಕರವಾದ ; ಭಯಂಕರವಾದ : ವಿಗಡತಪವನು ಮಾಡತೊಡಗಿದನಸುರಕರ್ಮದಲಿ (ಸಂಭಪ. ೮-೩) ; ಕಾಲುಗೊಲೆಯಲಿ ವಿಗಡಕರಿ ತುಳಿದಾಡಿತಿಱಿದಿದಿರಾದ ಪಟುಭಟರ (ಕುವ್ಯಾದ್ರೋ. ೩-೧೬). ೨. ಮಿಗಿಲಾದ ; ಘನವಾದ : ವಿಗಡಭಕ್ತನು . . . ನೆಗಳುವಂ ತಿರ್ಮಾನರಿಶನು ಭೂತಳಾಗ್ರದೊಳು (ಬಸಪು. ೪೯-೪೨). ೩. ಬಲವುಳ್ಳ ; ಸಮರ್ಥವಾದ ; ಪರಾಕ್ರಮಿಯಾದ : ಕರಿಘಟೆಗಳ್ನೂಱು ರಥ ಸಾವಿರದ ಮೂನೂಱೆರಡುಸಾವಿರ ತುರಗದಳವೆಂಬತ್ತುಸಾವಿರ ವಿಗಡ ಪಾಯದಳ ತೆರಳಿ ತಂತಕಪುರಿಗೆ (ಕುವ್ಯಾಗ. ೧-೩೯) ; ದಾಡೆ ದಡಿಗಳ ವಿಗಡದೂತರು ನೆರೆದುದಮಮ (ಅಂಬಿರಾ. ೫-೧೪). ೪. ಆರ್ತವಾದ ; ವ್ಯಾಕುಲಗೊಂಡ ; ಕಳವಳ ಹೊಂದಿದ: ವಿಗಡಜೀವಿಗಳ ದುಷ್ಕರ್ಮಲೇಪವ ಹಱಿವ ಬಗೆಗಾವುದತ್ಯಧಿಕ (ಲಶಿಟಂ. ೪೧-೨). (ನಾ). ೫. ಶೌರ್ಯ ; ಪರಾಕ್ರಮ ; ಸಾಮರ್ಥ್ಯ : ಪರಶುರಾಮನ ವಿಗಡವನು ನೆಱೆಯಱಿಯದಲ್ಲಿಗೆ ಸೊಗಸಿ ಮುತ್ತಲು ಮೇಘವನಿಲನ ಕಾದಿದಂತಾಯ್ತು (ಸಂಭಪ. ೩೬-೯೦). ೬. ವ್ಯತಿರಿಕ್ತತೆ ; ವಿರೋಧ : ಆರು ಯಿದಕ್ಕೆ ವಿಗಡ ಆಚರಿಸಿದರು ಅವರು ತನ್ನ ತಾಯಿಗಳ ವಾರಣಾಸಿಯಲಿ ಕೊನ್ನ ಪಾಪಕೆ ಹೋಹರು (ಎಕ.IX, ದೊಡ್ಡಬ. ೫-೨೪ ; 1586). ೭. ಬಾಧೆ; ಕೋಟಲೆ : ಹಗೆಯನುರಗನ ಜಾರವನಿತೆಯನಗಡುಮಕ್ಕಳ . . . ಸೋಱುತಿಹ ಮಾಳಿಗೆಯ ನಂಬಿದ ಮೂಢನಿಕರಕೆ ವಿಗಡ ತಪ್ಪದು ಕೆಲವು ದಿನಕೆ (ಅಕ್ರೂಚ. ೨-೧೭). ೮. ಅತಿಶಯ ; ಆಧಿಕ್ಯ : ನೆಗೆವ ತಾರಾಕದಂಬಂ ಮೌಕ್ತಿಕಾಭರಣ ವಿಗಡದಿಂ ಬರ್ಪ ಕತ್ತಲೆದುಱುಂಬಿಂ ನಾರಿಯೆನೆ ಸಂಜೆ ಕಣ್ಗೆಸೆದುದು (ವಿಕೋಪು. ೭-೮೫). ೯. ವೀರ ; ಶೂರ; ಪರಾಕ್ರಮಿ: ಹಗಲುಕೈದೀವಿಗೆಯ ಬಿರುದಿನವಿಗಡನಿವನಾರೆನಲು . . . ಕೌರವರಾಯನೈತಂದ (ಕುವ್ಯಾಅ. ೭-೨೬). ೧೦. ಉದ್ಧಟ; ದುಡುಕಿನ ಸ್ವಭಾವದವನು : ವಿಗಡನೀ ಕಲಿಭೀಮನೀ ಕೈದುಗಳನೀತಂಗೀಯದಿರಿ . . . ಎಂದು ಸುರಂಗೆ ನುಡಿದನವನೀಶ (ಕುವ್ಯಾವಿ. ೧-೧೩). ೧೧. ದುರುಳನಾದವನು; ದುಷ್ಟ : ಸುಗುಣರ ಮನ್ನಿಸಿ ವಿಗಡರ ಮಗ್ಗಿಸಿ ಬಗೆಗೊಳಿ ಧರ್ಮವ (ಗೀತಗೋ. ೪೩-೩). [< ಸಂ. ವಿಕಟ]

**ವಿಗಡತನ** (ನಾ). ೧. ಪರಾಕ್ರಮ ; ಶೌರ್ಯ : ಯಾವಗಹುದಿದು ಹಿಂದೆ ಬಂದೆಸುವೀ ವಿಗಡತನ ನಿನಗೆ ಮೆಱೆವುದು ಕರ್ಣ (ಕುವ್ಯಾದ್ರೋ. ೬-೩೪). ೨. ದುರುಳತನ ; ದುಷ್ಟತನ : ಅಗಡು ಮಾಡಿದ ನಿಮ್ಮ ಮಕ್ಕಳ ವಿಗಡತನಕಂಜದರೂ ದುರಿತದ ಸೊಗಡಿಗಂಜದರೋ ಪೃಥಾಸುತರು (ಕುವ್ಯಾಸ. ೧೫-೪೭) ; ಜಗದೊಳಗೆ ಇನ್ನೊಂದು ಬಾರಿ ಮಹಪುರುಷರಂ ವಿಗಡತನದಿಂದಲತಿಕ್ರಮಿಸಿ ಕೊಲ್ಲದೊಲುಮ್ಮೀ ಬಗೆಯಱಿತು ಶಿಕ್ಷಿಸೆನ್ನಂ (ತುರಂಗ. ೮೯-೧೧). [ವಿಗಡ + - ತನ]

**ವಿಗಡವಿಕ್ರಮ** (ನಾ). ಮಹಾಶೂರ ; ಬಹಳ ಪರಾಕ್ರಮಿ : ಹಗೆಯನಾದರೆ ಕುಂದೆ ಗುಣದಲಿ ವಿಗಡವಿಕ್ರಮ ವೀರದೈತ್ಯನ ಮಗ ಮಹಾಬಲ ಸಾಕು ಸೈರಿಸಿ (ಕೌಶಿರಾ. ೩೬-೧೯). [ವಿಗಡ + ವಿಕ್ರಮ]

**ವಿಗಡವಿಗ್ರಹ** (ನಾ). ಭೀಕರವಾದ ಕಾಳಗ ; ಉಗ್ರವಾದ ಯುದ್ಧ : ಅಗ್ಗಳೆಯನೆಚ್ಚನು ನರನ ಮೈಯಲಿ ತಳಿತವಂಬುಗಳೇನನೆಂಬೆನು ವಿಗಡವಿಗ್ರಹವ (ಕುವ್ಯಾದ್ರೋ. ೯-೪೫). [ವಿಗಡ + ವಿಗ್ರಹ]

**ವಿಗಡಿಸು** (ಕ್ರಿ). ೧. ಬಾಧೆಪಡಿಸು ; ಕೋಟಲೆಗೊಳಿಸು ; ಭಂಗಪಡಿಸು : ಪಂಚಾಗ್ನಿ ತನ್ನತಿವಿಗಡಿಸಲ್ ತಿಳಿದು ಕಾಮಿನಿಯೆ ನಿನಗೆ ನಾ ಸಿತಗಳನ ಬೇಡಿ ಪತಿಯಂ ಕೊಡಿಪೆನೆಂಬುಮೆಯ ಚರಣಾಂಬುಜಕ್ಕೆ ಶರಣು (ಲಶಿಟಂ. ೧೪-೫೬) ; ರಣವನದನೇನೆಂಬೆನ್ನೆ ಧಾರುಣಿಪತಿಯ ವಿಗ್ರಹದ ವಿಸ್ತಾರಣ ನಿರ್ಗುರ್ಗಣೆ ವಿಗಡಿಸಿತು ವಿಬುಧರ ವಿಡಾಯಿಗಳ (ಕುವ್ಯಾಅ. ೧೨-೨೩). ೨. ಅಸ್ಥಿರವಾಗು ; ಕ್ಷೋಭೆಗೆ ಒಳಗಾಗು : ಪ್ರಳಯಾರ್ಣವದೊಳೆಯ್ದೆ ಜಗವಳಿದು ಕೆಳಗಿಳಿಯೆ ಕೂರ್ಮರೂಪಂ ಧರಿಸಿ ವಿಗಡಿಸಿದಜಾಂಡಮಂ ನಾವೆಯಂದದೆ ನೀನು ಶಿವನಾಜ್ಞೆಯಿಂದ ನಿಲಿಸಿ ಸೊಗಸನಿತ್ತೀ ಧರೆಗೆ ರಕ್ಷಕನೆನಿಸಿಕೊಂಡು ಬಗೆಯದೆ ಧರಾತಳವ ಕೊಲುವುದುಚಿತವೆ ಪೇಳು (ಲಶಿಟಂ. ೧೯-೧೩) ; ಮಗಳ ಮನ ವಿಗಡಿಸಿತು ನಾಲ್ವರು ಬೆಗಡುಗೊಳಿಸಿದರು (ನಳಚ. ೩-೭೫). ೩. ವಿರೋಧಿಸು ; ಪ್ರತಿಭಟಿಸು : ಮಹಾತ್ಮನನಂತರೂಪವನು ವಿಗಡಿಸಲು ಜಯವಹುದೆ (ಕುವ್ಯಾಭೀ. ೧-೨೧). 'ಬಿಗಡಿಸು' ಹೋ.

[ವಿಗಡ + - ಇಸು$_1$]

**ವಿಗಡೆ** (ನಾ). ೧. ಸಾಮರ್ಥ್ಯವುಳ್ಳವಳು ; ಬಲಿಷ್ಠೆ : ಬಗೆಬಗೆಯ ಕೈದುಗಳ ವಿಗಡೆಯರ್ ಕಾಳೆಗಕೆ ಮುಂಕೊಳುತಿರ್ದರು (ಜೈಮಿಭಾ. ೧೬-೪). ೨. ದುರುಳೆ ; ದುಷ್ಟೆ : ನೀವು ಮೂನ್ನರು ನಿಮ್ಮ ದಾಸಿ ಮಹಾವಿಗಡೆ (ಬಸಪು. ೫೫-೩೬) ; ಬಡಮನವಿಲ್ಲದೆ ಸಡಗರದೊಳಗಿಹ ವಿಗಡೆಯಾದರೆ ಇನ್ನ ನೆನೆಯೆ (ಕಪೂಆ. ೧೩-೪೬).

[ವಿಗಡ + - ಎ$_2$]

**ವಿಗತ** (ಗು). ೧. ಹೊರಟುಹೋದ ; ತೆರಳಿದ. ೨. ಅದೃಶ್ಯವಾದ ; ಇಲ್ಲವಾದ. ೩. ಅಗಲಿದ ; ಬೇರ್ಪಟ್ಟ. ೪. ಸತ್ತ ; ಮರಣಹೊಂದಿದ. ೫. ಇಲ್ಲದಿರುವ ; ರಹಿತವಾದ. ೬. ಕಳೆದುಹೋದ ; ನಷ್ಟವಾದ. (ನಾ). ೭. ಪಕ್ಷಿಗಳ ಹಾರಾಟ. [ಸಂ.]

**ವಿಗತಕೃಪ** (ನಾ). ಕರುಣೆಯಿಲ್ಲದವನು ; ನಿರ್ದಯನಾದವನು : ಇದಱೊಳಗಾನಿವನನಿಕ್ಕಿ ಕೋಪಮನಾಱಿಪ್ಪುದೆ ಪಂಥಮೆಂದು ಬಂದಂ ತದಗ್ರದೇಶಕ್ಕೆ ಕೋಣಾಪಂ ವಿಗತಕೃಪಂ (ಚಂದ್ರಪ್ರ. ೫-೪೨). [ಸಂ.]

**ವಿಗತಜೀವಿತ** (ನಾ). ಜೀವ ಹೋದವನು ; ಸತ್ತವನು : ರೌದ್ರಪರಿಣಾಮದಿಂ ವಿಗತಜೀವಿತನಾಗಿ (ಶಾಂತಿಪು. ೭-೬೦ ವ) ; ಕ್ರೂರತರವಿಷವಿಭೇದ್ಯಂ ಧಾರಿಣಿಯೊಳ್ ಬಿರ್ದು ವಿಗತಜೀವಿತನಾದಂ (ಪಂಚತಂ. ೨೭೯-೧೬). [ಸಂ.]

**ವಿಗತನಿದ್ರೆ** (ನಾ). ನಿದ್ದೆಯಿಂದ ಎದ್ದವಳು ; ಎಚ್ಚರಾದವಳು : ಮುನಿಕುಮಾರರೋದುವ ವೇದನಿನಾದದಿಂ ವಿಗತನಿದ್ರೆಯಾಗಿ ಪಾಂಡುರಾಜಂಗಮಲ್ಲಿಯ ಮುನಿಜನಂಗಳ್ಗವಱಿಪಿದೊಡವರಾ ಕನಸುಗಳ್ಗೆ ಸಂತೋಷಂಬಟ್ಟು (ಪಂಪಭಾ. ೧-೧೧೦ ವ). [ಸಂ. ವಿಗತನಿದ್ರಾ]

**ವಿಗತನಿಮೇಷ** (ನಾ). ಎವೆ ಬಡಿಯದವನು ; ಕಣ್ಣು ತೆರೆದುಕೊಂಡೇ ಇರುವವನು : ಉತ್ಸೃಷ್ಟಸಕಲವ್ಯಾಪಾರನುಂ ವಿಗತನಿಮೇಷನುಮೆನಿಸಿ ಬರೆದ ನಂತೆಯುಂ ಕಂಡರಿಸಿದನಂತೆಯುಂ . . . ಇರ್ದಂ (ಕಾದಂಪೂ. ೬೨೮). [ಸಂ.]

**ವಿಗತಪಾಪ** (ನಾ). ಪಾಪವಿಲ್ಲದವನು ; ಪಾಪರಹಿತನಾದವನು ; ಪರಮಾತ್ಮ : ಜಯ ಜಯ ಪರಮೇಶ್ವರ ಪರಮದೇವ . . . ಸರ್ವಜ್ಞ ಸರ್ವಹಿತ ವಿಗತಪಾಪ (ವರ್ಧಮಾ. ೧೪-೬). [ಸಂ.]

**ವಿಗತಮರಣ** (ನಾ). ಸಾವಿಲ್ಲದವನು ; ಅಮರ ; ದೇವತೆ : ಜಯಜಯ ಶಾಂತಿಕಿರಣ ಜಯಜಯ ವಿಗತಮರಣ ಜಯಜಯ ದುರಿತಹರಣ ಜಯ ಜಯತು ಜಯತು (ಹಚಕಾ. ೫-೬೯). [ಸಂ.]

**ವಿಗತಮಳ** (ನಾ). ದೋಷವಿಲ್ಲದುದು ; ನಿರ್ಮಲವಾದುದು : ವಿಗತಮಳಮುಪಾತ್ತಾರಾತಿ [ಸಾ] ರ್ಥಾರ್ಥವೀರಂ . . . ಸಾಗರಂಬೋಲ್ ಸೊಗಯಿಸಿ ಧರಣಿ[ಚಕ್ರಾಂಬ]ರಾಕ್ರಾಂತಮಕ್ಕುಂ (ಕವಿರಾ. ೩-೨೧೬). [ಸಂ. ವಿಗತಮಲ]

**ವಿಗತರೋಷ** (ನಾ). ಕೋಪವಿಲ್ಲದವನು : ಉದ್ಧೂತದೋಷರಂ ವಿಗತರೋಷರಂ . . . ಮಲಧಾರಿದೇವರಂ ದೇವರೆಂದು ಬಣ್ಣಿಪುದು ಜಗಂ (ಸುಕುಮಾ. ೧-೨೦). [ಸಂ.]

**ವಿಗತವಿಕಾರ** (ಗು). ೧. ಯಾವ ಬದಲಾವಣೆಯನ್ನೂ ಹೊಂದದ; ನಿರಂತರವಾಗಿ ಇದ್ದ ರೂಪದಲ್ಲಿಯೆ ಇರುವ : ವಿಗತವಿಕಾರಾಕಾರಂ ಸೊಗಯಿಸುಗುಂ ನಿನ್ನ ರೂಪು ಶಾಂತಾಧಾರಂ (ಕವಿರಾ. ೩-೧೯೭). (ನಾ). ೨. ಯಾವ ವಿಕಾರವನ್ನೂ ಹೊಂದದವನು ; ಸ್ಥಿರಸ್ವಭಾವದವನು : ವಿಗತವಿಕಾರ ನಚಲಗಮ್ಮನದ್ವಯನಾತ್ಮ ನೋಡು (ಕುಮಾ.ಭೀ. ೩-೪೩). [ಸಂ.]

**ವಿಗತಾಂತರಾಯ** (ನಾ). ವಿಘ್ನಗಳನ್ನು ನಿವಾರಿಸಿಕೊಂಡವನು ; ನಿರಾತಂಕನಾದವನು : ಉಗ್ರಸೇನಂ ಸಯಾದವಬೃಂದಂ ವಿಗತಾಂತರಾಯನೆಸೆದಂ (ವಿಮ್ಲಪು. ೫-೫-೧೩೫). [ಸಂ.]

**ವಿಗತಾಭರಣ** (ನಾ). ಆಭರಣಗಳನ್ನು ಕಳಚಿರುವಿಕೆ ; ನಿರಾಭರಣನಾಗಿರುವಿಕೆ : ಜಾತರೂಪಮಂಜುಳನೆಸೆದಂ . . . ವಿಗತಾಭರಣಪ್ರಭನಾಗಿ ನಿಶ್ಚಳಂ (ಪುಷ್ಪಪು. ೧೩-೧೦೮). [ಸಂ.]

**ವಿಗತಾಭ್ಯುದಯ** (ನಾ). ಏಳಿಗೆಯಿಲ್ಲದವನು ; ಅಭ್ಯುದಯಹೀನ : ಸುಯೋಧನನೃಪತಿ ವಿಗತಾಭ್ಯುದಯನಾದನೆನುತ್ತ ಕರ್ಣಾದಿಗಳು ಕಳವಳಿಸೆ (ಕುಮ್ಮಾದ್ರೋ. ೧೧-೪೦). [ಸಂ.]

**ವಿಗತಾರ್ತವೆ** (ನಾ). ಮುಟ್ಟು ನಿಂತುಹೋದ ಹೆಂಗಸು : "ನಿಷ್ಕಳಾ, ವಿಗತಾರ್ತವಾ – ಹೊಲೆನಿಂತುಹೋದ ಮುದಿಕಿಯಂಥಾವಳ ಹೆಸರುಗಳು" (ಸಿದ್ಧಾಂತಿ. ೧೭೩). [ಸಂ. ವಿಗತಾರ್ತವಾ]

**ವಿಗತಾಸು** (ನಾ). ಜೀವ ಹೋದವನು ; ಸತ್ತವನು : ಲೋಕೋನ್ನತನಪ್ಪ ದಿವ್ಯಪುರುಷಂ ವಿಗತಾಸುವನೊಯ್ಯನಟ್ಟಜಿಂ ನಿನ್ನುಮಂ (ಕಾದಂಪೂ. ೯೪೭) ; ವಿಜಿತನೋ ವಿಗತಾಸುವೋ ಧರ್ಮಜನ ಹದನೇನೆನುತ ಚಿಂತಾರಜನಿಯಲಿ ಕಂಗೆಟ್ಟುದಾ ಬಲ (ಕುಮ್ಮಾಶ. ೩-೪೭). [ಸಂ.]

**ವಿಗತಾಹಾರತ್ವ** (ನಾ). [ಜೈನ] ಆಹಾರಸೇವನೆ ಮಾಡದಿರುವಿಕೆ ; ನಿರಾಹಾರದಿಂದಿರುವುದು ; II$^P$ ಕೇವಲಜ್ಞಾನ ಉತ್ಪತ್ತಿಯಾದಾಗ ಉಂಟಾಗುವ ಹತ್ತು ಅತಿಶಯಗಳಲ್ಲಿ ಒಂದು : ಗಗನಗಮನಮುಂ ಉಪಸರ್ಗಾಭಾವಮುಂ ವಿಗತಾಹಾರತ್ವಮುಂ . . . ಅನಂತದರ್ಶನತ್ವಮುಮೆಂಬ ಘಾತಿಕ್ಷಯಮಪ್ಪ ದಶಗುಣಂಗಳುಂ (ಚಾವುಂಪು. ೮೨). [ಸಂ.]

**ವಿಗಲಿತ, ವಿಗಳಿತ** (ಗು). ೧. ಜಿನುಗಿದ ; ಸೋರಿದ. ೨. ಕಳಚಿದ ; ಉದುರಿದ. ೩. ಕರಗಿದ ; ಅದೃಶ್ಯವಾದ. ೪. ಹೊರಟುಹೋದ ; ಕಳೆದುಹೋದ. ೫. ಚೆದರಿದ ; ಹರಡಿದ. ೬. ಸಡಿಲವಾದ ; ಶಿಥಿಲವಾದ. ೭. (ಕೂದಲಿನಂತೆ) ಬಿಚ್ಚಿದ ; ಅಸ್ತವ್ಯಸ್ತವಾದ. ೮. ಹೊಮ್ಮಿದ ; ಸೂಸಿದ : ತದೀಯ ಮುನೀಶ್ವರಮುಖಕಮಲವಿಗಲಿತಮೃದುಮಧುರ ಗಂಭೀರಧ್ವನಿಯನಾಲಿಸಿ . . . ಜಾತಿಸ್ಮರನಾಗಿ (ಸುಕುಮಾ. ೧೧-೭೭ ವ). ವಿಗಳಿತ : ೫. ಘನಗಾಂಡೀವವಿಗಳಿತ ವಿಶಿಖವಿಸರದ ವಹಿಗೆ ವಂಚಿಸದೆ ಲಾವಣಿಗೆಗೊಳಲಲಸಿ ಯಮನನು ಜೀವಿಗಳು ಜಡರಾಯ್ತು (ಕುಮ್ಮಾಕ.೧೪-೨೮). ೮. ಕತೆಗೇಳ್ವನಪ್ಪ ವಿಗಳಿತ ಕಮಲಲೋಚನಂ (ಶ್ರೀರಾಮಾ. ೧೬೯-೪೭೭). ೯. ಜಾರಿದ ; ಸರಿದ : ವಿಗತಾ ಲೋಕಂ ಶಿವಪದವಿಗಳಿತಮೆನಿಸಿದ ಜನಕ್ಕೆ . . . ನೀನಾದೆ ನಾಥ ಕಣ್ಣುಂ ಗತಿಯುಂ (ಚಂದ್ರಪ್ರ. ೩-೬). [ಸಂ.]

**ವಿಗಳನ** (ನಾ). ರಸವು ಒಸರುವಿಕೆ ; ರಸಸ್ರಾವ : ಗಿಡುವಿನ ವಿಗಳನದಿಂದೊಕ್ಕುಡುಗದ ಸರಸೀಸರಿತ್ಸರ[ಪ್ರ]ಸರಂ ಕಾಲ್ಪಿಡಿದು ಪರಿತಂದು ನೆರೆವುದು ಬಿಡದೆ ವನಾಂತರದೊಳೆಸೆವ ನವವಿಟಪಿಗಳೊಳ್ (ವರ್ಧಮಾ. ೧-೪೨). [ಸಂ. ವಿಗಲನ]

**ವಿಗಳಿತ** 'ವಿಗಲಿತ' ನೋ.

**ವಿಗಳಿತಮಾಯ** (ನಾ). ಮಾಯೆಯನ್ನು ಮೀರಿದವನು ; ಮಾಯಾತೀತ ; ನಿರ್ಮಾಯ : ಶರಣಸಮೇತಂ ವಿಗಳಿತಮಾಯಂ . . . ಶ್ರೀಕಂಠಂ ನಗಮಂ ಸಾರ್ದಂ ಸೊಗಸಿಂದಿರ್ದಂ (ಹಾಲಾಸ್ಯ. ೧-೧-೨೧ ರಗಳೆ). [ಸಂ. ವಿಗಲಿತಮಾಯ]

**ವಿಗಳಿತಶೋಕ** (ನಾ). ದುಃಖವನ್ನು ಕಳೆದುಕೊಂಡ ವ್ಯಕ್ತಿ ; ಸಾಂತ್ವನ ಹೊಂದಿದ ವ್ಯಕ್ತಿ : ನೀವಸ್ತೋಕಪುಣ್ಯರ ತಿಳುಹಿ ವಿಗಳಿತಶೋಕರೆನಿಸುವುದಂಧನೃಪ ಗಾಂಧಾರಿದೇವಿಯರ (ಕುಮ್ಮಾಗ. ೧೦-೧೧). [ಸಂ. ವಿಗಲಿತಶೋಕ]

**ವಿಗಟಿಗೆ** 'ವಿಘಟಿಗೆ' ನೋ.

**ವಿಗಾನ** (ನಾ). ೧. ಅಬದ್ಧವಾದ ಗಾಯನ ; ಅಪಶ್ರುತಿಯ ಹಾಡುಗಾರಿಕೆ. ೨. ಬೈಗುಳು ; ನಿಂದೆ : "ವಿಗಾನಂ, ವಚನೀಯತಾ – ೨ ರಚ್ಚೆವಾತ್" (ಹಲಾಯು. ೨೪-೧೪೭). ೩. ವಿರುದ್ಧವಾದ ಹೇಳಿಕೆ ; ದೋಷಪೂರ್ಣವಾದ ಮಾತು : ಪ್ರತಿಯೊಂದು ಉಪನಿಷತ್ತಿನಲ್ಲಿಯೂ ಸೃಷ್ಟಿಸಲ್ಪಡುವ ಆಕಾಶವಾದಿಗಳ ವಿಷಯದಲ್ಲಿ ಕ್ರಮವೇ ಮುಂತಾದ್ವರ ವಿಗಾನವಿದ್ದರೂ ಸ್ರಷ್ಟುವಿನ ವಿಷಯದಲ್ಲಿ ಯಾವ ವಿಗಾನವೂ ಇಲ್ಲ (ಬ್ರಹ್ಮಭಾ. ೬೦೭). [ಸಂ.]

**ವಿಗುಣ** (ಗು). ಗುಣವಿಲ್ಲದ ; ಗುಣಶೂನ್ಯವಾದ : ಸುಗುಣೈಕಪಕ್ಷರಾದವಿಳಸಜ್ಜನರೆನ್ನ ವಿಗುಣಕಾವ್ಯದೊಳಿರ್ಪ ದೋಷಂಗಳಂ ತಿದ್ದಿ (ವರ್ಷವ. ೧-೮). [ಸಂ.]

**ವಿಗುನ** (ನಾ). ಅಶುಭ ; ವಿಘ್ನ : ಮಾಯದ ಕೈಯಲ್ಲಿ ಓಲೆ ಕಂಠವ ಕೊಟ್ಟರೆ ಲಗುನ ವಿಗುನವ ಬರೆಯಿತ್ತು ನೋಡಾ (ಅವಚಂ. ೯-೩೭). [< ಸಂ. ವಿಘ್ನ]

**ವಿಗುರ್ಬಣೆ$_1$** 'ವಿಗುರ್ವಣೆ$_1$' ನೋ.

**ವಿಗುರ್ಬಣೆ$_2$** 'ವಿಗರ್ವಣೆ$_2$' ನೋ.

**ವಿಗುರ್ಬಿಸು** 'ವಿಗುರ್ವಿಸು$_1$' ನೋ.

**ವಿಗುರ್ವಣಶಕ್ತಿ** (ನಾ). ಮಾಯಾಶಕ್ತಿ ; ರೂಪಪರಾವರ್ತನ ಶಕ್ತಿ : ವಿಗುರ್ವಣಶಕ್ತಿಯವೋಲ್ ಅವಧಿಯಿಂ ಸೌಧರ್ಮೈಶಾನಕಲ್ಪದ್ವಯಜಾತದೇವರ್ ಸ್ವಕೀಯಧ್ವಜದಂಡಮಾದಿಯಾಗಿ ರತ್ನಪ್ರಭಾವನ್ನಧಸ್ತನಭಾಗಂಬರಂ ಕಾಣ್ಬರ್ (ತತ್ತ್ವಪ್ರ. ೨೧೭). [< ಸಂ. ವಿಕುರ್ವಾಣಶಕ್ತಿ]

**ವಿಗುರ್ವಣೆ$_1$, ವಿಗುರ್ಬಣೆ$_1$** (ನಾ). ೧. ಭೀಕರತೆ ; ರೌದ್ರತೆ : ಮೇಘಕಾಲದ ವಿಗುರ್ವಣೆಯಂ ಪಡೆದಂ ವಿಯಚ್ಚರಂ (ಪುಣ್ಯಾಸ್ರ. ೨-೩೮). ೨. ರಭಸ ; ವೇಗ : ಪದಹತಿಯಿಂ ನೆಲಂನ್ನಡುಗೆ . . . ಕರಾಭಿಘಾತದ ವಿಗುರ್ವ್ವಣೆಯಿ[ಂ] ಭಗಣಂ ಧರಾತಳಕ್ಕುದಿರೆ (ಸೌಇಇ. XI-i, ೧೦೩-೨; 1070). ವಿಗುರ್ಬಣೆ$_1$ : ೧. ಆವ ಯುಗದಲಿ ಕಂಡುದಿಲ್ಲಿಂತೀ ವಿಗುರ್ಬ[ಪಾಠಾಂ. ಗುರ್ವ, ದುರ್ವ, ಗೂರ್ಬ]ಣೆಯನು ಮಹಾಹವ ಕೋವಿದರೊಳು (ತೊರರಾ. ೬-೪೦-೩೧). ೩. ಭಯಗೊಳಿಸುವಿಕೆ ; ಹೆದರಿಸುವಿಕೆ : ಅಂಜಲದೇಕೋ ಲೋಕವಿಗುರ್ಬಣೆಗೆ (ಬಸವ. ೬೮೯). ೪. ತೊಂದರೆ ; ಕ್ಲೇಶ : ಎನ್ನವನೆ ಸರ್ವಾಂಗಸೌಂದರ ನಿನ್ನ ಕಣ್ಣೆಂಗಹ ವಿಗುರ್ಬಣೆ [ಪಾಠಾಂ. ವಿಗುರ್ಬಿಗ]ಗೆಂತು ಸೈರಿಸುವೆ (ಬಸಪು. ೧೮-೬೭). [ವಿಗುರ್ವಿಸು$_1$ + - ಅಣೆ$_4$]

**ವಿಗುರ್ವಣೆ$_2$, ವಿಗುರ್ಬಣೆ$_2$** (ನಾ). ರೂಪಪರಾವರ್ತನಶಕ್ತಿ ; ರೂಪಾಂತರಗೊಳಿಸುವ ಮಾಯಾಶಕ್ತಿ : ನಯನಮನೋಹರಂ ಮನುಜನಿರ್ಮಿತಮಲ್ಲದು . . . ಭೋಗಭೂಮಿಯ ಭವನಾಂಗಭೂಜದ ವಿಗುರ್ವಣೆ ಸಂಶಯಮೇಪುದು (ಮಲ್ಲಿಪು. ೨-೭೫) ; ಹಗಲು ಕತ್ತಲೆ ಕವಿದಂತಾಯ್ತು ದುಷ್ಟದೈವಗಳ ವಿಗುರ್ವಣೆಯಿಂದ (ಭರತ. ೩೪-೪೮). ವಿಗುರ್ಬಣೆ$_2$ : ಬಳಿಕ್ಕಿನ ವಿಗುರ್ಬಣೆಗಳೆಂಬುದು ಮುನಿಯ ಗೊಡ್ಡಾಟದಿಂ ನಮಗೆ ಬಪ್ಪ ಕಿಜಿದಲ್ಲ ಸಂಕಟವಿದಕ್ಕೆ ಹೆದಜದಿರ್ದಡೆ ಮುಂದೆ ಲೇಸುಂಟು (ಹಚಕಾ. ೬-೫೭). [ವಿಗುರ್ವಿಸು$_2$ + - ಅಣೆ$_4$]

**ವಿಗುರ್ವಿಸು$_1$, ವಿಗುರ್ಬಿಸು** (ಕ್ರಿ). ೧. ಭಯಾನಕವಾಗು ; ಭೀಕರವಾಗು : ಆಗುರ್ವು ಪರ್ವೆ ವಿ[ಪಾಠಾಂ. ಬಿ]ಗುರ್ವಿಸಿದ ಬಿಲ್ಲಳಂ ಕಂಡು ಭಯಂಗೊಂಡು (ಪಂಪರಾಮಾ. ೫-೭೭ ವ) ; ನರ್ತಿಸುವ ಕಬಂಧದಿಂದೊಜೆವ ಲೋಹಿತಧಾರೆಗಳಿಂ ನಭಂ ವಿಗುರ್ವಿಸುವುದು (ಶಾಪಮಂ. ೭೬೫; ಎಕ. VII, ಶಿಕಾ. ೨೪೨ ; 1163ನೋ). ೨. ಬೆದರಿಸು ; ಭಯಗೊಳಿಸು : ಲೋಕಭೀಕರತರಕಾಳಕೂಟದ ವಿಗುರ್ವ್ವಿಷ ಕೂಟವೆನಿಪ್ಪುದಾಂತ ದುರ್ಧ್ಧರರಿಪುಸಂಕುಳಕ್ಕೆ ವಿಭು ಪೇಯಿಯ ಸಾಹಣಿಯಗ್ರವಿಕ್ರಮಂ (ಕೂಲ್ಹಾಶಾ. ೧೬-೧೫ ; 1189) ; ಅದಟ ಸಾಮಂತಸಂದೋಹಮಂ ವಿಗುರ್ವಿಸಿ ಭೇರಿಯಂ ಸೂಳೈಸಿ ನಿಂದರೊಡ್ಡಿ (ಜ್ಞಾನಚಂ. ೧-೮೧). ೩. ಅಧಿಕವಾಗು ; ಅತಿಶಯವಾಗು : ಉರ್ವಿ

ಪರ್ವಿದುದೋರಂತೆ ಕರಂ ವಿಗುರ್ವಿಸಿ ತಮಿಸ್ರಾನೀಕಮಾ ಲೋಕವಂ (ಶಾಂತೀಶ್ವ. ೧೧-೨೦). ೪. ಮೆರೆ ; ಪ್ರದರ್ಶಿಸು : ವೈರಿವರ್ಗದೊಳ್ ದೋರ್ವಲಮಂ ವಿಗುರ್ವಿಸಿ . . . ಪುತ್ರ ನೀಂ ಮುದದೆ ಮಾಡು ಮದೀಯಮನಪ್ರಮೋದಮಂ (ಶಾಂತೀಶ್ವ. ೪-೧೭೪). **ವಿಗುರ್ಬಿಸು** : ೪. ರಾಜ್ಯದೊಳುರ್ಬ್ಬಿಯೊಳ್ ವಿಗುರ್ಬಿಸಿದ ನಿದೇನಗುರ್ಬೊ ನಿಜದೋರ್ಬಳದುನ್ನತಿ ದುರ್ವಿನೀತನಂ (ಎಕ. VIII, ನಗರ. ೩೫-೨೯ ; 1077). ೫. ಉದ್ಧಟನಾಗು ; ಸೊಕ್ಕು : ಕಡುರ್ಬ್ಬಿನಿಂ ವಿಗುರ್ಬ್ಬಿಸುವರ ಮಿಸೆಯಂ ಸುಡುವ ತೇಜದಳುರ್ಕ್ಕೆ (ಎಕ. XI, ದಾವಣ. ೮೫-೨೨; 1143). 'ಬಿಗುರ್₁', 'ಬಿಗುರ್ವು' ಪರಾ. [ವಿಗುರ್ವು₂ + - ಇಸು₃. / ತೆಲು. ವಿಗುರ್ವಿಂಚು]

**ವಿಗುರ್ವಿಸು₂, ವಿಗೂರ್ವಿಸು** (ಕ್ರಿ). ಮಾಯಾಶಕ್ತಿಯಿಂದ ನಿರ್ಮಿಸು ; ವಿಕುರ್ವಾಣಶಕ್ತಿಯಿಂದ ಸೃಷ್ಟಿಸು : ಮನೋಹರನೆಂಬ ಯಕ್ಷಂ . . . ತಣ್ಣಾಳಿಯಂ ವಿಗುರ್ವಿಸಿ ದೇಹಕ್ಕಾಪ್ಯಾಯನಂ ಮಾಡಿ (ವಡ್ಡಾರಾ. ೫೭-೧೨). **ವಿಗೂರ್ವಿಸು** : ವಿಗೂರ್ವಿಸುವ ಶಕ್ತಿಯನೊಡೆಯರುಂ . . . ಪ್ರತ್ಯಕ್ಷಮಾಗಜೀವರು (ಶ್ರಾವಕಾ. ೪೭-೩) ; ಪಲವು ರೂಪುಗಳನೊರ್ಮೊದಲೊಳೆ ವಿಗೂರ್ವಿಸುವುದು ಕಾಮರೂಪಿತ್ವಮೆಂಬುದು (ಶ್ರಾವಕಾ. ೯೮-೧೦). [< ಸಂ. ವಿಕುರ್ವಾಣ + - ಇಸು₃]

**ವಿಗೂರ್ವಿಸು** 'ವಿಗುರ್ವಿಸು₂' ನೋ.

**ವಿಗ್ಗನಲೆ** (ನಾ). ಒಂದು ಊರಿನ ಹೆಸರು : ಕರಡಿಕುಲುಕಿ ಮೇಲ ಕಾರಜೆವಿ ವಿಗ್ಗನಲೆ ಕುನ್ನರ್ಕುಲುಕಿಯ ಮೂಡ್ಕ ಒಟ್ಟೆವಿ (ಎಕ. X (S), ಚಿಕ್ಕಬ.೬೭-೨೧; 850). [?]

**ವಿಗ್ರ** (ಗು). ೧. ಮೂಗಿಲ್ಲದ. (ನಾ). ೨. ಮೂಗಿಲ್ಲದವನು : "ವಿಗ್ರ ಎಂಬುದು ಮೂಗಿಲ್ಲದವಂ" (ಹಲಾಯು. ೧೦೦-೪೫೭). [ಸಂ.]

**ವಿಗ್ರಹ** (ನಾ). ೧. ಹಬ್ಬುಗೆ ; ವಿಸ್ತರಣ ; ವಿಸ್ತಾರ : "ವಿಸ್ತಾರಃ, ವಿಗ್ರಹಃ, ವ್ಯಾಸಃ – ೩ ಕಿರಿದಾಗಿರುವುದನ್ನು ಹಿರಿದಾಗಿ ಮಾಡುವಿಕೆ, ವಿಸ್ತಾರ, ವಿಶಾಲತೆ" (ಸಿದ್ಧಾಂತ. ೩೭೩). ೨. ಆಕಾರ ; ಆಕೃತಿ ; ರೂಪ : ಶ್ರೀಮಹಾಗುರು ಬಲೋದಗ್ರವಿಗ್ರಹಂ . . . ಪ್ರೇಮದಿಂದೆಮಗೆ ಭಕ್ತಿಯನೀಗೆ (ಸ್ವಾರಾ. ೧-೧). ೩. ದೇಹ ; ಶರೀರ : ಹಿಮಶಿಖರಿಶಿಖರಸಮವಿಗ್ರಹಸನಾಥನಂ ಕುಮುದದಳಧವಳರುಚಿರುಚಿರ ವೃಷನಾಥನಂ (ಆದಿಪು. ೭-೨೭ ರಗಳೆ) ; ವಿಗ್ರಹದೊಳಿದಿರಾಂತ ಕರಿಗಳ ವಿಗ್ರಹಂಗಳು ಕೆಡೆಯ ಕಾದಿ ಸಮಗ್ರಬಲ ಜೋದಾಳಿ ಕೊಂಡುದು ಸುರರ ಕೋಟೆಗಳ (ಕುಮಾರ. ೪-೯೦). ೪. ಪ್ರತಿಮೆ ; ಮೂರ್ತಿ : ವಿಗ್ರಹಗಳ ನಿರ್ಮಾಣಕೌಶಲ್ಯವನ್ನಂತೂ ವರ್ಣಿಸಲು ಅಸಾಧ್ಯ (ಮೈಸೂರು. ೬೧) ; ಈ ಶಿಲ್ಪಶಾಸ್ತ್ರಗಳು . . . ವಿಗ್ರಹ ಹೇಗಿದ್ದರೆ ಸುಂದರ, ಹೇಗಿದ್ದರೆ ಸುಂದರವಲ್ಲ - ಎಂಬ ಎರಡು ದೃಷ್ಟಿಗಳನ್ನು ಮಂಡಿಸುತ್ತವೆ (ಸೌಂದಸ. ೧೨೫). ೫. ಜಗಳ ; ಕಲಹ : 'ವಿಗ್ರಹಿಸು' ಪರಾ. ೬. ಕಾಳಗ ; ಯುದ್ಧ : ಅಹಿತರ್ ಸಂಧಿಯುಮಂ ವಿಗ್ರಹಮುಮನಾತನೊಳೊಡರ್ಚರ್ (ಶಾಂತಿಪು. ೧೦-೧೧೪) ; ಪೊಲ್ಲದು ದುರಾಗ್ರಹಮಾತನೊಳಾಗ ವಿಗ್ರಹಂ (ಪಂಪರಾಮಾ. ೧೧-೨). ೭. ಭಾಗ ; ಅಂಶ ; ವಿಭಾಗ. ೮. ಆಕಾಶ ; ಗಗನ. ೯. ಉದಾರಗುಣ ; ಔದಾರ್ಯ : "ವಿಸ್ತರಂ ಕಾಳಗಮತ್ಕುದಾರ ಗಗನಾಂಗಣ ಮೆಂಬಿವು ವಿಗ್ರಹಾಹ್ವಯಂ" (ನಾನಾರ. ೯೯). ೧೦. [ವ್ಯಾಕ] (ಸಮಾಸ ಮೊದಲಾದುವುಗಳ ಘಟಕಗಳನ್ನು) ವಿಭಜಿಸುವಿಕೆ ; ವಿಂಗಡಿಸಿ ಇಡುವಿಕೆ : 'ವಿಗ್ರಹವಾಕ್ಯ' ಪರಾ. [ಸಂ.]

**ವಿಗ್ರಹಂಗೆಯ್** (ಕ್ರಿ). ಕಾಳಗಮಾಡು ; ಯುದ್ಧಮಾಡು : ಅಗ್ರದುಭಯಬಲಂ ವಾಗ್ರೋಗ್ರವಿಗ್ರಹಂಗೆಯ್ಯುತಿರೆ (ಹಮ್ಮಿರ.೩-೪೦ ವ). [ವಿಗ್ರಹ + ಕೆಯ್₁]

**ವಿಗ್ರಹಕರಾಳ** (ನಾ). ೧. ವಿಕಾರವಾದ ರೂಪವುಳ್ಳವನು ; ಕುರೂಪಿ. ೨. ಯುದ್ಧದಲ್ಲಿ ಭೀಕರನಾದವನು. ೧, ೨: ಆ ನೃಪಂ . . . ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗಸಂಗಿಯಲ್ಲು ವಿಗ್ರಹಕರಾಳನಾಗಿಯುಂ ವಿಗ್ರಹಕರಾಳನಲ್ಲು (ಪುಷ್ಪದ. ೯-೩೯ ವ). [ಸಂ. ವಿಗ್ರಹಕರಾಲ]

**ವಿಗ್ರಹಭಂಜಕ** (ನಾ). ಪ್ರತಿಮೆಗಳನ್ನು ಭಂಗಿಸುವವನು ; ಮೂರ್ತಿಭಂಜಕ : ಸೂರ್ಯದೇವತೆಯ ಪ್ರತಿಮೆಯನ್ನು ವಿಗ್ರಹಭಂಜಕರು ಕತ್ತರಿಸಲಾಗಿ ಮತ್ತೆ ಅದರ ಕೈಗಳನ್ನು ಬಂಗಾರದಲ್ಲಿ ಮಾಡಿಟ್ಟರು (ಭಾರದ. ೫೧೦). [ಸಂ.]

**ವಿಗ್ರಹಲೀಲೆ** (ನಾ). ೧. ಆಕೃತಿಯ ಸೌಂದರ್ಯ ; ರೂಪದ ಬೆಡಗು. ೨. ಯುದ್ಧಕ್ರೀಡೆ ; ರಣಕೇಳಿ. ೧,೨ : ಬಾಲಾಶೋಕಂ ವಿಗ್ರಹಲೀಲೆ ರಜೋವಿಕೃತಿ . . . ಇಲ್ಲ ಬನದೊಳಲ್ಲದೆ ಜನದೊಳ್ (ಪುಷ್ಪದ. ೨-೨೮). [ಸಂ. ವಿಗ್ರಹಲೀಲಾ]

**ವಿಗ್ರಹವಾಕ್ಯ** (ನಾ). [ವ್ಯಾಕ] ಸಮಾಸದಲ್ಲಿ ಘಟಕಾವಯವಗಳನ್ನು ವಿವರಿಸುವ ಮಾತುಗಳ ಗುಂಪು ; ಸಮಾಸದ ಅರ್ಥವನ್ನು ಬಿಡಿಸಿ ಹೇಳುವ ವಾಕ್ಯ : ಸಮಾಸಶಬ್ದದಲ್ಲಿ ಸೇರಿರುವ ಪ್ರಕೃತಿಗಳಿಗೆ ಅರ್ಥದಲ್ಲಿ ಪರಸ್ಪರ ಸಂಬಂಧವಿರುತ್ತದೆ. ಆ ಸಂಬಂಧವನ್ನು ವಿವರಿಸಿ ಹೇಳುವುದಕ್ಕೆ ವಿಗ್ರಹವಾಕ್ಯ ಎಂದು ಹೆಸರಿದೆ (ಕೈಪಿಡಿ. ೨೦); ಸಮಾಸದ ಅರ್ಥವನ್ನು ಬಿಡಿಸಿ ಹೇಳುವ ಮಾತುಗಳ ಗುಂಪಿಗೆ 'ವಿಗ್ರಹವಾಕ್ಯ'ವೆಂದು ಹೆಸರು (ಮಧ್ಯಮ. ೧೪೧). [ಸಂ.]

**ವಿಗ್ರಹಾರಾಧನೆ** (ನಾ). ದೈವತ್ವವನ್ನು ಆರೋಪಿಸಿದ ಪ್ರತಿಮೆಗಳ ಆರಾಧನೆ ; ಮೂರ್ತಿಪೂಜೆ : ವಿಗ್ರಹಗಳಲ್ಲಿ ಅನುಪ್ರವೇಶವೂ ಆರಾಧಕರಿಗೆ ಅನುಗ್ರಹವೂ ಸಂಭವಿಸುವುದೆಂದು ವಿಗ್ರಹಾರಾಧನೆ ಮುಖ್ಯವಾಗಿ ಅನುಷ್ಠಾನಕ್ಕೆ ಬಂದಿರುತ್ತದೆ (ಹಿಂದಸಾ. ೭೨). [ಸಂ. ವಿಗ್ರಹಾರಾಧನಾ]

**ವಿಗ್ರಹಿಸು** (ಕ್ರಿ). ೧. ಜಗಳವಾಡಿಸು; ಘರ್ಷಣೆಯುಂಟಾಗುವಂತೆ ಮಾಡು : ಮಂದಿರದಲಾಟದಲಿ ಜೀವರ ವೃಂದವನು ವಿಗ್ರಹಿಸಿ ಕಾಡುವವಂದಿರನು ಮನುಕುಳಿಗಳಲಿ ಹೊಗೆಯಿಂದ ಕೊಲಿಸುವರು (ವಿಭಾಗ. ೫-೧೧-೩೯). ೨. ಭಾಗಮಾಡು ; ಸೀಳು ; ಹೋಳುಮಾಡು : ಅಂಬಿಕಾಸತಿ ವಿಗ್ರಹಿಸಿ ಹಸ್ತದಲಿ ತಿರುಹಿಟ್ಟಳು ರಸಾತಳಕೆ (ದೇವೀಮ. ೩-೨೫). [ವಿಗ್ರಹ + - ಇಸು₃]

**ವಿಘಟ** (ನಾ). ಒಡೆದವನು ; ಭೇದಿಸಿದವನು : ನೂರ್ವರೊಳೊರ್ವನಗುರ್ಬು ಪರ್ಬಿ ಪರಕಲಿಸೆ ಸಂಪೂರ್ಣವಯಸ್ಕನಾಗಿ ಘೃತಘಟವಿಘಟನುಮಾಗಿ ಪುಟ್ಟುವುದುಂ (ಪಂಪಭಾ. ೧-೧೩೧ ವ). [ಸಂ.]

**ವಿಘಟನ** (ನಾ). ೧. ಒಡೆಯುವುದು : ಇಂದ್ರನಟ್ಟಿದಂ ನಿನಗಿದಱ ಪೆಸರ್ ದೇವದತ್ತಮೆಂಬುದು ನಿನಗಭ್ಯುದಯಕರಂ ಶಂಖಂ ರಿಪುಹೃದಯಕವಾಟಪುಟವಿಘಟನಂ ನೋಡರಿಗಾ (ಪಂಪಭಾ.೬-೪). ೨. ವಿಭಜನೆ ; ವಿಂಗಡಣೆ : ಒಬ್ಬನು ಬಲ್ಲನಗ್ಗದ ಧರ್ಮಮುದ್ರಾಘಟನವಿಘಟನವ (ಕುಮಾರ. ೧೫-೬). ೩. ನಾಶ; ಅಳಿವು : ದುರಿತತಿಮಿರವಿಘಟನಪಟುವೆನಿಪ ವಿಮಲಕೇವಲಜ್ಞಾನಭಾನೂದಯಮಾಗೆ (ಆದಿಪು. ೭-೧೩ ವ) ; ಮುನಿಪದನಖದೀಪ್ತಿಶರಚ್ಚಂದ್ರಿಕೆ . . . ಮಾಡುಗಘತಮೋವಿಘಟನಮಂ (ಮಲ್ಲಿಪು. ೧-೧೨). ೪. ವಿಸರ್ಜನೆ ; ಮುಕ್ತಾಯ : ಆ ರೀತಿ ನಡೆದ ಪುನಸ್ಸಮಾಯೋಜನವು ತತ್ಕಾಲದಲ್ಲಿರುವ ಲೋಕಸಭೆಯ ವಿಘಟನವಾಗುವವರೆಗೂ ಲೋಕಸಭೆಯಲ್ಲಿಯ ಪ್ರತಿನಿಧಿತ್ವದ ಮೇಲೆ ಪ್ರಭಾವವುಳ್ಳದಾಗಿರತಕ್ಕುದಲ್ಲ (ಭಾಧಾವ. ೪೧). [ಸಂ.]

**ವಿಘಟಿತ** (ಗು). ೧. ಒಡೆದ ; ಸೀಳಿದ ; ಹೋಳುಮಾಡಿದ : ಸ್ವಕೀಯ ಪರಿಧಾವನವೇಗವಿಘಟಿತವೈರಿಬಾಲಶಕಟನೆಂಬ ಶಕಟನುಮಂ . . . ಕರೆದು (ಜಗವಿ. ೩-೨೨ ವ). (ನಾ). ೨. [ಕಾಮಶಾ] ಚುಂಬನದ ಹನ್ನೆರಡು ಪ್ರಕಾರಗಳಲ್ಲಿ ಒಂದು : ಬರೆತೆಗೆದೋಪಳ ತುಟಿಕೆತ್ತಿಯಂ ಕರಶಾಖೆಗಳಿಂದ ಪಿಡಿದು ನಾಲಗೆಗೊನೆಯಿಂ ಪರಿಮರ್ದಿಸಿ ಚುಂಬನಮಂ ನರನಿರದುಜ್ಜುಗಿಸೆ ವಿಘಟಿತಂ ತಾನೆನಿಕುಂ (ಮನ್ಮವಿ. ೧೨-೬). [ಸಂ.]

**ವಿಘಟಿಸು** (ಕ್ರಿ). ೧. ಮುರಿ ; ಸೀಳು ; ಭಂಜಿಸು. ೨. ಅಗಲಿಸು ; ಬೇರ್ಪಡಿಸು. ೧,೨ : ಆ ರಾಜಸುತಂ ಕೀರ್ತಿಸುಧಾರಸದಿಂ ತಂಪುವಡೆದು ಪರಿಪೂರ್ಣಕಳಾಧಾರಂ ಸಕಲೇಂದುರಥಂ ವೈರಿಮನೋರಥರಥಾಂಗಮಂ ವಿಘಟಿಸಿದಂ (ಪಂರಾಮಾ. ೨-೬೫). ೩. ಬೇರ್ಪಡು ; ಅಗಲು : ಆ ಮಹಾತ್ಮನ ಆತ್ಮೀಯಸಾಂಸಾರಿಕಮನೋರಥಂಗಳೊಡನೆ ರಥಾಂಗಂಗಳ್ ವಿಘಟಿಸೆಯುಂ (ಚಂದ್ರಪ್ರ. ೨-೪೬ ವ). ೪. ಬೇರೆಯಾಗು ; ವ್ಯತ್ಯಾಸವಾಗು : ತಾಳಮೇಳದ ಗತಿಯ ಗಮಕದ ಕೀಲಣೆಯ ಕಾಲಾಟ ವಿಘಟಿಸಿ ಚಾಳಿಯಲಿ ತಬ್ಬಿಬ್ಬುವೋಗುತಲಿರ್ದಳಾ ಮಾಯೆ (ಪ್ರಭುಲೀ. ೭-೨೬). ೫. ಪ್ರತಿಭಟಿಸು ; ಸ್ಪರ್ಧಿಸು : ವೈರಿಗ್ರಜಘಟಾವಿಘಟನನೊಳ್ ವಿಘಟಿಸಿ ಬಿಲ್ಲಲ್ಲು (ಪಂಪಭಾ. ೨-೫೭ ವ). [ವಿಘಟನ + - ಇಸು₃]

ವಿಘುನಿಸು (ಕ್ರಿ). ಗೌರವಿಸು ; ಮಾನ್ಯಮಾಡು ; ಮನ್ನಿಸು (?) : ಕಾಣ್ಕೆಗೊಟ್ಟಾ ಗುರುಜಘನೆ ಕೈಮುಗಿಯೆ ಕಾಣಿಕೆಯ ವಿಘುನಿಸಿ ಕೈಕೊಳುತಾಕೆಗೆ ಬಿನದಕಾ ಪ್ರಘಟಿತಾನಂದ ಕೈಮುಗಿದ (ಭರತೇ. ೪೨-೪೧). [ವಿಘುನ್ನ + - ಇಸು]

ವಿಘಸ (ನಾ). ೧. ಅರ್ಧಂಬರ್ಧ ಜಗಿದ ತುತ್ತು. ೨. ಯಜ್ಞಾಹುತಿ, ನೈವೇದ್ಯಗಳ ಶೇಷ. ೩. ಊಟಮಾಡಿ ಉಳಿದ ಆಹಾರ : "ಭೋಜನಕ್ಕಾಗಿ ಮಿಕ್ಕುದು ವಿಘಸಮಕ್ಕು" (ಮಂಗರಾ. ೬೫-೭). [ಸಂ.]

ವಿಘಸಾಸಿ (ನಾ). ಯಜ್ಞಶೇಷವನ್ನು ಸೇವಿಸುವವನು : ವಿಘಸಾಸಿಗಳಾದ ಮನುಜೋತ್ತಮರನೆ ಅನುಸರಿಸಿ ಆಂ ಸನ್ನುತಿಗೆಯ್ವನಲ್ಲದೆ ಪೆರತೊರ್ವರಂ ನುತಿಗೆಯ್ವುದೆನಗೆ ಲೇಶಮುಂ ಸಹ್ಯಮಾಗಿರದು (ಭಾರತಾಂ. ೧೧-೫೨).

[< ಸಂ. ವಿಘಸಾಶಿನ್]

ವಿಘಳಿಗೆ 'ವಿಘಟಿಗೆ' ನೋ.

ವಿಘಟಿಗೆ, ವಿಗಟಿಗೆ, ವಿಘಳಿಗೆ (ನಾ). ಒಂದು ಕಾಲಪ್ರಮಾಣ ; ಗಳಿಗೆಯಲ್ಲಿ ಅರುವತ್ತನೆಯ ಒಂದು ಭಾಗ ; ಇಪ್ಪತ್ತುನಾಲ್ಕು ಸೆಕೆಂಡುಗಳಷ್ಟು ಕಾಲ : "ವಿಘಟಿಗೆ . . . ಅಱುವತ್ತು ಪುಟ್ಟಿರಲು ಘಟಿಗೆಯೊಂದಕ್ಕು" (ಮಂಗರಾ. ೧೯-೪). ವಿಗಟಿಗೆ : ಮೂವತ್ತು ಗಳಿಗೆ ವಿಗಟಿಗೆ ಯೊ[ಪಾಠಾಂ.ವಿಷ್ಟಿಯೊ]ಳಾವುದು ಮಱಿ ಪುಟ್ಟತದಱ ಗಟಿಗೆಯೆ ವರಿಸಂ (ಅಶ್ವಶಾ. ೫-೨೯). ವಿಘಳಿಗೆ : ಚಿಟುಕು ಮೂನ್ನೂಱಱುವತ್ತು ಕೂಡಿದಡೆ ಒಂದು ವಿಘಳಿಗೆ (ಅವಚಂ. ೧೪೨-೬೫೪) ; ಒಂದು ಲಕ್ಕದ ಮೇಲೆ ತೊಂಬತ್ತೊಂದು ಸಾವಿರಜಂಗಮಕ್ಕೆಂದಂದು ಮಾಡಿದ ಪದಪದಾರ್ಥಾವಳಿಗಳೆಲ್ಲವನು ಒಂದು ವಿಘಳಿಗೆಯೊಳಗೆ ಸವೆಯಲು ಕುಂದದೇಗುವೆನು (ಬಸಪು. ೮-೧೬).

[< ಸಂ. ವಿಘಟಿಕಾ]

ವಿಘಾತ (ನಾ). ೧. ನಾಶ ; ಧ್ವಂಸ : 'ವಿಘಾತಿಸು' ಪರಾ. ೨. ಕೊಲೆ ; ವಧೆ. ೩. ನಿರೋಧ ; ವಿಘ್ನ ; ಅಡ್ಡಿ : ದೇವೇಂದ್ರಂ . . . ತಪೋವಿಘಾತಂ ಮಾಡಿಮೆಂದು ತನ್ನ ನಚ್ಚಿನಚ್ಚರಸಿಯರುಮನಾಱುಂ ಋತುಗಳುಮಂ ಗಂಧರ್ವರುಮಂ ಕಾಮದೇವನಂ ದಂಡನಾಯಕಂ ಮಾಡಿ ಪೇೞ್ದಾಗಳ್ (ಪಂಪಭಾ. ೭-೮೦ ವ). ೪. ಏಟು ; ಹೊಡೆತ ; ಪೆಟ್ಟು : ಈತನುಱುಬೆಗೆ ಬೆಗಱಿತುರುಸಂಘಾತದಲಿ ಹೆಬ್ಬಂದಿಯೊಂದು ವಿಘಾತದಲಿ ಹಾಯ್ದುದು ಕಿರಾತವ್ರಜವನೊಡೆದುಳಿದು (ಕುವ್ಯಾಅ. ೧೩-೩೧); ತನ್ನ ಸ್ಥಾನವ ಕಾದುಕೊಂಡುಯಿರುವಲ್ಲಿ ಅದಕ್ಕೆ ವಿಘಾತವ ಮಾಡಿದರೆ ಕಚ್ಚುವದು (ವಿಷಟಿ.೩-೫). ೫. ಬಿಟ್ಟುಬಿಡುವುದು ; ತ್ಯಾಗ. [ಸಂ.]

ವಿಘಾತಕ (ನಾ). ೧. ಕೊಲ್ಲುವವನು ; ನಾಶಮಾಡುವವನು. ೨. ಬಾಧಕ ವಾದುದು ; ವಿಘ್ನಕಾರಿಯಾದುದು. [ಸಂ.]

ವಿಘಾತಿ$_1$ (ನಾ). ನಾಶಪಡಿಸುವವನು ; ನಾಶಮಾಡುವವನು : ಶಾಂತಿನಾಥಂ ಮಿಥ್ಯಾಡಂಬರವಿಘಾತಿ ಘಾತಿಕದಂಬಕತರುಗಹನದಹನನೆನೆ ನೆಗಱ್ದಜರಂ (ಶಾಂತಿಪು. ೧೨-೨೬). [ಸಂ. ವಿಘಾತಿನ್]

ವಿಘಾತಿ$_2$ (ನಾ). ೧. ಅಳಿವು ; ನಾಶ : ಈ ತಳೋದರಿಯಿಂದ ಕುಲಕೆ ವಿಘಾತಿ ತಪ್ಪದು (ಕಾಶಿರಾ. ೨೩-೧೨). ೨. ಕೇಡು ; ಕೆಡುಕು ; ಹಾನಿ : ಪುರುಷಾರ್ಥವನು ತಮಗೆ ಮಾಡಿದವರುಗಳಿಗೆ ವಿಘಾತಿಯ ಹೂಡಿದವದಿರು ನರಕದೊಳಗೋಲಾಡ ದಿಹರೇ (ಕುವ್ಯಾಉ. ೩-೧೨೨); ನೋಡಿದ್ಯೆ ಕುಂತೀಕುಮಾರ ತಾಮ್ರಧ್ವಜಂ ಮಾಡಿದ ವಿಘಾತಿಯಂ ನಮ್ಮೆಲ್ಲರಂ ಧುರದೊಳೀಡಿಱಿದುರುಳ್ಚಿ ಹಯಮಂ ಕೊಂಡು ರತ್ನಪುರಿಗೈದಿದಂ (ಜೈಮಿಭಾ. ೨೬-೨). ೩. ಹಗೆತನ ; ವಿರೋಧ ; ವೈರ : ಭೀಮಾರ್ಜುನರ ಕೂಡೆ ವಿಘಾತಿ ಕೈಯೊಡನುಚಿತವೇ ಕೆಡೆನುಡಿವುದೀ ಲೋಕ (ಕುವ್ಯಾಅ. ೨೧-೫೦) ; ಮಾಡಿದ ವಿಘಾತಿಯಂ ಮಱೆದು ಸುತನಂ ಕೂಡಿಕೊಂಡು ನೃಪನಧ್ವರಕೆ ಪೊಱಮಟ್ಟು ಬಂದು ಕಾಂಬುದು ಕುಂತಿದೇವಿ ಪಾಂಚಾಲತನುಜೆಯರ (ಜೈಮಿಭಾ. ೩೨-೫೭). ೪. ಹೊಡೆತ; ಪ್ರಹಾರ : ಹಡಗು ಜಲಧಿಯೊಳೋಡಿ ಗಿರಿಗಳನೆಡಹಿ ನುಗ್ಗಾದಂತೆ ಸುಭಟರ ಗಡಣ ಗಜವನು ತಾಗಿ ತಾಗಿ ವಿಘಾತಿಯಲಿ ನೊಂದು (ಕುವ್ಯಾದ್ರೋ. ೩-೨೮). [ಸಂ.]

ವಿಘಾತಿಸು (ಕ್ರಿ). ಧ್ವಂಸಮಾಡು ; ನಾಶಗೊಳಿಸು : ಅತಿರಥರುರವಣೆಯ ಪದಹತಿಯ ಧೂಳಿಯ ಮಬ್ಬಿನುಬ್ಬರದ ಧರಧುರವದೊಂದೆಸೆ ಪದಾತಿಯ ಹೊರಳಿಗಳದೊಂದೆಸೆ ವಿಘಾತಿಸಿತರಿಭಟನನು (ಕುವ್ಯಾಕ. ೧೧-೩೬).

[ವಿಘಾತ + - ಇಸು]

ವಿಘೂರ್ಣನ (ನಾ). ೧. ಹೊಯ್ದಾಟ , ಕ್ಷೋಭೆ ; ಅಲ್ಲೋಲಕಲ್ಲೋಲ : ಮುಳಿಸು ವಿಘೂರ್ಣನಂ ತಿಳಿವುದಂಬು . . . ಅಕ್ಷಿಕಾಂತಿ ಮಿಂಚೊಳಪೆನೆ ಮೇರೆದಪ್ಪಿದ ರತಾಮೃತವಾರ್ಧಿಯನೀಸಿ ಮೂಡುತುಂ ಮುಳುಗುತುಮಿರ್ಪರ್ (ಶಾಂತಿಪು. ೭-೧೨೦). ೨. ಚಕ್ರಾಕಾರವಾಗಿ ಸುತ್ತುವಿಕೆ, — ತಿರುಗುವಿಕೆ. ೩. ಆಧಿಕ್ಯ ; ಅತಿಶಯ : 'ವಿಘೂರ್ಣಿಸು' ಪರಾ. [ಸಂ.]

ವಿಘೂರ್ಣಿಸು (ಕ್ರಿ). ಅತ್ಯಧಿಕವಾಗು : ಗೋತ್ರನಗಂ ಪಿಳಿಗಿತ್ತೊ ಸಾಗರಂ ತಳರ್ದುದೊ ಮೇರೆಯಿಂದಮುಱಿದಂದಿನಿತದ್ಭುತಮಾದ ನಾದಮಗ್ಗಳಿಸದೆನಲ್ ವಿಘೂರ್ಣಿಸಿದು ದಿರ್ಬಲದೊಳ್ ಸಮರಾನಕಸ್ವನಂ (ಪಂರಾಮಾ. ೧೩-೩೫). [ವಿಘೂರ್ಣನ + - ಇಸು]

ವಿಘ್ನ (ನಾ). ಅಡ್ಡಿ ; ತೊಡರು ; ಪ್ರತಿಬಂಧ : ತ್ರಿವಿಧವಿಘ್ನಂಗಳಿಗೆ ಪರಿಹಾರವನು ಕೇಳ್ (ಗಗತಾ. ೧೩-೧೬). [ಸಂ.]

ವಿಘ್ನರಾಜ (ನಾ). ವಿಘ್ನಗಳನ್ನು ನಿರ್ಬಂಧಿಸುವವನು ; ಗಣೇಶ : "ವಿಘ್ನರಾಜಂ ವಿನಾಯಕಂ . . . ಲಂಬೋದರನೆನಿಕ್ಕು" (ಮಂಗರಾ. ೫-೧೬). [ಸಂ.]

ವಿಘ್ನಹ (ಗು). ಅಡ್ಡಿಗಳನ್ನು ನಾಶಮಾಡುವ : ಜಂಗಮವ ತಣಿಪಿ ಶಿವಸಿದ್ಧ ವಿಘ್ನಹಲಗ್ನವೆಂದು ಓಂ ಪುಣ್ಯವೆನಲು (ಸಿದ್ಧರಾ. ೮-೮೭). [ಸಂ. ವಿಘ್ನಹನ್]

ವಿಘ್ನೇಶ (ನಾ). = ವಿಘ್ನರಾಜ : ಈಗೆ ನಮಗಿಷ್ಟಾರ್ಥವನು ನಿರ್ವಿಘ್ನದಾಯಕವ . . . ಕಾರುಣ್ಯನಿಧಿ ವಿಘ್ನೇಶನೊಲವಿನಲಿ (ನಿಭಾಗ. ೧-೧-೩). [ಸಂ.]

ವಿಘ್ನೇಶ್ವರ (ನಾ). ೧. = ವಿಘ್ನರಾಜ : ನಿರ್ವಿಘ್ನವಾಗಿ ಸತ್ಸಾಧನೆ ನಡೆಯುವುದಕ್ಕೆ ವಿಘ್ನೇಶ್ವರನ ಪ್ರಾರ್ಥನೆಯು ಆವಶ್ಯಕ (ಹಸಾರ. ೧೩೩೮ ಪುಟ). ೨. ಒಂದು ಬಗೆಯ ಮಹಾಮಂತ್ರ : ವಿಘ್ನೇಶ್ವರ ವಿಶಾಲ . . . ಭೈರವಾದಿ ಮಹಾಮಂತ್ರಂಗಳಂ . . . ಬೇಱೆ ಬೇಱೆ ವಿವೇಕಿಸಿ ನೋಡಿ (ವಿವೇಕ. ೮೧). [ಸಂ.]

ವಿಘ್ನೇಶ್ವರಾಗಮ (ನಾ). ಲಲಿತಾಗಮದ ನಾಲ್ಕು ಭೇದಗಳಲ್ಲೊಂದು : ಲಲಿತ ಲಲಿತೋತ್ತರ ಕೌಮಾರತಂತ್ರ ವಿಘ್ನೇಶ್ವರಾಗಮವೆಂದು ಲಲಿತಾಗಮದ ನಾಲ್ಕು ಭೇದಂಗಳು (ವಿವೇಕ. ೭೧). [ಸಂ.]

ವಿಚಕಿಲ, ವಿಚಕಿಳ (ನಾ). ೧. ಒಂದು ಬಗೆಯ ಮಲ್ಲಿಗೆ : ಮುಕ್ತಾಮಾಲಿಕೆಯಂ ನವವಿಚಕಿಳಮಾಲಿಕೆಗೆತ್ತೆಳಸಿ ಸುಱಿವುವಳಿಕಳಭಂಗಳ್ (ಪಂರಾಮಾ. ೫-೧೧೬); ವನಪಾಲಂ ಕಾಣ್ಕೆಗೈದಂ ವಿಚಕಿಲದಲರಂ (ರಾಜಶೇ. ೧೦-೨). ೨. ಒಂದು ಬಗೆಯ ಮರ ; ಮದನವೃಕ್ಷ. ವಿಚಕಿಳ : ೧. "ಪೊಂದಾವರೆಯ ವಿಚಕಿಳದ ನಸುಬಿರಿದಲರಿಂ ದರ್ಚಿಸಿದನವನಿಪತಿ ಜಿನಪತಿಯಂ (ಮಲ್ಲಿಪು. ೮-೩); ಮಧುಮಿತ್ರ ಜಗಜ್ಜೈತ್ರಾಯುಧ ಗೃಹಮೆನೆ ವಿಕಚವಿಚಕಿಳಂ ಸೊಗಯಿಸುಗುಂ (ಚಂದ್ರಪು. ೭-೫೦). [ಸಂ.]

ವಿಚಕಿಳ 'ವಿಚಕಿಲ' ನೋ.

ವಿಚಕ್ಷಣ (ಗು). ೧. ಸ್ಪಷ್ಟವಾಗಿ ಕಾಣಬಲ್ಲ ; ದೂರದರ್ಶಿಯಾದ. ೨. ಸಮರ್ಥವಾದ ; ಪರಿಣತವಾದ : ಆದರದ ಮಾತುಗಳು, ವಿಚಕ್ಷಣಚಿಕಿತ್ಸೆ ಇವೆಲ್ಲವೂ ಅವರ ಮೇಲೆ ಮರೆಯಲಾಗದ ಪರಿಣಾಮವನ್ನುಂಟುಮಾಡಿತ್ತು (ಮನೋಜಾ. ೧೭). (ನಾ). ೩. ವಿದ್ವಾಂಸ ; ಪಂಡಿತ : ರಸವತ್ಕವಿತಾಮಾರ್ಗಂ ರಸೆಯಲ್ಲಿ ವಿಚಕ್ಷಣರ್ಕಳಿಂ ಪೊಸತೆನಿಕುಂ (ರಾಜಶೇ. ೧-೩೩). ೪. ಪರಿಣತವಾದುದು : ಇಂತಿದು ಚಿತ್ರಕಥಾಭಿರೂಪನಿಂತಿದು ಗಜವಾಜಿಲಕ್ಷಣವಿಚಕ್ಷಣನೀ ಶುಕನುದ್ಗತಾಂಶುಕಂ (ಕಾದಂಪೂ. ೫೪). [ಸಂ.]

ವಿಚಕ್ಷಣೆ (ನಾ). ಕೌಶಲ ; ಚಾತುರ್ಯ : ಈ ವಿತರಣೆ, ವಿಚಕ್ಷಣೆ, ಅಂತಸ್ತು, ಗೌರವಗಳ ಅಳತೆಗೆ ಸರಿತೂಗಿಸುವುದು ಗಂಗರಾಜರಿಗೆ ಮಾತ್ರ ಸಾಧ್ಯವಿದ್ದಿತು (ಶಾಂತಲಾ. ೯೯). [ಸಂ. ವಿಚಕ್ಷಣ]

ವಿಚಯ (ನಾ). ಅನ್ವೇಷಣೆ ; ಶೋಧನೆ : "ವಿಚಯನಂ, ವಿಚಯಃ, ವಿಚಾರೋ ವಿಚಾರಣಮೆಂದೊಡಮೇಕಾರ್ಥಂ" (ತತ್ತ್ವಪ್ರ. ೩೪೮). [ಸಂ.]

**ವಿಚಯನ** (ನಾ). = ವಿಚಯ : "ಅನ್ವೇಷಣಂ, ವಿಚಯನಂ, ಮಾರ್ಗಣಂ, ಮೃಗಣಾ, ಮೃಗಃ - ೫ ಹುಡುಕಿ ನೋಡುವಿಕೆ" (ಸಿದ್ಧಾಂತಿ. ೩೬೬). [ಸಂ.]

**ವಿಚರ್ಚಿಕೆ** (ನಾ). ನವೆಯಿಂದ ಕೂಡಿದ ಒಂದು ಬಗೆಯ ಚರ್ಮವ್ಯಾಧಿ ; ತುರಿಕೆ : ವಿಚರ್ಚಿಕೆಯೆಂಬಾಮಯಕಂ ಶಸ್ತ್ರವಿಟ್ಟಿದು ಬಟ್ಟಿವುದು ಕೇಜಂ (ಅಶ್ವಶಾ. ೧೪-೧೯). [ಸಂ. ವಿಚರ್ಚಿಕಾ]

**ವಿಚಲ** (ಗು). ೧. ಅಲ್ಲಾಡುವ ; ಕಂಪಿಸುವ. ೨. ಅಹಂಕಾರವುಳ್ಳ; ದುರಭಿಮಾನಿಯಾದ. (ನಾ). ೩. ಚಂಚಲವಾದುದು ; ಅಸ್ಥಿರವಾದುದು : ವಿಚಲಮಪ್ಪುದೆ ಕೃಷ್ಣಹೃದಯಂ (ಜೈಮಿಭಾ. ೨೬-೧೯). [ಸಂ.]

**ವಿಚಲತೆ, ವಿಚಳತೆ** (ನಾ). ೧. ಅಲೆದಾಟ ; ಸಂಚಾರ : ರಾವಣನು . . . ಬಳಿಕ ನೋಡಿದ ನರ್ಮದೆಯ ತೀರದಲಿ ಸೇನೆಗಳ ನಿಲಿಸಿ ಬನದತಿಶಯಗಳನು ಮನಗೊಳಿಪ ಕುವಲಯ ಕಮಲ ರಾಜಿಪ ಕೊಳಗಳನು ವಿಹರಿಸುವ ಜಲವಿಹಗಗಳ ವಿಚಲತೆಯ (ಉತ್ತರ. ೧೯-೧೯). ೨. ಚಂಚಲತೆ ; ಅಸ್ಥಿರತೆ. ವಿಚಳತೆ : ೨. ವಿಚಳತೆಯಿಲ್ಲ ಚಿತ್ತದೊಳಪಾಂಗದೊಳಲ್ಲದೆ . . . ತಲ್ಲತಾಂಗಿಯಾ (ಚಂದ್ರಪ್ರ. ೧೧-೧೦೯). [ಸಂ. ವಿಚಲತಾ]

**ವಿಚಲಿತ, ವಿಚಳಿತ** (ಗು). ೧. ಅಲುಗಾಡುವ ; ಅಲ್ಲಾಡುವ. (ನಾ). ೨. ಉದ್ರೇಕ ; ಕ್ಷೋಭೆ : ಪುಳಕತತಿ ತಾಗುವುದೊ ಬಾಲೋತ್ಪಳಸಖಾಂಕ ಕಪರ್ದಿಗೆನುತ ವಿಚಲಿತಮಪ್ಪ ನಿಜಾತ್ಮದಿಂದಾಲಿಂಗಿಸುವ ಪರಿಯೊ (ಬಸವ. ೩೫-೨೪). ೩. ವ್ಯಗ್ರನಾದವನು; ಕ್ಷೋಭೆಗೊಂಡವನು : ಅದರಿಂದ ಅವನು ಅಷ್ಟು ವಿಚಲಿತನಾಗಿರಲಿಲ್ಲ (ದೀವಹ. II, ೨೭೯). ವಿಚಳಿತ : ೧. 'ವಿಚಳಿತಶ್ಮಶ್ರು' ಪರಾ. [ಸಂ.]

**ವಿಚಳತೆ** 'ವಿಚಲತೆ' ನೋ.

**ವಿಚಳಿತ** 'ವಿಚಲಿತ' ನೋ.

**ವಿಚಳಿತಶ್ಮಶ್ರು** (ನಾ). ಅಲ್ಲಾಡುವ ಮೀಸೆಯುಳ್ಳವನು : ಪಟುಕೋಪಾಟೋಪ ಬದ್ಧಭ್ರುಕುಟಿ ವಿಚಳಿತಶ್ಮಶ್ರು . . . ಧನುರ್ಜ್ಯಾಲತಾಸಂಘಟಿತಾಮೋಘಾಸ್ತ್ರದಿಂ ತತ್ಕರಟಬಿದುವನಾರ್ದೆಚ್ಚಂ (ರಾಜಶೇ. ೬-೮೯). [ಸಂ. ವಿಚಲಿತಶ್ಮಶ್ರು]

**ವಿಚಾರ** ([illegible] ವಿಮರ್ಶೆ ; ಪರ್ಯಾಲೋಚನೆ ; ಪರಾಮರ್ಶೆ. ೨. ವಿವೇಕ ; ವಿವೇಚನೆ : ವಿಚಾರದಲ್ಲಿ ಕಡಿಮೆಯಾದರೂ ಆಚಾರದಲ್ಲಿ ಕಡಿಮೆ ಇಲ್ಲ (ಗಾದೆ). ೩. ತೀರ್ಮಾನ ; ನಿರ್ಧಾರ. ೪. ವಿಷಯ ; ಸಂಗತಿ : ಕೆಲವೊಮ್ಮೆ ಅಂಥ ವಿಚಾರಗಳನ್ನು ವಿಸ್ತಾರದ ಭೀತಿಯಿಂದ ಕೈಬಿಡಲಾಗಿದೆ (ದ್ರಾವಿವಿ. ೧೦ ಹಿನ್ನೆಲೆ). ೫. ನ್ಯಾಯ ನಿರ್ಣಯ,—ತೀರ್ಮಾನ : ಮಹಿಶೂರನಗರದ ಹೋಬಳಿ ಸೀಮೆ ವಿಚಾರದ ಗೋಪಾಲರಾಜೈಗೆ ಬರಸಿ ಕಳಹಿದ ನಿರೂಪ (ಮೈಅರಿ. ೧೯೩೮, ೭೯-೨; 1849).

ವಿಚಾರದ ಚಾವಡಿ = ಮೈಸೂರಿನ ಅರಸರಾಗಿದ್ದ ಚಿಕ್ಕದೇವರಾಜ ಒಡೆಯರು ಸ್ಥಾಪಿಸಿದ ಆಡಳಿತಕಛೇರಿಗಳಲ್ಲಿ ಒಂದು ; ನ್ಯಾಯವನ್ನು ಪರಾಮರ್ಶಿಸುವ ಚಾವಡಿ : ಪಟಣದ ಹೊಬಳಿ ವಿಚಾರದ ಚಾವಡಿ ವಳಿತದ ನಾಗಮಂಗಲಸ್ಥಳದ ಕಲಿದೇವನದಳ್ಳಿ ಗ್ರಾಮ (ಮೈಅರಿ. ೧೯೩೩, ೫೬-೯ ; 1760) ; ಕಾವೇರಿಗೆ ಉತ್ತರಪಾರ್ಶ್ವದಲ್ಲಿರುವ ಗಡಿಗಳಿಗೆ ಪಟ್ಟಣದ ಹೋಬಳಿಯ ವಿಚಾರದ ಚಾವಡಿ ಎಂಬದಾಗಿ ನಿಬಂಧನೆ ಮಾಡಿದರು (ಮಹಾವಂ. I, ೧೪೭). [ಸಂ.]

**ವಿಚಾರಕ್ರಮ** (ನಾ). ವಿಷಯನಿರೂಪಣೆಯ ರೀತಿ ; ವಿಚಾರಪದ್ಧತಿ : ಚಾರುಶ್ರೀನೃಪತುಂಗವಿಚಾರಕ್ರಮಮಾರ್ಗಗಣನೆಯೊಳ್ ಪರಮಾಲಂಕಾರವಿಭಾಗಂ ವಿವಿಧಾಕಾರಂ ಶಬ್ದಾರ್ಥಭೇದದಿಂದೆರಡಕ್ಕುಂ (ಕವಿರಾ. ೨-೨). [ಸಂ.]

**ವಿಚಾರಕ್ಷಮ** (ನಾ). ೧. ಯೋಚಿಸಲು ಯೋಗ್ಯವಾದುದು ; ಪರಿಶೀಲಿಸಲು ಅರ್ಹವಾದುದು : ಮೃದುಸಂದರ್ಭಂ ವಿಚಾರಕ್ಷಮಮುಚಿತಪದಂ . . . ಕಾವ್ಯಮೊಂದನ್ವಿತಸುಕವಿಜನಂ ಮೆಚ್ಚೆ (ಆದಿಪು. ೧-೨೬). ೨. ಯುಕ್ತಾಯುಕ್ತತೆಯ ಪರಿಶೀಲನೆಯಲ್ಲಿ ದಕ್ಷನಾದವನು ; ವಿವೇಚನೆ ಮಾಡುವುದರಲ್ಲಿ ಸಮರ್ಥನಾದವನು : ಅನೂನಶಕ್ತ್ಯನ್ವಿತಂ ವಿಚಾರಕ್ಷಮನೆಂಬ ನೆಗಳ್ತೆಯಿನ್ನೆ ಬಲ್ಲಾಳನೃಪಾಳಂ ಕಾರ್ತಿಕೇಯನನ್ನೊಪ್ಪಿಪ್ಪಂ (ಎಕ.V.ಅರಸೀ.೩೮-೧೬ ; 1171). [ಸಂ.]

**ವಿಚಾರಗೇಡಿ** (ನಾ). ತಿಳಿವಳಿಕೆ ಇಲ್ಲದವನು ; ಅವಿವೇಕಿ : ಗಂಧರ್ವ ನಾರಿಯರು ಪುರುಷರು ವಿನೋದವಿಹಾರಲೀಲೆಯೊಳೆಯ್ದುಯಿಯ್ದು ವಿಚಾರಗೇಡಿಗಳಾಗಿ ತಾವವರಿದ್ದರಣ್ಯದಲಿ (ಬಸವ. ೩೪-೭) ; ನೀವಾದರೂ ಈ ವಿಚಾರಗೇಡಿಗೆ ತಿಳಿಹೇಳಿರಿ (ಹುಚ್ಚಾಟ. ೬೪). [ವಿಚಾರ + ಕೇಡಿ]

**ವಿಚಾರಗೋಷ್ಠಿ** (ನಾ). ಒಂದು ಗೊತ್ತಾದ ವಿಷಯದ ಬಗ್ಗೆ ನಾನಾ ಮುಖವಾಗಿ ನಡೆಸುವ ಸಮಾಲೋಚನೆಯ ಸಭೆ ; ವಿಮರ್ಶೆಯ ಗೋಷ್ಠಿ : ಎಂ.ಎ. ತರಗತಿಯಲ್ಲಿ ಆವಶ್ಯಕವಾಗಿ ಪಾತ್ರವಹಿಸಬೇಕಾಗಿದ್ದ ವಿಚಾರಗೋಷ್ಠಿಗಳ ವಿಷಯದಲ್ಲೂ ಅವನ ಉತ್ಸಾಹವು ಇಂಗಿಹೋಗಿತ್ತು (ದೂರಸ. ೨೪೫). [ಸಂ.]

**ವಿಚಾರಜ** (ನಾ). ವಿಷಯಮಂಥನದಿಂದ ಹುಟ್ಟಿದುದು ; ವಿಚಾರಜನ್ಯವಾದುದು : ನಿನ್ನಿಚ್ಛಾಪ್ರಕಾರಗಳೆ ನಿಯಮಗಳ್ ಪ್ರಕೃತಿಗೆ . . . ವಿಚಾರಜಂ ಮತಿಮಿತಿಯ ತತ್ತ್ವಸಿದ್ಧಾಂತಂಗಳಂ ಮೀರ್ವ ಯೋಗಸಿದ್ಧಿಗಳಾತ್ಮಸಾಧಕಗೆ। (ಶ್ರೀರಾಮಾ. ೭೨೬-೪೭೦). [ಸಂ.]

**ವಿಚಾರಣಾಧಿಕಾರಿ** (ನಾ). "(ಅಧಿಕಾರಪೂರ್ವಕವಾಗಿ) ವಿಚಾರಣೆ ನಡೆಸುವವನು, ವಿಚಾರಣಾಧಿಕಾರಿ" (Inquisitor. ಇಂಕನ). [ಸಂ.]

**ವಿಚಾರಣಾಸಮಿತಿ** (ನಾ). ವಿವಾದದ ಬಗೆಗೆ ತನಿಖೆ ನಡೆಸಲು ಅಧಿಕೃತವಾಗಿ ನಿಯೋಜಿತವಾಗಿರುವ ಸಮಿತಿ, — ಆಯೋಗ : ರಾಜನ ನ್ಯಾಯಾಲಯವು ಈ ವಿಚಾರಣಾಸಮಿತಿಗಳ ಕಾರ್ಯಗಳನ್ನು ಪರಿಶೀಲಿಸುತ್ತಿತ್ತು (ಭಾರದ. ೫೬). [ಸಂ.]

**ವಿಚಾರಣೀಯ** (ನಾ). ವಿಮರ್ಶಿಸಲು ತಕ್ಕುದಾದುದು; ಪರಿಶೀಲನೆ ಮಾಡಲು ಅರ್ಹವಾದುದು : ದ್ರಾವಿಡ ಎಂದು ಕರೆಯಬೇಕಾದ ಒಂದು ಕುಲ ಇದ್ದಿತೇ ಎನ್ನುವುದು ವಿಚಾರಣೀಯವಾಗಿದೆ (ನಮ್ಮನಾ. ೧೪). [ಸಂ.]

**ವಿಚಾರಣೆ** (ನಾ). ೧. (ಯಾವುದಾದರೊಂದು) ವಿಷಯವನ್ನು ಪರೀಕ್ಷಿಸುವುದು ,—ಪರಿಶೀಲಿಸುವುದು : "ಚರ್ಚಾ, ಸಂಖ್ಯಾ, ವಿಚಾರಣಾ – ಪ್ರಮಾಣದಿಂದ ಅರ್ಥವನ್ನು ಪರೀಕ್ಷಿಸುವಿಕೆಯ ಹೆಸರುಗಳು" (ಸಿದ್ಧಾಂತಿ. ೪೪). ೨. ಅಪರಾಧದ ತನಿಖೆ ,– ಶೋಧನೆ : "ಕೇಳುವುದು ; ಕೇಳಿಕೆ ; ಪ್ರಶ್ನೆ ; ವಿಚಾರಣೆ" (Inquiry. ಇಂಕನ). ೩. ವಾದ ಮಾಡುವುದು ; ಚರ್ಚೆ ; ವಾದಿಸುವುದು. ೪. [ತತ್ತ್ವಶಾ] ಆತ್ಮವಿಚಾರವನ್ನು ಮಾಡುವುದು : ವಿಚಾರಣಾ – ಆತ್ಮವಿಚಾರವನ್ನು ಮಾಡುವುದು (ಅಮೃತ. ೬-೬ ಟೀಕು) ; ಜ್ಞಾನಭೂಮಿಕೆಗಳು . . . "ವಿವಿದಿಷಾ", "ವಿಚಾರಣಾ". . . "ತುರ್ಯಗಾ" ಎಂದೇಳು (ಭಾರದ. ೨೨೭).

ವಿಚಾರಣೆಮಾಡು = (ಮೊಕದ್ದಮೆ, ವ್ಯಾಜ್ಯ ಇತ್ಯಾದಿಗಳ ಸಂಬಂಧದಲ್ಲಿ) ತನಿಖೆಮಾಡು ; ಶೋಧನೆನಡೆಸು : ನ್ಯಾಯಾಧಿಪತಿಯು . . . ಇವರಿಬ್ಬರನ್ನೂ ಚೆನ್ನಾಗಿ ವಿಚಾರಣೆ ಮಾಡಿದನು (ನೀತಿಚಿಂ. X, ೧೯) ; ಗ್ರಾಮಕೋರ್ಟಿನವರು ವಿಚಾರಣೆ ಮಾಡಬಹುದಾದ ವ್ಯಾಜ್ಯಗಳು (ಗ್ರಾಮಾಕ. ೨೦). ವಿಚಾರಣೆಯಾಗು = (ಮೊಕದ್ದಮೆ, ವ್ಯಾಜ್ಯ ಇತ್ಯಾದಿಗಳು) ಪರೀಕ್ಷೆಗೆ ಒಳಗಾಗು ; ತನಿಖೆಯಾಗು : ವ್ಯಾಜ್ಯವು ಬೆಂಚಿನಿಂದಲೇ ವಿಚಾರಣೆಯಾಗಬೇಕೆಂದು ಪ್ರತಿವಾದಿ ಅಪೇಕ್ಷಿಸಿ ಅಂಥಾ ಮನುಷ್ಯನನ್ನು ನೇಮಿಸಿದ್ದರೆ (ಗ್ರಾಮಾಕ. ೧೭). [ಸಂ. ವಿಚಾರಣಾ]

**ವಿಚಾರದೂರ** (ನಾ). = ವಿಚಾರಗೇಡಿ : ಕ್ರೂರಚಿತ್ತನು ನಂಜಿಕೆಯೆಂಬ ವಿಚಾರದೂರನು ಮಂದೆವಾಳದಿ ಮಾರಮರ್ದನನೆಂದಿನಿತು ಭಯವಿಲ್ಲದಾತ್ಮದಲಿ ಕಾಳುಗೆಲಸಂಗಳಿಗೆ ಕಳುಪುತ . . . ಕೀಳಾಳಿನಂದದಿ ಮಾಡಿಸುತ್ತಿರಲು (ಬಸವ. ೨೬-೫೭). [ಸಂ.]

**ವಿಚಾರಧಾರೆ** (ನಾ). ಆಲೋಚನೆಯ ಧಾಟಿ ; ವಿಚಾರದ ಓಟ, — ಗತಿ : ಈಸ್ಕಿಲಸನ ವಿಚಾರಧಾರೆಯ ಗತಿಯಲ್ಲಿ ಗಮನಾರ್ಹವಾದ್ದು ಒಂದಿದೆ (ಬದ್ಧಪ್ರ. XXXIV, ನಾಟಕದ ಸಮಸ್ಯೆ). [ಸಂ. ವಿಚಾರಧಾರಾ]

**ವಿಚಾರಪರ** (ನಾ). ಚಿಂತನಶೀಲನಾದ ವ್ಯಕ್ತಿ : ವಿಚಾರಪರರು ತಮ್ಮ ಅಸ್ತಿತ್ವದಲ್ಲಿ ಸಂದೇಹಪಡರು (ಜೀವಾತ್ಮ. ೧೫). [ಸಂ.]

**ವಿಚಾರಪರತೆ** (ನಾ). (ವಿಚಾರವನ್ನು ಕುರಿತು) ಚಿಂತಿಸುವಿಕೆ ; ಚಿಂತನಶೀಲತೆ : ಜನರ ವಿಚಾರಪರತೆಯನ್ನು ತುಳಿದು (ಶಿಕ್ಷದ. ೬೫). [ಸಂ. ವಿಚಾರಪರತಾ]

ವಿಚಾರಭ್ರಷ್ಟ (ನಾ). = ವಿಚಾರಗೇಡಿ : ಶಿಷ್ಟಜನದೂರನೆ ವಿಚಾರಭ್ರಷ್ಟನೇ ಗರ್ವಿತನೆ ಸುಜನಾರಿಷ್ಟನೇ ತಾಮಸನೆ ನೀತಿವಿಹೀನನೇ ವಿಳನೆ (ಬಸವು. ೪೫-೨೧). [ಸಂ.]

ವಿಚಾರಲಹರಿ (ನಾ). = ವಿಚಾರಧಾರೆ : ಸರ್ವಸಾಧಾರಣವಾಗಿ ವೈಖಾನಸ ಮತ್ತು ಪಾಂಚರಾತ್ರಾಗಮಗಳಲ್ಲಿನ ವಿಚಾರಲಹರಿಯಲ್ಲಿ ಏಕವಾಕ್ಯತೆ ಇರುವುದು ಕಂಡು ಬರುತ್ತದೆ (ಭಾರದ. ೭೫). [ಸಂ.]

ವಿಚಾರವಂತ (ನಾ). ಆಲೋಚಿಸುವ ಸಾಮರ್ಥ್ಯವುಳ್ಳವನು ; ವಿಚಾರಜ್ಞ : ನನ್ನ ತಂದೆ ವಿಚಾರವಂತ (ಮಣಸ, ೩). [ < ಸಂ. ವಿಚಾರವತ್]

ವಿಚಾರವಾದ (ನಾ). (ಯಾವುದಾದರೂ) ವಿಷಯವನ್ನು ಪರ್ಯಾಲೋಚಿಸುವ ವಾದ, –ಸಿದ್ಧಾಂತ : ವಿಚಾರವಾದವು ಅವನಿಗೆ ಬಹಳವಾಗಿ ಹಿಡಿಸಿದೆ (ದೂರಸ. ೨೧). [ಸಂ.]

ವಿಚಾರವಾದಿ (ನಾ). ವಿಚಾರವಾದವನ್ನು ಅನುಸರಿಸುವವನು : ಶುದ್ಧ ವಿಚಾರವಾದಿಗೆ ಅವುಗಳಲ್ಲಿ ಯಾವ ಅರ್ಥವೂ ಕಾಣುತ್ತಿರಲಿಲ್ಲ (ದೂರಸ. ೮೦). [ಸಂ. ವಿಚಾರವಾದಿನ್]

ವಿಚಾರವಿನಿಮಯ (ನಾ). ಆಲೋಚನೆಗಳ ಪರಸ್ಪರ ವಿನಿಮಯ : ತಮ್ಮದಣಿ ಸೂಚಿಸಿದ್ದ ಪ್ರದಾನಸಂಬಂಧವಾದ ವಿಚಾರವಿನಿಮಯದಲ್ಲಿ ಇಡೀ ದಿನ ಕಳೆದು ಹೋಯಿತು (ಪುನರು. ೩೦೭). [ಸಂ.]

ವಿಚಾರವೇದಿಕೆ (ನಾ). ಆಲೋಚನೆಯ ಅಭಿವ್ಯಕ್ತಿಗೆ ಸೂಕ್ತವಾದ ಸ್ಥಾನ : ಹಿರಿಯ ಹೊತ್ತಗೆಯನ್ನು ಹೊರತರುವುದರ ಮೂಲಕ ಒಂದು ಹೊಸ ವಿಚಾರವೇದಿಕೆಯನ್ನು ಸಿದ್ಧಪಡಿಸಿದನು (ದ್ರಾವಿ. ೧೬ ಹಿನ್ನೆಲೆ). [ಸಂ. ವಿಚಾರವೇದಿಕಾ]

ವಿಚಾರವ್ಯಾಪ್ತಿ (ನಾ). ವಿಷಯದ ಹರಹು ; ವಿಚಾರದ ವಿಸ್ತಾರ : "ಆಲೋಚ್ಯಾಂಶಗಳು, ವಿಚಾರವ್ಯಾಪ್ತಿ" (Terms of reference. ಪತ್ರಿನಿ. ೮೩). [ಸಂ.]

ವಿಚಾರಶಕ್ತಿ (ನಾ). ಆಲೋಚನೆ ಮಾಡುವ ಸಾಮರ್ಥ್ಯ : ನಿದ್ದೆಯ ಹೊತ್ತಾಯಿತೆಂದರೆ . . . ಆಕಳಿಕೆಗಳು ಬರಹತ್ತುತ್ತವೆ. ವಿಚಾರಶಕ್ತಿಯು ಕುಂದುತ್ತದೆ (ಮುಂಬಯಿ. ೪-೧೩೧). [ಸಂ.]

ವಿಚಾರಶಾಸ್ತ್ರ (ನಾ). [ಅದ್ವೈತ] ವೇದಾರ್ಥವನ್ನು ತಿಳಿಸುವ ಶಾಸ್ತ್ರ ; ವೇದಾಂತ ವಿಚಾರ : ಗಹನವಾದ ಮಾರ್ಗವನ್ನು ಬಿಟ್ಟು ಸುಲಭವಾದ ಮಾರ್ಗದಲ್ಲಿ ಮಾಡುವ ವಿಚಾರಕ್ಕೆ ಲಾಘವತರ್ಕವೆಂದರ್ಥ. ಈ ರೀತಿ ಮಾಡಲ್ಪಡುವ ವಿಚಾರಶಾಸ್ತ್ರವೂ ಸಹ ವೇದಕ್ಕೆ ಸಂಬಂಧಪಟ್ಟು ವೇದದಲ್ಲೇ ಸೇರಿದಂತಿರುವುದರಿಂದ ವಿಚಾರಶಾಸ್ತ್ರವನ್ನು ವೇದದಂತೆ ಗೌರವಿಸುವರು (ಹಿಂದಸಾ. ೧೮೫). [ಸಂ.]

ವಿಚಾರಸಂಕಿರಣ (ನಾ). = ವಿಚಾರಗೋಷ್ಠಿ ೧ : ಈ ಅವಧಿಯಲ್ಲಿಯ ವಿವಿಧಭಾಷೆಗಳ ಸಾಹಿತ್ಯಸಮಾಲೋಚನೆಯನ್ನು ಕುರಿತ ವಿಚಾರಸಂಕಿರಣವು ಬನಾರಸ ಸಮ್ಮೇಲನದಲ್ಲಿ ನಡೆಯಿತು (ಸಾಸಮೂ. ೭೫). [ವಿಚಾರ + ಸಂಕಿರಣ]

ವಿಚಾರಸರಣಿ (ನಾ). = ವಿಚಾರಧಾರೆ : ಬಾಳೊಂದು ಸ್ವಾಂತವೆಂದೂ . . . ಸ್ವಾಂತದುರಂತಗಳಿಂದ ಸಮನ್ವಿತವೆಂದೂ ಒಂದು ವಿಚಾರಸರಣಿಯಿದೆ (ಸಾಹಿಸ. ೧೦೭) ; ವಿಚಾರಸರಣಿಯಿಂದ ಆವಳೊಬ್ಬ ಪ್ರಗತಿಪರಳು (ಕರ್ನಾಕ. ೬೯). [ಸಂ.]

ವಿಚಾರಸ್ಥಾನ (ನಾ). ೧. ವಿಷಯಗಳನ್ನು ತಿಳಿಯತಕ್ಕ ಸ್ಥಳ. ೨. ಪಕ್ಷಿಗಳ ಸಂಚಾರದ ಸ್ಥಳ ; ಹಕ್ಕಿಗಳು ಹಾರಾಡುವ ಜಾಗ. ೧, ೨ : ಅಳಿದುಳಿದು ಭಂಗಮಯಮಾಗಿರ್ದು ಮುರಿದ ನೃಪದಳಮಲ್ಲ ಬಹುವಿಚಾರಸ್ಥಾನಮಾಗಿರ್ದು ತಿಳಿಯಲ್ಕುಪದ್ರವಸ್ಥಳಮಲ್ಲಮೆನಿಸಿರ್ದುದಾ ವಿಮಲಸರಸಿ ಕಣ್ಗೆ (ಜೈಮಿಭಾ. ೧೫-೧೪). [ಸಂ.(ವಿಚಾರ + ಸ್ಥಾನ); (ವಿ + ಚಾರ + ಸ್ಥಾನ)]

ವಿಚಾರಿಸು (ಕ್ರಿ). ೧. ಯೋಚಿಸು ; ಚಿಂತಿಸು ; ಆಲೋಚಿಸು : ಮನದೊಳಣಂ ವಿಚಾರಿಸದೆ ಸ್ಮರಣೆಗೆಟ್ಟುಜೀವಿತ್ತಪೋದುದೀ ಮನಸಿಜನೆಂಬ ಪಾತಕನಿನಿಂತಪ ಹಾಸ್ಯಮನೆಯ್ದಲಕ್ಕುಮೇ (ಕಾದಂಪೂ.೮೪೬) ; ವಿಚಾರಿಸಲು ನರನ ನುಡಿ ಹೊಳ್ಳಾಗದಾ ಮುರಹರನ ಬಲುಹುಳ್ಳನ್ನಬರವೆನಲು (ಕುಮಾವ್ಯಾದ್ರೋ. ೮-೬೩). ೨. ಪರೀಕ್ಷಿಸು ; ಪರಾಮರ್ಶಿಸು: ಅಱಿಯದೆಯುಂ ವಿಚಾರಿಸದೆಯುಂ ನೃಪ ನೀಂ ನೆಗಟ್ಟನೆಯಲ್ಲೆ ಯೂನಱಿವೆನದಂತೆ ಕರ್ಣನೆಣೆಗಂ ತೊಣೆಗಂ ನೃಪರಾರುಮಿಲ್ಲ (ಪಂಪಭಾ. ೧೨-೧೦೦); ಕೃಷ್ಣೆಯ ಸೂನುಗಳಪ್ಪ ಪಂಚಪಾಂಡವರ ಶಿರಂಗಳಂ ನೆಱೆ ವಿಚಾರಿಸದಕ್ಕಟ ಕೊಂಡು ಬರ್ಪುದೇ (ಗದಾಯು. ೯-೩೩); ಚಾರುಕವಿತೆಯ ಬಳಕೆಯಲ್ಲ ವಿಚಾರಿಸುವಡಳವಲ್ಲ (ಕುವ್ಯಾಅ. ೧-೭). ೩. ಕೇಳು ; ಪ್ರಶ್ನೆಮಾಡು ; ಪ್ರಶ್ನಿಸು : ದಂಡಕನೃಪತಿ . . . ಭಟಾರರ ಪಕ್ಕದೆ ವಿಚಾರಿಸಿ ಧರ್ಮಮಂ ಕೇಳ್ದು ಮೆಚ್ಚಿ ನಂಬಿ ಶ್ರಾವಕಬ್ರತಂಗಳಂ ಕೈಕೊಂಡು ಶ್ರಾವಕನಾಗಿ (ವಡ್ಡಾರಾ. ೧೭೬-೯); ನಾಯಕನು ನೇರವಾಗಿಯೇ ನಾಯಕಿಯ ಕುಲಗೋತ್ರಗಳನ್ನು ವಿಚಾರಿಸುತ್ತಾನೆ (ಸಂಕವ. ೨೭). ೪. ಪರಿಶೋಧನೆ ಮಾಡು ; ತನಿಖೆ ಮಾಡು : ಪೆಣ್ಬುಯ್ಯಲಂ ವಿಚಾರಿಸದೆ ಪುರುಷಂ ಪೋಗಲಾಗದು (ವರ್ಧಪು. ೧೬-೫೮) ; ಅಯ್ಯೋ ಇದಂ ವಿಚಾರಿಸುವರಿಲ್ಲಾ ಎನುತೆ ಬಂದನುರವಣಿಸಿ (ತಿರುರ.ದೇ. ೧೪-೧೪).

ವಿಚಾರಿಸಿಕೊಳ್ಳು = ೧. ತನಿಖೆಮಾಡು ; ಪರಿಶೋಧನೆಮಾಡು : ಯಾವ ವಿಷಯದಲ್ಲೂ ಸರಿಯಾಗಿ ವಿಚಾರಿಸಿಕೊಳ್ಳದೆ ದುಡುಕಬಾರದು (ರೂಢಿ). ೨. ಮಾನ್ಯ ಮಾಡು ; ಉಪಚರಿಸು : ಅವರ ಮನೆಯಲ್ಲಿ ಅತಿಥಿಗಳನ್ನು ತುಂಬ ಚೆನ್ನಾಗಿ ವಿಚಾರಿಸಿಕೊಂಡರು (ರೂಢಿ). ೩. (ಆಲಂ) ತರಾಟೆಗೆ ತೆಗೆದುಕೊಳ್ಳು ; ಆಕ್ಷೇಪಣೆ ಮಾಡು : ಒಂದೇ ತಡವೆ ಗುಣವಂತ, ಪ್ರತಾಪಕುಮಾರಿ ಇವರಿಬ್ಬರ ಮೇಲಿನ ಹಗೆಯೂ ತೀರುವುದು. ಆಮೇಲೆ ವಿಚಾರಿಸಿಕೊಳ್ಳುವೆನು (ಅರ್ಯಕ. ೧೧೬). [ವಿಚಾರ + -ಇಸು]

ವಿಚಾರಿಸುಹ (ನಾ). ವಿಚಾರಣೆ ಮಾಡುವಿಕೆ : "ಅದುವದು – ವಿಚಾರಿಸುಹಂ" (ಶಮದ. ಪರಿ. ೨). [ವಿಚಾರಿಸು + -ಹ(< -ಪ)]

ವಿಚಿಂತ (ನಾ). ದುಃಖವಿಲ್ಲದವನು ; ನಿಶ್ಚಿಂತನಾದವನು : ನಲ್ಮೆಗಡಲೊಳ್ ಮುಳುಗಾಡಿ ವಿಚಿಂತನಾಗಿ . . . ಮಱೆವೊಕ್ಕೆನೊ ನಾಥನೆ ನಿನ್ನ ಹಸ್ತಮಂ (ವಸ್ತುವಂ. ೩-೨೪). [ಸಂ.]

ವಿಚಿಂತಾಂತರ (ನಾ). ದುಃಖವಿಲ್ಲದಿರುವಿಕೆ ; ನಿಶ್ಚಿಂತತೆ : ಮನೋಜ್ಞ ಪ್ರತತಿಕುಳದೊಳಾದೊಂದವಸ್ಥಾವಿಚಿಂತಾಂತರದೊಳ್ ಕೈಕೊಂಡು ಪರ್ಯಾಪ್ತಿಯನನವರತಂ ಮಾಟ್ಪ ಶೀಲೋತ್ಕರಂ ಕೂಡಿರೆ ವೈಯಾಪೃತ್ಯವೆಂಬೀ ತಪದೊಳೆಸಗಿದಂ (ಸುಕುಮಾ. ೪-೧೭). [ಸಂ.]

ವಿಚಿಕಿತ್ಸನ (ನಾ). ೧. ಶಂಕೆ ; ಸಂಶಯ. ೨. ತಪ್ಪು ಹೊರಿಸುವುದು ; ದೋಷಾರೋಪಣೆ ಮಾಡುವುದು : ಭೋಗಕಾಂಕ್ಷೆಯೊಳ್ ವಿಮುಖತೆಯುಂ ಮುನಿಜನ ತನುಮಳ ವಿಚಿಕಿತ್ಸನವರ್ಜನಮುಂ ತ್ರಿಮೂಢತಾನಿರಸನಮುಂ . . . ಎಂದು ಪೇೞ್ದೀಯೆಂಟು ಗುಣಂಗಳುಂ ಸಮ್ಯಗ್ದರ್ಶನಾವಯವಂಗಳ್ (ಆದಿಪು. ೫-೫೭). [ಸಂ.]

ವಿಚಿಕಿತ್ಸೆ (ನಾ). ಶಂಕೆ; ಸಂಶಯ; ಸಂದೇಹ : ಭಯಮಖಿಲಕಾಂಕ್ಷೆ ವಿಚಿಕಿತ್ಸೆಯನ್ಯದೃಷ್ಟಿಪ್ರಶಂಸೆ ಸಂಸ್ತವನಮೆಂಬೀ ಕ್ರಿಯೆ ಸಮ್ಯಗ್ದೃಷ್ಟಿಗೆ ನೋಡೆ ಯಥಾಕ್ರಮದಿಂ ವ್ಯತಿಕ್ರಮಂ ತಾನಕ್ಕುಂ (ಸುಕುಮಾ. ೬-೪೫). [ಸಂ. ವಿಚಿಕಿತ್ಸಾ]

ವಿಚಿತಿ (ನಾ). ಪದ್ಯವನ್ನು ಹೇಳುವಾಗ ನಿಲ್ಲಿಸುವ ಉಸಿರ್ದಾಣ ; ಯತಿ: ಭೂರ್ಭುವಸ್ವಾದಿಪದ್ಧತಿಯಿಂ ಕಲ್ತಿರುಮಿಲ್ಲಮಾ ವಿಚಿತಿಯೊಳ್ ನೀಮಗ್ನಿಮಿೞೇ ಪುರೋಹಿತಮೆಂದೋದಿದಿರಿಲ್ಲ (ಸುಕುಮಾ. ೨-೩೬). [ಸಂ.]

ವಿಚಿತ್ರ (ಗು). ೧. ಆಶ್ಚರ್ಯಕರವಾದ. ೨. ಅನೇಕ ಬಣ್ಣಗಳಿಂದ ಕೂಡಿದ ; ನಾನಾ ವರ್ಣದ : ನಿರ್ಭರರತೋದೀರ್ಣಾರ್ಣವಂ ಘೂರ್ಣಿಸಲ್ ಮಸಗಿತ್ತಂದು ವಿಚಿತ್ರಚಿತ್ರಿತಸುಧಾಶ್ರೀರಮ್ಯಹರ್ಮ್ಯಂಗಳೊಳ್ (ಶಾಂತಿಪು. ೮-೧೦೨). ೩. ನಾನಾ ಬಗೆಯ ; ಹಲವು ವಿಧವಾದ : ಲಳಿತವಿಚಿತ್ರ ಪತ್ರಫಲಪುಷ್ಪಯುತಾಟವಿ ಸೊರ್ಕಿದಾನೆಯಂ ಬೆಳೆವುದು (ಪಂಪಭಾ. ೧-೫೪) ; ಮಿಂಚುವ ವಿಚಿತ್ರಪತ್ರಾವಳಿಗಳಂ ಬರಸಿ ಮಂಗಳದ್ರವ್ಯಂಗಳಂ ಕೂಡೆ ತಂದಿರಿಸಿ (ನಂಬರ. ೫-೨೭). ೪. ಚೆಲುವಾದ ; ಸುಂದರವಾದ : ಮೊದಲೊಳ್ ಮುಳ್ ಮೇಗೆ ವಿಚಿತ್ರದಳಿತರಕ್ತಪ್ರಸೂನಮೆಂಬಿನಿತ ಜೊಳ್ಳಾಗದು ಶಾಲ್ಮಲಿ ವನರುಹಮಾವುದಂತರಂ ನಿನಗಮಿದಿರ ಪಾದಿಗಮಧಿಪಾ (ಶಾಂತಿಪು. ೮-೧೫೨). ೫. ಬಣ್ಣಗೊಟ್ಟ; ಬಣ್ಣಹಾಕಿದ: ವಿಚಿತ್ರಚಿತ್ರಭಿತ್ತಿ ತಂತನ್ಯಮಾನವಾತಾಯನಪರೀತಮತ್ತವಾರಣಕ್ರೋಡೀಕೃತ ಚಂದ್ರಕಾಂತಕಾಂತ. ಸುಧಾವೇದಿಕಾಮಧ್ಯ ಭೂಮ್ಯಂತರಾಳದೊಳ್ (ಶಾಂತಿಪು. ೮-೮೬ ವ).

(ನಾ). ೬. ಆಶ್ಚರ್ಯಕರವಾದುದು; ಬೆರಗುಗೊಳಿಸುವಂತಹದು; ವಿಸ್ಮಯಕರವಾದುದು: ವಿಚಿತ್ರಂ ಮತ್ತಂ ದೇವಿಯರ್ ನೋಡನೋಡಲೊರ್ವ ಶತವೃದ್ಧನಾಗಿ ನಿಂದಿರ್ದಂ (ಸಂಬಿರ. ೬-೨) ; ಗೊರವ ನಿನ್ನಯ ಶೌರ್ಯಮದಿರ್ಕೆ ಖಡ್ಗಮಾ ಧನುಶರಮೆತ್ತ ನಿನ್ನ ತಪಮೆತ್ತ ವಿಚಿತ್ರಮಿದಲ್ತೆ ಧಾತ್ರಿಯೊಳ್ (ಶಬಶಂ. ೪-೩೦) ; ಚಿತ್ರಾಂಗದೆಯ ಕಥೆ ವಿಚಿತ್ರಮೆಂದಾಡುವರ್ (ಚಿತ್ರಾಂಗ. ೬೩-೧೯೧). ೭. [ಛಂದ] ಅಕ್ಷರಛಂದಸ್ಸಿನಲ್ಲಿ ಆರನೆಯ ಛಂದಸ್ಸಾದ ಗಾಯತ್ರಿಯಲ್ಲಿ ಒಂದು ಪ್ರಭೇದದ ಹೆಸರು; ಎರಡು ಯಗಣವಿರುವ ವೃತ್ತ : ಪಯೋಯುಗ್ಮದಿಂದಂ ಪಯೋಜಾಯತಾಕ್ಷೀ ಪ್ರಯೋಗಪ್ರಸಿದ್ಧಂ ನಿಯುಕ್ತಂ ವಿಚಿತ್ರಂ (ಛಂದೋಂಬು. ೨-೬೬). ೮. [ನಾಟ್ಯ] ಹತ್ತು ಬಗೆಯ ಆಕಾಶಮಂಡಲಗಳಲ್ಲಿ ಒಂದು ಬಗೆ : ಶುದ್ಧವಿಚಿತ್ರ[ಪಾಠಾಂ. ಚಿತ್ರ, ಪವಿತ್ರ]ಮೆಂಬ ಪೂರ್ವರಂಗಪ್ರಸಂಗದೊಳ್ . . . ಪುಷ್ಪಾಂಜಲಿವಿಕ್ಷೇಪಣಾದಿ ನಾಂದೀವಿಧಿಯಂ ನಿರ್ವರ್ತಿಸಿ (ಆದಿಪು. ೭-೧೧೫ ವ) ; ಅತಿಕ್ರಾಂತ . . . ವಿಚಿತ್ರ ವಿಪೃತ ಅಲಾತ ಲಲಿತ ಈ ಹತ್ತು ಆಕಾಶಮಂಡಲಂಗಳ್ (ಲಾಸ್ಯರಂ. ೮-೪ ವ). [ಸಂ.]

ವಿಚಿತ್ರಲಲಿತ (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಹದಿನೈದನೆಯ ಛಂದಸ್ಸಾದ ಅತಿಶಕ್ವರಿಯಲ್ಲಿ ಒಂದು ಬಗೆ ; ನಸನಭಯಗಣಗಳಿರುವ ಒಂದು ವೃತ್ತ : ತ್ರಿದಶ ಮರುದಿಂದ್ರಪುರಚಂದ್ರಸಲಿಲಂಗಳ್ ತುದಿಯೊಳಿರೆ ತಳ್ತು ಹರರಲ್ಲಿ ಯತಿ ನಿಲ್ಕುಂ ವಿದಿತಮಿದು ಧಾರಿಣಿಯೊಳಬ್ಜದಳನೇತ್ರೇ ಸದಮಲವಿಚಿತ್ರಲಲಿತಂ (ಛಂದೋಂಬು. ೨-೧೫೮). [ಸಂ.]

ವಿಚಿತ್ರಾಂಗಿ (ನಾ). ಸುಂದರವಾದ ಅವಯವಗಳನ್ನುಳ್ಳವಳು ; ಚೆಲುವೆ : ಸರೋಜಾತಾದಿ ನಿಸ್ಸಾರವಸ್ತುಗಳೊಳ್ ಪೋಲಿಸುವಂತುಟೇಮ್ಮರುಳನೇ ರೂಪಂ ವಿಚಿತ್ರಾಂಗಿಯಾ (ಆದಿಪು. ೬-೮೫). [ಸಂ. ವಿಚಿತ್ರಾಂಗೀ]

ವಿಚಿತ್ರೋಕ್ತಿ (ನಾ). ಆಶ್ಚರ್ಯಕರವಾದ ಮಾತು ; ಬೆರಗುಗೊಳಿಸುವ ನುಡಿ : ಕರಜಳಧರ ಕಳಧೌತೋತ್ಕರವರ್ಷದೆ ವಂದಿನಂದ[ನಾ]ವಳಿಗಳ ವಿಸ್ತರಿಪುವೆನೆ ದಾನಮವಿಳೋರ್ವ್ವರೆಗೆ ವಿಚಿತ್ರೋಕ್ತಿ ರೂಪವಿದ್ಯಾಧರಿಯ (ಸೌಇಇ. XX. ೪೯-೩೬; 1076 7). [ಸಂ.]

ವಿಚೂರ್ಣಿತ (ಗು). ವಿಶೇಷವಾಗಿ ಪುಡಿಮಾಡಿದ ; ಬಹಳ ಪುಡಿಮಾಡಿದ : ಆಯತವಾಮಹಸ್ತತಳಕ್ಷಣವಜ್ರ[ವಿ]ಚೂರ್ಣಿತಾದ್ರಿ ವಜ್ರಾಯುಧನೆಂಬ ದೊಡ್ಡಿವೆಸರಂ . . . ತಳರ್ದಂ ನೃಪಾತ್ಮಜಂ (ಶಾಂತಿಪು. ೮-೫೬). [ಸಂ.]

ವಿಚೇಷ್ಟೆ (ನಾ). ಚಲನೆಯಿಲ್ಲದಿರುವಿಕೆ ; ನಿಷ್ಪಂದವಾಗಿರುವ ಸ್ಥಿತಿ : ಅಱಿವು ಮಱವೆಗಳೊಂದನೊಂದನು ಮುಱಿದು ನೂಕಿದವವನಿಪತಿ ಕಡುವೆಱಗ ಕೇಣಿಯ ಕೊಂಡವೋಲಿದ್ದನು ವಿಚೇಷ್ಟೆಯಲಿ (ಕುವ್ಯಾಅ. ೧೪-೪). [ಸಂ. ವಿಚೇಷ್ಟಾ]

ವಿಚ್ಛಳಾಕಾರ (ನಾ). ಹೊಳೆಯುತ್ತಿರುವ ಆಕೃತಿ : ಮದಾಂಧಗಂಧಸಿಂಧುರಂ ಕರಿಣೀವೃಂದಂಗಳಿಂ ಪರಿವೇಷ್ಟಿತನಾಗಿ . . . ಲೀಲೆಯಿಂ ಬಂದು ಸ್ವಚ್ಛವಿಚ್ಛಳಾಕಾರ [ಪಾಠಾಂ. ವಿಚ್ಛಾಳಾಕ, ಲಿಚ್ಛಾಳಾಕ]ಮಪ್ಪ ಮಡುವಂ ಪೊಕ್ಕು ಮನೋಹಾರಿಗಳಪ್ಪ ಕರಿಣೀಗಣದೊಡನೆ ಕ್ರೀಡಿಸುವುದಂ ಮೂವರುಂ ಕಂಡು (ವಡ್ಡಾರಾ. ೩೬-೨೧). [ಸಂ. ವಿಚ್ಛಲಾಕಾರ ?]

ವಿಚ್ಛಾಯ (ಗು). ೧. ನೆರಳಿಲ್ಲದ ; ಛಾಯೆಯಿಲ್ಲದ. (ನಾ). ೨. ರತ್ನ ; ಮಣಿ. ೩. ಕಾಂತಿಹೀನವಾದುದು ; ಮಂಕಾದುದು : ಚತುರಂಗ ಚಮೂಚಕ್ರಪಾಂಶುಪಟಲದಿಂದಂ ದಿಙ್ಮುಖಂಗಳುಂ ವಿರೋಧಿನರಪಾಲಪ್ರಿಯ ಸಖೀಮುಖಂಗಳುಂ ವಿಚ್ಛಾಯಂಗಳಾಗೆಯುಂ (ಆದಿಪು. ೧೩-೬೬ ವ) ; ಕಡುರೋಮದ ವಿಚ್ಛಾಯದ ಕಡುಮುಳಿಸಿನ ಚಪಳವೃತ್ತಿಲೋಲುಪದಾ ಜಡಭಾವದ ಹರಿಗಳ್ಕುಂ . . . ಮರಣಭಯಂ (ಅಶ್ವಶಾ. ೬-೧೨). ೪. ಹಕ್ಕಿಗಳು ಗುಂಪಾಗಿ ಹಾರುವಾಗ ನೆಲದ ಮೇಲೆ ಬೀಳುವ ಅವುಗಳ ನೆರಳು. [ಸಂ.]

ವಿಚ್ಛಾಯತೆ (ನಾ). ಕಾಂತಿಹೀನತೆ; ತೇಜೋಹೀನತೆ : ಜೀವಂ ತನುವಿಂ ತಳರಲೊಡಂ ವಿಚ್ಛಾಯತೆಗೊಳಗಾದುವು ತೊಳಗುವವರ ಸೌಂದರತನುಗಳ್ (ಆದಿಪು. ೫-೨೬). [ಸಂ. ವಿಚ್ಛಾಯತಾ]

ವಿಚ್ಛಾಯತ್ವ (ನಾ). = ವಿಚ್ಛಾಯತೆ : ಬಾಹ್ಯಾಭ್ಯಂತರತಪೋನುಷ್ಠಾನದಿಂ ಪಟುತರತಪನತಾಪನಿಷ್ಕೀತಸಾರತರುವೋಲ್ ನಿಸ್ಸಾರವಿಚ್ಛಾಯತ್ವಗಸ್ಥಿಸಿರಾ ಜಾಲಮಾತ್ರತನುಯಂತ್ರನುಂ . . . ಅಪ್ಪ ಯತಿಗೆ ಯಾಚನಾಪರೀಷಹಜಯಮಱಿಯೆ ಪಡುಗುಂ (ತತ್ತ್ವಪ್ರ. ೩೩೬). [ಸಂ.]

ವಿಚ್ಛಾಯೆ (ನಾ). = ವಿಚ್ಛಾಯತೆ : ಅಂಗವಿಚ್ಛಾಯೆಯ ತೆಱದ ರಂಧ್ರಂಗಳೂದುವ ಬಸುಱ . . . ಹೇಸಿಕೆಯು ನಾತವಧಿಕಭಯಂಕರವು ಪಸರಿಸಲು (ಬಸವು. ೪೬-೫೮). [ಸಂ. ವಿಚ್ಛಾಯಾ]

ವಿಚ್ಛಿತ್ತಿ (ನಾ). ೧. ತುಂಡುಮಾಡುವಿಕೆ ; ಕತ್ತರಿಸುವಿಕೆ. ೨. ಬಿರುಕು ಬಿಟ್ಟಿರುವುದು ; ಒಡಕು ; ಸೀಳು. ೩. ತಡೆ ; ಅಡ್ಡಿ ; ಆತಂಕ : ಕೋಟಿಗಾಳೆಗದ ಪರಂಪರೆಗೆ ವಿಚ್ಛಿತ್ತಿ ಬಂದು ಒದಗಿತು (ಕರ್ಣಾಜ. ೬೨) ; ಒಂದು ದಿನ ಭಟ್ಟರಿಗೆ ಛಳಿಜ್ವರ ಬಂದು ಸಾಧನೆಗೆ ಸ್ವಲ್ಪ ವಿಚ್ಛಿತ್ತಿ ಬಂದಿತ್ತು (ರಾಮಾನ. ೯೩). ೪. ಬೇರೆಮಾಡುವುದು ; ವಿಚ್ಛೇದನ : ಕೇವಲ ಕ್ಷುಲ್ಲಕಕಾರಣಗಳಿಗಾಗಿ ದಾಂಪತ್ಯವಿಚ್ಛಿತ್ತಿಗೆ ಅನುಮತಿಯನ್ನು ಕೊಡುತ್ತ ಹೋದರೆ ಸಮಾಜವ್ಯವಸ್ಥೆಯ ಕಟ್ಟುಪಾಡೂ . . . ಉಳಿಯುವ ಬಗೆ ಹೇಗೆ (ಪ್ರಗಂಬ. ೧೫೯). ೫. ಇಲ್ಲದಂತೆ ಮಾಡುವುದು ; ನಾಶ : ಸಾಕ್ಷಾತ್ಪರಂಪರಾಭೇದದಿಂ ಪ್ರತ್ಯಕ್ಷಮುಂ ಇತ್ತೆಱನಲ್ಲಿ ಅಜ್ಞಾನವಿಚ್ಛಿತ್ತಿಯುಂ ಸದ್ಜ್ಞಾನೋತ್ಪತ್ತಿಯುಂ . . . ಸಾಕ್ಷಾತ್ಪ್ರತ್ಯಕ್ಷ ಫಲಂ (ತತ್ತ್ವಪ್ರ. ೪). ೬. ಕದಿಯುವಿಕೆ ; ಕಳ್ಳತನ : "ವಿಚ್ಛಿತ್ತಿ [ಪಾಠಾಂ. ನಿಕ್ಷಿಪ್ತ] ಚೌರ್ಯಂ ಸ್ತೇಯಮೆನಲ್ ಕಳವಕ್ಕು" (ಮಂಗರಾ. ೬೬-೫). ೭. ಗಡಿ ; ಸೀಮೆ ; ಎಲ್ಲೆ. ೮. [ಛಂದ] ಪದ್ಯವನ್ನು ಓದುವಾಗ ಅರ್ಥಸ್ಫೂರ್ತಿ ಕೆಡದಂತೆ ನಿಲ್ಲಿಸುವ ಉಸಿರ್ದಾಣ ; ಯತಿ. [ಸಂ.]

ವಿಚ್ಛಿದುರ (ಗು). ಭಗ್ನವಾದ; ಛಿದ್ರಗೊಂಡ : ಅಂತು ವಿದುರಂ ವಿಚ್ಛಿದುರಮನನಾಗಿ ಬಿಲ್ಲನುಡಿವುದುಂ (ಪಂಪಭಾ. ೯-೫೯ ವ). [< ಸಂ. ವಿಚ್ಛಿದ್ರ]

ವಿಚ್ಛಿನ್ನ (ಗು). ೧. ಒಡೆದ ; ಸೀಳಿದ. ೨. ವಿಭಾಗವಾದ ; ಬೇರೆಯಾದ. ೩. ತಡೆಗಟ್ಟಿದ ; ಅಡ್ಡವಾದ. ೪. ನಿಂತುಹೋದ ; ಮುಗಿದ. ೫. ಹರಿದ ; ಪ್ರವಹಿಸಿದ : ಅಂತು ನಿರುತ್ತರನಾಗಿ ಪ್ರತಿವಾದೀಂದ್ರಂ ವನಪ್ರವಿಷ್ಟಕರೀಂದ್ರ ವಿಚ್ಛಿನ್ನಮದಸಲಿಲಪ್ರವಾಹನಾಗಿರ್ದೊಡಂಬಟ್ಟು ಕುಡಿಸೆ (ಶಾಂತಿಪು. ೮-೧೯೯ ವ). (ನಾ). ೬. ಬೇರೆಯಾಗುವಿಕೆ ; ಅಗಲುವಿಕೆ : ನಿನಗಮೆನಗಮೇತಱೊಳಂ ವಿಕಲ್ಪಮುಂ ವಿಚ್ಛಿನ್ನಮುಮಿಲ್ಲೆಂದು ನುಡಿಯುತಿರ್ಪನ್ನೆಗಂ (ಪಂಪಭಾ. ೪-೪೫ ವ). ೭. ಚೆಲ್ಲಾಪಿಲ್ಲಿ ; ಚದುರಿಹೋದುದು : ಪನ್ನಗೇಂದ್ರಾಭರಣ ನಿಮಗೆಂದುನ್ನಿಸಿದ ಚೆಲುವಕ್ಕಿಯವು ವಿಚ್ಛಿನ್ನವಾದವಕಟಕಟ (ಬಸವು. ೨೬-೧೮). [ಸಂ.]

ವಿಚ್ಛುರಿತ (ಗು). ಬಳಿದ ; ಲೇಪಿಸಿದ : ಹರಿಚಂದನವಿಚ್ಛುರಿತಾಂಗರಾಗನತಿ ರುಚಿರಹಾರನೇನೆಸೆದನೊ . . . ಪಾಂಡ್ಯನೃಪೇಂದ್ರಂ (ಶಾಂತಿಪು. ೫-೧೩೮). [ಸಂ.]

ವಿಚ್ಛೇದ (ನಾ). ೧. ತುಂಡುಮಾಡುವಿಕೆ ; ಕತ್ತರಿಸುವುದು. ೨. ಬಿಡುವಿಕೆ ; ತೊರೆಯುವಿಕೆ : ಅವರಲ್ಲಿ ಆಗಲಿದ್ದ ವಿಚ್ಛೇದವು ತಪ್ಪಿ ಸಂಸಾರ ಕೂಡಿತು (ಬಂಕಿಮ. ೧೨೬). 'ವಿವಾಹವಿಚ್ಛೇದ' ಪರಾ. ೩. ಗ್ರಂಥದ ಭಾಗ ; ಅಧ್ಯಾಯ ; ಪರಿಚ್ಛೇದ. ೪. ಅವಕಾಶ ; ಬಿಡುವು. [ಸಂ.]

ವಿಚ್ಛೇದನ (ನಾ). ೧. ತುಂಡುಮಾಡುವಿಕೆ ; ಕತ್ತರಿಸುವಿಕೆ : "ಕಲ್ಪನಂ ವಿಚ್ಛೇದನಂ ಕರ್ತನಂ ವರ್ಧನಂ ಕಡಿಹಂ" (ಮಂಗರಾ. ೧೨೯-೧೧). ೨. ವಿಶ್ಲೇಷಣೆ ; ವಿಭಜನೆ: 'ವಿಚ್ಛೇದಿಸು' ಪರಾ. ೩. ಬಿಡುವಿಕೆ ; ತ್ಯಜಿಸುವಿಕೆ ನಾನು ನಿನ್ನ ಉನ್ನತಿಗಾಗಿ ಯತಿಸುತ್ತೇನೆ. ಆದರೆ ನಿನ್ನೊಡನೆ ಅಸಮಾಧಾನ ಹೊಂದಿದಾಗ ಈ ಸಂಬಂಧವನ್ನು ವಿಚ್ಛೇದನ ಮಾಡುತ್ತೇನೆ (ನಿಶೆಉ. 238) ; 'ದಾಂಪತ್ಯ ವಿಚ್ಛೇದನ' ಪರಾ. [ಸಂ.]

ವಿಚ್ಛೇದಿಸು (ಕ್ರಿ). ೧. ನಾಶಗೊಳಿಸು ; ಇಲ್ಲದಂತೆ ಮಾಡು : ಭವಕಾಂತಾರ ವಿಹಾರದೊಳ್ ವಿಷಯಮಂ ವಿಚ್ಛೇದಿಸಲ್ ಚಿತ್ತಸಂಭವನಂ ಸಂಹರಿಸಲ್ ಕಷಾಯಭಟರಂ ಬೆನ್ನಟ್ಟಲಾರ್ಪೀ ಮಹಾವ್ಯವಸಾಯಂ ತಮಗಾಗೆ (ಅಜಿಪು. ೧-೫). ೨. ವಿಶ್ಲೇಷಣೆಮಾಡು ; ವಿಭಜಿಸು : ಅವಳು ಸ್ನೇಹ ಮತ್ತು ಪ್ರೇಮಗಳನ್ನು ವಿಚ್ಛೇದಿಸಿ ನೋಡಲು ಶಕ್ತಳಾಗಿದ್ದಳು (ಹೇಮಂತ. ೨೯೬). [ವಿಚ್ಛೇದನ + - ಇಸು]

**ವಿಜಅರಸ** (ನಾ). ಒಬ್ಬಾತನ ಹೆಸರು : ವೀರಾಪುರುಷ ಸಮಕ್ಷಮದ ಕೇಳಯಪಲ್ಲವರಂ ಕಾದೆಱೆದು ಪೆತ್ತಜಯನಾ ವಿಜಅರಸನ್ಗೆ ಬಾಳ್ಗಳ್ಚು ಪಲ್ಮಡಿಉಂ ಮೂಱುವಳ್ಳಿಉಂ ಕೊಟ್ಟಾರ್ (ಮೈಆರಿ. ೧೯೩೭, ೧೬-೧೨; 450).
[< ವಿಜಯ್$_2$ + ಅರಸ$_1$]

**ವಿಜಕ್ಕ** (ನಾ). ಒಬ್ಬಾಕೆಯ ಹೆಸರು : ನವಿಲೂರ ಗಣದ ಬಾಳಂಬಾಕನ್ತಿಯರ್ ಮಗಳ್ ವಿಜಕ್ಕಂ ಪರೋಕ್ಷವಿನಯಂಗೆಯ್ದು ಕಲ್ಲನಿಱಿಸಿದಳ್ (ಎಕ.VI, ಕಡೂರು. ೧೫೫-೧೪; 961). [< ವಿಜಯ್$_2$ + ಅಕ್ಕ$_1$]

**ವಿಜಣನಾಯ್ಗ** (ನಾ). ಒಬ್ಬಾತನ ಹೆಸರು : ವಿಜಣನಾಯ್ಗರಾ ಮಗನ್ ಕಾಳ್ಗಿದೆ . . . ಸ್ವರ್ಗ್ಗಾಲಯಕ್ಕೇಱಿದೊನ್ (ಎಇ. IX, ೧೭-೫; ಪು.800).
[< ವಿಜಯ್$_2$ + < ಅಣ್ಣ$_1$ + ನಾಯ್ಗ (< ನಾಯಗ)]

**ವಿಜನ** (ಗು). ೧. ಜನರಿಲ್ಲದ ; ನಿರ್ಜನವಾದ ; ಏಕಾಂತವಾದ : ಕಾಮಳ್ಳಿಗಿಳಿಗಳುಲಿ ಕೇಳಿಸಿತ್ತಿಂಪಾಗಿ ಕಾನನದ ವಿಜನನೀರವದಿ (ಚಿತ್ರಾಂಗ. ೨೦-೫೪೬). (ನಾ). ೨. ನಿರ್ಜನವಾದುದು ; ಏಕಾಂತವಾದುದು : ಶಾಂತಿಯನ್ನಳವಡಿಸೆ ವಿಜನಮಹಿಚಾವಿನೊಳ್ ಕುಳ್ಳಿರ್ದು . . . ಉಭಯದಿಟ್ಟಿಗಳ ನಾಸಾಗ್ರದಲಿ ನೆಲೆಗೊಳಿಸೆ (ಪಂಕಾರಾ. ೨-೧೦-೨೨) ; ಪ್ರತ್ಯೇಕವೂ ವಿಜನವೂ ಆದ ಸ್ಥಳದಲ್ಲಿ ಗೃಹವಧುವಿನಂತೆ ಯಾರನ್ನೋ ನಿರೀಕ್ಷಿಸಿಕೊಂಡು ಕುಳಿತಿದೆಯೋ ಏನೋ (ನಿಬಂಧ. II, ೧೦೬). [ಸಂ.]

**ವಿಜಪಿಲ** (ನಾ). ಕೆಸರಿರುವ ಸ್ಥಳ : "ಪಿಚ್ಛಲಂ ವಿಜಪಿಲ[ಪಾಠಾಂ.ಲಕಂ]-ಈ ೨ ಕೆಸಱುಳ್ಳೆಡೆ" (ಹಲಾಯು. ೧೧೨-೫೬). [ಸಂ.]

**ವಿಜಯ$_1$** (ನಾ). ಒಂದು ಬಗೆಯ ಔಷಧೀಸಸ್ಯ : ಜಾಕಾಯಿ, ಜಾಪತ್ರೆ . . . ಅಳಲೆಕಾಯಿ, ವಿಜಯ, ಎಳ್ಳು, ಇವಂ ಪ್ರತ್ಯೇಕ ಸಮಾನವಾಗಿ ಚೂರ್ಣಿಸಿ . . . ಎಣ್ಣೆಯಲ್ಲಿ ಕೊಡಲು ಆಮಾತಿಸಾರಂ ಪರಿಹರವಹುದು (ಸಚವೈ. ೩೧೪). [ಸಂ. ವಿಜಯಾ]

**ವಿಜಯ$_2$** (ನಾ). ೧. ಗೆಲುವು ; ಯಶಸ್ಸು : ಜೈನಶಾಸನದೇವಿಕುಳಮುಂ ಸಮಂತು ಸಮಸಂದಿಷ್ಟಾರ್ಥಮಂ ಮಾಳ್ಕೆ ಕಾಂತನ್ನಲೋಕಸ್ತುತ ನಿನ್ನೊಳಿಂದು ವಿಜಯಂ ಭದ್ರಂ ಶುಭಂ ಮಂಗಳಂ (ಪುಷ್ಪಪು. ೮-೬೪). ೨. ಗೆಲುವು ಪಡೆದವನು ; ಜಯಶಾಲಿಯಾದವನು : ನಡೆ ವಿಜಯನಾಗೆಂದು ತನುವನು ತಡವಿದರು (ಕುಮಾ.ದ್ರೋ. ೪-೫೩) ; ವಿಜಯನಾಗೈ ಕಂದ (ಕೌಶಿರಾ. ೨೮-೬). ೩. ಪಾಂಡವರಲ್ಲಿ ಮೂರನೆಯವನಾದ ಅರ್ಜುನನ ಹೆಸರುಗಳಲ್ಲಿ ಒಂದು : ಭುಜವಿಜಯದೆ ವಿಜಯನುಮನಿಱಿಸಿದಂ ನರಸಿಂಹಂ (ಪಂಪಭಾ. ೧-೩೬) ; ದಿವ್ಯಾಸ್ತ್ರಮಂ ವಿಜಯಂಗಿತ್ತವನೀತನೀತನೆ (ಪಂಪಾಶ. ೩೧). ೪. ವೈಕುಂಠದ ದ್ವಾರಪಾಲಕರಲ್ಲಿ ಒಬ್ಬನ ಹೆಸರು : ಜಯನ ವಿಜಯನ ದೈತ್ಯಜನ್ಮವನು ಈತನೊದೆದನು (ಕುಮಾ.ಉ. ೯-೫೪). 'ಜಯ' ಪರಾ. ೫. ಅರುವತ್ತು ಸಂವತ್ಸರಗಳಲ್ಲಿ ಒಂದು; ಇಪ್ಪತ್ತೇಳನೆಯ ಸಂವತ್ಸರ : ಪ್ರಭವ ವಿಭವ . . . ವಿಜಯ ಅಕ್ಷಯವೆಂದಱುವತ್ತು ತೆಜನಾಗಿಹುದು (ವಿವೇಕ. ೩೦). ೬. ಇಪ್ಪತ್ತೆಂಟು ಶಿವಾಗಮಗಳಲ್ಲಿ ಒಂದು : ಕಾಮಿಕೆ, ಯೋಗಜ . . . ವಿಜಯ, ನಿಶ್ವಾಸ . . . ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಭಾರದ. ೭೨). ೭. ವೈಖಾನಸಾಗಮದಲ್ಲಿ ಸಂಹಿತೆಗಳೆಂದು ಪ್ರಖ್ಯಾತಿಗೊಂಡ ಎಂಟು ವಿಭಾಗಗಳಲ್ಲಿ ಒಂದು : ಮರೀಚಮಹರ್ಷಿಪ್ರೋಕ್ತವಾದ . . . ವೀರ, ವಿಜಯ, ವಿಮಲ, ಕಲ್ಪಗಳೆಂಬ ಎಂಟು ಆಗಮಗಳು "ಸಂಹಿತೆ"ಗಳೆಂದೂ . . . ಪ್ರಖ್ಯಾತವಾಗಿವೆ (ಭಾರದ. ೭೫). ೮. ಶೂರ ; ವೀರ. ೯. ಯುದ್ಧ ; ಸಮರ : "ಧುರಜೈತ್ರಾಭಯ ಪಾರ್ಥರಿಂತು ವಿಜಯಾಖ್ಯಂ" (ನಾನಾರ. ೯೫).

ವಿಜಯಮಂಡನ = ಗೆಲುವಿನಿಂದ ಶೋಭಿಸುವವನು ; ಒಂದು ಬಿರುದು : ಬನವಾಸೆನಾಡನೊಸೆದಾಳ್ದು ವಿರಾಜಿಪ ಬಳ್ಳಿಗಾವೆಯೊಳು ಸ್ಥಿರವಿರುತಿರ್ದ್ದಪಂ ವಿಜಯಮಂಡನ ರೇಚಣದಂಡನಾಯಕಂ (ಎಕ.VIII(S), ಶಿಕಾರಿ. ೩೩೪-೧೬ ; 1100). [ಸಂ.]

**ವಿಜಯಂಗೆಯ್** (ಕ್ರಿ). ಹೊರಡು ; ಪ್ರಯಾಣಬೆಳೆಸು ; IP ಇದು ರಾಜರು, ಗುರುಹಿರಿಯರ ಆಗಮನ, ನಿರ್ಗಮನಗಳನ್ನು ಕುರಿತು ಹೇಳುವಾಗ ಗೌರವಸೂಚಕವಾಗಿ ಬಳಸುವ ಪದ : ಗಂಗಮಂಡಲಿಕಂ ದೇವನಿವಾಸದತ್ತ ವಿಜಯಂಗೆಯ್ದಂ ನೊಱಂಬಾನ್ವಕಂ (ಎಕ. II, ೫೯-೧೧೩ ; 974). [ವಿಜಯ್$_2$ + ಕೆಯ್$_1$]

**ವಿಜಯಚ್ಛಂದ** (ನಾ). ಐನೂರು ಎಳೆಗಳುಳ್ಳ ಒಂದು ವಿಧವಾದ ಹಾರ : ಸಾಸಿರದೆಂಟುತೋರಮುತ್ತಿನ ಸರದಿಂದ್ರಚ್ಛಂದಂ ಮೊದಲಾಗೆ ವಿಜಯಚ್ಛಂದಹಾರದೇವಚ್ಛಂದಾರ್ಧಹಾರ ರಶ್ಮಿಕಲಾಪಗುಚ್ಛನಕ್ಷತ್ರಮಾಲಾರ್ಧಗುಚ್ಛಮಾಣವಕಾರ್ಧಮಾಣವಕಂಗಳೆಂಬ ಪನ್ನೊಂದು ನಾನಾರತ್ನಸುವರ್ಣಫಲಕವಿರಚನಾದಿಭೇದದಿಂ (ಆದಿಪು. ೮-೫ ವ) ; IP "೫೦೪ ಎಳೆಗಳುಳ್ಳ ಹಾರವು, ಇದನ್ನು ಅರ್ಧಚಕ್ರವರ್ತಿಗಳೂ ಬಲದೇವ, ಕಾಮದೇವ ಮೊದಲಾದವರೂ ಧರಿಸುತ್ತಾರೆ" (ಆದಿಪು. ಕೋಶ). [ಸಂ.]

**ವಿಜಯಜಾತಿ** (ನಾ). [ಜೈನ] ಪಾರಿವ್ರಾಜ್ಯಲಕ್ಷಣಗಳನ್ನು ತಿಳಿಸುವ ಜಾತಿ ಎಂಬ ಸೂತ್ರಪದದ ನಾಲ್ಕುವಿಭಾಗಗಳಲ್ಲೊಂದು ; IP ವಿಜಯಜಾತಿಯಿಂದ ಚಕ್ರವರ್ತಿತ್ವವುಂಟಾಗುತ್ತದೆ : ದಿವ್ಯಜಾತಿಯಿಂದಹಮಿಂದ್ರತ್ವಮುಂ ವಿಜಯಜಾತಿಯಿಂದ ಚಕ್ರವರ್ತಿತ್ವಮುಂ . . . ಪಡೆಯಲಕ್ಕುಂ (ಚಾವುಂಪು.೨೨೮). 'ದಿವ್ಯಜಾತಿ' ಪರಾ. [ಸಂ.]

**ವಿಜಯತೆ** (ನಾ). ಗೆಲುವಿನ ಸ್ಥಿತಿ ; ಗೆಲುವು ; ಜಯ : ಏಜೆ ಶಿವರತಿ ತೋಜೆ ದೃಷ್ಟವನೂಜೆ ವಿಜಯತೆ ಸಾಜೆ ಪುರದೊಳು ಬೀಜೆ ವಾಸನೆ ಹೇಜೆ ನಿಂಬಿಯ ಸೂಜೆಯೆಲ್ಲರಿಗೆ (ಬಸವು. ೩೬-೨೮). [ಸಂ. ವಿಜಯತಾ]

**ವಿಜಯದಶಮಿ** (ನಾ). ಆಶ್ವಯುಜಶುದ್ಧದಶಮಿ ಮತ್ತು ಅಂದು ಆಚರಿಸುವ ಹಬ್ಬ ; ನವರಾತ್ರಿಯ ಕೊನೆಯ ದಿನ : ವಿಜಯದಶಮಿದಿವಸ ನಡೆಸಿದ ಕಟ್ಟಳೆಗಳು (ಮಹಾವಂ. I, ೩೮) ; ವಿಜಯದಶಮಿಯ ಸುಮುಹೂರ್ತದಲ್ಲಿ ವಿಜಯಯಾತ್ರೆ ಹೊರಡುವುದೆಂದು ನಿಶ್ಚಯವಾಯಿತು (ಶಾಂತಲಾ. ೧೪೭).
[ಸಂ. ವಿಜಯದಶಮೀ]

**ವಿಜಯದ್ವಿಪ** (ನಾ). ರಾಜನು ದಿಗ್ವಿಜಯಕ್ಕೆ ಹೊರಡುವಾಗ ಏರುವ ಆನೆ ; ಜಯಗಜ : ಪಳಿಕಿನ ಶಿಲಾಪಟ್ಟಂ ಪ್ರಸ್ಥಾನದೊಳ್ ವಿಜಯದ್ವಿಪಾವಳಿಯ ದರಿಗೊಂಡುದ್ದೇಶಂ ಚಕ್ರವರ್ತಿಯ ನಾಮದಗ್ಗಳದ ಸಿರಿಯಂ ಪೋಲ್ವನ್ನಂ ತದ್ವಿಪಾಳಿ ದಿಗಂತದೊಳ್ ತಳೆದುದು ಜಯಸ್ತಂಭಶ್ರೀಯಂ ತ್ರಿಕೂಟಮಹೀಧರಂ (ಶಾಂತಿಪು. ೧೧-೧೮). [ಸಂ.]

**ವಿಜಯಧ್ವಜ** (ನಾ). ಜಯದ ಸೂಚಕವಾದ ಪತಾಕೆ ; ಜಯಧ್ವಜ : ಅನುವರದೊಳ್ ವಜ್ರಾಯುಧನನಿಕ್ಕಿ ವಿಕ್ರಾಂತದಿಂದೆ ವಿಜಯಧ್ವಜಮಂ ತನಗೆತ್ತಿಸಿದಂ . . . ನಿಜಶೌರ್ಯಬಳಂ (ಸುಕುಮಾ. ೭-೫) ; ಅಱಿಕೆದಾಣದೊಳೆಸೆವಂತೊಂದಿಸುತುಂ ವಿಜಯಧ್ವಜವೃಂದಮಂ . . . ಸಾರ್ತಂದಂ (ಪುಷ್ಪಪು. ೫-೫೯). [ಸಂ.]

**ವಿಜಯನಗರ** (ನಾ). ೧. ಗೆಲುವನ್ನು ಪಡೆದುದಕ್ಕಾಗಿ ಕಟ್ಟಿದ ನಗರ. ೨. ಒಂದು ಊರಿನ ಹೆಸರು ; IP ಈಗಿನ ಹಂಪೆ ಮತ್ತು ಹೊಸಪೇಟೆ ಪ್ರದೇಶ, ವಿಜಯನಗರ ಅರಸುಮನೆತನದ ರಾಜಧಾನಿಯಾಗಿದ್ದಿತು : ವೀರಶ್ರೀ ನಾರಸಿಂಹ ಸ ವಿಜಯನಗರೇ ರತ್ನಸಿಂಹಾಸನಸ್ಥಃ (ಎಕ.VIII,ಶಿವಮೊ.೧-೩೪; 1513).
[ಸಂ.]

**ವಿಜಯಪಟಹ** (ನಾ). ಗೆಲುವನ್ನು ಸೂಚಿಸಲು ಬಾರಿಸುತ್ತಿದ್ದ ಪಟಹ,– ಒಂದು ಬಗೆಯ ಚರ್ಮವಾದ್ಯ : ದುರಿತಾರಿಯನಭವಂ ಗೆಲ್ದಿರೆ ಮೊಱಗುವ ವಿಜಯಪಟಹದಂತೆ ನವಾಂಭೋಧರರವದಿನೇಱುಕೋಟಿಯಮರೆ ಸುರದುಂದುಭಿಗಳೊಡನೆ ಮೊಱಗಿದುವಾಗಳ್ (ಶಾಂತಿಪು. ೧೦-೨೧). [ಸಂ.]

**ವಿಜಯಪತಾಕೆ** (ನಾ). = ವಿಜಯಧ್ವಜ : ದಂಡನಾಯಕರು ಕಗ್ಗೊಲೆಯನ್ನೆಸಗಿದ ವಿಜಯಪತಾಕೆಯನ್ನು ಮೆರೆದಾಗ . . . ನಾವು ಅಂಥದೇ ವಿಚಿತ್ರವ್ಯಾಪಾರವನ್ನು ಗಮನಿಸಬಹುದಲ್ಲವೆ ? (ಪುನರು. ೧೯೭). [ಸಂ. ವಿಜಯಪತಾಕಾ]

**ವಿಜಯಪಜೆ** (ನಾ). ಒಂದು ಬಗೆಯ ವಾದ್ಯ : ಒಂದೊಂದು ರಾಜವಂಶವೂ ತನಗೇ ವಿಶಿಷ್ಟವಾಗಿದ್ದ ವಾದ್ಯ ಅಥವಾ ವಾದ್ಯಗಳನ್ನೂ . . . ಪಡೆದಿದ್ದಿತು . . . ನಾಗ-ವಿಜಯಪಜೆ (ಕಶಾಅ. ೩೩೭).

ವಿಜಯಪಜೆಘೋಷಣ = ಒಂದು ಬಿರುದು : ನಾಗಧ್ವಜಪ್ರತಾಪ ವಿಜಯಪಜೆಘೋಷಣ (ಎಇ. III, ೨೩೨-೭ ; 1070). [ವಿಜಯ್$_2$ + ಪಜೆ$_1$]

**ವಿಜಯಪ್ರಶಸ್ತಿ** (ನಾ). ಗೆಲುವನ್ನು ಘೋಷಿಸುವ ಪ್ರಶಂಸಾಕಾವ್ಯ ; ಜಯಪತ್ರಿಕೆ : ಆ ವೃಷಭಾದ್ರಿಯ ಮೇಖಳಾಭಿತ್ತಿಯೊಳ್ ಆತ್ಮೀಯ ವಿಶ್ವವಿಶ್ವಂಭರಾವಿಜಯಪ್ರಶಸ್ತಿಯನಟ್ಟಿಯೊಳ್ ಬರೆಯಿಸುವೆನೆಂದು ಪೋಗಿ ನೋಡುವನ್ನೆಗಂ (ಆದಿಪು. ೧೩-೭೦ ವ). [ಸಂ.]

**ವಿಜಯಪ್ರಸ್ಥಾನ** (ನಾ). ದಿಗ್ವಿಜಯಕ್ಕಾಗಿ ಹೊರಡುವ ಪ್ರಯಾಣ ; ಜೈತ್ರಯಾತ್ರೆ : ವ್ಯೋಮಭಾಗಮನೆಯ್ದಿರ್ದುದು ಚಕ್ರವರ್ತಿ ವಿಜಯಪ್ರಸ್ಥಾನ ಭೇರೀರವಂ (ಆದಿಪು. ೧೧-೧೦) ; ಘೂರ್ಣಿಸಿತ್ತು . . . ವಿಜಯಪ್ರಸ್ಥಾನಭೇರೀರವಂ (ಪುಷ್ಪಪು. ೫-೭). [ಸಂ.]

**ವಿಜಯಬೀಜ** (ನಾ). ಒಂದು ಬಗೆಯ ಔಷಧೀಸಸ್ಯ : ಗ್ರಹಣಿಯಿಂದ ಅತಿಸಾರ ನಿಲ್ಲದಿದ್ದರೆ ವಿಜಯಬೀಜದ ಎಲೆಯನ್ನು ಹುರಿದು ಎಲವದ ಹಗಿನು, ಸಜ್ಜರಸ . . . ಇವಂ ಸಮಾನವಾಗಿ ಚೂರ್ಣವ ಮಾಡಿ . . . ಗುಂಜಿಯ ತೂಕ ಕೊಡುವುದು (ವಿಷ್ಣು. ೧೮೮). [ವಿಜಯ$_1$ + ಬೀಜ]

**ವಿಜಯಬೀರವಣ** (ನಾ). ದಿಗ್ವಿಜಯದಲ್ಲಿ ಗೆದ್ದ ಸೈನಿಕರ ಜೀವನನಿರ್ವಹಣೆಗೆ ಪ್ರಜೆಗಳು ಕೊಡುತ್ತಿದ್ದ ತೆರಿಗೆ : ವಿಜಯಬೀರವಣ ಕೊಡತಿವಣ ಪಾಣ ಎಳ್ಳು ಭತ್ತವೆನಿಸಿದ ಪೂರ್ವಾಯ ಮತ್ತಂ ಅಪೂರ್ವಾಯಮೊಳಗಾಗಿ ಗ್ರಾಮಕೆ . . . ಕೊಟ್ಟರು (ಮೈಆ. ೧೯೪೦,೩-೨೬; 1206). [ವಿಜಯ$_2$ + ಬೀರವಣ]

**ವಿಜಯಭೇರಿ** (ನಾ). ಗೆಲುವನ್ನು ಘೋಷಿಸುವ ಭೇರಿ ; ಜಯಭೇರಿ : ಉತ್ತರಭಾರತವಿಜಯೋದ್ಯೋಗಮಂ ಭರತರಾಜನಘೋಷಲೆಂದು ವಿಜಯಭೇರಿಯಂ ಪೊಯಿಸಿದಾಗಳ್ (ಆದಿಪು. ೧೩-೪೧ ವ). [ಸಂ.]

**ವಿಜಯಮಂಗಳ** (ನಾ). ಗೆಲುವಿನ ಹಬ್ಬ ; ವಿಜಯೋತ್ಸವ : ಅಂತು ವಿಜಯಮಂಗಳಂ ನೆಗಟೆ ಗೋಕುಲಮಂ ಪೊಕ್ಕು ನಂದನಂದನಂ . . . ಸುಖ ದಿಂದಿರ್ಪನ್ನೆಗಂ (ಜಗವಿ. ೪-೫೮ ವ). [ಸಂ. ವಿಜಯಮಂಗಲ]

**ವಿಜಯಮಿತ್ರ** (ನಾ). ಅರ್ಜುನನ ಗೆಳೆಯ ; ಕೃಷ್ಣ : ಜಯಜಯಜನಾರ್ದನ ಮುಕುಂದ ಮುರಮರ್ದನ ವಿಜಯಮಿತ್ರ ಗೋವಿಂದ ಪಕ್ಷಿವಾಹನ (ಜೈಮಿಭಾ. ೧೧-೩೬). [ಸಂ.]

**ವಿಜಯಯಾತ್ರೆ** (ನಾ). = ವಿಜಯಪ್ರಸ್ಥಾನ : ವಿಜಯದಶಮಿಯ ಸುಮುಹೂರ್ತದಲ್ಲಿ ವಿಜಯಯಾತ್ರೆ ಹೊರಡುವುದೆಂದು ನಿಶ್ಚಯವಾಯಿತು (ಶಾಂತಲಾ. ೧೪೭). [ಸಂ. ವಿಜಯಯಾತ್ರಾ]

**ವಿಜಯರಾಜ್ಯ** (ನಾ). ಗೆಲುವಿನಿಂದ ಸಂಪಾದಿಸಿದ ರಾಜ್ಯ : ಶ್ರೀಮದ್ಭುವನೈಕಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾಚನ್ದ್ರಾರ್ಕ್ಕತಾರಂಬರಂ ಸಲುತ್ತಮಿರೆ (ಸೌಇಇ. XX, ೪೬-೪ ; 1072). [ಸಂ.]

**ವಿಜಯಲಕ್ಷ್ಮಿ** (ನಾ). ಜಯದ ಅಧಿದೇವತೆ : ವಿದ್ವಿಷ್ಟಚಮುಚಕ್ರ ಪಾಂಶುಪಟಲಮನೆ ನಿಜವಿಜಯಲಕ್ಷ್ಮೀಪರಿಣಯನೋತ್ಸವಪ್ರಾರಂಭ ಪಿಷ್ಟಾತಕಚೂರ್ಣಮೆಂದುಂ . . . ಬಗೆವ ಬಾಹುಬಲಿಕುಮಾರಂ (ಆದಿಪು. ೧೪-೮೪ ವ) ; ಸಿಂಹಾಸನದಿರ್ಕೆಲದೊಳ್ ನಿಂದ ವೀರಲಕ್ಷ್ಮಿ ವಿಜಯಲಕ್ಷ್ಮಿಯರ್. . . ವೀರಸೇಸೆಯನಿಕ್ಕುವಂತೆ ಬಿಂಕದಿಂ ಕೊಂಕಿನಿಂದು (ಗಿರಕ. ೨-೧೦೫ ವ). [ಸಂ. ವಿಜಯಲಕ್ಷ್ಮೀ]

**ವಿಜಯವೀರವಣ** (ನಾ). = ವಿಜಯಬೀರವಣ : ಕುಮಾರಗಾಣಿಕೆ ೨ ಹಾ ೨ ವಿಜಯವೀರವಣ ವ ೧ (ಎಕ. VIII (R), ಹಾಸನ. ೧೧೨-೬೬ ; ಸು. 1230). [ವಿಜಯ$_2$ + ವೀರವಣ]

**ವಿಜಯಶಾಲಿ** (ನಾ). ಗೆಲವನ್ನು ಪಡೆದವನು ; ವಿಜಯಿ : ಪುರಜನರೆಲ್ಲ ವಿಜಯಶಾಲಿಯಾಗಿ ಬಂದ ಪ್ರಭುಗಳ ಮೇಲೆ ಹೂಮಳೆ ಕರೆದರು (ಶಾಂತಲಾ. ೨೩೪). [ಸಂ. ವಿಜಯಶಾಲಿನ್]

**ವಿಜಯಶ್ರೀ** (ನಾ). ಗೆಲುವಿನ ಅಧಿದೇವತೆ ; ಜಯಲಕ್ಷ್ಮಿ : ಅಂತು ಪೊಱಮಟ್ಟುತ್ತರಭರತದ ವಿಜಯಶ್ರೀವಿವಾಹಮಹೋತ್ಸವಪ್ರಾರಂಭದೊಳ್ ದಿಕ್ಪಾಲಕರ ಕೆದಱುವ ಪಿಷ್ಟಾತಕಚೂರ್ಣಮೆನಿಸುವ ರಜಃಪುಂಜಮುಮಂ . . . ನೋಡುತ್ತುಂ ನಡೆಯೆ (ಆದಿಪು. ೧೩-೪೪ ವ) ; ದೈವವದತ್ತಲೊಲೆದಿಹುದತ್ತ ವಿಜಯಶ್ರೀಯ ಕುಡಿನೋಟ (ಕುವ್ಯಾದ್ರೋ. ೪-೨). [ಸಂ.]

**ವಿಜಯಸಂವತ್ಸರ** (ನಾ). ಅರುವತ್ತು ಸಂವತ್ಸರಗಳಲ್ಲಿ ಒಂದು : ವಿಜಯ ಸಂವತ್ಸರ ಇಪ್ಪದಾ ಎಂಟನೆಯೊಳು (ಎಕ. X, ಕೋಲಾರ. ೬-೨ ; 753). [ಸಂ.]

**ವಿಜಯಸಖ** (ನಾ). = ವಿಜಯಮಿತ್ರ : ಇಂದಿರಾಪತಿ ವಿಜಯಸಖ ಅರವಿಂದನಾಭ ಪುರಂದರಾರ್ಚಿತ ನಂದಕಂದ ಮುಕುಂದ ರಕ್ಷಿಸು ನಮ್ಮ (ಹರಿಸಾ. ೧೨). [ಸಂ.]

**ವಿಜಯಸಾರಥಿ** (ನಾ). ಅರ್ಜುನನ ರಥವನ್ನು ನಡೆಸಿದವನು ; ಪಾರ್ಥಸಾರಥಿ ; ಶ್ರೀಕೃಷ್ಣ : ಸುಜನರ ಪೊರೆಯುವ ಕುಜನರ ತರಿಯುವ ವಿಜಯಸಾರಥಿ ನಮ್ಮ ವಿಜಯವಿಠಲರೇಯ (ವಿದಾಕೃ. ೨೦-೩). [ಸಂ.]

**ವಿಜಯಸೇಸೆ** (ನಾ). ಗೆಲುವಿಗಾಗಿ ಸೂಸುವ ಅಕ್ಷತೆ, —ಸೇಸೆ : ವಿಜಯಶೇಷೆ –ವಿಜಯಸೇಸೆ [ಪಾಠಾಂ. ಸಿ] (ಶಮದ. ನ. ೩೦೮ ಪ್ರಯೋ). [ವಿಜಯ$_2$ + ಸೇಸೆ$_1$]

**ವಿಜಯಸ್ತಂಭ** (ನಾ). ಗೆಲವಿನ ನೆನಪಿಗಾಗಿ ನೆಡುವ ಕಂಬ : ಸ್ಮರನೃಪತಿಯ ವಿಜಯಸ್ತಂಭವೆನಿಪ ತರುಣಿಯ ಬಟ್ಟ ಮಣ್ಬೊಡೆ (ಇಚಸಾಂ. ೫-೯). [ಸಂ.]

**ವಿಜಯಾಗಮ** (ನಾ). ಕಾಮಿಕಾದಿ ಇಪ್ಪತ್ತೆಂಟುದಿವ್ಯಾಗಮಗಳಲ್ಲಿ ಹನ್ನೊಂದನೆಯದು : ಆ ಸಿದ್ಧಾಂತಭೇದಂಗಳಾವವೆಂದೊಡೆ –೧. ಕಾಮಿಕಾಗಮ . . . ೧೧. ವಿಜಯಾಗಮ . . . ೨೮. ವಾತುಲಾಗಮವೆಂಬವೇ ಇಪ್ಪತ್ತೆಂಟು ದಿವ್ಯಾಗಮಂಗಳಕ್ಕುಂ (ವಿವೇಕ. ೬೨). [ಸಂ.]

**ವಿಜಯಾಜ್ಞೆ** (ನಾ). [ಜೈನ] ಪಾರಿವ್ರಾಜ್ಯಲಕ್ಷಣಗಳನ್ನು ತಿಳಿಸುವ ಆಜ್ಞೆಯೆಂಬ ಸೂತ್ರ ಪದದ ಮೂರು ಬಗೆಗಳಲ್ಲಿ ಒಂದು : ವಿಜಯಾಜ್ಞೆಯೆಂಬುದು ಚಕ್ರಧರಪುಣ್ಯದಿಂ ದೇವವಿದ್ಯಾಧರ ನರೇಂದ್ರರಂ ವಶ್ಯಂ ಮಾಳ್ಪುದು (ಚಾವುಂಪು. ೨೩೦). [ಸಂ. ವಿಜಯಾಜ್ಞಾ]

**ವಿಜಯಾದಿತ್ಯ** (ನಾ). ಒಬ್ಬಾತನ ಹೆಸರು ; ಆಳುಪವಂಶದ ಒಬ್ಬ ಅರಸನ ಹೆಸರು: ವಿಜಯಾದಿತ್ಯ ಆಳುಪೇನ್ದ್ರ ಪರಮೇಸ್ವ(ಶ್ವ)ರ ಅಧಿರಾಜರಾಜನ್ ಉತ್ತಮಪಾಣ್ಡ್ಯನ್ (ಎಇ. IX, ೨೨-೧; 800). [ಸಂ.]

**ವಿಜಯಾನಂದ** (ನಾ). [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹದಿನಾರನೆಯದಾದ ಅಷ್ಟಿ ಎಂಬ ಛಂದಸ್ಸಿನ ಒಂದು ವೃತ್ತ : ವಸು ಧಾತ್ರೀಚಕ್ರಂ ಸುರಪಪವನು ಜಾತವೇದಂ ಮನೋಜನ್ಮಧ್ವಂಸಂ ಪದದ ಕಡೆಯೊಳ್ ಚೆಲ್ವನಾಳ್ದೆಯ್ದೆ ನಿಲ್ಕುಂ ವಿಶ್ರಾಮಂ ದಿವಸಕರನೋಳ್ಕಾಂತೆ ವಿದ್ವಜ್ಜನಾನಂದಂ ಛಂದಂ ನೆಗಟ್ದ ವಿಜಯಾನಂದಮಕ್ಕುಂ (ಛಂದೋಂಬು. ೨-೧೬೨). [ಸಂ.]

**ವಿಜಯಾನಕ** (ನಾ). ವಿಜಯೋತ್ಸವದಲ್ಲಿ ಬಾರಿಸುವ ನಗಾರಿ : ಶಂಖಕಾಹಳಾವ್ರಜ ವಿಜಯಾನಕಧ್ವನಿ ವಿಜೃಂಭಿಸೆ . . . ನಾಕಜರಜನಿರ್ಕೆಲಂಬಿಡದದೇಂ ನಡೆಗೊಂಡರೊ ಮೇಘಮಾರ್ಗದೊಳ್ (ಜಗವಿ. ೧-೪೧). [ಸಂ.]

**ವಿಜಯಾರ್ಧ** (ನಾ). [ಜೈನ] ಒಂದು ಪರ್ವತದ ಹೆಸರು ; ಭರತಕ್ಷೇತ್ರದ ನಡುವೆ ಪೂರ್ವಪಶ್ಚಿಮವಾಗಿ ಹಬ್ಬಿ ಈ ಕ್ಷೇತ್ರವನ್ನು ಉತ್ತರಭಾರತ ದಕ್ಷಿಣಭಾರತ ಎಂದು ಎರಡಾಗಿ ಮಾಡಿರುವ ಪರ್ವತ : ಇದು ವಿಜಯಾರ್ಧಮೆನ್ನ ಪೆಸರುಂ ವಿಜಯಾರ್ಧಮಲಂಘ್ಯಮೆಂದುಮಿಂತಿದು ಪೆಜಿಗ್ಗನುಮಿನ್ನೆಗಮಲಂಘ್ಯನೆಂ (ಆದಿಪು. ೧೩-೧೫). [ಸಂ.]

**ವಿಜಯಾಸ್ತ್ರ** (ನಾ). ಗೆಲ್ಲಲು ಸಾಧನವಾದ ಆಯುಧ : ಸ್ಮರಂಗೆ ವಿಜಯಾಸ್ತ್ರಂ . . . ಎಂಬುದು ಜನಂ ರೂಪಂ ಮಹಾದೇವಿಯಾ (ಪುಷ್ಪಪು. ೯-೪೬). [ಸಂ.]

**ವಿಜಯಿ$_1$** (ನಾ). ಒಂದು ಬಗೆಯ ಗಿಡ ; ಸೆಣಬು : "[illegible]ಯಿಯೆನೆ ಭಂಗಿ" (ಮಂಗರಾ. ೩೫-೧೫). [< ಸಂ. ವಿಜಯಾ]

**ವಿಜಯಿ$_2$** (ಗು). ೧. ಗೆದ್ದ ; ಗೆಲುವನ್ನು ಪಡೆದ. (ನಾ). ೨. ಗೆದ್ದವನು ; ಜಯಶಾಲಿ : ಆ ಭುವನತ್ರಯವಿಜಯಿಯಪ್ಪ ರೂಪಾತಿಶಯದೊಡನಮಳ್ವಳೆದಂತೆ ಬಳೆದ . . . ತೀರ್ಥಕರಕುಮಾರಂ (ಶಾಂತಿಪು. ೧೦-೯೨ ವ). [ಸಂ. ವಿಜಯಿನ್]

**ವಿಜಯಿಸು** (ಕ್ರಿ). ಶೋಭಿಸು ; ವಿಜೃಂಭಿಸು : ಕಿನ್ನರಗೇಯನಿಸ್ವನಂ ವಿಜಯಿಸೆ [ಪಾಠಾಂ. ಭಜಿಯಿಸೆ] . . . ನಾಕಜರಜನಿರ್ಕೆಲಂಬಿಡದದೇಂ ನಡೆಗೊಂಡರೊ ಮೇಘಮಾರ್ಗದೊಳ್ (ಜಗವಿ. ೧-೪೧). [ವಿಜಯ$_2$ + ಇಸು$_3$]

**ವಿಜಯೆ** (ನಾ). = ವಿಜಯಿ$_1$ : ಮುಳ್ಳುಸುಂಡೆ . . . ಗುಗ್ಗುಳ ವಿಜಯಾ

(ಭಂಗಿಸೊಪ್ಪು) ಅತಿಮಧುರ . . . ಮಗ್ಗಾರಬೇರು — ಇವನ್ನು ಬಗೆಯೊಂದಕ್ಕೆ ಒಂದು ಸೇರಿನಂತೆ ಹಾಕಿ ಚೂರ್ಣಿಸಿ (ಸಕಚ್ಚ. ಪರಿ. ೪೩೮). [ಸಂ. ವಿಜಯಾ]

ವಿಜಯೇಶ್ವರ (ನಾ). ಗೆಲುವನ್ನು ಪಡೆದವನು ; ಶಿವ : ಮಲುಹಣನನಾ ಮಲುಹಣೆಯನಾ . . . ಮಲಹರಂ ವಿಜಯೇಶ್ವರಂ ನಿಜಪುರಕೆ ಕೊಂಡೊಯ್ದು (ಬಸವು. ೪೨-೩೯). [ಸಂ.]

ವಿಜಯೋತ್ಸವ (ನಾ). ೧. ಗೆಲುವು ದೊರೆತುದರಿಂದ ಉಂಟಾದ ಸಡಗರ,–ಉತ್ಸಾಹ : ಕೃಷ್ಣಾಯೆನುತರ್ಜುನನ ತಲೆ ಬೀಳಲು ವಿಜಯೋತ್ಸವದೊಳ್ಳಿದಿದಂ ಬಭ್ರುವಾಹನಂ ನಿಜಪುರಕೆ (ಜೈಮಿಭಾ. ೨೩-೪೯). ೨. ಗೆಲುವು ಸಿಕ್ಕಿದುದಕ್ಕಾಗಿ ಮಾಡುವ ಸಂತೋಷಸಮಾರಂಭ : ವಿಜಯೋತ್ಸವವೂ ಕುಮಾರಜನ್ಮೋತ್ಸವವೂ ಒಟ್ಟಿಗೇ ಆದ ಪರಮಾನಂದದಲ್ಲಿ ವಿಷ್ಣುವರ್ಧನನು ಆ ದೇವರ್ಗೆ . . . ದತ್ತಿಯನ್ನು ಬಿಡುತ್ತಾನೆ (ಸವತಿ.VII. ಪ್ರಸ್ತಾವನೆ). ೩. ಆಶ್ವಿನಮಾಸದ ದಶಮಿಯಂದು ವಿಷ್ಣುವನ್ನು ಕುರಿತು ಮಾಡುವ ಹಬ್ಬ,–ಉತ್ಸವ. [ಸಂ.]

ವಿಜಯೋತ್ಸಾಹಿ (ನಾ). ೧. ಗೆಲುವನ್ನು ಪಡೆಯುವ ಉತ್ಸಾಹದಲ್ಲಿರುವವನು : ಸಮರಸಿದ್ಧರಾಗಿ ಬಂದ ಕುರುಪಾಂಡವವೀರರಲ್ಲ ವಿಜಯೋತ್ಸಾಹಿಗಳಾಗಿ ಕದನಕುತೂಹಲರಾಗಿ ಶಂಖಿಧ್ವಾನ ಮಾಡುತ್ತಿದ್ದಾರೆ (ಭಾರದ. ೧೧೧). ೨. ಗೆಲುವಿನಿಂದ ಸಂತೋಷವನ್ನು ಹೊಂದಿದವನು : ಯುದ್ಧಕ್ಕೆ ಹೋದವರು ವಿಜಯೋತ್ಸಾಹಿಗಳಾಗಿ ಹಿಂದಿರುಗಿದರು (ರೂಢಿ). [ಸಂ. ವಿಜಯೋತ್ಸಾಹಿನ್]

ವಿಜಯೋಪಚಿತ (ಗು). ಗೆಲುವಿನಿಂದ ಕೂಡಿದ : ಉಚಿತವಿತರೇತರಗುಣಸ್ತುತಿರಚನೆ ಗುಣಯುಕ್ತರಿಗೆ ವಿಜಯೋಪಚಿತ ರಣನಾಟಕಕೆ ಜವನಿಕೆಯಾಯ್ತಲೇ ರಜನಿ (ಕುವ್ಯಾತ. ೧-೨೧). [ಸಂ.]

ವಿಜಸಿರ್ತಿ (ನಾ). ಒಬ್ಬಾತನ ಹೆಸರು : ಮಾರತ್ತಿಗಳ ಮಗನ್ ಧೂಲ ಆವನ್ ವಿಜಸಿರ್ತ್ತಿರಾ ಕಾಳೆಗದುಳ್ ಕದನಗರುಳ್ ಎಱಿದು ಸರ್ಗ್ಗ ಪುಕ್ಕದುನ್ (ಎಕ.X(S), ಚಿಂತಾಮ. ೧೬೬-೬ ; ೫ನೆಯ ಶತ). [ ? ]

ವಿಜಾತಿ (ನಾ). ೧. ಬೇರೆ ಜಾತಿಯಿಂದ ಹುಟ್ಟಿದುದು ; ಭಿನ್ನಜಾತಿಗೆ ಸೇರಿದುದು. ೨. ಬೇರೆಯ ಜಾತಿ,–ವರ್ಗ : ಚಿಬ್ಬು ಸಂಜನಿಸಿರಲು ಗೋಧೂಮವರ್ಣನಕ್ಕುಟಿದ ಸರ್ಪಂಗಳ್ ವಿಜಾತಿಯಕ್ಕು (ಮಂಗರಾ. ೧೧೯-೯). ೩. ಹೀನಕುಲ ; ಕೀಳುಜಾತಿ : ಎಸೆವ ವಿಷವುಂಟಾಗಿಯುಂ ವಿಷಂ ತಾನಲ್ಲ . . . ಪ್ರತಿಕೂಲವುಂಟಾಗಿಯುಂ ಹೆಸರಿಡಲು ಪ್ರತಿಕೂಲವಿಲ್ಲಲ್ಲಿ ಕಡೆಗೆ ಶೋಧಿಸೆ ವಿಜಾತಿಗಳುಂಟೆನಲು ವಿಜಾತಿಗಳಿಲ್ಲ ವಸುಧೆಗೆ ವಿಚಿತ್ರವೆಂದೊಂದೆರಡುಘಳಿಗೆ ನೋಡಿದ ಕೋಳನನಾ ಭೂಪನು (ಹಟಚರಿ. ೩-೪೨); ಜಾತಿಹೀನರ ಮನೆಯ ಜ್ಯೋತಿ ತಾ ಹೀನವೇ ಜಾತಿ ವಿಜಾತಿಯೆನಬೇಡ ದೇವನೊಲಿದಾತನೇ ಜಾತ (ಸರ್ವಜ್ಞ. ೯೭೬). ೪. ಹಕ್ಕಿಗಳ ಜಾತಿ ; ಪಕ್ಷಿಕುಲ. ೩,೪ : ಅಬಲನೆವುಗೆ ಮಾಡಿದವಂ ನಿತ್ತರಿಸಂ ತಿರ್ಯಗ್ಜಾತಿಯೊಳೆರಡಿಲ್ಲದೆಯಿಂ ವಿಜಾತಿ ಪುಟ್ಟಿದೆ ಮಾಣಂ (ಕಾದಂಬ. ೪೮೪) ; ಕುಮುದದಿಂ ಪ್ರತಿಕೂಲದಿಂ ವಿಜಾತಿಗಳ ಸಂಗಮದಿಂದೆ ಜಡಜೀವನೋಪಾಯದಿಂ ಭಂಗಸಮಿತಿಯಿಂದಿರ್ಪ ತಾವರೆಗೊಳಂ (ಭಾವಚಿಂ. ೩-೪೫) ; ಇದರ್ಕೆಯ ನಿನಗಿಂತು ವಿಜಾತಿಯೊಳಮಧೋಗತಿಯೊದವಿತ್ತು (ರಾಮಾಶ್ವ. ೧-೧೩). ೫. ಮಾಲತೀ ಪುಷ್ಪಗಳಿಂದ ಕೂಡಿಲ್ಲದುದು. ೩,೫ : ಮಧುಮಾಸಕುಸುಮಸಮೃದ್ಧಿಯಂತೆ ವಿಜಾತಿಯುಂ . . . ಎನಿಸಿದೆಱುಂಚೌವನೆಯ ರೂಪಾತಿಶಯಮನೆವೆಯಿಕ್ಕದೆ ನೋಡುತ್ತಂ (ಕಾದಂಪೂ. ೪೯). [ಸಂ.]

ವಿಜಾತೀಯ (ಗು). ಬೇರೆ ಜಾತಿಯ ; ಭಿನ್ನಜಾತಿಯ : ವಿಜಾತೀಯಾ ವ್ಯವಧಾನಲಘೂತ್ಪತ್ತಿಸದೃಶಾಪರಾಪರೋತ್ಪತ್ತಿಯೆಂಬಿವಱಿಂ ವಿಪ್ರಲಬ್ಧಬುದ್ಧಿಗೆ ಸಂತಾನರೂಪದಿಂ ಪುಟ್ಟುತ್ತಿರ್ದ ವಿಜ್ಞಾನಲಕ್ಷಣಂಗಳಾತ್ಮಾಭಿಧಾನಮಂ ಪುಟ್ಟಿಸುಗುಂ (ಆದಿಪು. ೨-೯ ವ). [ಸಂ.]

ವಿಜಾತೀಯದ್ವಿತ್ವ (ನಾ). [ವ್ಯಾಕ] ಬೇರೆ ವರ್ಗದ ಅಕ್ಷರ ; ವಿಜಾತಿಯ ಸಂಯುಕ್ತಾಕ್ಷರ: ವಿಜಾತೀಯದ್ವಿತ್ವವು ಸಜಾತೀಯವಾಗಿ ಮಾರ್ಪಡುವ ಹೊಸಗನ್ನಡಕ್ಕೆ ಸರಿಯಾಗಿ ಅದು 'ಅದಕ್ಕೆ' ಎಂಬ ರೂಪ ತಾಳಿದೆ (ಸಂಶೋಧ. ೬೩). [ಸಂ.]

ವಿಜಾತೆ (ನಾ). ಮಕ್ಕಳನ್ನು ಹಡೆದವಳು ; ತಾಯಿಯಾದವಳು. [ಸಂ. ವಿಜಾತಾ]

ವಿಜಾರ (ನಾ). ಪಾಯಿಜಾಮ ; ಇಜಾರ : ವಿಜಾಪುರದಲ್ಲಿ ವಿಜಾರದವರಷ್ಟು ಜನ ಅಂದ ಹಾಗೆ (ಗಾದೆ). [ <— ಮರಾ. ವಿಜಾರ. / ತುಳು. ವಿಜಾರೆ]

ವಿಜಾಲಕ (ನಾ). ಬೆಳಕಿಂಡಿ ; ಗವಾಕ್ಷಿ ; ವಾತಾಯನ : "ಗವಾಕ್ಷಂ ವಿಜಾಲಕಂ ವಾತಾಯನಂ ಜಾಳಮೆನಲ್ ಬೆಳಕ ಕಂಡಿಯಕ್ಕುಂ" (ಮಂಗರಾ. ೬೦-೧೪). [ಸಂ.]

ವಿಜಿಗೀಷಣ (ನಾ). ಗೆಲುವನ್ನು ಬಯಸುವವನು; ಜಯಾಕಾಂಕ್ಷಿಯಾದವನು : ರೋಷಣಪ್ರತಿವೀರರಣವಿಜಿಗೀಷಣಾಧಿಕಶೂರ ಹಿಮಕರಭೂಷಣಾಜ್ಞಾಧಾರ ಬಸವಕುಮಾರ ಮಾಂ ತ್ರಾಹಿ (ಬಸವು. ೨೦-೩೮). [ < ಸಂ. ವಿಜಿಗೀಷು]

ವಿಜಿಗೀಷು (ಗು). ೧. ಗೆಲ್ಲಬೇಕೆಂಬ ಬಯಕೆಯುಳ್ಳ. (ನಾ) ೨. = ವಿಜಿಗೀಷಣ : ವಿಜಯಶ್ರೀಗೃಹಮೆನಿಸುವ ವಿಜಯಪ್ರಸ್ಥಾನಶಿಬಿರನೃಪಮಂದಿರಮಂ ವಿಜಿಗೀಷು ಬಂದು ಪೊಕ್ಕಂ ವಿಜಯಾಲಂಕಾರಬಾಹುಭರತಮಹೀಶಂ (ಆದಿಪು. ೧೧-೨೬) ; ಹೆಡೆಮುಚ್ಚಿದ್ದಿತು ಜ್ಯೋತ್ಸ್ನಾಮಂತ್ರದಿ ವಿಜಿಗೀಷುಗೆ ಹಿಂಸಾಬುದ್ಧಿ (ಕೋಗಿಲೆ. ೪೯-೯). [ಸಂ.]

ವಿಜಿಗೀಷುತೆ (ನಾ). ಗೆಲ್ಲಬೇಕೆಂಬ ಬಯಕೆ ; ಜಯಾಕಾಂಕ್ಷೆ : ವಿಜಿಗೀಷುತೆಯಿಂ ದೇವ ನೆಗಟ್ಟೆ ದೇವ ನೀನೆ ದೇವನೆ ಅಲ್ತೇ (ಆದಿಪು. ೧೩-೨೬). [ಸಂ. ವಿಜಿಗೀಷುತಾ]

ವಿಜಿಗೀಷುತ್ವ (ನಾ). = ವಿಜಿಗೀಷುತೆ : ವಿಜಿಗೀಷುತ್ವದೊಳೊಂದಿ ಗೋವುಳಿಗನಪ್ಪಂ . . . ಹರಿಯೆಂಬ ದೊಡ್ಡಿವೆಸರಂ ಪೊತ್ತಿರ್ದ ನೀಂ ಮಂತ್ರಿಯಾಗೆ (ಪಂಪಭಾ. ೯-೪೭). [ಸಂ.]

ವಿಜಿಗೀಷುವೃತ್ತ (ನಾ). ಗೆಲುವನ್ನು ಬಯಸುವ ಸ್ವಭಾವವುಳ್ಳವನು : ಉಂಡುಂಪಟ್ಟಿರ್ಪನನಣಮೆ ನಿರುದ್ಯೋಗಿಯುಂ ಭೂಪನೆಂಬರ್ ಎಂದು ವಿಜಿಗೀಷುವೃತ್ತೋದ್ಯುಕ್ತನಾಗಲ್ ಬಗೆದು (ಪಂಪಭಾ. ೪-೧೧) ; ವಿನತಾಪುರಮಂ ಪೊಕ್ಕು ಬಱಿಯಂ ಸಹಜ ವಿಜಿಗೀಷುವೃತ್ತನಪ್ಪುದಱಿಂ ದಿಗ್ವಿಜಯೋದ್ಯೋಗಮನೆತ್ತಿಕೊಂಡು (ಚಂದ್ರಪ್ರ. ೭-೨೭ ವ). [ಸಂ.]

ವಿಜಿಗೀಷುವೃತ್ತಿ (ನಾ). ಗೆಲ್ಲಬೇಕೆಂಬ ಬಯಕೆ,–ಹಂಬಲ : ಚತುರ್ವಿಧರಾಜವೃತ್ತವನುದಾತ್ತಮಪ್ಪಂತಾಚರಿಸುತ್ತುಂ ವಿಜಿಗೀಷುವೃತ್ತಿಯನೆತ್ತಿಕೊಂಡು ವಿಕ್ರಮಾವಲಂಬಿಯಾಗಿ (ಅಜಿಪು. ೨-೪೭ ವ); ವಿಕ್ರಮಭೂಪನ . . . ಶೂರತೆಯೂ ವಿಜಿಗೀಷುವೃತ್ತಿಯೂ ಲೋಕದಲ್ಲಿ ಅತ್ಯದ್ಭುತವೆನಿಸಿದವು (ಕವೀರ. ೬೨). [ಸಂ.]

ವಿಜಿಗೀಷೆ (ನಾ). = ವಿಜಿಗೀಷುತೆ. [ಸಂ. ವಿಜಿಗೀಷಾ]

ವಿಜಿತ (ಗು). ೧. ಗೆಲ್ಲಲ್ಪಟ್ಟ ; ಜಯಿಸಲ್ಪಟ್ಟ : ನಿಜರೂಪ ವಿಜಿತಮಕರಧ್ವಜನಖಿಳದಿಶಾಂತರಪ್ರತಿಷ್ಠಿತಕೀರ್ತಿಧ್ವಜನದನಾಳ್ವಂ ಧರಣೀಧ್ವಜನೆಂಬಂ (ಚಂದ್ರಪ್ರ. ೬-೬); ವಿಜಿತಸುವರ್ಣಭೂಧರಸುಪ್ರತಾಪ ಜಿತಾಸುಗತಿಮಿತ್ರ ಪೂರ್ಣತೇಜೋವಿಜಿತದಿನಕರ (ಬಸವು. ೫-೧). (ನಾ). ೨. ಗೆಲ್ಲಲ್ಪಟ್ಟವನು ; ಜಯಿಸಲ್ಪಟ್ಟವನು : ವಿಜಿತನೋ ದಿಗತಾಸುವೋ ಧರ್ಮಜನ ಹದನೇನು (ಕುವ್ಯಾಶ. ೩-೪೭) ; ಆ ಮಣಿ ಮಿಱಿದುದು ತರುಣನಭೋಮಣಿನಿಜಸುಪ್ರತಾಪವಿಜಿತಂ ಪರಿತಂದಾ ಮಹಿತರಾಜಶೇಖರ ಭೂಮೀಶ್ವರನಂಘ್ರಿಕಮಳಂ ಸೇವಿಪವೋಲ್ (ರಾಜಶೇ. ೫-೨೬). [ಸಂ.]

ವಿಜಿತಬಲ (ನಾ). ಯುದ್ಧದಲ್ಲಿ (ಪ್ರತಿಪಕ್ಷದ) ಸೈನ್ಯವನ್ನು ಗೆದ್ದವನು : ರಜನಿಯೆಂಬ ಮದೋತ್ಕಟದಿಗ್ಗಜದ ಕುಂಭಸ್ಥಳಕೆ ಮೋಹಿದ ವಿಜಿತಬಲನಂಕುಶದ ತಲೆಮಾಣಿಕವಿದೆಂಬಂತೆ ಗಜಗಲಿಸಿತಿನಬಿಂಬ (ತೊರರಾ. ೧-೧೪-೨). [ಸಂ.]

ವಿಜಿತೇಂದ್ರಿಯ (ನಾ). ಇಂದ್ರಿಯಗಳನ್ನು ನಿಗ್ರಹಿಸಿದವನು : ಶಾಂತರುಚಿ ವಿಜಿತೇಂದ್ರಿಯರು ವೇದಾಂತನಿಷ್ಠರು (ಕುವ್ಯಾಅ. ೧೮-೧೨). [ಸಂ.]

ವಿಜುಗುಪ್ಸತೆ (ನಾ). [ಕಾವ್ಯಮೀ] ಸ್ಥಾಯಿಭಾವಗಳಲ್ಲಿ ಒಂದು ; ಬೀಭತ್ಸದ ಸ್ಥಾಯಿಭಾವ : ರತಿ ಪರಿಹಾಸಂ ಶೋಕೋದ್ಗತಮುತ್ಸಾಹಂ ಭಯಂ ಪ್ರಕೋಪಂ ವಿಜುಗುಪ್ಸತೆ ವಿಸ್ಮಯಾಶಯತ್ವಂ ಪ್ರತಿನಿಯತಸ್ಥಾಯಿಭಾವಮಿವು ತಾಮಕ್ಕುಂ (ಕಾವ್ಯಾವ. ೭೯೪). [ < ಸಂ. ವಿಜುಗುಪ್ಸಿತ]

ವಿಜುಲಿ (ನಾ). ಒಂದು ಬಗೆಯ ನಂಜಿಕೊಳ್ಳುವ ಪದಾರ್ಥ : "ಧಾನ್ಯಾದಿ ಪಿಷ್ಟಮಂ ಮಿದಿದು ಪುದಿಯಲ್ಕೆ ಸತ್ತುಕಮಕ್ಕು ತುಟಿದ ಕಚ್ಚರಿಯ್ಕೆದೆ ವಿಜುಲಿ [ಪಾಠಾಂ. ಖಿಜುಳಿ, ವಿಜುಳಿ]ಯಕ್ಕು" (ಮಂಗರಾ. ೬೫-೬). [< ಸಂ. ವಿಜಿಲ]

ವಿಜ್ರಂಭ (ನಾ). ೧. ಹುಬ್ಬುಗಂಟಿಕ್ಕುವುದು. ೨. ಹೆಚ್ಚಳ ; ಆಧಿಕ್ಯ : ಕಾರ ಕಾದಂಬಿನಿ ಮಾಟ್ಕುಮೇ ಬಿರಯಿಗಂಗಜವಹ್ನಿವಿಜ್ರಂಭಮಂ ವಿಲೋಲಾಂಬಕವಾರಿಯಿಂ ಹೃದಯತಾಪಮನುತ್ಕಳಿಕಾಪ್ರಪಂಚಮಂ (ಚಂದ್ರಪ್ರ. ೪-೩೩). ೩. ಪ್ರದರ್ಶನ ; ಆಡಂಬರ : (೩). [ಸಂ.]

ವಿಜ್ರಂಭಣ (ನಾ). ೧. ಅರಳುವುದು ; ಬಿರಿಯುವುದು. ೨. ಹೆಚ್ಚಳ : ಪುದಿದು ಪೊದಟ್ಟ ವಿಕ್ರಮ ವಿಜ್ರಂಭಣಮಂ ತೋಜಿದಾಳ್ವೆಸಕ್ಕೆ ಪೂಣ್ದೊದವಿದ ಭೀತಿಯಿಂದೆಜಗಲನ್ಯನೃಪಾವಳಿ (ಎಕ. XIII, ೪೪-೩೦; 1112) ; ವಿನುರಂ ಪಿರಿದೊ ತಾಂ ನೆರೆದತ್ತು ಪಯೋಧರದ್ವಯಿಭಾರಿ ವಿಜ್ರಂಭಣಕ್ಕೆ (ಚಂದ್ರಪ್ರ. ೫-೧೧೯). ೩. ಆಕಳಿಕೆ : ಅನಿಬರುಂ . . . ಪಲ್ಯೋಪಮಮತ್ರಯಾಯುಷ್ಯಾವಸಾನದೊಳೋಷಧಿಗಳಂತೆ ಫಲಕಾಂತದೊಳ್ ಕ್ಷುತವಿಜ್ರಂಭಣವ್ಯಾಜದಿಂ ಲೋಕಾಂತರಿತರಾಗಿ (ಆದಿಪು. ೫-೬೪ ವ). ೪. ಹರಡುವಿಕೆ ; ವಿಸ್ತಾರ. ೫. ಅಬ್ಬರ ; ಆಟೋಪ ; ಆರ್ಭಟ : ರಾಸಭವಿಜ್ರಂಭಣಕ್ಕೇನೋಸರಿಪುದೆ ಪೋಗಿ ತಾಟ ಪಣ್ಣಳನೊಲವಿಂ ಲೇಸಪ್ಪುವ ನಾಸ್ವಾದಿಸಿ ಗೋಸಮಿತಿಯನಲ್ಲಿ ಮೆಲ್ಲನಾಡಿಸಿ ಬರ್ಪಂ (ಜಗನ್. ೪-೪೦). ೬. ಉದ್ಘಟಿತನ; ಔದ್ಧತ್ಯ : ನೋಂತೆನಾಂ ನೋನೆನೆ ನೋಡೆ ಕಂಸನ ವಿಜ್ರಂಭಣಮು ಜಯಿಸಲ್ ಸಮರ್ಥನಂ ಭೂನುತನಂ ಯಶೋವಿದಿತನಂ ಸುತನಂ ಪಡೆವೊಂದು ನೋಂಪಿಯಂ (ಜಗವ. ೨-೬೮). [ಸಂ.]

ವಿಜ್ರಂಭಣಕ್ರಮ (ನಾ). ವಿಕಾಸದ ಹೆಜ್ಜೆ ; ಬೆಳವಣಿಗೆಯ ಹೆಜ್ಜೆ : ಕ್ರಮದೆ ವಿಜ್ರಂಭಣಕ್ರಮದೆ ಕೊಂಡು ಧರಾತಳಮಂ ರಸಾತಳಕ್ಕಮರವಿರೋಧಿಯಂ ಕಟುಪಿದಂ (ಜಗವ. ೧-೭೨). [ಸಂ.]

ವಿಜ್ರಂಭಣೆ (ನಾ). ೧. ಹೆಚ್ಚಳ ; ಅತಿಶಯ ; ಮೇಲ್ಮೆ : ಡಂಭನೊಳು ಬಲುರಣವ ಮಾಡಿದನೆಂಬವೊಲ್ ಸಂಕ್ಷೇಪಿಸಿದಿರಿ ವಿಜ್ರಂಭಣೆಯೊಳರುಹಿದಡೆ ಕೇಳುವೆನತಿ ಮನೋಮುದದಿ (ಕೊಳಯ. ೯-೧೧). ೨. ವೈಭವ ; ಆಡಂಬರ : ತಿಮ್ಮಪ್ಪ ನಾಯಕನೆಂಬಾತನು ಬಹಳ ವಿಜ್ರಂಭಣೆಯಿಂದ ತ್ರಿಯಂಬಕರಾಯನನ್ನು ಹಿಂಬಾಲಿಸುತ್ತಿದ್ದನು (ರಾವಿಜ. ೧೫೩) ; ಪುತ್ರೋತ್ಸವವು ಬಹಳ ವಿಜ್ರಂಭಣೆಯಿಂದ ದೇಶದಲ್ಲೆಲ್ಲಾ ಜರುಗಿತು (ಮಣಿಸ. ೪೧). ೩. ರಭಸ ; ಜೋರು : ತ್ರಿದಶೇಂದ್ರ ಮಕುಟಮಂ ಪೊಡೆದ ದೈತ್ಯಗದೆಯಿಂ ಸಿಡಿಲ್ದ ಶಕಳಮೆ ತಾನಾದುದು ಕೃಷ್ಣ ನಿನ್ನ ಗದೆಯೆನೆ ಗದೆಯ ವಿಜ್ರಂಭಣೆ ಭಯಾವಹಂ ದಾನವನಾ (ಜಗವ. ೯-೬೧). [ಸಂ. ವಿಜ್ರಂಭಣ]

ವಿಜ್ರಂಭಿತ (ಗು). ೧. ಅರಳಿದ ; ಬಿರಿದ ; ವಿಕಾಸಗೊಂಡ : ಪಾವಕದಿಕ್ಕಿನಂತೆ ವನದಂತೆ ವಿಜ್ರಂಭಿತಪುಂಡರೀಕವಿಂದೀವರನಾಭರಮ್ಯಂ ಸಭೆಯಂತೆ . . . ಸಮುತ್ಕಳಿಕಾಕುಳಂ ಕೊಳಂ (ಪುಷ್ಪಪ್ರ. ೨-೫೩). ೨. ಆಕಳಿಸಿದ. ೩. ವಿಸ್ತಾರವಾದ ; ದೊಡ್ಡದಾದ : ಕಾರ್ಯವು ಜರುಗದೆ ಮತ್ತು ಶೀಲವಾಗಲೀ ಭಾವನೆಯಾಗಲೀ ಪ್ರದರ್ಶಿತವಾಗದಿರುವ ಸಂದರ್ಭಗಳಲ್ಲಿ ಮಾತ್ರ ವಿಜ್ರಂಭಿತ (Elaborate) ಶೈಲಿಯು ಅಗತ್ಯವೆನಿಸುತ್ತದೆ (ಅಂಕಾ. ೧೩೭). ೪. ಮೆರೆದ ; ಪ್ರದರ್ಶಿಸಿದ : ನಿಜಗರಿಮಾವಿಜ್ರಂಭಿತವೃತ್ತಿಯಲಿ ಕೊಪ್ಪರಿಗೆಗಳಿಗೆಯ್ದಿ . . . ಪೊನ್ನ ತಂಬುಗೆಗಳೊಳು ಮೊಗೆಮೊಗೆದು (ಬಸವ. ೫೦-೬೮). (ನಾ). ೫. ಕೇಳಿ ; ಚೇಷ್ಟೆ : ನರೇಂದ್ರಂ . . . ಮನೋಭವವಿಜ್ರಂಭಿತಂಗಳಂ ಮನದೊಳ್ ಭಾವಿಸುತ್ತಂ ವಿಸ್ಮಯಾಕ್ಷಿಪ್ತಚಿತ್ತ ನಿಂತೆಂದಂ (ಕಾದಂಪೂ. ೯೭೦). [ಸಂ.]

ವಿಜ್ರಂಭಿಸು (ಕ್ರಿ). ೧. ಅರಳು ; ಬಿರಿ ; ವಿಕಾಸವಾಗು : ವಿಜ್ರಂಭಿಸಿದುದು ಯೌವನೋದಯವಿಲಾಸಮನುಕ್ರಮದಿಂ ಮದಂಗದೊಳ್ (ಕಾದಂಪೂ. ೭೧೯). ೨. ಉಬ್ಬು ; ಊದು : ಬಿಸುಸುಯ್ದೊಡಂ ಬೆಮರ್ವೊಡಮುಬರು ವಿಜ್ರಂಭಿಸುವೊಡಂ . . . ವಾಜಿಗೆ ಪಿಪ್ಪಲಿ ಶುಂಠಿ ಸೈಂಧವಂ ಗಿಡಿವುದು ಮೂಗಿನೊಳ್ (ಲೋಕೋಪ. ೯-೨೨೭). ೩. ಆಕಳಿಸು : ಬೊಕ್ಕಣದ ಬೂದಿಯನುಃಪೆನಲೂದಿ ಮೂಗಿನೊಳ್ ಪೊಕ್ಕೊಡೆ ಸೀಂತು ಮಾಣ್ದಿರದೆ ಪಾಯ್ದು ವಿಜ್ರಂಭಿಸಿ ಕೊಂಬನೇಟಿ ಪುರ್ವಿಕ್ಕಿ ಕುಮಾರತಾಪಸರನೇಡಿಸುತಿರ್ದುದದೊಂದು ಕೋಡಗಂ (ಸೂಕ್ತಿಸು. ೩-೧೮೪). ೪. ಶೋಭಿಸು ; ಚೆಲುವಾಗು : ಅಪಾಂಗಮಾಳಿಕೆ ವಿಜ್ರಂಭಿಸಿ ನಿಲ್ವಿನೆಗಂ . . . ಒತ್ತೆಗೆ ನಿಂದೆಳವೆಂಡಿರೊಪ್ಪಿದರ್ (ಜಗವ. ೧೬-೧೧೧) ; ಶಿವಭಕ್ತಜನವ್ರಜಂ ವಿಜ್ರಂಭಿಸಿ ನೆಲಸಿರ್ದ ಪಟ್ಟಣಮಿದು (ರಾಜಶೇ. ೧೩-೪). ೫. ಅತಿಶಯವಾದ ಆಟೋಪ ದಿಂದಿರು : ಮೊಟೆವುತ್ತೆಳುತ ವಿಜ್ರಂಭಿಸುವ ತತ್ಘಟಸರ್ಪನಂ ನೋಡಿ (ಬಸವ. ೫೦-೫೯) ; ಆಗಳೊಂದುದ್ದಂಡಪ್ರಚಂಡಕಂಠೀರವಂ . . . ಲಂಘಿಸಿ ವಿಜ್ರಂಭಿಸಿ ಕುಂಭಿಶಿರಃಪ್ರದೇಶಮಂ ಕೊನೆಯುಗುರಿಂದ ಸೀಳ್ದು (ರಾಜಶೇ. ೫-೧೧೭). ೬. ಸಡಗರಿಸು ; ಉತ್ಸಾಹಿಸು : ಇತ್ತ ವಸಂತನಿತ್ತ ಮಲಯಾನಿಲನಿತ್ತ ಮಧುವ್ರತಾಳಿ ಮತ್ತಿತ್ತ ಮದೋತ್ಕಕೋಕಿಲಕದಂಬಕವೆಯ್ದೆ ವಿಜ್ರಂಭಿಸಿತ್ತು (ಕಾದಂಪೂ. ೮೮೨). ೭. (?) : ಶುನಕಶಕುನಮಂ ಪೇಳ್ವೆಂ . . . ರುಜಾರ್ತನ ಗೃಹಕ್ಕೆ ಪೋಪೆಡೆಯೊಳಂ ಬಿದಿರ್ದಂಗಮಂ ವಿಜ್ರಂಭಿಸೆ ವಿಚೇಷ್ಟೆಗೆಯ್ಕೆ ಪುಗೆ ದೀಪ್ತಮಂ ಬೆರ್ಚಿ ಜಾಗರಮದಾ ನರಂ ನಿರುಜನೆಂಗೆ (ಲೋಕೋಪ. ೧೨-೨೯). "ಶ್ವಾನಂ ತನ್ನ ದೇಹಮಂ ಕೊಡಹಿಕೊಂಡುಚ್ಛ್ವಾಸದಿಂ ಬೆರ್ಚುತ್ತಿರಲ್" (ಲೋಕೋಪ. ೧೨-೨೯ ಟೀಕೆ).

[ವಿಜ್ರಂಭಣ + - ಇಸು]

ವಿಜ್ರಂಭೋದ್ಧುರ (ಗು). ೧. ಸ್ವೇಚ್ಛೆಯಾಗಿ ಅರಳುತ್ತಿರುವ. ೨. ನಿರಾತಂಕವಾಗಿ ಆಕಳಿಸುತ್ತಿರುವ. ೧,೨ : ವಿರಹಿಗಳಂತೆ ಮೃಣಾಳೋತ್ಕರವಲಯಾಂಕಿತ ವರೇEರತ್ನದಂತೆ ವಿಜ್ರಂಭೋದ್ಧುರ ಪುಂಡರೀಕಸಂಕುಳಮುರಗಾನ್ವಯದಂತ ನಂತಪದ್ಮೋಪೇತಂ . . . ಸರೋವರಂ (ಕಾದಂಪೂ. ೬೪೧). [ಸಂ.]

ವಿಜೇತ (ಗು). ೧. ಗೆದ್ದ ; ಜಯಿಸಿದ : ಕೇವಲ ವಿಜೇತವ್ಯಕ್ತಿಯೊಬ್ಬ ಆ ಮೌಲ್ಯವನ್ನು ನಿಷ್ಕರ್ಷಿಸುತ್ತಿದ್ದನು (ಶಿಲ್ಪದ. ೬೫). (ನಾ). ೨. ಗೆದ್ದ ವ್ಯಕ್ತಿ ; ಜಯಶಾಲಿ : ದೇವರನಾಮಗಳ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಸಮಾರಂಭದಲ್ಲಿ ಬಹುಮಾನಗಳನ್ನು ಹಂಚಲಾಯಿತು (ರೂಢಿ). [ಸಂ. ವಿಜೇತೃ]

ವಿಜ್ಜಣಿಗೆ 'ಬಿಜ್ಜಣಿಗೆ' ನೋ.

ವಿಜ್ಜಧರ 'ಬಿಜ್ಜಾದರ' ನೋ.

ವಿಜ್ಜನ 'ಬಿಜ್ಜಣ' ನೋ.

ವಿಜ್ಜನಸತಿ (ನಾ). ಚಾಮರ ಬೀಸುವವಳು : ಬಳುಕುವ ಚಮರಿಯ ಪೊಸ ಸೀಗುರಿಗಳು ಜಡಿಯಲ್ಕುಡುಗುವ ಫಣಿಗಳಿಗಾಹುತಿಗೊಡುವಂತಿಹ ವಿಜ್ಜನಸತಿಯರೆನೆ ಮಡದಿಯರೊಪ್ಪಿದರು (ವೀರಬಸ. ೧-೧೯). [ವಿಜ್ಜನ (< ಬಿಜ್ಜಣ) + ಸತಿ]

ವಿಜ್ಞ (ಗು). ೧. ತಿಳಿದ ; ವಿದ್ವತ್ತಿನಿಂದ ಕೂಡಿದ : ಸಜ್ಜವಿಜ್ಞಭಕ್ತಿಯುಕ್ತಜೀವನವೇ ಕರ್ಮವು (ಅರಳು. ೨೯೯-೮). (ನಾ). ೨. ತಿಳಿದವನು ; ವಿದ್ವಾಂಸ : ಆ ಧರ್ಮದಲ್ಲಿ ಕಾಲಕ್ಕೆ ತಕ್ಕಂತೆ ಹಲವು ಸುಧಾರಣೆಗಳನ್ನು ತಂದು ವರ್ಧಮಾನನು ಅದನ್ನು ಪ್ರಚಾರಗೈದನೆಂದೂ ವಿಜ್ಞರು ತಿಳಿಸುವರು (ತೀರ್ಥಂಕ. ೩೦). [ಸಂ.]

ವಿಜ್ಞತೆ (ನಾ). ಪಾಂಡಿತ್ಯ ; ಜ್ಞಾನ : ಪ್ರತ್ಯಕ್ಷವಾಗಿ ಲಭಿಸುವ ಫಲವನ್ನು ಪರಿತ್ಯಜಿಸಿ ಅಪ್ರತ್ಯಕ್ಷಕ್ಕೆ ಕೈಒಡ್ಡುವುದು ವಿವೇಕವೂ ಅಲ್ಲ, ವಿಜ್ಞತೆಯೂ ಅಲ್ಲ (ಅರ್ಯಾಥ. ೨).

[ಸಂ. ವಿಜ್ಞತಾ]

ವಿಜ್ಞಪ್ತಿ (ನಾ). ವಿಜ್ಞಾಪನೆ ; ಬಿನ್ನಹ. [ಸಂ.]

ವಿಜ್ಞವೇಷ (ನಾ). ಪಾಂಡಿತ್ಯದ ಸೋಗು,– ವೇಷ : ನಮ್ಮ ಯುವಕರ ಯೌವನಧರ್ಮ ಎಂದೂ ಚಿರಕಾಲ, ಸಾಲ ತಂದ ಮುಪ್ಪಿನ ಮುಖವಾಡವನ್ನು ತೊಟ್ಟು ವಿಜ್ಞವೇಷವನ್ನು ಹಾಕದು ಎಂಬುದನ್ನು ನಾನು ಬಲ್ಲೆ (ನಿಬಂಧ. I, ೪೫೫). [ಸಂ.]

ವಿಜ್ಞಾತ (ಗು). ೧. ತಿಳಿಯಲ್ಪಟ್ಟ ; ಗೊತ್ತಾದ. ೨. ಪ್ರಸಿದ್ಧವಾದ ; ಖ್ಯಾತ. ೩. ಪರಿಣತ ; ನಿಷ್ಣಾತವಾಗಿರುವ : ಲಬ್ಧಕಷಾಯವೈರಿಜಯನಂ ವಿಜ್ಞಾತ ನಿಶ್ಶೇಷವಾಙ್ಮಯನಂ . . . ವಂದಿಪೆಂ (ಚಂದ್ರಪ್ರ. ೧-೨೧). [ಸಂ.]

ವಿಜ್ಞಾತೃ (ನಾ). ಬಲ್ಲವನು ; ವಿದ್ವಾಂಸ : ಈತನಿಗಿಂತ ಬೇರೆಯಾದ ವಿಜ್ಞಾತೃವಿಲ್ಲ (ಬೃಹ್ಮಾಭಾ. ೨೬೮). [ಸಂ.]

ವಿಜ್ಞಾನ (ನಾ). ೧. (ವಿಶೇಷವಾದ) ಅರಿವು ; ತಿಳಿವಳಿಕೆ : ವಿಜ್ಞಾನಂ ವಿಜ್ಞಾನಾಂತರ ಗ್ರಾಹಕಮಕ್ಕುಮಪ್ಪೊಡಾವ ಮಾಟ್ಕೆಯೊಳ್ ವಿಜ್ಞಾನಾಂತರಮಪ್ಪುದು

(ಆದಿಪು. ೨-೧೦ ವ) ; ಜ್ಞಾನ ವಿಜ್ಞಾನ ಸುಜ್ಞಾನ ಮಹಾಜ್ಞಾನ ಅಪರಜ್ಞಾನ ಇಂತೀ ಪಂಚಜ್ಞಾನವ ದಹ್ಯಮಾಡಿ (ಮೋಳಿಮಾ. ೧೫೪-೫೮೧). ೨. ಪ್ರಾವೀಣ್ಯ ; ನೈಪುಣ್ಯ. ೩. ಭೌತ, ರಸಾಯನ ಮೊದಲಾದ ವಿಷಯಗಳ ವಸ್ತುಜ್ಞಾನ : ಹಿಂದಿನ ಕಾಲದಲ್ಲಿ ವಿಜ್ಞಾನವೇ (Science) ಬೇರೆ, ತತ್ತ್ವಶಾಸ್ತ್ರವೇ (Philosophy) ಬೇರೆ ಎಂಬ ವಿವೇಚನೆಯು ಸ್ಪಷ್ಟವಾಗಿರಲಿಲ್ಲ (ಭೌತವಿ. ೫). ೪. [ಯೋಗ] ಐದು ಬಗೆಯ ಯೋಗಗಳಲ್ಲಿ ಒಂದು : ಪ್ರಥಮದ ದಾರಿ ತಾರಕಯೋಗವಲ್ಲಿಂದೇರಲಾ ವಿಜ್ಞಾನವೆರಡನೆ ಯೋಗವೆನಿಸುವುದು (ಗಗತಾ. ೨೦-೧೭). [ಸಂ.]

ವಿಜ್ಞಾನದೃಷ್ಟಿ (ನಾ). ಎಚ್ಚರಿಕೆಯಿಂದ ಪರೀಕ್ಷಿಸಿ ತಿಳಿಯುವುದು : ವಿಜ್ಞಾನದೃಷ್ಟಿಯಿಲ್ಲದ ವ್ಯಾಸಂಗ ಅಸಂಪೂರ್ಣ (ರೂಢಿ). [ಸಂ.]

ವಿಜ್ಞಾನಮಯ (ನಾ). [ವೇದಾಂತ] ಜೀವಾತ್ಮನನ್ನು ಆವರಿಸಿಕೊಂಡಿರುವ ಐದು ಬಗೆಯ ಆವರಣಗಳಲ್ಲಿ ಒಂದು ; ಜ್ಞಾನ ಮತ್ತು ಇಂದ್ರಿಯಗಳೊಂದಿಗಿರುವ ಬುದ್ಧಿ : ಪಂಚಕೋಶ ಅನ್ನಮಯ (ಸ್ಥೂಲದೇಹ), ಪ್ರಾಣಮಯ (ಉಸಿರು), ಮನೋಮಯ (ಮನಸ್ಸು), ವಿಜ್ಞಾನಮಯ (ಬುದ್ಧಿ), ಆನಂದಮಯ (ವಿಷಯಸುಖದ ಅನುಭವ)(ಅಮೃತ. ೩-೧೮ ಟೀಕು) ; ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಐದು ಕೋಶಸ್ವರೂಪನಾಗಿ (ಹಸಾರ. ೪-೧೭ ಪದಾರ್ಥ). [ಸಂ.]

ವಿಜ್ಞಾನಮಯಕೋಶ (ನಾ). = ವಿಜ್ಞಾನಮಯ : ಪ್ರತ್ಯಗಾತ್ಮಚೈತನ್ಯಚ್ಛಾಯೆಯೊಡಗೂಡಿ ಲೋಹಕಾಂತ ಕುಂತದಂತಿರ್ದಹಂಕಾರಮುಂ ಜ್ಞಾನೇಂದ್ರಿಯಂಗಳುಂ ಕೂಡಿ ವಿಜ್ಞಾನಮಯಕೋಶವೆನಿಸುವುದು (ವಿವೇಕ. ೪೧) ; ಬುದ್ಧಿ, ಜ್ಞಾನೇಂದ್ರಿಯಗಳು ಸೇರಿ ವಿಜ್ಞಾನಮಯಕೋಶವಾಗುವುದು (ಹಿಂದೂಸಾ. ೧೯೭). [ಸಂ.]

ವಿಜ್ಞಾನವಿದ (ನಾ). ವಿದ್ವಾಂಸ ; ಪಂಡಿತ : ಕ್ಲೇಶಸಹಿಷ್ಣು ಸುತೇಜನಮಾತ್ಯಸುಮಂತ್ರಿಸಮೇತನಖಿಲವಿಜ್ಞಾನವಿದಂ (ಪಂಚತಂ. ಅ. ೧೫೯-೩೦೯). [ಸಂ.]

ವಿಜ್ಞಾನಶಕ್ತಿ (ನಾ). ವಿಷಯಗಳನ್ನು ಅರಿಯುವ ಬಲ ; ಜ್ಞಾನಶಕ್ತಿ : ಏನನೇನನೆಲೆ ಪೇಳ್ವೆನಣ್ಣ . . . ದಾನಶಕ್ತಿಯಭಿಮಾನಶಕ್ತಿ ವಿಜ್ಞಾನಶಕ್ತಿ ಸಲೆ ಗೋಪಣಾನ್ವಿಯ (ಎಕ. II, ೬೯-೬೧ ; 1100). [ಸಂ.]

ವಿಜ್ಞಾನಾಂತರ (ನಾ). ಬೇರೊಂದು ವಿಜ್ಞಾನ : ವಿಜ್ಞಾನಂ ವಿಜ್ಞಾನಾಂತರಂ ಗ್ರಾಹಕಮಕ್ಕುಮಪ್ಪೊಡಾವ ಮಾಟ್ಕೆಯೊಳ್ ವಿಜ್ಞಾನಾಂತರಮಪ್ಪುದು (ಆದಿಪು. ೨-೧೦ ವ). [ಸಂ.]

ವಿಜ್ಞಾನಾತ್ಮ (ನಾ). [ಅದ್ವೈತ] ಅರಿವುಳ್ಳವನು : ಜೀವ (ಪ್ರಾಣವನ್ನು ಧರಿಸಿರುವವನು), ಶರೀರ (ಶರೀರವುಳ್ಳವನು), ವಿಜ್ಞಾನಾತ್ಮ (ಬುದ್ಧಿಯುಳ್ಳವನು) ಇವೆಲ್ಲ ಪರ್ಯಾಯಗಳು (ಬ್ರಹ್ಮಭಾ. ೧೬೧ ಅಡಿಟ). [ಸಂ. ವಿಜ್ಞಾನಾತ್ಮನ್]

ವಿಜ್ಞಾನಿ (ನಾ). ೧. ವಿಶೇಷವಾದ ಜ್ಞಾನವುಳ್ಳವನು ; ಜ್ಞಾನಿ. ೨. ಭೌತ, ರಸಾಯನ ಮೊದಲಾದ ಶಾಸ್ತ್ರಗಳನ್ನು ತಿಳಿದವನು ; ವೈಜ್ಞಾನಿಕ : ವಿಜ್ಞಾನಿಗಳ ಜೀವನವನ್ನು ಮತ್ತು ಅವರ ಸಂಶೋಧನೆಗಳನ್ನು ವಿವರಿಸಿರುವ ಗ್ರಂಥಗಳು ಇಂಗ್ಲೀಷಿನಲ್ಲಿ ಅಲ್ಲೊಂದು, ಇಲ್ಲೊಂದು ಇರಬಹುದು (ಸಸ್ಯಕ.V, ಅರಿಕೆ). [ಸಂ. ವಿಜ್ಞಾನಿನ್]

ವಿಜ್ಞಾನಿಕ (ನಾ). = ವಿಜ್ಞಾನಿ. [ಸಂ.]

ವಿಜ್ಞಾಪನ (ನಾ). ಮನವಿ ; ಬಿನ್ನಹ ; ಅರಿಕೆ : ಬರುತಿರ್ದಳ್ ಪ್ರತೀಹಾರಿ ಭೂವಳಯಾಧೀಶ್ವರನಲ್ಲಿಗಾಗಿ ನಯದಿಂ ವಿಜ್ಞಾಪನೋತ್ಕಂಠೆಯಿಂ (ಕಾದಂಪೂ. ೨೪) ; ಇದು . . . ಸುರಜ್ಯೇಷ್ಠವಿಜ್ಞಾಪನಾಕರ್ಣನ ಸುಧಾರ್ಣವಾವತರಣೋದ್ಯೋಗವರ್ಣನಂ (ಜಗವಿ. ೧-೮೦ ವ). [ಸಂ.]

ವಿಜ್ಞಾಪನಂಗೆಯ್ (ಕ್ರಿ). ಮನವಿಮಾಡಿಕೊಳ್ಳು ; ಅರಿಕೆಮಾಡು ; ಬಿನ್ನಹಮಾಡು : ಆ ಕ್ಷಣದೊಳಾಹವಕಭಿಜ್ಞನೆನಿಸುವ ಕರ್ಣಸುತ ವೃಷಧ್ವಜನೆದ್ದು ನಗುತೆ ಕೈಮುಗಿದು ನಿಂದು ವಿಜ್ಞಾಪನಂಗೆಯ್ದ[ಪಾಠಾಂ.ಗೈದ]ನು (ಧ್ವಮಿಭಾ. ೨-೩೭) ; ಅಮಾತ್ಯಂಬೆರಸು ಭರದಿನೈತಂದು . . . ಆದ್ಯಂತಕಾರ್ಯಸ್ಥಿತಿಯನೊಸೆದು ವಿಜ್ಞಾಪನಂಗೆಯ್ದು (ರಾಜಶೇ. ೫-೧೩೩). [ವಿಜ್ಞಾಪನ + ಕೆಯ್$_1$]

ವಿಜ್ಞಾಪನಪತ್ರಿಕೆ (ನಾ). ಅರಿಕೆಮಾಡಿಕೊಳ್ಳುವ ಪತ್ರ ; ಬಿನ್ನವತ್ತಳೆ ; ಮನವಿಪತ್ರ : ಕಛೇರಿಯ ನಿಯೋಗವು ಮುಖ್ಯಮಂತ್ರಿಗಳಿಗೆ ವಿಜ್ಞಾಪನಪತ್ರಿಕೆಯನ್ನು ಕೊಟ್ಟಿತು (ರೂಢಿ). [ಸಂ. ವಿಜ್ಞಾಪನಪತ್ರಿಕಾ]

ವಿಜ್ಞಾಪನೆ (ನಾ). = ವಿಜ್ಞಾಪನ : ಹಿರಿಯರಿಗೆ ಕಿರಿಯನು ಮಾಡುವ ವಿಜ್ಞಾಪನೆಗಳು (ರೂಢಿ). [ಸಂ. ವಿಜ್ಞಾಪನ]

ವಿಜ್ಞಾಪಿತ (ಗು). ಅರಿಕೆ ಮಾಡಿದ ; ಬಿನ್ನವಿಸಿದ ; ಮನವಿ ಮಾಡಿಕೊಂಡ. [ಸಂ.]

ವಿಜ್ಞಾಪಿಸು (ಕ್ರಿ). ಅರಿಕೆಮಾಡು ; ಬಿನ್ನವಿಸಿಕೊಳ್ಳು : ತಮ್ಮ ಪಾದಪದ್ಮಗಳಿಗಭಿವಂದಿಸಿ ವಿಜ್ಞಾಪಿಸಿದೆನೆಂದು ತಿಳುಹಿ ಬಾರೆಂದು ನನ್ನಂ ಕಳುಹಿದಳು (ಸೌಗಂಧಿ. ೨೬೦-೫). [ವಿಜ್ಞಾಪನ + -ಇಸು$_3$]

ವಿಜ್ಞಾಪ್ತಿ (ನಾ). = ವಿಜ್ಞಪ್ತಿ. [ಸಂ.]

ವಿಜ್ಞಾಸಾರ (ನಾ). ಬಲ್ಲವನು ; ವಿದ್ಯಾವಂತ : ಸಾರುವೆವು ನಿಮ್ಮಡಿಯ ಸಿರಿಚರಣಾರವಿಂದವನೆಂದು ವಿಜ್ಞಾಸಾರರುದಿಸಿದರಸುರವಂಶದಲಧಿಕತೇಜದಲಿ (ತೊರರಾ. ೧-೮-೨೧). [ಸಂ.]

ವಿಜ್ವರ (ಗು). ೧. ಜ್ವರದಿಂದ ಬಿಡುಗಡೆಹೊಂದಿದ ; ಜ್ವರವಿಲ್ಲದ. (ನಾ). ೨. ಆತಂಕವಿಲ್ಲದಿರುವವನು ; ನಿರಾತಂಕವ್ಯಕ್ತಿ : ಉಜ್ವಲಿಪ ಕೋಪಾನಲನ ಬಲು ಕಜ್ಜಳವ ಕೆಲಕೊತ್ತಿ ಮನದಲಿ ವಿಜ್ವ[ಪಾಠಾಂ.ಜ್ಜ]ರನು ವಸುಧೆಯನು ಮೇಲಿರಿಸಿದನು ವಾರಿಧಿಯ (ನಿಭಾಗ. ೩-೭-೪೪). [ಸಂ.]

ವಿಟ್$_1$ (ನಾ). ೧. ಚಾತುರ್ವರ್ಣಗಳಲ್ಲಿ ಮೂರನೆಯದಾದ ವೈಶ್ಯವರ್ಗ ಮತ್ತು ಆ ವರ್ಗಕ್ಕೆ ಸೇರಿದವನು : ಭರಿತಭೋಜನ ದಕ್ಷಿಣೆಯಲಾದರಿಸಿದನು ಗುರುಬಂಧು ಜನಭೂಸುರರ ವಿಟ್ ಶೂದ್ರಾದಿಗಳನುಚಿತದಲಿ ಭೂಪಾಲ (ತೊರರಾ. ೧-೮-೧೧). ೨. ಮನುಷ್ಯ ; ಮಾನವ : "ಮನುಷ್ಯಃ . . . ಪುರುಷಃ, ಪೂರುಷಃ, ವಿಟ್ - ಈ ೧೨ ಮಾನಸರ್" (ಹಲಾಯು. ೫೫-೧೭೬). [< ಸಂ. ವಿಶ್]

ವಿಟ್$_2$ (ನಾ). ಮಲ ; ವಿಷ್ಠೆ : "ವರ್ಚಃ . . . ಕಿಟ್ಟಂ, ವಿಟ್, ವಿಷ್ಠಾ . . . ಮಲಂ – ಈ ೧೩ ವಿಷ್ಠ" (ಹಲಾಯು. ೧೦೫-೧೫). [< ಸಂ. ವಿಷ್]

ವಿಟ (ನಾ). ೧. ಕಾಮುಕ ; ವಿಷಯಾಸಕ್ತ ; ವಿಲಾಸಿ : ವಿಟನಱಿಗುಂ ಕುವಿಟಂ ಸ್ತ್ರೀರತರಹಸ್ಯದೊಳಗಱಿದಪನೇ (ಆದಿಪು. ೧-೨೦) ; ಸುರಗೋಪಂಗಳು ಮಾಲಿಕಲ್ಲುಮೆಳವುಲ್ಲುಂ . . . ಎಸೆಗುಂ . . . ನಾನಾಭೂಷಣಾನೀಕಮುಂ ಧರಣೀವಲ್ಲಭೆಗಂಬುದಾಗವುವಿಟಂ ತಂದಿಕ್ಕಿದೊಂದಂದದಿಂ (ಜಗವಿ. ೪-೨೦); ವಿಟನಾದವಗೆ ಮಠವಾದರೇನು ? (ಗಾದೆ). ೨. ಉಪಪತಿ ; ಜಾರ : "ವೇಶ್ಯಾಪತಿಃ, ಭುಜಂಗಃ, ವಿಟಂ, ಪಲ್ಲವಿಕಃ – ಈ ೪ ಬೊಜಗಂ" (ಹಲಾಯು. ೬೩-೨೨೭). ೩. ಶೃಂಗಾರವಿಷಯಗಳಲ್ಲಿ ನಾಯಕನಿಗೆ ಸಹಾಯಕರಾಗಿ ಬರುವ ನಾಲ್ಕು ಮಂದಿಯಲ್ಲಿ ಒಬ್ಬ : ಮೇಳದ ನಾಗರಿಕ ವಿಟ ವಿದೂಷಕ ಪೀಠಮರ್ದಕರ್ಕಳ್ವೆರಸು ಕಾಮದೇವನೋಲಗಕ್ಕೆ ಬರ್ಪಂತೆ ಸೂಳೆಗೇರಿಯೊಳಗನೆ ಬರ್ಪುದುಂ (ಪಂಪಬಾ. ೪-೭೯ ವ) ; ಅತಿಚದುರಂ ಮದನಾಗಮಯುತನದಟಂ ವರಕಳತ್ರಯುತನುಂ ಸುಜನಂ ಸತತಗುಣೋಪಾಯಾರ್ಜಿತನುತನಾಪ್ತಂ ವಿಟನೆನಿಪ್ಪನಂ (ಮದತಿ. ೧೦-೩೮). ೪. ಮೋಸಗಾರ ; ಠಕ್ಕ. ೫. ಒಂದು ಬಗೆಯ ಖನಿಜಲವಣ : "ಪಿದ್ಗ – ವಿಟ, ಲವಣ" (ಔಷಧಿ. ೧೭೩). [ಸಂ.]

ವಿಟಂಕ (ನಾ). ೧. (ವಿಶೇಷವಾಗಿ ಪಾರಿವಾಳ ಮುಂತಾದ)ಪಕ್ಷಿಗಳು ವಾಸಿಸಲು ಅನುಕೂಲವಾಗಲೆಂದು ಮನೆಯ ಸೂರಿನ ತುದಿಯಲ್ಲಿ ಅಳವಡಿಸಿರುವ ಗೂಡು ; ಲೋವೆ : ಪದ್ಮರಾಗಾಂಚಿತಕಲಶಮಿನಗ್ರಾವದಿವ್ಯದ್ವಿಟಂಕಾವರಣಂ (ರಾಜಶೇ. ೨-೧೩೮). ೨. ತುದಿ ; ಅಗ್ರ ; ಶಿಖರ : ಸಕಲಮುಕುಟಬದ್ಧಮಕಿರೀಟಕೋಟಿವಿಟಂಕಸನಾಥಪದ್ಮರಾಗಮಣಿಕಿರಣಾರುಣಿತವಹೌಕ್ತಿಕಮಂಡನೀಭೂತದುಕೂಲವಿತಾನಂ (ಶಾಂತಿಪು.೧-೧೧ ವ) ; ವಿಕಟಜರಾ(ಟಾ)ಜೂಟಕೋಟೀವಿಟಂಕಂ (ಎಇ. XVI, ೬೧-೩೦; 997). ೩. ಒಂದು ಬಗೆಯ ಸಸ್ಯ : "ಮುದ್ಗರಫಲಃ – ವಿಟಂಕ" (ಔಷಧಿ. ೧೨೭). ೪. (?) : ವಿಳಸಿತ ವಿಯತ್ತಳಂ

ಕೊತ್ತಳವಮಧಟರ ಗಂಡಗುಂಡಕಟ್ಟಳೆ ಮುಗಿಲಟ್ಟಳೆ ಪಗೆವರಾಳ್ಸರ? ಬೀಳ್ವಳೆ ಬಗೆದಾಳ್ವಜೆ ಮೆಚೆದುವರಿವಿಟಂಕಂ ವಂಕಂ (ಪುಷ್ಪಪು. ೭-೭೦). [ಸಂ.]

**ವಿಟಂಕಪಾಳಿ** (ನಾ). = ವಿಟಂಕ ೧ : ವಿಶೇಷರತ್ನಸ್ತೋಮಾಭಿರಾಮ ರಚಿತತೋರಣಗವಾಕ್ಷಲಕ್ಷಂ ಗೋಮೇಧಿಕಾಂಚಿತ ನವೀನವಿಟಂಕಪಾಳೀ . . . ಸದನವಿಂತು ಸಲೆ ಶೋಭಿಸುಗುಂ (ಹಮ್ಮೀರ. ೮-೩೮). 'ಕಪೋತಪಾಲಿ' ಪರಾ. [ಸಂ. ವಿಟಂಕಪಾಲೀ]

**ವಿಟಕೋವಿದ** (ನಾ). ಚತುರನಾದ ಜಾರ : ವಿಟಕೋವಿದಂ ನಂಬಿ ಹೂಂಗಠಾರಿಯ ಕೋಲುವಿಡಿದು (ಬಸವ. ೨೬-೧೧). [ಸಂ.]

**ವಿಟಗಾತಿ** (ನಾ). ಸೂಳೆ ; ವೇಶ್ಯೆ : (ಶ). [ವಿಟ + - ಕಾತ್ತಿ]

**ವಿಟಗಾರ** (ನಾ). ಸೂಳೆಯ ಸಹವಾಸ ಮಾಡುವವನು ; ವ್ಯಭಿಚಾರಿ : ರಮಣೀಯವಾಗಿರುವ ಬೆಟ್ಟ ಸಹ್ಯಾಚಲನಿತಂಬವ ನಿಟ್ಟಿಸುತ ವಿಟಗಾರನಂದದೆ ತಟ್ಟನೇ ಹೊರಟೆದ್ದು ಲಗುಬಗೆಯಿಂದ ಸಾಗಿದನು (ರಘುವಂ. ೪-೫೨).
[ವಿಟ + - ಗಾರ (< - ಕಾಜ)]

**ವಿಟಗಾರಿಕೆ** (ನಾ). ಸೂಳೆಗಾರಿಕೆ ; ಹಾದರ : ಮಗನ ಕೂಡೆ ವಿಟಗಾರಿಕೆ ಮಾಡಿ ಒಡವೆ ವಸ್ತು ವೆಚ್ಚವಾದುದಕ್ಕಳಲೋ (ಬಬ್ರು. ೯೮). [ವಿಟಗಾರ + - ಇಕೆ]

**ವಿಟಗಾರ್ತಿ** (ನಾ). = ವಿಟಗಾತಿ : (ಶ). [ವಿಟಗಾರ + - ತ್ತಿ (< - ಇತ್ತಿ)]

**ವಿಟಚರ್ಯೆ** (ನಾ). ವಿಟನು ಮಾಡುವ ಶೃಂಗಾರಚೇಷ್ಟೆ : ಆವಳಿಗೆ ಬೇಕಾಗಿದ್ದದ್ದು ಲಲ್ಲೆಯಲ್ಲ, ವಿಟಚರ್ಯೆಯೂ ಅಲ್ಲ (ಬಂಕಿಮ. ೨೦೪). [ಸಂ. ವಿಟಚರ್ಯಾ]

**ವಿಟಚೇಷ್ಟೆ** (ನಾ). = ವಿಟಚರ್ಯೆ : ಹಿರಿದು ವಿಟಚೇಷ್ಟೆಗಳಿನಾರಂ ಸರಕುಮಾಡದೆ ನಂಬಿಯಣ್ಣಂ ಪರಮಲೀಲೆಯೊಳುದ್ಧಚಮ್ಮಾವುಗೆಗಳಂ ಮೆಟ್ಟಿ ಸರಸರನೆ ನಡೆತಂದು (ಬಸವ. ೨೬-೧೪). [ಸಂ. ವಿಟಚೇಷ್ಟಾ]

**ವಿಟಜಂಗಮ** (ನಾ). ವಿಷಯಲಂಪಟನಾದ ಜಂಗಮ : ಕೊಟ್ಟು ವಿಟಜಂಗಮಕೆ ರಾಯನ ಪೆಟ್ಟಿಗೆಯ ಪೊನ್ನಂ ಬೆಳಿಸಿ ಸತಿಯುಟ್ಟುದಂ ಸುಗಿದಿತ್ತು ಮೆಚೆದನು ಕಟಕದೊಳು ಬಸವ (ಬಸವ. ೧೧ ಸೂಚನೆ). [ಸಂ.]

**ವಿಟಜನ** (ನಾ). ಕಾಮುಕರಾದ ಜನ : ಕೆಡಿಸಿತಧರದ ರಾಗ ರಾಗವ ಬಡತನವ ಹೆಚ್ಚಿಸಿತು ನಡುವಿನ ಬಡತನವು ವಿಟಜನಕೆನಲು ನಡೆತಂದಳೆಂದುಮುಖಿ (ಕುಮಾರವ್ಯಾಸ. ೫-೩೫). [ಸಂ.]

**ವಿಟತತ್ವ** (ನಾ). ಸೂಳೆಗಾರಿಕೆ ; ವ್ಯಭಿಚಾರ ; ಹಾದರ : ಆ ಪರಾರ್ಥ್ಯಾರ್ಥಿನೀಂದು ಲಲಾಟೆಯರಾ ಪೂರ್ಣಲಲಾಟನು ತಮ್ಮ ಲಲಾಟತಟರಂಜನೆಯಿಂ ವಿಟತತ್ವಾಭಿಮುಖಂ ಮಾಡಿ ರಂಜಿಸಿಯುಂ (ಸುಕುಮಾ. ೧೦-೧೦೧ ವ). [ಸಂ.]

**ವಿಟತನ** (ನಾ). = ವಿಟತತ್ವ : ನಾಡೊಳೂರೊಳು ನೀನೆ ನಿನಗಾರ್ ಪಾಡು ದೊರೆತನದಲ್ಲಿ ವಿಟತನದಲ್ಲಿ ಕೊಡುವಲ್ಲಿ (ಬಸವ. ೪೨-೬). [ವಿಟ + - ತನ]

**ವಿಟತ್ವ** (ನಾ). = ವಿಟತತ್ವ : ಕೂಟದೊಳ್ ಕುಶಲನಪ್ಪುದು ಕೇಳಿಮಿದಿಂತುಟೆಂದು ಚರ್ಚಿಸಿ ನುಡಿವಂತು ಬೇಜೆ ಬೇಜೆತಾಪುದು ಕೇಳಿಕೆಯುಂ ವಿಟತ್ವಮುಂ (ಶಾಂತಿಪು. ೮-೯೧) ; ಆ ಸರಸಿರುಹಮುಖಿಯರ ಲಾಂಛನಗಳನಲ್ಲಿ ತಾಮಾಳ್ವವರ ವಿಟತ್ವಮನಂತು ತಪ್ಪದುಸುರಲು (ಬಸವ. ೧೨-೫೬). [ಸಂ.]

**ವಿಟಪ** (ನಾ). ೧. ಮರದ (ಎಳೆಯ) ಕೊಂಬೆ ; ಟಿಸಿಲು : ಕುಸುಮಂ ಸ್ಮಿತಮಳಿನಯನಂ ಕಿಸಲಯಮಧರಂ ಭುಜದ್ವಯಂ ವಿಟಪಂ ಮತ್ತಸುವಲ್ಲಭೆ ಲತೆ (ಕವಿರಾ. ೩-೧೪) ; ದಳಫಳಕುಸುಮವಿಸರವಿಡಿದ ವಿಟಪಂಗಳೊಳ್ ಪೂಗೊಯ್ಯಲೆಂದ ಬಲೆಯರ್ನೆರೆದು (ರಾಜಶೇ. ೧೦-೫೭ ರಗಳೆ). ೨. ಪೊದೆ ; ಹೊದರು : "ಉಲಪಃ, ಸ್ತಂಭಃ, ಗುಲ್ಮಃ, ವೀರುತ್, ವಿಟಪಃ - ಈ ೫ ಪೊದಜು" (ಹಲಾಯು. ೩೧-೩೬). [ಸಂ.]

**ವಿಟಪಪರ್ಣ** (ನಾ). ಕೊಂಬೆಯಲ್ಲಿರುವ ಎಲೆ : ಅಶ್ವತ್ಥವಿಲ್ಲಿ ಬಾಡಿದೊಡೇನು ? ಚಿಗುರಲ್ಲಿ ; ನಶ್ವರತೆ ವಿಟಪಪರ್ಣಂಗಳಲಿ ಮಾತ್ರ (ಮಂಕುತಿ. ೮೮೭). [ಸಂ.]

**ವಿಟಪಿ** (ನಾ). ೧. ಕೊಂಬೆಗಳುಳ್ಳುದು ; ಮರ : ಮಲಯಾನಿಲನೊಯ್ಯನೆ ಪಣ್ಣೆಲೆಯಂ ನೆಲೆಯಿಂ ಕಲೆಬ್ಬುಗುಂ ವಿಟಪಿಗಳೊಳ್ (ಕವಿರಾ. ೩-೫೪) ; ಆ ಭಾಂಡೀರಮೆಂಬ ಮಹಾವಟವಿಟಪಿಯೊಳ್ . . . ರಾಜೀವಲೋಚನಂ ಕ್ರೀಡಿಸಿದಂ (ಜಗನ್ನಾ. ೪-೪೬ ವ) . ೨. ಅತ್ತಿಮರ. [ಸಂ. ವಿಟಪಿನ್]

**ವಿಟಪೀವರ** (ನಾ). ೧. ದೃಢಕಾಯನಾದ ಜಾರ. ೨. ದೊಡ್ಡಮರ ; ಮಹಾವೃಕ್ಷ. ೧,೨ : ಮುಗುಳ್ನಗೆಯೊಳಲರಕ್ಷಿಯೊಳ್ಪಳೆದು ಸಲೆ ರಾಜಿಸುವ ತನುಲತೆಯೊಳೊಪ್ಪಿರ್ದರೆಳವಣ್ಣಳಚ್ಚ ಪೊಸಜವ್ವನದೊಳಾವಗಂ ವಿಟಪೀವರಾಶ್ರಯದೊಳು (ಜೈಮಿಭಾ. ೬-೨೭). [ಸಂ. (ವಿಟ + ಪೀವರ) ; (ವಿಟಪೀ + ವರ)]

**ವಿಟಪುರುಷ** (ನಾ). = ವಿಟ ೧ : ನಾಲ್ವಿಧದ ವಿಟಪುರುಷರಿಂ ರತಿಸುಖವ ಪಡೆವೆವೆಂದು (ನವಮೋ. ೨-೫೪). [ಸಂ.]

ವಿಟಮಿನ್ 'ವಿಟಮಿನ್ನು' ನೋ.

**ವಿಟಮಿನ್ನು, ವಿಟಮಿನ್** (ನಾ). ಶರೀರವ್ಯಾಪಾರಕ್ಕೂ ರೋಗಗಳ ನಿವಾರಣೆಗೂ ಅಗತ್ಯವಾದ ಆಹಾರಾಂಶ ; ಜೀವಾತು ; ಅನ್ನಾಂಗ : ದೇಹದಲ್ಲಿ ವಿಟಮಿನ್ನುಗಳ ಕೊರತೆಯುಂಟಾದಾಗ ರೋಗಗಳು ತಲೆದೋರುತ್ತವೆ (ರೂಢಿ). ವಿಟಮಿನ್ : ಏಕದಳಧಾನ್ಯಗಳಾದ ಅಕ್ಕಿ, ರಾಗಿ, ಗೋಧಿ, ಜೋಳಗಳ ಅಂಕುರದಲ್ಲಿ ಎಣ್ಣೆ ಇರುತ್ತದೆ. ಈ ಎಣ್ಣೆಯಲ್ಲಿ ವಿಟಮಿನ್ 'ಇ' ಇರುತ್ತದೆ (ಗೃಹವಿ. ೩೨) ; ತರಕಾರಿಗಳಲ್ಲಿ ವಿಟಮಿನ್ ಸತ್ವಗಳಿವೆ (ತರಚಿ. ೬೩). [<— ಇಂ. Vitamin]

**ವಿಟವೃತ್ತ** (ನಾ). = ವಿಟಗಾರಿಕೆ : ಕಲ್ಮದಲ್ತೆ ವಿಟರಿಂ ವಿಟವೃತ್ತಮನೆಮ್ಮೊಳಲ್ಲಿ ಗಾಮೊಪಜರೆಮೆಂಬಪೋಲ್ತೊರೆವ ಮೆಲ್ಪೆಸೆಯುತ್ತಿರೆ ಸೂಟಿಸೂಟಿದೇಂ ಸವಿದುವೊ ಬಣ್ಣವಣ್ಣಗೆಯ ಪೂಗಳ ಸೌರಭಮಂ ಮದಾಳಿಗಳ್ (ಆದಿಪು. ೧೧-೧೨೬). [ಸಂ.]

**ವಿಟವೃಷಭ** (ನಾ). ಶ್ರೇಷ್ಠನಾದ ಜಾರ : ವೈನತೇಯನ ಚಿತ್ರವೃತ್ತಿಯಂತೆ ಭುಜಗದ್ವೇಷಿಯಾಗಿರ್ದು(ದ)ನಜೆದುರಗವನಿತೆಯಂತೆ ಕೋಲ್ವೆಪ್ಪಿ ಮುಳಿದಿರ್ದಳಂ ಪಜೆಗೆ ಮುಳಿದಳೆಂದು ವಿಟವೃಷಭನಾಕೆಯಂ ತಿಳಿಪಲಡಿಗೆಜಗಿ (ಶಾಂತಿಪು. ೮-೮೩ ವ).
[ಸಂ.]

**ವಿಟವೇಷ** (ನಾ). ಜಾರನ ವೇಷ : ಪೊಜಮಟ್ಟನೊಲವಿಂದ ವಿಟವೇಷದೀಶ್ವರಂ (ಇಹರ.ದೇ. ೩೬-೧೧). [ಸಂ.]

**ವಿಟಾಳ** (ಗು). ೧. ಅಪವಿತ್ರವಾದ ; ಕಲ್ಮಷದಿಂದ ಕೂಡಿದ : ವಿಕಾಳಿಸುತೆ ಕೌರವನ ಬುದ್ಧಿ ವಿಟಾಳಸಂಗತಿಯಾಯ್ತಲಾ ಪಿಸುಣಾರ ಕೆರಳಿಚದು (ಕುಮಾರವ್ಯಾಸ. ೧೨-೪೭).
(ನಾ). ೨. ಅಪವಿತ್ರತೆ ; ಮಾಲಿನ್ಯ : ಲೀಲೆಯಲಿ . . . ರಮಿಸುವುದು ಮನದ ವಿಟಾಳವಿಲ್ಲದೆ ಬದುಕಿ ನಿಮ್ಮೊಳಗೆ (ಕುಮಾರವ್ಯಾಸ. ೧೬-೪೨).
[< ಪ್ರಾ. ವಿಟ್ಟಾಲ. / ಮರಾ. ವಿಟಾಳ]

**ವಿಟಾಳಚರಿತ** (ನಾ). ಅಪವಿತ್ರನಾದವನು ; ಕಳಂಕದಿಂದ ಕೂಡಿದವನು : ಖಿಳರಿಗೆ ತಾ ಜನ್ಮಭೂಮಿ ವಿಟಾಳಚರಿತರ ತೌರುಮನೆ ದುಶ್ಶೀಲರಿಗೆ ದರ್ಪಣ (ಕುಮಾರವ್ಯಾಸ. ೯-೨೦). [ವಿಟಾಳ + ಚರಿತ]

**ವಿಟಾಳಿಸು**[1] (ಕ್ರಿ). ಹರಡು ; ವ್ಯಾಪಿಸು : ಕಾರ್ಬೊಗೆ ವಿಟಾಳಿಸಿತು ಕೂಡೆ ಶಿಖಿಯೊಳಗೆಯ ವಿಷ ಸುಡುತ ಬರುತಿರ್ದುದರಿಯೆಡೆಗೆ (ತುರಂಗ. ೬೯-೫೦).
[< ವಿತಾಳಿಸು]

**ವಿಟಾಳಿಸು**[2] (ಕ್ರಿ). ೧. ಅಪವಿತ್ರಮಾಡು ; ಹೊಲೆಗೊಳಿಸು : ಕಾಲದೇಶಾಗಮದ ನಿಗಮದ ಡಾಳವಜೆದೈಹಿಕಪರತ್ರ ವಿಟಾಳಿಸದೆ ನಡೆ ಕಂದ (ಕುಮಾರವ್ಯಾಸ. ೧೬-೬೨). ೨. ಹೇಸಿಗೆಯುಂಟಾಗು ; ಜುಗುಪ್ಸೆಯಾಗು : ಮಗಳೆ ವಿಟಾಳಿಸಿತೆ ಸಿರಿರಾಜ್ಯಸಂಪದ (ನಳಚ. ೭-೩೧). [ವಿಟಾಳ + - ಇಸು]

**ವಿಟಿ** (ನಾ). ವಿಲಾಸಿನಿ : ಕೇರಳವಿಟೀಕಟೀಸೂತ್ರಾರುಣಮಣಿ . . . ಉದಾರಂ ಸರಸ್ವತೀಮಣಿಹಾರಂ (ಆದಿಪು. ೧-೩೨) ; ಸ್ಮರಬಾಣಾರ್ತ ವಿಟೀವಿಟಾಳಿಗೆ ವಿಯೋಗಂ ಪೂರ್ವಸಂಭೋಗಸಂಸ್ಮರಣಂ ದೂತನ ಕೆಯ್ಯೊಳಟ್ಟುವವಿನಾಣಂ (ಶಾಂತಿಪು. ೮-೧೪೫).
[ವಿಟ + - ಇ[2]]

**ವಿಟಿಯ್ಯ** (ನಾ). ಒಬ್ಬಾತನ ಹೆಸರು : ಉರ್ಪವಳ್ಳಿಯ ಚಾಮಯ್ಯನುಂ ಇನ್ನಪೂರದ ವಿಟಿಯ್ಯನುಂ ಮಂಗಳಂ (ಎಕ.VI, ಚಿಕ್ಕಮ.೩-೧೬ ; ೫೦೯?). [? + ಅಯ್ಯ[1]]

**ವಿಟೆ** (ನಾ). = ವಿಟಿ : ಪುರವರದ ವೀಧಿಯೊಳೊರಲಿ ತಿರುಕರು ದ್ವಾರದ್ವಾರಗಳ ಚರಿಸಿ ಅನ್ನವ ಬೇಡುತಿಹರಾ ವಿಟ ವಿಟೆಯರನು ಬೆಂಬಳಿಯರಸಿ ತಿರುಗುವರಲ್ಲಿ ರತಿಯಾತುರದ ಮನದಿಂದಾ (ಜಿರಾಮಾ. ೬೦೪-೧೪). [ವಿಟ + - ಎ[2]]

ವಿಟ್ಟದಿರ (ನಾ). ಒಂದು ಬಗೆಯ ಕಗ್ಗಲಿಮರ : "ಅರಿಮೇದಃ, ವಿಟ್ಟದಿರಃ --೨ ದುರ್ಗಂಧವುಳ್ಳ ಕಗ್ಗಲೀಗಿಡ" (ಸಿದ್ಧಾಂತಿ. ೧೨೩). [ಸಂ.]

ವಿಟ್ಟರ (ನಾ). ಹೊಲಸು ತಿನ್ನುವ ಪ್ರಾಣಿ ; ಹಂದಿ : ವಿಟ್ಟರಂ . . . ಊರೊಳಗಿನ ಹಂದಿಯ ಹೆಸರು" (ಸಿದ್ಧಾಂತಿ. ೩೧೩). [ಸಂ.]

ವಿಟ್ಟಪ್ಪರಸ (ನಾ). ಒಬ್ಬಾತನ ಹೆಸರು : ಮಹಾಸಾಮನ್ತರ್ ವಿಟ್ಟಪ್ಪರಸರ್ ಕೊವಳಾಳನಾಡು ಮೂನೂಱುಂ ಆಳೆ (ಮೈಆರಿ. ೧೯೨೬,೧೦೦-೩ ; ೮ನೆಯ ಶತ). [ವಿಟ್ಟು$_2$ (< ಬಿಟ್ಟು$_2$) + ಅಪ್ಪ$_1$ + ಅರಸ$_1$]

ವಿಟ್ಟರ$_1$ (ನಾ). ದೇವತೆಗಳ ಗುರು ; ಬೃಹಸ್ಪತಿ : ಈ ಕಥೆಯ ಸಂಕ್ರಂದನಂ ವಿಟ್ಟರನ ಮುಂದೆ ಮುದದೊಳು ದ್ವಾರಪಾಲಕಗೆ ಪೇಳೆಯವ ಮಂದಸ್ಮಿತವನಾಗಿ ನೋಡುತಂ (ಪ್ರಭುಪು. ೬-೩೪). [< ಸಂ. ವಿತರ]

ವಿಟ್ಟರ$_2$ (ನಾ). ಆಸನ ; ಪೀಠ. 'ಪದುಮವಿಟ್ಟರ' ಪರಾ. [< ಸಂ. ವಿಷ್ಟರ]

ವಿಟ್ಟಿಗೆಜೆ (ನಾ). ಒಂದು ಊರಿನ ಹೆಸರು : ವಿಟ್ಟಿಗೆಜೆಗಳ ಎಡೆನಾಡಗಾಮುಂ ಮನ್ನೆಜ್ಜಳಾ ಕೈಯಿನ್ ಕಲಿಂಮರಾನ್ ಎಟೆದುಕೊಣ್ಣಾಳುತ್ತಿರೆ (ಎಕ.VIII, ಸೊರಬ. ೧-೨ ; 967). [ವಿಟ್ಟಿ$_7$ + ಕೆಜೆ]

ವಿಟ್ಟು$_1$ 'ಬಿಡು$_1$' ಪರಾ.

ವಿಟ್ಟು$_2$ 'ಬಿಟ್ಟು$_2$' ನೋ.

ವಿಟ್ಟೆ 'ವಿಷ್ಟೆ' ನೋ.

ವಿಟ್ಠಲ (ನಾ). ಪಂಢರಪುರದಲ್ಲಿ ವಿಠೋಬನೆಂದು ಪೂಜಿಸಲ್ಪಡುವ ಕೃಷ್ಣ : ಪಕ್ಷಿವಾಹನ ಸಿರಿಪುರಂದರ ವಿಟ್ಠಲನ ನಿಜದಾಸನೆ (ಪುರಂದ. ೧-೫-೩). [ಸಂ.]

ವಿಠಲ (ನಾ). = ವಿಟ್ಠಲ : ಜಯಹರಿ ಪುರಂದರವಿಠಲನ ಬಲವಯ್ಯ ಸುಜನರಿಗೆ (ಪುರಂದ. ೧-೨-೧) ; ಬಾಲೆಯರ ಮನೆಗೆ ಪೋಗಿ ಹಾಲು ಮೊಸರು ಕದ್ದು ಇಂಥ ಲೀಲೆ ಮಾಡದಿರು ನಮ್ಮ ಲೋಲ ಪುರಂದರವಿಠಲ (ಪುರಂದ. ೩-೧೭೪-೩). [ಸಂ.]

ವಿಠ್ಠಲ (ನಾ). = ವಿಟ್ಠಲ : ಕಣ್ಣಾಮುಂದೆ ಬಂದು ನಿಲ್ಲೊ . . . ವಿಜಯವಿಠ್ಠಲರಂಗ (ವಿದಾಕೃ. ೧೯-೫) ; ಭಕ್ತಪ್ರಿಯ ವಿಠ್ಠಲಾ ಕರುಣಿಸಿದರ ಫಲಾ ದೊರತೀತು (ಗೀಚುಗೆ. ೯೭). [ಸಂ.]

ವಿಡ (ನಾ). ಒಂದು ಬಗೆಯ ಕೃತಕಲವಣ : 'ವಿಡಲವಣ' ಪರಾ. [ಸಂ.]

ವಿಡಂಗ (ನಾ). ೧. ಒಂದು ಬಗೆಯ ಔಷಧೀಸಸ್ಯ ಮತ್ತು ಅದರ ಹಣ್ಣು ; ವಾಯಿವಿಳಂಗ; P ಕರುಳಿನಲ್ಲಿ ಹುಳುಗಳ ನಿವಾರಣೆಗಾಗಿ ಇದನ್ನು ಔಷಧಿಯಂತೆ ಬಳಸಲಾಗುತ್ತದೆ : "ಕೀಟಮಾರಃ - ವಿಡಂಗ"(ಓಷಧಿ. ೩೪) ; ಮರಿಚಂ ಚವ್ಯಂ ವಿಡಂಗಂ . . . ಯವಕ್ಷಾರಮೆಂದಿಂತಿವೆಲ್ಲಂ ಸಮನಾಗಿ ಕೂಡಿ ಕಟೆವೆರಸು ಮತಂಗಜಕಿಕ್ಕೆ ಶೂಲೆ . . . ಅರುಚಿತ್ವಮೆಂಬಿವಂ ಮಾಣಿಸುಗುಂ (ಲೋಕೋಪ. ೯-೨೪೫) ; ದಾಡಿಮಂ . . . ವಿಡಂಗಂ ಕೂಡೆ ಕುಳನೇಡಕಮುಮೞ್ ರೂಢಿಯ ಕುಳನೆಂದು ಱಱದಪಭ್ರಂಶತೆಯೊಳ್ (ಶಮದ. ೨೦). ೨. ಜಾಣ. ೩. (ಅಲಂ) ದಡ್ಡ ; ಮೂರ್ಖ : ಕುಂಚದ ಕನಿಷ್ಕರುಂ ತರಟೆನ ವಿಡಂಗರುಂ ಮಿಂಚುದಲೆ ಒಣಕರುಂ ನಿಡುಗಯ್ಯ ದಟಿಗರುಂ . . . ಸುತ್ತ ಮುತ್ತಿರಲು (ವಾಗೀಶ. ದೇ. ೨೫೪-೨೧). [ಸಂ.]

ವಿಡಂಬ (ನಾ). ೧. ಅನುಕರಣೆ : ತವಕಿಗರು ಮಗಧೇಂದ್ರರಾಯನ ಭವನವನು ಹೊಕ್ಕರು ವಿಡಂಬದ ವಿಪ್ರವೇಷದಲಿ (ಕುವ್ಯಾಸ. ೨-೬೧). ೨. ಸೋಗು ; ವೇಷ : ಅಱೆದಂ ತ್ವದೀಯಚರಿತದ ತೆಱನಂ ಮಾನುಷವಿಡಂಬಮುಂ ಮೆಚ್ಚೆದಪೆ ನೀಂ (ಜಗವಿ. ೮-೧೩). ೩. ತೋರಿಕೆ ; ಆಡಂಬರ : ಸೀಗುರಿ ಬೇಡ ಬೀಸದಿರ್ ಕೊಡೆಯ ವಿಡಂಬಮೇಕೆ (ಪುಷ್ಪಪು. ೧೩-೯೬). ೪. ಅಣಕ ; ಪರಿಹಾಸ್ಯ : ಮುಂದೆ ನಿಂದರಂ ಕಾಣದೆ ತಕ್ಕಡೆಯೊಳ್ ಕಡೆಗಣಿಸುವ ನೃಪವಿಡಂಬಮಿವು ಲಕ್ಷ್ಮೀ ನಿನ್ನ ದೂಸಱೆನಲ್ತೇ (ಗದಾಯು. ೯-೮). ೫. ಅಲ್ಲಗಳೆಯುವಿಕೆ ; ತಿರಸ್ಕಾರ. ೬. ಮೋಸ ; ವಂಚನೆ: ಬೆಂಬಲಕೆ ತಾನೆಂದು ಬಯಲ ವಿಡಂಬದಲಿ ಕಾಳೆಗವ ಮಸೆವರೆ ನಂಬಿ ಕೆಟ್ಟರಿ ಕೃಷ್ಣನನು ನೀವೇನ ಮಾಡುವಿರಿ (ಕುವ್ಯಾಬೀ. ೧-೫೯). ೭. ಕಷ್ಟ ; ತೊಂದರೆ : ಪಂಚವಿಧಸಮಿತಿಯುಕ್ತಂ ಪಂಚಭವಂಗಳ ವಿಡಂಬಮಂ ಸ್ತಂಭಿಸಿದಂ (ಐರ್ಧಪು. ೧೫-೨೯) ; ಕೀಚಕವಿಡಂಬವ ಕೇಳು ಭೂಪಾಲ (ಕುವ್ಯಾವಿ. ೨-೨). [ಸಂ.]

ವಿಡಂಬಕ (ನಾ). ೧. ಅನುಕರಿಸುವಿಕೆ ; ಅನುಕರಣೆ. ೨. ಅಣಕಿಸುವವನು ; ಪರಿಹಾಸಕ : ಕಾಮಶುದ್ಧಿಯೆಂಬುದು ವಿಗತಕಾಮರುಂ ಜಿತೇಂದ್ರಿಯರುಂ ಸ್ವದಾರಸಂತುಷ್ಟರುಮಪ್ಪುದುಮುಟೆದ ಸಾವದ್ಯಾಹಾರಮಶುದ್ಧಮೆಂದಿಂತು ನಡೆಯದೊರೆಲ್ಲಂ ವಿಟರುಂ ವಿಡಂಬಕರುಮೆಂದಱೆಗೆ (ಚಾವುಂಪು. ೨೨೨). [ಸಂ.]

ವಿಡಂಬಡಂಬರ (ನಾ). ಆಡಂಬರದ ಕೋಲಾಹಲ : ಜಗಮನದಿರ್ಪಲಾರ್ಪ ಬಿರುದಾಂತ ಬಲಂಗಳನೆತ್ತಿ ನುಂಗಿ ಮತ್ತುಗುಱೆದ ಜೀರವರ್ತಿನಿಕರಂಗಳ ಬಾಜೊದಲಾದ ಚಾಗದೋಲಗದ ವಿಡಂಬಡಂಬರಕೆ ಕಣ್ಣೆಲೆಯಾದ ವಿಲಾಸಮೊಪ್ಪೆ (ಅನಂಪು. ೨-೨೮). [ಸಂ.]

ವಿಡಂಬನ (ಗು). ೧. ತಿರಸ್ಕಾರಕ್ಕೆ ಯೋಗ್ಯವಾದ : ಈ ವಿಡಂಬನದೈಹಿಕವ ಸಂಭಾವಿಸುತ ಪರಲೋಕಹಿತವನು ನೀವು ನೆನೆಯದೆ ಕೆಟ್ಟುದಕೆ ಬೆಱಗಾದೆ ನಾನು (ಕುವ್ಯಾಗ. ೧-೨೨). (ನಾ). ೨. ಅನುಕರಿಸುವುದು ; ಅನುಕರಣೆ : ವೇಶ್ಯಾವಿಡಂಬನವಱೆವ ಕಥೆಗೇಳ್ವ ಬಿಡದೆ ಸಿಂಗರಿಸಿ ನಲ್ಲರ ಗೋಷ್ಠಿಯೊಳಗಿಪ್ಪ ಮಡದಿಯರನೀಕ್ಷಿಸುತಲವನೀಶನೆಯ್ತಂದನಾ ಸೂಳೆಗೇರಿಯೊಳಗೆ (ಹಚಕಾ.೪-೯) ; ಹಾಸ್ಯವು ಅನೇಕ ಮುಖವಾಗಿ ಪ್ರಕಟಗೊಂಡ ಜೀವನದಲ್ಲಿಯ ವಿವರವನ್ನು ಎತ್ತಿ ತೋರಿಸಿದೆ. ಅಣಕ, ವಿಡಂಬನ, ವಿನೋದ, ವ್ಯಂಗ್ಯೋಕ್ತಿ, ವಿದಗ್ಧತೆ — ಹೀಗೆ ಮೊದಲಾಗಿ ಹಾಸ್ಯ ಪ್ರಕಟವಾಗಿದೆ (ಸಮಜೀ. ೩೭ ಪೀಠಿಕೆ). ೩. ತೋರಿಕೆ ; ಆಡಂಬರ ; ಪ್ರದರ್ಶನ : ಅಂಬರದತ್ತಣ್ಗೆ ಸಂದ ಪುಸಿಯ ಕಳವಿನ ಬಲ್ಪಡೆಯೆನೆ ತೋರ್ಪ ಮಾಯಾವಿಡಂಬನದಿಂ ಕುದುರೆಯಂ ಕಳ್ದುಯ್ಯ ವಿದ್ಯುನ್ಮಾಲಿವೆಸರ ರಕ್ಕಸನ ಪೆರ್ವಡೆ ತುಬ್ಬಾದತ್ತು (ರಾಮಾಶ್ವ. ೧೧೦-೧೫). ೪. ಅಣಕ ; ಪರಿಹಾಸ್ಯ : ಕಾದಂಬರಿಯು ನೀನು ಇಲ್ಲದ ಗುಣಗಳನು ಪಕ್ಷಪಾತದಿಂದ ಕಲ್ಪಿಸಿ ಹೇಳಿದೆಯೆಂದು ಆಗಾಗ್ಗೆ ವಿಡಂಬನವ ಮಾಡಿ ನುಡಿಯುತಿರುವಳು (ವಚಕಾ. ೮೯) ; ಕನ್ನಡಿಯಂತುಟಾಕೆಯುಂ ಪ್ರತಿಬಿಂಬರೀತಿಯಂ ಕೈಕೊಂಡಳಾ ಜನದ ಮನದ ವಿಕೃತಿಗೆ ತನ್ನ ಮೆಯ್ ವಿಡಂಬನಮಪ್ಪವೋಲ್ (ಶ್ರೀರಾಮಾ. ೫-೬೦೧). ೫. ಅಲ್ಲಗಳೆಯುವಿಕೆ ; ತಿರಸ್ಕಾರ : 'ವಿಡಂಬನಂಗೆಯ್' ಪರಾ. [ಸಂ. ವಿಡಂಬನ, ವಿಡಂಬನಾ]

ವಿಡಂಬನಂಗೆಯ್ (ಕ್ರಿ). ಹೀಗಳೆ ; ಮೂದಲಿಸು : ಲಕ್ಷ್ಮಿಯಂ ವಿಡಂಬನಂಗೆಯ್ದ ನಿತಱೆಂಳಂ ಮಾಣದೆ (ಗದಾಯು. ೯-೧೨ವ) ; ದುರ್ವಿಷಯವಶನಾಗಿ ಪ್ರತಿಭೆ ಪೋಗಿ ಅಂಬುಜಾಂಬಕಿ ಕೈಕೆಗಾಳಾದನೆನ್ನುತ ವಿಡಂಬನಂಗೆಯ್ದುದುಳಿದವರೆ (ಮಂಕಾರಾ. ೨-೬-೪೩). [ವಿಡಂಬನ + ಕೆಯ್$_1$]

ವಿಡಂಬನಗೀತ (ನಾ). ಅಣಕವಾಡು : ಪದ್ಯನಾಟಕ ಗೀತನಾಟಕ, ಒಪೆರಾ . . . ವಿಡಂಬನಗೀತ, ಅಣಕು ವಾಡು-ಎಲ್ಲವೂ ಇಂದು ಕನ್ನಡದಲ್ಲಿ ನೆಲೆಗೊಂಡಿವೆ (ನವ್ಯಕಾ. ೨೪). [ಸಂ.]

ವಿಡಂಬನಚಿತ್ರ (ನಾ). ಗೇಲಿಯುಂಟುಮಾಡಲು ಬರೆದ ಚಿತ್ರ ; ಅಣಕಚಿತ್ರ : ವಿಡಂಬನಚಿತ್ರ ಬರೆ : ಒಂದು ವ್ಯಕ್ತಿಯನ್ನು ವಿಡಂಬನರೀತಿಯಲ್ಲಿ ರೇಖಿಸು (Cartoon.ಇಂಕನಿ). [ಸಂ.]

ವಿಡಂಬನೆ (ನಾ). ೧. ಅನುಕರಣೆ : ಶಂಬರಾರಿಯ ಶಸ್ತ್ರಹತಿಯ ವಿಡಂಬನೆಯ ಧಿಕ್ಕರಿಸಿ ತೋಱುವೆನು (ಪ್ರಭುಲೀ. ೧೦-೩). ೨. ಅಣಕ ; ಅಪಹಾಸ್ಯ : ಯುವಕನೊಬ್ಬನು . . . ಮುದುಕನ ನಟನೆ ಮಾಡಿ ತೋರಿಸಿದಲ್ಲಿ ಅದು ಅಣಕವಾಗುವುದಿಲ್ಲವೇ ? ಇದಕ್ಕೂ ಹೆಚ್ಚಿನ ವಿಡಂಬನೆ ಯಾವುದು ? (ಹೇಮಂತ. ೩೩೨) ; ಅಂತಃಪುರದ ಈ ಕಥೆಯನ್ನು ಕೇಳಿ ಗಿಣಿಯು ನನ್ನ ಭಾಗ್ಯದ ಬಗ್ಗೆ ಎಂತಹ ವಿಡಂಬನೆ ಮಾಡಿದೆ (ಬಾಣಅ. ೧೨೫). [ಸಂ. ವಿಡಂಬನಾ]

ವಿಡಂಬನೆಗೈ (ಕ್ರಿ). ಹೀಗಳೆ ; ಮೂದಲಿಸು : ಕೇವಲ ಬಹಿರಂಗದ ಲಾಂಛನ ಬರಿಯ ಪ್ರದರ್ಶನಕ್ಕೆ ಸೇರಿದ್ದು , ಅದನ್ನು ಘಟ್ಟಿವಾಳಯ್ಯ ಎಂಬ ಭಕ್ತ ಮಾರ್ಮಿಕವಾಗಿ ವಿಡಂಬನೆಗೈದಿದ್ದಾನೆ (ಶೂನ್ಯಕು. ೧೨೭). [ವಿಡಂಬನೆ + ಗೈ(< ಕೆಯ್$_1$)]

ವಿಡಂಬರ (ನಾ). = ವಿಡಂಬನ ೨ : ಭಾವಿಸಲು ಭಕ್ತಿಕ್ರಿಯಾಮಹಿಮಾ ವಿಡಂಬರಸಾನುಭವರಹ ಶೈವರಿಗೆ ನಿಮಿತ್ತವು ನಿನ್ನಸಮಭಕ್ತಿ (ಬಸವು. ೪೦-೮೧). [ಸಂ.]

ವಿಡಂಬಿ (ಗು). ಅತಿಶಯಿಸುವ ; ಮೀರುವ : ಆಡುವವಹಿವಿಲಾಸದಿಂದೆಡೆಯುಡುಗದೆ

ರತ್ನದಿನನೂನಗಾಂಭೀರ್ಯದಿನಾ ಕಡಲನವಗಯಿಸಿ ತೋರ್ಪುದು ವಿಡಂಬಿ ಮಹಿಮಾವಳಂಬಿ ಕೌಶಂಬಿಪುರಂ (ಸುಕುಮಾ. ೧-೭೮). [ಸಂ. ವಿಡಂಬಿನ್]

**ವಿಡಂಬಿತ (ಗು).** ೧. ಅನುಕರಿಸಿದ ; ಅನುಕರಣೆಮಾಡಿದ. ೨. ಅಣಕಿಸಿದ ; ಪರಿಹಾಸ್ಯಮಾಡಿದ. ೩. ವಂಚಿಸಿದ ; ಮೋಸಗೊಳಿಸಿದ. ೪. ಪೀಡೆಗೊಳಗಾದ ; ಹಿಂಸೆಗೊಳಗಾದ. ೫. ಹೀನವಾದ ; ತುಚ್ಛವಾದ. ೬. ನಿರಾಶೆಗೊಂಡ. [ಸಂ.]

**ವಿಡಂಬಿಸು (ಕ್ರಿ).** ೧. ಅನುಕರಣೆಮಾಡು ; ಅನುಕರಿಸು : ಇತ್ತ ಲಾಂಛನಚ್ಛಲದಿಂ ಶೋಕಾನಲದಗ್ಧಮಪ್ಪ ಮಹಾಶ್ವೇತಾಹೃದಯಮಂ ವಿಡಂಬಿಸುವಂತೆಯುಂ . . . ಆಗಿ (ಕಾದಂಪೂ. ೯೮೨) ; ಪೊಂಬಳಯಿಗೆ ಮಿಂಚು ಮಣಿತೋರಣ ಕಣ್ಗೊಂಬಿಂದ್ರಧನು ಕುಸುಮಾಳಿ ಇಂಬುಗೊಂಡಾಲಿಕಲ್ಲಾಗಲಾ ನಗರಿ ವಿಡಂಬಿಸಿದುದು ಕಾರ ಸಿರಿಯ (ಕುರಾಸಾಂ. ೭-೭೯). ೨. ಅಣಕಿಸು ; ಹಂಗಿಸು ; ಪರಿಹಾಸ್ಯಮಾಡು : ಸಂತತಂ ಪೌರಜನಂ ವಿಡಂಬಿಸುಗುಮೆಂದಱಿದುಂ ಮಱೆದುಂ ಸಮಂತು ಧಾತ್ರೀರಮಣಂ ದಿನಂಗಳನಿತಂ ಕಳೆವಂ ನಿಜಧೈರ್ಯವೃತ್ತಿಯಿಂ (ನಳಚಂ. ೬೨) ; ಅಕಟ ವಿಡಂಬಿಸಿತೆ ವಿಧಿಯೆನ್ನ (ಕುವ್ಯಾಅ. ೧-೬). ೩. ಅಲ್ಲಗಳೆ ; ತಿರಸ್ಕರಿಸು : ಆ ರಾಜ್ಯವನು ವಿಡಂಬಿಸಿ ಬಂದ ಕುಮಾರಗರಸುತನವಾಯ್ತು (ಪ್ರಬುಂಡ. ೨-೯೦). ೪. ಮೋಸಮಾಡು ; ವಂಚಿಸು: ಬೆಸನಂಗಳ್ತನುವಿಚ್ಛೆಗೊಯ್ಯುವದಱಿಂ ಲಕ್ಷ್ಮೀವಿಡಂಬಂ ವಿಡಂಬಿಸದಂತಾಗಿರೆ . . . ಆತ್ಮವಂತನೆನಿಸೆಂದುಂ ರಾಜವಿದ್ಯಾಧರಾ (ಕಾದಂಪೂ. ೫೬೪) ; ಆತನೆ ಪತಿಯೆಂದೆನ್ನ ವಿಡಂಬಿಸಿ ಮಾತ ಹಿರಿದನಾಡಿದೆಯ (ಶ್ರೀಪಾಲ. ೫-೯೪). [ವಿಡಂಬನ + - ಇಸು$_3$]

**ವಿಡಕ (ನಾ).** ಬಿದಿರಿನ ದೊಡ್ಡ ಬುಟ್ಟಿ ; ಹೆಡಗೆ : "ವಿಡಕ [ಪಾಠಾಂ. ವಿದಕ,ನೀಢ] ಮೆನೆ ಹೆಡಗೆಯಕ್ಕುಂ" (ಮಂಗರಾ. ೬೨-೨೧). [?]

**ವಿಡಲವಣ (ನಾ).** ಒಂದು ಬಗೆಯ ಕೃತಕಲವಣ : "ವಿಡ[ಪಾಠಾಂ. ಬಿಡು] ಲವಣಮದು ಘೃತಕಮೆನಿಸಿಕ್ಕು" (ಮಂಗರಾ. ೪೩-೪೧). [ಸಂ.]

**ವಿಡಾ** 'ಬೀಡಾ' ನೋ.

**ವಿಡಾಯ, ಬಿಡಯ್ಯ$_3$, ಬಿಡಿಯ್ಯ$_2$, ಬಿಡೆಯ್ಯ$_3$, ವಿಡಾಯಿ (ನಾ).** ೧. ಬೆಡಗು ; ಒನಪು ; ಒಯ್ಯಾರ : "ವಿಡಾಯಮೆನಲ್ ವಹಣೆಯಕ್ಕು" (ಭಾರನ. ೬) ; ಲಿಂಗಸಂಗಿಗಳೆಲ್ಲ ಕೇಳುವುದು ಮಾಯೆ ಮೋಹಿಸಿ ಮುಟ್ಟ ಬಂದ ವಿಡಾಯವನು ಮುಱಿದಲ್ಲಮಪ್ರಭುರಾಯನಾಡುತಲಿರ್ದ ಪರಿಯನು ಲಿಂಗಲೀಲೆಯಲಿ (ಪ್ರಭುಲೀ. ೬-೧) ; ಮುದ್ದುಮೊಗದೊಳ್ ಮಂದಸ್ಮಿತಂ ನೋಡದಂತಿರೆ ನೋಳ್ಪೊಂದು ವಿಡಾಯಮಕ್ಷಿಯೊಳ್ . . . ಮೆಱೆಯೆ ಕಣ್ಗೆಂಬಾದರಬ್ಬಾಸ್ಕೆಯರ್ (ರಾಜಶೇ. ೧೧-೮೨). ೨. ವಿಜೃಂಭಣೆ ; ಮೆರೆತ ; ಆಡಂಬರ : ವಿನಿಯೋಗವಿತತಿಯ ವಿಡಾಯದ ವಿಳಾಸದ ವಿನೋದದ ವಿಭವದ ವಿಭ್ರಮದ ಪೆಂಪಿಂಪನೀಯೆ (ಪದ್ಮರಾ. ೫-೩) ; ವಿನುತವಿಭವದ ವಿಡಾಯದೊಳ್ ನಡೆಗೊಳ್ವ ನೂತನರಥಾಂಗಂಗಳ ರಥಂಗಳಿಟ್ಟಣಿಸಿ ಸಂಭ್ರಮದಿಂದೆ ನಡೆಗೊಂಡುವು (ಚಿಬಪು. ೩೫-೧೦). ೩. ಸಂಭ್ರಮ ; ಸಡಗರ : ಹಲವು ಪಯಣದಲಿ ಬಂದು ನೆಲಸಿದ ಕಟಕದ ಕೆಲದೋಳಾನೆಯನೇಱಿ ಬಲುವಿಡಾಯದೊಳೆಯ್ದುತಿರ್ದ (ಬಸಚ. ೩೭-೧೬). ೪. ಠೀವಿ ; ಗತ್ತು : ಬಿರುದರಾಯರ ರತುನರಾಜಿಯಲರಿಬಲಾರ್ಣವ ಗಜಟು ಮಿಗಲಳ್ಳಿಱಿಯುತದೆ ಬಹುವಿಧದ ವಾದ್ಯವಿಡಾಯ ರಭಸದಲಿ (ಕುವ್ಯಾಭೀ. ೩-೨೩) ; ಆಯತದ ಭಾರಣೆಯ ಮುಷ್ಟಿವಿಡಾಯದಲಿ . . . ಬಿಡದೊಡನೆ ಬಡಿದಾಡಿದರು (ಅಂಬಿಕಾ. ೧೬-೧೮). ೫. ಸೊಗಸು ; ಅಂದ ; ಶೋಭೆ : ಅರಸಂಚೆಗೆ ನಡೆಯ ವಿಡಾಯಮನು . . . ಒರೆವುತ ಕಮಲಾಯತಾಕ್ಷಿಯರಿಹರು (ಕುರಾಸಾಂ. ೩-೪೩) ; ಕುಣಿವ ಸೋಗೆಗಳ ಸಮುದಾಯದ ವಿಡಾಯದಿಂ . . . ಮನಂ ಪೆರ್ಚಿಸುವುದು (ವಂಕಾರಾ. ೪-೧೮-೩). ೬. ಜಂಭ ; ಗರ್ವ ; ಅಹಂಕಾರ : ಬಾಯಬಡಿಕನ ನೂಕೆನುತ್ತ ವಿಡಾಯದಲಿ ಹೊಱವಂಟ ರಕ್ಕಸರಾಯ ಪುಷ್ಪಕವೇಱಿ ನಭದಲಿ ನೋಡಲ್ಕೆತಂದ (ಕಾಶಿರಾ. ೧೬-೧೪) ; ಪಚ್ಚೆ ಮಾಣಿಕ ಪವಳದ ಮಾಲೆ ಮುತ್ತಿನ ಕುಚ್ಚು ಪಾಳೆಯ ತುಂಬಿ ತೋಱೆ ಅಚ್ಚರಿವಟ್ಟನು ನಮಿರಾಜನೀಕ್ಷಿಸಿ ನುಚ್ಚುನೂಱಾಯ್ತು ವಿಡಾಯ (ಭರಚ. ೩೯-೭೭). ೭. ಯುಕ್ತಿ ; ಉಪಾಯ : ತಾಯೆ ಸಂಶಯವಿಲ್ಲ ನೈಷಧರಾಯನೀತನು ಸೂತನಲ್ಲ ವಿಡಾಯದಲಿ ಬಂದಿಹನು ಕುಹಕಕುರೂಪಿವೇಷದಲಿ (ನಳಚ. ೪-೫೦). ೮. ಭ್ರಮೆ ; ಮಾಯೆ : ಇದನೆಸಗೆ ಕುಂದಪ್ಪುದೆಮ್ಮ ಕುಲಕೆ ಎಂದೆಂಬುದೊಂದು ಬಯಲ ವಿಡಾಯಮಂ ಬಿಟ್ಟು . . . ಪರದುಗೆಯ್ವುದಕೆ ಮೌಲ್ಯಮಂ ಹಡೆಯದೊಡೆ ಕಾರ್ಯಮಹುದೇ (ಸಮ್ಯಕೌ. ೧೧-೮). ೯. ದಟ್ಟಣೆ ; ನೆರವಿ : ಸೆಳೆವ ಸಿಂಧದ ಕಮಿವ ಹೀಲಿಯ ವಳಯ ತೋಮರ ಚಮರ ಡೊಂಕಣಿಗಳ ವಿಡಾಯದಲಮುಮ [ಪಾಠಾಂ. ವಿಡಾಯಿಯಲಮಮು] ಕೆತ್ತುದು ಗಗನವಳ್ಳಿಱಿಯೆ (ಕುವ್ಯಾವಿ. ೪-೩೨). **ಬಿಡಯ್ಯ$_3$** : ೫. ಬಿಗಿದವೆಡೆಮಂಟಪದ ಬಿಂಗಾರಿಗಳ ಬಿಡ[ಪಾಠಾಂ. ಡೆ]ಯದ ಚಮರ . . . ಕಂಬದ ವಜ್ರಮಯ ಧಾರೆಗಳ ಲೆಸೆದುದು ಭದ್ರಮಂಟಪವಮಲ ಮಣಿಮಯದ (ಕುವ್ಯಾಅ. ೧೨-೧೨). **ಬಿಡಿಯ್ಯ$_2$** : ೧. ಕೀಳಿಗಾಕಳು ತೊರೆವುದಲ್ಲದೆ ಮೇಲುಬೊಂಬಿನಲಾವ ಬಿಡಿಯಕೆ ಲಾಲಿಸುತವಾಗದಕೆ ತೊರೆವುದೆ (ಸಂಭಪ. ೮-೭೩). ೪. ತನ್ನ ಚತುರೋಪಾಯರಾಜಬಿಡಿಯದಿ ಪಾಂಥರನ್ನಿಡುವ (ಜನಮು. ೩-೨೭). **ಬಿಡೆಯ್ಯ$_3$** : ೪. ಘುಡುಘುಡಿಸಿದನು ರೋಷವಹ್ನಿಯ ತಡಿಯ ಹೊಕ್ಕನು ಬಿಗಿದ ಹುಬ್ಬಿನ ಬಿಡೆಯ ಬವರಿಯ ಲಳಿಯ ಲವಣಿಯ ಲೋಚನದ್ವಯದ (ಕುವ್ಯಾಸ. ೧೫-೫೭) ; ಲಗಡಿಯಲಿ ಲಟಕಟಿಸುವಂತರಲಗಡಿಯಲಿ ಲಾಲಿಸುವ ಡೊಕ್ಕರಣೆಗಳ ಬಿಗುಹಿನ ಬಿಡೆಯ ಬಿನ್ನಾಣದಲಿ ಹೆಣಗಿದರು (ಕುವ್ಯಾಕ. ೧೯-೪೩). ೧೦. ಅಟ್ಟಹಾಸ ; ದರ್ಪ : ಸುಳಿದು ಖಗಪತಿಯಂತೆ ಹೊಯ್ಲಲಿ ಬಳಸಿ ಬಿಗಿದೆಱಗಿದರು ಬಿಡೆಯದ ಮತ್ತಗಜದಂತೆ (ಕುವ್ಯಾಗ. ೭-೨). **ವಿಡಾಯಿ** : ೨. ಹೂಸಿಕದ ಹೂಣಿಗತನವ ಸೊನ್ನಾರವಿದ್ಯೆಯ ಸಾಹಸೋನ್ನತಿಯ ಸೊಗಸ ಹುಟ್ಟಿಸಿ ಸುಲಿವ ರಸವಾದಿಗಳನಿವರ ವಿಡಾಯಿಗಳ ನಂಬುಗೆಯ ಕೇವಣ ಪಾಡುಕಾಱರ ಕರ್ಣ ನೋಡು (ಕುವ್ಯಾದ್ರೋ. ೧೬-೨೫) ; ತನ್ನ ವಿಡಾಯಿ ವರ್ತನೆಗಳ ದಂಬಗಾರಿಕೆಯ ಅರ್ಥವಿಲ್ಲದ ಅನರ್ಥಕ್ಕೆ ನಮ್ಮ ಅರಮನೆಯನ್ನೂ ರಾಜ್ಯವನ್ನೂ ಕೋಳ್ಕೊಡ್ತುಬಿಡಲು ಸಿದ್ಧಮಾಡಿಕೊಳ್ಳುತ್ತಿರುವನು (ಮಂತ್ರಶ. ೧೪೯-೮). ೩. ಹೊಂದೇರಿನ ವಿಡಾಯಿಯಲಿ . . . ನೋಡು ಗರುಡಿಯ ಜಾಣ ದ್ರೋಣನನು (ಕುವ್ಯಾಬೀ. ೩-೮) ; ಇಂತು ನಾನಾವಿಲಾಸದ ವಿಡಾಯಿಗಳಿಂದೆ ಕಂತುಹರನರಸಿ ವೈವಾಹಮಂಟಪದೆಡೆಗೆ ಸಂತಸದೊಳ್ಕೆತಂದು (ಚೆಬಪು. ೩೭-೫೫). ೪. ಎಡಗಾಲ ತೊಡರಬಾವುಲಿ ನಡೆಗೆಸೆವ ವಿಡಾಯಿ ಜಗಮನಂಗೆಯ್ಕೊಳ್ ನೋಟ್ಪೊಡೆ ತೋರ್ಪನೆಂಬ ನುಡಿ ನೇರ್ಪಡೆದೊಪ್ಪಿರಲಿಂದ್ರಜಾಲಿಗಂ ಮಿಗೆ ಬಂದಂ (ದಶಕು. ೬-೧೧೧) ; ಹಿಳಿದ ಛಲದ ವಿಡಾಯಿ ಧೈರ್ಯದ ತಳಿತ ಭೀತಿಗೆ ಕಾಲುವೊಳೆಯಾದಳಿಮನದ ಭೂಪಾಲನಿರವನು ಕಂಡನಾ ಪಾರ್ಥ (ಕುವ್ಯಾದ್ರೋ. ೧೮-೯). ೫. ಆ ಸುಕುಮಾರಿ ಚಾರು ನವರತ್ನ ವಿಭೂಷಣಸಂಚಯಂಗಳಂ ಲೇಸೆನಿಸಿರ್ದ ಮೆಯ್ಗೆ ಕಡುಭಾರ ವಿಡಾಯಿಗಳೆಂದು ಪುಷ್ಪಮಾಲಾಸಮುದಾಯಮಂ ಮುಡಿಗೆ ಭಾರಮಿದೆಂದು (ಬಾಧಪು. ೨-೫೮). ೯. ವಿಳಾಸಿನಿಯರ ವಿಡಾಯಿಯೊಳರಸಿ ಬಂದಳು (ಕುವ್ಯಾಉ. ೬ಂ೯. ೧೧-೫೭). ೧೧. ಆಧಿಕ್ಯ ; ಹೆಚ್ಚಳ ; ಅತಿಶಯತೆ : ವಿವಿಧವಾದ್ಯಂಗಳ ವಿಡಾಯಿಯಿಂದಾರ್ಭಟಿಸಿ ತಿವಿ ಬಸುಱನುಗಿ ಕರುಳನಗಿಯೆನುತ್ತಾಹವಕ್ಕವಗಡಿಸಿದುದು ವಜ್ರನಾಭನಿದಿರೊಳ್ ನಿಂದು ಸರಳ್ವಳೆಗಳಂ ಕಱೆವುತೆ (ಚೆಬಪು. ೩೯-೩).

**ವಿಡಾಯಕಾರ್ತಿ (ನಾ).** ಒಯ್ಯಾರಿ ; ಒನಪುಗಾತಿ : ಪಾಯವಧಾರೆಂದು ನೆಲನನುಗ್ಘಡಿಪ ವಿಡಾಯಕಾರ್ತಿಯರು ಮುಂಬರಲು . . . ಪೊಕ್ಕನು ರಕ್ಕಸರಾಯನೋಲಗಶಾಲೆಯನು (ಕುರಾಸಾಂ. ೧೮-೨೩).
[ವಿಡಾಯಕಾಱ + - ತಿ$_1$(< - ಇತ್ತಿ)]

**ವಿಡಾಯಕಾಱ (ನಾ).** ಜಂಬಗಾರ ; ಗರ್ವಿಷ್ಠ : ತಾಯ ತಂಗಿಯ ಕೆಳದಿಯರ ವಿಮಾನದೊಳೊಯ್ಯಾರದಿಂದಿಟ್ಟು ತನ್ನ ಸ್ತ್ರೀಯರ ಮನೆಯೊಳಿರಿಸಿ ಬಂದನೇನು ವಿಡಾಯಕಾಱನೊ ನಮಿರಾಜ (ಭರಚ. ೩೯-೭೧). [ವಿಡಾಯ + - ಕಾಱ]

**ವಿಡಾಯಗ (ನಾ).** = ವಿಡಾಯಕಾಱ : ಕೋಡಿಗನೋ ವಿಡಾಯಗನೊ ಕೋವಿದ ಮುಗ್ಧರ ದೇವನೊ (ಹಮ್ಮೀರ. ೫-೫೦). [ವಿಡಾಯ + - ಗ$_2$]

**ವಿಡಾಯಗೆಡು, ವಿಡಾಯಿಗೆಡು (ಕ್ರಿ).** ಸೊಕ್ಕು ಅಡಗು ; ಗರ್ವವಿಲ್ಲದಾಗು : ದಾಯ ತಪ್ಪಿತು ಗರುವರಾಟ ವಿಡಾಯಗೆಟ್ಟಿತು ವಿಟರ ನೋಟ ನವಾಯಿಕಾಱರ ಕೂಟ ಕುಸಿದುದು ಮಾರಶರಹತಿಗೆ (ಕುವ್ಯಾಅ. ೧೩-೪೫). **ವಿಡಾಯಿಗೆಡು** : ಸಾಯಲಾದನು ಧೃಷ್ಟಕೇತು ವಿಡಾಯಿಗೆಟ್ಟನು ಭೋಜನು (ಕುವ್ಯಾದ್ರೋ. ೨-೫೯). [ವಿಡಾಯ + ಕೆಡು$_1$]

**ವಿಡಾಯದೋಱು** (ಕ್ರಿ). ಆಡಂಬರವನ್ನು ಪ್ರಕಟಿಸು ; ವೈಭವವನ್ನು ಪ್ರದರ್ಶಿಸು : ಹೊನ್ನಪೀಠದಲಿ ಕುಳಿತು ಮುತ್ತಿನ ಹಾರ ರನ್ನದಾಭರಣವ ತೋಱಿ ಕನ್ನೆಯನೊಲಿಸುವೆನೆಂದು ನೃಪತಿಯೊರ್ವ ತನ್ನ ವಿಡಾಯದೋಱಿದನು (ಜೀವಂಸಾಂ. ೧೧-೬೬). [ವಿಡಾಯ + ತೋಱು]

**ವಿಡಾಯವಂತ** (ನಾ). = ವಿಡಾಯಕಾಱ : ಅಹಂಬ್ರಹ್ಮವೆಂದು ನಿಜದಾಯ ವಱಿಯದೆ ನಿತ್ಯರೆಂದು ಬೇವುತ್ತಿಹ ವಿಡಾಯವಂತರ ಕಂಡು ನಿತ್ಯರೆಂದವರ ಪೊರ್ದದೆ ಚರಿಪನಚ್ಚಶರಣಂ (ಸಿದ್ಧಪು. ೨೨-೧೯೦). [ವಿಡಾಯ + - ವಂತ]

**ವಿಡಾಯವೆಱು** (ಕ್ರಿ). ಬೆಡಗಿನಿಂದ ಕೂಡಿರು ; ಒಯ್ಯಾರದಿಂದಿರು : ರಾಯಂಚೆ ಪೊಣರ್ವಕ್ಕಿಗಳೆಡೆಯಾಟದ ರಾಯಬೀದಿಯೊ ತುಂಬಿಗಳ ಲಾಯಮೊ ಪೇಳೆನಲಾ ತುಂಗಭದ್ರೆ ವಿಡಾಯವೆತ್ತೆಸೆದುದು ಕಣ್ಗೆ (ಶಿರಾಹಾಂ. ೨-೮೨). [ವಿಡಾಯ + ಪೆಱು₁]

**ವಿಡಾಯಿ** 'ವಿಡಾಯ' ನೋ.

**ವಿಡಾಯಿಗೆಡಿಸು** (ಕ್ರಿ). ಗರ್ವವನ್ನು ಅಡಗಿಸು ; ಸೊಕ್ಕನ್ನು ಮುರಿ: ಅಖಿಳನೃಪರ ವಿಡಾಯಿಗೆಡಿಸಿದ ಚಂದ್ರಧರಚಾಪಾಯುಧವ ಗೆಲಿದೊಲಿಸಿದನು ರಘುನಾಥನವನಿಜೆಯ (ತೊರರಾ. ೧-೧೬-೬). [ವಿಡಾಯಿಗೆಡು (< ವಿಡಾಯಗೆಡು) + - ಇಸು₁]

**ವಿಡಾಯಿಗೆಡು** 'ವಿಡಾಯಗೆಡು' ನೋ.

**ವಿಡಿಸು** 'ಬಿಡಿಸು' ನೋ.

**ವಿದು** 'ಬಿಡು' ನೋ.

**ವಿಡೂರ₁** 'ವಿಡ್ಡೂರ' ನೋ.

**ವಿಡೂರ₂** (ನಾ). ಒಂದು ಬಗೆಯ ರತ್ನ ; ವೈಡೂರ್ಯ : ವಿಡೂರ ಧರಣೀಜ ವಿಶೇಷರತ್ನ ಸ್ತೋಮಾಭಿರಾಮರಚಿತೋರುಗವಾಕ್ಷಲಕ್ಷ್ಮಂ (ಹಮ್ಮೀ.ರ. ೮-೩೮). [ಸಂ.]

**ವಿಡೂರಜ** (ನಾ). = ವಿಡೂರ₂ : ಮಂಜುಳವಿಡೂರಜಭೂಷಣೆ ಚಂದ್ರಕಾಂತಿಯಂ ಕನಕಪರಿಷ್ಕೃತಿದ್ಯುತಿಕೃತಾತಪೆ ನೀಂ ತಡೆ (ರಾಜಶೇ. ೭-೮೮). [ಸಂ.]

**ವಿಡೂರಭೂಮಿ** (ನಾ). ವೈಡೂರ್ಯಗಳಿಂದ ಕೂಡಿರುವ ಭೂಮಿ : ದೇವರ ದೇವ ವಿಡೂರಭೂಮಿ ವೈಡೂರ್ಯದಿನೆಂತು . . . ಪೂಜ್ಯಮಂತಾರ್ಯಭವದ್ಗುರುತ್ತಮ ಮದೀಯ ಗುರುತ್ತಸಮಗ್ರಕಾರಣಂ (ಶಾಂತಿಪು. ೧೦-೧೦೦). [ಸಂ.]

**ವಿಡೂರಮಣಿ** (ನಾ). = ವಿಡೂರ ೩: ಮುಖ್ಯಪೀಠಮೆಸೆದತ್ತು ವಿಡೂರಮಣಿ ಪ್ರಭಾಪ್ಲುತಂ (ಮಲ್ಲಿಪು. ೧೪-೧೮೮). [ಸಂ.]

**ವಿಡೂರಾವನಿ** (ನಾ). = ವಿಡೂರಭೂಮಿ : ವಿಡೂರಾವನಿಯೊಳ್ವೈಡೂರ್ಯರತ್ನಂ ಜನಿಯಿಸೆ (ಮಲ್ಲಿಪು. ೮-೯೧). [ಸಂ.]

**ವಿಡ್ಡಿ** (ನಾ). ವಿರೋಧ ; ದ್ವೇಷ : ಆ ಸಮಯದಲ್ಲಿ ಹಯರತ್ನ ಮಂತದ್ವಿಷಭದಾಸನೊಳು ವಿಡ್ಡಿಯಂ ಮಾಡಿ ಕೆಡಿಸಿದುದನಱಿದಾ ಸುದಂಡಾಪನೀಶಂ ಕೆಕ್ಕಳಂಗೆರಳಿ (ಸಮ್ಯಕೌ. ೧೧-೭೩). [< ವಿಡ್ಡೂರ ?]

**ವಿಡ್ಡುರ** 'ವಿಡ್ಡೂರ' ನೋ.

**ವಿಡ್ಡೂರ, ವಿಡೂರ₁, ವಿಡ್ಡುರ** (ನಾ). ೧. ತೊಂದರೆ ; ಆಪತ್ತು : ಜಯಮಂಗಳಂ . . . ಅಡ್ಡಬಿದ್ದ ಜನರ ವಿಡ್ಡೂರಗಳ ಕಳೆದು ದೊಡ್ಡವರ ಮಾಳ್ಪ ಸಿರಿವಿಜಯವಿಠ್ಠಲಗೆ (ವಿದಾಕೃ. ೪೧-೩). ೨. ಅಡ್ಡಿ ; ಆತಂಕ : ಮಹತ್ಕಾರ್ಯಗಳನ್ನು ಸಾಧಿಸುವಲ್ಲಿ ಅಡೆತಡೆಗಳು ವಿಘ್ನ ವಿಡ್ಡೂರಗಳು ಇದ್ದೇ ಇರುತ್ತವೆ (ಏಕಿಸಂ. ೩); ನೆನೆಸಿದುದು ನೆನಸಿದಂತಾಗದಿರಲು ಒಂದಲ್ಲ ಒಂದು ವಿಘ್ನ ವಿಡ್ಡೂರಗಳು ಬಂದೇ ಬರುತ್ತವೆ (ಕುರುಕಾ. ೩೭). ೩. ನೋವು ; ಹಿಂಸೆ : ಸದ್ದಮಾಡದೆ ರಕ್ಕಸನ ಕೂರ್ಗಣೆಗಳ ವಿಡ್ಡೂರವನು ಹಾಱಿಹೊಯ್ದು ಅಡ್ಡವಾತಿಯಲಿ ಸ್ಕಂದನ ಸೂತವಾಜಿಯ ಒಡ್ಡವಣೆಯ ಖಂಡಿಸಿದ (ಮೋಹತ. ೪೦-೫೪) ; ವಾಯು ದೋಷರಹಿತವಾಗಿ ನಿಜವಾಗಿದ್ದರೆ ಶರೀರಕ್ಕೆ ವ್ಯಾಧಿ ವಿಡ್ಡೂರಗಳಿಲ್ಲದೆ ಸುಖವಾಗಿಹುದು (ಷಡ್ರಸಾ. I. ೪೦೩). ವಿಡೂರ₁ : ೧. ವಿಡೂರ ಬಂದದ್ದು ಆಡೂರಿಗೆ ಹೋದರೆ ಬಿಟ್ಟೀತೆ ? (ಗಾದೆ). ವಿಡ್ಡುರ : ೨. ದೊರೆತನಂ ನಡೆಯದೊಲ್ಲಿಡ್ಡುರಮಡಸಿಸೆ ತಾನೆ ಬಂದು ಬಿಳಿಗಿಯ ಭೂಪಂ . . . ಒರೆಯಲ್ (ಕೆಳನೃ. ೧೧-೬೧). 'ವಿಡ್ವರ' ಪರಾ.

[ ? ./ ತುಳು. ವಿಡ್ಡೂರ, ವಿಡೂರ ; ತೆಲು. ವಿಡ್ಡೂರಮು]

**ವಿಡ್ವರ** (ನಾ). ಆಪತ್ತು ; ತೊಂದರೆ : ಏಸೆವಸುರಾಧೆಯ ತೆಂಕಣದೆಸೆಯೊಳ್ ಗ್ರಹಸಮಿತಿ ನಡೆಯೆ . . . ವಸುಮತಿಯೊಳ್ ವಿಡ್ವರಂಗಳಕ್ಕುಮವೋಘಂ (ಜಿಟ್ಟಮ. ೭-೬೮) ; ಚಂದ್ರಸೂರ್ಯರಂದಾ(ತಾ)ವಗ ರಾಹು ಭಕ್ತಿ ಸಲೆ ವಿಡ್ವರಮದ್ಭುತ ರಾಜಘಟ್ಟನಂ (ಜಿಟ್ಟಮ. ೧೦-೫). [?./ತೆಲು. ವಿಡ್ವರ. /IP ತೆಲುಗುಕೋಶಕಾರರು ಈ ಶಬ್ದವನ್ನು ಸಂಸ್ಕೃತವೆಂದು ಹೇಳಿದ್ದಾರೆ. ಆದರೆ ಸಂಸ್ಕೃತಕೋಶಗಳಲ್ಲಿ ಈ ಶಬ್ದ ಸಿಕ್ಕಿಲ್ಲ]

**ವಿಡ್ವರಾಹ** (ನಾ). ಹೊಲಸು ತಿನ್ನುವ ಪ್ರಾಣಿ ; ಹಂದಿ. [ಸಂ.]

**ವಿಥಾಳಿಸು** (ಕ್ರಿ). ಚೆನ್ನಾಗಿ ಬೀಸು ; ಗಾಳಿಹಾಕು : ಹಡಪ ಕಾಳಾಂಜಿ ಕುಂಚದ ಬೀಸಣಿಗೆಯ ವಂಗಡ ವಿಥಾಳಿಪ ಚಾಮರಗಳ (ಕೃಷ್ಣಗೋ. ೨-೨೨).

[< ಥಾಳಿಸು₁]

**ವಿಣಿ** (ನಾ). (?) : ಶುನಕನ ಶಕುನಂ . . . ಫಲಮಾಗೆ ಪೋಪೊಡಂ ಕುಂಟೆಯೊಳ್ ವಿಣಿಗಳೊಳ್ ಮುಟ್ಟನೀಯೆಡೆಗಳೊಳ್ (ನಿಂದು) ಮೂತ್ರಿಸುವೊಡಂ . . . ಮಱೆಗಳೊಳ್ಳಿತುಮಕ್ಕುಂ (ಜಿಟ್ಟಮ. ೩-೩ ರಗಳೆ). [?]

**ವಿಣುಮಂಗಲ** (ನಾ). ಒಂದು ಸ್ಥಳದ ಹೆಸರು : ವಿಣುಮಂಗಲದ ಎಮ್ಮೆ ತೊಱು ಕೊಳೆವ ತೊಟ್ಟಟ್ಟ ಕದೆಯಂ ಪಲರನಾನ್ತಿಱಿದು ಸತ್ತು ಸಗ್ಗಯದರ್ (ಎಕ. X, ಶಿಡ್ಲಘ. ೩೯-೨ ; ಸು. ೯೦೦). [ವಿಣು? + ಮಂಗಲ]

**ವಿಣ್ಣುಗೋವರಸ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀಮಾನ್ ವಿಣ್ಣುಗೋವರಸರ್ XX ದುಗ್ಗಮಾರರ್ ಸೇನೆ ಮುಗ XXX ನಾಲ್ಕದಿನ್ಸರ್ ಕಸಪ್ರ XXX ಪೊನ್ನೊಱ ಬಿಟ್ಟದು (ಎಕ. X, ಚಿಂತಾಮ. ೧೨೬ (ಬಿ)-೧; ಸು. ೮೦೦). [ವಿಣ್ಣುಗೋವ₂ + ಅರಸ₁]

**ವಿಣ್ಮೂತ್ರ** (ನಾ). ೧. ಹೇಲು ಮತ್ತು ಉಚ್ಚೆ ; ಮಲಮೂತ್ರ : ವನಿತಾಸೇವನೆ ರೂಕ್ಷಮಕ್ಕೆ ಪಸಿವಾಗುಱ್ ಚಿಂತೆ ವಿಣ್ಮೂತ್ರವೇಗನಿರೋಧಂ ಶ್ರಮಮತ್ತ ಜೀರ್ಣಮಿವಱಿಂ ಕಾರ್ಗಾಲದೊಳ್ ಮಾರುತಂ ಜನಿಯಿಕ್ಕುಂ (ಲೋಕೋಪ. ೯-೪); ವಿಣ್ಮೂತ್ರಮಂ ವಿಸರ್ಜಿಸದ ಕಾಮಿಸದ ಕೋಪಿಸದ ಕರ್ಮದ್ವಯಂ ರೂಪಿಸದ ನಿರ್ಮಾಯನು (ಸಿದ್ಧರಾ. ೧-೩). ೨. ಒಂದು ನರಕದ ಹೆಸರು : ಲೋಹಸ್ತಂಭ ವಿಣ್ಮೂತ್ರ ವೈತರಣೀನದಿ . . . ಎಂಬವೇ ರಾಜರಾಜೇಶ್ವರನರಕಂಗಳಕ್ಕುಂ (ವಿವೇಕ. ೧೭೯). [ಸಂ.]

**ವಿತಂಡ** (ನಾ). ೧. ಹುರುಳಿಲ್ಲದ ವಾದ ; ಅರ್ಥವಿಲ್ಲದ ಮಾತು : (೩). ೨. ನಿರರ್ಥಕವಾದುದು ; ಹುರುಳಿಲ್ಲದುದು : ಇಂದ್ರನ ಅಹಂಕಾರವು ಕಳಚಿ ಬೀಳಬೇಕು ಈಶ್ವರನ ತಾಂಡವ ವಿತಂಡವಾಗಬೇಕು (ಕೈಲಾಸ. ೧೬).

[ಸಂ. ವಿತಂಡಾ]

**ವಿತಂಡವಾದ** (ನಾ). ಹುರುಳಿಲ್ಲದ ವಾದ ; ಅರ್ಥವಿಲ್ಲದ ಮಾತು : ಜ್ಞಾನಿಗಳು ಭಗವಂತನ ಅಸ್ತಿತ್ವವನ್ನು ಒಪ್ಪಿರುವಾಗ ದೇವರೇ ಇಲ್ಲವೆಂಬ ನಿಮ್ಮ ವಿತಂಡವಾದವನ್ನು ಒಪ್ಪುವುದು ಹೇಗೆ ಸಾಧ್ಯ? (ಅನಾಮಿ. ೬೩). [< ಸಂ. ವಿತಂಡಾವಾದ]

**ವಿತಂಡಾವಾದ** (ನಾ). = ವಿತಂಡವಾದ : ವಿತಂಡಾವಾದವೆಂಬ ಸರ್ವಶೂನ್ಯ ವಾದವನ್ನು ಖಂಡಿಸಬೇಕಾದರೆ ಪ್ರಯೋಜನವೇ ಬ್ರಹ್ಮಾಸ್ತ್ರವಾಗಿರುವುದು (ಹಿಂದೆಸಾ. ೧೧೭).

[ಸಂ.]

**ವಿತಂಡೆ** (ನಾ). = ವಿತಂಡ ೨ : ನ್ಯಾಯವೇ ಪ್ರಮಾಣ . . . ಜಲ್ಪ ವಿತಂಡೆ . . . ಜಾತಿ ನಿಗ್ರಹಸ್ಥಾನಗಳೆಂಬ ಷೋಡಶಪದಾರ್ಥಂಗಳಂ ಪೇಳುತ್ತ (ವಿವೇಕ. ೧೨) ; ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ . . . ವಿತಂಡಾ ಹೇತ್ವಾಭಾಸ ಛಲ ಜಾತಿನಿಗ್ರಹಸ್ಥಾನ ಎಱು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದುಸಾ. ೧೧೨).

[ಸಂ. ವಿತಂಡಾ]

**ವಿತಂತು** (ನಾ). ೧. ಸೂತ್ರವಿಲ್ಲದುದು ; ನಿರಾಧಾರವಾದುದು. ೨. ಮಂಗಳಸೂತ್ರವನ್ನು ಕಳೆದುಕೊಂಡವಳು ; ವಿಧವೆ : ದೇಶಮುಖನ ವಿತಂತುವು ಮೊಗಲರ ಸಹಾಯಾರ್ಥವಾಗಿ ದಂಡನ್ನು ಕಟ್ಟಿಕೊಂಡು ಹೋಗಿ ಸೋತು ಕೈಸೆರೆಯಾದಳು (ಛತ್ರಶಿ. ೧೨೦) ; ನಾನು ವಿಧವೆಯನ್ನೇ ಮದುವೆಯಾಗುವುದು . . . ವಿತಂತುವಿಗೆ ಒಂದು ಕೂಸಿದ್ದರು ಸರಿಯೆ (ರಾಮಾನಿ. ೪೩). ೩. ಒಳ್ಳೆಯ ಕುದುರೆ ; ಉತ್ತಮಾಶ್ವ. [ಸಂ.]

ವಿತಂದ್ರ (ಗು). ಆಲಸ್ಯವಿಲ್ಲದ ; ಬಳಲಿಕೆಯಿಲ್ಲದ : ಜಯ ಜಯ ಶಿವಾಂಗಸಂಗತ ಮಂಗಳಾಕಾರ ಜಯಜಯ ವಿತಂದ್ರ ವೃಷಭೇಂದ್ರ ಚತುರತುರಂಗ (ರಾಜಶೇ. ೧೪-೧೭೯ ರಗಳೆ). [ಸಂ.]

ವಿತಂದ್ರತ್ವ (ನಾ). ಆಲಸ್ಯವಿಲ್ಲದಿರುವಿಕೆ ; ಬಳಲಿಕೆಯಿಲ್ಲದಿರುವಿಕೆ ; ಚಟುವಟಿಕೆ : ಪರಿಯಂದ್ರಂ ಭೂತಿಸಾಂದ್ರಂ ಕುಡುಗೆಮುಗೆ ವಿತಂದ್ರತ್ವಮಂ ಶ್ರೀವೃಷೇಂದ್ರಂ (ರಾಜಶೇ. ೧-೯). [ಸಂ.]

ವಿತತ (ಗು). ೧. ಹರಡಿಕೊಂಡಿರುವ ; ವಿಸ್ತಾರವಾದ : ಭವದೀಯಮುತ್ತ್ರಿಯಂ ವಿತತಮರೀಚಿಮೇಚಕಿತನೂತ್ನವಿರಾಜಿತರತ್ನಮುದ್ರಿಕಾವ್ಯತಿಕರದಿಂ ತಪಕ್ಕೆ ತಟಿಸಂದಂ (ಸುಕುಮಾ. ೮-೫೨). ೨. ಒಳ್ಳೆಯ ; ಉತ್ತಮವಾದ ; ಶ್ರೇಷ್ಠವಾದ : ವಿತತಮುತ್ತ್ರಾಖ್ಯಾನ ವೇದಸ್ಮೃತಿಪುರಾಣ ಷಡಂಗವಿಂದ್ರನ ಸುತನ ದೆಸೆಯುಚ್ಚಾಟನ ಸ್ತಂಭಾದಿ ವಿದ್ಯೆಗಳು ಕ್ಷಿತಿಪ ಕೇಳ್ಕೆ ಕರ್ಣನತ್ತಲು (ಕುಮಾ.ಕ. ೨೨-೫). ೩. ಮಾಡಿದ ; ಸಿದ್ಧಗೊಳಿಸಿದ. (ನಾ). ೪. ವೀಣೆ ಮೊದಲಾದ ತಂತೀವಾದ್ಯ : ಇಂತಿದು ವಿತತಾದಿವಾದ್ಯವಿದನಿಂತಿದು ಚಿತ್ರಕಥಾಭಿರೂಪನಿಂತಿದು ಗಜವಾಜಿಲಕ್ಷಣವಿಚಕ್ಷಣನೀ ಶಕನುದ್ಧತಾಂಶುಕಂ (ಕಾದಂಪೂ. ೫೪); ತತವಿತತಘನಸುಷಿರವಾದ್ಯಪ್ರತಿಮಿಳಿತಷಡ್ಜಾದಿ ಸಪ್ತಶ್ರುತಿಗಳಿಂ ಪುಗೆ (ಬಸವು. ೧-೪೮). [ಸಂ.]

ವಿತತಗಣ (ನಾ). ೧. ಶ್ರೇಷ್ಠವಾದ ಗುಂಪು. ೨. ಶ್ರೇಷ್ಠವಾದ ಗಣಗಳ ಸಮೂಹವನ್ನು ಹೊಂದಿರುವವನು ; ಈಶ್ವರ : ಪ್ರತಿರಹಿತ ನುತವಿಹಿತ ಶರದಮಯ ಭರಿತಜಯ ವಿತತಗಣ ಚತುರಗುಣ ಸುರರಾಜ ವರತೇಜ ಸಿತಗಳನೆ ಯತಿಬಳನೆ ಶರಣಾಗು ಗುರುಮೂರ್ತಿ ಪಂಪಾಪುರಾಧೀಶ್ವರ (ಹಟಕಾ. ೧-೫). [ಸಂ.]

ವಿತತಭಾಷಿತ (ನಾ). ಅತಿಯಾಗಿ ಮಾತನಾಡುವವನು : ವಿತತಭಾಷಿತನಪ್ಪ ತನ್ನಂಗಿತವನವರಾಯತವನಱಿಯದ ಕ್ಷಿತಿಪನವ ಮೂಢಾತ್ಮನೈ (ಕುಮಾ.ಉ. ೩-೪೮). [ಸಂ.]

ವಿತತಯಶ (ನಾ). ಅಧಿಕವಾದ ಖ್ಯಾತಿಯುಳ್ಳವನು ; ಬಹಳ ಪ್ರಸಿದ್ಧನಾದವನು : ವಿತತಯಶಂಗಾ ವಿಪ್ರಂಗೆ . . . ಗುಣಾನ್ವಿತೆ ಸತಿ ಸಜ್ಜನಿಕೆಗರುಂಧತಿ ಮಿಗಿಲ್ ಕೌಂಡಿಕಬ್ಬೆಯೆಂಬಳ್ (ಛಂದೋಂಬು. ೧-೧೭). [ಸಂ. ವಿತತಯಶಸ್]

ವಿತತಾಟವಿ (ನಾ). ವಿಸ್ತಾರವಾದ ಕಾಡು ; ಮಹಾರಣ್ಯ : ಅತಿನಿಶಿತದರ್ಭಸೂಚೀಹತಿಗಳಿಂದ ತೆಱದಿನುಗ್ರಕರನತುಳವನಸ್ಪತಿಸಂಕೀರ್ಣವೆನಿಪ್ಪೀ ವಿತತಾಟವಿಯಲ್ಲಿ ಸಲಿಸನೆಂದುಂ ಕರಮಂ (ಚಂದ್ರಪ್ರ. ೫-೫೧). [ಸಂ.]

ವಿತತಾಭಿಮಾನ (ನಾ). ಹೆಚ್ಚಿನ ಅಭಿಮಾನ; ವಿಶೇಷವಾದ ಗೌರವ : ವಿತತಾಭಿಮಾನ ನೀತಿಕ್ಷಿತಿಗಂ ಶಿವಭಕ್ತಿಧರ್ಮನಿರ್ಮಳಕೀರ್ತಿಚ್ಯುತಿಗಘಟನಪ್ರೌಢಂ ಭೂಪತಿಯಕ್ಕಲ್ವೇಳ್ಕುಮಮಳಗುಣಗಣನಿಳಯಾ (ರಾಜಶೇ. ೧೩-೨೨). [ಸಂ.]

ವಿತತಿ (ನಾ). ೧. ವಿಸ್ತಾರ ; ಹರಹು. ೨. ಹೆಚ್ಚಳ ; ಆಧಿಕ್ಯ : ವಿವಿಧವಿಧ ವಾದ್ಯಧ್ವನಿಗಳಿಂ ತವೆಯಿನಿತು ತಾಂ ಕೇಳಲೀಯದು ಕವಿ ಗಮಕಿ ವಾಗ್ಮ್ಯಾದಿಜನ ಸಂಸ್ತವನರವವಿತತಿ ಅವನವಗಡಿಸುತಿರ್ಪ (ಬಸವು. ೫-೨೯). ೩. ಗುಂಪು ; ಸಮೂಹ : ಇದು ಸಕಲವಿಬುಧಜನವಿತತಿ ಕಾವ್ಯಾಲಂಕಾರನೀತಿ ನಿಬಂಧನಮುಂ ಛಂದೋಮಹಾರ್ಣವಮುಂ ಕವಿತಾಮಹಾರ್ಣವಮ (ಮದಿ. ೮-೬೬ ವ) ; ಕ್ಷತ್ರಿಯರ ವಂಶದ ವೀರಪಾರ್ಥಿವ ವಿತತಿ ಕುಳ್ಳಿರ್ದುದು ಸರಾಗದಲಿ (ಕುಮಾ.ಆ. ೧೩-೬). ೪. ಮರಗಳ ಗುಂಪು. ೫. ಸಾಲು ; ಪಂಕ್ತಿ. [ಸಂ.]

ವಿತತ್ವ (ನಾ). ತತ್ತ್ವಕ್ಕೆ ವಿರುದ್ಧವಾದುದು; ಕುತತ್ತ್ವ : ತತ್ವವಿತತ್ವಸಂಸೇವ್ಯ ನಿಕುರುಂಬಾಶಯಕರ್ದಮಪಮಾತ್ಮವಚನಬೋಧೋದಾರಕ್ಷೀರಾಪ್ಲಾಳಿತಮಾಗೆ (ಶಾಂತಿಪು. ೧೨-೩ ವ). [ಸಂ.]

ವಿತಥ (ಗು). ೧. ಸತ್ಯವಲ್ಲದ ; ಸುಳ್ಳಾದ : ಆರಯ್ಯಲ್ಟೀಪಹಿಂಸಾವಿರತಿವಿತಥವಾಕ್ಯಂ . . . ಬಹ್ವಾರಂಭಾಕಾಂಕ್ಷೆಯೆಂದಿಂತಿವು ಜಿನಗದಿತಾಣುವ್ರತಂಗಳ್ (ಸುಕುಮಾ. ೬-೯) ; ವಿತಥೋಕ್ತಿಯಲ್ತಜಂ ಪಶುಪತಿ ಸಾಜ್ಞಿಯೆನಿಪ್ಪ ಮೂವರುಂ ಶುಭಕೀರ್ತ್ತಿವ್ರತಿ ಸನ್ನಿಧಿಯೊಳ್ ನಾಮೋಚಿತಚರಿತರ ತೋರ್ದ್ದುಡಿತರವಾದಿಗಳಳವೇ (ಎಕ. II, ೧೪೦-೧೯೯; 1145). ೨. ವ್ಯರ್ಥವಾದ ; ನಿಷ್ಫಲವಾದ. (ನಾ). ೩. ಸುಳ್ಳು ; ಅಸತ್ಯ : ಸುತನು ಸಾರಥಿಯೆಂದು ಸಾರಿಸು ವಿತಥವಲ್ಲಿದು ಪಕ್ಷಪಾತಸ್ಥಿತಿಯನಾಡೆವು ಕವಲುನಾಲಗೆಯಿಲ್ಲ ತನಗೆಂದ (ಕುಮಾ.ವಿ. ೯-೧೭). ೪. ವ್ಯರ್ಥವಾದುದು ; ನಿಷ್ಫಲವಾದುದು. [ಸಂ.]

ವಿತಥಭಾಷಿತ (ನಾ). ಸುಳ್ಳುಹೇಳಿಕೆ ; ಅಸತ್ಯದ ನುಡಿ : ವಿತಥಭಾಷಿತವನ್ನ ವಿತ್ತಾಪಹೃತಿ ಪರವ್ಯಾಪಾರವಾತ್ಮಸ್ತುತಿ . . . ಧರ್ಮಕರ್ಮಚ್ಯುತಿಗಳಿವು ದೋಷಾಂಕುರಂಗಳು (ಕುಮಾ.ಆ. ೧೫-೧೪). [ಸಂ.]

ವಿತಥರುಚಿ (ನಾ). [ಜೈನ] ಮಿಥ್ಯಾದೃಷ್ಟಿಯುಳ್ಳ ವ್ಯಕ್ತಿ : ಎಂತು ನಿಜರುಚಿ ಸಮನ್ವಿತ ಶ್ರುತಜ್ಞಾನದಿಂ ಅಱಿಗುಂ ಅಱಿಪುಗುಂ ಅಂತೆ ವಿತಥರುಚಿಯುಂ ಶ್ರುತಜ್ಞಾನದಿಂ ಅಱಿಗುಂ ಅಱಿಪುಗುಂ (ತತ್ತ್ವಪ್ರ. ೭೨). [ಸಂ.]

ವಿತರಣ (ನಾ). ೧. ದಾಟುವುದು ; ಪಾರಾಗುವುದು. ೨. ಕೊಡುಗೆ ; ದಾನ : ಮದವದ್ವೈರಿನರೇಂದ್ರಮಣ್ಡಳಿಕಸೇನಾಭಂಜನಂ ವೀರನೀರದದುರ್ವಾರಸಮೀರಣ ವಿತರಣಕ್ರೀಡಾವಿನೋದಂ ಪ್ರತಾಪದಿಳೀಪಂ (ಎಕ.VII, ಶಿಕಾ. ೧೩೬-೨೪ ; 1086) ; ಆ ರಾಜಶಿರೋರತ್ನನ ವೀರದ ವಿತರಣದ ಪೆರ್ಮೆಯುಂ ರಿಪುಭೂಭೃದ್ದಾರಿದ್ರ್ಯಮುಮುಪಚಿತಪರಿವಾರಜನಾನೂನಲಕ್ಷ್ಮಿಯುಂ ಪ್ರಕಟಿಸುಗುಂ (ಚಂದ್ರಪ್ರ. ೨-೫). ೩. ಹಂಚುವಿಕೆ ; ವಿಭಾಗಿಸುವಿಕೆ : ನದೀಕಣಿವೆಯಲ್ಲಿನ ನೀರಿನ ಉಪಯೋಗ ವಿತರಣ ಅಥವಾ ನಿಯಂತ್ರಣ ಇವಕ್ಕೆ ಸಂಬಂಧಪಟ್ಟ ಯಾವುದಾದರೂ ವಿವಾದದಲ್ಲಿ ಅಥವಾ ದೂರಿನಲ್ಲಿ ನ್ಯಾಯನಿರ್ಣಯ ಮಾಡುವುದಕ್ಕೆ ಸಂಸತ್ತು ವಿಧಿದ್ವಾರಾ ಅವಕಾಶವನ್ನು ಕಲ್ಪಿಸಬಹುದು (ಭಾಧಾನ. ೧೪೮). ೪. ಬಿಡುವಿಕೆ ; ತ್ಯಜಿಸುವಿಕೆ ; ತ್ಯಾಗ : ವಿತರಣ ಧೈರ್ಯ ವಿದ್ಯಾಗೌರವಂಗಳಲಿ ಸುರಮಹೀಜನ ರಾಜರುದ್ರರ ಚರಿತೆಗಳಿಗಿಮ್ಮಡಿಯೆನಿಸಿ ಸತ್ಪುರುಷನಿಲ್ಲಿಗೆ ಸಲಹಬಂದನು ಬಸವವಿಭುವೆನುತ (ಬಸವು. ೫-೬೪). ೫. ಉದಾರತೆ ; ಔದಾರ್ಯ : ಶ್ರೀಯುಂ ವಿತರಣದೊಳ್ ವಾಕ್‌ಶ್ರೀಯುಂ ರಾಜನ್ಯವೃತ್ತಿಯೊಳ್ . . . ಅತಿಶಯಿಸಿ ನೆಗಟ್ದನಭಿನವಪಂಪಂ (ಪಂರಾಮಾ. ೨-೧). [ಸಂ.]

ವಿತರಣಪ್ರಥಿತ (ನಾ). ಕೊಡುವುದರಲ್ಲಿ ಪ್ರಸಿದ್ಧನಾದವನು ; ದಾನಶೀಲತೆಯಲ್ಲಿ ಕೀರ್ತಿಯನ್ನು ಹೊಂದಿದವನು : ಆತನುಗುಣೋನ್ನತಂ . . . ವಿತರಣಪ್ರಥಿತಂ . . . ಎಂದದೇಂ ಸ್ತುತಿಯಿಸಿದತ್ತೊ ಸಂತಸದೆ ಪೌರಜನಂ ಪ್ರಭುವಂಶಮೇರುವಂ (ಪುಷ್ಪಪು. ೩-೧೩೨). [ಸಂ.]

ವಿತರಣವಿನೋದ (ನಾ). ದಾನಮಾಡುವುದರಲ್ಲಿ ಸಂತೋಷಿಸುವವನು : ಪರಗುರು ತನ್ನಂ ಸುದ್ದಗೆ ಪರೆಯಿಸೆ ಮೂಜಿನೆಯ ತಾಣದೆರಡಕ್ಕರಮಂ ಸ್ವರದೊಳಪಮಂತಸ್ಥೆಯೊಳಂ ಬರೆಯನೆ ವಿತರಣವಿನೋದನದನೇಕಱಿಪಂ (ಪುಷ್ಪಪು. ೪-೫೭). [ಸಂ.]

ವಿತರಣವ್ಯಾಪಾರ (ನಾ). ಕೊಡುವ ಕ್ರಿಯೆ ; ದಾನಕಾರ್ಯ : ಕನ್ನೆಯೊಳ್ ಚಾಂದ್ರಿ ಕೂಡಿರೆ ಮೇಧಾವಿ ಮಹಾಗುಣಾಂಬುನಿಧಿ ಯುಕ್ತಿಜ್ಞಂ ವಿಭೀತಂ ಕ್ಷಮಾಪರನನ್ಯೋನ್ಯಸುಖಾನ್ವಿತಂ ವಿತರಣವ್ಯಾಪಾರಶೂರಂ ನರಂ (ಜಾತಕ. ೧೭-೨೩). [ಸಂ.]

ವಿತರಣಶೌಂಡ (ನಾ). ದಾನಮಾಡುವ ಸಾಮರ್ಥ್ಯವುಳ್ಳವನು ; ದಾನಶೂರ : ಧೃತಶಶಿಖಂಡ ಜಿತಸುಮಕಾಂಡ ವಿತರಣಶೌಂಡ ಭೃತಜಗದಂಡ (ಶಾಕುಂತ. ೧೧೭ ಅಡಿಟ). [ಸಂ.]

ವಿತರಣೆ (ನಾ). ೧. ಹಂಚುವುದು ; ವಿತರಿಸುವುದು ; ವಿನಿಯೋಗ : ಮಹಾಮಂಗಳಾರತಿ ಮುಗಿದು ಪ್ರಸಾದ ವಿತರಣೆಯಾಯಿತು (ದೀಪಹ. II, ೧೧೪). ೨. ಕೆಲಸ ಕಾರ್ಯಗಳನ್ನು ನಡೆಸುವ ಸಾಮರ್ಥ್ಯ ; ನಿರ್ವಹಣಾಶಕ್ತಿ : ದೊಡ್ಡದಾದ ಸೈನ್ಯವನ್ನು ಬಹಳ ವಿತರಣೆಯಿಂದ ನಡೆಯಿಸಿಕೊಂಡು . . . ಬರುತ್ತಿದ್ದನು (ರಾವಿಜ. ೧೫೪) ; ವಿತರಣೆ, ವಿಚಕ್ಷಣೆ, ಅಂತಸ್ತು, ಗೌರವಗಳ ಅಳತೆಗೆ ಸರಿತೂಗಿಸುವುದು ಗಂಗರಾಜನಿಗೆ ಮಾತ್ರ ಸಾಧ್ಯವಿದ್ದಿತು (ಶಾಂತಲಾ. ೯೯). ೩. ಓರಣ ; ಅಚ್ಚುಕಟ್ಟು ; ಸಮರ್ಪಕತೆ : ವಿಧವಿಧವಾದ ಭಕ್ಷ್ಯಭೋಜ್ಯಗಳಿಂದ ಕೂಡಿದ ಅಡಿಗೆಯ ಪದಾರ್ಥಗಳನ್ನೆಲ್ಲಾ ಬಹಳ ವಿತರಣೆಯಿಂದ ಬಡಿಸಿದ್ದಾಯಿತು (ಗುಣಸಾ. ೭೮) ;

ರಾಮರಾಯನು ತನ್ನ ಸ್ವಾಗತದ ಏರ್ಪಾಡುಗಳನ್ನು ನೋಡಿ ಅಚ್ಚರಿಗೊಂಡನು. ಎಷ್ಟು ಆದರ, ಎಷ್ಟು ವಿತರಣೆಗಳಿಂದ . . . ಸಿದ್ಧಗೊಳಿಸಲ್ಪಟ್ಟಿದೆ (ಶ್ರೀರಾಯ. ೧೭೮). [ಸಂ. ವಿತರಣ]

**ವಿತರಿಸು** (ಕ್ರಿ). ೧. ದಾಟು ; ಹಾಯ್ದುಹೋಗು. ೨. ಕೊಡು ; ದಾನಮಾಡು : ಸಗುಣ ಗುರುಸಿದ್ಧೇಶ ತವ ಬರಿದೆಗೆದರಳ ಪುಟನೆಗೆದು ಥಿಂಕಿಡುತಗಲ್ಕ ನಾಸಿಕದಿಂದ ವಾಸಿಪ ಸೊಗಸನಿದ ನೀನೆನಗೆ ವಿತರಿಸು (ಕೈಕವ. ೩-೫-೫) ; ಬರ್ಹಿಗಳು ಅತಿಸಮೀಪದ ಪೋದರೂ ಭೂಪತಿಯು ಶರಸಂಧಾನ ಮಾಡದೆ ವಿತರಿಸಿದನವುಗಳಿಗೆ ಅವುಗಳ ಪ್ರಾಣದಾನವನು (ರಘುವಂ. ೯-೭೭). ೩. ಬಿಡು ; ತ್ಯಜಿಸು ; ತ್ಯಾಗಮಾಡು : ಚತುರಂಬುಧಿವೃತಧಾಮತ್ರಿತಳಮಂ ವಿತರಿಸಿ . . . ಕೃತಕೃತ್ಯಂ ಬಂದಿರ್ದಪನೀ ಚರಮಾಂಗನನುಪಮಗುಣತುಂಗಂ (ಕುಮುದಾ. ೨೦-೨೧). [ವಿತರಣ + - ಇಸು]

**ವಿತರ್ಕ** (ನಾ). ೧. ವಾದ ; ಚರ್ಚೆ. ೨. ಊಹೆ ; ಕಲ್ಪನೆ : ಷಟ್ತರ್ಕವಿತರ್ಕಭೇತ್ತೃತೆ . . . ಎಂ ಚೋದ್ಯಮೆ ವರ್ಧಮಾನಮುನಿಯೊಳ್ ವಿದ್ಯಾತ್ರಯಾಧೀಶನೊಳ್ (ಚಂದ್ರಪ್ರ. ೧-೩೧). ೩. ಅನುಮಾನ ; ಶಂಕೆ ; ಸಂಶಯ : ಬಗೆದು ಮಾರ್ಗದ್ವಿತಯಗತಿಗಳಂ ಪ್ರಗುಣಗುಣಗಣೋದಯರ್ಕಳ್ ವಿತರ್ಕದಿಂ ಸೊಗಯಿಸುವಂತು ವಚನರಚನೆಯಿಂ ನೆಗಟ್ದಿರೆ ಪೇಟ್ಗೆ ರಸವಿಶೇಷದೊಳ್ (ಕವಿರಾ. ೨-೯೮). ೪. [ಕಾವ್ಯಮೀ] ಮೂವತ್ತು ಮೂರು ಸಂಚಾರಿಭಾವಗಳಲ್ಲಿ ಒಂದು ; ಹೀಗೋ ಹಾಗೋ ಎಂದು ವಿಚಾರಮಾಡುವುದು : ಮತಿ ಲಜ್ಜೆ ವಿತರ್ಕ . . . ಅಪಸ್ಮಾರಗಳೆಂಬ ಮೂವತ್ತು ಮೂಱು ಸಂಚಾರೀಭಾವಂಗಳಿಂ (ವಿವೇಕ. ೨೨೭) ; ಹೀಗೋ ಹಾಗೋ ಎಂದು ವಿಚಾರಮಾಡುವುದು ವಿತರ್ಕ (ಭಾರಮಿ. ೩೪೭). ೫. [ಬೌದ್ಧ] "ಮನಸ್ಸನ್ನು ವಿಷಯಕ್ಕೆ ಅರ್ಪಿಸಿ ಚಿಂತಿಸುವುದು ವಿತರ್ಕ" (ಬುದ್ಧಪ. ಮಿಲಿಂದ. ಕೋಶ) : ವಿತರ್ಕದ ಲಕ್ಷಣವೇನು ? ವಿತರ್ಕದ ಲಕ್ಷಣವು ಅರ್ಪಣ (ಬುದ್ಧಪ. ಮಿಲಿಂದ. ೮೫). [ಸಂ.]

**ವಿತರ್ಕಿತ** (ಗು). ೧. ತರ್ಕ ಮಾಡಿದ. ೨. ಊಹಿಸಿದ. (ನಾ). ೩. [ನಾಟ್ಯ] ಇಪ್ಪತ್ತು ಬಗೆಯ ಸಂಚಾರಿದೃಷ್ಟಿಗಳಲ್ಲಿ ಒಂದು ಬಗೆ ; IP "ರೆಪ್ಪೆಗಳನ್ನು ಮತ್ತು ಆಲಿಗಳನ್ನು ಜಾಗ್ರತೆ ತಿರುಗಿಸುವುದು. ಊಹೆ, ವಿಮರ್ಶೆ ಇವುಗಳನ್ನು ತೋರಿಸುವಾಗ" (ಲಾಸ್ಯರಂ. ೨೭೦ ಗದ್ಯಾನುವಾದ) : ಘನತರದೆವೆಯಾಲಿಯ ಭೋಂಕನೆ ತಿರುಗೆ ವಿತರ್ಕಿತಾಖ್ಯದೃಷ್ಟಿಯೆನಿಕ್ಕುಂ (ಲಾಸ್ಯರಂ. ೩-೩೨). [ಸಂ.]

**ವಿತರ್ಜೆ** (ನಾ). ಭಯ ; ಭೀತಿ ; ಹೆದರಿಕೆ : ದುರ್ಜನರಿಗಂಜುವುದು ಲೋಕವು ಸಜ್ಜನರ ಲೆಕ್ಕಿಸದು ತಾರ್ಕ್ಷ್ಯನ ಸೆಜ್ಜೆಯೊಳಗಿಹ ದಂದಶೂಕನನರ್ಚಿಸುವರೊಲಿದು ಉಜ್ಜ್ವಲಿತ ಭಕ್ತಿಯಲಿ ಬಹಳ ವಿತರ್ಜೆಯಲಿ ಮೂಢಾತ್ಮರಿಕ್ಕಿದ ಹಜ್ಜೆಯಿದು ಲೋಕಕ್ಕೆ (ಕುಮ್ಮಾಉ. ೪-೨೦). [< ಸಂ. ವಿತರ್ಜನ?]

**ವಿತರ್ದಿ** (ನಾ). ವೇದಿಕೆ ; ಜಗಲಿ ; ಕಟ್ಟೆ : ಎಸೆಯೆ ಕರದೊಳು ಮಾಧವೀಲತೆ ಯಸಿಯೆಸಳ ರನ್ನದ ವಿತರ್ದಿಯೊಳೆಸದಳಂ ರಂಜಿಸುವ ಮಣಿಮಯಕನಕಪೀಠದೊಳು ಕುಸುಮಶರಸತಿ . . . ಸೊಗಯಿಸಿದಳು (ಕುಮುದಾ. ೨-೭೭). [ಸಂ.]

**ವಿತರ್ದಿಕೆ** (ನಾ). = ವಿತರ್ದಿ : ಋತುಮತಿದೇವಿ ರನ್ನದ ವಿತರ್ದಿಕೆಯೊಳ್ಳೆಲಸಿರ್ದು (ಪಂರಾವಮಾ. ೩-೭೦) ; ಪಳಿಕಿನ ಭಿತ್ತಿ ರನ್ನದ ವಿತರ್ದಿಕೆ ಮುತ್ತಿನ ತೋರಣಂ (ಚಂದ್ರಪ್ರಭ. ೧೫-೫೭). [ಸಂ. ವಿತರ್ದಿಕಾ]

**ವಿತಲ, ವಿತಳ** (ನಾ). ಕೆಳಗಿನ ಏಳುಲೋಕಗಳಲ್ಲಿ ಒಂದು ; ಏಳು ಪಾತಾಳಲೋಕಗಳಲ್ಲಿ ಎರಡನೆಯದು : ಅಮ್ಮಮಾ ಚವುಡಯ್ಯಗಂಜಿ ಜಲಂ ಮುರಿದು ವಿತಲ[ಪಾಠಾಂ. ಳ]ಕ್ಕಿಳಿಯಿತನೆ ಬಿಮ್ಮಿಳಿದು ನೆಜೆ ಸರಿಯಲದು ತಾಮ್ಯಳಲುಗಾಣಿಸಲು (ಬಸವು. ೩೨-೬೭) ; ಅತಳದಾಶ್ಚರ್ಯಮಂ ವಿತಲ[ಪಾಠಾಂ. ಳ]ದ ವಿಚಿತ್ರಮಂ ಸುತಳದ ರುಚಿಯಂ ಮಹಾತಳದ ಮಣಿಮಯೋನ್ನತಿಯಂ ತಳಾತಳದ ತಾಣದತಿಶಯಮಂ . . . ನೋಡಿ (ಜೈಮಿಭಾ. ೨೪-೧೨). **ವಿತಳ** : ತೆರೆತೆರೆಯ ತಿವಿದೆದ್ದು ಗಗನವನಿರದೊದೆದು ವಿತಳಕ್ಕೆ ಸುಳಿ ಭೋಂಕರಿಸಿ ಸಾಗರನುಬ್ಬುಗವಳವ ಕೊಂಡ ವೊಲು ಕುಣಿದ (ಕುಮ್ಮಾಉ. ೧-೧೯) ; ಅತಳ ವಿತಳ ಸುತಳ ಮಹಾತಳ ತಳಾತಳ ರಸಾತಳ ಪಾತಾಳ (ಪುರಂದ. ಧಾ. ೩-೮೭-೫). [ಸಂ.]

**ವಿತಸ್ತಿ** (ನಾ). ವಿಸ್ತರಿಸಿದ ಅಂಗೈಯಲ್ಲಿ, ಹೆಬ್ಬೆರಳಿನಿಂದ ಕಿರುಬೆರಳಿನವರೆಗೆ ಇರುವ ಉದ್ದ ; ಸುಮಾರು ಹನ್ನೆರಡು ಅಂಗುಲದ ಅಳತೆ ; ಗೇಣು : ಅಭಿನವಶುಂಭತ್ಕೌಸುಂಭವೇಣಿಕಾಬಂಧೋಲ್ಲಸನ್ಮಲ್ಲಿಕಾಮುಕುಲಾಕಾರವಿತಸ್ತಿಮಾತ್ರಾಸಿಧೇನುಕೋಶ (ಆದಿಪು. ೧೩-೫೫ ವ) ; ಏಕೈಕವಾರವಿತಸ್ತಿಮಾತ್ರಾಸಿಧೇನುಚಾಲನೋಚ್ಚಲಿತದಕ್ಷಿಣಕರಕಲಿತಕನಕಕಂಕಣಝುಣತ್ಕಾರನುಂ (ಚಂದ್ರಪ್ರ. ೮-೮೨ ವ). [ಸಂ.]

**ವಿತಳ** 'ವಿತಲ' ನೋ.

**ವಿತಳ್ಪಂಕ** (ನಾ). ವಿಶೇಷವಾದ ಭಯ ; ಹೆಚ್ಚಾದ ಅಂಜಿಕೆ : ತರ ಕಣಾವಳಿ ಬುದ್ಬುದಂ ಪೆರ್ದೆರೆ ವಿತಳ್ಪಂಕಂ ವಿಕಾರಂ ನೊರೆಗಳಾವರ್ತಂ . . . ಎಸೆವ ಸುಸಮುದ್ರಂ (ಶಂಕದಾ. ೧-೩೧). [ವಿ - + ತಳ್ಪಂಕ]

**ವಿತಾಡಿತ** (ಗು). ೧. ಬಡಿದ ; ಹೊಡೆದ. (ನಾ). ೨. [ನಾಟ್ಯ] ಒಂಬತ್ತು ಬಗೆಯ ಎವೆಯ ಭೇದಗಳಲ್ಲಿ ಒಂದು ಬಗೆ ; IP "ಮೇಲಿನ ರೆಪ್ಪೆಯಿಂದ ಕೆಳಗಿನ ರೆಪ್ಪೆಯನ್ನು ಬಡಿಯುವುದು" (ಲಾಸ್ಯರಂ. ೨೭೩ ಗದ್ಯಾನುವಾದ) : ನುತಿವಡೆದ ಪ್ರಸೃತಂ ಕುಂಚಿತಮುನ್ಮೇಷಿತನಿಮೇಷಿತ . . . ವಿತಾಡಿತಂ [ಪಾಠಾಂ. ವಿಚಾಲಿತ] ಸಮಮೆನಿಪ್ಪಎವೆಯೊಂಬತ್ತುಂ (ಲಾಸ್ಯರಂ. ೩-೪೯). [ಸಂ.]

**ವಿತಾಡ್ಯಮಾನ** (ಗು). ಬಡಿಯುವ ; ಹೊಡೆಯುವ ; ತಾಗುವ : ಪ್ರಲಂಬಕರ್ಣಾಭರಣಮಕರಿಕಾವಿತಾಡ್ಯಮಾನಕಪೋಲಫಲಕಂ (ಶಾಂತಿಪು. ೭-೧೩ ವ). [ಸಂ.]

**ವಿತಾನ** (ನಾ). ೧. ಹರಹುವಿಕೆ ; ಹಬ್ಬುಗೆ ; ವಿಸ್ತಾರ : ಮೌನದಿ ಗಾನದ ತಾನ ವಿತಾನ ಮೌಢ್ಯದಿ ಜ್ಞಾನ ಜಾಡ್ಯದಿ ಪ್ರಾಣ ! (ಕರುಶ್ರಾ. ೯೭-೧೪) ; ರೂಢಿಗೊಂಡ ಛಂದಸ್ಸಿನ ತಾನ ವಿತಾನಗಳಲ್ಲಿ ಸಹ ಅವರು ನವೀನಲಹರಿಗಳನ್ನು ಏರಿಳಿತಗಳನ್ನು ಗುರುತಿಸಿ ಮೂಡಿಸಿ ಓದುಗನ ಮನವನ್ನು ಸೆಳೆಯುತ್ತಾರೆ (ನವ್ಯಕಾ. ೩೮). ೨. ಹೆಚ್ಚುಗೆ ; ಆಧಿಕ್ಯ. ೩. ಗುಂಪು ; ಸಮುದಾಯ : ನಗೆಗಣ್ಗಂ ಸೂಸಿದುವಾನಂದಬಾಷ್ಪಬಿಂದುವಿತಾನಂ (ಪಂರಾಮಾ. ೪-೨೫) ; ವಿಟವಿತಾನಕ್ಕೆ ಪೊಸಬೇಟದ ಸೊಂಪು ನೆರೆಯೆ (ರಾಮಾಶ್ವ. ೧೭-೪). ೪. ಸಾಲು ; ಪಂಕ್ತಿ : ಬಳವದ್ವೀಚೀವಿತಾನಂ ಪ್ರಬಳಘುಳುಘುಳುಧ್ವಾನ ಮಂಭೋನಿಧಾನಂ (ಜಗವಿ. ೧-೨೩) ; ಬಳಸಿ ಸುತ್ತುಂ ಆ ವಿಮಾನದ ವಿತಾನಮಂ ಮಾಲೆಯೆಳಲಿದ ಕನಕಲಘುಘಂಟಿಕಾಶ್ರೇಣಿ (ಶ್ರೀರಾಮಾ. ೨೦೭-೧೭೯). ೫. ಸಿಂಹಾಸನ, ಮಂಟಪ ಮೊದಲಾದುವುಗಳ ಮೇಲೆ ಕಟ್ಟುವ ಬಟ್ಟೆ ; ಮೇಲ್ಕಟ್ಟು : ಎತ್ತಿದ ಮುತ್ತಿನ ಮಂಟಪಂ ಮನಂಗೊಳಿಪ ವಿತಾನಪಂಕ್ತಿ (ಪಂಪಭಾ. ೧-೧೦೭) ; ಉಜ್ಜ್ವಳ ಮೌಕ್ತಿಕಾವಿತಾನಂ ಥಳಥಳಿಪುವು ಪುರದ ನಿಳಯನಿಳಯದೊಳೆಲ್ಲಂ (ಜಗವಿ. ೨-೨೪). ೬. ಯಾಗ ; ಯಜ್ಞ : "ಯಾಗಃ . . . ವಿತಾನಃ . . . ಸತ್ರಂ — ಈ ೧೨ ಯಾಗಂ" (ಹಲಾಯು. ೬೮-೨೬೦). ೭. ಯಾಗ ಮಾಡುವ ಕಟ್ಟೆ ; ಯಜ್ಞವೇದಿಕೆ. ೮. ಸಮಯ ; ಸಂದರ್ಭ. ೯. ಆಲೋಚನೆ ; ವಿಚಾರ. ೧೦. ಏನೂ ಇಲ್ಲದಿರುವುದು ; ಶೂನ್ಯ : "ವಿಚಾರದೊಳು ಮೇಲ್ಕಟ್ಟದೊಳವಧಿಯೊಳು ಶೂನ್ಯದೊಳ್ಮಖದೊಳು ವಿತಾನಮಕ್ಕುಂ" (ಮಂಗರಾ. ೧೪೫-೨೯). ೧೧. ಸಾರವಿಲ್ಲದುದು ; ಸತ್ತ್ವರಹಿತವಾದುದು. ೧೨. ಹೀನವಾದುದು ; ತುಚ್ಛವಾದುದು. ೧೩. ಮಂಕಾಗಿರುವುದು ; ದಡ್ಡತನದಿಂದ ಕೂಡಿರುವುದು. ೧೪. ದಡ್ಡವ್ಯಕ್ತಿ ; ಮಂಕ : "ವಿತಾನಂ — ೧ ಯಜ್ಞವಿಶೇಷ, ವಿಸ್ತಾರ, ತುಚ್ಛವಾದ್ದಕ್ಕೂ ಮಂದನಾದವನಿಗೂ ಹೆಸರಾದಾಗ — ೪" (ಸಿದ್ಧಾಂತಿ. ೪೦೧). ೧೫. ಅವಸರ ; ಶೀಘ್ರ ; ಜಾಗ್ರತೆ : "ಮಖಂ ಪ್ರಸರಂ ಶೂನ್ಯ ವಿಚಾರ ಪೆಚ್ಚುಗೆಗಳುಂ ಮೇಲ್ಕಟ್ಟು ಶೀಘ್ರಂ ವಿತಾನಂ ಸಮಾಖ್ಯಾನಂ" (ನಾನಾರ. ೧೧೭). ೧೬. [ಜೈನ] ಒಂದು ನರಕಬಿಲದ ಹೆಸರು : ವಾಲುಕಾಪ್ರಭೆಯೊಳ್ ತಪ್ತ . . . ವಿತಾನ . . . ವಿಕಲ್ಪದಿಂ ಪಂಚದಶಲಕ್ಷ ಬಿಲಂಗಳಪ್ಪುವು (ತತ್ತ್ವಪ್ರ. ೧೨೦). [ಸಂ.]

**ವಿತಾನಕ** (ನಾ). ೧. ವಿಸ್ತಾರ ; ಹರಹು. ೨. ಮೇಲ್ಕಟ್ಟು ; ವಿತಾನ. ೩. ಮೇಲ್ಕಟ್ಟನ್ನುಳ್ಳುದು : ಹಿಡಿಂಬವನಮಂ ಪೊಕ್ಕಂ ಮರುನ್ನಂದನಂ ಅದು . . . ನಿರ್ಝರೋಚ್ಚಲಿತಶೀಕರಶೀತಳವಾತನರ್ತಿತೋನ್ಮದಶಬರೀಜನಾಳಕಮದಾಯತ ವೇತ್ರಲತಾವಿತಾನಕಂ (ಪಂಪಭಾ. ೩-೧೧). [ಸಂ.]

**ವಿತಾನಾಂಬರ** (ನಾ). ಮೇಲುಕಟ್ಟಿನ ಬಟ್ಟೆ : ಚರರಾ ವಿತಾನಾಂಬರಮನಿಂದೊಯ್ಯು ರಾಯಂಗೆ ತೋಱಿಸಲು (ಪದ್ಮರಾ. ೫-೧೭). [ಸಂ.]

**ವಿತಾಲ, ವಿತಾಳ₁** (ನಾ). ೧. [ಸಂಗೀತ] ತಪ್ಪಾಗಿ ತಾಳಹಾಕುವಿಕೆ. ೨. ಗಾಯಕನ ದೋಷಗಳಲ್ಲಿ ಒಂದು ; ತಾಳಹೀನವಾಗಿ ಹಾಡುವವನು: ಗಾಯಕದೋಷಗಳು . . . ೧೦. ವಿತಾಲ — ತಾಳಹೀನವಾಗಿ ಹಾಡುವವನು (ಸಂಗೀಚಂ. ೧೦೩). **ವಿತಾಳ₁** : ೩. ಒಂದು ಬಗೆಯ ತಾಳ : ಭಂಗತಾಳ ಉಪಭಂಗ ತಾಳ ವಿಭಂಗತಾಳ ವಿತಾಳ ಶುದ್ಧತಾಳ ಅನುತಾಳವೆಂಬಾಱು ವರ್ಗ ಸಂಖ್ಯಾಭೇದ ಮಾಗಿಹವೆಂದು ಪೇಳ್ವ ಭರತಶಾಸ್ತ್ರಪರಿಣತರಪ್ಪ ತಾಳಧಾರಿಗಳಿಂ (ವಿವೇಕ. ೧೯೨). [ಸಂ.]

**ವಿತಾಳ₁** 'ವಿತಾಲ' ನೋ.

**ವಿತಾಳ₂** (ನಾ). ೧. ಹೆಚ್ಚಳ ; ಆಧಿಕ್ಯ ; ಅತಿಶಯ. ೨. ವಿಸ್ತಾರ ; ಹರಹು : 'ವಿತಾಳಿಸು' ಪರಾ. ೩. ಅಡೆತಡೆ ; ವಿಘ್ನ ; ಪ್ರತಿಬಂಧ : ಖೂಳರಲಿ ಸತ್ಕಳೆಗಳನು ನೆಱೆ ಕೇಳದವರಲಿ ಮಂತ್ರಬೀಜವನಾಲಿಯಿಲ್ಲದವಂಗೆ ರೂಪು ವಿಲಾಸ ವಿಭ್ರಮವ ಹೇಳು ವಂತಿರೆ ನಿಮ್ಮ ವಿದುರನ ಕೇಳಿಸಿದರಾ ಕಾರ್ಯಗತಿಗೆ ವಿತಾಳವಾಗದೆ ಬೊಪ್ಪಯೆಂದನು ನಗುತ ಕುರುರಾಯ (ಕುವ್ಯಾಸ. ೧೨-೬೨). ೪. ಚಿಂತೆ ; ವ್ಯಥೆ : ಆಳು ಹಿರಿದಿದ್ದೇನು ಫಲ ಹೀಹಾಳಿದ್ದವಕೆ ಬೇಱೆ ಪರಿಯ ವಿತಾಳವಿಲ್ಲ ವಿಪಕ್ಷಪಾತದೊಳೆಂದನಂಧನೃಪ (ಕುವ್ಯಾಕ. ೧೫-೭). [?/. ಸಂ. ವಿತಾನ]

**ವಿತಾಳಿಸು** (ಕ್ರಿ). ೧. ಹೆಚ್ಚಾಗು ; ಅಧಿಕವಾಗು : ಗಾಳಿ ಬೆಂಬಲವಾಗಲುರಿಯ ಛಡಾಳವನು ನಿರ್ಣಯಿಸಬಹುದೆ ವಿತಾಳಿಸಿತಲ್ಲೆ ನಿಮ್ಮ ಗಾರುಡವೆಂದನಾ ನೃಪತಿ (ಕುವ್ಯಾಅ. ೧೭-೧೫); ನೃಪಬಾಧೆ ಬಾಧಿಸದಧಿಕದುರ್ಭಯದ ಬಂದಿ ಹೋಗದಾಸಱು ವಿತಾಳಿಸಿ ನಿಂದಿರದು ನೆಲೆಗೊಳ್ಳದಾ ಜನವೃಂದದಲಿ ಕಟ್ಟಾಸೆ ದಶರಥನೃಪನ ರಾಜ್ಯದಲಿ (ತೊರರಾ. ೦-೩-೨೮). ೨. ಆವರಿಸು ; ವ್ಯಾಪಿಸು : ಖೋಡಿ ಕೊಪ್ಪರಿಸಿದುದು ಧೈರ್ಯವ ನೀಡಿಱಿದುದಪದೆಸೆ ವಿತಾ[ಪಾಠಾಂ. ಕಾ]ಳಿಸಿ ಖೇಡತನ ಭುಲ್ಲೈಸುತಿದ್ದುದೆ ಭಾನುನಂದನನ (ಕುವ್ಯಾಅ. ೧೯-೩೭) ; ಧಗೆ ವಿತಾಳಿಸಿ ಖರಮರೀಚಿಯ ತಗಡುವಿಸಿಲಿನ ತೊಱೆಗೆ ಹರಿಣಾಳಿಗಳು ಹರಿವಂದದಲಿ ಹರಿಬಲ ಹೊಕ್ಕುದಿನಸುತನ (ತೊರರಾ. ೪-೧೦-೧೧). ೩. ಮೀರು ; ತಪ್ಪಿಹೋಗು ; ವಿಘಟಿಸು : ಕಾಳು ಮಾಡಿದೆವಕಟ ಸಂಧಿ ವಿತಾಳಿಸಿತು ಕೈಯೆಡೆಯ ಶಿಶು ರಣಕೇಳಿಯಲಿ ನಿಲಲರಿದೆನುತ ಬಾಯಾಱಿದನು ರಾಮ (ತೊರರಾ. ೭-೧೦-೬೫). ೪. ಗರ್ವಿಸು ; ಸೊಕ್ಕು ; ಬೀಗು : ಶಿವನಂದು ಕರುಣಮಂ ತಾಳಿ ಸಿರಿಯರಸನಂ ಕರೆದೆಂದನೀ ಪರಿ ವಿತಾಳಿಸಿ ಜಗಕ್ಕೆ ಕೇಡಂ ತಂದ ಖಳನಸುಂಗೊಳ್ಳೆಂದು ನೇಮವೀಯೆ (ಚೆಬಪು. ೩೩-೪). ೫. ಕೈಗೂಡದಿರು ; ನಿಷ್ಫಲವಾಗು : ಭಾಷೆ ವಿತಾಳಿಸಿತು ಹುತವಹಗೆ ತನುವನು ಬೇಳುವೆನು (ನಿನಾಗ. ೦೮-೯೯-೩೮). ೬. ಎಚ್ಚರತಪ್ಪು ; ಮೂರ್ಛೆಹೋಗು : ನಿನ್ನವರೆನ್ನ ಮಾತನು ಕೇಳಿ ಮನ್ನಿಸದೆ ಮೇಲಗಾಣದೆ ನೀರುಕುಡಿದು ವಿತಾಳಿಸಿದರಿಂದೆನ್ನ ಮಾತನು ಕೇಳಿ ನೀನುತ್ತರವ ರಚಿಸು (ಕುವ್ಯಾಅ. ೨೩-೩೭). ೭. ಮಗ್ನವಾಗು ; ಲೀನವಾಗು ; ಐಕ್ಯವಾಗು : ಲೀಲೆಯಲಿ ಬಳಿಕವದಿರೊಡನೆ ವಿತಾಳಿಸಿತು ಮನ (ಕುವ್ಯಾಸ. ೯-೨೮). 'ವಿಕಾಳಿಸು', 'ವಿಟಾಳಿಸು' ಪರಾ. [ವಿತಾಳ₂ + - ಇಸು]

**ವಿತೀಪಾತ** (ನಾ). [ಜ್ಯೋತಿ] ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗ ಗಳಲ್ಲಿ ಒಂದು ; ವ್ಯತೀಪಾತ : ರುಧಿರೋದ್ಗಾರಿಸಂವಚ್ಛರದ ಶ್ರಾವಣ ಸುದ್ಧಪುಣ್ಣಮೆ ಬುಧವಾರದಂದು ಸೋಮಗ್ರಹಣಸಂಕ್ರಮಣವಿತೀಪಾತನಿಮಿತ್ತದಂದು ಶ್ರೀಮತ್ತ್ರೈ ಲೋಕ್ಯಮಲ್ಲ ಶ್ರೀ ಕೇಸವದೇವ . . . ಬಿಟ್ಟ ಧರ್ಮ್ಮಂ (ಕಇಅ. ೩೪-೪೭- ೧೭; 1145).

[ P ಇದು ಸಂಸ್ಕೃತದ 'ವ್ಯತೀಪಾತ' ಎಂಬುದರ ಅಪಲಿಖಿತ]

**ವಿತುನ್ನ** (ನಾ). ಒಂದು ಬಗೆಯ ಸಸ್ಯ : ''ವಿತುನ್ನಂ, ಸುನಿಷಣ್ಣಕಂ — ೨ ನೀರುಬೆಂಚಲಿ'' (ಸಿದ್ಧಾಂತಿ. ೧೪೭). [ಸಂ.]

**ವಿತುನ್ನಕ** (ನಾ). ೧. ಕೊತ್ತಂಬರಿಬೀಜ ; ಧನಿಯಾ : ''ಛತ್ರಾ , ವಿತುನ್ನಕಂ , ಕುಸ್ತುಂಬರು , ಧಾನ್ಯಾಕಂ — ೪ . . . ಕೊತ್ತುಂಬರೀ ಬೀಜ'' (ಸಿದ್ಧಾಂತಿ. ೨೮೫). ೨. ಮೈಲುತುತ್ತ ; ಗಂಧಕಾಮ್ಲ: ''ತುತ್ಥಾಂಜನಂ, ಶಿಖಿಗ್ರೀವಂ, ವಿತುನ್ನಕಂ, ಮಯೂರಕಂ, ಕರ್ಪರೀ — ೫ . . . ಮೈಲುತುತ್ಥದ ಹೆಸರುಗಳು'' (ಸಿದ್ಧಾಂತಿ. ೩೦೫). ೩. ಕಿರಿನೆಲ್ಲೀಕಾಯಿ ಗಿಡ: ''ವಿತುನ್ನಕಃ. . . ಶಿವಾ, ತಾಮಲಕೀ — ೭ ಕಿರಿನೆಲ್ಲೀಗಿಡದ ಹೆಸರು'' (ಸಿದ್ಧಾಂತಿ. ೧೪೧). [ಸಂ.]

**ವಿತೃಷ್ಣ** (ನಾ). ೧. ಆಸೆಯಿಲ್ಲದವನು ; ಆಶಾರಹಿತನಾದವನು : ಅಂತು ಪರಿತ್ಯಕ್ತಸಕಳಸಾಮ್ರಾಜ್ಯನುಂ ದೃಷ್ಟಾನುಭೂತಶ್ರಾವಕವಿಷಯವಿತೃಷ್ಣನುಮಾಗಿ (ಆದಿಪು. ೩-೭೮ ವ). ೨. ಬಾಯಾರಿಕೆಯಿಲ್ಲದವನು ; ತೃಷೆಯಿಲ್ಲದವನು. ೧,೨ : ಮಹಾತಪಸ್ವಿ ಮತ್ತಂತೆ ವಿತೃಷ್ಣನೆಂಬ ಸಮಶೀಲತೆಯಂ ತಳೆದಿರ್ದುಮೇನೊ ಸೈದ್ಧಾಂತಿಕ ಚಕ್ರವರ್ತಿ ಮುನಿಚಂದ್ರಮುನೀಂದ್ರನೆ ವಂದ್ಯನುರ್ವಿಯೊಳ್ (ಚಂದ್ರಪ್ರು. ೧-೨೭). [ಸಂ.]

**ವಿತೆ** (ನಾ). ಪ್ರಯೋಜನವಿಲ್ಲದುದು ; ವ್ಯರ್ಥವಾದುದು ; ನಿಷ್ಫಲವಾದುದು : ಋತ್ವಕ್ಕಿತ್ವಂ . . . ವೃಥಾ — ವಿತೆ, ವೃದ್ಧಿ — ವಿದ್ದಿ (ಶಮದ. ೨೬೮ ಪ್ರಯೋ) ; ತೆಗೆತೆಗೆ ! ನಿನ್ನ ಮುಂಗತೆಯಂ ವಿತೆಯಂ (ರಾಮಾಶ್ವ. ೧೧೮-೩); ನೀಚರನೊಳ್ಳಿದರಂಗೆಯ್ವುದೆ ನೆಂಬುಜ್ಜುಗಂ ವಿತೆಯಲ್ತೇ (ನೀತಿಮಂ. I. ೩೭೦). [< ಸಂ. ವೃಥಾ./ ತೆಲು. ವಿತಾ, ವಿತ]

**ವಿತ್ತ** (ಗು). ೧. ಪ್ರಸಿದ್ಧನಾದ ; ಪ್ರಖ್ಯಾತನಾದ. ೨. ವಿಚಾರಮಾಡಿದ ; ಪರಿಶೀಲಿಸಿದ. ೩. ಸಂಪಾದಿಸಿದ ; ಗಳಿಸಿದ. (ನಾ). ೪. ಪ್ರಸಿದ್ಧವಾದುದು ; ಪ್ರಖ್ಯಾತವಾದುದು : ''ವಿನ್ನಃ, ವಿತ್ತಃ, ವಿಚಾರಿತಃ — ೩ ವಿಚಾರಿಸಲ್ಪಟ್ಟದ್ದು, ಪ್ರಸಿದ್ಧವಾಗಿ ಕೇಳಿ ತಿಳಕೊಳ್ಳಲ್ಪಟ್ಟದ್ದು'' (ಸಿದ್ಧಾಂತಿ. ೩೫೦). ೫. ಪ್ರಸಿದ್ಧನಾದವನು : '' ಪ್ರತೀತಃ , ಪ್ರಥಿತಃ , ಖ್ಯಾತಃ , ವಿತ್ತಃ , ವಿಜ್ಞಾತಃ , ವಿಶ್ರುತಃ — ೬ ಧನಾದಿಗಳಿಂದ ಪ್ರಸಿದ್ಧನಾದವನ ಪೆಸರು'' (ಸಿದ್ಧಾಂತಿ. ೩೨೫). ೬. ಸಂಪಾದಿಸಿದುದು ; ಹಣ : ಭೋಗ ದೊಳ್ ವೈಶ್ರವಣಂಗತ್ತೆತ್ತಲುಂ ವಿತ್ತದೊಳಧಿಕನೆನುತ್ತಿರ್ಪಿನಂ ಸಂದಂ (ಸುಕುಮಾ. ೧೧-೩೭); ವಿತ್ತವುಳ್ಳವರ್ಗಳನ್ನಂ ಕೊಂಬುದು (ಹಚಕಾ. ೧೧-೨೩); ದಾನವಿಲ್ಲದ ವಿತ್ತ ಬುಧಸನ್ಮಾನವಿಲ್ಲದ ರಾಜ್ಯ . . . ಶರಸಂಧಾನವಿಲ್ಲದ ಸಮರ ಮೆಚಿಯದು (ಕುವ್ಯಾಉ. ೩-೫೦). ೭. ಬಲ ; ಶಕ್ತಿ. ೮. ಚಿನ್ನ ; ಬಂಗಾರ : 'ವಿತ್ತವಣಿಜ' ಪರಾ. ೯. [ಜ್ಯೋತಿ] ಲಗ್ನದಿಂದ ಎರಡನೆಯ ಸ್ಥಾನ: 'ವಿತ್ತಭವನ' ಪರಾ. [ಸಂ.]

**ವಿತ್ತಪ** (ನಾ). ಐಶ್ವರ್ಯಕ್ಕೆ ಒಡೆಯನಾದವನು; ಕುಬೇರ : ಸರ್ವಸ್ವಮಂ ಕೊಂಡು ಕೂಗಿಡಿಪೆಂ ವಿತ್ತಪನಂ ಪರಾಭವಿಸುವೆಂ ದಕ್ಷಾಧ್ವರಧ್ವಂಸಿಯಂ (ಜಗವಿ. ೩-೨೧). [ಸಂ.]

**ವಿತ್ತಪಸಖ** (ನಾ). ಕುಬೇರನ ಸ್ನೇಹಿತ ; ಶಿವ : ವಿತ್ತಪಸಖಾನಂದಯುತರಾವ ರಣಗಳಿಂ. . . ಶಂಖಕರ್ಣಾಚಾರ್ಯ ಕೈಲಾಸದಿಂ ನಡೆತಂದು (ಏಕೋಪು. ೭-೫೪). [ಸಂ.]

**ವಿತ್ತಭವನ** (ನಾ). [ಜ್ಯೋತಿ] ಲಗ್ನದಿಂದ ಎರಡನೆಯ ಸ್ಥಾನ : ಇಂದು ನಿಲೆ ತುರ್ಯಗೃಹದೊಳ್ ಮಂದಂ ನಿಲೆ ವಿತ್ತಭವನದೊಳ್ . . . ಅಸ್ತ್ರಾಹತಿಯಿಂದಮವಂ ಬಿರ್ದು ಪುಟಿಯಿತು ಲಯವಾಗದಿರಂ (ಜಾತತಿ. ೨೩-೧೪). [ಸಂ.]

**ವಿತ್ತರ** 'ಬಿತ್ತರ' ನೋ.

**ವಿತ್ತವಣಿಜ** (ನಾ). ಚಿನ್ನದ ವ್ಯಾಪಾರಿ ; ಸರಾಫ : ''ವಿತ್ತವಣಿಜಂ ಚಿನ್ನವರದಂ'' (ಮಂಗರಾ. ೧೦೫-೧೪). [ಸಂ.]

**ವಿತ್ತಸ್ಥಾನ** (ನಾ). = ವಿತ್ತಭವನ : ಉಡುರಾಜಂ . . . ನೆಲಸೆ ವಿತ್ತಸ್ಥಾನದೊಳ್ ವಿತ್ತಮಂ ಪಡೆಗುಂ ಬ್ರಂದಿಗನಕ್ಕುಂ (ಜಾತತಿ. ೧೮-೭). [ಸಂ.]

**ವಿತ್ತಾಧೀಶ** (ನಾ). = ವಿತ್ತಪ : ಬಿಸಜಾರಿ ಹರಿಯೊಳಿರೆ ವೀಕ್ಷಿಸೆ ಕನಕಾದಿಗ್ರಹಂ ಮಹೀನಾಥಂ ಜೋಯಿಸಿಗಂ ವಿತ್ತಾಧೀಶಂ ವಸುಧೇಶಂ ನಾವಿದಂ ನರೇಶ್ವರನಕ್ಕುಂ (ಜಾತತಿ. ೨೦-೫) ; ಪೆಱಸಾರ್ ಕೋಣವ ನೂಂಕದಿರ್ ಪವನ ವಿತ್ತಾಧೀಶ ನೀಂ ಕಾಣ್ಕೆಯಂ ನೆಱೆ ನೀಡು . . . ಎನುತಲ್ಲಿ ಕೂಡೆ ಜಡಿದಂ ಮಾಕಾಲನಾ ಕಾಲದೊಳ್ (ಶಬಶಂ. ೧-೮೩). [ಸಂ.]

**ವಿತ್ತಾನುವರ್ತಿನಿ** (ನಾ). ಹಣವನ್ನು ಅನುಸರಿಸುವವಳು ; ವೇಶ್ಯೆ ; ಸೂಳೆ : ದಿನನಾಥಾಲಯಲಗ್ನದೊಳ್ ಕುಜ ಬುಧ ತ್ರಿಂಶಾಂಶಮಾದಂದು ಕೋಕನದಪ್ರದ್ವಿಷನಲ್ಲಿ ಕೂಡೆ ಪುರುಷಾಚಾರಾಢ್ಯೆ . . . ಭಾರ್ಗವಾಂಶದೊಳಗಮ್ಮಾಸಕ್ತೆ ವಿತ್ತಾನುವರ್ತಿನಿ (ಜಾತತಿ. ೨೨-೭). [ಸಂ. ವಿತ್ತಾನುವರ್ತಿನೀ]

**ವಿತ್ತಾರ್ಥಿ** (ನಾ). ಹಣವನ್ನು ಬೇಡುವವನು; ಯಾಚಕ: ದೀನಜನದಾನನಿರತ

ನನೂನಗುಣೋತ್ತಮಸುಸತ್ತ್ವ ತಾಪಸಲೋಕಾದಾನಂ ವಿತ್ತಾರ್ಥಿಗೆ . . . ಆರ್ತೀವಂ (ಶಾಂತಿಪು. ೧-೨೮). [ಸಂ. ವಿತ್ತಾರ್ಥಿನ್]

**ವಿತ್ತಿ** (ನಾ). ೧. ಜೀವನೋಪಾಯಕ್ಕಾಗಿ ಬಿಟ್ಟ ದತ್ತಿ,— ಉಂಬಳಿ : ಮುನ್ನಿನ ಭಾಗಮಲ್ಲದ ಮತ್ತವೊನ್ದು ಭಾಗಮು ತೇಜಸಾಮ್ಯವಿತ್ತಿಗಾ ಬಳ ೧೦ ಕೊಳ್ವುದೆನ್ದು ನುಡಿಯಲ್ . . . ಪೂರ್ವ್ವದ ವಿತ್ತಿ ಪೋಪುದರ್ಕ್ಕೆ ಗಾವುಣ್ಡರ ಕೊಟ್ಟ ಮತ್ತವೊನ್ದು ಭಾಗಕ್ಕೆ ತೇಜಸಾಮ್ಯವಿತ್ತಿ XXX (ಸೌಇಇ. IX-i, ೧೨೩-೨೦; 1059) ; ಬೆಮ್ಮತ್ತನೂರ ವಿತ್ತಿಯೊಳಗಣ ನಗರೇಟಿ ಕಾಮಗಉಡನ ಮಗ ಬೆನಕಗಉಡನ ಕೈಯ್ಯಲು . . . ಬೆಮ್ಮತ್ತನೂರ ವಿತ್ತಿ ವೊಳಗೆಣೆಯ ವಿತ್ತಿಯ ನಾಡಪ್ರಭುಗಳು ಕೊಟ್ಟು (ಎಕ. XI, ಚಿತ್ರದು. ೧೨-೧೫ ; ಸು. 1286). ೨. ಒಂದು ಬಗೆಯ ಆದಾಯತೆರಿಗೆ : ಮಲ್ಲಿಕಾರ್ಜುನದೇವರ ವಿತ್ತಿ XXX ಆ ಭುವೇಸ್ವರದೇವರ ವಿತ್ತಿ XXX ನ್ನಯ ದೇವರ ವಿತ್ತಿ ಯಿಷ್ಟನು ಬಿರೂರ ಸಿದ್ದೇದೇವರ ಮಗ ವೀರಪಗೆ ಧಾರೆಪೂರ್ಬ್ಬವಾಗಿ ಬಿಟ್ಟ ಧರ್ಮ್ಮ (ಎಕ. XI, ದಾವಣ. ೧೨೦-೨೮ ; ಸು. 1360). ೩. ಜೀವನೋಪಾಯ ; ಕಸುಬು ; ಉದ್ಯೋಗ : ಋತ್ವಕ್ಕಿತ್ತಂ . . . ವೃತ್ತಿ — ವಿತ್ತಿ, ವೃಥಾ — ವಿತೆ (ಶಮದ. ೨೬೮ ಪ್ರಯೋ). [< ಸಂ. ವೃತ್ತಿ]

**ವಿತ್ತಿಕಾಱ** (ನಾ). ಕಸುಬುದಾರ ; ಉದ್ಯೋಗಸ್ಥ : ನಾಡೋಜನು ಮರ ಕಬುನ ಕೆಲಸಕೆ ವಿತ್ತಿಕಾಱರುಯಿವರು ತೂಬ ಮಾಡಿದರು (ಎಕ. X, ಚಿಂತಾಮ. ೬೮-೧೮; 1378). [ವಿತ್ತಿ + - ಕಾಱ]

**ವಿತ್ತೀಯ** (ಗು). ಹಣಕಾಸಿಗೆ ಸೇರಿದ ; ಐಶ್ವರ್ಯಕ್ಕೆ ಸಂಬಂಧಿಸಿದ ; ವಿತ್ತದ : ಧಾರ್ಮಿಕ ಆಚರಣೆಗೆ ಸಂಬಂಧಪಟ್ಟಿರುವ ಯಾವುದಾದರೂ ಆರ್ಥಿಕ, ವಿತ್ತೀಯ, ರಾಜಕೀಯ ಅಥವಾ ಇತರ ಲೌಕಿಕಕ್ರಿಯೆಯನ್ನು ವಿನಿಮಯಗೊಳಿಸಲು (ಭಾಧಾನ. ೧೫). [ಸಂ.]

**ವಿತ್ತು** 'ಬಿತ್ತು₁' ನೋ.

**ವಿತ್ತೇಶ** (ನಾ). ಐಶ್ವರ್ಯಕ್ಕೆ ಒಡೆಯನಾದವನು ; ಕುಬೇರ : ಐರಾಮಹಾದೇವಿ ಯರುದರದೊಳಂ ಬರ್ಪ ಲೋಕೇಶನಂ ಬೆಚ್ಚರವಾ ವಿತ್ತೇಶನಂ ಪೇಟ್ಟುದು (ಶಾಂತಿಪು. ೯-೧೬೨) ; ಸುರಪಂ ಮಂದಾರದಿಂದಚ್ಯುತನರುಣಸರೋಜಾತದಿಂ . . . ಪದ್ಮಜಂ ಹೇಮಪದ್ಮೋತ್ಕರದಿಂ ವಿತ್ತೇಶನುದ್ಯತ್ಕನಕಕುಸುಮದಿಂ ಮಾರುತಂ ದಿವ್ಯಸೌಗಂಧಿರಜಃಸೌಗಂಧದಿಂದರ್ಚಿಸೆ ನಿಜಪದಮಮಂ ಭರ್ಗನೊಪ್ಪಿರ್ದನಾಗಳ್ (ರಾಜಶೇ. ೧೪-೧೬೫). [ಸಂ.]

**ವಿತ್ತೇಷಣ** (ನಾ). ಹಣವನ್ನು ಪಡೆಯಬೇಕೆಂಬ ಬಯಕೆ ; ಶ್ರೀಮಂತನಾಗುವ ಅಪೇಕ್ಷೆ : ಪುತ್ರೇಷಣ ವಿತ್ತೇಷಣ ದಾರೇಷಣಂಗಳೆಂಬ ಈಷಣತ್ರಯವನುಳಿದು (ಆದವ. ಮು. ೯೧-೧೫೦); ವಿತ್ತೇ [ಪಾಠಾಂ. ಅರ್ಥೇ]ಷಣ ಪುತ್ರೇಷಣ ದಾರೇಷಣಮೆಂಬ ಈಷಣತ್ರಯದಿಂ (ವಿವೇಕ. ೧೯೬). [ಸಂ.]

**ವಿತ್ಪತ್ತಿ** (ನಾ). ಮೂಲ ; ಹುಟ್ಟು ; ವ್ಯುತ್ಪತ್ತಿ : (ಕ). [< ಸಂ. ವ್ಯುತ್ಪತ್ತಿ]

**ವಿತ್ಪನ್ನ** (ನಾ). ೧. ಮೂಲನಾದವನು ; ಕಾರಣನಾದ ವ್ಯಕ್ತಿ : ಉದ್ಯಾನವನವನು ಕೆಡಿಸಿ ಕಳೆದಿರಲ ಮುನ್ನ ಮುಱಿದವರಾರೆನುತ ವಿತ್ಪನ್ನರನು ತೊಲಗಿಸುತ ಸುರಪನ ಮನ್ನಣೆಯ ಗಂಧರ್ವಬಲ ಬೆರಸಿದುದು ಪರಬಲವ (ಕುಮ್ಮಾಅ. ೧೯-೯). ೨. ಪರಿಣತನಾದವನು ; ನಿಷ್ಣಾತನಾದವನು : ಜಗನ್ನಿವಾಸನು ಕೃಷ್ಣನಿಂ ವಿತ್ಪನ್ನರುಂಟೇ ಜಗಕೆ (ಕೋಳಗಯ. ೬-೨೪). [< ಸಂ. ವ್ಯುತ್ಪನ್ನ]

**ವಿತ್ಪನ್ನತೆ** (ನಾ). ಹುಟ್ಟು ; ಮೂಲ ; ವ್ಯುತ್ಪನ್ನತೆ : ಮನ್ನಿಸದಿರವಿವೇಕವನು ವಿತ್ಪನ್ನತೆಗೆ ಕುಂದಹುದು ಹಬ್ಬುವುದಿನ್ನು ನಿಮ್ಮಭ್ಯುದಯಲತೆ (ಕೊರರಾ. ೫-೩-೬೯). [< ಸಂ. ವ್ಯುತ್ಪನ್ನತಾ]

**ವಿತ್ರಸ್ತ** (ಗು). ೧. ಅಂಜಿದ ; ಭಯಗೊಂಡ : ವಿತ್ರಸ್ತಕರ್ಮಾರಿಪುವ ಜಗತ್ತ್ರಯದೀಪಕನ ಕಾಣ್ಕೆಗೊಳಗಾದುದು ಲೋಕತ್ರಯಮದನುಕ್ರಮದೊಳ್ ವೇತ್ರಾಸನಝಲ್ಲರೀಮೃದಂಗಸಮಾನಂ (ಆದಿಪು. ೧-೪೭) ; ವಿತ್ರಸ್ತಸಮಸ್ತನಿಶಾಟವರ್ಗ (ಪಂಚತಂ. ೧೬೨-೧೪). (ನಾ). ೨. ಹೆದರಿದವನು ; ಭಯಗೊಂಡವನು. [ಸಂ.]

**ವಿತ್ರಾಸ** (ನಾ). ಅಂಜಿಕೆ ; ಭಯ ; ಭೀತಿ : ಧಾತ್ರಿಗಧಿಪತಿಯಪ್ಪುದೆಂದು ಭರತಗೆ ಪೇಳೆ ವಿತ್ರಾಸಭಕ್ತಿಯಿಂದಿಚ್ಚೆಗ್ಗೆಯದೆ ಧರೆಯ ಶತ್ರುಘ್ನಸಹವಾಗಿ ಬಂದು ಶ್ರೀರಾಮನಂ ಕಂಡ ಕೈಕಾತ್ಮಭವನು (ವೆಂಕಾರಾ. ೧-೩-೧೩). [ಸಂ.]

**ವಿತ್ರಾಸಿತ** (ಗು). ಭಯವನ್ನುಂಟುಮಾಡಿದ : ಚತುರಾನನಸಂಸ್ಕಾರಸಂಯು ತೋಪನ್ಯಾಸವಿತ್ರಾಸಿತಪರಮತನುಂ . . . ಆಗಿ (ಚಂದ್ರಪ್ರ. ೪-೮೦ ವ). [ಸಂ.]

**ವಿದ** (ಗು). ೧. ತಿಳಿದ ; ಅರಿತ ; ಬಲ್ಲ. (ನಾ). ೨. ತಿಳಿದವನು ; ಬಲ್ಲವನು ; ಜ್ಞಾನಿ : ಸಕಲಮಂತ್ರಾಸ್ತ್ರವಿದನೀ ರಣಕಲಾಪಂಡಿತಂ (ಶ್ರೀರಾವಪ. ೩೦-೭೪) ; ಮೂರ್ತಿಯೊಂದೆ ದರ್ಶನಾರ್ಹವೆನುವ ವಿದರು, — ವಿಶ್ವಕರ್ಮ ಗುಡಿಯನೇಕೆ ಸಿಂಗರಿಸಿದನಿಂತು? ನುಡಿವರೆ? (ಚಿಂತನ. ೩೭-೧೪). [ಸಂ.]

**ವಿದಗ್ಧ** (ಗು). ೧. ಬೆಂಕಿಯಿಂದ ಸುಟ್ಟ ; ದಹಿಸಲ್ಪಟ್ಟ. ೨. ತಾಪಕ್ಕೆ ಗುರಿಯಾದ ; ತಪಿಸುವ. ೩. ಚೆನ್ನಾಗಿ ಬೆಂದ ; ಪಕ್ವವಾದ. ೪. ಹಾಳಾದ ; ನಾಶಗೊಂಡ. ೫. ನೊಂದ ; ಕಷ್ಟಕ್ಕೊಳಗಾದ. ೬. ವಂಚನೆಯಿಂದ ಕೂಡಿದ ; ಕಪಟದ: ತಿಳಿದದಂ ಮುಗ್ಧೆಯಾ ತಂತ್ರಮಂ ಮುಗುಳುನಗೆ ನಕ್ಕನು ವಿದಗ್ಧಲಂಕೇಶ್ವರಂ (ಶ್ರೀಕಾಮಾ. ೨೪೫-೯೬೦). ೭. ವಿದ್ವತ್ತಿನಿಂದ ಕೂಡಿದ ; ಪಾಂಡಿತ್ಯವುಳ್ಳ : ವಿದಗ್ಧ ವಿದ್ವಜ್ಜನಪಾರಿಜಾತಷಟ್ತರ್ಕ್ಕ . . . ಮೀಮಾಂಸ ಮಾನಸಸರೋವರ ರಾಜಹಂಸರ್ (ಸೌಇಇ. XX, ೪೭-೧೭ ; 1072) ; ಬನದೊಡಮೆ ಯೊಳಾದೊಲವುಂ ವನಪಾಲನೊಳಾದ ಮೆಚ್ಚುವೆುಕ್ಕೆಯುನಂದನುವಿಸೆ ವಿದಗ್ಧಚತುರಾನನನಾದಂ ಪ್ರೀತಿವಿಕಸಿತಾನನನಾದಂ (ಮಲ್ಲಿಪು. ೫-೬೦). ೮. ಅರಗಿದ ; ಜೀರ್ಣವಾದ. ೧೦. ಸರಿಯಾಗಿ ಅರಗದಿರುವ, — ಪಚನವಾಗದ. ೧೧. ಗೌರವಕ್ಕೆ ಪಾತ್ರವಾದ. ೧೨. ಸೊಬಗಿನಿಂದ ಕೂಡಿದ ; ಚೆಲುವಾದ; ಸುಂದರವಾದ : ವಿದಗ್ಧಸುರಸುಂದರೀನಯನಸುಂದರಂ ನಿನ್ನ ರೂಪಿದೆತ್ತ (ಆದಿಪು. ೧೩-೮೪). (ನಾ). ೧೩. ಪಂಡಿತ ; ವಿದ್ವಾಂಸ : ವಿಟಜನಕ್ಕೆ ತೊಡರ್ವ ಚಾರಿಯೆನಿಪ ಸೂಳೆಗೇರಿಯಿಂ ವಿದಗ್ಧಹೃದಯಹಾರಿಯಿಂ . . . ಸಮಸ್ತವಸ್ತುಭುವನದಿಂ (ಪಂಪಭಾ. ೧-೫೮ ರಗಳೆ) ; ಸಿರಿಯನುಳ್ಳವನೇ ವಿದಗ್ಧನು ಸಿರಿಯನುಳ್ಳವನೇ ಮಹಾತ್ಮನು . . . ಸಿರಿರಹಿತ ಶಿವನಾದೊಡಾಗಲಿ ಸರಕು ಮಾಡದು ಲೋಕವು (ಕುಮ್ಮಾಉ. ೩-೩೮). ೧೪. ನಿಪುಣನಾದವನು ; ಚತುರ : 'ವಿದಗ್ಧತನ' ಪರಾ. ೧೫. ವಂಚನೆಯಿಂದ ಕೂಡಿದವನು ; ಕಪಟಿ : 'ವಿದಗ್ಧಶರಣ' ಪರಾ. ೧೬. ಅಜೀರ್ಣದಿಂದ ಉಂಟಾಗುವ ಒಂದು ಬಗೆಯ ರೋಗ : ಅಜೀರ್ಣವೆಂಬ ವಿಷೂಚಿಯು ಆಮವೆಂದು, ವಿದಗ್ಧವೆಂದು, ವಿಷ್ಟಂಭವೆಂದು ಮೂಱುವಿಧವಾಗಿರ್ಪುದು. ಎದೆಯುರಿತ ಕಾಣಿಸುವುದು ವಿದಗ್ಧವೆನಿಸಿಕೊಂಬುದು (ಸಕವ್ಯ. ೩೫೮). [ಸಂ.]

**ವಿದಗ್ಧತನ** (ನಾ). ಜಾಣತನ ; ಚತುರತೆ ; ಕೌಶಲ : ತರಳೆ ಮನ್ಮಥನಂಕ ಕಾರ್ತಿಯೊ ಅರರೆ ಎನಲಾ ಮುಗ್ಧಮಿಂಡನ ಚರಣಯುಗಳಕ್ಕೆಱಗಿ ತನ್ನ ವಿದಗ್ಧತನ ವೆಸದು ಪಡಿಗವಂ ತರವೇಳ್ಪು (ಬಸಪು. ೧೨-೬). [ವಿದಗ್ಧ + - ತನ]

**ವಿದಗ್ಧತೆ** (ನಾ). ೧. ಪಾಂಡಿತ್ಯ ; ಜ್ಞಾನ : ಪರಮಪದಾರ್ತ್ಥನಿರ್ಣ್ಣಯಮನಾಂತ ವಿದಗ್ಧತೆ ದುರ್ನ್ನಯಂಗಳೊಳ್ಪರಿಚಯಮೆಂದುಮಿಲ್ಲದತಿಮುಗ್ಧತೆ ತನ್ನಿನಿಯಂಗೆ ಚಿತ್ತದೊಳ್ (ಎಕ. II, ೧೨೮-೮ ; 1121). ೨. ಕುಶಲತೆ ; ನೈಪುಣ್ಯ. [ಸಂ. ವಿದಗ್ಧತಾ]

**ವಿದಗ್ಧವೃತ್ತಿ** (ನಾ). ಪ್ರೌಢಿಮೆ ; ಪ್ರಾವೀಣ್ಯ ; ಚತುರತೆ : ಮತ್ತನುಜೆಯರುಧ್ವ ನರ್ತನದ ಗೀತದೊಳಾದ ವಿದಗ್ಧವೃತ್ತಿಯಂ ಪರಿವೀಕ್ಷಿಸುವುದು ನೀಂ (ನೇಮಿಪು. ೩-೧೭೪). [ಸಂ.]

**ವಿದಗ್ಧಶರಣ** (ನಾ). ೧. ಪಂಡಿತರಿಗೆ ಆಶ್ರಯವಾಗಿರುವವನು. ೨. ವಂಚಕರಿಗೆ ಆಶ್ರಯವಾಗಿರುವವನು. ೧,೨ : ಆ ನೃಪಂ ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗ ಸಂಗಿಯಲ್ಲು . . . ವಿದಗ್ಧಶರಣನಾಗಿಯುಂ ವಿದಗ್ಧಶರಣನಲ್ಲು (ಪುಷ್ಪದ. ೯-೩೯ ವ). [ಸಂ.]

**ವಿದಗ್ಧಾಜೀರ್ಣಜ್ವರ** (ನಾ). ಅಜೀರ್ಣದಿಂದ ಉಂಟಾಗುವ ಒಂದು ಬಗೆಯ ಜ್ವರ : ಅಜೀರ್ಣಜ್ವರವು ಮೂರು ತೆರನಾಗಿರುವುದು . . . ಪಿತ್ತದೋಷದಿಂದ ಹುಟ್ಟಿದ ಅಜೀರ್ಣಜ್ವರವು ವಿದಗ್ಧಾಜೀರ್ಣಜ್ವರವೆಂದೂ ಹೇಳಲ್ಪಟ್ಟಿದೆ (ಸಕವ್ಯ. ೧೦೦). [ಸಂ.]

**ವಿದಗ್ಧೆ** (ನಾ). ೧. ಚತುರಳಾದವಳು ; ಜಾಣೆ : ಕಾಂತನಂ ಮೆಚ್ಚಿಸಲ್ ವಿದಗ್ಧೆ

ಪುರುಷಾಯಿತಂ ತಗುಳೆ ನರ್ತಕೀಲೀಲೆಯಿಂದದೊಂದು ಪೊಸಗಾರ ಸೋಗೆನವಿಲಾಟಮಂ ತಾಳ್ದಿದಳ್ (ಆದಿಪು. ೧೨-೧೪) ; ಓದಿಸದಿರ್ ಗಿಳಿಯಂ ನಿನ್ನೀ ದಂತಮನೆಸೆವ ದಾಡಿಮಿಬೀಜಂಗೆತ್ತಾದರದಿಂ ಕರ್ದುಕುಗುವೆಂದೋದಿಸುತಿರ್ದಳ್ ವಿದಗ್ಧೆ ಮುಗ್ಧೆಯನೊಲವಿಂ (ಗಿರಿಕ. ೪-೧೨೩). ೨. **ತಾಪಕ್ಕೆ ಗುರಿಯಾದವಳು ; ತಪಿಸುತ್ತಿರುವವಳು** : ಮುಗ್ಧೆ ಭವದ್ವಿರಹದೊಳೆ ವಿದಗ್ಧೆಯೆ ತಾನಾದಳೆಂದು ನೀಂ ನೆರೆದೊಡೆ ಕೇಳ್ಸ್ನಿಗ್ಧತೆಯಿಂದೆ ವಿದಗ್ಧೆಯೆ ಮುಗ್ಧೆಯೆನಿಪ್ಪಳ್ ಬಳಿಕ್ಕಿದೇನಚ್ಚರಿಯೋ (ರಾಜಶೇ. ೧೧-೧೦೨). [ಸಂ. ವಿದಗ್ಧಾ]

**ವಿದತ್ತೂರ್** (ನಾ). ಒಂದು ಸ್ಥಳದ ಹೆಸರು : ಕದಮ್ಬೂರಾ ನಾಲ್ಪದಿನ್ನರು ವಿದತ್ತೂರು ನಾವಿದ ಪನ್ದೆಮು ಅಱಿಯ ಈರೆದೆತ್ತರಾ ಪೊರುಳ್ತ XXX ಱ ಮುನಿಗಿತ್ತು (ಎಕ. X, ಕೋಲಾರ. ೭-೬; 760). [? + ಊರ್]

**ವಿದರ್ಭ** (ನಾ). ೧. ಒಂದು ದೇಶದ ಹೆಸರು ; IP ಈಗಿನ ಮಧ್ಯಪ್ರದೇಶದ ಬಿರಾರ್ : ಕಳಿಂಗಕುರುನೇಪಾಳನಿಷಧವಿದರ್ಭಧರಣೀಪಾಲತತಿ ಸಂದಣಿಸಿದುದು ಸಾಕೇತನಗರಿಯಲಿ (ತೊರರಾ. ೧-೭-೧೮) ; ವಿದರ್ಭನರನಾಥ ರಥಾಂಗಸುಧಾಮಯೂಖಿ ಪರಾಕು (ಯಾದಚಂ. ೩-೧ ವ). ೨. **ವಿದರ್ಭ ದೇಶದ ದೊರೆ** : ಅಳಿಯನನು ಕಾಣದೆ ವಿದರ್ಭನು ತೊಳಲಿಸಿದನನುಚರರ ನಾನಾಹಳುವದಲಿ ಹಳ್ಳಿಯಲಿ (ತೊರರಾ. ೩-೨-೧೬). ೩. ವಿದರ್ಭದೇಶದ ವ್ಯಕ್ತಿ. ೪. [ಕಾವ್ಯಮಿ] ಕಾವ್ಯರಚನೆಯ ಮೂರು ರೀತಿಗಳಲ್ಲಿ ಒಂದು ; ಮಾಧುರ್ಯವ್ಯಂಜಕವಾದ ವರ್ಣಗಳಿಂದ ಕೂಡಿದ್ದು, ದೀರ್ಘಸಮಾಸಗಳಿಲ್ಲದಿರುವ ಲಲಿತವಾದ ಶೈಲಿ : ಪದರಚನಾತಿಶಯಂ ರೀತಿ ದಲದುವುಂ ನಿಯತವರ್ಣಗುಂಫನಗುಣದೊಂದೊದವಿಂ ಮೂದೆಱನಕ್ಕುಂ ವಿದರ್ಭ ಪಾಂಚಾಲ ಗೌಡವಿಷಯನಿಬದ್ಧಂ (ಕಾವ್ಯಾವ. ೭೮೧). [ಸಂ.]

**ವಿದರ್ಭಜೆ** (ನಾ). ೧. ವಿದರ್ಭರಾಜನ ಮಗಳು. ೨. ದಮಯಂತಿ. ೩. ಅಗಸ್ತ್ಯನ ಹೆಂಡತಿ ; ಲೋಪಾಮುದ್ರೆ. ೪. ಕೃಷ್ಣನ ಹೆಂಡತಿ ; ರುಕ್ಮಿಣಿ. [ಸಂ. ವಿದರ್ಭಜಾ]

**ವಿದಲ, ವಿದಳ** (ಗು). ೧. ಎರಡಾಗಿ ಹೋಳಾದ ; ಸೀಳಿದ. ೨. (ಹೂವು ಮುಂತಾದುವುಗಳಂತೆ) ಅರಳಿದ ; ಬಿರಿದ. (ನಾ). ೩. ಹೋಳು ಮಾಡುವಿಕೆ ; ಸೀಳುವಿಕೆ. ೪. ಯಾವುದಾದರೊಂದು ವಸ್ತುವಿನ ಚೂರು—ತುಂಡು. ೫. ಸೀಳಿದ ಬಿದಿರಿನಿಂದ ಮಾಡಿದ ಬುಟ್ಟಿ. ೬. ಎರಡು ಬೇಳೆಯಾಗುವ ತೊಗರಿ, ಕಡಲೆ ಮುಂತಾದ ಕಾಳು ; ದ್ವಿದಳ ಧಾನ್ಯ. **ವಿದಳ** : ೫. ಎಲೆ ಹೇರು ೧೦೦ ಕೆ ವ ಗ ೨ ವಿದಳ ಹೇರು ೧೦೦ ಕೆ ವ ಗ ೨ . . . ವಿದಳದ ಹೇರು ದವಸದ ಹೇರುಯಿವು ಮುನ್ನಾದ ಸಮಸ್ತ ಬೆವಹಾರಕೆ (ಎಕ. XII, ಸಿರಾ. ೭೬-೮ ; 1379). ೬. ''ವಿದಳಂ ಪರ್ವಾಖ್ಯಂ'' (ವಸ್ತುಕೋ. ೯೫-೨೧) ; ರಸಭಂಡವ್ನೆದು ವಿದಳವಿಪ್ಪತ್ತೈದು . . . ದಶೆದಿಕ್ಕಿನ ಕಾಲ್ನಡೆಯಱುವತ್ತಾಱುಕೋಟಿ (ಶಿವಗೀ. ೧೮೯-೯೪೬) ; ಉಪ್ಪು ಹುಳಿ ಬೆಲ್ಲ ಯೆಂಣೆ ತುಪ್ಪ ವಿದಳ ಬೂಸಕಾಯಿ . . . ಜವಳಿ ಮುಂತಾಗಿ (ಎಕ. VII, ಶಿವಮೊ. ೨೮-೧೬; 1670). ೭. ನಿವಾರಣೆ ; ಪರಿಹಾರ : ಜೀವಾದಿ ಪದಾರ್ಥಂಗಳೊಳಾವುದು ಸಂದಿಗ್ಧಮಾದೊಡಂ ಬಲಗೊಳೆ ಭವ್ಯಾವಳಿಗೆ ವಿದಳಮಕ್ಕುಂ ದೇವನನೀ ತೀರ್ಥಕರನ ಪುಣ್ಯಮಗಣ್ಯಂ (ಆಜಿಪು. ೫-೭೦). [ಸಂ.]

**ವಿದಲನ, ವಿದಳನ** (ಗು). ೧. ಸೀಳುವ ; ಹೋಳುಮಾಡುವ. ೨. ನಾಶ ಮಾಡುವ ; ಧ್ವಂಸಗೊಳಿಸುವ. (ನಾ). ೩. ಸೀಳುವಿಕೆ ; ಎರಡು ಭಾಗಗಳಾಗಿ ಹೋಳು ಮಾಡುವಿಕೆ. ೪. ನಾಶ ; ಧ್ವಂಸ. ೫. ನಾಶಮಾಡಿದವನು ; ಧ್ವಂಸಗೊಳಿಸಿದವನು : ಶ್ರುತಿಪುಟಲಲಿತಾಕಲಿತಭುಜಂಗಮ ಹೃದಯಂಗಮ ಪ[illegible]ದ್ಮಾನಂಗಮದವಿದಲನ . . . ಮಹಂತಜಯ (ಉದ್ಭದೇ. ೨-೧). **ವಿದಳನ**: ೧. ವೈರಿಭಟಗಜವಿದಳನೋದ್ಧತಸಿಂಹ ಲಂಕಾನಗರನಿರ್ದಹನ . . . ಭುವನಪ್ರಾಣಜಂ ವಂದೆ (ತೊರರಾ. ೧-೧-೪). ೨. ಬೊಮ್ಮಿದೇವನು . . . ಇರ್ಪನುರುಸಂಸಾರ ಮಾಯಾದರ್ಪವಿದಳನಮೂರ್ತಿ (ಬಸಪು. ೩೧-೧). ೩. ವಿದಳನ . . . ದುರ್ಭೋಗ್ಯ ನಾನಾವಿಧಾಸಂಖ್ಯಾತತೀವ್ರವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣದಿಂ ಮಾಳ್ಪ ಶಿಕ್ಷಾಲೇಶಮೆಂದೆನಿಸಿ (ವಿವೇಕ. ೧೮೧). ೪. ದಾನವರ ದಳವನ್ನು ವಿದಳನ ಮಾಡುವ ರುದ್ರನಾಮದಲ್ಲಿ ಮೃತಸಂಜೀವಿನಿಯ ಅಮೃತಧಾರೆಯು ಹರಿಯುತ್ತದೆಂದು ತೋರುತ್ತದೆ (ಕೋಹಿನೂ. ೧೪). [ಸಂ.]

**ವಿದಲಿತ, ವಿದಳಿತ** (ಗು). ೧. ಸೀಳಲ್ಪಟ್ಟ ; ಹೋಳಾದ : ಆಕಾಶಂಬರಂ ಪರ್ವಿದ ಮಣಿಮಯಕೂಟಂಗಳಿಂದಲ್ಲಿಮಾದ್ಯದ್ರದನೀಂದ್ರ ಸ್ಥೂಲದಂತಾಹತಿವಿದಲಿ [ಪಾಠಾಂ. ಳಿ]ತ ಗೋಶೀರ್ಷಸಾರದ್ರವಾವೋದದಿನೆತ್ತಂ ಗಂಧವಾಹಂ ಮಗಮಗಿಸೆ ಬೆಡಂಗೀ ನಗೇಂದ್ರೋಪಕಂಠಂ (ಆಪು. ೧೩-೭೮). ೨. **ಅರಳಿದ ; ಬಿರಿದ ; ವಿಕಸಿತವಾದ** : ವಿದಲಿ[ಪಾಠಾಂ. ಳಿ]ತಪುಷ್ಪಮಾಲಿಕೆಗಳಿಂ ಮಳಯೋದ್ಭವದಿಂ ತೊಳಪ್ಪ ರನ್ನದ ತೊಡವಿಂದಳಂಕರಿಸಿ (ಚಂದ್ರಪು. ೬-೮೦); ವಿದಲಿತ ಪುಷ್ಪಸೌರಭದಿನಚ್ಯುತಕಲ್ಪದ ಶುಕ್ಲಲೇಶ್ಯೆ ಲೆಪ್ಪದ ಕರು ವಜ್ರದಂಡದ ಬಲಂ ಪೊಳೆವುದ್ಗತತಿಗ್ಮರೋಚಿ ಬಣ್ಣದ ರುಚಿ ಮಿಂಚು ಮಿಂಚು ಪೆಱಕಣ್ದೆಱವಾಗಿರೆ (ಅನಂಪು. ೬-೧೮). **ವಿದಳಿತ**: ೧. ಹರಿವಿದಳಿತಮದಗಜ ಕುಂಭರಕ್ತಸಿಕ್ತಾರ್ದ್ರಮೌಕ್ತಿಕಪ್ರಕರದವೋಲ್ ಕರಮೆಸೆವ ದಾಡಿಮಿಬೀಜರಾಜಿಯಿಂ ತೆಗೆದು ರಸವನಾಸ್ವಾದಿಸಿದೆಂ (ಕಾದಂಪೂ. ೮೭). ೨. ವಿದಳಿತ ನುತ ಶತಪತ್ರದ ಪುದುವಿನೊಳಿರದಗಲೆವೋದ ಹಂಸನನಱಸಲ್ ಪದೆದೆಳಸುವ ಪೆಣ್ಣಂಚೆಯ ಪದ ಕೊರಲಿಂಚರದ ಸರಮೆ ಸವಿ ಕಿವಿಗಿದಱೊಳ್ (ಪಂಪಭಾ. ೫-೫೬) ; ವಿದಳಿತ ಪದ್ಮಸೌರಭಕೆ ಸಂದಣಿಗೊಳ್ವ ಮಧುವ್ರತಪ್ರತಾಪದಿಂ . . . ಒಪ್ಪುವುದೊಂದು ಪೂಗೊಳಂ (ಗಿರಿಕ. ೪-೧೬). (ನಾ). ೩. ಸೀಳಿದುದು ; ಹೋಳುಮಾಡಿದುದು. ೪. ಚಿಗುರಿದುದು. ೩,೪ : ವಿದಳಿತವಾದ ಕಂಟಕಕದಂಬದಿನುರ್ಬಿದ ವಾಹಿನೀಸಮೂಹದಿನಭಿವೃದ್ಧಿವೆತ್ತ ಭುವನಾಶ್ರಯದಿಂ . . . ಎಸೆದತ್ತು ರಾಜ್ಯವಿಭವಂ ಜಳದಾಗಮ ಚಕ್ರವರ್ತಿಯಾ (ಜಗವಿ. ೪-೩೫). ೫. **ಚದುರಿದುದು ; ಚಲ್ಲಾಪಿಲ್ಲಿಯಾದುದು** : ಕಲಿತ ಬಲ ಶತಕೋಟಿಗಿದಿರಾಗಳಿದವದ್ರಿಗಳಂತೆ ಹರಿಪದವಳಯ ವಿದಳಿತವಾಯ್ತು ಮೇಘವ್ರಾತದಂದದಲಿ (ಕುವ್ಯಾಭೀ. ೭-೯). [ಸಂ.]

**ವಿದಲಿತವನರುಹ** (ನಾ). ೧. ಅರಳಿದ ತಾವರೆ. ೨. [ಛಂದ] ವರ್ಣ ಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಇಪ್ಪತ್ತೈದನೆಯ ಅಭಿಕೃತಿ ಎಂಬ ಛಂದಸ್ಸಿನ ಒಂದು ವೃತ್ತ: ಅದಿತಿಜಪುರಮದಕರಿಗಣನಿವಹದೊಳೆಸೆದೊಡನಿರೆ . . . ವಿದಲಿ [ಪಾಠಾಂ. ಳಿ] ತವನರುಹ [ಪಾಠಾಂ. ಸರಸಿಜ] ವನಮೆನಲೆಸೆದುದು (ಛಂದೋಂಬು. ೨-೧೯೫). [ಸಂ.]

**ವಿದಲೆ** (ನಾ). ದ್ವಿದಳಧಾನ್ಯ : ವಿದಲೆ ಪೈಕ ಗೋಧಿ ಕಡಲೆ ಎಳ್ಳು ಅಗಸೆ . . . ಹುರವಲ್ಲಿ ಮುಂತಾದ ಧಾನ್ಯಕ್ಕೆ ಪ್ರತಿಹೇಱೊಂದಕ್ಕೆ ಹಾಗ (ಎಕ.V, ಬೇಲೂರು. ೭೫-೯೪; 1382). [ಸಂ. ವಿದಲ]

**ವಿದಳ** 'ವಿದಲ' ನೋ.

**ವಿದಳನ** 'ವಿದಲನ' ನೋ.

**ವಿದಳಹುಗ್ಗಿ** (ನಾ). ಹೆಸರು ಮುಂತಾದ ಬೇಳೆಯನ್ನು ಅಕ್ಕಿಯೊಂದಿಗೆ ಹಾಕಿ ಮಾಡುವ ಒಂದು ಬಗೆಯ ಖಾದ್ಯ : ಎರಡುಮಾನುದಕೊಮ್ಮಾನ ವಿದಳವ ಹಾಕಿಯರೆಬೆಂದ ಸಮಯದೊಳು ಸರಿಯಕ್ಕಿಯಂ ಹೊಯಿವುತ . . . ತೆಂಗಾಯ ತುಱುವಲಂ ತೆಗೆದು ಮತ್ತಾ ವಿದಳಹುಗ್ಗಿಯೆಂದೊಲಿದು ಹೆಸರಂ ಕರೆವುದು (ಸೂಪಶಾ. ೩-೪). [ವಿದಳ (= ವಿದಲ) + ಹುಗ್ಗಿ (< ಪುಳ್ಗಿ)]

**ವಿದಳಾನ್ನ** (ನಾ). = ವಿದಳಹುಗ್ಗಿ : ಅಪರಿಮಿತಮಪ್ಪ ವಿದಳಾನ್ನ ಪತ್ರಫಲಶಾಕ ಭೋಜನಂಗಳ ವಿಷಮುಂ ವ್ಯಪಗತಮಂಬಿಲದಧಿಯಿಂಗುಪಶಮಮಕ್ಕುಂ (ಖಮುದ. ೨-೧೩೫). [ಸಂ. ವಿದಲಾನ್ನ]

**ವಿದಳಿತ** 'ವಿದಲಿತ' ನೋ.

**ವಿದಳಿತಸರಸಿಜ** (ನಾ). = ವಿದಲಿತವನರುಹ ೨ : ಅದಿತಿಜಪುರಮದಕರಿಗಣ ನಿವಹದೊಳೆಸೆದೊಡನಿರೆ . . . ವಿದಳಿತಸರಸಿಜವನಮೆನಲೆಸೆದುದು (ಛಂದೋಂಬು. ೨-೧೯೫). [ಸಂ. ವಿದಲಿತಸರಸಿಜ]

**ವಿದಳಿಸು** (ಕ್ರಿ). ೧. ಸೀಳು ; ಎರಡು ಭಾಗಮಾಡು : ವಿದಳಿಸೆ ಘನದಂತಿ ಬಿಸಿಲ್ಗುದುರೆಗಳಂ ಪನಿತು ಪೆತ್ತ ನೆತ್ತರ ಪನಿಯಂದದಿನಲ್ಲಲ್ಲಿಗೆ ಕಣ್ಗೊಳಿಸಿದತ್ತು ಕಾರ್ಮುಕದೊಳಿಂದ್ರಗೋಪಕಳಾಪಂ (ಜಗವಿ. ೪-೧೩). ೨. **ನಾಶಮಾಡು** ;

ಇಲ್ಲವಾಗಿಸು ; ಧ್ವಂಸಗೊಳಿಸು : ಮದನಮದಾಂಧಕಾರಮನದಿರ್ಪ ಮಹೋದ್ಧತ ಮೋಹಮಲ್ಲನಂ ವಿದಳಿಸಿ (ವರ್ಧಪು. ೧೫-೮೩) ; ವಿದಳಾನ್ನ ಸರ್ವಶಾಕಂ ಕದಶನಮಿವನುಂಡವರ್ಗೆ ಶುಂಠಿಗಳುಂ ತಕ್ರದೊಳೊಂದಿದ ಭಯಮುಂ ಮೇಣ್ ವಿದಳಿಸುಗುಂ ತದ್ವಿಷಂಗಳಂ (ಖಮದ. ೨-೧೩೬). [ವಿದಳನ (= ವಿದಲನ) + - ಇಸು$_3$]

**ವಿದಾಯ** (ನಾ). ಮನೆಗೆ ಬಂದ ಅತಿಥಿ, ಬಂಧು ಮುಂತಾದವರನ್ನು ಕಳುಹಿಸಿ ಕೊಡುವಿಕೆ ; ಬೀಳ್ಕೊಡುಗೆ : ನೋವು ಕೊಡುತ್ತಿದ್ದುದು ಆ ವಿದಾಯ . . . ಆದರೆ ಶ್ರೀಧರನಿಗೆ ಅದು ಅತ್ಯಂತ ಪ್ರಾಮಾಣಿಕವಾದ ವಿದಾಯ (ವಾತ್ಸಲ್ಯ. ೨೮) ; ಕಣ್ಣುಗಳಿಂದ ಧಾರಾಕಾರವಾಗಿ ಅಶ್ರುಜಲ, ವಿದಾಯದ ಸಮಯವನ್ನು ನೆನೆದು, ಸುರಿಯುವುದೂ ಕಾಣಿಸಿತು (ಅಳಿನಿ. ೮). [<— ಅರ. ಬಿದಾಅ , ವಿದಾಆ ; ಹಿಂ. ಮರಾ. ವಿದಾ, ವಿದಾಈ, ಬಿದಾ, ಬಿದಾಈ. / ಸಂ. ವಿದಾಯ]

**ವಿದಾರಕ** (ಗು). ೧. ಸೀಳುವ ; ಹೋಳುಮಾಡುವ. ೨. ನಾಶಮಾಡುವ. (ನಾ). ೩. ಸೀಳುವಂತಹುದು ; ಒಡೆಯುವಂತಹುದು : ಹೃದಯವಿದಾರಕವಾದ ಈ ಜ್ಞಾತಿವೈರವನ್ನು ನೋಡಿ ತಾನು ಹೇಗೆ ತಾನೆ ಸೈರಿಸಬಹುದು (ಭೀಷ್ಮಚ. ೬೩). ೪. ಸೀಳುವವನು ; ಹೋಳುಮಾಡುವವನು : ಭೂರಿಕಳಾವಿಬೋಧಿತ ಸುಧಾಕರರೂರ್ಜಿತಸಾಧುಸಂಘನಿಸ್ತಾರಕರಂಗಜಾತಮಹಿಜಾತವಿದಾರಕರ್ (ಸುಕುಮಾ. ೧-೨೨). ೫. ನಾಶಗೊಳಿಸುವವನು ; ಧ್ವಂಸಮಾಡುವವನು : ದಾರಕರೂಪದೆ ಜಿನವೃಂದಾರಕನೊಡನೊಡನೆ ಬಾಲಕೇಳಿಗಳಂ ವೃಂದಾರಕರೆ ಮಾಡಿ ದುರಿತವಿದಾರಕನ ಮನಕ್ಕೆ ಮಾಡಿದರ್ ಸಂತಸಮಂ (ಅಜಿಪು. ೫-೭೨). ೬. ಪ್ರವಾಹದ ಮಧ್ಯದಲ್ಲಿದ್ದು ನೀರನ್ನು ವಿಭಾಗಿಸುವ ಮರ ಅಥವಾ ಕಲ್ಲುಬಂಡೆ: "ಕೂಪಕ, ವಿದಾರಕ- ಹೊನಲನ್ ಇಬ್ಬಗೆ ಮಾಡುವ ಕಡಲು" (ನಾಚಿರಾ. ೬). ೭. ಬತ್ತಿದ ನದಿಯೊಳಗೆ ತೋಡಿದ ಹಳ್ಳ, —ತಗ್ಗು: "ಕೂಪಕಾಃ , ವಿದಾರಕಾಃ — ೨ ಚಿಲುಮೆಗಳಾಗಿ ತೋಡಲ್ಪಟ್ಟ ಮರಳ ಹಳ್ಳ ಮುಂತಾದವುಗಳು, ನೀರೂರಿ ಬರುವ ಹಳ್ಳಗಳು" (ಸಿದ್ಧಾಂತಿ. ೭೮). ೮. ಉಪ್ಪುಮಣ್ಣಿನ ನೆಲ ; ಚೌಳುಭೂಮಿ. [ಸಂ.]

**ವಿದಾರಣ** (ಗು). ೧. ಸೀಳುವ ; ಹೋಳುಮಾಡುವ ; ವಿಭಾಗಿಸುವ : ಬ್ರಾಹ್ಮಣ ಕ್ಷತ್ರಿಯರ ನಡುವೆ ಈ ಚಿತ್ರಗತಭೇದ ಒಂದು ಎಲ್ಲೆಯನ್ನು ಮುಟ್ಟಿ ವಿಚ್ಛೇದ ವಿದಾರಣರೇಖೆಯಿಂದ ಸಾಮಾಜಿಕ ವಿಪ್ಲವದ ಅಗ್ನಿಜ್ವಾಲೆ ಧಗಧಗಿಸತೊಡಗಿತು (ನಿಬಂಧ. I, ೧೦೧). (ನಾ). ೨. ಸೀಳುವಿಕೆ ; ಎರಡಾಗಿ ಕತ್ತರಿಸುವಿಕೆ : ಶೂಲಾರೋಹಣಕ್ರಕಚವಿದಾರಣಕಾರಾಗಾರವಿನಿವೇಶನಸರ್ವಸ್ವಹರಣಾದಿಗಳಂ ಇಲ್ಲಿಯೆ ಪಡುಗುಂ (ತತ್ತ್ವಪ್ರ. ೨೭೧). ೩. ಸೀಳುವಿಕೆಯಿಂದುಂಟಾದ ಗಾಯ : ಹದುಳಿಸಿನ್ನಂಜದಿರು ಬಾಣೌಘದ ವಿದಾರಣವಿದು ವಿಚಾರಿಸಲೆದೆ ಬಿರಿದು ತಾ ನೊಂದೆನಿದೆ ನೋಡೆನ್ನ ಗಾಯವನು (ಕುಮಾವ್ಯಾ. ೮-೫೭). ೪. ಪೀಡಿಸುವಿಕೆ ; ಹಿಂಸೆಗೊಳಿಸುವಿಕೆ. ೫. ಕೊಲ್ಲುವಿಕೆ ; ಸಾಯಿಸುವಿಕೆ : ಶ್ರವಣವಿವರದೊಳ್ ತಪ್ತಾಯಸಮಂ ಪೊಯ್ದಂತೆ ದಾರಕವಿದಾರಣಮುಂ ದಾರಪರಾಭವಮುಂ ತನಗಟಲನೆರ್ದೆವಟಲುವಿನೊದವಿಸೆ (ಪಂರಾಮಾ. ೯-೪೭ ವ). ೬. ನಾಶಮಾಡುವವನು; ಧ್ವಂಸಗೊಳಿಸುವವನು: ಗುಣರಹಿತಶಂಕರ ತರುಣಚಂದ್ರಚೂಡವಾರಣ ದನುಜವಿದಾರಣ . . . ಫಣಿರಾಜಕಂಕಣ ಸಲಹು (ಉದ್ಭದೇ. ೩-೫೦); ಮೀರಿದರಿನೃಪಮದವಿದಾರಣ . . . ಆ ಜಯಂಧರರಾಜ ರಾಜಿಪನು (ನಾಗಷ. ೨-೧೦೧). ೭. ಕಾಳಗ ; ಯುದ್ಧ : "ಸಮಿತಿ ಸಂಗ್ರಾಮಂ . . . ವಿದಾರಣ ಯುದ್ಧಂ . . . ಸಂಖ್ಯಮೆಂದೆನಲು ಕಾಳೆಗಕೆ ನಾಮಮಕ್ಕುಂ" (ಮಂಗರಾ. ೮೫-೨೮). ೮. ಒಂದು ಬಗೆಯ ಮರ ; ಕಣಗಿಲೆ. ೯. [ಜೈನ] ಪಂಚವಿಂಶತಿಕ್ರಿಯೆಗಳಲ್ಲಿ ಒಂದು: ಪಂಚವಿಂಶತಿಕ್ರಿಯೆಗಳು — ೧ ಸಮ್ಯಕ್ತ್ವಕ್ರಿಯೆ . . . ೧೮ ವಿದಾರಣ (ಆಲಸ್ಯದಿಂದ ಶ್ರೇಯಸ್ಕರ ಕ್ರಿಯೆಯನ್ನು ಮಾಡದಿರುವುದು ಮತ್ತು ಅನ್ಯರ ಪಾಪಕರ್ಮವನ್ನು ಪ್ರಕಟಿಸುವುದು) (ಜೈನಧ. ೬೪). [ಸಂ.]

**ವಿದಾರಣಂಗೆಯ್** (ಕ್ರಿ). ಸೀಳು; ಭೇದಿಸು : ಮದವತ್ಕರಿಗಳ ಬಿದುವಂ ವಿದಾರಣಂಗೆಯ್ದು ಕೊಲ್ವ ಕಂಠೀರವಕಂ ಕದನದೊಳರಿನೃಪರಂ ಕೋಪದೆ ಕೊಲ್ವನಗಂ ಸಹಾಯಮೆಂಬರುಮೊಳರೇ (ಗದಾಯು. ೩-೪೮). [ವಿದಾರಣ + ಕೆಯ್$_1$]

**ವಿದಾರಿ$_1$** (ಗು). ೧. ಸೀಳುವ; ಭೇದಿಸುವ. (ನಾ). ೨. ನಾಶಮಾಡುವವನು : ಸಹಜದೊಳ್ ವೈರಿವೀರವಿದಾರಿಯುಂ ಅಜೇಯನುಮಪ್ಪ ದಮಿತಾರಿಗೆ ಷಾಡ್ಗುಣ್ಯದೊಳ್ ಯಾನಮುಮುಪಾಯಚತುಷ್ಟಯದೊಳ್ ದಂಡಮುಮಲ್ಲದುಳಿದ ಗುಣಪಂಚಕಮುಮುಪಾಯತ್ರಯಮುಂ ದೊರೆಯಲ್ಲವು (ಶಾಂತಿಪು. ೨-೫೧ ವ). ೩. [ಸಂಗೀತ] "ರಾಗವರ್ಧಿನಿಕ್ರಮ—ಅಕ್ಷಿಪ್ತಕ್ರಮದಲ್ಲಿ ರಾಗಸ್ವರೂಪ ತೋರಿದ ಮೇಲೆ ಸವಿಸ್ತಾರವಾಗಿ ರಾಗಾಲಾಪನೆ ಮಾಡುವ ಕ್ರಮ . . . ಇಳುವರಿಯ ಹಂತಗಳಿಗೆ 'ವಿದಾರಿ' ಅಥವಾ 'ಆಯತ್ತ' ಗಳೆಂದು ಹೆಸರು" (ಸಂಗೀಚಂ. ೨೯): ರಾಗವರ್ಧನಿಯನ್ನೇ ಕರಣ ಎಂದೂ ಕರೆಯಲಾಗುತ್ತದೆ. (ಇದಾದ) ನಂತರ ಲೋಕದಲ್ಲಿ ಮುಕ್ತಾಯಿ ಎಂಬ ಹೆಸರುಳ್ಳ ವಿದಾರಿಯನ್ನು ಹಾಡಬೇಕು. ಮೊದಲನೆಯ ಮತ್ತು ಎರಡನೆಯ ರಾಗವರ್ಧನಿಗಳನ್ನು ಪ್ರತ್ಯೇಕಿಸುವುದರಿಂದ ಇದನ್ನು ವಿದಾರೀ ಎನ್ನುತ್ತಾರೆ (ಚತುಪ್ರ. ೬೫). [ಸಂ. ವಿದಾರಿನ್]

**ವಿದಾರಿ$_2$** (ನಾ). ೧. ಒಂದು ಬಗೆಯ ಸಸ್ಯ ; ಬಳ್ಳಿಸುಂಡೆ : "ಮೀರಿಕಾ - ಬಳ್ಳಿಸುಂಡೆ, ವಿದಾರಿ" (ಓಷಧಿ. ೧೫೫). ೨. ಬಿಳಿಯ ಕುಂಬಳ : " ವಿದಾರೀ, ಕ್ಷೀರಶುಕ್ಲಾ, ಇಕ್ಷುಗಂಧಾ, ಕ್ರೋಷ್ಟ್ರೀ — ೪ ಬಿಳೀಕುಂಬಳದ ಹೆಸರು" (ಸಿದ್ಧಾಂತಿ. ೧೩೭). ೩. ಮೂರೆಲೆಹೊನ್ನೆ. ೪. ತೊಡೆಸಂದಿನಲ್ಲಿ ಊದಿಕೊಳ್ಳುವ ಒಂದು ಬಗೆಯ ರೋಗ. [ಸಂ. ವಿದಾರೀ]

**ವಿದಾರಿಕೆ** (ನಾ). ೧. ಒಂದು ಬಗೆಯ ಸಸ್ಯ ; ಮೂರೆಲೆಹೊನ್ನೆ. ೨. ತೊಡೆಸಂದಿಯಲ್ಲಿ ಬಾವು ಬರುವ ಒಂದು ಬಗೆಯ ರೋಗ : ಮತ್ತೊಂದೆಡೆಯೊಳ್ ತನುವುಮಂ ಮನೆಯುಮನಲಂಕರಿಸಿ ಬರವಂ ಪಾರ್ದಿರ್ದ ರಥಾಂಗಸಂತತಿಯಂತಿರುಳುಗಟಿಯೆ ಬಂದ ಚಿತ್ರೇಶ್ವರಂಗೆ ದಾರಿಕೆ ವಿದಾರಿಕೆಯಾದಂತೆ ನೊಂದಿಂತೆಂದಳ್ (ಅನಂಪು. ೮-೨೭ ವ). [ಸಂ. ವಿದಾರಿಕಾ]

**ವಿದಾರಿಗಂಧೆ** (ನಾ). ಒಂದು ಬಗೆಯ ಸಸ್ಯ ; ಮೂರೆಲೆಹೊನ್ನೆ : "ವಿದಾರಿಗಂಧಾ, ಅಂಶುಮತೀ, ಶಾಲಪರ್ಣೀ, ಸ್ಥಿರಾ, ಧ್ರುವಾ - ೫ ಮೂರೆಲೆಹೊನ್ನೆ ಹೆಸರು" (ಸಿದ್ಧಾಂತಿ. ೧೩೮). [ಸಂ. ವಿದಾರಿಗಂಧಾ]

**ವಿದಾರಿತ** (ಗು). ೧. ಸೀಳಿದ ; ಭೇದಿಸಲ್ಪಟ್ಟ : ತದೀಯಕೌಕ್ಷೇಯಕ ಧಾರಾವಿದಾರಿತ ಶರೀರನುಮಾಗಿ ಬಿಟ್ಟಿರ್ದ ಶರಾಚಾರ್ಯರಂ ಕಂಡು (ಪಂಪಭಾ. ೧೩-೫೫ ವ) ; ಕರಾಳಕರವಾಳಧಾರಾವಿದಾರಿತಮದವದರಾತಿಮಂಡಲೇಶ್ವರಪ್ರಚಂಡಶುಂಡಾಲನಂ . . . ಕಂಡು (ಪಂಚತಂ. ೧೯೩-೨೧). (ನಾ). ೨. ನಾಶಗೊಂಡವನು ; ಧ್ವಂಸನಾದವನು : ಅವುಗಳಿಂದ ವಿದಾರಿತನಾಗದೆ ನಾನು ಸುರಕ್ಷಿತವಾಗಿ ಪಾರಾಗುವುದೆಂತು? (ಪರಪ. ೭೭). [ಸಂ.]

**ವಿದಾರಿಸು** (ಕ್ರಿ). ೧. ಸೀಳು; ಇಬ್ಭಾಗಮಾಡು ; ಭೇದಿಸು : ಹೃದಯಮನಟಲವಿಂದುಜ್ ವಿದಾರಿಸುವುದಿಂತು ಕುಸುಮಮಯಮಲ್ತು (ಶವಿರಾ. ೩-೧೦೧) ; ಉದ್ವೃತ್ತನಂ ನಾರಸಿಂಹನ ರೂಪಿಂ ನಖದೊಳ್ ವಿದಾರಿಸಿ (ಕಾವ್ಯಾವ. ೩೫); ಕರಿಶಿರಮಂ ವಿದಾರಿಸೆ ಕರಾಗ್ರದ ಖಡ್ಗದೆ ವಜ್ರಪಾತದಿಂ ಗಿರಿ ಬಿರಿದಂತೆ ಮೇಣ್ಬಿರಿದುದು (ರಾಜಶೇ. ೬-೧೦೩). ೨. ಕೊಲ್ಲು ; ವಧಿಸು ; ಸಾಯಿಸು : ಈ ಮುಟ್ಟುಗೆಟ್ಟ ದುರಾತ್ಮನಂ ವಿದಾರಿಸುವೆನೆಂದಾ ವಾನರಚರಾಮರಂಗೆ ಮುಳಿಸನುಟಿವಂತು ಧರ್ಮೋಪದೇಶಂಗೆಯ್ದು (ಪಂರಾಮಾ. ೧೦-೧೯ ವ) ;'ಸುರೇಂದ್ರನು ಪೂರ್ವದಲಿ ವೃತ್ರನ ವಿದಾರಿಸೆ ಬಂದುದಾತಗೆ ಜನಿತಕಲ್ಮಷರೋಷವಾ ದಿನಕೆ (ತೊರರಾ. ೧-೧೦-೨).
[ವಿದಾರಣ + - ಇಸು$_3$]

**ವಿದಾಹ** (ನಾ). ೧. ಅತಿಯಾದ ತಾಪ , —ಕಾವು : ನಿನ್ನತುಳನಾಮಜಪಕ್ರಿಯೆಯಲ್ಲಿ ನಿಟ್ಟೆವಟ್ಟನತಿಶಯಾಂಗಿ ಸಾಧಿಸಿದಪಳ್ ನಿಜದೇಹವಿದಾಹಮುಕ್ತಿಯಂ (ಚಂದ್ರಪು. ೮-೮೩) ; ಪಾನ, ಅಭ್ಯಂಗನ, ಸೇಚನವಸ್ತಿ ಮೊದಲಾದ ಕ್ರಿಯಗಳಂ ಮಾಡಿಸಲು . . . ಶಿರೋರೋಗ, ವಾತರೋಗ, ಅಂಗಪಾದಕೇಶವಿದಾಹಗಳೆಲ್ಲವು ಪರಿಹರಮಕ್ಕುಂ (ಸಕವೈ. ೧೪೯). ೨. ಅತಿಯಾದ ದಾಹ,— ಬಾಯಾರಿಕೆ. [ಸಂ.]

**ವಿದಿಕ್ಕು** (ನಾ). ಎರಡು ದಿಕ್ಕುಗಳ ನಡುವಿನ ದಿಸೆ ; ಈಶಾನ್ಯ, ವಾಯವ್ಯ ಮುಂತಾದ ಉಪದಿಕ್ಕು : ವಾಮನಮುದ್ರೆಯ ಕಲ್ಲಿಂದಂ ತೆಂಕಲುಯಂಬೀ ದಿಕ್ಕು ವಿದಿಕ್ಕಿನ ನೀರರ್ಗಕಲೊಳಗುಳ್ಳ ಹಿತ್ತಿಲು ಕೊಪ್ಪಂ (ಎಕ.VIII, ತೀರ್ಥಹ. ೧೪೪-೧೭; 1421);

ಉಕ್ಕಿದವು ನದಿ ಧೂಮಕೇತು ವಿದಿಕ್ಕಿನಲಿ ತೋಱಿದವು (ತೊರರಾ. ೭-೩೭-೧೫) ; ಪೃಥ್ವಿ ಆಕಾಶಂಗಳಿಲ್ಲದಂದು ದಿಕ್ಕು ವಿದಿಕ್ಕುಗಳಿಲ್ಲದಂದು . . . ನಿಮ್ಮ ನೀವಱಿಯದ ಅನಂತಕಾಲವಿರ್ದಿರಂದು (ಅಬಿಂದ. ೧-೨). [< ಸಂ. ವಿದಿಶ್]

**ವಿದಿತ** (ಗು). ೧. ಬಲ್ಲ ; ತಿಳಿದ ; ಅರಿತ. ೨. ಪ್ರಸಿದ್ಧವಾದ ; ಪ್ರಖ್ಯಾತವಾದ : ಅದಱೊಳಗಂ ಕಿಸುವೊಬಲಾ ವಿದಿತ ಮಹಾಕೊಪಣನಗರದಾ ಪುಲಿಗೆಱೆಯಾ ಸದಭಿಸ್ತುತಮಪ್ಪೊಂಕುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೧-೩೭); ವಿದಿತ ವೇದಾರ್ಥದೊಳು ನಡೆದು . . . ಲೋಭಮಂ ತೊಱೆದೊಡಂ ತುದಿಗೆ ರಾಜ್ಯಾಂತರಂ ನರಕವೆಂಬುದು ತಪ್ಪದರಸುಗಳಿಗಿದು ನಿಶ್ಚಯಂ (ಹಚಕಾ. ೮-೨೭). ೩. ಅನುಮೋದಿಸಿದ ; ಒಪ್ಪಿದ. (ನಾ). ೪. ಎಲ್ಲರಿಗೂ ತಿಳಿದುದು ; ಪ್ರಸಿದ್ಧವಾದುದು : ವಿದಿತಂ ಪ್ರಾತೀತಿಕಂ ಕೋಮಳಮತಿಸುಭಗಂ ಸುಂದರಂ (ಆದಿಪು. ೧-೨೫) ; ವಿದಿತಂ ಕುರುಜಾಂಗಣಮೆಂಬುದು ವಿಷಯಂ ಭೂತಳಾಗ್ರದೊಳ್ ಕಡುಚೆಲ್ವಿಂದೊದವಿರ್ದುದು (ಧರ್ಮಾಮೃ. ೯-೬) ; ಹದಿಬದೆಯರ ಪೆಸರ್ಗೊಂಡು ಪೊಗಳ್ವುದು ವಿದಿತವೆನಿಸಲೆ ವೈದಿಕರಿಗೆ (ಹದಿಬ. ೨-೧೫). ೫. ಅರಿವು ; ತಿಳಿವಳಿಕೆ. ೬. ವಿಚಾರ ; ಆಲೋಚನೆ. ೭. ಒಪ್ಪಿಗೆ ; ಸಮ್ಮತಿ : ಪದವಿಗಳು ಗಿದವಿಗಳವೇತಕೆ ಮದನಹರ ನಿಮ್ಮ ಚಲಭಕ್ತಿಸುಪದವಿಯಂ ಕೃಪೆಯಿಂ ಪ್ರಸಾದಿಸಿ ಸಲಹು ನೀವೆನಗೆ ವಿದಿತವೆನಲು (ಬಸಪು. ೨-೨೪). ೮. ತಿಳಿದವನು; ಪಂಡಿತ; ಜ್ಞಾನಿ. [ಸಂ.]

**ವಿದಿತಪಡಿಸು** (ಕ್ರಿ). ತಿಳಿಯಪಡಿಸು ; ಗೊತ್ತಾಗುವಂತೆ ಮಾಡು : ಅವನಿಂದ ತಾವು ಮಾಡಿಸಿದ ಅಪರಾಧವನ್ನು ಮಾತ್ರ ಅವರು ಸುಂದರಿಗೆ ವಿದಿತಪಡಿಸಿರಲಿಲ್ಲ (ಪಳ್ಳಹಾ. ೯೦). [ವಿದಿತ + ಪಡು$_1$ + - ಇಸು$_1$]

**ವಿದಿತಾತ್ಮ** (ನಾ). ೧. ವಿಖ್ಯಾತನಾದವನು ; ಕೀರ್ತಿವಂತ : ಉದಯ ಕೈಂಟಱೊಳಿಂದು ಕೂಡೆ ಸರುಜಂ . . . ಲಾಭಸಂಸ್ಥಾನದೊಳ್ ವಿದಿತಾತ್ಮಂ ಪಡೆಪಾಳಿ (ಜಾತತಿ. ೧೮-೮). ೨. ತನ್ನನ್ನು ತಾನು ಅರಿತುಕೊಂಡವನು. [ಸಂ. ವಿದಿತಾತ್ಮನ್]

**ವಿದಿತೆ** (ನಾ). ತಿಳಿದವಳು; ಅರಿತವಳು : ವಿದಿತೆಯೆನಾಂ ತನಗೆಲ್ಲಂದದೊಳಂ ಪರಿಹೃತ ಸಮಸ್ತಸಂಗೆಯನೆನ್ನೀ ಹೃದಯಂ ನೋಡಲ್ಬಯಸಿದಪುದಕಾರಣಪಕ್ಷಪಾತಿನಿನಿಸಿದ ತನ್ನಂ (ಕಾದಂಉ. ೧೯೨). [ಸಂ. ವಿದಿತಾ]

**ವಿದಿತೋಮಾವರ** (ನಾ). ೧. ಪ್ರಸಿದ್ಧಳಾದ ಪಾರ್ವತಿಯ ಪತಿ ; ಶಿವ. ೨. ಪ್ರಸಿದ್ಧವಾದ ಕೀರ್ತಿಗೆ ಒಡೆಯನಾದವನು. ೧ , ೨ : ಅರಿಗೋತ್ರಭೇದಿ ವಿಬುಧೇಶ್ವರನಲ್ಲಂ ಧೃತಕಳಾಕಳಾಪಂ ದೋಷಾಕರನಲ್ಲಂ ವಿದಿತೋಮಾವರನಾತ್ತ ಭುಜಂಗನಲ್ಲನೀ ಭೂಪಾಳಂ (ಕವಿರಾ. ೩-೧೧೨). [ಸಂ.]

**ವಿದಿಶ** (ನಾ). = ವಿದಿಕ್ಕು : "ಅಂತರಾಳದಿಶಃ, ವಿದಿಶಃ, ಪ್ರದಿಶಃ—ಈ ೩ ಗೊಂಟುಗಳ ಪೆಸರ್" (ಹಲಾಯು. ೧೭-೧೦೨). [ಸಂ. ವಿದಿಶ್]

**ವಿದಿಶೆ** (ನಾ). = ವಿದಿಕ್ಕು : "ಪ್ರಾಚಿಯವಾಚಿ ಪ್ರತೀಚಿಯುದೀಚಿಯಾಶಾಚತುಷ್ಕಂ ಪರಿವಿಡಿಯಿಂದವಾ ಚ[ತುಃ]ಪ್ರದಿಶ ವಿದಿಶೆಗಳ್" (ವಸ್ತುಕೋ. ೯-೪೯). [ಸಂ. ವಿದಿಶ್]

**ವಿದೀರ್ಣ** (ಗು). ೧. ಸೀಳಿದ ; ಮುರಿದ ; ಭೇದಿಸಲ್ಪಟ್ಟ. ೨. ತೆರೆದ ; ಅಗಲವಾಗಿ ಬಿರಿದ : 'ವಿದೀರ್ಣಾನನ' ಪರಾ. ೩. (ಅಂತರಂಗಕ್ಕೆ ಸಂಬಂಧಿಸಿದಂತೆ) ನೊಂದ ; ಗಾಸಿಗೊಂಡ : ತಂದೆಯ ವಿದೀರ್ಣಹೃದಯದ ಬೇಡಿಕೆಯೆಲ್ಲವೂ ಆ ಒಂದೊಂದು ನುಡಿಯಲ್ಲೂ ಧ್ವನಿತವಾಗುತ್ತಿತ್ತು (ಹೂಸಕ್ಕಿ, ೪೪). (ನಾ). ೪. ಸೀಳಿದುದು ; ಭೇದಿಸಲ್ಪಟ್ಟುದು : ಕಲ್ಲಿದ್ದಲ ಗಣಿಯನ್ನು ವಿದ್ಯುತ್ತಿನ ಕಿಡಿ ಪ್ರವೇಶಿಸಿದುದಾದರೆ . . . ಭೂಗರ್ಭವು ನೂರು ಹೋಳಾಗಿ ವಿದೀರ್ಣವಾಗಿ ಬಿಡುತ್ತದೆ (ನಿಬಂಧ. I,೧೭). ೫. (ಅಂತರಂಗಕ್ಕೆ ಸಂಬಂಧಿಸಿದಂತೆ) ನೊಂದುದು; ಗಾಸಿಗೊಂಡುದು : ಅವನ ಮನಸ್ಸು ಅಧೀರವಾಗಿತ್ತು ; ಹೃದಯವು ವಿದೀರ್ಣವಾಗಿತ್ತು (ಸಮಜೀ. ೫೮೭) ; ತನ್ನ ಮಗನ ಮುಖದ ವಿಷಣ್ಣತೆ ನೆನೆನೆನೆದು ಅಪೂರ್ವನ ತಾಯಿಯ ಹೃದಯವೂ ವಿದೀರ್ಣವಾಗಿ ಹೋಗಿದೆ (ಇಪ್ಪ.ಕ. ೭೪). ೬. ಮನಸ್ಸಿಗೆ ಆಘಾತವಾದ ವ್ಯಕ್ತಿ : ವ್ಯಥೆಯಿಂದ ವಿದೀರ್ಣಳಾಗಿ ಹೋಗುವ ಅಸಹಾಯಹೆಣ್ಣಿನ ಹೃದಯದಂತೆ ಅವಳೆದೆ ಬಿರುಕು ಬಿಟ್ಟು ಹೋಗಿತ್ತು (ಅಲ್ಪವಿ. ೪) ; ರಾಜ ವಿದೀರ್ಣನಾಗಿ ಹೋದ (ವಂಶವೃ. ೩೦೦). [ಸಂ.]

**ವಿದೀರ್ಣಹೃದಯೆ** (ನಾ). ಮಾನಸಿಕವಾಗಿ ನೊಂದವಳು ; ದುಃಖಿನಿ : ನೀಮುಜ್ಜಯಿನಿಗೆ ಬಿಜಯಂಗೆಯ್ದಿರೆಂಬುದನಾಂ ಕೇಯೂರಕನ ಪೇೞ್ಕೆಯಿಂದಱಿದು ಭೋಂಕನೆ ವಿದೀರ್ಣಹೃದಯೆಯಾಗಿ (ಕಾದಂಉ. ೫೪೭). [ಸಂ. ವಿದೀರ್ಣಹೃದಯಾ]

**ವಿದೀರ್ಣಾನನ** (ನಾ). ೧. ಅಗಲವಾಗಿ ತೆರೆದ ಬಾಯಿ. ೨. ಅಗಲವಾಗಿ ತೆರೆದ ಬಾಯುಳ್ಳವನು : ಇಂತುದ್ವೃತ್ತರಾರೆಂಬಿನಂ ಗ್ರಸನಾಟೋಪದಿನೆಯ್ದಿದಂ ಹರಿಯನುತ್ಕರ್ಣಂ ವಿದೀರ್ಣಾನನಂ (ಜಗವಿ. ೫-೪೫). [ಸಂ.]

**ವಿದು$_1$** 'ಬಿದು$_1$' ನೋ.

**ವಿದು$_2$** (ನಾ). ೧. ಆನೆಯ ಕುಂಭಸ್ಥಳದ ಮಧ್ಯಭಾಗ : ಶುಂಡಾಳನಿಕಾಯಮಂ ವದನದಿಂದಿಱಿದೆತ್ತಿ ವಿದುಪ್ರದೇಶಮಂ ಸೀಳಿ ಬಿಸುಟ್ಟು ಸಂಹರಿಪ ಕಾಲನವೊಲ್ ತ್ರಿಜಗದ್ವಿಭೂಷಣವ್ಯಾಳಗಜೇಂದ್ರಮೈತರಲು (ಪುಣ್ಯಾಸ್ರ. ೨-೮). ೨. ನೀರಾನೆ. [ಸಂ.]

**ವಿದುರ** (ಗು). ೧. ತಿಳಿದ ; ಬಲ್ಲ ; ನುರಿತ. (ನಾ). ೨. ವಿದ್ವಾಂಸ ; ಪಂಡಿತ : "ಜ್ಞಾತಾ, ವಿದುರಃ, ವಿಂದುಃ – ೩ ತಿಳಿಯುವ ಸ್ವಭಾವವುಳ್ಳವನ ಪೆಸರುಗಳು" (ಸಿದ್ಧಾಂತಿ. ೩೩೧). ೩. ವಂಚಕ ; ಕಪಟಿ. ೪. ಮಹಾಭಾರತದ ಧೃತರಾಷ್ಟ್ರ ಹಾಗೂ ಪಾಂಡುವಿನ ತಮ್ಮ : ಆದರಂಬೆರಸು ಪೆತ್ತರಂದು ಧೃತರಾಷ್ಟ್ರ ವಿಖ್ಯಾತ ಪಾಂಡುರಾಜ ವಿದುರರ್ಕಳಂ ಕ್ರಮದೆ ಮೂವರುಂ ಮೂವರಂ (ಪಂಪಭಾ. ೧-೮೭); ತಿಳುಹಿದನು ವಿದುರನು ಮಹೀಪತಿತಿಲಕನನು ನಯನೀತಿಧರ್ಮಂಗಳ ಸುಸಂಗತಿಯಿಂದ ನೂಕಿದರಿವರು ಯಾಮಿನಿಯ (ಕುಮ್ಯಾಉ. ೩ ಸೂಚನೆ). [ಸಂ.]

**ವಿದುರ್ಮಣಿ** (ನಾ). [ಅಶ್ವಶಾ] ಕುದುರೆಯ ಕಿವಿಯ ಸಮೀಪದ ಒಂದು ಅಂಗಭಾಗ : ಕಿವಿಯ ಪೊಱಗಣ್ಗೆ ಬಿದುವೆಂಬ ಪೆಸರಕ್ಕುಂ ಬಿದುವಿನ ಸಮೀಪದೆಡೆಗೆ ವಿದುರ್ಮಣಿಯೆಂಬ ಪೆಸರಕ್ಕುಂ (ಅಶ್ವಶಾ. ೮೮-೭). [ಸಂ.?]

**ವಿದುಲ, ವಿದುಳ** (ನಾ). ಒಂದು ಬಗೆಯ ಜಲಸಸ್ಯ ; ಬೆತ್ತ : "ಪರಿವ್ಯಾಧಃ, ವಿದುಲಃ, ನಾದೇಯಿ, ಅಂಬುವೇತಸಃ – ೪ ನೀರುಹಬ್ಬೇಗಿಡ" (ಸಿದ್ಧಾಂತಿ. ೧೧೪). **ವಿದುಳ** : ಕತ್ತರಾಚು ಖೊಬರಿ ಉತುತ ಬೆಲ ವಿದುಳ ಬೂಸ ಮುಂತಾಗಿ (ಎಕ.VIII, ತೀರ್ಥಹ. ೭೩-೨೪; 1674). [ಸಂ.]

**ವಿದುಷಿ** (ನಾ). ಪಾಂಡಿತ್ಯವನ್ನು ಹೊಂದಿದವಳು ; ಪಂಡಿತೆ : ವಿಜಯನಗರದ ರಾಜಸ್ತ್ರೀ ಗಂಗಾದೇವಿ ಎಂತಹ ವಿದುಷಿ ? (ಭಾರದ.೪೮೯); ಪ್ರೌಢಕಾವ್ಯವನ್ನು ರಚಿಸಿದ ವಿದುಷಿಯರು ಈ ಕಾಲದಲ್ಲಿದ್ದಾರೆ (ಕರ್ನಾಕ. ೪೧). [ಸಂ. ವಿದುಷೀ]

**ವಿದುಳ** 'ವಿದುಲ' ನೋ.

**ವಿದೂರ** (ಗು). ೧. ಅತಿದೂರದ ; ಬಹುದೂರದಲ್ಲಿರುವ. ೨. ಪಡೆಯಲಸಾಧ್ಯವಾದ; ನಿಲುಕದ. ೩. ಇಲ್ಲವಾದ ; ರಹಿತ. (ನಾ). ೪. ಬಹಳ ದೂರ ; ಅತಿದೂರ. ೫. ಇಲ್ಲವಾದುದು ; ರಹಿತವಾದುದು : ಗುಣಯುಕ್ತಮುಂ ದೋಷವಿದೂರಮುಮಾಗೆ ಮೆಚ್ಚಿ ಕೈಕೊಳ್ವುದಿದಂ (ಶಮದ.೪). ೬. ಬಹಳ ದೂರದಲ್ಲಿರುವವನು : ನಿಖಿಳಗುಣಶೃಂಗಾರಿ ಕುಸುಮವಿಶಿಖವಿಕಾರವಿದೂರಂ (ಬಸಪು. ೩೨-೨). ೭. ನವರತ್ನಗಳಲ್ಲಿ ಒಂದಾದ ವೈಡೂರ್ಯವು ದೊರಕುವ ಬೆಟ್ಟ ಅಥವಾ ಒಂದು ಸ್ಥಳದ ಹೆಸರು. [ಸಂ.]

**ವಿದೂರಗತ** (ನಾ). ಬಿಟ್ಟುದು ; ಕಳೆದುದು : ಇದು ವಿದಿತ ವಿರುದ್ಧಾರ್ಥಕ್ಕುದಾಹೃತಂ ಹರಣಮಾತ್ರಮಿನ್ನಪ್ಪುವನುಂ ಸದಭಿಮತಕಾವ್ಯಪದವಿಧಿವಿದೂರಗತಮಾಗೆ ಪರಿಹರಿಕ್ಕೆ ಬುಧರ್ಕಳ್ (ಕವಿರಾ. ೧-೮೩). [ಸಂ.]

**ವಿದೂರಪಾತ** (ನಾ). ಅತಿದೂರದ ಎಸೆತ : ನಗವನೊಡ್ಡಿದರೊಂದೆ ಸರಳಲಿ ಹುಗಿಲುಗಳೆವ ವಿದೂರಪಾತದಿ ಗಗನಯಂತ್ರವನೆಸುವ ಜೋಕೆಯ ಜೋದವಿದ್ಯದಲಿ . . . ದಂತಿ ಶಿಕ್ಷೆಗೆ ಮಿಗಿಲು ಭಗದತ್ತಾದಿಗಳೆಗೆಂದುದು ಕುಮಾರಕರ (ಕುಮ್ಯಾಆ. ೭-೩). [ಸಂ.]

**ವಿದೂಷಕ** (ಗು). ೧. ಕಲುಷಿತಗೊಳಿಸುವ ; ಮಲಿನಗೊಳಿಸುವ. ೨. ತಪ್ಪು ಕಂಡುಹಿಡಿಯುವ ; ಹುಳುಕು ಹುಡುಕುವ. ೩. ನಿಂದಿಸುವ ; ದೂಷಿಸುವ. ೪. ಹಾಸ್ಯದ ; ತಮಾಷೆಯ : ನೀನು ಮದನವ್ರತವಾಗಿ ರತಿ ರಾಗಿಣಿಯರತ್ತ ಬಿರ್ದುಗೊಂಡಾಡುವ ನಸೆಯ ದಾಹದ ದೆಖ್ಖಾಳವು ಕಾಲರುದ್ರನ ಫಾಲಾಕ್ಷಿಯಲ್ಲಿಯೂ

ವಿನೋದಬಾಷ್ಪವನ್ನೊರೆಯಿಸುವಂತಹ ವಿದೂಷಕಲೀಲೆಯಾಗಿದೆ (ಮಂತ್ರಶ. ೭೧-೯). (ನಾ). ೫. ಹೊಲೆಗೊಳಿಸುವವನು ; ಭ್ರಷ್ಟಗೊಳಿಸುವವನು : ಹೀನಸತ್ವರು ಸತ್ಯಧರ್ಮವಿಹೀನರರ್ಥಪರಾಯಣರು ಕುಜನಾನುರಕ್ತರು ವರ್ಣಧರ್ಮಾಶ್ರಮ ವಿದೂಷಕರು . . . ಕಲಿಯುಗದ ಮನುಜರು (ಕುವ್ಯಾ.ಅ. ೧೦-೩೪). ೬. ದೋಷಾರೋಪಣೆ ಮಾಡುವವನು ; ನಿಂದಕ ; ದೂಷಕ. ೭. ಉಲ್ಲಾಸಿ; ವಿನೋದಶೀಲ. ೮. ಹಾಸ್ಯಮಾಡುವವನು ; ಹಾಸ್ಯಗಾರ. ೯. ವಿಷಯಲಂಪಟ ; ಕಾಮುಕ. ೧೦. [ಕಾವ್ಯಮೀ] ಶೃಂಗಾರ ಮತ್ತು ವಿನೋದದ ಕ್ರೀಡೆಗಳ ವಿಷಯಗಳಿಗಾಗಿ ನಾಯಕನಿಗೆ ಆಪ್ತಸಹಾಯಕರಾಗಿ ಇರುವ ನಾಲ್ಕು ಮಂದಿ ಭೋಗಸಖರಲ್ಲಿ ಒಬ್ಬ : ಆಗಳ್ ತನ್ನೊಡನೆ ತೊಟಲ್ವ ನಾಗರಕ ವಿಟ ವಿದೂಷಕ ಪೀಠಮರ್ದರ್ಕರ್ಳನಿರಲ್ವೇಳ್ದು (ಪಂಪಭಾ. ೧-೧೧೦ ವ) ; ಬಚ್ಚನಾಲಗೆಯ ಬೀಳೆಂದು ಹಾಸಂಗಿಯಂ ಪಚ್ಚೆಯ ವಿದೂಷಕನುರುಳ್ಚಿದಂ ಬಾಲೆಯರ ಮೆಚ್ಚಿಸುವ ಕಟಕಿವಾತುಗಳ ಜಾಣ್ಮೆಗಳಿಂದೆ ಪಗಡೆಯಾಡುವ ನೆವದೊಳು (ಜೈಮಿಭಾ. ೬-೩೧). [ಸಂ.]

**ವಿದೂಷಕತನ** (ನಾ). ಹಾಸ್ಯ ; ತಮಾಷೆ : ವಿದೂಷಕತನದಿಂದ ಇಲ್ಲವೆ ವಿಚಿತ್ರವರ್ಣನೆಯಿಂದ ಮಕ್ಕಳನ್ನು ನಗಿಸಬಹುದು. ಆದರೆ ಹೃದಯದಿಂದ ಬರುವ ನಗೆಯಲ್ಲ ಇದು (ಕಥಕ. ೧೬). [ವಿದೂಷಕ + - ತನ]

**ವಿದೇಶ** (ನಾ). ತನ್ನದಲ್ಲದ ದೇಶ ; ಹೊರನಾಡು ; ಪರದೇಶ : ದೇಶವಿದೇಶಗಳವರ ವ್ಯಾಪಾರ ವ್ಯವಹಾರಗಳಲ್ಲಿ ಯಾವ ಪಕ್ಷದವರಿಗೂ ಅನ್ಯಾಯವಾಗದಂತೆ . . . ವ್ಯವಹಾರಧರ್ಮ, ಪರಸ್ಪರವಿಶ್ವಾಸ ಇವು ಸ್ಥಾಪಿತವಾಗಬೇಕು (ಹಣಪ್ರ. ೮೧). [ಸಂ.]

**ವಿದೇಶಭ್ರಮಣ** (ನಾ). ಪರದೇಶದಲ್ಲಿ ಮಾಡುವ ಸಂಚಾರ ,—ತಿರುಗಾಟ : ಅವಗಡವನೇವೇಳುವೆನು ಪಾರ್ಥಂಗೆ ಬಂದುದಕಾಲಗತಿಯ್ಯೆಸಲೆ ವಿದೇಶಭ್ರಮಣವಾಯ್ತು (ಕುವ್ಯಾ.ಅ. ೧೯-೧). [ಸಂ.]

**ವಿದೇಶವ್ಯವಹಾರ** (ನಾ). ಒಂದು ದೇಶವು ಪರದೇಶಗಳೊಂದಿಗೆ ನಡೆಸುವ ಕಾರ್ಯಭಾರ : ರಾಷ್ಟ್ರದ ವಿದೇಶವ್ಯವಹಾರ ನೀತಿ, ಸಾರ್ವಜನಿಕ ಆಡಳಿತ, ರಕ್ಷಣಾಸಿದ್ಧತೆ - ಇತ್ಯಾದಿ ಹಲವಾರು ರೀತಿನೀತಿಗಳು ಪಕ್ಷಗಳಿಂದಲೇ ರೂಪಿಸಲ್ಪಟ್ಟು ಕಾರ್ಯಗತ ಮಾಡಲ್ಪಟ್ಟುವು (ರಾಜಪ. ೨). [ಸಂ.]

**ವಿದೇಶಾಂಗ** (ಗು). ನೆರೆಹೊರೆಯ ಮತ್ತು ದೂರದ ರಾಷ್ಟ್ರಗಳಿಗೆ ಸಂಬಂಧಿಸಿದ: ಲೋಕಸಭೆಯಲ್ಲಿ ವಿದೇಶಾಂಗನೀತಿಯನ್ನು ಕುರಿತು ದೀರ್ಘಚರ್ಚೆ ನಡೆಯಿತು (ರೂಢಿ). [ಸಂ.]

**ವಿದೇಶಿ** (ಗು). ೧. ಹೊರನಾಡಿಗೆ ಸಂಬಂಧಿಸಿದ ; ಪರದೇಶಕ್ಕೆ ಸೇರಿದ : ಚುರುಕಾಗಿ ವಿದೇಶಿವ್ಯಾಪಾರ ನಡೆಯುತ್ತಿರುವ ಪ್ರದೇಶಗಳಲ್ಲೆಲ್ಲ ಹಲವು ಕಟ್ಟುಪಾಡುಗಳೂ ಸುವಿಧಾನಗಳೂ ಏರ್ಪಟ್ಟು ಆ ಕೆಲಸಕ್ಕೆ ಸಹಕಾರಿಯಾಗುತ್ತವೆ (ಹಣಪ್ರ. ೮೪). (ನಾ). ೨. ಹೊರದೇಶದವನು ; ಪರದೇಶಿ : ವಿದೇಶಿಯರು ಕೊಟ್ಟ ಸಾಲಗಳು (ಹಣಪ್ರ. ೨೨೭). [ಸಂ. ವಿದೇಶಿನ್]

**ವಿದೇಶಿಕಾಱ** (ನಾ). ವಿಶೇಷವಾದ ಸೊಬಗನ್ನುಂಟುಮಾಡುವವನು ; ರಸಿಕ : ಜಗಕೆ ಜಿನೇಂದ್ರರುಕ್ತಿಯ ಸರಸ್ವತಿಯಾಕೆಗೆ ರಮ್ಯರೂಪು ಚಿತ್ತಗುಣವಿಳಾಸಮಿಲ್ಲೆನಲವೇಡಿ ವನುತ್ತಮಕಾವ್ಯದೊಳ್ . . . ಬಗೆ ಬಗೆ ಮಾತು ಮಾತು ಸತಿ ಭಾರತಿ ಕೊಳ್ಗೆ ವಿದೇಶಿಕಾಱನೊಳ್ (ಅರ್ಧನೇ. ೧-೩೮). [(ಸಂ.ವಿ-) + < ದೇಸಿಗಾಱ]

**ವಿದೇಶಿವಿನಿಮಯ** (ನಾ). ಒಂದು ದೇಶಕ್ಕೂ ಪರದೇಶಗಳಿಗೂ ಸಂಬಂಧಿಸಿದ ಕೊಡುಕೊಳ್ಳುವ ವ್ಯವಹಾರ : ವಿದೇಶಿವಿನಿಮಯ, ಬಡ್ಡಿಯ ದರಗಳು ಇವುಗಳನ್ನು ಸ್ತಿಮಿತದಲ್ಲಿ ನಡಸುವುದಕ್ಕೆ . . . ಕಳವಳ ಪಡಬೇಕಾಗಿಲ್ಲ (ಹಣಪ್ರ. ೩೧೪). [ಸಂ.]

**ವಿದೇಶೀಯ** (ಗು). ೧. = ವಿದೇಶಿ ೧ : "ವಿದೇಶೀಯ ರಾಜ್ಯ" ಎಂದರೆ ಭಾರತವಲ್ಲದ ಇತರ ಯಾವುದೇ ರಾಜ್ಯ ಎಂದು ಅರ್ಥ (ಭಾಧಾನ. ೨೨೩). (ನಾ). ೨. = ವಿದೇಶಿ ೨ : ವಿದೇಶೀಯರು ನಮ್ಮ ಸಂಪ್ರದಾಯಗಳನ್ನು ಕಲಿಯ ಹೋದರೆ ಹೀಗೆಯೇ ನಗೆಗೀಡಾಗಬಹುದು (ಸಮಜೀ. ೫೬೩). [ಸಂ.]

**ವಿದೇಹ** (ಗು). ೧. ಶರೀರವಿಲ್ಲದ ; ಅಮೂರ್ತ. ೨. ಗತಿಸಿದ ; ದೇಹತ್ಯಾಗಮಾಡಿದ. (ನಾ). ೩. ಶರೀರವಿಲ್ಲದವನು ; ಅನಂಗ ; ಕಾಮ. ೪. ಶರೀರವನ್ನು ಕಳೆದುಕೊಂಡವನು ; ದೇಹತ್ಯಾಗ ಮಾಡಿದವನು : ಉತ್ತಮತಪಂಗಳಿಂದತ್ಯುತ್ತಮದೇಹರ್ ವಿದೇಹರಪ್ಪುದಱಿಂ ಮೆಯ್ವೆತ್ತನ್ವರ್ಥತೆಯಂ ತಾಳ್ದಿತ್ತು ವಿದೇಹಂ ವಿದೇಹಮೆಂಬೀ ಪೆಸರಂ (ಆದಿಪು. ೧-೫೩). ೫. ಬಿಹಾರದಲ್ಲಿರುವ ಒಂದು ನಾಡು; ಮಿಥಿಲೆ; IP ಈಗಿನ ದರ್ಭಂಗ : ಕಾಬೇರೀ ಕಪಿನೀ ಶ್ರೀನದೀಭಿರಲಂಕೃತಸ್ಯ ವಿದೇಹ ಇವ ಬಭ್ರಾಜಮಾನಸ್ಯ ಅಧಿಪತಿಃ (ಎಕ. IV (R), ಎಳಂದೂ. ೧೬೭-೧೩; ಪು. 550) ; ವರವಿದೇಹನೃಪಾಲನಾ ನಿಮಿಧರಣಿಪಂಗುದುಭವಿಸಿದುದ ವಿಸ್ತರಿಸಿದನು (ತೊರರಾ. ೧-೧೬-೨೧). ೬. (ವಿಶೇಷವಾಗಿ ಜನಕರಾಜನು ಸೇರಿದಂತೆ) ವಿದೇಹದ ದೊರೆ,—ರಾಜ : ಆ ವಿದೇಹಪರಂಪರೆಯ ನೃಪರ ಚರಿತವನು ಕೊಂಡಾಡಿ ಜನಕನ ಧಾರ್ಮಿಕತನವನೊರೆದನು ಮುನಿ ವಸಿಷ್ಠಂಗೆ (ತೊರರಾ. ೧-೧೬-೨೧). ೭. [ಜೈನ] ಜಂಬೂದ್ವೀಪದಲ್ಲಿರುವ ಏಳು ವಿಭಾಗಗಳಲ್ಲಿ ನಾಲ್ಕನೆಯದು ; IP ನಿಷಧ ಮತ್ತು ನೀಲಪರ್ವತಗಳ ಹಾಗೂ ಪೂರ್ವಪಶ್ಚಿಮಸಮುದ್ರಗಳ ನಡುವಿನ ಕ್ಷೇತ್ರ : ಆ ತಿರ್ಯಗ್‌ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ ಹೈಮವತ ಹರಿವರ್ಷ ವಿದೇಹ ರಮ್ಯಕ ಹೈರಣ್ಯವತ್ಯೆರಾವತಂಗಳೆಂಬೇೞುಂ ಜನಪದಂಗಳಿಂ . . . ಎಸೆದು (ಆದಿಪು. ೧-೪೮ ವ) ; ಇಂತಿದೆ ನೆಲೆಯೆನಗೆಂದು ಪದಾಂತರದಿಂದತನು ತನ್ನ ಪೆಸರನದರ್ಕಂ ಸಂತಸದಿನಿಟ್ಟನೆನೆ ಚೆಲ್ವಂ ತಳೆದ ವಿದೇಹನಾಮಮಾ ಮಹಿಗೆಸೆಗುಂ (ಚಂದ್ರಪು. ೧-೭೯). [ಸಂ.]

**ವಿದೇಹಕೈವಲ್ಯ** (ನಾ). ದೇಹತ್ಯಾಗದ ನಂತರ ಸಿಗುವ ಮೋಕ್ಷ ,—ಮುಕ್ತಿ : ಜಗವಿದಾನೆಂಬ ಮಾತಿನ ಬಗೆಯನುಳಿದ ವಿದೇಹಕೈವಲ್ಯವದು ಫಲಿಸುವುದ್ಯೆಸೆ (ಗಗತಾ. ೨೨-೧೦೨) ; ಆ ಬ್ರಹ್ಮನೂ ಆ ಬ್ರಹ್ಮಲೋಕಕ್ಕೆ ಹೋಗಿ ಸೇರಿರುವ ಇತರ ಜೀವಾತ್ಮರೂ ಬ್ರಹ್ಮಸಾಕ್ಷಾತ್ಕಾರದಿಂದ ವಿದೇಹಕೈವಲ್ಯವೆಂಬ ಪರಮಮೋಕ್ಷವನ್ನು ಹೊಂದುವರು (ಓಂದಸಾ. ೧೯೮). [ಸಂ.]

**ವಿದೇಹಿ** (ನಾ). ದೇಹವನ್ನು ಕಳೆದುಕೊಂಡವನು ; ದೇಹತ್ಯಾಗ ಮಾಡಿದವನು : ಧರ್ಮ, ಅರ್ಥ, ಕಾಮ, ಮೋಕ್ಷ ಎನ್ನುವ ಚತುರ್ವಿಧ ಪುರುಷಾರ್ಥಗಳಲ್ಲಿ ಮುಕ್ತನು ವಿದೇಹಿಯಾದಾಗ ಮುಕ್ತಿ ಪಡೆಯುತ್ತಾನೆ (ತತ್ತ್ವಪ್ರಾ. ೩೩೮). [ಸಂ. ವಿದೇಹಿನ್]

**ವಿದ್ದಿ** 'ಬಡ್ಡಿ$_{2}$' ನೋ.

**ವಿದ್ದೆ** 'ಬಿಜ್ಜೆ' ನೋ.

**ವಿದ್ದೆಪಯ್ಯ** (ನಾ). ಒಬ್ಬಾತನ ಹೆಸರು : ಶ್ರೀವಿದ್ದೆಪಯ್ಯ (ಎಕ. II, ೪೨; ಪು. 1000). [ವಿದ್ದೆಪ ? + ಅಯ್ಯ$_{1}$]

**ವಿದ್ದೆರಾಶಿ** (ನಾ). ಒಬ್ಬಾತನ ಹೆಸರು : ಅಕ್ಕರಿಗಂಗೆ ಬೇಡಿದ ನರಂಗೆ ತಪಸ್ವಿಗೆ ದೇಸಿಗಂಗೆ ಮೆಚ್ಚಿದೊಡೋತೊಡೆ ಕೂರ್ತ್ತೊಡೀಗಳುಮ್ಮಿಕ್ಕೆ[ದರ್ಗಿ]ೀವೆನೆಂಬುದಿದು [ವೀ]ವ ಗುಣಂ ಸಲೆ ವಿದ್ದೆರಾಶಿಯ (ಸೌಇಇ. VIII, ೫೩ :-೬ ; ?). [?]

**ವಿದ್ಧ** (ಗು). ೧. ಚುಚ್ಚಿದ ; ತೂತುಕೊರೆದ ; ರಂಧ್ರಮಾಡಿದ : ಮುದ್ರಸಹಜಾತವಿದ್ಧಚ್ಛಿದ್ರಾನ್ವಿತ ಕರ್ಣಯುಗಳಪಾಳಿಗಳೊಳ್ ಸಂವಿದ್ರುತರಜಂಗೆ ಹರಿ ವಿಲಸದ್ರುಚಿಮದ್ವಜ್ರಕುಂಡಲಂಗಳನಿಟ್ಟಂ (ಶಾಂತಿಪು. ೧೦-೫೯). ೨. ಗಾಯಗೊಂಡ. ೩. ಹೊಡೆದ ; ಪ್ರಹರಿಸಿದ. ೪. ಎಸೆದ ; ಬೀರಿದ. ೫. ಎದುರಿಸಿದ ; ಅಡ್ಡಿಪಡಿಸಿದ. ೬. ಹೋಲುವ ; ಸಾದೃಶ್ಯವಿರುವ. ೭. ಪರಸ್ಪರ ಸೇರಿದ, —ಕೂಡಿದ. ೮. ತಿಳಿದ ; ಬಲ್ಲ ; ವಿದ್ವತ್ತಿನಿಂದ ಕೂಡಿದ. (ನಾ). ೯. ತೂತಾದುದು ; ರಂಧ್ರ ಕೊರೆದುದು : ವಜ್ರದೆಲ್ಗಟ್ಟುಂ ವಜ್ರದ ಸುತ್ತುಂ ವಜ್ರನಾರಾಚವಿದ್ಧಮುಮಪ್ಪಾದಿಮಪ್ಪ ವಜ್ರರ್ಷಭನಾರಾಚಸಂಹನನಮುಮಂ . . . ಮಾಟ್ಕುಂ (ತತ್ತ್ವಪ್ರ. ೨೯೬). ೧೦. ಹಾವಿನ ಕಡಿತದ ಒಂದು ರೀತಿ ; ಎರಡು ಹಲ್ಲನ್ನು ಊರಿ ರಂಧ್ರ ಕೊರೆದಂತೆ ಕಚ್ಚುವಿಕೆ : ಆ ಸರ್ಪದಂಶ ಅವಲುಪ್ತವೆಂದು ದಷ್ಟವೆಂದು ವಿದ್ಧವೆಂದು ಖಂಡಿತವೆಂದು ನಾಲ್ಕು ತೆಱ . . . ಎರಡು ಹಲ್ಲು ನಟ್ಟು ಗಾಯವಾದುದು ವಿದ್ಧ ಎನಿಸಿಕೊಂಬುದು (ವೈದ್ಯಸಾ. II, ೧೮೫). 'ಅವಲುಪ್ತ' ಪರಾ. ೧೧. ಹೊಡೆತ ; ಏಟು ; ಪ್ರಹಾರ : ಸಂಚಳೋದಾರಹಾರಮಂ ತಳದೊಳೊತ್ತುವೊಂದು ನೆವದಿಂದನಂಗಾಸ್ತ್ರವಿದ್ಧಮಂ ಪಡೆದು ಗೂಡುವಾಯ್ದೆರ್ದೆಯನೊತ್ತಿ ನಿಷ್ಕಂಪ

ಪಕ್ಷಮಾಂತು ತರಳಾಕ್ಷಿ ವಿಸ್ಮಯದೆ ಚಕ್ರಿಯಂ ನೋಡಿದಳ್ (ಆದಿಪು. ೧೧-೨೦). **೧೨. ಗಾಯಗೊಂಡವನು ; ಹೊಡೆತವನ್ನು ತಿಂದವನು** : ಬಾಣ ಬಿಟ್ಟನು ವ್ಯಾಧ ವೈರನಿಲಯನಿಷಾದ ಬಿಟ್ಟನೊ ವಿದ್ಧಕ್ರೌಂಚನಿಕೊ—ಬಿದ್ದ ಬಿದ್ದ (ಕ್ರೌಂಚಧ್ವ. ೩೨-೨೩). **೧೩. ಚಿತ್ರಿಸುವಿಕೆ ; ಚಿತ್ರಣ** : 'ಪರವಿದ್ಧ', 'ವಿದ್ಧಪದ್ಧತಿ' ಪರಾ. **೧೪. ಸಾದೃಶ್ಯಮೂಲವಾದ ಚಿತ್ರ** : ಇದು ದಲ್ ನೋಡ ಮನುಷ್ಯ ವಿದ್ಧಮಣಮಲ್ತೀ ಗಂಡರೂಪಾವುದಿಂತಿದಱೊಳ್ ತಳ್ತಿಸದಿರ್ದ ಪೆಣ್ ಸುರವಧೂಬಿಂಬಂ (ಆದಿಪು. ೩-೮೭); ಮನೋಜಾತನನಂಗನಾಗಿ ಮನದಿಂದಂ ಮಾಡಿದಂ ಪೆಣ್ಣ ವಿದ್ಧಮನೆಂಬಂತುಟು ಗಾಡಿ ರೂಢಿಯು ಜಯಾಶ್ಯಾಮಾಮಹಾದೇವಿಯಾ (ಅನಂಪು. ೨-೧೩). 'ವಿದ್ಧಂಬರೆ' ಪರಾ. **೧೫. [ನಾಟ್ಯ] ನರ್ತನದ ಒಂದು ಭಂಗಿ; P** "ಕಾಲುಗಳನ್ನು ಸ್ವಸ್ತಿಕದಂತಿರಿಸಿ ಒಂದು ಕಾಲನ್ನು ಕುಂಚಿತ ಮಾಡಿ ತೂಗಿಸಿ ಮುಂದಕ್ಕೆ ನೀಡುವುದು" (ಲಾಸ್ಯರಂ. ೩೨೫ ಗದ್ಯಾನುವಾದ) : ವಿದ್ಯುದ್ಭ್ರಾಂತ . . . ವಿದ್ಧ ಪ್ರಾವೃತ್ತ ಉಲ್ಲೋಲ ಈ ಹತ್ತೊಂಬತ್ತು ದೇಶೀಯ ಸಂಬಂಧದ ಆಕಾಶಚಾರಿಗಳು (ಲಾಸ್ಯರಂ. ೬-೧೭ ವ). [ಸಂ.]

**ವಿದ್ಧಂಬರೆ (ಕ್ರಿ). ಚಿತ್ರವನ್ನು ಬರೆ; ಚಿತ್ರಿಸು** : ಬೀಣೆ ವಾಜಿಪ ವಿದ್ಧಂಬರೆವ ಪರಚಕ್ರಮಿಕ್ಕುವ ಪರಿಹಾಸದೊಳಿರ್ಪ ಬಿನದಮುವರ್ಗಳ ಬಿನದಂ (ಅಜಿಪು. ೩-೮).

[ವಿದ್ಧ + ಬರೆ₁]

**ವಿದ್ಧಕ (ನಾ). [ಕಾಮಶಾ] ಆಲಿಂಗನದ ಪ್ರಕಾರಗಳಲ್ಲಿ ಒಂದು** : ಸಂತಸದಿಂ ಕುಳ್ಳಿರ್ದುಮದೆಂತಾದೊಡಮಿರ್ಪ ಗಾಡಿಕಾಱನನೊಲವಿಂ ಪಿಂತಮರ್ದಪ್ಪಲ್ ಮಗುಳ್ದುವನಂತೊಡರ್ದೊಡನಪ್ಪಿದಪ್ಪು ವಿದ್ಧಕಮೆನಿಕುಂ (ಮನ್ಮವಿ. ೧೧-೫). [ಸಂ.]

**ವಿದ್ಧಕರ್ಣ (ಗು). ೧. ತೂತುಮಾಡಿದ ಕಿವಿಗಳುಳ್ಳ. (ನಾ). ೨. ಒಂದು ಬಗೆಯ ಸಸ್ಯ ; ಅಗುಳುಶುಂಠಿ**: "ಪಾಠಾ, ಅಂಬಷ್ಠಾ, ವಿದ್ಧಕರ್ಣೀ . . . ವನತಿಕ್ತಕಾ - ೧೦ ಅಗರುಶೊಂಠಿ ಹೆಸರು" (ಸಿದ್ಧಾಂತಿ. ೧೩೧). [ಸಂ. ವಿದ್ಧಕರ್ಣೀ]

**ವಿದ್ಧಕಾಮಾಲೆ (ನಾ). ಕಾಮಾಲೆರೋಗದಲ್ಲಿ ಒಂದು ಬಗೆ** : ದ್ರಾಕ್ಷೆಹಣ್ಣು ಕೊತ್ತಂಬರಿ ಯಷ್ಟಿಮಧುಕ ಏಲಕ್ಕಿ ಶುಂಠಿ ಇವನ್ನು ಸಮಾನಂಗೊಂಡು ಚೂರ್ಣವಂ ಮಾಡಿ ಸಕ್ಕರೆ ಬೆರಸಿ ದಿನ ೧ ಕ್ಕೆ ೬ ತೂಕವ ತೆಗೆದುಕೊಳ್ಳಲು ವಿದ್ಧಕಾಮಾಲೆ ಮಾಣ್ಗುಂ (ವಿವೈವಿ. ೧೩೦). [ವಿದ್ಧ? + ಕಾಮಾಲೆ]

**ವಿದ್ಧಪದ್ಧತಿ (ನಾ). ಚಿತ್ರವನ್ನು ಬರೆಯುವ ರೀತಿ,–ಪ್ರಕಾರ** : ಶ್ರುತಿವಿದ್ಧಮಾತ್ಮವಿದ್ಧಂ ಪರವಿದ್ಧಮೆಂಬ ವಿದ್ಧಪದ್ಧತಿಯುಮಂ . . . ಪರಿಭಾವಿಸಿ ನೋಡಿ (ಮಲ್ಲಿಪು. ೫-೪೨) ; ಶ್ರುತವಿದ್ಧಮಾತ್ಮವಿದ್ಧಂ ಪರವಿದ್ಧಮೆಂಬ ವಿದ್ಧಪದ್ಧತಿಯೊಳಂ . . . ಅಳವಡೆ (ಚಂದ್ರಪ್ರ. ೧೫-೭೦ ವ). [ಸಂ.]

**ವಿದ್ಯ (ನಾ). ೧. ತಿಳಿವಳಿಕೆ ; ಪಾಂಡಿತ್ಯ ; ಪರಿಣತಿ** : ಸರಿಯೇ ವಿದ್ಯಕೆ ಬಂಧು ಮಾರನಿದಿರೊಳ್ ಬಿಲ್ಲಾಳ್ (ಸೋಮೇಶ. ೬); ಕಟ್ಯಾಳುತನವಾಭರಣವವನೀಪಾಲಸುತರಿಗೆ ವಿದ್ಯವೇ ವಿಪ್ರರಿಗಲಂಕಾರ (ಕುಮಾದ್ರೋ. ೫-೩೧). **೨. ಓದು ; ಶಿಕ್ಷಣ ; ಕಲಿಕೆ** : ವಿದ್ಯವೇ ತಾಯ್ತಂದೆ ಬುದ್ಧಿಯೇ ಸೋದರರನು (ಸರ್ವಜ್ಞ. ೧೩೨೨) ; ಇವನು ತನ್ನ ಮಗನಿಗೆ ವಿದ್ಯವನ್ನು ಕಲಿಸಿದನು (ನೀತಿಚಿಂ . IV , ೧೪). [ಸಂ.]

**ವಿದ್ಯಗೂಡು (ನಾ). ವಿದ್ಯೆಯ ನೆಲೆ ; ಜ್ಞಾನದ ಆಶ್ರಯ** : ಶಬ್ದಶಾಸ್ತ್ರತರ್ಕಾಗಮಂಗಳ ಹೇಳಿ ಕೇಳಿ ಕಲಿತುಲಿವವರೆಲ್ಲರು ವಿದ್ಯ[ಪಾಠಾಂ. ದ್ಯೆ]ಗೂಡಾದರಲ್ಲದೆ ಲಿಂಗಗೂಡಾದುದಿಲ್ಲ ನೋಡಯ್ಯಾ (ಆದವ. ಮು. ೮೬-೧೪೧). [ವಿದ್ಯ + ಗೂಡು]

**ವಿದ್ಯಮಾನ (ಗು). ೧. ಅಸ್ತಿತ್ವದಲ್ಲಿರುವ ; ವಾಸ್ತವವಾಗಿ ಇರುವ. ೨. ಸದ್ಯದ ; ಪ್ರಸ್ತುತ. ೩. ಯಥಾರ್ಥವಾದ ; ಸಹಜವಾದ ; ನೈಜ. ೪. ಒಬ್ಬನ ಸ್ವಾಧೀನದಲ್ಲಿರುವ ,–ವಶದಲ್ಲಿರುವ. (ನಾ). ೫. ವಸ್ತುಸ್ಥಿತಿ; ವಾಸ್ತವ ಸಂಗತಿ** : ಅರಿಂದಮನು . . . ಅಲ್ಲಿನ ವಿದ್ಯಮಾನಗಳನ್ನು ಪರಿಕಿಸಲಾರಂಭಿಸಿದನು (ಪಿಶಾಪ. ೧೦೦); ರಾಜರಾಯರು . . . ಪ್ರತಿತಾಲ್ಲೂಕಿಗೂ ಹೋಗಿ ಅಲ್ಲಿಯ ವಿದ್ಯಮಾನಗಳನ್ನೆಲ್ಲಾ ಸ್ವತಃ ತಿಳಿಯುವರು (ಇಬದು. ೨೩). **೬. ವಿಷಯ ; ಸಂಗತಿ** : ಲಿಂಗರಾಜೇಂದ್ರಒಡೆಯರ ದಿವಸ ಪರಿಯಂತ ಆದ ವಿದ್ಯಮಾನ ಬರೆದ ಸಾಧನಗಳು ಉಳಿದು ಇದ್ದದರಿಂದ . . . ಬರೆಸಿದ ಕ್ರಮವೆಂತೆಂದರೆ (ರಾಜೇಂದ್ರ. ೧) ; ರಾಮರಾಯನು . . . ಮೈಸೂರಿನ ವಿದ್ಯಮಾನಗಳನ್ನೆಲ್ಲಾ ಯಥೋಚಿತವಾಗಿ ಅರಿಕೆ ಮಾಡಿದನು (ಶ್ರೀರಾಯ. ೧೯೦). [ಸಂ.]

**ವಿದ್ಯಾಇಲಾಖೆ (ನಾ). (ಒಂದು ನಾಡಿನ) ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ವ್ಯವಹಾರಗಳನ್ನು ನೋಡಿಕೊಳ್ಳಲು ಸರ್ಕಾರದಿಂದ ನೇಮಕಗೊಂಡ ವಿಭಾಗ ; ಶಿಕ್ಷಣಶಾಖೆ** : ಹೆಂಡತಿಗೆ ವಿದ್ಯಾಇಲಾಖೆಯಲ್ಲಿ ಉನ್ನತ ಅಧಿಕಾರವಿತ್ತು (ನಾಡಿಗೇ. ೨೯). [ (ಸಂ. ವಿದ್ಯಾ) + ಇಲಾಖೆ]

**ವಿದ್ಯಾಕಾಂಕ್ಷೆ (ನಾ). ಪಾಂಡಿತ್ಯವನ್ನು ಪಡೆಯಬೇಕೆಂಬ ಉತ್ಕಟೇಚ್ಛೆ** : ಆನೆತ್ತ . . . ಈ ಮುನೀಂದ್ರೋತ್ತಮಂ ತಾನೆತ್ತಿರ್ದೆಡೆವೇಟ್ಪುದೆತ್ತನಗೆ ವಿದ್ಯಾಕಾಂಕ್ಷೆಯೆತ್ತ (ಸುಕುಮಾ. ೩-೪೨). [ಸಂ. ವಿದ್ಯಾಕಾಂಕ್ಷಾ]

**ವಿದ್ಯಾಕೇಂದ್ರ (ನಾ). ವಿದ್ಯೆಯನ್ನು ಕಲಿಸುವ (ಶಾಲೆ, ಕಾಲೇಜು ಮುಂತಾದ)ಸ್ಥಳ ; ವಿದ್ಯಾಸಂಸ್ಥೆ** : ಈ ಶೈವಗುರುಗಳು ರಾಜಮಹಾರಾಜರಿಂದ ಪೂಜಿತರಾಗಿದ್ದರು. ಇವರ ಮಠಗಳು ದೇವಸ್ಥಾನಗಳೂ ಹೌದು ವಿದ್ಯಾಕೇಂದ್ರಗಳೂ ಹೌದು (ಶೂನ್ಯಕು. ೧); ದೇವಸ್ಥಾನವು ವಿದ್ಯಾಕೇಂದ್ರವಾಗಿ ಪರಿಣಮಿಸಿದ್ದು ಬಹುಶಃ ಎಂಟು ಅಥವಾ ಒಂಬತ್ತನೇ ಶತಮಾನಗಳ ಬಳಿಕ (ಕಶಾಅ. ೨೧೭). [ಸಂ.]

**ವಿದ್ಯಾಗಣಪತಿ (ನಾ). ವಿದ್ಯೆಯ ಅಭಿಮಾನಿದೇವತೆ ; ಗಣಪತಿ** : ಆ ಯುವಕ ಸಂಘವು ವಿದ್ಯಾಗಣಪತಿಯ ಉತ್ಸವವನ್ನು ವಿಜೃಂಭಣೆಯಿಂದ ಆಚರಿಸಿತು (ರೂಢಿ). [ಸಂ.]

**ವಿದ್ಯಾಗರ್ವ (ನಾ). ವಿದ್ವತ್ತಿನಿಂದ ಬಂದ ಸೊಕ್ಕು ,–ಅಹಂಕಾರ** : ಮತಿಸಾಗರಮುನಿಪತಿಯೊಳ್ ಬಾದಗೆಯ್ದಾತ್ಮೀಯವಿದ್ಯಾಗರ್ವಪರ್ವತಮವರ ವಚೋವಜ್ರನಿರ್ಘಾತದಿಂ ನುಚ್ಚುನುಱಿಯಾಗಿ ಪೋದೊಡೆ (ಆದಿಪು. ೩-೭೫ ವ) ; ತನ್ನ ಮೈದುನನೈಶ್ವರ್ಯಗರ್ವದೊಳಂ ವಿದ್ಯಾಗರ್ವದೊಳಂ ನಿಮ್ಮ ಮಾವನಂ ನೀಂ ನಿರಾಕರಿಸಿ ನುಡಿದೊಡೆ (ಸುಕುಮಾ. ೫-೭ ವ). [ಸಂ.]

**ವಿದ್ಯಾಗುರು (ನಾ). ವಿದ್ಯೆಯನ್ನು ಕಲಿಸುವವನು ; ಉಪಾಧ್ಯಾಯ** : ಅವಗತ ತತ್ವಂಗೆ ಗುರುಗೆ ವಿದ್ಯಾಗುರು ಸಂಭವಿಸಂ ದೀಕ್ಷಾಗುರು ಸಂಭವಿಸನುಮೆನೆ ತನಗೆ ತಾನೆ ಗುರುವಾಗಿರ್ಪಂ (ಅಜಿಪು. ೫-೭೯) ; ವಿದ್ಯಾಗುರುಗಳಿಗೆ ಭಾಗಣ್ಣನಲ್ಲಿ ವಿಶೇಷ ಪ್ರೀತಿಯುಂಟಾಯಿತು (ಕಭವಿ. ೪೨೭). [ಸಂ.]

**ವಿದ್ಯಾಗೋಷ್ಠಿ (ನಾ). ಸಾಹಿತ್ಯ, ಸಂಗೀತ ಮುಂತಾದ ಕಲೆಗಳನ್ನು ಕುರಿತು ನಡೆಸುವ ಸಭೆ** : ದೇವಗಣಿಕೆಯರು ಸಂಗೀತಸಾಹಿತ್ಯಾದಿ ವಿದ್ಯಾಗೋಷ್ಠಿಗಳಿಂ ಮಲ್ಲಮಹಿಮಹಿಷಾದಿಯುದ್ಧಂಗಳಿಂ . . . ವಿರಾಜಿಸುತ್ತಿರ್ಕುಂ (ವಿವೇಕ. ೧೭೦). [ಸಂ.]

**ವಿದ್ಯಾಚಣ (ನಾ). ತನ್ನ ಪಾಂಡಿತ್ಯದಿಂದ ಪ್ರಸಿದ್ಧನಾದವನು** : ನರಸಿಂಹಪ್ರಿಯ ಮನ್ತ್ರಿ ಮನ್ತ್ರವಿಲಸದ್ವಿದ್ಯಾಚಣಂ ಬೂಚಣಂ (ಎಕ.V, ಅರಸೀ. ೧೭೨-೩೧; 1163). 'ಅಕ್ಷರಚಣ' ಪರಾ. [ಸಂ.]

**ವಿದ್ಯಾಚಾರ್ಯ (ನಾ). = ವಿದ್ಯಾಗುರು** : ಚಂದ್ರಾಪೀಡಂ ಪ್ರತಿದಿನಂ ಪ್ರವೃದ್ಧಮಾನನಾಗೆ . . . ನಿಖಿಳವಿದ್ಯಾಚಾರ್ಯರುಮಂ ಮಹಾಪ್ರಯತ್ನದಿಂ ನಿಲಿಸಿ . . . ವಿದ್ಯಾಧಿಗಮನದೊಳ್ (ಕಾದಂಪೂ. ೪೩೩). [ಸಂ.]

**ವಿದ್ಯಾಚ್ಛೇದ (ನಾ). ಅಲೌಕಿಕ ಶಕ್ತಿ ; ವಿಶೇಷವಾದ ಶಕ್ತಿ** : 'ವಿದ್ಯಾಚ್ಛೇದಂಗೆಯ್' ಪರಾ. [ಸಂ.]

**ವಿದ್ಯಾಚ್ಛೇದಂಗೆಯ್ (ಕ್ರಿ). ಅಲೌಕಿಕ ಶಕ್ತಿಯನ್ನು ನಾಶಮಾಡು** : ರತ್ನಜಟ . . . ಮೂದಲಿಸಿ ಮುಟ್ಟೆವರ್ಪುದುಮಾ ದಾನವನರ್ಕಜಟಿಯ ನಣ್ಪಂಗವನೊಳ್ಕಾದದೆ ಕರುಣಿಸಿ ವಿದ್ಯಾಚ್ಛೇದಂಗೆಯ್ದಂ ನಿರಂಕುಶಂ ದಶಕಂಠಂ (ಪಂರಾಮಾ. ೯-೧೪೭).

[ವಿದ್ಯಾಚ್ಛೇದ + ಕೆಯ್₁]

**ವಿದ್ಯಾಡಂಬರ (ನಾ). ವಿದ್ವತ್ತಿನ ಮೇಲ್ಮೆ ,–ಹೆಚ್ಚುಗಾರಿಕೆ** : ವಿಜಯಜಿಹ್ವನೆಂಬೊಂ. . . ನಿಜವಿದ್ಯಾಡಂಬರಮಂ ಮೆಱೆಯಲೆಂದರಮನೆಯ ಬಾಗಿಲೊಳ್ ನಿಂದು ಪತ್ರಾಲಂಬನಂ ಮಾಡಿರ್ಪುದಂ (ಸುಕುಮಾ. ೨-೧೪ ವ). [ಸಂ.]

**ವಿದ್ಯಾತ್ರಯಾಧೀಶ (ನಾ). ಷಟ್ಖಂಡಾಗಮದ ಮೊದಲ ಮೂರು ಖಂಡಗಳನ್ನು ಅಧ್ಯಯನ ಮಾಡಿದವನು** : ಶಾಬ್ದನೇತೃತೆ . . . ಎಂ ಚೋದ್ಯಮೆ ವರ್ಧಮಾನಮುನಿಯೊಳ್ ವಿದ್ಯಾತ್ರಯಾಧೀಶನೊಳ್ (ಚಂದ್ರಪ್ರ. ೧-೩೧). [ಸಂ.]

**ವಿದ್ಯಾದಯಿತ** (ನಾ). ವಿದ್ಯೆಗೆ ಒಡೆಯನಾದವನು : ಮಹಾತೇಜನೂರ್ಜಿತ ವಿದ್ಯಾದಯಿತಂ ಸುರಂ ಸುರಂ (ಮದತಿ. ೧-೪೫) ; ನಯದಿಂದಮಿಾ ಸರೋರುಹನಯನೆಯ ನಳವಡಿಸಲಾರ್ತನಿಲ್ಲಳವಡಿಪೆಂ ಭಯದಿಂದವೆಂದು ವಿದ್ಯಾದಯಿತಂ ಪಡೆದಂ ವಿಕುರ್ವಣಾವೈಭವಮಂ (ಪಂರಾಮಾ. ೯-೧೮೭). [ಸಂ.]

**ವಿದ್ಯಾದಾನ** (ನಾ). ವಿದ್ಯೆಯನ್ನು ನೀಡುವಿಕೆ; ಬೋಧಿಸುವಿಕೆ : ದಾನಂಗಳೊಳಗೆ ವಿದ್ಯಾದಾನಮುಮಾಹಾರದಾನಮುಂ ಮೇಲೆಂದೀ ಸ್ನಾನಶಕ್ತಿಬ್ರತೀಂದ್ರಂ ತಾನೆಯ್ದೆ ನೆಗ[ೞ್]ವಡೆದನಿವಱಿಂದ ಜಗದೊಳ್ (ಸೌಇಇ. XX, ೫೭-೨೫; 1084); ಕನಕಾಚಲಭಟ್ಟನು ಮಾಡಿದ ವಿದ್ಯಾದಾನ ಮಹಿಮೆಯಿಂದಲೋ ಎಂಬಂತೆ ತಿಮ್ಮಣ್ಣಭಟ್ಟನೂ ದೊಡ್ಡಪಂಡಿತನಾದನು (ಕಭವಿ. ೩೦೯). [ಸಂ.]

**ವಿದ್ಯಾದೇವತೆ** (ನಾ). ೧. ವಿದ್ಯೆಯ ಅಭಿಮಾನಿದೇವತೆ ; ಸರಸ್ವತಿ. ೨. [ಜೈನ] ಸಾಧಿತ, ಕುಲ ಮತ್ತು ವಿದ್ಯೆಗಳಿಗೆ ಸಂಬಂಧಿಸಿದ ದೇವತೆ : ಕುಬೇರಕಾಂತನುಂ ವಿದ್ಯಾದೇವತೆಯಂ ಬೆಸಗೊಂಡನ್ನ ಮುನ್ನಿನ ಭವದ ಪ್ರಾಣವಲ್ಲಭೆಯೆಲ್ಲಿರ್ದಳೆನೆ (ವಡ್ಡಾರಾ. ೩೯-೨೧) ; ತಾಂ ಮಹೀತಳಕ್ಕೆ ಬೀಟುತ್ತುಂ ನಮ್ಮ ನೋವಿಂಗಾಱದೆ ಪರ್ಣಲಘುವೆಂಬ ವಿದ್ಯೆಯಂ ಬೆಸಸುವುದುಮಾ ವಿದ್ಯಾದೇವತೆ . . . ಆ ಭೀಮಾಟವೀ ಸರಸ್ತೀರದೊಳಿರಿಸಿ ಪೋಪುದುಂ (ಶಾಂತಿಪು. ೪-೯೬ ವ). [ಸಂ. ವಿದ್ಯಾದೇವತಾ]

**ವಿದ್ಯಾಧನ** (ನಾ). ೧. ವಿದ್ಯೆಯ ರೂಪದಲ್ಲಿರುವ ಸಂಪತ್ತು, –ಐಶ್ವರ್ಯ : ಧನಮಂ ನೆರಪದೆ ವಿದ್ಯಾಧನಮಂ ಮಾಡದೆ ತಗುಳ್ದು ನೆಗಟದೆ ತಪದೊಳ್ ಮನುಜತ್ವಮಫಲಮಾಯ್ತು (ಕವಿರಾ. ೩-೧೧೧) ; ಕೃತಘ್ನನೆ ನರಕಿ ವಿದ್ಯಾಧನ ಮದಾಂಧನೆ ಬಾಹಿರನು (ಕುವ್ಯಾಅ. ೨೩-೪೫). ೨. ಪಾಂಡಿತ್ಯದಿಂದ ಗಳಿಸಿದ ಹಣ, –ಐಶ್ವರ್ಯ. [ಸಂ.]

**ವಿದ್ಯಾಧರ** (ನಾ). ೧. ಯಾವುದೇ ವಿದ್ಯೆಯನ್ನು ಬಲ್ಲವನು, –ಹೊಂದಿದವನು. ೨. ಸ್ವರ್ಗದಲ್ಲಿ ವಾಸಿಸುವವನೆಂದು ನಂಬಲಾದ, ಗಗನಗಮನಾದಿ ಅಲೌಕಿಕಶಕ್ತಿಯುಳ್ಳ ಜೀವಿ ; ದಿವಿಜ : ಸುರದನುಜಭುಜಗ ವಿದ್ಯಾಧರ ನರಸಂಕುಲದೊಳಾರನಾದೊಡಮೇನೊ ಗರ ಮುಟ್ಟೆ ಕೊಲ್ಲುಮಿದು ನಿಜವಿರೋಧಿಯಂ ಧುರದೊಳೆಂದು ಶಕ್ತಿಯನಿತ್ತಂ (ಪಂಪಭಾ. ೧-೧೧೩); ಸಿದ್ಧವಿದ್ಯಾಧರರು . . . ಅಖಿಳಾಪ್ಸರೆಯರೆಸೆದರು ರೋಮ ರೋಮದ ಕುಳಿಯ ಚೌಕದಲಿ (ಕುವ್ಯಾಉ. ೯-೫೯). ೩. [ಸಂಗೀತ] ತಾಳದ ಭೇದಗಳಲ್ಲಿ ಒಂದು : ಧ್ರುವಮಟಯ . . . ವಿಷಮ ವಿದ್ಯಾಧರ . . . ಮತಂಗ . . . ಜಯಾಳವೆಂಬವೇ ಮೊದಲಾದ ನೂಱೊಂದು ತಾಳಂಗಳು (ವಿವೇಕ. ೧೮೨). ೪. [ಜೈನ]ಭೋಗಭೂಮಿಯಲ್ಲಿ ವಾಸಿಸುವ ಪ್ರಜ್ಞಪ್ತಿ ಮುಂತಾದ ಅನೇಕ ವಿದ್ಯೆಗಳನ್ನು ಬಲ್ಲ ಒಂದು ವರ್ಗದ ಜನ : ಚಿಂತಾಗತಿಯೆಂಬ ವಿದ್ಯಾಧರನಾಕೆಯ ರೂಪಲಾವಣ್ಯಸೌಭಾಗ್ಯ ಕಾಂತಿತ್ವಮಂ ಕಂಡೊಟಿಸಿ (ವಡ್ಡಾರಾ. ೧೫೭-೨೭) ; ಬಲವದ್‌ವಿದ್ವಿಷ್ಟವಿದ್ಯಾಧರಕರಟಿ ಶಿರಶ್ಶುಕ್ತಿಸಂಭೂತ ಮುಕ್ತಾವಲಿಯೊಳ್ ಕಣ್ಣಟ್ಟು (ಆದಿಪು. ೧-೭೫) ; ಅವುಗಳಿಗೆ ವಿಜಯಾರ್ಧಪರ್ವತಗಳೆಂದು ಹೆಸರು . . . ಅವುಗಳ ಮೇಲೆ ವಿದ್ಯಾಧರರು ವಾಸಿಸುತ್ತಾರೆ (ಜೈನಪ. ೪೫೦). [ಸಂ.]

**ವಿದ್ಯಾಧರಕರಣ** (ನಾ). ವಿದ್ಯಾಧರರು ಆಕಾಶಕ್ಕೆ ನೆಗೆಯಲು ಅವಲಂಬಿಸುತ್ತಿದ್ದ ಹಸ್ತಪಾದಗಳ ಒಂದು ಭಂಗಿ : ತೊನ್ನಂ ಪೋಪಾಗಳ[ಳ]ಱುವಳ್ಳಮಂ ಕಂಡದಂ ವಿದ್ಯಾಧರಕರಣದಿಂ ಲಂಘಿಸಿ ಪೋಪುದುಂ ಯಮದಂಡಂ ಕಂಡು (ವಡ್ಡಾರಾ. ೧೨೪-೧) ; ಬ್ಬಟರಂ ವಿದ್ಯಾಧರಕರಣದಿನುಯ್ಯೆಡೆಯೊಳ್ ಸುರೇಂದ್ರವಧು ಪೋಲ್ತಿಂದ್ರಜಾಲದ ವಧುವಂ (ಗದಾಯು. ೪-೨೧). [ಸಂ.]

**ವಿದ್ಯಾಧರಚಕ್ರವರ್ತಿ** (ನಾ). ೧. ದೇವತೆಗಳ ಒಬ್ಬ ಮುಖ್ಯಸ್ಥ : ಆವ ಜಗಮಂ ಸಾಧಿಸಲ್ಬೋದಯ್ ಪೇೞೆಲೆ ವಿದ್ಯಾಧರಚಕ್ರವರ್ತಿ (ಶಮದ. ೧೨೭ ಪ್ರಯೋ) ; ಈ ಸುಂದರನೇ ವಿದ್ಯಾಧರಚಕ್ರವರ್ತಿಯೆಂದು ತಿಳಿದು ಮಲಯವತಿ ನಾಚಿದಳು (ಕವಪ್ರ. ೭-೧೧೩). ೨. [ಜೈನ] ವಿದ್ಯಾಧರರ ಚಕ್ರವರ್ತಿ ; ಖೇಚರೇಂದ್ರ : ವಿದ್ಯಾಧರಚಕ್ರವರ್ತಿ ಧರಣೀಕಂಪಂಗಂ ಪ್ರಭಾವತೀ(ಕರೀ)ದೇವಿಗಂ ಮಗಳಾಂ (ಚಾವುಂಪು. ೭೫). [ಸಂ. ವಿದ್ಯಾಧರಚಕ್ರವರ್ತಿನ್]

**ವಿದ್ಯಾಧರಿ** (ನಾ). ದೇವತಾಸ್ತ್ರೀ : ಆಕೆಯ ರೂಪಂ ನೋಡಿ ಮೆಚ್ಚಿ ವಿದ್ಯಾಧರಿಯ ದೇವಗಣಿಕೆಯ ರೂಪನೆ ಪೋಲ್ಕೆ ಎಂದು ಪೊಗಟ್ದು (ವಡ್ಡಾರಾ. ೧೭-೧೮) ; ಬಾರದು ಬರೆಯಲ್ ರೂಪು ರೂಪವಿದ್ಯಾಧರಿಯ (ಸೌಇಇ. XX, ೯೯-೩೨; 1076). [ಸಂ. ವಿದ್ಯಾಧರೀ]

**ವಿದ್ಯಾಧಿಕಾರಿ** (ನಾ). ವಿದ್ಯಾಭ್ಯಾಸಕ್ರಮವನ್ನು ನೋಡಿಕೊಳ್ಳುವ ಅಧಿಕಾರಿ ; ವಿದ್ಯಾಇಲಾಖೆಯ ಅಧಿಕಾರಿ : ಐದುಗಂಟೆಗೆ ಸರಿಯಾಗಿ ಮುಖ್ಯಅತಿಥಿಗಳಾದ ವಿದ್ಯಾಧಿಕಾರಿಗಳು ಬಂದರು (ಕವಪ್ರ. ೩-೪೧). [ಸಂ. ವಿದ್ಯಾಧಿಕಾರಿನ್]

**ವಿದ್ಯಾಧಿಗಮನ** (ನಾ). ವಿದ್ಯೆಯನ್ನು ಕಲಿಯುವಿಕೆ ; ವಿದ್ಯಾಭ್ಯಾಸ : ಚಂದ್ರಾಪೀಡಂ ಪ್ರತಿದಿನಂ ಪ್ರವೃದ್ಧಮಾನನಾಗೆ . . . ವಿದ್ಯಾಧಿಗಮನದೊಳ್ ಸಮರ್ಪಿಸಿ (ಕಾದಂಪೂ. ೪೩೩). [ಸಂ.]

**ವಿದ್ಯಾನಂದ** (ನಾ). ೧. ವಿದ್ಯೆಯಿಂದ ದೊರಕುವ ಸಂತೋಷ : ವೇದಶಾಸ್ತ್ರಂಗಳಂ ನೋಡಿ ಅದರಲ್ಲಿರ್ದ ಅರ್ಥಸಾರಮಂ ಬಿಟ್ಟು ವಾದಭೇದಗಳಿಂದಹಂಕರಿಸುವದೆ ವಿದ್ಯಾನಂದವೆನಿಸುವದು (ನಾನಾಗು. ೨೬-೧). ೨. ಆನಂದದ ಎಂಟು ಬಗೆಗಳಲ್ಲಿ ಒಂದು; ಬ್ರಹ್ಮಜ್ಞಾನದಿಂದ ಉಂಟಾಗುವ ಸಂತೋಷ : ವಿಷಯಾನಂದ ಬ್ರಹ್ಮಾನಂದ ವಾಸನಾನಂದ ಮುಖ್ಯಾನಂದ ನಿಜಾನಂದ ಆತ್ಮಾನಂದ ಅದ್ವೈತಾನಂದ ವಿದ್ಯಾನಂದವೆಂಬವೇ ಆನಂದದಷ್ಟಭೇದಂಗಳು (ವಿವೇಕ. ೨೪). [ಸಂ.]

**ವಿದ್ಯಾನಿಕೇತನ** (ನಾ). ವಿದ್ಯೆಯನ್ನು ಹೇಳಿಕೊಡುವ ಶಾಲೆ; ವಿಶ್ವವಿದ್ಯಾನಿಲಯ ಮುಂತಾದ ಸ್ಥಳ : ಬಹಿರ್ನಗರದೊಳಮರಮಂದಿರಾನುಕಾರಿಯಪ್ಪ ವಿದ್ಯಾನಿಕೇತನಮಂ ಮಾಡಿಸಿ ನಿಖಿಳವಿದ್ಯಾಚಾರ್ಯರುಮಂ ಮಹಾಪ್ರಯತ್ನದಿಂ ನಿಲಿಸಿ (ಕಾದಂಪೂ. ೪೩೩). [ಸಂ.]

**ವಿದ್ಯಾನಿಧಾನ** (ನಾ). ವಿದ್ವತ್ತೇ ನಿಧಿಯಾಗುಳ್ಳವನು : ವಿದ್ಯಾನಿಧಾನ ಮಲ್ಲಪಾರ್ಯ ತದನುಜಾತಾಭಿಜಾತ ಸಾರಸ್ವತ ಪುಣ್ಯಮಾರ್ಯಕಾರಿತಮುಮಪ್ಪ ಪುರಾಣಚೂಡಾಮಣಿಯೊಳ್ ಷಷ್ಠಾಶ್ವಾಸಂ (ಶಾಂತಿಪು. ೬-೧೨೭ ಗದ್ಯ). [ಸಂ.]

**ವಿದ್ಯಾನಿಧಿ** (ನಾ). ೧. = ವಿದ್ಯಾನಿಧಾನ : ಕಾನೂರ್ಗಣಮುನಿಪತಿ ವಿದ್ಯಾನಿಧಿ ಗುಣನಿಧಿ ದಯೈಕನಿಧಿ (ಶಾಂತಿಪು. ೧-೧೭) ; ಪ್ರಾಕ್ತನ ಜನ್ಮವಿದ್ಯೆಗಳ್ ಬಂದನಿತುಂ ನೆಲಸಿದವು ಸಕಲವಿದ್ಯಾನಿಧಿಯೊಳ್ (ಅಜಿಪು.೫-೬೮). ೨. [ಜೈನ] ಒಂದು ವಿದ್ಯೆಯ ಹೆಸರು : ಇರ್ವರುಂ ವಿದ್ಯಾಧರರಲ್ಲಿಗೆ ವಂದೊಡವರೊಳೊರ್ವಂ ವಿದ್ಯಾನಿಧಿ ಎಂಬ ವಿದ್ಯೆಯಿನಾ ವೈತಾಳಿಯಂ ಪ್ರಕಟಂಮಾಟ್ಪುದುಂ (ಚಾವುಂಪು. ೧೮೯). [ಸಂ.]

**ವಿದ್ಯಾನಿಲಯ, ವಿದ್ಯಾನಿಳಯ** (ನಾ). ೧. = ವಿದ್ಯಾನಿಕೇತನ : 'ವಿಶ್ವವಿದ್ಯಾನಿಲಯ' ಪರಾ. ವಿದ್ಯಾನಿಳಯ : ೨. ವಿದ್ಯೆಗೆ ನೆಲೆಯಾದವನು ; ವಿದ್ಯಾಪಾರಂಗತ : ನಳನ ನಹುಷನ ಶಾಲಿಹೋತ್ರನ ಬಲುಮೆಗಳು ಕಿಱಿದೆಂಬ ವಿದ್ಯಾನಿಳಯ ವರರೇವಂತನೇಱಾಟವನು ನಸುನಗುತ . . . ಹಯಪ್ರೌಢಪ್ರತಾಪರು ಹೊಳೆವ ಮಕುಟದ ಸಾಲುಗಳಲೊಪ್ಪಿದರು (ಕುವ್ಯಾಉ. ೬-೪೧). [ಸಂ.]

**ವಿದ್ಯಾನಿಳಯ** 'ವಿದ್ಯಾನಿಲಯ' ನೋ.

**ವಿದ್ಯಾಪಕ್ಷಪಾತಿ** (ನಾ). ವಿದ್ಯೆಯ ಕಡೆಗೆ ಒಲವುಳ್ಳವನು : ಲಿಂಗರಾಜರು ವಿದ್ಯಾಪಕ್ಷಪಾತಿಗಳಾಗಿದ್ದರು (ಕವಪ್ರ. ೬-೩೭). [ಸಂ. ವಿದ್ಯಾಪಕ್ಷಪಾತಿನ್]

**ವಿದ್ಯಾಪತಿ** (ನಾ). ವಿದ್ಯೆಯ ಒಡೆಯ : ಸಮಸ್ತವಿದ್ಯಾಪತಿ ನಾಭಿನಂದನನು ಪಾಶ್ರಿತಭವ್ಯಜನಾಭಿನಂದನಂ (ಆದಿಪು. ೧-೪೦). [ಸಂ.]

**ವಿದ್ಯಾಪರಿಣತ** (ನಾ). ವಿದ್ವಾಂಸ ; ಪಂಡಿತ : ವಿರಹಿಗಳ ಶೃಂಗಾರ ವಿದ್ಯಾಪರಿಣತರಲಂಕಾರ ಕಾವ್ಯಕೆ ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ (ಕುವ್ಯಾಅ. ೧-೧೯). [ಸಂ.]

**ವಿದ್ಯಾಪಾರ** (ನಾ). ವಿದ್ಯೆಯ ಕೊನೆ ; ವಿದ್ವತ್ತಿನ ಪರಾಕಾಷ್ಠೆ : ಪದ್ಯಂ ಸಮಸ್ತ ಜನತಾಹೃದ್ಯಂ ಪದವಿದಿತಪಾದನಿಯಮನಿವೇದ್ಯಂ ವಿದ್ಯಾಪಾರಪರಾಯಣಮಾದ್ಯಂ ಸದ್ವೃತ್ತಿವೃತ್ತಜಾತ್ಯಾಯತ್ತಂ (ಕವಿರಾ. ೧-೩೦). [ಸಂ.]

**ವಿದ್ಯಾಪಾರಗ** (ನಾ). ವಿದ್ಯೆಯನ್ನು ಸಂಪೂರ್ಣವಾಗಿ ಕಲಿತವನು ; ಪಂಡಿತೋತ್ತಮ : ಆ ಮಹಾಬಳಂ ಬಾಲಕಾಲದಿಂ ತಗುಳ್ದಭ್ಯಸ್ತಸಮಸ್ತ ವಿದ್ಯಾಧರವಿದ್ಯಾಪಾರಗನುಂ . . . ಆಗಿ (ಆದಿಪು. ೧-೭೩ ವ). [ಸಂ.]

**ವಿದ್ಯಾಪಾರಗೆ** (ನಾ). [ಜೈನ] ವಿಶೇಷಶಕ್ತಿಯನ್ನು ಸಂಪೂರ್ಣವಾಗಿ

ಕಲಿತವಳು : ಆಂ ಪ್ರಭಾ(ಸುಖಾ)ವತಿಯೆನಿಂಬೆಂ ಜಾತಿಕುಲಸಾಧಿತವಿದ್ಯಾಪಾರಗೆಯೆಂ (ಚಾವುಂಪು. ೭೫). [ಸಂ. ವಿದ್ಯಾಪಾರಗಾ]

**ವಿದ್ಯಾಪೀಠ** (ನಾ). ಜ್ಞಾನವನ್ನು ಪ್ರಸಾರಮಾಡಲು ಸ್ಥಾಪಿತವಾದ ಸಂಸ್ಥೆ ; ವಿದ್ಯಾಲಯ : ಆ ಕಾಲದಲ್ಲಿ ಒಂದೊಂದು ಕ್ಷೇತ್ರವೂ, ಒಂದೊಂದು ವಿದ್ಯಾಪೀಠ ವಾಗಿತ್ತು (ಕಭವಿ. ೬೦) ; ನಾಲ್ಕನೆಯ ಶತಮಾನದ ಪ್ರಸಿದ್ಧವಾದ ವಿದ್ಯಾಪೀಠಗಳಲ್ಲಿ ಪಲ್ಲವರ ರಾಜಧಾನಿಯಾಗಿದ್ದ ಕಂಚಿಯು ಒಂದಾಗಿತ್ತು (ಕರ್ನಾಅ.೩೩).. [ಸಂ.]

**ವಿದ್ಯಾಪ್ರತ್ಯಯ** (ನಾ). ತಾನು ಗಳಿಸಿದ ವಿದ್ಯೆಯ ಬಗೆಗೆ ಇರುವ ನಂಬುಗೆ ,- ವಿಶ್ವಾಸ : ಒರ್ವ ನಿರ್ಬುದ್ಧಿಗಾರುಡಿಗಂ ಗಾರುಡಮಂ ಕಲ್ತು ವಿದ್ಯಾಪ್ರತ್ಯಯಮಂ ನೋಡಲೆಂದು ಸರ್ಪದಷ್ಟನನಱಸುತ್ತುಂ ಬರ್ಪಾತಂ ಅಡವಿಯೊಳೊಂದು ಪೊದಱೊಳ್ ಪುಲಿಯಂ . . . ಕಂಡು (ಪಂಚತಂ.೨೫೨-೧೧). [ಸಂ.]

**ವಿದ್ಯಾಪ್ರಭಾವ** (ನಾ). ೧. ವಿದ್ಯೆಯ ಶಕ್ತಿ ,—ಸಾಮರ್ಥ್ಯ : ಯಾದವವಂಶಜರುಂ ನಾನಾದೇಶನರೇಂದ್ರರುಂ ಘಟೋದ್ಭವನ ಧನುರ್ವೇದಮನ ಕಲಲ್ ಬಂದಾಳಾದರ್ ವಿದ್ಯಾಪ್ರಭಾವಮಾ ದೊರೆತೆ ವಲಂ (ಪಂಪಭಾ. ೨-೫೭). ೨. [ಜೈನ] ವಿಶೇಷಶಕ್ತಿಯ ಪ್ರಭಾವ ,—ಮಹಿಮೆ : ವಿದ್ಯಾಪ್ರಭಾವದಿಂ ಮನೆಯೊಳ್ ನಾನದೆ ಬಂದೆನೆಂದು ನುಡಿಯೆ (ಶಾಂತಿಪು.೬-೬೫ವ). [ಸಂ.]

**ವಿದ್ಯಾಪ್ರಸಾರ** (ನಾ). ವಿದ್ಯೆಯನ್ನು ಹರಡುವಿಕೆ ; ಜ್ಞಾನವನ್ನು ಪ್ರಚಾರ ಮಾಡುವಿಕೆ : ಲಿಂಗರಾಜರು . . . ವಿದ್ಯಾಪ್ರಸಾರಕ್ಕಾಗಿ ಹಲವು ರೀತಿಯಿಂದ ಸಹಾಯ ಮಾಡಿದರು (ಕಪಪು. ೬-೩೭). [ಸಂ.]

**ವಿದ್ಯಾಪ್ರಾಕಾರ** (ನಾ). [ಜೈನ] ವಿಶೇಷಶಕ್ತಿಯಿಂದ ರಚಿಸಿದ ಪೌಳಿ ,— ಗೋಡೆ : ಅಂತು ನಿರ್ಮಿಸಿದ ವಿದ್ಯಾಪ್ರಾಕಾರಂಗಳ ಬಹಿರಂತಃಪ್ರದೇಶಗಳೊಳ್ ಪಲಬರ್ ವಿದ್ಯಾಧರರಂ ಕಾಪುವೇಟ್ಟುದುಂ (ಪಂರಾಮಾ. ೧೪-೩೫ ವ). [ಸಂ.]

**ವಿದ್ಯಾಭಿಮಾನಿ** (ಗು). ೧. ವಿದ್ಯೆಗೆ ಅಧಿಷ್ಠಾನವಾದ : 'ವಿದ್ಯಾಭಿಮಾನಿದೇವತೆ' ಪರಾ. (ನಾ). ೨. ವಿದ್ಯೆಯ ಬಗೆಗೆ ಗೌರವವುಳ್ಳ ವ್ಯಕ್ತಿ ; ವಿದ್ಯಾಪಕ್ಷಪಾತಿ : ವಿದ್ಯಾಭಿಮಾನಿಗಳಾದ ಇವರಿಗೆ ವಿದ್ಯಾಇಲಾಖೆಯು ಯಾವಾಗಲೂ ಆಭಾರಿಯಾಗಿರುತ್ತದೆ (ರೂಢಿ). [ಸಂ. ವಿದ್ಯಾಭಿಮಾನಿನ್]

**ವಿದ್ಯಾಭಿಮಾನಿದೇವತೆ** (ನಾ). ವಿದ್ಯೆಯ ಅಭಿಮಾನಿದೇವತೆ ; ಗಣಪತಿ ಅಥವಾ ಸರಸ್ವತಿ : ವಿದ್ಯಾಭಿಮಾನಿದೇವತೆಯಾದ ಶಾರದೆಯ ಸಿದ್ಧಿ ಅಚಲವಾದದ್ದು (ಭಾರದ. ೫೪೦). [ಸಂ. ವಿದ್ಯಾಭಿಮಾನಿದೇವತಾ]

**ವಿದ್ಯಾಭಿವೃದ್ಧಿ** (ನಾ). ಶಿಕ್ಷಣದ ಏಳಿಗೆ ,—ಉನ್ನತಿ : ವಿದ್ಯಾಭಿವೃದ್ಧಿಯಿಲ್ಲದೆ ದೇಶ ಹಾಳಾಗಿರುವುದಕ್ಕೆ ಈ ಹಾಳು ಮೇಷ್ಟ್ರುಗಳೇ ಕಾರಣರು (ರಂಗಕ. ೧೬೦). [ಸಂ.]

**ವಿದ್ಯಾಭ್ಯಾಸ** (ನಾ). ವಿದ್ಯೆಯನ್ನು ಅಭ್ಯಸಿಸುವುದು ; ಓದು ; ಕಲಿಕೆ ; ಶಿಕ್ಷಣ : ಅ. .ಭೂತಿಯುಂ ವಾಯುಭೂತಿಯುಮೆಂಬವಶೇಷವಿದ್ಯಾಭ್ಯಾಸನಿಮಿತ್ತದಿಂ ಭವದಂಘ್ರಿಸ್ಮರಣಪರಿಣತಾಂತಃಕರಣರಾಗಿ ಬಂದೆವು (ಸುಕುಮಾ. ೨-೪೮ ವ) ; ಇನ್ನೀ ವಿದ್ಯಾಭ್ಯಾಸಂ ಸಾಕು (ಪುಣ್ಯಾಸ್ರ. ೧೨-೧೭ ವ). [ಸಂ.]

**ವಿದ್ಯಾಭ್ಯಾಸಂಗೆಯ್** (ಕ್ರಿ). ಶಿಕ್ಷಣವನ್ನು ಪಡೆ ; ವಿದ್ಯೆಯನ್ನು ಕಲಿ : ನಿಮಗೆ ವಿದ್ಯಾಭ್ಯಾಸಂಗೆಯ್ಯ ತಾತ್ಪರ್ಯಮುಳ್ಳೊಡೆ . . .ನಿಶ್ಚಯಮೋದುವೊಡಾವುಮಾ ಮಾರ್ಗದಿಂದೋದಿಸಿ ಪಂಡಿತರಾಗೆ ಮಾಟ್ಪೆಂ (ಸುಕುಮಾ. ೨-೫೫ ವ).

[ವಿದ್ಯಾಭ್ಯಾಸ + ಕೆಯ್$_1$]

**ವಿದ್ಯಾಭ್ಯಾಸಂಗೆಯಿಸು** 'ವಿದ್ಯಾಭ್ಯಾಸಂಗೆಯ್ಸು' ನೋ.

**ವಿದ್ಯಾಭ್ಯಾಸಂಗೆಯ್ಸು**, ವಿದ್ಯಾಭ್ಯಾಸಂಗೆಯಿಸು (ಕ್ರಿ). ವಿದ್ಯೆಯನ್ನು ಕಲಿಯುವಂತೆ ಮಾಡು ; ಶಿಕ್ಷಣವನ್ನು ಕೊಡಿಸು : ಆ ಕೃಪಾಚಾರ್ಯರ ಪಕ್ಕದೊಳ್ ಕೂಸುಗಳಂ ವಿದ್ಯಾಭ್ಯಾಸಂಗೆಯ್ಸೆ (ಪಂಪಭಾ. ೨-೩೩ವ) ; ಚಂದ್ರಾಪೀಡಂ ಪ್ರತಿದಿನಂ ಪ್ರವೃದ್ಧಮಾನನಾಗೆ . . . ಅಖಿಳವಿದ್ಯಾಭ್ಯಾಸಂಗೆಯ್ವುತ್ತಮಿರೆ (ಕಾದಂಪೂ.೪೩೩); **ವಿದ್ಯಾಭ್ಯಾಸಂಗೆಯಿಸು** : ಈ ಕುಮಾರರಂ ಬಾಲಕಾಲದೊಳ್ ತೊಟ್ಟು ವಿದ್ಯಾಭ್ಯಾಸಂಗೆಯಿಸದೆ ಸ್ವೇಚ್ಛಾವಿಹಾರಿಗಳಂ ಮಾಡಿ ಕಿಡಿಸಿದೆಂ (ಪಂಚತಂ. ಅ. ೧೪-೧೫).

[ವಿದ್ಯಾಭ್ಯಾಸ + ಕೆಯ್ಸು]

**ವಿದ್ಯಾಮಂತ್ರ** (ನಾ). [ಜೈನ]ಯಾವುದಾದರೂ ವಿದ್ಯೆಗೆ ಸಂಬಂಧಿಸಿದ, ಪವಿತ್ರವಾದ ಹಾಗೂ ಅರ್ಥಸಹಿತವಾದ ವಾಕ್ಯ : ಆ ವಿದ್ಯಾಮಂತ್ರಂಗಳನೆನಗೆ ಪೇೞೆಂದಭಯಕುಮಾರಂ ಬೆಸಗೊಂಡು (ವಡ್ಡಾರಾ. ೧೫೮-೨೨). [ಸಂ.]

**ವಿದ್ಯಾಮಂತ್ರಿ** (ನಾ). ನಾಡಿನ ಶಿಕ್ಷಣವ್ಯವಸ್ಥೆಯನ್ನು ನೋಡಿಕೊಳ್ಳುವ ಸಚಿವ ; ಶಿಕ್ಷಣಸಚಿವ : ವಿದ್ಯಾಮಂತ್ರಿಯಾದವರು ಆ ಪದವಿಗೆ ತಕ್ಕಂತೆ ಸಾಹಿತ್ಯ ಹಾಗೂ ಸಂಸ್ಕೃತಿಯ ಮಹದಭಿಮಾನಿಗಳಾಗಿರಬೇಕು (ರೂಢಿ). [ಸಂ. ವಿದ್ಯಾಮಂತ್ರಿನ್]

**ವಿದ್ಯಾಮದ** (ನಾ). ಅಷ್ಟಮದಗಳಲ್ಲಿ ಒಂದು ; ವಿದ್ವತ್ತಿನಿಂದುಂಟಾಗುವ ಗರ್ವ : ವಿದ್ಯಾಮದಮುಳ್ಳಂ ಗೂಗೆಯಾಗಿಯುಂ ತಪೋಮದಮುಳ್ಳಂ ನಾಯಾಗಿಯುಂ . . . ಮಹಾದುಃಖಕ್ಕೆ ಭಾಜನರಪ್ಪರ್ (ಧರ್ಮಾಮೃ. ೬-೧೮೮); ನಾವು ಮಹಾವಿದ್ವಾಂಸರು ನಮ್ಮ ವಿದ್ವತ್ತೆಗೆ ಆರೂ ಸಮಾನಂಬರಲರಿಯರು ಎಂದು ಹೇಳಿಕೊಂಬುವುದೇ ವಿದ್ಯಾಮದವು (ವಚಶಾ. II, ೧೨೩). [ಸಂ.]

**ವಿದ್ಯಾರತ** (ನಾ). ವಿದ್ಯೆ ಕಲಿಯುವುದರಲ್ಲಿ ಮಗ್ನನಾದವನು : ಪಂಡಿತಪಾಣ್ಡ್ಯ ಭೂಪ[ನೆ]ನಿಸಿದಂ ಭೂಪಾಳ ವಿದ್ಯಾ[ರತಂ]ತದನುಜಾತಂ (ಸೌಇಇ. VI. ೫೭೨-೧೭; 1165). [ಸಂ.]

**ವಿದ್ಯಾರಾಧನ** (ನಾ). ವಿದ್ಯಾರ್ಜನೆಗಾಗಿ ಮಾಡುವ ಸೇವೆ ,—ಉಪಾಸನೆ : ಪ್ರಜ್ಞಪ್ತಿವಿದ್ಯಾಲಾಭಾಂತರಾಯವುಮಂ ಮಾಡಲೀತನೆತ್ತಿಕೊಂಡುಪಸರ್ಗಮಂ ಸಂಸಾರನಿಸರ್ಗಮೆಂದು ನಿಶ್ಚಳಿತೆ ಸೈರಿಸಿ ವಿದ್ಯಾರಾಧನದೊಳ್ ಚಿತ್ತಮಂ ನಿಱಿಸಿ (ಶಾಂತಿಪು. ೯-೫ ವ). [ಸಂ.]

**ವಿದ್ಯಾರೇಖೆ** (ನಾ). [ಸಾಮುದ್ರಿ] ಜಾತಕನ ವಿದ್ಯೆ, ಬುದ್ಧಿಗಳನ್ನು ಕುರಿತು ಸೂಚಿಸುವ, ಅಂಗೈಯಲ್ಲಿರುವ ಒಂದು ಗೆರೆ : ಅನಾಮಿಕದ ಬುಡದಲ್ಲಿ ವಿದ್ಯಾರೇಖೆಯಿರುವದು ಅದು ದೀರ್ಘವಾಗಲು ಪೂರ್ಣದಿವ್ಯವಹುದು ಸ್ವಲ್ಪವಾಗಿ ಇರಲು ಅಲ್ಪವಿದ್ಯಾಪ್ರದವು (ಸಾಮುಲ. ೬೦-೮). [ಸಂ. ವಿದ್ಯಾರೇಖಾ]

**ವಿದ್ಯಾರ್ಜನೆ** (ನಾ). ವಿದ್ಯೆಯನ್ನು ಗಳಿಸುವಿಕೆ ; ಜ್ಞಾನಸಂಪಾದನೆ : ವಿದ್ಯಾರ್ಜನೆಗಾಗಿ ತವಕಿಸುವ ಆ ವಾಮನಮೂರ್ತಿ ಅವರಿಗೊಂದು ವಿಭೂತಿಯಾಗಿ ಕಂಡಿದ್ದ (ಹೊಸಕ್ಷಿ. ೩೫). [ಸಂ. ವಿದ್ಯಾರ್ಜನ]

**ವಿದ್ಯಾರ್ಥಿ** (ನಾ). ವಿದ್ಯೆಯನ್ನು ಕಲಿಯಲು ಬಯಸುವವನು ; ವಿದ್ಯೆಯನ್ನು ಕಲಿಯುವ ಅಪೇಕ್ಷೆಯುಳ್ಳವನು : ನೀಮಾರ್ಗಾರಾದೊಡಮೇಂ ವಿದ್ಯಾರ್ಥಿಗಳಾಗಿಯೋದಂ ಕಲ್ವೆಮೆಂಬಟ್ಟಿಯೊಳ್ ಬಂದಿರಪ್ಪೊಡೆ . . . ನಿಮ್ಮನೋದಿಸಲಕ್ಕುಂ (ವಡ್ಡಾರಾ. ೩-೨೦) ; ಇದರಲ್ಲಿ ವಿದ್ಯಾರ್ಥಿಗಳ, ಉಪಾಧ್ಯಾಯರ ಸಹಕಾರವಿದೆ (ಶಿಕ್ಷದ. ೨೯೮). [ಸಂ. ವಿದ್ಯಾರ್ಥಿನ್]

**ವಿದ್ಯಾರ್ಥಿತಪೋಧನ** (ನಾ). ಗುರುಕುಲದಲ್ಲಿದ್ದುಕೊಂಡು ವಿದ್ಯೆಯನ್ನು ಕಲಿಯುತ್ತಾ ಆಜೀವವೂ ಬ್ರಹ್ಮಚಾರಿಯಾಗಿ ಉಳಿಯುವವನು ; ನೈಷ್ಠಿಕಬ್ರಹ್ಮಚಾರಿ : ಮಠದಲೋದುವ ವಿದ್ಯಾರ್ಥಿತಪೋಧನರ್ಗ್ಗಂ ವಿದ್ಯಾರ್ಥಿಮಾಣಿಯರ್ಗ್ಗಂ ಬಿಟ್ಟ ಗಟ್ಟೆ (ಎಕ.XI, ಚಿತ್ರದು. ೭೭-೧೨; 940). [ಸಂ.]

**ವಿದ್ಯಾರ್ಥಿದೆಶೆ** (ನಾ). ವಿದ್ಯಾಭ್ಯಾಸ ಮಾಡುತ್ತಿರುವ ಕಾಲ ,—ಅವಧಿ : ಅದಕ್ಕೆ ಅವಶ್ಯಕವಾದ ಬುನಾದಿಯನ್ನು ವಿದ್ಯಾರ್ಥಿದೆಶೆಯಲ್ಲಿರುವಾಗಲೇ ಭದ್ರವಾಗಿ ಕಟ್ಟಬೇಕು (ಹಸುಹೂ. ೨೦೯). [ವಿದ್ಯಾರ್ಥಿ + ದೆಶೆ$_1$ (< ದಸೆ)]

**ವಿದ್ಯಾರ್ಥಿನಿ** (ನಾ). ವಿದ್ಯೆಯನ್ನು ಕಲಿಯುವವಳು : ನನ್ನ ಮಗಳೂ ಇತಿಹಾಸದ ವಿದ್ಯಾರ್ಥಿನಿ (ವಂಶವೃ. ೩೪); ಈ ಅಧ್ಯಾಪಕರು ತನ್ನ ಪುಟ್ಟ ವಿದ್ಯಾರ್ಥಿನಿಗೆ . . . ವ್ಯಾಕರಣವನ್ನಷ್ಟೆ ಕಲಿಸುತ್ತಿರಲಿಲ್ಲ (ಇಪ್ಪಕ. ೮೭). [ಸಂ. ವಿದ್ಯಾರ್ಥಿನೀ]

**ವಿದ್ಯಾರ್ಥಿನಿಲಯ** (ನಾ). ಓದುವವರ ಸಲುವಾಗಿ ಕಟ್ಟಿದ, ಊಟ ಮತ್ತು ವಸತಿಯ ಸೌಲಭ್ಯಗಳನ್ನೊಳಗೊಂಡಿರುವ ಮನೆ : ಅವರ ಮಗ ಬೆಂಗಳೂರಿನ ವಿದ್ಯಾರ್ಥಿನಿಲಯವೊಂದರಲ್ಲಿ ಇದ್ದಾನೆ (ರೂಢಿ). [ಸಂ.]

**ವಿದ್ಯಾರ್ಥಿಮಾಣಿ** (ನಾ). ವಿದ್ಯಾಭ್ಯಾಸ ಮಾಡುತ್ತಿರುವ ಹುಡುಗ ,— ಬಾಲಕ : ಮಠದಲೋದುವ ವಿದ್ಯಾರ್ಥಿತಪೋಧನರ್ಗ್ಗಂ ವಿದ್ಯಾರ್ಥಿಮಾಣಿಯರ್ಗ್ಗಂ ಬಿಟ್ಟ ಗಟ್ಟೆ (ಎಕ. XI, ಚಿತ್ರದು. ೭೭-೧೨; 940) ; ವಿದ್ಯಾರ್ಥಿಮಾಣಿಯರೆಂದರೆ ಬಹುಶಃ

ಆ ಮಠದಲ್ಲಿ ಓದಿ ಅಧ್ಯಯನ ಮುಗಿದ ನಂತರ ಗೃಹಸ್ಥರಾಗತಕ್ಕವರು (ಕಶಾಅ. ೨೧೮). [ವಿದ್ಯಾರ್ಥಿ + ಮಾಣಿ]

**ವಿದ್ಯಾರ್ಥಿವೇತನ** (ನಾ). ವಿದ್ಯಾಭ್ಯಾಸಮಾಡಲು ಅನುಕೂಲವಾಗುವಂತೆ ಸರ್ಕಾರ ಅಥವಾ ಶಿಕ್ಷಣಸಂಸ್ಥೆಯು ಬುದ್ಧಿಶಾಲಿಯಾದ ವಿದ್ಯಾರ್ಥಿಗೆ ಕೊಡುವ ಸಹಾಯಧನ : ಒಂದು ದಿನ ನನಗೆ ಎರಡು ತಿಂಗಳ ವಿದ್ಯಾರ್ಥಿವೇತನವಾಗಿ ಎರಡು ರೂಪಾಯಿ ಬಂತು (ಬಂಕಿಮ. XIII. ಗ್ರಂಥಕರ್ತನ ಬಿನ್ನಹ). [ಸಂ.]

**ವಿದ್ಯಾಲಯ** (ನಾ). = ವಿದ್ಯಾನಿಕೇತನ : ಗಣಪತಿ ಹದಿನಾಲ್ಕುವರ್ಷಗಳಲ್ಲಿ ಆ ವಿದ್ಯಾಲಯವನ್ನೇ ಅರಗಿಸಿಕೊಂಡಿದ್ದಾನೆ (ಹೂಸಕ್ಕಿ. ೩೭). [ಸಂ.]

**ವಿದ್ಯಾವಂತ** (ಗು). ೧. ತಿಳಿದ ; ಬಲ್ಲ ; ಪರಿಣತಿಯನ್ನು ಹೊಂದಿದ : ವೀರಗಂಗ ಹೋಸಳದೇವರ ವಿದ್ಯಾವಂತರೂವಾರಿ ಪುಲಿ ಮಚ್ಚರಿಪ ಕುಮಾರ ಮಾಚಾರಿ (ಎಕ.V. ಬೇಲೂರು. ೪೦-೨; ಸು. 1120). (ನಾ). ೨. ವಿದ್ಯೆಯನ್ನು ಕಲಿತವನು ; ಸುಶಿಕ್ಷಿತ : ಅವರು ವಿದ್ಯಾವಂತರೂ, ಧೈರ್ಯಶಾಲಿಗಳೂ ಆಗಿದ್ದರು (ಚಂಗಾಳ್ಯ. ೧). [ಸಂ. ವಿದ್ಯಾವತ್]

**ವಿದ್ಯಾವಂತೆ** (ನಾ). ಕಲಿತ ಹೆಣ್ಣು ; ತಿಳಿದವಳು : ಅವಳು ವಿದ್ಯಾವಂತೆಯಾದುದರಿಂದ . . . ತನ್ನ ಜೊತೆಗಾತಿಯರಿಗಿಂತ ಮೇಲ್ಮಟ್ಟದಲ್ಲಿದ್ದಳು (ಪುಸರು. ೯೩). [ವಿದ್ಯಾವಂತ + -ಎ]

**ವಿದ್ಯಾವತಿ** (ನಾ). = ವಿದ್ಯಾವಂತೆ : ವೇಶ್ಯೆಯು . . . ವಿದ್ಯಾವತಿಯೂ, ಸುಂದರಿಯೂ, ಪಾಂಡುರಂಗನ ಭಕ್ತಳೂ ಆಗಿದ್ದಳು (ಕಭವಿ. ೨೧೫). [ಸಂ. ವಿದ್ಯಾವತೀ]

**ವಿದ್ಯಾವಿಡಂಬನ** (ನಾ). ಮಾಯಾವೇಷ ; ಮಾಯಾರೂಪ : ಆ ಮಹಾಭಾಗನ ತೋಳ್ ತೊಡರಲೊಡಮವಳ ವಿದ್ಯಾವಿಡಂಬನಂ ಬಿಟ್ಟು ಪಾಱಿ ಪೋದತ್ತಾಗಳ್ (ಲೀಲಾವ. ೧೪-೯೪). [ಸಂ.]

**ವಿದ್ಯಾವಿತ್ತಮ** (ನಾ). ಪಂಡಿತರಲ್ಲಿ ಶ್ರೇಷ್ಠನಾದವನು ; ಮಹಾವಿದ್ವಾಂಸ : ಚಕ್ರಿಯೊಳ್ ಮಗನಂ ಬೇಡಿದನೊಲ್ದನಿಲ್ಲ ಗುರು ವಿದ್ಯಾವಿತ್ತಮಂ ವಿತ್ತಮಂ (ಜಗವಿ. ೭-೧೫). [ಸಂ.]

**ವಿದ್ಯಾವಿದ** (ನಾ). ವಿದ್ಯೆಯನ್ನು ಬಲ್ಲವನು ; ವಿದ್ವಾಂಸ : ಅಖಿಲಶಾಸ್ತ್ರ ವಿದ್ಯಾವಿದರಂ ಬಲಯುತರನಿಪ್ಪ ಋಕ್ಷಜಕುಲವಧು ನಳ ನೀಳರೆಂಬ ಸುತರಂ ಪಡೆದಳ್ (ಪಂರಾಮಾ. ೧೧-೧೬೭). [ಸಂ. ವಿದ್ಯಾವಿದ್]

**ವಿದ್ಯಾವಿನೋದ** (ನಾ). ಕೌಶಲದಿಂದ ಕೂಡಿದ ಕೇಳಿ,-ಕ್ರೀಡೆ : ಪೊಱಮಟ್ಟು ದಖಿಳಪುರಜನಂ . . . ತರತರದ ವಿದ್ಯಾವಿನೋದದಿಂ (ಜೈಮಿಭಾ. ೩೩-೧೯). [ಸಂ.]

**ವಿದ್ಯಾವಿರೋಧ** (ನಾ). [ಕಾವ್ಯಮೀ] ಹತ್ತುಬಗೆಯ ಅರ್ಥದೋಷಗಳಲ್ಲಿ ಒಂದು ; ಶಾಸ್ತ್ರಕ್ಕೆ ವಿರುದ್ಧವಾದುದು : ವಿದ್ಯಾವಿರೋಧ – ಶಾಸ್ತ್ರ ಮುಂತಾದವುಗಳಿಗೆ (ದೇಶ ಕಾಲಾದಿಗಳಿಗೂ) ವಿರುದ್ಧವಾಗಿರುವುದು (ಕೃಪಿಡಿ. ೨೪೯). [ಸಂ.]

**ವಿದ್ಯಾವಿಹೀನ** (ನಾ). ವಿದ್ಯೆಯಿಲ್ಲದವನು ; ಅಜ್ಞ : ಆ ಕಾಲದ ಬ್ರಾಹ್ಮಣರಲ್ಲಿ . . . ಕೇವಲ ವಿದ್ಯಾವಿಹೀನನೆನಿಸಿದವನೂ ತನ್ನ ನಿತ್ಯನೈಮಿತ್ತಿಕಕರ್ಮಗಳಿಗಾಗುವಷ್ಟಾದರೂ ವೇದವನ್ನು ಕಲಿಯದಿರುತ್ತಿರಲಿಲ್ಲ (ಕಭವಿ. ೩೦೮). [ಸಂ.]

**ವಿದ್ಯಾವ್ಯಸನ** (ನಾ). ಹತ್ತು ಬಗೆಯ ವ್ಯಸನಗಳಲ್ಲಿ ಒಂದು ; ವಿದ್ಯೆಯನ್ನು ಕಲಿಯಬೇಕೆಂಬ ಗೀಳು,-ಹಂಬಲ : ತನುವ್ಯಸನ . . . ವಿದ್ಯಾವ್ಯಸನ . . . ಕಾಷ್ಠವ್ಯಸನಗಳೆಂಬ ದಶವ್ಯಸನಗಳಿಂ ಹಸಗೆಟ್ಟು (ವಿವೇಕ. ೨೪೭). [ಸಂ.]

**ವಿದ್ಯಾಶಾಲೆ** (ನಾ). ವಿದ್ಯೆಯನ್ನು ಹೇಳಿಕೊಡುವ ಸಂಸ್ಥೆ ; ಪಾಠಶಾಲೆ: ದೇವಾಲಯದಲ್ಲೇ ವಿದ್ಯಾಶಾಲೆಯಿದ್ದುದರಿಂದ ಅವನ ದೇವರ ಸೇವೆಗೆ ಮತ್ತಷ್ಟು ನಿರಾತಂಕವಾಗಿತ್ತು (ಕಭವಿ. ೨೪೯). [ಸಂ. ವಿದ್ಯಾಶಾಲಾ]

**ವಿದ್ಯಾಶುಲ್ಕ** (ನಾ). ವಿದ್ಯಾರ್ಥಿಯು ತನ್ನ ವಿದ್ಯಾಭ್ಯಾಸಕ್ಕಾಗಿ ಗುರುವಿಗೆ ಅಥವಾ ವಿದ್ಯಾಸಂಸ್ಥೆಗೆ ಕೊಡಬೇಕಾದ ಹಣ : ಪ್ರಾಚೀನಕಾಲದಲ್ಲಿ . . . ವಿದ್ಯಾಶುಲ್ಕದ ಹೆಸರಿರಲಿಲ್ಲ (ಆರ್ಯಧ. ೮೩). [ಸಂ.]

**ವಿದ್ಯಾಸತ್ರ** (ನಾ). = ವಿದ್ಯಾಶಾಲೆ : ಉತ್ತರೇಶ್ವರದೇವರ ಮಠದಲೋದುವ ಕೇಳುವ ತಪೋಧನರ್ಗ್ಗಂ . . . ವಿದ್ಯಾಸತ್ರಕ್ಕೆಂದು . . . ಕೊಟ್ಟ ೩೭ ಬಾಡದ ಬಳಿಯ ಮಾರಸಿಂಗನ ಪಳ್ಳಿ (ಸೌಇಇ. XX. ೪೦-೨೨; 1066). [ಸಂ.]

**ವಿದ್ಯುಚ್ಚಿಕಿತ್ಸೆ** (ನಾ). "ವಿದ್ಯುತ್ತಿನಿಂದ ರೋಗಗಳಿಗೆ ಚಿಕಿತ್ಸೆ ಮಾಡುವುದು" (Electropathy. ಇಂಕನಿ) : ನರದೌರ್ಬಲ್ಯದಿಂದ ಬಳಲುತ್ತಿರುವ ಅವನಿಗೆ ವಿದ್ಯುಚ್ಚಿಕಿತ್ಸೆಯನ್ನು ನೀಡಿ ಗುಣಪಡಿಸುತ್ತಿದ್ದಾರೆ (ರೂಢಿ). [ಸಂ. ವಿದ್ಯುಚ್ಚಿಕಿತ್ಸಾ]

**ವಿದ್ಯುಚ್ಚಿತಾಗಾರ** (ನಾ). ವಿದ್ಯುಚ್ಛಕ್ತಿಯಿಂದ ಹೆಣವನ್ನು ಸುಡುವ ಜಾಗ : ನಗರಮಧ್ಯದಲ್ಲಿರುವ ವಿದ್ಯುಚ್ಚಿತಾಗಾರವನ್ನು ಸ್ಥಳಾಂತರಿಸಬೇಕೆಂದು ಹಲವರು ಹೇಳುತ್ತಿದ್ದಾರೆ (ರೂಢಿ). [ಸಂ.]

**ವಿದ್ಯುಚ್ಛಕ್ತಿ** (ನಾ). ವಿದ್ಯುತ್ತಿನಿಂದ ಉಂಟಾಗುವ ಶಕ್ತಿ ; ಎಲೆಕ್ಟ್ರಿಸಿಟಿ : ಕರೋಬಾಮಣಿಗೆ ಗ್ರೀಕ್ ಭಾಷೆಯಲ್ಲಿ ಎಲೆಕ್ಟ್ರಾನ್ ಎಂದು ಹೆಸರು. ಅದನ್ನು ಉಜ್ಜಿದರೆ ಉಂಟಾಗುವ ಗುಣಕ್ಕೆ ಎಲೆಕ್ಟ್ರಿಸಿಟಿ (Electricity) ಎಂಬ ಹೆಸರನ್ನು ಯೂರೋಪಿನ ಪಂಡಿತರು ಕೊಟ್ಟರು . . . ಇದಕ್ಕೆ ನಮ್ಮಲ್ಲಿ ವಿದ್ಯುಚ್ಛಕ್ತಿ ಅಥವಾ ವಿದ್ಯುತ್ತು ಎಂಬ ಹೆಸರು ಬಳಕೆಗೆ ಬಂದಿದೆ (ಭೌತವಿ. ೩೨೩). [ಸಂ.]

**ವಿದ್ಯುಜ್ಜನಕ** (ಗು). ೧. ವಿದ್ಯುತ್ತನ್ನು ಉತ್ಪಾದಿಸುವ : ಮೇಲೆ ಹೇಳಿದ ಚಾಲಕಗಳಂತೆಯೇ ಕಾಣುವ ವಿದ್ಯುಜ್ಜನಕಯಂತ್ರಗಳನ್ನು (Dynamos) ಕಟ್ಟಿರುವರು (ಭೌತವಿ. ೩೩೮). (ನಾ). ೨. ವಿದ್ಯುತ್ತನ್ನು ಉತ್ಪಾದಿಸುವಂಥದು : ಎರಡು ಯಂತ್ರಗಳನ್ನು ಒಂದೇ ಅಕ್ಷದ ಮೇಲೆ ತಿರುಗುವಂತೆ ಜೋಡಿಸಿರುತ್ತಾರೆ. ಒಂದಕ್ಕೆ ಟರ್ಬೈನ್–ಎಂದು ಹೆಸರು . . . ಇನ್ನೊಂದು ವಿದ್ಯುಜ್ಜನಕ (Generator) (ಶಿಲ್ಪನಾ. ೨೪೯). [ಸಂ.]

**ವಿದ್ಯುತ್ಕಿರಣ** (ನಾ). ಬೆಳಕಿನ ಕಿರಣ,–ಕದಿರು : ಸೂರ್ಯನ ಒಳಭಾಗದಲ್ಲಿ ಇರುವ ಧಾತುಗಳೆಲ್ಲಾ ಶಾಖ ಮತ್ತು ಬೆಳಕಾಗಿ ಪರಿಣಮಿಸುತ್ತವೆ. ಈ ಶಾಖ ಮತ್ತು ಬೆಳಕೇ ಕೋಟ್ಯನುಕೋಟಿ ವರ್ಷಗಳಿಂದ ವಿದ್ಯುತ್‌ಕಿರಣಗಳಾಗಿ ಪ್ರಸಾರವಾಗುತ್ತಿವೆ (ಆಕಾಶ. ೧೧). [ಸಂ.]

**ವಿದ್ಯುತ್ಕೇಂದ್ರ** (ನಾ). ವಿದ್ಯುತ್ತನ್ನು ಉತ್ಪಾದಿಸುವ ಮುಖ್ಯಸ್ಥಳ : ಇಬ್ಬರೂ ಜತೆ ಸೇರಿ ಶಿವಸಮುದ್ರದ ವಿದ್ಯುತ್‌ಕೇಂದ್ರಕ್ಕೆ ಹೋಗಿ ತಮ್ಮ ವ್ಯಾಸಂಗದ ಕೊನೆಯ ಹಂತವನ್ನು ಮುಗಿಸಲು ನಿರ್ಧರಿಸಿದ್ದಾರೆ (ಚಿಗುಕ. ೧೩) ; ವಿದ್ಯುತ್ಕೇಂದ್ರದಲ್ಲಿ (Generating Station) ಎರಡು ಯಂತ್ರಗಳನ್ನು ಒಂದೇ ಅಕ್ಷದ ಮೇಲೆ ತಿರುಗು[illegible] ಜೋಡಿಸಿರುತ್ತಾರೆ (ಶಿಲ್ಪನಾ. ೨೪೯). [ಸಂ.]

**ವಿದ್ಯುತ್ತಂತಿ** (ನಾ). ವಿದ್ಯುಚ್ಛಕ್ತಿ ಪ್ರವಹಿಸುತ್ತಿರುವ ತಂತಿ : ನಾವೆಲ್ಲಾದರೂ, ತುಂಬಾ ಶಕ್ತಿ ಪ್ರವಹಿಸುತ್ತಿರುವ ವಿದ್ಯುತ್‌ತಂತಿಗಳನ್ನು ಹಿಡಿದರೆ ಮರಣವೇ ನಿಶ್ಚಯ (ಬಾಲಪ್ರ. III. ೧೨೩೭). [< ಸಂ. ವಿದ್ಯುತ್ತಂತ್ರೀ]

**ವಿದ್ಯುತ್ತು** (ನಾ). ೧. ಮಿಂಚು : ವಿಯದ್ರಂಗದೊಳಂದದೇಂ ನಲಿದುದೋ ವಿದ್ಯುನ್ನಟೀನರ್ತನಂ (ಆದಿಪು. ೬-೭೨); ವಿದ್ಯುನ್ನಟೀಕರ್ಬುರಜವನಿಕೆಯೋ . . . ಮೇಚಕನೆ ನೆಗೆದುದಳಿಶ್ಯಾಮಳಂ ಮೇಘಜಾಳಂ (ಚಂದ್ರಪು. ೪-೩೧) ; ವಿದ್ಯುತ್ ಎಂದರೆ ಮಿಂಚು (ಮುಂಬಯಿ. ೫-೨೦೨). ೨. ಸಿಡಿಲು. ೩. = ವಿದ್ಯುಚ್ಛಕ್ತಿ : ಇದಕ್ಕೆ ನಮ್ಮಲ್ಲಿ ವಿದ್ಯುಚ್ಛಕ್ತಿ ಅಥವಾ ವಿದ್ಯುತ್ತು ಎಂಬ ಹೆಸರು ಬಳಕೆಗೆ ಬಂದಿದೆ (ಭೌತವಿ. ೩೨೩). ೪. ಒಬ್ಬ ರಾಕ್ಷಸನ ಹೆಸರು : ವಿದ್ಯುತ್ತು ದಿವಾಕರ . . . ಯಜ್ಞವೇತರೆಂಬ ದ್ವಾದಶರಾಕ್ಷಸರೇ ಕ್ರಮದಿಂದವರವರ ಮೃಗಾವಲರು (ವಿವೇಕ. ೨೧೮). [ಸಂ. ವಿದ್ಯುತ್]

**ವಿದ್ಯುತ್ಪ್ರವಾಹ** (ನಾ). ೧. ವಿದ್ಯುಚ್ಛಕ್ತಿಯು ಪ್ರವಹಿಸುವುದು : ಗುಂಡಿಯನ್ನು ಒತ್ತಿದ ಕೂಡಲೆ ತಂತಿಗಳಲ್ಲಿ ವಿದ್ಯುತ್ಪ್ರವಾಹವು ಉಂಟಾಗುತ್ತದೆ (ರೂಢಿ). ೨. ಮಿಂಚಿನ ಹರಿವು ,–ಓಟ : ಆ ದಾವಾಗ್ನಿ ಘನನಿಬಿಡಘೋರಾಂಧಕಾರತೀರದ ಮಧ್ಯ ಪ್ರವಹಿಪಾ ವಿದ್ಯುತ್ಪ್ರವಾಹ ದೈತ್ಯಾಕೃತಿಯ ಪೋಲ್ ಕೆದರಿದುದು ದಿಕ್ಕುದಿಕ್ಕಿಗೆ ತನ್ನ ಕೇಸುರಿಯ ಕೇಶಪಾಶದ ರಾಶಿರಾಶಿ ವಿನ್ಯಾಸಮಂ (ಶ್ರೀರಾಮಾ. ೧೨೩-೩೧೯). [ಸಂ.]

**ವಿದ್ಯುತ್ಸಂಚಾರ** (ನಾ). ವಿದ್ಯುತ್ತಿನ ಚಲನೆ ,–ಸಂಚಾರ : ಎರಡು ಬೇರೆ ಲೋಹಗಳಿಂದ ಮಾಡಿದ ವಿದ್ಯುನ್ಮಾರ್ಗದಲ್ಲಿ (Electric Circuit) ಒಂದು ಲೋಹವನ್ನು ಕಾಯಿಸಿದರೆ ವಿದ್ಯುನ್ಮಾರ್ಗದಲ್ಲಿ ವಿದ್ಯುತ್ಸಂಚಾರವಾಗುತ್ತದೆ (ಶಿಲ್ಪನಾ. ೨೨೭). [ಸಂ.]

ವಿದ್ಯುದುಪಕರಣ (ನಾ). ವಿದ್ಯುಚ್ಛಕ್ತಿಯಿಂದ ಕಾರ್ಯಮಾಡುವ ಸಲಕರಣೆ : ವಿದ್ಯುದುಪಕರಣಗಳೊಂದಿಗೆ ಕೆಲಸ ಮಾಡುವಾಗ ಎಚ್ಚರಿಕೆಯಿಂದಿರಬೇಕು (ರೂಢಿ). [ಸಂ.]

ವಿದ್ಯುದ್ದೀಪ (ನಾ). ವಿದ್ಯುಚ್ಛಕ್ತಿಯಿಂದ ಬೆಳಗುವ ದೀಪ : ಆ ದಿನ ರಸ್ತೆಯಲ್ಲಿದ್ದ ವಿದ್ಯುದ್ದೀಪಗಳೆಲ್ಲ ಕೆಟ್ಟುಹೋಗಿದ್ದುವು (ಕಪಪು. ೪-೭೭). [ಸಂ.]

ವಿದ್ಯುದ್ಭ್ರಾಂತ (ನಾ). ನೃತ್ಯದ ಒಂದು ಭಂಗಿ ; IP "ಕಾಲನ್ನು ಹಿಂದುಗಡೆ ತಲೆಗೆ ಮುಟ್ಟಿಸಿ ಎಲ್ಲ ಪಾರ್ಶ್ವಗಳಲ್ಲೂ ಸುತ್ತಿಸಿ ಮುಂದಕ್ಕೆ ನೀಡುವುದು" (ಲಾಸ್ಯರಂ. ೩೧೯ ಗದ್ಯಾನುವಾದ) : ತಲಪುಷ್ಪಪುಟ, ಲೀನ, ವಿವರ್ತಿತ, ಲಲಿತೋರು . . . ನಿಶುಂಭಿತ, ವಿದ್ಯುದ್ಭ್ರಾಂತ, ಗಂಗಾವತರಣ - ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). [ಸಂ.]

ವಿದ್ಯುದ್ವಲಯ (ನಾ). ಮಿಂಚಿನ ವರ್ತುಲ, —ಪರಿಧಿ : ರೋದೋಂತಂ ಕೂಡೆ ರತ್ನಜ್ವಲಗಿರಿಕುಲದಿಂ ತೂಂತನಿಟ್ಟಂತೆ ನೀಲಾಂಭೋದಂಗಳ್ ಕೂಡೆ ವಿದ್ಯುದ್ವಲ[ಪಾಠಾಂ.ಳ]ಯಮನೊಳಕೊಂಡಂತೆ . . . ಆಗುರ್ವಿಂದಾದಂ ಚೆಲ್ವಾಯ್ತು ಚಕ್ರಿದ್ವಿಪಘಟೆ ಸಿತಸ್ವಾಂಶುಜಾಲಾವಲೀಢಂ (ಆದಿಪು. ೧೪-೯೭). [ಸಂ.]

ವಿದ್ಯುನ್ಮಾಲೆ (ನಾ). ೧. ಮಿಂಚಿನ ಹಾರ. ೨. [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಎಂಟನೆಯದಾದ ಅನುಷ್ಟುಭ್ ಛಂದಸ್ಸಿನ ಒಂದು ವೃತ್ತ : ಪಿಂತುರ್ವೀಯುಗ್ಮಂಗಳ್ ಬರ್ಪಂ ಮುಂತೀಶಾನದ್ವಂದ್ವಂ ನಿಲ್ಕುಂ ಸಂತಂ ನೀ ಕೇಳಂಭೋಜಾಕ್ಷೀ ಕಾಂತಂ ವಿದ್ಯುನ್ಮಾಲಾವೃತ್ತಂ (ಛಂದೋಂಬು. ೨-೯೨). [ಸಂ. ವಿದ್ಯುನ್ಮಾಲಾ]

ವಿದ್ಯುಲ್ಲತೆ (ನಾ). ೧. ಮೋಡಗಳ ಘರ್ಷಣೆಯಿಂದ ಅಂಕುಡೊಂಕಾಗಿ ಹರಿಯುವ ಮಿಂಚು ; ಬಳ್ಳಿಮಿಂಚು : ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಜವೋಲ್ಮಂಜುವೋಲ್ತೋಱಿ ಬೇಗಂ ಪಿರಿಗುಂ ಶ್ರೀರೂಪ ಲೀಲಾಧನ ವಿಭವಮಹಾರಾಶಿಗಳ್ ನಿಲ್ಲವಾರ್ಗ್ಗಂ (ಎಕ. II,೮೮-೧; ಸು. 700) ; ಹಾರಲತಾ ವಿದ್ಯುಲ್ಲತೆ ಚಾರುಪಯೋಧರಸಮೀಪದೊಳ್ ಪೊಳೆಯೆ (ಅಜಿಪು. ೨-೩೪). ೨. ವಿದ್ಯುಚ್ಛಕ್ತಿ ; ವಿದ್ಯುತ್ತು : ಹಡಗಗಳಲ್ಲಿಯೂ ಉಗಿಬಂಡಿಗಳಲ್ಲಿಯೂ ಬೆಂಕಿಗೆ ಬದಲಾಗಿ ವಿದ್ಯುಲ್ಲತೆಯನ್ನು ಪ್ರಯೋಗಿಸುವ ಕ್ರಮವು ಅಲ್ಪಸ್ವಲ್ಪವಾಗಿ ಸದ್ಯಕ್ಕೆ ಆರಂಭವಾಗಿರುತ್ತದೆ (ಮುಂಬಯಿ. ೫-೯೫) ; ದಿಕ್ಕಿನಿಂದ ದಿಕ್ಕಿಗೆ ಓಲಿದಾಡುವ ವಿದ್ಯುಲ್ಲತೆಯ ಬೀಸಣಿಕೆಯಂತೆ ತರುಣನು ಒಮ್ಮೆ ತಂಗಿಯ ಕಡೆಗೆ ಒಮ್ಮೆ ಪತ್ನಿಯ ಕಡೆಗೆ ಕರವಸ್ತ್ರವನ್ನು ಬೀಸುತ್ತಿದ್ದ (ಸಮಜೀ. ೫೫೭). [ಸಂ. ವಿದ್ಯುಲ್ಲತಾ]

ವಿದ್ಯುಲ್ಲೇಖೆ (ನಾ). ಮಿಂಚಿನ ಗೆರೆ , —ರೇಖೆ : ವನಚರಿ ಬರೆ ವಿದ್ಯುಲ್ಲೇಖೆ ಬರ್ಪಂತೆ ಬೆನ್ನಂ (ಅಜಿಪು. ೯-೩೨); ವಿದ್ಯುಲ್ಲೇಖಾನಿಕಾಯಂ ನವಘನಸಮಯಶ್ರೀಗೆ ಮಲ್ಲೀಚಯಂ ಚೈತ್ರೋದ್ಯಾನಶ್ರೀಗೆ ದೀಪ್ತಪ್ರತತಿ ಶಶಿಕಲಾಶ್ರೀಗೆ. . . ಒದವಿಸುವವೋಲ್ (ಲೀಲಾವ. ೧೧-೭೧). [ಸಂ. ವಿದ್ಯುಲ್ಲೇಖಾ]

ವಿದ್ಯೆ (ನಾ). ೧. ಅರಿವು ; ಜ್ಞಾನ ; ಅಭಿಜ್ಞತೆ : ಒಡೆಯಂ ಕೂಸಿಂಗದೊಂದೇ ಕುಲದ ಚಲದ ಪೆಂಪೊಂದೆ ಚೆಲ್ವೊಂದೆ ಸಂದೊಳ್ನುಡಿಯೊಂದೇ ವಿದ್ಯೆಯೊಂದೇ (ಆದಿಪು. ೪-೨೭) ; ಒಡಲೊಳಡಗಿದ ವಿದ್ಯೆ ಒಡಗೂಡಿ ಬರುತಿರಲು ಒಡಹುಟ್ಟಿದವರು ಕಳ್ಳರು ನೃಪರದನು ಪಡೆಯರೆಂತೆಂದ (ಸರ್ವಜ್ಞ. ೧೩೨೧). ೨. (ಯಾವುದಾದರೊಂದು ಶಾಸ್ತ್ರದ ಬಗೆಗಿರುವ)ಆಳವಾದ ಪಾಂಡಿತ್ಯ, —ವಿದ್ವತ್ತೆ : ಆ ಪ್ರತಿಭಾನಂ ಶಕ್ತಿಲೋಕಾಗಮ ಸಕಲಕಲಾವೇದನಂ ವಿದ್ಯೆ ಶಾಸ್ತ್ರಾನ್ವಿತನಪ್ಪಂ ವೃದ್ಧನಾಲಸ್ಯಮನುಱಿದ ಸಪ್ಪುದ್ಯೋಗಮಭ್ಯಾಸಕರ್ಮಂ (ಕಾವ್ಯಾವ. ೪೨೪) ; ಇಂತು ವಿದ್ಯೆ ಗುಣಜ್ಞಾನ ಧರ್ಮ ಆಚಾರಶೀಲಂಗಳ ನಮ್ಮ ಕೂಡಲ ಸಂಗನ ಶರಣರು ಸಾಧಿಸಿದ ಸಾಧನೆಯನೇ ಸಾಧಿಸುವುದು (ಬಸವ. ೬೧೩). ೩. ಓದು ; ಕಲಿಕೆ ; ಶಿಕ್ಷಣ : ಮಕ್ಕಳಿಗೆ ಆರಂಭದಲ್ಲೇ ಸರಿಯಾದ ವಿದ್ಯೆಯನ್ನು ಕಲಿಸಬೇಕು (ರೂಢಿ). ೪. ಆಧ್ಯಾತ್ಮಿಕಜ್ಞಾನ; ಆತ್ಮವಿದ್ಯೆ : ಸರಿಯಾಗಿ ವಸ್ತುಸ್ವರೂಪವನ್ನು ನಿಶ್ಚಯಿಸುವ ತಿಳಿವಳಿಕೆಗೆ 'ವಿದ್ಯೆ' ಎಂದು ಹೆಸರು (ಬ್ರಹ್ಮಭಾ. ೨೨). ೫. ಕಣ್ಕಟ್ಟು ; ಯಕ್ಷಿಣಿ. ೬. ದುರ್ಗೆ. ೭. [ಜೈನ] ಅಲೌಕಿಕ ಶಕ್ತಿ ; ಅಸಾಧಾರಣವಾದ ಶಕ್ತಿ : ಆತನ ವಿದ್ಯೆಯಲ್ಲಮಂ ಕೊಱೆದಿಕ್ಕಿ ಪನ್ನೆರಡುವರುಷಂಬರಂ ಭೂಮಿಗೋಚರನಾಗಿರೆಂದು ಶಾಪಂಗೊಟ್ಟೊಡೆ (ವಡ್ಡಾರಾ. ೧೫೫-೫). 'ವಿದ್ಯಾಚ್ಛೇದಂಗೆಯ್' ಪರಾ. ೮. [ವಿಶಿಷ್ಟಾ] ಜಗತ್ತಿನ ಸೃಷ್ಟಿ, ಸ್ಥಿತಿ ಮತ್ತು ಸಂಹಾರ ಮುಂತಾದುವುಗಳಿಗೆ ಸಾಧನವಾಗಿ ಸತ್ತ್ವಗುಣಪ್ರಧಾನವಾಗಿರುವ ಈಶ್ವರಶಕ್ತಿ : ಲೀಲೆಯಿಂ ಸರ್ವಜ್ಞತಾದಿಯಲೆಸೆವ ಪರಮಾತ್ಮ ಸತ್ತ್ವರಜತಮಮೆಂಬ ಮಾಯಾಶಕ್ತಿಯ ಗುಣಂಗಳಲಿ . . . ವಿದ್ಯಾವಿದ್ಯೆಯೆಂದೆರಡಾಗಿ ತೋಱಿಹುದು (ಅಮೃತ. ೫-೫). ೯. ಜೀವನು ಊರ್ಧ್ವಲೋಕಸಾಧನೆಗಾಗಿ ಸಾಧಿಸಬೇಕಾದ ಗುಣಗಳಲ್ಲಿ ಒಂದು : ವಿರತಿ ವಿವೇಕ ವಿತರಣ ಬುದ್ಧಿ ಸಿದ್ಧಿ ವಿದ್ಯಾ ಶಮ . . . ನಿಶ್ಚಯ ಮುಂತಾದ ಸಾತ್ವಿಕಗುಣಂಗಳಂ ಸುವಿಮಹಿತೋರ್ಧ್ವ ಲೋಕಂಗಳಂ ಸಾರ್ದು (ವಿವೇಕ. ೨೪೭). ೧೦. ವ್ಯೂಹರೂಪನಾದ ನಾರಾಯಣನ ನಾಲ್ಕು ರೂಪಗಳಲ್ಲಿ ಒಂದು ; ಅನಿರುದ್ಧ : ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವರೆಂಬ ನಾಲ್ಕು ರೂಪಗಳಿಂದ ಶ್ರೀಪರಮಾತ್ಮನು ವಿದ್ಯೆ, ಬುದ್ಧಿ, ಸಿದ್ಧಿ, ಪ್ರಸಿದ್ಧಿಯೆಂಬ ನಾಲ್ಕು ಹೆಸರುಗಳನ್ನು ಪಡೆಯುವವನಾದರೂ ಅನವದ್ಯನಾಗಿರುವನು (ಹಸಾರ. ೩-೬ ತಾತ್ಪರ್ಯ). ೧೧. ವೈದಿಕ ಉಪನಿಷತ್ತುಗಳಲ್ಲಿ ಉಪಾಸನಾಕಾಂಡ ಪ್ರಸಂಗದಲ್ಲಿ ನಿರೂಪಿಸಲಾಗಿರುವ ಸಾಧನಕ್ರಮ : ಈ ಉಪನಿಷತ್ತುಗಳಲ್ಲಿ ವಿಶ್ವದ ಸೃಷ್ಟಿ ಸ್ಥಿತಿ ಪ್ರಳಯಗಳ ವಿಷಯಗಳನ್ನು ವಿಮರ್ಶಿಸಿರುವುದಲ್ಲದೆ ಪರಮಾತ್ಮನನ್ನು ಉಪಾಸನೆ ಮಾಡುವ ಕ್ರಮಗಳನ್ನೂ ಪ್ರಧಾನವಾಗಿ ನಿರೂಪಿಸಿರುತ್ತಾರೆ. ಇವುಗಳನ್ನೇ ವಿದ್ಯೆಗಳೆಂದು ಕರೆಯುವುದು (ಭಾರದ. ೨೬೪). ೧೨. [ಶೈವ] ಅಶುದ್ಧಾಧ್ವದ ಸೃಷ್ಟಿಕ್ರಮದಲ್ಲಿರುವ ಮಾಯಾತತ್ತ್ವದ ಐದು ಪ್ರಕಾರಗಳಲ್ಲಿ ಒಂದು : ಅಶುದ್ಧ ಸೃಷ್ಟಿಯಲ್ಲಿ ಮಾಯಾತತ್ತ್ವವು ಕಾಲ, ನಿಯತಿ, ಕಲಾ, ವಿದ್ಯಾ, ರಾಗ ಎಂದು ಪಂಚವಿಧವಾಗಿ ಪರಿಣಮಿಸುವುದು (ಹಿಂದಸಾ. ೨೯೬). 'ಚೌಷಷ್ಟಿಕಲೆ' ಪರಾ.

ವಿದ್ಯಾವಿರಿಂಚನ = ವಿದ್ವತ್ತಿನಲ್ಲಿ ಬ್ರಹ್ಮನಂತಿರುವವನು ; ಒಂದು ಬಿರುದು : ಸಮಸ್ತವಿದ್ಯಾವಿರಿಂಚನುಂ ಸುವರ್ಣ್ಣಗರುಡಧ್ವಜಂ (ಸೌಇಇ. XX, ೫೦-೫; 11ನೆಯ ಶತ). [ಸಂ. ವಿದ್ಯಾ]

ವಿದ್ಯೆವಾರಿಧಿ (ನಾ). ಸಾಗರದಷ್ಟು ಆಳವಾದ ವಿದ್ಯೆಯನ್ನು ಒಳಗೊಂಡವನು : ಗಜಮುಖನೆ . . . ರಜತಗಿರಿಗೊಡೆಯನ ಕುಮಾರನೆ ವಿದ್ಯೆವಾರಿಧಿಯೆ (ಕುಮ್ಮಾರ. ೧-೪). [< ಸಂ. ವಿದ್ಯಾವಾರಿಧಿ]

ವಿದ್ಯೋತ (ಗು). ೧. ಹೊಳೆಯುವ ; ಪ್ರಕಾಶಿಸುವ. (ನಾ). ೨. ಬೆಳಕು ; ಕಾಂತಿ ; ಪ್ರಕಾಶ : ಬಲಧೂಳೀವ್ರಾತಮೇಘಪ್ರಕರತಿಮಿರದೊಳ್ ಶಸ್ತ್ರಜಾಲಾಂಶು ವಿದ್ಯುತ್‌ಕುಲವಿದ್ಯೋತಂಗಳಿಂದಂ . . . ಉಭಯಬಲಂ ಕಂಡುವೊಂದೊಂದನಾಗಳ್ (ಆದಿಪು. ೧೪-೯೬). ೩. ಶೋಭೆ ; ವಿಜೃಂಭಣೆ : ತನ್ನ ನಾಲ್ವರ್ ತಮ್ಮಂದಿರೊಡನೆ ಮಂಗಳವಸದನಂಗೊಂಡು ಮಂಗಳಪ್ರಧಾನೋಚಿತವಿಜಯಗಜಮನೇಱಿ ವಿದ್ಯೋತಮಾಗಿ ದಕ್ಷಿಣಾವರ್ತಮಪ್ಪ ಹೋಮಾಗ್ನಿಯಂ ಬಲಂಗೊಂಡು (ಪಂಪಭಾ. ೯-೯೫ ವ). ೪. ಪ್ರಸಿದ್ಧಿ ; ಖ್ಯಾತಿ : ನಿಜನಾಮಾಂಕ ವಿದ್ಯೋತಮಾಗಲ್ಕಿವು ನಾನಾಶಾಸನಂ ಸತ್ಪತಿ ವನಿತೆಗೆಔಚಿತ್ಯಮೆಂದಿತ್ತನತ್ತುತ್ಸವದಿಂ ವಿದ್ವತ್ಸಭಾಮಂಡಲಿ ತಣಿವಿನೆಗಂ ಭೋಜರಾಜ ಕ್ಷಿತೀಶಂ (ಕಾದಂಬ. ೮೨೩). [ಸಂ.]

ವಿದ್ಯೋದ್ಯೋಗ (ನಾ). ವಿದ್ಯಾಭ್ಯಾಸದಲ್ಲಿರುವ ಆಸಕ್ತಿ, — ಶ್ರದ್ಧೆ : ಶ್ರೀಗಧಿಪತಿ . . . ವಿಪ್ರತನಯರ ವಿದ್ಯೋದ್ಯೋಗಕ್ಕೆ ಮೆಚ್ಚಿ ತಲೆಯಂ ತೂಗಿದಂ (ಸುಕುಮಾ. ೩-೧). [ಸಂ.]

ವಿದ್ರ (ನಾ). (?) : ಬಲವದ್ವಿದ್ರಾತಿ ವಿದ್ರಂ ಪ್ರಮಥಕರಣವೃಂದಂ ವೃಷೇಂದ್ರಂ ಗಣೇಂದ್ರಂ (ಹಮ್ಮಿರ. ೧-೫). [ಸಂ.?]

ವಿದ್ರಧಿ (ನಾ). ದೇಹದೊಳಗಡೆ ಕೀವು ತುಂಬಿ ಆದ ಕುರು, —ಗಡ್ಡೆ : ರವಿಚಂದ್ರರ್ ನೆಲಸಿರ್ದೊಡಸ್ತಗೃಹದೊಳ್ ಸೂರ್ಯಾತ್ಮಜಂ ನೋಡೆ . . . ಸಂಭವಿಕುಂ ವಿದ್ರಧಿ (ಜಾತತಿ. ೨೧-೧೧ ಅಟಿ) ; ಚತುಷಷ್ಟಿ ಮರೀಚಾದಿಲೇಹ್ಯ . . . ಇದರಿಂ ಕಾಸ, ಶ್ವಾಸ . . . ವಿದ್ರಧಿ, ಪ್ಲೀಹ, ಹೊಟ್ಟೆಶೂಲೆ, ಮುಖರೋಗ, ಕ್ರಿಮಿರೋಗ ಸಹ ಪರಿಹಾರವಹುದು (ಸಕವೈ. ೨೧೮). [ಸಂ.]

ವಿದ್ರವ (ನಾ). ೧. ಓಡಿಹೋಗುವಿಕೆ ; ಪಲಾಯನ : "ಪ್ರದ್ರಾವಃ . . . ವಿದ್ರವಃ, ದ್ರವಃ, ಅಪಕ್ರಮಃ, ಅಪಯಾನಂ—ಈ ಪಲಾಯನವಾಗುವದಕ್ಕೆ ಹೆಸರು" (ಸಿದ್ಧಾಂತಿ. ೨೭೧). ೨. ಕ್ಷೋಭೆ ; ತಳಮಳ. ೩. ಸೋರುವಿಕೆ ; ಒಸರುವಿಕೆ. ೪. ಕರಗುವಿಕೆ ; ದ್ರವಿಸುವಿಕೆ. ೫. ನಿಂದೆ; ಬಯ್ಗುಳು. ೬. ಪ್ರಜ್ಞೆ ; ಬುದ್ಧಿಶಕ್ತಿ. ೭. ಅಳಿವು ; ವಿನಾಶ. ೮. [ಕಾವ್ಯಮೀ]ಸಂಸ್ಕೃತನಾಟಕದ ಸಂಧ್ಯಂಗಗಳಲ್ಲಿ ಒಂದು. [ಸಂ.]

ವಿದ್ರವಣ (ನಾ). ೧. ನಾಶ ; ಧ್ವಂಸ : ರುದ್ರರೂಪದ ದೈತ್ಯ ಬಂದನು ರಾಮನಿದ್ದೆಡೆಗೆ ನಿದ್ರಿತರನಾಲಿಸುತ ಮೆಲ್ಲನೆ ವಿದ್ರವಣವನು ಮಾಳ್ಪೆನೆನುತಾ ಕ್ಷುದ್ರರೂಪವ ತಾಳಬೇಕೆನುತಸುರನನುವಾದ (ಶಾಶಿರಾ. ೩೯-೨೮). ೨. ಗದಾಯುದ್ಧದಲ್ಲಿ ಬಳಸುವ ಒಂದು ಬಗೆಯ ಪಟ್ಟು, —ವರಸೆ : 'ನವವಿದ್ರವಣ' ಪರಾ. [ಸಂ.]

ವಿದ್ರಾಢ್ಯ (ನಾ). (?): ಮದಹರಕರುಣಾಪಾಂಗತುಂಗಂ ಮೃಡಾಂಗಂ ವಿದ್ರಾಢ್ಯಂ ಜಾಡ್ಯದೂರಂ (ಹಮ್ಮೀರ. ೧-೯). [?]

ವಿದ್ರಾವ (ನಾ). ೧. ಓಟ ; ಪಲಾಯನ. ೨. ಕರಗುವಿಕೆ. [ಸಂ.]

ವಿದ್ರಾವಣ (ಗು). ೧. ಹೊಡೆದೋಡಿಸುವ ; ಅಟ್ಟುವ : ಮಹೀವಲ್ಲಭೆ ನೋಂತಳೆನಿಸಿದರಿನ್ನಪಮದವಿದ್ರಾವಣವಿಜಯಭುಜಂ(ಮಲ್ಲಿಪು. ೩-೨);ಸುಕವಿನಿಕರ ದಾರಿದ್ರ್ಯವಿದ್ರಾವಣದ್ರವಿಣಧಾರಧಾರಾಧರಕರಾಗ್ರಪರಿಹಿತಸುರಧರಾರುಹಪ್ರಭಾವನುಂ . . . ಎನಿಸಿ (ರಾಜಶೇ. ೫-೧೨). (ನಾ). ೨. ಓಡಿಸುವಿಕೆ ; ಅಟ್ಟುವಿಕೆ. ೩. ಲೋಹ ಮುಂತಾದುವನ್ನು ಕರಗಿಸುವಿಕೆ. ೪. ನಾಶ ; ಅಳಿವು. ೫. ನಾಶಗೊಳಿಸುವವನು ; ಧ್ವಂಸಮಾಡುವವನು : ತದುಪದ್ರವಪ್ರತೀಕಾರ ವಿಧಾನಸಮರ್ಥನಖಿಳಕಾದ್ರವೇಯವಿದ್ರಾವಣಂ . . . ಮುಕುಂದನಂ ಕಂಡು (ಪಂಚತಂ. ೧೭೧-೭) ; ದನುಜಕುಲವಿದ್ರಾವಣನು ನಸುನಗುತ ಬೋಳೈಸಿದನು ತೇಜಿಗಳ (ಕುಮಾರ್ದ್ರೋ. ೧೦-೨೭). [ಸಂ.]

ವಿದ್ರಾವಿತ (ಗು). ೧. ಓಡಿಸಿದ ; ಅಟ್ಟಿದ : ಸಲ್ಲಕ್ಷಣಗುಣನಿಧಿಗಳ್ ಪಲ್ಲಣಂಗಟ್ಟಿ ಬಂದಿರ್ದುವು ಹೇಷಾಘೋಷವಿದ್ರಾವಿತರಿಪುಮಹಿಭೃಚ್ಛಾತುರಂಗಂ ತುರಂಗಂ (ಪುಷ್ಪಪು. ೫-೧೦). ೨. ಲೋಹ ಮುಂತಾದುವನ್ನು ಕರಗಿಸಿದ. [ಸಂ.]

ವಿದ್ರುತ (ಗು). ೧. ಕಳೆದುಹೋದ ; ನೀಗಿಕೊಂಡ : ಅಪರಿಮಿತಸ್ತಂಭೇರ ಮಾನೀಕಶೀಕರನೀಹಾರವರ್ಷದಿಂದಮುಷ್ಣಾಂಶುಮಾಲಿಪ್ರತಾಪಮುಮೂರ್ಜಿತಾರಾತಿ ರಾಜಪ್ರತಾಪಮುಮಂ ವಿದ್ರುತೋ[ಪಾಠಾಂ. ಅವಿದ್ರುತೋ]ದ್ರೇಕಮಾಗೆಯುಂ (ಆದಿಪು. ೧೩-೭೭ ವ). ೨. ನಾನಾದಿಕ್ಕುಗಳಿಗೆ ಚೆದರಿದ, — ಓಡಿದ : ವಿದ್ರುತಪಶುಪದ ಹತಿಪತಿತಾದ್ರಿಪ್ರಭಗೋಮಯೋಚ್ಚಯಂ ಸಮದವೃಷೋಪದ್ರವದರಿದ್ರ ಬಾಲವಟ ದ್ರುಮಮೆಸೆದಿರ್ದುದದಟ ಬಾಹಿರದೇಶಂ (ಲೀಲಾವ. ೫-೯೭). ೩. ಕ್ಷೋಭೆಗೊಳಗಾದ ; ಕಲಕೆಲ್ಪಟ್ಟ. ೪. ಹೆದರಿದ; ಗಾಬರಿಗೊಂಡ. ೫. ಕರಗಿದ ; ನೀರಾದ. (ನಾ). ೬. ನೀರಾದ ಪದಾರ್ಥ; ದ್ರವ. [ಸಂ.]

ವಿದ್ರುಮ (ನಾ). ೧. ನವರತ್ನಗಳಲ್ಲಿ ಒಂದು ; ಹವಳ : ವಿದ್ರುಮದಶನಚ್ಛದೆ ಕೋಪೋದ್ರೇಕದಿನಿರ್ದು ಪೋಗೆ ತೆಗೆದಪ್ಪಿದೊಡುನ್ನಿದ್ರಾಂಭೋಜಾಸ್ಯೆಗೆ ಮದನದ್ರವಮುಂ ಕಣ್ಣ ನೀರುಮುಣ್ಮಿದುವಾಗಳ್ (ಆದಿಪು. ೧೨-೪೪) ; ತನುಜನ ತೇಜಮನಪಹರಿಪನಿವನೆನುತ್ತಬ್ಧಿ ಮುಳಿದು ಸಂಧ್ಯಾರುಣಸೂರ್ಯನ ಕಿರಣಮನುಚಿ ಸೆಜೆವಿಡಿದನೆನೆ ವಿರಾಜಿಪುದು ವಿದ್ರುಮಂ ಸದ್ರುಚಿಯಿಂ (ರಾಜಶೇ. ೧-೯೨). ೨. ಕುಡಿ; ಚಿಗುರು : ಬಾಡದ ಕಲ್ಪವಲ್ಲಿ ಕಲೆಯಿಲ್ಲದ ಪೂರ್ಣಶಶಾಂಕಬಿಂಬವಿರ್ಪೋಡದ ವಿದ್ರುಮಂ (ನಳಚಂ. ೧೩೨). ೩. ಅತಿಶಯವಾದ ಮರ ; ದೊಡ್ಡ ಮರ. ೧,೩ : ವನರಾಶಿಯೊಳಗೆ ಬೆಳೆದೆಸೆವನೇಕವಿದ್ರುಮದ ಲತೆಯ ಪೊಂಪುಟಿಯವೊಲಾ ವನರಾಶಿಯೊಳಗೆ ಬೆಳೆದೆಸೆವನೇಕವಿದ್ರುಮದ ಲತೆಯ ಪೊಂಪುಟಿ ರಯ್ಯಂ (ಪುಷ್ಪಪು. ೯-೨೧). [ಸಂ.]

ವಿದ್ರುಮದ್ರುಮ (ನಾ). ಹವಳದ ಮರ : ಲತಾಪ್ರತಾನಸಂವಳಯಿತ ವಿದ್ರುಮ ದ್ರುಮವಿಳಾಸವಿಶೇಷಿತಬಾಡವಾನಳಾವಿಳಜಳಮಂ ಮನಂ ಬಯಸಿ ನೋಡಿ ದರ್ನರ್ಣವಮಂ ಗುಣಾರ್ಣವಂ (ಪಂಪಭಾ.೪-೨೫). [ಸಂ.]

ವಿದ್ರುಮಲತೆ (ನಾ). ೧. ಹವಳದ ಬಳ್ಳಿ : ಉಜ್ವಳಿಪ ವಿದ್ರುಮಲತಾಂಕುರದಂತೆ ಕೆಂದಳಿರ ತೊಂಗಲಂತೆ ಪಸರಿಸುವ ಪದ್ಮರಾಗಮುಕುಟಮುಂ . . . ಮೆಜೆಯೆ (ಪುಷ್ಪಪು. ೫-೧೩ವ); ಉತ್ತಮವರ್ಣದ ವಿದ್ರುಮಲತೆ ಸಮುದ್ರಮಧ್ಯದಿಂದ ಎದ್ದು ಬಂದು, ಶಾಂತಲೆಯ ಪಲ್ಲವಾಧರಗಳಿಗೆ ತನ್ನ ವರ್ಣವನ್ನು ಕೊಟ್ಟುಹೋಯಿತು (ಶಾಂತಲಾ. ೪೧). ೨. ಒಂದು ಬಗೆಯ ಸುಗಂಧದ್ರವ್ಯ : "ಸುಷಿರಾ, ವಿದ್ರುಮಲತಾ . . . ಅಂಜನಕೇಶೀ – ೭ ನಳಿ ಎಂಬುವ ಗ್ರಂಧ್ಯದ್ರವ್ಯದ ಹೆಸರುಗಳು" (ಸಿದ್ಧಾಂತಿ.೧೫೨). [ಸಂ. ವಿದ್ರುಮಲತಾ]

ವಿದ್ರುಮವಲ್ಲರಿ (ನಾ). ೧. ಹವಳದ ಬಳ್ಳಿ. ೨. ದೊಡ್ಡಮರ ಮತ್ತು ಬಳ್ಳಿ. ೧,೨: ಆ ಮಹಾರ್ಣವಂ ಸಮುದ್ರವಾಗಿಯುಂ ಅಪಾರವಿಸ್ತಾರಿಯುಂ . . . ಅರಣ್ಯದಂತಗಣ್ಯವಿದ್ರುಮವಲ್ಲರೀವೇಲ್ಲಿತಮುಂ . . . ಚತುರ್ಮುಖನಂತೆ ಸರಸ್ವತೀಪತಿಯುಮೆನಿಸಿದುದು (ಜಗವಿ. ೧-೪೪ ವ).

[ಸಂ. ವಿದ್ರುಮವಲ್ಲರೀ (ವಿದ್ರುಮ + ವಲ್ಲರೀ ; ವಿ + ದ್ರುಮ + ವಲ್ಲರೀ)]

ವಿದ್ರುಮಾಧರ (ನಾ). ಹವಳದಂತೆ ಕೆಂಪಾಗಿರುವ ತುಟಿ ; ಚೆಂದುಟಿ: ವಿದ್ರುಮಾಧರ ಶಾನ್ತಿಸೇನ ಮುನೀಶನಾಕ್ಕಿವ ವೆಳ್ಗೊಳದ್ರಿಮೇಲಶನಾದಿ ವಿಟ್ಟಪುನರ್ಭವಕ್ಕೆಜೆ ಆಗಿ (ಎಕ.II, ೩೧-೩; ಸು:650); ಸುರುಚಿರವಿದ್ರುಮಾಧರದಿನುತ್ತಮಮೌಕ್ತಿಕದಂತದಿಂ ಮನೋಹರಹರಿನೀಳಕುಂತಳದಿಂ . . . ಎಸೆದುದಂದಮರೀತತಿ (ಪುಷ್ಪಪು. ೧೦-೩೭). [ಸಂ.]

ವಿದ್ರುಮಾಧರೆ (ನಾ). ಹವಳದಂತೆ ಕೆಂಪಾದ ತುಟಿಗಳುಳ್ಳವಳು : ಭದ್ರೇಭಗಮನೆ ಬಾಣಾಬ್ಜನಂಗನೆ . . . ವಿದ್ರುಮಾಧರೆ ಶ್ವೇತಸರಸಿಜಪಯೋಧರೆ (ನವಮೋ. ೩-೧೪).

[ಸಂ. ವಿದ್ರುಮಾಧರಾ]

ವಿದ್ರೂಪ (ನಾ). ೧. ವಿಕಾರಹೊಂದಿದ ರೂಪ ; ಕುರೂಪ : ಒಂದು ವೇಳೆ ಜನ್ಮಾಂತರ ಇದ್ದುದಾದರೆ, ನನ್ನ ಮುಖದಲ್ಲಿ ಸುರೂಪವೂ ಉಪಾಧ್ಯಾಯರ ಮುಖದಲ್ಲಿ ವಿದ್ರೂಪವೂ ಮತ್ತೆ ಇದೇ ಬಗೆಯಾಗಿ ಪ್ರಕಟಗೊಳ್ಳಲಿ (ಇಪ್ಪಕ.೪೪೬). ೨. ವಿಲಕ್ಷಣವಾದುದು; ಅಸಹಜತೆಯಿಂದ ಕೂಡಿದುದು : ಆಗ ಫಾಕ್ಸನ ಮುಖದಲ್ಲಿ ಕಾಣುತ್ತಿದ್ದ ವಿದ್ರೂಪದ ಕಿರುನಗೆಯ ಕಡೆಗೆ ಪಂತನ ದೃಷ್ಟಿಯು ಇರದಿದ್ದದ್ದೇ ವಿಹಿತವಾಯಿತು (ಅಂಬಿಕ. ೭೨). ೩. ಭೀಕರವಾದುದು; ಭಯಂಕರವಾದುದು : ಇತ್ತಲುಲ್ಕಾಪಾತವಿಸರ ವಿದ್ರೂಪಾಗಿ ತೋರಿದಾ ತಾರಾಧಿನಾಥರತಿ ತಲ್ಲಣಿಸಲು (ಲಕ್ಷ್ಮಿಭಾ. ೨೪-೨೦). [< ಸಂ. ವಿರೂಪ]

ವಿದ್ರೂಪಿ (ನಾ). ರೂಪವಿಲ್ಲದವನು ; ಕುರೂಪಿ ; ವಿಕಾರಿ : ವಿರಸಂ ವಿದ್ರೂಪಿ ಮೂರ್ಖಂ ವಿಷಯವಿಕಳನೇನಪ್ಪೆನೆಂತಿರ್ಪೆನಯ್ಯೋ (ರಕ್ಷಾಶ. ೨೮).

[ವಿದ್ರೂಪ + -ಇ]

ವಿದ್ರೋಹ (ನಾ). ೧. ಅತಿಯಾದ ವಿಶ್ವಾಸಘಾತ, — ಕೇಡಿಗತನ : ಸಾರಿದನು ಸೋದರದ್ರೋಹಿಯೆಂದನುಜನಂ ಹೊರಿಸಿದನು ರಾಜವಿದ್ರೋಹದಪರಾಧಮಂ (ಶ್ರೀರಾಮಾ. ೨೮೧-೧೦೩). ೨. ಹೆಚ್ಚಾದ ದ್ವೇಷ, — ವೈರ : ಚಾರುಲತೆ ನಡುನಡುವೆ ಕೋಪವನ್ನೂ ವಿದ್ರೋಹವನ್ನೂ ವ್ಯಕ್ತಗೊಳಿಸುತ್ತಿದ್ದಳು (ಇಪ್ಪಕ. ೨೨೭). ೩. ದಂಗೆ; ಬಂಡಾಯ : ಫಕೀರರೇ ನಮಗೇಕೆ ಈ ವಿದ್ರೋಹದ ಚಿಂತೆ? (ದೌಲತ್. ೨೧೯). [ಸಂ.]

ವಿದ್ರೋಹಿ (ಗು). ೧. ವಿರೋಧಿಸಿದ ; ಎದುರುಬಿದ್ದ : ವಿದ್ರೋಹಿ ಸಾಮಂತರನ್ನ ಡಗಿಸಿ . . . ದೇಶದ ಭದ್ರತೆಯನ್ನು ಬಲಪಡಿಸಿದ (ಕವಿಕೋ. I, ೭೨೦). (ನಾ). ೨. ದಂಗೆಕೋರ ; ಬಂಡಾಯಗಾರ : ಸುಲ್ತಾನರ ಕಡೆಯವರು ಯಾರೆ ಆಗಲಿ . . . ಅವರ ತಲೆಯನ್ನು ವಿದ್ರೋಹಿಗಳು ಹಾರಿಸಿ ಬಿಡುತ್ತಾರೆ (ದೌಲತ್. ೨೧೯). [ಸಂ. ವಿದ್ರೋಹಿನ್]

ವಿದ್ವಜ್ಜನ (ನಾ).೧. ಪಂಡಿತ ; ವಿದ್ವಾಂಸ. ೨. ಪಂಡಿತರ ಗುಂಪು ; ವಿದ್ವಾಂಸರ ಸಮುದಾಯ : ವಿನಯಂ ಸಹಜಂ ಕೃತ್ರಿಮವೆನಿಸಿದುವವು ಬೇಜೆವೇಜೆ ವಿದ್ವಜ್ಜನಮಂ ಮನದಗೊಳಿಸುವುವಿವೆರಡುಂ ನಿನಗೊಳವಾರಾರ ಮನಮುಮಂ ರಂಜಿಸವೇ (ಆದಿಪು. ೧೪-೬೩); ನಿಖಿಲವಿದ್ವಜ್ಜನಂ ಮೆಚ್ಚೆ ರುದ್ರಾಂಕನೆ ಪೇಟ್ದಂ . . . ಸಕಲಬುಧಹೃದ್ಯಂ ಸಮಂತೀ ಪ್ರಬಂಧಂ (ಜಗವಿ.೧-೨೨).

ವಿದ್ವಜ್ಜನವನಜರಾಜಹಂಸ = ವಿದ್ವಾಂಸರ ಸಮೂಹದಲ್ಲಿ ರಾಜಹಂಸದಂತಿರುವವನು; ಒಂದು ಬಿರುದು : ಜನಪದಯುಗಳೋದಯಾಚಳಾರ್ಕ್ಕಂ

ವಿದ್ವಜ್ಜನವನಜ ರಾಜಹಂಸಂ ಜನಸಂಸ್ತುತನೆನಿಸಿ ದೇವರಾಜಂ ನೆಗಳ್ದಂ (ಎಕ. VII (R), ನಾಗಮಂ. ೬೪-೪೯ ; 1145). [ಸಂ.]

**ವಿದ್ವತ್ತು** (ನಾ). ಪಾಂಡಿತ್ಯ ; ಜ್ಞಾನ : ಅವನ ಕವಿತ್ವನಿವೇದನೆಯಾದ 'ಶ್ರದ್ಧಾಂಜಲಿ' ಅವನ ವಿದ್ವತ್ತಿಗೊಂದು ಪ್ರತೀಕ (ಹೊಸಕ್ಕ.೩೭). [< ಸಂ. ವಿದ್ವತ್ತಾ]

**ವಿದ್ವತ್ತೆ** (ನಾ). = ವಿದ್ವತ್ತು : ಸಂಶೋಧನವು ವಿದ್ವತ್ತೆಯ ಆರಾಧನವಾಗಿರುವುದರಿಂದ ಮೆಚ್ಚುಗೆಯನ್ನು ಗಳಿಸುವ ಕೆಲಸವೂ ಆಗಿದೆ (ಸಂಶೋಧ. ೧೯೭) ; ಅವರ ವಿದ್ವತ್ತೆಯನ್ನು ಪರೀಕ್ಷಿಸಲು ರಾಜನು ಹೊರಗಿನ ವಿದ್ವಾಂಸರನ್ನು ಆಮಂತ್ರಿಸುತ್ತಿದ್ದನು (ಕರ್ನಾಕ.೪೧). [ಸಂ. ವಿದ್ವತ್ತಾ]

**ವಿದ್ವತ್ಪರೀಕ್ಷೆ** (ನಾ). ೧. ಒಬ್ಬ ವಿದ್ಯಾರ್ಥಿಯು ತನ್ನ ವಿದ್ಯಾಭ್ಯಾಸದಲ್ಲಿ ಸಂಪೂರ್ಣಪಾಂಡಿತ್ಯವನ್ನು ಪಡೆದಿದ್ದಾನೆಯೆ ಎಂಬುದನ್ನು ಪರೀಕ್ಷಿಸಲು ನಡೆಸುವ ಪರೀಕ್ಷೆ : ವಿದ್ವತ್ಪರೀಕ್ಷೆಯದಾದ ಕಾರಣ ಒಬ್ಬೊಬ್ಬರೂ ಪ್ರತ್ಯೇಕಸ್ಥಳಗಳಲ್ಲಿ ಕುಳಿತು ಬರೆದು ಪ್ರತ್ಯೇಕವಾಗಿ ಹೇಳಬೇಕೆಂದು ನಿಬಂಧನೆಯಾಯಿತು (ಕಥವಿ.೩೪೮). ೨. ಸಾಹಿತ್ಯ, ಸಂಗೀತ ಮುಂತಾದುವುಗಳನ್ನು ಕಲಿಯುವ ವಿದ್ಯಾರ್ಥಿಯು ತನ್ನ ಕಲಿಕೆಯ ಕೊನೆಯ ಘಟ್ಟದಲ್ಲಿ ಕೂಡಬೇಕಾದ ಪರೀಕ್ಷೆ : ಅವಳು ಸಂಗೀತದ ವಿದ್ವತ್ಪರೀಕ್ಷೆಯಲ್ಲಿ ಮೊದಲನೆಯವಳಾಗಿ ತೇರ್ಗಡೆಯಾದಳು (ರೂಢಿ). [ಸಂ. ವಿದ್ವತ್ಪರೀಕ್ಷಾ]

**ವಿದ್ವತ್ಪೂರ್ಣ** (ನಾ). ಪಾಂಡಿತ್ಯದಿಂದ ಕೂಡಿದುದು : ಶ್ರೀಗೋವಿಂದಪೈಗಳು 'ನಮ್ಮ ಹಿರಿಯರನ್ನು ಕುರಿತು' ಎಂಬ ವಿದ್ವತ್ಪೂರ್ಣವಾದ ಹಾಗೂ ವಿಮರ್ಶಾತ್ಮಕವಾದ ಲೇಖನದಲ್ಲಿ ಗೌಡಸಾರಸ್ವತರ ಮೂಲವಾಸಸ್ಥಾನವು ಸಾರಸ್ವತದೇಶವೆಂದೂ . . . ತಿಳಿಸುತ್ತಾರೆ (ತುಳುನಾ. ೧೭೦). [ಸಂ.]

**ವಿದ್ವತ್ಸಂಭಾವನೆ** (ನಾ). ವಿದ್ವಾಂಸರಿಗೆ ತೋರುವ ಆದರ ಮತ್ತು ಗೌರವಪೂರ್ವಕವಾಗಿ ಅವರಿಗೆ ಕೊಡುವ ಕಾಣಿಕೆ : ಅವರ ಮನೆಯ ಸಮಾರಂಭದಲ್ಲಿ ಪಂಡಿತರಿಗೆ ನೂರುರೂಪಾಯಿ ವಿದ್ವತ್ಸಂಭಾವನೆ ನೀಡಿದರು (ರೂಢಿ). [ಸಂ. ವಿದ್ವತ್ಸಂಭಾವನ]

**ವಿದ್ವತ್ಸಭೆ** (ನಾ). ವಿದ್ವಾಂಸರ ಕೂಟ ; ಪಂಡಿತರ ಗೋಷ್ಠಿ : ದೋಷಂಗಳಿಂತು ಮಿಗೆ ಸಂಶ್ಲೇಷದೊಳಾದಂದು ಸಕಲವಿದ್ವತ್ಸಭೆಯೊಳ್ದೂಷಿಸುಗುಂ ಕೃತಿವಧುವಂ (ಕವಿರಾ. ೧-೧೦೦) ; ರವಿಸಿದ್ಧಾಂತಪಾಠಕರಷ್ಟಭಾಷಾಕವಿಗಮಕಿಗಳು ತಾರ್ಕಿಕರು ವಿವಿಧವಿದ್ವತ್ಸಭೆ ನೆರೆದುದು (ಮೋಹತ. ೩-೪೦). [ಸಂ. ವಿದ್ವತ್ಸಭಾ]

**ವಿದ್ವತ್ಸೇವೆ** (ನಾ). ಕಾವ್ಯಜ್ಞರ ಮಾರ್ಗದರ್ಶನದಲ್ಲಿ ಮಾಡುವ ಕಾವ್ಯಾಭ್ಯಾಸ : ಪ್ರತಿಭೆಯುಮಭ್ಯಾಸಮುಂ ವಿದ್ವತ್ಸೇವೆಯುಂ ಕಾವ್ಯಪರಿಚಯಮುಂ ಕವಿತೆಗೆ ಕಾರಣಂ (ಶಮದ. ೧೪೪ ಪ್ರಯೋ). [ಸಂ. ವಿದ್ವತ್ಸೇವಾ]

**ವಿದ್ವದರ್ಥಂ** (ಅ). ವಿದ್ವತ್ತಿಗೋಸ್ಕರ; ಪಾಂಡಿತ್ಯದ ಪೋಷಣೆಗಾಗಿ: ಪರಮಾರ್ಥಂ ವಿದ್ವದರ್ಥಂ ತವಿಸದನ ಧನಂ ವ್ಯರ್ಥಂ (ಎಕ. V, ಬೇಲೂರು. ೧೨೨-೪೪ ; 1133). [ಸಂ.]

**ವಿದ್ವದಾಸ್ಥಾಯಿಕೆ** (ನಾ). = ವಿದ್ವತ್ಸಭೆ : ಕಪಟಪಟು[ಪಟು] ಮನೋಗರ್ವಪರ್ವತಂ ನುರ್ಗಿ ನುರ್ಚುನೂಱಾದುದು ಭೂಮಿಪವಜ್ರಾಯುಧವಾಗ್ವಜ್ರಪಾತದಿಂ ನೆರೆದ ವಿದ್ವದಾಸ್ಥಾಯಿಕೆಯೊಳ್ (ಶಾಂತಿಪು. ೮-೧೪೮). [ಸಂ. ವಿದ್ವದಾಸ್ಥಾಯಿಕಾ]

**ವಿದ್ವದ್ಗೋಷ್ಠಿ** (ನಾ). = ವಿದ್ವತ್ಸಭೆ : ಕೃಷ್ಣರಾಜಪ್ರಭುಗಳು ವಿದ್ವದ್ಗೋಷ್ಠಿಯಲ್ಲಿ ಮಂಡಿಸಿದರೆಂದರೆ ಎಲ್ಲರೊಡನೆಯೂ ಬಲು ಧಾರಾಳವಾಗಿ ಮಾತನಾಡುತ್ತಿದ್ದರು (ಕಥವಿ. ೩೬೬) ; ವಿದ್ವದ್ಗೋಷ್ಠಿಗಳಲ್ಲಿ ಇವನ ಕೀರ್ತಿ ಗಾನವಾಗುತ್ತದೆ (ಚಿತಂಬಾ. ೬೬). [ಸಂ.]

**ವಿದ್ವಾಂಸ** (ನಾ). ೧. ವಿಜ್ಞಾನ, ಸಂಗೀತ, ಶಾಸ್ತ್ರ ಮುಂತಾದ ಜ್ಞಾನಶಾಖೆಗಳಲ್ಲಿ ಪಾಂಡಿತ್ಯವನ್ನು ಹೊಂದಿರುವವನು ; ಜ್ಞಾನಿ : ಆ ವಾಗೀಶಂ . . . ಎಂತಪ್ಪ ವಿದ್ವಾಂಸರಂ ವಾದದಿಂ ಮಿಗುತೆ ಸವಣರಂ ಕೂಡಿಕೊಂಡತಿಸಂಭ್ರಮದೊಳಿರಲು (ವಾಗೀಶ. ದೇ. ೨೫೪-೪); ಹಿರಿಯ ವಿದ್ವಾಂಸರ ಸಂಗೀತವನ್ನು ಕೇಳಿ ಕಲಿಯಬೇಕೆಂಬುದು ಶ್ರೀನಿವಾಸಯ್ಯಂಗಾರ್ಯರಿಗೆ ಮನವರಿಕೆಯಾಗಿಯೇ ಇತ್ತು (ಸಂಗೀತ. ೫೩). ೨. ಹಿಂದಿನ ಕಾಲದಲ್ಲಿ ರಾಜನ ಆಸ್ಥಾನದಲ್ಲಿ ಪಂಡಿತರಿಗೆ ಕೊಡುತ್ತಿದ್ದ ಒಂದು ಗೌರವಪೂರ್ಣವಾದ ಪದವಿ,–ಸ್ಥಾನ : ರಾಮನಾಡ್ ಸಂಸ್ಥಾನದ ವಿದ್ವಾಂಸರಾಗಿಯೂ ಅವರು ನೇಮಿತರಾದರು (ಸಂಗೀತ. ೫೩). [ಸಂ. ವಿದ್ವಸ್]

**ವಿದ್ವಾನ್, ವಿದ್ವಾನು, ವಿದ್ವಾನ್ನು** (ನಾ). ೧. = ವಿದ್ವಾಂಸ ೧. ೨. ವಿದ್ವತ್ತಿನ ಕುರುಹಾಗಿ ವಿದ್ವಾಂಸರ ಹೆಸರಿನ ಹಿಂದೆ ಸೇರುವ ಒಂದು ಪದ : ಆಚಾರ್ಯರ ಶಿಷ್ಯವರ್ಗಕ್ಕೆ. . . ಮದ್ರಾಸಿನ ಕಲಾಕ್ಷೇತ್ರದ ವಿದ್ವಾನ್‌ಪಶುಪತಿಯವರೂ ಸೇರಿದ್ದಾರೆ (ಸಂಗೀಚಂ. ೨೦೪). **ವಿದ್ವಾನು** : ೧. ತದ್ವೇದಮುಖದಿ ನಾ ಜನಿಸಿರುವ ಕಾರಣದಿ ವಿದ್ವಾನುಗಳು ವೇದವತಿಯೆಂಬರು (ರಾವಣೋ.೩೮). **ವಿದ್ವಾನ್ನು**: ೧. ಪುರೋಹಿತ ಸಂಗಮದೇವಗಳು ಅರಮನೆಯ ವಿದ್ವಾಂನುಗಳನು ಕೂಡಿಕೊಂಡು ಯಿತ್ತಂಡದ ಶಾಸನವನು ವೋದಿಸಿ ನೋಡಿ (ಸೌಇಇ. XX, ೨೩೨-೯; 1412). [< ಸಂ. ವಿದ್ವಸ್]

**ವಿದ್ವಾನು** 'ವಿದ್ವಾನ್' ನೋ.

**ವಿದ್ವಾನ್ನು** 'ವಿದ್ವಾನ್' ನೋ.

**ವಿದ್ವಿಟ್ಖೇದ** (ನಾ). ವೈರಿಗೆ ಒದಗುವ ದುಃಖ,–ಸಂಕಟ : ಷಟ್ಖಂಡಕ್ಷಿತಿನಾಥನ ಪೃಥಿಕಪುಣ್ಯಂ ತತ್ಪ್ರಭಾಸಾದಿವಿದ್ವಿಟ್ಖೇದೋದಯಹೇತುವಪ್ಪತುಳವಿಕ್ರಾಂತಂ (ಚಂದ್ರಪ್ರ. ೫-೩೫). [ಸಂ.]

**ವಿದ್ವಿಟ್ತತಿ** (ನಾ). ವೈರಿಗಳ ಗುಂಪು,– ಸಮೂಹ : ಕಣ್ಗೆಡೆ ವಿದ್ವಿಟ್ತತಿಯುರ್ಬಿ ಪರ್ಬಿ ವಿಪುಳ ಬ್ರಹ್ಮಾಂಡಮಂ ತುಂಬಿ ತಳ್ತೆಡೆಗೊಂಡತ್ತು ಧಳಂಧಳಂ ಧಳನದದ್ಗಂಭೀರ ಭೇರೀರವಂ (ರಾಜಶೇ ೧೩-೬೫). [ಸಂ.]

**ವಿದ್ವಿಟ್ತಮ** (ನಾ). (ಬೆಳಕಿಗೆ) ಶತ್ರುವಾದ ಕತ್ತಲೆ : ನಿಜಪಾದಾಗ್ರವಿಭಿನ್ನದೈತ್ಯ ಕರಿಕುಂಭೋನ್ಮತ್ತ ಮುಕ್ತಾಮಣೀವ್ರಜಸಂಧ್ಯಾಭಗಣಂ ಸರಾಗನಿಜಧಾಮಧ್ವಸ್ತ ವಿದ್ವಿಟ್ತಮಂ (ವಿಷ್ಣುಪು. ೧-೧-೬). [ಸಂ.]

**ವಿದ್ವಿಟ್ನೃಪತಿ** (ನಾ). ವಿರೋಧಪಕ್ಷದ ದೊರೆ ; ಶತ್ರುರಾಜ : ಅನ್ನೆನಿಸಿದ ಜಯಲಕ್ಷ್ಮೀಕಾನ್ತಂ ದುಷ್ಟಾಶ್ವಚಯಕಿದಾನೆನ್ನನ ರೇವನ್ತಂ ವಿದ್ವಿಟ್‌ನ್ರಿಪತಿ ಕ್ರಿತಾನ್ತಂ (ಸೌಇಇ. XX, ೪೭-೨೭; 1074). [(ಸಂ. ವಿದ್ವಿಷ್) + ನ್ರಿಪತಿ]

**ವಿದ್ವಿಟ್ಸ್ತ್ರೀ** (ನಾ). ಶತ್ರುವಿನ ಹೆಂಡತಿ : ಶ್ರುತಿಕಷ್ಟಕ್ಕೆ — "ವಿದ್ವಿಟ್ಸ್ತ್ರೀಯರೆಂದು" ಮಾಡಲಾಗದು (ಶಮದ. ೬೩ ಪ್ರಯೋ). [ಸಂ.]

**ವಿದ್ವಿಷ** (ಗು). ೧. ವಿರೋಧಿಯಾದ ; ಪ್ರತಿಸ್ಪರ್ಧಿಯಾದ : ಅರುಹಮುನಿಗಳು ಮಂತ್ರತಂತ್ರಕುಯಂತ್ರವಿದ್ಯೆಗಳ ವಿರಚಿಸುತ್ತ ಮಹೇಂದ್ರಜಾಲಾಪರಿಮಿತಾದ್ಯಯ ಶೂನ್ಯಮಾಯಾಕರಣ ವಿದ್ವಿಷಜ್ಜನವೃತ್ತಿಯೊಳಿಂತು ತರ್ಕಿಸಲು (ಬಸವು. ೫೧-೧೧). (ನಾ). ೨. ಹಗೆತನ ; ಶತ್ರುತ್ವ. ೩. ಹಗೆ ; ವೈರಿ ; ವಿರೋಧಿ : ರಾಹು ತನ್ನ ಹರಿನೀಳವಿಮಾನಮನೇಱುವಂತಿರಾಗಡೆ ಕಡುಕೈದು ಪುಷ್ಪಕವಿಮಾನಮನೇಱಿ ದನಿಂದ್ರವಿದ್ವಿಷಂ (ಪಂರಾಮಾ. ೯-೭೪). [ಸಂ.]

**ವಿದ್ವಿಷನ್ಮಂಡಲ** (ನಾ). ಶತ್ರುಗಳಿಗೆ ಸೇರಿದ್ದ ನಾಡು: ಮೆಯ್ಸಿತ್ತ ಬಾಹಾಬಲದಿಂ ಬೆಂಕೊಂಡವಿಂದಪ್ರಭರನಹಿತರಂ ಸಾಧಿಪೆಂ ವಿದ್ವಿಷನ್ಮಂಡಲಮಂ (ಪಂರಾಮಾ. ೬-೧೪೯). [ಸಂ.]

**ವಿದ್ವಿಷ್ಟ** (ಗು). ೧. ಶತ್ರುವಾದ ; ವೈರಿಯಾದ : ಬಳವದ್ವಿದ್ವಿಷ್ಟವಿದ್ಯಾಧರ ಕರಟಶಿರಶ್ಶುಕ್ತಿಸಂಭೂತ ಮುಕ್ತಾವಳಿಯೊಳ್ಕಣ್ಗೆಟ್ಟು (ಆದಿಪು. ೧-೭೭); ವಿದ್ವಿಷ್ಟಸೈನ್ಯಮಾರಣಮಂತ್ರಾಕ್ಷರಮಂ ಪೊನ್ನೊರೆಯಿಂದಂ ಬರೆದಂತಾ ನೃಪನ ತೋಳ ಬಾಳ್ಪೊಗರೆಸೆಗುಂ (ಮಲ್ಲಿಪು. ೩-೧೫). (ನಾ). ೨. ಹಗೆ ; ಶತ್ರು ; ವೈರಿ : ಮಾಱೂನ್ತ ವಿದ್ವಿಷ್ಟರನದಟಲೆಯಲ್ಬಣ್ಣಿಸಲ್ಬಣ್ಣಿಸಲ್ಕ[ರ್ಕ]ನ ಚಕ್ರಂ ಸೊರ್ಕೆ ಮಾರ್ಕೊಣ್ಬು (ಸೌಇಇ. XX, ೩೧-೨೭; 1044); ಲಂಕೇಶ್ವರನನಮರವಿದ್ವಿಷ್ಟನಂ ಕೋಪದಿಂದೋವದೆ ಕೊಂದಾಂ ತಂದಪೆಂ ದೇವಿಯಂ (ಪಂರಾಮಾ. ೧೧-೪೪). [ಸಂ.]

**ವಿದ್ವಿಷ್ಟಬಲ** (ನಾ). ಶತ್ರುಸೈನ್ಯ ; ವೈರಿದಳ : ವೈರಿಗಜಘಟಾವಿಘಟನಮುಂ ತನಗಿದಿರ ನದಿರದೊಡ್ಡಿದ ವಿದ್ವಿಷ್ಟಬಲಂ ನೋಡೆ ನೋಡೆ ಕರಗುವುದಱಿಂ (ಪಂಪಭಾ. ೧೪-೩೭ ವ). [ಸಂ.]

**ವಿದ್ವಿಷ್ಟವಿದ್ರಾವಣ** (ನಾ). ಶತ್ರುವನ್ನು ಓಡಿಸುವವನು : ಅಂತು ತೋಱಿಯುಮೆರ್ದೆಯ ಮುಳಿಸು ನಾಲಗೆಗೆ ವರೆ ಸೈರಿಸಲಾಱದೆ ವಿದ್ವಿಷ್ಟ

ವಿದ್ರಾವಣನಿಂತೆಂದಂ (ಪಂಪಭಾ. ೨-೭೯ ವ); ಭದ್ರಾಸನಮಂ ದುಷ್ಟ ವಿದ್ವಿಷ್ಟ [ಪಾಠಾಂ. ಷ] ವಿದ್ರಾವಣನೆನಿಪ್ಪ ಶೈಲರಾಜನವಷ್ಟಂಭಿಸಲೊಡಂ (ಗಿರಿಕ. ೨-೧೦೫ ವ). [ಸಂ.]

**ವಿದ್ವೇಷ** (ನಾ). ೧. ಹಗೆತನ ; ವೈರ ; ಶತ್ರುತ್ವ : ಧರಣೀಚಕ್ರಮನೊಪ್ಪುಗೊಳ್ ಬಗೆಯದಿರ್ವಿದ್ವೇಷಮಂ (ಗದಾಯು. ೭-೪೪) ; ವಾಲಿ ಸುಗ್ರೀವರೆಂದೀರ್ವರೇಕೋದರರು ಮೇಲೆ ವಿದ್ವೇಷ ಸಂಭವಿಸಿತಿಬ್ಬರಿಗೊಂದುಕಾಲದೊಳು (ತೆಂಕರಾ. ೪-೨-೩೮). ೨. ಅಸಡ್ಡೆ ; ತಾತ್ಸಾರ : ವಿದ್ವೇಷವಿಲ್ಲದೆ ವಿಮರ್ಶಿಸುವ ಆಲೋಚನಾಶಕ್ತಿಯನ್ನು ಅವರಲ್ಲಿ ಬಿತ್ತಿ ಬೆಳೆಸಬೇಕು (ಶಿಕ್ಷದ. ೧೯). [ಸಂ.]

**ವಿದ್ವೇಷಕಾರಿ** (ನಾ). ಶತ್ರುತ್ವವನ್ನು ಹುಟ್ಟಿಸುವಂಥದು; ವೈರವನ್ನುಂಟು ಮಾಡುವಂಥದು : ಕನಕಲತೆಯುಮಾಕೆಗಮರಸಂಗಂ ಕ್ಷಣಮಾತ್ರವಿದ್ವೇಷಕಾರಿಯಪ್ಪ ಪುಷ್ಪಮಾಲೆಯಂ ಮಂತ್ರವಿದರುಪದೇಶದಿಂ ಮದ್ಯರಸನಿವೇದನವ್ಯಾಜದಿಂ ಪರಿಚಾರಿಕೆಯರ ಕೆಯ್ಯೊಳಟ್ಟುವುದುಂ (ಶಾಂತಿಪು. ೯-೫೦ ವ). [ಸಂ. ವಿದ್ವೇಷಕಾರಿನ್]

**ವಿದ್ವೇಷಣ** (ನಾ). ೧. ಹಗೆತನ ; ಶತ್ರುತ್ವ : ಉದ್ವೇಗಭರಂ ಸಭೆಗೆ ಜಗದ್ವಲ್ಲಭನಭಿಮತಕ್ಕೆ ವಿಘ್ನಮಪಾಯಂ ವಿದ್ವಜ್ಜನಕ್ಕೆ ಪಸುಗೆಗೆ ವಿದ್ವೇಷಣವಿದ್ದೆ ಬರ್ಪ ತೆಱದಿಂ ಬಂದಳ್ (ಪಂರಾಮಾ. ೬-೪೪). ೨. ಹಗೆ ; ಶತ್ರು ; ವೈರಿ. ೩. ವಾಮಾಚಾರ ಕ್ರಿಯೆಗಳಲ್ಲಿ ಒಂದು : ಕೆಲರ್ ಮೋಹನದಿಂ ಸಾಧಿಸುವ ಬಗೆಯೊಳಿರ್ದರ್ ಕೆಲರ್ ವೈರಿಗುಚ್ಚಾಟನಂ ಮಾಡುತಿರ್ದರ್ ಕೆಲರ್ ಪೂಣ್ಬು ವಿದ್ವೇಷಣಂ ಮಾಡುತಿರ್ದರ್ (ಜೀವಸಂ. ೪೧-೩೦ ರಗಳೆ). [ಸಂ.]

**ವಿದ್ವೇಷಿ** (ಗು). ೧. ಹಗೆತನವುಳ್ಳ ; ಶತ್ರುತ್ವದ. (ನಾ). ೨. ಹಗೆ ; ಶತ್ರು : ಆ ಚೈತ್ರವಾಹಿನಿ ಕಿರೀಟಿಯೆಡೆಗೈದಿದಳ್ . . . ವಿದ್ವೇಷಿಯಂ ಸಂಹರಿಸೆ ವಿಜಯದೃಢನಿಶ್ಚಯದಿ ಬಿಂಕದಿಂ ಮುಂಬರಿವ ಕಲಿಯ ವಿಕ್ರಮಗಮನವಿನ್ಯಾಸಮಂ ಮೆರೆದು (ಚಿತ್ರಾಂಗ. ೨೩-೬೧೫). [ಸಂ. ವಿದ್ವೇಷಿನ್]

**ವಿಧ** (ನಾ). ರೀತಿ ; ಬಗೆ ; ವಿಧಾನ ; ಕ್ರಮ : ಇಂತೀ ತ್ರಿವಿಧದಲ್ಲಿ ಪಂಚಕನಾದರೆ ಈಸುವಿಧದೊಳಗೆ ಅಂಗವಿಲ್ಲ ಮೇಲೆ ಸತ್ಪುರುಷರ ಸಂಗವಿಲ್ಲ ಯುಕ್ತಿ ಇಲ್ಲಾ ಎನಗೆ ಭಕ್ತಿಯೆಂತಹುದಯ್ಯಾ (ಬಸವ. ೮೮೮); ಆವ ಪರಿಯ ದೇಸಿಯಾಣ್ಮಗೆ ಬಗೆವರ್ಪುದಾ ವಿಧಗಳನಾರ್ಯೆದು ಭಾವಿಸಿ ತಿಳಿದುಟ್ಟು ತೊಟ್ಟು ಬಣ್ಣಿಗೆಯಿಂದ ಭಾವವ ಬಂದಿಗೊಳುವುದು (ಹದಿಬ. ೩-೧೭).

ವಿಧವಿಧ (ದ್ವಿರುಕ್ತಿ): ಕನ್ಯಾವಿವಾಹವು ವಿಧವಿಧವಾಗಿದೆ. ಆದರಲ್ಲಿ ರಾಜರು ಸ್ವಯಂವರವನ್ನು ಮೆಚ್ಚುತ್ತಾರೆ (ವಚಭಾ. ೫); ಉದಿತದಿನ! ಮುದಿತವನ ವಿಧವಿಧವಿಹಗಸ್ವನ (ಸಬೀಗೀ. ೭೭-೨). [ಸಂ.]

**ವಿಧರ್ಮ** (ನಾ). ೧. ಧರ್ಮಕ್ಕೆ ವಿರುದ್ಧವಾದುದು ,–ತರವಲ್ಲದುದು. ೨. ವಿರುದ್ಧಗುಣದಿಂದ ಕೂಡಿದುದು : ಸಧರ್ಮ ವಿಧರ್ಮಗಳೆಂದರೆ ಸಮಾನಗುಣದವು, ವಿರುದ್ಧಗುಣದವು ಎಂದರ್ಥವು (ಆರ್ಯಧ. ೧೨). ೩. ಪರಧರ್ಮ; ಅನ್ಯಧರ್ಮ. [ಸಂ.]

**ವಿಧರ್ಮಿ** (ನಾ). ಪರಮತಕ್ಕೆ ಸೇರಿದವನು ; ಬೇರೆ ಜಾತಿಯವನು : ವಿಮಲೆಯೂ ತಿಲೋತ್ತಮೆಯೂ ಕತಲೂಖಾನನ ಅಂತಃಪುರವಾಸಿಗಳಾಗಿದ್ದರೆಂದು ತಿಳಿದು . . . 'ಈ ವಿಧರ್ಮಿಯ ಉಪಪತ್ನಿಯನ್ನು ಮರೆತು ಬಿಡುತ್ತೇನೆ' ಎಂದು ನಿರ್ಧರ ಮಾಡಿದನು (ಬಂಕಿಮ. ೧೪೮). [ಸಂ. ವಿಧರ್ಮಿನ್]

**ವಿಧರ್ಷಿಣೆ** (ನಾ). ನೀತಿಗೆಟ್ಟವಳು ; ಜಾರೆ : "ಸ್ವೈರಿಣಿ ವಿಧರ್ಷಿಣೆ [ಪಾಠಾಂ. ದರ್ಶಿನಿ] ಯನೀತೆ . . . ಬಂಧಕಿಯೆನಲ್ಕೆ ಹಾದರದ ನಾರಿಯೆನಿಸಿಕ್ಕು" (ಮಂಗರಾ. ೯೦-೪). [ಸಂ. ವಿಧರ್ಷಿಣೀ]

**ವಿಧವತೆ** (ನಾ). ಗಂಡನನ್ನು ಕಳೆದುಕೊಂಡಿರುವ ಸ್ಥಿತಿ ; ವೈಧವ್ಯ : ರತಿವನಿತೆಗೆ ವಿಧವತೆಯಂ ಶ್ರುತದೇವಿಗೆ ಚತುರವೃತ್ತಿಯಂ ಮಾಳ್ಪ ತಪಶ್ರುತಮೆರಡು ನಿರುಪಮಮಾ ಕ್ಷಿತಿಯೊಳ್ ಶ್ರುತಕೀರ್ತಿದೇವಭಟ್ಟಾರಕರಾ (ಚಂದ್ರಪ್ರ. ೧-೩೫). [ಸಂ. ವಿಧವತಾ]

**ವಿಧವಾಲಿಂಗಿ** (ನಾ). ವಿಧವೆಯ ಲಾಂಛನವನ್ನುಳ್ಳವಳು : ವಿಧವಾಲಿಂಗಿ ದಾಸಿಯ ತನುವಿಕಾರಿಯನು . . . ರೋಧಿನಿಯನುಪ್ಪವಡಿಸುವ ಸಮಯದೊಳೆನಿಬರನು ಕಾಣ್ಬುದು ಮಹೀಶರಿಗಂಗವಲ್ಲ (ಕುಮಾರವ್ಯಾ. ಉ. ೩-೧೦೭). [ಸಂ. ವಿಧವಾಲಿಂಗಿನ್]

**ವಿಧವಾವಿವಾಹ** (ನಾ). ಗಂಡನನ್ನು ಕಳೆದುಕೊಂಡವಳು ಆಗುವ ಮರುಮದುವೆ, –ಪುನರ್ವಿವಾಹ : ಒಂದಾನೊಂದು ಕಾಲದಲ್ಲಿ ವಿಧವಾವಿವಾಹವು ನಿಷಿದ್ಧವಾಗಿತ್ತು (ಭಾರದ. ೫೫); ವಿಧವಾವಿವಾಹಕ್ಕೆ ವೇದಗಳ ಒಪ್ಪಿಗೆಯಿದೆ (ಕಶಾಅ. ೪೨೧ ಅಡಿಟಿ). [ಸಂ.]

**ವಿಧವೆ** (ನಾ). ಗಂಡನನ್ನು ಕಳೆದುಕೊಂಡವಳು ; ವಿತಂತು : "ವಿಶ್ವಸ್ತಾ, ವಿಧವಾ – ಈ ೨ ವಿಧವೆ" (ಹಲಾಯು. ೮೦-೩೩೩) ; ಸತ್ತರೆ ಇಬ್ಬರು ವಿಧವೆಯರಾಗುವಿರೆಂದು ನಿನಗೆ ತಿಳಿಯಲಿಲ್ಲವೇ? (ದಾನಚಿಂ. ೧೫೪); ಪುಟ್ಟ ವಿಧವೆಯು ಪುರಾಣಕ್ಕೆ ಬರಲು ಗುಡಿಯ ಮೂರ್ತಿಗೆ ಮಂಕುಹಿಡಿದು, ಆಚಾರ್ಯರಿಗು ಉರುಲಿಕ್ಕಿದಂತೆ ಬಿಗಿದಿತ್ತು ಕೊರಲು (ಸಬೀಗೀ. ೯೯-೧೪). [ಸಂ. ವಿಧವಾ]

**ವಿಧಾಂತ** (ನಾ). ೧. ವಿಧಾತ ; ಬ್ರಹ್ಮ (?) : ಕಾಲಕ್ಕಂಜಿ ಕರ್ಮಕ್ಕಂಜಿ ವಿಧಿವಿಧಾಂತ ನಿನಗಂಜಿ ಹಿರಿಯರೆನಿಸಿಕೊಂಬ ಗ್ರಾಮವಾಸಿಗಳು ಕೇಳಿರಯ್ಯಾ (ಮೋಳಿಮಾ. ೧೦೩-೪೧೧). ೨. ಗಣೆಯ ಮೇಲೆ ಹತ್ತಿ ಆಡುವವನು; ಡೊಂಬ; ಕೊಲ್ಲಟಿಗ (?): ಗಳೆಯನೇಱಿದ ವಿಧಾಂ[ಪಾಠಾಂ. ದಾ]ತ ಲಾಗು ಬಾರದೆ ಇಳಿದಡೆ ಅವಗದೇ ಭಂಗ (ಸಕವ. ಕ. II, ೭೭೯-೮೦); ಕೈದುವ ಹಿಡಿದಾಡುವ ವಿಧಾಂ[ಪಾಠಾಂ. ದಾಂ]ತನ ಭಾವದಂತಿರಬೇಕು . . . ಕ್ರೀಜ್ಞಾನಸಂಬಂಧ (ಸಕವ. ಕ. I, ೭೩-೮೮). 'ವಿಧಾತ' ಪರಾ. [< ಸಂ. ವಿಧಾತೃ ?]

**ವಿಧಾತ** (ನಾ). ತ್ರಿಮೂರ್ತಿಗಳಲ್ಲಿ ಒಬ್ಬ ; ಬ್ರಹ್ಮ : ಎಲೆ ವಿಧಾತನೆ ವೃಥಾ ಹೊಳೆಯ ನಡುಗಡಲೊಳಗೆ ನಾವೆಯಂ ಮುಳುಗಿಸಿದೆಲೈ (ತುರಂಗ. ೨-೨೭). [ಸಂ. ವಿಧಾತೃ]

**ವಿಧಾತಾರ** (ನಾ). ಶಿವನ ಹೆಸರುಗಳಲ್ಲಿ ಒಂದು : ಭೂತಾಲಯನನಾ ವಿಧಾತಾರನಂ ದೇವೇಶನಂ . . . ಲಿಂಗಮಧ್ಯದೊಳಗಿರ್ಪನಂ ಕುಱಿತು ವಂದಿಪೆನು (ವೀಶ್ವೆಪು. ೬-೧-೩೪). [ಸಂ. ವಿಧಾತೃ]

**ವಿಧಾತೃ** (ನಾ). ೧. ಸೃಷ್ಟಿಮಾಡುವವನು ; ನಿರ್ಮಿಸುವವನು. ೨. ಬ್ರಹ್ಮ : 'ವಿಧಾತೃ' ಶಬ್ದದ ರಾಂತಕ್ಕೆ – ವಿಧಾತ್ರ (ಶಮದ. ೮೪ ಪ್ರಯೋ); ಪುರುಷನ ಭಾಗ್ಯದೇವತೆಯೊಲಿವ ಕಾಲವನು ವರುಷದುದಯವ ಬಱಿನ ಬರವನು ವಿರಚಿಸುವೊಡೆ ವಿಧಾತೃಗಳವಲ್ಲರಸ ಕೇಳ್ ಮಾನವರಿಗಿದು ಗೋಚರಿಸಲರಿದು (ಕುಮಾರವ್ಯಾ. ಉ. ೩-೭೩). ೩. ಅದೃಷ್ಟ ; ವಿಧಿ ; ದೈವ. ೪. ಕಾಮ ; ಮನ್ಮಥ. ೫. ನೀಡುವವನು ; ಕೊಡುವವನು. ೬. ವಿಷ್ಣುವಿನ ಹೆಸರುಗಳಲ್ಲಿ ಒಂದು. ೭. ಶಿವನ ಹೆಸರುಗಳಲ್ಲಿ ಒಂದು. [ಸಂ.]

**ವಿಧಾತೃಕಲ್ಪಿತ** (ನಾ). ಬ್ರಹ್ಮನಿಂದ ಸೃಷ್ಟಿಯಾದುದು ; ದೈವನಿಯಮ : ವಿಧಾತೃಕಲ್ಪಿತವೆಂಬ ವಿಷದುಗ್ಗಡಕೆ ಗಾರುಡವೇನ ಮಾಡುವುದು (ಕುಮಾರವ್ಯಾ. ೧೭-೨೭). [ಸಂ.]

**ವಿಧಾತೃಯೋಗ** (ನಾ). ದೈವಯೋಗ ; ವಿಧಿ : ವಿಧಾತೃಯೋಗದಿಂ ಕಣ್ಕುರುಡಾದೊಡೇನೊ ಕುರುಡಾಗಲೆವೇೞ್ಪುದೆ ನಿಮ್ಮ ಬುದ್ಧಿಯುಂ (ಪಂಪಭಾ. ೨-೯೧). [ಸಂ.]

**ವಿಧಾತೃವಶ** (ನಾ). ದೈವಯೋಗ ; ವಿಧಿ ; ಅದೃಷ್ಟ : ಭಂಡಣಧೊಳಱಿದು ಷಂಡಿರ್ಭಂಡಾರಂ ಪೋದಡದು ವಿಧಾತೃವಶಂ (ಅನಂಪು. ೧೧-೭೦). [ಸಂ.]

**ವಿಧಾತ್ರ** (ನಾ). ೧. ಬ್ರಹ್ಮ ; ಚತುರ್ಮುಖ : ಮುನ್ನಾ ವಿಧಾತ್ರಂ ಕುಡಲಿರ್ದಂ ಕನ್ನೆಯಂ ಪೇೞೆ ನಿನಗಮೆನಗಮೇಂ ದಂದುಗಂ (ಆದಿಪು. ೪-೨೭) ; ಅಬ್ಜನಾಗಿಯುಂ ಪೆಸರೆಸೆವಬ್ಜಮಂ ಬಟಲಿಪಂಗೆ ಸುಧಾಕರನಾಮಮಂ ವಿಚಾರಿಸದೆ ವಿಧಾತ್ರನಿಂತು ಕುಡಲಕ್ಕುಮೆ ರಾಜಸಗರ್ವದೇಳ್ಗೆಯಂ (ನಳಚಂ. ೨೦೫). ೨. ವಿಧಿ; ದೈವ ; ಅದೃಷ್ಟ : ಅಹೋ ವಿಧಾತ್ರಾ [ಪಾಠಾಂ. ಚಿತ್ರಂ] ಸಂಸಾರಮೆಂದಲಾಭಂ ಮಾಡಿ ಬಂದೆಂ (ವಡ್ಡಾರಾ. ೯-೨೭). [ಸಂ. ವಿಧಾತೃ]

**ವಿಧಾತ್ರವಶ** (ನಾ). = ವಿಧಾತೃವಶ : ಕರವಾಳ ಕಕ್ಕಡೆಯ ಕೊಂತದ ಧಾರೆಗಳುರ್ಚೆ ಸಂಯುಗಾವನಿತಳದೊಳ್ವಿಧಾತ್ರವಶದಿಂ ನಿಮಗಂ ನಡೆವಂತುಟಾದುದೇ (ಗದಾಯು. ೪-೧೮). [ಸಂ. ವಿಧಾತೃವಶ]

**ವಿಧಾತ್ರಾಧೀನ** (ನಾ). ವಿಧಿಗೆ ಸೇರಿದುದು ; ಅದೃಷ್ಟದ ವಶದಲ್ಲಿರುವುದು: ಕೌರವಂಗಾಧೀನವೆನ್ನಯ ತನು ವಿಧಾತ್ರಾಧೀನವೆನ್ನಯ ಜೀವ (ಕುಮಾರವ್ಯಾ. ೨-೨೮). [ಸಂ.]

**ವಿಧಾನ** (ನಾ). ೧. ವ್ಯವಸ್ಥೆಗೊಳಿಸುವುದು ; ಓರಣ ಮಾಡುವುದು. ೨. ವ್ಯವಸ್ಥೆ ; ಓರಣ. ೩. ರೀತಿ; ಬಗೆ; ಪ್ರಕಾರ: ಆ ಪುರಾಣಕ್ಕಂ ಲೋಕಾಕಾರ ಕಥನಮುಂ . . . ತಪೋದಾನವಿಧಾನವ್ಯಾವರ್ಣನಮುಂ ತತ್ಫಲಪ್ರಾಪ್ತಿಪ್ರಕಟನಮುಮೆಂದಿಂತವಯವಂಗಳೆಂಟಕ್ಕುಂ (ಆದಿಪು. ೧-೪೨ ವ); ಧರ್ಮಮ ದೇಹಿಗ(ಮಿ)ಹಪರಶರ್ಮಕ್ಕೆ ನಿದಾನಮದನನೂನವಿಧಾನಂ (ಪುಷ್ಪಪು. ೩-೧೦೮). ೪. ನಿಯಮ; ಕಟ್ಟಳೆ: "ವಿಧಿ ವಿಧಾನಮಕ್ಕುಂ" (ವಸ್ತುಕೋ. ೧೨೦-೧೪); ಅರ್ಕಪುಷ್ಕರದಲ್ಲಿ ವಿಧಾನದಿಂದ ಮಾಡಿದ ಸ್ನಾನವು ಪುಣ್ಯಾತಿಶಯ (ಅರ್ಕಮಾ. ೩೫). ೫. ಮತಸಂಬಂಧವಾದ ಆಚರಣೆ, –ವಿಧಿ. ೬. ಸೃಷ್ಟಿ ; ರಚನೆ ; ನಿರ್ಮಾಣ. ೭. ನಿಯಮಿತವಾದ ವಿಧಿಗಳ ಅನುಷ್ಠಾನ. ೮. ಸಾಧನ; ಉಪಕರಣ. ೯. ಕಾನೂನು ; ಶಾಸನ. ೧೦. ತಂತ್ರ ; ಉಪಾಯ. ೧೧. ದೈವ; ಅದೃಷ್ಟ. ೧೨. [ವ್ಯಾಕ] ಒಂದು ಪದಕ್ಕೆ ಪೂರ್ವಪ್ರತ್ಯಯ ಅಥವಾ ಪರಪ್ರತ್ಯಯವು ಸೇರುವುದು : ಪದಾದಿಯ ಖುತ್ಸಕ್ತಿತ್ವದೆತ್ವದತ್ವದ ವಿಧಾನಮುತ್ಸಂ ಬಹುಳಂ (ಶಮದ. ೨೬೮). [ಸಂ.]

**ವಿಧಾನಪರಿಷತ್ತು** (ನಾ). ರಾಜ್ಯದ ಶಾಸನಮಂಡಲ ; ರಾಜ್ಯದ ಶಾಸನಾಧಿಕಾರವನ್ನು ಹೊಂದಿರುವ ಸಭೆ : ಒಂದು ರಾಜ್ಯದ ವಿಧಾನಪರಿಷತ್ತಿನ ಸದಸ್ಯರ ಒಟ್ಟು ಸಂಖ್ಯೆಯು ಯಾವ ಸಂದರ್ಭದಲ್ಲಿಯೂ ನಲವತ್ತಕ್ಕಿಂತಲೂ ಕಡಮೆಯಾಗಿರತಕ್ಕದಲ್ಲ (ಭಾಧಾನ. ೯೧). [ಸಂ. ವಿಧಾನಪರಿಷದ್]

**ವಿಧಾನಪೂರ್ವಕಂ** (ಅ). ನಿಯಮಕ್ಕನುಸಾರವಾಗಿ ; ವಿಧ್ಯುಕ್ತವಾಗಿ : ಅಂತು ವಿಧಾನಪೂರ್ವಕಂ ಗತಜೀವೆಯಾಗಿ ಬಂದಿಲ್ಲಿ . . . ಪುಟ್ಟಿದ್ಕೆ (ಶಾಂತಿಪು. ೪-೬೯ ವ). [ಸಂ.]

**ವಿಧಾನಮಂಡಲ** (ನಾ). = ವಿಧಾನಪರಿಷತ್ತು : ಪ್ರತಿಯೊಂದು ರಾಜ್ಯಕ್ಕಾಗಿಯೂ ಒಂದು ವಿಧಾನಮಂಡಲವಿರತಕ್ಕುದು (ಭಾಧಾನ. ೮೯). [ಸಂ.]

**ವಿಧಾನಸಭೆ** (ನಾ). ರಾಜ್ಯದ ಚುನಾಯಿತ ಶಾಸಕರ ಸಭೆ : ಪ್ರತಿಯೊಂದು ರಾಜ್ಯದ ವಿಧಾನಸಭೆಯೂ ಪ್ರತ್ಯಕ್ಷ ನಿರ್ವಾಚನದ್ವಾರ ಆಯ್ಕೆಯಾದ ಈ ಸದಸ್ಯರಿಂದ ಕೂಡಿ ರಚಿತವಾಗಿರತಕ್ಕುದು (ಭಾಧಾನ. ೯೦). [ಸಂ. ವಿಧಾನಸಭಾ]

**ವಿಧಾನಸೌಧ** (ನಾ). ವಿಧಾನಸಭೆಯು ಸೇರುವ ಸರ್ಕಾರದ ಕಾರ್ಯಾಲಯ, –ಭವನ: ಬೆಂಗಳೂರಿನ ಪ್ರೇಕ್ಷಣೀಯ ಸ್ಥಳಗಳಲ್ಲಿ ವಿಧಾನಸೌಧವೂ ಒಂದು (ರೂಢಿ). [ಸಂ.]

**ವಿಧಾಯಕ** (ಗು). ೧. ವ್ಯವಸ್ಥೆಗೊಳಿಸುವ ; ಅಣಿಮಾಡುವ. ೨. ನಿರ್ವಹಿಸುವ ; ನೆರವೇರಿಸುವ. ೩. ಒಪ್ಪಿಸುವ ; ವಹಿಸಿಕೊಡುವ. ೪. ವಿಧಿಸುವ ; ಆಜ್ಞೆ ಮಾಡುವ : ಆ ವಿಧಾನಟನಲ್ಲಿ ಎರಡು ಅಂಶಗಳು ಬೆರತುಕೊಂಡಿರುತ್ತವೆ. ಒಂದು ವಿಧಾಯಕಭಾಗ, ಇನ್ನೊಂದು ವಿಧೇಯಭಾಗ (ರಾಜ್ಯಶಾ. ೪೪). ೫. ಸೃಷ್ಟಿಸುವ ; ರಚನಾತ್ಮಕವಾದ : ವಿಧಾಯಕಮನೋವೃತ್ತಿಗೆ ಸಾಕಷ್ಟು ಆಸ್ಪದ ಸಿಕ್ಕಿದ್ದರಿಂದ ಅವರ ಕರ್ತೃತ್ವಶಕ್ತಿಯು ವಿವಿಧರೂಪಗಳಲ್ಲಿ ದೃಗ್ಗೋಚರವಾಗತೊಡಗಿತು (ರಂಗರೂ. ೧೩೭); ಕ್ರೈಸ್ತಜನಾಂಗಗಳು ಅಥವಾ ಪಾಶ್ಚಾತ್ಯರು ಯಾವುದೇ ಕೆಲಸವನ್ನು ಕೈಕೊಂಡರೂ ಅದನ್ನು ವಿಧಾಯಕರೀತಿಯಲ್ಲಿ ನಡೆಸಿ ಪೂರ್ತಿಗೊಳಿಸುವುದೇ ಅವರ ವೈಶಿಷ್ಟ್ಯವಾಗಿದೆ (ಪಾಶ್ಚಾವಿ. ೨೬೩). ೬. ನಿರ್ಧರಿಸುವ ; ನಿರ್ಣಾಯಕ : ಅತಿದೊಡ್ಡ ವಿಧಾಯಕ ವಿಮರ್ಶಕರೆಂದೂ ಶ್ರೀಅರವಿಂದರಿಗೆ ಸ್ಥಾನ ಉಂಟು (ಮಹಾಯೋ. ೧೪೮). (ನಾ). ೭. ಅಧಿಕಾರಪೂರ್ವಕವಾಗಿ ನೀಡಿದ ಆಜ್ಞೆ, –ಆದೇಶ. ೮. ವಿಧಿಸಲ್ಪಟ್ಟುದು ; ವಿಧ್ಯುಕ್ತವಾದುದು : ಆ ಸರ್ಕಾರದವರಿಂದ ವಿಧಾಯಕವಾಗಿರುವ ನಮೂನೆಯಲ್ಲಿ . . . ರಿಜಿಸ್ಟರು ಮಾಡಲ್ಪಟ್ಟಿರುವ ಸಂದರ್ಭದಲ್ಲಿ (ಭಾಧಾನ. ೫). ೯. ಗೊತ್ತುಮಾಡಿರುವುದು ; ನಿಶ್ಚಯ : ರಾಗಗಳಿಗೆ ಒಂದೊಂದು ರಸನಿರೂಪಣೆಯು ವಿಧಾಯಕವಾಗಿರುವುದೆಂದು ಆಗಲೇ ಹೇಳಿದ್ದೇನೆ. ರಾಗವನ್ನು ಹಾಡಿದಲ್ಲಿ ವಿಧಾಯಕವಾಗಿರುವ ರಸವು ಹಾಡುವವರಲ್ಲಿಯೇ ಉದ್ಭವಿಸುವುದೇ? (ಭಾರದ. ೫೪೪). ೧೦. ನ್ಯಾಯಬದ್ಧವಾದುದು; ನಿಯಮಾನುಸಾರವಾದುದು : ನಮ್ಮ ಶಿಕ್ಷೆ ವಿಧಾಯಕವಾಗಿರಬೇಕೇ ವಿನಾ ವಿಧ್ವಂಸಕವಾಗಿರಬಾರದು (ರಂಗರೂ. ೫೬). ೧೧. ಊರ್ಜಿತವಾದುದು ; ಜಾರಿಗೆ ಬಂದುದು : ಮೊನ್ನೆ ತಾನೆ ಶಿಕ್ಷೆ ವಿಧಾಯಕವಾಯಿತು (ಪುನರು. ೧೮೭). ೧೨. ಮುನ್ನಡೆಸುವಂಥದು : ಸ್ವರವು ತನ್ನ ಕಾರಣವಸ್ತುಗಳಿಗೆ ವಿಧಾಯಕವಾಗುವುದಿಲ್ಲ, ವಿಧೇಯವಾಗುತ್ತದೆ (ಸೋಕ್ರಮ. ೮೫). ೧೩. ಮುನ್ನಡೆಸುವವನು ; ಮುಂದಾಳು : ಈ ಕೋಟಲೆಗಳನ್ನೆಲ್ಲಾ ಒಟ್ಟಿಗೆ ಪೋಣಿಸಿ "ವಿಧಾಯಕ"ನೆಂಬ ಹೆಮ್ಮೆಯ ಹೆಸರನ್ನು ಕಚ್ಚುಗಟ್ಟಿ, ಈ ಮುಳ್ಳಿನ ಮಾಲಿಕೆಯನ್ನು ಒಬ್ಬಾತನ ಕೊರಳಿಗೆ ಹಾಕಿಬಿಟ್ಟರು. ಈ ವಿಧಾಯಕನಿಗೆ ಸಂಘದ ಅಭಿವೃದ್ಧಿಯ ವಿಷಯದಲ್ಲಿ ಹೇರಳವಾದ ಆಸಕ್ತಿಯಿತ್ತು (ನಂಬರು. ೨೭). [ಸಂ.]

**ವಿಧಾರಣ** (ನಾ). ೧. ಪ್ರತ್ಯೇಕಿಸುವಿಕೆ ; ವಿಭಾಗಿಸುವಿಕೆ. ೨. ತಡೆಹಿಡಿಯುವಿಕೆ ; ಅಡ್ಡಿಪಡಿಸುವಿಕೆ ; ನಿರೋಧಿಸುವಿಕೆ. ೩. ಸಹಿಸುವಿಕೆ ; ತಾಳುವಿಕೆ. ೪. ಆಧಾರ ; ಅವಲಂಬನೆ : ಈತನೇ ಸರ್ವೇಶ್ವರನು . . . ಈತನೇ ಈ ಲೋಕಗಳು ಸಂಭೇದವಾಗದಿರುವುದಕ್ಕೆ ಕಾರಣನಾದ ವಿಧಾರಣವಾದ ಸೇತು ಎಂದು ಹೇಳಿದೆ (ಬೃಹ್ಯಭಾ. ೪೧೮). [ಸಂ.]

**ವಿಧಾವಂತ** (ನಾ). ವೇತನಕ್ಕಾಗಿ ದುಡಿಯುವ ವ್ಯಕ್ತಿ ; ಕೂಲಿಗಾಗಿ ದುಡಿಯುವ ವ್ಯಕ್ತಿ : ಸಂಜೀವನವ ತಂದೆನೆಂದಡೆ ಅದು ಬಂದ ಠಾವಿಲ್ಲದೆ ಕಾಮಧೇನುವ ಕಟ್ಟಿದೆನೆಂದಡೆ ಅದು ಹುಟ್ಟಿದ ಠಾವಿಲ್ಲದೆ ಇಷ್ಟನಟಿಯದೆ ವಿರಕ್ತನಾದೆನೆಂಬ ವಿಧಾವಂತರ [ಪಾಠಾಂ. ವಿಧಾಂತರ] ಕತ್ತೆಗಾಹಿಯ ಮಾತು ಬೇಡ (ಕೋಲಶಾಂ. ೧೪-೪೩); ವಿಧಾವಂತನಲಿ ಮಂತ್ರಾಲೋಚನೆಯ ಸಂಜನಿಸಿ ಹರಹಿನೊಳಳಿಯಲೇ ಭೂಪಾಲ (ಕುವ್ಯಾಸ. ೧-೪೦). [ಸಂ. ವಿಧಾವತ್]

**ವಿಧಿ** (ನಾ). ೧. ಕಟ್ಟಳೆ ; ಆಜ್ಞೆ ; ಆದೇಶ : ಮಧುಮದ್ಯದ ಬಸನಿಗ ಕುಡಿ ಮಧುಮದ್ಯಮನೆಂದು ಸಪ್ತಧಾತುದ್ರವಮಂ ವಿಧಿಯಿಂ ತಂದೆಚಿವರ್ (ಸುಕುಮಾ. ೧೧-೪೫). ೨. ನಿಯಮ ; ನೀತಿ : ಮತ್ತೇಭವಧಪ್ರಚಂಡ ಯಮದಂಡವದೇಂ ಮೂಣ್ಪುದೆ ಪಿಪೀಲಿಕಾವಧವಿಧಿಯಂ (ಜಗವಿ. ೨-೫೪). ೩. ಕಾಯದೆ ; ಕಾನೂನು ; ಶಾಸನ : ಬಾಂದುಹಾಕುವುದಕ್ಕೆ ಏನಾದರೂ ವಿಧಿಗಳುಂಟೆ ? (ಭೂಮಿಅ. ೨೩); ವಿದ್ಯಾರ್ಥಿಗಳಿಂದ ಸುಂಕ ತೆಗೆದುಕೊಳ್ಳಬೇಕೆನ್ನುವುದಕ್ಕೆ ವಿಧಿ ಎಲ್ಲಿದೆ? (ಹಸುಹೊ. ೧೪೯). ೪. ಧಾರ್ಮಿಕಪ್ರಕ್ರಿಯೆಗಳನ್ನು ತಿಳಿಸುವ ಗ್ರಂಥ ; ವೇದ : "ವಿಧಿ ವೇದಂ" (ವಸ್ತುಕೋ. ೧೨೦-೧೪). ೫. (ಹೀಗೆಯೇ ಮಾಡಬೇಕೆಂದು ಶಾಸ್ತ್ರದಲ್ಲಿ ಹೇಳಿರುವ) ಕರ್ಮ; ನೇಮ; ಸಂಪ್ರದಾಯ : ವಿಧಿ ನಿಷೇಧ ಜನನಿ ಜನಕ ಕುಲಗೋತ್ರ ಜಾತಿ ಭೇದಾಭೇದ ಸ್ವರ್ಗನರಕಾದಿ ಭಯವೇನೂ ಇಲ್ಲ (ಸಕವ.ಕ. II, ೨೬೬-೬೪); ವಿಧಿ ನಿಷೇಧಗಳೆರಡುಮರಿಯದೆ ಮಧುವಿರೋಧಿಯ ಪಾದಕರ್ಪಿಸು (ಹರಿಕಥಾ. ೧೮-೩೧). ೬. ಕ್ರಮ ; ರೀತಿ ; ಬಗೆ : ಉಪಚಿತವಿಧಿ ದಾತೃದ್ರವ್ಯಪಾತ್ರ ಫಲಭೇದದಿಂದಮಯ್ದು ತೆಱಂ ಭಾವಿಪೊಡನ್ನದಾನಮದಱೊಳ್ ಪ್ರಪಂಚಿಪೊಡೆ ವಿಧಿಯದೊಂದೆ ನವವಿಧಮಕ್ಕುಂ (ಚಂದ್ರಪ್ರ. ೩-೨೯) ; ಕಾಳಗದ ಕಥೆಯಲ್ಲ ವಿಷಯಗಳೇಳಿಗೆಯ ವಿಧಿಯಲ್ಲ (ಪ್ರಭುಲಿ. ೧-೧೨). ೭. ಸೃಷ್ಟಿಕರ್ತ ; ಬ್ರಹ್ಮ ; ಚತುರ್ಮುಖ : ದರ್ಪಿಕರನ ದಾಡೆಯಂ ಕಿಳ್ತವಧಿ ವಿಧಿಗಳಿರ್ವರ್ಗೆ ತೊಳ್ತುಗೆಲಸವನಿತ್ತು (ಪದ್ಮರಾ. ೨-೧೭); ಇದು ವಿಧಿ ವಿಷ್ಣುಗಳ ವಾದಮಂ ಮಾಣಿಸಿದಗ್ಗದ ಪರಬೊಮ್ಮಂ (ರಾಜಶೇ. ೧೩-೪೯). ೮. ವಿಷ್ಣು: "ಸನಾತನಃ, ಅಜಿತಃ, (ಜಿನಃ), ಶಂಭುಃ, ವಿಧಿಃ . . . ಪುರುಷೋತ್ತಮಃ — ಈ ೧೧ ನಾರಾಯಣನ ಪೆಸರ್" (ಹಲಾಯು. ೬-೨೭). ೯. ಒಳ್ಳೆಯ ಮನುಷ್ಯ ; ಸಂಭಾವಿತ. ೧೦. ತಿಳಿದವನು ; ಬಲ್ಲವನು. ೧೧. ಕವಿ. ೧೨. ಗುಂಪು ; ಮೇಳ. ೧೩. ಹೊತ್ತು ; ವೇಳೆ ; ಕಾಲ : "ಕಾಲದೊಳು ಕೂಟದೊಳು ವಿಧಿಯೆಂದೆನಿಕ್ಕುಂ" (ಮಂಗರಾ. ೧೪೨-೧೯) ; ಕಾಲದೊಳಂಬುಜಾಸನನೊಳ್ ಉತ್ತಮನೊಳ್ ಕವಿಯೊಳ್ ವಿಧಾನದೊಳ್ ಮೇಳದೊಳುಂ ವಿಚಕ್ಷಣನೊಳ್ ಶ್ರುತಿಯೊಳ್ ವಿಧಿಶಬ್ದಮಕ್ಕುಂ" (ನಾನಾರ. ೨೨). ೧೪. ವೈದ್ಯ. ೧೫. ದೈವ ; ಹಣೆಬರಹ ; ಅದೃಷ್ಟ : ಆರುಂ ಕೊಲಲಾರ್ಪರೆ ಸಾಯದರಂ ಲಲಾಟದೊಳ್ ವಿಧಿಯ ಬರೆದ ಲಿಪಿ ಜಲಲಿಪಿಯೇ (ಪಂಪರಾಮಾ. ೩-೩೦) ; ಬದುಕು ಜಟಕಾಬಂಡಿ, ವಿಧಿಯದರ ಸಾಹೇಬ (ಮಂಕುಕ. ೬೦೦). ೧೬. ಅನ್ಯಮಾರ್ಗ ; ಗತ್ಯಂತರ ; ನಿರ್ವಾಹ : ಮನೋವಿಜ್ಞಾನಕ್ಕೂ ಅಧ್ಯಾತ್ಮವಾದಕ್ಕೂ ಗೂಢ ಸಂಬಂಧವಿದೆ. ಇವೆರಡು ಅಧ್ಯಯನವನ್ನು ನಾವು ಪರಸ್ಪರ ಹೊಂದಿಸಿಕೊಂಡು

ಮಾಡಿದಲ್ಲದೆ ವಿಧಿಯಿಲ್ಲ (ಜೀವಾತ್ಮ. ೪೩). ೧೭. ಗತಿ ; ಅವಸ್ಥೆ ; ಪರಿಸ್ಥಿತಿ : ಪರಸ್ತ್ರೀ ಪರಧನವೆಂಬೀ ಜೂಜಿಂಗಂಜುವೆ ಮುನ್ನಂಜದ ರಾವಣನೇವಿಧಿಯಾದ (ಬಸವ. ೪೪೭). ೧೭. [ವ್ಯಾಕ] ಧಾತುವಿನ ವಿಧಿ, ನಿಷೇಧ ಮತ್ತು ಸಂಭಾವನೆ ಎಂಬ ಮೂರು ರೂಪಗಳಲ್ಲಿ ಒಂದು ; ಆಜ್ಞೆ, ಇಚ್ಛೆ ಮುಂತಾದ ಭಾವನೆಗಳನ್ನು ಸೂಚಿಸುವ ರೂಪ : ಪುಗೆ ದದಪವಕಾರಂ ವಿಧಿಯ ಗೆಕಾರಂ ವರ್ತಮಾನಕಾಲದ ಗು ಧಾತುಗೆ ಟಳಕುಳ ರೇಫಾಂತಕ್ಕೊಗೆಗುಂ ಶಿಥಿಲತ್ವಮುಗುರುಪೂರ್ವಸ್ಥಿತಿಯಿಂ (ಶಮದ. ೪೪) ; ಇಲ್ಲಿ 'ಹೊರಡು' ಎಂಬುದು ಕ್ರಿಯೆ ನಡೆಯಬೇಕೆಂದು ಅಪ್ಪಣೆಮಾಡುತ್ತದೆ (ವಿಧಿಸುತ್ತದೆ) . . . ವಿಧಿ, ನಿಷೇಧ, ಸಂಭಾವನೆ —ಇವು ಒಂದು ಕ್ರಿಯೆಯ ವಿಷಯದಲ್ಲಿ ಮಾತಾಡುವಾತನ ಅಭಿಪ್ರಾಯವೇನು ಎಂಬುದನ್ನು ತಿಳಿಸುತ್ತದೆ (ಮಧ್ಯಮ. ೭೩).

ವಿಧಿನಿಷೇಧ = ನಿಯಮ ಮತ್ತು ಅಡ್ಡಿ : ಮಡಿಯುಟ್ಟು ವಿಧಿನಿಷೇಧಾದಿಗಳ ದೋಷ ನೆರೆವ ಪೊರ್ದದೆ (ನವಮೋ. ೨-೩೭); ಅಲ್ಲಿಯ ಹೆಣ್ಣುಮಕ್ಕಳಂತೆಯೇ ಈ ಹರಟೆಗಾದರೂ ಮುನ್ನುಡಿಯ ಕುಂಕುಮದ ಸೌಭಾಗ್ಯದ ವಿಧಿನಿಷೇಧವೇಕೆ ? (ನರಾಭ. ೧೧೭). [ಸಂ.]

**ವಿಧಿಕೃತ** (ನಾ). ಹಣೆಬರಹ ; ದೈವಗತಿ : ಯುವತೀನಿರ್ಮಾಣನಂ ಕರ್ಮದ ವಿಧಿಕೃತಮೇಂ ಬಾಲ್ತೆ ಲೋಕತ್ರಯಿಜಿಷ್ಣುವನೆನ್ನಂ ಭೂಪನಂದು ತೃಣವೆನೆ ಲಘುವಂ ಮಾಡಿತು (ಪುಷ್ಪಪು. ೩-೨೩); ಅಹಂಕಾರಮುಂ ಪೋಯ್ತು ವಿಧಿಕೃತ ಮೀರದಾಯ್ತು (ವೆಂಕಾರಾ. ೨-೯-೫). [ಸಂ.]

**ವಿಧಿಕ್ರಿಯೆ** (ನಾ). [ವ್ಯಾಕ] ವಿಧ್ಯರ್ಥಕಕ್ರಿಯಾಪದ : ವರ್ತಮಾನಕ್ರಿಯೆಯುಂ ವಿಧಿಕ್ರಿಯೆಯುಂ ಮಧ್ಯಮಪುರುಷಕ್ರಿಯೆಯುಂ ಉತ್ತಮಪುರುಷಕ್ರಿಯೆಯುಂ ಕೃಲ್ಲಿಂಗಮಾಗವು (ಶಮದ. ೭೩ ವೃತ್ತಿ). [ಸಂ. ವಿಧಿಕ್ರಿಯಾ]

**ವಿಧಿಜ** (ನಾ). ೧. ಸರಿಯಾದ ಕ್ರಮವನ್ನು ತಿಳಿದವನು. ೨. ಧಾರ್ಮಿಕ ಆಚರಣೆಗಳನ್ನು ಬಲ್ಲ ಬ್ರಾಹ್ಮಣ. ೩. ಅಡುಗೆಯವನು; ಬಾಣಸಿಗ : "ಆರಾಳಿಕಂ ಪಲ್ಲವಸೂದ ಸೂಪಕಾರಾಹ್ವಯಂ ಬಾಣಸಿಗಂ ವಿಧಿಜ್ಞಂ ಪೌರೋಗವಂ ಸೂಪಮಹಾನಸಾಧಿಕಾರಸ್ಥಿತಂ ಭಕ್ತಿಗುಣಾನುರಕ್ತಂ" (ವಸ್ತುಕೋ. ೬೦-೫೨). [ಸಂ.]

**ವಿಧಿದಪ್ಪು** (ಕ್ರಿ). ನಿಯಮವನ್ನು ಮೀರು; ಕಟ್ಟಳೆಯನ್ನು ಉಲ್ಲಂಘಿಸು: ಸ್ಮರಸರಸು . . . ವಿಧಿದಪ್ಪಿ ಅಳ್ಪನಯ್ (ಬಿಲ್ಹಪ್ರ. ೧೦-೧೮೯). [ವಿಧಿ + ತಪ್ಪು]

**ವಿಧಿದಾನ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಮೂವತ್ತೈದನೆಯದು ; ತನ್ನನ್ನು ಪೂಜಿಸಿದ ದೇವತೆಗಳನ್ನು ಸತ್ಕರಿಸಿ, ವಿಧಿವತ್ತಾಗಿ ದಾನಮಾಡುವುದು : ಆದಾನ ಪ್ರೀತಿ ಸುಪ್ರೀತಿ . . . ವಿಧಿದಾನ ಸುಖೋದಯೇಂದ್ರ ತ್ಯಾಗಾವತಾರ . . . ವಿಹಾರಯೋಗ್ಯ ತ್ಯಾಗನಿರ್ವೃತಿಯೆಂಬಯ್ವತ್ತು ಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ) ; ಇಂದ್ರಾಭಿಷೇಕವುಳ್ಳವನು ತನ್ನ ಸ್ಥಾನದಲ್ಲಿರುವ ಸಕಲದೇವತೆಗಳಿಗೂ ಅವರವರ ಪದವಿಗಳಂ ಕೊಟ್ಟು ಸುಖಿವಾಗಿ ತನ್ನನುಜ್ಞೆಯೊಳಿರಿಸಿಕ್ಕೊಂಡಿರುವದೇ ವಿಧಿದಾನವೆಂಬ ೩೫ನೇ ಕರ್ಮವು (ಪುರುಚ. ೨೧೨). [ಸಂ.]

**ವಿಧಿಪೂರ್ವ** (ಅ). ನಿಯಮಾನುಸಾರವಾಗಿ ; ವಿಧ್ಯುಕ್ತವಾಗಿ : ಕುಲವಿದ್ಯಾದಿ ನಿಜಾನ್ವಯಪ್ರಕೃತಿಯೊಳ್ ತಜ್ಜಾತಿವಿದ್ಯೋತ್ಕರಂ ಕುಲವೆಣ್ಗೊಳ್ ವಿಧಿಪೂರ್ವ ಸಾಧಿತ ಮಹಾಮಂತ್ರವ್ರಜಂ (ಶಾಂತಿಪು. ೫-೧೩). [ಸಂ.]

**ವಿಧಿಪೂರ್ವಕ** (ನಾ). ನಿಯಮಬದ್ಧವಾದುದು ; ವಿಧ್ಯುಕ್ತವಾದುದು : ವಿಧಿಪೂರ್ವಕದಿ ಸದಮಲ ಮೂಲಗುರುಗಳ ನಾಮದಿಂದಲಿ ಪದಗಿ ನಮಸ್ಕರಿಸಿ (ವಿಸಾಸು. ೧೧೮-೪); ಭೀಷ್ಮನು ತನ್ನ ಮೊಮ್ಮಕ್ಕಳನ್ನು ಅವನಲ್ಲಿ ವಿಧಿಪೂರ್ವಕವಾಗಿ ಶಿಷ್ಯವೃತ್ತಿ ಕೈಕೊಳ್ಳುವಂತೆ ನೇಮಿಸಿದನು (ವಚಭಾ. ೧೮). [ಸಂ.]

**ವಿಧಿಪೂರ್ವಕಂ** (ಅ). = ವಿಧಿಪೂರ್ವ : ವಿಧಿಪೂರ್ವಕಮಾತ್ಮಗದಾಯುಧಮಂ ದೈವಿಕಮನೆತ್ತಿ ಹನುಮಂ . . . ಪೊಯ್ದಂ (ಪಂರಾಮಾ. ೧೧-೬೯). [ಸಂ.]

**ವಿಧಿಪ್ರೇರಿತ** (ನಾ). ದೈವದಿಂದ ಪ್ರಚೋದನೆಗೊಂಡವನು ; ವಿಧಿಯಿಂದ ನಿಯಮಿತನಾದವನು : ಮಾದ್ರಿಯು ತಾನು ಎಷ್ಟು ತಡೆದರೂ ಪಾಂಡುವು ಸುಮ್ಮನಾಗಲಿಲ್ಲವೆಂದೂ ವಿಧಿಪ್ರೇರಿತನಾಗಿಯೇ ಹಾಗೆ ನಡೆದುಕೊಂಡನೆಂದೂ ಉತ್ತರಕೊಟ್ಟಳು (ವಚಭಾ. ೧೪). [ಸಂ.]

**ವಿಧಿಯಿಸು** 'ವಿಧಿಸು' ನೋ.

**ವಿಧಿರೂಪ** (ನಾ). = ವಿಧಿ ೧೭ : ವಿಚಾರ ಮಾಡಿದರೆ, ವಿಧಿರೂಪಗಳನ್ನು ಬಿಟ್ಟರೆ ಮಿಕ್ಕ ಪೂರ್ಣಕ್ರಿಯೆಗಳೆಲ್ಲಾ ನಾಮಪದಗಳೇ ಆಗಿವೆ (ಕೃಪಿಠಿ. ೩೫೧). [ಸಂ.]

**ವಿಧಿಲಿಖಿತ** (ನಾ). ಹಣೆಬರಹ ; ದೈವಲೀಲೆ : ವಿಧಿಲಿಖಿತಕ್ಕೆ ಅನುಸಾರವಾಗಿ ನಾವು ನಡೆಯಬೇಕಾಗುವದರಿಂದ . . . ತಪ್ಪುತಡೆಗಳಿಗೆ ಎಡೆಯುಂಟಾಗಿ, ಅವೂ ಮತ್ತು ಸಂಬಂಧಿಸಿದ ವ್ಯಕ್ತಿಯೂ ನಿಮಿತ್ತಮಾತ್ರವಾಗಿ ಉಳಿಯಬೇಕಾಗುತ್ತದೆ (ಹೇಮಂತ. ೧೪೧) ; ವಿಭೀಷಣನು ವಿಷಣ್ಣವದನನಾಗಿ ಈ ವಿಧಿಲಿಖಿತವನ್ನು ತಪ್ಪಿಸುವ ಉಪಾಯವನ್ನು ಚಿಂತಿಸಿ ಕೊಲೆಗಡಕರನ್ನು ಕರೆಸಿ ಜನಕದಶರಥರೀರ್ವರನ್ನು ಕೊಂದುಬರುವಂತೆ ಆಜ್ಞಾಪಿಸುವನು (ಸಾಹಿಸ. ೮೭). [ಸಂ.]

**ವಿಧಿಲಿಪಿ** (ನಾ). = ವಿಧಿಲಿಖಿತ: ತಪ್ಪದೆ ರಣಮುಖದೊಳ್ಮಂತಪ್ಪದಟರನಿಸೆ ಮಹಾರಥರ್ಜವನಾಳಂತಪ್ಪ ಕಣೆ ರೋಮರೋಮಂದಪ್ಪದೆ ನಾಂಟಿದುವು ಸೀಂಟಿದುವು ವಿಧಿಲಿಪಿಯಿಂ (ಪಂರಾಮಾ. ೧೩-೭೧); ಆ ಕಾರ್ಯವು ನಿನ್ನ ಮುಖಾಂತರವಾಗಿಯೇ ಆಗಬೇಕೆಂದು ವಿಧಿಲಿಪಿಯಿದ್ದರೆ ಅದನ್ನಾರು ತಪ್ಪಿಸಬಲ್ಲರು ? (ಸಾವಿತ್ರಿ. ೨). [ಸಂ.]

**ವಿಧಿಲೀಲೆ** (ನಾ). ಅದೃಷ್ಟದ ಆಟ ; ದೈವಮಾಯೆ : ಕೊಳ್ಳಿದಂ . . . ಪಸುಗೆ ನೀಡಂಶಂಗಳಂ ಸತಿಯರ್ಗೆ ಗೆಲ್ಲುದಾ ವಿಧಿಲೀಲೆಯಿಂ (ಶ್ರೀರಾಮಾ. ೧೪-೩೪೯). [ಸಂ. ವಿಧಿಲೀಲಾ]

**ವಿಧಿವಂತ** (ನಾ). ಕಟ್ಟಳೆಗಳನ್ನು ಅನುಸರಿಸುವವನು ; ಸಂಪ್ರದಾಯಗಳನ್ನು ಪಾಲಿಸುವವನು : ಉದುಭಟನೆನಿಪ್ಪ ಮಹಂತನಿಪ್ಪನು ಭೋಜರಾಜೋತ್ತಮನ ಗುರುವಾಗಿ ಶಾಂತದಿಂ ಶಿವದೀಕ್ಷೆಯಂ ವಿಧಿವಂತನಾಗಲು ಕೊಟ್ಟು (ಬಸಪು. ೫೭-೬). [ಸಂ. ವಿಧಿವತ್]

**ವಿಧಿವಡು** (ಕ್ರಿ). ಹಣೆಬರಹದಲ್ಲಿರುವುದನ್ನು ಅನುಭವಿಸು ,—ಭೋಗಿಸು : ದೇವಗತಿಯಲ್ಲಿ ಪೆಸರ್ವೆತ್ತೀ ವಿಧುಗಂ ಕಾಲವಶದೊಳಿಂತಾಯ್ತಾ ಮಿನ್ನೀ ವಿಷಮಭವದೊಳಾಗದದೇವಿಧಿವಟ್ಟಪೆವೊ (ಚಂದ್ರಪು. ೯-೮). [ವಿಧಿ + ಪಡು]

**ವಿಧಿವತ್ತು** (ನಾ). ನಿಯಮಬದ್ಧವಾದುದು ; ಕಟ್ಟಳೆಗೆ ಅನುಸಾರವಾದುದು : ವರ್ಣಗಳೂ ವರ್ಣಧರ್ಮಗಳೂ ವಿಧಿವತ್ತಾದುವುಗಳು (ಭಾರದ. ೧೧೭).

ವಿಧಿವತ್ತಾಗಿ = ೧. ನಿಯಮವನ್ನು ಅನುಸರಿಸಿ ; ನಿಯಮಾನುಸಾರವಾಗಿ : ಕನ್ನಡ ಅಧ್ಯಯನಸಂಸ್ಥೆಯ ಆಶ್ರಯದಲ್ಲಿ ವಿಶ್ವಕೋಶದ ಕೆಲಸ ವಿಧಿವತ್ತಾಗಿ ನಡೆಯತೊಡಗಿದ್ದು ಕಳೆದ ಆರುತಿಂಗಳಿಂದ (ಕವಿಕೋ. I, X, ಪೀಠಿಕೆ). ೨. ಶಾಸ್ತ್ರಗ್ರಂಥದಲ್ಲಿ ಹೇಳಿರುವಂತೆ ; ವಿಧ್ಯುಕ್ತವಾಗಿ : ಅವರ ವಿವಾಹವು ವಿಧಿವತ್ತಾಗಿ ಆಯಿತು (ರೂಢಿ). [ಸಂ. ವಿಧಿವತ್]

**ವಿಧಿವಶ** (ನಾ). ದೈವದ ಅಂಕೆ ; ವಿಧಿನಿಯಮ : ಫಣೇಂದ್ರಪತಾಕಾ ವಿಧಿವಶದೆ ನಿನಗಮಿಾ ಪರಿಯಾಯ್ತೆ (ಗದಾಯು. ೯-೨೨) ; ಎನ್ನ ಪಗೆಯಾದೊಡಂ, ವಿಧಿವಶದೆ ಕಾಲ್ ತೊಡರ್ದು ಬಿಟ್ಟಂಗೆ ಮಱುಗುವೆನ್ (ಅಶ್ವತ್ಥಾ. ೬-೧೦೯).

ವಿಧಿವಶವಾಗು = (ಆಲಂ) ಸಾಯು ; ಗತಿಸು : ಹತ್ತುದಿನಗಳ ಹಿಂದೆ ಶ್ರೀಯುತರು ವಿಧಿವಶವಾದರು (ರೂಢಿ). [ಸಂ.]

**ವಿಧಿವಾಕ್ಯ** (ನಾ). ಇಂತಿಂಥದನ್ನು ಮಾಡಬೇಕೆಂದು ಆದೇಶಿಸುವ ಮಾತು : ವೇದವಾಕ್ಯವಿಚಾರವೆಂತೆನಲಾದಿಯಲಿ ವಿಧಿವಾಕ್ಯವಾ ಬಳಿಕಾದುದ್ಯೆಸೆ ನಿಷಿದ್ಧ ವಾಕ್ಯವದು (ಗಗತಾ. ೨೨-೫); ತ್ರಿಗುಣಾತ್ಮಕವಾದ ಚತುರ್ವೇದಂಗಳಲ್ಲಿಯು ವಿಧಿವಾಕ್ಯ ನಿಷೇಧವಾಕ್ಯ ಸಿದ್ಧಾಂತವಾಕ್ಯಮಾಗಿರ್ಪವವರಲ್ಲಿ ಸಕಲಧರ್ಮಕರ್ಮಂಗಳ ನಿಯಮಿಸುವುದೇ ವಿಧಿವಾಕ್ಯವೆನಿಸುವದು (ನಾನಾಗು. ೨೮-೯). [ಸಂ.]

**ವಿಧಿವಾದ** (ನಾ). ೧. ಹೀಗೆಯೇ ಆಗುತ್ತದೆ ಎಂದು ಹೇಳುವ ವಾದ ; ನಿರ್ಣಯವಾದ : ಈ ವಿಧಿವಾದವೆಂಬುದೇನು ? ಪ್ರತಿಯೊಂದು ವಸ್ತುವೂ ಯಾವುದೋ ಒಂದು ವಿಧಿಯಿಂದ ಒಂದು ನಿಶ್ಚಿತವಾದ ಹಾದಿ ಹಿಡಿದು ಸಾಗುತ್ತಿದೆ ಎಂಬುದು (ಬಾಲಪ್ರ. III, ೧೩೭೭). ೨. ವೇದಗಳಲ್ಲಿಯ ಒಂದು ಭಾಗ ; ನೇಮಗಳನ್ನು ಪಾಲಿಸುವಂತೆ ಹೇಳುವ ವಾದ : ಆ ವೇದಂಗಳಾದೊಡೆ ವಿಧಿವಾದ ಅರ್ಥವಾದ ಮಂತ್ರವಾದ ನಾಮಧೇಯಂಗಳೆಂಬ ನಾಲ್ಕುಭೇದದಿಂ ಸಮಸ್ತಧರ್ಮಂಗಳಂ

ಬೋಧಿಸುತಿರ್ಪವವಟಿಲ್ಲಿ ರಾಜಾಜ್ಞೆಯಂತೆ ಪುರುಷರುಗಳಂ ನಿಷೇಧದತ್ತಣಿಂ ತಿರುಗಿಸಿ ಧರ್ಮವೇ ಮಾಡಲಕ್ಕುಮೆಂಬುದೇ ವಿಧಿವಾದವೆನಿಸುವುದು (ವಿವೇಕ. ೪). [ಸಂ.]

ವಿಧಿವಾಹನ (ನಾ). ಬ್ರಹ್ಮನ ವಾಹನ ; ಹಂಸ : ಆ ವನಂ . . . ವಿರಹಿಯಂತೆ ವಿಧಿವಾಹನದಂತೆ ವಿಕಳಧ್ವನಿವಿಳಸಿತಮುಂ . . . ಎನಿಸಿದುದು (ರಾಜಶೇ. ೨-೭೮ ವ). [ಸಂ.]

ವಿಧಿವಿಪರ್ಯಾಸ (ನಾ). ದೈವದ ಪ್ರತಿಕೂಲಸ್ಥಿತಿ ; ಅದೃಷ್ಟದ ಏರುಪೇರು : ಉದಾರಮನಸ್ಕರೂ ದೈವಭಕ್ತರೂ ಆದ ನಿಮಗೆ ಎಂಥ ಕಷ್ಟ ಬಂತು! ಇದು ಏನು ವಿಧಿವಿಪರ್ಯಾಸ! (ವಚಭಾ. ೧೦೯). [ಸಂ.]

ವಿಧಿವಿಹಿತ (ಗು). ೧. ದೈವದಿಂದ ನಿಯಮಿಸಲ್ಪಟ್ಟ : ಕರ್ಮವಾವುದು ವಿಧಿವಿಹಿತ ದುಷ್ಕರ್ಮವಾವುದು (ಕುವ್ಯಾಉ. ೪-೬೪). (ನಾ). ೨. ದೈವದಿಂದ ನಿಯಮಿಸಲ್ಪಟ್ಟುದು ; ದೈವಾಧೀನವಾದುದು : ಜೀವಧಾರಣೆ ಪೋಷಣೆಗಳಿಗೋಸ್ಕರವೆ ಮಾಡಬೇಕಾದ ಹೋರಾಟ ಅನಿವಾರ್ಯ ; ವಿಧಿವಿಹಿತ (ಮಕ್ಕಳ. ೧. ೭೮೬). [ಸಂ.]

ವಿಧಿವೃತ್ತ (ನಾ). [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹದಿನ್ಯೆದನೆಯ ಅತಿಶಕ್ವರಿ ಎಂಬ ಛಂದಸ್ಸಿನ ಒಂದು ವೃತ್ತ : ಸಜಸಂಸಯ ನೆರೆದಿರಲ್ ವಿಧಿವೃತ್ತಮಕ್ಕುಂ (ಕೃಪಿ. ೮೩). [ಸಂ.]

ವಿಧಿಸು, ವಿಧಿಯಿಸು (ಕ್ರಿ). ೧. ಆಜ್ಞಾಪಿಸು ; ಆದೇಶಮಾಡು : ಆ ಸಭೆಯವರು ಸಾಕ್ರಟೀಸನು ನಾಸ್ತಿಕನೆಂದು ನಿರ್ಣಯಿಸಿ ವಿಷಕುಡಿಸಿ ಅವನನ್ನು ಕೊಲ್ಲಬೇಕೆಂಬ ಶಿಕ್ಷೆಯನ್ನು ವಿಧಿಸಿದರು (ಮುಂಬಯಿ. ೪-೧೮೨). ೨. ನಿಯಮಿಸು ; ಅನುಸರಿಸುವಂತೆ ಮಾಡು : ತರುಣ ಕುರಂಗಧರಧರಭಕ್ತರಾಚಾರಂಗಳಿಂತಹವೆಂದು ತತ್ತಾಪಸರು ವಿಧಿಸಲ್ಕೆ (ಬಸವು. ೪೩-೮೨); ಒಂದು ನಿರ್ದಿಷ್ಟ ಭೂಭಾಗವನ್ನು ಗೋಗ್ರಾಸಕ್ಕೆ ಪ್ರತ್ಯೇಕವಾಗಿ ಇರಿಸಲೇಬೇಕೆಂದು ಮನುಮುನಿಯು ಶಾಸನವನ್ನೇ ವಿಧಿಸಿದ್ದನು (ಗೋಗ್ರಾಸ. ೧೧೩). ವಿಧಿಯಿಸು : ೨. ಗೊತ್ತುಮಾಡು: ಆವರಿಸೆ ಕೂಸುತನ ಮುಪ್ಪಾವಳಿಯುಂ ತನುಧನಗಳಂ[ಪಾಠಾಂ. ಜೌವನಮುಂ ಮುಪ್ಪುಮಂತಟಿಂ]ದಿನ್ನೆವರಂ ಮೂವಣ್ಣಂ ಬರೆ ರೂಪಪರಾವರ್ತನವಿಧಿಯಿನವರ್ಗೆ ವಿಧಿ ವಿಧಿಯಿಸುಗುಂ (ಆದಿಪು. ೨-೯೨). [ವಿಧಿ + - ಇಸು]

ವಿಧು (ನಾ). ೧. ತಿಂಗಳು ; ಚಂದ್ರ : ವಿಷಮಬಾಣನ ತೀವ್ರಶರಾನಳಾರ್ಚಿಗಳ್ ತಗುಳ್ದುವೆನಲ್ಕೆ ತೋರ್ಪುವು ತಮಸ್ವಿನಿಗಳ್ ವಿಧುವಿಪ್ರಲಂಭದಿಂ (ಕಾದಂಪೂ. ೩೦೨); ವಿಧು ವಿಂದಂ ವಿಬುಧೋತ್ಕರಪ್ರಿಯಕರಂ ತೀವ್ರಾಂಶುವಿಂದಂ ಪ್ರತಾಪಧನಂ (ಪುಷ್ಪದ. ೩-೧೨೨). ೨. ವಿಷ್ಣು : ಅನಂತಾಶ್ರಯಂಗೆ ಜಗದ್ವಿಶ್ರುತಮಾಗದೇ ವಿಧುಸಮಾಖ್ಯಾನಂ (ರಾಜಶೇ. ೧೧-೭೪). ೩. ಬ್ರಹ್ಮ. ೨, ೩: ದ್ವಿಜಚಕ್ರಕ್ಕನಿಮಿತ್ತಮಾತ್ಮಕರದಿಂ ಸಂತಾಪಮಂ ಮಾಡಿಯುಂ ದ್ವಿಜರಾಜಂ ಕಮಲಾರಿಯಾಗಿ ವಿಧು ಹಂಸದ್ವೇಷಿ ಮೇಣಾಗಿಯುಂ ನಿಜದಿಂದಬ್ಜಂ (ರಾಜಶೇ. ೧೧-೭೩). ೪. ಕರ್ಪೂರ : ಅದು ಪರಿಶೋಭಿಸಿದತ್ತು ಮಧುವಿಂ ವಿಧುವಿಂ ವಧುವಿಂ (ರಾಜಶೇ. ೮-೭). ೫. ದೈತ್ಯ ; ರಾಕ್ಷಸ : "ವಿಧು ದನುಜಾರಾತಿ" (ವಸ್ತುಕೋ. ೧೨೦-೧೪). [ಸಂ.]

ವಿಧುಂತುದ (ನಾ). ಚಂದ್ರನನ್ನು ಪೀಡಿಸುವವನು ; ರಾಹು : ಬಲಮಿಲ್ಲ ನಿನಗೆ ಚಕ್ರದ ಬಲಮ ದಲದನೀಗಳೆನ್ನ ಬಾಣಂ ರವಿಮಂಡಲಮಂ ವಿಧುಂತುದಂ ಕೊಳ್ವ ಲೀಲೆಯಿಂ ಕೊಂಡು ಖಂಡಂ ಮಾಳ್ಕುಂ (ಶಾಂತಿಪು. ೪-೫೨) ; ಚಂದ್ರಮನಂ ವಿಧುಂತುದಂ ನೀಗುಗೆ (ನಳಚಂ. ೨೦೧). [ಸಂ.]

ವಿಧುಕಾಂತ (ನಾ). ಚಂದ್ರನ ಗೆಳೆಯ, –ಪ್ರಿಯ: ವಿಧುಕಾಂತಂ ಕಾಮದಂ ಪ್ರೋದ್ಧತಮಕರಪತಾಕಂ . . . ಮನ್ಮಥಂ ದಿವ್ಯರೂಪಂ (ಲೀಲಾವ. ೧-೨). [ಸಂ.]

ವಿಧುತ (ಗು). ೧. ಅಲುಗಾಡಿಸಿದ; ಕಲಕಿದ. ೨. ಬಿಟ್ಟ ; ತ್ಯಜಿಸಿದ ; ತೊರೆದ. ೩. ಕ್ಷೋಭೆಗೊಂಡ ; ಕ್ಷುಬ್ಧ. ೪. ಅಸ್ಥಿರವಾದ. (ನಾ). ೫. ಅಲುಗಾಡುವುದು ; ಅಲ್ಲಾಡುವುದು : "ವಿಧುತಂ ವಿಧೂತಂ" (ವಸ್ತುಕೋ. ೧೧೭-೫೧). ೬. ತೊರೆದುದು ; ಬಿಟ್ಟುದು : "ತ್ಯಕ್ತಂ, ಹೀನಂ, ವಿಧುತಂ . . . ಉತ್ಸೃಷ್ಟಂ -- ೬ ಬಿಡಲ್ಪಟ್ಟದ್ದು" (ಸಿದ್ಧಾಂತಿ. ೩೫೨). ೭. [ನಾಟ್ಯ] "ಭಯದಿಂದ ತಲೆಯನ್ನು ಬೇಗ ಎಡಕ್ಕೂ ಬಲಕ್ಕೂ ಅಡ್ಡಲಾಗಿ ಚಲಿಸುವುದು" (ಲಾಸ್ಯರಂ. ೨೨೦ ಗದ್ಯಾನುವಾದ): ಧುತಂ, ವಿಧುತಂ, ಆಭೂತಂ . . . ಸಮಂ, ಪಾರ್ಶ್ವಾಭಿಮುಖಂ — ಈ ಹನ್ನೊಂಬತ್ತುಂ ಶಿರೋಭೇದಂಗಳ್ (ಲಾಸ್ಯರಂ. ೧-೭೮ ಪ). [ಸಂ.]

ವಿಧುಧರ (ನಾ). ಚಂದ್ರನನ್ನು ಧರಿಸಿದವನು ; ಶಿವ : ವೈಜಪ್ಪೆ . . . ವಿಧುಧರಾಕೃತಿಯಂ ತಪೋಧನನಿಧಿಯನರ್ಚಿಸಿ (ಬಸವು. ೫೨-೫); ಭಿಕ್ಷೆಯನಲ್ಲಿ ಬೇಡುತಂ ವಿಧುಧರನೊರ್ಮೆ ತಾಳ್ದನಧಿಕೋತ್ಸುಕ ಭಿಕ್ಷುಕಲೀಲೆಯಂ (ರಾಜಶೇ. ೩-೯೧). [ಸಂ.]

ವಿಧುಬಿಂಬ (ನಾ). ಚಂದ್ರಮಂಡಲ; ಶಶಿಬಿಂಬ : ಅಲೆದಮೃತದೊಡನೆ ತಾರಾಲಲನೆಯರಡಿದಳಿರನೂಡಲೆಂದು ಪದಂಗೆಯ್ದಲತಗೆಯ ಪಡಲದಂತೊಪ್ಪಲಲೆದುದು ಪರಿಪಕ್ವಬಿಂಬಮಂ ವಿಧುಬಿಂಬಂ (ಲೀಲಾವ. ೨-೭) ; ವಿಧುಬಿಂಬಂ ರಾಹುವ ಪೋರ್ಪಂತೆ ವಧುವದನಂ ಸಿರಿವುಡಿಯೋರಂತೆ ಹುಡಿಯಾಗುತ್ತಿರೆ ಹೊರಳಿದಳಂದು ಕಡುಶೋಕಾನಲನಿಂ (ಹಟಕಾ. ೧೨-೩೦ ರಗಳೆ). [ಸಂ.]

ವಿಧುಮಂಡಲ (ನಾ). = ವಿಧುಬಿಂಬ : ಜನಿಸಿದುದು ವಿಧುಮಂಡಲಕೆ ಕೇಳ್ಕರೆಯು (ನಾಗಷ. ೨-೯೦) ; ನಿನ್ನೊಂದು ಸುಂದರವದನವ ತಾನಿಂದು ಈ ಇಂದು ಹೋಲದು ಎಂದು ಬೇರೊಂದನೆಸಗುವ ತೆರದೆ ಖಂಡಿಸಿದನು ವಿಧಿ ಮತ್ತೆ ವಿಧುಮಂಡಲವನು (ಗಾಥಾಸ. ೫೨-೭). [ಸಂ.]

ವಿಧುಮೌಲಿ, ವಿಧುಮೌಳಿ (ನಾ). = ವಿಧುಧರ : ವಿಧುಮೌಲಿನಿರ್ಮಾಲ್ಯಪ್ರಸವ ಶಿರಸೇ ಲಲಾಟಾಕ್ಷಪ್ರತಿಮ ಬಸವಾಯ ತೇ ಜಯತು (ಬಸವು. ೭೧-೯೯). ವಿಧುಮೌಳಿ : ವಿಧುಮೌಳಿಗೆ ಸುಧೆಯಂ ನೆಟ್ ವಿಧಿಯಿಟಿಯೆ ನಿಮಿರ್ದು ಸುರಿವ ಪಾಲ್ಮಳೆಯನೆ ತಾಂ ಬುಧತಾತನ ತಿಳಿಬೆಳ್ದಿಂ ವಿದಿತಾಶಾವಳಿವಿಕೀರ್ಣಪೂರ್ಣವಿಲಾಸಂ (ಹಮ್ಮೀರ. ೨-೬೩). [ಸಂ.]

ವಿಧುಮೌಳಿ 'ವಿಧುಮೌಲಿ' ನೋ.

ವಿಧುರ (ಗು). ೧. ಅತಿಸಂಕಟಕ್ಕೆ ಈಡಾದ ; ತೊಂದರೆಗೊಳಗಾದ. ೨. ಕ್ಷೋಭೆಗೊಳಗಾದ ; ಚಂಚಲವಾದ : 'ವಿಧುರಗತಿ' ಪರಾ. ೩. ವಿರಹವ್ಯಥೆಗೊಳಗಾದ ; ಅಗಲಿದ. ೪. ಇಲ್ಲದ ; ಶೂನ್ಯವಾದ. ೫. ಶತ್ರುತ್ವದ ; ಪ್ರತಿಪಕ್ಷದ. ೬. ಪ್ರತಿಕೂಲವಾದ ; ವಿರುದ್ಧವಾದ. ೭. ಆಚರಿಸಲು ಸಾಧ್ಯವಾಗದ ; ಅಶಕ್ಯವಾದ. (ನಾ). ೮. ವಿಯೋಗ ; ಅಗಲಿಕೆ : "ವಿಯೋಗ ವಿಧುರಾಖ್ಯಂ" (ವಸ್ತುಕೋ. ೧೧೪-೧೮). ೯. ಬರಿದು ; ಶೂನ್ಯ : ಶೂನ್ಯತೆ ಹಠಾತ್ತಾಗಿ ತುಂಬಿದುದು ಹೃದಯಮಂ . . . ಮಧುರನಿಶೆ, ವಿಧುರಮಾಗೆಸೆದತ್ತು (ಚಿತ್ರಾಂಗ. ೨೫-೭೮೬). ೧೦. ಆಪತ್ತು ; ಗಂಡಾಂತರ. ೧೧. ಅಂಜಿಕೆ ; ಭಯ. ೧೨. ಪ್ರತಿಕೂಲ ; ವಿರುದ್ಧವಾದುದು. ೧೩. ಪ್ರಿಯಳ ಅಗಲಿಕೆಯನ್ನು ಹೊಂದಿದವನು ; ವಿರಹಿ : ತನುಲತೆಯುಂ. . . ಘನಸ್ತನಯುಗ ಕೋಕಮುಂ ಬಗೆಗೆ ಮಾಡದೆ ಖೇದಮನೇಕೆ ಮಾಡುಗುಂ ಜನಕಸುತಾವಿಯೋಗವಿಧುರಂಗೆ ರಘುಪ್ರವರಂಗೆ ರಾಗಮಂ (ಪಂಪಾರಾಮಾ. ೧೦-೪೧). ೧೪. ಹೆಂಡತಿಯನ್ನು ಕಳೆದುಕೊಂಡವನು : ಸೊಸೆ ನೀಲವ್ವ ಎಳವೆಯಲ್ಲಿಯೇ ವಿಧವೆಯಾಗಿದ್ದಾಳೆ. ತಿಮ್ಮಯ್ಯನವರೂ ಬಹಳ ಕಾಲದ ಹಿಂದೆಯೇ ವಿಧುರರಾಗಿದ್ದರು (ಕಾಗೆ. ೧೩ ಕಥಾಮುಖ). [ಸಂ.]

ವಿಧುರಗತಿ (ನಾ). ಚಂಚಲವಾದ ಗತಿ, –ಚಲನೆ : ಬುಧಗುಣಗಣನಾತೀತಾಂತರಂ ಶಬ್ದತತ್ತ್ವಾಂಬುಧಿವಿವಿಧವಿಧಾನಾಲಂಕ್ರಿಯಾವೀ[ಚಿಮಾಲಾ] ವಿಧುರಗತಿವಿಲೋಢ್ಯಂ (ಕವಿರಾ. ೨-೧೫೪). [ಸಂ.]

ವಿಧುರತನ (ನಾ). ಹೆಂಡತಿಯನ್ನು ಕಳೆದುಕೊಂಡಿರುವ ಸ್ಥಿತಿ : ತಮ್ಮನ ವಿಧುರತನ ಮತ್ತು ಹಿನ್ನೆಲೆಗಿರುವ ತಮ್ಮನ ಹೆಂಡತಿಯ ಆತ್ಮಹತ್ಯೆಯ ನೆನಪು ಇವೆಲ್ಲ ಬಾಳಿನ ಒಳಬೇನೆಯನ್ನು ನಿರೂಪಿಸುತ್ತವೆ (ಹೊಸಕ್ಕಿ. ೨೯೩). [ವಿಧುರ + - ತನ]

ವಿಧುರವಿವಾಹ (ನಾ). ಹೆಂಡತಿಯನ್ನು ಕಳೆದುಕೊಂಡವನು ಆಗುವ ಮರುಮದುವೆ : ವಿವಾಹವಿಚ್ಛೇದ, ವಿಧವಾವಿವಾಹ, ವಿಧುರವಿವಾಹ, ಬಹುಪತ್ನೀತ್ವ ಮತ್ತು ಬಹುಪತಿತ್ವಗಳಲ್ಲಿ ಕೆಲವಕ್ಕಾದರೂ ಅವಕಾಶಕೊಡಬೇಕು (ನಿಶಉ. ೨೩೮). [ಸಂ.]

ವಿಧುರಿತ (ಗು). ಅಶಾಂತಿಯಿಂದ ಕೂಡಿದ ; ಪ್ರಕ್ಷುಬ್ಧವಾದ : ಆ ದರ್ಪಕಪ್ರದಾರಿತ ವಿಧುರಿತಸ್ವಾಂತೆ ನಿಜಾಂತರವೇದಿಸಖೀಜನಂಗಳೊಳೊರ್ವ ಚಾತುರ್ಯವತಿಯ ಮೊಗಮಂ ನೋಡಿ (ಜಗವಿ. ೧೧-೪೧ ವ). [ಸಂ.]

ವಿಧುರಿತೆ (ನಾ). ಕ್ಷೋಭೆಗೊಂಡವಳು : ವಿಧುವಿರಹಿಣಿ ನವಕುಮುದಿನಿ ಮಧುಮಿತ್ರ ನಿರೂಪಣಾತಿಭೀಕರ ವಿಚರನ್ಮಧುಕರಮರಾಳದರ್ಶನವಿಧುರಿತೆ ಸುಗಿದಂತೆ ಮುಗಿದುದಸಿತಾಂಭೋಜಂ (ರಾಜಶೇ. ೧೨-೧೬). [ಸಂ. ವಿಧುರಿತಾ]

ವಿಧುರೆ (ನಾ). ಕಷ್ಟಕ್ಕೆ ಗುರಿಯಾದವಳು ; ತೊಂದರೆಗೆ ಈಡಾದವಳು : ದೊರೆ ಕೊಳೆ ನೋಡಿದನಾಯತಕರುಣಾಪಾಂಗದೊಳೆ ಲೋಲಲೋಚನಯುಗೆಯಂ ಗುರುಜಘನ ಪಯೋಧರಯುಗಭರವಿಧುರೆಯನಾ ಧರಾಧಿಪತಿ ವಿಧುಮುಖಿಯಂ (ಕವಿರಾ. ೨-೫೮); ವಿರಹವಿಧುರೆಯಾಗಿಯುಂ ಲಾವಣ್ಯರಸತರಂಗಿಣೀತರಂಗಲೇಖೆಯನನುಕರಿಸಿ ತಳಿರ್ತ ಶೋಕತರುತಳಮನಲಂಕರಿಸಿ . . . ಸೀತೆ ನಾಡೆ ಪಾಡಟೆದಿರ್ದಳ್ (ಪಂರಾಮಾ. ೧೧-೮೨ ವ). [ಸಂ. ವಿಧುರಾ]

ವಿಧುಲೇಖೋತ್ತಂಸ (ನಾ). ಚಂದ್ರಕಳೆಯನ್ನು ತಲೆಯಲ್ಲಿ ಧರಿಸಿದವನು ; ಶಿವ : ವಿಧುಲೇಖೋತ್ತಂಸನೆಂದಂತಕಮದಹರನೆಂದು . . . ಅಂ ಭವದುರು ಚರಣಾಂಭೋಜಮಂ ನಚ್ಚಿ ಸಾರ್ದಂ (ಉದ್ಭಟ. ೧೧-೬೫). [ಸಂ.]

ವಿಧುವಿರಹಿಣಿ (ನಾ). ಚಂದ್ರನಿಂದ ಅಗಲಿದವಳು ; ಚಂದ್ರನ ವಿಯೋಗ ದಲ್ಲಿರುವವಳು : ವಿಧುವಿರಹಿಣಿ ನವಕುಮುದಿನಿ ಮಧುಮಿತ್ರನಿರೂಪಣಾತಿಭೀಕರ ವಿಚರನ್ಮಧುಕರಮರಾಳದರ್ಶನವಿಧುರಿತೆ ಸುಗಿದಂತೆ ಮುಗಿದುದಸಿತಾಂಭೋಜಂ (ರಾಜಶೇ. ೧೨-೧೬). [ಸಂ. ವಿಧುವಿರಹಿಣೀ]

ವಿಧುಶಿಲೆ (ನಾ). ಚಂದ್ರನ ಪ್ರಕಾಶದಿಂದ ದ್ರವಿಸುವುದೆನ್ನಲಾದ ಒಂದು ಬಗೆಯ ಕಲ್ಲು ; ಚಂದ್ರಕಾಂತಶಿಲೆ : ಕಾಡ ಶಿಲೆಗಳ್ ಕರಗಿ ಪರಿದು ವಿಧುಶಿಲೆಯಂತೆ ಮೂಡಿರ್ದ ಸ್ವಯಂಭುಲಿಂಗಗಳ್ ಸ್ಥಾಪಿಸಿದ ನಾಡೆ ಶಿವಲಿಂಗ ಶಿವಪ್ರತುಮೆಗಳ್ ನಲಿದುಪೋಲಾಡಿದವು (ಚತುಪು. ೧-೫-೧೬). [ಸಂ. ವಿಧುಶಿಲಾ]

ವಿಧುಸುತೆ (ನಾ). (ದಕ್ಷ)ಬ್ರಹ್ಮನ ಮಗಳು ; ರತಿ.

ವಿಧುಸುತಾವರ = (ದಕ್ಷ) ಬ್ರಹ್ಮನ ಮಗಳಾದ ರತಿಯ ಗಂಡ ; ಮನ್ಮಥ : ವಿಧುಸುತಾವರನು ತಾಂ ಮನದೊಳ್ಪಿನಿಂ ತನ್ನ ಸದನಕಿಟ್ಟಹ ಪೊಂಗಳಸಗಳೋ ಎಂಬಂತೆ ತುದಿ ಸಣ್ಣವಾಗಿ ತೋಯಜಕೋರಕದ ತೆಜದೊಳವಳ ಕುಚಯುಗಳಮೆಸೆಯೆ (ಪ್ರೌಢರಾ. ೯-೭). [ಸಂ. ವಿಧುಸುತಾ]

ವಿಧುಸ್ಪರ್ಧಿ (ಗು). ಚಂದ್ರನೊಂದಿಗೆ ಪೈಪೋಟಿಮಾಡುವ ,—ಹುರುಡಿಸುವ : ಉದ್ದಾಮಾಯುತ ಚಂದ್ರಶಾಲಮುಪಮಾತೀತಂ ವಿಧುಸ್ಪರ್ಧಿವಿದ್ಯುದ್ಧ್ವಂಷ್ಟ್ರಾಸುರ ಯಾನಮಭ್ರಪಥದೊಳ್ ಪಾಱುತ್ತುಮಿರ್ದಲ್ಲಿ (ಶಾಂತಿಪು. ೮-೪೮). [ಸಂ. ವಿಧುಸ್ಪರ್ಧಿನ್]

ವಿಧುಹಾಸ (ನಾ). ೧. ಚಂದ್ರನನ್ನು ನೋಡಿ ನಗುವವನು. ೨. ವಿಷ್ಣುಭಕ್ತನಾದ ಕುಂತಳದೇಶದ ಒಬ್ಬ ದೊರೆ ; ಚಂದ್ರಹಾಸ : ವಿಧುಹಾಸನನುಪಮ ಧನುರ್ವಿದ್ಯೆಯಂ ಜಗದೊಳಧಿಕತರಮಾಗೆ ಸಾಧಿಸಿ ಪರಮಭಾಗವತಕಲೆಗಳಿಂದೆಸೆ ದಿರ್ದನು (ಜೈಮಿಭಾ. ೨೯-೮) ; ವಿಧುಹಾಸನಿಗೆ ಜಯವಾಗಲಿ (ಚಂದ್ರಸ. ೪೭-೧೨). [ಸಂ.]

ವಿಧೂತ (ಗು). ೧. ಅಲುಗಾಡುವ ; ಅಲ್ಲಾಡುವ : ಅಮರೇಂದ್ರಪುತ್ರನಂ ಕರೆವವೊಲಾದುವಾ ಪುರದ ವಾತವಿಧೂತವಿನೂತಕೇತುಗಳ್ (ಪಂಪಭಾ. ೪-೩೪) ; ಶಿರದೊಳ್ ಕ್ರಮದಿಂ ಪೂಗಳನೆರೆವುದು ವಿಮಲಸಮೀರಣವಿಧೂತಶಾಖೆಗಳಿಂದ (ಕರ್ನಾಕ. ೩೨೦). ೨. ತೊರೆದ ; ಬಿಟ್ಟ ; ತ್ಯಜಿಸಿದ : ರಾಯ ಚಿತ್ತೈಸೆಂದು ವೈಶಂಪಾಯಮುನಿ ಹೇಳಿದನು ಕಮಲದಳಾಯತಾಕ್ಷನ ಬಾಲಕೇಳಿವಿಧೂತಕಲ್ಮಿಷವ (ಕುವ್ಯಾಆ. ೨-೧೫). ೩. ಅಸ್ಥಿರವಾದ ; ಚಂಚಲವಾದ. ೪. ಕೆದರಿಸಲ್ಪಟ್ಟ ; ಚೆದುರಿಸಿದ : ವಿಧೂತಧೂಮದಿ ಕಿಡಿಯ ಝಾಡಿಗಳೀತನನು ಮುಸುಕಿದವು ಚುಂಬಿಸಿತಂಬು ಪವನಜನ (ಕುವ್ಯಾದ್ರೋ. ೧೯-೪೪). (ನಾ). ೫. ಅಲುಗಾಡಿ ಸಲ್ಪಟ್ಟದ್ದು : "ವಿಧುತಂ ವಿಧೂತಂ" (ವಸ್ತುಕೋ. ೧೦೬-೫೦). ೬. ಹೊಂದಿಕೆಯಿಲ್ಲ ದಿರುವುದು ; ಅಸಾಮಂಜಸ್ಯ ; ವಿರೋಧ. [ಸಂ.]

ವಿಧೂತಕಾಲ (ನಾ). ಯಮನನ್ನು ನಡುಗಿಸಿದವನು ,—ತಲ್ಲಣಗೊಳಿಸಿದವನು; ಶಿವ : ಸರಸಭಕ್ತಸಮೇತಸುವ್ರತಚರಿತಲೋಲ ವಿಧೂತಕಾಲ ಸ್ಥಿರದಿಗಂತ ಯಶೋವಿಶಾಲ ಪ್ರಹತಭವಮಾಲ (ಬಸವಪು. ೩೮-೭೭). [ಸಂ.]

ವಿಧೂತರಿಪು (ನಾ). ಶತ್ರುವನ್ನು ತಲ್ಲಣಗೊಳ್ಳುವಂತೆ ಮಾಡುವವನು ; ವೈರಿಯನ್ನು ಕಂಪನಗೊಳಿಸುವವನು : ವಿಧೂತರಿಪು ಕುರುರಾಯನೆಂಬೀ ಖ್ಯಾತಿಯಿಲ್ಲದೆ ಬೇಜೆ ರಾಜ್ಯವನೊಲ್ಲೆ ನಾನು (ಕುವ್ಯಾಗ. ೩-೩೩) ; ದೇವರ ನೇಮವೆನಿತನಿತ ಓತು ಶಿರದಲಿ ಧರಿಸಿ ನಡೆಸುವುದೇ ತನಗೆ ಕರ್ತವ್ಯವೆಂದು ವಿಧೂತರಿಪು ಬಿನ್ನೈಸಿದನು ಭಾಸ್ಕರಕುಲೇಂದ್ರಂಗೆ (ತೊರರಾ. ೬-೪-೧೩). [ಸಂ.]

ವಿಧೂತಸಂತಾಪ (ನಾ). ಕಷ್ಟವನ್ನು ಕಳೆಯುವವನು ; ದುಃಖವನ್ನು ದೂರಮಾಡುವವನು : ಅಮಳೋದ್ದೀಪರೂಪ ಕಳಾಕಳಾಪ ವಿಧೂತಸಂತಾಪ (ಬಸವಪು. ೧೦-೧೨). [ಸಂ.]

ವಿಧೂನನ (ನಾ). ಅಲುಗಾಡಿಸುವುದು ; ಕೊಡಹುವುದು : "ವಿಧೂನನಂ, ವಿಧುವನಂ — ೨ ಕೊಡಹುವಿಕೆ" (ಸಿದ್ಧಾಂತಿ. ೩೫೫). [ಸಂ.]

ವಿಧೃತ (ಗು). ೧. ಹಿಡಿದ ; ಗ್ರಹಿಸಿದ. ೨. ದೂರಮಾಡಿದ ; ಪ್ರತ್ಯೇಕಗೊಳಿಸಿದ ; ಬೇರೆ ಮಾಡಿದ. ೩. ಹೊಂದಿದ ; ಪಡೆದ : ವಿಧೃತಭದ್ರಶಾಳವಿಶಾಳವಿಳಾಸಮನು ದ್ಯಾನಮಂ ಸಮೆಯಿಸಿ (ಶಾಂತಿಪು. ೭-೫೩ ವ) ; ವಿಧೃತಾಲಂಕಾರದಿಂದಂ ನವಯುವತಿಯ ವೋಲ್ . . . ಶೋಭಿಕುಂ ಸನ್ಮಧುರಂಬೆತ್ತಿರ್ಪ ಕಾವ್ಯಂ (ಉದ್ಭಟ. ೧-೩೦). [ಸಂ.]

ವಿಧೆ (ನಾ). ೧. ನಿಯಮ ; ಸೂತ್ರ ; ವಿಧಿ. ೨. ಬಗೆ ; ಪ್ರಕಾರ ; ವಿಧ. ೩. ಆಧಿಕ್ಯ ; ಹೆಚ್ಚಳ ; ವಿಪುಲತೆ : "ವಿಧಾ, ಸಮೃದ್ಧಿಃ - ೨ ಸಮೃದ್ಧಿ ಪೆಸರುಗಳು , ತುಂಬಿರುವ ಬಗೆ, ಸಾಕಾದಷ್ಟುಯಿರುವಿಕೆ" (ಸಿದ್ಧಾಂತಿ. ೩೫೮). ೪. ಆನೆ, ಕುದುರೆ ಮುಂತಾದುವುಗಳಿಗೆ ಕೊಡುವ ಆಹಾರ : "ವಿಧಾ - ಮಾಡುವಿಕೆ, ಪ್ರಕಾರ, ಗಜಕಬಳ, ಕೂಲಿ, ಬಗೆ" (ಸಿದ್ಧಾಂತಿ. ೩೯೯). ೫. ಸಂಬಳ ; ವೇತನ ; ಕೂಲಿ : "ಕರ್ಮಣ್ಯಾ, ವಿಧಾ . . . ಪಣಃ — ೧೧ ಕೂಲಿಯ ಪೆಸರುಗಳು, ಮಜೂರಿಯ ಕಿಮ್ಮತ್ತು" (ಸಿದ್ಧಾಂತಿ. ೩೧೭). ೬. ಕಾರ್ಯ ; ಕೆಲಸ. [ಸಂ. ವಿಧಾ]

ವಿಧೇಯ (ಗು). ೧. ಏರ್ಪಡಿಸುವ ; ವ್ಯವಸ್ಥೆಗೊಳಿಸುವ ; ಅಣಿಮಾಡುವ : ಇಂದಿನ ವಾಸರಮೆ ಶೋಭನವಿಧೇಯವಾಸರಂ ಇಂದಿನ ದಿವಸಮೆ ಶುಭದಿವಸಾಗ್ರೇಸರಂ (ಆದಿಪು. ೪-೩೦ ವ). ೨. ಮಾಡಬೇಕಾದ ; ಮಾಡಲು ಯೋಗ್ಯವಾದ. ೩. ಆಜ್ಞೆಗೆ ಒಳಪಟ್ಟ ; ಅಧೀನವಾದ. ೪. ವಿನಯದಿಂದ ಕೂಡಿದ. (ನಾ). ೫. ಆಜ್ಞೆಗೆ ಒಳಪಡುವಂಥದು ; ಅನುಸರಿಸುವಂಥದು : ಸ್ವರವು ತನ್ನ ಕಾರಣವಸ್ತುಗಳಿಗೆ ವಿಧಾಯಕವಾಗುವುದಿಲ್ಲ , ವಿಧೇಯವಾಗುತ್ತದೆ (ಸೋಕ್ರಮ. ೮೫) ; ವಿಧೇಯವೆಂದರೆ ಅವನ ಇಚ್ಛಾನುಸಾರವಿರುವುದು, ಕೂಡಬೇಕೆಂದರೆ ಕೂಡುವುದು . . . ಕೈಕಾಲುಗಳನ್ನು ಅಲ್ಲಾಡಿಸುವುದು ಇತ್ಯಾದಿ ಶರೀರವ್ಯಾಪಾರಗಳೆಲ್ಲವೂ ಜೀವಾತ್ಮನ ಇಚ್ಛಾಧೀನವಾಗಿರುವುವು (ಹಿಂದಸಾ. ೨೫೦). ೬. ಮಾಡಬೇಕಾದುದು ; ಮಾಡ ತಕ್ಕುದು : ಈಗಳಲ್ಲಿಗೇ ವಿಧೇಯಂ ಮಾಳ್ಪುದೆಂದು ಪೂರ್ವಪಕ್ಷದ ಪಕ್ಷಸಿದ್ಧಿಯ ವಿಸ್ತಾರಕ್ಕವಕಾಶಮಪ್ಪಂತು ನುಡಿದು (ಶಾಂತಿಪು. ೨-೩೫ ವ). ೭. ಆಜ್ಞೆಯಂತೆ ನಡೆಯುವವನು ; ಅಪ್ಪಣೆಯನ್ನು ಪಾಲಿಸುವವನು ; ಹೇಳಿದಂತೆ ಕೇಳುವವನು : ಆನುಂ ವಿಧೇಯನಲ್ಲಂ ನೀನುಂ ಗುರುವಲ್ಲಮಿಂದಿ ನೊಂದೆವಸದೊಳು (ಗದಾಯು. ೬-೨೫) ; ಜನನಿಯುಪದೇಶದಾ ವಿನಯಕೆ ವಿಧೇಯನಾಗವಿವೇಕಿಯಾದೆನಾಂ! (ಚಿತ್ರಾಂಗ. ೭೯-೨೦೬೪). ೮. [ವ್ಯಾಕ] ಕರ್ತೃಪದದ ವಿಷಯದಲ್ಲಿ ಹೇಳಿದುದು ; ಆಖ್ಯಾತ ; ಹೇಳಿಕೆ : ವಿಧೇಯ: ಮಹೇಂದ್ರ ಮಹೈಶ್ವರ್ಯಂಗಳೆಲ್ಲಮಧ್ರುವಂ . . . ಅಧ್ರುವಂಗಳ್ (ಕೈಪಿಡಿ. ೫೭). [ಸಂ.]

ವಿಧೇಯಕ (ನಾ). ಅಂಗೀಕಾರಕ್ಕಾಗಿ ಮಂಡಿಸುವ ಸೂಚನೆ ; ಠರಾವು ; ಮಸೂದೆ : ಯಾವುದೊಂದು ವಿಧೇಯಕವೂ ರಾಷ್ಟ್ರಪತಿಯವರ ಶಿಫಾರಸಿನ ಮೇಲಲ್ಲದೆ . . . ಮಂಡಿಸತಕ್ಕುದಲ್ಲ (ಭಾಧಾನ. ೩). [ಸಂ.]

ವಿಧೇಯತೆ (ನಾ). ೧. ಹೇಳಿದ ಮಾತಿನಂತೆ ನಡೆದುಕೊಳ್ಳುವಿಕೆ ; ವಿಧೇಯವಾಗಿರುವಿಕೆ : ಆಕೆಯ ಶಾಂತಸ್ವಭಾವವೂ ವಿನಯ ವಿಧೇಯತೆಗಳೂ ನನ್ನನ್ನು . . . ಸೆಳೆತಂದವು (ಕವಿಕ. ೪೫). ೨. ಅಧೀನದಲ್ಲಿರುವಿಕೆ ; ಅಧೀನತೆ : ವಾಕ್ರಂದ ಪಾರ್ಷ್ಣಿಗ್ರಾಹತಾತ್ಯಂತರ್ಧಿಗಳಂ ಷಾಡ್ಗುಣ್ಯದೊಳುಚಿತಗುಣಪ್ರಯೋಗದಿಂ ವಿಧೇಯತೆಯನೆಯ್ದಿಸಿಯುಂ . . . ಸಾಮ್ರಾಜ್ಯಮುಂ ನಿಷ್ಕಂಟಕಮುಂ ನಿರಾತಂಕಮುಂ ನಿಜಾಯತ್ತಮುಮೆನಿಸಿದಂ (ಚಂದ್ರಪು. ೨-೬೦ ವ). [ಸಂ. ವಿಧೇಯತಾ]

**ವಿಧೇಯತ್ವ** (ನಾ). = ವಿಧೇಯತೆ ೨ : ಅಂತು ಕೈತವಮಿಲ್ಲದೆ ವಿಧೇಯತ್ವದ ತುದಿಯ ನೆಯ್ದೆ ಮಣಿಯೆಂಬ ಪಸುರ್ಮಣಿಯಂ . . . ಲಂಜಿಕೆಯೆಂಬ ಶಾಳಭಂಜಿಕೆಯುಮಂ ಉಟಿಯದಂತಿರೆ ತಂದುರ್ವರಾಸ್ಯತಿಲಕನಪ್ಪ ದೇವಂ ದೇವಗವಟಯ್ಯು (ಶಾಂತಿಪು. ೧೧-೫೫ ವ). [ಸಂ.]

**ವಿಧೇಯವಾಚಕ** (ನಾ). = ವಿಧೇಯ ೮ : ಜಾತಿವಾಚಕ, ಸಂಖ್ಯೇಯವಾಚಕ, ವಿಧೇಯವಾಚಕಗಳ ಮೇಲೆ ಬಹುವಚನಕ್ಕೆ ಪ್ರತಿಯಾಗಿ ಏಕವಚನವು ವಿಕಲ್ಪದಿಂದ ಬರುವುದು (ಕೈಪಿಡಿ. ೫೭). [ಸಂ.]

**ವಿಧ್ಯರ್ಥ** (ನಾ). [ವ್ಯಾಕ] ಆಜ್ಞೆ, ಅಪ್ಪಣೆ, ಆರೈಕೆ, ಕಟ್ಟುಪಾಡು, ಆಶೀರ್ವಾದ ಮುಂತಾದುವುಗಳನ್ನು ತಿಳಿಸುವ, ಧಾತುವಿನ ರೂಪ : ಧಾತುಸ್ವರೂಪದಿಂ ಮಧ್ಯಮಪುರುಷದೇಕವಚನಂ ವಿಧ್ಯರ್ಥಮಾಗಿ ಪರಿಣಮಿಸುಗುಂ (ಶಮದ. ೨೬೦ ವೃತ್ತಿ) ; ಹೊರಡು, ಹೊರಡನು, ಹೊರಟಾನು ಎಂಬ ರೂಪಗಳು ಕ್ರಮವಾಗಿ ವಿಧ್ಯರ್ಥ ನಿಷೇಧಾರ್ಥ ಸಂಭಾವನಾರ್ಥಗಳಿಗೆ ಸೇರಿದುವು (ಮಧ್ಯಮ. ೬೩). [ಸಂ.]

**ವಿಧ್ಯರ್ಥಕ** (ನಾ). = ವಿಧ್ಯರ್ಥ : ಕ್ರಿಯಾಪದಗಳನ್ನು ಸಾಮಾನ್ಯಾರ್ಥಕ, ವಿಧ್ಯರ್ಥಕ, ನಿಷೇಧಾರ್ಥಕ ಎಂದು ಮೂರು ಪಂಗಡಗಳಾಗಿ ವಿಭಾಗಿಸಬಹುದು (ಕೈಪಿಡಿ. ೪೩). [ಸಂ.]

**ವಿಧ್ಯಲಂಕಾರ** (ನಾ). [ಕಾವ್ಯಮೀ] ಕಾವ್ಯಾಲಂಕಾರಗಳಲ್ಲಿ ಒಂದು ; ''ಇದು ಈ ತೆರವೆಂದು ಸಿದ್ಧವಾದ ವಿಷಯವನ್ನು ತಿಳಿದು ಅದನ್ನು ಪುನಃ ಹೇಳಿದರೆ ವಿಧಿ'' (ಕುವಲ. ೨೮೦ ಟಿಪ್ಪಣಿ) : ವಸ್ತುತಃ ಸಿದ್ಧವಾದರ್ಥವನು ವರ್ಣಿಸಲ್ಕೆ ತಕ್ಕದಲ್ಲವೆಂದು ಬಾಧ್ಯವಾಗಿರಲ್ಕೆ ಬಳಿಕರ್ಥಾಂತರದಿಂದ ಗರ್ಭೀಕರಿಸಿದುದರಿಂದ ಚಾರುತರವೆಂದು ವಿಧ್ಯಲಂಕಾರವೆನಿಪುದು (ಕುವಲ. ೧೭೮). [ಸಂ.]

**ವಿಧ್ಯುಕ್ತ** (ಗು). ೧. ವೇದ ಅಥವಾ ಶಾಸ್ತ್ರದಲ್ಲಿ ಸಮ್ಮತವಾದ ; ವಿಧಿಪೂರ್ವಕವಾದ : ಭರತನು ತ್ರಿವೇಣೀಸಂಗಮಕ್ಕೆ ಬಂದು ನಮಸ್ಕರಿಸಿ ಸಂಗಮದ ಶುಭ್ರಶ್ಯಾಮ ಜಲದಲ್ಲಿ ವಿಧ್ಯುಕ್ತ ಸ್ನಾನಮಾಡಿ ದಾನ ಕೊಟ್ಟು ಬ್ರಾಹ್ಮಣನನ್ನು ಸನ್ಮಾನಿಸಿದನು (ತುಳಸೀ. ೧೭೩). (ನಾ). ೨. ವೇದಶಾಸ್ತ್ರ ಸಮ್ಮತವಾದುದು ; ವಿಧಿಪೂರ್ವಕವಾದುದು : ಅವರು ವಿಧ್ಯುಕ್ತವಾಗಿ ಯಾಗವನ್ನು ನೆರವೇರಿಸಿದರು (ರೂಢಿ). [ಸಂ.]

**ವಿಧ್ಯುಕ್ತಕರ್ಮ** (ನಾ). ಶಾಸ್ತ್ರೋಕ್ತವಾದ ಕ್ರಿಯೆ ; ವಿಧಿವತ್ತಾದ ಕಾರ್ಯ : ಆಚಾರ : ಈ ಪದಕ್ಕೆ ನಡತೆ . . . ಸಂಪ್ರದಾಯ, ಪದ್ಧತಿ, ವಾಡಿಕೆ, ವಿಧ್ಯುಕ್ತಕರ್ಮ - ಈ ಅರ್ಥಗಳಿವೆ (ಕವಿಕೋ. I, ೭೦೫). [ಸಂ. ವಿಧ್ಯುಕ್ತಕರ್ಮನ್]

**ವಿಧ್ವಂಸ** (ನಾ). ೧. ನಾಶ ; ಹಾನಿ. ೨. ವಧೆ ; ಕೊಲೆ : ಸುತನ ವಿಧ್ವಂಸವಂ ಮಾಡಿಕ್ಕಿದಡೆಯಾ ಭೋಜನವೆ ಹಿತವು (ಬಸವಪು. ೨೪-೭) ; ಯಾರಿಂದ ಮನ್ಮಥನ ವಿಧ್ವಂಸವಾಯಿತೋ . . . ಆ ಅಂಧಕಾಸುರಸಂಹಾರಕನೂ ಪಾರ್ವತೀವಲ್ಲಭನೂ ಆದ ಭಗವಂತನು ನಿನ್ನನ್ನು ಸರ್ವದಾ ರಕ್ಷಿಸಲಿ (ಧ್ವನ್ಯಾಲೋ. ೮೮). ೩. ಮುಖಭಂಗ ; ಅವಮಾನ ; ತಿರಸ್ಕಾರ. [ಸಂ.]

**ವಿಧ್ವಂಸಕ** (ಗು). ೧. ಹಾಳುಮಾಡುವ ; ನಾಶಕಾರಕವಾದ : ಯಾರ ಹತೋಟಿಗೂ ಒಳಪಡದ ಗುಂಪು ವಿಧ್ವಂಸಕಕಾರ್ಯದಲ್ಲಿ ತೊಡಗಿತು (ರೂಢಿ). (ನಾ). ೨. ಹಾನಿಕಾರಕವಾದುದು ; ಕೆಡುಕನ್ನುಂಟುಮಾಡುವಂಥದು : ನಮ್ಮ ಶಿಕ್ಷೆ ವಿಧಾಯಕವಾಗಿರಬೇಕೇ ವಿನಾ ವಿಧ್ವಂಸಕವಾಗಿರಬಾರದು (ರಂಗರೂ. ೫೬). ೩. ನಾಶಮಾಡುವವನು ; ಹಾಳುಮಾಡುವವನು : ಮಲ್ಲಿಕಾರ್ಜುನಜ್ಞೆ ಯುದ್ಧ ಪ್ರಬದ್ಧವೈರಿ XXX ನಳ್ಳಂ ನಹಿತವಿಧ್ವಂಸಕಂ (ಎಕ. IV(R), ಎಳಂದೂ. ೧೮೩-೯ ; 919). [ಸಂ.]

**ವಿಧ್ವಂಸನ** (ನಾ). ೧. ನಾಶ ; ಹಾನಿ : ಆತಂ ಸುಭಟಸಮರಸಂಘಟ್ಟ ದೋರ್ಗರ್ವವಿಧ್ವಂಸನಕೇಳೀದೋಹಳಂ (ಆದಿಪು. ೧೪-೧೯). ೨. ನಾಶಪಡಿಸುವವನು; ಇಲ್ಲದಂತೆ ಮಾಡುವವನು ; ನಿರ್ನಾಮ ಗೊಳಿಸುವವನು : ಸ್ವಸ್ತಿಸಮಸ್ತ ಭುವನಾಧೀಶ್ವರಂ . . . ಶೈವ ವೈಷ್ಣವದ ಭೇದವಿಧ್ವಂಸನಂ (ಎಕ. XI, ದಾವಣ. ೮೩-೩ ; 1562). [ಸಂ.]

**ವಿಧ್ವಸ್ತ** (ಗು). ೧. ಚೆದರಿದ ; ಹರಡಿದ. ೨. ನಾಶಗೊಂಡ ; ಧ್ವಂಸವಾದ : ನವಕಾಶ್ಮೀರಪರಾಗರಾಗರುಚಿರಂ ವಿಧ್ವಸ್ತ [ಪಾಠಾಂ. ಸ್ರಬ್ಧ] ನೀರೇಜಷಂಡವಿಳಾಸಂ (ಪಂಚತಂ. ೨೪೨-೨೧). (ನಾ). ೩. ನಾಶ ; ಹಾಳು : ಕ್ರಿ. ಶ. ೧೧೮೪ರಲ್ಲಿ . . . ಕಳಚುರ್ಯರ ಸಾಮ್ರಾಜ್ಯವು ವಿಧ್ವಸ್ತವಾಯಿತು (ಮೂರುಉ. ೭೧). ೪. ಕಳೆದುದು ; ನಿವಾರಿಸಲ್ಪಟ್ಟುದು (?) : ''ನಿರಸ್ತಮಪವಿದ್ಧಮುಪಹೃತಂ (ವಿ)ಧ್ವಸ್ತಂ'' (ವಸ್ತುಕೋ. ೧೦೪-೩೯). [ಸಂ.]

**ವಿನಂ** (ಅ). ಇಲ್ಲಿಯವರೆಗೆ ; ಈವರೆಗೆ ; ಈ ತನಕ : ವನ್ನಂ, ವನ್ನೆಗಂ; ವಿನಂ, ವಿನೆಗಂ (ಶಬ್ದಾನು. ೧೯ ಪ್ರಯೋ). 'ಇನ್ನಂ' ಪರಾ. IP ಭವಿಷ್ಯತ್ಕಾಲದ 'ವ' ಪ್ರತ್ಯಯದೊಂದಿಗೆ 'ಇನಂ', 'ಇನೆಗಂ' ಮೊದಲಾದ ಕಾಲಾರ್ಥಕವಾದ ಅವ್ಯಯಗಳನ್ನು ಸೇರಿಸಿ ಈ ರೂಪಗಳನ್ನು ಗುರುತಿಸಲಾಗಿದೆ. [?]

**ವಿನಂತಿ** (ನಾ). ಕೋರಿಕೆ ; ಪ್ರಾರ್ಥನೆ ; ಬೇಡಿಕೆ : ನಿನ್ನ ವಿನಂತಿಯ ಜೊತೆಗೆ ಕಾರಣಗಳನ್ನು ಕೆದರಿ ವಿವರಿಸಿ ಹೇಳುವುದು ಅವಳಿಗೆ ಸ್ವಲ್ಪ ನೋವನ್ನುಂಟುಮಾಡಿ ದಂತಾಗುವುದಿಲ್ಲವೇ? (ಹೇಮಂತ. ೩೭೦) ; ನನ್ನ ಈ ಅಪರಾಧಕ್ಕಾಗಿ ಖಾವಿಂದರವರು . . . ಕಠಿನೀನಿರಿನ ಶಿಕ್ಷೆಯನ್ನು ವಿಧಿಸಬೇಕು, ಇಷ್ಟೇ ನನ್ನ ವಿನಂತಿ (ಸ್ಕೂಲಮಿ. ೨೧೩). [< ಸಂ. ವಿನತಿ]

**ವಿನಂತಿಸು** (ಕ್ರಿ). ಕೋರು ; ಪ್ರಾರ್ಥಿಸು : ಅವನು . . . ರಾಜಕುಮಾರರು ಈ ಬರಹವನ್ನು ಓದಬೇಕು ಎಂದು ವಿನಂತಿಸಿದ (ಹಾಹುತ್ರ. ೧೦೩) ; ಸಜ್ಜನರು ತಪ್ಪುಗಳನ್ನು ತಿದ್ದಿ ತನ್ನ ಕೃತಿಯನ್ನು ಮೆರೆಯಿಸಲಿ ಎಂದು ವಿನಂತಿಸಿಕೊಂಡಿದ್ದಾನೆ (ಯಕ್ಷಬ. ೩೧). [ವಿನಂತಿ + - ಇಸು]

**ವಿನಕ** (ನಾ). ವಿನಾಯಕ ; ಗಣಪತಿ : ಭಟರಿಯ ದೇಗುಲ ವಿನಕನ ದೇಗುಲ . . . ಮಡಿಸಿದನ್ (ಸೌಇಇ. XI-i, ೩೫-೫ ; 933). 'ಬೆನಕ' ಪರಾ. [< ವಿನಾಯಕ]

**ವಿನಕೆ** 'ವಿನಿಕೆ' ನೋ.

**ವಿನತ** (ಗು). ೧. (ಫಲಭಾರದಿಂದ) ಬಗ್ಗಿದ ; ಬಾಗಿದ : ವಿನತನವಗಂಧ ಶಾಲಿಯ ತೆನೆಗಳನೊಳಕೊಂಡು ಮುಗಿದ ಕುಮುದಂಗಳ್ ನೋಡನುಕರಿಸಿದಪುವು ತೀವಿಪ ತನಿಗಂಪಂ ಪೀರ್ವ ತೆಜಿನನುನ್ನತನಿಳಯಾ (ಲೀಲಾವ. ೫-೪೯). ೨. ನಮಸ್ಕರಿಸಿದ : ವಿನತ ನಾಗೇಂದ್ರ ಹಸ್ತಾರುಣಾಬ್ಜಂ ಹೈಮಂ ಕರ್ಣಾವತಂಸಂ ತನಗೆನೆ ಕರಮೊಪ್ಪಿರ್ದಳ್ (ಆದಿಪು. ೧-೧). ೩. ಕುಗ್ಗಿದ ; ಕುಸಿದ ; ಖಿನ್ನತೆಯಿಂದ ಕೂಡಿದ. (ನಾ). ೪. ನಮಸ್ಕಾರಮಾಡಿದವನು ; ನಮಸ್ಕರಿಸಿದವನು : ಅಪರಿಮಿತಭಕ್ತಿಯಿಂ ತನ್ನ ಪದಾಂಭೋಜಕ್ಕೆ ವಿನತರಾಗಲೊಡಂ ಕಾಶ್ಯಪಿ ಸಂತಸದಿಂ ತಟ್ಟೈಸಿ ಪರಸಿದಳ್ (ಸುಕುಮಾ. ೨-೬೩) ; ಶಿವಶರಣಂ ಕಂಡು ಕಂಡುಬ್ಬಿ ವಿನತನಾಗಿ ಪ್ರಣತಿಯಿಂ ಪುಗೆ ಮನಮೊಸೆದೊಸೆದು ಹಾಡಿ ಹಾಡಿ ಸವಿನಯದಿಂ (ಬಸವಪು. ೩೫-೩). [ಸಂ.]

**ವಿನತಾನಂದನ** (ನಾ). ೧. ನಮಸ್ಕರಿಸಿದವನಿಗೆ ಸಂತೋಷವನ್ನುಂಟು ಮಾಡುವವನು ; ಆಶ್ರಿತರಿಗೆ ಸಂತೋಷವನ್ನು ನೀಡುವವನು. ೨. (ಕಶ್ಯಪ ಋಷಿಯ ಪತ್ನಿಯಾದ) ವಿನತೆಯ ಮಗ ; ಗರುಡ : ವಿನತಾನಂದನಂ . . . ಬಿನ್ನಪಂಗೆಯ್ದಂ (ಪಂಚತಂ. ಅ. ೧೨೧-೧೦) ; ವಿನತಾನಂದನನಿಂದಮಕ್ಕೆ ವಿನತಾನಂದಂ (ಜಗವಿ. ೧-೫೧). ೧, ೨ : ಆ ಮೂರ್ಧಾಭಿಷಿಕ್ತಮುಖ್ಯಂ . . . ವಿನೀತವಿನತಾನಂದನನಾಗಿಯುಂ ಅಪಕ್ಷಪಾತಪ್ರಚಾರನುಂ . . . ಎನಿಪಂ (ಚಂದ್ರಪ್ರ. ೨-೮) ; ಆ ನರೇಂದ್ರಂ . . . ಅಹೀನವೃತ್ತಿಪ್ರವರ್ತಕನಾಗಿಯುಂ ವಿನತಾನಂದನವಿದ್ವೇಷಿಯಲ್ಲದೆ ಭೋಗೀಶ್ವರನುಂ . . . ಎನಿಸಿ (ಪುಷ್ಪದ. ೩-೨೧ ವ). [ಸಂ. (ವಿನತ + ಆನಂದನ) ; (ವಿನತಾ + ನಂದನ)]

**ವಿನತಾಪುತ್ರ** (ನಾ). = ವಿನತಾನಂದನ ೨ : ವಿನತಾಪುತ್ರನ ವಜ್ರತುಂಡಹತಿಗಂ ಮೆಯ್ಯಾಂತು ಕಂಡಂಗಳುಳ್ಳಿನಮಂಗಂಗಳನೊಡ್ಡಿಯೊಡ್ಡಿ . . . ನಾಗಾನಂದಮಂ ಮಾಡಿದಂ (ಪಂಪಭಾ. ೪-೨೬). [ಸಂ.]

**ವಿನತಿ** (ನಾ). ೧. ಬಾಗುವಿಕೆ ; ಬಗ್ಗುವಿಕೆ. ೨. ನಮಸ್ಕಾರ ; ಪ್ರಣಾಮ : ಸುರಮರ್ತ್ಯಭುಜಗರಾ ನವ್ಯದೀಕ್ಷಾಂಗಿಗಾದರದಿಂದ ವಿನತಿ ಮಾಡಿದರು (ಭರಚ. ೫೯-೫೦). ೩. ಸೌಜನ್ಯ ; ನಮ್ರತೆ : ವಿನತಿಯನೆನ್ನರೊಳಂ ನೆಟ್ ಜನಿಯಿಸುವುದು ನೋಡೆ ಪನ್ನೆರಡ್ಮಡಿಯುದಯಂ ಜಿನತನುಗೆನಲೆಸಕಂ ನಿಜಮೆನೆ

ಮಾನಸ್ತಂಭಮಿಂತು ನಾಲ್ಕುಮವೆಸೆಗುಂ (ಶಾಂತೀಶ್ವ. ೧೬-೩೬). ೪. **ಕೋರಿಕೆ ; ಬಿನ್ನಹ.** [ಸಂ.]

**ವಿನತೆ** (ನಾ). ೧. ಕಶ್ಯಪಋಷಿಯ ಹೆಂಡತಿ ; ಗರುಡ ಮತ್ತು ಅರುಣರ ತಾಯಿ : ವಿನತೋದರದಿಂ ಗರುತ್ಮನುದಯಾಚಳದಿಂ ದಿನಪನೊಗೆವಂತೆ ಪುಟ್ಟಿದನನಿವಾರ್ಯಸುತೇಜನನೆನಿಪನಿನಜನ ತನಯಂ (ಪಂಪಭಾ. ೧-೧೨೧) ; ವಿನತೆಯಾ ಕಂದನಧಟಿಗೆ ನಿಲ್ಲಲಾಱದೈತಂದವಳ ದೇಹದಲಿ ಪೊಂದಿ ದಿನವ ಹಿಂದುಗಳೆವುತ್ತಿರ್ಪ ದರ್ವೀಕರಂಗಳೋ . . . ವಿನಲು ತೋಳ್ಗಳೊಪ್ಪೆ (ಪ್ರೌಢರಾ. ೯-೯). ೨. ಬಾಗಿದ ಕಾಲುಗಳು ಅಥವಾ ಬಾಗಿದ ಬೆನ್ನುಳ್ಳ ಹುಡುಗಿ. ೩. ಹೊಟ್ಟೆ ಅಥವಾ ಬೆನ್ನಿನ ಮೇಲೆ ಏಳುವ ಗಡ್ಡೆ. ೪. ಒಂದುಬಗೆಯ ಬುಟ್ಟಿ. ೫. ಬಾಗಿದವಳು ; ನಮಸ್ಕರಿಸಿದವಳು. [ಸಂ. ವಿನತಾ]

**ವಿನತ್ಯನ್ವಿತ** (ನಾ). ೧. ನಮಸ್ಕರಿಸಿಕೊಂಡವನು. ೨. (ಗರುಡ)ಪಕ್ಷಿಯ ನಮಸ್ಕಾರವನ್ನು ಹೊಂದುವವನು. ೧, ೨ : ಪಾಪದೈತ್ಯಗಣಧ್ವಂಸಿ ದಶಾವತಾರವಿದಿತಂ ನಿತ್ಯಂ ವಿನತ್ಯನ್ವಿತಂ ಜಗದೊಳ್ ಕೇಶವದೇವನೊಲ್ದು ಕಳೆವಂ ಸ್ವಾತ್ಮಾನತಕ್ಲೇಶವಂ (ಎಕ. VI. ಕಡೂರು. ೬೬-೨೭ ; 1172).

[ಸಂ. (ವಿನತಿ + ಅನ್ವಿತ) ; (ವಿ + ನತಿ + ಅನ್ವಿತ)]

**ವಿನಮನ** (ನಾ). ತಲೆಬಾಗಿಸಿ ಮಾಡುವ ನಮಸ್ಕಾರ : 'ವಿನಮಿಸು' ಪರಾ. [ಸಂ.]

**ವಿನಮನ್ಮಸ್ತಕ** (ನಾ). ತಲೆಯನ್ನು ಬಾಗಿಸಿದವನು ; ನಮಸ್ಕರಿಸಿದವನು : ಕೃತಾಕೃತಿವಿಸ್ತಾರರ್ ಘನರಥಂಗೆ ಪೊಡೆವಡೆ ವಿನ[ಮ]ನ್ಮಸ್ತಕರ ಚಂದ್ರತಿಲಕನಭಸ್ತಿಲಕರ ಮಕುಟಮೆರಡುಮೆಱಗಿದುವಾಗಳ್ (ಶಾಂತಿಪು. ೯-೫೭). [ಸಂ.]

**ವಿನಮಿತ** (ಗು). ೧. ಬಾಗಿಸಿದ ; ಬಗ್ಗಿಸಿದ : ಭಕ್ತಿಭರವಿನಮಿತೋತ್ತಮಾಂಗನಿಬಿಡ ನಿಬದ್ಧಾಂಜಳಿಗಾಗಿ . . . ಅನೇಕ ಸ್ತುತಿಗಳಿಂ ಜಗತ್ರಯಸ್ವಾಮಿಯಂ ಸ್ತುತಿಯಿಸಿ (ಸುಕುಮಾ. ೮-೬೬ ವ). ೨. ವಂದಿಸಿದ ; ನಮಸ್ಕರಿಸಿದ : ಸಮಸ್ತವಿನಯಜನವಿನಮಿತ ಶ್ರೀವರ್ಧಮಾನಮುನೀಂದ್ರವಂದ್ಯ ಪರಮಜಿನೇಂದ್ರ (ಸುಕುಮಾ. ೩-೪೮ ವ). ೩. (ಆಲಂ) ಹೊಂದಿಕೊಳ್ಳುವ : ವಿನಮಿತಲಲಿತಪದೋಕ್ತಿಗಳಿಂ ಜನಹಿತಮಿಂತಿದು ಮುನಿಮತಮೆಂಬುದು ನಿನಗಱಿಪಿದೆ ಕೆಳದೀ (ಛಂದೋಂಬು. ೨-೧೯೮). (ನಾ). ೪. ನಮಸ್ಕಾರ ಮಾಡಿದವನು ; ವಂದಿಸಿದವನು : ವಿನಮಿತನಾಗಿ ಮಹೀನಾಥನ ದೇವಿಯ ಪರಕೆವಡೆದು ಕುಳ್ಳಿರ್ದಂ (ಕುಸುಮಾ. ೮-೨೩) ; ಧರಣಿಪತಿ ಮುನಿಸಾರ್ವಭೌಮನ ಬರವ ಕಾಣುತ ದಿಮ್ಮನುರುವಿಷ್ಟರವನಿಳಿದಿದಿರ್ವಂದು ವಿನಮಿತನಾಗಿ ಕೈಗೊಟ್ಟು . . . ಬೆಸಗೊಂಡ (ತೊರರಾ. ೧-೯-೨೦). [ಸಂ.]

**ವಿನಮಿತೆ** (ನಾ). ಬಾಗಿದವಳು ; ಬಗ್ಗಿದವಳು : ಧರೆಗತಿವಿದಿತಂ ಕವೀಂದ್ರಸಹಾಯ ನಿಂದೋದಲ್ ಚೆಲ್ವಂಬೆತ್ತೀ ವೃತ್ತಂ ಸ್ತನಭರವಿನಮಿತೆ ಪೆಸರಿಂ ಭುಜಂಗವಿಜೃಂಭಿತಂ (ಛಂದೋಂಬು. ೨-೧೯೭). [ಸಂ. ವಿನಮಿತಾ]

**ವಿನಮಿಸು** (ಕ್ರಿ). ೧. ನಮಸ್ಕರಿಸು ; ವಂದಿಸು : ದಾಸಿಯು ದುಗ್ಗಳೆಯು ಸಾಷ್ಟಾಂಗವೆಱಗಿ ವಿ[ಪಾಠಾಂ. ಯೆ]ನಮಿಸಿ ದಾಸಯ್ಯಂಗಳಡಿಗಳ ಮೇಲೆ ಇಬ್ಬರು ಕೆಡೆದು ಬಿಡದಿರಲು (ಬಸಪು. ೨೩-೩೫). ೨. ಬೇಡಿಕೊಳ್ಳು ; ಪ್ರಾರ್ಥಿಸು : ಸೋನಕ್ಕ ಕಂಬನಿ ಮಿಡಿದು ವಿನಮಿಸಿರಲಿಲ್ಲ (ದೀಪಹ. II. ೨೯೭). [ವಿನಮನ + - ಇಸು]

**ವಿನಮ್ರ** (ಗು). ೧. ಬಾಗಿದ ; ಬಗ್ಗಿದ : ಯುವತಿಜಘನಕಾಂಚೀರತ್ನಂ ಸ್ತನಭರ ವಿನಮ್ರಗಣಿಕಾಸ್ತನತಟಹಾರಂ ಸರಸ್ವತೀಮಣಿಹಾರಂ (ಆದಿಪು. ೧-೩೧) ; ಸತತಂ ಲಜ್ಜಾವಿನಮ್ರಾನನಸರಸಿಜಸತ್ಕರ್ಣಿಕಾಕಾರದಿಂ ಸಂಸ್ತುತಿವೆತ್ತಾಮೋದ ವಿಸ್ತಾರದಿನೆಸೆವ ಪುರಂಧ್ರೀಲಸನ್ನಾಸಿಕಂ (ನಳಚಂ. ೩೫೭). ೨. ವಂದಿಸಲ್ಪಡುವ ; ನಮಸ್ಕರಿಸಲ್ಪಡುವ: ಹತವೈರಿಕ್ಷತ್ರಚಕ್ರಂ ಭಯಚಕಿತಜಗದ್ವೀರಚಕ್ರಂ ವಿನಮ್ರಕ್ಷಿತಿಚಕ್ರಂ . . . ಇರ್ದತ್ತೊಳಪುಗದೆ ಪುರೋಪಾಂತದೊಳ್ ಚಕ್ರರತ್ನಂ (ಆದಿಪು. ೧೪-೩) ; ನಿಖಿಲದಿವಿಜದನುಜವಿನಮ್ರಕಮ್ರಶಿರೋಮಣಿದ್ಯುಗುಣ ಪಾಟಳಮಣಿ ಭೂಮಿಭಾಗಾ ಭೋಗಸಭಾಮಂಡಳನಂ . . . ಸ್ತುತಿಯಿಸಿ (ಶಾಂತಿಪು. ೧-೮೫ ವ). ೩. ವಿನಯ ಪೂರ್ವಕವಾದ ; ನಮ್ರವಾದ : ಜ ಮತ್ತು ಟ ಕಾರಗಳನ್ನು ಪುನರುಜ್ಜೀವಿಸುವ ವಿನಮ್ರಪ್ರಯತ್ನಗಳು . . . ಪಾಂಡಿತ್ಯಪ್ರಿಯಪಂಡಿತಮಂಡಳಿಯಿಂದ ನಡೆದಿದೆ (ದ್ರಾವಿ. ೩೫೭). ೪. ಕುಗ್ಗಿದ ; ಕುಸಿದ. [ಸಂ.]

**ವಿನಯ** (ನಾ). ೧. ಒಳ್ಳೆಯತನ ; ನಮ್ರತೆ ; ಸೌಜನ್ಯ : ವಿನಯಂ ಸಹಜಂ ಕೃತ್ರಿಮವೆನಿಸಿದವು ಬೇಱೆವೇಱೆ ವಿದ್ವಜ್ಜನಮಂ ಮನದೆಗೊಳಿಸುವುವಿವರಡುಂ ನಿನಗೊಳವು (ಆದಿಪು. ೧೪-೬೩) ; ವಿನಯಮನೆ ಬಗೆದು ವಿಕ್ರಮಮನೆ ಬಗೆಯದೆ ನರನುಮಾನುಮೆನಗಂ ಸಮ್ಮೋಹನಮಾದುದಕ್ಕುಮಂದಣ್ಣನ ಸೂನೃತವಚನವೆಂಬ ಮಂತ್ರಾಕ್ಷರದಿಂ (ಗದಾಯು. ೧-೬೩). ೨. ಆದರ ; ವಿಶ್ವಾಸ : ವಿನಯದಿನಿತ್ತ ಬನ್ನಿಮಿರಿಮೆಂಬವೊಲಿಂಚರ ದಿಂದಮೊಯ್ಯನೊಯ್ಯನೆ ಮಱಿದುಂಬಿಗಳ್ ಮೊರೆವುವು (ಪಂಪಭಾ. ೧-೧೧೭) ; ವಿನಯಂ ನಿಮ್ಮೊಳ್ಸಹಜಂ ಮದ್ವಚನಲವಮನುಲ್ಲಂಘನಂಗೆಯ್ದುದಿಲ್ಲೆಂಬನಿತಂ ಬಲ್ಲೆಂ (ಶಾಂತೀಶ್ವ. ೧೩-೮೦). ೩. ಯೋಗ್ಯ ನಡವಳಿಕೆ ; ಮರ್ಯಾದೆ ; ಸಭ್ಯತೆ : ಧನಿಕ ದೀನನನೊಂದೆ ಸಮದಲಿ ವಿನಯಗೊಂಡಾರೈವ ಭೂಭುಜನನುವಿನಸುಸರದಿಂದ ಪೊರೆವರು ಮಂತ್ರಿಗಳು ಜನರ (ಬಿಜ್ಜಪು. ೬೭-೧೬) ; ಕಲಿತರ್ಕೆ ಬಿಳ್ಬಿಚ್ಚೆಯಂ, ವೇದಮಂ ನೀತಿನಯವಿನಯನಿಯತಿಯಂ (ಶ್ರೀರಾಮಾ. ೨೫-೬೭೧). ೪. ಸನ್ಮಾರ್ಗದಲ್ಲಿ ನಡೆಯುವಂತೆ ನೀಡುವ ತಿಳಿವಳಿಕೆ, —ಮಾರ್ಗದರ್ಶನ : ಜನನಿಯುಪದೇಶದಾ ವಿನಯಕೆ ವಿಧೇಯನಾಗವಿವೇಕಿಯಾದೆನಾಂ! (ಚಿತ್ರಾಂಗ. ೭೯-೨೧೬೫). ೫. ಅರಿಕೆ ; ಬಿನ್ನಪ ; ವಿಜ್ಞಾಪನೆ : 'ವಿನಯವತ್ತಳೆ' ಪರಾ. ೬. ಆದರದ ಮಾತು ; ಸ್ನೇಹದ ನುಡಿ : ವಿನಯಮನಾಡುವುದಾಲೋಚನೆಗೆಯ್ವುದು . . . ಸಾಮದಿಂ ಮರಳ್ವುವುದವಂ (ಗಿಂಕ. ೬-೧೭). ೭. ದಂಡ ; ಜುಲ್ಮಾನೆ : ವ್ಯವಹಾರಾಭಿಲೇಖಿತಕ ಕರಣ ಸೇವಾಕಸ್ಯಾ ಮಧ್ಯಾಹ್ನದೂರ್ಧ್ವಂ ನಿರುಪಸ್ಥಿತಸ್ಯ ವಿನಯೋರೂಪಕಃ ಷಟ್ಪಾದಸ್ಸಹಧಾರ್ಮಿಕೇಣ (ಎಇ. XXX. ೧೭೯-೧೩; 592). ೮. (ಲೋಹ ಮುಂತಾದುವು ಆಕರ್ಷಣೆಗೆ ಒಳಗಾಗಿ) ಬಾಗುವಿಕೆ : ದೃಷ್ಟವನಱಿವುದಕ್ಕೆ ಅಯಸ್ಕಾಂತದ ಶಿಲೆಯ ತೆಱನಂತೆ ಲೋಹದ ವಿನಯದಂತೆ ಅನಲನ ತೃಣದ ಸಂಗದಂತೆ . . . ನಿಃಕಳಂಕಮಲ್ಲಿಕಾರ್ಜುನನ ಕೂಟದ ಕುಟಿಲ (ಮೋಳಿಮಾ. ೧೧೮-೪೨೮). ೯. [ಜೈನ] ಪೂಜ್ಯಪುರುಷರನ್ನು ಆದರಿಸುವುದು : ಅಭ್ಯಂತರತಪಷಟ್ಕದೊಳಂ ಪ್ರಾಯಶ್ಚಿತ್ತವಿನಯವೈಯಾಪೃತ್ಯಸ್ವಾಧ್ಯಾಯಧ್ಯಾನವ್ಯುತ್ಸರ್ಗಂಗಳನೊಳಕೊಂಡು (ಆದಿಪು. ೬-೩೩ ವ) ; ಪ್ರಾಯಶ್ಚಿತ್ತಂ ವಿನಯಂ ವೈಯಾಪೃತ್ಯಂ ಜಿನಂಗೆ ಕೂಡದು ದೋಷಾಪಾಯತಿಯಿಂ ಧ್ಯಾನಂ ಸ್ವಾಧ್ಯಾಯವ್ಯುತ್ಸರ್ಗಮುಂಟು ಸಂದೆಯಮುಂಟೇ (ಅಜಿಪು. ೧೨-೩೧). [ಸಂ.]

**ವಿನಯಂಗುಂದು** (ಕ್ರಿ). ಸೌಜನ್ಯವು ಇಲ್ಲದಾಗು ; ಅವಿನಯದಿಂದ ಕೂಡಿರು: ವಿನಯಂಗುಂದಿದುದಿಲ್ಲ ಪೊಲ್ಲಮೆಯನೆಂತುಂ ಮಾಡೆಂ (ಕುಸುಮಾ. ೩-೩೮); ವಿನಯಂಗುಂದದೆ ಪಾದಪೀಠತಳದೊಳ್ ಕುಳ್ಳಿರ್ಪ ಲೋಕೈಕಮಿತ್ರನನೊತ್ತಂಬದಿನೆತ್ತಿ (ಪುಷ್ಪಪು. ೪-೭೨). [ವಿನಯ + ಕುಂದು]

**ವಿನಯಂಗೆಡು** (ಕ್ರಿ). ಸಭ್ಯತೆಯನ್ನು ಕಳೆದುಕೊಳ್ಳು ; ಶಿಷ್ಟಾಚಾರವನ್ನು ಮೀರು : ದುರ್ವಿನೀತ ವಿನಯಂಗೆಟ್ಟೆಯೆಂದಾಚಾರಮ ತನ್ನಂ ಜಡಿವಂತೆಯುಂ . . . ಅತಿಲಜ್ಜಿತೆಯಾಗಿ ತನ್ನೊಳಿಂತೆಂದಳ್ (ಕಾದಂಬ. ೭೫). [ವಿನಯ + ಕೆಡು]

**ವಿನಯಂಗೆಯ್** (ಕ್ರಿ). ೧. ಆದರವನ್ನು ತೋರಿಸು ; ಸ್ನೇಹದಿಂದಿರು : ವಿನಯಂಗೆಯ್ವುದು ನಂಟುಗೊಳ್ವುದಹಿತಾಕ್ಷ್ಮಾಪಾಲರೊಳ್ ಸಾಮಂ (ಸೂಕ್ತಿಸು. ೧೬-೪). ೨. ಸೇವೆಮಾಡು ; ಉಪಚರಿಸು ; ಶುಶ್ರೂಷೆ ಮಾಡು : ಆವುಂ ಪೋಗಲೊಲ್ಲೆವು ನಿಮ್ಮಡಿಗಳ್ಗೆ ವಿನಯಂಗೆಯ್ಯುತ್ತಮಿರ್ದಪ್ಪೆವೆಂದು ಪಳ್ಕದಿರ್ದರ್ (ವಡ್ಡಾರಾ. ೮೮-೨೫); ಶ್ರೀ ಸಿಂಹನನ್ದಿತಮ್ಮಡಿಗಳ್ ಇಂಗಿನಿಮರ[ಣಂ] xxx ಒಂದು ತಿಂಗಳಿಂ ಸಾಧಿಸಿದೋರ ಶ್ರೀ ಸಿಂಹನನ್ದಿ ಅಣ್ಣನು[ಂ] . . . ಬ್ರಹ್ಮಚಾರಿ ಅಣ್ಣನುಂ ನಾಲ್ಕರುಂ ವಿನಯಂ[ಗೆ]ಯ್ದೋರ್ (ಕಇಅ. ೭೨-೮-೩; ಸು 1008).

[ವಿನಯ + ಕೆಯ್]

**ವಿನಯದೇವಸೇನ** (ನಾ). ಒಬ್ಬಾತನ ಹೆಸರು : ತನಗೆ ಮೃತ್ಯುವರವಾಸಱಿದೆನ್ನು ಸುಪಣ್ಣಿತನ್ ಅನೇಕಶೀಲಗುಣಮಾಲೆಗಳನ್ನಗಿದೊಪ್ಪಿದೊನ್ ವಿನಯದೇವಸೇನನಾಮ ಮಹಾಮುನಿ ನೋನ್ತು (ಎಕ. II (R). ೧೩೦-೩ ; 7 ನೆಯ ಶತ). [ಸಂ.]

**ವಿನಯಪರ** (ನಾ). ಸೌಜನ್ಯದಿಂದ ಕೂಡಿದವನು ; ನಮ್ರನಾದವನು : ಕೌರವನನುಜ್ಞೆ ಭೀಷ್ಮನ ಬೇಡಿಕೊಂಡನು ವಿನಯಪರನಾಗಿ (ಕುಮಾರವ್ಯಾ. ೧-೪೨). [ಸಂ.]

**ವಿನಯಪಿಟಕ** (ನಾ). [ಬೌದ್ಧ] ಬೌದ್ಧರ ಸೂತ್ರಪಿಟಕ, ವಿನಯಪಿಟಕ ಮತ್ತು ಅಭಿಧರ್ಮಪಿಟಕಗಳೆಂಬ ಮೂರು ಪವಿತ್ರಗ್ರಂಥಗಳಲ್ಲಿ ಒಂದು : ಸೂತ್ರಪಿಟಕ ವಿನಯಪಿಟಕ ಅಭಿಧರ್ಮಪಿಟಕ ಎಂದು ಮೂರು ಪಿಟಕಗಳು . . . ಸೂತ್ರರೂಪವಾದ ಗ್ರಂಥಗಳೊಂದು ರಾಶಿ, ಶಿಕ್ಷಾರೂಪಗ್ರಂಥಗಳೊಂದು ರಾಶಿ, ತತ್ತ್ವವಿಚಾರಗ್ರಂಥಗಳು ಮತ್ತೊಂದು ರಾಶಿ—ಈ ಪ್ರಕಾರ ಮೂರು ರಾಶಿಗಳು (ಹಿಂದಸಾ. ೨೪). [ಸಂ.]

**ವಿನಯಪೂರ್ವಕ** (ನಾ). ನಮ್ರತೆಯಿಂದ ಕೂಡಿರುವುದು ; ಸೌಜನ್ಯಯುಕ್ತವಾದುದು : ತನುವು ಮೊದಲಾದಭಿಮತಂಗಳನನುದಿನಂ ಮಾಹೇಶ್ವರರಿಗಿತಿ ವಿನಯಪೂರ್ವಕಮಾಗಿ ಕೊಡುತಿರ್ಪಂ ಹಲಾಯುಧನು (ಬಸವು. ೨೫-೩೮). [ಸಂ.]

**ವಿನಯಪ್ರಹೀಣ** (ನಾ). ಸೌಜನ್ಯವಿಲ್ಲದವನು ; ಉದ್ಧಟ : ನಗರಾಭ್ಯಂತರದೇವತಾ ಭವನದೊಳ್ . . . ವಿನಯಪ್ರಹೀಣರವಿನೀತರ್ ನೀತಿಗೆಟ್ಟಾಡುಪರ್ (ಸುಕುಮಾ. ೨-೭). [ಸಂ.]

**ವಿನಯವಂತ** (ನಾ). ವಿನೀತನಾಗಿರುವವನು ; ನಮ್ರಸ್ವಭಾವದವನು : ಆ ಹುಡುಗ ವಿನಯವಂತನಾಗಿದ್ದಾನೆ (ರೂಢಿ). [ಸಂ. ವಿನಯವತ್]

**ವಿನಯವತಿ** (ನಾ). ೧. ಸೌಜನ್ಯಸ್ವಭಾವವನ್ನು ಹೊಂದಿರುವವಳು : ವಿನಯವ[ಪಾಠಾಂ. ಪು]ತಿ ನಾಗಿಯಬ್ಬೆಗಮನೂನಗುಣನೆನಿಪ ನಾಗಮಯ್ಯಂಗಂ ನಂದನೆಯೆನಿಸಿ ದಪ್ಪಕಬ್ಬೆಯೆ ಜಿನಪಾದಪಯೋಜಭೃಂಗಿ ಕುಲವಧುವಾದಳ್ (ಅಜಿಪು. ೧-೩೮). ೨. ಒಬ್ಬಾಕೆಯ ಹೆಸರು ; IP ಚಾಳುಕ್ಯವಿಕ್ರಮಾದಿತ್ಯನ ಮಗಳು : ದೇವೀ ವಿನಯವತ್ಯಾಸೀತ್ ತಸ್ಯ ಯಸ್ಯಾಃ ಪಿತಾಭವತ್ ಚತುರ್ದಿಗಧಿಪಃ ಶ್ರೀಮಾನ್ ವಿಕ್ರಮಾದಿತ್ಯ ಭೂಪತಿಃ (ಎಇ. XXVII, ೧೫೧-೪೨ ; 771). [ಸಂ. ವಿನಯವತೀ]

**ವಿನಯವತ್ತಳೆ** (ನಾ). ವಿಜ್ಞಾಪನೆಯನ್ನು ಬರೆದಿರುವ ಪತ್ರ ; ಬಿನ್ನವತ್ತಳೆ : ಸುತ್ತಾಱುಂ ಸುತ್ತಿಲ್ಲದೆ ಸುತ್ತಟಿದಿರ್ದೊಂದು ವಿನಯವತ್ತಳೆಯಂ ವಿಪ್ರೋತ್ತಮಂ . . . ತನ್ನೊಳನುವಾಚಿಸಿದಂ (ಸುಕುಮಾ. ೨-೯೯). [ವಿನಯ + ಪತ್ತಳೆ]

**ವಿನಯವಿನಮಿತ** (ನಾ). ನಮ್ರತೆಯಿಂದ ತಲೆಬಾಗಿದವನು : ದೇವಗುರು ಬೆಸಸೆ ಜನಕ ಭವಾವಳಿಯಂ ಕೇಳ್ದು ವಿನಯವಿನಮಿತನಾದೊಂ (ಶಾಂತಿಪು. ೭-೬೫). [ಸಂ.]

**ವಿನಯಶೀಲ** (ನಾ). ಸೌಜನ್ಯದ ಸ್ವಭಾವದವನು : ಆ ವಿದ್ಯಾರ್ಥಿ ಬಹಳ ವಿನಯಶೀಲನಾಗಿದ್ದಾನೆ (ರೂಢಿ). [ಸಂ.]

**ವಿನಯಸಂಪನ್ನ** (ನಾ). ಸೌಜನ್ಯವೇ ಸಂಪತ್ತಾಗುಳ್ಳವನು : ಆ ಮನುಷ್ಯ ಬಹಳ ವಿನಯಸಂಪನ್ನ (ರೂಢಿ). [ಸಂ.]

**ವಿನಯಸಂಪನ್ನತೆ** (ನಾ). ೧. ಸೌಜನ್ಯವೇ ಸಂಪತ್ತಾಗಿರುವುದು ; ಅತಿನಮ್ರತೆ: ಅವನು ತನ್ನ ವಿನಯಸಂಪನ್ನತೆಯಿಂದ ಹಿರಿಯರ ಮೆಚ್ಚುಗೆಗೆ ಪಾತ್ರನಾಗಿದ್ದಾನೆ (ರೂಢಿ). ೨. [ಜೈನ] ತೀರ್ಥಂಕರನಾಗುವುದಕ್ಕೆ ಕಾರಣವಾದ ಹದಿನಾರು ಭಾವನೆಗಳಲ್ಲಿ ಒಂದು ; "ವಿನಯವನ್ನು ನೆಲೆಗೊಳಿಸುವ ಭಾವನೆ" (ಜೈನಕೋ. ೨೩೨): ವಿನಯಸಂಪನ್ನತೆಯೆಂಬುದು ಮೋಕ್ಷಸಾಧನಮಪ್ಪ ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳೊಳುಮವರ್ಕಾಧಾರಮಪ್ಪ ಗುರುಪ್ರಭೃತಿಗಳೊಳ್ ಯಥಾಯೋಗ್ಯ ಸಂಸ್ಕಾರಂಗಯ್ಯುದದು ವಿನಯಸಂಪನ್ನತೆ (ಚಾಪುಂಪು. ೨೪೧). [ಸಂ. ವಿನಯಸಂಪನ್ನತಾ]

**ವಿನಯಾದಿತ್ಯ** (ನಾ). ೧. ಗಂಗರ ಮನೆತನದ ಒಬ್ಬ ದೊರೆಯ ಹೆಸರು : ಅತಿಸಯಗಙ್ಗಂ ವಿನಯಾದಿತ್ಯಂ ಶ್ರೀಮತ್ತಙ್ಗರ ಭೀಮಂ ಕೂಡಲೂರ ಮಹಾಜನಕ್ಕೆ ಕೊಟ್ಟ ಸ್ಥಿತಿ (ಎಕ. III, ನಂಜನ. ೧೫೩-೫, ಸು. 980 ?). ೨. ಚಾಳುಕ್ಯಮನೆತನದ ಒಬ್ಬ ದೊರೆಯ ಹೆಸರು. [ಸಂ.]

**ವಿನಯಾರ್ಥ** (ನಾ). ವಿನಂತಿ ; ಮನವಿ ; ಬಿನ್ನವತ್ತಳೆ : ಅವರಿಗೆ ಒಂದೆರಡು ಸಲ ಎರಡು ವಿನಯಾರ್ಥ ಬರೆದದ್ದು ಉಂಟು (ಚಕರಾ. ೨೫೭). [ಸಂ.]

**ವಿನಯಾವತಿ** (ನಾ). [ಸಂಗೀತ] ಆಲಾಪನೆಯ ಒಂದು ಪ್ರಕಾರ : ನಾದಾವತಿ ನಂದಾವತಿ ಭದ್ರಾವತಿ ವಿನಯಾವತಿ ಭೋಗಾವತಿ ಎಂಬೈದುತೆಱದಿಂದಾಲಾಪಿಸುವ ಪದಕ್ರಮದ . . . ಗಾಯಕರಿಂ (ವಿವೇಕ. ೧೮೪). [ಸಂ.]

**ವಿನಯಾವಲೋಕ** (ನಾ). ಸೌಜನ್ಯದೃಷ್ಟಿಯುಳ್ಳವನು : ಅಹಿತಕುಳಕಮಳವನವೇದಂಡಂ ವಿನಯಾವಲೋಕಂ ಕೀರ್ತಿಪತಾಕಂ (ಎಕ. VII, ಶಿಕಾರಿ. ೧೩೫-೨೩ ; 1078). [ಸಂ.]

**ವಿನಯಿತ** (ನಾ). ಸೌಜನ್ಯಪರನಾದವನು ; ಸರಳವ್ಯಕ್ತಿ : ವಿನಯಿತನೆನ್ನು ಸತ್ಯಪರನೆನ್ನು . . . ಮೇದಿನಿಯಬಿವಣಿಕುಂ ನೆಗಳ್ದ ಹೆಗ್ಗಡೆಯಗ್ಗದ ಮೋಟಗೌಣ್ಡನಂ (ಎಕ. XII, ಚಿಕ್ಕನಾ. ೩೧-೬೩ ; 1233) ; ಎಡೆವರಿವ ವಿನಯಿತಂ ವೀತರಾಗನೆನಿಕ್ಕು (ಮಂಗರಾ. ೭೧-೨೦). [< ವಿನಯ]

**ವಿನಯೋಕ್ತಿ** (ನಾ). ಸೌಜನ್ಯದಿಂದ ಕೂಡಿದ ಮಾತು ; ಮೃದುವಚನ : ಈ ಮಲ್ಲಪಯ್ಯನೊಳೊಪ್ಪುಗುಂ ಪಿತೃಭಕ್ತಿಯುಂ ವಿನಯೋಕ್ತಿಯುಂ (ಶಾಂತಿಪು. ೧-೪೦); ದಿನಪಕುಲತಿಲಕನೇಕಾಂತದೊಳ್ನಗರಶೋಧನೆಯ ಚಾರರೊಳೊರ್ವನಂ ಕರೆಸಿ ಕೇಳ್ದನಿಂತೆಂದು ವಿನಯೋಕ್ತಿಯಿಂದೆ (ಜೈಮಿಭಾ. ೧೮-೪೧). [ಸಂ.]

**ವಿನಯೋಪಚಾರ** (ನಾ). ೧. ನಮ್ರತೆಯಿಂದ ಮಾಡುವ ಸೇವೆ, – ಉಪಚಾರ : ವಿನಯೋಪಚಾರವಚನಮುಮನುಕೂಲಾಚರಣಮುಂ ವಿಭಿನ್ನಾಸನಮುಂ ಮನದೊಳಗೆ ಪುದಿದು ಪೊಣ್ಮಿದ ಮುನಿಸಂ ಕನ್ನಡಿಪುವು (ಕಾವ್ಯಾವ. ೬೩೮). ೨. ವಿನೀತಭಾವದಿಂದ ಸೇವಿಸುವವನು : ಕುಲಜಾತಿದೇಶವಿಶದಂ ವಿನಯೋಪಚಾರಂ ನಿಲಯೈಕವೃತ್ತಿ . . . ಮಲಿನಾವಬೋಧ ವಿದಿತಾಖಿಳಚೋದ್ಯ[ವೃಂದಂ] (ಕವಿರಾ. ೩-೨೨೭). [ಸಂ.]

**ವಿನಶನ** (ನಾ). ೧. ನಾಶವಾಗುವಿಕೆ ; ಹಾಳಾಗುವಿಕೆ. ೨. ನಾಶ ; ಹಾಳು. ೩. ಮಾಯವಾಗುವಿಕೆ ; ಮರೆಯಾಗುವಿಕೆ ; ಕಾಣದಾಗುವಿಕೆ. ೪. ಸರಸ್ವತೀ ನದಿಯು ಅಂತರ್ವಾಹಿನಿಯಾಗಿ ಪ್ರವಹಿಸುವ ಸ್ಥಳ ; ಕುರುಕ್ಷೇತ್ರ : ಮಧ್ಯಮಃ, ಮಧ್ಯದೇಶಃ - ವಿನಶನವೆಂಬ ಕ್ಷೇತ್ರಕ್ಕೆ ಮೂಡಲಾಗಿಯೂ . . . ಇರುವ . . . ಚಿತ್ರಕೂಟ ಮುಂತಾದ ಮಧ್ಯದೇಶಕ್ಕೆ ಹೆಸರು (ಸಿದ್ಧಾಂತಿ. ೯೪). [ಸಂ.]

**ವಿನಷ್ಟ** (ಗು). ೧. ನಾಶಹೊಂದಿದ ; ಹಾಳಾದ. ೨. ಕಾಣದಾದ ; ಮರೆಯಾದ. (ನಾ). ೩. ನಾಶ ; ಹಾನಿ : ಮನೋಮಯದಲ್ಲಿ ಪ್ರಾಣಮಯದ ಭಾವತ್ವ ವಿನಷ್ಟವಾಗುವುದಿಲ್ಲ. ಅದು ತನ್ನ ಅಲ್ಪತ್ವದಿಂದ ಪಾರಾಗಿ ವಿಸ್ತಾರವಾಗುತ್ತದೆ (ಸೌಂದಸ. ೧೯); ಆ ರಾಜ್ಯತ್ರಯದಲ್ಲಿ ವಿನಷ್ಟವಾದ ದೇವಸ್ವ ಬ್ರಹ್ಮದೇಯಗಳನ್ನು ಧರ್ಮಯಶೋಭಿವೃದ್ಧಿಗಾಗಿ ತನ್ನ ಮುಖದಿಂದಲೇ ಉದ್ಧಾರಮಾಡಿದನು (ಕರ್ಣಾಇ. ೭೨). [ಸಂ.]

**ವಿನಷ್ಟೇಕ್ಷಣ** (ನಾ). ಕಣ್ಣುಗಳನ್ನು ಕಳೆದುಕೊಂಡವನು ; ಕುರುಡ : ಉದಯಸ್ಥಂ ದಿನನಾಥನಾಗೆ ವಿಕಲಾಕ್ಷಂ . . . ವಣಿಜೋದಯಸ್ಥನೆನೆ ನಿರ್ದ್ರವ್ಯಂ ವಿನಷ್ಟೇಕ್ಷಣಂ (ಜಾತಕ. ೧೮-೧). [ಸಂ.]

**ವಿನಹ, ವಿನಹಾ** (ಅ). ಹೊರತು ; ಅಲ್ಲದೆ : ಶಂಕರಭಟ್ಟರ ಬಗೆ ಬಡಾಕರೆಯಲು ಮನೆಯ ವಿನಹ ಮು ೫ ||| (ಸೌಇಇ. IX-ii, ೬೭೩-೩೧ ; 1562) ; ಯೆಹೂದ್ಯರು, ಮುಸಲ್ಮಾನರು ಮತ್ತು ಕ್ರೈಸ್ತರು ಇವರ ವಿನಹ ಉಳಿದ ಎಲ್ಲಾ ಜನಾಂಗದವರಲ್ಲೂ ಈ ಸಿದ್ಧಾಂತ ಪ್ರಚಾರದಲ್ಲಿತ್ತು (ಜೀವಾತ್ಮ. ೧೮೪). **ವಿನಹಾ** : ವಟ್ಟ ಕೊಟ್ಟ ವಿನಹಾ ಸೆಟ್ಟ ಬಿಡ (ಗಾದೆ). [< ಸಂ. ವಿನಾ]

**ವಿನಹಾ** 'ವಿನಹ' ನೋ.

**ವಿನಾ** (ಅ). ಹೊರತು ; ಉಳಿದು ; ಬಿಟ್ಟು : ನರರನ್ಯರಿಲ್ಲಾಯಿತ್ತು ಮಂಥರೆಯ ಲೋಕಕ್ಕೆ, ಕೈಕೆ ಭರತರ್ ವಿನಾ (ಶ್ರೀರಾಮಾ. ೨೭-೭೦೮). [ಸಂ.]

**ವಿನಾಕರಿಸು** (ಕ್ರಿ). ಹೊರತುಪಡಿಸು ; ಹೊರತುಗೊಳಿಸು : ಯಾವ ಶ್ರುತಿವಾಕ್ಯವೇ ಆಗಲಿ, ಅದನ್ನು ಅರ್ಥಮಾಡಿಕೊಳ್ಳುವುದೆಂದರೆ ಸರ್ವರೀತಿಯಿಂದಲೂ ಪರಬ್ರಹ್ಮನ ಅಹೇಯತ್ವವನ್ನು ರಕ್ಷಿಸಿಕೊಳ್ಳೋಣ . . . ಈ ಭಾವವನ್ನು ವಿನಾಕರಿಸಿ ಶ್ರುತಿಗೆ ಅರ್ಥಮಾಡಿಕೊಳ್ಳುವುದು ಅನುಚಿತ (ಭಾತತ್ತ್ವ. ೫೬೩). [ವಿನಾಕರಣ + - ಇಸು]

**ವಿನಾಕಾರಣ** (ಅ). ಕಾರಣವಿಲ್ಲದೆ ; ನಿಷ್ಕಾರಣವಾಗಿ : ನೀವು ಸುಮ್ಮನೆ . . . ವಿಚಾರಮಾಡದೆ ವಿನಾಕಾರಣ ದುಡುಕುತ್ತೀರಿ (ಪದ್ಮಸ. ೨೨೧). [ಸಂ.]

**ವಿನಾಡಿ** (ನಾ). ಇಪ್ಪತ್ತುನಾಲ್ಕು ಕ್ಷಣಗಳ ಅವಧಿ ; ಒಂದು ಗಂಟೆಯ ಅರುವತ್ತನೆಯ ಒಂದು ಭಾಗ : ಅನುರಾಧನಕ್ಷತ್ರದೊಡನೆ ಚಂದ್ರನ ಸಂಬಂಧ ೧೧ ನಾಡಿ ೪೧ ವಿನಾಡಿಗಳಲ್ಲಿ ಉದಯದಿಂದ ಮುಂದೆ ಚಂದ್ರನ ಚಲನೆ ಸಾಗಿ ಸಂಬಂಧ

ಜ್ಯೇಷ್ಠಾನಕ್ಷತ್ರ ರಾಶಿಯೊಡನೆ ಬೆಳೆಯುತ್ತದೆ (ಆಕಾಶ. ೮೮) ; ದೇವಿಯ ಕೌಶಲದಿಂದೊಂದು ವಿನಾಡಿಯಲ್ಲೇ ಐನೂರು ಮಂದಿ ಕುಂಪಣಿಯ ಸಿಪಾಯಿಗಳೂ ಪರಾಸ್ತರಾಗಿ ಹೋದರು! (ದೇವೀಚೌ. ೧೫೧). [ಸಂ.]

**ವಿನಾಪೋಟಿ** (ನಾ). ಒಬ್ಬಾಕೆಯ ಹೆಸರು : ವಿಜಯಾದಿತ್ಯ ಸತ್ಯಾಶ್ರಯ ಶ್ರೀಪೃಥಿವೀವಲ್ಲಭ ಮಹಾರಾಜಾಧಿರಾಜಪರಮೇಶ್ವರಭಟಾರರಾ ಪ್ರಾಣವಲ್ಲಭೆ ವಿನಾಪೋಟಿಗಲೆನ್ಬೊರ್ ಸೂಳೆಯರ್ (ಇಆ.X, ೧೦೩-೩ ; ಸು. 696). [ವಿನಾ$_{0}$ + ಪೋಟ್ಟಿ$_{2}$ (< ಪೊಡ್ಡಿ)]

**ವಿನಾಯಕ** (ನಾ). ೧. ಕಳೆಯುವಿಕೆ ; ತೆಗೆದುಹಾಕುವಿಕೆ. ೨. ಮುನ್ನಡೆಸುವವನು ; ಮುಂದಾಳು ; ಮಾರ್ಗದರ್ಶಕ. ೩. (ವಿಘ್ನಗಳನ್ನು) ನಿವಾರಿಸುವವನು. ೪. ಗಣೇಶನ ಹೆಸರುಗಳಲ್ಲಿ ಒಂದು : ಮೆಚ್ಚಿ ವಿನಾಯಕಂ ತಾನ್ನಿಮಿರ್ಚುಗೆ ಕಬ್ಬಮಂ ನಯದಿಂ ಗುಣಾರ್ಣವಭೂಪನಾ (ಪಂಪಭಾ. ೧-೭); ಅಂತು ವಿನಾಯಕಸ್ತೋತ್ರಮಂ ಮಾಡಿ . . . ನೈಷಧನೃಪಂ ಪೋಗುತ್ತಿರಲ್ (ನಳಚಂ. ೨೩೩ ವ). ೫. ಹಕ್ಕಿಗಳ ನಾಯಕ ; ಗರುಡ. ೬. ಅಡ್ಡಿ ; ತಡೆ ; ಆತಂಕ. ೭. [ಬೌದ್ಧ] ಬುದ್ಧ : "ಸರ್ವಜ್ಞಸ್ಸುಗತಃ . . . ವಿನಾಯಕಃ . . . ಮುನಿಃ – ೧೮ ಬುದ್ಧದೇವರ ಹೆಸರುಗಳು" (ಸಿದ್ಧಾಂತಿ. ೧೬). [ಸಂ.]

**ವಿನಾಯಕಚತುರ್ಥಿ** (ನಾ). ಭಾದ್ರಪದಶುದ್ಧಚೌತಿ ಮತ್ತು ಅಂದು ಆಚರಿಸುವ ಗಣೇಶನ ಹಬ್ಬ : ವಿನಾಯಕಚತುರ್ಥಿ, ಗಣೇಶಚೌತಿ (ಭಾಹಬ್ಬ. ೧೨೦). [ಸಂ. ವಿನಾಯಕಚತುರ್ಥೀ]

**ವಿನಾಯಕಚೌತಿ** (ನಾ). = ವಿನಾಯಕಚತುರ್ಥಿ : ವಿನಾಯಕಚೌತಿಯಂದು ಚಂದ್ರನನ್ನು ನೋಡಿದರೆ ಅಪವಾದ ಬರುವುದೆಂಬ ನಂಬಿಕೆಯಿದೆ (ರೂಢಿ). [ವಿನಾಯಕ + ಚೌತಿ]

**ವಿನಾಯತಿ** 'ವಿನಾಯಿತಿ' ನೋ.

**ವಿನಾಯಿತಿ** ವಿನಾಯತಿ, ವಿನಾಯ್ತಿ (ನಾ). ೧. ಬಿಟ್ಟುಕೊಡುವುದು ; ರಿಯಾಯಿತಿ ; ಕಡಿತ : ಜೈಲುಸೂಪರಿಂಟೆಂಡರು . . . ಸರ್ಕಾರಕ್ಕೆ ಬರೆದು ಅವನಿಗೆ ಮೂರು ತಿಂಗಳ ವಿನಾಯಿತಿ ದೊರಕಿಸಿದರು (ತಾಯಿಕ. ೨೪೮); ವಿನಾಯಿತಿ ಕೇಳಿ ಬರೆದುಕೊಂಡಿದ್ದವರ ಬಗ್ಗೆ ಯುಕ್ತವಾದ ನಿರ್ಣಯ . . . ಇತ್ಯಾದಿ ಕಾರ್ಯಕ್ರಮ ಜರುಗಿತು (ಪುನರು. ೩೪). **ವಿನಾಯತಿ** : ೨. ಹೊರತಾದುದು : ಹಿಂದಿನ ಸಂಪ್ರದಾಯಕ್ಕೆ ಬಾಗದ ಬೌದ್ಧ ಮತ್ತು ಜೈನಸಿದ್ಧಾಂತಗಳು ಕೂಡ ಇದಕ್ಕೆ ವಿನಾಯತಿ ಅಲ್ಲ (ತತ್ವಪ್ರಾ. ೩೦೪); ಈ ದೇಶಕ್ಕೆ ಮಾರ್ಕ್ಸಿಸಂ ಕೂಡ ವಿನಾಯತಿ (ಹೊಸಕ್ಷಿ. ೨೪೧). **ವಿನಾಯ್ತಿ** : ೧. ಐನೂರು ರೂಪಾಯಿಗಳಿಗೂ ಮೀರಿ ವ್ಯಾಪಾರ ಮಾಡಿದವರಿಗೆ ವಿನಾಯ್ತಿ ತೋರಿಸಲಾಗುವುದು (ರೂಢಿ). [< ವಿನಾ. / IP 'ರಿಯಾಯಿತಿ' ಮುಂತಾದ ಶಬ್ದಗಳ ರೂಪಸಾಮ್ಯದಿಂದ ಬಳಕೆಯಾಗಿರುವ ಶಬ್ದವಿರಬಹುದು]

**ವಿನಾಯಿಸು** (ಕ್ರಿ). ೧. ಹೊರತುಪಡಿಸು ; ಪ್ರತ್ಯೇಕಗೊಳಿಸು : ಮದ್ರಾಸನ್ನು ವಿನಾಯಿಸಿದರೆ ನೀಲಗಿರಿ ಬಹು ಚಿಕ್ಕದು (ಭೂಗೋಳ. ೮೦); ಈ ಎರಡರಲ್ಲಿ ಕಾವ್ಯವನ್ನು ವಿನಾಯಿಸಿದ ಸಾಹಿತ್ಯವನ್ನು ಕುರಿತು ಹೇಳಬೇಕಾದುದು ಹೆಚ್ಚೇನೂ ನನಗೆ ತೋರಿಲ್ಲ (ಜೀವಸಾ. ೧೯). ೨. ಹೊರತಾಗು ; ಅಪವಾದವಾಗು : ಅವನಿಗೆ ವಿದ್ಯೆ ವಿನಾಯಿಸಿ ಬೇರೆ ದ್ರವ್ಯವಿಲ್ಲ (ರೂಢಿ). [ವಿನಾ + - ಇಸು$_{3}$]

**ವಿನಾಯ್ತಿ** 'ವಿನಾಯಿತಿ' ನೋ.

**ವಿನಾಶ** (ನಾ). ೧. ಹಾಳು ; ಸರ್ವನಾಶ : ಕೀನಾಶದಂಡೋದ್ದಂಡಹತಿಗೆ ವಿನಾಶವೆಯ್ದುವವರ್ ಪ್ರತಿಯೆ ಕೀನಾಶನಾಶಂಗೆ (ಬಸವು. ೫೪-೨೨); ಲೇಸುಲೇಸಿದು ತಮ್ಮನಾಡಿದ ಭಾಷೆ ಬಾಹಿರವಾಗಬೇಡ ವಿನಾಶಕಾನಂಜೆನು ಮುರಾಂತಕ ಬಿಡು ಧನಂಜಯನ (ಕುವ್ಯಾಕ. ೧೭-೧೦). ೨. ಕಾಣಿಸದಾಗುವಿಕೆ ; ಮರೆಯಾಗುವುದು : "ವಿನಾಶಃ, ಆದರ್ಶನಂ – ೨ ಕಾಣಿಸದೆ ಹೋಗುವಿಕೆ ; ಗೋಚರವಾಗದೇ ಇರುವಿಕೆ" (ಸಿದ್ಧಾಂತಿ. ೩೬೩). [ಸಂ.]

**ವಿನಾಶಕ** (ಗು). ೧. ನಾಶಮಾಡುವ ; ಧ್ವಂಸಗೊಳಿಸುವ. (ನಾ). ೨. ನಾಶಮಾಡುವವನು ; ಧ್ವಂಸಗೊಳಿಸುವವನು. [ಸಂ.]

**ವಿನಾಶಕರ** (ಗು). ೧. ನಾಶವನ್ನುಂಟು ಮಾಡುವ ; ಧ್ವಂಸಗೊಳಿಸುವ. (ನಾ). ೨. ಹಾನಿ ; ಕೇಡು ; ಆಪತ್ತು : ಈಸುದಿನ ನಮ್ಮಗ್ನಿಹೋತ್ರಕೆ ಮಾಸಲಳಿಯದೆ ನಡೆದುದೀಗ ವಿನಾಶಕರವಾಯ್ತು (ತೊರರಾ. ೧-೯-೨೫). [ಸಂ.]

**ವಿನಾಶಕಾರಿ** (ಗು). ಧ್ವಂಸಗೊಳಿಸುವ ; ಹಾನಿಮಾಡುವ : ಪ್ರಜೆಗಳಿಗೆ ತನ್ನ ಅಧಿಕಾರ ವಹಿಸಿಕೊಡುವಂತೆ ವಿನಾಶಕಾರೀಕೃತ್ಯಗಳ ಮೂಲಕ ಸರ್ಕಾರದ ಮೇಲೆ ಒತ್ತಾಯ ಹಾಕುವುದೇ ಆ ಪಕ್ಷದ ಉದ್ದೇಶವಾಗಿತ್ತು (ಪುನರು. ೫೦೬). [ಸಂ. ವಿನಾಶಕಾರೀ]

**ವಿನಾಶಕಾಲ** (ನಾ). ಹಾಳಾಗುವ ಸಮಯ ; ನಾಶವಾಗುವ ಕಾಲ : ಕಲಿಯುಗ ಬಂತು ; ವಿನಾಶಕಾಲ ಪ್ರಾಪ್ತವಾಯಿತು! (ವಚಭಾ. ೯೦). [ಸಂ.]

**ವಿನಾಶನ** (ಗು). ೧. ಹಾಳುಮಾಡುವ ; ಧ್ವಂಸಗೊಳಿಸುವ. (ನಾ). ೨. ಸಂಪೂರ್ಣ ನಾಶ, —ಹಾಳು. [ಸಂ.]

**ವಿನಾಶಮಾರ್ಗ** (ನಾ). ಕೇಡಿನ ಮಾರ್ಗ ; ನಾಶದ ಹಾದಿ : ಯಾವ ದುಷ್ಟನು ನಿನಗೆ ಈ ವಿನಾಶಮಾರ್ಗವನ್ನು ಸೂಚಿಸಿದನು? (ವಚಭಾ. ೪೦೬). [ಸಂ.]

**ವಿನಾಶಿತ** (ಗು). ಸಂಪೂರ್ಣ ನಾಶಗೊಂಡ ; ಧ್ವಂಸವಾದ : [ಈ]ಶಂ ಮನವೊಸೆದು ನೆಗಟ್ದ ದಿವ್ಯಾಸ್ತ್ರಮನಾ ಪಾಶುಪತಾಸ್ತ್ರಮನಿತ್ತು ವಿನಾಶಿತರಿಪುವಕ್ಕೆ ಹರಿಗನೆಂದಂ ದಯೆಯಿಂ (ಪಂಪಭಾ. ೮-೨೬). [ಸಂ.]

**ವಿನಾಶೋನ್ಮುಖ** (ಗು). ನಾಶಕ್ಕೆ ಸಿದ್ಧವಾದ ; ಹಾಳಾಗುವ ಸ್ಥಿತಿಗೆ ಬಂದ. [ಸಂ.]

**ವಿನಿಕೆ, ವಿನಕೆ, ವಿನುಕೆ** (ನಾ). ೧. ಕೇಳುವಿಕೆ ; ಶ್ರವಣ. ೨. ಸಂಗೀತಕಚೇರಿ : ಗಾಯಕವಾದಕರು ಗೋಷ್ಠಿ ಸೇರಿ . . . ಭಕ್ತವೃಂದಶ್ರೋತೃಗಳಿಗೆ ಸಂಗೀತರಸದೌತಣ ಕೊಟ್ಟು, ಅವರನ್ನು ಸಂಗೀತಸಾಧನದ್ವಾರಾ ಭಗವಂತನ ಕಡೆಗೆ ತಿರುಗಿಸುವ ಸಮಾರಂಭಕ್ಕೆ ವಿನಿಕೆ ಅಥವಾ ಕಚೇರಿ ಎಂದು ಹೆಸರು (ಸಂಗೀಚಂ. ೯೬); ಅವರದೇ ಆಗಲಿ ಇವತ್ತು ಪಕ್ಕವಾದ್ಯ ವಿನಿಕೆ (ನಾಕಲಾ. ೨೫). **ವಿನಕೆ** : ೨. ಒಬ್ಬ ಪ್ರಸಿದ್ಧ ಗಾಯಕನ ಗೋಟುವಾದ್ಯದ ವಿನಕೆಯನ್ನು ಕೇಳುವುದಕ್ಕೆ ಬೆಂಗಳೂರಿನ ರಸಿಕರು ತಿರುಗಿ ನೆರೆದಿದ್ದಾರೆ (ರಾಮಾನ. ೬೫). **ವಿನುಕೆ** : ೨. ವಿನುಕೆಯನ್ನು ಕೇಳಿ ಆ ಆನಂದದಲ್ಲಿ ಮೂರು ತಿಂಗಳು ಆಹಾರವೇ ಬೇಕಿಲ್ಲದೆ ಇದ್ದ ಕಾಂಪ್ಬೂಷನ ಮನಸ್ಸು ಇನ್ನು ಎಷ್ಟು ಉದಾರವಾದ್ದೋ! (ಕಾಂಪೂಚ. ೧೪). [← ತೆಲು. ವಿನಿಕಿ, ವಿನ್ಕಿ = ಶಾಸ್ತ್ರಾದಿಗಳನ್ನು ಕೇಳುವಿಕೆ]

**ವಿನಿದ್ರ** (ಗು). ೧. ನಿದ್ರೆಯಿಲ್ಲದ ; ಎಚ್ಚರಗೊಂಡ. (ನಾ). ೨. (ಕಣ್ಣುಗಳಂತೆ) ಅರಳಿದುದು ; ತೆರೆಯಲ್ಪಟ್ಟುದು ; ಅಗಲವಾದುದು : "ವಿಕಸಿತಮುನ್ಮೀಲಿತಂ ವಿನಿದ್ರಮೆನಿಕ್ಕುಂ" (ವಸ್ತುಕೋ. ೩೧-೧೦). ೩. ಎಚ್ಚರಗೊಂಡುದು ; ನಿದ್ರೆ ತಿಳಿದುದು : ಭವದೀಯ ವನಾಯುಜಹಯನಿವಹಂ ಕೇಳ್ ಮೂರಿವಿಟ್ಟು ನಿಶ್ವಾಸಂ ಸೈಂಧವಮಂ ಮಾಸಿಸೆ ಸೊಗಯಿಸಿತು ವಿನಿದ್ರಂ ದೇವ ದೀರ್ಘಪಟಮಂಡಪದೊಳ್ (ಶಾಂತಿಪು. ೫-೯೨). [ಸಂ.]

**ವಿನಿದ್ರಿತೆ** (ನಾ). ನಿದ್ರೆ ತಿಳಿದವಳು ; ಎಚ್ಚರಗೊಂಡವಳು : ಪತಿಯಿಂ ಮುನ್ನಂ ನಿದ್ರಾಸ್ಥಿತೆಯಾಗಿರ್ದೋಪನೊಜಗಿದಿಂ ಬಟಿಕ ವಿನಿದ್ರಿತೆಯಾಗಿ ವಿಹರಿಸುವೊಡಾ ಸತಿಗಲಸೇಂಗಿತಂ (ಮದತಿ. ೧೧-೪೬). [ಸಂ. ವಿನಿದ್ರಿತಾ]

**ವಿನಿಪತತ್ತು** (ಗು). ಕೆಳಕ್ಕೆ ಬೀಳುತ್ತಿರುವ ; ಕುಸಿಯುತ್ತಿರುವ : ವಿಳಸಿತಕಂದಳಂ ವಿನಿಪತತ್ಕರಕಂ ಕ್ಷುಭಿತೋರುವಾಹಿನೀಕುಳನಿನದಂ (ಚಂದ್ರಪ್ರ. ೪-೪೪). [ಸಂ. ವಿನಿಪತತ್]

**ವಿನಿಮಯ** (ನಾ). ೧. (ವಿಚಾರ, ಪದಾರ್ಥ ಮುಂತಾದುವುಗಳ ವಿಷಯದಲ್ಲಿ) ಒಂದನ್ನು ಕೊಟ್ಟು ಅದರ ಬದಲಿಗೆ ಮತ್ತೊಂದನ್ನು ಪಡೆಯುವುದು ; ಅದಲುಬದಲು ಮಾಡಿಕೊಳ್ಳುವಿಕೆ : ಒಂದು ದೇಶದವರು ಬೇರೊಂದು ದೇಶದವರ ಸಂಗಡ ಮಾಡುವ ವಿನಿಮಯವು ವ್ಯಾಪಾರವೆನಿಸುವುದು (ಮುಂಬಯಿ. ೪-೧೫೫); ದೇಶದ ಕೈಗಾರಿಕೆ, ವ್ಯಾಪಾರ, ವಿನಿಮಯ, ದಾರಣೆವಾಸಿ —ಮುಂತಾದ ಕಾರ್ಯರಂಗಗಳ ವಿಚಾರವನ್ನು ಮಾಡಬೇಕಾಗುವುದು (ಹಣಪ್ರ. ೨). ೨. ಒತ್ತೆ ; ಅಡವು ; ಗಿರವಿ. [ಸಂ.]

**ವಿನಿಮಯವಚನ** (ನಾ). [ಕಾವ್ಯಮೀ] ಪರಿವೃತ್ತಿಅಲಂಕಾರದ ಒಂದು ಲಕ್ಷಣ ; ಒಂದು ವಸ್ತುವನ್ನು ಕೊಟ್ಟು ಮತ್ತೊಂದು ವಸ್ತುವನ್ನು ಪಡೆಯುವುದರ ವರ್ಣನೆ : ಪರಿವೃತ್ತಿಯೆಂಬುದಕ್ಕುಂ ನಿರುಪಮಮರ್ಥಸ್ವರೂಪವಿನಿಮಯವಚನಂ

ಪರಮಗುಣೋದಯಮುದಜಾ ಸ್ವರೂಪಮಂ ಬಗೆದು ಕೊಳ್ಗೆ ಮತ್ತೀ ತೆಱದಿಂ (ಕವಿರಾ. ೩-೧೫೮). [ಸಂ.]

**ವಿನಿಮಯವ್ಯಾಪಾರ** (ನಾ). ಒಂದು ವಸ್ತುವನ್ನು ಕೊಟ್ಟು ಮತ್ತೊಂದನ್ನು ಪಡೆದುಕೊಳ್ಳುವ ವ್ಯವಹಾರ : ಕರೀಂಸಾಬಿ . . . ಕರಿಮೀನು ಹೊತ್ತುಕೊಂಡು ಮನೆಮನೆಗೂ ತಿರುಗಿ ಅಕ್ಕಿಗೋ ಬತ್ತಕ್ಕೋ ಅಡಕೆಗೋ ವಿನಿಮಯವ್ಯಾಪಾರ ಮಾಡುತ್ತಿದ್ದನು (ಮಲಮ. ೨೮). [ಸಂ.]

**ವಿನಿಮಯಿಸು** (ಕ್ರಿ). ಬದಲಾಯಿಸಿಕೊಳ್ಳು ; ಅದಲುಬದಲು ಮಾಡಿಕೊಳ್ಳು : ಈ ಟಿಕೀಟನ್ನು ಒಂದು ರೈಲ್ವೆಪ್ರವಾಸದ ಉಪಯೋಗವನ್ನಾಗಿಯೋ ಗಾಯನ ನರ್ತನದ ಉಪಯೋಗವನ್ನಾಗಿಯೋ ವಿನಿಮಯಿಸಿ ವಿನಿಯೋಗಿಸಿಕೊಳ್ಳುತ್ತೇವೆ (ಮಾವಾದ. ೧೦೮); ಶರೀಫ, ನಾಗಲಿಂಗ, ಗರಗದ ಮಡಿವಾಳಪ್ಪ ಈ ತ್ರಿಮೂರ್ತಿಗಳು . . . ಸಾಧನಕ್ರಮಗಳ ಕುರಿತು ವಿನಿಮಯಿಸುತ್ತಿದ್ದರು (ಶರೀಫ. ೬೪ ಕವಿಕಾವ್ಯಪರಿಚಯ). [ವಿನಿಮಯ + - ಇಸು]

**ವಿನಿಮೀಲಿತ, ವಿನಿಮೀಳಿತ** (ಗು). ಮುಚ್ಚಿರುವ ; ಅರಳದಿರುವ ; ವಿಕಸಿತವಾಗದ : ವಿನಿಮೀಲಿತನೀಲಾಂಬುಜವನಮುನ್ಮೀಲಿತನವೀನಕಮಲವನಂ (ಕಾವ್ಯಾವ. ೫೨೦). **ವಿನಿಮೀಳಿತ** : ವಿನಿಮೀಳಿತಕುಮುದವನಂ ಜನಿತೋನ್ಮೀಲಾರವಿಂದವನಲಕ್ಷ್ಮೀಶಂ ದಿನಕರನುದಯಂಗೆಯ್ದಂ ವಿನಿಹತತಿಮಿರಂ ವಿಶಿಷ್ಟಸಂಧ್ಯಾಶ್ಲೇಷಂ (ಕವಿರಾ. ೨-೭೪). [ಸಂ.]

**ವಿನಿಮೀಳಿತ** 'ವಿನಿಮೀಲಿತ' ನೋ.

**ವಿನಿಮ್ನ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಏಳನೆಯದಾದ ಉಷ್ಣಿಕ್ಕು ಎಂಬ ಛಂದಸ್ಸಿನ ಒಂದು ವೃತ್ತ : ಶೀತಕರಾಗ್ನಿ ಚೇತೋಜಾತಹರರ್ಕಳಿರ್ದಂದೇ ತೊದಳೋಪಳೆ ನಾಮಾತಿಶಯಂ ವಿನಿಮ್ನಂ [ಪಾಠಾಂ. ವಿರಾಮಂ] (ಛಂದೋಂಬು. ೨-೮೪). [ಸಂ.]

**ವಿನಿಯತ** (ಗು). ಹತೋಟಿಯಲ್ಲಿರುವ ; ಅಂಕೆಯಲ್ಲಿರುವ : ಸರಸಿರುಹಸಂಭವ ಕೃತದುರಾಕ್ಷರವಿನಿಯತ ನಿರಾಸಕ ಮಹಾನಿರುಪಮಿತ ಮಹಿಮಾಢ್ಯನಂ . . . ಭವದೂರನಂ ಕೊಂಡಾಡಿ (ಬಸಪು. ೪೭-೭೧). [ಸಂ.]

**ವಿನಿಯೋಗ** (ನಾ). ೧. ಬಳಕೆ ; ಉಪಯೋಗ : ಹಲವು ವಿನಿಯೋಗದಲಿ ಸುದತಿಯರೊಲುಮೆಯಲಿ ಸಕಲಾಂಗದಲಿ . . . ಹಳಿವು ನಿನಗಾವಂಗದಲಿ ಬಳಿಸಲಿಸದಲೆ . . . ಭೂಪಾಲ ನಿನಗೆಂದ (ಕುವ್ಯಾಸ. ೧-೫೭); ಕಂಪೋಸ್ಟು ತಯಾರಿಸುವುದರಿಂದ ಮನೆಯಲ್ಲಾಗುವ ಕಸಕಡ್ಡಿ, ಕೊಳಚೆಗಳ ವಿನಿಯೋಗಕ್ಕೆ ಒಂದು ವ್ಯವಸ್ಥೆಯೂ ಆದಂತಾಗುವುದು (ಆಡುಸಾ. ೧೨೭). ೨. ವಿತರಣೆ ; ಹಂಚುವಿಕೆ : ಬಸವೇಶ್ವರನು ಮಾಡಿದ ತನ್ನ ಭಂಡಾರದ ವಿನಿಯೋಗವನ್ನು ಬಿಜ್ಜಳನು ಮೆಚ್ಚಲಿಲ್ಲ (ಮೂರುಉ. ೯೦). ೩. ಕೆಲಸ ; ಊಳಿಗ ; ಕೈಂಕರ್ಯ : ನಮ್ಮ ಕೂಡಲಸಂಗನ ಶರಣರು ಮಾಡಿದ ವಿನಿಯೋಗ ಬಹಿರಂಗದಲ್ಲಿ ವರ್ತಿಸುವವರಿಗೆ ಎಲ್ಲಿಯದೊ (ಬಸವ. ೮೧೭); ಕೆಲಕೆಲದೊಳ್ಪಿಡಿದು ನಿಂದ ಯಂತ್ರಪುತ್ರಿಕೆಗಳ ಸಡಗರಿಪ ವಿನಿಯೋಗದ ಮಡದಿಯರ ಪಿರಿಯ ಸಿರಿ ಕಮನೀಯಮಾಗೆ (ರಾಜಶೇ. ೧೩-೫೩ ವ). ೪. ಬೇರ್ಪಡಿಸುವಿಕೆ ; ಪ್ರತ್ಯೇಕಿಸುವಿಕೆ. ೫. ತೊರೆಯುವಿಕೆ ; ಬಿಟ್ಟುಬಿಡುವಿಕೆ. ೬. ತೊಡಗುವಿಕೆ ; ಪ್ರಾರಂಭ.

ವಿನಿಯೋಗದರ್, ವಿನಿಯೋಗದವರು = (ಅರಮನೆಯ) ಊಳಿಗದವರು, — ಸೇವಕರು : ವಿನಿಯೋಗದರೆಮ್ಮ ಪುರಾತನರಿಂತಿಂತಮರ್ದು ಮೆಚ್ಚೆಯ ನಿನ್ನರಸುತನಕ್ಕಿನಿತುಂಟೆ ಕೊಱತೆ (ವೃಷವಿ. ೬-೪೪); ಸುಕರಧಾನ್ಯದ ಕಣಜಗಳ್ ಸರ್ವವಿನಿಯೋಗದವರಿಪ್ಪ ಚಾವಡಿಗಳು . . . ತರತರದೊಳಿರಲ್ಕೆ (ಚೆಬಪು. ೫-೫೦); ಮುರವೈರಿ . . . ವಾಲಗದ ಭೂರಿ ವಿನಿಯೋಗದವರಿಗೆಯರುಹಿ (ನವಮೋ. ೧೦-೨೩). [ಸಂ.]

**ವಿನಿಯೋಗಸ್ಥ** (ನಾ). ಊಳಿಗದಲ್ಲಿರುವವನು ; ಸೇವೆಯಲ್ಲಿರುವವನು : ನಿಯೋಗಿ ಸಮಸ್ತರನು ಬೀಳ್ಕೊಟ್ಟು ವಿನಿಯೋಗಸ್ಥರೋಲಗದಲ್ಲಿ ಎಸೆದನು ರಾಜಶೇಖರನು (ಬಿಜ್ಜಪು. ೬-೨೬). [ವಿನಿಯೋಗ + - ಸ್ಥ]

**ವಿನಿಯೋಗಿ** (ನಾ). (ಉನ್ನತವಾದ) ಊಳಿಗದಲ್ಲಿರುವವನು; ಉನ್ನತಾಧಿಕಾರಿ: ವ್ಯಾಕುಲಿತವಿಪ್ರರ . . . ದರ್ವೀಕರನ ವಿನಿಯೋಗಿಗಳ ಸರ್ವೈಕಮತ್ಸರದೊಳಗೆ ಬದುಕುವನಾವ ಪೇಳೆಂದ (ಕುವ್ಯಾಆ. ೮-೫೧). [ಸಂ. ವಿನಿಯೋಗಿನ್]

**ವಿನಿಯೋಗಿಸು** (ಕ್ರಿ). ೧. ಬಳಸು ; ಉಪಯೋಗಿಸು : ಒಂದು ಭಾಗ ವೃಕೋದರಂಗುಳಿದೊಂದು ಭಾಗವ ತಾನು ನಾಲ್ವರು ನಂದನರು ವಿನಿಯೋಗಿಸು ವರವನೀಶ ಕೇಳೆಂದ (ಕುವ್ಯಾಆ. ೧೦-೪); ಈ ವೀರಶ್ರೇಣಿಯ ಒಕ್ಕಣೆಗೆ ಒಂದು ವೃತ್ತವನ್ನು ಮಾತ್ರ ಪಂಪನು ವಿನಿಯೋಗಿಸಿದ್ದಾನೆ (ಸಮಾಲೋ. ೯೬). ೨. ಕಳುಹಿಸು ; ಸಾಗಿಸು : ಬೀಗಿದವು ಕಾಲಾಳ ಕಬಳಿಸಿ ತೇಗಿದವು ಚತುರಂಗವನು ವಿನಿಯೋಗಿಸಿದವಂತಕನ ಮನೆಗಂಬುಗಳು ಗುರುಸುತನ (ಕುವ್ಯಾಶ. ೩-೧೭). [ವಿನಿಯೋಗ + - ಇಸು]

**ವಿನಿರ್ಗತ** (ಗು). ಹೊರಬಿದ್ದ ; ಆಚೆಗೆ ಹೊರಟ : ವಾಮನ ಜಯಾದಿತ್ಯ ಪ್ರಮುಖಮುಖಕಮಳವಿನಿರ್ಗತಸೂಕ್ತಿಮುಕ್ತಾವಲೀಮಣಿಕುಂಡಲಮಂಡಿತಕರ್ಣನಂ . . . ಕಂಡು (ಪಂಚತಂ. ೧೯೪-೪); ತುರಗಖುರಾಗ್ರಘಾತಕೃತಭೂತಳರಂಧ್ರವಿನಿರ್ಗತಾಹಿರಾಜರುಚಿರಶೀರ್ಷರತ್ನದೃಢಬೀಜಕರಾಂಕುರ ತತ್ಪ್ರತಾಪವಲ್ಲರಿ ರವಿರೋಚಿಯೆಂಬ ವಿಷದಿಂದಶದಿಕ್ತನೆ ಪರ್ಬಿ ಪೆತ್ತುದೋ ಖರಕರಪುಷ್ಪಮಂ ಕನಕಭೂಧ್ರಬೃಹತ್ಫಳಮಂ ಮಹೀಶನಾ (ರಾಜಶೇ. ೫-೫). [ಸಂ.]

**ವಿನಿರ್ಜರ** (ನಾ). ದೇವತೆ ; ಅಮರ : ದೆಸೆಯೊಳ್ ದಿಗ್ಗಜಬೃಂಹಿತಂ ಗಗನದೊಳ್ ಸೂರ್ಯಾಶ್ವಹೇಷಾರವಂ ವಸುಧಾಭೃತ್ತುಳದೊಳ್ ವಿನಿರ್ಜರರವಂ . . . ಮೆಯ್ವೆರ್ಚಲ್ಕೆ (ಪುಷ್ಪಪು. ೮-೨೫). [ಸಂ.]

**ವಿನಿರ್ಜಿತ** (ಗು). ಸಂಪೂರ್ಣವಾಗಿ ಗೆಲ್ಲಲ್ಪಟ್ಟ : ವಿನಿರ್ಜಿತನಿರವಶೇಷನಿಳಿಂಪನಾಥ ವಿಭವನುಂ . . . ಜಿತಾಖಂಡಭೂಮಂಡಲನುಮಪ್ಪ ಸ್ತಿಮಿತಸಾಗರಮಹೀವಲ್ಲಭಂಗೆ ಅರಸಿಯರಾದರ್ (ಶಾಂತಿಪು. ೧-೭೧ ವ) ; ಮುರಮಥನ ಕೆಲ್ಲೆಸಿ ನೋಡಿದನುರು ಭಯಂಕರಚಕ್ರವನು . . . ಸಂಗರವಿನಿರ್ಜಿತಚಕ್ರವನು (ಕುವ್ಯಾಭೀ. ೬-೩೧). [ಸಂ.]

**ವಿನಿರ್ಮಲತೆ** (ನಾ). ಅತ್ಯಧಿಕವಾದ ಶುಭ್ರತೆ, – ಹೊಳಪು : ಪಳಿಕಿನ ಪಾಸಱೆಯ ವಿನಿರ್ಮಲ[ಪಾಠಾಂ.ಳ]ತೆಯಿನಾ ಗಿರಿಯ ಖಚರತತಿ ಕಾಣ್ಬುಮಿಳಾತಳಮಂ ತಳೆದಹಿಪನ ಮಣಿವಿಳಸಿತರುಚಿವಿಸ್ಫುರತ್ಫಣಾಮಂಡಳಮಂ (ಶಬಶಂ. ೨-೩೨). [ಸಂ. ವಿನಿರ್ಮಲತಾ]

**ವಿನಿರ್ಮಿತ** (ಗು). ೧. ರಚಿಸಿದ ; ಕಟ್ಟಿದ ; ನಿರ್ಮಾಣಮಾಡಿದ : ಪ್ರತ್ಯಹಮೊಪ್ಪುಗುಂ ವಿವಿಧರತ್ನವಿನಿರ್ಮಿತಕೂಟಕೋಟಿಮಚ್ಚೈತ್ಯಗೃಹಾವಹಂ (ಚಂದ್ರಪ್ರ. ೬-೫). (ನಾ). ೨. ರಚಿಸಲ್ಪಟ್ಟುದು ; ರಚಿತವಾದುದು : ನವನಲಿನಂ ಕವಿರಾಜಹಂಸವಿನಿರ್ಮಿತಂ (ಛಂದೋಂಬು. ೨-೧೫೭); ಈ ಮಹೀಪಾಲಕರು ಬಂದರು . . . ಆ ಮನೋಹರ ವಿಶ್ವಕರ್ಮ ವಿನಿರ್ಮಿತದ ಪುರಕೆ (ಕುವ್ಯಾಆ. ೧೮-೯). [ಸಂ.]

**ವಿನಿರ್ಮಿಸು** (ಕ್ರಿ). ರಚಿಸು ; ನಿರ್ಮಾಣಮಾಡು : ನೀಳ್ದಿರೆ ಭೂಮಿಭಾಗಮಂ ಪಸರಿಸದೀ ಬಲಪ್ರಕರಮಂ ಭರತೇಶ್ವರನೇಕೆಯೋ ವಿನಿರ್ಮಿಸಿದಂ (ಆದಿಪು. ೧೧-೩೫) ; ಕಾಲಾಯಸದಿಂ ವಿನಿರ್ಮಿಸಿದ ಕಂಠಿಕೆ ಕಾಂಚನಮಾಲೆಯಂತುಪಾದೇಯಮೆನಿಸ್ಕುಮೇ (ಪಂರಾಮಾ. ೧-೩೭). [(ಸಂ. ವಿನಿರ್ಮಾಣ) + - ಇಸು]

**ವಿನಿವರ್ತನ** (ನಾ). ಹಿಂತಿರುಗುವಿಕೆ ; ಹೊರಟು ಹೋಗುವುದು : ಮುನಿ ವೃಷಭಂ ಭೂಪನ ಮನದೊಳ್ ಮಾಣದೆ ಪೊದಟ್ಟ ವೈರಾಗ್ಯದ ಪೆಂಪನೆ ಪರಿಕಿಸಲೆಂದಾಗ್ರಹವಿನಿವರ್ತನಸೂಚಕೋಕ್ತಿಗಳನಿಂತೆಂದಂ (ಚಂದ್ರಪ್ರ. ೯-೩೯). [ಸಂ.]

**ವಿನಿವರ್ತಿತ** (ಗು). ೧. ಹಿಂದಕ್ಕೆ ತಿರುಗಿಸಿದ ; ಹಿಮ್ಮುಖವಾಗಿ ತಿರುಗಿಸಿದ. (ನಾ). ೨. [ನಾಟ್ಯ] ಒಂದು ಬಗೆಯ ನಾಟ್ಯಭಂಗಿ ; IP "ಮೊಟ್ಟಿತ ಸ್ಥಾನಕದಲ್ಲಿ ನಿಂತುಕೊಂಡು ಮುಖವನ್ನು ಹಿಂದಕ್ಕೆ ತಿರುಗಿಸುವುದು" (ಲಾಸ್ಯರಂ. ೩.೪೯ ಗದ್ಯಾನುವಾದ): ಆಯತಂ ಭಾವಿಸುವವಹಿತ್ಥಾಖ್ಯಮೊಪ್ಪುವಶ್ವಕ್ರಾಂತಂ ಗತಾಗತಂ ವಲಿತಂ ಮೊಟ್ಟಿತ ವಿನಿವರ್ತಿತವೇಳೆ ಸ್ಥಿರ ತಾಣಂಗಳ್ (ಲಾಸ್ಯರಂ. ೭-೪). [ಸಂ.]

**ವಿನಿವೃತ್ತ** (ಗು). ೧. ಹಿಂದಿರುಗಿದ ; ಮರಳಿದ. (ನಾ). ೨. ತೊರೆದವನು ; ಬಿಟ್ಟವನು : ಧನಧಾನ್ಯಾದಿ ಪರಿಗ್ರಹಮನಾವಗಂ ತೊಱೆದು ನೆಗೞ್ದುಪಾಸಕ ನೊಂಬತ್ತನೆಯ ಪರಿಮಿತಪರಿಗ್ರಹವಿನಿವೃತ್ತನುದಾತ್ತಧರ್ಮನಿರ್ಮಲ ಚಿತ್ತಂ (ಸುಕುಮಾ. ೬-೩೪). ೩. [ನಾಟ್ಯ] ಒಂದು ಬಗೆಯ ನಾಟ್ಯಭಂಗಿ ;

''ಮುಖವನ್ನು ಹೆಚ್ಚಾಗಿ ತಿರುಗಿಸುವುದು'' (ಲಾಸ್ಯರಂ. ೨೮೨ ಗದ್ಯಾನುವಾದ) : ವ್ಯಾಭುಗ್ನಂ ಭುಗ್ನಮು ಮತಿಶಯದುದ್ವಾಹಿತಾಖ್ಯ ವಿಧುತಂ ವಿವೃತಂ ನುತ ವಿನಿವೃತ್ತಮಿವಾಱುಂ ಮತದಿಂ ರಂಜಿಸುಗುಮಾಸ್ಯಮತಿವಿಸ್ತರದಿಂ (ಲಾಸ್ಯರಂ. ೩-೧೦೪). ೪. ''ಒಂದು ಕಾಲಿನಿಂದ ಸೂಚೀಪಾದವನ್ನು ಮಾಡಿ ಇನ್ನೊಂದು ಕಾಲಿನ ಹಿಮ್ಮಡಿಯಲ್ಲಿ ಸ್ವಸ್ತಿಕ ದಂತಿರಿಸಿ, ಸೊಂಟವನ್ನು ಎರಡು ಪಾರ್ಶ್ವಗಳಲ್ಲೂ ಚಕ್ರದಂತೆ ಜಾಗ್ರತೆ ಸುತ್ತಿಸಿ ಬದ್ಧಚಾರಿಯನ್ನು ಮಾಡಿ ಕೈಗಳನ್ನು ರೇಚಿತ ಮಾಡಿ ಪ್ರಸರಿಸುವುದು'' (ಲಾಸ್ಯರಂ. ೨೯೮ ಗದ್ಯಾನುವಾದ): ಪದಮೊಂದಂ ಸೂಚಿಯಾಸ್ಯಂಬಡೆ ದಿತರಪದೋತ್ಪಾರ್ಷ್ಣಿಯೊಳ್ ಸ್ವಸ್ತಿಕಂಬೆತ್ತೊಡವಿರ್ದುಂ ಚಕ್ರದೊಲ್ ಬೇಗದೆ ಕಟಿಗಳನಿಮ್ಮೆಯ್ಯೊಳಂ ಸುತ್ತಿಸುತ್ತಂ . . . ಹಸ್ತಂಗಳಂ ಬೇಗದೆ ರೇಚ್ಯಾಖ್ಯಾನದಿಂದಂ ಪಸರಿಸೆ ವಿನಿವೃತ್ತಾಖ್ಯದಿಂ ರಂಜಿಸಿರ್ಕುಂ (ಲಾಸ್ಯರಂ. ೪-೧೧೮). [ಸಂ.]

**ವಿನಿವೃತ್ತಿ** (ನಾ). ೧. ನಿಲುಗಡೆ ; ಮುಕ್ತಾಯ ; ಕೊನೆ. ೨. ಸಾವು ; ಮರಣ : ''ಮೃತ್ಯು ಮರಣಂ . . . ವಿನಿವೃತ್ತಿಯೆನೆ ಸಾವಕ್ಕು'' (ಮಂಗರಾ. ೧೧೬-೩). [ಸಂ.]

**ವಿನಿಶ್ಚಲ, ವಿನಿಶ್ಚಳ** (ಗು). ೧. ಸ್ವಲ್ಪವೂ ಚಲಿಸದೆ ಇರುವ ; ಸ್ಥಿರವಾದ ; ಅಚಲವಾದ : ನರರನಾರಂ ಮುಟ್ಟಲೀಯನು ಶರಣರುಗಳಂಬರನಿಚಯಮಂ ಶರಣರಿಗೆ ಕೊಡುವಂ ವಿನಿಶ್ಚಲಭಕ್ತಿಯುಕ್ತಿಯಲಿ (ಬಸವು. ೨೧-೩೪). ವಿನಿಶ್ಚಳ : ೧. ಪಿಟ್ಟನ್ವಯ ವಿನಿಶ್ಚಳವಿನಯಭಕ್ತಿಗೆ ಕೂರ್ತಲಾ ನಾಂ ಬಿಟ್ಟಿಗೆಯ್ದಿದೆನು (ಬಸವು. ೨೬-೫೫). (ನಾ). ೨. ಸ್ಥಿರತೆಯಿಂದ ಕೂಡಿದವನು ; ದೃಢ ಮನಸ್ಸಿನವನು : ಮಂದರಂ ತಾನೆಂಬಂತೆ ವಿನಿಶ್ಚಳಂ ತನು ಶರಚ್ಚಂದ್ರಾಂಶುವೋಲ್ ನಿರ್ಮಳಧ್ಯಾನಂ (ಮಲ್ಲಿಪು. ೧೩-೧೯೩). [ಸಂ.]

**ವಿನಿಶ್ಚಳ** 'ವಿನಿಶ್ಚಲ' ನೋ.

**ವಿನಿಶ್ಚಳಂ** (ಅ). ಸ್ಥಿರವಾಗಿ ; ಅಲುಗಾಡದೆ : ಮಹಾಸತಿ ನೀರಂ ಪುಗುವಂತೆ ಕಿರ್ಚಂ ಪುಗುವುದಂ ಜಳದೇವತೆ ಕೋಡುವ ತಿಳಿಗೊಳದೊಳಗಿರ್ಪಂತೆ ಶೀಲವತಿ ಸೀತೆ ವಿನಿಶ್ಚಳಮಿರೆ ಮನದೊಳ್ ಜನಪತಿ ಚಳಣಂ ದಳ್ಳುರಿಯ ನಡುವೆ ಕೋಡುತ್ತಿರ್ದಳ್ (ಪಂರಾಮಾ. ೧೬-೨೮). [< ವಿನಿಶ್ಚಲ]

**ವಿನಿಶ್ಚಿತ** (ಗು). ೧. ನಿರ್ಣಯಿಸಿದ ; ಗೊತ್ತುಮಾಡಿದ ; ನಿರ್ಧಾರವಾದ : ಜಿನಚರಣನಖಾದರ್ಶಂ ವಿನತಾಮರರಾಜರಾಜವದನಪ್ರತಿಮಂ ಮನದೊಳ್ ಸಲೆ ನಿಲ್ಕೆಂಬುದು ವಿನಿಶ್ಚಿತವಿಶೇಷಣೋರುರೂಪಕಮಕ್ಕುಂ (ಕವಿರಾ. ೩-೧೮). (ನಾ). ೨. ನಿರ್ಧಾರವಾದುದು ; ನಿರ್ಣಯಿಸಿದುದು : ನಿತ್ಯ ತಾನೆಲ್ಲರು ಅನಿತ್ಯರು ಸತ್ಯವೀ ಜನವಟಿಯಲೆನುತಂ ನಿತ್ಯನೈರ್ಮಲ್ಯಸ್ವರೂಪವಿನಿಶ್ಚಿತಂ ದೃಷ್ಟಪ್ರತ್ಯಯವಲಾ (ಬಸವು. ೫೪-೫೯). [ಸಂ.]

**ವಿನಿಷ್ಕ್ರಾಮ** (ಗು). ಹೊರಕ್ಕೆ ಬರುತ್ತಿರುವ ; ಹೊರಡುತ್ತಿರುವ : ಸಾಮಾನಿಕ ಜನತತಿ ಚೇತೋವಮಂ ಪ್ರಾಸಾದಿಕಾಂತಾರಾಕ್ಷೇಪಕ ವಿನಿಷ್ಕ್ರಾಮಪ್ರವೇಶ ಗಾನರಸಾಮೃತಮೆಸೆಗುಂ ಧ್ರುವಪ್ರಯೋಗಾನುಗತಂ (ಅಜಿಪು. ೫-೧೦). [ಸಂ.]

**ವಿನಿಷ್ಯೂತ** (ಗು). ೧. ಚೆನ್ನಾಗಿ ಹೊಂದಿಕೊಂಡಿರುವ, —ಸೇರಿಕೊಂಡಿರುವ. (ನಾ). ೨. ಚೆನ್ನಾಗಿ ಹೊಂದಿಕೊಂಡಿರುವಂಥದು ; ಖಚಿತವಾದುದು : ತಟಿದ್ವಲಯವಿಲಸಿತಂಗಳಾಗಿ ನಿಜಪ್ರಕೋಷ್ಠವಿನಿಷ್ಯೂತಂ[ಪಾಠಾಂ. ನಿಷ್ಯೂತಂ]ಗಳಪ್ಪ ವೀರಾಂಗದಂಗಳೆಂಬ ಕಟಕಂಗಳುಂ (ಆದಿಪು. ಬ. ೧೫-೩ ವ). [ಸಂ.]

**ವಿನಿಹತ** (ಗು). ಕಳೆದ ; ನಿವಾರಿಸಿದ : ದಿನಕರನುದಯಂಗೆಯ್ದಂ ವಿನಿಹತತಿಮಿರಂ ವಿಶಿಷ್ಟ ಸಂಧ್ಯಾಶ್ಲೇಷಂ (ಕವಿರಾ. ೨-೭೪) ; ವಿನಿಹತಕಲ್ಮಷಂ ಜಿನನನಂತಚತುಷ್ಟಯಭಾಗಿ ಭವ್ಯನಂದನಂ (ಶಾಂತಿಪು. ೭-೪೦). [ಸಂ.]

**ವಿನಿಹಿತ** (ಗು). ಇಟ್ಟ ; ಇರಿಸಿದ : ವಾಸಿಸಲೆಂದು ಚಕೋರವಿಲಾಸಿನಿ ಶಶಿಚಷಕದೊಳೆ ನವೋತ್ಪಳದಳಮಂ ಸೂಸಿದಳೊ ವಿನಿಹಿತಜ್ಯೋತ್ಸ್ನಾಸವದೊಳೆನಿಪ್ಪ ಲಕ್ಷ್ಮಿವೆತ್ತುದು ಲಕ್ಷ್ಮಂ (ಚಂದ್ರಪು. ೮-೩೭) ; ದಿನಮಣಿಮಣಿಶಾಣೋಪಲವಿನಿಹಿತ ಘೃಷ್ಟಾರ್ಕ ಕಿರಣಖರಖಡ್ಗಲತಾಜನಿತಸ್ಫುಲಿಂಗಸಂಘಮಿದೆನೆ ತದ್ವಿಸ್ಫುರಿತವಹ್ನಿಕಣತತಿಯೆಸೆಗುಂ (ರಾಜಶೇ. ೫-೩೫). [ಸಂ.]

**ವಿನೀತ** (ಗು). ೧. ಒಯ್ಯಲ್ಪಟ್ಟ ; ತೆಗದುಕೊಂಡು ಹೋದ. ೨. ಮಾಡಿದ ; ಪೂರೈಸಿದ ; ನೆರವೇರಿಸಿದ. ೩. ಚೆನ್ನಾಗಿ ಪಳಗಿದ ; ಸುಶಿಕ್ಷಿತವಾದ. ೪. ನಮ್ರವಾದ ; ಸೌಜನ್ಯದಿಂದ ಕೂಡಿದ : ವಿನೀತಜನಾಕೀರ್ಣಮಪ್ಪುದಱಿಂ ವಿನೀತೆಯುಂ ಭವಿಷ್ಯತ್ಕೌಶಲವಿಷಯಸಹಚರ್ಯದಿಂ ಸುಕೌಶಲೆಯುಮೆಂಬ ಪೆಸರ್ಗಳ ನಿಟ್ಟು (ಆದಿಪು. ೬-೧೦೭ ವ). ೫. ಶಿಷ್ಟತೆಯಿಂದ ಕೂಡಿದ ; ಸಂಭಾವಿತ. ೬. ಆತ್ಮ ಸಂಯಮವುಳ್ಳ ; ಮನೋನಿಗ್ರಹವುಳ್ಳ. ೭. (ನಮ್ರತೆಯಿಂದ) ಬಾಗಿದ ; ಬಗ್ಗಿದ : ಆ ಕನ್ನೆ ತನ್ಮುನೀಂದ್ರಪಾದಾರವಿಂದದ್ವಂದ್ವದೊಳ್ ನಿರ್ದ್ವಂದ್ವಭಾವದಿಂ ವಿನೀತೋತ್ತಮಾಂಗೆ ಕೆಲದೊಳ್ ಕುಳ್ಳಿರ್ಪುದುಂ (ಸುಕುಮಾ. ೭-೩೯ ವ). ೮. (ಉಡುಗೆ, ತೊಡುಗೆ ಮುಂತಾದ ವಿಷಯಗಳಲ್ಲಿ) ನಿರಾಡಂಬರವಾದ ; ಸರಳತೆಯಿಂದ ಕೂಡಿದ. ೯. ಸುಂದರವಾದ ; ಚೆನ್ನಾದ. (ನಾ). ೧೦. ಸೌಜನ್ಯದಿಂದ ಕೂಡಿದ ವ್ಯಕ್ತಿ ; ನಮ್ರನಾಗಿರುವವನು : ವಿನೀತಂ ವಿರಚಿತಾಂಜಲಿಪುಟಘಟಿತ ಕರನಿಂತೆಂದು ಬಿನ್ನಪಂಗೈದು (ಶಾಂತಿಪು. ೨-೧೯) ; ಚಂದ್ರಾಪೀಡನು ವಿನೀತನಾಗಿ ಆ ಬಳಿಗೆ ಬಂದು (ವಚಕಾ. ೧೧). ೧೧. ಆಜ್ಞೆಯನ್ನು ಪಾಲಿಸುವವನು ; ವಿಧೇಯ : ಹಾ ಚಕ್ರಿಗೆ ಕರಮೆ ವಿನೀ[ಪಾಠಾಂ. ನೂ]ತರಿರಾ (ಜೀವಸಂ. ೨೪-೪೬ ರಗಳೆ) ; ಇದಱಲಿ ವರವಿನೀತರು ಕೆಲರು ಕೆಲಬರು ಧೂರ್ತರಾಗಿಹರು (ಕುವ್ಯಾದ್ರೋ. ೧೩-೯). ೧೨. ಶಿಕ್ಷೆಗೆ ಒಳಪಟ್ಟವನು ; ತಿದ್ದಲ್ಪಟ್ಟವನು : ''ನಿಭೃತಃ, ವಿನೀತಃ, ಪ್ರಶ್ರಿತಃ – ೩ ಶಿಕ್ಷಿಸಲ್ಪಟ್ಟವನ ಹೆಸರು'' (ಸಿದ್ಧಾಂತಿ. ೩೯). ೧೩. ಚೆನ್ನಾಗಿ ಪಳಗಿ ಸಾಧುವಾದ ಕುದುರೆ : ''ವಿನೀತಃ, ಸಾಧುವಾಹಿನಃ – ಎಳೆಯಲಾಪುವ ಕುದುರೆಗಳಿಗೂ ಚೆನ್ನಾಗಿ ಹೊರಲುಳ್ಳ ಕುದುರೆಗಳಿಗೂ ಹೆಸರುಗಳು'' (ಸಿದ್ಧಾಂತಿ. ೨೪೯). [ಸಂ.]

**ವಿನೀತಗುಣ** (ನಾ). ೧. ಬಾಗಿ ನಡೆಯುವ ನಡತೆ ; ಸೌಜನ್ಯ. ೨. ನಮ್ರನಾದವನು ; ಸೌಜನ್ಯಶೀಲ : ಸಾಮಿ ಬಂದೊಡೆ ವಿನೀತಗುಣರ್ ಬೆಸಕೆಯ್ಯದಿರ್ಕುಮೇ (ಪುಷ್ಪಪು. ೧೪-೨೪). [ಸಂ.]

**ವಿನೀತಿ** (ನಾ). ೧. ಒಳ್ಳೆಯ ನಡತೆ ; ಸದ್ಗುಣ : ಮಾಚಯ್ಯಂ . . . ಆದ್ಯರ ಸುಚಾರಿತ್ರಂಗಳಂ ತಿಳುಹಿ ಮುಂದೆ ಬುದ್ಧಿಗಳಂ ವಿನೀತಿಗಳಂ ದಯಾನ್ವಿತ ಶುದ್ಧಬೋಧೆಯನಂದದಿಂದೊರೆದು (ಬಸವು. ೨೭-೭೬). ೨. ಗೌರವ ; ಆದರ : ಮಾತೆಯಾಗಿಯೆ ಸಾಗಿಸುವುದು ವಿನೀತಿಯಲಿ ಗುರುಭಕ್ತಿ ನಿಚ್ಚಭ್ರಾತನಾಗಿ ಸಹಾಯವಪ್ಪುದು ಕೂರ್ತು ಗುರುಭಕ್ತಿ (ಬಸವು. ೩೯-೨೩). [ಸಂ.]

**ವಿನೀತೆ** (ನಾ). ಸೌಜನ್ಯದಿಂದ ಕೂಡಿದವಳು ; ನಮ್ರಳಾದವಳು : ಆ ಹುಡುಗಿ ಬಹಳ ವಿನೀತೆ (ರೂಢಿ). [ಸಂ. ವಿನೀತಾ]

**ವಿನೀಲ, ವಿನೀಳ** (ನಾ). ೧. ದಟ್ಟವಾದ ನೀಲವರ್ಣ ; ಕಡುನೀಲಿಬಣ್ಣ : 'ವಿನೀಲಚ್ಛಾಯ' ಪರಾ. ವಿನೀಳ : ೧. ಆಗಸಮಳಿನೀಳನೀಳಗಳಕಂಠತಮಾಳ ವಿನೀಳ ನೀರದಪ್ರಸರವಿಭಾಸಿಯಾದುದು . . . ಮೇಘಕಾಲದೊಳ್ (ಪಂಪಭಾ. ೭-೨೨) ; ಸುರಭಿಸಮೀರಣಂಬೆರಸು ಬೇಗದೆ ಬಂದಲರ್ಗಣ್ಣ ಸನ್ನೆಯಿಂ ಕರೆಯೆ ವಸಂತದೂತಿ ಸಹಕಾರನ ಕೈವಿಡಿದಿರ್ದ ಮಲ್ಲಿಕಾಪರವಧುವಂ ವಿನೀಳಪರಿಧಾನಮನಾಕೆ ಮಧುಪ್ರಸಂಗಕಾತರೆ ಮುಸುಕಿಟ್ಟವೊಲ್ಮುಸುಱಿ ಪೀರ್ದುವು ಸೌರಭಮಂ ಮದಾಳಿಗಳ್ (ಮಲ್ಲಿಪು. ೭-೪೧). ೨. ಕಡುನೀಲಿಯಾದುದು ; ದಟ್ಟವಾದ ನೀಲಿಬಣ್ಣವುಳ್ಳುದು : ತಳಿರ್ಗಳವೊಲ್ಮೆಲ್ಲಿದುವೀ ತಳಂಗಳಳಿಕುಳದವೊಲ್ವಿನೀಳಂಗಳ್ನಿನ್ನಳಕಾಳಿಗಳ್ (ಕವಿರಾ. ೩-೭೧). [ಸಂ.]

**ವಿನೀಲಚ್ಛಾಯ** (ನಾ). = ವಿನೀಲ ೧ : ಧವಳಜಳಧರಕುಳಾಕುಳಮವಿಕಳಮಂಬರತಳಂ ವಿನೀಲ[ಪಾಠಾಂ. ಳ]ಚ್ಛಾಯಂ ಕುವಳಯಕೀರ್ತಿಗೆ ಶಾರದಮವಧೀರಿತಮಾಯ್ತು (ಕವಿರಾ. ೨-೬೩). [ಸಂ.]

**ವಿನೀಲತೆ** (ನಾ).= ವಿನೀಲ ೨ : ಮೇಘವಿತಾನದೊಳ್ ವಿನೀಲ [ಪಾಠಾಂ. ಳ] ತೆ ವಿವಿಕ್ತವರ್ಣವ್ಯವಸ್ಥೆಯಿಂದೊಂದಿರ್ಕುಂ (ಕಾವ್ಯಾವ. ೮೯೪). [ಸಂ. ವಿನೀಲತಾ]

**ವಿನೀಳ** 'ವಿನೀಲ' ನೋ.

**ವಿನೀಳಗಳ** (ನಾ). ೧. ಕಡುನೀಲಿಬಣ್ಣದ ಕೊರಳು, —ಕುತ್ತಿಗೆ. ೨. ಕಡುನೀಲಿ ಬಣ್ಣದ ಕುತ್ತಿಗೆಯುಳ್ಳುದು ; ನವಿಲು : ''ಕೇಕಿ ವಿನೀಳಗಳಂ ಪ್ರಚಲಾಕಿ ಮಯೂರಂ ಕಳಾಪಿ ಶಿಖಿ ನವಿಲಕ್ಕು'' (ವಸ್ತುಕೋ. ೪೨-೧೨). [ಸಂ. ವಿನೀಲಗಲ]

**ವಿನುಕಿ** 'ವಿನಿಕಿ' ನೋ.

**ವಿನುತ** (ಗು). ೧. ಹೊಗಳಿಕೆಗೆ ಪಾತ್ರವಾದ ; ಸ್ತುತ್ಯವಾದ ; ಶ್ಲಾಘ್ಯವಾದ : ವಿನುತ ರುಚಕಾದ್ರಿಯುತ್ತರವನದೊಳ್ ಸೊಗಯಿಸುವ ಕುಂಡಳಸ್ಫಟಿಕಾರ್ಕಾಂಜನ ಕಾಂಚನರುಚಿರಸುದರ್ಶನರಜತಾಂಕಿತ ವಿಚಿತ್ರಕೂಟಾವಳಿಯೊಳ್ (ಶಾಂತಿಪು. ೯-೧೭೯) ; ನೆನೆಯೆ ಜಿನರಾಜ ನಿನ್ನಯ ವಿನುತಪದಗಳನಘೋತ್ಕರಂ ಪಿಂಗುಗುಂ (ವರ್ಧಮಾ. ೮-೧೩). ೨. ಹೆಸರುವಾಸಿಯಾದ ; ಪ್ರಸಿದ್ಧವಾದ ; ಶ್ರೇಷ್ಠವಾದ : ಆರೂಢವತ್ಸರಾಜನುದಾರಗುಣಂ ವಿನುತ ಕಂದುಕಾದಿತ್ಯಂ ಶ್ರೀನಾರೀಕಾನ್ತಂ ನಿರ್ಜ್ಜಿತವೈರಿವ್ರಜನೆನಿಸಿ ಪಿಟ್ಟುಗಂ ಸಲೆ ನೆಗಟ್ದಂ (ಸೌಇ. XX, ೧೮-೧೨; 980); ಧರ್ಮಕಥನದಿಂದಂ ವಿನುತಸ್ವಾಧ್ಯಾಯಮೆಂಬ ತಪಮಂ ತಳೆದಂ (ಸುಕುಮಾ. ೪-೧೮). ೩. ಚೆಲುವಾದ ; ರಮ್ಯವಾದ ; ಅಂದವಾದ : ವಿನುತಸಮಗ್ರಮಂಡಲದ ಚಂದ್ರನ ಚಂದ್ರಿಕೆವೊಲ್ ನರೇಂದ್ರಚಂದ್ರನ ರುಚಿರೋತ್ಕರಗ್ರಹಣಶೋಭಿತೆಯಂ ಸೊಸೆಯಂ ನಿರೀಕ್ಷಿಸಲ್ ಮನವೊಸೆದಿರ್ದೊಡೆ (ಕಾದಂಉ. ೯೭೨). (ನಾ). ೪. ಶ್ರೇಷ್ಠವಾದುದು : ವಿನುತಂ ಚಿತ್ರಂ ಸರಸ್ವೀಸುದತಿ ಬೆಸಲೆಯಾದಂಗನಾನೀಕಮೋ ತಾನೆನೆ ಲಾವಣ್ಯಾಮೃತಂ ಮಿಕ್ಕೊಸರ್ವ ತೆಱದೆ ವಸ್ತ್ರಾಂತದಿಂ ಬಿಂದುಗಳ್ ತಳ್ತಿನಿತಾನುಂ ಬೀೞ್ (ಕುಸುಮಾ. ೫-೧೫೮). ೫. ಶ್ರೇಷ್ಠನಾದವನು ; ಪ್ರಸಿದ್ಧವ್ಯಕ್ತಿ : ವಿನುತಂ ದೃಢರಥನೆಂಬಂ ಘನದೋರ್ಬಳದೃಪ್ತಂ (ನೇಮಿಪು. ೩-೧೦೩). ೬. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಒಂಬತ್ತನೆಯದಾದ ಬೃಹತಿ ಎಂಬ ಛಂದಸ್ಸಿನ ಒಂದು ವೃತ್ತ : ನನಯುಗಮಿರೆ ಪಾದಪಾಶನನಿದಿರಿರೆ ಬಂದು ಕೋಕನದನಯನೇ ನಾಕಿಯಿಂ ವಿನುತಮಿದುವೆ ನಾಮದಿಂ (ಛಂದೋಂಬು. ೨-೧೦೨). [ಸಂ.]

**ವಿನುತಂಬೆಱು** (ಕ್ರಿ). ಹೆಸರುವಾಸಿಯಾಗು ; ಪ್ರಸಿದ್ಧಿಯನ್ನು ಹೊಂದು : ವಿನುತಂಬೆತ್ತುದು ದೇವ ನಮ್ಮ ಪುರದ್ಯೆಂದ್ರೀಭಾಗದಿಂದೀರೆಂಟುಯೋಜನ ಮಾತ್ರಾವನಿಯೊಳ್ ಶಿವಂಕರವನಂ (ಕುಸುಮಾ. ೪-೮೮); ವಿನುತಂಬೆತ್ತೀ ಗಂಗಾವನಿತೆಯ ಕವುನೀಯವುಪ್ಪ ಕಟಿಸೂತ್ರಂ ತಾನೆನೆ ಕಣ್ಗೊಳಿಸಿತು ಮಣಿಮಯ ಕನಕವನವೇದಿಕಾವಿಳಾಸಂ (ಶಾಂತೀಶ್ವ. ೧೫-೯೬). [ವಿನುತ + ಪೆಱು]

**ವಿನುತಪ್ರಾಸ** (ನಾ). [ಛಂದ] ಆರು ಬಗೆಯ ಪ್ರಾಸಗಳಲ್ಲಿ ಒಂದು ; IP ಅದ್ವಿತ್ವವಾದ ಪ್ರಾಸಾಕ್ಷರವು ಯಾವುದೊಂದು ನಿರ್ದಿಷ್ಟಸ್ವರದಿಂದ ಕೂಡಿ ಆಗಲಿ ಅಥವಾ ಆ ಸ್ವರ ಮತ್ತು ಅದರ ಸವರ್ಣದಿಂದ ಕೂಡಿ ಆಗಲಿ ಇದ್ದರೆ ವಿನುತಪ್ರಾಸ : ವಿನುತಪ್ರಾಸಂ ಶಾಂತೋಪನತಂ ವರ್ಗೋದಿತಂ ಸಮೀಪಗತಂ ಮತ್ತನುಗತಮಂತಗತಂ ಸಂಜನಿತವಿಭೇದೋಕ್ತಿಯಿಂದಮಿಂತಾಱು ತೆಱಂ (ಕವಿರಾ. ೨-೩೦). [ಸಂ.]

**ವಿನುತಿಸು** (ಕ್ರಿ). ಕೊಂಡಾಡು ; ಹೊಗಳು ; ಸ್ತುತಿಸು : ಬಗೆಗಳೊಳು ಕುಕವಿಗಳನನು ದಿನವೆಣಿಸದತಿವಿಮಳಮತಿಯಲಿ ವಿನುತಿಸುವೆ ನಾನೀ ಕಥಾವೃತ್ತಾಂತವ (ಬಸವು. ೧-೩೭) ; ತನ್ನ ಗುರುವಂ ಕಂಡು ವಿನುತಿಸುತೆ ಸಾಷ್ಟಾಂಗದಿಂ ನಮಿಸಿ (ಪದ್ಮರಾ. ೨-೩೦). [ವಿನುತ + -ಇಸು]

**ವಿನುತ್ಯ** (ನಾ). ಹೊಗಳಿಕೆಗೆ ಪಾತ್ರವಾದುದು ; ಶ್ಲಾಘನೀಯವಾದುದು : ಭುವನವಿನುತ್ಯಮಾಗೆ ಕವಿಕರ್ಣರಸಾಯನಮೆಂಬ ಕಬ್ಬಮಂ ಪ್ರವಿತತಸಂಸ್ಕೃತೋಕ್ತಿಯೊಳೊಡರ್ಚಿದನಲ್ತೆ ಷಡಕ್ಷರಾಹ್ವಯಂ (ಶಬಶಂ. ೫-೬೩). [ಸಂ.]

**ವಿನೂತ** (ಗು). ೧. ಸ್ತುತ್ಯವಾದ ; ಶ್ಲಾಘ್ಯ ; ಕೊಂಡಾಡತಕ್ಕ : ಮುಳಿಸು ಲಲಾಟನೇತ್ರಶಿಖಿ ಮೆಚ್ಚೆ ವಿನೂತರಸಪ್ರಸಾದಮುಜ್ಜಳಜಸಮಂಗಸಂಗತ ಲಸದ್ಭಸಿತಂ (ಪಂಪಭಾ. ೧-೨) ; ರೀತಿವಿನೂತ ವಸ್ತು ಕೃತಿಗೊಪ್ಪುವ ಮೆಯ್ ರಸಭಾವವೃತ್ತಿ ನಿರ್ಣೀತಿಯೆ ಜೀವಂ (ಕಾವ್ಯಾವ. ೭೮೦). (ನಾ). ೨. ಹೊಗಳಿಕೆಗೆ ಪಾತ್ರನಾದವನು ; ಸ್ತುತ್ಯನಾದವನು : ವಿನೂತಂ ವಿನೇಯಾನೀಕಪ್ರವಿರಾಜಿತಂ ತ್ರಿಭುವನಾಧೀಶಂ ದಿನೇಶಂ ಸಮಾಧಾನಪ್ರಾಪ್ತಿಯನೀಗೆ ಭವ್ಯನಿಕರಕ್ಕಾಚಿತ್ಯಮಂ ಸ್ತುತ್ಯಮಂ (ಜೀವಸಂ. ೧-೧). [< ಸಂ. ವಿನುತ]

**ವಿನೂತನ** (ಗು). ೧. ಹೊಸದಾದ ; ನವೀನ : ಅವರಾರೂ ವರ್ಟರ ಈ ವಿನೂತನ ಯೋಚನೆಯನ್ನು ವಿರೋಧಿಸಲಿಲ್ಲ (ಶಿಕ್ಷದ. ೭೦೯). ೨. ಸುಲಭವಾಗಿ ಕಾಣಲಾಗದ ; ಅಪೂರ್ವವಾದ : ತಾವು ಬರುವ ಕುಟುಂಬಗಳ ವಿನೂತನಸಂದರ್ಭಗಳು ಅಂಥ ಸಮಸ್ಯೆಗೆ ಕಾರಣವೆನಿಸುತ್ತವೆ (ಶಿಕ್ಷದ. ೩೦೦). (ನಾ). ೩. ಹೊಸದಾದುದು ; ಹೊಸದು : ಬಹುದಿನದ ಬಯಕೆ ಸಂದು, ಗರ್ಭಧರಿಸಿದ ಆಕೆಗೆ, ದಿನದಿನಕ್ಕೆ ತನ್ನ ದೇಹವೇ ವಿನೂತನವಾಗಿ ಕಾಣುವುದಿರಲಿ . . . ವಾಜಶ್ರವಸನೂ ಈಗ ಹೊಸಬನಂತೆ ಕಾಣಿಸಿದ (ಬೆಕಂಬಾ. ೫೮). [ಸಂ.]

**ವಿನೂತ್ನ** (ಗು). ಅತಿನವೀನವಾದ ; ಹೊಚ್ಚಹೊಸದಾದ : ವಿನೂತ್ನ ಶ್ರೀ ಹ್ರೀ ಧೃತಿ ಕೀರ್ತಿಬುದ್ಧಿಲಕ್ಷ್ಮೀಪ್ರತಿತರ್ ದೇವಿಯರನಱುವರಂ ಬೆಸವೆಟ್ಟಂ (ಶಾಂತಿಪು. ೯-೧೬೪) ; ಪೊನ್ನೇಂ ಪೊಂದೇಡವೇಂ ಕಾಣಬಾರದ ವಿನೂತ್ನ ವಸ್ತೂತ್ಕರಂಗಳೇಂ ! (ರಾಮಾಶ್ವ. ೧೬೫-೧೮). [ಸಂ.]

**ವಿನೆಗಂ** (ಅ). ೧. ಇಂದಿನವರೆಗೆ ; ಈತನಕ ; ಈ ಪರ್ಯಂತ : ಯೋ ಭಾವೋ ಭಾವಾಂತರಸ್ಯ ಜ್ಞಾಪಕೋ ಭವತಿ ತತ್ರ ವರ್ತಮಾನಾದ್ಧಾತೋಃ ವುದುಂ . . . ವಿನಂ, ವಿನೆಗಂ (ಶಬ್ದಾನು. ೫೮೮ ವೃತ್ತಿ). ೨. ಇರಲಾಗಿ ; ಇರುತ್ತಿರಲು : ವನ್ನಂ, ವನ್ನೆಗಂ ; ವಿನಂ, ವಿನೆಗಂ (ಶಬ್ದಾನು. ೧೯ ಪ್ರಯೋ.). IP ಭವಿಷ್ಯತ್ಕಾಲದ 'ವ' ಪ್ರತ್ಯಯದೊಂದಿಗೆ 'ಇನಂ' 'ಇನೆಗಂ', ಮೊದಲಾದ ಕಾಲಾರ್ಥಕವಾದ ಅವ್ಯಯಗಳನ್ನು ಸೇರಿಸಿ ಈ ರೂಪಗಳನ್ನು ಗುರುತಿಸಲಾಗಿದೆ. 'ಇನ್ನೆಗಂ ' ಪರಾ. [?]

**ವಿನೇಯ** (ಗು). ೧. ಸೌಜನ್ಯದಿಂದ ಕೂಡಿದ ; ವಿನಯವುಳ್ಳ : ಇತ್ತ ವಿನೇಯ ನಿಕಾಯಾಂಬುಜಭಾನುವಪ್ಪ ಮೇಘರಥನರಮನೆಯಂ ಪೊಕ್ಕಿರ್ದು (ಶಾಂತಿಪು. ೯-೮೭ ವ) ; ಮತ್ತಾಕ್ತನ ಜನ್ಮಾವಳಿಯಂ . . . ಉಸಿರ್ವುದು ವಿನೇಯಕುಮುದಪ್ರಮೋದಕರ ತುಹಿನಕರಾ (ಚಂದ್ರಪ್ರ. ೩-೮). ೨. ಮಾರ್ಗದರ್ಶನ ಮಾಡಲ್ಪಟ್ಟ ; ಮುನ್ನಡೆಸಲ್ಪಟ್ಟ. (ನಾ). ೩. ಒಳ್ಳೆಯ ಮನುಷ್ಯ ; ಶಿಷ್ಟ ; ಸಜ್ಜನ : ಪ್ರಾಣಿಹಿತಮಂ ವಿನೇಯಪ್ರೀಣನಕರಮಂ . . . ನೆಗಟ್ದಾದಿಪುರಾಣಮನಪರಿಮಿತಭಕ್ತಿಯಿಂ ವಿರಚಿಸುವೆಂ (ಆದಿಪು. ೧-೪೨) ; ವಿನೇಯಂ ಕಲ್ಯಾಣಮಿತ್ರನೆಂಬಂ ಪರದಂ (ಯಶೋಚ. ೪-೪೪). ೫. ವಿದ್ಯಾರ್ಥಿ ; ಶಿಷ್ಯ. ೬. ಜೈನಧರ್ಮಾನುಯಾಯಿ : ದುರಿತಘನತಿಮಿರ ದಶಶತಕಿರಣಮತಿಪ್ರೀತಿಕರಣಮಖಿಳವಿನೇಯೋದ್ಧರಣಮೆಮಗಭವ ಭವಭಯಹರಣಂ ಭವದೀಯಸಮವಸರಣಂ ಶರಣಂ (ಆದಿಪು. ೧೪-೩೮). [ಸಂ.]

**ವಿನೇಯಜನ** (ನಾ). ಜೈನಧರ್ಮದಲ್ಲಿ ಶ್ರದ್ಧೆಯುಳ್ಳ ಜನ : ವಿನೇಯಜನ ಸಂಘಾತಕ್ಕೆ ಮಾಣಿಕ್ಯದೇವಪದಾಂಭೋಜವರಪ್ರಸಾದಮೆ ಜಯಂ ಭದ್ರಂ ಶುಭಂ ಮಂಗಳಂ (ಆದಿಪು. ೧೬-೭) ; ಮುನಿಸಮುದಾಯಸಮೇತಂ ವಿನೇಯಜನವನದಿವಾಕರನಂತಾ ಮುನಿಪನುಪವಾಸಮಂ ಪರ್ವನಿಮಿತ್ತಂ ಕಳೆದು (ಯಶೋಚ. ೧-೪೭). [ಸಂ.]

**ವಿನೇಯಾರ್ಥಿ** (ನಾ). ಜೈನಧರ್ಮಾನುರಾಗಿಯಾದವನು ; ಜೈನಧರ್ಮದಲ್ಲಿ ಶ್ರದ್ಧೆಯಿರುವವನು : ಪೇಟ್ದಂ ಜಿನಂ ಕೇಳ್ದೊರಖಿಳವಿನೇಯಾರ್ಥಿಗಳ್ ತತ್ಕಥಾಸಂತಾನಂ ಧರ್ಮಶ್ರವಃಸುಂದರಂ (ಶಾಂತಿಪು. ೬-೫೯). [ಸಂ. ವಿನೇಯಾರ್ಥಿನ್]

**ವಿನೋಕ್ತ್ಯಲಂಕಾರ** (ನಾ). [ಕಾವ್ಯಮೀ] ಒಂದು ಬಗೆಯ ಅಲಂಕಾರ : ಒಂದು ಪದಾರ್ಥವಿಲ್ಲದಿರುವುದರಿಂದ ವರ್ಣ್ಯವು ಹೀನವಾಗಿರುವಂತೆ ವರ್ಣಿತವಾದರೂ ಅಥವಾ ರಮ್ಯವಾಗಿರುವಂತೆ ವರ್ಣಿತವಾದರೂ ವಿನೋಕ್ತ್ಯಲಂಕಾರವಾಗುವುದು (ಕೈಪಿಡಿ. ೨೭೪). [ಸಂ.]

**ವಿನೋದ** (ನಾ). ೧. ದೂರ ಮಾಡುವಿಕೆ ; ಅಟ್ಟುವಿಕೆ. ೨. (ಮನೋರಂಜನೆ ಅಥವಾ ವಿಶ್ರಾಂತಿಗಾಗಿ ಏರ್ಪಡಿಸುವ) ಕ್ರೀಡೆ ; ವಿಹಾರ : ಅನೇಕ ಪ್ರಕಾರದ ಕಟಕದ ನಾಗರಿಕ ನರನಾರೀಜನಂಗಳಂಗಜರಾಗರಂಜಿತವಿನೋದಂಗಳೊಳಿರೆ (ಆದಿಪು. ೧೨-೪೫ ವ) ; ಭರದಿಂದಂಬರವೀಥಿಯೊಳ್ ನಿಜವಿನೋದಾಪಾದನೋದ್ಯೋಗದಿಂ ಬರುತುಂ (ಚಂದ್ರಪ್ರ. ೫-೪). ೨. ಹಾಸ್ಯ ; ತಮಾಷೆ ; ಚೇಷ್ಟೆ : ಕರಿ ವಿನೋದದಿ ಕುಡಿದ ಜಲವನು ಕರಣೆಯಲಿ ತೆಗೆತೆಗೆದು ರಿಪುಮೋಹರಕೆ ಚೆಲ್ಲಿತು ಕಲ್ಪಮೇಘದ ಬಸುಱ ಬಗಿದಂತೆ (ಕುಮಾರವ್ಯಾ. ೩-೪೦) ; ಊಟ ಮಾಡುವಾಗ ನಾಲ್ಕು ವಿನೋದದ ಮಾತುಗಳು ಇಲ್ಲದಿದ್ದರೆ, ಸ್ವಾರಸ್ಯವೇ ಇಲ್ಲ (ಆರ್ಯಕ. ೫೭). ೩. ಸಂತೋಷ ; ಹಿಗ್ಗು : ದ್ರುಪದನ ಪೊಟಲೊಳ್ ಪಾಂಡವರ್ ಚಾಗಕ್ಕೆ ಬೂತುಂ ಭೋಗಕ್ಕೆ ಪೊಟ್ಟುಂ ನೆಱೆಯದೆನಿಸಿ

ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಿರ್ಪನ್ನೆಗಂ (ಪಂಪಭಾ. ೪-೧ ವ) ; ಅದಂ ವಿನೋದವಿಕಸಿತವಿಳೋಚನಂ ನೋಡುತ್ತುಮಿರೆ (ಚಂದ್ರಪ್ರ. ೨-೨೭ ವ). ೪. ಅತಿಯಾದ ಆಸಕ್ತಿ ; ಕುತೂಹಲ : "ಕೌತೂಹಳಂ, ವಿನೋದಃ, ಕೌತುಕಂ, ಕುತೂಹಳಂ – ಈ ೪ ವಿನೋದಂ" (ಹಲಾಯು. ೧೯೯-೩೫). ೫. ಒಂದು ಬಗೆಯ ಭವನ. ೬. [ಸಂಗೀತ] ರಾಸಕಗೀತದ ನಾಲ್ಕುಪ್ರಕಾರಗಳಲ್ಲಿ ಒಂದು : ಆಲಾಪದ ಕೊನೆಯಲ್ಲಿ ಧ್ರುವಪದದಿಂದ, ಕೌತುಕ(ಭಾವ)ದಲ್ಲಿ ವಿನೋದವು (ಹಾಡುವಂತಹುದೆಂದು) ಸ್ಮೃತವಾಗಿದೆ (ಚತುಪ್ರ. ೭೭). [ಸಂ.]

**ವಿನೋದಂಬೆಱು** (ಕ್ರಿ). ಸಂತೋಷಿಸು ; ಆನಂದವನ್ನು ಪಡೆ ; ಹಿಗ್ಗು : ವನೇಜಾತಿನಿಯಂ ವಿಡಂಬಿಸಿ ವಿನೋದಂಬೆತ್ತು ಬಂದತ್ತು ಸಬ್ಬವಕಾಲಿಂಗೆಣೆಯಾಗಿ . . . ಮಾರುತಂ (ಜಗವಿ. ೧೭-೧೧೦). [ವಿನೋದ + ಪೆಱು]

**ವಿನೋದಕ್ರೀಡೆ** (ನಾ). ತಮಾಷೆಗಾಗಿ ಆಡುವ ಆಟ ; ಹುಡುಗಾಟ : ನಿಷ್ಕಾರುಣ್ಯ ಭೂಯಂತ್ರದ ವಿನೋದಕ್ರೀಡೆ ಕೃಷ್ಣನದು (ಕುವ್ಯಾದ್ರೋ. ೮-೬೨). [ಸಂ. ವಿನೋದಕ್ರೀಡಾ]

**ವಿನೋದಗಾತಿ** (ನಾ). ಚೆಲ್ಲಾಟವಾಡುವವಳು ; ಹಾಸ್ಯಗಾತಿ : "ಲಲನಾ — ವಿನೋದಗಾತಿ" (ಸಿದ್ಧಾಂತಿ. ೧೬೭). [ವಿನೋದ + - ಕಾತಿ]

**ವಿನೋದಗಾರ** (ನಾ). ತಮಾಷೆ ಮಾಡುವ ಸ್ವಭಾವದವನು; ಹಾಸ್ಯಗಾರ: (೬). [ವಿನೋದ + - ಗಾರ (< - ಕಾಱ)]

**ವಿನೋದನಿದ್ರೆ** (ನಾ). ತಮಾಷೆಗಾಗಿ ಮಾಡಿದ ನಿದ್ದೆ ; ತೋರಿಕೆಯ ನಿದ್ರೆ : ತಿಳಿಯೆ ವಿನೋದನಿದ್ರೆ ಹರಿ ಮೆಲ್ಲನೆ ಮೆಯ್ಮುರಿವಂತೆಗೆಯ್ಯೆ (ಜಗವಿ. ೩-೧೦೦). [ಸಂ. ವಿನೋದನಿದ್ರಾ]

**ವಿನೋದವನ** (ನಾ). ವಿಹಾರಕ್ಕಾಗಿ ಏರ್ಪಡಿಸಿದ ತೋಟ ; ಕೇಳೀವನ : ನಿನ್ನ ಪೆಂಡಿರಿನ್ನಾರ್ವುಧುಮಾಸದೊಳ್ ನಿಜವಿನೋದವನಂಗಳ ಪಾದಪಂಗಳೊಳ್ ಪೆರ್ಮೊಲೆಯೊತ್ತಿನಿಂ ಕುರವಕಕ್ಕೆ ವಿಕಾಸಮನುಂಟುಮಾಳ್ಪರ್ (ಪಂರಾಮಾ. ೧೪-೧೯೫). [ಸಂ.]

**ವಿನೋದವೇದಿಕೆ** (ನಾ). ಮನೋರಂಜನೆಯ ವೇದಿಕೆ , — ಜಗಲಿ : ಸೌಧತಳಂಗಳ ವಿನೋದವೇದಿಕೆಯ ಮತ್ತವಾರಣದ ಮಲಂಗಂ ಮಲಂಗಿ ಚದುರ ಚಾಗದ ದಗುಂತಿಯಂ ಮೆಟ್ಟಿವ ವಿವಿಧ ವಿಟರೊಳಂ (ಪುಷ್ಪಪು. ೨-೭೭ ವ). [ಸಂ. ವಿನೋದವೇದಿಕಾ]

**ವಿನೋದಶೀಲ** (ನಾ). ಸಂತೋಷದ ಸ್ವಭಾವದವನು : ಪರಮಾನುಭಾವನಭಿಮಾನಿ ವಿನೋದಶೀಲಂ (ಕವಿರಾ. ೩-೨೨೮) ; ಖಳಸುರಸೂದನನ ತೆಗೆದಪ್ಪಿ ನಗುತ ವಿನೋದಶೀಲನು ಮಗನ ನೋಡಿದ ಹಲವು ಕಣು ದಣಿಯೆ (ಕೌಶಿರಾ. ೩೭-೨). [ಸಂ.]

**ವಿನೋದಿ** (ನಾ). ಆನಂದಪಡುವವನು ; ಸಂತೋಷಿಸುವವನು : ಅಸಹಾಯ ಸಾಹಸವಿನೋದಿ ವಿವಿಕ್ತಚಿತ್ರಪ್ರಸಹಪ್ರಕಾಶಿತಮಹೋದಯತತ್ತ್ವಸತ್ತ್ವಂ (ಕವಿರಾ. ೩-೨೨೯) ; ದೈತ್ಯಧ್ವಾಂತಮಂ ಗೆಲ್ದ ಭೂಭಾರಚ್ಛೇದವಿನೋದಿ ಕೃಷ್ಣನೆಮಗೀಗಾ ನಂದಸಂದೋಹಮಂ (ಜಗವಿ. ೧-೧). [ಸಂ. ವಿನೋದಿನ್]

**ವಿನೋದಿಸು** (ಕ್ರಿ). ಹಿಗ್ಗು ; ಸಂತೋಷಪಡು : ಶಿವರಹಸ್ಯಾಗಮನಿಗಮ ದನುಭವಿಗಳೆನಿಸಿ ವಿನೋದಿಸುವರುಂ ಶಿವಗಣಾವಳಿಯಿಂತು ಸುಖಗೋಷ್ಠಿಯೊಳಿರಲು (ಬಸಪು. ೪-೯) ; ಸಕಲತತ್ತ್ವಂಗಳ ಸಕಲಬ್ರಹ್ಮಾಂಡಗಳ ಹುಟ್ಟಿಸಿ ತಮ್ಮಲ್ಲಿಯೇ ವಿನೋದಿಸುವರು (ಜ್ಯೋತಿಶಾಂ. ೭). [ವಿನೋದ + - ಇಸು]

**ವಿನೋದ್ಯಮಾನೆ** (ನಾ). ಸಂತೋಷಗೊಳಿಸಲ್ಪಟ್ಟವಳು : ಕನ್ಯಾಪರಿವಾರವಿಲಾಸ ವಿಲಾಸಿನೀವಿನೋದ್ಯಮಾನೆಯನಾಭರಣಪ್ರಭಾಪರಿಭೂತಪ್ರಭೂತಜ್ಯೋತಿಃಪ್ರಭೆಯಂ ಜ್ಯೋತಿಃಪ್ರಭೆಯಂ ಪ್ರತೀಹಾರಂ ಮಗಧಾಧಿರಾಜಾಭಿಮುಖಂ ಮಾಡಿ (ಶಾಂತಿಪು. ೫-೧೦೫ ವ). [ಸಂ. ವಿನೋದ್ಯಮಾನಾ]

**ವಿನ್ನ** (ಗು). ೧. ಗ್ರಹಿಸಿದ ; ತಿಳಿದ. ೨. ಪಡೆದ ; ಹೊಂದಿದ. ೩. ವಿಚಾರಿಸಲ್ಪಟ್ಟ. ೪. ಇಟ್ಟ ; ನೆಲೆಗೊಳಿಸಿದ. ೫. ಮದುವೆಯಾದ. (ನಾ). ೬. ಪಡೆದುದು ; ಹೊಂದಿದುದು : "ಲಬ್ಧಂ, ಪ್ರಾಪ್ತಂ, ವಿನ್ನಂ . . . ಭೂತಂ — ೬ ಹೊಂದಲ್ಪಟ್ಟಿರುವದು, ಪಡೆಯಲ್ಪಟ್ಟಿರುವುದು, ಆಗಿ ಬಂದಿರುವುದು" (ಸಿದ್ಧಾಂತಿ. ೩೫೦). ೭. ವಿಚಾರಿಸಿಕೊಂಡುದು : "ವಿನ್ನಃ, ವಿತ್ತಃ, ವಿಚಾರಿತಃ – ೩ ವಿಚಾರಿಸಲ್ಪಟ್ಟದ್ದು, ಪ್ರಸಿದ್ಧವಾಗಿ ಕೇಳಿ ತಿಳಕೊಳ್ಳಲ್ಪಟ್ಟದ್ದು" (ಸಿದ್ಧಾಂತಿ. ೩೫೦). [ಸಂ.]

**ವಿನ್ನಪ** 'ಬಿನ್ನಪ' ನೋ.

**ವಿನ್ನಪಂಗೆಯ್** 'ಬಿನ್ನಪಂಗೆಯ್' ನೋ.

**ವಿನ್ನಪ್ಪ** 'ಬಿನ್ನಪ' ನೋ.

**ವಿನ್ನಪ್ಪಂಕೆಯ್** 'ಬಿನ್ನಪಂಗೆಯ್' ನೋ.

**ವಿನ್ನಪ್ಪಂಕೆಯ್ಯು** (ಕ್ರಿ). ಅರಿಕೆ ಮಾಡಿಸು ; ವಿಜ್ಞಾಪಿಸುವಂತೆ ಮಾಡು : ಗೋವಿನ್ದ ಮಾಧವರಸರಯ್ಯು x ರಭಸುರಕಣ್ಣರಾಯಕೊಜ್ಜೆ x ವಿನ್ನಪ್ಪಂಕೆಯ್ಸಿ ಪ್ರಸಾದ xxx (ಎಕ. X (S), ಮುಳಬಾ. ೧೩೭-೩ ; 9ನೆಯ ಶತ). [ವಿನ್ನಪ್ಪ (< ಬಿನ್ನಪ) + ಕೆಯ್ಸು]

**ವಿನ್ನಪ್ಪಂಗೆಯ್** 'ಬಿನ್ನಪಂಗೆಯ್' ನೋ.

**ವಿನ್ನವೀ ?** (ಕ್ರಿ). (?) : ಕುದುರೆಗಾಳಗದ ಬಂಣಣದೊಳು(೦)ನ್ನತಿಕೆವಡೆದ ಸುಭಟ ಸವಾರಿಚೂಡಾರತ್ನ ಸಬಳತ್ರಿನೇತ್ರ ಬಿರುದಿನಣಕಕ್ಕೆ ಸೆಣಸಿ ಮುಚ್ಚರಿಪಂಗೆ ತ(೦)ನ್ನ ವಾರುವಮಂ ವಿ(೦)ನ್ನವಿತ್ತು ಮು(೦)ನ್ನ ಪಾರ್ವಿಸಿ ಮುರಾರಿಯೊಳು ದೆಪ್ಪಾದೆಪ್ಪಿಯೊಳು ಕಾದಿ ತಳ್ತಿಱಿದು ಗೆಲ್ದು (ಸೌಇಇ. IX-i, ೩೪೩-೨೦ ; 1226). [?]

**ವಿನ್ನಾಣ** 'ಬಿನ್ನಾಣ' ನೋ.

**ವಿನ್ನಾಣಿ** 'ಬಿನ್ನಾಣಿ$_2$' ನೋ.

**ವಿನ್ನು** 'ಬಿಟ್ಟು$_2$' ನೋ.

**ವಿನ್ಯಸ್ತ** (ಗು). ೧. ಇಟ್ಟ ; ಇರಿಸಿದ : ಸ್ವಸ್ತಿಸಮಸ್ತನರೇಶ್ವರ ಮಸ್ತಕವಿನ್ಯಸ್ತಶಾಸನಂ . . . ಆದಿದೇವನಗ್ರತನೂಜಂ (ಆದಿಪು. ೧೩-೬೨) ; ಶಸ್ತ ಶಿವದೀಕ್ಷಾರ್ಥಿಜನ ತನ್ನಸ್ತಕಾ ಭಯವರದ ಕರುಣಾಹಸ್ತವಿನ್ಯಸ್ತಪ್ರಭಾವ ಶ್ರೀಗುರುವೆ ಜಯತು (ಬಸಪು. ೬-೪೯). ೨. ಕೆತ್ತಿದ ; ಕೊರೆದ : ಸುಯೋಧನೋರುಮಕುಟೋದ್ಘಟ್ಟ ಪ್ರತಿಜ್ಞಾಕ್ಷರಾವಳಿ ವಿನ್ಯಸ್ತ ವಿಶಾಲನಿಶ್ಚಳಶಿಲಾಸ್ತಂಭಂ (ಗದಾಯು. ೧-೫೫). ೩. ಕೊಟ್ಟ ; ನೀಡಿದ. ೪. ಉಂಟಾದ ; ಒದಗಿದ : ಯುಧಿಷ್ಠಿರನುಣಲಿ ಧರೆಯನು ಗೋತ್ರವಧವಿನ್ಯಸ್ತ ಕಿಲ್ಬಿಷವ (ಕುವ್ಯಾಗ. ೩-೧೯). (ನಾ). ೫. ಇಡಲ್ಪಟ್ಟುದು ; ನೆಲೆಗೊಂಡುದು : ಅವನ ಪದಾರ್ಥಸಾಮಗ್ರಿಯು ಒಳಗೊಳಗೇ ಮೆಲ್ಲಮೆಲ್ಲನೆ ನಾನಾಪದರಗಳಲ್ಲಿ ವಿನ್ಯಸ್ತವಾಗಿ ಅವನನ್ನು ಸುತ್ತಿಕೊಂಡು . . . ಆನಂದಪಡೆಯುವುದನ್ನು ನೋಡುವೆವು (ನಿಬಂಧ. II, ೨೮೦). [ಸಂ.]

**ವಿನ್ಯಾಸ** (ನಾ). ೧. ಇಡುವಿಕೆ ; ಇರಿಸುವುದು : ಆ ಸುದತಿಯ ಮೃದುಪದವಿನ್ಯಾಸ ಮುಮಂ ಶೇಷನಾನಲಾಱದೆ ಸುಯ್ವಂ (ಪಂಪಭಾ. ೧-೧೨೭). ೨. (ವಸ್ತು, ಪದಾರ್ಥ, ಧನ ಮುಂತಾದುವನ್ನು) ನ್ಯಾಸವಾಗಿ ಇಡುವುದು , — ಇರಿಸುವುದು. ೩. ಇಡುಗಂಟು ; ನ್ಯಾಸ. ೪. ರಚನಾಕ್ರಮ ; ಜೋಡಣೆ ; ರಚನೆ : ಮದೀಯ ವಾಗ್ವಿಭವವಿನ್ಯಾಸಂ ಬಲಂಬೆತ್ತುದು (ಆದಿಪು. ೧-೨೫) ; 'ಚಾವುಂಡರಾಯಪುರಾಣ'ವು ವಿಷಯ ಹಾಗೂ ವಿನ್ಯಾಸಗಳಲ್ಲಿ ಅಸ್ವತಂತ್ರವಾದರೂ ಹಳಗನ್ನಡ ಗದ್ಯಶೈಲಿಯಲ್ಲಿ ತನ್ನದೇ ಒಂದು ಮಾದರಿಯಾಗಿ ಮೆರೆದಿದೆ (ಕಸಾಚ. ೧೧೪). ೫. (ಕಟ್ಟಡದ ಆಕಾರ, ಅಳತೆ ಮುಂತಾದುವನ್ನು ತೋರಿಸುವ) ರೇಖಾಚಿತ್ರ ; ನಕ್ಷೆ : ಮುಖ್ಯಸೂತ್ರಧಾರನು ದೇವಾಲಯದ ವಿನ್ಯಾಸವನ್ನು ಬರೆದು ಪ್ರತಿಯೊಂದು ಭಾಗದ ಅಳತೆಯನ್ನೂ ನಿರ್ಧರಿಸಿದ ಮೇಲೆ ತಮ್ಮ ಚಿಹ್ನೆಗಳನ್ನು ಹಾಕುತ್ತಿದ್ದರು (ಹೊಯ್ಸಾ. ೧೪). ೬. ವ್ಯವಸ್ಥೆ ; ಏರ್ಪಾಟು : ವಿಧಿಯ ವಿನ್ಯಾಸಮಂ ನಿಂದಿಸಿದೊಡೇಂ ಫಳಂ (ಶ್ರೀರಾಮಾ. ೩೦೩-೩೨೬). ೭. ಆಂಗಿಕಚಲನೆ ; ಅಂಗಾಭಿನಯ : ಅನಿಮೇಷಾಧಿಪತಿ ಸಹಸ್ರನೇತ್ರನಾಗಳ್ ಸಹಸ್ರಕರನಾದಂ ನರ್ತನದೊಳ್ ಸಹಸ್ರಪದನಾದನೆನೆ ವಿರಾಜಿಸಿತು ಹಸ್ತಪದವಿನ್ಯಾಸಂ (ಆಜಪು. ೫-೧೯). ೮. ವಿಧಾನ ; ರೀತಿ ; ಬಗೆ : ಆ ಸೊಸೆಯ ಸಂಗಾತ ಕುಂತಿ ವಿಲಾಸದಲಿ ಕುಳ್ಳಿರ್ದಳಾ ವಿನ್ಯಾಸವನು ಜನ ನೋಡುತಿರ್ದುದು ಬಿಗಿದ ಬೆಱಗಿನಲಿ (ಕುವ್ಯಾಆ. ೧೭-೨೯) ; ಹೀಗೆ ಮಾನವರ ಎದೆಗಳಲ್ಲಿ ಪ್ರೀತಿಯಾಗಿ ಮೈದೋರಿ ಬಾಳನ್ನು ಬೆಳಗುವ ಈ ಶಕ್ತಿ ಚಿರಂತನವಾದ ದೈವೀಪ್ರೇಮದ ಒಂದು ವಿನ್ಯಾಸ ಮಾತ್ರ (ಸೌಂದಸ. ೩೫). ೯. ಪ್ರದರ್ಶನ ; ತೋರಿಕೆ. ೧೦. ಗುಂಪು ; ರಾಶಿ ; ಸಮೂಹ. ೧೧. [ಸಂಗೀತ] ಸ್ವರಪ್ರಭೇದಗಳಲ್ಲಿ ಒಂದು ಬಗೆ : ಒಂದೊಂದು ರಾಗಕ್ಕೂ

ಹಾಡಲು ಪ್ರಾರಂಭಿಸಬೇಕಾದ ಸ್ವರ (ಗ್ರಹ) . . . ಅಲ್ಲಲ್ಲಿ ನಿಲ್ಲಲು ಉಪಯುಕ್ತಸ್ವರಗಳು (ನ್ಯಾಸ, ಅಪನ್ಯಾಸ, ವಿನ್ಯಾಸ) . . . ನಿಯಮ, ಕ್ರಮಗಳು ನಿಷ್ಕರ್ಷಿಸಲ್ಪಟ್ಟವು (ಭಾರದ. ೫೪೧). ೧೨. [ಕಾವ್ಯಮೀ] ಉಪರೂಪಕಗಳಲ್ಲಿ ಒಂದಾದ ಭಾಣಿಕೆ ಎಂಬುದರ ಏಳು ಬಗೆಯ ಅಂಗಗಳಲ್ಲಿ ಒಂದು : ಭಾಣಿಕಾ — ಇದರಲ್ಲಿಯೂ ಒಂದೇ ಅಂಕ ; ನೇಪಥ್ಯ ಸೂಕ್ಷ್ಮ. . . ಉಪನ್ಯಾಸ, ವಿನ್ಯಾಸ, ವಿಬೋಧ, ಸಾಧ್ವಸ, ಸಮರ್ಪಣ, ನಿವೃತ್ತಿ, ಸಂಹಾರ ಎಂಬ ಏಳು ಅಂಗಗಳು (ಸಂನಾಟ. ೩೭.) [ಸಂ.]

**ವಿನ್ಯಾಸಿಸು** (ಕ್ರಿ). ರಚಿಸು ; ಸೃಷ್ಟಿಸು : ಈ ಸರಣಿವಿಡಿದಜ್ಞಜನರಾಯಾಸಮಂ ಕಡೆಗೊಳಿಸುವಡೆ ವಿನ್ಯಾಸಿಸುವೆ ಕೇಳ್ಕನದೊಳಸರದೊರತೆ ಬರದಂತೆ (ಗಗಶಾ. ೧೩-೧೨). [ವಿನ್ಯಾಸ + -ಇಸು]

**ವಿಪ** (ನಾ). ಹಕ್ಕಿಗಳ ಒಡೆಯ ; ಗರುಡ : ಅತ್ಯದ್ಭುತಮಹಿಮಾತಿಶಯನ ಕೃಷ್ಣ ಸತ್ಕೇಶ ಭವ ವಿಪಾಹಿಪರಿಂ ನುತನು (ಪ್ರಸಭಾ. ೩೭-೧೫). [ಸಂ.]

**ವಿಪಂಚಿ** (ನಾ). ೧. ಒಂದು ಬಗೆಯ ವೀಣೆ : ಭರತರಾಜಂ . . . ವಿಪಂಚೀಮಂದ್ರತಾರಮಧುರಮೂರ್ಛನಾಸನಾಥಪ್ರಯೋಗಂಗಳುಮಂ . . . ಆಲಿಸಿ (ಆದಿಪು. ೧೧-೭೨ ವ) ; ಇಂಚರದಿಂದ ವಿಪಂಚಿಯ ಗೆಲ್ವಳಾ ಪಂಚಶರನ ಪಟ್ಟದಾನೆ (ನಾಗಕು. ೨-೯೧). ೨. ಆಟ ; ವಿಹಾರ ; ಕ್ರೀಡೆ. ೩. ಮನೆಯ ಮುಂದಿರುವ ಕಟ್ಟೆ ; ಜಗುಲಿ : "ವಿಪಂಚೀ - ವೀಣೆಯುಂ, ಗೃಹಬಹಿರ್ವೇದಿಯುಂ" (ಕಾಶಕ್ಕ. ೨೭೭). ೪. ಆವಾಸ ; ನೆಲೆ ; ಆಗರ : ಪುರುಡಿನ ಗರುಡಿ ಸೊರ್ಕಿನಿರ್ಕೆ ಮುಳಿಸಿನ ಬೆಳಸುವೆಜಗಿನ ವಿಪಂಚಿ ಪದಪಿನ ಪಂಜರಂ ಬಲ್ಚದುರ ಚಾವಡಿ . . . ಎನಿಪುದಂಗಜನ ಘಾರಾಘಾರಿ ರಾಜಿಸುವ ಸೂಳೆಗೇರಿ (ಪದ್ಮರಾ. ೬-೮೭). [ಸಂ. ವಿಪಂಚೀ]

**ವಿಪಂಚಿಕೆ** (ನಾ). ೧. = ವಿಪಂಚಿ ೧ : ವಿಪಂಚಿಕೆ ಚಿತ್ರಿಕೆ . . . ರುದ್ರವೀಣೆಯೆಂಬ ಇಪ್ಪತ್ತೆರಡು ತೆಱದ ತಂತ್ರೀವಾದ್ಯಕ್ರಮವೆಂಬುದು (ವಿವೇಕ. ೧೯೦). ೨. ಟೀಕೆ ; ವ್ಯಾಖ್ಯಾನ : ಆ ಮದನಂ ರತಿಶಾಸ್ತ್ರವಿಪಂಚಿಕೆಯಂ ಚದುರಿಂ ಬರೆದೋಲೆಯ ಚಂಡಳಿಕೆಯೊ ಎನೆ ಸಸಿ ಸೊಗಯಿಸಿತು (ಜಯಕಾ. ೧೪-೮). [ಸಂ. ವಿಪಂಚಿಕಾ]

**ವಿಪಂಚೀಗುಣತತ್ತ್ವಜ್ಞ** (ನಾ). ವೀಣಾವಾದನದಲ್ಲಿ ಪಾರಂಗತನಾದವನು : ವಿಪಂಚೀಗುಣತತ್ತ್ವಜ್ಞರುಂ ವಾದ್ಯವಿದ್ಯಾವಿಶಾರದರುಮಪ್ಪವನ ಶಿಷ್ಯರಾಗಳ್ ಸೂಚಿಱಿತು ಪಾಡಲ್ ತೊಡಂಗಿದರ್ (ಅದ್ಭುತ. ೧೯-೧೨). [ಸಂ.]

**ವಿಪಕ್ವ** (ಗು). ೧. ಹದವಾಗಿ ಬೇಯಿಸಿದ. ೨. ಚೆನ್ನಾಗಿ ಮಾಗಿದ : ಸುಕೃತಮಹೀರುಹವಿಪಕ್ವಫಲಭುಕ್ತಿಗಿಂತು ನೋಂತರುಮೊಳರೇ (ಶಾಂತಿಪು. ४-೭೫). (ನಾ). ೩. ಹದವಾಗಿ ಬೇಯಿಸಿದುದು : "ಶೃತಂ ವಿಪಕ್ವಂ" (ವಸ್ತುಕೋ. ೯೨-೨). [ಸಂ.]

**ವಿಪಕ್ಷ** (ಗು). ೧. ಎದುರುಪಕ್ಷಕ್ಕೆ ಸೇರಿದ ; ವಿರೋಧಿಯಾದ : ಉದಾರವೀರ ಚರಿತನಿರತಕದನಕರ್ಕಶಕ್ಷತ್ರಿಯಂಗೆ ವಿಪಕ್ಷಕ್ಷತ್ರಿಯಪರಾಕ್ರಮಾಕರ್ಣನೋದೀರ್ಣ ಕ್ರೋಧದೊಳಳೀಕಭ್ರುಕುಟಿಯುಂ . . . ತಕ್ಕುದಲ್ತು (ಆದಿಪು. ೧೪-೮೧ ವ) ; ತನ್ನಂಬು ಸಂಹಾರಂ ಮಾಡೆ ವಿಪಕ್ಷಸೈನಿಕಮನಂಭೋಜಾಕ್ಷನೇಸಾಡಿದಂ (ಪಂರಾಮಾ. ೯-೭೮). (ನಾ). ೨. ವಿರುದ್ಧವಾದ ಗುಣ : ಉಪಶಮಮುಂ ತೀವ್ರತೆಯುಂ ವಿಪಕ್ಷಮಿತರೇತರೋಕ್ತಿ ಯಿಂದವನಾ ಭೂಮಿಪನಾಂತು ಮಧ್ಯಮಂ ಲೋಕಪಾಲನಾದಂ ಗಡಂ ಮಹೀಮಂಡಳದೊಳ್ (ಶಾಂತಿಪು. ೮-೧೨೪). ೩. ವೈರ ; ಶತ್ರುತ್ವ : ಬನದ ಪಕ್ಕಿಗಳಿ ವಿಪಕ್ಷಂ ನೆನೆಯಲಾಗದು (ಬಸಪು. ೪೫-೪೪). ೪. ವಿರೋಧಿ ; ಶತ್ರು : ನಿಮಿಷದಲಿ ಕಂದೆಱೆದನಂತಃಶ್ರಮದ ಝುಳವಡಗಿತು ವಿಪಕ್ಷಭ್ರಮಣಚೇತೋಭಾವ ಭವನದ ಮುಖವಿಕಾಸದಲಿ (ಕುಮ್ಮಾಗ. ೭-೧೪) ; ತರಕ್ಷುರಾಕ್ಷಸವಿಪಕ್ಷವಳಕ್ಷಸರಕ್ಷದೇಹ (ರಾಜಶೇ. ೧-೧೧). ೫. ಹಗೆಗಳ ಪಕ್ಷ ; ಎದುರುಪಕ್ಷ ; ಪ್ರತಿಪಕ್ಷ : ಕಡಿದು ವಿಪಕ್ಷಮನಿಂದ್ರಂ ಕಡಿವಂತೆ ಕುಲಾದ್ರಿಪಕ್ಷಮಂ ತೋಳ್ವಲಮಂ ಪಡೆದಂ ಪರಪ್ರತಾಪಂ (ಪಂರಾಮಾ. ೧-೧೩೮) ; ಪಕ್ಷ ವಿಪಕ್ಷಮೆಂದು ಪರಿಭಾವಿಸದೇತೆಱದಿಂ ಪರೋಪ ಕಾರಕ್ಷಮರಾಗಿ ಪುಟ್ಟಿದವರುಳ್ಳೊಡೆ . . . ವಂದಿಸಿ ಬಣ್ಣಿಸುವೆಂ (ನಳಚಂ. ೫). ೬. ರೆಪ್ಪೆ ತೆರೆದಿರುವಿಕೆ. ೫,೬ : ಜನಪ ಕೇಳುಪಲಾಲಿತಾಂಜನವೆನೆ ಜಿತಾಕ್ಷ ವಿಪಕ್ಷವಾದವು . . . ವರ ಪಾಂಚಾಲನಂದನೆಯ (ಕುಮ್ಮಾಆ. ೧೩-೨೦). ೭. ಪ್ರತಿಪಕ್ಷಕ್ಕೆ ಸೇರಿದವನು ; ಪ್ರತಿವಾದಿ. ೮. ಪಕ್ಷಪಾತವಿಲ್ಲದಿರುವಿಕೆ ; ತಾಟಸ್ಥ್ಯ. ೯. ಚಾಂದ್ರಮಾನದ ತಿಂಗಳಿನಲ್ಲಿ ಒಂದು ಪಕ್ಷದಿಂದ ಮತ್ತೊಂದು ಪಕ್ಷಕ್ಕೆ ಬದಲಾದ ದಿನ. [ಸಂ.]

**ವಿಪಕ್ಷತ್ವ** (ನಾ). ೧. ಎದುರು ಪಕ್ಷದಲ್ಲಿರುವಿಕೆ ; ಶತ್ರುತ್ವ. ೨. ರೆಕ್ಕೆಗಳಿಲ್ಲದಿರುವಿಕೆ. ೧,೨ : ನೆಗಟ್ಟುದ್ದಂಡತೆ ಕಂಟಕಸ್ಥಿತಿಸರೋಜವ್ರಾತದೊಳ್ ರಾಜಲೀಲೆ ಗುರುಸ್ಫೂರ್ತಿ ನಭೋಗ್ರದೊಳ್ ಚಪಲತಾಸಂಗಂ ವಿಪಕ್ಷತ್ವ [ಪಾಠಾಂ. ವಿಪತ್ಪಕ್ಷ] ಮದ್ರಿಗಳೊಳ್ . . . ಒಪ್ಪುಗುಮುರ್ವೀಶರೊಳೊಪ್ಪದೆಂದೆನಿಸಿದಂ ತನ್ನೇಳ್ಗೆಯಿಂ ಪದ್ಮಜಂ (ಪುಷ್ಪಪು. ೫-೫೭). [ಸಂ. (ವಿ + ಪಕ್ಷತ್ವ ; ವಿಪಕ್ಷ + ತ್ವ)]

**ವಿಪಕ್ಷಪಾತ** (ನಾ). ಶತ್ರುಗಳ ನಾಶ ; ವೈರಿಗಳ ಧ್ವಂಸ : ಆಳು ಹಿರಿದಿದ್ದೇನು ಫಲ ಹೀಹಾಳಿದ್ದವಕೆ ಬೇಱೆ ಪರಿಯ ವಿತಾಳವಿಲ್ಲ ವಿಪಕ್ಷಪಾತದೊಳೆಂದನಂಧನೃಪ (ಕುಮ್ಮಾಕ. ೧೫-೭). [ಸಂ.]

**ವಿಪಕ್ಷಿ** (ನಾ). ೧. ಎದುರಾಳಿ ; ಹಗೆ ; ಶತ್ರು : ಅಕ್ಷದ್ಯೂತದಿನೆನ್ನ ವಿಪಕ್ಷಿಗೆ ಸೋಲ್ತೆಂ ಮದೀಯರಾಜ್ಯಮಂ (ನಳಚಂ. ೭೫೩). ೨. ವಿಶೇಷ ಬಗೆಯ ಪಕ್ಷಿ, — ಹಕ್ಕಿ : ಹಂಸ ಚಕ್ರವಾಕ ಬಳಾಕ ವಿಪಕ್ಷಿಗಣಂಗಳ್ ನೀರೊಳಗಾಡುತ್ತುಂ ಮುೞುಗುತ್ತುಂ (ವಡ್ಡಾರಾ. ೫೪-೨೧). [ಸಂ. ವಿಪಕ್ಷಿನ್]

**ವಿಪಣ** (ನಾ). ೧. (ವಸ್ತುಗಳ) ಮಾರಾಟ ; ವಿಕ್ರಯ ; ಬಿಕರಿ : "ವಿಪಣಃ, ವಿಕ್ರಯಃ - ೨ ಮಾರುವವರ ಹೆಸರುಗಳು" (ಸಿದ್ಧಾಂತಿ. ೨೯೮). ೨. ಅಂಗಡಿ ಬೀದಿ ; ಮಾರುಕಟ್ಟೆ. [ಸಂ.]

**ವಿಪಣಿ** (ನಾ). ೧. ವಸ್ತುಗಳನ್ನು ಮಾರುವ ಸ್ಥಳ ; ಅಂಗಡಿ ; ಮಳಿಗೆ : ಪೂಜ್ಯವಣಿಗ್ವರರಿಂ ನಿರಂತರಂ ನಿಯತದೊಳೊಪ್ಪುಗುಂ ವಿಪಣಿವಿಶ್ರುತಸುಂದರ ವೀಥಿವೀಥಿಯೊಳ್ (ನಳಚಂ. ೭೩೫). ೨. ಅಂಗಡಿಗಳಿರುವ ಬೀದಿ ; ಮಾರುಕಟ್ಟೆ : ಪಣಗಣದಿನಣೆಯರಮವಂ ನಗುತೆ ಪರದರೊಪ್ಪಿದರಾ ವಿಪಣಿಯೊಳುದ್ಧತತೇಜದಿಂ (ಪದ್ಮರಾ. ೮-೭೭). ೩. ಮಾರಾಟ ಮಾಡುವ ಸರಕು,— ವಸ್ತು. ೪. ವ್ಯಾಪಾರ ; ವ್ಯವಹಾರ. [ಸಂ.]

**ವಿಪಣಿಕ** (ನಾ). ವ್ಯಾಪಾರ ಮಾಡುವವನು ; ವರ್ತಕ : "ಬಣಂಜಿಸುವಮಂ ವಿಪಣಿಕಂ ನೈಗಮಂ ವಣಿಜನಕ್ಕು" (ಮಂಗರಾ. ೧೦೨-೧). [ಸಂ.]

**ವಿಪಣಿಪದ** (ನಾ). ಅಂಗಡಿಗಳಿರುವ ಬೀದಿ ; ಮಾರುಕಟ್ಟೆ ; ಪೇಟೆಬೀದಿ : ಜಳಧಿಯನಗಸ್ತ್ಯನೀಂಟಲ್ ತೊಳಗಿದಪುವು ತಳದೊಳಖಿಳನಾನಾರತ್ನಂಗಳೆನಲ್ಕೆ ಸಕಲರತ್ನಂಗಳ ಪಸರದಿನೆಸೆದುವಲ್ಲಿ ವಿಪಣಿಪದಂಗಳ್ (ಕಾದಂಪೂ. ೨೯೩). [< ಸಂ. ವಿಪಣಿಪಥ]

**ವಿಪಣಿಮಾರ್ಗ** (ನಾ). = ವಿಪಣಿಪದ : ಆ ವಿಲಾಸಿನೀನಿವಾಸಕ್ಕೆ ಆಸನ್ನಮೆನಿಪ ವಿಪಣಿಮಾರ್ಗದೊಳ್ . . . ನನೆಯಂಬುಗಳ್ಗೆ ಬೆರಲೆತ್ತುವರಲ್ಲಿಯ ಮಾಲೆಗಾರ್ತಿಯರ್ (ಮಲ್ಲಿಪು. ೨-೫೮) ; ಪುರದ ಸಿರಿಯನವಲೋಕಿಸುತ್ತುಂ ವಿಪಣಿಮಾರ್ಗಂಬಿಡಿದು ನಡೆತಂದು . . . ಬಿಸರುಹಾಕ್ಷಂ ನವರತ್ನಖಚಿತಸಿಂಹಾಸನದೊಳ್ ಸುಖಾಸೀನನಾಗಿ (ಜಗವಿ. ೧೭-೮೮ ವ). [ಸಂ.]

**ವಿಪತಾಕ** (ನಾ). ೧. ಗರುಡಲಾಂಛನವುಳ್ಳ ಧ್ವಜ. ೨. ಗರುಡಲಾಂಛನವುಳ್ಳ ಧ್ವಜವನ್ನು ಹೊಂದಿರುವವನು ; ವಿಷ್ಣು : ಅಮದಂ ಪಿತಾಮಹಂ ವೀತಮಲಂ ಮದನಾರಿ ಮೂಕನಾ ವಿಪತಾಕಂ . . . ದಾಮನಂದಿ ಮುನಿಸನ್ನಿಧಿಯೊಳ್ (ಎಕ. VII(R). ನಾಗಮಂ. ೧೧೮-೪೮ ; 1177). [ಸಂ. ವಿಪತಾಕಾ]

**ವಿಪತ್ಕಾಲ** (ನಾ). ಕಷ್ಟದ ಸಮಯ ; ಆಪತ್ಕಾಲ : ವಿಪತ್ಕಾಲದಲ್ಲಿ ಆದವನೇ ನಂಟ (ರೂಢಿ). [ಸಂ.]

**ವಿಪತ್ತಿ** (ನಾ). ೧. ಕೇಡು ; ಕಷ್ಟ ; ಆಪತ್ತು : ಬಗೆಯದೊಳಕೆಯ್ದುದೆನ್ನಯ ಪಗೆಯಂ ಸಂಪತ್ತಿಯುಂ ನಿರಂತರಮೆಂಬುಬ್ಬೆಗದಿಂ ವಿಪತ್ತಿ ನೋಡದು ನಗರ ವಣಿಗ್ವಾಟಕೋಟಿಯಂ ಮಱೆದೆಂದುಂ (ಚಂದ್ರಪ್ರ. ೧-೧೨೮) ; ಘನಪರಿಭವವಹುದು ತಪ್ಪದು ವಿಪತ್ತಿ (ತಿಮ್ಮಶಾಂ. ४-೨೫). ೨. ಸಾವು ; ಮರಣ : ಖರನ ವಿಪತ್ತಿಯೊಳ್ ವಿಕಲನಾದನೆ (ಪಂರಾಮಾ. ೯-೧೫೭). ೩. ನಿಲುಗಡೆ ; ಕೊನೆ ; ಮುಕ್ತಾಯ. ೪. ದುರ್ದೈವ ; ದುರಾದೃಷ್ಟ. [ಸಂ.]

**ವಿಪತ್ತು** (ನಾ). = ವಿಪತ್ತಿ ೧ : ಪಾಂಡುಸುತರಿಗೆ ಬಹ ವಿಪತ್ತುಗಳೊಳಗಿದೊಂದೇ ಕಳಶವಾದುದಲ (ಕುಮಾ.ಕ. ೩-೨೭) ; ಜೀವನದಲ್ಲಿ ಈವೊಳಗಾಗಿ ಅನೇಕ ಸಂಕಟ ಮತ್ತು ವಿಪತ್ತುಗಳನ್ನು ಕಂಡುಕೊಂಡಿದ್ದೇನೆ (ಹೇಮಂತ. ೨೭೧) ; ವಿಪತ್ತು ಬಂದರೂ ಆಪತ್ತು ಬಿಡಲಿಲ್ಲ (ಗಾದೆ). [< ಸಂ. ವಿಪದ್]

**ವಿಪಥ** (ನಾ). ತಪ್ಪುಹಾದಿ ; ಅಡ್ಡದಾರಿ : "ವ್ಯಧ್ವಃ, ದುರಧ್ವಃ, ವಿಪಥಃ, ಕದಧ್ವಾನ್, ಕಾಪಥಃ — ೫ ಕೆಟ್ಟದಾರಿ, ಕೀಳುಹಾದಿ" (ಸಿದ್ಧಾಂತಿ. ೯೭). [ಸಂ.]

**ವಿಪದಕಂಪಿತ** (ಗು). ಕಷ್ಟಕ್ಕೆ ನಡುಗದ ; ಆಪತ್ತಿಗೆ ಕದಲದ, —ಚಲಿಸದ : ವಿಪದಕಂಪಿತ ಪರಮವಿಜ್ಞಾನೈಕಬುದ್ಧಿಯಲಹವು ಸಿದ್ಧಿಗಳು (ತಿಮ್ಮಶಾಂ. ೬-೪). [ಸಂ.]

**ವಿಪದೆ** (ನಾ). ದುರ್ದೈವ ; ದುರಾದೃಷ್ಟ : ಸ್ವಪದದಲಿ ಮಗನನ್ನು ಸ್ಥಾಪಿಸಿ ವಿಪದೆಗಂಜದೆ ಮುನಿಗಳಂತೆಯೆ ಸಪದಿ ವನವಾಸಕ್ಕೆ ಹೊರಡಲು (ರಘುವಂ. ೭೮-೧೧). [ಸಂ. ವಿಪದಾ]

**ವಿಪದ್ವಿದ್ರಾವಣ** (ನಾ). ಕಷ್ಟಗಳನ್ನು ನಾಶಮಾಡುವವನು ; ತೊಂದರೆಗಳನ್ನು ನಿವಾರಿಸುವವನು : ಕರಂ ಪೆಂಪುವೆತ್ತನುದಾತ್ತಸ್ಥಿತಿಯಿಂ ಸುಹೃಜ್ಜನವಿಪದ್ವಿದ್ರಾವಣಂ ದೇವಣಂ (ಎಕ. VII(R), ನಾಗಮಂ. ೬೪-೫೯ ; 1145). [ಸಂ.]

**ವಿಪನ್ನ** (ಗು). ೧. ಅಡ್ಡಮಾರ್ಗ ಹಿಡಿದ ; ತಪ್ಪುದಾರಿಗೆ ಹೋದ. ೨. ಕಷ್ಟಕ್ಕೆ ಗುರಿಯಾದ ; ಆಪತ್ತಿಗೊಳಗಾದ ; ತೊಂದರೆಗೆ ಸಿಲುಕಿದ : ಅದೃಢಾಗಾರ ವಿಪನ್ನಖಿನ್ನಗೃಹಿಣೀನಿಶ್ವಾಸದಿಂ ಕೂಡೆ ತೂಱಿದುವಾವಾಸಪರಿಕ್ರಿಯಾಕುಲವಧೂವಕ್ತ್ರೋಜದೊಳ್ ಬಿಟ್ಟು ಸೇರಿದುವು . . . ವಾರ್ಬಿಂದುಗಳ್ (ಚಂದ್ರಪ್ರ. ೪-೪೦). ೩. ದುರ್ಬಲಗೊಂಡ ; ಕುಗ್ಗಿದ ; ಸೋತ. ೪. ನಾಶವಾದ ; ಅಳಿದ. ೫. ಸತ್ತ ; ಗತಿಸಿದ : ಕೊಳುಗುಳವನ್ನೋಡಲ್ ಚಕ್ರಪಾಣಿಯುಂ ತನ್ನ ಸಹೋತ್ಪನ್ನರುಮೊಡವರೆ ಬಂದು ವಿಪನ್ನೋಗ್ರಾರಾತಿವರ್ಗವಾಹವಧರೆಯಂ ಎಯ್ದಿ (ಪಂಪಭಾ. ೧೪-೨). ೬. ಕೆಳಕ್ಕೆ ಬಿದ್ದ ; ಚ್ಯುತವಾದ. (ನಾ). ೭. ಹಾವು ; ಸರ್ಪ. ೮. ದುರ್ಗತಿಯಲ್ಲಿರುವವನು ; ದುರ್ದೆಸೆಯಲ್ಲಿರುವವನು : ಮುನ್ನ ನಾರಾಯಣಿಯೆನಿಪುದೀ ಕನ್ನಿಕೆಯ ಪೆಸರೊಬ್ಬ ಗುಣಸಂಪನ್ನ ಮುನಿಪನ ವಧು . . . ತನ್ನ ಪತಿ ಪರದೈವವೆಂದು ವಿಪನ್ನನನು ಕೊಂಡಾಡುತಿರ್ದಳು (ಕುಮಾ.ಆ. ೧೬-೪೩). [ಸಂ.]

**ವಿಪನ್ನತೆ** (ನಾ). ೧. ಕಷ್ಟ ; ತೊಂದರೆ ; ತೊಡಕು : ರನ್ನದ ಮಱೆಯಿಂ ದಿಳೆಯ ವಿಪನ್ನತೆ ಗರ್ಭಾವತಾರದಿಂದಱುದಿಂಗಳ್ ಮುನ್ನಮನೆ ಪೋಯ್ತು (ಚಂದ್ರಪ್ರ. ೧೧-೧೨೦). ೨. ಇಲ್ಲದಿರುವ ಸ್ಥಿತಿ ; ಶೂನ್ಯತೆ : ಇನ್ನೆವರಂ ಸುತಜನ್ಮವಿಪನ್ನತೆ ಭವದೀಯ ಸತಿಯೊಳಾಯ್ತುದಯಿಸಿದಪ್ಪಂ ನಿಜಕುಲದೀಪಕಂ (ಚಂದ್ರಪ್ರ. ೩-೭೯). [ಸಂ. ವಿಪನ್ನತಾ]

**ವಿಪನ್ನಪೀಡಿತೆ** (ನಾ). ಆಪತ್ತಿನ ಹಿಡಿತಕ್ಕೆ ಒಳಗಾದವಳು ; ಕಷ್ಟಕ್ಕೆ ಗುರಿಯಾದವಳು : ಸಾಮ್ರಾಜ್ಯಲೀಲಾಸಮೇತೆಯಾಗಿಯುಂ ವಿಪನ್ನಪೀಡಿತೆಯಂತೆಯುಂ . . . ಇರ್ಪಿನೆಗಂ (ಚಂದ್ರಪ್ರ. ೩-೫೦ ವ). [ಸಂ. ವಿಪನ್ನಪೀಡಿತಾ]

**ವಿಪರಿಪರಿಧಾನ** (ಗು). ಸುತ್ತಲೂ ಆವರಿಸಿದ, — ಬಳಸಿದ : ಶಿವಶಿವಾ ಪವಡಿಸಿತೆ ಚತುರರ್ಣವವಿಪರಿಪರಿಧಾನ ಪೃಥ್ವೀಧವನ ಬಾಳಿಕೆ ನೀರೊಳು (ಕುಮಾ.ಗ. ೪-೮). [ಸಂ.]

**ವಿಪರೀತ** (ಗು). ೧. ಅಡ್ಡದಾರಿಗೆ ತಿರುಗಿದ ; ತಪ್ಪುಹಾದಿಗೆ ಹೊರಳಿದ. ೨. ವಿರುದ್ಧವಾದ ; ವ್ಯತಿರಿಕ್ತವಾದ : ನಿಗಮಸಂಸ್ಥಿತವಾಸ್ತು ರಚನಾದಿಗಳ ನಾಯವ್ಯಯ ತಾರಾದಿಗಳ ರಾಶಿಗ್ರಹಬಲದ ವಿಪರೀತಯೋಗದಲಿ . . . ಕೇಡಿಗನು ಕೃತ್ರಿಮರಚನೆಯಲಿ ಮಾಡಿಸಿದನರಮನೆಯ (ಕುಮಾ.ಆ. ೮-೬೮). ೩. ತಿರುವು ಮುರುವಾದ ; ಹಿಂದುಮುಂದಾದ. ೪. ಅತ್ಯಧಿಕವಾದ : ಬೀರಕ್ಕನು ದಂದರಹಾಳಿ. ವಿಪರೀತ ವೆಚ್ಚವನ್ನು ಮಾಡತಕ್ಕವಳು (ನೀತಿಚಂ. ix, ೩೨) ; ಬೇಸಾಯದ ಭೂಮಿಯ ಮೇಲೂ ನೀರು ನುಗ್ಗಿ ಪ್ರವಾಹದಿಂದ ವಿಪರೀತ ನಷ್ಟ ಸಂಭವಿಸುತ್ತದೆ (ನನದಿ. ೨೪). ೫. ವಿಲಕ್ಷಣವಾದ ; ಅಸ್ವಾಭಾವಿಕವಾದ : ಭವಹರಂ ತಾಂ ತಮ್ಮಡಿಗೆ ತೋಱುವೆನೆನುತ ತತ್‌ಕ್ಷಣದೊಳಗೆ ನೋಡುವಡೆ ವಿಪರೀತ ತ್ರಿಣೇತ್ರಂ ಭರಿತವಾಗಿರ್ದ ಒಂದು ಮುಖಮಂ ಧರಿಸಿ (ಬಸವಪು. ೧೮-೪೫). (ನಾ). ೬. ವಿರುದ್ಧವಾದುದು ; ವ್ಯತಿರಿಕ್ತವಾದುದು : ಪೃಥಕ್ಕನೆಂಬೊಂ ವಕ್ತೃರಾಗದ್ವೇಷ ವಶಗತನಾ ಧರ್ಮಾರ್ಥವ್ಯಾಖ್ಯಾನಮಂ ವಿಪರೀತಮಾಗಿ ಪೇೞೆಯುಮದಂ ಯಥಾವಸ್ಥಿತಧರ್ಮಸ್ವರೂಪಮಂ ಕೈಕೊಳ್ವೊಂ (ಚಾವುಂಪು. ೭) ; ಚರದೊಳ್ ಕೂಡಿರೆ ಚಂದ್ರನರ್ಥಚಯಮಂ ಮಿತ್ರತ್ವಮುಂ ನಿಲ್ಲದಸ್ಥಿರನಕ್ಕುಂ . . . ತದ್ವಿಪರೀತಮಪ್ಪ ಗುಣಮಂ ಕೆಯ್ಕೊಳ್ಗುಂ (ಜಾತತಿ. ೧೪-೮). ೭. ಹಿಂದುಮುಂದಾಗಿರುವ ಸ್ಥಿತಿ ; ತಿರುವು ಮುರುವು : "ವಿಪರೀತಂ, ಪರಾಚೀನಂ — ಈ ೨ ಹಿಂದುಮುಂದಾಗುಹ" (ಹಲಾಯು. ೧೨೫-೭೨). ೮. ವಿರೋಧಿ ; ವೈರಿ : ಕಲಿಗೆ ವಿಪರೀತಂಗಹಿತರ್ಕ್ಕಳ್ ಕೆಟ್ಟರ್ ಮೇಣ್ ಸತ್ತರ ವಿಚಾರಂ (ಇಆ. X, ೬೧-೧೦ ; ಸು. 700). ೧೦. ಆಧಿಕ್ಯ ; ಹೆಚ್ಚು : ವಿಪರೀತಮಾದ ಮೃಗಕುಲದುಪದ್ರಮಂ ನಿಮಗೆ ದಂಡಪಾಶಾದಿಗಳಿಂದಪಹರಿಸುಗುಂ (ಪಂರಾಮಾ. ೧-೭೨) ; ಈ ಪರತಂತ್ರಜೀವಿಗಳ ಹಾವಳಿ ಆಫ್ರಿಕಾಖಂಡದಲ್ಲಿ ವಿಪರೀತ (ಪರಜೀ. ೨೫). ೧೧. ಅಸಾಧಾರಣವಾದುದು : ವಿಪರೀತದ ಪುಣ್ಣನಿದಂ ಕೃಪೆಯಿಂ ಸಾರಿರ್ದ ವೈಶ್ಯವಂಶಲಲಾಮಂ ಸುಪರೀಕ್ಷೆಯುಳ್ಳ ವೈದ್ಯರಿನಪಹರಿಸಿದಂ (ಧರ್ಮಾಮೃ. ೧೨-೫೬) ; ವಿಪರೀತಮವನ ಚರಿತಂ ತಪಮಧಿಕಂ (ಶಬಶಂ. ೨-೧೦೯). ೧೨. ಅಸ್ವಾಭಾವಿಕವಾದುದು ; ವಿಲಕ್ಷಣವಾದುದು : ಪುರದ ತಿರುವೀಧಿಯೊಳೇನಂ ಬಿನ್ನವಿಪನದೊಂದಾಶ್ಚರ್ಯವದೊಂದು ಕೌತುಕವದೊಂದು ವಿಪರೀತಂ ಚಿತ್ತ್ರಸು (ನಂಬಿರ. ೨-೩೯) ; ಇಂತಹುದುಂಟೆ ವಿಪರೀತ ಎಂದುಮಱೆಯೆವು ಕೇಳ್ದು (ಬಸವಪು. ೩೯-೪೦). ೧೩. ತಪ್ಪಾದುದು ; ತಪ್ಪು : ವಾಚಕನೋಲೆಯರ್ಥಮನಱೆಯದೆ ವಿಪರೀತಮಾಗಿಂತೆಂದು ಬಾಚಿಸಿದನ್ (ಪದ್ಮಾರಾ. ೬೫-೧೭). ೧೪. ಸುಳ್ಳು ; ಅಸತ್ಯ. ೧೫. ಪಕ್ಷಿಗಳಿಂದ ವ್ಯಾಪ್ತವಾದುದು. ೧೬. ವಿರುದ್ಧವಾದ ವರ್ತನೆ. ೧೫, ೧೬ : ವಿಪರೀತನಲ್ಲದ ಕುಜನ್ಮನಲ್ಲದ ಕಲ್ಪವೃಕ್ಷವೆಂಬುದು . . . ಧರೆ ದುಮ್ಮನ ನಾಗದೇವನಂ (ಎಕ. V, ಅರಸೀ. ೨೮-? ; 1171). ೧೭. [ಕಾವ್ಯಮೀ] ಅರ್ಥಾಂತರನ್ಯಾಸಾಲಂಕಾರದ ಎಂಟು ಭೇದಗಳಲ್ಲಿ ಒಂದು ; ಅಸಂಬದ್ಧ ಅಥವಾ ಅಸ್ವಾಭಾವಿಕ ಗುಣದ ಕಲ್ಪನೆ : ಪರಿತಾಪಮನೆನಗೆ ನಿಶಾಕರನಾಗಿಸುಗುಂ ವಸಂತಸಮಯಾನುಗತಂ ಸುರಭಿಸಮಯೋದಿತಹಿಮಕರನಬಲಂ ಪಡೆವನೆಂಬುದಿದು ವಿಪರೀತಂ (ಕವಿರಾ. ೩-೩೬). [ಸಂ.]

**ವಿಪರೀತಕ** (ಗು). ೧. ವಿರುದ್ಧವಾದ ; ವ್ಯತಿರಿಕ್ತವಾದ. (ನಾ). ೨. ವಿರೋಧಿ ; ಎದುರಾಳಿ. ೩. ಹಕ್ಕಿಗಳಿಂದ ಸುತ್ತುವರಿಯಲ್ಪಟ್ಟುದು. ೨, ೩ : ವಿಪುಳತರ ಕಟಕನುದ್ಧದ್ ದ್ವಿಪಹ[ರಿ]ಮಹಿಷೀನಿಷೇವ್ಯನುನ್ನತಪಾದಂ ನೃಪನೀತಶ್ರೀಫಲದಂ ವಿಪರೀತಕನಪ್ಪನಂತು ಭೂಭೃನ್ನಾಥಂ (ಕವಿರಾ. ೩-೧೧೦). [ಸಂ.]

**ವಿಪರೀತಕಲ್ಪನ** (ನಾ). [ಕಾವ್ಯಮೀ] ಅಸಂಬದ್ಧವಾದ ಕಲ್ಪನೆಯಿಂದ ಕೂಡಿದ ಪದದ ದೋಷ : ಅಸಮರ್ಥಮಪ್ರತೀತಂ ವಿಸಂಧಿ ವಿಪರೀತಕಲ್ಪನಂ ಕಷ್ಟಂ ನೀರಸಮೆಂದು ದೋಷಮಿವು ಸಮನಿಸುಗುಂ ಪದದೊಳ್ (ಕಾವ್ಯಾವ. ೪೩೫). [ಸಂ.]

**ವಿಪರೀತಕಲ್ಪನೆ** (ನಾ). = ವಿಪರೀತಕಲ್ಪನ : ಅಸದರ್ಥಂ ವಿಪರೀತಕಲ್ಪನೆಯುಭವ್ಯಂ ದುಷ್ಕರಂ . . . ಅನೋಜೆಯೆಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ಪರಿ. ೧೦೦-೧) [ಸಂ. ವಿಪರೀತಕಲ್ಪನ]

**ವಿಪರೀತಗತಿ** (ನಾ). ೧. ಕೆಟ್ಟಗತಿ ; ದುರ್ಗತಿ : ನಿನ್ನನೀ ರಥದಿಂದೆ ನಿಪತನಂಗೆಯ್ಯದೊಡೆ ತನಗೆ ಪರಲೋಕದೊಳ್ವಿಪರೀತಗತಿಯಾಗದಿರ್ಪುದೆ ಪೇಳ್ (ಜೈಮಿಭಾ. ೧೪-೧೩). ೨. ವಿಚಿತ್ರವಾದ ಸ್ವಭಾವ, —ವರ್ತನೆ : ಅಳುವವರ ನಗಿಸುವುದು ನಗುವರನಳಿಸುವುದು ಗೆಲಿದವರ ಸೋಲಿಸಿ ಗೆಲಿಸುವುದು ಸೋತವರನೀ ವಿಪರೀತಗತಿ ವಿಧಿಗೆ (ಕುಮಾ.ಕ. ೧೨-೩). ೩. ಅಪಾಯಕಾರಿಯಾದ ರೀತಿ : ಎರಡು ಜಾತ್ಯಶ್ವದ ಮಱಿಗಳಂ ಕೊಂಡು ಒಂದಂ ರಾಜವಾಹನಮಾಗೆ ಸಮೆದುಮೊಂದಂ ವಿಪರೀತಗತಿಯೊಳ್ ಸಮೆದುಂ ವರಾಂಗನ ಪೆರ್ಗಡೆಯೊಳ್ ಸಮಕಟ್ಟಿದೊಡೆ (ಜೀವಸಂ. ೫೩-೮). [ಸಂ.]

**ವಿಪರೀತಚರಿತ** (ನಾ). ಅಸಾಧಾರಣವಾದ ಆಚಾರವುಳ್ಳವನು : ಅಘಟಿತಘಟಿತರು ವಿಪರೀತಚರಿತರು ಕೂಡಲಸಂಗನ ಶರಣರು ನಡೆದ ದಾರಿ ಭಯ ಕಾಣಿರಣ್ಣಾ (ಬಸವ. ೧೪೭). [ಸಂ.]

**ವಿಪರೀತಚಿತ್ತ** (ನಾ). ವ್ಯತಿರಿಕ್ತವಾದ ಮನಸ್ಸುಳ್ಳವನು : ದಶಾನನುಮವರ

ಬವರಮಂ ನೋಡಲೆಂದು ಬರುತ್ತುಂ ನಿಮ್ಮಂ ಕಂಡು ವಿಪರೀತಚಿತ್ತನಾಗಿ ಕೈದುಗೆಯ್ಯದೆ ಕೈತವದಿಂ ರಘುವೀರನನಗಲ್ಚಿ ನಿಮ್ಮನುಯ್ಯುದುಂ (ಪಂರಾಮಾ. ೧೧-೧೦೦ ವ). [ಸಂ.]

**ವಿಪರೀತತೆ** (ನಾ). ೧. ವಿಲಕ್ಷಣತೆ : ಕತೆಯೊಳಗಱಿಯದೆ ವಿಪರೀತತೆಯಿಂದಂ ಪೇೞ್ವ ಕೃತಿಗಳ್ಗೆ ಪುರಾಣಸ್ಥಿತಿಯೊಳೆ ಕವಿರತ್ನನಿನ್ನಿತಮಾದುದು ಸಗರಚಕ್ರವರ್ತಿಯ ಚರಿತಂ (ಅಜಿಪು. ೧೨-೨೮). ೨. ವ್ಯತ್ಯಾಸ ; ಭಿನ್ನತೆ : ತನಗೆ ಮತ್ತು ತನ್ನಂಥ ಇತರರಿಗೆ ಅಂಥ ಪರಿಸ್ಥಿತಿವಿಪರೀತತೆ ಏಕೆ ಕಾಣಿಸಿಕೊಳ್ಳಲಿಲ್ಲ (ಪುನರು. ೨೬೪). ೩. ವಿರೋಧ ; ವೈರ ; ದ್ವೇಷ : ಆದಿಕವಿ ಪಂಪನೆಂದನುವಾದಿಸೆ ಸಿತವಾದಿಸಿ ವಿರೋಧಿ ವಿಪರೀತತೆ ಯಿಂದೋದೆ ವಿಲೋಮದೆ ಪೆಸರಂ ಮೇದಿನಿಯೊಳವನ ಪೆಸರೆ ಪೆಸರ್ವಡೆ ದೆಸೆಗುಂ (ಧರ್ಮನಾ. ೧-೩೭). ೪. ಹಕ್ಕಿಗಳಿಂದ ಬಳಸಲ್ಪಡುವಿಕೆ ; ಪಕ್ಷಿಸಮೂಹದಿಂದ ಸುತ್ತುಗಟ್ಟಲ್ಪಡುವಿಕೆ. ೩,೪ : ವಿಪರೀತತೆ ವನದೊಳ್ ಪರಿಕಿಪೊಡಂ ತಾಂ ರಾಜಬಾಧೆ ತಾವರೆಗೊಳದೊಳ್ ಚಪಳತೆ ಲಲನಾ ನಯನಸಮುಪಚಯದೊಳ ಮಲ್ಲದಂತದಿಲ್ಲಾ ನಾಡೊಳ್ (ಬಾಧಪು. ४-೨೨). [ಸಂ. ವಿಪರೀತತಾ]

**ವಿಪರೀತಾರ್ಥ** (ನಾ). ಬೇರೆಯಾದ ಅರ್ಥ ; ವಿರುದ್ಧವಾದ ಅರ್ಥ : ಶ್ರುತಿಗೆ ವ್ಯಾಖ್ಯಾನಮಂ ಮಾಱ್ಪಲ್ಲಿ ವಿಪರೀತಾರ್ಥಮನಾತನೊಲ್ದೆಸಗಲ್ (ದಿವ್ಯಚ. ೧೧-೧೧). [ಸಂ.]

**ವಿಪರ್ಯಯ** (ಗು). ೧. ತಲೆಗೆಳಗಾದ ; ಬುಡಮೇಲಾದ. ೨. ವಿರುದ್ಧವಾದ ; ವ್ಯತಿರಿಕ್ತವಾದ. (ನಾ). ೩. ಅಡ್ಡಿ ; ವಿರೋಧ : "ವ್ಯತ್ಯಯಃ, ವಿಪರ್ಯಾಸಃ, ವೈಪರೀತ್ಯಂ, ವಿಪರ್ಯಯಃ – ಈ ೪ ವಿಪರೀತಂ ಮಾಡುಹ" (ಹಲಾಯು. ೧೨೦-೪೪). ೪. ಹಗೆತನ ; ವೈರ. ೫. ನಾಶ ; ಹಾಳು. ೬. ವಿಪತ್ತು ; ಕಷ್ಟಕಾಲ. ೭. ದುರ್ದೈವ ; ದುರಾದೃಷ್ಟ. ೮. ನಷ್ಟ ; ಹಾನಿ. ೯. ಇಲ್ಲದಿರುವಿಕೆ. ೧೦. ಬದಲಾವಣೆ ; ವ್ಯತ್ಯಾಸ : ನಿತ್ಯಪರೀಕ್ಷಣಸ್ಥಳವಿಪರ್ಯಯಪ್ರತಿಪತ್ತಿ ದಾನಂಗಳಿಂ ನಿಯೋಗಿಗಳಂ ಕಾಮದುಘರ್ ಮಾಡಿಯುಂ . . . ಸಾಮ್ರಾಜ್ಯಮಂ ನಿಷ್ಕಂಟಕಮುಂ ನಿರಾತಂಕಮುಂ ನಿಜಾಯತ್ತಮುಮೆನಿಸಿದಂ (ಚಂದ್ರಪ್ರ. ೨-೬೧) ; ರಾಜ್ಯಶಾಸ್ತ್ರ ಪದಗಳ ವಿವರಣೆ ವೈಜ್ಞಾನಿಕವಾಗಿಯೇ ಇದೆ. ಪೂರ್ವಪಕ್ಷ ಉತ್ತರಪಕ್ಷ, ಏಕಾಂತ ಪದನಿರ್ಧಾರದಲ್ಲಿ ವಿಪರ್ಯಯ . . . ಅನಾಗತವೀಕ್ಷಣ ಇವುಗಳ ಅರ್ಥಪ್ರಯೋಗಗಳು ಶಾಸ್ತ್ರಗ್ರಂಥಗಳಲ್ಲಿ ವಿಧವಿಧವಾಗಿವೆ (ಭಾರದ. ೩೬೯). ೧೧. ವಿನಿಮಯ ; ಪರಸ್ಪರ ಕೊಡುಕೊಳ್ಳುವಿಕೆ. ೧೨. ತಪ್ಪು; ಅಪರಾಧ. ೧೩. [ಕಾವ್ಯಮಿ] ಅರ್ಥಾಂತರನ್ಯಾಸಾಲಂಕಾರದ ಎಂಟು ಪ್ರಕಾರಗಳಲ್ಲಿ ಒಂದು ; ತನ್ನ ಸ್ವಭಾವಕ್ಕೆ ವ್ಯತಿರಿಕ್ತವಾದ ಪರಿಣಾಮವನ್ನು ಉಂಟು ಮಾಡುವಿಕೆ : ಸಕಲವ್ಯಾಪಿವಿಶೇಷಪ್ರಕಾಶಕಂ ಯುಕ್ತಕಾರಿ ಯುಕ್ತಾಯುಕ್ತಂ ಪ್ರಕಟಶ್ಲೇಷ ವಿರುದ್ಧಾತ್ಮಕಂ ವಿರುದ್ಧಂ ವಿಪರ್ಯಯಂ ಯುಕ್ತಾರ್ಥಂ (ಕವಿರಾ. ೩-೨೯). ೧೪. [ತತ್ತ್ವಶಾ] ಅಂತಃಕರಣವೃತ್ತಿಗಳಲ್ಲಿ ಒಂದು ; ಒಂದು ವಸ್ತುವನ್ನು ಮತ್ತೊಂದು ವಸ್ತುವಾಗಿ ಗ್ರಹಿಸುವಿಕೆ : ಒಂದು ವಸ್ತುವನ್ನು ಮತ್ತೊಂದು ವಸ್ತುವಾಗಿ ಗ್ರಹಿಸುವಂತಹ ಚಿತ್ತವೃತ್ತಿ ವಿಪರ್ಯಯ (ಹಿಂದಸಾ. ೧೦೩) ; ಪ್ರಮಾಣ, ವಿಪರ್ಯಯ, ವಿಕಲ್ಪ, ನಿದ್ರೆ, ಸ್ಮೃತಿ – ಈ ಐದೂ ಅಂತಃಕರಣವೃತ್ತಿಗಳು (ಭಾರದ. ೧೨೭). ೧೫. [ಜೈನ] ಮಿಥ್ಯಾಜ್ಞಾನ : ಸಂಶಯ ವಿಪರ್ಯಯ ಸಾವದ್ಯಾನವದ್ಯವಸಾಯಸ್ವಭಾವರಹಿತಮಾಗಿ ಜೀವಾದಿಪದಾರ್ಥ ಯಾಥಾತ್ಮ್ಯಾ ವಗಮಮಂ ಸಮ್ಯಗ್‌ಜ್ಞಾನಂ (ಆದಿಪು. ೧೦-೬೩ ವ). [ಸಂ.]

**ವಿಪರ್ಯಯವೃತ್ತಿ** (ನಾ). [ಕಾವ್ಯಮಿ] ವ್ಯತಿರಿಕ್ತವಾದ ಗುಣವುಳ್ಳ ಪ್ರಯೋಗ : ಅವಱ ವಿಪರ್ಯಯವೃತ್ತಿ ಪ್ರವಿಭಕ್ತವಿಕಲ್ಪಮಕ್ಕುಮುತ್ತರಮಾರ್ಗಂ (ಕವಿರಾ. ೨-೫೫). [ಸಂ.]

**ವಿಪರ್ಯಯೋಕ್ತ** (ನಾ). ವಿರುದ್ಧವಾಗಿ ಹೇಳಿದುದು : ನೆಗೞ್ದಲ್ಪಪ್ರಾಣಾಕ್ಷರ ನಿಗದಿತಮೇತದ್ವಿಪರ್ಯಯೋಕ್ತಂ ಶಿಥಿಲಂ (ಕವಿರಾ. ೨-೬೪). [ಸಂ.]

**ವಿಪರ್ಯಯೋಪಮ** (ನಾ). [ಕಾವ್ಯಮಿ] ಉಪಮಾಲಂಕಾರದಲ್ಲಿಯ ಒಂದು ಪ್ರಭೇದ ; ಉಪಮಾನವು ಉಪಮೇಯಗಳನ್ನು ತಿರುವು ಮುರುವು ಮಾಡುವ ಅಲಂಕಾರ : ನಿನ್ನ ಮುಖದಂತೆ ಕಮಳಮಿದುನ್ನಿದ್ರಂ ನಿನ್ನ ತಳದವೋಲಾರಕ್ತಂ [ನನ್ನಿಯನೀ] ಪಲ್ಲವಮೆನೆ ಸನ್ನುತರೂಪಿಂ ವಿಪರ್ಯಯೋಪಮಮುಮಕ್ಕುಂ (ಕವಿರಾ. ೩-೬೨). [ಸಂ. ವಿಪರ್ಯಯೋಪಮಾ]

**ವಿಪರ್ಯಸ್ತ** (ಗು). ೧. ಬದಲಾವಣೆ ಹೊಂದಿದ ; ವ್ಯತ್ಯಾಸಗೊಂಡ. ೨. ತಲೆಕೆಳಗು ಮಾಡಿದ. ೩. ವಿರುದ್ಧವಾದ ; ವ್ಯತಿರಿಕ್ತವಾದ : ಈ ಮೂರು ಅಭಾವವಾದಿಗಳಲ್ಲಿ ಮೊದಲನೆಯವರು ವಿಪರ್ಯಸ್ತಬುದ್ಧಿಗಳು (ಧ್ವನ್ಯಾಲೊ. ೧೦ ಅಡಿಟಿ). [ಸಂ.]

**ವಿಪರ್ಯಸ್ತಿಕ** (ನಾ). ಭುಜದ ಮೇಲೆ ಹೊದೆಯುವ ವಸ್ತ್ರ ; ಉತ್ತರೀಯ : "ವಿಪರ್ಯಸ್ತಿ[ಪಾಠಾಂ. ವಿಪರ್ಯಸ್ತ, ವಿಪರಿಸ್ತಿ]ಕಂ ಧೋತ್ರಮಕ್ಕು" (ಮಂಗರಾ. ೭೭-೯). [ಸಂ. ವಿಪರ್ಯಸ್ತಿಕಾ]

**ವಿಪರ್ಯಾಸ** (ನಾ). ೧. ಅಡ್ಡಿ ; ವಿರೋಧ ; ತಡೆ : "ವ್ಯತ್ಯಯಃ, ವಿಪರ್ಯಾಸಃ, ವೈಪರೀತ್ಯಂ, ವಿಪರ್ಯಯಃ — ಈ ೪ ವಿಪರೀತಂ ಮಾಡುಹ" (ಹಲಾಯು. ೧೨೦-೪೪). ೨. ವ್ಯತ್ಯಾಸ ; ಅದಲುಬದಲು : ಗಣನಿಯಮವಿಪರ್ಯಾಸದೊಳೆಸೆವಡೆ ದೊಳ್ಪೆಸೆಯೆ ಮಾತ್ರ ಸಮನಾಗಿ ಗುಣಾಗ್ರಣಿಯ ಮತದಿಂದೆ ತಾಳದ ಗಣನೆ ಗೊಡಂಬಟ್ಟೊಡದುವೆ ರಘಟಾಬಂಧಂ (ಛಂದೋಂಬು. ೩-೨೨೨). ೩. ತಪ್ಪು ; ಅಪರಾಧ. ೪. ಸಾವು ; ಮರಣ : ಪೂತನಾನಾಶಮನುಱೆ ಶಕಟೋದ್ಧೃದ್ವಿಪರ್ಯಾಸಮಂ ಮತ್ತಿಳೆಯೊಳ್ ವಾತಾದಿದೋಷಂ ಬಳೆಯದೆ ತರುಗಳ್ ಬಿಳ್ದುದಂ ನೋಡಿಂ (ವಿಷ್ಣುಪು. ೫-೨-೩೨). [ಸಂ.]

**ವಿಪರ್ಯಾಸೋಪಮೆ** (ನಾ). [ಕಾವ್ಯಮಿ] ಉಪಮಾಲಂಕಾರದ ಒಂದು ಪ್ರಭೇದ ; ಉಪಮಾನವೆಂದು ಪ್ರಸಿದ್ಧವಾಗಿರುವ ವಸ್ತುವನ್ನು ಉಪ ಮೇಯವಾಗಿ ಬಳಸುವ ಒಂದು ಪ್ರಕಾರ ; IP "ಉಪಮಾನವೆಂದು ಸುಪ್ರಸಿದ್ಧವಾಗಿರುವ ವಸ್ತುವನ್ನು ಉಪಮೇಯವಾಗಿ ಉಪಯೋಗಿಸುವುದು 'ಪ್ರತೀಪಾಲಂಕಾರ'. ಪ್ರತೀಪವೆಂದರೆ ಪ್ರತಿಕೂಲವಾಗಿರುವುದೆಂದು ಅರ್ಥ. ಉಪಮಾನವು ಉಪಮೇಯಕ್ಕಿಂತಲೂ ಅಧಿಕಗುಣಶಾಲಿಯಾಗಿರುವುದು, ಹೀಗೆ ಅಧಿಕಗುಣಶಾಲಿಯಾದ ಉಪಮಾನವು ಉಪಮೇಯವಾಗಿಯೂ ನ್ಯೂನಗುಣಶಾಲಿಯಾದ ಉಪಮೇಯವು ಉಪಮಾನವಾಗಿಯೂ ವರ್ಣಿತವಾದಲ್ಲಿ ಈ ವರ್ಣನೆ ಉಪಮಾನಕ್ಕೆ ಪ್ರತಿಕೂಲವಾದಂತಾಗುವುದು. ಇದನ್ನು ವಿಪರ್ಯಾಸೋಪಮೆಯೆಂಬುದಾಗಿ ಕಾವ್ಯಾವಲೋಕನಕಾರನು ಹೇಳಿರುವನು" (ಕೈಪಿಡಿ. ೨೫೯) : ವಿಪರ್ಯಾಸೋಪಮೆಗೆ : ಮೊಗಮಂ ತಾವರೆ ಕಣ್ಣನುತ್ಪಲದಳಂ ಆರಾಧಿಸಿ ಪೋಲ್ಗುವು (ಕಾವ್ಯಾವ. ೬೭೨). [ಸಂ. ವಿಪರ್ಯಾಸೋಪಮಾ]

**ವಿಪಲ, ವಿಪಳ** (ನಾ). (ಪಲದ ಆರನೆಯ ಒಂದು ಅಥವಾ ಅರುವತ್ತನೆಯ ಒಂದು ಭಾಗದಷ್ಟು) ಅತ್ಯಲ್ಪ ಕಾಲ. ವಿಪಳ : ಇಂಥಾದೊಂದು ಪತ್ರದ ಎರಡೂ ಮೈ ಛಾಪಿಸಲಿಕ್ಕೆ ಎರಡೂವರೆ ವಿಪಳ ಸಹ ಬೀಳಲಿಲ್ಲ (ಮುಂಬಯಿ. ४-೯೯). [ಸಂ.]

**ವಿಪಶ್ಚಿಜ್ಜನ** (ನಾ). ವಿದ್ವಾಂಸಜನ ; ಪಂಡಿತಗೋಷ್ಠಿ : ವಿಪಶ್ಚಿಜ್ಜನಮೊಂದೆ ಕೊರಲೊಳ್ . . . ಪೊಗೞ್ (ಶಾಂತಿಪು. ೮-೧೫೧ ವ). [ಸಂ.]

**ವಿಪಶ್ಚಿತ್ತು** (ನಾ). ವಿದ್ವಾಂಸ ; ಪಂಡಿತ ; ಜ್ಞಾನಿ : "ವಿದ್ವಾನ್, ವಿಪಶ್ಚಿತ್ . . . ವಿಚಕ್ಷಣಃ — ೨೦ ವಿದ್ವಾಂಸನ ಹೆಸರುಗಳು" (ಸಿದ್ಧಾಂತಿ. ೨೧೩).

ವಿಪಶ್ಚಿತ್ಪ್ರಸನ್ನ = ಪಂಡಿತಪ್ರಿಯನಾದವನು ; ಒಂದು ಬಿರುದು : ಧರೆ ತನ್ನಂ ಕೀರ್ತ್ತಿಪನ್ನಂ ವಿಬುಧತತಿಗೆ ಪೊನ್ನಂ ವಿಪಶ್ಚಿತ್ಪ್ರಸನ್ನಂ ಕರೆದೀವಂ ಬೊಪ್ಪದೇವಂ (ಎಕ. V, ಬೇಲೂರು. ೧೨४-೫೫ ; 1133). [ಸಂ. ವಿಪಶ್ಚಿತ್]

**ವಿಪಳ** 'ವಿಪಲ' ನೋ.

**ವಿಪಾಕ** (ನಾ). ೧. ಚೆನ್ನಾಗಿ ಬೇಯಿಸುವಿಕೆ ; ಹದವಾಗಿ ಪಕ್ವಮಾಡುವಿಕೆ. ೨. ಮಾಗುವಿಕೆ ; ಕಳಿಯುವಿಕೆ ; ಹಣ್ಣಾಗುವಿಕೆ. ೩. ಹದ ; ಪಕ್ವತೆ. ೪. ಜೀರ್ಣವಾಗುವಿಕೆ ; ಪಚನವಾಗುವಿಕೆ. ೫. ಕೇಡು ; ವಿಪತ್ತು. ೬. ಪರಿಣಾಮ ; ಫಲಿತಾಂಶ : ದ್ಯೂತ . . . ದಂಡವಿಘಾತಿ ದೂಷಣ ವರ್ಗಸಂಗತಿಯು ಜಾತಸಪ್ತವ್ಯಸನವಿವು ಸಂಪ್ರೀತಿಕರ ಮೊದಲಲಿ ವಿಪಾಕದೊಳಾತು ಕೆಡಿಸುವ ಹದನನಱಿದಿಹುದು (ಕುವ್ಯಾಸ. ೧೨-೪೮) ; ಮದಮುಖರು ಕೌರವರು

ನೀಚತ್ವದಲಿ ತಮ್ಮನು ತಾವೆ ಸಂಹರಿಸಿದುದು ವಿಧಿಯ ವಿಪಾಕವೆಂದಸವಳಿದು ಮಱುಗಿದರು (ತಿಮ್ಮಸ್ಕೀ. ೧-೫). ೭. ದೈವ ; ಅದೃಷ್ಟ : "ಭಾಗಧೇಯಂ,ಭಾಗ್ಯಂ, ವಿಪಾಕಃ, ಭವಿತವ್ಯತಾ — ಈ ೪ ಭಾಗ್ಯದ ಪೆಸರ್" (ಹಲಾಯು. ೨೧-೧೨೬). ೮. [ಜೈನ] ಇಂದಿನ ಮತ್ತು ಹಿಂದಿನ ಜನ್ಮಗಳ ಪಾಪ ಮತ್ತು ಪುಣ್ಯಕೃತ್ಯಗಳ ಫಲ ; ಕರ್ಮಫಲ : ವಿಪಾಕ : — ದ್ರವ್ಯಕ್ಷೇತ್ರ ಕಾಲಭವಭಾವಲಕ್ಷಣ ನಿಮಿತ್ತಭೇದಜನಿತ ವಿವಿಧ ಜ್ಞಾನಾವರಣಾದಿ ಕರ್ಮೋದಯಂ (ತತ್ತ್ವಪ್ರ. ೩೧೩) ; ವಿಪಾಕವೆಂದರೆ ಸುಖದುಃಖರೂಪವಾದ ಕರ್ಮಫಲ (ಹಿಂದಸಾ. ೯೬). [ಸಂ.]

**ವಿಪಾಕವಿಚಯ** (ನಾ). [ಜೈನ] ನಾಲ್ಕು ಬಗೆಯ ಧರ್ಮಧ್ಯಾನಗಳಲ್ಲಿ ಒಂದು ; ಕರ್ಮಫಲಕ್ಕೆ ಸಂಬಂಧಿಸಿದ ಚಿಂತನೆ : ಭಟಾರರಾಜ್ಞಾವಿಚಯಮಪಾಯವಿ ವಿಚಯ ವಿಪಾಕವಿಚಯ ಸಂಸ್ಥಾನವಿಚಯವೆಂಬೀ ನಾಲ್ಕು ಧರ್ಮಧ್ಯಾನಂಗಳಂ ಧ್ಯಾನಿಸುತ್ತಂ (ವಡ್ಡಾರಾ. ೧೫೪-೯) ; ಕರ್ಮಫಲಾನುಭವವನ್ನು . . . ಚಿಂತಿಸುವುದು ಮತ್ತು ಉದೀರಣದ ಚಿಂತನಮಾಡುವುದು ವಿಪಾಕವಿಚಯವು (ಜೈನಧ. ೮೯). [ಸಂ.]

**ವಿಪಾಕಸೂತ್ರ** (ನಾ). [ಜೈನ] ಜೈನಶಾಸ್ತ್ರದ ಹನ್ನೆರಡು ಅಂಗಗಳಲ್ಲಿ ಒಂದು; IP "ಶ್ರುತಾಂಗಗಳಲ್ಲಿ ಒಂದು ; ಪುಣ್ಯಪಾಪರೂಪವಾದ ಕರ್ಮಗಳ ಪರಿಪಾಕಸ್ವರೂಪದ ವಿವರಣೆ ; ಇದು ಒಂದು ಕೋಟಿ, ಎಂಬತ್ತನಾಲ್ಕು ಲಕ್ಷ ಪದಗಳುಳ್ಳ ಶಾಸ್ತ್ರ" (ಜೈನಕೋ. ೨೩೨) : ಆಚಾರಮುಂ ಸೂತ್ರಕೃತಮುಂ . . . ವಿಪಾಕಸೂತ್ರಮುಂ ಪರಿಕರ್ಮಸೂತ್ರ ಪ್ರಥಮಾನುಯೋಗಪೂರ್ವಗತಚೂಲಿಕಾ ಭೇದೋಪೇತದೃಷ್ಟಿವಾದಮುಂ ಎಂದು ಅಂಗಪ್ರವಿಷ್ಟಭೇದದಿಂ ದ್ವಾದಶವಿಕಲ್ಪಮುಂ ಅಕ್ಕುಂ (ತತ್ತ್ವಪ್ರ. ೫೮). [ಸಂ.]

**ವಿಪಾದಿಕೆ** (ನಾ). (ವಾತ ಮತ್ತು ಶ್ಲೇಷ್ಮಗಳಿಂದ) ಕಾಲು ಒಡೆಯುವ ಅಥವಾ ಬಿರಿಯುವ ಒಂದು ಬಗೆಯ ರೋಗ. [ಸಂ. ವಿಪಾದಿಕಾ]

**ವಿಪಿನ** (ಗು). ೧. ದಟ್ಟವಾದ ; ಸಾಂದ್ರವಾದ ; ನಿಬಿಡವಾದ. (ನಾ). ೨. ಅಡವಿ ; ಕಾಡು : ಹೆಬ್ಬಂದಿ ವಿಪಿನದೊಳು ನಿಂದುದಾ ಶಬರರಿಗೆ ಮೃತ್ಯು ತಾನೆಂಬಂದದಿ (ಹಚಕಾ. ೬-೬) ; ಇವರು ವಿಪಿನಕೆ ಹೋಗಲಾನೀ ಭವನದೊಳಗಿರೆ ದೈವ ಮಿಗೆ ಮೆಚ್ಚುವುದೆ (ತಿಮ್ಮಶ್ರ. ೨-೪೯). ೩. ಗುಂಪು ; ನೆರವಿ. ೪. ಮರಗಳ ಗುಂಪು ; ತೋಪು. [ಸಂ.]

**ವಿಪಿನಚರ** (ನಾ). ೧. ಕಾಡಿನಲ್ಲಿ ಸಂಚರಿಸುವುದು. ೨. ಕಾಡಿನಲ್ಲಿ ಸಂಚರಿಸುವ ಪ್ರಾಣಿ : ಪುರಮಂತರ್ದ್ವೀಪಮೆಂಬಂತಿರೆ ವಿಪಿನಚರಾನೇಕಪಾನೀಕಮಂಭಃಕರಿಯೂಥ ತಾನಿದೆಂಬಂತಿರೆ . . . ಕಱೆದುದು ಬಹಳಾಸಾರಮಂ ನೀರದೌಘಂ (ಚಂದ್ರಪ್ರ. ೪-೪೧). ೩. ಬೇಡ ; ಶಬರ : ಭೂಸುರತಪಕೆ ಹರಿ ಸಂಪ್ರೀತನಾಗುತ ವಿಪಿನಚರವೇಷ ದೊಳಗಾತನ ಬಳಿಗೆ ಬಂದು (ತಿಮ್ಮಸ್ಕೀ. ೧-೨೩). [ಸಂ.]

**ವಿಪಿನಭವ** (ನಾ). ಕಾಡಿನಲ್ಲಿ ಹುಟ್ಟಿದುದು ; ಕಾಡುಮೃಗ : ಬಹಳ ರೋಮಂಥಫೇನಾವಳೀ ಪಾಂಡುರವಕ್ತ್ರಂ ಮಾಹಿಷೀಸಂತತಿ ವಿಪಿನಭವಂ ಕಣ್ಣಿಗುರ್ವಾಯ್ತು ಕಾರೊಳ್ (ಚಂದ್ರಪ್ರ. ೪-೪೮). [ಸಂ.]

**ವಿಪಿನಮಕ್ಷಿಕ** (ನಾ). ೧. ಕಾಡುನೊಣ. ೨. ಒಂದು ಬಗೆಯ ಜೇನುನೊಣ : "ಮಧುಭುಗ್ವಿಪಿನಮಕ್ಷಿಕಂ ಜೇನನೊಣನಕ್ಕು" (ಮಂಗರಾ. ೫೨-೯). [ಸಂ.]

**ವಿಪಿನಾಶ್ವ** (ನಾ). ೧. ಕಾಡುಕುದುರೆ ; ಅಡವಿಯ ಅಶ್ವ. ೨. ಒಂದು ಬಗೆಯ ಜಿಂಕೆ ; ಕಡವೆ : "ಆ ಕಡವು ವಿಪಿನಾಶ್ವಮಕ್ಕು" (ಮಂಗರಾ. ೪೮-೮). [ಸಂ.]

**ವಿಪಿನೌಕಸ** (ನಾ). ೧. ಅರಣ್ಯದಲ್ಲಿ ವಾಸಿಸುವವನು : ವಿಪಿನೌಕಸರ ಸಂಹಾರ ವಿದ್ಯಾವೃತ್ತಿ ನಿನ್ನದಲೆ (ಕುವ್ಯಾಅ. ೬-೩). ೨. ಕೋತಿ ; ಮಂಗ. [ಸಂ. ವಿಪಿನೌಕಸ್]

**ವಿಪುಲ, ವಿಪುಳ** (ಗು). ೧. ವಿಸ್ತಾರವಾದ ; ಅಗಲವಾದ ; ವಿಶಾಲವಾದ : ಮಹಾವ್ಯೂಢೋರಸ್ಕನುಂ ವಿಪುಲೋ[ಪಾಠಾಂ.ಳೋ]ಪಚಿತಾಂಸನುಂ . . . ಅಪ್ಪ ವಿಜಯಪರ್ವತಗಜೇಂದ್ರಂ ಬಂದು ಮುಂದೆ ನಿಲ್ವುದುಂ (ಆದಿಪು. ೧೨-೫೬ ವ); ಭೀಮಸೇನನ ವಿಪುಲವಕ್ಷದಲಿ ತನ್ನ ಮಱೆದನು (ಕುವ್ಯಾದ್ರೋ. ೮-೩೦). ೨. ಅಧಿಕವಾದ ; ಹೆಚ್ಚಾದ ; ಬಹಳ : ಸಂದಣಿಸಿತಯ್ ನಗರದ ವಿಪುಲಜನಂ ದೊರೆಯರಮನೆಯ ಮುಂದ (ಶ್ರೀರಾಮಾ. ೭೮-೪) ; ಮಡಿದುದೌ ನಿನ್ನ ರಣಕಲಿ ಕುಮಾರನ ಕೈಲಿ ಕದನಮುಖದಲಿ ಫಲ್ಗುಣನ ಸೇನೆಯಲಿ ಜನಂ ವಿಪುಲಸಂಖ್ಯೆಯಲಿ (ಚಿತ್ರಾಂಗ. ೮೩-೨೨೮೮). ೩. ಆಳವಾದ ; ಗಾಢವಾದ ; ಅಗಾಧವಾದ : ವಿಪುಲ ಜ್ಞಾನಮನಾಂತು ಸಲ್ಲಿಸಿದ ಮೇಧಾಶಕ್ತಿಗಂ . . . ನಿನ್ನಕ್ಕಿಮ ಸರ್ವಶಕ್ತಿಗೆ ಸದಾ ಭದ್ರಂ ಶುಭಂ ಮಂಗಳಂ (ಗಿಳಿವಿಂ. ೫೩-೧೫). ೪. ಶ್ರೇಷ್ಠವಾದ ; ಅತಿಶಯವಾದ : ಜಿನಮತಪದಾರ್ಥ ಶಂಕಾಪನಯನಮುಂ . . . ವಿಪುಲ[ಪಾಠಾಂ. ಳ] ಗುಣವತ್ಸಲತ್ವಮುಮಪಗತಮಲ ಜೈನಶಾಸನೋದ್ಭಾಸನಮುಂ ಎಂದು ಪೇಳ್ದೀಯೆಂಟು ಗುಣಂಗಳುಂ ಸಮ್ಯಗ್ದರ್ಶನಾವ ಯವಂಗಳ್ (ಆದಿಪು. ೫-೫೮) ; ವಿಪುಲಕವಿತಾಗುಣಾಸ್ಪದಪುರಾಣಕವೀಂದ್ರನೆನಿಪ ಮಹಿಮೆಯಂ . . . ದಂಡಿಯೆ ನೋಂತಂ (ಪಂಚತಂ. ೪-೨೦). ೫. ದಟ್ಟವಾದ ; ಸಾಂದ್ರವಾದ. (ನಾ). ೬. ದೊಡ್ಡದು ; ವಿಶಾಲವಾದುದು : "ವಿಶಂಕಟಂ . . . ಉರು, ವಿಪುಲಂ — ೯ ವಿಶಾಲವಾದದ್ದು, ಅಗಲವಾದದ್ದು, ದೊಡ್ಡದು" (ಸಿದ್ಧಾಂತಿ. ೩೩೯). ೭. ಹೆಚ್ಚು ; ಬಹಳ ; ಜಾಸ್ತಿ : ತಾಮ್ರ ಕಬ್ಬಿಣ ಮುಂತಾದ ಧಾತುಗಳು . . . ವಿಪುಲವಾಗಿ ದೊರೆಯುವುದರಿಂದ ಅವುಗಳಿಗೆ ಕ್ರಯ ಕಡಿಮೆ (ಮುಂಬಯಿ. ೪-೯೧). ೮. ಗೌರವಕ್ಕೆ ಪಾತ್ರನಾದ ವ್ಯಕ್ತಿ. ೯. ಮೇರುಪರ್ವತ.

**ವಿಪುಳ** : ೧. ವಿಪುಳತರಕಟಕನುದ್ಯ(ದ್)ದ್ವಿಪಹ(ರಿ)ಮಹಿಷೀನಿಷೇವ್ಯನುನ್ನತಪಾದಂ (ಕವಿರಾ. ೩-೧೧೦) ; ಸುರಿದುವು ನಿರಂತರಂ ಬೆಳ್ಸರಿಗಳ್ ಸಂಗಳಿಸಿ ವಿಪುಳಯಶೋವಿತಾನ ಗುಣಮಿಲ್ಲದನಂ ಪ್ರಭುಮಾಡಿ ಪೂರ್ವಭೂಮಿಪರ ಪದಂಗಳಂ ಪುಗಿಸಿ (ಪಂಪಭಾ. ೧-೧೪). ೨. ಪಲವುಂ ಕೇಂದ್ರದೊಳಿರ್ದೊಡಲ್ಲಿ ಬಲಸಂಯುಕ್ತಗ್ರಹಂ . . . ವಿಪುಳಾಯುರ್ದಾಯಕಂ (ಜಾತತಿ. ೯-೩) ; ವಿಕ್ರಮವಿದಿತವಿಪುಳಪದಸ್ಥಭೂಪರು ಹುದುಗಿತಲ್ಲಿಯದಲ್ಲಿ ಪಾರ್ಥನ ಸರಳ ಘಾತಿಯಲಿ (ಕುವ್ಯಾಗ. ೧-೧೩). ೪. ನೃಪಪರಂಪರೆ ಯಿಂದ ಬಂದೀ ವಿಪುಳವಂಶಕ್ಷಿತಿವಿಸರ್ಗವನಪಹರಿಸಿದನು ಹಿಂದೆ ವೇದವ್ಯಾಸಮುನಿ ಬಂದು (ಕುವ್ಯಾಆ. ೪-೮). ೫. ಆ ಪರ್ವತದ ವಿಪುಳವನೋಪಕಂಠಂಗಳೊಳ್ ತಾಪಸಕ[ನ್ಯೆ] ಯರ್ ನಡಸಿದೆಳಲತೆಗಳೊಳಱಗಿ ತುಱುಗಿ ಸಾಮವೇದಧ್ವನಿಯೊಳ್ ಮೊರೆವ ತುಂಬಿಗಳುಮಂ . . . ನೋಡಿ (ಪಂಪಭಾ. ೬-೧೧೫ ವ). ೬. "ಬೃಹತ್, ಉರು . . . ವಿಶಾಲಂ, ವ್ಯೂಢಂ, ವಿಪುಳಂ, ಭದ್ರಂ, ವರಿಷ್ಠಂ—ಈ ೧೨ ಪಿರಿದು" (ಹಲಾಯು. ೧೬೭-೧೬). ೭. "ಪ್ರಾಜ್ಯಂ . . . ವಿಪುಳಂ, ಪುಷ್ಕಳಂ, ಪುಷ್ಟಂ, ಅದಭ್ರಂ – ಈ ೧೮ ಮೊಕ್ಕಳಂ" (ಹಲಾಯು. ೧೧೭-೧೪). [ಸಂ.]

**ವಿಪುಲಮತಿ** (ನಾ). ೧. [ಜೈನ] ಮನಃಪರ್ಯಯಜ್ಞಾನದ ಎರಡು ಭೇದಗಳಲ್ಲಿ ಒಂದು ; ಅನ್ಯರ ಮನಸ್ಸಿನ ಚಿಂತಿತ, ಅಚಿಂತಿತ, ಅರ್ಧಚಿಂತಿತ ಅಥವಾ ಚಿಂತಿತಪೂರ್ವವಿಷಯಗಳನ್ನು ಅರಿಯಲು ಸಮರ್ಥವಾದ ಜ್ಞಾನ : ವಿಪುಲಮತಿಯೆಂಬುದು ವಕ್ರಾವಕ್ರ ಪರಮನೋವಾಕ್ಕಾಯಗತಾರ್ಥಮಂ ಅಱಿಗುಂ (ತತ್ತ್ವಪ್ರ. ೬೯) ; ಕ್ರಮದಿಂ ಋಜುಮತಿಯುಂ ವಿಪುಲಮತಿಯುಮೆಂದದಱ ಭೇದಮಿರ್ತೆಱನಕ್ಕುಂ (ಚಂದ್ರಪ್ರ. ೧೪-೫೭). ೨. (ಅನ್ಯರ ಮನಸ್ಸಿನ ಭಾವನೆಗಳನ್ನು ಅರಿಯುವಂತಹ) ಅತಿಶಯವಾದ ಜ್ಞಾನವುಳ್ಳವನು : ವಿಪುಲ [ಪಾಠಾಂ. ಳ] ಮತಿ ಸಕಲವಿದ್ಯಾನಿಪುಣಂ ಗಣಧರನಿರೂಪಿತಕ್ರಮದಿಂ ದ್ವೈತ್ಯಪತಿಪ್ರಪಂಚಮಂ ಶ್ರವಣಪಥಾತಿಥಿ ಮಾಡಲಾತನುದ್ಯತನಾದಂ (ಪಂರಾಮಾ. ೧೦-೬೬). 'ಋಜುಮತಿ' ಪರಾ. [ಸಂ.]

**ವಿಪುಲಾದ್ರಿ** (ನಾ). [ಜೈನ] ಮಗಧದೇಶದ ರಾಜಧಾನಿಯಾದ ರಾಜಗೃಹದ ಬಳಿಯ ಪರ್ವತ ; ಮಹಾವೀರನು ಶ್ರೇಣಿಕಾದಿಗಳಿಗೆ ಉಪದೇಶಿಸಿದ ಸ್ಥಳ : ಶ್ರೀಮದಧಾರಿ ವೀರಜಿನಸನ್ನಿಧಿಯೊಳ್ ವಿಪುಲಾದ್ರಿಯೊಳ್ ಜಿನಸ್ವಾಮಿ ಮತೋಕ್ತಿಯಿಂ ಮಗಧನಾಯಕನಂ ತಿಳಿವಂತು . . . ತಿಳಿಯೆ ಪೇಳ್ದುದನೂರ್ಜಿತಮಾಗೆ ಪೇೞ್ವೆಂ (ಸುಕುಮಾ. ೧-೭೪). [ಸಂ.]

**ವಿಪುಲಾಮಂಡಲ** (ನಾ). ಭೂಮಂಡಲ ; ಪೃಥ್ವಿ : ನೃಪ ನೀಂ ರಕ್ಷಕನಾಗಿರೆ . . . ತಪನಂ ಪ್ರಜ್ವಲಿಸುತ್ತಿರೆ ವಿಪುಲಾಮಂಡಲದ ತಿಮಿರವೆಂತುದ್ಭವಿಕುಂ (ಶಾಕುಂತ. ೭೫-೧೧೪). [ಸಂ.]

**ವಿಪುಲಾಸನ** (ನಾ). ವಿಶಾಲವಾದ ಹೆಗಲುಗಳನ್ನುಳ್ಳುದು : ಪೀನಾಯತಾಮ್ರ ಪಲ್ಲವ ಕೋಶಸುಕೋಶವೋಹನನುಂ ವಿಪುಲಾ[ಪಾಠಾಂ.ಳಾ]ಸನನುಂ . . .

ಅಪ್ಪ ವಿಜಯಪರ್ವತಗಜೇಂದ್ರಂ ಬಂದು ಮುಂದೆ ನಿಲ್ವುದುಂ (ಆದಿಪು. ೧೨-೫೭ ವ).
[ಸಂ.]

**ವಿಪುಲಾಸ್ಯ** (ನಾ). ಅಗಲವಾದ ಮುಖವುಳ್ಳವನು : ಭೋಗಿ ವಿಪುಲಾಸ್ಯಂ ಗರ್ವಿತಂ . . . ಸಿಂಹೋದ್ಭವಂ (ಜಾತತಿ. ೧೭-೫). [ಸಂ.]

**ವಿಪುಲೆ, ವಿಪುಳೆ** (ನಾ). ೧. ಭೂಮಿ ; ಪೃಥ್ವಿ : ನಳಿನಮುಖಿ ಮಾದೇವಿ ಜನಿಸಿದಳು ಜಲಧಿ ಪರಿವೇಷವಾಗಿಹುದು ವಿಪುಲೆಯಲಿ ವಿಪುಲೆಯು ನೆಲೆಗೊಂಡಿಹಳು ಫಣಿಸಹಸ್ರವನುಳ್ಳ ಭುಜಗೇಂದ್ರ ಮಸ್ತಕದಲಿ (ಕುವಲ. ೯೪). ೨. ಒಬ್ಬ ಋಷಿಪತ್ನಿಯ ಹೆಸರು. ೩. [ಸಂಗೀತ] ಒಂದು ಬಗೆಯ ತಾಳ : ಏಕತಾಲೀ (ಗೀತವು) ಏಕತಾಲೀ (ಎಂಬ ತಾಳ) ದಿಂದ ಆಗುತ್ತದೆ, ಅದು ರಮಾ, ಚಂದ್ರಿಕಾ ಹಾಗೇ ವಿಪುಲಾ ಎಂಬ ಮೂರು ವಿಧವೆಂದು ಸ್ಮೃತವಾಗಿದೆ (ಚತುಪ್ರ. ೭೭). **ವಿಪುಳೆ** : ೧. ವಿಪುಳಾಮಹಿಳಾಕಾಂತಂ . . . ಉಪಮಾತೀತಂ ಮಹೇಶ ಶಿವನಂ ಭಜಿಪಂ (ಹಮ್ಮೀ.ರ. ೨-೫೦). ೨. "ಸತ್ಯವತಿಯರುಂಧತಿ ಮೈತ್ರಿ ವಿಪುಳೆ . . . ಅನಸೂಯೆಯರೆಯ್ದೆ ಋಷಿವಧುಗಳಕ್ಕುಂ" (ಮಂಗರಾ. ೭೭-೧೧). [ಸಂ. ವಿಪುಲಾ]

**ವಿಪುಳ** 'ವಿಪುಲ' ನೋ

**ವಿಪುಳಗುಣ** (ನಾ). ಅತಿಶಯವಾದ ಗುಣಗಳಿಂದ ಕೂಡಿದವನು : ನೃಪತೀ ಪರೋಪಕಾರೀ ವಿಪುಳಗುಣೀ . . . ದಯಾಲೂ ರಿಪುವರ್ಗಮನಲೆದು ಗೆಲ್ವೆ ಯಾಗಾಹವದೊಳ್ (ಕವಿರಾ. ೨-೨೪). [ಸಂ. ವಿಪುಲಗುಣಿನ್]

**ವಿಪುಳಪ್ರಜ್ಞ** (ನಾ). ಅಸಾಧಾರಣವಾದ ಪಾಂಡಿತ್ಯವುಳ್ಳವನು ; ಮಹಾ ವಿದ್ವಾಂಸ : ವಿಪುಳಪ್ರಜ್ಞನೆನಿಪ್ಪ ನಮ್ಮ ಸಚಿವಂ ಪ್ರಜ್ಞಾಬಳಂ ಮಾಳ್ಪ ಬಿನ್ನಪಮಂ ಚಿತ್ತದೊಳಪ್ಪುಕೆಯ್ದು (ಕುಸುಮಾ. ೩-೮೧). [ಸಂ. ವಿಪುಲಪ್ರಜ್ಞ]

**ವಿಪುಳಭುಜ** (ನಾ). ಬಲಿಷ್ಠವಾದ ತೋಳುಗಳುಳ್ಳವನು : ವಿಪುಳಭುಜರ್ . . . ಅಱುವರ್ ನೃಪತಿಗಳಾಱುಂ ಧವಳಾತಪತ್ರಮಂ ತಳ್ತು ಕಂಸವೈರಿಗೆ ಪಿಡಿದರ್ (ಜಗನ್ನಾ. ೯-೨). [ಸಂ. ವಿಪುಲಭುಜ]

**ವಿಪುಳವದನ** (ನಾ). ಅಗಲವಾದ ಮುಖವನ್ನುಳ್ಳದು : ವಿಪುಳವದನಂ ಸೂಳಂ ದಂತಂ ಪೃಥೂದರಪೇಚಕಂ . . . ಆ [ದ್ವಿಪಮಿದಂ]ದೇಂ ದೇವಪ್ರಖ್ಯಾತ ಜಾತಿಸಮುದ್ಭವಂ (ಬಂಪರಿ. ೨-೪೮). [ಸಂ. ವಿಪುಲವದನ]

**ವಿಪುಳವರ್ಷಿ** (ನಾ). ೧. ಹೆಚ್ಚಾಗಿ ಸುರಿಯುವಂಥದು ; ನಿರಂತರವಾಗಿ ವರ್ಷಿಸುವಂಥದು. ೨. ಅನೇಕ ವರ್ಷಗಳನ್ನು ಕಳೆದವನು ; ಮುದುಕ. ೧,೨ : ಉನ್ನತಶೀಲರು ಲೋಕಸನ್ಮಾನ್ಯರು ಮಹಿಮರು ವಿಪುಳವರ್ಷಿಗಳು ಭೂಮಿಯ ತಾಪವ ಕಳೆದರು ಭೂಪರು ಕಳೆವಂತೆ ಮಳೆಯ ಮೋಡಗಳು (ಇಂಚಾಪ. ೧೧೦-೩೯).
[ಸಂ. ವಿಪುಲವರ್ಷಿನ್]

**ವಿಪುಳವೃತ್ತಿ** (ನಾ). ವಿವರವಾದ ರೀತಿ : ಅಪರಿಮೇಯಮ ದೋಷಗುಣೌಘಮಿಂತು ಪಚಿತಕ್ರಮದಾರಯೆ ಕಾವ್ಯದೊಳ್ ವಿಪುಳವೃತ್ತಿಯೊಳೊಂದಿರೆ ಪೇಳ್ವೆನಭ್ಯುಪ[ಮಿತೋ]ಕ್ತಿಗುಣಾವಗುಣಗಳಂ (ಕವಿರಾ. ೧-೧೪೩). [ಸಂ. ವಿಪುಲವೃತ್ತಿ]

**ವಿಪುಳಾಂತರ** (ನಾ). ಭೂವಿಯ ಭಾಗ ; ಭೂಪ್ರದೇಶ : ಸುರಿದುವು ನಿರಂತರಂ ಬೆಳ್ಸರಿಗಳ್ ಸಂಗಳಿಸಿ ವಿಪುಳ ವಿಪುಳಾಂತರದೊಳ್ (ಕುಸುಮಾ. ೬-೫೨).
[ಸಂ. ವಿಪುಲಾಂತರ]

**ವಿಪುಳಾಚಾರ** (ನಾ). ಶ್ರೇಷ್ಠವಾದ ಆಚಾರವನ್ನುಳ್ಳವನು ; ಸದಾಚಾರದಿಂದ ಕೂಡಿರುವವನು : ವಿಪುಳಾಚಾರರಗಣ್ಣ(ಣ್ಯ)ಪುಣ್ಣ(ಣ್ಯ)ನಿಳೆ(ಳ)ಯರ್ (ಎಇ. XVIII, ೧೯೨-೫೯ ; 1162). [ಸಂ. ವಿಪುಲಾಚಾರ]

**ವಿಪುಳಾರ್ಯೆ** (ನಾ). [ಛಂದ] ಒಂದು ಮಾತ್ರಾವೃತ್ತದ ಹೆಸರು ; ಆರ್ಯೆಯ ಪ್ರತಿಯರ್ಧದಲ್ಲಿಯೂ ಒನೆಯ ಚತುರ್ಮಾತ್ರಾಗಣದ ಕೊನೆಗೆ ಪದ ಮುಗಿಯದೆ ಎಂದರೆ ಯತಿ ಪಾಲಿತವಾಗದೆ ಮುಂದಿನ ಗಣಕ್ಕೂ ಸಾಗುವುದು : ವಿಪುಳಾರ್ಯೆಯ ಪೂರ್ವಾರ್ಧ ದ್ವಿಪಾದದಂತಾಗಿ ಬರ್ಕು ಗೀತಿಕೆ ಕೇಳಿನ್ನ ಪರಾರ್ಧಪಾದಯುಗಮುಮದುಪಮೆಯ ಬರೆದೋದು ಕಲ್ತು ತಿಳಿವವೊಳಿಳೆಯೊಳ್ (ಛಂದೋಂಬು. ೪-೨೩೩). [ಸಂ. ವಿಪುಲಾರ್ಯಾ]

**ವಿಪುಳೆ** 'ವಿಪುಲೆ' ನೋ.

**ವಿಪುಳೋರಸ್ಕ** (ನಾ). ವಿಶಾಲವಾದ ಎದೆಯುಳ್ಳವನು : ಶ್ರೀರಾಮಾಲಿಂಗಿತ ವಿಪುಳೋರಸ್ಕಂ ಭಾಸ್ಕರಪ್ರತಾಪಂ . . . ಹರಿಗಂ (ಪಂಪಭಾ. ೧೪-೧). [ಸಂ. ವಿಪುಲೋರಸ್ಕ]

**ವಿಪ್ಪನ್ನ** (ನಾ). ೧. ಮಲಗುವಿಕೆ. ೨. ನಿದ್ರಿಸುವಿಕೆ : ವಿಪ್ಪನ್ನವಾಗಿರ್ದ ವರನ ಕಾಣುತ ನಮ್ಮಪ್ಪನವರು ಕಳುಹಿದರು ತಪ್ಪುಂಟು ಇದರೊಳು ಕೆಡುವುದು ಕಾರ್ಯ ಕೈತಪ್ಪೆಂದು ಮನದಲ್ಲಿ ತಿಳಿದು (ಚಂದ್ರಹಾ. ೩-೩೩). [?]

**ವಿಪ್ರ** (ನಾ). ೧. ವೇದಮಂತ್ರಗಳನ್ನು ಪಠಿಸುವವನು. ೨. ದ್ವಿಜ ; ಬ್ರಾಹ್ಮಣ : ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ (ಬಸವ. ೭೦೦) ; ವೇದವಿಧಾನವಿಲ್ಲದ ವಿಪ್ರ ಶರಸಂಧಾನವಿಲ್ಲದ ಸಮರ ಮೇಳೆಯದು (ಉದ್ಭಾಕು. ೩-೫೦). ೩. ವೇದೋಕ್ತವಿಧಿಗಳನ್ನು ಮಾಡಿಸುವವನು; ಪುರೋಹಿತ : ಪದೆಪಿನ ಪಲ್ಲವಂಗಳರುಣಾಂಶುಕಮುಳ್ಳಲರೋಳಿಯಕ್ಷತಂ . . . ಭೃಂಗರವಂ ಸುಮಂತ್ರಮಾಗೊಡವಿರೆಯುಂ ವಿಯೋಗಿಜನಮಾರಣಯಜ್ಞಮನೊಲ್ದೊಡರ್ಚಿದಾ ಮದನನ ವಿಪ್ರನಂತೆಸೆದುದಿಂತು ಬಸಂತದ ಬಂದ ಮಾಮರಂ (ಕುಸುಮಾ. ೫-೩೭). ೪. ಕಿರಣ ; ರಶ್ಮಿ. ೫. ದರ್ಭೆ ; ಕುಶ : "ಮರೀಚಿ ಭೂಸುರ ಕುಶ ವಿಪ್ರಶಬ್ದ" (ನಾನಾರ. ೧೦೫). ೬. ಜ್ಞಾನಿ ; ವಿದ್ವಾಂಸ. ೭. ಮಾಸಗಳಲ್ಲಿ ಒಂದು ; ಭಾದ್ರಪದಮಾಸ. ೮. ಚಂದ್ರ. ೯. ಅಶ್ವತ್ಥ ಮರ.

**ವಿಪ್ರದಿವಾಕರ** = ಬ್ರಾಹ್ಮಣರಲ್ಲಿ ಸೂರ್ಯನಂತೆ ಪ್ರಕಾಶಿಸುವವನು ; ಒಂದು ಬಿರುದು : ಸತ್ಯರತ್ನಾಕರಂ ವಿಪ್ರದಿವಾಕರಂ ನೀತಿಪಾರಾಯಣಂ (ಸೌಇಇ. XX, ೪೭-೩೩ ; 1072). **ವಿಪ್ರವಿದ್ಯಾಧರ** = ಬ್ರಾಹ್ಮಣರಲ್ಲಿ ದೇವತೆಯಂತಿರುವವನು ; ಒಂದು ಬಿರುದು : ವಿಪ್ರವಿದ್ಯಾಧರನೆನಿಸುವ ಚಾವುಣ್ಣರಾಯಂಗೆ ಸರ್ವೇಶ್ವರದೇವಂ . . . ರಕ್ಷಿಸುಗೆ (ಎಕ. VII, ಶಿಕಾರಿ. ೧೧೪-೧೯ ; 1096). [ಸಂ.]

**ವಿಪ್ರಕರ್ಮ** (ನಾ). ಬ್ರಾಹ್ಮಣನು ಅನುಸರಿಸಬೇಕಾದ ವಿಧಿ ,—ಆಚಾರ : ಹಾರುವೆನಯ್ಯಾ ಶರಣರ ಬರವ ಗುಡಿಗಟ್ಟಿ ಕೂಡಲಸಂಗಮದೇವನು ವಿಪ್ರಕರ್ಮವ ಬಿಡಿಸಿ ಅಶುದ್ಧನ ಶುದ್ಧನ ಮಾಡಿದನಾಗಿ (ಬಸವ. ೭೧೫). [ಸಂ. ವಿಪ್ರಕರ್ಮನ್]

**ವಿಪ್ರಕರ್ಷ** (ನಾ). ದೂರ ; ಅಂತರ : ಮದಕೋಳಾಹಳಮೆಯ್ದಿದತ್ತದುವೆ ತಾನುಲ್ಲಾಸಿ ದಿಗ್ದೇವತಾವದನೋತ್ಕರ್ಷಣವಿಪ್ರಕರ್ಷವಿರಳಂ ಪಂಕೇಜಿನೀಸೌರಭಂ (ಕಾದಂಪೂ. ೧೯೫).
[ಸಂ.]

**ವಿಪ್ರಕಾರ** (ನಾ). ೧. ಕೆಡುಕು ; ಹಾನಿ ; ಹಿಂಸೆ. ೨. ಕಡೆಗಣಿಸುವಿಕೆ ; ಅನಾದರ ; ತಿರಸ್ಕಾರ. ೩. ಬಯ್ಗುಳು ; ನಿಂದೆ. ೪. ವಿರೋಧ ; ಪ್ರತೀಕಾರ. ೫. ನಾನಾಬಗೆ ; ಅನೇಕವಿಧ. [ಸಂ.]

**ವಿಪ್ರಕಾರಣ** (ನಾ). ೧. ಎದುರುಬೀಳುವಿಕೆ ; ವಿರೋಧ ; ಅಡ್ಡಿ. ೨. ಮೋಸ ; ವಂಚನೆ : "ವ್ಯಾಳಿಕಂ ವಂಚನಂ ವಿಪ್ರಕಾ[ಪಾಠಾಂ.ತಾ]ರಣಮೆನಲ್ಕಾಳಿಗೊಳುಹಂ" (ಮಂಗರಾ. ೧೩೦-೧೭). [ಸಂ.]

**ವಿಪ್ರಕೀರ್ಣ** (ಗು). ೧. ಚೆದರಿದ ; ಹರಡಿರುವ ; ಚೆಲ್ಲಾಪಿಲ್ಲಿಯಾಗಿರುವ. ೨. ಅಗಲವಾದ ; ವಿಸ್ತಾರವಾದ. ೩. ಕಳಚಿಕೊಂಡಿರುವ ; ಸಡಿಲಾದ. (ನಾ). ೪. [ನಾಟ್ಯ] ಹಸ್ತವಿನ್ಯಾಸಗಳಲ್ಲಿ ಒಂದು : ತವೆ ಹಂಸಪಕ್ಷಕರಮೆರಡವೆ ಮುಂಗೈ ಮೇಲನೊಂದೆ ಸ್ವಸ್ತಿಕಮೆನಿಕುಂ ಭವಿಸಿದ ಸ್ವಸ್ತಿಕಮಂ ಭೇದವ ಮಾಡಲ್ ವಿಪ್ರಕೀರ್ಣಹಸ್ತಮೆನಿಕ್ಕುಂ (ಲಾಸ್ಯರಂ. ೨-೪೮) ; ಚತುರಸ್ರ, ಉದ್ವೃತ್ತ, ತಲಮುಖ, ಸ್ವಸ್ತಿಕ, ವಿಪ್ರಕೀರ್ಣ . . . ಲಲಿತ – ಈ ಮೂವತ್ತು ನೃತ್ತಹಸ್ತಂಗಳ್ (ಲಾಸ್ಯರಂ. ೨-೪೪ ವ). [ಸಂ.]

**ವಿಪ್ರಕುಲ, ವಿಪ್ರಕುಳ** (ನಾ). ಬ್ರಾಹ್ಮಣರ ಕುಲ ; ದ್ವಿಜವಂಶ : ವಿಪ್ರಕುಲೋತ್ತಮ ನಭ್ಯುದಿತಯಶಂ ಶ್ರೀಧರಂ (ಜಾತತಿ. ೧-೪) ; ವಿಪ್ರಕುಲತಿಲಕನೆನಿಸುತ್ತಪ್ರತಿಮಗುಣಾಬ್ಧಿ ರುದ್ರಪಶುಪತಿಯೆಂಬಂ ಸುಪ್ರಿಯದಿಂದಿರ್ಪಂ (ತ್ರಿಪುಪು. ೧೭-೩). **ವಿಪ್ರಕುಳ** : ವರವೇದಾಗಮಶಾಸ್ತ್ರದ ಪರಿಮತಿಯೊಳಜಂಗೆ ತಾಮ ದೊರೆ ಪದ್ಮಭ[ವಂ] ದೊರೆ ತಮಗೆ ಪೆಱರೊಳಾವನೊ ದೊರೆ ವಿಪ್ರಕುಳಪ್ರದೀಪರೊಳ್ಳಸುಮತಿಯೊಳ್ (ಸೌಇಇ. XX, ೫೭-೧೫ ; 1084). [ಸಂ.]

**ವಿಪ್ರಕುಳ** 'ವಿಪ್ರಕುಲ' ನೋ.

**ವಿಪ್ರಕೃತ** (ಗು). ೧. ಅಗೌರವಕ್ಕೆ ಗುರಿಯಾದ ; ನಿಂದಿಸಲ್ಪಟ್ಟ. ೨. ಗಾಯಗೊಂಡ ; ಗಾಸಿಗೊಂಡ. ೩. ಎದುರಿಸಲ್ಪಟ್ಟ. (ನಾ). ೪. ಗಾಸಿಗೊಂಡವನು ; ಹಿಂಸೆಗೆ ಗುರಿಯಾದವನು : "ನಿಕೃತಃ, ವಿಪ್ರಕೃತಃ — ೨ ಪೀಡಿಸಲ್ಪಟ್ಟವನ ಪೆಸರು" (ಸಿದ್ಧಾಂತಿ. ೩೩೪). [ಸಂ.]

**ವಿಪ್ರಕೃಷ್ಟ** (ಗು). ೧. ಎಳೆಯಲ್ಪಟ್ಟ ; ಒಯ್ಯಲ್ಪಟ್ಟ. ೨. ಹತ್ತಿರದಲ್ಲಿರದ ; ದೂರದ. (ನಾ). ೩. ದೂರ : ಸಂಯಮೈಕಾಧಿಕರಣ ಪ್ರತ್ಯಾಸತ್ತಿಯಿಂ ಪ್ರತ್ಯಾಸನ್ನಮಪ್ಪುದಱಿಂ ತತ್ಸಮೀಪದೊಳ್ ಮನಃಪರ್ಯಯಗ್ರಹಣಂ ವಿಪ್ರಕೃಷ್ಟಾಂತರಮಪ್ಪುದಱಿಂ ಅಸಂಯತನಲ್ಲಿಯುಂ ಉಳ್ಳುದಱಿಂ ತತ್ಪೂರ್ವದೊಳ್ ಅವಧಿಗ್ರಹಣಂ (ತತ್ತ್ವಪ್ರ. ೫೨). [ಸಂ.]

**ವಿಪ್ರತಿಪತ್ತಿ** (ನಾ). ೧. (ಅಭಿಪ್ರಾಯ, ಸ್ವಭಾವ, ಆಸ್ಥೆ ಮುಂತಾದುವುಗಳಲ್ಲಿ ಕಂಡುಬರುವ) ಭೇದ ; ವ್ಯತ್ಯಾಸ ; ಭಿನ್ನತೆ : ಜನಪ್ರವಾದದೊಳಮಿವರ ವಿಪ್ರತಿಪತ್ತಿಯಂ ಕೇಳ್ದೆವು (ಪಂಪರಾಮಾ. ೧೨-೭೯ ವ). ೨. ತಪ್ಪುಕಲ್ಪನೆ ; ಸರಿಯಲ್ಲದ ತಿಳಿವಳಿಕೆ. ೩. ತಪ್ಪು ; ಅಪರಾಧ. ೪. ಪರಸ್ಪರಸಂಬಂಧ. ೫. [ತರ್ಕಶಾ] ವಿರುದ್ಧವಾದ ಉತ್ತರ ,—ಹೇಳಿಕೆ ; ಆಕ್ಷೇಪಣೆ. [ಸಂ.]

**ವಿಪ್ರತಿಷಿದ್ಧ** (ಗು). ೧. ತಡೆದ ; ಅಡ್ಡಿಮಾಡಲ್ಪಟ್ಟ. ೨. ವ್ಯತಿರಿಕ್ತವಾದ ; ವಿರುದ್ಧವಾದ. (ನಾ). ೩. ವ್ಯತಿರಿಕ್ತವಾದುದು ; ವಿರುದ್ಧವಾದುದು : ಅತಿಬಹಲಸ್ಥಿತಿಯಿಂ ಸಂಗತಗುಣಮವಿಭೇದಿಯಾಗೆ ತದ್ಗುಣಮೆನಿಕುಂ ಕೃತಕಾರ್ಯ ಕಾರಣಂ ವಿಪ್ರತಿಷಿದ್ಧಮದೆನೆ ಪರಸ್ಪರಾಸಂಗತಿಕಂ (ಕಾವ್ಯಾವ. ೭೪೬). [ಸಂ.]

**ವಿಪ್ರತಿಸಾರ** (ನಾ). ಮಾಡಿದ ತಪ್ಪುಕೆಲಸಕ್ಕಾಗಿ ಮರುಗುವಿಕೆ ; ಪಶ್ಚಾತ್ತಾಪ : "ವಿಪ್ರತಿಸಾರಃ, ಅನುಶಯಃ, ಪಶ್ಚಾತ್ತಾಪಃ, ಅನುತಾಪಃ — ಈ ೪ ಅನುಶಯಂ ಬಡುವುದು" (ಹಲಾಯು. ೧೯೯-೩೧). [ಸಂ.]

**ವಿಪ್ರತೀಸಾರ** (ನಾ). = ವಿಪ್ರತಿಸಾರ : "ಅನುಶಯಮನುತಾಪಂ ವಿಪ್ರತೀಸಾರಮಕ್ಕುಂ" (ವಸ್ತುಕೋ. ೧೧೧-೧). [ಸಂ.]

**ವಿಪ್ರಪ್ರವರ** (ನಾ). ಬ್ರಾಹ್ಮಣರಲ್ಲಿ ಉತ್ತಮ ; ಬ್ರಾಹ್ಮಣೋತ್ತಮ : ಪದ್ಮಿನೀಪೇಟದ ವಿಪ್ರಪ್ರವರನಷ್ಟಾಂಗ...ಮಿತ್ತವಿಶಾರದಂ ವಿಶಾರದನೆಂಬೊಂ (ಶಾಂತಿಪು. ೬-೨೫ ವ). [ಸಂ.]

**ವಿಪ್ರಬ್ರುವ** (ನಾ). ಹೆಸರಿಗೆ ಮಾತ್ರ ಬ್ರಾಹ್ಮಣನಾದವನು : ಆದಿಯಲಿ ವಿಪ್ರಬ್ರುವನು ಧಾತ್ರಿಯೊಳೊಬ್ಬನುಂಟನ್ನವನು ಮಾಡುವ ದುರಿತ ಹೇಳಲು ಶಕ್ಯವಲ್ಲ (ಶಿವ್ವ.ಶಾಂ. ೪-೧೨೨) ; ಭುವನಪತಿನಿಂದೆಯನು ವಿಪ್ರಬ್ರುವನು ಮಾಡುತ್ತಿರಲು (ನಿಭಾಗ. ೪-೨-೨೬). [ಸಂ.]

**ವಿಪ್ರಯುಕ್ತೆ** (ನಾ). ಪ್ರಿಯನಿಂದ ದೂರವಾದವಳು ; ವಿರಹಿಣಿ : ರಥಾಂಗಕಾಂತೆ ಹೃದ್ಯಲ್ಲಭವಿಪ್ರಯುಕ್ತೆ ಬಗೆಗೆಟ್ಟು ನೆಱಲ್ವುದು ಪದ್ಮಪತ್ರದೊಳ್ (ಚಂದ್ರಪ್ರ. ೮-೭).

[ಸಂ. ವಿಪ್ರಯುಕ್ತಾ]

**ವಿಪ್ರಯೋಗ** (ನಾ). ೧. ಬೇರೆಯಾಗಿರುವಿಕೆ ; ಪ್ರತ್ಯೇಕತೆ. ೨. ಜಗಳ ; ವಿರೋಧ. ೩. (ಪ್ರಿಯ, ಪ್ರಿಯೆಯರ) ಅಗಲಿಕೆ ; ವಿಯೋಗ : ಧವವಿರಹದಿಂ ವಿಪ್ರಯೋಗದ ಯುವತಿಯರು ಪೊರಳಿದರು (ಶಂಕದಾ. ೨-೩೩) ; ವಿಪ್ರಯೋಗವು ಕೆಲವುಕಾಲಮಾತ್ರವಾದುದೂ ಆಗಬಹುದು, ಶಾಶ್ವತವಾದುದೂ ಆಗಬಹುದು (ಅರ್ಥಧ. ೧೪೭). ೪. [ಕಾವ್ಯಮೀ] ನಾಯಿಕೆ, ನಾಯಕರಲ್ಲಿ ಪ್ರೇಮವು ಬೆಳೆದು ಸಂಗಮವೇರ್ಪಡದಿರುವುದು ; ವಿಯೋಗ ; ಅಗಲಿಕೆ : "ವಿಪ್ರಲಂಭಃ, ವಿಪ್ರಯೋಗಃ — ೨ ವಬ್ಬರಿಗೊಬ್ಬರು ಅಗಲಿರುವ ಸ್ತ್ರೀಪುರುಷರು ಮಾಡಿಕ್ಕೊಂಡ ವಿಷಾದಕರವಾದ ಶೃಂಗಾರಾದ್ಯಲಂಕಾರದ ಹೆಸರು" (ಸಿದ್ಧಾಂತಿ. ೩೬೫). [ಸಂ.]

**ವಿಪ್ರಲಂಭ** (ನಾ). ೧. ಸುಳ್ಳುಮಾತಿನಿಂದ ಅಥವಾ ಕೊಟ್ಟ ಮಾತಿನಂತೆ ನಡೆಯದೆ ಮಾಡುವ ಮೋಸ ; ಕಪಟ ; ವಂಚನೆ : "ವಿಪ್ರಲಂಭಃ, ವಿಸಂವಾದಃ, ವಿಪ್ರಳಾಪಃ — ಈ ೩ ವಂಚಿಸುಹ" (ಹಲಾಯು. ೧೨೩-೬೩). ೨. ಕ್ರಮತಪ್ಪಿ ಮಾತನಾಡುವುದು : "ವಿಪ್ರಲಂಭಃ, ವಿಸಂವಾದಃ – ೨ ವಿಪರೀತವಾಗಿ ನುಡಿಯುವವದು ಅಂದರೆ ಕ್ರಮತಪ್ಪಿ ಮಾತಾಡುವುದು" (ಸಿದ್ಧಾಂತಿ. ೬೯). ೩. ಒಮ್ಮತವಿಲ್ಲದಿರುವಿಕೆ ; ಜಗಳ. ೪. ಕಳಚಿಕೊಂಡಿರುವಿಕೆ ; ಪ್ರತ್ಯೇಕತೆ ; ಬೇರೆಯಾಗಿರುವಿಕೆ. ೫. (ಪ್ರಿಯ, ಪ್ರಿಯೆಯರ) ಅಗಲಿಕೆ ; ವಿಯೋಗ : ಇದೇನೆಂಬೆಯೊ ಬಂದತ್ತೆತ್ತಣಿಂದೆಂದಱಿಯೆನೆನಗೆ ಮತ್ತಾಪದಿಂ ವಿಪ್ರಲಂಭಂ (ಕಾದಂಉ. ೭೯) ; ಸ್ತ್ರೀಪುಂಸರತಿಸಮುತ್ಥವ್ಯಾಪಾರಂ ತಾನದಲ್ತೆ ಶೃಂಗಾರಂ ಮೇಳಾಪದಿನಗಲ್ಕೆಯಿಂ ಸುನಿರೂಪಿತಸಂಭೋಗವಿಪ್ರಲಂಭಸಮಾಖ್ಯಂ (ಕಾವ್ಯಾವ. ೭೯೯). ೬. [ಕಾವ್ಯಮೀ] ನಾಯಿಕೆ, ನಾಯಕರಲ್ಲಿ ಪ್ರೇಮವು ಬೆಳೆದು ಸಂಗಮವೇರ್ಪಡದಿರುವುದು ; ವಿಯೋಗ ; ಅಗಲಿಕೆ : "ವಿಪ್ರಲಂಭಃ, ವಿಪ್ರಯೋಗಃ — ೨ ವಬ್ಬರಿಗೊಬ್ಬರು ಅಗಲಿರುವ ಸ್ತ್ರೀಪುರುಷರು ಮಾಡಿಕ್ಕೊಂಡ ವಿಷಾದಕರವಾದ ಶೃಂಗಾರಾದ್ಯಲಂಕಾರದ ಹೆಸರು" (ಸಿದ್ಧಾಂತಿ. ೩೬೫). [ಸಂ.]

**ವಿಪ್ರಲಂಭಶೃಂಗಾರ** (ನಾ). = ವಿಪ್ರಲಂಭ ೬ : ವಿಪ್ರಲಂಭಶೃಂಗಾರದ ಅತ್ಯುನ್ನತವಾದ ನಿದರ್ಶನಗಳನ್ನು ಕಾಣಲಿಚ್ಛಿಸುವ ವಿದ್ಯಾರ್ಥಿಯು ಅರಣ್ಯಕಾಂಡದ ಮತ್ತು ಕಿಷ್ಕಿಂಧಾಕಾಂಡದ ಕೆಲವು ಭಾಗಗಳನ್ನು ಓದುವುದು ಒಳ್ಳೆಯದು (ಪ್ರಾಸಂಗ. ೯೨) ; ಉದ್ದೀಪನವಿಭಾವದಿಂದ ವಿಪ್ರಲಂಭಶೃಂಗಾರವು ಉದ್ಬುದ್ಧವಾಗುತ್ತದೆ (ಸೃಷ್ಟ್ಯಾಲೋ. ೫೫). [ಸಂ.]

**ವಿಪ್ರಲಬ್ಧ** (ಗು). ೧. ಮೋಸಗೊಂಡ ; ವಂಚಿಸಲ್ಪಟ್ಟ. ೨. ನಿರಾಶೆಗೊಂಡ. ೩. ನೊಂದ ; ಗಾಸಿಗೊಂಡ. (ನಾ). ೪. ಮೋಸಕ್ಕೆ ಒಳಗಾದವನು ; ವಂಚಿತನಾದವನು : "ವಿಪ್ರಲಬ್ಧಃ, ವಂಚಿತಃ — ೨ ವಂಚಿಸಿಕ್ಕೊಂಡವನ ಪೆಸರು" (ಸಿದ್ಧಾಂತಿ. ೩೩೪). ೫. ನಿರಾಶೆ ಹೊಂದಿದವನು ; ಹತಾಶನಾದವನು : "ವಿಕೃತಃ, ವಿಪ್ರಲಬ್ಧಃ – ಈ ೨ ದೈನ್ಯಂಬಟ್ಟವಂ" (ಹಲಾಯು. ೬೩-೨೨೮). [ಸಂ.]

**ವಿಪ್ರಲಬ್ಧೆ** (ನಾ). [ಕಾವ್ಯಮೀ] ಎಂಟು ಬಗೆಯ ನಾಯಿಕೆಯರಲ್ಲಿ ಒಬ್ಬಳು ; ಪ್ರಿಯಕರನು ನಿಶ್ಚಿತವೇಳೆಗೆ ಬಾರದೆ ವಚನಭಂಗ ಮಾಡಿದುದರಿಂದ ನಿರಾಶೆಗೊಂಡವಳು : ಸ್ವಾಧೀನಪತಿಕೆ ಖಂಡಿತೆ ವಿಪ್ರಲಬ್ಧೆ[ಪಾಠಾಂ. ಲಂಭೆ] . . . ಸಮುತ್ಕೆಯರೆಂಬೆಂಟು ತೆಱದವಸ್ಥಾಕಾಮಿನಿಯರಿಂ (ವಿವೇಕ. ೧೮೩). 'ನಾಯಿಕೆ' ಪರಾ.

[ಸಂ. ವಿಪ್ರಲಬ್ಧಾ]

**ವಿಪ್ರಲಾಪ, ವಿಪ್ರಳಾಪ** (ನಾ). ೧. ಕೆಲಸಕ್ಕೆ ಬಾರದ ಮಾತು ; ಅಪ್ರಯೋಜಕವಾದ ಮಾತು ; ವ್ಯರ್ಥಾಲಾಪ : ಸ್ಮರದೀಪಂ ಪೆಣ್ಣ ರೂಪಂ ತಳೆದುದೆನಿಪ ವೇಷಂ ಪ್ರಭಾವೇಶರೂಪಂ ಪರಿತಾಪಂ ತೋಱಲಾ ಪೆಣ್ಣೊಲವತಿಲಲಿತಾಲಾಪವಾ ವಿಪ್ರಲಾಪಂ (ಜಗವಿ. ೧೬-೧೩೦). ೨. ಗೋಳಾಟ ; ರೋಧನ ; ಆಕ್ರಂದನ : ಇನ್ನು ಪಶ್ಚಾತ್ತಾಪವಮುಂ ವಿಪ್ರಲಾಪವಮುಂ ಪ್ರಯೋಜನಮಿಲ್ಲ (ಪಂಚತಂ. ೧೯೯-೫). ೩. ವಿರುದ್ಧವಾಗಿ ಮಾತನಾಡುವುದು : "ವಿಪ್ರಲಾಪಃ, ವಿರೋಧೋಕ್ತಿಃ- ವಿರೋಧವಾಗಿ ನುಡಿಯುವವದಕ್ಕೆ ಹೆಸರು" (ಸಿದ್ಧಾಂತಿ. ೫೪). ೪. ಜಗಳ ; ಕದನ. ೫. ವಂಚನೆ ; ಮೋಸ : "ವಿಪ್ರಲಾಪಂ ಪ್ರಲಂಬಮೆನಲು ವಂಚನೆಯದಕ್ಕು" (ಮಂಗರಾ. ೧೩೨-೨೭). ೬. ಕೊಟ್ಟ ಮಾತಿಗೆ ತಪ್ಪುವುದು ; ವಚನಭಂಗ. ವಿಪ್ರಳಾಪ : ೫. "ವಿಪ್ರಲಂಭಃ, ವಿಸಂವಾದಃ, ವಿಪ್ರಳಾಪಃ — ಈ ೩ ವಂಚಿಸುಹ" (ಹಲಾಯು. ೧೨೩-೬೩). [ಸಂ.]

**ವಿಪ್ರಲಾಪಂಗೆಯ್** (ಕ್ರಿ). (ಶೋಕದಿಂದ ಕೂಡಿ) ಅಸಂಬದ್ಧವಾಗಿ ಮಾತನಾಡು : ಪಡೆವುದು ಮೇಣ್ ನಂದನರಂ ನಡೆವುದು ಮೇಣ್ ತಪಕೆ ಸಗರವಲ್ಲಭ ಮತ್ತಂ ಪಡೆವುದೊ ತನಯರ್ಕಳ ಪಿಂಬಡಿನೋಳ್ ಪೇೞಿಮಗರಸ ಮಾನಸವಾೞಿ ಎಂದು ವಿಪ್ರಲಾಪಂಗೆಯ್ಯೆ (ಅಜಿಪು. ೧೦-೪೨ ವ). [ವಿಪ್ರಲಾಪ + ಕೆಯ್$_1$]

**ವಿಪ್ರವಿನೋದಿ** (ನಾ). ಕಣ್ಕಟ್ಟು , ಮಾಯ , ಮಂತ್ರ ಮುಂತಾದುವುಗಳಲ್ಲಿ ನೈಪುಣ್ಯವನ್ನು ಹೊಂದಿದ ಒಂದು ಬ್ರಾಹ್ಮಣವರ್ಗ : ಹನುಮಂತದೇವರಿಗೆ ಕಾರ್ತಿಕದ ಪೂಜೆಗೆ ವಿಪ್ರವಿನೋದಿಗಳಿಗೆ ಮುಖ್ಯಸ್ವಾಮಿಗಳಾದ . . . ಅಯವರು ಮೊದಲಾದ ವಿಪ್ರವಿನೋದಿಗಳಿಗೆ ಪು(೦)ಣ್ಯವಾಗಲಿಯೆಂದು . . . ಮಕರಸಂಕ್ರಾಂತಿ ಪುಣ್ಯಕಾಲದಲ್ಲಿ ಧಾರೆಯನೆಱೆದು ಕೊಟ್ಟ ಧರ್ಮಶಶನ (ಸೌಇಇ. IX-ii, ೬೫೨-೯ ; 1554).

[ಸಂ. ವಿಪ್ರವಿನೋದಿನ್]

**ವಿಪ್ರಶ್ನಿಕೆ** (ನಾ). ಕಣಿಹೇಳುವವಳು ; ಭವಿಷ್ಯವನ್ನು ನುಡಿಯುವವಳು ; ಕೊರವಂಜಿ : "ವಿಪ್ರಶ್ನಿಕಾ, ಈಕ್ಷಣಿಕಾ, ದೈವಜ್ಞಾ – ೩ ಕಣಿ ಮುಂತಾದ ಶಕುನಗಳನ್ನು ಹೇಳುವವಳ ಪೆಸರುಗಳು" (ಸಿದ್ಧಾಂತಿ. ೧೭೨). [ಸಂ. ವಿಪ್ರಶ್ನಿಕಾ]

**ವಿಪ್ರಳಾಪ** 'ವಿಪ್ರಲಾಪ' ನೋ.

**ವಿಪ್ರಾವತಿ** (ನಾ). ಬ್ರಾಹ್ಮಣರ ಬೀದಿ ; ಅಗ್ರಹಾರ : ಕೃತಿ ತಟಾಕಾರಾಮ ವಿಪ್ರಾವತಿ ಸುರಾಲಯ ಸುಜನಸ್ಥಾಪನೆ ಸುತರೆನಿಸುತಿಹ ಸಪ್ತಸಂತಾನಂಗಳೊಳಗೆ . . . ಉತ್ತಮಂ ಕೇಳ್ ಸುತ ಸುರಾಲಯ ಬ್ರಾಹ್ಮಣಾವತಿಯೆಂದನಗಜೇಶ (ಶಂಕರಾ. ೧೭-೧೯). [ಸಂ. ವಿಪ್ರಾವತೀ]

**ವಿಪ್ರಾಳಿವಧೆ** (ನಾ). ೧. ಬ್ರಾಹ್ಮಣರ ಹತ್ಯೆ , — ಕೊಲೆ ; IP ಇದು ಪಂಚಮಹಾಪಾತಕಗಳಲ್ಲಿ ಒಂದು. ೨. ಬ್ರಾಹ್ಮಣರ ಹತ್ಯೆಯಿಂದುಂಟಾಗುವ ದೋಷ ; ಬ್ರಹ್ಮಹತ್ಯಾದೋಷ : ಮೇಲನಱಿಯದೆ ಸತ್ಕದಲಿ ವಿಪ್ರಾಳಿವಧೆಯಾತಂಗೆ ಬಂದುದು (ಕುವ್ಯಾಕ. ೧೭-೧೭). [ಸಂ. ವಿಪ್ರಾಳಿವಧಾ]

**ವಿಪ್ರಿಯ** (ಗು). ೧. ಮನಸ್ಸಿಗೆ ಹಿತವಲ್ಲದ ; ಇಷ್ಟವಾಗದ. (ನಾ). ೨. ಪ್ರಿಯವಲ್ಲದುದು ; ಅಹಿತವಾದುದು : ಯಾರವನು ಪ್ರಿಯವೆಂದು ವಿಪ್ರಿಯವ ನುಡಿಯುವನು (ಭಾಸನಾ. ೫೮). ೩. ತಪ್ಪು ; ಅಪರಾಧ : "ವ್ಯಳೀಕಂ, ಅಪರಾಧಃ, ಆಗಃ, ಮಂತುಃ, ವಿಪ್ರಿಯಃ - ಈ ೫ ಅಪರಾಧಂ" (ಹಲಾಯು. ೧೨೩-೬೪). [ಸಂ.]

**ವಿಪ್ಲವ** (ನಾ). ೧. ನಾನಾದಿಕ್ಕುಗಳಿಗೆ ಹರಿಯುವುದು , — ಪ್ರವಹಿಸುವುದು. ೨. (ನಾಡಿನ ಶಾಂತಿಗೆ ಭಂಗವನ್ನುಂಟುಮಾಡುವ) ದಂಗೆ ; ಕ್ರಾಂತಿ ; ದೊಂಬಿ : ಮಂಗಳೂರಿನಲ್ಲಿ ವಿಪ್ಲವವು ಧಗಧಗನೆ ಉರಿಯುತ್ತಿದೆ (ದಾಲತ್. ೨೨೦) ; ರಾಜ್ಯದಲ್ಲಿ ವಿಪ್ಲವವಾಗುವಂತಹ ಪರಿಸ್ಥಿತಿಯೊದಗಿ . . . ಶ್ರೀರಾಮನ ನಿಶ್ಚಯವಾದ ನಡತೆಯಿಂದ ಮಾರ್ಪಡುತ್ತದೆ (ಭಾರದ. ೮೮). ೩. ತುಮುಲ ; ಕ್ಷೋಭೆ. ೪. ಗೊಂದಲ ; ಗಜಿಬಿಜಿ. ೫. ನಾಶ ; ಹಾಳು ; ಧ್ವಂಸ. ೬. ತೊಂದರೆ ; ಉಪದ್ರವ : "ಉಪಲಿಂಗಂ, ಅರಿಷ್ಟಂ, ಉಪಸರ್ಗಃ, ಉಪದ್ರವಃ . . . ಡಿಂಬಃ, ವಿಪ್ಲವಃ – ಈ ೧೦ ಉಪದ್ರವಂ" (ಹಲಾಯು. ೨೧-೧೨೭). ೭. ವಿರೋಧ ; ಪ್ರತಿಭಟನೆ. ೮. ಸುಲಿಗೆ ; ಲೂಟಿ. ೯. ಮೀರಿ ನಡೆಯುವುದು ; ಅತಿಕ್ರಮ. ೧೦. ಪಾಪ; ದೋಷ. [ಸಂ.]

**ವಿಪ್ಲವಕಾರ** (ನಾ). ದಂಗೆಮಾಡುವವನು ; ಬಂಡಾಯಗಾರ ; ಕ್ರಾಂತಿಕಾರ : ಭಕ್ಷಿಯು ಈ ವಿಪ್ಲವಕಾರರೊಡನೆ ಸೇರಿರುವುದೇನೋ ನಿಜ ! (ದಾಲತ್. ೨೨೦). [ಸಂ.]

**ವಿಪ್ಲವಮೂರ್ತಿ** (ನಾ). ನಾಶಮಾಡುವಂತಹ ವ್ಯಕ್ತಿ ; ಧ್ವಂಸಮಾಡುವ ಸ್ವರೂಪವುಳ್ಳವನು : ವಿಲಯದ ವಿಪ್ಲವಮೂರ್ತಿಯು ನಾನು . . . ರುದ್ರನು ನಾನು (ಪಾಂಚಜ. ೧೫-೬). [ಸಂ.]

**ವಿಪ್ಲುತ** (ಗು). ೧. (ಗಾಳಿಪ್ರವಾಹಗಳಿಂದ) ನೂಕಲ್ಪಟ್ಟ , — ಹೊಡೆದುಕೊಂಡು ಹೋದ, — ತೇಲಿಹೋದ. ೨. ಮುಳುಗಿದ. ೩. ಕ್ಷೋಭೆಗೊಂಡ ; ಕೆರಳಿಸಲ್ಪಟ್ಟ. ೪. ಕೆದರಿದ ; ಚೆದರಿದ. ೫. ಹಾಳಾದ ; ನಾಶಗೊಂಡ. ೬. ಕಾಣದಾದ ; ಮರೆಯಾದ. ೭. ಅಪಕೀರ್ತಿಗೆ ಗುರಿಯಾದ. (ನಾ). ೮. [ನಾಟ್ಯ] ದೃಷ್ಟಿಚಲನೆಗಳಲ್ಲಿ ಒಂದು ಬಗೆ ; IP "ರೆಪ್ಪೆಗಳನ್ನು ಅದಿರಿಸುತ್ತ ಚಂಚಲದೃಷ್ಟಿಯಿಂದ ಅರೆಗಣ್ಣಲ್ಲಿ ನೋಡುವುದು. ವಿ- ಉನ್ಮಾದ, ಚಾಪಲ್ಯ, ದುಃಖ, ಕಷ್ಟ, ದೈನ್ಯತೆ ಇವುಗಳನ್ನು ಅಭಿನಯಿಸುವಾಗ" (ಲಾಸ್ಯರಂ. ೨೭೦ ಗದ್ಯಾನುವಾದ) : ಅದಿರ್ಪುದು ಚಂಚಲದಿಂದಂ ಪುದುಗೊಂಡರೆ ಪುಟಮದುಂತೆ ವಿಪ್ಲುತಮೆನಿಕುಂ (ಲಾಸ್ಯರಂ. ೩-೩೭). [ಸಂ.]

**ವಿಫಲ** (ಗು). ೧. ಫಲವಿಲ್ಲದ ; ವ್ಯರ್ಥವಾದ ; ನಿಷ್ಪ್ರಯೋಜಕವಾದ: 'ವಿಫಲೋಕ್ತಿ' ಪರಾ. (ನಾ). ೨. ಉಪಯೋಗವಿಲ್ಲದುದು ; ನಿರರ್ಥಕವಾದುದು : ಆ ಗುಣವತಿ ಫಲವತಿ ತಾನಾಗೆಯುಮಿದು ವಿಫಲಮೆಂದು ಪತಿಗುತ್ಸವಮಂತಾಗದು ಸಂಸ್ಕೃತಿ ಫಲವತಿಯಾಗಿರೆಯುಂ ಯೋಗಿಗುತ್ಸವಂ ಪುಟ್ಟಿದವೋಲ್ (ಜಗವಿ. ೨-೫೩).

**ವಿಫಲನಾಗು** = ಫಲವಿಲ್ಲದವನಾಗು ; ಸೋಲು : ಗಣಪತಿ ಲಾಟೀನನ್ನು ಮೇಲಕ್ಕೆತ್ತಿ ದೀಪದ ಬೆಳಕಿನಲ್ಲಿ ಬಂದವರ ಗುರುತುಹಿಡಿಯಲು ಯತ್ನಿಸಿ ವಿಫಲನಾಗ (ಪದ್ಮಸ. ೧೮೮). **ವಿಫಲವಾಗು** = ವ್ಯರ್ಥವಾಗು ; ಪ್ರಯೋಜನಕ್ಕೆ ಬಾರದಾಗು : ರಣಮುಖದೊಳೇಕಾದಶಕ್ಷೋಹಿಣಿಯ ಗೆಲಿದುದು ವಿಫಲವಾದುದು . . . ಎಂದನಾ ಭೀಮ (ಕುವ್ಯಾಗ. ೪-೫೦). [ಸಂ.]

**ವಿಫಲತೆ** (ನಾ). ಉಪಯೋಗವಿಲ್ಲದಿರುವಿಕೆ ; ನಿಷ್ಪ್ರಯೋಜಕತೆ : 'ವಿಫಲತೆವಡೆ' ಪರಾ. [ಸಂ. ವಿಫಲತಾ]

**ವಿಫಲತೆವಡೆ** (ಕ್ರಿ). ನಿಷ್ಪ್ರಯೋಜಕವಾಗು ; ವ್ಯರ್ಥವಾಗು : ವಿಫಲತೆವಡೆಯಿತು ದೃಷ್ಟಿಯುಮಿಂದಿರದೆ ಕುಜನರ ಸೇವೆಯ ತೆರದೆ (ಇಂಚಾಪ. ೧೩೭-೬೭). [ವಿಫಲತೆ + ಪಡೆ]

**ವಿಫಲೋಕ್ತಿ** (ನಾ). ಉಪಯೋಗಕ್ಕೆ ಬರದ ಮಾತು ; ಕಾಡುಹರಟೆ : ಎಮ್ಮಯ ಜಂಗಮವನಾಸಕ್ತಿಯಲಿ ಮನ್ನಿಸದಿರಲು ವಿಫಲೋಕ್ತಿಯದು ಶಿವಪೂಜನಂ ಸ್ಥಾವರವು ನಿಷ್ಫಲವು (ಬಸಪು. ೨೭-೪೮). [ಸಂ.]

**ವಿಬುಧ** (ನಾ). ೧. ಪಂಡಿತ ; ವಿದ್ವಾಂಸ : ತಳ್ತರ್ಗಳವೋಲ್ ಮೆಲ್ಲಿದುವೀ ತಳಂಗಳ್ . . . ಎಂಬುದನಾಕುಳಮಿಲ್ಲದೆ ವಿಬುಧರಱಿಗೆ ಧರ್ಮೋಪದೇಶಮಯಂ (ಕವಿರಾ. ೩-೭೧) ; ಅವಧರಿಪುದು ವಿಬುಧರ್ . . . ಮೆಚ್ಚಿ ಕೈಕೊಳ್ವುದಿದಂ (ಶಮದ. ೪, ಪೀಠಿಕೆ). ೨. ಸುರ ; ದೇವತೆ : ಆ ವಿಬುಧರ್ ಮುದದಿಂ . . . ಮೇರುಗಿರಿಗೇಟ್ತಂದರ್ (ಜಗವಿ. ೨-೧). ೧,೨: ಸುಕುಲೀನಂ ವಿಬುಧಾನ್ವಿತಂ . . . ಸುಧರ್ಮಧರನಾಗಿರ್ದುನ್ನತಂ ತಾನೆನಲ್ ಸಕಳಾಕ್ಷ್ಮಾಧರರಾಜನಂದೆಸೆದಂ ಭೂಮಧ್ಯದೊಳ್ ಲಕ್ಷ್ಮಣಂ (ನೇಮಿಪು. ೧-೩). ೩. ಚಂದ್ರ.

**ವಿಬುಧಸಂತರ್ಪಣ** = ಪಂಡಿತಜನರನ್ನು ತೃಪ್ತಿಗೊಳಿಸುವವನು ; ಒಂದು ಬಿರುದು : ಕೊಂಕಣದಲ್ಲಳಂ ಗಣ್ಣರ ಮೇರುಮಾಶ್ರಿತ XXX ತದು ವಿಬುಧಸನ್ತರ್ಪಣಂ ಮಂಡಳಿತಮುಖದರ್ಪಣಂ (ಕಇ. iv, ೪೧-೬ ; 12 ನೆಯ ಶತ). [ಸಂ.]

**ವಿಬುಧನುತ** (ನಾ). ೧. ವಿದ್ವಾಂಸರಿಂದ ವಂದಿಸಿಕೊಳ್ಳುವವನು. ೨. ದೇವತೆಗಳಿಂದ ನಮಸ್ಕರಿಸಿಕೊಳ್ಳುವವನು. ೧,೨ : ಅರಿಕಾಮಧ್ವಂಸಿ ನಾಗಪ್ರಜಮಯಕಟಕಂ. . . ವಿಬುಧನುತನುಮಾ ಕಾಮಿನೀಜೀವಿತೇಶಂ ಪರಮೈಶ್ವರ್ಯಾಸ್ಪದಂ ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ (ಜಗವಿ. ೧-೩). [ಸಂ.]

**ವಿಬುಧಪತಿ** (ನಾ). ೧. ವಿದ್ವಾಂಸರಿಗೆ ಒಡೆಯನಾದವನು. ೨. ದೇವತೆಗಳಿಗೆ ಒಡೆಯನಾದವನು ; ದೇವೇಂದ್ರ ; ಇಂದ್ರ : ವಿಬುಧಪತಿನಿವಹವಂದಿತ ನಿಬಿಡಪದಾಂಬುರುಹನಂ . . . ಜಿನನಂ . . . ವಂದಿಸಿದರ್ (ಸುಕುಮಾ. ೮-೬೮) ; ಶ್ರೀರಮಣ ವಿಬುಧಪತಿ ವಾರಿಜಭವಾದಿವೃಂದಾರಕ . . . ಪಾಲಿಪುದೆನಗೆ ಚಾರುಮತಿಯಂ (ಕಬ್ಬಕೈ. ೧). ೧,೨ : ಆ ರಾಜೇಂದ್ರಂ ವಿಬುಧಪತಿಯಾಗಿಯುಂ ಗೋತ್ರಾರಿಯಲ್ಲು (ನಾಗಕು. ೨-೮೭ ವ). [ಸಂ.]

**ವಿಬುಧಭೂಜ** (ನಾ). ೧. ದೇವಲೋಕದ ವೃಕ್ಷ ; ಕಲ್ಪತರು. ೨. ಕಲ್ಪತರು ವಿನಂತಿರುವವನು ; ಕಲ್ಪವೃಕ್ಷಕ್ಕೆ ಸಮಾನನಾದವನು : ಪುಟ್ಟಿದಂ ಶ್ರೀಭಾಜಂ . . . ಭ್ರಾಜತ್ಕಾಂತಾಮನೋಜಂ ವಿಬುಧವಿಬುಧಭೂಜಂ ಯಶಶ್ಶ್ರೀಸಮಾಜಂ ನೈಜೋನ್ನಂತ್ರಾಬ್ಧಿರಾಜಂ ಸುವಿಭವ ಸುಮನೋರಾಜಂ ರೇಚಿರಾಜಂ (ಎಇ. XIV, ೨೮೧-೩೫; 1181). [ಸಂ.]

**ವಿಬುಧವರಾಶ್ವ** (ನಾ). ದೇವತೆಗಳ ಶ್ರೇಷ್ಠವಾದ ಕುದುರೆ ; ಉಚ್ಚೈಶ್ರವಸ್ಸು : ದೇವಮಣಿಗೂಡಿ ಜಳಧಿಯೊಳಾ ವಿಬುಧವರಾಶ್ವಮೊಗೆದಗಲ್ವಿರ್ಪುದಮಾ ದೇವಮಣಿಗೂಡಿ ರಾಜಿಸುವೀ ವಿಪುಳತರಾಶ್ವಯುಗಕದೇಂ ಪಾಸಟಿಯೇ (ರಾಜಶೇ. ೧೨-೧೦೧). [ಸಂ.]

**ವಿಬುಧಾಲಂಕೃತ** (ನಾ). ೧. ಪಂಡಿತರಿಂದ ಭೂಷಿತವಾದುದು. ೨. ದೇವತೆಗಳಿಂದ ಭೂಷಿತವಾದುದು. ೧,೨ : ಸುರೇಂದ್ರಸಭೆಯಂತೆ ವಿಬುಧಾಲಂಕೃತಮುಂ . . . ಶಿವಸಭೆಯಂತೆ ಸದಾನಂದಿಬಂಧುರಮೆನಿಸಿ ನರೇಂದ್ರನೊಡ್ಡೋಲಗಂ . . . ಪರಿರಂಜಿಸುತಿರ್ದುದು (ರಾಜಶೇ. ೫-೧೯ ವ). [ಸಂ.]

**ವಿಬುಧಾಶ್ರಯ** (ನಾ). ೧. ವಿದ್ವಾಂಸರಿಗೆ ಅವಲಂಬನವಾದುದು : ಎನ್ನ ದಾನಮಿದಾಗಳುಂ ಮಧುಪಾಶ್ರಯಂ ಧರೆಗವ್ಯವಚ್ಛಿನ್ನದಾನಮಿದಾಗಳುಂ ವಿಬುಧಾಶ್ರಯಂ (ಪಂಪಭಾ. ೧-೭) ; ಪ್ರಿಯದಲುಂಬುದು ಮೇಣು ವಿಬುಧಾಶ್ರಯ ದಲುಂಬುದು ಮಾನವರಿಗಿದು ನಿಯತವಿಂತಲ್ಲದೊಡೆ ಕೇಳ್ಕೆ ಕೌರವರ ರಾಯ ಪ್ರಿಯನು ನೀನಲ್ಲೆವಾಗೆ ವಿಬುಧಾಶ್ರಯವು ತಾ ಮುನ್ನಿಲ್ಲ ನಿನ್ನಾಲಯದಲೆವಾಗೆಂತೂಟ ಸಂಭವಿಸುವುದು (ಕುಮ್ಮಾಉ. ೮-೬೯). ೨. ದೇವತೆಗಳಿಗೆ ಆಶ್ರಯಸ್ಥಾನವಾದುದು; ಸ್ವರ್ಗ. ೩. ಪಂಡಿತರಿಗೆ ಆಶ್ರಯವಿತ್ತಿರುವವನು. ೪. ದೇವತೆಗಳಿಗೆ ಆಸರೆ ನೀಡಿದವನು ; ಒಂದು ಬಿರುದು. ೩,೪ : ಮೇರುಗಿರೀಂದ್ರದನ್ತೆ ವಿಬುಧಾಶ್ರಯನೀಶ್ವ ರನನ್ನುಮೇಶಂ . . . ನೆಗರ್ದ್ದಾಹವಮಲ್ಲವಲ್ಲಭ (ಎಕ. VII. ಶಿಕಾರಿ. ೧೧೮-೬ : 1054). [ಸಂ.]

**ವಿಬುಧೇಶ್ವರ** (ನಾ). ದೇವತೆಗಳ ಒಡೆಯ ; ಇಂದ್ರ : ಅರಿಗೋತ್ರಭೇದಿ ವಿಬುಧೇಶ್ವ ರನಲ್ಲಂ ಧೃತಕಳಾಕಳಾಪಂ ದೋಷಾಕರನಲ್ಲಂ . . . ಭೂಪಾಳಂ (ಕವಿರಾ. ೩-೧೧೨). [ಸಂ.]

**ವಿಬೋಧ** (ನಾ). ೧. (ನಿದ್ರೆಯಿಂದ) ಎಚ್ಚರಗೊಳ್ಳುವಿಕೆ. ೨. ಬುದ್ಧಿ ; ಜಾಣ್ಮೆ. ೩. ಅರಿವು ; ಜ್ಞಾನ ; ತಿಳಿವಳಿಕೆ. ೪. ಗಮನವಿಲ್ಲದಿರುವಿಕೆ ; ಲಕ್ಷ್ಯವಿಲ್ಲ ದಿರುವುದು. ೫. [ಕಾವ್ಯಮೀ] ಮೂವತ್ತು ಮೂರು ಸಂಚಾರಿಭಾವಗಳಲ್ಲಿ ಒಂದು ; ನಿದ್ರೆಯಿಂದ ಏಳುವುದು, — ಎಚ್ಚರಗೊಳ್ಳುವುದು : ನಿದ್ರೆಯಿಂದ ಎಚ್ಚರಗೊಳ್ಳುವುದು ವಿಬೋಧ (ಭಾರಮೀ. ೩೪೭). ೬. ಭಾಣಿಕೆಯೆಂಬ ಉಪರೂಪಕದ ಏಳು ಅಂಗಗಳಲ್ಲಿ ಒಂದು : ಭಾಣಿಕಾ — ಇದರಲ್ಲಿಯೂ ಒಂದೇ ಅಂಕ . . . ಉಪನ್ಯಾಸ, ವಿನ್ಯಾಸ, ವಿಬೋಧ, ಸಾಧ್ವಸ, ಸಮರ್ಪಣ, ನಿವೃತ್ತಿ, ಸಂಹಾರ ಎಂಬ ಏಳು ಅಂಗಗಳು (ಸಂನಾಟ. ೩೭). [ಸಂ.]

**ವಿಬೋಧಿತ** (ಗು). ಜ್ಞಾನವನ್ನು ಹೊಂದಿದ , —ಪಡೆದ : ಭೂರಿಕಳಾವಿಬೋಧಿತ ಸುಧಾಕರರೂರ್ಜಿತ ಸಾಧುಸಂಘನಿಸ್ತಾರಕರಂಗಜಾತ ಮಹಿಜಾತವಿದಾರಕರೆಂದು ಬಣ್ಣಿಪುದು ವಾರಿಧಿವೇಷ್ಟಿತಭೂರಿಭೂತಳಂ (ಸುಕುಮಾ. ೧-೨೨). [ಸಂ.]

**ವಿಭಂಗ** (ಗು). ೧. ಒಡೆದ ; ಮುರಿದ ; ಭಗ್ನಗೊಂಡ : ಆಗಸಮ ಮೇಲೆ ಕೆಡೆವಂತೆ ನೆಲಂ ಪೆಡಂಮಗುಳ್ವು ಕವಿದಿಕ್ಕಿದಂತೆ ತೊಟ್ಟನೆ ಪುಟ್ಟಿದತಿಭಯದಿಂ ವಿಭಂಗಮನರಾಗಿ . . . ಮೂದಲಿಸುತ್ತುಂ (ಸುಕುಮಾ. ೧೧-೮೨ ವ). (ನಾ). ೨. ಒಡೆಯುವಿಕೆ ; ಮುರಿಯುವಿಕೆ. ೩. ತಡೆಯುವುದು ; ಅಡ್ಡಿ ; ಪ್ರತಿರೋಧ. ೪. ಮುರುಟಿಕೊಳ್ಳುವಿಕೆ ; ಸಂಕುಚಿತಗೊಳ್ಳುವಿಕೆ. ೫. ಮಡಿಕೆ ; ಸುಕ್ಕು. ೬. ಮೆಟ್ಟಿಲು ; ಸೋಪಾನ. ೭. ಭಾಗ ; ವಿಭಾಗ. ೮. ಭಂಗಗೊಳಿಸಿದವನು ; ನಾಶಪಡಿಸಿದವನು : ಮಂಗಳಾಂಗ ಮದಂಗಜಾಂಗವಿಭಂಗ ವಾಮಾರ್ಧಾಂಗ ಮಹಿಮೋತ್ತುಂಗ ಕೂಡಲಸಂಗಮೇಶ್ವರಲಿಂಗ ಮಾಂ ತ್ರಾಹಿ (ಬಸವ. ೭೧-೪೯). ೯. [ಜೈನ] ಆತ್ಮನಿಗೆ ಅಹಿತವನ್ನುಂಟುಮಾಡುವ ಪದಾರ್ಥಗಳನ್ನು ತಿಳಿಯಬಲ್ಲ ಜ್ಞಾನ ; ಮಿಥ್ಯಾಜ್ಞಾನ : ಕುಮತಿ ಕುಶ್ರುತ ವಿಭಂಗ ಮತಿ ಶ್ರುತ ಅವಧಿ ಮನಃಪರ್ಯಯ ಕೇವಲಜ್ಞಾನವಿಕಲ್ಪದಿಂ ಜ್ಞಾನಮಷ್ಟವಿಧಂ (ತತ್ತ್ವಪ್ರ. ೧೭) ; ಕುಮತಿ ಎಂಬುದು ಮತಿಜ್ಞಾನದ . . . ವಿಭಂಗ ಎಂಬುದು ಅವಧಿಜ್ಞಾನದ ಆಭಾಸಗಳು (ಜೈನಧ. IV. ಮುನ್ನುಡಿ). [ಸಂ.]

**ವಿಭಂಗಜ್ಞಾನ** (ನಾ). = ವಿಭಂಗ ೯ : ವಜ್ರದಾಡಂ . . . ಆತನಂ ಕಂಡು ತನ್ನ ವಿಭಂಗಜ್ಞಾನದಿಂದೆನ್ನ ಪಗೆವನೀತನೆಂದಱಿದು . . . ಕಾಡಿ ಕೊಲೆ (ವಡ್ಡಾರಾ. ೧೪೫-೮) ; ಅರವಿಂದಂ ಕುರುವಿಂದನಂ ಕರೆದುತ್ಪನ್ನ ವಿಭಂಗಜ್ಞಾನದಿಂ ಮೃಗಂಗಳ್ದೆಡೆಯನಱಿದು . . . ಪೇೞ್ದೊಡೆ (ಆದಿಪು ೧೨-೧೪ ವ). [ಸಂ.]

**ವಿಭಂಗಜ್ಞಾನಿ** (ನಾ). [ಜೈನ] ವಿಭಂಗಜ್ಞಾನವನ್ನು ಹೊಂದಿದವನು : ವಿಭಂಗಜ್ಞಾನಿ ಮಿಥ್ಯಾದೃಷ್ಟಿಗಳಿಂ ಲೋಕಾಸಂಖ್ಯೇಯಭಾಗಮುಂ ದೇಶೋನಾಷ್ಟಚತು ರ್ದಶಭಾಗಮುಂ ಸರ್ವಲೋಕಮುಂ ಮೇಣ್ ತೀಡೆಪಟ್ಟುತ್ತು (ತತ್ತ್ವಪ್ರ. ೨೯). [ಸಂ. ವಿಭಂಗಜ್ಞಾನಿನ್]

**ವಿಭಂಗತಾಳ** (ನಾ). [ಸಂಗೀತ] ಒಂದು ಬಗೆಯ ತಾಳ : ಭಂಗತಾಳ ಉಪಭಂಗತಾಳ ವಿಭಂಗತಾಳ ವಿತಾಳ ಶುದ್ಧತಾಳ ಅನುತಾಳವೆಂಬಾಬು ವರ್ಗ ಸಂಖ್ಯಭೇದವಮಾಗಿಹವೆಂದು ಪೇಳ್ವ ಭರತಶಾಸ್ತ್ರಪ್ರವೀಣರಪ್ಪ ತಾಳಧಾರಿಗಳಿಂ (ವಿವೇಕ. ೨೩೮). [ಸಂ. ವಿಭಂಗತಾಲ]

**ವಿಭಂಗಿತ** (ಗು). ೧. ಒಡೆದುಹೋದ. ೨. ವಿಭಾಗಹೊಂದಿದ. ೩. ನಾಶವಾದ : ಮಂಗಳದ ಸರ್ವಾಂಗಲಿಂಗಿ ವಿಭಂಗಿತಾನಂಗಪ್ರಸಂಗಿ ಸುರಂಗಿ (ಬಸವು. ೭-೩೭). [ಸಂ.]

**ವಿಭಂಗಿಸು** (ಕ್ರಿ). ಕೆಡಿಸು ; ಭಗ್ನಗೊಳಿಸು ; ಹಾಳುಮಾಡು : ಭವಾನಿ ಭೋಂಕನೆ ತಪಮಿರ್ದಳುಗ್ರ ತಪಮಂ ತಪಮಂ ತಪಮಂ ವಿಭಂಗಿಸಲ್ (ಗಿರಿಕ. ೯-೧೨) ; ಅಂಗುಟದಿಂ ರಸಾತಳಕೆ ಮೆಟ್ಟಿದನಾ ದಶಕಂಠನಂ ಮಹಾಸಂಗರದೊಳ್ ವಿಭಂಗಿಸಿದಾಂತಸುರರ್ಕಳಂ . . . ಗಿರಿಶಂ (ಶಬಶಂ. ೪-೧೨೮). [ವಿಭಂಗ + - ಇಸು]

**ವಿಭಕ್ತ** (ಗು). ೧. ಭಾಗವಾದ ; ಪಾಲಾದ. ೨. ಬೇರೆಮಾಡಿದ ; ಪ್ರತ್ಯೇಕಗೊಳಿಸಿದ. (ನಾ). ೩. ಭಾಗವಾದುದು ; ಪಾಲಾದುದು. ೪. ಪ್ರತ್ಯೇಕವಾದುದು ; ಭಿನ್ನವಾದುದು. ೫. ಭಾಗ ; ಪಾಲು ; ಅಂಶ. ೬. ಪ್ರತ್ಯೇಕಗೊಂಡ ವ್ಯಕ್ತಿ ; ಬೇರ್ಪಟ್ಟವನು : ಅಹಂಕಾರದೃಷ್ಟಿಯಿಂದ ಮಮಕಾರ ಭಾವದಿಂದ ಜೀವಿಯು ಶಿವನಿಂದ ವಿಭಿನ್ನಸಂಸಾರಿಯಾಗಿದ್ದಾನೆ ; ವಿಭಕ್ತವಾಗಿದ್ದಾನೆ (ಭಾರದ. ೧೧೮). [ಸಂ.]

**ವಿಭಕ್ತಿ** (ನಾ). ೧. ಪ್ರತ್ಯೇಕವಾಗುವಿಕೆ ; ಭಾಗವಾಗುವಿಕೆ. ೨. ಪ್ರತ್ಯೇಕತೆ ; ಭಾಗ. ೩. ಆಸ್ತಿಯ ಒಂದು ಭಾಗ ; ಪಾಲು ; ಹಿಸ್ಸೆ. ೪. [ವ್ಯಾಕ] ನಾಮಪ್ರಕೃತಿಯ ಲಿಂಗ ವಚನ ಪ್ರತ್ಯಯಗಳ ಮೇಲೆ ವಾಕ್ಯದಲ್ಲಿ ಉಳಿದ ಪದಗಳೊಂದಿಗೆ ಸಂಬಂಧವನ್ನು ಕಲ್ಪಿಸಿ ಬೇರೆ ಬೇರೆ ಅರ್ಥಗಳನ್ನು ತಂದು ಕೊಡುವ ಪ್ರತ್ಯಯವು ಸೇರಿ ಸಿದ್ಧಿಸುವ ಅನ್ವಯ ; ಪ್ರಥಮಾ, ದ್ವಿತೀಯಾ, ತೃತೀಯಾ, ಚತುರ್ಥೀ, ಪಂಚಮೀ, ಷಷ್ಠೀ ಮತ್ತು ಸಪ್ತಮೀ ಎಂದು ಸಂಖ್ಯಾನುಕ್ರಮದಲ್ಲಿ ಏಳು ಮತ್ತು ಸಂಬೋಧನಾವಿಭಕ್ತಿಯೂ ಸೇರಿ ಎಂಟು ವಿಭಕ್ತಿಗಳಿವೆ : ಕಾರಕಮಾಱು ಕರ್ಮಕರಣಾದಿಕದಿಂ ಪ್ರಥಮಾದಿಭೇದ ನಿರ್ಧಾರದಿಂದದಂ ಪಿಡಿದು ನಿಲ್ವ ವಿಭಕ್ತಿಗಳೇೞ್‌ನಿಕ್ಕುಂ (ಕವಿರಾ. ೧-೧೧೪) ; ಪದದೊಳಿರ್ದರ್ಥಮಂ ತಂತಮ್ಮರ್ಥಾನುಗುಣಮಾಗಿ ವಿಭಾಗಿಸಿ ಕುಡುವದಱಿಂ ವಿಭಕ್ತಿಯೆನಿಸುಗುಂ (ಶಮದ. ೩೫ ವೃತ್ತಿ) ; ಕೆಲವು ವಿಭಕ್ತಿಗಳಿಗೆ ಎರಡು ಮೂರು ಪ್ರತ್ಯಯಗಳಿರುವುದಷ್ಟೆ (ಕೃಪಿಡಿ. ೩೮). ೫. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : ಜಲಧಿ ಮಾತೃಕೆ ವಾರಕುಲಗಿರಿಗಳು ವಿಭಕ್ತಿ ದ್ವೀಪ ಸರ್ಪಾವಳಿ ಮುನೀಶ್ವರರುಗಳ ಧಾತುಗಡಣದ ವೇದಿಗಳ ತಿಳಿದು . . . ನಡೆವವರುಗಳು ನಿರ್ಮಳದಲೆಡಹದೆ ಬೆರೆಸಿಕೊಂಬರು ಮುಕ್ತಿರಾಜ್ಯವನು (ಕುಮ್ಮಾಉ. ೪-೩೪). [ಸಂ.]

**ವಿಭಕ್ತಿಗಣ** (ನಾ). [ವ್ಯಾಕ] ಅನೇಕ ವಿಭಕ್ತಿಪ್ರತ್ಯಯಗಳ ಸಮೂಹ : ಸಂಗತಿಯಿಂದ ನಾಮಪದಂಗಳವೇಕಾರ್ಥಗತಿಯೊಳಾಗೆ ಸಮಾಸಂ ಸಂಗಳಿಸುಗುಂ ವಿಭಕ್ತಿಗಣಂ ಗಳ್ಗಂತರದೊಳಲ್ಲಿ ಲೋಪಮದಕ್ಕುಂ (ಕಾವ್ಯಾವ. ೧೯೯). [ಸಂ.]

**ವಿಭಕ್ತಿಪಲ್ಲಟ** (ನಾ). [ವ್ಯಾಕ] "ಒಂದು ವಿಭಕ್ತಿಗೆ ಪ್ರತಿಯಾಗಿ ಮತ್ತೊಂದು ವಿಭಕ್ತಿ ಕೆಲವೆಡೆಗಳಲ್ಲಿ ವಿಕಲ್ಪದಿಂದ ಬರುವುದು" (ಕೃಪಿಡಿ. ೫೭) : ಕೈಯಲ್ಲಿ ಬರೆದೆನು . . . ಕೋಲೊಳ್ ಬಡಿದಂ ಎಂಬಲ್ಲೆಲ್ಲ ಸಪ್ತಮೀವಿಭಕ್ತಿಪ್ರತ್ಯಯಗಳು ಕರಣಾರ್ಥಕವಾಗಿ ತೃತೀಯೆಗಳೇ ಆಗಿರುವುದು ಸ್ಪಷ್ಟವಿದೆ. ಈ ಪರಿಪಾಠವನ್ನು ವ್ಯಾಕರಣಕಾರರು "ವಿಭಕ್ತಿಪಲ್ಲಟ" ಎಂದಿರುವರು (ಸಂಶೋಧ. ೫೯). [ಸಂ.]

**ವಿಭಕ್ತಿಪ್ರತ್ಯಯ** (ನಾ). [ವ್ಯಾಕ] "ವಾಕ್ಯದಲ್ಲಿ ನಾಮಪ್ರಕೃತಿಗೆ ಇರುವ ಸಂಬಂಧವನ್ನು ತಿಳಿಸಲು ಸೇರಿಸುವ ಪ್ರತ್ಯಯಕ್ಕೆ ವಿಭಕ್ತಿಪ್ರತ್ಯಯವೆಂದು ಹೆಸರು" (ಮಧ್ಯಮು. ೫೩) : ವಿಭಕ್ತಿಪ್ರತ್ಯಯಗಳು ಏಕವಚನದಲ್ಲಿ ಪ್ರಕೃತಿಯ ಮುಂದೆಯೂ ಬಹುವಚನದಲ್ಲಿ ಬಹುವಚನಪ್ರತ್ಯಯದ ಮುಂದೆಯೂ ಸೇರುತ್ತವೆ (ಕೃಪಿಡಿ. ೩೭). [ಸಂ.]

**ವಿಭಕ್ತಿರೂಪಕ** (ನಾ). [ಕಾವ್ಯಮೀ] ರೂಪಕಾಲಂಕಾರಗಳಲ್ಲಿ ಒಂದು ವಿಧ ; ರೂಪಕಗಳನ್ನು ಪ್ರತ್ಯೇಕಿಸಿ ಹೇಳುವ ಅಲಂಕಾರ : ವಿಭಕ್ತಿರೂಪಕಕ್ಕೆ —

ಅಂಬುಜಸೂತ್ರಮೆಂಬ ಪೆಣೆದಾವಣೆಯಂ ಪಱಿದಾವಲೆಂಬ ಬಾಳ್ಗಂಬಮನೊತ್ತಿ ಕಿಱು ಲತೆಯೆಂಬ ತುರಂಗಮುಮಂ ಪೊರಳ್ಚಿ . . . ಮದಾಳಿಯೆಂಬ ಗುಂಡಂ ಬಱಿಯಟ್ಟಿ ಸೋವುದು ಸಮೀರಣವಾರಣಮಾ ಪ್ರದೇಶದೊಳ್ (ಕಾವ್ಯಾವ. ೭೮೯). IP ಇಲ್ಲಿ "ಎಂಬ" ಎನ್ನುವ ಪದದಿಂದ ಪ್ರತ್ಯೇಕಪ್ರತ್ಯೇಕವಾಗಿ ಸ್ಫುಟಗೊಳಿಸಿ ಹೇಳಿರುವುದೇ ವಿಭಕ್ತಿರೂಪಕ. [ಸಂ.]

**ವಿಭಕ್ತಿಸ್ವರ** (ನಾ). [ವ್ಯಾಕ] ವಿಭಕ್ತಿಪ್ರತ್ಯಯದ ಅಂತ್ಯಸ್ವರ : ಸ್ವರಮಿದಿರೊಳಿರೆ ವಿಭಕ್ತಿಸ್ವರಕಂ ಪ್ರಕೃತಿಸ್ವರಕ್ಕಮಕ್ಕುಂ ಲೋಪಂ (ಶಮದ. ೫೨). [ಸಂ.]

**ವಿಭಗ್ನ** (ಗು). ಮುರಿದ ; ಹಾಳಾದ : ವನಸೌರಭಭರವಿಭಗ್ನದಳವಿಳಸಿತ ಮಲ್ಲಿಕಾಮಾಲಾಲಿಸಕ್ತ ಕಾಂಚನಚಂಚರೀಕಾಯಮಾನಂಗಳಾದರಸನ ಕಣ್ಣಱಿದು ತನ್ನ ಮನೆಗೆ ಪೃಥ್ವೀಷೇಣ ಪೋದೊಡಂ (ಶಾಂತಿಪು. ೯-೫೧ ವ). [ಸಂ.]

**ವಿಭಜನ** (ನಾ). ೧. ಭಾಗವಾಗುವಿಕೆ ; ಪ್ರತ್ಯೇಕಗೊಳ್ಳುವಿಕೆ : ವಿಭಜನವು ಎಷ್ಟರ ಮಟ್ಟಿಗೆ ಆಗಿದೆಯೆಂಬುದನ್ನು ಕೆಂಪು ಮತ್ತು ಊರ್ಧ್ವಾರಶ್ಮಿಗಳಿರುವ ಕೋನದಿಂದ ಅಳೆಯಬಹುದು (ಭೌತವಿ. ೧೪೧). ೨. ಭಾಗಮಾಡುವಿಕೆ ; ವಿಭಾಗಿಸುವಿಕೆ. [ಸಂ.]

**ವಿಭಜನೆ** (ನಾ). = ವಿಭಜನ ೧ : ಕಾಯಿಸುವುದರಿಂದ ವಸ್ತುಗಳು ರಾಸಾಯನಿಕವಾಗಿ ವಿಭಜನೆಹೊಂದುತ್ತವೆ (ರೂಢಿ). [ಸಂ. ವಿಭಜನ]

**ವಿಭಜಿಸು** (ಕ್ರಿ). ಬೇರೆ ಬೇರೆ ಮಾಡು ; ವಿಭಾಗಿಸು ; ವಿಂಗಡಿಸು : ಬೆಟ್ಟದಂತೆ ರಾಶಿಬೀಳುತ್ತಿದ್ದ ಈ ಪ್ರಯೋಗಗಳನ್ನು ಓದಿ, ವಿಂಗಡಿಸಿ, ವಿಭಜಿಸಿ, ಕ್ರಮವಾಗಿ ಜೋಡಿಸಿ . . . ಶಬ್ದದ ಚರಿತ್ರೆಯನ್ನು ಕಡೆಯುವ ಕೆಲಸವು ನಿಘಂಟಿನ ಸಂಪಾದಕವರ್ಗಕ್ಕೂ ಅವರ ಸಹಕಾರಿಗಳಿಗೂ ಬಿದ್ದಿತು (ಸಮಾಲೋ. ೨೪೯). [ವಿಭಜನ + – ಇಸು]

**ವಿಭವ** (ನಾ). ೧. ಐಶ್ವರ್ಯ ; ಸಿರಿ ; ಸಂಪತ್ತು : ಮತ್ಸ್ಯಾವ್ಯಮಂ ಮೆಚ್ಚಿ ಕೇಳ್ದ ಗುಣಂಗೊಳ್ಳ ಜನಕ್ಕಮಕ್ಕೆ ವಿಭವಂ ಭದ್ರಂ ಶುಭಂ ಮಂಗಳಂ (ಆಜಿಪು. ೧೨-೨೭) ; ಆಶ್ರಿತಪರ್ವವಿಭವ ವೇಣುಗಳೊಳು ಸ್ವಸ್ಥತಾಗತಿಮುಕ್ತರಾದವರೊಳಲ್ಲದಾ ನಾಡೊಳಿಲ್ಲ (ಹಚಕಾ. ೨-೧೧). ೨. ಶಕ್ತಿ ; ಬಲ. ೩. ಹಿರಿಮೆ ; ಘನತೆ : 'ವಿಭವಂಬೆಱು' ಪರಾ. ೪. ತೋರಿಕೆ ; ಪ್ರದರ್ಶನ ; ಡೌಲು : ತತ್ಕಾಲ ಪ್ರೇಮವನಱಿಯದೆ ವಿಭವಕ್ಕೆ ಮಾಡಿದವನ ಭಕ್ತಿ ಇರುಳು ಸತ್ತಿಗೆಯ ಓಡಿಸಿಕೊಂಡಂತೆ (ಬಸವ. ೨೨೭). ೫. ಅಂದ ; ಸೊಗಸು : "ಸೊಗಸುಮಲಂಪುಂ ವಿಭವಮದು" (ಕವಿಕಂ. ೧೩೯). ೬. ಅರುವತ್ತುಸಂವತ್ಸರಗಳಲ್ಲಿ ಎರಡನೆಯದು : ಆ ವರುಷವೇ ಪ್ರಭವ, ವಿಭವ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೦) ; ನಿನ್ನೆ ಹೆಸರಳಿದು ನೀರಾದುದಾ ಪ್ರಭವಂ . . . ಇಂದೆನ್ನನೀಟಿಸುವ ವೀಚಿಯಾ ವಿಭವಂ (ಗಿಳಿವಿಂ. ೫೭-೩). ೭. ವೈಭವಯುಕ್ತನಾದವನು : ಸುರರಾಜವಿಭವನಂ ಕಂಡಿರೆ . . . ಕಂಡಿರೆ ಗುಣೆಯಂ ಭವ್ಯಸೇವ್ಯಚಿಂತಾಮಣಿಯಂ (ಸುಕುಮಾ. ೧೨-೨೨). ೮. [ವಿಶಿಷ್ಟಾ] ದೇವರು ಅವತರಿಸುವುದು ; ದೇವರ ಅವತಾರ : ದೇವಮಾನವಮೃಗನಗರೂಪದ ವಾಸುದೇವನ ವಿಭವಂಗಳನು ಆ ವಿಧದೊಡಲವೆತ್ತನುಸರಿಸುವ ಲಕ್ಷ್ಮೀವಧುವನು ವಂದಿಪೆನು (ಹದಿಬ. ೩-೨); ನಾರಾಯಣನು ಪರ, ವ್ಯೂಹ, ವಿಭವ, ಅಂತರ್ಯಾಮಿ ಮತ್ತು ಅರ್ಚಾವತಾರ ಎಂಬ ಐದು ಪ್ರಕಾರ ಉಳ್ಳವನು . . . ವಿಭವ ಎಂದರೆ ಸಜಾತೀಯವಾದ ರೂಪದಿಂದ ಆವಿರ್ಭವಿಸುವುದು. ಮತ್ಸ್ಯ ಮೊದಲಾದ ರೂಪಗಳೆಲ್ಲ ವಿಭವಗಳು (ಭಾತತ್ತ್ವ. ೭೭೯). [ಸಂ.]

**ವಿಭವಂಬೆಱು**(ಕ್ರಿ). ಹಿರಿಮೆಯನ್ನು ಪಡೆ ; ಘನತೆಯನ್ನು ಹೊಂದು : ಮತ್ತಮಲ್ಲಿ ಮನೋಜ್ಞತರಮೆನಿಸಿ ನಿರುಪಮಮಾನವಿಭವಂಬೆತ್ತು . . . ಶೋಭಿಸೆಯುಂ (ಶಬಶಂ. ೧-೪೧ ವ). [ವಿಭವ + ಪೆಱು]

**ವಿಭವೋದಯ** (ನಾ). ೧. ವೈಭವಪ್ರಾಪ್ತಿಯ ಕಾಲ,—ಸಂದರ್ಭ ; ಉಚ್ಛ್ರಾಯಕಾಲ : ವಿಭವೋದಯದೊಳ್ ಕೆಲಬರ್ ಪ್ರಭುಗಳ್ ಕರಮೆಸೆದು ಕರ್ಮವಶರಟಿವಾಗಳ್ ಪ್ರಭೆಗೆಟ್ಟ[ಡಗುವ ತೆಱದಿಂ ನಭದಿಂ ಗಮಿಸಿದನ]ಡಂಗಿದಂ ದಿವಸಕರಂ (ಬಂಹರಿ. ೨-೧೦). ೨. ಐಶ್ವರ್ಯವಂತನಾದವನು ; ಹಣವಂತ : ಸಕಲಜನವಿನುತನಂ ಶತಮುಖಸದೃಶವಿಶಾಲವಿವಿಧವಿಭವೋದಯನಂ . . . ಕಂಡನಣುವನಾ ರಾಘವನಂ (ಕವಿರಾ. ೨-೩೮). [ಸಂ.]

**ವಿಭಾಕರ** (ನಾ). ೧. ಸೂರ್ಯ ; ರವಿ : ವಿಭಾಕರನಸ್ತಮಿಸಿದನು ತಾವರೆಗಳ ಮೊಗಂಗಳಾಗಳು ತಾವರೆಗಳಾಗೆ (ಬಸಪು. ೧೦-೪೪) ; ಶ್ರೀವಿಯತ್ತಳವೆಂಬ ಸೀಮೆಗಿರುಳೊಳ್ ಪಗಲು ಬೇವಸದೆ ಹಾಱಿ ವರ್ಷಾಂಬುಪೂರ್ಣತ್ವವೆತ್ತಾ ವಿಭಾಕರ ನೆಂಬ ಕರಗಮಂ ಪೊತ್ತುತ್ತರಾಸೆಯಂ ನಡೆಯಲೊಡೆದು ಶೀವಿದುದಕಂ ಸುರಿವೊಲು ಕಱೆಯೆ ಮಳೆ (ಭಾವಚಿಂ. ೬-೪). ೨. ಚಂದ್ರ. ೩. ಅಗ್ನಿ. ೪. ಎಕ್ಕದ ಗಿಡ ; ಅರ್ಕ. [ಸಂ.]

**ವಿಭಾಗ** (ನಾ). ೧. ಭಾಗಮಾಡುವಿಕೆ ; ವಿಂಗಡಣೆ ; ಹಂಚಿಕೆ : ಪದವರ್ಣ ವಿಭಕ್ತಿವಿಭಾಗದಿಂ . . . ಭಂಗಶ್ಲೇಷಮೆಂದು ಪೇೞಲ್ಪಡೆಗುಂ (ಕಾವ್ಯಾವ. ೭೭೬). ೨. ಪ್ರತ್ಯೇಕವಾಗುವಿಕೆ ; ಬೇರ್ಪಡುವಿಕೆ : ಉಪಾಧ್ಯಾಯನು ಭಾವನಾಪರವಶನಾಗಿ "ಅವರು ಹೇಗೆ ವಿಭಾಗವಾಗಬೇಕು, ಯಾವ ಯಾವ ಕಡೆಯಿಂದ ಹೋಗಬೇಕು" ಎಂಬುದನ್ನು ಅಪ್ಪಣೆ ಮಾಡಿದನು (ಮಲೆನಾ. ೨೦೪). ೩. ಭಾಗ ; ಅಂಶ. ೪. ಪಿತ್ರಾರ್ಜಿತಆಸ್ತಿಯ ಪಾಲು ; ಹಿಸ್ಸೆ : ಎಲ್ಲೆ ದಾನಮಿತ್ರನೆ . . . ವಿಭಾಗದ ಮೇರೆಗೆ ನನ್ನ ಭಾಗಕ್ಕೆ ಬಂದ ದ್ರವ್ಯವ ಕೊಡೂಯೆಂದರೆ ನೀನು ಕೊಡುವ ಬಗೆ ಹ್ಯಾಗೆ (ಅರ್ಕಮಾ. ೯೩). ೫. ದೇಶ ಅಥವಾ ರಾಜ್ಯದ ವಿಂಗಡಿಸಿದ ಭಾಗ ,— ವಲಯ: ನಮ್ಮ ರಾಜ್ಯ ದಕ್ಷಿಣರೈಲ್ವೆಯ ವಿಭಾಗಕ್ಕೆ ಸೇರುತ್ತದೆ (ರೂಢಿ). ೬. ಒಂದು ಮೂಲಸಂಸ್ಥೆ ಅಥವಾ ವ್ಯವಸ್ಥೆಯ ಪ್ರತ್ಯೇಕವಾದ ಭಾಗ, — ಶಾಖೆ, — ಇಲಾಖೆ : ನಮ್ಮ ಸಂಸ್ಥೆಯ ಮಾರಾಟವಿಭಾಗದಲ್ಲಿ ಅನೇಕ ರೀತಿಯ ಪುಸ್ತಕಗಳು ದೊರೆಯುತ್ತವೆ (ರೂಢಿ). ೭. [ನ್ಯಾಯ] ನಲವತ್ತುವಿಧವಾದ ಗುಣಗಳಲ್ಲಿ ಒಂದು : ರೂಪ, ರಸ, ಗಂಧ . . . ಸಂಯೋಗ, ವಿಭಾಗ . . . ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಸಾ. ೨೭೫). [ಸಂ.]

**ವಿಭಾಗಿಸು** (ಕ್ರಿ). ೧. ಭಾಗಮಾಡು ; ವಿಂಗಡಿಸು ; ಬೇರ್ಪಡಿಸು : ಬಣ್ಣಿಸಲರಿದಾದೊಡಮೆಸೆವಾ ಋತುಸಂಧಿಯಂ ವಿಭಾಗಿಸಿ ಪೇಳ್ವೆಂ (ಗಿರಿಕ. ೭-೩೫) ; ಪದದರ್ಥಮಂ ವಿಭಾಗಿಸುವುದಱಿಂದೆ ವಿಭಕ್ತಿಯೆಂತದಂ ಪ್ರತ್ಯಯಮೆಂಬುದು (ಶಮದ. ೩೫) ; ದೇಹ ಬೇಱಾತ್ಮ ಬೇಱೆಂದು ವಿಭಾಗಿಸಿ ತನ್ನ ತಾ ನೆಮ್ಮಿ ಭೋಗಿಸಿದರೆ ಕರ್ಮಬಂಧವಿಲ್ಲಾಗಿಯಾ ಭೋಗಿ ತಾನೇ ಯೋಗಿಯಲ್ತೆ (ಭರತ. ೨-೩೦). ೨. ಒಡೆ ; ಸೀಳು : ದನುಜ ಮನುಜಾಮರಕದಂಬನ ಮನಕೆ ತಾರದಜಾಂಡಮಂಡಲವನು ವಿಭಾಗಿಪ ವೀರವಾನರವರವರೂಥಿನಿಯ . . . ಭಟರು ತೋಱಿದರಾಱು ನಿರ್ಬುದವ (ತೊರರಾ. ೧-೭-೧೪). [ವಿಭಾಗ + – ಇಸು]

**ವಿಭಾಡ, ವಿಭಾಳ** (ನಾ). ಬಡಿದುಹಾಕುವವನು ; ನಾಶಮಾಡುವವನು : ಅಸುರವಿಭಾಡ ನಸುನಗುತುಗ್ರ ವೈಷ್ಣವಬಾಣವನು ಬೆಸಸೆ . . . ಅಡಗಿಸಿತಾ ಶಿರತ್ರಯವ (ತೊರರಾ. ೩-೭-೨೩); ದುರಿತದುರ್ಗವಿಭಾಡ . . . ವಿಷ್ಣು ಸಲಹೆಂದೆನುತ ನಾಮಗಳ ಸ್ಮರಣೆಯಂ ಮಾಡುತ್ತೆತಂದರು (ತುರಂಗ. ೯೫-೧೬). **ವಿಭಾಳ** : ಫಾಲಲೋಚನಚಾಪಗ ರ್ವವಿಭಾಳನಲ್ಲದೆಯಿಾ ಧರಿತ್ರಿಯನಾಳಲಾಪರೆ ಮಿಕ್ಕಿನವರು (ಅನಂರಾ. ೨-೧-೫).

[<– ಮರಾ. ವಿಭಾಂಡಣೇ, ವಿಭಾಡನೇ = ಸೋಲಿಸು, ನಾಶಮಾಡು]

**ವಿಭಾಡನ** (ನಾ). = ವಿಭಾಡ : ಇವರಲಾ ಶಿವನ ನಿಜಸಂಪ್ರದಾಯದ ಗುರುಗಳು . . . ಭವಭಯವಿಭಾಡನರು ಸಕಲಾಗಮಸ್ತುತ್ಯರವಿರಳಜ್ಞಾನಿಗಳು (ಗುರುಚಾ. ೧-೭೫).

[< ವಿಭಾಡ]

**ವಿಭಾಡಿಸು** (ಕ್ರಿ). ೧. ಬಡಿದುಹಾಕು ; ನಾಶಮಾಡು : ಗರ್ವಿಸುವ ದಕ್ಷಿಣಪತಿಯ ಮದವಂ ವಿಭಾಡಿಸುವ ಸರ್ವಮಂಗಳೆಯಣುಗ ಬಾರಾ (ಬಸಪು. ೨೪-೭೭) ; ಕಿಮ್ಮಿರ ನೆಂಬವನನಿಮಿಷರಿಗುಬ್ಬಸದ ಖಳನಾತನ ವಿಭಾಡಿಸಿ ಹೊಕ್ಕರವರಾರಣ್ಯಮಂದಿರವ (ಕುಮ್ಮಾಅ. ೧-೨೨) ; ಇದಿರಾದ ಖಳರ ವಿಭಾಡಿಸಿ ತಲೆಗಳ ಹೊಯ್ದು ಕೂಡೆ ಬೊಬ್ಬಿಱಿದಾಗ ಹೊಱಕಾಹಿನಧಟರು ಪಾಡುವಂಥಗಳ ಮೆಱೆದರು (ಕಂಸವಿ. ೧೪-೯೪). ೨. ಹೊಡೆ ; ಭೇದಿಸು : ಇದೆ ಮಹಾಧನು ಬಾಣಪಂಚಕವಿದೆ ನಭೋಗ್ರದ ಯಂತ್ರ ಹೊಳೆಯುತ್ತಿದೆ ವಿಭಾಡಿಸಿ ಮೆಱೆವನಾವನು ಬಾಹುವಿಕ್ರಮವ (ಸಂಭಪ. ೩೦-೨). ೩. ಹಿಮ್ಮೆಟ್ಟಿಸು ; ಪರಾಜಯಗೊಳಿಸು ; ಸೋಲಿಸು : ಭಾನುಮತಿ ಹೊಱವಂಟಳರಸನ ಮಾನಿನಿಯರು ಸಹಸ್ರಸಂಖ್ಯೆಯೊಳಾನನೇಂದುಪ್ರಭೆ ವಿಭಾಡಿಸೆ ಬಿಸಿಲ ಬೇಗೆಗಳ . . .

ರಥವೇಱಿದರು ದುಗುಡದಲಿ (ಕುವ್ಯಾಗ. ೪-೧೩). ೪. ತೆಗಳು ; ನಿಂದಿಸು ; ಹೀಯಾಳಿಸು : ಧನಮದದಿ ಕುಲಮದದಿ ವಿದ್ಯಾಘನದಿ ಯವ್ವನಮದದಿ ದ್ವಿಜಗುರುವನು ವಿಭಾಡಿಸಿ ನೀನು ತಾನೆಂದೆನುತ ಹೂಂಕರಿಸಿ (ಕುವ್ಯಾಉ. ೩-೪೧) ; ಪೆಣ್ಣಂ ಬಱಿದೆ ಬಯಸಿ ಮೊಗಮಂ ಬಾತಣ್ಣಗೆ ರಣಮಂಡಪದೊಳು ರಕುತದ ಬಣ್ಣದ ಬಾಸಿಗಗಟ್ಟಿಸಿ . . . ಭೂತಮುಮಂ ಬಿರ್ದುವೊಲೆಯ್ದುಸುವೆಂ ಎಂದು ವಿಭಾಡಿಸಿ [ಪಾಠಾಂ. ವಿಡಂಬಿಸಿ] ತಗುಳಲ್ (ಜಯನೃ. ೭-೧೦). ೫. ಕತ್ತರಿಸು ; ತುಂಡರಿಸು : ಕಲಹಕಿದು ಕಡೆಯೆಂದು ಸೀತೆಯನೆಳೆದು ತಂದನು ಸರಿಸಕಾಖಂಡಲವಿರೋಧಿ ವಿಭಾಡಿಸಿದ ನವನಿಚೆಯ ತನುಲತೆಯ (ತೊರರಾ. ೭-೪೧-೪೭).

ವಿಭಾಡಿಸಿಕೊಡು = ಬಲಿಕೊಡು; ಆಹುತಿಯಾಗಿ ನೀಡು: ಬಗೆಯದೆನ್ನೊಡ ಲಸು ರಥಾತಿಗೆ ಮಿಗೆ ವಿಭಾಡಿಸಿ ಕೊಡುವೆನೆಂದೆನೆ ನಗುತೆ ಕುಂತೀದೇವಿ ನುಡಿದಳು ವಿಪ್ರ ಕೇಳೆಂದು (ಕುವ್ಯಾಆ. ೧೦-೧೩).[ವಿಭಾಡ + - ಇಸು./ಮರಾ. ವಿಭಾಡಣೇ, ವಿಭಾಂಡಣೇ]

**ವಿಭಾತ** (ನಾ). ೧. ಬೆಳಗಿನ ಹೊತ್ತು ; ಪ್ರಭಾತಸಮಯ ; ಪ್ರಾತಃಕಾಲ : ಆಗಳ್ ವಿಭಾತಸಮಯನಿಯೋಗಮನನವರತ ಪರಮಕಲ್ಯಾಣಶ್ರೀಭಾಗಿನಿ ತೀರ್ಚೆ ಮನಕ್ಕನುರಾಗಂ ಕೈಗಣ್ಮೆ ಸಂತಸಂಬೆರಸಿರ್ದಂ (ವರ್ಧಮಾ. ೧೧-೫೯) ; ಸುಟಿಯಲ್ ವಿಭಾತಪವಮಾನಂ ಪೊಕ್ಕನಕ್ರೂರಂ . . . ವತ್ಸಕುಲಹಂಭಾಘೋಷಮಂ ಘೋಷಮಂ (ಜಗವಿ. ೫-೭೭). ೨. ಕಾಂತಿ ; ಪ್ರಕಾಶ. [ಸಂ.]

**ವಿಭಾತಿ** (ನಾ). ೧. ಬೆಳಗಿನ ಕಾಲ ; ಪ್ರಾತಃಕಾಲ. ೨. ಹೊಳಪು ; ಕಾಂತಿ ; ಪ್ರಕಾಶ : ಕರವೀರ ಜಾತಿ ವಕುಳ ಮುಕುಳಕೋಹಳವಿಭಾತಿಯಲಿ . . . ಪೂಜಾವಿರಚನಾಲಂಕಾರಮಾಗಿರಲು (ಬಸಪು. ೧೮-೫೯). [ಸಂ. ವಿಭಾತೀ]

**ವಿಭಾತಿಕ** (ಗು). ಬೆಳಗಿನ ; ಪ್ರಾತಃಕಾಲದ : ಸತಿ . . . ಸರೋಜಮಿತ್ರಮಂಡಲ ಮುದಯಾಚಲಕ್ಕೆ ಬರಲೆರ್ದು ವಿಭಾತಿ ಮುಖ್ಯಮಂಗಳಂಗಳನನುರಾಗದಿಂದೆಸಗಿ . . . ಕುಳ್ಳಿರ್ದು (ಮಹಾನೇ. ೭-೭೫). [ಸಂ.]

**ವಿಭಾಮ** (ನಾ). (?) : ಹೈದರಲ್ಲಿಖಾನ ಬಹದರವರು . . . ದಂಡಿನ ಮೇಲೆ ಷಟಕೂನು ಮಾಡಿ ಮರುದಿನ ವಿಭಾಮ ಕೊಡಲಾಗಿ ಅವರವರಿಗೆ ಲಡಾಯಿಹತ್ತಿ . . . ಬೆನ್ನುಅಟ್ಟಿ ಬರುವಲ್ಲಿ (ಹೈದರ. ೪೩). [?]

**ವಿಭಾವ** (ನಾ). ೧. ಭಾವವನ್ನು ಉದ್ದೀಪನಗೊಳಿಸುವ ವಸ್ತು ಅಥವಾ ಕಾರಣ : ನಡೆವುದು ನುಡಿವುದು ಅವಿಚಾರವೆಂದು ಭಾವವಿಭಾವವೆಂದು ಕಂಡೆನಾದರೆ ತಪ್ಪೆನ್ನದು (ಬಸವ. ೪೩೨) ; ಆವಗಂ ಕಟಕದೊಳು ಸೊಡ್ಡಳದೇವ ಬಾಚರಸಂ ಸುಭಕ್ತಿವಿಭಾವದಿಂ ಪರಸಮಯಕೋಳಾಹಳ ಮಹಿಮೆವೆತ್ತು (ಬಸಪು. ೫೩-೩೦). ೨. ನಿರ್ಣಯ ; ತೀರ್ಮಾನ. ೩. ಗೆಳೆಯ ; ಸ್ನೇಹಿತ. ೪. [ಕಾವ್ಯಮೀ] ಸ್ಥಾಯಿಭಾವಗಳನ್ನು ಉಂಟುಮಾಡುವ ಕಾರಣ, — ಹೇತು ; IP ಇದು ರಸೋತ್ಪತ್ತಿಯ ಕಾರಣಗಳಲ್ಲಿ ಒಂದು. ಇದರಲ್ಲಿ ಆಲಂಬನವಿಭಾವ ಮತ್ತು ಉದ್ದೀಪನವಿಭಾವ ಎಂದು ಎರಡು ಬಗೆ : ಭಾವದನುಭಾವದೆಸೆವ ವಿಭಾವದ ಪಸುಗೆಗಳೊಳೊಸರ್ವ ರಸದಭಿನಯಮಂ ಭಾವಿಸುವೊಡಾದಿದೇವನ ದೇವೇಂದ್ರನ ಬಗೆಗಮಸದಳಂ ನರ್ತಕಿಯಾ (ಆದಿಪು. ೯-೨೭) ; ಭಾವಂ ವಿಭಾವಮೆಸೆವನುಭಾವಂ ಸಂಚಾರಿಭಾವಮೆಂದಿಂತಿವಱಿಂದಾವಿಷ್ಕೃತಮಕ್ಕುಂ ರಸಂ (ಕಾವ್ಯಾವ. ೭೪೮) ; "ಭಾವ"ದ ಕಾರಣಗಳನ್ನು "ವಿಭಾವ"ಗಳೆಂದೂ, ಕಾರ್ಯಗಳನ್ನು "ಅನುಭಾವ"ಗಳೆಂದೂ, ಕರೆಯುವುದೇ ಸಂಪ್ರದಾಯ (ಭಾರಮೀ. ೩೪೯). [ಸಂ.]

**ವಿಭಾವತ್ವ** (ನಾ). ವಿಭಾವದ ಸ್ಥಿತಿ ; ಭಾವವನ್ನು ಉದ್ದೀಪನಗೊಳಿಸಿರುವಿಕೆ : ವ್ಯಂಗ್ಯಾರ್ಥಪ್ರತೀತವಾಗುವ ಮೊದಲು ವಾಚ್ಯಾರ್ಥದಲ್ಲಿ ಶೃಂಗಾರರಸದ ವಿಭಾವತ್ವವಿಲ್ಲ ವ್ಯಂಗ್ಯಾರ್ಥದ ಸಂಸ್ಕಾರದಿಂದ ವಾಚ್ಯಾರ್ಥಕ್ಕೆ ವಿಭಾವತ್ವ ಬಂದರೂ ಅದು ರಸನಿಷ್ಪತ್ತಿಗೆ ಸಾಲದು (ಧ್ವನ್ಯಾಲೋ. ೨೯ ಅಡಿಟಿ). [ಸಂ.]

**ವಿಭಾವನ** (ನಾ). ೧. ಸ್ಪಷ್ಟವಾಗಿ ಗ್ರಹಿಸುವಿಕೆ, —ತಿಳಿಯುವಿಕೆ. ೨. ಸೂಕ್ಷ್ಮವಾದ ಪರಿಶೀಲನೆ. ೩. ನಿರ್ಣಯ ; ತೀರ್ಮಾನ. ೪. ಊಹೆ ; ಕಲ್ಪನೆ ; ಭಾವನೆ. ೫. ತೋರ್ಪಡಿಸುವಿಕೆ ; ಪ್ರಕಟಪಡಿಸುವಿಕೆ. ೬. ವಿಶೇಷವಾದ ಕಾರ್ಯಕಾರಣಸಂಬಂಧ. [ಸಂ.]

**ವಿಭಾವನತೆ** (ನಾ). ಪ್ರಕಟವಾಗುವಿಕೆ ; ತೋರ್ಪಡುವಿಕೆ : ಥಳಥಳಿಪ ಬಹಳಜ್ವಲನವಾರ್ಕ್ಷಣಮಾಱಿ ಮುನ್ನಿನವೊಲು ಸಹಜಸಿದ್ಧಪ್ರಸಾದವಿಭಾವನತೆಯಿಂದ ಚೆಲುವು ವಿಗಲಾ ಬಿಬ್ಬಬಾಚಯ್ಯಗಳ ಕರಸ್ಥಲಯುಗಳದಲ್ಲಿಯೆ ನೆಲಸಿದುದು (ಬಸಪು. ೫೭-೪೭). [ಸಂ. ವಿಭಾವನತಾ]

**ವಿಭಾವನಾಲಂಕಾರ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ; ಕಾರಣವನ್ನು ಬಿಟ್ಟು ಅಥವಾ ಕಾರಣವಿಲ್ಲದೆ ಕಾರ್ಯವುಂಟಾದಂತೆ ವರ್ಣಿಸುವುದು ; ವಿಭಾವನೆ : ಕಾರಣಮನಱಿಪೆ ನಿಜಸಂಸ್ಕಾರಗುಣಾತಿಶಯದೊಳ್ ತಗುಳ್ವುದಕ್ಕುಂ ಸಾರಂ ವಿಭಾವನಾಲಂಕಾರಂ (ಕವಿರಾ. ೩-೧೭೮). [ಸಂ. ವಿಭಾವನಾಲಂಕಾರ]

**ವಿಭಾವನೆ** (ನಾ). = ವಿಭಾವನಾಲಂಕಾರ : ನುತಪರಿವೃತ್ತಿ ವ್ಯಾಜಸ್ತುತಿ ಹೇತು ವಿಭಾವನಾಲವೋದಾತ್ತಾಪಹ್ನುತಿ ರಸವದೂರ್ಜಿತ ವ್ಯಾವೃತಿ ಪ್ರಿಯತರಾಶಿಗಳ್ ಕ್ರಮಾದ್ಯುಕ್ತಂಗಳ್ (ಕವಿರಾ. ೩-೪); ಕ್ರಿಯೆಯಂ ಪ್ರತಿಷೇಧಂಗೆಯೆ ನಿಯತಫಳವ್ಯಕ್ತಿಯದು ವಿಭಾವನೆ (ಕಾವ್ಯಾವ. ೭೩೭). [ಸಂ. ವಿಭಾವನಾ]

**ವಿಭಾವರಿ** (ನಾ). ೧. ಇರುಳು ; ನಿಶೆ ; ರಾತ್ರಿ : ಇಂದುವಮಂಡಳದಿಂದಮಾವಗಂ ಕಣ್ಗೊಳಿಪ ವಿಭಾವರಿಯನಿನಿಸನನುಕರಿಸಿರ್ದಳ್ (ಕಾದಂಪೂ. ४೦) ; ರಘುಜರ್ ನದೀತಟದ ತೃಣಶಯ್ಯೆಯೊಳ್ ಮಲಗಿ . . . ನಕ್ಷತ್ರಮಯ ವಿಪುಲಗಗನದ ವಿಭಾವರಿಯ ಕಳೆದರಯ್ (ಶ್ರೀರಾಮಾ. ३೧-४೪). ೨. ಅರಿಸಿನ. ೩. ತಲೆಹಿಡುಕಿ. ೪. ಅತಿಯಾಗಿ ಮಾತನಾಡುವ ಹೆಂಗಸು. [ಸಂ. ವಿಭಾವರೀ]

**ವಿಭಾವರೀಚರ** (ನಾ). ರಾತ್ರಿಯಲ್ಲಿ ಸಂಚರಿಸುವವನು ; ನಿಶಾಚರ ; ರಾಕ್ಷಸ : ಭಾವ ಸಿಕ್ಕಿದನೆಂದು ಸಭೆಯ ವಿಭಾವರೀಚರರುಬ್ಬಿ ನಗೆಯಲಿ ಪಾವಮಾನಿಯ ಮುಕ್ಕುಳಿಕ್ಕಿದರಳ್ಳೆಗುಕ್ಕಿನಲಿ (ತೊರರಾ. ೫-೭-೪೭). [ಸಂ.]

**ವಿಭಾವಸು** (ನಾ). ೧. ಕಾಂತಿಯಿಂದ ಕೂಡಿದುದು. ೨. ರವಿ ; ಸೂರ್ಯ : "ನಿಶಿವೈರಿ ಮಿಹಿರಂ . . . ವಿಭಾವಸು ಸಪ್ತಸಪ್ತಿ ಸವಿತಾರಂ ಸಹಸ್ರಾಂಶು ಪೂಷ್ಣನೆನೆ ಸೂರ್ಯನಕ್ಕುಂ" (ಮಂಗರಾ. ೧೦-೨). ೩. ಬೆಂಕಿ ; ಅಗ್ನಿ : ವಸನವಿಹೀನಂ . . . ಚೋರ ವಿಭಾವಸುಗಳ ಭಯದಿಂದಾಕ್ರಂದಿಸುವಂ ಕಾನನದೊಳನಿಮಿಷಾಂತ್ಯತ್ಯಂಶಂ (ಜಾತಕ. ೧೯-೩೭). ೪. ಬೆಂಕಿಯ ಅಧಿದೇವತೆ ; ಅಷ್ಟದಿಕ್ಪಾಲಕರಲ್ಲಿ ಒಬ್ಬ : "ವಸುಸಿತೇತರಗತಿ ಸ್ವಾಹಾಪ್ರಿಯಂ . . . ವಿಭಾವಸು ಲೋಹಿತಾಶ್ವಂ . . . ವಿರೋಚನನೆನಿಕ್ಕುಂ" (ಮಂಗರಾ. ೧೪-೬). ೫. ಚಂದ್ರ. ೬. ಎಕ್ಕದ ಗಿಡ. [ಸಂ.]

**ವಿಭಾವಿಸು** (ಕ್ರಿ). ೧. ನಿರ್ಣಯಿಸು ; ನಿಶ್ಚಯಿಸು : ನಟ್ಟಪಾಂಗದ ಪಾಂಗಿಂದಮ ಕನ್ನೆ ಕನ್ನಡಿಸಿದಳ್ ತನ್ನೊಂದಭಿಪ್ರಾಯಮಂ ಎಂದರವಿಂದಲೋಚನಂ ಮನದೊಳ್ ವಿಭಾವಿಸುತ್ತಿರ್ಪನ್ನೆಗಂ (ಜಗವಿ. ೧೦-೪೧ ವ). ೨. ಯೋಚನೆ ಮಾಡು ; ವಿಚಾರ ಮಾಡು : ಬರೆದೀ ಚಿತ್ರದ ಬೆಮರಿಂದ ಬೆರಳಟ್ಟೆಡೆ ಮಲಿನಮಾಗಿ ಕಾಣ್ಬುದು ಕದಪಿಂದು ರುಳಿದ ಕಂಬನಿ ಬಣ್ಣಂ ಪರೆದಿಪ್ಪುದರಿಂ ವಿಭಾವಿಸಲ್ಕೆಡೆಯೆನಿಕುಂ (ಶಾಕುಂತ. ೮೯-೧೪೭). [ವಿಭಾವನ + - ಇಸು]

**ವಿಭಾವ್ಯ** (ಗು). ೧. ಚೆನ್ನಾಗಿ ಗ್ರಹಿಸಬಹುದಾದ ; ಸ್ಪಷ್ಟವಾಗಿ ತಿಳಿಯ ಬಹುದಾದ. (ನಾ). ೨. [ಕಾವ್ಯಮೀ] ಭಾವವು ಉದ್ದೀಪನಗೊಳ್ಳುವುದು : ಇದೆ ದಲ್ ವಕ್ರೋಕ್ತಿಯೆನಿಪುದಿದರಿಂದೆ ವಿಭಾವ್ಯಮಪ್ಪುದರ್ಥಂ (ಧ್ವನ್ಯಾಲೋ. ೨೧೨). [ಸಂ.]

**ವಿಭಾಷೆ** (ನಾ). ಆಯ್ಕೆ ; ಐಚ್ಛಿಕತೆ : ಸದೃಶಾಕ್ಷರವಿನ್ಯಾಸಂ ಪದದೊಳ್ ಪಾದಂಗಳೊಳ್ ಪೊದಳ್ದೆಸೆದಿರೆ ಪೇೞ್ವುದನುಪ್ರಾಸಂ ನಿಯಮದಿನದನಾದ್ಯಂತಂ ವಿಭಾಷೆಯಿಂ ವಿರಚಿಸುವೆಂ (ಕಾವ್ಯಾವ. ೫೫೫). [ಸಂ. ವಿಭಾಷಾ]

**ವಿಭಾಸ** (ನಾ). ಹೊಳಪು ; ಕಾಂತಿ ; ಪ್ರಭೆ : ಇವು ದೃಷ್ಟಿವಿಷಾಹಿಯ ಗರಳವಹ್ನಿಜಿಹ್ವಾ ವಿಭಾಸಮೆನೆ ಕಣ್ಗಳ ಕೆಂಪವರೋರ್ವರೋರ್ವರಂ ಪ್ರಾಣವಾಯುವಂ ನುಂಗುವಂತೆ ನೋಡಿದರಾಗಳ್ (ಪಂರಾಮಾ. ೧೪-೧೪೭); ಲೇಸೆನಿಪ ಕೈದೀವಿಗೆಗಳ ವಿಭಾ[ಪಾಠಾಂ. ಕಾ]ಸದಿಂ ಪಿಡಿದುಕೊಂಡುಲ್ಲಾಸವೆತ್ತಾಳ್ವರಿಯ ಮೇಲಿಂತಿರುಳು ತಿರುಗುತಿರೆ (ಬಸಪು. ೧೭-೨೩). [ಸಂ. ವಿಭಾಸಾ]

**ವಿಭಾಸಿ** (ಗು). ಹೊಳೆಯುವ ; ಪ್ರಕಾಶಿಸುವ ; ಕಾಂತಿಯಿಂದೊಡಗೂಡಿದ : ಚಂದ್ರಿಕಾಚಯಮೆಳಸಿತ್ತು ವಾಸರಮುಮಂ ದರಹಾಸವಿಭಾಸಿವಕ್ತ್ರಶೋಭೆಯ ನೆವದಿಂದೆ ಚಂದ್ರವಳಯಂ ತಳೆದತ್ತನಿಶಂ ದ್ವಿರೂಪಮಂ (ಚಂದ್ರಪ್ರ. ೨-೧೫) ; ಸುದತಿಯು ಪಂಚಮುರ್ವಿಪ ಮುಖಂ ನಿಗಮಾಂಗವಿಭಾಸಿ ಮಾತ್ರಕಾಸ್ಪದಮಿದು ಮಂತ್ರಿಪುತ್ರವದನಂ ಮೆಱೆದಪ್ಪುದುದಾತ್ತವೃತ್ತಿಯಿಂ (ರಾಜಶೇ. ೧೪-೪೪). [ಸಂ. ವಿಭಾಸಿನ್]

**ವಿಭಾಸ್ಕರ** (ಗು). ೧. ಅತಿಶಯವಾಗಿ ಪ್ರಕಾಶಿಸುವ, — ಹೊಳೆಯುವ : ಮಾಹೇಶ್ವರಚರಣವಾರಿರುಹರೇಣುಪ್ರಕಲಿತವಿಭಾಸ್ಕರಲಲಾಟನನಭವಭಕ್ತಿಸ್ಥಳಕಿರೀಟನನು . . . ಸಾಷ್ಟಾಂಗದಲಿ ನಮಿಸಿ (ಬಸವು. ೪೭-೭೯). (ನಾ). ೨. ಸೂರ್ಯ ನಿಲ್ಲದಿರುವಿಕೆ. [ಸಂ.]

**ವಿಭಾಳ** 'ವಿಭಾಡ' ನೋ.

**ವಿಭಿನ್ನ** (ಗು). ೧. ಒಡೆದ ; ಛಿದ್ರಗೊಳಿಸಿದ : ಸತ್ಕ್ರಿಯೆಗಳನು ವಿಸ್ತರಿಸಿದನು ದುಃಸ್ವಪ್ನಕುಂತವಿಭಿನ್ನಚೇತನನು (ಕುವ್ಯಾಸ. ೧೩-೧೭). ೨. ಬೇರೆಯಾದ ; ಪ್ರತ್ಯೇಕಗೊಂಡ. ೩. ಚೆದರಿ ಹೋದ ; ತೊಲಗಿದ ; ದೂರವಾದ : ತನ್ನ ತನುಧರ್ಮಗಳುಳಿದು ವಿಭಿ[ಪಾಠಾಂ. ಚ್ಛಿ]ನ್ನಸ್ಮರಣೆಯಲಿ ಮಲುಹಣನು ತನ್ನ ನಲ್ಲಳ ಸಲ್ಲಲಿತಭಾವಾತಿರೇಕವನು . . . ನೆನೆವ (ಬಸವು. ೪೨-೨೦). ೪. ದಾರಿತಪ್ಪಿದ ; ಕಂಗೆಟ್ಟ. ೫. ನಿರಾಶೆಗೊಂಡ ; ನಿರಾಶೆ ಹೊಂದಿದ. ೬. ನಾನಾಬಗೆಯ ; ವಿಧವಿಧವಾದ. ೭. ಬೇರೆಬೇರೆಯ ; ಭಿನ್ನವಾದ ; ವ್ಯತ್ಯಾಸವಾದ : ಅತಿಮೋಹನಿಗಳನಿಯಮಿತನುತರೊಡನೊಡನಖಿಲಸುಖಮನುಂಡರ್ ದ್ವಾವಿಂಶತಿ ಜಲಧಿವರೆಗಮಿಂದ್ರಪ್ರತೀಂದ್ರರಿಂದು ಕೆಳೆ ವಿಭಿನ್ನತರರುಚಿ ಕೆಳೆಯೇ (ಶಾಂತಿಪು. ೭-೧೧೧). ೮. ಬೆರೆತುಕೊಂಡ ; ಮಿಶ್ರವಾದ. [ಸಂ.]

**ವಿಭಿನ್ನರೂಪಕ** (ನಾ). [ಕಾವ್ಯಮೀ] ರೂಪಕಾಲಂಕಾರದ ಒಂದು ಪ್ರಭೇದ ; ಒಂದನ್ನೇ ಬೇರೆಬೇರೆ ಪ್ರಕಾರವಾಗಿ ನಿರೂಪಿಸುವ ರೂಪಕ : ಪರಿಚಿತ ಸನಾಭಿರಾಗಾಂಕುರಜಲಸೇಚಂ ವಿರೋಧಿತರುದವದಹನಂ ಪರಮೋದಯರವಿಗಗನಂ ಪರಾಕ್ರಮವದೆನೆ ವಿಭಿನ್ನರೂಪಕಮಕ್ಕುಂ (ಕವಿರಾ. ೩-೨೨). [ಸಂ.]

**ವಿಭೀಕರ** (ನಾ). ಅತಿಭಯಂಕರವಾದುದು : ವಿಜಪ ದಾಡೆಗಳಂ ನಿಜವಕ್ತ್ರದೊಳ್ ವಿಭೀಕರಮನೆ ತೋಱುಗುಂ ಸಮರರಂಗದೊಳೀ ರಣರಂಗಭೈರವಂ (ಸೌಇ. XX, ೮೭-೩೦ ; 11ನೆಯ ಶತ). [ಸಂ.]

**ವಿಭೀತ** (ಗು). ೧. ಹೆದರಿದ ; ಭಯಗೊಂಡ. (ನಾ). ೨. ಭಯಪಟ್ಟವನು ; ಅಂಜಿದವನು : ಅಱಿಪಿದವರುಂ ವಿಭೀತರುಮಟಲ್ದರು ಸಲೆ ವಿಯೋಗದಿಂ ನಿಜಜನದಿಂ ಕಟಿಯ ಪರಾರ್ಥಿಗಳುಂ ಬಾಯಟಿದೊಲ್ದಂತಿದನೆ ಯುಕ್ತಪುನರುಕ್ತಿಕಮಂ (ಕವಿರಾ. ೨-೨೫). ೩. ಒಂದುಬಗೆಯ ಸಸ್ಯ ; ತಾರೆಗಿಡ : "ಕಲಿಃ, ಅಕ್ಷಃ, ವಿಭೀತಃ — ಈ ೩ ತಾಱೆ" (ಹಲಾಯು. ೧೧೧-೪೭೪). [ಸಂ.]

**ವಿಭೀತಕ** (ನಾ). = ವಿಭೀತ ೩ : "ವಿಭೀತಕಮಕ್ಕುಂ ಕಲಿದ್ರುಮಂ" (ವಸ್ತುಕೋ. ೩೫-೧೨). [ಸಂ.]

**ವಿಭೀತಿ** (ನಾ). ಭಯ ; ಅಂಜಿಕೆ : "ಶಂಕೆ ಭಯಂ ಸಾಧ್ವಸಮಾಶಂಕಂ ತ್ರಾಸಂ ದರಂ ವಿಭೀತಿ ಸಮಾನಾರ್ಥಂ" (ವಸ್ತುಕೋ. ೧೧೧-೫). [ಸಂ.]

**ವಿಭೀಷಣ** (ಗು). ೧. ಅತಿಯಾದ ಭಯವನ್ನುಂಟುಮಾಡುವ ; ವಿಶೇಷವಾದ ಹೆದರಿಕೆಯನ್ನು ತರುವ ; ಭೀಷಣವಾದ. (ನಾ). ೨. ಹೆದರಿಕೆಯನ್ನು ತರುವಂಥದು ; ಭೀಷಣವಾದುದು ; ಉಗ್ರವಾದುದು : ಶಾತಶರಾಗ್ನಿ ಭಗ್ನಭಟಕೋಟಿವಿಭೀಷಣಂ . . . ಭೂತಸದನಂ ಕದನಂ ಕದನತ್ರಿಣೇತ್ರನಾ (ಪಂಪಭಾ. ೧೪-೩). ೩. ರಾವಣನ ತಮ್ಮನ ಹೆಸರು : ವಿಭೀಷಣಂಬೆರಸು ಸುಗ್ರೀವಾದಿಗಳ್ ರಾಘವಂಗೆ ಸುಮಿತ್ರಾತನಯಂಗೆ ರಾಜ್ಯಸವನಪ್ರೋತ್ಸಾಹವಮಂ ಮಾಡಿದರ್ (ಪಂರಾಮಾ. ೧೫-೧೧) ; ರಾವಣನ ಪದಮಂ ವಿಭೀಷಣಂಗೊಲಿದಿತ್ತು ದೇವರ್ಕಳಂ ಪೊರೆದು . . . ಭೂವರಂ . . . ಸೌಮಿತ್ರಿದಶವದನನುಜಸುಗ್ರೀವಾದಿಗಳ ಗಡಣದಿಂದ ಯೋಧ್ಯಾಪುರಿಗೆ ದೂವಾಳಿಸಿದನು (ಜೈಮಿಭಾ. ೧೮-೮). [ಸಂ.]

**ವಿಭು** (ಗು). ೧. ಎಲ್ಲಾ ಕಡೆಯಲ್ಲಿಯೂ ಇರುವ ; ಸರ್ವವ್ಯಾಪಿಯಾದ. ೨. ಅತ್ಯುತ್ತಮವಾದ ; ಶ್ರೇಷ್ಠವಾದ ; ಮಹತ್ತಾದ. ೩. ಸರ್ವಸಮರ್ಥವಾದ ; ಸರ್ವಶಕ್ತವಾದ (ನಾ). ೪. ಎಲ್ಲಾ ಕಡೆಯಲ್ಲೂ ಇರುವಂಥದು ; ಸರ್ವವ್ಯಾಪ್ತಿಯಾದುದು : ಅವಱೊಳ್ಲೋಕಮದೆಂತುಟೆಂದೊಡೆ ಸಮಂತಾವಂಗಮೆತ್ತತ್ತ ನೋಡುವೊಡಂ ನೋಡಲನಂತಮಪ್ಪ ವಿಭುವಪ್ಪಾಕಾಶಪದ್ಮಕ್ಕೆ ತಾನೆ ವಲಂ ಕರ್ಣಿಕೆಯಂದನಾಯ್ತು (ಆದಿಪು. ೧-೪೩). ೫. ಪರಿಪೂರ್ಣವಾದುದು ; ಅಖಂಡವಾದುದು : ಆತ್ಮನು . . . ಕರ್ತ, ಜ್ಞಾತ, ಭೋಕ್ತ ಎಂಬಿಷ್ಟು ವಿಷಯ ಈವರೆವಿಗೆ ಸಿದ್ಧವಾಗಿದೆ. ಜೀವನ ಈ ಗುಣಗಳು ಅಪರಿಮಿತವಲ್ಲ — ವಿಭುವಲ್ಲ (ಜೀವಾತ್ಮ. ೫೨). ೬. ಒಡೆಯ ; ಪತಿ ; ಸ್ವಾಮಿ. ೭. ರಾಜ ; ಪ್ರಭು : ಕೃಶರಾಗಂ ವಿಗತಮನಃಪ್ರಸರತೆಯಿಂ ಕಣ್ಣ ನೀರ್ಗಳಂ ತೀವಿ ನಿರಂಕುಶಶೋಕಪರವಶಂ ಚಿತ್ರಶೇಷ ನಿಜಜನಕನಿಳಯಮಂ ವಿಭು ಪೊಕ್ಕಂ (ಶಾಂತಿಪು. ೧-೯೪) ; ಇಱಿಯಲ್ಬಲ್ಲೊಡೆ ವೀರನಾಗು . . . ವಿಭುವಾಗಾರೆಂದೊಡಂ ಕೋಪಮಂ ತೋಱಿಯಲ್ಬಲ್ಲೊಡೆ (ಸೋಮೇಶ. ೭೭). ೮. ದೇವರು ; ಪರಮಾತ್ಮ : ಶ್ರೀಗಿರಿಯೊಳ್ಪಿರಾಜಿಪ ಸದಾಶಿವನೀ ವಿಭು ಮಲ್ಲಿಕಾರ್ಜುನಂ (ಸೌಇ. XX, ೨೪೮-೨ ; 1228) ; ಕೊಡುವ ಪದ್ಯಕೆ ಸುಪ್ರಮೇಯದ ಗಡಣಕಬುಜಭವಾದಿ ವಿಭುಗಳು ಬಿಡಿಸಲರಿದೆನಿಪತುಳ ತಾರ್ಕಿಕಜನಗಳೊಪ್ಪಿದರು (ಕುವ್ಯಾಉ. ೮-೩೮). ೯. ಬ್ರಹ್ಮ. ೧೦. ವಿಷ್ಣು. ೧೧. ಶಿವ. [ಸಂ.]

**ವಿಭುಗುಣನುತಿ** (ನಾ). [ಕಾವ್ಯಮೀ] ದಶವಿಧ ಕಾಮಾವಸ್ಥೆಗಳಲ್ಲಿ ಒಂದು ; ಒಡೆಯನ ಗುಣಸ್ಮರಣೆ ಮಾಡುವುದು : ಅಭಿಲಾಷೆ ಚಿಂತೆ ಸಂಸ್ಮೃತಿ ವಿಭುಗುಣನುತಿ . . . ಕ್ಷುಭಿತಾತ್ಮಾವಸ್ಥೆ ಮರಣಮಿವು ದಶಭೇದಂ (ಶೃಂಗಾರ. ೪-೬೯). [ಸಂ.]

**ವಿಭುತ್ವ** (ನಾ). ೧. ಸರ್ವವ್ಯಾಪ್ತಿಯಾಗಿರುವಿಕೆ. ೨. ಸರ್ವಸಮರ್ಥವಾಗಿರುವಿಕೆ. ೩. ಒಡೆತನ ; ಪ್ರಭುತ್ವ : ಸಿರಿಯೊಳ್ಪರಹಿತಮನಮತ್ಸರಮತಿಯಂ ವಿದ್ಯೆಯೊಳ್ವಿಭುತ್ವದೊಳೆ ನಯಾಚರಣಮನತಿಶೌರ್ಯದೊಳೊಪ್ಪಿರೆ ವಿನಯಮನಾಳ್ದು ಬಾಳ್ದವಂಗೆಣೆಯುಂಟೇ (ರಾಜಶೇ. ೧೩-೧೦) ; ಮೋಕ್ಷದಲ್ಲಿ ಜೀವಾತ್ಮನು . . . ವಿಭುತ್ವ, ದ್ರವ್ಯತ್ವ, ನಿತ್ಯತ್ವ, ನಿರವಯವತ್ವ, ನಾನಾತ್ವ ಮೊದಲಾದ ಧರ್ಮಗಳೊಡನೆ ಯಾವತ್ಕಾಲ ನಿರ್ದುಃಖಿಯಾಗಿರುತ್ತಾನೆ (ಹಿಂದಸಾ. ೧೨೪). [ಸಂ.]

**ವಿಭೂತಿ** (ನಾ). ೧. ಹಿರಿದಾದ ಶಕ್ತಿ, — ಸಾಮರ್ಥ್ಯ. ೨. (ಭಗವಂತನ) ವಿಶೇಷಪ್ರಕಾಶನ ; ಮಹಿಮೆ ; ಗರಿಮೆ : ಜ್ಯೋತಿಯಿರ್ಪೆಡೆಯಲ್ಲಿ ಭಗವದ್‌ವಿಭೂತಿಯಂ ದರ್ಶಿಸುತೆ, ಮುಡಿಬಾಗಿ ಮಣಿದು ಕೈಜೋಡಿಸುವೆನಾಂ (ಶ್ರೀರಾಮಾ. ೬-೧೪೯). ೩. ಸಿರಿ ; ಐಶ್ವರ್ಯ ; ಸಂಪತ್ತು : ಲಕ್ಷದೀನಾರಂಗಳಂ ಕೊಟ್ಟು ರತ್ನಕಂಬಲಂಗಳಂ ಕೊಂಡು ಸೊಸೆವಿರ್ಕಳ್ಗೆ ಪಚ್ಚುಗೊಟ್ಟೊಡವರುಂ ತಂತಮ್ಮ ಕೆರ್ಪುಗಳೊಳ್ ತಗುಳ್ಚಿದರೆಂಬ ಮಾತನರಸಂ ಕೇಳ್ದು ಚೋದ್ಯಂಬಟ್ಟವರ ವಿಭೂತಿಯಂ ನೋಟ್ಪೆನೆಂದು ಮನೆಗೆ ವರ್ಪುದಂ (ವಡ್ಡಾರಾ. ೫೫-೨೯) ; ಶ್ರುತಕೈವಲ್ಯವಿಭೂತಿಯಂ ತಳೆದು . . . ಭದ್ರಬಾಹುಮುನಿನಾಥರ್ ಖ್ಯಾತಿಯಂ ತಾಳ್ದಿದರ್ (ಸುಕುಮಾ. ೧-೧೧). ೪. ವಿಜೃಂಭಣೆ ; ವೈಭವ ; ಸಂಭ್ರಮ : ವಿಜಯಗಜಾರೂಢನಾದ ವಿಜಯನಂ ಮುಂದಿಟ್ಟು ಮಹಾವಿಭೂತಿಯಿಂದಯ್ವರುಂ ನಿಜಾನ್ವಯರಾಜದ್ರಾಜಧಾನಿಯಂ ಪುಗೆ (ಪಂಪಭಾ. ೧೪-೧೩ ವ) ; ಮಹಾವಿಭೂತಿಯಿಂ ಪುರಮಂ ಪೊಕ್ಕರ್ (ಪಂರಾಮಾ. ೯-೧೪೦ ವ). ೫. ಕೀರ್ತಿ ; ಯಶಸ್ಸು : ಮಂತ್ರಿಯುಂ ನೃಪತಿಯುಂ ಬಗೆಗೊಂಡನುಕೂಲವೃತ್ತಿಯೊಳ್ ನೆರೆದಿರೆ ಕೂಡುಗುಂ ನಿಖಿಲರಾಜ್ಯ ವಿಭೂತಿಗಳಾವ ಕಾಲಮಂ (ಪಂಚತಂ. ೯೩-೨೨) ; ಅಭಿನುತಮಂ ಶ್ರೀಮಹತ್ತರ ವಿಭೂತಿಯಂ ತಳೆದ ಸೋಮಶರ್ಮಂಗಂ ಶ್ರೀನಿಭೆ ಕಾಶ್ಯಪಿಗಂ ಸುತರಗ್ನಿಭೂತಿಯುಂ ವಾಯುಭೂತಿಯುಂ ಪೆಸರಿಂದಂ (ಸುಕುಮಾ. ೨-೫). ೬. ಮಹಾಪುರುಷ ; ಮಹಿಮಾಶಾಲಿ : ವಿದ್ಯಾರ್ಜನೆಗಾಗಿ ತವಕಿಸುವ ಆ ವಾಮನಮೂರ್ತಿ ಅವರಿಗೊಂದು ವಿಭೂತಿಯಾಗಿ ಕಂಡಿದ್ದ (ಹೊಸಕ್ಷಿ. ೩೫) ; ಸ್ಥಿತಪ್ರಜ್ಞನಾದವನಲ್ಲಿ ಶಮೆ — ದಮೆ ಅವಶ್ಯ . . . ಆಗ ಅವನು ಚಿತ್ತಕ್ಲೇಶಮದದಿಂದ ದೂರವಾಗಿ "ವಿಭೂತಿ" ಆಗುವನು (ಜೀದಾನ. ೧೧೨). 'ವಿಭೂತಿಪೂಜೆ' ಪರಾ. ೭. (ಹಸುವಿನ ಸಗಣಿಯ) ಬೂದಿ ; ಭಸ್ಮ : ವಿಭೂತಿಯನೆ ಹೂಸಿ

ರುದ್ರಾಕ್ಷಿಯನೆ ಕಟ್ಟಿ ಶಿವ ನಿರ್ಮ್ಮೊಲವಿಲ್ಲದಂತೆ ಆಗಿರ್ದನಯ್ಯಾ (ಬಸವ. ೨೬೯) ; ವಿಭೂತಿಯನ್ನು ಧರಿಸಿದಲ್ಲಿ . . . ಸಕಲರೋಗಂಗಳೂ ನಾಶವಾಗುವುವು (ಸಕವ್ಯ. ೪೧). ೮. ಒಂದು ಬಗೆಯ ಸಸ್ಯ ; ಸಂಜೆಮಲ್ಲಿಗೆಗಿಡ : ವಿಭೂತಿ, ಭದ್ರಾಕ್ಷಿಹೂ, ನಾಲ್ಕುಘಂಟೆ ಹೂ, ಸಂಜೆಮಲ್ಲಿಗೆ (ವ್ಯಜಿಗಿ. ೫೪-೧೦೮೪). ೯. [ವೀಶೈ] ಅಷ್ಟಾವರಣಗಳಲ್ಲಿ ಒಂದು : ವಿಭೂತಿ : ಅದು ಮಹಾವಸ್ತುವಿನ ದಿವ್ಯತೇಜವು . . . ಶಿವಶರಣರು ಅದು ಪರಶಿವನ ಪರಮಚೈತನ್ಯವು, ಚಿತ್‌ಸ್ವರೂಪವು ಎಂದು ಭಾವಿಸಿ ಅದನ್ನು ಲೇಪಿಸಿಕೊಳ್ಳುತ್ತಾರೆ (ಶಿವಾಕೋ. ೧೨೯); ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಮತ್ತು ಮಂತ್ರ — ಇವೇ ಅಷ್ಟಾವರಣಗಳು (ವಚಸಾ. ೧೧೯). [ಸಂ.]

**ವಿಭೂತಿಕಲ್ಪ** (ನಾ). [ವೀಶೈ] ವಿಭೂತಿ ಅಥವಾ ಭಸ್ಮವನ್ನು ಮಂತ್ರ ಪೂರ್ವಕವಾಗಿ ಧರಿಸುವ ಕ್ರಿಯೆ, —ಆಚಾರ : ಗರಗಳಾದಿಯ ಪೊರ್ದದಂತೆ ಸಲಹುವುದೈ ವಿಭೂತಿಕಲ್ಪಂ (ವೀಶೈಪು. ೭-೫-೨೦). [ಸಂ.]

**ವಿಭೂತಿಗಾಣಿಕೆ** (ನಾ). ದೇವರ ಪ್ರಸಾದವಾದ ಪವಿತ್ರಭಸ್ಮಕ್ಕೆಂದು ಕೊಡುವ ಕಾಣಿಕೆ : ಮುಳವಾಯರಾಜ್ಯದ ದೇವಸ್ಥಾನಗಳಿನ್ದ ಅರಮನೆಗೆ ಎತ್ತಿ ಬಹ XXX ವರಿ ವಿಭೂತಿಗಾಣಿಕೆ ಹೊನ್ನು ಕಡಾಯದ ಹುಟ್ಟುವಳಿಯನು . . . ಮಲ್ಲಿಕಾರ್ಜುನರಾಯ ಮಹಾರಾಯರಿಗೆ ಧರ್ಮ್ಮವಾಗಿ ಬಿಟು (ಎಕ. X, ಬೌರಿಂಗ್. ೧೮-೩ ; 1465).

[ವಿಭೂತಿ + ಕಾಣಿಕೆ (< ಕಾಣ್ಕೆ)]

**ವಿಭೂತಿಧಾರಣ** (ನಾ). ಭಸ್ಮ ಅಥವಾ ಭಸಿತವನ್ನು ಧರಿಸುವಿಕೆ : ಆಗಮೋಕ್ತಸ್ನಾನಂಗಳಲ್ಲಿ ತತ್ತನ್ಮಂತ್ರಗಳಿಂ ಶ್ರೀವಿಭೂತಿಧಾರಣಂಗೈಯುವುದೇ ವಿಭೂತಿಪಟ್ಟೆಯೆನಿಸುವುದು (ವಿವೇಕ. ೧೧೪); ವಿಭೂತಿಧಾರಣವು ಕಾಮಾದಿ ಅರಿಷಡ್ವರ್ಗವನ್ನು ದಹಿಸಿದುದಕ್ಕೆ ಗುರುತು (ವಚಸಾ. ೧೨೫). [ಸಂ.]

**ವಿಭೂತಿಪಟ್ಟ** (ನಾ). ೧. [ವೀಶೈ] ಮರಣದ ಮುನ್ನ ಅಥವಾ ದೀಕ್ಷಾಸಮಯದಲ್ಲಿ ಮಾಡಿಸಿಕೊಳ್ಳುವ ಒಂದು ಸಂಸ್ಕಾರ ; ವಿಭೂತಿಧಾರಣೆ : ವಿಭೂತಿವೀಳೆಯ, ವಿಭೂತಿಪಟ್ಟ (ವಿಭೂತಿವೀಳ್ಯ) ಶರಣರು ಮರಣದ ಮುನ್ನ ಮಾಡಿಸಿಕೊಳ್ಳುವ ಒಂದು ಸಂಸ್ಕಾರವಿಶೇಷ (ಶರಸಾ. ೨೪-೭). ೨. (?) : ಶಟ್ಟಿಯು ತನ್ನ ಮಗಳಾದ ಗಣಕುಮಾರಿ ಚೆಂದವ್ವೆಯನ್ನು ಏಕಮೇವವಿಶ್ವಸ್ತಳನ್ನಾಗಿ . . . ನಿಯಮಿಸಿದನು. ಮಹಾಗಣಂಗಳೂ ಸೇರಿ ಆಕೆಗೆ ವಿಭೂತಿಪಟ್ಟವನ್ನು ಕಟ್ಟಿದರು (ಕರ್ನಾಕ. ೨೮). [ಸಂ.]

**ವಿಭೂತಿಪಟ್ಟೆ** (ನಾ). ೧. ಹಣೆಯ ಮೇಲೆ ಧರಿಸುವ ಭಸ್ಮದ ಅಡ್ಡಗೆರೆ, —ರೇಖೆ : ವಿಭೂತಿಪಟ್ಟೆಯು ಅವರ ಮುಖಕ್ಕೆ ಚೆನ್ನಾಗಿ ಒಪ್ಪುತ್ತದೆ (ರೂಢಿ). ೨. = ವಿಭೂತಿಪಟ್ಟ ೧ : ಆಗಮೋಕ್ತಸ್ನಾನಂಗಳಲ್ಲಿ ತತ್ತನ್ಮಂತ್ರಗಳಿಂ ಶ್ರೀವಿಭೂತಿಧಾರಣಂಗೈಯುವುದೇ ವಿಭೂತಿಪಟ್ಟೆಯೆನಿಸುವುದು (ವಿವೇಕ. ೧೧೪).

[ವಿಭೂತಿ + ಪಟ್ಟೆ]

**ವಿಭೂತಿಪುರುಷ** (ನಾ). ಮಹಾಪುರುಷ ; ಮಹಿಮಾಶಾಲಿ : ಇವರು ಜೀವಂತರಾಗಿ ಕೈಲಾಸಕ್ಕೆ ಶಿಷ್ಯರೊಡನೆ ತೆರಳಿದ ವಿಭೂತಿಪುರುಷರೆಂದು ಕಾಶ್ಮೀರದಲ್ಲಿ ದಂತಕಥೆಗಳು ಹುಟ್ಟಿವೆ (ಧ್ವನ್ಯಾಲೋ. XXViii, ಪೀಠಿಕೆ). [ಸಂ.]

**ವಿಭೂತಿಪೂಜೆ** (ನಾ). ಮಹಾಪುರುಷರನ್ನು ಪೂಜಿಸುವಿಕೆ, —ಗೌರವಿಸುವಿಕೆ : ವಿಭೂತಿಪೂಜೆಯು ನಮ್ಮ ಮಾನಸಿಕಸೂತ್ರಗಳಲ್ಲಿ ಒಳ್ಳೇ ಗಟ್ಟಿಯಾದ, ಗುರುತಮವಾದ ಎಳೆ (ಕಥಕ. ೩೭). [ಸಂ. ವಿಭೂತಿಪೂಜಾ]

**ವಿಭೂತಿವೀಳೆಯ, ವಿಭೂತಿವೀಳ್ಯ** (ನಾ). ೧. = ವಿಭೂತಿಪಟ್ಟ ೧ : ವಿಭೂತಿವೀಳೆಯ, ವಿಭೂತಿಪಟ್ಟ (ವಿಭೂತಿವೀಳ್ಯ) ಶರಣರು ಮರಣದ ಮುನ್ನ ಮಾಡಿಸಿಕೊಳ್ಳುವ ಒಂದು ಸಂಸ್ಕಾರವಿಶೇಷ (ಶರಸಾ. ೨೪-೭). ೨. ಭಸ್ಮ ಮತ್ತು ತಾಂಬೂಲಗಳನ್ನು ಗೌರವಪೂರ್ವಕವಾಗಿ ಕೊಡುವುದರ ಮೂಲಕ ಆಹ್ವಾನಿಸುವುದು : ವಿಭೂತಿವೀಳೆಯಮಂ ಕೊಟ್ಟು ಕಂಗಳು ತುಂಬಿ ನಿರೀಕ್ಷಿಸಿ . . . ತನುಕರಗಿ ಮನಕರಗಿ ನೋಡಿ ಮಾಡುವುದು ಭಕ್ತಿಸ್ಥಲ (ಬಸವ. ೮೭೪) ; ಅಂತು ನುತಿಸಿ ವಿಭೂತಿವೀಳೆಯವಂ ತಂದು ಮುಂದಿರಿಸಿಯನೇಕ ಸಂಭ್ರಮದಿಂ ಕಲ್ಯಾಣಪಟ್ಟಣಕ್ಕೆ ಬಿಜಯಂಗೆಯ್ಸಿಕೊಂಡು ಬಪ್ಪಾಗಳು (ನನ್ನಚಾ. ೨-೫೩ ವ). **ವಿಭೂತಿವೀಳ್ಯ** : ೧. ವಿಭೂತಿವೀಳೆಯ, ವಿಭೂತಿಪಟ್ಟ (ವಿಭೂತಿವೀಳ್ಯ) ಶರಣರು ಮರಣದ ಮುನ್ನ ಮಾಡಿಸಿಕೊಳ್ಳುವ ಒಂದು ಸಂಸ್ಕಾರವಿಶೇಷ (ಶರಸಾ. ೨೪-೭).

[ವಿಭೂತಿ + ವೀಳೆಯ]

**ವಿಭೂತಿವೀಳ್ಯ** 'ವಿಭೂತಿವೀಳೆಯ' ನೋ.

**ವಿಭೂಷಣ** (ನಾ). ೧. ಒಡವೆ ; ಆಭರಣ : ಮಣಿಕನಕಂ ವಸ್ತುವಿಭೂಷಣಂಗಳಂ ಕೊಟ್ಟು ಪೆಂಡಿರೊಲ್ವರೆ ಗಂಡರ್ ಗುಣಮನೆ ಮೆಚ್ಚುವುದು (ಗದಾಯು. ೨-೫) ; ಆ ಗೋಪಿಗೆ ಪಲ ಪರಲ ವಿಭೂಷಣಮಿತ್ತು ಮುರವೈರಿಯವರ ಕೆಲದೊಳಿರಲವನಾರ ವರಸುತನೆಂದು ಕೇಳಿದನು (ನೇಮಿಸಂ. ೧೬-೧೫). ೨. ಅಲಂಕಾರ ; ಶೃಂಗಾರ. [ಸಂ.]

**ವಿಭೂಷಣಾಂಗ** (ನಾ). [ಜೈನ] ದಶವಿಧ ಕಲ್ಪತರುಗಳಲ್ಲಿ ಒಂದು ; ಬಯಸಿದ ಆಭರಣಾದಿಗಳನ್ನು ನೀಡುವಂತಹ ಕಲ್ಪಕುಜ : ವಸನಾಂಗಾತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗಾನ್ನಾಂಗ ಸುರಾಂಗ ಭಾಜನಾಂಗಾವಸಥಾಂಗ ವಿಭೂಷಣಾಂಗ ದಶಕಲ್ಪಕುಜಂ (ಚಂದ್ರಪು. ೩-೩೪) ; ಗೀರ್ವಾಣವ್ರಜಂ ತಂದು ನೀಡಿದ ವಸ್ತ್ರಾಂಗ ವಿಭೂಷಣಾಂಗ . . . ಪೂಮಾಲೆಯಿಂದಂಗರಾಗದಿನುದ್ಘಾಳಿಸುವಂತು ಪೂಜಿಸಿದನಿಂದ್ರಂ ತತ್ಪಿತೃದ್ವಂದ್ವಮಂ (ಪುಷ್ಪಪು. ೧೨-೧೩). [ಸಂ.]

**ವಿಭೂಷೆ** (ನಾ). ೧. ಒಡವೆ ; ಆಭರಣ. ೨. ಅಲಂಕಾರ ; ಶೃಂಗಾರ. ೩. ಕಾಂತಿ ; ಪ್ರಕಾಶ. ೪. ಚೆಲುವು ; ಸೌಂದರ್ಯ : "ದಾ(ಧಾ)ರಾ, ಶೋಭಾ, ವಿಭೂಷಾ, ಅಭಿ(ಖ್ಯಾ)ಖ್ಯಾ, ಸುಷಮಾ – ಈ ೫ ಶೋಭೆ" (ಹಲಾಯು. ೯೩-೪೧೧).

[ಸಂ. ವಿಭೂಷಾ]

**ವಿಭೆ** (ನಾ). ೧. ಬೆಳಕು ; ಪ್ರಕಾಶ. ೨. ಕದಿರು ; ಕಿರಣ ; ರಶ್ಮಿ : "ರೋಚಿಃ, ಶೋಚಿಃ . . . ಭಾ, ವಿಭಾ, ಭಾಃ . . . ಗೌಃ – ಈ ೩೨ ರಶ್ಮಿಗಳ ಪೆಸರ್" (ಹಲಾಯು. ೭-೩೮). ೩. ಕಾಂತಿ ; ಶೋಭೆ. ೪. ಅಂದ ; ಸೌಂದರ್ಯ.

[ಸಂ. ವಿಭಾ]

**ವಿಭೇದ** (ನಾ). ೧. ಒಡೆಯುವಿಕೆ ; ಬೇರ್ಪಡಿಸುವಿಕೆ. ೨. ಭಾಗ ; ವಿಭಾಗ. ೩. ರೀತಿ ; ಬಗೆ ; ಪ್ರಕಾರ. ೪. ಅಂತರ ; ವ್ಯತ್ಯಾಸ ; ಭಿನ್ನತೆ : ಪಿರಿಯಣ್ಣಂ ಗುರು ತಂದೆಯೆಂದೆಣಿಗುವಂ ಮುನ್ನೆಲ್ಲಮಿನ್ನೀಗಳಾಳರಸೆಂಬೊಂದು ವಿಭೇದಮಾದೊಡೆಣಿಕಂ ಚೀಃ ಕಷ್ಟಮಲ್ತೇ (ಆದಿಪು. ೧೪-೩೨) ; ಪಾರ್ಥನೆರಡಂಬು ಮುಳಿದುದಿನ್ನೊಂದರೊಳಿವನ ಶಿರವನು ರೂಢಿಯಿಂದರಿಯದೊಡೆ ಹರಿಹರವಿಭೇದಮಂ ಮಾಡಿ ನಿಂದಿಸಿದವನ ಗತಿಯಾಗಲೆನಗೆನುತೆ ಪೂಡಿದಂ ಮತ್ತೆ ಕೋದಂಡದೊಳ್ಬಾಣಮಂ (ಜೈಮಿಭಾ. ೧೩-೪೧). ೫. ವಿರೋಧ ; ಪ್ರತಿರೋಧ. ೬. ತೆನೆಯಿಂದ ಕಾಳುಗಳನ್ನು ಬೇರ್ಪಡಿಸುವಿಕೆ ; ಒಕ್ಕುವಿಕೆ : "ವಿಭೇದಮೆನಲೊಕ್ಕಲು" (ಮಂಗರಾ. ೧೧೯-೩).

[ಸಂ.]

**ವಿಭೇದಿಸು** (ಕ್ರಿ). ೧. ಭಾಗ ಮಾಡು ; ಬೇರ್ಪಡಿಸು ; ಪ್ರತ್ಯೇಕಿಸು : ಆರನೇಚಿಲ ಪೊಂಬಾಟೆಯ ಸುರಯಿಯ ಮಾಮರದ ಬಕ್ಕೆವಲಸಿನ ಪುದುವಿಂ ಪರೆದುರ್ಬಿದ ಕಟ್ಟಲೆ ದಿನಕರಾಂಶುಗಳ್ಗಂ ವಿಭೇದಿಸಲ್ಕರಿದದಜೊಳ್ (ಕಾವ್ಯಾವ. ೨೪೮) ; ಪಿರಿದಾಯಾಸದೆ ಗುಣಮಂ ದೊರೆಕೊಳಿಸಿದೊಡಂ ಖಲಂಗೆ ಗುಣಮಂ ಪಶ್ಚಾತ್ಕರಿಸಿ ಗುಣಿಯಂ ವಿಭೇದಿಪ ಪರಿ ತೀಕ್ಷ್ಣಮುಖಿಂಗೆ ಸೂಚಿಯಂತಿರೆ ಸಹಜಂ (ಶಬಶಂ. ೧-೧೭). ೨. ವಿಶ್ಲೇಷಣೆ ಮಾಡು ; ವಿಶ್ಲೇಷಿಸು : ಆದಿಯೊಳಜ ಕೊಟ್ಟ ವರ ನಿನ್ನ ವಿದ್ಯೆಯ ಸಾಧಿಸಿದನ ಕೆಯ್ಯ ನೀನು ಭೇದಿಸಿಕೊಂಬ ಸಂಪ್ರಾಪ್ತಿಯುಂಟೆಲವೊ ವಿಭೇದಿಸಿ ನೋಡಿಕೊ ಮಗನೆ (ಮೋಹತ. ೧೨-೧೩). ೩. ವ್ಯತ್ಯಾಸಗೊಳ್ಳು ; ಬದಲಾವಣೆ ಹೊಂದು ; ಭಿನ್ನವಾಗು : (?). [ವಿಭೇದ + —ಇಸು]

**ವಿಭೇಷಜ** (ನಾ). ಔಷಧ : ತರಣಿ ನವಾಂಶದೊಳ್ ತ್ರಣ ವಿಭೇಷಜ ಕಂಬಳ ಕಾಂಚನಾದಿಯಿಂ . . . ಜೀವನಂ ಕೂಡುಗುಂ (ಜಾತತಿ. ೧೧-೪). [ಸಂ.]

**ವಿಭೋಗ** (ನಾ). ೧. ಹಿಗ್ಗು ; ಸಂತೋಷ ; ಆನಂದ : ಶೂಲದ ಮೇಲಣ ವಿಭೋಗವೇನಾದೊಡೇನೊ ನಾನಾವರ್ಣದ ಸಂಸಾರ ಹಾವು ಹಾವಾಡಿಗನ ಸ್ನೇಹದಂತೆ (ಬಸವ. ೧೨) ; ಯೋಗಲೀನ ಪ್ರಾಣಲಿಂಗ ವಿಭೋಗದೊಳು ಹೊಂದಿರೆ

ಸದಾನಂದಾಗಣಿತಸುಖದಿಂ ದಿವಾರಾತ್ರೌ ವರ್ಜಯೆನೆ (ಬಸವು. ೮-೫೮). ೨. ಒಬ್ಬಾತನ ಹೆಸರು : ಕಲ್ಲ ಬೆಸಗೆಯ್ದು ವಿಭೋಗಂಗೆ ಕೊಟ್ಟ ಪತ್ತುಕೊಳಗ ಮಣ್ಣಂ ನಡಯಿಸದೆ ಕಿಡಿಸಿದಾತ ಕವಿಲೆಯು ವಾರಣಾಸಿಯುಮನಟಿದೊಂ (ಎಕ. XV, ಅರಸೀ. ೨೩೭-೨೪ ; 971). [ಸಂ.]

**ವಿಭ್ರಂಶ (ನಾ).** ನಾಶ ; ಅಳಿವು : "ವಿಭ್ರಮವತಿಯರ ಮಿಸುಗುವದಭ್ರವಿಳಾಸಂ . . . ವಿಭ್ರಂಶಮನೆಯ್ದದೇಂ ಕ್ಷಣಂ ನಿಂದಪುದೇ (ಪಾರ್ಶ್ವಪು. ೪-೬೯). [ಸಂ.]

**ವಿಭ್ರಮ (ನಾ).** ೧. ಸುತ್ತುವಿಕೆ ; ಅಲೆದಾಟ ; ಭ್ರಮಣ : ಬಳಿಯ ತಂಪಿನ ತಡಿಯ ತಾಣದೊಳು ಭೂಪಕುಲತಿಲಕನ ವಿನೋದವಿಭ್ರಮವಿಲಾಸಕ್ಕೆ ಮಂಗಳಮಯವೆನಲ್ ಸವೆದ ಶೈತ್ಯಶಾಲೆಗಳನದನಾವ ಕವಿ ಬಣ್ಣಿಸುವನು (ಹಚಕಾ. ೩-೪೪). ೨. ತಬ್ಬಿಬ್ಬು ; ಭ್ರಮೆ ; ಭ್ರಾಂತಿ : ಮನಮಜಿಗುಂ ನರೇಂದ್ರಸುತನೆಂದಿನಿಸಳ್ಕಿನೆ ಸುತ್ತಲುಂ ಸಖೀಜನಮಿರೆಯುಂ ವಿಚಾರಿಸನೆ . . . ಚೇಟಕಿಯರ್ ನೆರೆದಿರ್ದರೆಂಬಿದಂ ನೆನೆಯನೆ ಕೆಟ್ಟನೇನನಿರದಿಂತುಟು ವಿಭ್ರಮದಿಂದೊಢರ್ಚಿದೆಂ (ಕಾದಂಉ. ೭೭) ; ಉರ್ವಿಯ ಶಾಡ್ವಲಂಗಳಗ್ರಿಮದೊಳೆ ಮಯ್ಯನಿಕ್ಕಿದ ಸಮುಜ್ಜ್ವಳ ತಾರಕ [ಸಂಘ] ಮೆಂಬ ವಿಭ್ರಮವನೆ ಬೀಱುತಿರ್ದುದೆನಸುಂ ಪನಿಪುಲ್ಲ ಪಯಃಕಣಬ್ರಜಂ (ಶಾಂತೀಶ್ವ. ೧೧-೯೩). ೩. ವಿನೋದ ; ತಮಾಷೆ : ರಮಣೀಸ್ಮೇರವಕ್ತ್ರಾಂಬುರುಹವಿಸರದೊಳ್ ಕಾಮಿನೀದೋರ್ಲತಾವಿಭ್ರಮದೊಳ್ . . . ತಾನಿರ್ದನಾಸ್ಥಾನದೊಳತುಳವನಸ್ಪರ್ಧಿಯೊಳ್ಪುವಸಂತಂ (ರಾಜಶೇ. ೯-೭೭). ೪. ಲಾವಣ್ಯ ; ಅಂದ ; ಸೌಂದರ್ಯ : ಏನೆಂದಾಂ ಬಣ್ಣಿಸುವೆನೊ ಸುರಸೌಂದರಿಯ ವಿಳಾಸವಿಭ್ರಮಭ್ರೂಲತೆಯಂ (ಆದಿಪು. ೯-೩೩) ; ಈ ಸತಿಯ ವಿಭ್ರಮವ್ಯೆದಿತೆನ್ನಯ ಮನವನೆನುತಿರ್ದ (ಕುವ್ಯಾವಿ. ೨-೧೧). ೫. ಬೆಡಗು ; ಒಯ್ಯಾರ : ಆಕೆ ಬಳೆದತ್ಕಂತರೂಪಲಾವಣ್ಯಸೌಭಾಗ್ಯಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯೊಳ್ (ವಡ್ಡಾರಾ. ೩೩-೧) ; ತನ್ನ ಲೀಲೆಯಿಂ ಬಂದಳದೊಂದು ವಿಭ್ರಮಂ . . . ಪೊಸತಾಗಿರೆ ವಲ್ಲಭನಲ್ಲಿಗಟ್ಕಿರಿಂ (ಜಗವಿ. ೨-೮೦) ; ಅಚ್ಚರಿಯ ರೊಳರಗಿಣಿಯರೊಳಚ್ಚಮುಗುಳ್ಚುವ ವಿಳಾಸಮುಂ ವಿಭ್ರಮಮುಂ ನಚ್ಚರದೆನೆ ನರನಾರಿಯ ನಚ್ಚಣಕೆಣೆವರ್ಪ ನಚ್ಚಣಂ ಪೆಱತುಂಟೇ (ರಾಜಶೇ. ೧೨-೯೭). ೬. ವಿಜೃಂಭಣೆ ; ವೈಭವ ; ಸಂಭ್ರಮ : ಅಭ್ರಮುವೆರಸಭ್ರಗಜಂ ವಿಭ್ರಮದಿಂದಂ ಸೆಜ್ಜರಕ್ಕೆ ಬಂದವೊಲೆಸೆಗುಂ (ಯಶೋಚ. ೨-೨೧) ; ವಿಭ್ರಮದಿಂ ಬಂದನದೊಂದು ನಂದನವನಂ ಬರ್ಪಂತೆ ಸಂಕ್ರಂದನಂ (ಪುಷ್ಪಪು. ೧೪-೪೫). ೭. ತಪ್ಪು ; ದೋಷ. ೮. [ಕಾವ್ಯಮೀ] ದಶವಿಧವಾದ ಕೇಲಿಭಾವ ಅಥವಾ ಸ್ತ್ರೀಯರ ಸ್ವಭಾವಜ ಅಲಂಕಾರಗಳಲ್ಲಿ ಒಂದು ; ಅನುರಕ್ತಸ್ತ್ರೀಯು ಸಂಭ್ರಮದಲ್ಲಿ ತನಗರಿವಾಗದಂತೆ ಮಾಡಿಕೊಳ್ಳುವ ತೊಡಿಗೆಯ ಪಲ್ಲಟ : "ವಿಭ್ರಮ - ಕಾಂತನ ಹತ್ತಿರ ಬಹ ಸಮಯದೊಳು ಸಂಭ್ರಮದಿಂ ಮಾಡುವ ತೊಡಿಗೆಯ ಪಲ್ಲಟ" (ನಾಚಿರಾ. ೩). [ಸಂ.]

**ವಿಭ್ರಮವತಿ (ನಾ).** ಚೆಲುವೆ ; ಸುಂದರಿ ; ಲಾವಣ್ಯವತಿ : ವಿಭ್ರಮವತಿಯರ ಮಿಸುಗುವದಭ್ರವಿಳಾಸಂ . . . ಶುಭ್ರಾಭ್ರವಿಭ್ರಮದವೊಲ್ ವಿಭ್ರಂಶಮನೆಯ್ದದೇಂ ಕ್ಷಣಂ ನಿಂದಪುದೇ (ಪಾರ್ಶ್ವಪು. ೪-೬೯). [ಸಂ. ವಿಭ್ರಮವತೀ]

**ವಿಭ್ರಮಿಸು (ಕ್ರಿ).** ತಪ್ಪುತಿಳಿದುಕೊಳ್ಳು ; ಭ್ರಾಂತಿಗೊಳ್ಳು ; ಭ್ರಮಿಸು : ಕುಮತಿಗಳು ನಾಯ್ಬಾಲನುಂಡರೂ ತಮವಿಡಿದು ಮರಳ್ಗೊಂಡರೋ ವಿಭ್ರಮಿಸಿ ಮೆಲಿದರೊ ಮದ್ದಕುಣಿಕೆಯ ಕಾಯಿಗಳನು (ಬಸವು. ೫೪-೩೦). [ವಿಭ್ರಮ + - ಇಸು]

**ವಿಭ್ರಾಂತ (ಗು).** ೧. ಸುತ್ತಾಡಿದ ; ತಿರುಗಾಡಿದ. ೨. ಭ್ರಾಂತಿಗೊಳಗಾದ ; ತಬ್ಬಿಬ್ಬುಗೊಂಡ. (ನಾ). ೩. ಭ್ರಾಂತಿಗೊಳಗಾದವನು ; ತಬ್ಬಿಬ್ಬುಗೊಂಡವನು : ನೀಂ ಭವ್ಯನೈ ಮತ್ತಿನ ಮಿಥ್ಯಾಜ್ಞಾನಿ ಪೋಲ್ ನೀಂ ತರಳತೆವೆರಸಿಂತೇಕೆ ವಿಭ್ರಾಂತನಪ್ಪ (ಆದಿಪು. ೩-೭); ಶಾಂತದೂರನನಲ್ಪಮತಿಯಂ ದಾಂತರಹಿತನನಶುಚಿಯಂ ವಿಭ್ರಾಂತನಂ . . . ಸಲಹು ಮದಗರ್ವವಂ ಹರಿಸಿ (ಬಸವು. ೨೨-೫೦). ೪. [ನಾಟ್ಯ] ನೋಟದ ಒಂದು ಭಂಗಿ ; IP "ಕಣ್ಣುಗುಡ್ಡೆ ಅರಳಿಸಿ ಚಂಚಲದೃಷ್ಟಿಯಿಂದ ನೋಡುವುದು" (ಲಾಸ್ಯರಂ. ೨೭೧ ಗದ್ಯಾನುವಾದ) : ಗೆಲವಂದ ನೋಂಟ ಮೊರ್ಮೆಯುಮಲರ್ದುಂ ಚಲಿಸಲ್ಕೆ ತಾರೆ ವಿಭ್ರಾಂತಾಖ್ಯಂ (ಲಾಸ್ಯರಂ. ೨-೨೭). ೫. [ಜೈನ] ಒಂದು ನರಕದ ಹೆಸರು : ರತ್ನಪ್ರಭೆಯೊಳ್ ಸೀಮಂತಕ ನಿರಯ ರೌರವ . . . ವಿಭ್ರಾಂತ ತ್ರಸ್ತ ವಕ್ರಾಂತ . . . ಪ್ರಕೀರ್ಣಕ ವಿಕಲ್ಪದಿಂ ತ್ರಿಂಶಲ್ಲಕ್ಷ ಬಿಲಂಗಳಪ್ಪುವು (ತತ್ತ್ವಪ್ರ. ೧೨೦). [ಸಂ.]

**ವಿಭ್ರಾಂತಚಿತ್ತ (ನಾ).** ಭ್ರಾಂತಿಗೊಳಗಾದ ಮನಸ್ಸುಳ್ಳ ವ್ಯಕ್ತಿ ; ಭ್ರಮಾಧೀನನಾದವನು : ಸಾಕ್ಷಾತ್ ಸದಾಶಿವನಂತೆ ಮೆಱೆವಾ ಅಯ್ಯನಂ ವಿಭ್ರಾಂತಚಿತ್ತರು ಬಲ್ಲರೇ (ಬಸವು. ೨೯-೨೨). [ಸಂ.]

**ವಿಭ್ರಾಂತಿ (ನಾ).** ಭ್ರಾಂತಿ ; ಭ್ರಮೆ : ಕಾಶ್ಯಪಿ . . . ಗದ್ಗದಕಂಠಸ್ಥಿತೆಯಾಗಿ ತನ್ನ ಮನದೊಳ್ ವಿಭ್ರಾಂತಿಯಂ ತಾಳ್ದಿದಲ್ (ಸುಕುಮಾ. ೨-೩೧ ವ) ; ವಿಳಸತ್ಸಂಧ್ಯಾರುಣ ಪ್ರದ್ಯುತಿಗೆ ರುಧಿರವಿಭ್ರಾಂತಿಯಿಂ ಬಗ್ಗವಿಂಡವ್ವಳಿಕುಂ (ರಾಜಶೇ. ೬-೨೦). [ಸಂ.]

**ವಿಭ್ರಾಂತಿಗೊಳ್ (ಕ್ರಿ).** ಗೊಂದಲಗೊಳ್ಳು ; ಕಂಗೆಡು ; ತಬ್ಬಿಬ್ಬಾಗು : ಲಿಂಗದ ಕಂಬನಿಗಳೊಗುವಂದಮಂ ಕಂಡಾಗ ಬೆಬ್ಬೆಱಗೊಂದಿ ಭಯ ವಿಭ್ರಾಂತಿಗೊಂಡು ಮನಂ ಕೆದಱಿ ಹೆದಱಿ (ಬಸವು. ೧೮-೪೭). [ವಿಭ್ರಾಂತಿ + ಕೊಳ್]

**ವಿಭ್ರಾಂತೆ (ನಾ).** ಗೊಂದಲಗೊಂಡವಳು ; ಕಂಗೆಟ್ಟವಳು ; ತಬ್ಬಿಬ್ಬಾದವಳು : ಬಾಷ್ಪಾಂಬುವುಂ ಗದ್ಗದಾರಾವಮುಂ ಪೊಣ್ಮೆ ಸಖೀಜನಕ್ಕೆ ನುಡಿದರ್ ವಿಭ್ರಾಂತೆಯರ್ ಕಾಂತೆಯರ್ (ಪುಷ್ಪಪು. ೧೩-೯೭) ; ಪುರುಷಾಂತರವನೇನುವನಱಿಯೆ ವಿಭ್ರಾಂತೆ ನೀನತಿ ದಿಟ್ಟತನದಿಂದೊಲ್ಲದಿಹುದೇನು (ಬಸವು. ೪೦-೨೭). [ವಿಭ್ರಾಂತ + - ಎ]

**ವಿಭ್ರಾಜ (ನಾ).** ಕಾಂತಿ ; ಹೊಳಪು ; ಪ್ರಕಾಶ : ಅನೂನ ಮರಕತರತ್ನಭಿತ್ತಿ ವಿಭ್ರಾಜದೊಳಾಲಂಬಮಾನ ಮುಕ್ತಾದಾಮಲಂಬೂಷಭೂಷಿತದೊಳ್ . . . ಪೊರೆದು (ಸುಕುಮಾ. ೯-೧೭ ವ). [ಸಂ. ವಿಭ್ರಾಜ್]

**ವಿಭ್ರಾಜಿ (ನಾ).** = ವಿಭ್ರಾಜ : ಶಶ್ವದ್ಬುಗಾಂಭೋರುಹವಿಲಸನವಿಭ್ರಾಜಿಯೊಳ್ . . . ಸೌಂದರ ಕೇಲೀಹಂಸನಾದಂ ಸುಕವಿಜನಮನೋಮಾನಸೋತ್ತಂಸಹಂಸಂ (ಆದಿಪು. ೧೬-೭೫). [ಸಂ.]

**ವಿಭ್ರಾಜಿತ (ಗು).** ೧. ಹೊಳೆಯುವ ; ಪ್ರಕಾಶಿಸುವ ; ಉಜ್ವಲವಾದ : ರಾಜಾಧಿರಾಜಮಸ್ತಕಮಣಿಮಕುಟವಿಭ್ರಾಜಿತಸರೋಜ . . . ಅಷ್ಟಮದಾಂಧನಪ್ಪಾ ಜರಾಸಂಧನ ಮುಂದೆ . . . ಜೀವಂಜಸೆ ನೆಟ್ಟನೆ ನೆಲಕೆ ಬೀಳ್ದುರುಳೆ (ನೇಮಿಸಂ. ೧೭-೧೭); ರಾಜಮುಖಿ ನೋಡೀ ಸರೋವರದ ಪದ್ಮಿನಿಗೆ ರಾಜಹಂಸಕ್ರೀಡೆ ಪುನ್ನಾಗಕೇಳಿ ವಿಭ್ರಾಜಿತಮಧುಪಗೋಷ್ಠಿ ಸಂದಪುದು (ಜೈಮಿಭಾ. ೭-೯). (ನಾ). ೨. ಹೊಳಪು ; ಕಾಂತಿ ; ಪ್ರಕಾಶ. ೩. ಹೊಳೆಯುತ್ತಿರುವಂಥದು ; ಕಾಂತಿಯುಳ್ಳುದು ; ಪ್ರಕಾಶಿತವಾದುದು : ಅಗಣ್ಯಪುಣ್ಯಾರಣ್ಯಶ್ರಮಪುಣ್ಯಶ್ಯೆಲ ಪುಣ್ಯಪ್ರದ ಸಮಾಜವಿಭ್ರಾಜಿತಮುಂ . . . ಎನಿಸಿದ ಭರತಕ್ಷೇತ್ರದ ಮಧ್ಯದೊಳ್ ಮಧ್ಯದೇಶಮುಂಟು (ಜಗಖ. ೨-೧ ವ) ; ಆ ಮಹಾವನಂ . . . ಗಗನಮಂಡಲದಂತೆ ಋಕ್ಷಾಕೀರ್ಣಮುಂ ಕುಟಜಕುಜವಿಭ್ರಾಜಿತಮುಂ (ಚಂದ್ರಪ್ರ. ೫-೫೨ ವ). ೪. ಕಾಂತಿಯಿಂದ ಕೂಡಿದ ವ್ಯಕ್ತಿ ; ಶೋಭಿಸುವವನು : ಭರತಯತಿಪತಿ . . . ಅಮ್ಮತಕರಧವಳೈಕಚ್ಛತ್ರಚಾಮರ ಚತುಷ್ಟಯವಿಭ್ರಾಜಿತನುಂ . . . ಆಗಿ (ಆದಿಪು. ೧೬-೭೪ ವ). [ಸಂ.]

**ವಿಭ್ರಾಜಿಸು (ಕ್ರಿ).** ಹೊಳೆ ; ಪ್ರಕಾಶಿಸು ; ರಾರಾಜಿಸು : ವಿಭ್ರಾಜಿಸುವ ಮಹಿಮೆಯುಳ್ಳಕ್ಷಯಶ್ರೀಯೊಳಾತಂ ನೆರೆದಂ (ಧಮಾಮ್ಯ. ೬-೨೩೩) ; ಪಿರಿದುಂ ಸೊಗಯಿಪ ಬುದ್ಬುದದಿಂದಂಬುಧಿ ವಿಭ್ರಾಜಿಸಿತು (ಜಯಕಾ. ೧-೩೦). [ವಿಭ್ರಾಜ + - ಇಸು]

**ವಿಮಂಡಿತ (ಗು).** ಅತಿಶಯವಾಗಿ ಅಲಂಕರಿಸಲ್ಪಟ್ಟ ; ಚೆನ್ನಾಗಿ ಶೃಂಗರಿಸಿದ : ದಂಡಧರಂಬೊಲಿರ್ದಂ . . . ಪ್ರಭಾಮಂಡಲನೆತ್ತಿ ಚಂಡಭುಜದಂಡವಿಮಂಡಿತ ಮಂಡಲಾಗ್ರಮಂ (ಪಂರಾಮಾ. ೧೪-೧೭೭). [ಸಂ.]

**ವಿಮುಗ್ನ (ಗು).** ತಲ್ಲೀನನಾದ ; ಮಗ್ನನಾದ ; ತನ್ಮಯಗೊಂಡ.

**ವಿಮುಗ್ನಗೋಷ್ಠಿ** = ತಲ್ಲೀನರಾದವರ ಗೋಷ್ಠಿ ; ತನ್ಮಯತೆಯನ್ನು ಹೊಂದಿದವರ ಸಭೆ : ತನು ಮನಂ ಧನವೆಂಬವಂ ವಂಚನೆಗಳಿಲ್ಲದೆ ಕೊಟ್ಟು ರಸಿಕದಿ ಮನಸು ಕರಗಿಸಿ ಮೇಳರಾಗಿ ವಿಮುಗ್ನಗೋಷ್ಠಿಯಲ್ಲಿ ಅನುನಯದೊಳೊಂದಿಪ್ಪ ಜಂಗಮದನುಭವಂಗಳೊಳಿಪ್ಪೆವಗಲದೆ (ಬಸವು. ೧೨-೩೦). [ಸಂ.]

**ವಿಮತ** (ಗು). ೧. ಅಭಿಪ್ರಾಯಭೇದದಿಂದ ಕೂಡಿದ ; ಭಿನ್ನಾಭಿಪ್ರಾಯದ. ೨. ಹೊಂದಿಕೆಯಿಲ್ಲದ ; ಸಾಮರಸ್ಯವಿಲ್ಲದ. ೩. ಕಡೆಗಣಿಸಿದ ; ಉಪೇಕ್ಷಿಸಲ್ಪಟ್ಟ. ೪. ಅಸ್ಪಷ್ಟವಾದ ; ಸಂದೇಹಾಸ್ಪದವಾದ. (ನಾ). ೫. ವಿರುದ್ಧವಾದ ಅಭಿಪ್ರಾಯವುಳ್ಳವನು. ೬. ವಿರೋಧಿ ; ಶತ್ರು. ೭. ಅನ್ಯಮತ ; ಬೇರೆಜಾತಿ. [ಸಂ.]

**ವಿಮತಿ** (ನಾ). ೧. ಭಿನ್ನಾಭಿಪ್ರಾಯ : ಮತಿವಂತರಿಗುಂ ತಾಂ ಸಂತತಮವಿದಿತ ತತ್ತ್ವಮಾಗಿ ವಿಮತಿಯಸಾಂತಾ ನುತಕಾವ್ಯದ ಧ್ವನಿಯೆಂಬೊಂದು ತೆರಂ ಸಲೆ ವಿವೃತಮಾಯ್ತುದಿಂತೀ ಪರಿಯಿಂ (ಧ್ವನ್ಯಾಲೋ. ೨೦೮). ೨. ದಡ್ಡತನ ; ಮೂರ್ಖತನ. ೩. ದಡ್ಡ ; ಮೂರ್ಖ. [ಸಂ.]

**ವಿಮದ** (ನಾ). ಅಹಂಕಾರವಿಲ್ಲದವನು ; ಮದರಹಿತನಾದವನು : ಕಾಂಚನಪೀಠಾಧಿಷ್ಠಿತ ನೀಂ ಚಿರ ಪೇಟೆಂತು ಸರ್ವವಿದನ್ನೆ ವಿಮದಾ (ಜಿನಾಲೆ. ೧೮-೧೮). [ಸಂ.]

**ವಿಮನ** (ನಾ). ೧. ದುಃಖದಿಂದ ಕೂಡಿದವನು ; ಖಿನ್ನಮನಸ್ಕನಾದವನು. ೨. ದಿಗ್ಭ್ರಮೆಹೊಂದಿದವನು ; ಭ್ರಾಂತಿಗೊಂಡವನು. ೩. ಕೆಟ್ಟಮನಸ್ಸುಳ್ಳವನು ; ದುಷ್ಟ : "ವಿಮನಂ ದುರ್ಮನ(ನಹೀನ)ಮನನುದ್ಯುಕ್ತಂ" (ವಸ್ತುಕೋ. ೯೯-೮). [ಸಂ. ವಿಮನಸ್]

**ವಿಮನಸ್ಕ** (ನಾ). ೧. ದುಃಖಿತನಾದ ವ್ಯಕ್ತಿ ; ಖಿನ್ನಮನಸ್ಕನಾದ ವ್ಯಕ್ತಿ : "ಸೋತ್ಕಂಠಂ ಕರವುನ್ಮನನುತ್ಕಂ ವಿಮನಸ್ಕ ಮತ್ತವಳನವನಕ್ಕುಂ" (ವಸ್ತುಕೋ. ೧೧೪-೨೩). ೨. ಬೇರೆಯ ಕಡೆಗೆ ಮನಸ್ಸುಳ್ಳ ವ್ಯಕ್ತಿ ; ಅನ್ಯಮನಸ್ಕವ್ಯಕ್ತಿ : 'ಸ್ನೇಹಿತೆಯ ಮನೆಗೆ ಹೋಗಿದ್ದೆ ಅಂದರಾಯಿತು' ಎಂದು ಅವಳು ವಿಮನಸ್ಕಳಾಗಿ ಹೇಳಿದಳು (ರೂಪಸ. ೬೪). ೩. ದಿಗ್ಭ್ರಾಂತನಾದ ವ್ಯಕ್ತಿ. ೪. ಅಸಮಾಧಾನ ಹೊಂದಿದವನು. [ಸಂ.]

**ವಿಮರ್ದ** (ನಾ). ೧. ಜಜ್ಜುವಿಕೆ ; ಪುಡಿಮಾಡುವಿಕೆ. ೨. ಉಜ್ಜುವಿಕೆ ; ತಿಕ್ಕುವಿಕೆ; ತೀಡುವಿಕೆ. ೩. ಪರಿಮಳದ್ರವ್ಯಗಳನ್ನು ನುಣ್ಣಗೆ ಮಾಡುವುದು, —ಚೂರ್ಣಿಸುವುದು : "ಪರಿಮಳಂ ವಿಮರ್ದಂ ಕ್ಷೋದಂ" (ವಸ್ತುಕೋ. ೧೧೩-೧೭). ೪. ಸಂಪರ್ಕ ; ಸ್ಪರ್ಶ. ೫. ನಾಶಮಾಡುವುದು ; ಹಾಳುಮಾಡುವುದು. ೬. ಕದನ ; ಯುದ್ಧ. ೭. ಗ್ರಹಣ. [ಸಂ.]

**ವಿಮರ್ದಿತಕರಣ** (ನಾ). [ಕಾಮಶಾ] ಒಂದು ವಿಧವಾದ ರತಿಬಂಧ : ಸ್ತ್ರೀ ಕುಳ್ಳಿರ್ದಿರೆ ಪುರುಷನಿದಿರ್ಮೊಕಮಾಗಿ ಅವಳ ಬದಿಗಳ ಠಾವಂ ತಕ್ಕಿಸಿಕೊಂಡು ತನ್ನ ತಿಗಮಂ ಹಲವು ಬಾರಿ ತಿರುಪುತಲ್ಲಾಡುತ್ತ ಈ ಪರಿಯಲ್ಲಿ ಹಲವು ಬಾರಿ ಮಾಡಿದೊಡೆ ವಿಮರ್ದಿತಕರಣಂ (ಕಾಮಶಾ. ೨೩೬). [ಸಂ.]

**ವಿಮರ್ದಿಸು** (ಕ್ರಿ). ನಾಶಮಾಡು ; ಅಳಿಸು : ಪುದಿದಿರೆ ಕೆಂಪು ನಿನ್ನ ನಯನಂಗಳೊಳನ್ನರ ರಕ್ತದಿಂದೆ ಮಾಯದೆ . . . ಉಣ್ಮೆ ಬೆಮರ್ ಕಪೋಲದೊಳ್ ಮದವದರಾತಿಕಾಂತೆಯರ ಲೋಚನವಾರಿಗಳಿಂ ಕಪೋಲಪತ್ರದ ಸಿರಿಯಂ ವಿಮರ್ದಿಸದೆ ಮಾಣ್ಣವನಲ್ತೆ ರಸಾಧಿನಾಯಕಾ (ಪಾರ್ಶ್ವಪು. ೨-೧೭). [ವಿಮರ್ದ + -ಇಸು]

**ವಿಮರ್ಶ** (ನಾ). ೧. ಗುಣದೋಷಗಳ ಪರಿಶೀಲನೆ, — ತುಲನೆ ; ವಿಮರ್ಶೆ. ೨. ಸಂಶಯ ; ಅನುಮಾನ ; ವಿತರ್ಕ. ೩. ವಿವೇಚನಾಶಕ್ತಿ ; ತಿಳಿವಳಿಕೆ. ೪. [ಶೈವ] "ವಿಮರ್ಶವೆಂದರೆ ಭೇಧಾಭೇದಗಳನ್ನು ತನ್ನಲ್ಲಿಯೇ ಸ್ಫುರಿಸಿಕೊಳ್ಳುವ ಶಕ್ತಿಯುಳ್ಳ ಸ್ವಸ್ವರೂಪಪರಾಮರ್ಶ" (ಭಾರದ. ೨೧೧). ೫. ಶಿವಶಕ್ತಿಗಳ ಸ್ವಾಭಾವಿಕಕ್ರಿಯೆ : ಶಿವಶಕ್ತಿಗಳು ಪ್ರಪಂಚವನ್ನು ಸೃಷ್ಟಿಸುವುದರಲ್ಲಿ ಪ್ರಕಾಶ ಮತ್ತು ಸ್ವಾಭಾವಿಕಕ್ರಿಯೆಗಳ ರೂಪವಾಗಿ ಸೇರುವುವು. ಈ ಸ್ವಾಭಾವಿಕಕ್ರಿಯೆಗೆ ವಿಮರ್ಶ ಎಂದು ಹೆಸರು (ಭಾತತ್ತ್ವ. ೬೩೮). [ಸಂ.]

**ವಿಮರ್ಶಕ** (ನಾ). ೧. (ಸಾಹಿತ್ಯ, ಕಲೆ ಮುಂತಾದುವುಗಳ) ಗುಣದೋಷಗಳನ್ನು ಪರಿಶೀಲಿಸುವವನು, —ವಿವೇಚಿಸುವವನು : ಥೇಲಿಸ್ಸನ 'ಆಪ್' ತತ್ತ್ವವು ಜಡದ್ರವ್ಯವೆ, ಚೇತನಾತ್ಮಕವೆ ಎಂಬ ವಿಷಯದಲ್ಲಿ ವಿಮರ್ಶಕರಲ್ಲೇ ವಿಪ್ರತಿಪತ್ತಿ ಇದೆ (ಖುಕ್ಸಾರ. ೭ ಪೀಠಿಕೆ) ; ಕಲಾಕೃತಿಯ ಯೋಗ್ಯತೆಯನ್ನು ನಿರ್ವಿಕಾರನಾಗಿ ನಿರ್ಣಯಿಸಿ ವಿಮರ್ಶಕನು ಅದಕ್ಕೆ ಉಚಿತಸ್ಥಾನವನ್ನು ತೋರಿಸುತ್ತಾನೆ. ಉತ್ತಮವಿಮರ್ಶಕನಲ್ಲಿ ಈ ಶಾಸ್ತ್ರೀಯದೃಷ್ಟಿ ಬಹುಪ್ರಮುಖವಾಗಿ ಕಂಡುಬರುತ್ತದೆ (ನವ್ಯಕಾ. ೫). [ಸಂ.]

**ವಿಮರ್ಶನ** (ನಾ). ೧. ಗುಣದೋಷಗಳ ಪರಿಶೀಲನೆ ; ವಿಮರ್ಶೆ : ವಿಮರ್ಶನ ಎಂದರೆ ಪರೀಕ್ಷಾ (ಭಾತತ್ತ್ವ. ೬೩೬). ೨. ಜ್ಞಾನ ; ತಿಳಿವಳಿಕೆ. [ಸಂ.]

**ವಿಮರ್ಶನಪ್ರಜ್ಞೆ** (ನಾ). ಗುಣದೋಷಗಳನ್ನು ಪರಿಶೀಲಿಸುವ ಜ್ಞಾನ, — ತಿಳಿವಳಿಕೆ : ಮನುಷ್ಯನಲ್ಲಿ ವಿಮರ್ಶನಪ್ರಜ್ಞೆ ಬೆಳೆದಂತೆಲ್ಲ ಬದುಕು ಅರ್ಥಪೂರ್ಣವಾಗುತ್ತದೆ (ರೂಢಿ). [ಸಂ. ವಿಮರ್ಶನಪ್ರಜ್ಞಾ]

**ವಿಮರ್ಶನಾಸಕ್ತಿ** (ನಾ). ಗುಣದೋಷಪರಿಶೀಲನೆಯಲ್ಲಿ ಇರುವ ಆಸಕ್ತಿ ; ವಿಚಾರಪರತೆ : ಅಪರೋಕ್ಷವಾದ ಆತ್ಮಾನುಭೂತಿಯನ್ನು . . . ತಿಳಿದು ನೋಡುವ ವಿಶೃಂಖಲಾವಿಮರ್ಶಾಶಕ್ತಿ ಮತ್ತು ವಿಮರ್ಶನಾಸಕ್ತಿ ಕ್ರಿ. ಪೂ. ಆರನೆಯ ಶತಮಾನದ ಸುಮಾರಿಗೆ ಆರಂಭವಾಗಿರಬೇಕು (ಭಾರದ. ೧೨೧). [ಸಂ.]

**ವಿಮರ್ಶಶಕ್ತಿ** (ನಾ). [ಶೈವ] ಪರಮಾತ್ಮನ ಸ್ವಾನಂದಾನುಭವ : ಪರಮಾತ್ಮನು ಪ್ರಳಯಕಾಲದಲ್ಲಿ ವಿಶ್ವವನ್ನು ತನ್ನೊಳಗೆ ಅಡಗಿಸಿಕೊಂಡು ಏಕಾಂತವಿಶ್ರಾಂತನಾಗಿ ಆತ್ಮಾರಾಮನಾಗಿರುವವನು . . . ಈ ಸ್ವಾನಂದಾನುಭವವನ್ನು ವಿಮರ್ಶಶಕ್ತಿಯೆಂದು ಅನುಭವಿಗಳು ಕರೆಯುತ್ತಾರೆ (ಶಕ್ತಿವಿ. ೨೪). [ಸಂ.]

**ವಿಮರ್ಶಿಸು** (ಕ್ರಿ). (ಸಾಹಿತ್ಯ, ಕಲೆ ಮುಂತಾದುವುಗಳ) ಗುಣದೋಷಗಳನ್ನು ಪರಿಶೀಲಿಸು, — ಚರ್ಚೆಮಾಡು, — ವಿಮರ್ಶೆಮಾಡು : ಆಗೀಗ ಪ್ರಕಟವಾಗುತ್ತ ಹೋಗುವ ಗ್ರಂಥಗಳನ್ನು ಮಾಸಿಕಗಳಲ್ಲಿ ವಿಮರ್ಶಿಸುವುದು ಸುಲಭ (ನವ್ಯಕಾ. ೯) ; ಅವರಿಬ್ಬರೂ ಆಗ ಖ್ಯಾತಿಪಡೆದಿದ್ದ ಪಂಡಿತೋತ್ತಮರ ಗುಣಾವಗುಣಗಳನ್ನು ವಿಮರ್ಶಿಸುತ್ತಾ ಸಂಭಾಷಣೆ ನಡೆಯಿಸಿದರು (ಚಂಗಾಳ್ವ. ೬೦). [ವಿಮರ್ಶನ + -ಇಸು]

**ವಿಮರ್ಶೆ** (ನಾ). ೧. ಗುಣದೋಶಪರಿಶೀಲನೆ ; ವಿವೇಚನಾಪರವಾದ ಟೀಕೆ: ವಾದ ವಿವಾದಗಳ ತಕ್ಕಡಿಯಲ್ಲಿ ತೂಗಾಡುವ ಈ ವಿಷಯದ ವಿಮರ್ಶೆ ಮುಂದೆ ಬರುತ್ತದೆ (ದ್ರಾವಿ. ೪೫). ೨. ತಜ್ಞರು ಮಾಡುವ ಕಲೆ, ವಿಜ್ಞಾನ ಮೊದಲಾದ ಬೌದ್ಧಿಕಪ್ರಕಾರಗಳ ರಚನೆಗಳ ಗುಣದೋಷಪರಿಶೀಲನೆ. ೩. ಸಾಹಿತ್ಯ ಪ್ರಕಾರಗಳಲ್ಲಿ ಒಂದು ; ಕಾವ್ಯ, ಸಾಹಿತ್ಯಕೃತಿಗಳ ಗುಣದೋಷಪರಿಶೀಲನೆಯನ್ನೊಳಗೊಂಡ ಸಾಹಿತ್ಯ : ಸಾಹಿತ್ಯಸೃಷ್ಟಿಯು ಇಂದು ನಮ್ಮಲ್ಲಿ ವಿಪುಲ, ಆದರೆ ಅದರ ಜೊತೆಯಾಗಿ ವಿಮರ್ಶೆಯು ಬೆಳೆದುಬಂದಿಲ್ಲ (ನವ್ಯಕಾ. ೭). [ಸಂ. ವಿಮರ್ಶ]

**ವಿಮಲ, ವಿಮಳ** (ಗು). ೧. ನಿರ್ಮಲವಾದ ; ಶುಭ್ರವಾದ ; ಸ್ವಚ್ಛವಾದ : ವಿಮಲತರಸ್ಫಟಿಕಮರೀಚಿಮಯಂ . . . ಸಮಚತುರಸ್ರದ ಸಂಸ್ಥಾನ ಮನೋಹರಮೂರ್ತಿ ಸಹಜಮಣಿಗಣಭೂಷಂ (ಶಾಂತೀಶ್ವ. ೯-೫೩). ೨. ಸ್ಪಷ್ಟವಾದ ; ವಿಶದವಾದ. ೩. ಶುದ್ಧವಾದ ; ಅಪ್ಪಟ ; ಅಚ್ಚ : ವಿಮಲಸ್ವರ್ಣಮಯಂ ಕನನ್ಮಣಿಮಯಂ ಶೋಭಾಮಯಂ ತಾನೆನಲ್ಕೆ ಮಯಂ ವಿಸ್ಮಯಮಾಗೆ ಮಾಡಿದ ಸಭಾವಿಸ್ತಾರಮಂ (ಜಗವಿ. ೧೭-೭). ೪. ನಿಷ್ಕಳಂಕವಾದ ; ಪವಿತ್ರವಾದ; ಶ್ರೇಷ್ಠವಾದ: ವಿಮಲಶ್ರೀಶ ಸರಸ್ವತೀನಿಳಯಂ ಕೀರ್ತಿಶ್ರೀವಧೂಕಾಂತ ಗೌತಮಗೋತ್ರಾಂಬುಜಮಿತ್ರ ನಿನ್ನನ್ನರಂ ಕಂಡೆನಿಲ್ಲ (ಪಂಚತಂ. ೩೧೧-೧೪) ; ವಿಮಲಯಶೋವಿಶುದ್ಧಮಣಿಯಂ ಪಡೆಯಲ್ಕೆ ಪಯೋಧಿವೇಲೆಯಂ ಕ್ರಮದೊಳೆ ದಾಂಟಿ ನಿರ್ಮಲದಯಾರಸಸಮುದ್ರಮನೀ ಕಥಾಸಮುದ್ರಮನೊಳಪೊಕ್ಕು ನಿರ್ವಹಿಸುವೆನ್ನ ಕವಿತ್ವಬಹಿತ್ರಯಾತ್ರೆಗೇನಮರ್ದುದೊ ಕರ್ಣಧಾರವಿಭವೋನ್ನತಿ ಭವ್ಯಜನಕ್ಕಿದೆಂತೆನಲ್ (ಮಲ್ಲಿಪು. ೧-೩೮). ೫. ಬಿಳಿಯದಾದ; ಶ್ವೇತವರ್ಣದ. (ನಾ). ೬. ನಿರ್ಮಲವಾದುದು ; ಶುದ್ಧವಾದುದು : "ಅನಾವಿಲಂ ವಿಶದಮುಜ್ವಲಮೆನಲು ವಿಮಲಮಕ್ಕು" (ಮಂಗರಾ. ೯-೨೯). ೭. ಪವಿತ್ರವಾದುದು ; ಶ್ರೇಷ್ಠವಾದುದು. ೮. ಚಿನ್ನದ ಮುಲಾಮು ಹಾಕಿದ ಬೆಳ್ಳಿಯ ರೇಕು, — ತಗಡು. ೯. [ಶೈವ] ಇಪ್ಪತ್ತೆಂಟು ಶಿವಾಗಮಗಳಲ್ಲಿ ಒಂದು : ಕಾಮಿಕ, ಯೋಗಜ, ಅಚಿಂತ್ಯ . . . ಮಕುಟ, ವಿಮಲ, ಚಂದ್ರಜ್ಞಾನ, ಬಿಂಬ . . . ಕಿರಣ, ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಭಾರದ. ೬೨).

೧೦. [ದ್ವೈತ] ವೈಖಾನಸಾಗಮದ ನಾಲ್ಕು ಪ್ರಭೇದಗಳಲ್ಲಿ ಒಂದಾದ ಸಂಹಿತೆಯ ಎಂಟು ಆಗಮಗಳಲ್ಲಿ ಒಂದು : ಮರೀಚಿಮಹರ್ಷಿಪ್ರೋಕ್ತವಾದ ಜಯ (ಆದಿ), ಆನಂದ . . . ವಿಜಿತ, ವಿಮಲ, ಕಲ್ಪಗಳೆಂಬ ಎಂಟು ಆಗಮಗಳು ''ಸಂಹಿತೆ'' ಗಳೆಂದೂ . . . ಪ್ರಖ್ಯಾತವಾಗಿವೆ (ಭಾರಪ. ೭೫). ೧೧. [ಜೈನ] ಇಪ್ಪತ್ನಾಲ್ಕು ಮಂದಿ ತೀರ್ಥಂಕರರಲ್ಲಿ ಹದಿಮೂರನೆಯ ತೀರ್ಥಂಕರ : ವೃಷಭ ಅಜಿತ ಸಂಭವ . . . ವಿಮಲ[ಪಾಠಾಂ. ಳ] ಅನಂತ ಧರ್ಮ ಶಾಂತಿ . . . ನಮಿ ನೇಮಿ ಪಾರ್ಶ್ವ ವರ್ಧಮಾನರೆಂಬಿಪ್ಪತ್ತುನಾಲ್ವರ್ ತೀರ್ಥಕರರ್ (ಚಾವುಂಪು. ೪೦೨). ೧೨. [ಬೌದ್ಧ] ಸಂನ್ಯಾಸಿ. ವಿಮಳ : ೧. ವಿಮಳತರ ಗಗನಮಂಡಳದ ಮಧ್ಯದೊಳ್ ನೆಗೆದು ಶಬಳಮೋಘೋತ್ಕರದೊಪ್ಪಮನಪ್ಪುಕೆಯ್ದುದಾ ಸ್ಪಟಿಕಮಯ ಪ್ರಾಕಾರದೊಳಗೆ ಮಣಿಗೃಹನಿವಹಂ (ಚಂದ್ರಪ್ರ. ೧೧-೬೭). ೪. ನಿನ್ನಾ ವಿಮಳ ಯಶೋವಿಧುವೆಂಬುದು ಕಮನೀಯಂ ಶ್ಲೇಷರೂಪಕಾಲಂಕಾರಂ (ಕವಿರಾ. ೩-೨೧); ಸಂಗಿಯಲ್ಲದ ವಿಮಳಪರಮಾತ್ಮಂಗೆ ಲೀಲೆಯೊಳಾಯ್ತು ಮಾಯಾಸಂಗವು (ಕುವ್ಯಾದ್ರೋ. ೩-೬೭). ೫. 'ವಿಮಳಾಬ್ಜ' ಪರಾ. ೬. ''ವಿಮಳಂ, ವಿಶದಂ, ವೀಧ್ರಂ, ಉಜ್ವಳಂ, ಅನಾವಿಲಂ - ಈ ೫ ನಿರ್ಮಳಮಪ್ಪ ವಸ್ತು'' (ಹಲಾಯು. ೨೨-೧೩೨). ೭. ವಿಮಳ ಮಿದೆನಿಸುವ ಜೈನಾಗಮಮಂ ನೀಮಱೆದುಮಱೆಯದೆಗ್ಗರ ತೆಱದಿಂ ರಮಣೀಯಮೆಂದು ರಾಜ್ಯಕ್ರಮಕ್ಕೆ ಬೆಚ್ಚಲ್ಲದೆಳಸಲಪ್ಪುದೆ ಮನದೊಳ್ (ಧರ್ಮಾಮೃ. ೧೦-೮೬). ೧೧. ಪದಿಮೂಱನೆಯ ಜಿನಂ ಸಮ್ಮದಮಂ ನಮಗೀಗೆ ವಿಮಳತೀರ್ಥಾಧೀಶಂ (ಬಾಧಪು. ೧೬-೩೯೪). ೫, ೧೧ : ವದನಂ ಚಂದ್ರಪ್ರಭಂ ವಿಕ್ರಮಭುಜಮಜಿತಂ ಪಾಣಿ ಪದ್ಮಪ್ರಭಂ ಸಂಪದಮೆಂದುಂ ವರ್ಧಮಾನಂ ಗುಣತತಿ ವಿಮಳಂ . . . ತಾನದಱಿಂ ಪ್ರತ್ಯಕ್ಷ ತೀರ್ಥೇಶ್ವರನೆನೆ ನೆಗೞ್ದಂ ಪದ್ಮನಾಭಪ್ರಧಾನಂ (ಅರ್ಥನೇ. ೧-೪೩). ೧೩. [ಜೈನ] ಕುಲಪರ್ವತಗಳ ಕೂಟ ಅಥವಾ ಶಿಖರಗಳಲ್ಲಿ ಒಂದು : ತತ್ಕುಕ್ಕೀಲದ ಪ್ರಾಗ್ದಿಗ್ದೇಶದವೋಘ ಸುಪ್ರಬುದ್ಧರುಂದ್ರ ವಿಮಳ ರುಚಕ ರುಚಕೋತ್ತರ ಚಂದ್ರಸುಪ್ರತಿಷ್ಠಮೆಂಬ ಕೂಟಾಷ್ಟಕಂಗಳೊಳ್ ರಮಿಯಿಸುವ . . . ಎಣ್ಬರುಂ ದಿಗಂಗನೆಯರಂ (ಆದಿಪು. ೭-೩ ವ) ೧೪. ಅರುವತ್ತುಮೂರು ಇಂದ್ರಕಗಳಲ್ಲಿ ಒಂದು : ೧. ಋತು ೨. ವಿಮಳಂ . . . ೬೨. ಆದಿತ್ಯಂ ೬೩. ಸರ್ವಾರ್ಥಸಿದ್ಧಿ ಎಂದಿವು ಅನುಕ್ರಮದಿಂ ಅಱುವತ್ತಮೂಱು ಇಂದ್ರಕಂಗಳ ಪೆಸರ್ಗಳ್ (ತತ್ತ್ವಪ್ರ. ೨೧೩).

[ಸಂ.]

**ವಿಮಲಗುಣ, ವಿಮಳಗುಣ** (ನಾ). ಪರಿಶುದ್ಧವಾದ ಗುಣ, — ಚಾರಿತ್ರ್ಯ : ವಿಮಲಗುಣಗಣಮನೊಕ್ಕುತ್ತಮಧರ್ಮಮನೊಲ್ಲದಧಿಕಪಾಪಂ ಶೂನ್ಯಾಗಮಮಂ ಪೊರ್ದಿದಂ (ಧರ್ಮಾಮೃ. ೧೧-೧೬೦). ವಿಮಳಗುಣ : ವಿಮಳಗುಣಪ್ರಕಟನದತ್ತಮನಸ್ಕಂ ಖಚರನಿಂದುದೆಂತಂತಿರೆ ರಾಗಮನಾಗಳೆ ನೂಂಕಿ ಸದ್ವ್ಯೃತ್ತಮನುತ್ತಮನೊಲ್ಲು ಮೆಱೆಯಲುದ್ಯತನಾದಂ (ಪಾರ್ಶ್ವಪು. ೬-೪೦). [ಸಂ.]

**ವಿಮಲತೆ, ವಿಮಳತೆ** (ನಾ). ನಿರ್ಮಲವಾಗಿರುವಿಕೆ ; ಪರಿಶುದ್ಧವಾಗಿರುವಿಕೆ: 'ವಿಮಲತೆವೆಱು' ಪರಾ. ವಿಮಳತೆ : 'ವಿಮಳತೆವೆಱು' ಪರಾ.

[ಸಂ. ವಿಮಲತಾ]

**ವಿಮಲತೆವೆಱು, ವಿಮಳತೆವೆಱು** (ಕ್ರಿ). ನಿರ್ಮಲತೆಯನ್ನು ಹೊಂದು ; ಪರಿಶುದ್ಧತೆಯನ್ನು ಪಡೆ : ವಿಮಲತೆವೆತ್ತು ಬಿತ್ತರಿಸುವುತ್ಪಳಿಕಾವಳಿಯಿಂ ಪೊದಟ್ಟ ವಿದ್ರುಮಕಮನೀಯದಿಂ . . . ಶಿಖಿಸಮನ್ವಿತದಿಂ ನೆಗೞ್ದಂತು ಸಂತತಂ ಪ್ರಮದವನಂ ಕರಂ ನೆನೆಯಿಸುತ್ತೆಸೆದತ್ತಮೃತಾಂಬುರಾಶಿಯಂ (ಶಾಂತೀಶ್ವ. ೧-೧೫೯). ವಿಮಳತೆವೆಱು: ವಿಮಳತೆವೆತ್ತ ಚಿತ್ರಮತಿಯಾಸ್ಯಮಯೂಖಮನುರ್ವಿ ತೋಱೆಸುತ್ತಮೆ ನಡೆನೋಡೆ ಕಲ್ಪಳಖಿಳಶ್ರುತಿನಾದಮನಾದಮಾಲಿಸುತ್ತಮೆ . . . ಕುಸುಮಾವಳಿದೇವಿ ವಿಶಾಲಲೀಲೆಯಿಂ (ಕುಸುಮಾ. ೧೨-೩೫); ವಿಮಳತೆವೆತ್ತ ನಿನ್ನಯ ವಚಸ್ಸುಧೆಯಂ ಸುಮನಶ್ಚಕೋರಚಕ್ರಮ ನೊಲವುಣ್ಕೆ ತುಷ್ಟಿವಡಿಸೆಂದು ವಿನೇಯಜನಂಗಳಿಂತು ಸತ್ಯಮುದದೆ ಪೇೞೆ (ಶಾಂತೀಶ್ವ. ೧-೬೪). [ವಿಮಲತೆ + ಪೆಱು]

**ವಿಮಲಮತಿ** (ನಾ). ೧. ಪರಿಶುದ್ಧವಾದ ಬುದ್ಧಿ ; ನಿರ್ಮಲವಾದ ಜ್ಞಾನ. ೨. ಪರಿಶುದ್ಧವಾದ ಮನಸ್ಸು ; ನಿರ್ಮಲವಾದ ಹೃದಯ. ೩. ಪರಿಶುದ್ಧವಾದ ಬುದ್ಧಿಯುಳ್ಳ ವ್ಯಕ್ತಿ. ೪. ಪರಿಶುದ್ಧವಾದ ಬುದ್ಧಿಯುಳ್ಳುದು : ಬಹುವ್ರೀಹಿಗೆ– ಅವರ್ ವಿಮಲಮತಿ, ಅವಳ್ ವಿಮಲಮತಿ, ಅದು ವಿಮಲಮತಿ (ಶಮದ. ೮೯ ಪ್ರಯೋ.). [ಸಂ.]

**ವಿಮಲಸಹಣ** (ನಾ). ಶ್ರೇಷ್ಠನಾದ ಕುದುರೆದಳದ ಮುಖಂಡ : ಧುರವನವ ಸಾಗಿಸದಿರೆ ತುರಗವಾವೆಡೆ ಪಟ್ಟಸಹಣದ ಹಿರಿಯ ಸಹಣದ ವಿಮಲಸಹಣಿ [ಪಾಠಾಂ. ಣ] ಗಳವರ ಕರೆಯೆನುತ ಧುರಧುರಂಧರರೊರಲಿದರು (ಕುವ್ಯಾಭೀ. ೪-೪೭).

[ವಿಮಲ + ಸಹಣಿ (< ಸಾಹಣಿ)]

**ವಿಮಲಸ್ವಾಂತ** (ನಾ). ನಿರ್ಮಲವಾದ ಅಂತಃಕರಣವುಳ್ಳವನು : ಪುರಾಂತಕ ಧ್ಯಾನದಲಿ ವಿಮಲಸ್ವಾಂತನೇಕಾಗ್ರದಲಿ ಭಜಿಸಿದನಿಂದುಶೇಖರನ (ಕುವ್ಯಾಅ. ೨೨-೪೩).

[ಸಂ.]

**ವಿಮಲಿತ** (ಗು). ಸ್ವಚ್ಛವಾದ ; ನಿರ್ಮಲವಾದ : ವಿಮಲಿ [ಪಾಠಾಂ. ಳಿ]ತ ಶ್ರೀಕಾರದಾಕಾರಮನೆಣಿಕೆಗೊಳ್ಳದೆ ಮಿಱುಗುವುವು ಕುಮುದದಳಲೋಚನೆಯ ಕರ್ಣಂಗಳು ಪೊಸತಿವೆನಿಸಿ (ಬಸಪು. ೪-೨೭). [ಸಂ.]

**ವಿಮಲೆ** (ನಾ). ೧. ನಿಷ್ಕಳಂಕಳಾದ ಹೆಂಗಸು ; ಪರಿಶುದ್ಧಳಾದ ಸ್ತ್ರೀ. ೨. ಒಂದು ಬಗೆಯ ಸಸ್ಯ ; ಚರ್ಮಕಷೆ : ''ಸಪ್ತಲಾ, ವಿಮಲಾ, ಸಾತಲಾ, ಭೂರಿಫೇನಾ, ಚರ್ಮಕಷಾ — ೫ ಸಮ್ಮಗಾರಯೆಂಬುವದು, ಸಂಬರೇಣಿ'' (ಸಿದ್ಧಾಂತಿ. ೧೪೫). [ಸಂ. ವಿಮಲಾ ]

**ವಿಮಳ** 'ವಿಮಲ' ನೋ.

**ವಿಮಳಗುಣ** 'ವಿಮಲಗುಣ' ನೋ.

**ವಿಮಳತೆ** 'ವಿಮಲತೆ' ನೋ.

**ವಿಮಳತೆವೆಱು** 'ವಿಮಲತೆವೆಱು' ನೋ.

**ವಿಮಳಾಬ್ಜ** (ನಾ). ೧. ಬಿಳಿಯತಾವರೆ. ೨. ನಿರ್ಮಲನಾದ ಚಂದ್ರ. ೧, ೨ : ವಿಮಳಾಬ್ಜವಿಭವಂ ನಭದೊಳಂ ನಳಿನಿಯೊಳಂ ಗೋಸಪ್ಪದ್ದಿ ಗೋಕುಲದೊಳಂ ಮಾರ್ತಂಡಮಂಡಳದೊಳಂ (ಜಗವಿ. ೪-೭೫ ವ). [ಸಂ. ವಿಮಲಾಬ್ಜ]

**ವಿಮಳಿನ** (ಗು). ೧. ನಿರ್ಮಲವಾದ ; ಸ್ವಚ್ಛವಾದ : ವಿಮಳಿನದುಗ್ಧಚ್ಛಟೆಯಿಾ ಕ್ರಮದಿಂದಂ ಸವನಸಮಯದೊಳ್ ಪುದಿದಪುದೆಂದಮರ್ದಿರೆ ಪೇೞ್ವಂತೆ ಸನತ್ಕುಮಾರ ಮಾಹೇಂದ್ರರಿಕ್ಕಿದರ್ ಚಮರಜಮಂ (ಪಾರ್ಶ್ವಪು. ೧೪-೩೮); ವಿಮಳಿನಚಂದ್ರಕಾಂತಿ ತನು ತಂತುಗಳಂ ಮಿಗೆ ನುಂಗಿ ಪಿಂಗದಾಕ್ರಮಿಪ ಪತಂಗದಿಂದಗಿದು ಪೊಕ್ಕ ಸೆಲಂದಿವೊಲೊಪ್ಪೆ ಲಾಂಛನಂ (ರಾಜಶೇ. ೧೨-೪೦). ೨. ಪವಿತ್ರವಾದ ; ಶ್ರೇಷ್ಠವಾದ : ವಿಮಳಿನ ಶುದ್ಧಸಮ್ಯಕ್ತ್ವಮುಪಾದೇಯಂ ಸಮಂತು ಹೇಯಂ ಮಿಥ್ಯಾತ್ವಮುಪಾದೇಯಂ ಸಚ್ಚರಿತಮದೆನಸುಂ ಹೇಯಮಲ್ತೆ ವಿಷಯಕಷಾಯಂ (ಶಾಂತೀಶ್ವ. ೧೩-೬೩).

[ಸಂ. ವಿಮಲಿನ]

**ವಿಮಾ** 'ವಿಮೆ' ನೋ.

**ವಿಮಾಂಸ** (ಗು). ೧. ಮಾಂಸರಹಿತವಾದ ; ಮಾಸಂಲವಲ್ಲದ : ಸಿಂಧುರಾಜಂ . . . ಸಮದಂತಂ ಚಾರುವಕ್ತ್ರಂ ಕಿಱುಗಿವಿ . . . ವಿಮಾಂಸಾಂಘ್ರಿ ಗಂಭೀರಮಹಾನಾದಂ ಸುನಾಸಾಪುಟಮಮರ್ದ ತುರಂಗಂಗಳಂ ಕಾಣ್ಕೆಗೈದಂ (ರಾಜಶೇ. ೧೨-೧೧೧). (ನಾ). ೨. (ನಾಯಿಯ ಮಾಂಸದಂತೆ) ಅಶುದ್ಧವಾದ ಮಾಂಸ. [ಸಂ.]

**ವಿಮಾದಾರ** 'ವಿಮೆದಾರ' ನೋ.

**ವಿಮಾನ** (ನಾ). ೧. ಮಾನಹೋಗುವಿಕೆ ; ಅವಮಾನ ; ಅವಮರ್ಯಾದೆ : ಹರುಷ ದರ್ಪ ಕ್ರೋಧ ಲಜ್ಜಾತುರತೆ ಮಾನ ವಿಮಾನವಿವರಲಿ ನಿರುತಸಮನೆಂದೆನಿಸಿ . . . ಕಾರ್ಯವೆಸಗುವನವನೆ ಪಂಡಿತನು (ಕುವ್ಯಾಉ. ೩-೪೪). ೨. ಮಾನವಿಲ್ಲದವನು ; ಭಂಡ : ಸತತಂ ನಿಂದಾಕರಂ . . . ಸ್ತುತಿಲೋಲಂ ರಾಗಶೀಲಂ ಸುಕೃತವಿಮುಖನಾನಂದಹೀನಂ ವಿಮಾನಂ ನತಕಲ್ಪೋರ್ವೀಜ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೪೯). ೩. ಒಂದು ಅಳತೆ. ೪. ಆಕಾಶದಲ್ಲಿ ಸಂಚರಿಸುವ ದೇವತೆಗಳ ವಾಹನ : ಕನ್ಯಾಚಕ್ರಾದ್ಯಭಿಧಾನ ಜೀವಾಜೀವ ರತ್ನಂಗಳಂ

ಕೊಂಡು ತಮ್ಮನಂ ಮುಂದಿಟ್ಟು ವಿಮಾನಾರೂಢಂ ಪ್ರಭಾಕರೀಪುರಾಭಿಮುಖನಾಗಿ ಸೌದಾಮಿನೀಪತಿಮಾರ್ಗಪ್ರಸ್ಥಾನದಿಂ ಪೋಗೆ (ಶಾಂತಿಪು. ೪-೫೯ ವ); ಕಟ್ಟಾಳುಗಳನಿಱಿದು ಬೀಳೆ ತುಱುಗಳು ಪೆಣನಂ ಮೆಟ್ಟಿ ಪರಿದವು ವಿಮಾನದೊಳಿಟ್ಟು ಸುರಾಂಗನೆಯರೆಮಗೆ ತಮಗೆನುತುಯ್ದರು (ಎಕ. VIII, ಸೊರಬ. ೪೫-೧೮; 1093); ಯಾನಶಾಲೆಗೆ ನಡೆದನೇರಿದನು ಧನದನಿಂ ಗೆಲ್ದು ತಂದಾ ಕಾಮಗಮನದ ವಿಮಾನಮಂ (ಶ್ರೀರಾಮಾ. ೨೧೬-೧೫೯). ೫. ವಾಯುಮಾರ್ಗದಲ್ಲಿ ಸಂಚರಿಸುವ ವಾಹನ ; ಏರೋಪ್ಲೇನು : ಬಹುಬೇಗ ನಡೆಸಬಲ್ಲ ರೈಲು, ಹಡಗು, ವಿಮಾನ ಮುಂತಾದ ವಾಹನಸೌಕರ್ಯ (ಶಿಕ್ಷದ. ೮). ೬. ಅರಮನೆ ; ರಾಜಗೃಹ : 'ನಾಗವಿಮಾನ' ಪರಾ. ೭. ಹೆಣವನ್ನು ಸಾಗಿಸುವ ಚಟ್ಟ, — ಮಂಟಪ : ಆ ಕಾಡ ನಟ್ಟ ನಡುವಣ ದಡದ ತುತ್ತತುದಿಯೊಳು ವಿಮಾನದ ಮರಂಗಳಮ ಕಡೆ ಹೊತ್ತಿ ಉರಿಕರಿಯಾದ ಕರಿಕೊಳ್ಳಿಗಳನಱಿಸಿ . . . ಕಾಯುತಿರ್ದನಿರುಳು ಹಗಲೆನ್ನದೊಡೆಯಂ ಬೆಸಸಿದಂತೆ ವಸುಧಾಧೀಶನು (ಹಚಕಾ. ೧೧-೪೩); ಅಚ್ಚರಿಯೊಳಾ ವಿಮಾನದ ಪೆಣಕೆ ಪ್ರಾಣ ಬರಲರಸ ನಮಿಸಿದನು ಬಳಿಕಂ (ಪ್ರಭುಪು. ೭-೬೨). ೮. ಡೋಲಿ ; ಪಲ್ಲಕ್ಕಿ ; ಮೇನೆ. ೯. [ವಾಸ್ತು] ಗೋಪುರ ; ಶಿಖರ : ಆಶ್ರಯನಿರ್ಮಾಣತನಕಂ ತನ್ನ ಸಿತಾತಪತ್ರಮಂ ಮಹಾಲಿಂಗದ ಪಿಂದಣ್ಗೆ ನಟ್ಟು ಬಿಸಿಲಂ ನಿವಾರಿಸಿ ವಿಶ್ವಕರ್ಮನಂ ಬರಿಸಿ ವಿಚಿತ್ರತರ ವಿಮಾನಮಂ ಮಾಡಲ್ವೇಳ್ಕುಮೆನಲ್ (ಹಾಲಾಸ್ಯ. ೧-೨-೭೯ ವ); ದೇವಾಲಯದ ಎರಡು ಮುಖ್ಯಭಾಗಗಳು ವಿಮಾನ ಮತ್ತು ಮಂಡಪ (ಹೊಯ್ಸವಾ. ೮). ೧೦. [ಜೈನ] ಊರ್ಧ್ವಲೋಕದ ಪುಣ್ಯಜೀವಿಗಳ ವಾಸಸ್ಥಾನ : ಮಂದರ ಮಹೀಧರದ ನಂದನಮೆಂಬ ಮೇಖಳೆಯಿಂ ಸಾಸಿರದ ನೂಱೆಪ್ಪತ್ತೊಂದು ಯೋಜನಮಗಲದಿಂ ತಾರಾಗಣವಿಮಾನಂಗಳಿರ್ಕುಂ (ಸುಕುಮಾ. ೧೧-೫೯ ವ); ಮೂನೂಱೆಕ್ಕೆವತ್ತೆಸೆವ ವಿಮಾನಂಗಳ್ಗಮಲಮಣಿಮಯಂಗಳ್ಗೆ ಸಮೀಚೀನ ನವಚೀನರಚಿತವಿತಾನಂಗಳ್ಗೊಡೆಯನಾದನಾ ದಿವಿಜೇಂದ್ರಂ (ಚಂದ್ರಪ್ರ. ೯-೪೯). [ಸಂ.]

ವಿಮಾನನಿಲ್ದಾಣ (ನಾ). ವಿಮಾನ ನಿಲ್ಲುವ ಸ್ಥಳ : ವಿಮಾನನಿಲ್ದಾಣದ ಅಧಿಕಾರಿಗಳಿಂದ ಕಾಗದ ಬಂದಿದೆ (ಕಪಪು. ೩-೮೯). [ವಿಮಾನ + ನಿಲ್ದಾಣ]

ವಿಮಾನವಾಸಿ (ನಾ). ವಿಮಾನವೆಂಬ ಊರ್ಧ್ವಸ್ಥಳದಲ್ಲಿ ವಾಸಿಸುವ ದೇವತೆ ; ವೈಮಾನಿಕ ದೇವತೆ : ವನಗ್ರೈವೇಯಕಮುಂ ನವಾದ್ವಿಶಮುಂ ಪಂಚಾನುತ್ತರಮುಮೆಂಬೀ ವಿಮಾನವಾಸಿಗಳೊಳು . . . ಪುಟ್ಟುವರು (ಗೊಮ್ಮಸಾ. ೪-೫); ಮೂರ್ತಿಶಿಲ್ಪದ ದೃಷ್ಟಿಯಿಂದ ಜೈನದೇವತೆಗಳನ್ನು ನಾಲ್ಕು ವಿಧವಾಗಿ ವಿಂಗಡಿಸಬಹುದು – (೧) ಜ್ಯೋತಿಷೀ (೨) ವಿಮಾನವಾಸೀ, (೩) ಭವನಪತಿ ಮತ್ತು (೪) ವ್ಯಂತರ (ಭಾರದ. ೫೧೪). [ಸಂ. ವಿಮಾನವಾಸಿನ್]

ವಿಮಾರ್ಗ (ನಾ). ೧. ಕೆಟ್ಟದಾರಿ, — ರಸ್ತೆ. ೨. ಕೆಟ್ಟನಡತೆ ; ದುರ್ಮಾರ್ಗ ; ದುರ್ನಡತೆ. ೩. ಕಸಗುಡಿಸುವ ಸಾಧನ ; ಪೊರಕೆ. ೪. ಕುದುರೆಸವಾರಿಯಲ್ಲಿ ಒಂದು ಬಗೆ : ಮುಷ್ಟಿಭಾಗಂ ವ್ಯೂಹಂ ನಿವರ್ತನೆ ಪದಂ ಯತಿ ಗಾತ್ರವೆ ವಿಮಾರ್ಗಂ . . . ಎಂಬ ಭೇದಂಗಳಿಂದಶ್ವಮನೇಱಲು ರೇಚಿಗನೃಪತಿ ತಾನೆ ಬಲ್ಲಂ (ಮದತಿ. ೧-೨೧). [ಸಂ.]

ವಿಮಿಶ್ರ (ಗು). ಬೆರೆತಿರುವ ; ಮಿಶ್ರವಾದ : ನವವಿವರಾವೃತಪೂ[ತಿ]ದ್ರವತ್ವಗಾವೃತವಿಮಿಶ್ರಮಾಂಸೋಪಚಿತಮಧ್ರುವಮಸುಚಿತ್ರಭ್ರಮಿ[ತಾ][ಸ್ಥಿ]ವಹಂ ಮೆಯ್ ಬಗೆವೊಡಿಂತು ಕಿಸುಗುಳಮಾದಂ (ಕವಿರಾ. ೩-೧೯೫). [ಸಂ.]

ವಿಮಿಶ್ರಣ (ನಾ). ಕೂಡಿರುವಿಕೆ ; ಬೆರೆತಿರುವಿಕೆ ; ಮಿಶ್ರಣ : ಅದಱಿಂ ಜೀವಪದಾರ್ಥಮಿಲ್ಲದಿರದಾ ಜೀವಕ್ಕಮಾ ಜನ್ಮಮೆಂಬುದುಮಾ ಮತ್ತಿನ ಜನ್ಮಮೆಂಬುದುಮನೇಕಂ ಜೀವತತ್ವಕ್ಕೆ ಪಾಪದೊಳಂ ಪುಣ್ಯದೊಳಂ ವಿಮಿಶ್ರಣದೊಳಂ ಜನ್ಮಾಳಿ ಸಲ್ಗುಂ (ಶಾಂತಿಪು. ೮-೧೩೯). [ಸಂ.]

ವಿಮುಂಡನ (ನಾ). ಮುಂಡನ ; ಕ್ಷೌರ : "ಕ್ಷೌರಂ ವಿಮುಂಡನಂ ಭದ್ರಾಕರಣಮೆನಲು ವಪನಕ್ಕೆ ನಾಮಮಕ್ಕುಂ" (ಮಂಗರಾ. ೧೩೦-೧೬). [ಸಂ.]

ವಿಮುಕ್ತ (ಗು). ೧. ಬಿಟ್ಟ ; ತೊರೆದ ; ವರ್ಜಿಸಿದ : ಆ ಕುತ್ಕೀಲಂ ಸೊಗಯಿಪುದಾ ಕಾಳೋರಗವಿಮುಕ್ತನಿರ್ಮಳತರನಿರ್ಮೋಕಂ ತಾನೆನೆ ರಜತಾಳೋಕಸಹಸ್ರಾಂಶು ಧವಳಿತಾಶಾವಳಿಯಂ (ಚಂದ್ರಪ್ರ. ೬-೩). ೨. ಬಿಡುಗಡೆಯಾದ ; ಬಂಧನರಹಿತವಾದ : ಪಂಜರವಿಮುಕ್ತಕುಂಜರಾರಾತಿಯಂತೆ ನೃಪನಿವಾಸಕ್ಕೆ ಬಂದು (ಪುಷ್ಪಪು. ೪-೭೦ ವ). ೩. ಪ್ರಯೋಗಿಸಿದ ; ಹೂಡಿಬಿಟ್ಟ : ಇನ್ನೆವರಂ ಗುಱಿಯಾದುದಿಲ್ಲ ಕಾಮಕರವಿಮುಕ್ತ ಬಾಣಹತಿಗೆ (ಶಮಿದ. ೨೪೮ ಪ್ರಯೋ). (ನಾ). ೪. ದೇಹದಿಂದ ವಿಸರ್ಜಿತವಾದುದು; ಅಮೇಧ್ಯ ; ಮಲ : "ವರ್ಚಸದೊಳು ವಿಮುಕ್ತದೊಳು ಮಿಗೆ ವಿಸರ್ಗವೆನಿಕು" (ಮಂಗರಾ. ೧೪೩-೨೪). ೫. ಬಿಡುಗಡೆ ಹೊಂದಿದ ವ್ಯಕ್ತಿ ; ಬಂಧನರಹಿತನಾದವನು; ಮುಕ್ತ : ಇದಿರುವಂದನು ಧರ್ಮಸುತ ಪದಪಯೋಜದಲೆಱಗಿದನು ನಿನಗಿದು ವಿನೋದವಲೇ ವಿಮುಕ್ತಗೆ (ಕುವ್ಯಾಸ. ೬-೨೧). ೬. ನಾಲ್ಕುಬಗೆಯ ಆಯುಧವರ್ಗಗಳಲ್ಲಿ ಒಂದು ; ಕೈಯಲ್ಲಿ ಹಿಡಿದೇ ಬಳಸಬೇಕಾದ ಕತ್ತಿ, ಬಾಕು ಮೊದಲಾದ ಆಯುಧ : ಸಲೀಹ ಬಲೀಹ ಕತ್ತಿ ಕಠಾರಿ ಬಾಕು ಕರಚೂರಿಯಾದಿಯಾದ . . . ವಿಮುಕ್ತವೆಂಬ ಪಲವು ತೆರದ ಕೈದುಗಳಿಂ (ಧರ್ಮವ್ಯಾ. ೧-೧೬). 'ಅಮುಕ್ತ' ಪರಾ. ೭. [ನಾಟ್ಯ] ಉಸಿರಾಟದ ಒಂದು ವಿಧ ; IP "ಬಹಳ ಹೊತ್ತು ಉಸುರನ್ನು ತಡೆದು ಬಿಡುವುದು. ಯೋಗ, ಧ್ಯಾನ, ಪ್ರಾಣಾಯಾಮ ಇವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೨೬೬ ಗದ್ಯಾನುವಾದ): ಪಿರಿದುಂ ಸ್ವಸ್ಥಂ . . . ಸ್ಥಿರದ ವಿಮುಕ್ತಂ ವಿವೃತಂ ತರುಣೀ ಪ್ರಸೃತಮುಮಿವಿಂತು ಕೋಹಳನ ಮತಂ (ಲಾಸ್ಯರಂ. ೩-೬೬). ೮. ಉಪವಿಷ್ಟ ಸ್ಥಾನಕಗಳಲ್ಲಿ ಒಂದು ; IP "ನೆಲದ ಮೇಲೆ ಬೀಳುವುದು" (ಲಾಸ್ಯರಂ. ೩೩೨ ಗದ್ಯಾನುವಾದ): ಸ್ವಸ್ಥ, ಮಂದಾಲಸ, ಕ್ರಾಂತ, ವಿಷ್ಕಂಭಿತ, ಉತ್ಕಟ, ತ್ರಸ್ತಾಲಸ, ಜಾನುಗತ, ಮುಕ್ತಜಾನು, ವಿಮುಕ್ತ ಈ ಒಂಬತ್ತು ಕುಳ್ಳಿರ್ದ ಸ್ಥಾನಕಂಗಳ್ (ಲಾಸ್ಯರಂ. ೭-೧೨ ವ). [ಸಂ.]

ವಿಮುಕ್ತಕ (ನಾ). = ವಿಮುಕ್ತ ೮ : ಉರುಮುಕ್ತಜಾನುವೊಳ್ಪಿಂ ಪಿರಿದೆಸೆವ ವಿಮುಕ್ತಕಾಖ್ಯಮಿಂತೊಂಬತ್ತುಂ ತರುಣೀ ಕೇಳ್ ಕುಳ್ಳಿರುತಿರ್ಪೊರದೀ ಸ್ಥಾನಕಮುಮಾಗಿ ರಂಜಿಸಿ ತೋರ್ಕುಂ (ಲಾಸ್ಯರಂ. ೭-೧೦). [ಸಂ.]

ವಿಮುಕ್ತಾಹಾರ (ನಾ). ೧. ಆಹಾರವನ್ನು ತ್ಯಜಿಸಿದವನು ; ಉಪವಾಸವನ್ನು ಮಾಡುವವನು. ೨. ಮುತ್ತಿನ ಸರವನ್ನು ಹೊಂದದಿರುವುದು. ೧, ೨: ವೀರರ ವೀರ ವಿಮುಕ್ತಾಹಾರಂ ಭವದರಿವಧೂಸ್ತನದ್ವಿತಯಂ ಕಣ್ಣೀರಿಂ ಮಿಂದೆರ್ದೆಗಿರ್ಚಿಂದೋರಂತಿರೆ ಬೆಂದು ಚರಿಸುತಿರ್ಪುದು ತಪಮಂ (ಕಾದಂಪೂ. ೬೧).

[ಸಂ. (ವಿಮುಕ್ತ + ಆಹಾರ; ವಿ + ಮುಕ್ತಾಹಾರ)]

ವಿಮುಕ್ತಿ (ನಾ). ೧. ಪಾರಾಗುವಿಕೆ ; ಬಿಡುಗಡೆ ; ವಿಮೋಚನೆ. ೨. ಪ್ರತ್ಯೇಕಗೊಳ್ಳುವಿಕೆ ; ಬೇರ್ಪಡುವಿಕೆ. ೩. ಮೋಕ್ಷ ; ಮುಕ್ತಿ : ಕಳೆ ಸಿರಿ ಧರ್ಮಂ . . . ಸುಖಮುಜ್ವಳವಿದ್ಯೆ ವಿಮುಕ್ತಿಯೆಂಬಿವಂ ಪಡೆವಂ ಪ್ರಮೋದದಿಂ ಕೇಳ್ದೊಡೆ ಕೇಳ್ವರನಾವನಾದೊಡಂ ಪೊಡವಿಯೊಳೀ ಮೃಡನ ಘನಪಂಚವಿಂಶತಿವಡೆದೀ ಲೀಲೆಗಳಂ (ರಾಜಶೇ. ೩-೧೧೧). [ಸಂ.]

ವಿಮುಕ್ತಿಗೊಳಿಸು (ಕ್ರಿ). ಬಂಧನದಿಂದ ಮುಕ್ತಿಗೊಳಿಸು ; ಬಿಡುಗಡೆ ಮಾಡು ; ವಿಮೋಚನೆಗೊಳಿಸು : ರಹಸ್ಯವನ್ನರಿತು ಮಾಡಿದ ಕರ್ಮವು ದಿವ್ಯತೆಯನ್ನುಂಟುಮಾಡಿ, ಪಾಪದಿಂದ ವಿಮುಕ್ತಿಗೊಳಿಸುವುದು (ಧರ್ಮಸಾ. ೧೦೬).

[ವಿಮುಕ್ತಿ + ಕೊಳು (< ಕೊಳ್$_1$) + – ಇಸು$_3$]

ವಿಮುಖ (ಗು). ೧. ಮುಖವನ್ನು ತಿರುಗಿಸಿದ, — ಬೇರೆಡೆಗೆ ಹೊರಳಿಸಿದ. ೨. ಮನಸ್ಸಿಲ್ಲದ ; ಇಷ್ಟವಿಲ್ಲದ ; ವಿರೋಧವಾಗಿರುವ. (ನಾ). ೩. ತಿರುಗಿಸಿರುವ ಮುಖ ; ಬೇರೆಡೆಗೆ ಹೊರಳಿರುವ ಮುಖ : ಬಸವಾಮುಖ ವಿಮುಖವಾಯಿತ್ತು (ನೀಲವ. ಕ. ೨೩-೬೯). ೪. ಮುಖವನ್ನು ಹಿಂದಕ್ಕೆ ತಿರುಗಿಸಿದುದು ; ಹಿಮ್ಮೊಗವಾದುದು : ಪತಾಕೆಯೊಂದು ರಾಘವನೂಣೆಯಮಂ ಕಾಣೆನೆಂದು ವಿಮುಖಮಾದುದು (ರಾಮಾಶ್ವ. ೩೦-೭). ೫. ಮುಖವನ್ನು ಬೇರೆಡೆಗೆ ತಿರುಗಿಸಿದವನು. ೬. ಸೋತವನು ; ಹಿಮ್ಮೆಟ್ಟಿದವನು ; ಹಿಂಜರಿದವನು : ಚಕ್ರಿಗೆ ವಿಮುಖನಾಗಿ ಬಂದೆನಾದೊಡೆ ನಿನ್ನ ಗರ್ಭದಿಂದುದಯಿಸಿದ ನಂದನನೆ (ಜೈಮಿಭಾ. ೧೧-೫); ಪ್ರಮುಖನಾದವನು ವಿಮುಖನಾಗಬಾರದು (ಗಾದೆ).

೭. ಮನಸ್ಸಿಲ್ಲದವನು ; ಆಸಕ್ತಿಯಿಲ್ಲದವನು : ಚಿತ್ತಜಾರಿಗೆ ನೆಗೆವ ಕೈಗಳನೆತ್ತುವರೆ ನೇಣಿನ ಹೊಲೆಯರಿಗೆ ಉತ್ತಮದ ಲಿಂಗಪ್ರಸಾದಿಗೆ ಭಕ್ತಿವಿಮುಖರಹ (ಬಸಪು. ೬೦-೯); ಪಾಠದಲ್ಲಿ ವಿಮುಖರಾಗಿರುವ ಮಕ್ಕಳ ಅವಧಾನವನ್ನು ಪಾಠದ ಕಡೆಗೆ ಸೆಳೆಯಲು ನೆರವಾಗಬೇಕು (ಶಿಕ್ಷದ. ೨೭೭). [ಸಂ.]

**ವಿಮುಖಗೊಳಿಸು** (ಕ್ರಿ). ಆಸಕ್ತಿಯನ್ನು ಕಳೆದುಕೊಳ್ಳುವಂತೆ ಮಾಡು : ಈ ಭಾವನೆ ಅವನನ್ನು ಅವಳಿಂದ ವಿಮುಖಗೊಳಿಸಲಿಲ್ಲವೆಂಬುದೇ ಆಶ್ಚರ್ಯ (ಪುನರು. ೧೯೫). [ವಿಮುಖ + ಕೊಳು (< ಕೊಳ್$_1$) + – ಇಸು$_1$]

**ವಿಮುಖವೃತ್ತಿ** (ನಾ). ಮನಸ್ಸಿಲ್ಲದಿರುವಿಕೆ ; ಉದಾಸೀನತೆ ; ವೈರಾಗ್ಯ : ಸ್ಮಿತ ಮಧುರಂ ಮುಖಂ ವಿಮುಖವೃತ್ತಿಯನಾರ್ಗೆ ಕಲಿಲ್ಪುದು . . . ತದಂಗಜರಾಜ್ಯಲಕ್ಷ್ಮಿಯಾ (ಚಂದ್ರಪ್ರ. ೧೦-೯೩). [ಸಂ.]

**ವಿಮುಗ್ಧ** (ಗು). ೧. ಕಪಟವನ್ನರಿಯದ ; ಸರಳವಾದ ; ಮುಗ್ಧವಾದ : ಓರ್ವಳ್ ವಿದಗ್ಧೆ . . . ತನ್ನ ವಿಮುಗ್ಧಸ್ವಭಾವಮಂ ನಲ್ಮೆಯಳಿಪನಲಂಪಳಿಕೆಯುಮಂ ತೋರ್ಪಿ ನುಡಿವುದುಂ (ಸುಕುಮಾ. ೧೧-೧೯ ವ). ೨. ಮನೋಹರವಾದ ; ರಮ್ಯವಾದ : ಬೆಂಚೆಗಂಚೆಗಳ್ ಕಿನಿಸಿ ವಿಮುಗ್ಧಮಾನಸದೊಳೊಂದೆ ಚರತ್ಪಥಿಕರ್ಗೆ ಬೇವಸಂ ಜನಿಯಿಸೆ ಬಂದು ಮುಟ್ಟಿದುದಿದೇಂ ಘನಕಾಲಮೊ ಘರ್ಮಕಾಲಮೋ (ಪುಷ್ಪಪು. ೧೩-೧೮). [ಸಂ.]

**ವಿಮುಗ್ಧೆ** (ನಾ). ಕಪಟವನ್ನರಿಯದವಳು ; ಸರಳಸ್ವಭಾವದವಳು : ಮತ್ತಮೋರ್ವಳ್ ವಿಮುಗ್ಧೆ . . . ಮನಃಸಂಕಲ್ಪಸಂಪರ್ಕಸಂಭೋಗಸುಖಾ ಸಕ್ತೆಯಾಗಿರ್ಪುದುಂ (ಸುಕುಮಾ. ೧೧-೧೮ ವ). [ಸಂ. ವಿಮುಗ್ಧಾ]

**ವಿಮೂಢ** (ಗು). ೧. ಬಹಳ ದಡ್ಡತನದ, – ಮೂಢತನದ : ತಾವು ಬಯಸುವ ಜನ್ಮವನು ಪಡೆದೀ ವಿಮೂಢಮನುಷ್ಯರಾ ಹರಿಸೇವೆಯನು ಮಾಡರು (ನಿಭಾಗ. ೩-೪-೩೯). ೨. ದಿಗ್ಭ್ರಮೆಗೊಂಡ ; ತಬ್ಬಿಬ್ಬಾದ. (ನಾ). ೩. ದಡ್ಡ ; ಮೂಢ. [ಸಂ.]

**ವಿಮೆ , ಬೀಮಾ , ವಿಮಾ** (ನಾ). ಒಬ್ಬ ವ್ಯಕ್ತಿಯು , ತನ್ನ ಸ್ವತ್ತು , ಕಾರ್ಯಶಕ್ತಿ ಮುಂತಾದುವು ನಷ್ಟವಾಗಬಹುದೆಂಬ ಅಥವಾ ಪ್ರಾಣಹಾನಿಯಾಗ ಬಹುದೆಂಬ ನಿರೀಕ್ಷೆಯ ಮೇಲೆ, ಅಂತಹ ಸಂದರ್ಭದಲ್ಲಿ ಪರಿಹಾರವನ್ನು ಪಡೆಯುವ ಕರಾರಿನ ಮೇಲೆ , ಅದಕ್ಕೆಂದೇ ನಿಗದಿತವಾದ ನಿರ್ದಿಷ್ಟವಾದ ಸಂಸ್ಥೆಯಲ್ಲಿ ಒಂದು ಗೊತ್ತಾದ ಮೊಬಲಗನ್ನು ಒಂದು ಕಾಲಮಿತಿಯಲ್ಲಿ ಕಂತುಗಳ ಮೂಲಕ ಶೇಖರಿಸಿಡುವ ಒಂದು ಏರ್ಪಾಟು ಅಥವಾ ವ್ಯವಸ್ಥೆ ಮತ್ತು ಅಂತಹ ನಷ್ಟ ಒದಗಿದ ಪಕ್ಷದಲ್ಲಿ (ಪ್ರಾಣಹಾನಿಯ ಸಂದರ್ಭದಲ್ಲಿ) ನಿರ್ದಿಷ್ಟ ಸಂಸ್ಥೆಯು, ಕಂತುಕೊಡುತ್ತ ಬಂದ ವ್ಯಕ್ತಿಯ ವಾರಸುದಾರರಿಗೆ , ಹಿಂದೆಯೇ ಗೊತ್ತು ಮಾಡಿದ ಒಟ್ಟು ಮೊಬಲಗನ್ನು ಪರಿಹಾರವಾಗಿ ಕೊಡುವ ಅಥವಾ ಅಂತಹ ಸಂದರ್ಭ ಒದಗದ ಪಕ್ಷದಲ್ಲಿ ಪೂರ್ತಿ ಕಂತು ತೀರಿದ ಮೇಲೆ ಒಟ್ಟು ಹಣವನ್ನು ಲಾಭಾಂಶದೊಂದಿಗೆ ಚಂದಾದಾರನಿಗೆ ಪಾವತಿ ಮಾಡುವ ಕರಾರಿನ ಒಂದು ವ್ಯವಸ್ಥೆ : ವಿಮೆಯನ್ನು ತೆಗಿಯಲಿಚ್ಛಿಸುವವರು ನಮಗೆ ಪತ್ರದಿಂದ ಹಾಂಗೆ ತಿಳಿಸಬೇಕು (ಮುಂಬವ್ಯಾ. ೮೩). 'ಜೀವವಿಮೆ' ಪರಾ. ಬೀಮಾ : 'ಬೀಮಾದಸ್ತೈವಜು' ಪರಾ. ವಿಮಾ : ವಿಮಾಸಂಸ್ಥೆಯ ಪ್ರತಿನಿಧಿ ಯೊಡನೆ ಪರಿಚಯವೇ? (ರಂಗವ. ೧೧೭); ಮನುಷ್ಯರು ಕ್ಲುಪ್ತಕಾಲಕ್ಕೆ ಕ್ರಮ ಕ್ರಮವಾಗಿ ಹಣವನ್ನು ಕಟ್ಟುತ್ತಿದ್ದಾರೆ . . . ವಿಮಾಸಂಸ್ಥೆಗಳು ಇದಕ್ಕೆ ಪ್ರತಿಯಾಗಿ . . . ಹಣವನ್ನು ಬಡ್ಡಿಸಮೇತ ಕೊಡುತ್ತವೆ (ಗೃಹವಿ. ೨೦೧). 'ವಿಮಾದಾರ' ಪರಾ.

ವಿಮೆಮಾಡಿಸು = ೧. ಜೀವವಿಮೆಯನ್ನು ಮಾಡಿಸು ; ವಿಮೆ ಇಳಿಸುವಂತೆ ಮಾಡು : ನನ್ನ ಹೆಂಡಿರು ಮಕ್ಕಳ ಒಳಿತಕ್ಕಾಗಿ ನನ್ನನ್ನು ವಿಮೆ ಮಾಡಿಸಲು ಬಂದ ದೇವದೂತನಂತೆ (ತುಟಮಿ. ೨೯). ೨. ವಿಮೆಮಾಡು : ಕೆಲವು ದಿನಗಳ ಹಿಂದೆ ಅವನು ಮನೆಯ ಮೇಲೆ ವಿಮೆ ಮಾಡಿಸಿದ್ದನಂತೆ (ಪುನರು. ೨೩೩). ವಿಮೆಮಾಡು = ಆಸ್ತಿ , ಜೀವ ಮೊದಲಾದುವು ನಷ್ಟವಾದರೆ ಪರಿಹಾರವನ್ನು ಪಡೆಯುವ ಕರಾರಿನ ಮೇಲೆ ಒಂದು ಗೊತ್ತಾದ ಸಂಸ್ಥೆಯಲ್ಲಿ ನಿರ್ದಿಷ್ಟವಾದ ಮೊತ್ತದ ಹಣವನ್ನು ಕಂತುಗಳಲ್ಲಿ ಕಟ್ಟುತ್ತ ಹೋಗು : ವಿಮೆ ಮಾಡುವವರು ಸಂಸ್ಥೆಯ ಕಾನೂನುಗಳನ್ನು ಪರಿಶೀಲಿಸಿ ಅದರಂತೆ ನಡೆದುಕೊಳ್ಳಬೇಕು (ಗೃಹವಿ. ೨೦೧).

[<– ಪಾರ. ಹಿಂ. ಬೀಮಾ; ಮರಾ. ವಿಮಾ; ಗುಜ. ವಿಮೊ]

**ವಿಮೆದಾರ , ವಿಮಾದಾರ** (ನಾ). ವಿಮೆಯನ್ನು ಮಾಡಿರುವವನು : ವಿಮೆಯ ಪತ್ರವನ್ನು ಯಾರ ಹೆಸರಿಗೆ ಕೊಟ್ಟಿದೆಯೊ ಅವನು ; ವಿಮೆದಾರ (Insurant. ಇಂಕನಿ). ವಿಮಾದಾರ : ವಿಮಾದಾರನು ಮೃತನಾದರೆ ಆತನು ಸೂಚಿಸಿದ ಹಕ್ಕುದಾರನಿಗೆ , ವಿಮಾಪತ್ರದ ಬೆಲೆಯ ಹಣವು ಬಡ್ಡಿಯ ಸಮೇತ ದೊರೆಯುತ್ತದೆ (ಗೃಹವಿ. ೨೦೧).

[ವಿಮೆ + – ದಾರ್$_1$]

**ವಿಮೋಕ್ಷ** (ನಾ). ೧. ಬಿಡುಗಡೆ ; ವಿಮೋಚನೆ. ೨. ಸಂಸಾರಬಂಧನದಿಂದ ಬಿಡುಗಡೆ ; ಮುಕ್ತಿ ; ಮೋಕ್ಷ : ನಾವು ಮೆಚ್ಚಲು ಬೇಡಿಕೊಳನೇ ಭೂವರಂ ತಚ್ಛೋಳನಂದು ಮಹಾವಿಮೋಕ್ಷವನು (ಬಸಪು. ೨೮-೮೫). ೩. ಒಂದು ಬಗೆಯ ಮರ : "ನಂದಿವಟ್ಟಂ ತಿಲಕವರ್ಜುನಂ ಪದ್ಮಮಾಸ್ಕಂದನಂ ಶಾಲಂ ವಿಮೋಕ್ಷ ಮೆಂಬಿವು ವೃಕ್ಷಮೆಂದೆನಿಸಿಕೊಂಬುವು" (ಮಂಗರಾ. ೧೪೧-೧೪). [ಸಂ.]

**ವಿಮೋಚನ** (ನಾ). ೧. ಬಿಡುಗಡೆ ; ಸ್ವಾತಂತ್ರ್ಯ. ೨. ಮುಗಿಯುವಿಕೆ ; ಮುಕ್ತಾಯ ; ಅಂತ್ಯ : ಪಾತಕಕ್ಷಯದಂತೆ ಮಾಗಿಯ ವಿಮೋಚನಂ ಕಾಣಿಸಲ್ಪುಣ್ಯವಾಸನೆಯಂತೆ ದಕ್ಷಿಣದ ವಾಯು ಸುಳಿಯೆ (ಜೈಮಿಭಾ. ೮-೭). ೩. ಮುಕ್ತಿ ; ಮೋಕ್ಷ. [ಸಂ.]

**ವಿಮೋಚನೆ** (ನಾ). ೧. ಬಿಡುಗಡೆ ; ವಿಮುಕ್ತಿ : ಆಲಿಕಾದರನು ತನ್ನ ಚಿಂತೆಗೆ ವಿಮೋಚನೆಯನ್ನೇ ಕಾಣದಾದನು (ಮಣಿಸ. ೨೭); ಅವಳು ಪ್ರಾಯಶ್ಚಿತ್ತರೂಪದ ವಿಮೋಚನೆಯೆ ಸಾರಸರ್ವಸ್ವವೆಂದು ಸಾರುವ ಕ್ರೈಸ್ತಪಂಥದ ಶ್ರದ್ಧಾನುಯಾಯಿ (ಪುನರು. ೬೨೯). ೨. ಮುಕ್ತಿ ; ಮೋಕ್ಷ. [ಸಂ.]

**ವಿಮೋಚನೆಗೊಳಿಸು** (ಕ್ರಿ). ಬಿಡುಗಡೆಮಾಡು ; ಮುಕ್ತಗೊಳಿಸು : ಹನನಾಪರಾಧದಿಂದ ಅವಳನ್ನು ವಿಮೋಚನೆಗೊಳಿಸಬೇಕೆಂಬುದೇ ಅವರ ಉದ್ದೇಶವಾಗಿದ್ದಂತೆ ಇದರಿಂದ ವ್ಯಕ್ತವಾಗುತ್ತದೆ (ಪುನರು. ೨೦೪).

[ವಿಮೋಚನೆ + ಕೊಳು (< ಕೊಳ್$_1$) + – ಇಸು$_1$]

**ವಿಮೋಹ** (ನಾ). ೧. ಮೋಹಪರವಶತೆ : ಪೋದುದು ಜೌವನಂ ಕ್ರಮದಿನಾದುದು ಮುಪ್ಪಿನಿಸಾದೊಡಂ ಸ್ಮರೋನ್ಮಾದದೊಳೀ ವಿಮೋಹದೊಳದೇಕೆ ಗಡಂ ಬಗೆಯಂ ತಗುಳ್ಚಿ ಬೆಳ್ಳಾದಪನಕ್ಕಟಾ (ಆದಿಪು. ೨-೩೫). ೨. ಭ್ರಮೆ ; ಭ್ರಾಂತಿ : ಇಂದ್ರಜಾಲದ ವಿಮೋಹಮೊ ಮೇಣಿದು ಮೂರ್ಛೆಯೊಂದು ಸಂಜನನಮೊ . . . ಎಂದು ತಜ್ಜನಮನಿತುಂ ಮನಂಬಸುತುಮಿರ್ದುದು ನಿಟ್ಟಿಸಲಾಜಿದೇನುಮಂ (ಚಂದ್ರಪ್ರ. ೫-೭).

[ಸಂ.]

**ವಿಮೋಹನವಿದ್ಯ** (ನಾ). ಮರುಳುಗೊಳಿಸುವ ವಿದ್ಯೆ ; ಸಂಮೋಹನವಿದ್ಯೆ : ಕುದುಕುಳಿದಾನವಂ ನಿಜವಿಮೋಹನವಿದ್ಯದಭೇದ್ಯಶಕ್ತಿಯಿಂದೊದವಿಸೆ ಮೋಹಮಂ ಹೃದಯದೊಳ್ ಸಭೆಗೆ (ಚಂದ್ರಪ್ರ. ೫-೫). [ಸಂ. ವಿಮೋಹನವಿದ್ಯಾ]

**ವಿಮೋಹಿಸು** (ಕ್ರಿ). ೧. ಭ್ರಮಿಸು ; ಭ್ರಾಂತಿ ಹೊಂದು : ಇವರಿನ್ನುಮಾಂತಿಜೆವರೆಂದು ವಿಮೋಹಿಸಿ ವೀರಪಟ್ಟಮಂ ಬಗೆಯದೆ ಕಟ್ಟಿದೈ (ಪಂಪಭಾ. ೧೧-೧೭). ೨. ವಿಶೇಷವಾಗಿ ಮೋಹಗೊಳ್ಳು : ದೆಸೆ ವಿಮೋಹಿಸಲೆಂದು ವರಷೋಡಶಸಹಸ್ರಾಂಗನೆಯರುನ್ನತವಸನ ಮಣಿಭೂಷಣಝಣತ್ಕಾರದಲಿ ರಂಜಿಸಲು (ನಿಭಾಗ. ೧೦-೧೦೨-೮). ೩. ಭ್ರಮೆಯನ್ನುಂಟು ಮಾಡು ; ಭ್ರಾಂತಿಗೊಳಿಸು : ಪ್ರಮದದೊಳನ್ನ ಕಂಧರದೊಳಂದಿರುಳಿಕ್ಕಿದ ತೋರಹಾರಮುಂ . . . ನಿನ್ನಯ ಪೇಟ್ದ ಮಾತುಮಾ ರಮಣಿಯದೊಂದು ಭಾವಗತಮಂ ನೆಜೆ ಸೂಚಿಸೆ ಮತ್ತೆ ಸಂದೆಗಂ ಸಮನಿಸಿತೆಂದೊಡಿನ್ನೆನಗದೊಂದು ವಿಮೋಹಿಪ ಶಾಪಮಾಗದೇ (ಕಾದಂಬ. ೩೪೭). [ವಿಮೋಹ + – ಇಸು$_1$]

**ವಿಯಚ್ಚಕ್ರ** (ನಾ). ಗಗನಮಂಡಲ ; ಆಕಾಶ : ಬೆಸಕೆಯ್ದುತ್ತು ಸಮುದ್ರಮುದ್ರಿತ ಧರಾಚಕ್ರಂ . . . ಪೊದಟ್ಟಾಚ್ಛೆಗಂ ಪೆಸರ್ಗಂ ಮುನ್ನಮೆ ರೂಪುವೋದುದು ವಿಯಚ್ಚಕ್ರಂ ಸಮಂತೆಂಬಿನಂ ಜಸಮಾಪಾಂಡುರಮಾದುದಾ ನೃಪರೊಳಾರಾ ಪಾಂಡುರಾಜಂಬರಂ (ಪಂಪಭಾ. ೧-೧೧೦); ಅಂತು ಬೆಳ್ಳಗಿಲ ತೆಳ್ಪಿನಿಂ ಪಳಚ್ಚನಾದ ವಿಯಚ್ಚಕ್ರಂ ಕೆಸರ್ಮಸುಳ್ಪು (ಮಲ್ಲಿಪು. ೮-೧೩೦). [ಸಂ.]

**ವಿಯಚ್ಚರ** (ನಾ). ೧. ಆಕಾಶದಲ್ಲಿ ಸಂಚರಿಸುವಂಥದು ; ಪಕ್ಷಿ ; ಹಕ್ಕಿ. ೨. ಆಕಾಶದಲ್ಲಿ ಸಂಚರಿಸುವವನು ; ಖೇಚರ : ಕಂಡು ದಿವಿಜೇಶ್ವರಂ ಬಗೆಗೊಂಡಿರೆ ನುಡಿದಂ ವಿಯಚ್ಚರಂ ಮುಂ ನಿನ್ನಂ ಕಂಡಱಿಯದೆಯುಂ ಸ್ವಾಮಿ ಕಂಡಂತಾದಪುದಖಿಂಡಿತವ್ಯಾಮೋಹಂ (ಶಾಂತಿಪು. ೫-೮); ಪಾವನಿ ಜಾಂಬವಾಂಗದ ಸುಷೇಣ ವಿಭೀಷಣ ಚಂದ್ರರಶ್ಮಿ ಸುಗ್ರೀವ ವಿಯಚ್ಚರಪ್ರಮುಖರೇಱಿದ ರತ್ನವಿಮಾನ ಮಾಲೆ ಶೋಭಾವಹಮಾಗೆ ಸುತ್ತಿ ಬರೆ (ಪಂರಾಮಾ. ೧೨-೯೩). [ಸಂ.]

**ವಿಯಚ್ಚರಿ** (ನಾ). ಆಕಾಶದಲ್ಲಿ ಸಂಚರಿಸುವವಳು ; ಖೇಚರಿ : ಈ ವಿಯಚ್ಚರಿಯುಂ . . . ತಾನುಂ ಪ್ರಾಸಾದದುಪರಿಮಭೂಮಿಯೊಳ್ ಇರ್ದು ದಿಶಾವಲೋಕನಂಗೆಯ್ಯುತ್ತಿರೆ (ಶಾಂತಿಪು. ೯-೧೨ ವ). [ಸಂ. ವಿಯಚ್ಚರೀ]

**ವಿಯಚ್ಚಾರಿ** (ನಾ). ೧. ಗಾಳಿಪಟ. ೨. ಆಕಾಶದಲ್ಲಿ ಸಂಚರಿಸುವವನು ; ಗಗನಗಾಮಿ : ಬಹುಯೋಜನದ ಛಾಯೆ , ನೊರೆವ ನೀರಂ ಕರ್ಪುಗ್ಗೆದು ಬರುತಿರ್ದುದಂ ಕಂಡಳದ್ಭುತನಿಶಾಚರಿ. ಕಂಡಳೊಡನೊಡನೆ ಕಣ್ಣಟ್ಟುತದರ ಮೂಲದ ವಿಯಚ್ಚಾರಿಯಂ (ಶ್ರೀರಾಮಾ. ೪೧೧-೨೨೬). [ಸಂ. ವಿಯಚ್ಚಾರಿನ್]

**ವಿಯಣ್ಣ** (ನಾ). ಒಬ್ಬಾತನ ಹೆಸರು : ವಿಯಣ್ಣ ತುಱುಗಳೊಳ್ತುಱುವಾನ್ನಿಕ್ಕಿಸಿ ಕಾದಿ ಸ್ವರ್ಗ್ಗಮಾಳ್ದಂ (ಎಕ. X, ಶಿಡ್ಲಘ. ೫೮-೨; ಸು. ೯೦೦?). [? + ಅಣ್ಣ]

**ವಿಯತ್ತಲ, ವಿಯತ್ತಳ** (ನಾ). ೧. ಆಕಾಶಸ್ಥಲ ; ನಭೋಂಗಣ ; ಗಗನ ಮಂಡಲ : ಶರತ್ಸಮಯಸರಿತ್ಸಲಿಲ ವಿಮಲ ವಿಯತ್ತಲ ದಿಗಂತರಾಳಂಗಳುಂ (ರತ್ನಕ. ೧-೩೦ ವ). **ವಿಯತ್ತಳ** : ೧. ನವನಳಿನೀವನಂಗಳ ಪರಾಗರಜಂಗಳನುಂಡು ಮುನ್ನಮಂತವನೆ ವಿಯತ್ತಳಭ್ರಮಣವಿಹ್ವಲನಾಗಿ ಬಟಲ್ದು ಕಾಱುವಂತೆವೊಲಿರೆ . . . ರವಿ ಪೂರ್ದಿದನಸ್ತಶೈಲಮಂ (ಪಂಪಭಾ. ೪-೪೬); ವಿಯತ್ತಳವ ನಳ್ಳಿಱಿವ . . . ವೈರಿಸೇನೆಯ ಕುತ್ತಿ ತೇಗುವ ಮನದ ಮಾರುತಿ ಮೊಳಗಿದನು ಮುಂದೆ (ಕುಮ್ಮಾರ. ೧೨-೨೦). ೨. [ಗಣಿತ] ಸೊನ್ನೆ ; ಶೂನ್ಯ : ಗಗನಂ ಶೂನ್ಯಾಂಬರ ಖರ ಮಿಗೆಯಾಕಾಶಂ ವಿಯತ್ತಳಂ ವ್ಯೋಮಾಂಬರ . . . ಬಿಂದುವಿನ ನಾಮನಾಸ್ತಿಸಮೇತಂ (ವ್ಯವಹಾ. ೧೦-೧೦). [ಸಂ.]

**ವಿಯತ್ತಳ** 'ವಿಯತ್ತಲ' ನೋ.

**ವಿಯತ್ಪಥ** (ನಾ). ಆಕಾಶಮಾರ್ಗ ; ಗಗನಪಥ : ನೋಟಕ್ಕಿಂಬಾದುದು ಮೇಘರಥವಿಯತ್ಪಥಗಮನಂ (ಶಾಂತಿಪು. ೯-೭೩). [ಸಂ.]

**ವಿಯತ್ಪುರುಷ** (ನಾ). ಆಕಾಶಸ್ವರೂಪನಾದ ಪುರುಷ ; ಪರಮಾತ್ಮ : ಸಹಸ್ರಶೀರ್ಷನಾದಿಪುರುಷನು ವೇದಪುರುಷನೊಬ್ಬ ಪುರುಷನು . . . ವಿಯತ್ಪುರುಷನೊಬ್ಬ ಪುರುಷನು (ಬಸವ. ೯೫೫). 'ಜ್ಯೋತಿಪುರುಷ' ಪಠಾ. [ಸಂ.]

**ವಿಯತ್ಪುಷ್ಪ** (ನಾ). ೧. ಆಕಾಶದ ಹೂವು ; ಗಗನಕುಸುಮ. ೨. (ಆಲಂ) ಅಸಂಭವವಾದುದು ; ಸುಳ್ಳು : ಮೊದಲಿಂದಂ ಕೂರ್ಮರೋಮಂಟಗೆಯ ಶಶವಿಷಾಣಂ ವಿಯತ್ಪುಷ್ಪದಂತಿಲ್ಲದುದೇ ಸತ್ಕಂ ಪ್ರಪಂಚೆಂದಱಿದು (ರಕ್ಷಾಶ. ೯೨). [ಸಂ.]

**ವಿಯದ್ಗಾಮಿ** (ನಾ). ೧. ಆಕಾಶದಲ್ಲಿ ಸಂಚರಿಸುವವನು ; ಖೇಚರ ; ವಿದ್ಯಾಧರ : ವಿಯದ್ಗಾಮಿ ಭೂಮಿಪನೊಳ್ ಕೊಟ್ಟುದನಿಂತುಟೆಂಬಿನಿತನಾರಯ್ದನ್ನ ಬರ್ಪನ್ನಮಾಜ್ಞೆ ಪುರಂ ಮಂಡಲಮೆಂಬಿವರ್ಕೆ ನಿಮುತ್ತಲೇ ಶಿಕ್ಷೆಯುಂ ರಕ್ಷೆಯುಂ (ಶಾಂತಿಪು. ೨-೬೬). ೨. ಆಕಾಶದಲ್ಲಿ ಚಲಿಸುವಂಥದು ; ಗಗನಚರ : ತ್ರಿದಶಂ ಮೇಣ್ಖಚರಂ ಮೇಣ್ಕುಮುರೆಯ ರೂಪಿಂದಮರಸನಂ ಮುನ್ನಿನ ಜನ್ಮದ ಪಗೆವನೊಯ್ದು ನಂತಲ್ಲದೊಡೆ ವಿಯದ್ಗಾಮಿಯಪ್ಪ ಕುದುರೆಗಳೊಳವೇ (ಪಂರಾಮಾ. ೪-೧೨೦). [ಸಂ. ವಿಯದ್ಗಾಮಿನ್]

**ವಿಯನ್ನಂದನ** (ನಾ). ಸ್ವರ್ಗದ ನಂದನವನ ; ಇಂದ್ರನ ವನ : ದುಂದುಭಿನಾದ ಮಾವರಿಸೆ ದಿಕ್ತಟಮಂ ಚಲಕೇತನಂ ವಿಯನ್ನಂದನಶಂಕೆಯಂ ಪಡೆಯೆ . . . ಕಣ್ಗೆವಂದದೇಂ ಬಂದುದೊ ರಾಮಕೇವಲಿಯ ಕೇವಲಪೂಜೆಗೆ ದೇವಸಂಕುಲಂ (ಪಂರಾಮಾ. ೧೬-೬೯). [ಸಂ.]

**ವಿಯನ್ಮಹೀರುಹ** (ನಾ). ಸ್ವರ್ಗದಲ್ಲಿರುವ ವೃಕ್ಷ ; ಕಲ್ಪವೃಕ್ಷ : ವಿಯನ್ಮ ಹೀರುಹದ ಪೂಗುಡಿಯೊಳ್ ಗುಡಿಗಳ್ ಪೊದಟ್ಟು ಚೆಲ್ವಾಗೆ (ಚಂದ್ರಪ್ರ. ೩-೯೬). [ಸಂ.]

**ವಿಯಮ್ಮ** (ನಾ). ಒಬ್ಬಾತನ ಹೆಸರು : ಕಿಱುರ ವಿಯಮ್ಮನ್ ಗಂಗರನಾನ್ತು ಬರೆ . . . ಬೆನವಯ ಸಗ್ಗಿಯಾದಮ್ (ಮೈಆರಿ. ೧೯೨೬, ೬೩-೨; ೨ನೆಯ ಶತ). [? + ಅಮ್ಮ]

**ವಿಯಾತ** (ಗು). ೧. ನಾಚಿಕೆಯಿಲ್ಲದ ; ಲಜ್ಜೆಗೆಟ್ಟ. ೨. ದಿಟ್ಟತನದಿಂದ ಕೂಡಿದ ; ದಿಟ್ಟನಾದ. (ನಾ). ೩. ದಿಟ್ಟತನವುಳ್ಳವನು : "ಪ್ರತಿಭಾನ್ವಿತಂ ಪ್ರಗಲ್ಭಂ ಪಟು ಬಗೆಯೆ ಕರಂ (ಧೃಷ್ಟ)ನಾತಂ ವಿಯಾತಂ" (ವಸ್ತುಕೋ. ೯೯-೬). [ಸಂ.]

**ವಿಯುಕ್ತ** (ಗು). ೧. ಬೇರ್ಪಡಿಸಿದ ; ಪ್ರತ್ಯೇಕಗೊಳಿಸಿದ. ೨. ಅಗಲಿದ ; ವಿಯೋಗಹೊಂದಿದ. (ನಾ). ೩. ಅಗಲಿದವನು ; ವಿಯೋಗಿ : ಈ ಸಮಾವೇಶದಿಂದ ಚಿರಕಾಲ ವಿಯುಕ್ತರಾಗಿದ್ದು ಆಕಸ್ಮಿಕವಾಗಿ ಒಂದುಗೂಡಿದ ಈರ್ವರಿಗೂ ಉಂಟಾದ ಸಂತೋಷವನ್ನು ಅಷ್ಟಿಷ್ಟೆಂದು ಹೇಳಲಳವಲ್ಲ (ಕವಿಕ. ೧). ೪. [ನಾಟ್ಯ]ಕಾಲಿನ ಹಿಮ್ಮಡಿಯ ಲಕ್ಷಣಗಳಲ್ಲಿ ಒಂದು : ಪಿರಿದುತ್ಕ್ಷಿಪ್ತಂ . . . ವಿಯುಕ್ತಾಂಗುಲಿ ಸಂಗತಮಾಯೆಂಟುಂ ಸಮಂತು ಪಾರ್ಷ್ಣಿಯ ಭೇದಂ (ಲಾಸ್ಯರಂ. ೩-೧೧೦). [ಸಂ.]

**ವಿಯುತ** (ಗು). ೧. = ವಿಯುಕ್ತ ೧. ೨. = ವಿಯುಕ್ತ ೨. (ನಾ). ೩. ಕಾಲಿನ ಹರಡಿನ ಲಕ್ಷಣಗಳಲ್ಲಿ ಒಂದು : ನೆಗಳ್ದಂಗುಟಸಂಶ್ಲಿಷ್ಟಂ ಮಿಗೆಯಂತರ್ಯಾ[ತ] ಮೊಳ್ಪುವೆತ್ತ ಬಹಿರ್ಗತಮೊಗೆದ ಮಿಥೋಯುಕ್ತಂ . . . ವಿಯುತಮೈದು ಗುಲ್ಫದ ಭೇದಂ (ಲಾಸ್ಯರಂ. ೩-೧೧೧). ೪. ಕೈಬೆರಳಿನ ಲಕ್ಷಣಗಳಲ್ಲಿ ಒಂದು : ಸಲೆ ಸಂಯುತ ವಿಯುತಂಗಳ್ ಸುಲಲಿತ ವಕ್ರಾಖ್ಯ ವಲಿತ ಪತಿತಾಖ್ಯಂಗಳ್ ಲಲನೇ ಕುಂಚನ್ಮೂಲಂ ಗೆಲವಂದ ಪ್ರಸೃತಮೆಂದು ಭರತದೊಳೆಸೆಗುಂ ಇಂತೆಸೆವೇಳುಂ ಪೆಸರುಂ ಸಂತತ ಹಸ್ತಾಂಗುಲಿ[ಯ]ವಿಭೇದಮೆನಿಕ್ಕುಂ (ಲಾಸ್ಯರಂ. ೩-೧೧೨). [ಸಂ.]

**ವಿಯೋಗ** (ನಾ). ೧. ಬೇರ್ಪಡುವಿಕೆ ; ಪ್ರತ್ಯೇಕವಾಗುವಿಕೆ : ಕಣಾದನ ವೈಶೇಷಿಕ ದರ್ಶನ ಅಣುಗಳ ಸಂಯೋಗವಿಯೋಗವಿಶೇಷವೇ ದೃಗ್ಗೋಚರವಾಗುತ್ತಿರುವ ಜಗತ್ತೆಂದಿತು (ಭಾರದ. ೧೨೨). ೨. (ಪ್ರಿಯರ) ಅಗಲಿಕೆ ; ವಿರಹ : ದಿನದೊಳ್ ಸಜಳತೆಯಿಂ ಮತ್ಸ್ಯನಳಿನಮಂ ಮತ್ತಮಿರುಳೊಳುನ್ನಿದ್ರತೆಯಿಂದೆನಸುಂ ಚಕೋರಕುಮುದಮನನುಕರಿಸಿದುದಾ ವಿಯೋಗವಿಧುರೆಯ ಕಣ್ಗಳ್ (ಚಂದ್ರಪ್ರ. ೫-೧೨೫); ಪ್ರಿಯವಿಯೋಗದ ನೋವಿಗೆಣೆಯುಂಟೆ? (ಶ್ರೀರಾಮಾ. ೧೬೩-೭೦೬). ೩. ಸಾವು ; ಮರಣ : ಬಂಧುವಿನ ವಿಯೋಗವನ್ನು ಯಾರು ತಾನೆ ಮೌನವಾಗಿ ಸಹಿಸಿಯಾರು ಹೇಳಿ? (ವೀರಯೋ. ೨೭). [ಸಂ.]

**ವಿಯೋಗಿ** (ನಾ). ಅಗಲಿಕೆಯನ್ನು ಹೊಂದಿದ ವ್ಯಕ್ತಿ ; ವಿರಹಿ : ಒಗುಮಿಗೆ ಬೆಳಗಿದುದು ವಿಯೋಗಿಗಳ ಮೊಗಂ ಬೆಳ್ಪನಾಗೆ . . . ಬೆಳ್ದಿಂಗಳ್ (ಮಲ್ಲಿಪು. ೭-೪೩); ಶಶಿಗೆ ಕಳೆಯೇಱೆ . . . ವಿರಹಿಗಳು ಬಾಯಾಱೆ ಮಾಮಸಕದಿಂ ಬಂದುದು ವಸಂತಂ ವಿಯೋಗಿಹೃತ್ಕುಂತಂ ಸುಖಾಶ್ರಾಂತವು (ಹಚಕಾ. ೩-೧೫). [ಸಂ. ವಿಯೋಗಿನ್]

**ವಿಯೋಗಿನಿ** (ನಾ). ೧. (ಗಂಡ ಅಥವಾ ಪ್ರಿಯಕರನಿಂದ) ಅಗಲಿಕೆಯನ್ನು ಹೊಂದಿದವಳು ; ವಿರಹಿಣಿ : ಉತ್ಕಂಠವಿಯೋಗಿನೀಜನತೃಷಾತ್ಕುಷ್ಮಾಂಗ ಸಂಸಂಗ ದಾಟಿದುವಾದಂ ನವನೀಲನೀರಧರಮುಕ್ತವ್ಯಕ್ತವಾರ್ಬಿಂದುಗಳ್ (ಚಂದ್ರಪ್ರ. ೪-೪೦); ಕಮಳಿನಿಯಂ ವಿಯೋಗಿನಿಯನೀಕ್ಷಿಸಿ ಮತ್ತೆ ಬೃಹದ್ವಿಯೋಗವೇಗವು ನೊಳಕೊಳ್ಳುಮಿಾಗಳೆ ಮದಾಗಮನೋತ್ಸವಮಂ ನಿವೇದಿಸೆಂದಮೃತಮರೀಚಿ ಪೇಟ್ದು (ಪುಷ್ಪಪು. ೮-೯೮). ೨. [ಛಂದ] ಅರ್ಧಸಮವೃತ್ತಗಳಲ್ಲಿ ಒಂದು : ವಿಯೋಗಿನಿ :— ಇದರ ವಿಷಮಪಾದಗಳಲ್ಲಿ ಸ ಸ ಜ ಗಣಗಳೂ ಒಂದು ಗುರುವೂ , ಸಮಪಾದಗಳಲ್ಲಿ ಸ ಭ ರ ಗಣಗಳೂ ಒಂದು ಲಘುವೂ ಒಂದು ಗುರುವೂ ಇರುವುವು (ಕೃಪಿಡಿ. ೪೯). [ಸಂ. ವಿಯೋಗಿನೀ]

**ವಿರಂಚಿ** (ನಾ). ಬ್ರಹ್ಮ ; ಚತುರ್ಮುಖ : ಹರಿ ವಿರಂಚಿಗಳಿಂದ ಮುನ್ನ ಉಮೆಯ ಕಲ್ಯಾಣದಿಂದ ಮುನ್ನ . . . ಅಂದಿಂಗಳೆಯ ನೀನು ಹಳೆಯ ನಾನು (ಬಸವ. ೨). [ಸಂ.]

**ವಿರಕ್ತ** (ಗು). ೧. ಬಣ್ಣವನ್ನು ಕಳೆದುಕೊಂಡ ; ಬಣ್ಣಹೋದ ; ವರ್ಣಗೆಟ್ಟ. ೨. ಉದಾಸೀನ ಮನೋಭಾವವನ್ನು ಹೊಂದಿರುವ ; ತಾಟಸ್ಥ್ಯದಿಂದ ಕೂಡಿದ. ೩. ಪ್ರಪಂಚದ ವ್ಯಾಮೋಹಗಳಿಗೆ ಒಳಗಾಗದ ; ವಿರಾಗಿಯಾದ;

ವೈರಾಗ್ಯದಿಂದ ಕೂಡಿದ. ೪. ಬಹಳ ಕೆಂಪಾದ. (ನಾ). ೫. ಉದಾಸೀನ ಮನೋಭಾವವನ್ನು ಹೊಂದಿದವನು ; ತಟಸ್ಥನಾದವನು : ಸಮತೆಯಾಯಿತು ತವಕಿಗಳಿಗುಧ್ಧ್ಯ ಮಿಗಳಿಗೆ ತಿಳಿವಾಯ್ತು ವಾಸಿಯ ಮಮತೆಯವರು ವಿರಕ್ತರಾದರು (ಕುವ್ಯಾಕ. ೫-೧೫). ೬. ಪ್ರಪಂಚದ ಯಾವ ಬಗೆಯ ವ್ಯಾಮೋಹಗಳಿಗೂ ಒಳಗಾಗದವನು ; ವಿರಾಗಿಯಾದವನು : ಹೊನ್ನು ಹೆಣ್ಣು ಮಣ್ಣು ಬಿಟ್ಟಾತನೇ ವಿರಕ್ತನೆಂದು ವಿರಕ್ತದೇವರೆಂದು ಬಣ್ಣವಿಟ್ಟು ನುಣ್ಣಿಸಿ ಕರೆವರಯ್ಯ (ಛನವ. ೨೨-೧೯); ಯೋಗಶಾಸ್ತ್ರದಲ್ಲಿ ಹೇಳುವಂತೆ ಸಮಾಧಿವಿಶೇಷದಿಂದ ಸಿದ್ಧರಾಗಿ ಸರ್ವಜ್ಞರಾಗಿ . . . ಕೆಲವು ಕಾಲವಿದ್ದರೂ ವಿರಕ್ತರಾಗಿ ಮುಕ್ತರಾಗುವರು , ಕೇವಲರಾಗುವರು (ಹಿಂದಸಾ. ೭೮). ೭. [ವೀಶೈ] ವಿರಾಗಿಯಾದ ಶಿವಭಕ್ತ : ಭಕ್ತ ವಿರಕ್ತರ ಆಚರಣೆಯೆಲ್ಲಾ ಒಂದೇ . . . ಭಕ್ತಂಗೆ ಬಹಿರಂಗದ ದಾಸೋಹ ವಿರಕ್ತರಿಗೆ ಅಂತರಂಗದ ದಾಸೋಹ (ಛನವ. ೨೯-೨೩). [ಸಂ.]

**ವಿರಕ್ತಗೊಡಗೆ** (ನಾ). ವೀರಶೈವ ವಿರಾಗಿಗಳಿಗೆ ಕೊಡುತ್ತಿದ್ದ ಕೊಡುಗೆ : ವಿರಕ್ತಗೊಡಗೆ ಕಪ್ಪರಗೊಡಗೆ ಆಗಿ ಕೊಟ್ಟೆವಾಗಿ (ಮೈಆರಿ. ೧೯೩೫, ೧೭-೮; 1663). [ವಿರಕ್ತ + ಕೊಡಗೆ (< ಕೊಡಂಗೆಯ್$_2$)]

**ವಿರಕ್ತಮಠ** (ನಾ). [ವೀಶೈ] ವಿರಾಗಿಗಳಾದ ಶಿವಭಕ್ತರ ಮಠ ; ವಿರಕ್ತರ ಮಠ : ತೊಟ್ಟವಾಡಿ ಗ್ರಾಮವನು ಶ್ರೀ ಮಾದವಪಟ್ಟಣದ ವಿರಕ್ತಮಠಕ್ಕೆ ಸಿವಾರ್ಪಿತಕ್ಕೆ ಕೊಟ್ಟೆವು (ಎಕ. V (R), ತಿರುಮ. ೨೫-೮; 1621); ಮಲ್ಲನ ಮೂಲೆಯಲ್ಲು ನೂತನಪ್ರತಿಷ್ಠೆಯಾಗಿ ವಿರಕ್ತಮಠವ ಕಟ್ಟಿಸಿ ಪ್ರಣಮಪ್ಪ ಚೆಂನವೀರದೆವರಯವಡೇರೆಂಬ ವಿರಕ್ತಸ್ವಾಮಿಯವರಿಗೆ ಕೊಟ್ಟ . . . ಶಿಲಾಶಾಸನ (ಎಕ. III (R), ಗುಂಡ್ಲುಪೇ. ೫೫-೧೩; 1665). [ಸಂ.]

**ವಿರಕ್ತಿ** (ನಾ). ಲೌಕಿಕವಿಚಾರಗಳಲ್ಲಿ ಆಸಕ್ತಿಯಿಲ್ಲದಿರುವಿಕೆ ; ವೈರಾಗ್ಯ : ಜಿನೇಶ್ವರಂ ಬೆಸಸೆ ಕೇಳ್ದಜಿತಂಜಯಭೂಮಿಪಾಲಕಂ ಸಂದು ವಿರಕ್ತಿಗಾಗಳೆ ತದೀಯ ಸಮಕ್ಷದೆ ದೀಕ್ಷೆಗಂ ಮನಂದಂದಂ (ಚಂದ್ರಪ್ರ. ೭-೨೭); ಯೌವನಾಶ್ವಂ . . . ಮೂಡಿದ ವಿರಕ್ತಿಯಿಂ ನಾಚಿ . . . ಕಾರುಣ್ಯಕೀಡಾದ ಬಳಿಕದೇತಕೆ ಸಮರವೆನುತವಂ ಕರ್ಣಜಂಗಿಂತೆಂದನು (ಜೈಮಿಭಾ. ೪-೫೦). [ಸಂ.]

**ವಿರಚನ** (ನಾ). ೧. ನಿರ್ಮಾಣ ; ರಚನೆ : ಪೊಟಲ ಪೂರ್ವದಿಗ್ಭಾಗಂಗಳೊಳ್ ಶಿಬಿರನಿವೇಶೋಪಕಾರ್ಯವಿರಚನಪರರಾಗಿ (ಶಾಂತಿಪು. ೧೦-೧೨೩ ವ). ೨. ಏರ್ಪಾಡು ; ವ್ಯವಸ್ಥೆ. ೩. ಸೃಷ್ಟಿಸುವುದು ; ಉತ್ಪತ್ತಿ ಮಾಡುವುದು. ೪. (ಸಾಹಿತ್ಯಕೃತಿ ಮುಂತಾದುವುಗಳ) ಬರವಣಿಗೆ ; ರಚನೆ ; ಸೃಷ್ಟಿ. [ಸಂ.]

**ವಿರಚನೆ** (ನಾ). ೧. = ವಿರಚನ ೧ : ಆ ಖಗೇಶ್ವರಂ . . . ನಿರತಿಶಯಸುರುಚಿರವಸ್ತ್ರಶೋಭಾವಿರಚಿEವಿರಚನೆತೆಯೊಳಂ ಮಧ್ಯಪ್ರದೇಶಪರಿಕಲ್ಪಿತವೇದೀವಿನ್ಯಾಸದೊಳಮೆಸೆದು ಪೊಸಯಿಸುವಂತಳಂಕರಿಸಿದಾಗಳ್ (ವರ್ಧಮಾ. ೩-೮೨ ವ). ೨. = ವಿರಚನ ೪ : ಚಿತ್ರಪಟದಂತೆ ಅಪೂರ್ವವಾದ ಒಂದು ಪುರಾಣಕಥಾವಿರಚನೆಯನ್ನೇ ಅದು ಅವರ ಕಣ್ಣೆದುರು ಕಟ್ಟಿದಂತೆ ಮಾಡುತ್ತದೆ (ದ್ಯಾವಾಪೃ. ii, ಮುನ್ನುಡಿ). [ಸಂ. ವಿರಚನ]

**ವಿರಚನೆಗೆಯ್** (ಕ್ರಿ). ರಚಿಸು ; ನಿರ್ಮಿಸು : ಜನಸೇನಾರ್ಯಂ ಮುದದಿಂ ವಿರಚನೆಗೆಯ್ದ ಲಸತ್ಕೃತಿಯಿದನಾಂ . . . ಪುಣ್ಯನಿಮಿತ್ತಂ ಹಿರಿದುಂ ಹರಿಸದೊಳುಸಿರಿದೆನು (ಜಯಕಾ. ೧-೨೭). [ವಿರಚನೆ + ಕೆಯ್$_1$]

**ವಿರಚಿತ** (ಗು). ೧. ಕಟ್ಟಿದ ; ನಿರ್ಮಿಸಿದ : ವಿರಚಿತತೋರಣಮಾಳಾಕರಮುತ್ತಂಭಿತ ಜಯಧ್ವಜೋತ್ಕರಮೆನಿಪಾ ಪುರಮಂ ತರುಣೀಕೇಕರಮರೀಚಿನೀರಾಜಿತಾಕ್ಷತಾಂಗಂ ಪೊಕ್ಕಂ (ಚಂದ್ರಪ್ರ. ೬-೪೨); ಎಲ್ಲಿಯುಂ ವಿರಚಿತಭವನದಿಂದೆ ಜನದಿಂದೆಯಾ ನಾಡ ಸಿರಿ ಮೆಱೆದುದು (ಜೈಮಿಭಾ. ೩-೨). ೨. ಏರ್ಪಡಿಸಿದ ; ಸಿದ್ಧಪಡಿಸಿದ. ೩. (ಸಾಹಿತ್ಯಕೃತಿ ಮುಂತಾದುವನ್ನು) ಬರೆದ ; ರಚಿಸಿದ. [ಸಂ.]

**ವಿರಚಿಸು** (ಕ್ರಿ). ೧. ಕಟ್ಟು ; ನಿರ್ಮಾಣಮಾಡು ; ನಿರ್ಮಿಸು : ನಿಜರಾಜಧಾನಿಯೊಳೊಸಗೆಯುಂ ಮಾಡಿ ವಿವಾಹಮಂಟಪಮಂ ಸ್ಥಪತಿರತ್ನಕ್ಕೆ ವಿರಚಿಸೆಂದು ಬೆಸಸಿದಾಗಳ್ (ಆದಿಪು. ೪-೩೦ ವ); ಒಂದಭಿನವಾಲಯವ ವಿರಚಿಸಲು ಶುಭದಿನ ಮುಹೂರ್ತಂಬೆರಸಿ ಆ ಪೊಳಲೊಳು ಪ್ರತಿಷ್ಠಿಸಿ (ಬಸವಪು. ೫೩-೩೨). ೨. (ಸಾಹಿತ್ಯಕೃತಿ ಮುಂತಾದುವನ್ನು) ಬರೆ ; ರಚಿಸು : ಪ್ರತಿಭಾವಿಶೇಷದಿಂ ಸನ್ಮತಿಯಿಂ ವಿರಚಿಸಿ ಕವೀಂದ್ರಸಮಿತಿಗೆ ಕವಿತಾಚತುರತೆಯಂ ಮೆಱೆದು ಜಗನ್ನುತರೆನಿಸಿದರಲ್ತೆ ಸಿದ್ಧಸೇನಾಚಾರ್ಯರ್ (ಚಾವುಂಪು. ೧); ಕೃತಿ ನೆಗಳ್ದ ಗದಾಯುದ್ಧಂ . . . ಕೃತಿಯಂ ವಿರಚಿಸಿದನಲಂಕೃತಿಯಂ ಕವಿರತ್ನನೆಂದೊಡೇವಣ್ಣಿಪುದೊ (ಗದಾಯು. ೧-೩೨). ೩. (ಚಿತ್ರ ಮುಂತಾದುವನ್ನು) ಬಿಡಿಸು ; ರಚನೆಮಾಡು : ಚಿತ್ರಲೇಖೆಯಂ ಮಣಿಸ್ತಂಭಸಾಲಭಂಜಿಕಾಸ್ತಂಭಂಗಳೊಳ್ ಕುಂಕುಮರಸಪತ್ರರೇಖೆಗಳಂ ವಿರಚಿಸಲುಂ . . . ಪೇಱ್ದಾಗಳ್ (ಆದಿಪು. ೭-೨೦ ವ). ೪. (ವಿಧಿಗಳನ್ನು) ಮಾಡು ; ಆಚರಿಸು ; ನೆರವೇರಿಸು : ಚರಣಸರೋರುಹಕ್ಕೆ ಮಕುಟದ್ಯುತಿವಾರಿಗಳಿಂದೆ ಪಾದ್ಯಮಂ ವಿರಚಿಸಿದಾತ್ಮಜಂಗೆ ಬಿಡುಮುತ್ತಿನ ಸೇಸೆಯನಿಕ್ಕುವಂದದಿಂ ಸುರಿದು ಮುದಶ್ರುಬಿಂದುಚಯಮಂ (ಚಂದ್ರಪ್ರ. ೭-೯೦); ಪರಿಪರಿಯ ಯಜ್ಞವನು ವಿರಚಿಸಿ ಸುರಪತಿಯ ಸಂತುಷ್ಟಬಡಿಸಲು ಸುರಿವನವ ಸಂಪೂರ್ಣವಾಗಿ ಸುವೃಷ್ಟಿಯನು ಜಗಕೆ (ಕುವ್ಯಾಉ. ೪-೭೦). ೫. (ವಿಧಿಗಳನ್ನು) ಮಾಡಿಸು ; ಆಚರಿಸುವಂತೆ ಮಾಡು : ತಿಳುಹಿ ಬಳಿಕನಿಬರನು ಸಲಿಲಾಂಜಲಿಮೃತಸ್ನಾನಾದಿ ಕರ್ಮಾವಳಿಯ ವಿರಚಿಸಿ [ಪಾಠಾಂ. ಮಾಡಿಸಿ] ಮುನಿಪನುಪಚರಿಸಿದನು ರಘುಪತಿಯ (ತೊರರಾ. ೨-೬-೨೭). ೬. ಅಲಂಕಾರ ಮಾಡು ; ಸಿಂಗರಿಸು : ವಿರಚಿಸಿದರುದ್ಯಾಹಶೋಭಾಕರದಲಂಕಾರದಲಿ ಮಿಥಿಳಾಪುರ ವನಖಿಳವಿಚಿತ್ರವಿಭವದ ವಿವಿಧರಚನೆಯಲಿ (ತೊರರಾ. ೧-೧೩ ಸೂಚನೆ). ೭. ನೆರವೇರು; ನಡೆ ; ಜರುಗು : ವಿರಚಿಸಿತು ಪಟ್ಟಾಭಿಷೇಕೋತ್ಕರುಷ ಮಂತ್ರಾಕ್ಷತೆಯ ಮಳೆಗಳ ಕಱೆದರವನೀಸುರರು (ಕುವ್ಯಾಕ. ೧-೨೯). ೮. ಸಿದ್ಧಗೊಳಿಸು ; ಸಜ್ಜುಮಾಡು ; ತಯಾರುಮಾಡು : ತರಳಿಕೆ . . . ಸಂಗಡಿಸಿಂಧನಂಗಳಂ ವಿರಚಿಸು ಬೇಗಮಿಂ ಚಿತಿಯನೇಂ ತಡವೀಕ್ಷಣಮೆನ್ನ ಜೀವಿತೇಶ್ವರನೊಡವೋಗವೇಱ್ಕುಮೆನಗೆಂಬುದುಂ (ಕಾದಂಪೂ. ೯೩೭); ವಿರಚಿಸಿದಂ ವಿಚಿತ್ರತರಮಪ್ಪಲರ್ವಚ್ಚಮಂ (ಜಗವಿ. ೬-೧೫); ವೇದಿಸಲು ಬ್ರಹ್ಮಾಂಡಖಾಂಡನಿಷಾದ ಭಾಂಡಾವಳಿಗಳಂ ಸಮ್ಮೋದದಿಂದಂ ವಿರಚಿಸುವ ಕುಂಬಾಱನುಂ ತಾನೆ (ಬಸವಪು. ೨೧-೨೭). ೯. ಹೆಣೆ : ವಿರಚಿಸಿದರ್ ಜಡೆಗಳನಾದರದಿಂ ದರಹಸಿತ ಬಿಸರುಹಾನನೆಯರ್ ಶಂಕರನರಸಿಗೆ ಗಿರಿಜಾತೆಗೆ (ಗಿರಿಕ. ೯-೩). ೧೦. ನೇಯು : ಮೆಱೆವ ಚಿತ್ರಿಗ ನಾನಾ ಬಗೆ ದುಗುಲವ ವಿರಚಿಸುತಿಹ ಸೇಲಿಗರ . . . ಚಿಪ್ಪಿಗಗೇರಿಯಿಹುವು (ಕಂನವಿ. ೬-೫೫). ೧೧. ರೂಪುಗೊಳ್ಳು ; ವ್ಯಕ್ತವಾಗು ; ಪ್ರಕಟವಾಗು : ಕೊರಲ ಕಱೆ ಶಿರದ ಪೆಱೆ ನೊಸಲುರಿಗಣ್ ಧೃತಚಾಪಹಸ್ತ ಶಾಕ್ವರಚಿಹ್ನಂ ವಿರಚಿಸೆ ಕೃಪಕೃತವರ್ಮರ್ಬೆರಸಾಗಳ್ ಮುಳಿದು ಬಂದನಶ್ವತ್ಥಾಮಂ (ಗದಾಯು. ೯-೨). ೧೨. ವರ್ಣಿಸು ; ವಿವರಿಸು ; ವಿಶದಪಡಿಸು : ಊರೂರೊಳತಿ ಶುಭಕರಮೆನಲು ಸಿರಿಯಾಳಚರಿತೆಯನೊರೆದೊರೆದು ವಿರಚಿಪರು ಭಕ್ತಸಭಾಂತರಂಗಳೊಳು (ಬಸವಪು. ೨೫-೨೦); ಈ ಭೂಮಿಯನು ಕೊಂಡಾಗಲಾ ಸುತ್ರಾಮಗೊಡರಿಸಿ ದಂದವನು ವಿರಚಿಸಿದನಾ ಮುನಿಪ (ತೊರರಾ. ೧-೧೧-೪). [ವಿರಚನ + – ಇಸು$_1$]

**ವಿರಜ** (ಗು). ೧. ಧೂಳಿಲ್ಲದ ; ಸ್ವಚ್ಛವಾದ. ೨. ದೋಷವಿಲ್ಲದ ; ಶುದ್ಧವಾದ. ೩. ರಜೋಗುಣವಿಲ್ಲದ. ೪. ಮುಟ್ಟು ನಿಂತುಹೋದ. (ನಾ). ೫. ರಜೋರಹಿತವಾದದ್ದು ; ಪರಿಶುದ್ಧವಾದುದು : ಪ್ರಣಮ್ಯಮೆನೆ ಹೃತ್ಪುಂಡರೀಕಂ ವಿರಜಮೆನೆ ವಿಶುದ್ಧಂ (ಪದ್ಮರಾ. ೧೧-೨೮). ೬. ರಜೋಗುಣರಹಿತನಾದವನು ; ಪರಿಶುದ್ಧನಾದವನು : ಅಪಹತಪಾಪ್ಮಾ , ವಿರಜಃ . . . ಸತ್ಯಸಂಕಲ್ಪಃ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಾಭಾವಿಕಗುಣಾಷ್ಟಕಗಳು ಆವಿರ್ಭವಿಸುವುವು (ಹಿಂದಸಾ. ೨೭೪). ೭. ಒಂದು ಬಗೆಯ ವಾದ್ಯ : ಹಱೆಗಳಗಣಿತಭೇರಿ . . . ವಿರಜ ಬೊಬ್ಬುಳಿ ಘಂಟೆ ರಣವಱೆಪೊಱಲುತಿರಲಂದು (ಕಾಶಿರಾ. ೪೧-೧೩). [ಸಂ. ವಿರಜಸ್]

**ವಿರಜಾಜಿ** (ನಾ). ಎರಡು ಸುತ್ತು ದಳಗಳಿರುವ ಒಂದು ಬಗೆಯ ಜಾಜಿಮಲ್ಲಿಗೆ; ಇರವಂತಿಗೆ ; ಹೆಜ್ಜಾಜಿ : ಅವರು ಹೆಚ್ಚು ಪ್ರೀತಿಯಿಂದ ಬೆಳಸುತ್ತಿದ್ದ ಹೂಗಳೆಂದರೆ ಪಾದರಿ , ಜಾಜಿ , ವಿರಜಾಜಿ , ಮರಳೆ , ಮಲ್ಲಿಗೆ , ಸಂಪಗೆ , ಕೇತಕಿ ಮುಂತಾದವು (ಸಾಹಿಜೀ. ೫೩).

[< ಇರ್$_2$ (< ಎರಡು) + ಜಾಜಿ$_1$ (< ಜಾದಿ)./ ತೆಲು. ವಿರಜಾಜಿ, ವಿರಜಾದಿ]

**ವಿರಡ** (ಗು). ೧. ಹಿರಿದಾದ ; ಅಸಾಧಾರಣವಾದ. (ನಾ). ೨. ಹಿರಿದಾದುದು; ಅಸಾಧಾರಣವಾದುದು: ಹರಿಯ ಬಸುಱೊಳಗಖಿಳಲೋಕದ ವಿರಡವಡಗಿಹವೋಲು

ಭಾರತಶರಧಿಯೊಳಗಡಗಿಹವನೇಕ ಪುರಾಣಶಾಸ್ತ್ರಗಳು (ಕುವ್ಯಾ.ಅ. ೧-೧೮).
[< ಸಂ. ವಿರಾಟ್]

**ವಿರತ** (ಗು). ೧. ನಿಲ್ಲಿಸಿದ ; ತಡೆಹಿಡಿದ. ೨. ವಿರಮಿಸಿದ ; ವಿಶ್ರಮಿಸಿದ. ೩. ಕೊನೆಗೊಂಡ ; ಕಡೆಮುಟ್ಟಿದ. ೪. ವಿರಕ್ತಿಹೊಂದಿದ. (ನಾ). ೫. ನಿಷ್ಕ್ರಿಯವಾದುದು : ಕಂಗಳು ವಿರತನಾ[illegible]ವಾ[illegible]ದರು ಮೋಹದೊಳಗಾತುರನು ಧೃತರಾಷ್ಟ್ರನಿಗೆ ಸಲುವುದು ಕೇಳು ರತಿಸುಖವು (ಜನಭಾ. ೬-೧೦). ೬. [ವೀಶೈ] ಲೌಕಿಕವಿಚಾರಗಳಲ್ಲಿ ನಿರಾಸಕ್ತಿಯನ್ನು ಹೊಂದಿದವನು ; ವಿರಕ್ತ ; ವಿರಾಗಿ : ಪಕ್ಷವುಳಿದರಿರಾಜಕುಲಮಂ ಶಿಕ್ಷಿಸಲು ರಣದಲ್ಲಿ ತನ್ನತಿರೂಕ್ಷಕೋಪದಿ ವಿರತನಾಗುತ್ತೋಡಿ ಬೇಸತ್ತು (ಬಸಪು. ೨೭-೩೩); ತೋಂಟದ ಯತೀಶ್ವರನಮಲ ವಿರತರುಗಳಂ ವ್ಯಾಪಿಸಿದ ಹರಿಸದಿಂ ದಿಟ್ಟಿಸುತ್ತೆ (ಸಿದ್ಧೇಪು. ೧೫-೭೦). ೭. [ಜೈನ] ಸಂನ್ಯಾಸಿ ; ಕ್ಷಪಣಕ ; ಸವಣ : "ಮುನಿಃ, ತಪೋಧನಃ, ವಿರತಃ . . . ಸಂಯತಃ — ಈ ೯ ಸವಣರ ಪೆಸರ್" (ಹಲಾಯು. ೫೭-೧೯೦). [ಸಂ.]

**ವಿರತಿ** (ನಾ). ೧. ಅಂತ್ಯ ; ಕೊನೆ ; ಮುಕ್ತಾಯ : ಜ್ವಲನಜಟ ನಿಜಪುರೋಪವನಳೀಳೆ ಮಧುಮಾಸವಿರತಿಯೊಳ್ ಮಸುಳ್ದಿರೆ ಕಂಟಳಿಸಿದ ಮೆಯ್ಯೆರಸಿನಿಸಾಕುಳನಾದೊಂ (ಶಾಂತಿಪು. ೫-೬೫). ೨. ವಿರಾಮ ; ನಿಲುಗಡೆ. ೩. ಲೌಕಿಕವಿಚಾರಗಳಲ್ಲಿ ನಿರಾಸಕ್ತಿಯನ್ನು ಹೊಂದಿರುವಿಕೆ ; ವೈರಾಗ್ಯ ; ವಿರಕ್ತಿ : ವಿರತಿ ವಿರತಿಯೆಂದು ವಿರತಿಯ ಹೊಲಬನಱಿಯದೆ ಹಂಬಲಿಸಿ ಹಲುಬುತಿಪ್ಪರಣ್ಣ ಕಠಿಣಪದಾರ್ಥವ ಸವಿದೊಡೆ ವಿರತಿಯೆ . . . ಬಣ್ಣವಿಟ್ಟು ನುಡಿದರೆ ವಿರತಿಯೆ ಇಂತಿವೆಲ್ಲವು ವಿರತಿಯ ನೆಲೆಯನಱಿಯದೆ ತಲೆಬಾಲಗೆಟ್ಟು ಹೋದವು (ಘನವ. ೨೪-೨೦); ನರರಂತೆ ಕಾಮವ್ಯೆಕಾರದುನ್ಮತ್ತದಿಂ ಪರಸತಿಯರನು ಕಂಡು ತರ್ಕೈಸಲೊಲ್ಲದತಿವಿರತಿಯಿಂದವಧಾನಭಕ್ತಿಯಳವಡಲು ಶೇಷಂಗೆ ಲಿಂಗಾಚಾರವು (ಮೈಲಾರ. ೫-೬). ೪. [ಛಂದ] ಪದ್ಯವನ್ನು ಹೇಳುವಾಗ ಅರ್ಥಸ್ಫೂರ್ತಿ ಕೆಡದಂತೆ ನಿಲ್ಲುವ ಸ್ಥಾನ ; ಉಸಿರ್ದಾಣ ; ಯತಿ : ಅಂಬುಜ ರಿಪುದ್ಯುಮಣಿ ಮಾರುತ ಬಲಾರಿ ತ್ರ್ಯಂಬಕಯುಗಂ ವಿರತಿ ಪಂಚಕದೊಳಿರ್ದಂದಂಬುರುಹ ಲೋಲನಯನೇ . . . ಕುಟ್ಮಲಮಯೂರಂ (ಛಂದೋಂಬು. ೨-೧೫೨). [ಸಂ.]

**ವಿರತೆ** (ನಾ). ವೈರಾಗ್ಯದ ಮನೋಭಾವದಿಂದ ಕೂಡಿದವಳು ; ವಿರಕ್ತೆ : ಆ ನಾಗಲಾಂಬಿಕೆಯ ಗರ್ಭಸೌಂದರ್ಯಮಂ ತಾನಱಿದು ತತ್ಪತಿಯ ಪೆಸರ್ವಿಡಿವುತುಂ ವಿರತೆ ನೀನಾರದೇಂ ಕಾರಣಂ ವೃಥಾಗರ್ಭಮಾಯ್ತೆನಲು (ಚೆಬಪು. ೪-೨೧). [ವಿರತ+ -ಎ₂]

**ವಿರಥ** (ನಾ). ರಥವಿಲ್ಲದವನು; ರಥಹೀನನಾದವನು : ವಿರಥಂ ಪಾಂಡ್ಯಂ ಕೋಪಸ್ಫುರಿತಾಧರನುಡಿದು ಕೆಡೆಯೆ ಪಟಯಿಗೆ[ಯುಂ] ಬಿಬ್ಬರಬಿರಿಯೆ ಗುರುತನೂಭವನುರಮಂ ಬಿರಿಯೆಚ್ಚು ಬೆಂಗೆವಂದಂ ಗಜದಾ (ಪಂಪಭಾ. ೧೨-೮೩); ವಿರಥನಾದನು ಕರ್ಣನಂಬಿಗೆ ತಿರುಹಿ ಬಿಲ್ಲನು ತೊಟ್ಟನಾ ಗುರು (ಕುವ್ಯಾದ್ರೋ. ೬-೨೧).
[ಸಂ.]

**ವಿರಮಣ** (ನಾ). ೧. ಅಂತ್ಯ ; ಕೊನೆ ; ನಿಲುಗಡೆ : ಜಿನಚಂದ್ರಮುನೀಂದ್ರನ ಶಾಂತಿನಾಥನೀ ಶಾಂತಿನಾಥನಾ ಜಿನಚಂದ್ರಂ ಜಿನಚಂದ್ರಮುನೀಂದ್ರನೆ ಶಾಂತಿನಾಥ ನಾದೊಂ ಭವಾವಳೀವಿರಮಣದೊಳ್ (ಶಾಂತಿಪು. ೧೨-೭೦). ೨. ವಿರಾಮ. [ಸಂ.]

**ವಿರಮಿಸು** (ಕ್ರಿ). ವಿಶ್ರಾಂತಿಯನ್ನು ಪಡೆ ; ವಿರಾಮವನ್ನು ಹೊಂದು ; ವಿಶ್ರಮಿಸು : ಮರುತನುರುಬನು ತಾಳತೇಳುತೋಲಾಡುತ್ತ ವಿರಮಿಸಾ ಲೀಲೆಯಲಿ (ಮಂಕುಕ. ೯೧೪); ಊಟವಾದ ಮೇಲೆ ಒಂದರ್ಧಗಂಟೆ ಸ್ವಾಮಿದಾಸರು ವಿರಮಿಸುತ್ತಿದ್ದರು (ಸಮಜೀ. ೯೩೩). [ವಿರಮಣ + - ಇಸು]

**ವಿರಲ, ವಿರಳ** (ಗು). ೧. ಬಿಡಿಬಿಡಿಯಾದ. ೨. ನಯವಾದ ; ನಾಜೂಕಾದ. ೩. ಅಗಲವಾದ. ೪. ಅಪರೂಪವಾದ ; ದುರ್ಲಭವಾದ : ವಿರಲಫಲಂಗಳಾದು ವಖಿಲೌಷಧಿಗಳ್ (ಆದಿಪು. ೮-೬೨). ೫. ಕೊಂಚ ; ಅಲ್ಪ . (ನಾ). ೬. ಮೊಸರು. **ವಿರಳ** : ೫. ವಿರಳಪರಿವಾರಪರಿವೃತನರಸಂ ಮಾದೇವಿವೆರಸು ನಿಚ್ಚಂ ಬಂದಾದರದಿಂದೆ ನೋಡಿ ಪೋಪಂ . . . ನಿಜನಂದನನಂ (ಕಾದಂಪೂ. ೪೩೭). ೭. ಬಿಡಿಬಿಡಿಯಾದುದು ; ಒತ್ತಾಗಿಲ್ಲದುದು ; ದಟ್ಟವಾಗಿಲ್ಲದುದು : ಬಿಂದು ಎಂಬ ಕೇಂದ್ರದಲ್ಲಿ ವಿರಳವಾಗಿರುವ ನಾದ ಬೆಳಕುಗಳ ಘನೀಭಾವ ಇದರ ಮುಂದಿನ ಹೆಜ್ಜೆ (ತತ್ವಪ್ರಾ. ೪೪೭); ವಿಜಾತೀಯ ಸಂಯುಕ್ತವ್ಯಂಜನಾಕ್ಷರಗಳು ವಿರಳವಾಗುವುವು . . . ವಿರಳವಾಗುವುದೆಂದರೆ ಎರಡು ವ್ಯಂಜನಗಳ ನಡುವೆ ಒಂದು ಸ್ವರ ಬರುವುದು (ಕೈಪಿಡಿ. ೨೯). ೮. ಕೋಮಲವಾದುದು ; ಮೃದುವಾದುದು : "ವಿರಳಂ ತನು ಪೇಲವಮದು" (ವಸ್ತುಕೋ. ೧೦೪-೩೯). ೯. ಅಗಲ ; ವಿಸ್ತಾರ : ಇದರಿಂದ ಕಂಪಾಸಿನ ರುಂಡಿಯು ಮೊದಲಿಗಿಂತಲೂ ತ್ರಿಗುಣ ವಿರಳವಾಯಿತು (ಭೂಮಿಅ. ೪೭). ೧೦. ಪೆಜ್ಜ ; ತೂತು ; ರಂಧ್ರ : ಪ್ರಾಣಕ್ಕೂ ಲಿಂಗಕ್ಕೂ ಅನುಸಂಧಾನವ ಮಾಡಬೇಕೆಂಬಲ್ಲಿ ಮಣಿಯ ವಿರಳದಲ್ಲಿ ಇರುವ ನೂಲೇ (ಸರ್ವವ. ೭೮-೪೩೫). ೧೧. ಅಪರೂಪ ; ದುರ್ಲಭ : ಅವರು ಹೊಂದಿಕೊಂಡು ಹೋಗುವುದು ಬಹಳೇ ವಿರಳ (ಕನ್ನಜಾ. ೧೦೪). [ಸಂ.]

**ವಿರಲತೆ, ವಿರಳತೆ** (ನಾ). ೧. ಸಾಂದ್ರತೆಯಿಲ್ಲದಿರುವಿಕೆ. ೨. ಅಪರೂಪವಾಗಿರುವಿಕೆ ; ಅಪೂರ್ವತೆ. **ವಿರಳತೆ** : ೧. ದೊರೆಕೊಳ್ವುದತ್ಪವಿಧಿಯಂತರಾಳದೊಳ್ ಬಹುಳಮಾಗಿ ಮಧ್ಯಪದಕ್ಕಂ ದೊರೆಕೊಳ್ವುದದರ್ಶನವಿಧಿ ವಿರಳತೆಯಿಂ ಕರ್ಮಧಾರಯಕ್ಕಱಿವವರಿಂ (ಶಮದ. ೧೭೮). [ಸಂ. ವಿರಲತಾ]

**ವಿರಸ** (ಗು). ೧. ರಸಹೀನವಾದ ; ನಿರ್ದ್ರವವಾದ. ೨. ಸಾರವಿಲ್ಲದ. ೩. ರುಚಿಯಿಲ್ಲದ ; ಅರುಚಿಯಿಂದ ಕೂಡಿದ. ೪. ಕ್ರೂರವಾದ; ನಿರ್ದಯವಾದ : 'ವಿರಸಕೃತಿ' ಪರಾ. (ನಾ). ೫. ನಿರರ್ಥಕವಾದುದು ; ಉಪಯೋಗವಿಲ್ಲದುದು : ಭಾನುಬಿಂಬವ ತಗೆವ ತಮದ ವಿತಾನದಂತಿರೆ ವಿರಸವಾಯ್ತು ಶರಾನುಗತಶರಜಾಲ (ಕುವ್ಯಾಗ. ೧-೪೮). ೬. ವಿರೋಧ ; ವೈಮನಸ್ಯ : ಕೂಡಲಸಂಗನ ಶರಣರೊಡನೆ ಸರಸವಾಡಿದರೆ ಅದು ವಿರಸ ಕಾಣಿರಯ್ಯಾ (ಬಸವ. ೬೭೧ ಅ); ಎಲವೊ ದಾನವಮಲ್ಲ ವೀರರ ಕುಲಶಿರೋಮಣಿ ನೀನು ನಾವೀ ಹುಲುಕಪಿಗಳೆಮ್ಮೊಡನೆ ಕಾದಲು ಸರಸ ವಿರಸವಲ (ಕೌಶಿರಾ. ೩೪-೨೦); ಅಂದಿನ ವಿರಸವು ಬೇಗನೆ ಮಾಯವಾಗಲಿಲ್ಲ (ಹೇಮಂತ. ೨೦೫). ೭. ಹೊಂದಾಣಿಕೆ ಇಲ್ಲದಿರುವಿಕೆ; ಸಾಮರಸ್ಯವಿಲ್ಲದಿರುವಿಕೆ: ರಸವೆ ಜನನ ವಿರಸ ಮರಣ ಸಮರಸವೇ ಜೀವನ (ಗರಿ. ೧೧೪-೫). ೮. ಇಚ್ಛೆಗೆ ವಿರುದ್ಧವಾದುದು ; ಇಷ್ಟವಾಗದೆ ಇರುವಂಥದು : ವಿರಸವೆನಗಿದು ಮುಂಜಿಯೆಂಬುದನೊರೆಯದಿರು ಪರಿಹರಿಸಿ ಕಳೆ ಶಂಕರನನರ್ಚಿಸುತಕಟ ನೀ ಮರುಳಾಗಿ ಹೋದೆಯಲಾ (ಬಸಪು. ೩-೪೭); ಸರಸಭಾವದೊಳೆ ಭಾವಿಸೆ ಭಾವನವರಿಗಿದು ವಿರಸವಾಗದೆ ಮಾಣದು (ಜೈಮಿಭಾ. ೨೨-೧೭). ೯. ವೈಮನಸ್ಸುಳ್ಳವನು ; ವಿರೋಧಿ : ಸರಸರಿಗೆ ಸರಸಂ ವಿರಸರಿಗೆ ವಿರಸನಿತರರ ಬೆರಸಿದವರಂ ಬೆರಸನೀಶ್ವರವಿರಹಿತರ ವಿರಹಿತನತುಳ ಸುಮತಿ (ಬಸಪು. ೧೯-೧). ೧೦. [ಕಾವ್ಯಮೀ] ಕಾವ್ಯದೋಷಗಳಲ್ಲಿ ಒಂದು ; ರಸವಿಹೀನವಾದುದು ; ಅಹಿತಕರವಾದುದು ; ದೋಷಯುಕ್ತವಾದುದು : ತಱಿಸಂದಾ ಸಕ್ಕದಮುಮನಱಿಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್ ಕುಱಿತು ಬೆರಸಿದೊಡೆ ವಿರಸಂ ಮಱುಗುವ ಪಾಲ್ಗಳೆಯ ಪವಿಗಳಂ ಬೆರಸಿದವೋಲ್ (ಕವಿರಾ. ೧-೫೮). ೧೧. ನೀರಸವಾಗಿ ಹಾಡುವವನು ; ರಸಪೂರಕವಾಗಿ ಹಾಡದಿರುವ ಗಾಯಕ : ವಿರಸ-ರಸಹೀನವಾಗಿ ಹಾಡುವವನು (ಸಂಗೀಚಂ. ೧೦೩).
[ಸಂ.]

**ವಿರಸಕರ** (ನಾ). ಅಹಿತಕರವಾದುದು : ಸಂಬೋಧನೆ ದೀರ್ಘೋಕ್ತಿಯೊಳಿಂಬಾಗಿರೆ ಬರ್ಕುಮದನೆ ಪಲವೆಡೆಗಳೊಳಿಂದುಂ ಬಲ್ಲವರಿಡದಿರ್ಕಾದಂ ಬಾಯಟಿದೂಳ್ಪವೋಲ್ ಕರಂ ವಿರಸಕ[ಪಾಠಾಂ. ತ]ರಂ (ಕವಿರಾ. ೨-೨೩). [ಸಂ.]

**ವಿರಸಕೃತಿ** (ನಾ). ಕ್ರೂರವಾದ ಕೆಲಸ ; ನಿರ್ದಯವಾದ ಕಾರ್ಯ: ಹರನ ಖತಿಯೋ ಲಯಕೃತಾಂತನ ವಿರಸಕೃತಿಯೋ ಸರ್ವದಳಸಂಹರಣಕೇನು ನಿಮಿತ್ತವೆಂದುದು ಭೂಸುರವ್ರಾತ (ಕುವ್ಯಾಗ. ೯-೪೦). [ಸಂ.]

**ವಿರಸಗಾಣ್** (ಕ್ರಿ). ಅಹಿತಕರವೆಂದು ತಿಳಿ ; ತಿರಸ್ಕರಣೀಯವೆಂದು ಪರಿಗಣಿಸು : ಭರತಚಕ್ರಿಯದೊಂದು ಸೇವೆ ಸಿಕ್ಕಿದರದು ಸಿರಿಯೆಂದು ಬೆರೆದಿಹರೆಂಟು ಧರೆಯೊಳಾತನ ಸುತರಾಗಿ ಸಂಪದವನು ವಿರಸಗಂಡುದು ಚಿತ್ರವಲ್ತೆ (ಭರಚ. ೭೦-೧೧೫). [ವಿರಸ + ಕಾಣ್]

**ವಿರಸೆ** (ನಾ). ೧. ಹೊಂದಾಣಿಕೆ ಇಲ್ಲದವಳು : ವಿರಸೆಯರು ವಿಶ್ವಾಸಘಾತಕಿಯರು . . . ವಾರಪುರಂಧ್ರಿಯರು (ಬಸಪು. ೪೦-೫೩). ೨. ದಯೆಯಿಲ್ಲದವಳು ; ನಿಷ್ಕರುಣೆಯಿಂದ ಕೂಡಿದ ಹೆಂಗಸು ; ಕ್ರೂರಿ : ಚಪಲೆ ಚಂಚಲೆ ಚಾಟುವತಿ

ಚಂಡಿ . . . ವಿರಸೆ [ಪಾಠಾಂ. ಪರುಷೆ]ಪರವಶೆ ಪಾದರಿ . . .ತಾಮಸಿಯೆನಿಪ ವನಿತೆಯರ ನಿಜಕೆ ನಿಲಿಸಿ ನಿಶ್ಶ್ವಸಿದೊಡೆ ಬಳಿಕ ಬಾರದೆ (ಜೈಮಿಭಾ. ೫-೬೧). [ವಿರಸ + - ಎ]

**ವಿರಸೇಂಗಿತ** (ನಾ). **ಅಹಿತಕರವಾದ ಚೇಷ್ಟೆ, — ವರ್ತನೆ :** ತೆಱಪಂ ಕಿಸುಗುಳತನಮಂ ಪೆಱನಿರ್ದುದನೆಗ್ಗತನಮನಾಡಿಗತನಮಂ ನೆಱೆಯೆ ವಿರಸೇಂಗಿತಂಗಳನಱಿವುಳ್ಳಂ ಕಾಣಲೀಯಲಾಗದು ವಧುವಂ (ಮದತಿ. ೧೦-೪೯). [ಸಂ.]

**ವಿರಹ** (ನಾ). ೧. **ಬೇರೆಯಾಗಿರುವುದು ; ಅಗಲಿಕೆ :** ನಿಜವಾದ ತಂದೆಯರಿಗೆ ಮಗಳ ಮೊದಲ ವಿರಹವು ಅದೆಷ್ಟು ದುಃಖಕರವಾದದ್ದಿರಬೇಕು! (ಧರ್ಮಸಾ.೭೦). ೨. **ಪ್ರಿಯರು ಪರಸ್ಪರ ದೂರವಿರುವುದು ; ಪ್ರಿಯರ ಅಗಲಿಕೆ, - ವಿಯೋಗ:** ವಿರಹದೆ ರಾಮಬಾಣದುಟಜಾಂಗಣ ರಮ್ಯಶಿಲಾತಲಂಗಳೊಳ್ ಬರೆಯೆ ವಿಚಿತ್ರಮಾಗೆಸೆವ ಸೀತೆಯ ಚಿತ್ರಮಂ (ಕಾದಂಪೂ. ೧೧೪); ವಿರಹದೊಳಾದ ವೇದನೆಯನಾಱಿಸಲಾ ಮರನೊಳ್ಳಿತೆಂದು ಮಾಮರದ ನೆಟಿಲ್ಗೆ ಪೋಪ ಗಡ (ಕಾವ್ಯಾವ. ೩೬೭); ವಿರಹವ ಬೀಳುಕೊಟ್ಟವು ಜಕ್ಕವಕ್ಕಿಗಳು (ಕುವ್ಯಾಭೀ. ೧-೩೮). ೩. ಬಿಟ್ಟುಹೋಗುವುದು ; ತೊರೆಯುವುದು ; ಪರಿತ್ಯಾಗ . ೪. ಏಕಾಂಗಿಯಾಗಿರುವುದು; ಒಂಟಿಯಾಗಿರುವುದು. ೫. ಅಗಲಿಕೆಯ ಸಮಯದಲ್ಲಿರುವ ಪ್ರೀತಿಯ ಭಾ[illegible] [ಸಂ.]

**ವಿರಹಜ್ವರ** (ನಾ). **ಪ್ರಿಯರ ಅಗಲಿಕೆಯಿಂದುಂಟಾಗುವ ತೀವ್ರವಾದ ತಾಪ :** ವಿರಹಜ್ವರದಿಂ ಪುಳಕೋತ್ಕರವೊಗೆದುವು ರೋಮಕೂಪವೆನಿತನಿತಱೊಳಂ (ಕಾದಂಪೂ. ೮೩೪); ಪರಿಹರಿಸಲೆಂದು ವಿರಹಜ್ವರಮಂ ಶಿಶಿರೋಪಚಾರಮಸಗಿದೊಡದು ತಾಂ ಪಿರಿದಾದುದು (ರಾಜಶೇ. ೭-೭೫). [ಸಂ.]

**ವಿರಹತಾಪ** (ನಾ).= **ವಿರಹಜ್ವರ :** ಸ್ವಯಂಪ್ರಭೆಯ ವಿರಹತಾಪವನ್ನು ಪಂಪಕವಿ ಬಣ್ಣಿಸಿದಾಗ ಶ್ರಾವಕರೆಲ್ಲ ಅತ್ತುಬಿಟ್ಟರು (ದಾನಚಿಂ. ೧೫೩). [ಸಂ.]

**ವಿರಹವಿಧುರ** (ಗು). **ಅಗಲಿಕೆಯಿಂದುಂಟಾದ ದುಃಖಿದ ; ವಿಯೋಗದಿಂದಾದ ನೋವಿನ :** ಪಲತೆಱದಿಂ ಪಲುಂಬುವ ನಿತಂಬಿನಿಯರ ವಿರಹವಿಧುರನಾದಮ ಸೌಭಾಗ್ಯಯಶಃಪಟಹನಾದಮಾಗೆಯುಂ (ಮಲ್ಲಿಪು. ೩-೭೨ ವ). [ಸಂ.]

**ವಿರಹವಿಧುರೆ** (ನಾ). **ವಿಯೋಗದಿಂದ ದುಃಖಿತೆಯಾದವಳು :** ಪಲರುಮಂಬರ ಚರನಿತಂಬಿನಿಯರ್ ಬಳಸಿ ದಿನಲಕ್ಷ್ಮಿಯಂ ಬಳಸಿದ ದೀಪಮಾಲೆಯಂತೆ ಕಾಂತಿಗಟ್ಟಿರೆ ವಿರಹವಿಧುರೆಯಾಗಿಯುಂ (ಪಂರಾಮಾ. ೧೧-೮೨ ವ). [ಸಂ. ವಿರಹವಿಧುರಾ]

**ವಿರಹವಿಹ್ವಲೆ** (ನಾ). = **ವಿರಹವಿಧುರೆ :** ಕಾಮಂ ಬರೆದ ನೃಪಸುತನ ಸೊಬಗಿನ ನರಶಾಸನದಂತೆ ವಿರಹವಿಹ್ವಲೆಯಿರ್ಪಳ್ (ಚಂದ್ರಪ್ರ. ೫-೧೨೬). [ಸಂ. ವಿರಹವಿಹ್ವಲಾ]

**ವಿರಹಾಗ್ನಿ** (ನಾ). **ವಿರಹದ ಬೇಗೆ, — ತಾಪ :** ಪರಿಕಿಪೊಡಗ್ನಿಗಮಾಕೆಯ ವಿರಹಾಗ್ನಿಗಮಿಲ್ಲ ಭೇದಂ (ಚಂದ್ರಪ್ರ. ೫-೧೨೯); ಕೈರವಕೆ ಹಾಸ್ಯ ವಿರಹಾಗ್ನಿಗತಿರೌದ್ರಂ . . . ಎನಿಸಿದ ಹಿಮಕರನೆಸೆದಿರುತಿರ್ದನು (ಹಚಕಾ. ೩-೮೫). [ಸಂ.]

**ವಿರಹಾನಲ** (ನಾ). = **ವಿರಹಾಗ್ನಿ :** ಒಱೆದುಗುವ ಬಾಷ್ಪವಾರಿಯನೆಱಂಕೆಗಳ್ ನಾಂದು ಮಗುಳೆ ವಿರಹಾನಲ [ಪಾಠಾಂ. ಳ]ನಿಂ ನೆಱೆ ಬಱವಾಗಿರೆ ಪಡುನೇಸಱೊಳಿರ್ದುವಗಲ್ದು ಚಕ್ರವಾಕದ್ವಂದ್ವಂ (ಚಂದ್ರಪ್ರ. ೮-೬). [ಸಂ.]

**ವಿರಹಾವಸ್ಥೆ** (ನಾ). **ಪ್ರಿಯರ ಅಗಲಿಕೆಯ ಸ್ಥಿತಿ ; ವಿಯೋಗಸ್ಥಿತಿ :** ವಿರಹಾವಸ್ಥೆಯನಪ್ಪುಕೆಯ್ದು ಪಿರಿದುಂ ಸುಯ್ಯಿಂಕೆಯಿಂ ಪಂಕಜೋತ್ಕರಮಂ ಕಂದಿಸುತುಂ . . . ವಿಹ್ವಲಿಸುತ್ತುಮಿರ್ದುದತಿದೀನಾಲೋಕಕೋಕವ್ರಜಂ (ಕುಸುಮಾ. ೧೦-೪). [ಸಂ. ವಿರಹಾವಸ್ಥಾ]

**ವಿರಹಿ** (ಗು). ೧. **ಪ್ರಿಯವ್ಯಕ್ತಿಯನ್ನು ಅಗಲಿದ; ವಿಯೋಗ ಹೊಂದಿದ :** 'ವಿರಹಿಜನ' ಪರಾ. ೨. ಒಂಟಿಯಾಗಿರುವ ; ಏಕಾಂಗಿಯಾಗಿರುವ. (ನಾ). ೩. **ಪ್ರಿಯ ಅಥವಾ ಪ್ರಿಯೆಯನ್ನು ಅಗಲಿದ ವ್ಯಕ್ತಿ; ವಿಯೋಗಿ:** ವಿರಹಿಗಳ ಸುಯ್ಯ ಬೆಂಕೆಯೊಳೆರ ದೂಣಗಿದುವಕ್ಕುಮಿಾಗಳೆನಲುರಿವುರಿಯಿಂ ಕರಿಮುರಿಕನಾದುವುನ್ಮದಪರಭೃತ ಷಟ್ಚರಣರಾಜಕೀರಕುಲಂಗಳ್ (ಪಂಪಭಾ. ೫-೮೦); ಅರಸುಗಳಿಗಿದು ವೀರ . . .ವಿರಹಿಗಳ ಶೃಂಗಾರ ವಿದ್ಯಾಪರಿಣತರಲಂಕಾರ ಕಾವ್ಯಕೆ ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ (ಕುವ್ಯಾಆ. ೧-೧೯). [ಸಂ. ವಿರಹಿನ್]

**ವಿರಹಿಜನ** (ನಾ). **ಪ್ರಿಯರ ವಿಯೋಗವನ್ನು ಹೊಂದಿದ ಜನ, — ಅಗಲಿಕೆಯನ್ನು ಹೊಂದಿದ ಜನ :** ವಿರಹಿಜನ ತರುಣಹರಿಣೋತ್ಕರನಿರ್ದಾರಣ ಸಮುತ್ಥರಕ್ತಾತ್ತ ಪರಿಸ್ಫುರದತನು ಚಮೂರು ನಖಾಂಕುರಂಗಳೆನಿಸಿದುವು ಮಿಸುಪ ಮುತ್ತದ ಮುಗುಳ್ಗಳ್ (ಚಂದ್ರಪ್ರ. ೭-೫೮); ವಿರಹಿಜನಕ್ಕೆ ತೀವ್ರಪರಿತಾಪಮನಾಗಿಸುತಿರ್ಪ ಕಾರಣಂ ನೆರಪಿದ ಪಾಪಪಿಂಡಮದು ತಾಂ ಪಿಡಿವಂತಿರೆ ರಾಹು ಚಂದ್ರನಂ ತ್ವರಿತದೊಳೆಯ್ದೆ ಬಂದು ಪಿಡಿಯಲ್ಕೆ (ಬಾಧಪು. ೫-೧೪). [ಸಂ.]

**ವಿರಹಿಣಿ** (ನಾ). ೧. **ಪ್ರಿಯಕರನನ್ನು ಅಗಲಿದವಳು ; ಪ್ರಿಯನ ವಿಯೋಗವನ್ನು ಹೊಂದಿದವಳು :** ತೋಯಜನಾಭನನಂತಸಹಾಯಂ ನಲಿದಿಂತು ವತ್ಸಕುಲಮಂ ಕಾದಂ ಕಾಯೆ ವಿರಹಿಣಿಗನಂಗಂ (ಜಗವಿ. ೩-೭೮); ವಿರಹಿಣಿಯಂತೆ ತದ್ಗಿರಿಯ ತಂಗೊಳದೊಳ್ ನೆಲಸಿರ್ಪ ಪದ್ಮಿನೀತರುಣಿಯ ಚಾರುಕೋರಕಕುಚಂಗಳನುತ್ಕರದಿಂದಿನಂ ಸಮಂತಿರದಮರ್ದಂತೆ (ರಾಜಶೇ. ೧-೧೧೭). ೨. ಒಂಟಿಯಾಗಿರುವವಳು ; ಏಕಾಂಗಿಯಾಗಿರುವವಳು. [ಸಂ. ವಿರಹಿಣೀ]

**ವಿರಹಿತ**[1] (ಗು). ೧. **ತ್ಯಜಿಸಲ್ಪಟ್ಟ ; ತೊರೆಯಲ್ಪಟ್ಟ** . ೨. ಒಂಟಿಯಾಗಿರುವ; ಏಕಾಂಗಿಯಾಗಿರುವ. (ನಾ). ೩. **ಬಿಟ್ಟವನು ; ತೊರೆದವನು ; ದೂರವಾದವನು :** ಸರಸರಿಗೆ ಸರಸಂ. . . ಈಶ್ವರ ವಿರಹಿತರ ವಿರಹಿತನತುಳಸುಮತಿ (ಬಸಪು. ೧೯-೧); ಪೆಣ್ಗಂಡುಗಳೊಳೊರ್ವರುಂ ನಿಜಾಚಾರವಿರಹಿತರಾಗಿ ನಡೆವರಿಲ್ಲ (ಜೈಮಿಭಾ. ೧೮-೧೩). ೪. **ಪ್ರಿಯರನ್ನು ಅಗಲಿದವನು ; ವಿಯೋಗಿ.** [ಸಂ.]

**ವಿರಹಿತ**[2] (ಅ). **ಏನೂ ಇಲ್ಲದೆ ; ಸುಮ್ಮನೆ :** ಭಾಂಡವ ತುಂಬಿದ ಬಳಿಕ ಸುಂಕವ ತೆತ್ತಲ್ಲದೆ ವಿರಹಿತ ಹೋಗಬಾರದು (ಬಸವ. ೧೯೬). [< ವಿರಹಿತ[1]]

**ವಿರಹಿಸು** (ಕ್ರಿ). **ಪ್ರಿಯರ ಅಗಲಿಕೆಯನ್ನು ಅನುಭವಿಸು ; ವಿರಹಾನುಭವವನ್ನು ಹೊಂದು :** ಕೊಡೆಯೆಲೆಗಳ ತಿಂತಿಣಿಯಿಟ್ಟೆಡೆಗಳ ಕಟ್ಟಲೆಯನಿರುಳೆಗೆತ್ತಾತ್ಮೇಶಂ ತಡೆದೊಡೆ ನರೇಂದ್ರ ನೋಡೀ ನಡುವಗಲೊಳ್ ಚಕ್ರವಾಕವಧು ವಿರಹಿಸುವಳ್ (ಆದಿಪು. ೧೧-೬೦). [ವಿರಹ + - ಇಸು]

**ವಿರಹೋತ್ಕಂಠಿತೆ** (ನಾ). ೧. **ವಿಯೋಗದಿಂದ ಉತ್ಕಂಠಿತೆಯಾದವಳು, - ದುಃಖಿತೆಯಾದವಳು.** ೨. [ಕಾವ್ಯಮಿಾ] **ನಾಯಿಕಾಭೇದಗಳಲ್ಲಿ ಒಂದು ; ವಿರಹದಿಂದ ದುಃಖಕ್ಕೊಳಗಾದವಳು :** ಸ್ವಾಧೀನಭರ್ತೃಕೆ . . .ವಿರಹೋತ್ಕಂಠಿತೆ . . . ಕಲಹಾಂತರಿತೆಯರೆಂಬ ಯೆಂಟುತೆಱದವಸ್ಥಾನಿಬದ್ಧರಾದ ಕಾಮಿನಿಯರಿಂ (ವಿವೇಕ. ೨೨೮); ನಾಯಕನ ಅನುನಯವೊಂದಕ್ಕೂ ಒಲಿಯದೆ ಕಡೆಗೆ ತಾನೇ ಪಶ್ಚಾತ್ತಾಪದಿಂದ ಕೊರಗುವ 'ವಿರಹೋತ್ಕಂಠಿತೆ'ನಾಯಿಕೆಯಾದಾಗ 'ವಿರಹವಿಪ್ರಲಂಭ' (ಧ್ವನ್ಯಾಲೋ. ೭೫ ಅಡಿಟಿ). [ಸಂ. ವಿರಹೋತ್ಕಂಠಿತಾ]

**ವಿರಳ** 'ವಿರಲ' ನೋ.

**ವಿರಳತೆ** 'ವಿರಲತೆ' ನೋ.

**ವಿರಳದಂತೆ** (ನಾ). **ವಿರಳವಾದ ಹಲ್ಲುಗಳನ್ನುಳ್ಳವಳು ; ಹಲ್ಲುಗಳ ನಡುವೆ ಸಂದುಗಳನ್ನು ಉಳ್ಳವಳು :** ಆತನ ದಾದಿ ವಿನಯಮತಿಯೆಂಬೊಳ್ ಗುಜ್ಜೆ ವಿರಳದಂತ ಆದಮಾನಂ ವಿರೂಪೆ ಪೇಸೆಪಡುವಳ್ (ವಡ್ಡಾರಾ . ೧೧೭-೨೨). [ಸಂ.ವಿರಲದಂತಾ]

**ವಿರಳದುಟಿ** (ನಾ). **ಅಗಲವಾಗಿ ತೆರೆದುಕೊಂಡಿರುವ ತುಟಿ ; ತೆರೆದ ಬಾಯಿ :** ಉಱುಗಿ ಬಾಗಿದ ಶಿರದ ಸಡಿಲಿದ ತುಱುಬಿನುಚ್ಚಿದ ವಿರಳದುಟಿಗಳ ಬೆಚ್ಚಿ ಮೋಱೆಯ ಕೆದಱುಮಿಾಸೆಯ ಬಿಗಿದ ಹುಬ್ಬುಗಳ (ಬಸವು. ೪೬-೫೭). [ವಿರಳ (= ವಿರಲ) + ತುಟಿ]

**ವಿರಳವೇಗಿ** (ನಾ). [ಜೈನ] **ಒಂದು ಬಗೆಯ ವಿದ್ಯೆ :** ವಿರಳವೇಗಿ ರೋಹಿಣಿ ಮನೋವೇಗಿ . . .ಎಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನವಾಗಿರ್ದು (ಚಾವುಂಪು. ೧೯೬). [ಸಂ. ವಿರಲವೇಗಿನ್]

**ವಿರಳಾಕ್ಷರ** (ನಾ). ೧. **ಬಿಡಿಬಿಡಿಯಾದ ಅಕ್ಷರ.** ೨. **ಅಸ್ಪಷ್ಟವಾದ ಮಾತು,- ನುಡಿ ; ತಡೆತಡೆದು ಆಡುವ ಮಾತು :** ಉಸಿರ್ದಂ ಲಜ್ಜೆಯಿನೆಂತಾನುಂ ಶೀರ್ಯಮಾಣ ವಿರಳಾಕ್ಷರದಿಂ (ಕಾದಂಪೂ. ೮೪೪); ವಿರಳಾಕ್ಷರದಿ ತಡೆತಡೆದು ನುಡಿದನಿಂತು . . . ಕೊರಳ್ ಗದ್ಗದಿಸೆ ನುಡಿದು, ಹಿಂತಿರುಗಿದನು ಲಂಕೇಶ್ವರಂ, ಬಂದ ಬಟ್ಟೆಯೊಳೆ (ಶ್ರೀರಾಮಾ. ೪೯೫-೨೪೪). [ಸಂ. ವಿರಲಾಕ್ಷರ]

**ವಿರಳಿಸು** (ಕ್ರಿ). ೧. ವಿರಳವಾಗಿ ಮಾಡು ; ಬಿಡಿಬಿಡಿಯಾಗಿ ಮಾಡು. ೨. ಚ್ಯುತಿಗೊಳಿಸು : ಧಕ್ಕೆತರು : ಅಖಿಣ್ಣತಬ್ರಹ್ಮರಾಜ್ಯಸ್ಥಾನವಿದು ವಿರಳಿಸಿ ದೊನನೂರುವರಸುಟ್ಟು ಪೊಱಮಡಿಸಿ ಕಳೆವುದು (ಶಾಇ. IX-i, ೭೭-೩೪; 984). ೩. ಕಳೆ ; ನೀಗು : ದೇಶಘಾತ್ಯನುಭಾಗಸ್ಪರ್ಧಕ ನಾನಾಗುಣಹಾನಿ ಶಲಾಕೆಗಳಂ ವಿರಳಿಸುತ್ತುಂ (ತತ್ತ್ವಪ್ರ. ೩೦೮); ಆ ವರ್ಗಶಲಾಕೆಯ ಹೀನರೂಪುಗಳ್ಗಸಂಖ್ಯಾತಂಗಳಂ ವಿರಳಿಸಿ (ಗೊಮ್ಮಸಾ. ೫೦-೮). [ವಿರಳ (= ವಿರಲ) + - ಇಸು]

**ವಿರಳೀಕರಿಸು** (ಕ್ರಿ). ವಿರಳವಾಗಿ ಮಾಡು ; ಕಡಮೆಮಾಡು ; ತಗ್ಗಿಸು : ಶಿವಕಾರುಣ್ಯಪ್ರಾರ್ಥನಾಸ್ಥಲಕ್ಕೆ ಸೇರಿದ ವಚನಂಗಳ ಸಂಪುಟ ೨೭ಕ್ಕೆ ವಿರಳೀಕರಿಸಿದ ಪದಂಗಳು ನೂಱಕ್ಕೆ ಪ್ರಥಮಮಂಜರಿಯು ಪರಿಸಮಾಪ್ತವಾದುದು (ಕೈಶವ. ೧-೨೭-೩ ವ). [ವಿರಳೀಕರಣ + - ಇಸು]

**ವಿರಾಗ** (ನಾ). ೧. ಬಣ್ಣದ ಬದಲಾವಣೆ. ೨. ಒಲವಿಲ್ಲದಿರುವಿಕೆ ; ಮನಸ್ಸಿಲ್ಲದಿರುವಿಕೆ. ೩. ಪ್ರಾಪಂಚಿಕ ವಿಷಯಗಳಲ್ಲಿರುವ ಅನಾಸಕ್ತಿ ; ವಿರಕ್ತಿ ; ವೈರಾಗ್ಯ : ಆ ಕಾಂತೆಯ ಮೃದುತಳಪದ ಕೋಕನದಂ ತನ್ನ ರುಚಿಯನೊದವಿಸಿ ರಾಗೋದ್ರೇಕಮನದೆಂತು ರಕ್ತಾಶೋಕದ ತಳಿರೊಳ್ವಿರಾಗಮಂ ಪುಟ್ಟಿಸುಗುಂ (ಮಲ್ಲಿಪು. ೩-೫೭); ಪಗೆಯಂ ಮಱೆತು ಸಂತಂ ಪುದುವಾಳ್ವುದೆಂದು ಬುದ್ಧಿವೇಟಲೊಡಮದುವೆ ವಿರಾಗಮಂ ಪುಟ್ಟಿಸೆ (ರಾಮಾಶ್ವ. ೪೨-೧೪). ೪. [ವೀಶೈ] ಈಶ್ವರನ ಹತ್ತು ಕಲ್ಯಾಣಗುಣಗಳಲ್ಲಿ ಒಂದು : ಶ್ರೀ ರುದ್ರನು ಧೃತಿ . . . ವಿರಾಗ ಮತಿ ಈಶ್ವರತ್ವಮೆಂಬ ದಶಕಲ್ಯಾಣಗುಣಯುಕ್ತನಾಗಿ (ವಿವೇಕ. ೨೯೦). [ಸಂ.]

**ವಿರಾಗಾರ್ಹ** (ಗು). ೧. ವಿರಕ್ತಿಗೆ ಅರ್ಹವಾದ ; ವೈರಾಗ್ಯಕ್ಕೆ ಯೋಗ್ಯವಾದ. (ನಾ). ೨. ವಿರಕ್ತ ; ವಿರಾಗಿ : "ವೈರಂಗಿಕಃ, ವಿರಾಗಾರ್ಹಃ- ಈ ೨ ವಿರಕ್ತಂ" (ಹಲಾಯು. ೭೧-೨೧೪). [ಸಂ.]

**ವಿರಾಗಿ** (ಗು). ೧. ಆಸಕ್ತಿಯಿಲ್ಲದ ; ಒಲವಿಲ್ಲದ. (ನಾ). ೨. ಲೌಕಿಕ ವಿಷಯಗಳಲ್ಲಿ ಆಸಕ್ತಿಯಿಲ್ಲದವನು ; ವಿರಕ್ತ : ವಿರಾಗಿಯರ್ಜುನನೆದೆಯ ಕೋಂಟೆಯಂ ಹುಡಿಗೈವ ಶೃಂಗಾರವೈತರಲಿ (ಚಿತ್ರಾಂಗ. ೨೯-೭೯೨). [ಸಂ. ವಿರಾಗಿನ್]

**ವಿರಾಜ** (ನಾ). ೧. ಕಾಂತಿ ; ಪ್ರಕಾಶ; ಹೊಳಪು : "ಆಹ್ಲಾದವಿರಾಜಯುಕ್ತಿ ನುಡಿದಿಗ್ಗಿವರಂಗಳೊಳುತ್ತರಾಪ್ಯಯಂ" (ನಾನಾರ. ೭೮). ೨. ತೇಜಸ್ಸು . [ಸಂ.]

**ವಿರಾಜಪುರುಷ** (ನಾ). ಅಧಿಕವಾದ ತೇಜಸ್ಸಿನಿಂದ ಕೂಡಿದವನು ; ಪರಮಾತ್ಮ : ವಿರಾಜ [ಪಾಠಾಂ. ವಿರಾಟ್]ಪುರುಷನೊಬ್ಬ ಪುರುಷನು ಆದಿಪುರುಷನೊಬ್ಬ ಪುರುಷನು (ಬಸವ. ೯೫೫). [ಸಂ.]

**ವಿರಾಜಿ** (ನಾ). ೧. ಪ್ರಕಾಶಮಾನವಾದುದು ; ಕಾಂತಿದಾಯಕವಾದುದು : ತುಂಗಕನಕ ಭೃಂಗಾರವಿರಾಜಿ ರಾಜನ್ಮರಕತಮಯಶುಕವಿರಾಜಿ (ಆದಿಪು ೪-೩೦ ರಗಳೆ). ೨. ತೇಜಸ್ಸಿನಿಂದ ಕೂಡಿದವನು ; ತೇಜಸ್ವಿ. [ಸಂ. ವಿರಾಜಿನ್]

**ವಿರಾಜಿತ** (ಗು). ೧. ಹೊಳೆಯುವ ; ಪ್ರಕಾಶಿಸುವ ; ಶೋಭಿಸುವ. (ನಾ). ೨. ಪ್ರಕಾಶಿಸುವಂಥದು ; ಕಾಂತಿಯುತವಾದುದು : ಮುತ್ತಿನ ತೋರಣಂ ಕನಕವೇದಿಕೆ ಪಚ್ಚೆಯ ಕುಟ್ಟಿಮಸ್ಥಳಂ . . . ವಿರಾಜಿತಮಾಯ್ತು ವಿವಾಹಗೇಹದೊಳ್ (ರಾಜಶೇ. ೮-೨). ೩. ಕಾಂತಿಯುಕ್ತನಾದವನು ; ತೇಜಸ್ವಿ : ಧೀರತೆಗಿಡದ . . . ತಪೋವ್ಯೆರಿವಿಜಯಕ್ಕೆ ಮಸೆದಸಿಧಾರೆಯೊಲಪರಾಜಿತಂ ವಿರಾಜಿತನಾದಂ (ಶಾಂತಿಪು. ೪-೧೧೯). [ಸಂ.]

**ವಿರಾಜಿಸು** (ಕ್ರಿ). ಪ್ರಕಾಶಿಸು ; ಹೊಳೆ; ಶೋಭಿಸು : ಎತ್ತಲುಂ ಮಿಳಿರ್ದ್ದ ಕೇತನರಾಜಿ ಕರಂ ವಿರಾಜಿಸಲ್ (ಎಇ. XIII, ೩೩೧-೪೦; 929); ವಿರಾಜಿಸುತಿರ್ದುದು ತತ್ಪುರಾಂತರಂ (ಜಗವಿ. ೯-೯೭); ವಿನುತ ಮಖಮಂಟಪ ವಿರಾಜಿಸಿತು (ತೊರರಾ. ೧-೧೨-೨೭).

[ವಿರಾಜ + - ಇಸು]

**ವಿರಾಟರೂಪ** (ನಾ). ಸಕಲವನ್ನೂ ತನ್ನಲ್ಲಿ ಅಡಗಿಸಿಕೊಂಡಿರುವ ದೈವದ ಭವ್ಯರೂಪ, — ಅಸಾಧಾರಣವಾದ ರೂಪ ; ವಿಶ್ವರೂಪ : ಕಮಲೋದರನು ಕೈಕೊಂಡನು . . . ಸಕಲಲೋಕದ ಬೀದಿ ವಿಸಟಂಬರಿವ ವಿಮಲ ವಿರಾಟರೂಪವನು (ಕುವ್ಯಾಭೀ. ೩-೬೪). [< ಸಂ. ವಿರಾಡ್ರೂಪ]

**ವಿರಾಟ್ಪುರುಷ** (ನಾ). ಅಸಾಧಾರಣನಾದ ಪುರುಷ ; ಪರಮಾತ್ಮ : ಇಲ್ಲೂ ವನವೃಕ್ಷನ್ಯಾಯದಿಂದ ಸಮಸ್ತಸ್ಥೂಲಶರೀರಸಮಷ್ಟಿಯೆ ವಿರಾಟ್ಪುರುಷನು (ಹಿಂದಸಾ. ೧೯೬). [ಸಂ.]

**ವಿರಾಡ** 'ಬೀಡಾರ' ನೋ.

**ವಿರಾಡಿಸು** 'ಬಿರಾಡಿಸು' ನೋ.

**ವಿರಾಡ್ಗೇಹ** (ನಾ). ೧. ಭವ್ಯವಾದ ಮನೆ. ೨. ಸರ್ವಾಂತರ್ಯಾಮಿ ಯಾದವನು ; ಪರಮಾತ್ಮ : ಕಾಲಭೈರವಂ . . . ಸ್ವತಂತ್ರದಿವ್ಯಾವಯವ ವಿರಾಡ್ಗೇಹ . . . ರುದ್ರನು (ವೀಶೈಪು. ೨-೩-೪). [ಸಂ.]

**ವಿರಾಡ್ಮನ** (ನಾ). ೧. ಅಸಾಧಾರಣವಾದ ಮನಸ್ಸು. ೨. ವಿಶ್ವಚೇತನ : ನೆಯ್ವಾಳುತಿದೆ ಜಗವನೊಂದತಿ ವಿರಾಡ್ಮನಂ (ಶ್ರೀರಾಮಾ. ೫೮-೧೩೧).

[< ಸಂ. ವಿರಾಣ್ಮನಸ್]

**ವಿರಾಡ್ರೂಪ** (ನಾ). ೧. = ವಿರಾಟರೂಪ : ಹರಿಯುದಂಕನ ಮಾತ ಮನ್ನಿಸಿ ಕರುಣದಲಿ ತೋಱಿದನು ಮೊದಲಾ ನರಗೆ ತೋಱಿಸಿದಾ ವಿರಾಡ್ರೂಪವನುದಂಕನಿಗೆ (ತಿಮ್ಮಅ. ೩-೪೦); ವಿಭುತ್ವದ ಪ್ರತೀಕವಾದ ವಿರಾಡ್ರೂಪವನ್ನೂ ತೋರಿಸಿದ ವೈರಾಗ್ಯಮೂರ್ತಿ ಶ್ರೀಕೃಷ್ಣ (ಭಾರದ. ೭೯). ೨. ಪರಮಾತ್ಮ ; ಪರಬ್ರಹ್ಮ : ಶ್ರೀ ವಿರಾಡ್ರೂಪಂ ಹಿರಣ್ಯಗರ್ಭಂ ಸಕಲಜೀವರಂ ರಕ್ಷಿಸುವ ಮೂರ್ತಿಯಂ ನವ್ಯ ಶೋಭಾವಹದೊಳಂ ಕೂರ್ತ ಬಿತ್ತರಿಸಿದಂ ಕರುಣದಿಂದ ಹಲಗೆಯ ದೇಶಿಕಂ (ವೀಶೈಪು. ೭-೧ ಸೂಚನೆ); ವಿರಾಡ್ರೂಪನಾದ ಸೃಷ್ಟಿಕರ್ತನ ವಿಶ್ವರೂಪದರ್ಶನಕ್ಕೆ ವ್ಯಜ್ಞಾನಿಕದರ್ಶನ ಮತ್ತು ತತ್ತ್ವಾನ್ವೇಷಕನ ತತ್ತ್ವದರ್ಶನ ಇವುಗಳ ಸಮನ್ವಯ ಅತ್ಯವಶ್ಯ (ಶುಶ್ವಾರ. ೪ ಪೀಠಿಕೆ). ೩. ದೊಡ್ಡ ಆಕಾರ, — ಆಕೃತಿ ; ಬೃಹದಾಕಾರ : ಭಿನ್ನತೆಯ ಅಂಧಶ್ರದ್ಧೆ ವಿರಾಡ್ರೂಪವನ್ನು ತಾಳಿ (ಶಿಕ್ಷದ. ೨೪). [ಸಂ.]

**ವಿರಾಡ್ರೂಪು** (ನಾ). = ವಿರಾಟರೂಪ : ಸಕಲವಿಶ್ವವನಾ ವಿರಾಡ್ರೂಪೆಂದು ಧ್ಯಾನಂಗೆಯ್ಯುವದೆ ನಿಶ್ಚಯದ ವೆಸರ ಸಮಾಹಿತಿಯು (ಗಗತಾ. ೧೩-೪೩). [< ವಿರಾಡ್ರೂಪ]

**ವಿರಾಧ** (ನಾ). ೧. ಅಡ್ಡಿ ; ವಿರೋಧ ; ಪ್ರತಿಬಂಧ. ೨. ಕಾಟ ; ತೊಂದರೆ ; ಉಪದ್ರವ. ೩. ರಾಮನಿಂದ ಹತನಾದ ಒಬ್ಬ ರಾಕ್ಷಸನ ಹೆಸರು : ತರಣಿವಂಶಜರತ್ರಿಮುನಿಯುಪಚರಣೆಯನು ಕೈಕೊಂಡು ರಜನೀಚರ ವಿರಾಧನ ಮುಱಿದು ಸಾರ್ದರು ಪಂಚವಟವನವ (ತೊರರಾ. ೩-೧ ಸೂಚನೆ); ಪಲ್ಮೊರೆದು ಗರ್ಜಿಪ ವಿರಾಧನಂ ಮರ್ದಿಸಿದೆ (ಜೈಮಿಭಾ. ೧೯-೨೦). [ಸಂ.]

**ವಿರಾಧಿಸು** (ಕ್ರಿ). ಅಡ್ಡಿಮಾಡು ; ವಿರೋಧಿಸು : ಪ್ರಮತ್ತಸಂಯುತನಾಗಿ ನವಪ್ರಕೃತಿಸ್ಥಾನಮಂ ಕಟ್ಟುತಿರ್ಪ ಪ್ರಥಮೋಪಶಮಸಮ್ಯಕ್ತ್ವಮಂ ವಿರಾಧಿಸಿ ಅನಂತಾನುಬಂಧಿ ಕರ್ಮೋದಯದಿಂದಂ (ಗೊಮ್ಮಸಾ. ೧೧೮-೩). [ವಿರಾಧ + - ಇಸು]

**ವಿರಾಮ** (ನಾ). ೧. ನಿಂತುಹೋಗುವುದು ; ನಿಲ್ಲುವುದು ; ನಿಲುಗಡೆ. ೨. ಕೊನೆಗಾಣುವುದು ; ಅಂತ್ಯ ; ಸಮಾಪ್ತಿ. ೩. ಕೆಲಸ ಮುಂತಾದುವುಗಳ ಮಧ್ಯದ ಅವಕಾಶ ; ಬಿಡುವು ; ವಿಶ್ರಾಂತಿ : ನನಗೆ ವಿರಾಮವೇ ಇಲ್ಲದಂತಾಗಿದೆ (ರಾಯಕ. ೮೦); ಕಚೇರಿಯಲ್ಲೋ ಒಂದು ಕ್ಷಣ ವಿರಾಮವಿಲ್ಲ (ರಂಗಕ. ೩.) . ೪. [ಛಂದ] ಪದ್ಯಗಳನ್ನು ಹೇಳುವಾಗ ಅರ್ಥಸ್ಫೂರ್ತಿ ಕೆಡದಂತೆ ನಿಲ್ಲಿಸಬೇಕಾದ ಸ್ಥಾನ ; ಯತಿ : ಸುರಪುರೇಂದು ದಿವಸಾಧಿಪಾಗ್ನಿಗಳ್ ಬರೆ ದಿಶಾಗಜದೊಳಾ ವಿರಾಮಮಾಗಿರೆ ಪೆಸರ್ವೆಗಟ್ಟ ನಾಱಯಂತೆವೊಲ್ ನಿರುಪಮಂ ಕೆಳದಿ ಮತ್ತಕೋಕಿಲಂ (ಛಂದೋಂಬು. ೨-೧೩೧); ನಿಯತಸ್ಥಾನಂ ಪದವಿಸ್ರುತಿಯೊಳಾದ ವಿರಾಮಮಱಿಗೆ ಯತಿಯಕ್ಕುಂ (ಕಾವ್ಯಾವ. ೪೭೯). ೫. ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಏಳನೆಯದಾದ ಉಷ್ಣಿಕ್ಕು ಎಂಬ ಛಂದಸ್ಸಿನ ವೃತ್ತ : ಶೀತಕರಾಗ್ನಿ ಚೇತೋಜಾತಹರಕರ್ಳಿರ್ದಂದೇ ತೊದಲೋಪಳೆ ನಾಮಾತಿಶಯಂ ವಿರಾಮಂ [ಪಾಠಾಂ. ವಿನಿಮ್ಮಂ] (ಛಂದೋಂಬು. ೨-೮೪). ೬. [ಸಂಗೀತ] ಹಾಡುವಾಗ ಮಧ್ಯದಲ್ಲಿ ನಿಲ್ಲಿಸಬೇಕಾದ ಸ್ಥಾನ ; ಉಸಿರ್ದಾಣ : ಕುಂತವು ಅದ್ಭುತರಸದಲ್ಲಿ ಮಧ್ಯದಲ್ಲಿ ವಿರಾಮವಿರುವ ಮೂರು ಲಘುಗಳೊಡನೆ (ಹಾಡುವಂತಹುದು) ಎಂದು ಸ್ಮೃತವಾಗಿದೆ (ಚತುಪ್ರ. ೭೪). [ಸಂ.]

**ವಿರಾಮಚಿಹ್ನ** (ನಾ). ಬರವಣಿಗೆಯಲ್ಲಿ ಅರ್ಥವಿಶದತೆಯನ್ನುಂಟುಮಾಡಲು ಮತ್ತು ಓದುವಾಗ ಉಸಿರನ್ನು ನಿಲ್ಲಿಸಲು ಪದಗಳ, ವಾಕ್ಯಭಾಗಗಳ ಮತ್ತು ವಾಕ್ಯಗಳ ನಡುನಡುವೆ ಅರ್ಥಾನುಸಾರಿಯಾಗಿ, ಉಚಿತವಾದ ಎಡೆಗಳಲ್ಲಿ ವಿರಾಮಸ್ಥಾನಗಳನ್ನು ಸೂಚಿಸಲು ಬಳಸುವ ಚುಕ್ಕೆ, ಗೆರೆ, ಕೊಕ್ಕೆ ಮುಂತಾದ ಲಿಖಿತಸಂಕೇತ,-ಗುರುತು : ವಿರಾಮಚಿಹ್ನಗಳಿದ್ದಲ್ಲಿ ನಿಲ್ಲಬೇಕು (ಮುಂಬಯಿ. ೨-೮). [ಸಂ.]

**ವಿರಾಮಚಿಹ್ನೆ** (ನಾ). = ವಿರಾಮಚಿಹ್ನ : ಮುದ್ರಣಕ್ಕೆ ಸಂಬಧಪಟ್ಟ ದೋಷಗಳಲ್ಲಿ ಹೇರಳವಾಗಿರುವುವು ಯಾವುವೆಂದರೆ . . . ಅಸಮಯೋಚಿತವಿರಾಮಚಿಹ್ನೆಗಳ ಉಪಯೋಗ, ವ್ಯಾಕರಣದೋಷಗಳು . . . ಇತ್ಯಾದಿ (ಮುದ್ರಕ. ೩೦). [ಸಂ. ವಿರಾಮಚಿಹ್ನ]

**ವಿರಾಮಜ್ವರ** (ನಾ). ನಿಂತು ನಿಂತು ಬರುವ ಒಂದು ಬಗೆಯ ಜ್ವರ : ಹಸಿವು, ಬಾಯಾರಿಕೆ ಶರೀರಲಾಘವ ಅಲ್ಪಜ್ವರ ಮಲದಲ್ಲಿ ಪಿತ್ತಶ್ಲೇಷ್ಮಗಳ ಪ್ರವೃತ್ತಿ ಮನೋತ್ಸಾಹವಿಲ್ಲದಿರುವುದು ಇವುಗಳೆಲ್ಲಾ ವಿರಾಮಜ್ವರಲಕ್ಷಣಗಳು (ಸಕಮ್ನ.೯೭). [ಸಂ.]

**ವಿರಾಮಾಯಣ** (ನಾ). ಬಿಡುವು ಮಾಡಿಕೊಂಡು ಕೇಳುವಂಥ ಕಥೆ ; ದೀರ್ಘಕಾಲದ ವಿರಾಮದಲ್ಲಿ ಕೇಳುವಂಥ ಕಥೆ : ಮತ್ತೊಮ್ಮೆ ಬರುವೆ. ದಿನವೆಲ್ಲಮುಂ ಕೇಳ್ವೆನೋದುವೆಯಂತೆ ; ರಾಮಾಯಣಂ ಅದು ವಿರಾಮಾಯಣಂ ಕಣಾ ! (ಶ್ರೀರಾಮಾ. iii -೯). ℙ ಇದು ಶಬ್ದಚಮತ್ಕಾರವಾಗಿ ಸೃಷ್ಟಿಸಿರುವ ಕವಿಕಲ್ಪಿತ ನಿಷ್ಪತ್ತಿಯ ರೂಪ. [ವಿರಾಮ + < ಅಯನ]

**ವಿರಾವ** (ನಾ). ಧ್ವನಿ ; ಶಬ್ದ : "ಶಬ್ದಃ, ನಿನಾದಃ, ನಿನದಃ . . . ಸಂರಾವಃ, ವಿರಾವಃ- ೧೭ ಧ್ವನಿಯ ಹೆಸರುಗಳು" (ಸಿದ್ಧಾಂತಿ. ೫೭). [ಸಂ.]

**ವಿರಾಳ** (ನಾ). ಆಕರ್ಷಣೆ ; ಮೋಹ : ನಿರಾಳದಲ್ಲಿ ನಿಂದ ಸುಖಿಗೆ ವಿರಾಳದಲ್ಲಿ ಸುತ್ತು ತಿರುಗುತ್ತಿಹಲೇಕೆ (ಮೋಳಮಾ. ೧೦೫-೪೧೯); "ಅಶಾಂತತೆ, ದುಃಖ, ಸಂಸಾರ" (ಮೋಳಮಾ. ಕೋಶ). [<— ತೆಲು. ವಿರಾಲ, ವಿರಾಳ]

**ವಿರಿಂಚ** (ನಾ). ಬ್ರಹ್ಮ ; ಅಜ : ವಿರಿಂಚಖ್ಯಾತಿ ಲೋಕಂಗಳೊಳ್ಪರಿದಾಯಸದೆ ನಿಂದುದೊ (ಕಾದಂಪೂ. ೭೭೩); ಅರರೆ ನೂತನಸೃಷ್ಟಿಯಾಯ್ತು ವಿರಿಂಚಿಸೃಷ್ಟಿಯಲಿ (ಕುವ್ಯಾಭೀ.೧-೪೯). [ಸಂ.]

**ವಿರಿಂಚನ** (ನಾ). = ವಿರಿಂಚ : "ಸರಸಿರುಹಭವಂ . . .ವಿರಿಂಚನಂ ವಿಧಿ ಪಿತಾಮಹಂ ಚತುರಾಸ್ಯಂ" (ವಸ್ತುಕೋ. ೩-೧೧). [ಸಂ.]

**ವಿರಿಂಚಿ** (ನಾ). ೧. ಬ್ರಹ್ಮ : ಹರಿ ವಿರಿಂಚಿಗೆ ನುಡಿದಂ (ಜಗವಿ. ೧-೬೭); ಸಕಲಪ್ರಮಥರಂ ಹರಿವಿರಿಂಚಿ ವಾಸವಮುಖ್ಯಸುರನಿಕರಮನುಮುನಿಗಳನು. . . ಪಂಪಾ ವಿರೂಪಾಕ್ಷಲಿಂಗಪ್ರಭು ವಿಲಾಸದಿಂ ಕಳುಹಿ ತಾಂ ನಡೆಗೊಂಡನಂದು ಕೈಲಾಸಗಿರಿಗೆ (ಹಚಕಾ. ೧೪-೨೨). ೨. ಶಿವ : ಚಕ್ರಧರತ್ವಮಂದು ಸಫಲಂ. . .ಶಕ್ರವಿರಿಂಚಿಮುಖ್ಯಸುರ ರಕ್ಷಣಮಂದು ಕೃತಾರ್ಥಮೆನ್ನೊಳಾ ವಿಕ್ರಮಸಾಲ್ವನಂ ತವಿಸಿದಂದಿದನಟಿದೆಂ ಪಿತಾಮಹಾ (ಜಗವಿ. ೧-೭೩). ೩. ವಿಷ್ಣು : ಸಲಿಲಮಯವಾದಖಿಳಭುವನಾವಳಿಗಳೊಳಗೆ ವಿರಿಂಚಿಯಾಳುತ ಮುಳುಗುತ್ತೈತಂದಾಲದೆಲೆಮಂಚದಲಿ ಪವಡಿಸಿದ (ಕುವ್ಯಾಉ. ೯-೫೫). [ಸಂ.]

**ವಿರಿಂಚಿಪ್ರಭವ** (ನಾ). ಬ್ರಹ್ಮನನ್ನು ಪಡೆದವನು ; ವಿಷ್ಣು : ಸಭೆಯೊಳೋಲಗದೊಳು ವಿರಿಂಚಿಪ್ರಭವನನುಮತದಿಂದ ಧರಣೀವಿಭು ಮಹಾಕ್ರತುರಾಜಸೂಯವನೊಲಿದು ಕೈಕೊಂಡ (ಕುವ್ಯಾಸ. ೧ ಸೂಚನೆ). [ಸಂ.]

**ವಿರಿಂಚಿಸಭೆ** (ನಾ). ಬ್ರಹ್ಮನ ಸಭೆ : ನಿರ್ವಿಣ್ಣೆಯಾಗಿ ಭೂವಧು ಗೀರ್ವಾಣಾವೃತ ವಿರಿಂಚಿಸಭೆಯಂ ಪೊಕ್ಕಳ್ (ಜಗವಿ. ೧-೨೭). [ಸಂ. ವಿರಿಂಚಿಸಭಾ]

**ವಿರಿವಿರಿ** (ನಾ). ಒಂದು ಅನುಕರಣ ಶಬ್ದ : ಪುಣ್ಣ ಬಾಯಿಂ ಪುಟು ವಿರಿವಿರಿಯೆಂದುರ್ಕೆ (ಶೃಂಗಾರ. ೧-೮೮). 'ವಿಲಿವಿಲಿ' ಪರಾ.

**ವಿರುತ** (ನಾ). (ಪಕ್ಷಿಗಳ)ಕೂಗು ; ಕುಕಿಲು ; ಚಿಲಿಪಿಲಿ ಶಬ್ದ : "ಉಡ್ಡೀನಂ ಪ್ರಡೀನಂ ಪಕ್ಷಿಗಳ ಗತಿಯಕ್ಕು ವಿರುತಮೆನೆ ನುಡಿಯಕ್ಕು" (ಮಂಗರಾ. ೫೦-೨). [ಸಂ.]

**ವಿರುತಿ** (ನಾ). ೧. ಶಬ್ದ ; ಧ್ವನಿ : ನೆರೆದ ಸಮಸ್ತದೇವನಿಕುರುಂಬದ ಯಾನವಿಮಾನಕಿಂಕಿಣೀವಿರುತಿಯ ದುಂದುಭಿಧ್ವನಿಯ ಮಂಗಳಗೇಯದ ನಾದಮಂ ತರಂತರದೊಳೆ ಪೊತ್ತು (ಆದಿಪು. ೩-೨೨); ಕಳಕಾಂಚಿಕಾವಿರುತಿ ಕರ್ಣದೊಳಂಚೆಯ ತುಪ್ಪಟಂಚೆಯಂ ಪೊಸೆಯೆ ನಿರೀಕ್ಷಣವ್ಯಸನದಿಂ ನಡೆತಂದುದು ಸೌಂದರೀಜನಂ (ಚಂದ್ರಪು. ೬-೯೫). ೨. = ವಿರುತ : ಸುರಭಿಸಮಯದೊಳೆ ಕೋಕಿಳವಿರುತಿನಿಬಂಧನಮನಬ್ದ ಕಾಲದೊಳೆ ಮದೋದ್ಧುರಕೇಕಿ ಮಧುರಕೇಕಾವಿರುತಿಯನಭಿಯುಕ್ತರಱಿದು ಪೇಳ್ವುದು ಕೃತಿಯೊಳ್ (ಕಾವ್ಯಾವ. ೮೯೧). [ಸಂ.]

**ವಿರುದ್ಧ** (ಗು). ೧. ತಡೆಗಟ್ಟಿದ ; ಅಡ್ಡಿಪಡಿಸಿದ. ೨. ವ್ಯತಿರಿಕ್ತವಾದ ; ಪ್ರತಿಕೂಲವಾದ. ೩.ಒಪ್ಪಿಗೆಯಾಗದ ; ಅಪ್ರಿಯವಾದ. ೪. ನಿಷಿದ್ಧವಾದ ; ನಿಷೇಧಿಸಿದ. (ನಾ). ೫. ವ್ಯತಿರಿಕ್ತ ; ಪ್ರತಿಕೂಲ : ಕೃಷ್ಣನ ಸ್ವಭಾವವು ಇದಕ್ಕೆ ತೀರ ವಿರುದ್ಧವಾದುದು (ವಾರಾಕ್ಯ. ೫೮). ೬ ಅಡ್ಡಿ ; ವಿರೋಧ : ಸಿಂಗಿತಲೆ ಪಣ್ಣಾರನ್ಗೆ ಕಾಸಂಪಳ್ಳಿಯಾ ಸಮಭಾಗಮಾನ್ ಚನ್ದ್ರಸೂರ್ಯ್ಯರುಳ್ಳಪ್ಪಿನಂ ಸರ್ವ್ವವಿರುದ್ಧ ರಹಿತಂ ಗೋಪಾಲದೇವ[ರ್] ಕೊಟ್ಟರ್ (ಎಇ. XXI. ೧೭೮-೯; ೮ನೆಯ ಶತ). ೭. ಹಗೆತನ ; ವೈರ : ತಾವು . . . ನಮಗೂ ಟೀಪುಸುಲ್ತಾನರಿಗೂ ಇರುವಂಥಾ ವಿರುದ್ಧವನ್ನು ಬೆಳೆಸಿ ತಮ್ಮ ವಿಲಾಯಿತಿಗಳಿಗೆ ಹೋಗುತ್ತೀರಿ (ರಾಜೇಂದ್ರ. ೮೩). ೮. [ಕಾವ್ಯಮಿ] ವಿರೋಧಕರವಾದ ಶಬ್ದಾರ್ಥಗಳು ಸೇರಿ ಆಗುವ ಒಂದು ಅಲಂಕಾರ : ಧರೆಗೆ ವಿರೋಧಮನಱಿಪ್ಪರ ವಿರುದ್ಧ ಶಬ್ದಾರ್ಥಘಟನೆಯಾಗೆ ವಿರುದ್ಧಂ (ಉದಯಾ. ೫೭). ೯. [ನ್ಯಾಯ] ಅಸಿದ್ಧ, ವಿರುದ್ಧ, ಅನೈಕಾಂತಿಕ ಮತ್ತು ಅಕಿಂಚಿತ್ಕರ ಎಂಬ ನಾಲ್ಕು ಬಗೆಯ ಹೇತ್ವಾಭಾಸದೋಷಗಳಲ್ಲಿ ಒಂದು : ನಿಗಮನಾದ್ಯಂಗಳುಂ ಸವ್ಯಭಿಚಾರ ವಿರುದ್ಧ ಸತ್ ಪ್ರತಿಪಕ್ಷ ಅಸಿದ್ಧಿ ಬಾಧೆಗಳೆಂಬ ಹೇತ್ವಾಭಾಸದೋಷಂಗಳು (ವಿವೇಕ. ೧೮); ಹೇತುವು ಸಾಧ್ಯದ ಅಭಾವವನ್ನು ಸಾಧಿಸುವುದಾದರೆ ಅದು ವಿರುದ್ಧವೆನಿಸುವುದು (ಭಾತತ್ತ್ವ. ೨೪೦). [ಸಂ.]

**ವಿರುದ್ಧಮತಿಕೃತ್ತು** (ನಾ). [ಕಾವ್ಯಮಿ] ಪದದೋಷಗಳಲ್ಲಿ ಒಂದು ; ಹೇಳಲೇಬೇಕಾದ ಅರ್ಥವು ತಪ್ಪಿ ವಿರುದ್ಧಾರ್ಥವಾಗುವಂಥದು : ವಿರುದ್ಧಮತಿಕೃತ್- ಹೇಳಬೇಕೆಂದಿದ್ದ ಅರ್ಥಕ್ಕೆ ಕೇವಲ ವಿರುದ್ಧವಾದ ಅರ್ಥವೂ ಆಗುವಂತಿರುವುದು (ಕೃಪಿಡಿ. ೨೨೮). [ಸಂ. ವಿರುದ್ಧಮತಿಕೃತ್]

**ವಿರುದ್ಧರೂಪಕ** (ನಾ). [ಕಾವ್ಯಮಿ] ರೂಪಕಾಲಂಕಾರಗಳಲ್ಲಿ ಒಂದು ; ಒಂದು ವಸ್ತುವು ಮತ್ತೊಂದು ವಸ್ತುವಿನ ಹಾಗೆ ಇದ್ದೂ ಅದರ ಕಾರ್ಯವನ್ನು ಮಾಡದಿರುವುದು ; ℙ ಉದಾಹರಣೆಗೆ : ಮುಖವು ಚಂದ್ರಬಿಂಬದ ಹಾಗಿದ್ದರೂ ಚಂದ್ರನ ಕಾರ್ಯವನ್ನು ಮಾಡದಿರುವುದು : ಕಮಲಾಕರದೊಳ್ ಸಂಕೋಚಮನಟಲಂ ಚಕ್ರವಾಕದೊಳ್ ಮಾಡದು ನಿನ್ನ ಮುಖೇಂದುಬಿಂಬಮಿಂದುಗೆ ಸಮನೆಂಬುದು ಮಿಗೆ ವಿರುದ್ಧರೂಪಕಮಕ್ಕುಂ (ಕವಿರಾ. ೩-೧೯). [ಸಂ.]

**ವಿರುದ್ಧವೃತ್ತ** (ನಾ). ವ್ಯತಿರಿಕ್ತವಾದ ನಡವಳಿಕೆಯುಳ್ಳವನು,-ಚರ್ಯೆಯುಳ್ಳವನು : ಬಗೆ ತತ್ತ್ವಾರ್ಥವಿನಿಶ್ಚಯಂಬಡೆಯೆ ನೈರ್ಗ್ರಂಥ್ಯಂ ಪೊದಟ್ದತ್ತು . . .ಅಪ್ರಮತ್ತತೆಯೊಳನ್ಯಪ್ರೀತಿಶೀಲಕ್ಕೆ ಕೇಡೊಗೆದತ್ತೆಂಬ ವಿರುದ್ಧವೃತ್ತರೆಮಗೊಳ್ಪಂ ಮಾಟ್ಕೆ ಸಾಧೂತ್ತಮರ್ (ಪುಷ್ಪಪು. ೧-೫). [ಸಂ.]

**ವಿರುದ್ಧಸಮಾಸ** (ನಾ). [ವ್ಯಾಕ] ಕನ್ನಡ ಮತ್ತು ಸಂಸ್ಕೃತಪದಗಳು ಸೇರಿ ಆಗುವ ಸಮಾಸ ; ಅರಿಸಮಾಸ : ಪದವಿಧಿ ಕನ್ನಡಕಂ ಸಕ್ಕದಕ್ಕಮಿಲ್ಲಾದ್ಯರಿಂದೆ ಸಂದುವನಱಿದಿರ್ಪುದು ಬಿರುದಾವಳಿಯೊಳ್ ಪೇಟ್ವುದು ಪೆಱವಱೊಳಾಗದಿದು ವಿರುದ್ಧಸಮಾಸಂ (ಶಮದ. ೧೭೪). [ಸಂ.]

**ವಿರುದ್ಧಾತ್ಮಕ** (ಗು).೧. ವಿರೋಧದಿಂದ ಕೂಡಿದ ; ಪ್ರತಿಕೂಲವಾದ. (ನಾ). ೨. ಅರ್ಥಾಂತರನ್ಯಾಸದ ಎಂಟುಭೇದಗಳಲ್ಲಿ ಒಂದು : ಸಕಲವ್ಯಾಪಿವಿಶೇಷ ಪ್ರಕಾಶಕಂ ಯುಕ್ತಕಾರಿ ಯುಕ್ತಾಯುಕ್ತಂ ಪ್ರಕಟಶ್ಲೇಷವಿರುದ್ಧಾತ್ಮಕಂ ವಿರುದ್ಧಂ ವಿಪರ್ಯಯಂ ಯುಕ್ತಾರ್ಥಂ (ಕವಿರಾ. ೩-೨೯). [ಸಂ.]

**ವಿರುದ್ಧಾಭಾಸ** (ನಾ). [ಕಾವ್ಯಮಿ] ಶ್ಲೇಷಾಲಂಕಾರದ ಒಂದು ಪ್ರಭೇದ; ವಿರೋಧವನ್ನು ಸೂಚಿಸುವ ಅಥವಾ ವಿರುದ್ಧಾರ್ಥಗಳಂತೆ ಕಂಡುಬರುವ ಪದಗಳ ಸಮೂಹ : ಅವಯವಮುಖದಿಂ ಸಮುದಾಯವಿಶೇಷಣಮನ್ಯವಸ್ತುಗಮಕಮದಾ

ದಂದವಯವಮವಿರುದ್ಧಂ ನೋಡೆ ವಿರುದ್ಧಸ್ಥಿತಿಯೊಳಿರೆ ವಿರುದ್ಧಾಭಾಸಂ (ಕಾವ್ಯಾವ. ೭೫೯). 'ವಿರೋಧಾಭಾಸ' ಪರಾ. [ಸಂ.]

**ವಿರುದ್ಧಾರ್ಥ** (ನಾ). ೧. ವಿರೋಧವನ್ನು ಸೂಚಿಸುವ ಅರ್ಥ ; ವಿಪರೀತಾರ್ಥ. ೨. [ಕಾವ್ಯಮಿ] ಕಾವ್ಯದ ದೋಷಗಳಲ್ಲಿ ಒಂದು ; ಒಂದು ವಾಕ್ಯದಲ್ಲಿ ಉಕ್ತವಾದ ಪೂರ್ವಾರ್ಧದ ಅರ್ಥಕ್ಕೂ ಉತ್ತರಾರ್ಧದ ಅರ್ಥಕ್ಕೂ ಕಂಡುಬರುವ ವಿರೋಧ : ಪರಿಗೀತಾರ್ಥಂ ಪೂರ್ವಾಪರದೊಳ್ ಬಗೆವಾಗಳೆಂದುಮೊಂದಣೊಳೊಂದುಂ ದೊರೆಕೊಂಡೊಂದದೊಡದು ದುಷ್ಕರಮೆ ವಿರುದ್ಧಾರ್ಥಮೆಂಬುದಾದಂ ದೋಷಂ (ಕವಿರಾ. ೧-೮೧); ದುಸ್ಸಂಧಿಯನಿಬದ್ಧಂ ವಿರುದ್ಧಾರ್ಥ ನೀರಸಂ ಶೈಥಿಲ್ಯವರ್ಣಂ ಕಾರಕವಿರಹಿತಂ ಕ್ರಿಯಾಳಂಕಾರಹೀನವೆನಿಪ್ಪ ಪೊಳ್ಳಂ ತೂಱಿ ಕಳೆದು (ಬಸಪು. ೧-೧೮). [ಸಂ.]

**ವಿರುದ್ಧಾರ್ಥಕ** (ನಾ). ಪ್ರತಿಕೂಲಕರವಾದ ಪ್ರತಿಕ್ರಿಯೆಗಳನ್ನು ಉಂಟುಮಾಡುವಂಥದು : ಕಳಶಜನುದಯದೊಳೊದವಿದ ಜಳಾಶಯಂ ತಿಳಿದುವೊಡನೆ ಕದಡಿದುವವನೀತಳಪತಿಯ ಪಡೆಯೊಳರಿನೃಪಜಳಾಶಯಂ ಶರದಮೇಂ ವಿರುದ್ಧಾರ್ಥಕಮೋ (ಶಾಂತಿಪು. ೧೧-೧೩೯). [ಸಂ.]

**ವಿರುಪ** (ನಾ). ಶಿವ ; ವಿರೂಪಾಕ್ಷ : ಹಂಪೆಯ ವಿರುಪಂ ತಾನೊಪ್ಪಿರ್ದಂ (ತಿರುನಾ. ದೇ. ೨೩೧-೨). [IP ಇದು 'ವಿರೂಪಾಕ್ಷ'ಎಂಬುದರ ಸಂಕ್ಷಿಪ್ತರೂಪ]

**ವಿರುಪಲಸು** (ನಾ). ಒಂದು ಬಗೆಯ ಹಲಸು : "ಝಿಂಡಕಃ- ಹೆಮ್ಮರ, ವಿರುಪಲಸು" (ಒಷಧಿ. ೬೪). [? + ಪಲಸು]

**ವಿರುಪಾಕ್ಷ** (ನಾ). ಶಿವ ; ವಿರೂಪಾಕ್ಷ : ಶ್ರೀ ವಿರುಪಾಕ್ಷ (ಎಕ. III (R), ನಂಜನ. ೧೧೧-೪೪;1490). [< ಸಂ. ವಿರೂಪಾಕ್ಷ]

**ವಿರುವತ್ತು** (ಗು). ಶಬ್ದಮಾಡುವ ; ಕೂಗುವ : ವಿರುವದ್ಭೃಂಗಸಂಗೀತಿ ಚೆಲ್ವಂ ನೀಡಿತ್ತು (ಆದಿಪು. ೭-೨೫); ವಿರುವತ್ಸಾರಸರಾಜಹಂಸರವದಿಂದೇವಂದಿರೇ ಬನ್ನಿಮಿಂತಿರಿವೆಂದಾದರಿಪಂತುಟಾಯ್ತು ಪವನೋದ್ಧೂತೋತ್ತರಂಗಾಂಬುವಿಂ (ಗದಾಯು. ೭-೪೦). [ಸಂ. ವಿರುವತ್]

**ವಿರೂಕ್ಷ** (ಗು). ಅಸಹ್ಯಕರವಾದ ; ಇಷ್ಟವಾಗದ : ಮತ್ತಮಾ ನಾರಕರೆಲ್ಲಂ ಹುಂಡವಮುಂಡಸಂಸ್ಥಾನರುಮತಿವಿರೂಕ್ಷಕೃಷ್ಣವರ್ಣರುಮತಿದುರ್ಗಂಧರುಂ (ಸುಕುಮಾ. ೧೧-೪೮ ವ). [ಸಂ.]

**ವಿರೂಕ್ಷಣ** (ಗು). ೧. ಉಗ್ರವಾದ ; ಭೀಷಣವಾದ : ವಿತತಸಮರಭುಜಪ್ರತಾಪೋನ್ನತ ಸದಾಗತಿಸಖನ ಝಳವಡಗಿತೆ ವಿರೂಕ್ಷಣತೀಕ್ಷ್ಣತೇಜಸ್ಫೂರ್ತಿ ಮುದ್ರಿಸಿತೆ (ತೊರರಾ.೭-೫೧-೭೯). (ನಾ). ೨. ಕಠಿಣಗೊಳಿಸುವಿಕೆ; ಕರ್ಕಶವಾಗುವಂತೆ ಮಾಡುವಿಕೆ. ೩. ದೂರು ; ನಿಂದೆ ; ಶಾಪ ; ಬಯ್ಗುಳು : "ಶಾಪಮಾಕ್ರೋಶಂ ವಿರೂಕ್ಷಣಂ ಕ್ಷಾರಣಾಕ್ಷೇಪಮೆನೆ ಬೈಗುಳೆನಿಸಿಕ್ಕು" (ಮಂಗರಾ. ೨೭-೫). [ಸಂ.]

**ವಿರೂಕ್ಷಿಸು** (ಕ್ರಿ). ತಿರಸ್ಕಾರಭಾವವನ್ನು ತಾಳು ; ಹೇವರಿಸು : ಬಗೆ ಮೃಗರಾಜಶಬ್ದದನಿತರ್ಕೆ ವಿರೂಕ್ಷಿಸಿದಂದಮೋ . . . ಪೇಟಿಮೆಂಬ ಶಂಕೆಗೆ ನೆಲೆಯಾದುದಂಬರಚರೇಶ್ವರನಿರ್ದ ಮೃಗೇಂದ್ರವಿಷ್ಟರಂ (ಶಾಂತಿಪು. ೩-೪೧) ; ಪುರಮಂ ಪುರಗೋಪುರಮಂ ಬಹಿಃಪುರೋದ್ಯಾನಮನೀಕ್ಷಿಸಲ್ ಬಗೆ ವಿರೂಕ್ಷಿಸೆ ಕನ್ನಡಿಸಲ್ಕೆ ಸಾಲ್ದಳಬ್ಜಾನನೆ ದುಃಖಿತೇಮನಸಿ ಸರ್ವಮಸಹ್ಯಮೆನಿಪ್ಪ ವಾಕ್ಯಮಂ (ಪಂರಾಮಾ. ೯-೧೯೪).

[ವಿರೂಕ್ಷಣ + – ಇಸು]

**ವಿರೂಪ** (ಗು). ೧. ಕೆಟ್ಟ ಆಕಾರವುಳ್ಳ ; ವಿಕಾರರೂಪವುಳ್ಳ. ೨. ಸ್ವಾಭಾವಿಕವಲ್ಲದ ; ಅಸ್ವಾಭಾವಿಕವಾದ ; ಅಸಂಗತವಾದ : ಹಲವರಲ್ಲಿ ಕಂಡುಬರುವ ವಿರೂಪವರ್ತನೆಗೆ ಅವರನ್ನು ಅವಿಧೇಯರೆಂದು ಶಿಕ್ಷಿಸಲು ಯತ್ನಿಸುವುದು ವಿವೇಕವಲ್ಲ (ಶಿಕ್ಷದ. ೧೮೦). (ನಾ). ೩. ಕೆಟ್ಟಆಕಾರ ; ಕುರೂಪ ; ವಿಕಾರವಾದ ರೂಪ. ೪. ವಿವಿಧರೂಪಗಳನ್ನು ಹೊಂದಿರುವಿಕೆ ; ಬಹುರೂಪತೆ. [ಸಂ.]

**ವಿರೂಪತೆ** (ನಾ). ಆಕಾರವಿಲ್ಲದಿರುವುದು ; ರೂಪರಾಹಿತ್ಯ : ಶ್ಯಾಮತೆಯಿಂ ವಿರೂಪತೆಯನಾರಯೆ ನಿನ್ನ ಸಖಂ ಮನೋಜನಂತಾ ಮದನಂಗಮಾದುದು ವಸಂತನ ಪೊರ್ದುಗೆಯಿಂದಮುತ್ಸವೋದ್ದಾಮತೆ (ಚಂದ್ರಪು. ೭-೭೮). [ಸಂ. ವಿರೂಪತಾ]

**ವಿರೂಪಸಂಧಿ** (ನಾ). [ವ್ಯಾಕ] ಸಂಧಿದೋಷಗಳಲ್ಲಿ ಒಂದು ; ಅಶ್ಲೀಲತೆಗೆ ಎಡೆಮಾಡುವಂತೆ ಶಬ್ದಗಳು ಸಂಧಿಯಾಗುವಿಕೆ : ವಿರೂಪಸಂಧಿಗೆ : ಪಸುರಂ ಬಿಡದೆಸಪ ಮಳೀಮಸರ್ಗಂದುದಿತೋಡುರಾಜನಂ ನಯದಿಂ ಕಲ್ಪಿಸಿ ಜಲಧಿ ನುಡಿವ ಮಾಟ್ಕೆಯಿನಸೆದತ್ತುಲ್ಲೋಲಬಹುಲಕಲ್ಲೋಲರವಂ (ಕಾವ್ಯಾವ. ೪೪೧). [ಸಂ.]

**ವಿರೂಪಾಕ್ಷ** (ನಾ). ವಿಷಮವಾದ ಕಣ್ಣುಗಳುಳ್ಳವನು ; ಮೂರುಕಣ್ಣುಗಳುಳ್ಳವನು ; ಶಿವ : ನಡೆತಂದೆನ್ನಯ ಕಣ್ಗಳಲ್ಲಿರು ವಿರೂಪಾಕ್ಷಾ ವಿರೂಪಾಕ್ಷ (ಪಂಪಾಶ. ೭) ; ಅಮಮ ಹಂಪೆಯ ವಿರೂಪಾಕ್ಷನಿಂತೊಪ್ಪಿದಂ (ಕನ್ನರ. ದೇ. ೧೫೧-೪). [ಸಂ.]

**ವಿರೂಪೆ** (ನಾ). ಕೆಟ್ಟರೂಪವುಳ್ಳವಳು ; ಕುರೂಪಿ : ಆತನ ದಾದಿ ವಿನಯಮತಿಯೆಂಬೊಳ್ ಗುಜ್ಜೆ ವಿರಳದಂತೆ ಆದಮಾನುಂ ವಿರೂಪೆ (ವಡ್ಡಾರಾ. ೧೦೭-೨೨).

[ಸಂ. ವಿರೂಪಾ]

**ವಿರೇಕ** (ನಾ). ೧. ಭೇದಿ ; ವಿರೇಚನ : ತಿಗಡೆ ಶುಂಠಿ ಶಿವೆ ಬೆಲ್ಲಮೆಂಬ ಮರ್ದುಗಳನಕ್ಕೆ ಪುರಿದಿರ್ದ ಕಟ್ಟವತ್ತಿಗೆಯ ಬಿತ್ತುಗಳನಕ್ಕೆ ತಿಂಗೆ ಮಾಡುಗುಮದಾರ್ಗಮಧಿಕಂ ವಿರೇಕಮಂ (ಲೋಕೋಪ. ೯-೩೫) ; ಕಕ್ಕೆ : — ಈ ಕುಡಿಯಂ ನಿಂಬೇಹುಳಿಯಲ್ಲಿ ಅರೆದು ಮೂರುಗುಳಿಗೆ ಗಜ್ಜುಗದ ಗಾತ್ರ ಮಾಡಿ ತೆಗೆದುಕೊಳ್ಳೆ ವಿರೇಕಮಕ್ಕುಂ (ವಿಷ್ವವಿ. ೩). ೨. ಭೇದಿಯಾಗುವಂತೆ ಮಾಡುವ ಔಷಧ ; ವಿರೇಚಕ. [ಸಂ.]

**ವಿರೇಕಿಸು** (ಕ್ರಿ). ಭೇದಿಯಾಗು ; ವಿರೇಚನವಾಗು : ಬಿರಿಸಾದ ಕೋಷ್ಠಕ್ಕೆರಡು ಗುಳಿಗೆಯ ತುಪ್ಪವೆರಸೀಯಲು . . . ವಿರೇಕಿಪುದು (ಸಾಳ್ವಸಾಂ. ೫).

[ವಿರೇಕ + – ಇಸು]

**ವಿರೇಚಕ** (ಗು) ೧. ಭೇದಿಯಾಗುವಂತೆ ಮಾಡುವ ; ಭೇದಿ ಮಾಡಿಸುವ : ಏರಂಡಕ್ಕೆ ವಿರೇಚಕಗುಣವಿದೆ (ಶಾಸಗಿ. ೨೧). (ನಾ). ೨. ವಿರೇಕ ; ಭೇದಿ : ಭಗವಂತನಿಗೆ ವಿರೇಚಕವಾಗುವಂಥ ಔಷಧವನ್ನು ಕೊಡಬೇಕೆಂದು ಜೀವಕನು ಕಂಡನು (ಹತ್ತುಮ. ೧೧೮). ೩. ಭೇದಿಯಾಗುವಂತೆ ಮಾಡುವ ಔಷಧ : ಚಿಗುರು ವಿರೇಚಕ. ತೊಗಟೆ ಬಾಯಿಹುಣ್ಣು, ಆಮಶಂಕೆ, ಮೇಹರೋಗಗಳಿಗೆ ಔಷಧ (ಕವಿಕೋ. I, ೪೬೬) ; ಜಾಪಾಳ . . . ಅತಿಶಕ್ತಿಯುತವಾದ ವಿರೇಚಕ (ಹಸುಹೂ. ೩೫೨). ೪. (ಆಲಂ) ಅಂತರಂಗದ ಕೊಳೆಯನ್ನು ಹೊರದೂಡುವ ಔಷಧ, — ಮದ್ದು : ಚಿಂತೆ ಸಂತಾಪಗಳು ಮನಸಿಗೆ ವಿರೇಚಕವೂ ಸಂತಸೋತ್ಸಾಹಗಳೆ ಪಥ್ಯದುಪಚಾರ ಇಂತುಮಂತುಂ ನಡೆಯುತಿರುವುದಾತ್ಮಚಿಕಿತ್ಸೆ (ಮಂಕುಕ. ೭೪೫). [ಸಂ.]

**ವಿರೇಚನ** (ನಾ). ೧. ಭೇದಿ ; ವಿರೇಕ : ವಿರೇಚನಕ್ಕೆ ಯೋಗ್ಯರು . . . ಇವಿಷ್ಟರಲ್ಲಿ ವಿರೇಚನ ಮಾಡಿಸಬಹುದು (ಸಕಪ್ಪ. ೨೫). ೨. ಭೇದಿಯಾಗುವಂತೆ ಮಾಡುವ ಔಷಧ: ಆ ಸಮಯದಲ್ಲಿ ಭಿಕ್ಷುವೊಬ್ಬನು ವಿರೇಚನ ಕುಡಿದಿದ್ದನು (ಬುದ್ಧಪ. ೧೪೩). [ಸಂ.]

**ವಿರೇಚನೆ** (ನಾ). ೧. = ವಿರೇಚನ ೧ : ಒಂದು ಗುಳಿಗೆಯ ಕೈಎಣ್ಣೆಯಲ್ಲಿ ಮರ್ದಿಸಿ ಕೊಡಲು ವಿರೇಚನೆಯಾಗುವುದು (ವಿಷ್ವವಿ. ೩೪). ೨. [ಕಾವ್ಯಮಿ] ನಾಟಕದರ್ಶನದಿಂದಾಗುವ ಭಾವೋದ್ರೇಕವನ್ನು ಹೊರಹಾಕುವುದು, -ಬಹಿರಂಗಪಡಿಸುವುದು : ಮೊದಲು ಭಯ ಕರುಣೆಗಳ ಪ್ರಚೋದನೆ, ಅನಂತರ ಅವುಗಳ ವಿರೇಚನೆ ಮತ್ತು ಪರಿಶುದ್ಧಿ ಮತ್ತು ಕೊನೆಯಲ್ಲಿ ತತ್ಫಲವಾಗಿ ಜನಿಸುವ ಶಾಂತಿಯೇ ರುದ್ರನಾಟಕದ ಪ್ರಭಾವವೆಂಬುದು ಅರಿಸ್ಟಾಟಲನ ಅಭಿಪ್ರಾಯವೆಂದು ವಿದ್ವಾಂಸರು ತೀರ್ಮಾನಕ್ಕೆ ಬಂದಿದ್ದಾರೆ (ಅಂಕಾ. ೩೮). [ಸಂ. ವಿರೇಚನ]

**ವಿರೋಕ** (ನಾ) . ೧. ಕಾಂತಿ ; ಹೊಳಪು . ೨. ಕಿರಣ ; ರಶ್ಮಿ : "ಉಸ್ರಃ . . . ವಿರೋಕಃ, ಗೌಃ — ಈ ೩೨ ರಶ್ಮಿಗಳ ಪೆಸರ್" (ಹಲಾಯು. ೮-೩೯). [ಸಂ.]

**ವಿರೋಚನ** (ನಾ). ೧. ಹೊಳೆಯುವಿಕೆ ; ಪ್ರಕಾಶಿಸುವಿಕೆ. ೨. ಬೆಳಕು ; ಕಾಂತಿ . ೩. ಸೂರ್ಯ ; ರವಿ : ಬಾಚರಸರಂ ಕರೆಸಿ ಬರೆದಿರ್ದ ಲೆಕ್ಕವ ವಿರೋಚನಂ ಪಶ್ಚಿಮಾಂಬುಧಿಯೊಳಿಳಿವನಿತಕ್ಕೆ ನೀಂ ಚಮತ್ಕಾರದಿಂ ಕೊಡಿಸುವುದೆನಲ್ಕೆ (ಪ್ರಾಭರಾ. ೧೭ -೭). ೪. ಇಂದು ; ಚಂದ್ರ. ೩, ೪ : ತನ್ನ ಕಂಡ ಶುಭಸ್ವಪ್ನಂಗಳನಱಿಪೆ ತನ್ನಹೀವಲ್ಲಭನಿಂತೆಂದಂ ಸಾಮಜದಿಂದಂ ದಾನಿಯನಾ . . . ಮಹಿತವಿರೋಚನರ್ಕಳಿಂ ನುತಸುತನಂ ಎನೆ (ನೇಮಿಪು. ೧-೧೩೪). ೫. ಬೆಂಕಿ ; ಅಗ್ನಿ : " ವಹ್ನಿ ಶಿಖಿ ವಿಭಾವಸು . . . ಅನಲಂ ಧೂಮಕೇತನಂ ಶುಚಿ ವಿರೋಚನನೆನಿಕ್ಕುಂ" (ಮಂಗರಾ. ೧೪-೭).

೬. ಪ್ರಹ್ಲಾದನ ಮಗ ; ಬಲಿಯೆಂಬ ರಾಕ್ಷಸಚಕ್ರವರ್ತಿಯ ತಂದೆ. ೭. ಒಂದು ಬಗೆಯ ಮರ : "ಕುಟನ್ನಟಂ — ವಿರೋಚನ, ಹೆಮ್ಮರ" (ಓಷಧಿ. ೩೭). [ಸಂ.]

**ವಿರೋಚನಲೋಚನ** (ನಾ). ಅಗ್ನಿಯನ್ನು ಕಣ್ಣಾಗಿ ಉಳ್ಳವನು ; ಶಿವ : ರಜತಾದ್ರಿಮಂದಿರ ವಿರೋಚನಲೋಚನ . . . ಪಿನಾಕಸುಪಾಣಿ ಮಹೇಶ ಪಾಲಿಸಾ (ಹಮ್ಮಿರ. ೧-೨). [ಸಂ.]

**ವಿರೋಚನಸುತ** (ನಾ). ೧. ಸೂರ್ಯನ ಮಗ ; ಯಮ : ವಿರೋಚನಸುತಹರ . . . ವಿಷಧರ ಪಾಹಿಮಾಂ (ಪ್ರೌಢರಾ. ೨೧-೪೧). ೨. ವಿರೋಚನನೆಂಬ ರಾಕ್ಷಸನ ಮಗ ; ಬಲಿಚಕ್ರವರ್ತಿ. [ಸಂ.]

**ವಿರೋಧ** (ನಾ). ೧. ತಡೆ ; ಅಡ್ಡಿ ; ನಿರ್ಬಂಧ : ತಾನೆಸೆವ ವೈಕುಂಠಮಂ ಜಲಂಧರನಿಱಿವುತೀ ನಾಗಪಾಶದಿಂ ಬಿಗಿದೆನ್ನನಿಡಲಾಗಿ ನಾನಾವಿರೋಧದಿಂದಂಬರದೊಳಿರ್ದೀಗ ಬಿರ್ದನವಧರಿಸೆಂದನು (ಪೀಶ್ವಪು. ೨-೧೩-೪). ೨. ಪ್ರತಿಯಾದುದು ; ವಿರುದ್ಧವಾದುದು. ೩. ಹಗೆತನ ; ವೈರ ; ವೈಮನಸ್ಯ : ಮಹಾವಿಷ್ಣುವಿನಲ್ಲಿ ವಿರೋಧ ಮಾಡಿಕೊಂಡರೆ ನಾವು ನಾಶವಾಗುತ್ತೇವೆ (ನೀತಿಚಿಂ. I, ೭). ೧, ೩ : ವಿರೋಧಂ ಪಂಜರದೊಳ್ ಗಳಿತದಾನತ ಕುಂಜರದೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಚಂದ್ರಪು. ೩-೯ ವ). ೪. [ಕಾವ್ಯಮೀ] ಅತಿಶಯಾಲಂಕಾರದ ಒಂದು ಪ್ರಭೇದ ; ಒಂದರಲ್ಲಿ ಒಂದು ಹೊಂದದ ವಿರುದ್ಧ ಪದಾರ್ಥಗಳನ್ನು ಒಂದುಗೂಡಿಸುವ ಮೂಲಕ ಅವುಗಳ ವೈಶಿಷ್ಟ್ಯವನ್ನು ಸ್ಪಷ್ಟವಾಗಿ ತಿಳಿಸುವ ಒಂದು ಅಲಂಕಾರ : ಒಂದೊಂದಱೊಳೊಂದದುವಂ ತಂದೊರ್ಬುಳಿಮಾಡಿ ತದ್ವಿಶೇಷಾಂತರಮಂ ಸಂದೇಹಮಿಲ್ಲದಱಿಪುವುದೊಂದೆ ವಿರೋಧಾಭಿಧಾನಮದುಮಿಂತಕ್ಕುಂ (ಕವಿರಾ. ೩-೧೩೪) ; ಅನ್ಯೋನ್ಯ ವಿರುದ್ಧಪದಾರ್ಥನ್ಯಾಸಮೆ ತಾಂವಿರೋಧಂ (ಕಾವ್ಯಾವ. ೭೭೭). [ಸಂ.]

**ವಿರೋಧನ** (ನಾ) . ೧. ತಡೆಯನ್ನೊಡ್ಡುವಿಕೆ ; ಪ್ರತಿಬಂಧಿಸುವಿಕೆ. ೨. ಅಡ್ಡಿ ; ಪ್ರತಿಭಟನೆ ; ತಡೆ. ೩. ವೈರ ; ಹಗೆತನ. [ಸಂ.]

**ವಿರೋಧಪಕ್ಷ** (ನಾ) . ೧. ಶತ್ರುಪಕ್ಷ ; ವೈರಿವರ್ಗ. ೨. ವಿಧಾನಸಭೆ, ಚುನಾವಣೆ, ಚರ್ಚಾಕೂಟ ಮೊದಲಾದುವುಗಳಲ್ಲಿ ಇರುವ ಪ್ರತಿಪಕ್ಷ ; ಒಂದು ಪಕ್ಷದವರು ಹೇಳಿದ ಅಭಿಪ್ರಾಯವನ್ನು ಖಂಡಿಸುವ ಮತ್ತೊಂದು ಪಕ್ಷ : ವಿರೋಧಪಕ್ಷದವರು ಬಹಳ ಬಿರುಸಾಗಿ ಚರ್ಚಿಸಿದರು (ರೂಢಿ). [ಸಂ.]

**ವಿರೋಧಸ್ಖಲಿತ** (ನಾ). ದ್ವೇಷದಲ್ಲಿ ಸಿಲುಕಿದವನು : ಎಲೆ ಸುನೀತ ವೃಥಾ ವಿರೋಧಸ್ಖಲಿತನಾದೆ ಮುರಾರಿ ಮಾನ್ಯರ ತಿಲಕನೀತನ ಪೂಜೆ ಯಾಗಕೆ ಕಳಸವಾಯ್ತೆಂದ (ಕುವ್ಯಾಸ. ೮-೪೧). [ಸಂ.]

**ವಿರೋಧಾಭಾಸ** (ನಾ). = ವಿರುದ್ಧಾಭಾಸ : ವಿರೋಧಾಭಾಸ. ವಿರೋಧವು ವಸ್ತುತಃ ಇಲ್ಲದೆ, ಇರುವಂತೆ ಮಾತ್ರ ತೋರಿದರೆ, ವಿರೋಧಾಭಾಸಾಲಂಕಾರವಾಗುವುದು . . . ಲಕ್ಷ್ಯ : ಕನಕನಗೇಂದ್ರಧರ್ಮಕರನಾಗಿಯುಮುನ್ನತಧರ್ಮಹಂತ್ರಸಂಜನಿತಪರಾರ್ಥನಾಗಿಯುಮುದಗ್ರಪರಾರ್ಥಹರಂ ಪ್ರದತ್ತಕಾಮನುಮೆನಿಸಿರ್ದು ಕಾಮಮಥನಂ ಪರಮೋಕ್ಷದನಾಗಿಯುಂ ಸನಾತನಪರಮೋಕ್ಷಲುಬ್ಧನೆನಿಸಿರ್ದನಹೀಂದ್ರಭೂಷಣಂ (ಕೃಪಿಡಿ. ೨೯೧) ; ಅಲ್ಲಿ ತೋರುವ ವಿರೋಧಾಭಾಸವನ್ನು ಸಮನ್ವಯವಾಗುವಂತೆ ಬಿಡಿಸಿ ಹೇಳಬೇಕಾಗುತ್ತದೆ (ಕರ್ಣಾಅ. ೧೧೯). [ಸಂ.]

**ವಿರೋಧಿ** (ಗು). ೧. ಪ್ರತಿಭಟಿಸುವ : ವಿನುತವಿರೋಧಿಮಂಡಳಿಕಮೌಳಿವಿಘಟ್ಟಿತ ಪಾದಪೀಠಕಾಂಚನಕಮಳಾಯಮಾನಮಿವು ನಿಮ್ಮಯ ಮೆಲ್ಲಡಿ (ಗದಾಯು. ೪-೧೮). (ನಾ). ೨. ಶತ್ರು ; ಹಗೆ ; ವೈರಿ : ತಾಱವಱಾಗೆ ಜಯಂ ಜೊಮ್ಮೆೞುವ ಟೆಂಟಣಿಸು ವರಸನರಸನೆ ವಿರಸಂಬೇಱಿ ನಯಮಿರೆ ವಿರೋಧಿಗೆ ಮಾಱಾಂಪೊಂ ತನ್ನ ಮೇಲೆ ತಾಂ ಮರಗಡಿಪೊಂ (ಶಾಂತಿಪು. ೨೪೧). ೩. ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತಮೂರನೆಯದು : ಮತ್ತಮಾ ವರ್ಷವೇ ಪ್ರಭವ ವಿಭವ . . . ವಿರೋಧಿ ವಿಕೃತಿ ಖರ ನಂದನ . . . ಕ್ರೋಧನ ಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೨೬೩). [ಸಂ. ವಿರೋಧಿನ್]

**ವಿರೋಧಿಕೃತು** (ನಾ). ಅರುವತ್ತು ಸಂವತ್ಸರಗಳಲ್ಲಿ ನಲವತ್ತೈದನೆಯದು : ಮತ್ತಮಾ ವರ್ಷವೇ ಪ್ರಭವ ವಿಭವ . . . ಸಾಧಾರಣ ವಿರೋಧಿಕೃತು . . . ಕ್ರೋಧನ ಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೨೬೩). [ಸಂ. ವಿರೋಧಿಕೃತ್]

**ವಿರೋಧಿಷಡ್ವರ್ಗ** (ನಾ). ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯಗಳೆಂಬ ಅಂತರಂಗದ ಆರು ಶತ್ರುವರ್ಗ ; ಅರಿಷಡ್ವರ್ಗ : ವಿರೋಧಿಷಡ್ವರ್ಗದ ವಿಕಾರವ್ಯಾಧಿಯಲಿ ಬೆಂಡಾಗಿ ಭವಪಾಶದಲಿ ಬಿಗಿವಡೆದು ಪಾದರಚನೆಯ ಬಲೆಗೆ ಸಿಲುಕಿ ವಿರೋಧಗೊಂಬೀ ಮೋಹವಿದ್ಯಾಸಾಧಕರು ನೀವ್ ಪಶುಗಳು (ಕುವ್ಯಾಕ. ೬-೨೯). [ಸಂ.]

**ವಿರೋಧಿಸು** (ಕ್ರಿ). ೧. ಅಡ್ಡಿಮಾಡು ; ಪ್ರತಿಭಟಿಸು ; ತಡೆಗಟ್ಟು : ಆಕೆಯ ಇಷ್ಟವನ್ನು ವಿರೋಧಿಸುವುದು ಶ್ರೀಧರನಿಗೆ ಆಗದ ಮಾತು (ವಾತ್ಸಲ್ಯ. ೩೦) ; ಅವರ ಈ ವರ್ತನೆಯನ್ನು ಅಪ್ಪಾಜಿಯವರು ವಿರೋಧಿಸಿದ್ದರು (ಚಂಗಾಳ್ಯ. ೨೮). ೨. ದ್ವೇಷಿಸು ; ವೈರಭಾವವನ್ನು ತಾಳು ; ಹಗೆತನವನ್ನು ಮಾಡು : ಆರಾಧನೆಯ ಮಾಡಿದಡೆ ಅಮೃತದ ಬೆಳಸು ವಿರೋಧಿಸಿದಡೆ ವಿಷದ ಬೆಳಸು (ಬಸವ. ೪೨೧) ; ಕಾಲಗೆ ಕರುಣವಿಲ್ಲ ವೃಥಾ ವಿರೋಧಿಸಿ ಸಾಯಬೇಡೆಂದ (ತೊರರಾ. ೩-೬-೫೨) ; ನಿಮ್ಮೆವರೊಳ್ ತಾ ತಳ್ತಿರದೆ ವಿರೋಧಿಸಿದನೆಮ್ಮಯ್ಯನಂ ತಾತನಪರಾಧಮಂ ಪರಿಹರಿಸದಿರ್ದೊಡಾನಿರ್ದು ಫಲವೇನು (ಜೈಮಿಭಾ. ೨-೩೯). [ವಿರೋಧ + – ಇಸು]

**ವಿರೋಧೋಪಮಿತ** (ನಾ). [ಕಾವ್ಯಮೀ] ಉಪಮಾಲಂಕಾರದ ಒಂದು ಪ್ರಭೇದ ; ಪರಸ್ಪರವಿರೋಧಗುಣಗಳನ್ನುಳ್ಳವನ್ನು ಹೋಲಿಸುವುದು ; ವಿರುದ್ಧಕರವಾದ ಹೋಲಿಕೆ : ಶರದುದಿತ ಶಿಶಿರಕರನುಂ ಸರಸಿರುಹಮುಮಿ ತ್ವದೀಯವದನಮುಮಿನಿತುಂ ದೊರೆಕೊಳಿಸುವೊಡೆ ಪರಸ್ಪರವಿರೋಧಿಗಳ್ ನಿರುತಮನ ವಿರೋಧೋಪಮಿತಂ (ಕವಿರಾ. ೩-೭೫). [ಸಂ.]

**ವಿರ್ತಿ** 'ವೃತ್ತಿ' ನೋ.

**ವಿಲ್** 'ಬಿಲ್$_2$' ನೋ.

**ವಿಲಂಘನ** (ನಾ). ಹಾರುವಿಕೆ ; ನೆಗೆತ ; ಜಿಗಿತ : ಬವರಿ ಮತ್ತೋದ್ಗತಿವಿಲಂಘನ ವಿವಳಿತಾಂಗವರಾಹಮತಸಂಪ್ಲವನಪಾರಿಷ್ಕವಗದಾಪರಿರಂಭವಿಕ್ಷೇಪ . . . ಎಂಬೀ ವಿವರದಲಿ ಕಾದಿದರು ಕೌತುಕವೆನಲು ಸುರನಿಕರ (ಕುವ್ಯಾಗ. ೬-೨೫). [ಸಂ.]

**ವಿಲಂಘಿಸು** (ಕ್ರಿ). ೧. ಹಾರು ; ನೆಗೆ ; ಜಿಗಿ : ಪಡಿನೆಳಲಂ ಮೃಗೇಂದ್ರನುಱೆ ಚಂದ್ರ ಶಿಲಾತಳದಲ್ಲಿ ಕಂಡು . . . ವಿಲಂಘಿಸಿ ಪಾಯ್ದು ಪೊಯ್ದು ತಾಂ ಮಡಿದುದು (ರಾಜಶೇ. ೫-೭೭). ೨. ಮೀರು ; ಉಲ್ಲಂಘಿಸು ; ಅತಿಕ್ರಮಿಸು : ಜಿನಾಧಿಪನಾಜ್ಞೆಯಂ ವಿಲಂಘಿಸಿ[ಪಾಠಾಂ. ಜಿನೇಶ್ವರನಾಜ್ಞೆ ಮೀಱೆ ಲಂಘಿಸಿ]ದೊಡಮಿಾಗಳುಂ ಜಗಮೆ ದಂಡಿಸುತಿರ್ದಪುದೆಂದೊಡೆ (ಸಮಪ. ೧-೪೩) ; ಎನ್ನಾಜ್ಞೆಯಂ ವಿಲಂಘಿಸಿ ನಡೆದು ತಿರುವತ್ತಿಯೂರಿನೊಳು ತಲೆವಾಗಿ ಬಂದನು (ಸೌಂದಪು. ೧೫-೧೬). [ವಿಲಂಘನ + – ಇಸು]

**ವಿಲಂಬ, ವಿಳಂಬ** (ನಾ). ೧. ಜೋಲುವುದು ; ನೇತಾಡುವುದು . ೨. ತಡ ; ಸಾವಕಾಶ ; ನಿಧಾನ : 'ವಿಲಂಬಿಸು' ಪರಾ. ೩. [ಸಂಗೀತ] ದ್ರುತ, ಮಧ್ಯ ಮತ್ತು ವಿಲಂಬ ಎಂಬ ಮೂರುವಿಧವಾದ ಲಯಭೇದಗಳಲ್ಲಿ ಒಂದು ; ಸಾವಕಾಶಗತಿಯಿಂದ ಕೂಡಿದ ಲಯ : ಬುದ್ಧಿವಂತರಾದ ಕೆಲವರು ಗೀತವನ್ನು ವಿಲಂಬವೂ ದ್ರುತವೂ ಅಲ್ಲದ ಮಧ್ಯಕಾಲದಲ್ಲಿ ನಡೆಯಿಸಬೇಕೆನ್ನು ವರು (ಗಾನಕ. ೭೬). **ವಿಳಂಬ** : ೨. ಪತಿಸೇವೆಯೊಳಂತು ಪಸಿದ ಪಾರ್ವನ ಮಱೆದತಿವಿಳಂಬವನಾಚರಿಸೆ . . . ಖತಿಗೊಂಡು ಮುನಿ ಗಳಪಿದನು (ಹದಿಬ. ೨-೩೯). ೩. ಲಯದಲ್ಲಿ ದ್ರುತ (ಹೆಚ್ಚಿನ ವೇಗ) ಮಧ್ಯ (ಹೆಚ್ಚೂ ಅಲ್ಲದ, ನಿಧಾನವೂ ಅಲ್ಲದ) ಮತ್ತು ವಿಳಂಬ (ನಿಧಾನ) ಎಂದು ಮೂರು ವಿಧ (ಸಂಗೀಚಂ. ೫೭). ೪. ಆಶ್ರಯ ; ಅವಲಂಬನ : ಧವಳಚ್ಛತ್ರದ ತಣ್ಪು ಭೂಮಿಗಮರ್ದಿರ್ಪನ್ನಿರ್ಪಿನಂ ಕ್ಷತ್ರಧರ್ಮಕ್ಕೆ ವಿಳಂಬಂ ಪೊಗಳ್ವಂಗಳುಂಬ ಮೆನಿಸಿತ್ತಾ ವಿಷ್ಣುಭೂಪಾಳನೊಳ್ (ಎಕ. VI (R), ಹಾಸನ. ೧೬೭-೧೮ ; 1122). [ಸಂ.]

**ವಿಲಂಬನ** (ನಾ). ಹೊಯ್ದಾಟ : ಈ ಕುಲವೃದ್ಧಮಂತ್ರಿಯ ಮತಂ ನೃಪನೀತಿಯೊಳೊಂದಿ ನಿಂದುದವ್ಯಾಕುಲಮಿಾ ಕುಮಾರನ ಮತಂ ಚಲಮಂ ಪುದಿದಿರ್ದುದಿಂತಿವೇಕ್ಕೆಕವಿರುದ್ಧ ಮೆಂದುಭಯಪಕ್ಷವಿಲಂಬನದಿಂ ವಿಲೋಲದೋಲಾಕುಲವೃತ್ತಿಯಾದುದಪರಾಜಿತ ರಾಜವಿರಾಜಮಾನಸಂ (ಶಾಂತಿಪು. ೨-೭೩). [ಸಂ.]

**ವಿಲಂಬಿ, ವಿಳಂಬಿ** (ಗು). ೧. ನೇತಾಡುವ ; ಜೋತುಬಿದ್ದಿರುವ. (ನಾ). ೨. ಅರುವತ್ತು ಸಂವತ್ಸರಗಳಲ್ಲಿ ಮೂವತ್ತೆರಡನೆಯದು. **ವಿಳಂಬಿ** :

೨. ಮತ್ತಮಾ ವರ್ಷವೇ ಪ್ರಭವ ವಿಭವ . . . ಹೇವಿಳಂಬಿ ವಿಳಂಬಿ ವಿಕಾರಿ . . . ಕ್ರೋಧನ ಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೨೬೩). [ಸಂ. ವಿಲಂಬಿನ್]

**ವಿಲಂಬಿತ,** ವಿಳಂಬಿತ (ಗು). ೧. ನೇತುಬಿದ್ದ ; ಜೋಲಾಡುವ. ೨. ಮಂದವಾದ ; ನಿಧಾನಗತಿಯ ; ಸಾವಕಾಶವಾದ : 'ದ್ರುತವಿಲಂಬಿತ' ಪರಾ. ೩. ಅವಲಂಬಿತವಾದ ; ಆಶ್ರಿತವಾದ. (ನಾ). ೪. ಸಾವಕಾಶ ; ತಡ ; ನಿಧಾನ : ವರ್ಣಗಳ ಉಚ್ಚಾರಣೆಯಲ್ಲಿ ಬರಬಹುದಾದ ದ್ರುತ, ವಿಲಂಬಿತ ಮುಂತಾದ ವಕ್ತೃವ್ಯಾಪಾರವನ್ನು "ಧ್ವನಿ"ಯೆನ್ನಲಾಗಿದೆ (ಧ್ವನ್ಯಾಲೋ. ೬೯ ಅಡಿಟಿ). ೫. ಸಾವಕಾಶ ಗತಿ ; ಮಂದಗಮನ : ರಾಜಮಾರ್ಗದೊಳ್ ನಡೆಯೆ ಹಯಂ ವಿಲಂ[ಪಾಠಾಂ. ಳಂ]ಬಿತದೆ (ಪಂರಾಮಾ. ೪-೯). **ವಿಳಂಬಿತ** : ೪. ಸಮನಿಸೆ ವಿಳಂಬಿತಂ ಮಾರ್ಗಮನುಪಜವದಿಂ ಮಹೀಭುಜಂ ತೋಱೆ ತುರಂಗಮತಿಳಕಂ ನೋೞ್ಪರ ಹೃದಯಮನೊಳಪೊಕ್ಕತ್ತು ನಯನಮಾರ್ಗದಿನಾಗಳ್ (ಮಲ್ಲಿಪು. ೯-೨೭). ೬. ಗದಾಯುದ್ಧದ ಒಂದು ಪಟ್ಟು,- ವರಸೆ: ವಿಳಂಬಿತವಮಾಕುಂಚಿತವಮಾಸ್ಫೋಟಿತವಮಾಕ್ಷಿಪ್ತಮುದ್ಭ್ರಾಮಿತಂ ದಿಗ್ಭ್ರಾಮಿತಮುಚಿತವಿರುದ್ಧಮಚಿಂತ್ಯಮುಮೆಂಬೆಂಟುಂ ತೆಱದ ಪ್ರಹರಣಂಗಳೊಳಂ (ಗದಾಯು. ೮-೧ ವ). [ಸಂ.]

**ವಿಲಂಬಿತಕಾಲ** (ನಾ). = ವಿಲಂಬ ೩ : ಕೃಷ್ಣಯ್ಯರ್ ಅವರು . . . ಸ್ವರಾಭ್ಯಾಸವನ್ನು ನಾಲ್ಕು ಸ್ಥಾಯಿಗಳಲ್ಲಿಯೂ ದ್ರುತಕಾಲದಲ್ಲಿಯೂ ವಿಲಂಬಿತಕಾಲದಲ್ಲಿಯೂ (ಮಂದ ಮತ್ತು ತೀವ್ರಗತಿಗಳಲ್ಲಿ) ನಡೆಸುತ್ತಿದ್ದರು (ಸಂಗೀತ. ೯೭). [ಸಂ.]

**ವಿಲಂಬಿಸು,** ವಿಳಂಬಿಸು (ಕ್ರಿ). ೧. ತಡಮಾಡು ; ಸಾವಕಾಶ ಮಾಡು : ಪಲುಂಬಿ ಮೞ್ವೊಕ್ಕೆನಾಂ ನಿನಗಧೀನಮಿಾ ಜೀವಿತಂ ವಿಲಂಬಿಸದೆ ರಕ್ಷಿಸೆನ್ನಂ (ಕಾದಂಬ. ೫೭೮). ೨. ಇಳಿ ; ಜಾರು ; ಸರಿ : ಅನಂತರಂ ರವಿಬಿಂಬಮಪರಾಂಭೋಧಿಗೆ ವಿಲಂಬಿಸುವುದುಂ (ಕಾದಂಪೂ. ೯೭೭). **ವಿಳಂಬಿಸು** : ೧. ಎನ್ನ ತೋಳ ತೀನಂ ಕಳೆವೆಂ ವಿಳಂಬಿಸಿದೊಡೆನ್ನ ನೆಗೞ್ತೆಗೆ ಬನ್ನಮಾಗದೇ (ಪಂರಾಮಾ. ೧೦-೬೩). ೩. ತಡವಾಗು ; ಸಾವಕಾಶವಾಗು : ಎನ್ನಯ ಸಮಿಾಹಿತಮಿಂತು ವಿಳಂಬಿಸಿರ್ಕುಮೆ (ಕಾದಂಬ. ೫೭೩). ೪. ವಿಸ್ತಾರಗೊಳಿಸು ; ಅಗಲಗೊಳಿಸು; ವಿಸ್ತರಿಸು: ಅವುಗಳನ್ನು ಜ್ಯೋತಿಷವಿಧಾನಸಂಗ್ರಹವಾದೀ ಅಧ್ಯಾಯದಲ್ಲಿ ವಿಳಂಬಿಸಲಾಗುವುದಿಲ್ಲ (ಜ್ಯೋತಿರ್ವಿ. ೨೭೦).

[ವಿಲಂಬ + - ಇಸು]

**ವಿಲಂಭ** (ನಾ). ೧. ಕೊಡುವಿಕೆ ; ದಾನಮಾಡುವುದು. ೨. ಉದಾರತೆ ; ಔದಾರ್ಯ. [ಸಂ.]

**ವಿಲಕ್ಷ** (ಗು). ೧. ನಿಶ್ಚಿತವಾದ ಗುರಿ ಅಥವಾ ಉದ್ದೇಶವಿಲ್ಲದಿರುವ. ೨. ಅಸಾಧಾರಣವಾದ ; ವಿಶೇಷವಾದ. ೩. ಆಶ್ಚರ್ಯಗೊಂಡ ; ಅಚ್ಚರಿಗೊಂಡ. ೪. ಲಜ್ಜೆಗೊಂಡ ; ನಾಚಿಕೊಂಡ. (ನಾ). ೫. ಗುರಿಯಿಲ್ಲದಿರುವಿಕೆ ; ಅನಿಶ್ಚಿತತೆ : ಲಕ್ಷಭೇದವನಱಿದು ನಡೆದು ವಿಲಕ್ಷವನು ಮುರಿದಾತ್ಮರಕ್ಷೆಯನೀಕ್ಷಿಸುವುದನುನಯವಲ್ಲೆ (ಕುವ್ಯಾಉ. ೩-೩೧). ೬. ಅಸಾಧಾರಣವಾದುದು ; ವೈಶಿಷ್ಟ್ಯಪೂರ್ಣವಾದುದು : ಲಕ್ಷವ ಬಿಟ್ಟು ನಿರ್ಲಕ್ಷವ ಕಂಡು ನಿಶ್ಚಯವಾಯಿತ್ತೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನಲಿಂಗವು ನಿರ್ಲಕ್ಷಿತನಾದ ವಿಲಕ್ಷ (ಮೋಳಿಮಾ. ೧೪೯-೭೧೧). [ಸಂ.]

**ವಿಲಕ್ಷಣ** (ಗು). ೧. ನಿಶ್ಚಿತವಾದ ಗುರುತು ಅಥವಾ ಲಕ್ಷಣವಿಲ್ಲದ. ೨. ಬೇರೆಯ ; ಅನ್ಯ. ೩. ಅಸಾಧಾರಣವಾದ ; ವಿಶಿಷ್ಟವಾದ ; ಅಸಾಮಾನ್ಯವಾದ : ಚೇತನಾಚೇತನವಿಲಕ್ಷಣನೂತನಪದಾರ್ಥಗಳೊಳಗೆ ಬಲುನೂತನನತಿಸುಂದರಕೆ ಸುಂದರ ರಸಕೆ ರಸರೂಪ (ಹಸಾರ. ೨-೨೩) ; ಅವರಲ್ಲಿ ವಿಲಕ್ಷಣ ಪ್ರಗತಿಯಾಗಿತ್ತು (ಸಮಜೀ. ೯೭). (ನಾ). ೪. ಕಾರಣವನ್ನು ಹೊಂದಿರದ ಸ್ಥಿತಿ. ೫. ವಿಭಿನ್ನವಾದುದು ; ಬೇರೆಯ ತೆರನಾದುದು : ಅವಳ ನೋಟವೂ ಸ್ವಲ್ಪ ವಿಲಕ್ಷಣವಾಗಿಯೇ ಕಂಡಿತು (ಹೇಮಂತ. ೩೫೩). ೬. ಅಸಾಧಾರಣವಾದುದು ; ವಿಶಿಷ್ಟವಾದುದು : ಪರಮಾತ್ಮನ ಸಂಕಲ್ಪ ಅತ್ಯದ್ಭುತವೂ ವಿಲಕ್ಷಣವೂ ಹಾಗೆಯೇ ಅನಂತವೂ ಅಪಾರವೂ ಆದುದು (ಶಕ್ತಿವಿ. ೫೨) ; ಭಾರತದಲ್ಲಿ ಹಿಂದೆಂದೂ ತಲೆದೋರದ ವಿಲಕ್ಷಣವಾದ ರಾಷ್ಟ್ರೀಯಪ್ರಜ್ಞೆಯು ಒಮ್ಮೆಲೆ ಪ್ರಕಟವಾಯಿತು (ಪ್ರಬಂಧ. ೫೭). [ಸಂ.]

**ವಿಲಕ್ಷಿತ** (ಗು). ಜ್ಞಾತವಾದ ; ತಿಳಿದ : ಸಮಾಧಿಗುಪ್ತಮುನೀಂದ್ರಪಾದಪದ್ಮೋಪಕಂಠದೊಳ್ ಪರಮದೀಕ್ಷಾವಿಲಕ್ಷಿತಾಕ್ಷೂಣಪ್ರಮೋದನಾಗಿ (ಶಾಂತಿಪು. ೯-೮೩ ವ). [ಸಂ.]

**ವಿಲಕ್ಷ್ಯ** (ಗು). ೧. ಅರಿತ ; ಗ್ರಹಿಸಿದ. (ನಾ). ೨. ಅಚ್ಚರಿ ; ಸೋಜಿಗ : ಬಳ್ಳಿಮಿಂಚಿನಿಸಂ ನಿಶ್ಚಲಮಾಗಿ ನಿಲ್ಕುಮೆ ವಿಲಕ್ಷ್ಯಂ ತಾನಿದೆಂಬನ್ನ ಮೋಹನಮಂ ಪುಟ್ಟಿಸಿ ತನ್ನ ದಿಟ್ಟಿವೆಳಗಿಂ ನುಣ್ಪಿಟ್ಟು ಕೊಟ್ಟಳ್ . . . ಹಾರಮಂ (ಮಲ್ಲಿಪು. ೮-೧೧೮). ೩. ಅಚ್ಚರಿಗೊಂಡವನು : ಶಿಕ್ಷೆ ರಕ್ಷೆಗೆ ಬಾಣವೊಂದೇ ಲಕ್ಷ್ಯವಿದು ನೀನಱಿಯದುದಕೆ ವಿಲಕ್ಷ್ಯನಾದೆನು ನಾನೆನುತ ಮುನಿ ನುಡಿದನರ್ಜುನಗೆ (ಕುವ್ಯಾಉ. ೧೩-೧೦). [ಸಂ.]

**ವಿಲಗ** (ನಾ). ೧. ತಾಪತ್ರಯ ; ಜಂಜಾಟ ; ಕೋಟಲೆ : ಹುಟ್ಟುಸಾವಿನ ವಿಲಗದಲಿ ಕಂಗೆಟ್ಟು ನಾನಾಯೋನಿಯಲಿ ತಟಗುಟ್ಟಿ ಬಳಲುವುದುಚಿತವೇ (ಕುವ್ಯಾಉ. ೪-೧೨); ಗೆಲಿದೆನೆಂದೆನಲರಿದು ಮಾಯೆಯ ವಿಲಗವನು (ನಿಭಾಗ. ೧೦-೫೨-೬೭). ೨. ವಿರೋಧ ; ವೈರ ; ದ್ವೇಷ : ಹರಶರಣರೊಳಗೆ ವಿಲಗಂ ಸಲ್ಲದು (ಸೌಂದಪು. ೪-೭೮). ೩. ಪ್ರತಿರೋಧ ; ತಡೆ : ಎಲೆ ಮರುಳೆ ಮುಂದಿದ್ದ ನಮ್ಮಯ ವಿಲಗವನು ಪರಿಹರಿಸಿ ಸೈಂಧವನಳಿವುಪಾಯವ ಮಾಡು (ಕುವ್ಯಾದ್ರೋ. ೯-೪೫). ೪. ಆಟೋಪ : ಮುನ್ನ ಹೀನತಾರಕನಣುಗರುಂ ತ್ರಿಪುರನಾಯಕರು ವಿಲಗದೊಳು ತ್ರೈಲೋಕ್ಯಮಂ ದಾಳಿಯಾಡಲು (ಪ್ರಭುಪು. ೭-೩೮). ೫. ಅಪವಾದ ; ದೂರು ; ನಿಂದೆ : ನಿಂದೆಗೊಳಗಾಗಿ ಬದುಕುವನಲ್ಲ ತಿದ್ದಿ ತೀರದ ವಿಲಗಕಂಜುವೆಂ ಸೀತೆಯಂ ಬಿಟ್ಟಲ್ಲದಿರೆನೆಂದನು (ಜೈಮಿಭಾ. ೧೮-೪೯) ; ಪಾವನೆಯೆಂದೇ ಒಪ್ಪುಗೊಂಡೆನದಱಿನೀ ವಿಲಗವೊಂದಕ್ಕೆ ತಲೆಮಟ್ಟೆಂ (ರಾಮಾಶ್ವ. ೨೪-೨೮). ೬. ಸಂರಕ್ಷಣೆ ; ಆಶ್ರಯ : 'ವಿಲಗಿಗ' ಪರಾ. ೭. ಹೊಂದಿಕೆಯಾಗದಿರುವಿಕೆ ; ವೈಪರೀತ್ಯ ; ವಿಸಂಗತಿ : (ಶ).

[←— ಮರಾ. ವಿಲಗ]

**ವಿಲಗಂಡಯ್ಯ** (ನಾ). ಒಬ್ಬಾತನ ಹೆಸರು : ಮರಂಗಳ್ ಒಡೆಯ ಕಣ್ಣಮ್ಮಯ್ಯನಾ ಮಗನ್ ವಿಲಗಣ್ಣಯ್ಯ (ಎಕ. X. ಬೌರಿಂಗ್. ೭೪-೬; ಸು. ೯೦೦). [? + ಅಯ್ಯ]

**ವಿಲಗಿಗ** (ನಾ). ಆಶ್ರಯದಾತ ; ಸಂರಕ್ಷಕ : ಬಗೆಯಲ್ಕವರ ಜೀವನದ ವಿಲಗಿಗನು ನೀನೆಂದರಸ ಕರುಣಾಳುಗಳ ದೇವನ ಬೇಡಿಕೊಂಡನು (ಕುವ್ಯಾದ್ರೋ. ೯-೩೨).

[ವಿಲಗ + - ಇಗ]

**ವಿಲಗ್ನ** (ಗು). ೧. ಕಟ್ಟಿದ ; ಬಿಗಿದ. ೨. ಸೇರಿಕೊಂಡ ; ಕೂಡಿದ ; ಅಳವಟ್ಟ : ಅಗ್ನಿಯಂ [illegible] ನೋಡುವೆನೆಂದು ನಿಜಕರವಿಲಗ್ನಚಾಪವನಿಳುಹಿ (ಜೈಮಿಭಾ. ೮-೪೧). (ನಾ). ೩. ಟೊಂಕ ; ಸೊಂಟ. [ಸಂ.]

**ವಿಲಜ್ಜ** (ನಾ). ಲಜ್ಜೆಯಿಲ್ಲದವನು ; ನಾಚಿಕೆಗೇಡಿ : ವನಿತಾಪುತ್ರರತಂ ವಿಲಜ್ಜನಲಸಂ ಧರ್ಮಧ್ವಜಂ . . . ಮೃಗಪ್ರೋದ್ಭವಂ (ಜಾತತಿ. ೧೭-೧೦). [ಸಂ.]

**ವಿಲಜ್ಜಿತ** (ನಾ). = ವಿಲಜ್ಜ : "ಕ್ಷೀಣಂ ಜೀನಂ ಜೀರ್ಣಂ . . . ಹ್ರೀತಂ ವಿಲಜ್ಜಿತಂ ತಾನಕ್ಕುಂ" (ವಸ್ತುಕೋ. ೧೧೫-೪೩). [ಸಂ.]

**ವಿಲಪನ** (ನಾ). ೧. ಮಾತನಾಡುವುದು. ೨. ವ್ಯರ್ಥವಾದ ಮಾತು ; ಹರಟೆ. ೩. ದುಃಖ ; ರೋದನ ; ಪ್ರಲಾಪ. ೪. [ಜೈನ] ಆರ್ತಧ್ಯಾನದ ಒಂದು ಭೇದ : ಅವಱೊಳ್ ಆರ್ತಧ್ಯಾನಂ ಬಾಹ್ಯಾಧ್ಯಾತ್ಮಿಕಭೇದದಿಂ ದ್ವಿಪ್ರಕಾರಮಕ್ಕುಂ ಅಲ್ಲಿ ಪರಾನುಮೇಯಮಪ್ಪ ಬಾಹ್ಯವಿಲಪನ ಪರಿದೇವನ ತಾ[illegible]ವ ವಿಸ್ಮಯ ವಿಷಯಸಂಗಾದಿ ಚಿಹ್ನಮಕ್ಕುಂ (ಅಜಿಪು. ೮-೨೮ ವ). [ಸಂ.]

**ವಿಲಪಿಸು** (ಕ್ರಿ). ದುಃಖಿಸು ; ಪ್ರಲಾಪಿಸು : ಹಿತರು ಪರಿಚಿತರನುಜರಗ್ರಜರತುಳರಣರಂಗದಲಿ ಮಡಿದರೆನುತ್ತ . . . ವಿಧಿಯ ಬೈಯುತ ವಿಲಪಿಸಿದರಂದು (ತಿಮ್ಮಸ್ತ್ರೀ. ೨-೧೯) ; ಸೂರ್ಯನು ನಮ್ಮ ಘನತೆಯನ್ನು ಲೂಟಿ ಮಾಡಿದ ಎಂದು ವಿಲಪಿಸುವಂತೆ ಮರಬಳ್ಳಿಗಳು ಜೋಲುಮುಖ ಹಾಕಿದ್ದುವು (ಮಸಕೂ. ೨೨).

[ವಿಲಪನ + - ಇಸು]

**ವಿಲಯ,** ವಿಳಯ (ನಾ). ೧. (ಪ್ರಪಂಚದ) ಕೊನೆ ; ನಾಶ ; ಲಯ ; ಪ್ರಳಯ : "ವಿಲಯಂ ನಾಶ ಯುಗಾಂತದೊಳ್" (ವಸ್ತುಕೋ. ೧೨೩-೩೪) ; ಘುಡುಘುಡಿಸಿ ಸತ್ಯೇಂದ್ರ ಚೋಳನ ಮಹಾಬಲಂ ಕಡೆಯ ಕಾಲದ ಕಿಚ್ಚಿನಂತೆ . . . ವಿಲಯದೊಳು ಧರೆಯ ಮೊಗೆದ ಕಡಲಂತೆ . . . ದಿಗ್ಬಲಿಯ ಕೊಡುತಿರ್ದುದರಿಸೇನೆಯ (ಭಾವಚಿಂ. ೫-೨೦).

೨. ಲೀನಗೊಳಿಸುವುದು ; ವಿಲೀನತೆ : ಪತ್ನಿಯು ತನ್ನ ವ್ಯಕ್ತಿತ್ವವನ್ನು ಪತಿಯ ವ್ಯಕ್ತಿತ್ವದಲ್ಲಿ ವಿಲಯ ಮಾಡಿದರೆ ಪತಿಯು ವಿಲಾಸಿಯೂ ಸುಖಲೋಲುಪನೂ ಆಗುವನು (ಪ್ರಬಂಧ. ೧೧೫). **ವಿಳಯ** : ೧. ಅನಿತುಮನೊರ್ಮೊದಲೆ ವಿಳಯದೊಳ್ ನೆರವಿಸು/ಗುಂ (ಯಶೋಚ. ೧-೩೫). [ಸಂ.]

**ವಿಲಯಕಾಲ**, ವಿಳಯಕಾಲ, ವಿಳಯಕಾಳ (ನಾ). ವಿನಾಶದ ಸಮಯ ; ಪ್ರಳಯಕಾಲ : ವಿಲಯಕಾಲದ ಗಾಳಿಯಿಂದಲು ಸ್ವಲ್ಪವಾದರು ಸಗ್ಗದ . . . ಬೇರೆ ರೂಪದ ರವಿಯ ದೀವಿಗೆಯೆಮಗೆ ಸುಖವನು ತೋರಲಿ (ಧ್ವನ್ಯಾಲೋ. ೬೫). **ವಿಳಯಕಾಲ** : ಮಿಕ್ಕಂ ವಿಷವಹ್ನಿಯಿಂ ವಿಳಯಕಾಲಜ್ವಾಲೆಯಂ ಭೋಗರತ್ನದ ಚೆಲ್ವಿಂ ದ್ಯುತಿಮಾಲಿಯಂ (ಜಗವಿ. ೩-೮೪). **ವಿಳಯಕಾಳ** : ಶರಣಾಗತಜಳನಿಧಿಯಂ ಪರಸೇನೆಗೆ ವಿಳಯಕಾಳಜಳನಿಧಿಯಂ . . . ನವನಿಧಿಯ ಕರೆದಂ (ಸೌಇ. XX, ೪೯-೫೪ ; 1076 ?). [ಸಂ.]

**ವಿಲಯಕೃತಾಂತ** (ನಾ). ಪ್ರಳಯಕಾಲದ ಯಮ : ಎಲೆಲೆ ವಿಲಯಕೃತಾಂತನೋ ನಮ್ಮಳವು ಕೊಳ್ಳದು ಬೆಂಗೊಡಲಿ ಮುಂಕೊಳಿಸದಿರಿ (ಕುವ್ಯಾಭೀ. ೫-೧೦). [ಸಂ.]

**ವಿಲಯಪವನ** (ನಾ). ಪ್ರಳಯಕಾಲದ ಗಾಳಿ : ಹರಿಯ ಚಕ್ರ ವರೂಥಚಕ್ರದೊಳುರವಣಿಪ ತೇಜಿಗಳ ಕಡುಹಿನ ಖುರದ ಹೊಯ್ಲಲಿ ವಿಲಯಪವನನ ಗರಿಯಗಾಳಿಯಲಿ . . . ಪಲ್ಲಟಿಸೆ ಸಂಗರದೊಳಗೆ ಸ್ಯವರಿದು ಸದೆದನು ಸಕಲಸೈನಿಕರ (ಕುವ್ಯಾದ್ರೋ. ೫-೨). [ಸಂ.]

**ವಿಲಯರುದ್ರ** (ನಾ). ಪ್ರಳಯಕಾಲದ ಶಿವ : ವೈರಿಭಟಕುಲವಿಲಯರುದ್ರನುದಾರತೇಜೋಭದ್ರನಾ ಭಾಗೀರಥೀಸುತ ಧರಿಸಿದನು ಕುರುಸೇನೆಯೊಡೆತನವ (ಕುವ್ಯಾಭೀ. ೧ ಸೂಚನೆ) ; ವಿಲಯರುದ್ರನ ಪಣೆಯ ಕಣ್ಣೆಚ್ಚಿದೋ ಭಾವಿಸುವೊಡರಿದೆಂಬೊಲಾದುದು ಧನಂಜಯನ ಪಾವಕಾಸ್ತ್ರಂ (ಜೈಮಿಭಾ. ೧೩-೧೧). [ಸಂ.]

**ವಿಲಯಾಂಬುದ** (ನಾ). ಪ್ರಳಯಕಾಲದ ಮೋಡ,– ಮೇಘ : ವಿಲಯಾಂಬುದದಿಂ ಪೊಱಮಟ್ಟ ಸಿಡಿಲ ಮುಸಕಮನುಱಿ ಸೆಱೆವಿಡಿದತ್ತು ಚಂದ್ರಹಾಸಕೃಪಾಣಂ (ಪಂರಾಮಾ. ೧೨-೭೨). [ಸಂ.]

**ವಿಲಯಾಗ್ನಿ** (ನಾ). ಪ್ರಳಯಕಾಲದ ಬೆಂಕಿ ; ಪ್ರಳಯಾಗ್ನಿ : ಬಂದುದ್ದಂಡಪ್ರಚಂಡಕಂಠೀರವಂ ಗೆಂಟನೊಳ್ವಿಲಯಾಗ್ನಿ ಮೈವೆತ್ತುದೆಂಬಗುರ್ವನೊಳಕೊಂಡು (ರಾಜಶೇ. ೫-೧೧೫ ವ). [ಸಂ.]

**ವಿಲಯಾನಲ**, ವಿಳಯಾನಳ (ನಾ). = ವಿಲಯಾಗ್ನಿ : ಬಲದೇವನಖಿಳರಿಪುಕುಲವಿಲಯಾನಲನಾತ್ಮಕುಲಸಮುಜ್ಜ್ವಲ ಗಗನಸ್ಥಲ ವಿರಕರಂ . . . ಎನಿಸಿ ನೆಗಟ್ಟನಖಿಲಾವನಿಯೊಳ್ (ಶಾಂತಿಪು. ೨-೧೦) ; ಲಯಸಮಯಂ ಜಗಕ್ಕೆ ಪೆಱತಾವುದೊ ರಾವಣನುಗ್ರಕೋಪವಹ್ನಿಯೆ ವಿಲಯಾನಲಂ (ಪಂರಾಮಾ. ೧೪-೧೭೦). **ವಿಳಯಾನಳ** : ವಿಳಯಾನಳವಿಳಸನವಿಸ್ಫುಲಿಂಗಸಂಘಾತದಿಂ ತಗುಳ್ದಡೆ (ಪಂಪಭಾ. ೧೨-೮೫). [ಸಂ.]

**ವಿಲಯಾನಿಲ**, ವಿಳಯಾನಿಳ (ನಾ). ಪ್ರಳಯಕಾಲದ ಗಾಳಿ : ಪರಿಪರಿಯ ಪಕ್ಷಿಪಕ್ಷಂಗಳಿಂದುಚ್ಚಳಿಸುತಿರದೆ ವಿಲಯಾನಿಲನಯಿಮ್ಮಡಿಗೆ ಪೆರ್ಚಿ ಮೊರೆದೆದ್ದು ಸುತ್ತಿವಿಯತ್ತಳವ ತಿರುರಿದಿರುಗಿಸುತೆ (ನವಮೋ. ೬-೬). **ವಿಳಯಾನಿಳ** : ದಮಿತಾರಿ ಕೈವೀಸೆ ವಿಳಯಾನಿಳಂ ಬೀಸೆ (ಶಾಂತಿಪು. ೪-೭ ವ) ; ಮರನಂ ಮರದಿಂ ಮೋದುವ . . . ಕಡಲಂ ಕಡಲೊಳ್ ಬೆರಸುವ ವಿಳಯಾನಿಳನೆನೆ ಭರದಿಂ ಕಡುಗಾಳಿ ಬೀಸಿದುದು ಗೋಕುಲದೊಳ್ (ಜಗವಿ. ೪-೮೬). [ಸಂ.]

**ವಿಲವಿಲ** (ನಾ). ಒಂದು ಅನುಕರಣಶಬ್ದ : ದೀಪಕ್ಕೆ ಬಿದ್ದ ಕ್ಷಣದಲ್ಲಿ ವಿಲವಿಲ ಎಂದು ಒದ್ದಾಡಿ ಹುಳು ರೆಕ್ಕೆ ಸುಟ್ಟುಕೊಂಡಿತು (ರೂಢಿ).

**ವಿಲವಿಲನೆ** (ಅ). ಒಂದು ಅನುಕರಣಾವ್ಯಯ : ಹಸು ನೋವಿನಿಂದ ವಿಲವಿಲನೆ ಒದ್ದಾಡುತ್ತಿತ್ತು (ರೂಢಿ). [ವಿಲವಿಲ + – ಅನೆ]

**ವಿಲಸ**, ವಿಳಸ (ನಾ). ೧. ಚೆಲುವು ; ಸೊಬಗು ; ವಿಲಾಸ : ವಿಲಾಸ – ವಿಲಸ, ಶಲಾಕಾ –ಸಲಗೆ (ಶಮದ. ೨೭೩ ಪ್ರಯೋ). ೨. ಅಲಂಕೃತನಾದವನು : ವರಭಸಿತಮಂ ಪೂಸಿ ಮೈಯಲಿ ಶಿರದೊಳೀಶಾರ್ಪಿತಕುಸುಮಮಂ ಧರಿಸಿ ರುದ್ರಾಕ್ಷಾಭರಣಭೂಷಿತ ವಿಲ[ಪಾಠಾಂ. ಳ]ಸನಾಗಿ (ಬಸವು. ೪-೧೦). **ವಿಳಸ** : ೧. ಲಲಿತಘೋಷದ ಲಾಜೆ ದಧಿದೂರ್ವಾಕ್ಷತಾದಿಗಳ ವಿಳ[ಪಾಠಾಂ. ಲ] ಸದಭಿನವರವದ ಕಂಚುಕಿಗಳ ಘುಡಾವಣೆಗಳಲಿ ರಾಜಾವಳಿಶಿರೋಮಣಿ ಹೊಕ್ಕನನುಪಮರಾಜಮಂದಿರವ (ತೊರರಾ. ೧-೭-೬೨) ; ಕವಿತೆಯ ಬರ್ದು ಮೆಯ್ಸಿರಿ ಬೆಡಂಗು . . . ದೇಸಿ ವಿಳಸಂ ಕಳೆ ಶಕ್ತಿ ಪುರುಳ್ (ಸಂಸಪ. ೬-೧೦). [< ಸಂ. ವಿಲಾಸ]

**ವಿಲಸತ್ತು**, ವಿಳಸತ್ತು (ಗು). ೧. ಪ್ರಕಾಶಿಸುವ ; ಹೊಳೆಯುವ : ಮುದ್ರಸಹಜಾತವಿದ್ಧಚ್ಛಿದ್ರಾನ್ವಿತಕರ್ಣಯುಗಳಪಾಳಿಗಳೊಳ್ ಸಂವಿದ್ರುತರಜಂಗೆ ಹರಿ ವಿಲಸದ್ರುಚಿ ಮುದ್ರಪ್ರಕುಂಡಲಂಗಳನಿಟ್ಟಂ (ಶಾಂತಿಪು. ೧೦-೫೯) ; ತಾರಾಭ್ರಮಂಡಲಮಂ ಮೂವಳಸಾಗೆ ಸುತ್ತೆ ವಿಲಸದ್ಭೂಷಾಪ್ರಭಾಮಂಡಲಂ (ಪಂರಾಮಾ. ೧೩-೬೨). ೨. ಉತ್ತಮವಾದ ; ಶ್ರೇಷ್ಠವಾದ : ವಿಲಸದ್ಗುಣಾಗುಣವಿವರ್ತಿ ಗುರೂಪದೇಶಾವಲಿನಾವಬೋಧವಿದಿತಾಖಿಳಚೋದ್ಯ[ವೃಂದಂ] (ಕವಿರಾ. ೩-೨೨೬) ; ಅಖಿಲಶ್ರುತಿಸ್ಮೃತಿಗಳು ಪಂತಿವಿಡಿದುಸುರ್ವುದನಱಿದು ವಿಲಸದಷ್ಟವಿಧದಿಂ ತವೆ ಭಜಿಸಿ ಮೋಕ್ಷಮಂ ಪಡೆದರ್ (ಪ್ರೌಢರಾ. ೮-೪). ೩. ಸೊಬಗಿನಿಂದ ಕೂಡಿದ ; ವಿಲಾಸದ : ಮಿಗಿಲೆನಿಸಿ ನಡೆದಳು ದೇವನರ್ಧಾಂಗಿ ನಿರುಪಮ ಚಿದಂಬುಜಪತಂಗಿ ದಿವ್ಯಾಂಗಿ ಶಂಕರವಿಲಸದಂತರಂಗಿ (ವೀಶೈಪು. ೩-೪-೨೬). **ವಿಳಸತ್ತು** : ೧. ವಿಳಸದ್ರತ್ನಪ್ರತಾನಂ . . . ಅಂಭೋನಿಧಾನಂ (ಜಗವಿ. ೧-೨೩). [ಸಂ. ವಿಲಸತ್]

**ವಿಲಸನ**, ವಿಳಸನ (ನಾ). ೧. ಹೊಳೆಯುವಿಕೆ ; ಪ್ರಕಾಶಿಸುವಿಕೆ. ೨. ವಿಲಾಸ ; ವಿನೋದ : 'ವಿಲಸಿಸು' ಪರಾ. **ವಿಳಸನ** : ೧. ವಿಳಯಾನಳವಿಳಸನವಿಸ್ಫುಳಿಂಗಸಂಘಾತದಿಂ (ಪಂಪಭಾ. ೧೨-೮೫) ; ಆತನಗ್ರಮಹಿಷಿ ಜಯಶ್ರೀಯಾಳ್ವಳ್ ತನ್ನನಮಂ ಕಣ್ಗೊಳ್ವ ನಿಜಾಕಾರಸಾರವಿಳಸನದಿಂದಂ (ಚಂದ್ರಪು. ೫-೯೫). [ಸಂ.]

**ವಿಲಸಿತ**, ವಿಳಸಿತ (ಗು). ೧. ಪ್ರಕಾಶಿಸುವ ; ಹೊಳೆಯುವ : ವಿಲಸಿತಪುಂಡರೀಕಚರಣಂ ಕುಮುದೇಕ್ಷಣಕಾಂತಮಂಜನಾಕುಲಿತವಿಲೋಚನಂ . . . ಎಸೆದತ್ತು ದಿಗ್ವಲಯದಂತೆ ನಿಶಾಂತದೊಳಂಗನಾಜನಂ (ಅಜಿಪು. ೬-೭೪) ; ವಿಲಸಿತದುಕೂಲವಸ್ತ್ರಂಗಳ ನಲ್ಲದೆ ಪೆಱವು ಸೀರೆಗಳನುಟ್ಟಟಿಯಿಂ (ಸುಕುಮಾ. ೧೦-೧೦೪). (ನಾ). ೨. ಲೀಲೆ ; ವಿಲಾಸ : ಕಾಲ ದಿಕ್ಕುಗಳ ಚಲನೆಯಲಿ ವಿಶ್ವಸಮ್ಮೋಹನಗಳಿಲ್ಲವಾ ವಿಲಸಿತವು ಬೊಮ್ಮನದು (ಮಂಕುಕ. ೮೭). ೩. ಸೊಬಗಿನಿಂದ ಕೂಡಿದುದು ; ಶೋಭಾಯಮಾನವಾದುದು: ತಟಿದ್ವಳಯವಿಲಸಿತಂಗಳಾಗಿ ನಿಜಪ್ರಕೋಷ್ಠನಿಷ್ಠಿತಂಗಳಪ್ಪ ವೀರಾಂಗದಂಗಳೆಂಬ ಕಟಕಂಗಳುಂ (ಆದಿಪು. ೧೫-೩ ವ) ; ವಿಲಸಿತಮಪ್ಪಲಂಕರಣಶಾಸ್ತ್ರದ ವೋಲ್ ದೆಸೆಗಳ್ ಪ್ರಸನ್ನಮಂ ತಳೆದು ಪೊದಟ್ಟುವು (ಕುಸುಮಾ. ೬-೪೪). **ವಿಳಸಿತ** : ೧. ವಿಳಸಿತಮದಿರಾರುಣೇಕ್ಷಣಂ ಸ್ಫುರಿತೋಷ್ಠಂ ಕೆಳದೀ ನಿನ್ನ ಮುಖಂ ತಳಮಳಗೊಳಿಸುಗುಂ (ಕವಿರಾ. ೩-೧೯೨) ; ವಿಳಸಿತಕಿರಣಕಳಾವಳಿಗಳ . . . ಉಜ್ಜ್ವಳಗುಣನಂ ಧರ್ಮನಾಥನಂ ಪೂಜಿಸುವೆಂ (ಬಾಧಪು. ೮-೧೪೫) ; ಥಳಥಳಿಪ ಪಟಿಕದ ಶಿಲೆಯೊಳಿಹ ವಿಳಸಿತ ಪ್ರತಿಬಿಂಬದಂತೆಯಚಳಕುಲದೊಳಿಹ ತತ್ಪ್ರತಿಧ್ವನಿಗಳವೊಲಖಿಳದೊಳು . . . ತಾನೆಯಾಗಿದ್ದಹನಲಾ ವಿಶ್ವ (ಬಸವು. ೫೧-೩೩). ೩. ಉದಯರುಚಿರಸಿತಭಾನುರಂಜಿತಮಹೋತ್ಪಳಮಿತ್ರವಿಳಸಿತಮುಂ (ರಾಜಶೇ. ೧೪-೧೫೪ ವ). [ಸಂ.]

**ವಿಲಸಿತೆ** (ನಾ). ಸೊಬಗಿನಿಂದ ಕೂಡಿದವಳು ; ಸುಂದರಿ : ಸುರುಚಿರಮಣಿಗಣನಿಕರವಿಲಸಿತೇ[ಪಾಠಾಂ. ವಿರಚಿತೇ] ವಿರಚಿತಮಿದನಱಿ ಮಣಿಗಣನಿಕರಂ (ಛಂದೋಂಬು. ೨-೧೫೪). [ಸಂ. ವಿಲಸಿತಾ]

**ವಿಲಸಿಸು** (ಕ್ರಿ). ಉಲ್ಲಾಸದಿಂದಿರು ; ಸುಖಿಸು : ತರುಣಿ ತನ್ನೊಡವೆಗಳ ತಳೆಯುತ್ತ ತೆಗೆಯುತ್ತ . . . ವಿಲಸಿಪಂತೆ ತಾಂ ವಿಶ್ವದಲಿ ಮೆರೆಯುವವನು ಪರಬೊಮ್ಮ (ಮಂಕುಕ. ೭೮). [ವಿಲಸನ + – ಇಸು]

**ವಿಲಾಪ**, ವಿಳಾಪ (ನಾ). ಅಳುವಿಕೆ ; ರೋದನ : ರತಿಯ ವಿಲಾಪವೇ ವಿಲಾಪ! (ಕನ್ನಜಾ. ೧೭೫) ; ಕೇವಲ ವಿಲಾಪದಲ್ಲಿ ಮುಕ್ತಾಯವಾಗದೆ ಆಶೆಯಲ್ಲಿ, ದರ್ಶನದಲ್ಲಿ ಕವನ ಸಮಾಪ್ತಿಯನ್ನು ಪಡೆದಿರುವುದು (ಭಾವಗೀ. ೬೮). **ವಿಳಾಪ** : 'ವಿಳಾಪಿಸು' ಪರಾ. [ಸಂ.]

**ವಿಲಾಪಗೀತ** (ನಾ). ಶೋಕಗೀತೆ : ಇದು ವಿಲಾಪಗೀತವು. ಈ ವಿಧದ ಕವನಗಳಿಗೆ ಆಂಗ್ಲಭಾಷೆಯಲ್ಲಿ (Elegy) ಎಂದರೆ ವಿಲಾಪಿಕೆ ಎನ್ನುವರು (ಚಿತ್ರಸ್ಯ. ೪೧). [ಸಂ.]

**ವಿಲಾಪಿಸು,** ವಿಳಾಪಿಸು (ಕ್ರಿ). ಅಳು ; ಪ್ರಲಾಪ ಮಾಡು ; ಗೋಳಾಡು : ವಿಲಾಪಿಪ ಭಗ್ನಾಂಗನ ಕುಷ್ಠಿಯಂ ವಿಧವೆಯಂ ಕೊಂದಾಟಮಂ ಧೂಮಮಂ ನಿಪುಣರ್ ಕಂಡರೆ ಪೋಗರ್ಕೆ (ಸೋಮೇಶ. ೬೮) ; ಅದರ ಮತ್ತೊಂದು ಸಾಮಾನ್ಯಲಕ್ಷಣವೇನೆಂದರೆ ಕವಿ ತಾನು ಕುರುಬನೆಂದು ಆರೋಪಿಸಿಕೊಂಡು ತನ್ನ ಗತಿಸಿದ ಕುರುಬಮಿತ್ರನಿಗಾಗಿ ವಿಲಾಪಿಸುವಂತೆ ಹಾಡುವುದು (ಭಾವಗೀ. ೬೯). **ವಿಳಾಪಿಸು :** ಈ ಪರಿಯೊಳತಿಶೋಕಿಸುತ ವಿ[ಪಾಠಾಂ. ಪ್ರ]ಳಾಪಿಸುವ ನಳನೃಪತಿ ಹೆಚ್ಚಿದ ತಾಪದಲಿ ಕಡುನೊಂದು ಬಳಲುತ (ನಳಚ. ೬-೫). [ವಿಲಾಪ + -ಇಸು$_3$]

**ವಿಲಾಯತಿ,** ವಿಲಾಯಿತಿ (ಗು). ೧. ವಿದೇಶಕ್ಕೆ ಸಂಬಂಧಿಸಿದ ; ಪರದೇಶದ. (ನಾ). ೨. ಮುಖ್ಯವಾಗಿ ಇಂಗ್ಲೆಂಡ್, ಯೂರೋಪು ಮುಂತಾದ ವಿದೇಶ, ಅನ್ಯದೇಶ : ವಿಲಾಯತಿಯಂಥ ಮಧ್ಯಮಶೀತವುಳ್ಳ ದೇಶಗಳಲ್ಲಿ ಬರ್ಫವು ಬಹುದಿವಸ ನಿಲ್ಲುವುದಿಲ್ಲ (ಮುಂಬಯಿ. ೪-೧೮೦) ; ನೀವೇಕೆ ವಿಲಾಯತಿಗೆ ಹೋಗುವದಿಲ್ಲ (ಸಮಜೀ. ೫೫೪). **ವಿಲಾಯಿತಿ :** ೧. ಕೆಲವು ವಿಲಾಯಿತಿ ವಿದ್ವಾಂಸರು ಬಹುಶ್ರುತರಾದರೂ ಅವರಿಗೆ ಭಾರತೀಯ ಲಲಿತಕಲೆಗಳ ಪೂರ್ಣರೂಪ ಕಂಡುಬಂದಿಲ್ಲ (ಭಾರದ. ೫೭೬). ೨. ಅಷ್ಟು ಹೊತ್ತಿಗೆ ಅವಳನ್ನು ಒಲಿದವನೂ ವಿಲಾಯಿತಿಯಿಂದ ವಿಜಯಿಯಾಗಿ ಹಿಂದಿರುಗಿದನು (ಸುಂದರಿ. ೬೩); ಇದು ವಿಲಾಯಿತಿಯ ಮಾಲು. ಇದರಲ್ಲಿ ಬಂಗಾರದ ಅಂಶ ಬಹಳ ಕಡಿಮೆ (ಇಪ್ಪಕ. ೪೫೩).

[<— ಅರ. ಹಿಂ. ಮರಾ. ವಿಲಾಯತೀ, ವಿಲಾಯತ್]

**ವಿಲಾಯಿತಿ** 'ವಿಲಾಯತಿ' ನೋ.

**ವಿಲಾಸ$_1$,** ವಿಳಾಸ$_1$ (ನಾ). ೧. ಲೀಲೆ ; ಕ್ರೀಡೆ. ೨. ಭೋಗಸೌಖ್ಯ ; ಕಾಮಕೇಳಿ : ವಿಧಿವತ್ತಾದ ವಿವಾಹಕ್ಕೆ ಮುನ್ನವೇ ವಿಲಾಸಕ್ಕೆ ಅಪೇಕ್ಷಿಸಿದೆ (ಹೊಸಕ್ಷಿ. ೧೩). ೩. ಅಂದ ; ಸೊಬಗು : ಕತ್ತರಿಸಿ ಚಂದ್ರಕಳೆಯಂ ಪತ್ತಿಸಿದಂತೆಸೆವ ಸತಿಯ ಸುಲಿಪಲ್ವೊಳಪಿಂ ಮುತ್ತಿನ ವಿಲಾಸಮಂ ಪರಿಮುತ್ತುಗೊಳಲ್ಸಾ[ಪಾಠಾಂ. ಗಳೊಳ್ಸಾ]ಲ್ವುದೆಂಬುದೊಂದಚ್ಚರಿಯೇ (ಮಲ್ಲಿಪು. ೩-೭೫) ; ನಡೆಯೊಳು ನುಡಿಯೊಳು ತೋರ್ಪ ವಿಲಾಸವು ರತಿಗಿಂತ ನೂರ್ಮಡಿ ಮಿಗಿಲು (ಇಂಚಾಪ. ೨೨೭-೨೩). ೪. ಉಲ್ಲಾಸ ; ಸಂಭ್ರಮ : ಕಣ್ಮಲರೊಳಾನಂದಾಶ್ರು . . . ಮುಖದೊಳ್ ವಿಲಾಸಮೆಸೆಯುತ್ತಿರ್ಪನ್ನಮಿಂತೆಂದರ್ (ಜಗವಿ. ೩-೫) ; ಸಂತೋಷದಿಂ ಮುಂದೆ ಸಿಂಹಾಸನವನಿಕ್ಕಲು ವಿಲಾಸದಿಂದೆಸೆಯೆ ಕುಳ್ಳಿರ್ದನಾ ಸುಕುಮಾರಸೌಂದರಂ (ನಂಬಿರ. ೫-೯೭). ೫. [ಕಾವ್ಯಮಿ] ಸ್ತ್ರೀಯ ದಶವಿಧವಾದ ಶೃಂಗಾರಭಾವಗಳಲ್ಲಿ ಒಂದು ; ಬೆಡಗು ; ಒನಪು ; ಒಯ್ಯಾರ : ಅತ್ಯಂತ ರೂಪಲಾವಣ್ಯ ಸೌಭಾಗ್ಯಕಾಂತಿ ಹಾವಭಾವ ವಿಲಾಸ ವಿಭ್ರಮಂಗಳನೊಡೆಯೊಳಂ . . . ಅಳಿಪದೆ ಪೋಗವೇಟ್ಟ ಧನದತ್ತನೊಳ್ಳಿದನೆಂದಂ (ವಡ್ಡಾರಾ. ೧೭-೧೨) ; ಕಾಂತನಲ್ಲಿಗೊಲ್ದಂಗನೆ ಬಂದಳಂಗಜನ ಮಂಗಳಲಕ್ಷ್ಮಿಯೆನಲ್ ವಿಲಾಸದಿಂ (ಪುಷ್ಪಪು. ೩-೧೨೧). **ವಿಳಾಸ$_1$ :** ೩. ಅಮರ ನದೀಹಂಸಕುಳಂ ಕಮಳಜ ಹಂಸೇಂದ್ರ ಸೇವೆಗೇಟ್ಟಿರ್ಪ ವಿಳಾಸಮದೆನಿಸಿ ದೇಸೆವೆತ್ತುವು . . . ಚಮರರುಹಂಗಳ್ (ಜಗವಿ. ೧-೩೮) ; ಠಕ್ಕೆಯದ ಪಲ್ಲವವಗಿಯೆ ಮೆಱೆದುದು ಬಿಗಿದ ಮೊಗರಂಬದ ವಿಳಾಸದಲಿ (ಕುವ್ಯಾದ್ರೋ. ೩-೪). ೪. ಕುಲಂ ಮಲಿನವೆನಿಸೆ ಬೆಡಂಗಡಂಗೆ ಮೆಯ್ಯ ಮಾಸಾಱದ ಕೂಸಂ ತಲೆಕೆಳಗಾಗೆ ಪಿಡಿದುಕೊಂಡು ನಡೆವನ್ನಂ (ಜಗವಿ. ೨-೫೩ ವ); ಘಾಸಿಯಾದರು ಘಾಯವಡೆದು ವಿಲಾಸವಳಿದುದು ರಿಪುಭಟನ ಗೆಲುವಾಸೆ ಬೀತುದು ಧಾತುಗೆಟ್ಟುದು ಸರಳ ಸಾರದಲಿ (ಕುವ್ಯಾದ್ರೋ. ೬-೨೦). ೫. ಅಮರೀಮಧುರ ಗೀತನಿನಾದಕ್ಕಾದಮೊಱಲ್ದಿರ್ದ ಶಿರಃಕಂಪದೊಳಿನಿಸಾನುಮೆಱಗಿದ ಕರ್ಣಪೂರಪಾರಿಜಾತ ಸ್ತಬಕಮನೋಸರಿಸುವ ವಿಳಾಸಮುಮಂ (ಆದಿಪು. ೪-೯ ವ); ಬಂದಳದೊಂದು ವಿಭ್ರಮಮದೊಂದು ವಿಳಾಸಮದೊಂದು ಚೆಲ್ವದೊಂದಂದಮದೊಂದು ದೇಸೆ ಪೊಸತಾಗಿರೆ ವಲ್ಲಭನಲ್ಲಿಗಟ್ಕಱಿಂ (ಜಗವಿ. ೨-೮೦).

ವಿಳಾಸವಲ್ಲಭ = ವಿಲಾಸಿಗಳ ಒಡೆಯ ; ಒಂದು ಬಿರುದು : ಅರಸಂ ಕರಗಸಂ ಬಿರುದರಂಕುಸಂ ಮೂರ್ತಿನಾರಾಯಣಂ ವಿಳಾಸವಲ್ಲಭಂ (ಕಇ.IV,೪೩-೩;1264). [ಸಂ.]

**ವಿಲಾಸ$_2$,** ವಿಳಾಸ$_2$ (ನಾ). ೧. ಪತ್ತೆ ; ಅಡ್ರೆಸ್ಸು : ವಿಲಾಸ ಬರೆದು ಟಪಾಲು ಮೇಲೆ ಹಾಕಿಬಿಟ್ಟಳು (ಕಥಾಮಂ. IV, ೮೩). ೨. ಅಂಕಿತ ; ಗುರುತು ; ಚಿಹ್ನೆ : ನೀನು ವಿಲಾಸವಿಲ್ಲದವನಾದರೆ ಸತ್ಯವಾದ ಜಗತ್ತೆಲ್ಲವೂ ಸುಳ್ಳಾಗುವದು (ಅರ್ಕಮಾ. ೧-೪೫) ; ಬಸವನ ಆಭರಣ . . . ೧. ವಿಲಾಸ ಕೆತ್ತಿದ ಅರಳೆಲೆ (ಎಕ. XIV, ನಂಜನ. ೨೮೯-೭ನೇ ಕಲಂ ; 1847). **ವಿಳಾಸ$_2$ :** ೧. ಲಲಿತೆ ಕೃಷ್ಣನಿಗೆ ಕಾಸರಗೋಡಿನ ವಿಳಾಸಕ್ಕೆ ಬರೆದ ಕಾಗದವೂ ವಿಳಾಸದಾರರಿಲ್ಲದೆ ಹಿಂದಿರುಗಿತು (ಮುಗಹಂ. ೫೫).

[?/. ತಮಿ. ವಿಲಾಚಮ್; ತುಳು . ವಿಲಾಸ್; ತೆಲು. ವಿಲಾಸ]

**ವಿಲಾಸಂದಾಳ್** (ಕ್ರಿ). ಸೊಬಗನ್ನು ತಾಳು ; ಚೆಲುವನ್ನು ಹೊಂದು : ತರುಣಿ ಸುಲೋಚನೆಯಂ ಬಸಮಾಡಲ್ ಗರಗರನಾದ ವಿಲಾಸಂದಾಳ್ದಿದ ಗರಿಮರ್ಬನ್ನಿಮೆನು ತ್ತೈವತ್ತಾಱಱಿಕೆಯ ಜನಪದದ ಅರಮಕ್ಕಳ ಬಳಿಗೆಮ್ಮರಸಂ ದೂತರನಟ್ಟಿದನು (ಜಯಕಾ. ೩-೭೩). [ವಿಲಾಸ$_1$ + ತಾಳ್$_1$]

**ವಿಲಾಸಂದೋಱು** (ಕ್ರಿ). ಬೆಡಗನ್ನು ತೋರಿಸು ; ಒಯ್ಯಾರಮಾಡು : ಪೂದೊಡವನೋರಂತಿಟ್ಟು ನಾನಾವಿಲಾ[ಪಾಠಾಂ. ಳಾ]ಸಂದೋಱುತ್ತಿನಿಯರ್ಗೆ ರಂಜಿಪುದಜಸ್ರಂ ಖೇಚರೀಸಂಚಯಂ (ಶಬಶಂ. ೨-೩೯). [ವಿಲಾಸ$_1$ + ತೋಱು]

**ವಿಲಾಸಂಬೆಱು** (ಕ್ರಿ). ಶೋಭಿಸು ; ಕಂಗೊಳಿಸು : ಗಂಧರ್ವಕುಲದ ನಡುವೆ ವಿಲಾ[ಪಾಠಾಂ. ಳಾ]ಸಂಬೆತ್ತತಿಸಂಭ್ರಮದಿಂದೆ ಬರುತ್ತಿರ್ಪಂ ಹಂಸವಾಹನಂ ಚತುರಾಸ್ಯಂ (ಗಿರಿಕ. ೬-೬೬). [ವಿಲಾಸ$_1$ + ಪೆಱು$_1$]

**ವಿಲಾಸತೆ,** ವಿಳಾಸತೆ (ನಾ). ೧. ಕ್ರೀಡೆ ; ಲೀಲೆ : ಘನಮಾಯಾವಿಲಾಸತೆಯಿಂದ ಕೌಶಿಕ ಹೊಕ್ಕನಾ ನೃಪನ (ತೊರರಾ. ೩-೨-೨೬). ೨. ಚೆಲುವು ; ಸೊಬಗು : ಕ್ಷಿತಿಪಶ್ರೀವಿಭವವಿಲಾಸತೆಯಂ ಪೇಱುರಮೆ ಪೇೞ್ಗುಂ (ಶಾಂತಿಪು. ೩-೪೨). **ವಿಳಾಸತೆ:** ೨. ಭಾಸುರವೆ ಸಾಕಾರವಾದ ವಿಳಾಸತೆಯಲಿಪ್ಪಾದಿರುದ್ರಗೆ ವಾಸವಾದುದು ತನಗೆ ತಾನೆ ಮಹಾಮಹತ್ವದಲಿ (ಪ್ರಭುಲೀ. ೨-೪). [ಸಂ. ವಿಲಾಸತಾ]

**ವಿಲಾಸವಾಸ** (ನಾ). (ಬೇಸಗೆಯಲ್ಲಿ ಉಪಯೋಗಿಸುವ) ವಿಶ್ರಾಂತಿಗೃಹ ; ವಿಹಾರಸ್ಥಳ : ಅಸುಗೆಯ ಮಿಸುಪ ಪೊಸದಳಿರಿಂದೆಸೆಯೆ ಪೊದೆಯಿಸಿ ವಾಸಂತಿಯ ಮುಗುಳ ಸೂಸಕದಿಂ ದೇಸೆವಡೆದ ವಿಲಾ[ಪಾಠಾಂ. ಳಾ]ಸವಾಸಲಕ್ಷ್ಮಿಯ ಚುಂಚಿನಂತೆ ಚಂಚುರಮಾದ ಚಂಚುಲೋವೆಗಳೊಳಂ (ಚಂದ್ರಪು. ೭-೯೫ ವ). [ಸಂ.]

**ವಿಲಾಸಾವಾಸ** (ನಾ). ೧. = ವಿಲಾಸವಾಸ : ಭವನಾಂಗಂ ಕಲ್ಪಭೂಜಂ ಸಮೆದ ಬಹುವಿಧೋತ್ತುಂಗಹರ್ಮ್ಯಾವಳೀಗರ್ಭವಿಲಾಸಾವಾಸದೊಳ್ . . . ಉತ್ಸವಮಂ ತಾಳ್ದು (ಚಂದ್ರಪು. ೩-೩೭). ೨. ಸೊಬಗಿನ ನೆಲೆ : ಅದು ಪರಮಾಸ್ಪದಮದು ಪುಣ್ಯಸಂಪದಮದು ಮಹಾಭ್ಯುದಯವಿಲಾಸಾವಾಸಂ (ಸುಕುಮಾ. ೧೨-೫೧). [ಸಂ.]

**ವಿಲಾಸಿ,** ವಿಳಾಸಿ (ಗು). ೧. ಹುಡುಗಾಟಿಕೆಯ ; ವಿನೋದದಿಂದ ಕೂಡಿದ. ೨. ಬೆಡಗಿನಿಂದ ಕೂಡಿದ ; ಒಯ್ಯಾರದ. (ನಾ). ೩. ಹಾಸ್ಯಗಾರ ; ಚೇಷ್ಟೆಗಾರ. ೪. ವಿಷಯಲೋಲುಪನಾದವನು ; ವಿಷಯಲಂಪಟ. **ವಿಳಾಸಿ :** ೫. ಸೊಬಗ ; ಸೊಗಸುಗಾರ : ಪುಷ್ಪಸಂಕುಳದೊಳ್ ನೀನೆ ವಿಳಾ[ಪಾಠಾಂ. ಲಾ]ಸಿಯ್ಯೆ (ಆದಿಪು. ೧೧-೯೭). [ಸಂ. ವಿಲಾಸಿನ್]

**ವಿಲಾಸಿಕೆ** (ನಾ). [ಕಾವ್ಯಮಿ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು ; ℙ "ಇದರಲ್ಲಿ ಒಂದೇ ಅಂಕ ; ಶೃಂಗಾರ ಹೆಚ್ಚು ; ಹತ್ತು ಲಾಸ್ಯಾಂಗಗಳು,ವಿದೂಷಕ ವಿಟ ಪೀಠಮರ್ದರು ಇರುತ್ತಾರೆ ; ಗರ್ಭ ವಿಮರ್ಶಸಂಧಿಗಳಿಲ್ಲ ; ನೀಚನಾಯಕ ; ಕಥಾವಸ್ತು ಸ್ವಲ್ಪ ; ನೇಪಥ್ಯ (ವೇಷ ಭೂಷಾದಿ) ರಚನೆ ಚೆನ್ನಾಗಿರುತ್ತದೆ" (ಸಂನಾಟ. ೩೫) : ೧. ನಾಟಿಕಾ. ೨. ತ್ರೋಟಕ . . . ೧೪. ವಿಲಾಸಿಕಾ . . . ೧೮. ಭಾಣಿಕಾ — ಎಂದು ಉಪರೂಪಕಗಳು ಹದಿನೆಂಟು ವಿಧ (ಸಂನಾಟ. ೩೨). [ಸಂ. ವಿಲಾಸಿಕಾ]

**ವಿಲಾಸಿತ** (ಗು). ೧. ಉಲ್ಲಾಸಗೊಳಿಸುವ ; ಆಹ್ಲಾದಕರವಾದ : ವಾಸವಾಧಿಕ ಗಾನಸೌಖ್ಯವಿಲಾಸಿತತ್ರ್ಯೈ ಸೋಮಪಾನವನಾಸೆಯಿಂ ಸೇವಿಸುವ ಕಷ್ಟ ಮಹೀಸುರರ ಕೂಡೆ (ಬಸಪು. ೫೭-೭೮). (ನಾ). ೨. ಲೀಲೆ ; ವಿನೋದ ; ಕ್ರೀಡೆ : ತನು ಹೇಳಿಗೆ ಮನ ಸರ್ಪನಾಗಿ ತನ್ನಯ ವಿಲಾಸಿತದಿಂದ ಹೆಡೆಯೆತ್ತಿ ಆಡುತ್ತಿರಲಾಗಿ (ಸಕವ. ಕ. II, ೬೩೬-೧೮೦೮) ; ಘಟದಿಂದ ಚಂದವಲ್ಲದೆ ಆತ್ಮಂಗೆ ಒಂದೇ ವಿಲಾಸಿತ (ಮೋಳಿಮಾ. ೮೩-೩೩೦). [ಸಂ.]

**ವಿಲಾಸಿನಿ, ವಿಳಾಸಿನಿ** (ನಾ). ೧. ಬೆಡಗಿ ; ಒಯ್ಯಾರಿ : ನಿರತಿಶಯಮಕ್ಕುಮದು . . . ಗುರುಜಘನಸ್ತನಭರಮಂಥರಲೀಲಾಲಸವಿಲಾ [ಪಾಠಾಂ. ಳಾ]ಸಿನೀಚಳಿತಂಬೋಲ್ (ಕವಿರಾ. ೧-೭೭) ; ಕುಟಿಲಚಂಚಲಕಠಿನಕೃಶವಮಾಂದ್ಯಮೆಂಬಿವುತ್ಕಟಯೌವನಶ್ರೀ ವಿಲಾಸಿನಿಯರಳಕಾಳಿ ಚಟುಲಸುಕಟಾಕ್ಷ ವಕ್ಷೋಜಾತ ಮಧ್ಯಗತಿಗಳ ವಿಲಾಸದೊಳಿಲ್ಲದೆ ಘಟಿಸದು (ಜೈಮಿಭಾ. ೩-೭). **೨. ಹೆಂಗಸು ; ಸ್ತ್ರೀ. ೩. ಸೂಳೆ ; ವೇಶ್ಯೆ** : ಅರಸರಿಗೆ ತಂದೆಚೆದು ಮೊದಲಲಿ ಅರಸಿಯರಿಗೆಚೆದಾ ವಿಲಾ[ಪಾಠಾಂ. ಳಾ]ಸಿನಿಯರಿಗೆಚೆದು ದಾದಿಯರಿಗೆಚೆದು (ಬಸವು. ೫೯-೨೭) ; ಅವರು ಅಪ್ಸರೆಯರು — ಪಟ್ಟಣದ ಚದುರೆಯರು- ಅರಮನೆಯ ವಿಲಾಸಿನಿಯರು (ಧರ್ಮಸಾ. ೬೭). **೪. ಸಖಿ ; ದಾಸಿ** : ಈತನೇ ಧೃತರಾಷ್ಟ್ರನೆರಡನೆಯಾತ ಪಾಂಡು ವಿಲಾಸಿನೀಸಂಭೂತನೀತನು ವಿದುರನೆಂದಾಯ್ತವರಿಗ ಭಿಧಾನ (ಕುವ್ಯಾಆ. ೩-೧೧). **ವಿಳಾಸಿನಿ: ೨. ಸೊಗಯಿಸುವ** ಪೊಜಿವೊಟಿಲ ವಿಲಾಸಮಂ ನೋಟ್ಟವನ ವಿಳಾಸಿನಿಯರ ಸಿರಿಯ ನಗೆಗಣ್ಗಳೆನಿಪ ಕಮಲಕುವಲಯವನಂಗಳಿಂ ಮನಂಗೊಳಿಸಿ (ಮಲ್ಲಿಪು. ೨-೪೯). **೩.** ಕನಕಗೋಪುರಂಗಳೊಳಗಣೆರಡು ದೆಸೆಯ ಗುಣಣೆಯಿಂ ವಿಳಾಸಿನಿಯರ ಗಡಣೆಯಿಂ . . . ಕನಕಶೈಲಮೆನಿಸಿ ನೆಗಟ್ದ ಭೂಮಿಪಾಲಭವನದಿಂ (ಪಂಪಭಾ. ೧-೫೮) ; ಲಜ್ಜೆಯಂ ಕುಲವಮಂ ದಾಂಟಿ ಕೆಲರ್ವಿಳಾಸಿನಿಯರಾದ ರ್ವಿಶ್ವಭೂಭಾಗದೊಳ್ (ಮಡಕಿ. ೧೦-೧). **೪. ದೇವಿ** ಸ್ನಾನವ ಮಾಡಿ ಬಟ್ಟೆಯಂ ತರವೇಳಲು ತಡೆಯದೆ ವಿಳಾಸಿನಿಯು ಬಂದು ಪೆಟ್ಟಿಗೆದೆಗೆಯೆ ಉಡುವ ವಸ್ತುಗಳೆಲ್ಲ ಛಿದ್ರವಾಗಿರೆ ಹೆದರಿ (ಪ್ರೌಢರಾ. ೬-೫೦). [ಸಂ. ವಿಲಾಸಿನೀ]

**ವಿಲಿಖಿತ, ವಿಳಿಖಿತ** (ಗು). ೧. ಬರೆದ ; ಚಿತ್ರಿಸಿದ : ಮೃಗಮದವಿಲಿಖಿತವಿಚಿತ್ರಪತ್ರ ಭಂಗಭಾಸುರಭುಜಶಿಖರನುಂ (ಆದಿಪು. ೩-೯೦ ವ) ; ಆ ಶೃಂಗಾರರಸತರಂಗಿಣಿಯ ತುಂಗಸ್ತನಕಪೋಲಕವಿಲಿಖಿತಮೃಗಮದಪತ್ರಭಂಗಂಗಳಿಂ ಚಿತ್ರಕಳಾಕೌಶಲಮಂ ಪ್ರಕಾಶಿಸಿಯುಂ (ಚಂದ್ರಪ್ರ. ೨-೧೭ ವ). **ವಿಳಿಖಿತ : ೨. ಕೊರೆದ; ಕೆತ್ತಿದ** : ಬಳಸುವ ಚಂದ್ರಭಾನುಭಗಣ ಪ್ರತಿಬಿಂಬಕದಂಬಮೆತ್ತಲುಂ ವಿಳಿಖಿತಸೋಮಸೂರ್ಯ ನಿಬಿಡಾಕ್ಷರಮಾಳಿಕೆಯಂದದಿಂ ಮನಂಗೊಳಿಸೆ (ಚಂದ್ರಪ್ರ. ೧-೭೪). [ಸಂ.]

**ವಿಲಿಪ್ತ** (ಗು). ಬಳಿದ ; ಸವರಿದ ; ಲೇಪಿಸಿದ : ದ್ರೌಪದೀಕುಚಕುಂಭಾರ್ಪಿತ ಕುಂಕುಮದ್ರವವಿಲಿಪ್ತೋರಸ್ಥಳಂ ದಾಂಟೆ ಕೀರ್ತಿ ಚತುರ್ವಾರ್ಧಿಯನಿರ್ದನಂದು ಸುಖದಿಂ ವಿದ್ವಿಷ್ಟವಿದ್ರಾವಣಂ (ಪಂಪಭಾ. ೩-೮೫) ; ಪಾರ್ವತೀಪಯೋಧರ ಲೇಪಿತಮೃಗಮದವಿಲಿಪ್ತವಕ್ಷಸ್ಥಳಂ (ರಾಜಶೇ. ೨-೧). [ಸಂ.]

**ವಿಲಿವಿಲಿ** (ನಾ). ಒಂದು ಅನುಕರಣಶಬ್ದ : ಹಳದಾಗಿ ನಾರುತ್ತ ಹುಳಿತು ವಿಲಿವಿಲಿಯೆಂಬುದಂ (ವೀಶೈಪು. ೩-೧೦-೩೭) ; ರಾಘಪ್ಪನ ವಾದದಲ್ಲಿ ಸಿಲುಕಿ ದೇಸಾಯರು ವಿಲಿವಿಲಿ ಒದ್ದಾಡಿದರು (ಗಂಮಾಯಿ. ೧೧೭).

**ವಿಲಿವಿಲಿಸು** (ಕ್ರಿ). ವಿಲಿವಿಲಿ ಎಂದು ಒದ್ದಾಡು, — ನರಳು : ಪಾಪದ ಬೀಜ ಒರ್ಬುಳಿಸಿದಂತೆ ದೋಷದ ಹುತ್ತ ನೆಗೆದಂತೆ ಪುಳುವಿನ ರಾಶಿ ವಿಲಿವಿಲಿಸುತ್ತಿರೆ (ಜೊಮ್ಮರ. ಹ. ೩೩೮-೧೪) ; ಹೊಲಸಿನ ನೆಲೆ ರುಧಿರದ ಕುಳಿ ವಿಲಿವಿಲಿಸುವ ಪುಳುಗಳೊಗೆವ ಪುತ್ತು (ವೃಷವಿ. ೨೮-೭೦). [ವಿಲಿವಿಲಿ + – ಇಸು]

**ವಿಲೀನ** (ಗು). ೧. ಆಸಕ್ತವಾದ ; ಮಗ್ನವಾದ. ೨. ಐಕ್ಯವಾದ ; ಲೀನವಾದ : ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಳಯವಿಲೀನವಿಶದವಿಷಯವಿಶೇಷಂ (ಕವಿರಾ. ೧-೩೭) ; ರಣಾಂಗಣದಂತೆ ಚಮೂರಚಿತಪ್ರಹರಣ ವಿಶೀರ್ಣರೂಪಮುಂ ದಂತಿದಾನವವಿಲೀನಶಿಲೀಮುಖಮುಂ (ಚಂದ್ರಪ್ರ. ೫-೫೨ ವ). ೩. ಕರಗಿದ. ೪. ಕಣ್ಮರೆಯಾದ ; ಕಾಣದಂತೆ ಆದ. (ನಾ). ೫. ಕರಗಿಸಿದ ತುಪ್ಪ : "ವಿಲೀನಂ, ದ್ರುತಂ — ಈ ೨ ಕರಗಿಸಿದ ತುಪ್ಪ" (ಹಲಾಯು. ೪೭-೧೨೧). ೬. ಐಕ್ಯನಾದವನು ; ಲೀನನಾದವನು : ಅಕ್ಕಜಿಂ ಬಾಲೇಂದುಧರನೊಳು ಪೊಕ್ಕು ಪೊಕ್ಕಲರ್ದಲರ್ದು ಕೂಡುತ ಸೊಕ್ಕಿ ತಲ್ಲಿಂಗದೊಳಗಿಂತು ವಿಲೀನನಾಗಿರ್ದು (ಬಸವು. ೩೫-೪). ೭. [ನಾಟ್ಯ] ಉಸಿರಾಟದ ಒಂದು ಭಂಗಿ ; IP "ಮೂರ್ಛೆ ಹೋದವನಂತೆ ಉಸಿರಾಡುವುದು" (ಲಾಸ್ಯರಂ. ೨೭೮ ಗದ್ಯಾನುವಾದ) : ಸಮ, ಭ್ರಾಂತ, ವಿಲೀನ, ಆಂದೋಲಿತ, ಕಂಪಿತ, ಸ್ತಂಭಿತ . . . ಸೀತ್ಕೃತ – ಈ ಹತ್ತು ಮೊದಲ ಒಂಬತ್ತುಗೂಡಿ ಒಟ್ಟು ಹತ್ತೊಂಬತ್ತು ಭೇದಂಗಳ್ (ಲಾಸ್ಯರಂ. ೩-೭೮ ವ). [ಸಂ.]

**ವಿಲೀನಗೊಳ್ಳು** (ಕ್ರಿ). ಸೇರಿಹೋಗು ; ಸೇರಿಕೊಳ್ಳು ; ಐಕ್ಯವಾಗು : ಈ ಪ್ರದೇಶದ ಬಹುಭಾಗವು ಮೌರ್ಯಸಾಮ್ರಾಜ್ಯದೊಂದಿಗೆ ವಿಲೀನಗೊಂಡಿದ್ದುದನ್ನು ಕಾಣುತ್ತೇವೆ (ನೊಳಂಬ. ೬೯). [ವಿಲೀನ + ಕೊಳ್ಳು (< ಕೊಳ್)]

**ವಿಲೀನಿತ** (ಗು). ೧. ಮಗ್ನನಾದ ; ಆಸಕ್ತನಾದ. (ನಾ). ೨. ಮಗ್ನನಾದವನು ; ಆಸಕ್ತನಾದವನು : ಅಮಳಲಿಂಗದೊಳತಿವಿಲೀನಿತನಾಗಿ ತಾನಿರ್ದಹನೊ ಬಸವೇಶ (ಬಸವು. ೩೫-೪೦). [ಸಂ.]

**ವಿಲೀನೆ** (ನಾ). ಐಕ್ಯಳಾದವಳು ; ಲೀನವಾದವಳು : ನುತಿವೆಂ ಸೇವಿತಶಕ್ತಿವಿತಾನೆಯ . . . ಶಂಕರನಂಕವಿಲೀನೆಯನು (ಉದ್ಭಟದೇ. ೩-೪). [ವಿಲೀನ + – ಎ]

**ವಿಲುತ್ಯ** (ಗು). ಸೆಳೆದುಕೊಳ್ಳಲ್ಪಟ್ಟ ; ಸುಲಿಗೆಯಾದ : ಪೂರ್ಣಪಾತ್ರಹರಣ ವಿಲುತ್ಯಮಾನವಸನಭೂಷಣಮುಂ (ಕಾದಂಪೂ. ೪೧೦). [ಸಂ.]

**ವಿಲುಪ್ತ** (ಗು). ೧. ನಾಶಹೊಂದಿದ ; ಧ್ವಂಸವಾದ : ಚಪಳಕಪಿಬಳವಿಲುಪ್ತ ವಿಗಳಿತಲತಾಭವನಮುಂ (ಪಂಪಭಾ. ೪-೧೮ ವ). (ನಾ). ೨. ಲೋಪ ; ಚ್ಯುತಿ ; ನಾಶ : ಅಭಿನವಗುಪ್ತನ ವಿಮರ್ಶನಶಕ್ತಿ ವಿಲುಪ್ತವಾಯಿತೇ ಎಂಬುದನ್ನು ನಿರ್ಣಯಿ ಸಲು ಸಾಧ್ಯವಿಲ್ಲ (ಭಾರಮೀ. ೭೪). [ಸಂ.]

**ವಿಲುಪ್ತಿ** (ನಾ). ಲಯ ; ನಾಶ : ಇಂಥ ವಿಲುಪ್ತಿಯ ಪರಿಚಯವನ್ನು ನಾವು ಬೇರೆ ಕಡೆ ನೋಡಿದ್ದೇವೆ (ನಿಬಂಧ. II, ೩೦೭) ; ಪ್ರಾಪ್ತಿಯು ಜಗಿವುದು ಚಿರವಿಲುಪ್ತಿಯಲಿ (ಕರುಶ್ರಾ. ೯೭-೨೦). [ಸಂ.]

**ವಿಲುಲಿತ, ವಿಲುಳಿತ** (ಗು). ೧. ಉರುಳಿ ಬಿದ್ದ ; ಉರುಳಿದ : ಹರ್ಷಪುಳಕಿತ ಸರ್ವಾಂಗನಾನಂದಬಾಷ್ಪಸಲಿಲವಿಲುಲಿತವಿಲೋಚನಂ (ಪಂಪಾರಾಮಾ. ೧೨-೧೦ ವ) ; ವಿಲುಲಿತ ಘರ್ಮವಾರಿಕಣದಿಂ ಕೆಸಟೇಳ್ದಿಳಿತರ್ಪ ಗಂಡಮಂಡಲಕೃತಪತ್ರಭಂಗಮೃಗ ನಾಭಿಜಮಂ ಬಳಿದಿಟ್ಟು (ರಾಜಶೇ. ೧೨-೭). **ವಿಲುಳಿತ :** ೧. ಆನಂದಾಶ್ರು ವಿಲುಳಿತ ಕಮಲವಿಲೋಚನೆ. . . ಇಂತಾತುರದೊಳಿರ್ದಳ್ (ರಾಮಾಶ್ವ. ೨೮-೩). **೨. ತಿರುಗಿಕೊಂಡಿರುವ ; ತಿರುಗಿರುವ** : ಸಂಗ್ರಾಮಭೂಮಿಯ ನಡುವೆ ಧೃಷ್ಟದ್ಯುಮ್ನಕಚಗ್ರಹವಿಲುಳಿತಮೌಳಿಯುಂ ತದೀಯ ಕೌಕ್ಷೇಯಕಧಾರಾವಿದಾರಿತ ಶರೀರನುಮಾಗಿ ಬಿಟ್ಟಿರ್ದ ಶರಾಚಾರ್ಯರಂ ಕಂಡು (ಪಂಪಭಾ. ೧೩-೫೫ ವ) ; ನಿಸರ್ಗ ದುಷ್ಟಧೃಷ್ಟದ್ಯುಮ್ನನ ಕಚನಿಗ್ರಹಕರವಿಲುಳಿತಮೌಳಿಯಾಗಿರ್ದ ಭಾರದ್ವಾಜನಿರವಂ ರಾಜರಾಜಂ ನೋಡಿ (ಗದಾಯು. ೪-೪೮ ವ). **೩. ಚಂಚಲ ; ಅಲ್ಲಾಡುತ್ತಿರುವ** : ಮುಗಿಲೊಡ್ಡಂತಂತೆ ವಾತಾಹತವಿಲುಳಿತ ದೀಪಾರ್ಚಿಯೆಂತಂತೆ ನೋಡಲ್ ಸೊಗ ಯಿಪ್ಪೈಶ್ವರ್ಯಮುಂ ಯವ್ವನವಿಳಸನಮುಂ (ವರ್ಧಮಾ. ೭-೩೭). [ಸಂ.]

**ವಿಲುಳಿತ** 'ವಿಲುಲಿತ' ನೋ.

**ವಿಲೂನ** (ಗು). ಕತ್ತರಿಸಿದ ; ತುಂಡರಿಸಿದ ; ಭೇದಿಸಿದ : ಅವನೀನೂತಯಶಂ ಯಶೋಧವಳಿತಾಶಾಮಂಡಳಂ ಮಂಡಳಾಗ್ರವಿಲೂನಾರಿಬಲಂ (ಎಕ. VI, ಚಿಕ್ಕಮ. ೧೬೧-೬೭; 1137) ; ಅನ್ಯದೈವಮತಂಗಮದಹರಿ ಅನ್ಯದೈವ ಕುರಂಗ ಮೃಗರಿಪು ಅನ್ಯದೈವಲತಾ ವಿತಾನವಿಲೂನಸಿತಗಾತ್ರ (ಬಸವು. ೫೩-೪). [ಸಂ.]

**ವಿಲೂನನಾಸೆ** (ನಾ). ಒಂದು ಬಗೆಯ ಮರ ; ಮೂಕೊರತಿ : ವಿಲೂನನಾ [ಪಾಠಾಂ. ವಾ]ಸೆಯ ಸುರೂಪೆಯ . . . ಕೆಂಡದಬ್ಬಿನೀವರನಭಿಧಾನಮು ತಳೆದ ಭೂರುಹಮೊಪ್ಪುಗುಮಾ ವನಾಂತದೊಳ್ (ರಾಜಶೇ. ೫-೫೭).

[IP ಇದು 'ಮೂಕೊರತಿ' ಎಂಬ ಶಬ್ದದ ಸಂಸ್ಕೃತೀಕರಣ]

**ವಿಲೆ** (ನಾ). ೧. ವರ್ಗ ; ಶ್ರೇಣಿ ; ಗುಂಪು : (ಶಿ). ೨. ವ್ಯವಸ್ಥೆ ; ಏರ್ಪಾಡು : (ಶಿ). ೩. ಮಾರಾಟ ; ವಿಕ್ರಯ : ಒಂದು ಹಸುವನ್ನೋ ಎತ್ತನ್ನೋ ಒಂದು ಪದಾರ್ಥವನ್ನೋ ಮಾರುವಂತೆ ತೂರನನ್ನು ಅವನ ಚಿಕ್ಕಪ್ಪ ವಿಲೆ ಮಾಡುತ್ತಿದ್ದನು (ಚಿಸ್ವಕ. ೩೫) ; ಆ ಜಮೀನನ್ನು ಬಹಿರಂಗ ಹರಾಜಿನಲ್ಲಿ ವಿಲೆ ಪಡಿಸಬೇಕೆಂದು ಮತ್ತೆ ಆಜ್ಞೆಯಿತ್ತರು (ಅಧಿಕಾ. ೫೭) ; ಸ್ವತ್ತನ್ನು ಅರ್ಜಿಸುವುದಕ್ಕೆ ಇಟ್ಟುಕೊಳ್ಳುವುದಕ್ಕೆ ಮತ್ತು ವಿಲೆ ಮಾಡುವುದಕ್ಕೆ . . . ಅಧಿಕಾರವಿರತಕ್ಕುದು (ಭಾಧಾನ. ೧೧). **೪. ಹಂಚಿಕೆ** : (ಶಿ). ೫. ತೀರ್ಮಾನ : (ಶಿ).

ವಿಲೇಬೀಳು = ನಿರ್ಣಯವಾಗು; ಮುಕ್ತಾಯಕ್ಕೆಬರು; ತೀರ್ಮಾನವಾಗು:

ಅಲ್ಲಿಗೆ ದಾಖಲಾದವನಿಗೆ ವಿಲೇಬಿದ್ದ ಕಾಗದದ ಹಾಗೆ ಭವಿಷ್ಯವೇ ಇಲ್ಲ (ಕಲಸ. ೨೯೫).
[<— ಅರ. ವಿಲ್ಯಾ ; ಮರಾ. ವಿಲೇ, ವಿಲ್ಹಾ, ವಿಲ್ಹೇ./ ತೆಲು. ವಿಲಿಯ]

**ವಿಲೇವಾರಿ** 'ವಿಲೇವಾರಿ' ನೋ.

**ವಿಲೇಖನ** (ನಾ). ೧. ಬರೆಯುವಿಕೆ. ೨. ಗೀಚುವಿಕೆ ; ಗೀರುವುದು. ೩. ನೇಗಿಲಿನಿಂದ ಭೂಮಿಯನ್ನು ಉಳುವಿಕೆ, – ಸಾಲುಮಾಡುವಿಕೆ. ೪. ಒಂದು ಬಗೆಯ ನರಕಶಿಕ್ಷೆ : ವಿಲೇಖನ... ದುರ್ಭೋಗ್ಯ ನಾನಾವಿಧಾಸಂಖ್ಯಾತ ತೀವ್ರವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷಾಲೇಶಮಂದೆನಿಸಿ (ವಿವೇಕ. ೧೮೧). [ಸಂ.]

**ವಿಲೇಪನ** (ನಾ). ೧. (ಸುಗಂಧದ್ರವ್ಯಗಳನ್ನು ಮೈಗೆ) ಬಳಿಯುವಿಕೆ ; ತೊಡೆಯುವಿಕೆ : ಗುರೂಪರೋಧವಶದಿಂ ಸ್ನಾನಾನ್ನಪಾನಂ ವಿಲೇಪನ ಮಾಲ್ಯಾದಿಗೆ ತಾನೊಡಂಬಡುವನೇಂ ದೇವಂ ನಿರಾಪೇಕ್ಷನೋ (ಅಜಿಪು. ೫-೮೭). ೨. ದೇಹವನ್ನು ಸುಗಂಧಗೊಳಿಸಲು ತೊಡೆಯುವ (ಗಂಧ ಇತ್ಯಾದಿ) ಸುಗಂಧದ್ರವ್ಯ. [ಸಂ.]

**ವಿಲೇಪಿ** (ನಾ). ಅನ್ನದ ಗಂಜಿ : "ಗಂಜಿ ಯವಾಗೂಷ್ಣಿಕಾ ವಿಲೇಪೀನಾಮಂ" (ವಸ್ತುಕೋ. ೯೨-೪). [ಸಂ. ವಿಲೇಪೀ]

**ವಿಲೇಪಿಕೆ** (ನಾ). = ವಿಲೇಪಿ : "ಯವಾಗೂಃ, ಉಷ್ಣಿಕಾ, ಶ್ರಾಣಾ (ಶ್ರೋಣ), ತರಳಾ, ವಿಲೇಪಿಕಾ — ಈ ೫ ಗಂಜಿ" (ಹಲಾಯು. ೫೩-೧೬೫). [ಸಂ. ವಿಲೇಪಿಕಾ]

**ವಿಲೇಪಿತ, ವಿಳೇಪಿತ** (ಗು). ಬಳಿದ ; ಸವರಿದ. **ವಿಳೇಪಿತ** : ಅತಿಶಯಮಸೆದಿರೆ ಮೃದುಪಾದತಳಂಗಳನೂಡಿ ಯಾವಕದ್ರವದಿಂದಂ ಪ್ರತಿದಿನಮಾ ದೇವಿ ವಿಳೇಪಿತ ಕರ್ಮಮನೂರ್ವಳಮರವಧು ಕೆಯ್ಕೊಂಡಳ್ (ಶಾಂತಿಪು. ೯-೧೮೪). [ಸಂ.]

**ವಿಲೇಪಿಸು** (ಕ್ರಿ). ಬಳಿ ; ತೊಡೆ : (೬). [ವಿಲೇಪನ + – ಇಸು]

**ವಿಲೇವಾಟ** (ನಾ). ಮಾರಾಟ ; ವಿಕ್ರಯ : ಲಕ್ಷ್ಮೀಬಾಯಿಗೆ ಆಸ್ತಿ ವಿಲೇವಾಟ ಮಾಡಲಿಕ್ಕೆ ಅಧಿಕಾರಾನ ಇಲ್ಲ (ಗ್ರಾಮಾಯ. ೩೧೪) ; ನನ್ನ ಸ್ವಾರ್ಜಿತಆಸ್ತಿಯ ವಿಲೇವಾಟದ ಅಧಿಕಾರ ಕೇವಲ ನನಗೇ ಇರುವುದರಿಂದ ಅದರಲ್ಲಿ ಯಾರದೂ ಹಸ್ತಕ್ಷೇಪ ನಡೆಯಲಾರದು (ದೀಪಹ. II, ೧೦೪). [<— ಮರಾ. ವಿಲ್ಹೇವಾಟ್ = ವ್ಯವಸ್ಥೆ]

**ವಿಲೇವಾರಿ, ವಿಲವಾರಿ** (ನಾ). ೧. ವಿತರಿಸುವುದು ; ಬಟವಾಡೆ ; ಹಂಚಿಕೆ : ಸಾಯುವ ಮೊದಲು ತನ್ನ ಆಸ್ತಿಯನ್ನೆಲ್ಲ ಮರಣಶಾಸನದ ಮೂಲಕ ವಿಲೇವಾರಿ ಮಾಡಿದ್ದ (ಗಂಗಾಳ. ೪೭) ; ನೀವು ದಣಿಗಳು. ಮನಸ್ಸು ಬಂದ ಹಾಗೆ ನೀವದನ್ನು ವಿಲೇವಾರಿ ಮಾಡಬಹುದು (ಪುನರು. ೩೦೫). ೨. ವರ್ಗೀಕರಣ ; ವಿಂಗಡಣೆ : ಹಳೆಯ ಕಾಗದಗಳ ವಿಲೇವಾರಿ ಮಾಡಿಬಿಡೋಣ ಎಂದು ಕುಳಿತೆ (ಮನೋಸಂ. ೨೨) ; ಈ ವಿಲೇವಾರಿಗಳ ಪೈಕಿ ಯಾವುದರಿಂದ ಗೋವಿಂದನಿಗೆ ಹೆಚ್ಚು ತೃಪ್ತಿಯಾಗುತ್ತದೆಯೋ ಸಾಧ್ಯವಿದ್ದರೆ ಅದನ್ನು ಮಾಡುತ್ತಾನೆ (ಭಾರದ. ೬). ೩. ಮಾರಾಟ ; ವಿಕ್ರಯ : ಕೆರೆ ಕಟ್ಟಿಸಿದರೆ ತನ್ನ ಜಮೀನೆಲ್ಲ ಮುಳುಗಡೆಯಾಗುತ್ತದೆ ಎಂದು ಭಾವಿಸಿ ತನ್ನ ಆಸ್ತಿ ಪಾಸ್ತಿಯನ್ನೆಲ್ಲ ವಿಲೇವಾರಿ ಮಾಡಲಾರಂಭಿಸಿದ (ನಮ್ಮೂರು. ೫). **ವಿಲವಾರಿ** : ೨. ಎರಡನೇ ವಿಲವಾರಿಯ ಯಾದಿಯಲ್ಲಿ ಯಾವ ಜಿನಸಿನ ತೂಕ ಎಷ್ಟು ಇರುತ್ತದೆ (ಮುಂಬವ್ಯಾ. ೯ ಪ್ರಸ್ತಾವನೆ). ೪. ವ್ಯವಸ್ಥೆ ; ಏರ್ಪಾಡು : ಅಜ್ಜ ತೀರಿಕೊಂಡ ಮೇಲೆ ಆಗಬೇಕಲ್ಲ ಏನಾದರೊಂದು ವಿಲವಾರಿ (ಕುಡಿಕೂ. ೧೩೩).
[<— ಮರಾ. ವಿಲ್ಹೇವಾರೀ, ವಿಲ್ಹೇವಾರ್./ ತೆಲು. ವಿಲೇವಾರಿ]

**ವಿಲೋಕ** (ನಾ). ನೋಡುವಿಕೆ ; ಅವಲೋಕನ : ಲೋಕಾಲೋಕಾವಿತತವಿಲೋಕಂ ಜ್ಞಾನಂ ಸಮೂರ್ಜಿತಾವದ್ಯವಿದಶ್ರೀಕಂ ಚರಿತ್ರಮಟಿ ಪರಲೋಕಮುಮಿಾ ಲೋಕಮುಂ ತದಾಯತ್ತಂಗಳ್ (ಶಾಂತಿಪು. ೬-೪೭). [ಸಂ.]

**ವಿಲೋಕನ, ವಿಳೋಕನ** (ನಾ). ೧. ನೋಡುವಿಕೆ ; ಅವಲೋಕನ. ೨. ನೋಟ ; ದೃಷ್ಟಿ : ಮದೀಯಮನೋಗತಕಾಮರಾಗಸಾಗರದೊದವಿಂಗೆ ನಲ್ಲಳ ವಿಲೋಕನ ಚಂದ್ರಿಕೆಯೊಂದೆ ಸಾಲದೇ (ಪಂಪಭಾ. ೫-೧೧) ; ಮನಸಿಜನ ವಿಲೋಕನಾಕರ್ಷಣಸ್ಥಾನದಂತೆ ಪಂಚಾಂಡಕಪರಿಣತಿಯಂ . . . ಅತಿಶಯಮಾದ ಚಿತ್ರಶಾಲೆಯಿಂ ಮನಂಗೊಳಿಸಿ (ಮಲ್ಲಿಪು. ೨-೭೪). **ವಿಳೋಕನ** : ೨. ಲಳಿತಮಧುರಂ ಲಜ್ಜಾಳೋಳಂ ಸ್ಮರಾಕುಳಿತಂ ಮನಂದಳಿತಮಪಸನ್ಮುಗ್ಧಂ ಸ್ನಿಗ್ಧಂ ವಿಳೋಕನಮೋಪಳಾ (ಪಂಪಭಾ. ೪-೭೭) ; ಅನಿಮಿತ್ತದರಸ್ಮಿತದಿಂದನಕ್ಷರಾಳಾಪದಿಂದಸಂಕೇತವಿಳೋಕನದಿಂದಕಾರಣಾಸಂದನದಿಂದುತ್ಥಾನ ಶಯನದಿಂ ಹರಿಯಿಸೆದಂ (ಜಗವಿ. ೩-೨೯). [ಸಂ.]

**ವಿಳೋಕನಂಗೆಯ್** (ಕ್ರಿ). ನೋಡು ; ಅವಲೋಕಿಸು : ತನ್ನ ಮನೆಗೆ ಪಂದು ನಿಜಾಂಗನಾಮುಖವಿಳೋಕನಂಗೆಯ್ಯು (ಸುಕುಮಾ. ೩-೧೫ ವ) ; ಕೈಕೆಯ ಮುಖಕಮಲ ವಿಳೋಕನಂಗೆಯ್ದು . . . ವಿಕಸಿತಹೃದಯಕಮಲನುಮಾಗಿ (ಪಂರಾಮಾ. ೬-೧೧೩ ವ).
[ವಿಳೋಕನ + ಕೆಯ್$_1$]

**ವಿಲೋಕಿತ** (ಗು). ೧. ನೋಡಲಾದ ; ಅವಲೋಕಿತವಾದ. (ನಾ). ೨. ನೋಟ ; ದೃಷ್ಟಿ. ೩. [ನಾಟ್ಯ] ನೋಟದ ಒಂದು ಭಂಗಿ ; ಕಣ್ಣಿನ ಆಲಿಯ ಎಂಟು ಬಗೆಯ ಚಲನಗಳಲ್ಲಿ ಒಂದು ; IP "ಹಿಂದಕ್ಕೆ ತಿರುಗಿ ನೋಡುವುದು" (ಲಾಸ್ಯರಂ. ೨೭೫ ಗದ್ಯಾನುವಾದ) : ಸಮ, ಸಾಚಿ, ಅನುವೃತ್ತ, ಅವಲೋಕಿತ, ವಿಲೋಕಿತ, ಉಲ್ಲೋಕಿತ, ಆಲೋಕಿತ, ಪ್ರವಿಲೋಕಿತ — ಈ ಎಂಟು ವಿಷಯಾಭಿಮುಖ ಆಲಿಯ ಭೇದಂಗಳ್ (ಲಾಸ್ಯರಂ. ೩-೬೩ ವ) ; ಕಣ್ಣು ಆಲಿಗಳ ೮ ಚಲನೆಗಳಿವೆ. ಅವು ಯಾವುವೆಂದರೆ ೧. ಸಮ. ೨. ಸಾಚಿ . . . ೫. ವಿಲೋಕಿತ . . . ೮. ಅವಲೋಕಿತ (ಅಭಾನ್ಯ. ೪೭). [ಸಂ.]

**ವಿಲೋಚನ, ವಿಳೋಚನ** (ನಾ). ಕಣ್ಣು ; ನೇತ್ರ : "ಈಕ್ಷಣ ನಯನ ವಿಲೋಚನ ಚಕ್ಷುರ್ನೇತ್ರಾಂಬಕಾಕ್ಷಿಗಳ್ ದೃಷ್ಟ್ಯಾಮಂ" (ವಸ್ತುಕೋ. ೭೦-೧೭) ; ಕಾಳಿಗದ ಕರ್ಣಾಮೃತದ ಮಳೆಗಾಲ ಮಾದು ವಿಲೋಚನದ ಮಳೆಗಾಲವಾಯ್ತೆಂದ (ಕುವ್ಯಾಕ. ೨೭-೧). **ವಿಳೋಚನ** : ಜಳಧಿಜೆಯ ರಾಗರಂಜಿತವಿಳೋಚನಂ ವರದ ಕರದ ಪೊಗರೇಱಿಸುಗುಂ (ವಸ್ತವಂ. ೨-೧೪). [ಸಂ.]

**ವಿಲೋಚನದ್ವಯ** (ನಾ). ಎರಡು ಕಣ್ಣುಗಳು : ಭೂಧವನ ವಿಲೋಚನದ್ವಯಮದೇಂ ಮುದವಾಂತುದೊ ರಾಗರಂಜಿತಂ (ರಾಜಶೇ. ೪-೪೭). [ಸಂ.]

**ವಿಲೋಚನವಾರಿ** (ನಾ). ಕಣ್ಣೀರು ; ಕಂಬನಿ : ನನೆದುದಂತಃಕರಣ ಮಧುಸೂದನನ ಸೂಕ್ತಿಸುಧಾರಸದಿ ನೆಱೆ ನೆನೆದುದಾತನ ಮೈ ವಿಲೋಚನವಾರಿಪೂರದಲಿ (ಕುವ್ಯಾಕ. ೧೭-೨೩). [ಸಂ.]

**ವಿಲೋಚನಾಂಬು** (ನಾ). = ವಿಲೋಚನವಾರಿ : ಮಲಯಾನಿಳನೆಸಕದಿನುದಿರ್ವಲರ್ಗಳ ಮಕರಂದಮಾಲೆಗಳ್ಪರೆದೆತ್ತಂ ನೆಲದೊಳ್ಪಿಟ್ಟುಂ ಪಡೆದುವು ವಿಲೋಚನಾಂಬುಗಳನಗ್ಗಳಂ ವಿರಹಿಗಳಾ (ಕವಿರಾ. ೩-೧೩೬) ; ಮುಂದುವರಿವ ವಿಲೋಚನಾಂಬುಗಳಿಂದ ಸ್ಮರಣೆ ಮಿಗದು ಸಂಜಯನಂದು ದೊಪ್ಪನೆ ಕೆಡೆದು ಹೊರಳಿದನರಸನಂಘ್ರಿಯಲಿ (ಕುವ್ಯಾಗ. ೩-೧೭). [ಸಂ.]

**ವಿಲೋಪ** (ನಾ). ೧. ನಾಶ ; ಹಾಳು. ೨. [ಜೈನ] ಅಸ್ತೇಯವ್ರತಕ್ಕೆ ವಿರೋಧಕರವಾದ ಕೃತಿ ; ಅನ್ಯರ ಸಂಪತ್ತನ್ನು ಹಾಳುಮಾಡುವುದು : ಹೀನಾಧಿಕವಿನಿಮಾನ ಸ್ತೇನಾ[ಹೃತ]ದಾನ ಸದೃಶಮಿಶ್ರವಿಲೋಪಸ್ತೇನಪ್ರಯೋಗ ಮೆಂದಿವು ತಾನಸ್ತೇಯವ್ರತಕ್ಕತಿಕ್ರಮಮಕ್ಕುಂ (ಸುಕುಮಾ. ೬-೧೫). [ಸಂ.]

**ವಿಲೋಪನ** (ನಾ). ೧. ಬಿಡುವುದು ; ಕಳೆದುಕೊಳ್ಳುವುದು ; ತ್ಯಜಿಸುವುದು : ಭರತೇಶ್ವರನಾಮಪ್ಪೊಡೆ ಚರಮಾಂಗಗುರುಮಖಿಲಮಲವಿಲೋ[ಪಾಠಾಂ. ಲೇ]ಪನದಿಂದಂ ಪುರುಪರಮೇಶ್ವರನ್ನೆದಿದ ಪರಮಪದಂ ನಮಗಮದುವೆ ನೆಲೆ ಪೆಱತುಂಟೇ (ಆದಿಪು. ೧೭-೫೭). ೨. [ಜೈನ] ನೀಚಗೋತ್ರ ಆಸ್ರವಕಾರಣಗಳಲ್ಲಿ ಒಂದು : ಯಶೋವಿಲೋಪನಾತ್ಮಕೀರ್ತ್ಯುತ್ಪಾದನ ಗುರುಪರಿಭವಕಾರಣದುದ್ಘಟ್ಟನದೋಷಖ್ಯಾಪನ . . . ತೀರ್ಥಕರಾಧಿಕ್ಷೇಪಾದಿತತ್ಪಪಂಚಂಗಳ್ ನೀಚೈರ್ಗೋತ್ರಾಸ್ರವಕಾರಣಮೆಂಬುದು ಸೂತ್ರಾರ್ಥಂ (ತತ್ತ್ವಪ್ರ. ೨೬೭). [ಸಂ.]

**ವಿಲೋಭನ** (ನಾ). ಮೋಹಗೊಳಿಸುವಿಕೆ ; ಆಕರ್ಷಿಸುವಿಕೆ. [ಸಂ.]

**ವಿಲೋಮ** (ಗು). ೧. ತಿರುಗುಮುರುಗಾದ ; ವಿಪರ್ಯಯವಾದ : ಅಮರಸರೋರುಹ ಮಿತ್ರಗಣಂ . . . ಪಾವಕಂ ಮರುತಂ ಕ್ರಮದೊಳ್ ಬಂದನುಲೋಮ ವಿಲೋಮ ಪದದ್ವಯದಿಂ ನಿಯಮಂ [ಪಾಠಾಂ. ಬಂದನುಲೋಮದೊಳೊಂದಿ ಪದದ್ವಯಂ ನಿಯತಂ] (ಛಂದೋಂಬು. ೩-೨೦೯). ೨. ಪ್ರತಿಕೂಲವಾದ ; ವಿರುದ್ಧವಾದ ; ವಿಪರೀತವಾದ. ೩. ಕೂದಲಿಲ್ಲದ. (ನಾ). ೪. ವ್ಯತ್ಯಾಸ ; ತಿರುಗುಮುರುಗು ; ವಿಪರ್ಯಯ : "ವಿಪರೀತಂ ವ್ಯತ್ಯಾಸಂ ವಿಪರ್ಯಯಂ ವ್ಯತ್ಯ[ಯಂ]

ವಿಲೋಮಮದಕ್ಕುಂ'' (ವಸ್ತುಕೋ. ೧೧೨-೬) ; ಆದಿಕವಿ ಪಂಪನೆಂದನುವಾದಿಸೆ ವಾದಿಸಿ ವಿರೋಧಿ ವಿಪರೀತತೆಯಿಂದೋದೆ ವಿಲೋಮದೆ ಪೆಸರಂ ಮೇದಿನಿಯೊಳಗವನ ಪೆಸರೆ ಪೆಸರ್ವಡೆದೆಸೆಗುಂ (ಧರ್ಮನಾ. ೧-೩೬). ೫. ನಾಯಿ. ೬. ಹಾವು. ೭. ಬಾವಿಯಿಂದ ನೀರು ಎತ್ತಲು ಹಾಕಿರುವ ಚಕ್ರ ; ಏತ. ೮. [ಸಂಗೀತ] ಹಾಡುವಿಕೆಯ ಒಂದು ಕಾಲಪ್ರಮಾಣ : ಪಲ್ಲವಿಯ ಸಹಜಕಾಲಪ್ರಮಾಣ ಸ್ಥಿರವಾಗಿಟ್ಟು ಆ ಕಾಲದ ಓಟಕ್ಕೆ ಸಾಹಿತ್ಯ ವಿಳಂಬಿಸಿ, ಎರಡು ತಗ್ಗಿನ ವಿಳಂಬಪ್ರಮಾಣದಲ್ಲಿ ಹಾಡುವುದು ವಿಲೋಮ ಎನಿಸಿಕೊಳ್ಳುತ್ತದೆ (ಸಂಗೀಚಂ. ೯೩). 'ಅನುಲೋಮ' ಪರಾ. [ಸಂ.]

**ವಿಲೋಮಕ್ರಮ** (ನಾ). ೧. ವಿರುದ್ಧವಾದ ಕ್ರಮ ; ವ್ಯತ್ಯಸ್ತವಾದ ರೀತಿ : ಒಬ್ಬ ವ್ಯಕ್ತಿಯಲ್ಲಿ ಕ್ರೂರತನಕ್ಕಿಂತ ಹೆಚ್ಚು ದಯಾಬುದ್ಧಿಯೂ . . . ಸೋಮಾರಿತನಕ್ಕಿಂತ ಹೆಚ್ಚು ಉತ್ಸಾಹವೂ ಅಥವಾ ಆ ಗುಣಗಳೇ ವಿಲೋಮಕ್ರಮದಲ್ಲಿ ಸಾಕಷ್ಟು ಪ್ರಮಾಣದಲ್ಲಿರುತ್ತವೆಂದು ಹೇಳಬಹುದು (ಪುನರು. ೨೫೩). ೨. [ಸಂಗೀತ] ತಗ್ಗಿನ ವಿಳಂಬ ಪ್ರಮಾಣದಲ್ಲಿ ಹಾಡುವ ಒಂದು ಕ್ರಮ : ಪಲ್ಲವಿಯನ್ನು ಅನುಲೋಮ ಮತ್ತು ವಿಲೋಮಕ್ರಮದಲ್ಲಿ ಹಾಡುವುದು ಸಂಪ್ರದಾಯ (ಸಂಗೀಚಂ. ೯೩). [ಸಂ.]

**ವಿಲೋಮಕ್ರಿಯೆ** (ನಾ). ವಿರುದ್ಧವಾದ ಕ್ರಿಯೆ ; ನಿಷೇಧದ ಕ್ರಿಯೆ : ಪ್ರಕೃತಿಯ ಪೂರ್ವದಿಕಾರದೊಳುಕಾರದೊಳ್ ಹ್ರಸ್ವದೇತ್ವಮೋತ್ವಂ ಬಹುಳಂ ಪ್ರಕಟಂ ತರ್ಬರ್ಗಳ ಮೊದಲಕಾರದೊಳ್ ದೀರ್ಘವಿಧಿ ವಿಲೋಮಕ್ರಿಯೆಯೊಳ್ (ಶಮದ. ೨೩೮).

[ಸಂ. ವಿಲೋಮಕ್ರಿಯಾ]

**ವಿಲೋಲ, ವಿಳೋಳ** (ಗು). ೧. ಹೊಯ್ದಾಡುವ ; ಚಂಚಲವಾದ : ಚಾರುವಿಲೋಲಕಟಾಕ್ಷಪಾತಸೌಂದರಪರಿವಾರದೇವಿಯರಿರಾ (ಆದಿಪು. ೩-೪) ; ಸಾಲಿಡೆ ಕಟಾಕ್ಷಮಾಲೆ ವಿಲೋಲತರಭ್ರಮರಮಾಲೆಯೇಟಿಸೆ . . . ಮಾಲೆಗಾರ್ತಿಯರೆಸೆವರ್ (ಜಗವಿ. ೨-೨೬). ೨. ಹೊರಳುವ ; ಉರುಳುವ. (ನಾ). ೩. ಹೊಯ್ದಾಟ ; ನಡುಕ : ''ವಿಲೋಲವೆ[ಪಾಠಾಂ. ಲೋಲವೆ] ನಡುಕಂ'' (ಚತುನಿ . II, ೩೯). ೪. ತಲ್ಲೀನನಾದವನು ; ಲೋಲುಪ : ಭಕ್ತಿವಿಲೋಲ ದೀಪದ ಕಲಿಯನಾರು ವಿಶಾಲಘನಪುಷ್ಪಕವಿಮಾನಂ ಮುಂದೆ ಬಂದಿರಲು ಆ ವಿಮಾನವನೇಱಿ (ಬಸವು. ೧೬- ೨೯). **ವಿಳೋಳ** : ೧. ವಿಲೋಳನೀಳಾಳಕೆ ಚಂದ್ರಾನನೆ ಜಾಕವ್ವೆ ದಲಾ ಜಾನಕಿಗಗ್ಗಳಮೆ ಕುಲದೊಳಂ ಶೀಲದೊಳಂ (ಪಂಪಭಾ. ೧-೩೯). [ಸಂ.]

**ವಿಲೋಲತೆ** (ನಾ). ೧. ಅಸ್ಥಿರತೆ ; ಹೊಯ್ದಾಟ. ೨. ಅತ್ಯಾಸಕ್ತಿ ; ಲೋಲುಪತೆ : ಗಂಗಾಮೌಲಿ . . . ಬೋಳವಿಸುತಂ ನಂದಿಯಂ ಕರುಣಾಲಸದಮೃತ ರಸದೊಳದ್ದಿ ವಿಲೋಲತಾಲೋಕನದಿನೀಕ್ಷಿಸುವಾಗಳ್ (ಬಸವು. ೨-೩೩) ; ಪುಣ್ಯಗಣ್ಯ ಮಂದಾಕಿನಿಯ ವಾಹಿನಿಯ ಕಂದರಕ್ರೀಡಾವಿಲೋಲತೆಯ ನೀಲಲೀಲಾಶೀಲಸಲಿಲ ಕಲ್ಲೋಲದಿಂ . . . ಮೆರೆಯುವಾ ಚಿತ್ರಕೂಟಾದ್ರಿಯದೊ ಕಣ್ಗೊಳಿಸುತಿಹುದಿಲ್ಲಿ (ಶ್ರೀರಾಮಾ. ೧೨೬-೩೪). [ಸಂ. ವಿಲೋಲತಾ]

**ವಿಲೋಲುಪ** (ಗು). ೧. ಅತಿಶಯವಾಗಿ ಇಚ್ಛಿಸುವ ; ಅತ್ಯಾಸಕ್ತಿಯಿಂದ ಕೂಡಿದ. (ನಾ). ೨. ಅತ್ಯಾಸಕ್ತನಾದವನು ; ತಲ್ಲೀನನಾದವನು : ಬಾಲೆ ನಯವಿನಯೋಕ್ತಿಯಲಿ ತನ್ನಾಲಯಕೆ ಕೊಂಡೊಯ್ದು ಭಕ್ತಿವಿಲೋಲುಪನನಭ್ಯಂಗನಾದಿ ಕ್ರಿಯೆಗಳಿಂ ತಣಿಸಿ (ಬಸವು. ೨೭-೫೯). [ಸಂ.]

**ವಿಲೋಹಿತ** (ನಾ). ಕೆಂಪುಬಣ್ಣ ; ರಕ್ತವರ್ಣ : ಕಣ್ಗೊನೆ ಜೋಡಾಡೆ ವಿಲೋಹಿತಂ ವಿರಹಿರಕ್ತಾಕ್ತಾಂಗಜಾಸ್ತ್ರಂಗಳಂ ವನಿತಾನೀಕಮದಿಂಬುವೆತ್ತು ಪೊಱಮಟ್ಟೆಯ್ದಿತ್ತು ಕಾಸಾರಮಂ (ರಾಜಶೇ. ೧೦-೯೯). [ಸಂ.]

**ವಿಲ್ಮನ** (ನಾ). (?) : ಫಣಿಮಣಿ ಅನ್ತು ಭೋಗಿಫಣದುಳ್ಮಣಿ ವಿಲ್ಮನದೊನ್ ರಣಮುಖದುಳ್ಳ ಕೋಲನೆರಿಯಕ್ಕುರ್ಂ (ಎಕ. XI, ಚಿತ್ರದು. ೪೩-೧ ; ಸು. 500 ?). [?]

**ವಿಲ್ಲು, ವೀಲು** (ನಾ). ಉಯಿಲು ; ಮೃತ್ಯುಪತ್ರ: ನಮ್ಮ ತಂದೆ ತಮ್ಮ ಸ್ವಯಾರ್ಜಿತಆಸ್ತಿಯನ್ನು ನನ್ನ ಹೆಸರಿಗೆ ವಿಲ್ಲು ಮಾಡಿದ್ದಾರೆ (ರೂಢಿ). **ವೀಲು** : ಅವರು ಗೋಪ್ಯವಾಗಿ ವಕೀಲರನ್ನು ಕರೆಯಿಸಿ . . . ಮಾಲಿನಿಯ ಹೆಸರಿನಲ್ಲಿ ವೀಲು ಬರೆದಿಟ್ಟರು (ವಿಧಿವ್ಯ. ೧೮೦) ; ಮನುಷ್ಯನು ವೀಲುಮಾಡದೆ ಫಕ್ಕನೆ ಬಿದ್ದು ಹೋದರೆ ಅವನ ಆತ್ಮೀಯವಾದ ನೆಂಟರಿಷ್ಟರು . . . ಹಣ ದುರ್ವ್ಯಯ ಮಾಡುತ್ತಾರೆ (ನಿಷ್ಕಾಮ. ೩). [<— ಇಂ. Will]

**ವಿವಂಚನೆ** (ನಾ). ೧. ವಿಚಾರ ; ಚಿಂತೆ ; ಆಲೋಚನೆ : ವಿವಂಚನೆಗೊಳಗಾದ ಭಗ್ನಹೃದಯಕ್ಕೆ ರಾಜಣ್ಣನ ಪತ್ರ ಶಾಂತಿಯ ಅಮೃತಸೇಚನೆ ಮಾಡಿತ್ತು (ಮರಳಿ. ೧೪೯). ೨. ಮೋಸ ; ವಂಚನೆ : ಸ್ನೇಹಿತರಿಗೆ ಮಿತ್ರದ್ರೋಹ ಮಾಡಿದ! ನಮ್ಮಂಥಾ ಹಿತಚಿಂತಕರಿಗೆ ವಿವಂಚನಾ ಮಾಡಿದ (ಸಮಜೀ. ೭೨೬). [ಸಂ. ವಿವಂಚನಾ]

**ವಿವಂಚಿತ** (ಗು). ವಂಚಿತವಾದ ; ತಪ್ಪಿಹೋದ : ಕಕ್ಕಿಯ ನಿರ್ದೇಶನದಿಂದ ವಿವಂಚಿತಳಾದ ಅನಾಥೆಗೆ, ಈಗ ತಿಳಿದಿದ್ದುದು ತನ್ನ ಜೀವನದ ವ್ಯಾವಹಾರಿಕ ನಡವಳಿಕೆಯಲ್ಲಿ ದೊಡ್ಡಪ್ಪನ ನಿರ್ದೇಶನವನ್ನು ಪಾಲಿಸದೆ ಬೇರೆ ದಾರಿಯೇ ಇಲ್ಲವೆಂಬ ಸತ್ಯ (ವಾತ್ಸಲ್ಯ. ೧೪೫). [ಸಂ.]

**ವಿವಂದ** (ನಾ). ೧. ಅತಿಯಾದ ಬಂಧನ : ವಿಬಂಧ — ವಿವಂದ (ಶಮದ. ೨೫೮ ಪ್ರಯೋ). ೨. ಒಬ್ಬ ಮನುಷ್ಯನು ತಲೆಯ ಮೇಲೆ ಹೊರಬಹುದಾದಷ್ಟು ಹೊರೆ , — ಭಾರ : ''ವಿವಧಂ ವಿವಂದವೆನೆ ತಲೆವೊಱೆಯೆನಿಕ್ಕು'' (ಮಂಗರಾ. ೬೩-೨೬). 'ವಿವಧ' ಹೋ. [< ಸಂ. ವಿಬಂಧ]

**ವಿವಕ್ಷಿತ** (ಗು). ೧. ಹೇಳಲು ಬಯಸಿದ ; ಹೇಳಲು ಉದ್ದೇಶಿಸಿದ : ಕುಱಿತಂತೆ ಪೇಟ್ದ ಪದದೊಳ್ ಮೆಱೆಯದೊಡೆಲ್ಲಂ ವಿವಕ್ಷಿತಾರ್ಥಮಶೇಷಂ ಪೆಱತೊಂದಲ್ಲಿಲ್ಲದುದುಮನಱಿವವರಿಟ್ಟಱಿಯೆ ಪೇೞ್ದೊಡದು ನೇಯಾರ್ಥಂ (ಕವಿರಾ. ೧-೧೦೧). ೨. ಬಯಸಿದ ; ಅಪೇಕ್ಷೆಪಟ್ಟ. ೩ ಉದ್ದೇಶಿಸಿದ ; ಉದ್ದೇಶದಿಂದ ಕೂಡಿದ. ೪. ಮನೋಹರವಾದ ; ಸುಂದರವಾದ : (೬). (ನಾ). ೫. ಚೆಲುವಾದುದು ; ಮನೋಹರವಾದುದು : ಕಲ್ಯಾಣಾರ್ಥಿಯಪ್ಪಾತಂ ವಿವಕ್ಷಿತಮಪ್ಪ ವಸ್ತುವಂ ಪೇೞ್ಪವರ್ಗಳು ಮುನ್ನಮಾಪ್ತಾಗಮವಕ್ತೃಕಥೆ ಶ್ರೋತೃವೆಂಬಿವಂ ಪೇೞ್ವುದು (ಚಾವುಂಪು. ೫). ೬. ಪ್ರಮುಖವಾದುದು ; ಮುಖ್ಯವಾದುದು : ಕಡೆಯ ಎರಡರ್ಥಗಳೂ ಗ್ರಂಥಕಾರನಿಗೆ ಇಲ್ಲಿ ವಿವಕ್ಷಿತ (ಧ್ವನ್ಯಾಲೋ. ೨೫). ೭. ಒಳ್ಳೆಯದಾದುದು ; ಶ್ರೇಷ್ಠವಾದುದು : ''ಒಳ್ಳಿತ್ತಱಲ್ಲಿಯುಂ ವಿವಕ್ಷಿತವೆಂಬುದು'' (ಹಲಾಯು. ೧೩೩-೧೬). ೮. ಗುರಿ ; ಉದ್ದೇಶ. ೯. ಅರ್ಥ ; ಭಾವ. [ಸಂ.]

**ವಿವಕ್ಷಿಸು** (ಕ್ರಿ). ೧. ಬಯಸು ; ನಿರೀಕ್ಷಿಸು : ಸ್ತ್ರೀಪುತ್ರದಾಯಾದ್ಯರತ್ತಣಿಂದಾತ್ಮರಕ್ಷಣೆಯಂ ವಿವಕ್ಷಿಸಿಯುಂ (ಚಂದ್ರಪು. ೨-೬೦ ವ). ೨. ವಿವರಿಸು ; ಸ್ಪಷ್ಟಗೊಳಿಸು : ಸ್ಥಾವರವಿಷಹರಣಮಂ ವಿವಕ್ಷಿಸಿ ಪೇೞ್ವೆಂ (ಖಮದ. ೨-೧). ೩. ಪರ್ಯಾಲೋಚಿಸು ; ವಿಚಾರಮಾಡು : ಮೋಕ್ಷವಿವರಿಗಾವ ಗಹನವೆಂದೊಲ್ದು ವಿವಕ್ಷಿಸುತಿರ್ದರಲ್ಲಲ್ಲಿ (ಭರಚ. ೭೦-೧೧೬). [ವಿವಕ್ಷೆ + – ಇಸು]

**ವಿವಕ್ಷೆ** (ನಾ). ೧. ವಕ್ತೃವಿನ ಇಚ್ಛೆ , — ಆಸೆ : ಅಲ್ಲಿ ವರ್ತಿಸುವುತ್ಸರ್ಪಣಾವಸರ್ಪಣಯುಗಸ್ವರೂಪನಿರೂಪಣವಿವಕ್ಷೆಯಿಂ ಮುಖ್ಯವ್ಯವಹಾರನಯದೊಳುಭಯಾತ್ಮಕಮೆನಿಪ್ಪ ಕಾಲಸ್ವರೂಪಮೆಂತೆನೆ (ಪಂರಾಮಾ. ೧-೪೫ ವ) ; ಮೋಕ್ಷಶಾಸ್ತ್ರವನಾತ್ಮತತ್ವವಿವಕ್ಷೆಯಲಿ ವಿವರಿಪೆನು (ನಿಭಾಗ. ೩-೧೨-೬). ೨. ವಿವರಣೆ; ಸ್ಪಷ್ಟೀಕರಣ : ಪರ್ಯಾಯಗಳ ವಿವಕ್ಷೆಯಿಲ್ಲದೆ ಸಂಕ್ಷೇಪದಿಂದ ಬರಿಯ ವಸ್ತುವನ್ನು ಹೇಳುವುದಕ್ಕಿಚ್ಛಿಸಿದರೆ ಆಗ ವಸ್ತುವು ಬರಿಯ ದ್ರವ್ಯರೂಪವಾಗಿ ತೋರುತ್ತದೆ (ಭಾರದ. ೧೮೦). 'ದ್ರವ್ಯವಿವಕ್ಷೆ' ಪರಾ. ೩. ವಿಂಗಡಣೆ ; ವಿಭಜನೆ : ಈ ಬಂಧೋದಯಪ್ರಕೃತಿಗಳ್ಗೆ ಭೇದಾಭೇದವಿವಕ್ಷೆಯಿಂದಂ ಸಂಖ್ಯೆಯಂ ಪೇಳ್ದಪರು (ಗೊಮ್ಮಸಾ. ೬-೫) ; ದ್ರಾವಿಡಭಾಷೆಗಳಲ್ಲಿ ಲಿಂಗವಿವಕ್ಷೆಯು ಉಳಿದ ಆರ್ಯಭಾಷೆಗಳಂತೆ ಅಸ್ಪಷ್ಟವಾಗಿರದೆ ಕ್ರಮಬದ್ಧವಾಗಿದೆ (ಭಾಷಾಶಾ. ೩೯). ೪. ಅರ್ಥ ; ಭಾವ : ಸರ್ವದಾ ರಸಪರವಾದ ವಿವಕ್ಷೆಯೇ ಹೊರತು, ತಾನೇ ಪ್ರಧಾನವೆಂಬ ಭಾವನೆಯು ಸರ್ವಥಾ ಇಲ್ಲದಿರುವುದು (ಧ್ವನ್ಯಾಲೋ. ೮೧). [ಸಂ. ವಿವಕ್ಷಾ]

**ವಿವಕ್ಷೆಗೆಯ್** (ಕ್ರಿ). ಪರ್ಯಾಲೋಚಿಸು ; ಭಾವಿಸು : ಮುನಿಯದ ಕೂರದ ಮುನಿಸದ ಮುನಿಪತಿ ಭಾವಿಪೊಡೆ ತಾನೆ ಜಿನಪತಿಯಲ್ತೆ ಎಂದು ವಿಶುದ್ಧಾಂತರಂಗದಿಂ ವಿವಕ್ಷೆಗೆಯ್ಯುತ್ತುಂ (ಸುಕುಮಾ. ೪-೩೭ ವ). [ವಿವಕ್ಷೆ + ಕೆಯ್$_1$]

**ವಿವದಿ** (ನಾ). ವಿವಾದ ಮಾಡುವವನು : ನ್ಯಾಯಾಧಿಪತಿ ತನ್ನ ಮತಿ ಮನಸುಗಳನೆಲ್ಲ ಸ್ವೀಯಲಾಭಸ್ಮರಣೆಯುಳಿದು ವಿವದಿಗಳಾದಾಯನಿರ್ಣಯಕೆ ಯೋಚಿಸುವಂತೆ (ಮಂಕುಕ. ೮೧೪). [< ಸಂ. ವಿವಾದಿನ್]

**ವಿವಧ** (ನಾ). ೧. (ಒಬ್ಬ ಮನುಷ್ಯನು ತಲೆಯ ಮೇಲೆ ಹೊರಬಹುದಾದಷ್ಟು) ಭಾರ, — ಹೊರೆ ; ತಲೆಹೊರೆ : ''ವಿವಧಂ ವಿವಂದಮೆನೆ ತಲೆವೊಱೆಯೆನಿಕ್ಕು'' (ಮಂಗರಾ. ೬೩-೨೬). ೨. ದಾರಿ ; ಮಾರ್ಗ. ೩. ಸಾಮಾನುಗಳನ್ನು ಹೊರಲು ಹೆಗಲ ಮೇಲೆ ಇಟ್ಟುಕೊಳ್ಳುವ ಅಡ್ಡೆ ; ಕಾವಡಿ: ''ವಿವಧಃ, ವೀವಧಃ — ೨ ಹೊರಗಿನಿಂದ ಊರೊಳಕ್ಕೆ ಧಾನ್ಯಾದಿಗಳು ಬರುವಿಕೆ. ಪ್ರರೋಕ್ತಿಗೆ ಬಂದಿರುವ ಅನಾಜು ಕಾವಡಿ, ದಾರಿ'' (ಸಿದ್ಧಾಂತಿ. ೩೯೬). [ಸಂ.]

**ವಿವರ** (ನಾ). ೧. ತೂತು ; ರಂಧ್ರ : ವಿವರ [ಪಾಠಾಂ. ವಿರಳ]ವಿಲ್ಲದ ಮಣಿಗೆ ದಾರದ ಹಂಗೇಕೆ (ಮೋಳಿಮಾ. ೧೦೫-೪೯). ೨. ಕಂಡಿ ; ಸಂದು : ವಿವರಂಗಳಿಂದಮೊಗೆವಗುರುವ ಪೊಗೆ ನಾರಚಕೆ ಮೇಲೆ ಮುಸುಱಿದ ಭೃಂಗೀನಿವಹದ ಗಱಿ ಗಱಿಗೆಣೆಯೆನೆ ಗವಾಕ್ಷಮಂಗಜನ ದೊಣೆಗೆ ತೊಣೆಯೆನಿಸಿರ್ಕುಂ (ವರ್ಧಪು. ೧-೬೨). ೩. ಬಿಲ ; ಕುಳಿ : ಮಹಾಹತಕಿಯೆನಿಪ ಮಂದಭಾಗ್ಯೆಯಿಂ ಭೋಂಕನೆ ಕಂಡು ಮೂರ್ಛೆವೋಗಿ ಬಿಬ್ದು ಪಾತಾಳತಲವಿವರಮಂ ಪೊಕ್ಕಂತೆ ಮಹಾಂಧಕಾರಂ ಕವಿಯೆ (ಕಾದಂಪೂ. ೯೧೯) ; ಎಲ್ಲೈ ವಾನರನೇ ಈ ವಿವರವನ್ನು ಮಯನೆಂಬ ಹೆಸರಿನ ದೈತ್ಯನು ನಿರ್ಮಿಸಿರುವನು (ತುಳಸೀ. ೨೫೯). ೪. ವಿಸ್ತಾರ ; ಹರಹು : ಮಾಯಾವಿ ತಾಂ ಮೆಯ್ಗರೆದನೊಯ್ಕನೆಯೆ ನುರ್ಗಿ ತೃಣಸಂಛನ್ನಧರಣಿಯ ಮಹಾಗುಹಾವಿವರಮಂ (ಶ್ರೀರಾಮಾ. ೨೭೯-೪೨). ೫. ಕುಂದು ; ದೋಷ. ೬. ವ್ಯತ್ಯಾಸ ; ವಿಭಿನ್ನತೆ. ೭. ವಿಸ್ತೃತವಾದ ಹೇಳಿಕೆ ; ಕೂಲಂಕಷವಾದ ವಿವರಣೆ : ಇನ್ನು ಆಚಾರಲಿಂಗದಲ್ಲಿಯ ಮಿಶ್ರಾರ್ಪಣದ ವಿವರವೆಂತೆಂದೊಡೆ (ಆದವ. ೫-೧೨) ; ಶ್ರೀರಂಗಪಟ್ಟಣದಲ್ಲಿ ದವಲತ್ತು ಮಾಡಿದ ನವಾಬಹೈದರಲ್ಲಿಖಾನಬಹದರವರ ದರಬಾರಿನ ವರ್ತಮಾನದ ವಿವರ (ಹೈದರ. ೨೧). ೮. ಸರಿಯಾದ ಕ್ರಮ ; ಯೋಗ್ಯವಾದ ರೀತಿ ; ಔಚಿತ್ಯ : ಅವನ ಸೀಮೆಯೊಳು ನಾವಿದ್ದಿಂತು ನುಡಿವುದು ವಿವರವೆಯೆಂದರಾಪ್ತಿಗರು (ಭರಚ. ೩೭-೩೬). [ಸಂ.]

**ವಿವರಗೇಡಿ** (ನಾ). ಸರಿಯಾದ ಹೇಳಿಕೆಯನ್ನು ಕೊಡದವನು ; ತಪ್ಪುವಿವರಗಳನ್ನು ನೀಡುವವನು : ಶಿವನ ನೆನೆದಡೆ ಭವ ಹಱಿವುದೆಂಬ ವಿವರಗೇಡಿಗಳ ಮಾತು ಕೇಳಲಾಗದು (ವಚರ. ೮೪-೩೫೬) ; ಇಂದೀ ವಿವರಗೇಡಿಯ ಭಂಗಪಡಿಸುವೆನೆನುತ ತೆಗೆದೆಚ್ಚ (ಕಾಶಿರಾ. ೧೭-೩೦). [ವಿವರ + ಕೇಡಿ$_1$]

**ವಿವರಣ** (ನಾ). ೧. ತೆರೆಯುವಿಕೆ ; ಬಿಚ್ಚುವಿಕೆ. ೨. ಹರಡುವುದು ; ಹರಹುವುದು. ೩. ಬೇರೆ ಮಾಡುವುದು ; ಹಿಂಜುವುದು : 'ಕಾರ್ಪಾಸವಿವರಣ' ಪರಾ. ೪. ವಿಸ್ತಾರವಾಗಿ ಹೇಳುವುದು ; ಕೂಲಂಕಷವಾಗಿ ತಿಳಿಸುವುದು ; ವರ್ಣನೆ : ''ವ್ಯಾಖ್ಯಾ, ವಿವರಣಂ — ಈ ೨ ವಖ್ಯಾಣಂ'' (ಹಲಾಯು. ೬೬-೨೪೬). ೫. ಪ್ರಕಟಗೊಳಿಸುವುದು; ವ್ಯಕ್ತಪಡಿಸುವುದು. ೬. [ಗಣಿತ]ಕಳೆಯುವುದು ; ವ್ಯವಕಲನ : ''ತ್ಯಜಂ, ನುನ್ನಂ, ವಿವರಣಂ . . . ಕಳೆ ಇಂತಿನಿತುಂ ಕಳೆವುದಕ್ಕೆ ಪೆಸರು'' (ವ್ಯವಹಾ. ೧೦-೧೨ ವ). [ಸಂ.]

**ವಿವರಣೆ** (ನಾ). ೧. ವಿಸ್ತಾರವಾದ ಹೇಳಿಕೆ ; ವರ್ಣನೆ ; ವ್ಯಾಖ್ಯಾನ : ಅನ್ನೆಗಮವ್ಯಕ್ತಕಾಲದೊಳೋದಿ ಮಱೆದ ವಿಷಮಶಾಸ್ತ್ರದ ಮೂಲಗ್ರಂಥಕ್ಕೆ ವಿವರಣೆ ಬರ್ಪವೊಲಿರದವಧಿವಿಬೋಧದೆ ಬರೆ ಮನಕ್ಕೆ ಬಗೆಯೊಳ್ ಕಂಡಂ (ಶಾಂತಿಪು. ೭-೧೯) ; ಅವರ ವಿಸ್ತಾರವಾದ ವಿವರಣೆಯ ಒಟ್ಟು ಸಾರವನ್ನು ಸಂಗ್ರಹಿಸಿ ಇಲ್ಲಿ ಅಳವಡಿಸಲೆತ್ನಿಸಿದೆ (ದ್ರಾವಿವಿ. ೨೯). ೨. ವಿಶದಪಡಿಸುವುದು ; ಸ್ಪಷ್ಟೀಕರಣ ; ಸಮಜಾಯಿಷಿ : ಅವರು ಯಾವುದೋ ಕಾರಣಗಳಿಂದ ನಿಮ್ಮಲ್ಲಿ ಹೀಗೆಲ್ಲಾ ಹೇಳಿರಬೇಕು. ದಯವಿಟ್ಟು ಇದರ ವಿವರಣೆಯಾಗಲಿ (ಕಾವೇರಿ. ೯೫). [ಸಂ. ವಿವರಣ]

**ವಿವರಿಸು** (ಕ್ರಿ). ೧. ವಿಸ್ತಾರವಾಗಿ ಹೇಳು ; ವಿವರವಾಗಿ ತಿಳಿಸು ; ವರ್ಣಿಸು : ಮಿಕ್ಕಭಿಮಾನದ ಮಾತು ಕೀರ್ತಿಯಂ ವಿವರಿಸೆ ಸಂದನೇಂ ಕಲಿಯೊ ಸತ್ಯವಿಯೋ ಕವಿತಾಗುಣಾರ್ಣವಂ (ಪಂಪಭಾ. ೧೪-೫೦) ; ಬಲಸಂಹಾರವನು ವಿವರಿಸುವನಾವನು ಭೂರಿಭಟರಂಘವಣೆ ಬೀತುದು (ಕುಮ್ಯಾದ್ರೋ. ೧೫-೩೧). ೨. ಕಾಣಿಸಿಕೊಳ್ಳು ; ತೋರು ; ಪ್ರಕಟವಾಗು : ದಿವಿಜಷಡಂಬುಜಮಿತ್ರ ಗಣಪ್ರಕರಂ ಲಗಮುಂ ಕ್ರಮದಿಂ ಪದದೊಳ್ ವಿವರಿಸೆ ಬಂದು ವಿರಾಜಿಸೆ . . . ಹಂಸಗತೀ (ಛಂದೋಂಬು. ೨-೧೮೭). ೩. ಪ್ರತ್ಯೇಕಿಸು ; ವಿಂಗಡಿಸು : ಪ್ರಣವಸ್ವರೂಪನು ಪಾಪಕರ್ಮಂಗಳಂ ವಿವರಿಸಿ ಕಳೆದನು ಬೀಜದೊಳಡಗಿದ ವೃಕ್ಷದಂತೆ (ಶಿವಗೀ. ೫೨-೨೫೧) ; ಶಾಕಂಗಳೊಳಗಱ ಸುತ್ತೊಂದನೆಂದಂ ವಿವರಿಸುತ್ತಾವಂದದಿಂ ಕಾಣದೆ ಶಿರೋಮಾಂಸವನು ತಾಪಸನು ಬಳಿಕವರಿಗಿಂತೆಂದು ನುಡಿದನು (ಬಸಪು. ೨೪-೨೩). ೪. ಅಗಲಗೊಳಿಸು ; ಹರಡು ; ಬಿಡಿಸು : ತೊಳಗುವ ಬಹುಚಿತ್ರದ ಪಟಮಂ ಕಣ್ಗೊಳಿಪಂದದಿ ವಿವರಿಸಿ ತೋಱುತ್ತುಂ (ಜಯಕಾ. ೩-೨). [ವಿವರ + – ಇಸು$_3$]

**ವಿವರ್ಜಿತ** (ಗು). ೧. ಬಿಟ್ಟ ; ತ್ಯಜಿಸಿದ : ಸಂಸಾರವೈರಾಗ್ಯಪ್ರಪಂಚವಿವರ್ಜಿತಾತ್ಮಕನು (ಬಸಪು. ೮-೨). (ನಾ). ೨. ವಿಮುಕ್ತವಾದುದು ; ದೂರವಾದುದು : ಶ್ರುತಿಸುಂದರಮೆನೆ . . . ದೋಷವಿವರ್ಜಿತಮೆನೆ ವಿರಚಿಸಿ ಮೆಱೆವುದು ಕೃತಿಯಂ (ಜಾತತಿ. ೧-೧೧). [ಸಂ.]

**ವಿವರ್ಣ** (ಗು). ೧. ಬಣ್ಣವಿಲ್ಲದ ; ವರ್ಣರಹಿತವಾದ. ೨. ಕಳೆಯಿಲ್ಲದ ; ಕಳಾಹೀನವಾದ. ೩. ಕೆಳಮಟ್ಟದ ; ತುಚ್ಛವಾದ. ೪. ಏನೂ ಅರಿಯದ ; ದಡ್ಡನಾದ. ೫. ಕೆಟ್ಟಬಣ್ಣದಿಂದ ಕೂಡಿದ. (ನಾ). ೬. ಬಣ್ಣಗೆಡುವುದು ; ಕಳಾಹೀನವಾಗುವುದು : ಕಾವಲುಗಾರರ ಮುಖಗಳು ಆಯಾಸದಿಂದ ಭಯದಿಂದ ವಿವರ್ಣವಾಗಿದ್ದುವು (ಶಾಂತಲಾ. ೨೬೦). ೭. ಅಲ್ಪ ; ಕ್ಷುದ್ರ : ''ವಿವರ್ಣಃ, ಪಾಮರಃ, ನೀಚಃ . . . ಇತರಃ – ೧೦ ನೀಚನ ಪೆಸರು'' (ಸಿದ್ಧಾಂತಿ. ೩೧೨). ೮. ಏನನ್ನೂ ಅರಿಯದವನು ; ದಡ್ಡ : ''ವೈದೇಯಃ, ಬಾಲಿಶಃ . . . ವಿವರ್ಣಃ, ಮೂರ್ಖಃ, ಮಾತೃಶಾಸಿತಃ — ಈ ೧೧ ಅಱಿಯದವಂ'' (ಹಲಾಯು. ೫೬-೧೮೧). ೯. [ಕಾವ್ಯಮೀ] ಎಂಟು ವಿಧವಾದ ಸಾತ್ವಿಕಭಾವಗಳಲ್ಲಿ ಒಂದು ; ಬಣ್ಣ ಬಿಳಿಚಿಕೊಳ್ಳುವುದು : ಸ್ತಂಭ ಸ್ವೇದ . . . ವಿವರ್ಣ ಅಶ್ರು ಪ್ರಳಯಮೆಂಬಷ್ಟಸಾತ್ವಿಕಗಳಿಂ (ವಿವೇಕ. ೧೮೧). 'ವೈವರ್ಣ್ಯ' ಪರಾ. [ಸಂ.]

**ವಿವರ್ಣತೆ** (ನಾ). ಮಸುಕುತನ ; ವರ್ಣಹೀನತೆ : ಕಲಾವಿದರೆಲ್ಲರ ಕೃತಿಗಳಲ್ಲೂ ಒಂದು ಬಗೆಯ ಕಾಂತಿಹೀನತೆ, ವಿವರ್ಣತೆ ಕಂಡುಬರುವುವು (ಭಾರದ. ೫೩೩). [ಸಂ. ವಿವರ್ಣತಾ]

**ವಿವರ್ಣಿಸು$_1$** (ಕ್ರಿ). ವರ್ಣಹೀನವಾಗು ; ಬಿಳಿಚಿಕೊಳ್ಳು : ಮುಖಂ ವಿವರ್ಣಿಸಿದುವೊಳ್ಮಡಿ ಬಿಚ್ಚಿದುವು (ಚೆಬಪು. ೩೭-೭೭). [ವಿವರ್ಣ + – ಇಸು$_3$]

**ವಿವರ್ಣಿಸು$_2$** (ಕ್ರಿ). ವಿಶೇಷವಾಗಿ ವರ್ಣಿಸು, — ವಿವರಿಸು : ಅನುಗತಮಪ್ಪಂತಿರೆ ಚೇತನಧರ್ಮಗಳನಚೇತನಾರ್ಥಂಗಳೊಳಂ ಸ್ತನ ನಯನಾದಿಯೊಳಂ ದ್ವಿತ್ವನಿಷ್ಟಮಂ ವಿವರ್ಣಿಪರರೆಬರ್ (ಕಾವ್ಯಾವ. ೯೩೨). [ಸಂ. (ವಿವರ್ಣನ) + – ಇಸು$_3$]

**ವಿವರ್ತ** (ನಾ). ೧. ಸುತ್ತುವರಿಯುವಿಕೆ ; ಭ್ರಮಣ. ೨. ಸಮುದಾಯ ; ಸಮೂಹ. ೩. [ಅದ್ವೈತ] ಕಾರ್ಯ, ಕಾರಣಗಳಲ್ಲಿ ಕಾರಣವು ಮಾತ್ರ ಸತ್ಯವೆಂದು ಪ್ರತಿಪಾದಿಸುವ ಸಿದ್ಧಾಂತ, — ದರ್ಶನ ; ತಾತ್ತ್ವಿಕವಲ್ಲದ ಅನ್ಯಥಾಭಾವ ; ಅವಿದ್ಯೆಯಿಂದ ತೋರುವ ರೂಪಾಂತರ : ಈ ಸಿದ್ಧಾಂತದಲ್ಲಿ ಈ ಪ್ರಪಂಚ ಬ್ರಹ್ಮದ ವಿವರ್ತವೆಂದು ಅಭಿಪ್ರಾಯ. ವಿವರ್ತವೆಂದರೆ ಒಂದು ವಸ್ತು ತನ್ನ ಸ್ವರೂಪಕ್ಕೆ ಹಾನಿಯಿಲ್ಲದೆ ಮತ್ತೊಂದು ವಸ್ತುವಾಗಿ ಆಗುವುದು, ಹಾಗೆ ಕಾಣುವುದು (ಓಂದಸಾ. ೨೦೭) ; 'ವಿವರ್ತ' ಎಂದರೆ ತನ್ನ ಕಾರಣದ ಇರುವಿಕೆಯಿಂದ ಭಿನ್ನವಾದ ಇರುವಿಕೆಯುಳ್ಳುದು ಎಂದು ಅರ್ಥ (ಭಾತತ್ತ್ವ. ೫೯೦). ೪. [ನಾಟ್ಯ] ಕಣ್ಣಿನ ಆಲಿಯ ಚಲನೆಯ ಭೇದಗಳಲ್ಲಿ ಒಂದು; ☞ ''ಕಡೆಗಣ್ಣಿನಲ್ಲಿ ಆಲಿಯನ್ನು ತಿರುಗಿಸುವುದು'' (ಲಾಸ್ಯರಂ. ೨೭೪ ಗದ್ಯಾನುವಾದ) : ಭ್ರಮಣ, ವಲನ, ಪಾತ, ಚಲನ, ಪ್ರವೇಶ, ವಿವರ್ತ, ಸಮುದ್ವೃತ್ತ, ನಿಷ್ಕ್ರಾಮ, ಪ್ರಾಕೃತ — ಈ ಒಂಬತ್ತು [ಸ್ವನಿಷ್ಠ]ಆಲಿಯ ಭೇದಂಗಳ್ (ಲಾಸ್ಯರಂ. ೩-೫೪). ೫. ನೂರೆಂಟು ಕರಣಗಳಲ್ಲಿ ಒಂದು ; ☞ ''ತುದಿಗಾಲನ್ನು ಮೇಲಕ್ಕೆತ್ತಿ ನೆಲದ ಮೇಲಿರಿಸುವ ಕಾಲದಲ್ಲೇ ಆ ಪಾರ್ಶ್ವದ ಕೈಯನ್ನೂ ಹಾಗೆಯೇ ಮಾಡಿ, ಇನ್ನೊಂದು ಕೈಯಿಂದ ರೇಚಿತ ಮಾಡುತ್ತ ಒಂದಾವರ್ತಿ ಸುತ್ತುವುದು'' (ಲಾಸ್ಯರಂ. ೨೯ ಗದ್ಯಾನುವಾದ) : ತಲಪುಷ್ಪಪುಟ, ಲೀನ . . . ವಿವರ್ತ, ಗಜಕ್ರೀಡಿತ . . . ಗಂಗಾವತರಣ — ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). ೬. ನಿಲ್ಲುವ ಭಂಗಿಗಳಲ್ಲಿ ಒಂದು ವಿಧ ; ಸ್ಥಾನಕಗಳಲ್ಲಿ ಒಂದು ಬಗೆ : ಸಮಮಾಕುಂಚಿತಮೊಪ್ಪುವ ಕ್ರಮಪ್ರಸಾರಿತಮುಮೆಸವುತಿರ್ಪ ವಿವರ್ತಂ

ರಮಣೀ ಕೇಳುದ್ವಾಹಿತಮುಮಂ ನತಮಿಂತಿವಾಱು ಸುಪ್ರಸ್ಥಾನಂ (ಲಾಸ್ಯರಂ. ೭-೧೧). [ಸಂ.]

**ವಿವರ್ತನ** (ನಾ). ೧. ತಿರುಗುವಿಕೆ ; ಭ್ರಮಣ. ೨. = ವಿವರ್ತ ೩ : ಈ ಏಕಮುಖಸಂಬಂಧವು ಅನಂತರದ ಅದ್ವೈತದಲ್ಲಿ ಪರಿಣಾಮಕ್ಕಿಂತ ಭಿನ್ನವಾದ 'ವಿವರ್ತನ' ಎಂಬುದಾಗಿ ಕರೆಯಲ್ಪಟ್ಟಿದೆ (ತತ್ತ್ವಪ್ರಾ. ೨೯೪). [ಸಂ.]

**ವಿವರ್ತವಾದ** (ನಾ). = ವಿವರ್ತ ೩ : ಅಂತಸ್ಸಿನಲ್ಲಿ ಪ್ರಪಂಚವನ್ನು ನಿರೂಪಿಸಿ ಸ್ವಾಪ್ನಪ್ರಪಂಚವನ್ನು ದೃಷ್ಟಾಂತವಾಗಿಟ್ಟು ಪ್ರಬೋಧದಶೆಯಲ್ಲಿ ನಿಶ್ಶೇಷವಿನಾಶವನ್ನು ಉಪದೇಶಿಸುವ ಮಾರ್ಗವಿದು. ಇದಕ್ಕೆ ವಿವರ್ತವಾದವೆಂದು ತಾತ್ಪರ್ಯ (ಹಿಂದಸಾ. ೧೯೧). [ಸಂ.]

**ವಿವರ್ತಿತ** (ಗು). ೧. ಹೊರಳಿದ ; ತಿರುಗಿದ. (ನಾ). ೨. [ನಾಟ್ಯ]ಪಕ್ಕಕ್ಕೆ ತಿರುಗುವ ಒಂದು ಭಂಗಿ ; IP "ಪೃಷ್ಠ ಮತ್ತು ಪಕ್ಕೆ ಇವೆರಡನ್ನೂ ತಿರುಗಿಸುವುದು. ಪಕ್ಕಕ್ಕೆ ತಿರುಗುವಾಗ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೨೫೭ ಗದ್ಯಾನುವಾದ): ವಿವರ್ತಿತ, ಅಪಸೃತ, ಪ್ರಸಾರಿತ, ನತ, ಉನ್ನತ — ಈ ಐದೂ ಬರಿಯ ಭೇದಂಗಳ್ (ಲಾಸ್ಯರಂ. ೨-೯೦ ವ) ; ಪೊಱವಾ[ಱ್] ತಿರುಗಲ್ಕೊಡನೇ ನೆಱ್ ತಿರುಗಿದ ಬರಿ [ವಿ]ವರ್ತಿತಾಖ್ಯಮನಾಳ್ಗುಂ (ಲಾಸ್ಯರಂ. ೨-೯೧). ೩. ಎವೆಗಳ ಚಲನೆಯ ಭೇದಗಳಲ್ಲಿ ಒಂದು ; IP "ರೆಪ್ಪೆಗಳನ್ನು ತಿರುಗಿಸುವುದು" (ಲಾಸ್ಯರಂ. ೨೭೩ ಗದ್ಯಾನುವಾದ) : ಪ್ರಸೃತ . . . ವಿವರ್ತಿತ, ಸ್ಫುರಿತ, ಪಿಹಿತ, ವಿತಾಡಿತ, ಸಯ — ಈ ಒಂಬತ್ತು ಎವೆಯ ಭೇದಂಗಳ್ (ಲಾಸ್ಯರಂ. ೩-೪೯ ವ). ೪. ನೂರೆಂಟು ಬಗೆಯ ಕರಣಗಳಲ್ಲಿ ಒಂದು ; IP "ಅಂಗೈಗಳನ್ನು ಎದುರಾಗಿ ಮಾಡಿ ಮುಂಗೈಗಳನ್ನು ಸ್ವಸ್ತಿಕದಂತೆ ಕೂಡಿಸಿ ಎದೆಯ ಹತ್ತಿರ ಸ್ವಲ್ಪ ಹೊತ್ತು ನಿಲ್ಲಿಸಿ ವ್ಯಾವರ್ತ ಮತ್ತು ಪರಿವರ್ತಗಳನ್ನು ಮಾಡಿ ಕೈಗಳನ್ನು ಮೇಲ್ಮುಖ ಮಾಡಿ ಹಿಡಿಯಬೇಕು" (ಲಾಸ್ಯರಂ. ೨೮೭ ಗದ್ಯಾನುವಾದ) : ತಲಪುಷ್ಪಪುಟ, ಲೀನ, ವಿವರ್ತಿತ . . . ಗಂಗಾವತರಣ — ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). [ಸಂ.]

**ವಿವರ್ಧನ** (ನಾ). ೧. ಬೆಳೆಯುವಿಕೆ ; ವೃದ್ಧಿ : ಅಭವಭಕ್ತಿಸಮಯವಾರ್ಧಿ ವಿವರ್ಧನೋಜ್ವಲ ಹಿಮಗು (ಬಸವು. ೧-೧೭). ೨. ಒಂದು ಬಗೆಯ ದಂತರೋಗ : ವಿವರ್ಧನ ಎಂಬ ದಂತಮೂಲರೋಗ ವಾತಾಧಿಕ್ಯದಿಂದ ಉಂಟಾಗುವದು (ವೃದ್ಧಸಾ. II, ೧೨೪). [ಸಂ.]

**ವಿವರ್ಧಿಸು** (ಕ್ರಿ). ೧. ಬೆಳೆ ; ವರ್ಧಿಸು : ಬಸವರಾಜನು ಜಂಗಮಪ್ರಾಣಸಹನಾಗಿ ವಿವರ್ಧಿಸುತ್ತಾ ಬಸವನಸು ಉರವಣಿಸಿ ಬಂದಿತು (ಬಸವು. ೩೫-೫೭). ೨. ಹೆಚ್ಚಾಗುವಂತೆ ಮಾಡು ; ಬೆಳೆಸು : ಮಲಿನತೆಯಂ ವಿವರ್ಧಿಸಿ ತೊಳಲ್ವಂ ಸಲಹಯ್ಯಾ (ಆಮಶ. ೩೩). [ವಿವರ್ಧನ + – ಇಸು]

**ವಿವಶ** (ಗು). ೧. ವಶವಾಗದ ; ಹತೋಟಿಗೆ ಸಿಗದ. ೨. ಸ್ವತಂತ್ರವಾದ. ೩. ಸಾವಿನ ಹೆದರಿಕೆಯ ; ಮರಣಭೀತಿಯ. (ನಾ). ೪. ತನ್ನನ್ನು ತಾನು ಅಂಕೆಯಲ್ಲಿಟ್ಟುಕೊಳ್ಳಲಾರದವನು ; ಅಸಹಾಯನಾದವನು : ವಿಶೇಷವಾಗಿ ರಾವಣನು ಸೀತೆಯ ವ್ಯಾಮೋಹದಿಂದ ವಿವಶನಾಗಿ . . . ಪ್ರೇಮೋನ್ಮಾದದ ಆವೇಶದಲ್ಲಿದ್ದಾಗ (ಕಸಾಚ. ೧೨೯). [ಸಂ.]

**ವಿವಶಿಸು** (ಕ್ರಿ). ಸ್ವಾಧೀನ ಪಡಿಸಿಕೊಳ್ಳು ; ವಶಪಡಿಸಿಕೊಳ್ಳು : ಕಿವಿವರಮಯ್ದೆ ನೀಳ್ದ ಕಡೆಗಣ್ ಕರಮಕ್ಕಱನೀಯೆ ರಾಗಮಂ ವಿವಶಿಸೆ ಪುರ್ವಿನುರ್ವು ಸುಲಿಪಲ್ ಮನಮಂ ಸೆಱೆಗೆಯ್ಯೆ (ಧರ್ಮಾಮೃ. ೫-೪೭). [ವಿವಶ + – ಇಸು]

**ವಿವಸ್ತ್ರೆ** (ನಾ). ಬಟ್ಟೆಯನ್ನು ಧರಿಸದೆ ಇರುವವಳು ; ದಿಗಂಬರೆ : ಮೂಲೋಕ ಜನನಿಯ ವಿವಸ್ತ್ರೆಯಾಗಿರ್ದಮ್ಮನಂ ನಾನು ಮನವಳ್ಕದಂತು ನೋಡುವೆನಯ್ಯ (ವೀಶೈವು. ೩-೧೯-೨೫) ; ವಿವಸ್ತ್ರೆಯರಾದವರ ಕೂಟದಲ್ಲಿಯುಂ ರೌದ್ರರಸಂ . . . ಪುಟ್ಟುವದು (ಕಾಮಶಾ. ೨೫೧). [ಸಂ. ವಿವಸ್ತ್ರಾ]

**ವಿವಸ್ವಂತ** (ನಾ). ೧. ನೇಸರು ; ಸೂರ್ಯ : "ರವಿ ಮಾರ್ತಂಡಂ . . . ಸಹಸ್ರಾಂಶು ವಿವಸ್ವಂತಂ" (ವಸ್ತುಕೋ. ೧೧-೭೪) ; ಯಾವ ಲೋಕದಲ್ಲಿ ವಿವಸ್ವಂತನ ಪುತ್ರನು ಪ್ರಭುವಾಗಿದ್ದಾನೆಯೊ . . . ಅಂಥ ಲೋಕದಲ್ಲಿ ನನ್ನನ್ನು . . . ಸ್ಥಾಪಿಸು (ಋಗ್ಸಾರ. ೫೬). ೨. ದೇವತೆ ; ಸುರ. [< ಸಂ. ವಿವಸ್ವತ್]

**ವಿವಸ್ವತ್ತು** (ನಾ). ೧. ನೇಸರು ; ಸೂರ್ಯ. ೨. ದೇವತೆ ; ಸುರ. [ಸಂ. ವಿವಸ್ವತ್]

**ವಿವಹ** (ನಾ). ೧. ಹೊತ್ತುಕೊಂಡು ಹೋಗುವಿಕೆ ; ಸಾಗಿಸುವುದು. ೨. ಮದುವೆ ; ಲಗ್ನ : ವಿವಹಸಂಭ್ರಮವನನುಗ್ಗೆದು ಲಗ್ನವ ಮೂಱುದಿವಸಕ್ಕೆ ಮಾಳ್ಪನಿತಱೊಳು (ಪ್ರೌಢರಾ. ೨೧-೨೧) ; ವಿವಹಕನುವಾಗಿ ಬಹರನುವ ಚರರಿಂದ ಭೂಧವನರಿದು (ಜನಮು. ೩-೨೮). ೩. ಸಪ್ತವಾಯುಗಳಲ್ಲಿ ಒಂದು. [ಸಂ.]

**ವಿವಹನ** (ನಾ). = ವಿವಹ ೨ : ಔತ್ಸುಕ್ಯಾಕ್ರಾಂತನಟ್ಟಿದೊನಾತ್ಮಪುತ್ರಕವಿವಹನಪ್ರೀತಂ ರೋಮಾಂಚಕಂಚುಕಿತಾಂಗಕಂ (ಶಾಂತಿಪು. ೫-೩೭) ; ವಿವಹನದುತ್ಸವಕ್ಕೆ ನೆಲೆಯಾದುದಿದು (ಚಂದ್ರಪು. ೬-೪೯). [ಸಂ.]

**ವಿವಳಿತ** (ಗು). ಸುತ್ತುವ ; ಹೊರಳುವ : ಬವರಿ ಮತ್ತೊಲ್ಕೋದ್ಗತಿವಿಲಂಘನ ವಿವಳಿತಾಂಗವರಾಹಮತ . . . ಎಂಬೀ ವಿವರದಲಿ ಕಾದಿದರು (ಕುವ್ಯಾಗ. ೬-೨೫). [ಸಂ. ವಿವಲಿತ]

**ವಿವಾಕ** (ನಾ). ತೀರ್ಮಾನ ನೀಡುವವನು ; ನ್ಯಾಯಾಧೀಶ. [ಸಂ.]

**ವಿವಾದ** (ನಾ). ೧. ಚರ್ಚೆ ; ತರ್ಕ ; ವಾಗ್ವಾದ : ಗೊಂಚಲು ಯಾರಿಗೆ ಸೇರತಕ್ಕದ್ದು ಎಂಬುದು ವಿವಾದದ ಕಾರಣ (ಹಸುಹೂ. ४७) ; ಪಕ್ಷಪಾತವಿಲ್ಲದ ವಿಚಾರ ಮಾಡುವವರು ತಮ್ಮ ಇರವಿನ ಅನುಭವವನ್ನು ಪಡೆಯುವುದೇ ನಿಜವಾದರೆ ಅಂತಹರೊಂದಿಗೆ ನನ್ನ ವಿವಾದವಿಲ್ಲ (ಜೀವಾತ್ಮ. ೪೮). ೨. ಜಗಳ ; ಕಲಹ. ೩. ದಾವೆ ; ಮೊಕದ್ದಮೆ . [ಸಂ.]

**ವಿವಾದಿ** (ನಾ). ೧. ವಾದಮಾಡುವವನು ; ಚರ್ಚಿಸುವವನು : ಈ ವಿಷಯವಾಗಿ ಸಂವಾದಿಯೇ ಆಗಲಿ ವಿವಾದಿಯೇ ಆಗಲಿ ಯಾವ ವಿಚಾರಸರಣಿಯೇ ಆದರೂ ನನ್ನ ವಿಚಾರಸಂಗತಿಗೆ ಉಪಯುಕ್ತವೇ ಆದೀತು (ಪ್ರಬಂಧ. ೩೫). ೨. ನ್ಯಾಯಾಲಯದಲ್ಲಿ ವ್ಯಾಜ್ಯವನ್ನು ಹೂಡಿರುವ ವಾದಿ ; ಕಕ್ಷಿಗಾರ. ೩. [ಸಂಗೀತ] ವಾದಿ, ಸಂವಾದಿ, ವಿವಾದಿ ಮತ್ತು ಅನುವಾದಿಗಳೆಂಬ ನಾಲ್ಕು ಬಗೆಯ ಸ್ವರಗಳಲ್ಲಿ ಒಂದು : ಒಂದು ರಾಗದಲ್ಲಿ ಎರಡು ಸ್ವರಗಳ ನಡುವೆ ಎರಡು ಶ್ರುತಿಗಳ ಅಂತರವಿದ್ದರೆ ಅವು ಪರಸ್ಪರ ವಿವಾದಿ ಅಥವಾ 'ಶತ್ರು'ಸ್ವರಗಳಾಗುತ್ತವೆ (ಸಂಗೀಚಂ. ೨೦). [ಸಂ. ವಿವಾದಿನ್]

**ವಿವಾದಿಸು** (ಕ್ರಿ). ಹೋರಾಡು : ಕೀಟಗಳು ಮಾನವನಿಗೆ ಬೇಕಾದ ಎಲ್ಲ ವಸ್ತುಗಳಿಗೂ ವಿವಾದಿಸಿ, ಅವನ ಕಷ್ಟಾರ್ಜನೆಯ ಬಹುಭಾಗವನ್ನು ದೊರಕಿಸಿಕೊಳ್ಳುತ್ತವೆ (ಕೀಟಜೀ. ೧). [ವಿವಾದ + – ಇಸು]

**ವಿವಾರಿಕ** (ನಾ). ಕೆಸರಿನಿಂದ ಕೂಡಿದ ನೀರು ; ಕೆಸರುನೀರು : "ವಿವಾರಿಕಂ ಪಿಚ್ಛಿಲಮೆನಲ್ಕಸಱ ನೀರೆಂದೆನಿಕ್ಕುಂ" (ಮಂಗರಾ. ೧೨೪-೧೫). [?]

**ವಿವಾಹ** (ನಾ). ೧. ಹೊತ್ತುಕೊಂಡು ಹೋಗುವಿಕೆ ; ಒಯ್ಯುವಿಕೆ ; ಸಾಗಿಸುವಿಕೆ . ೨. ವಾಹನ. ೩. ಹದಿನಾರು ಸಂಸ್ಕಾರಗಳಲ್ಲಿ ಒಂದು ; ಮದುವೆ ; ಲಗ್ನ : ಎಡೆಯಾಡುವೆಯ್ದೆಯರ ಪಾವನಮಂಗಳದೊಪ್ಪುಗೂಡಿ ನೇರ್ಪಟ್ಟುದು ನೋಟಕ ಗೋಸಗೆಯುಬ್ಬಣಮಪ್ಪಿನಮಾ ವಿವಾಹದೊಳ್ (ಸೂಕ್ತಿಸು. ೬-೨೨). ೪. [ಜೈನ] ಐವತ್ತು ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು ; ಮದುವೆ ; ಲಗ್ನ : ದಾನ ಪ್ರೀತಿ ಸುಪ್ರೀತಿ . . . ವಿವಾಹ ವರ್ಣಲಾಭ . . . ತ್ಯಾಗ ನಿರ್ವೃತಿಯೆಂಬಯ್ವತ್ತು ಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ). [ಸಂ.]

**ವಿವಾಹಕ್ರಿಯೆ** (ನಾ). = ವಿವಾಹ ೪ : ಸಂತಾನಾರ್ಥದಿಂ ಕಾಮಸೇವನೆಗೆಯ್ವುದು ವಿವಾಹಕ್ರಿಯೆ (ಚಾವುಂಪು. ೨೦೭). [ಸಂ. ವಿವಾಹಕ್ರಿಯಾ]

**ವಿವಾಹಗೃಹ** (ನಾ). ಮದುವೆಯ ಮನೆ : ನೆಯ್ದಿಲ ಮಱಿಪೊಲ್ ಸುಧಾರಸದ ಸೋನೆ . . . ಪರ್ವಿ ಕೊರ್ವಿದುದು ಕೂಡೆ ವಿವಾಹಗೃಹಾಂತರಾಳದೊಳ್ (ಜಗವಿ. ೧೦-೧೩೨). [ಸಂ.]

**ವಿವಾಹಗೇಹ** (ನಾ). = ವಿವಾಹಗೃಹ : ರಾಜಭವನದಂತೆ ಕೃತರಕ್ಷಾವಿಧಿಯಂ

ವಿವಾಹಗೇಹದಂತೆ ಸಂಗತಮಂಗಳಪರಿಕರಮುಂ . . . ಅಪ್ಪ ತಮಿಸ್ರಗುಹೆಯ ನೆಯ್ದಿದಾಗಳ್ (ಆದಿಪು. ೧೩-೯೭ ವ). **[ಸಂ.]**

**ವಿವಾಹಪ್ರಾಪ್ತೆ** (ನಾ). ಮದುವೆಯ ವಯಸ್ಸಾದವಳು ; ವಿವಾಹಕ್ಕೆ ಪ್ರಾಪ್ತವಯಸ್ಕಳಾದವಳು : ಇತ್ತಲಾ ಮದಾಳಿಯುಂ ವಿವಾಹಪ್ರಾಪ್ತೆಯಾಗಿ ಬಳೆಯೆವಳೆಯೆ (ಸುಕುಮಾ. ೭-೩೦ ವ). **[ಸಂ. ವಿವಾಹಪ್ರಾಪ್ತಾ]**

**ವಿವಾಹವಿಚ್ಛೇದ** (ನಾ). ಮದುವೆಯ ಬಂಧನವನ್ನು ಕಾನೂನಿಗನುಸಾರವಾಗಿ ರದ್ದುಮಾಡುವಿಕೆ ; ದಾಂಪತ್ಯವಿಚ್ಛೇದನ : ವಿವಾಹವಿಚ್ಛೇದಕ್ಕೆ ಅನುಮತಿ ಕೊಡುವ ನಿಯಮಾವಳಿಯ ಪ್ರಕಾರ ಮಾಡಿಕೊಂಡ ಮದುವೆಯ ಸಂಬಂಧದ ಒಳ್ಳೆಯತನದ ಅಂಶ ಬಹಳ ಕಡಿಮೆ (ನಿಶಲು. ೨೫೪). **[ಸಂ.]**

**ವಿವಾಹವಿಚ್ಛೇದನ** (ನಾ). = ವಿವಾಹವಿಚ್ಛೇದ : ನಮ್ಮ ದೇಶದಲ್ಲಿ ವಿವಾಹ ವಿಚ್ಛೇದನಗಳು ಕಡಿಮೆ (ರೂಢಿ). **[ಸಂ.]**

**ವಿವಾಹವೇದಿ** (ನಾ). ಮದುವೆಯ ವಿಧಿಯನ್ನು ಜರುಗಿಸಲು ಸಿದ್ಧಮಾಡುವ ಎತ್ತರವಾದ ಸ್ಥಳ, — ವೇದಿಕೆ : ಕಡೆಯಿಕ್ಕಿದ ಬಿಡುಮುತ್ತಿನ ಪೊಡರ್ದುಣ್ಮುವ ಬೆಳಗು . . . ಪೆಱತಲ್ತಿದೆ ಪಾಲ್ಗಡಲೆನಿಸಿದುದಾ ವಿವಾಹವೇದಿವಿಳಾಸಂ (ಆದಿಪು. ೮-೧೭). **[ಸಂ.]**

**ವಿವಾಹಿತ** (ಗು). ೧. ಮದುವೆಯಾದ ; ಲಗ್ನವಾಗಿರುವ : ಒಬ್ಬ ವಿವಾಹಿತವನಿತೆಯಲ್ಲಿ ಅವನು ಮನಸ್ಸಿಡುವನೇ? (ಇಪ್ಪತ. ೨೭೪). (ನಾ). ೨. ಮದುವೆಯಾಗಿರುವ ವ್ಯಕ್ತಿ ; ಲಗ್ನವಾಗಿರುವ ವ್ಯಕ್ತಿ : ಪೂರ್ವಾಶ್ರಮದೊಳ್ ವಿವಾಹಿತಳಾಗಿರ್ದ ಪತ್ನಿಯನ್ನೇ ವಿಧಿಪೂರ್ವಕ ಮಂತ್ರವತ್ತಾಗಿ ಪುನರ್ವಿವಾಹ ಮಾಡಿಕೊಳ್ಳುವುದೇ ವಿವಾಹವೆಂಬ ೧೨ನೇ ಕರ್ಮವು (ಪುರುಚ. ೨೧೭). **[ಸಂ.]**

**ವಿವಾಹಿತೆ** (ನಾ). ಮದುವೆಯಾದ ಸ್ತ್ರೀ ; ಲಗ್ನವಾಗಿರುವ ಹೆಣ್ಣು : ಜಗನ್ಮಾತೆಯೂ ಶಿವನಿಗೆ ವಿವಾಹಿತೆ (ಕಪಾಕುಂ. ೩೧). **[ಸಂ. ವಿವಾಹಿತಾ]**

**ವಿವಿಕ್ತ** (ಗು). ೧. ಪ್ರತ್ಯೇಕಿಸಿದ ; ಬೇರ್ಪಡಿಸಿದ. ೨. ಜನಸಂಚಾರವಿಲ್ಲದ ; ನಿರ್ಜನವಾದ : ಸದ್ಬ್ರಾಹ್ಮಣನು ಮುನ್ನೊಬ್ಬನು ವಿವಿಕ್ತಸ್ಥಳದೊಳಿರೆ (ತಿಮ್ಮಅ. ೨-೭೦). ೩. ಒಂಟಿಯಾದ ; ಏಕಾಂಗಿಯಾದ. ೪. ಭಿನ್ನವಾದ ; ವಿಶಿಷ್ಟವಾದ. ೫. ಪರಿಶುದ್ಧವಾದ : ಅವಿವೇಕಿಗಳ ಮನಂಗಳನವಿರಳಬಹಳ . . . ವಿವಿಕ್ತವಿಶದಮನದೆಂತುಮಾಡಿದೆ ಪೊರ್ದಲ್ (ಅಜಿಪು. ೧೧-೫೦). (ನಾ). ೬. ಜನರಹಿತವಾದುದು ; ನಿರ್ಜನವಾದುದು : ಆತಂ ಅವರಂ ಅಱಸುತ್ತಂ ಒಂದು ವಿವಿಕ್ತಮುಂ ಪರಮರಮ್ಯಮುಂ . . . ಅಪ್ಪುದೊಂದಾನುಮೊಂದು ಆಶ್ರಮ ಸ್ಥಾನದೊಳ್ . . . ಜೈನಾಚಾರ್ಯನಂ ಕಂಡು (ತತ್ತ್ವಪ್ರ. ೨); ವಿವಿಕ್ತಮಿದು ರಮಣೀಯ ಮಪ್ಪೊಡಂ ಸಾಕೇತಕೆತಿಸಮಿಪಾಶ್ರಮಂ (ಶ್ರೀರಾಮಾ. ೧೩೭-೩೪೮). ೭. ಒಂಟಿ ; ಏಕಾಂಗಿ : ಎಂಥ ವಿಚಿತ್ರಮನಸ್ಸು ನನ್ನದು? ಊರಿಗೆ ಊರೇ ಉತ್ಸವಗೊಂಡಿರುವಾಗ ವಿವಿಕ್ತವಾಗಿರಬೇಕೆನ್ನುತ್ತದೆ ಅದು ; ವಿವಿಕ್ತವಾಗಿರುವಾಗ ಹಬ್ಬದ ಸಂಭ್ರಮದಲ್ಲಿ ಬೆರೆಯುವುದಕ್ಕೆ ಕಾತರಿಸುತ್ತದೆ (ಹಂಸದ. ೧೨೭). **[ಸಂ.]**

**ವಿವಿಕ್ತಾವಾಸ** (ನಾ). [ಜೈನ] ಮುನಿಯು ಪಾಲಿಸಬೇಕಾದ ಒಂದು ಬಗೆಯ ನಿಯಮ ; ಸ್ತ್ರೀ, ಪಶು, ನಪುಂಸಕರಾದಿಯಾಗಿ ಯಾರೂ ಇಲ್ಲದ ಏಕಾಂತಸ್ಥಳಗಳಲ್ಲಿ ಮಾಡುವ ವಾಸ: ಸ್ತ್ರೀಪುನ್ನಪುಂಸಕಮೃಗಪಶುಪರಿವರ್ಜಿತ ವಿವಿಕ್ತಸ್ಥಾನಂಗಳೊಳ್ ನೆಲೆಸುವ ವಿವಿಕ್ತಾ[ಪಾಠಾಂ. ಕ್ತ]ವಾಸಮೆಂಬಯ್ದನೆಯ ತಪದೊಳಂ ನೆಱೆದು (ಆದಿಪು. ೬-೩೦ ವ) ; ಉಜ್ಜುಗದಯ್ದನೆಯ ತಪಂ ಸಾಧುಗುಣಾಗ್ರಣಿಗೆಸೆದುದಾ ವಿವಿಕ್ತಾವಾಸಂ (ಚಂದ್ರಪ್ರ. ೧೧-೧೨). **[ಸಂ.]**

**ವಿವಿಕ್ತಿಗೆಯ್** (ಕ್ರಿ). ವಿಶ್ಲೇಷಣೆಮಾಡು ; ವಿಶ್ಲೇಷಿಸು : ಕೇಳ್ದು ಪುರಾಣದರ್ಥಮನಿತಂ ಬಗೆಯೊಳ್ ಬರೆದೊಂದು ಚೆಂದದಿಂ ತಾಳ್ದಿ ವಿವಿಕ್ತಿಗೆಯ್ದು ಚತುರನ್ವಿತವಿಂಶತಿತತ್ತ್ವ ಭೇದಮಂ (ಚಿಕವಿ. ೪-೧೦೫). **[(ಸಂ. ವಿವಿಕ್ತಿ) + ಕೆಯ್]**

**ವಿವಿದಿಷೆ** (ನಾ). [ತತ್ತ್ವಶಾ] ಏಳು ಬಗೆಯ ಜ್ಞಾನಭೂಮಿಕೆಗಳಲ್ಲಿ ಒಂದು; ಅರಿವನ್ನು ಪಡೆದುಕೊಳ್ಳಬೇಕೆಂಬ ಇಚ್ಛೆ ; ತಿಳಿದುಕೊಳ್ಳುವ ಅಪೇಕ್ಷೆ: ಇಲ್ಲಿಂದ ಮುಂದೆ ಅನುಭವದಿಂದ ತಿಳಿಯತಕ್ಕ ಭೂಮಿಕೆಗಳು ಜ್ಞಾನಭೂಮಿಕೆಗಳು. ಅವುಗಳು ''ವಿವಿದಿಷಾ'' ''ವಿಚಾರಣಾ'' ''ತನುಮಾನಸಾ'' ''ಸತ್ವಾಪತ್ತಿ'' ''ಅಸಂಸಕ್ತಿ'' ''ಪದಾರ್ಥಾಭಾವಿನೀ'' ''ತುರ್ಯಗಾ'' ಎಂದೇಳು (ಭಾರದ. ೨೨೭). **[ಸಂ. ವಿವಿದಿಷಾ]**

**ವಿವಿಧ** (ಗು). ಅನೇಕ ರೀತಿಯ ; ನಾನಾ ಪ್ರಕಾರದ : ಪರಮಾಲಂಕಾರವಿಭಾಗಂ ವಿವಿಧಾಕಾರಂ ಶಬ್ದಾರ್ಥಭೇದದಿಂದೆರಡಕ್ಕುಂ (ಕವಿರಾ. ೧-೨) ; ವಿವಿಧಾರ್ಚನೆಗಳಿನರ್ಚಿಸಿ ವಿವಿಧಸ್ತುತಿಶತಸಹಸ್ರದಿಂ ಸ್ತುತಿಯಿಸಿ (ಆದಿಪು. ೫-೨೭). **[ಸಂ.]**

**ವಿವೃತ** (ಗು). ೧. ಪ್ರಕಟಗೊಳಿಸಿದ ; ವ್ಯಕ್ತವಾದ. ೨. ಮುಚ್ಚಿರದ ; ತೆರೆದ. ೩. ವಿವರಿಸಿದ ; ವಿಸ್ತಾರವಾಗಿ ಹೇಳಿದ. ೪. ವಿಸ್ತಾರವಾದ ; ಅಗಲವಾದ. (ನಾ). ೫. [ವ್ಯಾಕ] ಬಾಯಿ ತೆರೆದು ಉಚ್ಚರಿಸುವ ಶಬ್ದ : ವಿವೃತದಿಂದ ಸ್ವರಗಳೂ ಸ್ಪೃಷ್ಟದಿಂದ ವ್ಯಂಜನಗಳೂ ಹುಟ್ಟುತ್ತವೆ (ಸಂಶೋಧ. ೧೭) ; ಮತಿವಂತರಿಗುಂ ತಾಂ ಸಂತತಮವಿದಿತತತ್ತ್ವಮಾಗಿ ವಿಮತಿಯನಾಂತಾ ನುತಕಾವ್ಯದ ಧ್ವನಿಯೆಂಬೊಂದು ತೆರಂ ಸಲೆ ವಿವೃತಮಾಯ್ತುದಿಂತೀ ಪರಿಯಿಂ (ಧ್ವನ್ಯಾಲೋ. ೨೦೮). ೬. [ನಾಟ್ಯ] ಮೊಣಕಾಲನ್ನು ಚಲಿಸುವ ಭಂಗಿಗಳಲ್ಲಿ ಒಂದು ; IP ''ಮೊಳಕಾಲುಗಳನ್ನು ಹೊರ ಮುಖವಾಗಿ ಪ್ರಸರಿಸುವುದು. ವಿ — ಗಜಾರೋಹಣವನ್ನು ತೋರಿಸುವಾಗ'' (ಲಾಸ್ಯರಂ. ೨೭೫ ಗದ್ಯಾನುವಾದ): ಸಂಹತ, ಕುಂಚಿತ, ಅರ್ಧಕುಂಚಿತ, ನತ, ಉನ್ನತ, ವಿವೃತ, ಸಮ — ಈ ಏಳು ಮೊಳಕಾಲ ಭೇದಂಗಳ್ (ಲಾಸ್ಯರಂ. ೨-೧೫೩ ವ). ೭. ಮುಖದ ಅಭಿನಯ ಭೇದಗಳಲ್ಲಿ ಒಂದು ; IP ''ತುಟಿಗಳನ್ನು ಬಿಡಿಸುವುದು. ಹಾಸ್ಯ ಶೋಕ ಭಯ ಇವುಗಳನ್ನು ತೋರಿಸುವಾಗ ಇದನ್ನು ವಿನಿಯೋಗಿಸಬೇಕು'' (ಲಾಸ್ಯರಂ. ೨೮೦ ಗದ್ಯಾನುವಾದ) : ವ್ಯಾಭುಗ್ನ, ಭುಗ್ನ, ಉದ್ವಾಹಿತ, ವಿಧುತ, ವಿವೃತ, ವಿನಿವೃತ್ತ- ಈ ಆಱು ವದನಭೇದಂಗಳ್ (ಲಾಸ್ಯರಂ. ೩-೧೦೪ ವ). **[ಸಂ.]**

**ವಿವೃತಿ** (ನಾ). ವಿವರ ; ವಿವರಣೆ ; ವ್ಯಾಖ್ಯಾನ : ಈ ಜನಪದಸಾಹಿತ್ಯದ ಉಗಮಸ್ಥಾನವು ಸರಿಯಾಗಿ ಹೊಳೆಯದಿದ್ದರೂ ಅದು ಈಗಿನ ಮಾರ್ಗಸಾಹಿತ್ಯದ ಉದ್ಗಮಸ್ಥಾನಕ್ಕಿಂತಲೂ ಹಿಂದಿನದೆಂಬುದು ನನ್ನ ವಿವೃತ್ತಿಯಲ್ಲಿ ವ್ಯಕ್ತವಾಗುವುದು (ಪಾರ್ತಿಸು. V, ಮುನ್ನುಡಿ). **[ಸಂ.]**

**ವಿವೃತೋಕ್ತಿ** (ನಾ). [ಕಾವ್ಯಮಿ] ಒಂದು ಅಲಂಕಾರದ ಹೆಸರು ; ಗೂಢವಾದ ಅರ್ಥವು ಕವಿಯ ಪ್ರೌಢರೀತಿಯ ವಿವರಣೆಯಿಂದ ಸೂಚಿತವಾಗುವುದು : ಗೂಢವಾದರ್ಥವು ಕವಿಯ ಪ್ರೌಢವಚನರೀತಿಯಿಂದ ಕಂಠತಃ ಸೂಚಿಸಲ್ಕೆ ವಿವೃತೋಕ್ತಿಯೆನಿಸುವುದು (ಕುವಲ. ೧೫೯-೬). **[ಸಂ.]**

**ವಿವೃತ್ತ** (ಗು). ೧. ತಿರುಗಿದ ; ಹೊರಳಿದ. ೨. ಉರುಳುವ ; ಸುತ್ತುವ. (ನಾ). ೩. [ನಾಟ್ಯ] ಸೊಂಟವನ್ನು ತಿರುಗಿಸುವ ಒಂದು ಭಂಗಿ ; IP ''ಮುಖವನ್ನು ಹಿಂದಕ್ಕೆ ತಿರುಗಿಸಿ ಕೂಡಲೇ ಮುಂದಕ್ಕೆ ತಿರುಗಿಸುವುದು. [ಹಿಂದೆ ನೋಡಿ ಕೂಡಲೇ ಮುಂದೆ ನೋಡುವುದು]'' (ಲಾಸ್ಯರಂ. ೨೫೭ ಗದ್ಯಾನುವಾದ) : ಕಂಪಿತ, ಉದ್ವಾಹಿತ, ಛಿನ್ನ, ವಿವೃತ್ತ, ರೇಚಿತ — ಇವ್ವೆದೂ ಕಟಿಯ ಭೇದಂಗಳ್ (ಲಾಸ್ಯರಂ. ೨-೯೫ ವ). **[ಸಂ.]**

**ವಿವೃತ್ತಿ** (ನಾ). ಮನಸ್ಸಿಗೆ ಬಂದಂತೆ ನಡೆಯುವುದು ; ಸ್ವತಂತ್ರಮನೋವೃತ್ತಿ : ''ಸ್ವತಂತ್ರ ವೃತ್ತಸ್ಥಾನಂ ವಿವೃತ್ತಿಯೆನಲೊಲಿದಂತೆ ನಡಹಮಕ್ಕುಂ'' (ಮಂಗರಾ. ೧೩೩-೩೦). **[ಸಂ.]**

**ವಿವೇಕ** (ನಾ). ೧. ಯುಕ್ತಾಯುಕ್ತವಿಚಾರ ; ವಿವೇಚನೆ : ಅವನನುಜಂ ವಿವೇಕನಿಧಿ ಸಾಹಸದೊಳ್ಸುರರಾಜನನ್ನ[ನಂ] (ಸೌಇಇ. XX, ೩೧-೨೧ ; 1044) ; ನಿನಗೆ ವಿವೇಕವೆಳ್ಳನಿತಿಲ್ಲ (ಕುವ್ಯಾವಿ. ೬-೧೧) ; ಬಲಕ್ಕಿಂತಲೂ ಹೆಚ್ಚಾಗಿ ವಿವೇಕವನ್ನು ಉಪಯೋಗಿಸಬೇಕು (ಹಸುಹೂ. ೩೨೮). ೨. ಗುಣದೋಷಪರಿಶೀಲನೆ ; ವಿಮರ್ಶೆ. ೩. ಜ್ಞಾನ ; ತಿಳಿವಳಿಕೆ ; ಅರಿವು: ಸಕಳಲೌಕಿಕಸಾಮಯಿಕೋರುವೈದಿಕ ವಿಶೇಷ ವಿವೇಕಪರಾಯಣಂ (ಕವಿರಾ. ೩-೨೧೮) ; ವಿರತಿ ವಿವೇಕ ವಿತರಣ . . . ನಿರ್ಧಾರಗುಣಾದಿ ಸಾತ್ವಿಕಗುಣದಿಂದೂರ್ಧ್ವಲೋಕಮಂ ಸಾರ್ದು (ವಿವೇಕ. ೧೯೮). ೪. [ವೇದಾಂತ] ದೃಶ್ಯವಾಗಿರುವ ಪ್ರಪಂಚ ಮತ್ತು ಅದೃಶ್ಯವಾಗಿರುವ ಬ್ರಹ್ಮವನ್ನು ವಿಂಗಡಿಸಿ ತಿಳಿಯುವ ಶಕ್ತಿ : ವಿವೇಕ — ಪರಮಾತ್ಮನೊಬ್ಬನೇ ಯಾವಾಗಲೂ ನಿಜವಾಗಿ ಇರತಕ್ಕವನೆಂದೂ, ಉಳಿದವುಗಳೆಲ್ಲಾ ಬರೀ ತೋರಿಕೆಯವುಗಳಾಗಿದ್ದು

ನಾಶವಾಗತಕ್ಕವುಗಳೆಂದೂ ಬಿಡಿಸಿ ತಿಳಿಯುವುದು (ಅಮೃತ. ೧-೩೦ ಟೀಕು).

**ವಿವೇಕಬೃಹಸ್ಪತಿ** = ಜ್ಞಾನದಲ್ಲಿ ಬೃಹಸ್ಪತಿಗೆ ಸಮಾನನಾದವನು ; ಬಹಳ ಬುದ್ಧಿವಂತ ; ಒಂದು ಬಿರುದು : ಸನ್ಮಾನದಾನ ವಿವೇಕಬೃಹಸ್ಪತಿ ಭಯಲೋಭವರ್ಜ್ಜಿತ ಸಕಳಗುಣಸಂಪೂರ್ಣ್ಣಂ (ಸೌಇಇ. XI-i, ೪೭-೩೦ ; 994).

**ವಿವೇಕವಿರಿಂಚನ** = ವಿವೇಚನಾಶಕ್ತಿಯಲ್ಲಿ ಬ್ರಹ್ಮನಿಗೆ ಸಮಾನನಾದವನು ; ಒಂದು ಬಿರುದು : ರಟ್ಟಕುಳಭೂಷಣಂ . . . ವಿವೇಕವಿರಿಂಚನಂ ಸುವರ್ಣ್ಣಗರುಡಧ್ವಜಂ (ಸೌಇಇ. XX, ೬೨-೫; 1098 ?). [ಸಂ.]

**ವಿವೇಕಂಬಡೆ** (ಕ್ರಿ). ಜ್ಞಾನವನ್ನು ಹೊಂದು ; ತಿಳುವಳಿಕೆಯನ್ನು ಪಡೆ : ಇಚ್ಚೆಯೊಳ್ ಕೆಚ್ಚುಗಟ್ಟಿ ಸಿಂಗರದೊಳ್ ಸೊಬಗುವೆತ್ತು ವಿಳಾಸದೊಳ್ ವಿವೇಕಂಬಡೆದು (ಗಿರಿಕ. ೨-೧೦೫ ವ). [ವಿವೇಕ + ಪಡೆ]

**ವಿವೇಕಜ್ಞ** (ನಾ). ಯುಕ್ತಾಯುಕ್ತ ವಿಚಾರವನ್ನು ತಿಳಿಯುವವನು ; ವಿವೇಕಿ : ಸೊಕ್ಕಿರ್ದಾನೆ ಮೇಗಿಲ್ಲದೆ ಪರಿತಂದು ಮಸಗಿ ಕೊಲ್ಲುದಂ ಕಂಡೋಟಂಗೊಳ್ವೊಡಂ ವಿವೇಕಜ್ಞನುಂ ಕೃತಜ್ಞನುಂ ಅಲ್ಲದೆ ಕರುಣಮಿಲ್ಲದ ಜವಂ ಕೊಲ್ಲುದಂ ಕಂಡು (ಜೀವಸಂ. ೧೦-೧೩ ವ). [ಸಂ.]

**ವಿವೇಕವಿಕಲ, ವಿವೇಕವಿಕಳ** (ನಾ). ವಿವೇಚನೆಯಿಲ್ಲದ ವ್ಯಕ್ತಿ ; ಅವಿವೇಕಿ : ಪೆತಿಯುಮಂ ಪುರೋಹಿತನುಮನಾ ಪಾತಕಿ ವಿಷದಿಂ ಕೊಂದಳ್ ಕೌತುಕಮೆ ವಿವೇಕವಿಕಲರೇನಂ ಮಾಡರ್ (ಪಂರಾಮಾ. ೧೫-೩೭). **ವಿವೇಕವಿಕಳ** : ಪರಮಜ್ಞಾನಿಯೆ ವಿವೇಕವಿಕಳರವೋಲ್ ಬಾಲರ ತಲೆಯನರಿದು ತಂದೆಯೊ (ಗದಾಯು. ೯-೩೪). [ಸಂ.]

**ವಿವೇಕವಿಕಳ** 'ವಿವೇಕವಿಕಲ' ನೋ.

**ವಿವೇಕಶಾಲಿ** (ನಾ). = ವಿವೇಕಜ್ಞ : ವಿವೇಕಶಾಲಿಯಾದ ಉದ್ದನೆಯ ಮನುಷ್ಯ ತನ್ನದೊಂದು ಸಲಹೆ ಮಂಡಿಸಿದನು (ಪುನರು. ३೦೪). [ಸಂ. ವಿವೇಕಶಾಲಿನ್]

**ವಿವೇಕಶೂನ್ಯ** (ಗು). ೧. ವಿವೇಚನಾರಹಿತವಾದ ; ವಿಚಾರಹೀನವಾದ. (ನಾ). ೨. ವಿವೇಚನಾರಹಿತವಾದುದು ; ವಿಚಾರಹೀನವಾದುದು : ಹಳ್ಳಿಯ ದುಃಖದಾರಿದ್ರ್ಯಗಳಿಗೂ . . . ತಾನು ಮಾಡುತ್ತಿದ್ದ ವಿವೇಕಶೂನ್ಯವಾದ ದುಂದುಗಾರಿಕೆಗೂ ಅಪಾರವ್ಯೆದೃಶ್ಯ ಎದ್ದು ಕಾಣುತ್ತಿತ್ತು (ಪುನರು. ३೦೮). ೩. ವಿವೇಚನೆಯಿಲ್ಲದವನು ; ಅವಿವೇಕಿ : ದೆವಸದೊಳ್ ತರುಗಳುಂ ಮಾರ್ದವಮಂ ಕೆಯ್ಕೊಳ್ಳುಮಲ್ಲ ದಂದೊಣಗುಗುಮಿಾ ಭವವಾರ್ಧಿಯೊಳ್ ಮುಟುಗಿದ ವಿವೇಕಶೂನ್ಯಂಗಸಾರಮಿಂತಿದೆ ಸಾರಂ (ಶಾಂತಿಪು. ೫-೭೭) ; ಫಣಿರಾಜಪತಾಕಂ ವಿಕಳಿತವಿವೇಕಶೂನ್ಯಂ ಬಾಷ್ಪೋದ್ರೇಕಂ . . . ಮೂರ್ಛೆಗೆ ಸಂದಂ (ಗದಾಯು. ३-೭೭). [ಸಂ.]

**ವಿವೇಕಿ** (ನಾ). ಯುಕ್ತಾಯುಕ್ತಪರಿಜ್ಞಾನವುಳ್ಳವನು ; ವಿವೇಚನಾಪರ : ಲೋಕವಿರುದ್ಧಂ ತದ್ವ್ಯತಿರೇಕೋಕ್ತಿ ವಿವೇಕಿಲೋಕಗರ್ಹಿತಮಾರ್ಗಂ (ಕವಿರಾ. ೧-೧೦೯); ಪರಮದೀಕ್ಷೆಗುಪೇಕ್ಷಿಸಿದಂ ವಿವೇಕಿಯೇ (ಪುಷ್ಪಪು. ೧३-३೪). [ಸಂ. ವಿವೇಕಿನ್]

**ವಿವೇಕಿಸು** (ಕ್ರಿ). ೧. ವಿಚಾರ ಮಾಡು ; ವಿವೇಚಿಸು : ಪುಂಸ್ತ್ವ ಜಡಭಾವವುರುಷಪ್ರಕೃತಿಗಳ ವಿವೇಕಿಸಿಯಜಿಯೆ ಮೋಕ್ಷವೆಂಬ ಸಾಂಖ್ಯ ಉಡುಗು (ಪದ್ಮರಾ. ೧೧-೧೯೧) ; ನ್ಯಾಯನಿಷ್ಠುರರಹಿತವಚನರಚನೆ ಆ ಕಿವಿಗಳಿಗೆ ಕಠಿಣವಾಗಿ ವಿವೇಕಿಪಡೆ ಸೊಗಸಾಗಿ ಮುಂತೆಯನೇಕ ಸತ್ಫಲಸಿದ್ಧಿಯಹುದು (ಬಸವು. ३೭-೪೫). ೨. ನಿರ್ಧಾರಮಾಡು ; ನಿಶ್ಚಯಿಸು : ಆ ಕುಮಾರರಿಗಾಗಳಾ ವಾಲ್ಮೀಕಿ . . . ಲೋಕವಿಭುಕುಶನೆಂದು ಮೊದಲು ವಿವೇಕಿಸಿದನೆರಡನೆಯ ಶಿಶು ಶೋಭಾಕಲಿತ ಲವನೆಂದು ಕರೆದನು (ತೊರರಾ. ೧-३-೯). [ವಿವೇಕ + – ಇಸು]

**ವಿವೇಚನೆ** (ನಾ). ೧. ಯುಕ್ತಾಯುಕ್ತತೆಗಳನ್ನು ಅರಿಯುವಿಕೆ ; ವಿವೇಕ : ಈ ಬಗ್ಗೆ 'ಬಂಕಿಂಚಂದ್ರ'ರ . . . ವಿಮರ್ಶೆ ವಿವೇಚನೆಯಿಂದ ಕೂಡಿದೆ (ಧರ್ಮಸಾ. ೭೮) ; ನಿಮಗೆ ಹೊತ್ತಿನ ವಿವೇಚನೆಯೇ ಇಲ್ಲ (ಹಸುಹೂ. ೯). ೨. ತೀರ್ಮಾನ ; ನಿರ್ಣಯ : ಅವುಗಳ ವಿಚಾರದಲ್ಲಿ ಯಾವುದೇ ನಿಶ್ಚಿತ ವಿವೇಚನೆ ಮಾಡುವುದು ಸಾಧ್ಯವಿಲ್ಲ (ದ್ರಾವಿವಿ. ೪೭). ३. ಗುಣದೋಷ ಪರಿಶೀಲನೆ ; ವಿಮರ್ಶೆ : ಈ ಕಾವ್ಯದ ವಿವಿಧಾಂಗಗಳನ್ನು ಕುರಿತು ವಿವೇಚನೆ ಮಾಡಲು ಪ್ರಯತ್ನಿಸುವೆವು (ಸಾಹಿಸ. ೧೧೪). [ಸಂ. ವಿವೇಚನಾ]

**ವಿವೇಚಿಸು** (ಕ್ರಿ). ಪರಿಶೀಲನೆ ಮಾಡು ; ವಿಚಾರಮಾಡು ; ವಿಮರ್ಶಿಸು : ಪ್ರಾಚೀನಕಾಲದ ಸೂಪಶಾಸ್ತ್ರಗ್ರಂಥಗಳನ್ನು ಶಾಸನಾಧಾರದ ಬದಿಯಲ್ಲಿಟ್ಟುಕೊಂಡು ವಿವೇಚಿಸಬೇಕಾಗಿದೆ (ಶಾಸಗಿ. ೫೯). [(ಸಂ. ವಿವೇಚನ) + – ಇಸು]

**ವಿಶ** (ನಾ). ೧. ಬೇಸಾಯಗಾರ ; ರೈತ. ೨. ಚತುರ್ವರ್ಣಗಳಲ್ಲಿ ಮೂರನೆಯ ವರ್ಣಕ್ಕೆ ಸೇರಿದ ವ್ಯಕ್ತಿ ; ವೈಶ್ಯ : "ವಿಶನೂರುಭವತ್ರಿತಯಜಾತನಾರ್ಯಂ ಮಹೀಸ್ಪೃಶನೆನಲು ವೈಶ್ಯನಕ್ಕು" (ಮಂಗರಾ. ೧೦೨-೧). ३. ಮನುಷ್ಯ ; ವ್ಯಕ್ತಿ. [ಸಂ.]

**ವಿಶಂಕಟ** (ಗು). ೧. ದೊಡ್ಡದಾದ ; ಬೃಹತ್ತಾದ. ೨. ಅಗಲವಾದ ; ವಿಶಾಲವಾದ : ವಜ್ರಾಕರ್ಷಣರೇಖಾವಿಶಂ[ಪಾಠಾಂ. ಸಂ]ಕಟವ್ಯೂಢವಕ್ಷಸ್ಥಲರ್ (ಜಗವಿ. ೨-೩೯ ವ). ३. ಬಲವಾದ ; ಸಾಮರ್ಥ್ಯವುಳ್ಳ. (ನಾ). ೪. ಅಗಲವಾದುದು ; ವಿಶಾಲವಾದುದು : "ವಿಶಂಕಟಂ, ವಿಶಾಳಂ(ಲಂ) – ಈ ೨ ಅಗಲಿತ್ತು" (ಹಲಾಯು. ೧೨೪-೭೮). [ಸಂ.]

**ವಿಶಂಕೆ** (ನಾ). ೧. ಅನುಮಾನ ; ಸಂಶಯ : ನಯನಿಯೋಗವಿಕಲ್ಪನೆಯೊಳ್ವಿಶಂಕೆಯ ವಿಶೇಷಗುಣಕ್ಕುಪಲಕ್ಷಣಂ (ಕವಿರಾ. ೧-೧३೮). ೨. ಭಯ ; ಹೆದರಿಕೆ. [ಸಂ. ವಿಶಂಕಾ]

**ವಿಶದ** (ಗು). ೧. ಶುಭ್ರವಾದ ; ಸ್ವಚ್ಛವಾದ. ೨. ಬಿಳುಪಾದ ; ಧವಳ : ಪರಾಕ್ರಮಧವಳಂಗೆ ಶಶಾಂಕವಿಶದಯಶಮೆ ತೆರಳ್ದುರುಳಿಗೊಂಡಂತಿರ್ದ ಶಂಖಮಂ ಬಾಸಣಿಗೆಗಳೆದು . . . ವಿಕ್ರಮಾರ್ಜುನಂಗೆ ಕೊಟ್ಟು (ಪಂಪಭಾ. ೬-३ ವ) ; ಆ ವಂಶಜರ ಗುಣಂಗಳನಾವಗಮೊಳಕೊಂಡು ತನ್ನ ವಿಶದಯಶೋಮುಕ್ತಾವಳಿಯಂ ಧರೆಗಿತ್ತು . . . ಪೆಸರ್ವಡೆದಂ (ಪಂರಾಮಾ. ३-३). ३. ಸ್ಪಷ್ಟವಾದ ; ಸ್ಫುಟವಾದ : ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಲಯವಿಲೀನವಿಶದವಿಷಯವಿಶೇಷಂ (ಕವಿರಾ. ೧-३೭) ; ಅಶಿಥಿಲಪದಚಯ ರಚನಾತಿಶಯಂ ಸಂಶ್ಲಿಷ್ಟಮೆಂಬುದಕ್ಕುಮನೇಯಂ ವಿಶದಾರ್ಥಂ ಶಬ್ದಾನ್ವಯ ವಶಮರ್ಥವ್ಯಕ್ತಿ (ಕಾವ್ಯಾವ. ೫೦೫). ೪. ಚೆಲುವಾದ ; ಮನೋಹರವಾದ. (ನಾ). ೫. ನಿರ್ಮಲವಾದ ವಸ್ತು ; ಸ್ವಚ್ಛವಾದ ವಸ್ತು : "ವಿಮಳಂ, ವಿಶದಂ . . . ಅನಾವಿಲಂ – ಈ ೫ ನಿರ್ಮಳಮಪ್ಪ ವಸ್ತು" (ಹಲಾಯು. ೨೨-೧३೨). ೬. ಸ್ಪಷ್ಟವಾದುದು ; ನಿಚ್ಚಳವಾದುದು : ವಿಶದಮಾದೊಂದು ಜೀವನಧರ್ಮದರ್ಶನವನುಸರಿ ಕೊಳೆ ತನ್ನ ಮನಸಿಗೆ ತಾನೆ ಬಗೆದು (ಮಂಕುಕ. ೯४೭). [ಸಂ.]

**ವಿಶದಿಮ** (ಗು). ಬಿಳಿಯ ; ಧವಳ : ಧರ್ಮಾಚರಣೆಯಿಂದ ಚಾತುರ್ವರ್ಣಮಂ ಪೊರೆದು . . . ಕೀರ್ತಿಯಂ ಜಲಧಿಮೇಖಲೆಗೆ ವಿಶದಿಮವಸ್ತ್ರಮಂಗ್ಳೆದು (ವಂಕಾರಾ. ೨-३३-೨೭). [ಸಂ.]

**ವಿಶದೀಕರಣ** (ನಾ). ಸ್ಪಷ್ಟಪಡಿಸುವಿಕೆ ; ಅರ್ಥವಾಗುವಂತೆ ವಿವರನೀಡುವಿಕೆ : ಈ ಸಮಸ್ಯೆ ಜಟಿಲವಾದ್ದರಿಂದ ವಿಶದೀಕರಣ ಅಗತ್ಯ (ರೂಢಿ). [ಸಂ.]

**ವಿಶದೀಕರಿಸು** (ಕ್ರಿ). ಸ್ಪಷ್ಟಪಡಿಸು ; ವಿವರಿಸು : ಶಿಕ್ಷಣಮನೋವಿಜ್ಞಾನ . . . ಶಿಕ್ಷಣವನ್ನು ಹೇಗೆ ಕೊಡಬೇಕೆಂಬುದನ್ನು ವಿಶದೀಕರಿಸುತ್ತದೆ (ಶಿಕ್ಷದ. ४೦೭) ; ಅವನ್ನು ವಿಂಗಡಿಸಿ ವಿಶದೀಕರಿಸಿ ವಿಸ್ತರಿಸಿದ್ದಾನೆ (ಇಸ್ಲಾಂಸಂ. ೨೭೫). [ವಿಶದೀಕರಣ + – ಇಸು]

**ವಿಶದೋದಕ** (ನಾ). ತಿಳಿಯಾದ ನೀರು ; ಸ್ವಚ್ಛವಾದ ನೀರು : ಭರದಿಂ ನೀರಂ ಮೊಗೆದುಂ ಪರಿತಂದರ್ ಕನಕಕಳಶವಿಶದೋದಕಮಂ (ಶಾಂತಿಪು. ೧೦-३೯). [ಸಂ.]

**ವಿಶರ** (ನಾ). ಕೊಲ್ಲುವಿಕೆ ; ಕೊಲೆ. [ಸಂ.]

**ವಿಶರಣ** (ಗು). ೧. ನಾಶಹೊಂದುವ ; ನಶ್ವರವಾದ : ವ್ಯಸನಕಾರಣಮುಂ ವಿಶರಣಸ್ವಭಾವಮುಂ ಅಪ್ಪ ಶರೀರಂ ಇವರಿಂ ಬಾಧಿಸೆ ಪಟ್ಟುದು (ತತ್ತ್ವಪ್ರ. ३३५). (ನಾ). ೨. ಕೊಲ್ಲುವುದು ; ಸಂಹಾರ. [ಸಂ.]

**ವಿಶರಾರು** (ಗು). ೧. ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ. (ನಾ). ೨. ನಾಶ ಹೊಂದುವಂತಹುದು ; ನಶ್ವರವಾದುದು : ನಿರನ್ವಯಪ್ರತಿಕ್ಷಣ ವಿಶರಾರುಗಳ್ ನಿರಂಶಂಗಳಾಗಿಯುಂ . . . ಆತ್ಮಾಭಿಧಾನಮಂ ಪುಟ್ಟಿಸುಗುಂ (ಆದಿಪು. ೨-೯ ವ) ; ಪ್ರತಿಕ್ಷಣಂ ವಿಶರಾರುಗಳ್ ಚಿತ್ತಕ್ಷಣಂಗಳ್ . . . ಪ್ರವರ್ತಿಸುವುವು (ಶಾಂತಿಪು. ೮-೧೪೨ ವ). [ಸಂ.]

**ವಿಶಲ್ಯ** (ಗು). ೧. ಮುಳ್ಳಿಲ್ಲದ ; ಕಂಟಕರಹಿತವಾದ. ೨. ನೋವುಇಲ್ಲದ. [ಸಂ.]

**ವಿಶಲ್ಯಕರಣಿ** (ನಾ). (ದೇಹದಲ್ಲಿರುವ ಸಮಸ್ತ ನೋವು ಮತ್ತು ವ್ಯಾಧಿಗಳನ್ನು ಪರಿಹರಿಸುವುದೆಂದು ಹೇಳಲಾಗುವ) ಒಂದು ಬಗೆಯ ಔಷಧೀಮೂಲಿಕೆ : ಕೇಳದಾದೆನು ಜಾಂಬವರ ಜೀವಾಳದಮಳೌಷಧಿಯ ನಾಲ್ಕಬಿ ಮೂಲಿಕೆಯ ಸಂಧಾನ ಶಲ್ಯ ವಿಶಲ್ಯಕರಣಿಗಳ (ತೊರಾ. ೬-೩೬-೫೬). [ಸಂ. ವಿಶಲ್ಯಕರಣೀ]

**ವಿಶಲ್ಯೆ** (ನಾ). ೧. ಒಂದು ಬಗೆಯ ಸಸ್ಯ ; ಅಮೃತಬಳ್ಳಿ : "ವತ್ಸಾದನೀ . . . ವಿಶಲ್ಯಾ, ಮಧುಪರ್ಣೀ — ೯ ಅಮೃತಬಳ್ಳೀ ಹೆಸರು" (ಸಿದ್ಧಾಂತಿ. ೧೩೧). ೨. ಒಂದು ಬಗೆಯ ಸಸ್ಯ ; ಬೆಣ್ಣೆಬಿದುರು. ೩. ಜಾಪಾಳದ ಗಿಡ. ೪. ಅಜವಾನ. ೫. ಸಣ್ಣ ಯಾಲಕ್ಕಿ. [ಸಂ. ವಿಶಲ್ಯಾ]

**ವಿಶಸನ** (ನಾ). ೧. ಕೊಲ್ಲುವಿಕೆ ; ಕೊಲೆ : ಭೇದನಭೇದನ ವಿಶಸನಾದಿಕ್ರಿಯಾಪರತ್ವಮುಂ (ತತ್ತ್ವಪ್ರ. ೨೫೬) ; ವಿಶಸನಭೀತಿಯಿನೋಡುವ ವಸುಧೇಶರಂ . . . ನಗುತಿರ್ಪಂತೆಸೆದುವು ಬೆನ್ನಟ್ಟುತಿರ್ದ ಕೃಷ್ಣಶರಂಗಳ್ (ಜಗವಿ. ೭-೧೦೪). ೨. ಯುದ್ಧ ; ಕಾಳಗ : 'ವಿಶಸನರಂಗ' ಪರಾ. ೩. ಖಡ್ಗ ; ಕತ್ತಿ. [ಸಂ.]

**ವಿಶಸನರಂಗ** (ನಾ). ಕಾಳಗದ ಕಣ ; ಯುದ್ಧಭೂಮಿ : ಎನ್ನ ತೊಟ್ಟುವೆಸನನೀ ವಿಶಸನರಂಗದೊಳ್ ತೋರ್ಪೆಂ (ಪಂಪಭಾ. ೧೨-೬ ವ). [ಸಂ.]

**ವಿಶಾಖ$_1$** (ಗು). ೧. ಕೊಂಬೆಗಳಿಲ್ಲದ ; ಶಾಖೆಗಳಿಲ್ಲದ. (ನಾ). ೨. ಷಣ್ಮುಖ ; ಕಾರ್ತಿಕೇಯ : "ಗೌರೀಪುತ್ರಃ . . . ವಿಶಾಖಃ . . . ಶರಜನ್ಮಾ — ಈ ೨೦ ಕಾರ್ತಿಕೇಯನ ಪೆಸರ್" (ಹಲಾಯು. ೫-೨೦). ೩. ಬಿಲ್ಲುಗಾರನು ಬಾಣ ಹೊಡೆಯುವಾಗ ಕಾಲನ್ನು ವಿಂಗಡಿಸಿಕೊಂಡು ನಿಲ್ಲುವ ಒಂದು ಭಂಗಿ. ೪. ಯಾಚಕ ; ಭಿಕ್ಷುಕ. [ಸಂ.]

**ವಿಶಾಖ$_2$** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿನಾರನೆಯ ನಕ್ಷತ್ರ ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ವಿಶಾಖ, ಶೂಪ, ಇಂದ್ರಾಗ್ನಿ, ದ್ವಿದೈವತ್ಯಂ, ವಿಶಾಚಿಕಂ — ಈ ೫ ವಿಶಾಖನಕ್ಷತ್ರಕೆ ಪೆಸರು (ಭಾಸ್ಕರ. ೭೨-೮) ; ವಿಶಾಖ ಹಿಡಿದರೆ ಪಿಶಾಚಿ ಹಿಡಿದಂತೆ (ಗಾದೆ). [ಸಂ. ವಿಶಾಖಾ]

**ವಿಶಾಖಜನಕ** (ನಾ). ಷಣ್ಮುಖನ ತಂದೆ ; ಶಿವ : ವಿಶಾಖಜನಕ ವಿಷಧರ ಧರಾಧಿಪತಿ ವಿಷಧರಕಿರಣಮೌಳಿ ವಿಷಯವಿಹ್ವಲದೂರ . . . ಕರುಣಿಸುವುದು (ಸಿದ್ಧರಾ. ೬-೪೦). [ಸಂ.]

**ವಿಶಾಖಾಕರ** (ನಾ). ೧. ಕೊಂಬೆಗಳಿಲ್ಲದ ಪ್ರದೇಶ. ೨. ಷಣ್ಮುಖ ; ಕಾರ್ತಿಕೇಯ. ೧, ೨ : ಮತ್ತಮಾ ಮಹಾವನಂ . . . ಮಯೂರಾಧಿರೂಢಮಾಗಿಯುಂ ವಿಶಾಖಾಕರಮಲ್ತು (ಚಂದ್ರಪ್ರ. ೫-೫೨ ವ). [ಸಂ.]

**ವಿಶಾಖೆ** (ನಾ). ೧. = ವಿಶಾಖ$_2$ : ವಿಶಾಖೆ ಕುಂಬಾರಚಕ್ರದ ಹಾಗೆ (ಭಾಸ್ಕರ. ೬೦-೫) ; ಅಶ್ವಿನಿ ಭರಣಿ . . . ವಿಶಾಖೆ . . . ರೇವತಿಯೆಂಬಿಪ್ಪತ್ತೇಳು ನಕ್ಷತ್ರಗಳುಂ ತಮ್ಮ ತಮ್ಮ ಅಧಿಕಾರಮಂ ಮಾಡುತ್ತಿರ್ಪವು (ವಿವೇಕ. ೨೦೦). ೨. ಹಾಗಲಗಿಡ. [ಸಂ. ವಿಶಾಖಾ]

**ವಿಶಾಪ** (ನಾ). ಶಾಪದ ನಿವಾರಣೆ, — ಪರಿಹಾರ ; ಶಾಪವಿಮೋಚನೆ : ತಂದೆ ಕರುಣಿಸು ವಿಶಾಪವನೆಂದು ಬಾಯ್ಬಿಡುವ ಮಂದಮತಿಗಳಿಗೆ ದೊರಕುವ ಲೇಸನೀಯಬೇಕೆಂದು ಮನದೊಳು ನೆನೆದನು (ಸಿದ್ಧರಾ. ೧-೨೫) ; ನಲವೇರಿ ಚಂಡಿಯ ವಿಶಾಪದಿಂದೆ ಸೇನೆ ವಿಸ್ಮಯದೊಡನೆ ಹಯದೊಡನೆ ಮುಂದೆ ಸುಮ್ಮಾನದಿಂ ನಡೆಯಲ್ಕೆ (ಜೈಮಿಭಾ. ೩೩-೮). [ಸಂ.]

**ವಿಶಾಯ** (ನಾ). ೧. (ಪಹರೆಯವನಂತೆ) ಸ್ವಲ್ಪಕಾಲ ಮಲಗುವುದು ಮತ್ತು ಸ್ವಲ್ಪಹೊತ್ತು ಎಚ್ಚರವಾಗಿರುವುದು : "ಉಪಶಾಯಃ, ವಿಶಾಯಃ . . . ಪಹರೆ ತಿರುಗುವ ಕಾವಲುಗಾರರು ಸರದೀ ಮೇಲೆ . . . ಮಲಗುವುದಕ್ಕೆ ಹೆಸರುಗಳು" (ಸಿದ್ಧಾಂತಿ. ೩೬೬). ೨. ಪರಿವಿಡಿ ; ಅನುಕ್ರಮ : "ಪರಿಪಾಟೀ . . . ಪರ್ಯಾಯಃ, ವಿಶಾಯಃ — ಈ ೭ ಪರಿವಿಡಿ" (ಹಲಾಯು. ೧೨೨-೫೫). [ಸಂ.]

**ವಿಶಾರದ** (ಗು). ೧. ಕೌಶಲ್ಯವುಳ್ಳ ; ನಿಪುಣತನದ. ೨. ದಿಟ್ಟತನದ ; ಕೆಚ್ಚುಳ್ಳ. ೩. ಜ್ಞಾನಿಯಾದ ; ವಿದ್ವಾಂಸನಾದ. ೪. ಹೆಸರುವಾಸಿಯಾದ ; ಪ್ರಖ್ಯಾತಿ ಹೊಂದಿದ. (ನಾ). ೫. ವಿದ್ವಾಂಸ. ೬. ನಿಪುಣ ; ಕುಶಲನಾದವನು : ನವವಯಸನಾಗಿಯುಂ ವ್ಯಸನವಿಹೀನಂ ಶೂರನಾಗಿಯುಂ ತನುರಕ್ಷೈಕವಿಶಾರದಂ (ಶಾಂತಿಪು. ೨-೪೩) ; ರಾಜ್ಯದ ವ್ಯವಹಾರದಲ್ಲಿ ವಿಶಾರದರನ್ನಾಗಿ ಮಾಡು (ರಾಮರಾ. ೫೫). ೭. ಬಕುಳವೃಕ್ಷ. [ಸಂ.]

**ವಿಶಾಲ$_1$** (ನಾ). ಒಂದು ಬಗೆಯ ಸಸ್ಯ ; ಹಾವುಮೆಕ್ಕೆ ಗಿಡ : "ಬೆಳ್ಳಡಕಿಲು ವಿಶಾಲಂ ಕರಿಲ್ಲಕಮೆನಿಕ್ಕು" (ಮಂಗರಾ. ೪೦-೩೦). [ಸಂ. ವಿಶಾಲಾ]

**ವಿಶಾಲ$_2$** (ಗು). ೧. ದೊಡ್ಡದಾದ ; ಬೃಹತ್ತಾದ : ಇದು ವಿಶಾಲಭಾರತದ ಮತ್ತು ಭಾರತಸಂಸ್ಕೃತಿಯ ವ್ಯಾಪ್ತಿಯ ಸೂಕ್ಷ್ಮ ಪರಿಚಯ (ಭಾರದ. ೩೪೯). ೨. ಅಗಲವಾದ ; ವಿಸ್ತಾರವಾದ : ಸಾಲಪ್ರಾಂಶುವಿಶಾಲಲೋಲನಯನಂ ಜಯಶ್ರೀಲೋಲಂ ಜಮದಗ್ನಿರಾಮಮುನಿಯೊಳ್ ಕಲ್ತಂ ಧನುರ್ವಿದ್ಯೆಯಂ (ಪಂಪಭಾ. ೧-೬೮). (ನಾ). ೩. ದೊಡ್ಡದು ; ಹಿರಿದು : "ಬೃಹತ್ . . . ವಿಶಾಲಂ . . . ವರಿಷ್ಠಂ — ಈ ೧೨ ಹಿರಿದು" (ಹಲಾಯು. ೧೧೬-೧೪). ೪. ಅಗಲವಾದುದು ; ವಿಸ್ತಾರವಾದುದು : "ವಿಶಾಲಂ ವಿಶಂಕಟಮುಮುತಿಯಗಲಮಕ್ಕುಂ" (ಮಂಗರಾ. ೧೩೩-೨೮) ; ಒಂದು ಲಕ್ಷಯೋಜನ ವಿಶಾಲಮಾಗಿ ಮನೋಹರಮಾಗಿರ್ಪುದೇ ಜಂಬೂದ್ವೀಪಮಕ್ಕುಂ (ವಿವೇಕ. ೨೦೧). [ಸಂ.]

**ವಿಶಾಲತೆ** (ನಾ). ವಿಸ್ತಾರ ; ವೈಶಾಲ್ಯ ; ಹರಹು : "ಪರಿಣಾಹಃ, ವಿಶಾಲತಾ — ಈ ೨ ಸುತ್ತು" (ಹಲಾಯು. ೧೩೦-೧೦೧). [ಸಂ. ವಿಶಾಲತಾ]

**ವಿಶಾಲಮತಿ** (ನಾ). ಬಹಳ ಬುದ್ಧಿಶಾಲಿ ; ಉನ್ನತಜ್ಞಾನಿ : ಮನೆಗೆ ಬಂದು ವಿಶಾಲಮತಿ ಚಿಂತಿಸಿದನಾ ಸಿರಿಲೋಲ (ಕುಮಾರ. ೧೦-೨೫). [ಸಂ.]

**ವಿಶಾಲಾಕ್ಷ** (ಗು). ೧. ಅಗಲವಾದ ಕಣ್ಣುಗಳುಳ್ಳ. (ನಾ). ೨. ವಿಷ್ಣು. ೩. ಶಿವ. [ಸಂ.]

**ವಿಶಾಲಾಕ್ಷಿ** (ನಾ). ೧. ಅಗಲವಾದ ಕಣ್ಣುಗಳುಳ್ಳವಳು ; ಸುಂದರಿ. ೨. ಪಾರ್ವತಿಯ ಒಂದು ಹೆಸರು. [ಸಂ. ವಿಶಾಲಾಕ್ಷೀ]

**ವಿಶಾಲಿತ, ವಿಶಾಳಿತ** (ಗು). ವಿಸ್ತಾರವಾದ ; ಹರವಾದ. **ವಿಶಾಳಿತ:** ಸೊಗಯಿಸುಗುಮಿಂದ್ರನೀಲಮಣಿ ಸನ್ನಿಭದೊಳ್ . . . ಅತಿಧವಳಮೂರ್ತಿಗೆ ಘನವಳಯಸದಗ್ಗಗಗನದೊಳುಬ್ಬಿದುಬ್ಬಿದು ವಿಶಾಳಿತಾಶಾವಳಯಂ (ಕವಿರಾ. ೨-೧೪೯). [ಸಂ.]

**ವಿಶಾಲೆ** (ನಾ). ಒಂದುಬಗೆಯ ಸಸ್ಯ ; ಹಾವುಮೆಕ್ಕೆಗಿಡ : "ವಿಶಾಲಾ, ಇಂದ್ರ ವಾರುಣೀ — ೨ ಹಾವುಮೆಕ್ಕೇಗಿಡದ ಹೆಸರು" (ಸಿದ್ಧಾಂತಿ. ೧೪೮). [ಸಂ. ವಿಶಾಲಾ]

**ವಿಶಾಳಿತ** 'ವಿಶಾಲಿತ' ನೋ.

**ವಿಶಿಖ** (ಗು). ೧. ಜುಟ್ಟಿಲ್ಲದ ; ಶಿಖೆಯಿಲ್ಲದ. ೨. ತುದಿಯಿಲ್ಲದ ; ಮೊನೆಯಿಲ್ಲದ. (ನಾ). ೩. ಬಾಣ ; ಅಂಬು : ದುರ್ಯೋಧನನನೊಂದೆ ನಿಶಿತವಿಶಿಖಹತಿಯಿಂ ಸುರುಳ್ಚಿ ಪುಳ್ಚಿನಮೆಚ್ಚು ಮೂರ್ಛಾಗತನಂ ಮಾಡಿ (ಪಂಪಭಾ. ೧೧-೧೪೨ ವ) ; ಪಂಚಾಯುಧನ ಪೊಸಮಸೆಯ ವಿಶಿಖಂಗಳ್ (ರಾಮಾಶ್ವ. ೫೮-೨೯). [ಸಂ.]

**ವಿಶಿಖಾಸನ** (ನಾ). ಬಿಲ್ಲು ; ಧನುಸ್ಸು : 'ಇಕ್ಷುವಿಶಿಖಾಸನ', 'ಗೋತ್ರವಿಶಿಖಾಸನ' ಪರಾ. [ಸಂ.]

**ವಿಶಿಖೆ** (ನಾ). ೧. ಗುದ್ದಲಿ ; ಸನಿಕೆ. ೨. ನೂಲನ್ನು ಸುತ್ತುವ ಸಾಧನ ; ಕದಿರು. ೩. ರಾಜಮಾರ್ಗ ; ದೊಡ್ಡ ಬೀದಿ : "ಪ್ರತೋಳೀ, ವಿಶಿಖಾ, ರಥ್ಯಾ — ಈ ೩ ಬೀದಿ" (ಹಲಾಯು. ೪೮-೧೩೪). ೪. ಕ್ಷೌರಿಕನ ಹೆಂಡತಿ. [ಸಂ. ವಿಶಿಖಾ]

**ವಿಶಿಷ್ಟ** (ಗು). ೧. ಬೇರೆಯಾದ ; ಪ್ರತ್ಯೇಕವಾದ : ಟಕಾರ . . . ಇಂದಿಗೂ ಒಂದೆರಡು ಭಾಷೆಗಳಲ್ಲಿ ಉಳಿದಿರುವ, ದ್ರಾವಿಡಪರಿವಾರದ ಒಂದು ವಿಶಿಷ್ಟಧ್ವನಿ (ದ್ರಾವಿವಿ. ೩.೨). ೨. ಅಸಾಧಾರಣವಾದ ; ವಿಶೇಷವಾದ : ಇಲ್ಲಿಯ ಸ್ತ್ರೀ ಪಾತ್ರವರ್ಗದಲ್ಲಿಯೂ ಕೆಲವೊಂದು ವಿಶಿಷ್ಟಭೇದಗಳಿವೆ (ಸಮಜೀ. ೧೩ ಪೀಠಿಕೆ). ೩. ಶ್ರೇಷ್ಠವಾದ ; ಉತ್ತಮವಾದ : ವಿನಯಾಳಂಕರಣಂ ವಿಶಿಷ್ಟಕರಣಂ ಕುಂದೇಂದುನೀಹಾರನಿಭಾನೂನಯಶಂ (ಸುಕುಮಾ. ೨-೫೨). ೪. ಸಂಪೂರ್ಣವಾದ ; ಸಮಗ್ರವಾದ : ಚಂಡಪರಾಕ್ರಮಾರಿ ಬಲಸಂಹರ ಭೀಕರಧೀರರಿಂ ದಳಂ ಮಂಡಿತ ಮಂಡಲಾಧಿಪವಿಶಿಷ್ಟನಿನೊಪ್ಪಿತು ರಾಜರಾಜನಾ (ಹಮ್ಮಿರ. ೩-೧೧) ; ಅವನ ಸಂಸಾರದ

**ವಿಶಿಷ್ಟ**ಪದಾರ್ಥಗಳ . . . ಅವಳ ಮೇಲ್ವಿಚಾರಣೆಯಿಂದಲೇ ಪೋಷಿತವಾಗುತ್ತಿವೆ (ಮಲೆ . . .). (ನಾ). ೫. ಗಣ್ಯ ; ಪ್ರಮುಖ : ಸಿದ್ಧಿಗೆಸೆಟ್ಟಿಯರ ವಿಶಿಷ್ಟರಪ್ಪ ಅಂಕಮುಖ್ಯನಾಯಕರುಂ (ಎಕ. VII, ಶಿವಮೊ. ೯೯-೨೨ ; 1127). [ಸಂ.]

**ವಿಶಿಷ್ಟಾದ್ವೈತ** (ನಾ). [ವೇದಾಂತ] ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತಗಳೆಂಬ ಮೂರು ಬಗೆಯ ವೇದಾಂತದರ್ಶನಗಳಲ್ಲಿ ಒಂದು ಭೇದ ; ಜೀವಾತ್ಮ — ಪರಮಾತ್ಮರಿಗಿರುವ ಭೇದ ಮತ್ತು ಚಿದಚಿದ್ವಿಶಿಷ್ಟನಾದ ಪರಮಾತ್ಮ ಎಂಬ ಒಂದೇ ತತ್ವ — ಇವುಗಳನ್ನು ಪ್ರತಿಪಾದಿಸುವ ಒಂದು ದರ್ಶನ : ವಿಶಿಷ್ಟಾದ್ವೈತಸಿದ್ಧಾಂತವೆಂಬುದು ಶ್ರೀಮದ್ರಾಮಾನುಜಾಚಾರ್ಯರಿಂದ ಪ್ರಚಾರಕ್ಕೆ ಬಂದಿರುವುದು (ಹಿಂದಸಾ. ೨೩೦) ; ವಿಶಿಷ್ಟಾದ್ವೈತವೆಂದರೆ ಅನೇಕಧರ್ಮಗಳಿಂದ ವಿಶಿಷ್ಟಗಳಾದ ಎರಡು ತತ್ತ್ವಗಳು ಒಂದಾಗಿದೆಯೆಂದರ್ಥ (ಭಾರದ. ೨೬೬). [ಸಂ.]

**ವಿಶಿಷ್ಟಾದ್ವೈತಿ** (ನಾ). [ವಿಶಿಷ್ಟಾ] ವಿಶಿಷ್ಟಾದ್ವೈತಮತದ ಅನುಯಾಯಿ : ಸಪ್ರಪಂಚ ಸಗುಣ ಬ್ರಹ್ಮವಾದಿಗಳಾಗಿ ಈಶ್ವರನು ಗುಣರೂಪವಿಶಿಷ್ಟನೆಂದರು ವಿಶಿಷ್ಟಾದ್ವೈತಿಗಳು (ಭಾರದ. ೧೩೧) ; ವಿಶಿಷ್ಟಾದ್ವೈತಿಯ ಸಾಯುಜ್ಯಮುಕ್ತಿ ದ್ವೈತವೇದಾಂತದಲ್ಲಿ ಹೊಂದುವುದಿಲ್ಲ (ಶಕ್ತಿವಿ. ೧೮). [ಸಂ. ವಿಶಿಷ್ಟಾದ್ವೈತಿನ್]

**ವಿಶಿಷ್ಟೀಕರಣ** (ನಾ). ಪ್ರಾಮುಖ್ಯತೆಯನ್ನುಂಟುಮಾಡುವಿಕೆ ; ಪ್ರಾಧಾನ್ಯತೆಯನ್ನುಂಟುಮಾಡುವಿಕೆ : ಸಕಲಮಾನವವ್ಯಾಪಾರಗಳನ್ನು . . . ಭಾವಗೀತೆ ವಿವೇಚಿಸುತ್ತಿದೆಯಾಗಿ ಅದರ ವಿಶಿಷ್ಟೀಕರಣದ ಕ್ಷೇತ್ರದಲ್ಲಿ ನಾವು ಮೊದಲು ಕಾಣುವುದು ಅದರ ವಿಶ್ವಸಾಮಾನ್ಯತೆಯ ಅಂಶ (ಭಾವಗೀ. ೧೧). 'ವಿಶಿಷ್ಟೀಕರಿಸು' ಪರಾ. [ಸಂ.]

**ವಿಶಿಷ್ಟೀಕರಿಸು** (ಕ್ರಿ). ಪ್ರಮುಖವನ್ನಾಗಿ ಮಾಡು ; ಪ್ರಾಧಾನ್ಯತೆಯನ್ನುಂಟುಮಾಡು : ಈ ಪ್ರತಿಭಾನವೇ ಅಭಿವ್ಯಕ್ತಿ. ಅದು ಸಾಧಾರಣವನ್ನು ವಿಶಿಷ್ಟೀಕರಿಸುವ ಒಂದು ಶಕ್ತಿ (ಸೌಂದಸ. ೮೬). [ವಿಶಿಷ್ಟೀಕರಣ + – ಇಸು]

**ವಿಶೀರ್ಣ** (ಗು). ಒಡೆದ ; ಚೂರಾದ : ಗುಹಾಗಹನಗಹ್ವರೋದರವಿಶೀರ್ಣಮಾದಂದದೇಂ ಮುಹುಃಪ್ರಕಟಮಾದುದಾ ರವಿತನೂಭವಚ್ಛಾರವಂ (ಪಂಪಭಾ. ೧೨-೧೩೬) ; ಖುರೋಚ್ಚಳದುರುರೇಣುದೂಸರಿತನಗ್ರವಿಶೀರ್ಣವಿಷಾಣನಾತ್ತಮಾಂಸಳತನು ಬಂದುದಂದು ಮುಹುರುತ್ಥಬೃಹದ್ರವನೊಂದು ಪುಂಗವಂ (ಚಂದ್ರಪ್ರ. ೨-೨೮). [ಸಂ.]

**ವಿಶುದ್ಧ** (ಗು). ೧. ತಿಳಿಯಾದ ; ಸ್ವಚ್ಛವಾದ ; ನಿರ್ಮಲವಾದ. ೨. ಸರಿಯಾದ ; ಯಥಾರ್ಥವಾದ ; ತಪ್ಪಿಲ್ಲದ : ಸರಸ್ವತಿ ಮನ್ಮುಖಪದ್ಮರಂಗದೇಟಿಗೆಯನೆಡಗೊಂಡು ಕೊಂಡು ಕೊನೆದೀಗರಿಗಂಗೆ ವಿಶುದ್ಧಬುದ್ಧಿಯಂ (ಪಂಪಭಾ. ೧-೫). ೩. ಪವಿತ್ರವಾದ ; ದೋಷವಿಲ್ಲದ ; ಕಳಂಕರಹಿತವಾದ : ನಿನ್ನೀ ಸಮಯಮ ಸಮಯಂ ವಿಶುದ್ಧಕೇವಲಬೋಧಾ (ಜಿನಾಲ. ೧೯) ; ಸಮಸ್ತಾನ್ತಃಪುರಜಗದಳಪವಿತ್ರೀಕೃತವಿಶುದ್ಧಕುಳೆ ರಾಯನಾರಾಯಣ ಹೃ[ದಯಾ]ನಂದಪ್ರದಾಯಕಿ (ಎಇ. XXVIII, ೩೫-೪೧; 1082). (ನಾ). ೪. ಪರಿಶುದ್ಧವಾದುದು : ಮಕ್ಕಳುಳ್ಳ ಸಂಸಾರಿಗಳ ಪ್ರೇಮ, ವಿಶುದ್ಧವಾದ ಹಸುವಿನ ಹಾಲಿನಂಥ ಮಧುರಪ್ರೇಮ (ಬಂಕಿಮ. ೬೨). ೫. ಪವಿತ್ರನಾದ ವ್ಯಕ್ತಿ ; ಪರಿಶುದ್ಧನಾದವನು : ಸಿದ್ಧರ ಸತತವಿಶುದ್ಧರ ಬೋಧಸಮೃದ್ಧರ . . . ನೆನೆದು ಆತ್ಮಸಿದ್ಧಿಯ ಪಡೆವೆನು (ಭರಚ. ೧-೨). ೬. [ಯೋಗ] ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ ಮತ್ತು ಆಜ್ಞಾ ಎಂಬ ಷಟ್ಚಕ್ರಗಳಲ್ಲಿ ಒಂದು; ಕಂಠದಲ್ಲಿರುವ ಹದಿನಾರುಸ್ವರಗಳಿಂದ ಕೂಡಿದ ಹದಿನಾರುದಳದ ಪದ್ಮ : ಪ್ರಾಣಾಯಾಮವಿಧಿಗೆ . . . ವಿಶುದ್ಧ . . . ಸಹಸ್ರಾರಸಮ್ಮಿತವಾಗಿಪ್ಪ ಪಿಂಡಾಂಡದೊಳು (ವಿವೇಕ. ೧೫೧). [ಸಂ.]

**ವಿಶುದ್ಧತೆ** (ನಾ). ಅತ್ಯಂತ ನೈರ್ಮಲ್ಯ. 'ದರ್ಶನವಿಶುದ್ಧತೆ' ಪರಾ. [ಸಂ. ವಿಶುದ್ಧತಾ]

**ವಿಶುದ್ಧಿ** (ನಾ). ೧. ಸಂಪೂರ್ಣ ಶುದ್ಧತೆ ; ಪರಿಶುದ್ಧತೆ. ೨. = ವಿಶುದ್ಧ ೬ : ವಿಶುದ್ಧಿಯಲ್ಲಿ ಪ್ರಸಾದಲಿಂಗವೆನಿಸಿರ್ಪಿರಯ್ಯ (ಸಿದ್ಧೇವ. ೬೪-೧೮೮). ೩. [ಜೈನ] ಅಜ್ಞಾನವು ನಾಶವಾದಾಗ ಜೀವಿಯು ಪಡೆಯುವ ಪರಿಶುದ್ಧಸ್ಥಿತಿ : ಸ್ವಾವರಣಕ್ಷಯೋಪಶಮಜನಿತಾತ್ಮಪ್ರಸಾದಂ ವಿಶುದ್ಧಿಯೆಂಬುದಕ್ಕುಂ (ತತ್ತ್ವಪ್ರ. ೭೦). ೪. [ಬೌದ್ಧ] ಮುಕ್ತಿ ; ನಿರ್ವಾಣ : 'ವಿಶುದ್ಧಿ' ಎಂಬುದು ತೃಷ್ಣೆಯ ನಾಶದಿಂದ ಬರುವ ಚಿತ್ತದ ವಿಮುಕ್ತಿ ; ಇದೇ ನಿರ್ವಾಣ (ಭಾರದ. ೧೯೯) ; ಬುದ್ಧನು ಹೇಳುವಂತೆ ದೃಷ್ಟಿಯಿಂದ ವಿಶುದ್ಧಿ ಸಿಕ್ಕುವುದಿಲ್ಲ. ಕರ್ಮದಿಂದ ಕ್ರಿಯೆಯಿಂದ ಮಾತ್ರ ವಿಶುದ್ಧಿಪ್ರಾಪ್ತಿ (ತೀರ್ಥಕ. ೭೬). [ಸಂ.]

**ವಿಶುದ್ಧಿಚಕ್ರ** (ನಾ). = ವಿಶುದ್ಧ ೬ : ಎನ್ನ ವಿಶುದ್ಧಿಚಕ್ರದಲ್ಲಿ ಪ್ರಸಾದಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ (ಮಡಿಮಾ. ೩೬-೫೩) ; ವಿಶುದ್ಧಿಚಕ್ರದಲ್ಲಿ ಯಕಾರ ಸ್ವಾಯತ (ಸಿದ್ಧೇವ. ೭೧-೧೦೨). [ಸಂ.]

**ವಿಶುದ್ಧಿಲಬ್ಧಿ** (ನಾ). [ಜೈನ] ಕ್ಷಯೋಪಶಮ, ವಿಶುದ್ಧಿ, ದೇಶನೆ, ಪ್ರಾಯೋಗ್ಯತೆ ಮತ್ತು ಕರಣ ಎಂಬ, ಸಮ್ಯಕ್ತ್ವಕ್ಕೆ ಕಾರಣವಾದ ಐದು ಬಗೆಯ ಲಬ್ಧಿಗಳಲ್ಲಿ ಒಂದು ; ಅಶುಭವನ್ನುಳಿದು ಶುಭದ ಕಡೆ ಚಲಿಸುವಿಕೆ : ಸಾತಾದಿ ಪ್ರಶಸ್ತಪ್ರಕೃತಿಬಂಧಯೋಗ್ಯ ಪರಿಣಾಮಂ ವಿಶುದ್ಧಿಲಬ್ಧಿಯಕ್ಕುಂ (ತತ್ತ್ವಪ್ರ. ೮೦). 'ಪಂಚಲಬ್ಧಿ' ಪರಾ. [ಸಂ.]

**ವಿಶೇಷ** (ಗು). ೧. ಅಸಾಮಾನ್ಯವಾದ ; ವಿಶಿಷ್ಟವಾದ ; ಉತ್ಕೃಷ್ಟವಾದ : ಕಾಲ್ಡವೆಲ್ಲನ ವಿಶೇಷ ವ್ಯಾಸಂಗದ ಫಲ ವ್ಯರ್ಥವಲ್ಲ (ದ್ರಾವಿವಿ. ೪೪). ೨. ಅಧಿಕವಾದ ; ಹೆಚ್ಚಾದ : ಅನಿರೀಕ್ಷಿತತೆ ಆನಂದಕ್ಕೆ ವಿಶೇಷರುಚಿಯನ್ನು ಕೊಡುತ್ತದೆ (ಚತಂಬಾ. ೨). (ನಾ). ೩. ಪ್ರತ್ಯೇಕವಾದುದು ; ನಿರ್ದಿಷ್ಟವಾದುದು : ಆ ಮಂಗಳ ತ್ರಯೋದಶಿ ನಡೆವುದೆಂದು ವಿಶೇಷವಾಗಿ ಯಿರಿಸಿದ ಅಕ್ಕಿಮೂಡೆ ೨ (ಎಇ. XX, ೮-೫೨ ; 1556). ೪. ವೈಶಿಷ್ಟ್ಯ ; ಅತಿಶಯತೆ : ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಲಯವಿಲೀನವಿಶದವಿಷಯವಿಶೇಷಂ (ಕವಿರಾ. ೧-೩೬) ; ಈ ದಿನ ಏನೋ ವಿಶೇಷವಿರುವಂತಿದೆ (ಚತಂಬಾ. ೨). ೫. [ವ್ಯಾಕ] ಒಂದು ಕ್ರಿಯಾಪದ ಅಥವಾ ನಾಮಪದದ ಗುಣ, ರೀತಿ ಮೊದಲಾದುವನ್ನು ಹೇಳುವ ಪದ ; ಗುಣವಾಚಕ ; ವಿಶೇಷಣ. ೬. [ಕಾವ್ಯಮೀ] ಅರ್ಥಾಲಂಕಾರದ ಒಂದು ಭೇದ ; ವಸ್ತುವಿನ ಗುಣ, ಜಾತಿ ಮುಂತಾದುವುಗಳಲ್ಲಿ ಗುಣಪೂರ್ಣತೆಯನ್ನು ಹೇಳದೆ, ಅವುಗಳ ಕೊರತೆಯನ್ನೇ ಹೇಳಿ (ಆದರೂ ಕಾರ್ಯಸಿದ್ಧಿಯಾಗುವುದೆಂದು) ವಸ್ತುವಿನ ವೈಶಿಷ್ಟ್ಯವನ್ನು ನಿರ್ದೇಶಿಸುವಿಕೆ : ಗುಣಜಾತ್ಯಾದಿಗಳೊಳಗನುಗುಣಮಾಗಿರೆ ಪೇಅದವಱ ವಿಕಳತೆಯಂ ಸಯ್ತಣಿಸಿ ವಿಶೇಷಮನಱಿಪುವ ಗಣನೆ ವಿಶೇಷಾನುಭಾವಸದಳಂಕಾರಂ (ಕವಿರಾ. ೩-೧೨೦) ; ಗುಣಜಾತ್ಯಾದಿಗಳಿಂದೊಂದಣೆಯರಮಾಗಿರೆ ವಿಶೇಷಮದುವೆ ವಿಶೇಷಂ (ಉದಯಾ. ೫೫). ೭. [ವೀಶೈ] ವೀರಶೈವಸಿದ್ಧಾಂತದಲ್ಲಿ ಒಂದು ಬಗೆ : ಶುದ್ಧ ವಿಶೇಷ ನಿರ್ವಾಣ ಎಂದು ವೀರಶೈವವು ಮೂರು ತೆಱನಾಗಿರ್ಪುದು (ಸಿದ್ಧೇವ. ೪-೯) ; ವೀರಶೈವನೆ ಕ್ರಿಯಾಭೇದದಿಂ ಸಾಮಾನ್ಯವೀರಶೈವ ವಿಶೇಷವೀರಶೈವ ನಿರಾಭಾರಿವೀರಶೈವನೆಂದು ತ್ರಿವಿಧಂ (ವಿವೇಕ. ೯೮). [ಸಂ.]

**ವಿಶೇಷಕ** (ಗು). ೧. ಪ್ರತ್ಯೇಕವಾದ ; ವಿಶಿಷ್ಟವಾದ. (ನಾ). ೨. ಪ್ರಮುಖವ್ಯಕ್ತಿ ; ಮುಖ್ಯಸ್ಥ : ಆರೂಢಮದಗಜರುಮುಪಾರೂಢವಿಶೇಷಕರುಮಾಗಿ . . . ಸಂಗ್ರಾಮರಂಗಕ್ಕವತರಿಸೆ (ಪಂಪಭಾ. ೧೩-೩೩ ವ). ೩. (ಗಂಧ ಇತ್ಯಾದಿಗಳಿಂದ) ಹಣೆಯ ಮೇಲೆ ಇಡುವ ತಿಲಕ ; ಬೊಟ್ಟು : ಕವಿದ ಮುಂಗುರುಳ ಕಣ್ ಚೆಂದುಟಿ ತಮಾಲಪತ್ರವಿಶೇಷಕಾಂಕಿತಂ ಮೊಗಮದವಳದು (ಸೌನಂದ. ೪-೧೨). ೪. [ಕಾವ್ಯಮೀ] ಕಾವ್ಯಪ್ರಭೇದಗಳಲ್ಲಿ ಒಂದು ; ಏಕಾನ್ವಯವುಳ್ಳ ಮೂರುಶ್ಲೋಕಗಳ ಸಮುದಾಯ : ಕಾವ್ಯದಲ್ಲಿ ಅನೇಕ ಪ್ರಭೇದಗಳುಂಟು : — ಸಂಸ್ಕೃತ, ಪ್ರಾಕೃತ ಮತ್ತು ಅಪಭ್ರಂಶಭಾಷೆಗಳಲ್ಲಿ ರಚಿತವಾದ 'ಮುಕ್ತಕ', 'ಸಂದಾನಿತಕ', 'ವಿಶೇಷಕ', 'ಕಲಾಪಕ' . . . 'ಕಥಾ' ಇತ್ಯಾದಿಗಳು (ಧ್ವನ್ಯಾಲೋ. ೧೪೧). [ಸಂ.]

**ವಿಶೇಷಗುಣ** (ನಾ). ವಿಶಿಷ್ಟವಾದ ಸ್ವಭಾವಧರ್ಮ, — ಗುಣ : ಈ ಔಷಧಿಯಲ್ಲಿ ಕೆಲವು ವಿಶೇಷಗುಣಗಳಿವೆ (ರೂಢಿ). [ಸಂ.]

**ವಿಶೇಷಜ್ಞ** (ನಾ). ವಿಶಿಷ್ಟವಾದ ಪಾಂಡಿತ್ಯವಿರುವವನು : ಭಾಷಾವಿದರ್ಕವಿತ್ವವಿಶೇಷಜ್ಞರ್ನಿಕಷರಪ್ಪೊಡಪ್ಪುದು ಸಭೆಯೊಳ್ (ಆದಿಪು. ೧-೨೧). [ಸಂ.]

**ವಿಶೇಷಣ** (ನಾ). ೧. ವಿಭಿನ್ನತೆ ; ವೈಶಿಷ್ಟ್ಯ. ೨. = ವಿಶೇಷ ೫ :

ವಾಚ್ಯವಾಚಕ ವಿಶೇಷ್ಯ ವಿಶೇಷಣ ಲಕ್ಷ್ಯಲಕ್ಷಣಪ್ರಚುರತೆ ಕಾಳಿದಾಸನುಮನೇಳಿಸಿತು (ಛಂದೋಂಬು. ೧-೭); ನೆಲಸಿರ್ದ ವಿಶೇಷಣದಿಷ್ಟಲಿಂಗಮೆನಿಪುದು ವಿಶೇಷ್ಯಮದಱಿಷ್ಟ ದಿನಗ್ಗಲಿಕುಂ ವಿಶೇಷಣದ ಲಿಂಗಲಕ್ಷಣಂ ದೋಷರಹಿತಮಿದು ರೂಪಕದೊಳ್ (ಶಮದ. ನ. ೧೭೭) ; ಯಾವುದಾದರೂ ಒಂದರ ಗುಣ, ರೀತಿ ಮೊದಲಾದ ವಿಶೇಷವನ್ನು ತಿಳಿಸುವ ಪದಕ್ಕೆ (ಅಥವಾ ಪದಗಳ ಗುಂಪಿಗೆ) ವಿಶೇಷಣವೆಂದೂ . . . ಹೆಸರು (ಮಧ್ಯಮ. ೧೦). **[ಸಂ.]**

**ವಿಶೇಷಣರೂಪ** (ನಾ). [ವ್ಯಾಕ] ಗುಣವಾಚಕದ ಕೆಲಸ ಮಾಡುವ ಶಬ್ದಸ್ವರೂಪ ; ಕಾರಕಕ್ಕಿಂತ ಭಿನ್ನವಾದ ರೂಪ : 'ಚಿಕ್ಕ' ಎಂಬುದು ವಾಕ್ಯದಲ್ಲಿ ಸ್ವತಂತ್ರವಾಗಿ ಬರುವುದಿಲ್ಲ. ಅದು ಯಾವುದಾದರೂ ಒಂದು ನಾಮಪದಕ್ಕೆ ವಿಶೇಷಣವಾಗಿ ಬರಬೇಕು. ಆದ ಕಾರಣ ಇದಕ್ಕೆ ವಿಶೇಷಣರೂಪವೆಂದು ಹೆಸರು (ಮಧ್ಯಮ. ೪೧). **[ಸಂ.]**

**ವಿಶೇಷತ್ವ** (ನಾ). ವೈಶಿಷ್ಟ್ಯ ; ಹೆಚ್ಚಳ : ಗುರುಮುನೀಶ್ವರಾದಿ ವಿಶೇಷತ್ವದೊಳಂ ಅಸಹ್ಯವೃತ್ತಿಯೊಳಂ ಏಕವಚನಕ್ಕೆ ಬಹುವಚನಮಪ್ಪುದು (ಶಮದ. ೧೦೨ ವೃತ್ತಿ). **[ಸಂ.]**

**ವಿಶೇಷಧೂಪ** (ನಾ). ಒಂದು ಬಗೆಯ ಮರ : ಗುಗ್ಗುಳಮರ, ಗುಗ್ಗಳ, ಚಿಟೆ, ಚಿಟ್ಟುಂಬೆ, ಸಾಂಬ್ರಾಣಿಮರ, ವಿಶೇಷಧೂಪ (ಸಸ್ಯನಿ. ೨೧). [?]

**ವಿಶೇಷಭಾಷಿತ** (ನಾ). ವಿಶಿಷ್ಟವಾದ ನುಡಿ ; ಉಕ್ತಿವೈಶಿಷ್ಟ್ಯ : ಮನೋನಯನ ವಲ್ಲಭನೊಳ್ನನದೊಂದಲಂಪಿನಿಂ ನೆರೆವೆನಮೋಘಮೆಂಬುದಿದು ದಕ್ಷಿಣಮಾರ್ಗ ವಿಶೇಷ ಭಾಷಿತಂ (ಕವಿರಾ. ೨-೧೦೪). **[ಸಂ.]**

**ವಿಶೇಷಾಧಿಕಾರ** (ನಾ). ವಿಶಿಷ್ಟವಾದ ಅಧಿಕಾರ : ಅವರಿಗೆ ಕೆಲವು ವಿಶೇಷಾಧಿಕಾರ ಗಳನ್ನು ನೀಡಲಾಗಿತ್ತು (ರೂಢಿ). **[ಸಂ.]**

**ವಿಶೇಷಾರ್ಥ** (ನಾ). ೧. ವಿಶಿಷ್ಟವಾದ ಅರ್ಥ; ಅಸಾಧಾರಣವಾದ ಅರ್ಥ. ೨. ಅತಿಶಯವಾದ ಧನ ; ಹೇರಳವಾದ ಐಶ್ವರ್ಯ. ೧, ೨ : ಸುಲಕ್ಷಣದ ಲಾಲಿತಶ್ರುತಿರಂಜನದ ವಿಶೇಷಾರ್ಥಸಂಚಿತದ ವಿಸ್ತಾರದಿಂ ಪೊಸತೆನಿಸುವ ನುತಸತ್ಕವಿ ಪ್ರೌಢತರಸುಪ್ತಬಂಧದಂತತಿಮನೋಹರಮೆನಿಪ ವಾಜಿಯಂ ಕಂಡು (ಜೈಮಿಭಾ. ೪-೮).
**[ಸಂ.]**

**ವಿಶೇಷಾಲಂಕಾರ** (ನಾ). ೧. ಹೆಚ್ಚಿನ ಅಲಂಕಾರ ; ವಿಶಿಷ್ಟವಾದ ಶೃಂಗಾರ : ಈ ದಿನ ದೇವಸ್ಥಾನದಲ್ಲಿ ದೇವರಿಗೆ ವಿಶೇಷಾಲಂಕಾರವಿದೆ (ರೂಢಿ). ೨. = ವಿಶೇಷ ೬ : ಸಾಮಾನ್ಯಾಲಂಕಾರರೀತಿಯಿಂದ ಪೇಳಲ್ಕದಱೊಳು ಭೇದವೈಶಿಷ್ಟ್ಯವಿಶೇಷವು ತೋರ್ದಡೆ ವಿಶೇಷಾಲಂಕಾರವೆನಿಪುದು (ಕುವಲ. ೧೪೮-೧೭). **[ಸಂ.]**

**ವಿಶೇಷಿಸು** (ಕ್ರಿ). ೧. ಅತಿಶಯವಾಗಿ ಹೇಳು ; ವಿಶಿಷ್ಟವಾಗಿ ನಿರೂಪಿಸು : ಮಿಗೆ ಮನದ ಪೆಂಪುಮಂ ಕೈಮಿಗೆ ವಿಭವದ ಪೆಂಪುಮಂ ವಿಶೇಷಿಸಿ ಪೇೞಲ್ ಬಗೆವುದುದಾತ್ತಾ ಲಂಕಾರಗುಣೋದಯಂ (ಕವಿರಾ. ೩-೧೭೩) ; ಬುದ್ಧನು ಸ್ತ್ರೀಯರನ್ನು, 'ಮನಾಪಾ' ಎಂದು ವಿಶೇಷಿಸಿದ್ದಾನೆ (ರಾಮರಾ. ೧೭). ೨. ಅತಿಶಯವಾಗು ; ವಿಶೇಷವಾಗು : ವಿಶೇಷಿಸಿ ಕರ್ಮಪೀಡನಂ ತಾಗುವ ವೇಳೆಯೊಳ್ತೆಗೆದು ತಪ್ಪಿಸಿ ತನ್ನಿಮಿಷಂ ಸಮುದ್ಧರಿಪ್ಪಾ ಗುಣಮಿಲ್ಲದಿರ್ದೊಡೆ ಭವಿತ್ವಕೆ ಭಾಕ್ತಿಕಕೇನು ಭೇದಂ (ಶತಕ. ೧೫೭-೧೯).
[ವಿಶೇಷ + - ಇಸು]

**ವಿಶೇಷೋಕ್ತಿ** (ನಾ). [ಕಾವ್ಯಮೀ] ಒಂದು ಬಗೆಯ ಅಲಂಕಾರ ; ಒಂದು ವಸ್ತುವಿನ ಗುಣ, ಜಾತಿ, ಕ್ರಿಯೆ ಮುಂತಾದುವುಗಳ ಗುಣಪೂರ್ಣತೆಯನ್ನು ಹೇಳದೆ, ಅವುಗಳಲ್ಲಿ ದೋಷವನ್ನೇ ಹೇಳಿ ವಸ್ತುವಿನ ವೈಶಿಷ್ಟ್ಯವನ್ನು ಸೂಚಿಸುವುದು : ಒದವಿದ ಸಾಮಗ್ರಿಯೊಳೇಕದೇಶವೈಕಲ್ಯಮಾಗೆಯುಂ ಮತ್ತಂ ತತ್ಸದೃಶಫಲಸಿದ್ಧಿಯಂ ತೋರ್ಪುದದು ವಿಶೇಷೋಕ್ತಿಯೆಂಬಲಂಕೃತಿಯಕ್ಕುಂ (ಕಾವ್ಯಾವ. ೭೫೦) ; ವಿಶೇಷೋಕ್ತಿ ಕಾರಣವು ಸಮಗ್ರವಾಗಿದ್ದರೂ ಕಾರ್ಯವು ಉಂಟಾಗದಿದ್ದಲ್ಲಿ ವಿಶೇಷೋಕ್ತ್ಯಲಂಕಾರ (ಕೈಪಿಡಿ. ೨೭೮). **[ಸಂ.]**

**ವಿಶೇಷ್ಯ** (ಗು). ೧. ಮುಖ್ಯವಾದ ; ವಿಶಿಷ್ಟವಾದ. (ನಾ). ೨. [ವ್ಯಾಕ] ವಿಶೇಷಣದಿಂದ ವಿವರಿಸಲ್ಪಡುವ ಪದ ; ನಾಮಪದ : ಇಂತು ವಿಶೇಷ್ಯಂ ಕ್ರಿಯೆಯಂ ಸಂತಂ ನೋಟ್ಟುದಱಿನಕ್ಕುಮದು ಸಾಪೇಕ್ಷಂ (ಕವಿರಾ. ೨-೯೪) ; ವಿಶೇಷಣಮಾಗಿ ಕಾರಕಮೇಕವಚನದೊಳಿರ್ದೊಡಂ... ವಿಶೇಷ್ಯಮಪ್ಪ ಜಾತಿಗೇಕತ್ವಮಲ್ಲದೆ ಬಹುತ್ವಮಿಲ್ಲ (ಶಮದ. ೧೩೮ ವೃತ್ತಿ) ; ಒಂದು ವಿಶೇಷ್ಯಕ್ಕೆ ಅನೇಕ ಕಾರಕ ಕೃದಂತಗಳು ವಿಶೇಷಣಗಳಾಗಿ ಪ್ರಕೃತಿರೂಪದಿಂದ ಇರುವುದುಂಟು (ಕೈಪಿಡಿ. ೫೮). **[ಸಂ.]**

**ವಿಶೇಷ್ಯಾಧೀನಲಿಂಗ** (ನಾ). [ವ್ಯಾಕ] ಒಂಬತ್ತು ಬಗೆಯ ಲಿಂಗಗಳಲ್ಲಿ ಒಂದು ; ವಿಶೇಷ್ಯದ ಲಿಂಗಕ್ಕೆ ಅನುಸಾರವಾಗಿರುವ ಲಿಂಗ ; ವಾಚ್ಯಲಿಂಗ : ಕನ್ನಡದೊಳ್ ಪಿರಿದುಂ ಸ್ತ್ರೀಲಿಂಗಮೆಂದುಂ . . . ತ್ರಿವಿಧಲಿಂಗಮೆಂದುಂ, ವಿಶೇಷ್ಯಾಧೀನಲಿಂಗ ಮೆಂದುಂ, ಅವ್ಯಯಲಿಂಗಮೆಂದುಂ — ಲಿಂಗಮೊಂಬತ್ತು ತೆಱಂ (ಶಮದ. ೮೮ ವೃತ್ತಿ).
**[ಸಂ.]**

**ವಿಶೋಕ** (ಗು). ೧. ಚಿಂತೆಯಿಂದ ದೂರವಾದ ; ದುಃಖವಿಲ್ಲದ. (ನಾ). ೨. ದುಃಖವಿಲ್ಲದಿರುವಿಕೆ ; ಸಂತೋಷ : ಆ ಕ್ಷಣದಲ್ಲಿ "ಅಪಹತಪಾಪ್ಮಾ ವಿರಜಃ ವಿಮೃತ್ಯುಃ ವಿಶೋಕಃ . . . ಸತ್ಯಸಂಕಲ್ಪಃ" ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಾಭಾವಿಕ ಗುಣಾಷ್ಟಕಗಳು ಆವಿರ್ಭವಿಸುವುವು (ಒಂದಸಾ. ೨೬೪). ೩. ಚಿಂತೆಯಿಂದ ದೂರ ವಾದವನು ; ಸುಖಿ : ನೂಕಿ ಮುಂದಲೆವಿಡಿದು ತೊತ್ತಿರೊಳಾಕೆಯನು ಕುಟ್ಟಿರಿಸಿದಂದು ವಿಶೋಕನಹೆನು (ಕುವ್ಯಾಸ. ೧೨-೬೭). **[ಸಂ.]**

**ವಿಶೋಧಿ** (ನಾ). ಶುಚಿತ್ವ ; ಶೌಚಗುಣ : ಈ ಕಱೆ ಕರ್ಚೆ ಪೋಗದೀ ಕೆಯ್ಪಾರೊಳ್ ತೊಳೆವೊಡದಂ ಜಿನಪತಿಮತಸಳಿಳಂ ತೊಳೆಗುಂ ವಿಶೋಧಿ ತೊಳೆಗುಂ (ಶಾಂತಿಪು. ೪-೭೯) ; ನಿರಂತರವಿಶೋಧಿ ಕೂಡಿರೆ ಚತುರ್ವಿಧಾರಾಧನಾಪುರಸ್ಸರತೆಯಿಂ ಸಮಾಧಿವಿಧಿಗೇಂ ಮನದಂದದಳೋ (ಸುಕುಮಾ. ೯-೧೫). **[ಸಂ. ವಿಶೋಧಿನ್]**

**ವಿಶೋಧ್ಯ** (ಗು). ೧. ಶುದ್ಧಗೊಳಿಸತಕ್ಕ ; ನಿರ್ಮಲಗೊಳಿಸುವ. (ನಾ). ೨. ಸಾಲ ; ಋಣ. ೩. [ಗಣಿತ] ಕಳೆಯುವುದು ; ವ್ಯವಕಲನ : ರಜತಂ . . . ವಿಶೋಧ್ಯಂ, ತ್ಯಜಿಸು , ಕಳೆ — ಇಂತಿನಿತುಂ ಕಳೆವುದಕ್ಕೆ ಪೆಸರು (ವ್ಯವಹಾ. ೧೧-೨೧).
**[ಸಂ.]**

**ವಿಶ್ರಂಭ** (ನಾ). ೧. ನಂಬಿಕೆ ; ವಿಶ್ವಾಸ : "ವಿಶ್ರಂಭಮೆನಲು ವಿಶ್ವಾಸಮಕ್ಕುಂ" (ಮಂಗರಾ. ೧೩೫-೩೮). ೨. ಸಲುಗೆ ; ಸದರ. ೩. ಕುಶಲಪ್ರಶ್ನೆ ; ಯೋಗಕ್ಷೇಮ ವಿಚಾರಣೆ. **[ಸಂ.]**

**ವಿಶ್ರಬ್ಧ** (ಗು). ೧. ನಂಬಿಕೆಯುಳ್ಳ ; ವಿಶ್ವಾಸಯೋಗ್ಯವಾದ. ೨. ನೆಮ್ಮದಿಯಿಂದ ಕೂಡಿರುವ. ೩. ಪ್ರೀತಿಯುಳ್ಳ. ೪. ಹೆದರಿಕೆಯಿಲ್ಲದ ; ನಿರ್ಭೀತ. **[ಸಂ.]**

**ವಿಶ್ರಮ** (ನಾ). ೧. ಶ್ರಮಪರಿಹಾರ. ೨. ವಿರಾಮ; ವಿಶ್ರಾಂತಿ. ೩. ನೆಲೆ ; ಸ್ಥಾನ : ಶ್ರೀತರಿಟ್ಟದಾಯಿ ಸನ್ಮಾನದ ವಿಶ್ರಮಂ ದಯೆಯ ಕಾಳ್ಪುರಮದು (ಎಕ. VII (S), ಶಿಕಾರಿ. ೩೪೨-೬೯ ; ಸು. 1050) ; ಚರಿತಚತುರಾಶ್ರಮತಪೋನಿಷ್ಠರಿಗೆ ವಿಶ್ರಮವೈಭವಾದ್ಯಶದರುಶನವು ನಮಗೆಂದು ನುಡಿದರು ರೋಮಹರ್ಷಣಿಯ (ಕುವ್ಯಾಆ.೨-೨). ೪. [ಛಂದ] ಪದ್ಯವನ್ನು ಓದುವಾಗ ಉಸಿರನ್ನು ನಿಲ್ಲಿಸಬಹು ದಾದ ಎಡೆ ; ಉಸಿರ್ದಾಣ : ಕ್ಷೋಣೀವಾಯುದಿನೇಶನೀಶ್ವರಂ ಬಾಣಸ್ಥಾನದೊಳಾಗೆ ವಿಶ್ರಮಂ (ಛಂದೋಂಬು. ೨-೧೧೨). **[ಸಂ.]**

**ವಿಶ್ರಮಂದಳೆ** (ಕ್ರಿ). ವಿಶ್ರಾಂತಿಯಿಂದಿರು ; ಬಿಡುವನ್ನು ಹೊಂದು : ನೆಮ್ಮದಿವೆತ್ತು ವಿಶ್ರಮಂದಳೆಗೆ ಮದೀಯ ಚಾಪಂ (ಶಾಕುಂತ. ೨೩-೪೧). [ವಿಶ್ರಮ + ತಳೆ]

**ವಿಶ್ರಮಣ** (ನಾ). ೧. = ವಿಶ್ರಮ ೧ : ವಿಪುಲಪುಲಿನತಲಂಗಳೇ ವಿಶ್ರಮಣ ಭೂಮಿಗಳಾಗೆಯುಂ (ಆದಿಪು. ೪-೫೨ ವ). ೨. = ವಿಶ್ರಮ ೩ : ಮಾರುತಭಾನುಯುಗ್ಮ ಗಣಂಗಳಿಂ ಪರದೊಳೊಪ್ಪೆ ಹಿಮಾಂಶುಶೇಖರನಿರ್ದು ವಿಶ್ರಮಣಂ ದಿಶಾಕರಿಯೊಳಾಗಿರ (ಛಂದೋಂಬು. ೨-೧೭೧). **[ಸಂ.]**

**ವಿಶ್ರಮವನ** (ನಾ). ವಿಶ್ರಾಂತಿಗಾಗಿ ಇರುವ ಉದ್ಯಾನ : ಸದ್ವನಜವನಮೆಮಗೆ ವಿಶ್ರಮವನಮಕ್ಕೆ (ಆದಿಪು. ೧-೧೦). **[ಸಂ.]**

**ವಿಶ್ರಮಿಸು** (ಕ್ರಿ). ೧. ವಿಶ್ರಾಂತಿಯನ್ನು ಪಡೆ ; ವಿರಾಮವನ್ನು ಹೊಂದು : ಭರತೇಶ್ವರಂ . . . ಕುಸುಮದೆಸೆಟ ಮಿಸುಗುವ ಪೊಸದಳಿಂಬದ ಮೇಗೆ ಕಿಱಿದು ಬೇಗಂ ವಿಶ್ರಮಿಸಿ (ಆದಿಪು. ೧೧-೭೩ ವ); ಇಳೆಯ ಚಿಂತೆಯೊಳಾಡಿದವಸೀಶ ತನ್ನಾತ್ಮನೊಳು ನಿಂದು ವಿಶ್ರಮಿಸಿದನು (ಭರಚ. ೭೭-೩೫) ; ಅನುಕೂಲವಿದ್ದವರು ತಮ್ಮ ತಮ್ಮ ಮನೆಗಳಲ್ಲಿ ವಿಶ್ರಮಿಸುತ್ತಿದ್ದರು (ಕೊತಕಾ. ೧). ೨. ನೆಲೆಗೊಳ್ಳು ; ನೆಲಸು :

ಕುಮುದರಜಂಗಳೊಳ್ಪೊರೆದು ವಾಃಕಣಜಾಲಮನಾಂತು ಕೂಡೆ ವಿಶ್ರಮಿಸಿ . . . ಮಾರುತನೊಯ್ಯನೊಯ್ಯನೆ ಬಂದು ತೀಡಿದತ್ತು (ಕಾದಂಪೂ. ೬೩೩) ; ಸುತ್ತಿ ಸುಳಿದಾಡಿ ಬಳಲ್ದು ಸರಿತ್ಸುಧಾಂಶುಗಳ್ ಪುದಿದ ತದೀಯ ಮೌಳಿಯೊಳೆ ವಿಶ್ರಮಿಸಿರ್ದುದು ದೃಷ್ಟಿ ಪಾರ್ಥನಾ (ಶಬಶಂ. ೫-೧೫). ೩. ಅಲುಗಾಡದೆ ಇರು ; ಸ್ತಬ್ಧವಾಗಿರು : ನಿಮಿರ್ದ ಕೊರಲ್ ಮರಲ್ದು ಮಡಿದೂಱಿದ ಮುಂದಣ ಕಾಲ್ಗಳ್ . . . ಆಲಿಸುತ್ತ ವಿಶ್ರಮಿಸುವ ಕರ್ಣಮುಳ್ಳ ಗುಲ್ಲ ಕಣ್ (ಲೀಲಾವ. ೬-೪೭) ; ಮುಂಜಾವಿನ ಈ ತಂಗಾಳಿಯಿಂದ ಕಣ್ಣುಗಳು ತಾವಾಗಿಯೇ ವಿಶ್ರಮಿಸಹತ್ತಿವೆ (ಉದಪ್ಪ. ೩೨). [ವಿಶ್ರಮ + - ಇಸು]

**ವಿಶ್ರಾಂತ** (ಗು). ೧. ವಿಶ್ರಾಂತಿಯನ್ನು ಹೊಂದಿದ ; ವಿರಮಿಸಿದ : ಸೀಮಂತ ಸಿಂದೂರದ ವಿರಚನೆಯಂ ಕೂಡೆ ಮಾಡುತ್ತುಮಿರ್ದುಂ ಭರತೇಶಂ ತತ್ತಟೀನಂದನ ವಿಟಪಿತಟಚ್ಛಾಯ ವಿಶ್ರಾಂತಸೈನ್ಯಂ (ಆದಿಪು. ೧೧-೧೫೦) ; ಅಂತತಿ ಮನೋಹರಮಾದ ವಾಹಿನೀನಿಕಟದೊಳ್ ವಿಶ್ರಾಂತಕಟಕನಾಗಿರ್ಪುದುಂ (ಚಂದ್ರಪ್ರ. ೧೦-೫೪ ವ). ೨. ನಿರ್ದಿಷ್ಟ ಕಾಲದ ನೌಕರಿ ಅಥವಾ ಸೇವೆಯಿಂದ ಮುಕ್ತಗೊಂಡ, — ನಿವೃತ್ತಿಯಾದ : ಭಾರತ ಸೈನ್ಯದ ವರಿಷ್ಠಾಧಿಕಾರಿಯಾಗಿ ಸೇವೆ ಸಲ್ಲಿಸಿದ ಶ್ರೀಯುತರು ಈಗ ವಿಶ್ರಾಂತಜೀವನ ನಡೆಸುತ್ತಿದ್ದಾರೆ (ರೂಢಿ). ೩. ವಿಸ್ತರಿಸಿದ ; ಚಾಚಿಕೊಂಡಿರುವ : ಹರಿಗಂ ಕರ್ಣಾಂತ ವಿಶ್ರಾಂತಲೋಚನನಾ ಲೋಚನಗೋಚರಂಬರೆಗವೊಲ್ದಾ ಕನ್ನೆಯಂ ನೋಡಿದಂ (ಪಂಪಭಾ. ೪-೪೨). (ನಾ). ೪. = ವಿಶ್ರಮ ೩ : ಆ ವಿಶ್ರಾಂತಂ ನಿಲ್ಕುಂ ದಶಮದೆಡೆಯೊಳ್ (ಛಂದೋಂಬು. ೨-೧೬೩). [ಸಂ.]

**ವಿಶ್ರಾಂತಿ** (ನಾ). ೧. ಶ್ರಮಪರಿಹಾರ : ಕಂಡರ್ . . . ಸ್ವಾಂತಸುಖಮಂ ಪಡೆವ ಪೌರನಾರಿಯರ ವಿಶ್ರಾಂತಿಗಮರಿದ ರನ್ನವಾಸಱೆಗಳಿಂದೆ . . . ಮನೋಹರಮಾದ ಗಿರಿಯೊಂದನು (ಜೈಮಿಭಾ. ೩-೧೩). ೨. ವಿರಾಮ ; ಬಿಡುವು : ಇಡೀ ವಿಶ್ವವೇ ಕಾರ್ಯನಿಮಗ್ನವಾಗಿದೆ. ಅರೆಕ್ಷಣವೂ ವಿಶ್ರಾಂತಿಯೆನ್ನುವದಿಲ್ಲ (ಧರ್ಮಸಾ. ೧೩೦). ೩. ನೆಲೆ : ಗುರುದಯಾಸಂಪದದಿ ವರ್ಧಿಸಿ ಗುರುಜಠರ ವಿಶ್ರಾಂತಿಯಲಿ ತದ್ಗುರುವೆ ತಾನಾಗಿ ಬೆರಸಿದನು ಶಿವಲಿಂಗತತ್ವದೊಳು (ಬಸವ. ೬೧-೬೭) ; ನಾನಾರೂಪಿನ ಪ್ರಜ್ವಲಾಕಾರ ಏನೇನೂ ಇಲ್ಲದ ಠಾವಿನಲ್ಲಿ ವಿಶ್ರಾಂತಿಯನೆಯ್ದಿರೆ ನಾನು ಸ್ವಯಂಭುವಾದೆನು ಕಾಣಾ (ಸಿದ್ಧೇವ. ೧೪೮-೪೪೦). ೪. ಉದ್ಯೋಗದಿಂದ ಹೊಂದುವ ನಿವೃತ್ತಿ : ನಮಗೆ ಸಂಗೀತ ಕಲಿಸುತ್ತಿದ್ದ ಉಪಾಧ್ಯಾಯರು ಈಗ ವಿಶ್ರಾಂತಿ ಹೊಂದಿದ್ದಾರೆ (ರೂಢಿ). ೫. = ವಿಶ್ರಮ ೪ : ವನಂ ಧಾತ್ರೀಚಕ್ರಂ ಸುರಪಪವನಂ ಶೀತಕರನಬ್ಜನಾಭಂ ಭೂತೇಶಂ ನೆಲಸಿ ನಿಲೆ ವಿಶ್ರಾಂತಿಯವಱೊಳ್ ಮನಂಗೊಂಡಾಱೆಂಬೀಯೆಡೆಯೊಳೆಗೆ ಕರ್ಣಾಮೃತರಸಂ (ಛಂದೋಂಬು. ೨-೧೬೬). [ಸಂ.]

**ವಿಶ್ರಾಂತಿಗೃಹ** (ನಾ). ಪ್ರಯಾಣಿಕರು ದಣಿವಾರಿಸಿಕೊಳ್ಳುವುದಕ್ಕಾಗಿ ಕಟ್ಟಿರುವ ಮನೆ ; ತಂಗುಮನೆ : ಎವರ್‌ಗ್ರೀನ್ ಹೋಟೆಲು ಜನಸಾಮಾನ್ಯರ ವಿಶ್ರಾಂತಿಗೃಹವಲ್ಲ (ಒಂಟಿದ. ೧) ; ಅನ್ನಸತ್ರವನ್ನೋ ವಿಶ್ರಾಂತಿಗೃಹವನ್ನೋ ನಿರ್ಮಿಸುವುದಕ್ಕಾಗಲಿ ಏನಾದರೂ ಸಹಾಯ ಬೇಡಬಂದರೆ, ಅವರಿಗೂ ಇದೇ ಉತ್ತರ ಸಿದ್ಧವಾಗಿರುತ್ತಿತ್ತು (ಹೇಮಕೂ. ೧೩). [ಸಂ.]

**ವಿಶ್ರಾಂತಿಪದ** (ನಾ). ನೆಲಸುವ ಸ್ಥಳ ; ನೆಲೆ : ಸಮಸ್ತಸಾಮಂತಕಿರೀಟಕೋಟಿ ಗಳೊಳಾತಪವಾರಣಶೂನ್ಯದೈನ್ಯವಿಶ್ರಾಂತಿಪದಂಗಳೊಳ್ ನೆಲಸಿ ಸೈನ್ಯರಜೋರುಣಕಾಂತಿ ರಾಜಿಗಳ್ (ಶಾಂತಿಪು. ೧೧-೪೦). [ಸಂ.]

**ವಿಶ್ರಾಣನ** (ನಾ). ೧. ನೀಡುವಿಕೆ ; ದಾನ : 'ವಿಶ್ರಾಣನವಿನೋದ' ಪದಾ. ೨. ದಾನ ಮಾಡುವವನು ; ದಾನಿ : ವಿದ್ವಜ್ಜನಾ ಬಾಪುರೆ ಬಾಪೆಂದೆತ್ತಿ ಕೊಂಡಾಡುವ ವಿವಿಧಕಲಾಪ್ರೌ[ಢಿ]ವಂದಿಬ್ರಜಂ ಕಂಡಿರದಿಷ್ಟಾರ್ಥಂಗಳಂ ಕೊಂಡ[ಡ]ರೆ ಪೊಗಳ್ವ ವಿಶ್ರಾಣನಂ ಏಶ್ರ[ವಂದ್ಯಂ]ಚರಿತಂ ತಾನಾಗಲೇನುನಂನತಿವಡೆದನೊ ಲಕ್ಷ್ಮೀಧರಾಮಾತ್ಯ ವರ್ಯಂ (ಸೌಇಇ. IV. ೨೬೭-೪೪ : 1410). [ಸಂ.]

**ವಿಶ್ರಾಣನವಿನೋದ** (ನಾ). ದಾನಮಾಡುವ ವಿಲಾಸ, — ವಿನೋದ : ಅಂತು ಸಕಲಜನಪ್ರೀಣನಪ್ರದಮಂ ವಿಶ್ರಾಣನವಿನೋದಮಂ ತೀರ್ಚಿ . . . ಪುರಮಂ ಪುಗುತಲ್ಲಿ (ಚಂದ್ರಪ್ರ. ೬-೧೫೩ ವ). [ಸಂ.]

**ವಿಶ್ರಾಮ** (ನಾ). ೧. = ವಿಶ್ರಮ ೧. ೨. = ವಿಶ್ರಮ ೩ : ಭೂಮಿವ್ಯೋಮದ್ವಂದ್ವರುದ್ರ ದ್ವಯಂಗಳ್ ತಾಮೆತ್ತಂ ಚೆಲ್ವಾಗೆ ಶೈಲಂಗಳೊಳ್ ವಿಶ್ರಾಮಂ ನಿಲ್ವಂದಕ್ಕುಮಾ ನಾಕಿಯಿಂದಂ . . . ಶಾಲಿನೀನಾಮವೃತ್ತಂ (ಛಂದೋಂಬು. ೨-೧೨೦). [ಸಂ.]

**ವಿಶ್ರಾಮದೇಶ** (ನಾ). ವಿರಮಿಸುವ ಸ್ಥಳ : ವಾಗ್ದೇವ್ಯಾವಾಸಂ ವಿವೇಕೋನ್ನತಜಲನಿಧಿ ಸಂಸಾರವಿಶ್ರಾಮದೇಶಂ (ಗಿರಿಕೆ. ೧-೧೭). [ಸಂ.]

**ವಿಶ್ರಾವ** (ಗು). ೧. ಹರಿಯುವ ; ಪ್ರವಹಿಸುವ. (ನಾ). ೨. ಹೆಸರುವಾಸಿ ; ಪ್ರಖ್ಯಾತಿ : "ವಿಶ್ರಾವಃ, ಪ್ರತಿಖ್ಯಾತಿಃ – ೨ ಅಧಿಕವಾದ ಪ್ರಸಿದ್ಧಿ, ಹೆಚ್ಚಾದ ಹೆಸರುವಾಸಿ" (ಸಿದ್ಧಾಂತಿ. ೩೬೫). [ಸಂ.]

**ವಿಶ್ರುತ** (ಗು). ೧. ಪ್ರಖ್ಯಾತಿ ಹೊಂದಿದ ; ಪ್ರಸಿದ್ಧವಾದ : ಅದೊರ್ಮೆ ವರವೀರವಿಶ್ರುತ ಕಥಾಪುರಾಣಂಗಳಿಂ . . . ಕಳೆವನಿಂತು ಪೊಟ್ಟಂ ನೃಪಂ (ಕಾದಂಪೂ. ೨೨) ; ವಿಶ್ರುತವರಗುಣಗಣಧಾಮಂ (ಹಮ್ಮೀರ. ೨-೧೧). (ನಾ). ೨. ಪ್ರಸಿದ್ಧನಾದವನು ; ಕೀರ್ತಿವಂತ : ಮಂತ್ರಿಸಂದೋಹವಿಶ್ರುತನುಮಪ್ಪ ಬಹುಶ್ರುತನೆಂಬ ಮಂತ್ರಿಯಿಂತೆಂದಂ (ಶಾಂತಿಪು. ೨-೬೬ ವ) ; ಶ್ರೀವರನಿಂದ್ರಾದಿಮುನಿಗಳಿಂ ವಿಶ್ರುತನೈ (ಜಗವಿ. ೧೭-೨೭). [ಸಂ.]

**ವಿಶ್ಲಥ** (ಗು). ಸಡಿಲಗೊಂಡ ; ಅಳ್ಳಕವಾದ : ಜವಮುಱಿದೊಂದು ಸೋಗೆನವಿಲೊ ಯ್ಯನೆ ಕರ್ಚಡೆಗಾಸಿಯಾಗಿ ಪಾಱುವುದುಮಿದೆನ್ನ ನಲ್ಲಳ ರತಿಶ್ರಮವಿಶ್ಲಥಕೇಶಪಾಶದೊಳ್ ಸವಸವನಾಗಿ ತೋಱಿದಪುದೆಂಬುದೆ ಕಾರಣದಿಂದದಂ ಗುಣಾರ್ಣವನಿಡಲೊಲ್ದನಿಲ್ಲ (ಪಂಪಭಾ. ೫-೫೧) ; ಐರಾವತಗಜಕುಂಭಸ್ಫಾರಣ ವಿಶ್ಲಥವಿಕಾಸಿಕೇಯೂರಂ ಕೇಯೂರ ದೊಳೊರಸೆ (ಶಾಂತಿಪು. ೫-೧೫೩) ; ಆಸಾರಲಕ್ಷ್ಮೀಪ್ರಕಟಾಂಭೋದಾವಳೀವಿಶ್ಲಥಕಬರಿ ಭರಸ್ರಂಸಿದಾಮಂ . . . ತಟನ್ಮಾಲೆ ಚೆಲ್ವಾದುದು (ಚಂದ್ರಪ್ರ. ೪-೩೬). [ಸಂ.]

**ವಿಶ್ಲಿಷ್ಟ** (ನಾ). [ನಾಟ್ಯ] ದೇಶೀಯ ಭೌಮಚಾರಿಗಳಲ್ಲಿ ಒಂದು; IP "ಪಾರ್ಷ್ಣಿವಿದ್ಧಸ್ಥಾನಕದಲ್ಲಿ . . . ನಿಂತುಕೊಂಡು ಕಾಲನ್ನು ಬಿಡಿಸಿ ಮುಂದಕ್ಕೆ ನಡೆದು ಅಡಿಗಳು ಅದೇ ಮುಖವಾಗಿರುವಂತೆಯೇ ಹಿಂದಕ್ಕೆ ನಡೆಯುವುದು" (ಲಾಸ್ಯರಂ. ೩.೨೧ ಗದ್ಯಾನುವಾದ) : ರಥಚಕ್ರ . . . ವಿಶ್ಲಿಷ್ಟ . . . ಸಮಸ್ಖಲಿತ — ಈ ಮೂವತ್ತೈದು ದೇಶೀಯಸಂಬಂಧದ ಭೌಮಚಾರಿಗಳು (ಲಾಸ್ಯರಂ. ೬-೧೭ ವ). [ಸಂ.]

**ವಿಶ್ಲೇಷ** (ನಾ). ೧. ಬೇರೆಯಾದುದು ; ಪ್ರತ್ಯೇಕಗೊಂಡುದು ; ವಿಭಜಿಸಲ್ಪಟ್ಟುದು : ಬ ಐ ಗಳು ಬಿಡಿಯಾಗಿದ್ದಾಗ ಳ – ರ ಗಳಾಗಿ ಪರಿಣಮಿಸಿದವು ; ಒತ್ತಿ ನಲ್ಲಿದ್ದಾಗ ವಿಶ್ಲೇಷವಾದುವು ; ಇಲ್ಲಿ ಮುಂದಿನ ವ್ಯಂಜನರೂಪಕ್ಕೆ ತಿರುಗಿದವು (ದ್ರಾವಿವಿ. ೩೩೦). ೨. ಅಗಲಿಕೆ ; ವಿಯೋಗ : ಪ್ರಣಯಿನೀವಿಯೋಗಪರಿಭವಾನಲದಹ್ಯ ಮಾನಮಾನಸನಪ್ಪ ಶ್ರೀವಿಜಯನುಮಂ ಭಂಗಿಸಿ ವಿಶ್ಲೇಷೋಪತಾಪಾಂತಸ್ಸಪ್ಯಮಾನ ಹೃದಯನಪ್ಪಕಲಂಕಾಚಾರಸಾರನುಮಂ ಲೋಕಜ್ಞತಾದಿ ಮೃದುವಚನರಚನೆಗಳಿಂದಮಾಱ ನುಡಿದು (ಶಾಂತಿಪು. ೬-೩೬ ವ). ೩. [ಕಾವ್ಯಮೀ] ಕಾವ್ಯದ ಹದಿನೆಂಟು ದೋಷಗಳಲ್ಲಿ ಒಂದು ; ಕೂಡಿರಬೇಕಾದ ಪದಗಳನ್ನು ಬಿಡಿಸಿ ಬರೆದಿರುವುದು ; ವಿಸಂಧಿ : ಅಸದರ್ಥಂ . . . ದುಸ್ಸಂಧಿ ವಿಶ್ಲೇಷ ನಷ್ಟಸಮಾಸಂ ನಯನಾಶ ರೀತಿವಿಫಲಂ . . . ಇನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೧-೪೬ ಅಡಿಪದ್ಯ). ೪. [ನಾಟ್ಯ] ಕರನ್ಯಾಸಗಳಲ್ಲಿ ಒಂದು : ಮಾನಿತ ವಿಶ್ಲೇಷಂ . . . ತರ್ಜನಾಖ್ಯಂಗಳಿಂದೆ ತೋಱುವ ಭೇದಂ . . . ಇಪ್ಪತ್ತೆಂಬ ಭಾವದಿಂ ರಂಜಿಸುಗುಂ (ಲಾಸ್ಯರಂ. ೪-೧೧). [ಸಂ.]

**ವಿಶ್ಲೇಷಣ** (ನಾ). ವಿಂಗಡಿಸುವಿಕೆ ; ವಿಭಜನೆ ; ಪೃಥಕ್ಕರಣ : ಭೂತಕನ್ನಡಿಯಲ್ಲಿ ಸೂರ್ಯಕಿರಣಗಳ ವಿಶ್ಲೇಷಣ(Decomposition)ವಾಗುವುದರಿಂದ ವರ್ಣಾಂತರ ಗಳಾಗುವುದನ್ನು ತಪ್ಪಿಸಲು ಏನು ಮಾಡಬೇಕೆಂದು ಅವನು ಚಿಂತಿಸತೊಡಗಿದನು (ವಿಜ್ಞಾಕ. ೪೮). [ಸಂ.]

**ವಿಶ್ಲೇಷಣೆ** (ನಾ). ೧. = ವಿಶ್ಲೇಷಣ. ೨. ಸಾರವನ್ನು ಗ್ರಹಿಸಿ ಮಾಡುವ ವಿವರಣೆ : ಈ ಕಥೆಗಳ ವಿಶ್ಲೇಷಣೆ ಸುಲಭವಾಗಿ ಹಿಡಿತಕ್ಕೆ ಸಿಗುವಂಥದಲ್ಲ (ಹೊಸಕ್ಕೆ. ೨೯೩). [ಸಂ. ವಿಶ್ಲೇಷಣ]

**ವಿಶ್ಲೇಷಿಸು** (ಕ್ರಿ). ವಿಂಗಡಿಸು ; ವಿಭಜಿಸು ; ಪೃಥಕ್ಕರಿಸು : ರಸಾಯನಶಾಸ್ತ್ರಜ್ಞರು ಈ ಎಣ್ಣೆಯಿಂದ ಯಿತ್ಯೆಲ್‌ಎಸ್ಟರ್‌ಗಳೆಂಬ ಕೆಲವು ಸತ್ವಗಳನ್ನು ವಿಶ್ಲೇಷಿಸಿ ಬೇರೆ ಯಾಗಿಸಿದ್ದಾರೆ (ಹಸುಹೊ. ೫೩). [ವಿಶ್ಲೇಷಣ + - ಇಸು]

**ವಿಶ್ವ** (ಗು). ೧. ಸಕಲ ; ಸಮಸ್ತ ; ಎಲ್ಲ : ವಿಶ್ವದಿ[ಗ್ವ್ಯಾಪ್ತ] ಯಶೋವಿಳಾಸಿನಿಗೆ ವಲ್ಲಭನಾಗು (ಪಂಪಭಾ. ೧-೧೪೯). (ನಾ). ೨. ಜಗತ್ತು ; ಲೋಕ ; ಪ್ರಪಂಚ : ವಿಶ್ವವಿನುತಂ ಪಾದಂ . . . ಆಗಿರೆ ಪೆಂಪಚ್ಚರಿಯಾದ ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ (ಜಗಪ. ೧-೫) ; ವಿಶ್ವಭೂತಪ್ರಕರ ದಣಿದುದು ಧರ್ಮಪುತ್ರನ ರಾಜಸೂಯದಲಿ (ಕುವ್ಯಾಸ. ೭ ಸೂಚನೆ) ; ವಿಶ್ವದ ಸಮಸ್ತ ಬೌದ್ಧಿಕವ್ಯಾಪಾರಗಳಿಗೆಲ್ಲ ಮನುಷ್ಯನೇ ಕೇಂದ್ರ ಬಿಂದು (ಗ್ರಂಥಾಲ. ೧). ೩. ವಿಷ್ಣು : ಎಡೆವಿಡದೆ ಹರಿ ವಿಶ್ವನೆಂದುಗ್ಗಡಿಪನಲ್ಲದೆ ವಿಶ್ವವಲ್ಲಭನುಡುಪಖಂಡಶಿಖಂಡನೊರ್ಬನೆಯೆಂದುಸುರಲೊಲ್ಲ (ಬಸಪು. ೫೭-೨೬) ; ವಿಶ್ವ ನಿನ್ನಯ ಮಾಯೆ ನಿರ್ಮಲ (ಕುವ್ಯಾಭೀ. ೩-೮೬). ೪. ದೇವತೆಗಳಲ್ಲಿ ಒಂದು ಪಂಗಡ ; IPಧರ್ಮನೆಂಬ ತಪಸ್ವಿಗೂ ದಕ್ಷಪುತ್ರಿಯಾದ ವಿಶ್ವಾ ಎಂಬುವಳಿಗೂ ಜನಿಸಿದ ಕ್ರತು, ದಕ್ಷ, ವಸು, ಸತ್ಯ, ಕಾಲ, ಕಾವ್ಯ, ಶುಚಿ, ರುಚಿ, ಪುರೂರವ ಮತ್ತು ಆದ್ರ್ರವ ಎಂಬ ಈ ಹತ್ತು ಮಂದಿ ದೇವತೆಗಳನ್ನು ಶ್ರಾದ್ಧ ಮತ್ತು ವೈಶ್ವದೇವವಿಧಿಗಳಲ್ಲಿ ಪೂಜಿಸುತ್ತಾರೆ. ೫. ಒಣಶುಂಠಿ ; ಅಲ್ಲ. ೬. ದೇವಾಲಯದ ಶಿಖರ ಅಥವಾ ಅಲಂಕಾರದ ರಚನೆಯುಳ್ಳ ಬಾಗಿಲು : "ಲೋಕದಿ ಗೋಪುರ ಶುಂಠಿ ಸಮಸ್ತದಿ ನಾಲ್ಕುಂ ವಿಶ್ವಶಬ್ದಮೆನಿಕ್ಕುಂ ಜಗದೊಳ್" (ನಾನಾಕಂ. ೧೨೨) ; "ಜಗಮುಂ ಶುಂಠಿಯದಭ್ರಗೋಪುರಮಿವುಂ ವಿಶ್ವಾಖ್ಯಂ" (ನಾನಾರ. ೯೬). ೭. ಪ್ರಾಣವಾಯುಗಳಲ್ಲಿ ಒಂದು ; ಕೈ ಕಾಲುಗಳ ಚಲನೆಗೆ ಕಾರಣವಾದ ಒಂದು ವಾಯು : "ಕೈಕಾಲ ಗತಿಯಲ್ಲಿಹುದು ವಿಶ್ವವಕ್ಕು" (ಮಂಗರಾ. ೧೬-೧೩). ೮. ವಿಶ್ವ, ತೈಜಸ ಮತ್ತು ಪ್ರಾಜ್ಞವೆಂಬ ತ್ರಿವಿಧಜೀವಗಳಲ್ಲಿ ಒಂದು ; "ಸ್ಥೂಲಶರೀರದಲ್ಲಿರುವ ಜೀವನಿಗೆ ವಿಶ್ವನೆಂದೂ, ಜೀವಾತ್ಮನೆಂದೂ ಹೇಳುವರು" (ಶಿವಾಸೂ. ೪೯): ವಿಶ್ವ ತೈಜಸ ಪ್ರಾಜ್ಞವೆಂಬ ಜೀವತ್ರಯವಿಡಿದ ಸ್ಥೂಲ ಸೂಕ್ಷ್ಮ ಕಾರಣತನುವಿನ ಸುಬುದ್ಧಿ ಸುಮನ ಸದ್ಭಾವವೆಂಬ ಹಸ್ತದಿಂ . . . ಭಾವಾರ್ಪಣದಿಂದರ್ಪಿಸಿಕೊಂಬ (ಆದವ. ಮು. ೧೨೬-೨೨೦) ; ಈ ವಿಧದವಸ್ಥೆಯಲಿ ಹೊಳೆಯುವ ಜೀವನೆನಿಸುವ ವಿಶ್ವತೈಜಸನೋವಿ ಪ್ರಾಜ್ಞನೆನಿಪ್ಪ ಪೆಸರನು ತಳೆದು ತೋಱುವನು (ಅಮೃತ. ೯-೧೨). ೯. [ಗಣಿತ] ಹದಿಮೂರು ಎಂಬ ಸಂಖ್ಯೆಯ ಸಂಕೇತ : "ವಿಶ್ವಮೆನೆ ಪದಿಮೂಱನಿಕ್ಕುಂ" (ಮಂಗರಾ. ೧೦೪-೮).

[ಸಂ.]

**ವಿಶ್ವಂಭರ** (ಗು). ೧. ಎಲ್ಲವನ್ನೂ ಹೊರುವ. (ನಾ). ೨. ಜಗತ್ತನ್ನು ಧರಿಸಿರುವವನು; ಪರಮಾತ್ಮ : ಸಲಹುವ ದೈವವೇ ಕೆಡಹುವೊಡೆ ಭುವನದಲಾವ ತಡೆವನು ನೋಡೆ ವಿಶ್ವಂಭರನ ನಾಟಕವು (ಕಾಶಿರಾ. ೨೩-೧೫). ೩. ವಿಷ್ಣು ; ನಾರಾಯಣ : ವರಕೇಸರಿಯ ರೂಪಿನೊಳಾದಿ ವಿಶ್ವಂಭರನು ಗೆಲಿದನು ಮಾಯೆಯನು (ಕುವ್ಯಾಗ. ೫-೭). ೪. ಅಗ್ನಿ. ೫. ಇಂದ್ರ. [ಸಂ.]

**ವಿಶ್ವಂಭರಾಪುತ್ರ** (ನಾ). [ಜ್ಯೋತಿ] ಭೂಮಿಯ ಮಗ ; ಮಂಗಳ ; ಕುಜ: ಆ ನರಂಗೆ . . . ಆಮಯಂ ಸಮನಿಕುಂ . . . ತಾನವರೋಹಿಯಪ್ಪ ದಶೆಯೊಳ್ ವಿಶ್ವಂಭರಾಪುತ್ರನಾ (ಜಾತಕ. ೯-೨೨). [ಸಂ.]

**ವಿಶ್ವಂಭರಾವಲ್ಲಭ** (ನಾ). ಭೂಮಿಯ ಒಡೆಯ; ದೊರೆ; ರಾಜ : ಪಿತನಂತೆ ಪೂರ್ಣವಿಭವಂ ವಿಶ್ವಂಭರಾವಲ್ಲಭಂ (ರಾಜಶೇ. ೪-೧೨೩). [ಸಂ.]

**ವಿಶ್ವಂಭರೆ** (ನಾ). ಎಲ್ಲವನ್ನೂ ಧರಿಸಿರುವುದು; ಭೂಮಿ : ಸೀತೋದೆಯ ಪೋಲ್ವೆಗಿಲ್ಲ ತೋಟಗಳ್ ವಿಶ್ವಂಭರಾಭಾಗದೊಳ್ (ಆದಿಪು. ೧-೫೧) ; ಎರಡುಭಾಗವ ಮಾಡಿ ವಿಶ್ವಂಭರೆಯ ರಾಜ್ಯವನುಭಯರಾಯರು ಹೊಱ ಹೊಗದೆ ಪಾಲಿಸಲಿ ಪಂಥದೊಳು (ಕುವ್ಯಾಆ. ೧೮-೨). [ಸಂ. ವಿಶ್ವಂಭರಾ]

**ವಿಶ್ವಕದ್ರು** (ನಾ). ಬೇಟೆಗಾಗಿ ಪಳಗಿಸಿದ ನಾಯಿ ; ಬೇಟೆನಾಯಿ : ತಗುಳ್ದಟ್ಟುವ ವಿಶ್ವಕದ್ರುವನಭೀಕ್ಷಿಸಿ ಸಿಂಹಕಿಶೋರಮೆಂದು ಬೆಂಗೊಟ್ಟುವಿಭಂಗಳ್ (ಪುಷ್ಪಪು. ೫-೧೦೦).

[ಸಂ.]

**ವಿಶ್ವಕರ್ತ** (ನಾ). ಸೃಷ್ಟಿಕರ್ತ ; ಭಗವಂತ : ವಿಶ್ವಕರ್ತನು ರಾಮನಾಥನು ವಿಶ್ವಭರ್ತನು ರಾಮನಾಥನು ವಿಶ್ವಹರ್ತನು ರಾಮನಾಥನು (ಬಸಪು. ೫೧-೧೩).

[ಸಂ. ವಿಶ್ವಕರ್ತೃ]

**ವಿಶ್ವಕರ್ತೃ** (ನಾ). ಪ್ರಪಂಚವನ್ನು ಸೃಷ್ಟಿಸಿದವನು : ಸುಡುವುದಗ್ನಿಗೆ ಕಟ್ಟು ; ವಿಶ್ವಕರ್ತೃವಿನಾಜ್ಞೆ (ಚಿತ್ರಾಂಗ. ೩೮-೪೫). [ಸಂ.]

**ವಿಶ್ವಕರ್ಮ** (ನಾ). ೧. = ವಿಶ್ವಕರ್ತ : ಸಕಲಜಗತ್ಕರ್ತನಾಗಿರುವುದರಿಂದ ವಿಶ್ವಕರ್ಮನೆಂದು ಹೆಸರು (ಭಾರಕಾಂ. ೪೫). ೨. ದೇವಲೋಕದ ಶಿಲ್ಪಿ ; ದೇವಶಿಲ್ಪಿ : "ವಿಶ್ವಕೃತ್, ವಿಶ್ವಕರ್ಮಾ, ತ್ವಷ್ಟಾ, ದೇವವರ್ಧಕಿಃ - ಈ ೪ ದೇವರ ಬಡಗಿಯ ಪೆಸರ್" (ಹಲಾಯು. ೧೫-೯೬) ; ವಿಶ್ವಕರ್ಮನಳವಳ್ಕಿಂ ಬನ್ನಮುದ್ವ್ಯಾನಮಾಲೆಗಾನಾನಂ ಗಸಚಿತ್ರ ಮಾಗ ಬರೆವಂ (ಮಲ್ಲಿಪು. ೫-೪೪) ; ನಿಚಿತಹರುಷರು ವಿಶ್ವಕರ್ಮಂಗಱುಹಿದರು ಹದನ (ಕುವ್ಯಾಕ. ೭-೧) ೩. ಬ್ರಹ್ಮ. ೪. ಶಿವ. ೫. ಮಂತ್ರಿ ; ಸಚಿವ. ೬. ಸೂರ್ಯ. ೭. ಯಮ. ೮. ಪ್ರಾಣ, ಅಪಾನ, ಸಮಾನವೆಂಬ ಮೂರು ಪ್ರಾಣ ವಾಯುಗಳು. ೯. ನಕ್ಷತ್ರಸಮೂಹ ; ಭಗಣ. "ಮಂತ್ರಿ ಸೂರ್ಯಾಂಬುಜಭವ ಶಿವ ವಾಯುತ್ರಯಂ ವಿಶ್ವಕರ್ಮಂ ಭಗಣಂಗಳ್ ವಿಶ್ವಕರ್ಮಾಹ್ವಯಂ" (ನಾನಾರ. ೪೧). ೧೦. ಅಕ್ಕಸಾಲೆ ಜನಾಂಗಕ್ಕೆ ಸೇರಿದವನು. [ಸಂ. ವಿಶ್ವಕರ್ಮನ್]

**ವಿಶ್ವಕರ್ಮರತ್ನ** (ನಾ). [ಜೈನ] ಚಕ್ರವರ್ತಿಯಾದವನಿಗೆ ತಾನಾಗಿ ಬಂದೊದಗುವ ಏಳು ಜೀವರತ್ನಗಳಲ್ಲಿ ಒಂದು; ಅತ್ಯಂತ ಸಮರ್ಥನಾದ ಶಿಲ್ಪಿ : ಬಗೆದಾಗಳೆ ಪಡೆಗೆಲ್ಲಂ ಮಾ(ಟ)ಡಕೂಟಪ್ರಾಸಾದಂಗಳಂ ಸಮೆದು ತ(ದಿ)ರ್ಪ ವಿಶ್ವಕರ್ಮರತ್ನಮುಂ . . . ಸ್ತ್ರೀರತ್ನಮುಂ ಎಂಬೀಯೇೞುಂ ಜೀವರತ್ನಂಗಳ್ (ಜೀವಸಂ. ೧೮-೨). [ಸಂ.]

**ವಿಶ್ವಕುಟುಂಬಿ** (ನಾ). ಲೋಕವನ್ನೇ ತನ್ನ ಸಂಸಾರವೆಂದು ಭಾವಿಸುವ ವ್ಯಕ್ತಿ ; ವಿಶ್ವಸಂಸಾರಿ : ದೈವೀಯತೆಯ ಅಂತರಂಗಕ್ಕೆ ಬಹಿರಂಗವಾಗಿ ಅನುಕಂಪಿಸಿದರೆ, ಆತ ವಿಶ್ವಕುಟುಂಬಿಯಾಗುತ್ತಾನೆ (ಮನೋನಂ. ೨೩೦). [ಸಂ. ವಿಶ್ವಕುಟುಂಬಿನ್]

**ವಿಶ್ವಕೃತ್ತು** (ನಾ). ದೇವಲೋಕದ ಶಿಲ್ಪಿ ; ವಿಶ್ವಕರ್ಮ : "ವಿಶ್ವಕೃತ್, ವಿಶ್ವಕರ್ಮಾ, ತ್ವಷ್ಟಾ, ದೇವವರ್ಧಕಿಃ – ಈ ೪ ದೇವರ ಬಡಗಿಯ ಪೆಸರ್" (ಹಲಾಯು. ೧೫-೮೪).

[ಸಂ. ವಿಶ್ವಕೃತ್]

**ವಿಶ್ವಕೋಶ** (ನಾ). ಲೋಕಜ್ಞಾನದ ಎಲ್ಲ ವಿಷಯಗಳನ್ನೂ ವ್ಯವಸ್ಥಿತವಾಗಿ ನಿರೂಪಿಸುವ ಗ್ರಂಥ : ಆಧುನಿಕಯುಗದ ನಾಗರಿಕಮಾನವ ಹೊಂದಿರಬೇಕಾದ ಮೂಲಭೂತ ಅಗತ್ಯಗಳಲ್ಲಿ ವಿಶ್ವಕೋಶವೂ ಒಂದು (ಕವಿಕೋ. I, Vii ಪೀಠಿಕೆ). [ಸಂ.]

**ವಿಶ್ವಗೋದ** (ನಾ). ಬಡಗಿ : ಆಱು ದರ್ಶನವೆಲ್ಲಾ ಎನ್ನ ಬಾಚಿಯ ಕಲೆ ಮಿಕ್ಕಾದ ಮಾಱಿದ ಅವಧೂತರುಗಳೆಲ್ಲಾ ಎನ್ನ ಉಳಿಯೊಳಗಣ ಒಡಪು . . . ಇಂತೀ ವಿಶ್ವಗೋದ [ಪಾಠಾಂ. ಧ]ರೆಲ್ಲರೂ ಕರ್ತಾರನ ಕರ್ಮಟದ ನಕ್ಕು ಬಚ್ಚನೆಯ ಚಿಕ್ಕಮಕ್ಕಳು (ಸಕವ.ಕ. III, ೧೬೨-೩೧೨). 'ವಿಶ್ವಕರ್ಮ' ಪರಾ. [?]

**ವಿಶ್ವಚಿಹ್ನ** (ನಾ). ಪರಮಾತ್ಮ ; ಭಗವಂತ : ಚೇತನಂ ವಿಶ್ವಚಿಹ್ನಂ ವಿಶ್ವಸಂಹೃತಂ ಖ್ಯಾತಸಾಕ್ಷಾದ್ವಸ್ತುಶಿವನಾದಿಯಪ್ಪ ನಗಜಾತೆ (ವೀಶೈಪು. ೭-೧-೨೪). [ಸಂ.]

**ವಿಶ್ವಚೇಷ್ಟಕ** (ನಾ). ಜಗತ್ತಿಗೆ ಚಾಲಕಶಕ್ತಿಯನ್ನು ನೀಡುವವನು : ವಿಶ್ವಪಾಲನೆ ವಿಶ್ವಚೇಷ್ಟಕ . . . ಸಲಹಬೇಕು (ಕುವ್ಯಾಭೀ. ೩-೮೬). [ಸಂ.]

**ವಿಶ್ವಚೈತನ್ಯ** (ನಾ). ಲೋಕವನ್ನೆಲ್ಲಾ ವ್ಯಾಪಿಸಿರುವ ಪರಮಾತ್ಮನ ಚೇತನ : ಚಿತ್ತದ ಕಳೆಯಲ್ಲಿ ಸದ್ವಿವೇಕವೆಂಬ ಲಿಂಗಕಳೆ ಉದಯಿಸಿ . . . ವಿಶ್ವಚೈತನ್ಯನಾಗಿಪ್ಪುದು ನೋಡಾ (ಸಿದ್ಧೇವ. ೧೨೧-೩೬೫) ; ಆನಂದದ ಪರಮಾವಧಿಯನ್ನು ಮುಟ್ಟಿ ಅವರ ಆತ್ಮ ವಿಶ್ವಚೈತನ್ಯದಲ್ಲಿ ಲೀನವಾಗುತ್ತದೆ (ಸಮಜೀ. ೧೯ ಪೀಠಿಕೆ). [ಸಂ.]

**ವಿಶ್ವದಾತ** (ನಾ). ಸಕಲವನ್ನೂ ನೀಡುವ ದಾನಿ : ವಿಶ್ವಮಯನು ರಾಮನಾಥನು ವಿಶ್ವದಾ[ಪಾಠಾಂ. ಧಾ] ತಂ ರಾಮನಾಥನು (ಬಸಪು. ೫೧-೧೩). [ಸಂ. ವಿಶ್ವದಾತೃ]

**ವಿಶ್ವದೃಷ್ಟಿ** (ನಾ). ಸರ್ವವ್ಯಾಪಿಯಾದ ನೋಟ ; ವಿಶಾಲದೃಷ್ಟಿ : ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಹುಟ್ಟಿಯೂ ಸಾಹಿತಿಯು ವಿಶ್ವದೃಷ್ಟಿಯನ್ನು ಪಡೆಯಬಲ್ಲ (ನವ್ಯಕಾ. ೫).

[ಸಂ.]

**ವಿಶ್ವೆದೇವತೆ** (ನಾ). ಧರ್ಮನೆಂಬ ಮುನಿಗೂ ದಕ್ಷಪುತ್ರಿಯಾದ ವಿಶ್ವೆ ಎಂಬುವಳಿಗೂ ಹುಟ್ಟಿದ ಕ್ರತು, ದಕ್ಷ, ವಸು, ಸತ್ಯ, ಕಾಲ, ಕಾವ್ಯ, ಶುಚಿ, ರುಚಿ, ಪುರೂರವ ಮತ್ತು ಆದ್ರ್ರವ — ಎಂಬ ಹತ್ತು ಮಂದಿ ದೇವತೆಗಳ

ಒಂದು ವರ್ಗ ಮತ್ತು ಆ ವರ್ಗಕ್ಕೆ ಸೇರಿದ ಒಬ್ಬ ದೇವತೆ : ಚಿರಲೋಕವಾಸಿಗಳಾದ ಕ್ರತು . . . ಆರ್ದ್ರವರೆಂಬ ವಿಶ್ವದೇವತೆಗಳೊಡನೆಯುಂ . . . ಕೂಡಿರ್ಪ ಚಂದ್ರನಾದೊಡೆ (ವಿವೇಕ. ೨೦೪). [ < ಸಂ. ವಿಶ್ವೇದೇವತಾ]

**ವಿಶ್ವಧಾರಿಣಿ** (ನಾ). ವಿಶ್ವವನ್ನು ಹೊತ್ತಿರುವವಳು ; ಭೂಮಿ ; ಧರೆ : ಗುಣನಿಧೀ ನಂದಿವರ್ಧನನನಾಡುವನಾಳ್ವೆಸಕೆಯ್ಸಿ ವಿಶ್ವಧಾರಿಣಿಯನವಜ್ಜೆಗೆಯ್ಯದೆನಗಂ ಬೆಸಕೆಯ್ಯೊಡೆ (ಶಾಂತಿಪು. ೯-೧೦೪). [ಸಂ. ವಿಶ್ವಧಾರಿಣೀ]

**ವಿಶ್ವನಾಥ** (ನಾ). ೧. ಜಗತ್ತಿನ ಒಡೆಯ : ಅನತಿಶಯಕೇವಲಜ್ಞಾನನಿರೀಕ್ಷಿತ ವಿಶ್ವನಾಥನಾದಿಜಿನಂ . . . ಅನಂತಸುಖನಿಳಯಂ (ಆದಿಪು. ೧೦-೧೫). ೨. ಶಿವ ; ಈಶ್ವರ : ಶಶಿಮೌಳಿ ಶ್ರೀ ವಿಶ್ವನಾಥ ಭೂಪಂಗೆ ಕರುಣಿಸಿ ಸಕಲಸಾಮ್ರಾಜ್ಯವಿತ್ತು (ಹಚಿಕಾ. ೧-೧೭) ; ಶ್ರೀ ವಿಶ್ವನಾಥನು ಗಿರಿಜಾಸಹಾಯನು ನಮ್ಮನು ಸಲಹಲಿ ಶಿವನು (ಇಂಚಾಪ. ೮೩-೧). ೩. ವಾರಾಣಸಿಯಲ್ಲಿ ನೆಲೆಗೊಂಡಿರುವ ಶಿವನ ಮೂರ್ತಿ; ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಒಂದು : ಗಂಗಾಸ್ನಾನಾನಂತರ ಕಾಶೀ ವಿಶ್ವನಾಥನ ದರ್ಶನ ಮಾಡಿದರೆ ಪುಣ್ಯಪ್ರಾಪ್ತಿ ಎಂದು ಹೇಳುತ್ತಾರೆ (ರೂಢಿ). [ಸಂ.]

**ವಿಶ್ವಪ್ರಯತ್ನ** (ನಾ). ಎಲ್ಲ ಬಗೆಯ ಯತ್ನ ; ಸಕಲರೀತಿಯ ಪರಿಶ್ರಮ : ರಘುವೀರಸಿಂಹನನ್ನು ಹೇಗಾದರೂ ಕೈಸೆರೆಹಿಡಿಯಬೇಕೆಂದು ಅಕ್ಬರ್‌ಬಾದಷಹನು ವಿಶ್ವಪ್ರಯತ್ನ ಮಾಡುತ್ತಿರುವನು (ಹಿಂಕರು. ೧೦೨). [ಸಂ.]

**ವಿಶ್ವಪ್ರವೇಶಿನಿ** (ನಾ). [ಜೈನ] ಒಂದು ಬಗೆಯ ವಿದ್ಯೆ : ಪ್ರಜ್ಞಪ್ತಿ . . . ಉದಕ ಸ್ತಂಭನಿ ವಿಶ್ವಪ್ರವೇಶಿನಿ . . . ಆಭೋಗಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಚಾವುಂಪು. ೧೯೬). [ಸಂ. ವಿಶ್ವಪ್ರವೇಶಿನೀ]

**ವಿಶ್ವಭರ್ತ** (ನಾ). ಜಗತ್ತನ್ನು ಪೋಷಿಸುವವನು ; ಪರಮಾತ್ಮ : ವಿಶ್ವಕರ್ತನು ರಾಮನಾಥನು ವಿಶ್ವಭರ್ತನು ರಾಮನಾಥನು (ಬಸವು. ೫೦-೧೩). [ಸಂ. ವಿಶ್ವಭರ್ತೃ]

**ವಿಶ್ವಭೇಷಜ** (ನಾ). ಒಣಶುಂಠಿ ; ಅಲ್ಲ : "ಶುಂಠೀ, ನಾಗರಂ, ಮಹೌಷಧಂ, ವಿಶ್ವಭೇಷಜಂ, ವಿಶ್ವಾ- ಈ ೫ ಶುಂಠಿ" (ಪಲಾಯು. ೧೧೦-೪೬೧). [ಸಂ.]

**ವಿಶ್ವಮಾನವ** (ನಾ). ಸರ್ವಮಾನವಮಾನ್ಯವಾದ ಮೌಲ್ಯಪ್ರಜ್ಞೆಯುಳ್ಳ ವ್ಯಕ್ತಿ : ವ್ಯಕ್ತಿ ತನ್ನ ವ್ಯಕ್ತಿತ್ವವನ್ನು ಕಾಯ್ದುಕೊಂಡು ಸಹ ವಿಶ್ವಮಾನವನಾಗುತ್ತಾನೆ (ನವ್ಯಾ. ೧೫). [ಸಂ.]

**ವಿಶ್ವರೂಪ** (ನಾ). ೧. ಸರ್ವವ್ಯಾಪಿಯಾದವನು ; ವಿಷ್ಣು; ನಾರಾಯಣ : ವಿಶ್ವರೂಪಂ ಕರ್ತವ್ಯಮನರಿಪಿ ತನ್ನ ದಿವ್ಯರೂಪವನಡಂಗಿಸಿ . . . ಸಾಮಾನ್ಯ ಶಿಶುರೂಪಮಂ ಕೈಕೊಂಡು ನಿಲ್ಪುದುಂ (ಜಗವಿ. ೩-೭೪) ; ವಿಶ್ವರೂಪನೇ ! ನಿನ್ನ ಶರೀರದಲ್ಲಿ . . . ಅನಂತರೂಪವನ್ನು ನೋಡುತ್ತೇನೆ (ಭಾತತ್ತ್ವ. ೧೨೬). ೨. ಎಲ್ಲ ಕಡೆಗಳಲ್ಲಿಯೂ ತುಂಬಿರುವಂತಹ (ಕೃಷ್ಣನ) ರೂಪ ; (ಕೃಷ್ಣನ) ವಿರಾಟ್‌ಸ್ವರೂಪ : ಮಿಂಚಿನ ಹೊದಱು ಹುರಿಗೊಂಡಂತೆ . . . ಹರಿ ತೋಱಿದನು ನಿರುಪಮ ವಿಶ್ವರೂಪವನಾ ಮಹಾಸಭೆಗೆ (ಕುವ್ಯಾಉ. ೯-೫೭); ಸಾಸಿರಭುಜದ ಬಹುಳತೆಯವಗಡಿಸಿ ವೈಕುಂಠನೆಸೆದನು ವಿಶ್ವರೂಪದಲಿ (ಕುವ್ಯಾಉ. ೯-೬೧). ೩. ಶಿವ ; ಈಶ್ವರ : ವಿಶ್ವರೂಪನು ನೀನೆ ದೇವ (ಅಪಿಂಡೇ. ೧೯೭-೧೯). ೪. ಐದು ಬಗೆಯ ಮಾಯಾಮಂತ್ರಗಳಲ್ಲಿ ಒಂದು : ಕಾಮರೂಪ ಘೋರದರ್ಶನ ಸಂಮೋಹನ ವಿಶ್ವರೂಪ ಗುಲ್ಮಸೃಷ್ಟಿಗಳೆಂಬ ಪಂಚಮಾಯಾಮಂತ್ರಂಗಳಂ (ವಿವೇಕ. ೪೧). [ಸಂ.]

**ವಿಶ್ವರೂಪದರ್ಶನ** (ನಾ). (ಕೃಷ್ಣನ) ವಿರಾಟ್‌ಸ್ವರೂಪದ ಪ್ರಕಟಣೆ : ಶ್ರೀಕೃಷ್ಣನು ಅರ್ಜುನನಿಗೆ ತೋರಿಸಿದ 'ವಿಶ್ವರೂಪದರ್ಶನ' (ಪ್ರಬಂಧ. ii ಮುನ್ನುಡಿ). [ಸಂ.]

**ವಿಶ್ವಲೋಚನ** (ನಾ). ಲೋಕಕ್ಕೇ ಕಣ್ಣಾದವನು ; ಸೂರ್ಯ : ಸೌಮಿತ್ರಿ . . . ವಿಶ್ವಲೋಚನಂಗೆ ಎಲ್ಲೆ ಆರ್ಯಸೂರ್ಯನಾರಾಯಣ . . . ನೀಂ ಜಗಚ್ಚಕ್ಷುವಾಗೆ ಕುಂದುಕೊಱತೆಯಂ ಕಡೆಗೊತ್ತುತ್ತೆನ್ನನುದ್ಧರಿಸ್ಯೆ, ಎಂದು ಕೈಮುಗಿದು ನಡೆದಂ (ರಾಮಾಶ್ವ. ೨೭-೬). [ಸಂ.]

**ವಿಶ್ವವಸುಂಧರೆ** (ನಾ). ಭೂಮಂಡಲ ; ಪ್ರಪಂಚ : ಮನೋಜರಾಜವಿಕ್ರಾಂತ ಪನಾಸಿತಾರ್ತಿಯೆನೆ ವಿಶ್ವವಸುಂಧರೆ ಮಾಘಣಂದಿಸೈದ್ಧಾಂತಿಕಚಕ್ರವರ್ತಿ ನೆಗಟ್ದಂ (ಚಂದ್ರಪು. ೧-೨೨). [ಸಂ. ವಿಶ್ವವಸುಂಧರಾ]

**ವಿಶ್ವವಿಕರ್ಣ** (ನಾ). ಲೋಕಪ್ರಸಿದ್ಧನಾದವನು ; ವಿಶ್ವವಿಖ್ಯಾತ (?) : ನೀನು ಕುರುಬಲಕರ್ಣಧಾರನು ನೀನು ವಿಶ್ವವಿಕರ್ಣ ನೀನೇ ರಕ್ಷಿಸು (ಕುವ್ಯಾದ್ರೋ. ೧-೧೭). [ಸಂ.]

**ವಿಶ್ವವಿದ್ಯಾನಿಲಯ** (ನಾ). ನಾನಾಶಾಸ್ತ್ರಗಳಲ್ಲಿ ಪಾಠಪ್ರವಚನಗಳನ್ನು ಮಾಡಿ, ಪರೀಕ್ಷಾದಿಗಳನ್ನು ನಡೆಸಿ, ಪದವಿಗಳನ್ನು ನೀಡುವ ವಿದ್ಯಾಸಂಸ್ಥೆ; ಸ್ನಾತಕೋತ್ತರ ವಿದ್ಯಾಭ್ಯಾಸವನ್ನು ನೀಡುವ ಸ್ಥಳ ; ಯೂನಿವರ್ಸಿಟಿ : ವಿಶ್ವವಿದ್ಯಾನಿಲಯಗಳಿಗೆ ಸೂಕ್ತನಿರ್ದೇಶನವನ್ನೂ ನೀಡುತ್ತದೆ (ಶಿಕ್ಷದ Vii. ಮುನ್ನುಡಿ). [ಸಂ.]

**ವಿಶ್ವವಿದ್ಯಾಲಯ** (ನಾ). = ವಿಶ್ವವಿದ್ಯಾನಿಲಯ : ಬಲ್ಲವಿಕೆಯನು ತನ್ನ ದೇಶದೊಳೆಲ್ಲರುಂ ಸಂಗ್ರಹಿಸಲೆಂದದಿಕೋಲ್ಲಸದೆ ವರವಿಶ್ವವಿದ್ಯಾಲಯವನೇರ್ಪಡಿಸಿ (ರಾಮೂಸಂ. ೧-೧-೧೨). [ಸಂ.]

**ವಿಶ್ವವಿದ್ಯಾವಿದ** (ನಾ). ಸಕಲವಿದ್ಯೆಗಳಲ್ಲೂ ಪಾರಂಗತನಾದವನು: ದಾನಗುಣದುನ್ನತಿಯಂ ನೆಱೆ ತಾಳ್ದಿ ವಿಶ್ವವಿದ್ಯಾವಿದರ್ಗತಿಯಿಂ ಪಿರಿದನೀವ ನೆಗಟ್ದೆ (ಎಕ. VII, ಶಿಕಾರಿ. ೧೫೦-೨೪ ; 1047) ; ವಿಶ್ವವಿದ್ಯಾವಿದನೆನ್ನು ಬಣ್ಣಿಪು[ದು] ನನ್ನನೃಪಾಳನನೀ ಧರಾತಳಂ (ಸೌಇಇ. XX, ೨೪೭-೫ ; 1087). [ಸಂ. ವಿಶ್ವವಿದ್ಯಾವಿದ್]

**ವಿಶ್ವವಿದ್ಯೇಶ್ವರ** (ನಾ). ಸಕಲವಿದ್ಯೆಗಳಿಗೂ ಅಧಿಪತಿಯಾದವನು ; ಸಕಲ ಶಾಸ್ತ್ರವಿಶಾರದ : ಮಹೋತ್ಪನ್ನಮತಿ ಶ್ರುತಾವಧಿಬೋಧನಪ್ಪುದಱಿಂ ವಿಶ್ವ ವಿದ್ಯೇಶ್ವರನುಂ (ಆದಿಪು. ೮-೩ ವ). [ಸಂ.]

**ವಿಶ್ವವಿನುತ** (ನಾ). ಸಕಲರಿಂದಲೂ ಸ್ತುತಿಸಲ್ಪಡುವಂತಹುದು : ಸಾಕ್ಷರಸೇವ್ಯಂ ನಿಜವಿದ್ಯೆ ವಿಶ್ವವಿನುತಂ ಪಾದಂ (ಜಗವಿ. ೧-೫). [ಸಂ.]

**ವಿಶ್ವವ್ಯಸನ** (ನಾ). ಏಳು ಬಗೆಯ ಚಿಂತೆಗಳಲ್ಲಿ ಒಂದು : ತನುವ್ಯಸನ . . . ವಿಶ್ವವ್ಯಸನ ಉತ್ಸಾಹವ್ಯಸನ ಸೇವಕ(ಸೇವಕಾ) ವ್ಯಸನ ಎಂಬ ಸಪ್ತವ್ಯಸನಂಗಳ ಸಂಹಾರವ ಮಾಡಿದ ನಿರ್ವ್ಯಸನಿಯ ನೋಡಾ (ಸಿದ್ಧೇವ. ೧೫೪-೪೭೭) ; ತನುವ್ಯಸನ . . . ವಿಶ್ವವ್ಯಸನ ಉತ್ಸಾಹವ್ಯಸನ ಸೇವಕವ್ಯಸನವೆಂಬ ಸಪ್ತವ್ಯಸನದಿಂ ಹಸಂಗೆಟ್ಟು (ವಿವೇಕ. ೧೯೭). [ಸಂ.]

**ವಿಶ್ವವ್ಯಾಪಕ** (ನಾ). ೧. ಜಗತ್ತನ್ನೆಲ್ಲಾ ತುಂಬಿರುವುದು ; ವಿಶ್ವವ್ಯಾಪಿಯಾದುದು: ಭಾರತಮಹಿಳಾಗಣದ ಕೀರ್ತಿಯು ವಿಶ್ವವ್ಯಾಪಕವಾಗಿ ಆಶ್ಚರ್ಯವನ್ನುಂಟುಮಾಡುವುದಾಗಿದೆ (ಭಾರಮ. ೪೯೦). ೨. ವಿಶ್ವವನ್ನೆಲ್ಲಾ ವ್ಯಾಪಿಸಿರುವವನು ; ಪರಮಾತ್ಮ : ವಿಶ್ವವ್ಯಾಪಕ ವಿಶ್ವಸೂತ್ರಧರ ನೀನೆ ವಿಶ್ವನಾಟಕ ಶ್ರೀ ವಿಷ್ಣುವೇ ನಮೋ ನಮೋ (ಪುರಂದ. ೨-೩-೧). [ಸಂ.]

**ವಿಶ್ವಸಂಗ್ರಾಮ** (ನಾ). ಜಗತ್ತಿನ ಅನೇಕ ರಾಷ್ಟ್ರಗಳು ಕೂಡಿ ನಡೆಸುವ ಕಾಳಗ ; ಮಹಾಯುದ್ಧ : ಅಟ್ಲ . . . ಮೊದಲ ವಿಶ್ವಸಂಗ್ರಾಮದಲ್ಲಿ ಒಂದು ವರ್ಷ ಸೇನಾಸೇವೆ ಸಲ್ಲಿಸಿ ೧೯೨೨ರ ತನಕ ದೀನದಲಿತರ ಉದ್ಧಾರದಲ್ಲಿ ತೊಡಗಿದರು (ಕವಿಕೋ. I. ೨೧೧). [ಸಂ.]

**ವಿಶ್ವಸಂದಳೆ** (ಕ್ರಿ). ವಿಶ್ವಾಸವನ್ನು ತಾಳು ; ನಂಬಿಕೆಯಿಡು : ವಿಶ್ವಮೇ ವಿಶ್ವೇಶನದರೊಳ್ ವಿಶ್ವಸಂದಳೆದಾಚರಿಪುದು (ಗಗತಾ. ೧೪-೨೧). [ವಿಶ್ವಸ್ಯ + ತಳ್]

**ವಿಶ್ವಸಂಹೃತ** (ನಾ). ಪ್ರಪಂಚವನ್ನು ಲಯಗೊಳಿಸುವವನು ; ಶಿವ : ಚೇತಸಂ ವಿಶ್ವಚಿಹ್ನಂ ವಿಶ್ವಸಂಹೃತಂ ಖ್ಯಾತಸಾಕ್ಷಾದ್ವಸ್ತು ಶಿವನಾದಿಯಪ್ಪ ನಗಜಾತ (ವೀಶೈಪು. ೭-೧-೨೪). [ಸಂ.]

**ವಿಶ್ವಸನೀಯ** (ಗು). ೧. ನಂಬಿಕೆಗೆ ಪಾತ್ರವಾದ ; ವಿಶ್ವಾಸಾರ್ಹವಾದ. (ನಾ). ೨. ನಂಬಿಕೆಗೆ ಅರ್ಹವಾದುದು ; ವಿಶ್ವಾಸಕ್ಕೆ ಪಾತ್ರವಾದುದು : ರಾಘವಾಂಕನು ವೀರೇಶಚರಿತೆ ಹೊರತಾದ ಇತರ ಕಾವ್ಯಗಳನ್ನು ೧೨೦೦ ಈಚೆಗೆ ರಚಿಸಿರಬೇಕೆಂಬ ಪಕ್ಷ ವಿಶ್ವಸನೀಯವೆಂದು ಹೇಳಬಹುದು (ಸಾಪಿಸ. ೧೫೩). [ಸಂ.]

**ವಿಶ್ವಸಾಹಿತ್ಯ** (ನಾ). ಜಗತ್ತಿನಲ್ಲಿರುವವರೆಲ್ಲರಿಗೂ ಬೇಕಾಗುವ ಮೌಲ್ಯಗಳನ್ನು ಹೊಂದಿದ ಸಾಹಿತ್ಯ : ಲೋಕಮಾನ್ಯಟಿಳಕರು 'ಗೀತಾರಹಸ್ಯ' ವೆಂಬ ಅದ್ಭುತಗ್ರಂಥವನ್ನು ವಿಶ್ವಸಾಹಿತ್ಯಕ್ಕೆ ನೀಡಿದ್ದಾರೆ (ಧರ್ಮಸಾ. ೧೨೮). [ಸಂ.]

**ವಿಶ್ವಸಿಸು** (ಕ್ರಿ). ಸ್ನೇಹ ತೋರು ; ಪ್ರೀತಿಸು : ಆಕೆಯ ರತಿದೇವಿಯೆಂಬರಾಕೆಯನು ಅತಿವಿಶ್ವಸಿಸುವ ಕೆಳದಿಯರಿಂ ಕೇಳ್ದೆ ಪತಿಕರಿಸೆಂದ ತೋಂಟಿಗನು (ಮೋಹತ. ೧೦-೩). [ವಿಶ್ವಸನ್ರ + - ಇಸು]

**ವಿಶ್ವಸೃಕ್ಕು** (ನಾ). ಸೃಷ್ಟಿಕರ್ತ ; ಬ್ರಹ್ಮ : ಈ ಜಗವ ಸೃಜಿಸುವ ವಿಶ್ವಸೃಕ್ಕುಗಳಂತ ಭೂತಲವ ಬಗೆವಡಾವೇವೊಡೆಯರು (ನಿಭಾಗ. ೬-೧೫-೧೧). [ಸಂ. ವಿಶ್ವಸೃಜ್]

**ವಿಶ್ವಸ್ತ** (ಗು). ೧. ನಂಬಿಕೆಯ ; ವಿಶ್ವಾಸದ. ೨. ನಿರ್ಭಯವಾದ ; ದಿಟ್ಟ. (ನಾ). ೩. ನಂಬಿಕೆಗೆ ಪಾತ್ರನಾದವನು ; ವಿಶ್ವಾಸಾರ್ಹ : ನೋಡಿರಿ ನೀವು ನನಗೆ ವಿಶ್ವಸ್ತರಾದಿರಿ (ಕೂತಕಾ. ೧೪). [ಸಂ.]

**ವಿಶ್ವಸ್ತಮಂಡಲ** (ನಾ). ಧರ್ಮದರ್ಶಿಗಳ ಮಂಡಲಿ ; ಟ್ರಸ್ಟು : ತಮ್ಮ ತರುವಾಯ ಇಲಾಖೆಯನ್ನು ವಿಶ್ವಸ್ತಮಂಡಲದ ನೇತೃತ್ವದಲ್ಲಿ ಧರ್ಮಾರ್ಪಣ ಮಾಡಬೇಕೆಂದು ಯಜಮಾನರು ಅಂತ್ಯಕಾಲದಲ್ಲಿ ಹೇಳಿದ್ದರು (ಪ್ರೇಮಾಶ್ರ. ೧೨೨). [ಸಂ.]

**ವಿಶ್ವಸ್ತವ್ರತ** (ನಾ). ವಿಧವೆಯಂತೆ ಜೀವನ ಸಾಗಿಸುವ ಒಂದು ಬಗೆಯ ಧಾರ್ಮಿಕ ನಿಯಮ : ಯುದ್ಧರಂಗದಲ್ಲಿ ಕಲಿಪ್ಪಗ್ಗೆಯರು ವೀರಸ್ವರ್ಗವನ್ನೇರಿದರು. ಈ ವಾರ್ತೆಯನ್ನು ಕೇಳಿ ತಿಲಕವತಿ . . . ವಿವಾಹವನ್ನು ಮಾಡಿಕೊಳ್ಳದೇ ವಿಶ್ವಸ್ತ ವ್ರತದಿಂದೊಡಗೂಡಿದ್ದಳು (ಪುರಾವಿ. ೧೧೨). [< ಸಂ. ವಿಶ್ವಸ್ತಾವ್ರತ]

**ವಿಶ್ವಸ್ತಿಕೆ** (ನಾ). ನಂಬಿಕೆ ; ಶ್ರದ್ಧೆ ; ವಿಶ್ವಾಸ : ನೂರಾರು ಶರಣರ, ಲಕ್ಷಾವಧಿ ಭಕ್ತರ ಆರಾಧ್ಯಮೂರ್ತಿಯಾಗಿದ್ದ ಅಣ್ಣನವರ ಹೃದಯಸಂಪತ್ತಿನ ಧರ್ಮದರ್ಶಿತ್ವ, ವಿಶ್ವಸ್ತಿಕೆ ಸಾಮಾನ್ಯಕೆಲಸವೆ ? (ಶರಚ. ೪೬೬). [ವಿಶ್ವಸ್ತ + - ಇಕೆ]

**ವಿಶ್ವಸ್ತೆ** (ನಾ). ಗಂಡನಿಲ್ಲದವಳು ; ವಿಧವೆ : "ವಿಶ್ವಸ್ತಾ, ವಿಧವಾ – ಈ ೨ ವಿಧವೆ" (ಹಲಾಯು. ೮೦-೩೩೩). [ಸಂ. ವಿಶ್ವಸ್ತಾ]

**ವಿಶ್ವಹರ್ತ** (ನಾ). = ವಿಶ್ವಸಂಹೃತ : ವಿಶ್ವಕರ್ತನು ರಾಮನಾಥನು . . . ವಿಶ್ವಹರ್ತನು ರಾಮನಾಥನು (ಬಸಪು. ೫೧-೧೩). [ಸಂ.]

**ವಿಶ್ವಾತ್ಮ** (ನಾ). ೧. ಜಗತ್ತನ್ನೆಲ್ಲಾ ಆವರಿಸಿರುವ ಆತ್ಮ ; ಪರಮಾತ್ಮ : ಪರಂಜ್ಯೋತಿ ವಿಶ್ವಾತ್ಮ ನಿಶ್ವಸಿ ಲೋಕತ್ರಯದೊಳೋತು ಚರಿಸಲು ತೊಡಗಿದಂ (ವೀಶ್ವಪು. ೨-೩-೫) ; ಅಖಿಲಜಗದಂತರ್ಯಾಮಿಯಾಗಿಪ್ಪುದರಿಂದ ವಿಶ್ವಾತ್ಮನೆಂದುಂ ಹೆಸರು (ಭಾರಶಾಂ.೪೩). ೨. ಬ್ರಹ್ಮ. [ಸಂ. ವಿಶ್ವಾತ್ಮನ್]

**ವಿಶ್ವಾಧಾರ** (ನಾ). ೧. ಜಗತ್ತಿಗೆ ಆಧಾರನಾಗಿರುವವನು ; ಪರಮಾತ್ಮ. ೨. ಭೂಮಿಗೆ ಆಧಾರವಾಗಿರುವವನು ; ಚಕ್ರವರ್ತಿ : ಸಹಾಯರುಚಿ ವಿಶ್ವಾಧಾರನುತ್ತುಂಗ ಭೂಭೃದಪಾರಾಂಬುಧಿ ವಸ್ತುಗಳ್ ಬಗೆವೊಡೀ ಲೋಕ ಕ್ಯಸಾಧಾರಣಂ (ಶಾಂತಿಪು. ೨-೭೮). [ಸಂ.]

**ವಿಶ್ವಾಮಿತ್ರ** (ನಾ). ಒಬ್ಬ ಋಷಿಯ ಹೆಸರು : ಎಮ್ಮೊಡಲೊಳಳ್ಳಿಜೀವುತಿಪ್ಪಳಲ ಬೇಗೆಯ ಬೆಂಕಿಯುರಿ ನಿನ್ನನಿಜಿಯದೇ ಹೇಳು ವಿಶ್ವಾಮೃತ್ಯುವಾದ ವಿಶ್ವಾಮಿತ್ರ ಎನುತಿರ್ದರು (ಹಚಕಾ. ೯-೭). [ಸಂ.]

**ವಿಶ್ವಾಮಿತ್ರದರ್ಭೆ** (ನಾ). ಒಂದು ಬಗೆಯ ಹುಲ್ಲು : "ಕುಶಂ . . . ಪವಿತ್ರಂ — ೪ ದರ್ಭೆಹುಲ್ಲಿನ ಹೆಸರುಗಳು. ವಿಶ್ವಾಮಿತ್ರದರ್ಭೆ, ಬ್ರಹ್ಮದರ್ಭೆ, ವಸಿಷ್ಠದರ್ಭೆ, ತೃಣದರ್ಭೆ" (ಸಿದ್ಧಾಂತಿ. ೧೫೧). [ಸಂ. ವಿಶ್ವಾಮಿತ್ರದರ್ಭ]

**ವಿಶ್ವಾಮಿತ್ರಸೃಷ್ಟಿ** (ನಾ). ೧. ವಿಶ್ವಾಮಿತ್ರನೆಂಬ ಋಷಿಯು ತನ್ನ ತಪೋಬಲದಿಂದ ನಿರ್ಮಿಸಿದ ಬೇರೊಂದು ಲೋಕ ; ಪ್ರತಿಸೃಷ್ಟಿ. ೨. (ಆಲಂ) ಅದ್ಭುತಸೃಷ್ಟಿ : ಜನಸಾಮಾನ್ಯರ ಬುದ್ಧಿಗೆ ಎಟುಕದ ಈಗಿನ ಅದ್ಭುತ ಕಲಾಕೃತಿಗಳನ್ನು ನೋಡಿ ಅವನ್ನು ವಿಶ್ವಾಮಿತ್ರಸೃಷ್ಟಿಯೆಂದು ಕರೆಯುವ ರೂಢಿ ಈಗಲೂ ಇದೆ (ಜೀವಾತ್ಮ. ೨೨) ; ದೈವಸೃಷ್ಟಿ ಒಂದಾದರೆ ಮಾನವ ಮತ್ತೊಂದು ವಿಶ್ವಾಮಿತ್ರಸೃಷ್ಟಿಗೆ ಕೈಹಾಕುವುದು ಬೇಡ (ಹೇಮಕೂ. ೯೭). [ಸಂ.]

**ವಿಶ್ವಾಯುಧ** (ನಾ). ಸಮಸ್ತ ಆಯುಧ : ಅದು ವಿಶ್ವಾಯುಧದಕ್ಷದಕ್ಷಿಣಭುಜ ಕ್ಯಾಸನ್ನಧಾರಾಗ್ರಮಪ್ಪುದುಂ (ಶಾಂತಿಪು. ೪-೫೩). [ಸಂ.]

**ವಿಶ್ವಾವಸು** (ನಾ). ೧. ಮದುವೆಯ ಸಮಯದಲ್ಲಿ ಪೂಜಿಸಲ್ಪಡುವ ಒಬ್ಬ ದೇವತೆ. ೨. ಅರುವತ್ತು ಸಂವತ್ಸರಗಳಲ್ಲಿ ಮೂವತ್ತೊಂಬತ್ತನೆಯದು : ಪ್ರಭವ ವಿಭವ . . . ವಿಶ್ವಾವಸು . . . ಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೨೬೩); ವಿಶ್ವಾವಸುಸಂವತ್ಸರದ ವೈಶಾಖಶುದ್ಧ ೫ ಪಂಚಮಿಯೂ ಸೋಮವಾರ . . . ರಾಜ್ಯಂಗೈವಲ್ಲಿ (ಎಕ. III (R). ಗುಂಡ್ಲುಪೇ. ೨೫-೭ ; 1665). [ಸಂ.]

**ವಿಶ್ವಾಸ** (ನಾ). ೧. ನಂಬಿಕೆ ; ಭರವಸೆ : ಇಡಬೇಕೀಶ್ವರನಲ್ಲಿ ಭಕ್ತಿರಸಮಂ ವಿಶ್ವಾಸಮಂ ಸ್ವಾಮಿಯೊಳ್ (ಸೋಮೇಶ. ೭೯) ; ಅವರ ಕೀರ್ತಿಗೆ ತಕ್ಕಂತೆ ದುಡಿಯಬಲ್ಲೆವು ಎಂಬ ವಿಶ್ವಾಸ ಉಂಟಾಯಿತು (ಆತ್ಮಾರ್ಪ. ೧೩೭). ೨. ಪ್ರೀತಿ ; ಸ್ನೇಹ. ೩. ಭಕ್ತಿ ; ಶ್ರದ್ಧೆ : ಇದುಕಾರಣ ವಿಶ್ವಾಸದಿಂದ ಗುರು ವಿಶ್ವಾಸದಿಂದ ಲಿಂಗ ವಿಶ್ವಾಸದಿಂದ ಜಂಗಮ (ಸಿದ್ಧೇವ. ೭೯-೨೩೩). ೪. ಗುಟ್ಟು ; ರಹಸ್ಯ. ೫. ಪಕ್ಷಿಗಳ ಉಲಿ.

ವಿಶ್ವಾಸಪಡು = ನಂಬಿಕೆಯಿಡು ; ಭರವಸೆಯನ್ನು ಹೊಂದು : ಎಲ್ಲವೂ ಸಮಾನಗಂಧವಸ್ತುವಿನಲ್ಲಿ ವಿಶ್ವಾಸಪಡುವುದು (ಶಾಕುಂತ. ೭೯-೨೩). **ವಿಶ್ವಾಸವಿಡು** = ವಿಶ್ವಾಸಪಡು : ನಿನ್ನಲ್ಲಿ ವಿಶ್ವಾಸವಿಟ್ಟು ಈ ಕೆಲಸವನ್ನು ಒಪ್ಪಿಸಿದ್ದೀನಿ (ರೂಢಿ). [ಸಂ.]

**ವಿಶ್ವಾಸಂಗೆಯ್** (ಕ್ರಿ). ನಂಬು ; ಭರವಸೆ ಇಡು : ಅಹಿತರುಮನವಿನೀತರುಮಂ ವಿಶ್ವಾಸಂಗೆಯ್ದು ಪ್ರಧಾನರಂ ಮಾಡಿ ನಡಪಿದ ಮೂಢಸಿಂಹಕ್ಕೆ ಏಗೆಯ್ದುಂ ಕಾರ್ಯಹಾನಿಯಾಗದೆ ಪೋಗದು (ಪಂಚತಂ. ಅ. ೨೫-೨೩). [ವಿಶ್ವಾಸ + ಕೆಯ್₁]

**ವಿಶ್ವಾಸಘಾತ** (ನಾ). ೧. ನಂಬಿಸಿ ಮೋಸಮಾಡುವುದು ; ನಂಬಿಕೆದ್ರೋಹ : ಅದು ಒಂದು ರೀತಿಯಿಂದ ವಿಶ್ವಾಸಘಾತ ಮಾಡಿದಂತೆ ಆಗುವುದು (ಮುಂಬಯಿ. ೪-೩೪) ; ಯಾರಿಗೂ ವಿಶ್ವಾಸಘಾತ ಮಾಡಬಾರದು (ಭಾರದ. ೧೧೩). ೨. ಹಕ್ಕಿಗಳ ಉಲಿಯ ಹೊಡೆತ. ೧, ೨ : ವಿಶ್ವಾಸಘಾತಂ ವನದ್ರುಮನೀಡದೊಳ್ . . . ಅಕ್ಕುಮಲ್ಲದೆ ಜನಪದಜನಂಗಳೊಳಿಲ್ಲ (ಜಗಪಿ. ೨-೧ ವ). [ಸಂ. (ವಿಶ್ವಾಸ + ಘಾತ) ; (ವಿ + ಶ್ವಾಸ + ಘಾತ)]

**ವಿಶ್ವಾಸಘಾತಕ** (ನಾ). ೧. ನಂಬಿಸಿ ಮೋಸಮಾಡುವುದು, — **ದ್ರೋಹ** ಬಗೆಯುವುದು. ೨. ನಂಬಿಸಿ ದ್ರೋಹ ಬಗೆಯುವವನು ; ನಯವಂಚಕ : ಅವನೊಬ್ಬ ವಿಶ್ವಾಸಘಾತಕನೆಂದು ತಿಳಿಯುವಷ್ಟರಲ್ಲಿ ಕಾಲ ಮಿಂಚಿತ್ತು (ರೂಢಿ). [ಸಂ.]

**ವಿಶ್ವಾಸಘಾತಕಿ** (ನಾ). ನಂಬಿಸಿ ಮೋಸಮಾಡುವವಳು : ವಿರಸೆಯರು ವಿಶ್ವಾಸಘಾತಕಿಯರು ವಿಕಾರಿಯರು (ಬಸಪು. ೪೦-೫೩). [ಸಂ. ವಿಶ್ವಾಸಘಾತಕೀ]

**ವಿಶ್ವಾಸಘಾತಿ** (ನಾ). = ವಿಶ್ವಾಸಘಾತಕ ೨ : ಹಿರಿಯರಂತೆ ಕಿರಿಯರು ವಿಶ್ವಾಸಘಾತಿಗಳಲ್ಲ (ಮೇದಿಮ. ೧೭). [ಸಂ. ವಿಶ್ವಾಸಘಾತಿನ್]

**ವಿಶ್ವಾಸತನ** (ನಾ). ನಂಬಿಕೆ ಇಡುವುದು ; ವಿಶ್ವಾಸವಿಡುವಿಕೆ : ನಿಜವಿಶ್ವಾಸ ತನವಿಂದು ಅಱಿದೆವಲ್ಲಾ (ಬಸಪು. ೩೧-೧೪). [ವಿಶ್ವಾಸ + - ತನ]

**ವಿಶ್ವಾಸಪಾತ್ರ** (ನಾ). ನಂಬಿಕೆಗೆ ಅರ್ಹವಾದ ವ್ಯಕ್ತಿ ; ವಿಶ್ವಾಸಾರ್ಹ : ಆತನು ಎಲ್ಲವನ್ನೂ ಸರಿಯಾಗಿ ತಿಳಿಯಲು ವಿಶ್ವಾಸಪಾತ್ರಳಾದ ತಂಗಿಯ ಹಾಸಿನ ಬಳಿ ಹೋಗಿ . . . ಕಂಡನು (ಕಾಲೂರ. ೧೨ ಕಥಾಸಾರ). [ಸಂ.]

**ವಿಶ್ವಾಸಭೂಮಿ** (ನಾ). (ಆಲಂ) ನಂಬಿಕೆಗೆ ಯೋಗ್ಯವಾದ ವ್ಯಕ್ತಿ ; ವಿಶ್ವಾಸ ಪಾತ್ರನಾದವನು : ಆತ್ಮೀಯ ಪರಮವಿಶ್ವಾಸಭೂಮಿಗಳಪ್ಪ ನಾಲ್ವರ್ ಮಂತ್ರಿಗಳ್ವೆರಸು (ಸುಕುಮಾ. ೩-೨ ವ). [ಸಂ.]

**ವಿಶ್ವಾಸಸೂಚಕ** (ನಾ). ನಂಬಿಕಸ್ತನಾದವನು ; ವಿಶ್ವಾಸಾರ್ಹ : ಕೌರವಜನಪ ತನ್ನರಮನೆಯ ಸಚಿವರೊಳನುಪಮಿತವಿಶ್ವಾಸಸೂಚಕನನು ಪುರೋಚನನ ನೆನೆದ (ಕುವ್ಯಾಆ. ೮-೬೬). [ಸಂ.]

**ವಿಶ್ವಾಸಿ** (ಗು). ೧. ನಂಬಿಕೆಗೆ ಪಾತ್ರವಾದ ; ಪ್ರಾಮಾಣಿಕವಾದ : ಸ್ಕಂದಂ ಯುವರಾಜಂ ಗಣವ್ಯಂದಂ ವಿಶ್ವಾಸಿವಿತತಿಯಹಿಕಂಕಣನಾ (ವೀರವಿ. ೨-೪೫). (ನಾ) ೨. ನಂಬಿಕೆಗೆ ಪಾತ್ರವಾದುದು, — ಯೋಗ್ಯವಾದುದು : ಪಾಲನೂ ಫಣಿಯಂ ಸಾಕಲ್ಕೆ ವಿಶ್ವಾಸಿಯೇ (ಸೋಮೇಶ. ೪೧). ೩. ನಂಬಿಕೆಗೆ ಪಾತ್ರನಾದವನು ; ವಿಶ್ವಾಸಕ್ಕೆ ಯೋಗ್ಯನಾದವನು : "ಶ್ರಂಭಕಃ. . . ಶ್ರದ್ಧಾವಾನ್ – ಈ ೪ ವಿಶ್ವಾಸಿ" (ಕಾಶಕ್ಯ. ೧೫೩). ೪. ಪ್ರೀತಿಸುವವನು ; ಪ್ರಿಯಕರ : (ಕ). [ಸಂ. ವಿಶ್ವಾಸಿನ್]

**ವಿಶ್ವಾಸಿಗ** (ನಾ). ನಂಬಿಕೆಗೆ ಪಾತ್ರನಾದವನು : ಸುಬ್ಬಣ್ಣ ನೀನು ಅವಳ ವಿಶ್ವಾಸಿಗನಲ್ಲವೆ? (ದೇಶಭು. ೫). [ವಿಶ್ವಾಸ + - ಇಗ]

**ವಿಶ್ವಾಸಿಸು** (ಕ್ರಿ). ೧. ನಂಬು ; ಭರವಸೆಯಿಡು : ಇವಳೀಗಳ್ ಪೇಟ್ದ ಮಾತಾ ಕನಸನವಿತಥಂ ಮಾಟ್ಪ ಮಾತಪ್ಪುದಾಗಿರ್ದುವವಂ ವಿಶ್ವಾಸಿಸಲ್ಬಂದಪುದೆ (ಕಾದಂಪೂ. ೩೮೯) ; ವಿಷಯಾತುರರೊಳು ವಿಶ್ವಾಸಿಸದೆ ನೀ ವಸುಧೆಯ ಸಲಹಲೆ ಕಂದ (ಜೀವಂಧಾ. ೨೦-೩೦). ೨. ಪ್ರೀತಿಸು ; ಅನುರಾಗ ತೋರು : (೬).

[ವಿಶ್ವಾಸ + - ಇಸು]

**ವಿಶ್ವೆ** (ನಾ). ೧. ಒಂದು ಬಗೆಯ ಔಷಧೀಸಸ್ಯ ; ಅತಿಬಜೆ : ''ವಿಶ್ವಾ, ವಿಷಾ . . . ಅತಿಬಜೆ ಹೆಸರು'' (ಸಿದ್ಧಾಂತಿ. ೧೩೪). ೨. ಒಣಶುಂಠಿ ; ಅಲ್ಲ : ''ಶುಂಠೀ, ನಾಗರಂ, ಮಹೌಷಧಂ,ವಿಶ್ವಭೇಷಜಂ, ವಿಶ್ವಾ — ಈ ೫ ಶುಂಠಿ'' (ಹಲಾಯು. ೧೦೦೧-೪೬೧). [ಸಂ. ವಿಶ್ವಾ]

**ವಿಶ್ವೇಕ್ಷಣ** (ನಾ). ಎಲ್ಲವನ್ನೂ ಗಮನಿಸುವಂಥವನು : ವಿಶ್ವೇಕ್ಷಣಂ ವೃದ್ಧಗೋಚರ ಸೇವಾನುತ ದೂರತತ್ತ್ವವಿನಯಂ ಶಾಂತೀಶ್ವರಂ (ಶಾಂತಿಪು. ೧೧-೧೧೯). [ಸಂ.]

**ವಿಶ್ವೇದೇವ** (ನಾ). = ವಿಶ್ವದೇವತೆ. [ಸಂ.]

**ವಿಶ್ವೇದೇವತೆ** (ನಾ). = ವಿಶ್ವದೇವತೆ : ಅವನ . . . ತೋಳುಗಳಲ್ಲಿ ಆದಿತ್ಯರೂ . . . ವಿಶ್ವೇದೇವತೆಗಳೂ ಯಕ್ಷ ಗಂಧರ್ವ ರಾಕ್ಷಸರೂ ಕಂಡರು (ವಚಭಾ. ೨೫).

[ಸಂ. ವಿಶ್ವೇದೇವತಾ]

**ವಿಶ್ವೇಶ** (ನಾ). ೧. ಪ್ರಪಂಚದ ಒಡೆಯ ; ಶಿವ : ಅಚ್ಯುತನೆನಿಪನಂ ಕೊಂಡೊಯ್ದು ವಿಶ್ವೇಶನ ಹೊಡವಡಿಸಿದಪೆಂ (ಬಸಪು. ೫೩-೬೨). ೨. = ವಿಶ್ವನಾಥ ೩ : ಕಾಶಿಗೈತಂದು ವಿಶ್ವೇಶಂಗೆ ಪೊಡಮಟ್ಟನು (ಜೈಮಿಭಾ. ೫-೩೦). ೩. ವಿಷ್ಣು ; ನಾರಾಯಣ : ವಿಶ್ವೇಶ ನಿನ್ನ ಶಾಶ್ವತಮೂರ್ತಿಯಂ ತಳೆವ ವಿಶ್ವಾಸದಿಂದೆ ನಿನಗೊಪ್ಪಿಸಿದೆನೀಗಳೀ ನಶ್ವರಶರೀರಮಂ (ಜೈಮಿಭಾ. ೨೬-೭೪). ೪. ಬ್ರಹ್ಮ. [ಸಂ.]

**ವಿಶ್ವೇಶ್ವರ** (ನಾ). ೧. = ವಿಶ್ವನಾಥ ೩ : ತ್ರಿವಿಕ್ರಮನ ಹಿಂದಣೆಲುವಂ ಮುಱಿದು ಪಿಡಿದನು ಸ್ಕಂದಪಿತನೆಂದೋದಲೊಲ್ಲನು ಬಂದು ವಾರಾಣಸಿಯೊಳಂ ವಿಶ್ವೇಶ್ವರನ ಮುಂದೆ (ಬಸಪು. ೫೭-೨೩). ೨. [ಜೈನ] ಆದಿತೀರ್ಥಂಕರ : ಆ ವಿಶ್ವೇಶ್ವರನ ಮನೋಮಧುಕರಮಂ ತಮ್ಮ ಮುಖಾರವಿಂದದೊಳ್ ನಲಿಯಿಸಿಯುಂ (ಆದಿಪು. ೮-೨೪ ವ).

[ಸಂ.]

**ವಿಶ್ವೋಜ್ಜನನ** (ನಾ). ಜಗತ್ತಿನ ಸೃಷ್ಟಿ ; ಲೋಕದ ಉತ್ಪತ್ತಿ : ಶ್ರೀಧರಂ ಯೋಗನಿದ್ರೋದ್ಯಮದಿಂದಿರ್ದು ವಿಶ್ವೋಜ್ಜನನವಿಧಿಗೆ ಚಿತ್ತಂದರಲ್ (ಎಕ. VII, ಶಿಕಾ. ೧೨೩-೪ ; 1158). [ಸಂ.]

**ವಿಶ್ವೋದರ** (ನಾ). ಜಗತ್ತನ್ನೇ ತನ್ನ ಹೊಟ್ಟೆಯಲ್ಲಿ ಅಡಗಿಸಿಕೊಂಡವನು ; ಪರಮಾತ್ಮ : ವಿಶ್ವೋದರನು ವಿಶ್ವೇಶಾ ವಿಶ್ವಮಯ ತಾನು (ಗಗತಾ. ೧೭-೧೯). [ಸಂ.]

**ವಿಶ್ವೋದ್ಧತಿ** (ನಾ). ಹದಿನಾಲ್ಕು ಬಗೆಯ ನಾಡಿಗಳಲ್ಲಿ ಒಂದು : ಪಾವಕನಧಿದೇವತೆಯಾದ ವಿಶ್ವೋದ್ಧತಿಯೇ ಜಠರಾಂತಮಾಗಿಹುದು (ವಿವೇಕ. ೧೫೦).

[ಸಂ.]

**ವಿಷ** (ನಾ). ೧. ಸಾಮಾನ್ಯವಾಗಿ ಹಾವು ಮತ್ತಿತರ ಕೆಲವು ಪ್ರಾಣಿಗಳ ಅಂಗಾಂಗಗಳಲ್ಲಿ ಹಾಗೂ ಕೆಲವು ಸಸ್ಯಗಳಲ್ಲಿ ಸಂಗ್ರಹವಾಗಿರುವ ದ್ರವರೂಪದ ನಂಜು, — ಗರಳ : ನೀರಡಸಿ ವಿಷವನೀಂಟಬಹುದೆ (ಬಸವ. ೧೨೦) ; ವಿಷದಿಂ ಕೊಲ್ವಹಿಯುಂ ನಿಟ್ಟುಸಿರಿಂ ಕೊಲ್ವಹಿಯುಂ . . . ಪೆಸರ್ಗೊಳೆ ಕೊಲಲಾರ್ಪ ಖಳನೊಳೆಣೆವಂದಪುವೇ (ಪುಷ್ಪಪು. ೧-೫೩) ; ನಾಗ, ಕಳಿಂಗದಂಥ ಹಾವುಗಳು ತಮ್ಮ ವಿಷದ ಹಲ್ಲುಗಳಿಂದ ಕಡಿಯುವುವು (ಬಾಲಪ್ರ. III, ೧೩೨೫). ೨. ಪ್ರಾಣಕ್ಕೆ ಹಾನಿಕಾರಕವಾದ ಒಂದು ಬಗೆಯ ಪದಾರ್ಥ ; ಪಾಷಾಣ : ಅಮೃತಮಯ ಕಿರಣನೆಂಬುದುಮಮರದು . . . ಶಶಿಗೆಂದುಂ ಸಮನಿಸಿ ವಿಷಕಿರಣನುಮನಲ ಮರೀಚಿಯುಮೆಂದೆನಲ್ಕೆ ಮೋಹಾಪೋಹಂ (ಕವಿರಾ. ೩-೧೯೬) ; ವಿಷದ ಲಡ್ಡುಗೆಯನಿಕ್ಕಿಯು ಮೆನಿತಾನುಮುಪದ್ರವಂಗಳೊಳ್ ತೊಡರಿಕ್ಕಿಯುಂ ಗೆಲಲಾಱದೆ (ಪಂಪಭಾ. ೨-೬೨ ವ). ೩. ಸಾಂಕ್ರಾಮಿಕರೋಗಗಳನ್ನು ಹರಡಬಲ್ಲ ರಸಿಕೆ, ಸೋಂಕು ಮುಂತಾದುವು : 'ವಿಷಕ್ರಿಮಿ', 'ವಿಷಗಾಳಿ' ಪರಾ. ೪. ಉಗ್ರತರವಾದ ನಂಜುಳ್ಳ ಒಂದು ಬಗೆಯ ಔಷಧೀಸಸ್ಯ; ವತ್ಸನಾಭಿ : ''ವಿಷಂ – ನೀರು, ಬೋಟ, ವತ್ಸನಾಭ, ಇಲಿಪಾಷಾಣ'' (ಔಷಧಿ. ೧೫೨). ೫. ಕಹಿ ; ತಿಕ್ತ : ಸೌತೆಕಾಯಿ ಹೆಚ್ಚುವಾಗ, ಮೊದಲು ಅದರ ಎರಡುತುದಿಗಳಲ್ಲೂ ಇರುವ ವಿಷವನ್ನು ತೆಗೆದು ಹೆಚ್ಚಬೇಕು (ರೂಢಿ). ೬. ನೀರು ; ಜಲ : ತಿಳಿಗೊಳದೊಳ್ ಕುಳಿರ್ವ ವಿಷಮೆಯ್ದೆ ವಿಷಂ . . . ಎಂದು ಸಂಚಲಿಸಿ ಕರಂ ಕರಂ ಭ್ರಮಿಸುವಂ ಸ್ಮರತಾಪದಿನಾ ನೃಪಾಲಕಂ (ನಳಚಂ. ೧೬೦) ; ನೀರಡಿಸಿ ನದಿಯಂ ಪೊಕ್ಕು ವಿಷವ ನೀಂಟುತ್ತಿರಲು ಮಕರಂ ಪದವ ಪಿಡಿದು ಮಿಸುಕಲೀಯದೆ ತಡೆಯೆ (ಪ್ರಾಭಲಿ. ೮-೮). ೭. ಕಠೋರತೆ ; ನಿಷ್ಠುರತೆ. ೮. ಮದ ; ಉನ್ಮತ್ತತೆ : ''ಮದ ನಂಜು ಜಲ ಕಠೋರಗಳಿದು ನಾಲ್ಕುಂ ವಿಷಗಳಕ್ಕು'' (ನಾನಾಶಂ. ೨೧). ೯. (ಆಲಂ) ಹೊಟ್ಟೆಯುರಿ ; ಅಸೂಯೆ : ಮನಸ್ಸಿನ ವಿಷವೆಲ್ಲಾ ನಾಲಿಗೆಗೆ ಇಳಿದು, ರುಚಿ ಕೆಟ್ಟುಹೋಗುತ್ತದೆ (ಮನೋನಂ. ೨೯೦). ೧೦. ದ್ವೇಷ ; ವೈಮನಸ್ಯ : ಸ್ನೇಹವಾಗಿದ್ದ ಅವರಿಬ್ಬರ ಮಧ್ಯದಲ್ಲಿ ಈ ಹೊಸಬಳು ವಿಷ ಬಿತ್ತಿ ಹೋದಳು (ರೂಢಿ). [ಸಂ.]

**ವಿಷಉಮ್ಮತ್ತಿ** (ನಾ). ಒಂದು ಬಗೆಯ ಸಸ್ಯ : (ವೃಡಿಗಿ. ೨೯-೫೫೭).

[ವಿಷ + ಉಮ್ಮತ್ತಿ]

**ವಿಷಕಂಠ** (ನಾ). ವಿಷವನ್ನು ಕಂಠದಲ್ಲಿ ಧರಿಸಿದವನು ; ಶಿವ : ವಿಷಕಂಠ ವಿಷಮಾಕ್ಷ ವಿಷಮಾಸ್ತ್ರಹರ (ಸಿದ್ಧರಾ. ೬-೪೦) ; ಏನು ಬಂದರೂ ನುಂಗುವ ವಿಷಕಂಠನ ಮನೋಭಾವ ಹೊತ್ತೇ ಅವರು . . . ಬಂದದ್ದಲ್ಲವೇ? (ಹೊಸಕ್ಕ. ೪೪). [ಸಂ.]

**ವಿಷಕಂಧರ** (ನಾ). = ವಿಷಕಂಠ : ವಿಷಕಂಧರನ ಬಿರುದಿನ ವಾಹನವ ತನ್ನಿ (ಬಸಪು. ೫೯-೬೬). [ಸಂ.]

**ವಿಷಕಣಗಲೆ** (ನಾ). ಒಂದು ಬಗೆಯ ಸಸ್ಯ : (ವೃಡಿಗಿ. ೭೮-೧೫೯೩).

[ವಿಷ + ಕಣಗಲ (< ಕಣಗಿಲ್ೆ)]

**ವಿಷಕನ್ನಿಕೆ** (ನಾ). ೧. ಶರೀರದಲ್ಲೆಲ್ಲಾ ವಿಷವು ತುಂಬಿರುವ ಹೆಣ್ಣು : ಹಿಂದಿನ ಕಾಲದಲ್ಲಿ ರಾಜರು, ಕೆಲವು ರೂಪವತಿಯರಾದ ಹೆಣ್ಣುಗಳಿಗೆ ಚಿಕ್ಕಂದಿನಿಂದಲೇ ಸ್ವಲ್ಪಸ್ವಲ್ಪವಾಗಿ ವಿಷ ಕೊಟ್ಟು ಆಕೆಯ ಮೈಯೆಲ್ಲಾ ವಿಷಪೂರ್ಣವಾದರೂ ಅದರ ಸೋಂಕು ಆಕೆಗೆ ಮಾತ್ರ ತಗಲದಂತೆ ಸಾಕಿ ಶತ್ರುವಿನ ನಾಶಕ್ಕಾಗಿ ಕಳಿಸುತ್ತಿದ್ದುದಾಗಿ ತಿಳಿದುಬಂದಿದೆ. ಆಕೆಯನ್ನು ಕೂಡಿದವನು ಸತ್ತು ಹೋಗುತ್ತಿದ್ದನು : ವಿಷಕನ್ನಿಕೆಯರಿವರ್ . . . ಬೆರಸಿದೊಡೆ ಪುರುಷನಾಯುಷವನಪಹರಿಪರು (ಜೈಮಿಭಾ. ೧೫-೫೦) ; ಈ ಸ್ತ್ರೀಯು ವಿಷಕನ್ನಿಕೆಯು! ಚಂದ್ರಗುಪ್ತನ ನಾಶಾರ್ಥವಾಗಿ ರಾಕ್ಷಸನು . . . ಕಳುಹಿಸಿದನು (ಮುದ್ರಾಮಂ. ೨೧೮). ೨. (ಆಲಂ) ತ್ಯಜಿಸಬೇಕಾದ ಹೆಣ್ಣು : ಅಕಟ ಪಾಂಡುಮಹೀಶ ವಿಷಕನ್ನಿಕೆಯನೆನ್ನನು ಮುಟ್ಟಿದೈ (ಕುಮಾವ್ಯಾಆ. ೫-೧೭). [< ಸಂ. ವಿಷಕನ್ಯಕಾ]

**ವಿಷಕನ್ಯೆ** (ನಾ). = ವಿಷಕನ್ನಿಕೆ ೧ : ಅಂಗಸಂಗಸುಖದಿಂ ಸ್ವಸ್ಥನಾಗಿದ್ದವನು ಶಯನಗೃಹದಿಂ ಮರಳಿ ಬಾರನು . . . ಅದರಿಂದ ಇವಳು ವಿಷಕನ್ಯೆ ಎಂದು ತಿಳಿಯಬೇಕು (ಮುದ್ರಾಮಂ. ೨೨೭). [ಸಂ. ವಿಷಕನ್ಯಾ]

**ವಿಷಕಪರ್ದ** (ನಾ). ವಿಷವನ್ನು ಪಾನಮಾಡಿದ ಶಿವ : ವಿಷಧರನ ಕಿಂಕರನನಾ ವಿಷವೇನ ಮಾಡುವುದು . . . ವಿಷಕಪರ್ದನ ಭಕ್ತನಂ ವಿಷವೇನ ಮಾಡುವುದು (ಬಸಪು. ೪೯-೩೯). [ಸಂ.]

**ವಿಷಕಲ್ಲು** (ನಾ). ಸಸ್ಯಗಳನ್ನು ಹಾಳುಮಾಡುವ ಒಂದು ಬಗೆಯ ಕಲ್ಲು : ಉಪವನ ನಿರ್ಮಾಣಕ್ಕೆ ಯೋಗ್ಯಗಳಾದ ಭೂಮಿಗಳಂ ಪೇಳುವೆನು ವಿಷಕಲ್ಲು ಹುತ್ತ ಬಿಲಂಗಳಿಂದಲೂ ಬೆಣಚುಕಲ್ಲುಗಳಿಂದಲೂ ಯುಕ್ತವಾದ ಭೂಮಿಯು ಆಳವಾಗಿ ತೋಡಿದರೆ ನೀರು ಬರುವ ಭೂಮಿಯು ಮರಗಳಿಗೆ ವೃದ್ಧಿಯಂ ಕೊಡುವುದಿಲ್ಲ (ಸೌಗಂಧಿ. ४೨४-೮). [ವಿಷ + ಕಲ್ಲು (< ಕಲ್)]

**ವಿಷಕುಂಬಳ** (ನಾ). ಕಹಿರುಚಿಯ ಒಂದು ಬಗೆಯ ಕುಂಬಳ ; ''ಕಹಿಸೋರೆ'' : (ಗಂಗಾಮ. ೬). [ವಿಷ + ಕುಂಬಳ]

**ವಿಷಕ್ರಿಮಿ** (ನಾ). (ಸೋಂಕುರೋಗಗಳನ್ನು ಹರಡುವಂಥ) ವಿಷದಿಂದ ಕೂಡಿರುವ ಹುಳು, — ಜಂತು : ವಿಷಕ್ರಿಮಿಗಳನ್ನು ಸಾಕಿ ಕಾಜಿನ ಗೋಲಕಗಳಲ್ಲಿ ತುಂಬಿಸಿ ಸಿಡಿಗುಂಡುಗಳಂತೆ ವೈರಿರಾಜ್ಯದಲ್ಲಿ ಎಸೆಯಲು ಬರುವುದು (ಬಾಲಪ್ರ. I, ೫೯೫) ;

ಇವುಗಳಿಗೆ ಇತರ ವಿಷಕ್ರಿಮಿಗಳ ಸಂಪರ್ಕವಾದರೆ ಎಲ್ಲವೂ ನಾಶವಾದಂತೆಯೇ (ಹೊಸಕ್ಕ. ೯). [ಸಂ.]

**ವಿಷಖಿದ್ದಿ** (ನಾ). ಒಂದು ಬಗೆಯ ಔಷಧೀಸಸ್ಯ : ಬೂರಗದ ಅಂಟು ವಿಷಖಿದ್ದಿ ಬಿಲ್ವದ ಹಣ್ಣು . . . ಇವನ್ನೆಲ್ಲಾ ಚೂರ್ಣಮಾಡಿ (ಸಕಪ್ವ. ಪರಿ. ೪೮೧). [ವಿಷ + ಖಿದ್ದಿ?]

**ವಿಷಗಳ** (ನಾ). = ವಿಷಕಂಠ : ವಿಬುಧರೊಸಹಿತ ಸುರಪನ್ನೈತಂದು . . . ಕೆಟ್ಟೆವೆಂದು ಪುಟಹರಗೆ ಬಿನ್ನೈಸೆ ವಿಷಗಳನವಾತ ಸಂತೈಸುತ (ಪ್ರಭುಲಿಂ. ೯-೨೭). [ಸಂ. ವಿಷಗಳ]

**ವಿಷಗಳಿಗೆ, ವಿಷಘಳಿಗೆ** (ನಾ). ೧. ಕೆಟ್ಟ ಮುಹೂರ್ತ ; ಅಶುಭಸಮಯ : ಯಾವ ವಿಷಗಳಿಗೆಯಲ್ಲಿ ಈ ಕೆಲಸ ಪ್ರಾರಂಭವಾಯಿತೋ ದೇವರಿಗೇ ಗೊತ್ತು (ರೂಢಿ). ೨. ದುರದೃಷ್ಟದ ಸಮಯ ; ಕಷ್ಟಕಾಲ : ಎಂತಹ ಪಾಷಾಣಹೃದಯವಾದರೂ ಈ ವಿಷಗಳಿಗೆಯಲ್ಲಿ ಕರಗಿ ನೀರಾಗಬೇಕು (ಕಾವೇರಿ. ೨೧೭). **ವಿಷಘಳಿಗೆ** : ೧. ಇದು ವಿಷಘಳಿಗೆ ಇರಬಹುದು (ಹೊಸಕ್ಕ. ೨೨೦). [ವಿಷ + ಗಳಿಗೆ$_1$ (< ಗಳಿಗೆ)]

**ವಿಷಗಾಳಿ** (ನಾ). (ಸೋಂಕುರೋಗಗಳನ್ನು ಹರಡಬಲ್ಲ) ನಂಜು ಬೆರೆತಿರುವ ಗಾಳಿ ; ವಿಷಪೂರಿತವಾದ ವಾಯು : ವಿಷಗಾಳಿಗಳನ್ನೂ ವಿಷಕ್ರಿಮಿಗಳನ್ನೂ ಇನ್ನು ಮುಂದೆ ಸಮರದಲ್ಲಿ ಉಪಯೋಗಿಸಬಾರದು (ಬಾಲಪ್ರ. I. ೫೮೩). [ವಿಷ + ಗಾಳಿ$_1$]

**ವಿಷಗುಳಿಗೆ** (ನಾ). ಕ್ರಿಮಿಕೀಟಗಳನ್ನು ಕೊಲ್ಲಲು ಬಳಸುವ, ನಂಜು ಬೆರಸಿದ ಮಾತ್ರೆ : ಸಾವಿರಾರು ಇಲಿಯ ಬಲೆಗಳ ಸಂಗ್ರಹವಿದ್ದಿತು. ವಿಷಗುಳಿಗೆಯ ಚೀಲಗಳೂ ತುಂಬಿದ್ದವು (ಜಯಂತ. ೪೨೭). [ವಿಷ + ಗುಳಿಗೆ$_1$]

**ವಿಷಗೊಳಿಸು** (ಕ್ರಿ). ನಂಜೇರುವಂತೆ ಮಾಡು ; ಸೋಂಕುಂಟಾಗುವಂತೆ ಮಾಡು : ಕ್ರಿಮಿನಾಶಕಗಳು ಸಸ್ಯ ಪ್ರಾಣಿಗಳ ಅಂಗಾಂಶಗಳೆಲ್ಲವನ್ನೂ ವಿಷಗೊಳಿಸುವುದರಿಂದ ಚುಚ್ಚಿ ಹೀರುವ ಕೀಟಗಳು ಆಹಾರವನ್ನು ಹೀರುವಾಗ ಕ್ರಿಮಿನಾಶಕವನ್ನು ಹೀರಿಕೊಳ್ಳುತ್ತವೆ (ಕೀಟಜೀ. ೭೮). [ವಿಷ + ಕೊಳ್$_1$ + -ಇಸು$_3$]

**ವಿಷಗ್ರಂಥಿ** (ನಾ). ಕೆಲವು ಪ್ರಾಣಿಗಳ ಶರೀರದಲ್ಲಿರುವ ನಂಜನ್ನು ಹೊಂದಿರುವ ಗಡ್ಡೆ : ವಿಷಗ್ರಂಥಿಗಳು (Poison glands) (ಕೀಟಜೀ. ೪೪). [ಸಂ.]

**ವಿಷಗ್ರೀವ** (ನಾ). = ವಿಷಕಂಠ : ವಾಕ್ಪತೀಶಪತಿಯಾವಾಪ ಸಂಸ್ತೋತ್ರಸೇವಾನುಸುಖ ವಿಷಗ್ರೀವಾಢ್ಯ ಶಾಂತಮಲ್ಲ (ವೀಶೈಪು. ೪-೩-೧). [ಸಂ.]

**ವಿಷಘಳಿಗೆ** 'ವಿಷಗಳಿಗೆ' ನೋ.

**ವಿಷಚಕ್ರ** (ನಾ). ಒಂದು ಕ್ರಿಯೆ ಮತ್ತೊಂದು ಕ್ರಿಯೆಗೆ ದಾರಿಮಾಡಿಕೊಡುವುದು ; ಒಂದನ್ನೊಂದು ತೀವ್ರಗೊಳಿಸುವ ಕ್ರಿಯೆ ಪ್ರತಿಕ್ರಿಯೆಗಳ ಸರಣಿ : ಕರ್ನಾಟಕದಲ್ಲಿ 'ಓದುವವರಿಗೆ ಪುಸ್ತಕಗಳಿಲ್ಲ ; ಪ್ರಕಟವಾದ ಪುಸ್ತಕಗಳನ್ನು ಓದುವವರಿಲ್ಲ' ಎಂಬ ವಿಷಚಕ್ರವು ಎಂದಿನಿಂದಲೂ ರೂಢಿಯಲ್ಲಿದೆ (ಸಾಸಮಾ. ೪೮) ; ಕಡೇಆಟದ ವಿಷಚಕ್ರದಲ್ಲಿ ನಾನೂ ಸಿಕ್ಕಿದ್ದೆ (ನಾಡಿಗೇ. ೧೨). IP ಇದು ಇಂಗ್ಲಿಷಿನ 'Vicious circle' ಎಂಬುದರ ಭಾಷಾಂತರ. [ಸಂ.]

**ವಿಷಚಿಕಿತ್ಸೆ** (ನಾ). ದೇಹಕ್ಕೆ ಸೇರಿದ ವಿಷವನ್ನು ಹೋಗಲಾಡಿಸಲು ಮಾಡುವ ಚಿಕಿತ್ಸೆ : ಇಟ್ಟಮರ . . . ಆಯುರ್ವೇದದ ವಿಷಚಿಕಿತ್ಸಾಪ್ರಯೋಗದ ಪ್ರಕಾರ ಬೀಜಗಳನ್ನು . . . ಉಪಯೋಗಿಸಬಹುದೆಂದು ಹೇಳಲಾಗಿದೆ (ಹಸುಹೂ. ೫೭). [ಸಂ. ವಿಷಚಿಕಿತ್ಸಾ]

**ವಿಷಜಂತು** (ನಾ). ವಿಷಯುಕ್ತವಾದ ಪ್ರಾಣಿ : ವಿಷಜಂತುಗಳ ಕಡಿತಕ್ಕೆ ಔಷಧ ಕೊಡುವುದರಲ್ಲಿ ಅವರು ಗಟ್ಟಿಗರು (ರೂಢಿ). [ಸಂ.]

**ವಿಷಜಿತ** (ನಾ). ಹಾವಿನ ವಿಷವನ್ನು ಗೆಲ್ಲುವಂತಹುದು ; ಮುಂಗುಸಿ : "ವಿಷಜಿತಂ [ಪಾಠಾಂ. ಜಡಂ] ಬಭ್ರು ನಕುಲಂ ಮುಂಗುರಿಯೆನಿಕ್ಕುಂ" (ಮಂಗರಾ. ೯೯-೧೪). [ಸಂ.]

**ವಿಷಜ್ವರ** (ನಾ). ನಂಜಿನಿಂದ ಉಂಟಾಗುವ ಒಂದು ಬಗೆಯ ಜ್ವರ : ಕಷಾಯಂ ಕಾಯಿಸಿ ಕೊಡಲು ಶೀತಜ್ವರ, ವಿಷಜ್ವರ . . . ಅರೋಚಕ ಸಹ ಮಾಣ್ಗುಂ (ಸಕಪ್ವ. ೭೭). [ಸಂ.]

**ವಿಷಣ್ಣ** (ಗು). ೧. ಖಿನ್ನವಾದ ; ದುಃಖಿತ : 'ವಿಷಣ್ಣಮನ' ಪರಾ. ೨. ನಿರುತ್ಸಾಹದಿಂದ ಕೂಡಿದ ; ಕುಗ್ಗಿದ : ಮೇಜಿನ ಮುಂದೆ ವಿಷಣ್ಣದೃಷ್ಟಿಯ ಹಲವು ಮಂದಿ ಅವನ ಕಣ್ಣಿಗೆ ಬಿದ್ದರು (ಪುನರು. ೨೦೦). (ನಾ). ೩. ಉತ್ಸಾಹವಿಲ್ಲದುದು ; ಕುಗ್ಗಿದುದು ; ಬಾಡಿದುದು : ಅವನ ಮುಖವು ವಿಷಣ್ಣವಾಯಿತು (ಪ್ರಸಾಸ. ೨೭). ೪. ದುಃಖಿಗೊಂಡಿರುವವನು ; ವ್ಯಥಿತ: ನರೆಯುಮಂ ತೊಟ್ಟನೆ ಕಂಡು ನಾಣ್ಚಿ ವಿಷಣ್ಣನಾಗಿರ್ಪನ್ನೆಗಂ (ಚಾವುಂಪು. ೭೪) ; ಜಾನಕಿಯ ದೂಸಱಿಂ ಲಂಕಾನಾಥಂ ದಾಶರಥಿಯ ಕೈಯೊಳ್ ಮಡಿಗುಂ ಎನೆ ವಿಭೀಷಣಂ ವಿಷಣ್ಣನಾಗಿ (ಪಂರಾಮಾ. ೩-೨೩ ವ). ೫. ಕುಗ್ಗಿದ ಉತ್ಸಾಹವುಳ್ಳವನು ; ನಿರುತ್ಸಾಹಿ : ಅರ್ಜುನ ದುಃಖಿತನಾಗಿದ್ದಾನೆ. ವಿಷಣ್ಣನಾಗಿದ್ದಾನೆ (ಧರ್ಮಸಾ. ೧೧೯). ೬. [ನಾಟ್ಯ] ಮೂವತ್ತಾರು ಬಗೆಯ ದೃಷ್ಟಿಚಲನೆಗಳಲ್ಲಿ ಒಂದು ; ವಿಷಾದವನ್ನು ಸೂಚಿಸುವ ದೃಷ್ಟಿ : ನಿಲ್ಲದೆವೆಯುಕ್ಕುತರಲ್ದುಂ ನಲ್ಲಳ ಕೇಳ್ ಸ್ತಬ್ಧತಾರೆಯಾಗೆ ವಿಷಣ್ಣಂ (ಲಾಸ್ಯರಂ. ೩-೩೩). [ಸಂ.]

**ವಿಷಣ್ಣತೆ** (ನಾ). ೧. ದುಃಖ ; ವ್ಯಥೆ. ೨. ನಿರುತ್ಸಾಹ ; ನಿರಾಸಕ್ತಿ : ಏನೋ ಒಂದು ವಿಷಣ್ಣತೆ ವನ್ನ ಘನದಲ್ಲಿ ಮೂಡಿತು (ರಾಮಾನ. ೧೧೭). [ಸಂ. ವಿಷಣ್ಣತಾ]

**ವಿಷಣ್ಣಮನ** (ನಾ). ೧. ಖಿನ್ನತೆಯಿಂದ ಕೂಡಿದ ಮನಸ್ಸು. ೨. ದುಃಖದಿಂದಿರುವವನು ; ಖಿನ್ನ : ವಿದ್ಯಾವಚನದಿನಾತನಾಸನ್ನಮೃತ್ಯುವನಱಿದು ವಿಷಣ್ಣಮನಸುದಾಸೀನನಾಗಿರ್ದಂ (ಆದಿಪು. ೨-೧೪ ವ). [ಸಂ. ವಿಷಣ್ಣಮನಸ್]

**ವಿಷಣ್ಣವದನ** (ನಾ). ೧. ಬಾಡಿದ ಮುಖ ; ಉತ್ಸಾಹವನ್ನು ಕಳೆದುಕೊಂಡ ಮುಖ : ಅವಳ ವಿಷಣ್ಣವದನವೇ ಈ ನಗು ಕೃತಕ ಎಂದು ಸಾರಿ ಹೇಳುತ್ತಿತ್ತು (ವಾತ್ಸಲ್ಯ. ೨೦೯). ೨. ಚಿಂತಾಕ್ರಾಂತನಾದವನು ; ದುಃಖಿತ : ಶಿಲಾತಲದೊಳ್ ಕುಳ್ಳಿರ್ದು ಬಾಷ್ಪವಿಷಣ್ಣವದನನಾಗಿ ತರಳಿಕೆಯನಿದೇನೆಂದು ಬೆಸಗೊಳ್ಳುದುಂ (ಕಾದಂಉ. ೫೪೪) ; ವಿಭೀಷಣನು ವಿಷಣ್ಣವದನನಾಗಿ ಈ ವಿಧಿಲಿಖಿತವನ್ನು ತಪ್ಪಿಸುವ ಉಪಾಯವನ್ನು ಚಿಂತಿಸಿ . . . ಕೊಂದು ಬರುವಂತೆ ಆಜ್ಞಾಪಿಸುವನು (ಸಾಹಿಸ. ೮೬). [ಸಂ.]

**ವಿಷಣ್ಣಹೃದಯ** (ನಾ). ೧. ದುಃಖದಿಂದ ಕೂಡಿದ ಹೃದಯ. ೨. ದುಃಖಿತನಾದವನು ; ಖಿನ್ನಮನಸ್ಕ : ಲಕ್ಷ್ಮಣಂ ವಿಷಣ್ಣಹೃದಯನುದ್ದೀಪಿತಕೋಪಶಿಖಿಶಿಖಾಕಲಾಪನಿಂತೆಂದಂ (ಪಂರಾಮಾ. ೯-೧೩೨ ವ). [ಸಂ.]

**ವಿಷಣ್ಣಾನನೆ** (ನಾ). ದುಃಖದಿಂದ ಕೂಡಿದ ಮುಖವುಳ್ಳವಳು : ವಿಷಣ್ಣಾನನೆಯಂ . . . ಕಂಡಿಂತೆಂದಳ್ (ಯಶೋಚ. ೨-೩೫). [ಸಂ. ವಿಷಣ್ಣಾನನಾ (ವಿಷಣ್ಣ + ಆನನ + -)]

**ವಿಷತೀಟೆ** (ನಾ). ಒಂದು ಬಗೆಯ ಔಷಧೀಸಸ್ಯ : (ಮೈಡಿಗಿ. ೨೪-೪೪೭). [ವಿಷ + ತೀಟೆ$_1$]

**ವಿಷತೊಗರಿ** (ನಾ). ಒಂದು ಬಗೆಯ ತೊಗರಿ : ಚಿಕ್ಕತೊಗರಿ, ವಿಷತೊಗರಿ, ಕೇಸರಿಬೇಳೆ (ಮೈಡಿಗಿ. ೪೯-೯೮೧). [ವಿಷ + ತೊಗರಿ$_1$ (< ತುವರಿ)]

**ವಿಷತ್ರಯ** (ನಾ). ಸ್ಥಾವರ, ಜಂಗಮ ಮತ್ತು ಕೃತ್ರಿಮ ಎಂಬ ಮೂರು ಬಗೆಯ ವಿಷಗಳು : ವಿಷಮವಿಷತ್ರಯಮಳಿಗುಂ ನಿನ್ನ ಪದದ್ವಯಮಂ ಚಿಂತಿಸುಪೊಡೆ (ಜನಾಕ. ೧೯). [ಸಂ.]

**ವಿಷದಿವ್ಯ** (ನಾ). ಅಪರಾಧಿಯ ಅಪರಾಧವನ್ನು ನಿರ್ಣಯಿಸುವ ಪ್ರಾಚೀನವಿಧಾನವೆನಿಸಿದ ದಿವ್ಯಗಳಲ್ಲಿ ಒಂದು ; ಅಪರಾಧಿಗೆ ವಿಷವನ್ನು ಕುಡಿಸಿ, ಅದು ಯಾವ ಪರಿಣಾಮವನ್ನೂ ಉಂಟುಮಾಡದಿದ್ದರೆ ಅವನು ನಿರಪರಾಧಿ ಎಂದು ಪರೀಕ್ಷಿಸುವ ದಿವ್ಯ : ಸಿದ್ಧರಾಮಚಾರಿತ್ರದಲ್ಲಿ ವಿಷದಿವ್ಯ ಮತ್ತು ಅಗ್ನಿದಿವ್ಯಗಳು ನಡೆದ ಎರಡು ಘಟನೆಗಳು ಬರುತ್ತವೆ (ಕಶಾಅ. ೧೯೭). [ಸಂ.]

**ವಿಷದೃಷ್ಟಿ** (ನಾ). ವಿಷವನ್ನು ಹೊಮ್ಮಿಸುವ ನೋಟ ; ವಿಷಪೂರಿತವಾದ ದೃಷ್ಟಿ : ವಿಷದೃಷ್ಟಿವಿಷೋರಗಸ್ವರೂಪದಿಂ ಸಗರನಱುವತ್ತುಸಾಸಿರ್ವರ್ ಮಕ್ಕಳುಮನೊಡನೆ ಕೃತಕದಿಂ ಭಸ್ಮಾವಲೇಪನಮಾಗಿ ಮಾಡಿ (ಅಜಿಪು. ೧೧-೧೧ ವ). [ಸಂ.]

**ವಿಷದೇಹಿ** (ನಾ). ೧. ವಿಷಜಂತುಗಳನ್ನು ಒಡಲಲ್ಲಿ ಉಳ್ಳವಳು. ೨. ನೀರನ್ನೇ ತನ್ನ ದೇಹವಾಗಿ ಉಳ್ಳವಳು. ೧, ೨: ಪ್ರತಿಕೂಲೆಯೆಂದೆನಿಸಿಯು ಸವಿದರ್ಗೆ ಪುಣ್ಯಾನುಕೂಲೆಯಪ್ಪಳು ಘನೋದ್ಭವದ ವಿಷದೇಹಿಯಾಗಿಯು ಜನಕ್ಕಮೃತದೇಹವೀವಳಾಹಾ ವಿರುದ್ಧಸ್ವಭಾವೆ ಗಂಗಾನದಿ ಧರಾತಳದೊಳು (ಹಚಕಾ. ೧೧-೩೧). [< ಸಂ. ವಿಷದೇಹಿನೀ]

**ವಿಷದ್ರುಮ** (ನಾ). ವಿಷದಿಂದ ಕೂಡಿರುವ ಮರ : ಧರ್ಮದ್ರುಮಚ್ಛೇದ ಪರಶುಧಾರೆಯುಂ ವಿಷಯವಿಷದ್ರುಮಕಂದಳಿಯುಂ . . . ಅಪ್ಪ ಪಾತಕಿಯೊಳ್ . . . ಲಕ್ಷ್ಮಿಯೊಳ್ . . . ನೆರೆಯಲ್ಕಿಂತೀತನೆ ಬಗೆಗೆ (ಆದಿಪು. ೧೪-೧೨೨ ವ) ; ರಾಜೇಂದ್ರ ನೀ ಬಿತ್ತಿದ ವಿಷದ್ರುಮ ಫಲಿತವಾಯಿತು (ಕುವ್ಯಾಶ. ೧-೪). [ಸಂ.]

**ವಿಷಧರ** (ನಾ). ೧. ವಿಷದಿಂದ ಕೂಡಿರುವಂಥದು ; ನಂಜುಳ್ಳುದು : ವಿಷಯಾಮಿಷಲಂಪಟತೆಯೆ ವಿಷಧರನೆನಿಸಿದುದು ನಿನ್ನನೆಲ ವಿಷಧರ (ಆದಿಪು. ೨-೧೭). ೨. ಸರ್ಪ ; ಹಾವು : ಗಂಗಾದೇವಿಯ ವರಪ್ರಸಾದದೊಳ್ ವಿಷಮವಿಷಧರಂಗಳ್ ಪರಿಯೆ (ಪಂಪಭಾ. ೨-೩೨ ವ) ; ಬಗೆಯಂ ವಿಷಧರವಲ್ಲಭಭೂಷಣ ವೃಷಭನುಮಂ ದೇವ ನಿಮ್ಮನೇಂ ಬಗೆದಪನೇ (ಪಂಚತಂ.೯೬-೧೫). ೩. ನೀರನ್ನು ಧರಿಸಿರುವಂಥದು ; ಮೋಡ : ಪರೆಯಿಕ್ಕಿ ಪೋದುವಚಿರಾಂಶುರಸನಘನಕಾಲವಿಷಧರಂಗಳ್ . . . ಎನಲ್ ತರತರದಿಂ ಪಸರಿಸಿದುವಂದು ಬಿಳಿಯ ಮುಗಿಲ್ಗಳ್ (ಪಂರಾಮಾ. ೭-೧೬೪) ; ನೀಲಕಂಠನಾದೆನೆನುತ್ತಂ ಕುಣಿವಂತೆ ವಿಷಧರದ ಮುಂದಣೆಯರದಿಂ ಕೇಗಿ ಕುಣಿವ ನವಿಲೆಸೆದಿರ್ಕುಂ (ರಾಜಶೇ. ೮-೧೨೦). ೨, ೩ : ಆ ಮಹಾರ್ಣವಂ . . . ರಸಾತಳದಂತೆ ವಿಷಧರನಿಷೇವ್ಯಮುಂ . . . ಎನಿಸಿದುದು (ಜಗವಿ. ೧-೪೪ ವ). ೪. ಶಿವ ; ಈಶ್ವರ : ವಿಷಧರನ ಕಿಂಕರನನಾ ವಿಷವೇನ ಮಾಡುವುದು (ಬಸಪು. ೪೯-೩೯). [ಸಂ.]

**ವಿಷಧರಾಭರಣ** (ನಾ). ಸರ್ಪಗಳನ್ನು ಭೂಷಣವನ್ನಾಗುಳ್ಳವನು ; ಶಿವ : ವಿಷಧರಾಭರಣ ವಿಷಚಾಸನ ಕಪಾಲಧರ (ಸಿದ್ಧರಾ. ೬-೪೦) ; ವಿಷಚಾತಜಾತಸುತ ವಿಷಧರಾಭರಣ ವಿಷಧರ ಪಾಹಿಮಾಂ (ಪ್ರಾಭರಾ. ೨೧-೪೧). [ಸಂ.]

**ವಿಷಧರಾಹಿತ** (ನಾ). ೧. ಸರ್ಪಕ್ಕೆ ಶತ್ರುವಾದುದು. ೨. ಗರುಡ : ವಿಷಧರಾಹಿತಗಮನಬಂಧುವೆ . . . ನಮೋ (ಬಸಪು. ೨೧-೧). ೩. ನವಿಲು : ವಿಷಧರಾಹಿತಗಮನಗುರುವೇ . . . ನಮೋ (ಬಸಪು. ೨೧-೧). ೪. ಹಾವೆಂದು ಪರಿಗಣಿಸಲಾಗಿರುವ ರಾಹುವಿನ ಶತ್ರು ; ಚಂದ್ರ : ವಿಷಧರಾಹಿತಮಿತ್ರ ಮರುತಾಪೇಕ್ಷಣಾಯ ನಮೋ (ಬಸಪು. ೨೧-೧). [ಸಂ.]

**ವಿಷಧಿ** (ನಾ). ಕಡಲು ; ಸಮುದ್ರ : ವಿಷಧಿಗಳೊಳಗೊಯ್ವುದುರ್ವ ವಿಷಮರಣಾಂಗಣಮನಿರದೆ ಪುಗಿಸುವ . . . ವಿಷಯಸುಖಂಗಳೊಳೆ ತೊಡರ್ದು ಬಿರ್ದಪುದು ಜಗಂ (ಆದಿಪು. ೧೪-೧೨೪). [ಸಂ.]

**ವಿಷನಾಗ** (ನಾ). ಒಂದು ಬಗೆಯ ಸಸ್ಯ : "ವಿಷ, ಅತಿವಿಷ, ವತ್ಸನಾಭಿ, ವಿಷನಾಗ" (ಸಸ್ಯನಿ. ೫). [ಸಂ.]

**ವಿಷನಾಶಕ** (ನಾ). ವಿಷವನ್ನು ಹೋಗಲಾಡಿಸುವ ಮದ್ದು : (Anti-dote. ಪಾರಿಎ. ೫). [ಸಂ.]

**ವಿಷನಿಧಿ** (ನಾ). ೧. = ವಿಷಧಿ. ೨. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : ವಿಷನಿಧಿ . . . ಜಳರಾಶಿ ಎಂದು ನಾಲ್ಕಟ ನಾಮಂ (ವ್ಯವಹಾ. ೯-೧). [ಸಂ.]

**ವಿಷನಿಮಿಷ** (ನಾ). ಕೆಟ್ಟಮುಹೂರ್ತ ; ಅಶುಭಕಾಲ : "ಮಗುವಿನ ಕರ" ಕೇಳಿದಂತಾಗಿ ವಿಷನಿಮಿಷವು ರಸನಿಮಿಷವಾದ ರಸಮಯಸನ್ನಿವೇಶ (ನಿರಾಘ. ೨೦ ಮುನ್ನುಡಿ). [ಸಂ.]

**ವಿಷನೇತ್ರ** (ನಾ). ೧. ಕೆಟ್ಟದೃಷ್ಟಿಯುಳ್ಳವನು ; ಕೆಟ್ಟಕಣ್ಣಿನವನು. ೨. ಹಾವು ; ಸರ್ಪ. ೧, ೨ : ಕುಟಿಲಮಾರ್ಗಿಗಳಂ ವಿಷನೇತ್ರರಂ ರೌದ್ರತರಾಸ್ಯರಂ ಬೆರಸುವಾತ ನನೀತಿಯ ಸೇತುವಲ್ಲವೇ (ನಳಚಂ. ೭೦೧). [ಸಂ.]

**ವಿಷಪಕ್ಷಿ** (ನಾ). ಒಂದು ಬಗೆಯ ಪಕ್ಷಿ : "ದಾತ್ಯೂಹಃ, ಕಾಲಕಂಠಕಃ — ಈ ೨ ವಿಷಪಕ್ಷಿ" (ನಾಚಿರಾ. ೧೧೪). [ಸಂ. ವಿಷಪಕ್ಷಿನ್]

**ವಿಷಪರಿಹಾರಿ** (ನಾ). ಒಂದು ಬಗೆಯ ಸಸ್ಯ : "ದುರ್ಗಂಧ – ಗರಿಗಂಟೆ, ವಿಷಪರಿಹಾರಿ" (ಒಷಧಿ. ೬೪). [ಸಂ. ವಿಷಪರಿಹಾರಿನ್]

**ವಿಷಪರೀಕ್ಷೆ** (ನಾ). ೧. = ವಿಷದಿವ್ಯ. ೨. (ಆಲಂ) ಸತ್ವಪರೀಕ್ಷೆ : ಈ ತೊಡಕಿನ ವಿಷಪರೀಕ್ಷೆಗೆ ಚೆಂದವ್ವ — ಆಕೆಯನ್ನು ಬಲಿದಿತ್ತು ಕೊಂದು ತೀರಿಸಿ ಬಿಡುವೆಯೇನು? (ಚಿಬ್ಬಿಟ. ೧೧೯-೭) ; ಶಾಪವು ಕಿವಿ ಮನಸ್ಸುಗಳಲ್ಲಿ ಧ್ವನಿಸುತ್ತಿದ್ದರೂ ವಿಷಪರೀಕ್ಷೆಯಾಗಿ ಕಾಮವು ಈ ದಂಪತಿಗಳ ಜೀವನವನ್ನು ಕಬಳಿಸಿತು (ಭಾರದ. ೪೮೪). [ಸಂ. ವಿಷಪರೀಕ್ಷಾ]

**ವಿಷಪುಚ್ಛ** (ನಾ). ಬಾಲದಲ್ಲಿ ವಿಷವನ್ನುಳ್ಳುದು ; ಚೇಳು : ಕರಕಂಠ ವಿಷಪುಚ್ಛ ಮೂಷಕಂಗಳನೇರಿ ಕುವರರೈತರಲು (ನವಮೋ. ೩೦-೩೩). [< ಸಂ. ವಿಷಪುಚ್ಛ]

**ವಿಷಪುಚ್ಛ** (ನಾ). = ವಿಷಪುಚ್ಛ. [ಸಂ.]

**ವಿಷಪ್ರಯೋಗ** (ನಾ). ವಿಷವನ್ನು ಹಾಕುವುದು ; ನಂಜೂಡುವುದು : ಯಾವನೋ ಒಬ್ಬ ಚೋಳಿಯು ವ್ಯಾಸರಾಯರ ಪ್ರಾಬಲ್ಯವನ್ನು ನೋಡಿ ಸಹಿಸಲಾರದೆ ವಿಷಪ್ರಯೋಗ ಮಾಡಿಸಿದನು (ಕಥವಿ. ೬೪) ; ಚಂದ್ರವರ್ಮನಿಗೆ ವಿಷಪ್ರಯೋಗ ಮಾಡಿ ಕೊಲ್ಲಬೇಕೆಂದು ಆಜ್ಞಾಪಿಸಿದನು (ಕವಿಕ. ೩). [ಸಂ.]

**ವಿಷಪ್ರಹರಣ** (ನಾ). ನಂಜನ್ನು ಹೋಗಲಾಡಿಸುವಂಥದು : ವಿಷಪ್ರಹರಣಮಪ್ಪ ವೈದ್ಯಮಂ ಪ್ರಕಟಿಸುವೆಂ (ಖಮದ. ೧೫-೨). [ಸಂ.]

**ವಿಷಪ್ರಾಶನ** (ನಾ). ೧. = ವಿಷಪ್ರಯೋಗ. ೨. ನಂಜನ್ನು ಸೇವಿಸುವುದು ; ವಿಷಸೇವನೆ : ಕೃಷ್ಣಾಕುಮಾರಿ ಹೆಣ್ಣಾಗಿ ಹುಟ್ಟಿದ ತಪ್ಪಿಗೆ ವಿಷಪ್ರಾಶನ ಮಾಡಿ ವಂಶಗೌರವವನ್ನು ರಕ್ಷಿಸಬೇಕಾಯಿತು (ಭಾರದ. ೪೮೯) ; ಎಲ್ಲಾ ತರದ ವಿಷಪ್ರಾಶನಕಾಲದಲ್ಲೂ ಹಾಲು ಬಹಳ ಉಪಯೋಗಕಾರಿ (ಬಾಲಪ್ರ. I. ೫೪೦). [ಸಂ.]

**ವಿಷಫಲ** (ನಾ). ೧. ಒಂದು ಬಗೆಯ ಸಸ್ಯ : (ಮೈಡಿಗಿ. ೨-೩೩). ೨. (ಆಲಂ) ಕೆಟ್ಟ ಪರಿಣಾಮ ; ದುಷ್ಪರಿಣಾಮ : ದುಷ್ಕಾರ್ಯದ ವಿಷಫಲವನ್ನು ಎಂದಿದ್ದರೂ ಭೋಗಿಸಲೇಬೇಕು (ರೂಢಿ). [ಸಂ.]

**ವಿಷಬಿದುರು** (ನಾ). ಒಂದು ಬಗೆಯ ಸಸ್ಯ : ವಿಷಮೂಂಗಿಲಿ, ವಿಷಬಿದುರು (ಮೈಡಿಗಿ. ೨೫-೪೭೮). [ವಿಷ + ಬಿದುರು]

**ವಿಷಬೊದ್ದಿ** (ನಾ). ಒಂದು ಬಗೆಯ ಔಷಧೀಸಸ್ಯ : ಕಕ್ಕೆಬೇರು, ವಿಷಬೊದ್ದಿ . . . ಕಷಾಯ ಮಾಡಿ ಸೇವಿಸಲು ಪುರಾಣಜ್ವರ ಚಾತುರ್ಥಿಕಾದಿ ಸರ್ವಾಹಿಕಜ್ವರಗಳು ನಿಲ್ಲುವುವು (ಸಕವ್ಯ. ಪಂ. ೪೦೫). [ವಿಷ + ಬೊದ್ದಿ]

**ವಿಷಭಿಷಕ್ಕು** (ನಾ). ೧. ಹಾವು ಮುಂತಾದುವುಗಳ ವಿಷವನ್ನು ನಿವಾರಿಸುವವನು ; ವಿಷವೈದ್ಯ. ೨. ಗಾರುಡಿಗ : "ಜಾಂಗುಳಿಕಃ, ವಿಷಭಿಷಕ್ — ಈ ೨ ಗಾರುಡಿಗಂ" (ಹಲಾಯು. ೧೦೦೦-೪೯೫). [ಸಂ. ವಿಷಭಿಷಜ್]

**ವಿಷಭೇದ** (ನಾ). ಒಂದು ಬಗೆಯ ಔಷಧೀಸಸ್ಯ : "ಮಹಾಕರಂಭಃ— ವಿಷಭೇದ" (ಒಷಧಿ. ೧೨೨). [ಸಂ.]

**ವಿಷಭೋಜಕ** (ನಾ). ವಿಷವನ್ನು ಸೇವಿಸಿದವನು ; ನಂಜುಂಡ ; ಶಿವ : ಪಶುಪತಿಯೆನಿಸಿದ ವಿಷಭೋಜಕನೆ (ಲೋಕಗೀ. ೧೭೦). [ಸಂ.]

**ವಿಷಮ** (ಗು). ೧. ಸಮವಲ್ಲದ ; ಒರಟಾದ. ೨. ಕ್ರಮವಿಲ್ಲದ ; ಅವ್ಯವಸ್ಥಿತವಾದ. ೩. ಅಸಾಧಾರಣವಾದ ; ಅಸಾಮಾನ್ಯವಾದ : ಅನ್ನೆಗಮವ್ಯಕ್ತಕಾಲದೊಳೋದಿ ಮಱೆದ ವಿಷಮಶಾಸ್ತ್ರದ ಮೂಲಗ್ರಂಥಕ್ಕೆ ವಿವರಣೆ ಬರ್ಪವೊಲಿರದವಧಿ ವಿಬೋಧದೆ ಬರೆ ಮನಕ್ಕೆ (ಶಾಂತಿಪು. ೭-೧೮ ವ) ; ಕಾಲನ ಲೀಲೆಯಾದುದು ವಿಷಮ ಸಮರಂಗ (ಕುವ್ಯಾದ್ರೋ. ೫-೪). ೪. ಭಯಂಕರವಾದ ; ಉಗ್ರವಾದ : ಗಂಗಾದೇವಿಯ ವರಪ್ರಸಾದದೊಳ್ ವಿಷಮವಿಷಧರಂಗಳ್ ಪರಿಯೆ (ಪಂಪಭಾ. ೨-೩೨ ವ) ; ವಿಷಮತಪವ ನೆಗಳ್ವನಿಳೇಶ್ವರಂ (ಹಮ್ಮಿ.ರ. ೨-೬ ವ). ೫. ಕೆಟ್ಟ ; ದುಷ್ಟ : ವಿಷಮವಿಶ್ವಾಮಿತ್ರಮುನಿ ಮುನಿದು ತಪ್ಪ ಸಾಧಿಸಿದಪ್ಪಂ (ಹರಿಕಾ. ೫-೭೨). ೬. ಸಂತೋಷವಿಲ್ಲದ ; ನೋವಿನ ; ದುಃಖದಿಂದ ಕೂಡಿದ. ೭. ಆಪತ್ತಿನಿಂದ ಕೂಡಿದ ; ಕಷ್ಟಕರವಾದ. ೮. ತಿಳಿಯಲು ಅಸಾಧ್ಯವಾದ ; ಗೂಢವಾದ. ೯. ಸಮವಾಗಿ ಭಾಗಮಾಡಲಾಗದ ; ಬೆಸಸಂಖ್ಯೆಯ : 'ವಿಷಮಪಾದ' ಪರಾ. ೧೦. ಹೊಂದಾಣಿಕೆಯಿಲ್ಲದ ; ಏರುಪೇರಾದ. ೧೧. ಅನಿಯತವಾದ ; ಬಿಟ್ಟು ಬಿಟ್ಟು ಬರುವ : 'ವಿಷಮಜ್ವರ' ಪರಾ. (ನಾ). ೧೨. ಸಮವಾಗಿಲ್ಲದಿರುವುದು ; ಒರಟಾದುದು. ೧೩. ಕಷ್ಟಕರವಾದುದು ; ತ್ರಾಸದಾಯಕವಾದುದು : ಕಾಲ ವಿಷಮವು ಕೌರವಕ್ಷಿತಿಪಾಲ ಪಾಂಡುಕುಮಾರರಲಿ ಕೈ ಮೇಳವಿಸುವುದು (ಕುವ್ಯಾಆ. ೫-೩೧). ೧೪. ಗ್ರಹಿಸಲು ಕಷ್ಟವಾದುದು : ಅದೇಂ ಸುರಲಂಜಿಕೆಯರ್ ವಿಷಮಮುಮಂ ಸಮಮಂ ಮಾಡಿದರೊ (ಶಾಂತಿಪು. ೭-೩೩). ೧೫. ಕಷ್ಟಪರಿಸ್ಥಿತಿ ; ಆಪತ್ತು ; ಇಕ್ಕಟ್ಟು : ವಿಷ ತಿಂದರೆ ಬದುಕಬಹುದು,

ವಿಷಮದಲ್ಲಿ ಬದುಕಕೂಡದು (ಗಾದೆ). ೧೬. ಪ್ರತಿಕೂಲ ; ಏರುಪೇರು : ದೇಸಾಯರದ ಜೊತೆಗೆ ದಾಂಪತ್ಯ ವಿಷಮವಾಗಿ ಪರಿಣಮಿಸಿ ಕೊನೆಗೆ ಅವರನ್ನು ಪರಿತ್ಯಕ್ತರನ್ನಾಗಿ ಮಾಡಿತ್ತು (ಸಮಜೀ. ೭೭೫). ೧೭. ಸಮವಲ್ಲದ ಸಂಖ್ಯೆ ; ಬೆಸ. ೧೮. ಒಂದು ಬಗೆಯ ಜಠರಾಗ್ನಿ : 'ವಿಷಮಾಗ್ನಿ' ಹೋ. ೧೯. ಅಸಾಧಾರಣವಾದ ವ್ಯಕ್ತಿ : ಮುಸುಡ ಹೊಗರಿನ ಕಣ್ಣ ಕೆಂಪಿನ ವಿಷಮರಗ್ಗದ ಕರ್ಣತನುಜರು . . . ಮಸಗಿ ಮುಂಚುವ ಮೋಹರವನಡಹಾಯ್ದು ತಱುಬಿದರು (ಕುವ್ಯಾಕ. ೧೦-೩೨). ೨೦. [ನಾಟ್ಯ] ವಿಷಮ, ವಿಕಟ, ಲಘುವೆಂಬ ಮೂರು ಬಗೆಯ ನೃತ್ಯಗಳಲ್ಲಿ ಒಂದು : ಹೆಚ್ಚು ತಿವಡಿ ವಿಷಮಗಳೆಂಬ ಚೌಕಳಿ ಸಚ್ಚಿತಾ ಭ್ರಂಗಿನಾಟ್ಯಗಳು (ದೇವಾಂಪು. ೫-೧೭೯) ; ಒದವಿದ ನೃತ್ತಂ ತ್ರಿವಿಧಾಖ್ಯದೆ ರಂಜಿಪುದಯ್ದೆ ವಿಷಮ ವಿಕಟಂ ಲಘುವೆಂದು (ಲಾಸ್ಯರಂ. ೧-೬೭). ೨೧. [ಸಂಗೀತ] ನೂರೆಂಟು ತಾಳಗಳಲ್ಲಿ ಒಂದು : ಕಡೆಮುಟ್ಟೆ ನೇತ್ರವಟ್ಟೆಯ ಕಡೆಯಂ ಸೀಳ್ದಂತೆ ವಿಷಮತಾಳದೊಳ್ . . . ಬಾಜಿಸಿದಂ (ಮಲ್ಲಿಪು. ೮-೩೦) ; ಧ್ರುವ . . . ವಿಷಮ . . . ಜಯಾಳವೆಂಬವೇ ಮೊದಲಾದ ನೂಱೊಂದು ತಾಳಂಗಳಾದೊಡೆ (ವಿವೇಕ. ೧೯೨). ೨೨. [ಕಾವ್ಯಮೀ] ಒಂದು ಅರ್ಥಾಲಂಕಾರದ ಹೆಸರು ; ಪರಸ್ಪರ ಅನುಗುಣವಲ್ಲದ ವಸ್ತುಗಳನ್ನು ಒಟ್ಟಿಗೆ ಸೇರಿಸಿ ವರ್ಣಿಸುವುದು : ಸಮಾಸೋಕ್ತಿ . . . ವಿಷಮ . . . ಉದಾತ್ತವೆಂಬ ಅಱುವತ್ತೆದಲಂಕಾರಗಳಿಂದೊಡಗೂಡಿ (ವಿವೇಕ. ೧೭೯) ; ತಾಪಕ್ಕೆ ತಕ್ಕುದಾಗಿಲ್ಲದಂತಹ ಕೋಮಲಾಂಗಿಯಲ್ಲಿ ತಾಪವಿಹುದೆಂದು ವರ್ಣಿಸಲ್ಕೆ ವಿಷಮವು (ಕುವಲ. ೭೮). ೨೩. ಹದಿನೆಂಟು ಬಗೆಯ ಕಾವ್ಯದೋಷಗಳಲ್ಲಿ ಒಂದು : ಅಸದರ್ಥಂ . . . ದುರ್ಲಕ್ಷಣಂ ಹಾಸ್ಯವಾಗ್ವಿಷಮಾ'ಸೌಮ್ಯಮನೋಜೆಯೆಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೧-೪೬ ಅಡಿಪದ್ಯ). ೨೪. [ಛಂದ] ಸಮ, ಅರ್ಧಸಮ ಮತ್ತು ವಿಷಮವೆಂಬ ಮೂರು ತರದ ವೃತ್ತಗಳಲ್ಲಿ ಒಂದು ; ನಾಲ್ಕು ಪಾದಗಳೂ ಬೇರೆ ಬೇರೆ ಲಕ್ಷಣಗಳಿಂದ ಕೂಡಿರುವ ವೃತ್ತ : ವಿಪರೀತಗಣಾಕ್ಷರಮಾಗೆ ಪದಂಗಳ್ ನಾಲ್ಕು ಹಿಂದು ಮುಂದುಗಳಕ್ಕುಂ ಚಪಲಾಕ್ಷಿ ವಿಷಮವೃತ್ತಮನುಪದೇಶಿಪೆಂ (ಛಂದೋಂಬು. ೩-೨೧೧) ; ವರ್ಣವೃತ್ತವು ಸಮ, ಅರ್ಧಸಮ, ವಿಷಮ ಎಂದು ಸಾಮಾನ್ಯವಾಗಿ ಮೂರು ವಿಧವು (ಕೈಪಿಡಿ. ೭೮). [ಸಂ.]

**ವಿಷಮಕಾಲ** (ನಾ). ಕೆಟ್ಟಕಾಲ ; ದುಷ್ಕಾಲ : ಆ ವಿಷಮಕಾಲದಲ್ಲಂತೂ ಹಿಂದೂ ಸಂಸ್ಕೃತಿಯ ಪುನರುದ್ಧರಣ ಸಾಧ್ಯವೇ ಇಲ್ಲ ಎಂಬ ಭೀತಿಯುಂಟಾಗಿದ್ದರೆ ಆಶ್ಚರ್ಯವಿಲ್ಲ (ಹುಕ್ಕಾರ. ೧೧೯ ಪೀಠಿಕೆ). [ಸಂ.]

**ವಿಷಮಕುಲ** (ನಾ). ಅಸಮವಾದ ಕುಲ ; ಮೇಲು ಅಥವಾ ಕೀಳುಜಾತಿ : ವಿಷಮಕುಲದಲಿ ಕಾಯದಾಸೆಗೆ ಕೊಳುಕೊಡೆಯ ಕಳವಳಿಸಿ ಮಾಡಿದೊಡೆ ನಾಯಕದ ನರಕಗಳು ತಪ್ಪವು (ಪ್ರಭುಲೀ. ೧೦-೮). [ಸಂ.]

**ವಿಷಮಗೋ** (ನಾ). ಅಸಮಸಂಖ್ಯೆಯ ಕಣ್ಣುಗಳುಳ್ಳವನು ; ವಿರೂಪಾಕ್ಷ ; ಶಿವ : ಗೋಪತಿ ವಿಷಮಗೋಪರಂ ವಿಧುಗೋಪದಂ (ಬಸವು. ೧-೬). [ಸಂ.]

**ವಿಷಮಚಕ್ರ** (ನಾ). ೧. = ವಿಷಚಕ್ರ : "ಅನ್ಯೋನ್ಯಾಶ್ರಯದೋಷ ; ವಿಷಮಚಕ್ರ" (Vicious Circle. ೧೦೫೧). ೨. [ಕಾವ್ಯಮೀ] ಒಂದು ಬಗೆಯ ಕಾವ್ಯಬಂಧ ; ಒಂದು ಪದವನ್ನು ಆಶ್ರಯಿಸಿ ಇನ್ನೊಂದು ಪದವಿಡುವ ಒಂದು ಬಂಧ : ಅರ್ಧಪಾದಗತ ಪ್ರತ್ಯಾಗತ ವಿಷಮಚಕ್ರಶ್ಲೋಕ (ಮದತಿ. ೧-೪೨). [ಸಂ.]

**ವಿಷಮಚ್ಛದ** (ನಾ). ಒಂದು ಬಗೆಯ ಸಸ್ಯ ; ಏಳೆಲೆಬಾಳೆ : "ಸಪ್ತಪರ್ಣಃ . . . ವಿಷಮಚ್ಛದಃ- ೪ ಏಳೆಲೆಬಾಳೆಗಿಡ" (ಸಿದ್ಧಾಂತಿ. ೧೧೭). [ಸಂ.]

**ವಿಷಮಜ್ವರ** (ನಾ). ದಿನ ಬಿಟ್ಟು ದಿನ ಬರುವ ಜ್ವರ ; ವಿಷಮದಿನಗಳಲ್ಲಿ ಕಾಣಿಸಿಕೊಳ್ಳುವ ಜ್ವರ ; ಟೈಫಾಯ್ಡ್ : ದಿನ ಬಿಟ್ಟು ದಿನ ಜ್ವರ ಬರುವುದು, ಎರಡು ದಿನಕ್ಕೊಮ್ಮೆ ಜ್ವರ ಬರುವುದು ಇವುಗಳೆಲ್ಲಾ ವಿಷಮಜ್ವರಲಕ್ಷಣಗಳು (ಸಕವ್ಯ. ೯೮) ; ಇಲಿ, ಜಿರಳೆ, ನೊಣ ಮೊದಲಾದವುಗಳು . . . ವಿಷಮಜ್ವರ, ಆಮಶಂಕೆ ಇತ್ಯಾದಿ ರೋಗಗಳನ್ನು ಹರಡುತ್ತವೆ (ಆಡುಸಾ. ೪೮). [ಸಂ.]

**ವಿಷಮತೆ** (ನಾ). ೧. ದುಷ್ಟತನ ; ಕ್ರೌರ್ಯ : ವೃಷಭನ ಅನಿಮಿತ್ತರೋಷಾವೇಶವಿಷಮತೆಗಂ . . . ವಿಸ್ಮಯಂಬಟ್ಟು (ಚಂದ್ರಪು. ೨-೩೦) ; ಗ್ರಾಹಮಹಾಮೀನ ಕುಳೀರಾಹಿಗಳಂದೇನುಂ ಪೊಸೆಯಿಸಿದುವಿಲ್ಲ ನಿಜವಿಷಮತೆಯಂ (ಚಂದ್ರಪು. ೫-೪೫). ೨. ಏರುಪೇರು ; ಅಸಮಾನತೆ : ವಿಷಮತೆಗಳನ್ನು ನಿವಾರಿಸುವ ಅವಶ್ಯಕತೆ ಇರುವಾಗ ಪೇಟೆಯ ಕೈ ಬಿಗಿಹಿಡಿಯತಕ್ಕದ್ದು (ಹಣಪ್ರ. ೧೯೦). ೩. ಸೋಂಕು ; ನಂಜು : ಕಂಠನಾಳದ ಮೂಲರೋಗದಲ್ಲಿ ವಿಷಮತೆ (Toxity) ಹೆಚ್ಚಾಗಿ ಕಾಣಿಸುವುದಿಲ್ಲ (ಕಲರೋ. ೧೯). [ಸಂ. ವಿಷಮತಾ]

**ವಿಷಮತ್ಪೀಡನ** (ನಾ). ವಿಷವನ್ನುಳ್ಳ ಹಾವನ್ನು ಪೀಡಿಸುವಂಥದು ; ಗಿಡುಗ : "ಪ್ರಾಚಿಕೆ ವಿಷಮತ್ಪೀಡನಂ ಶ್ಯೇನಮನೆ ಗಿಡುಗನಕ್ಕುಂ" (ಮಂಗರಾ. ೫೨-೮). [ಸಂ.]

**ವಿಷಮತ್ವ** (ನಾ). ವ್ಯತ್ಯಾಸ : ಬಂಗಾರದಿಂದ ಉಂಗುರ ಉಡಿದಾರಗಳಾಗುತ್ತವೆ . . . ಬಂಗಾರವು ಅವುಗಳ ಸಾಮಾನ್ಯಾವಸ್ಥೆಯಾಗಿತ್ತು. ವಿಕಾರವಾಗುತ್ತಲೆ ವಿಷಮತ್ವಕ್ಕೆ ಆರಂಭವಾಗುತ್ತದೆ (ಜೀವಾತ್ಮ. ೧೫೫). [ಸಂ.]

**ವಿಷಮದಾಂಪತ್ಯ** (ನಾ). ಹೊಂದಿಕೆಯಾಗದ ಪತಿಪತ್ನೀಸಂಬಂಧ ; ಸಮರಸವಿಲ್ಲದ ದಾಂಪತ್ಯ : ಈ ಕಾದಂಬರಿಯಲ್ಲಿ ವಿಷಮದಾಂಪತ್ಯಗಳ ಸಂತೆ ನೆರೆದಿದೆ (ಸಮಜೀ. ೪೫ ಪೀಠಿಕೆ) ; ಮೇಳದವರು ಈ ತೆರನ ವಿಷಮದಾಂಪತ್ಯದ ವಿಧಿವಿಲಾಸವನ್ನು ಕಂಡು ಕಳವಳಿಸಿದರು (ಬದ್ಧಪ್ರ. XX. ಪೀಠಿಕೆ). [ಸಂ.]

**ವಿಷಮದಾರಿ** (ನಾ). ಒಂದು ಬಗೆಯ ಸಸ್ಯ : "ಇಬ್ಬನೆ . . . ವಿಷಮದಾರಿ, ಪರಲೆ, ಯಸಗ, ಮದರಾಸ್‌ಮಲ್ಲಿಗೆ" (ಸಸ್ಯನಿ. ೩೭). [?]

**ವಿಷಮನಯನ** (ನಾ). = ವಿಷಮಗೋ : ಬಸವನಸದೃಶಕೀರ್ತಿ ಪರ್ಬಿತು ದೆಸೆದೆಸೆಯೊಳಾ ವಿಷಮನಯನನ ಲಸಿತಸಿತಭಸಿತಾಂಗರಾಗಪ್ರಭೆ ಮುಸುಕಿತೆನಲು (ಬಸಪು. ೧೨-೩೭). [ಸಂ.]

**ವಿಷಮಪರೀಷಹ** (ನಾ). [ಜೈನ] ಸಾಧನೆಯ ಹಾದಿಯಲ್ಲಿ ಉಂಟಾಗುವ ತೀವ್ರವಾದ ಅಡ್ಡಿ : [ದಮ]ಂ ಶಮದಿಂ ತತ್ಕ್ಷುಧಾಪಿಪಾಸಾದಿ ದ್ವಾವಿಂಶತಿ ವಿಷಮಪರೀಷಹವಂಶಮನಶ್ರಮದಿನಾ ಮುನೀಂದ್ರಂ ಗೆಲ್ದಂ (ಶಾಂತಿಪು. ೯-೧೧೯). [ಸಂ.]

**ವಿಷಮಪಾದ** (ನಾ). [ಛಂದ] ಅಸಮಸಂಖ್ಯೆಯ ಪಂಕ್ತಿ ; ಬೆಸಸಂಖ್ಯೆಯ ಸಾಲು : ವಿಷಮಪಾದಗಳಲ್ಲಿ ನಾಲ್ಕನೆಯಕ್ಷರದ ಮುಂದೆ ಯಗಣವು ಬರಬೇಕು (ಕೈಪಿಡಿ. ೧೧೩). [ಸಂ.]

**ವಿಷಮಪ್ರದೇಶ** (ನಾ). ಕಷ್ಟಕರವಾದ ಸ್ಥಳ : ಮಹೇಂದ್ರಸಿಂಹನೊರ್ವನೆ ನಾನಾವಿಧ ಗಿರಿಗಹನವಿಷಯವಿಷಮಪ್ರದೇಶಂಗ[ಳುಮಂ] . . . ಕಟಿದು ಪೋಗಿ (ಪದ್ಮಾರಾ. ೫೪-೮). [ಸಂ.]

**ವಿಷಮಬಂಧ** (ನಾ). [ಕಾವ್ಯಮೀ] ಕಾವ್ಯಬಂಧಗಳಲ್ಲಿ ಒಂದು ; ಮೃದು ಮತ್ತು ಸ್ಫುಟ ವರ್ಣಗಳಿಲ್ಲದ, ಕೇಳುವುದಕ್ಕೆ ಅಹಿತಕರವಾದ ಒಂದು ಬಗೆಯ ಕಾವ್ಯರಚನೆ : ಇಂತಿದು ಸಮಬಂಧ ದ್ವಿತಯಾಂತರಮಾ ವಿಷಮಬಂಧ ಮಿನ್ನಿಂತಕ್ಕುಂ ಚಿಂತ್ಯಕಸುಖಾಕ್ರಾಂತರ್ ಸಂತುಷ್ಟೈಕಾಗ್ರಚಿತ್ತರಾದರ್ ತಮ್ಮೊಳ್ (ಕವಿರಾ. ೨-೫೯). [ಸಂ.]

**ವಿಷಮಬಂಧನ** (ನಾ). = ವಿಷಮಬಂಧ : ಸತತಂ ಭಯಾನಕೋದ್ಯತ್ಸುರಸಂ ಕರಂ ವಿಷಮಬಂಧನದಿಂ (ಕವಿರಾ. ೨-೧೦೦). [ಸಂ.]

**ವಿಷಮಬಾಣ** (ನಾ). ಬೆಸಸಂಖ್ಯೆಯ ಬಾಣಗಳುಳ್ಳವನು ; ಪಂಚಬಾಣ ; ಮನ್ಮಥ : ಧೃತವಿಷಮಬಾಣನಂ ಜನಪತಿ ಗೆಲ್ದಪೊಲಾತನಂ . . . ಗೆಲ್ದು (ಶಾಂತಿಪು. ೫-೫೭). [ಸಂ.]

**ವಿಷಮಭಾಗಾರ** (ನಾ). [ಗಣಿತ] ಬೆಸಸಂಖ್ಯೆಯ ಭಾಗಾಹಾರ : ಆಱು ಭಾಗಾರ ವಿಷಮಭಾಗಾರ . . . ಇವು ಮೊದಲಾದ ಲೆಕ್ಕಾಚಾರಗಳು ಗುಣಿಸಿ ಭಾಗಿಸುವ ವಿವರಾ (ಭಾಸ್ಕರ. ೧-೩). [ವಿಷಮ + ಭಾಗಾರ (< ಭಾಗಾಹಾರ)]

**ವಿಷಮಭುಜಂಗಿ** (ನಾ). ಭಯಂಕರವಾದ ಹೆಣ್ಣುಹಾವು ; ಉಗ್ರವಾದ ನಾಗಿಣಿ : ನಿಮ್ಮ ಮಗಳನೀತಂ ವಿಷಮಭುಜಂಗಿಯೆಂದನೆನೆ ಮುಳಿದು (ಚಾಪುಂಪು. ೭೪). [ಸಂ. ವಿಷಮಭುಜಂಗೀ]

**ವಿಷಮಮತಿ** (ನಾ). ನೀಚಬುದ್ಧಿ : ಮಾತ್ಸರ್ಯಮಹಾವಿಷಮಮತಿಯಿಂದೆ ದೋಷಾಮಿಷಮನೆ ಪೊರ್ದಿಪ್ಪುವಲ್ತೆ ಕುಕವಿಬಕಂಗಳ್ (ಆದಿಪು. ೧-೨೨). [ಸಂ.]

**ವಿಷಮಯತಿ** (ನಾ). [ಸಂಗೀತ] ಆರುವಿಧವಾದ ಯತಿಗಳಲ್ಲಿ ಒಂದು : ಯತಿಯಲ್ಲಿ ಆರು ವಿಧ. ಕ್ರಮವಾಗಿ ಅವು — (೧)ಸಮಯತಿ . . . (೫) ಮೃದಂಗಯತಿ ಮತ್ತು (೬) ವಿಷಮಯತಿ . . . ವಿಷಮಯತಿ – ಯಾವ ಕ್ರಮವನ್ನೂ ಅನುಸರಿಸದೆ ಅಂಗಗಳು ಬರುವುದು (ಸಂಗೀತಂ. ೫೮). [ಸಂ.]

**ವಿಷಮರಣ** (ನಾ). ಉಗ್ರ ಯುದ್ಧ, — ಕಾದಾಟ : ಧಣು ಧಣು ವಿಷಮರಣ ನರಸಿಂಹ ಜಾಗೆಂದುದು ಭಟಸ್ತೋಮ (ಕುವ್ಯಾಕ. ೨೮-೮). [ಸಂ.]

**ವಿಷಮರತಿ** (ನಾ). ಸಮವಲ್ಲದ ರತಿ ; ವಿಕೃತಕಾಮ : ಆ ಮಲ್ಲಣಿಯ ಮಂದಿರದ ಮುಂದೆ ನಿಂದಿರಲವಳಾತ್ಮೆಯರು ನಿರ್ಬಂಧದಿಂದಿರ್ದು ವಿಷಮರತಿಯೊಳ್ ನೃಪನೊಳು ಪೊರಮಟ್ಟು (ಕುಮಾಪು. ೩-೧೧೫). [ಸಂ.]

**ವಿಷಮರ್ತು** (ನಾ). ಪ್ರತಿಕೂಲವಾದ ಋತು, — ಕಾಲ : ಓಮಮುಂ ಗ್ರೀಷ್ಮಮು ಮೆಂಬಿವಾ ರಿತುಗಳುಂ ಶೀತಕ್ಕಮುಷ್ಣಕ್ಕಮಗ್ರಿಮಧಾಮಂಗಳಸೌಖ್ಯದಂಗಳದಟಿಂದಂ . . . ನಿಂದ್ದಂತೆ ಕಾರುಂ ಬಸಂತಮ ನಾಡೊಳ್ ವಿಷಮರ್ತುಗಳ್ ಪುಗುಗುಮೇ ಪುಣ್ಯಾ ಪ್ರಜಾವಾಸದೊಳ್ (ಶಾಂತಿಪು. ೯-೧೬೫). [ಸಂ.]

**ವಿಷಮವಿಕ್ರಮ** (ನಾ). ಅಸಾಮಾನ್ಯನಾದ ಪರಾಕ್ರಮಿ ; ವಿಷ್ಣು : ಹೆಸರುಗೊಂಬರು ವೀರರಾವನ ವಿಷಮವಿಕ್ರಮನೆಂದು ನಿನ್ನೀ ಗಸಣಿಯನು ಘಳಿಗೆಗೆ ಗತಾಯುವ ಮಾಡನೇ (ನಿಭಾಗ. ೩-೭-೨೭). [ಸಂ.]

**ವಿಷಮವಿಗ್ರಹ** (ನಾ). = ವಿಷಮರಣ : ಈಗಳೊಬ್ಬನೆ ವಿಷಮವಿಗ್ರಹಯಾಗದಲಿ . . . ತೋಟುವೆನು ಸ್ವೈರಿಸಿಯೆ (ಕುವ್ಯಾಕ. ೧೫-೧೨). [ಸಂ.]

**ವಿಷಮವಿವಾಹ** (ನಾ). ಏರುಪೇರಾದ ಲಗ್ನ ; ಹೊಂದಾಣಿಕೆಯಿಲ್ಲದ ಮದುವೆ : ಆ ಸಂಬಂಧ ವಿಷಮವಿವಾಹಕ್ಕೆ ದಾರಿಯಾಗಬಹುದೆಂದು ಅವಳು ಭಾವಿಸಿದ್ದಳು (ಪುನರು. ೪೧೭). [ಸಂ.]

**ವಿಷಮವಿಷಧರ** (ನಾ). ೧. ಭಯಂಕರವಾದ ವಿಷವನ್ನು ಹೊಂದಿದುದು ; ಸರ್ಪ : ಅಜಗರವೃತ್ತಾಂತಮಂ ಬೆಸಗೊಂಡು ವಿಷಮವಿಷಧರನಾತ್ಮೀಯಜನಕನೆಂದ ಱಿದು ತತ್ ಸಮೀಪಕ್ಕೆ ವಂದು (ಆದಿಪು. ೨-೧೫ವ). ೨. (ಸಮುದ್ರಮಥನಕಾಲದಲ್ಲಿ ಉತ್ಪನ್ನವಾದ) ವಿಷವನ್ನು ಕುಡಿದು ಕುತ್ತಿಗೆಯಲ್ಲಿ ಧರಿಸಿದವನು ; ವಿಷಕಂಠ ; ಶಿವ : ಬಂದಂ . . . ಅಮೃತಮಥನೋದ್ಭೂತವಿಷಮವಿಷಧರನೆಂಬ ಅಮಮ ಬಂದಂ ಜನನಮರಣವರ್ಜಿತನೆಂಬ (ನಂಬಿರ. ೭-೧೧೫). [ಸಂ.]

**ವಿಷಮವೃತ್ತ** (ನಾ). [ಛಂದ] ಅಕ್ಷರವೃತ್ತದ ನಾಲ್ಕು ಪಾದಗಳೂ ಬೇರೆ ಬೇರೆ ಲಕ್ಷಣಗಳಿಂದ ಕೂಡಿರುವುದು ; ಸಮವಲ್ಲದ ಸಾಲುಗಳನ್ನು ಅಥವಾ ಗಣವಿನ್ಯಾಸವನ್ನು ಹೊಂದಿರುವ ಪದ್ಯ : ನಾಲ್ಕು ಪಾದಗಳೂ ಬೇರೆ ಬೇರೆ ಲಕ್ಷಣದಿಂದ ಕೂಡಿರುವುದು ವಿಷಮವೃತ್ತವು ; ಇದು ಕನ್ನಡದಲ್ಲಿ ಬಳಕೆಯಲ್ಲಿಲ್ಲ (ಕೈಪಿಡಿ. ೭೮). [ಸಂ.]

**ವಿಷಮಶೀತಜ್ವರ** (ನಾ). = ವಿಷಮಜ್ವರ : ನೆಲ್ಲಿಕಾಯಿ, ತಾರೇಕಾಯಿ . . . ಕಷಾಯವಂ ಮಾಡಿ ಕೊಡಲು ವಿಷಮಶೀತಜ್ವರ ಮಾಣುವುದು (ವಿವೈ. ೧೭೭) ; ಕುಮುದ ಒಂದು ಘೋರ ವಿಷಮಶೀತಜ್ವರದಿಂದ ಸತ್ತಳು (ಹೊಸಚ್ಚ. ೧೪). [ಸಂ.]

**ವಿಷಮಶೀಲ** (ಗು). ೧. ಕೆಟ್ಟತನದಿಂದ ಕೂಡಿದ ; ದುಷ್ಟತನದ. (ನಾ). ೨. ಕೆಟ್ಟನಡತೆಯುಳ್ಳವನು ; ದುರಾಚಾರಿ : ಏನಪ್ಪೊಡೆ ವಿಷಮಶೀಲಂ (ಪಂಚತಂ. ೧೨೫-೧೨). [ಸಂ.]

**ವಿಷಮಸಂಖ್ಯೆ** (ನಾ). ಅಸಮಸಂಖ್ಯೆ ; ಬೆಸಸಂಖ್ಯೆ. [ಸಂ. ವಿಷಮಸಂಖ್ಯಾ]

**ವಿಷಮಸಂಧಿ** (ನಾ). ಇಕ್ಕಟ್ಟಿನ ಪ್ರಸಂಗ ; ಬಿಕ್ಕಟ್ಟು : ಅದು ಕಾರಣ ಇಂಥ ವಿಷಮಸಂಧಿಯಲ್ಲಿ ಕುಮಾರನಾದ ರಾಮಭದ್ರನು ಏನು ಮಾಡಿಯಾನು? (ಕಗವಿ. ೧೧೨ ಅಕ್ಕರಾನಾಮೃತರೆತ್ರ ಕಥೆ) ; ಇದು ವಿಷಮಸಂಧಿ ವ್ಯಾಳೆ (ಹೃದರ. ೩೮). [ಸಂ.]

**ವಿಷಮಸನ್ನಿ** (ನಾ). ಜ್ವರವು ತೀವ್ರವಾದ ಅವಸ್ಥೆಯನ್ನು ಮುಟ್ಟಿದಾಗ ಉಂಟಾಗುವ ಉನ್ಮಾದ : ಕಡುಜ್ವರವು, ಸಂತಾಪವು . . . ಮೂರ್ಛೆಯು ಇವು ಮುಂತಾದ ಲಕ್ಷಣಗಳೊಡನೆ ಯುಕ್ತವಾಗಿರ್ಪುದೆ ವಿಷಮಸನ್ನಿಯ ದೋಷವೆಂದರಿವುದು (ಸಕವ್ಯ. ೧೭೦). [ವಿಷಮ + ಸನ್ನಿ]

**ವಿಷಮಸನ್ನಿವೇಶ** (ನಾ). = ವಿಷಮಸಂಧಿ : ಇಂಥ ವಿಷಮಸನ್ನಿವೇಶದಲ್ಲೂ ಸಹ . . . ಸನ್ಮಾರ್ಗಪ್ರವರ್ತಕರ ನಾಯಕತ್ವ ಆರ್ಯಸಂಸ್ಕೃತಿಯ ರಕ್ಷಕವಾಯಿತು (ಋಗ್ಸಾರ. ೧೧೦ ಪೀಠಿಕೆ). [ಸಂ.]

**ವಿಷಮಸೂಚಿ** (ನಾ). [ನಾಟ್ಯ] ಇಪ್ಪತ್ತುಮೂರು ಬಗೆಯ ದೇಶೀಯ ಸ್ಥಾನಕಗಳಲ್ಲಿ ಒಂದು : ಸ್ವಸ್ತಿಕ . . . ವಿಷಮಸೂಚೀ . . . ವೃಷಭಾಸನ — ಈ ಇಪ್ಪತ್ತುಮೂಱು ದೇಶೀಯಸ್ಥಾನಕಂಗಳ್ (ಲಾಸ್ಯರಂ. ೬-೧೨ ವ). [ಸಂ.]

**ವಿಷಮಾಕ್ಷ** (ನಾ). = ವಿಷಮಗೋ : ಹಸಿವಿನಲ್ಲಿ ವಿಷಯದಲ್ಲಿ ಭವಿಯ ಬೆರಸಿದ ನಾದರೆ ಅವ ವಿಷಮಾಕ್ಷ ನಿಮಗೆ ದೂರ (ದೇದಾವ. ೫೩-೧೦೭) ; ಕಾಮಾರಿಗೆ ಶೂಲಿಗೆ ವಿಷಮಾಕ್ಷಗೆ . . . ನುಡಿದಂ (ಉದ್ಭದೇ. ೩-೫೭). [ಸಂ.]

**ವಿಷಮಾಗ್ನಿ** (ನಾ). ನಾಲ್ಕುಬಗೆಯ ಜಠರಾಗ್ನಿಗಳಲ್ಲಿ ಒಂದು : ದೇಹದಲ್ಲಿ ಜಠರಾಗ್ನಿಯು ನಾಲ್ಕು ತೆರನಾಗಿರುವುದೆಂತೆಂದೊಡೆ — ಮಂದಾಗ್ನಿ, ತೀಕ್ಷ್ಣಾಗ್ನಿ, ವಿಷಮಾಗ್ನಿ, ಸಮಾಗ್ನಿಯೆಂಬ ನಾಲ್ಕು ವಿಧವಾದ ಅಗ್ನಿಗಳಲ್ಲಿ . . . ವಾತಾಧಿಕ್ಯದಿಂದ ವಿಷಮಾಗ್ನಿಯೂ . . . ಉಂಟಾಗಿರುವುದು (ಸಕವ್ಯ. ೧೫). [ಸಂ.]

**ವಿಷಮಾಟವಿ** (ನಾ). ಭಯಂಕರವಾದ ಕಾಡು ; ಘೋರಾರಣ್ಯ ; ಕಗ್ಗಾಡು : ತಟಿದು ಪಡಲ್ವಡಿಸೆನೆ ಖಚರಸ್ಯೆನ್ಯವಿಷಮಾಟವಿಯಂ (ಶಾಂತಿಪು. ೫-೪೮) ; ಆ ವಿದ್ಯೆ ಗಗನತಳದಿಂದಾ ವಧುವಂ ಮೆಲ್ಲನುಯ್ದು . . . ಮಹಾವಿಷಮಾಟವಿಯೊಳಿರಿಸಿ ಪೋದತ್ತಾಗಳ್ (ಪಂರಾಮಾ. ೧೪-೫೩). [ಸಂ.]

**ವಿಷಮಾಧ್ವ** (ನಾ). ದುರ್ಗಮವಾದ ದಾರಿ : "ವಿಷಮಾಧ್ವಮುಂ ವಿಪಿನಮುಂ ಕಾಂತಾರಮಕ್ಕುಂ" (ನಾನಾರ. ೧೦೭). [ಸಂ. ವಿಷಮಾಧ್ವನ್]

**ವಿಷಮಾಯುಧ** (ನಾ). = ವಿಷಮಬಾಣ : "ಪ್ರದ್ಯುಮ್ನಃ . . . ವಿಷಮಾಯುಧಃ . . . ಮನೋಭವಃ — ಈ ೨೮ ಕಾಮ(ದೇವ)ನ ಪೆಸರ್" (ಹಲಾಯು. ೭-೩೮) ; ಕೋಮಲಾಂಗುಳಿಗಳದೇಂ ಬಗೆಯಂ ಬೆದಱಿಪುವೊ ಪುಣಂಬುಗಳೆಂಬಂತಿಂಬುವೆತ್ತು ವಿಷಮಾಯುಧನಾ (ಪುಷ್ಪಪು. ೩-೨೭). [ಸಂ.]

**ವಿಷಮಾಲಂಕಾರ** (ನಾ). "ಪರಸ್ಪರ ಅನುಗುಣವಲ್ಲದ ಪದಾರ್ಥಗಳು ಒಟ್ಟಿಗೆ ಸೇರಿವೆ ಎಂದು ವರ್ಣಿಸಿದರೆ ವಿಷಮಾಲಂಕಾರವಾಗುವುದು" (ಕೈಪಿಡಿ. ೨೭೯) : ಆವ ವಸ್ತುವಿಗೆ ತನ್ನ ರೂಪಕ್ಕೆ ತಕ್ಕುದಾಗಿಲ್ಲದಂತಹದರಲ್ಲಿ ತಾನಿರಲ್ಕೆ ಈ ಎರಡರ ಸಂಬಂಧವು ವರ್ಣಿಸೆ ವಿಷಮಾಲಂಕಾರವೆನಿಸುವದು (ಕುವಲ. ೭೮-೧೭). [ಸಂ.]

**ವಿಷಮಾವಗ್ರಹ** (ನಾ). ತೀಕ್ಷ್ಣವಾದ ಮಾತು ; ಕ್ರೂರಶಾಪ : ಶಿವ ಶಿವ ವಿಗ್ರಹಪ್ರತಿಮುಖದ ವಿಷಮಾವಗ್ರಹದಲಿದು ಬೆಂದು ಹೋಗದೆ ಭರತಸಂತಾನ (ಕುವ್ಯಾಸ. ೧೭-೫೨). [ಸಂ.]

**ವಿಷಮಾವಸರ** (ನಾ). ಬಹಳ ಜರೂರಾದುದು ; ಅತ್ಯಂತ ತುರ್ತಾದುದು : ಇದು ಮಹಾಸ್ವಾಮಿಯವರ ಹೆಸರಲ್ಲಿ ಮುದ್ರೆಯಲ್ಲಿ ಬಂದಿರುವ ವಿಷಮಾವಸರದ ನಿರೂಪ (ಚಟ್ಟಿಆ. ೭೭-೨೭). [ಸಂ.]

**ವಿಷಮಾವಸ್ಥೆ** (ನಾ). ವಿಕೋಪದ ಸ್ಥಿತಿ : ಹದಗೆಟ್ಟ ಪರಿಸ್ಥಿತಿ : ಪ್ರಕೃತಿಯು ಚಿರಕಾಲ ಸಾಮ್ಯಾವಸ್ಥೆಯಲ್ಲಿದ್ದು ಆಕಸ್ಮಿಕವಾಗಿ ವಿಷಮಾವಸ್ಥೆಯನ್ನು ಹೊಂದಲಾರದು (ಭಾರದ. ೨೩೦). [ಸಂ. ವಿಷಮಾವಸ್ಥಾ]

**ವಿಷಮಾಸ್ತ್ರ** (ನಾ). = ವಿಷಮಬಾಣ : ಅಂತು ದುರ್ಯಶಃಪದಮುಂ . . . ದುರ್ಘಟ ಮುಮನಿಪೆಡೆಯೊಳೆರ್ದೆಗೆಟ್ಟದೊಂದವಳ್ಗೆಯಿಂದೆಸಗಿದಪಂ ವಿಷಮಾಸ್ತ್ರಂ (ಕಾದಂಪೂ. ೮೫೭) ; ಬನದೊಳಗೆ ಬಿಸುಟ್ಟು ಪೋದ ವಿಷಮಾಸ್ತ್ರನ ನಟ್ಟನ ಬಾಣಾವಳಿಯೆನಿಸಿದುವನೂನ ಕುಸುಮಾವಕೀರ್ಣಬಾಣಾವಳಿಗಳ್ (ಚಂದ್ರಪ್ರ. ೨-೯೮). [ಸಂ.]

**ವಿಷಮಾಹಿ** (ನಾ). ಭಯಂಕರವಾದ ಹಾವು ; ಕ್ರೂರಸರ್ಪ : ಆ ವಿಷಮಾಹಿಯ ವಿಷಮುಖ ಪಾವಕನಿಂ ಪಾಱುತಿರ್ಪ ಖಗಕುಳಮುಂ . . . ಬೇವುದು ಯೋಜನಪರಿ ಪ್ರಮಾಣಾಂತರದೊಳ್ (ಜಗಪು. ೩-೮೧). [ಸಂ.]

**ವಿಷಮಿತ** (ಗು). ಏರುಪೇರಾದ ; ಅಸಮವಾದ : ವದನಾಂಬುಜಮಾಯತೋನ್ನತ ಭ್ರೂಚಾಪಂ ಮುದಮಂ ಪಡೆದತ್ತೆನಗೆಂಬುದು ವಿಷಮಿತರೂಪ ವಿಷಮರೂಪಕ ಮಕ್ಕುಂ (ಕವಿರಾ. ೩-೧೭). [ಸಂ.]

**ವಿಷಮಿಸು** (ಕ್ರಿ). ೧. ನಂಜಾಗು ; ಸೋಂಕು ತಗಲು : ರಂಗಪ್ಪನ ಚಿಕ್ಕಪ್ಪನಿಗೆ ಆಪರೇಷನ್ ಆಗಿ ಅದೇನೋ ವಿಷಮಿಸಿಕೊಂಡು ಸತ್ತುಹೋಗಿದ್ದನು (ಘಾಟೀಮು. ೪೯). ೨. ಹದಗೆಡು ; ವಿಕೋಪಕ್ಕೆ ಹೋಗು ; ಉಲ್ಬಣವಾಗು : ಹೀಗೆ ಎಲ್ಲವೂ ವಿಷಮಿಸಿಕೊಂಡಿರುವಾಗ ಒಬ್ಬ ಭಿಕ್ಷುವು ಅವರ ಮನೆಗೆ ಬಂದನು (ದೇಶಾಂಕ. ೧೦೩) ; ವ್ಯಾಧಿಯು ಎಲ್ಲಿ ವಿಷಮಿಸಿಬಿಡುವುದೋ ಎಂಬ ಶಂಕೆ ನನಗೆ (ಚಂಗಾಳ್ಳ. ೧೫೭). [ವಿಷಮ + -ಇಸು]

**ವಿಷಮುಂಗುಲಿ, ವಿಷಮೂಂಗಿಲಿ** (ನಾ). ಒಂದು ಬಗೆಯ ಸಸ್ಯ : ವಿಷಮೆಕ್ಕೆಗೆ ಗಿಣಿಮೂಗಂ ವಿಷಮುಂಗುಲಿ[ಪಾಠಾಂ. ರಿ]ಗಂತೆ ಪಾಲು . . . ಉಪವಿಷಮಕ್ಕುಂ (ಖಮದ. ೨-೧೧೯). **ವಿಷಮೂಂಗಿಲಿ** : ವಿಷಮೂಂಗಿಲಿ, ವಿಷಬಿದಿರು (ಸಸ್ಯನಿ. ೪೧). 'ಮುಂಗುರಿ' ಪರಾ. [ದೇ. ॥ ತುಳು. ವಿಷಮುಂಗುಲಿ]

**ವಿಷಮುಷ್ಟಿ** (ನಾ). ಒಂದು ಬಗೆಯ ಔಷಧೀಸಸ್ಯ : ನೇತ್ರಪುಷ್ಪಃ — ವಿಷಮುಷ್ಟಿ" (ಓಷಧಿ. ೪೯) ; ವಿಷಮುಷ್ಟಿ ನಾಂಗುಲಿಕ ಶಶನಯನ ಪಿತ್ತವರರಸವು ತಾಂಬೂಲದೊಡಗೂಡೆ ಸ್ತ್ರೀವಶವು (ಸರ್ವಜ್ಞ. ೧೯೭೯). [ಸಂ.]

**ವಿಷಮೂಂಗಿಲಿ** 'ವಿಷಮುಂಗುಲಿ' ನೋ.

**ವಿಷಮೂಲಿಕೆ** (ನಾ). ಒಂದು ಬಗೆಯ ಸಸ್ಯ : ವಿಷಮೂಲಿಕೆ, ಕರ್ಕಾಟಶೃಂಗಿ (ವೈದಿಗಿ. ೭೭-೧೩೫೦) ; ವಿಷಮೂಲಿಕೆಯ ಗೆಣಸು . . . ಮೆಣಸಿಗೆಯ ಬೇರು ಇಷ್ಟನ್ನೂ ಚೆನ್ನಾಗಿ ಜಜ್ಜಿ . . . ಮೆಲ್ಲುವುದು (ವಿಷವೈ. ೧೫೫). [ಸಂ. ವಿಷಮೂಲಿಕಾ]

**ವಿಷಮೆ** (ನಾ). ಮೋಸಗಾತಿ ; ವಂಚಕಿ : ವಿಹ್ವಲೆ ವಿಷಮೆ ವಿರಹಿ . . . ತಾಮಸಿಯೆನಿಪ ವನಿತೆಯರ ನಿಜಕೆ ನಿಲಿಸಿ ನಿಶ್ಚೈಸಿದೊಡೆ ಬಳಿಕ ಬಳಲಿಕೆ ಬಾರದೆ (ಜೈಮಿಭಾ. ೫-೬೧). [ಸಂ. ವಿಷಮಾ]

**ವಿಷಮೆಕ್ಕೆ** (ನಾ). ಒಂದು ಬಗೆಯ ಬಳ್ಳಿ ; ಹಾವುಮೆಕ್ಕೆ : ವಿಷಮೆಕ್ಕೆಗೆ ಗಿಣಿಮೂಗಂ . . . ಹಿಂಗು ತಗಚೆಗುಪವಿಷಮಕ್ಕುಂ" (ಖಮದ. ೨-೧೧೯). [ವಿಷ + ಮೆಕ್ಕೆ]

**ವಿಷಮೇಷು** (ನಾ). = ವಿಷಮಬಾಣ : ಇತ್ತಲ್ ವಿಷಮೇಷು ಕೊಂದಪಂ (ಕಾದಂಪೂ. ೮೬೦) ; ವಿಷಮೇಷು ಖಿನ್ನೆಯರ ಚೆನ್ನೆಯರ ರಕ್ಷಣೆಗೆ ನೀನೊಬ್ಬನೇ ಗತಿಯಲ್ಲವೆ? (ಧ್ವನ್ಯಾಲೋ. ೯೨). [ಸಂ.]

**ವಿಷಮೋರಗ** (ನಾ). ೧. ಭಯಂಕರವಾದ ಹಾವು ; ಘಟಸರ್ಪ : ಆಶೀವಿಷವಿಷಮೋರಗರಾಶಿಯನೊಳಕೆಯ್ದು ವಿಪುಳಪಾತಾಳನಿವಾಸಾಶಂಕೆಯನೀವುದು . . . ಜಯನಶಾಲಿಕೆ (ಚಂದ್ರಪ್ರ. ೧-೧೪೯). ೨. ಆದಿಶೇಷ : ವಿಷಮೋರಗನಂತೀ ಜಗತೀತಳಮನಾನಂತನವನೀಕಾಂತಂ (ಮಲ್ಲಿಪು. ೩-೭). [ಸಂ.]

**ವಿಷಯ** (ನಾ). ೧. ಇಂದ್ರಿಯಗೋಚರವಾಗುವ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬ ಜ್ಞಾನೇಂದ್ರಿಯಗಳು : ವಿಷಯಂಗಳಿದಱ ಕೈವಶವಾದುವು (ಮನೋವಿ. ೧-೧೪). ೨. ಕಿವಿ, ನಾಲಗೆ, ಕಣ್ಣು, ಮೂಗು ಮತ್ತು ಚರ್ಮವೆಂಬ ಐದು ಕರ್ಮೇಂದ್ರಿಯಗಳು : ಸಂಸಾರವೆಂಬ ಸರ್ಪ ಮುಟ್ಟಲು ಪಂಚೇಂದ್ರಿಯವಿಷಯವೆಂಬ ವಿಷದಿಂದೆ ಆನು ಮುಂದುಗೆಟ್ಟೆನಯ್ಯಾ (ಬಸವ. ೨೦). ೩. ಇಂದ್ರಿಯಾನುಭವ ; ಇಂದ್ರಿಯಾರ್ಥ : ಅನತಿಂದ್ರಿಯಮುಂ ವಿಷಯಮನನಾಕುಳಂ ಬಿಟ್ಟು ದರ್ಶನೇಂದ್ರಿಯಮೊಂದಕ್ಕನುವಶಮಾದವು (ಪಂರಾಮಾ. ೫-೬೭). ೪. ಬಯಕೆಯ ವಸ್ತು ; ಇಚ್ಛಿಸುವ ಪದಾರ್ಥ : ಇಂತೀ ಪ್ರಾಣಿಗಳು ಒಂದೊಂದು ವಿಷಯದಿಂದೆ ಬಂಧನಕ್ಕೊಳಗಾದುವು (ಅಪಂಡೇ. ೭-೪) ; ವಿಷಯಗಳ ಚಿಂತನದಿಂದ ಮನುಷ್ಯನಿಗೆ ಅವುಗಳಲ್ಲಿ ಆಸಕ್ತಿ ಹುಟ್ಟುತ್ತದೆ (ದರ್ಮಸಾ. ೧೩೨). ೫. ಭೋಗಾಭಿಲಾಷೆ ; ಇಂದ್ರಿಯಚಾಪಲ್ಯ ; ಕಾಮಾಸಕ್ತಿ : ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ (ಬಸವ. ೫೧) ; ವಿಷಯಂಗಳುಳ್ಳ ಮನುಜಂಗೆ ಗುರುಕರುಣ ವಶವರ್ತಿಯಹುದೆ (ಸರ್ವಜ್ಞ. ೯೩). ೬. ಕಾವ್ಯ, ಕಥೆ ಮುಂತಾದುವುಗಳ ವಸ್ತು : ವರಗೀತಗುಣೋದಯೈಕಾಂತ[ಕಾಂತ]ವಿಷಯಾಶಯರಾಗಿ ನಿರಾಕುಳಂ ಸಂತತಂ ನುಡಿಗಳೊಳ್ ಬಗೆ ಪೆರ್ಚಿರೆ ಪೇಟ್ಟುವರ್ ಸಂತಸಂಬಡಿಸುವರ್ (ಕವಿರಾ. ೩-೨೨೪). ೭. ವಿದ್ಯಾಭ್ಯಾಸದಲ್ಲಿ ವಿದ್ಯಾರ್ಥಿಯು ಆಯ್ಕೆಮಾಡಿಕೊಳ್ಳುವ ಭಾಗ : ನಾವು ಕಾಲೇಜಿಗೆ ಸೇರುವಾಗ ಯಾವಯಾವ ವಿಷಯ (Subject) ತೆಗೆದುಕೊಳ್ಳಬೇಕೆಂದು ಚರ್ಚೆ ನಡೆಸುತ್ತಿದ್ದವು (ಆಲಹೂ. ೯೧). ೮. ವಿಚಾರ : ಸಂಗತಿ : ಏತರ ವಿಷಯವಾಗಿ ವಿಚಾರವು ನಡೆದಿದೆ (ಬ್ರಹ್ಮಭಾ. ೨-೩೭). 'ವಿಷಯಾಂತರ' ಪರಾ. ೯. ಗುರಿ ; ಧ್ಯೇಯ. ೧೦. ದೇಶ ; ನಾಡು : ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಳಯ ವಿಲೀನವಿಶದ ವಿಷಯವಿಶೇಷಂ (ಕವಿರಾ. ೧-೩೬) ; ಆ ಕುರುಜಾಂಗಣವಿಷಯದೊಳ್ ಜಲಜಲಮೊ[ಟ್ಟು]ತಿರ್ಪ ಪರಿಕಾಲ್ . . . ಒಪ್ಪಿ ತೋಱುಗುಂ (ಪಂಪಭಾ. ೧-೫೧ ವ) ; ಯಜ್ಞೀಯಾಶ್ವಂ ನಾನಾ ವಿಷಯಂಗಳೊಳಂ ಮನೋರಥದ ವಾಜಿಯ ಪಾಂಗಿನಿಂ ತೊಟತೊಟಲ್ದು ಬರವರೆ (ರಾಮಾಶ್ವ. ೫೧-೧೨). ೧೧. ಆಶ್ರಯ ; ನೆಲೆ : ಅಂತತಿಶಯಶೋಭಾವಿಷಯಮಾದ ವಿಷಯಾಂತರಾಳದೊಳ್ . . . ಎಸೆದಿರ್ಪುದಲ್ತೆ ಮಧುರಾಪುರಂ (ಜಗವಿ. ೨-೧೧ ವ). ೧೨. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ಮದನನ ತಂದೆಯ ಗಣಮವು ವಿಷಯದೊಳಿರೆ ಗುರು ಮುಂದೊದವಿರೆ (ಛಂದೋಂಬು. ೫-೨೫೫) ; ಶರ ಬಾಣ ವಿಷಯ ಪಾಂಡವ ಪುರ ವೈರಿಮುಖಂಗಳೈದಱ ನಾಮಂ (ವ್ಯವಹಾ. ೯-೫). [ಸಂ.]

**ವಿಷಯಕ** (ಗು). ೧. ಯಾವುದಾದರೂ ವ್ಯಕ್ತಿ ಅಥವಾ ವಸ್ತುವಿಗೆ ಸಂಬಂಧಿಸಿದ : ಯಾವುದೊಂದು ಕಾರ್ಯದಲ್ಲಿ ಪ್ರವೃತ್ತಿಯುಂಟಾಗಬೇಕಾದರೆ ಮೊದಲು ಅದರ ವಿಷಯಕ ಜ್ಞಾನ, ನಂತರ ಇಚ್ಛೆ, ಅನಂತರ ಪ್ರವೃತ್ತಿ (ಮಾವಾದ. V, ಎರಡು ಮಾತುಗಳು). (ನಾ). ೨. ಯಾವುದಾದರೂ ವ್ಯಕ್ತಿ ಅಥವಾ ವಸ್ತುವಿಗೆ ಸಂಬಂಧಿಸಿದುದು : ಪಂಪನ ಪ್ರೇರಣೆಯಿಂದ ಮತ್ತು ಅವನ ವಿಷಯಕವಾದ ಹೆಮ್ಮೆಯಿಂದ ಅಭಿನವಪಂಪ ನಾದಂತೆ . . . ಕುಮಾರವಾಲ್ಮೀಕಿ ತಲೆದೋರಿದನು (ಕಸಾಚ. ೨೬೪). [ಸಂ.]

**ವಿಷಯಕಾಂಕ್ಷೆ** (ನಾ). ೧. ವಸ್ತುವಿನ ಬಯಕೆ, — ಆಸೆ : ಪ್ರಿಯವಿಷಯಕಾಂಕ್ಷೆಯಿಂದಿಂದ್ರಿಯಂಗಳೆಂತೆಯ್ದೆ ಮನಮನಾಶ್ರಯಿಸುಗುಮಂತಯನಯಪರರಯ್ಯರುಮಾಶ್ರಯಿಸಿರ್ದರ್ ವಿಷಯಕಾಂಕ್ಷೆಯಿಂ ಮುರರಿಪುವಂ (ಪಂಪಭಾ. ೯-೧೩). ೨. ರಾಜ್ಯ ಪಡೆಯಬೇಕೆನ್ನುವ ಬಯಕೆ ; ರಾಜ್ಯಾಭಿಲಾಷೆ : ಅಯನಯಪರರಯ್ಯರುಮಾಶ್ರಯಿಸಿರ್ದರ್ ವಿಷಯಕಾಂಕ್ಷೆಯಿಂ ಮುರರಿಪುವಂ (ಪಂಪಭಾ. ೯-೧೩). ೩. ಭೋಗಾಭಿಲಾಷೆ ; ಇಂದ್ರಿಯಲೋಲುಪತೆ : ನಾಗಸೂರಂ . . . ವಿಷಯಕಾಂಕ್ಷೆಯಿಂ ಮದಾಳಿಗೆ ಬಸಮಾಗಿ (ಸುಕುಮಾ. ೭-೩೨ ವ). [ಸಂ. ವಿಷಯಕಾಂಕ್ಷಾ]

**ವಿಷಯಗ್ರಹಣ** (ನಾ). ಗ್ರಂಥ, ಕಾವ್ಯ ಮುಂತಾದುವುಗಳ ವಸ್ತುವನ್ನು ಅರಿತುಕೊಳ್ಳುವುದು : ವಿಷಯಗ್ರಹಣವೋ ವಿಚಾರಮಂಥನವೂ ಅವೆಲ್ಲ ವ್ಯಕ್ತಿತ್ವಕ್ಕೆ ಹೊಸ ಪುಷ್ಟಿಯನ್ನು ನೀಡತಕ್ಕ ಅಂಶಗಳು (ಶಿಕ್ಷದ. ೧೭೯). [ಸಂ.]

**ವಿಷಯರತಿ** (ನಾ). ಕಾಮಾಸಕ್ತಿ : ವಿಷಯರತಿಯುಳ್ಳವಂಗೆ ಈಶ್ವರನ ರತಿಯು ಇನ್ನೆಲ್ಲಿಯದೋ (ಸಿದ್ಧೇವ. ೬೩-೧೧೯). [ಸಂ.]

**ವಿಷಯರಹಿತ** (ನಾ). ಇಂದ್ರಿಯಲಾಲಸೆಯಿಲ್ಲದಿರುವವನು ; ಜಿತೇಂದ್ರಿಯ : ವಿಷಯರಹಿತನ ಮಾಡಿ . . . ಸಲಹಯ್ಯಾ (ಬಸವ. ೫೦). [ಸಂ.]

**ವಿಷಯಲಂಪಟ** (ನಾ). ಇಂದ್ರಿಯಭೋಗದಲ್ಲಿ ಅತ್ಯಾಸೆಯುಳ್ಳವನು ; ವಿಷಯಾಸಕ್ತ ; ಅತಿಕಾಮುಕ : ವಿಷಯಲಂಪಟರಕ್ಷ್ಮಲೀಲಾವ್ಯಸನಕೋಸುಗ ವೊತ್ತೆಯಿಟ್ಟರು ವಸುಮತಿಯನು (ಕುವ್ಯಾಅ. ೧೭-೧೧) ; ತಾನೊಬ್ಬ ವಿಷಯಲಂಪಟನೆಂದೂ . . . ವ್ಯರ್ಥವಾಗಿ ಅವಳನ್ನು ಕೆರಳಿಸಿದೆನೆಂದೂ ಸ್ಪಷ್ಟಪಡಿಸುತ್ತೇನೆ (ಪುನರು. ೧೩೪). [ಸಂ.]

**ವಿಷಯಲಂಪಟತನ** (ನಾ). ಇಂದ್ರಿಯಲಾಲಸೆ ; ವಿಷಯಾಸಕ್ತಿ : ವಿಷಯಲಂಪಟತನದಲಾವ್ ನಿರ್ಮಿಸಿದೆವಶ್ವತ್ಥಾಮನನು ನಮ್ಮೆಸೆವ ಮೋಹದ ಕಂದನ್ನೆಯೆಲೆ ಪಾರ್ಥ ನೀನೆಮಗೆ (ಕುವ್ಯಾವಿ. ೮-೩೪) ; ಇನ್ನು ಜನರಲ್ಲಿ ಕೇವಲ ಸುಳ್ಳು . . . ವಿಷಯಲಂಪಟತನಾದಿಗಳೇ ಹೆಚ್ಚಾಗುವುವು (ಕಂಬಹು. ೮೭). [ವಿಷಯಲಂಪಟ + -ತನ]

**ವಿಷಯಲಿಪ್ಸೆ** (ನಾ). = ವಿಷಯರತಿ : ವಿಷಯಲಿಪ್ಸೆಯೇ . . . ನನ್ನನ್ನು ನೀನು ಈ ಘಾತಕಕೊಳ್ಳದಲ್ಲಿ ಕೆಡವಿದೆ (ಪ್ರೇಮಾಶ್ರ. ೨೬೨). [ಸಂ. ವಿಷಯಲಿಪ್ಸಾ]

**ವಿಷಯಲೋಭ** (ನಾ). ಇಂದ್ರಿಯಾಪೇಕ್ಷೆ ; ವಿಷಯಾಸಕ್ತಿ : ವಿಷಯಲೋಭದಿನೇನಸ್ವಂತಾನಮನ್ನನೇನಟಲಿಸದೇ (ಪಂರಾಮಾ. ೨-೧೮). [ಸಂ.]

**ವಿಷಯಲೋಲುಪ** (ನಾ). = ವಿಷಯಲಂಪಟ : ಅಚ್ಯುತರಾಯ . . . ವಿಷಯಲೋಲುಪನಾಗಿ ಆಡಳಿತಕ್ಕೆ ಗಮನ ಕೊಡಲಿಲ್ಲ (ಕವಿಕಾ. ೧. ೧೯೭). [ಸಂ.]

**ವಿಷಯವಾಸನೆ** (ನಾ). ಇಂದ್ರಿಯಭೋಗದಲ್ಲಿರುವ ಬಯಕೆ ; ಕಾಮವಾಸನೆ : ಅದಕ್ಕೆ ವಿಷಯವಾಸನೆ ಅಂಟಿಕೊಂಡಿರುವುದಿಲ್ಲ (ಪುನರು. ೭೩). [ಸಂ. ವಿಷಯವಾಸನಾ]

**ವಿಷಯವಿರತಿ** (ನಾ). ಇಂದ್ರಿಯಭೋಗದಿಂದ ದೂರವಿರುವುದು ; ಕಾಮವಾಸನೆಯಿಂದ ಮುಕ್ತವಾಗಿರುವುದು : ಪ್ರತಿಭೆಗೆ ಫಲಮಜೀವಿನ ಗತಿ ಗತಿಗೆ ಫಲಂ ವಿಷಯವಿರತಿ ವಿರತಿಗೆ ಫಲಮಾರ್ಹತ ಪರಮವೀಕ್ಷೆ (ಪುಷ್ಪಪು. ೧೩-೫೪). [ಸಂ.]

**ವಿಷಯಸಂಧಿ** (ನಾ). ನಾಡಿನ ಎಲ್ಲೆ ; ದೇಶದ ಗಡಿ : ಪಾಂಡ್ಯವಿಷಯದ ವಿಷಯಸಂಧಿಯೊಳ್ ಬೀಡುಬಿಟ್ಟು (ಶಾಂತಿಪು. ೧೧-೪ ವ). [ಸಂ.]

**ವಿಷಯಸುಖ** (ನಾ). ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬ ಐದು ವಿಷಯಗಳಿಂದ ಉಂಟಾಗುವ ಆನಂದ ; ಇಂದ್ರಿಯಸುಖ : ಅರಿಗೆ . . . ಸುರಾಂಗನಾಸುರತ ವಿಷಯಸುಖಮಂ ಕೊಟ್ಟಂ (ಕವಿರಾ. ೩-೧೫೯) ; ಶ್ರೀ ಪ್ರಭಾದೇವ್ಯಾದಿಕಂ . . . ವಿಷಯಸುಖಾಸ್ವಾದನರಸಾಮೃತತತ್ಪರನಾಗಿರೆ (ಶಾಂತಿಪು. ೭-೩೬ ವ). [ಸಂ.]

**ವಿಷಯಸೂಚಿ** (ನಾ). ಒಂದು ಗ್ರಂಥದಲ್ಲಿ ಅಡಕವಾಗಿರುವ ವಿಚಾರಗಳನ್ನು ತಿಳಿಸುವ ಪಟ್ಟಿ ; ಪರಿವಿಡಿ ; ಅನುಕ್ರಮಣಿಕೆ : ಈ ಗ್ರಂಥದ ವಿಷಯಸೂಚಿಯ ಭಾಗ ಮುದ್ರಣವಾಗದೆ ಬಿಟ್ಟುಹೋಗಿದೆ (ರೂಢಿ). [ಸಂ.]

**ವಿಷಯಾಂತರ** (ನಾ). ೧. ವಿಚಾರಸರಣಿಯ ಬದಲಾವಣೆ : ಅವರು ಬರುತ್ತಿದ್ದಂತೆ ಇವರಿಬ್ಬರೂ ಆಡುತ್ತಿದ್ದ ಮಾತನ್ನು ನಿಲ್ಲಿಸಿ ವಿಷಯಾಂತರ ಮಾಡಿದರು (ರೂಢಿ). **೨. ನಾಡಿನ ನಡುವಣ ಪ್ರದೇಶ, — ಹರಹು** : ಕೆಯ್ಯೊಲಗಳನೊಪ್ಪಿ ತೋ[ಱ]ಸಿ ನೋಡುಗುಮಾ ವಿಷಯಾಂತರಾಳದೊಳ್ (ಪಂಪಭಾ. ೧-೫೨). [ಸಂ.]

**ವಿಷಯಾತುರ** (ನಾ). ೧. ಇಂದ್ರಿಯಭೋಗಾಭಿಲಾಷೆ ; ವಿಷಯಾಸಕ್ತಿ. ೨. ವಿಷಯಾಸಕ್ತಿಯುಳ್ಳ ವ್ಯಕ್ತಿ : ಗಾತ್ರದೊಳು ವಿಷಯಾತುರಂಗಳಪಾತ್ರ ಪಾತ್ರಂಗಳು (ಬಸಪು. ೪೧-೭೩) ; ಆಸಿಯ ಜವ್ವನೆಯರ ಕಂಡು ವಿಷಯಾತುರರಾಗಿ ಕುಸಿವುತ್ತಿಪ್ಪರು ನೋಡಾ ಹಿರಿಯರು (ಸಿದ್ಧೇಪ. ೪೧-೧೧೧). [ಸಂ.]

**ವಿಷಯಾನಂದ** (ನಾ). ಇಂದ್ರಿಯಗಳಿಂದ ಉಂಟಾಗುವ ಸಂತೋಷ : ಸತಿಸುತಾದಿಗಳ ಮಧ್ಯದಲ್ಲಿರ್ದು ಅವರ ರೂಪುಲಾವಣ್ಯವಯೋವಿಶೇಷಮಂ ನೋಡಿ . . . ಆನಂದಿಸುವದೇ ವಿಷಯಾನಂದವೆನಿಸುವದು (ನಾನಾಗು. ೨೫-೧೮). [ಸಂ.]

**ವಿಷಯಾಭಿಲಾಷೆ** (ನಾ). ಭೋಗಾಭಿಲಾಷೆ ; ಕಾಮಾಸಕ್ತಿ : ನಿನ್ನಂಥವನ ಮನಸ್ಸು ವಿಷಯಾಭಿಲಾಷೆಯಿಂದ ಕೆದಡಿತು (ವಚಕಾ. ೨೧). [ಸಂ. ವಿಷಯಾಭಿಲಾಷ]

**ವಿಷಯಾಭ್ಯಾಸಿ** (ನಾ). = ವಿಷಯಲಂಪಟ : ನಿಲುವೆನು ಮುಕ್ತಿರಾಜ್ಯದಲಿ . . . ವಿಷಯಾಭ್ಯಾಸಿಗೊಮ್ಮೆ ವಿರಕ್ತಿ ದೆಸೆಯಹುದ್ಯೆಸಲೇ (ಕುವ್ಯಾಅ. ೨೧-೪೧). [ಸಂ. ವಿಷಯಾಭ್ಯಾಸಿನ್]

**ವಿಷಯಾಮಿಷ** (ನಾ). = ವಿಷಯಾಭಿಲಾಷೆ : ನೀಂ ವಿಷಧರವಾಗದೆ ಬೇಗಂ ವಿಷಯಾಮಿಷವಿಷಮನುಗುಳ್ದು ನಿರ್ವಿಷನಾಗಾ (ಆದಿಪು. ೨-೧೭) ; ವಿಷಮವಿಷಸದೃಶ ವಿಷಯಾಮಿಷಕಾಂಕ್ಷೆಯ ತಿಣ್ಣವಾಗೆ ಮುತಿಗೆಟ್ಟು ಮುಳೀಮುಸನಾದಂ (ಸುಕುಮಾ. ೮-೩೭). [ಸಂ.]

**ವಿಷಯಾರ್ಥಿ** (ನಾ). = ವಿಷಯಲಂಪಟ : ದೂರಂ ಯುಕ್ತಾಯುಕ್ತವಿಚಾರಂ ವಿಷಯಾರ್ಥಿಗೆ (ಆದಿಪು. ೯-೧೦೨). [ಸಂ. ವಿಷಯಾರ್ಥಿನ್]

**ವಿಷಯಾಸಕ್ತ** (ನಾ). = ವಿಷಯಲಂಪಟ : ಆ ಬಾಲಕರ್ . . . ಸಾರ್ವಭೌಮೋಪಜೀವಿಗಳಂತೆ ವಿಷಯಾಸಕ್ತರುಮೆನಿಸಿ (ಸುಕುಮಾ. ೨-೫ ವ). [ಸಂ.]

**ವಿಷಯಾಸಕ್ತತೆ** (ನಾ). = ವಿಷಯಲಂಪಟತನ : ಅತಿಶಯದಿಂ ವಿಷಯಾಸಕ್ತತೆ ನಿನ್ನನ್ನರುಮನಿಂತು ಮಾಡಿತ್ತು (ಕಾದಂಪೂ. ೭೭೭). [ಸಂ. ವಿಷಯಾಸಕ್ತತಾ]

**ವಿಷಯಾಸಕ್ತಿ** (ನಾ). ಭೋಗಾಭಿಲಾಷೆ ; ಇಂದ್ರಿಯಲೋಲುಪತೆ : ವಿಷಯಾಸಕ್ತಿಯೊಳಾಯಾಸೈಕನಿರತರಾಗಿರ್ಪ ಪ್ರಾಕೃತಜನಂಗಳ ಗಮನಮೇ ಸಮಸ್ತವೇದಿಗೆ ಹೃದಯಂಗಮಮಾಗದು (ಶಾಂತಿಪು. ೪-೧೦೨ ವ). [ಸಂ.]

**ವಿಷಯಿ** (ಗು). ೧. ವಿಷಯಕ್ಕೆ ಸಂಬಂಧಿಸಿದ. (ನಾ). ೨. ವಿಷಯವನ್ನು ತಿಳಿಯುವ ಸಾಧನ ; ಇಂದ್ರಿಯ : ವಿಷಯಿ ಎಂದರೆ ಎಲ್ಲವನ್ನೂ ಅರಿಯುವ ನಮ್ಮ ಆತ್ಮನು. ವಿಷಯವೆಂದರೆ ಆತ್ಮನ ಅರಿವಿಗೆ ಗೋಚರವಾಗುವ ಮನಸ್ಸು, ಇಂದ್ರಿಯ, ಶರೀರ, ಹೊರಗಿನ ವಿಷಯಗಳು — ಇವು (ಬ್ರಹ್ಮಭಾ. ೧ ಅಡಿಟಿ). ೩. ವಿಷಯಲಂಪಟ ; ಕಾಮುಕ : ವಿಷಯಿ ತನ್ನ ಕೇಡಂ ನೋಡಂ (ಪಂಚರಾಮಾ. ೯-೮೭) ; ಬಾರದು ಬಾರದು ವಿಷಯಿಗೆ ಪಶುಪತಿಯ ಬ್ರತವು (ಬಸವ. ೭೭೦). [ಸಂ. ವಿಷಯಿನ್]

**ವಿಷಯೀಕರಣ** (ನಾ). ವಸ್ತುವನ್ನು ಗ್ರಹಿಸುವಿಕೆ : ಸುಖಬದ್ಧನಿಗೆ ಆ ಸುಖದ ವಿಷಯೀಕರಣ ಸುಲಭವಲ್ಲ (ಕಾವ್ಯಕು. ೬೫). [ಸಂ.]

**ವಿಷಯೀಕರಿಸು** (ಕ್ರಿ). ವಸ್ತುವನ್ನಾಗಿ ಮಾಡು ; ವಿಷಯವನ್ನಾಗಿಸು : ವರಋಷಿಗಳಾಜ್ಞೆಯಲಿ ವಿಶ್ವಂಭರನ ವಿಷಯೀಕರಿಸಿ ರಾಜಾಧ್ವರಸಮರ್ಥನ . . . ಅಜೀವತೆಱದಿಂದೆನ್ನ ಮತಿ ಗೋಚರಿಸಿದುದ ಹೇಳುವೆನು (ಕುವ್ಯಾಸ. ೯-೨) ; ಪ್ರತ್ಯಕ್ಷವು . . . ರೂಪ ರಸ ಗಂಧ ಸ್ಪರ್ಶ ಶಬ್ದ ಅಥವಾ ಅವುಗಳಿಗಾಶ್ರಯವಾದ ಸ್ಥೂಲವನ್ನು ವಿಷಯೀಕರಿಸುತ್ತದೆ (ಭಾರದ. ೨೨೯). [ವಿಷಯೀಕರಣ + – ಇಸು]

**ವಿಷಯೇಂದ್ರಿಯ** (ನಾ). ವಿಷಯವನ್ನು ಗ್ರಹಿಸುವ ಅವಯವ ; ಜ್ಞಾನೇಂದ್ರಿಯ. [ಸಂ.]

**ವಿಷರೋಗ** (ನಾ). ನಂಜಿನಿಂದ ಉಂಟಾಗುವ ರೋಗ : (ನೊರೆಹಾಲು) . . . ಸೇವಿಸಲು . . . ನೇತ್ರರೋಗ, ವಿಷರೋಗ ಸಹ ಗುಣಮಕ್ಕುಂ (ಸಕಪ. ೨೮). [ಸಂ.]

**ವಿಷಲ** (ನಾ). ಕೆಡುಕ ; ದುಷ್ಟ : ವ್ಯಭಿಚಾರಿಯಾದ ಸ್ತ್ರೀಯನೂ ಅಂಗೀಕರಿಸಿಕೊಂಡು ಇದ್ದವನೂ ಮಾಹಿಷಿಕನೂ ತನ್ನ ಜಾತ್ಯಾಚಾರಮಂ ಬಿಟ್ಟು ಪರರ ಜಾತ್ಯಾಚಾರದಿಂ ನಡವಂತಾವನು ವಿಷಲನು (ಕಾಶೀಮು. ೨೦೩-೫). [< ಸಂ. ವೃಷಲ]

**ವಿಷಲತೆ** (ನಾ). ಒಂದು ಬಗೆಯ ಬಳ್ಳಿ ; ಹಾವು ಮೆಕ್ಕೆ : ತದೀಯ ಕರ್ಣಾಭ್ಯರ್ಣಮಂ ಪೊರ್ದಿ . . . ಅತಿ ದುಸ್ಸಹವಾರ್ತಾವಿಷಲತೆಯಂ ನಾಂಟಿಸಲ್ (ಜಗವಿ. ೨-೪೩). [ಸಂ. ವಿಷಲತಾ]

**ವಿಷವಕ್ತ್ರ** (ನಾ). ವಿಷಪೂರ್ಣವಾದ ಮುಖವುಳ್ಳದು ; ಸರ್ಪ : ಆ ಕಮಠಂ ವಿಷವಕ್ತ್ರನಾಗಿ ನಾಲಗೆಯೆರಡಾದ ವಾಸುಗಿ ಕರಂ ತಲೆವಾಗಿಯುಂ (ಪುಷ್ಪಪು. ೩-೪). [ಸಂ.]

**ವಿಷವರ್ತುಲ, ವಿಷವರ್ತುಳ** (ನಾ). ೧. ಒಂದನ್ನೊಂದು ತೀವ್ರಗೊಳಿಸುವ ಕ್ರಿಯೆ, ಪ್ರತಿಕ್ರಿಯೆಗಳ ವ್ಯೂಹ ; ವಿಷಚಕ್ರ : ನಾನು ಆ ವಿಷವರ್ತುಲದಲ್ಲಿ ಸಿಕ್ಕಿಕೊಂಡು ಹೊರಬರಲಾರದೆ ಒದ್ದಾಡುತ್ತಿದ್ದೇನೆ (ರೂಢಿ). **ವಿಷವರ್ತುಳ** : ೨. ಒಂದು ನರಕದ ಹೆಸರು : ಐದು ಮುಂತ್ರಿನರಕಂಗಳಿಂದೊಪ್ಪಿ ವಿಷವರ್ತುಳವೆಂಬರಸುನರಕವಿಹುದು (ವಿವೇಕ. ೧೮೧). [ಸಂ.]

**ವಿಷವರ್ತುಳ** 'ವಿಷವರ್ತುಲ' ನೋ.

**ವಿಷವಲ್ಲಿ** (ನಾ). ವಿಷಯುಕ್ತವಾದ ಬಳ್ಳಿ : ಕಂಟಕಗುಲ್ಮವಿಷವಲ್ಲೀಸಂಘಾತಭೀಷಣಂಗಳುಂ . . . ಆಗಿ ದುರ್ಗಮಂಗಳಪ್ಪ ದುರ್ಗಂಗಳೊಳ್ (ಆದಿಪು. ೧೩-೫೭ ವ); ಪುಣ್ಯಮೆಂದು ವಿಷವಲ್ಲಿಗೆ ನೀರೆಱೆವೆಗ್ಗನಂತೆ ಕೆಮ್ಮಗೆ ಸುಖಮೆಂದಸದ್ವಿಷಯ ಸೌಖ್ಯದೊಳಿಂತೆಱಗಲ್ಕೆ ತಕ್ಕುದೇ (ಕಾದಂಪೂ. ೮೪೭). [ಸಂ. ವಿಷವಲ್ಲೀ]

**ವಿಷವಹ್ನಿ** (ನಾ). ವಿಷದ ಜ್ವಾಲೆ : ಮಿಕ್ಕಂ ವಿಷವಹ್ನಿಯಿಂ ವಿಳಯಕಾಲಜ್ವಾಲೆಯಂ ಭೋಗರತ್ನದ ಚೆಲ್ವಿಂ ದ್ಯುತಿಮಾಲಿಯಂ ಮಸಕದಿಂ ದಂಭೋಳಿಯಂ ಕಾಳಿಯಂ (ಜಗವಿ. ೩-೮೪). [ಸಂ.]

**ವಿಷವಾಕ್ಕು** (ನಾ). ಕೊಂಕುಮಾತು ; ಕಹಿನುಡಿ : ವಿಷವರ್ಜಿತವಾಹನ ಕೃಷ್ಣಂಗೆನ್ನಯ ವಿಷವಾಕ್ಕು ತಾಗಲೇನಹುದು (ಮೋಹತ. ೧-೨೭). [ಸಂ. ವಿಷವಾಚ್]

**ವಿಷವಿಕ್ಕು** (ಕ್ರಿ). ನಂಜನ್ನು ಉಣಿಸು ; ವಿಷಹಾಕು : ವಿಷವಿಕ್ಕಿದವಗೆ ಷಡ್ರಸವ ನುಣಿಸಲು ಬೇಕು (ಪುರಂದ. ೨-೭೫-೧). [ವಿಷ + ಇಕ್ಕು]

**ವಿಷವಿಷಮ** (ನಾ). ನಂಜಿನಿಂದ ಭಯಂಕರವಾದುದು : ನಂಜಿನೊಳೂಡಿದ ಕಂಜಮನೆಂಜಲಿಸಿದ ಮಧುಪನಂತೆ ವಿಷವಿಷಮಕನತ್ಕಿಂಜಲ್ಕಮನುತ್ಪಲಮೊಂದಂ ಜನಪತಿ ಕಂಪುಗೊಂಡು ತೂಂಕಂಗೊಂಡಂ (ಶಾಂತಿಪು. ೭-೯೨). [ಸಂ.]

**ವಿಷವೂಡು** (ಕ್ರಿ). = ವಿಷವಿಕ್ಕು : ಅಪರಾಧವನ್ನು ಮುಚ್ಚುವ ಸಲುವಾಗಿ ವರ್ತಕನನ್ನು ಬಿಡದಿಗೆ ಮತ್ತೆ ಕರೆತಂದು ವಿಷವೂಡಿದಳು (ಪುಸರು. ೯೪). [ವಿಷ + ಊಡು₁]

**ವಿಷವೃಕ್ಷ** (ನಾ). ೧. ವಿಷದಿಂದ ತುಂಬಿರುವ ಮರ : ಸಂಸಾರವೆನ್ನುವ ವಿಷವೃಕ್ಷದೊಳು ನೋಡು ಅಮೃತದ ಫಲವಿಹವೆರಡು (ಇಂಚಾಪ. ೧೫೨-೪೮). ೨. ಒಂದು ಬಗೆಯ ಮರ : ಅಜ್ಜನ ಪಟ್ಟೆ, ಆರಂಪೆ, ಬೈರಿ, ಜಾಗುರಿ, ವಿಷವೃಕ್ಷ (ಮೃಔಗಿ. ೭-೧೨೫). [ಸಂ.]

**ವಿಷವೈದ್ಯ** (ನಾ). ಹಾವು ಮುಂತಾದ ವಿಷಜಂತುಗಳ ಕಡಿತದಿಂದಾದ ವಿಷವನ್ನು ನಿವಾರಿಸಬಲ್ಲವನು : "ವಿಷವೈದ್ಯಃ, ಜಾಂಗಲಿಕಃ — ೨ ವಿಷವನ್ನು ಇಳಿಸುವ ವೈದ್ಯನ ಹೆಸರು" (ಸಿದ್ಧಾಂತಿ. ೭೪). [ಸಂ.]

**ವಿಷಸರ್ಪ** (ನಾ). ನಾಗರ, ಕನ್ನಡಿ ಮುಂತಾದ ನಂಜುಳ್ಳ ಹಾವು : ಕುಲಶೇಖರಾಳ್ವಾರ್ ಎಂಬುವರು . . . ಕಳ್ಳತನದ ಆಪಾದನೆಯನ್ನು ನಿವಾರಿಸಲು ವಿಷಸರ್ಪವಿದ್ದ ಮಡಕೆಯೊಳಕ್ಕೆ ಕೈಹಾಕಿ ಗೆದ್ದಂತೆ ತಿಳಿದುಬರುತ್ತದೆ (ಕಶಾಕ. ೧೯೭ ಅಡಿಟಿ). [ಸಂ.]

**ವಿಷಸೇವನೆ** (ನಾ). = ವಿಷಪ್ರಾಶನ ೨ : ಇಂಥ ವಿಷಸೇವನೆ ಮಾಡಿದಾಗ ಬಾಯಿಗೆ ರಬ್ಬರುನಳಿಗೆಯನ್ನು ಇಳಿಸಿ ಹೊಟ್ಟೆಯನ್ನು ಬರಿದುಮಾಡಬೇಕು (ಬಾಲಪ್ರ. I, ೫೪೦). [ಸಂ. ವಿಷಸೇವನಾ]

**ವಿಷಹರ** (ನಾ). ನಂಜನ್ನು ಹೋಗಲಾಡಿಸುವಂಥದು : ಮೆಯ್ಯೊಳ್ ವಿಷಮಂ ಪರಿಯಲ್ಕೀಯದೆ ತದ್ವಿಷ(ಹ)ರಮಂ ಕಟ್ಟಿಸುವುದು (ಅಶ್ವಶಾ. ೧೭-೩). [ಸಂ.]

**ವಿಷಹರಮೃಗ** (ನಾ). ಒಂದು ಬಗೆಯ ಜಿಂಕೆ : "ರಾಮಃ — ಹಿರಿಯದುಪ್ಪಿ, ವಿಷಹರಮೃಗವು. ಇದನ್ನು ಹಿರಿಯಹ ಮರೇಮೃಗವೆನ್ನುವರು" (ಸಿದ್ಧಾಂತಿ. ೧೫೭). [ವಿಷಹರ₁ + ಮೃಗ]

**ವಿಷಹಾರಿ** (ನಾ). ಒಂದು ಬಗೆಯ ಸಸ್ಯ : "ವಿಷಹಾರಿ ಕಂದೆಯನೆ ಮಡುವಾಗಲಕ್ಕು" (ಮಂಗರಾ. ೪೫-೪೭). [ಸಂ. ವಿಷಹಾರಿನ್]

**ವಿಷಹೀರೆ** (ನಾ). ಒಂದು ಬಗೆಯ ಸಸ್ಯ ; ಕಹಿಹೀರೆ : (ಮೃಔಗಿ. ೫೦-೧೦೨೭). [ವಿಷ + ಹೀರೆ₁ (< ಪೀರೆ)]

**ವಿಷಳ** (ನಾ). ನಂಜು ; ವಿಷ : ವಿಷರುಹಾಂಬಕನಯನಪಾದ ವಿಷಳವ್ಯಾಪ್ತನುತ ತರವಿಷಾಖಜನಕ (ಸಿದ್ಧರಾ. ೬-೪೦). [ಸಂ. ವಿಷಲ]

**ವಿಷಾಂಗನೆ** (ನಾ). = ವಿಷಕನ್ನಿಕೆ ೧ : ಅರುಣಾಧರದ ಚುಂಬನವನಿತ್ತು . . . ಸೊಗಸಂ ಬಲಿದು ಹರಣಮಳಿವಲ್ಲಿಪರಿಯಂತರಂ ಬಿಡರವನನಲ್ಲಿಯ ವಿಷಾಂಗನೆಯರು (ಜೈಮಿಭಾ. ೧೫-೪೮). [ಸಂ. ವಿಷಾಂಗನಾ]

**ವಿಷಾಣ** (ನಾ). ೧. ಪ್ರಾಣಿಗಳ ಕೋಡು, — ಕೊಂಬು : ಸ್ಫುರದಕ್ಷೂಣವಿಷಾಣಕೋಟಿ ದಳಿತಪ್ರೋತ್ತುಂಗವಲ್ಮೀಕಂ . . . ಸಂಚರಿಸುತ್ತಿರ್ದುದನೂನಪೀನಕಕುದಂ ತನ್ನಿಚ್ಛೆಯಿಂ ನಿಚ್ಚಲುಂ (ಪಂಚತಂ. ೨೪-೧೭) ; ರೇಣುಧೂಸರಿತನಗ್ರವಿಶೀರ್ಣವಿಷಾಣನಾತ್ತಮಾಂಸಳತನು ಬಂದುದಂದು . . . ಪುಂಗವಂ (ಚಂದ್ರಪ್ರ. ೨-೨೮). ೨. ಆನೆ, ಹಂದಿ ಮೊದಲಾದುವುಗಳ ದಂತ ; ಕೋರೆಹಲ್ಲು : ಉದ್ವೃತ್ತ ವಾರಣೇಂದ್ರ ವಿಷಾಣಕುಲಿಶದಂಡಹತಿಯಿಂ ವನದುರ್ಗಭಂಗಮುಂ ವಿಪಕ್ಷಪಾರ್ಥಿವಭಂಗಮುಂ ಮನೋರಥಸಿದ್ಧಮಾಗೆಯುಂ (ಆದಿಪು. ೧೩-೭೭ ವ) ; ಅರಿನರಪಾಲಕೋಗ್ರಮದಕುಮ್ಭಿ ವಿಷಾಣಮನೊತ್ತಿ ಕಿತ್ತು (ಎಕ. V, ಅರಸೀ. ೧೧೭-೨೪ : 1161). [ಸಂ.]

**ವಿಷಾಣಿ** (ನಾ). ೧. ಕೊಂಬುಗಳಿರುವ ಹಸು, ಎಮ್ಮೆ ಮುಂತಾದ ಪ್ರಾಣಿ. ೨. ದಂತವುಳ್ಳದು ; ಆನೆ. ೩. ಕೊಂಬುಗಳುಳ್ಳವನು : ಅಲ್ಲಿ ದಿಕ್ಚತುಷ್ಕಯಗತ ದ್ವೀಪನಿವಾಸಿಮನುಷ್ಯರೇಕಪಾದರುಂ ಲಾಂಗುಲಿಕರುಂ ವಿಷಾಣಿಗಳುಂ ಅಭಾಷಕರುಂ ಅಪ್ಪರ್ (ತತ್ತ್ವಪ್ರ. ೧೪೮). ೪. ಒಂದು ಬಗೆಯ ಸಸ್ಯ ; ಅಜಶೃಂಗಿ : "ವಿಷಾಣೀ - ಔಷಧಿ, ಚೇಳುವಾಲಿ, ನೆಲಮೂಗಿ" (ಓಷಧಿ. ೧೫೫). [ಸಂ. ವಿಷಾಣಿನ್]

**ವಿಷಾಣು** (ನಾ). ಒಂದು ಗೊತ್ತಾದ ರೋಗವನ್ನುಂಟುಮಾಡುವ ನಂಜು : ಅತ್ಯಂತ ಸೂಕ್ಷ್ಮತಮವಾದ ವಿಷಾಣುಗಳನ್ನು ವಿಶೇಷರೀತಿಯಲ್ಲಿ ಪರೀಕ್ಷಿಸಿದರು (ಜೀವಾತ್ಮ. ೧೨೪). [ಸಂ.]

**ವಿಷಾದ₁** (ನಾ). ೧. ಉತ್ಸಾಹಹೀನತೆ ; ನಿರುತ್ಸಾಹ : ಭಗವದ್ಗೀತೆಯಿಂದರ . . . ವಿಷಾದದ ಕಗ್ಗತ್ತಲೆಯನ್ನು ಕಿತ್ತೊಡಿಸಲು . . . ಬಂದ ಸಹಸ್ರಕಿರಣನಾದ ಜ್ಞಾನರವಿ (ಧರ್ಮಸಾ. ೧೦೪). ೨. ದುಃಖ ; ವ್ಯಥೆ ; ಚಿಂತೆ : ಉಭಯಬಲದಗ್ಗಳದ ಹರುಷವಿಷಾದವಾರಿಧಿ ಕಾಲುಹೊಳೆಯಾಯ್ತು (ಜಾಮ್ಯದ್ರೋ. ೧೬-೫೦) ; ಉಳಿ ಮಗಳೆ ವಿಷಾದವನುಸಿರ ವೇಗವನಂತೆ (ಧ್ವನ್ಯಾಲೋ. ೯೯). ೩. [ಕಾವ್ಯಮೀ] ಸಂಚಾರಿ ಭಾವಗಳಲ್ಲಿ ಒಂದು; ಕಾರ್ಯಭಂಗ, ದೈವದ ವಿಮುಖತೆ ಮೊದಲಾದವು ಗಳಿಂದ ಉಂಟಾಗುವ "ಮನಃಪೀಡೆಯೆ ವಿಷಾದಂ" (ಭಾರಮೀ. ೩೪೭) : ಮತಿ ನಿರ್ವೇದ . . . ವಿಷಾದಸ್ಮೃತಿ ಚಿತ್ತಭ್ರಂಶ ಮೋಹಾಮಯ ಮೃತಿಗಳಿವಿಂತೆಯ್ದೆ ಸಂಚಾರಿ ಭಾವಂ (ಕಾವ್ಯಾವ. ೭೯೫) ; ವಿಷಾದ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರೀ ಭಾವಂಗಳಿಂ ಪರಿವರ್ಧಿಸಿ (ವಿವೇಕ. ೨೨೭). ೪. ಒಂದು ಕಾವ್ಯಾಲಂಕಾರದ ಹೆಸರು : ಇಚ್ಛೆ ಮಾಡಿದಂಥ ವಸ್ತು ವಿರುದ್ಧವಾಗೆ ಸ್ವಚ್ಛದಿಂದಿದು ವಿಷಾದವೆನಿಸೆ ಹೆಚ್ಚಿದಂ ದೀಪೋದ್ದೀಪನ ಮಾಡಲು ಹೆಚ್ಚಿತು ತಾಂ ವಡಬಾಗ್ನಿಯಾಗಿ (ಕುವಲ. ೧೨೭-೧). ೫. ವಾಕ್ಯಾರ್ಥದೋಷಗಳಲ್ಲಿ ಒಂದು : ಅವಧಾರಿಸದುಕ್ತಾರ್ಥಮನವಿಶೇಷದ ಮಗುಟ್ಟು ನುಡಿದೊಡೇಕಾರ್ಥಂ ಕ್ರೋಧವಿಷಾ[ಪಾಠಾಂ. ರೋ]ದ ಖೇದ ಭಯ ಹರ್ಷ ವಿಸ್ಮಯಾದಿಗಳೊಳಿನ್ನವಿಷ್ಟಮದುಷ್ಟಂ (ಕಾವ್ಯಾವ. ೪೫೯). [ಸಂ.]

**ವಿಷಾದ₂** (ನಾ). ನಂಜನ್ನು ಉಂಡವನು ; ಶಿವ : ವೃಷೇಂದ್ರಧ್ವಜನಜನವಸಾನಂ ವಿಷಾದಂ ವಿಪದ್ಧೀಕರನಂಗಾರಾಂಗನಂಗೋದ್ಭವಹರನಸುರಧ್ವಂಸಕಂ ವೀರಭದ್ರಂ (ರಾಜಶೇ. ೧೪-೧೫೩). [ಸಂ. (ವಿಷ + ಅದ = ತಿನ್ನುವಿಕೆ)]

**ವಿಷಾದಗರ್ಭ** (ನಾ). ದುಃಖಕರವಾದುದು ; ಚಿಂತಾಕುಲವಾದುದು : ಆವ ಜನ್ಮದೊಳಂ ಮತ್ತೆನಗೆ ನವವಯಸದೊಳ್ ತಾಂ ಜನಿಯಿಸದಿರ್ಕೆಮ ವಿಷಾದಗರ್ಭಂ ಗರ್ಭಂ (ಚಂದ್ರಪ್ರ. ೩-೭೭). [ಸಂ.]

**ವಿಷಾದಚಿತ್ತ** (ನಾ). ಖಿನ್ನವಾದ ಮನಸ್ಸು : ಉಂಗುರದ ಕೇಡಿನೊಳಾದಟಲಟ್ಟೆ ವಿದ್ಯೆಯುಂ ನೋಡುವೆನೀತನೊಳ್ನುಡಿವೆನೆಂದಿರದಾದ ವಿಷಾದಚಿತ್ತದಿಂ ಪೋಗಿ (ಸುಕುಮಾ. ೩-೧೭). [ಸಂ.]

**ವಿಷಾದಯೋಗ** (ನಾ). ಚಿಂತೆಯ ಪ್ರಸಂಗ ; ದುಃಖದ ಸಂದರ್ಭ : ಹಿಂದಿನ ಕುರುಕ್ಷೇತ್ರಸಂದರ್ಭದಲ್ಲಿ ಅರ್ಜುನನಿಗೆ ಒದಗಿದ ವಿಷಾದಯೋಗ, ಇಲ್ಲಿ ಈಗ ಧರ್ಮರಾಯನಿಗೆ ಒದಗಿರುವುದು ಸ್ವಾರಸ್ಯವಾಗಿದೆ (ಪರಿಶೀ. ೧೨೦). [ಸಂ.]

**ವಿಷಾದವಿಧುರ** (ನಾ). ವ್ಯಥೆಯಿಂದ ಕಳವಳಕ್ಕೀಡಾದವನು ; ದುಃಖದಿಂದ ಚಿಂತಿತನಾದವನು : ಸಟ್ಟ ಮನಃಕ್ಷತಂಬಟ್ಟು ವಿಷಾದವಿಧುರಂ ಮಧುರೆಗಭಿಮುಖ ನಾಗಿ ಪಯಣಂಬೋದಂ (ಪಂಚತಂ. ೨೪-೪). [ಸಂ.]

**ವಿಷಾದಾಂತ** (ಗು). ಶೋಕದಿಂದ ಕೊನೆಗೊಳ್ಳುವ ; ದುಃಖಾಂತ : ಮುಗಿವು. ಮರಣದೊಳೆಲ್ಲ ವಿಷಾದಾಂತನಾಟಕಕೃತಿಗಳು ಕಡೆಗೆ (ಇಂಚಾಪ. ೧೭೭-೧೮). [ಸಂ.]

**ವಿಷಾದಿಸು** (ಕ್ರಿ). ದುಃಖಿಸು ; ವ್ಯಥೆ ಪಡು : ನಿನ್ನ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡಲಾರನೆಂದು ಹೇಳಲು ವಿಷಾದಿಸುತ್ತೇನೆ (ಜಮಿನ್ನಾ. ೧೬೦). [ವಿಷಾದ₁ + -ಇಸು₁]

**ವಿಷಾನಲ** (ನಾ). ವಿಷದ ಜ್ವಾಲೆ, — ಬೆಂಕಿ : ಅಟ್ಟ ಸುಡುತಿಹ ವಿಷಾನಲದಿಂದವಂದಿ ಗಳುಟ್ಟು ಹೊದದಂಬರಗಳು ಬಳಿಕ್ಕಂತವರು ತೊಟ್ಟ ಕಂಚುಕಿ . . . ಇರದೆ ಬೆಂದು (ವೀಶೈಪು. ೩-೧೭-೨೭). [ಸಂ.]

**ವಿಷಾನಿಲ** (ನಾ). ನಂಜು ಬೆರೆತಿರುವ ಗಾಳಿ ; ವಿಷಪೂರಿತವಾದ ವಾಯು : ಕರಾಟಗಳಲ್ಲಿನ ಇದ್ದಲೂ, ಸೋಡಾಲ್ಮೆಮೂ ಎಂತಹ ವಿಷಾನಿಲಗಳನ್ನೂ ಹೀರಿಕೊಂಡು ಸಯ್ಯೊಳಿಸುತ್ತಿದ್ದುವು (ಕವಿಕೋ. I, ೩೦೨). [ಸಂ.]

**ವಿಷಾಪಹಾರ** (ಗು). ೧. ನಂಜನ್ನು ನಿವಾರಿಸುವ ; ವಿಷವನ್ನು ಹೋಗ ಲಾಡಿಸುವ : ಜಳಮೃಣಾಳಮಂ ಜಳವ್ಯಾಳಮೆಂದು ಕೆಲದ ಬಲದಿಂ ಪಿಡಿಯಲೆಂದು ಧೀಂಕಿಡುವ ವಿಷಾಪಹಾರ ಶಾಲೂರಜಾಲಂಗಳೊಳಂ . . . ಭೀಷಣರಮಣೀಯಮೆನಿಸಿತ್ತು (ಚಂದ್ರಪ್ರ. ೫-೪೦ ವ). (ನಾ). ೨. ನಂಜಿನ ನಿವಾರಣೆ ; ವಿಷನಿರ್ಮೂಲನ : ನಾಳೆ ನೇಸರ್ಮೂಡದ ಮುನ್ನಮೆ ವಿಷಾಪಹಾರಂ ಮಾಡಿದಪ್ಪೆಂ (ಸುಕುಮಾ. ೭-೮ ವ);

ಸೀತಾಹರಣಮಿದರ್ಕೆ ಮರಣನಿಮಿತ್ತಮಾದುದೆಂದುಬ್ಬೆಗಂಬಟ್ಟು ಸಂಸಾರವಿಷಮ ವಿಷಾಪಹಾರಮಂ ಪಂಚನಮಸ್ಕಾರಮನದರ್ಕೆ ಪೇಳ್ದು (ಪಂರಾಮಾ. ೯-೧೧೭ ವ). [ಸಂ.]

**ವಿಷಾಪಹಾರಿ** (ಗು). ನಂಜನ್ನು ತೆಗೆಯುವ ; ವಿಷವನ್ನು ನಿವಾರಿಸುವ : ಯಾವುದಾದರೂ ವಿಷಾಪಹಾರಿ (disinfectant) ದ್ರವ್ಯವನ್ನು ನೀರಿಗೆ ಬೆರೆಸಿ . . .ನೆಲದ ಮೇಲೆ ತಂಗುವ ಜೀವಿಗಳನ್ನು ನಾಶಮಾಡಲು ಸಾಧ್ಯವಾಗುತ್ತದೆ (ಗೃಹವಿ. ೧೮೩). [ಸಂ. ವಿಷಾಪಹಾರಿನ್]

**ವಿಷಾರ್ಥಾಜೀವನ** (ನಾ). ವಿಷಪ್ರಯೋಗದಿಂದ ಹಣ ಸಂಪಾದಿಸಿ ಜೀವಿಸುವವನು : ದಿವಸೇಂದ್ರಂ . . . ವೃಶ್ಚಿಕಕ್ಷೇತ್ರದೊಳ್ ಕೂಡೆ ವಿಷಾರ್ಥಾಜೀವನಂ ಸಾಹಸಿಗನಖಿಳಶಾಸ್ತ್ರಜ್ಞನತ್ಯುಗ್ರನಕ್ಕುಂ (ಜಾತತಿ. ೧೭-೧೭). [ಸಂ.]

**ವಿಷಾವಿಲದಂಷ್ಟ್ರ** (ನಾ). ವಿಷಯುಕ್ತವಾದ ಹಲ್ಲುಳ್ಳುದು ; ಸರ್ಪ : ದಂಡಕನೃಪಂ ಲೋಭಾಭಿಭೂತಂ ವಿಷಾವಿಲದಂಷ್ಟ್ರಂ ಶ್ಶಯುವಾಗಿ ಪುಟ್ಟಿ ಸುಟಿಗುಂ ಮುಂ ಬಯ್ತು ಭಂಡಾರದೊಳ್ (ಆದಿಪು. ೨-೧೫). [ಸಂ. ವಿಷಾವಿಲದಂಷ್ಟ್ರಾ]

**ವಿಷಾಹ್ವಯ** (ನಾ). ಒಂದು ಬಗೆಯ ಸಸ್ಯ : "ವಿಷಾಹ್ವಯ: – ವಿಷಾಣಿಕ, ಬಾಟಿ, ಕರ್ಕಾಟಕಶೃಂಗಿ, ಸಾತಲೆ? " (ಓಷಧಿ. ೧೫೫). [ಸಂ.]

**ವಿಷು** (ನಾ). ೧. ಹೆಚ್ಚುಕಡಮೆಯಿಲ್ಲದಿರುವುದು ; ಸಮವಾದುದು. ೨. ಅರುವತ್ತುಸಂವತ್ಸರಗಳಲ್ಲಿ ಹದಿನೈದನೆಯದು : ಆ ವರ್ಷವೇ ಪ್ರಭವ . . . ವಿಷು . . . ಕ್ಷಯವೆಂದಜುವತ್ತು ತೆಱನಾಗಿಹುದು (ವಿವೇಕ. ೨೬೩). [ಸಂ.]

**ವಿಷುವ** (ನಾ). ೧. ಸೂರ್ಯನು ಭೂಮಧ್ಯರೇಖೆಯನ್ನು ಹಾಯುವ ಕಾಲ ; ಹಗಲು, ಇರುಳು ಒಂದೇ ಪ್ರಮಾಣದಲ್ಲಿರುವ ಕಾಲ. ೨. ಸೂರ್ಯನು ಮೇಷ ಅಥವಾ ತುಲಾ ಸಂಕ್ರಾಂತಿಯ ದಿನದಂದು ಮೇಷ ಅಥವಾ ತುಲಾರಾಶಿಯನ್ನು ಪ್ರವೇಶಿಸುವ ಪ್ರಾರಂಭದ ಬಿಂದು. [ಸಂ.]

**ವಿಷುವತ್ತು** (ನಾ). ಸಮವಾದ ಹಗಲು ಮತ್ತು ರಾತ್ರಿಗಳುಳ್ಳ ಕಾಲ : ವೇದಗಳ ಕಾಲದ ಭಾರತೀಯರು ವಿಷುವತ್ತಿನ ಮತ್ತು ಅಯನಸಂಕ್ರಾಂತಿಯ ಬಿಂದುಗಳನ್ನು ಗೊತ್ತುಮಾಡಿ ಅವುಗಳನ್ನು ಅಗ್ನಿ ಮತ್ತು ಇಂದ್ರ ಮತ್ತು ಮಿತ್ರ ಮತ್ತು ವರುಣಗಳೆಂದರು (ತತ್ವಪ್ರಾ. ೪೮೨). [ಸಂ. ವಿಷುವತ್]

**ವಿಷುವದ್ಬಿಂದು** (ನಾ). ವಿಷುವದ್ರೇಖೆಯನ್ನು ಸೂರ್ಯನು ಹಾದುಹೋಗುವ ಎರಡು ಬಿಂದು ; ಸಂಕ್ರಾಂತಿಬಿಂದು : ವಿಷುವದ್ಬಿಂದುವು ಕೃತ್ತಿಕೆಯಿಂದ ಉತ್ತರಾಭಾದ್ರದವರೆಗೆ ಸರಿದು ಬಂದಿರುವುದಕ್ಕೆ ಲಿಖಿತಸಾಕ್ಷಿ ಇದೆ (ನಕ್ಷತ್ರ. ೨೪). [ಸಂ.]

**ವಿಷುವದ್ರೇಖೆ** (ನಾ). ಭೂಗೋಳವನ್ನು ಪೂರ್ವಪಶ್ಚಿಮವಾಗಿ ಎರಡು ಸಮಭಾಗಗಳಾಗಿ ವಿಭಜಿಸುವಂತೆ ಮಧ್ಯದಲ್ಲಿ ಕಲ್ಪಿಸಿರುವ ರೇಖೆ ; ಸಮಭಾಜಕವೃತ್ತ : ಉಭಯಧ್ರುವಗಳಿಗೂ ಮಧ್ಯೆ (ಸಮದೂರದಲ್ಲಿ) ಭೂಗೋಳದ ಸುತ್ತಲೂ ಬರೆಯಲ್ಪಟ್ಟದೆಯೆಂದು ಭಾವಿಸಲ್ಪಡುವ (ಕಲ್ಪಿತವಾದ) ರೇಖೆಗೆ ವಿಷುವದ್ರೇಖೆ . . . ಎಂದು ಹೆಸರು (ಭೂಗೋಳ. ೫). [ಸಂ. ವಿಷುವದ್ರೇಖಾ]

**ವಿಷುವದ್ವೃತ್ತ** (ನಾ). = ವಿಷುವದ್ರೇಖೆ : ಭೂಗೋಳವನ್ನು ಎರಡು ಅರ್ಧಗಳಾಗಿ ವಿಭಾಗಿಸುವ ಬೃಹದ್ವೃತ್ತಕ್ಕೆ ವಿಷುವದ್ವೃತ್ತವೆಂದು ಹೆಸರು (ಜ್ಯೋತಿರ್ವಿ. ೨೦೫). [ಸಂ.]

**ವಿಷೂಚಿ** (ನಾ). ಒಂದು ಬಗೆಯ ರೋಗ ; ವಾಂತಿ ಭೇದಿ : ದಾಳಿಂಬಾದಿ ಚೂರ್ಣ . . . ಸೇವಿಸಲು ವಿಷೂಚಿ ಗುಣವಾಗುವುದು (ಸಕವೈ. ಪರಿ. ೪೮೮) ; ಬಾಹಟವೆಂಬ ವೈದ್ಯ ಗ್ರಂಥಗಳಲ್ಲಿ ವಿಷೂಚಿಜಾಡ್ಯವೆನ್ನಿಸಿಕೊಂಡಿರುವ ಈ ರೋಗಕ್ಕೆ ಚಿಕಿತ್ಸೆಯನ್ನು ಹೇಳಿದ್ದಾರೆ (ಮಾಮರಾ. ೪೭). [ಸಂ. ವಿಷೂಚೀ]

**ವಿಷೂಚಿಕ** (ನಾ). = ವಿಷೂಚಿ : ಇದರಲ್ಲಿ ವಿಷೂಚಿಕವೆಂದು ಅಲಸಿಕವೆಂದು ಅಜೀರ್ಣಕವೆಂದು ವಿಳಂಬಿಕವೆಂದು ಸಶೇಷವೆಂದು ವಿಷೂಚಿಕಾರೋಗಮೈದು ತೆರನಾಗಿರ್ಪುದು (ಸಕವೈ. ೩೫೭). [ಸಂ. ವಿಷೂಚಿಕಾ]

**ವಿಷೂಚಿಕೆ** (ನಾ). = ವಿಷೂಚಿ : ಉಗ್ರಂಗಳಾ ಜ್ವರಂ ವಿಷೂಚಿಕೆ ಎಂಬಿವಾಗಳೆ ಪೊರ್ದುಗುಂ (ಲೋಕೋಪ. ೪-೮೨) ; ವಿಷೂಚಿಕೆಯಲ್ಲಿಯೂ ತಾಮ್ರದ ಉಪಯೋಗವಾಗುವುದು (ಔಷಧೀ. ೪೭). [ಸಂ. ವಿಷೂಚಿಕಾ]

**ವಿಷೆ** (ನಾ). ಒಂದು ಬಗೆಯ ಗ್ರಂದಿಗೆಪದಾರ್ಥ ; ಅತಿಬಜೆ . [ಸಂ. ವಿಷಾ]

**ವಿಷೋತ್ಪಳ** (ನಾ). ವಿಷಪೂರಿತವಾದ ನೈದಿಲೆ : ಅಸಿತವಿಷೋತ್ಪಳಪರಿಮಳದುಸಿರೊಳ್ ಮಡಿದಂದಿನೆಗ್ಗು ನೀಗೆ ಜನಾಂಘ್ರಿಸ್ಪರ್ಶಸದಮೃತಾಬ್ಜಮನಾಘ್ರಾಯಿಸಿದಂ (ಶಾಂತಿಪು. ೭-೪೧). [ಸಂ. ವಿಷೋತ್ಪಲ]

**ವಿಷೋದಕ** (ನಾ). ನಂಜಿನಿಂದ ಕೂಡಿದ ನೀರು ; ವಿಷಜಲ : ಕುಡಿವೆನು ಮುನ್ನ ಜಲವನು . . . ಎನುತ ಮೊಗೆದನು ವಿಷೋದಕವ (ಕುಮಾ.ಭ. ೨೩-೨೮). [ಸಂ.]

**ವಿಷೋದ್ಗಾರಿ** (ನಾ). ೧. ವಿಷವನ್ನು ಉಗುಳುವಂಥದು. ೨. ನೀರನ್ನು ಹೊರಸೂಸುವಂಥದು. ೧, ೨ : ಅಹಿಯಂತೆ ವಿಷೋದ್ಗಾರಿಗಳರ್ಹನಿಶಪ್ರಹರದಂತೆ ಘಟಿಕಾತ್ಮಂಗಳ್ ರಹಟಘಟೀಯಂತ್ರಂಗಳ್ ಬಹುವಿಧವಿಭ್ರಮದಿನೆಸೆವುವುಪಶಲ್ಯಕದೊಳ್ (ಪುಷ್ಪಪು. ೨-೫೧). [ಸಂ. ವಿಷೋದ್ಗಾರಿನ್]

**ವಿಷೋದ್ಯಾನ** (ನಾ). ವಿಷಪೂರಿತವಾದ ವನ, — ತೋಟ : ವಿದ್ಯಾಗರ್ವಗ್ರಹ ಪೀಡಿತಂ ಸ್ವಪರಬಾಧಾಹೇತುವಂ ದುಸ್ತರೋದ್ಯೋಗಕ್ಲೇಶಿತರಾಗಿ ಬಿತ್ತಿ ಬೆಳೆವಂತಕ್ಕುಂ ವಿಷೋದ್ಯಾನಮಂ (ಪಂರಾಮಾ. ೧-೩೪) ; ಅದು ತನ್ನ ಮತ್ತು ಪರರ ವಿನಾಶಕ್ಕೆ ಕಾರಣವಾದ ವಿಷೋದ್ಯಾನವಾಗಿ ಪರಿಣಮಿಸುತ್ತದೆ (ಸುವರ್ಣ. ೨೦೯). [ಸಂ.]

**ವಿಷೋನ್ನತಿ** (ನಾ). ೧. ನಂಜಿನ ಏರಿಕೆ ; ವಿಷದ ಹೆಚ್ಚಳ. ೨. ನೀರಿನ ಆಧಿಕ್ಯ. ೧, ೨ : ಸಪ್ತಮುಖದಿಂದೆ ವಿಷೋನ್ನತಿಯಿಂದೆ ಭೋಗದೊಳ್ ತುಱುಗಿರವಿಂದೆ ಪೋಲ್ತುದು ಮಹಾನದಿ ರುಂದ್ರಫಣೇಂದ್ರರಾಜನಂ (ಕಾವ್ಯಸಾ. ೭೪೭ ಶೂದ್ರಕ). [ಸಂ.]

**ವಿಷೋರಗ** (ನಾ). ನಂಜುಳ್ಳ ಹಾವು ; ವಿಷಸರ್ಪ : ಅಡಿವಿಡಿದಿಟ್ಟ ಪುತ್ತುಗಳ ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗಳ್ವಿಡಿದು ವಿಷೋರಗಪ್ರತತಿ ನೋಟ್ಪೊಡಗುರ್ವಿಸೆ ಸುಯ್ದು ಸುಯ್ದಳಿಂ ಕಿಡಿ ಪೊಱಪೊಣ್ಮೆ (ಆದಿಪು. ೧೪-೧೪೦). [ಸಂ.]

**ವಿಷೋರಗಧಾರಿ** (ನಾ). ೧. ವಿಷಸರ್ಪವನ್ನು ಧರಿಸಿದವನು ; ಶಿವ. ೨. ವಿಷಸರ್ಪಗಳನ್ನುಳ್ಳುದು ; ಸಾಗರ. ೧, ೨ : ಆ ಮಹಾರ್ಣವಂ . . . ತ್ರಿಪುರಾರಿಯಂತೆ ವಿಷೋರಗಧಾರಿಯುಂ . . . ಎನಿಸಿದುದು (ಜಗು. ೧-೪೪ ವ). [ಸಂ. ವಿಷೋರಗಧಾರಿನ್]

**ವಿಷ್ಕಂಭ** (ನಾ). ೧. ಆಧಾರ ; ಊರೆ. ೨. ಅಡ್ಡಿ ; ವಿಘ್ನ : "ಪ್ರತಿಬಂಧಮೆನಲು ವಿಷ್ಕಂ[ಪಾಠಾಂ. ಷ್ಕಂ]ಭಮೆನೆ ತಗಹಕ್ಕು" (ಮಂಗರಾ. ೧೩೩-೩೨). ೩. ವಿಸ್ತಾರ ; ಹರಹು : ಯೋಜನಶತಸಹಸ್ರ ವಿಷ್ಕಂಭಂ ವಿಶ್ರುತಜಂಬೂವೃಕ್ಷ ಮಹಾಪ್ರಾತೀತಿಯಿಂ ನೆಗಟ್ದುದಿಳೆಗೆ ಜಂಬೂದ್ವೀಪಂ (ಆದಿಪು. ೧-೪೯) ; ಏಕಲಕ್ಷಪ್ರಮಿತಪ್ರಮಾಣಯೋಜನಾ ವಿಷ್ಕಂಭಮುಂ . . . ಆಗಿ (ವರ್ಧಮಾ. ೧-೩೭ ವ). ೪. ಬಾಗಿಲಿನ ಅಗುಳಿ ; ಲಾಳವಿಂಡಿಗೆ. ೫. ವಿಷೂಚಿರೋಗದಲ್ಲಿ ಒಂದು ಬಗೆ ; ಅಜೀರ್ಣದಿಂದ ಹೊಟ್ಟೆ ಉಬ್ಬುವ ಕಾಯಿಲೆ : ಅಜೀರ್ಣವೆಂಬ ವಿಷೂಚಿಯು ಆಮವೆಂದು, ವಿದಗ್ಧವೆಂದು, ವಿಷ್ಕಂಭವೆಂದು ಮೂರು ವಿಧವಾಗಿರ್ಪುದು . . . ಹೊಟ್ಟೆಯುಬ್ಬರಿಸುವುದೇ ವಿಷ್ಕಂಭವೆನಿಸಿಕೊಳ್ಳುವುದು (ಸಕವೈ. ೩೫೮). ೬. [ಕಾವ್ಯಮೀ] ನಾಟಕ ಅಥವಾ ದೃಶ್ಯಕಾವ್ಯಗಳಲ್ಲಿ ಹಿಂದೆ ನಡೆದುಹೋದ ಮತ್ತು ಮುಂದೆ ನಡೆಯುವ ಕಥಾಂಶವನ್ನು ಸಂಕ್ಷೇಪವಾಗಿ ತಿಳಿಸುವ ದೃಶ್ಯ : ವಿಷ್ಕಂಭ: ನಡೆದುಹೋದ ಕಥಾಂಶವನ್ನು ಸಂಕ್ಷೇಪವಾಗಿ ಸೂಚಿಸುವುದು (ಸಂನಾಟ. ೧೪) ; ವಿಷ್ಕಂಭ — ನಡೆದುಹೋದ ಮತ್ತು ಮುಂದೆ ನಡೆಯುವ ಕಥಾಂಶಗಳನ್ನು ಮಧ್ಯಮಪಾತ್ರಗಳ ಮೂಲಕ ಸಂಕ್ಷೇಪವಾಗಿ ಸೂಚಿಸುವುದು (ಕೃಪಿಡಿ. ೨೦೭). ೭. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಮೊದಲನೆಯದು : ಅಶ್ವಿನಿ ಮೊದಲಾದಿಪ್ಪತ್ತೇಳು ನಕ್ಷತ್ರಗಳುಂ ವಿಷ್ಕಂಭ . . . ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೨೬೨) ; ಪ್ರತಿದಿನದಿ ಸಂಚರಿಪ ಯೋಗಗಳತಿಶಯವನರಿಯೆ ಪೇಳುವೆ ವ್ಯತಿಯು ಧೃತಿ ವಿಷ್ಕಂಭ ಶೂಲವು (ಗಗತಾ. ४-೫೯). ೮. [ನಾಟ್ಯ] ಮೂವತ್ತೆರಡು ಬಗೆಯ ಅಂಗಹಾರಗಳಲ್ಲಿ ಒಂದು : ಸ್ಥಿರಹಸ್ತ . . . ವಿಷ್ಕಂಭ . . . ಸ್ವಸ್ತಿಕರೇಚಿತ — ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಲಾಸ್ಯರಂ. ೫-೭ ವ). [ಸಂ.]

**ವಿಷ್ಕಂಭಕ** (ನಾ). = ವಿಷ್ಕಂಭ ೭ : ವಿಷ್ಕಂಭಕ ಯೋಗ ೩೧ ಗಳಿಗೆ ಮೇಲೆ ತ್ಯಾಜ್ಯಾ (ಭಾಸ್ಕರ. ೭೦ ४). [ಸಂ.]

**ವಿಷ್ಕಂಭಿತ** (ಗು). ೧. ತಡೆದ ; ಅಡ್ಡಿಮಾಡಿದ. (ನಾ). ೨. [ನಾಟ್ಯ] ಕುಳಿತುಕೊಳ್ಳುವ ಒಂದು ಭಂಗಿ : ಸ್ವಸ್ಥಂ . . . ವಿಷ್ಕಂಭಿತ . . . ವಿಮುಕ್ತ ಈ ಒಂಭತ್ತು ಕುಳ್ಳಿರ್ದ ಸ್ಥಾನಕಂಗಳ್ (ಲಾಸ್ಯರಂ. ೭-೧೨ ವ). [ಸಂ.]

**ವಿಷ್ಕರ** (ನಾ). ಎಕ್ಕದ ಗಿಡ : "ವಿಷ್ಕ[ಪಾಠಾಂ. ಷ್ಕಿ]ರಮರ್ಕಮೆಂದೆನಲ್ಕೆಕ್ಕೆಯಕ್ಕುಂ" (ಮಂಗರಾ. ೩೯-೨೭). [ಸಂ. ?]

**ವಿಷ್ಕಿರ** (ನಾ). ಪಕ್ಷಿ ; ಹಕ್ಕಿ : ವಿಷ್ಕಿರಕೆ ಪಾಶುಪತಾಸ್ತ್ರಮದೇಕೆ (ವೃಷವಿ. ೧೨-೭೩). [ಸಂ.]

**ವಿಷ್ಕಂಭ** (ನಾ). ೧. ಅಡ್ಡಿ ; ತಡೆ : "ವಿಷ್ಕಂಭಃ, ಪ್ರತಿಬಂಧಃ – ಈ ೨ ತಗವುದು" (ಹಲಾಯು. ೧೨೭-೮೪). ೨. ಆಧಾರ ; ಊರೆ. ೩. ಗಟ್ಟಿಯಾಗಿ ಊರುವಿಕೆ ; ದೃಢವಾಗಿ ನೆಡುವಿಕೆ. ೪. ಮಲ ಅಥವಾ ಮೂತ್ರಕಟ್ಟುವಿಕೆ. ೫. ಪಾರ್ಶ್ವವಾಯು ; ಲಕ್ವ. [ಸಂ.]

**ವಿಷ್ಕಂಭಿಸು** (ಕ್ರಿ). ತಡೆಯಾಗು ; ಪ್ರತಿಬಂಧಿಸಲ್ಪಡು : ವಿಷ್ಕಂಭಿಸಿರ್ದ ಮಲದಿಂ ಕೋಷ್ಠಾಭ್ಯಂತರದೊಳುಗ್ರವೇದನೆಯಕ್ಕುಂ (ಅಶ್ವಶಾ. ೧೧-೧೪). [ವಿಷ್ಕಂಭ + - ಇಸು₃]

**ವಿಷ್ಕಕಂದ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಗೆಡ್ಡೆ : "ಬಹುಸಂಘಟ್ಟಃ — ವಿಷ್ಕಕಂದ" (ಓಷಧಿ. ೧೦೭). [? + ಕಂದ₃]

**ವಿಷ್ಟಪ** (ನಾ). ಜಗತ್ತು ; ವಿಶ್ವ ; ಲೋಕ : ಶಂಖಭೇರೀಕಂಠೀರವಘಂಟಾಧ್ವನಿಗಳ್ ನೆಗಟ್ದುವು ಭೋಂಕೆನೆ ಸಕಲವಿಷ್ಟಪಾಶ್ಚರ್ಯಂಗಳ್ (ಆದಿಪು. ೭-೪೦) ; ವಿಷ್ಟಪ ಮೊರ್ಮೆಯುಂ ತಮಗೆ ಹಸ್ತತಲಾಮಲಕಂಬೊಲೆಯ್ದೆ ವಿಸ್ಪಷ್ಟಮೆನಿಪ್ಪ ಬೋಧಯುತರಿಂ ತಿಳಿದಿಲ್ಲಿಗೆ ತಕ್ಕುದೇನುಮಂ ಚೇಷ್ಟಿಪಂ (ಚಂದ್ರಪ್ರ. ೩-೭೮). [ಸಂ.]

**ವಿಷ್ಟಪಜನ** (ನಾ). ಲೋಕದ ಜನ ; ಜಗತ್ತಿನ ಮಾನವಕುಲ : ವನಬರ್ಹಿಗಳಂ ಮೇಘಧ್ವನಿ ತಣಿಪುವ ತೆಱದೆ ದೇವ ನಿನ್ನಯ ದಿವ್ಯಧ್ವನಿ ತಣಿಪಿದಪುದು ವಿಷ್ಟಪಜನಮಂ (ಅಜಿಪು. ೮-೧೧). [ಸಂ.]

**ವಿಷ್ಟಬ್ಧಾಜೀರ್ಣ** (ನಾ). ಒಂದು ಬಗೆಯ ಅಜೀರ್ಣರೋಗ : ಸೈಂಧವಚೂರ್ಣವಂ ಬಿಸಿನೀರಿಂ ಕುಡಿಯೆ ವಿಷ್ಟಬ್ಧಾಜೀರ್ಣ ಗುಣಮಕ್ಕುಂ (ಸಕವ್ಯ. ೩೭೫). [ಸಂ.]

**ವಿಷ್ಟರ** (ನಾ). ೧. ಕುಳಿತುಕೊಳ್ಳುವ ಆಸನ, — ಪೀಠ : ಮಣಿಮಯನಿಜೋಪವಿಷ್ಟ ವಿಷ್ಟರಾಗ್ರದಿಂದೆ ಇೞಿದು (ಚಂದ್ರಪ್ರ. ೨-೧೦ ವ) ; ಸೌಧರ್ಮೇಂದ್ರಂ . . . ತಡೆದಿರದೆೞ್ದು ವಿಷ್ಟರದಿನಾನತಮಸ್ತಕನಾಗಿ (ಪುಷ್ಪಪು. ೧೦-೫). ೨. ಪದರ ; ಸ್ತರ. ೩. ಮರ ; ವೃಕ್ಷ : "ವೃಕ್ಷಂ . . . ವಿಷ್ಟರಃ, ನಗಃ,ದ್ರುಮಃ, ಪಾದಪಃ – ಈ ೧೯ ಮರಂ" (ಹಲಾಯು. ೨೯-೨೩). ೪. ಒಂದು ಹಿಡಿ ತುಂಬುವಷ್ಟು ದರ್ಭೆ. [ಸಂ.]

**ವಿಷ್ಟರಶ್ರವ** (ನಾ). ವಿಷ್ಣುವಿನ ಹೆಸರುಗಳಲ್ಲಿ ಒಂದು : "ವಿಷ್ಣುಃ . . . ವಿಷ್ಟರಶ್ರವಾಃ, ನಾರಾಯಣಃ . . . ಗದಾಧರಃ — ಈ ೪೫ ನಾರಾಯಣನ ಪೆಸರ್" (ಹಲಾಯು. ೫-೨೫). [ಸಂ. ವಿಷ್ಟರಶ್ರವಸ್]

**ವಿಷ್ಟವ** (ನಾ). ಕಿರುಕುಳ ; ತೊಂದರೆ : "ವಿಷ್ಟವವೆನಲ್ಕುಪದ್ರವಮಕ್ಕು" (ಮಂಗರಾ. ೮-೨೭). [?]

**ವಿಷ್ಟಿ** (ನಾ). ೧. ಸಂಬಳವಿಲ್ಲದೆ ಮಾಡುವ ಕೆಲಸ ; ಬಿಟ್ಟಿ . ೨. ನರಕಕ್ಕೆ ಕಳಿಸುವುದು ; ಅಧೋಲೋಕಕ್ಕೆ ಅಟ್ಟುವುದು. ೩. [ಜ್ಯೋತಿ] ಹನ್ನೊಂದು ಕರಣಗಳಲ್ಲಿ ಏಳನೆಯದು : ಕರಣಂ ಪನ್ನೊಂದು ಚರಸ್ಥಿರಸ್ವರೂಪಂಗಳಲ್ಲಿ ವಿಷ್ಟಿಯದೊಂದುಂ ಪರಿಹಾರ್ಯಮುೞಿದ ಪತ್ತುಂ ಕರಣಂ ಶುಭಕರಣಮಕ್ಕುಂ (ಲೋಕೋಪ. ೧-೨೫) ; ಶನಿಯಂಗಾರಕರೊಳ್ಕಿದರೆನಿಸರ್ ಮತ್ತಲ್ಲಿ ವಿಷ್ಟಿಗಿತ್ತಂ ಕುಳಿಕಂ ಜನಿಯಿಸುಗುತ್ಪಾತಂಗಳುಮೆನಿಪುದಱಿಂದಾಗ ಬಿತ್ತಣಕ್ಕಾ ದೆವಸಂ (ಜಟ್ಟಮ. ೯-೧೩). 'ಬಿಟ್ಟಿ₁' ಪರಾ. [ಸಂ.]

**ವಿಷ್ಟಿಸು** (ಕ್ರಿ). ೧. ಮಲ, ಮೂತ್ರಗಳನ್ನು ವಿಸರ್ಜಿಸು : ಶುನಕಶಕುನಮಂ ಪೇೞ್ವೆಂ . . . ಪದದೊಳೆ ಭೂಮಿಯಂ ಕರೆದು ವಿಷ್ಟಿಸೆ ಮಾಣ್ಬುದು ತದ್ವಿವಾಹಮಂ (ಲೋಕೋಪ. ೧೨-೨೫) ; ಕಾಗೆ ವಿಷ್ಟಿಸುವ ಹೊನ್ನ ಕಳಸವಹುದಱಿಂದ ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯಾ (ಬಸವ. ೩೭೧) ; ಸೂಕರಗಳು ಜೋಳವನ್ನು ತಿಂದು ಮನೆಯೊಳಗೆಲ್ಲ ವಿಷ್ಟಿಸಿದವು (ಬಚ್ಚರು. ೩). ೨. ಅಶುಭವನ್ನುಂಟುಮಾಡು ; ಅಮಂಗಳವನ್ನು ಸೂಚಿಸು : ಜನವು ಬೆಕ್ಕಸಬಟ್ಟು ಬೆದಱಿದುದನಿತಱೊಳು ವಿಷ್ಟಿಸಿಯೆ ಬಲಭದ್ರನನು ತದ್ರೂಪನು ಕಳೆದು ಮಾತೆಯ ಬಳಿಗೆ ಬಂದ (ಸಾಳ್ವಭಾ. ೩೦-೫೪). [ವಿಷ್ಟೆ + - ಇಸು₃]

**ವಿಷ್ಟೆ, ವಿಟ್ಟೆ** (ನಾ). ೧. ಮಲ ; ಅಮೇಧ್ಯ : ಗೂಗೆಯ ಎಡಪಕ್ಕದ ಗರಿ . . . ಅರಿದಳ, ಕಾಗೆಯ ವಿಷ್ಟೆ ಇವಂ ಸಮಾನವಾಗಿ ಚೂರ್ಣವಂ ಮಾಡಿ ಆಡಿನ ಮೂತ್ರದಿಂದರೆದು ಅಂಜನವಿಡಲು ಚಾತುರ್ಥಿಕಜ್ವರಂ ಮಾಣ್ಗುಂ (ಸಕವ್ಯ. ೧೯೯). ೨. ಅಶುಭ ; ಅಮಂಗಳ : 'ವಿಷ್ಟಿಸು' ಪರಾ. ೩. ಪಾಪ ; ದೋಷ : "ಅಶುಭಂ ಪಾಪೌಘ ವಿಷ್ಟಾಹ್ವಯಂ" (ನಾನಾರ. ೧೦೪). **ವಿಟ್ಟೆ** : ೧. "ವಿಟ್ಟೆ (ಬಿಟ್ಟ) ವಿಷ್ಟಾ – ಹಿಕ್ಕೆ, ಮಲ" (ತದ್ಭಕೋ. ೪೦). [< ಸಂ. ವಿಷ್ಟಾ]

**ವಿಷ್ಟಾಕೂಪ** (ನಾ). ಒಂದು ನರಕದ ಹೆಸರು : ಪರ್ವತ . . . ವಿಷ್ಟಾಕೂಪವೆಂಬೈದು ಮುಂತ್ರಿನರಕಂಗಳಾಧಿಪತ್ಯದಿಂ ಸುದೀರ್ಘವೆಂಬರಸುನರಕವಿಹುದು (ವಿವೇಕ. ೧೫೩). [ಸಂ.]

**ವಿಷ್ಠಿ** (ನಾ). (?) : ಮುತ್ತಿಂಗೆ ಪೇಳ್ವೆ ಗುಳ್ಳದ ಬೇರಿನಲಿ ಕೊಳವಿ ಮತ್ತದಕೆ ಮಾದಳದ ರಸವ ತುಂಬಿಯೆ ಶಂಖದತ್ಯಧಿಕರಾಜಾನವಿಷ್ಠಿಯಲಿ ಕಲಸ್ಯೆದುದಿನಮಿರ್ದು ಬಿಸಿ ಮಾಳ್ಪುದು (ರತ್ನಶಾ. ೨೩-೩). [?]

**ವಿಷ್ಠೆ** (ನಾ). = ವಿಷ್ಟೆ ೧ : ಕುದುರೆಯ ಪಂದಿಯ ವಿಷ್ಠೆಯೊಳೊದವಿದ ಕಿರ್ಚಿಂದೆ ಸೂಜಿಯಂ ಕಾಸಿ (ಲೋಕೋಪ. ೭-೨೮) ; ತನ್ನ ದಾನವನಪಹರಿಸಿಕೊಂಡನ್ಯರಿತ್ತುದಕಡ್ಡ ಬೀಳುವ ಧನ್ಯರುಗಳಱವತ್ತುಸಾವಿರವರುಷಪರಿಯಂತ ಖಿನ್ನವಹ ವಿಷ್ಠೆಯೊಳು ಕ್ರಿಮಿಗಳ ಜನ್ಮದಲ್ಲಿಹರು (ಕುವ್ಯಾಉ. ೪-೯೩). [ಸಂ. ವಿಷ್ಠಾ]

**ವಿಷ್ಣು** (ನಾ). ೧. ತ್ರಿಮೂರ್ತಿಗಳಲ್ಲಿ ಒಬ್ಬ ; ನಾರಾಯಣ : ದೇವಕಿ ವಿಷ್ಣುವಂ ಬಸಿಱೊಳಾಂತಿರೆ ವೈಷ್ಣವಮಾಯೆಯಂ ಯಶೋದಾವಧು . . . ಗರ್ಭದೊಳಾಂತಳ್ (ಜಗವಿ. ೨-೮೭) ; ನಿಖಿಲಜಗದ್ವ್ಯಾಪಕನಾಗಿರುವುದರಿಂದ ವಿಷ್ಣುವೆಂದು ಹೆಸರು (ಭಾರಶಾಂ. ೪೩). ೨. ಹನ್ನೆರಡು ಮಂದಿ ಆದಿತ್ಯರಲ್ಲಿ ಒಬ್ಬ : ದಾತ ಅರಿಯಮ . . . ವಿಷ್ಣುಗಳೆಂಬವರೇ ಕ್ರಮದಿಂ ದ್ವಾದಶಾದಿತ್ಯರು (ವಿವೇಕ. ೨೧೮). ೩. ವಿಷ್ಣುವು ಧ್ಯಾನದೇವತೆಯಾದ ಒಂದು ಮಂತ್ರ : ಗಾಯತ್ರಿ ಮೃತ್ಯುಂಜಯ . . . ಬ್ರಹ್ಮ ವಿಷ್ಣು . . . ಭೈರವಾದಿ ಮಹಾಮಂತ್ರಂಗಳಂ (ವಿವೇಕ. ೭೫). ೪. ವಿಷ್ಣುವು ಅಧಿದೇವತೆಯಾಗಿರುವ ಶ್ರವಣನಕ್ಷತ್ರ. ೫. ಅಗ್ನಿ. ೬. [ಛಂದ] ಅಂಶಗಣಗಳಲ್ಲಿ ಒಂದು ; ಮೂರಂಶದ ಒಂದು ಗಣ : ಎರಡುಂ ಮೂಱುಂ ನಾಲ್ಕುಂ ಗುರುವಿಂ . . . ಸರಸಿಜಭವ ವಿಷ್ಣುರುದ್ರಸಂಜ್ಞೆಗಳಕ್ಕುಂ (ಛಂದೋಂಬು. ೫-೨೪೦) ; ಕನ್ನಡ ಛಂದದಲ್ಲಿ ವಿಷ್ಣುವೇ ಪ್ರಧಾನಗಣ (ಛಂದೋವಿ. ೮೭). [ಸಂ.]

**ವಿಷ್ಣುಕಂದ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಗೆಡ್ಡೆ : "ಬೃಹತ್ಕಂದಃ – ವಿಷ್ಣುಕಂದ" (ಓಷಧಿ. ೧೦೯). [ಸಂ.]

**ವಿಷ್ಣುಕಾಂತ** (ನಾ). [ವಾಸ್ತು] ಸ್ತಂಭಗಳಲ್ಲಿ ಒಂದು ಬಗೆ : ಶಿಲ್ಪಶಾಸ್ತ್ರಗಳಲ್ಲಿ ಬ್ರಹ್ಮಕಾಂತ, ವಿಷ್ಣುಕಾಂತ, ರುದ್ರಕಾಂತ ಇತ್ಯಾದಿ ಸ್ತಂಭಪ್ರಭೇದಗಳು ಉಕ್ತವಾಗಿವೆ (ಹೊಯ್ಸವಾ. ೨೭). [ಸಂ.]

**ವಿಷ್ಣುಕ್ರಾಂತ** (ನಾ). ೧. ಒಂದು ಬಗೆಯ ಔಷಧೀಸಸ್ಯ : "ಆಸ್ಫೋಟಾ, ಗಿರಿಕರ್ಣೀ, ವಿಷ್ಣುಕ್ರಾಂತಃ, ಅಪರಾಜಿತಾ — ೪ ವಿಷ್ಣುಕ್ರಾಂತದ ಹೆಸರುಗಳು" (ಸಿದ್ಧಾಂತಿ. ೧೩೫). ೨. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : ಉರುಕುಂಚಿತ ಪಾದಂ ನೀಡಿರೆ . . . ಪಿರಿದುಂ ರೇಚಿತಮಾಗಲ್ ತರುಣೀ ಕೇಳ್ ಕರಣಮಿದುವೆ ವಿಷ್ಣುಕ್ರಾಂತಂ (ಲಾಸ್ಯರಂ. ೪-೧೭೧). [ಸಂ. ವಿಷ್ಣುಕ್ರಾಂತಾ]

**ವಿಷ್ಣುಕ್ರಾಂತಿ** (ನಾ). ಒಂದು ಬಗೆಯ ಔಷಧೀಸಸ್ಯ : ವಿಷ್ಣುಕ್ರಾಂತಿ ಸಹದೇವಿಯ ಬೇರು ಇವಂ . . . ಆಮಂತ್ರಿಸಿ ಮುಖಮಂ ಪೂಸೆ ಲೋಕವಶ್ಯ (ವಿಷ್ಣವಿ. ೨). [ಸಂ.]

**ವಿಷ್ಣುಗಂಟಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು : ರುದ್ರಗಂಟಿ ಮೂಸಿ ವಿಷ್ಣುಗಂಟಿ ಹಾಸಿ (ಗಂ. ೯೭-೪). [ವಿಷ್ಣು + ಕಂಟಿ₂]

**ವಿಷ್ಣುಗಣ** (ನಾ). = ವಿಷ್ಣು ೬ : ವಿಷ್ಣುಗಣಮೆಂತೆಂದೊಡೆ ಗೋವಿಂದಂ ಜಲಜಾಕ್ಷಂ . . . ಮುರರಿಪು (ಛಂದೋಂಬು. ೫-೨೪೦ ವ) ; ವಿಷ್ಣುಗಣ ೪ ರಿಂದ ೬ ರವರೆಗೆ ಮಾತ್ರೆಗಳನ್ನು ಸಮಾವೇಶಮಾಡಿಕೊಳ್ಳುತ್ತದೆ (ಛಂದೋವಿ. ೫೩). [ಸಂ.]

**ವಿಷ್ಣುಗೃಹ** (ನಾ). ವಿಷ್ಣುವಿನ ದೇವಸ್ಥಾನ : ನೆಗಟ್ಟುತ್ತುಂಗಶಿವಾಲಯ ಪ್ರತತಿಯಾದಿತ್ಯಾಲಯಂ ಸಾಲೆ ವಿಷ್ಣುಗೃಹಂ . . . ಎನೆ ನಾನಾಧರ್ಮಮಂ ಮಾಡಿಸಿ (ಸೌಇಇ. XX, ೪೯-೩೯ ; 1076?). [ಸಂ.]

**ವಿಷ್ಣುಚಕ್ರ** (ನಾ). ೧. ವಿಷ್ಣುವಿನ ಆಯುಧ : ವಿಷ್ಣುಚಕ್ರವು ಬಂದು ಸುತ್ತಿ ಮೂಜು ಸೃಷ್ಟಿಯನೆಲ್ಲವ ತಿರುಗಿ ಬೆನ್ನಟ್ಟಿ ಕೃಷ್ಣ ಸಲಹೆಂದು ಮೊಱೆಯಿಟ್ಟ ಮುನಿಶ್ರೇಷ್ಠಗಿಷ್ವರ ಮೇಲೆ ಅಭಯವ ಕೊಟ್ಟೆ (ಪುರಂದ. ಧಾ. ೩-೭೩-೫). ೨. ಒಂದು ಬಗೆಯ ಸುಡುಮದ್ದು : ದೀಪಾವಳಿಹಬ್ಬದಲ್ಲಿ ಪಟಾಕಿ, ವಿಷ್ಣುಚಕ್ರ ಮುಂತಾದುವನ್ನು ಹಚ್ಚಿಸಿ ಮಕ್ಕಳು ಸಂತೋಷ ಪಡುತ್ತಾರೆ (ರೂಢಿ). ೩. [ಸಾಮುಲ] ಕೈಯಲ್ಲಿರುವ ರೇಖಾರೂಪವಾದ ಚಕ್ರ. [ಸಂ.]

**ವಿಷ್ಣುತುಳಸಿ** (ನಾ). ಒಂದು ಬಗೆಯ ತುಳಸಿ : ವಿಷ್ಣುತುಳಸಿ, ಕರೀತುಳಸಿ, ಶ್ರೀತುಳಸಿ (ಮೈಔಗ. ೫೭-೧೧೪೯). 'ಶ್ರೀತುಲಸಿ' ಪರಾ. [ಸಂ. ವಿಷ್ಣುತುಲಸೀ]

**ವಿಷ್ಣುತ್ವ** (ನಾ). ವಿಷ್ಣುವಿನ ಪದವಿ : ಆ ಮಾಧವ . . . ಶಿವರಾತ್ರೆಯಂ ನೆಱೆ ಮಾಡಲ್ಕೆಸಲೇ ವಿಷ್ಣುತ್ವಮಂ ಪಡೆದನೆಂದು ಬಿತ್ತರಿಸಿದಂ ಸರ್ವೇಶನು (ವೀಶೈಪು. ೨-೮-೫೦). [ಸಂ.]

**ವಿಷ್ಣುನಕ್ಷತ್ರ** (ನಾ). ಒಂದು ನಕ್ಷತ್ರದ ಹೆಸರು ; ಶ್ರವಣ : ವರವಿಷ್ಣುನಕ್ಷತ್ರ ದಂತದೊಳ್ಳೆದೇಹಿಗಾಯ್ತು ಗರ್ಭಾಧಾನಂ (ಜೈಮಿಭಾ. ೧೮-೩೩). [ಸಂ.]

**ವಿಷ್ಣುಪದ** (ನಾ). ೧. ವಿಷ್ಣುವಿನ ಪಾದ : ಇದು ಪೂರ್ವದಿಶಾವಧುವೆತ್ತಿದ ಶಶಿಮಣಿಮುಕುರಮಮೃತಕರಮಂಡಳಮಲ್ತಿದು ಚಿಹ್ನಮಲ್ತು ಮಧ್ಯದೊಳೊದವಿದ ಮಾರ್ಪೊಳಪು ವಿಷ್ಣುಪದ ವಿಷ್ಣುವಿನಾ (ರಾಜಶೇ. ೧೧-೭೧). ೨. ಆಕಾಶ ; ಗಗನ. ೩. ಮುಕ್ತಿ ; ಮೋಕ್ಷ : ವರಭಾಗವತನಂತಿರೆ ವಿಷ್ಣುಪದಸಂಸಕ್ತತನುವಾಯ್ತು (ಕುವ್ಯಾಭೀ. ೮-೧೨). [ಸಂ.]

**ವಿಷ್ಣುಪದಿ** (ನಾ). ವಿಷ್ಣುವಿನ ಪಾದದಿಂದ ಹುಟ್ಟಿದುದು ; ಗಂಗೆ : "ಭಾಗೀರಥೀ, ಸುರಸರಿತ್, ವಿಷ್ಣುಪದೀ, ಜಾಹ್ನವೀ, ಗಂಗಾ — ಈ ೫ ಗಂಗೆ" (ಹಲಾಯು. ೧೧೧-೫೦). [ಸಂ. ವಿಷ್ಣುಪದೀ]

**ವಿಷ್ಣುಪಾದ** (ನಾ). ವಿಷ್ಣುವಿನ ಪಾದದ ಗುರುತಿರುವ ಸ್ಥಳ ; ಗಯೆಯಲ್ಲಿ ರುವ ಇದು ಹಿಂದೂಗಳ ಅತ್ಯಂತ ಪವಿತ್ರಸ್ಥಳವಾಗಿದೆ. [ಸಂ.]

**ವಿಷ್ಣುಪುರಾಣ** (ನಾ). ಹದಿನೆಂಟು ಪುರಾಣಗಳಲ್ಲಿಒಂದು; ವಿಷ್ಣುವಿನ ಕಥೆಯನ್ನೂ ಅವನ ಮಹಿಮೆಯನ್ನೂ ಕುರಿತು ಹೇಳುವ ಪುರಾಣ : ಕತೆ ವಿಷ್ಣುಪುರಾಣಂ ಸತ್ಯಕೃತಿವೇಟ್ಟಂ ಸುಕವಿರುದ್ರಂ (ಜಗವಿ. ೧-೨೧) ; ನಾರದೀಯ ಭಾಗವತ ಗಾರುಡ ವೈಷ್ಣವ ಎಂಬ ನಾಲ್ಕೆ ವಿಷ್ಣುಪುರಾಣಂಗಳು (ವಿವೇಕ. ೯). [ಸಂ.]

**ವಿಷ್ಣುಮಾಯೆ** (ನಾ). ೧. ಸೃಷ್ಟಿಯ ಕಾಲದಲ್ಲಿ ವಿಷ್ಣುವಿನ ಶಕ್ತಿಯಿಂದ ನಿರ್ಮಿತವಾದ ಒಂದು ಬಗೆಯ ಮೋಹ : ಬ್ರಹ್ಮಪಾಶ ವಿಷ್ಣುಮಾಯೆಯೆಂಬ ಬಲೆಯ ಬೀಸಿ ಹೊನ್ನು ಹೆಣ್ಣು ಮಣ್ಣು ತೋಱಿ ಮುಕ್ಕಣ್ಣನಾಡಿದ ಬೇಂಟೆಯ (ಅವಚಂ. ೬-೨೧); ವಿಶ್ವರೂಪಂ ಕರ್ತವ್ಯಮನಱಿಪ ತನ್ನ ದಿವ್ಯರೂಪವನಡಂಗಿಸಿ ವಿಷ್ಣು ಮಾಯೆಯಂ ಪಸರಿಸಿ (ಜಗವಿ. ೩-೭ ವ). ೨. ದುರ್ಗೆ. [ಸಂ. ವಿಷ್ಣುಮಾಯಾ]

**ವಿಷ್ಣುರಥ** (ನಾ). ವಿಷ್ಣುವಿನ ವಾಹನ ; ಗರುಡ. [ಸಂ.]

**ವಿಷ್ಣುವಾಹನ** (ನಾ). = ವಿಷ್ಣುರಥ : "ಗರುಡಃ = ವಿಷ್ಣುವಾಹನಂ" (ಕಾಶಕ್ಕ. ೭೪). [ಸಂ.]

**ವಿಷ್ಣುಸಾವರ್ಣಿಕ** (ನಾ). ಹದಿನಾಲ್ಕು ಮನುಗಳಲ್ಲಿ ಒಬ್ಬ : ಪೂರ್ವದಲ್ಲಿ ಸ್ವಯಂಭು . . . ವಿಷ್ಣುಸಾವರ್ಣಿಕ ರುದ್ರಸಾವರ್ಣಿಕ . . . ಬ್ರಹ್ಮಸಾವರ್ಣಿಕರೆಂಬ ಹದಿನಾಲ್ಕು ಮನುಗಳೊಳಗೆ (ವಿವೇಕ. ೧೬೩). [ಸಂ.]

**ವಿಷ್ಣುಸ್ಮೃತಿ** (ನಾ). ೧. ವಿಷ್ಣುಪರವಾದ ಸ್ತೋತ್ರ. ೨. ಹತ್ತೊಂಬತ್ತು ಸ್ಮೃತಿಗಳಲ್ಲಿ ಒಂದು : ಮನುಸ್ಮೃತಿ ಅತ್ರಿಸ್ಮೃತಿ ಹಾರೀತಸ್ಮೃತಿ ವಿಷ್ಣುಸ್ಮೃತಿ . . . ವಶಿಷ್ಠಸ್ಮೃತಿಗಳೆಂಬಿವೇ ಆಯಾಯ ನಾಮಧೇಯಮುಳ್ಳವರಿಂದುಕ್ತಮಾದ ಹತ್ತೊಂಬತ್ತು ಧರ್ಮಶಾಸ್ತ್ರಂಗಳ್ (ವಿವೇಕ. ೫). [ಸಂ.]

**ವಿಷ್ಣುಹಣ** (ನಾ). (?) : ಇದು ಮಧ್ಯರಾಸಿಯಲಿ ಹಣ ತೋರಿದ ಕಾಯಿ ವಿಷ್ಣುಹಣವಾದ ಕಾರಣ ಗ ೧ಕ್ಕೆ ಹಣ ೧೦ ರಿಂದ ಭಾಗಿಸಲು ಗ ೧೩ ‖ ೦ (ಭಾಸ್ಕರ. ೨೫-೨). [ವಿಷ್ಣು? + ಹಣ?]

**ವಿಷ್ಫಾರ** (ನಾ). ೧. ಬಿಲ್ಲಿನ ದನಿ ; ಠೇಂಕಾರ : "ಬಿಲ್ಲ ದನಿಯಂ ವಿಷ್ಫಾರವೆಂಬುದು" (ಹಲಾಯು. ೨೪-೧೫೦). ೨. ಕಂಪನ ; ನಡುಕ. [< ಸಂ. ವಿಸ್ಫಾರ]

**ವಿಷ್ವಕ್ಸೇನ** (ನಾ). ೧. ವಿಷ್ಣು ; ನಾರಾಯಣ : ಆ ಬಳ ವಿಷ್ವಕ್ಸೇನರ್ ಗೋಪಬಂಧು ಗೆತ್ತರ್ ಖಳನಂ (ಜಗವಿ. ೪-೫೦) ; ತ್ರಿವಿಕ್ರಮನ ಬೆನ್ನೆಲು ಕರದಿ ಝಗಝಗಿಪ ಶೂಲದೊಳಗೆಸೆಯೆ ವಿಷ್ವಕ್ಸೇನನಗಜೇಶ ಧರಿಸಲ್ (ಗುರುಚಾ. ೪-೨೨). ೨. ವಿಷ್ಣುವಿನ ಮುಖ್ಯ ಪರಿಚಾರಕ : ವಿಷ್ವಕ್ಸೇನನೆಂಬವನ ನಿಶಿತ ಶೂಲಾಯುಧದಿನಿಱಿದಾ ಬಿಸರುಹಾಕ್ಷನ ಹರನಿಱಿದನೆಂದುಸುರಲೊಲ್ಲನು (ಬಸವು. ೫೭-೨೨). [ಸಂ.]

**ವಿಷ್ವಕ್ಸೇನಪ್ರಿಯೆ** (ನಾ). ೧. ವಿಷ್ಣುವಿನ ಪತ್ನಿ ; ಲಕ್ಷ್ಮಿ. ೨. ಒಂದು ಬಗೆಯ ಸಸ್ಯ ಮತ್ತು ಅದರ ಗೆಡ್ಡೆ ; ವಾರಾಹಿ ; ಹಂದಿಗೆಡ್ಡೆ. [ಸಂ. ವಿಷ್ವಕ್ಸೇನಪ್ರಿಯಾ]

**ವಿಷ್ವಕ್ಸೇನೆ** (ನಾ). ಒಂದು ಬಗೆಯ ಸಸ್ಯ ; ಪ್ರಿಯಂಗು : "ಶ್ಯಾಮಾ . . . ವಿಷ್ವಕ್ಸೇನಾ, ಗಂಧಫಲೀ, ಕಾರಂಭಾ, ಪ್ರಿಯಕಃ — ೧೨ ಪ್ರೇಂಕಣಗಿಡದ ಹೆಸರು" (ಸಿದ್ಧಾಂತಿ. ೧೨೪). [ಸಂ. ವಿಷ್ವಕ್ಸೇನಾ]

**ವಿಸ್**$_1$ 'ಬಿಸ್$_1$' ನೋ.

**ವಿಸ್**$_2$ (ನಾ). "ಕೊಳಲು" (ವರ್ಧಪು, ಅನುವಾದ) : ಮುಹರಿಯ ಮಧುರತೆಯುಂ ಬೀಣೆಯ ಬಹುಲಿಕೆಯುಂ ಎಸೆಯೆ ವಿಸದ ಕುಸರಿಯಂ ಕಳೆಗೆ ಕೆಳೆಗೊಳಿಸಿ ತವನೆಗಿಡದೆ (ವರ್ಧಪು. ೯-೪೪ ವ). [< ಸಂ. ವಂಶ]

**ವಿಸ್**$_3$ (ನಾ). ೧. ತಾವರೆಯ ದಂಟು ; ಮೃಣಾಳ. ೨. ತಾವರೆಯ ದಂಟಿನೊಳಗಿನ ನಾರು ; ಬಿಸಜತಂತು. [ಸಂ.]

**ವಿಸಂಕಟ** (ಗು). ೧. ಭಯಂಕರವಾದ ; ಘೋರವಾದ. (ನಾ). ೨. ಒಂದು ನರಕದ ಹೆಸರು : ಸಂಕಟ ವಿಸಂಕಟ ಸವಿಶಾಲ ಕಟ ವಿಕಟವೆಂಬೈದು ಮಂತ್ರಿನರಕಂಗಳಿಂ ಮೋಹಿಸಿ ವಿಕರಾಳವೆಂಬರಸುನರಕವಿಹುದು (ವಿವೇಕ. ೧೫೩). [ಸಂ.]

**ವಿಸಂಗತ** (ಗು). ೧. ಹೊಂದಾಣಿಕೆಯಿಲ್ಲದ ; ಅಸಂಬದ್ಧವಾದ : ಏನು ವಿಸಂಗತ ಮಾತುಗಳಿವು (ಕಳ್ಳಕಾ. ೩೯). (ನಾ). ೨. ಅಸಂಬದ್ಧವಾದುದು ; ವಿಚಿತ್ರ ವಾದುದು : ಪ್ರತಿಯೊಂದು ಕಥೆಯೂ ಸಂದೇಶವಾಹಕವೇ ಎನ್ನುವುದು ತುಸು ವಿಸಂಗತವಾಗಿ ತೋರಬಹುದು (ಕಥಕ. ೭೮). [ಸಂ.]

**ವಿಸಂಗತಿ** (ನಾ). ಹೊಂದಾಣಿಕೆ ಇಲ್ಲದಿರುವಿಕೆ ; ಅಸಾಂಗತ್ಯ : ವಿನೋದದ ಕಥೆಗಳು . . . ವಿಸಂಗತಿ ವೈಚಿತ್ರ್ಯಗಳೇ ಈ ಬಗೆಯ ಕಥೆಗಳ ಜೀವಾಳ (ಕಥಕ. ೨೪) ; ಮಡಿವಂತಿಕೆಯ ಅಧಿಕಾರದರ್ಪ ಹೇಗಿತ್ತೆಂಬುದನ್ನು ವರ್ಣಿಸಿ ಆ ವಿಸಂಗತಿಗೆ ತಾವೂ ನಗುತ್ತಾರೆ (ಸ್ಮೃತಿಚಿ. ೪). [ಸಂ.]

**ವಿಸಂಚ** 'ವಿಸಂಚು' ನೋ.

**ವಿಸಂಚಿಸು** (ಕ್ರಿ). ೧. ಚೂರುಚೂರಾಗು ; ಪುಡಿಪುಡಿಯಾಗು : ಸಾರಥಿ ನೊಂದನಾ ಧ್ವಜದಂಡವುಡಿದುದು ರಥ ವಿಸಂಚಿಸಿತು (ಕುವ್ಯಾವಿ. ೮-೫೮). ೨. ತಪ್ಪಿಹೋಗು ; ಮುರಿದುಬೀಳು : ಸಂಧಿ ವಿಸಂಚಿಸಲಾಗಳಾ ಅವನ ಕಪಟವೃತ್ತಿಯಂ ಗುರುವಮಂತ್ರಿ ಯರಿದು (ಕಲನ್ಯ. ೧೦-೩೮). ೩. (ಅಲಂ) ಸಾಮರ್ಥ್ಯವನ್ನು ಕಳೆದುಕೊಳ್ಳು ; ಶಕ್ತಿಗುಂದು : ಕನಸು ಮೇಣೆಚ್ಚಱು ಸುಷುಪ್ತಿಗಳೆನಿಪವಸ್ಥಾತ್ರಿತಯದಲಿ ಜೀವನು ವಿಸಂಚಿಸಿ ಬೀಳ್ವನಲ್ಲದೆ ಶರಕೆ ಸಿಲುಕುವನೆ (ಕುವ್ಯಾವಿ. ೮-೮೮). [ವಿಸಂಚ ? + - ಇಸು$_1$]

**ವಿಸಂಚು** , ವಿಸಂಚ (ನಾ). ವಿಶೇಷವಾದ ಕುತಂತ್ರ, — ಪಿತೂರಿ : ಕುದುರೆಯ ರಾಯರಾವುತರಿದಿರ್ಚಿ ಕುರುಳ್ಚಿ ತೆರಳ್ಚಿ ಕೋಪದಿಂದೊಡಗಿಱಿದಿಕ್ಕೆಯುಕ್ಕೆ ಪಟುವಾಗಿ ಪಳಂಚಿ ವಿಸಂಚಿನೊಳ್ಳಹಾಮದಕರಿಪುಷ್ಕರಂಗಳನತಿಕ್ರಮಿಸಿ (ಹಮ್ಮೀರ. ೩-೪೨). **ವಿಸಂಚ** : ಮನದೊಳೋವರಿಯಿಲ್ಲ ಬುದ್ಧಿಯೊಳು ವಿಸಂಚವಿ[ಪಾಠಾಂ. ಚಿಯಿ]ಲ್ಲ (ಬಸರ. ೮-೫೧) ; ನಿನ್ನನು ತಾ ಕಾಣಲೋಸುಗ ಕಾಂತೆ ಸರಸದ ವಾಣಿಯನು ವಿರಚಿಸಲು ನೇಹಕ್ಕೂಣೆಯವೆ ವಸುದೇವನಾಣೆ ವಿಸಂಚವಿಲ್ಲ (ನಿಭಾಗ. ೧೦-೮೭-೨೩). [ವಿ$_{0}$ - + ಸಂಚು$_2$]

**ವಿಸಂಧಿ** (ನಾ). ೧. ಹೊಂದಿಕೆಯಾಗದಿರುವಿಕೆ ; ಅಸಂಬದ್ಧತೆ : ಕೋಲಾಹಲದಿಂದ ಸಂಧಿಗಿಂತ ವಿಸಂಧಿಯೇ, ಸಂಘಟನೆಗಿಂತ ಸಂಘರ್ಷಣೆಯೇ ಹೆಚ್ಚು ಸಂಭಾವ್ಯ (ಸಾಹಿಪ್ರ. iii, ಪ್ರಸ್ತಾವನೆ). ೨. ಒಪ್ಪಂದ ಮುರಿಯುವಿಕೆ ; ಕರಾರು ಮುರಿಯುವಿಕೆ : ಈತನ ಭಾವ ಬೆಟ್ಟಿತು ತೆಱಹುಗೊಡನಿಂದೀ ವಿಸಂಧಿಯೊಳಱಿಯೆನವನಿಪನಾಗು ಹೋಗುಗಳ (ಕುವ್ಯಾಕ. ೧೪-೧೭). ೩. [ವ್ಯಾಕ] ಸಂಧಿಯಾಗದಿರುವುದು : ವಿಸಂಧಿಗೆ — ಕರೆ + ಅಲ್ = ಕರೆ ಅಲ್ (ಶಮದ. ೭೧ ಪ್ರಯೋ). ೪. [ಕಾವ್ಯಮೀ] ಕಾವ್ಯದೋಷಗಳಲ್ಲಿ ಒಂದು ; "ಅಶ್ಲೀಲವು ತೋರುವ ಹಾಗೆ ಸಂಧಿ ಮಾಡಿರುವದು" (ಕೃಪಿಡ.೨೨೮) : ಛಂದಕ್ಕೆ ಬಾರದೆಂದಱಿದೊಂದೊಂದಱೊಳೊಂದಿ ಬಂದು ನಿಂದಕ್ಕರಮಂ ಸಂಧಿಸದೆ ಪೇೞ್ದೊಡದು ಕೃತಿ ನಿಂದಿತಮೆಂದುಂ ವಿಸಂಧಿಯೆಂಬುದು ದೋಷಂ (ಕವಿರಾ. ೧-೯೫). [ಸಂ.]

**ವಿಸಂಧಿಕ** (ನಾ). = ವಿಸಂಧಿ ೪ : ಚ್ಯುತಯಾಥಾಸಂಖ್ಯಂ ವ್ಯವಹಿತಮಚ್ಛಂದಂ ವಿಸಂಧಿಕಂ ನೇಯಾರ್ಥಂ (ಕವಿರಾ. ೧-೬೯). [ಸಂ.]

**ವಿಸಂಯೋಜಿಸು** (ಕ್ರಿ). ಬಿಡು ; ತೊರೆ ; ತ್ಯಜಿಸು : ಅನಂತಾನುಬಂಧಿ ಕ್ರೋಧಮಾನ ಮಾಯಾಲೋಭಂಗಳಂ ವಿಸಂಯೋಜಿಸಿ (ಆದಿಪು. ೧೦-೧೪ ವ).

[ (ಸಂ. ವಿಸಂಯೋಜನ) + - ಇಸು$_{3}$]

**ವಿಸಂವಾದ** (ನಾ). ೧. ವಿರುದ್ಧವಾಗಿ ಆಡುವ ಮಾತು ; ಎದುರುಮಾತು. ೨. ವಾದ ; ಚರ್ಚೆ : ಯಜ್ಞಾದಿ ಕಾರಣದೊಳ್ ಪರ್ವತ ನಾರದ ವಿಸಂವಾದದೊಳ್ ನೆಗಟ್ದುದನಱಿಪಿ (ಚಾವುಂಪು. ೨೯೭). ೩. ಅಸಂಗತವಾದ ಮಾತು ; ಅಸಂಬದ್ಧವಾದ ನುಡಿ : ಅವನಲ್ಲಿ ತನ್ನೊಡನೆ ಎಳ್ಳುಕಾಳಿನಷ್ಟು ವಿರೋಧ ವಿಸಂವಾದಗಳಿಲ್ಲ (ನಿಬಂಧ. II, ४೧೨). ४. ಪಕ್ಷಿಗಳ ಧ್ವನಿ. ೩, ೪ : ನೆರೆದ ವಿಸಂವಾದಂ ಪಂಜರಶುಕತತಿಯೊಳ್ . . . ನೆಗಟ್ದುಂ (ಕವಿರಾ. ೩-೧೧೨). ೫. ಮೋಸ ; ವಂಚನೆ : "ವಿಪ್ರಲಂಭಃ, ವಿಸಂವಾದಃ, ವಿಪ್ರಲಾಪಃ — ಈ ೩ ವಂಚಿಸುಹ" (ಹಲಾಯು. ೧೨೭-೬೩).

[ಸಂ.]

**ವಿಸಂವಾದಂಗೆಯ್** (ಕ್ರಿ). ವಾದಿಸು ; ತರ್ಕಿಸು : ನಂದಿವರ್ಧನಗುರುಗಳ್ ಸದ್ಧರ್ಮವಂ ಪೇೞೆ ಕೇಳ್ದಗ್ನಿಭೂತಿಯುಂ ವಾಯುಭೂತಿಯುಂ ಸೈರಿಸದೆ ವಿಸಂವಾದಂಗೆಯ್ಯಲ್ (ಚಾವುಂಪು. ೩೫೭). [ವಿಸಂವಾದ + ಕೆಯ್$_{1}$]

**ವಿಸಕಂಠಿಕೆ** (ನಾ). ಒಂದು ಬಗೆಯ ಸಣ್ಣ ಕೊಕ್ಕರೆ : "ಬಲಾಕಾ, ವಿ[ಪಾಠಾಂ. ಬಿ]ಸಕಂಠಿಕಾ — ಈ ೨ ಬೆಳ್ಳಕ್ಕಿ" (ಹಲಾಯು. ४೨-೯೭). [ಸಂ. ವಿಸಕಂಠಿಕಾ]

**ವಿಸಟ** (ನಾ). ಮನಸ್ಸಿಗೆ ಬಂದಂತೆ ಇರುವುದು ; ಸ್ವೇಚ್ಛೆ : 'ವಿಸಟಂಬರ್', 'ವಿಸಟಂಬರಿ' ಪರಾ. [< ಪ್ರಾ. ವಿಸಟ್ಟ]

**ವಿಸಟಂಬಯ್** (ಕ್ರಿ). ತೋಚಿದ ಕಡೆ ಅಡಗು ; ಮನಬಂದ ಕಡೆ ಮರೆಯಾಗು : ಚಪಲವಾಗುತ್ತಿರ್ದ ಚಿತ್ತು ತನ್ನಾ ಧ್ಯೇಯಸುಪವಿತ್ರವಸ್ತುವಂ ಬಿಟ್ಟತ್ತಲೆತ್ತಾನು ನೆಪದೆ ವಿಸಟಂಬಯಿತ್ತು (ವೀಶೈಪು. ೫-೧೮-೧೯). [ವಿಸಟ + ಬಯ್$_{1}$]

**ವಿಸಟಂಬರ್, ವಿಸಟಂಬರು** (ಕ್ರಿ). ಮನಸ್ಸಿಗೆ ತೋಚಿದಂತೆ ಬರು ; ಸ್ವೇಚ್ಛೆಯಾಗಿ ಬರು : ಗಜಪುರದೊಳೊಂದು ಮದಗಜಂ ಇರುಳ್ ವಿಸಟಂಬರ್ಪುದಂ ಕಂಡು ಮೂವತ್ತೆರಡುಂ ಕ್ರೀಡೆಗಳೊಳಳವಡಿಸಿ ವಶಂ ಮಾಡೆ (ಚಾವುಂಪು. ೭೭). **ವಿಸಟಂಬರು** : ಅಡ್ಡಂ ತಿಗಟಂ ವಿಸಟಂಬರುತಂ ಗುಡ್ಡಿಸಿ ಮುಗಿಲುದ್ದಕೆ ನೆಗೆವುತ್ತುಂ (ಭೃಂಗೀರ. ಹ. ४೭೩-೮). [ವಿಸಟ + ಬರ್ (< ವರ್)]

**ವಿಸಟಂಬರಿ$_{1}$, ಬಿಸಟಂಬರಿ** (ಕ್ರಿ). ೧. ಮನಸ್ಸಿಗೆ ಬಂದಂತೆ ಹೋಗು ; ಸ್ವೇಚ್ಛೆಯಾಗಿ ಗಮಿಸು : "ವಿಸಟಂಬರಿದುದೆನಲ್ ಸ್ವೈರಗಮನಮಕ್ಕುಂ" (ಕವಿಕಂ. ೨४೮) ; ಆ ಪುರದುಪವನದೊಳ್ . . . ಕಂತುದಂತಿ ವಿಸಟಂಬರಿಯದೇಲಾವನವೀಧಿಗಳಿಲ್ಲ (ಪಂರಾಮಾ. ೧-೧೦೭ ವ) ; ವದನ ಮುಖಮಂಡಲದ ಕಾಂತಿಯನೊದೆದು ಕಂಗಳ ಬೆಳಗು ವಿಸಟಂಬರಿದುದೇನೆಂಬೆನು ನಿತಂಬಿನಿಯ (ಕುವ್ಯಾಅ. ೧೩-೨४). ೨. ಮನ ಬಂದಂತೆ ಹರಿ, — ಪ್ರವಹಿಸು : ಕಾನನಂಗಳೊಳ್ ನೆಱೆ ವಿಸಟಂಬರಿದುವು ಹೊಳೆ (ಗಿರಿಕ. ೯-೫೭) ; ರುಧಿರದ ಪ್ರವಾಹ ದೆಸೆಗೆ ವಿಸಟಂಬರಿಯೆ (ಸೌಂದಪು. ೧೭-೧೯). **ಬಿಸಟಂಬರಿ** : ೧. ಮಾಮಸಕಂ ಮಸಗಿ ಬಿಸಟಂಬರಿವ ಮದಕರಿಯಂ ಕುಮಾರಂ ಕಂಡು (ಅರ್ಧನೇ. ೫-೧೧೩ ವ) ; ಬಟ್ಟೆಯೊಳ್ ಬಿದ್ದಂಬರಿದುಮಡವಿಯೊಳ್ ಬಿಸಟಂಬರಿದುಂ . . . ತತ್ತಮೋಬಳಂ . . . ಸಕಳಜಗಮನಂಡಲೆದು ನೆಲಸೆ (ವರ್ಧಪು. ೬-೩೨ ವ) ; ಬಿಸಟಂಬರಿವುತಲದೆ ಪೊಳಲೊಳು ಗಜ ವಸುಧಾಧಿಪತಿ ಚಿತ್ತೈಸು (ನಾಗಕು. ೭-೨೮).

[ವಿಸಟ + ಪರಿ$_{2}$]

**ವಿಸಟಂಬರಿ$_{2}$** (ನಾ). ಮನಬಂದತ್ತ ಚಲಿಸುವಿಕೆ ; ಸ್ವೇಚ್ಛಾಗಮನ : ಗಿರಿಯ ವಿಸಟಂಬರಿಯನಮರೇಶ್ವರನು ತಡೆವವೋಲಳ್ಳಿಱಿವ ದಿಕ್ಕರಿಯನಡಗಟ್ಟಿದನು (ಕುವ್ಯಾದ್ರೋ. ೩-४೮). [ವಿಸಟ + ಪರಿ$_{3}$]

**ವಿಸಟಂಬರಿಯಿಸು** (ಕ್ರಿ). ಮನಬಂದತ್ತ ಓಡುವಂತೆ ಮಾಡು ; ಸ್ವೇಚ್ಛೆಯಾಗಿ ಹರಿಬಿಡು : ವಿಸಟಂಬರಿಯಿಸಿದೊಡದೆಣ್ದೆಸೆಗಂ ತನ್ಮಯದೆ ಪರಿದು ಕಲ್ಪಕ್ಷಯದೊಳ್ ಮಸಗಿದ ದೆಸೆಯಾನೆಯಿದೆಂಬೆಸಕದೆ ತೋಱಿತ್ತು (ಚಂದ್ರಪು. ೧೦-೯೫) ; ಪಿಂಡಾನೆಗಳೊಂದುಗೂಡಿ ಶಿಕ್ಷೋಪಕರಣಂಬೆರಸು ಸುಳಿದೇಱುವ ಸುತ್ತಂ ಮೆಟ್ಟಿಸುವ ವಿಸಟಂಬರಿಯಿಸುವಡ್ಡ[ಪಾಠಾಂ. ಬರಿವಡ್ಡ]ತರದೊಳಿಕ್ಕುವ . . . ಗಜಾರೋಹಣಧುರೀಣಗಾದಾ ಧೋರಣರ್ನೆರೆನೆರೆದು (ರಾಜಶೇ. ೬-೧೧ ವ). [ವಿಸಟಂಬರಿ$_{1}$ + - ಇಸು$_{3}$]

**ವಿಸಟಂಬರು** 'ವಿಸಟಂಬರ್' ನೋ.

**ವಿಸಟಂಬಾಯ್** (ಕ್ರಿ). = ವಿಸಟಂಬರಿ$_{1}$ ೧ : ಜಯಕೇಶಿಕ್ಷಿತಿಪಾಲನಾನೆ ವಿಸಟಂಬಾಯ್ವುಂದು (ಅನಂಪು. ೧-೨೧). [ವಿಸಟ + ಪಾಯ್$_{1}$]

**ವಿಸಟಂಬೊಂದಿಸು** (ಕ್ರಿ). ಭಂಗಿಸು ; ಭಗ್ನಗೊಳಿಸು : ತತ್ಕುಜಮನೀಗಳ್ತರ್ಪೆನೆಂದಿಂದ್ರನಂ ವಿಸಟಂಬೊಂದಿಸಿ ತಂದೆ ಕೃಷ್ಣವೆಸರಿಂ (ಚಂದ್ರಬ್ಯು. ೩-೫೯).

[ವಿಸಟ + ಪೊಂದು$_{1}$ (< ಪೊರ್ದು) + - ಇಸು$_{3}$]

**ವಿಸದ** (ನಾ). ನಿರ್ಮಲವಾದುದು ; ಶುದ್ಧವಾದುದು : ವಿಸದಂ ತಾರಾಗ್ರಹಾನೀಕದ ವಿಕೃತಿ ವಲಂ ದಿವ್ಯಮಕ್ಕುಂ (ಲೋಕೋಪ. ४-೩).

ವಿಸದಮನ್ನೆಯ = ಕಳಂಕರಹಿತನಾದವನು ; ಒಂದು ಬಿರುದು : ವೈರಿಮನ್ನೆಯಂ ಪಾಷ[ಣ್ಣ] ವೀರಮುರಾರಿ ವಿಸದಮನ್ನೆಯ . . . [ನಾ]ಮಾದಿ ಸಮಸ್ತ ಪ್ರಸಸ್ತಿಸಹಿತಂ (ಸೌಇಇ. XX, ೩೮-೭ ; 1058). [< ಸಂ. ವಿಶದ]

**ವಿಸದಿ** (ನಾ). ಒಂದು ಅಳತೆ ; ವೀಸ : ಪೂಣೆ ಇಱುವ ಮಾಲ(ಲಾ)ಕಾರರ್ಗ್ಗೆ ಅದ್ಧ ವಿಸದಿ ಇತ್ತೊದಾನಟಿವೊನ್ (ಇಆ. X, ೬೦-೩ ; 678). [< ಸಂ. ವಿಂಶತಿ]

**ವಿಸದೃಶ** (ಗು). ಸಮಾನವಲ್ಲದ ; ಹೊಂದಿಕೆಯಾಗದ : ಈ ವಿಧ ವಿಸದೃಶ ಜೋಡು ಮೆಟ್ಟಿ ಕಾಲೇಜಿಗೆ ಹೋಗುವುದು ಅಸಂಭವ (ಇಪ್ಪಕ. ೩೭೯). [ಸಂ.]

**ವಿಸಮ** 'ಬಿಸಮ$_{1}$' ನೋ.

**ವಿಸಯ** 'ಬಿಸಯ' ನೋ.

**ವಿಸರ** (ನಾ). ೧. ವಿಸ್ತಾರ ; ವ್ಯಾಪ್ತಿ : ಅಸುರನೆಚ್ಚ ಶರಾಳಿ ದಿಕ್ಕಿನ ವಿಸರ ತುಂಬಿತು (ಕೌಶಿರಾ. ೩೫-೨೨) ; ವಿಸರಸತ್ತ್ವಮದೊಂದದೆತ್ತಣೆನೊ ಬಂದು ನಮ್ಮಸುಗಳೊಳವೊಗುತಿಹುದು (ಮಂಕುಕ. ೧೫೫). ೨. ಸಮೂಹ ; ಗುಂಪು : ಮುನಿಜನದೇವತಾರ್ಚನೋಪಯುಕ್ತಮಾದ ಕುಸುಮವಿಸರದಿಂ . . . ಮನಗೊಳಿಸುವ ವನರಾಜಿಗಳಿಂ ೦ಂ ರಂಜಿಸುವುದು (ಕಾದಂಪೂ. ೧೧೭) ; ಮುಸುಕಿ ಹೋಯಿತು ಲಂಕೆ ಕಪಿಗಳ ವಿಸರದಿಂ (ಕೌಶಿರಾ. ೨೦-४). ೩. ಹಿಂಡು ; ಮಂದೆ. [ಸಂ.]

**ವಿಸರಣ** (ನಾ). ಹರಡುವುದು ; ವ್ಯಾಪ್ತವಾಗುವುದು : ಈ ವಿಸರಣಗಳನ್ನೆಲ್ಲ ನಮ್ಮ ಇಂದ್ರಿಯಗಳು ಗ್ರಹಿಸಲಾರವು (ಶಿಲ್ಪಸಾ. ೧೯೦) ; ಈ "ವಿಸರಣ"ದ ವಿಚಾರವಾಗಿ ಸಾಕಷ್ಟು ವಿಜ್ಞಾನಸಿದ್ಧಾಂತಗಳು ಉಂಟಾಗಿವೆ (ಬಾಲಪ್ರ. III, ೧೩೭೭). [ಸಂ.]

**ವಿಸರತ್ತು** (ನಾ). ಹರಡುವುದು ; ವ್ಯಾಪ್ತಿ ಹೊಂದುವುದು : ಸಂತತದರದಳಿತ ಪರಿಮಳಭರಿತ ಕುಸುಮವಿಸರವಿಸರದಮಂದಮರಂದರಸ ಕದಂಬಕರ್ದಮಿತವಿಧುರವಿವೀಥಿಸನಾಥಮುಂ (ರಾಜಶೇ. ೧४-೧೦೭ ವ). [ಸಂ. ವಿಸರತ್]

**ವಿಸರಿಸು** (ಕ್ರಿ). ವಿಸ್ತರಿಸು ; ಹರಡು : ವಿಸರಿಪ ಟಂಕಣವೋಲೆಯ ಮಸಿಯೆಂಬಿವನೊರಸಿ ಮಾತುಲುಂಗದ ಪಣ್ಣಂ ಬಿಸಿಲೊಳ್ ಪಸರಿಸೆ ತದ್ದ್ರವವೊಸರ್ಗುಮಶೇಷಂ (ಲೋಕೋಪ. ೮-೩४) ; ನಮ್ಮ ವಿಶ್ವವು ಈಗ ದಿನೇ ದಿನೇ ತನ್ನ ಶಕ್ತಿಯನ್ನು ವಿಸರಿಸುತ್ತಿದೆ (ಬಾಲಪ್ರ. III, ೧೩೭೮). [ವಿಸರಣ + - ಇಸು$_{3}$]

**ವಿಸರುಹ** (ನಾ). ನಾಳದಿಂದ ಹುಟ್ಟಿದುದು ; ತಾವರೆ ; ಕಮಲ : ಭೃಂಗಪ್ರಸರಂ ಪಸರಿಸುವುವೆಸೆವ ವಿಸರುಹವನದೊಳ್ (ಸುಕುಮಾ. ೧೦-೫೭) ; ವಿಸರುಹದಂತೆ ಕೇಸರಮನಾಂತುದು . . . ಪುಂಜನಗ್ಗದ ಸುವಸ್ತುವಿನಂತಿರೆ ತಟ್ಟು ಹೇಂಟೆಯೊಳ್ (ಯಶೋಚ. ೩-೭೮). [ಸಂ.]

**ವಿಸರ್ಗ** (ನಾ). ೧. ಬಿಡುವಿಕೆ ; ತ್ಯಜಿಸುವುದು ; ತ್ಯಾಗ. ೨. ಮುಕ್ತಿ ; ಮೋಕ್ಷ : "ವರ್ಚಸದೊಳು ವಿಮುಕ್ತದೊಳು ಮಿಗೆ ವಿಸರ್ಗವೆನಿಕು " (ಮಂಗರಾ. ೧೪೩-೨೪). ೩. ನಾಶ ; ಹಾನಿ ; ಚ್ಯುತಿ : ನೃಪಪರಂಪರೆಯಿಂದ ಬಂದೀ ವಿಪುಳವಂಶಸ್ಥಿತಿವಿಸರ್ಗ ವನಪಹರಿಸಿದನು ಹಿಂದೆ ವೇದವ್ಯಾಸಮುನಿ ಬಂದು (ಕುವ್ಯಾಅ. ೪-೮). ೪. (ಮಹಾಪುರಾಣಲಕ್ಷಣಗಳಲ್ಲಿ ಒಂದಾದ) ಜಗತ್ತಿನ ಲಯ, — ಪ್ರಳಯ. ೫. [ವ್ಯಾಕ] (ಯೋಗವಾಹಗಳಲ್ಲಿ ಒಂದಾದ) ಎರಡು ಬಿಂದುಗಳ ಚಿಹ್ನೆಯಿಂದ ಗುರುತಿಸುವ ವರ್ಣಸಂಜ್ಞೆ (ಃ) : ಸೊನ್ನೆ ಮುತ್ತುವೋಲ್ ವೃತ್ತತೆಯಿಂದ ಸಂದಿರ್ಪುದಂತದಡಕಿಲ್ಲೊಂದಿರೆ ಮಣಿಗೊಪ್ಪುವೋಲ್ ವಿಸರ್ಗಮೆನಿಕ್ಕುಂ (ಶಮದ. ೧೧) ; ಉಕಾರಕ್ಕೂ ಖಕಾರಕ್ಕೂ ನಡುವೆ ಇರುವ ವರ್ಣಕ್ಕೆ (ಃ) ವಿಸರ್ಗ ಎಂದೂ ಹೆಸರು (ಮಧ್ಯಮ. ೧೨). 'ಅನುಸ್ವಾರ' ಪರಾ. [ಸಂ.]

**ವಿಸರ್ಜನ** (ನಾ). ೧. ಬಿಡುವುದು ; ತೊರೆಯುವುದು. ೨. ಕೊಟ್ಟುದು ; ಕೊಡುಗೆ ; ದಾನ. ೩. (ಪ್ರತಿಮೆಯಲ್ಲಿ) ಆವಾಹನೆ ಮಾಡಿದ ದೇವತೆಯನ್ನು ಕಳುಹಿಸಿಕೊಡುವುದು : ಒಂದು ಆಹ್ವಾನ ಒಂದು ವಿಸರ್ಜನ ಒಂದು ವ್ಯಾಕುಳ ಒಂದು ನಿರಾಕುಳ (ಅವಚಿಂ. ೮೦-೩೫೯) ; ಅನಂತಚತುರ್ದಶಿಯ ದಿವಸವೇ ಗಣಪತಿ ವಿಸರ್ಜನವೂ ನಡೆಯುವುದು (ಭಾಹಬ್ಬ. ೧೨೮). 'ಆವಾಹನ' ಪರಾ. ೪. (ದೇಹದಿಂದ ಮಲ ಮೂತ್ರಾದಿಗಳನ್ನು) ಹೊರಹಾಕುವಿಕೆ : ಅದು ವಿಸರ್ಜನಕಾರ್ಯಕ್ಕೆ ಸಕಾಲವಾದುದರಿಂದ ವೇಗವು, ತಾನಾಗಿ ಪ್ರಾಪ್ತವಾಗುವುದು (ಆರ್ಯಧ. ೪೩). 'ವಿಸರ್ಜನಾಂಗ' ಪರಾ. ೫. [ನಾಟ್ಯ] ನೃತ್ಯದ ಇಪ್ಪತ್ತು ಬಗೆಯ ಕರಕರ್ಮಭೇದಗಳಲ್ಲಿ ಒಂದು : ಅತಿಶಯ ವಿಸರ್ಜನಾಹ್ವಾನ . . . ಕರಕರ್ಮಂಗಳ್ . . . ಸತತಿಪ್ಪತ್ತು (ಲಾಸ್ಯರಂ. ೪-೧೩). [ಸಂ.]

**ವಿಸರ್ಜನಾಂಗ** (ನಾ). (ಶರೀರಕ್ಕೆ ಬೇಡವಾದುದನ್ನು) ಶರೀರದಿಂದ ಹೊರಹಾಕುವ ಅಂಗ, — ಅವಯವ ; ಶುದ್ಧೀಕರಣಾಂಗ : ವಿಸರ್ಜನಾಂಗಗಳಿಲ್ಲದ . . . ಕೀಟಗಳಲ್ಲಿ ಕೊಬ್ಬು ವಿಸರ್ಜನಾವಸ್ತುಗಳನ್ನು ಶೇಖರಿಸುತ್ತದೆ (ಕೀಟಬಿ. ೩೪). [ಸಂ.]

**ವಿಸರ್ಜನೀಯ** (ಗು). ೧. ಹೊರದೂಡುವ ; ಹೊರಕ್ಕೆಬಿಡುವ. (ನಾ). ೨. = ವಿಸರ್ಗ ೫ : ವಿಸರ್ಜನೀಯಮೆಂದುಂ ವಿಸರ್ಗಕ್ಕೆ ಪೆಸರ್ (ಶಮದ. ೧೧ ವೃತ್ತಿ). [ಸಂ.]

**ವಿಸರ್ಜನೆ** (ನಾ). ೧. ಬಿಡುವುದು ; ತ್ಯಜಿಸುವುದು : ಮೊನೆಗಾರನು ರಣಧೀರನಾಗಿ ಅಂದಿನಿಂದ ಹಳೆಯ ಪಯ್ಯದವರ ಸಭೆಯನ್ನು ವಿಸರ್ಜನೆ ಮಾಡಿಬಿಡುತ್ತಾನೆ (ಸಂಸಕ. ೧೧೨). ೨. ನಿವಾರಣೆ : ಇಲ್ಲಿ ಆ ದೋಷ ವಿಸರ್ಜನೆಯಾಗಬೇಕಾಗಿದೆ (ಚಿತಂಬಾ. ೧೭೭). ೩. ಕೊಟ್ಟುದು ; ಕೊಡುಗೆ ; ದಾನ. ೪. (ಪ್ರತಿಮೆಯಲ್ಲಿ) ಆವಾಹಿಸಿದ ದೇವತೆಯನ್ನು ಕಳುಹಿಸಿಕೊಡುವುದು : ಭಾದ್ರಪದಚತುರ್ಥಿಯಿಂದ ನಾಲ್ಕು ದಿವಸ ಅಥವಾ ಹತ್ತುದಿವಸ ಗಣಪತಿಯನ್ನು ಪೂಜಿಸಿ ನಂತರ ಜಲಾಶಯದಲ್ಲಿ ವಿಸರ್ಜನೆ ಮಾಡುತ್ತಾರೆ (ರೂಢಿ). 'ಆವಾಹನೆ' ಪರಾ. ೫. (ದೇಹದಿಂದ ಮಲಮೂತ್ರಾದಿಗಳನ್ನು) ಹೊರಹಾಕುವಿಕೆ : ವಿಸರ್ಜನೆಯು ಮುಗಿದ ಕೂಡಲೇ . . . ಮೃತ್ತಿಕೆಯಿಂದಲೂ ಉದ್ಧೃತವಾದ ಜಲದಿಂದಲೂ . . . ಶೌಚವನ್ನು ಮಾಡಿಕೊಳ್ಳಬೇಕು (ಆರ್ಯಧ. ೪೪) ; ದಿನಾಲು . . . ಎರಡು ವೇಳೆ ನಿಯಮದಿಂದ ಮಲಮೂತ್ರ ವಿಸರ್ಜನೆ ಮಾಡುವುದರಿಂದ ಶರೀರವು ಬಹು ನಿರೋಗಿಯೂ ಮತ್ತು ಶಾಂತವೂ ಆಗುವುದು (ಬ್ರಹ್ಮಜೀ. ೧೪೩). [ಸಂ. ವಿಸರ್ಜನ]

**ವಿಸರ್ಜಿಸು** (ಕ್ರಿ). ೧. ತ್ಯಜಿಸು ; ಬಿಡು : ಪೊಡವಿಯೊಳು ಭವಿಯಂ ವಿಸ [ಪಾಠಾಂ. ವ]ರ್ಜಿಸಿ ಪೊಡವಡುತ ಭಕ್ತರ್ಗೆ ನಿಚ್ಚಂ ಕೊಡುವುದುತ್ತಮವೆನುತವೀ ಪರಿಯೊಳ್ ಪ್ರವರ್ತಿಸಲು (ಬಸವು. ೭೦-೧೫). ೨. ಕಳುಹಿಸಿಕೊಡು ; ಬೀಳ್ಕೊಡು : ಬಂದ ಪಂಡಿತರ್ಕಳುಮನುಚಿತ ಪ್ರತಿಪತ್ತಿಗಳಿಂ ವಿಸರ್ಜಿಸಿ (ಪಂಪಭಾ. ೪-೭೯ ವ) ; ಸುರಲೋಕಮಂ ಸಾಧಿಸುವೆನೆಂದು ಅಶ್ವತ್ಥಾಮಾದಿಗಳಂ ವಿಸರ್ಜಿಸಿ (ಗದಾಯು. ೯-೩೪ ವ) ; ಸುರಪತಿ ಮೊದಲಾದರನೆಲ್ಲರನಾಹ್ವಾನಿಸುತಾದರಿಸಿ ವಿಸರ್ಜಿಸುವ . . . ಜತಿರಾಯನೆಸೆದನಲ್ಲಿ (ಜಯಕಾ. ೨-೨೭). ೩. (ಪ್ರತಿಮೆಯಲ್ಲಿ) ಆವಾಹಿಸಿದ ದೇವತೆಯನ್ನು ಕಳುಹಿಸಿಕೊಡು, — ಬೀಳ್ಕೊಡು : ಈಶ್ವರಾರ್ಚನೆಯ ಪುನರಪಿ ಮಹಾತುರದೊಳಂ ಮಾಡಲೆಂದು ನಿರ್ಮಾಲ್ಯಮಾಘ್ರಾಣಿಸಿ ವಿಸರ್ಜಿಸಿದನು (ನಂದಿಮಾ. ೧೮-೫) ; ಪ್ರತಿಮೆಗಳನ್ನು ಮಣ್ಣಿನಲ್ಲಿ ಮಾಡಿ ಪೂಜಾನಂತರ ಅವುಗಳನ್ನು ನದಿಯ ನೀರಿನಲ್ಲಿ ವಿಸರ್ಜಿಸುವುದೂ ಉಂಟು (ಭಾರದ. ೫೧೮). ೪. (ಸಭೆ, ಓಲಗ ಮುಂತಾದುವನ್ನು) ಮುಕ್ತಾಯಗೊಳಿಸು ; ಬರಖಾಸ್ತುಮಾಡು : ನೃಪಾಲನೋಲಗವನು ವಿಸರ್ಜಿಸಿ ಕಾಲಭೈರವನಂತೆ ಗರ್ಜಿಸಿ (ಜೀವಂಚ. ೬-೭) ; ಈಶ್ವರನಂದು ತನ್ನ ಕಣ್ಗೊನೆಯೊಳೋಲಗಮಂ ವಿಸರ್ಜಿಸುತ್ತಾಕ್ಷಣಂ ನೆನೆದು . . . ನಾಗಲಾಂಬಿಕೆಯ ಗೃಹಮಂ ಸಾರ್ದನು (ಚಬಪು. ೩-೩೪). ೫. (ದೇಹದಿಂದ ಮಲಮೂತ್ರಾದಿಗಳನ್ನು) ಹೊರಹಾಕು ; ಆಚೆಗೆ ನೂಕು : ಗೋಣಿ, ಅತ್ತಿ, ಅಶ್ವತ್ಥ ಮೊದಲಾದ ಮರಗಳ ಹಣ್ಣುಗಳನ್ನು ತಿಂದ ಹಕ್ಕಿಗಳು ತಾಳೆಮರದ ಮೇಲೆ ಬೀಜಗಳನ್ನು ವಿಸರ್ಜಿಸಿದಾಗ, ಬೀಜ ಮೊಳೆತು ಅಲ್ಲಿಯೇ ಮರವಾಗಿ ಬೆಳೆಯುತ್ತದೆ (ಹಸುಹೂ. ೩೩೮). [ವಿಸರ್ಜನ + - ಇಸು]

**ವಿಸರ್ಪ** (ನಾ). ೧. ಹರಡುವಿಕೆ ; ವ್ಯಾಪಿಸುವಿಕೆ. ೨. ಮೈಯೆಲ್ಲಾ ಹರಡುವ, ನವೆ, ಉರಿ, ನೋವುಗಳಿಂದ ಕೂಡಿದ ಒಂದು ಬಗೆಯ ಚರ್ಮರೋಗ : ತ್ರಿಫಲೆ, ಪದ್ಮಕ . . . ತುರುಚನ ಬೇರು ಸಹವಾಗಿಯಾದರೂ ಲೇಪನಂಗೈಯಲು ಶ್ಲೇಷ್ಮದಿಂದುಂಟಾದ ವಿಸರ್ಪ ಹರವಹುದು (ವೃದ್ಧಸಾ. I, ೩೭೭). ೩. ಮನುಷ್ಯನ ಕಾಲು ಆನೆಯ ಕಾಲಿನಂತೆ ದಪ್ಪವಾಗುವ ಒಂದು ಬಗೆಯ ರೋಗ ; ಆನೆಕಾಲುರೋಗ : "ಶ್ಲೀಪದಂ ವಿಸರ್ಪಮೆನೆ ವಿಷಹಮಕ್ಕುಂ" (ಮಂಗರಾ. ೧೧೩-೨). [ಸಂ.]

**ವಿಸರ್ಪಕ** (ನಾ). = ವಿಸರ್ಪ ೨ : ವಿಸರ್ಪಕಮಂ, ಮದಮೂರ್ಛೆಯಂ, ನೇತ್ರರಿಂದಾದ ತೊನ್ನಂ, ಪಂಚಗುಲ್ಮಂಗಳಂ ಕೆಡಿಸುಗುಂ. ಇದು ಅಮೃತಾದಿ ಎಂಬ ಆದಿಯೋಗ (ವಿಷ್ಣಪಿ. ೧೧). [ಸಂ.]

**ವಿಸರ್ಪಣ** (ನಾ). ೧. ವಿಸ್ತಾರ ಹೊಂದುವಿಕೆ ; ವಿಕಾಸವಾಗುವಿಕೆ ; ಹರಡುವಿಕೆ : ಸಂಹರಣ ವಿಸರ್ಪಣಾಸ್ವರೂಪನುಂ . . . ಅಪ್ಪ ಜೀವನುಂಟೆಂದು (ಆದಿಪು. ೨-೧೦ ವ) ; ಸಂಹರಣ ವಿಸರ್ಪಣ ಸ್ವಭಾವ ಸಮನ್ವಿತಜೀವಕ್ಕೆ (ತತ್ತ್ವಪ್ರ. ೨೩೮). ೨. = ವಿಸರ್ಪ ೨ : "ವಿಸರ್ಪಣ-ಪ್ರಸರ, ಚಿಬ್ಬು, ತುಜಿ ಹಿಡಿವುದು" (ನಾಚಿರಾ. ೩). [ಸಂ.]

**ವಿಸರ್ಪರೋಗ** (ನಾ). = ವಿಸರ್ಪ ೨ : ಮಂದಾಗ್ನಿಯವರು . . . ವಿಸರ್ಪರೋಗದವರು, ವಿಷೂಚಿರೋಗದವರು, ವಿಷದ ರೋಗದವರು ಇವರಿಷ್ಟೂ ವಮನಯೋಗ್ಯರೆಂದರಿವುದು (ಸಕವೈ. ೨೫). [ಸಂ.]

**ವಿಸರ್ಪಿ** (ನಾ). = ವಿಸರ್ಪ ೨ : ವಿಸರ್ಪಿ, ಸರ್ಪಿ (= Herpes) ಎಂಬ ರೋಗ ಒಂದುಂಟು (ಗ್ರಂಥಸಂ. ೧೭೯) ; ಈ ವರ್ಣವು ಕೈಕಾಲು ತಣ್ಣಗಾಗುವ ವಿಸರ್ಪಿ, ಮೈನವೆ, ಸೊನೆ ಹುಣ್ಣು, ತಲೆಯ ಕೂದಲು ಉದುರುವುದು ಮೊದಲಾದ ಸಮಸ್ತ ಚರ್ಮರೋಗಗಳು . . . ಇಂಥವುಗಳಲ್ಲಿ ತುಂಬ ಪ್ರಯೋಜನ (ಬಚಿಕಿ. ೪). [ಸಂ. ವಿಸರ್ಪಿನ್]

**ವಿಸವಂತ** (ನಾ). ವಿಷವನ್ನು ಹೊಂದಿರುವವನು ; ಆದಿಶೇಷ : ವಿಸವಂತಂ ಸೇಸಂ, ಜೆಕ್ಕೆವಂತಂ ಗರುಡಂ (ಶಬ್ದಾನು. ೪೦೨ ಪ್ರಯೋ). [< ಸಂ. ವಿಷವತ್]

**ವಿಸಸನ, ಬಿಸಸನ** (ನಾ). ೧. ಕೊಲೆ ; ಸಂಹಾರ : ಕಾಳಗದ ವಿಸಸನದೊಳು . . . ನಾನಾಖಡ್ಗಂಗಳಿಂದೊರ್ವರಂ ತಾಗಿ (ಶ್ರಾವಕಾ. ೧೯-೩) ; ಪರರಾಳ್ಕೆಗೆ ಸಂದಿಹ ಸ್ವರ್ಣಭೂಮಿಯಂ ವಿಸಸನಕೊಡ್ಡದೊಡ್ಡಳಿಸಿ (ಅಮತಂ. ೨೭-೬). ೨. ನಾಶ ; ಹಾಳು. ೩. ಯುದ್ಧ : ಸಂಗ್ರಾಮ ; ಕಾಳೆಗ : ವಿಸಸನದೊಳ್ ವಿರೋಧಿನೃಪರಂ ತಱಿದೊಟ್ಟಲುಂ . . . ಕರಂ ನೆಱೆವ ಮಕ್ಕಳನೀಯದೆ ನೋಡೆ ನಾಡೆ ನೋಯಿಸಿದಪುದಿಕ್ಕು ಪುಷ್ಪದವೊಲೆನ್ನಯ ನಿಷ್ಫಲಪುಷ್ಪದರ್ಶನಂ (ಪಂಪಭಾ. ೧-೧೧೭) ; ಅಂತಾ ಖಗೇಂದ್ರಕೇತನ ನಭಿಷೇಣಂಗೆಯ್ದು ವಿಸಸನಕ್ಕಾಗಿ ಮೊಗಸಿ ತಳರ್ದಾಗಳ್ (ವರ್ಧಮಾ. ೪-೩೭ ವ);

ಇಂದಿನೀ ವಿಸಸನದೊಳಾಟಿಯ ಜತ್ತುಕದ ನಿಶಾಟನುಬ್ಬಿನ ಬಲಮಂ ಗೋಣ್ಮುಱಿದು ಗುಟ್ಟಿಗಟ್ಟುವೊಡಾನೆ ಸಾಲ್ವೆಂ (ರಾಮಾಶ್ವ. ೧೧೧-೧೨). ೪. ಕತ್ತರಿಸುವುದು ; ಬೇರ್ಪಡಿಸುವುದು. **ಬಿಸಸನ :** ೩. ಬಿಸಸನದೊಳ್ ದಶಮುಖನಂ ದೆಸೆವಲಿಗುಡಲೆಂದು ಭರತಶತ್ರುಘ್ನರ್ . . . ಸನ್ನಾಹಭೇರಿಯಂ ಪೊಯಿಸುವುದುಂ (ಪಂರಾಮಾ. ೧೪-೬೨) ; ಬಿಸಸನದೊಳಿರ್ವಲಂ ಕದನಮಂ ಮಸೆಯೆ (ಸಾಳ್ವಭಾ. ೨೫-೯). ೫. ನೋವು ; ಬಾಧೆ : (೬). [< ಸಂ. ವಿಶಸನ]

**ವಿಸಸನಗಲಿ** (ನಾ). ಕಾಳಗದ ಕಲಿ ; ಸಮರಶೂರ : ವಾಗ್ವವಧು ಬರೆದಳು ವಿಸಸನಗಲಿ ಬಮ್ಮರ್ನೆಂಬಿವೆಂಟಕ್ಕರಮಂ (ಕಇ. IV, ೧೦-೨೮ ; 1121).

[ವಿಸಸನ + ಕಲಿ$_2$]

**ವಿಸಸನಗೆಯ್, ವಿಸಸನಗೈ** (ಕ್ರಿ). ಹೊಡೆ ; ಘಾತಿಸು : ನೆಱ ವಿಸಸನಗೆಯ್ದು ಪೊಯ್ದನೆನೆ ಘಾತಿಸಿದಂ (ಕವಿಕಾ. ೧೨೪). **ವಿಸಸನಗೈ :** ವಿಸಸನಗೈದು ತನ್ನಣುಗರ ಮೊಗವ ನಿಟ್ಟಿಸದೆ ಸತ್ತನು ಧರೆಯರಿಯೆ (ಇಚಸಾಂ. ೭-೧೧). [ವಿಸಸನ + ಕೆಯ್$_1$]

**ವಿಸಸನಗೈ** 'ವಿಸಸನಗೆಯ್' ನೋ.

**ವಿಸಸನಭೂಮಿ** (ನಾ). ಕಾಳಗದ ಕಣ ; ಯುದ್ಧದ ಭೂಮಿ : ವಿಸಸನಭೂಮಿ ಕೋಟ್ಮಿದುಳ ನೆತ್ತರ ಕಾಳ್ಗಸಱಿಂ ತಗುಳ್ದು (ಎಕ. VII, ಶಿಕಾರಿ. ೨೪೨-೨೨ ; 1163).

[ವಿಸಸನ + ಭೂಮಿ]

**ವಿಸಸನರಂಗ** (ನಾ). = ವಿಸಸನಭೂಮಿ : ವಿಸಸನರಂಗಕ್ಕಾನಿರೆ ಬೆಸಗೊಳ್ವುದೆ ಪೆಱರನೆಂದು ಜಯಪಟಹಂಗಳ್ ದೆಸೆದೆಸೆಗೆಸೆವಿನೆಗಂ ಕಟ್ಟಿಸಿಕೊಂಡಂ ಬೀರವಟ್ಟಮಂ ಕಳಶಭವಂ (ಪಂಪಭಾ. ೧೧-೫೪). [ವಿಸಸನ + ರಂಗ]

**ವಿಸಾಕೆ** (ನಾ). ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ; **ವಿಶಾಖೆ :** ಶ್ರೀಮುಖಸಂವತ್ಸರದ ಬಹುಳ ಬಿದಿಗೆ ಬುಧವಾರ ಸಿದ್ಧಯೋಗದಂದು ವಿಸಾಕೆ ನಕ್ಷತ್ರ ಚಂದ್ರತೊಲೆ (ಸೌಇಇ. XX, ೨೮೪-೫ ; 1033). [< ಸಂ. ವಿಶಾಖಾ]

**ವಿಸಾರ** (ನಾ). ೧. ವಿಸ್ತಾರ ಹೊಂದುವಿಕೆ ; ವೈಶಾಲ್ಯ : ದಕ್ಷಿಣಾವೃತ್ತ ವೃತ್ತ ತ್ರಿತಯಾಂತರ್ವರ್ತಿ ತಾನೆಂಬಿನವಮನುಗತತತ್ವೌಘದೊಳ್ ತತ್ತ್ವದಿಂದನ್ವಿತಮಂ ವಿಸಾರವಮತ್ಕಪ್ರಕಟಿತಮಾನದಿಂ ಮೆಚ್ಚಿದಂ ದೇವರಾಜಂ (ಅಜಪು. ೫-೧೨). ೨. ಪ್ರವಹಿಸುವಿಕೆ ; ಹರಿಯುವಿಕೆ. ೩. ಮೀನು ; ಮತ್ಸ್ಯ : "ವೈಸಾರಿಣಃ, ವಿಸಾರಃ . . .ಪಾಠೀನಃ — ಈ ೧೩ ಮೀನ್" (ಹಲಾಯು. ೧೦೮-೩೫). [ಸಂ.]

**ವಿಸಾರಿ** (ನಾ). ಪ್ರವಾಹ ; ಹರಿವು : ಆ ರಮಣಿಯ ದೇಹಚ್ಯುತಿವಾರಿಯಿನವಿರಳ ವಿಸಾರಿಯಿಂ ತೊಳೆದಂತಾಚಾರಮೆನಿತ್ತನಿತುಂ ವಿಸ್ತಾರಿಸಿದುದು (ಚಂದ್ರಪು. ೨-೧೪).

[ಸಂ. ವಿಸಾರಿನ್]

**ವಿಸಿಖ** (ನಾ). ಬಾಣ ; ಅಂಬು ; ಸರಳು : ನೋಟಕರ ಮಸೆಗಾಣಿಸಲು ಪೊಸಕುಸುಮಾಸ್ತ್ರದಿಂದಲಿದ್ದೆಸೆಯಲ್ಲಿ ನಿಡಿಯಲರ್ಗಣ್ಣ ವಿಸಿಖದಿಂ ದೆಸೆ ಬಿದ್ದರಸುವ ತುಳಿವೊಲು ಸಂತಸದೊಳುಯ್ಯಲನೊರ್ವವನಿತೆ . . . ಆಡುತಿರಲು (ಭೈರಸೂ. I, ೩೦೭).

[< ಸಂ. ವಿಶಿಖ]

**ವಿಸಿಖಾಸನ** (ನಾ). = ವಿಶಿಖಾಸನ : ನಿನ್ನಳವ ನೋಡುವೆನೆನುತ ವಸುಮಯದ ವಿಸಿಖಾಸನವನ್ನು ಪಿಡಿದು (ನವಮೋ. ೧೨-೫೭). [< ಸಂ. ವಿಶಿಖಾಸನ]

**ವಿಸಿನಿ** (ನಾ). ೧. ಕಮಲದ ಗಿಡ. ೨. ಕಮಲಗಳ ಸಮೂಹ. ೩. ಕಮಲದ ನಾಳ ; ತಾವರೆಯ ದಂಟು. 'ಬಿಸಿನಿ' ಪರಾ. [ಸಂ. ವಿಸಿನೀ]

**ವಿಸಿಷ್ಟ** 'ಬಿಸಿಷ್ಟ' ನೋ.

**ವಿಸುದ್ಧ** (ಗು). ಶುದ್ಧವಾದ ; ಪವಿತ್ರವಾದ : ಸ್ವಿೀ ವೀರಬಳಂಜದ ಧರ್ಮ ಪ್ರತಿ ಪಾಳನವಿಸುದ್ಧಗುಡ್ಡಧ್ವಜವಿರಾಜಿತಮಪ್ಪ ಲಕ್ಷ್ಮೀವಕ್ಷಸ್ಥಳಂ (ಕಇ. II, ೫೫-೫ ; 1000?) ; ವೀರಬಣಂಜುಧರ್ಮಪ್ರತಿಪಾಳನ ವಿಸುದ್ಧ ಗುಡ್ಡಧ್ವಜ ವಿರಾಜಮಾನ . . . ಭುವನ ಪರಾಕ್ರಮೋಂನತರುಂ (ಸೌಇಇ. XX, ೬೩-೩ ; 1098). [< ಸಂ. ವಿಶುದ್ಧ]

**ವಿಸುಮಯ** (ನಾ). ಅದ್ಭುತ ; ಆಶ್ಚರ್ಯ : ಕೋಟಾನುಕೋಟಿ ಸೊಡರ್ಗಳಲಿ ಶಿವನ ಹೊಸ ಕೊಳನ ಸಲಿಲವನೆಱೆದು ಹೊತ್ತಿಸಿದಪಂ ಗಡ ಧರೆಯೊಳಿಂತಾ ವಿಸು [ಪಾಠಾಂ. ಷ,ಸ] ಮಯಂ ಪುಟ್ಟುವುದೆ (ಬಸಪು. ೫೦-೫೯). [< ಸಂ. ವಿಸ್ಮಯ]

**ವಿಸುಮಯಂಗೊಳ್** (ಕ್ರಿ). ಆಶ್ಚರ್ಯಗೊಳ್ಳು ; ಬೆರಗಾಗು : ಕುಸುರಿಗೆಲಸಂಗಳೊಪ್ಪುವ ಪೊಸವೆಳಗು ಕಣ್ಗೆ ಹೊಂಬಿಸಿಲಿಂದ ವೆಗ್ಗಳಿಸೆ ವಿಸುಮಯಂಗೊಂಡು ಗುರುಪದವ ನೆನೆದು (ಮನೋವಿ. ೧-೨೪). [ವಿಸುಮಯ + ಕೊಳ್$_1$]

**ವಿಸೃತ** (ಗು). ೧. ಹರಡಿದ ; ವ್ಯಾಪಿಸಿದ ; ಹಬ್ಬಿದ. ೨. (ಬಿಲ್ಲಿನ ಹೆದೆಯಂತೆ) ಎಳೆದ ; ಜಗ್ಗಿದ. (ನಾ). ೩. ವ್ಯಾಪಿಸಿರುವಂಥದು : "ವಿಸೃತಂ, ವಿಸ್ತೃತಂ, ತತಂ — ೩ ವ್ಯಾಪಿಸಿ ಇರುವುದರ ಹೆಸರುಗಳು" (ಸಿದ್ಧಾಂಟಿ. ೩೪೯). [ಸಂ.]

**ವಿಸೃಷ್ಟ** (ಗು). ೧. ಹೊರದೂಡಿದ ; ಹೊರಗೆ ಹಾಕಿದ. ೨. ಹುಟ್ಟಿಸಿದ ; ಸೃಷ್ಟಿಸಿದ ; ಸೃಜಿಸಿದ. (ನಾ). ೩. [ನಾಟ್ಯ] ನರ್ತನದಲ್ಲಿ ತುಟಿಯ ಚಲನೆಯ ಒಂದು ಭೇದ ; ತುಟಿಯನ್ನು ಮುಂದಕ್ಕೆ ಚಾಚುವ ಒಂದು ಭಂಗಿ ; ℙ "ಅರಗಿನ ರಸವನ್ನು ಹಚ್ಚುವಾಗ ಮಾಡುವಂತೆ ತುಟಿಯನ್ನು ಮುಂದಕ್ಕೆ ನೀಡುವುದು. ಹೆಂಗಸರ ವಿಲಾಸ ಮತ್ತು ಬಿಬ್ಬೋಕ ಇವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೨೭೮ ಗದ್ಯಾನುವಾದ) : ಅಲತಗೆಯ ರಚಿಪ ಭಾವಂ ನೆಲೆಗೊಳೆ ತೋರ್ಪಧರಮದು ವಿಸೃಷ್ಟಮೆನಿಕ್ಕುಂ (ಲಾಸ್ಯರಂ. ೩-೮೩). [ಸಂ.]

**ವಿಸೃಷ್ಟಾರ್ಥ** (ನಾ). ಸೃಜಿಸಿ ಆಡುವ ಮಾತು ; ಹುಟ್ಟಿಸಿಕೊಂಡು ಆಡುವ ನುಡಿ : ದಕ್ಷಿಣನವಳ ದೂತೀಜಲ್ಪಂ ವಿಸೃಷ್ಟಾರ್ಥಮಾದುದೆಂದುಮಲ್ಲಿಂ ತಳರ್ದು ರಾಜ ಭವನಾಭಿಮುಖನಾಗಿ (ಚಂದ್ರಪು. ೮-೯೧ ವ). [ಸಂ.]

**ವಿಸ್ಕಂದ** (ನಾ). ಚಂಚಲಗೊಂಡುದು ; ವಿಚಲಿತವಾದುದು : ಮನ ವಿಸ್ಕಂ [ಪಾಠಾಂ. ಷ್ಕಂ]ದವಾಗದೊಂದೆಯಂದದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾಗುಣ ಎನ್ನನೆಂದು ಬಂದು ಪೊದ್ದಿಪ್ಪುದು ಹೇಳಾ (ಸಿದ್ಧವ. ಕ. ೩೧-೯೩). [ಸಂ.]

**ವಿಸ್ತರ** (ನಾ). ೧. ಹಬ್ಬುಗೆ ; ವಿಸ್ತಾರ ; ವ್ಯಾಪ್ತಿ : ಶ್ರೀ ಚೋಳದೇಶವೊಪ್ಪಿಪ್ಪುದು ಧರಾತಳಕೆ ವಾಚಾಮಗೋಚರಮದಱ ವಿಸ್ತರಂ ಜಗಕೆ (ತಿರುರ. ದೇ. ೧-೭). ೨. ವಿವರಣೆ ; ವ್ಯಾಖ್ಯಾನ. ೩. ಹಾಸಿದುದು ; ಹಾಸಿಗೆ, ಚಾಪೆ ಮುಂತಾದುವು. ೪. ಆಸನ ; ಪೀಠ ; ಗದ್ದುಗೆ. ೫. ಒಳ್ಳೆಯ ಸ್ವಭಾವ ; ಸದ್ಗುಣ. ೬. ಕಲ್ಲು : "ವಿಸ್ತೀರ್ಣ ಸದ್ಗುಣವು ದೃಷದಿನಿತುಂ ವಿಸ್ತರಾ ನಾಮವುಮಕ್ಕುಂ" (ನಾನಾರ. ೧೪೧). ೭. (ಅಲಂ) ಚೆನ್ನಾದುದು : ಅಬಲೆಯರಂಘ್ರಿಗಳವಿಸ್ತರದೊಳೊತ್ತಲು ಅಂಚೆವಾಸಿನ ಮೇಲೆ ಪವಡಿಸುವ ಪುರುಷ ನೀನೆಣ ನೆತ್ತರೊಳು ಭೂತರುಣಿಯನು . . . ಅಪ್ಪಿದೆಯೆಂದು ಮನದೊಳು ಮಱುಗಿದಳು ರಮಣಿ (ಜೀವಂಚ. ೫-೨೭). ೮. ಮಹಿಮೆ ; ಔನ್ನತ್ಯ : ಗುರುವಿನ ವಿಸ್ತರದ ಪರಿಯ ನಾನೇನೆಂಬೆ ಮೆಱೆವ ಬ್ರಹ್ಮಾಂಡದೊಳಹೊಱಗನವ ಬೆಳಗಿ ಪರಿಪೂರ್ಣನಿಪ್ಪ (ಸರ್ವಜ್ಞ. ೩೦). [ಸಂ.]

**ವಿಸ್ತರಣ** (ನಾ). ೧. ವಿಸ್ತರಿಸಿದುದು ; ಹಬ್ಬಿದುದು : ಗುರು ನಿರಂತರ ಪರಿಚರಣ ವಿಸ್ತರಣ ಸದ್ಭಾವಾನುರಕ್ತ (ಬಸಪು. ೩೯-೭೮) ; 'ಛಂದಸ್ಸು ಮತ್ತು ಗುರುಲಘುಗಳ ರಹಸ್ಯ' ವು ಉಲ್ಲೇಖನೀಯವಾದ ಮಾರ್ಪಾಡಿಲ್ಲದೆ ಇಲ್ಲಿ ಬಂದಿದೆ, ಉಳಿದವು ಯಥಾನುಸಾರ ಸಂಕ್ಷೇಪಣ, ವಿಸ್ತರಣ ಪರಿವರ್ತನಗಳನ್ನು ಎತ್ತಿವೆ (ಸಂಶೋಧ. iii, ಅರಿಕೆ). ೨. ನಗರದ ವಿಸ್ತರಿಸಿದ ಭಾಗ ; ಬಡಾವಣೆ : ಶ್ರೀಕಂಠೇಶ್ವರವಿಸ್ತರಣದ ಲಾಯರ್ ವೆಂಕಟರಾಯರ ಮಗ ಚಕ್ರಪಾಣಿ ಈಗ ಅವನ ಸಹಪಾಠಿಯಾಗಿದ್ದ (ವಂಶವೃ. ೪೦೦). [ಸಂ.]

**ವಿಸ್ತರಣೆ** (ನಾ). ವಿಸ್ತರಿಸೂವಿಕೆ : ತಾಂತ್ರಿಕಸಹಾಯವಿಸ್ತರಣೆ ಕಾರ್ಯಕ್ರಮವೊಂದು . . . ವಿಶ್ವಸಂಸ್ಥೆಯ ಕಾರ್ಯಾಚರಣೆಯ ಭಾಗವಾಗಿದೆ (ಅಂತಸಂ. ೨೫೯).

[ಸಂ. ವಿಸ್ತರಣ]

**ವಿಸ್ತರಿಗೆ** (ನಾ). ಹಾಸಿದುದು ; ಹಾಸಿಗೆ, ಚಾಪೆ, ಮುಂತಾದುವು : ಮಣಿಮಯಸಿಂಹಾಸನದ ಮೇಲೆ ವಿಸ್ತರಿಸಿದ ದೇವಾಂಗ ವಿಸ್ತರಿಗೆವೋಲ್ ಮಹಾವಿಸ್ತರದಿನಿರಿಸಿ (ಸುಕುಮಾ. ೧೦-೧೨೨ ವ) ; ಕಂಸಂ ವಸುದೇವನ ಮನೆಗೆ ಭೋಂಕನೆ ಬಂದು ವಿನತನಾಗಿ ಪ್ರಶಸ್ತಮಪ್ಪ ವಿಸ್ತರಿಗೆಯೊಳ್ ಕುಳ್ಳಿರ್ದು (ನೇಮಿಪು. ೭-೧೧ ವ).

[< ಸಂ. ವಿಸ್ತರಿಕಾ]

**ವಿಸ್ತರಿತ** (ಗು). ಹರಡಿದ ; ವಿಶಾಲವಾದ : ದಿವಾಕರನಂತೆ ನಿರ್ದೋಷನಿಂದ್ರನಂತೆ

ಪರಿಚಿತಸುರಭಿರಮ್ಯನಮೃತಾರ್ಚಿಯಂತೆ ವಿಸ್ತರಿತಕುವಲಯನೆಂದು ಧರ್ಮಜನ ಧರೆ ಪೊಗಳುಳುತಿರೆ (ಜೈಮಿಭಾ. ೨-೧೩). [ಸಂ.]

**ವಿಸ್ತರಿಸು** (ಕ್ರಿ). ೧. ಹಬ್ಬು ; ಹರಡು ; ವಿಸ್ತಾರವಾಗು : ಹನ್ನೆರಡುಯೋಜನವರೆಯ ಭೋಜನಶಾಲೆಗಳು ವಿಸ್ತರಿಸಿದವು (ತೊರರಾ. ೧-೭-೭). ೨. ಬೆಳೆ ; ವೃದ್ಧಿಹೊಂದು : ಸುರರ ದೈತ್ಯರ ಸಮರಸಿರಿ ವಿಸ್ತರಿಸಿತಿತ್ತಲು (ಕುವ್ಯಾದ್ರೋ. ೧೦-೬೧). ೩. ದೊಡ್ಡದಾಗಿಸು ; ವಿಸ್ತಾರವಾಗಿಸು : ಅರಗು ಮೊದಲಾಗೆ ಘೃತ ಸಜ್ಜರಸಂ ಬೆಲ್ಲಂ ಸಣಂಬಿವೆಂಬಿವಱಿಂ ವಿಸ್ತರಿಸಿ ಸಮೆದಿಂಪ್ರಭವನಮ ಧರೆಗವತರಿಸಿರ್ದುದೆನಿಸುವರಗಿನ ಮನೆಯಂ (ಪಂಪಭಾ. ೩-೩) ; ವಿಸ್ತರಿಸಿ ಕಟ್ಟಿದರಗಲದಲಿ ವೈವಾಹಮಂಟಪವ (ನಳಚ. ...). ೪. (ಚಾಪೆ ಮೊದಲಾದುವನ್ನು) ಹಾಸು ; ಅಳವಡಿಸು : ಸಿಂಹಾಸನದ ಮೇಲೆ ವಿಸ್ತರಿಸಿದ ದೇವಾಂಗವಿಸ್ತರಿಗೆವೋಲ್ ಮಹಾವಿಸ್ತರದಿನಿರಿಸಿ (ಸುಕುಮಾ. ೧೦-೧೨೨ ವ). ೫. ಪಸರಿಸಿ ಇಡು ; ವಿಸ್ತಾರವಾಗಿರಿಸು : ಕಾಣ್ಕೆಯಾಗಿ ತಂದು ವಿಸ್ತರಿಸಿದ ಸಮಸ್ತ ವಸ್ತುಗಳನವಲೋಕಿಸುತ್ತುಂ (ಉದ್ಭಟ. ೭-೧೩೨ ವ). ೬. ಬೆಳೆಸು ; ಹೆಚ್ಚಿಸು : ಕರಜಳಧರ ಕಳಧೌತೋತ್ಕರ ವರ್ಷದೆ ವಂದಿ[ನ]ಂದನಾವಳಿಗಳ ವಿಸ್ತರಿಪುವನೆ ದಾನಮಖಿಳೋರ್ವ್ವರೆಗೆ ವಿಚಿತ್ರೋಕ್ತಿ ರೂಪವಿದ್ಯಾಧರಿಯ (ಸೌಇಇ. XX, ೯೯-೩೭; 1076?) ; ದೊರೆಗಳಿಬ್ಬರ ಸೋಲವನು ವಿಸ್ತರಿಸಿ ಹೊಕ್ಕರು ಮತ್ತ ಮಾದ್ರೇಶ್ವರ . . . ದುಶ್ಶಾಸನಾದಿಗಳು (ಕುವ್ಯಾಕ. ೩-೨೯). ೭. ವಿವರಿಸು ; ಬಣ್ಣಿಸು ; ವರ್ಣಿಸು : ಎಲ್ಲವನೂನವಿಲ್ಲದೆ ಹೇಳಿದಳು ಮದಮಾನಿ ವಿಸ್ತರಿಸಿ (ಪ್ರಭುಲೀ. ೫-೪೧) ; ಈ ಮಹಾಲೀಲೆಗಳನೆನಗೆ ವಿಸ್ತರಿಸು (ಚೆಬಪು. ೧೩-೯). ೮. ಅಣಿಮಾಡು ; ಸಜ್ಜುಗೊಳಿಸು : ಗಿರಿರಾಜಂ ಮಹೋತ್ಸಾಹದಿಂ ಮಹಾವಿವಾಹಮಂಟಪಾದಿ ಸಮಸ್ತ ವಸ್ತುಗಳಂ ವಿಸ್ತರಿಸುತಿರ್ದಂ (ಗಿರಿಕ. ೧೦-೨೭ ವ). ೯. ನೆರವೇರಿಸು ; ಸಾಂಗಗೊಳಿಸು : ಶತರುದ್ರೀಯವನು ವಿಸ್ತರಿಸಿ ಬಿಜಯಂಗೈದನಾ ಮುನಿಪತಿ ನಿಜಾಶ್ರಮಕೆ (ಕುವ್ಯಾದ್ರೋ. ೧೯-೫೪). ೧೦. (ಹೆಸರನ್ನು) ಇಡು : ನಿಮ್ಮ ವನಿಜಾರಮಣಂಗೆ ರಾಮಾಖ್ಯವನು ವಿಸ್ತರಿಸಿದರು ವೈದಿಕವಿದಿತಕರ್ಮದಲಿ (ತೊರರಾ. ೧-೮-೧೦). [ವಿಸ್ತರ + - ಇಸ್ಸು]

**ವಿಸ್ತಾರ** (ನಾ). ೧. ಹರಹು ; ವ್ಯಾಪ್ತಿ : ಗಗನಮಂ ಪೃಥ್ವಿಯಂ ವಾರ್ಧಿಯಂ ಪರ್ವತಾರಣ್ಯವಿಸ್ತಾರಧೀರೋದಾತ್ತಗಾಂಭೀರ್ಯಮಂ . . . ಕಾಮಿಸಿದನಾ ಭೂಮಿಪಂ ತದ್ರೂಪಗುಣಹೃದಯರಂ (ಶ್ರೀರಾಮಾ. ೧೨-೩೦೩). ೨. ಅಡ್ಡಗಲ ; ವಿಸ್ತೀರ್ಣ : ದಶಯೋಜನೋಪರಿಮತಲಸಮಾನವಿಸ್ತಾರದೊಳಂ . . . ನೆಱೆದು (ಆದಿಪು. ೧-೬೨ ವ) ; ಬೆನ್ನಿನಿಂದ ಪಾರ್ಶ್ವಸಹಿತವಾಗಿ ಹೊಟ್ಟೆಯನ್ನಳದರೆ ಅದು ವಿಸ್ತಾರವೆನಿಸಿಕೊಳ್ಳುವುದು (ಸೌಗಂಧಿ. ೨೭೭-೧೦). ೩. ವಿವರವಾದುದು ; ವಿಶದವಾದುದು. ೪. (ಹೊಸಚಿಗುರುಗಳಿಂದ ಕೂಡಿದ) ಮರದ ಕೊಂಬೆ : "ವಿಸ್ತಾರಃ, ವಿಟಪಃ — ಈ ೨ ಮರದ ಕೊಂಬು" (ಹಲಾಯು. ೩೦-೨೭). 'ವಿಸ್ತಾರಫಳ' ಪರಾ. ೫. [ಕಾವ್ಯಮೀ] ಕಾವ್ಯಾರ್ಥವನ್ನು ಗ್ರಹಿಸಿ ಅನುಭವಿಸುವ ನಾಲ್ಕುವಿಧವಾದ ಆನಂದಗಳಲ್ಲಿ ಒಂದು : ಕಾವ್ಯಾರ್ಥವನ್ನು ಗ್ರಹಿಸುವುದರಿಂದ ಆಗುವ ಆನಂದವು (ಚಿತ್ತ) ವಿಕಾಸ, ವಿಸ್ತಾರ, ಕ್ಷೋಭ, ವಿಕ್ಷೇಪ ಎಂದು ನಾಲ್ಕು ವಿಧ . . . ವಿಸ್ತಾರ – ಕಾದ ತುಪ್ಪದಲ್ಲಿ ಹಾಕಿದ ಹಪ್ಪಳ ಹಿಗ್ಗುವಂತೆ (ಕೃಪಿಡಿ. ೨೦೦). [ಸಂ.]

**ವಿಸ್ತಾರಕ** (ನಾ). ೧. ವಿಸ್ತರಿಸುವಂಥದು ; ಅಗಲ ಮಾಡುವಂಥದು. ೨. ಬೆಳೆಸುವವನು ; ವೃದ್ಧಿಮಾಡುವವನು : ಸಕಲಜಗದ್ವಿಸ್ತಾರಿತಯಶನನ್ವಯ ವಿಸ್ತಾರಕನಾದಿದೇವನಗ್ರತನೂಜಂ (ಆದಿಪು. ೧೩-೭೨) ; ನರನಾಗಾಮರಲೋಕಶೋಕಸರಣೀವಿಸ್ತಾರಕಂ ತಾರಕಂ (ಗಿರಿಕ. ೬-೪). [ಸಂ.]

**ವಿಸ್ತಾರಣ** (ನಾ). ವ್ಯಾಪ್ತಿ ; ಹರಹು : ರಣವದನೇನೆಂಬೆನೈ ಧಾರುಣಿಪತಿಯೆ ವಿಗ್ರಹದ ವಿಸ್ತಾರಣ ವಿಗುರ್ವಣೆ ವಿಗಡಿಸಿತು ವಿಬುಧರ ವಿಡಾಯಗಳ (ಕುವ್ಯಾಅ. ೧೨-೨೩). [ಸಂ.]

**ವಿಸ್ತಾರಣೆ** (ನಾ). ೧. ವ್ಯಾಪ್ತಿ ; ಹರಹು ; ವಿಸ್ತೀರ್ಣ. ೨. ವಿವರ : ಪ್ರಾಯಮುಮಂ ಶಾಸ್ತ್ರಾಭಿಪ್ರಾಯಮುಮನಾರಯ್ದು ಪೇಳ್ದ ವಿಸ್ತಾರಣೆಯಿಂದಾಯತಮಕ್ಕುಂ (ಅಶ್ವಶಾ. ೫-೨೧). [ಸಂ. ವಿಸ್ತಾರಣ]

**ವಿಸ್ತಾರಪಣ** (ನಾ). ವಿಶಾಲವಾಗಿರುವಿಕೆ ; ವೈಶಾಲ್ಯ : ವೀರಪಣ, ಜಾಣಪಣ, ವಿಸ್ತಾರಪಣ ಈ ಭಾವನಾಮಗಳಲ್ಲಿಯ 'ಪಣ' ಉಪಪದವೂ ಮರಾಠಿಯ ಕಂಡಿತವಾದ ಪ್ರಭಾವವನ್ನು ತೋರುತ್ತವೆ (ಕಸಾಚ. ೨೬೧). [ವಿಸ್ತಾರ + - ಪಣ್ಯ]

**ವಿಸ್ತಾರಫಳ** (ನಾ). ಕೊಂಬೆಯ ಹಣ್ಣು : ಕೊಳಕ್ಕೆ ಹಂಸ ವಿಸ್ತಾರಫಳಕ್ಕೆ ರಾಜಶುಕ ನೀಶ್ವರಭಕ್ತಿಗೆ ಭಕ್ತನಾಸೆ ಮಾಳ್ಕೋರಗೆಯಾಗಿ ಸಂಕಿಲಿಯೊಳಂ ನೆರವಾಸೆಯೊಳಿರ್ದ ಸೌಂದರಂ (ನಂಬಿರ. ೧೪ ಸೂಚನಾಪದ್ಯ). [ಸಂ. ವಿಸ್ತಾರಫಲ]

**ವಿಸ್ತಾರಿತ** (ಗು). ಹರಡಿದ ; ಹಬ್ಬಿದ : ಸಕಲಜಗದ್ವಿಸ್ತಾರಿತಯಶನನ್ವಯ ವಿಸ್ತಾರಕನಾದಿದೇವನಗ್ರತನೂಜಂ (ಆದಿಪು. ೧೩-೭೨) ; ಸಖಿಯರ್ ತಾರಾಚಲನಾಥ ನರಸಿಗನುನಯದಿಂದಂ ಸಾರ ಮೃದುತರ ವಿಮಳ ವಿಸ್ತಾರಿತವಲ್ಕಲಮನೊಪ್ಪಲುಡಿಸುತ್ತಿರ್ದರ್ (ಗಿರಿಕ. ೯-೫). [ಸಂ.]

**ವಿಸ್ತಾರಿಸು** (ಕ್ರಿ). ೧. ಹರಡುವಂತೆ ಮಾಡು ; ಹಬ್ಬಿಸು ; ವ್ಯಾಪ್ತಗೊಳಿಸು : ಆ ರಟ್ಟರಾಜ್ಯಮಂ ವಿಸ್ತಾರಿಸಿ ನಲವಿಂದೆ ರಟ್ಟರಾಜ್ಯಸ್ಥಿರವಿಸ್ತಾರಕನೆನಿಪಂ . . . ಮುನಿಚಂದ್ರಂ (ಸೌಇಇ. XX, ೨೪೮-೬ ; 1228). ೨. ಬೆಳೆಸು ; ಹೆಚ್ಚಿಸು ; ವೃದ್ಧಿಗೊಳಿಸು : ವೃತ್ತಿಯೊಳ್ ರಸಮಂ ಸಂಚಾರಿಸುವ ಭಾವಮಂ ವಿಸ್ತಾರಿಸುವ ಬೆಡಂಗು ಬೇಱೆ ನೀಲಾಂಜನೆಯಾ (ಆದಿಪು. ೯-೨೭). ೩. ವಿವರಿಸು ; ಬಣ್ಣಿಸು : ಪ್ರಸ್ತುತಮಲ್ಲದುದನೆ ಮಿಗೆ ವಿಸ್ತಾರಿಸಿ ನೆಗಟ್ ಪೇಳ್ದೊಡಕ್ಕುಂ ಮತ್ತಪ್ರಸ್ತುತಮೆಂಬುದಳಂಕೃತಿ (ಕವಿರಾ. ೩-೧೩೮) ; ಶಿವಪಾದಭಕ್ತಂಗಾರೆಣಿಸಲೆಣೆಯೆಂದು ಸಭೆ ವಿಸ್ತಾರಿಸಲು ಬಸವಂಗರಸನುಡಲಿತ್ತು ಕೈಮುಗಿದು (ಬಸಪು. ೧೦-೫೫). ೪. ಮಾಡು ; ಆಚರಿಸು : ದುಷ್ಕೃತಿಯಂ ವಿಸ್ತಾರಿಸಿ ಸಲೆ ಸುಜನ ಶಿರಸ್ತೋದಮನೇಕೆ ಮಸಗಿ ಮಾಟ್ಪರೊ ಕೆಲಬರ್ (ಲೀಲಾವ. ೧-೨೨). ೫. ನೆರವೇರಿಸು ; ಸಾಂಗಗೊಳಿಸು : ವೈರಿವೀರಪ್ರತತಿಗಮರೀನಾರಿಯರಿಗೆ ವಿವಾಹವನು ವಿಸ್ತಾರಿಸುವ ಸಮಯದೊಳಗೆ (ಕುವ್ಯಾದ್ರೋ. ೬-೪೩). [ವಿಸ್ತಾರ + -ಇಸ್ಸು]

**ವಿಸ್ತೀರ್ಣ** (ಗು). ೧. ಅಗಲವಾದ ; ದೊಡ್ಡದಾದ : ಓರೋರ್ವರಂ ತೆಗೆದಪ್ಪಿ ನಿಬಿಡಾಲಿಂಗನಂಗೆಯ್ವಾನಂದಜಳಪರಿಪೂರ್ಣವಿಸ್ತೀರ್ಣವಿಲೋಚನಂಗಳಿಂದಂ ಮುಹುರ್ಮುಹುರಾಲೋಕನಂಗೆಯ್ಯುತ್ತುಂ (ಪಂಪಭಾ. ೪-೩೩ ವ). (ನಾ). ೨. ಅಗಲ ; ವಿಸ್ತಾರ : ಪಂಚಾಶತ್ಕೋಟಿ ವಿಸ್ತೀರ್ಣ ಭೂಮಂಡಲಕೆ ಸುತ್ತ ಹರಿದವು ಸಪ್ತಸಾಗರಂಗಳು (ಅವಚಂ. ೩-೮) ; ವನರುಹಭವಾಂಡದೊಳಗೈವತ್ತುಕೋಟಿಯೋಜನದ ವಿಸ್ತೀರ್ಣದಿಳೆಯಂ ಸಪ್ತಶರನಿಧಿಗಳನು ವೇಷ್ಟಿಸಿರಲು (ಜೈಮಿಭಾ. ೨-೧). ೩. ದೊಡ್ಡದು ; ಬೃಹತ್ತಾದುದು : "ಬೃಹತ್ ಉರು ಗುರು ವಿಸ್ತೀರ್ಣಂ . . . ವರಿಷ್ಠಂ – ಈ ೧೨ ಹಿರಿದು" (ಹಲಾಯು. ೧೧೭-೧೪). [ಸಂ.]

**ವಿಸ್ತೃತ** (ಗು). ೧. ಅಗಲವಾದ ; ವಿಸ್ತಾರವಾದ : ವಿಸ್ತೃತ ವಕ್ಷೋದರಭಾಗ ಭೂರಿಕಮಠ ಪ್ರಕ್ಷುಬ್ಧ ಕಲ್ಲೋಲ ಕಲ್ಪಿತ ಕೋಲಾಹಲಕಲ್ಪಕಾಲರಭಸಪ್ರಸ್ಪರ್ಧಿಯಂ ವಾರ್ಧಿಯಂ (ಕಾವ್ಯಸಾ. ೭೫) ; ನರನ ನಾಗರಿಕತೆಯ ತೀರ್ಥಯಾತ್ರೆಯ ಮಹಾವಿಸ್ತೃತ ಸಲಿಲಪಥವೆ, ಮೊರೆದುರುಳು, ರತ್ನಧಿಯೆ (ಚಿತ್ರಾಂಗ. ೬೫-೧೭೭೩). (ನಾ). ೨. ಅಗಲವಾದುದು ; ವಿಸ್ತಾರವಾದುದು : ದ್ಯಾವಾಪೃಥಿವಿಗಳೆರಡೂ, ತಮ್ಮ ಪುತ್ರನಾದ ಅಗ್ನಿಗಾಗಿಯೇ ವಿಸ್ತೃತಗಳಾದಂತೆ ಕಂಡುಬಂದುವು (ಋಕ್ಸಾರ. ೪). [ಸಂ.]

**ವಿಸ್ತೃತಪಾಠ** (ನಾ). [ಗ್ರಂಥಸಂ] ವಿವರವಾದ ಪಠ್ಯವಿರುವ ಆಕರ, — ಗ್ರಂಥ, — ಕೃತಿ : ಅಧಿಕಪದ್ಯಗಳೂ ವಿಸ್ತೃತಪಾಠಗಳೂ ಯಾವ ಪ್ರತಿಗಳಲ್ಲಾದರೂ ಇದ್ದರೆ ಅವುಗಳನ್ನು ಆ ಹಾಳೆಯ ಹಿಂದುಗಡೆ ಬರೆಯುವುದಾಗುತ್ತದೆ (ಕನ್ನಸಂ. ೭೪). [ಸಂ.]

**ವಿಸ್ತೃತಿ** (ನಾ). ವ್ಯಾಪ್ತಿ ; ಹರಹು : ವಾಕ್ಕು . . . ಅಂತರಿಕ್ಷದಲ್ಲಿ ಅಪರಿಮಿತವಾದ ವಿಸ್ತೃತಿಯನ್ನೂ ಹೊಂದಿದ್ದಾಳೆ (ಋಕ್ಸಾರ. ೨೮೪). [ಸಂ.]

**ವಿಸ್ಪಷ್ಟ** (ಗು). ೧. ವಿಶೇಶವಾಗಿ ಸ್ಫುಟವಾದ ; ಹೆಚ್ಚು ಸ್ಪಷ್ಟವಾದ : ವಿಹೀನಕಟ ವಿಸ್ಪಷ್ಟೇಂದ್ರಿಯಂ . . . ಮೃಗಪೋದ್ಭವಂ (ಜಾತಕ. ೧೭-೧೦). (ನಾ). ೨. ಹೆಚ್ಚು ಸ್ಫುಟವಾದುದು ; ಸುಸ್ಪಷ್ಟವಾದುದು : ವಿಷ್ಣುಪಮೋರ್ಮೆಯುಂ ತಮಗೆ ಹಸ್ತತಲಾಮಲಕಂಬೋಲೆಯ್ದೆ ವಿಸ್ಪಷ್ಟಮೆನಿಪ್ಪ ಬೋಧಯುತರಿಂ ತಿಳಿದಿಲ್ಲಿಗೆ

ತಕ್ಕುದೇನುವಂ ಚೇಷ್ಟಿಪವನ್ನೆಗಂ ಮನದೊಳುಮ್ಮಳಿಸಲ್ಕಣಮಾಗದು (ಚಂದ್ರಪ್ರ. ೩-೬೮). [ಸಂ.]

**ವಿಸ್ಫಾರ** (ಗು). ೧. ಅತಿಶಯವಾದ : ಸಮಗ್ರೋದಗ್ರವಿಗ್ರಹವಿಜಿತ ವಿಗ್ರಹ ವೀರ ವೀರಪ್ರಮಥವಾರದಿಂ ವಿಸ್ಫಾ[ಪಾಠಾಂ. ಸ್ಫೂ]ರ ವೀರರಸಮುಮಂ (ರಾಜಶೇ. ೧೪-೧೦೬ ವ). ೨. ಹೊಳೆಯುವ ; ಪ್ರಕಾಶಿಸುವ : ವಿಸ್ಫಾರ ವಿದ್ಯುತ್ಸಂಭಿನ್ನಾಂಭೋಭೃದುದ್ಯತ್ತಟಚಟುಳಚಳನ್ಮೀನಫೇನಪ್ರತಾನಂ . . . ಸಮುದ್ರಂ (ರಾಜಶೇ. ೧-೯೦). (ನಾ). ೩. ಅಲುಗಾಡುವಿಕೆ ; ನಡುಗುವಿಕೆ. ೪. ಬಿಲ್ಲಿನ ಹೆದೆಯ ಧ್ವನಿ; ಧನುಷ್ಟಂಕಾರ : "ಬಿಲ್ಲ ಜೇವೊಡೆಯ ಧ್ವನಿ – ವಿಸ್ಫಾರ" (ನಾಚಿರಾ. ೬). ೫. ಹೊಳಪು ; ಪ್ರಕಾಶ. [ಸಂ.]

**ವಿಸ್ಫಾರಿತ** (ಗು). ಅಗಲವಾದ ; ಅರಳಿದ : ಆಕೆಯ ಮುಖಾರವಿಂದಮನಾನಂದ ವಿಸ್ಫಾರಿತವಿಲೋಚನನಾಗಿ ನೋಡಿ (ಪಂರಾಮಾ. ೩-೬೫ ವ). [ಸಂ.]

**ವಿಸ್ಫಾರಿಸು** (ಕ್ರಿ). ದೊಡ್ಡದಾಗು ; ಅಗಲವಾಗು : ಸುಯ್ ಸುಯ್ದುಳಿದೆಯ ತಿದಿಯೊತ್ತಿ ಮೂಗಿನ ಸೊಳ್ಳೆ ವಿಸ್ಫಾರಿಸಲ್ (ಶ್ರೀರಾಮಾ. ೭೩-೫೧೬).

[ವಿಸ್ಫಾರ + -ಇಸು$_3$]

**ವಿಸ್ಫಾಲ** (ನಾ). ಅಲುಗಾಟ ; ಕಂಪನ : ನಿಶ್ಶಬ್ದತೆಯ ಪಕ್ಷವಿಸ್ಫಾಲಮೆಂಬಿನಂ ಕಡಲತೀರದ ತೆಂಗುಮರಗಳೊಳ್ ನರ್ತಿಸಿರೆ ಗರಿ ಮರ್ಮರಂ (ಶ್ರೀರಾಮಾ. ೩೩೪-೧೦೩).

[ಸಂ.]

**ವಿಸ್ಫಾಲನೆ** (ನಾ). = ವಿಸ್ಫಾಲ : ಕೋಸಲಾಕಾಶವಿಸ್ತಾರಮಾ ರಾಮನಾತ್ಮದ ವಿರಾಟ್ ಪಕ್ಷವಿಸ್ಫಾಲನೆಗೆ ಸಾಲದಲ್ಪಂ (ಶ್ರೀರಾಮಾ. ೧೭೨-೫೪೮). [ಸಂ. ವಿಸ್ಫಾಲನ]

**ವಿಸ್ಫಾಳನ** (ನಾ). = ವಿಸ್ಫಾಲ : ಕೇರಳಭೂಪಭುಜಾವಲೇಪವಿಸ್ಫಾಳನ (ಎಕ. V, ಬೇಲೂರು. ೧೨೪-೨೨ ; 1133). [ಸಂ. ವಿಸ್ಫಾಲನ]

**ವಿಸ್ಫುಟ** (ನಾ). ಚೆನ್ನಾದುದು ; ಸ್ಪಷ್ಟವಾದುದು : ಇಂದ್ರಿಯಶಕ್ತಿಯಂ ಜರೆ ಭರಂಗೆಯ್ದೆಯ್ದೆ ಬೆನ್ನಟ್ಟೆ ವಿಸ್ಫುಟಮಿಲ್ಲಿಚ್ಚೆಯ ಮಚ್ಚು (ಶಾಂತಿಪು. ೭-೬೭) ; ನಾವುಬ್ಬಟೆಯ ತವಸಿಗಳೆಂಬುದಿದು ವಿಸ್ಫುಟವಲೇ ತಪ್ಪೇನು (ಕುವ್ಯಾಅ. ೬-೫). [ಸಂ.]

**ವಿಸ್ಫುರಣ** (ನಾ). ೧. ಅಲುಗಾಟ; ಕಂಪನ . ೨. ಹೊಳಪು; ಕಾಂತಿ: ವಾಲ್ಮೀಕೇಶ್ವರನ ಚರಣಾರವಿಂದಾಮಂದ ಸುರುಚಿರವಿಸ್ಫುರಣಮೊಪ್ಪೆ (ಬಸವು. ೨೬-೧೦). [ಸಂ.]

**ವಿಸ್ಫುರಣೆ** (ನಾ). = ವಿಸ್ಫುರಣ ೨ : ಚಲನೆ ವಿಶ್ವಾಸ್ತರಣೆಯದುವೆ ಮಾಯಾಭ್ರಮಣೆ ಸಲೆ ಬಗೆಯಲದು ಪರಬ್ರಹ್ಮವಿಸ್ಫುರಣೆ (ಮಂಕುಕ. ೮೮). [ಸಂ. ವಿಸ್ಫುರಣ]

**ವಿಸ್ಫುರತ್ತು** (ಗು). ೧. ಹೊಳೆಯುವ ; ಪ್ರಕಾಶಿಸುವ : ವಿಸ್ಫುರದ್ದಿನಕರನಂ ಚಿತ್ರಾಂಗದಾವನೀಶಂ ಕಂಡಂ (ಆದಿಪು. ೧೬-೪೮) ; ಲಲಿತ ಚಿದ್ವಿಸ್ಫುರದಮೃತಕರಕುಲಜನಿತ ಪಂಚಾಮೃತವನೆಱೆದು (ಬಸವು. ೩೫-೧೨). ೨. ಬೆಳೆಯುವ ; ವೃದ್ಧಿಯಾಗುವ : ತವದ ಪುರಾತನ ಭವಬಂಧ ವಿಸ್ಫುರತ್ಪ್ರೇಮಮಂತೆ ಬಂದವರ್ಗೆ ಪುನರ್ನವಮಾದುದು (ಶಾಂತಿಪು. ೬-೧೨೫). [ಸಂ. ವಿಸ್ಫುರತ್]

**ವಿಸ್ಫುರಿತ** (ಗು). ೧. ಅಲುಗಾಡುವ ; ಕಂಪಿಸುವ ; ನಡುಗುವ. ೨. ಹೆಚ್ಚಾದ ; ವೃದ್ಧಿಯಾದ. (ನಾ). ೩. ಹೆಚ್ಚಾದುದು ; ವೃದ್ಧಿಗೊಂಡುದು : ಪೋಕುಂ . . . ಆನವರಿದಿರಿದಿರೊಳ್ ಕಾದಿ ಸತ್ತಂದು ಮೇಣ್ ವಿಸ್ಫುರಿತಂ ಮತ್ಕೋಪಮುಂ (ಪಂಪಭಾ. ೧೩-೨೦). [ಸಂ.]

**ವಿಸ್ಫುರಿಸು** (ಕ್ರಿ). ಹೊಳೆ ; ಬೆಳಗು ; ಪ್ರಕಾಶಿಸು : ದಶರಥಚಕ್ರವರ್ತಿಯ ಧರೆಯ ಪರಿವೃತ ಕೀರ್ತಿಲತೆ ವಿಸ್ಫುರಿಸುತಿರ್ದುದು ಸಕಲಜನಪದಜನದ ಕಣ್ಮನಕೆ (ತೊರರಾ. ೧-೩-೩೧). [ವಿಸ್ಫುರಣ + - ಇಸು$_3$]

**ವಿಸ್ಫುಲಿಂಗ** (ನಾ). ೧. ಬೆಂಕಿಯ ಕಿಡಿ : ಅನೇಕರಾಜನ್ಯಕಮಕುಟಸಂಘಟ್ಟೋಚ್ಚಲನ್ಮಣಿ ಮರೀಚಿಗಳ್ ವಿಳಯಾನಳ ವಿಸ್ಫುಲಿಂಗಂಗಳಂತೆ ದೆಸೆದೆಸೆಗೆ ಕೆದಱೆ (ಆದಿಪು. ೧೪-೮೨ ವ); ಚಟುಳಕೋಪಾಗ್ನಿಯಲಿ ನಾಸಾಪುಟದ ಸುಯ್ನಲಿ ವಿಸ್ಫುಲಿಂಗೋತ್ಕಟ ಸಮಾಧಿಗಳಿದ್ದಲಲಿ . . . ಬಾಹುಪ್ರತಾಪದ ಪುಟವನೆತ್ತದೆ ಮಾಣನು (ಕುವ್ಯಾದ್ರೋ. ೧೯-೧೧). ೨. ಒಂದು ಬಗೆಯ ವಿಷ : "ಶೃಂಗಿಕಃ . . . ವಿಸ್ಫುಲಿಂಗಃ — ಈ ೬ ವಿಷಭೇದಂಗಳ್" (ಹಲಾಯು. ೧೦೬-೨೫). [ಸಂ.]

**ವಿಸ್ಫುಲಿಂಗಿತ** (ನಾ). (ಆಲಂ) ಬೆಂಕಿಯ ಕಿಡಿಯಂತೆ ಕೆರಳಿದವನು : ಕೆಂಪಿನಂಬುಜಾಂಬಕಯುಗಳನೊಲೆದೊಲೆದು ರೋಷಪ್ರಕಟಪಾವಕವಿಸ್ಫುಲಿಂಗಿತ ನಾದನಡಿಗಡಿಗೆ (ಕುವ್ಯಾಭೀ. ೬-೨೮). [ಸಂ.]

**ವಿಸ್ಫುಲಿಂಗಿಸು** (ಕ್ರಿ). ಕಿಡಿಗೊಳ್ಳು ; ಹತ್ತಿಕೊಳ್ಳು : ಛಾಯಾರಚಿತರಾತ್ರಿ ತಾನಾಯ್ತೊ ಚಂದ್ರೋದಯೋಜ್ವಲಿತಮೆಂಬವೋಲ್ ಭೋಂಕನೆಯ ವಿಸ್ಫುಲಿಂಗಿಸಿದುದು ವನಧರಿತ್ರಿ (ಶ್ರೀರಾಮಾ. ೨೩೦-೭೫). [ವಿಸ್ಫುಲಿಂಗ + - ಇಸು$_3$]

**ವಿಸ್ಫೂರ್ಜಿತ** (ಗು). ಕಾಂತಿಯುತನಾದ ; ತೇಜಸ್ವಿಯಾದ : ಪಿರಿದುತ್ಸಾಹದೆ ನೋಡಿಯುಂ ಗಿರಿಶನಂ . . . ಪೂರ್ಣೋತ್ಸವಮ್ಮೆದಿಯುಂ ತಡೆದುದಿಲ್ಲೇನೆಂಬೆನುದ್ಯತ್ಕಳೇವರ ವಿಸ್ಫೂರ್ಜಿತಸಾತ್ವಿಕಂ ಗುಣನಿಧಿ ಚೋಳಭೂಪಾಲಕಂ (ರಾಜಶೇ. ೧೪-೯೭). [ಸಂ.]

**ವಿಸ್ಫೂರ್ತಿ** (ನಾ). ಪ್ರಕಾಶಿಸುವವನು ; ತೇಜಸ್ವಿ : ಅವಿರಳಿತತೇಜಃಪ್ರಪೂರ್ತಿ ಸಮಸ್ತವಿಸ್ಫೂರ್ತಿ (ಬಸವು. ೪೬-೪೦). [ಸಂ.]

**ವಿಸ್ಫೋಟ** (ನಾ). ೧. ಮೈಮೇಲೆ ಏಳುವ ಗುಳ್ಳೆ, — ಬೊಬ್ಬೆ : "ವಿಸ್ಫೋಟಃ , ಪಿಟಿಕಃ —೨ ಹೊಕ್ಕು , ಹುಣ್ಣಿನ ಹೊಕ್ಕು , ಬೊಬ್ಬೆ" (ಸಿದ್ಧಾಂತಿ. ೧೮೩). ೨. ಒಡೆಯುವಿಕೆ ; ಬಿರಿಯುವುದು. [ಸಂ.]

**ವಿಸ್ಫೋಟಿಸು** (ಕ್ರಿ). ಉರಿ ; ಜ್ವಲಿಸು : ಹುರಿದು ಮುಕ್ಕುವಂತಹ ಹವೆಯು ವಿಸ್ಫೋಟಿಸುತ್ತಿದ್ದಿತು (ಝೂರಾಣಿ. ೩೮೯). [ವಿಸ್ಫೋಟ + - ಇಸು$_3$]

**ವಿಸ್ಮಯ** (ನಾ). ೧. ಆಶ್ಚರ್ಯ ; ಅಚ್ಚರಿ ; ಬೆರಗು : ಶ್ರೀಗಧಿಪತಿ ವಿಸ್ಮಯಮನನಾಗಿ ಬೆರಲ್ಮಿಡಿದು ವಿಪ್ರತನಯರ ವಿದ್ಯೋದ್ಯೋಗಕ್ಕೆ ಮೆಚ್ಚಿ ತಲೆಯಂ ತೂಗಿದಂ (ಸುಕುಮಾ. ೩-೧) ; ಈ ಕಾಂತಿಯಾ ತನುಚ್ಛಾಯೆಯಾ ವಿಸ್ಮಯಂ . . . ಈ ಯೌವನೋದಯಂ ಮಾನವರ್ಗಿಲ್ಲ (ನಂಬಿರ. ೩-೨೦). ೨. ಗರ್ವ ; ಅಹಂಕಾರ ; ದರ್ಪ. ೩. [ಕಾವ್ಯಮೀ] ಲೋಕೋತ್ತರವಾದ ವಸ್ತುಗಳ ದರ್ಶನದಿಂದ ಹೃದಯದಲ್ಲಿ ಉಂಟಾಗುವ ವಿಕಾಸದ ಅನುಭವ ; ಅದ್ಭುತರಸದ ಸ್ಥಾಯಿಭಾವ : ರತಿ ಪರಿಹಾಸಂ . . . ವಿಸ್ಮಯಾಶಯತ್ವಪ್ರತಿನಿಯತ ಸ್ಥಾಯಿಭಾವಮಿವು ತಾಮಕ್ಕುಂ (ಕಾವ್ಯಾವ. ೭೯೪). [ಸಂ.]

**ವಿಸ್ಮಯಂಗೊಳ್, ವಿಸ್ಮಯಗೊಳ್** (ಕ್ರಿ). ಆಶ್ಚರ್ಯಗೊಳ್ಳು ; ಅಚ್ಚರಿಪಡು ; ಬೆರಗಾಗು : ಕ್ಷಣದೊಳಾ ಲಿಪಿಯಂ ಸಭೆ ಕೇಳ್ದು ವಿಸ್ಮಯಂಗೊಳೆ (ವೃಷವಿ. ೫-[illegible]). ಊರ್ಧ್ವಲೋಕವ ಪತ್ತಿಸುವ ಶೀಳ್ವಾರಿಗೆರಗದೆ ವಿಸ್ಮಯಂಗೊಳದೆ (ಗಗತಾ. ೧೬-೧೮). **ವಿಸ್ಮಯಗೊಳ್** : ಮದನನೊ ನಳನೊ ನಳಕೂಬರ ಜಯಂತನೊ ಎನುತ ವಿಸ್ಮಯಗೊಂಡಳಾ ತರುಣಿ (ನಳಚ. ೩-೩೪). [ವಿಸ್ಮಯ + ಕೊಳ್$_1$]

**ವಿಸ್ಮಯಂಬಡು, ವಿಸ್ಮಯಪಡು, ವಿಸ್ಮಯಬಡು** (ಕ್ರಿ). = ವಿಸ್ಮಯಂಗೊಳ್ : ಈ ನೆರೆದ ನೆರವಿ ವಿಸ್ಮಯಂಬಟ್ಟದೇನಂ ನೋಡಿದಪ್ಪುದು (ಆದಿಪು. ೪-೩ ವ) ; ಸೂರ್ಯಮಿತ್ರಂ ತನ್ನೊಳ್ ವಿಸ್ಮಯಂಬಟ್ಟು (ಸುಕುಮಾ. ೨-೪೮ ವ). **ವಿಸ್ಮಯಪಡು** : ಆ ದೃಶ್ಯವನ್ನು ಕಂಡು ಜನರೆಲ್ಲ ವಿಸ್ಮಯಪಟ್ಟರು (ರೂಢಿ). **ವಿಸ್ಮಯಬಡು** : ವಿಸ್ಮಯಬಟ್ಟುದೀ ಮೂಲೋಕವದುಭುತಶಿಶುಪರಾಕ್ರಮಕೆ (ನಿಭಾಗ. ೩-೨-೨೦).

[ವಿಸ್ಮಯ + ಪಡು$_1$]

**ವಿಸ್ಮಯಂಬಡೆ** (ಕ್ರಿ). = ವಿಸ್ಮಯಂಗೊಳ್ : ಎನ್ನ ಭುಜಾಗ್ರವಿಕ್ರಮಕೆ ಮೆಚ್ಚಿದೆ ನೀಂ ಭವದೀಯ ಸಾಹಸಕ್ಕಾನ್ನೆಱೆ ವಿಸ್ಮಯಂಬಡೆದೆಂ (ಶಬಶಂ. ೪-೮೬).

[ವಿಸ್ಮಯ + ಪಡೆ$_1$]

**ವಿಸ್ಮಯಕಾರಿ** (ನಾ). ಅಚ್ಚರಿಯನ್ನುಂಟು ಮಾಡುವಂಥದು ; ಆಶ್ಚರ್ಯದಾಯಕವಾದುದು : ಇದು ಅವನಿಗೆ ವಿಸ್ಮಯಕಾರಿಯಾಗಿ ಕಂಡಿತು (ಪುನರು. ೧೯೭).

[ಸಂ. ವಿಸ್ಮಯಕಾರಿನ್]

**ವಿಸ್ಮಯಗೊಳ್** 'ವಿಸ್ಮಯಂಗೊಳ್' ನೋ.

**ವಿಸ್ಮಯಪಡು** 'ವಿಸ್ಮಯಂಬಡು' ನೋ.

**ವಿಸ್ಮಯಪದ** (ನಾ). ಆಶ್ಚರ್ಯವನ್ನುಂಟುಮಾಡುವ ವಿಷಯ : ಮೋಹನಮಂ ಪುಟ್ಟಿಸಿ ತನ್ನ ದಿಟ್ಟಿವೆಳಗಿಂ ನುಣ್ಪಿಟ್ಟು ಕೊಟ್ಟಳ್ ಘನಸ್ತನಭಾರಾವನತಾಂಗಿ ವಿಸ್ಮಯಪದವ್ಯಾಹಾರಮಂ ಹಾರಮಂ (ಮಲ್ಲಿಪು. ೮-೧೧೮). [ಸಂ.]

**ವಿಸ್ಮಯಬಡು** 'ವಿಸ್ಮಯಂಬಡು' ನೋ.

**ವಿಸ್ಮಯಭರಿತ** (ಗು). ೧. ಆಶ್ಚರ್ಯದಿಂದ ಕೂಡಿದ ; ಬೆರಗಿನಿಂದ ಕೂಡಿದ. (ನಾ). ೨. ಆಶ್ಚರ್ಯದಿಂದ ಕೂಡಿದವನು ; ಬೆರಗಾದವನು : ಚೌಡಪ್ಪ ವಿಸ್ಮಯಭರಿತರಾದರು (ಹಳ್ಳಿಹಾ. ೧೨೧). [ಸಂ.]

**ವಿಸ್ಮಯವೊಂದು** (ಕ್ರಿ). = ವಿಸ್ಮಯಂಗೊಳ್ : ಚೀಲಾಳನ ನುಡಿಗಳಿಗಮಂದ ದೃಢಚಿತ್ತಕ್ಕೆ ವಿಸ್ಮಯವೊಂದಿ ನುತಿಸುವ ತಪಸಿಯೆಯ್ದಿದನು (ಬಸಪು. ೨೪-೧೫).

[ವಿಸ್ಮಯ + ಪೊಂದು (< ಪೊರ್ದು)]

**ವಿಸ್ಮಯಾಕ್ರಾಂತ** (ನಾ). ಸೋಜಿಗಗೊಂಡವನು ; ಆಶ್ಚರ್ಯಭರಿತನಾದವನು : ಪಂಚಾಶ್ಚರ್ಯಮಿತ್ತಂ ನೆಗಟ್ ಶಿಬಿರದೊಳ್ ವಿಸ್ಮಯಾಕ್ರಾಂತನಿರ್ದಂ . . . ಸುಕವಿಜನ ಮನೋಮಾನಸೋತ್ತಂಸಹಂಸಂ (ಆದಿಪು. ೪-೯೮). [ಸಂ.]

**ವಿಸ್ಮಯಾವೃತ** (ಗು). ಆಶ್ಚರ್ಯದಿಂದ ಕೂಡಿದ ; ಬೆರಗು ಆವರಿಸಿದ : ಸಂಭ್ರಮ ವಿಸ್ಮಯಾ(ವೃ)ತದಿಗಂತವಿಲೋಕವಿಕಾರವರ್ಜಿತಗತಿಕ್ರಮಮೊಪ್ಪೆ ವನಾಂತದಿಂ ವ್ರತಿ ಬರುತ್ತಿರೆ ಕಂಡು (ಪುಷ್ಪಪು. ೧೩-೧೧೭). [ಸಂ.]

**ವಿಸ್ಮರಣ** (ನಾ). ನೆನಪಿಲ್ಲದಿರುವಿಕೆ ; ಮರವೆ ; ವಿಸ್ಮೃತಿ : ಅತಿಶಯತರಮೆನಿಪ ಗುಣವ್ರತದೊಳ್ ದಿಗ್ವಿರತಿಗಕ್ಕುಂ . . . ತಿರ್ಯಗ್ವ್ಯತಿಕ್ರಮಕ್ಷೇತ್ರವೃದ್ಧಿವಿಸ್ಮರಣಂಗಳ್ (ಸುಕುಮಾ. ೬-೧೮). [ಸಂ.]

**ವಿಸ್ಮರಣೆ** (ನಾ). = ವಿಸ್ಮರಣ : ಉಪನಿಷತ್ತುಗಳ ಪ್ರಕಾರ ಆತ್ಮಸ್ವರೂಪದ ವಿಸ್ಮರಣೆಯೇ ಬಂಧನಕ್ಕೆ ಆಧಾರವಾಗಿರುತ್ತದೆ (ತತ್ವಪ್ರಾ. ೬೪) ; ಅವನಿಗೆ ಸ್ಮರಣೆಯೆ ಮರಣವಾಗಿತ್ತು, ವಿಸ್ಮರಣೆಯೆ ಹರಣವಾಗಿತ್ತು (ಪುನರು. ೪೦). [ಸಂ. ವಿಸ್ಮರಣ]

**ವಿಸ್ಮಿತ** (ಗು). ೧. ಆಶ್ಚರ್ಯಗೊಂಡ ; ಸೋಜಿಗಪಟ್ಟ ; ಬೆರಗಾದ : ಆಗಳತ್ಕಂತ ವಿಸ್ಮಿತಸ್ವಾಂತನಾಗಿ ಕಂಸಂ ನಿಜಾಂತಿಕದೊಳಿರ್ದ ಮಂತ್ರಿಗಳ್ಗಾ ವೃತ್ತಾಂತಮಂ ಪೇೞ್ವುದುಂ (ಜಗವಿ. ೨-೪೪ ವ) ; ಶಿವಧರ್ಮಧರ್ಮೋತ್ತರಪ್ರಸಂಗಗಳಂ . . . ತೋಱೆ ವಿಸ್ಮಿತನಾಗಿ ನಡೆತರುತಿರಲು (ಸಂಬಿರ. ೯-೧೦೬). (ನಾ). ೨. ಗಾಬರಿ ; ದಿಗ್ಭ್ರಮೆ : ಸ್ಮಿತವೆ ವಿಸ್ಮಿತವಾಯ್ತು ಅಸ್ಪರ್ಶಸ್ಪರ್ಶದಲಿ (ಅರಳು. ೪೪೫-೧೧). ೩. ಸೋಜಿಗಗೊಂಡ ವ್ಯಕ್ತಿ : ಆಚಾರಿಯನ್ನು ನೋಡಿ ಬಸವಂತಿ ಒಂದಿಷ್ಟು ವಿಸ್ಮಿತಳೇ ಆದಳು (ದೀಪಹ. II, ೧೬೮). ೪. [ನಾಟ್ಯ] ನೃತ್ಯದಲ್ಲಿ ನೋಟದ ಒಂದು ಭಂಗಿ ; IP "ಪ್ರೀತಿಯಿಂದ ಕೂಡಿ ಕಣ್ಣನ್ನು ತೆರೆದು ರೆಪ್ಪೆ ಬಡಿಯದೆ ಮೇಲ್ನೋಟದಿಂದ ದೃಷ್ಟಿಸಿ ನೋಡುವುದು" (ಲಾಸ್ಯರಂ. ೨೬೮ ಗದ್ಯಾನುವಾದ) : ಮಿಱುಗುವ ಕಣ್ಣಿಂ ನಿಟ್ಟಿಸುವೆಱಕೆಯದುಂ ತಾನೆ ವಿಸ್ಮಿತಾಖ್ಯಮೆನಿಕ್ಕುಂ (ಲಾಸ್ಯರಂ. ೩-೨೫). ೫. ನರ್ತನಮಾಡುವಲ್ಲಿ ಉಸಿರು ಬಿಡುವ ಒಂದು ಕ್ರಮ; IP "ಯತ್ನಪೂರ್ವಕ ಅನ್ಯಮನಸ್ಕನಾಗಿದ್ದು ಉಸಿರು ಬಿಡುವುದು" (ಲಾಸ್ಯರಂ. ೨೭೭ ಗದ್ಯಾನುವಾದ): "ಸ್ವಸ್ಥ . . . ಉಲ್ಲಾಸಿತ, ವಿಮುಕ್ತ, ವಿಸ್ಮಿತ, ಸ್ಖಲಿತ, ಪ್ರಸೃತ — ಈ ಒಂಬತ್ತೂ ಕೋಹಳನ ಮತದಂತೆ ಗಾಳಿಯ ಭೇದಂಗಳ್" (ಲಾಸ್ಯರಂ. ೩- ೭೮ ವ).

[ಸಂ.]

**ವಿಸ್ಮೃತ** (ಗು). ಮರೆತ ; ನೆನಪಿಲ್ಲದ : ವಿಸ್ಮೃ[ಪಾಠಾಂ. ಸ್ಮಿ]ತಪಕ್ಷ್ಮಪಾತನಮಪೂರ್ವಾಲೋಕನಾಕೌತುಕಾಕುಳಿತಾಂತಃಕರಣಂ ಸ್ವಕೀಯಭವನವ್ಯಾಪಾರಚಿಂತಾಂತರಂಗಳನೆಲ್ಲಂ ಮಱದಿಂತು ಕೂಡಿ ನೆರೆದತ್ತತ್ತಂ ಪುರಸ್ತ್ರೀಜನಂ (ಆದಿಪು. ೪-೬೦). [ಸಂ.]

**ವಿಸ್ಮೃತಿ** (ನಾ). = ವಿಸ್ಮರಣ : ವಿಸ್ಮೃತಿ ಜನಿಸುವುದು ಮೇಣವರಿಗೀ ಸಂಸಾರ ಧರ್ಮದಲಿ (ನಿಭಾಗ. ೩-೧೩-೧೭) ; ಹೆಸರಾಗಿದಿಹ ಜೀವಿ ಬಸವಳಿಸದಿರು ಮನದಿ ವಿಸ್ಮೃತಿಯನಪ್ಪದೆ ಹೆಸರು ಕೊನೆಗೆ? (ಕಲ್ಲೋಲ. ೩೩-೮). [ಸಂ.]

**ವಿಸ್ಮೇರ** (ಗು). ಆಶ್ಚರ್ಯಗೊಂಡ ; ಸೋಜಿಗಗೊಂಡ : ಧರಾಭಾರಾವಹಂ ಬಾಹುದಿವ್ಯಕರಿ ಶ್ರೀಕರಮಂ ಕರಂ ಜಱಿಯೆ ಚಂಚದ್ರಶ್ಮಿವಿಸ್ಮೇರದೃಷ್ಟಿಕಲಾಪೇಕ್ಷಣ ಮಚ್ಛಮಂ ಪಳಿಯೆ (ರಾಜಶೇ. ೩-೩). [ಸಂ.]

**ವಿಸ್ರ** (ನಾ). ಕೊಳೆತು ಕೆಟ್ಟವಾಸನೆ ಬರುವ ಮಾಂಸ : "ನಾಱುವ ಮಾಂಸಂ ವಿಸ್ರಂಯೆಂಬುದು" (ಹಲಾಯು. ೧೧೪-೯). [ಸಂ.]

**ವಿಸ್ರಂಭ** (ನಾ). ನಂಬುಗೆ ; ವಿಶ್ವಾಸ : ಉಚಿತಸೇವಾಜಾತಚಾತುರ್ಯದಿಂದೆ ಕರಂ ಚಿತ್ತಮನಪ್ಪುಗೆಯ್ದುಖಿಳವಿಸ್ರಂಭಕ್ಕಮಾವಾಸಮಾಗಿ ಕುಮಾರಂಗೆ ಮಹಾಪ್ರಧಾನತನಯಂ ಮಿತ್ರತ್ವಮಂ ತಾಳ್ದಿದಂ (ಕಾದಂಪೂ. ೪೪೦). [ಸಂ.]

**ವಿಸ್ರಂಭದೋಷ** (ನಾ). ವಿಶ್ವಾಸಘಾತ ; ಅಪನಂಬಿಕೆ : ವಿಶ್ವಾಸದ್ರೋಹ : ವಿಟಜನಚತುಷ್ಪಥದೊಳ್ ಪಾಲುಂ ನೀರು[o] ಬೆರಸಿದಂತಪ್ಪ ಕೆಳೆಯರಿರ್ದು ವಿಸ್ರಂಭ ದೋಷಪ್ರಸಕ್ತರಾದೆಡೆಯೊಳೊರ್ವರನೊರ್ವರಂಗೆ ಕೋಳ್ಗಗ್ಗಳಮಾದ ಮನೆಗಂ ತೋಳ್ಗಗ್ಗಳನೂಸ ಬದ್ದೆಗಂ ಬೇಸತ್ತು (ಶಾಂತಿಪು. ೮-೭೮ ವ). [ಸಂ.]

**ವಿಸ್ರಬ್ಧ** (ನಾ). ತಾಳ್ಮೆಯುಳ್ಳವನು : "ವಿಸ್ರಬ್ಧಃ, ಸ್ಥಿರಃ — ಈ ೨ ಹದುಳಿ(ಗ)ದಂ" (ಹಲಾಯು. ೬೧-೨೧೫). [ಸಂ.]

**ವಿಸ್ರಸೆ** (ನಾ). ೧. (ಮುಪ್ಪಿನಿಂದುಂಟಾಗುವ) ದುರ್ಬಲತೆ ; ಅಶಕ್ತತೆ ; ದೌರ್ಬಲ್ಯ : ರೂಪ ಸೌನ್ದರ್ಯ ಯವ್ವನ ಶೃಂಗಾರ ಕಲೆಗಳೆಂಬ ಪಂಚಾಸವಗಳನ್ನು ನಿಮ್ಮ ವಿಸ್ರಸಾವೇಶದ ಅಂಗಜಾಗ್ನಿಯಿಂದ ಹದಗಾಸಿ (ಮಂತ್ರಶ. ೨೯-೧೭). ೨. ಮುಪ್ಪು ; ಮುದಿತನ : "ಜರಾ, ವಿಸ್ರಸಾ — ಈ ೨ ಮುಪ್ಪು" (ಹಲಾಯು. ೮೩-೩೪೯).

[ಸಂ. ವಿಸ್ರಸಾ]

**ವಿಸ್ರಸ್ತ** (ಗು). ೧. ಕೆಳಗೆ ಬಿದ್ದ ; ಉದುರಿದ. ೨. ಅಶಕ್ತವಾದ ; ದುರ್ಬಲವಾದ : ವಿಸ್ರಸ್ತ ಬಹಳದೋಷತಮಿಸ್ರರಂ . . . ಮುನಿಪತಿಗಳಂ ಮನಂಬಿಡೆ ಕಂಡಂ (ಆದಿಪು. ೩-೩೭). [ಸಂ.]

**ವಿಸ್ರಾವ** (ಗು). ೧. ಹರಿಯುವ ; ಪ್ರವಹಿಸುವ. ೨. ಹನಿಯುವ ; ಒಸರುವ. [ಸಂ.]

**ವಿಸ್ವರ** (ಗು). ೧. ಹೊಂದಿಕೆಯಿಲ್ಲದ ; ಸಾಮರಸ್ಯವಿಲ್ಲದ. (ನಾ). ೨. [ವ್ಯಾಕ] ಸ್ವರಾಕ್ಷರವಿಲ್ಲದುದು : ಧಾತುವಿನಂತ್ಯಾಕ್ಷರಲೋಪಂ ಚರಮಂ ವಿಸ್ವರಮಾದ್ಯಂ ಹ್ರಸ್ವಮಕ್ಕುಮಾಗೆಂಬುದಱೊಳ್ (ಶಮದ. ೨೪೩). [ಸಂ.]

**ವಿಹಂಗ** (ನಾ). ೧. ಪಕ್ಷಿ ; ಹಕ್ಕಿ : ಆ ಮಾತಂಗಂ ವಿಹಂಗಸಂಗತಪಂಜರಮಂ ಪಿಡಿದು ನರೇಂದ್ರನಂ ದೇವ ಬಿನ್ನಪಮೆಂದಿಂತೆಂದಂ (ಕಾದಂಪೂ. ೫೩) ; ಬಂಧದಲ್ಲಿ ಬಿದ್ದ ವಿಹಂಗನಂತೆ ಇದೞ ದಂದುಗವ ನೋಡಲಾಱ (ಮೋಹಮಾ. ೧೫೭-೫೮೭). ೨. ಮೋಡ ; ಮೇಘ : 'ವಿಹಂಗಧ್ವಾನ ' ಪರಾ. [ಸಂ.]

**ವಿಹಂಗಗಮನ** (ನಾ). (ಗರುಡ)ಪಕ್ಷಿಯನ್ನು ವಾಹನವಾಗಿ ಉಳ್ಳವನು ; ಪಕ್ಷಿವಾಹನ ; ವಿಷ್ಣು : ಮಂಗಳಾಂಗ ಮಾತಂಗವರದ ವಿಹಂಗಗಮನ . . . ನಿನ್ನಯ . . . ಚರಣಂಗಳಬ್ಬಕೆ ಭೃಂಗನಪ್ಪೆನೆಂತೊ (ವಿದಾಕ್ಯ. ೪೭-೧). [ಸಂ.]

**ವಿಹಂಗಧ್ವಾನ** (ನಾ). ಮೇಘಧ್ವನಿ ; ಗುಡುಗು : ಆನಕಧ್ವನಿ ವಿಹಂಗಧ್ವಾನಮಂ ಪೋಲೆ ವಿಭ್ರಮದಿಂ ಬಂದನದೊಂದು ನಂದನವನಂ ಬರ್ಪಂತೆ ಸಂಕ್ರಂದನಂ (ಪುಷ್ಪಪು. ೧೪-೪೫). [ಸಂ.]

**ವಿಹಂಗನಾಡಿ** (ನಾ). ಶರೀರದ ಒಂದು ನಾಡಿಯ ಹೆಸರು : ಮಯೂರನಾಡಿ . . . ವಿಹಂಗನಾಡಿ . . . ಸಂತೋಷನಾಡಿ — ಇಂತೀ ನಾಡಿಗಳೊಳಗಾದ ಶರೀರದಲ್ಲಿ ತೋರುವ ನಾಡಿ ಜೀರ್ಣಪರ್ಣದಂತೆ (ಶರಚ. ೪೬೦). [ಸಂ.]

**ವಿಹಂಗಪ** (ನಾ). ಪಕ್ಷಿಗಳ ಒಡೆಯ ; ಗರುಡ : ತವೆ ಹರ್ಯಜೇಂದ್ರ ಸುರದನುಜನರಫಣಿಮನುಮುನಿ ವಿಹಂಗಪಾದ್ಯಖಿಲರೀಶಕಾರುಣ್ಯದಿಂದವೆ ಬಾಳ್ದರಿದು ಶಾಸ್ತ್ರಸಿದ್ಧಂ (ಪದ್ಮರಾ. ೧೧-೧೫೯). [ಸಂ.]

**ವಿಹಂಗಮ** (ನಾ). ೧. = ವಿಹಂಗ ೧ : ನಿನ್ನಯ ದೇಶಮೆತ್ತಣದು . . . ಮಱಸಲೆಂದು ವಿಹಂಗಮವೇಷಿಯಾದೆಯೋ (ಕಾದಂಪೂ. ೯೦) ; ವಿಹಂಗಮಗಳಿಂಚರಂ ತಂಗದಿರ ಬೆಂಗದಿರ ನುದಯಾಸ್ತಗಳ ಪೆಂಪು ಸರ್ವಮಂ ನಿನ್ನ ಅಂಗೋಪಾಂಗಮಂ ಸುತ್ತಿ ಮುತ್ತಿ ನೆಯ್ಕಲಿ (ಚಿತ್ರಾಂಗ. ೨೯-೮೦೭). ೨. ಸೂರ್ಯ ; ನೇಸರು : 'ವಿಹಂಗಮಕುಲ' ಪರಾ. [ಸಂ.]

**ವಿಹಂಗಮಕುಲ** (ನಾ). ಸೂರ್ಯವಂಶದವನು ; ರಾಮ : ನೆಗೆದನಂತುಟೆ ತಾನುಮಾ ವಿಹಂಗಮಕುಲಂ! (ಶ್ರೀರಾಮಾ. ೨೩೭-೨೦೯). [ಸಂ.]

**ವಿಹಂಗಮದೃಷ್ಟಿ** (ನಾ). ೧. ಪಕ್ಷಿಯು ಹಾರುವ ಎತ್ತರದಿಂದ ಕಾಣುವ ಭೂದೃಶ್ಯ, — ನೋಟ. ೨. ಯಾವುದಾದರೊಂದು ವಿಷಯದ ಸ್ಥೂಲವಾದ ಹಾಗೂ ವಿಶಾಲದೃಷ್ಟಿಯ ಪರಿವೀಕ್ಷಣೆ : ಅವರ ಉಪನ್ಯಾಸವು ಕಾವ್ಯದ ವಸ್ತುವನ್ನು ಕುರಿತ ವಿಹಂಗಮದೃಷ್ಟಿಯಾಗಿತ್ತು (ರೂಢಿ). [ಸಂ.]

**ವಿಹಂಗಮನೋಟ** (ನಾ). = ವಿಹಂಗಮದೃಷ್ಟಿ ೨ : ಭಾರತೀಯಸಂಸ್ಕೃತಿಯ ಬಹುಮುಖಗಳನ್ನು ವಿಹಂಗಮನೋಟದಲ್ಲಿಯಾದರೂ ತೋರಿಸಿರುವ ಗ್ರಂಥ ಕನ್ನಡದಲ್ಲಿ ಇದೊಂದೇ . . . ಎಂದರೆ ಅತಿಶಯೋಕ್ತಿಯಲ್ಲ (ಭಾರದ. ೧ ಮುನ್ನುಡಿ).
[ವಿಹಂಗಮ + ನೋಟ]

**ವಿಹಂಗರಾಜ** (ನಾ). = ವಿಹಂಗಪ : ಪೃಥ್ವಿಯಾಕಾಶದ ಮಧ್ಯದಲ್ಲಿ ಖೇಚರಮಂಡಲ ಆ ಮಂಡಲದರಸು ವಿಹಂಗರಾಜ (ಕಲ್ಯಾಣಾ. ೧೦೭–೧೧). [ಸಂ.]

**ವಿಹಂಗವಾಹನ** (ನಾ). = ವಿಹಂಗಗಮನ : ಮಂಗಳಾಂಗ ವಿಹಂಗವಾಹನ ರಂಗರಾಯನ ಸಖನ ಹೊಳೆವ ಹಯಂಗಳನೆ ರಂಗೇರಿದಾಲಿಗಳಿಂದ ದಿಟ್ಟಿಸಿದ (ಸುದಾಮ. ೫–೧೭). [ಸಂ.]

**ವಿಹಂಗಾಧಿಪ** (ನಾ). = ವಿಹಂಗಪ : ವಿಶ್ವಜಗತ್‌ಕ್ಷೋಭಕರ ಸ್ವಭಾವಗತಿಯಿಂ ಬಂದಂ ವಿಹಂಗಾಧಿಪಂ (ಜಗವಿ. ೧೩–೩೭). [ಸಂ.]

**ವಿಹಂಗಿಕೆ** (ನಾ). ಭಾರವನ್ನು ಹೊರುವ ಅಡ್ಡೆಕೋಲು ; ಕಾವಡಿಕೋಲು : "ಭಾರಯಷ್ಟಿಃ, ವಿಹಂಗಿಕಾ — ಈ ೨ ಕಾ(ಟಿ)ಸಿನ ಕಂಬಿ" (ಹಲಾಯು. ೧೨೫–೭೩).
[ಸಂ. ವಿಹಂಗಿಕಾ]

**ವಿಹಗ** (ನಾ). = ವಿಹಂಗ ೧ : ಶುಕ ಶಾರಿಕಾದಿ ವಿಹಗಪ್ರಕರಂ ಮುಂ ಕೇಳ್ದ ವಚನಮಂ ನುಡಿವುದು (ಶಾಂತಿಪು. ೭೪) ; ಗಗನಗಮನದ ನಿಖಿಳವಿಹಗಾಳಿಗಳು ಬೆಂದವು (ಕುಮ್ಯಾಕ. ೨೫–೪). [ಸಂ.]

**ವಿಹಗಪ** (ನಾ). = ವಿಹಂಗಪ : ಕವಚಧರಂ ಶೂರಂ . . . ವಿಹಗಪಾಸ್ಯಂ ನೃಯುಗ್ಮ ಮಧ್ಯತ್ರ್ಯಂಶಂ (ಜಾತತಿ. ೧೯–೮). [ಸಂ.]

**ವಿಹಗಯೋಗ** (ನಾ). [ಜ್ಯೋತಿ] ಮೂವತ್ತೆರಡು ಯೋಗಗಳಲ್ಲಿ ಒಂದು ; IP ಏಳುಗ್ರಹಗಳೂ ದಶಮ ಚತುರ್ಥ ಕೇಂದ್ರಗಳಲ್ಲಿದ್ದರೆ ವಿಹಗಯೋಗವೆನಿಸುತ್ತದೆ : ಗ್ರಹಮೇೞುಂ ನಿಂದೊಡೆ ದಶಮ ಹಿಬುಕದೊಳ್ ವಿಹಗಯೋಗಮನಿಕುಂ (ಜಾತತಿ. ೧೩–೩). [ಸಂ.]

**ವಿಹಗಸ್ವನ** (ನಾ). ಪಕ್ಷಿಯ ಧ್ವನಿ, — ಕೂಗು : ವಿಧವಿಧ ವಿಹಗಸ್ವನ . . . ಪವನದಂತೆ ಪಾವನ (ಸಹೀಗೀ. ೭೭–೨). [ಸಂ.]

**ವಿಹಗೇಂದ್ರ** (ನಾ). = ವಿಹಂಗಪ : ಸಾವಿರೊಳ್ಳಗೆ ಮಣಿವನೇ ವಿಹಗೇಂದ್ರನು (ಕುಮ್ಯಾಸ. ೧೦–೫೪). [ಸಂ.]

**ವಿಹಗೇಂದ್ರವಾಹನ** (ನಾ). = ವಿಹಂಗಗಮನ : ವಿಹಗೇಂದ್ರವಾಹನಂ ಮಾಡವೇಳ್ಕೆಂದನುಗ್ರಹಿಸಿದಂ ಮಖಮಂ (ಜೈಮಿಭಾ. ೮–೪೪). [ಸಂ.]

**ವಿಹಟತ್ಕಿರೀಟ** (ನಾ). ಪ್ರಕಾಶಮಾನವಾದ ಮಕುಟ : ವಿಭುಲೋಕಂ ವಿಹಟತ್ಕಿರೀಟಹತಿಯಿಂದತ್ತತ್ತ . . . ಎಂಬಿನಂ ರಂಜಿಪಾರಭಟೀವೃತ್ತಿಯೊಳುದ್ಧತಾಭಿನಯದಿಂ ಕಣ್ಗೊಂಡನಾಖಂಡಳಂ (ಪುಷ್ಪಪು. ೧೨–೩೭). [ಸಂ.]

**ವಿಹರಣ** (ನಾ). ೧. (ಸಂತೋಷವಾಗಿ ಕಾಲಕಳೆಯುತ್ತ) ಸುತ್ತಾಡುವುದು ; ತಿರುಗಾಡುವುದು : ಕುಸುಮಾಪಚಯವಿಹರಣಪರಿಶ್ರಾಂತಿವಿಪ್ಲವಪ್ಲವನಕೇಳೀದೋಹಳ ಸುರಕುಮಾರ ಪ್ರಕಾರಾನುಲಿಪ್ಯಮಾನ ಸರ್ವಾಂಗೀಣ ಚಂದನದ್ರವನಿವೇಶದಿಂ ಗಂಗಾಸಂಗಮಮಾದಂತೆಯುಂ ಎಸೆವುದು (ಚಂದ್ರಪು. ೧–೮೫) ; ಲಹರಿ ಮಸಗಿದುದು . . . ಅಟ್ಟಹಾಸದ ರಹಣಿಗಳ ರಭಸದ ವಿಡಂಬದ ವಿಹರಣದಚಲದೃಷ್ಟಿಗಳ ಮಱಿಮೀನ ಹೊಳಹುಗಳ (ಕುಮ್ಯಾಆ. ೧೫–೧೯). ೨. [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು ; ಧರ್ಮೋಪದೇಶನಿಮಿತ್ತವಾಗಿ, ಧರ್ಮಚಕ್ರವನ್ನು ಮುಂದಿಟ್ಟುಕೊಂಡು ಭೂಮಂಡಲದಲ್ಲಿ ವಿಹರಿಸುವುದು : ಜಿನೇಂದ್ರನ ವಿಹರಣಪೂರ್ವರಂಗಮೇನೊಪ್ಪಿದುದೋ (ಶಾಂತಿಪು. ೧೨–೧೭) ; ಸಮ್ಮೇದಗಿರಿಯೊಳೊಂದು ತಿಂಗಳ್ವಿಹರಣಮುಳಿದು ಸಹಸ್ರಮುನಿಸಹಿತಂ . . . ಮುನಿ ಸುವ್ರತಭಟ್ಟಾರಕರ್ ಮುಕ್ತಿಗೆ ಸಂದರ್ (ಚಾವುಂಪು. ೨೭೮). [ಸಂ.]

**ವಿಹರಣಕಾಲ** (ನಾ). [ಜೈನ] ಧರ್ಮೋಪದೇಶನಿಮಿತ್ತವಾಗಿ ವಿಹಾರಕ್ರಿಯೆಯನ್ನು ಕೈಗೊಳ್ಳುವ ಸಮಯ : ವಿಹರಣಕಾಲಮಿನ್ನೆನಗೆ ಬಂದುದಿದೆಂದು ಜಿನಂ ಜನಸ್ತುತಂ ವಿಹರಿಸಲುದ್ಯಮಂಗೆಯಲೊಡಂ (ಶಾಂತಿಪು. ೧೨–೧೩). [ಸಂ.]

**ವಿಹರಣಕ್ರಮ** (ನಾ). [ಜೈನ] ಧರ್ಮೋಪದೇಶನಿಮಿತ್ತವಾಗಿ ಕೈಗೊಳ್ಳುವ ವಿಹಾರಕ್ರಿಯೆಯ ರೀತಿ, — ನಿಯಮ : ಗ್ರಾಮ ನಗರ . . . ಸಂವಾಹಗಳೊಳ್ ವಿಹಾರಿಸುತ್ತುಂ ವಿಹರಣಕ್ರಮದಿಂ ವತ್ಸವಿಷಯದ ಕೌಶಂಬೀನಗರಕ್ಕೆ ವಂದು (ಸುಕುಮಾ. ೬–೨೦ ವ). [ಸಂ.]

**ವಿಹರಣವಿಧಿ** (ನಾ). = ವಿಹರಣಕ್ರಮ : ಒಂದು ತಿಂಗಳ ವಿಹರಣವಿಧಿಯಂ ಮಾಣ್ದು ಸಾಸಿರ್ವರ್ಮುನಿವರರೊಡನೆ ಸಮ್ಮೇದಪರ್ವತದೊಳ್ . . . ಮೋಕ್ಷಲಕ್ಷ್ಮಿಯಂ ಶಂಭವನಾಥಂ ಕೈಕೊಂಡಂ (ಚಾವುಂಪು. ೯೯) ; ಕೃತಸಕಳಮೇದಿನೀವಿಹರಣನೊಂದು ತಿಂಗಳ್ ವಿಹರಣವಿಧಿಯಂ ಮಾಣ್ದು ಬಂದು (ಆದಿಪು. ೮–೨೮ ವ). [ಸಂ.]

**ವಿಹರಿಸು** (ಕ್ರಿ). ೧. (ಸಂತೋಷವಾಗಿ ಕಾಲ ಕಳೆಯುತ್ತ) ಸುತ್ತಾಡು ; ತಿರುಗಾಡು : ದಕ್ಷಿಣಸಮುದ್ರದ ತಡಿವಿಡಿದು ಬಂದು ರಾಮಚಂದ್ರಂ ವಿಹರಿಸಿದೆಡೆಗಳಂ ನೋಡಿ (ಪಂಪಭಾ. ೪–೧೮ ವ) ; ಲೀಲಾವನದೊಳೆ ವಿಹರಿಪ . . . ಲೀಲಾಂದೋಳಮನೇಱುವ ಲೀಲಾಕೇಳಿಗಳೆ ವಿಲಾಸಕೇಳಿಗಳ್ ನೃಪಸತಿಯಾ (ಆದಿಪು. ೩–೯) ; ವಿವಿಧಚಿತ್ರಕಲಾಪ ಕೇಳೀಭವನವೀಥಿಗಳೊಳಗೆ ವಿಹರಿಸಿದನು ವಿನೋದದಲಿ (ತೊರರಾ. ೨–೭–೨). ೨. [ಜೈನ] ಧರ್ಮೋಪದೇಶನಿಮಿತ್ತವಾಗಿ ವಿಹಾರಕ್ರಿಯೆಯನ್ನು ಕೈಗೊಳ್ಳು : ಭಟ್ಟಾರಕರ್ . . . ಚತುರ್ವಿಧದೇವನಿಕಾಯಮುಂ ಪಕ್ಷಿ ಚತುಷ್ಪದ ಸರೀಸೃಪಾದಿ ತಿರ್ಯಗ್ಜಾತಿಗಳುಂಬೆರಸು ಧರ್ಮಕ್ಷೇತ್ರದೊಳು ವಿಹರಿಸಿ (ಚಾವುಂಪು. ೮೨).
[ವಿಹರಣ + -ಇಸು]

**ವಿಹಸಿತ** (ನಾ). ಮುಗುಳ್ನಗೆ : ಮಧ್ಯಮಪ್ರಕೃತಿಯವರಲ್ಲಿ ವಿಹಸಿತ ಉಪಹಸಿತಗಳೂ . . . ಗೋಚರಿಸುತ್ತವೆ (ಭಾರಮಿಮಾ. ೪೧೩). [ಸಂ.]

**ವಿಹಸ್ತ** (ಗು). ೧. ಕೈಯಿಲ್ಲದ. ೨. ದಿಗ್ಭ್ರಮೆಗೊಂಡ ; ಗಾಬರಿಗೊಂಡ. (ನಾ). ೩. ವ್ಯಾಕುಲಗೊಂಡವನು ; ಕಳವಳಪಡುತ್ತಿರುವವನು : "ವಿಹಸ್ತಂ ವ್ಯಾಕುಳಂ ಕಳವಳಿಗನೆನಿಕ್ಕು" (ಮಂಗರಾ. ೭೦–೧೮) ; [ಸಂ.]

**ವಿಹಾಪಿತ** (ಗು). ೧. ಬಿಟ್ಟುಕೊಟ್ಟ ; ತ್ಯಜಿಸಿದ. ೨. ದಾನಮಾಡಿದ ; ಕೊಟ್ಟ. (ನಾ). ೩. ದಾನ ; ಕೊಡುಗೆ. [ಸಂ.]

**ವಿಹಾಯ** (ನಾ). ೧. ಆಕಾಶ ; ಗಗನ : "ವಿಹಾಯಃ . . . ವಿಹಾಯಸಃ, ಗಗನಂ, ದ್ಯುಃ — ಈ ೧೫ ಆಕಾಶಂ" (ಹಲಾಯು. ೨೨–೧೩೭). ೨. ಪಕ್ಷಿ ; ಹಕ್ಕಿ : "ಪತತ್, ಪತಂಗಃ . . . ವಿಹಾಯಃ, ವಿಹಗಃ . . . ದ್ವಿಜಃ — ಈ ೨೭ ಹಕ್ಕಿ" (ಹಲಾಯು. ೪೦–೮೪).
[ಸಂ. ವಿಹಾಯಸ್]

**ವಿಹಾಯನ** (ನಾ). ಕೊಡುವುದು ; ನೀಡುವುದು : "ವಿಶ್ರಾಣನಂ, ವಿಹಾಯನಂ . . . ದಾನಂ — ಈ ೧೦ ಕುಡುವುದು" (ಹಲಾಯು. ೬೯–೨೬೫). [ಸಂ.]

**ವಿಹಾಯಸ** (ನಾ). ೧. = ವಿಹಾಯ ೧ : ವಿಹಾಯ ಕಾಕೋಕಗಳು ನಿಲದೆ ವಿಹಾಯಸದಿ ತಿರುಗುವುದು (ಕರ್ಣಾಕ್ಯ. ೮–೫೩). ೨. = ವಿಹಾಯ ೨ : "ಶಕುನಿ ವಿಹಗಂ . . . ವಿಹಾಯಸಂ . . . ಶಕುಂತಿಯೆನೆ ಪಕ್ಷಿ" (ಮಂಗರಾ. ೫೦–೧). [ಸಂ.]

**ವಿಹಾಯೋಗತಿ** (ನಾ). [ಜೈನ] ನಾಮಕರ್ಮಗಳಲ್ಲಿ ಒಂದು ; "ಆಕಾಶದಲ್ಲಿ ಗಮನಮಾಡುವ ಶಕ್ತಿ" (ಜೈನಕೋ. ೨೫೫) : ಅಗುರು ಲಘುಚತುಷ್ಕ ವಿಹಾಯೋಗತಿ ದ್ವಿಕಸ್ಥಿರಾಸ್ಥಿರ . . . ನೀಚೈರ್ಗೋತ್ರಗಳೆಂಬ ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೭–೪೯ ವ). [ಸಂ.]

**ವಿಹಾರ** (ನಾ). ೧. (ಸಂತೋಷವಾಗಿ ಕಾಲ ಕಳೆಯುತ್ತಾ) ಸುತ್ತಾಡುವುದು ; ತಿರುಗಾಡುವುದು : ವಿಹಾರಾನುಕೂಲಗಳು ಈ ಯೋಜನೆಯಲ್ಲಿ ಸೇರಿವೆ (ಶಿಲ್ಪನಾ. ೪೦೧). ೨. ಬೌದ್ಧ ಅಥವಾ ಜೈನ ಭಿಕ್ಷುಗಳ ವಾಸಸ್ಥಾನ ; ಚೈತ್ಯಾಲಯ : ವಿಶಾಖಾ ಸುಪ್ರಿಯೆ ಎಂಬುವಳೊಡನೆ ವಿಹಾರದ ಒಳಗಡೆ ತಿರುಗಾಡಿದಳು (ಹತ್ತುಮ. ೪೮) ; ವಿಹಾರಗಳು ಭಿಕ್ಷುಗಳು ವಾಸಮಾಡುವ ಸ್ಥಳಗಳು (ಮೈವಾಸ್ತು. ೨೪). ೩. ರಾಜನು ವಾಸಿಸುವ ಮನೆ ; ಅರಮನೆ : ಮಹಾರಾಜ ಎರೆಯಂಗರ ಕಾಲದಲ್ಲಿ ಮಹಾದೇವಿ ಅಕ್ಕನವರಿಗಾಗಿಯೇ ಕಟ್ಟಿಸಿದ ಭವ್ಯವಿಹಾರವದು (ಶಾಂತಲಾ. ೫೮). ೪. [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಧರ್ಮೋಪದೇಶನಿಮಿತ್ತವಾಗಿ ಧರ್ಮಚಕ್ರವನ್ನು ಮುಂದಿಟ್ಟುಕೊಂಡು

ಭೂಮಂಡಲದಲ್ಲಿ ಸಂಚರಿಸುವುದು : ದಾನ ಪ್ರೀತಿ . . . ವಿಹಾರ ಯೋಗ ತ್ಯಾಗ ನಿರ್ವೃತಿಯೆಂಬಯ್ಯುತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ) ; ಯೋಗಸನ್ನಹಮುಂ ಅರ್ಹತ್ಯಮುಂ ತದ್ವಿಹಾರಮುಂ,.. ಅಪ್ಪಯ್ಯುತ್ತುಮೂಱು ಗರ್ಭಾನ್ವಯಕ್ರಿಯೆಯೊಳ್ (ಚಾವುಂಪು. ೨೧೨). 'ದೀಕ್ಷೆ' ಪರಾ. [ಸಂ.]

**ವಿಹಾರವನ** (ನಾ). (ಸಂತೋಷವಾಗಿ ಕಾಲ ಕಳೆಯುತ್ತ) ಸುತ್ತಾಡುವ ಸ್ಥಳ ; ತಿರುಗಾಡುವ ಜಾಗ : ಖೂಳರಿಗೆ ತಾ ಜನ್ಮಭೂಮಿ . . . ವಿಕಾರಿಗಳಿಗೆ ವಿಹಾರವನ . . . ಠಕ್ಕಿನ ಠೌಳಿಕಾಱರು ಮಾದ್ರದವರು (ಕುಮ್ಮಾಕ. ೯-೨೦) ; ವಿಹಾರವನವೊಂದರಲ್ಲಿ ಒಬ್ಬ ಸೈನಿಕ, ಒಬ್ಬ ವರ್ತಕ, ಒಬ್ಬ ಕವಿ ಕುಳಿತಿರುವಾಗ (ಶಿಕ್ಷದ. ೪೮೦). [ಸಂ.]

**ವಿಹಾರಿ** (ನಾ). ವಿನೋದದಿಂದ ಸಂಚರಿಸುವವನು, — ವಿಹಾರ ಮಾಡುವವನು : ಲಲಿತಕಾಂತಿಯೊಳಖಿಳತಾರಾವಳಿಗಳವುಲಗ್ರಹವಿರಲು ತೊಳತೊಳಗಿ ಮೆಱೆದನು ವಿಶ್ವರೂಪವಿಹಾರಿ ಮುರವೈರಿ (ಕುಮ್ಮಾಉ. ೯ - ; ಶೈಲಕಾನನ ಮನೋಹರತೆಯಂ ಸವಿಯುತಲೆವ ವಿಪಿನವಿಹಾರಿ (ಶ್ರೀರಾಮಾ. ೧೧೮-೧೭೩). [ಸಂ. ವಿಹಾರಿನ್]

**ವಿಹಾರಿಣಿ** (ನಾ). ೧. ವಿಹಾರ ಮಾಡುವವಳು. ೨. ಸ್ವೇಚ್ಛಾಚಾರಿಣಿ ; ಸ್ವೈರಿಣಿ : "ವಿಹಾರಿಣಿ — ಪಾಣ್ಸೆ" (ಕಾಶಕ್ಕ. ೧೫೭). [ಸಂ. ವಿಹಾರಿಣೀ]

**ವಿಹಾರಿಸು** (ಕ್ರಿ). ೧. = ವಿಹರಿಸು ೧ : ದೇವಕೀನಂದನಂ ಮಾಲೆಗಾಱಗೇರಿಯೊಳ್ ವಿಹಾರಿಸುತ್ತುಂ ಬರ್ಪಲ್ಲಿ (ಜಗಪು. ೬-೧೧ ವ). ೨. = ವಿಹರಿಸು ೨ : ಭದ್ರಬಾಹು ಭಟ್ಟಾರರ್ . . . ಗ್ರಾಮನಗರಖೇಡಖರ್ವಡಮಡಂಬಪಟ್ಟಣದ್ರೋಣಾಮುಖಂಗಳಂ ವಿಹಾರಿಸುತ್ತಿರ್ಪನ್ನೆಗಂ (ವಡ್ಡಾರಾ. ೭೫-೪) ; ಇತ್ತ ವೃಷಭನಾಥನುಂ ಆರ್ಯಕ್ಷೇತ್ರಂಗಳಂ ವಿಹಾರಿಸಿ . . . ಕೈಲಾಸಕ್ಕೆ ವಂದು ಸಿದ್ಧಶಿಖರತಳದೊಳು ಪೌಷ್ಯಮಾಸದ ಪುಣ್ಣಮಿಯೊಳು ಅಪಗತವಿಹಾರಣನಾಗಿರ್ದಂ (ಚಾವುಂಪು. ೮೩). [ವಿಹಾರ + - ಇಸು]

**ವಿಹಿತ** (ಗು). ೧. ಇಟ್ಟ ; ಇರಿಸಿದ. ೨. ಯೋಗ್ಯವಾದ ; ಸೂಕ್ತವಾದ : ಕುಲವಿಹಿತ ಚೌಲೋಪನಯನವನಿಬ್ಬರಿಗೆ ರಚಿಸಿ ಸೋಮವಂಶದ ಬೆಳವಿಗೆಯನೇ ಮಾಡಿ ಕೊಂಡಾಡಿದನು ಕಲಿಭೀಷ್ಮ (ಕುಮ್ಮಾಆ. ೩-೧೧). ೩. ಕೂಡಿಸಿದ ; ಹೊಂದಿಸಿದ : ಪಿರಿದುಂ ಚತುರ್ಥ ಸಂಸ್ಕೃತ ಪುರುಷಸ್ತ್ರೀವಿಷಯವಿಹಿತಬಹುವಚನದೊಳೊಂದಿರೆ ಶಿಥಿಲವೃತ್ತಿ ತಾನುಚ್ಚರಿರ್ಪಗೆ ಯಥೇಷ್ಟಂ (ಶಮದ. ೧೧೫). (ನಾ). ೪. ಯೋಗ್ಯವಾದುದು ; ಔಚಿತ್ಯಪೂರ್ಣವಾದುದು : ಸಹನೆ ಸಮರಸಭಾವವಂತಃಪರೀಕ್ಷೆಗಳು ವಿಹಿತವಾತ್ಮದ ಹಿತಕೆ (ಮಂಕುಕ. ೭೪೨) ; ಪೂರ್ವಸಿದ್ಧತೆ ಇಲ್ಲದೆ ತರಗತಿಗೆ ಬರುವುದು ಯಾರಿಗೂ ಎಂದಿಗೂ ವಿಹಿತವಲ್ಲ (ಶಿಕ್ಷದ. ೨೬೨). [ಸಂ.]

**ವಿಹಿತಕರ್ಮ** (ನಾ). ಯೋಗ್ಯವಾದ ಕಾರ್ಯ ; ಸೂಕ್ತಕೆಲಸ : ಲೋಕ ನಮ್ಮನುದಾಹರಿಸುವುದು ಕಾಕನೇ ಬಳಸುವುದು ದುರ್ಯಶವೇಕೆ ನಿಮಗಿದು ವಿಹಿತ ಕರ್ಮ ಶ್ರುತಿಪರಿತ್ಯಾಗ (ಕುಮ್ಮಾದ್ರೋ. ೧೮-೫೭) ; ಕರ್ಮವನ್ನು ಮಾಡುವುದು ಅನಿವಾರ್ಯವೇ ಆದುದರಿಂದ ವಿಹಿತಕರ್ಮವನ್ನೇ ಮಾಡುವುದು ಯುಕ್ತವು (ಆರ್ಯಧ. ೪೧). [ಸಂ. ವಿಹಿತಕರ್ಮನ್]

**ವಿಹಿತಗುರು** (ನಾ). ಯೋಗ್ಯನಾದ ಗುರು : ನಿಜಕೈವಲ್ಯಪದವೀವನೆ ವಿಹಿತಗುರು ವಹನು (ಕೈವಲ್ಯ. ೧-೩) ; ಬೋಧಕಗುರು ವೇದಕಗುರು ನಿಷಿದ್ಧಗುರು ಕಾಮ್ಯಗುರು ಸೂಚಕಗುರು ವಾಚಕಗುರು ಕಾರಕಗುರು ವಿಹಿತಗುರುವೆಂದೆಂಟು ತೆಱನಾಗಿರ್ಪರವರಲ್ಲಿ . . . ಸಂಶಯನಿರಸನದ್ವಾರದಿಂ ನಿತ್ಯಮುಕ್ತಿಪ್ರದನೇ ವಿಹಿತಗುರುವಕ್ಕುಂ (ವಿವೇಕ.೧೭). [ಸಂ.]

**ವಿಹಿತಾಂಗುಲಿ** (ನಾ). ಕೂಡಿಸಿದ ಬೆರಳು : ಅಹಿತಶಿರವಿದಲಾಯೆನುತ ಗೃಹಮಹಿಳೆಯರು ವಿಹಿತಾಂಗುಲಿಯ ಸಂಪ್ರಹರಣದಿ ಪರಿಭವಿಸಿದರು ಘೊಳ್ಳೆನಲು ನಿಖಿಳಜನ (ಕುಮ್ಮಾಅ. ೨೨-೪೧). [ಸಂ.]

**ವಿಹೀನ** (ಗು). ೧. ತೊರೆದ ; ಬಿಟ್ಟ ; ತ್ಯಜಿಸಿದ : ನಿಜವಾಹನವಿಹೀನವಿಸ್ಮಯ ಸ್ಮೇರವದನ ಸರಸಿರುಹ ದ್ವಾತ್ರಿಂಶನ್ನಾಕಾನೀಕಮುಂ ಕರಮೊಪ್ಪ (ಶಾಂತಿಪು. ೧೨-೧೯ ವ). ೨. ಇಲ್ಲದ : ಸುಡು ತಾಂಬೂಲವಿಹೀನವಕ್ತ್ರವ (ಸೋಮೇಶ. ೨೧). [ಸಂ.]

**ವಿಹೀನಕಟಿ** (ನಾ). (ಆಲಂ) ಕೃಶವಾದ ನಡುವುಳ್ಳವನು : ವನಿತಾಪುತ್ರರತಂ . . . ವಿಹೀನಕಟಿ . . . ಮೃಗಪೋದ್ಭವಂ (ಜಾತಕ. ೧೭-೧೦). [ಸಂ.]

**ವಿಹೃತ** (ಗು). ೧. ಕಳೆದ ; ಇಲ್ಲವಾದ. ೨. ನಾಶಗೊಳಿಸಿದ ; ನಿವಾರಿಸಿದ : ಚಂದ್ರಿಕೋಪಮಕೃಪಾಸಾಂದ್ರೇಕ್ಷಣೇ ವಿಹೃತತಂದ್ರ ರಕ್ಷಿಸು (ಉದ್ಭದೇ. ೫-೪). (ನಾ). ೩. [ನಾಟ್ಯ] ಹತ್ತು ಬಗೆಯ ಮಂಡಲಾಕೃತಿಯ ಭಂಗಿಗಳಲ್ಲಿ ಒಂದು : ಸಲೆ ಲಲಿತಸಂಚರಂ . . . ವಿಲಸದ್ವಿಹೃತಮಲಾತಂ ಲಲಿತಮಿವಾಕಾಶಮಂಡಲಂ ಪತ್ತೆನಿಕುಂ (ಲಾಸ್ಯರಂ. ೮-೪). ೪. [ಕಾವ್ಯಮೀ] ಸ್ತ್ರೀಯ ಸ್ವಭಾವಸಿದ್ಧವಾದ ಹತ್ತು ವಿಧವಾದ ಹಾವಭಾವಗಳಲ್ಲಿ ಒಂದು, — ದಶವಿಧ ಕೇಳೀಭಾವಗಳಲ್ಲಿ ಒಂದು : ಸತಿಗಾತ್ರಕೇಳಿ ಮೊಟ್ಟಾಯಿತ ಬಿಬ್ಬೋಕಾಖ್ಯಲಲಿತಲೀಲಾಕಿಲಕಿಂಚಿತ ವಿಚ್ಛಿತ್ತಿವಿಳಾಸವಿಹೃತವಿಭ್ರಮಕುಟ್ಟಮಿತಮೆನಲ್ಪತ್ತು ತೆಱಂ (ಶೃಂಗಾರ. ೨-೫೩) ; ಪರಮಪ್ರಿಯ ವಸ್ತುಗಳಂ ಪರಮಪ್ರಯುತಂಗಳಂ ಸಮಂತು ನಿಜಾಂತಃಕರಣದೊಳಣಮಲ್ಲೆಂಬಂತಿ ರುತಿರ್ಪ ಗಭೀರವೃತ್ತಿ ವಿಹೃತಮೆನಿಕ್ಕುಂ (ಶೃಂಗಾರ. ೨-೬೮). [ಸಂ.]

**ವಿಹೃತದೋಷ** (ನಾ). ದೋಷರಹಿತನಾದವನು : ಬಹುಕರರಂಜಿತಂ ವಿಹೃತದೋಷನನಾರತಮೆನ್ನ ಹೃತ್ಸರೋರುಹಕುಟೆ ತಾರಕಾರಿ ಮಿಗೆ ಮಾಡುಗೆ ಭವ್ಯತರ ಪ್ರಮೋದಮಂ (ರಾಜಶೇ. ೧-೮). [ಸಂ.]

**ವಿಹೃತಮದನ** (ನಾ). ಕಾಮನನ್ನು ನಾಶಗೊಳಿಸಿದವನು ; ಮದನಹರ ; ಶಿವ : ವದನಪಂಚಕ ವಿಹೃತಮದನ . . . ಜಯತು ಶಾಂತಮಲ್ಲ (ವೀಶೈಪು. ೪-೧-೧). [ಸಂ.]

**ವಿಹೃತಿ** (ನಾ). ಆಟ ; ವಿನೋದ ; ಕೇಳಿ : ಲಹರಿ ಮಸಗಿದುದತ್ತ ಕಾಂತಾಬಹಳ ಪಾರಾವಾರ ಹುಬ್ಬಿನ ವಿಹೃತಿಗಳ ತೆರೆಮಾಲೆಗಳ ಬೆಳುನಗೆಯ ಬುದುಬುದದ (ಕುಮ್ಮಾಆ. ೧೫-೧೯). [ಸಂ.]

**ವಿಹೇಟನ** (ನಾ). ತೊಂದರೆಪಡಿಸುವಿಕೆ ; ಗಾಸಿಗೊಳಿಸುವಿಕೆ : ತದುದ್ಘಟ್ಟನ ದೋಷಖ್ಯಾಪನ ವಿಹೇ[ಪಾಠಾಂ. ನಿಪೇ, ನಿಹೇ]ಟನ (?)ಸ್ಥಾನಾವಮಾನ ಭರ್ತ್ಸನ . . . ತೀರ್ಥಕರಾದಿಕ್ಷೇಪಾದಿ ತತ್ಪ್ರಪಂಚಂಗಳ್ ನೀಚೈರ್ಗೋತ್ರಾಸ್ರವಕಾರಣಂ (ತತ್ತ್ವಾಪ್ರ. ೨೬೭). [< ಸಂ. ವಿಹೇಠನ]

**ವಿಹ್ವಲ, ವಿಹ್ವಳ** (ಗು). ೧. ವ್ಯಾಕುಲಗೊಂಡ ; ದುಃಖಿತ. ೨. ಗೊಂದಲದಲ್ಲಿ ಬಿದ್ದ ; ಗಾಬರಿಗೊಂಡ. (ನಾ). ೩. ಗೊಂದಲ ; ಗಾಬರಿ ; ದಿಗ್ಭ್ರಮೆ : ಬೆರಗು, ವಿಹ್ವಲ, ಉದ್ವೇಗಗಳು ತುಂಬಿದ ಮಾತುಗಳಿದ್ದವು! (ಸ್ವಪ್ನಹೂ. ೨೬೬). ೪. ಗಾಬರಿಗೊಂಡ ವ್ಯಕ್ತಿ ; ದಿಗ್ಭ್ರಮೆಗೊಂಡ ವ್ಯಕ್ತಿ : ಭೀತಪರಿಗ್ರಹಂ ಕೃಪಣನಾತ್ಮಬಲವ್ಯಸನಾತಿವಿಹ್ವಲಂ[ಪಾಠಾಂ. ವಿಗ್ರಹಂ] (ಪಂಚತಂ. ೨೨೦-೧೦) ; ಕೆಲಬರ್ ವಿಪರೀತತೆಯಿಂದಿಂತಜ್ಞಾನತ್ರಿತಯತಮೋವಿಕೃತಿಯಿಂದೆ ವಿಹ್ವಲರಪ್ಪರ್ (ಚಂದ್ರಪು. ೨-೩೫). **ವಿಹ್ವಳ** : ೧. ಜನಕನತಿವಿಹ್ವಳಚಿತ್ತಂ ಶೋಕರಸಮನೊಳಕೊಂಡಿರ್ದಂ (ಪಂಪಾರಾಮಾ. ೪-೨೪). ೨. ವಿಪ್ರವಂಶ ಶ್ರೀಗರ್ಭೋತ್ಪನ್ನೆಯಂ ವಿಹ್ವಳವಿಷಯಲತಾಚ್ಛಿನ್ನೆಯಂ ಬೇಗಮೆಂದರ್ . . . ವರ್ಣನಾಥರ್ (ಸುಕುಮಾ. ೭-೪೮). ೩. "ವಿಕ್ಲಬಃ, ವಿಹ್ವಳಃ — ಈ ೨ ವ್ಯಾಕುಳಂ" (ಹಲಾಯು. ೬೪-೨೬೨). ೪. ಬಹ್ವಾರಂಭ ಪರಿಗ್ರಹ ವಿಹ್ವಳ [ಪಾಠಾಂ. ಲ]ನಿಂದ್ರಿಯಸುಖಾರ್ಥಿ . . . ಮಱುಗದೇಂ ಸುಖಂಬಡೆದಪನೇ (ಆದಿಪು. ೩- ೬೮) ; ಸಂಜನಿತಭವಬದ್ಧರೋಷಂ ತನಯನನೆಱೆದುಯ್ದನೆಂದು ವಿಹ್ವಳನಾದಂ (ಚಂದ್ರಪು. ೫-೮). [ಸಂ.]

**ವಿಹ್ವಲಿತ, ವಿಹ್ವಳಿತ** (ಗು). ೧. ವ್ಯಾಕುಲಗೊಂಡ ; ದುಃಖಿತನಾದ : ಬಹಳ ನಿದ್ರಾವ್ಯಸನ ವಿಹ್ವಲಿತಾಂತರಂಗರು ಮೆಯ್ಯನೊಲೆದೊಲೆದು ಉಸುರ ಸಂಪದನಾಡಿಯವ ಗಾಹಿಸಲು ಕೋಟೆದರು ಗುಱುಕಿಡುತ ತಲೆಮುಸುಕಿನಲಿ (ಕುಮ್ಮಾವಿ. ೮-೮೨). (ನಾ). ೨. ದುಃಖಗೊಂಡವ್ಯಕ್ತಿ ; ಚಿಂತಾಕ್ರಾಂತ : ವೈಶಂಪಾಯನ ವಿಯೋಗದಿಂ ವಿಹ್ವಲಿತ [ಪಾಠಾಂ. ಲಿತೆಯ] ರಾದ ಮನೋರಮೆಯುಮಂ ಶುಕನಾಸನುಮಂ ನಾವೀಗಳಾವ ತೆಱದಿಂ ಸಂತೈಸಲ್ವೇೞ್ಪುದು (ಕಾದಂಉ. ೬೭೬). **ವಿಹ್ವಳಿತ** : ೧. ಅಲಘುತರ ಪರಿವೇದನಾ ವಿಹ್ವಳಿತ ಕಂಠಗತಾತ್ಮನೂರ್ಧ್ವಸ್ಖಲಿತ ದೀರ್ಘಶ್ವಾಸನಿಕನು ಕೌರವರ ರಾಯ (ಕುಮ್ಮಾಗ. ೧೦-೨). [ಸಂ.]

**ವಿಹ್ವಲಿಸು** (ಕ್ರಿ). ೧. ದುಃಖಿಸು ; ವ್ಯಾಕುಲಪಡು : ನಾನಾ ದುರಂತಮಂ

ನೆನೆನೆನೆದು ವಿಹ್ವಲಿಸಿದುದು ಮನಂ (ಶ್ರೀರಾಮಾ. ೨೩೮-೨೮೧). ೨. ನೋಯಿಸು ; ಸಂಕಟಗೊಳಿಸು : ವಿಷಯೇಂದ್ರಿಯಂ ವಿಹ್ವಲಿಸಲಿಂ ಮನಂಗೊಳಿಸುಗುಮೆ ಕಡಲಡವಿ ಬಾನ್ ಬಯಲ್ ನಿರತೆ? (ಶ್ರೀರಾಮಾ. ೨೧೮-೧೪೯).
[ವಿಹ್ವಲ + -ಇಸು]

**ವಿಹ್ವಲೆ, ವಿಹ್ವಳೆ** (ನಾ). ವ್ಯಾಕುಲಗೊಂಡವಳು ; ದುಃಖಿತೆ : ಪರಮಪಾಲಕ ನೀನೆ ಗತ್ಯಂತರದ ವಿಹ್ವಲೆ ತಾನಲಾ . . . ಎಂದೊಡಲಿದಳು ತರಳಾಕ್ಷಿ (ಕುವ್ಯಾಸ. ೧೪-೧೨೫) ; ಕಡುದುಷ್ಟೆ ಕಲಹಾರ್ಥಿ ವಿರಸೆ ಪರವಶೆ ಪಾದರಿ ವಿಫಲೆ ವಿಹ್ವಲೆ ವಿಷಮೆ ವಿರಹಿ ವಿಪರೀತೆ . . . ಎನಿಪ ವನಿತೆಯರ ನಿಜಕೆ ನಿಲಿಸಿ ನಿಶ್ಚೈಸಿದೊಡೆ ಬಳಿಕ ಬಳಲಿಕೆ ಬಾರದೆ (ಜೈಮಿಭಾ. ೫-೬೧). **ವಿಹ್ವಳೆ** : ಋತುಸಮಯಮೆನಗಿದಸ್ಪೃಶ್ಯತೆಯ ಸಮನಿಸಲೆ ಹೇತುವಾದತ್ತಾದಂ ಸುತಹೇತುವಾದುದಿಲ್ಲೆಂದು ತನೂದರಿ ನೆನೆದು ನೆನೆದು ವಿಹ್ವಳೆಯಾದಳ್ (ಮಲ್ಲಿಪು. ೩-೧೧೯) ; ಅಳಲ್ದರ್ ಕಟಲ್ದರ್ ಪುರುಡಿಂ . . . ನೃಪಶುದ್ಧಾಂತಕಾಂತಾ ಜನಂಗಳ್ ಅಂತು ವಿಹ್ವಳೆಯರಾಗಿ (ಪುಷ್ಪಪು. ೧೩-೯೨ ವ).
[ಸಂ. ವಿಹ್ವಲಾ]

**ವಿಹ್ವಳ** 'ವಿಹ್ವಲ' ನೋ.

**ವಿಹ್ವಳತೆ** 'ವಿಹ್ವಲತೆ' ನೋ.

**ವಿಹ್ವಳಿತ** 'ವಿಹ್ವಲಿತ' ನೋ.

**ವಿಹ್ವಳೆ** 'ವಿಹ್ವಲೆ' ನೋ.

**ವಿಳಂಗ** (ನಾ). ಒಂದು ಕ್ರಿಮಿನಾಶಕವಾದ ಔಷಧೀಸಸ್ಯ ; ವಿಡಂಗ : ಬೃಹತೀತ(ಫ)ಳ ಕ್ಷಾರವಾರಿಯೊಳ್ ಪುದಿದುಕೊಂಡು ಧೂಪಿಸಿ ವಿಳಂಗದಿಂ . . . ಶುಭಲಗ್ನಮೊಂದಿ ಬರೆ ಕುಟಿಯೊಳ್ ಬಿತ್ತುವುದು (ಲೋಕೋಪ. ೬-೬).

**ವಿಳಂಗಾದಿ ಘೃತ** = ವಿಳಂಗ ಮೊದಲಾದ ಔಷಧದ್ರವ್ಯಗಳನ್ನು ಸೇರಿಸಿ ಮಾಡಿದ ಲೇಹ್ಯ : ವಿಳಂಗಾದಿ ಘೃತ – ವಾಯುವಿಳಂಗ, ಸುವರ್ಚಲವಣ . . . ಪ್ರಾತಃಕಾಲದಲ್ಲಿ ಸೇವಿಸೆ ಹಳೆಯ ಜ್ವರ, ಶ್ಲೇಷ್ಮಜ್ವರ, ಜೀರ್ಣಜ್ವರ ಸಹ ಮಾಣ್ಗುಂ (ಸಕವ್ಯ. ೧೨೫). [< ಸಂ. ವಿಡಂಗ]

**ವಿಳಂದ** (ನಾ). ಒಂದು ಸ್ಥಳದ ಹೆಸರು : ಪಲ್ಲವೇನ್ದ್ರನ್ನರಪತಿಮಜಯದ್ದೋ ವಿಳನ್ದಾಭಿಧಾನೇ ರಾಜಾ(:)ಶ್ರೀವಲ್ಲಭಾಕ್ಕಸ್ಸಮರಶತಜಯಾವಾಪ್ತ ಲಕ್ಷ್ಮೀವಿಲಾಸಃ (ಷ್ಮಆಂ. ೧೯೪೨, ೭೫-೨೮ ; 819). [?]

**ವಿಳಂಬ** 'ವಿಲಂಬ' ನೋ.

**ವಿಳಂಬಿ** 'ವಿಲಂಬಿ' ನೋ.

**ವಿಳಂಬಿಕ** (ನಾ). (ಅಜೀರ್ಣತೆಯಿಂದ ಉಂಟಾಗುವ) ಮಲಬದ್ಧತೆ : ಇದರಲ್ಲಿ ವಿಷೂಚಿಕವೆಂದು ಆಲಸಿಕವೆಂದು ಅಜೀರ್ಣಕವೆಂದು ವಿಳಂಬಿಕವೆಂದು ಸಶೇಷವೆಂದು ವಿಷೂಚಿಕಾರೋಗಮೈದು ತೆರನಾಗಿರ್ಪುದು (ಸಕವ್ಯ. ೩೫೭). [ಸಂ. ವಿಲಂಬಿಕಾ]

**ವಿಳಂಬಿತ** 'ವಿಲಂಬಿತ' ನೋ.

**ವಿಳಂಬಿಸು** 'ವಿಲಂಬಿಸು' ನೋ.

**ವಿಳಗಿ** (ನಾ). ತರಕಾರಿಯನ್ನು ಕತ್ತರಿಸುವ ಸಾಧನ ; ಮೆಟ್ಟುಗತ್ತಿ : ೬೪. ವಿಲಾಯಿತಿ ತರದ ಸರಪಳಿ, ೬೫. ವಿಳಗಿಗಳು (ಮುಂಬವ್ಯಾ. ೧೦೨). 'ಈಳಿಗೆ' ಪರಾ. [<— ಮರಾ. ವಿಳಾ, ವಿಳೀ]

**ವಿಳಯ** 'ವಿಲಯ' ನೋ.

**ವಿಳಯಕಾಲ** 'ವಿಲಯಕಾಲ' ನೋ.

**ವಿಳಯಕಾಳ** 'ವಿಲಯಕಾಲ' ನೋ.

**ವಿಳಯಜಲಧಿ** (ನಾ). ಪ್ರಳಯಕಾಲದ ಸಮುದ್ರ ; ಅಲ್ಲೋಲಕಲ್ಲೋಲವಾದ ಸಾಗರ : ರಣಪಟಹಪಟುನಿನದಮೊದವೆ ವಿಳಯಜಳಧಿಯಂತೆ ನೆಲೆಯಿಂ ತಳರ್ದ ರಾಜಕುಲಮಂ ಕಂಡು (ಪಂರಾಮಾ. ೩-೪೮ ವ). [ಸಂ. ವಿಲಯಜಲಧಿ]

**ವಿಳಯಜ್ವಾಲೆ** (ನಾ). ಪ್ರಳಯಕಾಲದ ಅಗ್ನಿ ; ಪ್ರಳಯಾಗ್ನಿ : ಕುರುಕುಲ ವಿಳಯಜ್ವಾಲೆ ಸುಯೋಧನಪ್ರಳಯಕಾಲೆ ಪಾಂಚಾಲಿಯ ವದನಮಂ ನೋಡಿ (ಗದಾಯು. ೧-೬೨ ವ). [ಸಂ. ವಿಲಯಜ್ವಾಲಾ]

**ವಿಳಯಾನಳ** 'ವಿಲಯಾನಲ' ನೋ.

**ವಿಳಯಾನಿಳ** 'ವಿಲಯಾನಿಳ' ನೋ.

**ವಿಳಸ** 'ವಿಲಸ' ನೋ.

**ವಿಳಸತ್ತು** 'ವಿಲಸತ್ತು' ನೋ.

**ವಿಳಸನ** 'ವಿಲಸನ' ನೋ.

**ವಿಳಸಿತ** 'ವಿಲಸಿತ' ನೋ.

**ವಿಳಾಪ** 'ವಿಲಾಪ' ನೋ.

**ವಿಳಾಪಿಸು** 'ವಿಲಾಪಿಸು' ನೋ.

**ವಿಳಾಸ$_1$** 'ವಿಲಾಸ$_1$' ನೋ.

**ವಿಳಾಸ$_2$** 'ವಿಲಾಸ$_2$' ನೋ.

**ವಿಳಾಸಂಗೆಡು** (ಕ್ರಿ). ಉತ್ಸಾಹಗುಂದು ; ಸಂತೋಷವಿಲ್ಲವಾಗು : ವಲ್ಲಭೆಯರ್ ಪೊಲ್ಲಗೆಯ್ದರಂತುಸಿರದೆ ಕುಳ್ಳಿರೆ ವಿಳಾಸಿನಿಯರ್ ವಿಳಾಸಂಗೆಟ್ಟರಂತೆ ಕುಂದೆ . . . ಪ್ರಭಾವತೀಮಹಾದೇವಿ ತನ್ನೊಳಿಂತೆಂದಳ್ (ಧರ್ಮಾಮೃ. ೪-೧೫೯).
[ವಿಳಾಸ$_1$ (= ವಿಲಾಸ$_1$) + ಕೆಡು$_1$]

**ವಿಳಾಸಕೇಳಿ** (ನಾ). ವಿನೋದದ ಆಟ ; ಸಂತೋಷದ ಕ್ರೀಡೆ : ಅಂತು ಸೊಗಯಿಸುವ ಚಕ್ರಧರ ಕುಸುಮಾಯುಧಂಗೆ ವಿಳಾಸಕೇಳೀಸಹಾಯಂ ಬರ್ಪಂತೆ (ಚಂದ್ರಪ್ರ. ೭-೩೬ ವ). [ಸಂ. ವಿಲಾಸಕೇಲಿ]

**ವಿಳಾಸತೆ** 'ವಿಲಾಸತೆ' ನೋ.

**ವಿಳಾಸದಾರ** (ನಾ). (ಕಾಗದದ ಮೇಲೆ ತನ್ನ) ವಿಳಾಸವುಳ್ಳವನು : ಕಾಗದವು ಕೈಗೆ ಬಂದ ಕೂಡಲೆ ನೆಕ್ಕುದೋವ್ ಆ ವಿಳಾಸದಾರರ ಅನ್ವೇಷಣೆಗಾಗಿ ಹೊರಟನು (ಪುನರು. ೩೩೫). [ವಿಳಾಸ$_2$ (= ವಿಲಾಸ$_2$) + - ದಾರ$_4$]

**ವಿಳಾಸಯಾನ** (ನಾ). ಬೆಡಗಿನ ನಡಗೆ ; ಒಯ್ಯಾರದ ನಡೆ : ಈಗಳಿದೆಮ್ಮ ಪಾಂಗು ಗೆಂಟನಿತಡೆಯಂ ತಗುಳ್ದು ಬರಲಾರ್ಪಿರೆ ನಿಮ್ಮ ವಿಳಾಸಯಾನದಿಂ (ಆದಿಪು. ೧೧-೧೩೪).
[ಸಂ. ವಿಲಾಸಯಾನ]

**ವಿಳಾಸವನ** (ನಾ). ಸಂತೋಷವಾಗಿ ವಿಹರಿಸುವ ಉದ್ಯಾನ ; ಕ್ರೀಡಾವನ : ವನದೇವತೆಗಳ್ ನಂದನವನಮಂ ಪುಗುವಂತೆ . . . ವನಜಾನನೆಯರ್ ವಿಳಾಸವನಮಂ ಪೊಕ್ಕರ್ (ಆದಿಪು. ೧೧-೬೯). [ಸಂ. ವಿಲಾಸವನ]

**ವಿಳಾಸಾವನಿ** (ನಾ). ವಿಲಾಸದ ಭೂಮಿ ; ವಿಹಾರದ ಪ್ರದೇಶ : ಮನಸಿಜಸಾಧಕನೆ ಯಗುಳ್ದು ನೆಗಪಿದ ಕುಳಿಯೆಂದನೆ ಸುಳಿನಾಭಿ ವಿಳಾಸಾವನಿ ವನಿತಾಮಣಿಯ ತೆಳ್ಪಸಿಜೊಳೆಸೆದಿರ್ಕುಂ (ರಾಜಶೇ. ೭-೩೩). [ಸಂ. ವಿಲಾಸಾವನಿ]

**ವಿಳಾಸಿ** 'ವಿಲಾಸಿ' ನೋ.

**ವಿಳಾಸಿನಿ** 'ವಿಲಾಸಿನಿ' ನೋ.

**ವಿಳಾಸಿನೀವಾಟ** (ನಾ). ಪಣ್ಯಾಂಗನೆಯರು ವಾಸಿಸುವ ಸ್ಥಳ ; ಸೂಳೆಗೇರಿ : ವಜ್ರಾಯುಧಂ ನಾಗರಕಾದಿಗಳ್ವೆರಸು ಪೆಜತೊಂದು ವಿಳಾಸಿನೀವಾಟದೊಳಗನೆ ಬರೆವರ (ಶಾಂತಿಪು. ೮-೯೯ ವ). [ಸಂ. ವಿಲಾಸಿನೀವಾಟ]

**ವಿಳಾಸೋಲ್ಲಾಸಿ** (ನಾ). ವಿನೋದಶೀಲ ; ಕ್ರೀಡಾಸಕ್ತ : ನಾನಾಮಂತ್ರದೂತ ಪ್ರಯಾಣಾಕ್ಷಯಸಮಯ ವಿಳಾಸೋಲ್ಲಾಸಿ ಸಂಗ್ರಾಮಿತಾಂಗಂ (ಕವಿರಾ. ೩-೨೧೩).
[ಸಂ. ವಿಲಾಸೋಲ್ಲಾಸಿನ್]

**ವಿಳಿಕ್ಕರ** (ನಾ). ಒಂದು ಮನೆತನದ ಹೆಸರು : ಶ್ರೀಮತ್ ವಿಳಿಕ್ಕರ ನಾಗಿಯಮ್ಮಗಾಮುಣ್ಡಂ ಚನ್ದ್ರಾದಿತ್ಯಕ[ಕ್ಕ]ಳುಳ್ಳಿನಂ ಶ್ರೀವಾಯಿ[ಲ]ನ್ನಿಜಿಸಿದಾನ್ (ಎಇ. XIII, ೧೮೩-೮ ; 869). [?]

**ವಿಳಿಖಿತ** 'ವಿಲಿಖಿತ' ನೋ.

**ವಿಳುಕಾಡು** 'ವಿಳ್ಕಾಡು' ನೋ.

**ವಿಳೇಪಿತ** 'ವಿಲೇಪಿತ' ನೋ.

**ವಿಳೋಕನ** 'ವಿಲೋಕನ' ನೋ.

**ವಿಳೋಚನ** 'ವಿಲೋಚನ' ನೋ.

**ವಿಲೋಳ** 'ವಿಲೋಲ' ನೋ.

**ವಿಳ್ಕಾಡು, ವಿಳುಕಾಡು** (ನಾ). ಭಾಗ; ಪಾಲು; ಹಿಸ್ಸೆ : ಹರಿವಾಣದ ಪ್ರಸಾದದ ಹರಿವಾಣಗಳವೊಳಗೆ ವಿಟ್ಟವನ ವಿಳ್ಕಾಡಿಗೆ ಹರಿವಾಣ ಆರೂವರೆ ಅಪ್ಪ ಪ್ರಸಾದ ಹದಿಮೂರೂ . . . ಶ್ರೀವಯಿಷ್ಣವರಿಗೆ ಯಿಕ್ಕುವ ಹಾಗೆ ಕಟ್ಟಳೆಯ ಮಾಡಿದೆವಾಗಿ (ಸೌಇ. IX-ii, ೪೬೨-೩ ; 1467). **ವಿಳುಕಾಡು** : ನಂಬಿಗಳಿಗೆ ಒಂದು ಹರಿವಾಣಊ ಸೂರ್‍ಯದಲೂ ಆರೋಗಣೆಯ ಮಾಡುವ ಪಡಿಕಟಳೆಯ ಆರೋಗಣೆಯ ಹರಿವಾಣದಲೂ ಕೊಟ್ಟು ಮಿಕ್ಕ ಹರಿವಾಣಗಳನೂ ತಿರುಮಲೆಯ ಸಂಧಿಯ ಅಡಪಿನ ವಿಳುಕಾಡಿನಲೂ ಹಂಚಿಕೊಂಬುದು (ಸೌಇ. IX-ii, ೪೬೨-೨ ; 1467). [ದೇ. ‖ ತಮಿ. ವಿಟಕ್ಕಾಟು]

**ವಿಳ್ಳಿ** 'ವೀಳೆಯ' ನೋ.

**ವಿಳ್ಳೇದೆಲೆ** 'ವೀಳೆಯ' ಪರಾ.

**ವೀಕಾಶ** (ನಾ). ೧. ಸ್ಪಷ್ಟವಾಗಿ ತೋರುವಿಕೆ, — ಕಾಣುವಿಕೆ. ೨. ಸ್ಪಷ್ಟವಾದುದು ; ಸ್ಫುಟವಾದುದು. ೩. ತೋರ್ಪಡಿಸಿಕೊಳ್ಳದಿರುವಿಕೆ ; ಏಕಾಂತತೆ ; ಒಂಟಿತನ. ೪. ಏಕಾಂತಸ್ಥಳ ; ಯಾರಿಗೂ ಕಾಣದಂತೆ ಇರುವ ಪ್ರದೇಶ : "ವೀಕಾಶಃ — ೧ ಏಕಾಂತಸ್ಥಳ, ಸ್ಫುಟವಾದ್ದು, ೨" (ಸಿದ್ಧಾಂತಿ. ೪೨೩). [ಸಂ.]

**ವೀಕ್ಷಕ** (ನಾ). ನೋಡುವವನು ; ವೀಕ್ಷಿಸುವವನು ; ಪ್ರೇಕ್ಷಕ : ಸಭಾಂಗಣದ ತುಂಬ ವೀಕ್ಷಕರು ಕಿಕ್ಕಿರಿದು ಸೇರಿದ್ದರು (ರೂಢಿ). [ಸಂ.]

**ವೀಕ್ಷಕವಿವರಣೆ** (ನಾ). ಯಾವುದೇ ಒಂದು ಕಾರ್ಯಕ್ರಮವು ನಡೆಯುವುದನ್ನು ನೋಡುತ್ತಿರುವಂತೆಯೇ ಅದರ ವಿವರಗಳನ್ನು (ನಿಸ್ತಂತುವಿನ ಮೂಲಕ)ಪ್ರಸಾರ ಮಾಡುವ ಜೊತೆಗೆ ನೀಡುವ ವಿವರಣೆ : ರೇಡಿಯೋದಲ್ಲಿ ಇಂದು ಕ್ರಿಕೆಟ್ ಆಟದ ವೀಕ್ಷಕವಿವರಣೆಯನ್ನು ಕೇಳಿದೆವು (ರೂಢಿ). [ಸಂ. ವೀಕ್ಷಕವಿವರಣ]

**ವೀಕ್ಷಣ** (ನಾ). ೧. ನೋಡುವಿಕೆ ; ದೃಷ್ಟಿಯನ್ನು ಚೆಲ್ಲುವಿಕೆ. ೨. ದೃಷ್ಟಿ ; ನೋಟ : ಘನದೈನ್ಯಂಬಡುವರ್ ಗುರುತ್ವಗೆಡುವರ್ ಗ್ರಾಸಕ್ಕೆ ಕುಗ್ರಾಮವಾಗನುಗೊಟ್ಟರ್ಪರು ವೀಕ್ಷಣಕ್ಕೆ ಮುನಿವರ್ ಮಾತಾಡಲುಂ ಬೀಗಿ ಬಿರ್ರನೆ ಬಾಗರ್ . . . ಮನುಜರ್ಗೆತ್ತಣ ನೀತಿಯೊ (ಸೋಮೇಶ. ೪೮) ; ತತ್ಸುರಕುಲಕೃಪಾವೀಕ್ಷಣದೆ ವಿಶ್ವತಶ್ಚಕ್ಷುವೆನಿಪ . . . ವಿಷ್ಣುಗುಪರಿಪದದಿಂ ವಿಶ್ವಪತಿಯೆನಿಪನಾವನಾತಂಗೆಱಗುವೆಂ (ಪದ್ಮರಾ. ೧-೨). ೩. ಗಮನವಿಟ್ಟು ನೋಡುವುದು ; ಅವಲೋಕನ ; ಪರಿಶೀಲನೆ ; ಸಮೀಕ್ಷೆ : ಪ್ರಕೃತಿಯಲ್ಲಿ ತಾನಾಗಿ ನಡೆಯುವ ಸಂಗತಿಯನ್ನು ಹೀಗೆ ಅನುಭವಮೂಲಕ ತಿಳಿಯುವುದಕ್ಕೆ ವೀಕ್ಷಣವೆಂದು (Observation)ಹೆಸರು ಕೊಡಬಹುದು (ಭೌತವಿ. ೮). ೪. ಕಣ್ಣು ; ನೇತ್ರ. [ಸಂ.]

**ವೀಕ್ಷಣೆ** (ನಾ). ೧. = ವೀಕ್ಷಣ ೧. ೨. = ವೀಕ್ಷಣ ೨ : ಹಣಬಲ ಸಾಕೇ ಸಾಲದೇ ಎಂಬ ಬಗ್ಗೆ ಮೊದಲ ೫ ವರ್ಷಗಳೊಳಗೆ ಒಂದು ವೀಕ್ಷಣೆ ನಡೆಸಿ, ಸೂಕ್ತಕ್ರಮಗಳನ್ನು ಕೈಗೊಳ್ಳಬೇಕೆಂದು . . . ಒಪ್ಪಂದದಲ್ಲಿ ಸೂಚಿಸಲಾಗಿದೆ (ಅಂತಸಂ. ೧೨೯). [ಸಂ. ವೀಕ್ಷಣ]

**ವೀಕ್ಷಿಸು** (ಕ್ರಿ). ೧. ನೋಡು ; ಅವಲೋಕಿಸು : ಓವ ತೋಱುವ . . . ತಾವು ತಮ್ಮಕ್ಕಿಗಳೆ ತಮ್ಮೊಳು ತಾವೆ ವೀ[ಪಾಠಾಂ. ಈ]ಕ್ಷಿಸುವ ಭಾವವಾಯ್ತುಭವಂಗೆ (ಬಸವು. ೧೮-೮೭) ; ಸತ್ಕೋಮಲಾಂಗಿಯ ಪೇರುರದಿ ಹೇಮಾಬ್ಜಮುಕುಳಸ್ತನ ಬಿಗಿವಡೆದಿರೆ ಭ್ರಾಮಕಗೊಂಡು ವೀಕ್ಷಿಸಿದ (ಮೋಹತ. ೧೭-೫೭) ; ಜಲಧಿತೀರದಿ ನಿಂತು ವೀಕ್ಷಿಸಿಕ್ಕೆಲಗಳಲಿ ಚಲವೊಂದಚಲವೊಂದು ಸಮವದಸಮವಿದು ಕಲೆತಿರ್ಪುವಂತು ಮೇಯಾಮೇಯಗಳು ಜಗದಿ ಮಿಲಿತತೆಯನೇ ರುಚಿಯೊ (ಮಂಕುತಿ. ೯೯). ೨. ಗಮನಿಸು ; ಪರಿಶೀಲಿಸು : ಅಜಯ . . . ಕಾಂಗ್ರೆಸ್‌ಅಧಿವೇಶನದ ಕಾರ್ಯಗಳನ್ನು ವೀಕ್ಷಿಸಿ, ನಾಯಕರ ದರ್ಶನ ಪಡೆದು, ತನ್ನ ಹೃದಯದಲ್ಲಿ ದೇಶಪ್ರೇಮ ತುಂಬಿಕೊಳ್ಳುತ್ತಿದ್ದ (ಆತ್ಮಾರ್ಪ. ೧೩೨). ೩. ಎದುರು ನೋಡು ; ನಿರೀಕ್ಷಿಸು ; ಕಾಯು : ಅಸಿತಪಯೋಜನೇತ್ರೆಯರತಿಪ್ರಿಯ ಕಾಂತೆಯರಾಸೆವಟ್ಟು ವೀಕ್ಷಿಸುವರಧೀಶ್ವರಾಗಮನಕಾಲಮನಿರ್ದು ದಿಗಂತರಂಗಳೊಳ್ (ಶಾಂತಿಪು. ೨-೪೮) ; ಅಲ್ಲಿನ ಪ್ರಯೋಗ ಫಲಿತಾಂಶಗಳನ್ನು ಕುತೂಹಲದಿಂದ ವೀಕ್ಷಿಸುತ್ತಿದ್ದೆ (ಶಿಕ್ಷದ. ೧೯೦). [ವೀಕ್ಷಣ + -ಇಸು]

**ವೀಕ್ಷೆ** (ನಾ). ೧. ನೋಡುವಿಕೆ ; ಅವಲೋಕಿಸುವಿಕೆ : ಪರಿಪೂರ್ಣ ಸುಖವನೆಳಸುವನು ತನ್ನೊಳಗಡೆಗೆ ತಿರುಗಿಸಲಿ ತನ್ನ ದೃಷ್ಟಿಯನು ನಿರ್ಮಲದಿಂ ನಿರತಿಶಯ ಸುಖವಲ್ಲಿ, ವಿಶ್ವಾತ್ಮವೀಕ್ಷೆಯಲಿ ಪರಸತ್ತ್ವಶಾಂತಿಯಲಿ (ಮಂಕುತಿ. ೮೮೭). ೨. ನೋಟ ; ದೃಶ್ಯ. [ಸಂ. ವೀಕ್ಷಾ]

**ವೀಚಿ** (ನಾ). (ನೀರಿನ) ಸಣ್ಣ ಅಲೆ ; ತೆರೆ ; ತರಂಗ : "ಭಂಗಂ ಲಹರಿಕೆ ವೀಚಿ ತರಂಗಂ ಲಳಿಯೆಂಬಿವೂರ್ಮಿಪರ್ಯಾಯಂಗಳ್" (ವಸ್ತುಕೋ. ೨೨-೩) ; ಸ್ಥಗಿತಮಮಿತ ನಾನಾಶಬ್ದವೀಚಿಪ್ರ[ಪಂ]ಚಂ ನಿಗದಿತಗುಣರತ್ನೈಕಶಾಕ[ರಂ] ಸಾಗರಂಬೋಲ್ ಸೊಗಯಿಸಿ ಧರಣೀ [ಚಕ್ರಾಂಬ]ರಾಕ್ರಾಂತಮಕ್ಕುಂ (ಕವಿರಾ. ೩-೨೧೭) ; ನೀಲಿಯ ಮಳಲೊಟ್ಟಿದ ವೊಲು ಮುಗಿಲಿಗೆ ಮೊಗ ಚಾಚಿ ಶಿಖರಂಗಳು ಸ್ಪರ್ಧಿಸುತ್ತಿವೆ ವೀಚಿಯ ಮೇಲೆ ವೀಚಿ (ಪಕ್ಷಿಕಾ. ೮೦-೧೬). [ಸಂ.]

**ವೀಚೀಚಯ** (ನಾ). ಅಲೆಗಳ ಸಮೂಹ ; ತರಂಗಮಾಲೆ : ಭವ್ಯಶ್ರೇಣಿಗವ್ಯಾಜದಿಂದಜೆಯಲ್ ನಾಲ್ಕನುಯೋಗಮಾದುದದಱೊಳ್ ಪೂರ್ವಾನುಯೋಗಾಬ್ಧಿಯಿಂ ಪೊಱಪೊಣ್ಮುತ್ತದು ವೇಳೆಯಂತೆ ಕಥೆ ಲಂಬೋದ್ಧಾಮವೀಚೀಚಯಂ (ಆದಿಪು. ೧-೩೯). [ಸಂ.]

**ವೀಚೀಮಾಲೆ** (ನಾ). = ವೀಚೀಚಯ : ಆಚಾರಂ ಗುಣಮಾಲೆ ತಮ್ಮೊಳಮ್ಮ ತಾಂಭೋರಾಶಿ ರತ್ನಂಗಳಿಂ ವೀಚೀಮಾಲೆಯನಪ್ಪುಕೆಯ್ಯ ತೆಱದಿಂ ಚೆಲ್ವಪ್ಪಿನಂ ಶಿಷ್ಯಶಿಕ್ಷಾಚಾತುರ್ಯಮನಪ್ಪುಕೆಯ್ಯು (ಮಲ್ಲಿಪು. ೧-೩). [ಸಂ. ವೀಚೀಮಾಲಾ]

**ವೀಚು**$_1$ (ಕ್ರಿ). ಇಲ್ಲವಾಗು ; ನಾಶವಾಗು ; ಹಾಳಾಗು : ಶಿವನ ಶರ ನಿನಗಾಯ್ತು ನಿರ್ಜರನಿವಹವಿದೆ ನಾಕದಲಿ ಬಲುದಾನವರ ವಿಲಗದಿ ವೀಚಿಹೋ[ಪಾಠಾಂ. ಬೆಚ್ಚುವೋ]ದುದು ಸಗ್ಗಸೌಖ್ಯಫಲ (ಕುವ್ಯಾಅ. ೧೨-೩). [?]

**ವೀಚು**$_2$ (ನಾ). ಇಲ್ಲದಂತಾಗುವಿಕೆ ; ನಾಶಹೊಂದುವುದು : 'ವೀಚುಗೆಡು' ಪರಾ. [< ವೀಚು$_1$]

**ವೀಚುಗೆಡು** (ಕ್ರಿ). ಇಲ್ಲವಾಗು ; ನಾಶವಾಗು : ಪ್ರಕಟಮಾಯಾಗುಪ್ತ ಪರಮಾತ್ಮಕಮಹಾನಿಧಿ ಸಭೆಯೊಳಿರುತಿರೆ ವಿಕಳಮತಿಗಳು ವೀಚು[ಪಾಠಾಂ. ತಱಿಚು]ಗೆಡುವರು ಶಿವಶಿವಾಯೆಂದ (ಕುವ್ಯಾಸ. ೯-೩೪). [ವೀಚು$_2$ + ಕೆಡು$_1$]

**ವೀಚುವೋಗು** (ಕ್ರಿ). = ವೀಚುಗೆಡು : ನೆನಹು ನೆಮ್ಮಿತು ಶಿವನನಿತರದ ನನೆಕೊನೆಯ ತೆರಳಿಕೆಯ ತೊಡಚೆಯ ಮನದ ಸಂಚಲ ವೀಚುವೋದುದು ಕಲಿ ಧನಂಜಯನ (ಕುವ್ಯಾಅ. ೪-೪೨). [ವೀಚು$_2$ + ಪೋಗು$_1$ (< ಪೋ$_1$)]

**ವೀಜನ** (ನಾ). ೧. ಗಾಳಿಯನ್ನು ಬೀಸುವಿಕೆ ; ಗಾಳಿಯನ್ನು ಹಾಕುವಿಕೆ. ೨. ಗಾಳಿಯನ್ನು ಬೀಸುವ ಸಾಧನ ; ಬೀಸಣಿಗೆ ; ಆಲವಟ್ಟ : ವನಕೇಳೀಗಮನಕ್ಕೆ ದೀಪಕಲಿಕಾದೀಪ್ತಿಪ್ರತಾನಕ್ಕೆ ವೀಜನವಾತಕ್ಕೆ ಬಟಲ್ವ ಸೀತೆ ಗಮನಾಯಾಸಕ್ಕೆ . . . ಬೇವಸಂಬಟ್ಟಳಿಲ್ಲಿನಿಯಂ ತನ್ನೊಡನುಯ್ದಪಂ ರಘುಜನೆಂಬೀ ರಾಗದುದ್ರೇಕದಿಂ (ಪಂರಾಮಾ. ೭-೨೬) ; ಚಾರುವೀಜನಚಾಮರಂ ಕುಡಿನೀರ ಸಗ್ಗಳೆ ಹಡಪ . . . ವಸ್ತ್ರಾಭರಣ ಲೇಪನದ ಧಾರಣದಿ ಕಂಗೆಸೆಯುತಿಹ ಪರಿಚಾರಕರು (ಶಂಕದಾ. ೧೧-೪). [ಸಂ.]

**ವೀಟಿ** (ನಾ). ೧. ವೀಳೆಯದ ಬಳ್ಳಿ ಮತ್ತು ಅದರ ಎಲೆ ; ನಾಗವಲ್ಲಿ. ೨. ವೀಳೆಯದೆಲೆಯೊಂದಿಗೆ ಅಡಕೆ, ಸುಣ್ಣ ಮುಂತಾದುವನ್ನು ಹಾಕಿ ಸಿದ್ಧಪಡಿಸಿದ ತಾಂಬೂಲ ; ವೀಳೆಯ : ಕುಗ್ಗಲಿಗಳೆನಿಪ ಸದ್‌ಭಕ್ತರಾ ಲಿಂಗಕ್ಕೆ ಓಗ್ಗಿ ಹೊರೆಯೇಱೆ ನೈವೇದ್ಯಮಂ ಮಾಡಿ ಬಳಿಕಗ್ಗಳದ ವೀಟಿಯಂ ಲಿಂಗದೇವಂಗೀವ ಪರಿಯ ಕೇಳೆಂದನಾರ್ಯಂ (ಗುರುಚಾ. ೬-೬೬) ; ಶಿವಗೆ ಕರ್ಪೂರವೀಳೆಯವ ಕೊಡುವ ನೇಮಮಂ ತವೆ ತನಗೆಯಿರಲೊಮ್ಮೆ ದೊರೆಯದಿರಲಸುಗಳೆದ ಶಿವಭಕ್ತ ರೇಚಯ್ಯಗಳ ಪಾದಮಂ ನೆನೆವುತೀಕಗಿತ್ತರು ವೀಟಿಯ (ರಾಘಚ. ೨-೧೩).

**ವೀಟಿತಾಂಬೂಲ** = ವೀಳೆಯದೆಲೆ, ಅಡಕೆ, ಸುಣ್ಣಗಳನ್ನು ಹಾಕಿ ಸಿದ್ಧಪಡಿಸಿದ ತಾಂಬೂಲ : ವೀಟಿತಾಂಬೂಲ ಸವುದವರೇ (ಕಜಕಾ. ೨೭೭). [ಸಂ.]

**ವೀಟಿಕೆ** (ನಾ). ೧. = ವೀಟಿ ೧ : ಸ್ಫಟಿಕಂ ಪೇಟಿಕೆ ವೀಟಿಕೆ ಘುಟಿಕೆ ವರಾಟಂ ಪೊದಟ್ಟ ರಘಟೆ ಕುಳಂ ತಾಂ ಸ್ಫುಟಸಹಿತಂ (ಶಮದ. ೨೨). ೨. = ವೀಟಿ ೨ : ಧನಕನಕ ದೇವಾಂಬರಾದಿ ಮುಕ್ತಾಭರಣ ಕರ್ಪೂರವೀಟಕಾದಿಗಳನಿತ್ತು ಓವಿ ಸಿಂಹಳಮುಖ್ಯರಂ

ತಮ್ಮ ತಮ್ಮ ದೇಶಾವಳಿಗೆ ಬೀಳ್ಕೊಡಲು (ಭಾವಚಿಂ. ೫-೩೧) ; ಭೂತಳೇಶ್ವರ ಬಾಣಲಿಂಗಾರ್ಚನೆಯ ತೀರ್ಚಿ ವೋತು ಭೋಜನಗೈದು ವೀಟಿಕೆಯನೊಲಿದುಯಾ ಶ್ವೇತಾಂಬುಜಾಯತೇಕ್ಷಣೆಯು ಭದ್ರಾವತೀ ಮಡಿಮಡಿಸಿ ಯಾವುತಿರಲು . . . ಸವಿಲಾಸದಿಂ ತಾಂಬೂಲ ಸವಿವುತಿರೆ (ನವಮೋ. ೨೨-೫೭). [ಸಂ. ವೀಟಿಕಾ]

**ವೀಟಿಕೆಯಿಾ** (ಕ್ರಿ). ವೀಳೆಯವನ್ನು ಕೊಡು ; ತಾಂಬೂಲವನ್ನು ನೀಡು : ಮೊಲ್ಲೆ ಮಲ್ಲಿಗೆ ಜಾಜಿ ಹಾರಂಗಳಮರ್ಚುತ್ತೆ ಸಲ್ಲೀಲೆಯಿಂದ ತಾಂ ತರುಬಿ ವೀಟಿಕೆಯಿತ್ತು ಪುಲ್ಲಂಬನಾಹವಕೆಯನುವಾದಳು (ಚೋರಬ. ೨-೨೦). [ವೀಟಿಕೆ + ಈ$_2$]

**ವೀಟೋ** (ನಾ). (ಶಾಸನಸಭೆಯು ಮಾಡಿದ ನಿರ್ಣಯವನ್ನು ಅಥವಾ ಶಾಸನವನ್ನು) ನಿರಾಕರಿಸುವ ಅಧಿಕಾರ ; ನಿರಾಕರಣೆಯ ಅಧಿಕಾರ : "ನಿಷೇಧ ; ನಿರೋಧ ; ವೀಟೋ. (ಪಾರಿ) ನಿಷೇಧಾಧಿಕಾರ" (Veto. ಪತ್ರಿಸಿ. ೮೭).

[← ಇಂ. Veto]

**ವೀಡು** 'ಬೀಡು$_2$' ನೋ.

**ವೀಣಾರ್ಕರ್ಕಟಿ** (ನಾ). ಒಂದು ಬಗೆಯ ಸಸ್ಯ : "ಕುಲಕರ್ಕಟೀ — ವೀಣಾರ್ಕರ್ಕಟಿ" (ಔಷಧಿ. ೩೭). [ಸಂ.]

**ವೀಣಾಕ್ವಣ** (ನಾ). ವೀಣೆಯ ಧ್ವನಿ, — ನಾದ : ಆಲಿಸದೊ! ಪೊಣ್ಮುತಿಹುದಲ್ಲಿ ವೀಣಾಕ್ವಣಂ (ಅಗ್ನಿಹಂ. ೫೯). [ಸಂ.]

**ವೀಣಾಗಾನ** (ನಾ). ವೀಣೆಯಲ್ಲಿ ನುಡಿಸುವ ಸಂಗೀತ : ಮನವ ದೇಹವನಲೆವ ಚಿಮ್ಮುಗೆಗಳೊಂದಾಗಿ ಘನಸಹಜದಂಗನೆಯ ಕೆರಳಿಸಿದುವು : — ಸವಿಯ ವೀಣಾಗಾನ, ಕನಿಕರದ ಪ್ರೇಮಕಥೆ, ಕವಿದ ಕಂಪಿನ ಸಿರಿಯ ಹೊಳೆವ ಸಂಜೆ (ಇಂಗೀತ. ೪೭-೨೩); ಇವರ ವೀಣಾಗಾನಪಾಂಡಿತ್ಯಕ್ಕೆ ಮೆಚ್ಚಿ . . . ನಾಲ್ವಡಿ ಕೃಷ್ಣರಾಜಒಡೆಯರು ಸುಬ್ಬಣ್ಣನವರಿಗೆ 'ವೈಣಿಕಪ್ರವೀಣ' ಎಂಬ ಪ್ರಶಸ್ತಿ ದಯಪಾಲಿಸಿದರು (ಸಂಗೀಚಂ. ೨೭೩). [ಸಂ.]

**ವೀಣಾದಂಡ** (ನಾ). ವೀಣೆಯ ಸೋರೆಬುರುಡೆಯ ಮೇಲೆ ಉದ್ದಕ್ಕೆ ಇರುವ ದಂಡ ; ವೀಣೆಯ ದಂಡಿಗೆ : ತೋಡಿರಾಗವನ್ನು ಸರಿಯಾಗಿ ಆಲಾಪನೆ ಮಾಡಲಿಲ್ಲವೆಂದು ನಾನಾಕೆಯನ್ನು ತಿದ್ದಲು ಅವಳು ಕೋಪಿಸಿಕೊಂಡು ನನ್ನನ್ನು ವೀಣಾದಂಡದಿಂದಲೇ ಪ್ರಹರಿಸಿದಳು (ಕವಿಕ. ೪೭). [ಸಂ.]

**ವೀಣಾಧ್ವನಿ** (ನಾ). = ವೀಣಾಕ್ವಣ : "ಕ್ವಣಿತಂ ವೀಣಾಧ್ವನಿ ಭೂಷಣರಣಿತಂ" (ವಸ್ತುಕೋ. ೮೧-೩೭). [ಸಂ.]

**ವೀಣಾನಾದ** (ನಾ). = ವೀಣಾಕ್ವಣ : ವೀಣಾಧರಶಿವನ ಮುಖ ತುಸು ಬಾಗಿದ್ದು ವೀಣಾನಾದಕ್ಕೆ ಸರಿಯಾಗಿ ತಲೆದೂಗುವಂತಿದೆ (ಸೊಳಂಬ. ೯೭). [ಸಂ.]

**ವೀಣಾನುಗಂತ** (ನಾ). [ಸಂಗೀತ] ಒಂದು ಬಗೆಯ ತಂತೀವಾದ್ಯ : ದುಕ್ಕಡಿ ಗೀತಾನುಗಂತ ಶ್ರುತಾನುಗಂತ ಉಭಯಾನುಗಂತ ವೀಣಾನುಗಂತಮೆಂಬೈದು ತೆಱನಾಗಿ ಹುದು (ವಿವೇಕ. ೧೯೧). 'ಗೀತಾನುಗಂತ' ಪರಾ. [< ಸಂ. ವೀಣಾನುಗಂತೃ]

**ವೀಣಾಪಾಣಿ** (ನಾ). ೧. ವೀಣೆಯನ್ನು ಕೈಯಲ್ಲಿ ಹಿಡಿದಿರುವ ವ್ಯಕ್ತಿ : ಆ ಮಂಟಪದ ಮಧ್ಯದಲ್ಲಿ ಓರ್ವ ಸುಂದರಿ ವೀಣಾಪಾಣಿಯಾಗಿದ್ದಾಳೆ (ಕುಂಕುಮ. ೪೧). ೨. ಸರಸ್ವತಿ : ಭುವನಮೋಹನ ಮಧುರದಿವ್ಯ ವೀಣಾಪಾಣಿ, ವಾಗ್ದೇವಿ (ಚಿತ್ರಾಂಗ. ೧-೪). [ಸಂ.]

**ವೀಣಾವಾದಕ** (ನಾ). ವೀಣೆಯನ್ನು ನುಡಿಸುವವನು : ಇತಿಹಾಸ ಪುರಾಣಗಳು . . . ನಾರದಮಹರ್ಷಿ 'ಮಹತೀ' ವೀಣಾವಾದಕನೆಂದೂ ತಿಳಿಸುತ್ತವೆ (ಸಂಗೀಚಂ. ೧೧೮).

[ಸಂ.]

**ವೀಣಾವಾದನ** (ನಾ). ವೀಣೆಯನ್ನು ನುಡಿಸುವಿಕೆ : ಶೇಷಣ್ಣನವರು ತಮ್ಮದೇ ಆದ ವೀಣಾವಾದನ ಶೈಲಿ ನಿರ್ಮಿಸಿಕೊಂಡರು (ಸಂಗೀಚಂ. ೨೭೮). [ಸಂ.]

**ವೀಣಾವಾದ್ಯ** (ನಾ). ಒಂದು ಬಗೆಯ ತಂತೀವಾದ್ಯ ; ವೀಣೆ : ವೀಣಾವಾದ್ಯದ ಬಲ್ಮೆ ಬಲ್ಮೆಯಳವಂ ಗೆಲ್ವೊಪ್ಪೆ . . . [ಸೋಲ್ವಂತಮಾ ವೀಣಾಳಾಪಿನಿ] ಮಾಣ್ಬುದಾವು ದೆನಗೀ ಜನ್ಮಾಂತರಕ್ಕೆಂತುಟುಂ ಪ್ರಾಣಾಧೀಶ್ವರನೀತನೆಂದು ಕೊರಲೊಳ್ ತಂದಿಕ್ಕಿದಳ್ ಮಾಲೆಯಂ (ಬಂಹರ. ೫-೩) ; ಈಗಿರುವ ಸರ್ವರಾಗ ಮೇಳ ವೀಣಾವಾದ್ಯದ ರಚನಾ ಶಿಲ್ಪಿಯೂ ವೆಂಕಟಮಖಿ (ಸಂಗೀಚಂ. ೩೨೫). [ಸಂ.]

**ವೀಣಾಸೂತ್ರವಿಧಿ** (ನಾ). ವೀಣೆಯ ತಂತಿಗೆ ಒದಗುವ ಸ್ಥಿತಿ, — ಪಾಡು (?) : ಶ್ರೋತ್ರಸುಖವನು ಕೇಳಿ ನಿಲ್ಲದೆ ನೇತ್ರಸುಖವನು ಕಂಡು ಬಳಿಕಲಿ ಪಾತ್ರದಿಂ ಸ್ಪರುಶನವ ಮಾಡುವೆನೆಂದು ತವಕಿಸುತ ಮೂತ್ರನಾಳಕೆ ಮುಂದುಗೆಟ್ಟಣು ಮಾತ್ರ ಬಂದುವ ಕೆಡಹಿ ವೀಣಾಸೂತ್ರವಿಧಿಯಂತಾಗಬೇಡೆಂದೊರೆದ ದೇಶಿಕನು (ಸದ್ಗುರು. ೨-೧೭). [ಸಂ.]

**ವೀಣೆ$_1$** (ನಾ). ೧. ಕರಡಿಗೆ ; ಭರಣಿ : ಪನ್ನೀರ ಕುಪ್ಪಿಗೆ ಕರ್ಪೂರದಂಡೆ ಪೂವಿನ ಪೊಟ್ಟಣ ಮೃಗಮದದ ತನಿಗಂಪಿನ ವೀಣೆ ಸಾದಿನ ಭರಣಿಗಳನಲ ಕೊಂಡಕೆ ಹಾಕಿದರು (ಕುರಾಸಾಂ. ೩೭-೧೫೩). ೨. ಸುಗಂಧದ್ರವ್ಯ (?) : ಕತ್ತುರಿಯ ವೀಣೆ ಬಾವನ್ನ ಕುಂಕುಮವನೊಡಗಲಿಸಿಯನುಲೇಪಲಲಾಮಂಗಳ ಜಾಣಂದೊಡರ್ಚಿ (ರೇವಣ.೬-೧೪).

[ದೇ. ‖ ತೆಲು. ವೀಣೆಯ, ವೀಣೆ, ವೀಣೆಯ = ಕಸ್ತೂರಿಮೃಗದ, ಹೊಟ್ಟೆಯ ಚರ್ಮ ದೊಳಗೆ ಇರುವ ಕಸ್ತೂರಿಯನ್ನು ಒಸರುವ ಗ್ರಂಥಿ]

**ವೀಣೆ$_2$** (ನಾ). (ಸಾಮಾನ್ಯವಾಗಿ, ಏಳು ತಂತಿಗಳು ಮತ್ತು ಮೆಟ್ಟಿಲುಗಳನ್ನು ಹೊಂದಿದ್ದು, ಬಲಗೈ ಬೆರಳುಗಳಿಂದ ಮೀಟಿ, ಎಡಗೈ ಬೆರಳುಗಳಿಂದ ನುಡಿಸುವ) ಒಂದು ಬಗೆಯ ತಂತೀವಾದ್ಯ : ಪೋಲಿಸುವೊಡೆ ಪೋಲಿಸಲ್ಕೆ ದೊರೆ ವೀಣೆಯನಾ ಸುರತಪ್ರವೀಣೆಯಂ (ಆದಿಪು. ೨-೭೭) ; ವೀಣೆಯೊಳಗಿವಳಮಮ ಪ್ರತಿವಾಣಿ ಸುಂದರದೇಳ್ಗೆಗಂಬುಜಬಾಣನರಸಿಯುಮಿವಳಿ ವರನಹ ನೃಪನದಾರೆನುತ ಜಾಣಸಚಿವನ ಮುಖವ ನೋಡಲು (ನಾಗಪ. ೧೨-೧೦) ; ನಾನೇ ವೀಣೆ, ನೀನೆ ತಂತಿ, ಅವನೆ ವೈಣಿಕ (ಪ್ರೇಮಕಾ. ೩೦-೧) ; ಏಳು ವೀಣೆಯೆ, ಏಳು! ಹೇಳು ಮುಂದಿನ ಕಥೆಯ (ಚಿತ್ರಾಂಗ. ೨-೯).

**ವೀಣೆ ನುಡಿಸು** = ವೀಣೆಯನ್ನು ಬಾರಿಸು; ವೀಣಾವಾದನ ಮಾಡು : ಶೇಷಣ್ಣನವರಿಗೆ ಬಾಲ್ಯದಿಂದಲೂ ವೀಣೆ ನುಡಿಸುವುದರಲ್ಲಿ ಅಸಾಧಾರಣ ಕೈಚಳಕ (ಸಂಗೀಚಂ. ೨೭೮). **ವೀಣೆ ಬಾರಿಸು** = ವೀಣೆನುಡಿಸು : ವೀಣೆ ಬಾರಿಸುವುದರಲ್ಲಿ ಅವಳದು ಎತ್ತಿದ ಕೈ (ರೂಢಿ). **ವೀಣೆಯ ಹೆರಳು** = ವೀಣೆಯ ಬುರುಡೆ : "ಕಕುಭಃ, ಪ್ರಸೇವಕಃ — ೨ ವೀಣೆಯ ಹೆರಳಿನ ಹೆಸರುಗಳು" (ಸಿದ್ಧಾಂತಿ. ೫೯). **ವೀಣೆಯೆಳೆ** = ವೀಣೆಯ ತಂತಿ : ವೀಣೆಯೆಳೆ ಹರಿಯುತ್ತಲೇ ಮಾಣುವುವು ನೆನಪಿಂದ ಗಾನದುಲುಹು (ಇಂಗೀತ. ೫೮-೫). [ಸಂ. ವೀಣಾ]

**ವೀಣೆಗಾರ್ತಿ** (ನಾ). ವೀಣೆಯನ್ನು ನುಡಿಸುವವಳು ; ವೀಣಾವಾದಕಿ : ತರಳಾಕ್ಷಿ ತನ್ನೊಳು ಪಾಡುವರಿಲ್ಲೆಂದು ಕೊರಲೊಳಿಟ್ಟಳು ಕಂಠಸರವ ಪೆಱಳೊರ್ವ ವೀಣೆಗಾರ್ತಿಯರಿಲ್ಲೆನುತವೆ ಬೆರಲೊಳಿಟ್ಟಳು ಮುದ್ರಿಕೆಯ (ಮೋಹತ. ೧೮-೪೩).

[ವೀಣೆಗಾಱ + -ತಿ$_1$ (< ಇತ್ತಿ)]

**ವೀಣೆಗಾಱ** (ನಾ). ವೀಣೆಯನ್ನು ನುಡಿಸುವವನು ; ವೈಣಿಕ : 'ವೀಣೆಗಾರ್ತಿ' ಪರಾ. [ವೀಣೆ$_2$ + - ಕಾಱ]

**ವೀಣೆಯ** (ನಾ). ಮರಗಳ ಸಮೂಹ ; ತೋಪು (?) : ಇಂತತಿಮನೋಹರಮಾದ ವಸಂತಸಮಯದೊಳ್ ಪುದಿಯೆ ಕವಿಲ್ತ ಕೇಸರದ ದೂಸಮಶೋಕೆಯ ವೀಣೆಯಂ ಪ್ರಿಯಾಳದ ಗುಡಿ ನಾಗಪಂಚಕದ ಚಂಪೆಯಮಾಮ್ರದ ಕೊಂಚೆಯುಂ ತಮಾಳದ ಪರಿವೆತ್ತ ಚೋಳಪರಿ ತಳ್ತದಿರ್ಮುತ್ತೆಯ ಕುಪ್ಪವೊಪ್ಪಿ ತೋಱಿದುವು ಮನೋಜರಾಜ ಶಿಬಿರಂಗಳೆಂಬಿನೆಗಂ ವನಾಳಿಗಳ್ (ಚಂದ್ರಪ್ರ. ೬-೭೨). [?]

**ವೀತ** (ಗು). ೧. ಹೊರಟ ; ಹೋದ ; ಕಾಣೆಯಾದ. ೨. ಬಿಟ್ಟುಹೋದ ; ಬೇರೆಯಾದ. ೩. ಬಿಟ್ಟುಬಿಟ್ಟ ; ಬಿಡುಗಡೆ ಮಾಡಿದ ; ಮುಕ್ತಗೊಳಿಸಿದ. ೪. ಬಿಡುಗಡೆ ಹೊಂದಿದ ; ವಿಮುಕ್ತಗೊಂಡ. ೫. ಹತ್ತಿರಕ್ಕೆ ಹೋದ ; ಸಮೀಪಿಸಿದ. ೬. ಅಂಗೀಕೃತವಾದ ; ಒಪ್ಪಿತವಾದ ; ಸ್ವೀಕೃತವಾದ. ೭. ಬಯಸಿದ ; ಅಪೇಕ್ಷಿಸಿದ. ೮. ಸಾಧುವಾದ ; ಸೌಮ್ಯವಾದ. ೯. (ವಸ್ತುವನ್ನು) ಧರಿಸಿದ ; ತೊಟ್ಟ. (ನಾ). ೧೦. ಯುದ್ಧಕ್ಕೆ ಯೋಗ್ಯವಲ್ಲದ ಅಥವಾ ತರಬೇತಿ ಪಡೆಯದ ಆನೆ ಅಥವಾ ಕುದುರೆ : "ವೀತಂ — ಅಸಾರಂ — ಹಸ್ತ್ಯಶ್ವಂ ಬಲವಿಲ್ಲದೆ ಬೆಂಡಾದ ಆನೆಗೂ ಕುದುರೆಗೂ ಹೆಸರುಗಳು" (ಸಿದ್ಧಾಂತಿ. ೧೪೯). ೧೧. ಕಾಲಿಗೆ ಅಳವಡಿಸಿಕೊಂಡ ಚುಚ್ಚುವ

ಸಾಧನ ಅಥವಾ ಮೊನೆಗೋಲು, ಅಂಕುಶ ಮೊದಲಾದುವುಗಳಿಂದ ಆನೆಯನ್ನು ತಿವಿದು ಓಡಿಸುವಿಕೆ, — ನಡೆಸುವಿಕೆ, — ಚೋದಿಸುವಿಕೆ : "ಯತವಂಘ್ರಿಕರ್ಮವಂಕುಶಗತ(ಚಾ)ವಾರಣ ಯಾತವೆಂಬುದದು ವೀತಂ ತದ್ವ್ವಿತಯಕ್ಕಂ ಪೆಸರಕ್ಕುಂ" (ವಸ್ತುಕೋ. ೮೮-೩೭). [ಸಂ.]

**ವೀತಂಸ** (ನಾ). ಪ್ರಾಣಿ ಅಥವಾ ಪಕ್ಷಿಗಳನ್ನು ಬಂಧಿಸಲು ಬಳಸುವ ಬೋನು, ಪಂಜರ, ಬಲೆ,ಸರಪಳಿ ಮುಂತಾದ ಸಾಧನ. [ಸಂ.]

**ವೀತಕೇತಕ** (ನಾ). ಕೇದಗೆಯನ್ನು ಬಿಟ್ಟಿರುವುದು : ಮತ್ತಮದು ಸಮುಚಿತ ನೀಲಕಂಠವಿಳಾಸಮಾಗಿಯುಂ ವೀತಕೇತಕಮಲ್ತು (ಚಂದ್ರಪ್ರ. ೪-೪೨ ವ). [ಸಂ.]

**ವೀತಭಯ** (ನಾ). ೧. ನಿರ್ಭಯತೆ ; ನಿರ್ಭೀತಿ : ಖ್ಯಾತವಾದಾ ಹ್ರದನ ತಟದಲಿ ವೀತಭಯದಲಿ ಪದ್ಮನಾಭಸಮೇತನೊಬ್ಬನು ಪನ್ನಗೋತ್ತಮನಿಹನು (ತಿಮ್ಮಶಾಂ. ೧೦- ೩೮). ೨. ಭಯವನ್ನು ಬಿಟ್ಟವನು ; ನಿರ್ಭೀತನಾದವನು : ವೀತಭಯನಭಿಮನ್ಯುವೆನೆ ರಿಪುಜಾತ ನಡುಗಿತು ಲೋಕ ಮೂಜಗದೊಳೀತನುದಯದ ಕೀರ್ತಿ ಪಸರಿಸಿತು (ಕುಮ್ಮಾಆ. ೨೦-೩). [ಸಂ.]

**ವೀತಮಲ** (ನಾ). ದೋಷದೂರನಾದ ವ್ಯಕ್ತಿ ; ಶುದ್ಧನಾದವನು : ಇಂತಹ ಪರಮಶಿವನ ಉಪಾಸನೆಯಿಂದ ವೀತಮಲರಾದ ಪುರುಷರು ಪರಮಶಿವನ ಪರಮ ಸಾಮ್ಯವೆಂಬ ಮುಕ್ತಿಯನ್ನು ಹೊಂದಿ ಶಾಶ್ವತಶಿವರಾಗಿರುವರು (ಓಂದಸಾ. ೩೦೧). [ಸಂ.]

**ವೀತರಾಗ** (ಗು). ೧. ಆಸೆ, ಬಯಕೆ, ಕಾಮ, ಪ್ರೇಮ, ದೋಷ ಮೊದಲಾದ ಮನೋವಿಕಾರಗಳನ್ನು ಬಿಟ್ಟಿರುವ ; ರಾಗರಹಿತವಾದ. ೨. ನಿರುದ್ವೇಗದಿಂದಿರುವ; ಪ್ರಶಾಂತವಾಗಿರುವ. ೩. ಬಣ್ಣವಿಲ್ಲದಿರುವ ; ವರ್ಣರಹಿತವಾದ. (ನಾ). ೪. ಆಸೆ, ಕಾಮ, ರೋಷ ಮೊದಲಾದ ಮನೋವಿಕಾರಗಳಿಂದ ದೂರನಾದವನು; ರಾಗರಹಿತನಾದವನು ; ವಿರಾಗಿ ; ಜಿತೇಂದ್ರಿಯ : ಮುನಿ ವೀತರಾಗನೆಂದುಂ ಬನಮಂ ಸಾರ್ತಕ್ಕುಂ (ಕವಿರಾ. ೧-೭೯) ; ಸ್ಮರರಾಗೋದ್ರೇಕಂ ವೀತರಾಗನಿರ್ದೆಡೆಯೊಳೇಕೆ ಪುಟ್ಟುಗುಮೆನೆ ತತ್ಪರತೆಯನಂತರ್ವರ್ತ್ತಿಯೊಳರಸನಪೇಕ್ಷಿಸನೆ ರತಿರಹಸ್ಯೋತ್ಸವಮಂ (ಪುಷ್ಪಪು. ೯-೧೧೮). ೫. (ಬೌದ್ಧ ಅಥವಾ ಜೈನ) ಸಂನ್ಯಾಸಿ ; ಭಿಕ್ಷು. ೬. ರಾಗದ್ವೇಷಾದಿಗಳಿಲ್ಲದವನು ; ಅರ್ಹಂತ ; ಜಿನ : ಕರಿ ಮಹಿಷ ಮೇಷ ಮಲ್ಲಸ್ವರೂಪದಿಂ ತಮಗೆ ತಾಮೆ ಪೋರೆ ಸುರರ್ಕಳ್ ಪರಮನ ಮನಕ್ಕವೊಂದುಂ ಬರಲಾಱವೆ ವೀತರಾಗನಪ್ಪುದಱಿಂದಂ (ಅಜಿಪು. ೫-೮೧). ೭. ಅತಿವಿನಯವಂತ ; ಅತ್ಯಂತ ವಿನಯಶೀಲನಾದವನು : "ಎಡೆವರಿವ ವಿನಯಿತಂ ವೀತರಾಗನೆನಿಕ್ಕು" (ಮಂಗರಾ. ೭೧-೨೦). [ಸಂ.]

**ವೀತರಾಗದ್ವೇಷಿ** (ನಾ). ಮುನಿಯ ನಡವಳಿಕೆಗೆ ವಿರುದ್ಧವಾದ ನಡವಳಿಕೆಯುಳ್ಳವನು : ಈತನೆಮ್ಮಯ ಪಾಶುಪತ ವಿಖ್ಯಾತ ಬಾಣವ ಬೇಡಿ ತಪದಲಿ ವೀತರಾಗದ್ವೇಷಿಯಾದನು (ಕುಮ್ಮಾಆ. ೬-೨೬). [ಸಂ. ವೀತರಾಗದ್ವೇಷಿನ್]

**ವೀತರಾಗಿ** (ನಾ). ಮೋಹಾದಿ ರಾಗಗಳನ್ನು ಗೆದ್ದವನು : ರಣರಹಸ್ಯಜ್ಞಾನಿಗಳು ಮಿಗೆ ಮಣಿದರಿಂದ್ರಿಯವಶಕೆ ರಿಪುಭಟಗಣವಿದಾರಣತರ್ಕವಿದ್ಯಾವೀತರಾಗಿಗಳು (ಕುಮ್ಮಾಭೀ. ೭-೧೦). [ಸಂ. ವೀತರಾಗಿನ್]

**ವೀತರಾಶಿ** (ನಾ). ಒಬ್ಬಾತನ ಹೆಸರು : ವೀತರಾಶಿ (ಎಕ, II, ೩೮ ; ಸು, 750). [?]

**ವೀತಾಂಕುಶ** (ನಾ). ಅಡ್ಡಿ, ತಡೆಗಳಿಲ್ಲದವನು ; ನಿರಂಕುಶನಾದವನು : ವೀತಾಂಕುಶನಪ್ಪ ರಾವಣನೊಳಂ ನೆರೆದೀ ನುಡಿಗೇಳ್ವ ನಾಡೆಯುಂ ಶಂಕೆಯೊಳೊಂದಿ ಬಂದೆನಱಿಪಲ್ವೇಱತೇಂ ನಿಮಗಾ ಪ್ರಪಂಚಮಂ (ಪಂಪರಾಮಾ. ೩-೨೨). [ಸಂ.]

**ವೀತಾಸು** (ನಾ). ಜೀವಹೋದ ದೇಹ ; ಹೆಣ ; ಶವ : "ವೀತಾಸು ಶವಂ ಕುಣಪಂ" (ವಸ್ತುಕೋ. ೫೯-೪೫). [ಸಂ.]

**ವೀತಿ** (ನಾ). ೧. ಚಲಿಸುವಿಕೆ ; ಗತಿ ; ಗಮನ. ೨. ಬೆಳಕು ; ಕಾಂತಿ. ೩. ಕುದುರೆ ; ಅಶ್ವ : "ಘೋಟಕಃ, ವೀತಿಃ . . . ಸೈಂಧವಃ, ಸಪ್ತಿಃ — ೧೩ ಕುದುರೆಯ ಹೆಸರುಗಳು" (ಸಿದ್ಧಾಂತಿ. ೨೪೯). [ಸಂ.]

**ವೀತಿಹೋತ್ರ** (ನಾ). ೧. ಅಗ್ನಿ ; ಬೆಂಕಿ : ಭಕ್ತಜನವಿಪದಿಂಧನ ಪ್ರಬಲ ವೀತಿಹೋತ್ರನ ಜಗದ್ಹಿತಗಾತ್ರನ . . . ಭಕ್ತವತ್ಸಲನ ಪದ್ಮರಸನೀ ಕೃತಿಗೆ ಮೊದಲಾವುದನೆ ಮುಂದೆ ಪೇಳ್ವೆಂ (ಪದ್ಮರಾ. ೧-೫೧) ; ಜಾತರೂಪದಲೇಸು ಹೊಳ್ಪೆಹ ವೀತಿಹೋತ್ರನ ದೇಹ ಕಾರಣಭೂತವಾಗಿಹುದವಗೆ (ಕುಮ್ಮಾಉ. ೩-೧೨೪). ೨. ಸೂರ್ಯ ; ರವಿ. ೧, ೨ : ಮತ್ತಮಾ ನೃಪೇಂದ್ರನುಪೇಂದ್ರನಂತೆ ಸದಾನಂದಕರಾಜಿತನುಂ . . . ವೀತಿಹೋತ್ರನಂತೆ ವಿತತಕಾಂತಾರತಮೋಹನುಂ . . . ಅತನುವಿಭೂತಿವಿಳಸಿತನಾಗಿಯುಮಶೇಷಾಭರಣಕರನೆನಿಸಿರ್ದಂ (ರಾಜಶೇ. ೩-೯ ವ). [ಸಂ.]

**ವೀತಿಹೋತ್ರಜ** (ನಾ). ಸೂರ್ಯನ ಮಗ ; ಸುಗ್ರೀವ : ಆತು ನಿಂದ ಸುಷೇಣ ಜಾಂಬವ ವೀತಿಹೋತ್ರಜ ಬಲಮಹಾಬ್ಧಿಗೆ ಸೇತುವನು ಕಟ್ಟಿದನು ಬಾಣಶಿಲಾ ಪ್ರಕೀರ್ಣದಲಿ (ತೊರರಾ. ೬-೧೮-೨೦). [ಸಂ.]

**ವೀತಿಹೋತ್ರಾಂಬಕ** (ನಾ). ಉರಿಗಣ್ಣುಳ್ಳವನು ; ಅಗ್ನಿನೇತ್ರ ; ಶಿವ : ಶ್ರೀಮದ್ಭರ್ಗ ನಿರರ್ಗಳಸೋಮ ಜಗನ್ನೇತ್ರ ವೀತಿಹೋತ್ರಾಂಬಕ ನಿಃಕಾಮಿಸ್ವಾಮಿ ನಿರಾಕುಳ ರಾಮಗ್ರೀವಾಘದೂರ ಪಾಲಿಪುದೆನ್ನಂ (ಹಮ್ಮಿರ. ೭-೧). [ಸಂ.]

**ವೀಥಿ** (ನಾ). ೧. ಸಾಲು ; ಓಳಿ ; ಪಂಕ್ತಿ : "ಆಳೀ(ಃ), ಶ್ರೇಣೀ(ಃ), ಆವಳಿಃ, ಪಂಕ್ತಿಃ, ವೀಥೀ, ರಾಜೀ(ಃ)- ಈ ೬ ಪಂತಿ" (ಹಲಾಯು. ೧೧೯-೩೭) ; ಸೋನಕ್ಕನ ಹಿಂಬಾಲಿಗೆ ನಡೆಯುವ ಮೃತ್ಯುಕಾಮಿ ಜೀವಗಳ ವೀಥಿಯೇ ಇತ್ತು (ದೀಪಹ. II, ೩೪೧). ೨. ಬೀದಿ ; ದಾರಿ ; ಮಾರ್ಗ : ಪೃಥ್ವಿ ಅಪ್ಪು ತೇಜವಾಯ್ವಾಕಾಶದ ಕೊನೆಯ ಮೊನೆಯ ಮೇಲೆ . . . ಚಪ್ಪನ್ನ ವೀಥಿಗಳ ದಾಂಟಿ ಛತ್ತೀಸಪುರದ ರಚನೆಯ ನೋಡಿ ಬಲ್ಲೆವೆಂಬರು (ಅವಚಂ. ೭೧-೨೬೭) ; ಚಂದ್ರೋದಯದಲಿ ನಗರದ ವೀಥಿಗಳಂದವ ನಲಿದು ನಿಟ್ಟಿಸುತ ಕಂದರ್ಪರೂಪ ಜೀವಂಧರನತಿಲೀಲೆಯಿಂದ ನಡೆದು ಬರುತಿರ್ದ (ಜೀವಂಸಾಂ. ೧೯-೨೭). ೩. ಗುಂಪು ; ಸಮೂಹ : ಪಾಱುವ ಸೋಗೆ ಸೀಗುರಿ ಚಲಚ್ಚಮರೀಮೃಗವೀಥಿ ಚಾಮರಂ . . . ಸಿಂಹವಿಷ್ಟರಂ ತೋಱುವ ಚಂದ್ರಕಾಂತಶಿಲೆಯಾಗೆ . . . ಪೂರ್ವ ಪಶ್ಚಿಮಕೆ ಪರ್ವಿದ ಪರ್ವತರಾಜನೊಪ್ಪುಗುಂ (ಗಿರಿಕ. ೧-೫೦). ೪. [ನಾಟ್ಯ] ಹತ್ತು ಬಗೆಯ ರೂಪಕಗಳಲ್ಲಿ ಒಂದು; ಒಂದೇ ಅಂಕವುಳ್ಳ ಒಂದು ಬಗೆಯ ದೃಶ್ಯಕಾವ್ಯ : ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ — ಎಂದು ರೂಪಕಗಳು ಹತ್ತು ವಿಧ (ಸಂನಾಟ. ೨೯) ; ಅಭಿನಯಿಸಿ ತೋರುವ ನಾಟಕಗಳಿಗೆ ರೂಪಕವೆಂದು ಅನ್ನುವರು. ಇದರಲ್ಲಿ ನಾಟಕ, ಪ್ರಕರಣ . . . ವೀಥಿ, ಅಂಕ, ಈಹಾಮೃಗ — ಎಂಬ ಹತ್ತು ವಿಧಗಳಿವೆ (ಬಾಲಪ್ರ. I, ೩೨೬). [ಸಂ.]

**ವೀಥಿಗೊಳ್** (ಕ್ರಿ). ಸಾಲಾಗು ; ಶ್ರೇಣಿಗೊಳ್ಳು : ಕೆಲಬಲದೊಳ್ ಶುಕಾವಳೀ ತುರಂಗಸಂಘಂ ಸಂದಣಿಸೆ ರಥಾಂಗಘನರಥಂ ಮೇಳಯ್ಸೆ ಚೂತಗಜಂ ವೀಥಿ [ಪಾಠಾಂ. ಧಿ]ಗೊಳೆ . . . ಕಾಮದೇವಂ ಹೇಮಕೂಟಾಭಿಮುಖನಾಗಿ ನಡೆತರ್ಪಾಗಳ್ (ಗಿರಿಕ. ೭-೭೨ ವ). [ವೀಥಿ + ಕೊಳ್$_1$]

**ವೀಥಿಮಾರ್ಗ** (ನಾ). ಬೀದಿಯ ಸಾಲು : ರವಜಿತ ಯಾಮತೂರ್ಯರವಮಿಶನ ನಬ್ಧಿಯ ನಿದ್ರೆಯತ್ತಲುಪ್ಪವಡಿಸುವಂತು ಮಾಳ್ಪುದು ಗವಾಕ್ಷನಿರೀಕ್ಷಿತವೀಥಿಮಾರ್ಗದೊಳ್ ನವಯುವನೀತನೊಳ್ ನೆರೆದುವಂದುಪವಾಂತ ಲವಂಗಪುಷ್ಪವತ್ಸವನವಿದಾರ್ಯ ಘರ್ಮಲವೆಯಾಗಿ ವಿಹಾರಿಸು ವಾರ್ಧಿತೀರದೊಳ್ (ಶಾಂತಿಪು. ೫-೧೩೫). [ಸಂ.]

**ವೀಧಿ** (ನಾ). ೧. ಹಾದಿ ; ಮಾರ್ಗ ; ದಾರಿ ; ರಸ್ತೆ : ತಮಾಲವನದೊಳ್ ಘನಚಂದನ ವೀಧಿಯೊಳ್ . . . ತೊಟಲ್ವಱಸಿ ನೋಡಿದೆಂ (ಕಾದಂಪೂ. ೮೨೭) ; ವಾರನಾರಿಯರು ಸಂಚರಿಸುತಿರ್ದರು ಕೇಳು ದ್ವಾರಾವತಿಯ ವೀಧಿಯಲಿ (ಮೋಹತ. ೩-೬೮). ೨. ವಿಸ್ತಾರ ; ಹರಹು ; ಬಯಲು : ಪಕ್ಷಿಸುಸ್ವನಮಯ ಪುರೋದ್ಯಾನ ವೀಧಿಯೊಳ್ ಪಾಳೆಯಂಬಿಟ್ಟು ದರ್ಜುನನ ಸೇನೆ ! (ಚಿತ್ರಾಂಗ. ೭೨ ೧೯೬೪). ೩. ಗುಂಪು ; ಸಮೂಹ . 'ದೇವವೀಧಿ', 'ಯೂಥ' ಪರಾ.

ವೀಧಿವೀಧಿ (ದ್ವಿರುಕ್ತಿ) : ವೀಧಿವೀಧಿಯೊಳು ಕಂಗೊಳಿಸುವ ಸೋಪಸ್ಕರ ವ್ಯವಹಾರದಂಗಡಿ ಮೆಱೆದುವಿಕ್ಕೆಲದಿ (ಮೋಹತ. ೩೭-೭೦). [< ವೀಥಿ./ P ಸಂಸ್ಕೃತ ಕೋಶಗಳಲ್ಲಿ ಈ ರೂಪ ಸಿಗುವುದಿಲ್ಲ. 'ವೀಥಿ'ಗೆ ಅನುರೂಪವಾಗಿ ಇದು ಬಳಕೆಯಾಗಿದೆ]

**ವೀಧ್ರ** (ಗು). ೧. ಶುದ್ಧವಾದ ; ನಿರ್ಮಲವಾದ. (ನಾ). ೨. ನಿರ್ಮಲವಾದುದು ; ಸ್ವಚ್ಛವಾದುದು : "[ಮಲ] ವಿದೂಷಿತಂ ಶುದ್ಧಮದುಜ್ಜ್ವಲಮತಿಮೇಧ್ಯಂ ವೀಧ್ರಂ

ಮಲರಹಿತಂ ಶುಚಿತಮಂ ಪವಿತ್ರಂ ಪೂತಂ'' (ವಸ್ತುಕೋ. ೧೦೬-೬೧). ೩. ಆಕಾಶ. ೪. ಗಾಳಿ ; ವಾಯು. ೫. ಅಗ್ನಿ ; ಬೆಂಕಿ. [ಸಂ.]

**ವೀಪ್ಸೆ** (ನಾ). ೧. ಅನುಕ್ರಮವಾಗಿ ಒಂದಾದ ಮೇಲೆ ಒಂದರಂತೆ ಅನುಸ್ಯೂತವಾಗಿ ಪದಗಳನ್ನು ಆವರ್ತಿಸುವ ಕ್ರಮ. ೨. ಹೇಳಿದ್ದನ್ನೇ ಮತ್ತೆ ಹೇಳುವಿಕೆ ; ನಿರಂತರವಾದ ಕ್ರಿಯೆಯನ್ನು ಸೂಚಿಸಲು ಬಳಸುವ ಶಬ್ದಗಳ ಪುನರುಕ್ತಿ, — ಯುಗಳೋಚ್ಚಾರಣೆ : ಚಾಪಲ್ಯವೀಪ್ಸಾಭೀಕ್ಷ್ಣ್ಯ ಸಮೀಪಾನುಕೃತಿ ಕ್ರಿಯಾಸಮಭಿಹಾರಾದಿ ಖ್ಯಾಪನೆಯೊಳ್ ಪದಕಕ್ಕುಂ ರೂಪದ್ವಿತ್ವಂ ಯಥಾ ಪ್ರಯೋಗಾನ್ನುಗತಂ (ಶಾಬ್ದಾವ. ೨೮೭). ೩. ಹಬ್ಬುವಿಕೆ ; ವ್ಯಾಪನೆ. [ಸಂ. ವೀಪ್ಸಾ]

**ವೀರ** (ಗು). ೧. ಶೌರ್ಯದಿಂದ ಕೂಡಿದ ; ಪೌರುಷದ : ಗಗನಮಂ ಪೃಥ್ವಿಯಂ . . . ಭದ್ರವೀರ ಸೌಂದರ್ಯಮಂ, ಧ್ಯಾನಿಸುತೆ ಭಾವಿಸುತೆ ರೂಪಿಸುತೆ ಕಾಮಿಸಿದನಾ ಭೂಮಿಪಂ ತದ್ರೂಪಗುಣಹೃದಯರಂ (ಶ್ರೀರಾಮಾ. ೧೨-೩೦೯). ೨. ಶೂರನಾದ ; ಪರಾಕ್ರಮಿಯಾದ : 'ವೀರಭಟ' ಪರಾ. ೩. ಬಲಿಷ್ಠವಾದ ; ಬಲವಾದ ; ಶಕ್ತಿಯುತವಾದ. ೪. ಶ್ರೇಷ್ಠವಾದ ; ಉತ್ತಮವಾದ. ೫. ಭೀಕರವಾದ ; ಭಯಂಕರವಾದ : 'ವೀರಕ್ಷಾಮ' ಪರಾ. (ನಾ). ೬. ಕಲಿ ; ಶೂರ ; ಪರಾಕ್ರಮಿ : ವೀರರ ವೀರ ವಿಮುಕ್ತಾಹಾರಂ ಭವದರಿವಧೂಸ್ತನದ್ವಿತಯಂ ಕಣ್ಣೀರಿಂ ಮಿಂದೆದೆಗಿರ್ಚಿಂದೋರಂತಿರೆ ಬೆಂದು ಚರಿಸುತಿರ್ಪುದು ತಪಮಂ (ಕಾದಂಪೂ. ೬೧) ; ವೀರನಾದರೆ ವೈರಿಗಳು ಮೆಚ್ಚಬೇಕು ವ್ರತಿಯಾದರೆ ಅಂಗನೆಯರು ಮೆಚ್ಚಬೇಕು ಭಕ್ತನಾದರೆ ಜಂಗಮ ಮೆಚ್ಚಬೇಕು (ಬಸವ. ೬೬೧). ೭. ಶೌರ್ಯ ; ಪರಾಕ್ರಮ ; ಕಲಿತನ : ತಕ್ಕಿನೆನ್ನದಟುಮನೆನ್ನ ವೀರಮುಮನಾಜಿಯೊಳೆನ್ನರಸಂಗೆ ತೋಱುವೆಂ (ಪಂಪಭಾ. ೧೦- ೪೧) ; ಮರುಳು ಮರ್ಕಟನೂರ ಸುಟ್ಟರೆ ಹಿರಿದು ವೀರವೆಯೆನಲು (ಕೌಶಿರಾ. ೧೪-೨೦). ೮. ನಟ ; ಪಾತ್ರಧಾರಿ. ೯. ಬೆಂಕಿ ; ಅಗ್ನಿ. ೧೦. ಯಜ್ಞಯಾಗಗಳಲ್ಲಿ ಬಳಸುವ ಅಗ್ನಿ. ೧೧. ಮಗ ; ಪುತ್ರ. ೧೨. ಗಂಡ ; ಪತಿ. ೧೩. ಅರ್ಜುನ ವೃಕ್ಷ. ೧೪. ಕರವೀರವೃಕ್ಷ. ೧೫. ಜಿನ. ೧೬. ವಿಷ್ಣು. ೧೭. ವೀರಭದ್ರ : '' ವೀರಂ ಭಯಂಕರಂ ದಕ್ಷಾರಿ ಶರಭನೆನೆ ವೀರಭದ್ರನೆನಿಕ್ಕು'' (ಮಂಗರಾ. ೫-೧೫). ೧೮. ಪೂರ್ವಜರನ್ನು ಯುದ್ಧದಲ್ಲಿ ಕಳೆದುಕೊಂಡಿದ್ದು, ಫಾಲ್ಗುಣ ಶುದ್ಧ ಪ್ರತಿಪದೆಯಂದು ಯುದ್ಧಯೋಗ್ಯವಾದ ವೈಭವ, ಆಡಂಬರಗಳೊಂದಿಗೆ ದೇವರ ದರ್ಶನಕ್ಕೆ ಹೋಗುವ ಪುರುಷ, — ಶೂರ : (೬). ೧೯. ಇಪ್ಪತ್ತೆಂಟು ಶೈವಾಗಮಗಳಲ್ಲಿ ಒಂದು : ಕಾಮಿಕ, ಯೋಗಜ, ಅಚಿಂತ್ಯ . . . ಅನಲ, ವೀರ, ರೌರವ, ಮಕುಟ . . . ಕಿರಣ, ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು . . . ಸಿದ್ಧಾಂತಗಳೆಂಬ ಸಂಜ್ಞೆಯನ್ನು ಪಡೆದಿವೆ (ಭಾರದ. ೬೨). ೨೦. [ಕಾವ್ಯಮೀ] ಕಾವ್ಯ, ನಾಟ್ಯಗಳಲ್ಲಿ ಬಳಕೆಯಾಗುವ ನವರಸಗಳಲ್ಲಿ ಒಂದು ; ವೀರರಸ : ವೀರಾದ್ಭುತ ಕರುಣಾ ಶೃಂಗಾರ ಭಯಾನಕ ಸರೌದ್ರ ಬೀಭತ್ಸ ಮಹಾಸಾರತರ ಹಾಸ್ಯ ಶಾಂತಾಧಾರಂ ನವವಿಧವಿಕಲ್ಪಮಾ ರಸಮಾರ್ಗಂ (ಕವಿರಾ. ೩- ೧೮೮) ; ವೀರಂ ಗೌರಂ ರೌದ್ರಮದಾರಕ್ತಂ ಪೀತಮದ್ಭುತಂ ಶ್ಯಾಮಂ ಶೃಂಗಾರಂ ಶ್ವೇತಂ ಹಾಸ್ಯಂ ಕಾರುಣ್ಯಂ ಧೂಮ್ರಮುಸಿತಮುೞಿದುವೆರಡುಂ (ಕಾವ್ಯಾವ. ೮೩೬). ೨೨. [ನಾಟ್ಯ] ಎಂಟು ಬಗೆಯ ರಸಯುಕ್ತವಾದ ನೋಟಗಳಲ್ಲಿ ಒಂದು ; ಒಂದು ಬಗೆಯ ರಸದೃಷ್ಟಿ ; IP ''ಪ್ರಜ್ವಲಿಸುವ ಕಡೆಗಣ್ಣು ನಟ್ಟ ಸವಾರ್ಥ ದೃಷ್ಟಿಯಲ್ಲಿ ಗಾಂಭೀರ್ಯದಿಂದ ನೋಡುವುದು'' (ಲಾಸ್ಯರಂ. ೨೬೭ ಗದ್ಯಾನುವಾದ) : ಕಾಂತಂ ಹಾಸ್ಯಂ ಕರುಣಂ ಸಂತತ ರೌದ್ರಾದ್ಭುತಂ ಭಯಂ ವೀರಮುದ್ಭುತ್ಕಂತದ ಬೀಭತ್ಸಂ ಕೇಳ್ ಕಾಂತೇ ರಸಯುಕ್ತಮಾದ ನೋಟಮಿವೆಂಟುಂ (ಲಾಸ್ಯರಂ. ೩-೪).

**ವೀರಚೂಡಾಮಣಿ** = ವೀರರಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ಸುಭಟಶಿರಶ್ಶೇಖರಂ ಸಮರೈಕವೀರಂ ವೀರಚೂಡಾಮಣಿಯೇಕವಾಕ್ಯಂ . . . ಶ್ರೀಮದ್ವಾಸರಸರ್ (ಸೌಇಇ. XX, ೨೧-೪೫ ; 1019). **ವೀರಝುಳಪ್ಪ** = ವೀರರನ್ನು ಸೋಲಿಸುವವನು ; ಒಂದು ಬಿರುದು : ತ್ರಿಭುವನಮಲ್ಲಂ ರಿಪುರಾಯಭಯಂಕರಂ . . . ಅನವರತದಾನಿ ವೀರಝುಳಪ್ಪ (ಎಇ. XV, ೩೫೧-೧೫ ; 1098). **ವೀರಬಿರುದಾಳ** = ವೀರನೆಂಬ ಬಿರುದನ್ನು ಹೊಂದಿದವನು ; ಒಂದು ಬಿರುದು : ಶ್ರೀಮನು ಮಹಾಮಂಡಳೇಸ್ವರಂ . . . ನರಪತಿ ಜಗದಾಳ ವೀರಬಿರುದಾಳ ದೇವರಸರು (ಪ್ರಾ.ಆರಿ. ೧೯೩೧,೬೧-೬ ; 1297). **ವೀರಮಹೇಶ್ವರ** = ೧. ವೀರರಲ್ಲಿ ಮಹೇಶ್ವರನಂತಿರುವವನು ; ಒಂದುಬಿರುದು : ಶ್ರೀ ಮಹೀವಲ್ಲಭ ಯುವರಾಜರಾಜಪರಮೇಶ್ವರ ವೀರಮಹೇಶ್ವರ ವಿಕ್ರಮಾಭರಣ . . . ಶ್ರೀಮತ್ತ್ರೈಳೋಕ್ಯಮಲ್ಲವೀರನೊಳಂಬಪಲ್ಲವಪೆರ್ಮಾನಡಿ ಜಯಸಿಂಹದೇವರ್ (ಸೌಇಇ. XX, ೫೫-೧೩ ; 1082). ೨. ಶ್ರೇಷ್ಠನಾದ ಶಿವಭಕ್ತ : ವೀರಮಹೇಶ್ವರ ರಾರಾಧಕನಾದ ಶೀಲವಂತ ದಳವಾಯಿ (ಎಕ. XVI, ಚಿಕ್ಕನಾ. ೧-೧೧ ; 1623). **ವೀರಮಾಹೇಶ್ವರ** = ವೀರಮಹೇಶ್ವರ ೧ : ಮರುಳುವಿಟ್ಟನ ವಂಶಜಂ . . . ವೀರಮಾಹೇಶ್ವರಂ ನಾಲ್ಕಡಿ ಚಲದಂಕರಾಮಂ (ಸೌಇಇ. XX, ೭೧-೩೭; 1109). ೨. = ವೀರಮಹೇಶ್ವರ ೨ : ವೀರಮಾಹೇಶ್ವರರೆ ಗತಿಯೆನಗಿದುವೆ ನಿಶ್ಚಯವು (ಬಸಪು. ೩-೮೩). **ವೀರಮುರಾರಿ** = ಶೌರ್ಯದಲ್ಲಿ ಕೃಷ್ಣನಿಗೆ ಸಮನಾದವನು ; ಒಂದು ಬಿರುದು : ಮಣಲೆರಭೀಮಂ ವೈರಿಮನ್ನೆಯರ ಪಾಷ[ಣ್ಣ] ವೀರಮುರಾರಿ [ವಿಸದ] ಮನ್ನೆಯ . . . [ನಾ]ಮಾದಿ ಸಮಸ್ತಪ್ರಸಸ್ತಿಸಹಿತಂ (ಸೌಇಇ. XX, ೩೮-೭ 1058). **ವೀರವಿದ್ಯಾಧರ** = ವೀರಚೂಡಾಮಣಿ : ಸಂಗ್ರಾಮರಾಮನಭಿಮಾನಮೇರು ಜಗದೇಕವೀರಂ ವೀರವಿದ್ಯಾಧರಂ . . . ಶ್ರೀಮನ್ಮಹಾಮಂಡಳೇಶ್ವರಂ ಕುಂದಮರಸರು (ಎಕ. VII, ಶಿಕಾರಿ. ೧೨೫-೨೨ ; 1019). **ವೀರವೃಕೋದರ** = ಪರಾಕ್ರಮದಲ್ಲಿ ಭೀಮನಂತಿರುವವನು ; ಒಂದು ಬಿರುದು : ಪರನಾರೀಸಹೋದರಂ ವೀರವೃಕೋದರಂ . . . ಶ್ರೀಮನ್ಮಹಾಮಣ್ಡಳೇಶ್ವರಂ ಲಕ್ಷ್ಮರಸರ್ ಪುರಿಗೆಱೆಮೂನೂಱುಂ . . . ಸುಖದಿನಾಳುತ್ತಿರೆ (ಸೌಇಇ. XX, ೪೭-೯ ; 1074). **ವೀರಸಿಂಹಾಸನಿಗ** = ತನ್ನ ಶೌರ್ಯದಿಂದ ರಾಜಪದವಿಯನ್ನು ಹೊಂದಿದವನು ; ಒಂದು ಬಿರುದು : ಬಿಕ್ಕುಳ್ಳಿ ವಿಗ್ರಹದಂಡಿ ವೀರಸಿಂಹಾಸನಿಗ ಪಡಿಮಲ್ಲಂ ನೋಡಿ . . . ಪೊಯಿಸಿ ಇಱಿದೊಡೆ (ಎಕ. XI, ಚಳ್ಳಕೆ. ೮-೩ ; ಸು. 810). **ವೀರಾವಧೀರ** = ವೀರಚೂಡಾಮಣಿ : ಏಕಾಂಗವೀರ ವೀರಾವಧೀರ ನುಡಿದನ್ತೆ ಗಣ್ಡಂ (ಎಕ. XI, ಚಿತ್ರದು. ೪೭-೧೪; 1067). [ಸಂ.]

**ವೀರಂಬೆಱು** (ಕ್ರಿ). ೧. ಶೌರ್ಯವನ್ನು ಹೊಂದು ; ಪರಾಕ್ರಮವನ್ನು ತಾಳು : ಅತ್ತಲರಮನೆಯಿಂದ ಪೊಱಮಟ್ಟೆತ್ತ ತನ್ನರಮನೆಗೆ ವೀರಂಬೆತ್ತು ಮೊಲ್ಲೆಯ ಬೊಮ್ಮಯಂಗಳು ತಾನುವೆಯಿತಂದು (ಬಸಪು. ೬೧-೩೪). [ವೀರ + ಪೆಱು]

**ವೀರಕ** (ನಾ). ೧. ಶೂರ ; ವೀರ. ೨. ಪ್ರಮಥರಲ್ಲಿ ಒಬ್ಬನ ಹೆಸರು : ವೀರ ವೀರಕ ನಂದಿರೇಣುಕ ದಾರುಕರುಮುಪಮನ್ಯು ಭೃಂಗಿಯು ವೀರಭದ್ರಾದಿ ಪ್ರಮಥರೋಳ್ಪೆಪ ಸಮಯದೊಳು (ಬಸಪು. ೧-೫೨) ; ವೀರಕ ವೀರಭದ್ರಕಮುಖಪ್ರಮಥಪ್ರಕರಾನ್ವಿತಂ ಮನೋಹಾರಿ ನಗೇಂದ್ರಪುತ್ರಿಯೊಡನಂಬರದೊಳ್ಪಗೆಗೊಂಡು . . . ನೆಲಸಿರ್ದು (ವೃಷವಿ. ४೦-೫೧). [ಸಂ.]

**ವೀರಕಂಕಣ** (ನಾ). ವೀರರು (ಯುದ್ಧಕ್ಕೆ ಹೋಗುವಾಗ)ಕೈಗೆ ಕಟ್ಟಿಕೊಳ್ಳುವ ಕಂಕಣ, – ಆಭರಣ : ರಾವುತರೊಳಗ್ಗಳೆಯರನು ದಶಸಾವಿರವ ಜೋಡಿಸಿದರಿನಿಬರು ಸಾವನೇ ನಿಶ್ಚೈಸಿ ಬಿಗಿದರು ವೀರಕಂಕಣವ (ಕುವ್ಯಾಕ. ೧೯-೩) ; ವೀರಕಂಕಣಗಳ ಮುಱಿದು ಶೃಂಗಾರದ ಹಾರಗಳನು ತೆಗೆದಿಟ್ಟು . . . ತಾಱುತಟ್ಟಾಗಿಯೋಡಿದರು (ಕಂಸವಿ. ೧೫-೯೫). [ಸಂ.]

**ವೀರಕಚ್ಚೆ** 'ವೀರಗಚ್ಚೆ' ನೋ.

**ವೀರಕಾರ್ಯ** (ನಾ). ಸಾಹಸದ ಕೆಲಸ ; ಪೌರುಷದಿಂದ ಮಾಡುವ ಕಾರ್ಯ : ನನಗೆ ವೀರಕಾರ್ಯದಲ್ಲಿ ಇಷ್ಟ (ವಚಭಾ. ೭೭). [ಸಂ.]

**ವೀರಕಾವ್ಯ** (ನಾ). ಶೌರ್ಯ, ಸಾಹಸಗಳನ್ನು ವರ್ಣಿಸುವ, ವೀರರಸಪ್ರಧಾನವಾದ ಕೃತಿ : ಭಾರತಕ್ಕೆ ಮುಸಲ್ಮಾನರ ಆಗಮನ ವೀರಕಾವ್ಯಗಳ ಅಂತ್ಯವನ್ನು ತಂದಿತು (ಭಾರದ. ೪೫೭). [ಸಂ.]

**ವೀರಕಾಶೆ** 'ವೀರಗಾಸೆ' ನೋ.

**ವೀರಕುಲ** (ನಾ). ಪರಾಕ್ರಮಿಗಳ, ಸಾಹಸಿಗರ ವಂಶ, — ಸಂತತಿ : ನಮ್ಮದು ವೀರಕುಲ (ವಚಭಾ. ೭೭). [ಸಂ.]

**ವೀರಕೇಳಿ** (ನಾ). ಪೌರುಷದ ಆಟ ; ಸಾಹಸದ ಕ್ರೀಡೆ : ವೀರಕೇಳೀಶ್ರಮವಡಗೆ ಕರ್ಪೂರ ವೀಳೆಯಗೊಂಡು ಮತ್ತೆ ಮಹಾರುಭಟೆಯಲಿ ಸುಭಟರೆದ್ದರು ತೂಗಿ ನಿಜಗದೆಯ (ಕುವ್ಯಾಗ. ೭-೩೩). [ಸಂ. ವೀರಕೇಲಿ]

**ವೀರಕ್ಷಾಮ** (ನಾ). ಭೀಕರವಾದ ಕ್ಷಾಮ ; ಭಯಂಕರವಾದ ಬರಗಾಲ, - ದುರ್ಭಿಕ್ಷ : ಭರಮಪ್ಪನಾಯಕನ ಆಳಿಕೆಯಲ್ಲಿ ವೀರಕ್ಷಾಮ ಪ್ರಾಪ್ತವಾಯಿತು (ಚಿತ್ರಪಾ. ೭ ಉಪೋದ್ಘಾತ) ; ೧೮೮೦ನೆಯ ಇಸವಿಯಲ್ಲಿ ಬಂಗಾಳದಲ್ಲಿ ವೀರಕ್ಷಾಮವು ಪ್ರಾಪ್ತವಾಗಿ ಜನರಲ್ಲಿ ಹಾಹಾಕಾರ ಉಂಟಾಯಿತು (ಜಗಚಂ. ೭). [ಸಂ.]

**ವೀರಕ್ಷೇತ್ರ** (ನಾ). ಶೂರರಾದ ಕ್ಷತ್ರಿಯರು ಹೋರಾಡುವ ಸ್ಥಳ ; ಸಾಹಸಕೃತ್ಯಗಳು ನಡೆಯುವ ಸ್ಥಳ : ವೀರಕ್ಷೇತ್ರಮುಗುರ್ವಿಗಂಕದ ಕುರುಕ್ಷೇತ್ರಂ . . . ವೈರಿಸಂಹಾರಂ ಮಾಡದೆ ಮಾಣೆನೆಂದು ಹರಿಗಂ ಕೆಯ್ಕೊಂಡನುತ್ಸಾಹಮಂ (ಪಂಪಭಾ. ೯-೧೦೫). [ಸಂ.]

**ವೀರಗಚ್ಚೆ, ವೀರಕಚ್ಚೆ** (ನಾ). ಶೂರರು ಯುದ್ಧದ ಸಮಯದಲ್ಲಿ ಹಾಕಿಕೊಳ್ಳುವ ಕಚ್ಚೆ ; ಹೋರಾಡಲು ಅನುಕೂಲವಾಗುವಂತೆ ಧೋತ್ರ ಅಥವಾ ಸೀರೆಯನ್ನು ಉಟ್ಟುಕೊಳ್ಳುವ ಒಂದು ರೀತಿ : ವೀರಗಚ್ಚೆಯ ಖಳರು ಹೊಱವಡೆ ತೇರು ಕರಿ ಘಟೆ ಕುಣಿವ ಕುದುರೆಯ ವೀರತೆಕ್ಕೆಯ ತೊಡರುಪೆಂಡೆಯರಸುರ್ಪಡೆ ಕವಿಯೆ (ಕಾಶಿರಾ. ೨೦-೧೧). **ವೀರಕಚ್ಚೆ** : ಬಂದವನು ದೀರ್ಘಕಾಯನು . . . ವೀರಕಚ್ಚೆಹಾಕಿ (ನಿಷ್ಕಾಮ. ೪೦) ; ಹುಡುಗಿಯು ವೀರಕಚ್ಚೆಯನ್ನು ಕಟ್ಟಿ ಹೆಗಲು ಮೇಲಿನಿಂದ ಸೆರಗನ್ನು ಬಿಗಿದು ಸೊಂಟಕ್ಕೆ ಸುತ್ತಿದ್ದಳು (ಶ್ರೀರಾಯ. ೨). [ವೀರ + ಕಚ್ಚೆ]

**ವೀರಗಣ** (ನಾ). ೧. ಶೂರರ ಸಮೂಹ ; ಪರಾಕ್ರಮಿಗಳ ಗುಂಪು : (೬). ೨. [ವೀಶೈ] ವೀರಭದ್ರ : ನರಹರಿಯನಾ ವೀರಗಣನಂಬರಕೆ ಹಾಯ್ಕುವ ತೆಱದೆ ಹಾಯ್ಕುತ . . . ಹರನಿಭದ್ಯೆತ್ಯನಂ ಸಂಹರಿಸಿ ಸೀಳುವ ಮಾರ್ಗದಿಂದೊಡೆಸೀಳ್ದನುರ್ಬಿನಲಿ (ಬಸವು. ೨೧-೪೩). [ಸಂ.]

**ವೀರಗಲ್ಲು** (ನಾ). ಯುದ್ಧದಲ್ಲಿ ಸತ್ತ ವೀರನ ಸ್ಮರಣಾರ್ಥವಾಗಿ ನಿಲ್ಲಿಸಿದ (ವೀರನ ಸಾಹಸಗಳನ್ನು ವರ್ಣಿಸುವ ಬರವಣಿಗೆ ಅಥವಾ ಚಿತ್ರವನ್ನುಳ್ಳ) ಕಲ್ಲು : ಮಾರತಮ್ಮನು . . . ಕಾಳಗದಲ್ಲು ಕಾದಿ ಬಿದ್ದನು ಆ ಮಾರತಮ್ಮನು ದೇವಲೋಕಕ್ಕೆ ಸಲಬೇಕೆನ್ದು ಆತನ ತಮ್ಮ ಮಲಿಯನಾಯಕ ಆ ಮಾರತಮ್ಮನ ಮಕ್ಕಳು ಸೋಮಣ್ಣ xxx ವೀರಗಲ್ಲು ಶ್ರೀ ಶ್ರೀ ಶ್ರೀ (ಎಕ. I, ೮೭-೪ ; 1285) ; ವೀರಗಲ್ಲುಗಳು ದೇಶದ ಎಲ್ಲ ಭಾಗಗಳಲ್ಲಿಯೂ ಕಂಡುಬರುತ್ತವೆ (ಮೈವಾಸ್ತು. ೫೭). [ವೀರ + ಕಲ್ಲು (< ಕಲ್$_3$)]

**ವೀರಗಾಣಿಕೆ** (ನಾ). ಶೂರರಿಗೆ ಅರ್ಪಿಸುವ ಕಾಣಿಕೆ : ಹುಡುಗನು xxx ವೀರಗಾಣಿಕೆಯನು ದೇವರಿಗೆ ನೈವೇದ್ಯಕಾಲxxಂದು ದಿಪದ ಫಲ ತಂಮದೆಂದು ದೇವಾಪೃಥ್ವಿಯ ಮಹಾಮಹತ್ತಿನೊಳಗಾದ ಸುತ್ತುರ ಸಿಂಹ್ಯಾಸನ ವಟಿಕೆಯಗಿ ಮಾಡಿದ ಧರ್ಮ್ಮಕ್ಕೆ (ಎಕ. V (R), ತಿರುಮ. ೮೩-೪ ; ಸು. 17 ನೆಯ ಶತ).

[ವೀರ + ಕಾಣಿಕೆ (< ಕಾಣ್ಕೆ)]

**ವೀರಗಾಥೆ** (ನಾ). ವೀರರ ಸಾಹಸದ ಕಥೆಗಳನ್ನು ವರ್ಣಿಸುವ ಹಾಡಿನ ರೂಪದ ಕೃತಿ : ಯಾರಿಂದ ಭಾರತವು "ವೀರಗಾಥಾ" ಎಂದು ಹೆಸರುವಾಸಿ ಯಾಯಿತೋ ಅವರನ್ನು ಸ್ಮರಿಸುವಾಗ ವೀರಶಕ್ತಿಸ್ವರೂಪಿಣಿಯಾದ ಅಬಲೆಯೊಬ್ಬಳು ರೋಷದುಃಖಸಂತಪ್ತವದನೆಯಾಗಿ ಮುಂದೆ ಬರುತ್ತಾಳೆ (ಭಾರದ. ೪೮೫) ; ಮಹಾಕವಿ ಯಾಗಿದ್ದ ಮೊಗಲ ಸಾಮ್ರಾಟ ಬಹದ್ದೂರಶಹನು ತನ್ನದೊಂದು ವೀರಗಾಥೆಯಲ್ಲಿ ಅಂದಿನ ಭಾರತದ ಅಂತಃಸತ್ವವನ್ನು ಮಾರ್ಮಿಕವಾಗಿ ಚಿತ್ರಿಸಿರುವನು (ಪ್ರಬಂಧ. ೫೪).

[ಸಂ. ವೀರಗಾಥ]

**ವೀರಗಾಲು** (ನಾ). ಯುದ್ಧಮಾಡುವಾಗ ವೀರರು ಮಂಡಿಯೂರಿ ಕುಳಿತುಕೊಳ್ಳುವ ಒಂದು ಭಂಗಿ ; ವೀರಮಂಡಿ : ಸ್ತಬ್ಧವಾದ ವಾತಾವರಣದಲ್ಲಿ ರಾಚಮಲ್ಲನು ಮಾತ್ರೆಗಳನ್ನೆಣಿಸಿಕೊಂಡು, ಮೈ ತುಂಬಿದವನಂತೆ ವೀರಗಾಲು ಹೊಡೆದು, ಮುಕ್ತಾಯವನ್ನಿತ್ತ ಕೂಡಲೇ, ಜನಸಂದಣಿಯೆಲ್ಲ 'ಹಾ! ಹಾ! ಭಲೆ! ಭಲೆ!!' ಎಂದು ಕೂಗಿದರು (ಬೆಟ್ಟಹೂ. ೧೩). [ವೀರ + ಕಾಲು$_1$ (< ಕಾಲ್$_1$)]

**ವೀರಗಾಸೆ, ವೀರಕಾಶೆ** (ನಾ). ೧. = ವೀರಗಚ್ಚೆ : ವೀರಗಾಸೆಯನುಟ್ಟು ಸುರ ನರರಾರತಿಗೆ ಕೈಗೊಟ್ಟು ಸಾಕ್ಷಾತ್ಕಾರವಾಗಿಹ ಕೃಷ್ಣದೇವನ ದೂರದಲಿ ಕಂಡು (ಕೃಷ್ಣಾಕಾ. ೧೭-೪೮). ೨. ಒಂದು ಬಗೆಯ ಕುಣಿತ ; ವೀರಗಚ್ಚೆ ಹಾಕಿಕೊಂಡು ವೀರಭದ್ರನಂತೆ ನರ್ತಿಸುವುದು : ವೀರಭದ್ರನು ತೋರಿದ ಪ್ರತಾಪದ ಪ್ರತೀಕವೇ 'ವೀರಗಾಸೆ' (ಕಜಕ. ೧೬೦). ೩. ವೀರಗಚ್ಚೆ ಹಾಕಿಕೊಂಡು ಕುಣಿಯುವವನು : ಶಸ್ತ್ರಪವಾಡ ನಡೆಸುವುದು ವೀರಗಾಸೆಯವರ ಮತ್ತೊಂದು ವಿಶೇಷ (ಕಜಕ. ೧೬೦). **ವೀರಕಾಶೆ** : ೧. ಈ ದೇಶದ ಮರಾಟೆಯವರಾದ ನಮ್ಮಲ್ಲಿ ಯುದ್ಧದ ಪ್ರಮೇಯ ಬಂದಾಗೆಲ್ಲಾ ನಮ್ಮ ಸ್ತ್ರೀಜನರು ವೀರಕಾಶೆಯನ್ನು ಕಟ್ಟಿ ಕದನಕ್ಕೆ ಸಿದ್ಧರಾಗುತ್ತಾರೆ (ಮುಸುಗ. ೩೦).

**ವೀರಗಾಸೆಕುಣಿತ** = (ವೀರಗಚ್ಚೆಯನ್ನು ಕಟ್ಟಿಕೊಂಡು ಕುಣಿಯುವ) ಒಂದು ಬಗೆಯ ಕುಣಿತ, — ನೃತ್ಯ : 'ವೀರಗಾಸೆ' ಕುಣಿತದ ಹಿನ್ನಲೆ ಬಗ್ಗೆ ಪ್ರಚಲಿತವಿರುವ ಒಂದು ಪೌರಾಣಿಕಪ್ರಸಂಗ ಹೀಗಿದೆ (ಕಜಕ. ೧೫೮). [ವೀರ + ಕಾಸೆ$_1$]

**ವೀರಗುಣ** (ನಾ). ಶೂರಸ್ವಭಾವ ; ಶೌರ್ಯ ; ಪರಾಕ್ರಮ : ವಸುಮತಿ ಸಾಕ್ಷಿ ಧೀರತೆಗೆ . . . ಸಾಹಸಕೆ ನಿಜಾಸಿ ಸಾಕ್ಷಿಗಳ ವೀರಗುಣಕ್ಕೆನೆ ಮತ್ತ ಪೆಂಪಿಗೆನ್ನಿಸ ಕಮೆನೆಯ್ದೆ ಬಿತ್ತರಿಪರಾಗ್ಗ್ರಳ ಭಾಸ್ಕರದಣ್ಣನಾಥನಂ (ಸೌಇಇ. XX, ೪೭-೩೨ ; 1072).

[ಸಂ.]

**ವೀರಗೆಲಸ** (ನಾ). ಶೌರ್ಯದಿಂದ ಕೂಡಿದ ಕೆಲಸ ; ಸಾಹಸದ ಕಾರ್ಯ : ವೀರಗೆಲಸದ ಷೋಡಶರಿಗೆಯು ತೇರಸಗಣಂಗಳಿಗೆ ನಮಿಸಿಯಪಾರಪರಿಯಲಿ ಹರಸಿಕೊಂಡಹೆವೆನ್ನದೆ (ಬಸವು. ೪೮-೧೮). [ವೀರ + ಕೆಲಸ]

**ವೀರಗೋಷ್ಠಿ** (ನಾ). ಪರಾಕ್ರಮಿಗಳ ಸಭೆ ; ವೀರರ ಕೂಟ : ಬಾಹುಬಲಿಕುಮಾರನ ವಿಜಯಸ್ಕಂಧದೊಳ್ ಮಸೆಯಿಪ ಶಸ್ತ್ರಕೋಟಿ ಸಮಕಟ್ಟುವ ಸನ್ನಣಂ . . . ಎಸೆವುಗ್ರರಣಾನಕ ರೌದ್ರಘೋಷಮೇರ್ವ್ಯಸನಮನುಂಟುಮಾಡಿದುದು ಪಂದೆಗಮಂದಿನ ವೀರಗೋಷ್ಠಿಯೊಳ್ (ಆದಿಪು. ೧೪-೯೦). [ಸಂ.]

**ವೀರಚಕ್ರ** (ನಾ). ವೀರರ ಸಮೂಹವನ್ನುಳ್ಳವನು : ಅಂತು ನಿಖಿಲ ಜಗದಾಶ್ಚರ್ಯಶೌರ್ಯರಸ ಬಹುಲಬಾಲಕ್ರೀಡಾಚಮತ್ಕಾರಿತವೀರಚಕ್ರನುಂ ನಿಜೋದಯಾನಂದಿತ ಜಗಚ್ಚಕ್ರನುಮಾಗಿ ಯೌವನಪ್ರಾಪ್ತನಾಗೆ (ಆದಿಪು. ೮-೪೨ ವ).

[ಸಂ.]

**ವೀರಚರಿತ** (ನಾ). ವೀರೋಚಿತವಾದ ನಡವಳಿಕೆ ; ಶೌರ್ಯಸ್ವಭಾವ : ಉದಾರವೀರಚರಿತನಿರತಕದನಕರ್ಕಶಕ್ಷತ್ರಿಯಂಗೆ ವಿಪಕ್ಷ ಕ್ಷತ್ರಿಯ ಪರಾಕ್ರಮಾಕರ್ಣ ನೋದೀರ್ಣ ಕ್ರೋಧದೊಳಳೀಕಭ್ರುಕುಟಿಯುಂ . . . ನಿಷ್ಕಾರಣಕಾಯಕಂಪನಮುಂ ನಿರಾಲಂಬನ ವಾಗಾಡಂಬರಮುಂ ತಕ್ಕುದಲ್ತು (ಆದಿಪು. ೧೪-೮೧ ವ). [ಸಂ.]

**ವೀರಚಿಮ್ಮುರಿ** (ನಾ). ವೀರರು ಧರಿಸುವ ರುಮಾಲು, — ಶಿರಸ್ತ್ರಾಣ : ಸುತ್ತಿದ ವೀರಚಿಮ್ಮುರಿಯ ವಜ್ರಾಂಗಿಯನೆತ್ತಿದ ಬ್ರಹ್ಮರಂಧ್ರದಲಿ ಕೆತ್ತಿದುವಸುರೇಶನ ಮಾರ್ಗಣ ನೆಗ್ಗೊತ್ತಿದುವಧಟಯಾದವರ (ಮೋಹತ. ೪೦-೪೯) ; ಪೂವಿಲ್ಲ ತಾ ಪತಿಯ ಚಲ್ಲಣಮಂ ತೊಟ್ಟು ತೀವಿ ಕಾಸೆಯ ಬಿಗಿದು ವೀರಚಿಮ್ಮುರಿ ಸುತ್ತಿವೋವಿ ಕತ್ತುರಿ ತಿಲಕವಿಟ್ಟು ಪೂಸರ ಮುಡಿದು ಗೀರುಗಂಧವನು ಧರಿಸಿ (ನವಮೋ. ೧೨-೩೨).

[ವೀರ + ಚಿಮ್ಮುರಿ]

**ವೀರಚೌಪದಿ** (ನಾ). [ಛಂದ] ನಾಲ್ಕುಪಾದಗಳುಳ್ಳ ಒಂದುಬಗೆಯ ಚೌಪದಿ, — ಸೀಸಪದ್ಯ : ಕನ್ನಡದ ಕಿರಿಸೀಸ . . . ಈ ಬಗೆಯ ಸೀಸದ ಛಂದೋಬಂಧವನ್ನು 'ವೀರಚೌಪದಿ' ಎಂದು ಕರೆಯುವುದುಂಟು (ಛಂದೋವಿ. ೨೧೧) ; ಕೆಳಗಿನದು ಪ್ರಾಸಬದ್ಧವಾಗಿರುವ ವೀರಚೌಪದಿ (ಸಂಶೋಧ. ೧೩೪) ; ಇದರಲ್ಲಿಯ ಪದ್ಯಗಳು ದ್ವಿಪದಿಗಳು, ಇಲ್ಲವೆ ಚೌಪದಿಗಳು, ಇಲ್ಲವೆ ವೀರಚೌಪದಿಗಳೆಂಬ ಕುಸುಮಷಟ್ಪದಿಯ ಭೇದಗಳು (ಕವಪು. ಪೀಠಿಕೆ). [ವೀರ + ಚೌಪದಿ]

**ವೀರಜನನಿ** (ನಾ). ವೀರನನ್ನು ಹೆತ್ತ ತಾಯಿ : ವೀರಮಾತೆ : ನಿನ್ನಂ ಪೆತ್ತಳ್ ಮೊಲೆವೆತ್ತಳೆ ವೀರಜನನಿವೆಸರಂ ಪೆತ್ತಳ್ (ಗದಾಯು. ೪-೫೫). [ಸಂ. ವೀರಜನನೀ]

**ವೀರಡೌಡೆ** (ನಾ). ಯುದ್ಧಸಮಯದಲ್ಲಿ, ಯುದ್ಧೋತ್ಸಾಹ,

ವೀರಾವೇಶಗಳನ್ನುಂಟುಮಾಡಲು ಬಾರಿಸುವ ಒಂದುಬಗೆಯ ಚರ್ಮವಾದ್ಯ ; ರಣಭೇರಿ : ಎತ್ತ ನೋಡಿದರತ್ತ ಬೊಂಬಾಳ ಕೈದೀಪ ಸುತ್ತ ಭೇರಿಯು ವೀರಡೌಡೆ (ದೇವಾಂಪು. ೬-೧೬೨). [ವೀರ + ಡೌಡೆ (< ಡವುಡೆ₁)]

**ವೀರಣ₁, ಬೀರಣ** (ನಾ). (ಮದುವೆ ಮುಂತಾದ ಶುಭಸಮಯಗಳಲ್ಲಿ ಬಳಸುವ) ಒಂದು ಬಗೆಯ ದೊಡ್ಡಹರೆ, — ಚರ್ಮವಾದ್ಯ : ವೀ[ಪಾಠಾಂ. ಬೀ]ರಣ ತಂಬಟ ಹಚಿ . . . ನಿಸ್ಸಾಳ ಬೊಬ್ಬೆಯ ದನಿ ತುಂಬಿದು ದಂಡೆಣ್ದೆಸೆಯನು (ಸೂಬಸೋ. ೫-೪೩) ; ತಱಿದರು ಹೋರಿ ಕುಱಿ ಕೋಣಗಳ ಬೊಬ್ಬೆಯ ವೀರಣದ ಬೊಗ್ಗುಗಳ ಲಗ್ಗೆಯಲುಭಯಪಾರ್ಶ್ವದಲಿ (ತೊರಶಾ. ೬-೨೦-೨೮) ; ತಿತ್ತಿರಿ ಕಾಳೆ ವೀರಣ . . . ವೀರವೃಂದದ ನಾದ ತುಂಬಿತೀರೈದು ದಿಕ್ಕಿನೊಳು (ಭರಚ. ೩೧-೫೯). **ಬೀರಣ₁** : ಬೀರಣ ಡೌಡೆ . . . ಕಹಳೆಗಳು ಸಡಗರಂಬೆತ್ತು ನಾನಾವಾದ್ಯದಬ್ಬರ ವಿರಾಜಿಸಲು (ರಾಘಚ. ೧೯-೫೮). [ದೇ. ‖ ತಮಿ. ವೀರಾಣ ; ತೆಲು. ವೀರಣ, ವೀರಾಣ]

**ವೀರಣ₂** (ನಾ). ಒಂದು ಬಗೆಯ ಸುಗಂಧಯುಕ್ತವಾದ ಹುಲ್ಲು ; ಲಾಮಂಚ : "ವೀರಣಂ, ವೀರತರಂ — ೨ ಮರಕಬ್ಬಿನ ಪೆಸರುಗಳು, ಕೆಲವರು ಲಾಳೀಕಡ್ಡಿ ಯನ್ನುವರು, ಕೆಲವರು ಹುಲ್ಲಾಳೀ ಕಡ್ಡಿಯನ್ನುವರು" (ಸಿದ್ಧಾಂತಿ. ೧೫೦). [ಸಂ.]

**ವೀರತನ** (ನಾ). ಶೂರತನ ; ಪೌರುಷ : ಜನನಾಥಂ ಬಿದ್ದರಸಂಗನುನಯದಿಂ ಲೆಂಕವಳಿಯೊಳು ವೀರತನಂ ತನಗೆನಿಸಿ ಬೀ[ರ]ಡೊಂಗಿನ ಬಸವಂ ಕೊಟ್ಟು ಪಡೆದ[o] ಸಗ್ಗದ ಸುಖವನು (ಮೈಅರಿ. ೧೯೪೩, ೩೩-೫ ; ಸು. 1217) ; ಪುರುಷನ ಭಾವಂ, ಪುರುಷತನಂ, ಏವಂ ವೀರತನಂ, ಶೂರತನಂ, ಬಲ್ಲತನಂ (ಶಬ್ದಾನು. ೪೩೦ ಪ್ರಯೋ). [ವೀರ + - ತನ]

**ವೀರತರ** (ನಾ). ೧. ಶ್ರೇಷ್ಠನಾದ ವೀರ ; ಅತಿಶಯಶೂರ. ೨. = ವೀರಣ₂ : "ವೀರಣಂ, ವೀರತರಂ — ೨ ಮರಕಬ್ಬಿನ ಪೆಸರುಗಳು, ಕೆಲವರು ಲಾಳೀಕಡ್ಡಿ ಯನ್ನುವರು, ಕೆಲವರು ಹುಲ್ಲಾಳೀಕಡ್ಡಿಯನ್ನುವರು" (ಸಿದ್ಧಾಂತಿ. ೧೫೦). [ಸಂ.]

**ವೀರತರು** (ನಾ). ೧. ಒಂದು ಬಗೆಯ ಮರ ; ಅರ್ಜುನವೃಕ್ಷ ; ಕೆಂಪು ಮತ್ತಿಮರ : "ನದೀಸರ್ಜಃ, ವೀರತರುಃ, ಇಂದ್ರದ್ರುಃ, ಕಕುಭಃ, ಅರ್ಜುನಃ — ೫ ತೋರಮತ್ತೀಗಿಡ, ಕೆಂಪುಮತ್ತೀಗಿಡ, ರಕ್ತಾರ್ಜುನವೃಕ್ಷ" (ಸಿದ್ಧಾಂತಿ. ೧೨೨). ೨. ಬಿಲ್ವಪತ್ರೆಮರ ; ಬಿಲ್ವವೃಕ್ಷ. [ಸಂ.]

**ವೀರತಾಂಬೂಲ** (ನಾ). ಯುದ್ಧಕ್ಕೆ ಹೊರಟುನಿಂತ ವೀರರಿಗೆ ಶುಭ ಹಾರೈಸಿ ಕೊಡುವ ತಾಂಬೂಲ,— ವೀಳೆಯ : ಅರಸನು ತನ್ನ ಹಸ್ತದಿಂದಲೇ ವೀರ ತಾಂಬೂಲವನ್ನು ಕೊಟ್ಟು ಸಂಭಾವಿಸಿ ಕಳುಹಿಸಿಕೊಟ್ಟನು (ನಡೆದಾ. II, ೧೪೭೦). [ಸಂ.]

**ವೀರತಿಕೆ** (ನಾ). = ವೀರತನ : ಅಂದೆ ರಾವಣ ಕೊಲಲು ನೇಮಿಸೆಯೆಂದ ವಿಭಿಷಣರಾಯ ಕೇಳಾ ಮುಂದೆ ಕಾಡುವ ವೀರತಿಕೆಯಿದಱಿಂದ ಲಘುವಹುದೇ (ಕೌಶಿರಾ. ೧೧-೫೩). [ವೀರತೆ + - ಇಕೆ]

**ವೀರತೆ** (ನಾ). = ವೀರತನ : ಧರಣಿಯೊಳು ಷೋಡಶಗಣಂಗಳ ನಿರತ ವೀರತೆಗೊಲಿದು ಬ್ರಹ್ಮೇಶ್ವರನು ನೆಲಗೊಂಡಿದ್ದನಲ್ಲಾ ಪೀಠಮಧ್ಯದಲಿ (ಬಸಪು. ೫೪-೭೭) ; ವರಶುಚಿ ವೀರರಾಮನ ಚರಿತವನಿದನೊರೆವನೊಲಿದು ಸತ್ಪುರುಷರು ಇರದಾದರಿಪುದು ಶುಚಿತೆ ವೀರತೆ ಬಂದು ದೊರೆಕೊಂಬುದು (ಕುರಾಸಾಂ. ೧-೮೯). [ಸಂ. ವೀರತಾ]

**ವೀರತ್ವ** (ನಾ). = ವೀರತನ : ಚಿತ್ತದೊಳಗೆ ಕ್ಲೇಶದಿಂದುದ್ಧತ್ ತಪೋವೀರತ್ವ ದಿಂದಂ ತತ್ವಮವನೇ ಧೂಪವಂ ಮಾಡಿನನಲಾ ಕೂರ್ತು (ಬಸಪು. ೪೪-೪೯). [ಸಂ.]

**ವೀರದಂಬುಲ** (ನಾ). = ವೀರತಾಂಬೂಲ : ಕೈಯಂ ನೀಡಿ ಬೆಸನಕ್ಕಾಱೆನ್ನದ ವೀರದಂಬುಲವಂ ಕೊಳುತಲಾಗ (ಬಸಪು. ೬೦-೬೧). [< ಸಂ. ವೀರತಾಂಬೂಲ]

**ವೀರದಾಸತ್ವ** (ನಾ). ಸಜ್ಜನತ್ವದ ಆರುವಿಧಗಳಲ್ಲಿ ಒಂದು : ದಾಸತ್ವ ವೀರದಾಸತ್ವ ಭೃತ್ಯತ್ವ ವೀರಭೃತ್ಯತ್ವ ಸಮಯಾಚಾರತ್ವ ಸಕಲಾವಸ್ಥಾತ್ವಂಗಳೆಂಬ ಷಡ್ವಿಧ ಸಜ್ಜನತ್ವ ಯುಕ್ತನಾಗಿ (ವಿವೇಕ. ೯೭). [ಸಂ.]

**ವೀರಧರ್ಮ** (ನಾ). ವೀರರಿಗೆ ಉಚಿತವಾದ ಧರ್ಮ ; ಶೌರ್ಯೋಚಿತವಾದ ನಡವಳಿಕೆ : ಇವರೆಲ್ಲ ಮಹಾತ್ಯಾಗಜೀವಿಗಳು, ವೀರಧರ್ಮವನ್ನು ಪಾಲಿಸಿದವರು (ಭಾರದ. ೪೮೯). [ಸಂ.]

**ವೀರನೂಪುರ** (ನಾ). ಶೂರರಾದವರು ಕಾಲಿಗೆ ಧರಿಸುವ ಒಂದು ಬಗೆಯ ಕಡಗದಂತಹ ಆಭರಣ ; ಪೆಂಡೆಯ : ಸಂದಣಿಯ ಸುಕರದ ಕೈದುಗಳ ವರ ವೀರನೂಪುರದ ಕುಣಿವ ಸುರಗಿಯ ಪಳಹರದ ಡೊಂಕಣಿಯ ಭೇದಿಪ ಖಡ್ಗ ಬಿಲು ಬಲುಗಣೆಯ ಸಂಖ್ಯೆಯ ಕೈದುಗಳ ಕಾಲಾಳ ನೋಡಿದರು (ಕುವ್ಯಾಉ. ೧೧-೧೭). [ಸಂ.]

**ವೀರನೇವುರ** (ನಾ). = ವೀರನೂಪುರ : ಹಾರ ಹಱಿದುದು ಕರ್ಣಪೂರದ ಚಾರುಮಣಿಗಳು ಸಡಲಿದುವು ಪದವೀರನೇವುರ ನೆಗ್ಗಿದವು ಕುಗ್ಗಿದವು ನೆನಹುಗಳು (ಕುವ್ಯಾಆ. ೧೪-೬). [ವೀರ + ನೇವುರ]

**ವೀರಪಟಹ** (ನಾ). ಪರಾಕ್ರಮಸೂಚಕವಾದ ತಮಟೆವಾದ್ಯ : ವೀರಪಟಹದ ದುಂದುಭಿಯ ಡಂಬರದ ರವವಳ್ಳಿಱಿದುದಂಬರವ (ಕುವ್ಯಾಆ. ೧೩-೨೮). [ಸಂ.]

**ವೀರಪಟ್ಟ** (ನಾ). ಸೇನಾಧಿಪತಿಯ ಅಧಿಕಾರ, ಪದವಿ ಮತ್ತು ಆ ಅಧಿಕಾರದ ಸೂಚಕವಾಗಿ ಹಣೆಗೆ ಕಟ್ಟುವ ಪಟ್ಟಿ,— ಫಲಕ : ಸುಲಿಪಲ್ ತಟ್ಟಲ ತಾರಕಾವಯವಮಂ ಪೀನಂ ಲಲಾಟಾಗ್ರದೊಳ್ ನೆಲೆಗೊಂಡೊಪ್ಪುವ ವೀರಪಟ್ಟ ಮುದಯಂಗೆಯ್ವಿಂದುವಂ . . . ವಕ್ತ್ರಾರುಣಂ ಸಂಜೆಯಂ ಗೆಲೆ ಪೋಲ್ತತ್ತು ತಳಪ್ರಹಾರಿಯ ಶಿರಂ ಹೇಮಾದ್ರಿಯಾಕಾರಮಂ (ಕಾವ್ಯಸಾ. ೫೨೫ ಶೂದ್ರಕ) ; ಇವರಿನ್ನುಮಾಂತಿಱಿವರೆಂದು ವಿಮೋಹಿಸಿ ವೀರಪಟ್ಟಮಂ ಬಗೆಯದೆ ಕಟ್ಟಿದೈ (ಪಂಪಭಾ. ೧೦-೧೭) ; ವೀರಪಟ್ಟವನತುಳ ಬಲಭೀಷ್ಮಂಗೆ ಕಟ್ಟುವೆನೆನುತ ಕುರುರಾಯ ಮತದ ನಿಶ್ಚಯದಿಂದ ಗುರು ಗುರುಸುತನ ಕಳುಹಿದನು (ಕುವ್ಯಾಭೀ. ೧-೧೫). [ಸಂ.]

**ವೀರಪಟ್ಟೆ** (ನಾ). = ವೀರಪಟ್ಟ : ಪ್ರತಿಗರುಡಿಕಾಱ ಬಿರುದ ಪಾಡಿಂಗೆ ಒದಗಲು ವೀರಪಟ್ಟೆಯ ಕಟ್ಟಿ ತಿಗುರನೇಱಿಸಿಕೊಂಬೆ (ಬಸವ. ೭೦೧). [< ವೀರಪಟ್ಟ]

**ವೀರಪಣ** (ನಾ). = ವೀರತನ : ಒಡ್ಡವಣೆ, ಚಡ್ಡಣೆ . . . ಪಾರುಖಾಣೆ ಎಂಬ ಶಬ್ದಗಳೂ ಅವುಗಳ 'ಣೆ' ಅಂತ್ಯವೂ ವೀರಪಣ, ಜಾಣಪಣ, ವಿಸ್ತಾರಪಣ ಈ ಭಾವನಾಮಗಳಲ್ಲಿಯ 'ಪಣ' ಉಪಪದವೂ ಮರಾಠಿಯ ಕಂಡಿತವಾದ ಪ್ರಭಾವವನ್ನು ತೋರಿಸುತ್ತವೆ (ಕಸಾಚ. ೨೮೧). [ವೀರ + - ಪಣ₅]

**ವೀರಪತ್ನಿ** (ನಾ). ಶೂರನ ಹೆಂಡತಿ ; ಪರಾಕ್ರಮಿಯ ಸತಿ : ವೀರಪತ್ನೀನಿವಹಕ್ಕಾ ನಂದ ಬಾಷ್ಪಾವಳಿಯನೆ ಕುಚದೊಳ್ ಹಾರಮಂ ಮಾಡುತುಂ ಭೂಭುವನಾಂತರ್ಭಾಗಮಂ ಪರ್ವಿದುದು ಸಮರಸನ್ನಾಹಭೇರೀನಿನಾದಂ (ಆದಿಪು. ೧೪-೮೭) ; ಸತೀಸಂಯುಕ್ತೆ ಪೃಥ್ವೀರಾಜನ ವೀರಪತ್ನಿ (ಭಾರದ. ೪೮೯). [ಸಂ. ವೀರಪತ್ನೀ]

**ವೀರಪದಕ** (ನಾ). ವೀರತ್ವವನ್ನು ಸೂಚಿಸುವ ಪದಕ : ರಾಗ ಮಿಗೆ ಮೈಯ್ಯೊಳಂ ಗೀರು ಗಂಧಮ ಧರಿಸುತಾಗ ವುರಸ್ಥಳದಿ ವೀರಪದಕಂ ಮೆರೆಯೆ ಸಾಗಿ ಮರಬಿಲ್ಲು . . . ಚಾಯಿಲಗಳಂ ಪಿಡಿದಡಿಯೊಳು ಬಿಗಿದು (ನವಮೋ. ೧೭-೧೨). [ಸಂ.]

**ವೀರಪಲಗೆ** (ನಾ). = ವೀರಡೌಡೆ : ವೀರಪಲಗೆಗಳಂ ಆ ವಿಗಡರಡಿಗಡಿಗೆ ತಾಟಿಪ ರಾವ ರಭಸದ ಬೊಬ್ಬೆಗಳಿಗೆ ದಿಶಾವರರು ನಡುನಡುಗೆ (ಬಸಪು. ೫-೪೦). [ವೀರ + ಪಲಗೆ]

**ವೀರಪವಾಡ** (ನಾ). ಧರ್ಮಾಂಧತೆಯಿಂದ ಕೂಡಿದ, ಕ್ರೂರವಾದ ಮತ್ತು ಉಗ್ರವಾದ ಕ್ರಿಯೆ; ವಿಷ್ಣು, ರುದ್ರ ಮುಂತಾದ ದೇವರ ಹೆಸರಿನಲ್ಲಿ ಹೊಟ್ಟೆಯನ್ನು ಸೀಳಿಕೊಳ್ಳುವುದು, ಕುತ್ತಿಗೆಯನ್ನು ಕತ್ತರಿಸಿಕೊಳ್ಳುವುದು ಮುಂತಾದ ಆಚರಣೆಗಳ ಭೀಕರಕ್ರಿಯೆ : (೬). [ವೀರ + ಪವಾಡ₁]

**ವೀರಪಳಿ** (ನಾ). ವೀರರು ಉಡುವ ವಸ್ತ್ರ ; ಶೂರರ ಉಡುಗೆ ; ವೀರಗಚ್ಚೆ : ಮುಂಚೆಱಿಗನಳವಡಿಸಿ ವೀರಪಳಿಯಂ ಬಿಗಿದು . . . ತೇರಂ ಜಯನಿನಾದದಿಂದೇಱಿದಂ ಸಮರಕೆ ಧನಂಜಯಂ (ಜೈಮಿಭಾ. ೧೨-೫೦). [ವೀರ + ಪಳಿ₄ (< ಪಟಿ₅)]

**ವೀರಪಾಂಚಾಳ** (ನಾ). ಪಾಂಚಾಳರಲ್ಲಿ ಒಂದು ಪಂಗಡದ ಹೆಸರು : ಸಮಸ್ತ ವೀರಪಾಂಚಾಳ XXX ರು ಕೂಡಿ . . . ಕೊಟ್ಟ ಸಿಲಾಸಾಸನದ ಕ್ರಮವೆಂತೆಂದಡೆ (ಎಕ. IX, ಮಾಗಡಿ. ೧೫-೨೭ ; 1315). [ಸಂ. ವೀರಪಾಂಚಾಲ]

**ವೀರಪಾತಕ** (ನಾ). ವೀರರನ್ನು ಹೊಗಳುವವನು ; ಸ್ತುತಿಪಾಠಕ : ಹಾರುವರ ಹರಕೆಗಳನಾಮುತ ವೀರಪಾತಕರೊಲವ ಸಲಿಸುತ ನಾರಿಯರು ನಲವಿಂದ ಮುತ್ತಿನ ಸೇಸೆಗಳ ತಳಿಯೆ (ಕೌಶಿರಾ. ೩೩-೪೪). [ಸಂ.]

**ವೀರಪಾಣ** (ನಾ). ಯೋಧರು ಯುದ್ಧಮಾಡುವ ಮೊದಲು ಅಥವಾ ನಂತರ ತೆಗೆದುಕೊಳ್ಳುವ ಉತ್ತೇಜಕವಾದ ಮಾದಕಪಾನೀಯ : "ವೀರಪಾಣಂ – ೧ . . . ಕಾಳಗ ನಡೆಯುತ್ತಿರುವಾಗಲೂ ಮುಂದೆ ನಡೆಯ ಬೇಕಾಗಿರುವಾಗಲೂ ವೀರಭಟರು ಆಯಾಸವಿಲ್ಲದೆ ಸ್ಥಿರವಾಗಿರುವದಕ್ಕೆ ಮಾಡುವ ಮದ್ಯಪಾನದ ಹೆಸರು" (ಸಿದ್ಧಾಂತಿ. ೨೮೯). [ಸಂ.]

**ವೀರಪುಂಗವ** (ನಾ). ವೀರರಲ್ಲಿ ಶ್ರೇಷ್ಠನಾದವನು ; ಮಹಾಪರಾಕ್ರಮಿ : ಕೊಡು ಕೊಡು ರಾಯನಪ್ಪಣೆಯನೆಂದುಱೆ ಬೇಡಿದರಂದು . . . ಬಿಂಕದ ಭೀಕರ ವೀರಪುಂಗವರ್ (ಹಮ್ಮೀರ. ೩-೩೭) ; ವೀರಪುಂಗವನು ಜ್ಞಾನಿಪುಂಗವನ ಬಳಿಗೆ ಬಂದಿದ್ದಾನೆ (ಮಹಾನಾ. ೧೭). [ಸಂ.]

**ವೀರಪುರುಷ** (ನಾ). ಶೂರನಾದವನು ; ಪರಾಕ್ರಮಿ : "ಶೂರಂ ವಿಕ್ರಾಂತಂ ಕಲಿ ಚಾರಭಟಂ ವೀರಪುರುಷನಾತಂಗೆ ಪೆಸರ್" (ವಸ್ತುಕೋ. ೧೦೦-೧೨). [ಸಂ.]

**ವೀರಪೂಜೆ** (ನಾ). ವೀರರಾದವರ ಬಗ್ಗೆ ಇರುವ ಪೂಜ್ಯಭಾವನೆ : ಹುಟ್ಟಿದ ಒಡನೆ ಮಕ್ಕಳಲ್ಲಿ ಬೆಳೆದು ಬರುವ ವೀರಪೂಜೆಯ ಈ ಒಲವು ತಮತಮಗೆ ಇಷ್ಟವಾದ ಮಹಾಪುರುಷರನ್ನು ಅರಸುವಂತೆ ಆಯ್ದುಕೊಳ್ಳುವಂತೆ ಅವರನ್ನು ಬಲವತ್ತರವಾಗಿ ಪ್ರೇರಿಸುವುದು (ಕಥಕ. ೩೭). [ಸಂ. ವೀರಪೂಜಾ]

**ವೀರಪೆಂಡೆಯ** (ನಾ). = ವೀರನೂಪುರ : ಬಲಗಾಲಿನ ವೀರಪೆಂಡೆಯ ಅವನ ಉನ್ನತಪದವಿಯನ್ನು ಸೂಚಿಸುತ್ತಿದ್ದವು (ರೂಲೇಖಾ. ೫). [ವೀರ + ಪೆಂಡೆಯ]

**ವೀರಬಣಂಜ** 'ವೀರಬಣಜ' ನೋ.

**ವೀರಬಣಂಜಧರ್ಮ, ವೀರಬಳಂಜಧರ್ಮ** (ನಾ). ವರ್ತಕರ ಧರ್ಮ : ಸತ್ಯಸೌಚಾಚಾರ ಚಾರಿತ್ರ ನಯವಿನಯವಿಜ್ಞಾನ ವೀರಬಣಂಜಧರ್ಮಪ್ರತಿಪಾಳಕ . . . ಭುವನಪರಾಕ್ರಮೋನ್ನತರುಂ (ಸೌಇ. XV, ೧೧೭-೫ ; 1166) ; ಸತ್ಯ ಸೌಚ ಚಾರು ಚಾರಿತ್ರ ನಯವಿನಯವಿಭೂನವೀರಬಣಂಜಧರ್ಮ್ಮ ಪ್ರತಿಪಾಳಕರು (ಕಇ. ೧೨೩-೩೨-೭ ; 1182). **ವೀರಬಳಂಜಧರ್ಮ** : ವೀರಬಳಂಜಧರ್ಮ್ಮಪ್ರತಿಪಾಳನವಿಶುದ್ಧಗುಡ್ಡಧ್ವಜ ವಿರಾಜಿತಂ (ಎಕ.VII,ಶಿಕಾರಿ. ೯೪-೮; 1094); ಸತ್ಯ ಸೌಚಾಚಾರ [ಚಾರು] ಚಾರಿತ್ರ ನಯವಿನಯ ವಿಜ್ಞಾನ ವೀರಬಳಂಜಧರ್ಮ್ಮ ಪ್ರತಿಪಾಳಕರುಂ (ಕಇ. ೪೪-೬೩-೧೧; 1229). [ವೀರಬಣಂಜ (< ವೀರಬಣಜ) + ಧರ್ಮ]

**ವೀರಬಣಂಜು, ವೀರಬಳಂಜು, ವೀರಬಟಂಜು** (ನಾ). ಕರ್ನಾಟಕದಲ್ಲಿದ್ದ ಪ್ರಾಚೀನವಾದ ವ್ಯಾಪಾರಿಸಂಸ್ಥೆ ಮತ್ತು ಅದಕ್ಕೆ ಸೇರಿದ ವ್ಯಕ್ತಿ: ಸತ್ಯ ಶೌಚಾಚಾರ ಚಾರುಚಾರಿತ್ರನಯವಿನಯ ವಿಜ್ಞಾನವೀರಾವತಾರ ವೀರ ಬ[ಣಂ]ಜುಗ[ಸ]ಮಯಧರ್ಮ್ಮಪ್ರತಿಪಾಳನವಿಶುದ್ಧಗುಡ್ಡಧ್ವಜವಿರಾಜಿತಾನೂನ ಸಾಹಸೋತ್ತುಂಗರುಂ ಪುಣ್ಯಪ್ರಸಂಗರುಂ (ಎಇ. XIX, ೨೫-೫೭ ; 1245) ; ಈ ವೀರಬಣಂಜುಗಳು ಪ್ರಾಚೀನಕರ್ನಾಟಕದಲ್ಲಿ ಅತ್ಯಂತ ಪ್ರಭಾವಶಾಲಿಗಳಾಗಿದ್ದ ವ್ಯಕ್ತಿಗಳಾಗಿದ್ದರು (ಕಶಾಅ. ೩೮೦). **ವೀರಬಳಂಜು** : ಉಳಿದ ಶಾಸನಗಳಲ್ಲಿ ವೀರ ಬಳಂಜು, ವೀರಬಟಂಜು ಎಂಬ ರೂಪಗಳೂ ದೊರಕುತ್ತವೆ (ಕಶಾಅ. ೩೮೦ ಅಡಿಟ). Δ **ವೀರಬಟಂಜು** : ಸತ್ಯಶೌಚ ಚಾರುಚರಿತ್ರ ನಯವಿನಯವಿಜ್ಞಾನ ವೀರಬಟಂಜು XXX ಧರ್ಮಪ್ರತಿಪಾಳನ . . . ಪರಾಕ್ರಮೋಂನತ ವಾಸುದೇವ ಖಣ್ಣಳೀಮೂಳ ಭದ್ರೋ[ದ್ಭ]ವರ್ (ಸೌಇ. XV, ೧೨೪-೩೪ ; 1174). [ವೀರ + ಬಣಂಜು (< ಬಣಜು)]

**ವೀರಬಣಂಜುಧರ್ಮ, ವೀರಬಳಂಜುಧರ್ಮ** (ನಾ). = ವೀರಬಣಂಜಧರ್ಮ : ಸತ್ಯಶೌಚಾಚಾರ ಚಾರುಚರಿತ್ರ ನಯವಿನಯ ವಿಜ್ಞಾನ ವೀರಬಣಂಜುಧರ್ಮ ಪ್ರತಿಪಾಳ ವಿಶುದ್ಧಗುಡ್ಡಧ್ವಜವಿರಾಜಮಾನ . . . ಭುವನಪರಾಕ್ರಮೋಂನತರುಂ (ಎಕ. VII, ಶಿಕಾರಿ. ೧೧೮-೨೭ ; 1054) ; ನಯವಿನಯ ವೀರಬಣಂಜುಧರ್ಮ್ಮಪ್ರತಿಪಾಳನ . . . ಭುವನಪರಾಕ್ರಮೋಂನತರುಂ (ಸೌಇ. XX, ೬೩-೩ ; 1098) ; ವರ್ತಕರು ತಮ್ಮ ಜಾತಿಯನ್ನು 'ವೀರಬಣಂಜುಧರ್ಮ' ಎಂದು ಕರೆದುಕೊಳ್ಳುವುದುಂಟು (ಕಶಾಅ. ೩೮೦). **ವೀರಬಳಂಜುಧರ್ಮ** : ಸತ್ಯಸೌಚಾಚಾರಚಾರುಚಾರಿತ್ರಾನೇಕಗುಣ XXX ನೂನ ವೀರಬಳಂಜುಧರ್ಮ್ಮ ವಿಸುದ್ಧ ಗುಡ್ಡಧ್ವಜವಿರಾಜಮಾನ . . . ಭುವನ ಪರಾ ಕ್ರಮೋನ್ನತರುಂ (ಸೌಇ . XX, ೧೧೨-೨೪; 1144 ?). [ವೀರಬಣಂಜು + ಧರ್ಮ]

**ವೀರಬಣಜ, ವೀರಬಣಂಜ, ವೀರಬಳಂಜ** (ನಾ). = ವೀರಬಣಂಜು : ಶಿಲಾಶಾಸನಗಳಿಂದ ಸ್ಥಳೀಯಶಾಖೆಗಳು ಕನ್ನಡದಲ್ಲಿ 'ವೀರಬಣಜ' ತಮಿಳಿನಲ್ಲಿ 'ವೀರವಳಂಜಿಯಾರ್' ಎಂದು ಕರೆಯಲ್ಪಡುತ್ತಿದ್ದಂತೆ ಕಂಡುಬರುತ್ತದೆ (ದಭಾಇ. ೧೧೧). **ವೀರಬಣಂಜ** : 'ವೀರಬಣಂಜಧರ್ಮ' ಪರಾ. **ವೀರಬಳಂಜ**: 'ವೀರಬಳಂಜಧರ್ಮ' ಪರಾ. [ವೀರ + ಬಣಜ]

**ವೀರಬಲ** (ನಾ). ಶೂರರ ಸೈನ್ಯ ; ಪರಾಕ್ರಮಿಗಳ ದಂಡು : "ವೀರಬಲಮಂ ಸರ್ವಸನ್ನಾಹಮೆಂಬುದು" (ಮಂಗರಾ. ೧೪೦-೮). [ಸಂ.]

**ವೀರಬಳಂಜ** 'ವೀರಬಣಜ' ನೋ.

**ವೀರಬಳಂಜು** 'ವೀರಬಣಜು' ನೋ.

**ವೀರಬಳಂಜುಧರ್ಮ** 'ವೀರಬಣಂಜುಧರ್ಮ' ನೋ.

Δ **ವೀರಬಟಂಜು** 'ವೀರಬಣಂಜು' ನೋ.

**ವೀರಬ್ರತ** (ನಾ). ಕಠಿಣವಾದ ವ್ರತ, – ನೋಂಪಿ : ಗುಜ್ಜಿಗನೂರ ಪ್ರಭುಗಾವುಣ್ಡುಗಳು ಕುವಪ್ಪಾರ ಬಮ್ಮನ ತಲೆ ಪೂಸದನ್ನವುಣದ ವೀರಬ್ರತವು ಕಯ್ಕೊಣ್ಡು ಪ್ರತಿಷ್ಠೆಯಂ ಮಾಡಿಸಿದ ಕುಮ್ಬೇಶ್ವರ ದೇವರಂಗಭೋಗಕ್ಕೆ . . . ಬಿಟ್ಟ ಗರ್ದೆ ಕಮ್ಮ ವಿನ್ನೂರು ೨೦೦ (ಎಕ. XI, ಹೊಳಲ್ಕೆ. ೬೮-೨೪ ; 1126). [< ಸಂ. ವೀರವ್ರತ]

**ವೀರಭಕ್ತ** (ನಾ). ಭಕ್ತಿಯಲ್ಲಿ ವೀರಭಾವವನ್ನು ಉಳ್ಳವನು : ವೀರಭಕ್ತ ಸಮುಚಿತ ಪರತಂತ್ರೋರುಪೂಜೆಯೊಳೊಲಿದೊಲಿದು ಮಾರಾರಿಗಣನಿತ್ಯಪ್ರಸಾದಾನುಭವ ಸೌಖ್ಯವನೆ ಹಾರಿ ಹಾರಿ (ಬಸಪು. ೬-೨೭). [ಸಂ.]

**ವೀರಭಕ್ತಿ** (ನಾ). ಆವೇಶಕರವಾದ ಭಕ್ತಿ : ಶ್ರೀ ಮಹಿತ ಕಲ್ಯಾಣದಲ್ಲಿಯ ಆ ಮಹಾತ್ಮನು ವೀರಭಕ್ತಿಯೊಳೊಪ್ಪಿ ವರ್ತಿಸಲು (ಬಸಪು. ೩೨-೧೧) ; ಈರರು ತಲೆಯ ಮೇಲೆ ಈರ್ಕೆಕಾಯಿ ಹೊಡೆದುಕೊಂಡು ತಮ್ಮ ವೀರಭಕ್ತಿಯನ್ನು ತೋರಿಸುವರು (ಜೋರೇದೇ. ೪೭). [ಸಂ.]

**ವೀರಭಟ** (ನಾ). ಶೂರನಾದ ಸೈನಿಕ, — ಯೋಧ : ವೀರಭಟರುದ್ಭಟಾರಭಟೀ ರಸರಿವರವರದೆನ್ನರುಂ ಸೆಣಸುವೊಡೇಕಾರಣವೊ ಚಕ್ರಮೇವುದೊ ವಾರಣಘಟೆ ದಂಡರತ್ನಮೇಗೆಯ್ವುದೋ (ಆದಿಪು. ೧೪-೨೭) ; ವೀರಭಟವಿತತಿಯೊಳ್ವೀರಭಟವಿತತಿ ಮದವಾರಣಪ್ರತತಿಯೊಳ್ವಾರಣಪ್ರತತಿ . . . ಆರಭಟೆಯಿಂದ ಕಾದುತ್ತಿ ರ್ದುದಾಯಿರ್ವರವನಿಪಾಲಕರ ಸೇನೆ (ಸಮ್ಮಕೌ. ೮-೪೮). [ಸಂ.]

**ವೀರಭದ್ರ** (ನಾ). ೧. ಶಿವನ ಮಗ ; ಒಂದು ಅವತಾರ ; ಶರಭ : ವಿಷವಟ್ಟ ಸುಡುವಲ್ಲಿ ವೀರಭದ್ರ ಕೊಲುವಲ್ಲಿ ಕೂಡಲಸಂಗಯ್ಯಂಗೆ ಶರಣೆಂದು ಮೊಱೆ ಯಿಟ್ಟರೆಲ್ಲರೂ (ಬಸವ. ೫೫೦); ವೀರಭದ್ರನ ಕೆಣಕಿ ಹೊಗುವರೆ ಮಾರಿಕವ್ವೆಯ ಮಱೆಯನೆಲೆ ಖಳ ಮಾರಮಥನನ ನೆರೆಯ ಹೊಕ್ಕರು ಬಿಡುವೆನೇ ನಿನ್ನ (ಕೌಶಿರಾ. ೩೭-೭೦). ೨. ಒಂದು ಮಹಾಮಂತ್ರದ ಹೆಸರು : ಗಾಯತ್ರಿ ಮೃತ್ಯುಂಜಯ ದಕ್ಷಿಣಾಮೂರ್ತಿ ನೀಲಕಂಠ ಶರಭ ವೀರಭದ್ರ [ಪಾಠಾಂ. ವೀರ] ವಿಘ್ನೇಶ್ವರ . . . ಸೂರ್ಯ ಭೈರವಾದಿ ಮಹಾಮಂತ್ರಂಗಳಂ . . . ಬೇಱೆ ಬೇಱೆ ವಿವೇಕಿಸಿ ನೋಡಿ (ವಿವೇಕ. ೭೫).

. **ವೀರಭದ್ರರಸ** = ಒಂದು ಬಗೆಯ ಔಷಧ : ವೀರಭದ್ರರಸಂ : — ನಾಭಿಯನ್ನು ಎಕ್ಕೆಯ ಹಾಲಿನಲ್ಲಿ ಇಪ್ಪತ್ತೊಂದು ದಿನ ಭಾವನೆಯ ಕೊಟ್ಟು . . . ಎಕ್ಕೆಯ ಬೇರಿನ ಕಷಾಯದಲ್ಲಿ ಮರ್ದಿಸಿ ಗುಂಜಿಪ್ರಮಾಣ ಗುಳಿಗೆಯಂ ಮಾಡಿ, ಲೊಕ್ಕಿಯ ರಸ, ಅಲ್ಲದ ರಸ, ಬೆಳ್ಳುಳ್ಳಿಯ ರಸ, ಒಂದು ಗುಳಿಗೆಯಂ ಈ ರಸಗಳಲ್ಲಿ ಅರೆದು ಕೊಟ್ಟರೆ ಸನ್ನಿಪಾತಂಗಳು ಮಾಣುವುವು. ಇದು ವೀರಭದ್ರರಸ (ವಿಪ್ರವಿ. ೪೯). [ಸಂ.]

**ವೀರಭೃತ್ಯತ್ವ** (ನಾ). ಸಜ್ಜನತ್ವದ ಆರುವಿಧಗಳಲ್ಲಿ ಒಂದು : ದಾಸತ್ವ ವೀರದಾಸತ್ವ ಭೃತ್ಯತ್ವ ವೀರಭೃತ್ಯತ್ವ ಸಮಯಾಚಾರತ್ವ ಸಕಲಾವಸ್ಥಾತ್ವಂಗಳೆಂಬ ಷಡ್ವಿಧ ಸಜ್ಜನತ್ವಯುಕ್ತನಾಗಿ (ವಿವೇಕ. ೯೭). [ಸಂ.]

**ವೀರಭೋಜ್ಯ** (ನಾ). ಶೂರರು ಭೋಗಿಸಲು ಯೋಗ್ಯವಾದುದು : ಅರಿ ಯುವತಿ ಬಾಷ್ಪಬಿಂದೂತ್ಕರಂಗಳಪಸೂತ್ರಹಾರಮಂ ಸ್ತನದೊಳ್ ಪೋಲ್ತಿರೆ ತವಿಸೆ ಪಗೆವರಂ ಸಕಳರಾಜ್ಯಮಂ ವೀರಭೋಜ್ಯಮೆನಿಸಿದನೀತಂ (ಶಾಂತಿಪು. ೫-೧೧೪). [ಸಂ.]

**ವೀರಮಂಟಗೆ** (ನಾ). ಶೂರರು ಕಾಲುಬೆರಳಿನಲ್ಲಿ ಧರಿಸುವ ಒಂದು ಬಗೆಯ ಅಂದುಗೆಯಂತಹ ಆಭರಣ : ಪುಷ್ಕಳಿ ತಾಂ ತಂದ ಧನಮಂ . . . ಪಸ್ರುವರಳೋಲೆ ಪುಸ್ತಿ ಪಟ್ಟಿ ವೀರಮಂಟಗೆ ಕೆಯ್ಯೂರ ಮುದ್ರಿಕೆಯುಂಗುರಂಗಳು . . . ನವರತ್ನಂಗಳ್ ತೀವಿದ ಪೆಂಡೆಯಂ ಮೊದಲಾದ ಸಕಲಾಭರಣಂಗಳನಾ ಶೌಂಡಿಕಂಗೆ ತೋಱಲು (ನನ್ನಚಾ. ೩-೧೧೧ ವ). [ವೀರ + ಮಂಟಗೆ(< ಮೆಂಟಿಕೆ)]

**ವೀರಮಂಡಿ** (ನಾ). = ವೀರಗಾಲು : ವೀರಮಂಡಿಯ ಬಲಿದು ಕಿವಿವರೆಗೇರಿಸಿದ ಬಿಲ್ಲಿನೊಳೆ ಬೊಬ್ಬಿಡುತೇರಿ ಖಡುಗವ ಜಡಿದು ಹೂಂಕರಿಸುತ್ತಲಧಟಿಂದ (ಶಾವೇಮು. ೯-೮೨) ; ಪ್ರಭುಗಳನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ವೀರಮಂಡಿಯನ್ನೂರಿ ನಮಸ್ಕಾರಮಾಡಿ ಎದ್ದ (ಶಾಂತಲಾ. ೧೬೯). [ವೀರ + ಮಂಡಿ₁]

**ವೀರಮರಣ** (ನಾ). ಯುದ್ಧದಲ್ಲಿ ದಿಟ್ಟತನದಿಂದ ಹೋರಾಡಿ ಯುದ್ಧ ರಂಗದಲ್ಲಿಯೇ ಮರಣ ಹೊಂದುವುದು ; ಶೂರರಿಗೆ ಉಚಿತವಾದ ಮರಣ : ತ್ರೈಲೋಕ್ಯಮಲ್ಲ ನನ್ನಿನೊಳಂಬನು ತನ್ನ ಅಧಿಪತಿ ಸೋಮೇಶ್ವರನ ಏಳಿಗೆಗಾಗಿ ವೀರಮರಣವನ್ನಪ್ಪಿದನು (ನೊಳಂಬ. ೫೮). [ಸಂ.]

**ವೀರಮಾತೆ** (ನಾ). = ವೀರಜನನಿ : ಸರ್ಕಾರದಿಂದ ಎಂದಾದರೂ ಆ ವೀರಮಾತೆಗೆ ಅವಶ್ಯಕವಾಗಿ ಸಲ್ಲಬೇಕಾದ ಮನ್ನಣೆ, ಗೌರವ ಸಲ್ಲುತ್ತೋ, ಇಲ್ಲವೋ, ನಾನು ಹೇಳಲಾರೆ (ವೀರಯೋ. ೧೦೧). [ಸಂ. ವೀರಮಾತಾ]

**ವೀರಮುದ್ರಿಕೆ** (ನಾ). ವೀರತ್ವಸೂಚಕವಾದ ಒಂದು ಆಭರಣ : ತುಱುಬಿನ ಮಣಿ ತುಱುಗಿದ ಮುತ್ತಿನ ಸರ ಮಿಱುಪ ಮುದ್ರಿಕೆ ತೋರಹಾರ ನಿಱಿಯುಡಿದಾರ ನೇವುರ ವೀರಮುದ್ರಿಕೆ ಮೆಱೆಯ ನಡೆದಳೊಲವಿಂದ (ಹರಾಸಾಂ. ೨೧-೩೬). [ಸಂ. ವೀರಮುದ್ರಿಕಾ]

**ವೀರಮುದ್ರೆ** (ನಾ). = ವೀರಮುದ್ರಿಕೆ : ಉಂಗುರ ಪಿಲ್ಲಿ ಪದಾಂಗುಲಕ್ಕಿಡ ಹೊಂಗಳಸದ ವೀರಮುದ್ರೆ ಝೇಂಗಿಡೆ ಝಣರೆಂಬ ನೇವುರ ಪಾಯಿವಟ್ಟಂಗಳು ತರುಣಿಗೊಪ್ಪಿದವು (ನಿಜಸಾಂ. ೨-೧೫). [ಸಂ. ವೀರಮುದ್ರಾ]

**ವೀರಯುಗ** (ನಾ). ೧. ಶೌರ್ಯ, ಪರಾಕ್ರಮಗಳು ಮನುಷ್ಯನ ಸಾಮಾಜಿಕಬದುಕಿನಲ್ಲಿ ಪ್ರಧಾನಪಾತ್ರವನ್ನು ವಹಿಸಿದ ಕಾಲ. ೨. "(ಟ್ರಾಯ್ ಪಟ್ಟಣದಿಂದ ಗ್ರೀಕರು ಹಿಂದಿರುಗುವುದಕ್ಕೆ ಮೊದಲಿನ) ಗ್ರೀಸಿನ ವೀರಯುಗ" (The heroic age. ೩೦೮) : ವೀರಯುಗ(Heroic age)ದ ಜೀವನಸಂಸ್ಕೃತಿಗಳನ್ನು ಇಲಿಯಡ್ ವರ್ಣಿಸಿದರೆ, ಆ ಯುಗದ ಉಳಿಗಮಾನ್ಯಸಮಾಜದ ಆಂತರಿಕಘರ್ಷಣೆಗಳ ಚಿತ್ರಣವು ಒಡಿಸ್ಸಿಯಲ್ಲಿದೆ (ಅಂಕಾ. ೨೦೬). [ಸಂ.]

**ವೀರಯೋಧ** (ನಾ). ಶೂರನಾದ ಸೈನಿಕ : ಕನ್ಯೆಯೊಬ್ಬಳನ್ನು ಕೂಡಬಯಸಿದ ವೀರಯೋಧ — ಅವಳಿಗಾಗಿ ನಡೆಸುವ ಯುದ್ಧ ಈ ಮುಕ್ತಕಗಳ ಮುಖ್ಯವಸ್ತು (ಭಾರದ. ೪೫೭). [ಸಂ.]

**ವೀರರಸ** (ನಾ). ೧. ಶೌರ್ಯದ ಭಾವನೆ ; ಶೌರ್ಯಭಾವ : ವೀರರಸದ ತೊಱೆಯುಂ ನೆತ್ತರ ತೊಱೆಯುಮೊಡನೊಡನೆ ಬೆಳ್ಳಂಗೆಡೆದು ಪರಿಯೆ ಚತುರ್ಬಲಂಗಳ್ ಕಾದಿ ಬಸವಟಿದು ಪೆಱಪಿಂಗಿ ನಿಂದಾಗಳ್ (ಪಂಪಭಾ. ೧೨-೧೭ ವ) ; ಭುಜಶೌರ್ಯಶಕ್ತಿ ಗೆಂಟಾದುದೆ ಸಾರವೀರರಸಮೇಂ ಬಿಸಿಟುಂದಿದುದೇ . . . ಕಾದಲೆ ನೋಳ್ಪುದೀತನ ಸಮುಗ್ರಪರಾಕ್ರಮಮುರ್ವಿ ಪೆರ್ಚುಗುಂ (ಶಬಶಂ. ೪-೬೭). ೨. [ಕಾವ್ಯಮೀ] ನವರಸಗಳಲ್ಲಿ ಒಂದು; ಉತ್ಸಾಹವು ಸ್ಥಾಯಿಯಾಗಿ ಹುಟ್ಟುವ ಒಂದು ಭಾವಪರಿಪಾಕ ; ಶೌರ್ಯಭಾವ : ವೀರರಸಂ ಸ್ಫುಟೋಕ್ತಿಯಿನುದಾರತಮಂ ಕರುಣಾರಸಂ ಮೃದೂಚ್ಚಾರಣೆಯಿಂದಂ . . . ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತ[ದ]ಂ (ಕವಿರಾ. ೨-೯೯). [ಸಂ.]

**ವೀರವಂದ** (ನಾ). ಒಂದು ಬಗೆಯ ವಾದ್ಯ : ಡೋಳು ಡಮರು ಗಿಡುಬಿಡಿ ವೀರವಂದ ನಿಸ್ಸಾಳ . . . ಮೊಳಗಲು (ರಾಮವಿ. ೮-೭೨). [?]

**ವೀರವಂದನ** (ನಾ).ವೀರೋಚಿತವಾದ ನಮಸ್ಕಾರ ; ಶೂರರು, ಶೂರರಿಗೆ ವೀರಮಂಡಿಯನ್ನು ಹೂಡಿ ಮಾಡುವ ನಮಸ್ಕಾರ : ಚಿಕ್ಕಚಾಮಪ್ಪ, ಆತನವರು (ಆಗತನಿಗೆ ವೀರವನ್ದನ ಮಾಡುವರು) (ಬಿಟ್ಟಿ. ೧೮-೩). [ಸಂ.]

**ವೀರವಟ್ಟ** (ನಾ). = ವೀರಪಟ್ಟ : ತಾಂ ತನ್ನ ಕೆಯ್ಯೊಳೆ ಕಟ್ಟಿದಂ ಕುರುಪರಿವೃಢಂ ಕರ್ಣಂಗಾ ವೀರವಟ್ಟದ ಪಟ್ಟಮಂ (ಪಂಪಭಾ. ೧೨-೫೨). [ವೀರ + ಪಟ್ಟ₃]

**ವೀರವಸಂತ** (ನಾ). [ಸಂಗೀತ] ಒಂದು ಮೇಳಕರ್ತರಾಗದ ಹೆಸರು: ವೀರವಸಂತವೆಂಬ ರಾಗವು . . . ಸದಾಕಾಲದಲ್ಲಿಯೂ ಹಾಡುವಂತಹದು (ಚತುಪ್ರ. ೧೩೯). [ಸಂ.]

**ವೀರವಱೆ** (ನಾ). ಯುದ್ಧದ ಸಮಯಗಳಲ್ಲಿ ಸೈನ್ಯಕ್ಕೆ ಉತ್ಸಾಹ ತುಂಬಿಸಲು ಬಾರಿಸುವ ಒಂದು ಬಗೆಯ ತಮಟೆಯಂತಹ ಚರ್ಮವಾದ್ಯ; ರಣವಾದ್ಯ : ಈ ಭವಸಂಗರಂಗಳಂ ಗೆಲ್ದು ಹರ್ಷಂ ಮೂಡಿ ಹುಸಿಯೆಂಬ ವೀರವಱೆಯಿಂ . . . ಮಿಗೆ ನೋಯಿಪಾಸೆಯೆಂಬಲಗಿನತಿರ್ಥುಳಪದಿಂ ಮೆಱೆವ ಮನವೆಂದೆಂಬ ಮಾಸಾಳನಿಱಿದು (ಮೋಸರ. ೧೪೦-೧೯) ; ಭೇರಿ ಪಟಹ ಮೃದಂಗ ತಂಬಟ ವೀರಣಾನಕ ಮುಖ್ಯ ನಾನಾ ವೀರವಱೆಗಳ ರಭಸದಲಿ ರಂಜಿಸಿದುದಾ ದುರ್ಗ (ತೊರರಾ. ೬-೭-೧೫) ; ಸುರರು ಪೂಮಳೆಗಱೆದರು ದಿಕ್ಪಾಲರು ಕರಗಳ ಮುಗಿದು ಖೇಚರರು ಸ್ಮರಿಸೆ ಸ್ವರ್ಗದಿ ಯೊರೆದವು ವೀರವಱೆಗಳು (ಅಬ್ಬಲೂ. ೪-೮೫). [ವೀರ + ಪಱೆ₁]

**ವೀರವಾಕ್ಯ** (ನಾ). ವೀರೋಚಿತವಾದ ಮಾತು,— ನುಡಿ : ಅವರೂಳ್ ಪರೀಕ್ಷಾಕ್ಷಮೋದಾರ ವೀರವಾಕ್ಯಂಗಳಂ ನುಡಿಯುತ್ತುಂ ರಥಮಂ ಮಗುಟಲ್ವೇಟ್ದು (ಶಾಂತಿಪು. ೪-೧೦೨ ವ). [ಸಂ.]

**ವೀರವಾಣಿ** (ನಾ). = ವೀರವಾಕ್ಯ : ಚಣಚಣಕೆ ವೈರಿಯ ದಳಂ ಬಲಗುಂದುತಳಿ ದುಳಿದು ಹಿಂಜರಿಯುತೋಡುತಿದೆ ಲೆಕ್ಕಿಸದೆ ವೀರಪಾರ್ಥನ ವೀರವಾಣಿಯಂ (ಚಿತ್ರಾಂಗ. ೮೩-೨೨೯೦). [ಸಂ.]

**ವೀರವಿಲಸಿತ** (ನಾ). ೧. ವೀರಶ್ರೀ ; ಶೌರ್ಯಸಂಪತ್ತು. ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹತ್ತನೆಯದಾದ ಪಂಕ್ತಿಛಂದಸ್ಸಿನ ಒಂದು ವೃತ್ತ : "ವೀರವಿಲಸಿತಂ ಭಸಾ ಜಗಾ" ಎಂದು ವೃತ್ತಲಕ್ಷಣಂ (ಅಪ್ರತಿ. ೧೧೭-೧೯);೧೦ನೆಯ ಪಂಕ್ತಿಯಲ್ಲಿ :— ವೀರವಿಲಸಿತಂ ಭಸಂ ಜಗಂ (ಛಂದೋ. ೭೯). ೧,೨ : ಶ್ರೀರಮಣನ ದಿವ್ಯಲೀಲೆವೊಲ್ ಭೂರಿಭುವನಪೋಷಕಂ ಮಹೋದಾರನ ಚಿಕದೇವರಾಯನಾ ವೀರವಿಲಸಿತಂ ವಿರಾಜಿಕುಂ ಇದಱೊಳ್ ವೀರವಿಲಸಿತಮೆಂಬ ಪದದ ವೃತ್ತದ ಪೆಸರ್ ಪಂಕ್ತಿಚ್ಛಂದಸ್ಸಿನೊಳ್ತೋರ್ಪುದ ಱಿಂದಿದು ಮುದ್ರಾಲಂಕಾರಂ (ಅಪ್ರತಿ. ೧೧೭-೧೬). [ಸಂ.]

**ವೀರವೂರ್** (ನಾ). ಒಂದು ಊರಿನ ಹೆಸರು : ನೀಗರ್ಗ್ನನ್ನನಾಡು ಮೂನೂಱುಮನ್ನೀಗರ್ಗ್ನನ್ನದರ್ಸರಾ ಆಳೆ ಅವರಾಳು ವೀರವೂರ ಮಾಳ್ವೊಪೊಟ್ಟೆ ಯರಾ ಕುಡಿಮುದ್ದನ್ ಮೇಲೆಯುಳ್ಳಿಱಿದು ವಿಟ್ಟನ್ (ಎಕ. V, ಚೆನ್ನರಾ. ೨೦೮-೪ ; ಸು. 770). [ವೀರ + ಊರ್]

**ವೀರವೃತ್ತ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹನ್ನೊಂದನೆಯದಾದ ತ್ರಿಷ್ಟುಪ್ ಎಂಬ ಛಂದಸ್ಸಿನ ಒಂದು ವೃತ್ತ : ೧೧ ನೆಯ ತ್ರಿಷ್ಟುಪ್ಪಿನಲ್ಲಿ . . . ವೀರವೃತ್ತಮಿರಲ್ ರಸಸಂಲಗಂ (ಛಂದೋ. ೮೦). [ಸಂ.]

**ವೀರವೃತ್ತಿ** (ನಾ). ಶೌರ್ಯದಿಂದ ಕೂಡಿದ ನಡವಳಿಕೆ : ವೀರವೃತ್ತಿ ಈ ನನ್ನ ತೋಳುಗಳನ್ನವಲಂಬಿಸಿದೆ (ಭಾಮಣಿ. ೬೦). [ಸಂ.]

**ವೀರವೈಷ್ಣವ** (ನಾ). ನಿಷ್ಠೆಯುಳ್ಳ ವಿಷ್ಣುಭಕ್ತ ; ರಾಮಾನುಜಪಂಥದವನು ; ಶ್ರೀವೈಷ್ಣವ : ಇಂತು ನುತಿಸಿಯೆ ಬೇಡಲಾಯಾ ಚಿಂತನೆಯ ಫಲವೀವ ಕೇಶವ ನಿಂತುದುವೆ ನಿಜವೀರವೈಷ್ಣವರಾಂತ ಪದ್ಧತಿಯು (ಗಗಕಾ. ೫-೨೮). [ಸಂ.]

**ವೀರವ್ರತ** (ನಾ). ಕಠಿಣವಾದ ವ್ರತ,— ನಿಯಮ : ವೀರವ್ರತನಿಧಿ ವಿತತ ಯಶೋರಂಜಿತನಂಬುರಾಶಿಗಾಂಭೀರ್ಯಗುಣಾಧಾರಂ . . . ಎಂಬ ನೆಗಳ್ತೆಯನಾಳ್ದಳಿಕಾಂಬಕನಂ ಪೂಜೆಗೆಯ್ವುತುಂ (ವೃಷವಿ. ೨೮-೬). [ಸಂ.]

**ವೀರವ್ರತಿ** (ನಾ). ನಿಷ್ಠೆಯಿಂದ ವ್ರತಗಳನ್ನು ಆಚರಿಸುವವನು ; ಕಠೋರವಾದ ನಿಯಮಗಳನ್ನನುಸರಿಸುವವನು : ಬೆಳಗುಸಿದ ಪಿರಿಜಯಾಮಿರಗಸ್ತ್ಯ ಗುರವರ್ಭುವನಿಯೊಳ್ವೀರವ್ರತಿ ನೂಱೊನ್ದುದಿವಸಂ ವಾಸುನ್ಧಿಯ ಜೆಲ್ಲಧರ್ಮ[ದೆ]

ಮಾಡಿ (ಕಇಅ. ೩೯-೫೫-೨; ಸು. 10ನೆಯ ಶತ) ; ವೀರವ್ರತಿ ಭಕ್ತನೆಂದು ಹೊಗಳಿಕೊಂಬಿರಿ ಕೇಳಿರಯ್ಯಾ ವೀರನಾದರೆ ವೈರಿಗಳು ಮೆಚ್ಚಬೇಕು ವ್ರತಿಯಾದರೆ ಅಂಗನೆಯರು ಮೆಚ್ಚಬೇಕು ಭಕ್ತನಾದರೆ ಜಂಗಮ ಮೆಚ್ಚಬೇಕು (ಬಸವ. ೬೭೧). [ಸಂ. ವೀರವ್ರತಿನ್]

**ವೀರಶಯನ** (ನಾ). ರಣರಂಗದಲ್ಲಿ ಯುದ್ಧಮಾಡುತ್ತಾ ಮಡಿದ ಅಥವಾ ಗಾಯಗೊಂಡ ವೀರರು ಒರಗುವ ಹಾಸು : ದುರ್ಯೋಧನ, ವೀರಶಯನವು ಇಷ್ಟವಾಗಿದ್ದರೆ ಅದನ್ನು ಪಡೆಯುತ್ತೀಯೆ ; ಸ್ವಲ್ಪ ತಡೆದುಕೋ (ವಚಭಾ. ೨೫೫). [ಸಂ.]

**ವೀರಶಯ್ಯೆ** (ನಾ). ೧. = ವೀರಶಯನ : ಆದರೆ ಭೀಷ್ಮನಿಗೆ ಅವು ಬೇಕಾಗಿರಲಿಲ್ಲ. ಅವನು ಮಂದಹಾಸದಿಂದ "ವೀರಶಯ್ಯೆಗೆ ಈ ದಿಂಬುಗಳು ತಕ್ಕವಲ್ಲ!" ಎಂದು ಅರ್ಜುನನನ್ನು ನೋಡಿ "ತಕ್ಕಂಥ ದಿಂಬು ನಿನಗೆ ಗೊತ್ತಿದ್ದರೆ ಕೊಡುತ್ತೀಯಾ?" ಎಂದು ಕೇಳಿದನು (ವಚಭಾ. ೨೭೭). ೨. [ಜೈನ] ಸಲ್ಲೇಖನವ್ರತವನ್ನು ಕೈಕೊಂಡವರು ದೇಹತ್ಯಾಗಮಾಡುವ ವರೆಗೂ ಮಲಗಿಕೊಳ್ಳುವ ಶಯ್ಯೆ : ಬಲ್ಲಿಡಿವಿಡಿದು ಶರುಣ್ಬುಗು ಜಿನೇಂದ್ರಪದಸರಸಿಜಮಂ ಎಂದಾ ಮಹಾನುಭಾವನ ಪೇೞ್ದ ಮಾೞ್ಕೆಯೊಳಿ ರ್ಪತ್ತೆರಡು ದಿವಸಂಬರಂ ವೀರಶಯ್ಯಾತಳಗತನಾಗಿರೆ (ಆದಿಪು. ೨-೫೮ ವ).

[ಸಂ. ವೀರಶಯ್ಯಾ]

**ವೀರಶುಲ್ಕ** (ನಾ). ಹಿಂದೆ ಶೂರರ ಪರಾಕ್ರಮಕ್ಕೆ ಪ್ರತಿಫಲವಾಗಿ ಕೊಡುತ್ತಿದ್ದ ಸ್ತ್ರೀರೂಪದ ಶುಲ್ಕ : ಬಂದರಸರ್ಗೆ ದೇವವಾಣಿಯನರುಹಿ ವೀರಶುಲ್ಕೆಯನಾಗಿ ಸಾರಿದೆನಯೋನಿಜಾಕನ್ಯೆಯಂ (ಶ್ರೀರಾಮಾ. ೪೨-೩೭೯). [ಸಂ. ವೀರಶುಲ್ಕಾ]

**ವೀರಶೈವ** (ನಾ). ೧. ಶೈವಮತದ ಒಂದು ಪ್ರಭೇದ ; ಲಿಂಗಾಯತಮತ: ಶುದ್ಧಶೈವವ ಹೊದ್ದದೆ ಪೂರ್ವಶೈವವನಾಚರಿಸದೆ ಮಾರ್ಗಶೈವವ ಮನ್ನಣೆಯ ಮಾಡದೆ ವೀರಶೈವವನಾಧರಿಸದೆ ಆದಿಶೈವವನನುಕರಿಸದೆ . . . ಬಯಕೆ ಅಱತು ಭವ ಹಿಂಗಿ ತಾನೆನ್ನದೆ ಇದಿರೆನ್ನದೆ ಏನುವೆನ್ನದ ಲಿಂಗೈಕ್ಯಂಗೆ ಸ್ವಾನುಭಾವದಿಂದ ನಮೋ ನಮೋ ಎಂಬೆ (ಮೋಳಿಮಾ. ೧೨೬-೪೯೧) ; ಶೈವಂಗಳಲ್ಲಿ ಮುಖ್ಯಮಾದ ಸಾಮಾನ್ಯಶೈವ ಮಿಶ್ರಶೈವ ಶುದ್ಧಶೈವ ವೀರಶೈವವೆಂದು ಚತುರ್ವಿಧಶೈವಂಗಳು (ವಿವೇಕ. ೭೮); ವೀರಶೈವ ಮಹಾಮತಾಶ್ರಿತ ಭಕ್ತನಿರ್ಜರವಲ್ಲರೀ . . . ವಾರಣಾನನಮಾತೆ ರಕ್ಷಿಪುದೆನ್ನನದ್ರಿಜೆ ಶಾಂಕರೀ (ವೃಷವಿ. ೩೨-೬೬). ೨. ಶೈವಾಚಾರದಲ್ಲಿ ನಿಷ್ಠೆಯುಳ್ಳವನು; ಲಿಂಗಾಯತ ;ಲಿಂಗವಂತ : ವೀರಶೈವ ಗುರುವಾಗಿ ಶುದ್ಧಶೈವಕ್ಕೆ ಹೊಱಗಾಗಬೇಕು ಶುದ್ಧಶೈವ ಗುರುವಾಗಿ ಮಾರ್ಗಶೈವಕ್ಕೆ ಹೊಱಗಾಗಬೇಕು (ಸಕವ. ಕ. I. ೧೧೭-೪೪೫) ; ವೀರಶೈವರ ಮೆಚ್ಚೆ ತನ್ನ ಕುಮಾರನಾದಡೆ ಜಂಗಮವಲಾ ಕ್ರೂರಚಿತ್ತನು ಕೊಂದನಾ ಪಾಪಕ್ಕೆ ಶಂಕಿಸದೆ (ಬಸಪು. ೨೫-೨೬). [ಸಂ.]

**ವೀರಶೈವಾಗಮ** (ನಾ). ಶೈವಾಗಮದಲ್ಲಿಯ ಒಂದು ಪ್ರಭೇದ : ಶೈವಾಗಮ ದಲ್ಲಿ ಅನುಷ್ಠಾನಭೇದದಿಂದ (ಉಪಾಸನಾಭೇದದಿಂದ)'ಶೈವಾಗಮ' 'ದೇವ್ಯಾಗಮ ಅಥವಾ ಶಾಕ್ತಾಗಮ, ವಾತುಳಾಗಮ ಅಥವಾ ತಾಂತ್ರಿಕಾಗಮ' ಮತ್ತು 'ವೀರಶೈವಾಗಮ' ಎಂದು ನಾಲ್ಕು ಒಳಭೇದಗಳಿವೆ (ಭಾರದ. ೭೪). [ಸಂ.]

**ವೀರಶೈವಾಚಾರ** (ನಾ). ೧. ಲಿಂಗವಂತರ ಆಚಾರ, — ನಡವಳಿಕೆ : ನೀರ ನೇಣಿನ ಬಾಧೆಯಿಲ್ಲದ ವೀರಶೈವಾಚಾರ ದೀಕ್ಷಾಧಾರಕನನತಿ ನಿರ್ಮಿತೋಭಯ ಕರ್ಮನಿರ್ಮಲನ ಘೋರಕರ್ಮಾಶ್ರಯದ ಪಾರಾವಾರದೊಳು ಮುಳುಗಿಸುವನೆಂಬ ವಿಚಾರವಿಂತಿದು ನಿನಗೆ ಧರ್ಮವೆ (ಬಸಪು. ೩-೪೯). ೨. ಶಿವಾಚಾರ ಸಂಪನ್ನನಾದವನು;ಉತ್ತಮನಾದ ವೀರಶೈವ,— ಲಿಂಗವಂತ : ಚಾರುಚರಿತಂ ಮತ್ತೆಯುಂ ಬಾಹೂರಬೊಮ್ಮಯನೆಂಬ ಭಕ್ತನುದಾರಕೀರ್ತಿನಿರೂಢಗಾಢ ಮಹತ್ವತತ್ವಾರ್ಥಿ ವೀರಶೈವಾಚಾರ ಸುವ್ರತಕಾರಿ (ಬಸಪು. ೨೨-೨೩). [ಸಂ.]

**ವೀರಶ್ಮಶ್ರು** (ನಾ). ವೀರರಿಗೆ ಶೋಭಿಸುವಂತಹ ಮೀಸೆ : ಸೋನ್ನತದೇಹ . . . ಹೆಚ್ಚಲ್ಲದ ಕಡಮೆಯಲ್ಲದ ವೀರಶ್ಮಶ್ರು, ವಿಶಾಲಲಲಾಟ . . . 'ಇಂತಹ ಅಂಗಸೌಷ್ಠವಕ್ಕೆ ಅಲಂಕಾರಗಳೇಕೆ?' ಎನ್ನಿಸಿತು ನೋಡಿದವರಿಗೆ (ಶಾಂತಲಾ. ೧೦೭). [ಸಂ.]

**ವೀರಸಂಕಲ್ಪ** (ನಾ). ಕಠೋರವಾದ ನಿರ್ಧಾರ ; ದಿಟ್ಟತನದ ತೀರ್ಮಾನ : ಆಗ ವೀರರಾಜನು ವೀರಸಂಕಲ್ಪವನ್ನು ಮಾಡಿ . . . ಕೋಟೆಯ ಹೊರವಳಯದಲ್ಲಿ ನುಗ್ಗಿ ಕಾದಾಡುತ್ತ ಮಡಿದನು (ಒಡೆಕ. ೪೨). [ಸಂ.]

**ವೀರಸಂಸ್ತರಾರೂಢ** (ನಾ). [ಜೈನ] ಸಲ್ಲೇಖನವ್ರತವನ್ನು ಕೈಕೊಂಡು, ಮರಣವನ್ನು ಸಾಧಿಸಲು ವೀರಶಯ್ಯೆಯನ್ನೇರಿದವನು : ಜಿನೇಂದ್ರಾರ್ಚನಾ ಪುರಸ್ಸರಂ ವಚನಾಗ್ರಹಣಸಮೇತಮಾರಾಧನೆಯನರ್ಚಿಸಿ ವೀರಸಂಸ್ತರಾರೂಢ ನಾದನಾಗಳ್ (ಆದಿಪು. ೨-೫೦ ವ). [ಸಂ.]

**ವೀರಸಂಸ್ಥಾನಾರೂಢ** (ನಾ). = ವೀರಸಂಸ್ತರಾರೂಢ : ಆಗಳಾ ಸ್ವಯಂಬುದ್ಧಂ . . . ವೀರಸಂಸ್ಥಾನಾರೂಢನಂ ಮಹಾಬಲನಂ ಜಾತರೂಪಧರನಂ ಮಾಡಿ ಚತುರ್ವಿಧಾಹಾರಶರೀರಪ್ರತ್ಯಾಖ್ಯಾನಮಂ ಕೊಟ್ಟು (ಆದಿಪು. ೨-೫೧ ವ). [ಸಂ.]

**ವೀರಸಗ್ಗ** (ನಾ). ಯುದ್ಧದಲ್ಲಿ ಪರಾಕ್ರಮದಿಂದ ಹೋರಾಡಿ ಮಡಿದ ವೀರರು ಪಡೆಯುವರೆನ್ನಲಾದ ಸ್ವರ್ಗ : ವೀರಸಗ್ಗಕೆ ಪೋಪಡಾರ್ಯಮಂಡಲದೊಂದು ದಾರಿಗೆ ನಸುನುಸುಳ್ದಂತೆ ವೀರನ ಶಿರ ಚಕ್ರದಗ್ರದಿ ಮೆಱೆದುದು ವೀರಕೆ ಕಲಶವಿಟ್ಟಂತೆ (ವರ್ಧಚ. ೭-೩೭). [< ಸಂ. ವೀರಸ್ವರ್ಗ]

**ವೀರಸರ್ಗತ** (ನಾ). ವೀರಮರಣವನ್ನು ಹೊಂದಿದವನು ; ವೀರಸ್ವರ್ಗವನ್ನು ಪಡೆದವನು : ಚೌಣ್ಡಾಂ ವೀರಸರ್ಗ್ಗಗತನಾದ (ಎಕ. III (R), ಹೆಗ್ಗಡ. ೫೫-೮; 12ನೆಯ ಶತ).

[IP ಇದು 'ವೀರಸ್ವರ್ಗಸ್ಥ' ಎಂಬುದರ ಅಪಲಿಖಿತವಿರಬಹುದು]

**ವೀರಸಾಸನ** (ನಾ). (ಯುದ್ಧ ಮೊದಲಾದ ಸಂದರ್ಭಗಳಲ್ಲಿ ಸತ್ತ)ವೀರನಿಗೆ ಸಂಬಂಧಿಸಿದ ಶಾಸನ : ಅನೇಕ ನಾಮಾವಳೀಮುಖ್ಯನಪ್ಪ ದುದ್ದರಸಂ . . . ಶಿವಲೋಕಪ್ರಾಪ್ತನಾಗಲ್ ಸಹೋದರಂ ಜೂಜರಸಂ ಸ್ನೇಹದಿಂ ಪರೋಕ್ಷ ವಿನೆಯಂಗೆಯ್ದು ವೀರಸಾಸನಮಂ ಬರೆಯಿಸಿದಂ (ಎಕ. I. ೭೨-೫೧ ; 1095) ; ಸೊಲ್ಲಗೆ ಮಾರೆಯ ತುಱುಹರಿಯಲು ಮುಗುಳ್ಚಿ ಸುರಲೋಕ ಪ್ರಾಪ್ತನಾದ ವೀರಸಾಸನಂ ಅಡಿಯರ ಕುಲತಿಳಕಂಗೆ ನಿಲಿಸಿದ ಕಲ್ಲು (ಎಕ. XII, ಗುಬ್ಬಿ. ೧-೧೯ ; ಸು. 1125).

[< ಸಂ. ವೀರಶಾಸನ]

**ವೀರಸಾಳ** (ನಾ). = ವೀರಸಾಸನ (?): ತೊಣವತ್ತಿಯ ಮೆಱೆಗಾಱಬಾಬೆಯ ನಾಯಕ ಕಾದಿ ಸರ್ಗ್ಗಸ್ಥನಾದಲ್ಲಿ ಅಳಿಯ ಮದುಕೆಯಬಾಬೆಯ ಕಲ್ಲನಿರಿಸಿ ವೀರಸಾಳನೆತ್ತಿಸಿದ (ಎಕ. VII. ಶಿಕಾರಿ. ೧೩೯-೫ ; 1160).

[IP ಇದು 'ವೀರಸಾಸನ' ಎಂಬುದರ ಅಪಲಿಖಿತವಿರಬಹುದು]

**ವೀರಸುತಜನನಿ** (ನಾ). ಶೂರನಾದ ಮಗನನ್ನು ಪಡೆದವಳು ; ವೀರಮಾತೆ : ವೀರಸುತಜನನಿಗೀ ಗಾಂಧಾರಿಗೆ ದುಃಖಿಶತಜನನಿವೆಸರಾಯ್ತಾಗಳ್ ಕೌರವಪತಿ ದುಃಖ ಮಹಾಭಾರಮನಾಂತಾಯಸಕ್ಕೆ ಗುಱಿಯಾದುದಱಿಂ (ಗದಾಯು. ४-೫).

[ಸಂ. ವೀರಸುತಜನನೀ]

**ವೀರಸೂ** (ನಾ). = ವೀರಸುತಜನನಿ : "ವೀರಮಾತಾ, ವೀರಸೂಃ – ೨ ವೀರನನ್ನು ಪೆತ್ತ ತಾಯಿಯ ಹೆಸರುಗಳು" (ಸಿದ್ಧಾಂತಿ. ೧೭೧). [ಸಂ.]

**ವೀರಸೇತು** (ನಾ). ಹಿಂದಿನ ಕಾಲದಲ್ಲಿ ಯುದ್ಧದ ಸಮಯದಲ್ಲಿ ಕೋಟೆಯ ಸುತ್ತಲಿರುವ ಅಗಳನ್ನು ದಾಟಲು ಬಳಸುತ್ತಿದ್ದ ಒಂದು ಬಗೆಯ ಸೇತುವೆಯಂತಹ ಸಾಧನ : ದುರ್ಗಕ್ಕೆ ನಿಚ್ಚಣಿ ಸಾರ್ಚುಂದೊಲೆ ವೀರ ಸೇತು ನಡೆಸಾರಂ ಬದ್ದರಂ ಗೆಗ್ಗ ಡೆಂಕಣಿ ಗುಮ್ಮಂ ಪಡಿಗೋಂಟೆಯೆಂಬ ಬಹು ಕೋಟಾಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ ಲಗ್ಗೆಗಾರ್ದು ವಸುಷೇಣಂ ಸಾರ್ದು ಸೂೞ್ಕೆಸಿದಂ (ಅನಂಪು. ೧೧-೮೩). [ಸಂ.]

**ವೀರಸೇನತೆ** (ನಾ). ೧. ಶೂರರಿಂದ ಕೂಡಿದ ಸೈನ್ಯವನ್ನು ಹೊಂದಿರುವಿಕೆ ; ಬಲಯುತವಾದ ಸೈನ್ಯದಿಂದ ಕೂಡಿರುವಿಕೆ. ೨. ವಿದ್ವಾಂಸರ ಪ್ರಶಸ್ತಿಗೆ ಪಾತ್ರವಾಗುವ ಪಾಂಡಿತ್ಯ. ೩. ವೀರಸೇನಮುನಿಗಳ ವಿದ್ವತ್ತು, — ಪಾಂಡಿತ್ಯ. ೨, ೩ : ಕ್ಷಿತಿನಾಥವ್ರಜಪೂಜ್ಯಪಾದತೆ . . . ವಿದ್ವನ್ನುತ ವೀರಸೇನತೆ . . . ಆಹಾರಾಧ್ವಾಂತತತ್ತ್ವಪ್ರಮಾತೃತೆಯೇಂ ಚೋದ್ಯಮೆ ವರ್ಧಮಾನಮುನಿಯೊಳ್ (ಚಂದ್ರಪ್ರ. ೧-೩೧). [ಸಂ. ವೀರಸೇನತಾ]

**ವೀರಸೇಸೆ1** (ನಾ). ಶೂರರನ್ನು ಸ್ವಾಗತಿಸುವಾಗ ಅಥವಾ ಬೀಳ್ಕೊಡುವಾಗ ತಳಿಯುವ ಮಂಗಳಾಕ್ಷತೆ ; ವೀರೋಚಿತವಾದ ಅಕ್ಷತೆ : ವಸಂತಂ ಪೊಸಮಲ್ಲಿಗೆಯ ನುಣ್ಣನಪ್ಪ ಸಣ್ಣನನೆಯ ವೀರಸೇಸೆಯಂ ಸೂಸೆ ವನಲಕ್ಷ್ಮಿ ಪಳಿಕಿನ

ಪರಿಯಾಣದೊಳ್ ಬಂದುಗೆಯ ಕುಸುಮದ ವಿಜಯಾರತಿಯನೆತ್ತೆ (ಗಿರಿಕ. ೭-೭ ವ) ; ಬೊಪ್ಪಗೌಡಿಯ ಮಲ್ಲೆಯ ಮುಳ್ಳೂರ ಕೋಟೆಯ ಕಾದು ಅಟಿಹೊಯಿದು ವಂಕಧಾರದೊಳಗೆ ಬಿದ್ದನು ಬಿದ್ದಲ್ಲಿಗೆಯಾತಂಗೆ ವೀರಸೇಸೆಯಾಗಿ ಮಾಸಾವಿ ಮುಖ್ಯವಾಗಿ ಊರ ಮುನೂರಾಳು ನೆರವಿರ್ದು (ಎಕ. I, ೬೦-೮ ; 1296).

[ವೀರ + ಸೇಸೆ₁]

**ವೀರಸೇಸೆ₂** (ನಾ). ಒಂದು ಬಗೆಯ ಸುಂಕ ; ವೀರರ ಮೇಲೆ ಹಾಕುತ್ತಿದ್ದ ತೆರಿಗೆ (?) : ಆ ಶಾಂತಿಗ್ರಾಮದ ವರದನರಸಿಂಹದೇವರ್ಗ್ಗೆ ವೀರಬಲ್ಲಾಳದೇವರು . . . ಅಡಕೆಯ ಸುಂಕ ಹಣವೊಂದಱ ಸೇಸೆ ವೀರಸೇಸ ತೊಡರು . . . ಧಾರಾಪೂರ್ವ್ವಕಂ ಮಾಡಿ ತಾಂಮ್ರಶಾಸನಮಂ ಕೊಟ್ಟರು (ಮೈಆರಿ. ೧೯೪೦, ೩-೫ ; 1216); ಕಟ್ಟುಗೂಳು ಕಟಕಸೇಸೆ ವೀರಸೇಸೆ ಆನೆಯ ಸೇಸೆ... ಪೂರ್ಬಾಯ ಅಪೂರ್ಬಾಯಂಗಳನು ಕಾರುಣ್ಯಂ ಮಾಡಿ ಬಿಟ್ಟು (ಎಕ. XVI, ಚಿಕ್ಕನಾ. ೭೧-೨೭;?). [ವೀರ + ಸೇಸೆ₂]

**ವೀರಸ್ಕಂಧ** (ನಾ). ೧. ಬಲಯುತವಾದ ಹೆಗಲುಗಳುಳ್ಳವನು ; ಶಕ್ತಿಯುತವಾದ ಭುಜಾಗ್ರಗಳುಳ್ಳವನು : ವಿಶಾಲವಕ್ಷನೂ ಮಹಾಬಾಹುವೂ ವೀರಸ್ಕಂಧನೂ ಆದ ಆ ಪುರುಷನು ಪ್ರದ್ಯುಮ್ನನಂತೆ ಸುಂದರನಾಗಿಯೂ ಕಂಡುಬಂದನು (ಶಾಂತಲಾ. ೪೨). ೨. ಎಮ್ಮೆ ; ಮಹಿಷ. [ಸಂ.]

**ವೀರಸ್ವರ್ಗ** (ನಾ). ಯುದ್ಧದಲ್ಲಿ ಪರಾಕ್ರಮದಿಂದ ಹೋರಾಡಿ ಮಡಿದ ವೀರರು ಪಡೆಯುವರೆನ್ನಲಾದ ಸ್ವರ್ಗ : ಕೊಳುಗುಳದೊಳು . . . ಅಳಿದನಾದೊಡೆ ದೇವಲೋಕದ ಲಲನೆಯರು ತೊತ್ತಿರು ಸುರೇಂದ್ರನು ನೆಲನನುಗ್ಗಡಿಸುವವನು ವೀರಸ್ವರ್ಗವಹುದೆಂದ (ಕುಮ್ಮಾವಿ. ೬-೨೨) ; ಸಲಹಿದಾತಂಗಾಗಿ ಗೋದ್ವಿಜರಳಿವ ತೆಱ ಸಲೆ ಕಾದಿ ಮಡಿದೊಡೆ ಉಳಿವುದುತ್ತಮಕೀರ್ತಿ ವೀರಸ್ವರ್ಗಪದವಹುದು (ಕೌಶಿರಾ. ೩೮-೧೫).

[ಸಂ.]

**ವೀರಸ್ವಾಮಿ** (ನಾ). [ಜೈನ] ಜಿನ ; ಅರ್ಹಂತ : ವೀರಸ್ವಾಮಿಯ ಪಾದಪಯೋರುಹಮಂ ಬಂದಿವಿಡಿದು ಬಂಟಂ ಸೆಱೆಯಂ ಧೀರತೆಯಿಂ ಪಿಡಿವಂತೆ ಕುಮಾರಕನುಂ ಪಿಡಿದನೇಕಚಿತ್ರದಿನಾಗಳ್ (ಧರ್ಮಾಮೃ. ೭-೧೦೧). [ಸಂ. ವೀರಸ್ವಾಮಿನ್]

**ವೀರಹ** (ನಾ). ೧. ಪ್ರಮಾದವಶದಿಂದ ಅಥವಾ ಉಪೇಕ್ಷೆಯಿಂದ ಗಾರ್ಹಪತ್ಯಾಗ್ನಿಯನ್ನು ಕಳೆದುಕೊಂಡ ಬ್ರಾಹ್ಮಣ : ಶ್ರುತಿಯನುಷ್ಠಾನರಹಿತಂ . . . ದುಶ್ಶೀಲನೇ ಸಿತಾಖ್ಯಂ ತ್ರಿಕ್ಕಘಾತಕಂ ವೀರಹಾಖ್ಯಂ (ವೀಶೈಪು. ೭-೨-೨೨). ೨. ಶತ್ರುಗಳನ್ನು ಸಂಹರಿಸುವಿಕೆ. ೩. ವಿಷ್ಣು. [ಸಂ. ವೀರಹನ್]

**ವೀರಾಂಗದ** (ನಾ). ೧. ಪರಾಕ್ರಮಿಗಳು ಧರಿಸುವ ತೋಳಿನ ಬಳೆ. ೨. [ಜೈನ] ಭರತಚಕ್ರವರ್ತಿಯ ಕಡಗ, — ಕಂಕಣ : ತಟಿದ್ವಲಯವಿಲಸಿತಂಗಳಾಗಿ ನಿಜಪ್ರಕೋಷ್ಠ ನಿಷ್ಠಿತಂಗಳಪ್ಪ ವೀರಾಂಗದಂಗಳೆಂಬ ಕಟಕಂಗಳುಂ (ಆದಿಪು. ೧೫-೩ ವ). [ಸಂ.]

**ವೀರಾಗ್ರಗಣ್ಯ** (ಗು). ೧. ವೀರರಲ್ಲಿ ಶ್ರೇಷ್ಠನಾದ, — ಅಗ್ರಗಣ್ಯನಾದ : ಆಗಳ್ ಜಯನ ಭುಜವಿಜಯಸೂಚಕಮಾಗಿ ಮೇಘನಾದಸಮಾನಮಾದ ಸಿಂಹನಾದಕ್ಕೆ ಚಕ್ರವರ್ತಿ ಮೆಚ್ಚಿ ಮೇಘಸ್ವರನಾಮಮಂ ವೀರಾಗ್ರಗಣ್ಯಪದವಿಯಂ ದಯೆಗೆಯ್ದು (ಆದಿಪು. ೧೩-೭೭ವ). (ನಾ). ೨. ವೀರರಲ್ಲಿ ಶ್ರೇಷ್ಠನಾದವನು ; ವೀರಶ್ರೇಷ್ಠ ; ವೀರಾಗ್ರಣಿ. [ಸಂ.]

**ವೀರಾಗ್ರಣಿ** (ನಾ). = ವೀರಾಗ್ರಗಣ್ಯ ೨: ವೀರಾವತಾರನೆನಿಸಿದ ವೀರಂ ಮಲ್ಲಪನ ತಮ್ಮನುಂ ನಂದನರುಂ ವೀರನಳಿಯಂ ನೆಗೞ್ತೆಯ ವೀರಾಗ್ರಣಿ ನಾಗದೇವನೊಱೆಟರ ಮಲ್ಲಂ (ಅಜಿಪು. ೧-೪೦). [ಸಂ.]

**ವೀರಾಚಾರ** (ನಾ). [ವೀಶೈ] ವೀರಶೈವರ ಆಚಾರ, — ನಡವಳಿಕೆ : ವೀರಾಚಾರ [ಪಾಶಾಂ.ರ್ಯ]ವಿಹಾರನಾರ್ಯನನಘಂ ಪ್ರಧ್ವಸ್ತಪಾಶಂ . . . ಶ್ರೀಗುರುಲಿಂಗ ಜಂಗಮಪದಾಂಭೋಜಾತಪೂಜೋತ್ಸವಂ ಎನಿಸಿ ಪೆಂಪುವೆತ್ತಾ ಬಾಹೂರ ಬೊಮ್ಮಿದೇವಂ (ವೃಷವಿ. ೧೨-೬೩). [ಸಂ.]

**ವೀರಾಧಿವೀರ** (ನಾ). = ವೀರಾಗ್ರಗಣ್ಯ ೨ : ಅವನು ವೀರಾಧಿವೀರಯೋಧನಂತೆ ಪ್ರಾಣತ್ಯಾಗಮಾಡಿದ್ದನ್ನ ಕಣ್ಣಾರೆ ಕಂಡ ಒಬ್ಬ ಹತಭಾಗ್ಯನು . . . ಅರ್ಪಿಸಿದ ಕಾಣಿಕೆ ಇದು (ವೀರಯೋ. ೧೦೧). [ಸಂ.]

**ವೀರಾಯತ** (ನಾ). ಸಾಹಸದ ಕೆಲಸ ; ವೀರಕೃತ್ಯ : ವೀರಪುರುಷರ ವೀರಾಯತಂಗಳಂ ಬಿತ್ತರಿಸಿ ನುಡಿವರ್ (ಚಿಕಸ. ೧೮). [ಸಂ.]

**ವೀರಾವತಾರ** (ನಾ). ೧. ಶಿವನ ಒಂದು ಅವತಾರ ; ವೀರಭದ್ರ. ೨. (ಆಲಂ) ಶೌರ್ಯವೇ ಅವತಾರವೆತ್ತಿದಂತಿರುವವನು ; ಮಹಾಪರಾಕ್ರಮಿ: ವೀರಾವತಾರನೆನಿಸಿದ ವೀರಮಲ್ಲಪನ ತಮ್ಮಂ (ಅಜಿಪು. ೧-೪೦); ವೀರಾವತಾರನಸುರನ ಬಾರಿಗೆ ಗುಱಿಯಾದುದನ್ನ ನಾಯ್ಗಂ ನೀರೊಳ್ ನೀರಿೞಿವನಲ್ಲ ಪಂದಿಯ ಬಾರಂ ಕೋಱೆದದಱ ನೆತ್ತರೊಳ್ ನೀರಿೞಿಪೆಂ (ಸೂಕ್ತಿಸು. ೩-೨೨೭). [ಸಂ.]

**ವೀರಾವೇಶ** (ನಾ). ಪರಾಕ್ರಮದಿಂದ ಉಂಟಾಗುವ ಆವೇಶ, — ಉದ್ರೇಕ ; ಶೌರ್ಯೋದ್ರೇಕ : ಕರ ನಡುಗೆ ಮೈಬಲಿಯೆ ಹುಬ್ಬುಗಳುಱೆ ಬಿಗಿಯೆ ಕಂಗಳಲಿ ಕೆಂಗಿಡಿ ಸುರಿಯೆ ವೀರಾವೇಶದಲಿ ಮುಸಗಿದನು ಕಲಿಭೀಮ (ಕುಮ್ಮಾಕ. ೧೨-೧೧); ಬಿಱುಗಾಳಿಯಂತ್ಯದೆ ನುಗ್ಗಿದರ್ನುಚ್ಚುನುಱಿಯಾಗೆ ಬಱಸಿಡಿಲಂತೆ ಹಿಗ್ಗಿದರ್ಪಟ್ಟಿ ವೀರಾವೇಶದಿಂದೆ ಪಟುಭಟರಾಗಳಾಹವದೊಳು (ಜೈಮಿಭಾ. ೮-೩೨). [ಸಂ.]

**ವೀರಾಸನ** (ನಾ). ೧. ಬಾಣಪ್ರಯೋಗ ಮೊದಲಾದ ಸಂದರ್ಭಗಳಲ್ಲಿ ಒಂದು ಮಂಡಿಯನ್ನು ಊರಿ ಕುಳಿತುಕೊಳ್ಳುವ ಒಂದು ಭಂಗಿ ; ವೀರಮಂಡಿ. ೨. ವೀರರು ನಿಲ್ಲುವ ಸ್ಥಳ ; ಯುದ್ಧಭೂಮಿ ; ರಣರಂಗ : ''ಸುಭಟಪ್ರಮೋದಕರ ಯುದ್ಧಭೂಮಿ ವೀರಾಸನಂ ಮಹಾಪ್ರತಿಭಯದಂ'' (ವಸ್ತುಕೋ. ೮೨-೨). ೩. [ಯೋಗ] ಎಂಭತ್ತುನಾಲ್ಕು ಯೋಗಾಸನಗಳಲ್ಲಿ ಒಂದು ; ಯೋಗಿಗಳು ಧ್ಯಾನದ ಸಮಯದಲ್ಲಿ ಕೂರುವ ಆಸನ : ಮನವೊಲಿದವ ಸಂನ್ಯಸನದಳಿದು ವೀರಾಸನದಿ ಕುಳಿತು ನಾಸಿಕದಿ ಅನುಮಿಷದೃಷ್ಟಿಯ ನಿಲಿಸಿಯಾನಂದದಿ ಚಿನುಮಯನನು ಜಾನಿಸಿದ (ಜೀವಂಸಾ. ೫-೭೦) ; ಬಳಿಕ್ಕೆಂಬತ್ತುನಾಲ್ಕು ಆಸನಂಗಳೊಳಗೆ ಸಿದ್ಧಾಸನ ಪದ್ಮಾಸನ ಸ್ವಸ್ತಿಕಾಸನ ವೀರಾಸನ ಗೋಮುಖಾಸನ ಸುಖಾಸನಂಗಳೇ ಜಪಕರ್ಮಕ್ಕೆ ಯೋಗ್ಯಮಾದಾಸನಗಳೆಂದು ಸುಸ್ಥಿರಾಸನನಾಗಿ (ವಿವೇಕ. ೮೮). [ಸಂ.]

**ವೀರಾಳಾಪ** (ನಾ). ವೀರರ ಮಾತುಕತೆ ; ಶೂರರ ಸಂಭಾಷಣೆ : ಸುಭಟಕಟಕ ವೀರಾಳಾಪಗೋಷ್ಠಿಯೊಳಂ ಅಪ್ರತಿಮಲ್ಲ ಮಲ್ಲಯುದ್ಧಾಲೋಕನದೊಳಂ . . . ದಿವಸಕ್ಷಣಂಗಳೇಕವಾಗಿಯುಮೇಕಕ್ಷಣದಂತೆ ತನಗೆ ನಿರಂತರೋತ್ಸವಮನೊದವಿಸುತ್ತುಮಿರ (ಮಲ್ಲಿಪು. ೩-೨೭); ಬಿಂಕದ ಬಿರುದಂಕದ ವಿಡಾಯದ ದಡಾಳಿಯ ವೀರಾಳಾಪದ ವಿಪುಳಪ್ರತಾಪದ... ಹರಿಗೆಕಾಱರ ಮೊತ್ತದೊತ್ತಿನುಭಯಪಾರ್ಶ್ವದೊಳ್ (ಹಮ್ಮೀರ. ೩-೩೩ ವ). [ಸಂ. ವೀರಾಲಾಪ]

**ವೀರುತ್ತು** (ನಾ). ಹಬ್ಬಿರುವ ಬಳ್ಳಿ ; ಹರಡಿರುವ ಲತೆ : ಕುಸುಮಿಸಿದುವು ಮಿಕ್ಕೆಸೆವಾ ಕ್ಷುಪಕುಜಾತ ವೀರುತ್ತುಗಳುಂ (ಕಾವ್ಯಾವ. ೧೯೫) ; ಸಮುತ್ಕಂಟಕ ವಿಟಪಿಲತಾವೀರುದತ್ಕಂತ ವೃತ್ಯುತ್ಕರದುರ್ವೇಶಂ ಮನಕ್ಕದ್ಭುತರಸದೊದವಂ ತಂದುದಂದೊಂದಗೇಂದ್ರಂ (ಚಂದ್ರಪ್ರ. ೫-೭೭). [ಸಂ. ವೀರುಧ್]

**ವೀರುಧ** (ನಾ). = ವೀರುತ್ತು : ''ವಲ್ಲಿ ವೀರುಧಾಖ್ಯಂಗಳಲ್ಲಮವೆ ಗುಲ್ಮಂಗಳ್'' (ವಸ್ತುಕೋ. ೩೦-೩) ; ಪುಲಿಕರಡಿಸಿಂಹಶಾರ್ದೂಲಂಗಳಿಲ್ಲದಿಹ ಪೊಲಬ ಮೃಗ ಪಕ್ಷಿ ತರುಗುಲ್ಮವೀರುಧಂಗಳಿಂ ಕಲಿತಮಾಗದ ಭೂಮಿಯಂ ಕಂಡು ಪ್ಲವಗರತ್ಯಾಶ್ಚರ್ಯಗೊಳುತ (ವಂಕಾರಾ. ೪-೧೭-೩೪) ; ಚರಕ, ಸುಶ್ರುತಗಳಲ್ಲಿ ಸಸ್ಯವರ್ಗವನ್ನು ಹೀಗೆ ವಿಭಾಗಿಸಿದ್ದಾರೆ (i) ಹೂವಿಲ್ಲದೆ ಹಣ್ಣು ಬಿಡುವ ಗಿಡಗಳು ಅಥವಾ ವನಸ್ಪತಿಗಳು . . . (iv) ಹರಡುವ ಕಾಂಡಗಳುಳ್ಳ ಇತರ ಮೂಲಿಕೆಗಳು ಅಥವಾ ವೀರುಧಗಳು (ತತ್ತ್ವಪ್ರಾ. ೫೦೭). [ಸಂ. ವೀರುಧ್]

**ವೀರೇಶ್ವರ** (ನಾ). ೧. ಶ್ರೇಷ್ಠನಾದ ಪರಾಕ್ರಮಿ. ೨. ಈಶ್ವರ ; ಶಿವ : ತನಯನಸುವಂ ಕೊಟ್ಟಡಿಂದರ್ಚನೆಯ ಮಾಡುವೆನಭವಗೆನ್ನದೆ ನಿನಗೆ ವೀರೇಶ್ವರ ಸುತನನೀ ಬಾರಿ ಕಾಯಿದಡೆ ಮನವೊಲಿದು ಪರ್ಬಂಗಳ ದಿನದಿನಕೆ ಮಾಡಿಹೆನೆನ್ನದೇ ನಂದನನ ಜೀವವನೆತ್ತಿ ಗುರುವೇಯೆನ್ನದರ್ಧಿಸದೆ (ಬಸವು. ೪೮-೧೭). ೩. ವೀರಭದ್ರ : ಕಡೆಗಾಲದೊಳು ಜಗವ ಮೊಗೆದು ದಹಿಸುವ ಮೃಡನ ನಡುಗಣ್ಣ ಬೆಂಕಿಯಿಂದೊಗೆದು ನೆಗೆದೆಯ್ದೆ ಘುಡುಘುಡಿಸಿ ವೀರೇಶ್ವರಂ ನೆರೆದ ದೇವರ ಹಿಂಡನಂಡಲೆದು . . . ದಕ್ಷಂ ಪ್ರತಿಷ್ಠಿಸಿದ ದಕ್ಷೇಶ್ವರನನೀಕ್ಷಿಸಿದನು (ಹಚಿಕಾ. ೧೦-೪೪). [ಸಂ.]

**ವೀರೋಚಿತ** (ಗು). ೧. ವೀರನಿಗೆ ಉಚಿತವಾದ ; ಪರಾಕ್ರಮಿಗೆ ತಕ್ಕುದಾದ. (ನಾ). ೨. ವೀರನಿಗೆ ಉಚಿತವಾದುದು ; ಪರಾಕ್ರಮಿಗೆ ತಕ್ಕುದಾದುದು : ಸ್ವಂತ ಶಕ್ತಿಸಾಮರ್ಥ್ಯಗಳಿಂದಲೇ ಅವನು ಸೆನೆಟರ್ ಪದವಿ ಗಳಿಸಿದ್ದನು . . . ವೀರೋಚಿತವಾದ ಗೌರವ ಸನ್ಮಾನಗಳಿಗೂ ಯೋಗ್ಯನೆಂದೂ ತಿಳಿದುಕೊಂಡಿದ್ದನು (ಪುನರು. ೩೪೦). [ಸಂ.]

**ವೀರ್ಜಡೆ** (ನಾ). ಒಂದು ಬಗೆಯ ರಣವಾದ್ಯ (?) : ಸಿಂಹನಿಂದುಲಿವ ಸುಢಕ್ಕೆ ವೀರ್ಜಡೆಯುಃ ಶಂಖ ಸುಚಕ್ರವು ರಾಜರಾಜನಿಂದಲಿ ಪಡೆದಾತ ಘಂಟೆಯ ನರೇಶ್ವರ ಭೀಕರ ಶತ್ರುಸಂಹರಾ (ಬೀಳವಂ. ೧-೧೫೭). [?]

**ವೀರ್ತಂಡಕೊಲ್ಲಿ** (ನಾ). ಒಂದು ಪ್ರದೇಶದ ಹೆಸರು (?) : ತಸ್ಯ ಸೀಮಾನ್ತರಾಣಿ ಪೂರ್ವ್ವಸ್ಯಾನ್ದಿಸಿ (ಶಿ) ಕಮ್ಮಾತ್ತಿವಾಯ ಅಲ್ಲಂ ವೀರ್ತ್ತಂಡಕೊಲ್ಲಿಯ ಪಳಂಪೆಯಾಲ ತುಟಿಲ್ಲಾಲಾ ಮೂಟಾಯೊಟ್ಟಿ (ಇಆ. XVIII, ೩೭೭-೨೧ ; ೮ನೆಯ ಶತ). [? + ಕೊಲ್ಲಿ]

**ವೀರ್ಯ** (ನಾ). ೧. ಕಲಿತನ ; ಶೌರ್ಯ ; ಪರಾಕ್ರಮ : ಭಯವಿರಹಿತ ವೀರ್ಯೌದಾರ್ಯಗಂಭೀರಕಾರ್ಯಾಶ್ರಯವಿಶದಗುಣ ಶ್ರೀನಾಯಕೋತ್ಕರ್ಷವೇದ್ಯಂ (ಕವಿರಾ. ೩-೨೧೩) ; ದೇಹದಲಿ ಮನದಲಿ ಜ್ಞಾನದಲಿ ಗುಣದಲಿ ವೀರ್ಯದಲಿ ಸಹ್ಯಾದ್ರಿಶೃಂಗಸಂಕುಲದಂತೆ ನಿಮಿರೆಳ್ದು ಮೈತ್ರಿಯಿಂ ಸ್ಪರ್ಧಿಸಿದರೊಬ್ಬರೊಬ್ಬರ ಕೂಡೆ ನಾಲ್ವರುಂ (ಶ್ರೀರಾಮಾ. ೨೫-೬೭೭). ೨. ಬಲ ; ಸಾಮರ್ಥ್ಯ : ವೀರ್ಯಮನಂತ ವೀರ್ಯಮುಱಿವಪ್ರತಿಮಂ ಸುಖಮಾತ್ಮಭಾವಿ ಗಾಂಭೀರ್ಯಮಮಾನುಷಂ ನಿನಗೆ ದೇವರ ದೇವ (ಶಾಂತಿಪು. ೧೦-೧೦೦) ; ಒಂದಿದ ಧೈರ್ಯವೊಂದಿದಳವೊಂದಿದ ನಿರ್ಮಳಧರ್ಮಭಾವಮೊಳ್ಪೊಂದಿದ ವೀರ್ಯಮೊಂದಿದಜಿತಂ ನೆಱ ತನ್ನೊಡಮೊಂದಿ ನಿಲ್ವುದುಂ (ಸುಕುಮಾ. ೧೨-೪೧). ೩. ಕೆಚ್ಚು ; ಧೈರ್ಯ. ೪. ಪುರುಷತ್ವ ; ಪುಂಸತ್ವ. ೫. ಶುಕ್ರ ; ರೇತಸ್ಸು : ಮಧುಕ ಒಪ್ಪಲ ಕಾಳಿಅವಿನ ಹಾಲಲ್ಲಿ ಅರೆದು ಕುಡಿಯೆ ವೀರ್ಯವಕ್ಕುಂ (ವಿಷ್ಣವಿ. ೯೧). ೬. ಕಾಂತಿ ; ತೇಜಸ್ಸು. ೭. (ಔಷಧಿಗಳ) ಗುಣ ; ಪ್ರಭಾವ ; ಪರಿಣಾಮ. ೮. ಸಸ್ಯಗಳ ಬೀಜ, — ಕಾಳು. ೯. ವಿಷ ; ಗರಳ. ೧೦. ಚಿನ್ನ ; ಹಿರಣ್ಯ. ೧೧. ಘನತೆ ; ಗೌರವ ; ಗಣ್ಯತೆ. ೧೨. [ವಿಶಿಷ್ಟಾ] ಭಗವಂತನ ಆರುಗುಣಗಳಲ್ಲಿ ಒಂದು : ಶುದ್ಧಸತ್ತ್ವವೆಂಬುದು . . . ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸೆಂಬ ಭಗವಂತನ ಆರು ಗುಣಗಳಿಗೂ ಪ್ರಕಾಶವಾಗಿರುವುದರಿಂದ ಷಾಡ್ಗುಣ್ಯವಾಯವು (ಹಿಂದಸಾ. ೨೩೮). ೧೩. [ಜೈನ] ''ಆಸ್ರವ ವಿಶೇಷದ್ರವ್ಯಗಳ ಸ್ವಶಕ್ತಿವಿಶೇಷ'' (ಜೈನಕೋ. ೨೩೭) : ಬಱಿಯಂ ಕ್ಷಾಯಿಕ ಸಮ್ಯಕ್ತ್ವಾನಂತಜ್ಞಾನ ದರ್ಶನವೀರ್ಯ ಸೂಕ್ಷ್ಮಾವಗಾಹಾಗುರು ಲಘುತಾವ್ಯಾಬಾಧಂಗಳೆಂಬ ಗುಣಮೆಂಟುಂ ಬಂದು ತನ್ನೊಳ್ ಪೆಣೆದಿರೆ (ಆದಿಪು. ೧೭-೪೯ ವ). [ಸಂ.]

**ವೀರ್ಯಪ್ರವೃತ್ತಿ** (ನಾ). ಪರಾಕ್ರಮದಿಂದ ಕೂಡಿದ ನಡವಳಿಕೆ ; ಧೀರ ಸ್ವಭಾವ : ಸಾಂಪರಾಯಕಾಯಮುಂ ವೀರ್ಯಪ್ರವೃತ್ತಿಯುಮಿಂದ್ರಿಯಕಷಾಯ ಯೋಗ[ಮು] ಮಿಲ್ಲದುದು ಪುಣ್ಯಾಸ್ರವಮಕ್ಕುಂ (ಶಾಂತಿಪು. ೧೨-೫ ವ). [ಸಂ.]

**ವೀರ್ಯವತಿ** (ನಾ). ೧. ಸಂತಾನೋತ್ಪತ್ತಿಯ ಶಕ್ತಿಯುಳ್ಳವಳು. ೨. ಒಂದು ಬಗೆಯ ಸಸ್ಯ : ''ವೀರ್ಯವತಿ ಚುಂಚೆನಿಕ್ಕುಂ'' (ಮಂಗರಾ. ೪೪-೪೭).

[ಸಂ. ವೀರ್ಯವತೀ]

**ವೀರ್ಯವತ್ತು** (ನಾ). ಕಸುವುಳ್ಳುದು ; ಸತ್ತ್ವಯುತವಾದುದು: ಶರೀರಶೋಧನೆಗಾಗಿ ಉಪಯೋಗವಾಗುವ ವಮನ ಮತ್ತು ವಿರೇಚನದ್ರವ್ಯಗಳನ್ನು ವಸಂತಋತುವಿನ ಕೊನೆಯಲ್ಲಿ ಕೂಡಿಟ್ಟುಕೊಳ್ಳಬೇಕು. ಈ ಕಾಲಗಳಲ್ಲಿ ಅವು ಪೂರ್ಣವೀರ್ಯವತ್ತಾಗಿರುವುವು (ಸಕವ್ಯ. xii, ಪ್ರಸ್ತಾವನ). [ಸಂ. ವೀರ್ಯವತ್]

**ವೀರ್ಯವರ್ಧನ** (ನಾ). ಪುಂಸತ್ವದ ವೃದ್ಧಿ ; ಇಂದ್ರಿಯಬಲದ ಬೆಳವಣಿಗೆ : ಜವೆ ಕಳಮಂ ಮಾಷಂ ಗೋದುವೆ ಪಿಪ್ಪಲಿಯೆಂಬಿವಿನಿತುಮಂ ಗೋಘೃತದಿಂದ ಪುಗಡಿಸಿ ತಿಂದು ಸಿತದುಗ್ಧವನಿರುಳೊಳ್ ಕುಡಿಯೆ ವೀರ್ಯವರ್ಧನಮಕ್ಕುಂ (ಲೋಕೋಪ. ೯-೪೭); ಈಶ್ವರಿ . . . ಅದರ ಎಲೆಯುಂ ಒಣಗಲಿಕ್ಕಿ ಬೇವಹರಂ ಮಾಡಿ ಲಾಭ XXX ಹಸಿಯ ಹಾಲೊಪ್ಪ ಕುಡಿಯೆ ವೀರ್ಯವರ್ಧನಮಕ್ಕುಂ (ವಿಷ್ಣವಿ. ೨). [ಸಂ.]

**ವೀರ್ಯವೃದ್ಧಿ** (ನಾ). = ವೀರ್ಯವರ್ಧನ : ನವಣೆಯ ಪಿಟ್ಟಂ ನೆಲದಾಟುವ ನೊಡವೊಯ್ದಟ್ಟು ಘೃತಸಮೇತಂ ಮೇಣ್ ದುಗ್ಧವಿಮಿಶ್ರಂ ಸೇವಿಸೆ ವೀರ್ಯವೃದ್ಧಿಯುಂ ಮೆಯ್ಯ ಪುಷ್ಟಿಯುಂ ಸವನಿಸುಗುಂ (ಲೋಕೋಪ. ೯-೪೫) ; ನಸುಗುನ್ನಿ ಬಿತ್ತುಗಳಿಗೆಸೆವ ಸಮಮುದ್ದನಿಟ್ಟೆಸೆವ ತೆಂಗಾಯ ನೀರಿಂ ಚಾರಿಸಿ . . . ಮೆಲೆ ವೀರ್ಯವೃದ್ಧಿ (ಜನವ. ೧೩-೪೫). [ಸಂ.]

**ವೀರ್ಯಸ್ಖಲನ** (ನಾ). ಪುರುಷನಿಗೆ ಸಂಭೋಗಕಾಲವನ್ನುಳಿದು ಬೇರೆ ಸಮಯದಲ್ಲಿ ರೇತಸ್ಸು ವಿಸರ್ಜನೆಯಾಗುವಿಕೆ ; ವೀರ್ಯಸ್ರಾವ : ವೀರ್ಯಸ್ಖಲನದ ವೇಳೆಯಲ್ಲಿ ಎದೆಯೂ ಮತ್ತು ನಾಡಿಗಳೂ ಸಾಮಾನ್ಯಸ್ಥಿತಿಗಿಂತ ಹೆಚ್ಚು ಒತ್ತರದಿಂದ ಹಾರುವುದು (ಬ್ರಹ್ಮಜೀ. ೨೩). [ಸಂ.]

**ವೀರ್ಯಸ್ತಂಭನ** (ನಾ). ಪುರುಷನಿಗೆ ಸಂಭೋಗಕಾಲದಲ್ಲಿ ಹೆಚ್ಚು ಹೊತ್ತು ರೇತಸ್ಸು ವಿಸರ್ಜನೆಯಾಗದಿರುವಿಕೆ, — ವೀರ್ಯವು ಸ್ಖಲನವಾಗದಿರುವಿಕೆ : ವೀರ್ಯಸ್ತಂಭನಕ್ಕೆ:- ಆದಿತ್ಯವಾರ ಹೊಸ ಹಂಚಿಕೆ ಹೂವಿನ ಗುಂಡಿಗೆಯ ರಕ್ತವ ಬಿಟ್ಟು ಪಚ್ಚೆಕರ್ಪೂರರಸ ಮಲ್ಲಿಗೆಸೊಪ್ಪಿನ ರಸ . . . ಗುಟಿಕೆ ಮಾಡಿ ಒಂದಿಷ್ಟು ಹಾಲಲ್ಲಿ ಸೇವಿಸುವುದು (ವಿಷ್ಣವಿ. ೨೧೧). [ಸಂ.]

**ವೀರ್ಯಾಂತರಾಯ** (ನಾ). [ಜೈನ] ಐದು ಬಗೆಯ ಅಂತರಾಯಕರ್ಮ ಪ್ರಕೃತಿಗಳಲ್ಲಿ ಒಂದು ; ಮುಮುಕ್ಷುವಿಗೆ ಬರುವ ಒಂದು ಬಗೆಯ ವಿಘ್ನ ; ಇಚ್ಛೆಯಿದ್ದರೂ ಆತ್ಮಶಕ್ತಿಯ ಪ್ರಕಟಣೆಗೆ ಎಡೆಗೊಡದ ಕರ್ಮ: ಚಕ್ಷುರಚಕ್ಷುರವಧಿ ಕೇವಲದರ್ಶನಾವರಣ ಚತುಷ್ಕಮುಮಂ ದಾನಲಾಭ ಭೋಗೋಪ ಭೋಗವೀರ್ಯಾಂತರಾಯಪಂಚಕಮುಮನೊರ್ಮೊದಲೆ ಕಿಡಿಸಿ (ಆದಿಪು. ೧೦-೧೪ ವ).

[ಸಂ.]

**ವೀಲು** 'ವಿಲ್ಲು' ನೋ.

**ವೀವಧ** (ನಾ). ೧. ಭಾರವನ್ನು ಹೊರಲು ಉಪಯೋಗಿಸುವ ನೊಗ, ಅಡ್ಡೆ,ಕಂಬಿ, ಕಾವಡಿ ಮುಂತಾದುವು : ''ವಿವಧಂ ವೀವಧಮೆನಿಕುಂ'' (ವಸ್ತುಕೋ. ೫೧-೩೪). ೨. ಹೊರೆ ; ಭಾರ : ''ವಿವಧಃ, ವೀವಧಃ, ಭಾರಃ, ಪರ್ಯಾಹಾರಃ — ಈ ೪ ತಲೆಹೊಱೆ'' (ಹಲಾಯು. ೧೨೫-೬೩). ೩. ಹೊರಗಿನಿಂದ ಊರೊಳಕ್ಕೆ ಧಾನ್ಯ ಮುಂತಾದುವು ಬರುವಿಕೆ. ೪. ದಾರಿ ; ಮಾರ್ಗ: ''ವಿವಧಃ, ವೀವಧಃ — ೨ ಹೊರಗಿನಿಂದ ಊರೊಳಕ್ಕೆ ಧಾನ್ಯಾದಿಗಳು ಬರುವಿಕೆ, ಪುರೋಕ್ತಿಗೆ ಬಂದಿರುವ ಅನಾಜು, ಕಾವಡಿ, ದಾರಿ'' (ಸಿದ್ಧಾಂತಿ. ೩೯೭). ೫. ಧಾನ್ಯಗಳ ಸಂಗ್ರಹ. [ಸಂ.]

**ವೀಸ, ವೀಸೆ** (ನಾ). ೧. ಒಂದು ಹಣದ ಇಪ್ಪತ್ತನೆಯ ಒಂದು ($\frac{1}{20}$) ಭಾಗದ ಬೆಲೆಯ ಒಂದು ನಾಣ್ಯ : ತಿಂಗಳಿಂಗೆ ಪತ್ತುವೀಸಮಂ ಕುಡುತುಂ ಬರಿಸಕ್ಕೆಯ್ದುಸುತ್ತುಂ ಬರ್ಪ್ಪರು (ಸೌಇ. XI-ii, ೧೮೧-೧೦ ; 1094) ; ವಾಸಮದ್ಯದೆನೆ ಹಾಗಂ ವೀಸಮದಿಪ್ಪತ್ತಱಿಂದೆ ಪಣಮೆನಿಸಿರ್ಕುಂ (ವ್ಯವಹಾ. ೫-೩೦). ೨. ಒಂದು ಹಣದ ಹದಿನಾರನೆಯ ಒಂದು ($\frac{1}{16}$) ಭಾಗದ ಬೆಲೆಯ ಒಂದು ನಾಣ್ಯ ; ನಾಲ್ಕು ಕಾಣೆ : ಒಂದು ವೀಸವನ [ಪಾಠಾಂ. ವೀಸನ]ಪ್ಪೊಡಮಾರ್ಗಮಿತ್ತಱಿಯದೆ ಚಾಗಕ್ಕೆ ಮುಯ್ಯಾಂತು[ಂ] ತಮ್ಮ ನಗುವರನಱಿಯದೆಣ್ಬರೇಱಿದ ಕಟ್ತಿಯಂತೆ ದೆಸೆದೆಸೆಗೆ ಬೆಸೆವ ಪಚ್ಚಪಸಿಯೆಗ್ಗರುಮಂ ಕಂಡು (ಪಂಪಭಾ. ೪-೯೪ ವ); ಕಾಸಿಗೆ ವೀಸವ ಬಡ್ಡಿ ಗಳಿಸಿಕೊಂಡು ಶೇಷಗಿರಿಯ ಮೇಲೆ ವಾಸವಾಗಿದ್ದನೆ (ಪುರಂದ. ೨-೩೨-೧); ಆಸೆಯನು ಅಱಿದಿತ್ತ ವೀಸವದು ಸವಲಕ್ಷ ಆಸೆ ತಾ ತೀರ್ದ ಬಳಿಕಿತ್ತ ಲಕ್ಷವದು ವೀಸದಿಂ ಕಷ್ಟ (ಸರ್ವಜ್ಞ. ೬೪೧). ೩. ಯಾವುದೇ ದ್ರವ್ಯದ ಹದಿನಾರನೆಯ ಒಂದು ($\frac{1}{16}$)ಭಾಗ : (ರೈಸ್‌ಗ. II, ೫೭೪). ೪. ತೂಕದ ಒಂದು ಅಳತೆ ; ಮಣದ ಎಂಟನೆಯ ಒಂದು ($\frac{1}{8}$) ಭಾಗ ; ಐದುಸೇರು ; ಪಂಚೇರು : ಮುವತ್ತಮೂವೀಸಯುಮನ್ ವಿಟ್ಟು ಸರ್ವ್ವಪರಿಹಾರಂ ಕೊಟ್ಟಾರ್ (ಎಕ. VI, ಕೊಪ್ಪ. ೪೧-೧೪; ಸು. 1090) ; ದೇವಗಾಣದೊಕ್ಕಲಲ್ಲಿ ದೇವಸವಳವೆಂಣೆ ಸೊಳಸವೊಂದು ಚೈತ್ರಪವಿತ್ರಂಗಳೊಳು ಗಾಣದಲ್ಲಿ ವೀಸವ್ಯದು . . . ನಡವ ಮನುಷ್ಯರಾಹಾರ ದಾನಕ್ಕೆ ತಿಂಗಳಿಂಗೊಕ್ಕಲ್ಗಳೊಳ್ ಜೋಳ ಕೊಳಗ ಒಂದು (ಎಇ. XX, ೧೧೭-೫೦; 1167). ೫. ಒಂದು ಅಳತೆಯ ಪ್ರಮಾಣ ;

ಪಡಿಯ ಹದಿನಾರನೆಯ ಒಂದು ($\frac{1}{16}$) ಭಾಗದ ಅಳತೆ : ೧೬ ವೀಸಕ್ಕೆ — ೧ ಪಡಿ (ಭೂಮಿಅ. ೧). ೬. ಪಾಲು ; ಭಾಗ ; ಅಂಶ : ನೀನು ಇನ್ನೂ ಜೀವನಪಥದಲ್ಲಿ ಕಾಲಿಡುತ್ತಿ! ನಾನು ಮುಕ್ಕಾಲು ಮೂರು ವೀಸ ದಾರಿಯನ್ನು ಸಾಗಿಸಿದಂತಿದೆ! (ನಿಷ್ಕಾಮ. ೨೪). ೭. (ಆಲಂ) ಅತ್ಯಲ್ಪ ಹಣ ; ಕನಿಷ್ಠಬೆಲೆಯ ಕಾಸು : ಕೂಸಿಂಗೆ ಕುತ್ತವಾದೊಡೆ ದೇಶದ ಬಳಿರಿಯರ್ಗೆ ಕುಡುವರೊಳ್ಪರ್ಚನೆಯಂ ಶಾಸನದೇವತೆಗೆಂದೊಡ ವೀಸದ ಪುಷ್ಪಮುಮನೀಯ ರಜಿಗುಲಿಪೆಂಡಿರ್ (ಸಮಪ. ೫-೧೦೦); ದಾಸಿಯನು ಹೋಗುವಗೆ ವೀಸ ಹತ್ತದು ಕೈಗೆ ಹೇಸಿ ತೊಲಗುವಳು ಜಯಲಕ್ಷ್ಮಿ ಆಯುಷ್ಯ ನಾಶವಾಗುವುದು (ಸರ್ವಜ್ಞ. ೧೪೧೬). ೮. ವೀಸದಷ್ಟು ; ಸ್ವಲ್ಪಪ್ರಮಾಣ ; ಅಲ್ಪಪ್ರಮಾಣ : ವೀಸಂ ದೋಸಮಿಲ್ಲಂ, ಮಾರ್ನುಡಿಯದಿರ್, ಪೋಪೋಗೆಂದುಸಿರ್ದಂ (ರಾಮಾಶ್ವ. ೨೬-೧೫). ೯. ಒಂದುಬಗೆಯ ತೆರಿಗೆ (?) : 'ಮೂಲೆವೀಸ' ಪರಾ. ವೀಸೆ : ೨. ಪೊಂಗೇಟ್ಟಂಡುಗುಮಾಗೆ ಮನಂಗೊಳೆ ಹಣವದ್ದ ವೀಸೆ ಕಾಣೆಗಮೇನುಂಬಂಗೆ ತಿಳಿವಂತೆ ಪೇಟ್ಟಂ ಪಿಂಗದೆ ಗಣಕಪ್ರಧಾನನೆನಿಪುದು ಪಿರಿದೇ (ವ್ಯವಹಾ. ೧೫-೨೩). ೪. ಈ ಕಾಲದಲ್ಲಿ ಚವನಪ್ರಾಶ ಎಂಬ ಔಷಧಿ ಕೆಮ್ಮಲು ಮುಂತಾದ ವ್ಯಾಧಿಗಳನ್ನು ಗುಣಪಡಿಸುವುದೇ ಹೊರತು, ಅದನ್ನು ವೀಸೆವೀಸೆಯಾಗಿ ನುಂಗಿದವರಿಗೂ ಸಹ ವಯಸ್ಸನ್ನು ಕಡಿಮೆಮಾಡಿ ಯವ್ವನವನ್ನು ಕೊಟ್ಟಿತೆಂಬುದನ್ನು ಕಂಡುದೂ ಇಲ್ಲ, ಕೇಳಿದುದೂ ಇಲ್ಲ (ಕೂಸಪ್ಪ. ೧೬೦). ೧೦. ತೂಕದ ಒಂದು ಪ್ರಮಾಣ (?): ಹಾಗವ ಹಾಗದಿ ಗುಣಿಸಲು ಬೇಗಂ ವೀಸೆಗಳವಕ್ಕು ವೀಸವೀಸಮನಂತಾ ವೀಸದಿ ಗುಣಿಸಲು ಗಿಡ್ಡಗಾಣಿಯು (ಕ್ಷೇತ್ರಗ. ೨೯-೨). [< ಪ್ರಾ. ವೀಸ./ ಸಂ. ವಿಂಶತಿ./ ತಮಿ. ವೀಚಮ್; ಮಲ. ವೀಶಮ್ ; ತುಳು. ವೀಸ, ವೀಸು ; ತೆಲು. ವೀಸಮು]

**ವೀಸಕಂಭ** (ನಾ). ತೂಕ ಅಥವಾ ಅಳತೆಯ ಪ್ರಮಾಣ : ಅರೆಯಿಂದ ಬೇಳೆಯ ಗುಣಿಸಲು ಅದು ವೀಸಕಂಭವಕ್ಕುಂ (ಕ್ಷೇತ್ರಗ. ೬-೪). [ವೀಸ + ಕಂಭ]

**ವೀಸಪಾಲು** (ನಾ). ೧. ಯಾವುದೇ ದ್ರವ್ಯ ಅಥವಾ ಸಂಖ್ಯೆಯ ಹದಿನಾರನೆಯ ಒಂದು($1/_{16}$) ಅಂಶ, — ಭಾಗ : "ಕಲಾಷೋಡಶೋಭಾಗಃ— ಹದಿನಾರನೇ ಅಂಶ, ಅಂದರೆ ಚಂದ್ರನಲ್ಲಿ ವೀಸಪಾಲು" (ಸಿದ್ಧಾಂತಿ. ೨೯). ೨. (ಆಲಂ) ಸ್ವಲ್ಪಭಾಗ ; ಅತ್ಯಲ್ಪಅಂಶ : ಕ್ರೂರಕರ್ಮನಾದಾ ದುಷ್ಟಬುದ್ಧಿಗೆ ಆ ಮಾತುಗಳನ್ನು ಕೇಳಿ ವೀಸ ಪಾಲಾದರೂ ದಯೆಯುಂಟಾಗಲಿಲ್ಲ (ಕವಿಕ. ೧೫). [ವೀಸ + ಪಾಲು$_2$ (< ಪಾಲ್$_2$)]

**ವೀಸಬಡ್ಡಿ** (ನಾ). ೧. ಹದಿನಾರನೆಯ ಒಂದು ($\frac{1}{16}$) ಭಾಗದಷ್ಟು ಬಡ್ಡಿ : ಕುಮಾರಸ್ವಾಮಿಗಳ ಕೈಯಲು ಹೊಂಗೆ ತಿಂಗಳಿಂಗೆ ಹಾಗಂ ವೀಸಬಡ್ಡಿಯಲ್ ವರ್ಷಂಪ್ರತಿಯ ಸಿದ್ಧಾಯವಿಳಿದುಬಹಂತಾಗಿ (ಎಕ. VI, ಕಡೂರು. ೧೨-೫೯ : 1253). ೨. (ಆಲಂ) ಅಲಕ್ಷಿಸಬಹುದಾದಷ್ಟು ಪ್ರಮಾಣ ; ತೀರ ಅಲ್ಪ ; ಅತಿಸ್ವಲ್ಪ : ಗಾಸಿವಡೆಯದೆ ಕಡಲನಿಂಗಿಸಿ ಭೂಸಮವಗ್ಗೆದಸುರಪುರವನು ವೀಸಬಡ್ಡಿಯೊಳೀಗಳಸುವನು ಕೊಳ್ವೆನಾ ಖಳರ (ರಾಮಾಸಂ. ೬-೧-೮).

ವೀಸಬಡ್ಡಿಯಲಸುವ ಕೊಳ್ = (ಆಲಂ) ಅಲ್ಪಶ್ರಮದಿಂದ ಜೀವವನ್ನು ತೆಗೆ ; ಸುಲಭವಾಗಿ ಕೊಲ್ಲು : ಸಿಂಹದ ಕೂಸ ನರಿ ಕೆಣಕುವವೊಲೀ ಕುರುಕೀಚಕಾದಿಗಳು ಗಾಸಿಯಾದರು ಕೆಣಕಿ ನಾಯ್ಗಳ ವೀಸಬಡ್ಡಿಯಲಸುವ ಕೊಂಬೆನು (ಕುಮಾವಿ. ೩-೭೦). [ವೀಸ + ಬಡ್ಡಿ$_2$]

**ವೀಸವ** (ನಾ). = ವೀಸ ೧ : ಅಗ್ರಹಾರಂ ನಿಡುಗುಂದಿಯ ಮಹಾಜನಂ ನಾಲ್ನೂವ್ವರುಂ ಪೂರ್ವ್ವಸ್ಥಿತಿಯಿಂ ನಡೆವ ಪಾರಿಖಾಯದ ಹೊಂಗೆ ಮೂಜುವರೆ ವೀಸವಮಂ ಪರಸ್ಥಾನದ ಮಹಾಜನದಭ್ಯಾಗತಪೂಜೆಗೆ ಬಿಟ್ಟರು (ಸೌಇಇ. XI-i, ೧೧೭-೫ ; 1076). [< ವೀಸ]

**ವೀಸಾ** (ನಾ). "ರಹದಾರಿ ಮೊದಲಾದುವುಗಳನ್ನು ಪರೀಕ್ಷಿಸಿ ಅವುಗಳ ಮೇಲೆ 'ಸರಿಯಾಗಿದೆ' ಎಂದು ಬರೆದ ಷರಾ" (Visa. ಇಂಕನ್): ಪಾಸ್‌ಪೋರ್ಟಿನ ಮೇಲೆ ವೀಸಾ ಬರೆಸಿಕೊಳ್ಳುವ ಕೆಲಸ (ಅಪೂಪ. ೮). [<— ಇಂ. Visa]

**ವೀಸೆ** 'ವೀಸ' ನೋ.

**ವೀಸೋತ್ತರ** (ನಾ). ಒಬ್ಬಾತನ ಹೆಸರು : ಗಜೇಂದ್ರಂ ತುರಂಗಂ ನಡೆಮಾಡಂ ದಣ್ನಾಥೋ[ತ್ತ]ಮ ಪದವಿ ಮಹಾತೂರ್ಯ್ಯಮೆಂಬಿಂತಿವಂತುಂ ಪಡೆದಂ ಚೆಲ್ವಿಂದೆ ವೀಸೋತ್ತರ ವಿದಿತ ಧರಾದೇವನಿಷ್ಟಪ್ರಭಾವ (ಎಇ. XIII, ೩೩೦-೧೪ ; 929). [?]

**ವೀಸೋತ್ತರದೀಕ್ಷಿತ** (ನಾ). ಒಬ್ಬಾತನ ಹೆಸರು : ಶತಪತ್ರಭವಾನ್ವಯ ಭೂನುತರೆನಿಸಿದ ರೇವದಾಸ ವೀಸೋತ್ತರದೀಕ್ಷಿತರ ಗುಣಂಗಳನೆಣಿಸುವ ಮತಿಮನ್ತರನಾನದೆಲ್ಲಿಯುಂ [ಕಣ್ಣ]ಜೆಯೆ (ಎಇ. XIII, ೩೩೦-೧೨ ; 929). [ವೀಸೋತ್ತರ + ದೀಕ್ಷಿತ]

**ವೀಸೋತ್ತರಭಟ್ಟ** (ನಾ). ಒಬ್ಬಾತನ ಹೆಸರು : ಧರಣೀನಾಥಪ್ರಸಾದಂ ಸಮನಿಸಿರೆ ಮಹಾಯಜ್ಞಮಂ ಮಾಡಿ . . . ವೀಸೋತ್ತರಭಟ್ಟಂ ವಿಪ್ರವಂಶಪ್ರಬಳರುಚಿಮಯಾನಗ್ಘ್ಯ ಮಾಣಿಕ್ಯಪಟ್ಟಂ (ಎಇ. XIII, ೩೩೦-೧೮; 929). [ವೀಸೋತ್ತರ + ಭಟ್ಟ]

**ವೀಸೋತ್ತರಸೋಮಯಾಜಿ** (ನಾ). ಒಬ್ಬಾತನ ಹೆಸರು : ರೇವದಾಸ ವೀಸೋತ್ತರ ಸೋಮಯಾಜಿಗಳಿನೂರ್ಜ್ಜಿತಮಾಯ್ತು ಧರಾಮರಾನ್ವಯಂ (ಎಇ. XIII, ೩೩೦-೧೬ ; 929). [ವೀಸೋತ್ತರ + ಸೋಮಯಾಜಿ]

**ವೀಳ್** 'ಬೀಟ್$_1$' ನೋ.

**ವೀಳಯ** 'ವೀಳೆಯ' ನೋ.

**ವೀಳಯದೆಲೆ** 'ವೀಳೆಯ' ಪರಾ.

**ವೀಳಿಗೆ** (ನಾ). ೧. ವೀಳೆಯದೆಲೆ ಮತ್ತು ಅದರ ಬಳ್ಳಿ ; ನಾಗವಲ್ಲಿ : ಪಳಿಕಂ ವೇಳಿಗೆ, ವೀಳಿಗೆ, ಗುಳಿಗೆ, ವರಾಳಂ, ರಗಳೆ, ಪುಳಂ — ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟ್ಟಿಯುಂ ಕುಳಂಗಳಾದುವು (ಶಮದ. ೨೨ ವೃತ್ತಿ). ೨. ಸಿದ್ಧಪಡಿಸಿದ ವೀಳೆಯ ; ತಾಂಬೂಲ : ಪೆಗಲಂ ತಟ್ಟೈಸಿ ತೋಳಿಂ ತೊಡೆಗೆ ಗುರುನಿತಂಬಾಗ್ರಮಂ ಸಾರ್ಚಿಮುಂ ವೀಳಿಗೆಯಂ ಬಾಯ್ಗಿತ್ತು (ಲೀಲಾವ. ೧೩-೩೨). [< ಸಂ. ವೀಟಿಕಾ]

**ವೀಳಿಗೆಗೊಡು** (ಕ್ರಿ). ಸಿದ್ಧಪಡಿಸಿದ ಎಲೆಯಡಿಕೆಯನ್ನು ಕೊಡು,— ತಾಂಬೂಲವನ್ನು ನೀಡು : ಒರ್ಬಳೆನ್ನಂ ತನ್ನ ಗೃಹಕೆ ಕೊಂಡೊಯ್ದು . . . ದಿವ್ಯಾನ್ನಪಾನಂಗಳಿಂ ತಣಿಯಿಸಿ ಸರ್ಬಸಂತಸದೆ ವೀಳಿಗೆಗೊಟ್ಟು ಬಳಿಕೊಲ್ದು ಕರ್ಬುವಿಲ್ಲನ ಕೇಳಿಯಿಂದೆಯನುರಾಗಮಂ ಪರ್ಬಿಸೆ . . . ಸುಖದಿನಿರ್ದಂ (ಪಾರ್ಸೋಪು. ೫-೬೫). [ವೀಳಿಗೆ + ಕೊಡು$_1$]

**ವೀಳಿದೆಲೆ** 'ವೀಳೆಯ' ಪರಾ.

**ವೀಳೆಯ**, ಬಿಳೆಯ, ವಿಳ್ಳೆ, ವೀಳಯ, ವೀಳ್ಯ (ನಾ). ೧. (ನಮ್ಮ ದೇಶದಲ್ಲಿ ಜನರು ವಿಶೇಷವಾಗಿ ಅಡಕೆ, ಸುಣ್ಣಗಳೊಂದಿಗೆ — ಸಾಮಾನ್ಯವಾಗಿ ಊಟವಾದನಂತರ ಸೇವಿಸುವ) ಒಂದು ಬಗೆಯ ಎಲೆಯನ್ನು ಬಿಡುವ ಬಳ್ಳಿ ಮತ್ತು ಅದರ ಎಲೆ ; ನಾಗವಲ್ಲಿ : "ವೀಟಿಕೆಯ ವೀಳೆಯಂ" (ಚತುನಿ. ೧೩) ; ಘಟಿಕಾ, ಗಟಿಗೆ ; ವೀಟಿಕಾ, ವೀಳೆಯ ; ಘುಟಿಕಾ, ಗುಳಿಗೆ (ಶಬ್ದಾನು. ೧೬೦ ಪ್ರಯೋ) ; ಪಡಿಯಲೆಯ ವೀಳೆಯಕ್ಕ ಬಿಲ್ಲುಮ್ಬಳಿಯ ತೋಟದಲು ಎಲೆಯಗುಳಿ ಇನೂಱು ಗುಳಿಯಂ . . . ಕೊಟ್ಟರು (ಎಕ. XIV, ಶ್ರೀರಂಗ. ೬೧-೬; ?). ೨. ಸಾಮಾನ್ಯವಾಗಿ ಶುಭಮುಹೂರ್ತಾದಿ ಕಾಲಗಳಲ್ಲಿ ಕೊಡುವ ಎಲೆಯಡಿಕೆ; (ಅಡಕೆ, ಸುಣ್ಣ ಇತ್ಯಾದಿಗಳೊಂದಿಗೆ ಸೇವಿಸಲು ಸಿದ್ಧಪಡಿಸಿದ) ತಾಂಬೂಲ : "ವೀಳೆಯಂ ತಾಂಬೂಲಮಕ್ಕು" (ಮಂಗರಾ. ೯೯-೨೩); ವೀಳೆಯ ಮನುಗುಟಿ ಮುಡಿಯೊಳ್ ತಾಳಿದ ಕಮ್ಮಲರ ಸೂಸಿ (ಮಲ್ಲಕಾ. ೭-೭೨) ; ಪ್ರಥಮದಿನದ ವೀಳೆಯ ನಾನೆಣಿಸಿದಷ್ಟು ಅಗ್ಗವಾಗಿರಲಿಲ್ಲ (ಬಾಣಲ. ೨೫೪). ೩. ದೇವರಿಗೆ ನೈವೇದ್ಯದ ಸಂದರ್ಭದಲ್ಲಿಯೂ ಗುರುಹಿರಿಯರು, ಗಣ್ಯರು ಮುಂತಾದವರಿಗೆ ಗೌರವಪೂರ್ವಕವಾದ, ಮನ್ನಣೆಮರ್ಯಾದೆಗಳನ್ನು ಸೂಚಿಸುವಾಗಲೂ ಅರ್ಪಿಸುವ ತಾಂಬೂಲ : ತರಿಸಿ ಸಾದು ಜವಾದಿಯನು ಕರ್ಪುರದ ವೀಳೆಯ ವುಡುಗೊಜೆಗಳಲಿ ಹಿರಿದು ಪತಿಕರಿಸಿದನು ಪರಿವಾರವನು ಕಲಿದ್ರೋಣ (ಕುಮಾದ್ರೋ. ೧೫-೨೦). ೪. ಯುದ್ಧ ಅಥವಾ ಯಾವುದೇ ಕೆಲಸದ ಜವಾಬ್ದಾರಿಯನ್ನು ಒಪ್ಪಿಸುವಾಗ ಸಮ್ಮತಿಸೂಚಕವಾಗಿ ಕೊಡುವ ಅಥವಾ ಪಡೆಯುವ ತಾಂಬೂಲ : ಹೊಳಲ ಹೊಱಿಶೂಲದಲಿ ರಿಪುಗಳ ಸೆಳಸುವೆನು ತಾ ವೀಳೆಯವನೆಂದಲಘುಭುಜಬಲ ಕರ್ಣ ನುಡಿದನು ಕೌರವೇಂದ್ರಂಗೆ (ಕುಮಾಭೀ. ೧-೭) ; ವೀಳೆಯವನೀವುದೆನಗೀ ಕಾಳೆಗಕೆ (ಚಿಕವಿ. ೫-೭೮) ; ತೆಗದಿತ್ತನ್ನೆ ಕಾಳಗಕೆ ವೀಳೆಯವ (ದೇವೀಮ. ೩-೨). ಬಿಳೆಯ : ೩. ಅಯಿನೂರ್ಬರಿಗೆ ವಿಸ್ತರದಿಂ

ಬಿಳಿಯಮನಿತ್ತು (ಸೌಇಇ. XI-i, ೬೯-೨೪ ; 1033). ವಿಳ್ಳೆ : ೧. ಶುಂಠಿ ಕಬ್ಬು ವಿಳ್ಳೆ [ಪಾಠಾಂ. ಲ್ಲೆ]ಗಳನುಜ್ ಮಾಜುವರು ಬರುತಿರ್ದರು (ಚಬಪು. ೪೭-೪೨). ವೀಳಯ : ೪. ಬಹಳ ಬಲನೇ ಮಾಗಧನು ನಿನಗಹಿತನೇ ತಾ ವೀಳೆ[ಪಾಠಾಂ. ಳೆ]ಯವ ಸುರಮಹಿಳೆಯರ ತೋಳಿನಲಿ ತೋಜುವನೆಂದನಾ ಭೀಮ (ಕುಭಾಸ. ೨-೨೬); ಜೀಯ ಕೊಡು ವೀಳ [ಪಾಠಾಂ. ಳೆ]ಯವನು (ತೊರರಾ. ೫-೫-೧೦). ವೀಳ್ಯ : ೨. ಸುಣ್ಣವಿಲ್ಲ ಭಾಗವತರ ನುಣ್ಣನ ಗೋಡೆಯ ನಿನ್ನೆ ತೊಡೆದುಬಿಟ್ಟೆ ವೀಳ್ಯ ಹಾಕುವನಲ್ಲ ವ್ಯಾಧಿಸ್ಥ ಗಂಡನು ಬಾಳು ಸಟೆ ಎನ್ನ ಬಾಯಿ ನೋಡಿ (ಪುರಂದ. ೩-೪೪-೧) ; ಕುಡಿನೀರು ವೀಳ್ಯ ಕಾಳಾಂಜಿಗೆ ಚಮರ ಕನ್ನಡಿ ಮುಖವಸ್ತ್ರ ಬಿಜ್ಜಣವ ಪಿಡಿದೆಡಬಲದೆ ನಿಂದಿರೆ ಮಿಂಡಿವೆಂಗಳು (ಮೋಪತ. ೨೭-೯). ೩. ಕಲಿತ ಬುದ್ಧಿಯನಿನ್ನು ತೆಗೆದುದಕಲಸದಂತಿಹುದೆಂದು ಸರ್ವರಿಗುಲಿದು ಬೀಳ್ಕೊಟ್ಟಿತ್ತು ವೀಳ್ಯವ ಮಂತ್ರಿಮುಖ್ಯರನು ನಿಲಯಕ್ಕೆದೆಂದೆದ್ದನು . . . ಅರಸು (ಬಿಜ್ಜಪು. ೭೫-೫೫). ೪. ನನಗೆ ಯುದ್ಧದ ವೀಳ್ಯವನ್ನು ಕೊಡಿರಿ. ನಾನು ಯುದ್ಧಕ್ಕೆ ಹೊರಡುತ್ತೇನೆ ಎಂದು ಹೇಳಿದನು (ಶ್ರೀರಂಗ. ೯೯೮) ; ಆಗ ಅಲ್ಲಿಯೆ ಇದ್ದ ಯಪ್ಪತ್ತುರಾಯನು ತನಗೆ ವೀಳ್ಯ ಕೊಡಬೇಕೆಂದು ಬೇಡಿದನು (ಕುಮಾಸಾಂ. ೧೩೮).

ವೀಳೆಯ ಎತ್ತು, ವೀಳೆ ಎತ್ತು = ೧. ಮದುವೆ, ಮುಂಜಿ ಮುಂತಾದ ಶುಭಸಮಾರಂಭಗಳಲ್ಲಿ ಎಲ್ಲರಿಗೂ (ಅವರವರ ಸ್ಥಾನಮಾನಗಳನ್ನರಿತು) ಸರದಿಯ ಪ್ರಕಾರ ತಾಂಬೂಲವನ್ನು ಹಂಚು : ಯಾವ ಮದುವೆಯಲ್ಲಾದರೂ ವೀಳೆಯ ಎತ್ತುವವನು ಅವನೆ (ಬಳುಮ. ೧೦೪). ೨. ಯಾವುದಾದರೂ ನಿಶ್ಚಿತ ಕಾರ್ಯವನ್ನು ವಹಿಸಿಕೊಂಡು ಹೊರಡು : ಗುಡ್ಡಗಾಡ ತಿರುಗಿ ಅಡ್ಡದಾರಿಲೆ ಹೋಗಿ ಗೌಡರ ಕಂದನ ತರುವೆವು ಎಂದರು ಗುಡ್ಡರು ವೀಳೆ ಎತ್ತಿದರು (ಸಿದ್ದಪು. ೪-೭೧).

ವೀಳೆಯದ ಲತಾಂಗಿ = ರಾಜ, ರಾಣಿಯರಿಗೆ ಬೇಕಾದಾಗ ತಾಂಬೂಲವನ್ನು ಸಿದ್ಧಪಡಿಸಿ ಕೊಡುವವಳು; ಸಂಚಿಯವಳು : ತಂಬುಲದೆಲೆಯಂ ತೆಗೆದಡ ದಂಗ್ಯೆಯೊಳಗಿರಿಸುವ ವೀಳೆಯದ ಲತಾಂಗಿಯ ದಕ್ಷಿಣಹಸ್ತಂ ಧರಿಸಿತು ಪಿರಿದುಂ ಚೆಲ್ವಿಕೆಯಾ (ಜಯಕಾ. ೨-೧೪).ವೀಳೆಯದೆಲೆ , ವಿಳ್ಳೇದೆಲೆ, ವೀಳಯದೆಲೆ, ವೀಳೆದೆಲೆ, ವೀಳ್ಯದೆಲೆ,ವೀಳ್ಳೆದೆಲೆ = ವೀಳೆಯ ೧ : ಎಲೆ ಮಿಡುಕದಾಸ್ಥಾನ ವೀಳೆಯದೆಲೆಯ ಮಡಿಸುವ ರಭಸವಿಲ್ಲ . . . ಮಾನಭಂಗದ ಕಳವಳದ ಕನಸುಗಳಲಿದ್ದುದು ರಾಯನಾಸ್ಥಾನ (ಕುಭಾಕ. ೧-೨೦) ; ನಮ್ಮ ದೇಶದಲ್ಲಿ ವಿಳ್ಳೇದೆಲೆಯನ್ನು ವಿಶೇಷವಾಗಿ ಬೆಳೆಯುತ್ತಾರೆ (ರೂಢಿ) ; ''ಫಣಿಲತಾ — ವೀಳಯದೆಲೆ'' (ಒಷಧಿ. ೧೦೪) ; ಸುಣ್ಣವೂ ಅಡಕೆಯೂ ವೀಳೆದೆಲೆಯೂ ಸಮಾನವಾಗಿ ವೀಳ್ಯವನ್ನು ಮಾಡಿದರೆ ಬಾಯಿ ಕೆಂಪಾಗಿ ಸುಗಂಧವಾಗಿರುವುದು (ಸಕವೈ. ೫೨) ; ''ಒಳ್ಳೆಯದಾಯಿತು'' ಎಂದು ನುಡಿಯುತ್ತಾ ಲಿಂಗಯ್ಯ ವೀಳ್ಯದೆಲೆಗೆ ಸುಣ್ಣ ಹಚ್ಚಿದ (ಹಾಹುತ್ತ. ೬೯) ; ಬೆತ್ತದ ತಟ್ಟೆಯಲ್ಲಿ ಒಂದೆರಡು ಕಟ್ಟು ವೀಳ್ಳೆದೆಲ, ಅಡಿಕೆ ಎಲ್ಲವೂ ಅಣಿಯಾಗಿ ಇಡಲ್ಪಟ್ಟಿತ್ತು (ರಾಯಕ. ೧೦೪).

ವೀಳೆಯಶಾಸ್ತ್ರ, ವೀಳ್ಯದ ಶಾಸ್ತ್ರ = ೧. ಮದುವೆಯ ನಿಶ್ಚಿತಾರ್ಥದ ಸಂದರ್ಭದಲ್ಲಿ ಎಲ್ಲರಿಗೂ ತಾಂಬೂಲವನ್ನು ಹಂಚುವುದು : ಲಗ್ನ ನಿಶ್ಚಯವಾಯಿತು . . . 'ವೀಳೆಯಶಾಸ್ತ್ರ' ನಡೆದಿತ್ತು (ಬಳುಮ. ೧೦೭) . ೨. ಮದುವೆಗೆ ಹೆಣ್ಣನ್ನು ಕೇಳಲು ಹೋದ ಸಂದರ್ಭದಲ್ಲಿ ಎರಡೂ ಕಡೆಯ ಹಿರಿಯರು ಪರಸ್ಪರ ತಾಂಬೂಲವನ್ನು ಕೊಡುವುದು,—ಬದಲಾಯಿಸಿಕೊಳ್ಳುವುದು : (ಎಸಮ್ಮ. ೮). ವೀಳ್ಯಕಟ್ಟು = ಎಲೆಯಡಿಕೆಯನ್ನು ಸಿದ್ಧಪಡಿಸು ; ತಾಂಬೂಲವನ್ನು ಸಿದ್ಧಪಡಿಸು ; ಬೀಡಾಕಟ್ಟು : ನಿರ್ನಿಮೇಷನಯನಗಳಿಂದ ನಿಪುಣತೆಯನ್ನು ನೋಡುತ್ತಿದ್ದೆ. ಅವಳು ವೀಳ್ಯಕಟ್ಟುತ್ತಿದ್ದಳು (ಬಾಣಆ. ೨೧). [< ಸಂ. ವೀಟಿಕಾ]

ವೀಳೆಯಂಗೊಡು, ವೀಳೆಯಕೊಡು, ವೀಳೆಯಗೊಡು (ಕ್ರಿ). ೧. ತಾಂಬೂಲವನ್ನು ಕೊಡು ; ಎಲೆಯಡಿಕೆಯನ್ನು ಕೊಡು : ಅರಿಮಥನ ಮಹಾರಾಜಂ ಕಿಜಿಯರ್ಪಿರಿಯರೆನ್ನದೆ ಮನ್ನಣೆಯಿಂ ಕರ್ಪುರಸಹಿತಂ ವೀಳೆಯಂಗೊಟ್ಟು ಪೋಗಲ್ವೇಟ್ಟು (ಧರ್ಮಾಮೃ. ೨-೭೪). ೨. ಯುದ್ಧ ಅಥವಾ ಯಾವುದೇ ಕೆಲಸವನ್ನು ವಹಿಸಿ ಸಮ್ಮತಿಸೂಚಕವಾಗಿ ತಾಂಬೂಲವನ್ನು ಕೊಡು : ಈ ರಾಜದುರುಳನಂ ವಧಿಸಲ್ಕೆ ಮುಂ ಪೇಳ್ದ ಕಾಲಮದು ಪರಿತಂದುದೆನುತ ಜಗದೇವಗಂ ತಿಳಿಪುತವಗಂ ವೀಳೆಯಂಗೊಡುತ್ತಂ (ಮಹಾವಿ. ೧೩-೨೨). ವೀಳೆಯಕೊಡು : ೩. ''ಆಮಂತ್ರಿಸು'' (ಜಾನಕೋ. ೪೫). ವೀಳೆಯಗೊಡು : ೧. ಕಡಗ ಕಂಠಮಾಲೆ ಪದಕ ಕುಂಡಲವಿತ್ತನೊಡನೆ ಕುಲ್ಲಾಯಿ ಕಬಾಯಿ ನಿಡುಬೊಂಬೆ ಪಟ್ಟೆ ಪಚ್ಚಡವಿತ್ತು ವೀಳೆಯಗೊಡುತ ಜಾಳಿಗೆ ನೂಜಗೊಟ್ಟ (ಭರಚ. ೨-೯೯). [ವೀಳೆಯ + ಕೊಡು₁]

ವೀಳೆಯಕೊಡು 'ವೀಳೆಯಂಗೊಡು' ನೋ.

ವೀಳೆಯಗೊಡು 'ವೀಳೆಯಂಗೊಡು' ನೋ.

ವೀಳೆಯಗೊಳ್ (ಕ್ರಿ). ಯುದ್ಧ ಅಥವಾ ಯಾವುದೇ ಮುಖ್ಯಕೆಲಸಕ್ಕೆ ಹೊರಡುವಾಗ (ಶುಭಕಾರ್ಯಕೆಗಳೊಂದಿಗೆ ಒಡೆಯನಿಂದ) ತಾಂಬೂಲ ವನ್ನು ಸ್ವೀಕರಿಸು : ಒಜಗಿದೆಡಬಲದವರನೆಬ್ಬಿಸಿ ಜಜೆದು ವೀಳೆಯಗೊಂಡು ಕೈದುವ ತಿರುಹುತಾಯತವಾಯ್ತು ಪಡೆಯೆರಡರಲಿ ಪಾಯದಳ (ಕುಭಾದ್ರೋ. ೧೭-೧೯) ; ಪನ್ನೀರ ಮಿಂದು ದಿವ್ಯಾಂಬರವನುಟ್ಟು . . . ರನ್ನದೊಡವುಗಳನಳವಡಿಸಿ ವೀಳೆಯಗೊಂಡು . . . ಮೆಜೆದಂ ಸುಧನ್ವನಂದು (ಜೈಮಿಭಾ. ೧೧-೪೧). [ವೀಳೆಯ + ಕೊಳ್₁]

ವೀಳೆಯದೆಲೆ 'ವೀಳೆಯ' ಪರಾ.

ವೀಳ್ಯ 'ವೀಳೆಯ' ನೋ.

ವೀಳ್ಯದೆಲೆ 'ವೀಳೆಯ' ಪರಾ.

ವೀಳ್ಳೆದೆಲೆ 'ವೀಳೆಯ' ಪರಾ.

ವೀಱ್ 'ಬೀಱ್₁' ನೋ.

–ವು (ಪ್ರ). ಸಾಮಾನ್ಯವಾಗಿ ಕೆಲವು ಧಾತುಗಳ ಮೇಲೆ ಸೇರಿ ಭಾವಾರ್ಥವನ್ನು ಕೊಡುವ ಒಂದು ಕೃತ್ಪ್ರತ್ಯಯ : ಕ್ರಿಯಾರ್ಥವಾದ ಪ್ರಕೃತಿಗಳಿಗೆ (ಇವಕ್ಕೆ 'ಧಾತು' ಎಂಬ ಹೆಸರಿದೆ) ಇಸು, ಚು, ವು ಮೊದಲಾದುವು ಸೇರಿ ಮಾಡಿಸು, ನೆಗಚ್ಚು, ತಿಳಿವು ಮೊದಲಾದ ರೂಪಗಳು ಬರುತ್ತವೆ (ಕೈಪಿಡಿ. ೧೫). 'ಅಱಿವು', 'ಅೞಿವು' ಪರಾ.

ವುಳುವಟ್ಟು (ನಾ). ಒಂದು ಊರಿನ ಹೆಸರು : ಚಿರುಪಿಯ ಚಿನ್ನಕುಣ್ಣೆಯು ಚಿಱಿಯಪೊಬಲು ವುಳುವಟ್ಟು ನಾಲ್ಕೂರುಂ . . . ಸಲಲೀಯದವರು ವಾರನಾಸಿಯುಂ ಕವಿಲೆಯುಮನಱಿದೊ (ಸೌಇಇ. IX-i, ೨೭-೧೧ ; 950). [?]

ವೃಂತ (ನಾ). ೧. ಎಲೆ, ಹೂವು, ಹಣ್ಣು ಮೊದಲಾದುವುಗಳ ತೊಟ್ಟು,— ಕಾವು : ''ವೃಂತಂ, ಪ್ರಸವಬಂಧನಂ — ಈ ೨ ಹೂವಿನ ತೊಡಂಬೆ'' (ಹಲಾಯು. ೩೧-೩೧). ೨. ಮೊಲೆತೊಟ್ಟು ; ಚೂಚುಕ : ''ಕುಚಮುಖಂ, ಚೂಚಕಂ, ವೃಂತಂ, ಶಿಖಾ — ಈ ೪ ಮೊಲೆಯ ಕೊ(ತೊ)ಟ್ಟು'' (ಹಲಾಯು. ೮೭-೩.೭). [ಸಂ.]

ವೃಂತಫಲ (ನಾ). ಒಂದು ಬಗೆಯ ಬದನೆಕಾಯಿ ; ಮುಳ್ಳುಗಾಯಿ : ಎಲ್ಲರ್ಗೆ ಬಸವನಗ್ಗವಣಿಗೆಗಳಂ ತಾನೀವ ಸಮಯದೊಳಗಲ್ಲಿ ಕೆಲಬರ್ ಡಂಬಕರ್ ಬಂದು . . . ವೃಂತಫಲಮಂ ಸಮಂತಂದು ಕಕ್ಷದೊಳಿರಿಸಿ (ಬಸರ. ೯-೪೫) ; ತವೆ ಬಾಣಲಿಂಗವಾದವು ವೃಂತಫಲಗಳಾಗವರಿರ್ದರತಿ ಬಕುತಿಯಲಿ (ಭೈರವೇ. ೨-೧೭೭). [ಸಂ.]

ವೃಂತಾಕ (ನಾ). = ವೃಂತಫಲ : ''ಬದನೆಯದು ವೃಂತಾಕವುಕ್ಕು'' (ಮಂಗರಾ. ೨೯-೫) ; ವೃಂತಾಕವನ್ನು ಬೆಳೆಸಿ ತರಿಸಿ ನನಗೆ ಸಮರ್ಪಿಸು (ಕಭವಿ. ೧೫೦). [ಸಂ.]

ವೃಂತಾಕಪಾಕ (ನಾ). ೧. ಬದನೆಕಾಯಿಯಿಂದ ತಯಾರಿಸಿದ ಖಾದ್ಯ,— ಅಡುಗೆ : ಬದನಗಾಯ್ಗಳಂ . . . ಕೊಣಬಿನೊಳಿಕ್ಕಿ ಒಗ್ಗರಿಸೆ ಮಧುರವೃಂತಾಕಪಾಕ (ಸೂಪಶಾ. ೪-೧೪). ೨. [ಕಾವ್ಯಮೀ] ಕೇವಲ ಶಾಸ್ತ್ರಜ್ಞಾನದಿಂದ ಬರೆದ ನೀರಸವಾದ ಕಾವ್ಯ : ಒಳಗೆ ರಸವಿಲ್ಲದೆ ಬರಿಯ ಶಾಸ್ತ್ರವ್ಯುತ್ಪತ್ತಿಯಿಂದ ಬರೆದ ಕಾವ್ಯದಲ್ಲಿ 'ವೃಂತಾಕಪಾಕ' ವೆಂದು ಕೆಲವರು ಹೇಳಿದ್ದಾರೆ! (ಕೈಪಿಡಿ. ೨೨೫). [ಸಂ.]

ವೃಂತಾಕಫಲ (ನಾ). = ವೃಂತಫಲ : ''ವೃಂತಾಕಫಲ ಲಿಂಗವಾದುದು'' ಎಂಬುದಕ್ಕೆ ಉಪಕಥೆ (ಭೈರಸೂ. I, ೩.೩.೨). [ಸಂ.]

ವೃಂತಾಕಿ (ನಾ). ಬದನೆಗಿಡ : ''ವೃಂತಾಕೀ — ಬದಣೆ'' (ಒಷಧಿ. ೧೫೭). [ಸಂ. ವೃಂತಾಕೀ]

ವೃಂದ (ನಾ). ಗುಂಪು ; ಸಮೂಹ : ಉಱಿದುದ್ವೃತ್ತರ ಮೊತ್ತಮಂ ತಱಿದು ಗೆಲ್ಲಂಗೊಂಡು ವೃಂದಂಗಳಂ ಸೆಱೆಗೊಂಡು . . . ಆಯ್ಕುಳಿಗೊಂಡನುದ್ಧ್ಯಯಶಮಂ ವಿಶ್ರಾಂತ ಕಾಳಾನಳಂ (ಪುಷ್ಪಪು. ೫-೫೧) ; ಮಂದರಾದ್ರಿಗೆ ಮಿಗಿಲೆನಿಸುವ ಮಹೇಂದ್ರ ಪರ್ವತಕಾಗಿ ಕಂಡುದು ವೃಂದವೃಂದಾರಕವಧೂಜನವನಿಲನಂದನನ (ತೊರರಾ. ೪-೧೨-೨೦). [ಸಂ.]

**ವೃಂದಗಾನ** (ನಾ). ಒಟ್ಟಾಗಿ ಹಾಡುವಿಕೆ ; ಸಮೂಹಗಾಯನ ; ಮೇಳಗೀತ : ಆ ಶಾಲೆಯ ಮಕ್ಕಳ ವೃಂದಗಾನವು ತುಂಬ ಸೊಗಸಾಗಿತ್ತು (ರೂಢಿ). [ಸಂ.]

**ವೃಂದಾರಕ** (ಗು). ೧. ದೊಡ್ಡದಾದ ; ಹಿರಿದಾದ. ೨. ಉತ್ತಮವಾದ ; ಶ್ರೇಷ್ಠವಾದ. ೩. ಸುಂದರನಾದ ; ಮನೋಹರವಾದ : 'ವೃಂದಾರಕದಾರಕ' ಪರಾ. ೪. ಗೌರವಾನ್ವಿತವಾದ ; ಮಾನ್ಯವಾದ. (ನಾ). ೫. ದೇವತೆ; ಸುರ : ದಾರಕರೂಪದೆ ಜಿಸನ್ವೃಂದಾರಕನೊಗನೂಡನೆ ಬಾಲಕೇಳಿಗಳಂ ವೃಂದಾರಕರ ಮಾಡಿ ದುರಿತ ವಿದಾರಕನ ಮನಕ್ಕೆ ಮಾಡಿದರ್ ಸಂತಸಮಂ (ಅಜಿಪು. ೫-೭೦); ಸಕಲದನುಜ ಭುಜಂಗ ವೃಂದಾರಕ ಮಹಾಭೂತಾದಿ ಲೋಕಪ್ರಕರವೆರಡೊಡ್ಡಾಯ್ತು ಕರ್ಣಾರ್ಜುನರ ಕದನದಲಿ (ಕುವ್ಯಾಕ. ೨೨ ಸೂಚನೆ). ೬. ಮರ ; ವೃಕ್ಷ : ಸುರಸಭೆಯಂತೆ ಮದದಂತಿ ಯಂತೆ ಮೇಘಾವಳಿಗಳಂತೆ ವೃಂದಾರಕೋನ್ನತವಾಗಿ ಭಾವಿಸುವೊಡರಿದನಿಸಿತತಿ ಭೀಕರಾಕಾರದಿಂದ ಘೋರಾರಣ್ಯವು (ಪಚಿಅ. ೫-೧೯). ೭. ಮೋಡ ; ಮೇಘ. ೮. ಆನೆ ; ಗಜ. "ನಾಕಾವಾಸರಿಭಂ ಬಲಾಹಕ ಕುಜಂ ವೃಂದಾರಕಾಖ್ಯಂ" (ನಾನಾರ. ೧೫೪). [ಸಂ.]

**ವೃಂದಾರಕತ್ವ** (ನಾ). ೧. ಸೌಂದರ್ಯ ; ಮನೋಹರತೆ : ಇದು ಧಾತ್ರೀಪಾರಿಜಾತಂ . . . ವನಶ್ರೀಸುದತೀಪ್ರೇಮಾತ್ಮಜಾತಂ ಫಲ ತರುವರ ವೃಂದಾರಕತ್ವಾಭ್ಯುಪೇತಂ ಮದ ಭೃಂಗೀಗೀತಗೀತಂ ಕೃತವಿರಹಿವಿಘಾತಂ ದಲೀ ಬಾಲಚೂತಂ (ಚಂದ್ರಪು. ೭-೯೧). ೨. ದೇವತ್ವ ; ಅಮರತ್ವ. [ಸಂ.]

**ವೃಂದಾರಕದಾರಕ** (ನಾ). ಸುಂದರನಾದ ಬಾಲಕ ; ಮನೋಹರವಾದ ರೂಪುಳ್ಳ ಬಾಲಕ : ಓರಗೆಗಳಪ್ಪ ಬಹುವೃಂದಾರಕದಾರಕರನಂದು ಸಹಪಾಂಸುಕ್ರೀಡಾರಸದೊಳ್ ಸಮುಚಿತಸೇವಾರತಿಯೊಳ್ ನೆಱೆದು ನೆಗೞೆ ನಿರವಿಸಿ (ಪುಷ್ಪಪು. ೧೨-೫೫). [ಸಂ.]

**ವೃಂದಾರಕಪಥ** (ನಾ). ದೇವತೆಗಳ ಮಾರ್ಗ ; ಆಕಾಶ ; ಅಂತರಿಕ್ಷ : "ತಾರಾಪಥಂ ವ್ಯೋಮಮಂತರಿಕ್ಷಂ ನಭಂ ವಾರಿದಪಥಂ ವಿಯತ್ಪುಷ್ಕರಂ ಖಂ ದ್ಯು ವೃಂದಾರಕಪಥಂ ವಿಹಾಯಸಮಂಬರಂ ವಿಷ್ಣುಪದಮೆನಲು ಗಗನಮಕ್ಕುಂ" (ಮಂಗರಾ. ೬-೩೦). [ಸಂ.]

**ವೃಂದಾರಕವಧು** (ನಾ). ದೇವತಾಸ್ತ್ರೀ ; ಸುರವಧು : ಅಕಟ ರಾಯನ ಹರಿಬದಲಿ ಸೇವಕರಿಗಾದುದು ಸೂಱೆ ವೃಂದಾರಕವಧೂವರ್ಗದಲಿ ಬಾಳಿಸಬೇಡ ವಿಗ್ರಹಕೆ ವಿಕಳಬಲನಿವನೇನು ಭಾಳಾಂಬಕನೊ ಬಲಿಬಂಧಕನೊ ಸುರಪಾಲಕನೊ ಘಡಘಡ ಎನುತ ಕವಿದುದು ಕರ್ಣನಿದಿರಿನಲಿ (ಕುವ್ಯಾಕ. ೧೨-೫). [ಸಂ. ವೃಂದಾರಕವಧೂ]

**ವೃಂದಾರಕಾಚಲ** (ನಾ). ದೇವತೆಗಳ ಪರ್ವತ ; ಮೇರುಪರ್ವತ : ಸಾರ ಕಟ್ಟಿತು ಸಾಗರಕೆ ವೃಂದಾರಕಾಚಲವಿಡಿದು ಗಿರಿಗಳ ಭಾರಕಿಳೆ ಕಡು ತಗ್ಗುತಿರ್ದುದು ನಿಮಿಷ ನಿಮಿಷದಲಿ (ತೊರರಾ. ೬-೫-೧೪). [ಸಂ.]

**ವೃಂದಾವನ** (ನಾ). ೧. ದ್ವಾಪರಯುಗದಲ್ಲಿ ಗೋಕುಲದ ಸಮೀಪದಲ್ಲಿದ್ದು ಕೃಷ್ಣನು ವಿಹರಿಸುತ್ತಿದ್ದನೆನ್ನಲಾದ ಒಂದು ವನ ; ಈಗಿನ ಉತ್ತರ ಪ್ರದೇಶದ ಮಧುರೆಯ ಹತ್ತಿರವಿದ್ದಿತೆನ್ನಲಾದ ಬೃಂದಾವನ : ಸುಸ್ಥಳವತೀವಾ ಸೇವ್ಯಂ . . . ಕೇಳಿಸುಖಪ್ರದೇಶಮೆಸೆಗುಂ ವೃಂದಾವನಂ (ಜಗವಿ. ೩-೭೬); ವೃಂದಾವನ ದೊಳಾಡುವನ್ಯಾರೆ ಗೋಪಿ ಚಂದಿರವದನ ನೋಡುವ ಬಾರೆ (ಪುರಂದ. ೨-೧೩೩ ಪಲ್ಲವಿ). ೨. ಪೂಜಿಸುವುದಕ್ಕಾಗಿ, ತುಳಸಿಯನ್ನು ಬೆಳೆಸಿ ಸಾಮಾನ್ಯವಾಗಿ ಮನೆಯ ಮುಂಭಾಗದ ಅಂಗಳದಲ್ಲಿ ಕಟ್ಟುವ ಚಿಕ್ಕ ಕಟ್ಟೆ ; ತುಳಸೀಕಟ್ಟೆ : ವೃಂದಾವನವೇ ಮಂದಿರವಾಗಿಹ ಇಂದಿರೆ ಶ್ರೀತುಲಸಿ (ಪುರಂದ. ೩-೪೪ ಪಲ್ಲವಿ); ವಿರೋಧಿಕೃತುಸಂವತ್ಸರದ ಶ್ರಾವಣ ಶು ೧೨ ವೃಂದಾವನಪ್ರತಿಷ್ಠೆ (ಎಕ. IV (R). ಚಾಮರಾ. ೧೭೭-೨ ; ಸು. 16ನೆಯ ಶತ) ; ಆ ಬಯಲಿನ ಮಧ್ಯ ಒಂದು ವೃಂದಾವನ (ಕಳಹು. ೫೭). ೩. ವೈಷ್ಣವಸಂನ್ಯಾಸಿಗಳ ಸಮಾಧಿ : 'ವೃಂದಾವನಸ್ಥ' ಪರಾ. ೪. ಮಂತ್ರಾಲಯದಲ್ಲಿರುವ ರಾಘವೇಂದ್ರಸ್ವಾಮಿಗಳ ಸಮಾಧಿ. [ಸಂ.]

**ವೃಂದಾವನಸ್ಥ** (ನಾ). ಸಮಾಧಿಯನ್ನು ಸೇರಿದ ವೈಷ್ಣವಸಂನ್ಯಾಸಿ : ಶ್ರೀ ರಾಘವೇಂದ್ರರು ಮಂತ್ರಾಲಯ(ಮಂಚಾಲೆ)ವನ್ನು ಸೇರಿದೊಡನೆಯೇ . . . ತಾವು ಅಲ್ಲೇ ವೃಂದಾವನಸ್ಥರಾಗಿರಬೇಕೆಂಬ ಅಭಿಲಾಷೆಯನ್ನು ದೇವಿಗೆ ವಿಜ್ಞಾಪಿಸಿದರು (ಕಥವಿ. ೩೫೮). [ಸಂ.]

**ವೃಕ** (ನಾ). ೧. ಒಂದು ಬಗೆಯ ಕಾಡುಪ್ರಾಣಿ ; ತೋಳ : ವೃಕಶಾರ್ದೂಲವರಾಹಮುಖ್ಯರ ಮನಂಗೊಂಡಂ (ಪಂಚತಂ. ೯೭-೭); ವಿಪಿನಂ ಕ್ರೂರವ್ಯಾಳ ವೃಕಸೂಕರಚಮೂರ ಕಂಠೀರವನಿಷೇವಿತಮಲ್ತಾ! (ರಾಮಾಶ್ವ. ೨೮-೧೩). ೨. ನರಿ ; ಜಂಬುಕ. ೩. ಕಾಗೆ. ೪. ಗೂಗೆ ; ಘೂಕ. ೫. [ಖಗೋಳ] ಒಂದು ನಕ್ಷತ್ರಪುಂಜದ ಹೆಸರು : ವೃಶ್ಚಿಕರಾಶಿಯ ಉತ್ತರಕ್ಕೆ ಅಂದರೆ ಕಿನ್ನರನ ಎಡಕ್ಕೆ (ಪೂರ್ವಕ್ಕೆ) ಇರುವ ರಾಶಿ ವೃಕ. ವೃಕದ ಗ್ರೀಕ್ ಹೆಸರು ಲ್ಯೂಪಸ್‌ತೋಳ ಎಂದು (ನಕ್ಷತ್ರ. ೭೩). [ಸಂ.]

**ವೃಕತಿಕ್ತ** (ನಾ). ಒಂದು ಬಗೆಯ ಸಸ್ಯ ; ಅಗುಳುಶುಂಠಿ : "ವೃಕತಿಕ್ತ, ವೃಕಪತ್ರೀ - ಈಯೆರಡುಂ ಅಗುಳುಶುಂಠಿ" (ಓಷಧಿ. ೧೫೭). [ಸಂ.]

**ವೃಕಧೂಪ** (ನಾ). ೧. ಒಂದು ಬಗೆಯ ಸುಗಂಧದ್ರವ್ಯಗಳ ಮಿಶ್ರಣ : "ವೃಕಧೂಪಃ, ಕೃತ್ರಿಮಧೂಪಕಃ — ೨ ಅನೇಕ ಪರಿಮಳವಸ್ತುಗಳನ್ನು ಸೇರಿಸಿ ಮಾಡಿದ ಧೂಪಕ್ಕೆ ಹೆಸರುಗಳು" (ಸಿದ್ಧಾಂತಿ. ೨೦೭). ೨. ಒಂದು ಬಗೆಯ ಸಸ್ಯ : "ವೃಕಧೂಪಃ- ಕುಂದುರುಕ, ನಲಾವರ" (ಓಷಧಿ. ೧೫೭). ೩. ಬಣ್ಣಗಳ ಮಿಶ್ರಣ, ಔಷಧ ಮೊದಲಾದುವಕ್ಕೆ ಬಳಸುವ, ಒಂದು ಬಗೆಯ ಮರದಿಂದ ಸ್ರವಿಸುವ ತೈಲರೂಪದ ರಾಳ ; ಟರ್ಪೆಂಟೈನ್. [ಸಂ.]

**ವೃಕಪತ್ರಿ** (ನಾ). = ವೃಕತಿಕ್ತ : "ವೃಕತಿಕ್ತ, ವೃಕಪತ್ರೀ — ಈ ಯೆರಡುಂ ಅಗುಳುಶುಂಠಿ" (ಓಷಧಿ. ೧೫೭). [ಸಂ. ವೃಕಪತ್ರೀ]

**ವೃಕಶಾಬ** (ನಾ). ತೋಳದ ಮರಿ ; ಎಳೆಯ ಈಹಾಮೃಗ : ವೃಕಶಾಬಂ ಮತ್ತಮಾತಂಗದ ಬಿದುವನವಷ್ಟಂಭದಿಂದೇಱೆ ಶೌರ್ಯಾಧಿಕನಪ್ಪಂ ಧಾತ್ರಿಗೆಂದೋ ವದ ಬಯಸುವವೋಲ್ (ದಶಕು. ೭-೭೬). [ಸಂ.]

**ವೃಕಾನನ** (ನಾ). ೧. ತೋಳದಂತೆ ಮುಖವುಳ್ಳವನು : ಕರಿವದನರತಿಶಯ ವೃಕಾನನರು ಲಸದುಷ್ಟ್ರತುಂಡವೆನಿಸುವರು (ವೀಶ್ವಪು. ೩-೧೯-೬) ; ಮಹಿಷಾಸ್ಯರುಂ ವೃಕಾನನರನಿಪ ಪರಿಪರಿಯ ಬಹುಮುಖರ್ ಗಿರಿಜಾವಸಥನ ಪೇರೋಲಗದಿ ಜಸವೆತ್ತರು (ವಿಕೋಪು. ೨-೪೪). ೨. ಕೃಷ್ಣನ ಒಬ್ಬ ಮಗನ ಹೆಸರು. [ಸಂ.]

**ವೃಕಿ** (ನಾ). ಒಂದು ಬಗೆಯ ಔಷಧೀಸಸ್ಯ : "ವೃಕಿ - ಅಗುಳುಶುಂಠಿ" (ಓಷಧಿ. ೧೫೮). [ಸಂ. ವೃಕೀ]

**ವೃಕೋದರ** (ನಾ). ೧. ತೋಳದಂತೆ ಹೊಟ್ಟೆಯುಳ್ಳವನು ; ತೀಕ್ಷ್ಣವಾದ ಜಠರಾಗ್ನಿಯುಳ್ಳವನು. ೨. ಭೀಮ : ನಾರಾಯಣನುಂ ಧರ್ಮಪುತ್ರನುಂ ವೃಕೋದರನ ಮನಮನಾಱೆ ನುಡಿದು ಮತ್ತಂ ನಾರಾಯಣಂಗೆ ಯುಧಿಷ್ಠಿರಂ ನಿಶ್ಚಿತಕಾರ್ಯಮನನುಷ್ಠಿಸಲೆಂದಿಂತೆಂದಂ (ಪಂಪಭಾ. ೯-೨೫ ವ) ; ಎಲೆ ವೃಕೋದರ ನಕುಳ ಸಾತ್ಯಕಿ ನಿಲಿಸಿರೈ ತಂಗಿಯನು ತನ್ನಯ ಕೊಲೆಗೆ ಮಗನಳಿವೊಂದು ಸಾಲದ ತನ್ನ ನುಡಿಯೇಕೆ (ಕುವ್ಯಾದ್ರೋ. ೭-೧೯). ೩. ತೋಳಗಳನ್ನು ಹೊಂದಿರುವುದು ; ಕಾಡು. ೨, ೩ : ಆ ವನಂ ಘನಾಗಮದಂತೆ ಘನಕದಂಬಮುಕ್ತಕವಿಲಸಿತಮುಂ . . . ಯುಧಿಷ್ಠಿರಸದ್ಮದಂತೆ ವೃಕೋದರವಿಲಸದರ್ಜುನನಕುಲಾಧಿಷ್ಠಿತಮುಂ . . . ಎನಿಸಿರ್ದುದು (ರಾಜಶೇ. ೫-೭೪ ವ). ೪. ಬ್ರಹ್ಮ. [ಸಂ.]

**ವೃಕ್ಕ** (ನಾ). ೧. ಮಾಂಸ ; ಬಾಡು : "ವೃಕ್ಕಾ ಎಂಬುದು ಬಿಕ್ಕು" (ಹಲಾಯು. ೧೦೫-೧೪). ೨. ಹೃದಯ. ೩. ಮೂತ್ರಕೋಶ. [ಸಂ. ವೃಕ್ಕಾ]

**ವೃಕ್ಷ** (ನಾ). ಮರ ; ತರು ; ಭೂರುಹ : ತಾಳತರುಷಂಡಸಮೀಪದೊಳ್ . . . ಜರಠಮಹಾಶಾಲ್ಮಲೀವೃಕ್ಷಮಿರ್ಕುಂ (ಕಾದಂಪೂ. ೧೨೦); ಅಗ್ನಿಯಾಧಾರದಲ್ಲಿ ಕಬ್ಬುನ ನೀರುಂಬುದಯ್ಯಾ ಭೂಮಿಯಾಧಾರದಲ್ಲಿ ವೃಕ್ಷ ನೀರುಂಬುದಯ್ಯಾ (ಬಸವ. ೧೯೭) ; ವೃಕ್ಷದ ಮೂಲಮಂ ಸಲಹುತಿರ್ದಡೆಯಾ ತರು ಶಾಖೆಗೂಡಿ ಸಂರಕ್ಷಣಮಾಗಿ ಪೆರ್ಚುತಿಹವು (ನಸ್ಸಚಾ. ೭-೩೭೦). [ಸಂ.]

**ವೃಕ್ಷಧೂಪ** (ನಾ). ಮರದಿಂದ ಸಂಗ್ರಹಿಸುವ ಒಂದು ಬಗೆಯ ಸುಗಂಧ ದ್ರವ್ಯ ; ರಾಳ : "ಪಾಯಸಃ, ಶ್ರೀವಾಸಃ, ವೃಕ್ಷಧೂಪಃ . . . ವೃಕ್ಷದ ಬೊಂಕೆ, ರ್‍ಯಾಳದ ಬೊಂಕೆ" (ಸಿದ್ಧಾಂತಿ. ೨೦೮). [ಸಂ.]

**ವೃಕ್ಷಭಂಜನ** (ನಾ). ಮರವನ್ನು ಮುರಿಯುವಿಕೆ, — ನಾಶಮಾಡುವಿಕೆ : ಸುಂದರನೆಂಬಾನೆ ಸಾರಲೀಯದುದಱಿಂ ತದ್ವಿರಹಪರಿತಪ್ತಮನದಿಂದಂ ಸಲ್ಬುದಂ

ನವಯೌವನಮನೆಯ್ದಿ ಆತ್ಮಬಲಮನದಱಿ ಬಲದೊಳ್ ವೃಕ್ಷಭಂಜನಸಾಮರ್ಥ್ಯದಿಂ ಪರೀಕ್ಷಿಸಿ (ವಡ್ಡಾರಾ. ೩೭-೧೮). **[ಸಂ.]**

**ವೃಕ್ಷಭೇದಿ** (ನಾ). ೧. ಮರವನ್ನು ಕಡಿಯುವವನು,— ಕತ್ತರಿಸುವವನು. ೨. ಹಗುರವಾದ ಸಣ್ಣ ಕೊಡಲಿ ; ಕೈಗೊಡಲಿ. ೩. ಮರವನ್ನು ಕೆತ್ತುವ ಉಳಿ ; ಬಡಗಿಯ ಚಾಣ. **[ಸಂ. ವೃಕ್ಷಭೇದಿನ್]**

**ವೃಕ್ಷಮೂಲ** (ನಾ). ೧. ಮರದ ಬೇರು. ೨. ಮರದ ಪ್ರಾರಂಭದ ಭಾಗ,— ಬುಡ : ಕಲ್ಪಸ್ಥಾಯಿಯಾಗಿರ್ದುದು ಗಿರಿಕಟಕಸ್ಥೂಲಮಾ ವೃಕ್ಷಮೂಲಂ (ಕಾದಂಪೂ. ೧೨೨); ಇಳಿಯಂ ಸಲಹಲ್ ಮುಂ ಮಂಜುಳಸೌಧಾವಾಸಕೆಳಸುವಾ ಪುರುಕುಲಜರ್ ಬಳಿಕಂ ವಾನಪ್ರಸ್ಥಕ್ಕಳವಡೆ ತಾಂ ವೃಕ್ಷಮೂಲಮಂ ಮನಗೈವರ್ (ಶಾಕುಂತ. ೧೦೭-೧೮೩). **[ಸಂ.]**

**ವೃಕ್ಷರುಹ** (ನಾ). ೧. ಪರೋಪಜೀವಿಸಸ್ಯ ; ಬದನಿಕೆ. ೨. ಕಟ್ಟಿರುವೆ : "ವೃಕ್ಷರುಹಃ — ಬಂದಣಿಕೆ, ಕಟ್ಟಿರುಹೆ" (ಓಷಧಿ. ೧೫೭). **[ಸಂ. ವೃಕ್ಷರುಹಾ]**

**ವೃಕ್ಷರುಹೆ** (ನಾ). ೧. = ವೃಕ್ಷರುಹ ೧ : "ವಂದಾ, ವೃಕ್ಷಾದನೀ, ವೃಕ್ಷರುಹಾ, ಜೀವಂತಿಕಾ — ೪ ಬದನಿಕೇ ಹೆಸರುಗಳು" (ಸಿದ್ಧಾಂತಿ. ೧೫೦). ೨. ಒಂದು ಬಗೆಯ ಸುಗಂಧದ್ರವ್ಯ. ೩. ಒಂದು ಬಗೆಯ ಮರ : "ವೃಕ್ಷರುಹಾ — ಜತುಕೆ, ಮುಷ್ಟಿ" (ಓಷಧಿ. ೧೫೭). **[ಸಂ. ವೃಕ್ಷರುಹಾ]**

**ವೃಕ್ಷವಾಟಿಕೆ** (ನಾ). ಉಪವನ ; ತೋಟ : "ವೃಕ್ಷವಾಟಿಕಾ . . . ಮನೆಗಳಲ್ಲಿ ಕ್ರೀಡಾರ್ಥವಾಗಿ ಹಾಕಲ್ಪಟ್ಟಿರುವ ಶೃಂಗಾರ ವೃಕ್ಷವಾಟ" (ಸಿದ್ಧಾಂತಿ. ೧೧೦). **[ಸಂ. ವೃಕ್ಷವಾಟಿಕಾ]**

**ವೃಕ್ಷವೀರ್ಯ** (ನಾ). ಮರಗಿಡಗಳ ರಸ, — ಸತ್ತ್ವ : ವೃಕ್ಷವೀರ್ಯಶರೀರೋತ್ಸೇಧಾಯುರಾದಿ ಹಾನಿಯೊಳು ಸುಷಮದುಷ್ಷಮಮೆಂಬ ಕಾಲಂ ದ್ವಿಸಾಗರೋಪಮ ಕೋಟಾಕೋಟಿಸ್ಥಿತಿಯಿಂ ಪ್ರವರ್ತಿಸುವಂದು (ಚಾವುಂಪು. ೯). **[ಸಂ.]**

**ವೃಕ್ಷಶೋಷಣ** (ನಾ). ೧. ಮರಗಿಡಗಳನ್ನು ಒಣಗಿಸುವಿಕೆ, — ಹಾಳುಮಾಡುವಿಕೆ. ೨. ಒಂದು ಬಗೆಯ ಕೀಳುಮಟ್ಟದ ಸಿದ್ಧಿ,— ಕುತ್ಸಿತಸಿದ್ಧಿ : ಪಾಷಂಡಿಸಹವಾಸ ಪಾಷಾಣಪಾಟನ ಪ್ರತಿಮಾಭಾಷಣ ವೃಕ್ಷಶೋಷಣ ಮೊದಲಾದ ಕಪಟಕುತ್ಸಿತಸಿದ್ಧಿಗಳಿಂದ ಸಾಧುಜನವಂಚನೆ ಮೊದಲಾದವುಗಳು . . . ವಿವರಿಸಲ್ಪಟ್ಟಿರುವುದು (ಓಂದಸಾ. ೧೫೨). **[ಸಂ.]**

**ವೃಕ್ಷಾದನ** (ನಾ). ೧. ಮರವನ್ನು ಕೆತ್ತುವ ಉಳಿ ; ಬಡಗಿಯ ಚಾಣ. ೨. ಸಣ್ಣಬಾಚಿ ; ಕೈಬಾಚಿ. ೩. ಸಣ್ಣ ಕೊಡಲಿ ; ಕೈಗೊಡಲಿ. **[ಸಂ.]**

**ವೃಕ್ಷಾದನಿ** (ನಾ). = ವೃಕ್ಷರುಹ ೧ : "ವಂದಾ, ವೃಕ್ಷಾದನೀ, ವೃಕ್ಷರುಹಾ, ಜೀವಂತಿಕಾ — ೪ ಬದನಿಕೇ ಹೆಸರುಗಳು" (ಸಿದ್ಧಾಂತಿ. ೧೫೦). **[ಸಂ. ವೃಕ್ಷಾದನೀ]**

**ವೃಕ್ಷಾಧಿರೋಹಣ** (ನಾ). [ಕಾಮಶಾ] ಹನ್ನೆರಡು ಬಗೆಯ ಆಲಿಂಗನಗಳಲ್ಲಿ ಒಂದು ಬಗೆ : ಎಡದ ಕಾಲೊಳುಂಗುಟಮನ ಬಿಡದೆ ಮೆಟ್ಟಿ ಬಲದ ತೊಡೆಯನುಡೆಯೊಳಿಟ್ಟು ನುಡಿಸಿ ಬಾಯ್ಗೆ ಬಾಯನೊಂದಿಸಿ ಮುಡುಹುವಿಡಿದು ಗಳರವಂಗಳೊಡನೆ ಲಲ್ಲೆಗಱೆದು ತೆಕ್ಕೆಯೊಡೆಯದವಳ ತೆಱನದು ವೃಕ್ಷಾಧಿರೋಹಣಂ [ಪಾಠಾಂ. ವೃಕ್ಷರೋಹಣಂಗನೆ] (ಜನವ. ೭-೭). **[ಸಂ.]**

**ವೃಕ್ಷಾಮ್ಲ** (ನಾ). ೧. ಹುಳಿಹಣ್ಣು ; ಹುಣಿಸೆ : "ತಿಂತ್ರಿಣೀಕಂ, ಚುಕ್ರಂ, ವೃಕ್ಷಾಮ್ಲಂ - ೩ ಮರಹುಣಿಸೇಹಣ್ಣು, ಹುಳಿಹಣ್ಣು" (ಸಿದ್ಧಾಂತಿ. ೨೮೪). ೨. ಅಮಟೆಕಾಯಿ; "ಆಮ್ರಾತಕ" (ಪಂಡಿತ. ೨೭೯). **[ಸಂ.]**

**ವೃಕ್ಷಾರೋಹಣ** (ನಾ). ೧. ಮರವನ್ನು ಹತ್ತುವುದು,— ಏರುವುದು. ೨. = ವೃಕ್ಷಾಧಿರೋಹಣ. ೧, ೨ : ಪರಿಕಿಸ ವೃಕ್ಷಾರೋಹಣ ಪರಾಹಚರ್ವಿತಕ ವೇಣುದಾರಿತಕಂಗಳ್ ಕರಮೆಸೆಯೆ ಕಾಮಶಾಸ್ತ್ರದ ದೊರೆಯಾದುದು ಶಬರಶಿಶುಗಳುಜ್ಜುಗಮದಱೊಳ್ (ಚಂದ್ರಪ್ರ. ೫-೫೫). **[ಸಂ.]**

**ವೃಕ್ಷಾಸನ** (ನಾ). [ಯೋಗ] ಒಂದು ಬಗೆಯ ಆಸನ : ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು ೧. ಉತ್ತಾನಾಸನ . . . ೫೩. ದೂರ್ವಾಸಾಸನ, ೫೪. ವೃಕ್ಷಾಸನ, ೫೫. ಸಿದ್ಧಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಭಾರದ. ೧೬೭). **[ಸಂ.]**

**ವೃಕ್ಷೋತ್ಪಲ , ವೃಕ್ಷೋತ್ಪಳ** (ನಾ). ಒಂದು ಬಗೆಯ ಸಸ್ಯ ; ಬೆಟ್ಟದಾವರೆ ; ಕರ್ಣಿಕಾರ : "ವೃಕ್ಷೋತ್ಪಲಂ ಕರ್ಣಿಕಾರಮೆನೆ ಕೊಸಗೆನಿಕ್ಕುಂ" (ಮಂಗರಾ. ೩೫-೧೨). ವೃಕ್ಷೋತ್ಪಳ : "ಕೊಸಗು ವೃಕ್ಷೋತ್ಪಳಂ ಕರ್ಣಿಕಾರಂ" (ವಸ್ತುಕೋ. ೩೩-೧). **[ಸಂ.]**

**ವೃಕ್ಷೋತ್ಪಳ** 'ವೃಕ್ಷೋತ್ಪಲ' ನೋ.

**ವೃಜಿನ** (ಗು). ೧. ಬಾಗಿದ ; ಡೊಂಕಾದ ; ಕೊಂಕಿದ. ೨. ಪಾಪದಿಂದಕೂಡಿದ ; ದುಷ್ಕರ್ಮದಿಂದ ಕೂಡಿದ : ಅಂತು ಸಂಸಾರಶರೀರಭೋಗ ನಿರ್ವೇಗಪರತಂತ್ರನಾತ್ಮತಂತ್ರಮುಂ ವಿಷತಂತ್ರಮೆಂದುಂ . . . ದುರ್ಗಮುಂ ವೃಜಿನ ದುರ್ಗಮೆಂದುಮಿಂತು ಸಪ್ತಾಂಗಮುಮಂ ದೀರ್ಘಸಪ್ತಾಂಗಮಾಗೆ ಬಗೆದಿಟಿಕೆಯ್ದು (ಚಂದ್ರಪ್ರ. ೧೦-೧೨೫ ವ); ಅಜನಜಗರಗರದಿಂದಭ್ರಜಶಿಖಿರವದಿಂದೆ ಪುಲಿಯ ಕಾಯ್ಪಿಂ ನಿಸದಂ ವೃಜಿನ ಘನಕುಜನಜನಮಂ ಸೃಜಿಸಿದನಲ್ಲದೊಡವಂಗೆ ಜಗಮಂಜುವುದೇ (ರಾಜಶೇ. ೧-೩೮). (ನಾ). ೩. ಬಾಗಿದುದು ; ಡೊಂಕಾದುದು ; ಕೊಂಕಿದುದು : "ವಕ್ರಂ, ವೃಜಿನಂ, ಭಂಗುರಂ, ಆವಿದ್ಧಂ . . . ಕುಟಿಳಂ, ವ್ಯಾಕುಂಚಿತಂ, ಊರ್ಮಿಮತ್ – ಈ ೧೨ ಕೊಂಕಿದುದು" (ಹಲಾಯು. ೧೧೭-೧೧). ೪. ಪಾಪ ; ದೋಷ : ಕಾಲಾಂತದೊಳಾ ಜಿನಂ ವೃಜಿನವಂ ತವಿಸುತ್ತೆ ನಿರಾಸ್ರವಂ ತ್ರಿಲೋಕಾಂತಮನೆಯ್ದೆ ತಾಮುಮಿರದೆಯ್ದಿದರಾತ್ಮನಿಕೇತನಂಗಳಂ (ಶಾಂತಿಪು. ೧೨-೯೭) ; ನಿಜಪುರಾಕೃತಜನ್ಮಕರ್ಮದ ವೃಜಿನಪರಿಹಾರಾರ್ಥದಲಿ ನೆಱೆ ಭಜಿಸಲದುವೇ ಸಾತ್ವಿಕಧರ್ಮಭಕ್ತಿ ಭಾವಿಸಲು (ನಿಭಾಗ. ೩-೧೩-೨೩). ೫. (ಸುರುಳಿ ಸುತ್ತಿಕೊಂಡ) ಕೂದಲು; (ಗುಂಗುರು) ಕೂದಲು : "ವೃಜಿನಂ ಕೇಶಮೆನಿಕ್ಕುಂ" (ವಸ್ತುಕೋ. ೧೫೦-೮೧). ೬. ದುರುಳ ; ದುಷ್ಟ. ೭. ಕ್ಲೇಶ ; ಸಂಕಟ ; ನೋವು : "ವೃಜಿನಂ ಕ್ಲೇಶಾಘವ[ಕ್ರ] ವಾಚಿಯುಮಕ್ಕುಂ" (ವಸ್ತುಕೋ. ೧೫೦-೮೧). ೮. ರೋಗ ; ರುಜೆ. ೯. ಕೆಂಪುಚರ್ಮ. ೧೦. ಕಠಿಣತೆ ; ತೀವ್ರತೆ . "ಶಿರೋಜಂ ರುಜೆ ವಕ್ರಂ ತೀವ್ರಂ ಪಾಪಂ ವೃಜಿನಮೆನಿಕ್ಕು" (ನಾನಾರ. ೬೫). **[ಸಂ.]**

**ವೃಜಿನಬಂಧ** (ನಾ). ಪಾಪದ ಕಟ್ಟು ; ದುಷ್ಕರ್ಮದ ಪಾಶ : ಇಂತಿದೇಂ ವೃಜಿನಬಂಧಮೋ ಕುಸೃತಿಬಂಧಸಂಬಂಧಮೆಂದದೇಂ ತಳೆದನೋ ಮುನಿಪ್ರವರನಾಗಳುದ್ವೇಗಮಂ (ಸುಕುಮಾ. ೪-೬೧). **[ಸಂ.]**

**ವೃಜಿನಾರಿ** (ನಾ). ಪಾಪರಹಿತನಾದವನು ; ದುಷ್ಕರ್ಮಗಳಿಲ್ಲದವನು : ಆ ರಾಜಕುಳದೊಳಖಿಳ ಜಿನಾರಾಧ್ಯಂ ಸುಖದಿನಿರ್ಪನುನ್ಮಥಿತ ಸಮಸ್ತಾರಿ ಮಹಾಸೇನಂ ವೃಜಿನಾರಿ ಮಹಾಸೇನನೆಂಬನವನೀನಾಥಂ (ಚಂದ್ರಪ್ರ. ೧೧-೮೧). **[ಸಂ.]**

**ವೃಣೀತ** (ನಾ). ಆಯ್ಕೆಯಾದವನು ; ಚುನಾಯಿತನಾದವನು : ಯಾರು ವರಣವನ್ನು ಪಡೆಯುತ್ತಾನೋ ಎಂದರೆ ವರಣಸ್ಪರ್ಧೆಯಲ್ಲಿ ಜಯಶಾಲಿಯಾಗುತ್ತಾನೋ — ಅವನು ವೃಣೀತ, ಚುನಾಯಿತ, ಎಲೆಕ್ಟೆಡ್ (ರಾಜ್ಯಶಾ. ೨೮೭). **[ಸಂ.]**

**ವೃತ** (ಗು). ೧. ಮರೆಮಾಡಲ್ಪಟ್ಟ ; ಆವರಿಸಲ್ಪಟ್ಟ ; ಮುಚ್ಚಿದ : ಕೋರಕಾಗ್ರಗ್ರಸನೋತ್ಕಂಠಾನ್ಯಪುಷ್ಪೋತ್ಕರವೃತವಿಟಪಂ ಚೂತಂ . . . ಜನಪದದುದ್ಯಾನದೊಳ್ ಕುಂದಮೆಂದಂ (ಚಂದ್ರಪ್ರ. ೧೧-೪೩). ೨. ಸುತ್ತುವರಿದ ; ಬಳಸಿದ : ವರ್ಣಂಗಳ ಪಾಠಕ್ರಮುಮರ್ಣವವೃತಧಾತ್ರಿಯೊಳ್ ಪ್ರಸಿದ್ಧಂ ನಿಜದಿಂ ವರ್ಣಂಗಳಕಾರಾದ್ಯಾ ಪೂರ್ಣತೆಯಂ ಪಡೆವುವಾ ಳಕಾರಂಬರೆಗಂ (ಶಮದ. ೪). ೩. ತಡೆಗಟ್ಟಿದ ; ಅಡ್ಡಿಪಡಿಸಿದ. ೪. ಚುನಾಯಿಸಿದ ; ಆಯ್ಕೆಮಾಡಿದ. ೫. ಒಪ್ಪಿದ ; ಅಂಗೀಕರಿಸಿದ. ೬. ಪ್ರೀತಿಸಿದ ; ಆರಾಧಿಸಿದ. ೭. ಅಪೇಕ್ಷಿಸಿದ ; ಕೋರಿದ. (ನಾ). ೮. ಅಂಗೀಕರಿಸಲ್ಪಟ್ಟವನು ; ಸಮ್ಮತಿಸಲ್ಪಟ್ಟವನು : "ವೃತಃ, ವೃತ್ತಃ, ವಾವೃತ್ತಃ – ಅಂಗೀಕರಿಸಲ್ಪಟ್ಟವನು, ನನಗೆ ಇವನಾಗಬೇಕೆಂದು ವರಿಸಲ್ಪಟ್ಟವನು" (ಸಿದ್ಧಾಂತಿ. ೩೪೭). **[ಸಂ.]**

**ವೃತಗೋಮ** (ನಾ). ೧. ಕಿರಣಗಳಿಂದ ಆವೃತನಾದವನು ; ಚಂದ್ರ. ೨. ಸಂಪತ್ತಿನಿಂದ ಕೂಡಿದವನು ; ರಾಜ. ೧, ೨ : ವೃತಗೋಮಂ ಸಕಳಕಳಾನ್ವಿತನಮೃತಮಯಂ ವಿಶುದ್ಧವೃದ್ಧಂ ಪರಿವೇಷ್ಟಿತಸನ್ನಿವಹಂ ಕುವಳಯಹಿತನೆನೆ ಸಂಪೂರ್ಣಚಂದ್ರನೊಳ್ದೊರೆ ಚಂದ್ರಂ (ಮದತಿ. ೧-೪೮). **[< ಸಂ. ವೃತಗೋಮತ್]**

**ವೃತರೇಫ** (ನಾ). [ವ್ಯಾಕ] ರಕಾರದ ಒತ್ತಿನಿಂದ ಕೂಡಿದುದು ; ಸುತ್ತಿದ ರೇಫ : ನೆಗಟ್ಟುಂ ದ್ವಿತ್ವಾಗ್ರದ ರೇಫೆಗೆ ಲೋಪಂ ವರ್ಣಮಿಶ್ರ ರೇಫಕ್ಕಂ ತಾಂ ನೆಗಟ್ಟುಂ

ಲೋಪಂ ಬಹುಳದೆ ನೆಗಟ್ಟುಂ ವೃತರೇಫವಮಡಿಯೊಳಾ ವರ್ಣದ ವೋಲ್ (ಶಮದ. ೨೬೧). [ಸಂ.]

**ವೃತಿ** (ನಾ). ೧. ಆರಿಸುವಿಕೆ ; ಆಯ್ಕೆಮಾಡುವಿಕೆ : ''ವರಃ, ವೃತಿಃ – ೨ ವರಿಸುವಿಕೆ, ನನಗೆಯಿದು ಇರಲಿಯೆಂದು ಒಪ್ಪಿ ಅಂಗೀಕರಿಸುವಿಕೆ'' (ಸಿದ್ಧಾಂತಿ. ೩೫೭). ೨. ಮುಚ್ಚುವಿಕೆ ; ಆಚ್ಛಾದಿಸುವಿಕೆ. ೩. ಕೇಳುವಿಕೆ ; ಕೋರುವಿಕೆ. ೪. ಸುತ್ತುವರಿಯುವಿಕೆ ; ಆವರಿಸುವಿಕೆ. ೫. ಸುತ್ತುವರಿದಿರುವುದು ; ಬೇಲಿ; ಆವರಣ : ದಯೆ ವೃಕ್ಷಮೂಲಮೆನಿಕುಂ ನಿಯಮಂ ವೃತಿ ಶೀಲಮಾಳವಾಳಮೆನಲ್ಕೀಟ್ಗೆಯನಾಳ್ದು ಸುಖದ ಫಲಪ್ರಾಪ್ತಿಯನಾಗಿಪ ಕಲ್ಪವೃಕ್ಷಮಲ್ಲದೆ ಧರ್ಮಂ (ಪುಷ್ಪಪು. ೧೩-೫೫). ೬. ಆಯ್ಕೆ ; ವರಣ. [ಸಂ.]

**ವೃತ್ತ** (ಗು). ೧. ಬಳಸಿದ ; ಸುತ್ತುವರಿದ. ೨. ಗುಂಡಾದ ; ವರ್ತುಲಾಕಾರದ. ೩. ಉಂಟಾದ ; ಸಂಭವಿಸಿದ. ೪. ಮುಗಿದ ; ಪೂರ್ಣಗೊಂಡ. ೫. ಆಗಿಹೋದ ; ನಡೆದುಹೋದ ; ಕಳೆದ. ೬. ನಡೆಸಿದ ; ಆಚರಿಸಿದ. ೭. ಆವರಿಸಲ್ಪಟ್ಟ. ೮. ಗತಿಸಿದ ; ಮರಣಹೊಂದಿದ. ೯. ಓದಿದ ; ಅಭ್ಯಾಸಮಾಡಿದ. ೧೦. ದೃಢವಾದ ; ಬಲವಾದ. (ನಾ). ೧೧. ಸುತ್ತಿದುದು ; ಬಳಸಿದುದು : ''ವೃತ್ತ, ವ್ಯಾವೃತ್ತ — ಮರಳಿದುದು'' (ನಾಚಿರಾ.೩). ೧೨. ದುಂಡಾಗಿರುವುದು ; ವರ್ತುಲಾಕಾರವಾದುದು : ''ನಿಸ್ತಲಂ, ವರ್ತುಳಂ, ವೃತ್ತಂ - ಈ ೩ ಬಟ್ಟಿತ್ತು'' (ಹಲಾಯು. ೧೨೪-೬೮). ೧೩. ಉಂಟಾದುದು ; ಸಂಭವಿಸಿದುದು. ೧೪. ಮುಗಿದುಹೋದುದು ; ನಡೆದುಹೋದುದು : ''ವೃತ್ತಂ ಭೂತಂ ಕ್ರಿಯೆಗುಪಪತ್ತಿಯೊಳೊಡೆಸಲ್ಬುದು'' (ವಸ್ತುಕೋ. ೧೮-೧೮). ೧೫. ನಡೆಸಿದುದು ; ಆಚರಿಸಿದುದು. ೧೬. ಸತ್ತುದು ; ಮರಣಹೊಂದಿದುದು. ೧೭. ದೃಢವಾದುದು ; ಬಲವಾದುದು. ೧೮. ಪ್ರಸಿದ್ಧವಾದುದು ; ಹೆಸರುವಾಸಿಯಾದುದು. ೧೯. ಸುದ್ದಿ; ಸಮಾಚಾರ ; ವೃತ್ತಾಂತ : ಅತ್ತೆ ಮಾವನು ಮೊದಲಾದ ಪೂಜ್ಯರೊಳನುವೃತ್ತಿಗೈದಾತ್ಮವಲ್ಲಭನ ಚಿತ್ತವಱಿತು ಸೇವೆಯೆಸಗುವ ಸತಿಯರ ವೃತ್ತವ ಬಿತ್ತರಿಸುವೆನು (ಹದಿಬ. ೪-೩) ; ಕೇಳ್ದಳಿತ್ತನಸೂಯೆ ಮಧುರಭಾಷಿಣಿ ಜನಕಜಾತೆಯ ವದನದಿಂ ಸ್ವಯಂವರದ ವೃತ್ತವಂ (ಶ್ರೀರಾಮಾ. ೧೭೮-೬೩). ೨೦. ನಡವಳಿಕೆ ; ವರ್ತನೆ : ವೃತ್ತಮುಮಖಿಳಕಳಾಸಂಪತ್ತಿಯುಮತಿವಿಶದಮೆನಿಕುಂ (ಪಾರ್ಶ್ವಪು. ೧೦-೨೪) ; ಎತ್ತನೇಱುವನಾಜ್ಞೆಯನು ಸುರಲೋಕಪಾಲಕರು ಹೊತ್ತು ನಡೆಸುವರವರಿಗಿಷ್ಟವನಿತ್ತು ನಡೆಸುವನಾವನಾತನ ವೃತ್ತವನು ವಿಧಿಗಱಿಯಲರಿದೆಂದಳು ಸರೋಜಮುಖಿ (ನಿಭಾಗ. ೪-೫-೫೧). ೨೧. ಚರಿತ್ರೆ ; ಇತಿಹಾಸ. ೨೨. ಉದ್ಯೋಗ ; ವೃತ್ತಿ. ೨೩. ನಿಯಮ, ಸಂಪ್ರದಾಯಗಳ ಆಚರಣೆ, – ಅನುಷ್ಠಾನ. ೨೪. ಅಮೃತ ; ಸುಧೆ. ೨೫. ಶತ್ರು ; ಹಗೆ. ೨೬. ಕತ್ತಲೆ ; ತಿಮಿರ : ''ವೈರಿಗಳಮೃತಂ ಕತ್ತಲೆ ಚಾರಿತ್ರಂ ವಸ್ತುಕಂಗಳಸುರಂ ದೃಢಮುಂ ಸೇರಿದ ಬಟುವೆಂಟಕ್ಕಂ ತೋರಿದ ಸಲೆ ವೃತ್ತಶಬ್ದಮೆನಿಕುಂ ಜಗದೊಳ್'' (ನಾನಾಕಂ. ೧೩೬). ೨೭. ಅಂಗೀಕರಿಸಲ್ಪಟ್ಟವನು ; ವರಿಸಲ್ಪಟ್ಟವನು. ೨೮. ಆಳವಾದುದು ; ಗಂಭೀರವಾದುದು. ೨೯. [ಗಣಿತ] ಸೊನ್ನೆ ; ಶೂನ್ಯ: ದಿವಿ . . . ವೃತ್ತಂ ಆಗಸ ಜಲಧರಪಥ ಇಂತಿನಿತುಂ ಸೊನ್ನೆ(೦)ಗೆ ಹೆಸರು (ವ್ಯವಹಾ. ೧೧-೬). ೩೦. [ರೇಖಾಗ] ದುಂಡಾಗಿರುವ ವರ್ತುಲ : ಒಂದು ರೇಖೆಯಿಂದ ಸುತ್ತಲ್ಪಟ್ಟುಯಿರುವ ಪ್ರದೇಶವನ್ನು ವ ಕ್ಷೇತ್ರವನ್ನು ವರ್ತುಳ, ಪರಿಧಿ -ವ- ವೃತ್ತವೆಂದು ಹೇಳುವುದು (ಭೂಮಿಅ. ೯); ಹಿಪ್ಪಾಕ್ರೆಟೀಸನು ವೃತ್ತಗಳ ಮೇಲೆ ಅನೇಕ ವಿಷಯಗಳನ್ನು ಕಂಡುಹಿಡಿದನು (ಗಣಿಚ. ೨೭). ೩೧. ದೊಡ್ಡ ವರ್ತುಲದ ಪರಿಧಿಯ ಮೇಲೆ ಕೇಂದ್ರವುಳ್ಳ ಸಣ್ಣ ವರ್ತುಲ,— ಉಪರಿವರ್ತುಲ. ೩೨. [ಛಂದ] ಅಕ್ಷರಗಣ, ಮಾತ್ರಾಗಣ ಅಥವಾ ಅಂಶಗಣಗಳಿಂದ ಕೂಡಿದ ಛಂದೋಬಂಧ : ಅಲ್ಲಿ ಸಮಂ ಅರ್ಧಸಮಂ ವಿಷಮಮೆಂದು ವೃತ್ತಂ ಮೂಱುತೆಱನಕ್ಕುಂ (ಛಂದೋಂಬು. ೧-೪೬ ವ); ವೃತ್ತಮನೇಕಮಿಲ್ಲಿ ರಸಭಾವಸಮೇತದಿ ಪುಟ್ಟೆ ಕಾಮಿನೀ ವೃತ್ತಕುಚಂಗಳಂತೆ ಜನಮಂ ಮಿಗೆ ಮೋಹಿಸುತಿರ್ಪಿನಂ . . . ಕೇಳ್ದು ಸದ್ವೃತ್ತಸಭಾಜನಂ ಪೊಗಳೆ ಪೇಳಲೊಡರ್ಚಿದೆನೀ ಪ್ರಬಂಧಮಂ (ತ್ರಿಪುವಿ. ೧-೪೦). ೨, ೩೨ : ಕುಂದದ ಕೋಮಲಾಂಗರುಚಿಯಿಂ ಚೆಲುವಿಂಗೆಡೆಯಾಗಿ ವೃತ್ತದೊಂದಂದದೊಳಿರ್ದ ಪೆರ್ಮೊಲೆಯಿನಂತೆಸೆದೊಪ್ಪುವನೇಕ ಛಂದದೊಂದಂದದ ಯಾನದೊಂದು ರಮಣೀಯತೆಯಿಂ ಕಡುಗಾಡಿವೆತ್ತ ವಾಕ್ಸುಂದರಿ ಕೂರ್ತು ನಿಲ್ಕೆ ನಯಸೇನಮುನೀಂದ್ರಮುಖಾಬ್ಜಷಂಡದೊಳ್ (ಧರ್ಮಾಮೃ. ೧-೮). 'ಮಾತ್ರಾವೃತ್ತ', 'ವರ್ಣವೃತ್ತ' ಪರಾ.

ವೃತ್ತಜಾತಿ = ಬೇರೆಬೇರೆ ರೀತಿಯ ಛಂದಸ್ಸು, — ಪದ್ಯಜಾತಿ : ಯತಿಯೆಂಬುದುಸಿರ್ವ ತಾಣಂ ಕೃತಾಸ್ಪದಂ ವೃತ್ತಜಾತಿ ಪದಪದ್ಧತಿಯೊಳ್ (ಕವಿರಾ. ೧-೭೧). [ಸಂ.]

**ವೃತ್ತಕ** (ನಾ). ೧. ಸಮಾಚಾರ ; ಸುದ್ದಿ : ಕರೆದಾಗಳ್ ನಿಜಮಂತ್ರಿಮಂಡಲಮಹಾಸಾಮಂತ ಶುದ್ಧಾಂತಮುಖ್ಯರನಾ ವೃತ್ತಕಮೆಲ್ಲಮಂ ತಿಳಿಯೆ ಪೇೞ್ದು (ಆದಿಪು. ೧-೮೦); ನಿಮ್ಮ ಸೆಱೆಯಂ ಬಿಡಿಸಲ್ ಬಂದೆನಿದು ಮದೀಯ ವೃತ್ತಕಮೆನೆ ಸೀತೆ ಸಂತೋಷಂಬಟ್ಟು . . . ಬೆಸಗೊಂಡಳ್ (ಪಂರಾಮಾ. ೧೧-೧೦೧ ವ). ೨. ಕಸುಬು ; ಉದ್ಯೋಗ : ಆ ಮಹೇಶ್ವರಂ . . . ಎತ್ತ ವನಮೆತ್ತ ಮೃಗಯಾವೃತ್ತಕಮಿಾ ತಪಸಿಯೆತ್ತ ಮೃಗಮೆಂದಂ[ತಾ]ನೆತ್ತೆಚ್ಚೆನಾತ್ಮಕರ್ಮಾಯತ್ತಂ ಪೆಱತಲ್ತಿದೆಲ್ಲಮಘಟಿತಘಟಿತಂ ಎಂದು ಚಿಂತಿಸುತ್ತುಂ (ಪಂಪಭಾ. ೧-೧೧೩). ೩. ಒಂದು ಬಗೆಯ ಗದ್ಯರಚನೆ. ೪. ಒಂದು ಬಗೆಯ ಲೋಹ ; ಕಬ್ಬಿಣ (?) : ''ಖಾತಂ ತಾಂ ವೃತ್ತಿಲೋಹಮೆನೆ ವೃತ್ತಕಮುಂ'' (ವಸ್ತುಕೋ. ೨೯-೮). [ಸಂ.]

**ವೃತ್ತಕಟಿ** (ನಾ). ದುಂಡಾದ ನಡು, — ಸೊಂಟ : ನಡು ಬಳ್ಕೆ ವೃತ್ತಕಟಿ ಕೆತ್ತೆ . . . ನಿಕಾಮಕೋಮಳೆ ಪರಿತಂದುದಂಗದೊಳೆ ನಿಂದು ಕುಮಾರನನಂದು ನೋಡಿದಳ್ (ಸುಕುಮಾ. ೧೧-೧೧). [ಸಂ.]

**ವೃತ್ತಕುಚ** (ನಾ). ಬಟ್ಟಮೊಲೆ ; ದುಂಡಾಗಿರುವ ಸ್ತನ : ವೃತ್ತಕುಚಂಗಳಿಂ ದುದಿರ್ದ ಚಂದನದೊಳ್ ತಳಿರ್ವಾಸು ಬೆಳ್ಪನಾಳ್ದತ್ತು (ಪಂಪಭಾ. ೫-೧೭). [ಸಂ.]

**ವೃತ್ತಕುಚೆ** (ನಾ). ಬಟ್ಟಮೊಲೆಗಳನ್ನುಳ್ಳವಳು ; ದುಂಡಾದ ಸ್ತನಗಳನ್ನುಳ್ಳವಳು : ವೃತ್ತಕುಚೆ ಮೆಱದು ನುಡಿದೊಡಿದೆತ್ತಣ ಮಾತೆನ್ನದಿಕ್ಕೆ (ಮದಕ. ೧೦-೬೮) ; ವೃತ್ತಕುಚೆಯರ್ಗೆ ಬೆಮರಿಂದೊತ್ತರಿಸಿತ್ತಂಗದಲ್ಲಿ ಕತ್ತುರಿಯೆ ಪದಂಬೆತ್ತಂತೆಲರೊಳ್ ನೀರ್ದಳಿದತ್ತೆನೆ ದೊರೆವೆತ್ತು ಸುರಭಿಪರಿಮಳಮಾಗಳ್ (ಪಾರ್ಶ್ವಪು. ೯-೨೫).

[ಸಂ. ವೃತ್ತಕುಚಾ (ವೃತ್ತ + ಕುಚ + -)]

**ವೃತ್ತಗಂಧಿ** (ನಾ). [ಕಾವ್ಯಮಿಾ] ''ಗದ್ಯರೂಪವಾಗಿ ಹೊರಟು ಮಧ್ಯೆ ಛಂದೋರೂಪಕ್ಕೆ ತಿರುಗಿ ವೃತ್ತಪಾದಗಳೂ ಪಾದಭಾಗಗಳೂ ಆಗಿ ಪ್ರವಹಿಸುವ ಗದ್ಯಶೈಲಿಗೆ 'ವೃತ್ತಗಂಧಿ' ಎಂದು ಹೆಸರು'' (ಕೈಪಿಡಿ. ೧೭೯) : ಗದ್ಯವೆನ್ನುವುದು ಛಂದಸ್ಸಿಲ್ಲದ ಪದಸಮೂಹವೆಂದು ಸ್ಮೃತವಾಗಿದೆ. ಅದಾದರೂ ಉತ್ಕಲಿಕಾ, ಚೂರ್ಣಿಕಾ ಹಾಗೆಯೇ ಲಲಿತ, ವೃತ್ತಗಂಧಿ, ಖಂಡ, ಚಿತ್ರ ಎಂದು ಆರು ವಿಧ (ಚತುಪ್ರ. ೯೮). [ಸಂ.]

**ವೃತ್ತತಂಡುಲ** (ನಾ). ಒಂದು ಬಗೆಯ ಹುಲ್ಲು : ''ವೃತ್ತತಂಡುಲಃ – ಬೋಟು, ಹಾರಕ'' (ಓಷಧಿ. ೧೫೮). [ಸಂ.]

**ವೃತ್ತತರ** (ಗು). ೧. ದುಂಡಾಗಿರುವ ; ದುಂಡಾದ : 'ವೃತ್ತತರೋರು' ಪರಾ. (ನಾ). ೨. ದುಂಡಾಗಿರುವುದು ; ಗುಂಡಾಗಿರುವುದು : ಅತಿದೀರ್ಘ ಮಾಂಸಳಂ ವೃತ್ತತರಂ ಧೃತ ವಿಜಯಲಕ್ಷ್ಮಿ ಮಾಡಿದುದ್ಯೈರಾವತ ಪುಂಡರೀಕ ಕರಯುಗ ವಿತರ್ಕಮಂ ಭುಜಯುಗಂ ನಭಶ್ಚರಪತಿಯಾ (ಶಾಂತಿಪು. ೩-೪೪). [ಸಂ.]

**ವೃತ್ತತರೋರು** (ನಾ). ದುಂಡಾಗಿರುವ ತೊಡೆ : ಪಿತೃ ಗುರು ವಿಪ್ರಯೋಗ ವಿಯುತಸ್ಥಿತಿ . . . ವೃತ್ತತರೋರುಜಂಘನುಗ್ರತಮನಿಳಾಧಿಪಪ್ರಣುತನೆಂಬುದು ವೃಶ್ಚಿಕ ಗೇಹಜಾತಕಂ (ಜಾತಕಿ. ೧೭-೮). [ಸಂ.]

**ವೃತ್ತತೆ** (ನಾ). ದುಂಡಾಗಿರುವಿಕೆ; ಗುಂಡಾಗಿರುವಿಕೆ; ಬಟುವು : ಬಿಂದುವನುಸ್ವಾರಂ ತಾನೆಂದಕ್ಕುಂ ಸೊನ್ನೆ ಮುತ್ತುವೋಲ್ ವೃತ್ತತೆಯಿಂ ಸಂದಿರ್ಪುದು (ಶಮದ. ೧೧).

[ಸಂ. ವೃತ್ತತಾ]

**ವೃತ್ತನಾಮ** (ನಾ). ಛಂದೋಬಂಧಕ್ಕೆ ಒಳಪಟ್ಟ ಕೀರ್ತನೆ, — ಹಾಡು : ವಿಜಯದಾಸರ ಸುಳಾದಿಯಲ್ಲಿ ಪುರಂದರದಾಸರು ತಮ್ಮ ಭೂಪ್ರದಕ್ಷಿಣೆಯಲ್ಲಿ . . .

೪೦,೦೦೦ ಕಲ್ಯಾಣ ಶತಚರಿತೆಗಳನ್ನು ರಚಿಸಿದರೆಂದೂ, ೩೭,೦೦೦ ವೃತ್ತನಾಮಗಳನ್ನು ಹಾಡಿದರೆಂದೂ ಉಲ್ಲೇಖವಿದೆ (ಕಭವಿ. IV ಮುನ್ನುಡಿ). [ಸಂ.]

**ವೃತ್ತಪತ್ರ** (ನಾ). ಸುದ್ದಿ, ಜಾಹೀರಾತು, ಸಾಹಿತ್ಯವಿಷಯಗಳನ್ನೊಳಗೊಂಡು ಪ್ರತಿದಿನವೂ ಪ್ರಕಟವಾಗುವ ಸಮಾಚಾರಪತ್ರ ; ವೃತ್ತಪತ್ರಿಕೆ : ವೃತ್ತಪತ್ರದೊಡನೆ ಪಡಸಾಲೆಯ ಮಗ್ಗುಲದ ಕೋಣೆಯಲ್ಲಿ ಹೋಗಿ ಕುಳಿತಳು (ಗಂಮಾಯಿ. ೧೨೫). [ಸಂ.]

**ವೃತ್ತಪತ್ರಿಕೆ** (ನಾ). ೧. = ವೃತ್ತಪತ್ರ : ವೃತ್ತಪತ್ರಿಕಾಕಾಗದ . . . ವೃತ್ತಪತ್ರಿಕೆಗಳು, ಪ್ರಕಟನೆಗಳು . . . ಮುಂತಾದವುಗಳ ಮುದ್ರಣಕ್ಕೆ ಉಪಯೋಗವಾಗುತ್ತದೆ (ಮುದ್ರಕ. ೮೪). ೨. ಒಂದು ಬಗೆಯ ಸಸ್ಯ ; ಅಗುಳುಶುಂಠಿ : "ವೃತ್ತಪತ್ರಿಕಾ - ಅಗುಳುಶುಂಠಿ, ಚವ್ಯ" (ಓಷಧಿ. ೧೫೪) [ಸಂ. ವೃತ್ತಪತ್ರಿಕಾ]

**ವೃತ್ತಪಯೋಧರೆ** (ನಾ). = ವೃತ್ತಕುಚೆ : ಮತ್ತೀ ಕುರುಭೂಪಾಲನನಿಜಸತಿಯುತ್ತಮ ಜಲಧಿಯೆಂಬೋರ್ವ ವೃತ್ತಪಯೋಧರೆಗುದಧಿಯೆಂಬವಳುತ್ಪತ್ತಿಯಾಗಿ ನೆಟ್ ಬೆಳೆಯೆ (ನೇಮಿಸಂ. ೧೯-೧೯೭): [ಸಂ. ವೃತ್ತಪಯೋಧರಾ (ವೃತ್ತ + ಪಯೋಧರ + -)]

**ವೃತ್ತಪರಿಧಿ** (ನಾ). [ರೇಖಾಗ] ವರ್ತುಲದ ಸುತ್ತುಗೆರೆ; ವೃತ್ತದ ಅಂಚಿನ ರೇಖೆ : π, ಅಥವಾ ವೃತ್ತಪರಿಧಿ ÷ ವ್ಯಾಸ, ಎಂಬ ಸಂಖ್ಯೆಗೆ . . . ೩.೧೬ ಎಂಬ ಬೆಲೆಯು ಕೊಡಲ್ಪಟ್ಟಿದೆ (ಗಣಿಚ. ೧೦). [ಸಂ.]

**ವೃತ್ತಪಾಠಕ** (ನಾ). ಮಂಗಳಶ್ಲೋಕಗಳನ್ನು ಹಾಡುವವನು ; ಮಂಗಳ ಪಾಠಕ : ಸಕಲಮಧುವ್ರತಪ್ರಚಯಮೆಂಬ ಪಿಕಾವಳಿಯೆಂಬ ಸದ್ವಚಃಶುಕಕುಳಮೆಂಬ ಮೆಚ್ಚಿಸಿದ ಗಾಯಕ ಸತ್ಪ್ರತಿಹಾರ ವೃತ್ತಪಾಠಕತತಿಗಿತ್ತನಗ್ಗಳದ ಮಾವಿನ ಪೂವಿನ ಮಾವಿನಂಕುರಪ್ರಕರದ ಮಾವಿನೊಳ್ಮಿಡಿಯ ಜೀತಮಂ ಮದನಂ ಬಸಂತದೊಳ್ (ಶಾಂತಿಪು. ೭-೧೨೯). [ಸಂ.]

**ವೃತ್ತಫಲ** (ನಾ). ೧. ಬದರಿಗಿಡ ಮತ್ತು ಅದರ ಹಣ್ಣು ; ಎಲಚಿ. ೨. ದಾಳಿಂಬೆ ಗಿಡ ಮತ್ತು ಅದರ ಹಣ್ಣು. ೩. ಬೇಲದಮರ ಮತ್ತು ಅದರ ಹಣ್ಣು : "ವೃತ್ತಫಲಃ — ಬೇಳ, ದಾಳಿಂಬ, ಎಲಚಿ" (ಓಷಧಿ. ೧೫೮). ೪. ಮೆಣಸು. [ಸಂ.]

**ವೃತ್ತರೇಖೆ** (ನಾ). [ರೇಖಾಗ] ವರ್ತುಲದ ಸುತ್ತುಗೆರೆ, — ಅಂಚಿನ ರೇಖೆ ; ವೃತ್ತದ ಪರಿಧಿ : ಹಿಗ್ಗಲಿಸಲಾಗುವಂತೆ ಒಂದು ಕೊನೆಯಲ್ಲಿ ಕೀಲಿಸಿರುವ ಎರಡು ಬಾಹುಗಳುಳ್ಳ, ವೃತ್ತರೇಖೆಯನ್ನೆಳೆಯುವ, ಸಲಕರಣೆ: ವೃತ್ತರೇಖಕ; ಕೈವಾರ (Compass. ೯೦೫೧). [ಸಂ. ವೃತ್ತರೇಖಾ]

**ವೃತ್ತವಿಹಂಗ** (ನಾ). ಚಕ್ರವಾಕಪಕ್ಷಿ : ಇತ್ತರದಲಿ ತಳಿರ್ವಡೆದಿರ್ದ ಮಾಮರ ಮತ್ತೇಭ ಗಿಳಿ ತೇಜಿವಿಂಡು ವೃತ್ತವಿಹಂಗ ಚಕೋರಕಾಲಾಳ್ಗಳ ಮೊತ್ತದಿ ನಡೆದನಲ್ಲಿಯಲಿ (ಮೋಹತ. ೬-೧೯). [ಸಂ.]

**ವೃತ್ತವೆಱು** (ಕ್ರಿ). ದುಂಡಾಗು ; ವರ್ತುಲಾಕೃತಿಯನ್ನು ಹೊಂದು : ಪೊಂಗುಳಿಗೆಗಳ ಪರಿಯೊಳಂಗುಷ್ಠಂಗಳೊಪ್ಪುಗು . . . ಗುಲ್ಫಂಗಳಸೆವವು ವೃತ್ತವೆತ್ತಿನವಕದಲಿ ಸತಿಯ (ಬಸಪು. ೪-೧೭). [ವೃತ್ತ + ಪೆಱು]

**ವೃತ್ತಸಂಪನ್ನ** (ನಾ). ಒಳ್ಳೆಯ ನಡವಳಿಕೆಯುಳ್ಳವನು ; ಸಚ್ಚಾರಿತ್ರ್ಯವಂತ : ಇತರ ರಾಷ್ಟ್ರಾಧಿಪತಿಗಳೂ ಕೂಡ . . . ಈಗ ಆ ಧಾರ್ಮಿಕರೂ ವೃತ್ತಸಂಪನ್ನರೂ ಆದ ಯುಧಿಷ್ಠಿರಾದಿಗಳು ಸತ್ತು ಹುಟ್ಟಿದಂತಾಯಿತೆಂದು ಅಷ್ಟು ಸಂತೋಷಪಟ್ಟು, ಧೃತರಾಷ್ಟ್ರಾದಿಗಳನ್ನು ಧಿಕ್ಕರಿಸಿದರು (ಭೀಷ್ಮಚ. ೮೫). [ಸಂ.]

**ವೃತ್ತಸ್ತನ** (ನಾ). = ವೃತ್ತಕುಚ : ವೃತ್ತಸ್ತನದೊಡನೊಡನತ್ತಿತ್ತಸುವರೆಯಾಗೆ ನೃಸುರನೇತ್ರಾಳಿ ಪರಾವೃತ್ತಾರೋಚಿತಕಂಪನವಿವೃತ್ತೋನ್ನತಘನನಿತಂಬಮೆಸದುದು ನಟಿಯಾ (ಲೀಲಾವ. ೪-೧೨೧) ; ಹರುಷದಲುಬ್ಬಿ ಕೀಚಕನನಿಲಜನ ಮೈದಡವಿ ವೃತ್ತಸ್ತನವ ಕಾಣದ ಹೆದಱಿ ಬಳಿಕಿಂತೆಂದನವ ನಗುತ (ಕುಮ್ಮಾವಿ. ೩-೮೬). [ಸಂ.]

**ವೃತ್ತಸ್ತನೆ** (ನಾ). = ವೃತ್ತಕುಚೆ : ವೃತ್ತಸ್ತನೆಯರ ಕುಚತಟಕೊತ್ತೆ ನೃಪಂ ಮೃಗಮದಾಂಬುವಂ ಬಗೆಗೊಳಿಕುಂ ಚಿತ್ತಜಗಜಕುಂಭತಟಾಯತ್ತಾಯತ ದಾನವಾರಿ ವಾರಿಯ ತೆಱದಿಂ (ಪಾರ್ಶ್ವಪು. ೧೨೭). [ಸಂ. ವೃತ್ತಸ್ತನಾ (ವೃತ್ತ + ಸ್ತನ + -)]

**ವೃತ್ತಹಸ್ತ** (ನಾ). ೧. ದುಂಡಾಗಿರುವ ಕೈ ; ಗುಂಡಾಗಿರುವ ಹಸ್ತ. ೨. ದುಂಡಾದ ಕೈಗಳುಳ್ಳವನು : ದಕ್ಷಿಣಕರಾಲಂಬಿತನಿಬಿಡನಿವೇಷ್ಟಿತಾಂಶುಕ ವಿಶಾಲಸ್ಥೂಲ ವೃತ್ತಹಸ್ತನುಂ . . . ಅಂತಃಪುರಪ್ರಮದವನಪ್ರವಿಷ್ಟನಾಗಿ (ಆದಿಪು. ೮-೪೧ ವ). [ಸಂ.]

**ವೃತ್ತಾಂತ** (ನಾ). ೧. ಕಾರ್ಯಾಚರಣೆಯ ಅಂತ್ಯ, — ಪರಿಣಾಮ. ೨. ಘಟನೆ ; ಸಂಗತಿ ; ಪ್ರಸಂಗ : ಪ್ರವರ ನೃಪ ಕುಮಾರಾತ್ಮೋದಯಾ[ದಿ] ಪ್ರಮೋದಾಸವ ಸಮುದಿತ ಸೇವಾರಾತಿ ವೃತ್ತಾಂತವೃತ್ತಂ (ಕವಿರಾ. ೩-೨೧೨); ಬಳಿಕ ತೋರಿಹದೊಂದು ಕಱೆಯಂ ಬಿಲಿತುಕೊಂಡೋಪಳ ಮನೆಗೆ ಹೋಗಲವನಿಂದಾದನಿತು ವೃತ್ತಾಂತವನಱಿದು ಸೂಳೆ ಮುಳಿವುತಂ (ಬಸಪು. ೨೮-೧೮). ೩. ಸುದ್ದಿ ; ಸಮಾಚಾರ : ಅನಂತರಮಾ ವೃತ್ತಾಂತಮಂ ತಿಳಿದು . . . ಅಂತು ಬಂದು ತಂದೆಯ ಪದಾರವಿಂದಕ್ಕೆಱಗಿ (ಪಂರಾಮಾ. ೪-೬೩ ವ) ; ಇನಿತು ವೃತ್ತಾಂತಂಗಳಂ ಕೇಳ್ದನಿತಱೊಳು ನಡನಡುಗಿ ಬಸವಂ ಮನಗದಡಿ ಎಡೆಯೆಡೆಗಿಳೆಯೊಳಷ್ಟಾಂಗವೆಱಗುತ್ತ (ಬಸಪು. ೨೨-೪೦). ೪. ಕಥೆ ; ಚರಿತ್ರೆ ; ಪ್ರಕರಣ : ಬಸವಣ್ಣ ನೆಱೆಯಲೀ ವೃತ್ತಾಂತವಂ ತಾನಱಿದು ಬಾಚಯ್ಯಂಗಳಂ ಮನವಱಿಗಿ ಬಿನ್ನಹವಾಗಿ ಬರವೇಳ್ದಟ್ಟಿದಡೆ (ಬಸಪು. ೫೩-೭೪); ಹರಿರಾಮಾದಿ ಯದುನೃಪಜಾಲವೃತ್ತಾಂತವನು ತನಗಂದಾದ ಪರಿಭವವ . . . ವಿಸ್ತರಿಸಿ ನರನಱುಹಿದನು ಧರ್ಮಜಗೆ (ತಿಮ್ಮಮ. ೧-೧). ೫. ವಿಷಯ ; ವಿಚಾರ ; ವಸ್ತು. ೬. ತರಹ ; ವಿಧ ; ಬಗೆ. ೭. ರೀತಿ ; ವಿಧಾನ ; ಕ್ರಮ. ೮. ಸ್ಥಿತಿ ; ಇರವು ; ಅವಸ್ಥೆ. ೯. ಪೂರ್ಣತೆ; ಸಂಪೂರ್ಣತೆ. ೧೦. ವಿಶ್ರಾಂತಿ; ವಿರಾಮ. ೧೧. ಒಂಟಿತನ ; ಏಕಾಂತತೆ. ೧೨. (ವಸ್ತುವಿನ) ಸಹಜಗುಣ,— ಗುಣಧರ್ಮ ; ಸ್ವಭಾವ. ೧೩. ನಡವಳಿಕೆ ; ನಡತೆ ; ಕಾರ್ಯ : ಮತ್ತಗಜವಿಂತಭವನಂ ಭಜಿಸುತ್ತಮಿರೆ ಮೂಱುವಸರದೊಳುಂ ಮತ್ತೆ ಜೇಡಂ ಬಂದದಱ ವೃತ್ತಾಂತವಂ ನೋಡಿ ಚಿತ್ತದೊಳು ಕೋಪಿಸುತ (ಬಸಪು. ೧೮-೪೨). [ಸಂ.]

**ವೃತ್ತಾಕಾರ** (ನಾ). ದುಂಡಾಗಿರುವ ಆಕೃತಿ ; ವರ್ತುಲಾಕಾರ : ಕೊರಳ ಒಳಗೂ ಹೊಱಗೂ ಮೇಲೆಯೂ ವೃತ್ತಾಕಾರವಾಗಿ ಬಾತುಕೊಂಡು ಗಾತ್ರವಾಗಿ ಹಲ್ಲುನೋವ ಉಂಟುಮಾಡುವದು (ವೈದ್ಯಸಾ. II. ೧೧೪). [ಸಂ.]

**ವೃತ್ತಾಕಾರವಿಡಿ** (ಕ್ರಿ), ವರ್ತುಲಾಕೃತಿಯನ್ನು ಹೊಂದು ; ಮಂಡಲಾಕಾರವಾಗಿರು ; ದುಂಡಾಗಿರು : ಬಿಡದೆ ವೃತ್ತಾಕಾರವಿಡಿದ ಸಾಣೆಯೊಳೂರ್ವ ಮಡದಿ ಗಂಧವ ತೇವ ಭರಕೆ ಒಡನಲುಗುವ ಮೊಲೆಗಳು ಚಂದ್ರಮನ ಕಂಡು ನಡುಗುವ ಕೋಕದಂತಿಹುವು (ಕಂಸವಿ. ೨-೮೬). [ವೃತ್ತಾಕಾರ + ಪಿಡಿ]

**ವೃತ್ತಾಖ್ಯ** (ನಾ). ೧. ದುಂಡಾಗಿರುವ ಆಕೃತಿ ; ವೃತ್ತ ; ವರ್ತುಲ. ೨. ಒಂದು ಬಗೆಯ ಕುತ್ತಿಗೆಯ ಖಾಯಿಲೆ,- ಕಂಠರೋಗ : ಕೊರಳ ಒಳಗೂ ಹೊಱಗೂ ಮೇಲೆಯೂ ವೃತ್ತಾಕಾರವಾಗಿ ಬಾತುಕೊಂಡು ಗಾತ್ರವಾಗಿ ಹಲ್ಲನೋವು ಉಂಟುಮಾಡುವುದು. ಅದು ಅತ್ಯಂತ ಉನ್ನತವಾದ ಗ್ರಂಥಿಯಹುದು. ಹೀಗಿದ್ದುದು ವೃತ್ತಾಖ್ಯ ಎಂಬ ಕಂಠರೋಗ (ವೈದ್ಯಸಾ. II. ೧೧೪). [ಸಂ.]

**ವೃತ್ತಾಧ್ಯಯನ** (ನಾ). ಒಳ್ಳೆಯ ಚಾರಿತ್ರ್ಯ, ನಡವಳಿಕೆಗಳಿಂದ ಕೂಡಿದ ಅಧ್ಯಯನ ; ಸಚ್ಚಾರಿತ್ರ್ಯದಿಂದ ಕೂಡಿದ ಅಭ್ಯಾಸ : ವೃತ್ತಾಧ್ಯಯನಂಗಳ ಸಂಪತ್ತಿಬಲಂ ಬ್ರಹ್ಮವರ್ಚಸಂ ತಾನಕ್ಕುಂ (ವಸ್ತುಕೋ. ೫೮-೩೮). [ಸಂ.]

**ವೃತ್ತಿ** (ನಾ). ೧. ವರ್ತುಲಾಕಾರವಾಗಿ ಸುತ್ತುವಿಕೆ ; ಚಕ್ರಗತಿಯಲ್ಲಿ ತಿರುಗುವಿಕೆ. ೨. ವೃತ್ತ ಅಥವಾ ಚಕ್ರದ ಪರಿಧಿ ; ವರ್ತುಲದ ಹೊರವಲಯ. ೩. ಇರುವಿಕೆ ; ಅಸ್ತಿತ್ವ. ೪. ಸ್ಥಿತಿ ; ದೆಸೆ ; ಅವಸ್ಥೆ. ೫. ನಡವಳಿಕೆ ; ವರ್ತನೆ ; ಚರ್ಯೆ : ಸೂತ್ರಿಸಿದ ಸೂತ್ರ[ದ] ವೃತ್ತಿ ನಿಜಾತ್ಮವೃತ್ತಿವೋಲ್ ಪರಿಣಮಿಸಿತ್ತು (ಪಂಪಭಾ. ೨-೩೪) ; ಧಾತ್ರೀರಮಣಂ ದಿನಂಗಳನಿತಂ ಕಳೆವಂ ನಿಜಧೈರ್ಯವೃತ್ತಿಯಿಂ (ನಳಚಂ. ೬೨). ೬. ರೀತಿ ; ಕ್ರಮ ; ಪದ್ಧತಿ. ೭. ಜೀವನೋಪಾಯ ; ಕಸುಬು ; ಉದ್ಯೋಗ : ಯಥೋಚಿತವೃತ್ತಿಗಳನಱಿಪಲೆಂದು . . . ಅಜಂ ಬೇಱೆ ತೋಱಿದೊಡ (ಆದಿಪು. ೮-೭೨ ವ); ಇಲ್ಲಿ ನಿಮ್ಮಯ ವೃತ್ತಿ ಯಾವುದನೆ (ಸಂಬರ. ೭-೪೬) ; ವಿವಿಧವರ್ಣಗಳವರು ಮಾಡತಕ್ಕ ವೃತ್ತಿಗಳನ್ನು ಕುರಿತು ಸ್ಮೃತಿಗಳು ಪ್ರಸ್ತಾಪಿಸಿವೆ (ಭಾರದ. ೫೫). ೮. ಕ್ರಿಯೆ ; ಚಲನೆ ; ಚಟುವಟಿಕೆ. ೯. ಪ್ರತಿಫಲದ ಹಣ ; ಭತ್ಯ ; ವೇತನ. ೧೦. ಆಸೆ ; ಬಯಕೆ ; ಅಪೇಕ್ಷೆ :

ಇನಶಶಾಂಕಾದಿಗಳೇ ಲಕ್ಷ್ಮೀವನಿತೆಯರಸನ ದ್ವಾರಪಾಲಕರೆನಿಸುತಿಹರು ಮನದ ವೃತ್ತಿಗಳೆ ಪದಾತಿಗಳು (ಪಸಾರ. ೫-೨೧) ; ಆಶೆಯು ಹುಟ್ಟಿ ದೇಹೇಂದ್ರಿಯಗಳಲ್ಲಿ ವ್ಯಾಪಾರಮಾಡಿಸುತ್ತಲೇ ಇರುವುದು. ಇದೇ ವೃತ್ತಿ . . . ಆ ವೃತ್ತಿಯೆಲ್ಲವೂ ನಿನ್ನ ಸಂಕಲ್ಪಾನುಸಾರವಾಗಿ ತಿರುಗುವಂತೆ ಮಾಡಿ . . . ಆತ್ಮವಶವಾಗಿ ಹುಟ್ಟುವ ವೃತ್ತಿಯನ್ನು ಹಿಡಿದು ವ್ಯಾಪಾರಮಾಡುವವನು ಮನುಷ್ಯನು (ಮಹಾಣ. ೬೬). ೧೧. ದೇವಸ್ಥಾನ, ಉದ್ಯೋಗ ಮೊದಲಾದುವುಗಳಿಗಾಗಿ ಬಿಟ್ಟ ಭೂಮಿ ; ಇನಾಂ ; ಜಹಗೀರು : ಸೇನಾನಾಯಕಾದ್ಯನೇಕರ ವೃತ್ತಿ ಪ್ರಪತ್ತಿಗಳಂ ಕಳೆದುಕೊಂಡು (ಪಂಚತಂ. ೨೮-೪) ; ಬ್ರಹ್ಮಪುರೀ ಕೇಶವಪುರದಲ್ಲಿ ಶ್ರೀಜಗದೇಕಮಲ್ಲೇಶ್ವರ ದೇವರಿಗೆ ವೃತ್ತಿಯೆರಡು ಪಂಚಲಿಂಗದೇವರಿಗೆ ವೃತ್ತಿಯೆರಡು . . . ಮಾಲಗಾಱವೃತ್ತಿ ಒಂದು ಅನ್ತು ವೃತ್ತಿ ನಾಲ್ವತ್ತಾಱಕ್ಕಂ ಸರ್ವ್ವನಮಸ್ಯ್ಕದ ಹಳ್ಳಿ ಬೆಟುವಣೆಯನು . . . ಧಾರ ಎಱದು ಬಿಟ್ಟ ತ್ರಿಭೋಗಾಭ್ಯನ್ತರಸಿದ್ಧಿಯಪ್ಪುದು (ಎಕ. VII. ಶಿಕಾ. ೧೨೩-೬೨ ; 1159). ೧೨. ಬಳಕೆ ; ಉಪಯೋಗ. ೧೩. ಆಗುವಿಕೆ ; ಘಟನೆ ; ಸಂಭವಿಸುವಿಕೆ. ೧೪. ಬದುಕಿನ ರೀತಿ ; ಜೀವನದ ಧೋರಣೆ. ೧೫. ಜೀವನ ; ಬದುಕು : ಜನನಿಯ ಜಠರದೊಳಗಿರುವ ಸಮಯದಲಿ ವೃತ್ತಿಯನು ಕಲ್ಪಿಸಿದ ಪ್ರಭುವಾರು (ಹರಿಸಾ. ೫೬). ೧೬. ಕಾರ್ಯಾಚರಣೆಯ ಕಾರಣ, — ಹೇತು. ೧೭. ಗೌರವಾನ್ವಿತವಾದ ನಡವಳಿಕೆ,— ವರ್ತನೆ ; ಮರ್ಯಾದೆಯಿಂದ ಕೂಡಿದ ವ್ಯವಹಾರ. ೧೮. [ಕಾವ್ಯಮೀ] ನಾಯಕನ ಕಾರ್ಯಾದಿ ಘಟನೆಗಳ ಸ್ವಭಾವ, — ವ್ಯಾಪಾರ ; IP ಇದರಲ್ಲಿ ರಸಕ್ಕನುಗುಣವಾಗಿ ಕೈಶಿಕೆ, ಸಾತ್ವತಿ, ಆರಭಟಿ ಮತ್ತು ಭಾರತಿ ಎಂದು ನಾಲ್ಕು ವಿಧಗಳಿವೆ : ಭಾರತಿ ಸಾತ್ವತಿ ಕೈಶಿಕೆಯಾರಭಟಿಯು ಮೆಂಬ ವೃತ್ತಿಯೊಳ್ ರಸಮಂ ಸಂಚಾರಿಸುವ ಭಾವಮಂ ವಿಸ್ತಾರಿಸುವ ಬೆಡಂಗು ಬೇಱೆ ನೀಲಾಂಜನೆಯಾ (ಆದಿಪು. ೯-೨೬) ; ಭಾರತಿ ಸಾತ್ವತಿ ಕೈಶಿಕಿಯಾರಭಟಿಯೆನಿಪ್ಪ ವೃತ್ತಿಗಳ್ ನಾಲ್ಕಕ್ಕುಂ (ಕಾವ್ಯಾವ. ೮೩೭) ; ನಾಯಕಕಾರ್ಯಾದಿ ಘಟನೆಗಳ ಸ್ವಭಾವಕ್ಕೆ 'ವೃತ್ತಿ' (ವ್ಯಾಪಾರ — ಕೆಲಸ) ಎಂದು ಹೆಸರು. ಇದು ಕೈಶಿಕೀ, ಸಾತ್ವತೀ, ಆರಭಟೀ, ಭಾರತೀ ಎಂದು ನಾಲ್ಕು ವಿಧ (ಕೃಪಿಡಿ. ೨೦೧). ೧೯. ವಾಚ್ಯ, ಲಕ್ಷ್ಯ ಮತ್ತು ವ್ಯಂಗ್ಯಾರ್ಥಗಳನ್ನು ಕೊಡುವ ಶಬ್ದದ ಸಾಮರ್ಥ್ಯ,— ಶಬ್ದಶಕ್ತಿ : ಶಬ್ದಕ್ಕೆ ಅರ್ಥ ಕೊಡುವ ಸಾಮರ್ಥ್ಯವಿದೆ. ಈ ಸಾಮರ್ಥ್ಯಕ್ಕೆ 'ವೃತ್ತಿ' ಯೆಂದು ಹೆಸರು (ಕೃಪಿಡಿ. ೧೬೬). ೨೦. ಸೂತ್ರರೂಪದಲ್ಲಿರುವುದರ ಒಂದು ಬಗೆಯ ವಿವರಣೆ: ಸೂತ್ರಿಸಿದ ಸೂತ್ರ[ದ] ವೃತ್ತಿ ನಿಜಾತ್ಮವೃತ್ತಿವೋಲ್ ಪರಿಣಮಿಸಿತ್ತು (ಪಂಪಭಾ. ೨-೩೪) ; ಸೂತ್ರಕ್ಕೆ ತಾತ್ಪರ್ಯಾರ್ಥಂ ಪ್ರವರ್ತಿಸುತ್ತಮಿರೆ ವೃತ್ತಿಯುಂ ಬರೆದೆಂ (ಶಮದ. ೬ ಪೀಠಿಕೆ. ವೃತ್ತಿ). [ಸಂ.]

**ವೃತ್ತಿಕಾರ** (ನಾ). ಸೂತ್ರರೂಪದಲ್ಲಿರುವ ಮೂಲಗ್ರಂಥಕ್ಕೆ ಭಾಷ್ಯವನ್ನು ಬರೆದವನು ; ಟೀಕಾಕಾರ ; ವ್ಯಾಖ್ಯಾನಕಾರ : ಈ ವೃತ್ತಿಕಾರಂ ಪೂರ್ವಾಚಾರ್ಯರ ಆಚಾರಾನುಸರಣಂ ರತ್ನತ್ರಯಕಾರಣಮುಂದು ಮಂಗಳಾದಿಗಳಂ ಪೇಟ್ಟಲ್ಲಿ (ತತ್ವಪ್ರ. ೩) ; ಕಾರಿಕಾಕಾರನೇ ಬೇರೆ ವೃತ್ತಿಕಾರನೇ ಬೇರೆ ಎಂಬ ಅಭಿಪ್ರಾಯ ಬರುವಂತ ಅಭಿನವಗುಪ್ತನು ತನ್ನ ವ್ಯಾಖ್ಯಾನದಲ್ಲಿ ಕೆಲವು ಕಡೆ ಬರೆದಿದ್ದಾನೆ (ಭಾರಮೀ. ೫೯). [ಸಂ.]

**ವೃತ್ತಿಕಾಱ** (ನಾ). ಕಸುಬುದಾರ ; ಉದ್ಯೋಗಸ್ಥ ; ಕೆಲಸಗಾರ : ಇಲ್ಲಿಯ ವೃತ್ತಿಕಾಱರ್ ಕುಳಕರಣಿ ಸೋವಯ್ಯನುಂ ಉತ್ತವಯ್ಯನುಂ (ಸೌಇಇ. XX. ೧೯-೬೭; 1015). [ವೃತ್ತಿ + - ಕಾಱ]

**ವೃತ್ತಿಕೆ** (ನಾ). ೧. ಬಳೆ ; ಕಂಕಣ ; ವಲಯ : "ವೃತ್ತಿಕೆಯೆನಲು ಬಳೆಯೆನಿಕ್ಕುಂ" (ಮಂಗರಾ. ೮೪-೨೪). ೨. ಒಂದು ಬಗೆಯ ಸಸ್ಯ ; ಶಂಖಪುಷ್ಪೀಗಿಡ : "ವೃತ್ತಿಕೆಯೆನಲ್ ಕಟ್ಟವತ್ತಿ" (ಮಂಗರಾ. ೮೩-೮೩). [ಸಂ. ವೃತ್ತಿಕ]

**ವೃತ್ತಿಕ್ಷೇತ್ರ** (ನಾ). ಉದ್ಯೋಗದ ಸ್ಥಳ ; ಜೀವನೋಪಾಯದ ಭೂಮಿ : ಆ ರುಣದವರ್ಗ ವೃತ್ತಿಕ್ಷೇತ್ರಮಂ ತನ್ನ ನಾರಿಯ ಕೊರಲ್ಗಾಲಿಯೆಲ್ಲಮಂ ಮಾಱಲು (ವೀಶೈಪು. ೩-೧೫-೧೯). [ಸಂ.]

**ವೃತ್ತಿಗ** (ನಾ). = ವೃತ್ತಿಕಾಱ : ಮತ್ತಾಮುಂ ಬ್ರತಮಱಸಿ ವೃತ್ತಿಗರಂ ಕಿಡಿಸಲಾಗದು (ಸೌಇಇ. IX-i. ೧೧೭-೩೯ ; 1055). [ವೃತ್ತಿ + - ಗ$_2$]

**ವೃತ್ತಿಗ್ರಂಥ** (ನಾ). ಸೂತ್ರರೂಪವಾದ ಮೂಲಗ್ರಂಥಕ್ಕೆ ವ್ಯಾಖ್ಯಾನವನ್ನುಳ್ಳ ಗ್ರಂಥ ; ಭಾಷ್ಯ ; ವಿವರಣಗ್ರಂಥ : ಅಲ್ಪಾಕ್ಷರಮುಂ ಅಸಂದೇಹಮುಂ ಸಾರಮುಳ್ಳುದುಂ . . . ಅರ್ಥೋತ್ಪತ್ತಿನಿಮಿತ್ತಮುಂ ಅಪ್ಪುದು ಸೂತ್ರಮೆಂಬುದು ಅದಂ ವಿವರಿಸುವುದು ವೃತ್ತಿಗ್ರಂಥಂ (ತತ್ವಪ್ರ. ೩) ; ಉಪವರ್ಷಾಚಾರ್ಯರು ಪೂರ್ವಮೀಮಾಂಸಾಸೂತ್ರಕ್ಕೂ ಉತ್ತರಮೀಮಾಂಸಾಸೂತ್ರಕ್ಕೂ ವಿಪುಲವಾದ ವೃತ್ತಿಯೆಂಬ ವ್ಯಾಖ್ಯಾನವನ್ನು ಬರೆದಿರುವರು. ಇವರನ್ನೇ ವೃತ್ತಿಕಾರರೆಂದು ಕರೆದು ಈ ವೃತ್ತಿಗ್ರಂಥದ ವಾಕ್ಯಗಳನ್ನು . . . ಉದಾಹರಿಸಿರುವರು (ಹಿಂದಸಾ. ೧೮೬). [ಸಂ.]

**ವೃತ್ತಿಜೀವನ** (ನಾ). ಜೀವನೋಪಾಯಕ್ಕಾಗಿ ಮಾಡುವ ಉದ್ಯೋಗ,— ಕಸುಬು : ಇಲ್ಲಿ ಕೂಡಿಸಿರುವ ಘಟನಾವಳಿಗಳೂ ದಂತಕತೆಗಳೂ ಈ ಸಂಗೀತರತ್ನಗಳ ಹಿರಿಮೆ, ವ್ಯಕ್ತಿತ್ವ, ಗುರಿಯ ಸಾಧನೆ ಮತ್ತು ವೃತ್ತಿಜೀವನ ಇವುಗಳ ಬಗ್ಗೆ ಬೆಳಕು ಚೆಲ್ಲುತ್ತವೆ (ಸಂಗೀತ. Vi ಪೀಠಿಕೆ). [ಸಂ.]

**ವೃತ್ತಿಜ್ಞಾನ** (ನಾ). ೧. ಉದ್ಯೋಗದ ಬಗೆಗಿನ ತಿಳಿವಳಿಕೆ : ಕಸುಬಿನ ಅರಿವು. ೨. [ವೀಶೈ] ಭೂತ, ಭವಿಷ್ಯತ್ ಮತ್ತು ವರ್ತಮಾನದ ಜ್ಞಾನಗಳು : ಜ್ಞಾನ ಸುಜ್ಞಾನ ಮಹಾಜ್ಞಾನ ಎಂಬ ವೃತ್ತಿಜ್ಞಾನಂಗಳು ಇಲ್ಲದಂದು ಅಖಂಡ ಪರಿಪೂರ್ಣ ಅದ್ವಯ ನಿಷ್ಕಲ ನಿಜಜ್ಞಾನಮೂರ್ತಿ ನೀನೆಯಯ್ಯಾ (ಸಿದ್ಧೇವ. ೮-೨೬) ; ವೃತ್ತಿಜ್ಞಾನವಳಿದು ಚಿತ್ತದ ಕೊನೆಯ ಮೊನೆಯಲ್ಲಿ ನಿತ್ಯಲಿಂಗದ ನೆನಹು ತುಂಬಿ ಸುಳಿಯಬಲ್ಲರೆ ಅಚ್ಚ ಶರಣನೆಂಬೆನಯ್ಯ (ಅಖಂಡೇ. ೧೩೨-೧೦೪). [ಸಂ.]

**ವೃತ್ತಿತಂತ್ರ** (ನಾ). "ವೃತ್ತಿತಂತ್ರ ; ವ್ಯಾಪಾರದ ಉಪಾಯ" (Trick of the trade. ಪತ್ರಿಸಿ. ೮೪). [ಸಂ.]

**ವೃತ್ತಿತ್ವ** (ನಾ). ಇರುವಿಕೆ ; ಅಸ್ತಿತ್ವ : ಪ್ರಕಾಶಿತವೃತ್ತಿತ್ವಂ ಉದ್ಭಾವನಂ ಎಂಬುದಿಲ್ಲಿಯುಂ ಯಥಾಕ್ರಮದಿಂ ಸದ್ಗುಣೋಚ್ಛಾದನಂ ಅಸದ್ಗುಣೋದ್ಭಾವನಂ ಸಂಬಂಧಿಸೆ ಪಡುಗುಂ (ತತ್ವಪ್ರ. ೨೬೭). [ಸಂ.]

**ವೃತ್ತಿದಾರ** (ನಾ). ಇನಾಂಭೂಮಿಯನ್ನು ಪಡೆದವನು ; ಇನಾಂದಾರ ; ಜಹಗೀರುದಾರ : ಇವುಗಳಲ್ಲಿ ಕೆಲವು ಬಡಾಯಿ — ಅಂದರೆ ವೃತ್ತಿದಾರರಾದ ಇನಾಂದಾರರ ಸ್ವಂತ ಅನುಭವ ಅಥವಾ ವಹಿವಾಟಿನಲ್ಲಿದ್ದವು (ಕೆಲಸ. ೨೫೪). [ವೃತ್ತಿ + - ದಾರ್]

**ವೃತ್ತಿಪರಿಕಲ್ಪನೆ** (ನಾ). ದಾನವನ್ನು ಕೊಡುವಿಕೆ ; ದಾನಮಾಡುವಿಕೆ : ವೃತ್ತಿಪರಿಕಲ್ಪನೆಯಂ ಮಾಳ್ಪ ಸಂಕಲ್ಪದಿಂ . . . ಶ್ರೀಮತ್ಕಳಚುರಿ ಚಕ್ರವರ್ತಿ ನಿಃಶಂಕ ಮಲ್ಲ ಸಂಕಮದೇವರಸರ್ಗ್ಗೆ ಬಿನ್ನಪಂಗೆಯ್ದು (ಶಾಸಪ. ೫೩-೯೧; 1179). [ಸಂ. ವೃತ್ತಿಪರಿಕಲ್ಪನಾ]

**ವೃತ್ತಿಪರಿಸಂಖ್ಯಾನ** (ನಾ). [ಜೈನ] ಬಾಹ್ಯತಪಸ್ಸಿನ ಆರುಪ್ರಕಾರಗಳಲ್ಲಿ ಒಂದು ; ಆಹಾರಕ್ಕೆ ಸಂಬಂಧಿಸಿದ ಮುನಿನಿಯಮಗಳಲ್ಲೊಂದು ; IP ಕೆಲವು ನಿರ್ದಿಷ್ಟ ಮನೆ ಅಥವಾ ಬೀದಿಯಲ್ಲಿ ಆಹಾರ ದೊರೆತರೆ ಮಾತ್ರ ಸ್ವೀಕರಿಸುತ್ತೇನೆಂದು ನಿಯಮಮಾಡಿಕೊಂಡು ಹಾಗೆ ಸಿಕ್ಕಿದರೆ ಮಾತ್ರ ಸ್ವೀಕರಿಸುವುದು, ಇಲ್ಲದಿದ್ದರೆ ಉಪವಾಸ ಇರುವುದು : ಇಂತಪ್ಪೆಡೆಯೊಳಿಂತೆಂಬವರ್ ನಿರಿಸಿದೊಡಲ್ಲದೆ ನಿಲ್ಲೆನೆಂಬ ನಿಯಮಂ ಮೊದಲಾಗ ವೃತ್ತಿಪರಿಸಂಖ್ಯಾನನಾಮದ ಮೂಱನೆಯ ತಪದೊಳಂ . . . ನೆರೆದು (ಆದಿಪು. ೬-೩೦ ವ) ; ಅನಿನಿತು ಭೋಜ್ಯದಿಂ ಪೆಱತೇನುಮನುಣುವೊಲ್ಲೆನೆಂದೆನೆಂದುಣ್ಬೆಡೆಯೊಳ್ ತಾನಱಿದು ವೃತ್ತಿಪರಿಸಂಖ್ಯಾನ ತಪೋಯುಕ್ತನಾಗಿ ಸಂಯಮಿ ನೆಗಟ್ಟಂ (ಸುಕುಮಾ. ೪-೬). [ಸಂ.]

**ವೃತ್ತಿರಹಸ್ಯ** (ನಾ). "ವ್ಯಾಪಾರದ ಗುಟ್ಟು, ವೃತ್ತಿರಹಸ್ಯ" (Trade Secret. ಪತ್ರಿಸಿ. ೮೫). [ಸಂ.]

**ವೃತ್ತಿಲಾಭ** (ನಾ). ೧. ಉದ್ಯೋಗವು ದೊರಕುವುದು. ೨. [ಜೈನ] ಎಂಟು ಬಗೆಯ ಕ್ರಿಯೆಗಳಲ್ಲಿ ಒಂದು ; IP "ಮೊದಲನೆ ದಿನ ಉಪವಾಸವಿದ್ದು ಎರಡನೆಯ ದಿನ ಜಿನೇಶ್ವರನ ಸನ್ನಿಧಿಯಲ್ಲಿ ಪೂಜಾನಂತರ ಗುರುವು ಜಿನದೀಕ್ಷೆ ಕೊಟ್ಟ ಮೇಲೆ ಮನೆಗೆ ಹೋಗಿ ಮಾಡುವ ಪಾರಣೆ" (ಜೈನಕೋ. ೨೩೭) : ಮತ್ತಮವತಾರ ವೃತ್ತಿಲಾಭ [ಪಾಠಾಂ. ಲೋಭ] ಸ್ಥಾನಲಾಭ ಗಣಗ್ರಹಣ

ಪೂಜಾರಾಧ್ಯಪುಣ್ಯಯಜ್ಞದೃಢಚರ್ಯೋಪಯೋಗತ್ವಮೆಂಬೆಂಟುಂಬೆರಸು . . . ಅಱಿಪಿ (ಆದಿಪು. ೧೫-೧೬ ವ). [ಸಂ.]

**ವೃತ್ತಿಲೋಪ** (ನಾ). ಉದ್ಯೋಗದಲ್ಲಿಯ ಕೊರತೆ ; ಕಾರ್ಯದಲ್ಲಿಯ ಅರೆ ಕೊರೆ : ಅಡಗಿನ ಬಸನಿಗರ್ಗ್ಗಂ ಕಳ್ಳುಡಿವವರ್ಗ್ಗಂ ವೃತ್ತಿಲೋಪಮೆಂಬೀ ನುಡಿಯಂ ಕಡಗಣ್ ಗಣಿಸದೆ ಮೊದಲಿಂದಂ ಕಿಡಿಪುದದಂ ಸ್ಥಾನಗುರುಗಳುಂ ಪೂರ್ಬ್ಬಿಗರುಂ (ಸೌಇ. IX-i, ೧೧೭-೩೮ ; 1055). [ಸಂ.]

**ವೃತ್ತಿಲೋಹ** (ನಾ). ಒಂದು ಬಗೆಯ ಲೋಹ; ಕಬ್ಬಿಣ (?): "ಖ್ಯಾತಂ ತಾಂ ವೃತ್ತಿಲೋಹಮೆನೆ ವೃತ್ತಕಮುಂ" (ವಸ್ತುಕೋ. ೨೯-೮). [ಸಂ.]

**ವೃತ್ತಿವಂತ** (ನಾ). ೧. ಉದ್ಯೋಗವನ್ನು ಹೊಂದಿದವನು ; ಕಸುಬುದಾರ. ೨. ದಾನವಾಗಿ ಭೂಮಿಯನ್ನು ಪಡೆದವನು ; ಇನಾಂದಾರ; ಜಹಗೀರುದಾರ: ಹನ್ನೆರಡು ಗ್ರಾಮಗಳ ವೃತ್ತಿವಂತರಿಗೆ ಸಹನೆಯಾಗಲಿಲ್ಲ . . . ಹೇಗಾದರೂ ದಾಸರ ಮೇಲೆ ನಾಯಕನಿಗೆ ಕೋಪ ಬರುವಂತೆ ಮಾಡಬೇಕೆಂದು ವೃತ್ತಿವಂತರು ಹಂಚಿಕೆ ಮಾಡಿದರು (ಕಭವಿ. ೮). [ಸಂ. ವೃತ್ತಿವತ್]

**ವೃತ್ತಿವಿಳಾಸತೆ** (ನಾ). [ಕಾವ್ಯಮೀ] ಕೈಶಿಕಿ ಮುಂತಾದ, ಕಾವ್ಯನಾಟಕಗಳಲ್ಲಿಯ ವೃತ್ತಿಯ ಸೊಬಗು : ಜತಿವೆತ್ತೊಪ್ಪುವ ಮೃದುಪದಗತಿಯುಂ ರಸಮೊಸರ್ವ ಭಾವಮುಂ ವೃತ್ತಿವಿಳಾಸತೆಯುಂ ತಳ್ತಿರೆ ವಿಳಸತ್ಕೃತಿಯಂ ಪೋಲ್ತ ಬಳಿ ರಸಿಕರಂ ಮಚ್ಚಿಸಿದಳ್ (ರಾಜಶೇ. ೧೨-೯೬). [ಸಂ. ವೃತ್ತಿವಿಲಾಸತಾ]

**ವೃತ್ತಿವ್ಯಾಸ** (ನಾ). ವೃತ್ತಿಯ ವಿಸ್ತಾರ ; ವಿವರಣೆಯ ಹರಿಹು : ಪ್ರಾಸಚ್ಛಂದೋನ್ಯಯವಿನ್ಯಾಸದಿನಂತಿಂತು ಶಬ್ದಮಿರ್ಕುಂ ವೃತ್ತಿವ್ಯಾಸಂ ತದ್ವ್ಯಾಕುಲಮೆಂದಾ ಸೂತ್ರಕ್ಕರ್ಥವೃತ್ತಿ ವರ್ತಿಸೆ ಪೇೞ್ದಂ (ಶಮದ. ೭ ಪೀಠಿಕೆ). [ಸಂ.]

**ವೃತ್ತಿಶಿಕ್ಷಣ** (ನಾ). ಉದ್ಯೋಗವನ್ನು ಕಲಿಸುವ ಶಿಕ್ಷಣ ; ಒಂದು ನಿರ್ದಿಷ್ಟ ಕಸುಬನ್ನು ಮಾಡಲು ತರಬೇತು ನೀಡುವ ವಿದ್ಯಾಭ್ಯಾಸ : ಇಂಗ್ಲೆಂಡು ಅನೇಕ ಶತಮಾನಗಳಿಂದಲೂ ಔದ್ಯೋಗಿಕರಾಷ್ಟ್ರವಾಗಿದ್ದರೂ ಅಲ್ಲಿನ ಶಾಲೆಗಳಲ್ಲಿ ವೃತ್ತಿಶಿಕ್ಷಣ ವಿರಲಿಲ್ಲ (ಶಿಕ್ಷದ. ೧೯೪). [ಸಂ.]

**ವೃತ್ತಿಶಿಕ್ಷಣಶಾಲೆ** (ನಾ). ಒಂದು ನಿರ್ದಿಷ್ಟ ಕಸುಬನ್ನು ಕಲಿಸುವ ಶಾಲೆ; ಒಂದು ನಿರ್ದಿಷ್ಟ ಉದ್ಯೋಗವನ್ನು ಮಾಡಲು ತರಬೇತು ನೀಡುವ ವಿದ್ಯಾಕೇಂದ್ರ : ಭಾರತದಲ್ಲಿ ಇಂಗ್ಲೆಂಡು ತನ್ನ ಶಿಕ್ಷಣಪದ್ಧತಿಯನ್ನು ನಾಟಿಹಾಕಿದಾಗ ವೃತ್ತಿಶಿಕ್ಷಣಶಾಲೆಗಳು ಅಲ್ಲೊಂದು ಇಲ್ಲೊಂದು ಹೆಸರಿಗೆ ಆರಂಭವಾದುವು (ಶಿಕ್ಷದ. ೧೯೪). [ಸಂ. ವೃತ್ತಿಶಿಕ್ಷಣಶಾಲಾ]

**ವೃತ್ತ್ಯನುಪ್ರಾಸ** (ನಾ). [ಛಂದ] ಅನುಪ್ರಾಸದಲ್ಲಿಯ ಒಂದು ಭೇದ; ಪದ್ಯದಲ್ಲಿ ಬಿಡಿವ್ಯಂಜನಗಳು ಹಲವು ಸಲ ಆವೃತ್ತಿಗೊಳ್ಳುವುದು : ಒಂದಕ್ಕರ ಮಾಡೊಡಮೆರಡಕ್ಕರಮಾಡೊಡಂ ಪಲವುಂ ವೇಳೆಯೊಳ್ ಬಳಸಿ ಬರುತ್ತಿರೆಯದು ವೃತ್ತ್ಯನುಪ್ರಾಸಮೆನಿಪುದು (ಅಪ್ರತಿ. ೩.೦-೮) ; ಅನುಪ್ರಾಸದಲ್ಲಿ ಒಂದೋ ಎರಡೋ ಮೂರೋ ಅಕ್ಷರಗಳು ಮತ್ತೆ ಮತ್ತೆ ಬಂದರೆ 'ವೃತ್ತ್ಯನುಪ್ರಾಸ'ವೆಂದೂ . . . ಹೆಸರು (ಕೈಪಿಡಿ. ೨೫೩). [ಸಂ.]

**ವೃತ್ರ** (ನಾ). ೧. ಕತ್ತಲೆ ; ತಿಮಿರ. ೨. ಶತ್ರು ; ಅರಿ ; ಹಗೆ. ೩. ಮೋಡ ; ಮೇಘ. ೪. ಇಂದ್ರನಿಂದ ಹತನಾದ ಒಬ್ಬ ರಾಕ್ಷಸನ ಹೆಸರು : "ವೃತ್ರಂ ದಾನವನುಂ ರಿಪುವುಂ" (ವಸ್ತುಕೋ. ೧೧೮-೫) ; ವೃತ್ರನ ಹತ್ಯೆಗೆ ಪೇಳ್ದಂ ಗೋತ್ರಾರಿ ನಿವೃತ್ತಿಯಧಿಕ ಕೈಲಾಸಾದಿಕ್ಷೇತ್ರ ಸುತೀರ್ಥಚಯಂಗಳ ಯಾತ್ರೆಯನೆಸಗ್ಗೆ ಮಹೇಂದ್ರ ಪೋಪುದು ಪಾಪಂ (ಹಾಲಾಸ್ಯ. ೧-೨-೬೧) ; ಎಲ್ಲರೂ ಸೇರಿ ಅವನಿಗೆ 'ವೃತ್ರ' ಎಂದು ಹೆಸರಿಟ್ಟರು (ನಡದಾ. II, ೧೪೦೫). ೫. ಶಬ್ದ. ೬. ಚಕ್ರ. ೭. ಒಂದು ಪರ್ವತದ ಹೆಸರು. ೮. ಚರ್ಮ ; ತೊಗಲು. [ಸಂ.]

**ವೃತ್ರವೈರಿ** (ನಾ). ವೃತ್ರನೆಂಬ ರಾಕ್ಷಸನ ಶತ್ರು ; ಇಂದ್ರ : ಅತ್ರಿಮಹಋಷಿ ಕಂಡನದನಾ ವೃತ್ರವೈರಿ ಕುಚೇಷ್ಟೆಯನು (ನಿಭಾಗ. ೪-೧೩-೪). [ಸಂ. ವೃತ್ರವೈರಿನ್]

**ವೃತ್ರಹ** (ನಾ). ವೃತ್ರಾಸುರನನ್ನು ಕೊಂದವನು ; ಇಂದ್ರ : ಅಂತು ನೆಱೆಯೆ ಜನ್ಮಾಭಿಷೇಕಮಂ ವೃತ್ರಹಂ ನಿರ್ವರ್ತಿಸಿ (ಶಾಂತಿಪು. ೧೦-೫೪ವ). [ಸಂ. ವೃತ್ರಹನ್]

**ವೃತ್ರಹಮಂತ್ರಿ** (ನಾ). ಇಂದ್ರನ ಮಂತ್ರಿ ; ಬೃಹಸ್ಪತಿ : ಶೂರ್ಪಕವೈರಿ ಕಾಲುಗುರ್ಗೆ ವರ್ಪನೊ ವೃತ್ರಹಮಂತ್ರಿ ಜಾಣ್ಗೆ ಮೇಣ್ ವರ್ಪನೊ ಪೇೞಿಂ (ಶಾಂತಿಪು. ೭-೧೧೮). [ಸಂ. ವೃತ್ರಹಮಂತ್ರಿನ್]

**ವೃಥ** (ನಾ). ಉಪಯೋಗವಿಲ್ಲದುದು ; ವ್ಯರ್ಥವಾದುದು ; ನಿಷ್ಫಲವಾದುದು : ಅತಿಥಿಯನು ಪೂಜಿಸದಡಿನಿತೂ ವೃಥವದಹುದೆಲೆ ಮಗನೆ ಶಕ್ತಿಯಲತಿ ಗಮಿಸದರ್ಚಿಸುವುದುಳ್ಳಂದದಲಿ ಬಂದವರ (ನಿಭಾಗ. ೯-೧೮-೫೮). [ಸಂ. ವೃಥಾ ./ IP ಸಂಸ್ಕೃತದಲ್ಲಿ ಇದೊಂದು ಅವ್ಯಯ]

**ವೃಥಾ** (ಅ). ೧. ವ್ಯರ್ಥವಾಗಿ ; ನಿಷ್ಫಲವಾಗಿ ; ಉಪಯೋಗವಿಲ್ಲದೆ : ಬಲಿಯ ಭೂಮಿ ಕರ್ಣನ ಕವಚ ಖಚರನ ಆಸ್ತಿ ಶಿಬಿಯ ಮಾಂಸ ವೃಥಾ ಹೋಯಿತ್ತಲ್ಲಾ. . . ಕೂಡಲಸಂಗನ ಶರಣರನಱಿಯದೆ ಕೀರ್ತಿ ವಾರ್ತೆಗೆ ಮಾಡಿದವನ ಧನವು ವೃಥಾ ಹೋಯಿತ್ತಲ್ಲಾ (ಬಸವ. ೨೨೪) ; ಇನಿತು ದಿವಸಂ ವೃಥಾ ಸವೆದನೆಲೆ ಶಿವ (ನಂಬಿರ. ೭-೧೩೧). ೨. ತಪ್ಪಾಗಿ ; ಅನ್ಯಾಯವಾಗಿ. [ಸಂ.]

**ವೃಥಾಕೃತ** (ನಾ). ನಿರರ್ಥಕವಾದುದು ; ನಿಷ್ಫಲವಾದುದು : ಈ ವೃಷಧ್ವಜನಿಂದು ಸಮರದೊಳ್ಕಾಯದೊಡೆ ಹಾ ವೃಥಾಕೃತಮಾಗಿ ಪೋಗುತಿರ್ದುದು ಜನ್ಮಂ (ಜೈಮಿಭಾ. ೪-೬೩). [ಸಂ.]

**ವೃಥಾಭಿಯೋಗ** (ನಾ). ವ್ಯರ್ಥವಾದ ಅಪವಾದ ; ನಿರರ್ಥಕವಾದ ನಿಂದೆ : ಧಿಮ್ಮನೆ ನಿಂದು ಭುಗಿಲೆಂದನು ಕಿರೀಟಿ ವೃಥಾಭಿಯೋಗದ ಮನಕತಕೆ ಮಾರಾಂಕ ವಾಯ್ತೇ (ಕುವ್ಯಾಸ. ೩-೯). [ಸಂ.]

**ವೃಥಾಯ** (ಅ). = ವೃಥಾ ೧ : ಹೊನ್ನು ಹೆಣ್ಣು ಮಣ್ಣೆಂಬ ಕರ್ಮದ ಬಲೆಯಲ್ಲಿ ಸಿಲುಕಿ ವೃಥಾಯ ಬಱುದೊಱೆಹೋಹ ಕೆಡುಕಹಾರುವ ನಾನಲ್ಲ (ಬಸವ. ೭೧೫). [< ಸಂ. ವೃಥಾ]

**ವೃಥಾಳಾಪ** (ನಾ). ವ್ಯರ್ಥವಾದ ಮಾತು ; ಉಪಯೋಗವಿಲ್ಲದ ಹರಟೆ: ವೃಥಾಳಾಪದಿಂದ ನಿಂದೆ (ಸಕವ. ೫. III, ೮೬-೧೭೯). [ಸಂ. ವೃಥಾಲಾಪ]

**ವೃಥೆ** (ಗು). ೧. ವ್ಯರ್ಥವಾದ; ನಿಷ್ಪ್ರಯೋಜಕವಾದ ; ಏನೂ ಉಪಯೋಗವಿಲ್ಲದ. ೨. ತಪ್ಪಾದ ; ಸುಳ್ಳಾದ ; ಸರಿಯಲ್ಲದ. (ನಾ). ೩. ವ್ಯರ್ಥವಾದುದು ; ಫಲವಿಲ್ಲದುದು ; ನಿಷ್ಪ್ರಯೋಜಕವಾದುದು : "ವೃಥೆ ಮೋಘಂ ವಂಧ್ಯಂ ಮುಧೆ" (ವಸ್ತುಕೋ. ೧೧೨-೧೧).

**ವೃಥೆಯಾಗು** = ವ್ಯರ್ಥವಾಗು ; ನಿರರ್ಥಕವಾಗು ; ದಂಡವಾಗು : ಸಕಲಸಂಸಾರಸುಖಸರ್ವಸ್ವಮಂ ವೃಥೆಯಾಗದಂತನುಭವಿಸುತ್ತುಮಿರ್ದರ್ (ಸುಕುಮಾ. ೩-೨ ವ) ; ಅವಿಚಾರತೆಯಿಂ ನೀನಿಂತವಿವೇಕಂಗಿತ್ತೆಯೆನ್ನನದಱಿಂ ಪೇೞು ಸಂಭವಿಸುಗುಮೆ ಸೌಖ್ಯವೆನಗೀ ಭವಮುಂ ವೃಥೆಯಾದುದೆನ್ನ ಕರ್ಮದ ಫಲದಿಂ (ನೇಮಿಪು. ೪-೪೧). [ಸಂ. ವೃಥಾ]

**ವೃಥೆಗಳೆ** (ಕ್ರಿ). ವ್ಯರ್ಥವಾಗಿಸು ; ನಿಷ್ಪ್ರಯೋಜಕಗೊಳಿಸು ; ಉಪಯೋಗವಿಲ್ಲದಂತೆ ಮಾಡು : ರೂಹಿಲ್ಲದೊಡಂ ಕೆಲಬರ ಸಹಾಯದಿಂ ಬಱಿದೆ ತೊನೆದ ವಿಟಸಂದೋಹಮನೊಲಿಸುವರೆಂದೊಡೆ ರೂಹಂ ಪಡೆದೇಕೆ ಮರುಳೆ ನೀಂ ವೃಥೆಗಳೆವೈ (ಧರ್ಮಾಮೃ. ೩-೧೩೦). [ವೃಥೆ + ಕಳೆ$_1$]

**ವೃಥೋಕ್ತಿ** (ನಾ). = ವೃಥಾಳಾಪ : ಮಗನಗರಾಜಧೈರ್ಯನಿಭರಾಜಮನಂ ಮೃಗರಾಜಸತ್ವನರ್ಥಿಗೆ ಭಯಮಿಲ್ಲ ಬಾಟ್ಗೆ ವೃಥೋಕ್ತಿಗಳಿಲ್ಲ ನೆಗೞ್ಗೆಂ ಪೊಗೞ್ತೆಗಮೆಣೆಯಿಲ್ಲ (ಶಾಂತಿಪು. ೮-೧೧೬). [ಸಂ.]

**ವೃಥೋತ್ಸಾಹಿ** (ನಾ). ವ್ಯರ್ಥವಾಗಿ ಉತ್ಸಾಹಗೊಂಡವನು ; ಕಾರಣವಿಲ್ಲದೆ ಉತ್ಸುಕನಾದವನು : ನಾರಣಕ್ರಮಿತಂ . . . ದಾಮೋದರಭಟ್ಟಂ ಮೊದಲಾದ ಛಾಂದಸರು ವೇದಜಡರು ಮಟ್ಟಿಯ ಮರುಳ್ಗಳು ವೃಥೋ[ಪಾಠಾಂ. ತ್ಸೋ]ತ್ಸಾಹಿಗಳು . . . ನೆರೆದರರಮನೆಗೆ ಬಂದು (ಬಸರ. ೧೦-೨೬). [ಸಂ. ವೃಥೋತ್ಸಾಹಿನ್]

**ವೃದ್ಧ** (ಗು). ೧. ಹೆಚ್ಚಾದ ; ವೃದ್ಧಿಯಾದ ; ವರ್ಧಿಸಿದ. ೨. ಪೂರ್ಣವಾಗಿ ಬೆಳೆದ ; ಪ್ರೌಢವಾದ. ೩. ವಯಸ್ಸಾದ ; ಮುಪ್ಪಾದ ; ಹಿರಿಯ. ೪. ಹಳೆಯದಾದ ; ಹಿಂದಿನ ; ಪ್ರಾಚೀನವಾದ. ೫. ಮುಂದುವರಿದ ;

ಏಳಿಗೆಹೊಂದಿದ ; ಅಭಿವೃದ್ಧಿಯನ್ನು ಪಡೆದ. ೬. ರಾಶಿಯಾದ ; ಗುಡ್ಡೆಯಾದ. **೭.** ಪಾಂಡಿತ್ಯವನ್ನು ಪಡೆದ ; ಪ್ರಾಜ್ಞನಾದ. (ನಾ). ೮. ವಯಸ್ಸಾದ ವ್ಯಕ್ತಿ ; ಮುದುಕ : ಈಗಳಿಂತು ಪೊಱಗಿರಿಸಲಾಗಳಂತೆ ಬಂದು ಮುಂದಿರ್ದಪನೀ ವೃದ್ಧಂ ಕಿಱುಕುಳನಲ್ಲ ಕಾರಣಿಕನಾಗಲೆವೇಳ್ಕುಮೆಂದು ನೋಡುತ್ತಿರೆ (ನಂಬಿರ. ೬-೬೦) ; ಸೀತಾರಾಮಲಕ್ಷ್ಮಣರ್ ವೃದ್ಧನಂ ಪರ್ಯಂಕಕೆತ್ತಿ ಸಂತೈಸುತಿರೆ (ಶ್ರೀರಾಮಾ. ೯೧-೩೫೬). **೯.** ಪೂಜ್ಯನಾದವನು ; ಗೌರವಾರ್ಹನಾದವನು. ೧೦. ವಿದ್ವಾಂಸ ; ಪಂಡಿತ : ಪೇಟ್ಗೊಡಂತಾ ಪ್ರತಿಭಾನಂ ಶಕ್ತಿಲೋಕಾಗಮ ಸಕಲಕಲಾವೇದನಂ ವಿದ್ಯೆ ಶಾಸ್ತ್ರಾನ್ವಿತನಪ್ಪಂ ವೃದ್ಧನಾಲಸ್ಯಮನುೞಿದೆಸಪುದ್ಯೋಗಮಭ್ಯಾಸಕರ್ಮಂ (ಕಾವ್ಯಾವ. ೪೨೪). ೧೧. ಯೋಗಿ; ತಪಸ್ವಿ. ೧೨. ವಂಶಕ್ರಮದಲ್ಲಿ ಅನುಗತವಾಗಿ ಬಂದವನು ; ಸಂತತಿ ಯವನು. ೧೩. ಒಂದು ಬಗೆಯ ಸುವಾಸನಾಧೂಪ ; ಸಾಂಬ್ರಾಣಿ ; ಶಿಲಾಪುಷ್ಪ : "ಕಾಲಾನುಸಾರ್ಯಂ, ವೃದ್ಧಂ, ಅಶ್ಮಪುಷ್ಪಂ, ಶೀತಶಿವಂ, ಶೈಲೇಯಂ – ೫ ಕಲ್ಲುಹುವ್ವಿನ ಪೆಸರು, ಶಿಲಾಪುಷ್ಪ" (ಸಿದ್ಧಾಂತಿ. ೧೪೦). [ಸಂ.]

**ವೃದ್ಧಕಂಚುಕಿ** (ನಾ). ಮುದುಕನಾದ ಅಂತಃಪುರದ ರಕ್ಷಕ : ಮಹೀಪತಿನಿವೇದನ ಸಂಭ್ರಮಗಮನಸ್ಖಲಿತವೃದ್ಧಕಂಚುಕಿನಿಕರಮುಂ (ಆದಿಪು. ೮-೩೫ ವ) ; ಉಪಾತ್ತೋದಾತ್ತ ವಿಸ್ತಾರಕೀಚಕವೇತ್ರಂ ಭರತಾವನೀಪತಿಮಹೀಸ್ತ್ರೀರಕ್ಷಕಂ ವೃದ್ಧಕಂಚುಕಿ ಮರ್ಯಾದೆ ಯೊಳಿರ್ದನೆಂದು ಮಹಿಪಂ ಹೈಮಾದ್ರಿಯುಂ ನೋಡಿದಂ (ಶಾಂತಿಪು. ೧೧-೬೦).

[ಸಂ. ವೃದ್ಧಕಂಚುಕಿನ್]

**ವೃದ್ಧಕದಂಬ** (ನಾ). ಹಿರಿಯರ ಸಮೂಹ ; ಮುದುಕರ ಗುಂಪು : ಹೃದಯ ಪ್ರಮೋದಮದಿರಾಮದದಿಂ ಮೆಯ್ಮಱೆದು ಮೇಲುದಂ ಮಱೆದಿರ್ದಾಡಿದುದು ಪೞೆ ಮಾಣ್ದೊಡಂ ಮಾಣದೆ ಮೆಚ್ಚಿದ ತೆಱದಿನಾಪ್ತವೃದ್ಧಕದಂಬಂ (ಪುಷ್ಪಪು. ೪-೩೬). [ಸಂ.]

**ವೃದ್ಧಕ್ಷತ್ರ** (ನಾ). ೧. ಮುದುಕನಾದ ಅರಸುಕುಲದವನು ; ಹಿರಿಯನಾದ ಕ್ಷತ್ರಿಯ. ೨. ಮಹಾಭಾರತದ ಜಯದ್ರಥನ ತಂದೆ ; ಸಿಂಧುದೇಶದ ರಾಜ : ತುಡುಕಿ ಖಂಡವ ಕಚ್ಚಿ ನಭದಲಿ ಗಿಡಿಗ ಹಾಯ್ವಂದದಲಿ ತಲೆಯನು ಹಿಡಿದು ಹಾಯ್ದುದು ಬಾಣ ವೃದ್ಧಕ್ಷತ್ರಸಿದ್ದೆಡೆಗೆ (ಕುಮಾ.ದ್ರೋ. ೧೪-೪೩). [ಸಂ.]

**ವೃದ್ಧತೆ** (ನಾ). ವಯಸ್ಸಾದ ಸ್ಥಿತಿ ; ಮುಪ್ಪು ; ಮುದಿತನ : ಪದ್ಧತಿಯೆಂದು ಕಯ್ಕೊಳಗಾಂತ ಬೆತ್ತ ವೃದ್ಧತೆಯೊಳಗೆ ತಪ್ಪಿಸಿತು ವಿಪತ್ತ (ಶಾಕುಂತ. ೬೧ ಅಡಿಟ).

[ಸಂ. ವೃದ್ಧತಾ]

**ವೃದ್ಧತ್ವ** (ನಾ). = ವೃದ್ಧತೆ : "ಸ್ಥಾವಿರಂ, ವೃದ್ಧತ್ವಂ – ೨ ಐವತ್ತು ವರುಷಗಳಿಗೆ ಮಿಂಚಿದ ವಯಸ್ಸು, ಮುದಿತನ, ಮುಪ್ಪು" (ಸಿದ್ಧಾಂತಿ. ೧೭೯). [ಸಂ.]

**ವೃದ್ಧಧ್ವನಿ** (ನಾ). ಮುದುಕನ (ನಡುಗುವ) ಧ್ವನಿ : ಕೋಲನೂಱುತೆ ಕೆಮ್ಮಿ ಕುಮ್ಮುತ್ತೆ ಸಾಲ್ಗೊಂಡಿರ್ದ ತುಪ್ಪದ ಕೊಡಂಗಳೊಳ್ ನಾಲ್ಕೆರಡನೆಡಹಿ ನಮಃಶಿವಾಯ ಯೆಂಬ ವೃದ್ಧಧ್ವನಿ ಪುಟ್ಟೆ (ನಂಬಿರ. ೬-೪೧). [ಸಂ.]

**ವೃದ್ಧರಾಜ್ಯ** (ನಾ). ಅಭಿವೃದ್ಧಿಯನ್ನು ಹೊಂದಿದ ದೇಶ ; ಸಮೃದ್ಧಿಯನ್ನು ಪಡೆದ ನಾಡು : ಪೊಡರದೆ ಕಪ್ಪಮೀವ ಪರಮಂಡಳಿಕರ್ . . . ಚಾಗಮೆಡೞೋಡು ವಿನಂ ಪೊರೆದೂಳ್ಗಿಗಟ್ಟಿಯೊಳ್ ತೊಡರ್ದಿರೆ ವೃದ್ಧರಾಜ್ಯಮುಮದೇನೆಸೆದತ್ತೊ ನಭಶ್ಚರೇಂದ್ರನಾ (ಆದಿಪು. ೨-೨೪). [ಸಂ.]

**ವೃದ್ಧಶ್ರವ** (ನಾ). ಸ್ವರ್ಗಾಧಿಪತಿ ; ದೇವೇಂದ್ರ ; ಇಂದ್ರ : "ಪುರುಹೂತಂ ಮಘವಂ ದಿವಸ್ಪತಿ . . . ಜಿಷ್ಣು ವೃದ್ಧಶ್ರವಂ ಹರಿವಾಹಂ . . . ಪಾಕನಮುಚಿ ಜಂಭದ್ವಿಷ್ಟಂ" (ವಸ್ತುಕೋ. ೬-೩೩) ; ಸಲೆ ನಿರ್ಜರಾಧೀಶ ವೃದ್ಧಶ್ರವಂಗೆಯೊಪ್ಪಲು ಜೀವನಾಗಿ ಚಿತ್ರಶಿಖಂಡಿಜಂ ಮಂತ್ರಿತಿಲಕಂ ಗಡಾ . . . ಅರಸಂಗೆ ಪತಿಮೋಹಿಯೆನಿಪ ಮಂತ್ರೀಶನೆಸೆದಂ (ಭಾವಚಿಂ. ೨-೧೯). [ಸಂ. ವೃದ್ಧಶ್ರವಸ್]

**ವೃದ್ಧಸೇವಿತ್ವ** (ನಾ). ೧. ಮುದುಕರನ್ನು ಸೇವಿಸುವಿಕೆ ; ಹಿರಿಯರನ್ನು ಉಪಚರಿಸುವಿಕೆ. ೨. ವಿದ್ವಾಂಸರನ್ನು ಗೌರವಿಸುವಿಕೆ ; ಪಂಡಿತರಿಗೆ ಮನ್ನಣೆ ನೀಡುವಿಕೆ : ಸಕಲಮಹೀಚರಖೇಚರನಿಕಾಯಸೇವ್ಯತೆಗೆ ವೃದ್ಧಸೇವಿತ್ವಮ ಯೋಜಕ ಮಾದುದನಿತು ವಿದ್ಯಾಪ್ರಕಾಶನಕ್ಕಾತನಂತು ನೋಂತರುಮೊಳರೇ (ಶಾಂತಿಪು. ೨-೩೯).

[ಸಂ.]

**ವೃದ್ಧಸೇವೆ** (ನಾ). ೧. ಹಿರಿಯರ ಸೇವೆ. ೨. ವಿದ್ವಾಂಸರಿಗೆ ತೋರಿಸುವ ಗೌರವ ; ಪಂಡಿತರಿಗೆ ತೋರಿಸುವ ಮನ್ನಣೆ, — ಮರ್ಯಾದೆ : ಪರಮಾಗಮ ಭಾವನೆ ವೃದ್ಧಸೇವೆ . . . ಎಂಬಿವನಾಗಳುಮೊಂದೆ ಕೀಲೆ ದಲ್ ಜಂತ್ರದ ಪಾಪೆಯಂತೊಡ ನೊಡರ್ಚುವನಿಂದ್ರನುಮಾ ಪ್ರತೀಂದ್ರನುಂ (ಶಾಂತಿಪು. ೭-೧೧೦). [ಸಂ. ವೃದ್ಧಸೇವಾ]

**ವೃದ್ಧಾಚಾರ** (ನಾ). ಹಿಂದಿನಿಂದ ನಡೆದುಬಂದ ಆಚಾರ, — ನಡವಳಿಕೆ ; ಪೂರ್ವದ ಸಂಪ್ರದಾಯ : ಬ್ರಹ್ಮಚಾರಿಯ ಸೂತಕಾದಿ ಹೊಲೆಗಳಿಲ್ಲ ವೆಂಬುದು ಮೊದಲಾದಾಚಾರಭೇದಮಿರ್ಪುದಱಿಂ ದೇಶಾಚಾರ . . . ವೃದ್ಧಾಚಾರ ಗಣಾಚಾರ ಸಂಪ್ರದಾಯವೆಂಬುದು ಮೊದಲಾದವುಗಳಂ ತಿಳಿದು (ವಿವೇಕ. ೧೮೬). [ಸಂ.]

**ವೃದ್ಧಾನುಕ್ರಮ** (ನಾ). ಹಿಂದಿನ ನಡವಳಿಕೆ ; ಪೂರ್ವದ ಸಂಪ್ರದಾಯ: ತದಾಶ್ರಮದ ಗುರುಗಳ ಸಮೀಪಕ್ಕೆ ಬಂದವರ್ಗೆ ವೃದ್ಧಾನುಕ್ರಮದಿಂ ಪೊಡೆವಟ್ಟು . . . ಬೆಸಸಿಮೆನೆ (ಪಂಚತಂ. ೧೨೦-೧೨). [ಸಂ.]

**ವೃದ್ಧಾಪ್ಯ** (ನಾ). ವಯಸ್ಸಾದ ಸ್ಥಿತಿ ; ಮುದಿತನ ; ಮುಪ್ಪು : ಪಿತನಿಂದೆ ಬಾಲ್ಯ ದೊಳ್ಪತಿಯಿಂದೆ ಪ್ರಾಯದೊಳ್ಸುತನಿಂದೆ ವೃದ್ಧಾಪ್ಯದೊಳ್ಕುಲಸ್ತ್ರೀ ಸುರಕ್ಷಿತೆಯಾಗದಿ ರ್ದೊಡವಳಿಂದೆ ನಿಜವಂಶಕುಪಹತಿ ಬಂದೊಡಲ್ಲದಿರದು (ಜೈಮಿಭಾ. ೫-೫೨).

[ < ಸಂ. ವೃದ್ಧ./ ಮರಾ. ವೃದ್ಧಾಪ್ಯ]

**ವೃದ್ಧಾಶ್ರಮ** (ನಾ). ೧. ಮನುಷ್ಯನ ಕಡೆಯ ಅವಸ್ಥೆ . ೨. (ಪೋಷಕರಿಲ್ಲದ) ಮುದುಕರಿಗೆ ಆಶ್ರಯ ನೀಡುವ ಸ್ಥಳ ; ವೃದ್ಧರನ್ನು ಪೋಷಿಸುವ ಸಂಸ್ಥೆ : ವಾರಸುದಾರರಿಲ್ಲದ ಆ ಮುದುಕರನ್ನು ಯಾರೋ ವೃದ್ಧಾಶ್ರಮಕ್ಕೆ ಸೇರಿಸಿದ್ದಾರೆ (ರೂಢಿ).

[ಸಂ.]

**ವೃದ್ಧಿ** (ನಾ). ೧. ಬೆಳೆಯುವುದು ; ವರ್ಧನ ; ವಿಕಾಸ : ಆಕೆಗಳ ಪೀವರತುಂಗ ನಿತಂಬಬಿಂಬದೊಂದಗಲದ ವೃದ್ಧಿ ಪೆರ್ಚೆ ನೆಲೆವೆರ್ಚಿದುದೀ ಕೊಳಂ (ಶಾಂತಿಪು. ೮-೨೮). ೨. (ಅಮಾವಾಸ್ಯೆಯಿಂದ ಹುಣ್ಣಿಮೆಯವರೆಗೆ) ಚಂದ್ರನು ವರ್ಧಿಸುವಿಕೆ, – ಕಳೆಯೇರುವಿಕೆ : ವೃದ್ಧಿಕ್ಷಯಂಗಳು ಚಂದ್ರಮಗಾದತ್ತು ಆದತ್ತೆ ಬಡತಾರೆಗಳಿಗೆ (ಇಂಚಾಪ. ೬೯-೩೪). ೩. ಹೆಚ್ಚುವುದು ; ಆಧಿಕ್ಯ. ೪. ಧನದ ಹೆಚ್ಚಳ ; ಐಶ್ವರ್ಯದ ಆಧಿಕ್ಯ ; ಸಂಪತ್ಸಮೃದ್ಧಿ. ೫. ಉನ್ನತಿ ; ಏಳಿಗೆ ; ಅಭಿವೃದ್ಧಿ : ಎನ್ನ ವಾಮಕ್ಷೇಮ ನಿಮ್ಮದಯ್ಯಾ ಎನ್ನ ಹಾನಿವೃದ್ಧಿ ನಿಮ್ಮದಯ್ಯಾ ಎನ್ನ ಮಾನಾಪಮಾನ ನಿಮ್ಮದಯ್ಯಾ (ಬಸವ. ೬೦) ; ಸಮಸಮಾನ ಭಾವ ಬುದ್ಧಿ ಸಮಸಮಾನ ಶುದ್ಧಿಯು ಇದೇ ಋದ್ಧಿ ಇದೇ ವೃದ್ಧಿ ಇದೇ ಸ್ವತಂತ್ರಸಿದ್ಧಿಯು (ಅರಳು. ೨೯-೪). ೬. ಧನ ; ಸಂಪತ್ತು ; ಐಶ್ವರ್ಯ. ೭. ಗುಂಪು ; ಸಮೂಹ ; ನೆರವಿ. ೮. ಸಾಲವಾಗಿ ಪಡೆದ ಅಥವಾ ಕೊಟ್ಟ ಹಣಕ್ಕೆ ಪ್ರತಿಫಲವಾಗಿ ಕೊಡುವ ಅಥವಾ ಪಡೆಯುವ ಹಣ ; ಬಡ್ಡಿ : ದೇವರ ನಂದಾದೀವಿಗೆಗೆ ಮಾಕಯ್ಯಂ ಕೊಟ್ಟ ಗದ್ಯಾಣ ೧೫ . . . ಅನ್ತು ೩೦ ಗದ್ಯಾಣ ಮುಂ ಇರ್ಪ್ಪಣ ವೃದ್ಧಿಯನು ಕೊಡುವರ್ (ಮೈಆರಿ. ೧೯೨೯,೫೫-೪೩ ; 1067) ; ಗಗ್ಗರ ಬಮ್ಮಣ್ಣಂ ಪುಷ್ಪಕ್ಕೆ ಕೊಟ್ಟ ಗದ್ಯಾಣ ೧ ಈ ಪೊನ್ನ ವೃದ್ಧಿಯೊಳಂ ಕೆಯ್ಯ ಗುತ್ತಗೆಯೊಳಂ ಗಂಧಧೂಪ ನಿವೇದ್ಯ ನಂದದೀವಿಗೆಗಂ ಅೞ್ಚಿಸುವ ಮಾಣಿಯ ಜೀವಿತಕ್ಕಂ ಕುಡುವುದು (ಕಇ. II, ೯-೨೭; 1075) ; ಶ್ರೀಮಾರ್ಕಂಡೇಶ್ವರದೇವರ ಶ್ರೀಪಾದಸನ್ನಿಧಾನದಲು ಶಿವಾನನ್ದ ಯೋಗಿ ನಿವೇದ್ಯಶಾಲೆಯಂ ಮಾಡಿ . . . ಬಿದಿರ ಗದ್ದೆಯ ಮೇಲಿಕ್ಕಿದ ಪಾಣ್ಡ್ಯ ಗದ್ಯಾಣಂ ಮುವತ್ತುಮನಾ ಪೊನ್ನ ವೃದ್ಧಿಯುಮಂ ಅಗ್ರಕ್ಕೆನ್ದು ಶಾಸನಮಾಗೆಮಾಡಿಸಿದ ಧರ್ಮ (ಸೌಇಇ. VIII, ೩೮-೧೭ ; 1140). **೯.** ಲಾಭ ; ಗಳಿಕೆ. ೧೦. ಮಗುವಿನ ಜನನದಿಂದ ಮನೆಯವರಿಗೆ ಮತ್ತು ದಾಯಾದಿಗಳಿಗೆ ಉಂಟಾಗುವ ಅಶುದ್ಧಿ, — ಪುರುಡು ; ಜಾತಸೂತಕ : ಗೋಭಿಲಸ್ಮೃತಿ . . . ಉಪವೀತಪ್ರಕರಣ, ವೃದ್ಧಿ, ಶ್ರಾದ್ಧ, ಉಪಾ ಕರ್ಮ ಮುಂತಾದ ವಿಚಾರಗಳಿವೆ (ಭಾರದ.೬೬). ೧೧. ಒಂದು ಬಗೆಯ ಔಷಧೀಸಸ್ಯ : "ಜನೇಷ್ಟಃ — ಬಜೆ, ವೃದ್ಧಿ, ಜತುಕೆ" (ಓಷಧಿ. ೬೦). ೧೨. ಒಂದು ಬಗೆಯ ಗಂಧ ದ್ರವ್ಯ. ೧೩. [ಜ್ಯೋತಿ] ಪಂಚಾಂಗಗಳಲ್ಲಿ ಒಂದಾದ ಯೋಗದ ಇಪ್ಪತ್ತೇಳು ಬಗೆಗಳಲ್ಲಿ ಒಂದು : ವಿಷ್ಕಂಭ ಪ್ರೀತಿ ಆಯುಷ್ಮಾನ್ . . . ಗಂಡ.ವೃದ್ಧಿ ಧ್ರುವ . . . ಐಂದ್ರ ವೈಧೃತಿಗಳೆಂಬ ಇಪ್ಪತ್ತೇಳುಯೋಗಂಗಳುಂ (ವಿವೇಕ. ೨೬೨). ೧೪. [ವ್ಯಾಕ] = ವೃದ್ಧಿಸಂಧಿ. ೧, ೧೪ : ಅವರ್ಣವಾದಕ್ಕೆಡೆಯಾಗದೊಳ್ಪಿಂದವರ್ಣಕಾಮರ್

ಗುಣವೃದ್ಧಿಧಾಮರ್ ದಿವಾಕರರ್ ವ್ಯಾಕೃತಿನಾಮಿಗಳ್ ಪೋಲ್ ದಿವಕ್ಕೆ ಪನ್ನಿರ್ವರೆ ಮುಖ್ಯರಾದರ್ (ಶಮದ. ೬ ವೃತ್ತಿ). [ಸಂ.]

**ವೃದ್ಧಿಂಗತ** (ನಾ). ೧. ಅಭಿವೃದ್ಧಿ ; ಏಳಿಗೆ : ಭಾರತೀಯನಾರಿಯರು . . . ಆತ್ಮ ಗೌರವದ ವ್ಯಕ್ತಿತ್ವವನ್ನು ವೃದ್ಧಿಂಗತಗೊಳಿಸುತ್ತ ವಿಹರಿಸಲೆಂದೂ ನಾವು ಸದ್ಯವ ಹಾರೈಸುವೆವು (ಪ್ರಬಂಧ. ೯೩). ೨. ಹೆಚ್ಚಳ ; ಆಧಿಕ್ಯ.

**ವೃದ್ಧಿಂಗತವಾಗು** = ೧. ವೃದ್ಧಿಯಾಗು ; ಹಬ್ಬು ; ಹರಡು : ಆ ಜಗದೀಶನ ಕೃಪೆಯಿಂದ ನಮ್ಮ ಪಂತರ ಆಯುರಾರೋಗ್ಯಗಳೂ, ಸುಕೀರ್ತಿಯೂ ವೃದ್ಧಿಂಗತವಾಗಲಿ ಎಂದು ನುಡಿದನು (ಅಂಬಿಕೆ. ೧೪೭). ೨. ಅಭಿವೃದ್ಧಿಯನ್ನು ಹೊಂದು ; ಏಳಿಗೆಯನ್ನು ಪಡೆ ; ಪ್ರವರ್ಧಮಾನಕ್ಕೆ ಬರು : ಈ ನೆರೆನಾಡುಗಳೊಳಗಿನ ನವೀನಸ್ನೇಹದ ಅಧ್ಯಾಯವು ವೃದ್ಧಿಂಗತವಾಗುತ್ತಿರಬೇಕು ಎಂಬ ಸದಪೇಕ್ಷೆಯಿಂದ ನಾನು ಈ ಆಮಂತ್ರಣವನ್ನು ಸ್ವೀಕರಿಸಿರುವೆನು (ಪ್ರಬಂಧ. ೭). [< ಸಂ. ವೃದ್ಧಿ]

**ವೃದ್ಧಿಜೀವನ** (ನಾ). ೧. ಹಣವನ್ನು ಸಾಲ ಕೊಟ್ಟು ಬಂದ ಬಡ್ಡಿಯಿಂದ ಉಪಜೀವನ ನಡೆಸುವ ವೃತ್ತಿ ; ಬಡ್ಡಿವ್ಯವಹಾರದಿಂದ ಜೀವನ ನಡೆಸುವಿಕೆ: ಗೋರಕ್ಷಣವು, ಕೃಷಿಯು, ವೃದ್ಧಿಜೀವನವು ಮೊದಲಾದ ಸದ್ಧರ್ಮವನ್ನು ತಪ್ಪದೆ ಆಚರಿಸುವ ವೈಶ್ಯನು (ಕೃವಾಸ. ೨೧). ೨. ಬಡ್ಡಿವ್ಯವಹಾರದಿಂದ ಜೀವನ ನಡೆಸುವವನು ; ಕುಸೀದಕ : "ಕುಸೀದಃ, ವೃದ್ಧಿಜೀವನಂ — ಈ ೨ ಬಡ್ಡಿಯಿಂದ ಬಾಳ್ವವಂ" (ಹಲಾಯು. ೯೪-೪೧೮). [ಸಂ.]

**ವೃದ್ಧಿಜೀವಿಕೆ** (ನಾ). ೧. = ವೃದ್ಧಿಜೀವನ ೧. ೨. ಸಾಲವಾಗಿ ಕೊಟ್ಟ ಹಣದ ಮೇಲಿನ ಬಡ್ಡಿ : "ಅರ್ಥಪ್ರಯೋಗಃ, ಕುಸೀದಂ, ವೃದ್ಧಿಜೀವಿಕಾ — ೩ ಬಡ್ಡಿಯ ಹೆಸರುಗಳು, ಹಣದ ಬಡ್ಡಿ, ತಲವಾಸಿ" (ಸಿದ್ಧಾಂತಿ. ೨೭೪). [ಸಂ. ವೃದ್ಧಿಜೀವಿಕಾ]

**ವೃದ್ಧಿಪಡಿಸು** (ಕ್ರಿ). ಹೆಚ್ಚಿಸು ; ಬೆಳೆಸು ; ಅಧಿಕಗೊಳಿಸು : ಸಂಪತ್ತು ಹೆಚ್ಚಿದಂತ ಅದನ್ನು ವೃದ್ಧಿಪಡಿಸುವ ಆಶೆ ಮತ್ತೆ ಇನ್ನಷ್ಟು ಹೆಚ್ಚುವುದು (ರಾಜವ. ೫). [ವೃದ್ಧಿ + ಪಡಿಸು]

**ವೃದ್ಧಿಸಂಧಿ** (ನಾ). [ವ್ಯಾಕ] ನಾಲ್ಕು ಬಗೆಯ ಸಂಸ್ಕೃತ ಸ್ವರಸಂಧಿಗಳಲ್ಲಿ ಒಂದು: ಅ ಆಕಾರಗಳಲ್ಲಿ ಒಂದರ ಮುಂದೆ, ಏಕಾರವಾಗಲಿ ಐಕಾರವಾಗಲಿ ಬಂದರೆ ಐಕಾರವೂ, ಓಕಾರವಾಗಲಿ ಔಕಾರವಾಗಲಿ ಬಂದರೆ ಔಕಾರವೂ ಎರಡಕ್ಕೂ ಆದೇಶವಾಗಿ ಬರುತ್ತವೆ. ಇದಕ್ಕೆ ವೃದ್ಧಿಸಂಧಿಯೆಂದು ಹೆಸರು (ಮಧ್ಯಮ. ೧೭೧). [ಸಂ.]

**ವೃದ್ಧಿಸು** (ಕ್ರಿ). ೧. ಬೆಳೆ ; ಹೆಚ್ಚಾಗು ; ಅಧಿಕಗೊಳ್ಳು : ಅವನ ಪರಿಶ್ರಮದಿಂದ ಅವನ ಸಂಪತ್ತು ವೃದ್ಧಿಸಿತು (ರೂಢಿ). ೨. ಬೆಳೆಯುವಂತೆ ಮಾಡು ; ಹೆಚ್ಚಿಸು ; ಅಧಿಕಗೊಳಿಸು : ಈ ಪ್ರಸಂಗ ಅವಳ ಕೋಪವನ್ನು ಇಳಿಸುವುದಿರಲಿ, ವೃದ್ಧಿಸಿತು (ಕುಸುಸಂ. ೧೭). [ವೃದ್ಧಿ + -ಇಸು]

**ವೃದ್ಧೆ** (ನಾ). ವಯಸ್ಸಾದವಳು ; ಮುದುಕಿ : ಕ್ರಮದಿಂ ಪನ್ನೆರಡಾಗೆ ಬಾಲಿಕೆ . . . ವೃದ್ಧೆಯಾಕ್ರಮಿಸಲ್ ಪಂಚದಶಾಬ್ದಸಂಖ್ಯೆ (ಮನ್ಮವಿ. ೭-೨) ; ನೋಡುತಿರೆ ನೆರೆದ ಜನರಾ ವಿರೂಪದ ವೃದ್ಧೆ . . . ಮಡಿಲಿಂದೊಂದು ಮುಕುರಮಂ ಪೊರದೆಗೆದು ನೀಡಿದಳ್ (ಶ್ರೀರಾಮಾ. ೨೦-೫೫೭). [ಸಂ. ವೃದ್ಧಾ]

**ವೃದ್ಧೋಕ್ಷ** (ನಾ). ಮುದಿಯಾದ ಎತ್ತು ; ವಯಸ್ಸಾದ ವೃಷಭ : ಮುಂದೆ ನಿಂದ ಚತುರಂಗಬಲಂಬೆರಸಬಲಾಬಾಲವೃದ್ಧವೃದ್ಧೋಕ್ಷಶಕಟ ಸಂಕಟಮಪ್ಪ ಕಟಕಮಂ ಮೆಲ್ಲಮೆಲ್ಲನೊಡಗೊಂಡು ಬರ್ಪಂತು . . . ಅಪ್ಪಯಿಸಿ (ಆದಿಪು. ೪-೯೧ ವ). [ಸಂ.]

**ವೃದ್ಧ್ಯಂಬು** (ನಾ). ಸಮುದ್ರದ ದಡದಲ್ಲಿರುವ ನೀರು, — ದಂಡೆಯಲ್ಲಿರುವ ಜಲ : "ತಟದಲ್ಲಿರ್ಪ ನೀರು ವೃದ್ಧ್ಯಂಬು ವೇಳೆಯೆನಿಕ್ಕು" (ಮಂಗರಾ. ೧೨೦-೩). [ಸಂ.]

**ವೃದ್ಧ್ಯಾಜೀವ** (ನಾ). = ವೃದ್ಧಿಜೀವನ ೨ : "ದ್ವೈಗುಣಿಕಃ, ವಾರ್ಧುಷಿಕಃ, ವೃದ್ಧ್ಯಾಜೀವಃ, ಕುಸೀದಕಃ — ಈ ೪ ಬಡ್ಡಿಗುಡುವವಂ" (ಹಲಾಯು. ೯೩-೪೧೭). [ಸಂ.]

**ವೃದ್ಧ್ಯಾಜೀವಿ** (ನಾ). = ವೃದ್ಧಿಜೀವನ ೨ : "ಕುಸೀದಕನು ವಾರ್ಧುಷಿಕನಾ ದ್ವೈಗುಣಿಕನೆನಲು ವೃದ್ಧ್ಯಾಜೀವಿಯೆನೆ [ಪಾಠಾಂ. ವನೆನೆ] ಬಡ್ಡಿ ಗೊಡುವನಕ್ಕುಂ" (ಮಂಗರಾ. ೧೧೨-೧). [ಸಂ. ವೃದ್ಧ್ಯಾಜೀವಿನ್]

**ವೃಶ** (ನಾ). ೧. ಹಸಿಯ ಶುಂಠಿ ; ಅಲ್ಲ : "ವೃಶ ಶಾಕಪ್ರಭವಂ ಶಾಕಶಾಕಟಂ ಶಾಕಶಾಕಿನಂ ತಾನೆನಿಕುಂ" (ವಸ್ತುಕೋ. ೨೭-೭). ೨. ಮೂಲಂಗಿ. ೩. ಇಲಿ; ಮೂಷಕ. [ಸಂ.]

**ವೃಶ್ಚಿಕ** (ನಾ). ೧. ಬಾಲದಲ್ಲಿ ವಿಷವುಳ್ಳ ಒಂದು ಬಗೆಯ ಕೀಟ ; ಚೇಳು: ವೃಶ್ಚಿಕ ಬಾಲದಲ್ಲಿ ಸರ್ಪ ಬಾಯಲ್ಲಿ ಕಂಠೀರವ ದಂತದಲ್ಲಿ ಇಂತಿವಟಿ ಸಂಚವನಟಿದಲ್ಲಿ ಸಂಕಲ್ಪವಿಲ್ಲ (ಸಸವ. ೩. I, ೨೬೭-೧೦೫೭) ; ಕುಡಿಯಳ್ಳೆಯಂ ವೃಶ್ಚಿಕಂ ಮಿಡಿಯೆ ಮಿಡುಮಿಡನೆ ಮಿಡುಕುವ . . . ಹೆದಟಿ ಹಾ ಎಂದೊಟಿಲುವಂಗನೆಯ . . . ಭೂತ ಭೇತಾಳವಡೆ ಸುತ್ತಿ ಮುತ್ತಿ ಬೊಬ್ಬಿಟ್ಟು ಝುಂಕಿಸಿದುವಾ ಕೌಶಿಕನ ಪ್ರೇರಣೆಯೊಳು (ಹಚಾ. ೯-೪೩). ೨. ಏಡಿ; ನಳ್ಳಿ. ೩. ಸಾವಿರ ಕಾಲುಳ್ಳ ಚೇಳು ; ಲಕ್ಷ್ಮಿ ಚೇಳು; ಜರಿ. ೪. ಕಂಬಳಿ ಹುಳು. ೫. ಕಣಜದ ಹುಳು ; ಕಡಜ : "ವೃಶ್ಚಿಕಃ, ಶೂಕಕೀಟಃ — ೨ ಕೊಂಡೀವಿಷದ ಚೇಳು, ಕರೀಚೇಳು, ಖಣಜದ ಹುಳುವಿಗೂ ಹೆಸರು" (ಸಿದ್ಧಾಂತಿ. ೧೫೭). ೬. ಒಂದು ಬಗೆಯ ಸಸ್ಯ ; ಕೊಂಡೀಗಿಡ : "ವೃಶ್ಚಿಕಃ — ೧ ಮುಳ್ಳುಹುಳ, ಚೇಳು, ಚಕಾರದಿಂದ ಕಣಜದ ಹುಳು, ವೃಶ್ಚಿಕರಾಶಿ, ಕೊಂಡೀಗಿಡ, ೫" (ಸಿದ್ಧಾಂತಿ. ೩೭೩). ೭. (ಆಲಂ) ಕೆಟ್ಟಸ್ವಭಾವದ ವ್ಯಕ್ತಿ ; ಕೆಡುಕ ; ದುಷ್ಟ. ೮. [ಜ್ಯೋತಿ] ಸೂರ್ಯ ಮೊದಲಾದ ಗ್ರಹಗಳು ಸಂಚರಿಸುವ ಹನ್ನೆರಡು ರಾಶಿಗಳಲ್ಲಿ ಎಂಟನೆಯದು : ಮೃಗ ಕರ್ಕಟಕ ಶಾಕ್ವರ ವೃಶ್ಚಿಕ ಝುಷಮಿವಬಲೆಗಳ್ ಸೌಮ್ಯಂಗಳ್ (ಜಾತತಿ. ೧-೨೨) ; ಹನ್ನೆರಡು ರಾಶಿಗಳಲ್ಲಿ ವೃಶ್ಚಿಕ ಒಂದಕ್ಕೇ ಅದರ ಹೆಸರಿಗೆ ತಕ್ಕಂತೆ ಚೇಳಿನ ಆಕಾರವಿರುವುದು (ನಕ್ಷತ್ರ. ೯೭). ೯. ಹನ್ನೆರಡು ಸೌರಮಾನ ತಿಂಗಳುಗಳಲ್ಲಿ ಒಂದು ; ಸೂರ್ಯನು ವೃಶ್ಚಿಕರಾಶಿಯಲ್ಲಿರುವ ತಿಂಗಳು ; ವೃಶ್ಚಿಕಮಾಸ. ೧೦. [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು ; "ಎರಡು ಕೈಗಳಿಂದಲೂ ಕರಿಹಸ್ತವನ್ನು ಮಾಡಿ ಬೆನ್ನನ್ನು ಬಗ್ಗಿಸಿ ಒಂದು ಕಾಲನ್ನು ಚೇಳಿನ ಬಾಲದಂತೆ ಹಿಂದಕ್ಕೆತ್ತುವುದು" (ಲಾಸ್ಯರಂ. ೫೯೭ ಗದ್ಯಾನುವಾದ); ಇದು ಖೇಚರರು ಆಕಾಶದಲ್ಲಿ ಸಂಚರಿಸುವುದನ್ನು ಅಭಿನಯಿಸುವಾಗ ತೋರುವ ಭಂಗಿ : ಕರಿಕರದಿನೊಪ್ಪೆ ಕೈಗಳ್ ಚರಣಂ ತೇಳ್ಬಾಲದಂತೆ ಪಿಂತಣ್ಗಂ ನೀಡಿರೆ ಬೆನ್ ಬಾಗಲ್ಕದು ತಾಂ ತರುಣೀ ಕೇಳ್ ವೃಶ್ಚಿಕಾಖ್ಯಕರಣಮೆನಿಕ್ಕುಂ (ಲಾಸ್ಯರಂ. ೪-೧೦೨). [ಸಂ.]

**ವೃಶ್ಚಿಕಕೇತನ** (ನಾ). ಚೇಳಿನ ಗುರುತುಳ್ಳ ಧ್ವಜವುಳ್ಳವನು ; ವೃಶ್ಚಿಕಲಾಂಛನದ ಪತಾಕೆಯುಳ್ಳವನು : ಮೇಷಾಸ್ಯನೃತವೃಷಭಮೋಹಿ ಗೌರೀಮಿಥುನ ದೋಷಾದಿನಾಶ ಕರ್ಕಾಟಕೋಟಾದಿಗಳೊಳೀಶಾಗ್ರ ನರಸಿಂಹವೈರಿ ಕನ್ಯಾಕ್ಷೀರಪಾಯಿ ತುಲೆಯಮರನೀತೀ ಪ್ರೇಷ ವೃಶ್ಚಿಕಕೇತನಸ್ತುತ್ಯ ಮೇರುಧನುದೋಷಿಹಿಮಕರರಕ್ಷಕುಂಭಜಗೆ ಹರಿಮತ್ಸ್ಯ ವೇಷಿಯಂ ಸಲಹುವಗ್ಗಳವಿತ್ತ ಶಾಂತಮಲ್ಲೇಶ ಕಾರುಣ್ಯರಾಸೀ (ವೀಶೈಪು. ೮-೫-೧). 'ವೃಶ್ಚಿಕಗಮನ' ಪರಾ. [ಸಂ.]

**ವೃಶ್ಚಿಕಗಮನ** (ನಾ). ಚೇಳನ್ನು ವಾಹನವಾಗಿ ಉಳ್ಳವನು : ಅಕಲಂಕಗಿರಿಜಾಮಿಥುನ ದೇಹ ವೃಷಗ ವೃಶ್ಚಿಕಗಮನದೌವಾರಿಕಂ ಗಿರಿಜಾವರ (ಏಕೋಪು. ೩-೨). 'ವೃಶ್ಚಿಕಕೇತನ' ಪರಾ. [ಸಂ.]

**ವೃಶ್ಚಿಕನಿಕುಟ್ಟಕ** (ನಾ). [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು; "ಒಂದು ಕಾಲನ್ನು ಚೇಳಿನ ಬಾಲದಂತೆ ಹಿಂದಕ್ಕೆತ್ತಿ, ಕೈಗಳನ್ನು ಅಲಪದ್ಮ ಹಸ್ತದಿಂದ ಭುಜಶಿರಸ್ಸಿನಲ್ಲಿಡುವುದು" (ಲಾಸ್ಯರಂ. ೫೯೭ ಗದ್ಯಾನುವಾದ) : ತಲಪುಷ್ಪಪುಟ, ಲೀನ . . . ವೃಶ್ಚಿಕ, ವೃಶ್ಚಿಕನಿಕುಟ್ಟಕ, ವೃಶ್ಚಿಕರೇಚಿತ . . . ಗಂಗಾವತರಣ — ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). [ಸಂ.]

**ವೃಶ್ಚಿಕಮಾಸ** (ನಾ). [ಜ್ಯೋತಿ] ಸೌರಮಾನದ ಹನ್ನೆರಡುತಿಂಗಳುಗಳಲ್ಲಿ ಎಂಟನೆಯ ತಿಂಗಳು ; ಸೂರ್ಯನು ವೃಶ್ಚಿಕರಾಶಿಯಲ್ಲಿರುವ ತಿಂಗಳು. [ಸಂ.]

**ವೃಶ್ಚಿಕರಾಶಿ** (ನಾ). [ಜ್ಯೋತಿ] ಸೂರ್ಯ ಮೊದಲಾದ ಗ್ರಹಗಳು ಸಂಚರಿಸುವ ಹನ್ನೆರಡು ರಾಶಿಗಳಲ್ಲಿ ಒಂದು, — ಎಂಟನೆಯ ರಾಶಿ : (ವೃಶ್ಚಿಕರಾಶಿಸ್ಥಿತ ಚಂದ್ರಫಲ) (ಜಾತತಿ. ೧೭-೮) ; ವೃಶ್ಚಿಕರಾಶಿಯಲ್ಲಿ ಹುಟ್ಟಿದವನು ತಂದೆ ಗುರು ವಿಪ್ರರನ್ನು ಬಿಟ್ಟಿರುತ್ತಾನೆ (ಜಾತತಿ. ೧೭-೮ ಟೀಕೆ). [ಸಂ.]

**ವೃಶ್ಚಿಕರೇಚಿತ** (ನಾ). [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು ;

''ಒಂದು ಕಾಲನ್ನು ಚೇಳಿನ ಬಾಲದಂತೆ ಹಿಂದಕ್ಕೆತ್ತಿ, ಕೈಗಳನ್ನು ಸ್ವಸ್ತಿಕದಂತೆ ಹಿಡಿದು, ಸ್ವಸ್ತಿಕವನ್ನು ಬಿಡಿಸುತ್ತ ರೇಚಿತ ಮಾಡುವುದು'' (ಲಾಸ್ಯರಂ. ೨೯೭ ಗದ್ಯಾನುವಾದ) : ಪ್ರಕಟಿತ ವೃಶ್ಚಿಕಮುಂ ವೃಶ್ಚಿಕದ ನಿಕುಟ್ಟಾಖ್ಯಮೆಸೆವ ವೃಶ್ಚಿಕರೇಚಿತಮಕಳಂಕಮಾದ ಲತಾವೃಶ್ಚಿಕಮಾಕ್ಷಿಪ್ತಾರ್ಗಲಾಖ್ಯಮೀ ಕರಣಂಗಳ್ (ಲಾಸ್ಯರಂ. ೪-೩೨). [ಸಂ.]

**ವೃಶ್ಚಿಕಾಪಸೃತ** (ನಾ). [ನಾಟ್ಯ] ಮೂವತ್ತೆರಡು ಬಗೆಯ ಅಂಗಹಾರಗಳಲ್ಲಿ ಒಂದು ; ಲತಾವೃಶ್ಚಿಕ, ನಿಕುಂಚಿತ, ಮತ್ತಲ್ಲಿ, ನಿತಂಬ, ಕರಿಹಸ್ತ ಮತ್ತು ಕಟೀಛಿನ್ನವೆಂಬ ಆರು ಕರಣಗಳನ್ನೂ ಕ್ರಮವಾಗಿ ಮಾಡುವುದು : ಸ್ಥಿರಹಸ್ತ, ಪರ್ಯಸ್ತ, ಸೂಚೀವಿದ್ಧ . . . ಅರ್ಧನಿಕುಟ್ಟ, ವೃಶ್ಚಿಕಾಪಸೃತ, ಅಲಾತಕ . . . ಸ್ವಸ್ತಿಕರೇಚಿತ – ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಲಾಸ್ಯರಂ. ೫-೭ ವ). [ಸಂ.]

**ವೃಶ್ಚಿಕಾಸನ** (ನಾ). [ಯೋಗ] ಒಂದು ಬಗೆಯ ಆಸನ : ಮುಖ್ಯವಾದ ಕೆಲವು ಆಸನಗಳು . . . ೫೮. ಉತ್ತಾನಕೂರ್ಮಾಸನ ೫೯. ವೃಶ್ಚಿಕಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಭಾರದ. ೧೬೭). [ಸಂ.]

**ವೃಶ್ಚಿಕಾಳಿ** (ನಾ). ಒಂದು ಬಗೆಯ ಸಸ್ಯ : ''ಕಾಳಾಂಜನಿ — ಕರಿಯಜೀರಗೆ, ನಿರಸಂ, ವೃಶ್ಚಿಕಾಳಿ, ಕರಿಯತಿಗಡೆ'' (ಓಷಧಿ. ೨೮). [ಸಂ. ವೃಶ್ಚಿಕಾಲೀ]

**ವೃಷ** (ನಾ). ೧. ಎತ್ತು ; ಹೋರಿ ; ವೃಷಭ : ಶೃಂಗಾರದಿಂ ಭಂಗಿವಡೆದು ವೃಷ ಬಲೀವರ್ದಧ್ಯಾನಮುಂ ಗೋವತ್ಸಕದಂಬಹಂಭಾರವಮುಂ ವಿಜೃಂಭಿಸೆ (ಜಗವಿ. ೪-೮೦ ವ). ೨. ಶಿವನ ವಾಹನವಾದ ವೃಷಭ ; ನಂದಿ ; ಬಸವ : ತರುಣೋತ್ತುಂಗಶಶಾಂಕಖಂಡಮ ಸುಧಾಬೀಜಂ . . . ವೃಷಂ ಪುಷ್ಪಮಿಶ್ವರಶೈಲಂ ಫಲಮಾಗೆ ಕೋಮಲಮುಖೀ ಗೌರೀಲತಾಶ್ಲಿಷ್ಟ ಶಂಕರಕಲ್ಪದ್ರು ಮನೀಗಭೀಷ್ಟಫಲಮಂ ಚಾಳುಕ್ಯನಾರಾಯಣಂ (ಗದಾಯು. ೧-೨). ೩. (ಯಾವುದೇ ವರ್ಗದಲ್ಲಿ) ಶ್ರೇಷ್ಠವಾದುದು ; ಉತ್ತಮವಾದುದು ; ಉತ್ಕೃಷ್ಟವಾದುದು : ''ಮೂಷಕ ಧರ್ಮ ಶ್ರೇಷ್ಠಾರ್ಥಪ್ರಕಾಶಕಂ ಕವಿವಚೋಕ್ತ(ಯಿಂ) ವೃಷಶಬ್ದಂ''(ವಸ್ತುಕೋ. ೧೩೨-೮೪). ೪. ಪ್ರೀತಿಯ ಅಧಿದೇವತೆ ; ಕಾಮ ; ಮನ್ಮಥ. ೫. ಬಲಿಷ್ಠನಾದವನು ; ಬಲಶಾಲಿ ; ಮಲ್ಲ. ೬. ಪುರುಷ ಅಥವಾ ಗಂಡುಪ್ರಾಣಿ ; ಪುರುಷಜಾತಿ. ೭. ಶತ್ರು ; ವೈರಿ ; ಹಗೆ. ೮. ಇಲಿ ; ಮೂಷಿಕ : ''ಆಖುಃ, ವೃಷಃ, ಮೂಷಕಃ – – ಈ ೩ ಇಲಿ'' (ಹಲಾಯು. ೩೯-೮೨). ೯. ಇಂದ್ರ : ವೃಷಕೃತ ಜಿನೇಂದ್ರಜನ್ಮಾಭಿಷವಂ ನಂದೀಶ್ವರತ್ರಯಂಗಳೊಳಮಮಾನುಷಮಾಗಿರೆ ಮಾಳ್ಪ ಮಹಾಭಿಷೇಕದಂತಾಯ್ತು ದಾನಚಿಂತಾಮಣಿಯಾ (ಅಜಿಪು. ೪-೭೭) ; ಹರನೇತ್ರವಹ್ನಿಯುಂ ಸಂಹರಣಾಗ್ನಿಯುಮಿದಱ ಕಾಯ್ಪಿನೊಳ್ ದೊರೆಯಕ್ಕುಂ ದೊರೆಯಲ್ತು ಗರ್ಜನಾಡಂಬರದೊಳಿದರ್ಕೆನಿಪ ವಜ್ರದಿಂ ವೃಷನಿಟ್ಟಂ (ಜಗವಿ. ೧೩-೧೦೭). ೧೦. ಕರ್ಣ. ೧೧. ವಿಷ್ಣು. ೧೨. ನೀರು ; ಉದಕ. ೧೩. ಒಂದು ಬಗೆಯ ಔಷಧಿ. ೧೪. ಒಂದು ಬಗೆಯ ಸಸ್ಯ ; ಆಡುಸೋಗೆ ; ಆಡುಮುಟ್ಟದ ಗಿಡ : ''ವೈದ್ಯಮಾತಾ, ಸಿಂಹೀ, ವಾಶಕಾ . . . ವೃಷಃ, ··ಟರೂಷಃ . . . ವಾಜಿದಂತಕಃ – ೮ ಅಡ್ಡ ಸರದ ಗಿಡ, ಆಡುಸೋಗೇಗಿಡದ ಹೆಸರು, ಆಡುಮುಟ್ಟದ ಗಿಡ, ಮೇಕೆವಲ್ಲದ ಗಿಡ'' (ಸಿದ್ಧಾಂತಿ. ೧೩೫). ೧೫. ಒಂದು ಬಗೆಯ ಮೂಲಿಕೆ : ''ಶೃಂಗೀ, ವೃಷಭಃ . . . ವೃಷಃ – ೩ ಹೆರೆಗೆ ಹಾಲೆಯ ಹೆಸರು, ವೃಷಭವೆಂಬುವ ಮೂಲಿಕೆ'' (ಸಿದ್ಧಾಂತಿ. ೧೩೮). ೧೬. ನೀತಿ ; ಧರ್ಮ : ಅಂತು ಪುರಂದರನಾನಂದನನೃತ್ಯಾವಸಾನದೊಳೀ ಪರಮೇಶ್ವರಂ ಧರ್ಮಾಮೃತವರ್ಷದಿಂ ಭವ್ಯಸಸ್ಯಸಮೃದ್ಧಿಯಂ ಮಾಡುವುದಱಿಂ ವೃಷಮೆಂಬುದು ಧರ್ಮಮದಱಿಂ ದೊಪ್ಪುವುದಱಿಂದಂ . . . ವೃಷಭಸ್ವಾಮಿಯೆಂದು ಪೆಸರನಿಟ್ಟು (ಆದಿಪು. ೭-೧೨೭ ವ) ; ಮೂವತ್ತಾಱುಂ ಗುಣದಿಂ ಭಾವಜನಂ ಕಟ್ಟಿ ಪೆಟ್ಟಿವೆಟ್ಟಿದರ್ ವೃಷದಿಂ ಭಾವಿಪೊಡೆ ಮೇಘಚಂದ್ರತ್ರೈವಿದ್ಯರದೆಂತು ಶಾಂತರಸಮಂ ತಳೆದರ್ (ಪಂಠಾವಮಾ. ೧-೧೯). ೧೭. ಪುಣ್ಯ ; ಸುಕೃತ : ಭುವನದ ಪಾಪತಾಪಮಗಿಯಲ್ ಮುಗಿಯಲ್ ಕರಕಂಜ ಪುಂಜಮೊಪ್ಪುವ ವೃಷವಾರ್ಧಿ ವೃದ್ಧಿವಡೆಯಲ್ ಸಡೆಯಲ್ . . . ಎಳದಿಂಗಳಂತೆ ಬಳೆದಂ ತಳೆದೊಂದೊದವಂ ಜಿನಾರ್ಭಕಂ (ಪುಷ್ಪಪು. ೧೨-೫೮). ೧೮. ಬಯಸಿದುದನ್ನು ಉಂಟುಮಾಡುವ ಕಾರ್ಯ ; ಇಷ್ಟಾರ್ಥಪ್ರದವಾದ ಕಾರ್ಯ : ವೃಷವೆಂದರೆ ಇಷ್ಟಾರ್ಥಪ್ರದವಾದ ಕಾರ್ಯವು (ಆರ್ಯಧ. ೯). ೧೯. ಧರ್ಮಸ್ವರೂಪಿಯಾದವನು ; ಧರ್ಮವೇ ಮೂರ್ತಿವತ್ತಾದವನು : ಸಕಲಧರ್ಮಸ್ವರೂಪಿಯಾಗಿರ್ಪುದರಿಂದ ವೃಷನೆಂದು ಹೆಸರು (ಭಾರಶಾಂ. ೪೩). ೨೦. ಒಳ್ಳೆಯತನ ; ಸದ್ಗುಣ ; ಸೌಶೀಲ್ಯ : ''ಶರೀರಭೇದವೊಳ್ಪು ಜನ ವೃಷಂ ಸುಧರ್ಮ ವೃಷವಾಚಕಂ'' (ನಾನಾರ. ೧೭). ೨೧. [ಕಾಮಶಾ] ಮೂರುವರ್ಗದ ಪುರುಷರಲ್ಲಿ ಒಂದು ವರ್ಗಕ್ಕೆ ಸೇರಿದವನು ; ಅತಿಕಾಮಿಯಾದವನು : ಎಸೆಗುಂ ಶಶವೃಷಹಯ[ರ್ಗ]ಲ್ಲಸಿತಧ್ವಜಮುಂ ಕುರಂಗಿ ಪಯಹಸ್ತಿಹಯರ್ಗಸಮಾಸ್ತ್ರಗೆ ಹಯಮುಂ ಲೆಕ್ಕಿಸಲಾಱೊಂಬತ್ತು ಪನ್ನೆರಟ್ಟಿರಲುದ್ದಂ (ಮನ್ಮವಿ. ೯-೨); ಮುನಿವರ ವಾತ್ಸ್ಯಾಯನ ಮತದೊಳು ನೆಟ್ಟನೆ ಶಶವೃಷಹಯರೆಂದೆನಿಪ ಮನುಜರ ಮೂದೆಱನೆನಿಸುವರ್ (ಜನವ.೪-೧). ೨೨. [ಜೈನ] ಮೊದಲನೆಯ ತೀರ್ಥಂಕರ ; ವೃಷಭನಾಥ : ಪಾಪಹರಂ ಪ್ರಕಾಶಿತವೃಷಂ ವೃಷಭಂ ವೃಷಧ್ವಜಂ . . . ಸಮಸ್ತವಿದ್ಯಾಪತಿ ನಾಭಿನಂದನನುಪಾಶ್ರಿತ ಭವ್ಯಜನಾಭಿನಂದನಂ (ಆದಿಪು. ೧-೪೦). ೨೩. [ವಾಸ್ತು]ಮನೆ, ದೇವಾಲಯ ಮೊದಲಾದುವನ್ನು ಕಟ್ಟುವ ಎಂಟು ಆಯಗಳಲ್ಲಿ ಒಂದು ; ವೃಷಭಾಯ : ವಿವಿಧವಾದ ಪ್ರಾಸಾದಾದಿಗಳು ಎಂಟುವಿಧವಾದ ಗಜ, ಉಷ್ಟ್ರ (ಒಂಟೆ), ಖರ, ಸಿಂಹ, ವೃಷ, ಧ್ವಜ, ಧೂಮ, ಶ್ವಾನ ಎಂಬ ಆಯಗಳನ್ನರಿತು ನಿರ್ಮಾಣವಾಗತಕ್ಕದೆಂದೂ . . . ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಭಾರದ. ೮೦). 'ಧೂಮಾಯ' ಪರಾ. ೨೪. ದೇವಾಲಯದ ಒಂದು ನಿರ್ದಿಷ್ಟರೀತಿ, – ಮಾದರಿ. ೨೫. [ಜ್ಯೋತಿ] ಜ್ಯೋತಿಶ್ಚಕ್ರದ ಹನ್ನೆರಡು ರಾಶಿಗಳಲ್ಲಿ ಒಂದು ; ವೃಷಭರಾಶಿ. [ಸಂ.]

**ವೃಷಕೇತು** (ನಾ). ಕರ್ಣನ ಮಗನಾದ ವೃಷಧ್ವಜ : ಈ ಘಟೋತ್ಕಚನ ತನುಸಂಭವಂ ಬಡವನೇ ಮೇಘನಾದಂ ಕರ್ಣಸೂನು ವೃಷಕೇತು ತಾಂ ಮೋಘ ವಿಕ್ರಮನೆ (ಜೈಮಿಭಾ. ೨-೩೫). [ಸಂ.]

**ವೃಷಕೋಷ್ಠ** (ನಾ). [ಜೈನ] ಲೋಕಾಂತಿಕದೇವನಿಕಾಯದಲ್ಲಿ ಒಂದು ವರ್ಗ : ಅರುಣ ಗರ್ದತೋಯಮಧ್ಯದೊಳ್ ವೃಷಕೋಷ್ಠ ಕಾಮಧರರುಂ ಗರ್ದತೋಯ ತುಷಿತಾಂತರದೊಳ್ ನಿರ್ಮಾಣ ರಜೋದಿಗಂತರಕ್ಷಿತರುಂ . . . ಇರ್ಪರ್ (ತತ್ತ್ವಪ್ರ. ೨೨೨). [ಸಂ.]

**ವೃಷಗ** (ನಾ). ನಂದಿಯ ಮೇಲೆ ಸಂಚರಿಸುವವನು ; ನಂದಿವಾಹನ ; ಶಿವ : ಅಕಲಂಕಗಿರಿಜಾಮಿಥುನದೇಹ ವೃಷಗ ವೃಶ್ಚಿಕಗಮನದೌವಾರಿಕಂ . . . ಗಿರಿಜಾವರ (ಏಕೋಪು. ೨-೨). [ಸಂ.]

**ವೃಷಗಂಧಿ** (ನಾ). ಒಂದು ಬಗೆಯ ಸಸ್ಯ ; ಗಿರಿಕರ್ಣಿಕೆ : ''ವೃಷಗಂಧಿಃ, ವೃಷಪಾದೀ – ಈಯೆರಡುಂ ಗಿರಿಕರ್ಣಿಕೆ'' (ಓಷಧಿ. ೧೫೭). [ಸಂ.]

**ವೃಷಣ** (ಗು). ೧. ಮಳೆ ಸುರಿಯುವ ; ವರ್ಷಿಸುವ. ೨. ಸಿಂಪಡಿಸುವ. ೩. ಫಲವತ್ತುಗೊಳಿಸುವ. (ನಾ). ೪. ತರಡು ; ಬೀಜ : ''ಮುಷ್ಕಂ, ಅಂಡಃ; ವೃಷಣಃ, ಕೋಶಃ, ಸಂಗ್ರಾಹಃ, ಮುಷ್ಟಿಃ — ಈ ೬ ಅಂಡಂ'' (ಹಲಾಯು. ೮೭-೩೭೯). ೫. ಬೀಜಕೋಶ ; ಅಂಡಕೋಶ. [ಸಂ.]

**ವೃಷದಂಶ** (ನಾ). ಇಲಿಯನ್ನು ತಿನ್ನುವಂತಹುದು ; ಬೆಕ್ಕು ; ಮಾರ್ಜಾಲ : ''ಮಾರ್ಜಾಲಂ ಬಿಡಾಲಮಾಖುದ್ವಿಷಂ ವೃಷದಂಶಮೋತುವೆನೆ ಬೆಕ್ಕೆನಿಕ್ಕುಂ'' (ಮಂಗರಾ. ೪೯-೧೧). [ಸಂ.]

**ವೃಷದ್ವಿಪ** (ನಾ). ಇಂದ್ರನ ಆನೆ ; ಐರಾವತ : ಕೂಡೆ ಸಮಸ್ತವಸ್ತುಶತಸಾರ ಸಮೃದ್ಧಿಯನೊಪ್ಪುತಿರ್ಪುದಾ ನಾಡು ದಿವಕ್ಕೆ ತೋಡು ಕುಸುಮೇಷುಗೆ ಬೀಡು ವೃಷದ್ವಿಪಕ್ಕೆ ತಾಯ್ನಾಡು . . . ನಯನಕ್ಕೆಳದಿಂಗಳ ಕಾಡಿದೆಂಬಿನಂ (ಪುಷ್ಪಪು. ೯-೧೮). [ಸಂ.]

**ವೃಷಧ್ವಜ** (ನಾ). ೧. ನಂದಿಯ ಲಾಂಛನವನ್ನುಳ್ಳವನು ; ಶಿವ : ಯುದ್ಧದೊಳ್ ವೃಷಧ್ವಜನುಮನಿಕ್ಕಿ ಗೆಲ್ದರಿಗನೊಳ್ ತಲೆವಟ್ಟಿದಿರಾಗಿ ನಿಂದು ಸೂತಜನಿಱಿವಂ ಗಡಂ (ಪಂಪಭಾ. ೧೨-೪೦) ; ಅಸುರಪತಿ ಕೇಳಿವನ ಬಿಡು ಕಲಿವೃಷಭನೆಂಬ ಕಪೀಶ್ವರನ ನೀಕ್ಷಿಸು ವೃಷಧ್ವಜನಂದದಲಿ ತೋರ್ಪವನ (ತೊರರಾ. ೭-೮-೧೨). ೨. ಇಲಿಯ

ಲಾಂಛನವನ್ನುಳ್ಳವನು ; ಗಣಪತಿ. ೩. ಕರ್ಣನ ಮಗನಾದ ವೃಷಕೇತು : ಆಹವಕಭಿಜ್ಞನೆನಿಸುವ ಕರ್ಣಸುತ ವೃಷಧ್ವಜನೆದ್ದು ನಗುತೆ ಕೈಮುಗಿದು ನಿಂದು ವಿಜ್ಞಾಪನಂಗೈದನು (ಜೈಮಿಭಾ. ೨-೩೭). ೪. [ಜೈನ] ಆದಿತೀರ್ಥಂಕರನಾದ ವೃಷಭನಾಥ : **ಪಾಪಹರಂ ಪ್ರಕಾಶಿತವೃಷಂ ವೃಷಭಂ ವೃಷಧ್ವಜಂ . . .** ಸಮಸ್ತವಿದ್ಯಾಪತಿ ನಾಭಿನಂದನನುಪಾಶ್ರಿತಭವ್ಯಜನಾಭಿನಂದನಂ (ಆದಿಪು. ೧-೪೦). [ಸಂ.]

**ವೃಷನಾಥ** (ನಾ). [ಜೈನ] ಆದಿತೀರ್ಥಂಕರನಾದ ವೃಷಭನಾಥ : ಹಿಮಶಿಖರಿಶಿಖರಸಮವಿಗ್ರಹಸನಾಥನಂ ಕುಮುದದಲಧವಲರುಚಿರುಚಿರವೃಷನಾಥನಂ (ಆದಿಪು. ೭-೨೭ ರಗಳೆ). [ಸಂ.]

**ವೃಷಪಾದಿ** (ನಾ). ಒಂದು ಬಗೆಯ ಸಸ್ಯ ; ಗಿರಿಕರ್ಣಿಕೆ : "ವೃಷಗಂತಿಃ, ವೃಷಪಾದೀ - ಈಯೆರಡುಂ ಗಿರಿಕರ್ಣಿಕೆ" (ಓಷಧಿ. ೧೫೭). [ಸಂ. ವೃಷಪಾದೀ]

**ವೃಷಪಾಳಿ** (ನಾ). = ವೃಷಧ್ವಜ ೧ : ಅರಶರೀರದಿಂ ನೆರೆ ವಿರಾಜಿಪ ಮಕುಟಮೌಳಿ ವೃಷಪಾಳಿ ಕೃಪಾಳಿ ರಾಮೇಶ ಸಲಹಾಹಿ (ನವಮೋ. ೭-೧). [ಸಂ. ವೃಷಪಾಲಿ]

**ವೃಷಭ** (ನಾ). ೧. ಎತ್ತು ; ಗೂಳಿ ; ಹೋರಿ : "ವೃಷ ಸೌರಭೇಯ ಗೋಪತಿ ಋಷಭ ಬಲೀವರ್ದ ಶಾಕ್ವರೋಕ್ಷಕಕುದ್ಮದ್ವೃಷಭಾಖ್ಯಮನಡ್ವಾಹಂ" (ವಸ್ತುಕೋ. ೮೯-೧) ; ಮಳೆಗೆ ತೆರಳದೆ ಕೋಡ ಬಾಗಿಸಿ ಕಲಿವೃಷಭ ಹೊಗುವಂತೆ ದ್ರೋಣನ ಬಲುಸರಳ ಸರಿವಳೆಗೆ ದಂಡೆಯನೊಡ್ಡಿ . . . ಕಟ್ಟಳವಿಯಲಿ ಹೊಕ್ಕನು ಭೀಮ ಬೊಬ್ಬಿರಿದು (ಕುಮಾರವ್ಯಾಸಭಾ. ದ್ರೋ. ೧೩-೧೨) ; ನಿಂದಿರ್ಪನೊರ್ವ ಹರ್ಯಕ್ಷವಕ್ಷಾನ್ವಿತಂ ವೃಷಭಸನ್ನಿಭಗಮನನಿಭಸಮದೃಢಶರೀರಿ ! (ಶ್ರೀರಾಮಾ. ೨೭೮-೫). ೨. ಈಶ್ವರನ ವಾಹನವಾದ ನಂದಿ ; ಬಸವ : ಆಜನೆಯ ಭವಾಂತರದಲ್ಲಿ ವೃಷಭನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮಗೇಜಲು ವಾಹನವಾಗಲೆಂದಿರಿಸಿ ಕೊಂಡಿರ್ದಿರಯ್ಯಾ (ಬಸವ. ೪) ; ವರಶಿಂಶುಮಾರಮರ್ದನ ಶರಣಾಗತ ವೃಷಭಮಹಿಮ ಸುರಸಂಕುಳಮಂ ನೊರಜೆನೆ ಮಿಗೆ ಮೂಗಿನ ಘನತರ ನಿಸ್ವಾಸೋಸ್ವಾಸದೊಳಾಡಿಸಿದಭವಾ (ಹಮ್ಮೀರ. ೫-೫). ೩. ಯಾವುದೇ ಗಂಡುಪ್ರಾಣಿ ; ಪುರುಷಜಾತಿ. ೪. (ಯಾವುದೇ ವರ್ಗದಲ್ಲಿ) ಒಳ್ಳೆಯದು ; ಉತ್ತಮವಾದುದು ; ಶ್ರೇಷ್ಠವಾದುದು : "ಒಳ್ಳಿತಬಿಲ್ಲಿಯುಂ ವೃಷಭಮೆಂಬುದು" (ಹಲಾಯು. ೧೩೪-೨೧). ೫. ಒಂದು ಬಗೆಯ ಔಷಧೀಸಸ್ಯ : "ಶೃಂಗೀ, ವೃಷಭಃ, ವೃಷಃ — ೩ ಹೆರೆಗೆಹಾಲೆಯ ಹೆಸರು, ವೃಷಭವೆಂಬುವ ಮೂಲಿಕೆ" (ಸಿದ್ಧಾಂತಿ. ೧೩೮). ೬. ಒಂದು ಬಗೆಯ ಗಂಧದ್ರವ್ಯ : "ಶೃಂಗೀ, ವೃಷಭಃ, ವೃಷಃ— ಈ ೩ ವೃಷಭವೆಂಬ ಗಂಧದ್ರವ್ಯ" (ನಾಚಿರಾ. ೧೧೦). ೭. ಆನೆಯ ಕಿವಿ ; ಗಜಕರ್ಣ. ೮. ಕಿವಿಯ ರಂಧ್ರ,— ತೂತು. ೯. ನೀತಿ ; ಧರ್ಮ ; ನ್ಯಾಯ. ೧೦. ಒಂದು ಪರ್ವತದ ಹೆಸರು : ಶಂಖಕೂಟ ವೃಷಭ ಹಂಸ ಕಾಳಾಂಜನ ಶಿಖರಿಯೆಂಬೈದು ಕುಧರಂಗಳೇ ಉತ್ತರದ ಸುಪಾರ್ಶ್ವದ ಮೂಡಣ ಮಂದರದ ನಡುವಿಹವು (ವಿವೇಕ. ೧೭೧). ೧೧. [ಜ್ಯೋತಿ] ಜ್ಯೋತಿಶ್ಚಕ್ರದ ಹನ್ನೆರಡುರಾಶಿಗಳಲ್ಲಿ ಎರಡನೆಯದು : ಅಮರಾಸೆಯನಜ ಹರಿ ಧನು ಯಮಾಸೆಯಂ ವೃಷಭ ಕನ್ಯಕಾ ಮಕರಂ ಪಶ್ಚಿಮಮಂ ಮಿಥುನತುಳಾಕುಂಭಮಾಳ್ಕುಮುದಗಾಸೆಯಂ ಕುಳೀರಾಳಿ ಝಷಂ (ಜಾತತಿ. ೧-೨೪) ; ದಿನನಾಥಂ ಮೇಷದೊಳ್ ಶೀತರುಚಿ ವೃಷಭದೊಳ್ ಭಾರ್ಗವಂ ಮೀನದೊಳ್ . . . ಸಂತಮಿರಂತಿರ್ಪಿನಮತ್ಯುತ್ಸಾಹದಿಂದಂ ಗುರುವಿನುದಯದೊಳ್ ಪುತ್ರನಂ ಪೆತ್ತಳಾಗಳ್ (ಸುಕುಮಾ. ೧೦-೨೭). ೧೨. [ಜೈನ] ಬಿಳಿಯ ಎತ್ತು : ಉರಗೇಂದ್ರ ಕ್ಷೀರನೀರಾಕರ ರಜತಗಿರಿ ಶ್ರೀಸಿತಚ್ಛತ್ರ ಗಂಗಾಹರಹಾಸ್ಯರಾವತೇಭಸ್ಫಟಿಕ ವೃಷಭ ಶುಭ್ರಾಭ್ರನೀಹಾರಹಾರಾಮರ ರಾಜಶ್ವೇತ ಪರಕೇರುಹ ಹಳಧರ ವಾಕ್ಕಂಖ ಹಂಸೇನ್ನು ಕುನ್ದೋತ್ಕರ ಚಂಚತ್ಕೀರ್ತ್ತಿಕಾನ್ತಂ ಧರೆಯೊಳೆಸೆದನೀ ಭಾನುಕೀರ್ತ್ತಿವ್ರತೀಂದ್ರಂ (ಎಕ. II (R), ೭೩-೧೧೨ ; 1176). ೧೩. ಆದಿತೀರ್ಥಂಕರ ; ವೃಷಭನಾಥ : ಪಾಪಹರಂ ಪ್ರಕಾಶಿತವೃಷಂ ವೃಷಭಂ ವೃಷಧ್ವಜಂ . . . ಸಮಸ್ತ ವಿದ್ಯಾಪತಿ ನಾಭಿನಂದನನುಪಾಶ್ರಿತ ಭವ್ಯಜನಾಭಿನಂದನಂ (ಆದಿಪು. ೧-೪೦) ; ವೃಷಭ ಅಜಿತ ಸಂಭವ ಅಭಿನಂದನ . . . ನೇಮಿ ಪಾರ್ಶ್ವ ವರ್ಧಮಾನರೆಂಬಿಪ್ಪತ್ತುನಾಲ್ವರ್ ತೀರ್ಥಕರರ್ (ಚಾವುಂಪು. ೪೦೨). ೧೪. [ಛಂದ] ಸಿಂಹ, ಗಜ, ವೃಷಭ, ಅಜ, ಶರಭ ಮತ್ತು ಹಯ ಎಂಬ ಆರುಬಗೆಯ ಪ್ರಾಸಗಳಲ್ಲಿ ಒಂದು : ಹರಿ ಕರಿ ವೃಷಭ ತುರಂಗಂ ಶರಭಮಜಂಗಳು ಮೆನಿಪ್ಪ ಷಟ್ಪ್ರಾಸಕ್ಕುಂ . . . ಗಜದೀರ್ಘಂ ಬಿಂದು ವೃಷಭ ಬೆಂಜನ ಶರಭಂ ಅಜನು ವಿಸರ್ಗಂ ಹಯಮಂಬುಜಮುಖಿ ದಡ್ಡಕ್ಕರಂಗಳವು ಷಟ್ಪ್ರಾಸಂ (ಛಂದೋಂಬು. ೧-೪೭ ಅಡಿಟ ೩) ; ವೃಷಭ : — ಒಂದು ವ್ಯಂಜನಕ್ಕೆ : ಕಂಸವಧಂಗೆಯ್ದು ಮುರಧ್ವಂಸಿಗೆ . . . ವಜ್ರಿ **ನುಡಿವುದುಮಾಗಳ್** (ಕೃಪಿಡಿ. ೭೨). ೧೫. [ಸಂಗೀತ] ಸಪ್ತಸ್ವರಗಳಲ್ಲಿ ಎರಡನೆಯದು ; ಋಷಭ ; 'ರಿ' ಎಂಬ ಸ್ವರ : ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಂಗಳೆಂಬ ಸಪ್ತಸ್ವರಮುಮಂ . . . ದಶರೂಪಲಕ್ಷಣಮುಮಂ ಪಾತ್ರಸಂಕ್ರಮಣದೊಳ್ ನೆಱೆಯೆ ತೋಱೆ (ಅಜಿಪು. ೫-೩೦ ವ) ; ಸಪ್ತಸ್ವರಂಗಳುತ್ಪತ್ತಿಕ್ರಮದಲ್ಲಿ ಪರಶಿವನ ಈಶ್ವರ ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನ ನಿರಂಗವೆಂಬೇಳು ಮುಖಕ್ರಮವಿಡಿದು ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಮೆಂಬ ಸಪ್ತಸ್ವರಂಗಳಾದವು (ವಿವೇಕ. ೧೪೫). ೧೬. = ವೃಷಭಾಯ : 'ವೃಷಭಾಯ' ಪರಾ. ೧೭. [ನಾಟ್ಯ] ಇಪ್ಪತ್ತುಮೂರು ದೇಶೀಯ ಸ್ಥಾನಕಗಳಲ್ಲಿ ಒಂದು : ಒದವಿರ್ದ ಸ್ವಸ್ತಿಕಮುಗ್ಗದಿನೊಪ್ಪುವ ವರ್ಧಮಾನ ನಂದ್ಯಾವರ್ತಂ . . . ಸಲೆ ಬ್ರಾಹ್ಮಂ ವೈಷ್ಣವಮುಂ ಲಲನೇ ಕೇಳ್ ಶೈವಮೆಸೆವ ಗರುಡಂ ಕೂರ್ಮಂಗೆಲೆ ನಾಗಬಂಧ ವೃಷಭಂ ಸುಲಲಿತಮಿಪ್ಪತ್ತಮೂಱು ದೇಶಿಸ್ಥಾನಂ (ಲಾಸ್ಯರಂ. ೭-೮). [ಸಂ.]

**ವೃಷಭಕ** (ನಾ). ಒಂದು ಬಗೆಯ ಔಷಧೀಸಸ್ಯ : "ಧುತ್ತೂರಃ — ವೃಷಭಕ ; ಉಮ್ಮತ್ತ" (ಓಷಧಿ. ೮೨) ; ನೆಲಗುಳ್ಳ ಆಡುಸೋಗೆ . . . ಜೀವಕ ವೃಷಭಕಃ . . . ಹಿರಿಮದ್ದಿನ ಬೇರು ಸಹ ಪ್ರತ್ಯೇಕ ಗ ಳ ತೂಕದಲ್ಲಿ ಚೂರ್ಣಂಗೈದು (ಸಕವೈ. ೧೨೯). [ಸಂ.]

**ವೃಷಭಕ್ರೀಡಿತ** (ನಾ). [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು : ಚರಣವಲಾತಚಾರಿಯನೊ[ರೆ]ಯಲ್ ಕರಮೆರಡು ರೇಚಿತದಿನೊಪ್ಪುತ್ತಂ ಪಿರಿದುಂ ವ್ಯಾವೃತದಿಂ ಬಾಗಿರೆಯಲಪದ್ಮಗಳಿಂದೆ ಮುಡುಹಿಂಗೆಯ್ವಲ್ ಕ್ಷಿತಿಯೊಳ್ ಕೇಳ್ ವೃಷಭಕ್ರೀಡಿತಮೆಂಬೀ ಪೆಸರನಾಂತು ಮೆಱೆವುದು ಕರಣಂ (ಲಾಸ್ಯರಂ. ೪-೧೭೩). [ಸಂ.]

**ವೃಷಭಗಮನ** (ನಾ). ಎತ್ತಿನ ಮೇಲೆ ಸಂಚರಿಸುವವನು ; ನಂದಿವಾಹನ ; ಶಿವ : ವನಜಲೋಚನೆಯುಗಳ ಬಂದಳು . . . ಪಾವನಚರಿತೆ ಬಂದಳು ವೃಷಭಗಮನನ ಕೆಲದೊಳಿರ್ದು (ಬಸಪು. ೫೦-೧೧). [ಸಂ.]

**ವೃಷಭತಾಣ** (ನಾ). = ವೃಷಭ ೧೭ : ಒಂದಿರಲಗಲ್ದಿರಲೆರಡುಂ ಸಂದಿಸಿ ಮೊಳಕಾಲ್ಗಳವನಿಯಂ ಪತ್ತಿರೆ ಕೇಳ್ ಸೌಂದರಮುಖಿ ಸೌಷ್ಠವದಿಂದೊಂದಿರೆ ತನು ವೃಷಭತಾಣಮೆನಿಕುಂ ಧರೆಯೊಳ್ (ಲಾಸ್ಯರಂ. ೭-೫೧). [ವೃಷಭ + ತಾಣ]

**ವೃಷಭಧ್ವಜ** (ನಾ). ೧. ನಂದಿಯ ಲಾಂಛನವುಳ್ಳ ಧ್ವಜ : ನಲೆನಲೆಗಳೊಳು ನೆಗಳ್ದ ವೃಷಭಧ್ವಜಂಗಳಂ ನಲಿನಲಿದು ಕುಣಿವ ಕೇತನದಂಡತತಿಗಳಂ . . . ತೋಱುತುಂ ಪೇಳುತುಂ ಬಾಳುತುಂ ಬರುತಿರಲು (ನಂಬಿರ. ೯-೯೩). ೨. ನಂದಿಯ ಲಾಂಛನವುಳ್ಳವನು ; ಶಿವ : ಶ್ರೀವಚ್ಛಂ ಸಿರಿಯಿಂ ಸಮೃದ್ಧನೆಸೆವಾ ನಾಗಾಂಬಿಕಾಸೂನು . . . ವೃಷಭಧ್ವಜಪ್ರಿಯತಮಂ ನಾರಾಯಣಾತ್ಮೋದ್ಭವಂ ಭಾವಂಬೆತ್ತಿರೆ ಚೆಲ್ವನೆಂದೆನಿಸಿದಂ ಶ್ರೀರೇಚಿದಣ್ಣಾಧಿಪಂ (ಎಕ. VII, ಶಿಕಾ. ೧೯೭-೩೭ ; 1181) ; ವೃಷಭಧ್ವಜ ಸಾಂಸಾರಿಕವಿಷಯಂಗಳೊಳಾಶೆಯಿಲ್ಲ ಮತ್ತೇನೆನಲಾಂ ವಿಷಧರಮರ್ದನವಾಹನ ಹೃಷಿಕಪತಿಪದಮನೊಂದನೆ ನಿಶ್ಚೈಸಿದಪೆಂ (ಯಾದವಚಂ. ೧೪-೫೭). ೩. [ಜೈನ] ಆದಿತೀರ್ಥಂಕರ ; ವೃಷಭನಾಥ : ವೃಷಭಧ್ವಜ ವೃಷಭನಾಥ (ಜಿನಾಲಿ. ೧೦-೧೦). [ಸಂ.]

**ವೃಷಭಧ್ವಾಂಕ್ಷಿ** (ನಾ). ಒಂದು ಬಗೆಯ ಸಸ್ಯ ; ನಾಗರಮುಸ್ತೆ : "ವೃಷಭಧ್ವಾಂಕ್ಷಿ - ನಾಗರಮುಸ್ತೆ" (ಓಷಧಿ. ೧೫೪). [ಸಂ. ವೃಷಭಧ್ವಾಂಕ್ಷೀ]

**ವೃಷಭನಾಥ** (ನಾ). [ಜೈನ] ಆದಿತೀರ್ಥಂಕರ ; ವೃಷಭಸ್ವಾಮಿ : ಮನೋಹರ ವೃಷಲಾಂಛನಂ ವೃಷಮುಖಂ ವೃಷವಾಹನನಿಂದುಕುಂದಸೌಂದರತರವರ್ಣನೀ ವೃಷಭನಾಥಕಥಾರಚನೋಕ್ತಿಯಲ್ಲಿ ಮಾಣ್ಕಿರದೆಮಗಾಗಳುಂ ವೃಷಭಯಕ್ಷನವಿಘ್ನ ಮನಃಪ್ರವೃತ್ತಿಯಂ (ಆದಿಪು. ೧-೮) ; ವೃಷಭಧ್ವಜ ವೃಷಭನಾಥ (ಜಿನಾಲಿ. ೧೦-೧೦). [ಸಂ.]

**ವೃಷಭಪತಿ** (ನಾ). ನಂದಿಯ ಒಡೆಯ ; ಪಶುಪತಿ ; ಶಿವ : ಹಂಸಪತಿ ಗರುಡಪತಿ ವೃಷಭಪತಿ ಮೊದಲಾದ ಸರ್ವಜೀವಾಧಿಪತಿ ದೇವರಾಯಮಹಾರಾಯನ ಅರಸುತನ ಹೊಸತು (ಸಕವ. ಕ. III, ೨-೪). [ಸಂ.]

**ವೃಷಭಪಾಳಿ** (ನಾ). ನಂದಿಧ್ವಜವುಳ್ಳವನು ; ಶಿವ : ಪದ್ಮರಿಪುಖಂಡಮಂಡಲ ಮಂಡಿತಸುಮೌಳಿಧೃತಶೂಲಿ ವೃಷಭಪಾಳೀ . . . ಪಾಲಿಸುಗೆ ರಾಮೇಶ್ವರಾ (ನವಮೋ. ೪-೧). [ಸಂ. ವೃಷಭಪಾಲಿ]

**ವೃಷಭಪುರುಷ** (ನಾ). [ಕಾಮಶಾ] ಶಶ, ವೃಷ ಮತ್ತು ಹಯ ಎಂಬ ಮೂರುವರ್ಗದ ಪುರುಷರಲ್ಲಿ ಎರಡನೆಯ ವರ್ಗಕ್ಕೆ ಸೇರಿದವನು : ಅಗಲವಾಗಿ ಉನ್ನತವಾದ ತಲೆ ದೊಡ್ಡದಾದ ಮುಖ . . . ಶ್ಲೇಷ್ಮಪ್ರಕೃತಿ ನಡುಪಗಲೊಳು ಸುಖಿಪಂ . . . ಈ ಲಕ್ಷಣಂಗಳುಳ್ಳವಂ ವೃಷಭಪುರುಷಂ (ಕಾಮಶಾ. ೨೧೩). [ಸಂ.]

**ವೃಷಭಪ್ರಾಸ** (ನಾ). [ಛಂದ] "ಪ್ರತಿಪಾದದ ಮೊದಲೆರಡು ಸ್ವರಗಳ ನಡುವೆ ಒಂದೇ ವಿಧದ ಒಂದು ವ್ಯಂಜನಕ್ಕಾಗಲಿ, ಅನೇಕ ವ್ಯಂಜನಗಳಿಗಾಗಲಿ ಹಿಂದೆ ಅನುಸ್ವಾರವಿರಲು ವೃಷಭಪ್ರಾಸ" (ಕೈಪಿಡಿ. ೬೨). [ಸಂ.]

**ವೃಷಭಮಾಸ** (ನಾ). [ಜ್ಯೋತಿ] ಹನ್ನೆರಡು ಸೌರಮಾಸಗಳಲ್ಲಿ ಎರಡನೆಯದು ; ಸೂರ್ಯನು ವೃಷಭರಾಶಿಯಲ್ಲಿರುವ ತಿಂಗಳು : ಸೂರ್ಯನು ರೇವತೀತಾರೆಯನ್ನು ಸೇರಿದ ಕ್ಷಣವೇ ಮೇಷಸಂಕ್ರಮಣ. ಆ ಕಾಲದಿಂದ ಸೂರ್ಯನು . . . ರೇವತೀತಾರೆಯಿಂದ ಕ್ರಾಂತಿವೃತ್ತದ ೩೦ ಡಿಗ್ರಿಗಳ ದೂರವನ್ನು ಸೇರುವವರಗೂ ಆಗುವ ಕಾಲಾಂತರವು ಮೇಷಮಾಸ. ಅಲ್ಲಿಂದ ಮುಂದಿನ ೩೦ ಡಿಗ್ರಿಗಳನ್ನು ದಾಟಲು ಸೂರ್ಯನು ತೆಗೆದುಕೊಳ್ಳುವ ಕಾಲವು ವೃಷಭಮಾಸ (ನಕ್ಷತ್ರ. ೪೮). [ಸಂ.]

**ವೃಷಭರಾಶಿ** (ನಾ). [ಜ್ಯೋತಿ] ಜ್ಯೋತಿಶ್ಚಕ್ರದ ಹನ್ನೆರಡುರಾಶಿಗಳಲ್ಲಿ ಎರಡನೆಯದು : ವೃಷಭರಾಶಿಯಲ್ಲಿ ಹುಟ್ಟಿದವನು ಸುಂದರ ಸಮರ್ಥ ಒಯ್ಯಾರದಿಂದ ನಡೆಯುತ್ತಾನೆ, ಅದೃಷ್ಟಶಾಲಿ (ಜಾತಕ. ೧೭-೨ ಟೀಕೆ). [ಸಂ.]

**ವೃಷಭಲಕ್ಷ್ಮ** (ನಾ). ಅಂಶಗಣಗಳಲ್ಲಿ ಒಂದಾದ ರುದ್ರಗಣದ ಹದಿನಾರು ಪ್ರಭೇದಗಳಲ್ಲಿ ಒಂದು ; ಮೊದಲು ಮೂರು ಲಘು, ಅನಂತರ ಎರಡು ಗುರು ಬರುವಂತೆ ರಚನೆಯಿರುವ ರುದ್ರಗಣ (UUU−−) : ರುದ್ರಗಣಮೆಂತೆಂದೊಡೆ : ೧. ಗಂಗಾಧೀಶಂ ೨. ಗಿರಿಜಾಕಾಂತಂ ೩. ನೀಲಕಂಠಂ ೪. ವೃಷಭಲಕ್ಷ್ಮಂ [ಪಾಠಾಂ. ಕ್ಷ್ಮಂ] ೫. ಕಾಮಾಂತಕಂ . . . ೧೬. ಮದನರಿಪು (ಛಂದೋಂಬು. ೫-೨೪೦ ವ). [ಸಂ.]

**ವೃಷಭಲಾಂಛನ** (ನಾ). ೧. ವೃಷಭಧ್ವಜ ; ಶಿವ. ೨. ವೃಷಭಲಾಂಛನವುಳ್ಳ ಒಬ್ಬ ರಾಜ : ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದ ಮಹಾಸಾಮಂತ xxx ವಾನರಧ್ವಜ ವೃಷಭಲಾಂಛನ [ಶೋ]ಣಿತಪುರಾಧೀಶ್ವರ ಪತಿಗೊಡ್ಡಿಕೊಲ್ಲ (ಎಕ. IV (R). ಚಾಮರಾ. ೧೧೪-೨ ; ಸು. 10 ನೆಯ ಶತ). [ಸಂ.]

**ವೃಷಭವಾಹನ** (ನಾ). ನಂದಿವಾಹನ ; ಶಿವ : ಬೆಟ್ಟದಪುರದ ಮೇಗಳ ಮನೆ ಲಿಂಗಣ್ಣನ ಮಗ ನಗಶಟಯು ಮಾಡಿ ವಪಿಶಿದ ಹಿತ್ತಾಳೆವೃಷಭವಾಹನ ಶೇವಾರ್ಥ (ಎಕ. IV (R). ಪಿರಿಯಾ. ೬೩-೬ ; 1867). [ಸಂ.]

**ವೃಷಭವಾಹಿನಿ** (ನಾ). ಹಸು ; ಆಕಳು ; ಗೋವು : "ರೋಹಿಣಿಯನಡ್ವಿಯರ್ಜುನಿ ವೃಷೆ ಗೋ ವೃಷಭವಾಹಿನಿಯೆನೆ ಹಸು" (ಮಂಗರಾ. ೫೩-೩). [ಸಂ. ವೃಷಭವಾಹಿನೀ]

**ವೃಷಭಾಕ್ಷಿ** (ನಾ). ಒಂದು ಬಗೆಯ ಸಸ್ಯ : " ವೃಷಭಾಕ್ಷೀ — ಬಿಳಿಯಗಿರಿಕರ್ಣಿಕೆ " (ಓಷಧಿ. ೧೫೭). [ಸಂ. ವೃಷಭಾಕ್ಷೀ]

**ವೃಷಭಾಚಲ, ವೃಷಭಾಚಳ** (ನಾ). [ಜೈನ] ವೃಷಭಾದ್ರಿ : ಇತ್ತುತ್ತರಭರತಮನಾಳುತ್ತಿರ್ದರನೇಕಚಕ್ರವರ್ತಿಗಳ ಪೆಸರ್ ಸುತ್ತಿ ಬರೆದಿರೆ ನಿಬಂಧದ ಹೊತ್ತಗೆಯೆಂಬಂತಿರಿರ್ದ ವೃಷಭಾಚಲಮಂ ಕಂಡು (ಶಾಂತಿಪು. ೧೧-೬೧). **ವೃಷಭಾಚಳ:** ಭರತೇಶ್ವರನುಂ ತೆಂಕಮೊಗದೆ ಬಂದುತ್ತರಭರತದ ಮಧ್ಯಮಖಂಡದ ನಡುವೆ ವೃಷಭಾಚಳಮಂ ಕಂಡು ವಿಜಯಪ್ರಶಸ್ತಿಯಂ ಅಲ್ಲಿ ಬರೆಯಿಸುವೆನೆಂದು ಪೋಗಿ (ಚಾವುಂಪು. ೪೨). [ಸಂ.]

**ವೃಷಭಾಚಳ** 'ವೃಷಭಾಚಲ' ನೋ.

**ವೃಷಭಾದ್ರಿ** (ನಾ). [ಜೈನ] "ಉತ್ತರಭಾರತದಲ್ಲಿ ಹಿಮವತ್‌ಪರ್ವತದ ಮಧ್ಯಮಕೂಟಕ್ಕೆ ನೇರವಾಗಿ ದಕ್ಷಿಣದಲ್ಲಿರುವ ಪರ್ವತ. ಚಕ್ರವರ್ತಿಗಳು ತಮ್ಮ ಷಟ್ಖಂಡವಿಜಯಪ್ರಶಸ್ತಿಯನ್ನು ಶಾಸನವನ್ನಾಗಿ ಕೆತ್ತಿಸುವ ಪರ್ವತ" (ಜೈನಕೋ. ೨೩೭) : ಆ ವೃಷಭಾದ್ರಿಯ ಮೇಖಲಾಭಿತ್ತಿಯೊಳಾತ್ಮೀಯ ವಿಶ್ವವಿಶ್ವಂಭರಾವಿಜಯಪ್ರಶಸ್ತಿಯನಚ್ಚಿಯೊಳ್ ಬರೆಯಿಸುವೆಂ (ಆದಿಪು. ೧೩-೭೦ ವ) ; ವೃಷಭಾದ್ರಿಯಲ್ಲಿ ತನ್ನಯ ಪೆಸರಂ ಬರಸಿಟ್ಟು ವಜ್ರನಾಭಿಮಹೀಶಂ . . . ಕ್ಷೇಮಂಕರಮುನಿಗಳ ಸಮಕ್ಷದೊಳ್ದೀಕ್ಷೆಗೊಂಡಿರುತ್ತಿರಲ್ (ಪುಣ್ಯಾಸ್ರ. ೪-೯೭). [ಸಂ.]

**ವೃಷಭಾಧರ** (ನಾ). ನಂದಿಯ ಲಾಂಛನವನ್ನುಳ್ಳವನು ; ಶಿವ : ಹರನು ಗೌರೀನಾಥ ವೃಷಭಾಧರನು ಕೈಲಾಸೇಂದ್ರ ಢಮರುಗಧರ ತ್ರಿಶೂಲಿಯು (ಬಿಜ್ಜಪು. ೭೩-೪೭). [< ಸಂ. ವೃಷಭಧರ./ IP ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ]

**ವೃಷಭಾಯ** (ನಾ). [ವಾಸ್ತು] ಮನೆ, ದೇವಾಲಯ ಮೊದಲಾದುವನ್ನು ಕಟ್ಟುವ ಎಂಟು ಆಯಗಳಲ್ಲಿ ಒಂದು : ಧ್ವಜಾಯಂ, ಧೂಮಾಯಂ, ಸಿಂಹಾಯಂ, ಶುನಕಾಯಂ, ವೃಷಭಾಯಂ, ಖರಾಯಂ, ಗಜಾಯಂ, ವಾಯಸಾಯಂ – ಈ ಎಂಟು ಆಯಂಗಳುಂ ಮೂಡಲ್ ಮೊದಲಾಗಿ ಸವ್ಯದಿಂದ ಎಂಟುದಿಕ್ಕಿನಲ್ಲಿಯುಮಿರ್ಪುವು (ಲೋಕೋಪ. ೩-೧೯ ಟೀಕೆ) ; ವಿಸ್ತಾರವಾಗಿ ಉದ್ದ ಅಗಲವನು ಅಳೆದು ಒಟ್ಟುಗೂಡಿಕೊಂಡ ಕೋಲು ಯೆಷ್ಟೋ ಅದನು ೩ ಹೆಚ್ಚಿ . . . ಅದಂ ೮ ರಿಂ ಭಾಗಿಸಿ ಉಳಿದವು ಆಯಂಗಳೂ . . . ೫ ವುಳಿದರೆ ವೃಷಭಾಯ (ಆಯಟೀ. ೧-೬). 'ಧೂಮಾಯ' ಪರಾ. [ಸಂ.]

**ವೃಷಭಾಯತ** (ನಾ). ಎತ್ತಿನ ಗಂಭೀರತೆ ; ವೃಷಭದ ಗಾಂಭೀರ್ಯ : ವೃಷಭಾಯತದೊಳಾಂತ ಭಟರೊಳ್ಗಳಂಚುವ ಪರುಷಭಾಷಿತವನಬಲೆ ನಿನ್ನೊಳಾಡುವುದು ಪೌರುಷಭಾವಮಲ್ಲ (ಜೈಮಿಭಾ. ೧೬-೧೨). [ಸಂ.]

**ವೃಷಭಾಸನ** (ನಾ). ಇಪ್ಪತ್ತುಮೂರು ಬಗೆಯ ದೇಶೀಯಸ್ಥಾನಕಗಳಲ್ಲಿ ಒಂದು : ಸ್ವಸ್ತಿಕ, ವರ್ಧಮಾನ, ನಂದ್ಯಾವರ್ತ, ಸಂಹತ, ಸಮಪಾದ . . . ನಾಗಬಂಧ, ವೃಷಭಾಸನ – ಈ ಇಪ್ಪತ್ತಮೂಱು ದೇಶೀಯಸ್ಥಾನಕಂಗಳ್ (ಲಾಸ್ಯರಂ. ೭-೧೨ ವ). [ಸಂ.]

**ವೃಷಭೇಂದ್ರ** (ನಾ). ೧. ಶ್ರೇಷ್ಠವಾದ ಎತ್ತು ; ಉತ್ತಮವಾದ ಗೂಳಿ : ವೃಷಭೇಂದ್ರನಂದಮಿಾಗಳ್ ವಿಷಮತರಂ ಮುನ್ನಿನಂದಮಲ್ಲಂ . . . ದೇವ ನಿಮ್ಮನೇಂ ಬಗೆದಪನೇ (ಪಂಚತಂ. ೯೬-೧೫೮) ; ಮಕರ ತರಕ್ಷು . . . ವೃಷಭೇಂದ್ರ ತಾರ್ಕ್ಷ್ಯ ಶಶಿ ಭಾನು ನಿಶಾಚರಖಡ್ಗಚಿಹ್ನಕೌತುಕವೆಸೆಯಲ್ (ನಳಚಂ. ೨೪೫). ೨. ಶಿವನ ವಾಹನವಾದ ನಂದಿ ; ಬಸವ : ದೇವಲಋಷಿ ನೆಲಸಿರ್ದತಿಪಾವನ ರುಕ್ಮಾಂಗಪರ್ವತದ ಮಧ್ಯದೊಳಂ ದೇವರ್ಕಳಿಸುತಿರಲೊಡನಾ ವಿಭು ವೃಷಭೇಂದ್ರನಿರ್ದ ಪರಿಯಂತಿರ್ಕುಂ (ಹಮ್ಮಿರ. ೫-೨) ; ಪ್ರಮಥಾಮರರೊಂದುಗೂಡಿ ದಿವ್ಯಾನಕರಾವಮುಣ್ಮೆ ವೃಷಭೇಂದ್ರನನೇಱೆ ನಿಜಾಂಗಕಾಂತಿಯಿಂ ಭಾನುಕರೋತ್ಕರಂ ಮಸುಳೆ ಬಾನ್ನಡೆದರ್ಯ್ಯುದನಿತ್ತಲೀಶ್ವರಂ (ಶಬಶಂ. ೫-೫೭). ೩. [ಜೈನ] ಬಿಳಿಯ ಎತ್ತು : ರಜತಗಿರಿಯಂದ್ರನಂ ಜಿತಶರಚ್ಚಂದ್ರನಂ ನಿಜವದನವನಜಮಂ ಪುಗುವ ವೃಷಭೇಂದ್ರನಂ ನೋಡಿ ಗಜಗಮನೆ ಕನಸೆಂದು ಬಗೆವನ್ನೆಗಂ (ಆದಿಪು. ೭-೨೭ ರಗಳೆ). [ಸಂ.]

**ವೃಷಭೇಂದ್ರಗಮನ** (ನಾ). ನಂದಿಯ ಮೇಲೆ ಸಂಚರಿಸುವವನು ; ಶಿವ : ಘೋರಕಾಲಭುಜಂಗವಿಷಸಂಹಾರನಂ ವೃಷಭೇಂದ್ರಗಮನಾಕಾರನಂ ಭವದೂರನಂ ಕೊಂಡಾಡಿ ಮುಂಡಾಡಿ (ಬಸಪು. ೪೬-೭೪). [ಸಂ.]

**ವೃಷಭೇಶ್ವರ** (ನಾ). ೧. ಶ್ರೇಷ್ಠವಾದ ಎತ್ತು ; ಉತ್ತಮವಾದ ಋಷಭ. ೨. ಶಿವನ ವಾಹನವಾದ ನಂದಿ ; ಬಸವ : ಪುಣ್ಯದ ಪುಂಜದಂತೆ ಶಿವನ ಸದ್ಗುಣರಾಶಿಯಂತೆ ಭಕ್ತರ ಬೆಳ್ವಸದಂತೆಸೆವ . . . ಅಖಂಡಚಿತ್ತಿಂಡ ವೃಷಭೇಶ್ವರನಂ ಕಂಡು ದೂರದಿಂ ವಂದಿಸುತ್ತಿರ್ದನಂ (ಹಮ್ಮಿರ. ೫-೪ ವ). ೩. [ಜೈನ] ಆದಿತೀರ್ಥಂಕರ ; **ವೃಷಭನಾಥ** : ಮುನ್ನಂ ವೃಷಭೇಶ್ವರಂ ವಜ್ರಜಂಘನಾದ ಭವದೊಳಾ ಮಹಾತ್ಮಂಗೆ ತಂಗೆಯಾದ ಸುಂದರಿಯೆ ಕತಿಪಯಭವಪರಿಭ್ರಮಣದಿಂ ಬಂದು . . . ಸುನಂದೆಗಂದು ನಂದನೆಯಾದಳ್ (ಆದಿಪು. ೮-೫೩ ವ). [ಸಂ.]

**ವೃಷಭೋಪಗತೆ** (ನಾ). ಗರ್ಭಕಟ್ಟಿದ ಹಸು ; ಗರ್ಭನಿಂತ ಆಕಳು : "ವೇಹತ್, ವೃಷಭೋಪಗತಾ — ಈ ೨ ಕಟ್ಟಿದಾವು" (ಹಲಾಯು. ೪೫-೧೧೪). [ಸಂ. ವೃಷಭೋಪಗತಾ]

**ವೃಷಮಾರ್ಗ** (ನಾ). ಧರ್ಮಮಾರ್ಗ ; ಸತ್ಪಥ; ಪುಣ್ಯದ ದಾರಿ : ಶ್ರೀದೇವೇಂದ್ರ

ಮುನೀಂದ್ರವಂದಿತಗುಣವ್ರಾತಂ . . . ದುರ್ವಾರಸಂಸಾರವಿಚ್ಛೇದೋಪಾಯನಿಯುಕ್ತ ಸೂಕ್ತಿವೃಷಮಾರ್ಗಾಗ್ರೇಸರಂ ಪಾಪಹೃತ್ಪಾದಾಬ್ಜಂ ದಯೆಗೆಯ್ವನಕ್ಕೆಮಗೆ ಮುಕ್ತಿ ಶ್ರೀಸುಖಾವಾಪ್ತಿಯಂ (ಆದಿಪು. ೧-೧). [ಸಂ.]

**ವೃಷಮುಖ** (ನಾ). ೧. ಎತ್ತಿನ ಮುಖ. ೨. [ಜೈನ] ಎತ್ತಿನಂತೆ ಮುಖವುಳ್ಳ ಒಬ್ಬ ಯಕ್ಷ: ಮನೋಹರವೃಷಲಾಂಛನಂ ವೃಷಮುಖಂ ವೃಷವಾಹನನಿಂದುಕುಂದ ಸೌಂದರತರವರ್ಣನೀ ವೃಷಭನಾಥಕಥಾರಚನೋಕ್ತಿಯಲ್ಲಿ ಮಾಟ್ಕಿರದೆಮಗಾಗಳುಂ ವೃಷಭಯಕ್ಷನವಿಘ್ನಮನಃಪ್ರವೃತ್ತಿಯಂ (ಆದಿಪು. ೧-೮). [ಸಂ.]

**ವೃಷರಥ** (ನಾ). ೧. ನಂದಿವಾಹನ ; ಶಿವ. ೨. ಮೂಷಿಕವಾಹನ ; ಗಣಪತಿ : ಪರಶುಧರ ಗಣಪತಿ ವಿನಾಯಕ ಗಜಾಸ್ಯ ಜಯ ಪುರಹರತನೂಜ ವೃಷರಥ ಲೋಕವಶ್ಯ ಜಯ (ನಳಚಂ. ೨೩.೨). [ಸಂ.]

**ವೃಷರಾಜ** (ನಾ). ೧. = ವೃಷಭೇಶ್ವರ ೧. ೨. = ವೃಷಭೇಶ್ವರ ೨ : ಚಂಡ ಸುರಥನ ಶಿರವನಸುರಹರನಾಣ್ಣೆಯಿಂ ಕೊಂಡು ಗರುಡಂ ಪ್ರಯಾಗವ ನೈದಲೀಶ್ವರಂ ಕಂಡು ವೃಷರಾಜನಂ ಕಳುಹಿ ತರಿಸಿದನದಂ ರುಂಡಮಾಲೆಯ ತೊಡವಿಗೆ (ಜೈಮಿಭಾ. ೧೮ ಸೂಚನ). [ಸಂ.]

**ವೃಷರಾಶಿ** (ನಾ). = ವೃಷಭರಾಶಿ : ಇನಜಂ ಮೇಷದೊಳೊಂದಿದಂದು ಕಪಟಂ . . . ವೃಷರಾಶಿಯೊಳ್ ನೆಲಸೆ ವರ್ಜ್ಯಂ ಸ್ವಲ್ಪವಿತ್ತಂ ವಧೂಜನಮಿತ್ರಂ ಬಹುಭಾರ್ಯಂ (ಜಾತತಿ. ೧೭-೩೨). [ಸಂ.]

**ವೃಷಲ, ವೃಷಳ** (ನಾ). ೧. ಕೀಳುಜಾತಿಯಲ್ಲಿ ಹುಟ್ಟಿದವನು; ಶೂದ್ರ ; ಅಂತ್ಯಜ: "ತುರ್ಯಜಾತಿ ತಾಂ ವೃಷ[ಲನಂತ್ಯ]ವರ್ಣಂ ಶೂದ್ರಂ" (ವಸ್ತುಕೋ. ೬೩-೭೧). ೨. ಕುದುರೆ ; ಅಶ್ವ. ೩. ಬೆಳ್ಳುಳ್ಳಿ. ೪. ಅಧಾರ್ಮಿಕನಾದವನು ; ಪಾಪಾತ್ಮ. ೫. ನೃತ್ಯಗಾರ. ೬. ಎತ್ತು ; ವೃಷಭ. ೭. ಬಹಿಷ್ಕರಿಸಲ್ಪಟ್ಟವನು ; ಹೊರಹಾಕಲ್ಪಟ್ಟವನು. ೮. ಮೇಲ್ಜಾತಿಯಲ್ಲಿ ಹುಟ್ಟಿ, ತನ್ನ ಮತಧರ್ಮವನ್ನು ಪಾಲಿಸದೆ ಜಾತಿಭ್ರಷ್ಟನಾದವನು. ೯. ಚಾಣಕ್ಯನಿಂದ ಪೋಷಿತನಾಗಿ ಪ್ರಸಿದ್ಧ ರಾಜನಾದ ಚಂದ್ರಗುಪ್ತನ ಹೆಸರು ; P ಇವನು ನಂದರಾಜನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿ, ಚಾಣಕ್ಯನಿಂದ ಮಾತ್ರ ಹೀಗೆ ಕರೆಯಲ್ಪಡುತ್ತಿದ್ದವನು : ಎಲೈ ವೃಷಲನೇ, ಅಕಾರಣವಾದ ಇಂಥ ಪೋಲುವೆಚ್ಚಮಂ ಮಾಡಕೂಡದು (ಮುದ್ರಾಮಂ. ೩.೨೫). **ವೃಷಳ** : ೯. ಎಲೈ ವೃಷಳನೇ ದೈವವೇ ಪ್ರಮಾಣವೆಂದು ಪೌರುಷಹೀನರಾದವರು ಹೇಳುವರು (ಮುದ್ರಾಮಂ. ೩.೩೦). [ಸಂ.]

**ವೃಷಲಾಂಛನ** (ನಾ). ೧. = ವೃಷಭಲಾಂಚನ ೩. ೨. [ಜೈನ] ವೃಷಭದ ಚಿಹ್ನೆಯುಳ್ಳ ಒಬ್ಬ ಯಕ್ಷ : ಮನೋಹರವೃಷಲಾಂಛನಂ ವೃಷಮುಖಂ ವೃಷವಾಹನನಿಂದುಕುಂದಸೌಂದರತರವರ್ಣನೀ ವೃಷಭನಾಥ ಕಥಾರಚನೋಕ್ತಿಯಲ್ಲಿ ಮಾಟ್ಕಿರದೆಮಗಾಗಳುಂ ವೃಷಭಯಕ್ಷನವಿಘ್ನಮನಃಪ್ರವೃತ್ತಿಯಂ (ಆದಿಪು. ೧-೮). [ಸಂ.]

**ವೃಷಲಿ** (ನಾ). ೧. ಮದುವೆಯಾಗುವ ಮುನ್ನ ಋತುಮತಿಯಾಗಿ ತಂದೆಯ ಮನೆಯಲ್ಲಿರುವ ಕನ್ಯೆ: ತನ್ನ ತಂದೆಯಾಲಯದೊಳಂ ಮದುವೆಯಾಗದಾಮ್ಮೆನೆರದೊಡಾ ಕನ್ನೆ ವೃಷಲಿಯೆನಿಪ್ಪಳು (ವೀಶೈಪು. ೭-೨-೨೩). ೨. ಮುಟ್ಟಾದ ಹೆಂಗಸು. ೩. ಮಕ್ಕಳಿಲ್ಲದ ಸ್ತ್ರೀ; ಬಂಜೆ. ೪. ಹುಟ್ಟುವಾಗಲೇ ಸತ್ತ ಮಗುವನ್ನು ಹಡೆದವಳು. ೫. ಕೀಳುಜಾತಿಯವಳು ; ಶೂದ್ರಸ್ತ್ರೀ. ೬. ತನ್ನ ಗಂಡನನ್ನು ಬಿಟ್ಟು ಪರಪುರುಷನನ್ನು ಸೇರಿದವಳು. [ಸಂ. ವೃಷಲೀ]

**ವೃಷಲೀಪತಿ, ವೃಷಳೀಪತಿ** (ನಾ). ಶೂದ್ರಸ್ತ್ರೀಯನ್ನು ಮದುವೆಯಾದ ಅಥವಾ ಅಂತಹ ಸ್ತ್ರೀಯನ್ನು ತನ್ನ ಉಪಪತ್ನಿಯಾಗಿ ಪರಿಗ್ರಹಿಸಿದ ಬ್ರಾಹ್ಮಣ. **ವೃಷಲೀಪತಿ:** ಅಶ್ರೋತ್ರಿಯನಾ ವೃಳಿEವೃಷಳೀತಿಪತಿಯಯಂಧನ ಕುರುಡನ ಕೃಶನ ದೀನನ ಸದಾಕೇಶಧಾರಿಯ ದುರಾತ್ಮನ ವಾಚಾಟನಯಿರುವ ಮೊದಲಾದವರ ಶ್ರಾದ್ಧಕ್ಕೆ ಹೇಳಬಾರದು (ಶೇಷಧ. ೨೦-೧೭). [ಸಂ.]

**ವೃಷಲೀವಲ್ಲಭ** (ನಾ). = ವೃಷಲೀಪತಿ : ಮೊದಲಲಾ ಮಾಹಿಷಿಕನನು ಮಧ್ಯದಲಿ ವೃಷಲೀವಲ್ಲಭನನಂತ್ಯದಲಿ ವಾಗ್ಘೋಷಕನ ಕಂಡವರುಗಳ ಭಾಗ್ಯನಿಧಿ ಕದಡಿ ಹರಿವುದು (ಭುವ್ಯಾಉ. ೪-೪೮). [ಸಂ.]

**ವೃಷವಾಹನ** (ನಾ). ೧. ನಂದಿಯನ್ನು ವಾಹನವಾಗಿ ಉಳ್ಳವನು ; ಶಿವ. ೨. [ಜೈನ] ವೃಷಭವಾಹನವನ್ನುಳ್ಳ ಒಬ್ಬ ಯಕ್ಷ : ಮನೋಹರವೃಷಲಾಂಛನಂ ವೃಷಮುಖಂ ವೃಷವಾಹನನಿಂದುಕುಂದಸೌಂದರತರವರ್ಣನೀ ವೃಷಭನಾಥ ಕಥಾರಚನೋಕ್ತಿಯಲ್ಲಿ ಮಾಟ್ಕಿರದೆಮಗಾಗಳುಂ ವೃಷಭಯಕ್ಷನವಿಘ್ನಮನಃಪ್ರವೃತ್ತಿಯಂ (ಆದಿಪು. ೧-೮). [ಸಂ.]

**ವೃಷಸತ್ವ** (ನಾ). [ಕಾಮಶಾ] ಶಶ, ವೃಷ ಮತ್ತು ಹಯ ಎಂಬ ಮೂರು ವರ್ಗದ ಪುರುಷರಲ್ಲಿ ಎರಡನೆಯ ವರ್ಗಕ್ಕೆ ಸೇರಿದವನು : ವಿವಿಧಗುಣಂ ನಾಗರಿಕ ವಿಟ ವಿದೂಷಕ ಪೀಠವರ್ಧನಂ ಪರಿವೃ[ವ್ರಟ್] ತ್ಯಾಗಿ ವಿವೇಕಿ ಭೋಗಿ ಚೆಲ್ವಂ ನವಯೌವನನರುಜನರ್ಥಪರಿ(ತಿ?) ವೃಷಸತ್ವಂ (ಮದತಿ. ೧೧-೧೬). [ಸಂ.]

**ವೃಷಸ್ಕಂಧ** (ನಾ). ಎತ್ತಿನ ಹೆಗಲಿನಂತೆ ವಿಶಾಲವಾದ ಮತ್ತು ದೃಢವಾದ ಹೆಗಲುಳ್ಳವನು : ಆ ಪೀನ ವೃಷಸ್ಕಂಧನುಮಾ ಪದ್ಮಾಸ್ಯೆಯರ ಮನಮನಿರ್ಕುಳಿಗೊಂಡಂ (ಆದಿಪು. ೮-೨೫). [ಸಂ.]

**ವೃಷಸ್ಯಂತಿ** (ನಾ). ೧. ಬೆದೆಯೇರಿದ ಹಸು ; ಉದ್ರೇಕಗೊಂಡ ಆಕಳು. ೨. ಕಾಮಾತುರೆಯಾದವಳು : "ವೃಷಸ್ಯಂತೀ, ರತಾರ್ಥಿನೀ — ಈ ೨ ಸುರತದಬಿಕೆಯವಳ್" (ಹಲಾಯು. ೮೦-೩೩೧). [ಸಂ. ವೃಷಸ್ಯಂತೀ]

**ವೃಷಳ** 'ವೃಷಲ' ನೋ.

**ವೃಷಳೀಪತಿ** 'ವೃಷಲೀಪತಿ' ನೋ.

**ವೃಷಳಿ** (ನಾ). = ವೃಷಲಿ ೧ : ಧರೆಯೊಳಂಜನ ಕುಂಜರಾಖ್ಯಂಗುದಿಸಿ ಬೆಳೆವುತಿರೆ . . . ಬಹುಕಾಲ ವೃಷಳಿಯದೆನಿಪ ತತ್ಸುತೆಗುಚಿತವರನನು ವನದೊಳಟಸಿದನು (ಕೌಶಿರಾ. ೭-೧೨). [< ಸಂ. ವೃಷಲೀ]

**ವೃಷಾಂಕ** (ನಾ). ೧. ನಂದಿಯ ಲಾಂಛನವುಳ್ಳವನು ; ಶಿವ : ಒಯ್ಯಗೆ ಪಾರ್ಥಚ್ಚ ವೃಷಾಂಕನಂಬು ತನುವಂ ಪಚ್ಚಂತೆ ಕೊಂಡತ್ತು ತೊಟ್ಟಗೆ ವೈಮಾನಿಕಕೋಟಿಗಂದು ಪಿರಿದೊಂದುತ್ಸಾಹಮಪ್ಪನ್ನೆಗಂ (ಪಂಪಭಾ. ೮-೧೭). ೨. ಇಲಿಯ ಲಾಂಛನವನ್ನುಳ್ಳವನು ; ಗಣಪತಿ. ೩. ಧಾರ್ಮಿಕ ನಡವಳಿಕೆಯ ವ್ಯಕ್ತಿ ; ಸಾತ್ವಿಕಸ್ವಭಾವದ ಮನುಷ್ಯ. ೧, ೩ : ಅರಿಕಾಮಮದ್ವಂಸಿ . . . ವೃಷಾಂಕಂ ವಿಬುಧನುತನುಮಾ ಕಾಮಿನೀಜೀವಿತೇಶಂ ಪರಮೈಶ್ವರ್ಯಾಸ್ಪದಂ ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ (ಜಗವಿ. ೧-೩). ೪. ನಪುಂಸಕ ; ಷಂಡ. ೫. ಒಂದು ಬಗೆಯ ಸಸ್ಯ. [ಸಂ.]

**ವೃಷಾಕಪಿ** (ನಾ). ೧. ವಿಷ್ಣು : "ವಿಷ್ಣುಃ, ಕೃಷ್ಣಃ, ಕೇಶವಃ . . . ವೃಷಾಕಪಿಃ . . . ವನಮಾಲೀ, ಗದಾಧರಃ — ಈ ೪೫ ನಾರಾಯಣನ ಪೆಸರ್" (ಹಲಾಯು. ೫-೨೩). ೨. ಈಶ್ವರ ; ಶಿವ : ಕಪಿರಥಕುಶಲವನು ಕಂಡಾ ವೃಷಾಕಪಿ [ಪಾಠಾಂ. ವೃಷಧ್ವಜ] ವೃಷಭನಾನನವನು ನಿರೀಕ್ಷಿಸಿ ತೂಗಿದನು ಶಿರವ (ತೊರಾರಾ. ೬-೨೫-೫). ೩. ಬೆಂಕಿ ; ಅಗ್ನಿ. ೪. ಇಂದ್ರ. ೫. ಸೂರ್ಯ. ೬. ಮರದ ಕೊಂಬೆ,– ರೆಂಬೆ. ೭. ಒಂದು ಬಗೆಯ ಪ್ರಾಣಿ. ೮. ಕತ್ತಿ ; ಖಡ್ಗ. "ಶಿಪಿವಿಷ್ಟಾಗ್ನಿ ಮುಕುಂದ ಶಾಖಮೃಗಭೇದಂ ಖಡ್ಗಮಿಂತುಂ ವೃಷಾಕಪಿಶಬ್ದಂ" (ನಾನಾರ. ೫೯). [ಸಂ.]

**ವೃಷಾಧಿಪ** (ನಾ). = ವೃಷಭೇಶ್ವರ ೨ : ನಿಶಿತವಿಷಾಣದಿಂ ಮೃಡವೃಷಾಧಿಪ ನೀಡಿಡಿಜಿದೆತ್ತೆ ತತ್‌ಕ್ಷತ ಪ್ರಸರಮ ತಪ್ಪಲಲ್ಲಿ ಲಿಪಿಯಂತಿರ ವಿಶ್ವಕಥೀಶನೊರ್ವನೆನಿಸಿದಂ (ಶಬಶಂ. ೧-೩೭). [ಸಂ.]

**ವೃಷಾವಾಸ** (ನಾ). ಒಂದು ಬಗೆಯ ಸಸ್ಯ ; ಆಡುಸೋಗೆ ; ಆಡುಮುಟ್ಟದ ಗಿಡ : "ವೃಷಾವಾಸಃ, ಆಟರೂಷಕಃ — ಈ ೨ ಆಡುಸೋಗೆ" (ಹಲಾಯು. ೩೩-೪೫). [ಸಂ.]

**ವೃಷಾಹವ** (ನಾ). ಗೂಳಿಗಳ ಕಾಳಗ ; ಹೋರಿಗಳ ಸೆಣಸಾಟ : ಕಪಿವಿಲಂಘನ ಕೀಟನಿಯುದ್ಧ ದ್ವಿಪರಣಪ್ರಕರಣ ವೃಷಾಹವ[ಪಾಠಾಂ. ವಹ] ಶಫರಿಸಂಚರ ಸರ್ಪಗತಿ ಸವ್ಯಾಪಸವ್ಯಗಳ ಚಪಲತರ ಪಯಪಾಡುಗಳ ಕಡುಸುಪಿತ ರ್ಕರ್ಕಶಮಾನಸದ ರಣನಿಪುಣ ನಿಕಷಾಸೂನುಗಳು ಕಾದಿದರು ಕಡುಹಿನಲಿ (ತೊರಾರಾ. ೭-೧೪-೧೭). [ಸಂ.]

**ವೃಷಿ** (ನಾ). ೧. ವೇದಾಧ್ಯಯನ ಮಾಡುವ ವಿದ್ಯಾರ್ಥಿಯ ಆಸನ ; ದರ್ಭಾಸನ ; ಕುಶಾಸನ. ೨. ನಾಲ್ಕುವೇದಗಳನ್ನೂ ಪಠಿಸುವವನು ;

ಚತುರ್ವೇದಪಂಡಿತ : ವೇದಶಾಸ್ತ್ರದ ನಿಷ್ಠನೇ ಭಟ್ಟನ್ಯ ನಾಲ್ಕುವೇದಪಾಠಕನೆ ವೃಷಿಯೇಕಶಾಖೆಯ ಮಾತ್ರ ವೇದವೋದುವನ ಸುಶ್ರೋತ್ರಿಯಂ ಸಷಡಂಗವೇದಿಯೆ ಯನೂಚಾನನು (ವೀಶೈಪು. ೭-೨-೧೮). [ಸಂ. ವೃಷೀ]

**ವೃಷೆ** (ನಾ). ೧. ಹಸು ; ಆಕಳು ; ಗೋವು : "ರೋಹಿಣಿಯನಡ್ವಿಯರ್ಜುನಿ ವೃಷೆ ಗೋ ವೃಷಭವಾಹಿನಿಯೆನೆ ಹಸು" (ಮಂಗರಾ. ೫೫-೩). ೨. ಒಂದು ಬಗೆಯ ಮರ : "ಚಿತ್ರಾ, ಉಪಚಿತ್ರಾ, ನ್ಯಗ್ರೋಧೀ . . . ವೃಷಾ . . . ರಂಡಾ, ಮೂಷಕಪರ್ಣೀ – ೧೦ ಎಲಿಯಾಲದ ಮರಕ್ಕೆ ಹೆಸರು, ಇಲೀಕಿಮಿಗಿಡ" (ಸಿದ್ಧಾಂತಿ. ೧೩೨). ೩. ಒಂದು ಬಗೆಯ ಸಸ್ಯ. [ಸಂ. ವೃಷಾ]

**ವೃಷೇಂದ್ರಧ್ವಜ** (ನಾ). ೧. ನಂದಿಯ ಚಿಹ್ನೆಯುಳ್ಳ ಬಾವುಟ, – ಪತಾಕೆ. ೨. ನಂದಿಯ ಧ್ವಜವುಳ್ಳವನು ; ವೃಷಭಲಾಂಛನವುಳ್ಳವನು ; ಶಿವ : ರುರು ಘಂಟಾಕರ್ಣಂ . . . ಶಂಕರನೋಂಕಾರಂ ವೃಷೇಂದ್ರಧ್ವಜಂ . . . ವೀರಭದ್ರಂ (ರಾಜಶೇ. ೧೪-೧೫೩). [ಸಂ.]

**ವೃಷ್ಟಿ** (ನಾ). ೧. ಮೋಡ ಕರಗಿ ಸುರಿಯುವಿಕೆ, – ವರ್ಷಿಸುವಿಕೆ ; ಮಳೆ : ಕಱಲಭೂಮಿಯಲ್ಲಿ ಕಱೆದ ವೃಷ್ಟಿಯ ತೆಱನಂತೆ ಅವರೆತ್ತ ಬಲ್ಲರು ಎನ್ನ ಸುಖದುಃಖವ (ಬಸವು. ೪೫೫) ; ಅರಸ ಕೇಳ್ಕೆ ವೃಷ್ಟಿಗಳನಾ ಸುರಪ ಸುರಿಯದೆ ನಿಂದನಳಿದವು ಧರೆಯೊಳೋಷಧಿಗಳು ಮಹಾದ್ಭುತವಾಯ್ತು ಲೋಕದಲಿ (ತಿಮ್ಮಕೃ. ೯-೫೨). ೨. ಸುರಿಯುವಿಕೆ ; ವರ್ಷಿಸುವಿಕೆ ; ಧಾರಾಕಾರವಾಗಿ ಬೀಳುವಿಕೆ : ಕವಿತಾ ವಲ್ಲೀಸುಧಾವೃಷ್ಟಿ ಸರ್ವರಸೋತ್ಪಾದನವೀನಸೃಷ್ಟಿ ಬುಧಹರ್ಷಾಕೃಷ್ಟಿ ಸರ್ವಾಂಗ ಸುಂದರಿ ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಲೀರಂಗದೊಳ್ (ಪಂರಾಮಾ. ೧-೭); ಅಂತರ್ಮುಹೂರ್ತಕಾಲಂ ಉತ್ಕೃಷ್ಟದಿಂ ದೇಶೋನಪೂರ್ವ ಕೋಟಿಕಾಲಂ ಭೇದಾಭೇದ ರತ್ನತ್ರಯಾತ್ಮಕಧರ್ಮಾಮೃತವೃಷ್ಟಿಯಿಂ ಆಸನ್ನಭವ್ಯಸಸ್ಯಸಮೃದ್ಧಿಯಂ ಮಾಡುತ್ತುಂ (ತತ್ತ್ವಪ್ರ. ೩೭೮). [ಸಂ.]

**ವೃಷ್ಟಿಕಾರಕ** (ಗು). ೧. ಮಳೆಯನ್ನು ಸುರಿಸುವ. (ನಾ). ೨. ಮಳೆ ಸುರಿಯುವಂತೆ ಮಾಡುವವನು : ವೃಷ್ಟಿಕಾರಕನಾದ ವೈಶ್ವಾನರಾಗ್ನಿಯ ಪ್ರಶಂಸೆಯನ್ನು ನಾನೂ ಪಠಿಸುತ್ತೇನೆ (ಋಕ್ಸಾರ. ೭). [ಸಂ.]

**ವೃಷ್ಟಿಕೆ** (ನಾ). ಮಣ್ಣಿನ ಪಾತ್ರೆ ; ಮಡಕೆ : "ಮಣ್ಣ ಮಡಕೆ ವೃಷ್ಟಿಕೆಯೆನಿಪ್ಪುದು" (ಮಂಗರಾ. ೧೩೮-೨). [ಸಂ. ವೃಷ್ಟಿಕಾ?]

**ವೃಷ್ಣಿ** (ನಾ). ೧. ಮೋಡ ; ಮೇಘ. ೨. ಆಡು ; ಮೇಷ : "ಅವಿಮೇಷವುರಭ್ರಂ ಮೇಂಡವದೇಳಕವೃಷ್ಣ್ಯುರಣ(ಕ)ಮೇಕಾರ್ಥಂ" (ವಸ್ತುಕೋ. ೯೦-೧೧). ೩. ಬೆಳಕಿನ ಕಿರಣ,– ರೇಖೆ. ೪. ಕೃಷ್ಣನ ಒಬ್ಬ ಪೂರ್ವಜ. ೫. ಯದುವಂಶದ ಒಬ್ಬ ರಾಜ : ರಾಜೀವನೇತ್ರನಿಂತೆನುತುಮಂಧಕವೃಷ್ಣಿಭೋಜರನಿಖಿಳಯಾದವಕುಲದ ಪಟುಭಟಸಮಾಜಮಂ ಪ್ರದ್ಯುಮ್ನನೊಡನೆ ಸುರಥನ ರಥಕ್ಕೆಣೆಯೊಡ್ಡಿ (ಜೈಮಿಭಾ. ೧೪ -೩). ೬. ಕೃಷ್ಣ. ೭. ಇಂದ್ರ. ೮. ಬೆಂಕಿ ; ಅಗ್ನಿ. ೯. ವಾಯು ; ಗಾಳಿ. ೧೦. ಸಂಪ್ರದಾಯಬಾಹಿರನಾದವನು ; ಪಾಖಂಡಿ. [ಸಂ.]

**ವೃಷ್ಣಿಕುಲ** (ನಾ). ಯಾದವಕುಲ ; ಯದುವಂಶ : ಸಾಕಿನ್ನು ಜಿಷ್ಣುವಂ ಕರೆಸು ತೊಲಗೆನುತೊಂದು ಸರಳಿಂದೆ ವೃಷ್ಣಿಕುಲತಿಲಕನ ಕುಮಾರಕನ ಧನುವನೇಳ್ತುಂಡಾಗಿ ಖಂಡಿಸಿದನು (ಜೈಮಿಭಾ. ೧೨-೩೨) ; ಭಾಗವತಸಂಪ್ರದಾಯದವರ ಆಧಾರಗಳನ್ನು ಪರಿಶೀಲಿಸಿ ನೋಡಿದರೆ ಈ ವಾಸುದೇವ ವೃಷ್ಣಿಕುಲಕ್ಕೆ ಸೇರಿದವನೆಂಬುದು ವ್ಯಕ್ತವಾಗುತ್ತದೆ (ಭಾರದ. ೨೮೩). [ಸಂ.]

**ವೃಷ್ಯ** (ಗು). ೧. ಕಾಮಪ್ರಚೋದಕವಾದ ; ಕಾಮೋತ್ತೇಜಕವಾದ ; ಲೈಂಗಿಕ ಭಾವನೆಗಳನ್ನು ಉದ್ದೀಪನಗೊಳಿಸುವ : ಪರಿಹರಿಸಿದ ನಾಂ ವೃಷ್ಯೇಷ್ಟ ರಸಂಗಳನೆಂದು ನಿರ್ಮಳಾಚಾರಪುರಸ್ಸರಮಾ ಮುನೀಂದ್ರನಾರ್ತಸಗಿ ರಸಪರಿತ್ಯಾಗಮೆಂಬ ತಪಮಂ ತಳೆದಂ (ಸುಕುಮಾ. ೪-೭). (ನಾ). ೨. ಕಾಮಪ್ರಚೋದಕವಾದುದು ; ಕಾಮೋತ್ತೇಜಕವಾದ ದ್ರವ್ಯ : ಅಭಿಷವಾಹಾರ — ಧಾನ್ಯಾಮ್ಲಾದಿ ದ್ರವದ್ರವ್ಯಮುಂ ವೃಷ್ಯಮುಂ ಅಪ್ಪ ಅಭಿಷವಾಹಾರಮುಂ (ತತ್ತ್ವಪ್ರ. ೨೮೪). ೩. ಸತ್ತ್ವಯುಕ್ತವಾದುದು ; ವೀರ್ಯವೃದ್ಧಿಯನ್ನುಂಟುಮಾಡುವಂತಹುದು : ಕೂಷ್ಮಾಂಡರಸಾಯನ . . . ಸೇವಿಸಿದರೆ . . . ಶರೀರವು ಪುಷ್ಟವೂ ವೃಷ್ಯವೂ ಬುದ್ಧಿ ಮತ್ತು ಬಲಪ್ರದವೆಂದು ಧನ್ವಂತರಿಯು ಹೇಳಿರುತ್ತಾನೆ (ಸಕವೈ. ೪೫೨ ಪರಿ). [ಸಂ.]

**ವೃಷ್ಯಗಂಧ** (ನಾ). ಒಂದು ಬಗೆಯ ಸಸ್ಯ : "ವೃಷ್ಯಗಂಧ – ನೆಲಗುಂಬಳ" (ಓಷಧಿ. ೧೫೭). [ಸಂ.]

**ವೃಷ್ಯರಸ** (ನಾ). ಕಾಮೋತ್ತೇಜಕವಾದ ರಸ ; ಕಾಮೋದ್ದೀಪನಗೊಳಿಸುವ ದ್ರವ : ಯುವತಿಕಥಾಲೋಕನಭೂತವಿಭವಚಿಂತಾಂಗಸಂಸ್ಕೃತಂ ವೃಷ್ಯರಸಾಭ್ಯವ ಹಾರತ್ಯಜನಂ ಪಂಚವಿಧಂ ಬ್ರಹ್ಮವ್ರತಂ ಜಿನೇಶ್ವರಮತದೊಳ್ (ಶಾಂತಿಪು. ೭-೫೪). [ಸಂ.]

**– ವೆ** (ಪ್ರ). ಧಾತುಗಳ ಮೇಲೆ ಹತ್ತಿ ಭಾವನಾಮದ ಅರ್ಥವನ್ನು ಕೊಡುವ ಒಂದು ಕೃತ್ಪ್ರತ್ಯಯ : 'ತೆಱವೆ', 'ಪೋಲ್ವೆ', 'ಮಱವೆ' ಪರಾ.

**ವೆಂಕಟ** (ನಾ). (ಮೂಲತಃ ತಿರುಪತಿಯ ಬೆಟ್ಟದ ಮೇಲೆ ಪ್ರತಿಷ್ಠಿತಗೊಂಡು ಪ್ರಸಿದ್ಧವಾಗಿರುವ) ವಿಷ್ಣುವಿನ ವಿಗ್ರಹ ; ಶ್ರೀನಿವಾಸ ; ವೆಂಕಟೇಶ : 'ವೆಂಕಟರಮಣ' ಪರಾ. [< ಸಂ. ವೇಂಕಟ./ ☞ ಕಿಟೆಲ್ ಅವರ ಕೋಶದಲ್ಲಿ ಈ ಶಬ್ದವನ್ನು ದೇಶ್ಯವೆಂದು ಪರಿಗಣಿಸಿದೆ]

**ವೆಂಕಟಗಿರಿ** (ನಾ). ೧. ಪ್ರಸಿದ್ಧವಾದ ವಿಷ್ಣುವಿನ ವಿಗ್ರಹವು ಪ್ರತಿಷ್ಠೆಗೊಂಡಿರುವ ಬೆಟ್ಟ ; ತಿರುಪತಿಬೆಟ್ಟ ; ತಿರುಮಲೆ : ತಿರುಪತಿ ಬೆಟ್ಟವನ್ನು ವೆಂಕಟಗಿರಿ ಎಂದೂ ಕರೆಯುತ್ತಾರೆ (ರೂಢಿ). ೨. ತಿರುಮಲೆಯಲ್ಲಿರುವ ಕೋಟೆ, – ದುರ್ಗ : (೩). [< ಸಂ. ವೇಂಕಟಗಿರಿ]

**ವೆಂಕಟಪತಿ** (ನಾ). ೧. ತಿರುಮಲೆಯ ಅಧಿದೇವತೆ ; ವೆಂಕಟೇಶ : ಅವರು ಆರ್ತರಾಗಿ ವೆಂಕಟಪತಿ ನೀನೇ ಗತಿ ಎಂದು ಮೊರೆಯಿಟ್ಟರು (ರೂಢಿ). ೨. ಒಂದು ಬಗೆಯ ನಾಣ್ಯ : ಬ್ರಿಟಿಶಸರಕಾರದ ಅಮಲಿನ ಆರಂಭದಲ್ಲಿ . . . ೧೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡಿಯುತ್ತಿದ್ದವು. ಅವುಗಳ ವಿವರ — ೧ ಗಜಪತಿ . . . ೧೪ ವೆಂಕಟಪತಿ; ಇವೆಲ್ಲ ಕಿಮ್ಮತ್ತು ೩ ರೂ ಆ ೮ (ಕಭಾಗ . ೨೮೦). [< ಸಂ. ವೇಂಕಟಪತಿ]

**ವೆಂಕಟರಮಣ** (ನಾ). ೧. = ವೆಂಕಟಪತಿ ೧ : ತಿರುಪತಿ ವೆಂ[ಪಾಠಾಂ. ವೇಂ]ಕಟರಮಣ ನಿನಗೇತಕೆ ಬಾರದು ಕರುಣ (ಪುರಂದ. ೧-೭೭ ಪಲ್ಲವಿ) ; ಸಂಕಟ ಬಂದಾಗ ವೆಂಕಟರಮಣ (ಗಾದ). [< ಸಂ. ವೇಂಕಟರಮಣ]

**ವೆಂಕಟಾಚಲ** (ನಾ). = ವೆಂಕಟಗಿರಿ ೧ : ವೆಂಕಟಾಚಲನಿಲಯಂ ವೈಕುಂಠಪುರವಾಸಂ ಪಂಕಜನೇತ್ರಂ ಪರಮಪವಿತ್ರಂ (ಪುರಂದ. ಧಾ. ೧-೧೦೦ ಪಲ್ಲವಿ). [< ಸಂ. ವೇಂಕಟಾಚಲ]

**ವೆಂಕಟಾದ್ರಿ** (ನಾ). = ವೆಂಕಟಗಿರಿ ೧ : ಆದಿನಾರಾಯಣನೆಂಬ ಪರ್ವತವನು ಭೇದಿಸಿ ನಿಂತವನ ಸಾಧಿಸಿ ಮುಂದಣ ವೆಂಕಟಾದ್ರಿಯ ಮೇಲೆ ಪಾದವನೂಱಿದನ . . . ಪಾದವ ತೋಱೆನಗೆ (ಪುರಂದ. ಧಾ. ೩-೮೫-೭). [< ಸಂ. ವೇಂಕಟಾದ್ರಿ]

**ವೆಂಕಟೇಶ** (ನಾ). = ವೆಂಕಟಪತಿ ೧ : ವೆಂಕಟೇಶ ಬೇಡಿಕೊಂಬೆ ಕೃಪೆಯ ಪಾಲಿಸೋ (ಪುರಂದ. ಧಾ. ೧-೯೯ ಪಲ್ಲವಿ). [< ಸಂ. ವೇಂಕಟೇಶ]

**ವೆಂಗದ** (ನಾ). ಒಂದು ವಂಶದ ಹೆಸರು : ಗಂಗರ ನೊಱಮ್ಬರಾ ಒಕ್ಕಲಾಚನ್ದ್ರತಾರ ಕಮ್ ಅರ್ರುಸಗೆಯ್ವನ್ನೆಗಮಿಾ ದತ್ತಿಯಮ್ಪೊಮ್ಪಲ್ಲ ವೆಂಗದರ ಒಕ್ಕಲ್ಗೆ ಸಲಿಪೋ ಸತ್ಯಮನ್ತ (ಎಕ. X. ಕೋಲಾರ. ೭೯-೧೫ ; ಸು.890). [?]

**ವೆಂಗಿ₁, ಬೆಂಗಿ** (ನಾ). (ಈಗಿನ ಆಂಧ್ರಪ್ರದೇಶದ ಕರಾವಳಿಯಲ್ಲಿರುವ) ಒಂದು ಪ್ರದೇಶದ ಹೆಸರು ಮತ್ತು ಆ ಪ್ರದೇಶಕ್ಕೆ ಸೇರಿದ ವ್ಯಕ್ತಿ ; ☞ ಇದು ಕನ್ನಡದ ಆದಿಕವಿ ಪಂಪನು ಇದ್ದ ಪ್ರದೇಶ : ನಿರುಪಮದೇವನ ರಾಜ್ಯದೊಳರಿಕೇಸರಿ ವೆಂಗಿವಿಷಯಮಂ ತ್ರಿ[ಕಳಿಂಗಂ] ಬೆರಸೊತ್ತಿಕೊಂಡು ಗರ್ವದೆ ಬರೆಯಿಸಿದಂ ಪೆಸರನಖಿಳ ದಿಗ್ಭಿತ್ತಿಗಳೊಳ್ (ಪಂಪಭಾ. ೧-೨೦) ; ವೆಂಗೀವಿಷಯಂ ತ್ರೈಭುವನಂಗಳೊಳಗ್ಗದ ವಿಷಯಂ (ಶಾಂತಿಪು. ೧-೪೨). **ಬೆಂಗಿ** : ಪೊಣರ್ದಿದಿರಾಗಿ ತಾಗಿದೊರನಾನೆಯೊಳೊಕ್ಕುವನೆಂದು ಬೆಚ್ಚಿ ಕೊಂಕಣಮೆಟ್ಟಿದ್ದಿಯಿಕ್ಕೆ ಬೆಂಗಿ ಬೆಱಗಾಗೆ (ಸೌಇಇ. XI-i, ೫೨-೯ ; 1007).

**ವೆಂಗಿ₂** (ನಾ). ದಡ್ಡ ; ಮೂರ್ಖ (?) : ಸಾಕ್ಷಾತ್ ಲಿಂಗವಲ್ಲದೆ ಬಳ್ಳವೇ ಅದು ವೆಂ[ಪಾಠಾಂ. ಲೆಂ]ಗಿಗಳಿರಾ ಕಂಡುಕಂಡಿನ್ನೇಕೆ ಗಳಹುವಿರಿ (ಬಸವು. ೯-೨೦). 'ಪೆಂಗ' ಪರಾ. [?]

**ವೆಂಗಿಪಟು** (ನಾ). (ಈಗಿನ ಆಂಧ್ರಪ್ರದೇಶದ ಕರಾವಳಿಯಲ್ಲಿರುವ) ಒಂದು ಊರಿನ ಹೆಸರು : ಆ ಮಳಯಾಚಳ ಹಿಮಗಿರಿ ಸೀಮಾವನಿತಳ[ಕೆ] ಬೆಂಗಿಮಂಡಳದೊಳ್ ಚೆಲ್ವಾವಗಮ ತನಗದೊಂದೂರ್ ನಾಮದೊಳಂ ವೆಂಗಿಪಟು ಕರಂ ಸೊಗಯಿಸುಗುಂ (ಪಂಪಭಾ. ೧೪-೪೦); ಜಗದೊಳಗಿದೊಂದು ಮಿಗಿಲೆನೆ ನೆಗಟ್ಟಿಪುದು ವೆಂಗಿವಿಷಯಮಾ ವಿಷಯದೊಳೊಳ್ಪಗಣಿತಮೆನೆ ಸಪ್ತಗ್ರಾಮಗಳೊಳಮಾ ವೆಂಗಿಪಟು ಕರಂ ಸೊಗಯಿಸುಗುಂ (ಛಂದೋಂಬು. ೧-೧೨). [ವೆಂಗಿ$_1$ + ಪಟು$_1$ (< ಪಟುವ)]

**ವೆಂಟಣಿಸು, ವೆಂಠಣಿಸು** (ಕ್ರಿ). ೧. ಮುತ್ತು ; ಸುತ್ತುಗಟ್ಟು ; ಆಕ್ರಮಿಸು : ಗೆಂಟರಲಿ ನಮ್ಮೊಡ್ಡ ಸುತ್ತಲು ವೆಂಟಣಿಸಿ ರಿಪುಸೇನೆಯಿದೆ ಏನುಂಟು ಮಾಡುವುಪಾಯವೆಂದನು ನಗುತ ಮುರವೈರಿ (ಕುವ್ಯಾದ್ರೋ. ೧೦-೨೬); ಪ್ರಳಯದ ಮುಗಿಲ ಮೋಹರದಂತೆ ವೆಂಟಣಿಸಿದರು ರಿಪುಭಟನ (ನಿಭಾಗ. ೪-೯-೧೫) ; ಏಗಾಲಮಿಂತು ವೆಂಟಣಿಸಿ ನೀ ಮುದಿಯ ಮರಿಯಂತೆ ಕಾವೆ ಪಳನನಸಿನೀ ನಿಧಿಯು? (ಗಿಳಿವಿಂ.೨೭-೯). ೨. ವ್ಯಾಪಿಸು ; ಆವರಿಸು : ಎಂಟುಂ ದೆಸೆಗಳ ನಾದಂ ವೆಂಟಣಿಸೆ ನಿನಾದಮೊಳ್ಪನೆಸಗುವ ಮಾಲಾಘಂಟೆಯುಮಂ ಸೊಗಇಸುವ್ಯೆ ಗಂಟೆಯುಮಂ ಚಂದ್ರನಾಥಗೃಹಕರ್ಪ್ಪಿಸಿದಂ (ಕಇ. I. ೬೫-೪ ; 1484) ; ಉರಿ ಛಡಾಳಿಸಿ ವೆಂಟಣಿಸಿದುದು ತಿರುಗಿ ಬರೆ ಬಳಿಕಮುಮ ಲಂಕಾಪುರವನುಪ್ಪರಿಸಿದುದು ಗಾವಳಿ ಗಗನದಳತೆಯಲಿ (ತೊರರಾ. ೫-೮-೭೮) ; ಪಗಲ ದೆಸೆಗಳುಕಿ ಪರೆದಿರ್ದ ಬೆಳ್ದಿಂಗಳೀ ನಗರಮಂ ಪೊಕ್ಕು ವೆಂಟಣಿಸಿ ಮಾರ್ಮಲೆತಿರಲ್ (ಜೈಮಿಭಾ. ೧೭-೭). ೩. ಗುಂಡಾಗಿ ಸುತ್ತುವರಿ ; ವರ್ತುಲಾಕಾರವಾಗಿರು : ಜ್ಞಾನವೃಕ್ಷದ ಬಳಿಯೆ ವೆಂಟಣಿಸಿ ಕುಳಿತದರ ಫಲವ ಮೆಲಲಾರದದನಕ್ಕಜದೊಳೀಕ್ಷಿಸುವ ಹಳೆಯ ಹಾವನ, ಹೊನ್ನಗದ್ದುಗೆಯನೇರಿ ಕುಳಿತಲ್ಲಿ ತನ್ನೆದುರಲ್ಲಿ ನಿಂದ ಯೇಸುವ ನಿಟ್ಟಿಸಿದನಾ ಪಿಲಾತಂ (ಗೊಲ್ಗೊಥಾ. ೧-೨೨). ೪. ಸೀಳು ; ಒಡೆ ; ಭೇದಿಸು : ತಂದೆ ನಿನ್ನಯ ಗಂಟಲನು ಮುಱಿವಂದು ಕಂಭವ ವೆಂಟಣಿಸಿ ಬಿಗಿದೊಗೆದನಲ್ಲೈ ನೃಹರಿ ಜಗವಱಿಯೆ (ನಿಭಾಗ. ೭-೧೩-೧೧). ೫. ಉಡು ; ಧರಿಸು : ಖುಲ್ಲರೊಡನೆಯೆ ಖೇಳಮೇಳಕೆ ಚಲ್ಲಣವ ವೆಂಟಣಿಸಲಾ ಜನವೆಲ್ಲ ಮಱುಗಿತು ಧರ್ಮಜನ ಮಱುಜೂಜಿನುಬ್ಬಟೆಗೆ (ಕುವ್ಯಾಸ. ೧೭-೪೭). ೬. ಒಟ್ಟಾಗು ; ಗುಂಪುಗೂಡು : ತುರಗಚಯ ವೆಂ[ಪಾಠಾಂ.ಟೆಂ]ಟಣಿಸಿ ಹೂಡಿದ ವರರಥಕೆ ಬಲವಂದು ಕೈದುವ ಧರಿಸಿಯೇಱಿದನರಸ ಮಂಗಳವಾದ್ಯರಭಸದಲಿ (ನಳಚ. ೯-೧೮) ; ಲಕ್ಷಮೊರ್ವನ ಬಳಿಯೊಳು ಗಣಿತಕಿಹುದಿನಿತು ಬಲಮಿನಿತು ಬಲದಿಂದ ವೆಂಟಣಿಸಿರ್ಪ ದಳಪತಿಗಳೆಪ್ಪತ್ತು ಮಂದಿ ಸಂದಣಿಸಿ ಬರುತಿಹುದು ಹಂಸಧ್ವಜನೃಪಾಲಕಂ ಪೊಱಮಟ್ಟು ನಡೆವಡೆಯೊಳು (ಜೈಮಿಭಾ. ೧೦-೪೩). ೭. (ಕೋಪ, ಉದ್ವೇಗ, ಭಯ ಮುಂತಾದುವುಗಳಿಂದ) ಕಂಪಿಸು ; ನಡುಗು ; ಅದುರು : ಕೋಪದಲಿ ವೆಂ [ಪಾಠಾಂ. ಕಂ, ಟೆಂ]ಟಣಿಸುತರಿಭಟನ ತೆಗೆವೆನು ಸುಂಟಿಗೆಯನೆಂದೆನುತ ದಾನವಕಂಟಕನು ತೆಗೆದೆಚ್ಚನಾ ಬ್ರಹ್ಮಾಸ್ತ್ರದಲಿ ನೃಪನ (ನಿಭಾಗ. ೧೦-೫೭-೫೩). ೮. ಅಂದಗೊಳ್ಳು ; ಶೋಭಿಸು : ಬೇಱೊಂದು ವರ್ಣವೆಯ್ದಿ ಟೆಂಟಣಿಪ ನುಣ್ಮೊಗಂ ಮೊಳೆವ ಕಂಪನವಿನಿತು ವೆಂಟಣಿಸೆ ಪರವೆ ಬಿಗಿಯಪೆ. ಮೆಱೆದಳ್ನೀಲಕಂಠನಪರಾವತಾರನ ಸೌಂದರಾಧಿಪನ ಅಂಗಲತೆ ಪೊರೆಯೇಱಲು (ಸೌಂದಪು. ೯-೧೧). ೯. ಸಂಪಾದಿಸು ; ಹೊಂದು ; ಪಡೆ : ಕೃಷ್ಣನ ಮುಂದೆ ಭಾಷೆಯಂ ಪೂರೈಸಿ ಟೆಂಟಣಿಸದೊಡಲಂ ತೊಱೆದು ಮುಕ್ತಿರಾಜ್ಯಮಂ ವೆಂಟಣಿಸಿಕೊಂಡಂ ಸುಧನ್ವಂ (ಜೈಮಿಭಾ. ೧೩-೬೨). ೧೦. (ನಾದವು) ಉಂಟಾಗು ; ಹೊರಹೊಮ್ಮು : ತುಂಟರಕ್ಕಸರ ಹಾಹೆಗಳ ಮಧ್ಯದ ಹೊನ್ನಗಂಟೆಯ ನಾದವಂಘ್ರಿಯೊಳು ವೆಂಟಣಿಸಲು ಕೃಷ್ಣನಂದು ಕ್ರೀಡಾಕುಲಮಂಟಪವನು ಸಾರ್ದನೊಲಿದು (ಮೋಹತ. ೧೪-೨೭). ೧೧. ನಮಸ್ಕರಿಸು ; ವಂದಿಸು : ನಸುನಗೆ ಕುಣಿಯೆ ಮುಖದಲಿ ಮುನಿನಿಗೆ ವೆಂಟಣಿಸಿ ಲಜ್ಜಾಭರದಿ ನುಡಿದನು ದೂತನೀ ಮಾತ (ಕುವ್ಯಾಅ. ೭-೧೦೦). ೧೨. ಅನುವುಗೊಳಿಸು ; ಸಿದ್ಧಪಡಿಸು ; ಸಜ್ಜುಮಾಡು : ಬಂದನು ಭೂಪ ಬೀಯಗರೊಡನೆ ಹಂತಿಯ ವೆಂಟಣಿಸಿದರು ರತುನಗದ್ದುಗೆಯ (ಕಾಶಿರಾ. ೨-೬೧). ೧೩. ಆತಂಕಪಡು ; ತಳಮಳಗೊಳ್ಳು : ಬೇಂಟೆಗಂ ಭೀಮಸೇನಂ ಪೋಗಿ ಹೇಗಿಹನೊ ಉತ್ಪಾತದಪಶಕುನವು ಉಂಟಾಗಿ ತೋರುತಿದೆ ನೋಡಬೇಕೆಂದೆನುತ ವೆಂಟಣಿಸಿ ತಮ್ಮಂದಿರಂ ಕೂಡಿಕೊಂಡು ಪಥ ಕಂಟಕದಿ ತೊಳಲಿ ಬರೆ ಕಂಡರಾ ಭೀಮನಂ ಗಂಟಿಕ್ಕಿದಾ ಸರ್ಪನ (ತುರಂಗ. ೩೧-೩೨). ೧೪. ಸೇರು ; ಕೂಡು : ಅಣುವಿನಲಿ ಲಘುವಿನಲಿ ಗುರುವಿನಯೆಣಿಕೆಯಲಿ ಮಹಿಮೆಯಲಿ ಪ್ರಾಪ್ತಿಯ ಭಣಿತೆಯಲಿ ಶೀಲತ್ವದಲಿ . . . ವೆಂಟಣಿಸಿ ರೇಚಕ ಪೂರಕದ ರಿಂಗಣವನಱಿವುದು ಯೋಗಸಿದ್ಧಿಗೆ ಲಕ್ಷಣವನು (ಕುವ್ಯಾಉ. ೪-೯). ೧೫. ಲಭಿಸು; ಪ್ರಾಪ್ತವಾಗು : ತೃಣದ ಕೊನೆಯ ಜಲಕಣವೆನಿಪುದು ವೆಂಟ[ಪಾಠಾಂ. ಠ]ಣಿಸಿದ ಜವ್ವನಮಿದಱೊಳಗೆ ಎಣಿಸದೆ ಕಮ್ಮಂಗಣೆ ಕುಣಿಸಿದವೊಲ್ ಕುಣಿಯದವನೆ ಕುಱಿಯೆನಿಸುವನು (ಜನವ. ೨-೪). ೧೬. (?) : ವೆಂಟಣಿಸುತ ಬಹುರೋಷದುಬ್ಬಿನ ಗಂಟಿನಲಿ ಸೊಕ್ಕಿರ್ದರು (ಅಭಿಕಾ. ೩೪).

**ವೆಂಠಣಿಸು:** ೧. ಅವನಿಯದಿರಿತು ಗಗನ ತಾರಾನಿವಹವನು ಬಿದಿರಿತ್ತು ವರಪಾಂಡವರು ಕಣನೊಳು ವೆಂಠಣಿಸಿದರು ಕಮಠ ಟೆಂಠಣಿಸೆ (ಕುವ್ಯಾಉ. ೧೧ ಸೂಚನ) ; ತುಂಟಿಗಂಡಿಗಳೆಣಿಸಲವು ನೂಱೆಂಟು ಹುಲಿಮುಖನಂಕದರಿಗಳು ವೆಂಠಣಿಸಲವು ಏಳುಸುತ್ತಿನ ಕೋಟೆಗೀ ಕ್ರಮದಿ (ಉತ್ತಕ. ೫-೨೭). ೨. ಚಾತುರಂಗದ ದಳದ ತೆರಳಿಕೆ ತೆಕ್ಕೆಮಿಗೆ ಕುರುಸೇನೆ ನಡೆತಂದು ಕಳನ ವೆಂಠಣಿಸಿದವು (ಕುವ್ಯಾದ್ರೋ. ೪-೧೪) ; ಘನಮಹಿಮನದಟನ ತಲೆಗೆ ಕೊಟ್ಟನು ವರಸುದರ್ಶನವ ಗಹಗಹಿಪ ಘನತೇಜದಲಿ ಶತಮಿಹಿರರಡಗಲು ಕಮಲಜಾಂಡದ ಕುಹರವನು ವೆಂಠಣಿಸಿ ನಡೆದುದು ಭಟನ ಸಮ್ಮುಖಕೆ (ನಿಭಾಗ. ೧೦-೮೨-೫೨). ೩. ತೆಗೆದು ತಲೆಮಾಲೆಯನು ಹಸುರಂಗಿಗಳ ತೊಟ್ಟನು ಸುತ್ತುಬರೆ ಹೀಲಿಗಳ ಹರಹಿನ ಪಾರಿವದ ಚಲ್ಲಣವ ವೆಂಠಣಿಸಿ[ಪಾಠಾಂ. ಅಳವಡಿಸಿ] . . . ಕಿರಾತವೇಷದ ವಿಗಡದೇವರ ದೇವ ಕೊಂಡನು ಚಾಪ ಮಾರ್ಗಣವ (ಕುವ್ಯಾಅ. ೫-೨೮). ೧೭. ಹೆಚ್ಚಾಗು ; ಅಧಿಕಗೊಳ್ಳು : ಸುತಶೋಕ ಸೂಚನೆ ನರನ ಚಿತ್ತದೊಳಾಯ್ತು ವೆಂಠಣಿಸಿತ್ತು ಪರಿತಾಪ . . . ಕಡುಶೋಕ ಜಠರದಲುರವಣಿಸಲಾಕಸ್ಮಿಕದ ಭಯವಾಯ್ತು ಪಾರ್ಥಂಗೆ (ಕುವ್ಯಾದ್ರೋ. ೮-೭) ; ವೆಂಠಣಿಸಿದ ವಿಷ್ಣುಭಕ್ತಿ ನಂದನ ಕಲಕಂಠ ನಿನ್ನಯ ಸವಿವಾತು ಉಂಟಾದುದೆನ್ನಯ ಕರ್ಣಕ್ಕೆ ಪರಲೋಕನಂಟರು ಕೇಳುವಂತುಸಿರು (ಮೋಹತ. ೨-೨). ೧೮. ಏರು ; ಹತ್ತು : ಬಿದ್ದುದಗಣಿತ ಸೇನೆ ಪಡುವಲು ಹೊದ್ದಿದನು ರವಿ ಮತ್ತೆ ಮೂಡಣ ಗದ್ದುಗೆಯ ವೆಂಠಣಿಸಿದನು ಕುಮುದಾಳಿ ಕಂಠಣಿಸೆ (ಕುವ್ಯಾಭೀ. ೭-೪). ೧೯. ಮೆತ್ತಿಕೊಳ್ಳು ; ಅಂಟಿಕೊಳ್ಳು ; ಹತ್ತಿಕೊಳ್ಳು : ಹಾಱಿತೊಂದೆಸೆಗಾಗಿ ಗದೆ ಮೈಹೇಱಿತುರುಘಾಯವನು ಮೊಳಕಾಲೂಱಿ ಬಿದ್ದನು ವದನದಲಿ ವೆಂಠಣಿಸೆ ರಣಧೂಳಿ (ಕುವ್ಯಾಗ. ೭-೨೮). [ವೆಂಟಣೆ + - ಇಸು$_3$]

**ವೆಂಟಣೆ** (ನಾ). ಎಲ್ಲಾಕಡೆ ವ್ಯಾಪಿಸಿರುವುದು ; ಸರ್ವದಿಕ್ಕುಗಳಲ್ಲೂ ಹಬ್ಬಿರುವುದು : ವೆಂಟಣೆಯನಣುಗನಹ ಚನ್ನಬಸವಗೆ ಬಸವ ಪಾಂಟದಿಂ ಗುರುವಾಗಿ ಸುಜ್ಞಾನಬೋಧೆಯಂ ಉಂಟುಮಾಡೆನಲು (ಪ್ರಭುಪು. ೭-೩೫). 'ವೆಂಟಣಿಸು' ಪರಾ.
[ ⟵ ಮರಾ. ವೇಟಣೆ, ವೇಟಾಳಣೆ, ವೇಢಣೆ = ವ್ಯಾಪಿಸು, ಸುತ್ತುವರಿ./ ಸಂ. ವೇಷ್ಟನ]

**ವೆಂಟಿ, ವಂಟಿ, ವೆಂಟೆ** (ನಾ). ಕಿವಿಯಲ್ಲಿ ಧರಿಸುವ ಒಂದು ಬಗೆಯ ಆಭರಣ : ವಾಸಂತೀವಿಚಕಿಲಂಗಳ ವೆಂ[ಪಾಠಾಂ. ಮೆಂ]ಟಿಗಳುಮಂ . . . ಮಿಸುಪಸುಕೆಯ ಪಲ್ಲವದ ಮುಡಿಗಟ್ಟಿನ ಪಲ್ಲವಂಗಳುಮಂ ವಿಚಿತ್ರಶೋಭೆವಡೆಯೆ ವಿರಚಿಸಿ (ಶಾಂತೀಶ್ವ. ೧೦-೧೪೭ ವ). **ವಂಟಿ** : ಕಂಠಮಾಲೆ ವಂಟಿ ನಿಂಬಳ ಚವುಕುಳಿ . . . ಪೆಂಡೆಯಂ ಮೊದಲಾದ ಸಕಲಾಭರಣಂಗಳನಾ ಶೌಂಡಿಕಂಗೆ ತೋಱಲ್ (ನನ್ನಚಾ. ೩-೧೧೧ ವ) ; ಕಿವಿಯೊಳು ಶೋಭಿಪ ಮಕರದ ವಂಟಿ (ಕಭವಿ. ೬೬೩). **ವೆಂಟೆ** : ತೋರುಮುತ್ತಿನ ಹಾರ ವೆಂಟೆ ಕಡುರಮ್ಯವಾದ ತಾಟಂಕ (ರುಕ್ಮಾಂಗ. ೧೫-೨೧). [< ಒಂಟಿ$_2$]

**ವೆಂಟಿಸು, ವೆಟ್ಟಿಸು** (ಕ್ರಿ). ೧. ಕೂಡಿಸು ; ಸೇರಿಸು : ಘನಘಂಟೆಗಳ ಪಲತೆಱದ ಪಾದಾಂದುಕಂಗಳ ಪ್ರಭಾಪಟಲಂ ಪವನಪಥಪ್ರಸನ್ನಾದರ್ಶದೊಳ್ ಪ್ರತಿಬಿಂಬಿಸಲಂಘ್ರಿಗಳಗ್ರಾವನಿಯೊಳ್ ವೆಂಟಿಸಿದ ಪೊಂಗಿಱುಗೆಜ್ಜೆಯ ಭಂಗಿವೆತ್ತ ಚಲ್ಲಣಂಗಳ ಕಟ್ಟಿದ . . . ನಿಷಾದಿಗಳ್ ಮೊಗವಡಂಗಳನುಗಿಯೆ (ಮಹಾಸೇ. ೧೨-೪೭ ವ). **ವೆಟ್ಟಿಸು** : ೨. ಸುರುಳಿಯಾಗು ; ಸುತ್ತಿಕೊಳ್ಳು : ಶಿರದಲ್ಲಿ ಗುಂಡುಗಳ ತಂದಿಡಲು ಭುಜಗತತಿ ವೆಟ್ಟಿಸಲು (ಜ್ಞಾನಚಂ. ೧-೮೦). [< ವೆಂಟಣಿಸು ?]

**ವೆಂಟೆ** 'ವೆಂಟಿ' ನೋ.

**ವೆಂಟೆಯ** 'ಪೆಂಡೆಯ' ನೋ.

**ವೆಂಠಣಿಸು** 'ವೆಂಟಣಿಸು' ನೋ.

**ವೆಂಡಿಕೆವಣ** (ನಾ). ಒಂದು ಬಗೆಯ ತೆರಿಗೆ, — ಸುಂಕ : ಇಱಿವ ಗೊರವಂಗೀ ಸ್ಥಾನಮುಮ್ ಅನ್ನಗೆಡೆಯೊಳ್ ಪಿರಿಯ ಗಳೆಯಿ ೨೫ ಮತ್ತರ್ಗ್ಗದ್ದೆಯ ತಮ್ಮ ಭುಕ್ತಿಯೊಳೆಲ್ಲಂ ವೆಣ್ಣಿಕೆವಣಮುಮಂ ಕೊಟ್ಟಂ (ಎಕ. VIII, ಸೊರಬ. ೧೮೪-೩೦ ; 1033 ?). [ವೆಂಡಿಕೆ, + ಪಣ್ಣ]

**ವೆಂತರ** 'ಬೆಂತರ' ನೋ.

**ವೆಂತೆ** (ನಾ). ಕ್ಷುದ್ರ (?) : ಸಂತತ ಈರ್ಯಾಪಥ ಮನದೊಳಗಿಲ್ಲ ವೆಂತೆಯ ಗುರುವಿಗೆರಗಲೇಕೆ (ಬಿಜ್ಜಲರಾ. ೪-೬೨). 'ವೆಂತರ' ಪರಾ. [?]

**ವೆಕ್ಕಸ, ವೆಖ್ಖಸ** (ನಾ). ೧. ಒರಟು ; ನಯವಿಲ್ಲದಿರುವಿಕೆ. ೨. ಕಠಿಣತೆ ; ನಿರ್ದಯತೆ ; ನಿಷ್ಕರುಣೆ : ರಕ್ಕಸರನಿಬರೆಲ್ಲರುಂ ದೀರ್ಘದೇಹಿಗಳ್ವೆಕ್ಕಸದ ಕೋಪಿಗಳ್ಮೇಲೆ ಪುರುಷಾದರ್ಕರ್ಕಸದ ಮುಸುಡವರ್ಬಹಳ ಮಾಯಾವಿಗಳ್ (ಜೈಮಿಭಾ. ೧೬-೨೨) ; ಕರ್ಕಶನು ನೆರೆಹೊರೆಗೆ ಸರ್ವರ ಸೊಕ್ಕಿ ವೆಕ್ಕಸವಾಗಿ ಗರ್ವದಿ ಧಿಕ್ಕರಿಸಿ ನುಡಿವ (ಅಮೃತ. ೨-೫೨). ೩. ಗರ್ವ ; ಅಹಂಕಾರ : ರಕ್ಕಸನು ರಜತಾದ್ರಿ ವೆಕ್ಕಸದಿ ಎತ್ತಿ ಕೈ ಸಿಕ್ಕಿ ಬಿದ್ದಂತೆಯವ ಕಕ್ಕಸಂಗೊಂಡ (ಶರಲೀ. ೪೩೬-೬). ೪. ಬೆರಗು ; ಬೆಕ್ಕಸ ; ಆಶ್ಚರ್ಯ : ಇದು ಚಿತ್ರಕ್ಕಂ ಕಕ್ಕಸಮಂ ಕಳವಳಮುಂ ವೆಕ್ಕಸಮುಂ ಬಟಿಕೆ ಬಳೆದು ಕಿಕ್ಕಿಱಿದಿರ್ಕುಂ (ಚಿಕವಿ. ೩-೩೮). ೫. ಬಹಳ ; ಹೆಚ್ಚು ; ಅತಿಶಯ : ಉಱೆ ಬೆಳೆದ ಕಕ್ಕಸದ ಬಟ್ಟ ಬಲ್ಮೊಲೆಗಳೊಪನ ಕೈಗೆ ವೆಕ್ಕಸಂ ನೋಳ್ಪರ್ಗ ಕಣ್ಗೆಸುರ್ (ಜೈಮಿಭಾ. ೨೬-೧೧) ; ಕಕ್ಕಸದ ಕಾಳಗಕೆ ತೆರಳಲು ವೆಕ್ಕಸದ ಬಲಗೊಂಡು ದನುಜೆಯ ಕಕ್ಕುಲಿತೆಯಂ ಬಿಡಿಸಲೈದಿದನಧಿಕರೋಷದಲಿ (ಅನಂರಾ. ೧-೧೪-೭). ೬. ಗಾಬರಿ ; ಗೊಂದಲ : 'ವೆಕ್ಕಸಗೆಯ್' ಪರಾ. ೭. ಕಷ್ಟಕರವಾದುದು ; ಅಸಾಧ್ಯವಾದುದು ; ಶಕ್ಯವಲ್ಲದುದು : ಹೊಕ್ಕವನಾರಂಬುದ ಕೇಳು ಪೇಳುವೆ ರಕ್ಕಸವೈರಿಯ ಮೊಮ್ಮ ಕಕ್ಕಸ ನಿನಗಿದು ಹವಣಲ್ಲ ಭೇದಿಸೆ ವೆಕ್ಕಸವಹುದೆಂದ ನಗುತೆ (ಮೋಹತ. ೩೩-೨೧). 'ಎಕ್ಕಸ', 'ಬೆಕ್ಕಸ' ಪರಾ. ವೆಖ್ಖಸ : ೬. ನಿರುತಾದಲ್ಲಿ ವೈಶ್ವಾನರಗೆ ವೆಖ್ಖಸವಾಗೆ ಪರಿಹಾರಾ ಕಾಣಾದ ಭರದಿಂದಲಿ ಅಗ್ನಿ ಹರಿಯಾ ಮೊರೆಯೋಗೆ (ತೀರ್ಥಮ. ೭೫-೮).
[ದೇ. ॥ ತೆಲು. ವೆಕ್ಕಸಮು]

**ವೆಕ್ಕಸಂ** (ಅ). ಹೆಚ್ಚಾಗಿ ; ಅಧಿಕವಾಗಿ ; ಅತಿಶಯವಾಗಿ : ಬಕ್ಕೆವಲಸುಗಳ ಪಣ್ಗೊನೆಗಳಂ ಬಿತ್ತುಗಳ ವೆಕ್ಕಸಂ ಬಿರಿದ ದಾಳಿಂಬವಣ್ಗೊನೆಗಳಂ ಮುಕ್ಕಣ್ಣನೆಡೆಗೆ ವನಪಾಲಕಂ ಪೊಱೆಸಿಕೊಂಡೈತಂದನಾ ಕ್ಷಣದೊಳು (ಚಿಬಪು. ೮೫-೨೯). [< ವೆಕ್ಕಸ]

**ವೆಕ್ಕಸಗೆಯ್** (ಕ್ರಿ). ಗಾಬರಿಪಡು; ತಬ್ಬಿಬ್ಬಾಗು : ಒಕ್ಕಯ್ಯ ವಾಘೆಯದೊಳು ನಿಲ್ಲಲೊಲ್ಲದೆ ವೆಕ್ಕಸಗಯ್ಯುದ ಕಂಡು ಬೆಕ್ಕಸಬೆಱಗಾಗಿ ಬಲರಾಮದೇವರು ನಕ್ಕರು ರಣರಂಗದೊಳಗೆ (ಮೋಹತ. ೩೮-೪೩). [ವೆಕ್ಕಸ + ಕೆಯ್1]

**ವೆಖ್ಖರಣೆ** (ನಾ). ಮದ್ದಳೆಯನ್ನು ಬಾರಿಸುವ ಒಂದು ಕ್ರಮ (?) : ಮದ್ದಳೆಯಂ . . . ಜಾತಿ ಜೋಕು ತುಡುಕು ವಹಣಿ ರಿಗ್ಗವಣೆ ಮಲೆಪು ವೆ[ಪಾಠಾಂ. ವ]ಖ್ಖರಣೆ ಕೌತುಕಳಿಕೋತ್ತರಂಗಳಿಂ ಕೌತುಕದ ಬಾಜನೆಯೊಳಸಗಿದುವನಿಸಿ ಬಾಜಿಸುತ್ತಿರೆಯುಂ (ಶಾಂತೀಶ್ವ. ೭-೯೩ ವ). [?]

**ವೆಖ್ಖಸ** 'ವೆಕ್ಕಸ' ನೋ.

**ವೆಗಟಿಸು** (ಕ್ರಿ). ೧. (ಅತಿಯಾದ ಸೇವನೆಯಿಂದ) ಬೇಸರ ತರಿಸು ; ಅಸಹ್ಯವಾಗುವಂತೆ ಮಾಡು ; ರುಚಿಗೆಡಿಸು. ೨. (ಅತಿಯಾದ ಸೇವನೆಯಿಂದ) ತೃಪ್ತಿಗೊಳಿಸು ; ತಣಿಸು : "ತೃಪ್ತಿಗೊಳಿಸು ; ಸಂತೃಪ್ತಮಾಡು, ತಣಿಸು ; ಕಟ್ಟರಹಿಡಿಸು ; ವೆಗಟಿಸು, ಕಟ್ಟಡಚು" (Satc. ೯೦೮೫). [ವೆಗಟು + - ಇಸು1]

**ವೆಗಟು** (ಗು). ೧. (ವಿಪರೀತ ಸೇವನೆಯಿಂದ) ರುಚಿಗೆಟ್ಟ; ಅಸಹ್ಯವಾದ ; ಎಗಟಾದ. (ನಾ). ೨. (ಹೆಚ್ಚು ಸೇವನೆಯಿಂದ) ಬೇಸರ ತರುವಂತ ಹುದು ; ಅಸಹ್ಯವಾದುದು ; ರುಚಿಗೆಟ್ಟಿರುವುದು ; ಎಗಟು : ಕುದಿ ಹೆಚ್ಚೆ ವೆಗಟಹುದು ಕಡಮೆಯಿರೆ ಹಸಿನಾತ ಕದಡಲೊಡೆವುದು ಹಾಲು ಸೂಕ್ಷ್ಮವದರ ಹದ (ಮಂಕುಕ. ೩೭೮); ಸಂತೋಷ ತರುವ ವಸ್ತುವನ್ನೇ ನಿರಂತರವಾಗಿ ಬಳಸಿದರೆ ಅದು ಅಸಹ್ಯವಾಗುತ್ತದೆ. ದಿನವೂ ಅದನ್ನೇ ಸೇವಿಸುತ್ತಿದ್ದರೆ ರುಚಿಕರವಾದ ಆಹಾರವೂ ವೆಗಟಾಗದೆ ಇರುವುದು ಸಾಧ್ಯವಲ್ಲ (ತತ್ವಪ್ರಾ. ೧೩೮). ೩. (ಹೆಚ್ಚು ಸೇವಿಸುವುದರಿಂದಾಗುವ) ಕಟ್ಟರೆ ; ತಣಿವು ; ತೃಪ್ತಿ : "ಹೊಟ್ಟೆ ಬಿರಿಯ ತೃಪ್ತಿ, ಕಟ್ಟರೆ, ವೆಗಟು" (Satiety. ೯೦೮೫). ೪. (ಸುಖ, ದುಃಖ, ಆಹಾರ, ಪಾನೀಯ ಮುಂತಾದುವುಗಳ ಅತಿರೇಕದಿಂದುಂಟಾಗುವ) ಬೇಸರ ; ಜುಗುಪ್ಸೆ ; ಅಸಹ್ಯ : ಅವರಿಗೆ ಬೇಕಾಗಿದ್ದದ್ದು ಶುಚಿಯಾದ ಸೊಗಸು, — ಯಾರ ಮನಸ್ಸಿಗೂ ಯಾವ ಬಗೆಯಲ್ಲಿಯೂ ಎಷ್ಟುಮಾತ್ರವೂ ವೆಗಟನ್ನೂ ಅಸಹ್ಯವನ್ನೂ ಉಂಟುಮಾಡಲಾರದ ಚಿತ್ತೋತ್ಕರ್ಷಕವಾದ ಸೊಗಸು (ಮಹಾಗ. iii, ಸ್ನೇಹದ ಮಾತು ). 'ಎಗಟು' ಪರಾ. [<— ತೆಲು. ವೆಗಟು]

**ವೆಗ್ಗಳ, ವೆಗ್ಗಳೆ** (ನಾ). ೧. ಹಿರಿಮೆ ; ಅಗ್ಗಳಿಕೆ ; ಶ್ರೇಷ್ಠತೆ : "ವೆಗ್ಗಳ ಲಂಘನಂಗಳೊಳು ಲಾಗು" (ಶಬ್ದಮಂ. ೮೩); ಹೋಮ ನೇಮ ಜಪತಪದಿಂದ ವೆಗ್ಗಳ ಕೂಡಲಸಂಗಮದೇವಾ ನಿಮ್ಮ ಮಾಣದೆ ನೆನೆವವಂಗೆ (ಬಸವ. ೬೧೧) ; ಕೆಲಬಲದ ವೇಲಾಯತರ ವೆಗ್ಗಳದ ರಾವ್ತರ ಗಡಣ ನಾಲಗೆದಳೆದುದೆನೆ ಹೊಳೆಹೊಳೆವಡಾಯುಧ ಭಟರು ನೂಕಿದರು (ಕುಮ್ಮಾದ್ರೋ. ೫-೭೧) ; ದೇವತಾಸ್ತುತಿಯಲ್ಲ ಕೇಳ್ಬೊಡೆ ನರಸ್ತುತಿ ಯಾವ ವೆಗ್ಗಳವೆನಬೇಡ (ಕಂಸವಿ. ೧-೧೭). ೨. ಹೆಚ್ಚಾದುದು ; ಹೇರಳ ; ಸಮೃದ್ಧಿ : ಕಱೆವ ಪಶುವಿಂಗೆ ತೃಣ ದವಸ ಎಯ್ದಾದಲ್ಲಿ ಹಾಲ ವೆಗ್ಗಳವ ಕಾಬಂತೆ ಕ್ರೀಶುದ್ಧತೆಯಾಗಿ ಮನವಚನಕಾಯ ತ್ರಿಕರಣಶುದ್ಧವಾಗಿ ಇದ್ದಲ್ಲಿಯೆ ವಸ್ತುವಿನ ಹೆಚ್ಚುಗೆಯ ಒದಗು (ಸಕವ. ಕ. I, ೧೫೦-೫೭೩); ವೆಗ್ಗಳ ಹಾಲು ತುಂಬಿದ ತನೆಹೊತ್ತು ಬಾಗಿ ನಿಂತಿಹವು ಪೈರುಗಳು (ಸಿದ್ಧಪು. ೧-೫೫) ; ಬಿಲ್ವ, ಮಲ್ಲಿಗೆ, ಗುಲಾಬಿ, ಗಂಧರಾಜ, ಕರಬಿ ಮತ್ತು ರಜನಿಗಂಧಾ ಇವುಗಳೇ ವೆಗ್ಗಳವಾಗಿದ್ದುವು (ಇಪ್ಪಕ. ೧೧೭). ೩. (ವಸ್ತು ಮುಂತಾದುವುಗಳ ಪ್ರಮಾಣವನ್ನು ಸೂಚಿಸುವಾಗ) ಹೆಚ್ಚು ; ಜಾಸ್ತಿ ; ಅಧಿಕ : ಲೆಕ್ಕದಲ್ಲಿ ನೀ ಮೊದಲು ಮಾಡಿದ್ದಲ್ಲದೆ ಒಮ್ಮಾನಕ್ಕಿ ವೆಗ್ಗಳವಾಗಿ ಕೊಡುವರುಂಟೆ (ಪುರಂದ. ೧-೧೭೪-೩) ; ಕೆಲ್ಬಿಷಿಯು ಹಲ್ಲ ಸುಲಿಯದವನು ವೆಗ್ಗಳವನುಂಬವನುಂ ನಿಷ್ಠುರವಾಕ್ಯವನುಳ್ಳವನು (ಶಾಮುಲ. ೬-೧೭) ; ವೆಗ್ಗಳವಾಗಿ ಕಾಂಚನ ಕೊಡಿಸಿ . . . ಅನೇಕರ ಕೈಗಳನ್ನೂ ಒಳಿತಾಗಿ ಬಿಸಿಮಾಡಿದರು (ಕನಕ. ೪೨). ೪. (ಹೋಲಿಸಿ ಹೇಳುವಾಗ) ಮಿಗಿಲು ; ಉತ್ತಮ ; ಶ್ರೇಷ್ಠ : ಇಂದೀವರಾಕ್ಷನಿಂ ವೆಗ್ಗಳವಹ ಶೌರ್ಯ ಹೊಂದಿತು ಮೈಸೂರ ನೃಪಗೆ (ಕಂಸವಿ. ೧೩-೬೭). ೫. ಶ್ರೇಷ್ಠವ್ಯಕ್ತಿ ; ಮೇಲಾದ ವ್ಯಕ್ತಿ : ಗಠತಿಯೇ ಸ್ತ್ರೀಜಾತಿಯೊಳ್ ವೆಗ್ಗಳಂ (ಸೋಮೇಶ. ೪) ; ಕುಲದಲಧಿಕರು ರಾಜ್ಯದಲಿ ವೆಗ್ಗಳರು . . . ಇವರ ಭಂಗಿಸಿ ನಿನಗೆ ಮನ್ನಣೆಯೆ (ಕುಮ್ಮಾಸ.೮-೩೫) ಅವನೀಸುರರಿಗಿಂದಗ್ಗಳರು ಶೌರ್ಯದಲವನಿಪರು ವೆಗ್ಗಳರು ವಿಪ್ರರು ವಿಧಿವಿಹಿತಕರ್ಮದಲಿ ನಮಗಿಂದ (ತೊರರಾ. ೧-೧೭-೭). ೬. ಬಲಶಾಲಿ ; ಶಕ್ತಿಶಾಲಿ : ಪಂದಿಯಿದಂದಿನಗ್ಗದ ಗಜಾಸುರನಿಂ . . . ಇರ್ಮಡಿ ವೆಗ್ಗಳವಪ್ಪುದಿಂದಿದಂ ಕೊಂದಪೆನಾನೆ (ಶಬಶಂ. ೪-೨೦) ; ಭುವನೇಶನೆನಗೆ ವೆಗ್ಗಳವಾದನಿವನಾವ ನೆವದಿಂದ ಕೊಲುವೆನೆಂತೆಂದು (ಧನ್ಯಚ. ೨೯೩). ೭. ತೀವ್ರ ; ಬಿರುಸು ; ಜೋರು : ಬವರ ವೆಗ್ಗಳವಾಯಿತನೆ ಕೌರವನು ಕರ್ಣನ ಮುಖವ ನೋಡಿದಡಿವನ ಪೌರುಷವುಳಿಯಲೀಯದು ಮರಳಲಿಲ್ಲೆನುತ ಅವನಿಪತಿ ಸನ್ನೆಯನು ಮಾಡಲು . . . ರವಿಸುತನು ಬಲುಬಿಲ್ಲ ಸೆಳೆದನು ತಿರುವನೇಱಿಸಿದ (ಕುಮ್ಮಾದ್ರೋ. ೬೦೧. ೬-೩೦ ಆದಿಪದ್ಯ); ಭಗದತ್ತನ ಆನೆಯು ವೆಗ್ಗಳವಾಗಿ ಆರ್ತಧ್ವನಿಯನ್ನು ಮಾಡುತಳಿದೆ (ಕೃವಾಭೀ. ೧೧೩). ೮. ಹೆಚ್ಚಿನದು ; ವಿಶೇಷವಾದುದು ; ಅತಿಶಯವಾದುದು : ಭಕ್ತರ ಮನೆಗೆ ಸತ್ಯಶರಣರು ಬಂದಲ್ಲಿಯೆ ಮದುವೆಯ ಉತ್ಸಾಹಕ್ಕಿಂದ ವೆಗ್ಗಳವೆಂದು ಕಂಡ (ವಿಲಕ್ಷ. ೭೮) ; ತಣಿವಿಲ್ಲದ ತವಕಂ ಪೊಣ್ಮೆ ಸತ್ತ್ವಗುಣಂ ಮತ್ತಂ ವೆಗ್ಗಳಮಾಗೆ ಮಿಕ್ಕು ಮಿಱಿ (ಬಸರ. ೮-೧೦). ೯. ಅತಿಯಾದುದು ; ವಿಪರೀತವಾದುದು ; ಮೇರೆ ಮೀರಿದುದು : ವಿರಸಂ ಬರ್ಪುದು ಬೇಡೆನಲ್ ದ್ರುಪದೆಯಿಂ ಭೀಮಾರಿ ತಾಂ ನೋಯನೇ ಸರಸಂ ವೆಗ್ಗಳಮಾಗದೆ (ಸೋಮೇಶ. ೮೯); ಮೂಜಗಂ ವೆಗ್ಗಳದ ಭಯರಸದೊಳೋಲಾಡುತಿರ್ದುದು (ಚಿಬಪು. ೨೮-೧೦). ೧೦. ಅಸಾಧ್ಯವಾದುದು ; ಕಷ್ಟಕರವಾದುದು : ಅಂತರಂಗದೊಳಾತ್ಮರೂಪನೊಳ್ಪಾಗಿರುಹಂತ ತಾನಲ್ಲಿರ್ಪನೆನಲು ವ್ಯಂತರವಶ್ಯ ವಿದ್ಯಾವಶ್ಯ ಕೈವಲ್ಯಕಾಂತಾವಶ್ಯ ವೆಗ್ಗಳವೆ (ಭರಚ. ೨-೬೮); ಇವನ ಸಾಸಿರ ಕವಚದೊಳಗೊಂದುವನು ನಿಲಿಸಿಯೆ ಮಿಕ್ಕ ಕವಚವನವನಿಗೊಱಗಿಸಿದಧಿಕದೇವರದೇವ ನಿನಗಿದು ಸವಱುವುದು ವೆಗ್ಗಳವೆ (ಕೋಗಯ. ೧೦-೯೩). ೧೧. ಏರುಪೇರು ; ಅದಲುಬದಲು ; ವ್ಯತ್ಯಾಸ : ಕೀಳುಮೇಲು ಮೇಲುಕೀಳಾಗಿ

ನಡೆದುದು ಕಾಲ ವೆಗ್ಗಳವಾಯಿತು (ಪುರಂದ. ೧-೧೭೧-೩). (ಗು). ೧೨. ಶ್ರೇಷ್ಠವಾದ ; ಹಿರಿಮೆಯ ; ಅಗ್ಗಳಿಕೆಯ : ಪತಿತರಂ ನುಡಿಸಿದಿರೊ ವೆಗ್ಗಳ ವ್ರತಿಗಳಂ ತಪ್ಪೆಂದಿರೋ (ಶಂಕರಾ. ೭-೫). ೧೩. ಹೆಚ್ಚಿನ ; ಹೇರಳವಾದ ; ಅಧಿಕವಾದ : ಆಣಿಮುತ್ತಿಗ ವೆಗ್ಗಳ ಬೆಲೆಗಟ್ಟುವ ವಾಣಿಜರಿರ್ದರಿಕ್ಕೆಲದಿ (ಮೋಹತ. ೩-೨೬); ಕಗ್ಗೊಲೆಯಲಿ ಬಾಗೂರ ಹೊಗುವನೆಂದು ವೆಗ್ಗಳಬಲದೆ ವೇದೋಜ ಬೊಗ್ಗನ್ನೆತಂದು ಭಂಗಕೆ ಬಂದು ಮನನೊಂದು ಸಿಗ್ಗಾಗೆ ತೆರಳಿದನಾಗ (ಕಂಸವಿ. ೧೬-೬೮). 'ವಗ್ಗಳ', 'ಪೆಕ್ಕಳ' ಪರಾ.

**ವೆಗ್ಗಳೆ** : 'ವೆಗ್ಗಳಿಯ' ಪರಾ. [ದೇ. ॥ ತೆಲು. ವಗ್ಗಲ]

**ವೆಗ್ಗಳವಂತ** (ನಾ). ಉತ್ತಮಸ್ಥಿತಿಯಲ್ಲಿರುವವನು ; ಹಣವಂತ ; ಧನಿಕ : ಒಂದಾನೊಂದು ಕಾಲಕ್ಕೆ ಈ ಗ್ರಾಮದಲ್ಲಿ ನಾವು ಎಲ್ಲರಿಗಿಂತ ವೆಗ್ಗಳವಂತರಾಗಿಯೇ ಇದ್ದೆವು (ಇಪ್ಪಕ. ೩೩೩). [ವೆಗ್ಗಳ + - ವಂತ]

**ವೆಗ್ಗಳಿಕೆ** (ನಾ). ಹೆಚ್ಚಳ ; ಆಧಿಕ್ಯ : ಎಳಲತೆಯ ನುಣ್ಬುಗಳ ನವಪರಿಮಳದ ಪವನನ ಸೊಂಪುಗಳ ವೆಗ್ಗಳಿಕೆ ಝಳಪಿಸಿ ಹೊಯ್ದು ಸಳೆದುದು ಜನದ ಕಣ್ಮನವ (ಕುವ್ಯಾಅ. ೫-೮). [ವೆಗ್ಗಳ + - ಇಕೆ]

**ವೆಗ್ಗಳಿಸು** (ಕ್ರಿ). ೧. ಅಧಿಕವಾಗು ; ಹೆಚ್ಚಾಗು ; ಅತಿಶಯಿಸು : ವೆಗ್ಗಳಿಸಿತು ಹಲವು ಮಾತು ಹಿಗ್ಗಿಹೋದುದಾತ್ಮನಚಿವು (ಶಿವಗೀ. ೧೫೬-೭೮೪) ; ಕಲಿತನದ ಮೃಗವೇಂಟೆಕಾಱರು ಅಲಘುಕೇಸರಿಯಂ ತೊಡರ್ವತಿಥಲದ ಸತ್ವದ ಜಾಯಿಲಂಗಳು ತವಕ ವೆಗ್ಗಳಿಸೆ ಬಳಸಿ ತನ್ನುವನಯ್ದು ಬರುತಿರೆ (ಬಸಪು. ೩೪-೨೩) ; ಪ್ರಳಯರುದ್ರನ ಕೋಪಶಿಖಿ ವೆಗ್ಗಳಿಸಿತೆನೆ ಕಂಗಳಲಿ ಕಿಡಿಗಳು ತುಳುಕಿದವು (ಕುವ್ಯಾದ್ರೋ. ೮-೩೩). ೨. ಅತಿಯಾಗು ; ಮಿತಿಮೀರು : ಆಳಿಯರೊಳಿಂತು ಚಂಪಕಮಾಲಿನಿಗೆ ಸರಸಕೇಳಿ ವೆಗ್ಗಳಿಸಿರ್ದ ಸಮಯದೊಳಲರ್ಗೊಯ್ಯ ಬೇಳಂಬದಿಂದೆ ಕೆಲಸಿಡಿದು ಬಂದಾ ವಿಷಯೆ . . . ಚಂದ್ರಹಾಸನಂ ಕಂಡು ಸೈವೆಱಗಾದಳು (ಜೈಮಿಭಾ. ೩೦-೧೯). ೩. ಮೀರು ; ಅತಿಶಯಿಸು : ತಿಲಕುಸುಮದಾಕಾರವಂ ವೆಗ್ಗಳಿಸಿ ಚಂಪಕಪುಷ್ಪದಿರವಂ ಪಳಿದು . . . ಕಿಱುವೆಸಳ ನೆಯ್ದಿಲುಗಳೀ ಮಡದಿಯ ಕುಡಿತೆಗಂಗಳಿಗೆ ಪಡಿಯಲ್ಲ (ಬಸಪು. ೪-೨೫). ೪. ಹೆಚ್ಚಿಸು ; ಅಧಿಕಗೊಳಿಸು : ಸಂಸ್ಕೃತ ದ್ರಾವಿಡಭಾಷೆಗಳ ನಯನುಣುಪುಗಳನ್ನು ವೆಗ್ಗಳಿಸಿರಬಹುದು (ದ್ರಾವಿವಿ. ೧೫ ಪಿನ್ನೆಲ್). ೫. ಉದ್ವೇಗಗೊಳ್ಳು ; ಭಾವೋದ್ರೇಕ ಹೊಂದು : ನೋಟ ವೆಗ್ಗಳಿಸಿ ಕೆಲಸೂಸಿ ಪರಿವುತ್ತಮಿದೆ ಕೂಟದನುವಿಂಗೆ ತನು ವೆಗ್ಗಳಿಸಿ ಕೆತ್ತುತಿದೆ (ಸಂಬರ. ೩-೮೩) ; ಸಲಿಸಿ ಕಾಮಕ್ರೀಡೆಯಂ ವೆಗ್ಗಳಿಸಿ ಸರಸದೊಳದ್ದಿ ಸಿಕ್ಕಿಸಿ ಲಲನೆಯಂ ಮೇಣಲಸಿದೆಡೆಯ ಶ್ರಮಮನಾಱಿಸುತ ತಿಳುಹಿ (ಬಸಪು. ೪೨-೧೬) ; ಅಳುವವರ ನಗಿಸುವುದು ನಗುವರನಳಿಸುವುದು . . . ವಿಪರೀತಗತಿ ವಿಧಿಗೆ ಅಳಲದಿರು ಸುಮ್ಮಾನದಲಿ ವೆಗ್ಗಳಿಸದಿರು ನಿನ್ನವರು ನಿಮಿಷದೊಳಳಲುದೊಱೆಯಲಿ ಮುಳುಗುವಂದವನಿನ್ನು ಕೇಳು (ಕುವ್ಯಾಕ. ೧೨-೩). ೬. ಉಬ್ಬು ; ಗರ್ವಹೊಂದು ; ಅಹಂಕಾರಪಡು : ಕೆಳೆತನದ ನಂಟು ವಿಷಯದ ಬಂಧುವಾತುಗಳ ಬಲದೊಳಾಂ ಕವಿಯೆಂದು ಕವಿರಾಯನೆಂದು ವೆಗ್ಗಳಿಸಿ ಕಾಳ್ಗೆಡೆದಡದ ಸೈರಿಸುವೆನಲ್ಲದಾ ನಂಟನೀಡಾಡಿ ಮಲೆತು . . . ವೆಗ್ಗಳಿಸಿ ದನಿಗೈವ ದುಷ್ಕವಿಯ ಗರ್ವದ ಮೂಗನಿಳುಹದಿರನುಭಯಕವಿಶರಭಭೇರುಂಡ (ಹಚಕಾ. ೧-೩೧). ೭. ಚಿಮ್ಮು ; ಹೊರಸೂಸು : ಮಧುರ ರಸಂ ವೆಗ್ಗಳಿಸೆ ಲವಲವಿಸುತುಂ ಪಣ್ಗಳೊಳಳ್ಳುದದೊಂದು ರಾಜಶುಕನತಿಭರದಿಂ (ಗಿರಿಕ. ೨-೪೦). ೮. ಮುನ್ನುಗ್ಗು ; ಮುಂದುವರಿ : ಯಮನಂದನನ ಕೈ ವೆಗ್ಗಳಿಸಿ ತಾಗಿತು ನಿನ್ನ ತನುಜನ ಪಿಲುಸರಳು ರಥ ಸೂತ ವಾಜಿಗಳೊಱಗಿದವು ಧರೆಗೆ (ಕುವ್ಯಾಕ. ೪-೩೫). ೯. ವಿವರಿಸು ; ವಿಸ್ತರಿಸು : ಮುನಿಗಳಿವರುಪಟಳವನರಸಂಗಱುಹಿದರು ವೆಗ್ಗಳಿಸಿ ಭೀಮಂಗೆಂದರರ್ಜುನ ಯಮಳರಿದಿರಿನಲಿ (ಕುವ್ಯಾಅ. ೧೮-೧೮). ೧೦. ಚುರುಕಾಗು ; ಚಟುವಟಿಕೆಯನ್ನು ಹೊಂದು : ಗರವಾವುದೋ ವೆಗ್ಗಳಿಸಿತಿದಕೌಷಧವ ಬಲ್ಲನು ತೋಱಿಸುವನು (ನಿಭಾಗ. ೫-೭-೧೨). ೧೧. ತಿರಸ್ಕರಿಸು ; ಅವಹೇಳನ ಮಾಡು : ಎಲೆಲೆ ದುರ್ಮತಿಯುತ ವ್ಯಾಸ . . . ಶಿವನಂ ನಿಂದೆಗೆಯ್ವೆನ್ನನೇ ಸಲೆ ವೆಗ್ಗಳಿಸಿ ನುಡಿವರೇ ಮೂಢ (ಪದ್ಮರಾ. ೧೦-೧೩). ೧೨. ಅವಸರಪಡಿಸು ; ತ್ವರೆಗೊಳಿಸು : ಜಳಕ ದೇವಾರ್ಚನಕ್ಕೇಳೆಂದು ಸುದತಿ ವೆಗ್ಗಳಿಸುತಿರೆ ಸೋಮನಾಥನ ಮೂರ್ತಿಯಂ ಕಂಡೊಡಲ್ಲದಾನೊಲ್ಲೆನೆನಲು . . . ದಿನಂ ಕಡೆಗಂಡುದು (ಸೋಮಚ. ೪-೨೫). ೧೩. ಮುತ್ತು ; ಆವರಿಸು ; ಆಕ್ರಮಿಸು : ಎಡಬಲ ಬಳಸಿದವು ಮಲುವಾಯಿದವು ವೆಗ್ಗಳಿಸಿದವು ಕುಸುಬಿದವು ಕುನ್ನಿಗಳಖಿಳ ಮೃಗಕುಲವ (ಕುವ್ಯಾಅ. ೧೩-೨೭). ೧೪. ಮುನ್ನುಗ್ಗಿ ಕಾದು ; ಮೇಲೆಬಿದ್ದು ಯುದ್ಧಮಾಡು ; ಆಕ್ರಮಣ ನಡೆಸು : ಅಖಿಳ ದಿವ್ಯಾಸ್ತ್ರದಿಂದ ವೃಷಕೇತು ವೆಗ್ಗಳಿಸೆ ವಾಡಬವೈಷ್ಣವಂಗಳಿಂ ಪರಿಹರಿಸಿಕೊಳುತರ್ಜುನಾತ್ಮಜಂ ಕೆರಳ್ದಿವನನೆಚ್ಚೊಡುಚ್ಚಳಿಸಿತಚ್ಛೋಣಿತವನು ತೊಳೆಯಲಿಳಿದುವು ಭೋಗವತಿಯ ಜಲಕೆ (ಜೈಮಿಭಾ. ೨೩-೧೬). [ವೆಗ್ಗಳ + ಇಸು₃]

**ವೆಗ್ಗಳೆ** 'ವೆಗ್ಗಳ' ನೋ.

**ವೆಗ್ಗಳಿಯ** (ನಾ). ೧. ಉತ್ತಮವಾದುದು ; ಶ್ರೇಷ್ಠವಾದುದು : ವೆಗ್ಗಳಿಯ ಕರಿಗಳ ಬೃಂಹಿತದ ಗೊಂದಳದ ಕಳಗರ್ಜಾಯ್ತು ಕೌರವಸೈನ್ಯಶರಧಿಯಲಿ (ಕುವ್ಯಾದ್ರೋ. ೯-೨೭). ೨. ಅಧಿಕವಾದುದು ; ಹೆಚ್ಚಾದುದು : ಕಲಿಯ ರಾಜ್ಯದಲೊಂದು ಪಾದದ ಸಲುಗೆ ಧರ್ಮಕ್ಕಹುದು ಗಡ ವೆಗ್ಗಳಿಯವದಱೊಳಸತ್ಯ ಧರ್ಮದ್ರೋಹ ಮಾತ್ಸರ್ಯ (ಕುವ್ಯಾಅ. ೧೨-೩೮). ೩. ಬಲವಾದುದು ; ಶಕ್ತಿಯುತವಾದುದು : ತುಳಿದುದರಿ ಸುಭಟರನು ಸಾವಿರತಲೆಯ ಸೆಳೆದುದು ಸೊಂಡಿಲಲಿ ವೆಗ್ಗಳಿಯ ಮದಕರಿ ಕೇಣಿಗೊಂಡುದು ವೈರಿಮೋಹರವ (ಕುವ್ಯಾದ್ರೋ. ೩-೧೪). ೪. ಉತ್ತಮನಾದವನು ; ಶ್ರೇಷ್ಠನಾದವನು : ಕಳಕಳವ ಕಣ್ಣೆಱವೆಗಳ ಮನಗಲಿತನದ ಮುಳುಮುಟ್ಟುಗಳ ವೆಗ್ಗಳಿಯರಿದ್ದುದು ಭೀಮ ಸಾತ್ಯಕಿ ಸೃಂಜಯಾದಿಗಳು (ಕುವ್ಯಾಕ. ೨೧-೧೪). ೫. ಕಲಿ ; ಶೂರ ; ಸಮರ್ಥ : ಬಳಿಯ ನೆಲನುಗ್ಗಡಣೆಗಳ ವೆಗ್ಗಳಿಯ ಸುಭಟರ ಮೋಹಳದಲಿ ಬಂದಿಳಿದು ದಂಡಿಗೆಯಿಂದ ನಸುನಗುತೇಱಿದನು ರಥವ (ಕುವ್ಯಾಕ. ೬-೨೩). [ವೆಗ್ಗಳಿ (< ವೆಗ್ಗಳ) + - ಅ₇]

**ವೆಗ್ಗಳಿಯತನ** (ನಾ). ಆಧಿಕ್ಯ ; ಹೆಚ್ಚಳ ; ಶ್ರೇಷ್ಠತೆ : ಲಲಿತಚಿತ್ರದ ಚದುರ ಭಟರವ್ವಳಿಸಿ ಹೊಯ್ದಾಡಿದರು ನೋಟಕರುಲಿದುದಿಬ್ಬರ ಶ್ರಮದ ಶೌರ್ಯದ ವೆಗ್ಗಳಿಯತನಕೆ (ಕುವ್ಯಾದ್ರೋ. ೧೪-೮). [ವೆಗ್ಗಳಿಯ + - ತನ]

**ವೆಗ್ಗಳಿಯವೆಸರು** (ನಾ). ಕೀರ್ತಿಶಾಲಿಯೆಂಬ ಹೆಸರು : ಉಳಿದ ಭೂರಿಯ ಬಣಗುಗಳು ವೆಗ್ಗಳಿಯವೆಸರಿಗೆ ನೋಂತರೇ ಕುರುಬಲದೊಳರಿಬಲದೊಳಗೆ ಸರಿಯಿನ್ನು ವರಿಗಿಲ್ಲೆಂದ (ಕುವ್ಯಾದ್ರೋ. ೧೬-೩೮). [ವೆಗ್ಗಳಿಯ + ಹೆಸರು₁ (< ಪೆಸರ್)]

**ವೆಗ್ಗುಗೆಯ್** (ಕ್ರಿ). (?) : ಬಹು ಪದ್ಮಾವೃತರೋಚಿಯಿಂ . . . ಬಹು ಭುಜಂಗವ್ರಾತದಿಂದಾ ಪಯೋರುಹಪತ್ರಾನನ ವೆಗ್ಗುಗೆಯ್ವಳೆ [ಪರಿಲ್ಪೇಳಿರ್ಪುದುದ್ಯತ್ಸಭಾ] ? ವಹಮಪ್ಪಂಬುರುಹಾಕರಪ್ರಕರಮೊಪ್ಪಿರ್ಕುಂ ವನೋಪಾಂತದೊಳ್ (ಕುಸುಮಾ. ೧-೯೯).

[ವೆಗ್ಗು? + ಕೆಯ್₁]

**ವೆಚ್ಚ** (ನಾ). ೧. ಖರ್ಚು ; ವ್ಯಯ : ಒಡೆಯರ ಬರವಿಂಗೆ ಕುನ್ನಿ ಬಾಲ ಬಡಿದರೆ ವೆಚ್ಚವೇನು ಹತ್ತುವದು (ಬಸವ. ೨೦೭) ; ಸಿರಿಬಾಗಿದವರಿಗೆ ಸಿರಿಗೊಡಬಹುದು . . . ಧರೆಗೆಲ್ಲ ವೆಚ್ಚವನಿಕ್ಕಿ ಬಹರ ಹುಚ್ಚು ದೊರೆಯೆ (ಭರಚ. ೫೩-೪೦) ; ಅಗತ್ಯವಾದ ಉಡುಪುಗಳು, ಪಯಣದ ವೆಚ್ಚಕ್ಕಿರುವ ಹಣ, ಇವುಗಳನ್ನು ಮಾತ್ರ ಅವರು ತೆಗೆದುಕೊಂಡಿದ್ದರು (ಹಾಹುತ್ರ. ೯೯). ೨. ಲೆಕ್ಕಾಚಾರ : ಮನವ ಶೋಧಿಸಬೇಕೋ ನಿಚ್ಚಾ ದಿನದಿನ ಮಾಡುವ ಪಾಪ ಪುಣ್ಯದ ವೆಚ್ಚ (ಪುರಂದ. ೧-೪೭ ಪಲ್ಲವಿ).

**ವೆಚ್ಚಸಚ್ಚ** (ದ್ವಿರುಕ್ತಿ) : ಈ ಫರಾಶೀಸರ ದ್ವೀಪದಲ್ಲಿ ಇರುವ ಪರಿಯಂತ್ರ ಅವರ ಸರಕಾರದವರು ವೆಚ್ಚಸಚ್ಚಕ್ಕೆ ಕೊಟ್ಟು ಇರಿಸಿಕೊಂಡು ಇದ್ದರು (ರಾಜೇಂದ್ರ. ೮೬). **ವೆಚ್ಚಮಾಡು, ವೆಚ್ಚವಮಾಡು** = ೧. ಖರ್ಚುಮಾಡು : ಕೊಳ್ಳುವುದು ಕೊಡುವುದು, ವೆಚ್ಚಮಾಡುವುದು . . . ಎಲ್ಲವೂ ಹಣದ ಮೂಲಕವೇ (ಹಣಪ್ರ. ೨). ೨. (ಆಲಂ) ನಾಶಮಾಡು : ಕಪಿಬಲದ ಸುಭಟರ ವೆಚ್ಚಮಾಡಿದನೇನ ಹೇಳುವೆ ದೈತ್ಯನುಬ್ಬಟೆಯ (ಕೌಶಿರಾ. ೨೦-೨೭). ೩. ನೀಗು ; ಕಳೆ : ಮೂಲೋಕಮಂ ಕ್ಷಣದೊಳ್ ವೆಚ್ಚವ ಮಾಡಿ ಬೇಡೆ ಬಲಿ ಸಾಲಕ್ಕಂಜಿ ಬಿಟ್ಟೋಡಿದಂ ರುಣಭಾರಕ್ಕೆಣೆ ಯಾವುದೈ (ಸೋಮೇಶ. ೯೧).

[< ಪ್ರಾ. ವಿಚ್ಚ, ವೆಚ್ಚ = ಖರ್ಚುಮಾಡು./ ಸಂ. ವ್ಯಯ]

**ವೆಚ್ಚಬಿರಾಡ** (ನಾ). ಒಂದು ಬಗೆಯ ಸುಂಕ, - ತೆರಿಗೆ : ಕುಳಬಿರಾಡದಿಂದ ಗ ೩ ॥ ೦ ಸುಂಕ ಕೊಡವೀಸ ೧೧೩ ವೆಚ್ಚಬಿರಾಡದಿಂದ ಗ ॥ ೦ (ಎಕ. VIII (S), ಕುಂಸಿ. ೧-೧೯; 1721). [ವೆಚ್ಚ + ಬಿರಾಡ (< ಬೀಡಾರ)]

**ವೆಚ್ಚಿಸು** (ಕ್ರಿ). ೧. ಖರ್ಚುಮಾಡು ; ವ್ಯಯಿಸು : ತಮ್ಮ ದಾನಧರ್ಮದೊಳು

ಪಯೋಗಮಾಗದುಪಭೋಗಿಸದರ್ಥಮನಾದಮಾನೆಗಂ ಕುದುರೆಗಮಾರ್ತು ವೆಚ್ಚಿಸದೆ ಪೂಜಿಸಿ (ಅಜಿಪು. ೧೨-೧೯): ಬಂಡಾರದವಿಳವಸ್ತುವನೊಂದು ತೃಣಮಾಗೆ ಕಂಡು ವೆಚ್ಚಿಸಿ ಚಂದ್ರಹಾಸನ ವಿವಾಹಮಮಂ ಕೊಂಡೆಸಗುತಿರ್ದನೊಲವಿಂ ಮದನಂ (ಜೈಮಿಭಾ. ೩೧-೨೬); ಉಣದುಡದೊಡಲ ದಂಡಿಸುವಾಯಸವಿಲ್ಲ ಪಣವ ವೆಚ್ಚಿಸುವ ಪಾಡಿಲ್ಲ (ಹದಿಬ. ೨-೨೨) ೨. ಹಂಚು ; ವಿತರಣೆಮಾಡು : ಭಕ್ತರಲ್ಲದವರ್ಗೆ ಏನುವಂ ವೆಚ್ಚಿಸಂ ಶರಣರಯ್ತರೆ ತನ್ನ ಹರಣವೆಯ್ತುಂದಂತೆ . . . ನಿತ್ಯಾನಂದದಿಂದೀವ (ಕೂಂಗುರ. ದೇ. ೧೫೨-೧೬) ; ವೆಚ್ಚಿಸಿದನು ವಸ್ತ್ರಾಭರಣಂಗಳನಚ್ಚರಿವಡೆ ಬಂಧುಗಳಿಗೆ (ರಾಮವಿ. ೮-೪೧) ; ಪಾಯದಳ ದೊಳು ತೇಜಾಢ್ಯರಿಗೆ ಹೊಳೆವ ಸುವರ್ಣಕಾರಂಡದ ಕದುಶ್ಯತ್ಯದಳೆದ ಕಪ್ಪುರವ ವೆಚ್ಚಿಸಿದ (ಮೋಹತ. ೧೯-೩೦). ೩. ಕಳೆ ; ನೀಗು : ನಿನ್ನಸುವಂ ಪತಿಕಾರ್ಯದೆ ವೆಚ್ಚಿಸಿದಯ್ ನಿನ್ನನ್ನನಾವನಂಗಾಧಿಪತೀ (ಗದಾಯು. ೫-೨೨). ೪. (ಪ್ರಾಣವನ್ನು) ಕೊಡು; ನೀಡು ; ಅರ್ಪಿಸು : ಮೆಚ್ಚದಿರ್ದೊಡೆ ಮೇಱೆಯೊಳಿಹರಲ್ಲದೆ ಮೆಚ್ಚಿದ ಬಳಿಕ ವಿಟರಿಗೆ ವೆಚ್ಚಿಸುವರು ಹರಣವ (ಕುರಾಸಾಂ. ೨೬-೫) ; ನೆಱೆ ನಮ್ಮ ಕಾರ್ಯವ ಕುಱಿತು ತಾಂ ಹರಣವನಿರದೆ ವೆಚ್ಚಿಸಿದನೀ ಶೂರ (ಕಂನವಿ. ೧೯-೯೧) ; ಪ್ರಾಣವ ವೆಚ್ಚಿಸೇಳೆನಲಾರ್ಭಟಿಸಿ ಕಂಭವ ನಿರೀಕ್ಷಿಸಿದ (ಪ್ರಹ್ಲಾಚ. ೧೩-೮೮). [ವೆಚ್ಚ + - ಇಸು$_1$]

**ವೆಜ್ಜ , ಹೆಜ್ಜ** (ನಾ). ೧. ತೂತು ; ರಂಧ್ರ : ಕಣಿಯೊಳಪೊಕ್ಕು ತಾರದೆ . . . ವೆಜ್ಜಮಂ ಕಳೆದು ಕೋಯದೆ ತಾಂ ಮಱುಮಯ್ಗೆ ವರ್ಪ ಸದ್ಗುಣಮಣಿಯೆಂಬ ಭೂಷಣದಿನಾವನಲಂಕೃತನಾ ಮಹಾತ್ಮನಂ . . . ಅರ್ಗಳ ಕೀರ್ತಿಸರೀಧರಿತ್ರಿಯೊಳ್ (ಲೀಲಾವ. ೧-೬೦) ; ವಜ್ರದುಂಬಿಗಳು ಹೆಬ್ಬಿದಿರನು ಕೊಱೆವೊಡೆಯುಜ್ಜುಗವೆತ್ತ ರೀತಿಯಲಿ ನಿರ್ಜರವೈರಿಯ ನಿಡಿದೋಳ ಶಿಲೀಮುಖ ವೆಜ್ಜವ ಮಾಡಿ ತೋಱಿದುದು (ಮೋಹತ. ೩೫ - ೪೦). ೨. ಕೊರತೆ ; ಊನ ; ನ್ಯೂನತೆ : ಸಜ್ಜೆಯ ಮನೆ ಮಜ್ಜನದ ನಿಶಾಂತವು ಖಜ್ಜಾಯದ ಮಂದಿರವು ಗುಜ್ಜರಬೀಡು ಸಜ್ಜನ ಗೊಲ್ಲರಾವಾಸ ವೆಜ್ಜವಿಲ್ಲದೆಯಿರುತಿಹವು (ಅಂಜಚ. ೩-೩೩) ; ಊರ್ಜಿತಾಮಳ ಭಕುತಿಯಿಲ್ಲದ ಭಕ್ತರಿಗೆ ತನ್ನ ನಿರ್ಜರಾರ್ಜಿತ ಪಾದ ಕೊಡುವನು ವೆಜ್ಜವಿಲ್ಲದ ಮಾತಿದೆಂದಾ ಸಜ್ಜನಾಗ್ರಣಿ ಮೈಥಿಲಗೆ ಪೇಳಿದನು (ನಿಭಾಗ. ೧೧-೫-೧೩) ; ವೆಜ್ಜವಿಲ್ಲದ ಚಿತ್ತದಿಂದೆಯ್ದುತಿರ್ದನು ಗುಜ್ಜುಮೆಟ್ಟಿಂದ ಮುಂಗಡೆಗೆ (ಭರಚ. ೧೬-೨೦). **ಹೆಜ್ಜ:** ೧. ಸೂಜಿಯ ಹೆಜ್ಜದಲ್ಲಿ ಆನೆಯನ್ನು ಪವಣಿಸಿದಂತಾಯ್ತು (ಕರ್ನಾಕ. ೫೪). [< ಪ್ರಾ. ವಿಜ್ಜ$_1$./ಸಂ. ವಿದ್ಧ]

**ವೆಜ್ಜಗೊಡು** (ಕ್ರಿ). (ಆಲಂ) ಅವಕಾಶವನ್ನುಂಟುಮಾಡು ; ಆಸ್ಪದವನ್ನು ನೀಡು : ಕಜ್ಜುರ ಕಕ್ಕೆ ಸಸಿ ನೇಸಱವಳಗಿಗೆ ವೆಜ್ಜಗೊಡದ ಬೆಳೆದಿರಲಾ ಬಂಜಂ ಭೀಕರತರಮಾಯ್ತು (ಜಯಿಕಾ. ೧೫-೨೪). [ವೆಜ್ಜ + - ಕೊಡು$_1$]

**ವೆಟ್ಟ** 'ಬೆಟ್ಟ' ನೋ.

**ವೆಟ್ಟನ** (ನಾ). ದುಂಡಾದ ಒಂದು ಬಗೆಯ ಆಭರಣ : ಮತ್ತೊಮ್ಮೆ ಮಣಲ ವೆಟ್ಟನ[ಪಾಠಾಂ. ವೇಷ್ಟನ]ಮಂ ಬೇಡಿಯಟ್ಟೆ ಅಭಯಕುಮಾರನ ನಿರೂಪದೊಳ್ ಸಣ್ಣ ಮಣಲಂ ಕೊಂಡು ಅರಸನ ಸಮಿಪಕ್ಕೆ ಪೋಗಿ . . . ತೋಱಿದೊಡೆ (ಪುಣ್ಯಾಸ್ರ. ೩-೩೧ ವ). [< ಸಂ. ವೇಷ್ಟನ]

**ವೆಟ್ಟಿ** (ನಾ). ಗ್ರಾಮದ ಕಾವಲುಗಾರ ; ಗ್ರಾಮಸೇವಕ : ಗ್ರಾಮಾಧಿಕಾರಿಗಳು ಮತ್ತು ಗ್ರಾಮನೌಕರರು ೮ ವಿಧಗಳಾಗಿ ವಿಂಗಡಿಸಲ್ಪಟ್ಟಿರುವರು . . . ೪ ತೋಟಿ ತಳವಾರ, ವೆಟ್ಟಿ ಬಾರೀಕಿ ಅಥವಾ ಕೋಲುಕಾರನೆಂದು ಹೆಸರುಂಟು (ಗ್ರಾಮಾಕ.೧).

[ದೇ. ‖ ತಮಿ. ವೆಟ್ಟಿಯಾನ್ = ಕೀಳುಕೆಲಸದ ಆಳು]

**ವೆಟ್ಟಿವರಿ** (ನಾ). ಗ್ರಾಮನೌಕರರ ನಿರ್ವಹಣೆಗಾಗಿ ವಿಧಿಸುವ ಸುಂಕ, — ತೆರಿಗೆ (?): ಗಾವುಣ್ಡನಾಣೆಯಮ್ಮಂ ಮಱುವದಿಂಬರ್ಗ್ಗೆ ಕೊಟ್ಟ ವ್ಯವಸ್ಥೆ ಯಾವು ದೆನ್ನೊಡುಟ್ಟುಗೆರಡುವರಿಸಂ ವೆಟ್ಟಿವರಿಯರಪತ್ತುವರಿಸಂಬರಂ ಮಿಂತವ್ರ್ವಣದುಟ್ಟುಗೂರ್ವ್ವ ಱೆನ್ನು ಮಾಣಲಾಗಂ ತಮ್ಮ ಸ್ವೇಚ್ಛೆಯೊಳ್ ನೆಗಳ್ವುದು (ಕ್ಣ. V ,೪-೧೮ ; 970).

[ವೆಟ್ಟಿ + ವರಿ$_1$]

**ವೆಟ್ಟಿವೇರು** (ನಾ). ಒಂದು ಬಗೆಯ ಸಸ್ಯ : ಲಾಮಂಚ, ವೆಟ್ಟಿವೇರು, ಕಾಡು ಕರೇದಪ್ಪ, ಸಜ್ಜೆಹುಲ್ಲು (ಮೈಪಿಗಿ. ೭೭-೧೫೮).

[ದೇ. ‖ ತಮಿ. ವೆಟ್ಟಿವೇರ್; ಮಲ. ತೆಲು. ವೆಟ್ಟಿವೇರು]

**ವೆಟ್ಟಿಸು** 'ವೆಂಟಿಸು' ನೋ.

**ವೆಟ್ಟೆ$_1$** (ನಾ). ಕಾವು ; ಉಷ್ಣ ; ಬಿಸಿ : (೩).

[ದೇ. ‖ ತಮಿ. ವೆಟ್ಟೈ; ಮಲ. ತೆಲು. ವೆಟ್ಟ]

**ವೆಟ್ಟೆ$_2$** (ನಾ). ೧. ಒರಟಾದುದು ; ಬಿರುಸಾದುದು ; ಗಟ್ಟಿಯಾದುದು. 'ಎಟ್ಟೆ'$_3$ ಪರಾ. (ಗು). ೨. ಬಿರುಸಾದ ; ಗಟ್ಟಿಯಾದ.

ವೆಟ್ಟೆತಟ್ಟೆ = (ಆಲಂ) ಒರಟಾದ ವರ್ತನೆ, – ನಡವಳಿಕೆ : ಕೊಟ್ಟೊಡವೆಯ ನಾವು ತೆಗೆದುಕೊಂಬವರಲ್ಲ ಮುಟ್ಟದಿರೌ ನಿನಗಿರಲಿ ವೆಟ್ಟೆತಟ್ಟೆಯೊಳೆಮ್ಮ ನೀನೆಂದುದಕೆ ತಕ್ಕ ತಿಟ್ಟವ ಮಾಳ್ಪೆ ನಾನು (ಭರಚ. ೯-೧೨೫). [?/ ತಮಿ. ವೆಟ್ಟೈ]

**ವೆಟ್ಟೆಡೆಗುರವಡಿ** (ನಾ). ಒಬ್ಬಾತನ ಹೆಸರು : ಶ್ರೀ ವೆಟ್ಟೆಡೆಗುರವಡಿಗಳ್ಮಾಣಾಕ್ಕ ಸ್ಸಿಂಗಣನ್ದಿಗುರವಡಿಗಳ್ನೋನ್ತು ಕಾಲಂ ಕೆಯ್ದಾರ್ (ಎಕ. II, ೩೨-೧; ಸು. 700).

[ವೆಟ್ಟೆಡೆ ? + ಗುರವಡಿ]

**ವೆಡಣಗೆ** (ನಾ). ಒಂದು ಬಗೆಯ ಖಾದ್ಯ , — ವಡೆ (?) : ಅರದ ಉದ್ದು ಒಂದು ಭಾಗ ಅರದ ಹೆಸರು ಒಂದು ಭಾಗ ಇವ ಕೂಡಿ ತಕ್ಕಷ್ಟು ಉಪ್ಪನಿಕ್ಕಿ ಮೆಣಸು ಏಲಕ್ಕಿಯ ಚೂರ್ಣ ಅಲ್ಲಂ ಉಳ್ಳಿಯ ಮಿಗಿಲಾಗಿ ಕಾಯಿದಿಕ್ಕಿ ಇಂಗನರೆದು ಚೆನ್ನಾಗಿ ಕಲಸಿ ಕೆಂಡಧೂಪವ ಕೊಟ್ಟು ಕಲಸಿ ಒಂದು ಉಂಡೆಯ ಮಾಡಿ ಚೆನ್ನಾಗಿ ಕುಟ್ಟಿದ ಕಣಕದಿಂದ ಚೆನ್ನಾಗಿ ಮುಚ್ಚಿ ಒಂದು ಪಾ(ವ)ಾಡೆಯಲ್ಲಿ ತಟ್ಟಿ ವಡೆಯಾಗಿ ವೊತ್ತಿ ಕಾದ ಕಾವಲಿಯ ಮೇಲೆ ಹಾಕಿ . . . ಬೇಯಿಸುವುದು. ಇದೊಂದು ವೆಡಣಗೆಯೆಂಬ ವೊಡೆ (ಭೀಮಸೂ. ೧೯). 'ದಿಡ್ಡಣಿಗೆವಡೆ' ಪರಾ. [?]

**ವೆಡಿರೂನ್** (ನಾ). ಒಬ್ಬಾತನ ಹೆಸರು : ಶ್ರೀಮತ್ ಶಿವಮಾರಂ ಪ್ರಿಥುವೀರಾಜ್ಯಂ ಕೆಯೆ ವೆಡಿರೂನ್ ಸ್ವರ್ಗತ್ತಿಱೆಯ ಮರಿಯಾದಿ ಕೊಟ್ಟಾನ್ (ಎಕ. III (R), ಹೆಗ್ಗಡ. ೧೫೬-೨ ; ಸು. 780 ?). [?]

**ವೆಡೆವಳ್ಳಿ** (ನಾ). ಒಂದು ಊರಿನ ಹೆಸರು : ವಳ್ಳಿಗ್ರಾಮೆಯರ ದಾಸಡಿಯುಂ ಅಮಲಿಯರ ದೇವದಿಯುಂ ವೆಡೆವಳ್ಳಿಯರಾ ದೇವದಿಯುಂ ಅಲವಳ್ಳಿಯರಾ ರವಿಚನ್ದ ನುಮ್ . . . ರಾಜಶ್ರಾವಿತಮಾಗೆ ಪ್ರಸಾದಂ ಕೆಯ್ದಾರ್ (ಇಅ. XIX, ೧೪೪-೭; 680).

[ವೆಡೆ ? + ಪಳ್ಳಿ$_1$]

**ವೆಡ್ಡಯ್ಸು** 'ವೇಡಯಿಸು' ನೋ.

**ವೆಡ್ಡೈಸು** 'ವೇಡಯಿಸು' ನೋ.

**ವೆತಿರೇಕ** 'ಬೆತಿರೇಕ' ನೋ.

**ವೆತೆ** 'ಬೆತೆ' ನೋ.

**ವೆತ್ತನೆ** (ನಾ). ಒಂದು ಬಗೆಯ ಸುಂಕ, – ತೆರಿಗೆ : ಮಗ್ಗ ಸುಂಕ ಮಾವಾಱಿಕೆ ಸಲಿಯೂರ ವೆತ್ತನೆ ಮುಂತಾದ ಸರ್ವ ತೆಱಿಗೆ ಕಾಲುವಳ್ಳಿಯ ಗ್ರಾಮಗಳು ಸಹ (ಎಕ. IV, ಗುಂಡ್ಲುಪೇ. ೧-೧೯ ; 1522). [?]

**ವೆದಿರಕೆಱೆ** (ನಾ). ಒಂದು ಕೆರೆಯ ಹೆಸರು : ಕಱುಮಾಮಿ ಪಂಳಮೆ ವೆದಿರಕೆಱೆ ಎ ಸಾಲತ್ತ ಕಾಡೇಱಿನ ಪೇರೊಟ್ಕಿಎ (ಎಕ. IV, ಎಡತೂ. ೬೦-೭೪ ; ಸು. 890).

[ವೆದಿರ? + ಕೆಱೆ]

**ವೆಯ** 'ಬಿಯ' ನೋ.

**ವೆರಂ** 'ವೆಱಂ' ನೋ.

**ವೆರತ** (ನಾ). ಹಾಳಾದುದು ; ಪ್ರಯೋಜನವಿಲ್ಲದುದು ; ವ್ಯರ್ಥ : ನಾ ಬದುಕಿ ಬಹು[?]ನಸವೂ ವೆರತವೇ ಸರಿಯೆನ್ನ ಕಲಹದೊಳಿರದೆ ಸಾಗ್ಯೆ ಕಂದ (ಜನಭಾ. ೭೦-೨೯).

[< ಸಂ. ವ್ಯರ್ಥ]

**ವೆರ್ಗಡೆ** 'ಪೆರ್ಗಡೆ$_1$' ನೋ.

**ವೆರ್ಥಾಯ** (ನಾ). ಪ್ರಯೋಜನವಿಲ್ಲದುದು: ಹಾರುವರು ಉಪಾಯದೊಳ್ ಕಾಲಮಂ ಕಳೆವವರು ಬರಿದೆ ವೆರ್ಥಾಯದಿಂ ಹಾರುವರ ನೆಚ್ಚದಿರು (ತುರಂಗ. ೫೧-೨೪).

[< ಸಂ. ವೃಥಾ]

**ವೆರ್ಮಾಡಿ** (ನಾ). ಹಿಂದಿನ ಕಾಲದಲ್ಲಿ ಹಿರಿತನದ ಅಥವಾ ಅಧಿಕಾರದ ಸೂಚಕವಾಗಿ ವ್ಯಕ್ತಿಗಳ ಹೆಸರಿನೊಂದಿಗೆ ಸೇರುತ್ತಿದ್ದ ಶಬ್ದ (?) :

ರಾಚಮಲ್ಲವೆರ್ಮ್ಮಾಡಿಗಳ್ಗಂ (ಎ.ಇ. X, ೬೫-೧೭ ; 892) ; ತತ್ಪುತ್ರಂ ಭೂತುಗವೆರ್ಮಾಡಿ (ಎಕ. VII. ಶಿಕಾರಿ. ೫೭-೧೪ ; 1115). [< ಪೆರ್ಮಾನಡಿ]

**ವೆಲೆ** 'ಬೆಲೆ$_1$' ನೋ.

**ವೆಲೆಕೊಳ್** 'ಬೆಲೆಗೊಳ್' ನೋ.

**ವೆಲ್ಲವಾಲೆ** (ನಾ). ಒಂದು ಬಗೆಯ ಔಷಧೀಸಸ್ಯ : ಪಯಸ್ಯಾ— ನೆಲದಾವರೆ, ವೆಲ್ಲವಾಲೆ, ನಾಗಾರ್ಜುನಿ (ಒಷಧಿ. ೯೧). [?]

**ವೆಲ್ಲಿಸು** (ಕ್ರಿ). (ನೆಲದ ಮೇಲೆ) ದಿಂಡುರುಳು ; ಉರುಳಾಡು : "ನೆಲದಲ್ಲಿ ಅಡಿಗಡಿಗೆ ವೆಲ್ಲಿಸುವಲ್ಲಿ ಉಪಾವೃತ್ತ, ಲುಠಿತ ಎನಿಸುಗು, ಇದು ಹೊರಳುವುದು" (ನಾಚಿರಾ. ೧೩೪). [< ಸಂ. ವೇಲ್ಲನ + - ಇಸು$_3$]

**ವೆವಹರ** 'ಬೆವಹಾರ' ನೋ.

**ವೆವಹರಿಸು** 'ಬೇಹರಿಸು' ನೋ.

**ವೆವಹಾರ** 'ಬೆವಹಾರ' ನೋ.

**ವೆಸ** 'ಬೆಸ$_1$' ನೋ.

**ವೆಸನ** 'ಬೆಸನ$_2$' ನೋ.

**ವೆಸಸು** 'ಬೆಸಸು$_2$' ನೋ.

**ವೆಳಂಗ** (ನಾ). ಒಬ್ಬಾತನ ಹೆಸರು (?): ಅಜ್ಜುನರಾಹ ನಾಟಿಕೆಯೊಳೆ ವೆಳಂಗ ಕೊವರ ಚಬ್ಬಿಸೆಟ್ಟಿಯ ತಮ್ಮ ಮಣಿಯಮಸೆಟ್ಟಿ ತುಱುಗೊಳೆ ತುಱುವನಿಕ್ಕಿಸಿ ಸತ್ತು ಸಗ್ಗಕ್ಕೆ ಸನ್ದನ್ (ಎಕ. IX, ದೊಡ್ಡಬ. ೧೦-೨ ; ಸು. 920). [?]

**ವೆಳಸು** 'ಮೆಟಸು' ನೋ.

**ವೆಳಿಯಂಬು** (ನಾ). ಒಂದು ಬಗೆಯ ಬಾಣ (?) : ಅಱುಗಿ ವೆಳಿಯಂಬಿ ನೆಱಗಿ ಕಳ್ಕಡೆ ತಳ್ತು ಮಱುವಕ್ಕಮಾದ ನೃಪರ್ಕ್ಕಳಾನ್ ಅಂಗರನೆಱಿವೆನಾರದ . . . ಪೂಲಿಯರ್ ಮಾಡಿದ ಸಿಲಾಕಮ್ಮ್ (ಎಕ. VIII. ಸೊರಬ. ೨೨-೯ ; ಸು. 800?).

[? + ಅಂಬು$_2$]

**ವೆಳಿಯವೂರ್** (ನಾ). ಒಂದು ಊರಿನ ಹೆಸರು : ತಾಗರತ್ತೆ ಆ ಮಹಾಜನಕ್ಕೆ ಸಾಲೆ ಆಚನ್ದ್ರತಾರಕಂ ವೆಳಿಯವೂರಾ ಮಹಾಜನಕ್ಕೆ ಆಚನ್ದ್ರತಾರಕಂ ಎರಡುಸಾಲೆ . . . ಸ್ವಸ್ತಿಶ್ರೀ ದಿಗಟರ ಬೆಸುಗಿ ಕೊಟ್ಟದು (ಎಕ. VII. ಶಿಕಾರಿ. ೪೫-೧೩; ಸು. 890 ?).

[ವೆಳಿಯ$_1$ + ಊರ್]

**ವೆಳ್ಗೊಳ** 'ಬೆಳ್ಗೊಳ' ನೋ.

**ವೆಳ್ಪ** (ನಾ). ದೂರವನ್ನು ಅಳೆಯುವ ಒಂದು ಪ್ರಮಾಣ ; ಇಪ್ಪತ್ತು ಯೋಜನದ ಅಳತೆ : "ಕ್ರೋಶಂ . . . ನಾಲ್ಕುವರಲು ಯೋಜನಮಕ್ಕುಮಿಪ್ಪತ್ತು ವೆಳ್ಪಮಕ್ಕಿವು ಹತ್ತು ವರ್ತನಾಖ್ಯಂ" (ಮಂಗರಾ. ೯೭-೧೧). [?]

**ವೆಳ್ಮಟ್ಟಿಕವಾಡ** (ನಾ). ಒಂದು ಊರಿನ ಹೆಸರು : ಮೂಲ (ಲ?)ವಳ್ಳಿ ವೆಳ್ಮಟ್ಟಿಕವಾಡ ಪಚ್ಛ(ಪ್ಪ)ನೂರ್ . . . ಇತಿ ಅಸ್ಯ ಭುಕ್ತಿ(ಕ್ತಿಃ) (ಇ.ಆ. VIII, ೨೪೩-೧೮ ; 634) ; (ಎ.ಇ. V. ೭-೧೮ ; 634 ನೋ). [ವೆಳ್ಮಟ್ಟಿಕ$_2$ + ಬಾಡ$_1$]

**ವೆಳ್ಮಾದ** (ನಾ). ಒಂದು ಊರಿನ ಹೆಸರು (?) : ಶ್ರೀಕಿತ್ತೂರಾ ವೆಳ್ಮಾದದಾ ಧಮ್ಮ್ಸೇನಗುರವಡಿಗಳಾ ಶಿಷ್ಯರ್ ಬಾಲದೇವಗುರವಡಿಗಳ್ ಸನ್ಯಾಸನಮ್ ನೋನ್ತು ಮುಡಿಪ್ಪಿದಾರ್ (ಎಕ. II. ೨೪-೧ ; ಸು. 700). [?]

**ವೆಱಂ, ವೆರಂ** (ಅ). ನಿಶ್ಚಿತವಾದ ಅರ್ಥವನ್ನು ಸೂಚಿಸುವ ಒಂದು ಅವ್ಯಯ ; ಖಂಡಿತವಾಗಿ ; ದಿಟವಾಗಿ ; ನಿಶ್ಚಯವಾಗಿ : ಇನ್ನಂತೆ ಮತ್ತೆ ಬಱಿ ಮಿಗೆ ಮುಂ ನಿಲೆ ತಾಂ ಮೇಣ್ ವೆಱಂ ಗಡಂ ಗಳಮಾದಂ ಕೆನ್ನಂ ನಿಲ್ಲೆಂದಿವನೆಂದುಂ ನಿಱಿಸಲ್ಕಲ್ಲದೆಡೆ ಗಳೊಳ್ ಕಲ್ಪದಿರಿಂ (ಕವಿರಾ. ೨-೧೩) ; ಕೀಱಿ ಪೌರುಷಮನಾತ್ಮಪುಣ್ಯದಿಂ ಬೇಱಿ ಮಾಡದೆಸಪೊಂ ವಿರೋಧಿಯಂ ಮಾಱುಗುಂ ವೆಱಮೆಱಂಕೆಯೊಂದಱಿಂ ಪಾಱ ಲಾರ್ಕುಮೆ ಪತತ್ರಿರಾಜನುಂ (ಕಾವ್ಯಾವ. ೪೯೨); ಏಗಂ ವಲಂ ವೆಱಂ ದಲ್ ತಾಗು ಗುಮತಿನಿಶ್ಚಯಾರ್ಥಮಂ (ಶಮದ. ೩೦೭). **ವೆರಂ** : ಸರೆಯಂ ಸವರಲೆಂದೆ ವೆರಮಾ ಬವರ ದಬ್ಬಾಳಿಕೆಯ ಮೆಟ್ಟಡಿಯ ತಬ್ಬಬೇಕೆ ? (ಗಿರಿಜಾಕಿ. ೭೦-೨೫) ; ಬೇಳ್ವಲಿಪುವೊಡಮಾಯ್ತು ತಗುವ ಚಿತವೆರಮೆಂದು ಬೀಗಿದೆನೆದಂ ಪುಗುವೆನೀಗಳೆ ವಿಧಾತ್ರನಂ (ಸಂಸಪ. ೨೫-೩). [?]

**ವೇಱಿ** (ನಾ). ಹುಚ್ಚು ; ಮರುಳುತನ ; ಬುದ್ಧಿಭ್ರಮೆ : ವೆರ್ರಿ(ೞಿ)ಯಾಗಿರ್ದವಂ, ಭೀತನಾಗಿ ಇಹಾತಂ, ಕ್ಲೇಶವಹ ನುಡಿಗಳನುಳ್ಳಾತಂ . . . ಈ ಪೇಱಿಂತಪ್ಪ ದೂತಂ ಬಂದು ಪಾವ್ ಕಚ್ಚಿತೆಂದು ಪೇಟಲ್, ಗಾರುಡಮಸಾಧ್ಯಂ (ಲೋಕೋಪ. ೧೦-೫ ಟೀಕೆ).

[ದೇ. ‖ ತಮಿ. ಮಲ. ವೆಱಿ ; ತೆಲು. ವೆಱ್ಱಿ / ಪುದಾ. ವೇಡ]

**ವೇಗ** (ನಾ). ೧. ಜೋರು ; ಶೀಘ್ರತೆ ; ತೀವ್ರತೆ : ಲಕ್ಷ್ಮಣದೇವನೆಸೆದನಯ್ ರಾಗಾನುರಾಗದಲಿ, ವೇಗದಲಿ, ರಭಸದಲಿ (ತೊರರಾಮಾ. ೨೭-೬೮) ; ದೃಶ್ಯದ ಮಿಲಿಯಗಟ್ಟಳೆ ಸೂಕ್ಷ್ಮಭಾಗಗಳು ಒಂದರ ಮೇಲೊಂದಾಗಿ ಅತ್ಯಂತ ವೇಗದಿಂದ ಪರದೆಯ ಮೇಲೆ ಮೂಡುವಾಗ . . . ಇಡಿ ಚಿತ್ರದ ಭಾವನೆಯೇ ನಮ್ಮಲ್ಲುಂಟಾಗುವುದು (ವಿಜ್ಞಾವಿ. ೯೮). ೨. ಚುರುಕು; ಚಟುವಟಿಕೆ : ಬಾಗಿಲಿನೊಳವೊಕ್ಕು ಬಂದನೆಂಬುದು ಮತಿವೇಗದೊಳಿದಿರುಗೊಳುವುದು (ಹರಿಬ. ೩-೧೪). ೩. ಪ್ರವಾಹ ; ಹರಿವು : "ವೇಗಃ, ಸ್ಥೂಳೋಚ್ಚಯಃ — ಈ ೨ ಹರಿವುದಕ್ಕೆ ಪೆಸರ್" (ಹಲಾಯು. ೩೭-೬೯) . ೪. ಒತ್ತಡ ; ರಭಸ : ಮಲಮೂತ್ರಾದಿಗಳ ವೇಗವ ತಡೆಯುವುದರಿಂದಲೂ . . . ಬಹುಮೂತ್ರರೋಗವುಂಟಾಗುತ್ತಿಹುದು (ಸಕವೈ. ೩೭೯). ೫. ರಭಸದಿಂದಾಗುವ ಮಲಮೂತ್ರಾದಿಗಳ ವಿಸರ್ಜನೆ : ಒಳ್ಳೆ ವಿಭೂತಿ ಮತ್ತು ಸಕ್ಕರೆ ಇವನ್ನು ನಿಂಬೆಹುಳಿಯಲ್ಲಿ ಕಲಸಿ ಉಂಡೆ ಮಾಡಿ ಅಡಿಕೆ ಗಾತ್ರದಷ್ಟನ್ನು ಕೊಟ್ಟರೆ ಬಹುಶಃ ವೇಗಗಳು ಹೋಗುವುದು ನಿಲ್ಲುವುದು (ಸಕವೈ.ಪರಿ. ೪೭೭). ೬. ಬಲ ; ಶಕ್ತಿ. ೭. ಹಗೆ ; ಶತ್ರು. ೮. ಬೇಲಿ ; ಪರಿಧಿ. ೯. ಒಂದು ಬಗೆಯ ವಿಷ ; ಕಿಂಪಾಕ : "ಮಹಾಜವ ಕಿಂಪಾಕಮರಾತಿಯುಂ ಪರಿಧಿಯಿಂತೀ ನಾಲ್ಕು ವೇಗಾಹ್ವಯಂ" (ನಾನಾರ. ೯೮) ; ಸರ್ಪ ಕಚ್ಚಿದರೆ ವೇಗ ಉಂಟು (ವಿಷಚಿ. ೯-೨). ೧೦. ಕುದುರೆಯ ಒಂದು ಬಗೆಯ ನಡಗೆ : "ರಂಹಃ, ತರಃ, ಸ್ಯದಃ, ಪ್ರಸರಃ, ವೇಗಃ, ರಯಃ, ಜವಃ, ವಾಜಃ — ಈ ೮ ಕುದಿರೆಯ ವೇಗಂ" (ಹಲಾಯು. ೭೩-೨೮೯). [ಸಂ.]

**ವೇಗಗತಿ** (ನಾ). ತ್ವರಿತದಿಂದ ಕೂಡಿದ ಚಲನೆ ; ಶೀಘ್ರಗತಿ : ಗುಳಿ ತೆವರನೀಕ್ಷಿಸುತ ಬಟ್ಟೆಯ ಮೆಳೆ ಮರಂಗಳ ಹೊಯ್ಲು ತಪ್ಪಿಸಿ ನೆಳಲನಱಸುತ ವೇಗಗತಿ ಸಾಮಾನ್ಯ ಗತಿಗಳಲಿ ಬಳಿವಿಡಿದು . . . ಡಗೆಯ ಸೈರಿಸಿ ಬಳಸುವವನೇ ಛತ್ರಧಾರಕನು (ಕುಮ್ಮಾಉ. ೩-೯೯). [ಸಂ.]

**ವೇಗಗಾಮಿ** (ಗು). ರಭಸದಿಂದ ಚಲಿಸುವ ; ಶೀಘ್ರಗತಿಯ : ಅತ್ಯುತ್ತಮ ಜಾತಿಯ ವೇಗಗಾಮಿ ತೇಜಿಗಳ ಪಿರಾಟ ತನಗೆ ಅತ್ಯವಶ್ಯವೆಂದು ಅವನು ನಂಬಿಕೊಂಡಿದ್ದನು (ಪುನರು. ೩೩೨). [ಸಂ. ವೇಗಗಾಮಿನ್]

**ವೇಗಗೂಡು** (ಕ್ರಿ). ರಭಸಹೊಂದು ; ಜೋರಾಗು : ನಾಡಿಯು . . . ಹುಳಿಗೂಡಿದ ಆಹಾರವನ್ನು ಹೆಚ್ಚಾಗಿ ತೆಗೆದುಕೊಂಡಿದ್ದರೆ ಎಣ್ಣೆಯ ತೊಡೆದ ಹಾಗೂ ನೀರ ಕಾಗೆಯ ಹಾಗೂ ವೇಗಗೂಡಿ ನಡೆವುದು (ಸಕವೈ. ೧೨). [ವೇಗ + ಕೂಡು$_1$]

**ವೇಗದೂರ** (ನಾ). ವೇಗರಹಿತವಾದುದು ; ನಿಧಾನಗತಿಯುಳ್ಳುದು : ಚೂತವಲ್ಲೀವನಿತೆಗೆ ಪಡೆವುತ್ತಂಕುರವ್ಯಾಜದಿಂ ನೆಟ್ಟಗೆ ರೋಮಾಂಚಂಗಳಂ ಸದ್ವಿಟನೆನೆ ಸುಳಿದಂ ವೇಗದೂರಂ ಸಮೀರಂ (ರಾಜಶೇ. ೯-೪೭). [ಸಂ.]

**ವೇಗವರ್ಧಕ** (ಗು). ೧. ವೇಗವನ್ನು ಹೆಚ್ಚಿಸುವ; ಗತಿಯನ್ನು ತೀವ್ರಗೊಳಿಸುವ; "ವೇಗವರ್ಧಕ" (Accelerating. ಇಂಕನಿ). (ನಾ). ೨. (ಯಾವುದೇ ಜೀವಿ, ವಸ್ತು ಇವುಗಳ) ವೇಗವನ್ನು ಹೆಚ್ಚಿಸುವಂತಹುದು : ವೇಗವರ್ಧಕ (ಮನುಷ್ಯ ಅಥವಾ ವಸ್ತು) (Accelerator. ಇಂಕನಿ). ೩. [ವಿಜ್ಞಾ]ರಾಸಾಯನಿಕಕ್ರಿಯೆಯನ್ನು ಶೀಘ್ರಗೊಳಿಸುವ ವಸ್ತು, — ಅಧಿಕಮಾಡುವ ಸಾಧನ : ಕೆಲವು ರಸಾಯನಿಕ ಕ್ರಿಯೆಗಳು ಬಹಳ ನಿಧಾನವಾಗಿ ನಡೆಯುತ್ತಿರುವುವು. ಇವುಗಳ ವೇಗವನ್ನು ಇತರ ವಸ್ತುಗಳ ಸಹಾಯದಿಂದ ಅಧಿಕಗೊಳಿಸಬಹುದು. ಹೀಗೆ ಒಂದು ರಸಾಯನಿಕಕ್ರಿಯೆಯನ್ನು ಅಧಿಕಮಾಡುವ ವಸ್ತುಗಳಿಗೆ ವೇಗವರ್ಧಕಗಳೆಂದು ಹೆಸರು (ರಸಾಯ. ೩೭). [ಸಂ.]

**ವೇಗಾಯಿಲ, ವೇಗಾಯ್ಲ** (ಗು). ೧. ತ್ವರಿತವಾಗಿ ಚಲಿಸುವ ; ಅತಿವೇಗದ. (ನಾ). ೨. ಶೀಘ್ರವಾಗಿ ಹೋಗಿ ಸುದ್ದಿಯನ್ನು ಮುಟ್ಟಿಸುವವನು ; ಹರಿಕಾರ : "ವೇಗಾಯಿಲನೆಂದು ಹರಿಕಾಱಂ" (ಕಶಸಾ. ೫೭-೨೩೦) ; ವೇಗಾಯಿಲಮಿತ್ರನೇ, ನೀನು ತೊಟ್ಟಿರುವ ಕುಡುತೆಯು ಸೇನಾನಿಯಮನಿರ್ಬನ್ಧಗಳ ಬಿಗಿಗಟ್ಟಿನೊಳಗೆ ಸಂಬದ್ಧವಾಗಿರುವ

ವೀರಚಾರವನ್ನು ನಿರ್ದೇಶಿಸುತ್ತಿದೆ (ಬಿಟ್ಟಆ. ೭೭-೯). **ವೇಗಾಯ್ಲ : ೧.** ಹರುಷದಲಿ ಬಿನ್ನಹದ ವೋಲೆಯ ಬರೆಸಿದನು ವೇಗಾಯ್ಲ ದೂತರನಟ್ಟಿದನು ಭೂಪ (ಕುವ್ಯಾ.ವಿ. ೧೦-೨೯). **೨.** ''ವೇಗಾಯ್ಲ ಶೀಘ್ರಗಾಮಿಕನಕ್ಕುಂ'' (ಕವಿಕಂ.೧೧೨). **೩. ಶೀಘ್ರಗತಿಯ ವ್ಯಕ್ತಿ ; ವೇಗಶಾಲಿಯಾದವನು :** ಆಟಲಿಗರುಂ ವೇಗಾಯ್ಲರುಮಪ್ಪನ್ನಯಾಗತ ನಭೋಗತಿಗಳ್ ಬಿಲ್ಲಂ ಸರಳ್ಗಮಣ್ಮುಗೆಟ್ಟುಮಿಟ್ಟೆಡೆಯುಮಾಗಿ ತೊಟ್ಟನೆ ನೆರೆದುರುಳೆ ನೂಂಕುವುದುಂ (ಶಾಂತಿಪು. ೪-೩೩ ವ) ; ಹೊಯ್ಲ ಹೊಗೆಗಳ ಹೋರಟೆಯ ವೇಗಾಯ್ಲ ಮುಷ್ಟಾಮುಷ್ಟಿಗತಿಯ ದೃಢಾಯ್ಲರಪ್ಪಳಿಸಿದರು ಪದಘಟ್ಟಣೆಗೆ ನೆಲಕುಸಿಯೆ (ಕುವ್ಯಾಸ. ೨-೧೦೮). [ವೇಗ + - ಆಯಿಲ್ಲ]

**ವೇಗಾಯ್ಲ** 'ವೇಗಾಯಿಲ' ನೋ.

**ವೇಗಾಯ್ಲತನ** (ನಾ). ವೇಗವನ್ನು ಹೊಂದಿರುವಿಕೆ ; ಶೀಘ್ರಗಾಮಿತ್ವ : ಆವ ಜವವೇನೆಂಬ ಗತಿ ಮೇಣಾವ ದೃಢ ವೇಗಾಯ್ಲತನ ತಾನಾವ ಸೂಟಿಯದಾರು ಬಲ್ಲರು ವಹಿಲ ವಿವರಣವ (ಕುವ್ಯಾಆ. ೭-೧೯). [ವೇಗಾಯ್ಲ (< ವೇಗಾಯಿಲ) + - ತನ]

**ವೇಗಿ** (ಗು). ೧. = ವೇಗಾಯಿಲ ೧. (ನಾ). ೨. = ವೇಗಾಯಿಲ ೨ : ''ಜಂಘಾಳಃ, ಜವನಃ, ವೇಗೀ — ಈ ೩ ಹರಿಕಾಖಂ'' (ಪಲಾಯು. ೫೯-೨೦೩). ೩. ಒಂದು ಬಗೆಯ ಪಕ್ಷಿ ; ಗಿಡುಗ. ೪. ಒಂದು ಬಗೆಯ ಬಿಕ್ಕುಳುರೋಗ : ಆ ಹಿಧ್ಮವೆಂಬ ಬಿಕ್ಕುಳು ಅನ್ನಜೆ, ಕ್ಷುದ್ರ, ಯಮಳೆ, ಮಹತಿ, ವೇಗಿ — ಇಂತೈದು ತೆರನಾಗಿ . . . ವೇಗಿ ಎಂಬ ಬಿಕ್ಕುಳೊಂದೇ ಸರ್ವಥಾ ಅಸಾಧ್ಯವೆನಿಸಿಕೊಳ್ಳುವುದು (ಸಕವ್ಯ. ೨೪೦). [ಸಂ. ವೇಗಿನ್]

**ವೇಗಿಸು** (ಕ್ರಿ). ಭರದಿಂದ ಹೆಚ್ಚಿಸು ; ಬೇಗ ವೃದ್ಧಿಸು ; ಜಾಸ್ತಿಮಾಡು : ಯೋಗತತಿಗಳನಪಹರಿಸಿ ನಿಜಯೋಗಸಾಮರ್ಥ್ಯದಲಿ ಭಂಗದ ಸಾಗರದಲದ್ದಿದನು ತಮ್ಮೈಶ್ವರ್ಯಸಿದ್ಧಿಗಳ ವೇಗಿಸಿದನೀ ದುಷ್ಟನೀತನ ನೀಗಿದೈ ನಿಜಶರಣರಕ್ಷಾ (ನಿಭಾಗ. ೭-೮-೨೧). [ವೇಗ + - ಇಸು]

**ವೇಗೂರ್** (ನಾ). ಒಂದು ಊರಿನ ಹೆಸರು : ವೇಗೂರಾ ಪರಮಪ್ರಭಾವ ರಿಷಿಯರ್ಸ್ವರ್ವ್ವಜ್ಞಭಟ್ಟಾರಕರ್ . . . ಸ್ವರ್ಗ್ಗಾಗ್ರಮಾನೇಱಿದಾರ್ (ಎಕ. II. ೧೩-೨ ; ಸು. 700) ; ಸ್ವಸ್ತಿ ಗುವಳಾಲಂಗೊಂಗುಂ ವಾಣರಸ ಆಳೆ ವೇಗೂರಂ ಪೊಂಪುಲಂ ಆಳೆ (ಎಕ. X, ಮುಳಬಾ. ೨೬೫-೧ ; ಸು. 860). [? + ಊರ್]

**ವೇಟಿಸು** (ಕ್ರಿ). ಆವರಿಸು ; ವೇಷ್ಟಿಸು (?) : ಕಳವುಮಾರ್ಗಮದೇಕೆ ಬಯಸುವ ಬಳಿಕ ವೇ[ಪಾಠಾಂ. ಮೇ]ಟಿಸು ತೋರ್ಪೆ ಪರಗತಿ ನೆಲೆ ಸುಮಾರ್ಗವನೆಂದು ದಿವಿಜಾಧೀಶ ತೆಗೆದೆಚ್ಚ (ಅಂಬಿಕಾ. ೧೪-೧೪). [< ಸಂ. ವೇಷ್ಟನ + - ಇಸು]

**ವೇಟು** (ನಾ). (?) : ನಿಷ್ಠುರದೊಳತಿಯುಬ್ಬುಗೊಬ್ಬಿನೊಳ್ ಧೈರ್ಯದೊಳ್ ಶೌರ್ಯಂಗಳಾ ಅಂಕೆಯುರು ವೇಟನೊಳ್ ನೀಟನೊಳ್ ಮೇಣವರಿಗುಂ ಕಡೆಯೊಳ್ಲಿಯುಂ ಲೋಕದೊಳ್ ಪರಿಕಿಸಲ್ ಮುಂ ಕಾಣೆ ಸರಿಯಪ್ಪ ಸುಭಟರ್ಕಳ (ಪರಶು. ೩೦-೨೦). [?]

**ವೇಡಯಿಸು, ವೆಡ್ಡಯ್ಸು, ವೆಡ್ಡೈಸು, ವೇಡಯ್ಸು, ವೇಡಿಸು, ವೇಡೈಸು, ವೇಢಯ್ಸು, ವೇಢೈಸು** (ಕ್ರಿ). ಸುತ್ತುವರಿ; ಆವರಿಸು; ಬಳಸು : ಕದನಕರ್ಕಶದ ಮೆಯ್ಸಿರಿಯ ರಾವುತರ್ ಮಾವುತರ್ ಬಳಸಿ ವೇಡಯಿಸಿ [ಪಾಠಾಂ.ವೇಡಯ್ಸಿ]ಬರಲಂ ದಂಧಕಾಸುರಂ ಪೊಱಮಟ್ಟು ಪೊಱಬೀಡನುಱೆ ಬಿಟ್ಟನು(ಚಿಬಪು. ೪೭-೩೨). **ವೆಡ್ಡಯ್ಸು :** ಸಾರಿದರೆ ಮಱಿದುಂಬಿಗಳ ಸುಖಪಾರಣೆಯ ಬೆಸಗೊಳುತ ನಗುತ ವಿಕಾರಿಗಳು ವೆಡ್ಡಯ್ಸಿ [ಪಾಠಾಂ. ವೇಡೈಸಿ]ದರು ನೃಪಮುನಿನಿಜಾಶ್ರಮವ (ಕುವ್ಯಾಆ. ೧೮-೫) ; ತಿವಳಿದೆರೆಗಳ ನಡುವೆ ರಂಜಿಸುವ ಶೈವಾಲದಂತೆ ಜಘನಾದ್ರಿಯಂ ವೆಡ್ಡಯ್ಸಿ[ಪಾಠಾಂ. ವೆಡ್ಡೈಸಿ]ದಮಲ ಕಾಂಚೀದಾಮದ ದಾವಶಿಖಿಯಿಂದೆ ನಭಕೇಳ್ವ ಕರ್ಬೊಗೆಯಂತೆ . . . ತನುಮಧ್ಯದೊಳ್ಪಾಸ ಕಂಗೊಳಿಸಿರ್ದುದು (ಜೈಮಿಭಾ. ೩೦-೧೧). **ವೆಡ್ಡೈಸು :** ಕೇಸುರಿಯ ಕಬ್ಬೊಗೆಯ ಶಿಖಿ ವೆಡ್ಡೈಸಿತಬುಧಿಯ ಮದದ ಘಾಡಿಕೆ ಘಾಸಿಯಾದುದು (ತೊರರಾ. ೭-೪-೩೭) ; ಮತ್ತ ದಂತಿಗಳು ವೆಡ್ಡೈಸಲು ಕಾಣುತ ಕಿತ್ತೊಂದು ಕೈರದ ಮರನ . . . ಪೊಯ್ಯೆ (ನಾಗಕು. ೧೦-೧೨೦) . **ವೇಡಯ್ಸು :** ಐದಿತೀ ರಘುಪತಿಯನಾ ಕ್ರವ್ಯಾದಬಲ ವೇಡಯ್ಸಿ [ಪಾಠಾಂ. ವೆಡ್ಡೈಸಿ, ವೇಡೈಸಿ]ಕೊಂಡುದು ಕೊಯ್ದ ಮೂಗಿನ ಖಳಸತಿಯ ಕೈಸನ್ನೆಗಾಶ್ರಮವ (ತೊರರಾ. ೩-೬-೧). **ವೇಡಿಸು :** ಶಶಾಂಕನಲಿ ಕಣ್ಣಾಡಿದವು ರೋಹಿಣಿಗೆ ವಾಣಿಗೆ ವೇಡಿಸಿತು ಕಂದರ್ಪಶರ ಸರ್ವಾಂಗದಲಿ ಮನವ (ನಿಭಾಗ. ೧೦-೨೮-೪) ; ಈ ಮಹಾಕೃತಿಯಿಂದೊಲವು ಮಿಗೆ ವ್ಯೋಮದಲಿ ವಿಧು ವೇಡಿಸಿದ ಪರಿವೇಷದಿಂದೆರೆವ ಕೌಮುದಿಯೊಲೀ ಕನ್ನಡದೊಳಾಸೀಮಮನೆ ನೆಲಸಿಹುದು (ಗಿಳಿವಿಂ. ೯೬-೧). **ವೇಡೈಸು :** ಲಿಂಗಂಗಳಂ ತರಿಸಿ ಬಂಡಿಗಳ ಮೇಲಳವಡಿಸಿ ಮುಂಕೊಂಡು ನಡೆತಂದೂರ ಮೇಲುದ್ದಂಡದಿಂ ವೇಡೈಸಿ [ಪಾಠಾಂ. ಡಯ್ಸಿ] ಬಿಟ್ಟನು ನಾಚಿದೇವಯ್ಯ (ಬಸಪು. ೫೧-೬೯) ; ಬೇಸರದೆ ಕಾಳೋರಗನನಡ್ಡೈಸಿ ಕಟ್ಟಿರುವೆಗಳು ಮಿಗೆ ವೇಡೈಸಿ ಕಡಿದೆರೆಯಟ್ಟುವಂದದಲಹಿತಬಲದೊಳಗೆ ಓಸರಿಸದೊಳ ಹೊಕ್ಕು (ಕುವ್ಯಾಸ. ೧-೭೫) ; ರೂಢನಾಗಿರಲೊಲ್ಲದಾರ್ಜಿಸಿದ ವಿತ್ತಮಂ ವೇಡೈಸಿದಖಿಳ ಜನಕಿತ್ತೆ ವನವಾಸವೇ ಗತಿ ನಿನಗೆ (ಜೈಮಿಭಾ. ೩೦-೩೩). **ವೇಢಯ್ಸು :** ಮಹೀಶೂರ ಕೋಟೆಯನ್ನೇ ವೇಢಯ್ಸಿ ಆಕ್ರಮಿಸಿಕೊಳ್ಳಲು ದುರಾಲೋಚನೆಯ . . . ಗುಪ್ತವಾರ್ತೆಯು ಪರಾಂಬರಿಕೆಯಾಯ್ತು (ಬಿಟ್ಟಆ. ೭೯-೩). **ವೇಢೈಸು :** ವಹಿಲವನು ವೇಢೈಸುವಡೆ ನರರಹಿಪತಿಗಳೇ (ಕುವ್ಯಾಕ. ೨೩-೬) ; ಮಲೆನಾಡವರ್ ಮಲೆತು ನಿಲ್ವಿನಂ ಅವರ್ ವೇಢೈಸಿ ಬಿಗಿದಿತ್ತತ್ತಲಿನಿಸುಂ ಮಿಸುಕಲೀಯದೆ (ಚಿಕವಂ. ೪೧-೨೦) ; ರಾಜಧಾನಿಯೊಳಿರ್ದ ಸೇನೆಯುಮೊಂದುಗೂಡಿ ಬಂದು ವೇಢೈಸಲೊಡಂ (ಮರಾಚ. ೨-೭೪).

[< ವೇಡ + - ಇಸು]

**ವೇಡಯ್ಸು** 'ವೇಡಯಿಸು' ನೋ.

**ವೇಡಾಂಕ** (ನಾ). ಒಂದು ಬಗೆಯ ನೃತ್ಯ (?) : ಹಾಡುತಿಹ ಗುರುನಿರೂಪಿತದ ವಚನಂಗಳಿಂದಾಡುತಿಹ ಪೇರಣೆಯ ವೇಡಾಂಕ [ಪಾಠಾಂ. ವೆಡ್ಡಾಂಗ, ವೇಡಾಂಗ] ಕೇಳಿಕೆಯ ನೋಡುತಿಹ ಪೃಥ್ವಿಯ ಮಹಾಭಕ್ತಜನದ ಸಮ್ಮರ್ದನವ ಕೆಲವಿಂಗಿಸಿ (ಸಿದ್ಧರಾ. ೮-೭೯). [?]

**ವೇಡಿಕೆ** (ನಾ). ವಿನೋದ ; ತಮಾಷೆ ; ಹಾಸ್ಯ : ಪೊಱಮಡುವವಸರದೊಳ್ — ಪರರಾಯರಂ ಕಾಣ್ಬೆಡೆಗುಂ, ಸ್ವಯಂವರದೆಡೆಗುಂ, ವೇಡಿಕೆಯ ಕಾಣ್ಬೆಡೆಗುಂ, ರಣದೆಡೆಗುಂ ತಾನೊರ್ವನೆ ಪೋಪುದರಸಂಗೆ ತಕ್ಕುದಲ್ತು (ಅದ್ಭುಕ. ೪೩-೧೩).

[ದೇ. ‖ ತಮಿ. ವೇಟಿಕ್ಕೈ; ತೆಲು. ವೇಡುಕ]

**ವೇಡಿಸು** 'ವೇಡಯಿಸು' ನೋ.

**ವೇಡೆ, ವೇಢೆ** (ನಾ). ೧. ಸುತ್ತುವರಿಯುವಿಕೆ ; ಮುತ್ತಿಗೆ ; ಆಕ್ರಮಣ : ಇವನ ಹೊಯ್ ಕಟವಾಯ ಕೊಯ್ ತಪ್ಪುವನೆ ಸುರಪತಿ ಶಿವಶಿವಾ ಸುರರವಗಡಿಸುವರ ವೇಡೆಗಡ ಹೈರಣ್ಯನಗರಿಯಲಿ (ಕುವ್ಯಾಆ. ೧೨-೧೭); ಕೂಡೆ ನಗರದ ನಿಖಿಳಜನ ತೆಗೆದೋಡಿತಲ್ಲಿಯದಲ್ಲಿ ದಳ್ಳುರಿವೇಡೆಯಲಿ ಸಿಲುಕಿದ ನಿಶಾಚರರಾ ಪುರಾಂತರದ ಬೇಡಕುಣಿ ಹೊಕ್ಕರಣೆಗಳಲಕ್ಕಾಡಿದರು (ತೊರರಾ. ೫-೮-೭೯) ; ಕಾಳುಗಿಚ್ಚಿನ ವೇಡೆಯಲಿ ವನಜಾಲ ಬೇವುತ್ತಿರಲು (ನಿಭಾಗ. ೨-೩-೨೨). ೨. ಸುತ್ತುಗಟ್ಟಿರುವುದು ; ಆವರಣ; ಬೇಲಿ : ಜೋಡಿಸಿದನಮರೇಂದ್ರನಮರರ ವೇಡೆಯಾಯ್ತು ಹಿರಣ್ಯನಗರಿಗೆ (ಕುವ್ಯಾಆ. ೧೨-೧೬). ೩. ಹಿಡಿತ ; ಬಂಧನ ; ಸೆರೆ : ಸುರೇಂದ್ರನ ಕಟಕವಿಕ್ಕಿದ ವೇಡೆಯಲಿ ಲಟಕಟಿಸುತ್ತಿದೆ ದಾಸವರು ಮಾನಚ್ಯುತಿಯ ಮನ್ನಿಸದೆ (ಕುವ್ಯಾಆ. ೧೨-೨೮) ; ತರ್ಕಶಾಸ್ತ್ರದ ವೇಡೆಗಾನೊಳಗಾಗೆನೆಲೆ ಅಕ್ರೂರ (ಅಕ್ರೂಚ. ೩-೨೫). ೪. ಬಲೆ ; ಜಾಲ : ಹೊಕ್ಕನು ಕಾನನವನನಿಲಜನು ಶಬರವಿತಾನವಿಕ್ಕಿದ ವೇಡೆಗಳ ಬೆಳ್ಳಾರಸುತ್ತುಗಳ . . . ದೀರ್ಘದ್ರೋಣಿಗಳಲಱಿಸಿದರು ಮೃಗಕುಲವ (ಕುವ್ಯಾಆ. ೧೩-೨೪). **೫. ಮಂಡಲಾಕೃತಿಯಲ್ಲಿ ಓಡುವ, ಕುದುರೆಯ ಒಂದು ಬಗೆಯ ಓಟ :** ಮನದಂಕೆಯಂ ತಿಳಿದು ಶಿಕ್ಷಾಪ್ರೌಢಿಯೊಳ್ ನಾಡೆ ನೇರ್ಪಡೆಯುಂ ವೇಡೆಯ ವೇಗದಿಂ ಬಹುಗತಿವ್ಯಾಪ್ತತ್ವದಿಂ ತೋರ್ಕೆಯೊಳ್ ತೊಡರ್ದಯ್ದುಂ ತೆಱನಪ್ಪ ಧಾರೆಗಳನಾಗಳ್ ನೋಡೆ (ಕುಸುಮಾ. ೮-೭೩) ; ಪೊಳಪುಗತಿ ವೇಡೆ ಜೋಡತಿಚಳಕಂ ದೂವಾಳಿಬಿಡಿಪುದಾಳಿಯರ ಮನಂಗೊಳಿಸಿರೆ ತುರಂಗಗಳ ವಾಹಳಿ ವಾಹಕರಿಂದೆ ಮೆಱೆದುದಾ ಪೊಱವೊಳಲೊಳ್ (ತ್ರಿಪುವಿ. ೧೭-೧೬). **ವೇಢೆ: ೩.** ಇತ್ತಲಿತ್ತಲು ಭೀಮನೆಂದುಱೆ ಮುತ್ತಿ ಮುಸುಕಿತು ಸೇನೆ ಚಿಮ್ಮಿದನತ್ತಲಾಚೆಯಲಲ್ಲಿ ದಳ ಥಾಡಿಸಿತು ವೇಢೆಯಲಿ (ಕುವ್ಯಾಕ. ೧೫-೩೫) ; ಸಿಕ್ಕಿದುದು ನೃಪಕಟಕ ಯಾದವರಿಕ್ಕಿದಾಳ್ಗಳ ವೇಢೆ[ಪಾಠಾಂ. ಡೆ]ಯಲಿ ದಾವಾಗ್ನಿಮಧ್ಯದಲಿ (ನಿಭಾಗ. ೧೦-೪೮-೨೦) ; ತಾಪಸರಂತೆ

ಭೋಗದ ವೇಢೆಗೊಳಗಾಗಿಪ್ಪ ಹರಿ ನಲಿದಾಡುತುವೆ ಬಂದಡರಿದನು ಮಣಿಖಚಿತವಿಷ್ಟರವ (ಅಕ್ರೂಚ. ೮-೫೭).

ವೇಡೆಯವರು = ಬಲೆಗಾರರು ; ವ್ಯಾಧರು : ಬೊಬ್ಬೆಗಳ ಪಟಹದ ಮೃದಂಗವ ಸರ್ಬಲಗ್ಗೆಯ ಸೋಹಿನಲಿ ಸುಳಿವಬ್ಬರಕೆ ಹಿಂಡೊಡೆದು ಹಾಯ್ದುವು ಸೂಸಿದವು ದೆಸೆಗೆ ತಬ್ಬಿದವು ಬೆಳ್ಳಾರವಲೆ ಹರಿದುಬ್ಬಿ ಹಾಯ್ದೊಡೆ ವೇಡೆಯವರಿಗೆ ಹಬ್ಬವಾಯ್ತು (ಕುವ್ಯಾ.ಆ. ೧೩-೨೫).

[< ಸಂ. ವೇಷ್ಟ./ ತೆಲು. ವೇಡಮು, ವೇಡೆಮು./ ಪ್ರಾ. ವೇಢ./ ಮರಾ. ವೇಢಾ]

**ವೇಡೆಗೆದಱು** (ಕ್ರಿ). ಮುತ್ತಿಗೆಯು ಚೆದುರು ; ಒಗ್ಗೊಡೆ : ಸೋತಲಾ ಕೌಂತೇಯ ನಿಮಿಷಕೆ ಬೀತುದೇ ನಿನ್ನಖಿಳಸಿರಿ ವಿಖ್ಯಾತಿ ಬಱತುದ ವೇಡೆಗೆದಱಿತೆ ಮನದ ವಾಸಿಗಳ (ಕುವ್ಯಾಸ. ೧೪-೧೧). [ವೇಡ + ಕೆದಱು₁ (< ಕೆದಱ್₁)]

**ವೇಡೆಗೊಳ್** (ಕ್ರಿ). ಸಿಕ್ಕಿಹಾಕಿಕೊಳ್ಳು ; ಸೆರೆಯಾಗು ; ಬಂಧನಕ್ಕೆ ಸಿಕ್ಕು : ಕಾಯಸೌಖ್ಯಕೆ ಕಾಮಸುಖದ ವಿಡಾಯತತುವಕೆ ವೇಡೆಗೊಂಡು ನವಾಯಿಯಲಿ ದುರ್ಗತಿಗೆ ದುವ್ವಾಳಿಸುವನಲ್ಲ (ಕುವ್ಯಾಆ. ೮-೩೧). [ವೇಡೆ + ಕೊಳ್₁]

**ವೇಡೆಯ, ವೇಢಯ, ವೇಢೆಯ** (ನಾ). ೧. ಸುತ್ತುವರಿಯುವಿಕೆ ; ಆವರಿಸುವಿಕೆ : ಎಡ್ಡವೆನಲಿಂಡೆಗಟ್ಟುವ ಗಡ್ಡುಗೆಗುಡುವಡೆಗೆ ನೀರನಡಕುವ ಫಲಮಂ ಬಡ್ಡಿಸಿ ನೀಡುವ ವೇಡೆಯ [ಪಾಠಾಂ. ನಿವೇದ್ಯಮಿಮಿವೀ, ನೀಡುವ ವೇಢಯ] ಗೂಡ್ಡಾಟದ ಮುಸುಗಳೆಸೆದುವಾ ಮುನಿಗೃಹದೊಳ್ (ಕಾವ್ಯಸಾ. ೧೧೧೯); (ಜಗವಿ. ೧೭-೫೭ ನೋ). ೨. ಸುತ್ತುಗಟ್ಟಿರುವುದು ; ಆವರಣ ; ಬೇಲಿ : ಹರಗಣಾವಳಿ ಹರುಷಪುಳಕಾಂಕುರಿತಮಾನಸರಾಗೆ ಜೈನರನುರವಣಿಸಿ ಹಳಚಿದರು ಸುತ್ತುಂ ವೇಡೆಯವನಿಕ್ಕಿ (ಬಸಪು. ೫೧-೭೦) ; ಹರನ ಕೈಲಾಸಮಂ ಪೊಕ್ಕಲ್ಲಿ ಮೆಱೆವ ಶಂಕರನ ಬಲಗೊಂಬಂತೆ ವಾಜಿಗಳು ತಿಟ್ಟೆಂದು ತಿರುಗುವೇಡೆಯವನಿಕ್ಕೆ[ಪಾಠಾಂ. ವೆಡೆಯವನಿಕ್ಕುತ]ಸೆದಿರ್ದರಾ ಕುಮಾರರು ಲೋಕಕತಿಧೀರರು (ಭಾವಚಿಂ. ೮-೧೧). ೩. ಸೆರೆ ; ಬಂಧನ : ಶಿವಭಕ್ತಿಪ್ರಯುಕ್ತನು . . . ಘನಭುಜಾಯತನಾಗುತವರಂ ವೇಡೆಯವನಿಕ್ಕಿ ಕನಲಿ ಶೂಲಂಗಳಲಿ ತೆಗೆಸುತ್ತ (ಬಸಪು. ೫೧-೫೨). ೪. ಕುದುರೆಗಳ ಸಮೂಹ ; ಅಶ್ವದಳ ; ಹಯಮಂಡಲ : "ವೇಡೆಯಮನೆ ಹಯಮಂಡಲ" (ಭಾರನಿ. ೪೮). ೫. ಕುದುರೆಯ ಓಟದಲ್ಲಿ ಒಂದು ಬಗೆ ; ವೃತ್ತಾಕಾರವಾದ ಚಲನೆ : ಕಡುಪಿನಿಂ ವೇಡೆಯದ ಬೀದಿಯಿಂ ತೀವ್ರದುಗ್ಗಡದ ಬಹುಗಮನದಿಂ ಲಂಘಿಸುತ ಬಳಸುತ್ತೆ . . . ತುರಂಗಮಂ ಪೊಡವಿಪಾಲಕರಣುಗರೇಱುತ್ತೆ ವೈಹಾಳಿಯುತ್ಸಾಹಮಂ ತಳೆದರಾಗ (ಭಾವಚಿಂ. ೮-೧೩) ; ಪರಿಮಂಡಲಾಕೃತಿವಡೆದ ಬೆರಲ ರೇಖೆಯೊಳು ಮೆಱೆದುದಾ ತುರಗವಾ ವೇಡೆಯದೊಳಗೆ (ಕುರಾಸಾಂ. ೯-೯೫). **ವೇಢಯ** : ೨. ಝಾಡಿ ಹೊರಳಿಯ ಹೂಗೆಯ ಜೋಡಿಯ ನೀಡುನಾಲಗೆ ಪುರದ ಸುತ್ತಲು ಕೂಡೆ ವೇಢಯವಾಯ್ತು ಹರಹಿನ ಕಿಡಿಯ ಗಡಣದಲಿ (ಕುವ್ಯಾಕ. ೭-೪೦). **ವೇಢೆಯ** : ೧. ಒಪ್ಪುವ ಕನ್ನಡದೊಳ್ ಸ್ವಭಾವದಿಂ ಕೆಲವು ಮಹಾಪ್ರಾಣಂಗಳೊಳವು ; ಅವಾವುವೆಂದೊಡೆ . . . ವೇಢೆಯಂ, ಢಂಕೆ, ಢೊಕ್ಕರಂ (ಶಮದ. ೧೫ ವೃತ್ತಿ) ; ಕೃತವರ್ಮ ಗೌತಮರು ಸಾಯಕದ ಮಳೆಗಱೆದು ಕೌರವರಾಯನನು ಹಿಂದಿಕ್ಕಿ ವೇಢೆಯ ವಾಯುಜನ ವಂಗಡವ ಮುಱಿದಿರು ತಱಿದರರಿಬಲವ (ಕುವ್ಯಾಶ. ೩-೭). ೫. ನಲವಿಂದ ಮಾರ್ಬಲಗಳನಿಬ್ಬಗೆಯೊಳು ನಿಲಿಸಲುತ್ತಮವಾಜಿಯನು ತೂಲಗು ವೇಢೆಯ ರವಗಾಲು ಬಂಬೀರಿಯೊಳ್ಳಲಿದೇಱಿ ಮೆಱೆಯುತರ್ತಿಯಲಿ (ಕಂಸವಿ. ೨೨-೯೪). 'ವೇಡೆ' ಪರಾ.

[< ಸಂ. ವೇಷ್ಟನ./ ಪ್ರಾ. ವೇಢಣ]

**ವೇಡೈಸು** 'ವೇಡಯಿಸು' ನೋ.

**ವೇಢಯ** 'ವೇಡೆಯ' ನೋ.

**ವೇಢಯ್ಸು** 'ವೇಡಯಿಸು' ನೋ.

**ವೇಢಿಮ** (ನಾ). ಹೂವುಕಟ್ಟುವುದರಲ್ಲಿ ಒಂದು ಬಗೆ ; ದಂಡೆಕಟ್ಟುವಿಕೆ (?) : ಪೂಗಟ್ಟುವರಂ ಕಂಡು ತಾನುಮವರ ಕೆಲದೊಳ್ ಕುಳ್ಳಿರ್ದು ನೂಲಿನಗ್ರ ಗ್ರಂಥಿಮ [ವೇಢಿಮ] [ಪಾಠಾಂ. ಮವೇಯಿಮ] ವೇಧಿಮ ಸಂಪೂರಿ[ಮ ಸಂಘಾಯಿಮ]ಮೆಂಬಯ್ದುಂ ತೆಱದ ಪುಷ್ಪಮಾಲೆಗಳಂ ಸಮೆದಾಗಳ್ (ಬಂಹರಿ. ೨-೨೯ ವ). 'ವೇಧಿಮ' ಪರಾ. [? ./ ಪ್ರಾ. ವೇಢಿಮ]

**ವೇಢೆ** 'ವೇಡೆ' ನೋ.

**ವೇಢೆಯ** 'ವೇಡೆಯು' ನೋ.

**ವೇಢೆಯವಡೆ** (ಕ್ರಿ). ಸುತ್ತುವರಿ ; ಬಳಸಿರು ; ವರ್ತುಲಾಕಾರವನ್ನು ಹೊಂದು : ವೇಢೆಯವಡೆದು ನಿಂದುದು ಪೆಣ್ಣು ಹರಿ ಜಲಕ್ರೀಡೆಯನಾಡಿದ ಬಳಿಕ ಕೂಡಿಸದ್ವಸ್ತ್ರಭೂಷಣ ಗಂಧಮಾಲ್ಯವ ಜೋಡಣೆಗೆಯ್ದು ಶ್ರೀಧರನು (ಮೋಹತ. ೧೪-೯೨).
[ವೇಢೆಯ (< ವೇಡೆಯ) + ಪಡೆ₁]

**ವೇಢೈಸು** 'ವೇಡಯಿಸು' ನೋ.

**ವೇಣಿ₁** (ನಾ). ೧. ನೇಯುವಿಕೆ ; ಹೆಣೆಯುವಿಕೆ. ೨. ಹೆಣೆದಿರುವ ಕೂದಲು ; ಜಡೆ ; ತುರುಬು : ಶಿತಿಕಂಠಬರ್ಹಿಶೀರ್ಷರ್ ನುತವೇಣಿ ಸ್ಫುರಿತ ಚೂಡರಸಕೃತ್ಕ್ರೀಡರ್ (ಜಗವಿ. ೩-೭೭) ; ಮನಸಿಜರಾಣಿಯ ಮಧುಕರವೇಣಿಯ ವಿನುತ ಸದ್ಗುಣಶ್ರೇಣಿಯನು ಘನತರಶ್ರೋಣಿಯ ವರಶುಕವಾಣಿಯ ವನಿತೆಯ ಪೊಗಳಲೆನ್ನಳವೆ (ಜೀವಂಸಾಂ. ೧೦-೨೯). ೩. ಕೇಶಸಂಸ್ಕಾರವಿಲ್ಲದೆ ಇಳಿಬಿಟ್ಟ ಕೂದಲು : 'ವೇಣೀಸಂಹಾರ' ಪರಾ. ೪. ಹೆರಳನ್ನು ಉಳ್ಳವಳು ; ಸ್ತ್ರೀ; ಹೆಂಗಸು : ಮೂವರಪ್ರತಿರೂಪಾನ್ವಿತೆಯರ್ ಸಿತಾಂಶುಕೆಯರಿರ್ದರ್ಕನ್ನೆಯರ್ಕಳ್ ಮಧು ವ್ರತಮಾಲಾಯತವೇಣಿಗಳ್ ಜಪಿಯಿಸುತ್ತುಂ ದಿವ್ಯಮಂತ್ರಂಗಳಂ (ಪಂರಾಮಾ. ೧೧-೫೮) ; ಬಾಳು, ವೀಣಾಪಾಣಿ ; ಬಾಳು, ಬ್ರಹ್ಮನ ರಾಣಿ; ಗಾನಗೆಯ್, ಹೇಳು, ಓ ಭಾವಗಂಗಾವೇಣಿ (ಶ್ರೀರಾಮಾ. ೫-೧೨೨). ೫. ನೆರೆ ; ಪ್ರವಾಹ ; ಹರಿವು : "ಓಘಃ, ಪ್ರವಾಹಃ, ವೇಣೀ, ಧಾರಾ, ಸ್ರೋತಃ, ರಯಃ- ಈ ೬ ತೊಱೆಯ ಹರಿಹಂ" (ಹಲಾಯು. ೧೧೦-೪೭); ಕರ್ಣಾಟಕದ ಜನದ ಕರ್ಣವೀಣಾತುಂಬಿ ನಿನ್ನ ವಾಣಿಗೆ ವಿಕಂಪಿಸಿ, ಜೇಂಕೃತಿಯ ಬೀರಿ, ರಸದ ನವನೀತಮಂ ಹೃದಯದಿ ಮಥಿಸುವಂತೆ ಗಾನಗೆಯ್, ಹೇಳು, ಓ ಭಾವಗಂಗಾವೇಣಿ (ಶ್ರೀರಾಮಾ. ೫-೧೨೭). ೬. ಎರಡು ಅಥವಾ ಹೆಚ್ಚು ನದಿಗಳು ಸೇರುವಿಕೆ ಮತ್ತು ಹಾಗೆ ಬಂದು ಸೇರುವ ಸ್ಥಳ ; ಸಂಗಮ : 'ತ್ರಿವೇಣಿ' ಪರಾ. ೭. ಕೃಷ್ಣಾನದಿಯ ಹೆಸರು : 'ಕೃಷ್ಣವೇಣಿ' ಪರಾ. ೮. ಒಂದು ಬಗೆಯ ಹುಲ್ಲಿನ ಹೆಸರು ; ದಾಗಡಿ. ೯. ಒಂದು ಬಗೆಯ ಮರ ; ದೇವದಾರುವೃಕ್ಷ : "ವೇಣೀ, ಗರಾಗರೀ, ದೇವತಾಳಃ, ಜೀಮೂತಃ — ೪ ದೇವತಾಳೀವೃಕ್ಷದ ಹೆಸರುಗಳು" (ಸಿದ್ಧಾಂತಿ. ೧೨೭). ೧೦. ಗೆರೆ ; ರೇಖೆ ; ಸಾಲು : ವಿಜಯಶರಾಸನಗುಣಘಾತಜಾತ ಕಾಳಿಕೆಯನೆತ್ತಮಗ್ಗಳಿಸಿದುದಾ ಭುಜಬಲಿಯ ಭುಜದ್ವಯದೊಳ್ ಭುಜಂಗನಿಶ್ವಾಸ ಧೂಮವೇಣೀನಿಕರಂ (ಆದಿಪು. ೧೪-೧೬೧) ; ದೆಸೆದೆಸೆಗೆರಡುಸಾಸಿರವೇಣಿಗಳನಾಗ ಮಸಗಿ ಖಾನನ ಬಲುಭಟರು ಮುಸುಕಿ ಚೌದಿಕ್ಕಿನ ಕೋಟೆಯ ತೆನೆಗೆ ಸಂದಿಸಿ ಬೊಬ್ಬಿಱಿದರು (ಕಂಸವಿ. ೧೪-೧೨). ೧೧. ಒತ್ತಾಗಿ ಹೆಣೆದ ಹೂವಿನ ದಂಡೆ : ಅವರು ಮಾರ್ಕೆಟ್ಟಿನಿಂದ ನಾಲ್ಕು ಕನಕಾಂಬರಹೂವಿನ ವೇಣಿಗಳನ್ನು ತಂದರು (ರೂಢಿ). [ಸಂ.]

**ವೇಣಿ₂** (ನಾ). ಸುಗಂಧದ್ರವ್ಯ ಮುಂತಾದುವನ್ನು ತೂಗುವ ಒಂದು ಪ್ರಮಾಣ : ಹವಳಕ್ಕೆ ಕಣಜುಗಟ್ಟಳೆ ಭುವನದೊಳಂಚಿವು ಅಡಹು ಮುತ್ತಿನ ಮಣಿಗಂ ಧ್ರುವದಿಂ ಮಂ(ಜ)ಡಿ ವಜ್ರಕೆ ಜವದಿಂ ಕಸ್ತುರಿಗೆ ವೇಣಿ ತಪ್ಪದು ಗಣಕಾ (ವ್ಯವಹಾ. ಅನುಬಂಧ. ೧-೩-೧೫). [?]

**ವೇಣೀಬಂಧ** (ನಾ). ಹೆಣೆದ ಕೂದಲು ; ಜಡೆ ; ತುರುಬು : ಉಗುಳುತ್ತುಂ ಸಿಡಿಲೆಂಬ ತೋರಕಿಡಿಯಂ ಕಾಲೂಱೆ ಭೂಭಾಗದೊಳ್ ಗಗನಾಭೋಗಮನೆಯ್ದೆ ನೀಳ್ದು ಘನವೇಣೀಬಂಧಮಂ ಬಿರ್ಚಿ . . . ಒಗೆದಂ ಕಾರೆಂಬ ಕಾಳಾಸುರಂ (ಮಲ್ಲಿಪು. ೮-೯೪) ; ತಿವಿದವೆಳಮುತ್ತುಗಳ ಚಂದ್ರಿಕೆ ಜವಳಿಸಿದವೊಂದೊಂದನೌಕಿದವ ವಿರಳಿತಮಣಿಕಿರಣ ವೇಣೀಬಂಧಬಂಧುರದಿ (ಕುವ್ಯಾಸ. ೧೩-೨೬). [ಸಂ.]

**ವೇಣೀಬಂಧಕ** (ನಾ). = ವೇಣೀಬಂಧ : ದೈವದ ಪರುಠವಣೆ ದುಶ್ಶಾಸನನ ನೆತ್ತರಿನ ವೇಣೀಬಂಧಕಘಟಿತವಾಯ್ತು ಸಂಬಂಧ (ಕುವ್ಯಾಕ. ೧೭-೪೭). [ಸಂ.]

**ವೇಣೀಸಂಹಾರ** (ನಾ). ೧. ಬಿಚ್ಚಿದ್ದ ಕೂದಲನ್ನು ಸೇರಿಸಿ ಹೆಣೆಯುವಿಕೆ; ಹೆರಳು ಹಾಕುವಿಕೆ : ಊರುಗಳನುಡಿವನೂದವಂ ಕೌರವಪರಿಬೃಢನ ಮಕುಟಮಂ ವೇಣೀಸಂಹಾರಂ ಮಾಡುವೆಂ (ಗದಾಯು. ೧-೭೦); ಕೌರವಶ್ರೇಷ್ಠನ ತೊಡೆಗಳನ್ನು ಮುರಿಯುತ್ತೇನೆ . . . ಬಳಿಕ ವೇಣೀಸಂಹಾರ ಮಾಡುತ್ತೇನೆ (ಭಾಮಣಿ. ೩೯).

೨. ಭಟ್ಟನಾರಾಯಣನೆಂಬ ಕವಿಯು ಸಂಸ್ಕೃತದಲ್ಲಿ ರಚಿಸಿದ ಒಂದು ಪ್ರಸಿದ್ಧವಾದ ನಾಟಕದ ಹೆಸರು : ಅವನ 'ವೇಣೀಸಂಹಾರ' ವು ಬಹುದಿನದಿಂದ ಲಾಕ್ಷಣಿಕರಿಗೂ ಪಂಡಿತರಿಗೂ ಪ್ರಿಯವಾದದ್ದಾಗಿದೆ (ಸಂನಾಟ. ೨೩೭). [ಸಂ.]

**ವೇಣು** (ನಾ). ೧. ಬಿದಿರು; ಬೊಂಬು : ಬೇಡಿಂಗೆ ಬೀಡುವಿಡಲ್ ನೆಲನುಮೊಲೆಗಲ್ಲಳ್ಗೆ ಬೆಟ್ಟುಗಳುಂ ಗುಡಿಯ ಗೂಂಟಕ್ಕೆ ಬಲ್ಲಡವಿಗಳುಂ ದಂಡಿಗೆಗೆ ವೇಣುವನಂಗಳು ಮಾನೆಗಂಬಕ್ಕೆ ಪೆರ್ಮರಂಗಳುಮಾ ಪಡೆಗೆ ನೆಱೆಯವೆನಿಸಿ (ಪಂಪಭಾ. ೯-೧೦೪ ವ); ವಿತತಧರ್ಮಶ್ರವಣವಂತ್ಯಕಾಲದೊಳಗಾಶ್ರಿತಪರ್ವವಿಭವ ವೇಣುಗಳೊಳು ಸ್ವಸ್ವತಾ ಗತಿ ಮುಕ್ತರಾದವರೊಳಲ್ಲದಾ ನಾಡೊಳಿಲ್ಲ (ಪಚಕಾ. ೨-೧೧). ೨. ಬಿದಿರಿನಿಂದ ಮಾಡಿದ ಒಂದು ವಾದ್ಯ; ಪಿಳ್ಳಂಗೋವಿ; ಕೊಳಲು : ಮಹಾಶ್ವೇತೆಯ ಕಣ್ಣಱಿದು ವೇಣುರವಂಗಳುಮಂ ವೀಣಾನಾದಂಗಳುಮಂ . . . ಪ್ರತೀಹಾರಿಯರ್ ನಿವಾರಿಸುತ್ತ ಮಿರ್ದರ್ (ಕಾದಂಙ. ೪೬); ವೇಣು ವೀಣೆಗಳಿಂಪುದಿಸಿ ಕರ್ಣಕಮೃತಮಂ ಸೂಸುತಿರೆ (ಶ್ರೀರಾಮಾ. ೭೭-೩೫೦). [ಸಂ.]

**ವೇಣುಕಾಂಡ** (ನಾ). ಬಿದಿರು ಮೆಳೆ : ತದ್ಧ್ವಜದೀರ್ಘದಂಡಾಕಾರಮಂ ತಳೆದು ಬಾಂದಳಮಂ ಮುಟ್ಟಿ ನಿಮಿರ್ದು ನಿಂದ ವೇಣುಕಾಂಡದಿಂ . . . ಮಹಾಗಹನವೊಪ್ಪಿರ್ದುದಲ್ಲಿ (ಶಬಶಂ. ೩-೩೫ ವ). [ಸಂ.]

**ವೇಣುಗಾನ** (ನಾ). ಕೊಳಲನ್ನು ನುಡಿಸುವಿಕೆ ; ಕೊಳಲುವಾದನ : ಸಾಕ್ಷಾತ್ ಶ್ರೀಕೃಷ್ಣ ವೇಣುಗಾನಚತುರನೂ ಈಶ್ವರ ಡಮರುಗವಾದಕನೂ ಚತುರ್ಮುಖಬ್ರಹ್ಮ ಮತ್ತು ನಂದಿ ಮದ್ದಳೆವಾದಕರೂ ಆಗಿದ್ದಾರೆ (ಸಂಗೀಚಂ. ೧೦೮). [ಸಂ.]

**ವೇಣುಗೀತ** (ನಾ). ೧. ಕೊಳಲಿನ ಮೂಲಕ ನುಡಿಸುವ ಹಾಡು ; ವೇಣುಗಾನ : 'ವೇತ್ರಗೀತ' ಪರಾ. ೨. ಕೃಷ್ಣನ ಕೊಳಲಿನ ಮಾಧುರ್ಯವನ್ನು ವರ್ಣಿಸಿ ಶ್ರೀಪಾದರಾಜರು ರಚಿಸಿರುವ ಗೀತಸಾಹಿತ್ಯ : ಶ್ರೀ ಶ್ರೀಪಾದರಾಜರು ರಚಿಸಿರುವ ಭ್ರಮರಗೀತ, ವೇಣುಗೀತ ಮತ್ತು ಗೋಪೀಗೀತಗಳು ತಿಳಿಗನ್ನಡಮಾತುಗಳ ಸುಂದರ ಸಾಹಿತ್ಯ (ಜಗದಾ. ೮೧). [ಸಂ.]

**ವೇಣುಗೋಪಾಲ** (ನಾ). ಕೊಳಲೂದುವ ಗೋಪಾಲ ; ಮುರಳೀಧರ ; ಕೃಷ್ಣ : ಧ್ಯಾನಮಾಳ್ಪ ಸಜ್ಜನರ ಮಾನದಿಂ ಪರಿಪಾಲಿಸುವ ವೇಣುಗೋಪಾಲಾ ಗೋವಿಂದಾ ವೇದವೇದ್ಯ ನಿತ್ಯಾನಂದಾ (ಪುರಂದ. ಧಾ. ೧-೯೬ ಅನುಪಲ್ಲವಿ) ; ಸಿಕ್ಕಿದನೆಲೆ ಜಾಣೆ ಶ್ರೀ ವೇಣುಗೋಪಾಲ ಭಕ್ತವತ್ಸಲದೇವನು (ಪುರಂದ. ಧಾ. ೪-೫೯ ಪಲ್ಲವಿ.). [ಸಂ.]

**ವೇಣುಚಕ್ರವಾದ್ಯ** (ನಾ). ಒಂದು ಬಗೆಯ ವಾದ್ಯ : ಮುಖವೀಣೆಯ ಮೋಹಿಗಳಿಂದಂ ರಾವಣವೀಣೆಯ ರಂಜಕರಿಂ ವೇಣುಚಕ್ರವಾದ್ಯದ ಜಾಣರಿಂದಂ . . . ಒಪ್ಪಿದತ್ತಾ ಮಹಾಲಿಂಗದಾಸ್ಥಾನಂ (ಹಮ್ಮೀ.ರ. ೮-೪೧ ವ). [ಸಂ.]

**ವೇಣುದಂಡ** (ನಾ). ಬಿದಿರಿನ ಕೋಲು, — ಬೆತ್ತ : ಶಿಖಾ ಯಜ್ಞೋಪವೀತ ವೇಣುದಂಡ ಕಮಂಡಲ . . . ಉಳ್ಳಾತನಾಗಿ (ವಿವೇಕ. ೧೧೮) ; ಸಾತಿಶಯ ವೇಣುದಂಡಂ ವಿಚಾರದ ಖರ್ಪರಾ ತಾಮ್ರಮುದ್ರೆಯು ಶಿಲಾಭಸಿತಲೇಪನಂ ನೂತನದ ಕಾಷಾಯದಂಬರಂ ಪ್ರಾಣಲಿಂಗಂ ಚೆನ್ನಮಲ್ಲೇಶ್ವರಂ (ಗುರುಬಾ. ೧-೭೦). [ಸಂ.]

**ವೇಣುದಾರಿತ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ : ಪದ್ಮಿನಿ ಪದ್ಮಾಸನದಿಂ ನಾಗರಕಬಂಧದಿಂ ಚಿತ್ತಿನಿ ಶಂಖಿನಿ ವೇಣುದಾರಿತದೆ ಹಸ್ತಿನಿ ತಣಿಕುಂ ಸ್ಕಂಧಪಾದದಿಂ ಕೂಡುವಿನಂ (ಮನ್ಮವಿ. ೨-೮). [ಸಂ.]

**ವೇಣುದಾರಿತಕ** (ನಾ). ೧. ಬಿದಿರು ಸೀಳುವಿಕೆ, — ಭಾಗವಾಗುವಿಕೆ. ೨. = ವೇಣುದಾರಿತ. ೧,೨ : ಪರಿಕಿಸೆ ವೃಕ್ಷಾರೋಹಣ ವರಾಹಚರ್ವಿತಕ ವೇಣುದಾರಿತಕಂಗಳ್ ಕರಮೆಸೆಯೆ ಕಾಮಶಾಸ್ತ್ರದ ದೊರೆಯಾದುದು ಶಬರಶಿಶುಗಳುಜ್ಜುಗಮದಱೊಳ್ (ಚಂದ್ರಪು. ೫-೫೫). [ಸಂ.]

**ವೇಣುನಾದ** (ನಾ). ೧. ಕೊಳಲಿನ ಧ್ವನಿ : ವೇಣುನಾದಮನೊಸೆದಾಲಿಸಲ್ ಕಿವಿಗಳೇಕೆಯೊ ಸಾಸಿರವಾದುವಿಲ್ಲೆನುತ್ತಮವರವರಂ ಮನಂಗೊಳೆ ನೆಗೞ್ದುದು ಕೃಷ್ಣನ ವೇಣುನಿಸ್ವನಂ (ಜಗವಿ. ೫-೫). ೨. ಕೊಳಲನ್ನೂದುವವನು ; ಕೃಷ್ಣ : ವೇಣುನಾದ ಬಾರೊ ವೆಂಕಟರಮಣನೆ ಬಾರೊ (ಪುರಂದ. ಧಾ. ೪-೮೨ ಪಲ್ಲವಿ.). [ಸಂ.]

**ವೇಣುಪತ್ರ** (ನಾ). ೧. ಬಿದಿರಿನ ಎಲೆ : ಚೂತಪಲ್ಲವೋದಾರರಸಂಗಳು ಸವಿವ ಕೋಗಿಲೆ ಮಲ್ಲುದ ವೇಣುಪತ್ರಮಂ (ವೃಷವಿ. ೮-೧೧) ; ಒಣಗಿದ ವೇಣುಪತ್ರಗಳಿಂದ ಹರವಿಹೋದ ಹಳ್ಳಿಯ ಅಂಗಳಗಳ ಬದಿಯಿಂದ ನಡೆದು . . . ಹೊರಟಿದ್ದಾರೆ (ಇಪ್ಪಕ. ೩೫೨). ೨. ಒಂದು ಬಗೆಯ ಔಷಧೀಸಸ್ಯ : "ಕಟ್ಟಂತಸಾಲಿಕಾ – ವೇಣುಪತ್ರ" (ಓಷಧಿ. ೨೭). [ಸಂ.]

**ವೇಣುಪತ್ರಿ** (ನಾ). ಒಂದು ಬಗೆಯ ಔಷಧೀಸಸ್ಯ : "ಇಂದೀವರಾ — ವೇಣುಪತ್ರಿ" (ಓಷಧಿ. ೧೪). [?]

**ವೇಣುಬೀಜ** (ನಾ). ಬಿದಿರಿನ ಅಕ್ಕಿ ; ಬಿದಿರಿನ ಬೀಜ : ವೇಣುಬೀಜಮಂ ವನಚರಿ ಕುಟ್ಟುತುಂ ಪದೆದು ಪಾಡಿದಳ್ (ಪುಷ್ಪಪು. ೫-೯೩). [ಸಂ.]

**ವೇಣುವಾದನ** (ನಾ). ಕೊಳಲನ್ನು ಊದುವಿಕೆ : ಮಧುರಸ್ವನಪತ್ರವಾದ್ಯನಿರತರ್ ಮನೋಜ್ಞಗೋಪಾಲವೇಣುವಾದನಸುಭಗರ್ (ಜಗವಿ. ೩-೭೭). [ಸಂ.]

**ವೇತಂಡ** (ನಾ). ಆನೆ ; ಗಜ : ಇತ್ತಲೀ ಕುವಲಯಾಪೀಡವೇತಂಡಮುಮನೊಡನೊಡನೆ ಕಂಡು (ಜಗವಿ. ೬-೪೮ ವ) ; ಗಜನ್ಮಗೇಂದ್ರದಂಷ್ಟ್ರಮಂ ಕಂಡ ವೇತಂಡದಂತೆ . . . ಭಯಂಗೊಂಡು (ಪುಷ್ಪಪು. ೧೩-೨೬ ವ). [ಸಂ.]

**ವೇತಂಡಯಾನ** (ನಾ). ಆನೆಯ ನಡಗೆಯಂತಹ ನಿಧಾನವಾದ ನಡಗೆ ; ಗಜಗಮನ : ತೊಂಡೆವಾಯ್ದೆಱೆಯ ಶಶಿಮಂಡಲಾನನದ ವೇತಂಡಯಾನದ . . . ಅಬಲೆ ನೇಪಾಳದವಳು (ಜನವ. ೬-೧೯). [ಸಂ.]

**ವೇತನ** (ನಾ). ೧. ಕೆಲಸ ಮಾಡಿದ್ದಕ್ಕೆ ಕೊಡುವ ಪ್ರತಿಫಲ ; ಸಂಬಳ : ಬಗದಣಿವಂತೆಂದೆಂದುಂ ಜಗ ಮೆಚ್ಚುವ ತೆರದೆ ಬೀಱ್ ವೇತನಮೆನಿತೋ (ಪ್ರಸೂಮ. ೫-೮೮); ಪ್ರತಿಯೊಬ್ಬ ಕೆಲಸಗಾರನಿಗೂ ವೇತನವೂ ಗೌರವವೂ ಸಲ್ಲಬೇಕು (ಕ್ರಿಯಾಶಿ. ೧೨). ೨. (ಉನ್ನತವ್ಯಾಸಂಗಕ್ಕಾಗಿ ಕೊಡುವ) ಸಹಾಯಧನ, — ಪ್ರೋತ್ಸಾಹ ಧನ: ಸೊಸೈಟಿಯವರು ಇವರ ಸಾಮರ್ಥ್ಯವನ್ನು ಮನಗಂಡು ಇಂಗ್ಲೀಷ್ ಭಾಷಾಸಾಹಿತ್ಯಗಳ ವಿಶೇಷವ್ಯಾಸಂಗಕ್ಕಾಗಿ ವೇತನ ಕೊಟ್ಟು ಇವರನ್ನು ಆಕ್ಸ್‌ಫರ್ಡಿಗೆ ಕಳುಹಿಸಿದರು (ಸಮಾಲೋ. ೬೫). ೩. ಬೆಲೆ ; ಮೌಲ್ಯ : "ಭೃತಿಃ, ಭೃತ್ಯಾ . . . ವೇತನಂ — ಈ ೬ ಬೆಲೆ" (ಪಲಾಯು. ೧೨೦-೪೩). [ಸಂ.]

**ವೇತಸ** (ನಾ). ೧. ಒಂದು ಬಗೆಯ ಬಿದಿರು ; ಹಬ್ಬೆ : ವೇತಸ ಕದಂಬ ಪ್ರಿಯಂಗು ಶಿರೀಷ ಪಲಾಶ ರಾಜವೃಕ್ಷಾಭಿದಾನ ತರುಗಳ್ ಪತಾಕಾಚಿಹ್ನಂಗಳುಂ (ತತ್ತ್ವಪ್ರ. ೧೮೬). 'ಅಂಬುವೇತಸ' ಪರಾ. ೨. ಜೊಂಡುಹುಲ್ಲು : ಹರಿವ ಬಹುವಾರಿಪ್ರವಾಹಕೆ ತರುಮಲೆತು ಬೀಳುವುದು ತಲೆವಾಗಿರುತ ವೇತಸಕುಂಜವುಳಿದಿಹವು (ತಿಮ್ಮಶಾಂ. ೩-೪೧). [ಸಂ.]

**ವೇತಸೇಯ** (ನಾ). ಒಂದು ಬಗೆಯ ಔಷಧೀಸಸ್ಯ : "ಕುಂಭೀರಃ – ವೇತಸೇಯ ಭೇದ, ಗುಳ್ಳೆ" (ಓಷಧಿ. ೩೫). [?]

**ವೇತಾಲ, ವೇತಾಳ** (ನಾ). ೧. ಒಂದು ಬಗೆಯ ಭೂತ ; ದೆವ್ವ : ಬಿಱುದನಿಯ ಭೂತವೇತಾಲ[ಪಾಠಾಂ. ಳ]ಸಂಕುಲದಡಗಿನಱಕೆಗಳ ಸುಡುಗಾಡೊಳಾ ಮಾಂತ್ರಿ ಚಂಡಿಕಾಲಯದೆಡೆಗೆ ನಡೆತಂದನು (ಜೈಮಿಭಾ. ೩೧-೫೫). ೨. ಬಾಗಿಲು ಕಾಯುವವನು ; ವೈತಾಲಿಕ ; ದ್ವಾರಪಾಲಕ. ೩. ಉಪಾಧ್ಯಾಯ ; ಗುರು : "ವೇತಾಲ[ಪಾಠಾಂ. ಳ]ನಾಚಾರ್ಯನಕ್ಕು" (ಮಂಗರಾ. ೮೮-೩೮). **ವೇತಾಳ** : ೧. ಭೂತದ ಕೈಯ ಲೊಂದಱುವ ಅದು ವೇತಾಳನುದ್ದಕ್ಕೆ ನಿಂದಿತು ಭೂತ ಸತ್ತಿತು (ಅವಚಂ. ೨೯೮-೧೩೧೩); ಅಣುಗನಂ ವೇತಾಳನಿಹ ವೇದಿಕೆಯ ಮುಂದೆ . . . ಕುಳ್ಳಿರಿಸಿ (ನವಮೋ. ೧೨-೨೩). [ಸಂ.]

**ವೇತಾಲಪಂಚವಿಂಶತಿ** (ನಾ). ಬೇತಾಳವು ವಿಕ್ರಮಾದಿತ್ಯನಿಗೆ ಹೇಳಿದ ಇಪ್ಪತ್ತೈದು ಕಥೆಗಳ ಸಂಗ್ರಹದ ಹೆಸರು : (*). [ಸಂ.]

**ವೇತಾಳ** 'ವೇತಾಲ' ನೋ.

**ವೇತಾಳಕ** (ನಾ). ಮೆಟ್ಟಿಕೊಂಡಿರುವ ಭೂತಪ್ರೇತಗಳನ್ನು ಬಿಡಿಸುವವನು; ಮಂತ್ರವಾದಿ : ಹಳೆಯ ವೇತಾಳಕರು ಹೆಬ್ಬುಲಿ ಹಲವು ಜಟ್ಟುಗ ಮಾಣಿಭದ್ರರು ಬಲು ಭುಜಂಗಳ ತೊಡಿಗೆಯೊಪ್ಪುವ ರೌದ್ರಮುಖರಿರಲು (ಕಾಶಿರಾ. ೧೯-೩೫). [< ಸಂ. ವೈತಾಲಿಕ]

**ವೇತಾಳವಡೆ** (ನಾ). ದೆವ್ವಗಳ ಸಮೂಹ; ಪಿಶಾಚಿಗಳ ಗುಂಪು: ಅಂತುತ್ಪಾತ ವೇತಾಳವಡೆಯಂತೆ ಭಯಂಕರಾಕಾರಮಾದ ಬೇಡವಡೆಯ ನಡುವೆ . . . ಬಂದಂ ಪುಳಿಂದ ಪ್ರಕರ ಬಹುಳಸೇನಾಪರೀತಂ ಕಿರಾತಂ (ಕಾದಂಪೂ. ೧೬೬). [ವೇತಾಳ (= ವೇತಾಲ) + ಪಡ್ಕೆ]

**ವೇತ್ತ** 'ವೇತ್ತಾರ' ನೋ.

**ವೇತ್ತಾರ, ವೇತ್ತ** (ನಾ). ತಿಳಿದವನು ; ಜ್ಞಾನಿ : ಲಿಂಗದ ಅನುಭವದಿಂದ . . . ಮಾನವಜೀವನದ ಮಹಾಸಮಸ್ಯೆ ಬಗೆಹರಿದಂತಾಯ್ತೆ? ಬಗೆಹರಿಯಿತೆಂದು ತಿಳಿದುಕೊಂಡ ವೇತ್ತಾರರಿದ್ದಾರೆ (ವಚಸಂ. XV. ೭೮೫). **ವೇತ್ತ** : ಪಾವನಾತ್ಮನು ಪಾಶದಳನಕಳಾವಿದಂ ದಿವ್ಯಾಗಮಪುರಾಣಾವಿರಳಪರಮಾರ್ಥವೇತ್ತನು (ಬಸಪು. ೪೭-೧). [< ಸಂ. ವೇತ್ತೃ]

**ವೇತ್ತಿ** (ನಾ). ಲೋಹಗಳನ್ನು ಪರೀಕ್ಷಿಸುವ ಸಾಧನ ; ಒರೆಗಲ್ಲು : "ಪರೀಕ್ಷಿತಂ ವೇತ್ತಿಯೆನಲೊರೆಗಲ್ಲು" (ಮಂಗರಾ. ೧೦೫೫-೧೪). [?]

**ವೇತ್ತೃ** (ನಾ). ೧. = ವೇತ್ತಾರ. ೨. ಋಷಿ ; ಮುನಿ. ೩. ಹೊಂದುವವನು; ಪಡೆಯುವವನು. [ಸಂ.]

**ವೇತ್ತೃತೆ** (ನಾ). ತಿಳಿವಳಿಕೆ ; ಜ್ಞಾನ : ಶಾಬ್ದವೇ [ಪಾಠಾಂ. ನೇ]ತ್ತೃತೆ ಷಟ್ತರ್ಕವಿತರ್ಕ ಭೇತ್ತೃತೆ . . . ಏಂ ಚೋದ್ಯಮೆ ವರ್ಧಮಾನಮುನಿಯೊಳ್ (ಚಂದ್ರಪು. ೧-೩೧). [ಸಂ. ವೇತ್ತೃತಾ]

**ವೇತ್ರ** (ನಾ). ೧. ಒಂದು ಜಾತಿಯ ಬಿದಿರು ; ಬೆತ್ತ : ಅನೇಕರುಚಿವಿಚಿತ್ರ ವೇತ್ರವಿಶಿಖಾತಿರುಚಿರಪ್ರಾಂತಕುಂತಮನುತ್ತರೀಯಕಂಟಕಮತಿಸುಭಟಮದೋತ್ಕಂಟಮಿದು ಕರ್ಣಾಟಬಲಂ (ಆದಿಪು. ೧೩-೪೫ ವ). ೨. (ದ್ವಾರಪಾಲಕನು ಹಿಡಿದುಕೊಳ್ಳುವ) ಕೋಲು ; ದಂಡ : ಪ್ರಾಂಚತ್ಕಾಂಚನವೇತ್ರಮಂಜುಳಕರಂ ಕೂರ್ಪಾಸವಿಭ್ರಾಜಿತಂ . . . ಬಂದಂ ಪ್ರತೀಹಾರಕಂ (ರಾಜಶೇ. ೫-೨೩). ೩. ಕೊಳಲು; ವೇಣು : 'ವೇತ್ರಗೀತ' ಪರಾ. [ಸಂ.]

**ವೇತ್ರಕೀಯ** (ಗು.) ೧. ಬಿದಿರಿನ ; ಬೆತ್ತದಿಂದ ಕೂಡಿದ : 'ವೇತ್ರಕೀಯಗೃಹ' ಪರಾ. (ನಾ). ೨. ಬೆತ್ತದ ಗಿಡಗಳು ಗುಂಪುಗುಂಪಾಗಿ ಬೆಳೆಯುವ ಪ್ರದೇಶ. [ಸಂ.]

**ವೇತ್ರಕೀಯಗೃಹ** (ನಾ). ಬಿದಿರಿನಿಂದ ನಿರ್ಮಿಸಿದ ಮನೆ, — ಕುಟೀರ : ನಮ್ಮೂರ ವೇತ್ರಕೀಯಗೃಹದಲ್ಲಿದ್ದಾನೆ (ವಚಭಾ. ೪೫). [ಸಂ.]

**ವೇತ್ರಖೇಟಕ** (ನಾ). ಬೆತ್ತದಿಂದ ಮಾಡಿದ ಗುರಾಣಿ ; ಬಿದಿರಿನ ಹರಿಗೆ : ಮತ್ತೀಭಾಗದೊಳಭಿನವಪ್ರಿಯಂಗುಶ್ಯಾಮಾಂಗವರ್ಧಚಂದ್ರಬುದ್ಬುದವ್ಯಾಕೀರ್ಣತ್ರಿಶೂಲಕರಾಲವಿಶಾಲವೇತ್ರ[ಪಾಠಾಂ. ಮಿತ್ರ]ಖೇಟಕಂ . . . ಇದು ವರಾಟಸುಭಟಬಲಂ (ಆದಿಪು. ೧೩-೪೫ ವ). [ಸಂ.]

**ವೇತ್ರಗೀತ** (ನಾ). ೧. ಕೊಳಲಿನ ಗಾನ. ೨. ಕೊಳಲನ್ನು ಊದುವವನು : ಮಂತ್ರಿ ಸೇನಾಧವರು ನಾಟಕ ವೇತ್ರಗೀತರು ಹಾಸ್ಯ ಮೊದಲಾಗಿ ತವದ ಅಷ್ಟಾದಶವು . . . ಒಪ್ಪಿಹುದು (ಬಿಜ್ಜಪು. ೨೩-೩೪). [ಸಂ.]

**ವೇತ್ರದಂಡ** (ನಾ). ದ್ವಾರಪಾಲಕನು ಹಿಡಿಯುವ ಬೆತ್ತದ ಕೋಲು : ವೇತ್ರದಂಡಮಂ ಪಿಡಿದು ನಿಂದಿರ್ದ ಪಡಿಯಱಿತಿಯರಿಂ ರಮ್ಯಂಬಡೆದು ಅನಂಗನಾಜ್ಞಾಸೀಮೆಯಂ ಪಡೆದಂತಿರ್ದ ಪಚ್ಚೆಯ ತೆರೆಯ ಕಂಡು (ನಂಬಿರ. ೧೨-೪೧). [ಸಂ.]

**ವೇತ್ರದಂಡಧರ** (ನಾ). ಬೆತ್ತದ ಕೋಲನ್ನು ಹಿಡಿದಿರುವ ದ್ವಾರಪಾಲಕ ; ಕಟ್ಟಿಗೆಕಾರ : ನೃಪತಿ ನುಡಿಯೆ ನುಡಿಯಿಂ ನೀಮಿರ್ಪಡೆಯೊಳಿರಿಂ ನೀಮಱಿವಿರ್ ಮಿಡುಕಿದೊಡೆನೆ ಚಿತ್ರವೇತ್ರದಂಡಧರರ್ಕಳ್ (ಆದಿಪು. ೯-೬) ; (ಪಂಪಭಾ. ೧೪-೨೨ ನೋ.). [ಸಂ.]

**ವೇತ್ರಧರ** (ನಾ). = **ವೇತ್ರದಂಡಧರ** : ಪೆಡಂಮೆಟ್ಟುವ ರಾಜಹಂಸಸಮಾಜಮನೋಜೆಯಿಂ ಕರೆದುಚಿತಸ್ಥಾನದೊಳ್ ನಿಲಿಪ ವೇತ್ರಧ[ಪಾಠಾಂ. ಧಾ]ರರಿಂ (ರಾಜಶೇ. ೫-೧೯ ವ) ; ಅನೇಕ ಪರಿಯಲಿ ಪೊಗಳ್ವ ವಂದಿಜನಂಗಳಿಂ ಓದುವ ಪಾಠಕರಿಂ ಉಗ್ಗಡಿಸುವ ವೇತ್ರಧರರಿಂ (ಸನ್ನಚಾ. ೫-೧೦೮ ವ). [ಸಂ.]

**ವೇತ್ರಧಾರಕ** (ನಾ). = ವೇತ್ರದಂಡಧರ : ಪರಿಹಾಸ ಮಾಡುತಲ್ಲರ ಕುಣಿಸಾಡುತ್ತಿರೆ ಕಂಡು ವೇತ್ರಧಾರಕರು ಪೊಯ್ಯಲವರ ಕೆಟ್ಟು ಬಯ್ಕೆ (ಭರವೇ. ೧-೧೩). [ಸಂ.]

**ವೇತ್ರನಾಳಿ** (ನಾ). ಬಿದಿರಿನ ಕೊಳವೆ, — ನಳಿಕೆ : ಚತುರಂಗುಲಪ್ರಮಾಣೋಚ್ಛ್ರಿತಮಪ್ಪುದು ವೇ [ಪಾಠಾಂ. ನೇ]ತ್ರನಾಳಿ ತತ್ಸುಷಿರಂ ಪ್ರಸ್ತುತಮಂಗುಲಪ್ರಮಾಣಾಕೃತಿಯಾಗಿ ನಿರೂಹಕರ್ಮಣಕ್ಕುಪಯೋಗ್ಯಂ (ಅಶ್ವಶಾ. ೧೧-೧೯). [ಸಂ. ವೇತ್ರನಾಲಿ]

**ವೇತ್ರಲತೆ** (ನಾ). ಎಳಸಾದ ಬೆತ್ತ, — ಬಿದಿರು : ಅವನಿಪತಿಗೃಹದ್ವಾರದಂತ ವೇತ್ರಲತಾಶತದುಷ್ಪ್ರವೇಶಮುಂ ವಿರಾಟನಗರಿಯಂತೆ ಕೀಚಕಾವೃತಮುಂ . . . ಸಪ್ತಪರ್ಣೋಪಶೋಭಿತಮುಂ ಕ್ರೂರಸತ್ವಮಾಗಿಯುಂ ಮುನಿಜನಸೇವಿತಮುಮೆನಿಪುದುಂ (ಕಾದಂಪೂ. ೧೦೦). [ಸಂ. ವೇತ್ರಲತಾ]

**ವೇತ್ರವತಿ** (ನಾ). ೧. ದಂಡವನ್ನು ಹಿಡಿದುಕೊಂಡಿರುವ ದ್ವಾರಪಾಲಕಿ ; ಕಟ್ಟಿಗೆಕಾರ್ತಿ : ವೇತ್ರವತಿ, ಹೋಮಶಾಲೆಯ ಮಾರ್ಗವನ್ನು ತೋರಿಸು (ಶಾಕುಂತ. ೬೨-೧೯). ೨. ಒಂದು ನದಿಯ ಹೆಸರು : "ಶರಾವತೀ, ವೇತ್ರವತೀ, ಚಂದ್ರಭಾಗಾ, ಸರಸ್ವತೀ, ಕಾವೇರೀ — ೫ . . . ನದೀವಿಶೇಷಗಳು" (ಸಿದ್ಧಾಂತಿ. ೮೮). [ಸಂ. ವೇತ್ರವತೀ]

**ವೇತ್ರವಿಷ್ಟರ** (ನಾ). ಬೆತ್ತದಿಂದ ಮಾಡಿದ ಪೀಠ ; ಬಿದಿರಿನ ಪೀಠ, — ಆಸನ : ಸಂಹರಿಪ ದಂದುಗಮಂ ಪೊಱಗಿಕ್ಕಿತೆಂಬ ಮಯ್ಸಿರಿ ಸಹಜಾತಮಾಗ ತಳೆದಿರ್ಪುದನುಕ್ರಮದಿಂದೆ ವೇತ್ರವಿಷ್ಟರನಿಭ ಝಲ್ಲರೀನಿಭಮೃಗನಿಭಾಕೃತಿಯಿಂ ಜಗತ್ರಯಂ (ಪುಷ್ಪಪು. ೧-೪೮). [ಸಂ.]

**ವೇತ್ರಹಸ್ತ** (ನಾ). = **ವೇತ್ರದಂಡಧರ** : ಮಕುಟವರ್ಧನರಂ ಕಟ್ಟಿಗೆಯೆತ್ತಿ ಮಟ್ಟಮಿರಿಸುವ ವೇತ್ರಹಸ್ತರಾಕ್ರಮಣೆಯ ನಡುವೆ ದಂಡನಾಥತ್ರಿಣೇತ್ರನೆನಿಪ ಬಸವರಾಜಂ . . . ಸುಖದೊಳಿಪ್ಪಲ್ಲಿ (ಬಸರ. ೬-೩೦) ; ಆ ಪ್ರಸ್ತಾವದೊಳ್ ವಿಚಿತ್ರವೇತ್ರಹಸ್ತನುಮಾರ್ಯವೇಷಪ್ರಶಸ್ತನುಮಪ್ಪ ಪ್ರತೀಹಾರನೊರ್ವನುರ್ವೀಶ್ವರಂಗೆ ಪೊಡೆವಟ್ಟು (ಪುಷ್ಪಪು. ೬-೩೭ ವ). [ಸಂ.]

**ವೇತ್ರಾಸನ** (ನಾ). ಬೆತ್ತದ ಅಥವಾ ಬಿದಿರಿನಿಂದ ಹೆಣೆದ ಆಸನ : ನದೀತನೂಜಂ ಭಾರದ್ವಾಜಂಗೆ ಬಱಿಯನಟ್ಟಿ ಬರಿಸಿ ಪೂರ್ವಸಂಭಾಷಣಾರ್ಘ್ಯಮೆತ್ತಿ ಮಧುಪರ್ಕವೇತ್ರಾಸನ ತಾಂಬೂಲ ದಾನಾದಿಗಳಿಂ ಸಂತಸಂಬಡಿಸಿ (ಪಂಪಭಾ. ೨-೫೦ ವ) ; ಮೊದಲೊಳ್ ವೇತ್ರಾಸನದೊಂದಿದಂದಮಂ ನಡುವೆ ಝಲ್ಲರೀವಿಭ್ರಮಮುಂ . . . ಪೋಲ್ತುದು ಲೋಕಮಿದಲ್ತೆ ಲೋಕದೊಂದಾಕಾರಂ (ಅಜಿಪು. ೧೧-೪). [ಸಂ.]

**ವೇತ್ರಿ** (ನಾ). = ವೇತ್ರದಂಡಧರ : ನೃಪವಧೂವರ್ಗಂ ತದಾಳೀಜನಂ ನಿರುತಂ ಮುಂತಿರೆ ವೇತ್ರಿ ಖಡ್ಗಧರರುಂ ಪರ್ಯಂತದಲ್ಲೊಪ್ಪುಗುಂ (ಲಾಸ್ಕರಂ. ೧-೩೫). [ಸಂ. ವೇತ್ರಿನ್]

**ವೇತ್ರಿಗ** (ನಾ). ೧. = ವೇತ್ರದಂಡಧರ : ದೇವೇಂದ್ರ ವಂದಿಸು ಕೆಲಕಾಗಿರ್ಕೆ ದಿಕ್ಪಾಲರೆಲ್ಲ ಯೋಗಿಗಳ್ಕುಳ್ಳಿರಿರೆಂಬ ವೇತ್ರಿಗರ ಶಬ್ದಾಗಮ ಕೇಳುತೆಯ್ದಿದನು (ಭರಚ. ೪೪-೭೧). ೨. ಅಧಿಕಾರಸೂಚಕವಾದ ದಂಡವನ್ನು ಧರಿಸಿದವನು ; ಅಧಿಕಾರಿ : ವೇತ್ರಿಗರು ಚಂದದಿಂ ಕರವೆತ್ತಿ ಅವಧರಿಸೆಂದು ಹೊಗಳಿದರ್ (ಬಿಜ್ಜಪು. ೮೧-೨೩). [ವೇತ್ರ + - ಇಗ]

**ವೇದ** (ನಾ). ೧. ಅರಿವು ; ತಿಳಿವಳಿಕೆ ; ಜ್ಞಾನ : 'ವೇದ' ಎಂಬ ಮಾತಿಗೆ 'ಜ್ಞಾನ' ಎಂದು ಅರ್ಥ (ಭಾರದ. ೧೯). 'ವೇದನಿಧಿ' ಪರಾ. ೨. ಶ್ರುತಿ, ಧರ್ಮ ಮತ್ತು ಬ್ರಹ್ಮಜ್ಞಾನಬೋಧಕವಾದ ಅಪೌರುಷೇಯ ವಾಕ್ಯರಾಶಿ ; IP ಋಗ್ವೇದ, ಯಜುರ್ವೇದ ಮತ್ತು ಸಾಮವೇದವೆಂಬ ಮೂರು ವೇದಗಳು ಮೂಲವೆಂದೂ ನಂತರ ಅಥರ್ವಣ ವೇದವು ಸೇರಿತೆಂದೂ ಪ್ರತೀತಿಯಿದೆ : ಪದಿನೆಂಟು ಧರ್ಮಶಾಸ್ತ್ರಂಗಳೊಳಂ ನಾಲ್ಕುವೇದದೊಳಂ . . . ಆರೂಢಸರ್ವಜ್ಞ ಮಹೇಂದ್ರಜಾಣ(?)[ನು]ಮಾಗಿ (ಪಂಪಭಾ. ೨-೩೪ ವ) ; ವೇದಶ್ರುತಿಗಳ ತಿಳಿಯಲಱಿಯದೆ ವಾದವ ಮಾಡುವರೆಲ್ಲಾ (ಬಸವ. ೫೪೫) ; ಅರಸುಗಳಿಗಿದು ವೀರ ದ್ವಿಜರಿಗೆ ಪರಮ ವೇದದ ಸಾರ (ಕುಮ್ಮಾಳ. ೧-೧೯) ; ವೇದ ಸುಳ್ಳಾದರೂ ಗಾದೆ ಸುಳ್ಳಾಗದು (ಗಾದ). 'ಚತುರ್ವೇದ', 'ತ್ರಯಿ' ಪರಾ. ೩. ವಿದ್ಯೆ ; ಶಾಸ್ತ್ರ. ೪. ಬ್ರಹ್ಮ. ೫. ವಿಷ್ಣು. ೬. [ಜೈನ] ಆಚಾರಾಂಗ, ಸೂತ್ರಕೃತಾಂಗ, ಸ್ಥಾನಾಂಗ ಮೊದಲಾದ ದ್ವಾದಶಾಂಗಗಳುಳ್ಳ ಶಾಸ್ತ್ರ : ಎರಡ(ಎಂಟ)ನೆಯ ದೀಕ್ಷಾನ್ವಯಕ್ರಿಯೆಯೊಳ್ ಅವತಾರಮೆಂಬುದು ತನ್ನನಾಶ್ರಯಿಸಿದ ಭವ್ಯಜನಕ್ಕೆ ವೇದಮುಂ . . . ಎಂಬ ದಶವಿಧಗಳಲ್ಲಿ ಮೊದಲ ವೇದಮೆಂಬುದು ಸಪ್ತಪರಮಸ್ಥಾನಮನೀವ ದ್ವಾದಶಾಂಗಮುಳಿದ ವೇದಂ ಪಾಪಸೂತ್ರಮೆಂದಱಿಗೆ (ಚಾವುಂಪು. ೨೨೧). 'ದ್ವಾದಶಾಂಗವೇದ' ಪರಾ.

೭. [ಬೌದ್ಧ] ''ಬುದ್ಧನು ವೇದಯಿಸಿ ತಿಳಿದ ಜ್ಞಾನ'' (ಬುದ್ಧಪ. ಮಿಲಿಂದ, ಕೋಶ. ೧೩೩); ನಾಗಸೇನನು . . . ಸಾಗಲ ನಗರದ ಬಳಿ ಸಾರಿದ್ದನು. ಆತನು ಸಂಘದ ಮುಖ್ಯಸ್ಥನು, ಗಣದ ಮುಖಂಡನು . . . ವೇದಗಳನ್ನು ತಿಳಿದವನು (ಬುದ್ಧಪ. ಮಿಲಿಂದ. ೨೭). ೮. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : ಗತಿ ವೇದ . . . ಸತತಂ ಜಳರಾಶಿ ಎಂದು ನಾಲ್ಕಱ ನಾಮಂ (ವ್ಯವಹಾ. ೯-೪) ; ಹರನಯನ ವೇದ ಶಶಿ ಗಿರಿಯಿಂದಂ ಗುಣಿಸಲ್ (ಭಾಸ್ಕರ. ೪೨-೬).

ವೇದಶಾಸ್ತ್ರ = ಚತುರ್ವೇದಗಳು ಮತ್ತು ಶಾಸ್ತ್ರಸಿದ್ಧಾಂತ : ವೇದಶಾಸ್ತ್ರದವರ ಹಿರಿಯರೆನ್ನೆ ಮಾಯಾಭ್ರಾಂತಿ ಕವಿದ ಗೀತಜ್ಞರ ಹಿರಿಯರೆನ್ನೆ (ಬಸವ. ೬೧೩); ವೇದ ಶಾಸ್ತ್ರಾರ್ಥ ತತ್ವದ ವಿಚಾರವ ಮಾಡು (ಪುರಂದ. ೨-೫-೨). [ಸಂ.]

**ವೇದಂಡ** (ನಾ). = ವೇತಂಡ : ಊದೆ ಕರಿಗಳ ಸರಃಸ್ವಚ್ಛೋದಕಮಂ ನೆತ್ತಿಗಡರ್ದ ಪನಿಗಳೆ ಮುಸು ಮುತ್ತಾದುವಲ್ಲದೊಡದವಿಯ ವೇದಂಡದ ನೆತ್ತಿಯಲ್ಲಿ ಮುತ್ತುಗಳೊಳವೇ (ಅರ್ಧನೇ. ೫-೧೧೧) ; ಗಂಡಮೃಗ ಮೃಗರಾಜ ಹರಿ ವೇದಂಡ ಸೂಕರ . . . ಚಮರೀಮೃಗ ಶಿಖಿನಿಗಳ ತಂಡವಿಂತನ್ಯೋನ್ಯವೈರವನುಳಿದು ಚರಿಸುತಿಹ ಘನದ ಬಿಲ್ವಾವನದ ಮಹಿಮೆಯ ವಿನುತಿಸುತ ನೋಡುತ್ತ (ಬಸಪು. ೧೯-೮೪). [ಸಂ.]

**ವೇದಕ** (ಗು). ೧. ಜ್ಞಾನವನ್ನು ನೀಡುವ, — ಬೋಧಿಸುವ : ತತ್ವದರ್ಶಕನೇ ವೇದಕಗುರು (ವಿವೇಕ. ೧೯). (ನಾ). ೨. [ಜೈನ] ಸಮ್ಯಕ್ತ್ವಭೇದಗಳಲ್ಲಿ ಒಂದು : ಸಮ್ಯಕ್ತ್ವಮೊಂದಱುದಯದಿಂದುೞಿದವಱುಪಶಮದಿಂ ಪುಟ್ಟಿದುದು ವೇದಕಮೆಂಬುದು (ವರ್ಧಮಾ. ೬-೨೮ ವ). [ಸಂ.]

**ವೇದಗರ್ಭ** (ನಾ). ೧. ವೇದಗಳನ್ನು ಗರ್ಭದಲ್ಲಿಟ್ಟುಕೊಂಡು ಸಂರಕ್ಷಿಸುವವನು ; ಬ್ರಹ್ಮ : ವೇದಗರ್ಭವರಪ್ರಸಾದಾಹ್ಲಾದಕವಿ ರಘುವರಕಥಾವಿಮಲೋದದಿಂದು ಮಹಾಮುನಿಪ್ರಾಚೇತಸಂ ವಂದೆ (ತೊರರಾ. ೧-೧-೮). ೨. ವಿಷ್ಣು. [ಸಂ.]

**ವೇದಗೋಚರ** (ನಾ). ವೇದಗಳಿಗೆ ಗೋಚರಿಸುವವನು ; ಪರಮಾತ್ಮ : ವೇದಗೋಚರ ಬಾರೋ ಆದಿಕಚ್ಛಪ ಬಾರೋ (ಪುರಂದ. ಧಾ. ೧-೬೫-೧). 'ನಿಗಮಗೋಚರ' ಹೋ. [ಸಂ.]

**ವೇದಘೋಟಕ** (ನಾ). (ತ್ರಿಪುರಸಂಹಾರದ ಕಾಲದಲ್ಲಿ) ನಾಲ್ಕುವೇದಗಳನ್ನು ತನ್ನ ರಥಕ್ಕೆ ಕುದುರೆಗಳನ್ನಾಗಿ ಮಾಡಿಕೊಂಡವನು ; ಶಿವ : ವೇದಘೋಟಕ ಭಕ್ತರಾಲಯದಿ ಭಾಂಡದ ಪ್ರಸಾದವನು ತಂದು ಶುನಿಯಾದ ಶಿಷ್ಯಗೆ ಕೊಟ್ಟು ಪೋದಪೆ ನೆನುತ್ತ (ಪ್ರಾಭರಾ. ೧೯-೨೧). [ಸಂ.]

**ವೇದಘೋಷ** (ನಾ). ೧. ವೇದಗಳನ್ನು ಗಟ್ಟಿಯಾಗಿ ಹೇಳುವಿಕೆ : ಮನೆಮನೆಗಳೊಳ್ ನೆಗಳ್ವ ವೇದಘೋಷಂಗಳಂ . . . ಶಿವಕೀರ್ತನಾವಳಿಗಳಂ ತೋಱುತುಂ (ನಂಬಿರ. ೯-೧೦೩) ; ದೇವಿಗೆ ಆರತಿ ಬೆಳಗುತ್ತಿರುವಾಗ, ಒಳಗಡೆ ಸುಸ್ವರದಲ್ಲಿ ವೇದಘೋಷ ಕೇಳಬಂತು (ಶಾಂತಲಾ. ೧೧೩). ೨. ವೇದಗಳನ್ನು ಗಟ್ಟಿಯಾಗಿ ಹೇಳುವವನು ; ಬ್ರಾಹ್ಮಣ : ವೇದಘೋಷರೂ ಶಾಸ್ತ್ರಿಗರೂ ಯೇನಾದ ವರ್ತನೆ ನಿಮದು ಯೆನಲು (ಬಿಜ್ಜಪು. ೩೧-೧೮). [ಸಂ.]

**ವೇದನ** (ನಾ). ೧. ತಿಳಿವಳಿಕೆ ; ಅರಿತುಕೊಳ್ಳುವುದು : ಪ್ರತಿಭಾನಂ ಶಕ್ತಿ ಲೋಕಾಗಮಸಕಲಕಲಾವೇದನಂ ವಿದ್ಯೆ (ಕಾವ್ಯಾವ. ೪೨೪) ; (ಧ್ಯಾನ, ಅರ್ಚನೆ, ಪ್ರಣಾಮ ಮೊದಲಾದುವು) ಉಪನಿಷತ್ತುಗಳಲ್ಲಿ ವೇದನ, ಉಪಾಸನ, ಬ್ರಹ್ಮವಿದ್ಯಾ ಮೊದಲಾದ ಶಬ್ದಗಳಿಂದ ಹೇಳಲ್ಪಡುವುವು(ಹಿಂದೂಸಾ. ೨೫೭). 'ವೇದಿಸು' ಪರಾ. ೨. ದೇಹದ ಮತ್ತು ಇಂದ್ರಿಯಾನುಭವಗಳ ಅರಿವು. ೩. ನೋವು ; ಬಾಧೆ : 'ವೇದನಂಗೊಳ್' ಪರಾ. ೪. ಆಸ್ತಿ ; ಸಂಪತ್ತು. ೫. ವಿವಾಹ. [ಸಂ.]

**ವೇದನಂಗೊಳ್** (ಕ್ರಿ). ಬಾಧೆಗೊಳಗಾಗು ; ಸಂಕಟಕ್ಕೆ ಸಿಲುಕು : ಗುರುಪಾದುಕಂಗಳ ಮುಂದೆ ತನ್ನಯ ಪಾದಯುಗಳಂ ಸೋಂಕಿದಡೆ ಗುರುಭಕ್ತನಾತ್ಮದೊಳು ವೇದನಂಗೊಳುತ (ಬಸಪು. ೩೯-೩೧). [ವೇದನ + ಕೊಳ್₁]

**ವೇದನಿಂದಾಪರ** (ಗು). ೧. ವೇದವನ್ನು ನಿಂದಿಸುವ, — ಹೀಯಾಳಿಸುವ. (ನಾ). ೨. ವೇದಗಳನ್ನು ನಿಂದಿಸುವವನು ; ನಾಸ್ತಿಕ : ಗುರುವಿಘಾತಿಯ ವೇದನಿಂದಾಪರನ . . . ನರಕವಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ (ಕುವ್ಯಾದ್ರೋ. ೮-೩೭). [ಸಂ.]

**ವೇದನಿಧಿ** (ನಾ). ಜ್ಞಾನದ ಭಂಡಾರ ; ತಿಳಿವಳಿಕೆಯ ಆಗರ : ಹಿಮಗಿರಿಯೊಳ ವಿತಿಹುದು ಚೈತನ್ಯದಗ್ನಿಕಣ ಸ್ತಿಮಿತದಿಂ ನಿಂತಿರ್ಪುದದು ಧರೆಯ ಹಿತಕೆ ಶಮದ ಸುಂದರದ ಸಾತ್ತ್ವಿಕದ ಗಾಂಭೀರ್ಯವದು ನಮಗೊಂದು ವೇದನಿಧಿ (ಮಂಕುಕ. ೧೧೨). [ಸಂ.]

**ವೇದನೀಯ** (ಗು). ೧. ತಿಳಿಯಲು ಅರ್ಹವಾದ. (ನಾ). ೨. [ಜೈನ] ಜೀವಕ್ಕೆ ಸುಖ ಅಥವಾ ದುಃಖರೂಪವಾದ ವೇದನೆಯನ್ನು ಉತ್ಪನ್ನಮಾಡುವ ಕರ್ಮ : ನಿಜದ್ವಿಚರಮಸಮಯದೊಳ್ ಅನ್ಯತರವೇದನೀಯ ದೇವಗತಿ . . . ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೯ ವ) ; ಸಾತಾಸಾತಸಂವಿಭಾಗದಿನಿರ್ತೆಱನಪ್ಪ ವೇದನೀಯಮುಮಂ (ಸುಕುಮಾ. ೩-೬೫ ವ). [ಸಂ.]

**ವೇದನೆ** (ನಾ). ೧. ಜ್ಞಾನ ; ತಿಳಿವಳಿಕೆ : ಬಲ್ಲೆಂದಡಟ್ಟು ಅದೆಲ್ಲಿದ್ದರು ತನ್ನ ವೇದನೆಯ ಬಿಡದು (ಪ್ರಭುಲಿಪಾ. ೫೫-೨೨೭) ; ಪ್ರತಿಭಾಶ್ರವಣ ಮೋಹಾತಿಶಯದ ವಾರ್ತಾ ದರುಶನಗಳತುಳವಪ್ಪಾಸ್ವಾದನವು ವೇದನೆಯುಮೆಂಬಾಱು . . . ಬ್ರಹ್ಮಾಭ್ಯಾಸಕಾಲದಲಂತರಾಯಗಳು (ಅಮೃತ. ೬-೮೯). ೨. ಸಂವೇದನೆ ; ಅನುಭವದ ಅರಿವು : ಈ ಲೋಕವ್ಯಾಪಾರಗಳಿಗೆ ಪಡಿಮಿಡಿಯುವ ಕ್ರಿಯೆಗೆ . . . ವೇದನೆ (Sensation) ಎನ್ನಬಹುದು (ಸೌಂದಸ. ೫) ; ಸ್ಪರ್ಶದಿಂದ ಆಗುವ ಅನುಭವವೇ 'ವೇದನೆ' (ಭಾರದ. ೧೯೫). ೩. ನೋವು ; ತಾಪ ; ಯಾತನೆ : ಸ್ಮರವೇದನೆಯಿಂ ಮಹಿಷಾಸುರನೇಳ್ತರೆ (ಕಾದಂಪೂ. ೪೪) ; ಭೈಷಜ್ಯಜ್ಞಾನವೆ ಮಾಡುಗುವೆ ವೇದನಾನಿಗ್ರಹಮಂ (ಚಂದ್ರಪ್ರ. ೭-೨೬) ; ಎಲೆ ತಂದೆ ಎನ್ನವನೆ ಕಣ್ಣ ವೇದನೆ ಘನವಲ್ಕೆ ತಂದೆ (ಕನ್ನರ. ದೇ. ೧೪೭-೨೪). [ಸಂ. ವೇದನಾ]

**ವೇದನೆಗೊಳ್** (ಕ್ರಿ). ನೋವನ್ನು ಹೊಂದು ; ಬಾಧೆಗೊಳಗಾಗು : ಬೇಡಿದೊಂದು ಪುರುಳಂ ಮಾರ್ಕೊಂಡನೇ ಬೇಡಿ ವೇದನೆ[ಪಾಠಾಂ. ಡನೆ]ಗೊಂಡಾನೆಱೆದಟ್ಟಿಯುಂ ಬಗೆಯನೇಂ ಗಂಡಂ ಮನಂಗೊಂ[ಪಾಠಾಂ. ಗಂ]ಡನೋ (ಆದಿಪು. ೧೨-೩೭).

[ವೇದನೆ + ಕೊಳ್₁]

**ವೇದಪಾರಾಯಣ** (ನಾ). ವೇದಗಳನ್ನು ಓದುವಿಕೆ, — ಪಠಿಸುವಿಕೆ : ವೇದಪಾರಾಯಣದ ಫಲ ಗಂಗಾದಿತೀರ್ಥಸ್ನಾನಫಲ . . . ಕನ್ಯಾದಾನಫಲವಹುದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ (ಕುವ್ಯಾಆ. ೧-೨೦). [ಸಂ.]

**ವೇದಪುರುಷ** (ನಾ). ವೇದವನ್ನು ಪ್ರತಿಪಾದಿಸಿದವನು ; ಪರಮಾತ್ಮ : ಸಹಸಶೀರ್ಷನಾದಿಪುರುಷನು ವೇದಪುರುಷನೊಬ್ಬ ಪುರುಷನು (ಬಸವ. ೯೫೫); ವೇದಪುರುಷನ ಸುತನ ಸುತನ ಸಹೋದರನ . . . ನಾದಿನಿಯ ಜಠರದಲಿ ಜನಿಸಿದನಾದಿ ಮೂರುತಿ ಸಲಹೊ (ಕುವ್ಯಾಆ. ೧-೨೩). [ಸಂ.]

**ವೇದಪ್ರಾಮಾಣ್ಯ** (ನಾ). ವೇದದಲ್ಲಿ ಹೇಳಿರುವುದು ಸರಿಯೆಂದು ತಿಳಿಸುವಿಕೆ; ವೇದದ ಪ್ರಮಾಣತ್ವ : ಯುಕ್ತಿವಾದದ ಬಲದಿಂದಲೇ ವೇದಪ್ರಾಮಾಣ್ಯವನ್ನು ಆಸ್ತಿಕರು ನಿರೂಪಿಸತೊಡಗಿದರು (ಭಾರದ. ೧೨೦). [ಸಂ.]

**ವೇದಪ್ರಿಯ** (ನಾ). ವೇದದಲ್ಲಿ ಪ್ರೀತಿಯುಳ್ಳವನು ; ವೇದಗಳನ್ನು ಪ್ರೀತಿಸುವವನು : ವೇದಪ್ರಿಯ ಶಿವನೆಂಬರು ವೇದಪ್ರಿಯ ಶಿವನಲ್ಲವಯ್ಯಾ (ಬಸವ. ೧೮೧) ; ವೇದಪ್ರಿಯನಲ್ಲ ಎನ ದೇವ (ಸಿದ್ಧಪು. ೨೩-೬೨). [ಸಂ.]

**ವೇದಬಾಹಿರ** (ನಾ). ೧. ವೇದದಿಂದ ಹೊರತಾದುದು ; ವೇದದಲ್ಲಿ ಪ್ರತಿಪಾದಿತವಲ್ಲದುದು : ಆದಡಂಜದಿರಂಜದಿರು ವರ ವೇದಬಾಹಿರವಲ್ಲ ಸತಿಯರೊಳಾದಿಪಾತಿವ್ರತ್ಯ ನಿನಗೆಂದನು ಮುಖಧ್ವಂಸಿ (ಕುವ್ಯಾಆ. ೧೬-೫೦). ೨. ವೇದವನ್ನು ತಿಳಿಯಲು ಅನರ್ಹನಾದವನು ; ವೇದದಿಂದ ಹೊರತಾದವನು : ವಂಚಕರ ನಿಜವೇದಬಾಹಿರ ಹಂಚುಗಳ ಸನ್ಮಾರ್ಗವಿಲ್ಲದ ಪಂಚಮಹಾಪಾತಕರ ಜೈನರ ಹಿಂಡು ನೆರೆದಾಗ (ಬಸಪು. ೫೧-೫೪) ; ಶೈವರು ಚಾರ್ವಾಕರಂತೆ ವೇದದೂಷಕರಲ್ಲ ; ಬೌದ್ಧರಂತೆ ವೇದಬಾಹಿರರಲ್ಲ (ಭಾರದ. ೨೯೮). [ಸಂ.]

**ವೇದಬಾಹ್ಯ** (ನಾ). = ವೇದಬಾಹಿರ ೨ : ಹರನ ಭಕ್ತಿಗೆ ಕೆಟ್ಟು ಮಿಗೆ ಉಬ್ಬರಿಸಿ ತನುವೇಕಾಂತರಾಮಯನರರೆ ತಾನಿಂತೆಂದು ನುಡಿದನು ವೇದಬಾಹ್ಯಂಗೆ (ಬಸಪು. ೪೯-೧೪) ; ಎತ್ತಲೆಂದೞಿಯದ ಜಗಕೆ ಜಡಾತ್ಮರಾಗಿಹ ವೇದಬಾಹ್ಯರ ಮೃತ್ಯುದೇವತೆ ಮುೞಿದು ಮೋದದೆ ಬಿಡುವಳೇಯೆಂದ (ಕುವ್ಯಾಉ. ೪-೧೧೧). [ಸಂ.]

**ವೇದಭಾಷ್ಯ** (ನಾ). ವೇದಗಳಿಗೆ ಬರೆದಿರುವ ಟೀಕೆ ; ವೇದಗಳ ಅರ್ಥ ವಿವರಿಸುವ ಗ್ರಂಥ : ಸಾಯಣರ ವೇದಭಾಷ್ಯ, ಮಾಧವರ ಪರಾಶರಮಾಧವೀಯ ಇವೆರಡೂ ಭಾರತೀಯ ಸಂಸ್ಕೃತಿಯ ಪ್ರಗತಿಗೆ ವಿಜಯನಗರದ ಸಾಮ್ರಾಜ್ಯದ ಮುಖ್ಯ ಕಾಣಿಕೆಗಳು (ಖುರ್ಶ್ವರ. ೧೧೧ ಪೀಠಿಕೆ). [ಸಂ.]

**ವೇದಮಂತ್ರ** (ನಾ). ವೇದಗಳಲ್ಲಿ ಹೇಳಿರುವ ಮಂತ್ರ, — ಸೂಕ್ತಿ : ದಹನ ಖನನಗಳೆರಡೂ ವೇದಮಂತ್ರಗಳಲ್ಲಿಯೇ ಉಕ್ತವಾಗಿವೆ (ಭಾರದ. ೧೭); ತನಗೆ ವೇದಮಂತ್ರಗಳು ಬಾರದೆ ಇರುವುದರಿಂದ ಬ್ರಾಹ್ಮಣರಿಗೆ ತನ್ನಲ್ಲಿ ಅಸಮಾಧಾನವೆಂದು ಅವನು ತಿಳಿದ (ಗರುಡಾ. ೧೩೧). [ಸಂ.]

**ವೇದಮಾತೆ** (ನಾ). ೧. ವೇದದ ಅಧಿದೇವತೆ ; ಗಾಯತ್ರಿ : ಕರದಲ್ಲಿ ಕನಕದ ಚಾಮರಮಂಬಿಡಿದು ಭಾಸುರವೇದಮಾತೆ ಗಾಯಿತ್ರಿ ಡಾಳಿಸೆ (ಕುಮಾಪು. ೧-೭೦) ; ವೇದಪುರುಷನ ಸ್ತ್ರೀರೂಪವಿದು. ಈಕೆಯೇ ವೇದಮಾತೆಯು (ಮಹಾಣ. ೨೮೫). ೨. ದುರ್ಗಾದೇವಿ. [ಸಂ. ವೇದಮಾತಾ]

**ವೇದಮೂರ್ತಿ** (ನಾ). ೧. ವೇದವೇ ಮೂರ್ತಿವೆತ್ತಂಥವನು ; ಬ್ರಾಹ್ಮಣ. ೨. ವೇದಾಧ್ಯಯನ ಮಾಡಿರುವ ಬ್ರಾಹ್ಮಣವಿದ್ವಾಂಸರ ಹೆಸರಿನ ಹಿಂದೆ ಕೆಲವುಸಲ ಸೇರಿಸುವ ಗೌರವಸೂಚಕವಾದ ಶಬ್ದ : ಕನ್ನಡದಲ್ಲಿ . . . ವೇದಮೂರ್ತಿ . . . ಮೊದಲಾದ ಶಬ್ದಗಳನ್ನೂ . . . ಪತ್ರ ಸ್ವೀಕರಿಸತಕ್ಕವರ ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯ ಉಂಟು (ಮುಂಬಯಿ. ೪-೮೪). [ಸಂ.]

**ವೇದವಾಕ್ಯ** (ನಾ). ೧. ವೇದಗಳಲ್ಲಿರುವ ಉಕ್ತಿ, — ಸೂಕ್ತಿ : ಮುಂದೆ ಅಜನಾಗಿ ಪವಮಾನ ಕೃತಯುಗದಲ್ಲಿ ಬಂದು ಸ್ವೇಚ್ಛೆಯಲಿ ಸೃಜಿಸುವನು ಸಚರಾಚರವ ಸಂದೇಹವಿಲ್ಲ ತಪ್ಪದು ವೇದವಾಕ್ಯವಿದು (ಪುರಂದ. ೧-೨೦೭-೭) ; ಬ್ರಾಹ್ಮಣದಲ್ಲಿನ ವೇದವಾಕ್ಯಗಳಿಗೂ ಆಗಮವಾಕ್ಯಗಳಿಗೂ ಏಕವಾಕ್ಯತೆಯಿರುವ ನಿದರ್ಶನ ಬೇಕಾದಷ್ಟಿದೆ (ಭಾರದ. ೭೧). ೨. (ಆಲಂ) ಪ್ರಮಾಣವಾದ ಮಾತು : ಬಂದೂಕುಧಾರಿಗಳಿಗೆ ಅವನ ಮೇಲೆ ಬಹಳ ಮಮತೆ. ಅವನ ಆಜ್ಞೆ ಅವರಿಗೆ ವೇದವಾಕ್ಯ (ಯೋಧರು. ೧೭) ; ಅವರಂದುದು ಅವರಾಣತಿಯಿತ್ತುದು ವೇದವಾಕ್ಯ ಎಂದು ಚುಟುಕಿನಲ್ಲಿ ಹೇಳಿ ಮುಗಿಸಬಹುದು (ಕುರುಕಾ. ೧೯). [ಸಂ.]

**ವೇದವಾದಿ** (ನಾ). ವೇದವನ್ನು ಆಧರಿಸಿ ವಾದಮಾಡುವವನು : ವೇದವಾದಿಯ ಶಾಸ್ತ್ರಸಾರನುವಾದ ಭೂಸುರರೊಶ್ಕ ಪಾರ್ಥಿವರಾದರೆಲ್ಲೊಡಬಟ್ಟು (ಬಿಜ್ಜಪು. ೭೧-೩೭); ಈ ಪರೀಕ್ಷೆಯನ್ನು ಲೋಕದಲ್ಲಿ ತತ್ತ್ವೋಪದೇಶ ಮಾಡಿದವರ ವಚನಕ್ಕೆ ಹೊಂದಿಸಿದರೆ ಹೊಂದಿಸಿದವರು ವೇದವಾದಿಗಳೇ ಆಗುವರು (ಭಾತತ್ತ್ವ. ೪೭೬).
[ಸಂ. ವೇದವಾದಿನ್]

**ವೇದವಿತ್ತು** (ನಾ). ವೇದವನ್ನು ಚೆನ್ನಾಗಿ ಬಲ್ಲವನು ; ವೇದಜ್ಞ ; ವೇದ ಸಂಪನ್ನ : ಶ್ರೀರುದ್ರಂ ಮೊದಲಾಗಿ ವೇದವಿತ್ತಪ್ಪ ತ್ರಿಸನ್ಧೆಯೊಳಂ ಪೂಜಿಸುವ ಆಚಾರ್ಯ್ಯವ್ರಿತ್ತಿ ಗದ್ಯಾಣ ಆಱು (ಕಇಅ. ೭೯-೧೩-೩೮ ; 1088) ; ಜೋಯಿಸರೊಪ್ಪುವ ಪೌರಾಣಿಕರಾ ಶಕುನವ ಪೇಳುವ ವೇದವಿತ್ತುಗಳ್ ರಂಜಿಸಿದರ್ (ದಶಾವ. ೫-೫೭).
[ಸಂ. ವೇದವಿತ್]

**ವೇದವಿದ** (ನಾ). = ವೇದವಿತ್ತು : ಇಂತಿದು ಸಕಲಾಂಗವೇದವಿದನಿಂತಿದು ಕಾವ್ಯಕಲಾಪ್ರಗಲ್ಭಂ . . . ಶುಕನುದ್ಗತಾಂಶುಕಂ (ಕಾದಂಪೂ. ೫೪) ; ವೇದವಿದಂ ಸಕಳಕಳಾ ವೇದಿ ಸಮಸ್ತಾಧಿಕಾರಪರಿಚಿತನಾಶೀರ್ವಾದಪ್ರಿಯಂ ಪರಿಮೃತನಾದನ ವಿಶ್ರುತಬಹು ಶ್ರುತೋದಾತ್ತಯಶಂ (ಸುಕುಮಾ. ೨-೧೨). [ಸಂ. ವೇದವಿತ್]

**ವೇದವೇತ್ತ** (ನಾ). = ವೇದವಿತ್ತು : ಉತ್ತಮಕುಲೀನನತ್ಯಧಿಕವಿಪ್ರಂ ವೇದವೇತ್ತ[ಪಾಠಾಂ.ವಿತ್ತು] ಸರ್ವಾಗಮಜ್ಞಂ (ಪಚಕಾ. ೧೦-೧೭); ದೀನರಾರ್ಯರು ವೇದ ವೇ[ಪಾಠಾಂ.ವಿ]ತ್ತರನೂನತತ್ವಜ್ಞರು ಸಕಳವಿದ್ಯಾನಿಪುಣರುಂ (ಬಸಪು. ೬-೧೭).
[< ಸಂ.ವೇದವಿತ್]

**ವೇದವೇದ್ಯ** (ನಾ). ೧. ವೇದಗಳಿಂದ ತಿಳಿಯಲ್ಪಡುವವನು ; ಪರಮಾತ್ಮ : ಶ್ರೀಮದ್ದೇವಾದಿದೇವಂ ತ್ರಿಭುವನಜನಕಂ ಸರ್ವ್ವಗಂ ವೇದವೇದ್ಯಂ ಸೋಮಂ (ಸೌಇಇ. IX-i . ೧೧೮-೧ ; 1057) ; ವೇದವೇದ್ಯನನೀಗ ರಣದಲಿ ಕಾದಿ ಕೈವಲ್ಯವನು ಕೂಡುವೆನಾದಿಮೂರ್ತಿಯನೆನುತ ನಗುತತಿಕಾಯನನುವಾದ (ಕಾಶಿರಾ. ೨೭-೧). ೨. ಬ್ರಹ್ಮ. ೩. ವಿಷ್ಣು : ವೈದ್ಯ ಬಂದನು ವೇದವೇದ್ಯ ನೋಡೀಗಲೆ ಶ್ರೀದೇವೀ ರಮಣನು ಶ್ರೀನಿವಾಸನೆಂಬ (ಪುರಂದ. ೩-೧೪೨ ಅನುಪಲ್ಲವಿ). ೪. ಶಿವ. [ಸಂ.]

**ವೇದವ್ಯಾಸ** (ನಾ). ಅಖಂಡವೇದರಾಶಿಯನ್ನು ಬೇರೆ ಬೇರೆ ಶಾಖೆಗಳಾಗಿ ವಿಂಗಡಿಸಿದವನು ; ಸತ್ಯವತಿ ಮತ್ತು ಪರಾಶರಮುನಿಯ ಪುತ್ರ ; ಕೃಷ್ಣ ದ್ವೈಪಾಯನ ಮುನಿ : ಕೇಶವನಲ್ಲದೆ ಅತಃಪರದೈವವಿಲ್ಲೆಂದು ವೇದವ್ಯಾಸಮುನಿ ಭಂಗವಾದುದನಱಿಯಿರೆ (ಬಸವ. ೫೪೯) ; ವೇದಗಳನ್ನು ವಿಭಾಗ ಮಾಡಿ ವಿಸ್ತರಿಸಿದುದರಿಂದ ವ್ಯಾಸ ಅಥವಾ ವೇದವ್ಯಾಸರೆಂದೂ . . . ಪುರಾಣಪಂಕ್ತಿಗಳು ತಿಳಿಸುತ್ತದೆ (ಭಾರದ. ೨೬೯).
[ಸಂ.]

**ವೇದಸಿದ್ಧ** (ನಾ). ವೇದದಲ್ಲಿ ಹೇಳಿದ ಹಾಗೆ ಇರುವುದು ; ಸತ್ಯವಾದುದು ; ವೇದವಾಕ್ಯ : ಕಾವಡೆನ್ನಳವಲ್ಲ ಮೇಣ್ ಗಾಂಡೀವಿ ಕೊಲುವವನಲ್ಲ ಕೃಷ್ಣನು ಕಾವರೆಯು ಕೊಲುವರೆ ಸಮರ್ಥನು ವೇದಸಿದ್ಧವಿದು (ಕುವ್ಯಾದ್ರೋ. ೮-೬೧). [ಸಂ.]

**ವೇದಸೂಕ್ತ** (ನಾ). ವೇದದಲ್ಲಿರುವ ಸ್ತೋತ್ರಭಾಗ, – ಸೂಕ್ತಿ : ಹಾನಿವೃದ್ಧಿವಿನಾಶ ವಭ್ಯುದಯಪ್ರಪಂಚದಲಿ ಮಾನನಿಧಿಯೇ ವೇದಸೂಕ್ತ ವಿಧಾನದಲಿ ಪರಿಹಾರ ವಿಶ್ವಕ್ಸೇನ ಮಯವೀ ಲೋಕಯಾತ್ರೆಗಳೆಂದನಾ ಮುನಿಪ (ಕುವ್ಯಾಸ. ೧೦-೭೪) ; ವೇದಸೂಕ್ತಗಳಿಗೆ ಅರ್ಥಮಾಡುವ ರೀತಿಯು ಜೈಮಿನೀಯ ಮೀಮಾಂಸಾಸೂತ್ರಗಳಲ್ಲಿ ನಿರೂಪಿತವಾಗಿದೆ (ಭಾರದ. ೧೨೮). [ಸಂ.]

**ವೇದಹನಸು** (ನಾ). = ವೇದಮಂತ್ರ : ಅಲ್ಲಿದ್ದ ವೈದಿಕರು ವೇದಹನಸುಗಳನ್ನು ಹೇಳಿ ಆಶೀರ್ವಾದವನ್ನು ಮಾಡಿ ಫಲಮಂತ್ರಾಕ್ಷತೆಯನ್ನು ಒಪ್ಪಿಸಿದರು (ಮಾಮರಾ. ೬೭).
[ವೇದ + ಹನಸು$_2$]

**ವೇದಹೀನ** (ನಾ). = ವೇದಬಾಹಿರ ೨ : ವೇದಹೀನರಿಗಿತ್ತ ಫಲವಾ ಶ್ರಾದ್ಧಕರ್ಮ ದಲಿ ಐದದಿಹ ದಕ್ಷಿಣೆಗಳೆಂಬಿವು ಬೂದಿಯಲಿ ಬೇಳಿದ ಹವಿಸ್ಸಿನ ಹಾದಿಯಲ್ಲದೆ ಫಲವನೀಯವು (ಕುವ್ಯಾಉ. ೪-೮೯). [ಸಂ.]

**ವೇದಾಂಗ** (ನಾ). ಶಿಕ್ಷೆ, ಛಂದಸ್ಸು, ವ್ಯಾಕರಣ, ನಿರುಕ್ತ, ಜ್ಯೋತಿಷ ಮತ್ತು ಕಲ್ಪ ಎಂಬ ವೇದದ ಆರು ಅಂಗಗಳು, — ಶಾಸ್ತ್ರಭಾಗಗಳು : ವೇದಾಂಗಂ ಸ್ಮೃತಿವೇದಮೆಂದಿನಿತುಮಂ ಪೂರ್ಣ್ವೋದಿದಂ (ಸುಕುಮಾ. ೩-೪೩) ; ಶಿಕ್ಷಾ, ಛಂದಸ್ಸು, ವೈದಿಕಪದಗಳ ನಿರುಕ್ತಿ, ವ್ಯಾಕರಣ . . . ಇವೇ ಮುಂದಿನ ಶತಮಾನಗಳಲ್ಲಿ ಬೆಳೆದು ವೇದಾಂಗಗಳೆಂದು ಕರೆಯುವ ಶಾಸ್ತ್ರಗಳಾಗಿ ಪರಿಣಮಿಸಿದುವು (ಭಾರದ. ೩೨). [ಸಂ.]

**ವೇದಾಂತ** (ನಾ). ೧. ವೇದದ ಕಡೆಯ ಭಾಗ ; ಉಪನಿಷತ್ತು ; ಷಡ್ದರ್ಶನಗಳಲ್ಲಿ ಕಡೆಯದು : ವೇದ ವೇದಾಂತವನೋದಿದೊಡೇನು . . . ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ (ಬಸವ. ೧೮೮) ; ಸಂತತವು ಭಕ್ತಸಂಸಾರವನು ಪೊರೆವ ವೇದಾಂತನುತ ಕಾಗಿನೆಲೆಯಾದಿಕೇಶವರಾಯ (ಕನಕ. ೭೯-೫). ೨. ಆಧ್ಯಾತ್ಮ ; ತತ್ತ್ವಶಾಸ್ತ್ರ ; ತತ್ತ್ವಜಿಜ್ಞಾಸೆ : ಮಕ್ಕಳನ್ನು ಪ್ರೀತಿಸುವುದರಲ್ಲಿ ರಾಯರಿಗೆ ಯಾವ ವೇದಾಂತವೂ . . . ಆಧಾರವಾಗಿರಲಿಲ್ಲ (ಕಂಬಹು. ೧೨೧). ೩. ತತ್ತ್ವ ; ಸಿದ್ಧಾಂತ : ಅನುಭವವೇದಾಂತವನ್ನು ಲೋಕಕ್ಕೆ ನೀಡಿ . . . ಗಾಯತ್ರಿಯ ಕರ್ತೃವಿನ ಕಥೆಯನ್ನು ಗೌರವಿಸುವರು (ಮಹಾಣ. ೭). [ಸಂ.]

**ವೇದಾಂತದೆರೆ** (ನಾ). ವೇದಾಂತದ ಅಧ್ಯಯನಕ್ಕೆ ಸಲ್ಲುವ ತೆರಿಗೆಯ ಆದಾಯ : ವೇದಾನ್ತದೆರೆ ಮತ್ತ ೧೫ ಹರಳ್ಮತ್ತರು ೧೦ xx ರುಗ್ವೇದದೆರೆ ಮತ್ತ ೧೫ (ಸೌಇಇ. XX, ೩೦೦-೧೫ ; ಸು. 12ನೆಯ ಶತ). [ವೇದಾಂತ + ತೆರ್$_3$ (< ತೆಱ್$_3$)]

**ವೇದಾಂತವಾದ** (ನಾ). ವೇದಾಂತವನ್ನು ಕುರಿತು ಮಾಡುವ ಚರ್ಚೆ : ಗಾದೆ ಓದುಗಳೇಕೆ ವೇದ ಆಗಮವೇಕೆ ವೇದಾಂತವಾದ ತನಗೇಕೆ ಶರಣರ ಹಾದಿ ಹಿಡಿದವಗೆ (ಸರ್ವಜ್ಞ. ೨೮೪). [ಸಂ.]

**ವೇದಾಂತವೇದಿ** (ನಾ). = ವೇದವಿತ್ತು : ಸದಾಗ್ನಿಹೋತ್ರಾಚರಿತನಹ ವೇದಾಂತವೇದಿ ಯನು . . . ಅಭಿವಂದಿಸುವರ್ಶೈ ಮೂಱುಮೂರ್ತಿಗಳು (ಕುವ್ಯಾಉ. ೩-೪೫).
[ಸಂ. ವೇದಾಂತವೇದಿನ್]

**ವೇದಾಂತವೇದ್ಯ** (ನಾ). ೧. ಉಪನಿಷತ್ತುಗಳಿಂದ ತಿಳಿಯಲ್ಪಡುವವನು ;

ಪರಮಾತ್ಮ : ಕಂಡೆ ನಾ ಗೋವಿಂದನ . . . ಯಾದವಕುಲವಂದ್ಯನ ವೇದಾಂತವೇದ್ಯನ ಇಂದಿರಾರಮಣನ (ಪುರಂದ. ೧-೯೦-೨). ೨. ಶಿವ : ಕಂತುಹರನನು ವಿಮಳನನು ವೇದಾಂತವೇದ್ಯನನು . . . ಉದ್ದಂಡದೈವವ ಕಂಡನಬುಜಭವ (ಕುಮ್ಮಾಕ. ೬-೧೮). **[ಸಂ.]**

**ವೇದಾಂತಿ** (ನಾ). ೧. ವೇದಾಂತವನ್ನು ಅನುಸರಿಸುವವನು ; ಬ್ರಹ್ಮಜ್ಞಾನಿ : ಬ್ರಹ್ಮಕ್ಕೆ ಹಮ್ಮು ಹೋಹ ಬಹ ಭೇದವ ತಿಳಿದು . . . ಭೀತಿ ನಿರ್ಭೀತಿಯಿಲ್ಲದೆ ನಿರಂಗಸ್ವರೂಪನಾದಡೆ ವೇದಾಂತಿಯೆಂಬೆ (ವಚಸಂ. ೫೪೧-೨೪) ; ನಿತ್ಯಾನಿತ್ಯವಿವೇಕ . . . ಬ್ರಹ್ಮಜ್ಞಾನ ಬ್ರಹ್ಮಾನಂದಂಗಳೆಂಟುಂ ಬುದ್ಧಿಗಳಿವು ವೇದಾಂತಿಗಳ ಗುಣಂಗಳಕ್ಕುಂ (ವಿವೇಕ. ೨೭೭). ೨. ತತ್ತ್ವಜ್ಞಾನಿ. **[ಸಂ. ವೇದಾಂತಿನ್]**

**ವೇದಾಢ್ಯ** (ನಾ). ವೇದವಿದ್ಯೆಯಲ್ಲಿ ಪಾರಂಗತನಾದವನು : ಯಿದಂ ಕಾಯದ ಕಾಯ್ದ(ವಂ) ಪಾಪಿಗೆ . . . ಕವಿಲೆಯಂ ವೇದಾಢ್ಯರಂ ಕೊಂದೊಂದುಯ್[?] ಶಂ XX ಮಿಡದೆ ಸಾಜಿದಪವೀ ಶೈಳಾಕ್ಷರಭ್ರಾಜಿಗಳ್ (ಸೌಇಇ. VIII, ೩೭೯-೧೮ ; 1074); ನಾದರಸ ಸಮಸ್ತಶ್ರುತಿಮಂತ್ರಗತತತ್ತ್ವಯೋಗವಿದನೇ ವೇದಾಢ್ಯನು (ವೀಶೈಪು. ೬-೨-೧೮). **[ಸಂ.]**

**ವೇದಾತೀತ** (ನಾ). ವೇದಕ್ಕೆ ನಿಲುಕದವನು ; ವೇದಗಳಿಂದ ತಿಳಿಯಲಾಗದವನು ; ಪರಮಾತ್ಮ : ವೇದಾತೀತ ಷಡುವರ್ಣರಹಿತ ಅಷ್ಟತ್ರಿಂಶತ್‌ಕಳಾತೀತ ವ್ಯೋಮಾತೀತ ಕೂಡಲಸಂಗಮದೇವ (ಬಸವ. ೯೫೩). **[ಸಂ.]**

**ವೇದಾಧ್ಯಯನ** (ನಾ). ವೇದಗಳನ್ನು ಅಭ್ಯಸಿಸುವುದು, — ಕಲಿಯುವುದು : ಮಾಡುತಿಹ ಯಜ್ಞವನು ಪರರಿಗೆ ಮಾಡಿಸುವ ವೇದಾಧ್ಯಯನವನು ಮಾಡುತಿಹ ತದ್ವಿಷಯದಲಿ ಯೋಗ್ಯರನು ಮಾಡಿಸುವ . . . ಗುಣವನು ಕೂಡಿಕೊಂಡಿಹನೇ ಸಮರ್ಥನು ವಿಪ್ರರೊಳಗೆಂದ (ಕುಮ್ಮಾಉ. ೪-೬೩) ; ವೇದಗಳು, ವೇದಾಂಗಗಳು, ವೇದದ ಉಪಾಂಗಗಳು ಇಷ್ಟನ್ನು ವೇದಾಧ್ಯಯನವು ಒಳಕೊಂಡಿತ್ತು (ಕಶಾಅ. ೨೩೦). **[ಸಂ.]**

**ವೇದಾಧ್ಯಾಯಿ** (ನಾ). ವೇದಗಳನ್ನು ಅಧ್ಯಯನ ಮಾಡುವವನು, — ಅಭ್ಯಾಸ ಮಾಡುವವನು : ಶಾಲೆಯಲೋದುವ ವೇದಾಧ್ಯಾಯಿಗಳಿನ್ನೂರ್ವರ್ಗ್ಗಂ . . . ಸರ್ವ್ವನಮಸ್ಯಮಾಗಿ ಕೊಟ ಕೆಯ್ (ಕಇಇ. ೬-೨-೧೯೧ ; 1058). **[ಸಂ. ವೇದಾಧ್ಯಾಯಿನ್]**

**ವೇದಾಭ್ಯಾಸ** (ನಾ). = ವೇದಾಧ್ಯಯನ : ದ್ವಾದಶವರ್ಷಗಳ ಕಾಲದ ವೇದಾಭ್ಯಾಸ ಮಾಡುತ್ತಾ ಬ್ರಹ್ಮಚಾರಿಯಾಗಿರು (ಚಿತಂಬಾ. ೧೦೭). **[ಸಂ.]**

**ವೇದಾಭ್ಯಾಸಜಡ** (ನಾ). ಬರಿಯ ವೇದಾಭ್ಯಾಸ ಮಾತ್ರ ಮಾಡಿರುವವನು ; ಲೋಕಜ್ಞಾನಶೂನ್ಯನಾದವನು ; ಲೌಕಿಕವ್ಯವಹಾರಶೂನ್ಯನಾದವನು : ವೇದಗಳ ಕಾಲದ ಜನರು ಬರೀ ವೇದಾಭ್ಯಾಸಜಡರಾಗಿದ್ದಿರಲಿಲ್ಲ (ಭಾರದ. ೫೬೭) ; ಶಾಸ್ತ್ರಿಗಳೇನು ಅಷ್ಟೊಂದು ವೇದಾಭ್ಯಾಸಜಡರೇ ? (ಹೊಸಕ್ಕ. ೨೪). **[ಸಂ.]**

**ವೇದಿ$_1$** (ನಾ). ಪಂಡಿತ; ಜ್ಞಾನಿ ; ವಿದ್ವಾಂಸ: ವೇದಾನುವಾದದಿಂ ಸ್ತ್ರೀಪುಂನಪುಂಸಕವೇದಿಗಳ್ಗಂ ಅವೇದಿಗಳ್ಗಂ ಸಾಮಾನ್ಯೋಕ್ತಭಾವಂ (ತತ್ತ್ವಪ್ರ. ೪೭) ; ಜಲಧಿ . . . ಮುನೀಶ್ವರರುಗಳ ಧಾತುಗಡಣದ ವೇದಿಗಳ ತಿಳಿದು ಕಾಲದ ಗತಿಯ ಗಮಕಂಗಳನಱಿದು ನಡೆವವರುಗಳು ನಿರ್ಮಳದಲೆಡಹದೆ ಬೆರೆಸಿಕೊಂಬರು ಮುಕ್ತಿ ರಾಜ್ಯವನು (ಕುಮ್ಮಾಉ. ೪-೩೪). 'ಚತುರ್ವೇದಿ', 'ತ್ರಿವೇದಿ' ಪರಾ. **[ಸಂ. ವೇದಿನ್]**

**ವೇದಿ$_2$** (ನಾ). ೧. ಯಾಗಕ್ಕಾಗಿ ಪರಿಷ್ಕರಿಸಿ ಸಿದ್ಧಪಡಿಸಿದ ಭೂಮಿ ; ಯಾಗಭೂಮಿ; ಯಜ್ಞವನ್ನು ಮಾಡುವ ಸ್ಥಳ : ವೇದಿಯ ಸುತ್ತಲ್ ನೆಲೆಗೊಂಡಾದಂಸಮಿಧೆಗಳನಾಂತು ಪೊಣ್ಮುವ . . . ವೈತಾನವಹ್ನಿ ಸಲಹುಗೆ (ಶಾಕುಂತ. ೫೨-೮೬) ; ಯಾಗಶಾಲೆಯಂ ನೇರ್ಪಡಿಸಿ . . . ವೇದಿಯಂ ಸಮಕಟ್ಟಿ, . . . ಯಾಗಂಗಳಂ ನೆರಯಿಸುತಿರ್ದರ್ (ರಾಮಾಶ್ವ. ೧೬-೫). ೨. ಎತ್ತರವಾದ ಜಗುಲಿ ; ವೇದಿಕೆ : ವೇದಿಯ ಸಾತ್ಮಗೃಹಾಂಗಣ ವೇದಿಯೊಳೆಸೆಯಾಗೆ ಬಗೆದು (ಆದಿಪು. ೧೨-೬೫); ದಿಶಾಳೋಕನಿಮಿತ್ತವೇಱುವೆಡೆಗೆನ್ದಿಕ್ಕಿರ್ದ್ದ ವೇದೀವಿಳಾಸದ ವಿಸ್ತಾರಮೊ ಪೇಳೆನಲ್ಕೆ ಮೆಱಗುಂ ಶ್ರೀಕುಜ್ಜಾನಾಥಾಶ್ರಯಂ (ಎಕ. V, ಅರಸೀ. ೧೦೮-೯೯ ; 1255). ೩. ಮುದ್ರೆಯುಂಗುರ. **[ಸಂ. ವೇದಿ, ವೇದೀ]**

**ವೇದಿಕಾವಳಯ** (ನಾ). ಸುತ್ತಲೂ ಇರುವ ವೇದಿಕೆ : ವೇದಿಕಾವಳಯಂ ಪೂವಲಿ . . . ಲತಾಮಂಟಪವಮಂಬಿವಿಲ್ಲದ ಜನಾವಾಸಂಗಳಿಲ್ಲೆಲ್ಲಿಯುಂ (ಪುಷ್ಪಪು. ೨-೬೩). **[ಸಂ. ವೇದಿಕಾವಲಯ]**

**ವೇದಿಕೆ** (ನಾ). ೧. ಯಜ್ಞಮಾಡುವ ಸ್ಥಳ. ೨. ಕಟ್ಟೆ ; ಜಗುಲಿ : ಮಂದರಪ್ರಾಸಾದದ ಕೆಳಗಣ ಸೌಧತಳವೇದಿಕೆಯೊಳ್ ಮಹಾಶ್ವೇತೆವೆರಸಿರ್ದಪಳ್ (ಕಾದಂಉ. ೧೬೭) ; ಸಲ್ಲೀಲೆಯಿಂ ವಿವಾಹದ ವೇದಿಕೆಯನಿಕ್ಕಿ (ಸಂಜರ. ೫-೨೭). ೩. ನಾಟಕ, ಭಾಷಣ ಮೊದಲಾದುವನ್ನು ಮಾಡಲು (ಹಲಗೆ ಮುಂತಾದುವುಗಳಿಂದ) ಎತ್ತರವಾಗಿ ಕಟ್ಟಿದ ಸ್ಥಳ ; ರಂಗಸ್ಥಳ : ಗಮಕಿವರ್ಯನ ವೇಣುವಾಣಿಗೆ ಕಲಾರಮಣಿ ವರ್ಣಲಯ ರಾಗಮಯ ನವರಸಾವೇಶದಿಂ ಮಮಕಾವ್ಯವೇದಿಕೆಯನೇರಿ ನರ್ತಿಸುವಂತೆ ನಲಿದುದಾ ಪೊನ್ನಿಗಂ (ಶ್ರೀರಾಮಾ. ೨೩೨-೧೨೭) ; ವೇದಿಕೆಯನ್ನೇರಿ ಮಹಾಸಭೆಯನ್ನು ಎದುರಿಸಿ ನಿಂತೆ (ನಂಬುರು. ೩೯). ೪. ಪೀಠ ; ಆಸನ. ೫. ದಿಬ್ಬ ; ದಿಣ್ಣೆ. ೬. (ಕುಂದುಕೊರತೆ, ಭಾವನೆ ಮುಂತಾದುವನ್ನು ವ್ಯಕ್ತಪಡಿಸಲು) ಅವಕಾಶವಿರುವ ಸ್ಥಾನ, — ನೆಲೆ ; ಉದಾ. 'ಗ್ರಾಹಕರ ವೇದಿಕೆ', 'ವಿಚಾರ ವೇದಿಕೆ' ಇತ್ಯಾದಿ. ೭. ಮುದ್ರೆಯುಂಗುರ ; ಗುರುತಿನ ಉಂಗುರ : "ವೇದಿಕೆ ಮುದ್ರೆಯುಂಗುರಗಳೆಂಬಿವು ವೇದಿಕೆಯಕ್ಕು" (ನಾನಾರ. ೧೪೯). **[ಸಂ. ವೇದಿಕಾ]**

**ವೇದಿತ** (ಗು). ತಿಳಿಯಲ್ಪಟ್ಟ ; ತಿಳಿದ : ಶಿವನ ಬೆಸನದಿ ವೇದಿತಾಮಳ ಭಕ್ತಿವರ್ಧನ ಕಾರಣದಿ ಬಂದು ಮೇದಿನಿಯೊಳೊಗೆದಂ (ಬಸಪು. ೩-೨೦). **[ಸಂ.]**

**ವೇದಿತಜ್ಞ** (ನಾ). ಶ್ರೇಷ್ಠವಿದ್ವಾಂಸ : ನೀವಪ್ಪೊಡೆ ವಿದಿತ ವೇದಿತಜ್ಞರುಂ ಭಾವಿತಾತ್ಮರುಮಾಗಿರ್ದ ಜ್ಞಾನಿಗಳ್ (ಗದಾಯು. ೫-೪೪ ವ). **[ಸಂ.]**

**ವೇದಿನಿ** (ನಾ). ವಿದ್ಯಾವಂತೆ ; ಪಂಡಿತೆ : ಸಂತಸ ಮಿಗೆ ಸರ್ವಸರಸವಿದ್ಯಾಸಿದ್ಧಾಂತ ವೇದಿನಿಯರೊಪ್ಪಿಹರು (ಹದಿಬ. ೧-೧೮) ; ಆದಿದರುಶನ ವೇದಿನಿ ಬಾಧಿಸುವ ಮೋಹಿನಿಯು (ಬಿಜ್ಜಪು. ೧೫-೫೮). **[ಸಂ. ವೇದಿನೀ]**

**ವೇದಿಸು** (ಕ್ರಿ). ೧. ತಿಳಿಯುವಂತೆ ಮಾಡು ; ನಿರೂಪಿಸು : ವೇದ್ಯನಿಂತಹನೆಂದಱಿದು ವೇದಿಸಿದರು ನಮ್ಮ ಪುರಾತನರು (ಉರಿಪೆ. ೧೩೮-೧೩೧) ; ಬತ್ತೀಸಾದಿರಾಗಂಗಳಿಗನಿತು ದಂಡಿಗೆಗಳಂ ರಚಿಸಿ ವೇದಿಸಲು (ಬಸಪು. ೧೯-೬) ; ಭೂವಿನುತ ಜೀವಂಧರನ ಚರಿತವನು ವೇದಿಸುವೆನು ಭಾಮಿನಿಯ ಷಟ್ಪಾದದಿಂ (ಜೀವಂಚ. ೧-೩೫). ೨. ಅರಿವಾಗು ; ಅರಿವಿಗೆ ಬರು : ಶಬ್ದವೇದಿಗಳೆಂದು ನುಡಿದು ನಡೆವರು ನೋಡಾ ನಿಶ್ಶಬ್ದ ವೇದಿಸದಿದ್ದರೆ ಗುಹೇಶ್ವರ ನೋಡಿ ನೋಡಿ ನುಡಿದು ನಗುತ್ತಿಪ್ಪ ನೋಡಾ (ಅವಚಂ. ೧೧೭-೪೮೩) ; ಆದುದು ನವಮಾಸಂ ಪುಣ್ಯೋದರದೊಳ್ ಪಕ್ವಸಮಯಮಲರ್ದುದು ಸುಪಥಂ ವೇದಿಸಿದುದು ಸುಮುಹೂರ್ತಂ ಕಾದಿರ್ದುವು (ಗಿರಿಕ. ೩-೪೧) ; ವಾದವೇತಕೆ ನಿನ್ನ ಮನಸಿಗೆ ವೇದಿಸುವ ದಿಟವಲ್ಲ ಮನೆಯವನಾದನಾದೊಡೆ ಬಳಿಕ ನೋಡುವೆನೆಂದಳಾ ಮಾಯೆ (ಪ್ರಭುಲೀ. ೬-೨೧). ೩. ಆಚರಿಸು ; ಜರುಗಿಸು : ನೀವು ನಾಲ್ವರು ವೇದಿಸುವುದೌ ತಪವ ಮುಖ್ಯಪ್ರಾಣನಂಗನೆಗೆ (ಸಂಭಪ. ೩೩-೯). ೪. ಅರಿತುಕೊಳ್ಳು ; ಗ್ರಹಿಸು : ವೇದ ವೇದಿ [ಪಾಠಾಂ. ಧಿ]ಸಲಱಿಯದೆ ಅಭೇದ್ಯಲಿಂಗವೆಂದು ನಡುನಡುಗಿತ್ತು (ಬಸವ. ೯೫೨) ; ವೇದವಿದರುದ್ಯೋಗಪರ್ವಂ ವೇದಿಸುವರಿಗೆ ಶಾಂತಿಪರ್ವಂ ಮೇದಿನಿಯೊಳವಿಳಾಗಮಜ್ಞರ ಕರ್ಣಪರ್ವವಿದು (ಬಸಪು. ೫-೨) ; ನಾರದುನಿಯನು ತಾನು ತಕ್ಕಿಸಿಕೊಂಬರ್ತಿಯಾದುದು ತನ್ನೊತ್ತಿಗವಳು ವೇದಿಸಿ ಬಾರಳದಕೆ (ಭರತ. ೯-೫೧). ೫. ಸೋಕು ; ತಾಗು : ಪರುಷ ವೇದಿಸಲು ಲೋಹ ಹೊನ್ನಾದ ತೆಱ ಲಿಂಗಸಂಗಿಗಳಲಿಹನು (ಶಿವಗೀ. ೩೪-೧೫೭) ; ಘನಮನ ವೇದಿಸಿ ಅನುಪಮ ತಾನಾಗಿ ಘನಲಿಂಗದಲ್ಲಿ ಮನ ತಲ್ಲೀಯವಾದನು (ಶಿವಗೀ. ೧೧೧-೫೪೭). ೬. ಇಡು ; ಇರಿಸು: ಓದಿ ಬಿರುದಾವಳಿಯ ನೊಸಲೊಳು ವೇದಿಸಿದ ಕರದಿಂದಲಾ ಸುರವೀದಿಯಲಿ ಮೆರಸಿದನು ಸಿಂದುರದಗ್ರಬಿಜ್ಜಣನ (ಬಿಜ್ಜಪು. ೯೫-೩೦). [ವೇದನ + - ಇಸು]

**ವೇದೀಸ್ಥಳ** (ನಾ). ಎತ್ತರವಾದ ಜಗಲಿಯ ಪ್ರದೇಶ : ಆ ವೇದೀಸ್ಥಳದೊಳ್ ಹರಿದ್ವಸುವ ಪಾತ್ರಂಗಳ್ ಲಸದ್ದೂರ್ವೆಯಿಂ ತೀವಿರ್ದುಂ ನವಚಂದ್ರಕಾಂತ ಚಷಕಂಗಳ್ ಚಂದನಕ್ಷೋದದಿಂ ತೀವಿರ್ದುಂ . . . ಬಱಿದಿರ್ದ ಪೋಲೆಸೆದುವಾದಂ ವರ್ಣಸಾಮಾನ್ಯದಿಂ (ಚಂದ್ರಪು. ೬-೫೪). **[ಸಂ. ವೇದೀಸ್ಥಲ]**

**ವೇದೆ** (ನಾ). (?) : ಶ್ರೀಪೆರ್ಗ್ಗಡೆ ರೇತಯ್ಯನ ವೇದೆ ಸಂಕಯ್ಯ (ಎಕ.II, ೪೬೭-೨ಸು.1000). [?]

**ವೇದೋಕ್ತ** (ಗು). ವೇದದಲ್ಲಿ ಹೇಳಿರುವ ; ವೇದದಲ್ಲಿ ತಿಳಿಸಿರುವ :

ಭುವಿಯೊಳದುಕಾರಣಂ ವೇದೋಕ್ತಮಾರ್ಗವಿಪ್ರವರೇಣ್ಯನಾಗಿ ಪಠಣಾವರಣೆ ಜಪತಪಸ್ನಾದಿಯಿಂ ನಡೆವುದುಚಿತಂ (ವೀಶೈಪು. ೭-೨-೨೬) ; ವೇದೋಕ್ತಪೂಜೆಯಲಿ ತೃಪ್ತಿಪಡಿಸದಿರೆ ಆದುದೇನು (ಕನಕ. ೧೬-೬). [ಸಂ.]

**ವೇದೋದ್ಧಾರ** (ನಾ). ವೇದರಾಶಿಯನ್ನು ಉದ್ಧಾರಮಾಡಿದವನು, –ಕಾಪಾಡಿದವನು : ವೇದೋದ್ಧಾರ ಶ್ರೀವೇಂಕಟನಾಯಕ ಪುರಂದರವಿಟ್ಠಲ ನಮೋ ನಮೋ (ಪುರಂದ. ೩-೪೧-೩). [ಸಂ.]

**ವೇದ್ಯ** (ನಾ). ೧. ತಿಳಿಯಲು ಸಾಧ್ಯವಾದುದು ; ತಿಳಿಯಬೇಕಾದುದು : ಆದ್ಯರಿಗಲ್ಲದೆ ವೇದ್ಯವಾಗದು (ಬಸವ. ೭೦೩) ; ವೇದ್ಯವಾವುದು ಎಂಬುದನಱಿತು ನಿಂದಾತನೇ ಕೃತಾರ್ಥನು (ಉರಿಪೆ. ೧೩೮-೧೩೧). ೨. ತಿಳಿದುದು ; ವಿದಿತವಾದುದು : ಚಿದಂಶವೇದ್ಯಂ ನಿರ್ವಿಕಲ್ಪಂ . . . ಗುಣಾತೀತಮವ್ಯಕ್ತಂ (ಶಿವಗೀ. ೭೦-೩೪೦) ; ನಿನ್ನ ನಿಜ ಉಂಡ ನಿಲವನ್ನ ಮತಿಗೆ ವೇದ್ಯವು (ಸಿದ್ಧಪು. ೨೬-೫). ೩. ತಿಳಿದವನು ; ಅರಿತವನು ; ಜ್ಞಾನಿ : ಆದ್ಯರ ವಚನ ಆದ್ಯರಿಗಾಯಿತ್ತು ವೇದ್ಯರಿಗಲ್ಲದೆ ಸಾಧ್ಯವಾಗದು (ಬಸವ. ೮೪೨) ; ಆದ್ಯರಲ್ಲ ವೇದ್ಯರಲ್ಲ ಸಾಧ್ಯರಲ್ಲದ ಹಿರಿಯರ ನೋಡಾ (ಅವಚಂ. ೩೧-೧೭). [ಸಂ.]

**ವೇಧ** (ನಾ). ೧. ತೂತುಕೊರೆಯುವಿಕೆ ; ರಂಧ್ರಮಾಡುವಿಕೆ : "ವ್ಯಧಃ, ವೇಧಃ– ೨ ಬೆಜ್ಜ ಮಾಡೋಣವು, ತೂತು ಕೊರೆಯುವಿಕೆ, ಚುಚ್ಚುವಿಕೆ" (ಸಿದ್ಧಾಂತಿ. ೩೫೭). ೨. ತೂತು ; ರಂಧ್ರ. ೩. ಅಡಚಣೆ ; ಅಡ್ಡಿ ; ಉಪಟಳ : ಯಾರಿಗೂ ಯಾವುದೇ ಬಗೆಯ ಕೆಲಸದ ಒತ್ತಡ ವೇಧ ಇರಲಿಲ್ಲ (ಇಪ್ಪಿಕ. ೧೭೯). ೪. [ಜ್ಯೋತಿ] ಒಂದು ನಿರ್ದಿಷ್ಟವಾದ ಕಾಲಪರಿಮಾಣ. [ಸಂ.]

**ವೇಧನ** (ನಾ). ತೂತುಮಾಡುವಿಕೆ ; ರಂಧ್ರಮಾಡುವುದು : 'ವೇಧಿಸು' ಪರಾ. [ಸಂ.]

**ವೇಧನಿಕೆ** (ನಾ). ಮುತ್ತು, ರತ್ನಗಳನ್ನು ಕೊರೆದು ರಂಧ್ರಮಾಡುವ ಸಾಧನ. [ಸಂ. ವೇಧನಿಕಾ]

**ವೇಧಮುಖ್ಯಕ** (ನಾ). ಒಂದು ಬಗೆಯ ಔಷಧೀಸಸ್ಯ ; ಕಚೋರ : "ಕಚೋರ . . . ಶಟಿ, ವೇಧಮುಖ್ಯಕ" (ಸಸ್ಯನಿ. ೪೩). [ಸಂ.]

**ವೇಧಸ** (ನಾ). ೧. ಸೃಷ್ಟಿಕರ್ತ ; ಬ್ರಹ್ಮ. ೨. ವಿಷ್ಣು. [ಸಂ. ವೇಧಸ್]

**ವೇಧಸ್ಸಂಕಲ್ಪ** (ನಾ). ಬ್ರಹ್ಮಸಂಕಲ್ಪ ; ವಿಧಿನಿಯಮ : ವೇಧಸ್ಸಂಕಲ್ಪಂ ದುರ್ಬೋಧಮಿವಂ ನಿಟ್ಟೆಯಿಂ ನಿರೋಧಿಸಿ ತನುವಂ ಸಾಧಿಸಿದೊಡೀ ಕೃಪಾಣಾಮೆ ಬಾಧಾಕರಮಾಯ್ತಜಾಕೃಪಾಣೀಯದವೋಲ್ (ಪಂಠಾಮಾ. ೯-೨೫). [ಸಂ.]

**ವೇಧಾದೀಕ್ಷೆ** (ನಾ). [ವೀಶೈ] "ಗುರುಲಿಂಗವು ಶಿವಲಿಂಗದಲ್ಲಿ ಬೆಳೆಯಲು ಆತ್ಮನ ವರ್ತನೆಯು ನಷ್ಟವಾಗುವುದು. ಇದು ಗುರುವಿನ ಹಸ್ತಮಸ್ತಕ ಸಂಯೋಗದಿಂದ ಉಂಟಾಗುತ್ತದೆ. ಆಗ ಭಾವಲಿಂಗದ ಕಳೆಯು ಮನುಷ್ಯನಲ್ಲಿ ಪ್ರಾದುರ್ಭವಿಸುವುದು. ಇದೇ ವೇಧಾದೀಕ್ಷೆಯನ್ನು ಉಂಟುಮಾಡುವಂತಹುದು" (ಶಿವಾಕೋ. ೯೩) : ಆ ದುಃಖಜೀವಿಯಾಗಿದ್ದ ಪ್ರಾಜ್ಞನ ವೇಧಾದೀಕ್ಷೆಯಿಂದ ಭಿನ್ನಜ್ಞಾನವ ನಿವೃತ್ತಿಮಾಡಿ ಪರಿಪೂರ್ಣಜ್ಞಾನಚಿತ್ತ ಪ್ರಭಾವಿಸಿ ಕೊಟ್ಟು ಅಲ್ಲಿ ಭಾವಲಿಂಗ ಸಾಹಿತ್ಯವ ಮಾಡಿದನು (ಮೋಳಿಮಾ. ೨೨೮-೭೮೦ ಟೀಕೆ) ; ಆಣವಮಲ ಮಾಯಾಮಲ ಕಾರ್ಮಿಕಮಲಗಳೆಂಬ ಮಲತ್ರಯಂಗಳಂ ಕಳೆದಿದ್ದೇ ವೇಧಾದೀಕ್ಷೆ ಎನಿಸುವುದು (ಕೃಷಿಪ್ರ. ೩೩೩). [ಸಂ. ವೇಧಾದೀಕ್ಷಾ]

**ವೇಧಿತ** (ಗು). ತೂತುಮಾಡಿದ ; ರಂಧ್ರಮಾಡಿದ : "ವೇಧಿತಃ, ಛಿದ್ರಿತಃ, ವಿದ್ಧಃ — ೩ ತೊಲಿಯಿಡಲ್ಪಟ್ಟದ್ದು, ತೂತುಕೊರೆಯಲ್ಪಟ್ಟದ್ದು" (ಸಿದ್ಧಾಂತಿ. ೩೫೦). [ಸಂ.]

**ವೇಧಿಮ** (ನಾ). ಹೂವು ಕಟ್ಟುವ ಒಂದು ಬಗೆಯ ಬಂಧ : ಪೂಗಟ್ಟುವರಂ ಕಂಡು ತಾನುಮವರ ಕೆಲದೊಳ್ ಕುಳ್ಳಿರ್ದು ನೂಲಿನಗ್ರಗ್ರಂಥಿಮ [ವೇಧಿಮ] ವೇಧಿಮ ಸಂಪೂರಿ [ಮ ಸಂಘಾಯಿಮ]ಮೆಂಬಯ್ದುಂ ತೆಱದ ಪುಷ್ಪಮಾಲೆಗಳಂ ಸಮೆದಾಗಳ್ (ಬಂಹರಿ. ೨-೨೯ ವ). [?]

**ವೇಧಿಸು** (ಕ್ರಿ). ೧. ಚುಚ್ಚು ; ನಾಟು ; ನೆಡು : ಘನತರದ ಸೂಜಿಕಲ್ಲಂ ಕಾಣೆ ಸೂಜಿ ವೇಧಿಸುವವೊಲು ಮನ ನಟ್ಟಿರೆ (ಪ್ರಭುಪು. ೮-೧೩೨). ೨. ಆಳವಾಗಿ ಒಳಹೊಗು, –ಪ್ರವೇಶಿಸು : ನಡೆ ನುಡಿ ಚೈತನ್ಯ ಒಡಲನೊಂದುಮಾಡಿ ಬಿಡದೆ ವೇಧಿಸುವ ಬೆಡಗ ಕಂಡೆನಯ್ಯ (ಅವಚಂ. ೨೫೧-೧೧೪೫) ; ಲಿಂಗ ಲಿಂಗವ ವೇಧಿಸಿ ಅಂಗ ಲಿಂಗದೊಳಗಾಯಿತ್ತು ಮನ ಲಿಂಗವ ವೇಧಿಸಿ ಮನ ಲಿಂಗದೊಳಗಾಯಿತ್ತು (ಮಹಾದೇ. ಬ. ೨೬-೫೧) ; ನಾಯಿ ಬಗುಳದೆ ಕೆಲಕೆ ಸಾರ್ ಸುರೆ ಕಾಯವನು ವೇಧಿ[ಪಾಠಾಂ. ದಿ]ಸಿತೆ (ತೊರರಾ. ೫-೫-೬). ೩. ಕಾಣಿಸಿಕೊಳ್ಳು ; ತೋರು : ಗುರುವಚನದಿಂದಲ್ಲದೆ ಲಿಂಗಕ್ಕೆ ಕಳೆ ವೇಧಿಸದು (ಅಬಿಂಡೇ. ೧೮-೩). ೪. ಹೊರಳಿಸು ; ತಿರುಗಿಸು : ಬೊಟ್ಟುಮಾಡಿ ತೋರಿಸುತ್ತ ಆ ಅಪರಿಚಿತನ ಲಕ್ಷ್ಯವನ್ನು ಅತ್ತ ಕಡೆಗೆ ವೇಧಿಸಿದನು (ಅಂಬಿಕೆ. ೫೫). ೫. ಪುಡಿಮಾಡು : ಸಿತಮಂ ಘೃತಮಂ ಬೆರಸಿಟ್ಟು ಮತ್ತದಂ ಪೆಱವಱೊಳೀಂ ತ್ರಿಜಾತಕದೊಳೊಂದಿರೆ ವೇಧಿಸಿ ಕಮ್ಮಿತಾಗೆ . . . ಮಾಟ್ಪುದು ಕ್ಷೀರದುಂಡೆಯಂ (ಲೋಕೋಪ. ೮-೧೧). [ವೇಧನ + – ಇಸು]

**ವೇಧೆ** (ನಾ). ೧. ಉಪಟಳ ; ಕಾಟ : ಅವರು ಜಮೀನ್‌ದಾರರ ವೇಧೆಯಿಂದ ತಿನ್ನುವುದಕ್ಕನ್ನವಿಲ್ಲದೆಯೂ ಹೊದೆಯುವುದಕ್ಕೆ ಬಟ್ಟೆಯಿಲ್ಲದೆಯೂ ಶ್ರಮ ಪಡುತ್ತಲಿರುವರು (ಛತ್ರಶಿ. ೩೨). ೨. ನೋವು ; ಬಾಧೆ : ವೇದ ಘನವೆಂಬೆನೆ ಪ್ರಾಣವೇಧೆಯ ಹೇಳುತ್ತಿದೆ (ಬಸವ. ೨೦೮) ; ನಿನ್ನೆರ್ದೆಪೂವಿನಾ ವೇಧೆ ಜಗುಳ್ವುದಿಲ್ಲವೆ ತುಳ್ಕಿ ನೇತ್ರಶತಪತ್ರದಿಂ? (ಶ್ರೀರಾಮಾ. ೯೯-೫೭೬). ೩. [ವೀಶೈ] ಇಷ್ಟಲಿಂಗಧ್ಯಾನದಲ್ಲಿ ಸುಜ್ಞಾನಭಕ್ತಿಯೊಡನೆ ಮಗ್ನವಾಗುವಿಕೆ : ಅನವರತ ಅನುಭವಮುಖದಿಂದ ತತ್ವವನಱಿಯುತ್ತಿಪ್ಪ ವೇಧೆಯುಂಟಾದಡೇನು (ಪ್ರಭುವ. ೨೭೮-೨೭೨ ಟೀಕೆ) ; ಸದ್ಗುರು ಶಿಷ್ಯಮಸ್ತಕದೊಳಿಡೆ ಕರವನಂದು ವೇಧೆಯದಾಯ್ತು (ಲಶಿಚಂ. ೫೨-೯). ೪. ಒಂದು ನಿರ್ದಿಷ್ಟವಾದ ಕಾಲಪರಿಮಾಣ. [ಸಂ. ವೇಧ]

**ವೇಪ** (ನಾ). ನಡುಕ ; ಕಂಪನ : ಏಱಿಸಿದಂ ಮುರಾರಿ . . . ಚಂಡರೂಪಮನಸ್ತ್ರಾಮರವೇಪಮಂ ವಿಜಯವೃಕ್ಷಾವಾಸಮಂ ಚಾಪಮಂ (ಜಗವಿ. ೧೨-೭). [ಸಂ.]

**ವೇಪಥು** (ನಾ). ನಡುಕ ; ಕಂಪನ : "ವೇಪಥುಃ, ಕಂಪಃ — ಈ ೨ ನಡುಕಂ" (ಹಲಾಯು. ೯೮-೪೪೭) ; ವೇಪಥು, ಅಶ್ರು (ಕಣ್ಣೀರು), ವೈಸ್ವರ್ಯ (ಧ್ವನಿ ಬದಲಾಗುವುದು) — ಇವು 'ಸಾತ್ತ್ವಿಕ' ಭಾವಗಳು (ಸಂನಾಟ. ೧೨). [ಸಂ.]

**ವೇಪನ** (ನಾ). = ವೇಪಥು : "ಕ್ಷವಥು ವದವಸಾದಂ ಕ್ಲಮಥು ವೇಪನಂ ತಾನದಱಿಗೆ ವೇಪಥುವೆನಿಕುಂ" (ವಸ್ತುಕೋ. ೭೩-೩೪). 'ವೇಪಿಸು' ಪರಾ. [ಸಂ.]

**ವೇಪಮಾನ** (ಗು). ನಡುಗುವ; ಕಂಪಿಸುವ: ಪಾಂಡುರ ಜರಾ ಮೂರ್ಧಜೆಯ ವೇಪಮಾನವಮಾ ಪ್ರತಗೇಹಮಂ ದೇಹಮಂ ಪಿಡಿದನೊಯ್ಯನೆಯೆ ರಾಮಚಂದ್ರಂ (ಶ್ರೀರಾಮಾ. ೧೭೬-೨೦). [ಸಂ.]

**ವೇಪಿಸು** (ಕ್ರಿ). ೧. ನಡುಗು ; ಕಂಪಿಸು : ಕೇಗಿತಾ ನೆರವಿ, ಮಳೆಮೋಡಮಂ ಕಾಣುವ ನವಿಲ್‌ಗಳೊಲ್, ವೇಪಿಸೆ ಸಭಾಸ್ಥಾನಮಂಟಪಂ (ಶ್ರೀರಾಮಾ. ೫೮-೧೦೮). ೨. ತಲ್ಲಣಗೊಳಿಸು : ಪಾಪಿಯಂ ಪ್ರೋತ್ಸಹಿಸಿ ಸುಕೃತಿಯ ಪರೀಕ್ಷಿಸುತ ವೇಪಿಪ ವಿಧಿ ನಮ್ಮ (ಮಂಕುಕ. ೧೫೯). [ವೇಪನ + – ಇಸು]

**ವೇಬಿಲ** (ನಾ). ಒಬ್ಬಾತನ ಹೆಸರು : ವಾರಬದಿಗದಾಲನುಂ ತೆಳ್ಳನುಂ ತಾಳಲಿಯನುಂ ವೇಬಿಲನುಂ ಕಾಟೆರನುಂ ದತ್ತಿಕ್ಕೆ (ಎಕ. III, ನಂಜನ. ೧೩೯-೭ ; 915 ?). [?]

**ವೇಮ** (ನಾ). ನೂಲಿಂದ ಬಟ್ಟೆಯನ್ನು ನೇಯಲು ಬಳಸುವ ಉಪಕರಣ; ಮಗ್ಗ. [ಸಂ.]

**ವೇಮದಂಡ** (ನಾ). = ವೇಮ : "ನೆಯ್ಗೆಕಾಱನ ನಾಳಿ — ವೇಮ, ವೇಮದಂಡ" (ನಾಚಿರಾ. ೬). [ಸಂ.]

**ವೇಮಾಱು** (ಕ್ರಿ). ಅಜಾಗರೂಕನಾಗು ; ಮೋಸಹೋಗು : ಮನದೊಳ್ ಕೂರದ ಪಾಂಡುರಾಜಸುತರುಂ ಲಾಕ್ಷಾಗೃಹೋಗ್ರಾಗ್ನಿ[ಯಾ]ನನದೊಳ್ ಮುೞ್ಗಿದರೆನ್ನ ಪುಣ್ಯಮರಿಯರ್ ವೇಮಾಱಿ(?)ರಿನ್ನಾರೊ ಬೇರನೆ ಕಿೞ್ತಿಕ್ಕಿದೆಂ (ಪಂಪಭಾ. ೩-೬೨). IP 'ಏಮಾರು' ಎಂಬ ಶಬ್ದಕ್ಕೆ ಇದು ಪೂರ್ವರೂಪವಿರಬಹುದೆ?. [?./ ತೆಲು. ವೇಮಾಱು, ವೇಮಾರು, ವೇಮಱು, ವೇಮರು = ಮತ್ತೆ ಮತ್ತೆ, ಪುನಃ ಪುನಃ]

**ವೇರ್** 'ಬೇರ್₁' ನೋ.

**ವೇರ** (ನಾ). ೧. ದೇಹ ; ಶರೀರ. ೨. ಬದನೆಗಿಡ. ೩. ಕೇಶರ ; ಕುಂಕುಮಕೇಸರಿ. [ಸಂ.]

**ವೇರಡಗಿತ್ತಿ, ವೇರಡಿಗಿತಿ** (ನಾ). ಹೀನಕುಲದವಳು ; ಅಕುಲೀನೆ : ಮಾಲೆಗಾರ್ತಿ ಮುದಿಗುಂಟಣಿ ವೇರಡ [ಪಾಠಾಂ. ವೇಡರ]ಗಿತ್ತಿಯೆಂಬ ಪೆಂಡಿರ ನೆರೆಗೊಂಡೊಡಂದಱಿಗೆ ಸಜ್ಜನವೆಂಡಿತಿ ಕೆಟ್ಟಳೆಂಬುದಂ (ಸೂಕ್ತಿಸು. ೬೯೧೦೭). **ವೇರಡಿಗಿತಿ** : ವೇರಡಿ [ಪಾಠಾಂ. ಣಿ]ಗಿತಿ, ಕುಱುಂಬಿತಿ, ತೆಲುಂಗಿತಿ (ಶಮದ. ೨೦೮ ಪ್ರಯೋ).

[ವೇರಡ್ಡ (P < ಸಂ. ವೇರಟ = ಹೀನಕುಲದವನು) + - ಗಿತ್ತಿ]

**ವೇರಡಿಗ** (ನಾ). ಕೇರಳಪ್ರದೇಶದವನು (?) : "ಕೇರಳನೆನಲ್ ವೇರಡಿಗನಕ್ಕು" (ಮಂಗರಾ. ೧೧೨-೭). [?]

**ವೇರಡಿಗಿತಿ** 'ವೇರಡಗಿತ್ತಿ' ನೋ.

**ವೇಲಾಯೋಗ** (ನಾ). [ಜ್ಯೋತಿ] ಲಗ್ನದಿಂದ ಮೊದಲು ಮಾಡಿ ಏಳು ರಾಶಿಗಳಲ್ಲಿ ಗ್ರಹವಿರುವ ಒಂದು ಬಗೆಯ ಯೋಗ ; ನೌಯೋಗ : ಉದಯಾದ್ಯಸ್ತಗೃಹಂಬರಂ ನೆಲಸೆ ವೇಲಾಯೋಗಮಕ್ಕುಂ . . . ಉದ್ಯೋಗಗೇಹದಿನಾ ತುರ್ಯಗೃಹಂಬರಂ ನೆಲಸೆ ಚಾಪಯೋಗಮಕ್ಕುಂ ಗ್ರಹಂ (ಜಾತತಿ. ೧೩-೮). P 'ನೌ' ಎಂಬ ಶಬ್ದಕ್ಕೆ 'ಭೇಲ' ಎಂಬ ಪರ್ಯಾಯಪದವಿರುವುದರಿಂದ ಇಲ್ಲಿ 'ವೇಲಾ' ಎಂಬುದು 'ಭೇಲ' ಎಂಬುದಕ್ಕೆ ಪರ್ಯಾಯವಾಗಿ ಪ್ರಯೋಗವಾಗಿರಬಹುದು. [ಸಂ.]

**ವೇಲಾವನ, ವೇಳಾವನ** (ನಾ). ಸಮುದ್ರದ ತಡಿಯಲ್ಲಿರುವ ವನ ; ಸಮುದ್ರತೀರದ ಕಾಡು : ಏಲಾಲವಂಗಲವಲೀವೇಲಾವನಭೂಮಿಯೊಳ್ ನಿಧೀಶ್ವರ ಸೈನ್ಯವ್ಯಾಲಗಜಂಗಳ್ . . . ಕಣ್ಗೆವಂದುವು (ಆದಿಪು. ೧೩-೨) ; ವೇಲಾಂಧನಗನಿತಂಬದ ವೇಲಾಂಧಪುರೋಪಕಂಠಮಂ ಸಾರ್ದುದು ಭೂಪಾಲಸ್ಕಂಧಾವಾರಂ ವೇಲಾವನ ವೀಥಿಯಿಲ್ಲದಂಭೋನಿಧಿವೋಲ್ (ಪಂಪಭಾ. ೧೨-೩೬). **ವೇಳಾವನ** : ಕೆಂದಳಿರಂ ತದ್ವಾರ್ಧಿ ವೇಳಾವನಸಮಿತಿದವಜ್ವಾಳೆಯಂ ನೀಲಶೈಲಾವಳಿ ಕೈಕೊಂಡಭ್ರಮಂ ತಳ್ತಡರ್ವವೊಲಡರ್ದ ತ್ರೈತ್ರಲುಂ ಬಳ್ಳಿಮಿಂಚಂ ತಳೆದಾಶಾಮಂಡಲಂ ಕಟ್ಟನೆ ಕುನಿಯೆ ಜಳಸ್ಫೀತಜೀಮೂತಜಾತಂ (ಜಗವಿ. ೪-೧೪). [ಸಂ.]

**ವೇಲಿ** 'ಬೇಲಿ' ನೋ.

**ವೇಲು** (ನಾ). ಒಂದು ಬಗೆಯ ಬಟ್ಟೆ : ಜಂಗವೇಲುರೆ ವೆಂಜವೇಲು ಸುರಳಿದೊಪ್ಪು ಕಂಗೊಳಿಸಿದ ಸುರಳಿಗಳು (ದೇವಪು. ೪-೧೮೦) ; ಹಸಿ ಹೊಂಬಣ್ಣದ ವೇಲು ಮುಡಿವೇಲುಗಳಲ್ಲಿ ಹಸಿರತ್ನವೇಲು ಕಾವೇಲು (ದೇವಾಂಪು. ೪-೧೭೦). [?]

**ವೇಲೆ, ವೇಳೆ$_2$** (ನಾ). ೧. ಸಮುದ್ರದ ತೀರ : ಸುಭದ್ರವಿಜಯಂಗಂ ಶೃಂಗಾರಸಮುದ್ರವೇಲಾಲೀಲೆಯೆನಿಸಿದ ಸುವೇಲಾದೇವಿಗಂ . . . ಸಗರನೆಂಬೊಂ ತನಯನಾಗಿ (ಅಜಿಪು. ೯-೬ ವ) ; ಪತಿಚರಿತಾನುಕೂಲೆ ಘನರಾಗರಸಾರ್ಣವವೇಲೆ . . . ಗುಣಮಾಲೆಯೆನಲ್ ವನಮಾಲೆ ರಂಜಿಪಳ್ (ಪುಷ್ಪಪು. ೩-೭೦). ೨. ಸಮುದ್ರದ ಅಲೆ, – ತೆರೆ : ಉದಯಿಸುವುದುಮವ್ಯತಾಂಶುವಿನುದಯದೊಳಂಭೋಧಿವೇಲೆ [ಪಾಠಾಂ. ಪೆರ್ಚಿ] ಭೋರ್ಗರೆವವೊಲ್ (ಪಂಪಭಾ. ೧-೧೪೬) ; ಸಾಗರವೇಲೆ ಚಂದ್ರಮನ ಕೋಗಿಲೆ ಸುಗ್ಗಿಯ ಕೂರ್ಪಂತೆ ಸತಿಯನುರಾಗದಿನಿಯನ ಜಾನಿಪಳು (ಹರಿಬ. ೨೪). ೩. ಸಮುದ್ರದ ಉಬ್ಬರ, – ಭರತ ; ಸಮುದ್ರವು ಉಕ್ಕಿ ಹರಿಯುವಿಕೆ. ೪. ಮೇರೆ ; ಸೀಮೆ; ಎಲ್ಲೆ : ಚತುರುದಧಿವಲಯವೇಲಾಲಂಕೃತವಸುಂಧರಾಸುಂದರೀ ಜೀವಿತೇಶ್ವರನಂ . . . ಕಂಡು (ಪಂಚತಂ. ೧೯೪-೬) ; ತೆರೆಪರಂಪರೆ . . . ಅಪ್ಪಳಿಸಿದುದು ನಿರಂತರಂ ತಟಗತ ಅಶೋಕವನ ವಂಕಿಯ ಶಿಲಾವೇಲೆಯಂ (ಶ್ರೀರಾಮಾ. ೩೩೦-೫). ೫. ಕಾಲ ; ಸಮಯ. ೬. ಅವಕಾಶ ; ಆಸ್ಪದ. ೭. ವಿರಾಮ ; ಪುರಸತ್ತು. ೮. ಮರಣದ ಸಮಯ, – ಕಾಲ. ೯. ಸುಖವಾದ ಮರಣ ; ಸುಲಭವಾದ-ಸಾವು. **ವೇಳೆ$_2$** : ೧. ಗಾಳಿ ವಿಸರ್ಜಿಸೆ ಬಟಿಕಾಂ ವೇಳೆಯೊಳಾಂ ಬಿರ್ದು ಮಲ್ಲನೀಕ್ಷಿಸೆ (ಉದ್ಭಟ. ೭-೮೪) ; ನೃಪಕಂನರಂ ಸಮಸ್ತೋದಧಿವೇಳೆಯಿಂ ಪೊಱಗೆ ಬೆಳ್ಗೊಡೆಯೊಳ್ಕೆಳಲಂ ನಿಮಿರ್ಚಿದಂ (ಎಇ. XXI, ೧೨-೧೪; 1260). ೨. ಆಗಳೆರಡುಂ ಪಡೆಗಳಪಹಾರತೂರ್ಯಂಗಳಂ ಬಾಜಿಸಿ ಮುನ್ನೊತ್ತಿದ ವೇ[ಪಾಠಾಂ. ಪೊ]ಳೆಗಳ್ ಸಮುದ್ರಂಗಳಂ ಪುಗುವಂತೆ ತಂತಮ್ಮ ಬೀಡುಗಳಂ ಪೊಕ್ಕರ್ (ಪಂಪಭಾ. ೧೧-೨೪ ವ) ; ಜಳನಿಧಿವೇಳಾತರಂಗೋಚ್ಚಳದ್ರತ್ನ ವಿನಿದ್ರಪ್ರಾಂತದೇಶಂ ಸೊಗಯಿಪುದೆನಸುಂ ನೀಳ್ದ ವಿಂಧ್ಯಾಚಳೇಂದ್ರಂ (ಕಾದಂಪೂ. ೯೩). ೩. ಪೂರ್ವಾನು ಯೋಗಾಬ್ಧಿಯಿಂ ಪೊಱಪೊಣ್ಮತ್ತರ್ದು ವೇಳೆಯಂತೆ ಕಥೆ ಲಂಬೋದ್ದಾಮ ವೀಚೀಚಯಂ (ಆದಿಪು. ೧-೩೯). ೫. ಕಾಂಚನಕ್ಕೆ ವೇಳೆಯಲ್ಲದೆ ಲಿಂಗಕ್ಕೆ ವೇಳೆಯಿಲ್ಲಾ (ಬಸವ. ೩೧೩) ; ಅವಸರದ ವೇಳೆಯೊಳತಿ ಸುಖೋತ್ಸವವಲರಿ ಶಿವಯೋಗ ನಿದ್ರೆಯೊಳವಿರತಂ ಸಿಕ್ಕಿರಲು (ಬಸಪು. ೩೫-೪೭). [ಸಂ. ವೇಲಾ]

**ವೇಲೆಯಮ** (ನಾ). ಒಬ್ಬಾತನ ಹೆಸರು : ಆತನ ತಮ್ಮಂ ಪೆರ್ಗ್ಗಡೆ ವೇಲೆಯಮಂ ಬಾವಿಯಂ ಕಟ್ಟಿಸಿ ಮಟವಂ ಮಾಡಿಸಿದಂ (ಎಕ. VIII, ಸೊರಬ. ೭೦-೧೪ ; 938).

[ವೇಲೆ$_2$ + ಅಮ್ಮ (< ಅಮ್ಮ$_1$)]

**ವೇಲ್ಲ** (ಗು). ೧. ಹೋಗುವ ; ಚಲಿಸುವ. ೨. ನಡುಗುವ ; ಕಂಪಿಸುವ. ೩. ಉರುಳಾಡುವ ; ಹೊರಳಾಡುವ. (ನಾ). ೪. ಒಂದು ಬಗೆಯ ಔಷಧೀ ಸಸ್ಯ ; ವಿಡಂಗ : "ವೇಲ್ಲಂ . . . ವಿಡಂಗಂ — ೬ ವಾಯುವಿಳಂಗದ ಹೆಸರುಗಳು" (ಸಿದ್ಧಾಂತಿ. ೧೩೭). [ಸಂ.]

**ವೇಲ್ಲಜ** (ನಾ). ಕರಿಮೆಣಸು : "ವೇಲ್ಲಜಂ, ಮರೀಚಂ . . . ಧಾರ್ಮಪತ್ತನಂ — ೬ ಮೆಣಸುಕಾಳಿನ ಹೆಸರುಗಳು" (ಸಿದ್ಧಾಂತಿ. ೨೮೪). [ಸಂ.]

**ವೇಲ್ಲನ** (ಗು). ಅಲುಗಾಡುವ; ಕಂಪಿಸುವ : ಮಾಲತೀಪ್ರತತಿವಿತಾನ ಚೂತವಲ್ಲೀವೇಲ್ಲನನಿಸರ್ಗಸೌಂದರಕ್ರೀಡಾಚಲಕೇಲೀಸಮಭಿರಾಮಮುಮಾಗಿ . . . ನಿಜವಿಳಾಸದಿಂ ನಗುವವಲ್ಲಿ ವಲ್ಲೀವನಂ (ಆದಿಪು. ೧೦-೨೭ ವ). [ಸಂ.]

**ವೇಲ್ಲಿತ** (ಗು). ೧. ಕಂಪಿಸುವ ; ಅಲ್ಲಾಡುವ. ೨. ಸುತ್ತಿಕೊಂಡ ; ಬಳಸಿದ : ಸುರಶರಾಸನೋಪಮಾನನಾನಾನೂನಕಲ್ಪವಲ್ಲೀವೇಲ್ಲಿತ . . . ನೀಳಾಭ್ರವಿಭ್ರಮ ಕುಟ್ಟಿಮದೊಳಂ (ಸುಕುಮಾ. ೧೨-೪೨ ವ). (ನಾ). ೩. ನಡುಗಿದುದು ; ಅಲ್ಲಾಡಿದುದು: "ವೇಲ್ಲಿತಃ, ಪ್ರೇಂಖಿತಃ, ಅವಧೂತಃ, ಚಲಿತಃ, ಅಕಂಪಿತಃ, ಧುತಃ— ೬ ಕದಲಿಸಲ್ಪಟ್ಟ ಥಾಂದ್ಯು, ಅಲ್ಲಾಡಿಸಲ್ಪಟ್ಟದ್ದು" (ಸಿದ್ಧಾಂತಿ. ೩೪೬). ೪. ಕೊಂಕಿದುದು ; ಬಗ್ಗಿದುದು : "ವಕ್ರಂ, ವೃಜಿನಂ, ಭಂಗುರಂ, ಆವಿದ್ಧಂ, ವೇಲ್ಲಿತಂ . . . ಊರ್ಮಿಮತ್ — ಈ ೧೨ ಕೊಂಕಿದುದು" (ಹಲಾಯು. ೧೧೬-೧೧). ೫. ಸುತ್ತುವರಿದುದು ; ಬಳಸಿದುದು : ಆ ಮಹಾರ್ಣವಂ . . . ಅರಣ್ಯದಂತಗಣ್ಯವಿದ್ರುಮವಲ್ಲರೀವೇಲ್ಲಿತಮುಂ . . . ಚತುರ್ಮುಖನಂತೆ ಸರಸ್ವತೀಪತಿಯುಮೆನಿಸಿದುದು (ಜಗವಿ. ೧-೪೪ ವ). [ಸಂ.]

**ವೇಶ** (ನಾ). ೧. ಒಳಗೆ ಹೋಗುವ ದಾರಿ ; ಪ್ರವೇಶದ್ವಾರ. ೨. ಮನೆ ; ವಸತಿ ; ಬೀಡು : ಗುಡಿಗುಳಣೆಗೆ ಗೂಡಾರಂ . . . ಎಂಬಿವೞಿಂದೆಡೆಗಿಱಿದು ನಾಡೆಯುಂ ಕಣ್ಗೆಡಱಿದುದಾ ನೃಪನ ವಿಜಯಶಿಬಿರಂ ವೇಶಂ (ವರ್ಧಮಾ. ೮-೫೭). ೩. ವೇಶ್ಯೆಯರ ನಿವಾಸ ; ಸೂಳೆಗೇರಿ. ೪. ಉಡಿಗೆ ತೊಡಿಗೆ ; ವೇಷಭೂಷಣ. ೫. ವೇಷ ; ಸೋಗು : ಬೀಸುವ ನೆವದಿಂದ ವೇಶವನು ತಾಳುವಳು (ಸರ್ವಜ್ಞ. ೧೮೪೫).

[ಸಂ.]

**ವೇಶಿ, ವೇಸಿ** (ನಾ). ಗಣಿಕೆ ; ಸೂಳೆ : ವೇಶಿಯ ಬಾಯಂಜಲ ತಿಂಬ ದಾಸಿಯ ಸಂಸಾರದಂತೆ (ಬಸವ. ೬೩೫) ; ಮಲುಹಣನು ವಿಟಪುಂಗವಂ ಗುಣನಿಳಯಮಾನಸನೊರ್ಬ ವೇಶಿಯು ತಾನು ಒಲವುಣ್ಮೆ . . . ವರ್ತಿಸುವ ಸಮಯದಲಿ (ಬಸಪು. ४२-೧) ; ಈಶಭಕ್ತನು ಆಗಿ ವೇಶಿಯನು ಸಾರಿಹರೆ ಮಾಸಲಾಗಿರ್ದ ಬೋನವನು ಹಂದಿಯು ಮೂಸಿ ಹೋದಂತೆ (ಸರ್ವಜ್ಞ. ೨೭೫). **ವೇಸಿ** : ವೇಸಿಯನುಳಿದು ಪರಮಾನಂದದಲಿ ಮುಸುಕಿಟ್ಟು ಮಲಗಿರಲು (ಜೀವಂಚ. ೩-೨೨) ; ವೇಸಿಯಹ ಪರಿಯಂಕದಲಿ ನಿಜದಾಸಿಯಹ ಶಿಶ್ರೂಷೆಯಲಿ . . . ವಿಸುಕಾರ್ಯಕೆ ಮಂತ್ರಿಯೆನಿಸುವ ಮೈಸಿರಿಯನುಳ್ಳವಳು ರಾಣೀವಾಸವೆಂದೆನಿಸುವಳು (ಕುವ್ಯಾಉ. ೩-೮೦). [< ಸಂ. ವೇಶ್ಯಾ]

**ವೇಶ್ಮ** (ನಾ). ಮನೆ ; ಗೃಹ : ಮರಕತವೇಶ್ಮರಶ್ಮಿಯರುಣಾಶ್ಮಗೃಹದ್ಯುತಿಯಿಂದ್ರನೀಳಮಂದಿರರುಚಿ ಹೇಮದಾಮಘೃಣಿ ಮೌಕ್ತಿಕಮಂಡಪಕಾಂತಿಯೆತ್ತಲುಂ ಪರಿಕಲಿಪನ್ನೆಗಂ (ಚಂದ್ರಪ್ರು. ೧೧-೭೮). [ಸಂ. ವೇಶ್ಮನ್]

**ವೇಶ್ಯಾಂಗನೆ** (ನಾ). ಸೂಳೆ ; ವೇಶ್ಯೆ : ವೇಶ್ಯಾಂಗನೆಯರು ಚಿತ್ರಕಲಾಕುಶಲಿಗಳೂ ಆಗಿರುತ್ತಿದ್ದರು (ಭಾರದ. ೫೨೪). [ಸಂ. ವೇಶ್ಯಾಂಗನಾ]

**ವೇಶ್ಯಾವಾಟ** (ನಾ). ವೇಶ್ಯೆಯರು ವಾಸಿಸುವ ಬೀದಿ ; ಸೂಳೆಗೇರಿ : ಗುಡಿ ತುಱುಗಿ ಲತೆಯ ಪೊಸದಾಂಗುಡಿಯೆನಿಸಿದುದು . . . ವೇಶ್ಯಾವಾಟದೊಳೆಡೆಗಿಱಿದ ವಿಶಿಷ್ಟಸೌಧಭವನಾವಳಿಯೊಳ್ (ಶಾಂತಿಪು. ೧೦-೬೯) ; ಮಕರಂದನುಂಬೆರಸರಮನೆಯಂ ಪೊಱಮಟ್ಟು ವೇಶ್ಯಾವಾಟಮಂ ಮುಟ್ಟಿವರೆ (ಲೀಲಾವ. ೨-೨೪ ವ). [ಸಂ.]

**ವೇಶ್ಯಾವಾಟಿ** (ನಾ). = ವೇಶ್ಯಾವಾಟ : ನಗರದತುಲಸರ್ವಸ್ವಮೆಂಬಂತೆ ವೇಶ್ಯಾವಾಟ ಕಂಗಸೆದುದನಿಲಭವಗೆ (ವಂಕಾರಾ. ೫-೬-೨೭) ; ಪರಿಪರಿಯ ನಾಟ್ಯಗಳ ನಟ್ಟುವರಿರದೆ ಪೊಸತರುಣಿಯರ ತಿದ್ದುವ ಸ್ವರ ಮೊರವು ತೀವಿರುವ ವೇಶ್ಯಾವಾಟಿ ರಾಜಿಸಿತು (ನಾಗಪ. ೨-೬೬). [ಸಂ. ವೇಶ್ಯಾವಾಟೀ]

**ವೇಶ್ಯಾವೃತ್ತಿ** (ನಾ). ಸೂಳೆಗಾರಿಕೆ; ವೇಶ್ಯೆಯ ಕಸುಬು, –ದಂಧೆ : ದೇವರ ಕಲ್ಲನ್ನು ಎತ್ತಿಸಿ ನೋಡಿದಾಗ ಮೊಮ್ಮಗಳನ್ನು ವೇಶ್ಯಾವೃತ್ತಿಗೆ ಹಚ್ಚಬೇಕೆಂದು ಉತ್ತರ ಬಂದುದನ್ನು . . . ನಂಬಲಿಲ್ಲ (ಗಂಗಾಸಾ. ೧೫). [ಸಂ.]

**ವೇಶ್ಯಾಸ್ತ್ರೀ** (ನಾ). ಸೂಳೆ ; ಗಣಿಕೆ : ವೇಶ್ಯಾಸ್ತ್ರೀಯರ ಹಾಗೆ ತಲೆಗೂದಲನ್ನು ಅಲ್ಲಿ ಇಲ್ಲಿ ಸುತ್ತಿ . . . ಮುಖದ ಮೇಲೆಲ್ಲ ಪೌಡರ್ ಸವರಿಕೊಂಡಿದ್ದಳು (ಜ್ವಾಲಾಮು. ೨೫೭). [ಸಂ.]

**ವೇಶ್ಯೆ** (ನಾ). = ವೇಶ್ಯಾಸ್ತ್ರೀ : ಪಲರ್ಗಂ ಕಾಮಸುಖಾರ್ಥಮಿತ್ತನನೊಳಿರ್ಪಂತುಂ ಸಮಂತಾರೊಳಂ ಚಲಮಂ ಕೋಪಿಯುಮಾಗದಂತೆ ಪಡೆದಂ ಪದ್ಮಾಸನಂ ವೇಶ್ಯೆಯಂ (ಮದರಿ. ೧೦-೧) ; ವೇಶ್ಯೆಯ ನೆಚ್ಚಿ ತನ್ನ ನಾರಿಯ ಬಿಡುವಂಥ ಪುರುಷನೇಕೆ (ಪುರಂದ. ೪-೧೪೭-೨). [ಸಂ. ವೇಶ್ಯಾ]

**ವೇಷ** (ನಾ). ೧. ಅಲಂಕಾರ ಮಾಡುವುದು ; ಸಿಂಗರಿಸುವುದು : "ಆಕಲ್ಪಃ, ಮಂಡನಂ, ವೇಷಃ, ಪ್ರತಿಕರ್ಮ, ಪ್ರಸಾಧನಂ — ಈ ೫ ಶೃಂಗಾರಂಗೆಯ್ವುದು" (ಹಲಾಯು. ೪೯-೩೮೫). ೨. ಉಡುಗೆತೊಡುಗೆ ; ಪ್ರಸಾಧನ : ಧರ್ಮಪುತ್ರಂ ಧರಾಮರವೇಷದೊಳ್ ವಿರಾಟನಂ ಕಂಡು (ಪಂಪಭಾ. ೮-೫೨ ವ) ; ಅಡ್ಡತ್ರಿಪುಂಡ್ರದ ಮಣಿಮುಕುಟದ ವೇಷದ ಶರಣರ ಕಂಡರೆ ನೂಬುವುದೆನ್ನ ಮನವು (ಬಸವ. ೮೮). ೩. ತೋರಿಕೆಯ ರೂಪ ; ಸೋಗು : ಸರಿದುದು ಪುಸಿವೇಷದ ತೆಱಿ ಸುರಿದುದು ಕೆಯ್ಸೂರ ತೆಱಿದೆ ಪೂವಳೆ (ಗಿರಿಕ. ೯-೧೨೦) ; ಶಿವಂ ಸತ್ಕದುರವಣೆಯ ನೇಹಕ್ಕಂಜಿ ಕಡುಪೊಸತನುತ್ತ ವೇಷವ ಬಿಟ್ಟನಂದಂಜಿ (ರುದ್ರರ. ದೀ. ೨೦೦-೨೦). ೪. (ನಾಟಕ, ಯಕ್ಷಗಾನ ಮುಂತಾದುವುಗಳ) ಪಾತ್ರ : ಇವರ ವೇಷಗಳಲ್ಲಿ ಅತ್ಯಂತ ಸುಂದರವಾದುದು "ಅರ್ಧನಾರೀಶ್ವರನ ಪಾತ್ರ" (ನಡದಾ. III, ೨೨೬೯).

**ವೇಷಭೂಷಣ** = ಉಡುಗೆತೊಡುಗೆ ; ಒಡವೆ, ವಸ್ತ್ರ : ಕುಶಲವಿರಚಿತಾನು ರೂಪವೇಷಭೂಷಣನಾಗಿ ರಾಜಸಮಾಜವಿರಾಜಮಾನಮಂ ಸ್ವಯಂವರಪ್ರದೇಶ ಮನೆಯ್ದೆವಂದು (ಶಾಂತಿಪು. ೫-೯೨ ವ); ಯಕ್ಷಗಾನದಲ್ಲಿ ಬಹುಮೆಚ್ಚಿನ ಸೌಂದರ್ಯಸಿದ್ಧಿಯನ್ನು ಹೊಂದಿದ ಭಾಗವಂದರೆ ಅದರ ವೇಷಭೂಷಣಗಳು (ಯಕ್ಷಬ. ೧೫೨). **ವೇಷಭೂಷೆ** = ವೇಷಭೂಷಣ : ಅವನ ವೇಷಭೂಷೆಗಳಲ್ಲಿ ಪೂರ್ತಿಯಾಗಿ ಬದಲಾವಣೆಯಾಗಿತ್ತು (ನೀನಮಮ. ೧೫೩) ; ಅವುಗಳ ಹಿಂದೆ ವೇಷಭೂಷೆಯ ಸಂಚಾರಿಪ್ರದರ್ಶನದಂತಿದ್ದ ಸ್ತ್ರೀ ಪುರುಷರ ಮೇಳ (ಅನ್ನ. ೨೪೭). **ವೇಷಹಾಕು** = ೧. ಅಲಂಕಾರಮಾಡು ; ವೇಷ ತೊಡಿಸು : ಆಸ್ತಿಕ ದೈವಕ್ಕೆ ಇಲ್ಲದ ಸಲ್ಲದ ವೇಷಹಾಕಿ ಮಂಗನಂತೆ ಮೆರೆಸುತ್ತಾನೆ (ನಟಸಾ. ೪೨೨). ೨. ಪಾತ್ರವಹಿಸು ; ಅಭಿನಯಿಸು : ಅಶ್ವಘೋಷನು . . . ವೇಷ ಹಾಕಿಕೊಂಡು ಅದನ್ನು ಪಾಟಲಿಪುತ್ರದಲ್ಲಿ ಅಭಿನಯಿಸಲು ಅದನ್ನು ನೋಡಿದ ೫೦೦ ಕ್ಷತ್ರಿಯಕುಮಾರರು ವೈರಾಗ್ಯ ತಾಳಿ ಬೌದ್ಧಮತವನ್ನು ಕೈಕೊಂಡರೆಂದೂ . . . ತಿಳಿದು ಬರುತ್ತದೆ (ಸಂನಾಟ. ೬೮). [ಸಂ.]

**ವೇಷಕಟ್ಟು** (ಕ್ರಿ). ೧. ನಟನೆ ಮಾಡು ; ಸೋಗುಹಾಕು : ನನಗಿಚ್ಛೆಯಿಲ್ಲದಿದ್ದರೂ ಅವನ ಗೆಳೆಯರ ಕೃಪಾಪ್ರವಾಹದಲ್ಲಿ ಸಮರಸನಾಗಬೇಕೆಂದು ಇಷ್ಟು ವೇಷಕಟ್ಟಿರುವನು (ಜಯಂತ. ೧೧೨) ; ನೀವು ವೇಷಕಟ್ಟೋದರಲ್ಲಿ ತುಂಬ ಬಲ್ಲಿದರು (ಹಾಡುಹು. ೧೮). ೨. (ನಾಟಕ ಮುಂತಾದುವುಗಳಲ್ಲಿ) ಪಾತ್ರಮಾಡು ; ಅಭಿನಯಿಸು : ಈ ಪ್ರದೇಶದಲ್ಲಿ ಮಳೆಗಾಲದಲ್ಲಿ ವೇಷಕಟ್ಟಿ ಆರುತಿಂಗಳ ಕಾಲ ಕುಣಿಯುವುದಕ್ಕೆ ಮಳೆ ರಾಯ ಬಿಡನು (ಯಕ್ಷಬ. ೨೭). [ವೇಷ + ಕಟ್ಟು]

**ವೇಷಡಂಭಕ** (ನಾ). ತೋರಿಕೆಯ ನಡೆನುಡಿಯವನು ; ಬೂಟಾಟಿಕೆಗಾರ : ವೇಷಡಂಭಕರಿಗೆ ಭಕ್ತಿ ಎಂತಪ್ಪುದಯ್ಯಾ (ಬಸವ. ೬೬೬).
[ವೇಷ + ಡಂಭಕ (< ಡಂಬಕ)]

**ವೇಷಧಾರಿ** (ನಾ). ೧. ವಸ್ತ್ರಭೂಷಣ, ಆಕಾರ ಇತ್ಯಾದಿಗಳನ್ನು ಬದಲಾಯಿಸಿ ಕೊಂಡವನು ; ವೇಷಾಂತರ ಮಾಡಿಕೊಂಡವನು : ಪಾರ್ವತಿಯೂ ಶಿವನ ವೇಷಕ್ಕೆ ತಕ್ಕಂತೆ ಕಿರಾತೆಯ ಉಡುಪನ್ನು ಧರಿಸಿ . . . ಹೊರಡಲು, ಅವರ ಹಿಂದೆ ನಾನಾವೇಷಧಾರಿಗಳಾದ ಭೂತಗಳೂ ಹೊರಟವು (ವಚಭಾ. ೧೨೫). ೨. ಸೋಗುಗಾರ ; ನಟನೆ ಮಾಡುವವನು ; ಬೂಟಾಟಿಕೆಯವನು : ವೇಷಧಾರಿಯಾನು ಉದರಪೋಷಕ ನಾನಯ್ಯಾ (ಬಸವ. ೮೫) ; ಹೇಸಿ ವಿಷಯ ಬಯಸುವಂಥ ವೇಷಧಾರಿಗಳಿಗೆ ಕಾಶೀಯಾತ್ರೆ ಫಲ ಬಾಹೊದೆ (ಪುರಂದ. ೧-೧೮೦-೩). ೩. (ನಾಟಕ ಮುಂತಾದುವುಗಳಲ್ಲಿ) ಪಾತ್ರ ಮಾಡುವವನು ; ವೇಷಧರಿಸುವವನು : ನಮ್ಮಲ್ಲೇ ಹಲವು ವೇಷಧಾರಿಗಳಿಗೆ, ಇಷ್ಟೆಲ್ಲ ಕಷ್ಟಪಟ್ಟು ಬಣ್ಣಹಾಕಿ ರಂಗಸ್ಥಳಕ್ಕೆ ಬರುವುದೆಂಬುದು ಅರ್ಥಶೂನ್ಯವೆಂದು ತೋರುತ್ತಿದೆ (ಯಕ್ಷಬ. ೧೬೨) ; ವೇಷಧಾರಿಗಳಿಗೆ ಬಗೆಬಗೆ ತೊಡವನು ಮಾಡಿಕೊಟ್ಟರು ನಮ್ಮ ತಂದೆ (ಇಂಚಾಪ. ೧೧-೪೩). [ಸಂ. ವೇಷಧಾರಿನ್]

**ವೇಷಾಂತರ** (ನಾ). ಉಡುಗೆ ತೊಡುಗೆಗಳನ್ನು ಮಾರ್ಪಡಿಸಿಕೊಳ್ಳುವುದು ; ಮಾರುವೇಷ ಹಾಕುವುದು : ಅವರಿಬ್ಬರನ್ನು ವೇಷಾಂತರದಿಂದ ದೇಶಾಂತರಕ್ಕೆ ಕಳುಹಿಸಿ ಲೆಪ್ಪದ ಪ್ರತಿಮೆಗಳನ್ನು ಮಾಡಿಸಿ ಇಟ್ಟರು (ಸಾಹಿಸ. ೮೭) ; ವೇಷಾಂತರವನಾಂತು ಧರೆಗಿಳಿದ ಭೈರವನೋ (ಕೊಳಲು. ೩೮-೧೭). [ಸಂ.]

**ವೇಷಾಡಂಬು** (ನಾ). ತೋರಿಕೆ; ಬೂಟಾಟಿಕೆ : ವೇಷಾಡಂಬಿನ ಮಾತಿನ ಬಿನ್ನಾಣಿಗಳಿಗೆ ಗ್ರಾಸ ಉಂಟಲ್ಲದೆ ನೀವಿಲ್ಲ (ಮೋಳಮಾ. ೧೭೬-೬೯).
[< ವೇಷ + ಡಂಬು (< ದಂಬ)]

**ವೇಷಿ** (ನಾ). ವೇಷವನ್ನು ಧರಿಸಿದವನು ; ವೇಷಧಾರಿ : ಮಹೇಶನು ವರ ತಪೋಧನವೇಷಿಯಾಗೆಯ್ತರಲು ಕಂಡೆದ್ದು . . . ಸಾಷ್ಟಾಂಗವೆಱಗಿ (ಬಸವಪು. ೫೨-೩).
[ಸಂ. ವೇಷಿನ್]

**ವೇಷ್ಟ** (ಗು). ೧. ಸುತ್ತುವರಿದಿರುವ ; ಆವರಿಸಿರುವ. (ನಾ). ೨. ಬೇಲಿ ; ಆವರಣ. ೩. ತಲೆಗೆ ಸುತ್ತುವ ವಸ್ತ್ರ ; ರುಮಾಲು, ಪೇಟ ಇತ್ಯಾದಿ. ೪. ಮರದ ರಸ, — ಅಂಟುದ್ರವ. ೫. ಹಲ್ಲಿನ ಕುಳಿ ; ಹಲ್ಲಿಗೆ ಉಂಟಾಗುವ `ಒಂದು ಬಗೆಯ ರೋಗ : 'ದಂತವೇಷ್ಟ' ಪರಾ. [ಸಂ.]

**ವೇಷ್ಟನ** (ನಾ). ೧. ಸುತ್ತುವರಿಯುವುದು : 'ವೇಷ್ಟಿಸು' ಪರಾ. ೨. ಬೇಲಿ : ಮುತ್ತಮಲ್ಲಿ ಕಂಟಕವೇಷ್ಟನಂ ತೋಂಟಂಗಳೊಳ್ ಬಹುವಿರೋಧಾಮಳಂ ಪೆರ್ಗಿಱ ಗಳೊಳ್ . . . ಅಲ್ಲದೆ ಪೆಱವೆಡೆಯೊಳಿಲ್ಲ (ವರ್ಧಮಾ. ೧-೪೫ ವ). ೩. ತಲೆಗೆ ಸುತ್ತುವ ಬಟ್ಟೆ ; ರುಮಾಲು, ಪೇಟ ಇತ್ಯಾದಿ : ನಾನು ಪರಿಷೆಗೆ ಬಂದು ತಲೆಯ ವೇಷ್ಟನವನ್ನು ತೆಗೆದರೆ ಅದನ್ನು ನಾನು ಶಿರಸಾ ಮಾಡಿದ ಅಭಿವಾದನವೆಂದು ಸ್ವೀಕರಿಸಬೇಕು (ಬುದ್ಧಪ. ೧೪೯). ೪. ಕಿರೀಟ ; ಮುಕುಟ. ೫. [ನಾಟ್ಯ] ಹತ್ತೊಂಬತ್ತು ಬಗೆಯ ದೇಶೀಯ ಆಕಾಶಚಾರಿಗಳಲ್ಲಿ ಒಂದು ; IP "ಒಂದು ಕಾಲನ್ನು ಸಮನಾಗಿರಿಸಿ ಇನ್ನೊಂದು ಕಾಲಿಂದ ಅದನ್ನು ಸುತ್ತುವುದು" (ಲಾಸ್ಯರಂ. ೩.೨೪ ಗದ್ಯಾನುವಾದ) : ನಿಂದ ಪದವೊಂದನುೞಿ ಮತ್ತೊಂದು ಪದಂ ಸುತ್ತಿ ತೋಱಿ ವೇಷ್ಟನಮೆನಿಕುಂ (ಲಾಸ್ಯರಂ. ೬-೯೮). [ಸಂ.]

**ವೇಷ್ಟಿ** (ನಾ). ಸೊಂಟಕ್ಕೆ ಸುತ್ತುವ ವಸ್ತ್ರ ; ಧೋತ್ರ ; ದಟ್ಟಿ : ಪುಲಿದೊವಲ್ ಗಜಚರ್ಮ ಉಟ್ಟ ಹೊದೆದ ವೇಷ್ಟಿಗಳಾಗೆ (ನಂಬರ. ೬-೧೯) ; ಕುಪ್ಪಸದ ಕಣ ಸಹಿತ ಒಂದು ಶೀರೆ, ಒಂದು ಜೋಡಿ ವೇಷ್ಟಿ, ನಗದಿಯಿಂದ ನಾಲ್ಕು ರೂಪಾಯಿ ಕೈಗೆ ಹಾಕಿದಳು (ವಾಗ್ದೇವಿ. ೧೫೭).
[< ಸಂ. ವೇಷ್ಟ./ ತಮಿ. ತುಳು. ವೇಷ್ಟಿ ; ತೆಲು. ವೇಷ್ಟುವ./ ಮರಾ. ವೇಷ್ಟೀ]

**ವೇಷ್ಟಿತ** (ಕ್ರಿ). ೧. ಸುತ್ತುವರಿದ ; ಆವರಿಸಿದ : ಜಲಧಿವೇಷ್ಟಿತಸಕಲವಸುಧಾವಲಯ ವನು ಬಹುಪುಣ್ಯಫಲತೆಯಲಲಘುಮಹಿಮೆಯಲಾಳಿ ಭುವನಖ್ಯಾತನೆನಿಸಿದನು (ತಿಮ್ಮಅ. ೧-೧೨೦). ೨. ಉಡಿಸಿದ ; ತೊಡಿಸಿದ. ೩. ಪ್ರತಿಬಂಧಿಸಿದ ; ತಡೆಗಟ್ಟಿದ.

(ನಾ). ೪. ಸುತ್ತುವರಿದುದು : "ನಿವೃತಂ, ವೇಷ್ಟಿತಂ, ಪರಿವಿಷ್ಟಂ, ವಳಯಿತಂ, ಪರಿಕ್ಷಿಪ್ತಂ – ಈ ೫ ಸುತ್ತಲ್ಪಟ್ಟುದು" (ಹಲಾಯು. ೧೧೮-೨೭). ೫. [ಕಾಮಶಾ] ಒಂದು ಬಗೆಯ ರತಿಕ್ರೀಡೆ : ಸ್ತ್ರೀ ಮೆಲ್ಲನೆ . . . ಹಿಂದಣ ಕರಣಮನೆ ಒಂದೊಂದು ತೊಡೆಗಳನೊಂದೊಂದು ಕೈಗಳಿಂ ಪಲ್ಲಟದಿಂದೊತ್ತಿ ರಮಿಸಲ್ಕೆ ವೇಷ್ಟಿತಮೆಂಬ ಕರಣಂ (ಕಾಮಶಾ. ೨೩೫). [ಸಂ.]

**ವೇಷ್ಟಿಮ** (ನಾ). [ನಾಟ್ಯ] ರಂಗಸ್ಥಳದಲ್ಲಿ ಬಳಸಲಾಗುವ ವಾಹನ, ಧ್ವಜ, ಕವಚ ಇತ್ಯಾದಿ ಪರಿಕರ : ಸಂಧಿಮ, ವ್ಯಾಜಿಮ, ವೇಷ್ಟಿಮ ಎಂದು ವರ್ಣಿತವಾಗಿರುವ . . . ಕೃತಕವಾದ ರಂಗವಸ್ತುಗಳಿದ್ದರೂ (ಸಂನಾಟ. ೨೭). [ಸಂ.]

**ವೇಷ್ಟಿಸು** (ಕ್ರಿ). ೧. ಸುತ್ತುವರಿ ; ಬಳಸು ; ಸುತ್ತುಗಟ್ಟು : ಹುತವಹತತಿಯಿಂ ವೇಷ್ಟಿಸಿರ್ದಧ್ವರಂ . . . ಎಂಬಂದದಿಂ ಕಣ್ಗೊಳಿಸುತ್ತಂ ಯೋಗಿವೃಂದಾರಕರ ನಡುವೆ ಚಾಬಾಲಿಯೋಗೀಂದ್ರನಿರ್ದಂ (ಕಾದಂಪೂ. ೨೩೦) ; ಅಂಬುಜನಾಭ ನಮ್ಮವಯವಂಗಳ ನೂರ್ಮಿಯೆ ನಿನ್ನ . . . ಕೌಸ್ತುಭವಿಭೂಷಣದೀಧಿತಿ ವೇಷ್ಟಿಸಿತ್ತೊ ಪೀತಾಂಬರಕಾಂತಿ ಸುತ್ತಿದುದೊ (ಜಗವಿ. ೧೮-೪) ; ಶ್ರೀಕರದಿ ಸಪ್ತಾಬ್ಧಿ ವೇಷ್ಟಿಸಿರೆ ಲವಣರತ್ನಾಕರಂ ಮೊದಲ ಜಂಬುದ್ವೀಪಮಂ ಬಳಸಿ ರಾಮಣೀಯಕಮಾದುದು (ಚಬಪು. ೨-೨). ೨. ಅಳವಡಿಸು ; ಹೊಂದಿಸು : ಮನೋಜಗಜಕುಂಭದೊಳ್ ನಕ್ಷತ್ರಮಾಲೆಯಂ ಸುತ್ತುವಂತೆ ರತ್ನರಶನಾ ಸೂತ್ರಮಂ ವೃತ್ತಕಟಿಯೊಳ್ ವೇಷ್ಟಿಸಿಯುಂ (ಚಂದ್ರಪ್ರ. ೬-೬೩ ವ). [ವೇಷ್ಟನ + -ಇಸು$_3$]

**ವೇಸ** (ನಾ). ವೇಷ;ಸೋಗು: ವೇಷ-ವೇಸ, ಶೇಷ – ಸೇಸ (ಶಮದ. ೨೫೩ ಪ್ರಯೋ); ವೇಷ- ವೇಸ, ದೋಷ – ದೋಸ (ಶಬ್ದಾನು. ೧೩೮ ಪ್ರಯೋ). [< ಸಂ. ವೇಷ]

**ವೇಸನೆ** (ನಾ). (?) : ತಮುಸಿ ಮೂಱ ದಿವಸಂ ವೇಸನೆ ಈ xxx ರೆ ಉಟ್ಟುದು . . . ಪೋಪ್ಪನ್ನು (ಎಕ. III, ಮೈಸೂರು. ೫೫-೧೧ ; 8ನೆಯ ಶತ). [?]

**ವೇಸರ$_1$** (ನಾ). [ವಾಸ್ತು] ಭಾರತೀಯ ವಾಸ್ತುಶಿಲ್ಪದ ನಾಗರ, ದ್ರಾವಿಡ ಮತ್ತು ವೇಸರಗಳೆಂಬ ಮೂರುಪ್ರಭೇದಗಳಲ್ಲಿ ಒಂದು : ಚಾಲುಕ್ಯರ ವಾಸ್ತುಶಿಲ್ಪದಲ್ಲಿ ನಾಗರ ಮತ್ತು ದ್ರಾವಿಡಸಂಪ್ರದಾಯಗಳೆರಡನ್ನೂ ಸೇರಿಸಿಕೊಂಡಿರುವುದ ರಿಂದ ಇದನ್ನೇ ವೇಸರವೆಂದು ಹೇಳಬಹುದು (ಭಾರದ. ೫೦೨) ; ದೇವಾಲಯವು ವೃತ್ತಾಕಾರವಾದುದು "ವೇಸರ"ವೆಂದೂ ಶಾಸ್ತ್ರಗಳಲ್ಲಿ ಹೇಳಿದೆ (ಮೈವಾಸ್ತು. ೨೮); ಶಿಲ್ಪಶಾಸ್ತ್ರಗಳಲ್ಲಿ ಭಾರತೀಯಶಿಲ್ಪವನ್ನು ನಾಗರ, ದ್ರಾವಿಡ, ವೇಸರ ಎಂಬುದಾಗಿ ವಿಭಜಿಸಿ . . . ಕಾವೇರಿಗೆ ದಕ್ಷಿಣದಲ್ಲಿ ದ್ರಾವಿಡ, ಮಧ್ಯದಲ್ಲಿ ವೇಸರರೀತಿಗಳಿವೆಯೆಂದು ಹೇಳಿದೆ (ಹೊಯ್ಸವಾ. ೧). [ದೇ. ‖ ತಮಿ. ವೇಚರಮ್]

**ವೇಸರ$_2$** (ನಾ). ಕತ್ತೆ ಮತ್ತು ಕುದುರೆಗಳ ಕೂಟದಿಂದ ಹುಟ್ಟುವ ಒಂದು ಬಗೆಯ ಪ್ರಾಣಿ ; ಹೇಸರಗತ್ತೆ : ಕರ್ತಾರನ ಪೂಜಿಸಿ ಕು [ಚ್ಚಿ]ತ ದೈವಕ್ಕೆಱಗುವರು ಕತ್ತೆ ಕುದುರೆಗ ಹುಟ್ಟಿದ ವೇ[ಪಾಠಾಂ. ಹೇ]ಸರನಂತೆ (ಬಸವ. ೬೧೭) ; ಆಸೋದಿಗಳು ನವರತ್ನಸುವರ್ಣವ ವೇಸರದಂತೆ ಹೊತ್ತಿಹರು (ಮೋಹತ. ೫-೫೭). [ಸಂ.]

**ವೇಸರಗತ್ತೆ** 'ವೇಸರಗಟ್ಟೆ' ನೋ.

**ವೇಸರಗಟ್ಟೆ, ವೇಸರಗತ್ತೆ** (ನಾ). ಹೇಸರಗತ್ತೆ : ಕನಕಂ ವೇಸರಗಟ್ಟೆ ಭೂಮಿ ಸುಭಗತ್ವಂ ಯುಕ್ತಿ ಮಂತ್ರಜ್ಞಮೆಂಬಿನಿತಕ್ಕುಂ . . . ದಶೋಕ್ತ್ಯಾರೋಹಗೇಹಂಗಳೊಳ್ (ಜಾತತಿ. ೯-೨೩). **ವೇಸರಗತ್ತೆ** : "ಚಕ್ರಿಪತಿ ವಾಜಿತರಮೆನಲು ವೇ[ಪಾಠಾಂ. ಹೇ] ಸರಗತ್ತೆಯಕ್ಕು" (ಮಂಗರಾ. ೫೫-೯). [ವೇಸರ$_2$ + ಕಟ್ಟೆ]

**ವೇಸರಮಾರ್ಗ** (ನಾ). [ವಾಸ್ತು] ವಾಸ್ತುಶಿಲ್ಪದ ಮೂರುರೀತಿಗಳಲ್ಲಿ ಒಂದಾದ ವೇಸರಶೈಲಿ : ಪುರಿಯಲ್ಲಿ ಪ್ರಸಿದ್ಧ ಜಗನ್ನಾಥದೇವಾಲಯವು ಉತ್ತರಹಿಂದೂಸ್ಥಾನದಲ್ಲಿ ಪ್ರಚಾರದಲ್ಲಿರುವ 'ವೇಸರ' ಮಾರ್ಗವನ್ನು ತೋರಿಸುವುದು (ಬಾಲಪ್ರ. III, ೧೭೨೦). [ವೇಸರ$_1$ + ಮಾರ್ಗ]

**ವೇಸರಶಿಲ್ಪ** (ನಾ). [ವಾಸ್ತು] ವೇಸರಮಾರ್ಗದ ಶಿಲ್ಪಶೈಲಿ : ಬಂಗಾಳವು ತನ್ನದೊಂದು ವಿಜಾತೀಯವಾದ ಶಿಲ್ಪಶೈಲಿಯನ್ನು ರಚಿಸಿಕೊಂಡಿತು . . . ಇದೇ ವೇಸರಶಿಲ್ಪ ಎನಿಸುವುದು (ಬಾಲಪ್ರ. III, ೧೭೨೪). [ವೇಸರ$_1$ + ಶಿಲ್ಪ]

**ವೇಸರಿ** (ನಾ). ಹೆಣ್ಣು ಹೇಸರಗತ್ತೆ : ವೇಸರಿಯ ನೆರವಿಯೊಳ್ ಬರ್ಪ ದೇಶಿ ಕುತಪವಿತತಿಯುಂ (ಚಂದ್ರಪ್ರ. ೬-೮೦ ವ). [ಸಂ. ವೇಸರೀ]

**ವೇಸರಿಗಟ್ಟೆ** (ನಾ). = ವೇಸರಿ : ವೇಸರಿಗಟ್ಟೆ [ಪಾಠಾಂ. ನಡೆಗತ್ತೆ, ನಡೆಯ ಕಳ್ತೆ, ನಿಡಿಯಕಳ್ತೆ]ಗಳುಂ ಪಿಡಿಗಳುಂ ಸಿಬಿಗೆಗಳುಮನೇಱ ಸೀಗುರಿಗಳುಮಂ ಕೊಡೆಗಳುಮಂ ಪಿಡಿಯಿಸಿ . . . ವಿದ್ಯಾಧರಿಯರ್ಕಳ್ ಬರ್ಪಂತೆ ಬಂದು (ವಡ್ಡಾರಾ. ೮೦-೧೧). [ವೇಸರಿ + ಕಟ್ಟೆ]

**ವೇಸವಾರ** (ನಾ). (ಧನಿಯಾ, ಮೆಣಸು, ಶುಂಠಿ ಮುಂತಾದ ಮಸಾಲೆಪದಾರ್ಥ ಗಳಿಂದ ತಯಾರಿಸುವ) ಒಂದು ಬಗೆಯ ವ್ಯಂಜನಪದಾರ್ಥ ; ಮೇಲೋಗರ : "ವೇಸ[ಪಾಠಾಂ. ಶ]ವಾರ, ಉಪಸ್ಕರಂ– ಈ ೨ ಊಟದ ಪರಿಕಾರಂ" (ಹಲಾಯು. ೫೩-೧೬೬); ವೇಸವಾರ (ಇಂಗು, ಶುಂಠಿ . . . ಮೊದಲಾದವುಗಳಿಂದ ಸಂಸ್ಕೃತವಾದ ಜಜ್ಜಿದ ಮಾಂಸ)ವು ಜಡ (ಅಷ್ಟಾಂಗ. ೧೨೧-೬೯ ಟೀಕೆ). [ಸಂ.]

**ವೇಸಿ** 'ವೇಶಿ' ನೋ.

**ವೇಹತ್ತು** (ನಾ). ೧. ಗರ್ಭಧಾರಣೆ ಮಾಡಿದ ಹಸು ; ಗಬ್ಬದ ಹಸು : "ವೇಹತ್, ವೃಷಭೋಪಗತಾ — ಈ ೨ ಕಟ್ಟಿದಾವು" (ಹಲಾಯು. ೪೫-೧೧೪). ೨. ಸತ್ತ ಕರುವನ್ನು ಹಾಕಿದ ಹಸು : "ವೇಹತ್ — ಗರ್ಭೋಪಘಾತಿನೀ — ೨ ಸತ್ತಕರುವನ್ನು ಈತ ಆಕಳು" (ಸಿದ್ಧಾಂತಿ. ೨೯೫). ೩. ಗೊಡ್ಡುಹಸು ; ಬಂಜೆಹಸು : "ತನೆ ಮಗು ಟ್ಟುದು ವೇಹತ್ತೆಳತನ್ನೆ ತಾಂ ಪ್ರಷ್ಠೌಹಿ ಬಂಜೆ ವಶೆಯೆನೆ ಪಡೆಗುಂ" (ವಸ್ತುಕೋ. ೯೦-೮). [ಸಂ. ವೇಹತ್]

**ವೇಹಿ** (ನಾ). ಬೆದೆಗೆ ಬಂದ ಆಕಳು : "ವೇ [ಪಾಠಾಂ. ನೇ]ಹಿಯೆನೆ ಸಂಭೋಗದಾವು" (ಮಂಗರಾ. ೫೪-೩). [< ಸಂ. ವೇಹತ್]

**ವೇಳ** (ನಾ). ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದ ವ್ಯಕ್ತಿ : ತಂಕಣ ಐಯಾವಳೆಯಾದ ಆಲೂರ ವೇಳರು ಕೋವರು ಕುಣಿಂದರು ನಲ್ಗೊಡೆಯರು . . . ಬಸದಿಯ ಜೀರ್ನೋದ್ಧರಣವಂ ಮಾಡಿಸಿ (ಎಕ. IV (R), ಚಾಮರಾ. ೧೯೫-೯ ; 1278). 'ವೇಳಕಾಱ' ಪರಾ. [ದೇ. ‖ ತಮಿ. ವೇಳನ್, ವೇಳಾನ್]

**ವೇಳಕಾಱ, ವೇಳೆಕಾಱ** (ನಾ). = ವೇಳ : ಗಾತ್ರಿಗರುಂ ವೇಳಕಾಱರುಂ . . . ಗಾವುಂಡಸ್ವಾಮಿಗಳುಮಯ್ಯಾವೊಳೆಪುರಪರಮೇಶ್ವರರುಮಪ್ಪ ಶ್ರೀಮದಯ್ಯೂರ್ವ್ವರ ವಿಖ್ಯಾತಿಯೆನ್ತೆಂದಡೆ (ಸೌಇಇ. IX-i, ೧೧೮-೫೫ ; 1057). **ವೇಳೆಕಾಱ** : ಇವರಲ್ಲಿ ಮುಮ್ಮುರಿದಂಡ . . . ವೇಳೆಕಾಱ ಮುಂತಾದ ಪಂಗಡಗಳಿದ್ದುವು . . . ವೇಳೆಕಾಱ ಎಂಬುದು ಸಮುದ್ರವ್ಯಾಪಾರದೊಡನೆ ಸಂಬಂಧವಿರಿಸಿಕೊಂಡವನನ್ನು ಸೂಚಿಸುವುದೆ? (ವೇಲಾ = ಸಮುದ್ರದ ಅಂಚು) (ಕಶಾಅ. ೩೬೦). [ವೇಳ + -ಕಾಱ]

**ವೇಳಾಚರ** (ನಾ). ಸಮಯವನ್ನು ತಿಳಿಸುವ ದೂತ : ಸಮೀರಂ ಸುಳಿದುದು ಬೆಳಗಪ್ಪುದನೊಲ್ದಿಳೆಯರಸಂಗ್ಱದಿ ಪೇಳ್ವ ವೇಳಾಚರನಂತೆ (ರಾಜಶೇ. ೧೧-೧೯೨). [ಸಂ. ವೇಲಾಚರ]

**ವೇಳಾಪಟ್ಟಿ** (ನಾ). (ತರಗತಿ, ವಾಹನನಿಲ್ದಾಣ ಇತ್ಯಾದಿ ಸ್ಥಳಗಳಲ್ಲಿ) ಕೆಲಸದ ನಿರ್ದಿಷ್ಟಸಮಯವನ್ನು ಸೂಚಿಸುವ ಪಟ್ಟಿ, — ಯಾದಿ :ತರಗತಿಯಲ್ಲಿ ವೇಳಾಪಟ್ಟಿಯಿಲ್ಲ (ಕಾವೇರಿ. ೧೧೩). [(ಸಂ. ವೇಲಾ) + ಪಟ್ಟಿ]

**ವೇಳಾಪತ್ರಿಕೆ** (ನಾ). = ವೇಳಾಪಟ್ಟಿ : ಶಾಲೆಗಳಲ್ಲಿ ವೇಳಾಪತ್ರಿಕೆಯನ್ನು ಎಚ್ಚರಿಕೆಯಿಂದ ಏರ್ಪಡಿಸಬೇಕು (ಶಿಕ್ಷದ. ೯೮); ವಸಂತ ಹತ್ತಿರದ ಗೋಡೆಯ ಮೇಲೆ ಅಂಟಿಸಿದ ವೇಳಾಪತ್ರಿಕೆಯನ್ನು ನೋಡಿಕೊಂಡು ಬಂದ (ಕಮನೆ. ೧). [ಸಂ. ವೇಲಾಪತ್ರಿಕಾ]

**ವೇಳಾಯಿತ** (ನಾ). ಸಂಕಟದ ಸಮಯಕ್ಕೆ ಒದಗುವವನು : ನಿಮಗಿನ್ನರಸ ವೇಳಾ ಯಿತರು ವೆಗ್ಗಳ ದೈತ್ಯಭಟರಲ್ಲ (ಕುವ್ಯಾಅ. ೨೧-೬೭). [← ಮರಾ. ವೇಳಾಯಿತ, ವೇಳಾಈತ]

**ವೇಳಾವನ** 'ವೇಲಾವನ' ನೋ.

**ವೇಳಾವಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ವೇ[ಪಾಠಾಂ.ಪಾ]ಳಾ ವಳಿಯನೊಲವಿಂ ಪ್ರೌಢೆ ಪಾಡುತ್ತಮಿರ್ದಳ್ (ಲೀಲಾವ. ೨-೩೦); ಕೌಶಿಕೆ ವೇಳಾವಳಿ ಶುದ್ಧಾವಳಿ . . . ಸಯಸೋಧರರೆಯೆಂಬ ಮೂವತ್ತುನಾಲ್ಕು ಭಾಷಾಂಗದಿಂದಾದ ರಾಗಂಗಳು (ವಿವೇಕ. ೧೮೪). [ಸಂ. ವೇಲಾವಲೀ]

**ವೇಳಾವುಳ** (ಗು). ಸಮುದ್ರದ ದಂಡೆಯಲ್ಲಿರುವ ; ಸಮುದ್ರತೀರದ:

ಭಗವತೀವರಪ್ರಸಾದಂ ದ್ವಾತ್ರಿಂಸ ವೇಳಾವುಳ ಅಷ್ಟಾದಸಪಟ್ಟಣಂ ಚೌಸಷ್ಟಿಯೋಗಪೀಠಂ ಅಱುವತ್ತನಾಲ್ಕು ಘಟಿಕಸ್ಥಾನಂ (ಕ೯. IV. ೫೫-೭ ; 1000 ?). [⟵ ಮರಾ. ವೇಲಾಉಳ]

**ವೇಳಾಳು** 'ವೇಳೆಯಾಳು' ನೋ.

**ವೇಳುವಾಯ್** (ನಾ). ಒಂದು ಊರಿನ ಹೆಸರು : ಸಾಱಿದ ಮಹಾಜನಕ್ಕೆ ಎರಡು ಸಾಳೆ . . . ವೇಳುವಾಯಾ ಮಹಾಜನಕ್ಕೆ ಎರಡು ಸಾಲೆ ಆಚನ್ದ್ರತಾರಕಂ ಪತ್ತಿಳದಾ ಮಹಾಜನಕ್ಕೆ ಸಾಲೆ (ಎಕ. VII. ಶಿಕಾರಿ. ೭೫-೧೭ ; ಸು. 890). [?]

**ವೇಳೆ$_1$** (ನಾ). ೧. ಒಡೆಯನು ಮರಣಹೊಂದಿದರೆ ಅವನ ಆಶ್ರಿತ ಅಥವಾ ಸೇವಕನು ತಾನೂ ಸಾಯುವುದಾಗಿ ಮಾಡುವ ಪ್ರತಿಜ್ಞೆ ; ವೇಳೆವಾಳಿತನ : ವೇಳೆಗೊಂಡಾತಂ ಸಾವಿಗಂಜುವೊಡಂ ತಪಂಗೊಂಡಾತನನುಷ್ಠಾನಕ್ಕಂಜುವೊಡಂ ಅದೆಲ್ಲಿಯ ವೇಳೆ ಅದೆಲ್ಲಿಯ ತಪಂ (ಜೀವಸಂ. ೧೬೦-೨೧); ತೊಱೆದಾಳ್ದನೊಡನೆ ಸಾಯದೆ ಪೞಗುಟಿದಿಂ ತೊಱೆದು ಸತ್ತವನ ವೇಳೆ ದಲಾವೞಿಪವದನೆಂಬ ಗಂಡರ್ ತೊಱೆದರ್ ಕಲಿಕುವರಲಕ್ಷ್ಮನೊಡನತಿಸುಭಟರ್ (ಎಕ. V. ಬೇಲೂರು. ೧೧೨-೯೬ ; 1220 ?). ೨. ಒಡೆಯನು ಸತ್ತರೆ ತಾನೂ ಸಾಯುವೆನೆಂದು ಪ್ರತಿಜ್ಞೆ ಮಾಡಿರುವ ವ್ಯಕ್ತಿ : ಜಂಗಮದ ವೇಳೆ[ಪಾಠಾಂ. ಆಳು] ಜಂಗಮದ ಕಿಂಕರನೆಂಬ ಜಂಗಮಪ್ರಾಣ ಜಂಗಮದ ಸಂಪದನೆಂಬ ಬಿರುದೆತ್ತಿ ಕಹಳೆಗಳು ದೆಸೆದೆಸೆಗೆ ಕರೆವುತಿರೆ (ಬಸರ. ೧೧-೧೩೯); ಬಂದೆಲ್ಲರಲ್ಲಿ ಇಱಿಭಕ್ತರ್ಗೆ ಸುತರಾಗೆ ಇಂದುಶೇಖರನ ಭಕ್ತರ್ಗೆ ವೇಳೆಗಳಾಗೆ (ಇಱಿರ.ದೇ. ೧೧೦-೮). **P** ಇದು 'ವೇಳೆವಾಟಿ' ಎಂಬುದರ ಸಂಕ್ಷಿಪ್ತರೂಪ.

[ದೇ. ‖ ತಮಿ. ವೇಲ್ಯೆ = ಕೆಲಸ ; ತೆಲು. ವೇಲ = ದಾಸ್ಯ]

**ವೇಳೆ$_2$** 'ವೇಲೆ' ನೋ.

**ವೇಳೆಕಳೆ** 'ವೇಳೆಗಳೆ' ನೋ.

**ವೇಳೆಕಾಱ** 'ವೇಳಕಾಱ' ನೋ.

**ವೇಳೆಗಳೆ, ವೇಳೆಕಳೆ** (ಕ್ರಿ). (ವ್ಯರ್ಥವಾಗಿ) ಸಮಯವನ್ನು ಕಳೆ; ಕಾಲಹರಣ ಮಾಡು : ನೀನು ಕುಡಿದು ಕೊಡು, ವೇಳೆಗಳೆಯಬೇಡ (ಜಯಂತ. ೨೩೫). **ವೇಳೆಕಳೆ** : ಕಂಡವರ ಬೆನ್ನುಹತ್ತಿ ಹತ್ತುಗಳಿಗೆ ಮೋಜಿನಲ್ಲಿ ವೇಳೆಕಳೆಯುವುದೇ ನನ್ನ ಧ್ಯೇಯವಾಗಿಲ್ಲ (ಕಮುನ. ೬ [ವೇಳೆ$_2$ (= ವೇಲೆ) + ಕಳೆ$_1$]

**ವೇಳೆಗಾಣ್** (ಕ್ರಿ). ಸಮುದ್ರದ ತೀರವನ್ನು ಸೇರು, — ಆಶ್ರಯಿಸು : ಅಹಿತರೋಡಿ ಸಮುದ್ರದ ವೇಳೆಗಂಡು ತಾವನುಮಿಸಿ ವೇಳೆಗೊಣ್ಡು ಸುಖಮಿರ್ಪ್ಪರಿಂದೇನದಟಂಗೆ ನೋಂತನೊ (ಎಕ. VII. ಶಿಕಾರಿ. ೧೯೭-೪೭ ; 1182 ?). [ವೇಳೆ$_2$ (= ವೇಲೆ) + ಕಾಣ್]

**ವೇಳೆಗಾಯ್** (ಕ್ರಿ). ಸಮಯವನ್ನು ಕಾಯು, — ನಿರೀಕ್ಷಿಸು : ನಿನಗೆಂದುಂ ತಲೆವಾಗದ ನಿನಗಳ್ಕದ ನಿನ್ನ ವೇಳೆಗಾಯದ ಪಿರಿದುಂ ನಿನಗೆ ಬೆಸಕೆಯ್ಯ ಬಾಱದ ನಿನಗೋಡದ ಪಗೆವರೆಂಬರಿಲ್ಲಿಂದುವರಂ (ಚಬ್ಬಿಕಾ. ೧೪೪).

[ವೇಳೆ$_2$ (= ವೇಲೆ) + ಕಾಯ್$_1$]

**ವೇಳೆಗೊಡು** (ಕ್ರಿ). (?) : ಉಪಾಯದಿಂದ ದಳವಾಯ್ತನದ ಉಪಧಾಶುದ್ಧತೆಯನ್ನು ಹಳಿಯಪಯ್ಯದವರ ಮಹಾಸಭೆಯು ಒರೆಗಲ್ಲ ವೇಳೆಗೊಟ್ಟಿರಬಾರದೆಂದೇನು? (ಮಂತ್ರಶ. ೮೭-೨). [ವೇಳೆ$_1$ + ಕೊಡು$_1$]

**ವೇಳೆಗೊಳ್$_1$, ವೇಳೆಗೊಳ್ಳು** (ಕ್ರಿ). (ಸೇವಕ ಅಥವಾ ಆಶ್ರಿತನು) ಒಡೆಯನು ಮಡಿದರೆ ತಾನೂ ಮಡಿಯುವುದಾಗಿ ಪ್ರತಿಜ್ಞೆಯನ್ನು ಕೈಗೊಳ್ಳು ; ವೇಳೆವಾಳಿಯಾಗು : ನಾಗತ್ತರನ ಮಗಳ್ ತೊಣ್ಡಬ್ಬೆಯು ಕತ್ತವ್ವ ವೇಳೆಗೊಣ್ಡು ಸತ್ತಂ (ಎಕ. IX. ಬೆಂಗಳೂ. ೮೮-೫ ; ಸು. 900) ; ಮಲ್ಲಿಗೆಗಳ್ ವಸಂತದೊಳ್ ಬಿರಿದೊಡೆ ನಲ್ಲರಂ ನೆನೆದು ನಲ್ಲರ ಮಲ್ಲೆರ್ದೆಗಳ್ ನಿರಂತರಂ ಬಿರಿವುವದೆಂತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ವೇಳೆ[ಪಾಠಾಂ. ಮೇಳ]ಗೊಂಡುದೋ (ಆದಿಪು. ೧೧-೧೦೬) ; (ಪಂಪಭಾ. ೫-೩೩ ನೋ) ; ಅನುಜರ್ ನಾಲ್ವರುಮಂ ಧರ್ಮನಂದನಂ ವೇಳೆಗೊಂಡು ಕಾವಂ (ಪಂಪಭಾ. ೧೩-೧೫) ; "ಸಮಯ ಪ್ರತಿಜ್ಞೆಯನ್ನು ಮಾಡಿ" (ಪಂಪದೀ. ೫೦೫) ; ಮಲಪರ್ಸ್ವರ್ದ್ಧಿಳಿತಿಯಿಂ ಕಣ್ನವಯದೊಳು X ಣ್ಣತ್ತಿರ್ಯಿಂ ವೇಳೆಗೊಣ್ಡರ್ (ಸೌಇಇ. XX. ೪೯-೨೪ ; 1076 ?) ; ವೇಳೆಗೊಂಡಾತಂ ಸಾವಿಗಂಜುವೊಡಂ ತಪಂಗೊಂಡಾತನನುಷ್ಠಾನಕ್ಕಂಜುವೊಡಂ ಅದೆಲ್ಲಿಯ ವೇಳೆ ಅದೆಲ್ಲಿಯ ತಪಂ (ಜೀವಸಂ. ೧೬೦-೨೦ ವ). **ವೇಳೆಗೊಳ್ಳು** : ಜಲಕ್ಕನೀಗಳರಿದೆಂ ಕವಿಯೆಲ್ಲಿಯೊ ಪಾಡುತಿರ್ಪ ಪಾಡಿನ ಪದಪಿಂತಿದ್ದೈ; ಕವಿಗೆ ಧನ್ಯನೆ ನಾನುಮ ವೇಳೆಗೊಳ್ಳನೇ (ಸಂಸಪ. ೨೦-೬).

[ವೇಳೆ$_1$ + ಕೊಳ್$_1$]

**ವೇಳೆಗೊಳ್$_2$** (ಕ್ರಿ). ಸಮುದ್ರತೀರದಲ್ಲಿ ಆಶ್ರಯವನ್ನು ಹೊಂದು ; ಸಮುದ್ರತೀರವನ್ನು ಸೇರು : ತುಳುವನಳವುಗೆಟ್ಟೋಡಿದಂ . . . ಜಳಧಿನಿಕಟಮಂ ಚೋಳಿಕಂ ವೇಳೆಗೊಂಡಂ (ಎಕ. V. ಅರಸೀ. ೬೨-೩೦; 1177).

[ವೇಳೆ$_2$ (= ವೇಲೆ) + ಕೊಳ್$_1$]

**ವೇಳೆಗೊಳ್ಳು** 'ವೇಳೆಗೊಳ್$_1$' ನೋ.

**ವೇಳೆತನ** (ನಾ). ಆಳುತನ ; ಸೇವಾವೃತ್ತಿ : ತಾಂ ಕೊಲಲಾಱದೆಯುಂ ಮುಳಿಸಿಂ ಕೌರವಬಲಮನಂದು ವೇ[ಪಾಠಾಂ. ವೆ]ಳೆತನಂಗೊಂಡುಂ ಕೌಂತೇಯರಿನಾ ಬಲಮಂ ಕೊಲಿಸಿದನಾಪ್ತನಪ್ಪನೆನಲಾಗಱಿವಂ (ಸಮಪ. ೮-೧೪೨); ಆ ವಸತಿಯ ಸಿರಿಯಂ ಜಿನದೇವಂಗಾಳಾಗಿ ವೇಳೆತನಮಂ ತೋಱಿಲ್ ಕಾವನೆ ಋತುತತಿಸಹಿತಂ ಕಾವಂ ಕೆಯ್ಯಿಂದ ಮಿಱಿಪನಂಬಂ ಬಿಲ್ಲಂ (ಲೀಲಾವ. ೮-೭೯) ; ರಮಣೆಯ ಮುಖಕ್ಕೆ ವೇಳೆತನಮನಾಂತ ಸರೋಜದಂತೆ ತತ್ತಾಂಬೂಳಕ್ಕಮರವಧುವಾಂಪ ಕಾಂಚನಕಮಳಾಕೃತಿಯೆನಿಪ ಡವಕೆ ಪಡೆದುದು ಚೆಲ್ವಂ (ಚಂದ್ರಪ್ರ. ೧೧-೧೨೮). [ವೇಳೆ$_1$ + - ತನ]

**ವೇಳೆಯಾಳು, ವೇಳಾಳು** (ನಾ). = ವೇಳೆ$_1$ ೨ : ಅನ್ಯದೈವದ ಮನೆಗದೇತಕೆ ಬಾರರವರೆಂದೆನಲಹುದೆ ಪತಿ ಜೋಳವಾಳಿಗೆ ವೇಳೆಯಾಳಿಗಿದು[ಪಾಠಾಂ. ಮೇಳವಾಗಿರ್ದು, ವೇಳೆಯೊಳಿನಿತು, ವೇಳವಾಗಿನಿತು] ಕನಲಲಹುದೇ (ಬಸಪು. ೫೩-೩೫). **ವೇಳಾಳು** : ಉಳಿದ ಕ್ಷ್ಮಾಪಾಳರೆಲ್ಲಾಗಳುಂ ವೇಳಾಳಾಗಿಹರೆಂದಡೇಂ ಪೊಗಳ್ವೆನಾ ಭೂಪ ಪ್ರತಾಪೋಗ್ರಮಂ (ಎಕ. XI. ದಾವಣ. ೫೯-೨೮ ; 1280). [ವೇಳೆ$_1$ + ಆಳು$_3$ (< ಆಳ್$_3$)]

**ವೇಳೆವಡಿಚ, ಬೆಳವಡಿಚ, ಬೆಳಾವಡಿಚ** (ನಾ). = ವೇಳೆ$_1$ ೨ : ಮುನ್ನೆಗಟ್ಟ ವೇಳೆ ವಡಿಚರುಂ . . . ನಿನ್ನನ್ನರೆ ನಿನಗೆ ನೀನೆ ದೊರೆಯೈ (ಇಅ. XX. ೭೦-೧೧ ;ಸು. ೯ನೆಯ ಶತ); ಉರಿವ ಕೊ(ಕೆ)ಂಡಕ್ಕೆ ವಂದ ವೇಳೆವಡಿಚಂಗಂ [ಪಾಠಾಂ. ವೇಳವಡಿ, ವೇಳೆವಡಿವಂ, ವೇಳೆವಡಚಗಂ, ವೇಳೆವಡಚಂ] ಮನುಷ್ಯಭವಕ್ಕೆ ಬಂದ ಜೀವಕ್ಕಂ ಗತಿಯಂ ಬಗೆಯಲಲ್ಲದೆ ಪೆಱತು ಮೋಹದೊಳ್ ನೆಗಟಲೆಡೆಯಿಲ್ಲಂ (ಜೀವಸಂ. ೧೦ -೨೦); ವೇಳೆವಡಿಚ ಎನ್ನುವುದರಲ್ಲಿನ 'ಡ' ಕಾರವು ತೆಲುಗಿನ 'ಪಾಡಿ'ಯಿಂದ ಬಂದಿರಬೇಕು (ಕಶಾಅ. ೩೧೨). **ಬೆಳವಡಿಚ** : ಆತನ ಬೆಳವಡಿಚ ಅಲ್ಲಿಗಂ ಕೀೞ್ಗುಣ್ಣೆಯಾಗಿ (ಎಕ. XI. ದಾವಣ. ೧೧೯-೬ ;930). **ಬೆಳಾವಡಿಚ** : ರಟ್ಟಿಯ [ಣ್ಣ] XXX [ಸಂ] ಬೆಳಾ [ವ]ಡಿಚ ಮೇಟಿಮಡುವಿ XX ಟ್ಟು (ಸೌಇಇ. XI-i. ೧೧-೧೫ ; 865). **P "ವೇಳೆವಾಟಿ < ವೇಳೆವಾಡಿ, ವೇಳೆವಡಿ ಎಂಬುದಕ್ಕೆ ಸಮಯಪಾಲನಮಾಡುವ ಕ್ರಮ ಅಥವಾ ಧರ್ಮ ಎಂದು ಅರ್ಥವಾಗುತ್ತದೆ. ಅದರಲ್ಲಿ ವ್ಯವಹರಿಸುವವನು 'ವೇಳೆವಡಿಚ'ನೆಂದಾಗುತ್ತದೆ. ಆದ್ದರಿಂದ ಇಲ್ಲಿನ – ಇಚ ಪ್ರತ್ಯಯವನ್ನು ಅಥವಾ –ಚ ಪ್ರತ್ಯಯವನ್ನು –ಇಗ ದ ಅರ್ಥದಲ್ಲಿ ಬಳಸಿರುವುದೆಂದು ಹೇಳಬಹುದು"** (ಪೀಠಿಕೆಗಳು, ಲೇಖನಗಳು. ೮೦೨). [ವೇಳೆವಡಿ$_0$ + - ಇಚ]

**ವೇಳೆವಡಿಯ** (ನಾ). = ವೇಳೆ$_1$ ೨ : ಸ್ವಸ್ತಿ ರಕ್ಕಸನೊಟಮ್ಮಂ ಪಲ್ಲವಾಭರಣಂ ಶ್ರೀಮತ್ ಪಾಳಿಗಜ್ಜೆ ಪೂಣ್ದು ನೆಱಪಿ ಸತ್ತಂ ವೇಳೆವಡಿಯ ಅರಸಿಗನ ಮಯ್ದುನ (ಮೈಆರಿ. ೧೯೩೯, ೪೮-೩ ; 11ನೆಯ ಶತ). [ವೇಳೆವಡಿ$_0$ + - ಅ$_7$]

**ವೇಳೆವಾಳಿ** 'ವೇಳೆವಾಟಿ' ನೋ.

**ವೇಳೆವಾಟಿ, ವೇಳೆವಾಳಿ** (ನಾ). ೧. ಒಡೆಯನು ಮರಣಹೊಂದಿದಾಗ ತಾನೂ ಸಾಯುವೆನೆಂದು ಅವನ ಆಶ್ರಿತನು ಅಥವಾ ಸೇವಕನು ಕೈಗೊಳ್ಳುವ ಪ್ರತಿಜ್ಞೆ, – ಸ್ವೀಕರಿಸುವ ನಿಯಮ : ಪಾರ್ದು ನೆರವಂ ಸಂಗ್ರಾಮದೊಳ್ ಜೋಳವಾಟಿಗೆ ಕೆಯ್ಯಾಂಪಳೆ ವೇಳೆ[ಪಾಠಾಂ. ವೇರೆ]ಪಾಳಿ Eವಾಟಿ3 ವೆನಸುಂ ಮುಯ್ಯಾಂಪ ಸಾಮಂತರಂ ನಗುವಂತಿರ್ದುದು ಸಿಂಹಚೂಡನ ಶಿರೋಬ್ಜಂ (ಅನಂಪು. ೧೧-೭೬). **ವೇಳೆವಾಳಿ:** ೧. ರಾಹುತಗೌಡ ವೇಳೆವಾಳಿಯಿಂ ತಲೆಗೊಟ್ಟಲ್ಲಿ (ಮೈಆರಿ. ೧೯೩೨, ೩೦-೮ ; 1124) ; ಜೋಳವಾಳಿಯಾನಲ್ಲ ವೇಳೆವಾಳಿಯವ ನಾನಯ್ಯ (ಬಸವ. ೬೯೮) ; ವೇಳೆವಾಳಿಪದ್ಧತಿಯು ಕರ್ನಾಟಕದಲ್ಲಲ್ಲದೆ ತಮಿಳುನಾಡಲ್ಲಿಯೂ . . . ಪ್ರಚಾರದಲ್ಲಿದ್ದಿತು (ಕಶಾಅ. ೩೧೧).

೨. ಒಡೆಯನು ಸತ್ತರೆ ತಾನೂ ಸಾಯುವೆನೆಂದು ಪ್ರತಿಜ್ಞೆ ಮಾಡಿರುವ ವ್ಯಕ್ತಿ : ಸಾಮಾನ್ಯವಾಗಿ ವೇಳೆವಾಳಿಗಳು ಕಿಚ್ಚನ್ನು ಪ್ರವೇಶಿಸಿಯೋ, ಕತ್ತಿಯಿಂದ ಇರಿದುಕೊಂಡೋ ಮಡಿದ ವಿಷಯವನ್ನು ಮೇಲೆ ನೋಡಿದೆವು (ಕಶಾಅ. ೩೯). 'ಜೋಳವಾಳಿ' ಹೋ. [ವೇಳೆ₁ + ಪಾಟ್₂./ ತೆಲು. ವೇಳವಾಳಿ]

**ವೇಙುಪಾವಡೆ** (ನಾ). ಹೊಸಬಟ್ಟೆ ; ನೂತನವಸ್ತ್ರ : ಹೊಳೆವ ಮುತ್ತಿನ ಸತ್ತಿಗೆ ಸಾಲುಗೊಂಡಿಹ ತಳತಳಿಪಾಲವಟ್ಟಿಗಳ ನೆಳಲೊಳು ವೇಙುಪಾವಡೆಯ ಸಂಭ್ರಮ ದಿಂದಲಿಳೆಯಾಣ್ಮ ನಗುತ್ಮೆತಂದ (ಕಂಸವಿ. ೧೨-೨೯). [ವೇಙು (IP ← ತಮಿ. ವೇಙು = ಹೊಸದು) + ಪಾವಡೆ (< ಪಾವುಡ₁)]

**ವೈಕಂಕತ** (ನಾ). ೧. ಒಂದು ಬಗೆಯ ಸಸ್ಯ ; ಹುಳಿಬೇಲ. ೨. ಹುಳಿಬೇಲದ ಮರದಿಂದ ಮಾಡಿದ ಯಾಗದ ಪಾತ್ರೆ : ಶತಜುಹುಗಳಿಂ ವೈಕಂಕತದ ಷಷ್ಟಿಸ್ರುಕ್ಸುವನಿವಹದಿಂದೆ . . . ಮಖಶಾಲೆ ಕಣ್ಸೆಸೆದುದು (ಜೈಮಿಭಾ. ೩೩-೬೮). [ಸಂ.]

**ವೈಕಕ್ಷ** (ನಾ). ೧. (ಯಜ್ಞೋಪವೀತದಂತೆ) ಅಡ್ಡಲಾಗಿ ಧರಿಸುವ (ಹೂವಿನ) ಹಾರ : ಆ ಕುರುತಿಲಕನ ಮೆಯ್ಯೊಳನೇಕಪಯಃಕಣಗಣಂ ಪೊದಟ್ದುವು ಮುಕ್ತಿಶ್ರೀ ಕಾಂತೆಯಿತ್ತ ಮುತ್ತಿನ ವೈಕಕ್ಷದ ತೆಱದಿನಭಿಷವೋತ್ಸವವಿಧಿಯೊಳ್ (ಶಾಂತಿಪು. ೧೦-೪೭). ೨. ಹೊದೆಯುವ ವಸ್ತ್ರ ; ಉತ್ತರೀಯ ; ಮೇಲುಹೊದಿಕೆ : "ವೈಕಕ್ಷಂ [ಪಾಠಾಂ. ಕಕ್ಷ್ಯಂ], ಉತ್ತರಾಸಂಗಃ, ಬೃಹತಿಕಾ – (ಈ ೩) ಉತ್ತರಾಸಂಗಂ" (ಹಲಾಯು. ೬೮-೨೫೬). [ಸಂ.]

**ವೈಕಕ್ಷಕ** (ನಾ). = ವೈಕಕ್ಷ ೧ : "ಜನ್ನವಿರದಂತಿಕ್ಕಿದ ಹೂವಿನ ಮಾಲೆ ವೈಕಕ್ಷಕಮೆಂಬುದು" (ಹಲಾಯು. ೯೧-೩೯೯). [ಸಂ.]

**ವೈಕಟಿಕ** (ನಾ). ರತ್ನಪಡಿವ್ಯಾಪಾರಿ : "ವೈಕಟಿಕಂ ಮಣಿಕಾರಂ" (ವಸ್ತುಕೋ. ೬೫-೭೯). [ಸಂ.]

**ವೈಕರ್ತನ** (ಗು). ೧. ಸೂರ್ಯನಿಗೆ ಸಂಬಂಧಿಸಿದ. (ನಾ). ೨. ಸೂರ್ಯನ ಮಗ ; ಕರ್ಣ : ಕೂರಿ[ಸೆ] ಗುರುಶುಶ್ರೂಷೆಯೊಳಾ ರಾಮನನುಗ್ರಪರಶುಪಾಟಿತರಿಪು ವಂಶಾರಾಮನನಿಷುವಿದ್ಯಾಪಾರಗನೆನಿಸಿದುದು ಬಲ್ಮೆ ವೈಕರ್ತನನಾ (ಪಂಪಭಾ. ೧-೧೦೪); IP "ತನ್ನ ಕರ್ಣಕುಂಡಲಗಳನ್ನೂ ಕವಚವನ್ನೂ ಕತ್ತರಿಸಿ ಕೊಟ್ಟದ್ದರಿಂದ ಕರ್ಣನಿಗೆ ವೈಕರ್ತನ ಎಂಬ ಹೆಸರು" (ಪಂಪವಿ. ೩೮). [ಸಂ.]

**ವೈಕಲ್ಪಿಕ** (ಗು). ೧. ಸಂದೇಹಾಸ್ಪದವಾದ ; ನಿಶ್ಚಿತವಲ್ಲದ. ೨. ಐಚ್ಛಿಕವಾದ : ಪದದಾದಿಯು ವರ್ಣಕ್ಯಾತ್ವದತ್ವದೆಡೆಗೊತ್ವಮುಂ ಪೊದಲ್ದೋತ್ವಮುಮಪ್ಪುದು ವೈಕಲ್ಪಿಕದಿಂ ಶಬ್ದದಾದಿದೀರ್ಘಕ್ಕೆ ಪಿರಿದುಮಕ್ಕುಂ ಹ್ರಸ್ವಂ (ಶಮದ. ೨೭೦). [ಸಂ.]

**ವೈಕಲ್ಪಿತ** (ಗು). = ವೈಕಲ್ಪಿಕ ೨ : ಕೇಶಿರಾಜನು ಕೈ, ಕೌಂಗುಗಳನ್ನು ಕೆಯ್, ಕವುಂಗು — ಎಂದು ಬರೆಯಬಹುದೆಂದು ಹೇಳಿದ್ದರೂ, ಇವೆರಡರಲ್ಲೂ ಮುಖ್ಯ ಮತ್ತು ವೈಕಲ್ಪಿತಪ್ರಯೋಗಗಳಾವುವು ಎಂಬುದನ್ನು ಗಮನಿಸಬೇಕು (ಭಾಷಾಶಾ. ೧೧೧). [ಸಂ.]

**ವೈಕಲ್ಯ** (ನಾ). ೧. ವಿಕಲತೆ ; ನ್ಯೂನತೆ : ಮತಿಯ ಮಗ್ಗಿಸಿದವಗೆ ಮಿಗೆ ವೈಕಲ್ಯ ಮೆತ್ತಣದು (ಗಗತಾ. ೧೬-೫೦) ; ಅಂಗವೈಕಲ್ಯವನ್ನು ನೋಡಿ ನಗಬಾರದು (ಮುಂಬಯಿ. ೪-೩೪). ೨. ಕ್ಷೋಭೆ ; ಕಳವಳ : ಜಾನಕೀಹರಣಂ ಕರ್ಮವಿಪಾಕಮಾರ ಬಗೆಗಂ ವೈಕಲ್ಯಮಂ ತಾರದೇ (ಪಂರಾಮಾ. ೯-೯೮). ೩. ದೋಷ ; ಕಳಂಕ. ೪. ಅಸಾಮರ್ಥ್ಯ ; ಅಶಕ್ತತೆ. ೫. ಅಂಗಹೀನನಾಗಿರುವಿಕೆ. [ಸಂ.]

**ವೈಕಾಂಡ** (ನಾ). ಒಂದು ಬಗೆಯ ಬಾಣ : ನನಗೆ ತಗಲಿದ ಈ ಬಾಣವು ಖುರಪ್ಪವೆ, ವೈಕಾಂಡವೆ, ನಾರಾಚವೆ . . . ಕರವೀರಪತ್ರವೆ? (ಬುದ್ಧಪ. ೮೦). [?]

**ವೈಕಾರ** (ನಾ). ವಿಕಾರ ; ವಿಕೃತಿ : ಏನೇನೋ ವೈಕಾರಗಳು ದಾನವವಾಯುವಿನ ಧರ್ಮ (ಗಗತಾ. ೯-೬೮). [ಸಂ.]

**ವೈಕಾರಕ** (ನಾ). ೧. ಬದಲಾವಣೆ ಮಾಡುವವನು ; ಮಾರ್ಪಾಟುಗೊಳಿಸುವವನು : (೬). ೨. ಕಮ್ಮಾರ ; ಕಬ್ಬಿಣದ ಕೆಲಸಮಾಡುವವನು : "ವೈಕಾರಕಂ [ಪಾಠಾಂ. ದೈತಾರಕಂ] ಕಮ್ಮಱಂ" (ಮಂಗರಾ. ೧೧೧-೧). [< ಸಂ. ವೈಕಾರಿಕ]

**ವೈಕಾರಿಕ** (ಗು). ೧. ವಿಕಾರ ಹೊಂದುವ ; ಬದಲಾಗುವ. (ನಾ). ೨. [ತತ್ತ್ವಶಾ] ಮೂರುಬಗೆಯ ಅಹಂಕಾರತತ್ತ್ವಗಳಲ್ಲಿ ಒಂದು ; ಸಾತ್ತ್ವಿಕಭಾವ : ಜನಿತ ವೈಕಾರಿಕವೆ ಮನವೆಂದೆನಿಪ ಕರಣವು ತೈಜಸವೆ ಕೇಳನಘ ತನ್ಮಾತ್ರೆಗಳು (ಅಮೃತ. ೪-೧೨); ಮಹತ್ತತ್ತ್ವದ ದೆಶೆಯಿಂದ ವೈಕಾರಿಕ, ತೈಜಸ, ತಾಮಸವೆಂಬ ಮೂರುವಿಧವಾದ ಅಹಂಕಾರತತ್ತ್ವವು ಹುಟ್ಟಿತು (ಹಸಾರ. ೩-೧ ಟೀಕು). [ಸಂ.]

**ವೈಕುಂಠ** (ನಾ). ೧. ವಿಷ್ಣುವಿನ ಒಂದು ಹೆಸರು : ವೈಕುಂಠನ ಕಿವಿಯ ಕೊಗ್ಗಿಯಿಂದಂದೊಗೆತಂದಾ ಕೈಟಭನಿವನೆನೆ ನೀರಾಕರದೊಳ್ ನೆಗಟ್ದನತಿಬಳಂ ಪಂಚಜನಂ (ಜಗವಿ. ೭-೧೯) ; ವೈಕುಂಠನಿದಿರಿನೊಳಾರು ದೇವತೆಯೈ (ಕುಮ್ಯಾದ್ರೋ. ೧೦-೩೫). ೨. ಇಂದ್ರ ; ದೇವೇಂದ್ರ. ೩. ವಿಷ್ಣುಲೋಕ ; ಪರಂಧಾಮ : ಶ್ರೀರಂಗಪಟ್ಟಣದ ರಂಗನಾಥಸಾಮಿಯಱಿಕೆಯಾಗಿ ಕೈಲಾಸ ವೈಕುಂಠವಱಿಕೆಯಾಗಿ . . . ಶಿಲಾಶಾಸನವನು ನೆಟಿಕೊಟೆವು (ಎಕ. IV (R), ಪಿರಿಯಾ, ೫೯-೧೭ ; 1529) ; ಇಷ್ಟುದಿನ ಈ ವೈಕುಂಠ ಎಷ್ಟು ದೂರವೊ ಎನ್ನುತಲಿದ್ದೆ (ಕನಕ. ೨೮ ಪಲ್ಲವಿ). ೪. [ಛಂದ] ಲಘುವಿನ ಚಿಹ್ನೆ,— ಸಂಕೇತ : ಮುನ್ನಂ ಭೂಮಿ ದ್ವಂದ್ವಾಕಾಶಂ ಸುರಪುರ ಗಣತತಿಯಿನಿರೆ ಬಱಿಕ್ಕೆನ್ನುತ್ತುಂ ವೈಕುಂಠೇಶಾನರ್ಕರಿಯೊಳೆ ನಿಲೆಯತಿತತಿ [ಪಾಠಾಂ. ಚಕ್ರಧರಂ ಶರ್ವಂ ವಸುವಿ ರಚಿತಮಹಯತಿ] ಲಲಿತಪದೋತ್ಪನ್ನಂ ವೃತ್ತಂ ಭಿನ್ನಾಬ್ಜಾಕ್ಷೀ (ಛಂದೋಂಬು. ೨-೧೮೮). [ಸಂ.]

**ವೈಕುಂಠಪತಿ** (ನಾ). ವೈಕುಂಠದ ಒಡೆಯ ; ವಿಷ್ಣು : ಓಡಿ ಬಾರೈ ವೈಕುಂಠಪತಿ ನಿನ್ನ ನೋಡುವ ಮನದನಿಯೆ (ಪುರಂದ. ೧-೮೪ ಪಲ್ಲವಿ) ; ವಾಣಿಯರಸನ ಪೆತ್ತ ವೈಕುಂಠಪತಿ ನೀನು (ಕನಕ. ೬೭-೨). [ಸಂ.]

**ವೈಕುಂಠಪದ** (ನಾ). ಪರಂಧಾಮ; ಮೋಕ್ಷ; ಮುಕ್ತಿ : ಆವಾವ ಪರಿಯಲ್ಲಿ ಸೇವೆಯ ಮಾಡಲು ಪಾವನ ವೈಕುಂಠಪದವೀವಳೆ (ಪುರಂದ. ೨-೧೬೧-೫). [ಸಂ.]

**ವೈಕುಂಠಯಾತ್ರೆ** (ನಾ). (ಆಲಂ) ಸಾವು ; ಮರಣ : ತಕ್ಕ ಗಿಡದಿಂದ ರುಜೆ ಫಕ್ಕನೆ ಅಡಗಿಹುದು ತಕ್ಕಾದ ಗಿಡನ ಕೊಡಲಱಿಯದನ ಮಾತ್ರ ವೈಕುಂಠಯಾತ್ರೆ (ಸರ್ವಜ್ಞ. ೨೦೨೫). [ಸಂ. ವೈಕುಂಠಯಾತ್ರಾ]

**ವೈಕುಂಠಸಮಾರಾಧನೆ** (ನಾ). ಸತ್ತವ್ಯಕ್ತಿಯ ಆತ್ಮಶಾಂತಿಗಾಗಿ ಹದಿಮೂರನೆಯ ದಿನದಂದು ನಡೆಸುವ ಕಾರ್ಯ : ವೈಕುಂಠಸಮಾರಾಧನೆಯನ್ನು ನಡೆಸೋಕ್ಕೆ ಸಿದ್ಧರಿದ್ದೇವೆ (ಸಂಸ್ಕಾರ. ೨೨). [ಸಂ. ವೈಕುಂಠಸಮಾರಾಧನಾ]

**ವೈಕುಂಠಿ** (ನಾ). ವಿಷ್ಣುಭಕ್ತ ; ವೈಷ್ಣವ : ರಂಗನ ಸಮಯದ ಗುರುವರ ಶೃಂಗಿಗಳೆಸೆದಿರ್ದರಲ್ಲಿ ಶಿಖಿಯಿಂ ಬೋಳಿಂದಂಗಯಿಸಿ ಱಚ್ಚೆಯ ವಾದಂಗಳನೆಸಗಲ್ಕೆ ವೀರವೈಕುಂಠಿಗಳುಂ (ಹಮ್ಮಿರ. ೭-೨೦). [ಸಂ. ವೈಕುಂಠಿನ್]

**ವೈಕುಂಠಿಕೆ** (ನಾ). ಒಂದು ಬಗೆಯ ಔಷಧೀಸಸ್ಯ : ಔಡಲದ ಎಲೆ . . . ವೈಕುಂಠಿಕೆಯ ಸೊಪ್ಪು . . . ಸೋರೆಸೊಪ್ಪು, ಈ ಸೊಪ್ಪುಗಳೆಲ್ಲವನ್ನೂ ಒರಳಲ್ಲಿ ತುಳಿದು ಭಾಂಡದಲ್ಲಿ ತುಂಬಿ (ವೃದ್ಧಸಾ. I. ೪೨೮). [ಸಂ. ವೈಕುಂಠಿಕಾ]

**ವೈಕುರ್ವಣ** (ಗು). ೧. ಬದಲಾಗುವ ; ಮಾರ್ಪಾಡಾಗುವ. ೨. ಸಂತೋಷಪಡುವ; ಸಡಗರಪಡುವ : ತ್ರಿದಶರ್ನೀಡುವ ಶಾತಕುಂಭಕಳಶವ್ರಾತಂಗಳಂ ಪರ್ವಿಕೊರ್ವಿದ ವೈಕುರ್ವಣಹಸ್ತದೊಳ್ತಳೆದು (ಮಲ್ಲಿಪು. ೧೨-೧೪೭). (ನಾ). ೩. [ಜೈನ] ರೂಪವನ್ನು ಮಾರ್ಪಾಡುಗೊಳಿಸುವ ವಿದ್ಯೆ ; ರೂಪಪರಾವರ್ತನ ವಿದ್ಯೆ ; ರೂಪಾಂತರಗೊಳಿಸುವ ಮಾಯಾಶಕ್ತಿ : ಆಕಾರಮಲ್ತು ವಜ್ರಪ್ರಾಕಾರಮಿದೆನಿಸಿ ಲಕ್ಷ್ಮಣಂ ಬರೆ ಚಾಪಂ ವೈಕುರ್ವಣವಿಷಮಫಣೀಂದ್ರಾಕೃತಿಯಂ ಬಿಟ್ಟು ಮಟ್ಟಮಿರ್ದತ್ತಾಗಳ್ (ಪಂರಾಮಾ. ೫-೯೮); ವಿಕ್ರಿಯೋಪಕ್ರಮಿತ ವೈಕುರ್ವಣದಿನುರ್ಬುವೆತ್ತೈರಾವತಂ ಮೊದಲಾದನೇಕ ದೇವವಾಹನಂಗಳ್ಗೆ . . . ಇಂದ್ರನೀಳಮಯವೀಥಿಯಂ ನಿರ್ಮಿಸಿದಾಗಳ್ (ಚಂದ್ರಪು. ೧೨-೭೦ ವ). [< ಸಂ. ವಿಕುರ್ವಾಣ]

**ವೈಕೃತ** (ಗು). ೧. ಬದಲಾದ ; ಮಾರ್ಪಾಟು ಹೊಂದಿದ : ಪ್ರಕೃತಿಪ್ರಾಣವಾಯುವನು ಸೋಹಂಭಾವದಿಂದೆ ವೈಕೃತಪ್ರಾಣನಂ ಮಾಡಿ . . . ಮನೋಮಾರುತಂಗಳೊಳಗೂಡಿ ಲಯಿಸುವುದೆ ಲಯಯೋಗ ನೋಡಾ (ಅಬಿಂಪ. ೨೦೩-೫೩). ೨. ವಿಕಾರವಾದ : ಭಾವಿಸಲ್ ಬಗೆದವಂ ಮಿಗೆ ಜಾಣನಶೇಷಭಾಷಾ ವಿಶೇಷವಿಷಯಾತಿಶಯಾಮಳಕೌಶಳಂ ದೇವತಾಗುರು ಗುಣೋದಯವೃದ್ಧಜನೋಪ ಸಂಸೇವನಾಪರನ ಪಾಕೃತ ವೈಕೃತಚಾಪಳಂ (ಕವಿರಾ. ೩-೨೨೦). ೩. ಊನವಾದ ; ಅಂಗಹೀನವಾದ. ೪. ಅಸಹಜವಾದ. ೫. ಸಾತ್ತ್ವಿಕವಾದ. (ನಾ). ೬. ಬದಲಾವಣೆ ;

ಮಾರ್ಪಾಡು. ೭. ಅಂಗಹೀನತೆ ; ಅಂಗವಿಕಾರ. ೮. ಜುಗುಪ್ಸೆ ; ಹೇವರಿಕೆ. ೯. [ತತ್ತ್ವಶಾ] ಅಹಂಕಾರತತ್ತ್ವದಲ್ಲಿನ ಒಂದು ಪ್ರಭೇದ ; ರಾಜಸಗುಣ ಪ್ರಧಾನವಾದ ಅಹಂಕಾರ : ಅಹಂಕಾರದಲ್ಲಿ ತೈಜಸ ಮತ್ತು ವೈಕೃತ ಎಂದು ಮತ್ತೆ ಎರಡು ವಿಧ. ತೈಜಸದಲ್ಲಿ ಸತ್ತ್ವಗುಣವು ಪ್ರಧಾನವಾಗಿಯೂ ವೈಕೃತ ದಲ್ಲಿ ರಾಜಸಗುಣವು ಪ್ರಧಾನವಾಗಿಯೂ ಇರುವುವು (ಭಾತತ್ತ್ವ. ೬೬೪). ೧೦. ಕ್ಷುದ್ರ ಮಂತ್ರಗಳಲ್ಲಿ ಒಂದು : ದ್ರಾವಿಡ ವೈಕೃತ ಪ್ರಾಕೃತ ಶವನಾದಿ ಕ್ಷುದ್ರಮಂತ್ರಂಗಳಂ . . . ವಿವೇಕಿಸಿ ತಿಳಿದಿರಲಕ್ಕುಂ (ವಿವೇಕ. ೮೦). ೧೧. [ಯೋಗ] ಪ್ರಾಣಾಯಾಮದ ಮೂರುಪ್ರಕಾರಗಳಲ್ಲಿ ಒಂದು : ಪ್ರಾಕೃತ ವೈಕೃತಮಾದ ದ್ವಿವಿಧ ರೇಚಕ ಪೂರಕ . . . ಉತ್ಕ್ರಾಂತಿ ಎಂಬ ಸಪ್ತಪ್ರಾಣಾಯಾಮಲಕ್ಷಣಂಗಳುಂ (ವಿವೇಕ. ೧೩೩). [ಸಂ.]

**ವೈಕೃತಿ** (ನಾ). ೧. ತಿರಸ್ಕಾರ ; ಅವಮಾನ : ಗುರುವಿನಿಂದ ವೈಕೃತಿಯನು ಪಡೆದು ಸಕಲವನು ಬಿಟ್ಟಾತನು ದಿಗಂಬರನಾಗಿ ವೈರಾಗ್ಯದಲ್ಲಿ ಚರಿಸುವನು (ತಿಮ್ಮ ಅ. ೧-೫೦). ೨. ವೈಪರೀತ್ಯ ; ಪ್ರತಿಕೂಲತೆ : ನೂಕುನೂಕಾಡುವ ವಿಪತ್ತಿನ ವೈಕೃತಿಗೆ ನಾನೊಬ್ಬನೇ ದಿಟವಾಕೆವಾಳನೆ ಶಿವಶಿವಾ (ಕುಮ್ಮಾ.ಅ. ೨೨-೪೭). [ಸಂ. ವೈಕೃತೀ]

**ವೈಕೊಂತವಾಸಿ** (ನಾ). ವೈಕುಂಠದಲ್ಲಿ ನೆಲಸುವಂಥವನು ; ಮೋಕ್ಷಪ್ರಾಪ್ತಿ ಹೊಂದುವವನು : ಇದಕೆ ವಕ್ರವಪ್ಪೊನ್ಪಞ್ಚಮಹಾಪಾತಕನಕ್ಕು ರಕ್ಷಿಪ್ಪೊನ್ ವೈಕೊನ್ತವಾಸಿ ಅಕ್ಕುಂ (ಎಕ. XVI, ಪಾವುಗ. ೧೧-೫ : 754). [< ಸಂ. ವೈಕುಂಠವಾಸಿನ್]

**ವೈಕ್ರಾಂತ** (ನಾ). ವಜ್ರಕ್ಕಿಂತಲೂ ಕಡಮೆದರ್ಜೆಯ ಒಂದುಬಗೆಯ ಹರಳು : "ಚೂರ್ಣವಜ್ರಂ – ವೈಕ್ರಾಂತ" (ಓಷಧಿ. ೫೮). [ಸಂ.]

**ವೈಕ್ರಾಂತಪಾಷಾಣ** (ನಾ). = ವೈಕ್ರಾಂತ : "ವೈಕ್ರಾಂತ – ವೈಕ್ರಾಂತಪಾಷಾಣ" (ಓಷಧಿ. ೧೫೭). [ಸಂ.]

**ವೈಕ್ರಿಯಕ** (ನಾ). [ಜೈನ] ಜೀವರುಗಳ ಐದುಬಗೆಯ ಶರೀರಭೇದಗಳಲ್ಲಿ ಎರಡನೆಯದು ; ಸ್ಥೂಲಶರೀರದಲ್ಲಿ ಬದಲಾವಣೆಯನ್ನುಂಟುಮಾಡುವಂಥ ಸೂಕ್ಷ್ಮಶರೀರ : ತದ್ಭೋಗಾವನೀಭಾಗದೊಳ್ ತನುಗಳ್ ವೈಕ್ರಿಯಕಂಗಳಂತೆ ಕರಗುತ್ತಿರ್ಪನ್ನೆಗಂ ಪುಣ್ಯಸಂಜನಿತೈಶ್ವರ್ಯದಿನಂತೆ ಬಂದು ನೆಲಸಿತ್ತೀಶಾನಕಲ್ಪಾಗ್ರದೊಳ್ (ಆದಿಪು. ೫-೭೦) ; ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ, ಕಾರ್ಮಣ ಎಂಬ ಐದು ತರದ ಶರೀರಗಳುಂಟು . . . ಸ್ಥೂಲ ಸೂಕ್ಷ್ಮ ಗುರು ಲಘು ಮೊದಲಾದ ವಿಕಾರಗಳನ್ನು ಹೊಂದುವ ಯೋಗ್ಯತೆಯುಳ್ಳ ಶರೀರವು ವೈಕ್ರಿಯಕವು (ಜೈನಧ. ೩೨). [ಸಂ.]

**ವೈಕ್ರಿಯಕಶರೀರ** (ನಾ). ೧. = ವೈಕ್ರಿಯಕ : ಮುನ್ನೆ ತಮ್ಮನೆರಪಿದಾಯುಷ್ಯಾಂತಂಬರಂ ಸಣ್ಣಗೆಯೊಳ್ ಸಣ್ಣಮಾಗರೆದು ಸಣ್ಣಿಸಿದೊಡಮಂದಿರ ವೈಕ್ರಿಯಕಶರೀರಂಗಳ್ ಪಾದರಸದ ಮಾರ್ಗದಿಂ ಪತ್ತುತ್ತುಮಿರ್ಕುಂ (ಸುಕುಮಾ. ೧೧-೪೭ ವ). ೨. ಐದು ಬಗೆಯ ಶರೀರಭೇದಗಳಲ್ಲಿ ಒಂದಾದ ವೈಕ್ರಿಯಕಶರೀರವುಳ್ಳವನು : ಏಕರತ್ನಿ ಪ್ರಮಾಣೋತ್ಸೇಧರುಂ ವೈಕ್ರಿಯಕಶರೀರರುಂ ಪರಮಶುಕ್ಲಲೇಶ್ಯಾಪರಿಣಾಮರುಂ ಸಾರ್ಧ ಷೋಡಶಮಾಸಕೃತನಿಶ್ವಾಸರುಂ . . . ಆಗಿ ಸುಖಮಿರ್ಪಿನಂ (ಚಾವುಂಪು. ೩೧). [ಸಂ.]

**ವೈಕ್ರಿಯಿಕ** (ನಾ). ೧. = ವೈಕ್ರಿಯಕ : ಔದಾರಿಕ – ಔದಾರಿಕಮುಂ, ವೈಕ್ರಿಯಿಕ – ವೈಕ್ರಿಯಿಕಮುಂ . . . ಶರೀರಾಣಿ – ಶರೀರಂಗಳಯ್ದುತೆಱಂ (ತತ್ತ್ವಪ್ರ. ೧೧೪). ೨. ಮನೋವಾಕ್ಕಾಯಯೋಗದ ಮೂರುಭೇದಗಳಲ್ಲಿ ಒಂದು : ಔದಾರಿಕ ಔದಾರಿಕಮಿಶ್ರ ವೈಕ್ರಿಯಿಕ ವೈಕ್ರಿಯಿಕಮಿಶ್ರ ಆಹಾರಕ ಆಹಾರಕಮಿಶ್ರ ಕಾರ್ಮಣಕಾಯ ಯೋಗಭೇದಜಾತಸಪ್ತವಿಧ ಕಾಯಯೋಗಮುಂ ಕೂಡಿ ಯೋಗಂ ಪಂಚದಶವಿಕಲ್ಪಂ (ತತ್ತ್ವಪ್ರ. ೧೭). [ಸಂ.]

**ವೈಕ್ರೀಯಕ** (ನಾ). = ವೈಕ್ರಿಯಕ : ಔದಾರಿಕ ವೈಕ್ರೀಯಕ[ಮಾ]ಹಾರಕ ತೈಜಸಕಾರ್ಮಣಂಗಳಿವು ತನುವೆನಿಕುಂ (ಸುಕುಮಾ. ೮-೧೦). [< ಸಂ. ವೈಕ್ರಿಯಿಕ]

**ವೈಕ್ಲವ್ಯ** (ನಾ). ೧. ಗಾಬರಿ ; ಗಡಿಬಿಡಿ ; ಗೊಂದಲ. ೨. ನೋವು ; ಅಳಲು ; ವೇದನೆ : ದುಃಖ - ಪೀಡಾಲಕ್ಷಣಪರಿಣಾಮರೂಪದುಃಖಮುಂ ಶೋಕ – ಅನುಗ್ರಾಹಕ ಸಂಬಂಧವಿಚ್ಛೇದಜನಿತ ವೈಕ್ಲವ್ಯವಿಶೇಷರೂಪಶೋಕಮುಂ . . . ಅಪ್ಪುದಱಿಂ (ತತ್ತ್ವಪ್ರ. ೨೬೦). [ಸಂ.]

**ವೈಖರಿ** (ನಾ). ೧. ಮಾತು ; ನುಡಿ. ೨. ಸ್ಪಷ್ಟವಾದ ಮಾತು ; ಬಿಚ್ಚುನುಡಿ : ವೈಖರಿಯ ನಾರದಂ ಪೇಳ್ದ ಗಡ (ಪರಶು. ೭-೨೮). ೩. ಚೆನ್ನಾಗಿ ಮಾತನಾಡುವ ಕಲೆ ; ವಾಕ್ಚಾತುರ್ಯ. ೪. ಶೈಲಿ ; ಧಾಟಿ : ಕಾವ್ಯವಿಮರ್ಶೆಗೆ ಹೊರಡತಕ್ಕವರಿಗೆ ಮೊದಲು ಸೌಂದರ್ಯಾನುಭವದ ಅಭಿವ್ಯಕ್ತಿಯ ವೈಖರಿ . . . ಅತ್ಯಂತ ಅಗತ್ಯ (ಸೌಂದಸ.೧. ಮೊದಲಮಾತು) ; ಅವನು ವಿಶೇಷ ವೈಖರಿಯಿಂದ ಕಾಗದವನ್ನು ಮುಕ್ತಾಯಗೊಳಿಸಿದನು (ಪುಷರು. ೨೨೫). ೫. ರೀತಿ ; ಪ್ರಕಾರ : ಭಾಸ್ಕರಂ . . . ಬೈತಲೆಯ ಮಾಣಿಕ್ಯದ ವೈಖರಿಯ ತೊಡವಿನೊಲು ಝಗಝಗಿಸುತುದಯಿಸಲ್ (ಪರಶು. ೫-೧) ; ಈಗಿನ ಸ್ಥಿತಿಯಲ್ಲಿಯೇ ಅದರ ವಿನ್ಯಾಸರಚನೆ, ಅಲಂಕಾರವೈಖರಿ . . . ಇವುಗಳಲ್ಲಿ ಇದನ್ನು ಮೀರಿಸಬಲ್ಲ ಕಟ್ಟಡವು ಮತ್ತೊಂದಿಲ್ಲ (ಮೈವಾಸ್ತು. ೧೦೫). ೬. ವಿವಿಧತೆ ; ವೈವಿಧ್ಯ : ಹಲಸು ತಿನಿಸಿನ ವೈಖರಿಯನ್ನು ಪಶ್ಚಿಮಘಟ್ಟಗಳ ಜನಜೀವನದಲ್ಲಿ ಇಂದಿಗೂ ನೋಡಬಹುದು (ಹಸುಹೂ. ೫೦). ೭. ಠೀವಿ ; ದರ್ಪ : ಕಲ್ಪದ್ರುಮದ ಗಾತ್ರಮಂ ತನ್ನ ನೀಳ್ದೀರ್ಯ್ದು ಸೊಂಡಿಲ್ಗಳಿಂ ಸುತ್ತಿ, ಕ್ಷೀರಫೇನಶ್ವೇತಗೀರ್ವಾಣವಾರಣಂ ಮತ್ತ ವೈಖರಿಯಿಂದೆ ಜರ್ಗಿ ಸೆಳೆವುದು, ಮರಂ ಬಳ್ಳಿಯಾಗುತೆ ಬಳ್ಳುವಂತೆ (ಶ್ರೀರಾಮಾ. ೪೯-೫೭೫) ; ಭಟ್ಟರು ಯೋಗ್ಯ ಜನ. ಅವರದೆ ಒಂದು ಗತ್ತು, ವೈಖರಿ (ಹೊಸಕ್ತಿ. ೫೯). ೮. ಪರಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀ ಎಂಬ ನಾಲ್ಕು ಪ್ರಕಾರದ ವಾಙ್ಮಯರೂಪಗಳಲ್ಲಿ ಒಂದು : ಸಕಲಸಂಸಾರವ್ಯವಹಾರಕಾರಣಮಪ್ಪುದಱಿಂ ಮುಖ್ಯಬಂಧರೂಪಮಾದ ವಾಣಿಯೇ ವೈಖರಿಯೆನಿಸಿ ಸಕಲಗೋಚರಮಾಗಿರ್ಕುಂ (ವಿವೇಕ. ೧೪೨). [ಸಂ. ವೈಖರೀ]

**ವೈಖಾನಸ** (ಗು). ೧. ಸಂನ್ಯಾಸಿಗೆ ಸಂಬಂಧಿಸಿದ. (ನಾ). ೨. ವಾನಪ್ರಸ್ಥಾಶ್ರಮದಲ್ಲಿರುವ ಬ್ರಾಹ್ಮಣ : "ವಾನಪ್ರಸ್ಥನಂ ವೈಖಾನಸನೆಂಬುದು" (ಹಲಾಯು. ೬೫-೨೪೦). ೩. ಋಷಿ ; ಮುನಿ : ಕಾನನದಾಶ್ರಮದೊಳ್ ವೈಖಾನಸಕುಲಪತಿ ಮಹಾಜಟಂ ತಂದೆ ಜಯಾಮಾನಿನಿ ತಾಯ್ ತನ್ಮಿಥುನದ ಸೂನುತೆಗೆ ವಿಶಾಖನಂದಿ ಭಾಜನನಾದೊಂ (ಶಾಂತಿಪು. ೭-೬೩) ; ಸೀತೆಗೆ ವೈಖಾನಸರ ಮುತ್ತೈದೆಯರನೇವೊಲ್ಗಿಂಗೆ ಕಾಣ್ಬನೋ ಎಂಬೊಂದು ತವಕದಿಂ ನಡೆ ಮುಂಚಿದುದು (ರಾಮಾಶ್ವ. ೩೨-೨೫). ೪. ವೈಷ್ಣವರ ಒಂದು ಪಂಗಡದ ಹೆಸರು ; ವೈಖಾನಸಾಗಮದ ರೀತಿ ದೇವಾಲಯಗಳಲ್ಲಿ ಪೂಜೆಮಾಡುವ ಅರ್ಚಕವರ್ಗ ಮತ್ತು ಆ ವರ್ಗಕ್ಕೆ ಸೇರಿದವನು : ಬಂದ ವೈಷ್ಣವಮತನಿವಾರಣ ಬಂದ ವೈಖಾನಸಭಯಂಕರ (ಶಂಕರದಾ. ೯-೧೭) ; ಅಪ್ಪಾಜಿಯವರು ಸ್ನಾನಮುಗಿಸಿ ಮಡಿಯುಟ್ಟು, ವೈಖಾನಸರ, ಸಿದ್ಧಾಂತಿಗಳ, ಪುರೋಹಿತರ ಒಡಗೂಡಿ . . . ಬಂದರು (ಶಾಂತಲಾ. ೨೫೭). ೫. ವೈಷ್ಣವಾಗಮಗಳಲ್ಲಿ ಒಂದು ; ವಿಷ್ಣುಪರವಾದ ಆಗಮಗಳಲ್ಲಿ ಒಂದು : ಆಗಮಗಳು — ಶೈವ, ವೈಖಾನಸ, ಪಾಂಚರಾತ್ರಾಗಮಗಳೆಂದು ಪ್ರಧಾನವಾಗಿ ಮೂರಾಗಿವೆ (ಭಾರದ. ೭೨) ; ವೈಷ್ಣವ ದೇವಾಲಯಗಳಿಗೆ ವೈಖಾನಸ ಅಥವಾ ಪಾಂಚರಾತ್ರ ಆಗಮಗಳು ಆಧಾರಗಳೆಂದು ಹೇಳಲು ಸಾಧ್ಯವಿಲ್ಲ (ಹೊಯ್ಸವಾ. ೧೩). [ಸಂ.]

**ವೈಖಾನಸಾಗಮ** (ನಾ). ವಿಖನಸ ಎಂಬ ಋಷಿಗೆ ವಿಷ್ಣುವಿನಿಂದ ಉಂಟಾದ ತತ್ತ್ವಬೋಧನೆ : ವ್ಯಾಸರಾಯರು . . . ವೈಖಾನಸಾಗಮಪದ್ಧತಿಯನ್ನು ತಪ್ಪಿಸಿ, ತಂತ್ರಸಾರೋಕ್ತಮಾರ್ಗದಿಂದ ಆರಾಧನೆಗಳನ್ನೇರ್ಪಡಿಸಿದರು (ಕಭವಿ. ೭೪) ; ಭಗವದಂಶಸಂಭೂತರಾದ ವಿಖನಸಮಹರ್ಷಿಗಳಿಗೆ ಭಗವಂತನಿಂದ ಉಪದಿಷ್ಟವಾದ ವೈಷ್ಣವಾಗಮವು ವೈಖಾನಸಾಗಮವೆಂದು ಪ್ರಖ್ಯಾತವಾಯಿತು (ಭಾರದ. ೭೫). [ಸಂ.]

**ವೈಚಾರಿಕ** (ಗು). ೧. ವಿಚಾರಪೂರ್ಣವಾದ : ನಾಡವರ ಪರವಾದ ವೈಚಾರಿಕ ವಿಮರ್ಶೆಯು ಈ ಕೆಳಗಿನ ಪ್ರಶ್ನೆಗಳಿಗುತ್ತರವನ್ನು ಕೊಡುವುದವಶ್ಯ (ತುಳುನಾ. ೫೭) ; ನನ್ನ ಮತ್ತು ಇಂದುಮತಿಯ ಸಂಬಂಧದಲ್ಲಿಯೂ ನರಕ – ಸ್ವರ್ಗಗಳ ಅಂತರವಿದೆ . . . ಅದು ಒಂದು ಭೌತಿಕಕ್ರಿಯೆಯಲ್ಲ. ಆದರೆ ಅದೊಂದು ವೈಚಾರಿಕಭಾವನೆ (ಅಪನಾ. ೨೪೪). (ನಾ). ೨. ವಿಚಾರ ಮಾಡುವವನು ; ವಿಚಾರವಂತ : ಸಾಹಿತಿಯಾಗಿ ಮತ್ತು ವೈಚಾರಿಕನಾಗಿ ವಿಜೃಂಭಿಸಿರುವ ಕವಿಯ ಜೀವನವನ್ನು ಮಹಾಮಾತೆಯ ಅಷ್ಟೇ ಉಜ್ವಲವಾದ ಜೀವನದೊಡನೆ ನೋಡಿ ತಿಳಿಯಬೇಕಾಗುತ್ತದೆ (ಕವಿಕೊ. I, ४೭४). [ಸಂ.]

**ವೈಚಾರಿಕತೆ** (ನಾ). ಆಲೋಚನೆ ; ವಿಚಾರದೃಷ್ಟಿ : ಮನುಷ್ಯ ಕೇವಲ ಇಂದ್ರಿಯಗಳ ಮೂಲಕವಷ್ಟೇ ಅಲ್ಲದೆ, ತನ್ನ ವೈಚಾರಿಕತೆ . . . ಇರುವಿಕೆಯ ರೀತಿ ಇವುಗಳ ಮೂಲಕವಾಗಿ ಅನುಭವವನ್ನು ಸ್ವೀಕರಿಸುತ್ತಾನೆ (ಹೊಸಕ್ಕಿ. ೨೭೮). [ಸಂ. ವೈಚಾರಿಕತಾ]

**ವೈಚಾರಿಕಮಥನ** (ನಾ). ವಿಚಾರಪೂರ್ಣವಾದ ಚಿಂತನೆ : ಈ ವೈಚಾರಿಕ ಮಥನ ತನ್ನ ಅನುಭವರಾಹಿತ್ಯತೆಯನ್ನು ಪ್ರದರ್ಶನಕ್ಕಿಡುತ್ತಿದ್ದುದರಿಂದ, ಯಶೋದೆ ತನ್ನ ಭವಿಷ್ಯದ ಬಗೆಗೆ ಯೋಚಿಸತೊಡಗಿದಳು (ವಾತ್ಸಲ್ಯ. ೧೩೭). [ಸಂ.]

**ವೈಚಿತ್ರ** (ಗು). ೧. ವಿಧವಿಧವಾದ ; ಹಲವು ಬಗೆಯ : ಇನ್ನಾ ಪುರದೊಳಾವೆಡೆಯೊ ವೇದಿಸಿಹ ವೈಚಿತ್ರಕೇತನವಾದವಿನ್ನೆನಿತನಿತೊ (ಬಿಜ್ಜಪು. ೨೪-೩೭). ೨. ವಿಚಿತ್ರವಾದ; ವಿಲಕ್ಷಣವಾದ : ವಾರುವನ ವೈಚಿತ್ರಗತಿಯ ನಿಹಾರದಲಿ ಸಾರಥಿ ನರೇಂದ್ರನ ತೇರ ತಿರುಗಿಸಿದನು (ಕುಮಾ.ಶ. ೩-೫೬). [ಸಂ.]

**ವೈಚಿತ್ರ್ಯ** (ನಾ). ೧. ವಿವಿಧತೆ ; ವೈವಿಧ್ಯ : ಆಗಳದಱ ಚಾಪಚ್ಛದಚ್ಛಾಯಾನುಕಾರಿಯಪ್ಪ ಮಸೃಣವರ್ಣಪ್ರಸರಮೇಳಾಪವೈಚಿತ್ರ್ಯಮಂ ಚಿತ್ರಕಳಾವಿಶಾರದಂ ಪರಿಭಾವಿಸುತ್ತುಮಿರ್ಪನ್ನೆಗಂ (ಚಂದ್ರಪು. ೪-೫೦ ವ) ; ಅನೇಕ ಉಪಕಥೆಗಳು . . . ಎಷ್ಟು ವೈಚಿತ್ರ್ಯದಿಂದ ತುಂಬಿಕೊಂಡಿರುವುವೋ, ಅಷ್ಟೇ ಸೊಗಸಾಗಿರುವುವು (ಸಾಹಿಸ. ೯೦). ೨. ಸೋಜಿಗ ; ಆಶ್ಚರ್ಯ. ೩. ವಿಚಿತ್ರವಾದ ರೀತಿ, — ನಡೆ : ಬಡವ ಬಲ್ಲಿದರನು ವಿಧಿ ಕಟಕಿಯಾಡುವನವನ ವೈಚಿತ್ರ್ಯವನಂತ (ಇಂಚಾಪ. ೧೪೩-೫). [ಸಂ.]

**ವೈಜನನ** (ಗು). ೧. ಹೆರಿಗೆಯ; ಹೆರಿಗೆಗೆ ಸಂಬಂಧಿಸಿದ : ಸತಿ ವೈಜನನಮಾಸದೊಳಂದು ಪಡೆದಳು ತನುಜನನು (ಉತ್ತರಾ. ೨-೩೦). (ನಾ). ೨. ಬಸಿರಿನ ಕಡೆಯ ತಿಂಗಳು ; ಹೆರಿಗೆಯ ತಿಂಗಳು ; ನವದಿವಸದಂತೆ ನವಮಾಸಮಂ ನೆಱೆಯೆ ವೈಜನನ [ಪಾಠಾಂ. ನೈಜನವ]ಮೆಂಬ ಪೆಸರಿಂ ಮಿಸುಪ ಮಾಸದೊಳ್ . . . ಕಾಂತೆ ಪಡೆದಳ್ ಲೀಲಾವತೀದೇವಿಯಂ (ಲೀಲಾವ. ೭-೬೫ ವ). [ಸಂ.]

**ವೈಜನಾಥ** (ನಾ). ಶಿವನ ಒಂದು ಹೆಸರು : ಧರೆಯೊಳು ವಿದಿತಮಾಗಲು ವೈಜನಾಥನೆನಲು ವಿರಾಜಿಸಿದ (ಬಸವಪು. ೫೨-೨೯). [< ಸಂ. ವೈದ್ಯನಾಥ]

**ವೈಜಬ್ಬೆ** (ನಾ). ಒಬ್ಬಾಕೆಯ ಹೆಸರು : ಶ್ರೀಮತ್ ಬೆಟ್ಟದವೋ XX ನ ಮಗಳ್ ವೈಜಬ್ಬೆXX ಬ್ಬಪುತೀಜ್ಜಿದೊಳವೂ ನೋನ್ತು ಸನ್ಯಸನಂ XX (ಎಕ. II, ೭೮-೨ ; ಸು. 950). [ವೈಜ + ಅಬ್ಬೆ]

**ವೈಜಯಂತ** (ನಾ). ೧. ಧ್ವಜ ; ಬಾವುಟ. ೨. ಇಂದ್ರನ ಧ್ವಜ, — ಬಾವುಟ. ೩. ಮನೆ. ೪. ಇಂದ್ರನ ಅರಮನೆ : "ವೈಜಯಂತಃ, ಪ್ರಾಸಾದಃ — ಆತನ ಉಪ್ಪರಿಗೆ ಹೆಸರು" (ಸಿದ್ಧಾಂತಿ. ೨೧). ೫. [ಜೈನ] ದೇವತೆಗಳ ಒಂದು ವರ್ಗ: 'ವೈಜಯಂತವಿಮಾನ' ಪರಾ. [ಸಂ.]

**ವೈಜಯಂತವಿಮಾನ** (ನಾ). [ಜೈನ] ಲೋಕಾಕಾಶದ ತುದಿಯ ನೆಲೆಯಲ್ಲಿರುವ ಪುಣ್ಯವಂತರ ವಾಸಸ್ಥಾನ : ಇತ್ತಂ ಪದ್ಮನಾಭನುಂ . . . ವೈಜಯಂತವಿಮಾನದೊಳ್ ಮೂವತ್ತುಮೂಱುಸಾಗರೋಪಮಾಯುಷ್ಯಮನೊಡೆಯಂ ಅಹಮಿಂದ್ರನುಮಾಗಿ ಸುಖಮಿರ್ಪಿನಂ (ಚಾವುಂಪು. ೧೨೧). [ಸಂ.]

**ವೈಜಯಂತಿ** (ನಾ). ೧. ಧ್ವಜ ; ಬಾವುಟ : ಕರ್ಬಿನ ಬಿಲ್ಲ ಕೊಂಕಿನಂತೆ ಕೊಂಕಿಯುಂ ಪರವನಿತೆಯರೆರ್ದೆಗೆ ಕೊಂಕಿಲ್ಲದೆಯುಂ ಸೊಗಯಿಸುವ ಸುರತಮಕರಧ್ವಜನ ಪುರ್ವುಗಳ್ ಕಾಮದೇವನ ವಿಜಯವೈಜಯಂತಿಗಳಂತಾದುವು (ಪಂಪಭಾ. ೨-೬೯ ವ) ; ರಚಿಸಿದ ಪ್ರಾಚುರದ ವೈಜಯಂತಿಗಳು ಕರಮೆಸೆದವು (ಗುರುಬಾ. ೧-೨೯). ೨. ವಿಷ್ಣುವಿನ ಕೊರಳಲ್ಲಿರುವ ಹಾರ, — ಮಾಲೆ : ದಣಿಯ ನೋಡಿದೆನೋ ವೆಂಕಟನ . . . ಕೊರಳೊಳು ವೈಜಯಂತಿ ಇಹನ (ಪುರಂದ. ೨-೧೨೭-೨). ೩. ವಿಜಯದ ಮುನ್ಸೂಚನೆಯಾಗಿ ಧರಿಸುವ ಹಾರ, — ಮಾಲೆ. ೪. ಒಂದು ನಿಘಂಟಿನ ಹೆಸರು ಮತ್ತು ಆ ನಿಘಂಟನ್ನು ಬರೆದವನು : "ವರ ವೈಜಯಂತಿಯ ನಯಂ ಹಲಾಯುಧನ ವಿಸ್ತರದ ವಚನೋಕ್ತಿಯೆಂಬಿಂತಿವೆಲ್ಲವನು ಸಂವರಿಸಿಯಭಿನವ ಮಂಗನುಸುರಿದಂ" (ಮಂಗರಾ. ೨-೪). ೫. ಒಂದು ಸ್ಥಳದ ಹೆಸರು ; P ಈಗಿನ ಬನವಾಸಿಯ ಹಿಂದಿನ ಹೆಸರು : ವೈಜಯಂತಿಯ (ಬನವಾಸಿ) ಒಬ್ಬ ಶ್ರೇಷ್ಠಿಯು ಕಾರ್ಲೆ(ಮುಂಬೈ ಹತ್ತಿರ) ಗುಡ್ಡದಲ್ಲಿ ಚೈತ್ಯಾಲಯ ಮಾಡಿಸಿದ್ದುಂಟು (ಕರ್ನಾಟ. ೧೪೯). ೬. [ಜೈನ] ಭರತಚಕ್ರವರ್ತಿಯ ಅರಮನೆ : ಸರ್ವತೋಭದ್ರಮೆಂಬ ಗೋಪುರದೊಳಂ ಕೂಡಿದ ವೈಜಯಂತಿಯೆಂಬ ದಿವ್ಯಪ್ರಾಸಾದಮುಂ (ಆದಿಪು. ೧೫-೩ ವ). ೭. ವಿಜಯಾರ್ಧ ಪರ್ವತದ ದಕ್ಷಿಣದಿಕ್ಕಿನಲ್ಲಿರುವ ನಗರ : 'ವೈಜಯಂತೀದ್ವಾರ' ಪರಾ. [ಸಂ. ವೈಜಯಂತೀ]

**ವೈಜಯಂತಿಕೆ** (ನಾ). ೧. = ವೈಜಯಂತಿ ೧ : ಸಂಚಲಚ್ಚಾಮರಮರುತ್ಪ್ರೇಂಖೋಲಿತಾಭರಣವಿಚಿತ್ರನೇತ್ರವೈಜಯಂತಿಕಾಂಚಲನುಂ . . . ಪರಚಕ್ರನುಮಾಗಿ ನಡೆಯೆ (ಆದಿಪು. ೧೨-೬೦ ವ). ೨. ಒಂದು ಬಗೆಯ ಮುತ್ತಿನ ಹಾರ. ೩. ಒಂದು ಬಗೆಯ ಸಸ್ಯ ; ತಕ್ಕಿಲೆ : "ಜಯಾ . . . ವೈಜಯಂತಿಕಾ — ಈ ತಕ್ಕಿಲೇಗಿಡ" (ಸಿದ್ಧಾಂತಿ. ೧೨೭). [ಸಂ. ವೈಜಯಂತಿಕಾ]

**ವೈಜಯಂತಿಮಾಲೆ** (ನಾ). = ವೈಜಯಂತಿ ೨ : ವರುಣನು ಬೇಗ ವೈಜಯಂತಿಮಾಲೆ ಕೊಟ್ಟು ಶರಣೆಂದು ಪೇಳುತಲಿರಲು (ಸಮುಮ. ೨೦). [ಸಂ. ವೈಜಯಂತೀಮಾಲಾ]

**ವೈಜಯಂತೀದ್ವಾರ** (ನಾ). [ಜೈನ] ವಿಜಯಾರ್ಧಪರ್ವತದ ದಕ್ಷಿಣದಿಕ್ಕಿನಲ್ಲಿರುವ ನಗರದ ಬಾಗಿಲು : ಅಂತು ಭರತೇಶ್ವರಚಕ್ರವರ್ತಿ ದಕ್ಷಿಣದಿಗಂಗನಾಳಂಕಾರನಾಗಿ ನಡೆದು ದಕ್ಷಿಣಾಂಬುರಾಶಿಯನೆಯ್ದಿ ವೈಜಯಂತೀದ್ವಾರದೊಳ್ ಬೀಡಂ ಬಿಟ್ಟಾಗಳ್ (ಆದಿಪು. ೧೩-೧ ವ) ; ಮುಂಗುಡಿಯ ಬಂದ ಚಕ್ರವರ್ತಿ ವೈಜಯಂತೀದ್ವಾರಾಭಿಮುಖನಾಗಿ ಬೀಡಂ ಬಿಟ್ಟೋಲಂಗಗೊಟ್ಟಿರೆ (ಶಾಂತಿಪು. ೧೧-೬ ವ). [ಸಂ.]

**ವೈಜಯಂತೀವಿಮಾನ** (ನಾ). = ವೈಜಯಂತವಿಮಾನ : ಷೋಡಶಭಾವಿಷ್ಯತ್ತೀರ್ಥಕರನಾಮಕರ್ಮಮಂ ಕಟ್ಟಿ ವೈಜಯಂತೀವಿಮಾನದೊಳ್ ಪುಟ್ಟಿ (ಪಂಠಾಮಾ. ೧೭-೭೩ ವ). [ಸಂ.]

**ವೈಜಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ವೈಜಯ್ಯಾ (ಎಕ. II, ೪೧೭ ; ಸು. 1000). [ವೈಜ + ಅಯ್ಯ]

**ವೈಜ್ಞಾನಿಕ** (ಗು). ೧. ನುರಿತ ; ಪ್ರಾವೀಣ್ಯತೆಯನ್ನು ಹೊಂದಿದ. ೨. ವಿಜ್ಞಾನಕ್ಕೆ ಸಂಬಂಧಿಸಿದ : ವೈಜ್ಞಾನಿಕವಿಷಯಗಳ ಬಗೆಗೆ ಸಾಮಾನ್ಯ ಓದುಗರು ಹೆಚ್ಚು ಆಸ್ಥೆವಹಿಸುವಂತಾಗಬೇಕಾದರೆ ಅದು ವಿಜ್ಞಾನಿಗಳ ಜೀವನಚರಿತ್ರೆಗಳ ಮುಖಾಂತರವೇ ಸಾಧ್ಯವೆಂಬುದು ನನ್ನ ಮತ (ಸಸ್ಯಕ. III ಮುನ್ನುಡಿ) ; ಇದು ವೈಜ್ಞಾನಿಕವಿಧಾನದಲ್ಲಿ ರಚಿಸಲ್ಪಟ್ಟಿರುವುದರಿಂದ ಬೆಂಕಿಯು ಸಹಜವಾಗಿ ಉರಿಯುವ ಹಾಗಿದೆ (ಅಡುಸಾ. ೨೯). (ನಾ). ೩. ವಿಶೇಷವಾದ ಜ್ಞಾನವುಳ್ಳವನು ; ನಿಪುಣ. ೪. ಯಾವುದಾದರೊಂದು ವಿಷಯವನ್ನು ಪ್ರಾಯೋಗಿಕವಾಗಿ ಪರೀಕ್ಷಿಸಿ ನಂಬುವವನು; ವಿಜ್ಞಾನಿ : ಆಧುನಿಕವೈಜ್ಞಾನಿಕರು ಹೇಳುತ್ತಾರೆ : ವಿಶ್ವವು ಕೂಡ ಅಪರಿಮಿತವಲ್ಲವೆಂದು (ಸಮಾಲೋ. ೩೭) ; ವೈಜ್ಞಾನಿಕರೆದುರಿಗೆ ಅವರ ಪ್ರಯೋಗಪ್ರದರ್ಶನ ನಡೆಯಿತು (ಸಸ್ಯಕ. ೧೦೫). [ಸಂ.]

**ವೈಜ್ಞಾನಿಕದೃಷ್ಟಿ** (ನಾ). ನಿಷ್ಕೃಷ್ಟವಾದ ಆಲೋಚನೆಯ ರೀತಿ ; ಶಾಸ್ತ್ರೀಯವಾದ ವಿಚಾರಧಾರೆ : ಅವರ ವೈಜ್ಞಾನಿಕದೃಷ್ಟಿ ಕ್ರಮೇಣ ವಿಚಾರಶೂನ್ಯವಾದ ಶ್ರದ್ಧೆಗೆ ವಿರುದ್ಧವಾದ ಪ್ರವೃತ್ತಿಯನ್ನು ಬೆಳೆಸಿತು (ಖುಸ್ರಾರ. ೧೧ ಪೀಠಿಕೆ) ; ಈ ಎರಡೂ ಭಾವನೆಗಳೂ ವೈಜ್ಞಾನಿಕದೃಷ್ಟಿಗೆ ವಿರುದ್ಧವಾದುವು (ಭೌತವಿ. ೧೭). [ಸಂ.]

**ವೈಜ್ಞಾನಿಕಪ್ರಜ್ಞೆ** (ನಾ). ನಿಷ್ಕೃಷ್ಟವಾದ ಅರಿವು, — ಜ್ಞಾನ : ಜನಪದ ಸಾಹಿತ್ಯದ ವೈಜ್ಞಾನಿಕಪ್ರಜ್ಞೆಯೇ ಇಲ್ಲದ ಕಾಲದಲ್ಲಿ ಯಾರೋ ಹೀಗೆಂದು ಕರೆದರು (ಕಜಕಾ. ೩೭ ಪ್ರಸ್ತಾವನೆ). [ಸಂ. ವೈಜ್ಞಾನಿಕಪ್ರಜ್ಞಾ]

**ವೈಡೂರಿಯ** (ನಾ). ನವರತ್ನಗಳಲ್ಲಿ ಒಂದು : ಮರಕತದ ಮಧುಪಾತ್ರ ನೀಲದ ಕರಗ ವೈಡೂರಿಯದ ಪಡಿಗವ ಚರರು ತಂದೊಟ್ಟಿದರು (ಕುಮಾಗ. ೪-೧೫) ; ಪೊಳೆವ ನೀಲದ ಭಿತ್ತಿ ಬಜ್ಜರದ ಕಂಭಮುಚಿ ತೊಳಪ ವೈಡೂರಿಯದ ಮದನಕ್ಕೆ (ಜೈಮಿಭಾ. ೧೭-೨೩). [< ಸಂ. ವೈಡೂರ್ಯ]

**ವೈಡೂರ್ಯ** (ನಾ). ೧. = ವೈಡೂರಿಯ : ಸರ್ವರತ್ನಜಾಂಬೂನದ ವೈಡೂರ್ಯಮಯಮುಂ . . . ಆಗಿ (ಆದಿಪು. ೧-೪೯ ವ) ; ಸುತ್ತುವಳಯದ ಪದ್ಮರಾಗದ ಭಿತ್ತಿಗಳ ವೈಡೂರ್ಯಶಿಲೆಗಳ ಮತ್ತವಾರಣವರವಿಧಾನದಲೆಸೆದುದಾಸ್ಥಾನ (ಕುಮಾವ್ಯಾಸ. ೧-೧೪); ಅದೋ ಅಲ್ಲಿ ವೈಡೂರ್ಯಗಳೆ ರಾಸಿಗೊಂಡಂತೆ, ದಡಂ ಮುಚ್ಚೆ ಪಸುರ್ಮುಡಿದು ಸಾಲ್ಗೊಂಡಿಹವು

ಹೊಂಗೆ (ಶ್ರೀರಾಮಾ. ೧೧-೩೧). ೨. [ಜೈನ] ಒಂದು ಪರ್ವತದ ಹೆಸರು : ತದವನೀಧರ ವಿದಿಙ್ನಿಲಯಂಗಳಪ್ಪ ವೈಡೂರ್ಯರುಚಕ ಮಣಿಪ್ರಭ ರುಚಕೋತ್ತರಂಗಳೆಂಬ ವಿಕಟಕೂಟಾಧೀಶೆಯರೆ . . . ಮಹತ್ತರಿಯರಾಗಲುಂ (ಆದಿಪು. ೭-೬ ವ). [ಸಂ.]

**ವೈಡೂರ್ಯದಂಡ** (ನಾ). ವೈಡೂರ್ಯಮಣಿಯನ್ನು ಹುದುಗಿಸಿದ ದಂಡ, – ಕೋಲು : ವೈಡೂರ್ಯದಂಡಮುಕ್ತಾಮಣಿಜಾಲಾಲಂಕೃತರತ್ನಶಲಾಕಾಶತ ಕಾಂಚನಕುಂಭಬಿಂಬ ರಜತಚ್ಛದಚ್ಛತ್ರವಿಚಿತ್ರಜಿನೇಂದ್ರಪ್ರತಿಕೃತಿಪ್ರಕೀರ್ಣಮುಂ . . . ಆಗಿ (ಆದಿಪು. ೧-೯೯ ವ). [ಸಂ.]

**ವೈಣ** (ನಾ). ೧. ಬಿದಿರಿನ ಬುಟ್ಟಿ ಮುಂತಾದುವನ್ನು ಹೆಣೆಯುವವನು; ಮೇದರ. ೨. ವೀಣೆ : ಒಪ್ಪುವ ವಾಂಶ ವೈಣ ಗೇಯಾದಿಗಳಿಂಪು ಪೊಂಪುಳಿ ಸುರೇಶ್ವರಗಾಯಕವಾದನೋದಿತಂ (ಶಾಂತಿಪು. ೧೨-೨೨). [ಸಂ.]

**ವೈಣಕ** (ನಾ). = ವೈಣ ೧ : ಕ್ರೂರಮಾದ ಕರ್ಮಗಳಿಂದ ರಜಕರಾಗಿ . . . ವೈಣಕರಾಗಿ ಆಭಿಲರಾಗಿ ಮ್ಲೇಂಛರಾಗಿ . . . ಜನಿಸುವರು (ಶೇಷಧ. ೧೮-೨೩). [ಸಂ.]

**ವೈಣವ** (ಗು). ೧. ಬಿದಿರಿನಿಂದ ಮಾಡಿದ : ವರವೃದ್ಧವಿಪ್ರವೇಷವನ್ನು ಧರಿಸುತ್ತ ಕರದಿ ವೈಣವದಂಡವಿರದೆ ಪಿಡಿಯುತ್ತ (ಯಗಿಕ. ೧೮). (ನಾ). ೨. ಬಿದಿರಿನ ಕೋಲು; ಬೆತ್ತ. ೩. ಬಿದಿರಿನ ಕಾಳು ; "ಬಿದಿರಕ್ಕಿ" : (ನಾಚಿರಾ. ೬). ೪. ಬಿದಿರಿನ ಕೆಲಸ ಮಾಡುವವನು ; ಮೇದರ. ೫. ಕೊಳಲು. ೬. ಒಂದು ಬಗೆಯ ಮರ ಮತ್ತು ಅದರ ಹಣ್ಣು : "ಅಶ್ವತ್ಥಂ, ವೈಣವಂ . . . ಬಾರ್ಹತಂ – ಈ ೬ ಕ್ರಮವಾಗಿ ಅಶ್ವತ್ಥಾದಿ ವೃಕ್ಷಗಳ ಫಲಗಳಿಗೆ ಹೆಸರು" (ಸಿದ್ಧಾಂತಿ. ೧೧೫). [ಸಂ.]

**ವೈಣವಿಕ** (ನಾ). ಕೊಳಲನ್ನು ನುಡಿಸುವವನು ; ವೇಣುವಾದಕ : ಕೊಳಲು . . . ಶ್ವಾಸನಿಯಮವನ್ನು ಸಾಧಿಸಿದ ವೈಣವಿಕನ ಕೈಯಲ್ಲಿ ಇದು ಬಹಳ ಮೃದುಮಧುರ ಗಂಭೀರವಾಗಬಲ್ಲುದು (ಗಾನಕ. ೯೮). [ಸಂ.]

**ವೈಣಿಕ** (ನಾ). ವೀಣೆಯನ್ನು ನುಡಿಸುವವನು ; ವೀಣಾವಾದಕ : ರಾಮಸ್ವಾಮಿದೀಕ್ಷಿತರು ಉದ್ದಾಮಗಾಯಕರು ಹಾಗೂ ವೈಣಿಕರು (ಸಂಗೀತಂ. ೨೯೧) ; ನಾನೆ ವೀಣೆ, ನೀನೆ ತಂತಿ, ಅವನೆ ವೈಣಿಕ (ಪ್ರೇಮಕಾ. ೩೧-೨).

**ವೈಣಿಕಶಿಖಾಮಣಿ** = ವೀಣೆಯನ್ನು ನುಡಿಸುವವರಲ್ಲಿ ಅತ್ಯಂತ ಶ್ರೇಷ್ಠನಾದವನು ; ಒಂದು ಬಿರುದು : ನಾಲ್ವಡಿಕೃಷ್ಣರಾಜಒಡೆಯರು, ಶೇಷಣ್ಣನವರಿಗೆ 'ವೈಣಿಕಶಿಖಾಮಣಿ' ಎಂದು ಬಿರುದುಕೊಟ್ಟು, ಪಲ್ಲಕ್ಕಿಯಲ್ಲಿ ಅವರನ್ನು ಕೂರಿಸಿ . . . ಮೆರವಣಿಗೆಯಾಗಬೇಕೆಂದು ಅಪ್ಪಣೆಮಾಡಿದರು (ಸಂಗೀತಂ. ೨೭೦). [ಸಂ.]

**ವೈಣಿಕೆ** (ನಾ). ವೀಣೆಯನ್ನು ನುಡಿಸುವವಳು : ಸಭೆಯ ನಡುವೆ ಎತ್ತರವಾಗಿ ನಿರ್ಮಿಸಿದ್ದ ವೇದಿಕೆಯ ಮೇಲೆ, ವೈಣಿಕೆಯರಿಬ್ಬರಿಗೆ ಸ್ಥಳವೇರ್ಪಡಿಸಲಾಗಿತ್ತು (ಶಾಂತಲಾ. ೫೮). [ಸಂ. ವೈಣಿಕಾ]

**ವೈಣುಕ** (ನಾ). ೧. = ವೈಣವಿಕ. ೨. ಆನೆಯನ್ನು ನಡೆಸುವಾಗ ಅದನ್ನು ಅಂಕೆಯಲ್ಲಿಡಲು ಉಪಯೋಗಿಸುವ, ಕಬ್ಬಿಣದ ಮೊನಚಾದ ತುದಿಯುಳ್ಳ ಬಿದಿರಿನ ಕೋಲು : "ತೋತ್ರಂ ವೈಣುಕಮಱಿಗೆ" (ವಸ್ತುಕೋ. ೮೮-೩೫). [ಸಂ.]

**ವೈತಂಡವಾದ** (ನಾ). ನಿಷ್ಪ್ರಯೋಜಕವಾದ ವಾದ ; ಹುರುಳಿಲ್ಲದ ಮಾತು : ವೈತಂಡವಾದಿಗಳ ತಾಂಡವವು ನಡೆದಿಹುದು ತಂಡತಂಡಗಳಲ್ಲ ಇತ್ತಂಡವೇ (ಮುಕ್ತಕಂ. ೯೬-೧). [ಸಂ.]

**ವೈತಂಡಿಕ** (ನಾ). ೧. ಕಣ್ಕಟ್ಟುವಿದ್ಯೆಯನ್ನು ಬಲ್ಲವನು. ೨. ಜಗಳಗಂಟಿ ಮನುಷ್ಯ ; ವ್ಯಾಜ್ಯಮಾಡುವ ವ್ಯಕ್ತಿ : "ವೈತಂಡಿಕನಱಿ ಕುಹಕತೆಯಂ ಕೊಂಡಾಡುವನಿಂದ್ರಜಾಲಿಕಂ ತಾನಕ್ಕುಂ" (ವಸ್ತುಕೋ. ೬೬-೮೬). [ಸಂ.]

**ವೈತಂಸಿಕ** (ನಾ). ಪಶುಪಕ್ಷಿಗಳ ಮಾಂಸವನ್ನು ಮಾರಾಟಮಾಡುವವನು; ಕಸಾಯಿಗಾರ : "ವೈತಂಸಿಕಃ, ಸೌನಿಕಃ, ಕೌಟಿಕಃ, ಮಾಂಸವಿಕ್ರಯಾ – ಈ ೪ ಸೂನೆಗಾಱಂ" (ಹಲಾಯು. ೯೭-೪೪೧). [ಸಂ.]

**ವೈತನಿಕ** (ಗು). ೧. ವೇತನಕ್ಕೆ ಸಂಬಂಧಿಸಿದ ; ಸಂಬಳದಿಂದ ಕೂಡಿರುವ : 'ವೈತನಿಕನೌಕರಿ' ಪರಾ. (ನಾ). ೨. ಸಂಬಳದ ಆಧಾರದ ಮೇಲೆ ಜೀವಿಸುವವನು : "ಭೃತಕಂ ವೈತನಿಕನಱಿಗೆ" (ವಸ್ತುಕೋ. ೬೪-೭೨). [ಸಂ.]

**ವೈತನಿಕನೌಕರಿ** (ನಾ). ವೇತನ ಪಡೆದು ಮಾಡುವ ಕೆಲಸ ; ಸಂಬಳ ತೆಗೆದುಕೊಂಡು ಮಾಡುವ ಉದ್ಯೋಗ : ಅವರ ಪದಕ್ಕೆ ಸಂಬಂಧಪಟ್ಟ, ಕರ್ತವ್ಯಗಳಿಂದ ಹೊರಗಾದ ಯಾವುದಾದರೂ ವೈತನಿಕನೌಕರಿಯನ್ನು ಮಾಡುತ್ತಿದ್ದರೆ (ಭಾಭಾಸ. ೧೮೩). [ವೈತನಿಕ + ನೌಕರಿ]

**ವೈತರಣಿ** (ನಾ). ೧. ಓಡ್ರ ದೇಶದಲ್ಲಿ ಹರಿಯುವ ಒಂದು ನದಿಯ ಹೆಸರು. ೨. ನರಕದಲ್ಲಿರುವುದೆಂದು ನಂಬಲಾದ ಒಂದು ನದಿ : ಪ್ರವಾಹಾತ್ಯುಷ್ಣತಾಪ ಹಸಿತಪ್ರಲಯಕಾಲಪ್ರೌಢತರತರಣಿಯಂ ವೈತರಣಿಯಂ ಪೊಕ್ಕಾಗಳ್ (ಆದಿಪು. ೫-೮೭) ; ಶರಣರ ಸಂಬಂಧವನಱಿದ ಬಳಿಕ ಮರಳಿ ಭವಿಯ ಬೆರಸಬಾರದು ಬ್ರಹ್ಮಹತ್ಯ ಭ್ರೂಣಹತ್ಯ ವೈತರಣಿ ದುರ್ಗತಿ ಪಂಚಮಹಾಪಾತಕದಿಂದಧಿಕ ನೋಡಾ (ಬಸವ. ೬೭೦). [ಸಂ. ವೈತರಣೀ]

**ವೈತಸವೃತ್ತಿ** (ನಾ). ಅಧಿಕಾರಿ, ವೈರಿ ಮುಂತಾದವರ ಎದುರು (ಬೆತ್ತದಂತೆ ಬಾಗಿ) ನಮ್ರವಾಗಿ ವರ್ತಿಸುವುದು : ಭೂಜಾಂಗವೃತ್ತಿಗೊಂದಿ ಪರಾಜಿತಮ ಕಾಣಲಾಗ ವೈತಸವೃತ್ತಿ ವ್ಯಾಜಮನಿತಲ್ಲದಾರ್ಗಪರಾಜಿತ ದಮಿತಾರಿಯೊಳ್ ಮಹೀಮಂಡಲದೊಳ್ (ಶಾಂತಿಪು. ೨-೫೧). [ಸಂ.]

**ವೈತಸಾವಳಿ** (ನಾ). ಬೆತ್ತದ ಗಿಡಗಳ ಗುಂಪು : ಭೂಜಾಂಗವೃತ್ತಿಯಂ ಬಿಸುಟಾ ಜಗದಧಿಪಂಗೆ ವೈತಸಾವಳಿ ಪರಿವಂದಾ ಜಳಕೆಱಗುವವೋಲ್ ನಯಭಾಜನರೆಱಗಿದ ರಜಂಹರೆನಿಸಿದ ಸುಹೃರ್ (ಶಾಂತಿಪು. ೧೦-೧೫೯). [ಸಂ. ವೈತಸಾವಲಿ]

**ವೈತಾನ** (ಗು). ೧. ಯಜ್ಞಕ್ಕೆ ಸಂಬಂಧಿಸಿದ ; ಯಾಗಕ್ಕೆ ಸಂಬಂಧಪಟ್ಟ : ನವರತುನಮಯ ವರ್ಣವೇದಿಕೆ ದುಕೂಲದುರುನವಕವೈತಾನಭೃಂಗಾರಕಲಶಾಳಿಗಳ ವಿವಿಧಪೂತಾಂಬುಪೂರಿತಕುಂಭಗಳ ಮಣಿದೀಪಂಗಳೊಲವಿನಿಂದ . . . ಉದ್ವಾಹ ಮಂಟಪ ತೋರ್ದುದು (ವೆಂಕಾರಾ. ೧-೨೧-೨೨). 'ವೈತಾನವಹ್ನಿ' ಪರಾ. (ನಾ). ೨. ಯಾಗ ; ಯಜ್ಞ. ೩. ಹವಿಸ್ಸು. [ಸಂ.]

**ವೈತಾನವಹ್ನಿ** (ನಾ). ಯಜ್ಞಕಾರ್ಯಕ್ಕಾಗಿ ಪ್ರತಿಷ್ಠಾಪಿಸಿದ ಅಗ್ನಿ ; ಹೋಮಾಗ್ನಿ : ವೇದಿಯ ಸುತ್ತಲ್ ನೆಲೆಗೊಂಡಾದಂ ಸಮಿಧೆಗಳನಾಂತು . . . ಅಘಪರಿಹಾರಕಮಾದೀ ವೈತಾನವಹ್ನಿ ಸಲಹುಗೆ ನಿನ್ನಂ (ಶಾಕುಂತ. ೫೩-೮೬). [ಸಂ.]

**ವೈತಾಲಿ, ವೈತಾಳಿ** (ಗು). ೧. ಬೇತಾಳಕ್ಕೆ ಸಂಬಂಧಿಸಿದ. ೨. (ಆಲಂ) ಜೋರಾದ ; ಬಿರುಸಾದ : ಮುಗಿದ ಮೊಗ್ಗೆಯ ಬಾಯ ಮುತ್ತಿಟ್ಟು ತೆರೆಯಿಸುವೆ; ನೀ ಮೋಡಿಗಾಳಿ ವೈತಾಳಿ ಗಾಳಿ (ಕರುಶ್ರಾ. ೬೩-೧೨). (ನಾ). ೩. ಬೇತಾಳ. ೪. [ಛಂದ] ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ ಹದಿನಾಲ್ಕು ಮಾತ್ರೆಗಳೂ ಎರಡನೆಯ ಮತ್ತು ನಾಲ್ಕನೆಯ ಪಾದಗಳಲ್ಲಿ ಹದಿನಾರು ಮಾತ್ರೆಗಳೂ ಬರುವ ಒಂದು ಮಾತ್ರಾವೃತ್ತ ; ಮಾತ್ರಾಛಂದಸ್ಸಿನ ವರ್ಗಕ್ಕೆ ಸೇರಿದ ಮಿಶ್ರಜಾತಿಯ ಅರ್ಧಸಮವೃತ್ತ. **ವೈತಾಳಿ** : ೪. ಆಱುಮಾತ್ರೆಗಳಕ್ಕು ಮೋಜೆಯೊಳ್ ಕರಿ ಸಂಖ್ಯಾತದ ಮಾತ್ರೆ ಯುಗ್ಮದೊಳ್ ಮರುದಿಪ್ಪಲಗಂ ತದಂತದೊಳ್ ಬರೆ ವೈತಾಳಿ (ಛಂದೋಂಬು. ೩-೨೧೯). ೫. ಮಾಯಾವಿದ್ಯೆ ; ಮಾಂತ್ರಿಕವಿದ್ಯೆ : ಈಗಳಿನ ಮಾಯಾಸ್ತ್ರೀಯುಂ ವೈತಾಳಿಯೆಂಬುದಾತನ ವಿದ್ಯೆಯೆಂಬುದುಂ (ಚಾವುಂಪು. ೧೮೯). ೬. ಮಾಯಾವಿದ್ಯೆಯ ಅಧಿದೇವತೆ : ಅವರೊಳೊರ್ವಂ ವಿದ್ಯಾನಿಧಿ ಎಂಬ ವಿದ್ಯೆಯಿನಾ ವೈತಾಳಿಯಂ ಪ್ರಕಟಂ ಮಾಳ್ಪುದುಂ (ಚಾವುಂಪು. ೧೮೯) ; ಆಗಳೆ ಹರ್ಷೋತ್ಕರ್ಷ ದಿನಾ ಗಗನಚರಂ ಕರಾಳಿ ವೈತಾಳಿಯನಾ ಭೋಗಿ ಬರಿಸಲ್ಕೆ ಬಂದಿರ್ದೇಗೆಯ್ವುದೆನಲ್ಕೆ ವಿದ್ಯೆಗೆಂದನನಿಂದ್ಯಂ (ನೇಮಿಪು. ೫-೩೭). ೭. (ಆಲಂ) ಬಿರುಸಾದ ಗಾಳಿ ; ಬಿರುಗಾಳಿ : ಕುಂಭಮಾಸದೀ ಗಾಳಿ ಹಾನೆ ವೈತಾಳಿಯಾಗಿ ಬಂದು (ಸೂರ್ಯಪಾ. ೧೫-೧). [ಸಂ. ವೈತಾಲೀ]

**ವೈತಾಲಿಕ, ವೈತಾಳಿಕ** (ನಾ). ೧. ಪ್ರಾತಃಕಾಲದಲ್ಲಿ ರಾಜನನ್ನು ನಿದ್ರೆಯಿಂದ ಎಚ್ಚರಿಸುವವನು ; ಮಂಗಳಪಾಠಕ : ಗಾಯಕ ವಾದಕ ನರ್ತಕ ಕಥಕ ಪುಣ್ಯ ಪಾಠಕ ವೈತಾಳಿ[ಪಾಠಾಂ.ಳಿ]ಕನಿಕರಮುಮಂ ಕೊಟ್ಟು (ಆದಿಪು. ೪-೫೪ ವ). ೨. ಮಂತ್ರವಿದ್ಯೆಯನ್ನು ಬಲ್ಲವನು ; ಮಾಂತ್ರಿಕ. ೩. ಬೇತಾಳನ ಅನುಚರ. **ವೈತಾಳಿಕ** : ೧. ನೋಟ ಮನಭಿನಯಿಸಿಯಾಡಿ ತೋರ್ಪ ವೈತಾಳಿಕರಿಂ ಬೀಭತ್ಸರಸಮುಂ . . . ನೆಗಟುತ್ತಮಿರೆ

(ಜಗವಿ. ೨-೬೯ ವ) ; ನವವಿಧದ ವೈತಾಳಿಕರ ವರಯುವತಿಯರ ಭಾರಣೆಯ ಭೂಷಣರವದ ಮೇಳವು ಮುತ್ತಿ ಮುಸುಕಿತು ಚಾರುಚಪ್ಪರವ (ಕುವ್ಯಾಳ. ೧೨-೧೯). [ಸಂ.]

**ವೈತಾಲಿಕೆ, ವೈತಾಳಿಕೆ** (ನಾ). = ವೈತಾಲಿ ೪. **ವೈತಾಳಿಕೆ** : ಮೊದಲೊಳ್ ಪದಿನಾಲ್ಕ ರಡನೆಯದಱೊಳ್ ಪದಿನಾಱು ಮೂಱಱೊಳ್ ಪದಿನಾಲ್ಕಗ್ರದ ಪಾದದೆ ಪದಿನಾಱೆಂತು ದಯಿಪುದಱುವತ್ತು ಮಾತ್ರ ವೈತಾಳಿಕೆಗಂ (ಛಂದೋಂಬು. ೩-೨೧೯ ಅಡಿಪದ್ಯ).

[ಸಂ. ವೈತಾಲಿಕ]

**ವೈತಾಳ** (ಗು). ೧. ಬೇತಾಳಕ್ಕೆ ಸಂಬಂಧಿಸಿದ. ೨. ಮಾಯಾವಿದ್ಯೆಗೆ ಸಂಬಂಧಿಸಿದ: 'ವೈತಾಳವಿದ್ಯೆ' ಪರಾ . (ನಾ). ೩. ಬೇತಾಳ ; ಪಿಶಾಚಿ : ಮದಮತ್ಸರವೈತಾಳ ಸಂಪಾದನವಲ್ಲದೆ ಅನುಭಾವವೆಲ್ಲಿಯದೊ (ಬಸಷ. ೪೩-೧೦೭).

[ಸಂ. ವೈತಾಲ]

**ವೈತಾಳವಿದ್ಯೆ** (ನಾ). ಮಾಯಾವಿದ್ಯೆ : ಅಶನಿಘೋಷಂ . . . ವೈತಾಳವಿದ್ಯೆಯಂ ಸುತಾರೆಯ ರೂಪಿನೊಳಲ್ಲಿರಿಸಿ ಪೋದಂ ಇತ್ತಂ ಮಾಯಾಸುತಾರೆಯಂ ಕುಕ್ಕುಟಸರ್ಪಂ ಕೊಂದುದು (ಚಾಪುಂಪು. ೧೮೮). [ಸಂ. ವೈತಾಲವಿದ್ಯಾ]

**ವೈತಾಳಿ** 'ವೈತಾಲಿ' ನೋ.

**ವೈತಾಳಿಕ** 'ವೈತಾಲಿಕ' ನೋ.

**ವೈತಾಳಿಕೆ** 'ವೈತಾಲಿಕೆ' ನೋ.

**ವೈದಂಡಿಕ** (ನಾ). [ಕಾವ್ಯಮೀ] ಕಂದಗಳೂ ವೃತ್ತಗಳೂ ಇರುವ ಒಂದು ಬಗೆಯ ಪ್ರಾಚೀನ ಕಾವ್ಯಪ್ರಕಾರ ; ಬೆದಂಡೆ : ''ವೈದಂಡಿಕಂ ನೋಡಲ್ ಬೆದಂಡೆಯೆಂದಕ್ಕು'' (ಕಬ್ಬಿಕೈ. ೮೦) ; ಪರಮೇಶ್ವರನ ಮಹಿಮಾತಿಶಯಮಂಗಳಂಗಳೊಳಂ ಮುಕ್ತಕಂ ಕುಲಕಂ ಕೋಶಂ ಸಂಘಾತಮೆಂಬ ರಚನಾವೈಚಿತ್ರ್ಯಚಿತ್ರಾಯತನ ವೈದಂಡಿಕ ಪ್ರಬಂಧ ಬಂಧುರಪದ್ಯಬಂಧದೊಳಂ . . . ಲೀಲೆಯಂ ತಳೆದು (ಅನಂಪು. ೧೦-೨೮ ವ) ; ಬೆದಂಡೆ –ವೈದಂಡಿಕಂ (ಶಮದ. ಪರಿ. ೨). 'ಬೆದಂಡೆ ' ಪರಾ. [ಸಂ. ವೈದಂಡಿಕಾ]

**ವೈದಗ್ಧ್ಯ** (ನಾ). ೧. ಪಾಂಡಿತ್ಯ. ೨. ಜಾಣತನ. ೩. ಶಕ್ತಿ ; ಸಾಮರ್ಥ್ಯ. ೪. ರಚನಾಕೌಶಲ. ೫. ಮೋಸ ; ಕಪಟ. [ಸಂ.]

**ವೈದಗ್ಧ್ಯಜನ**(ನಾ). ವಿದ್ವಜ್ಜನ : ದರ್ಶನಪ್ರಸ್ತಾವಘಟನಾವಸರಪ್ರಾಪ್ತವೈದಗ್ಧ್ಯಜನ ಸಂಭಾಷಣಗೋಷ್ಠೀನಿರ್ದೇಶ . . . ಸಮಾನೋದಿತಕಾಲದೊಳ್ (ಶಾಂತಿಪು. ೯-೧೯೨ ಫ).

[ಸಂ.]

**ವೈದರ್ಭ** (ಗು). ೧. ವಿದರ್ಭದೇಶಕ್ಕೆ ಸೇರಿದ, – ಸಂಬಂಧಿಸಿದ. (ನಾ). ೨. ವಿದರ್ಭದೇಶದ ರಾಜ. ೩. ದಮಯಂತಿಯ ತಂದೆ ; ಭೀಮರಾಜ : ಅಟ್ಟಿದಂ ಧರಣೀಶರ್ಗೆಸವೋಲೆಯಂ ಚರರುಮಂ ವೈದರ್ಭಭೂಪಾಲಕಂ (ನಳಚಂ. ೨೨೨). ೪. ರುಕ್ಮಿಣಿಯ ತಂದೆ ; ಭೀಷ್ಮಕ. ೫. ಭೋಜರಾಜ. ೬. ಒಸಡಿನ ಮೇಲೆ ಏಳುವ ಒಂದು ಬಗೆಯ ಕುರು : ವೈದರ್ಭ ಎಂಬ ದಂತಮೂಲರೋಗ ರಕ್ತವಾತಗಳಿಂದ ಹುಟ್ಟುವುದು (ವೈದ್ಯಸಾ. II, ೧೨೪). ೭. [ಕಾವ್ಯಮೀ] ಮೂರು ಬಗೆಯ ಕಾವ್ಯಮಾರ್ಗಗಳಲ್ಲಿ ಒಂದು : ವೈದರ್ಭಗೌಡಮಾರ್ಗವಿಭೇದಂ ಬಗೆವೊಡೆ ಗತಾನುಗತಿಕಂ (ಕಾವ್ಯಾವ. ೫೨೨) ; ಪರಿಚ್ಛೇದದ ಬಹುಭಾಗವು ವೈದರ್ಭ, ಗೌಡ ಎಂಬ ಎರಡು ಕಾವ್ಯಮಾರ್ಗಗಳ ವಿಭೇದವನ್ನು ಪ್ರತಿಪಾದಿಸುವುದಕ್ಕೇ ಮೀಸಲಾಗಿದೆ (ಭಾರಮೀ. ೨೯). [ಸಂ.]

**ವೈದರ್ಭಮಾರ್ಗ** (ನಾ). [ಕಾವ್ಯಮೀ] ಕಾವ್ಯಬಂಧದಲ್ಲಿರುವ ಒಂದು ನಿರ್ದಿಷ್ಟವಾದ ಶೈಲಿ : ಶ್ಲೇಷ, ಪ್ರಸಾದ, ಸಮತೆ . . . ಸಮಾಧಿ — ಈ ಹತ್ತು ಗುಣಗಳೇ ವೈದರ್ಭಮಾರ್ಗದ ''ಪ್ರಾಣ'' (ಭಾರಮೀ. ೨೯). [ಸಂ.]

**ವೈದರ್ಭರೀತಿ** (ನಾ). = ವೈದರ್ಭ ೭ : ಗೌಡರೀತಿ ವೈದರ್ಭರೀತಿ ಪಾಂಚಾಲರೀತಿ ತ್ರಯಸಮೇತಮಾಗಿ (ವಿವೇಕ. ೧೭೯). [ಸಂ.]

**ವೈದರ್ಭಿ** (ನಾ). ೧. ವಿದರ್ಭದೇಶದ ರಾಜಕುಮಾರಿ ; ಭೀಮರಾಜನ ಮಗಳು ; ದಮಯಂತಿ : ತನು ರೋಮಾಂಚನವಪ್ಪುಕೆಯ್ಯಲಧರಂ ಬೆಳ್ಪಾಗಲ್ . . . ಚಿತ್ತ ಕಾಂತನ ಸಂಗಂಬಡೆದಂತೆ ವೈಮೆವಡೆದಳ್ ವೈದರ್ಭಿ ವಿಶ್ರಾಂತಿಯಿಂ (ನಳಚಂ. ೧೪೧). ೨. ಭೀಷ್ಮಕರಾಜನ ಮಗಳು ; ರುಕ್ಮಿಣಿ. ೩. = ವೈದರ್ಭ ೭ : ಗೌಡಿ ವೈದರ್ಭಿ ಪಾಂಚಾಲಿ ಎಂಬ ರೀತಿತ್ರಯಂಗೂಡಿ . . . ಪಾಡಿ ಮೋಹಿಸುವ ಗಾಯಕರಿಂ (ವಿವೇಕ. ೧೮೯). [ಸಂ. ವೈದರ್ಭೀ]

**ವೈದರ್ಭೀರೀತಿ** (ನಾ). = ವೈದರ್ಭ ೭ : ಶ್ಲೇಷ ಪ್ರಸಾದಾದಿ ಹತ್ತು ಗುಣಗಳೂ ಇರುವುದು ವೈದರ್ಭೀರೀತಿಯೆಂದೂ ಗೌಡೀರೀತಿ ಪ್ರಾಯಃ ಇದಕ್ಕೆ ವಿರುದ್ಧವಾಗಿರುವು ದೆಂದೂ ದಂಡಿಯು ಹೇಳಿದ್ದಾನೆ (ಕೃಪಿಡಿ. ೨೨೧). [ಸಂ.]

**ವೈದಿಕ** (ಗು). ೧. ವೇದಕ್ಕೆ ಅನುಸಾರವಾದ ; ವೇದದಲ್ಲಿ ಹೇಳಿರುವ ; ವೇದೋಕ್ತ : ಸಕಳಲೌಕಿಕಸಾಮಾಯಿಕೋರುವೈದಿಕವಿಶೇಷವಿವೇಕಪರಾಯಣಂ ಪ್ರಕಟಿತೋಕ್ತಿವಿವಿಕ್ತಕಳಾಕಳಾಪಕ[ನು]ಪಾಹಿತಸಾಹಿತ್ಯವಿದ್ಯೆಯೊಳ್ (ಕವಿರಾ. ೩-೨೧೮) ; ಶ್ರೀಕಾಂತಾಪತಿ . . . ಲೌಕಿಕವೈದಿಕಶಾಸ್ತ್ರವಿವೇಕಕಲಾಭಿಜ್ಞನೆನಿಸಿ ನೆಗಟ್ದಂ ಧರೆಯೊಳ್ (ಛಂದೋಂಬು. ೧-೨೦). ೨. ವೇದಾಧ್ಯಯನ ಮಾಡಿದ ; ವೇದಪಾರಂಗತನಾದ ; ಶಾಸ್ತ್ರವನ್ನು ಅನುಸರಿಸುವಂಥ : ಆ ಗುಡಿಸಲುಗಳಲ್ಲಿ ವೈದಿಕಬ್ರಾಹ್ಮಣರು, ಶಿವಭಕ್ತರಾದ ತಮ್ಮಡಿಗಳು . . . ಜಂಗಮರುಗಳು ಇದ್ದರು (ಶ್ರೀರಾಯ. ೮). ೩. ಪವಿತ್ರವಾದ ; ಪರಿಶುದ್ಧವಾದ : ಲಲಿತ ವೈದಿಕಧರ್ಮ ಮಾರ್ಗವನಳಿದು ಹೆಚ್ಚಿದ ಕಾಲನೇಮಿಯ ತಲೆಯ ಕೊಂಡನು ಚಕ್ರದಲಿ ದೈತ್ಯಾರಿ ಪೂರ್ವದಲಿ (ಕುವ್ಯಾಗ. ೫-೮). ೪. ಗೊಡ್ಡು ಸಂಪ್ರದಾಯದ ; ಕಂದಾಚಾರವುಳ್ಳ : ಒಲ್ಲೆನೆ ವೈದಿಕ ಗಂಡನ ನಾನೆಲ್ಲಾದರು ನೀರ ದುಮುಕುವೆನಮ್ಮ (ಪುರಂದ. ೨-೧೮೫ ಪಲ್ಲವಿ). (ನಾ). ೫. ವೇದ : ತಾಂತ್ರಿಕ ವೈದಿಕವೆಂಬೆರಡು ಪೂಜಾಭೇದಗಳಂ . . . ಪಂಚಶುದ್ಧಿಗಳಂ ವಿಸ್ತರಿಸುವದಱಲ್ಲಿ . . . ಧ್ಯಾನಾದಿ ರಚನಂಗೈವುದೇ ಆತ್ಮಶುದ್ಧಿಯೆನಿಸುವುದು (ವಿವೇಕ. ೯೨) ; ಭಾರತೀಯ ದಾರ್ಶನಿಕಪದ್ಧತಿಯ ಬೆಳವಣಿಗೆಯಲ್ಲಿ ವೈದಿಕ ಮತ್ತು ಅವೈದಿಕಗಳೆಂಬ ಮುಖ್ಯ ವಿಚಾರಧಾರೆಗಳು ಪ್ರವಹಿಸಿವೆ (ತತ್ವಪ್ರಾ. ೧೯). ೬. ವೇದೋಕ್ತವಾದ ಕ್ರಮ, – ವಿಧಿ : ವಿಪ್ರರ ಕರಸಿ ವೈದಿಕದಿಂದ ರಚಿಸಿದರಗ್ನಿಯನು ಮಾಡಿದರು ಭಾಷೆಗಳ (ಕುವ್ಯಾದ್ರೋ. ೨-೬) ; ವೈದಿಕ ತಿಳಿಯದಿದ್ದರೂ ಬಯ್ದಾಡಲಿಕ್ಕೆ ಬಲ್ಲ (ಗಾದ). ೭. ವೇದಪಾರಂಗತನಾದ ಬ್ರಾಹ್ಮಣ ; ವೇದಾಧ್ಯಯನ ಮಾಡಿದ ಬ್ರಾಹ್ಮಣ : ಜನದ ಕವಿತೆಗೆ ಶಿಲ್ಕುವವೆ ಬಳಿಕ್ಕಾಘ್ರಾಯ ಎನುತಲಾಘ್ರಾಯವಿಂದಂತಿ ವೇದಾಶ್ವಾನವೆನಲಾ ಸ್ವಯಂಭುನಿತ್ಯಂ ಶಂಭುವುಳಿದರಲ್ಲೆಂಬರ್ಕೈ ವೈದಿಕರಲ್ಲೆ (ವೀಶೈಪು. ೪-೪-೫೩) ; ಹದಿಬದೆಯರ ಪೆಸರ್ಗೊಂಡು ಪೊಗಳ್ವುದು ವಿದಿತವೈಸಲೆ ವೈದಿಕರಿಗೆ (ಹದಿಬ. ೨-೧೫). ೮. ಆಚಾರಗಳನ್ನು ಶ್ರದ್ಧೆಯಿಂದ ಪಾಲಿಸುವವನು; ಸಂಪ್ರದಾಯನಿಷ್ಠ. ೯. ಕಾಲಕ್ಕೆ ತಕ್ಕ ನಾಗರಿಕತೆಯಿಲ್ಲದ ಮನುಷ್ಯ ; ಪುಳಿಚಾರು : 'ವೈದಿಕಗೊಡ್ಡು' ಪರಾ. ೧೦. ಪಿತೃಕಾರ್ಯ ; ಶ್ರಾದ್ಧ : ನಾಳೆ ನಮ್ಮ ತಾತನವರ ವೈದಿಕ (ರೂಢಿ). [ಸಂ.]

**ವೈದಿಕಕ್ರಿಯೆ** (ನಾ). ವೇದೋಕ್ತವಾದ ಆಚರಣೆ ; ಶಾಸ್ತ್ರದಲ್ಲಿ ಹೇಳಿರುವ ವಿಧಿ : ತಾನು ಮಾಡಿದ ಕರ್ಮಗಳ ದುಷ್ಟಫಲಗಳನ್ನು ಸರಿಪಡಿಸಲು ಬೇರೆಯವರಿಗೆ ಸಾಧ್ಯವಿದೆ ಎಂಬುದು ಶ್ರಾದ್ಧ ಹಾಗೂ ಇತರ ವೈದಿಕಕ್ರಿಯೆಗಳು ತೋರಿಸುತ್ತವೆ (ತತ್ವಪ್ರಾ. ೨೭). [ಸಂ. ವೈದಿಕಕ್ರಿಯಾ]

**ವೈದಿಕಗಾನ** (ನಾ). ವೇದಗಳಲ್ಲಿ ಕಂಡುಬರುವ ಸಂಗೀತ ; ವೇದಗಾನ : ವೇದಯುಗದಲ್ಲಿ ಈ ಬಗೆಯ ವೈದಿಕಗಾನವಿದ್ದರೂ ಲೌಕಿಕವಾದ ಸಂಗೀತವೂ ಸಮಪ್ರಮಾಣದಲ್ಲಿದ್ದಿರಬೇಕು (ಭಾರದ. ೫೩೭) ; ಭಾರತೀಯಸಂಗೀತ, ಸ್ಥೂಲವಾಗಿ ಎರಡು ರೀತಿಯಲ್ಲಿದೆ – ೧. ವೈದಿಕಗಾನ ಅಥವಾ ಪವಿತ್ರಗಾನ (ಸಂಗೀಚಂ. ೬೫).

[ಸಂ.]

**ವೈದಿಕಗೊಡ್ಡು** (ನಾ). ಮಂತ್ರಾರ್ಥವನ್ನರಿಯದೆ ಕೇವಲ ಆಚಾರಗಳನ್ನು ಮಾತ್ರ ಅನುಸರಿಸುವವನು ; ಕಂದಾಚಾರದವನು : ಮೊನ್ನೆ ನನ್ನ ಗೆಳೆಯರು ಬಂದಾಗ ಕುಡಿಯುವುದಿಲ್ಲವೆಂದು ಹಟಹಿಡಿದೆ. ಆಗ ಅವರೆಲ್ಲರು ನಿನಗೆ ಏನೆಂದ ರೆಂಬುದನ್ನುಬಲ್ಲೆಯಾ? . . . ವೈದಿಕಗೊಡ್ಡೆಂದು ನಾಮಕರಣ ಮಾಡಿ ನಕ್ಕರು (ಜಯಂತ. ೧೦೪). [ವೈದಿಕ + ಗೊಡ್ಡು]

**ವೈದಿಕಛಂದಸ್ಸು** (ನಾ). ವೇದಗಳಲ್ಲಿ ಕಂಡುಬರುವ ಛಂದಸ್ಸು ; ಅಕ್ಷರ ನಿಯಮಕ್ಕೊಳಪಟ್ಟ ಛಂದಸ್ಸು : ಸಂಸ್ಕೃತದಲ್ಲಿ ವೈದಿಕಛಂದಸ್ಸೆಂದೂ ಲೌಕಿಕ

ಛಂದಸ್ಸೆಂದೂ ಎರಡು ವಿಧ. ವೈದಿಕಛಂದಸ್ಸು ವೇದಗಳಲ್ಲಿ ಕಾಣುವುದು (ಕೈಪಿಡಿ. ೧೦೫) ; ಅಕ್ಷರ ನಿಯಮಕ್ಕೊಳಗಾದ ವೈದಿಕಛಂದಸ್ಸಿನಲ್ಲಿ ಪ್ಲುತಕ್ಕೆ ಮೂರುಮಾತ್ರೆಯ ಲೆಕ್ಕಾಚಾರವಿದೆ (ಸಂಶೋಧ. ೧೦೩). **[ಸಂ. ವೈದಿಕಛಂದಸ್]**

**ವೈದಿಕತೇಜಸ್ಸು** (ನಾ). ಬ್ರಹ್ಮಜ್ಞಾನದ ವರ್ಚಸ್ಸು : ಒಂದೇ ಜಗಿತಕ್ಕೆ ಅವನು ಕರ್ಮಠತನದತ್ತ ಜಗಿದನು . . . ಮುಖವು ವೈದಿಕತೇಜಸ್ಸಿನಿಂದ ಕಂಗೊಳಿಸತೊಡಗಿತು (ಗಂಮಾಯಿ. ೨೯೫). **[ಸಂ. ವೈದಿಕತೇಜಸ್]**

**ವೈದಿಕದರ್ಶನ** (ನಾ). ವೇದದ ಸಾರವನ್ನು ಹೇಳುವ ಶಾಸ್ತ್ರ : ಭರತಖಂಡದಲ್ಲಿ ಆರು ವೈದಿಕದರ್ಶನಗಳು ಪ್ರಸಿದ್ಧವಾಗಿವೆ (ಭಾರದ. ೧೫೦). **[ಸಂ.]**

**ವೈದಿಕಪದ್ಧತಿ** (ನಾ). ವೇದಗಳಲ್ಲಿ ಪ್ರತಿಪಾದಿತವಾಗಿರುವ ಧರ್ಮ,- ಮಾರ್ಗ : ವೈದಿಕಪದ್ಧತಿಗಿಂತಲೂ ಪ್ರಾಚೀನವಾದ ಪದ್ಧತಿ ಯಾವುದೂ ಕಂಡು ಬರುವುದಿಲ್ಲ (ಹಿಂದಸಾ. ೧೫೨). **[ಸಂ.]**

**ವೈದಿಕಮತ** (ನಾ). ವೇದದಲ್ಲಿ ಹೇಳಿರುವ ಮತ ; ವೇದೋಕ್ತಪಂಥ : ಪೂರ್ವಕಾಲದಲ್ಲಿ ವೈದಿಕಮತವೂ ಔಪನಿಷದಮತವೂ ಸ್ವತಂತ್ರಗಳಾಗಿ ಶುದ್ಧವಾಗಿ ಮಿಶ್ರವಿಲ್ಲದೆ ಇದ್ದುವು (ಹಿಂದಸಾ. ೧೭೩) ; ವೈದಿಕಮತವು ಭೂತಪೂಜೆಯಿಂದ ಆರಂಭವಾಯಿತೋ ಅಥವಾ ದೇವತಾಪೂಜೆಯಿಂದ ಆರಂಭವಾಯಿತೋ ಹೇಳಲು ಸಾಧ್ಯವಾಗಲಿಲ್ಲ (ಭಾತತ್ತ್ವ. ೩೫). **[ಸಂ.]**

**ವೈದಿಕವಾಙ್ಮಯ** (ನಾ). ವೇದದಲ್ಲಿರುವ ಸಾಹಿತ್ಯ ; ವೇದ : ವೈದಿಕವಾಙ್ಮಯದಲ್ಲಿ ಉಪನಿಷತ್ತುಗಳು ಬಹಳ ಮಹತ್ವಪೂರ್ಣ ಸ್ಥಾನವನ್ನು ಪಡೆದಿವೆ (ಭಾರದ. ೩೫). **[ಸಂ.]**

**ವೈದಿಕವಿದ್ಯೆ** (ನಾ). ಪೌರೋಹಿತ್ಯ ಮುಂತಾದ ವೇದಸಂಬಂಧವಾದ ವಿದ್ಯೆ : 'ಈ ವೈದಿಕವಿದ್ಯೆಯಲ್ಲೇನಿದೆ ಮಣ್ಣು? ನನ್ನ ಮಗ ದೊಡ್ಡ ಸಾಹೇಬನಾಗಬೇಕು' ಎಂಬ ಹಂಬಲ ಶಾಲಬ್ಬೆಯದು (ಹೊಸಕ್ಕಿ. ೧೭) ; ರಾಮಭಟ್ಟರು ಎಂತು ವೈದಿಕವಿದ್ಯೆಗೆ ಶಾಸ್ತ್ರಿಗಳಂತು ಲೌಕಿಕಕೆ (೫೦ಚಾಪ. ೧೭-೭೪). **[ಸಂ. ವೈದಿಕವಿದ್ಯಾ]**

**ವೈದಿಕವೃತ್ತಿ** (ನಾ). ಪೌರೋಹಿತ್ಯ ಮುಂತಾದ ವೈದಿಕಮಾರ್ಗದ ವಿಧಿಗಳನ್ನು ಮಾಡಿಸುವ ಕೆಲಸ : ವೈದಿಕವೃತ್ತಿಯನೆ ಎತ್ತಿ ಅವ ಒದನಕೆ ಮನೆಮನೆಯ ಸುತ್ತಿ (ಪುರಂದ. ೫-೯೩-೫) ; ಅಪ್ಪನದು ಹೀಗೆ ವೈದಿಕವೃತ್ತಿಯಾದರೆ ಶ್ಯಾಮಕಕ್ಕನದು ಸಂಪೂರ್ಣಲೌಕಿಕ (ಹೊಸಕ್ಕಿ. ೨೪೯). **[ಸಂ.]**

**ವೈದಿಕಸಂಪ್ರದಾಯ** (ನಾ). ವೇದೋಕ್ತವಾದ ರೀತಿ , — ಪದ್ಧತಿ : ವೈದಿಕ ಸಂಪ್ರದಾಯದ ಬೆಳವಣಿಗೆಗೆ ಆಗಾಗ ಅಡ್ಡಿ ಆತಂಕಗಳು ಒದಗಿವೆ (ಭಾರದ. ೨೮) ; ಪ್ರಾಚೀನಕಾಲದಿಂದಲೂ ವೈದಿಕಸಂಪ್ರದಾಯಕ್ಕೆ ಸೇರಿದ ಶೈವವಲ್ಲದ ಸಿದ್ಧಾಂತಗಳಿಗೆ ವಿರುದ್ಧವಾಗಿ ಶೈವಸಂಪ್ರದಾಯಗಳು ಅನುಸರಿಸಿಕೊಂಡು ಬರುತ್ತಿವೆ (ಭಾತತ್ತ್ವ. ೬೦೮). **[ಸಂ.]**

**ವೈದಿಕಸಂಸ್ಕೃತಿ** (ನಾ). ವೇದಗಳಿಗೆ ಸಂಬಂಧಿಸಿದ ಸಂಸ್ಕೃತಿ: ಭಾರತೀಯ ಸಂಸ್ಕೃತಿಯನ್ನು ವೈದಿಕಸಂಸ್ಕೃತಿ ಎಂದು ಹೇಳುವುದರಲ್ಲಿ ಔಚಿತ್ಯವಿದೆ (ಋಗ್ಸಾರ. ೯೭ ಪೀಠಿಕೆ). **[ಸಂ.]**

**ವೈದಿಕಸಿದ್ಧಾಂತ** (ನಾ). ವೇದಗಳಲ್ಲಿ ಹೇಳಿರುವ ತತ್ತ್ವ : ಬೌದ್ಧತತ್ತ್ವ ಜೈನಸಿದ್ಧಾಂತಗಳ ಪ್ರವಾಹದ ಎದುರಿಗೆ ವೈದಿಕಸಿದ್ಧಾಂತವನ್ನು ನಿಲ್ಲಿಸಲು ಯತ್ನಿಸಿದ ಶಂಕರಾಚಾರ್ಯರ ಅದ್ವೈತಮತ . . . ಬೌದ್ಧತತ್ತ್ವಕ್ಕೆ ಸಮೀಪ ಎಂಬ ಭಾವನೆ ಬೆಳೆಯಿತು (ಭಾರದ. ೨೯೭). **[ಸಂ.]**

**ವೈದಿಕಾಗಮ** (ನಾ). ವೇದೋಕ್ತತತ್ತ್ವಗಳಿಗೆ ಅನುಸಾರವಾಗಿರುವ ಆಗಮ ; ವೈಷ್ಣವ ಆಗಮಗಳಾದ ವೈಖಾನಸ ಮತ್ತು ಪಾಂಚರಾತ್ರ ಆಗಮಗಳಲ್ಲಿ ಒಂದು : ವಿಶ್ವದ ವಿಶಿಷ್ಟಕಲೆಗಳ ಮಾತೃಕೆಯಾಗಿರುವ ವೈಖಾನಸಾಗಮವು ವೈದಿಕಾಗಮವೆಂದೇ . . . ಪರಿಗಣಿತವಾಗಿದೆ (ಭಾರದ. ೧೭೬). **[ಸಂ.]**

**ವೈದಿಕೋಕ್ತಿ** (ನಾ). ವೇದದಲ್ಲಿ ಹೇಳಿರುವ ಮಾತು : ವೈದಿಕೋಕ್ತಿಗಳಲಿ ಹರಿಶ್ಚಂದ್ರಾದಿ ರಾಯರು ರಾಜಸೂಯದೊಳಾದರನಿಬರೊಳಗ್ಗಳೆಯರು (ಕುವ್ಯಾಸ. ೧-೮೭). **[ಸಂ.]**

**ವೈದೀಕ** (ಗು). ೧. ಪೌರೋಹಿತ್ಯ ಮುಂತಾದ ವೈದಿಕಸಂಪ್ರದಾಯವನ್ನು ಅನುಸರಿಸುವ : ಹತ್ತು ಮನೆಯ ಪುರೋಹಿತನಾಗಿ ಕೋಟೇಶ್ವರದಲ್ಲೆ ವೈದೀಕ ಬ್ರಾಹ್ಮಣನಾಗಿ ಬಾಳಿದ (ದೇವಹಂ. ೩೧). (ನಾ) ೨. = ವೈದಿಕ ೭ : ವೈದೀಕರಾದ ನಮ್ಮ ತಂದೆಯವರು ಬೆಂಗಳೂರಿಗೆ ಬರುವರೆಂದು ವದಂತಿ (ಗರುಡಾ. ೧೪). ೩. ಶ್ರಾದ್ಧ; ತಿಥಿ : ಶಾಸ್ತ್ರಿಗಳವರು ವೈದೀಕಕ್ಕೆ ಬರಲು ಒಪ್ಪಿಕೊಂಡರು (ರೂಢಿ). [< ಸಂ. ವೈದಿಕ]

**ವೈದುಷ್ಯ** (ನಾ). ಪಾಂಡಿತ್ಯ ; ವಿದ್ವತ್ತು : ವೈದುಷ್ಯದಿಂ ಪೂಜ್ಯನಾಗದ ವಿಪ್ರನಂತೆ . . . ಅಖಿಳಬಾಂಧವರೊಡನೆ ಬದುಕದ ಮನುಷ್ಯಸಂಸಾರದಿಂದೇನು (ಜೈಮಿಭಾ. ೨-೧೮) ; ಷಡಕ್ಷರಿಯ ಕೃತಿಗಳಲ್ಲಿ ಆಶ್ಚರ್ಯಕಾರಕವಾದ ಪ್ರತಿಭೆ ಆಳವಾದ ಜೀವನವನ್ನು ಸ್ಪರ್ಶಿಸದೆ ವೈದುಷ್ಯದ ಇಲ್ಲವೆ ಚಮತ್ಕೃತಿಯ ರೂಪ ತಾಳಿರುವುದು ಹೆಚ್ಚು (ಕಸಾಚ. ೩೫೪). **[ಸಂ.]**

**ವೈದೂರ್ಯ** (ನಾ). ನವರತ್ನಗಳಲ್ಲಿ ಒಂದು : ಬೆಳಗುತಿಹ ಗೋಮೇಧಿಕದ ಕವಾಟಗಳೆಸೆದು ಪೊಳೆವುತಿಹ ಮಾಣಿಕ್ಯಕಲಶಗಳ ವೈದೂರ್ಯಲೋವೆಗಳ ಗಾಡಿಯಿಂದ . . . ಕೌತುಕಂಬಡೆದಿರ್ದುದು (ವೆಂಕಾರಾ. ೧-೨೦-೧೧). **[ಸಂ.]**

**ವೈದೃಶ್ಯ** (ನಾ). ಪ್ರತ್ಯೇಕತೆ ; ವಿಭಿನ್ನತೆ : ಈ ಮಹಾವಜ್ರದ ಕಾಂತಿಯು ವೈದೃಶ್ಯದಿಂದ ನಮ್ಮ ಗಮನವನ್ನು ಸೆಳೆಯಲೆಂಬಂತೆ . . . ಮಿನುಗುತ್ತಿದೆ (ನಕ್ಷತ್ರ. ೧೧). **[ಸಂ.]**

**ವೈದೇಶಿಗ** (ನಾ). ಹೊರನಾಡಿನವನು ; ಪರದೇಶಿ : ನರರು ವೈದೇಶಿಗರು ಕಾರ್ಯಾತುರರು ನಾವು (ಕುವ್ಯಾಅ. ೧೧-೩೭). **[< ಸಂ. ವೈದೇಶಿಕ]**

**ವೈದೇಹ** (ನಾ). ೧. ವಿದೇಹರಾಜ್ಯಕ್ಕೆ ಸಂಬಂಧಿಸಿದುದು. ೨. ಒಂದು ದೇಶದ ಹೆಸರು : ಸಮಸ್ತಾವನಿಯ ನೃಪರೊಗ್ಗಾಯ್ತು ವರವೈದೇಹನಗರದಲಿ (ತೊರರಾ. ೧-೧೨-೨೭). ೩. ವಿದೇಹದೇಶದ ರಾಜ ; ಸೀತೆಯ ತಂದೆ ; ಜನಕ ರಾಜ : ವೈದೇಹನಾಗಾ ನೃಪತಿ [ಪಾಠಾಂ. ಬಳಿಕಾ ವಿದೇಹನೃಪಾಲ] ದಶರಥನ . . . ಅವಿರಳೋತ್ಸವದಿಂದಿದಿರ್ಗೊಂಡೊಯ್ದನೊಲವಿನಲಿ (ತೊರರಾ. ೧-೧೭-೧೫). ೪. ವಿದೇಹ ದೇಶದ ಪ್ರಜೆ ; ವಿದೇಹದೇಶದಲ್ಲಿ ವಾಸಿಸುವವನು. ೫. ವ್ಯಾಪಾರಿ ; ವರ್ತಕ : "ವಣಿಜಂ ವೈದೇಹಂ" (ವಸ್ತುಕೋ. ೬೨-೬೩). **[ಸಂ.]**

**ವೈದೇಹಕ** (ನಾ). ೧. ವ್ಯಾಪಾರಿ ; ವರ್ತಕ : ಗ್ರಾಮಭೃತಕ (ಕೂಲಿ ಕೆಲಸಗಾರ)ರಿಗಾಗಲಿ ವೈದೇಹಕ(ವ್ಯಾಪಾರಿ)ರಿಗಾಗಲಿ ಆರಂಬಕ್ಕೆ ಕೊಟ್ಟು ಅವರಿಂದ ಹೆಚ್ಚು ಬೆಳೆಯನ್ನು ಎತ್ತಿಸಿ ತಾನು ಅಧಿಕಲಾಭವನ್ನು ಪಡೆಯಬಹುದು (ಭಾರದ. ೩೭೨). ೨. ಬ್ರಾಹ್ಮಣಸ್ತ್ರೀಗೂ ವೈಶ್ಯನಿಗೂ ಹುಟ್ಟಿದವನು : "ವೈದೇಹಕಂ, ತಸ್ಮಾಂ, ಆ ಬ್ರಾಹ್ಮಣಸ್ತ್ರೀಯಲ್ಲಿ, ವಿಶಃ - ವೈಶ್ಯನ ದೆಸೆಯಿಂದ ಹುಟ್ಟಿದವನ ಹೆಸರು" (ಸಿದ್ಧಾಂತಿ. ೬೦೯). **[ಸಂ.]**

**ವೈದೇಹಿ** (ನಾ). ೧. ವಿದೇಹರಾಜನ ಮಗಳು; ಸೀತೆ : ಕುಲಭೂಭೃದ್ಭವೆ ಲಕ್ಷ್ಮಣಾಭಿನುತ ರಾಮೋತ್ಕಂಠೆ ವೈದೇಹಿ ಮಂಜುಲವೇಣೀರಮಣೀಯೆ(ಪುಷ್ಪಪು. ೨-೮) ; ಹೂಯ್ದಿದನು ಡಂಗುರವ . . . ವೈದೇಹಿಯನು ವರಿಸುವಡೆ ಈಶದತ್ತಮಹೋಗ್ರತರ ಬಾಣಾಸನವ ತಗೆದೇಱಿಸುವ ಬಲುಸಾಸಿಗರು ಬಹುದೆಂದು (ತೊರರಾ. ೧-೧೩-೧೨). ೨. ವರ್ತಕನ ಹೆಂಡತಿ. ೩. ಒಂದು ಬಗೆಯ ಸಸ್ಯ ; ಹಿಪ್ಪಲಿ : "ಕೃಷ್ಣಾ, ಉಪಕುಲ್ಯಾ, ವೈದೇಹೀ, ಮಾಗಧೀ, ಪಿಪ್ಪಲೀ, ಕಣಾ — ಈ ೬ ಹಿಪ್ಪಲಿ" (ಪಲಾಯು. ೧೦೦-೪೬೦). ೪. ಗೋರೋಚನ. ೫. ಅರಿಶಿನ. ೬. (ವಿದೇಹ ದೇಶದ) ಹಸು. **[ಸಂ. ವೈದೇಹೀ]**

**ವೈದ್ಯ** (ಗು). ೧. ವೇದಕ್ಕೆ ಸಂಬಂಧಿಸಿದ. ೨. ರೋಗಚಿಕಿತ್ಸೆಗೆ ಸಂಬಂಧಪಟ್ಟ; ಔಷಧೋಪಚಾರಕ್ಕೆ ಸಂಬಂಧಿಸಿದ. (ನಾ). ೩. ಪಂಡಿತ ; ವಿದ್ವಾಂಸ. ೪. ವೇದವನ್ನು ಬಲ್ಲವನು; ವೇದವಿದ. ೫. ರೋಗಚಿಕಿತ್ಸೆ ; ಔಷಧೋಪಚಾರ : ಜ್ಯೋತಿಷ್ಯ . . . ವೈದ್ಯ ಗಾರುಡ ಸಂಗೀತ ನಾಟ್ಯ ಸಾಮುದ್ರಿಕ ಭೂತಾದ್ಯಲ್ಪವಿದ್ಯೆಯನೋತು ಕಲ್ತರೆ (ಕೈಕವ. ೪-೪-೨) ; ಪುರ ನಗರ ಮೊದಲಾದವುಗಳ ರಚನೆ . . . ನೃತ್ಯ, ವೈದ್ಯ ಮೊದಲಾದ ಅರವತ್ತು ನಾಲ್ಕು ಕಲೆಗಳಿಗೂ ಆಗಮಶಾಸ್ತ್ರವು ಆಶ್ರಯವಾಗಿದೆ (ಭಾರದ. ೭೦). ೬. ರೋಗಗಳಿಗೆ ಚಿಕಿತ್ಸೆ ಮಾಡುವವನು; ಡಾಕ್ಟರು: ಭವರೋಗವೈದ್ಯ ನೀನು ಭವವಿರಹಿತ ನಾನು (ಬಸವ. ೬೮) ; ಗುಣವಾಯಿತೆನ್ನ ಭವರೋಗ ಕೃಷ್ಣನೆಂಬ ವೈದ್ಯನು ದೊರಕಿದನು (ಪುರಂದ. ೨-೧೫೩ ಪಲ್ಲವಿ) ; ರೋಗಿ ಬಯಸಿದ್ದೂ ಹಾಲುಅನ್ನ ವೈದ್ಯ ಹೇಳಿದ್ದೂ ಹಾಲುಅನ್ನ (ಗಾದೆ). ೭. ವಿಷ್ಣು. ೮. (ಕರಾ) ಒಂದು

ಮನೆತನದ ಹೆಸರು : ನಾಗನ ವಿಶಿಷ್ಟಪೂಜೆಯಾದ ನಾಗಮಂಡಲವನ್ನು ಕಾಣುವ ಭಾಗ್ಯವಿದ್ದವರಿಗೆ ಈ ನೃತ್ಯವು ಎಂಥದೆಂದು ತಿಳಿದೀತು. ಅದನ್ನು ಕುಣಿಯಬಲ್ಲ ಆರೆಂಟು ಮನೆತನಗಳು ಮಾತ್ರ ಇಂದು ಉಳಿದಿವೆ. ಅಂಥ ಮನೆತನದವರಿಗೆ ವೈದ್ಯರೆನ್ನುತ್ತಾರ (ಯಕ್ಷಬ.೧೭). [ಸಂ.]

**ವೈದ್ಯಕಾಣಿ** (ನಾ). ವೈದ್ಯನಿಗೆ ದಾನವಾಗಿ ಕೊಟ್ಟ ಆಸ್ತಿ ಅಥವಾ ಭೂಮಿ : ವೈದ್ಯರಿಗಾಗಿ . . . ದಾನಮಾಡಿದ ನೆಲಕ್ಕೆ 'ವೈದ್ಯಕಾಣಿ' ಎಂಬ ವಿಶೇಷವಾದ ಹೆಸರಿತ್ತು (ಶಾಸಗಿ. ೬೦). [ವೈದ್ಯ + ಕಾಣಿ]

**ವೈದ್ಯಕಾರ** (ನಾ). ರೋಗವನ್ನು ಗುಣಪಡಿಸುವವನು ; ಚಿಕಿತ್ಸಕ : ಮದ್ದ ತಿನಬೇಕಾದರೆ ವೈದ್ಯಕಾರನಿದ್ದಡೆಗೆ ಹೋಗಿ ರೊಕ್ಕಮಂ ಕೊಟ್ಟು . . . ಬೇಡಿಯಾಸಿ ಕೊಂಡು ತಿಂಬರು (ಪದಗೋ. ೧೮-೨೫೪). [ಸಂ.]

**ವೈದ್ಯಕೀಯ** (ಗು). ರೋಗಚಿಕಿತ್ಸೆಗೆ ಸಂಬಂಧಪಟ್ಟ : ಮದುವೆಯ ಸುಖವನನುಭವಿಸಿ ದಾಂಪತ್ಯಜೀವನಕ್ಕೆ ತಿಲಾಂಜಲಿಯನ್ನು ಕೊಟ್ಟು ಅನೇಕ ಕಷ್ಟಗಳನ್ನನುಭವಿಸಿ ವೈದ್ಯ ಕೀಯವಿದ್ಯಾಭ್ಯಾಸ ಮಾಡಿದೆ (ಕುಂಕುಮ. ೬೮) ; ಪ್ರಾಚೀನಕಾಲದಲ್ಲಿ ವೈದ್ಯಕೀಯ ಅಧ್ಯಯನಕ್ಕೆ ವಿಶೇಷಪ್ರೋತ್ಸಾಹವಿತ್ತು (ಶಾಸಗಿ. ೬೦). [ಸಂ.]

**ವೈದ್ಯಗಾರ** (ನಾ). = ವೈದ್ಯಕಾರ : ಸ್ವರಗಾರ ಹಾಡಿದ್ದೇ ರಾಗ ವೈದ್ಯಗಾರ ಹೇಳಿದ್ದೇ ರೋಗ (ಗಾದ). [ವೈದ್ಯ + — ಗಾರ (<— ಕಾಱ)]

**ವೈದ್ಯನಾಥ** (ನಾ). ೧. ಶಿವ ; ಈಶ್ವರ. ೨. ವೈದ್ಯಶಾಸ್ತ್ರದಲ್ಲಿ ಪ್ರವೀಣನಾದವನು. [ಸಂ.]

**ವೈದ್ಯಪರೀಕ್ಷೆ** (ನಾ). ೧. ರೋಗನಿದಾನವನ್ನು ಕಂಡುಹಿಡಿಯುವಿಕೆ ; ಕಾಯಿಲೆಯ ಕಾರಣವನ್ನು ತಿಳಿಯುವಿಕೆ : ವೈದ್ಯಪರೀಕ್ಷೆಗಳನ್ನು ನಡೆಸಲು ಸರ್ಕಾರ ಅದಕ್ಕೆ ಪ್ರತ್ಯೇಕವಾದ ವೈದ್ಯಇಲಾಖೆಯನ್ನು ಇಟ್ಟಿರುವಾಗ ನಿಮಗೇಕ್ರಿ ಅವರ ಇವರ ಕೆಲಸ! (ಹಸುಹೂ. ೧೧೭). ೨. ವೈದ್ಯಪದವಿಯನ್ನು ಗಳಿಸಲು ಮಾಡಬೇಕಾಗುವ ಪರೀಕ್ಷೆ ; ವೈದ್ಯಕೀಯ ಪರೀಕ್ಷೆ : ಮೈಸೂರು ಹುಡುಗ ವೈದ್ಯಪರೀಕ್ಷೆಗೆ ಓದುತ್ತಿದ್ದ (ಹೊಸಕ್ಕ. ೧). [ಸಂ. ವೈದ್ಯಪರೀಕ್ಷಾ]

**ವೈದ್ಯಭಾಗ** (ನಾ). ೧. ರೋಗವನ್ನು ಪರೀಕ್ಷಿಸಿದುದಕ್ಕೆ ವೈದ್ಯನಿಗೆ ಸಲ್ಲಿಸಬೇಕಾಗುವ ಹಣ ಅಥವಾ ಪರಿಹಾರ. ೨. ವೈದ್ಯಕೀಯವಿಷಯದ ಭಾಗ ; ವೈದ್ಯಕ್ಕೆ ಸಂಬಂಧಪಟ್ಟ ಭಾಗ : (ಕಿ). ೩. (?) : ಗಜ್ಜುಗ ಪ್ರಮಾಣ ಲೇಹ್ಯಮಂ ದುಡ್ಡುತೂಕ ತುಪ್ಪಮಂ ಯಜ್ಞೇಶ್ವರಗಾಹುತಿಯಂ ಕೊಟ್ಟು ವೈದ್ಯಭಾಗಮಂ ಕೊಟ್ಟು . . . ತೆಗೆದುಕೊಳ್ಳುವುದು (ಸಕವ್ಯ. ೩೯೩). [ಸಂ.]

**ವೈದ್ಯಮಾತೆ** (ನಾ). ಒಂದು ಬಗೆಯ ಔಷಧೀಸಸ್ಯ ; ಆಡುಸೋಗೆ : "ವೈದ್ಯಮಾತಾ, ಸಿಂಹೀ . . . ವಾಜಿದಂತಕಃ — ಆ ಅಡ್ಡಸರದ ಗಿಡ, ಆಡುಸೋಗೇಗಿಡದ ಹೆಸರು" (ಸಿದ್ಧಾಂತಿ. ೧೩೫). [ಸಂ. ವೈದ್ಯಮಾತಾ]

**ವೈದ್ಯರಾಜ** (ನಾ). ೧. ವೈದ್ಯರಲ್ಲಿ ಶ್ರೇಷ್ಠನಾದವನು : ಅಶ್ವಿನೀಕುಮಾರರಂತೆ ಆಯುರ್ವೇದವನ್ನು ಕಲಿತು, ಧನ್ವಂತರಿಯಂತೆ ಎಲ್ಲಾ ರೋಗಗಳನ್ನೂ ನಿರ್ಮೂಲ ಮಾಡಿ, ವೈದ್ಯರಾಜನೆನಿಸಿಕೊಳ್ಳಬೇಕೆಂದಿರುವವನು (ಮೆಣಸ. ೩). ೨. ಧನ್ವಂತರಿ. [ಸಂ. ವೈದ್ಯರಾಜನ್]

**ವೈದ್ಯವಿದ** (ನಾ). ರೋಗಚಿಕಿತ್ಸೆಯಲ್ಲಿ ನಿಪುಣನಾದವನು : ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ ಸತ್ಪೂಜಿತಂ ದಾರುಣಂ ವೈದ್ಯವಿದಂ ತಕ್ಕೋಪಜೀವ್ಯಂ (ಜಾತತಿ. ೧೭-೧೭). [ಸಂ. ವೈದ್ಯವಿದ್]

**ವೈದ್ಯಶಾಲೆ** (ನಾ). ಚಿಕಿತ್ಸೆ ಮಾಡುವ ಸ್ಥಳ ; ಆಸ್ಪತ್ರೆ ; ದವಾಖಾನೆ : ಹುಚ್ಚರ ವೈದ್ಯಶಾಲೆಯನ್ನು ರಾಜಕಾರ್ಯಕ್ಕಾಗಿ ನಾನು ಪರೀಕ್ಷಿಸಿ ನೋಡಬೇಕಾಗಿರುವುದು (ಚನ್ನಬೇ. ೧೪೭). [ಸಂ. ವೈದ್ಯಶಾಲಾ]

**ವೈದ್ಯಶಾಸ್ತ್ರ** (ನಾ). ೧. ರೋಗ, ರೋಗನಿದಾನ ಮುಂತಾದುವನ್ನು ವಿವರಿಸುವ ಶಾಸ್ತ್ರ : ಅಷ್ಟಾಂಗಯುಕ್ತವಾದ ಈ ಆಯುರ್ವೇದವೇ ವೈದ್ಯಶಾಸ್ತ್ರವೆನಿಸಿಕೊಂಬುದು (ವೈದ್ಯಸಾ. I, X, ಮುನ್ನುಡಿ); ವೈದ್ಯಶಾಸ್ತ್ರಕ್ಕೊಂದು ಸಾರ್ವಜನಿಕಮನ್ನಣೆಯನ್ನು ಕೊಟ್ಟು . . . ಬೆಳೆಸಿದ ಕೀರ್ತಿ ಚೋಳರಸರಿಗೆ ಸೇರಿದಂತೆ ಕಾಣುತ್ತದೆ (ಶಾಸಗಿ. ೬೦) ; ನಾನು ವೈದ್ಯಶಾಸ್ತ್ರಗಳನ್ನು ಚೆನ್ನಾಗಿ ಅರಿತುಕೊಳ್ಳಬೇಕೆಂಬ ಆಶೆಯಿಂದಲೇ ಓದಿದೆ (ಹೊಸಕ್ಕ. ೮). ೨. ರೋಗ, ರೋಗನಿದಾನ ಮುಂತಾದುವನ್ನು ವಿವರಿಸುವ ಗ್ರಂಥ, — ಪುಸ್ತಕ : ಆ ವೈದ್ಯಶಾಸ್ತ್ರಕ್ಕೆ ಟೀಕಂ ಬರೆದಂ ವೈದ್ಯಪ್ರವೀಣರ್ ಪೊಗಳುತಿರೆ (ಸಕವ್ಯ. ೪). [ಸಂ.]

**ವೈದ್ಯಾಲಯ** (ನಾ). = ವೈದ್ಯಶಾಲೆ : ಕಾವಲುಗಾರ ಎಂಟುಗಂಟೆಗೇ ಬಂದು ವೈದ್ಯಾಲಯದ ಬಾಗಿಲು ತೆರೆದ (ಹಸುಹೂ. ೧೪). [ಸಂ.]

**ವೈದ್ಯುತ** (ಗು). ೧. ಮಿಂಚಿಗೆ ಸಂಬಂಧಿಸಿದ. ೨. ವಿದ್ಯುತ್ತಿಗೆ ಸಂಬಂಧಿಸಿದ ; ವಿದ್ಯುಚ್ಛಕ್ತಿಯ. (ನಾ). ೩. ವಿದ್ಯುಚ್ಛಕ್ತಿ ; ವಿದ್ಯುತ್ತು. ೪. ಸ್ವರ್ಗದ ಪಟ್ಟಣಗಳಲ್ಲಿ ಒಂದು. [ಸಂ.]

**ವೈದ್ಯುತಾಗ್ನಿ** (ನಾ). ಪಂಚಾಗ್ನಿಗಳಲ್ಲಿ ಒಂದು : ದೇಹದೊಳಗೆ ಮೂಲಾಧಾರಾದಿ ಸ್ಥಾನಂಗಳಲ್ಲಿರ್ಪ ಕಾಲಾಗ್ನಿ ಬಾಡಬಾಗ್ನಿ ಪಾಷಾಣಾಗ್ನಿ ವೈದ್ಯುತಾಗ್ನಿ ಸೂರ್ಯಾಗ್ನಿ ಎಂಬ ಸೂಕ್ಷ್ಮಬಿಂದುರೂಪ ಪಂಚಾಗ್ನಿಧ್ಯಾನಯುಕ್ತನಾಗಿ (ವಿವೇಕ. ೧೨೬). [ಸಂ.]

**ವೈದ್ಯುತೆ** (ನಾ). ದೇಹದಲ್ಲಿರುವ ಒಂದು ನಾಡಿಯ ಹೆಸರು : ಸುಷುಮ್ನಾ ನಾಡಿಯ ಹಿಂಭಾಗಕ್ಕೆ 'ವಜ್ರಿಕೆ' ಬಲಭಾಗಕ್ಕೆ 'ವೈದ್ಯುತಾ' ಎಂದು ಹೆಸರುಗಳು (ಹಸಾರ. ೮-೩. ತಾತ್ಪರ್ಯ). [ಸಂ. ವೈದ್ಯುತ]

**ವೈದ್ಯೋಕ್ತ** (ನಾ). (ಔಷಧ ಮುಂತಾದುವುಗಳ ವಿಷಯದಲ್ಲಿ) ವೈದ್ಯರು ಹೇಳಿದಂತೆ ಕೇಳುವವನು : ಉದರಸಮಾಗ್ನಿಯ ಚಿಹ್ನದ ಪದದೊಳ್ ವೈದ್ಯೋಕ್ತನಪ್ಪ ಬಾಣಸಿಗನವೊಲ್ ತ್ರಿದಶಾಮೃತಾನ್ನಮಂ ಕುಡುವುದವರ್ಗೆ ಭೋಜ್ಯಾಂಗ ತುಂಗಕಲ್ಪಮಹೀಜಂ (ಶಾಂತಿಪು. ೬-೧೧೫). [ಸಂ.]

**ವೈಧರ್ಮ್ಯ** (ನಾ). ೧. ಸಾದೃಶ್ಯವಿಲ್ಲದಿರುವಿಕೆ ; ವ್ಯತ್ಯಾಸ : ಆ ಧರ್ಮವತಿಯ ಪುರದ ಮಹಾಧರ್ಮಯುತರ್ಗೆ ಸುರರ್ಗೆ ಮೈವೆತ್ತುದು ತಾಂ ಸಾಧರ್ಮ್ಯಮೆಂದು ಬಿದಿ ಮಿಗೆ ವೈಧರ್ಮ್ಯ [ಪಾಠಾಂ. ರ್ಮ] ಮನನಿಮಿಷತೆಯನವರೊಳ್ಪೆಗಳ್ದ (ರಾಜಶೇ. ೨-೯೨) ; ಜ್ಞಾನ ಕರ್ಮಗಳಿಗೆ ಸಹಜವಾದ ವೈಧರ್ಮ್ಯವಿಲ್ಲ (ಭಾರದ. ೧೧೫). ೨. ನ್ಯಾಯವಿರುದ್ಧ ವಾದುದು. [ಸಂ.]

**ವೈಧವ್ಯ** (ನಾ). ಗಂಡನನ್ನು ಕಳೆದುಕೊಂಡಿರುವ ಹೆಣ್ಣಿನ ಸ್ಥಿತಿ : ಆ ಪ್ರಿಯ ತನೂಜೆಯರ ನವ್ಯವೈಧವ್ಯಮಂ ಕಂಡು . . . ಜರಾಸಂಧನತಿಕ್ರೋಧಮಂ ಕೈಕೊಂಡು (ಜಗವಿ. ೭-೩೪ ವ) ; ವೈಧವ್ಯದ ಭಯಕ್ಕೋಸ್ಕರ ಭಯಪಡಬೇಕು (ಕಪಾಕು. ೭೬). [ಸಂ.]

**ವೈಧವ್ಯದೀಕ್ಷೆ** (ನಾ). ವಿಧವೆಯ ಪಟ್ಟ : ಆತನಂ ಮುನಿದು ನೀಂ ಕೊಂದು ನಿಜಾನುಜೆಗೆ ವೈಧವ್ಯದೀಕ್ಷೆಯಂ ಕುಡುವುದು ಚದುರಲ್ಲ (ಪಂರಾಮಾ. ೧೦-೧೭೮ ವ) ; ಪಾರ್ಥನ ಮಾನಿನಿಗೆ ವೈಧವ್ಯದೀಕ್ಷಾವಿಧಿಯ ಕೊಡಲಹುದೆ (ಕುಮ್ಯಾಕ. ೨೫-೧೩). [ಸಂ. ವೈಧವ್ಯದೀಕ್ಷಾ]

**ವೈಧಾತ್ರ** (ನಾ). ವಿಧಾತೃವಿನ ಮಗ ; ಸನತ್ಕುಮಾರ : "ಸನತ್ಕುಮಾರಃ, ವೈಧಾತ್ರಃ- ೨ ಬ್ರಹ್ಮಪುತ್ರನಾದ ಸನತ್ಕುಮಾರನ ಹೆಸರುಗಳು" (ಸಿದ್ಧಾಂತಿ. ೨೨). [ಸಂ.]

**ವೈಧೃತಿ** (ನಾ). ೧. [ಜ್ಯೋತಿ] ಇಪ್ಪತ್ತೇಳು ಬಗೆಯ ಯೋಗಗಳಲ್ಲಿ ಒಂದು; ಅತ್ಯಂತ ಅಮಂಗಳವೂ ಅನಿಷ್ಟಕಾರಕವೂ ಎಂದು ಭಾವಿಸಲಾದ, ಚಂದ್ರ ಮತ್ತು ಸೂರ್ಯರ ಒಂದು ನಿರ್ದಿಷ್ಟ ಸ್ಥಾನ : ವಿಷ್ಕಂಭ ಪ್ರೀತಿ . . . ಬ್ರಹ್ಮ ಐಂದ್ರ ವೈಧೃತಿಗಳೆಂಬ ಇಪ್ಪತ್ತೇಳು ಯೋಗಂಗಳುಂ (ವಿವೇಕ ೨೬೨) ; ಯೋಗಗಳತಿಶಯವನರಿಯೆ ಪೇಳುವೆ . . . ವೈಧೃತಿಯು ವ್ಯಾಘಾತಧ್ರುವಪರಿಘವೇಕಾದಶದ ಯೋಗಗಳಶುಭ ಮಿಕ್ಕುಳಿದವೇ ಶುಭಗಳಹವು (ಗಗತಾ. ೪-೬೯). ೨. (ಆಲಂ) ಕೆಟ್ಟುದು ; ಅಶುಭಕರ ವಾದುದು : ನಾಳೆಯೆಲ್ಲಾ ಸಮಸ್ತಕಾರ್ಯಕ್ಕೂ ವೈಧೃತಿಯಾಗಿರುವಂಥಾದ್ದು, ಇವತ್ತು ನಾಳೆ ಸಮಸ್ತಕಾರ್ಯಕ್ಕೂ ಅನುಕೂಲವಾಗಿರುವಂಥಾದ್ದು (ಮಾಮರಾ. ೧). [ಸಂ.]

**ವೈಧೇಯ** (ನಾ). ಏನೂ ತಿಳಿಯದವನು ; ದಡ್ಡ ; ಮೂರ್ಖ : "ವೈಧೇಯಃ . . . ಮೂರ್ಖಃ, ಮಾತೃಶಾಸಿತಃ — ಈ ೧೧ ಅಱಿಯದವಂ" (ಹಲಾಯು. ೫೬-೧೮೧). [ಸಂ.]

**ವೈನ** 'ವಯಿನ' ನೋ.

**ವೈನಕಾಳು** (ನಾ). ತಾಂಬೂಲದ ಜೊತೆಯಲ್ಲಿ ಮಿಶ್ರಮಾಡುವ, ಜೀರಿಗೆಯಂಥ ಒಂದು ಬಗೆಯ ಕಾಳು ; ಸೋಂಪು : ಎಲೆ, ಅಡಕೆ, ಹೊಗೆಕಡ್ಡಿ, ಕಾಚು, ಕಾಯಿ,

ಬಜೆ, ಲವಂಗ, ಪತ್ರೆ, ಏಲಕ್ಕಿ ಕಸದ ಬೀಜ, ವೈನಕಾಳು — ಇತ್ಯಾದಿ ತುಂಬಿದ ತಾಂಬೂಲದ ಚಂಚಿಯನ್ನು ಅವರ ಕೈಗೆ ಕೊಟ್ಟು . . . ಕುಳಿತಳು (ಬೆಳುಮ. ೩೨).

[ವೈನ? (P ⟵ ಮರಾ. ವರ್ಯಾಳೀ) + ಕಾಳು$_2$ (< ಕಾೞ್$_2$)]

**ವೈನತೇಯ** (ನಾ). ೧. ಕಶ್ಯಪಮುನಿ ಮತ್ತು ವಿನತಾದೇವಿಯ ಮಗ ; ಗರುತ್ಮಂತ : "ವಿಹಂಗರಾಜಃ, ಗರುಡಃ . . . ವೈನತೇಯಃ . . . ಕಶ್ಯಪ ನಂದನಃ – – ಈ ೧೦ ಗರುಡನ ಪೆಸರ್" (ಹಲ್ಲಾಯು. ೬-೩೧) ; ಜಯರಾಮನೋ ದುಂದುಮಾರನೋ . . . ಪಂನಗ ವೈನತೇಯನೋ (ಎಕ. VII (R), ನಾಗಮಂ. ೧೬೯-೨೫ ; 1142) ; ಬಂದಂ . . . ಸಕಲಖಗಕುಲಜ್ಯಾಯನಾ ವೈನತೇಯಂ (ಜಗವಿ. ೧೧-೯೦) ; ಶರನಿಕರದಲಿ . . . ಕಲಿ ವೈನತೇಯನೊ ಕರ್ಣನೋ ನಾವಱಿಯೆವು (ಕುವ್ಯಾಕ. ೧೨-೨೫). ೨. ಹದ್ದಿನ ಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ ; ಗರುಡ : ಗರ್ಭೇಶ್ವರಿಯಲ್ಲಿಗೆ ದೂತನನಟ್ಟಿ ಪಸರಂಬಡೆಯದೆ ವೈನತೇಯನ ಚಿತ್ತವೃತ್ತಿಯಂತೆ ಭುಜಗದ್ವೇಷಿಯಾಗಿರ್ದು(ದ)ನಱಿದು (ಶಾಂತಿಪು. ೮-೮೩ ವ). ೩. ಅರುಣ. [ಸಂ.]

**ವೈನಯಿಕ** (ಗು). ೧. ವಿನಯದಿಂದ ಕೂಡಿದ ; ಸೌಜನ್ಯದ. (ನಾ). ೨. ಯುದ್ಧರಥ. ೩. [ಜೈನ] ವಿನಯಕ್ಕೆ ಸಂಬಂಧಿಸಿದ ಅಂಗಬಾಹ್ಯ : ವೈನಯಿಕಮೆಂಬುದು ಸಮ್ಯಗ್ದರ್ಶನ ಜ್ಞಾನಚಾರಿತ್ರ ತಪೋವಿನಯಮುಂ ಔಪಚಾರಕ ವಿನಯಮುಮಂ ವ್ಯಾವರ್ಣಿಸುಗುಂ (ತತ್ತ್ವಪ್ರ. ೬೫). [ಸಂ.]

**ವೈನಾಯಕಾಸ್ತ್ರ** (ನಾ). ವಿನಾಯಕನ ಮಂತ್ರವನ್ನು ಅಭಿಮಂತ್ರಿಸಿ ಬಿಡುವ ಬಾಣ : ಸಾಯಕವನಭಿಮಂತ್ರಿಸುತ ವೈನಾಯಕಾಸ್ತ್ರವ ಹೂಡಿದನು ಬಲ ಬಾಯ ಬಿಡೆ ಚಿಗಿದಂಬು ಕಡಿದುದು ಕರ್ಣನಂದನನ (ಕುವ್ಯಾಕ. ೨೦-೩೫). [ಸಂ.]

**ವೈನಾಶಿಕ** (ಗು). ೧. ನಾಶವಾಗುವ ; ಕ್ಷಣಿಕ. (ನಾ). ೨. [ಬೌದ್ಧ] ಬೌದ್ಧಮತದ ಒಂದು ತತ್ತ್ವ ; ಕ್ಷಣಿಕವಾದ. ೩. ಬೌದ್ಧತತ್ವದ ಅನುಯಾಯಿ : ವೈನಾಶಿಕರೆಂದರೆ ಪ್ರತಿಯೊಂದು ವಸ್ತುವೂ ಪ್ರತಿಕ್ಷಣದಲ್ಲಿಯೂ ಹುಟ್ಟಿ ಉತ್ತರಕ್ಷಣದಲ್ಲಿಯೇ ನಾಶವಾಗುವುದು ಎಂದು ವಾದಿಸುವ ಕ್ಷಣಿಕವಾದಿಗಳು (ಹಿಂದಸಾ. ೧೨೮). [ಸಂ.]

**ವೈನಿ** 'ವಹಿನಿ' ನೋ.

**ವೈನೋದಿಕ** (ನಾ). ೧. ಹಾಸ್ಯ ; ವಿನೋದ : ರೊಮ್ಯಾಂಟಿಕ್ ನಾಟಕಕಾರರ ಯೋಜನೆಯ ಪ್ರಕಾರ, ಉತ್ಪ್ರೇಕ್ಷಿತ ಭಾವಗಳನ್ನೂ ವೈನೋದಿಕವನ್ನೂ ಸರಿದೂಗಿಸುವುದು ಡಿಕನ್ಸನ ಸ್ವಭಾವಪೂರ್ವಕ ವಿಧಾನವಾಗಿತ್ತು (ಸಾಹಿಪ್ರ. ೧೩೫). ೨. ವಿನೋದವನ್ನುಂಟು ಮಾಡುವ ನಾಟಕ ; ನಗೆನಾಟಕ : ನಾಟಕದಲ್ಲಿ ಎರಡು ಮುಖ್ಯವರ್ಗಗಳನ್ನು ಕಲ್ಪಿಸುವುದು ರೂಢಿ : ಸುಖಾಂತನಾಟಕ ಅಥವಾ ವೈನೋದಿಕ ಮತ್ತು ದುರಂತನಾಟಕ ಅಥವಾ ರುದ್ರನಾಟಕ (ಸಾಹಿಪ್ರ. ೨೦೮). ೩. ವಿನೋದವನ್ನು ಮಾಡುವವನು; ಹಾಸ್ಯಗಾರ : ವೈನೋದಿಕರು ಕೋಮೋ ಅಥವಾ ಕ್ರೀಡೆಗಳಿಂದ ತಮ್ಮ ಹೆಸರನ್ನು ಪಡೆಯಲಿಲ್ಲ (ಅರಿಕಾ. ೬೬). [ಸಂ.]

**ವೈನ್ಸ** (ನಾ). ಗಂಡನ ಒಡಹುಟ್ಟಿದವಳು ; ಗಂಡನ ಸೋದರಿ : ವೈನ್ಸ. ನಾನು ನಿಮಗೇನು ಮಾಡಿದರೂ ಅದರಿಂದ ದೇವರು ನನಗೆ ಆಶೀರ್ವಾದ ಮಾಡುತ್ತಾನೆ (ಸ್ಮೃತಿಚಿ. ೨೧೬). [ ⟵ ಮರಾ. ವನಸೇ, ವನ್ಸೇ, ವಹಿನ್ಸ, ವೈನಸೇ]

**ವೈಪಥ** (ನಾ). ಸುಗಮವಲ್ಲದ ದಾರಿ ; ಕೆಟ್ಟಮಾರ್ಗ : ವಿವಿಧವೈಪಥಪಾಂಸುಗಳಿಂದೆ ನಾಡೆ ಸೀಟಿಸಿದ ತಲೆಯುಂ ಕರಂ ಮಲಿನಮಾದ ಪಟಚ್ಚರಮುಂ ನೆಗಟ್ಟಲಂದಿದಿರೊಳಿ ಲೇಖವಾಹನಿವಹಂ ಬರೆ ಕಂಡನಿಳಾಧಿನಾಯಕಂ (ಕಾದಂಉ. ೬೩೬). [ಸಂ.]

**ವೈಪರೀತ್ಯ** (ನಾ). ೧. ವಿರೋಧ ; ಪ್ರತಿಕೂಲತೆ : ಹಾರಮಿದನ್ಯಭವಾಲಂಕಾರ ಮನನುಕರಿಸಿ ಮದ್ವಿತೀಯನ ಗತಿ ಸಂಸ್ಕಾರಮನಱಿಪಿದೊಡೆನ್ನ ಶರೀರಕ್ಕಿನಿತಾಯ್ತು ವೈಪರೀತ್ಯಂ ಸಭೆಯೊಳ್ (ಶಾಂತಿಪು. ೨-೨೬) ; ಚಾಪವೀತನ ಕೈಯಲಿರಲಿನ್ನಾ ಪಿನಾಕಿಗೆ ಗೆಲವು ಘಟಿಸದು ವೈಪರೀತ್ಯಕೆ ಬೆದಱಲಾಗದು ಸ್ವಾಮಿಕಾರ್ಯವಿದು (ಕುವ್ಯಾದ್ರೋ. ೬-೨೯); ನನ್ನ ದೃಷ್ಟಿಯಲ್ಲೇ ಒಂದು ವೈಪರೀತ್ಯ ಉಂಟಾಗಿತ್ತು (ಶಾಂತಲಾ. ೨೫೦). ೨. ಹೊಂದಾಣಿಕೆಯಿಲ್ಲದುದು ; ಅಸಾಮಂಜಸ್ಯ. [ಸಂ.]

**ವೈಪು** (ನಾ). ೧. ನಿಧಿ ; ನಿಕ್ಷೇಪ ; ಭಂಡಾರ : ಕಱುಬು ಕುಹಕದ ಕಣಜ ಈಡುಪಾಡಿನ ಪಸರ ಕರೆವ ಕೊಸರುವ ವೈಪು ಸೈಪುದೋಱುವ ಸೂಳೆಗೇರಿ ಸೊಗಸಾದುದಲ್ಲಿ (ನಂದಿಮಾ. ೨೩-೧೭). ೨. ಯುಕ್ತಿ ; ಚಾತುರ್ಯ; ತಂತ್ರ : ಆ ಪುರಾರಿಯ ಶರಣರಿಗೆ ವಿತ್ತಮನಿತ್ತು ವೈಪಿನಿಂದೆಸೆವ ಗಜತುರಗ ವಾಹನವಿತ್ತು (ಲಿಂಗಪು. ೨೧-೪೭); ವೈಪು ಉಳ್ಳವ ಕೈಪು ಕಟ್ಟ್ಯಾನೇ? (ಗಾದೆ). [ದೇ. ‖ ತಮಿ. ವೈಪ್ಪು ; ತೆಲು. ವಯಿಪು, ವೈಪು]

**ವೈಪುಲ್ಯ** (ನಾ). ೧. ಯಥೇಷ್ಟವಾದುದು ; ಹೇರಳವಾದುದು : ಸಂಖ್ಯಾವೈಪುಲ್ಯ ವಾಚಿಯಪ್ಪ ಬಹುಶಬ್ದಕ್ಕೆ ವಿಶೇಷಾಭಾವದಿಂ ಗ್ರಹಣಮಕ್ಕುಂ (ತತ್ತ್ವಪ್ರ. ೫೭); ಇಲ್ಲಿಯವರೆಗೆ ಉಪಲಬ್ಧವಾಗಿರುವ ಗ್ರಂಥ ಮತ್ತು ಲೇಖನಸಂಪತ್ತನ್ನು ಸೂರೆಗೊಂಡಿರುವ ವಿಷಯವೈಪುಲ್ಯ ಈ ಗ್ರಂಥದ ಮೇಲ್ಮೆಗೆ ಕಾರಣವಾಗಿದೆ (ದ್ರಾಪಿವಿ. V, ಮುನ್ನುಡಿ). ೨. ವಿಶಾಲವಾದುದು. [ಸಂ.]

**ವೈಫಲ್ಯ** (ನಾ). ಪ್ರಯೋಜನಕ್ಕೆ ಬಾರದುದು ; ನಿಷ್ಫಲವಾದುದು : ಯಥಾರ್ಥತೆ ಇಲ್ಲವೆ ಅಯಥಾರ್ಥತೆಯ ನಿರ್ಣಯಕ್ಕೆ ಒರೆಗಲ್ಲೆಂದರೆ ಆಯಾ ಜ್ಞಾನಮೂಲಕವಾದ ನಮ್ಮ ವ್ಯಾವಹಾರಿಕಪ್ರವೃತ್ತಿಗಳ ಸಾಫಲ್ಯ ಇಲ್ಲವೆ ವೈಫಲ್ಯ (ತತ್ವಪ್ರಾ. ೨೩೦). [ಸಂ.]

**ವೈಬಾಧ** (ನಾ). ಒಂದು ಬಗೆಯ ಮರ ; ಅಶ್ವತ್ಥ : ಈ ವಿನಾಶಕತ್ವದ ಕುರುಹಾಗಿ ಅಶ್ವತ್ಥವನ್ನು ವೈಬಾಧ ಎಂದೂ ಕರೆದರು (ಹಸುಹೊ. ೩೬೫). [ಸಂ.]

**ವೈಭವ** (ನಾ). ೧. ಶಕ್ತಿ ; ಸಾಮರ್ಥ್ಯ : ಘಟದಲ್ಲಿ ವೈಭವ ಆತ್ಮನಲ್ಲಿ ನಿರೋಧ ಆಚಾರದಲ್ಲಿ ಕರ್ಕಶ ಇಂತೀ ನಿಹಿತಾಚಾರಂಗಳಲ್ಲಿ ನಿರತನಾಗಿ ಕಾಯದ ಕರ್ಮ ಜೀವದ ಭಾವ ಜ್ಞಾನದ ಒಳಗನಱಿಯಬೇಕು (ಮೋಳಮಾ. ೧೦-೩೭). ೨. ಶ್ರೇಷ್ಠತೆ ; ಮೇಲ್ಮೆ : ಶಿವಭಕ್ತರುಗಳಭಿವೃದ್ಧಿಕರಮಂ ಭಕ್ತಚಾರಿತ್ರಪ್ರಭಾವೈಭವಸಮುನ್ನತಿಯ ವ್ಯಕ್ತಮಾಗಲು ಕಂಡವರ್ಗಳು (ಬಸವು. ೫೮-೧೪) ; ಶ್ರೀ ಭೂಮಿ ನೀಳಾನಾಥನಿಗನುಪಮ ವೈಭವ ವೈಕುಂಠಪತಿಗೆ (ಪದಿಬ. ೩-೧). ೩. ಐಶ್ವರ್ಯ; ಸಿರಿ; ಸಂಪತ್ತು: ಸಕಲವೈಭವದಿಂದೆಸೆದಿರ್ಪುದಾ ಪುರಂ (ಜಗವಿ. ೨-೩೪) ; ಬೊಪ್ಪ ಬಿನ್ನಹವವರ ಜನಕನು ತಪ್ಪಿ ನಡೆಯನು ನಿಮಗೆ ನೀವಿನ್ನೊಪ್ಪಿಸುವುದಾ ಪಾಂಡುಸುತರಿಗೆ ರಾಜ್ಯವೈಭವವ (ಕುವ್ಯಾಆ. ೮-೫೯). ೪. ಆಡಂಬರ ; ವಿಜೃಂಭಣೆ : ಆದುದವರಿಗೆ ಬಳಿಕ ಲೌಕಿಕ ವೈದಿಕದ ವೈಭವಗಳಲಿ ಭದ್ರೋದಯದ ಭವಕರ್ಮವು (ತೊರರಾ. ೧-೮-೯) ; ಶಕ್ರನಾಸ್ಥಾನಮಂ ವಿವಿಧವೈಭವದಿಂ ದತಿಕ್ರಮಿಸುವರಸನೋಲಗಮಂ ನಿರೀಕ್ಷಿಸುತುಪಕ್ರಮಿಸುವೆಳನಗೆಯೊಳಸುರಾರಿ ನುಡಿದಂ (ಜೈಮಿಭಾ. ೨-೫೨). [ಸಂ.]

**ವೈಭವಂಬಡೆ** (ಕ್ರಿ). ಐಶ್ವರ್ಯವನ್ನು ಹೊಂದು ; ಶ್ರೀಮಂತನಾಗು : ಜನಂಗಳಂ ಪೊರೆವ ಕಾರ್ಯದೊಳಗ್ಗಳನಪ್ಪೆ ವೈಭವಂಬಡೆದಿರೆ ಬಂದು ಸಂದಣಿಪ ಬಂಧುಗಳಿರ್ಕೆ (ಶಾಕುಂತ. ೬೩-೧೦೮). [ವೈಭವ + ಪಡೆ$_1$]

**ವೈಭಾಗ** (ನಾ). ವಂಶಪಾರಂಪರ್ಯವಾಗಿ ಬಂದ ಆಸ್ತಿಯ ಪಾಲು ; ದಾಯ ಭಾಗ : "ದ್ರವಿಣ ದಾನೋತ್ಕೃಷ್ಟ ವೈಭಾಗ ಕಾನನ ಮಾಟಂಗಳು ದಾಯಶಬ್ದ" (ನಾನಾರ. ೧೪೩). [< ಸಂ. ವಿಭಾಗ]

**ವೈಭಾತಿಕ** (ಗು). ೧. ಬೆಳಗಿನ ಜಾವದ ; ಪ್ರಾತಃಕಾಲದ : ಲತಿಕಾ ಲಾಸ್ಯೋಪ ದೇಶವ್ಯಸನಿ ವನಲತಾಂದೋಳಿತಾಮೋದ . . . ಮೃಗಸಂದೋಹ ರೋಮಂಥ ಫೇನೋದ್ಗತಬಿಂದುಸ್ಯಂದಿ ತೀಡಿತ್ತೆಸಗಿ ಸುರಭಿ ವೈಭಾತಿಕಂ ಮಾತರಿಶ್ವಂ (ಕಾದಂಪೂ. ೧೪೬); ತೆರೆವೊಯ್ಲಿಂದೆಟ್ಟಿ ಕಾಸಾರದ ಪರಿಸರದೊಳ್ . . . ಸುೞಿದುದು ವೈಭಾತಿಕಂ ಮಾತರಿಶ್ವಂ (ಜಗವಿ. ೧೬-೧೩೬). (ನಾ). ೨. ಮುಂಜಾನೆ ; ಪ್ರಾತಃಕಾಲ: ಎಸಗಿ ವೈಭಾತಿಕದ ಕ್ರಿಯೆಗಳ . . . ಚೈತ್ಯಾಲಯಕೆ ಭವ್ಯಪ್ರಸರ ಸಹ ತೆರಳಿದನು (ನಾಗಷ. ೩೨-೨೧). [ಸಂ.]

**ವೈಭಾತಿಕಕ್ರಿಯೆ** (ನಾ). ಪ್ರಾತಃಕಾಲದಲ್ಲಿ ಮಾಡಬೇಕಾದ ದೇಹಶೌಚ, ಸಂಧ್ಯಾವಂದನಾದಿ ಕಾರ್ಯ ; ಪ್ರಾತರ್ವಿಧಿ : ಎಸಗಿ ವೈಭಾತಿಕಕ್ರಿಯೆಗಳ ಮೆಲ್ಲನೆ . . . ವಸುಧಾಧಿಪತಿ ನಡೆತಂದ (ನಾಗಕು. ೩-೧೦೬). [ಸಂ. ವೈಭಾತಿಕಕ್ರಿಯಾ]

**ವೈಭಾತಿಕಸಮೀರ** (ನಾ). ಬೆಳಗಿನ ಗಾಳಿ ; ತಂಗಾಳಿ : ಭ್ರಮರಹಿತಂ ವೈಭಾತಿಕ ಸಮೀರನೆಸಗಿದುದು ಪೋಲ್ತು ಸುವಿಧಿಯ ಬಗೆಯಂ (ಪುಷ್ಪಪು. ೧೩-೫೮). [ಸಂ.]

**ವೈಭಾಷಿಕ** (ನಾ). ೧. [ಬೌದ್ಧ] ಬೌದ್ಧರ ಒಂದು ಒಳಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು : ಸೌತ್ರಾಂತಿಕ ವೈಭಾಷಿಕ ಮಹಾಯಾನಕ ಸೌಶ್ರುತವೆಂದು ನಾಲ್ಕು ತೆಱನಾಗಿರ್ಕುಂ (ವಿವೇಕ. ೧೦) ; ಬೌದ್ಧರಲ್ಲಿ ವೈಭಾಷಿಕರೇ ಮೊದಲಾದ ನಾಲ್ಕು

ಪಂಗಡಗಳಿರುವುವು (ಭಾರದ. ೨೦೪). ೨. ನಾಸ್ತಿಕ ದರ್ಶನಗಳಲ್ಲಿ ಒಂದು : ಈ ಮೂಲತತ್ತ್ವಾನ್ವೇಷಣರೂಪದಲ್ಲಿ ಚಾರ್ವಾಕ, ವೈಭಾಷಿಕ, ಸೌತ್ರಾಂತಿಕ, ಯೋಗಾಚಾರ, ಮಾಧ್ಯಮಿಕ, ಜೈನದರ್ಶನಗಳೆಂಬ ಆರು ನಾಸ್ತಿಕ ದರ್ಶನಗಳೂ . . . ಆವಿರ್ಭವಿಸಿರುತ್ತವೆ (ಭಾರದ. ೨೨೯). [ಸಂ.]

**ವೈಭೋಗ** (ನಾ). ಆಡಂಬರ ; ಡೌಲು ; ವಿಜೃಂಭಣೆ : ಶೂಲದ ಮೇಲಣ ತಲೆಯ ವೈಭೋಗವನಾರು ಬಯಸಿದಡಲ್ಲಿಯದು (ಅಪಚಂ. ೧೫೪-೭೦೮) ; ದೇವರ ಅಮೃತಪಡಿ ಅಂಗರಂಗ ವೈಭೋಗ ಮಾಸೋಚ್ಛಾಹ ಮುಂತಾದ ದೇವರ ಸೇವೆಗೆ ಹಿರಿಯ ಸಿಂದೊಗಿಯ ಗ್ರಾಮವನು ಸಮರ್ಪಿಸಿದೆವಗಿ (ಕಇಅ. ೭೨-೯-೧೧ ; 1521); ಈ ಪಾಪಿಜೀವನಕ್ಕೆ ವೈಭೋಗ ಯಾಕೆ ಕರ್ಮಕ್ಕೆ? (ಮೊಮಗು. ೧೮). 'ಐಭೋಗ' ಪರಾ.

[< ಸಂ. ವೈಭವ./ ತಮಿ. ವೈಪೋಕ]

**ವೈಭ್ರಾಜ** (ನಾ). ದೇವತೆಗಳ ಉದ್ಯಾನವನ: ನಂದನವು ಬಡಗಣದು ಪಡುವಣ ಚಂದವಹ ವೈಭ್ರಾಜ ತೆಂಕಲು ಗಂಧಮಾದನ ಚೈತ್ರರಥ ಮೂಡಣದು (ಕುವ್ಯಾಅ. ೩-೩೮). [ಸಂ.]

**ವೈಮತ್ಯ** (ನಾ). ೧. ಅಭಿಪ್ರಾಯಭೇದ : ನಮ್ಮದೀ ವೈಮತ್ಯವನ್ನವನಿಗೊಂದಾಗಿ ಒಪ್ಪಿಸುವ! ಅವನೆ ತೀರ್ಚುಗೆ! (ಹಚ್ಚರ. ೪೩-೫). ೨. ಜುಗುಪ್ಸೆ ; ಹೇವರಿಕೆ. [ಸಂ.]

**ವೈಮನಸ್ಯ** (ನಾ). ೧. ಅತೀವವಾದ ದುಃಖ; ಅಧಿಕವಾದ ಸಂಕಟ: ಸುಯೋಧನನು . . . ಐತಂದು ಗಜಪುರಸೀಮೆಯಲಿ ಪಾಳಯವ ಬಿಡಿಸಿದ ವೈಮನಸ್ಯದಲಿರುಳು ಹೊಕ್ಕನು ಹಸ್ತಿನಾಪುರವ (ಕುವ್ಯಾಸ. ೧೧-೩೭) ; ಬಳಲ್ದ ರಿಪು ಚೇತರಿಸಿಕೊಳ್ಳದಿರಲು ವೈಮನಸ್ಯದೊಳಕಟ ತಪ್ಪಿತ ರಣಾಟೋಪವ್ಯಮೊಗಂ ಬಲ್ಲನೆನುತವನೆಡೆಗೆ ಬಂದು (ಜೈಮಿಭಾ. ೪-೪೭). ೨. ಹಗೆತನ ; ವೈರ ; ದ್ವೇಷ : ವೈಮಟಿ'ದನರಗಳಿಗೆ ಮಾತ್ರಕೆ ವೈಮನಸ್ಯದ ಜಾಡ್ಯರೇಖೆಯ ಸುಯ್ ಮಹಾದ್ಭುತವಾಯ್ತು ಪರಿಣತ ಪಾರವಶ್ಯದಲಿ (ಕುವ್ಯಾಗ. ೭-೨೭) ; ಬೇಟದ ಕಟಕಿಗಳಿಂದೆ ಐಮೊಗನ ರಾಣಿಯಂ ನುಡಿಸಿದೊಡೆ ಭೂಪ ಕೇಳ್ಕೆ ಮುಳಿದು ನೋಡಿದಳ್ಪವನಮಾತೆಯ ಖತಿಯ ವೈಮನಸ್ಯದೊಳುಳಿವರಾರ ಸುರನುರಿದು ಪೋದಂ ಕೂಡೆ ಬೂದಿಯಾಗಿ (ಜೈಮಿಭಾ. ೧೫-೨೭). [ಸಂ.]

**ವೈಮನಸ್ಸು** (ನಾ). = ವೈಮನಸ್ಯ ೨ : ಊರಿನಲ್ಲಿ ಹಲವಾರು ಕಾರಣಗಳಿಂದ ಪಟೇಲ ತಿಮ್ಮೇಗೌಡ ನುತ್ತು ಶ್ಯಾನುಭೋಗ ನರಸಿಂಹಮೂರ್ತಿಗಳಿಗೆ ವೈಮನಸ್ಸು ಇತ್ತು (ಊರುಕ. ೧೦) ; ಅವಳಿಗೆ . . . ನಾಗಲಕ್ಷ್ಮಿಯೊಡನೆ ಎಂದೂ ವೈಮನಸ್ಸು ಬೆಳೆದಿರಲಿಲ್ಲ (ವಂಶವೃ. ೨೯೭). [< ಸಂ. ವೈಮನಸ್ಯ]

**ವೈಮಾನಿಕ** (ನಾ). ೧. ಒಂದು ನಿರ್ದಿಷ್ಟವರ್ಗಕ್ಕೆ ಸೇರಿದ ದೇವತೆ : ವೃಷಾಂಕನಂಬು ತನುವಂ ಪಚ್ಚಂತೆ ಕೊಂಡತ್ತು ತೊಟ್ಟಗೆ ವೈಮಾನಿಕಕೋಟಿಗಂದು ಪಿರಿದೊಂದುತ್ಸಾಹಮಪ್ಪನ್ನೆಗಂ (ಪಂಪಭಾ. ೮-೧೭) ; ಏನ ಹೇಳುವೆನವನಿಪತಿ ವೈಮಾನಿಕರ ಹಂತಿಗಳ ಹರ ಚತುರಾನನರ ವೊಡ್ಡೋಲಗವ ವಾಗ್ಜನಿತವಿಗ್ರಹವ (ಕುವ್ಯಾಕ. ೨೨-೩). ೨. ವಿಮಾನದಲ್ಲಿ ಪ್ರಯಾಣಮಾಡುವವನು ; ವಿಮಾನಸಂಚಾರಿ. ೩. ವಿಮಾನವನ್ನು ನಡೆಸುವವನು ; ಪೈಲಟ್ : ಮೊನ್ನೆ ಸಂಭವಿಸಿದ ವಿಮಾನಾಪಘಾತದಲ್ಲಿ ಆಶ್ಚರ್ಯಕರವಾದ ರೀತಿಯಲ್ಲಿ ವೈಮಾನಿಕನೂ ಸೇರಿದಂತೆ ಪ್ರಯಾಣಿಕರೆಲ್ಲರೂ ಪಾರಾದರು (ಊಢಿ). ೪. ಗಾಳಿಯಲ್ಲಿ ತೇಲುವ ವಸ್ತು ; ಆಕಾಶಬುಟ್ಟಿ. ೫. [ಜೈನ] ವಿಮಾನದಲ್ಲಿ ನೆಲಸಿರುವವನು ; ಪುಣ್ಯವಂತರ ವಾಸಸ್ಥಳದಲ್ಲಿರುವವನು: ಯಥಾಕ್ರಮದಿಂ ಮೂವತ್ತೆರಡು ಲಕ್ಕೆಯುಮಿರ್ಪತ್ತೆಂಟು ಲಕ್ಕೆಯುಂ ವಿಮಾನಂಗಳಕ್ಕು ಮಲ್ಲಿಯ ವೈಮಾನಿಕರೆಲ್ಲಂ ಸಪ್ತಹಸ್ತೋತ್ಸೇಧಶರೀರರ್ (ಸುಕುಮಾ. ೧೧-೬೧ ವ). [ಸಂ.]

**ವೈಮಾಳಿಗೆ** (ನಾ). ಒಂದು ಬಗೆಯ ಉತ್ಸವ : ಶ್ರೀರಂಗಪಟ್ಟಣದಲ್ಲಿ ವೈಮಾಳಿಗೆಯ ಉತ್ಸವವು ಆರಂಭವಾಗಿದ್ದಿತು (ಶ್ರೀರಾಯ. ೨೯೩). [?]

**ವೈಮೇಯ** (ನಾ). ಒಂದು ವಸ್ತುವನ್ನು ಕೊಟ್ಟು ಮತ್ತೊಂದನ್ನು ಪಡೆಯುವಿಕೆ ; ವಿನಿಮಯ : "ಪರಿವೃತ್ತಿಃ, ವಿನಿಮಯಃ, ವೈಮೇಯಃ — ಈ ೬ ಗೂಡುಜೂಡುಹಂ" (ಹಲಾಯು. ೯೪-೪೧). [ಸಂ.]

**ವೈಯಕ್ತಿಕ** (ಗು). ಒಂದು ವಸ್ತುವಿಗೆ ಅಥವಾ ಒಬ್ಬ ವ್ಯಕ್ತಿಗೆ ಸಂಬಂಧಿಸಿದ : ವೈಯಕ್ತಿಕ, ಸಾಂಸಾರಿಕ, ಸಾಮಾಜಿಕ ಮತ್ತು ರಾಜಕೀಯ ಜೀವನಗಳಲ್ಲೆಲ್ಲ ಧರ್ಮಾಚರಣೆಯ ಪ್ರಾಧಾನ್ಯವನ್ನುಪದೇಶಿಸಿದರು (ಬುಶ್ವಾರ. ೧೦೩ ಪೀಠಿಕೆ) ; ಒಂದಾನೊಂದು ಆತ್ಮವು ತನ್ನ ವೈಯಕ್ತಿಕ ವೈಶಿಷ್ಟ್ಯಗಳಿಂದ ಕೂಡಿ ಮಾತಾಪಿತೃಗಳ ಶರೀರವನ್ನು ಪ್ರವೇಶಿಸದಿದ್ದರೆ . . . ಜೀವೋತ್ಪತ್ತಿಯಾಗಲಾರದು (ಜೀವಾತ್ಮ. ೧೭೩). [ಸಂ.]

**ವೈಯಕ್ತಿಕವಿಷಯ** (ನಾ). ಸ್ವಂತವಿಷಯ ; ಖಾಸಗಿವಿಚಾರ : ಅವನ ವೈಯಕ್ತಿಕ ವಿಷಯದಲ್ಲಾಗಲೀ ಆಡಳಿತ ಕ್ಷೇತ್ರದಲ್ಲಾಗಲೀ ಯಾವೊಂದು ನಿರ್ದಿಷ್ಟವಾದ ಸೂತ್ರವನ್ನವಲಂಬಿಸಿರಲಿಲ್ಲ (ಪುನರು. ೩೩೩). [ಸಂ.]

**ವೈಯರ್ಥ್ಯ** (ನಾ). ವ್ಯರ್ಥತೆ ; ನಿಷ್ಪ್ರಯೋಜಕತೆ : "ಮೋಘತೆ ತಾಂ ವೈಯರ್ಥ್ಯಂ" (ವಸ್ತುಕೋ. ೧೧೫-೨೯) ; ಅವುಗಳ ಉಪಯೋಗವಿಲ್ಲ ಎಂದು ನಾನು ಹೇಳುವುದಿಲ್ಲ. ಅದರೊಳಗಿನ ರಾಗದ್ವೇಷಗಳ ವೈಯರ್ಥ್ಯವನ್ನು ಕುರಿತು ನಾನು ಹೇಳಿದೆನು (ಸಾಹಿವಿ. ೨೯). [ಸಂ.]

**ವೈಯಾಕರಣ** (ಗು). ೧. ವ್ಯಾಕರಣಕ್ಕೆ ಸಂಬಂಧಿಸಿದ. (ನಾ). ೨. ವ್ಯಾಕರಣ ಶಾಸ್ತ್ರವನ್ನು ಅಭ್ಯಾಸಮಾಡಿದವನು ; ವ್ಯಾಕರಣಪಂಡಿತ : ಇರು ಮರುಳೆ ಶುಷ್ಕವೈಯಾಕರಣಂಗಂ ಶುಷ್ಕತಾರ್ಕಿಗಂಗಂ . . . ವಿಷಯಮು ಕಾವ್ಯರತ್ನಮತಿ ಚತುರಕವಿಕದಂಬಕವಿಷಯಂ (ಆದಿಪು. ೧-೨೪) ; ವೈಯಾಕರಣನಂತೆ ಶಬ್ದಮನಾಲಿಸಿಯುಂ ಬೇಂಟೆಕಾಱನಂತೆ ಅಡಿವಜ್ಜೆಯನಱಸಿಯುಂ (ಗದಾಯು. ೬-೨೮ ವ); ದೊರೆಕೊಳ್ಳದಖಿಳ ವೈಯಾಕರಣರಿನೊಂದೆಂಬುದರ್ಕೊರಂಬಾದೇಶಂ . . . ದೊರೆಕೊಳ್ಳುಮದಲ್ಲದಂದು ಕಾರಾಭಾವಂ (ಶಮದ. ೧೪೭). [ಸಂ.]

**ವೈಯಾಕರಣೆ** (ನಾ). = ವೈಯಾಕರಣ ೨ : ಬಳಿಕ ಕವಿಯೆಂದು ವೈಯಾಕರಣೆಯೆಂದು ವೆಗ್ಗಳಿಸಿ ದನಿಗೈವ ದುಷ್ಕವಿಯ ಗರ್ವದ ಮೂಗನಿಳುಹದಿರನು . . . ಹಂಪೆಯ ರಾಘವಂ (ಹಚಕಾ. ೧-೩೧) ; ಪ್ರಾಕೃತವೈಯಾಕರಣೆಗಳು ಕೂಡ, ದಾಕ್ಷಿಣಾತ್ಯಭಾಷೆಗಳ ಈ 'ಟಕಾರ'ಬಾಹುಲ್ಯವನ್ನೇ ಘೋಷಿಸುತ್ತಿದ್ದಾರೆ (ಭಾಷಾಶಾ. ೪೨). [< ಸಂ. ವೈಯಾಕರಣ]

**ವೈಯಾಘ್ರ** (ಗು). ೧. ಹುಲಿಗೆ ಸಂಬಂಧಪಟ್ಟ. ೨. ಹುಲಿಯ ಚರ್ಮವನ್ನು ಹೊದಿಸಿದ. (ನಾ). ೩. ಹುಲಿಯ ಚರ್ಮ. ೪. ಹುಲಿಯ ಚರ್ಮವನ್ನು ಹೊದಿಸಿದ ರಥ : "ದ್ವೈಪಃ, ವೈಯಾಘ್ರಃ – ೨ . . . ಹುಲಿಯ ತೊಗಲು ಹೊದಿಕೆಯುಳ್ಳ ರಥದ ಹೆಸರು" (ಸಿದ್ಧಾಂತಿ. ೨೫೨). [ಸಂ.]

**ವೈಯಾಪೃತ್ಯ** (ನಾ). ೧. (ಮಧ್ಯೆ ಪ್ರವೇಶಿಸದೆ) ಯಾರಿಗಾದರೂ ವಹಿಸಿಕೊಟ್ಟ ಕೆಲಸ , — ಕಾರ್ಯ. ೨. [ಜೈನ] ಅಂತರಂಗದಲ್ಲಿ ಆಚರಿಸುವ ಆರು ಬಗೆಯ ತಪಸ್ಸುಗಳಲ್ಲಿ ಒಂದು : ಅಭ್ಯಂತರತಪಷ್ಷಟ್ಕದೊಳಂ ಪ್ರಾಯಶ್ಚಿತ್ತ ವಿನಯವೈಯಾಪೃತ್ಯಸ್ವಾಧ್ಯಾಯಧ್ಯಾನವ್ಯುತ್ಸರ್ಗಂಗಳನೊಳಕೊಂಡು (ಆದಿಪು. ೬-೩೩ ವ); ಪ್ರಾಯಶ್ಚಿತ್ತ ವಿನಯವೈಯಾಪೃತ್ಯ ಸ್ವಾಧ್ಯಾಯವ್ಯುತ್ಸರ್ಗಧ್ಯಾನಂಗಳೆಂಬ ಷಡ್ವಿಧಾಭ್ಯಂತರತಪದೊಳಂ ನೆಱೆ'ದು (ಆಪು. ೭-೮ ವ). [ಸಂ.]

**ವೈಯಾಪೃತ್ಯಂಗೆಯ್** (ಕ್ರಿ). ಸೇವೆಯನ್ನು ಮಾಡು ; ಉಪಚರಿಸು : ವ್ಯಾಧಿಯ ಪ್ರಬಲತ್ವಮಂ ಕಂಡು ವೈಯಾಪೃತ್ಯಂಗೆಯ್ಯುದರ್ಕಾದಮಾನುಮ[ಟ್ಟಿ]ಯೊಡೆಯನಾಗಿ ಪೂಡೆವಟ್ಟು (ವಡ್ಡಾರಾ. ೧೭೧-೧೭). [ವೈಯಾಪೃತ್ಯ + ಕೆಯ್₁]

**ವೈಯಾರ, ವಯ್ಯಾರ** (ನಾ). ೧. ಬೆಡಗು ; ಬಿನ್ನಾಣ ; ಒನಪು : ನಗೆ ಮುಸುಕಿದ ವದನ ವೈಯಾರ ಮುಸುಕಿದ ವಲಪು . . . ಪ್ರೌಢಿ ಮುಸುಕಿದ ಕೂಟದಂಗನೆಯರೆಸೆದಿರ್ದರಾ ಪಣ್ಯವಾಟಿಯೊಳ್ (ಸಂದಿಮಾ. ೨೩-೪೧) ; ಆ ಚೈತ್ರಪಾಹಿನಿ ಕಿರೀಟಿಯೆಡೆಗೈದಿದಳ್, ವರನೆಡೆಗೆ ವೈಯಾರದಿಂದ್ಯೆದುವಂಗನೆಯ ಪಾಂಗಿನಿಂದಲ್ತು (ಚಿತ್ರಾಂಗ. ೨೩-೬೦೪). ೨. ಆಸೆ; ಪ್ರೀತಿ: ಭಕ್ತರು ಕ್ರೀವಿಡಿದು ಪದಾರ್ಥವ ಪರಿಯಾಣದಲ್ಲಿ ತಂದರೆ ಭಯಭಕ್ತಿಯಿಂದ ವೈಯಾರದಲಿ ಪ್ರಸಾದವ ಸಲಿಸುವುದೇ ಎನ್ನ ಕ್ರೀಗೆ ಸಂದಿತು (ಘನವ. ೧೮-೧೭). **ವಯ್ಯಾರ:** ೧. ಅವಳ ವಯ್ಯಾರಕ್ಕೆ ಬಲಿಬೀಳದವರು ಅಪರೂಪ (ಮಣ್ಣಿಮ. ೧೩); ತವಡು ತಿಂಬವಗೆ ವಯ್ಯಾರ ಯಾಕೆ ? (ಗಾದೆ). ೩. ಅಂದ; ಸೊಗಸು: ಅವಳ ಮುಂದೆ ತನ್ನ ಗಂಟಲ ಗೀತದ ವಯ್ಯಾರವನ್ನೂ . . . ತೋರಿಸಿದ್ದುಂಟು (ಸ್ವಪ್ನಪೂ. ೪). [< ಒಯ್ಯಾರ]

**ವೈಯಾರಿ, ವಯ್ಯಾರಿ** (ನಾ). ಬೆಡಗಿ ; ಬಿನ್ನಾಣಗಿತ್ತಿ : ನಿನಗೇನು ತಿಳಿಯುತ್ತದೆಯೇ ವೈಯಾರಿ! (ವಾತ್ಸಲ್ಯ. ೩೧೯). **ವಯ್ಯಾರಿ :** ಎಂಟುಗಂಟೆಗೇ ಊಟಮಾಡಿ ಹೋಗಿದ್ದಳಲ್ಲ ನಿನ್ನ ಆ ವಯ್ಯಾರಿ (ಮೂರುದಾ. ೩೪). [< ಒಯ್ಯಾರಿ]

**ವೈಯಾಳಿ** 'ವೈಹಾಳಿ' ನೋ.

**ವೈಯಾಳಿಗ್ಯೆ** (ಕ್ರಿ). ಕುದುರೆಸವಾರಿ ಮಾಡು : ಅತ್ತ ಫಣಿಸುತ ಸರಿವರೆಯ ನೃಪಮೊತ್ತಸಹ ವೈಯಾಳಿಗ್ಯೆಯಲು ಉತ್ತಮಾಶ್ವವ ತನ್ನಿಮೆನ್ನುತ ಕಳುಹೆ ಸೇವಕರ (ನಾಗಪ. ೯-೩೦). [ವೈಯಾಳಿ (< ವೈಹಾಳಿ) + ಕೈ (< ಕೆಯ್$_1$)]

**ವೈರ** (ನಾ). ೧. ಹಗೆತನ; ದ್ವೇಷ; ಶತ್ರುತ್ವ : ಆ ಮುನೀಂದ್ರನ ತಪಃಪ್ರಭಾವದೊಳನ್ಯೋನ್ಯ ವೈರಂಗಳಂ [ಪಾಠಾಂ. ವೈರ ವೈರಸ್ಯಂಗಳಂ, ವೈರಸ್ಯಂಗಳಂ] ಮಱೆದು ಕರಿಗಳಾ ಕೇಸರಿಗಳ್ಗೆ ಪುಷ್ಕರಧೃತಸ್ವಚ್ಛಾಂಬುವಂ ನೀಡೆ (ಆದಿಪು. ೯-೭೬ ವ) ; ಹರಿಯ ಹಿಸುಣಿಕೆಯವರ ಚಿತ್ತವ ಬೆರಸಿ ವೈರವ ಬೆಳಸಿ ಬಂದರು (ಕುವ್ಯಾ.ಭೀ. ೧-೧೯) ; ಮಚ್ಚರಿಸುವ ಸವತಿಯರಿರ್ವರುಮೀ ಕೃತಿಗೇಳೆ ಬೇರ್ವರಿದಿರ್ಪ ವೈರದ ಬೇರ ಪರಿದಿಟ್ಟಿರ್ವರೊಂದೆನಿಸಿಯೊಪ್ಪುವರು (ಹರಿಬ. ೧-೫೯). ೨. ಸೇಡು ; ಪ್ರತೀಕಾರ. ೩. ಹಗೆ; ವೈರಿ; ಶತ್ರು. ೪. ಶೌರ್ಯ; ಸಾಹಸ. [ಸಂ.]

**ವೈರಂಗಿಕ** (ಗು). ೧. ಅನಾದರಕ್ಕೆ ಪಾತ್ರವಾದ. ೨. ಪ್ರಾಪಂಚಿಕ ಸುಖಗಳಿಂದ ದೂರವಾದ. (ನಾ). ೩. ವಿರಾಗಿ ; ವಿರಕ್ತ : "ವೈರಂಗಿಕಃ, ವಿರಾಗರ್ಹಃ – ಈ ೨ ವಿರಕ್ತಂ" (ಶಬ್ದಾಯು. ೬೧-೨೦೪). [ಸಂ.]

**ವೈರಂಭ** (ನಾ). ನಾಲ್ಕು ಬಗೆಯ ಜೀವಸಂಬಂಧವಾಯುಗಳಲ್ಲಿ ಒಂದು : ವೈರಂಭ ಮುಖ್ಯ ಪ್ರಭಂಜನ ಅಂತರ್ಯಾಮಿ ಸೌಜನ್ಯಯುಳ್ಳ ನಾಲ್ಕು ಜೀವಸಂಬಂಧಮಾದ ವಾಯುಗಳೇ ಮಾನಸಾದ್ಯಂತಃಕರಣಚೇಷ್ಟಾಕಾರಣಂಗಳಾಗಿರ್ಕುಂ (ವಿವೇಕ. ೩೪) ; ವೈರಂಭಾದಿ ವಾಯುವಿನ ವರ್ತನದಿಂದಲಹವಿದು ನಿಜವಕ್ಕು (ಪರಜೋ. ೨-೮-೩). [ಸಂ.]

**ವೈರಂಭಣ** (ನಾ). = ವೈರಂಭ : "ಮೇಲಕ್ಕೆ ಚಿಗಿವುದು ಪ್ರಭಂಜನಂ ತಿರಿಗಿಸುವ ಗಾಳಿ ವೈರಂಭಣಂ" (ಮಂಗರಾ. ೧೭-೧೩) ; ವೈಲ ವೈರಂಭಣ ಮುಖಪ್ರಭಂಜನ ಅಂತರ್ವಹ ವಾಯು ಭಾವದ ಚರಿತ್ರ (ಚನ್ನವ. ಕ. ೫೮೭-೧೩೧೪). [ಸಂ.]

**ವೈರತ್ವ** (ನಾ). ಹಗೆತನ ; ದ್ವೇಷ : ಇಷ್ಟು ವೈರತ್ವವುಳ್ಳ ನಮ್ಮ ಮಿತ್ರನದಾವನಿರಬೇಕು? (ಅಂಬಿಕೆ. ೨೫). [ಸಂ.]

**ವೈರಬಂಧ** (ನಾ). ಹಗೆ ; ಸೇಡು : ಸೈರಿಸುವುದೀ ಬಾಲಭಾಷೆಗೆ ವೈರಬಂಧವ ಬಿಡುವದನುತಾಚಾರಿಯನ ರಥಹಯವ ಹೊದಿಸಿದನಸ್ತ್ರನಿಕರದಲಿ (ಕುವ್ಯಾ.ಭೀ. ೮-೩೩). [ಸಂ.]

**ವೈರಭಾವ** (ನಾ). = ವೈರತ್ವ : ದಿನದಿನಂಪ್ರತಿ ವೈರಭಾವವನೆನಗೆ ಹುಟ್ಟಿಸಿ ಸಂಹರಿಸುವವನು ಮುನಿಹೃದಾಂಬುಜವಾಸಗಿದು ನಿಜಲೀಲೆ (ಕೌಶಿರಾ. ೨೩-೧೭). [ಸಂ.]

**ವೈರಮುಡಿ** 'ವಯಿರಮುಡಿ' ನೋ.

**ವೈರವಡೆ** (ಕ್ರಿ). ಹಗೆತನದಿಂದ ಕೂಡಿರು ; ದ್ವೇಷವನ್ನು ತಾಳು : ಒರ್ಬೊರ್ವರ ಮುಡಿಗೋರ್ಬೊರ್ವರ ಮುಡಿಯೋರ್ಬೊರ್ವರ ತೊಡೆಗೋರ್ಬೊರ್ವರ ತೊಡೆ ವೈರವಡೆದ ವಸ್ತುವಿನಿರವಂ ನೆಱೆ ಪೋಲ್ತು ಸೊಗಯಿಸಿದುವು (ಜಯಕಾ. ೨-೪). [ವೈರ + ಪಡೆ$_1$]

**ವೈರಶುದ್ಧಿ** (ನಾ). ೧. ದ್ವೇಷವನ್ನು ನಿರ್ಮೂಲಮಾಡುವಿಕೆ ; ಹಗೆತನವನ್ನು ತೊರೆಯುವಿಕೆ. ೨. ಸಿಟ್ಟನ್ನು ತೀರಿಸಿಕೊಳ್ಳುವಿಕೆ ; ಸೇಡು ; ಪ್ರತೀಕಾರ: "ವೈರಶುದ್ಧಿಃ, ಪ್ರತೀಕಾರಃ, ವೈರನಿರ್ಯಾತನಂ – ೩ ಹಗೆ ತೀರಿಸಿಕೊಳ್ಳುವುದರ ಹೆಸರು" (ಸಿದ್ಧಾಂತಿ. ೨೭೦) ; ಈ ಹುಡುಗಿಗೆ ನೆಗಡಿ ತಪ್ಪದಂತೆ ಮಾಡಿ ಆಕೆ "ಅಯ್ಯೊ ನನ್ನ ಮೂಗೇ" ಎಂದು ಗೋಳಾಡುತ್ತಿದ್ದರೆ, ಅದು ನಿಜವಾದ ವೈರಶುದ್ಧಿಯಾದೀತೆಂದು ಇನ್ನೊಂದು ತಲೆ ಸೂಚಿಸಿತು (ದೇಜಗೌ. ೧೮). [ಸಂ.]

**ವೈರಸ್ಯ** (ನಾ). ೧. ರಸವಿಲ್ಲದುದು ; ನಿಸ್ಸಾರವಾದುದು. ೨. ಸಮರಸವಿಲ್ಲದಿರುವಿಕೆ ; ವಿರಸ : ಆ ಮುನೀಂದ್ರನ ತಪಃಪ್ರಭಾವದೊಳನ್ಯೋನ್ಯ ವೈರಸ್ಯಂಗಳಂ [ಪಾಠಾಂ ವೈರಂಗಳಂ, ವೈರವೈರಸ್ಯಂಗಳಂ] ಮಱೆದು (ಆದಿಪು. ೯-೭೬ ವ) ; ಈ ಪ್ರಕಾರ ಮದನಸಿಂಗನಿಗೂ ಕುಸುಮಾಕ್ಷಿಗೂ ವೈರಸ್ಯ ಹುಟ್ಟಿ ವೃದ್ಧಿಯಾಗುವ ಹಾಗಾಯಿತು (ಅದೂಬ. ೧೫೫). ೩. ನೋವು ; ವೇದನೆ : ನಿರ್ಭರ ಪ್ರಥಮಗರ್ಭಭಾರಪರಿಕ್ಲೇಶಾಯಾಸಿತಸ್ವಾಂತೆಯುಮಂಗವೈರಸ್ಯಾಕ್ರಾಂತೆಯುಮಾಗಿರ್ದ ವೈಶ್ಯಕಾಂತೆಯನೊರ್ವಳಂ ಕಂಡು (ಚಂಪ್ರಪು. ೩-೭೬ ವ). [ಸಂ.]

**ವೈರಾಗ** (ನಾ). ಖಡ್ಗಯುದ್ಧದಲ್ಲಿಯ ಒಂದು ಪಟ್ಟು ; ಒಂದು ಬಗೆಯ ಕತ್ತಿವರಸೆ : ಹನ್ನೆರಡು ಪಟ್ಟಿನ ಮಧ್ಯದಲ್ಲಿ ಆವದಾನೊಂದು ಪಟ್ಟಿನಿಂದ ಅಂಗ್ಯ ಶರೀರದಲ್ಲಿ ಘಾಯವನು ಹುಟ್ಟಿಸಿ ಆ ವೈರಿಯಿಂದ ಘಾಯವಿಲ್ಲದ ದೇಹವುಳ್ಳವನಾಗಿ ಆವವನ್ನು ಯತ್ನದಿಂದ ಆವಟಾನೊಂದು ಸಾಧನೆಯನು ಮಾಡುವನು ಅವನ ಸಾಧನೆಯು ವೈರಾಂಗವು ಎಂದು ತಿಳಿಯಲ್ಪಟ್ಟಿತು (ಖಡ್ಗಟೀ. ೫-೭೪). [ಸಂ. ?]

**ವೈರಾಗಿ** (ನಾ). (ಸಾಮಾನ್ಯವಾಗಿ ವೈಷ್ಣವ) ಸಂನ್ಯಾಸಿ : "ವೈರಾಗಿಯೆಂದನೆ ವಿರಕ್ತನಕ್ಕು" (ಮಂಗರಾ. ೨೦-೧೫). [ಸಂ. ವೈರಾಗಿನ್]

**ವೈರಾಗ್ಯ** (ನಾ). ೧. ಪ್ರಪಂಚದ ಎಲ್ಲ ಬಗೆಯ ಆಸೆಗಳನ್ನೂ ತ್ಯಜಿಸುವಿಕೆ ; ಸರ್ವಸಂಗಪರಿತ್ಯಾಗ : ತತ್ಕಂ ಮತಿಗೆ ವಿಮಲಮೇಕಾಂತವೈರಾಗ್ಯಮಸ್ತತ್ಪ್ರಭು ಕೂಸಿಂದಿರ್ದನಿಲ್ಲ (ಶಾಂತಿಪು. ೧೦-೬೨) ; ಒಲ್ಲೆನೆಂಬುದು ವೈರಾಗ್ಯ ಒಲಿವೆನೆಂಬುದು ಕಾಯಗುಣ (ಬಸವ. ೭೭೪) ; ಭೀಷ್ಮನ ಹೃದಯದಲಿ ವೈರಾಗ್ಯ ಮನೆಗಟ್ಟಿತ್ತು ನಿಮಿಷದಲಿ (ಕುವ್ಯಾ.ಭೀ. ೧೦-೨) ; ಹಸಿವು ತೃಷೆಯ ಸಹಿಸದವಗೆ ಹುಸಿಯಾದ ವೈರಾಗ್ಯವೇಕೆ (ಪುರಂದ. ೧-೩೦-೩). ೨. ಅತೃಪ್ತಿ ; ಅಸಮಾಧಾನ. ೩. ಹೇವರಿಕೆ ; ಜುಗುಪ್ಸೆ. ೪. ದುಃಖ. ೫. ಬಣ್ಣಗೆಡುವಿಕೆ. [ಸಂ.]

**ವೈರಾಳ್** (ನಾ). ವೈರಿ ; ಶತ್ರು ; ಹಗೆ : ಬಾಗೆಯೂರ ಬಲ್ಲಹನೇಱಿನೊಳ್ಳಿಯಾನ್ ವೈರಾಳ್ ಸಮಪದರುಳ್ ಕೊಪ್ಪುಳವೂರ ಬಾಳಿಯೊಳ್ಬೊಣ್ಣದಿಕ್ಕಿಜ್ಜಯ ತಮ್ಮುಳಿ ಪಡೆಯುಳಿಱಿದು ಸತ್ತನ್ (ಎಕ. XVI. ತುಮಕೂ. ೯೨-೯ ; 9ನೆಯ ಶತ ?). [ವೈರ + ಆಳ್$_1$]

**ವೈರಿ** (ಗು). ೧. ಹಗೆತನವುಳ್ಳ ; ದ್ವೇಷದಿಂದ ಕೂಡಿದ. (ನಾ). ೨. ಹಗೆ ; ಶತ್ರು : ವೀರನಾದರೆ ವೈರಿಗಳು ಮೆಚ್ಚಬೇಕು ವ್ರತಿಯಾದರೆ ಅಂಗನೆಯರು ಮೆಚ್ಚಬೇಕು (ಬಸವ. ೬೭೦) ; ನಾವು ವೈರಿಗಳೆಂದು ಕೋಪಿಸುವ ಈ ಮರುಳುತನವೆತ್ತಲೀ ರಣತಾಮಸಿಕೆ ತಾವೆತ್ತಣದು (ಕುವ್ಯಾ.ಭೀ. ೬-೪೦) ; ಚಣಚಣಕೆ ವೈರಿಯಂ ದಳಂ ಬಲಗುಂದು ತಳೆದುಳಿದು ಹಿಂಜರಿಯುತೋಡುತಿದೆ (ಚಿತ್ರಾಂಗ. ೮೩-೨೦೮೮).

**ವೈರಿಕುಳಯಮದಂಡ** = ಶತ್ರುಪಕ್ಷದವರಿಗೆ ಯಮನ ಗದೆಯಂತಿರುವವನು ; ಒಂದು ಬಿರುದು: ಶ್ರೀವಾವಣನೃಪತಿ ವೈರಿಕುಳಯಮದಣ್ಡಂ (ಸೌಇಇ. XX, ೫೫-೨೩; 1082). **ವೈರಿನಿಃಕಂಟ** = ಶತ್ರುಗಳ ಉಪಟಳವನ್ನು ನಾಶಗೊಳಿಸುವವನು ; ಒಂದು ಬಿರುದು : ಸಮರಜಯಘಂಟಾರವಂ ಕಾದಂಬಕಣ್ಠೀರವ(ಂ)ಮಣ್ಣನ ಬಂಟಂ ವೈರಿನಿಃಕಂಟಂ ತೈಲನ ಸಿಂಘಂ (ಸೌಇಇ. XX, ೪೦-೧೧; 1068). **ವೈರಿಬಂಗಾಱ, ವೈರಿಭಂಗಾಱ** = ಶತ್ರುಗಳಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ರೂಪಮನೋಜಂ ಪರಬಳಸೂಱೆಕಾಱಂ ವೈರಿಬಂಗಾಱಂ ನರಸಂಕಭೀಮಂ ಚಲದಂಕರಾಮಂ (ಸೌಇಇ. XX, ೧೮-೯ ; 980) ; ರಾಯರಾಯ ಪುರಸೂಱೆಕಾಱ ವೈರಿಭಂಗಾಱ ವೀರನಾರಾಯಣ (ಎಕ. II, ೧೪೩-೪೦ ; 1131). **ವೈರಿಬಳಮಲ್ಲ** = ಶತ್ರುಪಡೆಗೆ ಮಲ್ಲನಂತಿರುವವನು ; ಮಹಾಶೂರ ; ಒಂದು ಬಿರುದು : ವೈರಿಬಳಮಲ್ಲಂ ಗಡಿಯಜ್ಕಮಲ್ಲಂ ಮಾರಸಿಜ್ಞನ ನನ್ನನಂ (ಎಕ. III (R). ಹಗ್ಗಡ. ೧೦೪-೫ ; 1087). **ವೈರಿಭಯದಾಯಕ** = ಶತ್ರುಗಳಿಗೆ ಭಯವನ್ನುಂಟುಮಾಡುವವನು ; ಒಂದು ಬಿರುದು : ಮಹಾಸಂಧಿವಿಗ್ರಹಾಧಿಪತಿ ಮಹಾಪ್ರಚಣ್ಡದಣ್ಡನಾಯಕಂ ವೈರಿಭಯದಾಯಕಂ ಸಾಹಿತ್ಯವಿದ್ಯಾವಿತರ್ಕ್ಕಂ (ಕಇಅ. ೧-೧-೧ ; 1092). **ವೈರಿಭೇರುಂಡ** = ಶತ್ರುಗಳಿಗೆ ಭೇರುಂಡಪಕ್ಷಿಯಂತಿರುವವನು ; ಒಂದು ಬಿರುದು : ಗಣ್ಡರ ಗಣ್ಡಂ ವೈರಿಭೇರುಣ್ಡಂ ಪ್ರತಿಪನ್ನಮಂದರಂ ಶರಣಾಗತವಜ್ರಪಂಜರಂ ಶ್ರೀಮತ್ ಶಾನ್ತಿವರ್ಮ್ಮರಸರ ವಂಶಾವತಾರಮೆಂತೆಂದೊಡೆ (ಸೌಇಇ. XX, ೧೮-೯; 980). **ವೈರಿಮದಭಂಜನ** = ಶತ್ರುಗಳ ಸೊಕ್ಕನ್ನು ಅಡಗಿಸುವವನು ; ಒಂದು ಬಿರುದು : ಸರಣಾಗತ ವಜ್ರಪಂಜರಂ ವೈರಿಮದಭಂಜನಂ ಬಿರುದರ್ಗುರ್ವ್ವನುಂ . . . ಶ್ರೀಮನ್ಮಹಾಮಣ್ಡಳೇಶ್ವರಂ ಕೀರ್ತ್ತಿವರ್ಮದೇವರ್ (ಸೌಇಇ. XX, ೪೦-೧೨; 1068). **ವೈರಿಮನ್ನೆಯ** = ಶತ್ರುಗಳಿಂದ ಮನ್ನಣೆಯನ್ನು ಪಡೆದವನು ; ಒಂದು ಬಿರುದು : ಕಾಮಿನೀಕಾಮಂ ಮಣಲರ ಭೀಮಂ ವೈರಿಮನ್ನೆಯರ ಪಾಷ[ಣ್ಡ] ವೀರ ಮುರಾರಿ (ಸೌಇಇ. XX, ೩೮-೭ ; 1058). **ವೈರಿಸಂತಾಪ** = ಶತ್ರುಗಳಲ್ಲಿ ತಾಪವನ್ನುಂಟು ಮಾಡುವವನು ; ಒಂದು ಬಿರುದು : ಉಭಯಬಳಸುಭಟಕೀರ್ತ್ತಿತಪ್ರತಾಪಂ ವೈರಿಸಂತಾಪಂ (ಸೌಇಇ. XX, ೪೬. ೩೫ ; 1072). **ವೈರೀಭಕಂಠೀರವ** = ಶತ್ರುವೆಂಬ ಆನೆಗೆ ಸಿಂಹದಂತಿರುವವನು ; ಒಂದು ಬಿರುದು:

ವೈರೀಭಕಣ್ಠೀರವ(ಮ) ಮಕರ ರಾಜ್ಯ ನಿರ್ಮೂಲಕ . . . ಶ್ರೀವಿಷ್ಣುವರ್ಧನಹೊಯ್ಸಳ (ಎಕ. III (R), ನಂಜನ. ೩.೨೦-೭ ; 1022). [ಸಂ. ವೈರಿನ್]

**ವೈರಿಂಚಾಸ್ತ್ರ** (ನಾ). ಬ್ರಹ್ಮನು ಅಧಿದೇವತೆಯಾಗಿರುವ ಮಂತ್ರಾಸ್ತ್ರ; ಬ್ರಹ್ಮಾಸ್ತ್ರ : ಆಯುವಂತನೆ ಕೇಳು ಮಿಕ್ಕಿನ ಸಾಯಕದಲಿವನಳಿಯ ದೈತ್ಯನಿಕಾಯಕ ವಚವಿಭೇದಿ ವೈರಿಂಚಾಸ್ತ್ರ ಹೂಡು (ಕೌಶಿರಾ. ೨೭-೫೦). [ಸಂ.]

**ವೈರಿಕ್ಷೋಣಿಪ** (ನಾ). ಪ್ರತಿಪಕ್ಷದ ದೊರೆ ; ಶತ್ರುರಾಜ : ಹೂಣಿ ಹೊಕ್ಕನು ಹಿಡಿದು ವೈರಿಕ್ಷೋಣಿಪನ ತಟುಬಿದನು ನಾವಕ್ಷಣದುರಿತರು ಹಲುಬಿ ಮಾಡುವು ದಾವುದು (ಕುಮ್ಮಾದ್ರೋ. ೪-೬). [ಸಂ.]

**ವೈರಿಣಿ** (ನಾ). ಹಗೆತನವುಳ್ಳವಳು ; ಶತ್ರುತ್ವವಿರುವವಳು : ಕ್ಷುದ್ರಬುದ್ಧಿಯ ಕೈಕೇಯಿಯು ತನ್ನ ವೈರಿಣಿಯನ್ನು ಹಿತಕರ್ತ್ಯವಾಗಿ ಭಾವಿಸಿದಳು (ತುಳಸೀ. ೧೦೮). [ಸಂ. ವೈರಿಣೀ]

**ವೈರಿದೂತ** (ನಾ). ಶತ್ರುಪಕ್ಷದ ದೂತ ; ವೈರಿಯ ಕಡೆಯಿಂದ ಬಂದ ಆಳು: ವೈರಿದೂತನ ಕಳುಹಿದನು ಕೈವಾರಿಗಳು ಜಯಜಯಯೆನಲು ಹೊಂದೇರ ತರಿಸಿದನಬುಜ ನಾಭನ ಪದಯುಗಕೆ ನಮಿಸಿ (ಕುಮ್ಮಾಭೀ. ೧-೬೨). [ಸಂ.]

**ವೈರಿನಾಯಕವಾಡಿ** (ನಾ). ವೈರಿಗಳ ದಳಪತಿ ; ಶತ್ರುಸೇನಾಪತಿ : ಬೇಡ ಮಗನೇ ವೈರಿನಾಯಕವಾಡಿಗಳು ವೆಗ್ಗಳರು . . . ನಿನಗೆಯಸದಳವು (ಕುಮ್ಮಾದ್ರೋ. ೭೧೯. ಪರಿ. ೨೭೭). [ವೈರಿ + ನಾಯಕವಾಡಿ]

**ವೈರಿಪದ** (ನಾ). ಅರಿಸಮಾಸ ; ವಿರುದ್ಧಸಮಾಸ : ವೈರಿಪದವಪಶಬ್ದವ ಚಮತ್ಕಾರವಧಮೋಪಮೆ ನಿಯತಿಪದಪೂರಕಂ . . . ಕ್ರಿಯಾಳಂಕಾರಹೀನವೆನಿಪ್ಪ ಪೊಳ್ಳಂ ತೂಱಿ ಕಳೆದು . . . ರಚಿಸುವಂ ಕೃತಿಯ (ಬಸಪು. ೧-೧೮). [ಸಂ.]

**ವೈರಿಬಲ** (ನಾ). ಹಗೆಗಳ ಪಡೆ ; ಶತ್ರುಸೈನ್ಯ : ದೆಸೆದೆಸೆಗೋಡಿದನ್ನಕರಿ ದಿಕ್ಕರಿಯಾದುದರಾತಿಭೂಭುಜಪ್ರಸರಮೆ ದಿಕ್ಪತಿಪ್ರಸರಮಾದುದು ವೈರಿಬಲಂ (ಗದಾಯು. ೧-೫೩); ಓಸರಣೆಗೊಡದತಿಬಳರು ದಿವದಾಸೆಗಾಱರು ವೈರಿಬಲವನು ಘಾಸಿಮಾಡಿದ ರೊಗ್ಗಿನಲಿ ಹಮ್ಮೀರರಾವುತರು (ಕುಮ್ಮಾಭೀ. ೪-೬೨). [ಸಂ.]

**ವೈರೂಪ್ಯ** (ನಾ). ವಿರೂಪ ; ವಿಕಾರ : ಅನಿಬರುಂ ವೈರೂಪ್ಯಮಂ ಕಂಡು, ಕಿನಿಸಿ, ಮುನಿದಕ್ಷಿಯಿಂ ಪಳಿದು ಮುನ್ ನಡೆಯೆ, ಮಂಥರೆ ಸಾರ್ದಳೊಯ್ಯನೆಯೆ ಸಂಭ್ರಮಂ ತುಳುಕಿರ್ದ ಕಲ್ಯಾಣಮಂಟಪಕೆ (ಶ್ರೀರಾಮಾ. ೬೦-೧೬೬) ; ಅವಳ ದೃಷ್ಟಿಯಲ್ಲಿ ಮಗಳಿಗೆ ಮಾತು ಬಾರದಿದ್ದದ್ದು ಒಂದು ವೈರೂಪ್ಯ, ಅಪರಾಧ (ಏಳಜೀ. ೩೯). [ಸಂ.]

**ವೈರೋಚನ** (ಗು). ೧. ಸೂರ್ಯನಿಗೆ ಸಂಬಂಧಪಟ್ಟ. (ನಾ). ೨. ಸೂರ್ಯನ ಮಗ. ೩. ವಿರೋಚನನ ಮಗ ; ಬಲಿ. ೪. ಅಗ್ನಿಯ ಮಗ. ೫. ಒಬ್ಬ ಮುನಿಯ ಹೆಸರು. ೬. [ಜೈನ] ಭವನವಾಸಿ ದೇವತೆಗಳಲ್ಲಿ ಒಬ್ಬ : ಚಮರ ವೈರೋಚನಪ್ರಮುಖರಪ್ಪ ಭವನಾಮರರುಮಂ . . . ನಿರವಿಸಿ (ಚಂದ್ರಪು. ೧೨-೧೧೩ ವ); ಓರೊಂದು ಕುಲದೊಳಿರ್ವರಿರ್ವರ್ಚಮರ ವೈರೋಚನಾದಿಗಳಿಂದ್ರರಪ್ಪರ್ (ರತ್ನಕ. ೨-೯ ವ). ೭. [ಬೌದ್ಧ] ಒಬ್ಬ ದೇವತೆ : ವೈರೋಚನ, ರತ್ನಸಂಭವ, ಅಮಿತಾಭ, ಅಮೋಘಸಿದ್ಧಿ, ಅಕ್ಷೋಭ್ಯ – ಈ ಐವರಿಗೂ ಕ್ರಮವಾಗಿ ವಜ್ರಧಾತೇಶ್ವರಿ . . . ತಾರಾ ಎಂಬ ಐವರು ಶಕ್ತಿದೇವತೆಗಳುಂಟು (ಕಶಾಅ. ೧೨೦). [ಸಂ.]

**ವೈರೋಚನಿ** (ನಾ). ೧. ಸೂರ್ಯನ ಮಗ. ೨. ವಿರೋಚನನ ಮಗ ; ಬಲಿ: ತನಗಹಂಕೃತಿಯಿಲ್ಲ ವೈರೋಚನಿಯ ಪಡಿಹಾಱಿಕೆ ಕಿರೀಟಿಯ ಮನೆಯ ಬಂಡಿಯ ಬೋವನಾದನು ವೀರನಾರಯಣ (ಕುಮ್ಮಾಉ. ೧-೪೫) ; ಸಮಯವರಿತು ವೈರೋಚನಿಯು ಧಾಳಿಟ್ಟಮರಪುರವನೊಳಗ್ಗೈದನು (ಸಮುದ್ರ. ೪-೫). ೩. ಬುದ್ಧ. [ಸಂ.]

**ವೈರ್ಮುಡಿ** 'ವಯಿರಮುಡಿ' ನೋ.

**ವೈಲ**$_1$ 'ವಹಿಲ' ನೋ.

**ವೈಲ**$_2$ (ನಾ). ಒಂದು ಬಗೆಯ ವಾಯು : ಗಮನದ ಭಾವದಱಿವು ತ್ರಿವಿಧ ವೈಲ ವೈರಂಭಣ ಮುಖಿಪ್ರಭಂಜನ ಅಂತರ್ವಹವಾಯುಭಾವದ ಚರಿತ್ರ (ಚನ್ನವ. ಕ. ೫೮೭-೧೩೦೪). [?]

**ವೈಲಕ್ಷಣ** (ನಾ). ಹೊಸತನ ; ನವೀನತೆ : ಕೂರ್ಮೆಯಿಡು ವೈಲಕ್ಷಣದ ಪರಿಯಂ ಮನದಲಿ (ಗಗತಾ. ೧೩-೩೨) ; ಬಾಳು ಬಯಲಂತಿರಲು ಮನೆಯಚ್ಚುಕಟ್ಟೆಂಬು ವೈಲಕ್ಷಣದ ಚೆಂದ (ಮಂಕುಕ. ೪೫೧). [ಸಂ.]

**ವೈಲಕ್ಷಣ್ಯ** (ನಾ). ೧. ವಿಲಕ್ಷಣತೆ ; ವಿಚಿತ್ರತೆ. ೨. ವ್ಯತ್ಯಾಸ ; ಭಿನ್ನತೆ : ಚಿನ್ನದಲ್ಲಿ ಕಡಗವು ಅನಭಿವ್ಯಕ್ತರೂಪದಲ್ಲಿರುವಾಗ ಯಾವ ತೂಕವೋ ಅದೇ ತೂಕವು ಅಭಿವ್ಯಕ್ತವಾದಾಗಲೂ ಇರುವದು. ಹೊಸದಾಗಿ ಕಡಗವು ಹುಟ್ಟಿದರೆ ಇಮ್ಮಡಿಯಾದ ತೂಕವಾಗಲೀ ಎಂದು ದೂಷಿಸಬಹುದು. ಕಡಗವಾದಾಗ ಅಭಿವ್ಯಕ್ತಿ, ಹಿಂದೆ ಅನಭಿವ್ಯಕ್ತಿ (ಮರೆಯಾಗಿರುವಿಕೆ), ಇಷ್ಟೇ ವೈಲಕ್ಷಣ್ಯ (ಭಾರದ. ೨೫೧) ; ಎಲ್ಲ ಪ್ರಾಂತದವರಿಗೂ ಸಾಮಾನ್ಯವಾದ ಗ್ರಂಥರಾಶಿಯೂ ಇಲ್ಲದೆ ಹೋದ ಪಕ್ಷದಲ್ಲಿ ಪ್ರಾಂತವೈಲಕ್ಷಣ್ಯಗಳು ಬೆಳೆದು ಒಂದು ಪ್ರಾಂತದ ಜನರ ಭಾಷೆ ಕೆಲವು ಕಾಲಾನಂತರ ಮತ್ತೊಂದು ಪ್ರಾಂತದವರಿಗೆ ಅರ್ಥವಾಗದಂತಾಗಬಹುದು (ಕೈಪಿಡಿ. ೩೦೨). ೩. ಹೊಸತನ ; ನವೀನತೆ : ಒಂದು ಕೃತಿ ಕಲಾಕೃತಿ ಎನಿಸಿಕೊಳ್ಳಬೇಕಾದರೆ ಅದಕ್ಕೆ ಅನಿವಾರ್ಯವಾದ ಒಂದು ವಿಶೇಷತೆಯಿರಬೇಕು. ಯಾವ ಅಂತಹ ಒಂದು ವೈಲಕ್ಷಣ್ಯವಿರದಿದ್ದರೆ ಅದು ಕಲಾಕೃತಿ ಎನಿಸಿಕೊಳ್ಳಲಾರದು (ಸಾಂದಸ. ೭೫). ೪. ವಿಶೇಷವಾದ ಲಕ್ಷಣ : ಸಂಸ್ಕೃತ ನಾಟಕಗಳಲ್ಲಿ ಸಂಸ್ಕೃತಭಾಷೆಯ ಜೊತೆಗೆ ಹಲವು ವಿಧವಾದ ಪ್ರಾಕೃತಭಾಷೆಗಳೂ ಬರುತ್ತವೆ. ಈ ಅಂಶವು ಸಂಸ್ಕೃತನಾಟಕದ ಒಂದು ವೈಲಕ್ಷಣ್ಯ (ಸಂನಾಟ. ೨೧). [ಸಂ.]

**ವೈವಟ್ಟು** 'ವಹಿವಾಟು' ನೋ.

**ವೈವಧಿಕ** (ನಾ). ೧. ಹೊರೆಯನ್ನು ಹೊತ್ತು, ತಿರುಗಿ ಮಾರಾಟಮಾಡುವವನು ; ಕೋರಿಶೆಟ್ಟಿ. ೨. ಕಾವಡಿಯಲ್ಲಿ ಭಾರ ಹೊರುವವನು : ಸಿವಿಗೆಯಂ ಭುವನತ್ರಯನಾಥನೇಱಿದಂ . . . ಉರಗವೃಂದಾರಕರುಂ ಸುರವೃಂದಾರಕರುಂ ತರತರದಿಂ ವೈವಧಿಕರುಯ್ಯು ತೆಱದಿಂದುಯ್ದರ್ (ಮಲ್ಲಿಪು. ೧೩-೧೭೩). [ಸಂ.]

**ವೈವರ್ಣ್ಯ** (ನಾ). ೧. ಬಣ್ಣ ಬದಲಾಗುವುದು : ಸ್ವೇದಂ ವೈವರ್ಣ್ಯಂ ಸ್ವರಭೇದಂ ರೋಮಾಂಚನಂ ಪ್ರಕಂಪನಮಶ್ರೂದ್ಭೇದಂ ಸ್ತಂಭಂ ಲಯಮೆಂದಾದುವಿವೆಂಟು ರಸಕ್ಕೆ ಸಾತ್ವಿಕಭಾವಂ (ಕಾವ್ಯಾವ. ೭೯೬). ೨. ಒಂದು ಜಾತಿಯಿಂದ ಮತ್ತೊಂದು ಜಾತಿಗೆ ಬದಲಾಗುವಿಕೆ. ೩. ವ್ಯತ್ಯಾಸ ; ಭಿನ್ನತೆ. ೪. ಭಿನ್ನಭಿನ್ನ ಅಂಶಗಳಿಂದ ಕೂಡಿರುವಿಕೆ ; ವಿವಿಧತೆ. [ಸಂ.]

**ವೈವರ್ತ** (ನಾ). ರೂಪಪರಿವರ್ತನೆ : ಅಬಲಬ್ರಹ್ಮದಲ್ಲಿ ಸಬಲಬ್ರಹ್ಮ ನೆರೆ ಬೆರೆತು ಒಂದುಗೂಡಿ ಪರಮಾತ್ಮನಲ್ಲೆ ವೈವರ್ತವಾಗಿ ಪರಿಣಮಿಸಿ ವಿಶ್ವಮೋಡಿ (ಅರಳು. ೧೦೪-೧೮). [ಸಂ.]

**ವೈವಸ್ವತ** (ನಾ). ೧. ಸೂರ್ಯನ ಮಗ. ೨. ಯಮ : ಸಮದಾರಾತಿಮರಾಳ ನೀರದರವಂ ಸಂಕ್ರುದ್ಧವೈವಸ್ವತೋಪಮವಿದ್ವಿಷ್ಟಫಣೀಂದ್ರಚಂದ್ರಕಿರವಂ . . . ತಾನೆಂಬಿನಂ ವ್ಯೋಮಭಾಗಮನೆಯ್ದಿರ್ದುದು ಚಕ್ರವರ್ತಿವಿಜಯಪ್ರಸ್ಥಾನಭೇರೀರವಂ (ಆದಿಪು. ೧೧-೧೦) ; ಗತಿಗೆಡಿಸಿಕೊಂಡೊಯ್ದು ವೈವಸ್ವತನು ನಾಯಕನರಕದೊಳಗದ್ದುತ ಬಹನು ಕುಲಕೋಟಿಸಹಿತ (ಕುಮ್ಮಾಉ. ೪-೮೬). ೩. ಸದ್ಯದಲ್ಲಿ ನಡೆಯುತ್ತಿರುವ ಏಳನೆಯ ಮನ್ವಂತರ. ೪. ಸದ್ಯದ ಯುಗಪುರುಷನಾದ ಏಳನೆಯ ಮನು : ಪೂರ್ವದಲ್ಲಿ ಸ್ವಯಂಭು . . . ವೈವಸ್ವತ . . . ಬ್ರಹ್ಮಸಾವರ್ಣತರೆಂಬ ಹದಿನಾಲ್ಕು ಮನುಗಳೊಳಗೆ (ವಿವೇಕ. ೧೬೩). ೫. ನವಗ್ರಹಗಳಲ್ಲಿ ಒಂದು ; ಶನಿ. ೬. ಅಗ್ನಿಯ ಹೆಸರುಗಳಲ್ಲಿ ಒಂದು. ೭. ಏಕಾದಶರುದ್ರರಲ್ಲಿ ಒಬ್ಬ. [ಸಂ.]

**ವೈವಸ್ವತಾನ್ವಯ** (ನಾ). ಮನುವಂಶಕ್ಕೆ ಸೇರಿದವನು ; ರಾಮ : ಕಾಣಿಕೆಯ ಕೈಕೊಂಡು ಶಬರಶ್ರೇಣಿಯನು ಮನ್ನಿಸಿದನುಚಿತದ ವಾಣಿಯಲಿ ವೈವಸ್ವತಾ [ಪಾಠಾಂ. ಹರಿದಶ್ವನ]ನ್ವಯನಾ ಪುಳಿಂದಕರ (ತೊರರಾ. ೩-೩-೫). [ಸಂ.]

**ವೈವಾಟ** 'ವಹಿವಾಟು' ನೋ.

**ವೈವಾಟ** 'ವಹಿವಾಟು' ನೋ.

**ವೈವಾಟು** 'ವಹಿವಾಟು' ನೋ.

**ವೈವಾದ** (ನಾ). ಭಿನ್ನತೆ ; ವ್ಯತ್ಯಾಸ : "ವೈವಾದಮೆ ಭಿನ್ನ" (ಭಾರನಿ. ೧೧೦). [ಸಂ.]

**ವೈವಾಹ** (ಗು). ೧. ವಿವಾಹಕ್ಕೆ ಸಂಬಂಧಿಸಿದ ; ಮದುವೆಗೆ ಸಂಬಂಧಪಟ್ಟ. (ನಾ). ೨. ಮದುವೆ ; ಲಗ್ನ : ವೈವಾಹಮಂಗಳಮಂ ಮಾಡಿದನಬ್ಜಱಿಂದವರ್ಗೆ

ಸತ್ರಾಜಿನ್ಮಹೀಪಾಲಕಂ (ಜಗವಿ. ೧೧-೫೩) ; ಚೋಳಭೂಪಾಲಕನು ಹರುಸದಿಂದಪ್ಪಿ ಪಟ್ಟದ ಭದ್ರಗಜದ ಮೇಲಿರಿಸಿ ಸೌಂದರನ ತುಂಬುರು ಮಂತ್ರಿಸಹಿತ ವೈವಾಹಕ್ಕೆ ತೆರಳಿಸಿದನು (ಸೌಂದಪು. ೪-೨೫). [ಸಂ.]

**ವೈವಾಹಗೈ** (ಕ್ರಿ). ಮದುವೆ ಮಾಡು ; ಲಗ್ನ ಮಾಡು : ಮತ್ಸುತೆಯ ಭವದೀಯ ತನುಜಗಂ ಮುದದಿಂದ ವೈವಾಹಗೈದೀವೆ ಹರನೆಡೆಯಲಿದು ಸಿದ್ಧ (ವಂಕಾರಾ. ೧-೨೦-೧೧). [ವೈವಾಹ + ಕೈ$_1$ (< ಕೆಯ್$_1$)]

**ವೈವಾಹಮಂಟಪ** (ನಾ). ವಿವಾಹಕ್ಕೆಂದು ಸಿದ್ಧಪಡಿಸಿದ ವೇದಿಕೆ; ಲಗ್ನಮಂಟಪ : ಜನಕನೃಪ ಪರಿಪರಿಯಲಂಕಾರಗೈಸಿದಂ ವೈವಾಹಮಂಟಪವನತಿ ವಿಭವದಿ (ವಂಕಾರಾ. ೧-೨೧ ಸೂಚನೆ); ವೈವಾಹಮಂಟಪಸ್ಮರಣೆಯಂ ಬಗೆಗೊಳಿಸುವೀ ಮನೋಹರ ಚಿತ್ರದೃಶ್ಯಮಂ ನೋಳ್ಪನಗೆ ಬಾಳಿನುರಿ ನೂರ್ಮಡಿಸುತಿದೆ (ಶ್ರೀರಾಮಾ. ೨೮೮-೩೭). [ವೈವಾಹ + ಮಂಟಪ]

**ವೈವಾಹವೇದಿಕೆ** (ನಾ). = ವೈವಾಹಮಂಟಪ : ಅಲ್ಲಿ ಊರಗಲದೊಳು ಮಂಟಪವನೊಲಿದಿಕ್ಕಿ ಸಲ್ಲೀಲೆಯಿಂದ ವೈವಾಹವೇದಿಕೆಯಿ[ಪಾಠಾಂ. ವಿವಾಹದ ವೈದಿಕೆಯನಿ]ಕ್ಕಿ (ನಂಜರ. ೫-೨೬) ; ಯುವತಿಯರಲಂಕರಿಸಿದರಾ ವೈವಾಹವೇದಿಕಾಂತರವ ಪ್ರಿಯದಿ (ವಂಕಾರಾ. ೧-೨೧-೨೦). [ಸಂ. ವೈವಾಹವೇದಿಕಾ]

**ವೈವಾಹಿಕ** (ಗು). ೧. ಲಗ್ನಕ್ಕೆ ಸಂಬಂಧಿಸಿದ ; ಮದುವೆಗೆ ಸಂಬಂಧಪಟ್ಟ. (ನಾ). ೨. ಮದುವೆ ; ಲಗ್ನ : ಚಕ್ರಿ ತಕ್ಕೆಡೆಗಳೊಳ್ ವೈವಾಹಿಕಂ ಕೂಡಿ ಬರ್ಪುದನಾಪೇಕ್ಷಿಸುತುಂ (ಶಾಂತಿಪು. ೨-೭೮) ; ಗೌರಿಯರು ಗಿರಿರಾಜನರಸಿಯ ಚಾರುಗರ್ಭದೊಳವತರಿಸಿ ಮದನಾರಿಯನು ಸಾರಿದಳು ವೈವಾಹಿಕಮಹೋತ್ಸವದೀ (ಯಗಿಕ. ೧೯). ೩. ವಿವಾಹಕಾರ್ಯಕ್ಕೆ ಉಪಯೋಗಿಸುವ ವಸ್ತು. ೪. ಮದುವೆಯ ಸಿದ್ಧತೆ. [ಸಂ.]

**ವೈವಾಹಿಕಜೀವನ** (ನಾ). ಮದುವೆಯಾದ ನಂತರದ ಜೀವನ ; ದಾಂಪತ್ಯ : ಆನಂದ ಮೋಹಿನಿಯರ ವೈವಾಹಿಕಜೀವನದ ಬಗೆಯಲ್ಲಿ ಎಷ್ಟೋ ಹಾರುಮಾತುಗಳನ್ನು ವಸಂತ ಕೇಳಿದ್ದ (ಕಮನ. ೪) ; ವೈವಾಹಿಕಜೀವನದ ಸಮರಸತೆ ಹಾಗು ಸಮನ್ವಯಗಳಿಗೆ . . . ಪರಿಶುದ್ಧಕಾಮನು ಬೇಕೇ ಬೇಕು (ಸಾಹಿಸ. ೧೪೩). [ಸಂ.]

**ವೈವಾಹಿಕಸಂಬಂಧ** (ನಾ). ಮದುವೆಯಿಂದಾದ ಪರಸ್ಪರ ನಂಟು, – ಬಾಂಧವ್ಯ : ನಿಮಗಂ ಅವಗಂ ವೈವಾಹಿಕಸಂಬಂಧಂ ಪರಂಪರೆಯಿಂ ಬಂದುದು (ಚಾವುಂಪು. ೧೪೩). [ಸಂ.]

**ವೈವಿಧ್ಯ** (ನಾ). ೧. ವಿವಿಧತೆ ; ನಾನಾಪ್ರಕಾರ : ಹೆಂಗಸರ ಕೇಶವಿಧಾನಗಳಲ್ಲಿ ಬಹಳ ವೈವಿಧ್ಯವಿದೆ (ಭಾರದ. ೧೩). ೨. ವ್ಯತ್ಯಾಸ : ಭಾರತದಲ್ಲಿ ಶಿಕ್ಷಣ ರಾಜ್ಯಸರ್ಕಾರಗಳ ಹೊಣೆಗಾರಿಕೆ. ಆದ್ದರಿಂದ ಶಿಕ್ಷಣದಲ್ಲಿ ವೈವಿಧ್ಯಕ್ಕೆ ಅವಕಾಶವಿದೆ (ಶಿಕ್ಷದ. ೭೬೩). [ಸಂ.]

**ವೈವಿಧ್ಯತೆ** (ನಾ). ೧. = ವೈವಿಧ್ಯ ೧ : ದಿವ್ಯರೂಪಗಳ ಸಾಕಾರಸ್ವರೂಪವು ಪ್ರಬಲವಾದುದರಿಂದಲೂ ಮತ್ತು ದೇವತೆಗಳ ಕಾರ್ಯಭಾರದ ವೈವಿಧ್ಯತೆಯು ಹೆಚ್ಚಿದುದರಿಂದಲೂ, ದೇವತ್ವದಲ್ಲಿ ಹೆಚ್ಚು ಸ್ಪಷ್ಟತೆಯಿದೆ (ತತ್ವಪ್ರಾ. ೨೪) ; ವೈವಿಧ್ಯತೆಯ ದೃಷ್ಟಿಯಿಂದ ವಿಚಾರ ಮಾಡಿದರೆ . . . "ರಾಮಚಂದ್ರಚರಿತಪುರಾಣವು ಸಾವಿರಕಂಬದ ಬಸದಿಯನ್ನು ಕಟ್ಟಿದಂತೆ" (ಸಾಹಿಸ. ೬೦). ೨. ವಿಶೇಷತೆಯಿಂದ ಕೂಡಿದುದು : ಜೋಡಿಸಿದ ಮೊಳೆಗಳಲ್ಲಿ ಬರುವ ದೋಷಗಳನ್ನು ನಿವಾರಿಸುವುದು ಒಂದು ವೈವಿಧ್ಯತೆಯ ಕೆಲಸ (ಮುದ್ರಕ. ೩೦). [ಸಂ. ವೈವಿಧ್ಯತಾ]

**ವೈಶಂಪಾಯನ** (ನಾ). ೧. ವೇದವ್ಯಾಸಋಷಿಯ ಶಿಷ್ಯರಲ್ಲಿ ಪ್ರಸಿದ್ಧನಾದವನೂ ಮಹಾಭಾರತವನ್ನು ಜನಮೇಜಯರಾಯನಿಗೆ ಹೇಳಿದವನೂ ಆದ ಒಬ್ಬ ಪ್ರಸಿದ್ಧ ಋಷಿ : ರಾಯಜನಮೇಜಯಗೆ ವೈಶಂಪಾಯನನು ಹೇಳಿದನು ಮುನಿದ್ವೈಪಾಯನಭಿವರ್ಣಿಸಿದ ಭಾರತವರಕಥಾಮೃತವ (ಕುವ್ಯಾಆ. ೨ ಸೂಚನೆ) ; ಶ್ರೀ ವ್ಯಾಸಮಹರ್ಷಿಗಳು ತಮ್ಮ ಶಿಷ್ಯನಾದ ವೈಶಂಪಾಯನನಿಗೆ ಹೇಳಿದ ಮಹಾಭಾರತ ಕಥೆಯನ್ನು, ವೈಶಂಪಾಯನನು ಜನಮೇಜಯರಾಯನಿಗೆ . . . ಹೇಳಿದನು (ವಚಭಾ. ೧). ೨. ದುರ್ಯೋಧನನು ಪಾಂಡವರಿಗೆ ಹೆದರಿ ಅಡಗಿ ಕುಳಿತಿದ್ದನೆಂದು ಹೇಳಲಾಗುವ ಒಂದು ಸರೋವರದ ಹೆಸರು : ವಿಂಧ್ಯಕ ಜಾಲಕರೆಂಬ ಕಿರಾತದೂತರ್ . . . ತೃಷ್ಣಾಭಿಭೂತರಾಗಿ ಸಕಲಜಗತ್ಪಾವನಾಪ್ಯಾಯನಕಾರಿಯಪ್ಪ ವೈಶಂಪಾಯನಸರೋವರಕ್ಕೆ ನೀರ್ಗುಡಿಯೆ ಪೋಗಿ (ಗದಾಯು. ೬-೩೭ ವ) ; ವೈಶಂಪಾಯನ ಸರಸಿಯ ತೀರದಿ ತೋರುವರಾರಲ್ಲಿ? (ಪಾಂಚಜ. ೧೩-೨೨). ೩. ವ್ಯಾಸಮಹರ್ಷಿ ; ವೇದವ್ಯಾಸ : "ವೈಶಂಪಾಯನಂ ಸತ್ಯವಾದಿ ಪರಾಶರಂ ವ್ಯಾಸನಕ್ಕು" (ಮಂಗರಾ. ೭೭-೧೦). ೪. ನ್ಯಾಯಶಾಸ್ತ್ರವನ್ನು ಬರೆದ ಒಬ್ಬಾತನ ಹೆಸರು : (ಕಿ). [ಸಂ.]

**ವೈಶದ್ಯ** (ಗು). ೧. ಶುಭ್ರವಾದ : ಶ್ರೀಶೈಲಾದಿಪ್ರಸಿದ್ಧಂ . . . ಧರಾಧಾರ ಧರ್ಮಂ ವೈಶದ್ಯದ್ಯೋತಿಚಂದ್ರೋಪಲಸಿತಭಸಿತಾನಂತಕಾಂತೋತ್ತಮಾಂಗಂ ಶ್ರೀಶೈವಶ್ರೇಯಮಂ ಮಾಳ್ಕೆಮಾಗನವರತಂ ನಂದಿಕೇಶಂ ಮಹೇಶಂ (ರಾಜಶೇ. ೧-೧). (ನಾ). ೨. ಸ್ಪಷ್ಟತೆ ; ವಿಶದತೆ : ಎಲ್ಲಿ ಮಾತ್ರ ವೈಶದ್ಯಕ್ಕಾಗಿ ಒಂದೆರಡು ಮಾತುಗಳನ್ನು ಹೇಳಬಹುದೋ ಅಂತಹ ಎಡೆಗಳಲ್ಲಿ ಹಲಕೆಲವು ಟಿಪ್ಪಣಿಗಳನ್ನು ಬರೆದಿದೆ (ಭಾ೪ಪ್ರ. ೧೦). [ಸಂ.]

**ವೈಶಾಖ** (ನಾ). ೧. ಚಾಂದ್ರಮಾನವರ್ಷದ ಎರಡನೆಯ ತಿಂಗಳು ; ಬೇಸಗೆ ; ವಸಂತಮಾಸ : ವೈಶಾಖದೊಳಾ ಯೋಗೀಶ್ವರಂ ಕಲ್ಮೆಲೆ ನೆಲಸಿ ಹಿಮಾದ್ರೀಂದ್ರಮಿರ್ಪಂತಿರಿರ್ದಂ (ಸುಕುಮಾ. ೪-೧೩) ; ಆ ಮಾಸವೇ ಚೈತ್ರ ವೈಶಾಖ . . . ಫಾಲ್ಗುಣಮೆಂದು ಹನ್ನೆರಡು ತೆಱನಾಗಿಹುದು (ವಿವೇಕ. ೨೩) ; ವೈಶಾಖಮಾಸ ಬಂದರೂ ವೈಶ್ಯರ ಉಪದ್ರ ಬಿಡಲಿಲ್ಲ (ಗಾದೆ). ೨. ಮೊಸರು ಕಡೆಯುವ ಕೋಲು ; ಮಂತು : ಅನಿಮಿಷಾಲಯದಂತೆ ರವಿಯಂತೆ . . . ಗೋಮಯಪಲ್ಲವಾಸ್ಪದಂ ವೈಶಾಖಶಬ್ದದೊಳ್ ವ್ರಜಮೆಸದುದು (ಚೆಬಪು. ೧೧-೧೮). ೩. ಯುದ್ಧದಲ್ಲಿ ಎದುರಾಳಿಯ ಮೇಲೆ ಬಾಣಹೂಡುವಾಗ ಒಂದುಅಡಿ ಅಂತರದಲ್ಲಿ ಪಾದಗಳನ್ನಿಟ್ಟು ನಿಲ್ಲುವ ಒಂದು ಬಗೆಯ ಭಂಗಿ : ರಣಾಂಗಣಮನಣೆಯರದಿಂ ಮುಂಗೊಂಡು ನಿಂದ ಭೇದವೆಂತೆಂದೊಡೆ . . . ಸೋಮಪಾದ ಪ್ರತ್ಯಾಲೀಢಾಲೀಢ ವೈಶಾಖ ಮಂಡಲದಿಂದೆಸೆವ ಶಪಥದ ಸನ್ನಾಹದ ಪನ್ನತಿಕೆಯ . . . ಬಿಲ್ಲಾಳ್ಗಳ (ಹಮ್ಮಿರ. ೩-೩೩ ವ). 'ವೈಶಾಖಸ್ಥಾನ' ಪರಾ. ೪. [ನಾಟ್ಯ] ಆರು ವಿಧವಾದ ಪುರುಷಸ್ಥಾನಕಗಳಲ್ಲಿ ಒಂದು ; IP 'ನೆಲಕ್ಕೆ ೩ ⅓ ಗೇಣು ಮೇಲೆ ತೊಡೆಗಳನ್ನು ನಿಲ್ಲಿಸಿ ಕಾಲುಗಳಿಗೂ ಅಷ್ಟೆ ಅಂತರವಿರುವಂತೆ ತ್ರ್ಯಸ್ರದಿಂದ ನಿಂತುಕೊಳ್ಳುವುದು" (ಲಾಸ್ಯರಂ. ೩.೨೭ ಗದ್ಯಾನುವಾದ) : ವೈಷ್ಣವ, ಸಮಪಾದ, ವೈಶಾಖ, ಮಂಡಲ, ಆಲೀಢ, ಪ್ರತ್ಯಾಲೀಢ – ಈ ಆಱು ಪುರುಷಸ್ಥಾನಕಂಗಳ್ (ಲಾಸ್ಯರಂ. ೭-೧೨ ವ). [ಸಂ.]

**ವೈಶಾಖರೇಚಿತ** (ನಾ). ೧. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; ನಿಂತುಕೊಳ್ಳುವ ಭಂಗಿಗಳಲ್ಲಿ ಒಂದು : ತಲಪುಷ್ಪಪುಟ . . . ವೈಶಾಖರೇಚಿತ . . . ನಾಗಾಪಸರ್ಪಿತ, ಗಂಗಾವತರಣ – ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೬೨ ವ). ೨. ಅಂಗಹಾರಗಳಲ್ಲಿ ಒಂದು : ಸ್ಥಿರಹಸ್ತ, ಪರ್ಯಸ್ತ, ಸೂಚೀವಿದ್ಧ, ಅಪರಾಜಿತ, ವೈಶಾಖರೇಚಿತ . . . ಸಂಭ್ರಾಂತ, ಸ್ವಸ್ತಿಕರೇಚಿತ – ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಲಾಸ್ಯರಂ. ೫-೭ ವ). [ಸಂ.]

**ವೈಶಾಖವೃತ್ತಿ** (ನಾ). ೧. ವೈಶಾಖಮಾಸ. ೨. = ವೈಶಾಖ ೩. ೧, ೨ : ಅತಿಕ್ರಾಂತ ವೈಶಾಖವೃತ್ತಿಯಾಗಿಯುಂ ಅಬರ್ಹಿಲೀಲಾರ್ಹಮಲ್ತು (ಚಂದ್ರಪ್ರ. ೪-೬೨ ವ). [ಸಂ.]

**ವೈಶಾಖಸ್ಥಾನ** (ನಾ). ೧. = ವೈಶಾಖ ೩ : ಆಲೀಢಪ್ರತ್ಯಾಲೀಢಸಮಪಾದವೈಷ್ಣವ ಮಂಡಲಾಗ್ರಮುಮೆಂಬ ಪಂಚವಿಧಸ್ಥಾನಕೃತ್ಯಂಗಳೊಳಂ . . . ಎಂಟುಂ ತೆಱದ ಪ್ರಹರಣಂಗಳೊಳಂ ಅತಿಪರಿಚಿತರಾಗಿ ವೈಶಾಖಸ್ಥಾನದೊಳ್ ನಿಂದು . . . ದೃಷ್ಟಿಯುದ್ಧಂಗೆಯ್ದರ್ (ಗದಾಯು. ೮-೧ ವ) ; ಚಿನ್ನಬೆಳ್ಳಿಗಳಿಂದ ವಿಚಿತ್ರಾಲಂಕಾರ ಮಾಡಿದ ಗದೆಗಳನ್ನು ಇಬ್ಬರೂ ಹಿಡಿದುಕೊಂಡು ವೈಶಾಖಸ್ಥಾನದಲ್ಲಿ ನಿಂತು ಒಬ್ಬರನ್ನೊಬ್ಬರು ನೋಡತೊಡಗಿದರು (ಭಾಮಣಿ. ೭೫). ೨. = ವೈಶಾಖ ೪ : ಲೋಕಾಕಾರಮನಭಿನಯಿಪಾಕಾರಂ ನೆಗಟ್ ನಿಂದು ವೈಶಾಖಸ್ಥಾನಾಕಾರದೊಳ್ ಮರುದ್ಭೂತನಾ ಕುಲಿಶಾಯುಧನದೊಂದು ಚೆಲ್ವಂ ಪಡೆದಂ (ಆದಿಪು. ೭-೧೧೭) ; ಪುಷ್ಪಾಂಜಳಿ

ವಿಕ್ಷೇಪಂಗೆಯ್ದೆಱಗಿ ಪೊಡವಟ್ಟು ಸರಸಾಗಮಪ್ರಾರಂಭನಿರತನನು ವೈಶಾಖಸ್ಥಾನಸ್ಥಿತನಾಗಿ (ಶಾಂತಿಪು. ೧೦-೬೧ ವ). [ಸಂ.]

**ವೈಶಾಲ್ಯ** (ನಾ). ಹರಹು; ವಿಸ್ತಾರ : ಆ ಮಂಕಾದ ಬಿಳಿಯ ಆಕಾಶದ ವೈಶಾಲ್ಯದಲ್ಲಿ ಬೆಟ್ಟಗಳು ಸ್ಪಷ್ಟವಾಗಿ ಎದ್ದು ಕಾಣುತ್ತಿದ್ದುವು (ಮಲೆನಾ. ೨೪) ; ಕಾಲಿದಾಸಾದಿ ಮಹಾಕವಿಗಳೂ ಪೂರ್ವಪರಿಚಿತವಾಗಿದ್ದ ಕಥೆಗಳನ್ನೇ ಮಾರ್ಪಡಿಸಿಕೊಂಡು ತಮ್ಮ ಪ್ರತಿಭೆಯ ನವ ನವೋನ್ಮೇಷಶಾಲಿತ್ವವನ್ನೂ ವೈಶಾಲ್ಯವನ್ನೂ ತೋರ್ಪಡಿಸಲಿಲ್ಲವೇ? (ಸಾಹಿಸ. ೯೧). [ಸಂ.]

**ವೈಶಿಕ** (ಗು). ೧. ವೇಶ್ಯೆಯು ಪ್ರಯೋಗಿಸುವ, – ಬಳಸುವ. (ನಾ). ೨. (ಗೀತ, ನೃತ್ಯ, ಚಾತುರ್ಯ, ತಂತ್ರ ಮುಂತಾದ) ವೇಶ್ಯೆಯ ವಿದ್ಯೆ, –ಕಲೆ : ವಿಟರ ತವಕ ತಕ್ಕೆಗೊಟವ ಮೋಹಿಪ ದಿಟವ ಸೋಲವ ವೈಶಿಕವ ಸಟೆಯ ಸವಡುನುಡಿಗಳೊಳು ಮಗಳೆ ನೀ ಪಟುವಾಗು (ರಾಮವಿ. ೧೦-೪೦) ; ಒದವಿಸಿ ನಡೆನುಡಿನೋಟದ ಪದದಿಂ ಪೆಣ್ಗಳ್ಗೆ ಕಲಿಸುವರ್ ವೈಶಿಕಮಂ ಮುದುಪೆ ದಲೀ ಕುಂಟಣಿ ಮೆಯ್ಪುದುಳದ ಗೆಯ್ಮೆಯೊಳಮಿಂತು ಪೆತ್ತಿಪಳ್ (ಚಿಕವಿ. ೬-೮೬). ೩. ಬೆಡಗು ; ಬಿನ್ನಾಣ : ಕರವಲೆಯ ಕಟಿಸೂತ್ರ ಪದನೂಪುರ ನಿನಾದದ ಬೇಟವಚೆಗಳ ಸರಸ ಹಾಸ್ಯದ ಹಾಸಕದ ವಹಣಿಗಳ ವೈಶಿ[ಪಾಠಾಂ. ಸಿ]ಕದ ಸರಳಿಸುವ ಕುಕ್ಕುರಕದಂಬದ ವಿರಚಿತಾಡಂಬರದ ನವಶಾಬರಿಯರ್ಕೈದಿದರ್ (ತೊರರಾ. ೧-೫-೪೦). ೪. ಮೋಸ ; ಠಕ್ಕು ; ಕಪಟ : ಸಟೆಯಿಲ್ಲದಂತೆ ಪ್ರಪಂಚುವಿಲ್ಲದಂತೆ ವೈಶಿಕವಿಲ್ಲದಂತೆ ನಡೆಸಯ್ಯಾ ಲಿಂಗತಂದೆ (ಬಸವ. ೬೧) ; ಸ್ವಯಂಪ್ರಯೋಜನಮಾಗಿ ತಾಮಸಗುವ ಕರ್ಮಜ್ಞಾನ ಭಕ್ತ್ಯಾದಿಗಳೊಳ್ ಸಾಧನಬುದ್ಧಿಗೆಯ್ವುದು ವೈಶಿಕಮಪ್ಪುದು (ಚಿಕವಂ. ೧೦೭-೧೦). ೫. ಶೃಂಗಾರನಾಯಕರಲ್ಲಿ ಒಬ್ಬ ; ಅನೇಕ ವೇಶ್ಯೆಯರೊಂದಿಗೆ ಇರುವವನು : ಕಾಮನ ಕೊಂದು ಪಟ್ಟಕ್ಕೆ ನಿಂದ ಕಾಮರಾಜರಾಜನು ರಾಜಾಧಿ ರಾಜ ಗಂಡರನೆಲ್ಲರ ಹೆಂಡಿರ ಮಾಡಿ ನೆರೆವ ವೈಶಿ[ಪಾಠಾಂ. ಸಿ]ಕ ಕಾಮ ನೀ ಕೇಳಾ (ಉರಿವ. ಕ. ४೧४-೮). [ಸಂ.]

**ವೈಶಿಕತಂತ್ರ** (ನಾ). ಆಕರ್ಷಿಸುವ ಉಪಾಯ ; ಮೋಹಿಸುವ ವಿಧಾನ: ಗಾರುಡಕನ್ಯವಾದಾ ದರುಶನವನು ಮಾರಣ ವೈಶಿಕ [ಪಾಠಾಂ. ವಶಿಕರ]ತಂತ್ರ ವಾರುವ ಗಜನರಪಶುಪರೀಕ್ಷೆಯ ಬಲ್ಲ ಭಾರಿ ಶಾಸ್ತ್ರಜ್ಞರಲ್ಲೆಸೆಯೆ (ಅಬ್ಬಲೂ. ೩-೭೮). [ಸಂ.]

**ವೈಶಿಷ್ಟಿಕ** (ಗು). ೧. ವಿಶೇಷವಾದ ; ಮಹತ್ತರವಾದ. (ನಾ). ೨. ಹೆಚ್ಚುಗಾರಿಕೆ ; ವಿಶೇಷತೆ : ಹೊಸ 'ಜಾತಿಕಟ್ಟು'ಗಳೂ ಸಗೋತ್ರವಿವಾಹವನ್ನು ನಿರಾಕರಿಸಿವೆ ; ತಮ್ಮ ವೈಶಿಷ್ಟಿಕವಾದ ಆಚಾರ ವ್ಯವಹಾರಗಳನ್ನು ಕಾಪಾಡಿಕೊಂಡು ಬರುತ್ತಿವೆ (ಶಾಸಗಿ. ೩ ಮುನ್ನುಡಿ). [ಸಂ.]

**ವೈಶಿಷ್ಟ್ಯ** (ನಾ). ವಿಶೇಷವಾದ ಗುಣ ; ಹೆಚ್ಚುಗಾರಿಕೆ ; ಮೇಲ್ಮೆ : ತಂತ್ರದ ದೃಷ್ಟಿಯಿಂದ ಕೆಲವೊಂದು ವೈಶಿಷ್ಟ್ಯಗಳನ್ನು ಇಲ್ಲಿ ಕಾಣಬಹುದು (ಸಮಜೀ. ೨೫ ಪೀಠಿಕೆ); ಹೊಯ್ಸಳದೇವಾಲಯಗಳನ್ನು ವಿವಿಧ ಭಾಗಗಳಾಗಿ ವಿಂಗಡಿಸಿ ವೈಶಿಷ್ಟ್ಯವನ್ನು ತಿಳಿಯಬಹುದು (ಹೊಯ್ಸವಾ. ೧೪). [ಸಂ.]

**ವೈಶೇಷಿಕ** (ಗು). ೧. ವಿಶೇಷವಾದ ; ಅಸಾಧಾರಣವಾದ ; ವಿಶಿಷ್ಟಗುಣವುಳ್ಳ. (ನಾ). ೨. ವಿಶಿಷ್ಟವಾದುದು ; ವಿಶೇಷ ಲಕ್ಷಣದಿಂದ ಕೂಡಿದುದು : ವೈಶೇಷಿಕ ಶಬ್ದ ವಿಶೇಷವೆಂಬ ಶಬ್ದದಿಂದ ಸಿದ್ಧಿಸಿದೆ (ಭಾರದ. ೧೨೩) ; 'ವೈಶೇಷಿಕ' ಪದವು ವಿಶೇಷವೆಂಬ ಒಂದು ವಸ್ತುವನ್ನು ಅಂಗೀಕರಿಸಿರುವುದರಿಂದ ಬಂದಿರುವುದೆಂದು ಪ್ರಾಯಶಃ ತಿಳಿಯುವರು (ಹಿಂದಸಾ. ೧೧೧). ೩. ಷಡ್ದರ್ಶನಗಳಲ್ಲಿ ಒಂದು ; ವಿಶೇಷಗುಣವನ್ನು ಪ್ರತಿಪಾದಿಸಿದ ತತ್ವಶಾಸ್ತ್ರಜ್ಞನಾದ ಕಣಾದನ ದರ್ಶನ : ವೈಶೇಷಿಕ ಎಂಬ ಇಟ್ಟಿಗೆಯಲೊರಸಿ ಕೂಡಲಸಂಗಯ್ಯನೆಂಬ ಕನ್ನಡಿಯ ತೋಱುವೆನು (ಬಸವ. ೭೪೭) ; ಈ ಮೂಲತತ್ತ್ವಾನ್ವೇಷಣರೂಪದಲ್ಲಿ . . . ವೈಶೇಷಿಕ, ನೈಯಾಯಿಕ, ಸಾಂಖ್ಯಯೋಗ, ಜೈಮಿನೀಯ, ಔಪನಿಷದಗಳೆಂಬುವ ಆರು ಆಸ್ತಿಕದರ್ಶನಗಳೂ ಆವಿರ್ಭವಿಸಿರುತ್ತವೆ (ಭಾರದ. ೨೨೯). ೪. ವೈಶೇಷಿಕತತ್ತ್ವವನ್ನು ಅನುಸರಿಸುವವನು, — ಪಾಲಿಸುವವನು: ಗೋಪಣಂದಿಮುನಿಪುಂಗವನೆಂಬ ಮದಾಂಧಸಿಂಧುರಂ ತಗಯಲ್ ಜೈಮಿನಿ ತಿಪ್ಪಿಕೊಣ್ಡು ಪರಿಯಲ್ ವೈಶೇಷಿಕಂ ಪೋಗದುಣ್ಣಿಗೆಯೊತ್ತಲ್ (ಎಕ. II, ೬೯-೪೩ ; 1100); ವೈಶೇಷಿಕರು ಪ್ರತ್ಯಕ್ಷ, ಅನುಮಾನಗಳನ್ನು ಮಾತ್ರ ಸ್ವತಂತ್ರ ಪ್ರಮಾಣಗಳೆನ್ನುತ್ತಾರೆ (ತತ್ವಪ್ರಾ. ೨೩೦). ೫. (ವೈಶೇಷಿಕರ ಪ್ರಕಾರವಿರುವ) ಆತ್ಮನ ಗುಣಗಳಲ್ಲಿ ಒಂದು : ಬುದ್ಧಿಸುಖದುಃಖೇಚ್ಛಾದ್ವೇಷಪ್ರಯತ್ನಧರ್ಮಾಧರ್ಮಸಂಸ್ಕಾರರೂಪನವವಿಧ ವೈಶೇಷಿಕಗುಣೋಚ್ಛೇದಂ (ತತ್ತ್ವಪ್ರ. ೫). [ಸಂ.]

**ವೈಶೇಷಿಕದರ್ಶನ** (ನಾ). = ವೈಶೇಷಿಕ ೩ : ಗೌತಮನ ನ್ಯಾಯದರ್ಶನ, ಕಣಾದನ ವೈಶೇಷಿಕದರ್ಶನ, ಕಪಿಲನ ಸಾಂಖ್ಯದರ್ಶನ . . . ಬಾದರಾಯಣನ ಉತ್ತರಮೀಮಾಂಸಾ ದರ್ಶನ — ಇವೇ ಷಡ್ದರ್ಶನಗಳು (ಭಾರದ. ೧೨೧) ; ವೈಶೇಷಿಕದರ್ಶನದಲ್ಲಿ ಸಾಮಾನ್ಯವಾಗಿ ಪ್ರಪಂಚವನ್ನು ದ್ರವ್ಯ . . . ಅಭಾವವೆಂದು ಏಳು ಪದಾರ್ಥಗಳಾಗಿ ವಿಭಾಗಮಾಡಿರುವರು (ಹಿಂದಸಾ. ೧೧೨). [ಸಂ.]

**ವೈಶ್ಯ** (ಗು). ೧. ವ್ಯಾಪಾರಿಗೆ ಸಂಬಂಧಿಸಿದ. (ನಾ). ೨. ಚತುರ್ವರ್ಣಗಳಲ್ಲಿ ಮೂರನೆಯ ವರ್ಗ : "ಬ್ರಾಹ್ಮಣಃ, ಕ್ಷತ್ರಿಯಃ, ವೈಶ್ಯಃ — ಈ ಮೂಱು ವರ್ಣಮಂ ದ್ವಿಜರೆಂಬುದು" (ಹಲಾಯು. ೬೫-೨೩೮) ; ವೈಶ್ಯವೆಂಬುದು ಜಾತಿಯಲ್ಲ ವರ್ಣ (ತುಳುನಾ. ೧೭೬). ೩. ಚತುರ್ವರ್ಣಗಳಲ್ಲಿ ಮೂರನೆಯ ವರ್ಗಕ್ಕೆ ಸೇರಿದವನು ; ವ್ಯಾಪಾರ ಅಥವಾ ಒಕ್ಕಲುತನ ಮಾಡುವವನು : ತನತನಗೆ ಕಂಡರು ಮಹಿಸುರ ಜನಪ ವೈಶ್ಯ . . . ಹರ ಚತುರ್ಮುಖರ (ಕುವ್ಯಾಸ. ೧೪-೩೩) ; ಭಗವದ್ಗೀತೆಯಲ್ಲಿ ವೈಶ್ಯನಿಗೆ ಕೃಷಿ, ಗೋರಕ್ಷೆ, ವಾಣಿಜ್ಯಗಳು . . . ಮತ್ತೆ ಕೆಲವನ್ನು ಸೇರಿಸಿದ್ದಾನೆ (ಭಾರದ. ೫೫); ವೈಶಾಖಮಾಸ ಬಂದರೂ ವೈಶ್ಯರ ಉಪದ್ರ ಬಿಡಲಿಲ್ಲ (ಗಾದೆ). ೪. ರತ್ನಗಳಲ್ಲಿ ಒಂದು ಬಗೆ : ಅರಿಸಿನದ ಬಣ್ಣವನಾಂತು ಮಿಸುನಿಯೊಲು ತೊಳಪುದದು ವೈಶ್ಯಜಾತಿಯು (ರತ್ನಶಾ. ೩-೯) ; ಬ್ರಾಹ್ಮಣನೀ ಮಣಿ ಚಿತ್ತಂಬುಗೆ ಜಾತರಂಗಮೆನಿಪುದು . . . ವೈಶ್ಯಂ ಸಮಂತು ಸೌಗಂಧಿಕಮ್ಮೆ (ಹಾಲಾಸ್ಯ. ೨-೧-೭೦). [ಸಂ.]

**ವೈಶ್ಯಕಾಂತೆ** (ನಾ). ವೈಶ್ಯಜಾತಿಯ ಹೆಣ್ಣು : ವೈಶ್ಯಕಾಂತೆಯನೊರ್ವಳಂ ಕಂಡು (ಚಂದ್ರಪ್ರ. ೩-೭೬ ವ). [ಸಂ. ವೈಶ್ಯಕಾಂತಾ]

**ವೈಶ್ಯಜ** (ನಾ). ವಣಿಜರ ವಂಶದವನು ; ವ್ಯಾಪಾರಿ. 'ಪಟವೈಶ್ಯಜ' ಪರಾ. [ಸಂ.]

**ವೈಶ್ಯದತ್ತಿ** (ನಾ). ವ್ಯಾಪಾರಿಗೆ ಕೊಟ್ಟ ದಾನ : ಪುಲಿನಾಡ ಕೊಳತೂರಂ ಪಲ್ಲವಾದಿತ್ಯಪೂರವಾಗೆ ನಕರಂ ಮಾಡಿ ವೈಶ್ಯದತ್ತಿಯಾಗೆ ಮಾಡಿ ನೊಱಂಬಸೆಟ್ಟಿಗೆ ಕೊಡಂಗೆಯಾಗೆ ಕೊಟ್ಟಂ (ಸೌಇಇ. IX-i, ४೧-೧೭ ; ಸು. 10ನೆಯ ಶತ). [ಸಂ.]

**ವೈಶ್ಯೆ** (ನಾ). ವೈಶ್ಯಜಾತಿಯ ಹೆಣ್ಣು. [ಸಂ. ವೈಶ್ಯಾ]

**ವೈಶ್ರವಣ** (ನಾ). ೧. ವಿಶ್ರವಸ್ಸಿನ ಮಗ ; ಕುಬೇರ : ವಿವಿಧವಿನೋದಸುಖಿಂ ವೈಶ್ರವಣಂ ಧನದಾದ್ರಿಯೊಳ್ ಸುಖಂ ವಸಿಯಿಸುವಂತವನಿಪನಾ ಮಾಡದೊಳುದ್ಧ ವಾಂಬುನಿಧಿ ವಿಶ್ವಸೇನನನುದಿನಮಿರ್ಕುಂ (ಶಾಂತಿಪು. ೯-೧೪೯) ; ದಿವಿಜೇಂದ್ರಂಗೆತ್ತಲುಂ ವೈಭವದೊಳ್ . . . ವೈಶ್ರವಣಂಗೆತ್ತೆತ್ತಲುಂ ವಿತ್ತದೊಳಧಿಕನೆನುತ್ತಿರ್ಪನಂ ಸಂದ ನಿಂತೀ ಲವಣಾಂಭೋರಾಶಿವೇಳಾವಲಯಿತಧರಣೀಚಕ್ರದೊಳ್ ತತ್ಕುಮಾರಂ (ಸುಕುಮಾ. ೧೧-೩೭) ; ಇವನು ಸುರಪತಿ ವರುಣ ಯಮ ವೈಶ್ರವಣರೆಂಬರ ಗೆಲಿದ ಪೂರ್ವಾದಿ ಇವನ ಗೆಲಿದವರಿಲ್ಲ (ಕೌಶಿರಾ. ೨೭-೧೩). ೨. ರಾವಣ. [ಸಂ.]

**ವೈಶ್ವಂಭರ** (ಗು). ೧. ವಿಷ್ಣುವಿಗೆ ಸಂಬಂಧಿಸಿದ. (ನಾ). ೨. ಒಂದು ಮತದ ಹೆಸರು; ವೈಷ್ಣವಮತ : ವಿತಂಡಮುನಿಯು . . . ವೈಶ್ವಂಭರವೆಂಬ ಮತವನ್ನು ಕಲ್ಪನೆಮಾಡಿ, ಆ ಪಂಡಿತನು ಅನಂತರ ವಿಷ್ಣುನಾಮಾಂಕಿತವಾದ ಅಷ್ಟಾಕ್ಷರಿಯನ್ನು ಅವರಿಗೆ ಉಪದೇಶ ಮಾಡಿದನು (ತುಳುನಾ. ೧೦೭). [ಸಂ.]

**ವೈಶ್ವದೇವ** (ಗು). ೧. ವಿಶ್ವದೇವತೆಗಳಿಗೆ ಸಂಬಂಧಪಟ್ಟ. (ನಾ). ೨. ಗೃಹಸ್ಥನು ಎಲ್ಲ ದೇವತೆಗಳಿಗೆ ದಿನವೂ ಊಟಕ್ಕೆ ಮುಂಚೆ ಅರ್ಪಿಸುವ ಭೂತಯಜ್ಞ : ಮಧ್ವರಾಯರ ನೆನೆದು ಪರಿಶುದ್ಧರಾಗಿರೊ . . . ಕಾಮವಿಲ್ಲದ ಹರಿಪೂಜೆ ವೈಶ್ವದೇವವಿಡುವಾಗ (ಪುರಂದ. ೧-೨೦೯-೨) ; ದೈವಯಜ್ಞವು ಎಲ್ಲಾ ದೇವತೆಗಳನ್ನು ಉದ್ದೇಶಿಸಿ ಮಾಡುವುದು, ಆದ್ದರಿಂದ ಇದನ್ನು ವೈಶ್ವದೇವವೆನ್ನುತ್ತಾರೆ (ಆರ್ಯಧ. ೧೪೯). ೩. ಋಕ್ಸಾದಿ ದೇವತೆಗಳಲ್ಲಿ ಒಬ್ಬ : "ಸೂರತ್ವಷ್ಟಾ ನಿಲೇಂದ್ರಾನಲಂ ಮಿತ್ರೇಂದು ನೈರುತಿ ಜಲಂ ವೈಶ್ವ[ಪಾಠಾಂ. ಸ್ವ]ದೇವ . . . ಋಕ್ಷಾದಿದೈವಮಕ್ಕುಂ" (ಮಂಗರಾ. ೧೯-೩). [ಸಂ.]

**ವೈಶ್ವದೇವಿ** (ನಾ). ೧. ಮಾಘಮಾಸದ ಕೃಷ್ಣಪಕ್ಷದ ಅಷ್ಟಮಿ. ೨. [ಛಂದ]

ಹನ್ನೆರಡುಮಾತ್ರೆಗಳ ಜಗತೀಛಂದಸ್ಸಿನ ಒಂದು ಪ್ರಭೇದ : ಭೂಮಿದ್ವಂದ್ವ ಕೃತ್ತಲ್ ಜಲದ್ವಂದ್ವಮಿತ್ತಂ ತಾಮಪ್ಪಂತಿಂಬಾಗಿಲ್ಲಿ ಬಂದೊಪ್ಪೆ ಕೇಳ್ ವಿಶ್ರಾಮಂ ಕಾಮಾಸ್ತ್ರಸ್ಥಾನದೊಳ್ ನಿಂದೊಡಕ್ಕುಂ ಕಾಮಪ್ರಾಕಾರೇ ವೈಶ್ವದೇವಿ ಪ್ರಸಿದ್ಧಂ (ಛಂದೋಂಬು. ೨-೮೬ ಅಡಿಟ). [ಸಂ. ವೈಶ್ವದೇವೀ]

**ವೈಶ್ವರೀಯ** (ನಾ). "ಎಲ್ಲ ದೇವತೆಗಳಿಗೆ ತರ್ಪಣ ಕೊಡುವುದು" (ಶಂಕದಾ. ಕೋಶ); ಆ ನವೀನಾತಿಥ್ಯಮಿಲ್ಲದೆ ವೈಶ್ವರೀಯವನು ಮಾಡಲೊಲ್ಲರು ವ್ರತವ (ಶಂಕದಾ. ೧-೫೪). [?]

**ವೈಶ್ವಾನರ** (ಗು). ೧. ಮಾನವಜನಾಂಗಕ್ಕೆ ಸಂಬಂಧಿಸಿದ. (ನಾ). ೨. ಬೆಂಕಿ ; ಅಗ್ನಿ : ಇಭವಿದ್ವೇಷಿಗೆ ವಿಕ್ರಮಂ . . . ಹಿಮಾಂಶುಗೆ ಹಿಮಂ ವೈಶ್ವಾನರಂಗುಷ್ಣ[ವ]ತ್ವಪ್ರಭೆ . . . ಸಾಜಂ (ಶಾಂತಿಪು. ೧೧-೯೪) ; ಆಳಾಪಿಸುವ ವಿದಗ್ಧೆ ವಿಪ್ರಲಂಭ ವೈಶ್ವಾನರದಗ್ಧೆಯೆಂಬುದನೀ ರಾಗಪ್ರಯೋಗವು ಪೇಳ್ವಪ್ಪುದು (ಲೀಲಾವ. ೨-೩೦ ವ). ೩. ಜಠರಾಗ್ನಿ. ೪. ಅಗ್ನಿಯ ಅಧಿದೇವತೆ : ಪಿರಿದೆನಿಸುತಿಹ ದೇವತಾತ್ರಯವಧಿಕವೆಲ್ಲರಿಗೆ ವರವೆನಿಪುದಾಮ್ನಾಯ ವೈಶ್ವಾನರನಧಿಕವಿದಱಿಂದ (ತಿಮ್ಮಶಾಂ. ೩-೧೨) ; ವೈಶ್ವಾನರಂ ಈ ಮರ್ಬಿನೊಂದು ಜಂಕಣೆಗೆ ಬೆದಱಿ . . . ಪತಿಪರಾಯಣೆಯಂ ತೋಱಿಸಲೊಡಂ (ರಾಮಾಶ್ವ. ೬೪-೨೫). ೫. ಚಿತ್ರಮೂಲದ ಗಿಡ. ೬. [ವೇದಾಂತ] ಸಮಷ್ಟಿಶರೀರದಲ್ಲಿ ಚೈತನ್ಯರೂಪಿಯಾಗಿರುವವನು : ಈ ಸಮಷ್ಟಿಶರೀರದ ಕೂಡೆ ಕೂಡಿದ ಚೈತನ್ಯವು ಸಮಸ್ತಮನುಷ್ಯರುಗಳಲ್ಲಿ ಅಭಿಮಾನವ ಮಾಡಿತಾಗಿ ವೈಶ್ವಾನರನುಯಂತಾ ಹೇಳಲ್ಪಡುವುದು (ಈಶ್ವನ್ಯ. ೧೮-೨) ; ಜಾಗ್ರತಾವಸ್ಥೆಯನ್ನು ಮಾಂಡೂಕ್ಯಉಪನಿಷತ್ತು ಈ ರೀತಿಯಾಗಿ ವರ್ಣಿಸಿದೆ . . . ವೈಶ್ವಾನರ — ಸಕಲಪ್ರಾಣಿಗಳಿಗೂ ಸಂಬಂಧಿಸಿಕೊಂಡಿರುವವನು (ಜೀವಾತ್ಮ. ೧೨೭). ೭. [ಛಂದ] ಒಂದು ಗುರು, ಒಂದು ಲಘು ಪುನಃ ಒಂದು ಗುರು ಇರುವ ಒಂದು ಗಣ ; ರಗಣ (–U–) : ಕುಲಿಶಧರವಾತೋರ್ವೀ ವೈಶ್ವಾನರಾ ನಿಲರಂತ್ಯದೊಳ್ ನೆಲಸೆ ಹರಿಯುಂ (ಛಂದೋಂಬು. ೨-೧೭೭).

**ವೈಶ್ವಾನರಚೂರ್ಣ** = ಹೊಟ್ಟೆಶೂಲೆ, ಅಗ್ನಿಮಾಂದ್ಯ ಮುಂತಾದುವುಗಳಿಗೆ ಉಪಯೋಗಿಸುವ, ಚಿತ್ರಮೂಲ ಮುಂತಾದುವುಗಳಿಂದ ಮಾಡಿದ ಒಂದು ಬಗೆಯ ಚೂರ್ಣ : ವೈಶ್ವಾನರಚೂರ್ಣ — ಶುಂಠಿ, ಹಿಪ್ಪಲಿ . . . ಚಿತ್ರಮೂಲ, ಗಜಹಿಪ್ಪಲಿ . . . ಬಿಳಿಸಾಸುವೆ ಇವಂ ಸಮಾಂಶವಾಗಿ ದಿನಂಪ್ರತಿಯೂ ೪ ವರಹ ತೂಕ ತುಪ್ಪದಿಂ ಸೇವಿಸೆ ಗ್ರಹಣಿ, ಅಗ್ನಿಮಾಂದ್ಯ, ಹೊಟ್ಟೆಶೂಲೆ ಸಹ ಪರಿಹರಮಕ್ಕುಂ (ಸಕವೈ. ೩೩೭). [ಸಂ.]

**ವೈಷಮ್ಯ** (ನಾ). ೧. ಏರುಪೇರು ; ವ್ಯತ್ಯಾಸ : ಅಂತುಭಯನದಿಯ ವೈಷಮ್ಯಮುಮನಾಶ್ಚರ್ಯಂಬಟ್ಟು, ನೋಡಿ (ಆದಿಪು. ೧೩-೫೦ ವ) ; ಅಪಱಿಳ್ ಶಾರೀರಮೆಂಬುದು ವಾತಪಿತ್ತದೋಷ ವಿಶೇಷವೈಷಮ್ಯಸಮುದ್ಭವಮಪ್ಪ ಶರೀರಾಕ್ಷಿಕುಕ್ಷಿದಂತಶೂಲಾದಿ ಜನಿತಮಕ್ಕುಂ (ಅಜಿಪು. ೮-೨೮ ವ). ೨. ವಿಪತ್ತು ; ತೊಂದರೆ : "ವಿಷಮಂ ವೈಷಮ್ಯಂ" (ಚತುನಿ. ೧೨೦). ೩. ದ್ವೇಷ ; ಹಗೆತನ : ನೊಳಂಬರ ರಾಜ್ಯವು ಬಹಳಮಟ್ಟಿಗೆ ವಿಸ್ತಾರಗೊಂಡಿತಲ್ಲದೆ ನೊಳಂಬರ ಮತ್ತು ಬಾಣರ ನಡುವೆ ನಿರಂತರವೈಷಮ್ಯಕ್ಕೆ ದಾರಿಮಾಡಿಕೊಟ್ಟಿತು (ನೊಳಂಬ. ೨೮). [ಸಂ.]

**ವೈಷಯ** (ಗು). ೧. ವಿಷಯಕ್ಕೆ ಸಂಬಂಧಪಟ್ಟ. (ನಾ). ೨. ವಿಷಯ ; ವಸ್ತು : "ವಿಷಯಂ ವೈಷಯಮೆನಿಪ್ಪುದು" (ಚತುನಿ. ೧೨೦). [ಸಂ.]

**ವೈಷಯಿಕ** (ಗು). ೧. ವಸ್ತುವಿಗೆ ಸಂಬಂಧಿಸಿದ. ೨. ವಿಷಯಸುಖಕ್ಕೆ ಸಂಬಂಧಪಟ್ಟ ; ಇಂದ್ರಿಯಸುಖಕ್ಕೆ ಸಂಬಂಧಿಸಿದ : ರಾವಣಂಗೊಲವು ಪದಿರ್ಮಡಿಸಿತ್ತಪ್ರಾಪ್ತಿರಸಂಬಡೆಗುಂ ವೈಷಯಿಕಸುಖದೊಳಿದು ವಿಸ್ಮಯನೋ (ಪಂಪರಾಮಾ. ೯-೧೮೭) ; ತಾವು ವೈಷಯಿಕ ವಾಸನೆಗಿಂತಲೂ ಮೇಲಿನ ಒಂದು ಉಪಅನುಭವವನ್ನು ಪಡೆದವರೆಂಬುದನ್ನು ನಾನು ತಿಳಿದುಕೊಂಡೆ (ಮೃಜಲ. ೧೭೪). (ನಾ). ೩. ಇಂದ್ರಿಯಗಳಿಂದ ತಿಳಿಯಲ್ಪಡುವ ವಸ್ತು, — ವಿಷಯ: ನಿರ್ವರ್ತ್ಯವಿಕಾರ್ಯಂ ಪ್ರಾಪ್ಯಮೆತ್ತಲುಂ ವೈಷಯಿಕಂ (ಶಮದ. ೧೨೭). ೪. ಭೋಗಗಳಲ್ಲಿ ಆಸಕ್ತಿಯುಳ್ಳವನು ; ವಿಷಯಲೋಲುಪ. [ಸಂ.]

**ವೈಷ್ಣವ** (ಗು). ೧. ವಿಷ್ಣುವಿಗೆ ಸಂಬಂಧಿಸಿದ ; ವಿಷ್ಣುವಿನ : ಆ ಸೋಮನಾಥಪುರದ ಆಱು ತತ್ತಿನ ಒಳಗಣ ಬಂಡೂರತತ್ತಿನ ಒಳಗೆ ಆ ವೈಷ್ಣವಬಾಗೆಯ ವೃತ್ತಿ ಹದಿನಾಲ್ಕಱ ಪ್ರಾಪ್ತಿಗಳನೂ . . . ಅನುಭವಿಸಿಕೊಂಡು (ಎಕ. V(R), ತಿರುಮ. ೯೧-೧೨ ; 1281). ೨. ವಿಷ್ಣುವನ್ನು ಆರಾಧಿಸುವ. (ನಾ). ೩. ಹಿಂದೂಮತದ ಮೂರು ಪ್ರಮುಖಪಂಥಗಳಾದ ವೈಷ್ಣವ, ಶೈವ ಮತ್ತು ಶಾಕ್ತ ಎಂಬುವುಗಳಲ್ಲಿ ಒಂದು ; ಹರಿಸರ್ವೋತ್ತಮತ್ವವನ್ನು ಸಾರುವ ಪಂಥ : ಭರತಖಂಡದಲ್ಲಿ ಶೈವ ಮತ್ತು ವೈಷ್ಣವ ಎಂಬುದಾಗಿ ಎರಡು ಸಂಪ್ರದಾಯಗಳು . . . ನಾನಾ ಮತಾಚಾರಗಳಿಗೆ ಕಾರಣವಾದುವು (ಛಾತತ್ತ್ವ. ೬೧೯). ೪. ವೈಷ್ಣವ ಮತಾವಲಂಬಿ : ಬಿಜ್ಜಳನ ಗುರುವಪ್ಪ ನಾರಣಕ್ರಮಿತಂ ಸೌರಿಭಟ್ಟಂ ವಿಷ್ಣುಪೆದ್ದಿಗಳು ಮೊದಲಾದ ವೈಷ್ಣವರೆಲ್ಲಂ ಕಂಡುಕಂಡು ಅಸೂಯೆಯೊಳು ನಡೆದು (ಬಸರ. ೮-೭೫); ಷಟ್ಕರ್ಮ ಮಾಡಬೇಕು ವೈಷ್ಣವನೆನಿಸಬೇಕು ವಿಷ್ಣುದಾಸರ ದಾಸನಾಗಬೇಕು (ಪುರಂದ. ೩-೭೦-೪); ವಿಷ್ಣುವನ್ನೇ ಪರಬ್ರಹ್ಮಸ್ವರೂಪವೆಂದು ತಿಳಿದು ಆರಾಧಿಸುವವರು ವೈಷ್ಣವರು (ಭಾರದ. ೨೦) ; ಸ್ಮಾರ್ತರಿಗೆ ಸ್ವಾರ್ಥ ಹೆಚ್ಚು, ವೈಷ್ಣವರಿಗೆ ಉಷ್ಣ ಹೆಚ್ಚು (ಗಾದ). ೫. ವಿಷ್ಣುವನ್ನು ಅಭಿಮಂತ್ರಿಸಿ ಬಿಡುವ ಅಸ್ತ್ರ ; ನಾರಾಯಣಾಸ್ತ್ರ : ಲೋಕಮಂ ಬಸಿಱೊಳಗಿಟ್ಟು ಕಾದಳವ ನಾರಳವೊಡ್ಡಿಸೆ ಕಾದನಾಗಳರ್ವಿಸೆ ತೆಗೆದೆಚ್ಚ ವೈಷ್ಣವಮನೊಡ್ಡಿಸಿ ವೈಷ್ಣವದಿಂ ಮುರಾಂತಕಂ (ಪಂಪಭಾ. ೧೨-೩೨). ೬. ಯುದ್ಧಮಾಡುವಾಗ ನಿಲ್ಲುವ ಒಂದು ಭಂಗಿ : ಆಲೀಢ ಪ್ರತ್ಯಾಲೀಢ ಸಮಪಾದ ವೈಷ್ಣವ ಮಂಡಲಾಗ್ರಮುಮೆಂಬ ಪಂಚವಿಧಸ್ಥಾನಕೃತಂಗಳೊಳಂ . . . ನಿಂದು . . . ದೃಷ್ಟಿಯುದ್ಧಂಗೆಯ್ದರ್ (ಗದಾಯು. ೮-೧ ವ). ೭. [ನಾಟ್ಯ] ಆರು ಬಗೆಯ ಪುರುಷಸ್ಥಾನಕಗಳಲ್ಲಿ ಒಂದು ; IP "ಪಾದಗಳಿಗೆ ೨½ಗೇಣು ಅಂತರವಿರುವಂತೆ ಒಂದು ಕಾಲನ್ನು ಸಮನಾಗಿರಿಸಿ ಇನ್ನೊಂದು ಕಾಲಿನ ಬೆರಳುಗಳನ್ನು ಪಕ್ಕಕ್ಕೆ ಮಾಡಿ ಪಾರ್ಶ್ವದಲ್ಲಿ ತ್ರ್ಯಸ್ರದಂತಿರಿಸಿ ಮೊಳಕಾಲನ್ನು ಬಗ್ಗಿಸಿ ಸೌಷ್ಠವದಿಂದ ನಿಂತುಕೊಳ್ಳುವುದು" (ಲಾಸ್ಯರಂ. ೩೨೬ ಗದ್ಯಾನುವಾದ) : ವೈಷ್ಣವ . . . ಪ್ರತ್ಯಾಲೀಢ — ಈ ಆಱು ಪುರುಷಸ್ಥಾನಕಂಗಳ್" (ಲಾಸ್ಯರಂ. ೭-೧೨ ವ).

**ವೈಷ್ಣವಗೀತಿಮನೋಹರ** = ವಿಷ್ಣುಪರವಾದ ಗೀತೆಗಳನ್ನು ಸುಶ್ರಾವ್ಯವಾಗಿ ಹಾಡುವವನು ; ಒಂದು ಬಿರುದು : ಗ್ರಾಮನಾಮೋತ್ತಮವ್ವೈಷ್ಣವಗೀತಿ ಮನೋಹರರ್ (ಕಇ. II, ೧೦-೯ ; 1080). [ಸಂ.]

**ವೈಷ್ಣವದೀಕ್ಷೆ** (ನಾ). ವೈಷ್ಣವಮತದ ವ್ರತಗಳನ್ನು ವಿಧಿವತ್ತಾದ ರೀತಿಯಲ್ಲಿ ಕೈಗೊಳ್ಳುವ ಸಂಸ್ಕಾರ : ನೀನು ನನ್ನೊಡನೆ ಬಾ ವೈಷ್ಣವದೀಕ್ಷೆಯನ್ನು ಕೊಡುತ್ತೇನೆ (ಶ್ರೀರಾಯ. ೩೮೧). 'ಶೈವದೀಕ್ಷೆ' ಪರಾ. [ಸಂ. ವೈಷ್ಣವದೀಕ್ಷಾ]

**ವೈಷ್ಣವಪುರಾಣ** (ನಾ). ಹದಿನೆಂಟು ಮಹಾಪುರಾಣಗಳಲ್ಲಿ ಒಂದು; ವಿಷ್ಣುವನ್ನು ಕುರಿತ ಪುರಾಣ : ಬ್ರಹ್ಮಪುರಾಣ ಪದ್ಮಪುರಾಣ ವೈಷ್ಣವಪುರಾಣ . . . ಬ್ರಹ್ಮಾಂಡಪುರಾಣವೆಂಬವೆ . . . ಹದಿನೆಂಟು ಮೂಲಪುರಾಣಂಗಳು (ವಿವೇಕ. ೭); ಇವುಗಳಲ್ಲಿ ನಾಲ್ಕು ವೈಷ್ಣವಪುರಾಣಗಳು ಶಿವ ವಿಷ್ಣುಗಳ ಸಾಮ್ಯವನ್ನು ಪ್ರತಿಪಾದಿಸುತ್ತವೆ (ಭಾರದ. ೧೪೭). 'ಶೈವಪುರಾಣ' ಪರಾ. [ಸಂ.]

**ವೈಷ್ಣವಮತ** (ನಾ). ೧. ವಿಷ್ಣುವನ್ನು ಪೂಜಿಸುವವರ ಮತ, — ಕುಲ: 'ವೈಷ್ಣವಮತ' ಎಂಬ ಹೆಸರು ಸೂಚಿಸುವಂತೆಯೇ ವಿಷಯ ವಿಷ್ಣುವಿನ ಆರಾಧನೆಯ, ಪೂಜೆಯ ಪರಂಪರೆಗೆ ಅಥವಾ ಸಂಪ್ರದಾಯಕ್ಕೆ ಸೇರಿದ್ದು (ಭಾರದ. ೨೮೨). ೨. ವಿಷ್ಣುಭಕ್ತಿಯನ್ನು ಪ್ರತಿಪಾದಿಸುವ, ಮಧ್ವಾಚಾರ್ಯರಿಂದ ಸ್ಥಾಪಿತವಾದ ಮತ ; ದ್ವೈತಪಂಥ ; ದ್ವೈತಮತ : ಮಧ್ವರಾಯರ ನೆನೆದು ಪರಿಶುದ್ಧರಾಗಿರೊ ಪೊದ್ದಿ ವೈಷ್ಣವಮತವ ಭವಾಬ್ಧಿಯನು ದಾಟಿರೊ (ಪುರಂದ. ೧-೨೧೯ ಅನುಪಲ್ಲವಿ). 'ಶೈವಮತ' ಪರಾ. [ಸಂ.]

**ವೈಷ್ಣವವೇದ** (ನಾ). ವಿಷ್ಣುಭಕ್ತಿಯನ್ನು ಕುರಿತ ಗೀತಗ್ರಂಥ ; ಪುರಾತನಕಾಲದ ಆಳ್ವಾರರು ರಚಿಸಿದ ವಿಷ್ಣುಸ್ತೋತ್ರ : ಆಳ್ವಾರರು . . . ಸುಮಾರು ೪೦೦೦ ಪದ್ಯಗಳನ್ನು ಹಾಡಿದ್ದಾರೆ. ಈ ಪದ್ಯಗಳಿಗೆ ನಾಲಾಯಿರ ದಿವ್ಯಪ್ರಬಂಧಂ ಎಂದು ಹೆಸರು. ವೈಷ್ಣವವೇದ ಎಂಬ ಹೆಸರೂ ಇದೆ (ಭಾರದ. ೩೯೯). [ಸಂ.]

**ವೈಷ್ಣವಸಿದ್ಧಾಂತ** (ನಾ). ವಿಷ್ಣುಭಕ್ತಿಯನ್ನು ಪ್ರತಿಪಾದಿಸುವ ತತ್ತ್ವ,—ದರ್ಶನ : ಜಗತ್ಕಾರಣತ್ವ ಮೊದಲಾದ ಸರ್ವಕೃತ್ಯಗಳನ್ನೂ ವಿಷ್ಣುವಿಗೇ ಸಮರ್ಥಿಸಿ ವಿಷ್ಣುಭಕ್ತಿಯನ್ನೇ ಮುಖ್ಯವಾಗಿ ಕರ್ತವ್ಯವೆಂದು ನಿರ್ಣಯಿಸಿರುವುದರಿಂದ ಈ ದರ್ಶನಕ್ಕೆ ವೈಷ್ಣವಸಿದ್ಧಾಂತವೆಂದು ಪ್ರಸಿದ್ಧಿ (ಹಿಂದಸಾ. ೨೬೬) ; ವೈಷ್ಣವಾಗಮಗಳ ಬೆಳಕಿನಲ್ಲಿ ವೇದವ್ಯಾಖ್ಯಾನ ಮಾಡುವ ಪ್ರಯತ್ನದಲ್ಲಿ ವೈಷ್ಣವಸಿದ್ಧಾಂತಗಳೂ ಪ್ರವೃತ್ತವಾದುವು (ಭಾತತ್ತ್ವ. ೬೧೭). 'ಶೈವಸಿದ್ಧಾಂತ' ಪರಾ. [ಸಂ.]

**ವೈಷ್ಣವಾಗಮ** (ನಾ). ವಿಷ್ಣುದೇವಾಲಯಗಳ ನಿರ್ಮಾಣ, ವಿಷ್ಣುವಿಗ್ರಹದ ಪ್ರತಿಷ್ಠೆ, ಪೂಜೆ ಮೊದಲಾದ ವಿಷಯಗಳನ್ನು ತಿಳಿಸುವ ಶಾಸ್ತ್ರ ; ವೈಖಾನಸಾಗಮ : ವಿಖನಸಮಹರ್ಷಿಗಳಿಗೆ ಭಗವಂತನಿಂದ ಉಪದಿಷ್ಟವಾದ ವೈಷ್ಣವಾಗಮವು ವೈಖಾನಸಾಗಮವೆಂದು ಪ್ರಖ್ಯಾತವಾಯಿತು (ಭಾರದ. ೭೫). 'ಶೈವಾಗಮ' ಪರಾ. [ಸಂ.]

**ವೈಷ್ಣವಾಸ್ತ್ರ** (ನಾ). ವಿಷ್ಣುಮಂತ್ರವನ್ನು ಅಭಿಮಂತ್ರಿಸಿ ಪ್ರಯೋಗಿಸುವ ಅಸ್ತ್ರ ; ನಾರಾಯಣನು ಅಧಿದೇವತೆಯಾಗಿರುವ ಅಸ್ತ್ರ ; ನಾರಾಯಣಾಸ್ತ್ರ: ಅಂತು ವೈಷ್ಣವಾಸ್ತ್ರಮತಿನಿರ್ಭರದಿಂ ಚತುರ್ವಲದೊಳ್ ಕಾದುತ್ತುಮಿರೆ (ಜಗವಿ. ೧೨-೩೪ ವ) ; ಇದು ವರಾಹನ ದಾಡೆಯಿದನಾ ತ್ರಿದಶವೈರಿಗೆ ಕೊಟ್ಟೆನವನಿಂದಿದುವೆ ಭಗದತ್ತಂಗೆ ಬಂದುದು ವೈಷ್ಣವಾಸ್ತ್ರವಿದು ಇದು ಹರಬ್ರಹ್ಮಾದಿಗಳ ಗೆಲುವುದು ಕಣಾ ನಿಮಿಷದಲಿ (ಕುವ್ಯಾದ್ರೋ. ೩-೭೨). [ಸಂ.]

**ವೈಷ್ಣವಿ** (ನಾ). ೧. ವಿಷ್ಣುವಿನ ಶಕ್ತಿ ; ವಿಷ್ಣುಮಾಯೆ. ೨. (ದೇವ, ದಾನವರು ಅಮೃತಕ್ಕಾಗಿ ಕ್ಷೀರಸಮುದ್ರವನ್ನು ಮಥನ ಮಾಡಿದಾಗ) ಕ್ಷೀರಸಮುದ್ರದಲ್ಲಿ ಜನಿಸಿದವಳು ; ಲಕ್ಷ್ಮಿ : ಬಾಲಭಾಸ್ಕರನು ಪೂರ್ವಾದ್ರಿಯ ಶಿಖರದ ಮೇಲೆ ಮೈದೋರುವಂತೆ ಪಾಲಾಬ್ಧಿಯಲಿ ಜಗತ್ಪಾಲೆ ಕಣ್ಗೆಸೆದಳು ಶೀಲೆ ವೈಷ್ಣವಿಯೂ ಮುಂತೆ (ಸಮುಮ. ೧೯-೧೨). ೩. ಸಪ್ತಮಾತೃಕೆಯರಲ್ಲಿ ಒಬ್ಬಳು : "ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಮಾಹೇಂದ್ರೀ, ಚಾಮುಂಡಾ —ಈ ೭ ಸಪ್ತಮಾತೃಕೆಯರ ಪೆಸರ್" (ಹಲಾಯು. ೪-೧೭). ೪. ದುರ್ಗಾದೇವಿ ; ದುರ್ಗೆ : ಹರಿಯಚೇಂದ್ರಾದಿಗಳು ಮುರಿದು ಮರೆಯಾಗೆ ಕಾಯ್ದುಯಿರದೆ ವೈಷ್ಣವಿಯಾಗಿ . . . ಶುಂಭಾಸುರನ ಸಿರವ ನಿಮಿಷದೊಳರಿದು ಚರಣದಿ ಮೆಟ್ಟಿಯಮರರನುಳುಹಿದಗಜೆ ಸಲಹಾ (ನವಮೋ. ೯-೨). ೫. ವಿಷ್ಣುವಿನ ಭಕ್ತೆ ; ವೈಷ್ಣವಭಕ್ತೆ : ಭಗವಂತನನ್ನು ನಂಬಿಕೊಂಡು ಅವನ ಆರಾಧನೆಯಲ್ಲಿ ವೈಷ್ಣವಿಯರಂತೆ ಕಾಲಕಳೆಯಬೇಕೆಂದು ನಿರ್ಧರಿಸುವ ನನಗೆ ಬೇರಾವ ಬಾಳಿನಲ್ಲಿಯೂ ಆಸೆಯಿಲ್ಲ (ಹೇಮಂತ. ೩೪೦). ೬. ವೈಷ್ಣವಮತವನ್ನು ಅನುಸರಿಸುವವಳು ; ವೈಷ್ಣವಜಾತಿಯ ಹೆಂಗಸು : ಹಸಿರು ಹಣೆಯಿಂದ ಕುಳಿತ ವಿಕ್ಟೋರಿಯಾ ರಾಣಿಗೂ ಚಾಂದಬೀಬಿಗೂ ಒಂದು ಬೊಟ್ಟು ಉದ್ದ ಕುಂಕುಮವಿಟ್ಟು ವೈಷ್ಣವೀ ಮುತ್ತೈದೆಯರ ಸಾಲಿಗೆ ಸೇರಿಸಿದೆವು (ಗಾಳಿಪ. ೭೦). ೭. ಹಿಂದಿನ ಕಾಲದ ರಾಜರ ಕಾಲದಲ್ಲಿ ಎಲ್ಲೆಂದರಲ್ಲಿ ಸಂಚರಿಸುವ ಸ್ವಾತಂತ್ರ್ಯವನ್ನು ಹೊಂದಿದ್ದ, ವಿಷ್ಣುವಿನ ಉಪಾಸಕಿ ; ವಿರಾಗಿಣಿಯರ ಒಂದು ವರ್ಗಕ್ಕೆ ಸೇರಿದವಳು : ವೈಷ್ಣವಿಯು ಆ ದ್ವಾರಪಾಲಕನನ್ನು ಹಿಂಬಾಲಿಸಿ ಅರಮನೆಯೊಳಗೆ ಪ್ರವೇಶ ಮಾಡಿದಳು (ಶ್ರೀರಾಯ. ೬೩). ೮. [ಸಂಗೀತ] ಸಪ್ತಸ್ವರಗಳಲ್ಲಿ ಒಂದಾದ ಮಧ್ಯಮಸ್ವರದ ಅಧಿದೇವತೆ : ಬ್ರಾಹ್ಮಿ ಮಾಹೇಶ್ವರಿ ಕೌಮಾರಿ ವೈಷ್ಣವಿ ವಾರಾಹಿ ಮಾಹೇಂದ್ರಿ ಚಾಮುಂಡಿಯೆಂಬವರೇ ಕ್ರಮದಿಂದಾ ಷಡ್ಜಾದಿಸ್ವರಾಧಿದೇವತೆಗಳು (ವಿವೇಕ. ೧೮೭). 'ಕೌಮಾರಿ' ಪರಾ. [ಸಂ. ವೈಷ್ಣವೀ]

**ವೈಸಣಿಗೆ** 'ಬಯಿಸಣಿಗೆ' ನೋ.

**ವೈಸರಾಯ** 'ವೈಸರಾಯಿ' ನೋ.

**ವೈಸರಾಯಿ, ವೈಸರಾಯ** (ನಾ). ರಾಜ್ಯಾಧಿಕಾರವನ್ನು ನಿರ್ವಹಿಸುವ ಆಡಳಿತಗಾರ ; ರಾಜನ ಪ್ರತಿನಿಧಿ : ವೈಸರಾಯಿ ಎಂಬ ಪದಕ್ಕೆ 'ರಾಜನ ಪ್ರತಿನಿಧಿ' ಎಂದರ್ಥವಾಗುವುದು (ಬಾಲಪ್ರ.III, ೧೩೧೬). **ವೈಸರಾಯ** : ದಡುಗನನ್ನು ಸ್ಥಾನಿಕನಾಗಿ ವಿಜಯನಗರದ ವೈಸರಾಯನಾದ ಅಣ್ಣದಾನ ಒಡೆಯನ ಅನುಮತಿ ಮೇರೆಗೆ ನೇಮಿಸಲಾಗಿತ್ತು (ತುಳುನಾ. ೧೩೪). [<— ಇಂ. Viceroy]

**ವೈಸಾರಿಣ** (ನಾ). ಮೀನು ; ಮತ್ಸ್ಯ : "ಮೀನಂ ಝಷಂ . . . ವೈಸಾರಿಣಂ ಮತ್ಸ್ಯಮೆನೆ ಮೀನ್ಗೆ ನಾಮಂ" (ಮಂಗರಾ. ೧೨೧-೬). [ಸಂ.]

**ವೈಸಿಕ** (ನಾ). ೧. ವೇಶ್ಯೆಯರು ವಿಟರನ್ನು ಮನಸೆಳೆಯಲು ಬಳಸುವ ಗೀತ, ನೃತ್ಯ, ಚಾತುರ್ಯ, ತಂತ್ರ ಮುಂತಾದ ವಿದ್ಯೆ,—ಕಲೆ : ನೆರೆವಳ್ ತಂಗಿಯವಟ್ಟೆ, ತಾನೆ ಬರಲೊಲ್ಲಂ ಲಜ್ಜೆಯಿಂದಾತನಂ ಕರೆಯಲ್ ವೈಸಿ [ಪಾಠಾಂ. ಶಿ]ಕವೆಂದಪಂ ಸಖಿ ಸರಣ್ಮೊಕ್ಕೆಂ ಗಡಾ ನಲ್ಲನಂ ಬರಿಸನ್ನಲ್ಲಿಗೆ (ಲೀಲಾವ. ೭-೫೫) ; ಪುಯುಡಿನೆಡೆಯುಪಚಾರದಿಕ್ಕೆ ವೈಸಿಕದ ಹರವರಿ ಹುಸಿಯ ಹಸರ . . . ಎಂದೆನಿಪ ಸೂಳೆಗೇರಿಯ ಹೊಕ್ಕನವನೀಶನು (ಹಚಕಾ. ೪-೪) ; ಅತಿಕುಟಿಲಮಾದ ಡಂಬಕದ ವೈಸಿಕದೆ ಸಂತತಮೆಸೆವ ವಾರಸತಿಯರ್ ಚಪಳೆಯರ್ ನಾಡೆ ಸಿತಗೆಯರ್ (ಆರಾಚ. ೨-೫-೩೮). ೨. ಠಕ್ಕು ; ವಂಚನೆ : ಆಸುರದ ವ್ಯಾಮೋಹವಿದು ಡೊಳ್ಳಾಸವೋ ಕೌರವರ ಘಟ್ಟಿಸ ವೈಸಿಕವೊ ನಿಮ್ಮಡಿಯ ಮಾಯಾ ಮಯದ ಮಾಲೆಗಳೊ (ಕುವ್ಯಾಕ. ೨೬-೨೫) ; ಇಂತು ವೈಸಿಕಮೆಸಗಿದ ತಚ್ಚೋರಭಟರಂ ಘಾತಿಸಿ (ಮರಾಚ. ೨-೪೩). ೩. ನಿರರ್ಥಕವಾದುದು ; ಕೆಲಸಕ್ಕೆ ಬಾರದುದು: ಸಾಕದೇತಕೆ ಬಚಿಪೆ ವೈಸಿಕದ ಬಾಣಪ್ರಯೋಗಂಗಳ್ (ಜೈಮಿಭಾ. ೨೩-೩೪) ; ವೈಸಿಕದ ಕಿರುವಳ್ಳಿಯುಂ ಕೈಲಾಸಗಿರಿಗೆ ಸಮನೆನಿಸಿ ತೋರಿದ . . . ಶಿವಸಿದ್ಧಪತಿ ನಿನ್ನ ಸಮ್ಮುಖಕೆ ಬರಲೆನಗೆ ಸನ್ಮಾರ್ಗಮಂ ತೋರಿ ನೀನುಪಕರಿಸು (ಕರೀಚೆ. ೮-೭೦). [< ಸಂ. ವೈಶಿಕ]

**ವೈಸ್ರಸಿಕ** (ನಾ). [ಜೈನ] ಶಬ್ದಭೇದದಲ್ಲಿ ಒಂದು ಬಗೆ ; "ಅಭಾಷಾತ್ಮಕ ಶಬ್ದಭೇದ-ಸ್ವಭಾವಜನ್ಯವಾದ ಮೇಘಧ್ವನಿ ಮೊದಲಾದುವು" (ಜೈನಕೋ. ೨೩೯); ಅಭಾಷಾತ್ಮಕಮುಂ ಪ್ರಾಯೋಗಿಕ ವೈಸ್ರಸಿಕಭೇದದಿಂ ದ್ವಿವಿಧಂ ಅಲ್ಲಿ ಬಲಾಹಕಾದಿಪ್ರಭವಂ ವೈಸ್ರಸಿಕಂ ಅಕ್ಕುಂ (ತತ್ತ್ವಪ್ರ. ೨೪೨); ಶಬ್ದವು ಪ್ರಾಯೋಗಿಕ, ವೈಸ್ರಸಿಕ (ಸ್ವಾಭಾವಿಕ) ಎಂದು ಎರಡು ವಿಧವಾಗಿದೆ . . . ಮೇಘಾದಿಗಳಿಂದ ಉಂಟಾಗುವುದು ವೈಸ್ರಸಿಕವು (ಜೈನಧ. ೫೭). [ಸಂ.]

**ವೈಸ್ವರ್ಯ** (ನಾ). ಧ್ವನಿ ಬದಲಾಗುವಿಕೆ: ಸ್ತಂಭ (ಸ್ತಬ್ಧತೆ) . . . ವೇಪಥು, ಅಶ್ರು (ಕಣ್ಣೀರು), ವೈಸ್ವರ್ಯ (ಧ್ವನಿ ಬದಲಾಗುವುದು) -- ಇವು ಸಾತ್ವಿಕಭಾವಗಳು (ಸಂನಾಟ. ೧೨). [ಸಂ.]

**ವೈಹಳಿ** 'ವೈಹಾಳಿ' ನೋ.

**ವೈಹಾಯಸ** (ಗು). ೧. ಆಕಾಶದಲ್ಲಿರುವ ; ಗಗನದಲ್ಲಿರುವ. (ನಾ). ೨. ಬಾನು ; ಆಕಾಶ : ವೈಹಾಯಸಯುದ್ಧಸನ್ನದ್ಧರನಪರಾಜಿತಾನಂತವೀರ್ಯರಂ ಕಂಡು ಪೊಡವಟ್ಟು (ಶಾಂತಿಪು. ೩-೭೫ ವ) ; ತರಣಿ ವೈಹಾಯಸವನೇಱಿದ ಕರವ ಬೀಸಿದ ವಿಷ್ಣುಚರಣದ ಸರಣಿಯಲಿ ಸರದೆಗೆವ ಗಂಧರ್ವರನು ಖತಿಗೊಳಿಸಿ (ಕಾಶಿರಾ. ೪೧-೧). [ಸಂ.]

**ವೈಹಾಸಿಕ** (ನಾ). ಹಾಸ್ಯಮಾಡುವವನು ; ಹಾಸ್ಯಗಾರ ; ವಿದೂಷಕ : "ಸುಪರಿಹಾಸಂ ಧ್ರುವಂ ವೈಹಾಸಿಕನೆನಲ್ಕೆ ನೃಪರ ನಗಿಸುವನಕ್ಕು" (ಮಂಗರಾ. ೮೦-೯). [ಸಂ.]

**ವೈಹಾಳಿ, ಒಯ್ಯಾಳಿ, ವೈಯಾಳಿ, ವೈಹಳಿ** (ನಾ). ೧. ಕುದುರೆ, ಆನೆ, ಟಗರು ಮೊದಲಾದುವುಗಳ ಮೇಲೆ ಕುಳಿತು ಮಾಡುವ ಸವಾರಿ : ಗೋಳಿಟ್ಟು ಸತಿಯರಂ ವೈಹಾಳಿಯನೇಱಿದನವಳ್ವಿರ ದಾವಣಿಯಂ ಲೀಲೆಯೊಳೆ ಕಟ್ಟಿದಂ ಗುಣಬಳಂ ವಿಟಚಕ್ರವರ್ತ್ತಿ ವಿಭುದೇವರಸ (ಸೌಇಇ. IX-i, ೧೧೮-೪೩ ; 1057) ; ರಂಜಿಸುವ ಮಹಿಷಯುದ್ಧಂಗಳಂ ಕಾಣುತುಂ ಕರಿತುರಗವೈಹಾಳಿಯೊಳ್ ಬೆರಸಿ ಬಳೆವುತುಂ (ನಂಬಿರ. ೩-೫೯) ; ಎಳಗನ ವೈಹಾಳಿಯ ಮಾಡೇಳ್ಕೆ ಕೆಳೆಯರ ಮೇಳಕೆ ಮನಗುಡಲೇಳ್ಕೆ (ಹಚಕಾ. ೧೨-೩೦ ರಗಳೆ). ೨. ಸಂಚಾರ ; ವಿಹಾರ ; ಗಮನ : ಮೇಲುರತದಲಿ ಪರಿಮಳದ ವೈಹಾಳಿಯಲಿ ಸಲೆ ಬೀದಿವರಿದು ಚಡಾಳಿಸುವ ಸೊಗಸಿನಲಿ ಸೊಂಪಾದಳು ಸರೋಜಮುಖಿ (ಕುವ್ಯಾಅ. ೧೦-೪) ; ವಾಯುವಿನ ವೈಹಾಳಿಗೆಡೆಗುಡು ನಿನ್ನ ವಚನವನು (ತೊರರಾ. ೬-೨೩-೨೫). ೩. ಕುದುರೆಸವಾರಿಯನ್ನು ಪ್ರದರ್ಶಿಸುವ ಸ್ಥಳ ; ಕುದುರೆಸವಾರಿಯ ಮೈದಾನ : ಬನವೆತ್ತಂ ಧವಳಾರ ವಂಕದ ಕಳಂ ವೈಹಾಳಿ ಪೂದೋಂಟದಿಂಬನೆ ತಳ್ತಂಗದಿ ಸೂಳೆಗೇರಿ ಕೆಱೆಗಳ್ ಕಣ್ಗೊಪ್ಪವಂ ಮಾಡೆ (ಎಇ. XIII, ೩೦೨-೧೦ ; 1125). **ಒಯ್ಯಾಳಿ** : ೧. ಕಾನನದೊಯ್ಯಾಳಿಯಿಂದಲಿ ಬರುತಿರ್ದು ತಾನು ಕಂಡನೀ ಮಾರಿದತ್ತ (ಜನರಾ. ೫-೭೧) ; ಪುರುಷಪ್ರದ್ಯುಮ್ನ ರತಿದೇವಿಯರ ಸತ್ಪುತ್ರ

... ತುರಗ ರಥ ಗಜಗಳೊಯ್ಯಾಳಿಕೇಳಿಯನರಿದು (ನವಮೋ. ೧೭-೩). **ವೈಯಾಳಿ : ೧.** ತುರಗ ವೈಯಾಳಿಯನು ಮಾಡುವ ತ್ವರಿತದಿಂದಪ್ಪಣೆಯ ಪಾಲಿಸು (ನಾಗಷ. ೯-೩೪). **ವೈಹಳಿ : ೩.** ಪೊಳಲ ಪೊಱಗಣ ನಾಲ್ಕುಂದೆಸೆಗಳೊಳಾನೆಗಳ ಕುದುರೆಗಳ ವಾಹಕರ ಕಳಕಳರವದಿಂದ ಕಣ್ಗೆಸೆದವು ವೈಹಳಿಯ ಕಳಗಳೇನನೆಂಬೆ (ಕುರಾಸಾಂ. ೪-೬೮) ; ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. 'ಬಾಹ್ಯಾಳಿ' ಪರಾ.

[< ಸಂ. ವಾಹ್ಯಾಳೀ]

**ವೈಹಾಳಿಗ (ನಾ).** ವಿಹಾರಕ್ಕಾಗಿ ಕುದುರೆಸವಾರಿ ಮಾಡುವವನು : ಕೆಲತರದ ಇರಳುಹಕ್ಕಿಗಳು ಈ ವೈಹಾಳಿಗರನ್ನು ಕಂಡೋ ಏನೋ ಕಿರಿಚು – ಕೀಚಲುಗುಟ್ಟು ತ್ತಿದ್ದವು (ವೀರಬಂ. ೨೧). [ವೈಹಾಳಿ + - ಇಗ]

**ವೈಹಾಳಿಯಂಕಣ (ನಾ).** ಕುದುರೆ ಅಥವಾ ಆನೆಯ ಸವಾರಿಯನ್ನು ಪ್ರದರ್ಶಿಸುವ ಸ್ಥಳ, – ಮೈದಾನ : ಸೊಕ್ಕಾನೆ ಕುದುರೆಯ ವೈಹಾಳಿಯಂಕಣದಿಕ್ಕೆ ಕಣ್ಮನಕೆ ರಂಜಿಸಿತು (ಮೋಹತ. ೨-೫೩). [ವೈಹಾಳಿ + ಅಂಕಣ]

**ವೊಕ್ಕಳಾರಿ (ನಾ).** ಬೇಸಾಯ ಮಾಡುವವನು; ರೈತ(?) : ಹಿನ್ನಕೆ ದೇವಸ್ಥಾನದ ಸೀಮೆಯವರನೂ ವೊಕ್ಕಳಾರಿ ಹಿಡಿದುಕೊಂಡು ಹೋಗಿ ತೊಂಡನೂರ ಗದ್ದೆ ನೂವುಳಿಸುವ ಸಂಮಂಧ ಅದನ ನಾವು ಕುಳವ ಕಡಿದು ಬಿಟ್ಟೆವು (ಎಕ. XIV, ಶ್ರೀರಂಗ. ೨೬೩-೮ ; 1527).

[< ಒಕ್ಕಲ್ + ?]

**ವೊಡೆತಿರ್ (ಕ್ರಿ).** ಕೂಡಿಕೊಂಡಿರು ; ಸೇರಿರು : ಶ್ರೀಮದಱಬಲ್ಲಹಾ[ಗ್ರ]ನುಂ ಕುಱುಂಗೋಡ ಮೂನೂರ್ವ್ವರ್ಮ್ಮಹಾಜನರು ವೊಡೆತಿಟ್ಟು ದೇಗುಲಕೆ ಕುಱುಂಗೋಡ ಪೊಲದೊಳ್ . . . ಕೊಟ್ಟು (ಸೌಇಇ. IX-i, ೬೫-೭ ; 947). 'ಉಡಿತಿಟ್ಟು' ಪರಾ.

[< ಒಡೆತು + ಇರ್]

**ವೊಡ್ಡವಾರ** 'ವಡ್ಡವಾರ' ನೋ.

**- ವೊಲ್** '- ವೋಲ್' ನೋ.

**- ವೊಲು** '- ವೋಲ್' ನೋ.

**ವೋರ (ನಾ).** ಒಬ್ಬಾತನ ಹೆಸರು : ಪನ್ನಿರ್ಮ್ಮತ್ತರ್ಕೆಯ್ಯಂ ಮಾನ್ಯಂಗುಡುಗೆನ್ನು ಪೇಳೆ ವೋ(?) ಬೆಸದೊಳ್ . . . ಕೊಟ್ಟು (ಇಆ. XII, ೨೨೩-೫ ; 930). [?]

**ವೋರ್ಬಣ್ಣಗೆ (ನಾ).** ಒಂದೇ ಆಕಾರ, — ಸ್ವರೂಪ : ಯಿಸ್ವರನುವ್ವೀರ್ಪವ್ವಿರ್ಯಡಂಗಿಕೊಂಡಿಪ್ಪನು ವೋರ್ಬ್ಬಣ್ಣಗೆಯಾಗಿ ಯೋಗಿಗಳ ಮನದ ಕೊನೆಯ ಜೋತೀಸ್ವರನು ವೃಷಭನ ರೂಪಾಗಿ (ಎಇ. XXIII, ೩೦-೫ ; 1265). 'ಒಬ್ಬಣ್ಣಗೆ' ಪರಾ.

[☞ ಇದು 'ಒರ್ಬಣ್ಣಗೆ' ಎಂಬುದರ ಅಪಲಿಖಿತವಿರಬಹುದು]

**- ವೋಲ್, - ಒಲ್$_2$, - ಒಲು$_2$, - ಓಲ್, - ವೊಲ್,- ವೊಲು,- ವೋಲು (ಪ್ರ).** ಎಂಬಂತೆ, ಹಾಗೆ, ಆ ರೀತಿಯಲ್ಲಿ ಎಂಬರ್ಥದಲ್ಲಿ ಬಳಕೆಯಾಗುವ ಒಂದು ಪ್ರತ್ಯಯ : "ವೋಲೋಲ್ ಪಾಂಗಂತೆವೊಲೆಂಬೀ ಲಲಿತಾಭಿಖ್ಯೆ ಸಾಮ್ಯಮೆಂಬರ್ಥಂ" (ಚಕುನಿ. ೩೨) ; ಬಾಳಾ ಮೇಲ್ಸಿಖಿ ಮೇಲೆ ಸರ್ಪ್ಪದ ಮಹಾದನ್ತಾಗ್ರದುಳ್ಳಲ್ಲವೋಲ್ (ಎಕ. II, ೨೨-೧ ; ಸು. 700) ; ಹೃದಯದೊಳ್ ತಾಳ್ದ ಮಣಿಹಾರಂ ಬೋ[ಪಾಠಾಂ. ಬೊ]ಲ್ ಸೊಗಯಿಸುವ ವಚನವಿರಚನೆ ನೆಗೞ್ಗುಂ (ಕವಿರಾ. ೧-೧೩) ; ಪರಮಶ್ರೀನಿಳಯಂ ಶಶಧರಕಾಂತಿವಿರೋಧಿರೋಚಿವದನಂ ನಿನ್ನಾ ಸರಸಿರುಹದ ವೋಲ್ (ಕವಿರಾ. ೩-೭೨) ; ತನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ ಸೋಲ್ತು (ಪಂಪಭಾ. ೧-೭೦) ; ವೋಲೆಂಬುದುಂ ಅಂತೆ ಎಂಬುದುಂ ಉಪಮೆಯೊಳ್ ಪ್ರತ್ಯೇಕಂ ಪತ್ತುಗುಂ . . . ವೋಲೆಂಬುದು ವಿಕಲ್ಪದಿಂ ಹ್ರಸ್ವಮುಮಕ್ಕುಂ (ಶಮದ. ೨೧೪ ವೃತ್ತಿ). ☞ ಅಕಾರಾಂತ ಶಬ್ದಗಳಲ್ಲಿ 'ವೋಲ್' ಪ್ರತ್ಯಯವು ಬಕಾರ ರೂಪದಲ್ಲಿ ಪ್ರಯೋಗವಾಗುತ್ತದೆ. ಉದಾಹರಣೆಗೆ ಮೇಲೆ ಕೊಟ್ಟಿರುವ (ಕವಿರಾ. ೧-೧೩) ; (ಪಂಪಭಾ. ೧-೭೦)ರ ಪ್ರಯೋಗಗಳನ್ನು ನೋಡಬಹುದು. **- ಒಲ್$_2$ :** ಪುರಲಕ್ಷ್ಮಿಯ ತಲೆದುಡುಗೆಯೊಲಿರು[ತಿಹ] ಪುರುಷಾರ್ತ್ಥತೀರ್ತ್ಥನಾ . . . ಮಹಿಮಾಮನೋಹರಿಪ್ರಿಯ ನಾದಂ (ಕೊಲ್ಹಾಶಾ. ೨೩-೪೦ ; 1209); ಹೃತ್ಕಮಲಕರ್ಣಿಕಾಮಧ್ಯದಲ್ಲಿ ಎಡೆವಿಡದೊಲಾವಾಗಮಿರ್ಪ ಪಂಪಾಕ್ಷೇತ್ರದೊಡೆಯಂ ವಿರೂಪಾಕ್ಷನೇ ಪೇಳಿಸಿದೊಡೆ . . . ಪೇಳ್ದೆಂ (ಚಿಬಪು. ೧-೩೦) ; ನಿಜಪುರಕೆ ಮೃಗಧರನೊಲೆಸೆವ ಶಿಶುವಂ ಕೊಂಡು ಪರಿಜನದೊಡನೆ ಬಂದನುತ್ಸವದೊಳು (ಜೈಮಿಭಾ. ೨೮-೫೧). **-ಒಲು$_2$ :** ಸೂಳೆಗವಳ ದೂತಿಕೆ ನುಡಿದಳವನಂ ಜಱೆದು ಪೊಗಳ್ವೊಲು (ಜೈಮಿಭಾ. ೬-೩೫). **- ಓಲ್ :** ಸುರಪತಿಯೊಡ್ಡೋಲಗಕ್ಕಮಿದು ಮಿಗಿಲೆಂಬೋಲ್ ಕರಮೊಪ್ಪಿರ್ದುದು ಸಭೆಯಾ ತರಳಾಕ್ಷಿಯರಿಂ ಪೊದಟ್ಟು ನೂರ್ಮಡಿ ಚೆಲ್ವಂ (ಧರ್ಮಾಮೃ. ४-೧೪೬) ; ಗೋಪಿತಾರ್ಥವ ಕೊಟ್ಟು ಜನ ಸಪ್ಪಾಪರಾಹೋಲ್ ರಚಿಸುವದಕುಪಮಾಪದವ ಕೊಡು ಚಂದ್ರನಾಥನ ಕೋಮಲಾಕೃತಿಯಾ (ಬಿಜ್ಜಪು. ४-೧೫). **- ವೊಲ್ :** "ವೊಲೆಂದೊಡೆ ಹೋಲಿಪರ್ಥಮಕ್ಕುಂ" (ಶಬ್ದಮಂ. ೫೬) ; ಕಟ್ಟಿದ ಸಿಂಘಮನ್ನೆಟ್ಟೊಡೇನೆಮಗೆನ್ನು ಬಿಟ್ಟ ವೊಲ್ (ಇಆ. X, ೬೧-೯ ; 700); ವಿಪರೀತಂ ತರುತತಿಯವೊಲಪರಾಗಂ ಶುದ್ಧ ಭೂಮಿವೋಲ್ಪದ್ಮಿನಿವೊಲುಪಗತವಿಭ್ರಮರಹಿತಂ ಕುಪಿತಾಕೃತಿಯೆಂಬುದುಪಮೆ ಸಂಧಾನಾಂಕಂ (ಕವಿರಾ. ೩-೮೩). **— ವೊಲು :** ಜಲದ ನಿನದಕೆ ಕುಣಿವ ನವಿಲ್ಗಳವೊಲು . . . ಸೂರ್ಯೋದಯಕೆ ಮನವಲರ್ವ ಚಕ್ರಂಗಳವೊಲಾಗಳಖಿಳಶಿವೈಕ್ಯರು ನಿನ್ನ ಬರವಂ ಬಯಸುವರು (ಬಸವು. ೩೭-೫೪) ; ಚೈತ್ರ ಬೆಳೆದದ್ರಿಯವೊಲಿದ್ದುದು ಮತ್ತಗಜನೊಂದಟಿಯದನಿಬರ ಬಾಣಹತಿಗಳಲಿ (ಕುವ್ಯಾದ್ರೋ. ೩-೩೯) ; ಅಂಗಜಾಂತಕನಾಲಯದವೊಲು . . . ಎಸೆದುದುಗ್ಗದ ರಾಷ್ಟ್ರಕೋಸಲದ (ತೊರರಾ. ೧-೯-೭). **- ವೋಲು :** ಹೊರೆದೆನಕಟಾ ತನುವನಿದ ಸೂಕರನ ಶುನಕನ ವೋಲು (ತೊರರಾ. ೧-೪-೧೦) ; ಪುರಲಕ್ಷ್ಮಿ ಕೈಗಳೆತ್ತಿದವೋಲು ಡೆಂಕಣಿ ಮೆಱೆದುವೆಣ್ದೆಸೆಯೊಳು (ಕಂನವಿ.೨-೬೫).

**-ವೋಲು** '- ವೋಲ್' ನೋ.

**ವ್ಯಂಗ (ನಾ).** ೧. ಅಂಗಹೀನ ; ಹೆಳವ. ೨. ದೋಷ ; ಕುಂದು : ಹಲವು ಜೀನಸುಗಳು ಹುಳುತಿರುವವು . . . ಹೊಲಸ ನಾರುವ ಜೀನಸುಗಳು — ಹೀಂಗೆ ಬಗೆಬಗೆಯ ವ್ಯಂಗಗಳಿರುವವು (ಮುಂಬವ್ಯಾ. ೭೩). [ಸಂ.]

**ವ್ಯಂಗ್ಯ (ಗು).** ೧. ಕೊಂಕಾಗಿ ಸೂಚಿಸಿದ ; ಅಣಕದ : 'ವ್ಯಂಗ್ಯಚಿತ್ರ', 'ವ್ಯಂಗ್ಯನುಡಿ' ಪರಾ. **(ನಾ).** ೨. ಕೊಂಕು ; ಅಣಕ : ಇಂಗಿತಗಳನಿದಿರಿಂಡಲೆಳಸುವ ನೋಟ . . . ವ್ಯಂಗ್ಯವ ಕಲಿವ ಒಳ್ನುಡಿ ಬಗೆಗೊಳೆ ಕೋಮಲಾಂಗಿಯ ಕೂರ್ತೆಱಗಿಪುದು (ಹದಿಬ. ೬-೨೨) ; ವೇಂಬುಲಿಗೆ ವ್ಯಂಗ್ಯ ಅರ್ಥವಾಗಲಿಲ್ಲ (ಹಸುಹೊ. ೪೯). ೩. ಅಣಕದ ಮಾತು ; ಕೊಂಕುನುಡಿ : ಶರಣನಾಡಿದ ವ್ಯಂಗ್ಯಗಳನಾದರಿಸಿ ಮನದೊಳು ನಾಚಿ (ಶಂಕದಾ. ೭-೨) ; ನೀವೇನು ಧರ್ಮರಾಜರೋ . . . ಭೀಷ್ಮಾಚಾರ್ರ್ಯ? ಎಂದು ಜಾನಕಿಬಾಯರು ವ್ಯಂಗ್ಯವಾಡಿದರು (ಸಮಜೀ. ೩೨೩). ೪. [ಕಾವ್ಯಮೀ] ಕಾವ್ಯಗಳಲ್ಲಿ ಬಳಕೆಯಾಗುವ ವಾಚ್ಯ ಲಕ್ಷ್ಯ ಮತ್ತು ವ್ಯಂಗ್ಯವೆಂಬ ಮೂರು ಬಗೆಯ ಅರ್ಥಗಳಲ್ಲಿ ಒಂದು ; ವ್ಯಂಜನಾವೃತ್ತಿಯಿಂದ ಬೋಧ್ಯವಾಗುವ ಅರ್ಥ,- ಧ್ವನಿತವಾಗುವ ಅರ್ಥ : ವ್ಯಂಗ್ಯಮಾಗಿ ತೋರ್ಪರ್ಥ ವ್ಯಕ್ತಮಾಗಿ ಮನೋಹರ ಮಾಗಿರೆ (ಅಪ್ರತಿ. ೧-೧೮ ವ) ; ಅರ್ಥವು ಮುಖ್ಯವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರು ವಿಧ (ಕೃಪಿಡಿ. ೧೭೭). [ಸಂ.]

**ವ್ಯಂಗ್ಯಚಿತ್ರ (ನಾ).** ಅಣಕದ ಚಿತ್ರ ; ನಗೆ ತರಿಸುವ ಚಿತ್ರ : ಮಾನವಾಕೃತಿಗಳು ಕೂಡಾ ಏನೋ ಸಂಪ್ರದಾಯಕ್ಕೆ ಗೀಚಿದಂತಿವೆ ; ವ್ಯಂಗ್ಯಚಿತ್ರಗಳಂತಿವೆ (ಭಾರದ. ೫೨೧).

[ಸಂ.]

**ವ್ಯಂಗ್ಯನುಡಿ (ನಾ).** ಕೊಂಕನ್ನು ವ್ಯಕ್ತಪಡಿಸುವ ಮಾತು ; ಅಣಕದ ನುಡಿ : ಕೈಯೊಡ್ಡಿ ಕಾಸು ಕೇಳಿದೆವು. ಆಗ ನಮಗೆ ದೊರೆತದ್ದು ವ್ಯಂಗ್ಯನುಡಿ (ಜೀವನ. ೨ ಅಂಕಿ).

[ವ್ಯಂಗ್ಯ + ನುಡಿ$_2$]

**ವ್ಯಂಗ್ಯಾರ್ಥ (ನಾ).** = ವ್ಯಂಗ್ಯ ೪ : ಆವ ಕಾವ್ಯದೊಳು ವಾಚ್ಯಾರ್ಥಕ್ಕತಿಶಯವಾದ ವ್ಯಂಗ್ಯಾರ್ಥವು ತೋರದಿರಲ್ಕೆ ಚಿತ್ರವೆನಿಸುವುದು (ಕುವಲ. ೬) ; ಅನುಕ್ತವಾದರೂ ಅರಿವಿಗೆ ವಿಷಯವಾಗುವ ವ್ಯಂಗ್ಯಾರ್ಥವೇ ಕಾವ್ಯದ ಸಾರ (ಭಾರಮಿಮಾ. ೫೧) ; ಪ್ರಾಚೀನರ ಮತಾನುಸಾರವಾಗಿ ಕಾವ್ಯದಲ್ಲಿ ವಾಚ್ಯಾರ್ಥಕ್ಕೇ ಪ್ರಾಧಾನ್ಯ ; ವ್ಯಂಗ್ಯಾರ್ಥವಿದ್ದರೆ, ವಾಚ್ಯಾರ್ಥವನ್ನು ಪುಷ್ಟಿಗೊಳಿಸುವುದರ ಮೂಲಕ ಅದಕ್ಕೆ ಪ್ರಾಶಸ್ತ್ಯ (ಕೃಪಿಡಿ. ೧೬೫).

[ಸಂ.]

**ವ್ಯಂಗ್ಯೋಕ್ತಿ (ನಾ).** ೧. = ವ್ಯಂಗ್ಯನುಡಿ : ವ್ಯಂಗ್ಯೋಕ್ತಿಯು ಅಲ್ಲಲ್ಲಿ ಮೂಡಿ ವಿರಸದ ತೀಕ್ಷ್ಣತೆಯನ್ನು ಹೆಚ್ಚಿಸುತ್ತದೆ (ಸಮಜೀ. ೩೭ ಪೀಠಿಕೆ) ; ಅಯ್ಯೋ ಪಾಪ, ಯಾರಾದರೂ

ಅಪ್ಪಾಜಿಯವರಿಗೆ ಹೇಳಬೇಕು ಎಂಬ ವ್ಯಂಗ್ಯೋಕ್ತಿಯಿಂದ ಅವನನ್ನು ಕಳಿಸಿಬಿಡುತ್ತಿದ್ದರು (ಶಾಂತಲಾ. ೧೯೨). ೨. [ಕಾವ್ಯಮೀ] ಕಾವ್ಯಗಳಲ್ಲಿ ವ್ಯಂಜನಾವೃತ್ತಿಯಿಂದ ಬೋಧ್ಯವಾಗುವ ಅರ್ಥವನ್ನು ಒಳಗೊಂಡ ಮಾತು, — ನುಡಿ : ಮಂಗಳ ಮಹಿಮನ ಪುರುಷವಿರಹದೊಂದು ಸಾಂಗತ್ಯದಾ ಸಂಗತಿಯೊಳು ವ್ಯಂಗ್ಯೋಕ್ತಿಯಿಂ ಚಿಕುಪಾದ್ಯಕೃತಮಿದಕ್ಕೆ ಮಂಗಳಮಹಶ್ರೀ ಶ್ರೀ [illegible] ೩೮-೧೦೧) ; ಕಾವ್ಯದ ರೀತಿ ಅನಿವಾರ್ಯವಾಗಿ ಅಲಂಕಾರಾತ್ಮಕವೂ ವ್ಯಂಗ್ಯವೂ ಆಗಿರುವುದರಿಂದ, ಅದರ ರಚನೆಯ . . . ವ್ಯಂಗ್ಯೋಕ್ತಿ, ವಕ್ರೋಕ್ತಿಗಳನ್ನು . . . ರಸಾನುಭವಮೌಲ್ಯದ ದೃಷ್ಟಿಯಿಂದ ಪರಿಗಣಿಸಬೇಕು (ಸಾಹಿಪ್ರ. ೧೧೫). [ಸಂ.]

**ವ್ಯಂಜಕ** (ಗು). ೧. ಸ್ಪಷ್ಟಗೊಳಿಸುವ ; ವ್ಯಕ್ತಗೊಳಿಸುವ : ಬೇಱೊಂದರ್ಥಮಂ ಸೂಚಿಪ ಶಬ್ದಾದಿಕವೇ ವ್ಯಂಜಕಶಬ್ದಮಕ್ಕುಂ (ವಿವೇಕ. ೧೪೩) ; ವ್ಯಂಜಕಶಬ್ದ, ವ್ಯಂಜಕ ಅರ್ಥ, ವ್ಯಂಜನಾವ್ಯಾಪಾರ ಇವುಗಳೆಲ್ಲವುಗಳ ಸಮುದಾಯರೂಪವಾದ ಕಾವ್ಯವನ್ನೇ ಮುಖ್ಯವಾಗಿ ಧ್ವನಿಯೆನ್ನಲಾಗಿದೆ (ಧ್ವನ್ಯಾಲೋ. ೨೭ ಅಡಿಟಿ). (ನಾ). ೨. [ಕಾವ್ಯಮೀ] ವ್ಯಂಗ್ಯಾರ್ಥವನ್ನು ಕೊಡುವ ಪದ ಅಥವಾ ಅರ್ಥ : ವ್ಯಂಜನಾವ್ಯಾಪಾರ ವನ್ನುಳ್ಳದ್ದಕ್ಕೆಲ್ಲ — ಅದು ಶಬ್ದವಾಗಲಿ, ಅರ್ಥವಾಗಲಿ — ವ್ಯಂಜಕವೆಂದು ಹೆಸರು (ಭಾರಮೀ. ೨೬೫) ; ಅರ್ಥವು ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರುವಿಧ. ಈ ಅರ್ಥಗಳನ್ನು ಕೊಡುವ ಶಬ್ದಗಳಿಗೆ (ಕ್ರಮವಾಗಿ) ವಾಚಕ, ಲಕ್ಷಕ, ವ್ಯಂಜಕಗಳೆಂದೂ . . . ಹೆಸರು (ಕೈಪಿಡಿ. ೧೭೭). ೩. [ನಾಟ್ಯ] ಹಸ್ತವಿನ್ಯಾಸಗಳಿಂದ ಭಾವವನ್ನು ವ್ಯಕ್ತಪಡಿಸುವುದು : "ವ್ಯಂಜಕಃ, ಅಭಿನಯಃ— ೨ ಹಸ್ತವಿನ್ಯಾಸಗಳಿಂದ ಭಾವಾರ್ಥವನ್ನು ತಿಳಿಯಪಡಿಸುವುದಕ್ಕೆ ಹೆಸರುಗಳು" (ಸಿದ್ಧಾಂತಿ. ೬೨). [ಸಂ.]

**ವ್ಯಂಜನ** (ನಾ). ೧. ಸ್ಪಷ್ಟಗೊಳಿಸುವಿಕೆ ; ಅಭಿವ್ಯಕ್ತಿ. ೨. ಸಂಸ್ಕೃತದಲ್ಲಿ ಕಕಾರದಿಂದ ಹಕಾರದವರೆಗೂ ಕನ್ನಡದಲ್ಲಿ ಕಕಾರದಿಂದ ಳಕಾರದವರೆಗೂ ಇರುವ ಅಕ್ಷರಗಳ ಸಮೂಹ : ಅಂತಕಾರಾದಿ ಹಕಾರಾಂತ ಸ್ವರ ವ್ಯಂಜನ ಭೇದ ಭಿನ್ನ ಶುದ್ಧಾಕ್ಷರಂಗಳುಮಂ (ಆದಿಪು. ೮-೫೯ ವ) ; ಪ್ರಕಟತರ ವ್ಯಂಜನ ಸಂಜ್ಞೆ ಕಕಾರದಿನಾ ಳಕಾರ ಪರ್ಯಂತಂ ಪಂಚಕ ಪಂಚಕಂಗಳಿಂ ಪಂಚಕಮಕ್ಕುಂ (ಶಮದ. ೧೩) ; ಸ್ವರದ ಸಹಾಯವಿಲ್ಲದೆ ಉಚ್ಚರಿಸಲಾಗದ ವರ್ಣಕ್ಕೆ ವ್ಯಂಜನ ಎಂದು ಹೆಸರು (ಮಧ್ಯಪು. ೧೧). ೩. ಚಿಹ್ನೆ ; ಗುರುತು. ೪. ಸ್ತ್ರೀ ಅಥವಾ ಪುರುಷರಿಗೆ ಯೌವನಾವಸ್ಥೆಯಲ್ಲಿ ದೇಹದಲ್ಲಿ ತೋರುವ ಚಿಹ್ನೆ,— ಗುರುತು. ೫. ಊಟದಲ್ಲಿ ಬಾಡಿಸಿಕೊಳ್ಳುವ ಅಥವಾ ನಂಜಿಕೊಳ್ಳುವ ಪದಾರ್ಥ ; ನಂಜಿಕೆ : "ನಿಷ್ಠಾನಂ, ವ್ಯಂಜನಂ — ಈ ೨ ವ್ಯಂಜನಂ" (ಹಲಾಯು. ೫೩-೧೭೭) ; ವಿವಿಧ ಭಾಜನಂಗಳೊಳಡುವ ಘೃತ ಲವಣ ತೈಲಕ್ಷೀರದಧಿವ್ಯಂಜನಂಗಳೊಳ್ ಸಂಸ್ಕಾರಂ ಮಾಡುವ . . . ತೆಱನುಮಱಿಯೆ ಪೇಳ್ದು (ಆದಿಪು. ೬-೭೭ ವ) ; ಮೊಸರನ್ನದ ಜತೆಗೆ ಈ ವ್ಯಂಜನವಿಲ್ಲದೆ ತುತ್ತು ಗಂಟಲಿನಲ್ಲಿ ಇಳಿಯುವುದೇ ಇಲ್ಲ (ಪಸುಹೂ. ೩೦೯). ೬. ಸ್ತ್ರೀ ಮತ್ತು ಪುರುಷರ ಮರ್ಮಾಂಗ: "ವ್ಯಂಜನಂ – ಗುರ್ತು, ಗಡ್ಡಮೀಸೆ, ಮಜ್ಜಿಗೆಪಳಿದ್ಯ, ಸ್ತ್ರೀಪುರುಷರ ಗುಹ್ಯಾವಯವ, ಅಕ್ಷರ" (ಸಿದ್ಧಾಂತಿ. ೪೦೨). ೭. ಜೊತೆಯ ವಸ್ತು ; ಪರಿಕರ : ನೇಗಿಲುಗಳೂ . . . ಸುವರ್ಣಮಾಲಿಕೆಗಳೂ ತುಮುರು ತುಮುರಾದ ವಿಚಿತ್ರವ್ಯಂಜನಗಳೂ (ಕೃವಾಕ. ೧೧೧). ೮. [ಕಾವ್ಯಮೀ] ಅಭಿಧಾ, ಲಕ್ಷಣ, ವ್ಯಂಜನವೆಂಬ ಮೂರು ಶಬ್ದಶಕ್ತಿಗಳಲ್ಲಿ ಒಂದು ; ಧ್ವನಿಶಕ್ತಿ : ಅಭಿಧ, ಲಕ್ಷಣ, ವ್ಯಂಜನವೇ ಮೊದಲಾದ ಶಬ್ದಶಕ್ತಿಯನ್ನು ಈ ಕಾಲದ ಯಾವ ಕವಿಯೂ ಕಣ್ಣೆತ್ತಿ ನೋಡಲಿಲ್ಲ (ಭಾರದ. ೪೬೩). ೯. [ಜೈನ] "ಕ್ಷುಲ್ಲಕ ಲಕ್ಷಣ" (ಜೈನಕೋ. ೨೪೯): ಚತುರ್ವಿಧಶುಕ್ಲಧ್ಯಾನದೊಳ್ ಪೂರ್ವಾಪರ ವಿಷಯ ವಿವಿಕ್ತಾರ್ಥವ್ಯಂಜನ ಯೋಗಸಂಕ್ರಮಣಲಕ್ಷಣಮಪ್ಪ . . . ಉಪಶಾಂತ ಗುಣಸ್ಥಾನದೊಳ್ ಪ್ರಾಣಪರಿತ್ಯಾಗಂಗೆಯ್ದು (ಆದಿಪು. ೬-೩೪ ವ) ; ಅಂತು ಜಿನಾರ್ಭಕಂ ನೋಡಿ ತದೀಯಾಂಗ ಸಂಗತಲಕ್ಷಣವ್ಯಂಜನಂಗಳಂ ನೋಡಲಱಿಯದೆಯುಂ (ಶಾಂತಿಪು. ೧೦-೭ ವ). ೧೦. ಆಹಾರವನ್ನು ಅಗಿಯುವುದು : ಚತುರಾಬ್ದಂ(ಬರಲ್) ಬೀಟ್ಟುಮಯ್ಯಾದಂತೆಲ್ಲಂ ಬರ್ಕುಮಲ್ಲಿಂ ಬಟಿಯುಮನಿತುಮುಂ ವ್ಯಂಜನ ಕ್ಯಾಶ್ರಯಂಗಳ್ (ಲೋಕೋಪ. ೧೧-೭೯). [ಸಂ.]

**ವ್ಯಂಜನನಿಮಿತ್ತ** (ನಾ). [ಜೈನ] ದೇಹದ ಮೇಲಿನ ಸುಳಿ, ಕಪ್ಪುಚುಕ್ಕಿ, ಕಾರೆಳ್ಳು ಮೊದಲಾದವುಗಳನ್ನು ನೋಡಿ ಸ್ಥಾನಮಾನ, ಪ್ರಭುತ್ವ, ಲಾಭನಷ್ಟ ಮೊದಲಾದ ಫಲಾಫಲಗಳನ್ನು ಹೇಳುವುದು : ಸ್ವರಮಂ ಕೇಳ್ವುದು ಸ್ವರನಿಮಿತ್ತ ಮೈಯ ಕಾರೆಳ್ಳು ಮೊದಲಾದುವಂ ನೋಡಿ ಫಲಮಂ ಪೇಳ್ವುದು ವ್ಯಂಜನನಿಮಿತ್ತ ಮೆಂಬುದು (ಶ್ರಾವಕಾ. ೯೩-೨). [ಸಂ.]

**ವ್ಯಂಜನಪದಾರ್ಥ** (ನಾ). ಊಟದಲ್ಲಿ ಬಾಡಿಸಿಕೊಳ್ಳುವ ಪದಾರ್ಥ ; ನಂಜಿಕೆ : ಅನ್ನ, ವ್ಯಂಜನಪದಾರ್ಥಗಳು . . . ಮೊದಲಾದ ಭೌತಿಕಸಾಮಗ್ರಿಗಳಿಂದ ಹೊಟ್ಟೆಯನ್ನು ತುಂಬಿಸುವುದು ಆಧಿಭೌತಿಕಪೂರ್ತಿ (ಕಮಕ. ೨೧). [ಸಂ.]

**ವ್ಯಂಜನಸಂಧಿ** (ನಾ). [ವ್ಯಾಕ] ಎರಡು ವ್ಯಂಜನಗಳು ಸೇರಿ ಆಗುವ ಸಂಧಿ : ವ್ಯಂಜನಸಂಧಿ — ಆದೇಶ . . . ಕೆಲವೆಡೆಗಳಲ್ಲಿ ಈ ಆದೇಶವಿಲ್ಲ (ಕೈಪಿಡಿ. ೧೦). [ಸಂ.]

**ವ್ಯಂಜನಾಂಗ** (ನಾ). [ವ್ಯಾಕ] ವ್ಯಂಜನಾಕ್ಷರದಿಂದ ಕೂಡಿದುದು : ಮುಖ್ಯೋಚ್ಚಾರಣಕ್ಕೆ ಬಾರದ ಕತದಿಂ ಪರಿಕಿಸೆ ಬಿಂದು ವಿಸರ್ಗಂ ಸ್ವರಾಂಗಮುಂ ವ್ಯಂಜನಾಂಗಮುಂ ತಾವೆಂಬರ್ (ಶಮದ. ೧೨). [ಸಂ.]

**ವ್ಯಂಜನಾಂತ** (ನಾ). [ವ್ಯಾಕ] ವ್ಯಂಜನದಿಂದ ಕೊನೆಯಾಗುವ ಶಬ್ದ: ಸ್ವರಾಂತವಾಗಿರುವ ಅನೇಕ ಶಬ್ದಗಳು ಹಳಗನ್ನಡದಲ್ಲಿ ವ್ಯಂಜನಾಂತವಾಗಿದ್ದು ವೆಂಬುದನ್ನು ಗಮನಿಸಬೇಕು (ಕೈಪಿಡಿ. ೬) ; ವ್ಯಂಜನಾಂತಗಳಾದ ಅರಲ್, ಪುರುಳ್ — ಎಂಬಂಥವು . . . ಸ್ವರಾಂತಗಳಾಗಿ ಪ್ರಥಮಾವಿಭಕ್ತಿರೂಪಗಳೇ ಆಗುತ್ತವೆ (ಸಂಶೋಧ. ೫೪). [ಸಂ.]

**ವ್ಯಂಜನಾವೃತ್ತಿ** (ನಾ). [ಕಾವ್ಯಮೀ] ಶಬ್ದಾರ್ಥಗಳ ಸಂಬಂಧದಲ್ಲಿ ಹೇಳಿರುವ ಮೂರುವೃತ್ತಿಗಳಲ್ಲಿ ಒಂದು ; ವ್ಯಂಗ್ಯಾರ್ಥವನ್ನು ತಿಳಿಸುವ ಶಕ್ತಿ : ಅರ್ಥವು ಮುಖ್ಯವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರು ವಿಧ . . . ಅವುಗಳಲ್ಲಿರುವ ಸಾಮರ್ಥ್ಯಕ್ಕೆ (ಅಥವಾ ವೃತ್ತಿಗೆ – ಕ್ರಮವಾಗಿ) ಅಭಿಧಾವೃತ್ತಿ, ಲಕ್ಷಣಾವೃತ್ತಿ, ವ್ಯಂಜನಾವೃತ್ತಿ ಎಂದು ಹೆಸರು (ಕೈಪಿಡಿ. ೧೭೭); ಅರ್ಥವಿಶೇಷವನ್ನು ಬಾಯಿಬಿಟ್ಟು ಹೇಳದಿದ್ದರೂ ಸನ್ನಿವೇಶಮಹಿಮೆಯಿಂದ ವ್ಯಂಜನಾವೃತ್ತಿಯೆಂಬ ಬೇರೊಂದು ವೃತ್ತಿಯ ಮೂಲಕ ಸೂಚಿಸಬಲ್ಲುದು (ಭಾರಮೀ. ೪೯). [ಸಂ.]

**ವ್ಯಂಜಿತ** (ನಾ). ವ್ಯಕ್ತವಾದುದು ; ಸ್ಫುಟಗೊಂಡುದು : ಇಲ್ಲಿ ವ್ಯಂಜಿತವಾಗಿರುವ ಭಾವಗಳು . . . ನನ್ನ ಮನಸ್ಸಿನ ನಿವೇದನ (ವಿಸೀಗೀ. VI, ಪೀಠಿಕೆ). [ಸಂ.]

**ವ್ಯಂಜಿಸು** (ಕ್ರಿ). ಅಭಿವ್ಯಕ್ತವಾಗು ; ಪ್ರಕಟವಾಗು : ಮಾಯೆಯ ಪಂಜರದ ಪರಮಾತ್ಮನೋ ಹರಹರಮಹಾದೇವ ವ್ಯಂಜಿಸುವ ಸರ್ವಾಂಗಲಕ್ಷ್ಮಿಯ ಕಂಜನಯನನ ಕೋಮಲಾಕೃತಿ ರಂಜಿಸಿತು (ನಿಭಾಗ. ೫-೪-೩೪). [ವ್ಯಂಜನ + - ಇಸು]

**ವ್ಯಂತರ** (ನಾ). ೧. ಭೂತ ; ಪಿಶಾಚಿ. ೨. [ಜೈನ] ಜ್ಯೋತಿಷೀ , ವಿಮಾನವಾಸೀ, ಭವನಪತಿ ಮತ್ತು ವ್ಯಂತರವೆಂಬ ನಾಲ್ಕುಬಗೆಯ ದೇವತೆಗಳಲ್ಲಿ ಒಂದು ಗುಂಪು ; ₱ "ಮಹಾಮೇರುಪರ್ವತದ ತುದಿಯಿಂದ ಭವನಲೋಕದವರೆಗೆ ಇರುವ ದೇವತೆಗಳು" (ಜೈನಕೋ. ೨೪೯) : ಮರ್ತ್ಯ ವಿದ್ಯಾಧರರಾಜವ್ಯಂತರಾಧೀಶ್ವರಕರಸರಸೀಜಂಗಳಂ . . . ಮುಗಿಯಿಸೆ (ಆದಿಪು. ೩-೪೬) ; ಸತ್ತು ಮನುಷ್ಯರುಂ ವ್ಯಂತರರಾಗಿ ಪುಟ್ಟಿ ಪದ್ಮಾದಿ ಸರೋವರಂಗಳೊಳಂ . . . ಕ್ರೀಡಿಸುತ್ತಿರ್ಪರ್ (ಸುಕುಮಾ. ೧೧-೫೪ ವ) ; ದಾನವಾಮರ ಮಾನುಷ ಜ್ಯೋತಿಷ್ಕರು ಭೂನುತವಾದ ವ್ಯಂತರರು (ತ್ರಿಪುಸಾಂ. ೧೩-೧೪೭). [ಸಂ.]

**ವ್ಯಂತರಿಗ** (ನಾ). = ವ್ಯಂತರ ೧ : ಕಿನ್ನರ ಕಿಂಪುರುಷ ಮಹೋರಗ ಗಂಧರ್ವ ಯಕ್ಷ ರಾಕ್ಷಸ ಭೂತ ಪಿಶಾಚ ಈ ಎಣ್ಬರು ವ್ಯಂತರಿಗರುಂ (ಪ್ರತಿಷ್ಠಾ. ೬-೪). [ವ್ಯಂತರ + - ಇಗ]

**ವ್ಯಂಶಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; ₱ "ಒಂದು ಕೈಯನ್ನು ಎದೆಯ ಹತ್ತಿರ ಕೆಳಮುಖವಾಗಿಯೂ, ಇನ್ನೊಂದನ್ನು ಮೇಲ್ಮುಖವಾಗಿ ಕೆಳಗಡೆಯೂ [ಪಕ್ಕೆಯಲ್ಲಿ] ಹಿಡಿದು ಪರ್ಯಾಯವಾಗಿ ಉದ್ವೇಷ್ಟಮಾಡುತ್ತ ಕೆಳಕ್ಕೂ ಪರಿವರ್ತಮಾಡುತ್ತ ಎದೆಗೂ ಕೈಗಳನ್ನು ತಂದು, ಒಂದು ಕೈಯನ್ನು ಮೇಲ್ಮುಖವಾಗಿಯೂ, ಇನ್ನೊಂದು ಕೈಯನ್ನು ಕೆಳಮುಖವಾಗಿಯೂ ರೇಚಿತಮಾಡಿ ಆಲೀಢಸ್ಥಾನಕದಿಂದ

ನಿಂತುಕೊಳ್ಳುವುದು. ವಿ — ಆಂಜನೇಯಾದಿ ಮಹಾಕಪಿಗಳ ಪರಿಕ್ರಮವನ್ನು ಅಭಿನಯಿಸುವಾಗ'' (ಲಾಸ್ಯರಂ. ೨೯೫ ಗದ್ಯಾನುವಾದ) : ಭುಜಂಗಾಂಚಿತಕಂ ಮಿಗೆ ದಂತರೇಚಿತಂ ಚತುರಂ ನಿಶ್ಚಿತ ಕಟಿಭ್ರಾಂತಮುಂ ವ್ಯಂಶಿತವೈಶಾಖ್ಯರೇಚಿತಂಗಳವಿನಿತುಂ (ಲಾಸ್ಯರಂ. ೪-೩೧) ; ತಲಪುಷ್ಪಪುಟ . . . ಕಟಿಭ್ರಾಂತ, ವ್ಯಂಶಿತ . . . ಗಂಗಾವತರಣ — ಈ ನೂರೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). [ಸಂ.]

**ವ್ಯಕ್ತ** (ಗು). ೧. ಪ್ರಕಟವಾದ ; ಕಾಣಿಸಿಕೊಂಡ. ೨. ಸ್ಪಷ್ಟವಾದ. ೩. ಸ್ಪಷ್ಟವಾಗಿ ತಿಳಿಸಿದ ; ನಿರ್ದಿಷ್ಟವಾಗಿರುವ. (ನಾ). ೪. ಸ್ಪಷ್ಟವಾದುದು ; ಚೆನ್ನಾಗಿ ಕಾಣುವಂತಹುದು : ಮುನ್ನಾರು [೦] ಜಾತಕಮಂ ಕನ್ನಡದಿಂ ವ್ಯಕ್ತಮಾಗಿ ಪೇಟ್ದನ್ನಿತರಿಲ್ಲ (ಜಾತತಿ. ೧-೧೭) ; ವ್ಯಕ್ತಂ ಸಾಮುಮಯಮಮಾತ್ಯೋಕ್ತಿ ಸಮುಚ್ಚಂಡದಂಡ ಮಯಮಿತ್ತಲಪತ್ಯೋಕ್ತಿಯಿವೆರಡುಮನನುಸರಿಪುಕ್ತಿಯೆ ವಕ್ತ್ರವ್ಯಮೆನಗೆ ಸುಘಟಿತ ಭಾವ್ಯಂ (ಚಂದ್ರಪ್ರ. ೯-೧೨೭) ; ನಮ್ಮನ್ನು ವ್ಯಕ್ತದ ಅಂಚಿಗೆ ಎಳೆದೊಯ್ದು ಅವ್ಯಕ್ತದ ಗಭೀರತೆಯನ್ನು ವೀಕ್ಷಿಸುವಂತೆ ಮಾಡುತ್ತದೆ (ಭಾವಗೀ. ೩೧). ೫. ಪಂಡಿತ. ೬. ವಿಷ್ಣು : ಲಕುಮಿ ನಾರಸಿಂಹನ ರೂಪಗುಣಗಳು . . . ಕಾರಣಂಶಾವೇಶ ವ್ಯಾಪ್ತವತಾರ ಕಾರ್ಯಾವ್ಯಕ್ತವುವಾರು ನಾಲ್ಕು ವಿಭೂತಿಯಂತರ್ಯಾಮಿರೂಪಗಳು (ಹಸಾರ. ೭-೨೭).

**ವ್ಯಕ್ತವಾಗು** = ಸ್ಪಷ್ಟವಾಗು ; ತಿಳಿ : ಆತನಲ್ಲಿ ಉಳಕೊಳ್ಳಲೊಲ್ಲನೆಂದೂ . . . ವ್ಯಕ್ತವಾಗುತ್ತದೆ (ಮೂರುಉ. ೯೦). [ಸಂ.]

**ವ್ಯಕ್ತಂ** (ಅ). ನಿರ್ದಿಷ್ಟವಾಗಿ ; ಸ್ಪಷ್ಟವಾಗಿ ; ಖಚಿತವಾಗಿ : ಉಕ್ತವಿಚಾರಂ ನ್ಯಾಯನಿಯುಕ್ತಂ ಕ್ರಮಮಿನ್ನದಕ್ಕೆ ಬಾರದುವೆಲ್ಲಂ ವ್ಯಕ್ತಂ ನ್ಯಾಯವಿರುದ್ಧಂ ಪ್ರೋಕ್ತ ಮಹಾದೋಷಂ (ಕವಿರಾ. ೧-೧೦೭). [ಸಂ.]

**ವ್ಯಕ್ತಪಡಿಸು** (ಕ್ರಿ). ಸ್ಪಷ್ಟಪಡಿಸು ; ಪ್ರಕಟಿಸು : ಕೆಲವರು ಪ್ರಾಚ್ಯದೇಶದ ಸಹನೆ, ಧಾರ್ಮಿಕ ಸಹಿಷ್ಣುತೆಯ ವಿಷಯವಾಗಿ ಗೌರವವನ್ನು ವ್ಯಕ್ತಪಡಿಸಿದರು (ಧರ್ಮಸಾ. ೫೦) ; ನಲಿನಿಯನ್ನು ಅರಳಿಸದ ಚಂದ್ರನ ಉದಯವೂ ನಿರರ್ಥಕವೆಂದು ಬಿಲ್ಹಣನು ತನ್ನ ನಿರಾಶೆಯನ್ನು ವ್ಯಕ್ತಪಡಿಸಿದನು (ಸಂಕವ. ೭). [ವ್ಯಕ್ತಪಡು + —ಇಸು]

**ವ್ಯಕ್ತಪಡು** (ಕ್ರಿ). ಪ್ರಕಟವಾಗು ; ತಿಳಿದು ಬರು ; ಸ್ಪಷ್ಟವಾಗು : ಅಶಿಸ್ತಿಗೆ ಕೆಲವು ಪ್ರಮುಖ ಕಾರಣಗಳು ವ್ಯಕ್ತಪಟ್ಟಿವೆ (ಶಿಕ್ಷದ. ೩೨೦). [ವ್ಯಕ್ತ + ಪಡು]

**ವ್ಯಕ್ತಿ** (ನಾ). ೧. ಸ್ಪಷ್ಟವಾಗಿ ತೋರಿಬರುವಿಕೆ ; ನಿಚ್ಚಳವಾಗಿ ಕಾಣಿಸಿಕೊಳ್ಳುವಿಕೆ : ಕ್ರಿಯೆಯಂ ಪ್ರತಿಷೇಧಂಗೆಯೆ ನಿಯತಫಳ ವ್ಯಕ್ತಿಯದು (ಕಾವ್ಯಾವ. ೭೩೭) ; ವ್ಯಕ್ತಿಗಾತ್ಮನ ತಂದರಲ್ಲರು ಮುಕ್ತರು ವ್ಯಕ್ತಿಗೆ ತಾರದಿದ್ದವರು ಯುಕ್ತಸಂಸಾರಿಗಳಹುದು (ಭರಚ. ೭೮-೨೨). ೨. ಮನುಷ್ಯ ; ಮಾನವ : ಶರೀರ, ಇಂದ್ರಿಯ, ಮನಸ್ಸು, ಪ್ರಾಣ, ಜ್ಞಾನ, ಜೀವಾತ್ಮ ಎಂಬ ಆರುಭೇದಗಳುಳ್ಳ ಸಂಪುಟವೇ ವ್ಯಕ್ತಿ (ಭಾರದ. ೨೬೧) ; ಸಮಾಜದ ಕೈವಾಡ ವ್ಯಕ್ತಿಯ ಮೇಲೆ ಪರಿಣಾಮುಗೊಳಿಸುವುದು (ಶಿಕ್ಷದ. ೨). [ಸಂ.]

**ವ್ಯಕ್ತಿಗತ** (ನಾ). ವ್ಯಕ್ತಿಗೆ ಸಂಬಂಧಿಸಿದುದು ; ವೈಯಕ್ತಿಕವಾದುದು : ಸ್ವಾನುಭವಜನ್ಯ ತಿಳಿವಳಿಕೆಯು ವ್ಯಕ್ತಿಗತವಾದುದು (ಗ್ರಂಥಾಲ. ೧). [ಸಂ.]

**ವ್ಯಕ್ತಿಗೌರವ** (ನಾ). ಪ್ರತಿಯೊಬ್ಬ ವ್ಯಕ್ತಿಗೂ ಸಲ್ಲುವ ಮರ್ಯಾದೆ : ವ್ಯಕ್ತಿಗೌರವವನ್ನೂ ರಾಷ್ಟ್ರದ ಏಕತೆಯನ್ನೂ ಸುನಿಶ್ಚಿತವಾಗಿ ನೆಲಗೊಳಿಸುವಂಥ ಬಂಧುಭಾವನೆ (ಭಾಧಾನ. ೧ ಪ್ರಸ್ತಾವನ). [ಸಂ.]

**ವ್ಯಕ್ತಿತೆ** (ನಾ). ತನ್ನತನ ; ವ್ಯಕ್ತಿತ್ವ : ಭವ್ಯವಾದುದರ ಮುಂದೆ ನಮ್ಮ ವ್ಯಕ್ತಿತೆ ತತ್ತರಿಸುತ್ತದೆ (ಸೌಂದಸ. ೩೮೮). [ಸಂ. ವ್ಯಕ್ತಿತಾ]

**ವ್ಯಕ್ತಿತ್ವ** (ನಾ). ತನ್ನದೇ ಆದ ವಿಶಿಷ್ಟಗುಣ ; ತನ್ನತನ : ಅಲ್ಲಮನ ವ್ಯಕ್ತಿತ್ವ ಉದ್ದಕ್ಕೂ ಕಾಣಿಸಿಕೊಳ್ಳುತ್ತದೆ (ಶೂನ್ಯಕು. ೧೩೭) ; ಮಕ್ಕಳು ಉಪಾಧ್ಯಾಯರ ವ್ಯಕ್ತಿತ್ವವನ್ನೇ ಸಾಧಿಸಬೇಕೆಂದು ವಾದಿಸುವರು (ಶಿಕ್ಷದ. ೨೦೮). [ಸಂ.]

**ವ್ಯಕ್ತಿನಿಷ್ಠ** (ಗು). ೧. [ಕಾವ್ಯಮೀ] ಯಾರಾದರೂ ಒಬ್ಬ ವ್ಯಕ್ತಿಯನ್ನು ಕುರಿತ : ಕನಕದಾಸರು ದಾಸಪರಂಪರೆಯೊಳಗೆ ನಿಂತು ಅದಕ್ಕೆ ವ್ಯಕ್ತಿನಿಷ್ಠ ಕೀರ್ತನೆಗಳ ಮೂಲಕ ಗೌರವವನ್ನು ಸಲ್ಲಿಸಿದ್ದು (ಪರಿಶೀ. ೧೧೧). (ನಾ). ೨. ಒಬ್ಬವ್ಯಕ್ತಿಯನ್ನು ಕುರಿತುದು : ವ್ಯಕ್ತಿನಿಷ್ಠಾನುಭವವನ್ನೇ ಪ್ರಧಾನವಾಗಿರಿಸಿಕೊಳ್ಳುವುದರ ಮೂಲಕ ಸೌಂದರ್ಯ ವ್ಯಕ್ತಿನಿಷ್ಠವೆನ್ನುವ ವಾದವನ್ನು ಪ್ರತಿಪಾದಿಸುತ್ತದೆ (ಸೌಂದಸ. ೬೭). 'ವಸ್ತುನಿಷ್ಠ' ಪರಾ. [ಸಂ.]

**ವ್ಯಕ್ತಿಪೂಜೆ** (ನಾ). ಯಾರಾದರೂ ಒಬ್ಬನೇ ವ್ಯಕ್ತಿಯ ಬಗ್ಗೆ ಅತಿಯಾಗಿ ತೋರಿಸುವ ಬೆಂಬಲ, —ನಿಷ್ಠೆ : ಸಮಾಜದಲ್ಲಿ ವ್ಯಕ್ತಿಪೂಜೆ ಒಳ್ಳೆಯದಲ್ಲ (ರೂಢಿ). [ಸಂ. ವ್ಯಕ್ತಿಪೂಜಾ]

**ವ್ಯಕ್ತಿವಾದ** (ನಾ). ವ್ಯಕ್ತಿಸ್ವಾತಂತ್ರ್ಯಪರವಾದ ವಾದ, — ತತ್ತ್ವ : ''ವ್ಯಕ್ತಿಭಾವ, ಅಹಂಭಾವ . . . ವ್ಯಕ್ತಿವಾದ'' (Individualism . ಇಂಕನಿ). [ಸಂ.]

**ವ್ಯಕ್ತಿವೈಶಿಷ್ಟ್ಯ** (ನಾ). ವೈಯಕ್ತಿಕ ಸಾಮರ್ಥ್ಯ ; ತನ್ನತನದ ವಿಶೇಷಲಕ್ಷಣ : ವಿಜ್ಞಾನಿಗಳು ಅನುಭವದಿಂದ ತಮಗಿರುವ ವ್ಯಕ್ತಿವೈಶಿಷ್ಟ್ಯವನ್ನು (Individuality) ಅರಿತುಕೊಳ್ಳುವವರೆಗೆ ಅವರಿಂದ ಮಹತ್ಕಾರ್ಯವಾಗುವುದಿಲ್ಲ (ವಿಜ್ಞಾಕ. ೧೦). [ಸಂ.]

**ವ್ಯಕ್ತಿಸ್ವಾತಂತ್ರ್ಯ** (ನಾ). ಮನುಷ್ಯನಿಗೆ ಸ್ವಾಭಾವಿಕವಾಗಿ ಇರುವ ಸ್ವಾತಂತ್ರ್ಯ : ವ್ಯಕ್ತಿತ್ವವಿಕಾಸ ಹಾಗೂ ವ್ಯಕ್ತಿಸ್ವಾತಂತ್ರ್ಯವೇ ಅದರ ಹೆಗ್ಗುರಿ (ನವ್ಯಕಾ. ೧೭) ; ನಮ್ಮಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೆ ಬೆಲೆಯಿದೆ (ಭಾರತಿ. ೪೯). [ಸಂ.]

**ವ್ಯಕ್ತೀಕರಣ** (ನಾ). ವ್ಯಕ್ತಪಡಿಸುವುದು ; ವಿಶದಗೊಳಿಸುವುದು : ವ್ಯಕ್ತೀಕರಣಕಲೆಯಲ್ಲಿ ವ್ಯಕ್ತಿಯ ಮನೋರಾಜ್ಯದ ಅನೇಕ ಅಂಶಗಳು ನುಸುಳಿಕೊಂಡು ಬಂದು ಕಾಣಿಸಿಕೊಳ್ಳುತ್ತವೆ (ಶಿಕ್ಷದ. ೬೪೦) ; ಬುದ್ಧಿಯ ವ್ಯಕ್ತೀಕರಣಕ್ಕೆ ಆತ್ಮಸಾಧನವಿದ್ದಂತೆ ದೇಹ ಮರಣಾನಂತರ ಅಳಿದುಹೋಗುತ್ತದೆ (ಇಸ್ಲಾಂಸಂ. ೨೧೫). [ಸಂ.]

**ವ್ಯಕ್ತೀಕರಿಸು** (ಕ್ರಿ). ವ್ಯಕ್ತಪಡಿಸು ; ವ್ಯಕ್ತಗೊಳಿಸು ; ವಿಶದಪಡಿಸು : ಯುಕ್ತಿಗೆ ಯುಕ್ತಮೆನಿಸುವಾಗಮಮಂ ವ್ಯಕ್ತೀಕರಿಸುವುಪಾಧ್ಯಾಯರನಾಂ ಭಕ್ತಿಯಿನಭಿವಂದಿಸುವೆಂ (ಜಯಕಾ. ೧-೪) ; ಉಪಾಧ್ಯಾಯರಲ್ಲಿರಬೇಕಾದ ಲಕ್ಷಣಗಳು . . . ಭಾವಗಳನ್ನು ನಿರ್ವಿಕಾರವಾಗಿ ವ್ಯಕ್ತೀಕರಿಸುವ ಶಕ್ತಿ (ಶಿಕ್ಷದ. ೬೭೧). [ವ್ಯಕ್ತೀಕರಣ + — ಇಸು]

**ವ್ಯಗ್ರ** (ಗು). ೧. ಗಾಬರಿಯಾದ ; ಕಳವಳಗೊಂಡ : ಕುತೂಹಲಂಬೆರಸು ಮುನ್ನಿನೆಡೆಗೆ ಬಂದು ನೋಡಿ ಕಾಣದೆ ವ್ಯಗ್ರಮನನಾಗಿ (ಕಾದಂಪೂ. ೬೨೨) ; ಎದೆಯ ಚಾಂಚಲ್ಯಮಂ ನಿಗ್ರಹಿಸಿ ವ್ಯಗ್ರಮನದಿಂದೆ (ಚಿತ್ರಾಂಗ. ೫೧-೧೩೮೮). ೨. ಆಸಕ್ತವಾದ ; ಮಗ್ನವಾದ : ಕಿಜಿದಾನುಂಬೇಗಮಿರ್ದಲ್ಲಿ ಕಾರ್ಯವ್ಯಗ್ರ ಪಾಪಿಪಾಶಾಶ್ರಿತರಲ್ಲರುಂ ಕೇಳಲೆಂದು ಮಹೀಭುಜನಿಂತೆಂದಂ (ಪಂಪಭಾ. ೧೩-೮ ವ). (ನಾ). ೩. ಕಳವಳ ; ಉದ್ವೇಗ ; ಆತುರ : ಶಿವ ಶರಣೆನುತ್ತಿರಲು ಕೇಳ್ದು ಸೈರಿಸಲಾಱದಹಿಕಟಕನು ವ್ಯಗ್ರದಿಂ ನಿಜವೆರಸಿ ಬಂದು (ಸಿದ್ಧರಾ. ೭-೪೦) ; ಉಗ್ರಕರ್ಮವ ನೆನೆಯಬೇಡ ವ್ಯಗ್ರದಲಿ ಸಾಧಿಸಿದೆವವಧಿಸಮಗ್ರವನು (ಕುವ್ಯಾವಿ. ೪-೫೭). ೪. ಕಳವಳಗೊಂಡವನು ; ಗಾಬರಿಯಾದವನು : ನೆರಹಿತ್ತು ತೆಱಹಿಲ್ಲೆನಿಸಿ ಪುರದೊಳಗೆ ಉಗ್ರರುಂ ಶಾಂತರುಂ ಮೃದುಗಳುಂ ಮಧುರರುಂ ವ್ಯಗ್ರರುಂ (ಅನೀರ. ದೇ. ೮೪-೧೦). ೫. ತ್ವರೆಪಡುವವನು ; ಆತುರಪಡುವವನು : ''ವ್ಯಗ್ರಃ, ೧. ಆಸಕ್ತನು, ತ್ವರೆಪಡುವವನು ೨'' (ಸಿದ್ಧಾಂತಿ. ೪೧೭). [ಸಂ.]

**ವ್ಯಗ್ರಚಿತ್ತ** (ನಾ). ಉದ್ವೇಗಗೊಂಡ ಮನಸ್ಸುಳ್ಳವನು : ದ್ರುಪದಂ ರಾಜ್ಯ ಮದಿರಾಮದೋನ್ಮತ್ತನುಂ ಗರ್ವಗ್ರಹವ್ಯಗ್ರಚಿತ್ತನುಮಾಗಿ (ಪಂಪಭಾ. ೨-೪೬ ವ). [ಸಂ.]

**ವ್ಯಗ್ರತೆ** (ನಾ). ವಿಷಾದ ; ಖೇದ ; ಕಳವಳ : ಭೀತಿಯಂ ಪೇಳ್ವನೆಂಬೀ ಮನಮಂ ನೀಂ ಮಾಡದಿರ್ವ್ಯಗ್ರತೆಯನುಳಿದು (ರಾಜಶೇ. ೧೩-೮) ; ಚಾರುನ ಈ ತವಕಕ್ಕೆ, ಈ ಅತಿರೇಕದ ವ್ಯಗ್ರತೆಗೆ ಭೂಪತಿಯು ಹಿಗ್ಗಿ ಹತ್ತಾಗಿ (ಇಪ್ಪಕ. ೨೮೮). [ಸಂ. ವ್ಯಗ್ರತಾ]

**ವ್ಯಗ್ರಿಸು** (ಕ್ರಿ). ೧. ಆತುರಪಡು ; ಉದ್ವೇಗಗೊಳ್ಳು : ಒತ್ತರಿಸಿ ತವಕ ತನುವೆತ್ತಂದದಿಂ ವ್ಯಗ್ರಿಸುತ್ತಂದು ನಂದಿ ನಡೆತಂದು ವಂದಿಸಿ ನಿಂದು (ಸಿದ್ಧರಾ. ೫-೧). ೨. ವಿಕಾರಹೊಂದು ; ವಿಕೃತಗೊಳ್ಳು : ನಾಲ್ದೆಸೆಯಿಂದ ಬಂದ ಲೋಕವಾರ್ತೆಗಳಿಂ ವ್ಯಗ್ರಿಸದೆ ನಿಜತತ್ತ್ವಮಂ ಭಾವಿಸುವನ ಭವಭೂಜಬೀಜಮಾಗದೆ ಭಸ್ಮಂ (ಉಸಾರ. ೧೭೨). [ವ್ಯಗ್ರ + — ಇಸು]

**ವ್ಯಜನ** (ನಾ). ಗಾಳಿಯನ್ನು ಬೀಸುವ ಸಾಧನ ; ಬೀಸಣಿಗೆ : ಸಾಮ್ರಾಜ್ಯವಿಭವದಂತೆ ಚಮರೀವಾಲವ್ಯಜನೋಪೇತಶೋಭಿತಮುಂ (ಕಾದಂಪೂ. ೧೦೦) ; ಹೊಂಬಳೆಯ ತೆರೆಸೀರೆಗಳ ಛತ್ರ ವ್ಯಜನ ಸೀಗುರಿಯ . . . ದಿಂಡುಗಳೊಟ್ಟಿದವು (ಕುವ್ಯಾಗ. ೪-೧೪). [ಸಂ.]

**ವ್ಯತಿಕರ** (ನಾ). ೧. ಪರಸ್ಪರ ಕೂಡಿಕೊಳ್ಳುವುದು, — ಸೇರಿಕೊಳ್ಳುವುದು. ೨. ಸೇರುವೆ ; ಸಂಬಂಧ ; ಜೋಡಣೆ : ನೇಜಿಲ ಪಣ್ಗಳನಾ ಕೂಸಿನ ಪಕ್ಕಕ್ಕಾಗಿ

ಸಾರ್ಚಿ ಕೊಟ್ಟು ತದನಂತರದಾ ವ್ಯತಿಕರದಿನಂತರಾಯಮಾಗಿ ಮಗುಟ್ದು ಬಂದು (ಸುಕುಮಾ. ೪-೬೩ ವ). ೩. ಘಟನೆ ; ಪ್ರಸಂಗ ; ಸಂದರ್ಭ : ರಾಜಸೂಯವ್ಯತಿಕರದೊಳ್ ದಿಗ್ವಿಜಯಂಗೆಯ್ದು ಲಂಕೆಯ ವಿಭೀಷಣನನೊಂದೆ ದಿವ್ಯಾಸ್ತ್ರದೊಳೆಚ್ಚು ಕಪ್ಪಂಗೊಂಡ ವಿಕ್ರಮಾರ್ಜುನನ ವಿಕ್ರಮಮುಂ (ಪಂಪಭಾ. ೯-೫೨ ವ) ; ನಲ್ಮೆಗೆ ದಿವ್ಯಂಬಿಡಿದಳೊ ಪೇೞಿಮೆನಿಪಳಾ ವ್ಯತಿಕರದೊಳ್ (ಚಂದ್ರಪ್ರ. ೫-೧೩೧). ೪. ಆಪತ್ತು ; ವಿನಾಶ ; ಕೇಡು : ಆ ಪ್ರಸ್ತಾವದೊಳಾದಿಭಟ್ಟಾರಕವ್ಯತಿಕರ [ಪಾಠಾಂ. ರವ್ಯವ]ಸ್ಥಿತಿಯನಾನಂಬ ನೆಂಬಂ ಧರ್ಮಕಾರ್ಯನಿಮಿತ್ತಂ ಬಂದಱಿಪಿದೊಡೆ (ಆದಿಪು. ೧೬-೪೯ ವ) ; ಪತಿಯ ಸಹಸಂಭವನ ಮರಣವ್ಯತಿಕರವ ನೋಡಿದಡೆ (ಕುವ್ಯಾಕ. ೧೯-೬೧). ೫. ತಡೆ ; ಅಡ್ಡಿ : ಎನಗಿಂ ಸ್ವೇಚ್ಛಾವಿಹಾರವ್ಯತಿಕರಮೊಗೆದತ್ತೇಕೆ (ಎಕ. VII, ಶಿಕಾರಿ. ೧೩೭-೨೯ ; 1114). ೬. ತೊಂದರೆ ; ಉಪದ್ರವ : ಅನ್ನೆಗಮಿತ್ತ ಸುಗ್ರೀವಂ ಮಾಯಾಸುಗ್ರೀವನ ವ್ಯತಿಕರದೊಳ್ ಶರಣಾಗತಶರಣ್ಯನಪ್ಪ ರಾಮನಂ ಕಂಡು ತನ್ನ ವೃತ್ತಾಂತಮಂ ಬಿನ್ನವಿಸೆ (ಪಂರಾಮಾ. ೧೧-೧೦೦ ವ) ; ಕ್ಷಿತಿಯ ಪಾಲಿಸುವುದು ವಿರೋಧಿವ್ಯತಿಕರವ ಬಿಡಿಸುವುದು (ಕುವ್ಯಾಉ. ೬-೨೧). ೭. ಹರಡುವಿಕೆ ; ಚೆದರುವಿಕೆ. [ಸಂ.]

**ವ್ಯತಿಕರಣ** (ನಾ). ೧. ಸಂಧಿಕಾಲ ; ಕೂಡುವ ವೇಳೆ : ಆತನ ಕಡೆಯೊಳುಚಿತಮನ್ವಂತರ ವ್ಯತಿಕರಣ [ಪಾಠಾಂ. ವ್ಯತಿಕ್ರಮ]ದೊಳ್ . . . ಪದಿಮೂಱನೆಯ ಕುಲಧರಂ ಪುಟ್ಟಿ (ಆದಿಪು. ೬-೬೩ ವ). ೨. ಬೆರಕೆ ; ಮಿಶ್ರಣ : ಎರಡುಂ ವಿರುದ್ಧರಸಮೊಡವೆರಸಿರೆ ತರವಾಂತರಸ್ಥಮೊಂದನ್ಯರಸಂ ಪರಿಪುಷ್ಟಮಾಗೆಯುಂ ವ್ಯತಿಕರಣಂ ಮೇಣ್ ತಾಮವಾಗೆಯುಂ ನಿರ್ದೋಷಂ (ಕಾವ್ಯಾವ. ೮೩೩). [ಸಂ.]

**ವ್ಯತಿಕೀರ್ಣ** (ಗು). ೧. ಕೆದರಿದ ; ಚೆದರಿದ : ವ್ಯತಿಕೀರ್ಣ ಪದಕ್ರಮಮನುಚಿತಾನ್ವಯಂ ವ್ಯವಹಿತಾನ್ವಯಂ ತಾನದು ದಲ್ ಮತಿಸಮ್ಮೋಹಮನಿರದವರ್ಗೆ ತೊಡರ್ಚಲ್ಕೇ ಟ್ಟೊಡಲ್ಲಿಗಲ್ಲದು ದೋಷಂ (ಕಾವ್ಯಾವ. ೪೫೬). ೨. ಕೂಡಿದ ; ಮಿಶ್ರಣಗೊಂಡ. [ಸಂ.]

**ವ್ಯತಿಕ್ರಮ** (ನಾ). ೧. ಮೀರುವುದು ; ದಾಟುವುದು ; ಉಲ್ಲಂಘನೆ : ದುರ್ಗತಿಹೇತು ಪೂಜ್ಯಪೂಜಾವ್ಯತಿಕ್ರಮಂ ಕಿಱಿದು ದುಃಖಮಂ ಮಾಡುಗುಮೇ (ಆದಿಪು. ೩-೩೯) ; ಗುಣವ್ರತದೊಳ್ ದಿಗ್ವಿರತಿಗಕ್ಕುಮತಿಚಾರಮನಾರತಮೂರ್ಧ್ವಾಧಃ ಸ್ತಿರ್ಯಗ್ವ್ಯತಿಕ್ರಮ ಕ್ಷೇತ್ರವೃದ್ಧಿವಿಸ್ಮರಣಂಗಳ್ (ಸುಕುಮಾ. ೬-೧೮). ೨. ವ್ಯತ್ಯಾಸ ; ಅದಲುಬದಲು. ೩. ಪಾಪ ; ಅಪರಾಧ. ೪. ಆಪತ್ತು ; ತೊಂದರೆ ; ಕ್ಲೇಶ. ೫. [ಜೈನ] ವಿರುದ್ಧವಾದ ನಡವಳಿಕೆ ; ಅತಿಚಾರ ; ℙ "ಅವಶ್ಯಕಕ್ರಿಯೆಗಳನ್ನು ಸಮಯಕ್ಕಿಂತ ಮೊದಲು ಮಾಡುವುದು" (ಜೈನಕೋ. ೨೪೦) : ಭಯಮಖಿಲಕಾಂಕ್ಷೆ ವಿಚಿಕಿತ್ಸೆಯನ್ಯದೃಷ್ಟಿ ಪ್ರಶಂಸೆ ಸಂಸ್ತವನಮೆಂಬೀ ಕ್ರಿಯೆ ಸಮ್ಯಗ್ದೃಷ್ಟಿಗೆ ನೋಡೆ ಯಥಾಕ್ರಮದಿಂ ವ್ಯತಿಕ್ರಮಂ ತಾನಕ್ಕುಂ (ಸುಕುಮಾ. ೬-೪೫). [ಸಂ.]

**ವ್ಯತಿಕ್ರಮಣ** (ನಾ). ಅತಿಕ್ರಮಣ ; ಉಲ್ಲಂಘನೆ : ಮರಣದ ಜನ್ಮದ ನಿಗಳಂ ನಿರಾಕುಳಂ ಪತ್ತುವಿಡುವಿನಂ ಜಿನ ನಿನ್ನಂ ಸ್ಮರಿಯಿಪುದನಣೋರಣ್ವಂತರ ವ್ಯತಿಕ್ರಮಣ ಮಾತ್ರಮಂ ಮೆಱೆದಪೆನೇ (ಆದಿಪು. ೧೦-೫೯). [ಸಂ.]

**ವ್ಯತಿಪಾತ** (ನಾ). [ಜ್ಯೋತಿ] ಇಪ್ಪತ್ತೇಳು ಬಗೆಯ ಜ್ಯೋತಿಷಯೋಗಗಳಲ್ಲಿ ಹದಿನೇಳನೆಯ ಯೋಗ : ವ್ಯತಿಪಾತಯೋಗಕ್ಕೆ ಸಾಯಾ ೧೭ ಗಳಿಗೆ ಮೇಲೆ ತ್ಯಾಜ್ಯಾ (ಭಾಸ್ಕರ. ೭೦-೫) ; ಆ ಹುಡುಗಿ ಹುಟ್ಟಿದಾಗ ಖಗ್ರಾಸಗ್ರಹಣ, ವೈಧೃತಿ, ವ್ಯತಿಪಾತ ಎಲ್ಲಾ ಇದ್ದವು (ಭಾಗ್ಯಶ್ರೀ. ೩). [ಸಂ.]

**ವ್ಯತಿರಿಕ್ತ** (ಗು). ೧. ಭಿನ್ನವಾದ ; ವಿರೋಧವಾದ. ೨. ತಡೆಹಿಡಿದ ; ಅಡ್ಡಿಪಡಿಸಿದ. (ನಾ). ೩. ಹೊರತಾದುದು; ಬೇರೆಯಾದುದು : ಒಂದಂಶ ಮತ್ತೊಂದನ್ನು ವ್ಯತಿರಿಕ್ತವೆನಿಸುವಂತಿರಬಾರದು (ಶಿಕ್ಷದ. ೨೬೮). [ಸಂ.]

**ವ್ಯತಿರಿಕ್ತತೆ** (ನಾ). ಅಗಲಿಕೆ ; ವಿಯೋಗ : ಸುತ ನಿನ್ನ ಚಂದ್ರವದನವ್ಯತಿರಿಕ್ತತೆಯಿಂ ಸಭಾನಭೋವಳಯಂ ಸಂವೃತವಾಯ್ತು ತಮದಿಂ (ಚಂದ್ರಪ್ರ. ೫-೧೩). [ಸಂ. ವ್ಯತಿರಿಕ್ತತಾ]

**ವ್ಯತಿರೇಕ** (ನಾ). ೧. ಹೆಚ್ಚುಗಾರಿಕೆ ; ಶ್ರೇಷ್ಠತೆ. ೨. ಅಗಲಿಕೆ ; ವಿಯೋಗ. ೩. ವ್ಯತ್ಯಸ್ತ ಸ್ಥಿತಿ : ಆ ವ್ಯತಿರೇಕದೊಳೆನ್ನ ಛತ್ರಧಾರಿಣಿ ನೋಡಿ (ಕಾದಂಪೂ. ೭೭೨). ೪. ಅದಲುಬದಲು ; ವ್ಯತ್ಯಾಸ : ಖಳಂ ಸ್ತ್ರೀರತ್ನದಿಂ ವೀರರತ್ನಮನರ್ಘ್ಯಂ ಪಿಡಿದುಯ್ವೆನೀತನನೆನುತಂ ಕನ್ನೆಯಂ ಬಿಟ್ಟು . . . ಎತ್ತಿಕೊಂಡು ನೆಗೆದಂ ವ್ಯೋಮಕ್ಕೆ ಗಾಂಡೀವಿಯಂ ಆ ವ್ಯತಿರೇಕದೊಳತಿಕುಪಿತನಾಗಿ ಶಂಬರಸೂದನಂಬೆರಸು ನಡೆತಂದು (ಜಗವಿ. ೧೫-೪ ವ). ೫. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ; ಉಪಮಾನ ಮತ್ತು ಉಪಮೇಯಗಳಲ್ಲಿ ಬರುವ ವೈಲಕ್ಷಣ್ಯವರ್ಣನೆ : ಆದಿಪ್ರತೀತಿಯಿಂ ಶಬ್ದಾದರದಿಂ ಸದೃಶಮಾದ ವಸ್ತುದ್ವಯದೊಳ್ಭೇದಮನಱಿಪುವುದು . . . ವ್ಯತಿರೇಕಂ (ಕವಿರಾ. ೩-೩೯) ; ವ್ಯತಿರೇಕಮುಭಯಸಾಮ್ಯಪ್ರತೀತಿಯಂ ತೋಱಿ ಭೇದಮಂ ಮಾಟ್ಪುದು (ಕಾವ್ಯಾವ. ೬೪೨) ; ವರ್ಣನಾಕಾಲದಲ್ಲಿ ಶ್ಲೇಷ, ರೂಪಕ, ವ್ಯತಿರೇಕ ಇತ್ಯಾದಿ ಅಲಂಕಾರಗಳು ಪ್ರಯತ್ನವಿಲ್ಲದೆಯೇ ಮೂಡಿಬರುತ್ತವೆ (ಧ್ವನ್ಯಾಲೋ. ೬೮). ೬. [ತರ್ಕಶಾ] ಇಲ್ಲದಿರುವಿಕೆ ; ಅಭಾವ, ಸಾಧ್ಯಾಭಾವ ಮತ್ತು ಹೇತ್ವಭಾವಗಳ ವ್ಯಾಪ್ತಿ, — ಸಾಹಚರ್ಯ : ವ್ಯಾಪ್ತಿಯು ಅನ್ವಯ ಮತ್ತು ವ್ಯತಿರೇಕ ಎಂದು ಎರಡು ವಿಧ (ಭಾತತ್ತ್ವ. ೨೭೨). [ಸಂ.]

**ವ್ಯತಿಹಾರ** (ನಾ). ಅದಲುಬದಲು ; ವಿನಿಮಯ : ಶ್ರೀಮತಿ ವಜ್ರಜಂಘರ ಜನ್ಮಾಂತರಸ್ನೇಹರಸಾಮೃತಪಾತ್ರಚಿತ್ರಪಟವ್ಯತಿಹಾರಮಂ ವಜ್ರಜಂಘಾನುಚರರಿಂದ ಮಱಿದು (ಆದಿಪು. ೪-೨೩ ವ). [ಸಂ.]

**ವ್ಯತೀತ** (ಗು). ಕಳೆದುಹೋದ ; ಮುಗಿದುಹೋದ : ಆ ನಗದೊಳ್ ವ್ಯತೀತ ಬಹುಚಕ್ರಿಗುಣಾನ್ವಯತತ್ಪ್ರತಾಪಸಂತಾನಲಿಪಿಪ್ರಪಂಚವಚನಾಳಿಯನೋಳಿಯೆ ಕೇಳ್ದು ಕೇಳ್ದು . . . ಲಜ್ಜಾನತಮಾದುದುನ್ನತಶಿರೋಮಣಿ ಪಂಚಮಚಕ್ರವರ್ತಿಯಾ (ಶಾಂತಿಪು. ೧೧-೬೨). [ಸಂ.]

**ವ್ಯತೀಪಾತ** (ನಾ). ೧. ಸಂಪೂರ್ಣವಾಗಿ ಬಿಟ್ಟುಹೋಗುವುದು. ೨. ಅನರ್ಥ ಸೂಚಕವಾಗಿ ಮುಂದೊದಗುವ ದೊಡ್ಡ ಉತ್ಪಾತ, — ಕೇಡು. ೩. [ಜ್ಯೋತಿ] ಇಪ್ಪತ್ತೇಳು ಬಗೆಯ ಜ್ಯೋತಿಷಯೋಗಗಳಲ್ಲಿ ಹದಿನೇಳನೆಯ ಯೋಗ : ಆದಿತ್ಯವಾರಮುಂ ಸಂಕ್ರಾಂತಿಯುಂ ವ್ಯತೀಪಾತಮುಂ ಕೂಡಿದ ಪುಣ್ಯದಿನದನ್ದು (ಸೌಇ. XX, ೩೪-೧೭ ; 1053) ; ಗ್ರಹಣ ಸಂಕ್ರಾಂತಿಯಿಂದ ವೆಗ್ಗಳ ಏಕಾದಶಿ ವ್ಯತೀಪಾತದಿಂದ ವೆಗ್ಗಳ . . . ನಿಮ್ಮ ಮಾಣದೆ ನೆನೆವವಂಗೆ (ಬಸವ. ೬೧೧) ; ವ್ಯತೀಪಾತ ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೩೨೦). ೪. ಶ್ರಾದ್ಧಕರ್ಮಗಳಲ್ಲಿ ಒಂದು : ಒಂದು ವರ್ಷದಲ್ಲಿ ೯೬ ಶ್ರಾದ್ಧಗಳು ಬರುವವು. ಅವು ಯಾವುವೆಂದರೆ- ಮನ್ವಾದಿಗಳು ೧೪ . . . ವ್ಯತೀಪಾತಗಳು ೧೩ (ಹಸಾರ. ೨೪-೨ ಟೀಕು). [ಸಂ.]

**ವ್ಯತ್ಯಯ** (ನಾ). ೧. ಗಮನಿಸದಿರುವುದು ; ಲಕ್ಷಿಸದಿರುವುದು. ೨. ವಿರೋಧ : ನನ್ನ ಧ್ಯೇಯಾರ್ಥಕ್ಕೆ ಸ್ವಲ್ಪ ಸಹ ವ್ಯತ್ಯಯ ಬಾರದಂತೆ ಈ ಎಚ್ಚರಿಕೆಯನ್ನು ವಹಿಸದೆ ಹೋದೆನಾದರೆ (ಮಹಾಯೋ. ೨೪೧). ೩. ಅಡ್ಡಿ ; ತಡೆ ; ಧಕ್ಕೆ : ಸಾಲೆಯ ಕೆಲಸಕ್ಕೆ ವ್ಯತ್ಯಯವಾಗಹತ್ತಿತು (ಅಪವಾ. ೩೧) ; ಬಾಗಿಲನಿಕ್ಕಿಕೊಳ್ಳುವಾಗ ಆಕೆಗೆ ಅವನಿಂದ ಸ್ವಲ್ಪವೂ ವ್ಯತ್ಯಯವುಂಟಾಗಲಿಲ್ಲ (ಅಂಬಿಕೆ. ೩೩). ೪. ಬದಲಾವಣೆ ; ಪರಿವರ್ತನೆ : ಪುರುಷತ್ರಯಂ ಕ್ರಮದಿನಿರ್ದೊಡಂ ವ್ಯತ್ಯಯಮಾಗಿರ್ದೊಡಂ ಕೂಡಿ ನುಡಿವೆಡೆಯೊಳ್ ಉತ್ತಮಪುರುಷಕ್ಕೆ ಮುಖ್ಯತ್ವಂ (ಶಮದ. ೨೨೩ ವೃತ್ತಿ). ೫. ವಿಪರೀತತೆ ; ವಿಪರ್ಯಯ : "ವ್ಯತ್ಯಯಂ ವಿಪರ್ಯಾಸಮೆನೆ ವಿಪರೀತಮಕ್ಕುಂ" (ಮಂಗರಾ. ೧೩೦-೧೯). ೬. ದುರ್ಗತಿ : ಅತಿರಾಗತೆಯಿಂ ಸ್ತ್ರೀಪದಹತಿಗಂ ದಳವೇಱಿಯಲರ್ದಶೋಕಂ ಫಳಹೀನತೆಗೆಡೆಯಾದುದು ಕಡೆಯೊಳ್ ಮತಿಗೆಟ್ಟಂಗೇಗುಮತ್ಯಯಂ ವ್ಯತ್ಯಯಮಂ (ಚಂದ್ರಪ್ರ. ೭-೯೫). [ಸಂ.]

**ವ್ಯತ್ಯಸ್ತ** (ಗು). ೧. ಬದಲಾದ ; ಪಲ್ಲಟಗೊಂಡ ; ಬುಡಮೇಲಾದ : ಸ್ವಸ್ತಿಕಂ ಲೋಚನೋಷ್ಠದ್ವಿತಯವ್ಯತ್ಯಸ್ತವರ್ಣಸ್ಥಿತಿ . . . ಕಣ್ಗೆವಂದಿರ್ದುದು (ಚಂದ್ರಪ್ರ. ೭-೧೪೯). (ನಾ). ೨. ವ್ಯತ್ಯಾಸ ; ಬದಲು : ಮನುಷ್ಯನು ಕಾಲಸ್ಥಿತಿಗನುಸರಿಸಿ ತನ್ನ ಉಡುಪಿನಲ್ಲಿ ಎಷ್ಟೋ ವ್ಯತ್ಯಸ್ತ ಮಾಡಿಕೊಂಡಿರಲಿ (ಕಗದ್ಯ. ೧೦೮) ; ಊರು ಹೆಸರು ಮುಂತಾದ್ದನ್ನು ವ್ಯತ್ಯಸ್ತ ಮಾಡಿ ತಾರುಮಾರಾಗಿ ಬರೆದರು (ಪುರಾವಿ. ೨ ಉಪೋದ್ಘಾತ). [ಸಂ.]

**ವ್ಯತ್ಯಾಸ** (ನಾ). ೧. ಅದಲು ಬದಲು ; ಮಾರ್ಪಾಡು ; ವಿಪರ್ಯಯ : ನಮ್ಮ ಅಂತರಂಗಜೀವನದ ಮತಗಳನ್ನೂ ಸಮಾಜಸಂಪ್ರದಾಯಗಳನ್ನೂ ಸಹ

ವ್ಯತ್ಯಾಸಗೊಳಿಸುತ್ತದೆ (ಸಾಹಿಶ. ೮೨). **೨. ವಿರೋಧ ; ವ್ಯತ್ಯಯ** : ಈ ಭಾಷೆಗಳ ನಡುವೆ ಹಲಕೆಲವು ವ್ಯತ್ಯಾಸಗಳೂ ಇವೆ (ದ್ರಾವಿವಿ. ೫, ಪೀಠಿಕೆ). **೩. ಅಂತರ ; ಹೆಚ್ಚುಕಡಿಮೆ** : ಭರತಖಂಡದ ಬದುಕಿನಲ್ಲಿ ಮೂಲಭೂತವಾದ ವ್ಯತ್ಯಾಸಗಳಾಗಿವೆ (ಹಣಪ್ರ. iii, ಮುನ್ನುಡಿ) ; ನದಿಯಿಂದ ಅರ್ಧಮೈಲಿ ದೂರದಲ್ಲಿ ಒಂದಕ್ಕೊಂದಕ್ಕೆ ಐದು ಆರು ಮೈಲಿ ವ್ಯತ್ಯಾಸದಲ್ಲಿ ಕಾಸರ್‌ಹಳ್ಳಿಗಳಿವೆ (ಮಲೆನಾ. ೧೯). [ಸಂ.]

**ವ್ಯಥಕ** (ಗು). ೧. (ಮನಸ್ಸಿಗೆ) ನೋವುಂಟುಮಾಡುವ ; ದುಃಖದಾಯಕವಾದ. (ನಾ). ೨. ನೋಯಿಸುವವನು : "ಅರುಂತುದಃ, ವ್ಯಥಕಃ — ಈ ೨ ನೋಯಿಸುವವಂ" (ಹಲಾಯು. ೭೧-೨೧೭). ೩. ಅಂಜುಬುರುಕ : "ವ್ಯಥಕಃ, ವ್ಯಥಮಾನಃ— ಈ ೨ ನೋವುಗನುಂ, ಅಂಜುಬುರುಕನುಂ" (ಕಾಶಕೃ. ೧೩೫). [ಸಂ.]

**ವ್ಯಥನ** (ನಾ). ೧. ನೋವು ; ಯಾತನೆ. ೨. ಅಂಜುಬುರುಕುತನ. ೩. ನಾಶ ; ನಷ್ಟ : ಮಥನವೋ ಸಾಗರದ ಕೌತುಕಕಥನವೋ ಕೇಳುವರ ದುರಿತವ್ಯಥನವೋ ಬೆಸಲಾದುದಿಷ್ಟಾರ್ಥ (ನಿಭಾಗ. ೮-೭ ಸೂಚನೆ). [ಸಂ.]

**ವ್ಯಥಿತ** (ಗು). ೧. ಗಾಬರಿಗೊಂಡ ; ಅಂಜಿದ. ೨. ನೊಂದ ; ಕ್ಲೇಶಗೊಂಡ ; ದುಃಖಿತ. (ನಾ). ೩. ನೊಂದುದು ; ಕ್ಲೇಶಗೊಂಡುದು : ವ್ಯಥಿತವಾಯಿತು ವೈರಿಬಲ ಸಂಪ್ರಥಿತಸಾಹಸನಾದ ನೀನೆನೆ ಶಿಥಿಲಸಂಶಯಸಂಗಚಿತ್ತವನಿತ್ತನಾತಂಗೆ (ಕುವ್ಯಾಉ. ೨-೩). ೪. ನೊಂದಿರುವ ವ್ಯಕ್ತಿ : ಅವರು ಮೊದಲೇ ವ್ಯಥಿತರಾಗಿರುವರು (ಆವಮಾ. ೪೯). [ಸಂ.]

**ವ್ಯಥಿಸು** (ಕ್ರಿ). ೧. ನೋಯು ; ಬೇನೆಪಡು : ಎದೆಯ ಮೇಲೆ ಕೋಲ್ಮಿಂಚಿಸಲ್ ವ್ಯಥಿಸಿ ಮೈಮರೆದನು (ಜೈಮಿಭಾ. ೭-೬೯). ೨. ನೋಯುವಂತೆ ಮಾಡು : ಕೊಳಲ ಬಾರಿಸುತಿರುಳ ಮೌನವನು ವ್ಯಥಿಪನಿಂತೆ (ಗೋಕುನಿ. ೭೨-೧೦). [ವ್ಯಥನ + - ಇಸು]

**ವ್ಯಥೆ** (ನಾ). ೧. ನೋವು ; ಬಾಧೆ ; ಯಾತನೆ : ಅಪಚಾರಕುಪಿತಗೆನಗಿನ್ನುಪಚಾರಂ ವ್ಯಥೆಯನೀಗುಮಿಗುಮೆ ಸುಖಮಂ (ಜಗವಿ. ೧೨-೯೫) ; ರಥದ ಮೇಲಂಬುಗಳು ರಿಪುಸಾರಥಿಯ ಮೈಯಲಿ ಛಾಯ ತುರಗವ್ಯಥೆಯನೇವೇಳುವೆನು. . . ಪೃಥುಳಬಲನೈ ಭೀಮನೆಚ್ಚನು ಗುರುತನೂಭವನ (ಕುವ್ಯಾಕ. ೩-೨೩) ; ಹುಡುಗಿಯನ್ನು ನಟರಾಜ ಹಾಗೆ ಹೊಡೆದು ಬೈದು ಹಿಂಸಿಸುತ್ತಿದ್ದುದು ಪಾರ್ವತಮ್ಮನಿಗೆ ಅತ್ಯಂತ ವ್ಯಥೆಯನ್ನುಂಟು ಮಾಡಿತು (ಸರ್ವಮಂ. ೨೨೪). ೨. ಅಂಜಿಕೆ ; ಗಾಬರಿ. [ಸಂ. ವ್ಯಥಾ]

**ವ್ಯದ್ವಿತೆ** (ನಾ). ಶೂನ್ಯ ; ಸೊನ್ನೆ : "ಶೂನ್ಯ . . . ವ್ಯದ್ವಿತ — ಇಂತಿನಿತುಂ ಸೊನ್ನೆಗ ಹೆಸರು" (ವ್ಯವಹಾ. ೧೧-೬). [?]

**ವ್ಯಧಿಕರಣ** (ನಾ). ೧. ವಿರುದ್ಧವಾದ ಮಾತು : ಎನ್ನ ಮೇಲೆ ವ್ಯಧಿಕರಣ ನುಡಿದಳೀ ದೂತಿ ಪನ್ನಗಶಯನ ನೀ ಕಿವಿಕೊಟ್ಟು ಕೇಳದ್ಯೋ (ಶ್ರೀಕೃಪಾ. ೨೧). ೨. ಬೇರೆ ಬೇರೆಯ ಅಧಿಕರಣ ; ವಿಭಿನ್ನವಾದ ಆಶ್ರಯ, — ಸ್ಥಾನ. [ಸಂ.]

**ವ್ಯಪಗತ** (ಗು). ೧. ಬೇರೆಯಾದ ; ದೂರವಾದ : ನೃಪತೀ ಪರೋಪಕಾರೀ ವಿಪುಳಗುಣೀ . . . ವ್ಯಪಗತಭಯಾ ದಯಾಲೂ ರಿಪುವರ್ಗಮನಲೆದು ಗೆಲ್ಪೆ ಯಾಗಾಹವದೊಳ್ (ಕವಿರಾ. ೨-೨೪) ; ದ್ರುಪದನಾಗಲಿಯೆಂದು . . . ಕೆಲಬರು ಭೀಮಸುತನೆಂದು ಅಪರಿಮಿತಮತವಾಗೆ ಸಮರವ್ಯಪಗತಾರಿ ಸುರೇಂದ್ರಸುತನೀ ದ್ರುಪದಸುತ ಸೇನಾಧಿಪತಿಯಹುದೆಮ್ಮ ಮತ (ಕುವ್ಯಾಉ. ೧೧-೩೧). (ನಾ). ೨. ನಿಂತುಹೋಗುವಿಕೆ ; ತಪ್ಪಿಹೋಗುವುದು : ಈ ಸಂವಿಧಾನವು ಆಚರಣೆಗೆ ಬರದೆ ಇದ್ದಿದ್ದ ಪಕ್ಷದಲ್ಲಿ, ರಾಜಗಾಮಿಯಾಗುವುದರಿಂದ ಅಥವಾ ವ್ಯಪಗತವಾಗುವುದರಿಂದ . . . ಸಂಘದ ವಶದಲ್ಲಿ ನೆಲಸತಕ್ಕುದು (ಭಾಧಾಸ. ೧೭೦). [ಸಂ.]

**ವ್ಯಪದೇಶ** (ನಾ). ೧. ತಿಳಿವಳಿಕೆ ; ಸೂಚನೆ. ೨. ಹೆಸರು ; ಅಭಿಧಾನ : ಅಮೃತಾರ್ಣವೋದ್ಧೃತ ಘಟಾಮೃತಕ್ಕೆ ತಚ್ಛಕ್ತಿಯೋಗದಿಂ ಅಮೃತವ್ಯಪದೇಶಂ (ತತ್ತ್ವಪ್ರ. ೩) ; ಚೇತನವು ಇಚ್ಛೆಯಿಂದ ಅಭಿಮಾನಿಸಿ ಅನೇಕ ವ್ಯಪದೇಶಗಳನ್ನು ಹೊಂದಿದರೂ ಅದರ ಸ್ವರೂಪಕ್ಕೆ ಯಾವ ಹಾನಿಯೂ ಸಂಘಟಿಸುವುದಿಲ್ಲ (ಶಕ್ತಿವಿ. ೪೮). ೩. ನೆವ ; ನಿಮಿತ್ತ : ಆ ಮಾಯಾವಿಯಂ ಧನುರ್ಮಹೋತ್ಸವಾಮಂತ್ರಣವ್ಯಪದೇಶದಿಂ ವಿನಾಶಮನೆಯ್ದಿಸುವೆಂ (ಜಗವಿ. ೫-೯೧ ವ). ೪. ಉಪಾಯ ; ಹಂಚಿಕೆ. ೫. ಕಪಟ ; ಮೋಸ. ೬. [ಕಾವ್ಯಮಿ] ಉಪಮಾಲಂಕಾರದಲ್ಲಿ ಒಂದು ಬಗೆ ; ಉಪಮಾನವು ಉಪಮೇಯಕ್ಕೆ ಹೀನವಾದಾಗ ಅಥವಾ ಅಧೀನವಾದಾಗ ಆಗುವ ಅಲಂಕಾರ ; P ನವೀನಾಲಂಕಾರಿಕರು ಇದನ್ನು 'ಕೈತವಾಪಹ್ನುತಿ ಅಲಂಕಾರ' ಎಂದು ಕರೆಯುವರು : ಉಪಮೇಯನ್ನಗ್ಗಾವ್ಪೋಪ ಪನ್ನ ಮುಪಮಾನಮಾಗೆ ಮುಖ್ಯಮದಕ್ಕುಂ ವ್ಯಪದೇಶಂ ಮುಂ ಪೋದುದನಪೂರ್ವಮಂ ಕಂಡು ನೆನೆವುದದು ತಾಂ ಸ್ಮರಣಂ (ಕಾವ್ಯಾವ. ೭೧೩). [ಸಂ.]

**ವ್ಯಪನೀತ** (ನಾ). ಹೋಗಲಾಡಿಸುವಂಥದು ; ನೀಗುವಂಥದು : ಚಾರುಘನಮ್ಮುತಿ ವಿಳಸದ್ವಾರ್ಬರಂ ವ್ಯಪನೀತನೂಷ್ಮತಾಪಪ್ರಸರಂ ಕಾರಂತಿರೆ ವಿಜಯಾರ್ಧಕುಮಾರಂ ಬಂದೆಲಗಿದಂ ಮಹೀಭೃತ್ಪದದೊಳ್ (ವರ್ಧಮಾ. ೯-೩೦). [ಸಂ.]

**ವ್ಯಪಸರ್ಗ** (ನಾ). ಬಿಟ್ಟುಬಿಡುವುದು ; ತ್ಯಾಗ : ವ್ಯ[ಪಾಠಾಂ. ವ್ಯು]ಪಸರ್ಗ ವಿಷಯರೂಪಪ್ರಪಂಚಿತಮನೇಕಭೇದಮದು ತಾನಕ್ಕುಂ (ಕಾವ್ಯಾವ. ೬೬೬). [ಸಂ.]

**ವ್ಯಪಾಕೃತ** (ಗು). ಬಿಡುಗಡೆ ಹೊಂದಿದ ; ಮುಕ್ತ : ಸರ್ವಾಂಗಮಲಧರಂ ಪರಿ ನಿರ್ವೃತಿ ಸೌಖ್ಯೋನ್ಮುಖಂ ವ್ಯಪಾಕೃತಮೋದಂ . . . ಒರ್ವಂ ಋಷಿಯಿರ್ದಂ (ಚಂದ್ರಪ್ರ. ೯-೨೦). [ಸಂ.]

**ವ್ಯಪಾಯ** (ನಾ). ೧. ಇಲ್ಲವಾಗುವಿಕೆ ; ಅದೃಶ್ಯವಾಗುವಿಕೆ ; ನಿರ್ಗಮನ : ಚ್ಯುತಿಯಾಗೆ ಭೋಗಭೂಮಿಸ್ಥಿತಿ ಕಲ್ಪಮಹೀರುಹವ್ಯಪಾಯದೊಳಿಂತುಂ ಕ್ಷಿತಿಪತಿ ಕಲ್ಪಮಹೀಜಸ್ಥಿತಿಯಿಂ ತಾನಿಂತು ಜನಮನೇಂ ನಿಱಿಸಿದನೋ (ಆದಿಪು. ೭-೭೮). ೨. ಅಡೆತಡೆ ; ವಿಘ್ನ : "ಅಂತರಾಯಂ ವ್ಯಪಾಯಂ ವಿಘ್ನವೆನಿಸಿಕ್ಕು" (ಮಂಗರಾ. ೭೫-೫). ೩. (ಆಲಂ) ಸಾವು ; ಮರಣ : ಲಕ್ಷ್ಮೀಮತಿಮಹಾದೇವಿಯು ಮನುಂದರಿವರಸು ಚಕ್ರವಲ್ಲಭ ವ್ಯಪಾಯ [ಪಾಠಾಂ. ವಿಯೋಗ]ದೊಳ್ ಪುಂಡರೀಕನಂ ಕೈಕೊಂಡಿರೆ (ಆದಿಪು. ೪-೮೧ ವ). [ಸಂ.]

**ವ್ಯಪಾಯಿ** (ನಾ). = ವ್ಯಪಾಯ ೧ : ಅದಱಿಂ ವಿಜ್ಞಾನಾಶ್ರಿತಂಗಳಪ್ಪ ಶರೀರೇಂದ್ರಿಯ ಬುದ್ಧಿಗಳೇಕಕ್ಷಣಾಂತರಾಳವರ್ತಿಗಳುತ್ತರಕ್ಷಣವ್ಯಪಾಯಿಗಳದರ್ಕೇಕಾತ್ಮಜಂ ಜೀವ ಮೆಂಬುದಾದುದು (ಶಾಂತಿಪು. ೮-೧೪೨ ವ). [< ವ್ಯಪಾಯ]

**ವ್ಯಪೇಕ್ಷೆ** (ನಾ). ೧. ನಿರೀಕ್ಷೆ. ೨. ಪರಸ್ಪರ ಸಂಬಂಧ : ವಿಶೇಷಣವಿಶೇಷ್ಯ ಸಂಬಂಧಮುಳ್ಳೊಡಂ ಶಬ್ದಶಕ್ತಿವ್ಯಪೇಕ್ಷೆಯಿಂ ಉಪಾತ್ತಲಿಂಗಸಂಖ್ಯಾವ್ಯತಿಕ್ರಮಮಾಗದು (ತತ್ತ್ವಪ್ರ. ೯). [ಸಂ. ವ್ಯಪೇಕ್ಷಾ]

**ವ್ಯಪೇಕ್ಷೆಗೆಯ್** (ಕ್ರಿ). ಬಯಸು ; ನಿರೀಕ್ಷಿಸು : ಸ್ವಪೂರ್ವವಾಸನೆಯ ಬಲದಿನಂತಾತಂ ವೇದಪುರಾಣವೇದಿಯಾದಂ ವ್ಯಪೇಕ್ಷೆಗೆಯ್ಯುಮೆ ವಿಶುದ್ಧಮಣಿ ಸಂಸ್ಕೃತಿಯಿಂ (ವರ್ಧಮಾ. ೭-೧೮). [ವ್ಯಪೇಕ್ಷೆ + ಕೆಯ್]

**ವ್ಯಪೇತ** (ಗು). ೧. ಬೇರೆಯಾದ ; ಅಗಲಿದ. ೨. ವಿರುದ್ಧವಾದ ; ವಿರೋಧವಾದ. (ನಾ). ೩. ದೂರೀಕರಿಸಿದವನು ; ತೊರೆದವನು : ಸಪ್ತರ್ಧಿಸಂಪನ್ನನುಂ ಅಷ್ಟ ಮಲವ್ಯಪೇತನುಂ . . . ಪಂಚದಶಪ್ರಮಾದಪರಿವರ್ಜಿತನುಮಾಗಿ (ಅಜಪು. ೩-೧ ವ) ; ಸಹಜಸುರಭಿಗಂಧಿಯುತಂ ದೋಷದಾಹಮಳವಿಹೀನನುಂ ನಖ[ತ] ನೂರುಹಶ್ಮಶ್ರುಕೇಶ ರೋಮವ್ಯಪೇತನುಂ . . . ಎನಿಸಿ (ವರ್ಧಮಾ. ೬-೪೭ ವ). [ಸಂ.]

**ವ್ಯಪೇತತೆ** (ನಾ). ಇಲ್ಲದಿರುವಿಕೆ ; ಅಭಾವ : ಮಗಳೇಱುಂಜವ್ಯನಮುಮಂ . . . ವಿಲಾಸಸಮೇತತೆಯುಮಂ ಮಿಥುನಲೀಲಾವ್ಯಪೇತತೆಯುಮಂ . . . ಮಂತ್ರಿವರ್ಗ ದೊಳಾಲೋಚಿಸಿ (ಶಾಂತಿಪು. ೫-೧೯ ವ). [ಸಂ. ವ್ಯಪೇತತಾ]

**ವ್ಯಪೇತಾವ್ಯಪೇತ** (ನಾ). [ಕಾವ್ಯಮಿ] ಒಂದು ಬಗೆಯ ಶಬ್ದಾಲಂಕಾರ, — ಯಮಕ : ವ್ಯಪೇತಾವ್ಯಪೇತಕ್ಕೆ – ಸಬಳಿಕೆಯಿಂ ಪಾಟಿಯನೊಕ್ಕು ಬೇರನಂತಾ ಕುಬೇರನಾಯಕನತಿವಿಕ್ಕಬಚಿತ್ರಂ ತೊಟ್ಟಗೆ ತಾಗಿ ಬಾಗಿದಂ ತಾಗಿ ಬಾಗಿದಂ ನರನಡಿಯೊಳ್ (ಕಾವ್ಯಾವ. ೫೪೪). [ಸಂ.]

**ವ್ಯಭಿಚರಿಸು** (ಕ್ರಿ). ೧. ಒಳ್ಳೆಯ ಮಾರ್ಗವನ್ನು ಬಿಡು ; ಅಡ್ಡದಾರಿಗೆ ಬೀಳು : ಪ್ರತ್ಯಕ್ಷಪರಿಚ್ಛೇದ್ಯಂ ವಸ್ತುತತ್ತ್ವಮನುಮಾನದಿಂ ವ್ಯಭಿಚರಿಸುಗುಂ ಎಂದು ನುಡಿದು (ಶಾಂತಿಪು. ೮-೧೨೪ ವ). ೨. ಹಾದರ ಮಾಡು : "ರಂಕತೀತಿ – ವ್ಯಭಿಚರಿಸಿದ ಪಳೆಂಬುದು" (ಕಾಶಕೃ. ೨೫). [(ಸಂ. ವ್ಯಭಿಚರ) + - ಇಸು]

**ವ್ಯಭಿಚಾರ** (ನಾ). ೧. ದಾರಿಬಿಟ್ಟು ಹೋಗುವಿಕೆ. ೨. ವಿಷಯಲಂಪಟತೆ ;

ಹಾದರ : ಕ್ಷಿತಿಜಾರ್ಕಜಮಧ್ಯದೊಳುಡುಪತಿ ನಿಲೆ . . . ಆ ದಂಪತಿಗಳ್ ವ್ಯಭಿಚಾರಶೀಲರಿರ್ವರುಮಪ್ಪರ್ (ಜಾತತಿ. ೨೧-೬). ೩. [ತರ್ಕಶಾ] ಹೇತ್ವಾಭಾಸಗಳಲ್ಲಿ ಒಂದು: ವ್ಯಭಿಚಾರವೆಂದರೆ ಹೇತುವಿರತಕ್ಕ ಸ್ಥಲದಲ್ಲಿ ಸಾಧ್ಯವಿಲ್ಲದೇ ಇರುವುದು (ಹಿಂದಸಾ. ೧೪೧). [ಸಂ.]

**ವ್ಯಭಿಚಾರಿ** (ಗು). ೧. ದಾರಿಬಿಟ್ಟು ಸಾಗುವ ; ಹಾದಿತಪ್ಪಿ ನಡೆಯುವ. ೨. ನೀತಿಗೆಟ್ಟ ; ನಿಯಮಬಾಹಿರವಾದ : ಹಗಲು ನನ್ನವರು ಮಾಂಸದೃಷ್ಟಿಯ ಮುಂದೆ, ರಾತ್ರಿ ಸ್ವಪ್ನದಲ್ಲಿ ಜಯಂತನು ದೃಷ್ಟಿಜ್ಞಾನದ ಮುಂದೆ. ಈ ವ್ಯಭಿಚಾರಿ ಸಂಗಮವನ್ನು ಹೇಗೆ ನಿವಾರಿಸಬೇಕೆಂಬುದೇ ತಿಳಿಯದು (ಜಯಂತ. ೪೧೮). (ನಾ). ೩. ಹಾದರ ಮಾಡುವ ವ್ಯಕ್ತಿ ; ಹಾದರಿಗ : ಆ ನೀಚ ವ್ಯಭಿಚಾರಿಯ ಹಿಡಿತದಿಂದ ಪಾರಾಗಿ ಹೋಗಬೇಕೆಂಬುದೊಂದೇ ಆಕೆಯ ಯೋಚನೆಯಾಗಿತ್ತು (ಬ್ಯಾಲಾಮು. ೩೩೬). ೪. [ಕಾವ್ಯಮಿ] ನಿಯತವಾಗಿ ಇರದ, ದೊಡ್ಡ ಭಾವಗಳ ಜೊತೆಗೆ ಬಂದು ಹೋಗುತ್ತಿರುವ ಭಾವ ; ಸಂಚಾರಿಭಾವ : ವೀರರಸವೂ ವ್ಯಭಿಚಾರಿಯಾಗಿ ವರ್ಣಿತವಾಗಿದೆ (ಕರ್ಣಾಜ. ೬೬). 'ವ್ಯಭಿಚಾರಿಭಾವ' ಪರಾ. [ಸಂ. ವ್ಯಭಿಚಾರಿನ್]

**ವ್ಯಭಿಚಾರಿಣಿ** (ನಾ). ನೀತಿಗೆಟ್ಟವಳು ; ಹಾದರಗಿತ್ತಿ : ಆಕೆ ವ್ಯಭಿಚಾರಿಣಿ ಎಂದು ಸುಳ್ಳು ಹೇಳಿದವರು ಕೂಡಾ ವೇದಪಾರಾಯಣಪ್ರವೀಣರೆ (ದೇವಹಂ. ೮೬) ; ಹುಟ್ಟಿದ ವಂಶಕ್ಕೆ ಅಗೌರವ ತಂದ ವ್ಯಭಿಚಾರಿಣಿ ಪುನಃ ತವರಿಗೆ ಹೋಗುವುದು ಸರಿಯಲ್ಲ (ಸೋತುಗೆ. ೧೩೯). [ಸಂ. ವ್ಯಭಿಚಾರಿಣೀ]

**ವ್ಯಭಿಚಾರಿಭಾವ** (ನಾ). = ವ್ಯಭಿಚಾರಿ ೪ : ಇವು ನಿಯತವಾಗಿ ಒಂದು ಕಡೆ ಇರದೆಯೂ ದೊಡ್ಡ ಭಾವಗಳ ಜೊತೆಯಲ್ಲಿ ಬರುತ್ತ ಹೋಗುತ್ತಲೂ ಇರುವುದರಿಂದ ಇವುಗಳನ್ನು 'ವ್ಯಭಿಚಾರಿ'ಭಾವ ಅಥವಾ 'ಸಂಚಾರಿ' ಭಾವಗಳೆಂದೂ . . . ಕರೆಯುತ್ತಾರೆ (ಕೈಪಿಡಿ. ೧೮೭). 'ಸ್ಥಾಯಿಭಾವ' ಪರಾ. [ಸಂ.]

**ವ್ಯಯ** (ನಾ). ೧. ನಷ್ಟ ; ನಾಶ ; ಕಡಮೆಯಾಗುವಿಕೆ : ಆತ್ಮೋಪಾತ್ತಶರೀರ ಪ್ರಮಾಣನುಂ ಉತ್ಪಾದವ್ಯಯಧ್ರವ್ಯಾತ್ಮಕನುಂ . . . ಅಪ್ಪ ಜೀವನುಂಟೆಂದು (ಆದಿಪು. ೨-೧೦ ವ) ; ವಸ್ತುಸ್ವರೂಪವು ಉತ್ಪಾದ, ವ್ಯಯ, ಧ್ರೌವ್ಯ (ಸ್ಥಿರ) ಎಂಬ ಮೂರು ರೂಪವಾಗಿದೆ (ಭಾರದ. ೧೮೦). ೨. ಸಂಪಾದನೆಯ ದ್ರವ್ಯದ ಬಳಕೆ ; ವೆಚ್ಚ ; ಖರ್ಚು : ರಾಮಣೀಯಕವಸ್ತುದಾನವ್ಯಯದ ವೈಭವಕೆ . . . ದ್ವಿಜವರರನರ್ಚಿಸಿದ (ಕುಮ್ಮಾಗ. ೬-೧೦) ; ನಮ್ಮ ಆವಶ್ಯಕತೆಗಳನ್ನು ಪೂರೈಸಲು, ನಮ್ಮ ಆದಾಯವನ್ನು ಉಪಯೋಗಿಸಿದರೆ, ಅದಕ್ಕೆ ವ್ಯಯವೆಂದು ಹೇಳಲಾಗುತ್ತದೆ (ಗೃಹವಿ. ೧೯೪). ೧, ೨ : ವ್ಯಯಮಪ್ಪ ಧನಮನೇ ಸದ್ವ್ಯಯಮಂ ಸತ್ಪಾತ್ರದಾನದಿಂದೊಳ್ಳಿತೆದಲ್ ವ್ಯಯಸುಖಮಂ ಪಡೆಯದವಂ ವ್ಯಯಮಂ ತಾನೆಯ್ದಿ ಪೋಪುದೇನಚ್ಚರಿಯೆ (ಶಾಂತೀಶ್ವ. ೬-೧೧೯). ೩. ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತನೆಯದು : ಆ ವರ್ಷವೆ ಪ್ರಭವ . . . ವ್ಯಯ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೨೬೩). ೪. ಲಗ್ನದಿಂದ ಹನ್ನೆರಡನೆಯ ಸ್ಥಾನ : ಸಹಜಾಯವ್ಯಯಧನದಶಸುಹೃದಗ್ರಹಸ್ಥಾಯಿಯಾಗೆ ತತ್ಕಾಲದೊಳಾ ಗ್ರಹಮಂತದು ತಾತ್ಕಾಲಿಕ ಸುಹೃದ್ಗ್ರಹಂ ಪರಯುತಂ ದ್ವಿಷದ್ಗ್ರಹಮೆನಿಕುಂ (ಜಾತತಿ. ೨-೧೭). [ಸಂ.]

**ವ್ಯಯಗೃಹ** (ನಾ). [ಜ್ಯೋತಿ] ಲಗ್ನದಿಂದ ಹನ್ನೆರಡನೆಯ ಸ್ಥಾನ : ಜಲಜಪ್ರಿಯ ರವಿಜಕುಜೋತ್ಪಲಪ್ರಿಯರ್ ನಿಧನಧನರಿಪುವ್ಯಯಗೃಹದೊಳ್ ನೆಲಸಿರೆ . . . ಕಣ್ಗೆಡುಗುಂ (ಜಾತತಿ. ೨೧-೧೬). [ಸಂ.]

**ವ್ಯಯಿಸು** (ಕ್ರಿ). ಖರ್ಚುಮಾಡು ; ವೆಚ್ಚಮಾಡು : ಚುನಾವಣೆಗಾಗಿ ಸಾವಿರಗಟ್ಟಲೆ ವ್ಯಯಿಸುವ ಹಣವನ್ನು ಬಡವರ ಕಲ್ಯಾಣಕ್ಕಾಗಿ ವ್ಯಯಿಸಬಾರದೇಕೆ (ದೇಶಧು. ೬೩) ; ಆವಶ್ಯಕವಿದ್ದಷ್ಟನ್ನೇ ವ್ಯಯಿಸಿ ನಮಗೆ ಬೇಕಾದ ಸುಖ ಸಂಪತ್ತನ್ನು ಪಡೆಯುವುದೇ ಸಂಸ್ಕೃತಿಯ ಲಕ್ಷಣಗಳಲ್ಲಿ ಒಂದು (ಭಾಷಾಶಾ. ೨೭೨). [ವ್ಯಯ + - ಇಸು]

**ವ್ಯರ್ಥ** (ಗು). ೧. ನಿರುಪಯುಕ್ತವಾದ ; ಅಪ್ರಯೋಜಕವಾದ : ವಿಪ್ರರೊಳಗೆ ಸಮರ್ಥರಾರು ಸುಧಾತ್ರಿಯೊಳಗೆಯು ವ್ಯರ್ಥಜೀವಿಗಳಾರು ಚಿತ್ತೈಸು (ಕುಮ್ಮಾಉ. ೪-೫೪) ; ವಿವಿಧ ಪಯೋಜದಿ ವ್ಯರ್ಥಾಯಾಸದಿ ತೊಳಲಿದೆ ತೃಪ್ತಿಯ ಚಿರನಿಧಿಗೆ (ಅಗ್ನಿಹಂ. ೩-೫). (ನಾ). ೨. ನಿರುಪಯುಕ್ತತೆ ; ನಿಷ್ಪ್ರಯೋಜಕತೆ : ಮಱುಭವಂನಾಡೆಯುಂ ವ್ಯರ್ಥಮಲ್ತೇ (ಚಂದ್ರಪ್ರ. ೪-೧೮). ೩. [ಕಾವ್ಯಮಿ] ವಾಕ್ಯದೋಷಗಳಲ್ಲಿ ಒಂದು : ವ್ಯವಹಿತಮೇಕಾರ್ಥಂ ವ್ಯರ್ಥವಪಕ್ರಮಂ . . . ಇಂತು ವಾಕ್ಯದೋಷಮಿವಕ್ಕುಂ (ಕಾವ್ಯಾವ. ೪೫೫).

**ವ್ಯರ್ಥಂಮಾಡು, ವ್ಯರ್ಥಮಾಡು** = ನಿರರ್ಥಕಗೊಳಿಸು ; ನಿಷ್ಪ್ರಯೋಜಕವನ್ನಾಗಿ ಮಾಡು : ಕಾಲಲಬ್ಧಿವಶದಿಂ ನಿವೃತ್ತಿಪರಿಣತಿಯೊಳ್ ಪರಿಣಮಿಸಿದ ಸುಸ್ಥತೆಯಂ ವ್ಯರ್ಥಂಮಾಡದೆ . . . ಒಡಂಬಡುವುದೆ ನಿನಗೆ ವಿನಯಂ (ಚಂದ್ರಪ್ರ. ೪-೧೮ ವ) ; ಇದಕ್ಕಿಂತ ಹೆಚ್ಚು ಹಣವನ್ನು ವ್ಯರ್ಥಮಾಡುತ್ತಾರಲ್ಲವೆ (ನಂಟರು. ೧೯). **ವ್ಯರ್ಥವಾಗು** = ನಿಷ್ಪ್ರಯೋಜಕವಾಗು ; ಉಪಯೋಗವಿಲ್ಲವಾಗು : ವ್ಯರ್ಥವಾಯ್ತುಕಟಕಟ ಜನ್ಮ ನಿರರ್ಥವಾಯ್ತು (ತೊರರಾ. ೧-೪-೨) ; ಮಕ್ಕಳಿಗೆ . . . ಒಳ್ಳೇ ನಡತೆಯನ್ನಷ್ಟು ಕಲಿಸದೆ ಬಿಟ್ಟರೆ ಅದೆಲ್ಲಾ ವ್ಯರ್ಥವಾಗುವುದು (ಮುಂಬಯಿ. ೪-೩೩). [ಸಂ.]

**ವ್ಯರ್ಥತೆ** (ನಾ). ನಿಷ್ಫಲತೆ ; ನಿರರ್ಥಕತೆ : ನಿನ್ನೊಳ್ತಾಂ ವ್ಯರ್ಥತೆಯಂ ಪಡೆಗುಂ ಪರಮಾರ್ಥವಚೇತನತೆಯಿಂದೆ ಕಲ್ಪಕುಜಾತಂ (ಕವಿರಾ. ೩-೪೪). [ಸಂ. ವ್ಯರ್ಥತಾ]

**ವ್ಯರ್ಥಾಯ** (ಅ). ವೃಥಾ ; ವ್ಯರ್ಥವಾಗಿ : ವ್ಯರ್ಥಾಯ ನೊಂದು ಇತ್ಯರ್ಥವ ಕಾಣದೆ . . . ನರಕಗರ್ತದೊಳಿಳಿವೆನು ಕೀರ್ತಿ ಮರೆದು (ಮೋಕ್ಷದೀ. ೧೫೧-೧).

[< ವ್ಯರ್ಥ]

**ವ್ಯರ್ಥಾಲಾಪ, ವ್ಯರ್ಥಾಳಾಪ** (ನಾ). ನಿಷ್ಪ್ರಯೋಜಕವಾದ ಮಾತು ; ನಿರರ್ಥಕವಾದ ನುಡಿ : "ಜಱುಚೆಂದು ವ್ಯರ್ಥಾಲಾಪಂ" (ಕಶಸಾ. ೬೬-೪೮೯). **ವ್ಯರ್ಥಾಳಾಪ** : ವ್ಯರ್ಥಾಳಾಪದೊಳೇಂ ಧನಮರ್ಥಂ ಪ್ರಾಣಂ ನಿಜಕ್ಕೆ ನಿನ್ನದು (ದಶಕು. ೮-೧೨೬). [ಸಂ.]

**ವ್ಯರ್ಥಾಳಾಪ** 'ವ್ಯರ್ಥಾಲಾಪ' ನೋ.

**ವ್ಯಲೀಕ, ವ್ಯಳೀಕ** (ನಾ). ೧. ಸೇರಿಕೆಯಾಗದುದು ; ಅಸಹ್ಯವಾದುದು. ೨. ಅಯೋಗ್ಯವಾದ ಕೆಲಸ ; ತಪ್ಪು ; ಅಪರಾಧ. ೩. ದುಃಖ ; ನೋವು. ೪. ವಂಚನೆ ; ಮೋಸ ; ಕಪಟ. ೫. ಅನೃತ ; ಸುಳ್ಳು. **ವ್ಯಳೀಕ** : ೨. "ವ್ಯಳೀಕಂ, ಅಪರಾಧಃ, ಆಗಃ, ಮಂತುಃ, ವಿಪ್ರಿಯಃ — ಈ ೫ ಅಪರಾಧಂ" (ಹಲಾಯು. ೧೨೩-೬೪). ೪. "ವಂಚನಂ, ಅತಿಸಂಧಾನಂ, ವ್ಯಳೀಕಂ, ಪ್ರತಾರಣಂ — ಈ ೪ ಆಟಿಗೊಳ್ಳುದು" (ಹಲಾಯು. ೧೨೩-೬೩). [ಸಂ.]

**ವ್ಯವಕಲನ** (ನಾ). ೧. ಬೇರೆಮಾಡುವಿಕೆ ; ಪ್ರತ್ಯೇಕಿಸುವುದು. ೨. [ಗಣಿತ] ಒಂದು ಸಂಖ್ಯೆಯನ್ನು ಮತ್ತೊಂದು ಸಂಖ್ಯೆಯಿಂದ ಕಳೆಯುವುದು : ವ್ಯವಕಲನಕ್ರಿಯೆಯನ್ನು ತೋರಿಸುವುದಕ್ಕೂ ಸಮತ್ವವನ್ನು ತಿಳಿಸುವುದಕ್ಕೂ ಚಿಹ್ನೆಗಳನ್ನು ಕೊಟ್ಟನು (ಗಣಿಚ. ೪೮). 'ಸಂಕಲನ' ಪರಾ. [ಸಂ.]

**ವ್ಯವಚ್ಛೇದ** (ನಾ). ೧. ಕತ್ತರಿಸುವಿಕೆ ; ತುಂಡಾಗಿಸುವಿಕೆ. ೨. ಬೇರ್ಪಡಿಸುವಿಕೆ : ದ್ರವ್ಯತ್ವವಿಧಾನಪ್ರಕರಣಮಪ್ಪುದಱಿಂ ಉಕ್ತ ಜೀವಂಗಳ್ಗಂ ಅದ್ರವ್ಯತ್ವವ್ಯವಚ್ಛೇದಾರ್ಥಂ ಉತ್ತರಸೂತ್ರಾವತಾರಂ (ತತ್ತ್ವಪ್ರ. ೨೩೧). ೩. ಬಾಣಬಿಡುವಿಕೆ : "ಬಿಲ್ಲ ತಿರುವಿಂದ ಹಿಳಿಕು ಬಳಿಚುವುದು ವ್ಯವಚ್ಛೇದಮಕ್ಕುಂ" (ಮಂಗರಾ. ೮೮-೩೬). [ಸಂ.]

**ವ್ಯವಧಾನ** (ನಾ). ೧. ಬಿಡುವು ; ಸಾವಕಾಶ : ಅವಧಿಯಳಿಯಿತ್ತು ವ್ಯವಧಾನ ಉಳಿಯಿತ್ತು ನಿಜವೆ ನಿಜವನೊಡಗೂಡಿತ್ತು ಕೇಳಾ (ಅವಚಂ.೨೫೫-೧೧೬೫) ; ಸಾಹೇಬರಿಗೆ ವ್ಯವಧಾನವಿರಲಿಲ್ಲ (ರಂಗರೋ. ೧೨೩). ೨. ಅಡೆತಡೆ ; ವಿರೋಧ ; ಭಂಗ : ಸವಿಶೇಷಾಲಂಕಾರೋದ್ಭವಮಾಗಿಯುಮೊಂದುವರ್ಥದೊಳ್ಸಂಬಂಧವ್ಯವಧಾನಮಾದೊಡಕ್ಕುಂ ವ್ಯವಹಿತದೋಷಂ (ಕವಿರಾ. ೧-೯೦) ; ಆನಂದಾಶ್ರುಜಲವ್ಯವಧಾನಕ್ಕುಮ್ಮಳಿಸಿದಂತೆವೋಲ್ ಕಣ್ಮಲರಿಂದಾ ನೃಪನಂ ನೋಡದೆ ಕಮಲಾನನೆ ನೆನಪಿನೊಳ್ ಪದೆದು ನೋಡುತಿರ್ದಳ್ (ಕಾದಂಉ. ೮೪). ೩. ತಾಳ್ಮೆ ; ಸಹನೆ : ನಿಜಸ್ಥಿತಿಯನ್ನು ಪರಿಭಾವಿಸುವ ಅಪೇಕ್ಷೆಯಾಗಲಿ, ವ್ಯವಧಾನವಾಗಲಿ ಅವನಿಗೆ ಇರುವುದಿಲ್ಲ (ಭಾರಮಿ. ೧೬೬) ; ಅವುಗಳನ್ನು ನೀರಿಗೆ ಚೆಲ್ಲುವಷ್ಟು ವ್ಯವಧಾನ ನನಗೆ ಇಲ್ಲದೇ ಹೋಯಿತಲ್ಲಾ (ಸಂಸ್ಕಾರ. ೯೫). ೪. ನೆವ ; ನೆಪ : "ತಿರೋಧಾನಮೆನೆ ನೆವನಕ್ಕು" (ಮಂಗರಾ.೧೨೯-೧೩). ೫. ಕೊನೆ ; ಸಮಾಪ್ತಿ : ನೀವರಗುಮನೆಯಲಿ ಹೊತ್ತಿಸಿದ ಫಲ ಬಂದುದೇ ವ್ಯವಧಾನವಾದುದಲೆ (ಕುಮ್ಮಾಗ.೮-೧೦). ೬. ಕಾಣದಂತಾಗುವುದು ; ಅದೃಶ್ಯವಾಗುವುದು. [ಸಂ.]

**ವ್ಯವಸಾಯ** (ನಾ). ೧. ಪರಿಶ್ರಮ ; ಪ್ರಯತ್ನ : "ಉತ್ಸಾಹಃ, ವ್ಯವಸಾಯಃ, — ೨ ಮಹಾಕಾರ್ಯ ವಿಷಯವಾಗಿ ಮಾಡಲ್ಪಡುವ ಪ್ರಯತ್ನಕ್ಕೆ ಹೆಸರು" (ಸಿದ್ಧಾಂತಿ. ೬೭). ೨. ಕಾರ್ಯನಿರ್ವಾಹ ; ಕಾರ್ಯಾಚರಣೆ : ಚಿತ್ರಸಂಭವನಂ ಸಂಹರಿಸಲ್ ಕಷಾಯಭಟರಂ ಬೆನ್ನಟ್ಟಲೊಪ್ಪೀ ಮಹಾವ್ಯವಸಾಯಂ ತಮಗಾಗೆ (ಅಜಿಪು. ೧-೫); ಅರಸನೀತನ ಭಕ್ತಿಗಂ ವ್ಯವಸಾಯಕ್ಕಂ ಮೆಚ್ಚಿ ತನ್ನ ತಂದೆರ್ಮೆಗಳೊಳೊಂದುಮಂ ಕೊಳ್ಳದೆ ನೀನೇ ಕೊಳ್ಳೆಂದು ಕೊಟ್ಟೊಡೆ (ಸುಕುಮಾ. ೭-೩೫ ವ) ; ನನ್ನ ವ್ಯವಸಾಯ ಪೂರ್ಣವಾಯಿತು (ಹೊಸಕ್ಕ. ೧೪). ೩. ಕಸುಬು ; ಉದ್ಯೋಗ : ವ್ಯವಸಾಯಕ್ಕೆ ಒಪ್ಪುವ ವೇಷ, ತಾನು ಕೈಕೊಂಡ ಕೆಲಸದ ಎಲ್ಲ ಮಾಹಿತಿ, ಇವೆರಡೆ ಪ್ರಚಾರಕನ ಕೈಪಾಡಿನಲ್ಲಿದ್ದರೆ ತೀರದು (ತಕ್ಕಡಿ. ೧೦೦). ೪. ಸಾಗುವಳಿ ; ಬೇಸಾಯ ; ಒಕ್ಕಲುತನ : ನಮ್ಮ ತಂದೆಯವರು ನೇಗಿಲು ಮೇಲೆ ಎಂದೂ ಕೈಯಿಟ್ಟವರಲ್ಲವಾದರೂ ವ್ಯವಸಾಯದಲ್ಲಿ ನಿಪುಣರು (ಚಂಗಾಳ್ಯ. ೧). [ಸಂ.]

**ವ್ಯವಸಾಯಗಾರ** (ನಾ). ಬೇಸಾಯಗಾರ ; ಒಕ್ಕಲುತನ ಮಾಡುವವನು ; ರೈತ : ವ್ಯವಸಾಯಗಾರನೇ ದೇಶದ ಭಾಗ್ಯ (ಚಂಗಾಳ್ಯ. ೧) ; ವ್ಯವಸಾಯಗಾರರ ಮತ್ತು ನಡುವರ್ಗಗಳವರ ಉತ್ಪನ್ನಕ್ಕೆ ಲಾಭಕರವಾದ ಪೇಟೆ ದೊರೆಯುವಂತೆ ಸೌಕರ್ಯ ಕಲ್ಪಿಸಲಿದೆ (ಹಣಪ್ರ. ೩೪೪). [ವ್ಯವಸಾಯ + — ಗಾರ(< — ಕಾಱ)]

**ವ್ಯವಸಾಯಿ** (ನಾ). ೧. ಉತ್ಸಾಹದಿಂದ ಕೆಲಸಮಾಡುವವನು ; ಕಷ್ಟಪಟ್ಟು ದುಡಿಯುವವನು : ಭುವನೈಕಮಲ್ಲದೇವನ ಭವನದೊಳಂ ತಾನೆ ಮಾನಸಂ ತಾನೆ ಮಹಾವ್ಯವಸಾಯಿ (ಸುಕುಮಾ. ೨೮೦ ಪರಿಶಿಷ್ಟ). ೨. ಕಸುಬುದಾರ : ಮೂಲದಲ್ಲಿ ರೈತನೂ ಕೈಕಸಬಿನ ಚಿಕ್ಕ ವ್ಯವಸಾಯಿಯೂ ತನ್ನ ದುಡಿಮೆಯಿಂದ ದುಡ್ಡು ಗಳಿಸಿ . . . ತನ್ನ ಧನೋತ್ಪಾದನೆಯ ಸಾಧನಗಳ ಮೇಲೆ ತನ್ನದೇ ಒಡೆತನವುಳ್ಳವನಾಗಿರುತ್ತಾನೆ (ಮಾವಾದ. ೧೨೯). [ಸಂ. ವ್ಯವಸಾಯಿನ್]

**ವ್ಯವಸ್ಥಾಪಕ** (ಗು). ೧. ಏರ್ಪಾಡುಮಾಡುವ ; ನಿರ್ವಹಿಸುವ : ಜೀವ ಪರಮಾಣುಗಳ ವಿಕಸನಗುಣದಿಂದ ವ್ಯವಸ್ಥಾಪಕಶಕ್ತಿ (Organising force) ಯೊಂದುಂಟಾಗುತ್ತದೆ (ನಿಶಉ. ೨೩೩). (ನಾ). ೨. ಏರ್ಪಾಡು ಮಾಡುವವನು ; ಮೇಲ್ವಿಚಾರಕ : ದೇಶದ ಹಣದ ವ್ಯವಸ್ಥಾಪಕರು ಧೈರ್ಯದಿಂದ, ನಿಷ್ಪಕ್ಷಪಾತದಿಂದ, ಸಮದರ್ಶಿತೆಯಿಂದ, ದೇಶದ ಪ್ರಯೋಜನದೃಷ್ಟಿಯಿಂದ ವ್ಯಾಪಾರದ ಬೆನ್ನ ಹಿಂದೆ ನಿಲ್ಲಬೇಕು (ಹಣಪ್ರ. ೫೭). [ಸಂ.]

**ವ್ಯವಸ್ಥಿತ** (ಗು). ಸಜ್ಜುಗೊಳಿಸಿದ ; ಕ್ರಮಪಡಿಸಿದ : ದಿಕ್‌ಚತುಷ್ಟಯವ್ಯವಸ್ಥಿತದೇವ ಮಾನವತಿರ್ಯಗ್ನಿನೇಯಜನಸುಖಾರೋಹಣಹೇತು (ಆದಿಪು. ೧೦-೨೨ ವ) ; ಮಕ್ಕಳ ಬೆಳವಣಿಗೆಯ ವ್ಯವಸ್ಥಿತಜ್ಞಾನವೇ ಮನೋವಿಜ್ಞಾನ (ಶಿಕ್ಷದ. ೪೦೮). [ಸಂ.]

**ವ್ಯವಸ್ಥೆ** (ನಾ). ೧. ಏರ್ಪಾಡು ; ಸಜ್ಜು : ಶ್ರೀಧರಭಟ್ಟರ್ . . . ತವಗಂ ಮಹಾಜನಕ್ಕಂ ಪ್ರಜೆಗಂ ಮಾಡಿದ ವ್ಯವಸ್ಥೆಯಂ (ಎಇ. XX, ೬೭-೧೫ ; 1012) ; ದೇವರಿಗೆ ನಮ್ಮ ಹಳ್ಳಿಗರು ಸಕಲ ವ್ಯವಸ್ಥೆಗಳನ್ನೂ ಪೂರೈಸಿದ್ದಾರೆ (ಜೋರದೇ. ೭). ೨. ಕಟ್ಟಳೆ ; ನಿಯಮ ; ಕ್ರಮ : ಗಾವುಣ್ಣ ನಾ[ಗಿ]ಯಮ್ಮಗಮಱುವದಿಂಬರ್ಗ್ಗಂ ಕೊಟ್ಟ ವ್ಯವಸ್ಥೆ ಯಾವುದೆನ್ನೊಡೆ (ಸೌಇಇ. Xi-i . ೪೩-೧೭ ; 970) ; ಅದರ್ಕೆ ಲಿಂಗವಚನ ವ್ಯವಸ್ಥೆಯಿಲ್ಲ (ಶಮದ. ೪೭ ವೃತ್ತಿ). ೩. ಇರವು ; ಸ್ಥಿತಿ : "ತನ್ನಿರವಿನಲಿ ವ್ಯವಸ್ಥೆಯಲಿ ಸ್ಥಿತಿಯೆನಿಕು" (ಮಂಗರಾ. ೧೪೩-೨೨). ೪. ರಚನೆ ; ವಿನ್ಯಾಸ : ಕಾವ್ಯದ ವ್ಯವಸ್ಥೆ ಹೇಗೆಂದು ಕೇಳಬಹುದು (ಧ್ವನ್ಯಾಲೋ. ೨೫೨). [ಸಂ. ವ್ಯವಸ್ಥಾ]

**ವ್ಯವಹರಣ** (ನಾ). ರೂಢಿ ; ಬಳಕೆ : ವ್ಯವಹರಣತದಾಚರಣಪ್ರವಣನೊಳಕ್ಕುಂ ಸಮಂತು ಗ ಪ್ರತ್ಯಯಂ (ಶಮದ. ೨೦೪). [ಸಂ.]

**ವ್ಯವಹರಣೆ** (ನಾ). ೧. ನಡತೆ ; ಆಚರಣೆ ; ವರ್ತನೆ : ಸುಳಿವ ಸುತ್ತುವ ವ್ಯವಹರಣೆಯುಳ್ಳನ್ನಕ್ಕರ ಅಜಿಯೆನಜಿಯೆ ನೆಜೆ ಶಿವಪಥವ (ಅವಚಂ. ೬೭-೨೯೪). ೨. ವಹಿವಾಟು : ಇವರದಾವನ ಪಕ್ಷಪಾತವ್ಯವಹರಣೆಯವರಲ್ಲ ಕೇಳು (ಕುವ್ಯಾಉ. ೯-೧೪) ; ಯುಕ್ತವಾದ ವ್ಯವಹರಣೆಯ ಮೂಲಕ . . . ಆಶ್ವಾಸನ ಕೊಡಲಾಗಿದೆ (ಭಾಧಾನ. ೧೯). [ಸಂ. ವ್ಯವಹರಣ]

**ವ್ಯವಹರಿಸು** (ಕ್ರಿ). ೧. ಉದ್ಯೋಗಿಸು ; ತೊಡಗು : "ಪಣತೀತಿ ವ್ಯವಹರಿಸಿದಪುದೆಂಬುದು" (ಕಾಶಕ್ಯ. ೩೪). ೨. ವ್ಯವಹಾರ ಮಾಡು ; ವಹಿವಾಟು ನಡೆಸು : ವ್ಯಾಪಾರಿಸುವುದಕ್ಕೆ ಯೋಗ್ಯವಲ್ಲದಂತಪ್ಪ ಠಾವಿನೊಳ್ ಆವನೊರ್ವಂ ವ್ಯವಹರಿಸಲಿಚ್ಛೈಸಿಹಂ . . . ಕೇಡನೈದುವಂ (ಪಂಚತಂ. ೨೯-೧೧) ; ಮಕ್ಕಳು ಆಗುವ . . . ವ್ಯವಹರಿಸುವ ಎಲ್ಲ ಸನ್ನಿವೇಶಗಳೂ ಅವರ ಜೀವನದಲ್ಲಿ ಪರಿಣಾಮ ಹುಟ್ಟಿಸುತ್ತಲೇ ಇವೆ (ಶಿಕ್ಷದ. ೫೩). ೩. ಉಂಟಾಗು ; ಪ್ರಾಪ್ತವಾಗು : ಸಂಧ್ಯಕ್ಷರಮನ ಯಥಾರ್ಥದಿಂ ವ್ಯವಹರಿಸುಗುಮೇಕಾರಮಾದಿಯಾಗಿರೆ (ಕಾವ್ಯಾವ. ೧೨) ; ಅವಿಕೃತಿಗಳೆವರ್ಣ ಮೊವರ್ಣವಂತ್ಯವೆನಿಸಿದ ನಿಪಾತಮವಧಾರಣೆ ತಳ್ತ ವಿಶಂಕೆಗಳೆಂಬಿವಱೊಳ್ ವ್ಯವಹರಿಸದು ಸಂಧಿಯಾ ಪ್ಲುತಕ್ಕಮಭಾವಂ (ಶಮದ ೫೭) ; ವ್ಯವಹರಿಸಿತೀ ಕುಹಕಮತಿ ನಿಮ್ಮ ನಿಪಾಲನಮತದಿ (ತೊರರಾ. ೨-೧-೩೩). ೪. ರೂಢಿಗೆ ಅಥವಾ ವಾಡಿಕೆಗೆ ತರು ; ಬಳಸು : ನಮ್ಮ ಕಾಲವನ್ನು ವಿಜ್ಞಾನದ ಯುಗವೆಂದು ವ್ಯವಹರಿಸುವುದು ಎಲ್ಲರಿಗೂ ತಿಳಿದಿರುವ ಸಂಗತಿ (ಸಾಹಿಶ. ೬೦). [ವ್ಯವಹರಣ + - ಇಸು]

**ವ್ಯವಹಾರ** (ನಾ). ೧. ಕೆಲಸ ; ಉದ್ಯೋಗ : ವ್ಯವಹಾರಕ್ಕೂ ಆಹಾರಕ್ಕೂ ದಾಕ್ಷಿಣ್ಯ ಮಾಡಬಾರದು (ಗಾದೆ). ೨. ಕಾರ್ಯಭಾರ ; ವಹಿವಾಟು : ಭಾರತದ ವಾಣಿಜ್ಯ ವ್ಯವಹಾರಗಳನ್ನು ಹೆಚ್ಚಿಸುವುದು ಹೇಗೆ (ಶಿಕ್ಷದ. ೫೪೯) ; ಲಿಪಿರಹಿತಭಾಷೆಯನ್ನು ಆಡುವವರ ವ್ಯವಹಾರವೆಲ್ಲಾ ಹೆಚ್ಚಾಗಿ ಸಂಭಾಷಣೆಯಲ್ಲೇ ನಡೆಯುತ್ತವೆ (ದ್ರಾವಿವಿ. ೪೫). ೩. ನಡತೆ ; ಆಚರಣೆ ; ವರ್ತನೆ : ವ್ಯಂಗ್ಯವಾದ ನಾಯಿಕಾ ನಾಯಕರ ವ್ಯವಹಾರವು (Behaviour) ಪ್ರಸ್ತುತಕ್ಕೆ (= ವ್ಯಾಚ್ಯಾರ್ಥಕ್ಕೆ) ಪೋಷಕ (ಧ್ವನ್ಯಾಲೋ. ೨೯ ಅಡಿಟಿ). ೪. ದಿನನಿತ್ಯ ಮಾಡುವ ಕೆಲಸ ; ದೈನಂದಿನಕಾರ್ಯ : ವ್ಯವಹಾರ ಮಂಗಳಾಚಾರವೆಲ್ಲವಂ ತೀರ್ಚಿ ಮುಖ್ಯಮಾಂಗಲ್ಯಮನಾ ಯುವತಿ ಜಿನಪೂಜೆಯಂ ಮಾಡಿ ವಿಚಿತ್ರಮೆನಿಪ್ಪ ಚಿತ್ರಶಾಲೆಗೆ ಬಂದಳ್ (ಪಂರಾಮಾ. ೩-೮೩). ೫. ಸಂಬಂಧ ; ಬಳಕೆ : ಯುವತಿಯರ ವ್ಯವಹಾರವೆಂಬ ವಿಕಳತೆ ಹತ್ತಿ ಯೋಗದ ಸಮತೆ ಸಡಿಲಿತ್ತು ನೋಡಾ (ಸಿದ್ಧೇವ. ೧೫೦). ೬. ರೂಢಿ ; ವಾಡಿಕೆ. ೭. ವ್ಯಾಜ್ಯ ; ದಾವೆ : ಯಾವುದಾದರೂ ಉಚ್ಚನ್ಯಾಯಾಲಯವು ವ್ಯವಹಾರದ ಬಾಬಿನ ವ್ಯವಹರಣೆಯಲ್ಲಾಗಲಿ . . . ಕೊಟ್ಟ ನಿರ್ಣಯದ ಮೇಲೆ . . . ಉಚ್ಚತಮ ನ್ಯಾಯಾಲಯಕ್ಕೆ ಅಪೀಲು ಮಾಡಲು ಅವಕಾಶವಿರತಕ್ಕದು (ಭಾಧಾನ. ೬೧).

**ವ್ಯವಹಾರಹೂಡು** = ೧. ವ್ಯಾಪಾರ ಆರಂಭಿಸು ; ಉದ್ಯೋಗವನ್ನು ಪ್ರಾರಂಭಿಸು : ನಾನು ಫಿಲಿಡೆಲ್ಫಿಯಾದಲ್ಲಿ ವ್ಯವಹಾರಮಾಡುವುದನ್ನು ಬಲವಾಗಿ ಶಿಫಾರಸು ಮಾಡಿ ಅದರಿಂದ ನನ್ನ ಅಭಿವೃದ್ಧಿಯಾಗುವುದೆಂದು ಬರೆದಿದ್ದನು (ಬೆಂಜನ್. ೪೮). ೨. ಮೊಕದ್ದಮೆ ಹೂಡು ; ದಾವೆ ಮಾಡು : ಒಬ್ಬನ ಮೇಲೆ ನ್ಯಾಯಾಸ್ಥಾನದಲ್ಲಿ ವ್ಯವಹಾರಹೂಡು, ಕ್ರಮ ನಡಸು, ದಾವಾ ಹಾಕು, ವ್ಯಾಜ್ಯ ಹೂಡು (Proceed Against. ಇಂಕನ). . [ಸಂ.]

**ವ್ಯವಹಾರಕಾಲ** (ನಾ). ೧. ಕೆಲಸದ ವೇಳೆ ; ವಹಿವಾಟಿನ ಸಮಯ. ೨. [ಜೈನ] ಸಮಯ, ಆವಲಿ, ಲವ, ಘಟಿಕೆ ಮೊದಲಾದ ಸಮಯರೂಪ ಕಾಲ : ವ್ಯವಹಾರಕಾಲಮೆಂಬುದು ಮುಖ್ಯಕಾಲನಿರ್ವರ್ತಿತ ಕ್ರಿಯಾರೂಪಂ (ಆದಿಪು ೬-೪೮ ವ) ; ಕಾಲಮಿತ್ತೆ ಜಿನಕ್ಕು ಪರಮಾರ್ಥಕಾಲಮೆಂದುಂ ವ್ಯವಹಾರಕಾಲಮೆಂದು (ಶ್ರಾವಕಾ. ೪-೧೦). [ಸಂ.]

**ವ್ಯವಹಾರಕುಶಲ** (ನಾ). ಲೌಕಿಕವಹಿವಾಟಿನಲ್ಲಿ ಜಾಣನಾಗಿರುವವನು ; ದೈನಂದಿನಕಾರ್ಯಗಳಲ್ಲಿ ಕೌಶಲ್ಯವುಳ್ಳವನು : ವ್ಯವಹಾರಕುಶಲವೈದಿಕರಾದ ಸುಬ್ಬಣ್ಣಾಚಾರ್ಯರಲ್ಲಿ ಕ್ರಮೇಣ ಒಂದು ದುಷ್ಟತನವು ತಲೆಯೆತ್ತುತ್ತದೆ (ಸಮಜೀ. ೨೯ ಪೀಠಿಕೆ). [ಸಂ.]

**ವ್ಯವಹಾರಚತುರ** (ನಾ). = ವ್ಯವಹಾರಕುಶಲ : ವ್ಯವಹಾರಚತುರನಾದ . . . ಅವನನ್ನು ಕರೆದು ಬರಮಾಡಿಕೊಂಡಿದ್ದನು (ಇಪ್ಪಕ. ೧೬೩). [ಸಂ.]

**ವ್ಯವಹಾರಚತುಷ್ಟಯ** (ನಾ). ಒತ್ತೆ, ವಿಕ್ರಯ, ದಾನ ಮತ್ತು ವಿನಿಮಯಗಳೆಂಬ ನಾಲ್ಕು ಬಗೆಯ ವಹಿವಾಟುಗಳು : ಇಲ್ಲಿಂದಾ ಮುಂದೆ ನೀಉ ಮಾಡುವ ದಾನ ಅಧಿಕ್ರಯ ಪರಿವರ್ತನೆಗಳೆಂಬ ವ್ಯವಹಾರಚತುಷ್ಟಯಕ್ಕು ಯೋಗ್ಯವಾಗಿ (ಎಕ. XVI, ಚಿಕ್ಕನಾ. ೫೩-೨೭ ; 1623). [ಸಂ.]

**ವ್ಯವಹಾರಚಾತುರ್ಯ** (ನಾ). ಲೌಕಿಕವಹಿವಾಟಿನಲ್ಲಿ ಇರುವ ಚತುರತೆ : ವ್ಯವಹಾರಚಾತುರ್ಯವಿಲ್ಲದಿದ್ದರೆ ಇಂದು ಬಾಳುವುದೇ ಅಸಾಧ್ಯ (ನಿಶಉ. ೧೧೯) ; ಅದರಲ್ಲಿ ಭೀಮೂನ ಕಾರ್ಯಕುಶಲತೆಯೂ ಮೇನಕಿಯ ವ್ಯವಹಾರಚಾತುರ್ಯವೂ ಮುಖ್ಯವಿರುವುದು ಎಲ್ಲರಿಗೂ ಗೊತ್ತಿದ್ದಂತೆ ತೋರಿತು (ಸಮಜೀ. ೭೬೩). **[ಸಂ.]**

**ವ್ಯವಹಾರಜ್ಞಾನ** (ನಾ). ಲೌಕಿಕವಹಿವಾಟುಗಳಲ್ಲಿ ಇರುವ ತಿಳಿವಳಿಕೆ, — ಅರಿವು : ಅದರ ಉದ್ದೇಶವೂ ಕೂಡ . . . ವ್ಯವಹಾರಜ್ಞಾನವನ್ನು ಜನರಿಗೆ ಒದಗಿಸುವುದೇ ಆಗಿದೆ (ಜೈನಪ. ೮೩೭). **[ಸಂ.]**

**ವ್ಯವಹಾರನಯ** (ನಾ). [ಜೈನ] "ಗುಣಧರ್ಮಕೃತ,ವ್ಯಕ್ತಿತ್ವಕೃತಭೇದಗಳ ಮೇಲೆ ದೃಷ್ಟಿಯನ್ನು ಬೀರಿ ವಿಶ್ವದ ನಿರೀಕ್ಷಣ ಮಾಡುವುದು; ಸಂಗ್ರಹ ನಯಕ್ಕೆ ವಿರುದ್ಧವಾದುದು; ವಸ್ತುವಿನ ಸಾಮಾನ್ಯ ಭಾವವನ್ನನುಲಕ್ಷಿಸಿ ವೈಶಿಷ್ಟ್ಯವನ್ನು ಅನುಲಕ್ಷಿಸುವುದು" (ಜೈನಕೋ. ೨೪೦) : ವ್ಯವಹಾರನಯಾಶ್ರಿತ ಶುದ್ಧವನಿಶ್ಚಯವಿಶಿಷ್ಟ ರತ್ನತ್ರಯಮೆಂಬಿವು ಮುಕ್ತಿಗೆ ಕಾರಣಮಪ್ಪುವು ವಿಮಳ ಧ್ಯಾನಮಂತರಕ್ಕೆ ನಿಮಿತ್ತಂ (ಪಾರ್ಶ್ವಪು. ೧೬-೧೨೨). **[ಸಂ.]**

**ವ್ಯವಹಾರಪಲ್ಯ** (ನಾ). [ಜೈನ] ಒಂದು ಕಾಲದ ಅವಧಿ : ಉತ್ತರಪಲ್ಯವ್ಯವಹಾರ ಬೀಜತ್ವದಿಂ ಆದ್ಯಂ ವ್ಯವಹಾರಪಲ್ಯಮೆಂಬುದು (ತತ್ತ್ವಪ್ರ. ೧೭೫) ; ಮಱಿಗುಱಿಯ ರೋಮಂಗಳಂ ಕೊಂಡು . . . ವರ್ಷಕ್ಕೊಂದಂ ಪೊಱಗಿಕ್ಕಲು ವಂದಿಂಗಂ ತಿರ್ಗುಮಯದು ವ್ಯವಹಾರಪಲ್ಯಮಕ್ಕುಂ (ಶ್ರಾವಕಾ. ೫-೧೫). **[ಸಂ.]**

**ವ್ಯವಹಾರಶೂನ್ಯ** (ನಾ). ಲೌಕಿಕಜ್ಞಾನವಿಲ್ಲದವನು ; ಪ್ರಾಪಂಚಿಕ ರೀತಿ ನೀತಿಯನ್ನು ಅರಿಯದವನು : ನನ್ನ ಪರಮೈಕಾಂತವೇ ನನ್ನನ್ನು ಸುಖಸ್ವಪ್ನದಲ್ಲಿ ಸೆರೆಹಿಡಿದು ವ್ಯವಹಾರಶೂನ್ಯನನ್ನಾಗಿ ಮಾಡಿದೆ (ಜಯಂತ. ೧೦೦). **[ಸಂ.]**

**ವ್ಯವಹಾರಿ** (ಗು). ೧. ರೂಢಿಯ ; ವಾಡಿಕೆಯ ; ಸಾಂಪ್ರದಾಯಿಕ. ೨. ಕಾಯದೆಯ ಕಾರ್ಯಾಚರಣೆಗೆ ಸಂಬಂಧಿಸಿದ ; ಕಾನೂನುಬದ್ಧವಾದ. (ನಾ). ೩. ವ್ಯಾಪಾರ ಮಾಡುವವನು ; ವ್ಯಾಪಾರಿ : ಜಂಬೂದ್ವೀಪದ ವ್ಯವಹಾರಿ ಖಂಡಭಂಡವ ತುಂಬಿ ಕುಂಭಿನಿಯುದರದ ಮೇಲೆ ಪಸರವನಿಕ್ಕಿದ (ಅವಚಂ. ೧೮). ೪. ದಾವಾಹೂಡಿದವನು ; ವ್ಯಾಜ್ಯಮಾಡುವವನು. **[ಸಂ. ವ್ಯವಹಾರಿನ್]**

**ವ್ಯವಹಾರಿಕ** (ಗು). ೧. ವ್ಯಾಪಾರಕ್ಕೆ ಸಂಬಂಧಿಸಿದ ; ಉದ್ಯೋಗಕ್ಕೆ ಸಂಬಂಧಿಸಿದ. ೨. ರೂಢಿಯ ; ವಾಡಿಕೆಯ. ೩. [ವೇದಾಂತ] ಲೌಕಿಕ; ಪ್ರಾಪಂಚಿಕ : ಶ್ರೀ ಶಂಕರರು . . . ಉಪಾಸನೆಯು ವ್ಯವಹಾರಿಕಸ್ಥಿತಿಯಲ್ಲಿ ಮಾಡಬೇಕಾಗಿದೆಯಲ್ಲದೆ ಪಾರಮಾರ್ಥಿಕಸ್ಥಿತಿಯಲ್ಲಿ ಅಲ್ಲವೆಂದು ಹೇಳಿರುತ್ತಾರೆ (ಜೀವಾತ್ಮ. ೩೦೧). (ನಾ). ೪. = ವ್ಯವಹಾರಿ ೩. ೫ = ವ್ಯವಹಾರಿ ೪. **[ಸಂ.]**

**ವ್ಯವಹಿತ** (ಗು). ೧. ಪ್ರತ್ಯೇಕವಾಗಿಟ್ಟ ; ಬೇರೆ ಇರಿಸಿದ. ೨. ಮುಚ್ಚಿಟ್ಟ; ಮರೆಮಾಡಿದ : ಆಕಾಶಸ್ಫಟಿಕಾಂತರಿತ ದಹನಾರ್ಚಿಯಂತಾನುಮಚ್ಛಸಲಿಲವ್ಯವಹಿತ ಪದ್ಮರಾಗಮಣಿಯಂತೆ . . . ಜಿನಾರ್ಭಕಂ ಬಳೆಯೆ (ಶಾಂತಿಪು. ೯-೨೦೪ ವ); ನಭೋವಿಭಾಗಮಾಚ್ಛಾದಿತದಿಙ್ಮುಖಂ ವ್ಯವಹಿತಾಖಿಲದೃಷ್ಟಿಪಥಂ (ಪಂಚತಂ. ೧೭೫-೬). ೩. ನಿರಂತರವಾಗಿರದ ; ಒಂದನ್ನು ಬಿಟ್ಟು ಒಂದು ಇರುವ; ಅನುಕ್ರಮವಿಲ್ಲದ. ೪. ವಿರೋಧವಾದ ; ಅಡ್ಡಿಯಾದ. ೫. ಕೈಬಿಟ್ಟ; ಲೋಪವಾದ. ೬. ಮೀರಿದ ; ದಾಟಿದ. ೭. ನಾಚಿಕೆಗೀಡಾದ; ಅವಮಾನಕ್ಕೀಡಾದ. ೮. ನೆರವೇರಿಸಿದ ; ಆಗುಮಾಡಿದ. (ನಾ). ೯. ಬಹಳ ಅಂತರ ; ದೂರ. ೧೦. [ಕಾವ್ಯಮೀ] ವಾಕ್ಯದೋಷಗಳಲ್ಲಿ ಒಂದು : ಚ್ಯುತಯಾಥಾಸಂಖ್ಯಂ ವ್ಯವಹಿತಮಚ್ಛಂದಂ ವಿಸಂಧಿಕಂ ನೇಯಾರ್ಥಂ (ಕವಿರಾ. ೧-೬೯); ವ್ಯವಹಿತಮೇಕಾರ್ಥಂ . . . ಭಿನ್ನವೃತ್ತಮೆಂದಿಂತು ವಾಕ್ಯದೋಷಮಿವಕ್ಕುಂ (ಕಾವ್ಯಾವ. ೪೫೫) ; ಶಬ್ದಪುನರುಕ್ತಿ ಅರ್ಥಪುನರುಕ್ತಿ . . . ವ್ಯವಹಿತ ವಿಸಂಧಿ ನೇಯಾರ್ಥವೆಂಬೆಂಟು ಶಬ್ದದೋಷಂಗಳಿಲ್ಲದೆ (ವಿವೇಕ. ೨೨೭). ೧೧. ಯಮಕದ ಒಂದು ಭೇದ : ವ್ಯವಹಿತಕ್ಕೆ: ಮಾಣಿಕದಂತೊಪ್ಪಿದನೀ ಮಾಣಿ ಕರಂ ಕಟಿಯೆ ಚೆಲ್ವುವಡೆದೆಂಬಿನೆಗಂ ಕ್ಷೋಣಿಯನಳೆಯಲ್ ಮುನ್ನಂ ಕ್ಷೋಣಿಮನಂ ವಿಷ್ಣು ತಾನೆ ವಾಮನನಾದಂ (ಕಾವ್ಯಾವ. ೫೨೬). **[ಸಂ.]**

**ವ್ಯವಹೃತಿ** (ನಾ). ಬಳಕೆ ; ವ್ಯವಹಾರ : ಕೃತಕೃಷಿಕರ್ಮವ್ಯವಹೃತಿಯಿಂ ಕೃತಯುಗಮಂಬ ವಿಕಲ್ಪಮನಾದಿಕಾಲದೊಳ್ ಪುಟ್ಟಿಸಿದಂ (ಪಂರಾಮಾ. ೧-೯೩) ; ಕರಣೇಂದ್ರಿಯ ವ್ಯವಹೃತಿಗಳೆಲ್ಲವುಂ ಲಿಂಗಕರಣೇಂದ್ರಿಯವ್ಯವಹೃತಿಗಳಾಗಿ (ಪದ್ಮರಾ. ೧-೧೨). **[ಸಂ.]**

**ವ್ಯವಾಯ** (ನಾ). ೧. ಭಿನ್ನವಾಗುವಿಕೆ ; ಬೇರ್ಪಡುವಿಕೆ. ೨. ಕಾಣೆಯಾಗುವಿಕೆ ; ಮರೆಯಾಗುವಿಕೆ ; ಅದೃಶ್ಯ. ೩. ಹೀನಸ್ವಭಾವ ; ಚಂಚಲಗುಣ. ೪. ಅಡೆತಡೆ ; ವಿಘ್ನ ; ತೊಂದರೆ. ೫. ಸುರತಸುಖ ; ಸಂಭೋಗ : "ಸುರತದಲ್ಲಿಯುಂ ವ್ಯವಾಯಮೆಂಬುದು" (ಹಲಾಯು. ೧೩೬-೨೯). ೬. ದುಃಖ ; ವ್ಯಥೆ ; ಉದ್ವೇಗ : "ಉದ್ವೇಗ ಚಂಚಲಮೇಕಾಂತಮಿವು ವ್ಯವಾಯಮೆನಿಕುಂ" (ನಾನಾರ. ೧೫೩). **[ಸಂ.]**

**ವ್ಯಷ್ಟಿ** (ನಾ). ೧. ಒಬ್ಬ ವ್ಯಕ್ತಿಗೆ ಸಂಬಂಧಿಸಿದುದು. ೨. ಒಬ್ಬ ವ್ಯಕ್ತಿ : ಪೂಜಿಪೆವಲ್ತೆ ವ್ಯಷ್ಟಿರೂಪದಿನಿಳಿದ ಸೃಷ್ಟಿಯ ಸಮಷ್ಟಿಯಂ (ಶ್ರೀರಾಮಾ. ೧೧-೨೯೭). ೩. ಸಮಷ್ಟಿಯಿಂದ ಬೇರೆಯಾಗಿರುವುದು ; ಬಿಡಿಬಿಡಿಯಾಗಿರುವುದು : ಏಕವ್ಯಕ್ತಿವಾದರೆ ಯಾವ ವ್ಯಕ್ತಿವೆಂತ ಹೇಳಲ್ಪಡುತ್ತದೆಯೋ ಹಾಗೆ ಏಕಸೂಕ್ಷ್ಮಶರೀರವೂ ವ್ಯಷ್ಟಿಯೆಂತಲೂ ಹೇಳಲ್ಪಡುವುದು (ಈಶ್ವಸ್ವ. ೧೫-೨) ; ವ್ಯಷ್ಟಿಯಲ್ಲಿ ಸಮಷ್ಟಿ : ಸಮಷ್ಟಿಯಲ್ಲಿ ವ್ಯಷ್ಟಿ ಕಂಡುಬಂದಂತೆ ಅಕ್ಕನ ಜೀವನದಲ್ಲಿ ಹತ್ತಾರು ಮುಖಗಳನ್ನು ಕಾಣಬಹುದು (ಕರ್ನಾಟ. ೬೫). 'ಸಮಷ್ಟಿ' ಪರಾ. **[ಸಂ.]**

**ವ್ಯಸನ** (ನಾ). ೧. ದುಃಖ ; ವ್ಯಥೆ : ಕೆಟ್ಟ ಸುದ್ದಿ ಕೇಳಿ ಬಹಳ ವ್ಯಸನವಾಯಿತು (ರೂಢಿ). ೨. ಗೀಳು ; ಅತ್ಯಾಸಕ್ತಿ : ಅತಿರಭಸರಣವ್ಯಸನಮನಾತ್ಮೀಯಶಾಸನಾಯತ್ತಂ ಮಾಡಿದಂ (ಪಂಪಭಾ. ೧೦-೪೧ ವ) ; ಪೋ ಮಾಣೆನ್ನನ್ನಕವಿಸ್ತುತಿವ್ಯಸನಮಂ (ಕಾದಂಪೂ. ೩) ; ದೇವರ್ದಿಗ್ವಿಜಯವ್ಯಸನಾವಷ್ಟಂಭದೊಳೆ ನಡೆಯದಾಟವಿಕರೊಳಾದೀ ವಿಗ್ರಹಕ್ಕೆ ನಡೆವುದಿದಾವುದು ಜಸಂ (ಪಂರಾಮಾ. ೪-೪೭). ೩. ದುರಭ್ಯಾಸ ; ಕೆಟ್ಟಚಟ: ವ್ಯಸನತೃಷ್ಣೆಯು ಕೀಲುಚಿತ್ತದ ಮಿಸುನಿಯೊಳು ಬೆರೆಸಿತು (ಕುವ್ಯಾಸ. ೧೩-೧೪) ; ಚೀನದೇಶದ ಜನರಿಗಂತೂ ಅಫು ತಿನ್ನುವ ವ್ಯಸನವೂ ಸೇದುವ ವ್ಯಸನವೂ ಪರಮಾವಧಿ ಯುಂಟು (ಮುಂಬಯಿ. ೪-೪೦). ೪. ಚಿಂತನೆ ; ಧ್ಯಾನ: ಧಾತ್ರಂ ಪದಂಗೆಯ್ಯ ಸಂತೋಸದಿಂ ಧರ್ಮದೊಳೊಂದಿ ನಿರ್ಮಿಸಿದನೀ ವಿಶ್ವಂಭರಾರಕ್ಷಣವ್ಯಸನವ್ಯಾಪ್ತ ಯಶೋವಿಳಾಸವಿಳಸದ್ವೂನಾಕನಂ ನಾಕನಂ (ಎಕ. V, ಹಾಸನ. ೭೬-೪೭ ; 1165).

ವ್ಯಸನಪಡು = ದುಃಖಿಸು ; ಶೋಕಿಸು : ಸ್ವಾಮಿ, ತಾವು ಇಷ್ಟು ವ್ಯಸನಪಡತಕ್ಕ ಅಗತ್ಯವಿಲ್ಲ (ನೀತಿಚಿಂ. VII, ೨೩). **[ಸಂ.]**

**ವ್ಯಸನಿ** (ನಾ). ೧. ದುರ್ದೈವಿ ; ದುಃಖಿ. ೨. ಕೆಟ್ಟಚಟವುಳ್ಳವನು; ದುರಭ್ಯಾಸಿ : ಜ್ಞಾತಿ ಬಹಿಷ್ಕೃತಂ ವ್ಯಸನಿ . . . ವಿಕಳತಂತ್ರನನಿಶ್ಚಿತಮಂತ್ರನಾಗಳುಂ (ಪಂಚತಂ. ೨೨೦-೭) ; ನಾನು ಕಾಮುಕನಾದರೂ ವ್ಯಸನಿಯಲ್ಲ (ರಕ್ತಧ್ವ. ೧೭೦). ೩. ಅತ್ಯಾಸಕ್ತಿಯುಳ್ಳವನು ; ತಲ್ಲೀನ : ಪೊಸ ಪಂದಿವೇಂಟೆಯ ವ್ಯಸನಿ ಕೊಲ್ಲುತಲಿರೆ (ನನ್ನಕಾ. ೧೦-೨೧). **[ಸಂ. ವ್ಯಸನಿನ್]**

**ವ್ಯಸ್ತ** (ಗು). ೧. ಕೆದರಿದ ; ಚೆಲ್ಲಾಪಿಲ್ಲಿಯಾದ ; ಹರಡಿದ : ವ್ಯಸ್ತರಜಸ್ತತಿ ಯಾಯ್ತಾಳಾವಳಯಂ (ಚಂದ್ರಪು. ೩-೯೪). ೨. ಬೇರ್ಪಡಿಸಿದ ; ಪ್ರತ್ಯೇಕಿಸಿದ. ೩. ಬೇರೆಬೇರೆಯಾದ ; ಭಿನ್ನವಾದ : ವ್ಯಸ್ತವಯಸ್ಕರಾದ ಈ ಇಬ್ಬರು ಸ್ನೇಹಜೀವಿಗಳ ನಡುವಿನ ಅದೇ ಆ ಹಳೆಯ ನಗೆಯಾಟ ನಡೆದಾಗ ನನ್ನ ಹೃದಯ ಹಿಗ್ಗಿ ಹತ್ತಾಗುತ್ತದೆ (ಇಪ್ಪತ. ೩೭). ೪. ಗಾಬರಿಗೊಂಡ ; ಕಾತರಗೊಂಡ. ೫. ತಿರುವುಮುರುವಾದ; ತಲೆಕೆಳಗಾದ : 'ವ್ಯಸ್ತಜ್ಞಾನ' ಪರಾ. ೬. ಜಾರಿದ ; ಕಳಚಿಕೊಂಡ : ಗಳಿತಾಶ್ರುಪ್ರವಿಲೋಚನಂ ಕುಚತಟವ್ಯಸ್ತಾಂಬರಂ ಸ್ರಸ್ತಕುಂತಳಕೇಶಂ (ಗದಾಯು. ೧೦-೧೩). (ನಾ). ೭. ಬೇರೆ ; ಪ್ರತ್ಯೇಕ : ಬೆರಸಿರೆ ಸಮಾಸದೊಳ್ ಬಂಧುರಮಾಗದು ಕಾವ್ಯಬಂಧಮೆಂದುಂ ಕೃತಿಯೊಳ್ ದೊರೆಕೊಳ್ಳ ಪದವಿಶೇಷ್ಯಾಂತರಮದಱಿಂ ವ್ಯಸ್ತಮಾಗಿ ಪೇೞ್ಗೆ (ಕವಿರಾ. ೨-೯೨). ೮. ಪ್ರತ್ಯೇಕ ವಾಗಿರುವವನು : ವ್ಯಸ್ತನೆನಿಸುವ ಸರ್ವರೊಳಗೆ . . . ವಿಶುದ್ಧಾತ್ಮ ಲೋಕದೊಳು (ಹಸಾರ. ೨೨-೨೨). ೯. ಕೆದರಿದುದು ; ಚೆದರಿದುದು : "ವ್ಯಸ್ತಃ, ಅಪ್ರಗುಣಃ, ಅಕುಲಃ — ೩ ಕೆದರಿದ್ದು, ಭಿನ್ನಿಸಿ ಹೋದದ್ದು, ಚದರಿಹೋದದ್ದು, ಕೆದರಿಕೊಂಡಿರುವದು"

(ಸಿದ್ಧಾಂತಿ. ೩೪೨). ೧೦. (?) : ಆಸನ್ನಭವ್ಯಜನಾರಾಧ್ಯಂಗಳಾಗಿ ದರ್ಶನವಿಶುದ್ಧಿಸಹಿತ ಸಮಸ್ತಂಗಳುಂ ವ್ಯಸ್ತಂಗಳುಂ ತೀರ್ಥಕರನಾಮಕರ್ಮಾಸ್ರವಕಾರಣಂಗಳಪ್ಪುದರಿಂ (ತತ್ತ್ವಪ್ರ. ೨೬೬). **[ಸಂ.]**

**ವ್ಯಸ್ತಪದ** (ನಾ). ೧. ಗೊಂದಲಮಯವಾದ ಹೇಳಿಕೆ. ೨. [ವ್ಯಾಕ] ಪ್ರತ್ಯೇಕವಾದ ಪದ ; ಸಮಾಸಪದವಲ್ಲದುದು. **[ಸಂ.]**

**ವ್ಯಸ್ತರೂಪಕ** (ನಾ). [ಕಾವ್ಯಮೀ] ರೂಪಕಾಲಂಕಾರದ ಒಂದು ಭೇದ ; ಸಮಾಸಪದಘಟಿತವಲ್ಲದ ರೂಪಕ : ಕುಸುಮಂ ಸ್ಮಿತಮಳಿನಯನಂ ಕಿಸಲಯಮಧರಂ . . . ಎಂಬುದಿದಸಮಸ್ತಂ ವ್ಯಸ್ತರೂಪಕಕ್ರಮಂ (ಕವಿರಾ. ೩-೧೪). IP ಸ್ಮಿತಕುಸುಮ, ಅಧರಪಲ್ಲವ ಎಂಬುವು ಸಮಸ್ತರೂಪಕ, ಕುಸುಮಂ ಸ್ಮಿತಂ, ಕಿಸಲಯಮಧರಂ ಎಂಬುವು ವ್ಯಸ್ತರೂಪಕ. **[ಸಂ.]**

**ವ್ಯಳೀಕ** 'ವ್ಯಲೀಕ' ನೋ.

**ವ್ಯಾಕರಣ** (ನಾ). ೧. ವಿಭಜನೆ ; ವಿಶ್ಲೇಷಣೆ. ೨. ಭಾಷೆಯ ನಿಯಮಗಳನ್ನು ತಿಳಿಸುವ ಶಾಸ್ತ್ರ ; ಆರು ವೇದಾಂಗಗಳಲ್ಲಿ ಒಂದು : ವ್ಯಾಕರಣಕಾವ್ಯನಾಟಕ ಲೋಕಕಳಾಸಮಯಮಾದಳಂಕೃತಿಗಳೊಳಂ (ಕವಿರಾ. ೧-೬) ; ಉಭಯವ್ಯಾಕರಣಪರಿಣತಂ ಕವಿರತ್ನಂ (ಅಜಿಪು. ೧೨-೪೩) ; ಶಬ್ದಗಳ ಸಾಧುತ್ವ ಅಥವಾ ಪ್ರಯೋಗಾರ್ಹತೆ ಬೋಧಿಸುವ ವಿಷಯವು ವ್ಯಾಕರಣವೆಂದು ವಿಶದವಾಗುವುದು (ಸಂಶೋಧ. ೬೮). **[ಸಂ.]**

**ವ್ಯಾಕರಣಕಾರ** (ನಾ). ವ್ಯಾಕರಣಶಾಸ್ತ್ರವನ್ನು ರಚಿಸುವವನು ; ವೈಯಾಕರಣಿ : ಕೆಲಂಬರ್ ವ್ಯಾಕರಣಕಾರರ್ ಸ್ವರಸಂಜ್ಞೆಯಲ್ಲಿ ಪೇಳ್ದರ್ (ಶಮದ. ೧೩ ವಿಚಾರ). **[ಸಂ.]**

**ವ್ಯಾಕರಣಜ್ಞ** (ನಾ). ವ್ಯಾಕರಣಶಾಸ್ತ್ರವನ್ನು ಬಲ್ಲವನು ; ವ್ಯಾಕರಣಪಂಡಿತ : ಅಖಿಳ ವೈಯಾಕರಣರಿಂ = ಸಮಸ್ತವ್ಯಾಕರಣಜ್ಞರಿಂದೆ (ಶಮದ. ೧೮೭ ಟೀಕು). **[ಸಂ.]**

**ವ್ಯಾಕರಣಿ** (ನಾ). ಭಾಷೆಯ ನಿಯಮಗಳಿಗೆ ಸಂಬಂಧಿಸಿದ ಶಾಸ್ತ್ರವನ್ನು ಬಲ್ಲವನು ; ವ್ಯಾಕರಣದಲ್ಲಿ ಪರಿಣತ : ತರ್ಕಿಗಳ್ತಳ್ಕಂಕಗೂಳೆ ವ್ಯಾಕರಣಿಗಳ್ ಪಿಪ್ಪಲರಾಗೆ (ಉದ್ಭಟ. ೪-೬೩ ವ). **[ಸಂ. ವ್ಯಾಕರಣಿನ್]**

**ವ್ಯಾಕೀರ್ಣ** (ಗು). ೧. ದಿಕ್ಕುದಿಕ್ಕಿಗೆ ಚೆಲ್ಲಿದ,—ಹರಡಿದ: ಭೂಭೃನ್ನಿವಹ ವ್ಯಾಕೀರ್ಣನಾನಾಮಕುಟಮಣಿಗಣದ್ಯೋತಿ ಪರ್ವಿತ್ತದಾಗಳ್ (ಕಾದಂಪೂ. ೫೯೩). ೨. ಅಸ್ತವ್ಯಸ್ತವಾದ ; ಅವ್ಯವಸ್ಥೆಗೊಂಡ : ಆ ಕಾಳಿಕಾಲಯಕೆ ಬಂದದಟ ಬೆಳಕಿನೊಳ್ವ್ಯಾಕೀರ್ಣಕೇಶದ ನಿಮಿರ್ದ ಕೈಕಾಲುಗಳ . . . ಸುಕುಮಾರನಂ ಕಂಡನು (ಜೈಮಿಭಾ. ೩೧-೫೭). (ನಾ). ೩. ವ್ಯಾಪಿಸಿದುದು ; ಹರಡಿದುದು : ಘೋರವಾದ್ಯದ್ವಿ‍ರದವ್ಯಾಕೀರ್ಣಮಂ ನಿರ್ಜನವನಮನಿದಂ ಬಂದು ನೀನೆಂತು ಪೊಕ್ಕೆ (ಪಂಚತಂ. ೫೭-೪). **[ಸಂ.]**

**ವ್ಯಾಕೀರ್ಣಿಸು** (ಕ್ರಿ). ಹರಡಿಕೊಳ್ಳು ; ಆವರಿಸು : ಗುಹೆಯೊಳಗಗ್ನಿ ವ್ಯಾಕೀರ್ಣಿಸುವುದದು ಸಹಜ (ಭರಚ. ೨೮-೭೯). [ವ್ಯಾಕೀರ್ಣ + - ಇಸು]

**ವ್ಯಾಕುಂಚಿತ** (ಗು). ೧. ಬಾಗಿದ ; ಓರೆಯಾದ : ಶ್ರೀಕಮಳಲೋಚನಂ . . . ತಿರ್ಯಗ್ವಳಿತ ವ್ಯಾಕುಂಚಿತಕಂಠನೂದುತಿರ್ದಂ ಕೊಟಲಂ (ಜಗವಿ. ೫-೧). (ನಾ). ೨. ಬಾಗಿದುದು ; ಡೊಂಕಾದುದು : ವಕ್ರಂ, ವೃಜಿನಂ . . . ವ್ಯಾಕುಂಚಿತಂ, ಊರ್ಮಿಮತ್ -- ಈ ೧೨ ಕೊಂಕಿದುದು (ಹಲಾಯು. ೧೧೬-೧೧). **[ಸಂ.]**

**ವ್ಯಾಕುಲ, ವ್ಯಾಕುಳ** (ನಾ). ೧. ದುಃಖ ; ಅಳಲು ; ವ್ಯಥೆ : ಏಕೋಭಾವದ ನಿಷ್ಠೆ ಭವದ ವ್ಯಾಕುಲವನೆಬ್ಬಟ್ಟುವುದು ನೋಡಾ (ಸಿದ್ಧೇವ. ೪೦೮) ; ಅಮ್ಮಯ್ಯನು ನನ್ನ ಮುಖ ನೋಡಿ ನನ್ನ ಮನಸ್ಸಿನ ವ್ಯಾಕುಲವನ್ನು ತಿಳಿದುಕೊಂಡರು (ಚೆಂಗಾಳ್ವ. ೧೩). ೨. ಗಾಬರಿ ; ಗೊಂದಲ ; ಕಾತರ. ೩. ತಲ್ಲೀನತೆ ; ಮಗ್ನತೆ. ೪. ಶೋಕದಿಂದ ದಿಕ್ಕೆಟ್ಟವನು ; ದುಃಖದಿಂದ ದಿಗ್ಭ್ರಾಂತನಾದವನು : "ವಿಹಸ್ತಃ, ವ್ಯಾಕುಲಃ – ೨ ಶೋಕಾದಿಗಳಿಂದ ಹಿಂದುಮುಂದು ತಿಳಿಯದವನ ಹೆಸರುಗಳು" (ಸಿದ್ಧಾಂತಿ. ೩೩೪) ; ಆ ಹೊಸಮನೆಯಲ್ಲಿ ಅವಳನ್ನು ನೋಡಿಕೊಳ್ಳುವವರು ಇರುವರೋ ಇಲ್ಲವೋ ಎಂದು ಅವನು ವ್ಯಾಕುಲನಾದ (ಭಾರತಿ. ೪೬). **ವ್ಯಾಕುಳ** : ೪. "ವಿಹಸ್ತಂ ವ್ಯಾಕುಳಂ ಕಳವಳಿಗನೆನಿಕ್ಕು" (ಮಂಗರಾ. ೭೧-೧೮) ; ಆಗಳಾಕುಳ ವ್ಯಾಕುಳರಾಗಿ ನಾಣ್ಚೆ . . . ಪೋಪುದುಂ (ಆದಿಪು. ೩-೮೯). ೫. ಆಸಕ್ತಿಯುಳ್ಳವನು ; ಅಭಿರುಚಿಯುಳ್ಳವನು : ವ್ಯಾಕರಣ ಕಾವ್ಯನಾಟಕ ಲೋಕಕಳಾಸಮಯಮಾದಳಂಕೃತಿಗಳೊಳಂ ವ್ಯಾಕುಳನಲ್ಲದನೇಕೆ ವಿವೇಕಬೃಹಸ್ಪತಿಯ ನೆಗರಮಂ ಪುಗುತರ್ಪಂ (ಕವಿರಾ. ೧-೮). **[ಸಂ.]**

**ವ್ಯಾಕುಲತೆ, ವ್ಯಾಕುಳತೆ** (ನಾ). ಚಿಂತೆ ; ಕಳವಳ : ಗೌಳಿ ಮೆಯ್ಯ ಮೇಲೆ ಬಿದ್ದ ಫಲ . . . ಬಲದ ಹೆಗಲ ಮೇಲೆ ಬೀಟೆ ವ್ಯಾಕುಲತೆ (ಲೋಕೋಪ. ಪರಿ. ೨, ಪುಟ ೨೮೭) ; ಎಡವಟ್ಟುತನ, ವ್ಯಾಕುಲತೆ, ತಾನು ಹೆರವರಿಗಿಂತ ಕೀಳೆಂಬ ಭಾವನೆ ಮೊದಲಾದ ಲಕ್ಷಣಗಳು ಕಾಣಿಸುವುವು (ಅಡುಸಾ. ೬೧). **ವ್ಯಾಕುಳತೆ** : ವ್ಯಾಕುಳ [ಪಾಠಾಂ. ಲ]ತೆ ನಮಗಿಹುದು ಮೂರ್ಖತೆ ಸಾಕು (ತೊರರಾ. ೪-೧೧-೧೨). **[ಸಂ. ವ್ಯಾಕುಲತಾ]**

**ವ್ಯಾಕುಲಿತ, ವ್ಯಾಕುಳಿತ** (ಗು). ೧. ಗಾಬರಿಗೊಂಡ ; ಕಳವಳಗೊಂಡ. (ನಾ). ೨. ಗೊಂದಲ ; ಗಾಬರಿ : ಪಿನಾಕಿಭಕ್ತರು ಮುನಿದಡಂ ಬದುಕುವನೆ ತಾನೆನುತ ವ್ಯಾಕುಲಿತಯುತಹೃದಯರಾಗುತ (ಬಸವು. ೬೧-೫). **ವ್ಯಾಕುಳಿತ** : ೧. ವ್ಯಾಕುಳಿತಮನದೊನಾಗಿ ಇನ್ನಿದನವೋಘಂ ನೋಟ್ಪೆನೆಂದಾ ದೆಸೆಗಾಗಿ ಸಲ್ವನಂ (ವಡ್ಡಾರಾ. ೫೫-೪). **[ಸಂ.]**

**ವ್ಯಾಕುಳ** 'ವ್ಯಾಕುಲ' ನೋ.

**ವ್ಯಾಕುಳತೆ** 'ವ್ಯಾಕುಲತೆ' ನೋ.

**ವ್ಯಾಕುಳಿತ** 'ವ್ಯಾಕುಲಿತ' ನೋ.

**ವ್ಯಾಕೃತ** (ಗು). ೧. ವಿಭಜಿಸಿದ ; ವಿಂಗಡಿಸಿದ : ಅವ್ಯಾಕೃತವಾದ ರೂಪವುಳ್ಳವನೂ ವ್ಯಾಕೃತವಾದ ರೂಪವುಳ್ಳವನೂ ಆದ ಅಗ್ನಿಯು . . . ದ್ಯುಲೋಕದಲ್ಲಿಯೂ ಅಸ್ತಿತ್ವವನ್ನು ಹೊಂದಿದ್ದಾನೆ (ಋಕ್ಸಾರ. ೪೨). ೨. ವಿರೂಪ ಹೊಂದಿದ ; ವಕ್ರವಾದ. (ನಾ). ೩. ಒಂದು ವ್ಯವಸ್ಥೆಗೆ ಒಳಪಟ್ಟುದು : ವ್ಯಾಕೃತದಿನವ್ಯಾಕೃತಾದಿ ಸತ್ವಕೆ ನಿನ್ನ ಜಾಗೃತಿಪ ಮತಿಧರ್ಮ (ಮಂಕುಕ. ೯೮). **[ಸಂ.]**

**ವ್ಯಾಕೃತಿ** (ನಾ). ೧. ವಿಭಜನೆ ; ವಿಶ್ಲೇಷಣೆ. ೨. ವಿವರಣೆ ; ಪ್ರತಿಪಾದನೆ. ೩. ರೂಪಬದಲಾವಣೆ ; ಆಕಾರಪರಿವರ್ತನೆ. ೪. ರೀತಿ ; ಬಗೆ : "ವ್ಯಾಕೂ(ಕೃ)ತಿಃ, ಭಂಗಿಃ—ಈ ೨ ಪರಿ" (ಹಲಾಯು. ೧೨೫-೭೭). ೫. ವ್ಯಾಕರಣಶಾಸ್ತ್ರ: ದಿವಾಕರರ್ ವ್ಯಾಕೃತಿ ನಾಮಿಗಳ್ ಪೋಲ್ ದಿವಕ್ಕೆ ಪನ್ನಿರ್ವರೆ ಮುಖ್ಯರಾದರ್ (ಶಮದ. ಸ. ೧೯ ವೃತ್ತಿ). **[ಸಂ.]**

**ವ್ಯಾಕೃತಿಸು** (ಕ್ರಿ). ಮಾರ್ಪಡಿಸು ; ವಿಕಾರಗೊಳಿಸು ; ಬದಲಾಯಿಸು : ಪ್ರಕೃತಿಯನವರತ ಮನುಜನ ತಿದ್ದುತಿರುವಂತೆ . . . ಭೂಕೃಷಿಕ ರಸತಂತ್ರಿ ಶಿಲ್ಪಿ ವಾಹನಯಂತ್ರಿ ವ್ಯಾಕೃತಿಸರೇನವಳ ? (ಮಂಕುಕ. ೮೫೯). [ವ್ಯಾಕೃತಿ + - ಇಸು]

**ವ್ಯಾಕೋಚ** (ನಾ). ಪೂರ್ತಿಯಾಗಿ ಅರಳುವಿಕೆ ; ಪೂರ್ಣವಿಕಾಸ : "ಉನ್ಮೀಲಿತಂ . . . ವ್ಯಾಕೋಚಂ, ವಿಕಾಸಃ - ಈ ೯ ಅಲರ್ವುದರ್ಕೆ ಪೆಸರ್ (ಹಲಾಯು. ೩೧-೩೩). **[ಸಂ.]**

**ವ್ಯಾಕೋಚನ** (ನಾ). = ವ್ಯಾಕೋಚ : ಹೇಳೀ ಕರಾವಮರ್ಶನಜಾತ ವ್ಯಾಕೋಚನಾಳೀಕ ಸುಮರೇಣುಸೌರಭ್ಯರಾಗ ಸುಮಧೂಳೀಪರಂಪರೆಯು ಪರಪಿರಲ್ (ವೆಂಕಾರಾ. ೧-೪-೨೭). [< ವ್ಯಾಕೋಚ]

**ವ್ಯಾಕೋಶ** (ನಾ). = ವ್ಯಾಕೋಚ : ಘನಬಾಹಾಬಹಳೋರ್ಮ್ಮಿಭಾಸಿತ ಮುಖವ್ಯಾಕೋಶ ಪಂಕೇಜಮಣ್ಣನೆ (ಎಕ. II, ೩೨೭-೪೩ ; 1181). **[ಸಂ.]**

**ವ್ಯಾಖ್ಯಾಕಾರ** (ನಾ). (ಗ್ರಂಥಗಳಿಗೆ) ಟೀಕೆಯನ್ನು ರಚಿಸುವವನು ; ಟಿಪ್ಪಣಿ ಬರೆಯುವವನು ; ಭಾಷ್ಯಕಾರ : ಮಹರ್ಷಿಗಳ ದರ್ಶನಲಾಭವನ್ನು ಲೋಕಕ್ಕೆ ವಿವರಿಸುವ ವ್ಯಾಖ್ಯಾಕಾರರು (ಋಕ್ಸಾರ. ೯೯ ಪೀಠಿಕೆ) ; ಇತರ ವ್ಯಾಖ್ಯಾಕಾರರ ಮತಖಂಡನಕ್ಕಾಗಿ ಬರೆದಿರುವರೆಂದು ಹೇಳಬಹುದು (ಹಿಂದಸಾ. ೧೫೧). **[ಸಂ.]**

**ವ್ಯಾಖ್ಯಾತ** (ಗು). ೧. ವಿವರಿಸಿದ ; ವಿಸ್ತರಿಸಿದ : ಜೀವಂಗಳುಂ ದ್ರವ್ಯಂಗಳಪ್ಪುವು ಬಹುತ್ವ ನಿರ್ದೇಶಂ ವ್ಯಾಖ್ಯಾತ ಭೇದ ಪ್ರತಿಪತ್ತ್ಯರ್ಥಮಾದುದು (ತತ್ತ್ವಪ್ರ. ೨೩೨). (ನಾ). ೨. = ವ್ಯಾಖ್ಯಾಕಾರ : ವ್ಯಾಖ್ಯಾತರು ಈ ವಿಷಯವನ್ನು ಹೆಚ್ಚು ವಿಮರ್ಶೆ ಮಾಡಿದ್ದಾರೆ (ಮೂರುಉ. ೫ ಮುನ್ನುಡಿ). **[ಸಂ.]**

**ವ್ಯಾಖ್ಯಾತೃ** (ನಾ). = ವ್ಯಾಖ್ಯಾಕಾರ : ತದುಪಾಧ್ಯಾಯಿಗಳು ೩ ಭಟ್ಟದರ್ಶನ ವ್ಯಾ[ಸ] ಪ್ರಭಾಕರ ವ್ಯಾಖ್ಯಾತೃಗಳ್ಮ್ಮವರ್ಗಂ . . . ಸರ್ವನಮಸ್ಯಮಾಗಿ ಕೊಟ್ಟ ಕೆಯ್ ಮಾಣಿಕೇಶ್ವರದಗಟಿಂ ಬಡ[ಗ] ಮತ್ತರು ೧೦೦೦ (ಕಇಅ. ೬-೨-೧೯೪; 1058) ; ಪ್ರಯೋಗಿಸಿರುವ ಪದಗಳಂತೂ ಆಗಾಮಿವ್ಯಾಖ್ಯಾತೃಗಳ ಪಾಂಡಿತ್ಯಪ್ರದರ್ಶನ, ತರ್ಕ ರಸಿಕತೆಗಳಿಗೆ ಸ್ವರ್ಣಭೂಮಿ(ಅರಿಕಾ. ೨೪). [ಸಂ.]

**ವ್ಯಾಖ್ಯಾನ** (ನಾ). ೧. ವಿಸ್ತಾರವಾಗಿ ಹೇಳುವುದು ; ಕೂಲಂಕಷವಾದ ವರ್ಣನೆ ; ವಿವರಣೆ : 'ವ್ಯಾಖ್ಯಾನಂಗೆಯ್' ಪರಾ. ೨. ಟೀಕೆ ; ಟಿಪ್ಪಣಿ : ಇವುಗಳಿಂದ ಹೊರಟ ವ್ಯಾಖ್ಯಾನ, ಚರ್ಚೆ — ಇದಿಷ್ಟು ಮಾತ್ರವೇ ಸಾಹಿತ್ಯ ಎಂಬುದು ರೂಢಿಯಿಂದ ಬಂದ ತಿಳಿವಳಿಯಾಗಿತ್ತು (ಸಾಹಿಶ. ೫೯) ; ಅನುಮತ, ವ್ಯಾಖ್ಯಾನ . . . ಇವುಗಳ ಅರ್ಥಪ್ರಯೋಗಗಳು; ಶಾಸ್ತ್ರಗ್ರಂಥಗಳಲ್ಲಿ ವಿಧವಿಧವಾಗಿವೆ (ಭಾರದ. ೩೬೯). ೩. ಭಾಷಣ ; ಉಪನ್ಯಾಸ : "ಅಧ್ಯಾಪಕಂ ಮುಂದೆ ವ್ಯಾಖ್ಯಾನಮಂ ಪೇೞ್ವವಂ" (ಮಂಗರಾ. ೭೪-೪) ; ನಾರದ ವ್ಯಾಖ್ಯಾನವ ಮಾಡುತಿರೆ ಅಗಸ್ತ್ಯನದಕ್ಕೆ ತೂಕಡಿಸುತಿರೆ (ಗಣೇಶ. ೧೧-೨೭೩).

ವ್ಯಾಖ್ಯಾನ ಬಿಗಿ = ಭಾಷಣ ಮಾಡು : ಪ್ರೇಮದ ಮೇಲೆ ವ್ಯಾಖ್ಯಾನ ಬಿಗಿದಿದ್ದಾನೆ (ಮೂರುದಾ. ೨೬೬). **ವ್ಯಾಖ್ಯಾನಮಾಡು = ವಿವರಣೆ ನೀಡು ; ಅರ್ಥಮಾಡು :** ಆತ್ಮಾರ್ಪಣಭಾವದ ಪ್ರಕಟನೆಯೇ ಕರ್ಪೂರದಾರತಿಯ ಅರ್ಥ ಎಂದೂ ವ್ಯಾಖ್ಯಾನ ಮಾಡಿದರು (ಶಾಸಗಿ. ೫೧). [ಸಂ.]

**ವ್ಯಾಖ್ಯಾನಂಗೆಯ್** (ಕ್ರಿ). ವಿವರಣೆ ನೀಡು ; ವರ್ಣಿಸು ; ನಿರೂಪಿಸು : ಉದಾರಸಾರತರವಚನರಚನೆಗಳಿಂ ವ್ಯಾಖ್ಯಾನಂಗೆಯ್ಯಲ್(ಸುಕುಮಾ. ೩-೩೯ ವ).

[ವ್ಯಾಖ್ಯಾನ + ಕೆಯ್₁]

**ವ್ಯಾಖ್ಯಾನಕಾರ** (ನಾ). = ವ್ಯಾಖ್ಯಾಕಾರ : ಶ್ರೀವಿಜಯನೇ ನೃಪತುಂಗದೇವನೆಂಬುದು ಈ ವ್ಯಾಖ್ಯಾನಕಾರನ ಬರವಣಿಗೆಯಿಂದ ಸ್ಪಷ್ಟವಾಗಿದೆ (ಶಮಪಾಂ. ೪೩). [ಸಂ.]

**ವ್ಯಾಖ್ಯಾನಶಾಲೆ** (ನಾ). ಉಪನ್ಯಾಸಮಂದಿರ ; ಪಾಠಶಾಲೆ : ಶಾಸ್ತ್ರಸಮಿತಿ ವ್ಯಾಖ್ಯಾನಶಾಲಾಪರಂಪರೆ ಸುತ್ತಿರ್ಪನೆಗಂ ನೃಪಂ ನಿಜಸುತಂಗಾನಂದದಿಂ ಮಾಡಿಸಲ್ ಕರಮೊಪ್ಪಿತ್ತು ಸಲೀಲಕೇಳಿವನದೊಳ್ ವಿದ್ಯಾಮಹಾಮಂಡಪಂ (ಪುಷ್ಪಪು. ೪-೫೪).

[ಸಂ. ವ್ಯಾಖ್ಯಾನಶಾಲಾ]

**ವ್ಯಾಖ್ಯಾನಿಸು** (ಕ್ರಿ). ೧. = ವ್ಯಾಖ್ಯಾನಂಗೆಯ್ : ಇಂತು ಪ್ರಕೃತಿಸಂಗ್ರಹಂ ರಚನಾನುಸಾರವಾಗಿ ವ್ಯಾಖ್ಯಾನಿಸಲ್ಪಟ್ಟುದು (ಗೊಮ್ಮಸಾ. ೬೧-೨) ; ಯೋಗಿಕ ಶಬ್ದಪುಂಜಗಳನ್ನೇ ಉಪಯೋಗಿಸಿಕೊಂಡು ತಮ್ಮ ಕಾವ್ಯಗಳನ್ನು ವ್ಯಾಖ್ಯಾನಿಸುತ್ತಾರೆ (ಶ್ರೇಷ್ಠಪ್ರ. ೧೪೬). ೨. ಭಾಷಣ ಮಾಡು ; ಉಪನ್ಯಾಸ ಕೊಡು : ಬೇರೆ ಬೇರೆ ತಜ್ಞರು ಬಂದು ಹೈನದ ಬಗ್ಗೆ ಬೇರೆಬೇರೆ ವಿಷಯಗಳನ್ನೆತ್ತಿ, ಬೇರೆಬೇರೆ ದೃಷ್ಟಿಕೋನದಿಂದ ವ್ಯಾಖ್ಯಾನಿಸಿದರು (ಗೋಗ್ರಾಸ. ೯). [ವ್ಯಾಖ್ಯಾನ + - ಇಸು₃]

**ವ್ಯಾಖ್ಯಾಪ್ರಜ್ಞಪ್ತಿ** (ನಾ). [ಜೈನ] ಜೈನಶಾಸ್ತ್ರದ ಹನ್ನೆರಡು ವಿಭಾಗಗಳಲ್ಲಿ ಒಂದು ; ℙ "ಶ್ರುತಾಂಗಗಳಲ್ಲಿ ಒಂದು. ಗಣಧರರು ಕೇಳಿದ ಪ್ರಶ್ನೆಗಳು ಮತ್ತು ಅವಕ್ಕೆ ತೀರ್ಥಂಕರರ ಉತ್ತರಗಳು ; ಇದರಲ್ಲಿ ಅರವತ್ತು ಸಾವಿರ ಪ್ರಶ್ನೆಗಳಿಗೆ ಉತ್ತರಗಳಿವೆ" (ಜೈನಕೋ. ೨೪೧) : ಆಚಾರಮುಂ . . . ವ್ಯಾಖ್ಯಾಪ್ರಜ್ಞಪ್ತಿಯುಂ . . . ಎಂದು ಅಂಗಪ್ರವಿಷ್ಟಭೇದದಿಂ ದ್ವಾದಶವಿಕಲ್ಪಮುಂ ಅಕ್ಕುಂ (ತತ್ತ್ವಪ್ರ. ೫೮) ; ಆಚಾರ, ಸೂತ್ರಕೃತ, ಸ್ಥಾನ, ಸಮವಾಯ, ವ್ಯಾಖ್ಯಾಪ್ರಜ್ಞಪ್ತಿ, ಜ್ಞಾತೃಧರ್ಮಕಥಾ, ಉಪಾಸಕಾಧ್ಯಯನ, ಅಂತಕೃದ್ದಶ, ಔಪಪಾದಿಕದಶ, ಪ್ರಶ್ನ ವ್ಯಾಕರಣ, ವಿಪಾಕಸೂತ್ರ, ದೃಷ್ಟಿವಾದ ಎಂಬುವು ಹನ್ನೆರಡು ಅಂಗಗಳು (ಭಾತತ್ತ್ವ. ೨೨೮).

[ಸಂ.]

**ವ್ಯಾಖ್ಯೆ** (ನಾ). ೧. ವಿವರಣೆ. ೨. ಟೀಕೆ ; ಟಿಪ್ಪಣಿ : ಪ್ರಾಚೀನಋಷಿವರ್ಯರು ಧರ್ಮದ ವ್ಯಾಖ್ಯೆಯನ್ನು ಕೊಡುತ್ತಾರೆ (ಧರ್ಮಸಾ. ೩). **೩. ಸೂತ್ರ ;** ಲಕ್ಷಣನಿರೂಪಣೆ: ಅಭಾಗಲಬ್ಧಸಂಖ್ಯೆಗಳಿಗೆ ನಿಖರವಾದ ವ್ಯಾಖ್ಯೆ (definition) ಮತ್ತು ಸಿದ್ಧಾಂತ (Theory)ಗಳನ್ನು ಭಾರತೀಯರೂ ಕಂಡುಹಿಡಿಯಲಿಲ್ಲ (ಗಣಚಿ. ೧೯೩). [ಸಂ. ವ್ಯಾಖ್ಯಾ]

**ವ್ಯಾಗನ್, ವಾಗೀನು** (ನಾ). ೧. ಸಾಮಾನು ಸಾಗಿಸುವ ರೈಲುಬಂಡಿ ; ಸರಕು ಬಂಡಿ : ನಿನ್ನೆ ಹತ್ತಾರು ವ್ಯಾಗನ್‌ಗಳು ಕಂಬಿ ತಪ್ಪಿದ ಸುದ್ದಿಬಂದಿತ್ತು (ರೂಢಿ). ೨. ನಾಲ್ಕುಚಕ್ರದ ಕುದುರೆ ಬಂಡಿ ; ಸಾಮಾನುಗಾಡಿ : ಫೈಲ್, ವ್ಯಾಗನ್ ; ಲೋಡು ಬರದುಕೊಂಡರು ನೋಡು, ತಂತಮ್ಮ ಖಾನೆಗನುಕೂಲವಾಗಿ (ಅರರೋ. ೨೦). **ವಾಗೀನು :** ೧. ರೈಲ್ವೆಕಂಬಿಗಳ ಮೇಲೆ ಬಾಯ್ದೆರೆದುಕೊಂಡು ನಿಂತಿದ್ದ ವಾಗೀನುಗಳಿಗೆ ಹಲವರು ಅದಿರನ್ನು ತುಂಬುತ್ತಿದ್ದರು (ಹೊಸಮೇ. ೧೫). ೨. ವಾಗೀನು ವೇಳೆಗೆ ಸಿಗುವಂತಿಲ್ಲ (ಪ್ರಾಸ. ೩೬). [ <—— ಇಂ. Waggon]

**ವ್ಯಾಘಾತ** (ನಾ). ೧. ಹೊಡೆತ ; ಪೆಟ್ಟು : ಪ್ರಚಂಡಗಾಂಡೀವವ್ಯಾಘಾತದೊಳಿಂದ್ರ ನೀಲಂಗಳನಡಸಿದಂತಪ್ಪ ಮುಂಗೆಯ್ಯುಮಂ ಕಂಡು (ಪಂಪಭಾ. ೫-೧೦೩ ವ) ; ಗದ್ಯ ಕವಿತೆಯಲ್ಲಿ . . . ಸ್ವರೂಪದಲ್ಲಿಯೇ ಅದಕ್ಕೆ ವ್ಯಾಘಾತ ವುಂಟಾಗಿದೆ (ನಿಬಂಧ. II, ೩೨೩). ೨. ವಿರೋಧವಾದ ಹೇಳಿಕೆ ; ಅಸಂಬದ್ಧವಾದ ಹೇಳಿಕೆ : ವ್ಯರ್ಥಂ ಪೂರ್ವಾಪರವಿಹಿತಾರ್ಥವ್ಯಾಘಾತದಿಂ ವಿರುದ್ಧಾರ್ಥಪದಂ ಸಾರ್ಥಕಮಕ್ಕುಮನ ರ್ಥಕದರ್ಥಿತ ಜನದುಕ್ತಿವಿಷಯದೊಳ್ (ಕಾವ್ಯಾವ. ೪೬೫). ೩. ವಿರೋಧಾಲಂಕಾರಗಳಲ್ಲಿ ಒಂದು : ವ್ಯಾಘಾತ . . . ಉದಾತ್ತಾದ್ಯಲಂಕಾರಗಳೊಡಗೂಡಿ (ವಿವೇಕ. ೨೫) ; ಆವ ಕಾರ್ಯಕೆ ಸಾಧನವಾ ಕಾರ್ಯಕೆ ವಿರೋಧಭಾವ ತೋರೆ ವ್ಯಾಘಾತ (ಕುವಲ. ೮೮). ೪. [ಜ್ಯೋತಿ] ಜ್ಯೋತಿಶ್ಶಾಸ್ತ್ರದ ಇಪ್ಪತ್ತೇಳು ಯೋಗಗಳಲ್ಲಿ ಒಂದು : ವ್ಯಾಘಾತ . . . ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೩೨೦). [ಸಂ.]

**ವ್ಯಾಘ್ರ** (ನಾ). ೧. (ಕಾಡಿನಲ್ಲಿ ಬೇಟೆಯಾಡಿ ಜೀವಿಸುವ) ಮಾಂಸಾಹಾರಿಯಾದ ಒಂದು ದುಷ್ಟಪ್ರಾಣಿ ; ಹುಲಿ : ವರಾಹ ವ್ಯಾಘ್ರ . . . ಮಹೋರಗಾದಿ ಮೃಗಸಂದೋಹಂಗಳತ್ಯಂತಭೀಕರಶಬ್ದಂಗಳಿನೆಯ್ದೆ ತೀವಿ ಮೆರೆಗುಂ ತಚ್ಛೈಲಾನುಸ್ಥಳಂ (ಯಾದಚಂ. ೪-೪೭) ; ವ್ಯಾಘ್ರ ಭಲ್ಲೂಕ ಹರ್ಯಕ್ಷ ವಿಷಧರೋರಗ ಭೀಷಣಂ ಮಹಾಟವಿ ! (ಶ್ರೀರಾಮಾ. ೮೮-೨೮೭). ೨. ಒಂದು ನರಕದ ಹೆಸರು : ಸಗಲ ಶಲ್ಯ ಸಿಂಹ ಗಜಾನನ ವ್ಯಾಘ್ರವೆಂಬೈದು ಮಂತ್ರಿನರಕಂಗಳ ಮೇಳದಲ್ಲಿ ಮಹಾಚಂಡ ವೆಂಬರಸುನರಕವಿಹುದು (ವಿವೇಕ. ೧೫೨). ೩. ಕೆಂಪುಜಾತಿಗೆ ಸೇರಿದ ಹರಳಿನ ಗಿಡ : "ವ್ಯಾಘ್ರಃ- ಹುಲಿ, ಕೆಂಪಿನೌಡಲ" (ಓಷಧಿ. ೧೫೨). [ಸಂ.]

**ವ್ಯಾಘ್ರಕೇತನ** (ನಾ). ೧. ಹುಲಿಯ ಚಿತ್ರವಿರುವ ಧ್ವಜ ; ಹುಲಿಯ ಲಾಂಛನ ವಿರುವ ಬಾವುಟ. ೨. ಹುಲಿಯ ಚಿಹ್ನೆಯಿರುವ ಧ್ವಜವುಳ್ಳವನು ; ಶಲ್ಯ : ಮದ್ರವಿಷಯಾಧಿಪತಿಯುಂ ವ್ಯಾಘ್ರಕೇತನನುಂ ಶಸ್ತ್ರನಿರ್ಭರನಿಪುಣನುಂ ಸಮರೇಭ ಶಲ್ಯನುಮೆನಿಸಿದ . . . ಶಲ್ಯನ ಸಂಹರಣದೊಳಂ (ಗದಾಯು. ೩-೧೦ ವ). [ಸಂ.]

**ವ್ಯಾಘ್ರನಖ** (ನಾ). ೧. ಹುಲಿಯ ಉಗುರು. ೨. ಒಂದು ಬಗೆಯ ಗಂಧದ್ರವ್ಯ : ಮುಡಿವಾಳ ವ್ಯಾಘ್ರನಖವೆಂಬ ಗಂಧಿಗದ್ರವ್ಯ (ಸಕಪ್ಪ. ೧೪೮). [ಸಂ.]

**ವ್ಯಾಘ್ರಪಾದ** (ನಾ). ೧. ಹುಲಿಯ ಹೆಜ್ಜೆ. ೨. ಒಂದು ಬಗೆಯ ಸಸ್ಯ : "ವ್ಯಾಘ್ರಪಾದಃ- ಹುಲುಮಾಣಿಕ" (ಓಷಧಿ. ೧೫೨). [ಸಂ.]

**ವ್ಯಾಘ್ರಪುಚ್ಛ** (ನಾ). ೧. ಹುಲಿಯ ಬಾಲ. ೨. ಔಡಲಮರ ; ಹರಳುಮರ : (ಪಂಡಿತ. ೨೭೪). [ಸಂ.]

**ವ್ಯಾಘ್ರಮುಖ** (ನಾ). ೧. ಹುಲಿಯ ಬಾಯಿ. ೨. ಹುಲಿಯ ಮುಖದ ಆಕಾರದಲ್ಲಿರುವ ಹೆಬ್ಬಾಗಿಲು ; ಹುಲಿಮುಖ : ಪೊಳಲಂ ನಿರ್ಮಿಪುದೈ . . . ಡೆಂಕಣಿಗಳಿಂದಟ್ಟಾಲಸತ್ಪಂಕ್ತಿಯಿಂ ವಿಳಸದ್ವ್ಯಾಘ್ರಮುಖಂಗಳಿಂದೆ ಕರುಮಾಡಂಗಳ್ ಸಮಂತೊಪ್ಪಿರಲ್ (ಹಾಲಾಸ್ಯ. ೧-೪-೫೨). ೩. (ಆಲಂ) ಹುಲಿಯ ಬಾಯಿಯಂತಿರುವ ಭಯಾನಕವಾದ ಪ್ರದೇಶ : ತುರಗದೆಡಬಲ ಗಜದ ಸಮ್ಮುಖ ತರುಣಿಯರುಗಳ ಸರ್ವತೋಮುಖ ಓರಿದು ದುರ್ಜನನಿದ್ದ ದೇಶವದೆಯ್ದೆ ವ್ಯಾಘ್ರಮುಖ . . . ಅಲ್ಲಿಹುದುಚಿತವಲ್ಲ (ಕುವ್ಯಾಉ. ೩-೬೭). [ಸಂ.]

**ವ್ಯಾಘ್ರವಕ್ತ್ರ** (ನಾ). ೧. ಹುಲಿಯ ಮುಖ. ೨. ಹುಲಿಯ ಮುಖದಂತೆ ಇರುವ ಮುಖವುಳ್ಳವನು ; ಶಿವನ ಪ್ರಮಥಗಣದಲ್ಲಿ ಒಬ್ಬನು : ಹರಿವಕ್ತ್ರಂ . . . ವ್ಯಾಘ್ರವಕ್ತ್ರಂ ಪಯಶ್ವರವಕ್ತ್ರಂ ರುರುವಕ್ತ್ರನೆಂಬರೆಸೆದರ್ವಿಶ್ವೇಶ್ವರಾಸ್ಥಾನದೊಳ್ (ರಾಜಶೇ. ೧೪-೧೫೪). [ಸಂ.]

ವ್ಯಾಘ್ರಾವಲೆ (ನಾ). ಹುಲಿಯನ್ನು ಹಿಡಿಯುವ ಒಂದು ಬಗೆಯ ಬಲೆ : ಬೀಸುವಲೆ ವ್ಯಾಘ್ರಾವಲೆ ಸಿಂಗವಲೆ . . . ಶಶಕವಲೆಯು (ರುಕ್ಮಾಂಗ. ೧೦-೧೯).

[ವ್ಯಾಘ್ರ + ಬಲೆ]

ವ್ಯಾಘ್ರಸಮ್ಮ (ನಾ). ಹುಲಿಯ ಚರ್ಮ : ಉಡುಗೆ ವಲ್ಕಲ ವ್ಯಾಘ್ರಸಮ್ಮ ಕಕ್ಷಸ್ಥಳದಿ ಪಿಡಿದು . . . ಕಡುಶುಭ್ರತೇಜದೊಬ್ಬುಳಿ ಮೂರ್ತಿಗೊಂಡುದೊ (ನವಮೋ. ೨೭-೧೯). [ವ್ಯಾಘ್ರ + ಸಮ್ಮ]

ವ್ಯಾಘ್ರಾಜಿನ (ನಾ). ಹುಲಿಯ ಚರ್ಮದ ಆಸನ : ಆ ಬ್ರಹ್ಮಸಭೆಯ ಇದಿರಿನಲ್ಲಿ, ಮಿತಿಪರಿವಾರದ ನಡುವೆ, ಜನಕರಾಜ ವ್ಯಾಘ್ರಾಜಿನದ ಮೇಲೆ ಕುಳಿತಿದ್ದಾನೆ (ಚಿತಂಬಾ. ೧೪೧). [ಸಂ.]

ವ್ಯಾಘ್ರಾಟ (ನಾ). ಒಂದು ಬಗೆಯ ಪಕ್ಷಿ ; ಭರದ್ವಾಜ : "ವ್ಯಾಘ್ರಾಟಃ, ಭರದ್ವಾಜಃ - ಈ ೨ ಹೆಗ್ಗಾರ" (ಹಲಾಯು. ೪೨-೯೫). [ಸಂ.]

ವ್ಯಾಘ್ರಾಭ (ನಾ). ಹುಲಿಯ ಬಣ್ಣದ ಕುದುರೆ : ಹುಲಿಯ ಬಣ್ಣವುಳ್ಳ ಅಶ್ವವು ವ್ಯಾಘ್ರಾಭವೆನಿಸಿಕೊಳ್ಳುವದು (ಸೌಗಂಧಿ. ೩೧೨-೯). [ಸಂ. ?]

ವ್ಯಾಘ್ರಾಸನ (ನಾ). ೧. ಹುಲಿಯ ಚರ್ಮದ ಆಸನ : ಆ ತಪೋಧನರು ಜರ್ಝರಿಸಿ . . . ವ್ಯಾಘ್ರಾಸನವ್ರಾತಗಳನುಳಿದು (ನವಮೋ. ೬-೨೪). ೨. ಹುಲಿಯ ಪ್ರತಿಮೆಗಳ ಮೇಲೆ ಅಳವಡಿಸಿರುವ ಪೀಠ : ಟೀಪೂಸುಲ್ತಾನನ ಮನೆಯಲ್ಲಿದ್ದ . . . ರತ್ನಮಯವಾದ ವ್ಯಾಘ್ರಾಸನವನ್ನು ಮುರಿದು ಆ ದ್ರವ್ಯದ ಸಂಗಡ ತಮ್ಮ ದೇಶಕ್ಕೆ ಕಳುಹಿಸಿದರು (ಮಹಾವಂ. I, ೨೪೫). 'ಸಿಂಹಾಸನ' ಪರಾ. ೩. [ಯೋಗ] ಒಂದು ಬಗೆಯ ಆಸನ : ತುಂಬು ವ್ಯಾಘ್ರಾಸನದಿ ಮೋಕ್ಷವು (ಗಗತಾ. ೪-೨೪).

[ಸಂ.]

ವ್ಯಾಘ್ರಿ (ನಾ). ೧. ಹೆಣ್ಣುಹುಲಿ. ೨. ಒಂದು ಬಗೆಯ ಸಸ್ಯ ; ನೆಲಗುಳ್ಳ ; ಹೆಗ್ಗುಳ್ಳ : "ವ್ಯಾಘ್ರೀ -ಉಳ್ಳಿ, ನೆಲಗುಳ್ಳ" (ಓಷಧಿ. ೧೫೨). [ಸಂ. ವ್ಯಾಘ್ರೀ]

ವ್ಯಾಜ (ನಾ). ೧. ಕಪಟ ; ಮೋಸ ; ಮರೆ : ನೂತನಚೂತಾವನಿಜಾತಗುಚ್ಛನಿವಹ ವ್ಯಾಜಂಗಳೊಳ್ ನಿಂದು (ಸುಕುಮಾ. ೪-೪೫). ೨. ನೆವ ; ನೆಪ : ತದ್ವ್ಯಾಪದೀಲಲನಾವ್ಯಾಜ ದಿನೀನಗಳೊಂದೆ ಪೊಟಲೊಳ್ ಸಂದಿರ್ದ ಭಾಸ್ವತ್ಸುಹೃದ್ವಲಕಂ ಮಾರ್ವಲಕಂ ಗುಣಾರ್ಣವ ಶರಪ್ರಾಗಲ್ಭ್ಯಮಂ ತೋಱುವಂ (ಪಂಪಭಾ. ೩-೩೩) ; ದೃಷ್ಟಾಂತಪೂರ್ವಕಂ ಪಾರ್ವತೀ ವ್ಯಾಜದಿಂ ಸ್ಥಾಪಿಸಿದ ಭೃಂಗಿಗಾಂ ಲೆಂಗಿಯಪ್ಪಂ (ಪದ್ಮರಾ.೧-೮). ೩. ತುಂಟತನ ; ದುಷ್ಟತನ. [ಸಂ.]

ವ್ಯಾಜನಿಂದೆ (ನಾ). ೧. ಸ್ತುತಿಮಾಡುವ ನೆವದಿಂದ ಹೀಯಾಳಿಸುವುದು. ೨. [ಕಾವ್ಯಮೀ] ಒಂದು ಬಗೆಯ ಅಲಂಕಾರ ; "ಒಂದು ನಿಂದೆಯಿಂದ ಮತ್ತೊಂದು ನಿಂದೆ ಗೋಚರಿಸಿದರೆ ಅದು ವ್ಯಾಜನಿಂದೆ" (ಕೈಪಿಡಿ. ೨೮೮) : ಆಲಿಸಿನ್ನನ್ಯರ ನಿಂದೆಯೊಳ್ ನಿಂದೆಯು ಪೇಳಲ್ಕೆ ವ್ಯಾಜನಿಂದೆಯು ಕೀಲಾಲಜಾಸನ ನಿನ್ನ ಶಿರವನು ಮೊದಲು ಶೂಲಿಯು ತರಿದ ದುಷ್ಟನು (ಕುವಲ. ೬೮-೧).

[ಸಂ. ವ್ಯಾಜನಿಂದಾ]

ವ್ಯಾಜರೂಪಕ (ನಾ). [ಕಾವ್ಯಮೀ] ಒಂದು ಬಗೆಯ ಅಲಂಕಾರ ; ಅಪ್ರಕೃತ ವಸ್ತುವಿನ ಗುಣಧರ್ಮಗಳನ್ನು ಪ್ರಕೃತವಸ್ತುವಿನಲ್ಲಿ ವ್ಯಾಜಾಂತರದಿಂದ ಆರೋಪಿಸುವುದು : ನಗೆಯೆಂಬ ನೆವದೆ ಬೆಳಗೀ ಮೊಗಮೆಂಬೀ ನೆವದೆ ತಿಂಗಳೊಳಗೆಸೆದಾದಂ ಸೊಗಯಿಸಿ ತೋರ್ಕುಂ ಲೋಚನಯುಗಮೆಂಬೀ ನೆವದೆ ಲಕ್ಷ್ಮ ಮೆನೆ ತದ್ವ್ಯಾಜಂ (ವ್ಯಾಜರೂಪಕಂ) (ಕವಿರಾ. ೩-೨೭). [ಸಂ.]

ವ್ಯಾಜಸಂಸ್ತವ (ನಾ). [ಕಾವ್ಯಮೀ] ಒಂದು ಬಗೆಯ ಅಲಂಕಾರ ; ಸ್ತೋತ್ರರೂಪದಲ್ಲಿ ನಿಂದೆಯೂ ನಿಂದೆಯ ರೂಪದಲ್ಲಿ ಸ್ತೋತ್ರವೂ ವರ್ಣಿತವಾಗುವ ಅಲಂಕಾರ : ತಗುಳೆ ಪಟುವಿಂತೆ ಕೆಯ್ಮಿಗೆ ಪೊಗಟ್ಟುದು ತಾಂ ವ್ಯಾಜಸಂಸ್ತವಾಖ್ಯಮೆನಿಕ್ಕುಂ (ಕಾವ್ಯಾವ. ೭೫೫). [ಸಂ.]

ವ್ಯಾಜಸ್ತುತಿ (ನಾ). [ಕಾವ್ಯಮೀ] ಒಂದು ಬಗೆಯ ಅಲಂಕಾರ ; ℙ "ಸ್ತೋತ್ರದ ರೂಪದಲ್ಲಿ ನಿಂದೆಯೂ, ನಿಂದೆಯ ರೂಪದಲ್ಲಿ ಸ್ತೋತ್ರವೂ ವರ್ಣಿತವಾಗಿದ್ದರೆ ಅದು 'ವ್ಯಾಜಸ್ತುತಿ' (ಕೈಪಿಡಿ. ೨೮೮) : ಅತಿಶಯಮಾಗಿರೆ ಗುಣಸಂತತಿಯಂ ದೋಷಮನೆ ಪೇಟ್ಟವೋಲ್ಪೇಟ್ಟುದು ನಿಶ್ಚಿತಶಬ್ದಾರ್ಥಂ ವ್ಯಾಜಸ್ತುತಿಯೆಂಬುದು (ಕವಿರಾ. ೩-೧೬೦) ; ಅಂದದಿ ಸ್ತುತಿಮಾಡುತ್ತದರೊಳ್ ನಿಂದೆಯು ತೋರೆ ಛಂದದಿಂದಿದು ವ್ಯಾಜಸ್ತುತಿಯು (ಕುವಲ. ೬೪-೧). [ಸಂ.]

ವ್ಯಾಜಾಂತರ (ನಾ). ಬೇರೊಂದು ನಿಮಿತ್ತ ; ಕಾರಣಾಂತರ : ನಾರದಂ ವ್ಯಾಜಾಂತರದಿನಾ ರಾಜನಂ ಬೇಱೊಂದೆಡೆಗೆ ಕರೆದೊಯ್ದು (ಅದ್ಭುತ.ರ. ೯-೪). [ಸಂ.]

ವ್ಯಾಜಿಮ (ನಾ). ಮಣ್ಣು, ಮರ ಮುಂತಾದುವುಗಳಿಂದ ತಯಾರಿಸಿದ ರಂಗಪರಿಕರ ; ಪುಸ್ತ : ಸಂಧಿಮ, ವ್ಯಾಜಿಮ, ವೇಷ್ಟಿಮ ಎಂದು ವರ್ಣಿತವಾಗಿರುವ ('ನಾಟ್ಯಶಾಸ್ತ್ರ', ಅಧ್ಯಾಯ ೨೧) ಕೃತಕವಾದ ರಂಗವಸ್ತುಗಳಿದ್ದರೂ . . . ಅನೇಕ ಕ್ರಿಯೆಗಳೂ, ಪದಾರ್ಥಗಳೂ ನಾಟ್ಯಧರ್ಮಿಯನ್ನನುಸರಿಸಿ ಅಭಿನಯಿಸಲ್ಪಡುತ್ತಿದ್ದುವು (ಸಂನಾಟ. ೨೭). [ಸಂ.]

ವ್ಯಾಜೃಂಭಣ (ನಾ). ವಿಸ್ತಾರ ; ಹಬ್ಬುಗೆ ; ವಿಜೃಂಭಣ : ಅಂತು ನೆಱೆದ ಚಾತುರ್ದಂತಬಲಜಲಧರರಭಸಂ ಪ್ರಭಿನ್ನ ಬ್ರಹ್ಮಾಂಡಾಖಂಡಶಂಕೆಯಂ ಪುಟ್ಟಿಸೆ ತೊಟ್ಟನೆ ಕೊಳೆ ತದ್ವಿಯಚ್ಚರಸೇನಾವ್ಯಾಜೃಂಭಣಮಾ ಪ್ರಸ್ತಾವದೊಳ್ (ಶಾಂತಿಪು. ೩-೧೦೧ ವ). [ಸಂ.]

ವ್ಯಾಜೋಕ್ತಿ (ನಾ). ೧. ಮೋಸದ ಮಾತು ; ಕಪಟೋಕ್ತಿ : ಉಗುರಂ ನೋಟ್ಟಂದದಿಂ ಪಾಣಿಪಲ್ಲವಮಂ ಕೆಂದಳದಿಂದಮರ್ಚುವಳಿಪಂ ವ್ಯಾಜೋಕ್ತಿಯಿಂದಂ ನಿಮಿರ್ಚುವತಿಪ್ರೌಢೆಯ ಪೊರ್ದುವಾಸೆಗೆ ನೃಪಂ ರೋಮಾಂಚಮಂ ತಾಳ್ದುವಂ (ಮಲ್ಲಿಪು. ೩-೪೩). ೨. [ಕಾವ್ಯಮೀ] ಒಂದು ಬಗೆಯ ಅರ್ಥಾಲಂಕಾರ ; ಕಾರಣವಲ್ಲದ್ದನ್ನು ಕಾರಣವಾಗಿ ಹೇಳಿ ನಿಜಸ್ಥಿತಿಯನ್ನು ಮುಚ್ಚುವುದು : ಸಮಾಸೋಕ್ತಿ ಪರ್ಯಾಯೋಕ್ತಿ . . . ಸತ್ಯಸಂಗತಿ ತದ್ಗುಣ ಅತದ್ಗುಣ ವ್ಯಾಜೋಕ್ತಿ ಸ್ವಭಾವೋಕ್ತಿ ಭಾವಿಕ ಉದಾತ್ತವೆಂಬ ಅಱುವತ್ತೆ೦ದಲಂಕಾರಂಗಳಿಂದೊಡಗೂಡಿ (ವಿವೇಕ. ೧೭೯) ; ಅನ್ಯೋಕ್ತಿಯ ನೆವದಿಂದ ತನ್ನಾಕೃತಿ ಮರೆಮಾಡೆ ಚೆನ್ನಾಗಿದು ವ್ಯಾಜೋಕ್ತಿಯೆನಿಸೆ ಎನ್ನಂಗವು ಸದನೋಪವನಕುಸುಮಧೂಳಿಂದ ಇನ್ನು ಮಾಸಿದೆ ನೋಡೆ ಸಖಿಯೇ (ಕುವಲ. ೧೫೭-೧). [ಸಂ.]

ವ್ಯಾಜ್ಯ (ನಾ). ೧. ಜಗಳ ; ಕಲಹ : ಕುದುರೆ ದೇವರ್ರಿಗೆ ಬರಗೊಡರುಯೆಮ್ಮ ವ್ಯಾಜ್ಯದ ಮೇಲೆ . . . ನೀವು ಬಂದು ಅರ್ಜಮಾಡಿಕೊಳ್ಳಲಾಗಿ . . . ನಿಮ್ಮ ಸ್ಥಲಮಿರಿಸಿ ನಿಮಗೆ ಕೊಟು ತಾಮ್ರದ ಶಾಸನದ ಲಿಪಿ ಬರೆಸಿ ಕೊಟುಯಿದೆವೆ (ಎಕ. XII, ಶಿರಾ.೧೧೨-೨೫; 1720); ನಂಗೆ ವ್ಯಾಜ್ಯ ಬೇಕಾಗಿಲ್ಲ (ಚಂಡತತೂ. ೧೭೯). ೨. ದಾವೆ ; ಮೊಕದ್ದಮೆ : ಆ ಹೊತ್ತು ನಾನು ಒಂದು ವ್ಯಾಜ್ಯದಲ್ಲಿ ಪೂರ್ಣ ವಿಚಾರ ಮಾಡದಲೆ ಅನ್ಯಾಯದ ತೀರ್ಪು ಕೊಟ್ಟೆ (ಮುಂಬಯು. ೪-೧೮೮).

ವ್ಯಾಜ್ಯತೀರಿಸು = ಜಗಳ ಬಿಡಿಸು ; ನ್ಯಾಯವನ್ನು ಬಗೆಹರಿಸು : ಅವರು ಊರಿನಲ್ಲಿ ವ್ಯಾಜ್ಯತೀರಿಸುವುದರಲ್ಲೇ ಜೀವ ಸವೆಸಿದರು (ರೂಢಿ). ವ್ಯಾಜ್ಯಮಾಡು = ಜಗಳವಾಡು ; ನ್ಯಾಯತೆಗೆ : ವ್ಯಾಜ್ಯಮಾಡುವವ ಅಜ್ಜಗೆ ಬಿಟ್ಟಾನೇ ? (ಗಾದೆ). ವ್ಯಾಜ್ಯವಾಡು = ೧. ಜಗಳವಾಡು. ೨. ಖಟ್ಲೆಹಾಕು ; ದಾವೆಹೂಡು : ವ್ಯಾಜ್ಯವಾಡಿ ಇದ್ದ ಆಸ್ತಿಯನೆಲ್ಲಾ ನೀಗಿಕೊಂಡ (ರೂಢಿ). ವ್ಯಾಜ್ಯಹೂಡು = ಕೋರ್ಟಿನಲ್ಲಿ ದಾವೆ ದಾಖಲುಮಾಡು ; ಕೇಸು ಹಾಕು : ಅವನ ದಾಯಾದಿಗಳು ಹೈಕೋರ್ಟಿನಲ್ಲಿ ವ್ಯಾಜ್ಯಹೂಡಿ ಅವನ ಆಸ್ತಿಯನ್ನೆಲ್ಲಾ ಕಸಿದುಕೊಂಡರು (ಬಂಕಿಮ. ೧೩೨). [? ./ ತಮಿ. ವಿಯಾಚ್ಚಿಯಮ್ ; ತುಳು. ವ್ಯಾಜ್ಯ; ತೆಲು. ವ್ಯಾಜ್ಯ, ವ್ಯಾಜ್ಜೆ./ ಮರಾ. ವ್ಯಾಜ್ಯ = ಚಂತೆ./ ಸಂ. ವ್ಯಾಜ = ಕಪಟ, ಮೋಸ]

ವ್ಯಾತ್ಯುಕ್ಷಿ (ನಾ). ಪರಸ್ಪರ ನೀರೆರಚುವುದು ; ನೀರಾಟ ; ಜಲಕ್ರೀಡೆ : ಅಸಿಬರುಮವರ್ ವ್ಯಾತ್ಯುಕ್ಷೀಶಕ್ತರೋಕುಳಿಯಾಡಿದರ್ (ವರ್ಧಮಾ. ೧೨-೪೦).

[ಸಂ. ವ್ಯಾತ್ಯುಕ್ಷೀ]

ವ್ಯಾದೀರ್ಣ (ನಾ). [ನಾಟ್ಯ] ನೃತ್ಯದಲ್ಲಿ ಗದ್ದವನ್ನು ಚಾಚುವ ಒಂದು ಭಂಗಿ ; ℙ "ಗದ್ದವನ್ನು ನೀಡುವುದು ; ಆಕಳಿಸುವುದು, ಆಲಸ್ಯ ಇವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೨೪೧ ಗದ್ಯಾನುವಾದ) : ನಿಡುಚಬುಕಂ ವ್ಯಾದೀರ್ಣಂ (ಲಾಸ್ಯರಂ. ೩-೧೦೦). [ಸಂ.]

**ವ್ಯಾಧ** (ನಾ). ೧. ಬೇಟೆಗಾರ ; ಬೇಡ ; ಕಿರಾತ : ಅಭಯಾರ್ಥಿವ್ಯಾಧರಾಜಪ್ರತತಿಗಭಯಮಂ ಕೊಟ್ಟು (ಆದಿಪು. ೧೩-೭೮) ; ವ್ಯಾಧನೊಂದು ಮೊಲವ ತಂದರೆ ಸಲುವ ಹಾಗಕ್ಕೆ ಬಿಲಿವರಯ್ಯ (ಬಸವ. ೧೫೮) ; ನೀಜೆ ಪಡೆದರ್ಭಕಗೆ ಮೂಱು ಕಣ್ಣಹವೆಂದು ಪುರಜನ ವ್ಯಾಧಭಜಕಸಮುದಾಯಕ್ಕೆ ಮಾರಹರ ಪೇಳಲು (ಪ್ರಾಭರಾ. ೧೦-೭). ೨. ದುರುಳ ; ನೀಚ. [ಸಂ.]

**ವ್ಯಾಧನಿವಾಸ** (ನಾ). ಬೇಡರು ವಾಸಿಸುವ ಸ್ಥಳ ; ಬೇಡರ ಹಟ್ಟಿ : ಮಹೇಂದ್ರ ಸಿಂಹನೊರ್ವನೆ ನಾನಾವಿಧ ಗಿರಿಗಹನ ವಿಷಯ ವಿಷಮಪ್ರದೇಶಂಗಳುಮಂ ವ್ಯಾಧ ನಿವಾಸಂಗಳುಮಂ ಯಥಾಕ್ರಮದಿಂದಂ ಕಟಿದು ಪೋಗಿ (ವಡ್ಡಾರಾ. ೫೪-೯). [ಸಂ.]

**ವ್ಯಾಧಿ** (ನಾ). ೧. (ದೈಹಿಕ) ರೋಗ ; ಖಾಯಿಲೆ ; ಬೇನೆ : ಸನತ್ಕುಮಾರಭಟಾರರು ಮೇಱುನೂಱುಂ ವ್ಯಾಧಿಗಳಂ ನೂಱುವರುಷಂಬರೆಗಂ ಸೈರಿಸಿ ಘೋರವೀರತಪಶ್ಚರಣಂಗೆಯ್ದು (ವಡ್ಡಾರಾ. ೭೦-೧೧) ; ಬಳಯಿಸುವುದು ನೀತಿಯೆ ವಿರೋಧಿಯಂ ವ್ಯಾಧಿಯುಮಂ (ಜಗವಿ. ೩-೨೨). ೨. ಒಂದು ಬಗೆಯ ಸಸ್ಯ : "ಗದಂ – ವ್ಯಾಧಿ, ಕೋಷ್ಠ, ವಿಷ" (ಓಷಧಿ. ೪೪) ; "ವ್ಯಾಧಿ – ಚಂಗಲುಕೋಷ್ಠ" (ಪಂಡಿತ. ೨೧೭). [ಸಂ.]

**ವ್ಯಾಧಿಗ್ರಸ್ಥ** (ನಾ). ಬೇನೆಗೆ ಒಳಗಾದವನು ; ರೋಗಪೀಡಿತನಾದವನು : ಪಥ್ಯ ಅರುಚಿಯಾಗುವ ವ್ಯಾಧಿಗ್ರಸ್ಥನಂತೆ (ಚತಂಬಾ. ೭೧). [< ಸಂ. ವ್ಯಾಧಿಗ್ರಸ್ತ]

**ವ್ಯಾಧಿಘಾತ** (ನಾ). ಒಂದುಬಗೆಯ ಔಷಧೀಸಸ್ಯ : "ವ್ಯಾಧಿಘಾತ - ಕಕ್ಕೆಗಿಡ" (ಪಂಡಿತ. ೨೧೭). [ಸಂ.]

**ವ್ಯಾಧಿತ** (ಗು). ೧. ಖಾಯಿಲೆಯಿಂದ ಕೂಡಿದ ; ರೋಗಪೀಡಿತವಾದ. (ನಾ). ೨. ಖಾಯಿಲೆ ಬಿದ್ದವನು ; ರೋಗಗ್ರಸ್ತ ; ರೋಗಿ : ಮಱೆವ ಗಜಹಯಶಾಲೆಯಲಿ ಮೈಮುಱಿಕ ವೃದ್ಧ ವ್ಯಾಧಿತಾವಳಿ ಮಱಿಗುದುರೆ ಮಱಿಯಾನೆ ತೆಗೆದವು ಲಕ್ಕಸಂಖ್ಯೆಯಲಿ (ಕುಮ್ಯಾಗ. ೪-೧೭). [ಸಂ.]

**ವ್ಯಾಧಿನಿರ್ಹರಣ** (ನಾ). ರೋಗನಿವಾರಣೆ ; ವ್ಯಾಧಿನಿರ್ಮೂಲನ : ಇಂದು ಇಷ್ಟದೇವತಾಸಮಾರಾಧನಂಗೆಯ್ದು ರಾಸಭಮಂ ವ್ಯಾಧಿನಿರ್ಹರಣಾರ್ಥಂ ದಿವ್ಯೌಷಧ ಮೆಂದು ಬಗೆದಾರೋಗಿಸಿಂ (ಪಂಚತಂ. ೨೮೪-೧೮). [ಸಂ.]

**ವ್ಯಾಧಿಷ್ಠ** (ಗು). = ವ್ಯಾಧಿತ ೧ : ಸುಣ್ಣವಿಲ್ಲ ಭಾಗವತರ . . . ವೀಳ್ಯ ಹಾಕುವವನಲ್ಲ ವ್ಯಾಧಿಷ್ಠ ಗಂಡನು ಬಾಳು ಸಟೆ ಎನ್ನ ಬಾಯಿ ನೋಡಿ (ಪುರಂದ. ೨-೮೪-೧). [ಸಂ.]

**ವ್ಯಾನ** (ನಾ). ಶರೀರದಲ್ಲಿರುವ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನಗಳೆಂಬ ಐದು ಪ್ರಾಣವಾಯುಗಳಲ್ಲಿ ಒಂದು : "ಸರ್ವದೇಹಾನಿಲಂ ವ್ಯಾನಮಕ್ಕುಂ" (ಮಂಗರಾ. ೧೫-೧೨) ; ವಾಯು ಅಗ್ನಿಯು ಬೆರಸಿದಲ್ಲಿ ವ್ಯಾನ ವಾಯುವಿನ ಜನನ (ಸಿದ್ಧೇವ. ೨೯-೭೪) ; ಪ್ರಾಣಾಪಾನ ವ್ಯಾನೋದಾನ ಸಮಾನಗಳೆಂಬ ಪಂಚಪ್ರಾಣಗಳು ಹುಟ್ಟುವುವು (ಹಿಂದಸಾ. ೧೯೭). [ಸಂ.]

**ವ್ಯಾನಮ್ರ** (ಗು). ವಿನಮ್ರವಾದ ; ವಿನಯದಿಂದ ಕೂಡಿದ : ವ್ಯಾನಮ್ರ ಶ್ರೀಮುಖಸುರವಧೂವಕ್ತ್ರಪದ್ಮಪ್ರಭಾಂಭಸ್ಸ್ನಾನೋನ್ಮೀಲತ್ಪದಕಮಳೆ . . . ಗೌರೀ ನೀನೆನ್ನಂ ರಕ್ಷಿಪುದು (ರಾಜಶೇ. ೨-೧೪೫). [ಸಂ.]

**ವ್ಯಾಪ** (ನಾ). ೧. ವ್ಯವಹಾರ ; ದಂಧೆ ; ಕೆಲಸ : ನನಗೋ ಈ ಪತ್ರಿಕೆಯ ವ್ಯಾಪದಲ್ಲಿ ಇರಬೇಕಾಗುತ್ತದೆ (ಇಪ್ಪಕ. ೨೪೦). ೨. ಗೀಳು ; ಆಸಕ್ತಿ : ನನಗೀಗ ದೇವರ ನಾದ ಹತ್ತಿತ್ತು. ನನಗೆ ಮತ್ತ ಯಾವ ವ್ಯಾಪವೂ ಇದ್ದಿಲ್ಲ (ಸ್ಮೃತಿಚಿ. ೨೧೭).

[<—— ಮರಾ. ವ್ಯಾಪ]

**ವ್ಯಾಪಕ** (ಗು). ೧. ಹರಡುವ ; ಆವರಿಸುವ ; ತುಂಬುವ : ಕರುಣಕಥೆಗಳನ್ನೂ . . . ವ್ಯಾಪಕರೂಪದಲ್ಲಿ ಸ್ಪಷ್ಟಗೊಳಿಸಿದ್ದಾರೆ (ಭಾರತಿ. ii ಪೀಠಿಕೆ). ೨. ಎಲ್ಲ ಕಾಲಕ್ಕೂ ಸತ್ಯವಾಗಿರುವ; ನಿತ್ಯವಾದ : ಅಣುವೂ ವ್ಯಾಪಕವೂ ಅಲ್ಲದ ವಸ್ತುಗಳು ನಾಶ ಹೊಂದುತ್ತವೆ (ಭಾರದ. ೨೫೭). (ನಾ). ೩. ಎಲ್ಲೆಲ್ಲೂ ಆವರಿಸಿರುವಂಥದು ; ಸರ್ವವ್ಯಾಪಿಯಾದುದು : ನಿಯತಪ್ರತೀತಿಯಂ ಕಳೆಯಲಕ್ಕುಮೇ ವ್ಯಾಪಕಮಂ (ಕವಿರಾ. ೩-೩೦) ; ಅಧಿಕದೇಶದಲ್ಲಿರುವ ವಸ್ತುವಿಗೆ ವ್ಯಾಪಕವೆಂದು ಹೆಸರು (ಭಾತತ್ತ್ವ. ೧೭೭). ೪. ಎಲ್ಲ ಕಡೆ ಇರುವವನು ; ಸರ್ವರನ್ನು ಪ್ರತಿನಿಧಿಸುವವನು : ಪ್ರಾಪಕ ಸ್ಥಾಪಕ ನಿಯಾಮಕ ವ್ಯಾಪಕಯೆಂದಱಿದು (ಹಸಾರ. ೪-೨೯) ; ಆ ವ್ಯಕ್ತಿ ತಾನೊಬ್ಬನೆ ಸರ್ವಜ್ಞನೆಂಬಂತೆ ಅವರ ಬಾಯಿ ಮುಚ್ಚಿಸಿ ವ್ಯಾಪಕನಂತೆ ಮಾತಾಡುತ್ತಿದ್ದನು (ಪುಸರು. ೨೫). [ಸಂ.]

**ವ್ಯಾಪಕತೆ** (ನಾ). ಹಬ್ಬಿರುವಿಕೆ ; ವ್ಯಾಪಿಸಿರುವಿಕೆ : ಅವರು ವಿಶ್ವದ ಅನಂತತ ಮತ್ತು ಅಪರಿಮಿತ ವ್ಯಾಪಕತೆಗಳನ್ನರಿಯಲಿಲ್ಲ (ಋಕ್ಸಾರ. ೫ ಪೀಠಿಕೆ). [ಸಂ. ವ್ಯಾಪಕತಾ]

**ವ್ಯಾಪಕತ್ವ** (ನಾ). = ವ್ಯಾಪಕತೆ : ಶಿವನ ಸರ್ವಕರ್ತೃತ್ವ , ಸರ್ವಜ್ಞತ್ವ, ಪೂರ್ಣತ್ವ ,ನಿತ್ಯತ್ವ , ವ್ಯಾಪಕತ್ವ ಎಂಬ ಶಕ್ತಿಗಳು . . . ಕ್ರಮೇಣ ಪಂಚಕಂಚುಕಗಳಾಗುತ್ತವೆ (ಭಾರದ. ೨೧೪). [ಸಂ.]

**ವ್ಯಾಪನೆ** (ನಾ). ಹರಡಿದುದು : ಸುತ್ತುಮುತ್ತು ಇರುವ ಊರುಗಳಿಗೂ ಗ್ರಾಮಗಳಿಗೂ ವ್ಯಾಪನೆಯಾಗಿತ್ತು (ಮಾಮರಾ. ೪೩). [ಸಂ. ವ್ಯಾಪನ]

**ವ್ಯಾಪರಿಸು** (ಕ್ರಿ). ಕಾರ್ಯಮಾಡು ; ವ್ಯವಹರಿಸು : ಆ ಲಿಂಗ ತನ್ನಸರ್ವಾಂಗದಲ್ಲಿ ತಾ ವ್ಯಾಪರಿಸುವಲ್ಲಿ . . . ಅಂದಂದಿಗೆ ಬಂಧ ಮೋಕ್ಷಕರ್ಮ ಹಿಂಗಿ ನಿಂದ ನಿಜ ಲಿಂಗಾಂಗಿಗೆ ಭರಿತಾರ್ಪಣ (ಸರ್ವವ. ೧೩೦-೬೫೭) ; ಸೃಷ್ಟಿವಿಧಾನಕರ್ಮದಲಿ ವ್ಯಾಪರಿಸಲೆನ್ನನು ರಜೋಗುಣ ಲೇಪಿಸದು (ನಿಭಾಗ. ೨-೨-೨). 'ವ್ಯಾಪಾರಿಸು' ಪಠಾ.

[< ವ್ಯಾಪಾರ + - ಇಸು]

**ವ್ಯಾಪಾದ** (ನಾ). ೧. ನಾಶ ; ಧ್ವಂಸ. ೨. ಬೇರೆಯವರನ್ನು ಹಿಂಸೆಪಡಿಸುವ ಹಂಚಿಕೆ ; ಹಿಂಸಾಬುದ್ಧಿ : "ವ್ಯಾಪಾದಃ, ದ್ರೋಹಚಿಂತನಂ – ೨ ದ್ರೋಹಮಾಡಬೇಕೆಂಬ ಕೆಟ್ಟ ಇಚ್ಛೆಯ ಹೆಸರು" (ಸಿದ್ಧಾಂತಿ. ೪೫) ; ಕಾಮಚ್ಛಂದ ವ್ಯಾಪಾದ . . . ವಿಚಿಕಿತ್ಸೆ ಎಂಬ ಐದು ನೀವರಣಗಳಿಗೆ ಜರಡಿಯೆಂಬುದು ಸಂಜ್ಞೆ (ಬುದ್ಧಪ. ೭೩). [ಸಂ.]

**ವ್ಯಾಪಾದಕ** (ಗು). ೧. ನಾಶಗೊಳಿಸುವ ; ಧ್ವಂಸಮಾಡುವ. ೨. ಕೊಲ್ಲುವ ; ಕೊಲೆಮಾಡುವ. (ನಾ). ೩. ಬೇರೆಯವರನ್ನು ಹಿಂಸೆಗೊಳಪಡಿಸುವವನು ; ಹಿಂಸಕ ; ಪೀಡಕ : ನಿಶಿತಾಸಿ ಮುಸಲ ಮುದ್ಗರಾದಿ ಪ್ರಹರಣತಾಡನಪೀಡನಾದಿಗಳಿಂ ವ್ಯಾಪಾದ್ಯಮಾನಶರೀರನುಂ ವ್ಯಾಪಾದಕರೊಳ್ ಇನಿತಪ್ಪೊಡಂ ಮನೋವಿಷಾದಮಂ ಮಾಡದನುಂ (ತತ್ತ್ವಪ್ರ. ೩೩೫). [ಸಂ.]

**ವ್ಯಾಪಾದನ** (ನಾ). ಕೊಲೆ ; ವಧೆ : "ಮಾರಣಂ, ನಿಶರಣಂ . . . ವ್ಯಾಪಾದನಂ . . . ಸಂಜ್ಞಪನಂ – ಈ ೨೧ ಕೊಲೆ" (ಹಲಾಯು. ೭೮-೩೨೪) ; ಬಾಲಕ್ರೀಡೆಯೆ ಪೂತನಾಬಕಮುಖವ್ಯಾಪಾದನಂ (ವಸ್ತುಪಂ. ೨-೧೧) . [ಸಂ.]

**ವ್ಯಾಪಾದಿತ** (ಗು). ನಾಶವಾದ ; ಇಲ್ಲವಾದ : ಸಂಭ್ರಮಾಕುಲಿತಚಿತ್ತಂ ಸ್ವಯಂಪ್ರಭೆಗಮಱಿಪಿ ವಿಷಾದ ವ್ಯಾಪಾದಿತಪ್ರಮೋದರಾಗಿರ್ಪಿನೆಗಂ(ಶಾಂತಿಪು. ೬-೩೦ ವ).

[ಸಂ.]

**ವ್ಯಾಪಾರ** (ನಾ). ೧. ಉದ್ಯೋಗ ; ವ್ಯವಹಾರ : "ವ್ಯಾಪಾರಮಯು ದ್ಯೋಗಂ" (ಭಾರನಿ. ೯೯); ವ್ಯಾಪಾರ ನಮಗಾಯಿತು ಶ್ರೀಪತಿ ಪಾದಾರವಿಂದಸೇವೆಯೆಂಬೊ (ಪುರಂದ. ೨-೧೫ ಪಲ್ಲವಿ) . ೨. ಕಾರ್ಯಶಕ್ತಿ ; ಚಟುವಟಿಕೆ : ವಿದ್ಯಾರ್ಥಿಗಳಾಗಿ ಗುರುಶುಶ್ರೂಷಾದಿ ವ್ಯಾಪಾರದಿಂ ಭರವಸಂಗೆಯ್ದು (ಸುಕುಮಾ.೨-೫೫ ವ); (ಧರ್ಮವೆಂಬುದು) ಪುರುಷನ ವ್ಯಾಪಾರಕ್ಕೆ ಅಧೀನವಾಗಿರುತ್ತದೆ (ಬ್ರಹ್ಮಭಾ. ೧೧). ೩. ಕೊಳ್ಳುವ, ಮಾರುವ ವ್ಯವಹಾರ ; ವಾಣಿಜ್ಯ : ಬೂಸದ ವ್ಯಾಪಾರವಾದರೂ ತಕ್ಕಮಟ್ಟಿಗೆ ನಡೆಯುತ್ತದೆ (ಮುಂಬಯಿ. ೪-೧೪೩). ೪. ಕೆಲಸ ; ಕಾರ್ಯ ; ಕ್ರಿಯೆ : ಪೌರವಾರವಿಲಾಸಿನಿಯರಾತ್ಮೀಯಭವನವ್ಯಾಪಾರ ಚಿಂತಾಂತರಾಳಾಪಂಗಳಂ ಮಱೆದು (ಸುಕುಮಾ. ೧೧-೭ ವ); ಜನನಿ ಪಿತ ಭೂ ವಾರಿದಾಂಬರವೆನಿಪ ಪಂಚಾಗ್ನಿಯಲಿ ನಾರಾಯಣನ ತ್ರಿಂಶತಿಮೂರ್ತಿಗಳ ವ್ಯಾಪಾರವ್ಯಾಪ್ತಿಗಳ ನೆನೆದು (ಹಸಾರ. ೬-೧). [ಸಂ.]

**ವ್ಯಾಪಾರಕ** (ನಾ). ತೊಡಗಿರುವವನು ; ವ್ಯವಹರಿಸುವವನು : ವಿಶ್ವವಿದ್ಯೇಶ್ವರನುಮುಪಗತಾನೇಕಲೋಕವ್ಯಾಪಾರಕನುಂ [ಪಾಠಾಂ. ವ್ಯಾಪಾರನುಂ] ಜನ್ಮಾಂತರಾಭ್ಯಸ್ತ ಕಲಾಕುಶಲನುಂ (ಆದಿಪು. ೮-೩ ವ). [ಸಂ.]

**ವ್ಯಾಪಾರಕೇಂದ್ರ** (ನಾ). ವಾಣಿಜ್ಯವಹಿವಾಟುಗಳು ನಡೆಯುವ ಮುಖ್ಯಸ್ಥಳ ; ಮಲಯ . . . ಹಳೆ ವ್ಯಾಪಾರಕೇಂದ್ರಗಳಾದ ಸಿಂಗಪುರ, ಪೀನಾಂಗ್, ಮಲಕ್ಕಾ ಇದಕ್ಕೆ ಸೇರಿವೆ (ಭೂವಿವ. ೪೧೧). [ಸಂ.]

**ವ್ಯಾಪಾರಗಾರ** (ನಾ). ವಾಣಿಜ್ಯವಹಿವಾಟು ನಡೆಸುವವನು ; ಕೊಳ್ಳುವ, ಮಾರುವ ವ್ಯವಹಾರವನ್ನು ಮಾಡುವವನು ; ವ್ಯಾಪಾರಿ ; ವಣಿಕ : ವ್ಯಾಪಾರಗಾರರಿಗೆ ಹೆಚ್ಚು ಸಾಲದ ಹಣವೂದಗಿಸಬೇಕೆಂದಾಗ ನೇರವಾಗಿಯೋ ಪರೋಕ್ಷವಾಗಿಯೊ ಸೆಂಟ್ರಲ್‌ಬ್ಯಾಂಕಿನ ಸಹಾಯವನ್ನು ಪಡೆಯಬೇಕಾಗುತ್ತದೆ (ಹಣಪ್ರ. ೧೭೯). [ವ್ಯಾಪಾರ + - ಗಾರ (<- ಕಾಱ)]

**ವ್ಯಾಪಾರಚಿಹ್ನೆ** (ನಾ). ವ್ಯಾಪಾರದಲ್ಲಿ ಯಾವುದಾದರೂ ಒಂದು ವಸ್ತುವಿನ ಮೇಲೆ ಅದನ್ನು ಉತ್ಪಾದಿಸುವವರು ತೋರಿಸುವ ವೈಯಕ್ತಿಕವಾದ ಗುರುತು ; ವ್ಯಾಪಾರಸ್ವಾಮ್ಯಮುದ್ರೆ : ಏಕಸ್ವಗಳು; ನವನಿರ್ಮಿತಿಗಳು ಮತ್ತು ನಕ್ಷೆಗಳು ; ಕೃತಿಸ್ವಾಮ್ಯ; ವ್ಯಾಪಾರಚಿಹ್ನೆಗಳು ಮತ್ತು ಪಣ್ಯಚಿಹ್ನೆಗಳು (ಭಾಧಾನ. ೨೮೨). [ಸಂ. ವ್ಯಾಪಾರಚಿಹ್ನ]

**ವ್ಯಾಪಾರದಾರ** (ನಾ). = ವ್ಯಾಪಾರಗಾರ : ಇದು ಅನುಭವಕ್ಕೆ ತಂದ ಈ ಮಾಲಿನ ವ್ಯಾಪಾರದಾರರಿಗೆ ಮಾತ್ರ ಗೊತ್ತೇ ಇರಬಹುದು (ಮುಂಬವ್ಯಾ. ೨೮೪). [ವ್ಯಾಪಾರ + - ದಾರ್ಃ]

**ವ್ಯಾಪಾರನೀತಿ** (ನಾ). ವ್ಯಾಪಾರ ಮಾಡುವ ಪದ್ಧತಿ ; ವಾಣಿಜ್ಯದ ರೀತಿ ನೀತಿ : ಆಗ ವ್ಯಾಪಾರನೀತಿಯನ್ನೂ ಪ್ರಮಾಣಗಳನ್ನೂ ವ್ಯತ್ಯಾಸಮಾಡಿಕೊಂಡು ಆ ದುಃಸ್ಥಿತಿಯಿಂದ ಪಾರಾಗಬೇಕಾದೀತು (ಹಣಪ್ರ. ೧೭೭). [ಸಂ.]

**ವ್ಯಾಪಾರಸಂಸ್ಥೆ** (ನಾ). ಕೊಳ್ಳುವ ಮತ್ತು ಮಾರುವ ಸಂಸ್ಥೆ ; ವ್ಯಾಪಾರವನ್ನು ನಡೆಸುವ ಸಂಸ್ಥೆ : ೧೯೪೪ರಲ್ಲಿ ಅಂತರರಾಷ್ಟ್ರೀಯ ವ್ಯಾಪಾರಸಂಸ್ಥೆಯೊಂದನ್ನು ಸ್ಥಾಪಿಸಲು ಹವಾನಾ ಪ್ರಣಾಳಿಕೆ ಎಂಬ ಕರಡು ಒಪ್ಪಂದವನ್ನು ತಯಾರಿಸಲಾಯಿತು (ವಿಕೋ. I, ೧೦೪). [ಸಂ. ವ್ಯಾಪಾರಸಂಸ್ಥಾ]

**ವ್ಯಾಪಾರಸ್ಥ** (ನಾ). = ವ್ಯಾಪಾರಗಾರ : ವ್ಯಾಪಾರಸ್ಥರೂ ಎಲ್ಲಿ ಅಗ್ಗವಾದ ಬೆಲೆಗೆ ಸಾಮಾನು ಸಿಕ್ಕುವುದೂ ಅಲ್ಲಿ ಅದನ್ನು ಕೊಳ್ಳುವರು, ಎಲ್ಲಿ ಪೇಟೆಧಾರಣೆ ಏರಿ ಹೆಚ್ಚು ಲಾಭ ಬರುವುದೊ ಅಲ್ಲಿ ತಮ್ಮ ಸಾಮಾನನ್ನು ಮಾರುವರು (ಹಣಪ್ರ. ೫೫). [ಸಂ.]

**ವ್ಯಾಪಾರಿ** (ನಾ). ೧. ಯಾವುದಾದರೂ ಕೆಲಸದಲ್ಲಿ ತೊಡಗಿರುವವನು ; ಉದ್ಯೋಗಸ್ಥ : ಅತಿಪ್ರಮತ್ತನಾಗಿ ದ್ವಂದ್ವದುಃಖವನ್ನು ಸಹಿಸದೆ ಯೋಗಕ್ಷೇಮ ವ್ಯಾಪಾರಿಯಾದಂಥವನಿಗೆ ನಿಷ್ಕಾಮತ್ವವು ಕೂಡದು (ಕೃವಾಭೀ. ೩೭). ೨. ಕ್ರಯವಿಕ್ರಯ ಮಾಡುವವನು ; ವರ್ತಕ ; ಹರದ : ಇಬ್ಬರು ಮದೋನ್ಮತ್ತರು ಒಬ್ಬ ವ್ಯಾಪಾರಿಯ ಹಡಗನ್ನು ಹಿಡಿದುಕೊಂಡಿದ್ದರು (ಆರ್ಯಕ. ೫೨). [ಸಂ. ವ್ಯಾಪಾರಿನ್]

**ವ್ಯಾಪಾರಿಗ** (ನಾ). = ವ್ಯಾಪಾರಿ : ವ್ಯಾಪಾರಿಗನಾಗಿ ದೇಶದೇಶಗಳನ್ನು ಸುತ್ತಿ ನೋಡಿದ್ದ ಅವನು ಇಂತಹ ಕಲಾಕುಶಲತೆಯನ್ನು . . . ಕಂಡಿರಲಿಲ್ಲ (ಶಾಂತಲಾ. ೧೩೩). [ವ್ಯಾಪಾರ + - ಇಗ]

**ವ್ಯಾಪಾರಿಸು** (ಕ್ರಿ). ವ್ಯವಹರಿಸು ; ಕಾರ್ಯಮಾಡು : ವ್ಯಾಪಾರಿಸುವುದಕ್ಕೆ ಯೋಗ್ಯವಲ್ಲದಂತಪ್ಪ ಠಾವಿನೊಳ್ ಆವನೊರ್ವಂ ವ್ಯವಹರಿಸಲಿಚ್ಛೈಸಿಹಂ ಆತಂ ಕೀಲನುರ್ಚಿದ ಕೋಡಗನಂತೆ ಕೆಡನ್ನದುವಂ (ಪಂಚತಂ. ೨೯-೧೦) ; ಶ್ರುತಜ್ಞಾನಂ ತದ್ವಿಷಯಂಗಳೊಳು ವ್ಯಾಪಾರಿಸುಗುಂ (ತಸೂವ್ಯ. ೨೫). [ವ್ಯಾಪಾರ + - ಇಸು]

**ವ್ಯಾಪಾರೀಬುದ್ಧಿ** (ನಾ). ಲಾಭವನ್ನು ಗಳಿಸುವ ಚತುರತೆ ; ವ್ಯಾವಹಾರಿಕ ಜಾಣತನ : ನಿನ್ನ ವ್ಯಾಪಾರೀಬುದ್ಧಿ ಈ ಹುಡುಗನನ್ನು ಈಗ ಸಾಕಿದರ ಮುಂದ ತನಗೆ ಕೈಲಾಗದಿದ್ದಾಗ ಸಲಹಲಿಕ್ಕಾದೀತು ಎಂದೆಣಿಸಿತು (ಮುಂಗಾಮು. ೭). [ಸಂ.]

**ವ್ಯಾಪಿ** (ನಾ). ೧. ಎಲ್ಲೆಲ್ಲೂ ವ್ಯಾಪಿಸಿರುವ ಗುಣ. ೨. ಯೋಗಿಯು ಮೈಮೇಲೆ ಹಾಕಿಕೊಳ್ಳುವ ಬಟ್ಟೆ ; ಯೋಗಪಟ : "ಯೋಗಪಟ ವ್ಯಾಪಿಯಕ್ಕು" (ಮಂಗರಾ. ೭೭-೯). ೩. ವ್ಯಾಪಿಸಿರುವವನು ; ಆವರಿಸಿರುವವನು : ಜೀವನೂ ಅಣುವಾಗದೆ, ವ್ಯಾಪಿಯಾಗದಿದ್ದಲ್ಲಿ ಅನಿತ್ಯನಾದಾನು (ಭಾರದ. ೨೩೭). [ಸಂ. ವ್ಯಾಪಿನ್]

**ವ್ಯಾಪಿತ** (ಗು). ತುಂಬಿರುವ ; ವ್ಯಾಪಿಸಿರುವ ; ಹರಡಿದ : ಮುಂದೆಸೆಯೊಳುದಿತ ವ್ಯಾಪಿತಾಂತರ್ಗತ ಸುವಾಸನೆ ರಂಜಿಸುತ್ತಿರಲು (ಬಸವು. ೩೩-೭). [ಸಂ.]

**ವ್ಯಾಪಿಸು** (ಕ್ರಿ). ೧. ಆವರಿಸು ; ಹರಡು ; ಹಬ್ಬು : ಮಣಿದೀಪಕಲಾಪೋದ್ಯಜ್ಯೋತಿಗಳ್ ದಿಶಾಮಂಡಲಮಂ ವ್ಯಾಪಿಸುತಿರೆ (ಆದಿಪು. ೫-೪೦) ; ಆಪಾದಮಸ್ತಕಂ . . . ಬಳ್ಳಿಯಿಂ ಪುತ್ತುಗಳುಂ ವ್ಯಾಪಿಸಿದುವು (ಧರ್ಮಾಮೃ. ೨-೨೦೮) ; ಪರಿಮಳಿಸುವ ಸಾಂಬ್ರಾಣಿಧೂಪವಾಸನೆ ದಿಕ್ತಟವ ವ್ಯಾಪಿಸೆ (ಕಂಸವಿ. ೭-೧೦೨); ವಿಷವು ಅವನ ರಕ್ತವನ್ನು ಸೇರಿ ಅವನ ಶರೀರವನ್ನು ವ್ಯಾಪಿಸಿತು (ಮಣಿಸ. ೫೦). ೨. ಚಲಿಸು ; ಅಲುಗಾಡು : ನಟ್ಟಡವಿಗೆ ನಡೆತಂದೇಱ ಬಿಲ್ಲಾಗ್ರಮಂ ವ್ಯಾಪಿಸದತ್ತಿತ್ತಂ ಮೃಗಧ್ಯಾನದೊಳಿರೆ (ಪಂಪಾಶ. ೧೫). ೩. ಮುನ್ನುಗ್ಗು ; ತಲೆಹಾಕು : ಪರರ ಕಾರ್ಯಕ್ಕೆ ವ್ಯಾಪಿಸದೆ ಸುಮ್ಮನೆ ಇರು (ಕೃವಾಸ. ೧೩೨). [ವ್ಯಾಪನ + - ಇಸು]

**ವ್ಯಾಪುತ** (ನಾ). ಹರಡಿದ ; ತುಂಬಿದ ; ಹಬ್ಬಿದ : ಜಲ ಅನಿಲ ಅನಳ ಬಯಲ ಮಿಕ್ಕಾದ ವಸ್ತುದೊಳಗೆ ವ್ಯಾಪುತನೆಂಬಗ್ಗಳಿಕೆ ಏನೋ (ಮೋಕ್ಷದೀ. ೨೦-೮). [< ಸಂ. ವ್ಯಾಪ್ತ]

**ವ್ಯಾಪೃತ** (ನಾ). ೧. ತೊಡಗುವಿಕೆ ; ನಿರತವಾಗುವಿಕೆ : ಅವನ ಮನಸ್ಸು ಹಿಂದೂಧರ್ಮ, ಧರ್ಮಗ್ರಂಥಗಳ ವ್ಯಾಸಂಗ, ಗೀತೋಕ್ತಧರ್ಮದ ಪ್ರತಿಪಾದನೆ ಇವುಗಳಲ್ಲಿ ಹೆಚ್ಚಾಗಿ ವ್ಯಾಪೃತವಾದಂತೆ ತೋರುತ್ತದೆ (ಬಂಕಿಮ. ೧೪೪). ೨. ಮನೆಗೆಲಸದಲ್ಲಿ ತೊಡಗಿದವನು ; ಗೃಹಸ್ಥ ; ಸಂಸಾರಿ : "ವ್ಯಾಪೃತಂ [ಪಾಠಾಂ. ವ್ಯಾಪ್ರುಕಂ] ಕುಟುಂಬಿಯೆನಲ್ಕೆ ಮನೆವಾರ್ತೆಯುಳ್ಳನಕ್ಕು" (ಮಂಗರಾ. ೬೯-೧೨); ವ್ಯಾಪೃತನೆಂದರೆ ಅದರಲ್ಲಿ ಯತ್ನಮಾಡುವವನು (ಹೊಸುಗ. ೮೮). [ಸಂ.]

**ವ್ಯಾಪೃತಿ** (ನಾ). ವ್ಯವಹಾರ ; ಉದ್ಯೋಗ ; ಕಾರ್ಯ : ತಳ್ಪತಳದಿಂದೊಸೆದೆಟ್ಟು ದಿನಾದಿಸತ್ಕ್ರಿಯಾವ್ಯಾಪೃತಿಯೆಲ್ಲಮಂ ನೆಱೆಯನುಷ್ಠಿಸಿ ಪೋಗಿ (ಶಾಂತಿಪು. ೮-೨೧೯) ; ಸುಸೌಖ್ಯೋಪಚಯನಿರ್ದನುಚಿತವ್ಯಾಪೃತಿಯಿಂ ಜೈನಜನಮನೋಹರಚರಿತಂ (ಚಂದ್ರಪ್ರ. ೮-೧). [ಸಂ.]

**ವ್ಯಾಪ್ತ** (ಗು). ೧. = ವ್ಯಾಪುತ : ಶ್ರವ್ಯಮವ್ಯಾಕುಲಂ ವ್ಯಾಪ್ತದಿಗಂತಂ ಕಾವ್ಯಮೆಂದನ್ನಿತಸುಕವಿಜನಂ ಮೆಚ್ಚೆ (ಆದಿಪು. ೧-೨೬). (ನಾ). ೨. ಗುಂಪು ; ಸಮೂಹ : "ಅಚಿತಂ, ನಿಚಿತಂ, ವ್ಯಾಪ್ತಂ . . . ಪೂರ್ಣಂ — ಈ ೯ ಸಂದಣಿ" (ಹಲಾಯು. ೧೧೭-೧೭). ೩. ತುಂಬಿರುವವನು ; ಆವರಿಸಿರುವವನು : ವ್ಯಾಪ್ತನೆಂದರೆ ಒಳಗೂ ಹೊರಗೂ ಸಂಪುಟದಂತೆ ಸಕಲಪ್ರಾಣಿಗಳನ್ನು ಆವರಿಸಿಕೊಂಡಿರುವವನು (ಹಸಾರ. ೧೨-೨೭ ತಾತ್ಪರ್ಯ). [ಸಂ.]

**ವ್ಯಾಪ್ತಿ** (ನಾ). ೧. ವ್ಯಾಪಿಸಿರುವಿಕೆ ; ಹರಹು : ಸರ್ವವಿದ್ಯಾಸಕಲಕಳಾವ್ಯಾಪ್ತಿಯನಱಿಯಬಹುದು (ಅವಚಂ. ೧೧೧-೫೦೨) ; ಈ ಚರಾಚರವಿಚಾರವ್ಯಾಪ್ತಿ ನಿಮ್ಮಡಿಗಗೋಚರವೆ ಶಿವಶಿವಾ ಸಾಕಿದೇತಕೆ ಬಱಿದೆ ನಾಚಿಸುವಿರಿ (ಜೈಮಿಭಾ. ೨-೫೫); ಸಮಸ್ತ ಅನುಭವಗಳ ವ್ಯಾಪ್ತಿಯು ನಮ್ಮ ಎಲ್ಲಾ ಅನುಭವಗಳಿಗಿಂತಲೂ ಎಷ್ಟೋ ಪಾಲು ಅಧಿಕವಾಗಿರುತ್ತದೆ (ಜೀವಾತ್ಮ. ೧೪೦). ೨. ಸಂಪೂರ್ಣತೆ ; ಪರಿಪೂರ್ಣತೆ : ಜನನಿಪಿತಭೂವಾರಿದಾಂಬರವೆನಿಪ ಪಂಚಾಗ್ನಿಯಲಿ ನಾರಾಯಣನ ತ್ರಿಂಶತಿಮೂರ್ತಿಗಳ ವ್ಯಾಪಾರವ್ಯಾಪ್ತಿಗಳ ನೆನೆದು (ಹಸಾರ. ೭-೧). ೩. ಉದ್ಯೋಗ ; ವ್ಯಾಪಾರ : ಕೂರ್ಪವರನಾರನೂ ಕಾಣೆನು ಡೋಹಾರ ಕಕ್ಕಯ್ಯನಲ್ಲದೆ ವ್ಯಾಪ್ತಿಯುಳ್ಳ ನಮ್ಮ ಮಡಿವಾಳ ಮಾಚಯ್ಯ ನಿನ್ನಾಪತ್ತಿಗಿಱಿವರಯ್ಯ ಕೂಡಲಸಂಗಯ್ಯಾ (ಬಸವ. ೬೫೧) ; ಕಾಫಿತೋಟಗಳಲ್ಲಿ ದುಡಿಯಲು ಆಳುಗಳನ್ನು ಸರಬರಾಯಿ ಮಾಡುವವರು. ಈ ವ್ಯಾಪ್ತಿ ಪ್ರಾರಂಭಿಸಿ ಅನೇಕ ವರುಷಗಳಾಗಿದ್ದವು (ರಕ್ತರೂ. ೨೭). ೪. (ಅಧಿಕಾರ ನಿರ್ವಾಹದ) ಪರಿಧಿ ; ಸೀಮೆ : ಅವು ಅನಿವಾರ್ಯವೆಂದು ಪರಿಗಣಿಸಿ, ಶಾಸನದ ವ್ಯಾಪ್ತಿಗೊಳಪಡಿಸುವುದರ ಮೂಲಕ ಅವುಗಳಿಗೆ ಪ್ರೋತ್ಸಾಹ ನೀಡುತ್ತೇವೆ (ಪುಸರು. ೧೭೦). ೫. ವಸ್ತುಗಳಲ್ಲಿರುವ ಅನ್ಯೋನ್ಯಸಂಬಂಧ : ಧೂಮವಿರುವ ಕಡೆ ವಹ್ನಿ ಇರುವುದೆಂದೂ ವಹ್ನಿ ಇಲ್ಲದ ಕಡೆ ಧೂಮವಿರುವುದಿಲ್ಲವೆಂದೂ ತಿಳಿದಿದೆ. ಧೂಮವಹ್ನಿಗಳಿಗೆ ನಿಯತವಾದ ಸಂಬಂಧ ಇರುವುದೆಂದು ತಿಳಿದುಬರುವುದು. ಈ ನಿಯತಸಂಬಂಧಕ್ಕೆ ವ್ಯಾಪ್ತಿ ಎಂದು ಹೆಸರು (ಭಾತತ್ತ್ವ. ೧೭೬). ೬. [ಸಂಗೀತ] ಇಪ್ಪತ್ತುನಾಲ್ಕು ಬಗೆಯ ಆಲಾಪನೆಗಳಲ್ಲಿ ಒಂದು : ಆಲಾಪ ಕಾಳಾಪ ಹೆಲ್ಲಣೆ ವ್ಯಾಪ್ತಿ ಮುಂತಾದ ಇಪ್ಪತ್ತು ನಾಲ್ಕು ತೆಱದಲ್ಲಿ ಸರಿಗಮಪಧನಿ ಎಂಬ ಸಪ್ತಸ್ವರಾಕ್ಷರಂಗಳನು . . . ಆಲಾಪಿಸಿ (ವಿವೇಕ. ೧೯೧). [ಸಂ.]

**ವ್ಯಾಪ್ಯ** (ನಾ). ೧. ಹರಡಲು ಯೋಗ್ಯವಾದುದು : ವ್ಯಾಪ್ಯವೆಂದರೆ ವ್ಯಾಪ್ತಿಗೆ ಆಶ್ರಯವಾದುದು ಎಂದರ್ಥ (ಭಾತತ್ತ್ವ. ೨೭೧). ೨. ಎಲ್ಲಾ ಕಡೆಯಲ್ಲಿಯೂ ಆವರಿಸಿರುವವನು ; ಪರಮಾತ್ಮ : ವ್ಯಾಪ್ಯನಂದದಿ ಸರ್ವಜೀವರೊಳಿಪ್ಪ ಚಿನ್ಮಯ ಘೋರಭವಸಂತಪ್ಯಮಾನರು ಭಕುತಿಗಳಿಂದಲಿಹಪರದಿ ಪ್ರಾಪ್ಯನಾಗುವನು (ಹಸಾರ. ೧೨-೨೭). ೩. [ತತ್ತ್ವಶಾ] ವಸ್ತುಗಳಲ್ಲಿರುವ ಅನ್ಯೋನ್ಯಸಂಬಂಧವು ವ್ಯಕ್ತವಾಗುವಿಕೆ : ಅನುಮಾನಪ್ರಮಾಣವು ಉಪಪತ್ತಿ, ವ್ಯಾಪ್ಯ, ಯುಕ್ತಿ, ಲಿಂಗ ಎಂದು ಹೇಳಲ್ಪಡುವುದು (ಹಿಂದಸಾ. ೨೪೧) ; ಸಾಮಾನ್ಯ ವಿಧಿಯು ವ್ಯಾಪಕ. ವಿಶೇಷ ವಿಧಿಯು ವ್ಯಾಪ್ಯ (ಭಾರದ. ೨೫೧). ೪. ಒಳಕೊಳ್ಳುವುದು ; ಗ್ರಾಹ್ಯವಾಗಬೇಕಾದುದು : (?). ೫. ಒಂದು ಬಗೆಯ ಔಷಧೀಸಸ್ಯ : "ವ್ಯಾಪ್ಯ — ಚಂಗಲುಕೋಷ್ಠ" (ಪಂಡಿತ. ೨೦೭). [ಸಂ.]

**ವ್ಯಾಬದ್ಧ** (ಗು). ಬಲವಾಗಿ ಬಿಗಿದ ; ಭದ್ರವಾಗಿ ಕಟ್ಟಿದ : ಕಪಿಂಜಲನುದ್ವ್ಯಾಪ್ಪ ಪರ್ಯಾಕುಲವ್ಯಾಬದ್ಧಲಕ್ಷ್ಯದೃಷ್ಟಿಯಪ್ಪ ಮಹಾಶ್ವೇತೆಯನೆಯ್ದೆವಂದು (ಕಾದಂಉ. ೬೦೫). [ಸಂ.]

**ವ್ಯಾಬಾಧೆ** (ನಾ). ೧. ಕಾಯಿಲೆ ; ರೋಗ : ಜರಾಮಯವ್ಯಾಬಾಧಾಬಾಧಿತತ್ವಮುಂ ಗಂಭೀರಮೃದುಮಧುರವಾದಿತೆಯುಂ . . .ತನಗನುಸಂಗತಮಾಗೆ (ಶಾಂತಿಪು. ೧೧-೯೪ ವ). ೨. ಕಾಟ ; ಹಿಂಸೆ : ದಿತಿಸುತವ್ಯಾಬಾಧೆಗಳ್ ದೇವರ್ಗಿಲ್ಲವಲಾ (ಪಂಪಭಾ. ೬-೧೫). [ಸಂ. ವ್ಯಾಬಾಧ]

**ವ್ಯಾಭಾಸಿ** (ನಾ). ಹೊಳಪು ; ಕಾಂತಿ : ಸಸ್ಮಿತಹಸಾನಂದಸಲೀಲಸಸ್ಮಿತಮುಖವ್ಯಾಭಾಸಿ ನೋಡಿಂತು ಸನ್ನಿಹಿತಂ ಸೌಂದರರೂಪಮಿನ್ನುಮೆರ್ದೆಯೊಳ್ ಮಜ್ಜೀವಿತಾಧೀಶನಾ (ಆದಿಪು. ೩-೪೨). [ಸಂ.]

**ವ್ಯಾಭಾಸಿತ** (ಗು). ಹೊಳೆಯುವ ; ಕಾಂತಿಯುಕ್ತವಾದ : ವ್ಯಾಭಾಸಿತರತ್ನಚಯಂ ಶೋಭಾವತಿಯೆಂಬ ಪುರವರಂ ರಂಜಿಸುಗುಂ (ಪಂಚತಂ. ೧೬೩-೨೦). [ಸಂ.]

**ವ್ಯಾಭುಗ್ನ** (ಗು). ೧. ಬಾಗಿದ ; ಬಗ್ಗಿದ ; ಡೊಂಕಾದ. (ನಾ). ೨. [ನಾಟ್ಯ] ನೃತ್ಯದಲ್ಲಿ ಅಭಿನಯಿಸಿ ತೋರಬೇಕಾದ ಮುಖದ ಒಂದು ಭಂಗಿ ; IP "ಮುಖವನ್ನು ಅಡ್ಡಲಾಗಿ ನೀಡುವುದು. ನಿರ್ವೇದ, ಔತ್ಸುಕ್ಯ, ಚಿಂತೆ ಇವುಗಳನ್ನು ತೋರಿಸುವಾಗ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೨೪೨ ಗದ್ಯಾನುವಾದ) ! ಸತಿ ವ್ಯಾಭುಗ್ನಂ . . . ವಿವೃತಂ ನುತವಿನಿವೃತ್ತಮಿವಾಱುಂ ಮತದಿಂ ರಂಜಿಸುಗುಮಾಸ್ಯಂ (ಲಾಸ್ಯರಂ. ೩-೧೦೪) ; ವ್ಯಾಭುಗ್ನ, ಭುಗ್ನ, ಉದ್ವಾಹಿತ, ವಿಧುತ, ವಿವೃತ, ವಿನಿವೃತ್ತ – ಈ ಆಱು ವದನಭೇದಂಗಳ್ (ಲಾಸ್ಯರಂ. ೩-೧೦೪ ವ). [ಸಂ.]

**ವ್ಯಾಮ** (ನಾ). ೧. ಅಡ್ಡವಾಗಿ ಚಾಚಿದ ಎರಡು ತೋಳುಗಳ ಮಧ್ಯದ ಅಳತೆ ; ಒಂದುಮಾರು ಅಳತೆ : "ವ್ಯಾಮಃ . . . ಕೈಗಳಿಂದೊಡಗೂಡಿದ ಅಡ್ಡವಾಗಿ ಚಾಚಲ್ಪಟ್ಟ ತೋಳುಗಳೆರಡರ ಮಧ್ಯಪ್ರದೇಶ, ಮಾರು" (ಸಿದ್ಧಾಂತಿ. ೧೯೪). ೨. ಒಂದುನೂರು ; ಶತ. ೩. ಅನಾರೋಗ್ಯದವನು ; ಖಾಯಿಲೆಯುಳ್ಳವನು . "ಅಳತೆ ಶತಂ ಸರೋಗಮಿವು ವ್ಯಾಮಸಮಾಹ್ವಯ" (ನಾನಾರ. ೧೩೦). [ಸಂ.]

**ವ್ಯಾಮಿಶ್ರ** (ಗು). ೧. ಕಲೆತಿರುವ ; ಬೆರೆತಿರುವ. (ನಾ). ೨. ಒಂದರೊಳಗೊಂದು ಸೇರಿರುವಿಕೆ, — ಬೆರೆತಿರುವುದು : ಈಗಿನವರ ಮನೋವೃತ್ತಿಗಳು ವಲ್ಲಿವಲ್ಲಿಯಾಗಿ ವ್ಯಾಮಿಶ್ರವಾಗಿ ಹೊರಟಿರುವುವು (ರಾಜ್ಯಶಾ. ೧೯). [ಸಂ.]

**ವ್ಯಾಮುಗ್ಧ** (ಗು). ಅತಿಶಯವಾದ ಪ್ರೀತಿಯ : ತಾವರೆಯರಲೊಳ್ ಸರಸನಿಜಾಮೋದದೊಳೊಂದಿ ನಲಿದು ಮಕರಂದರಜೋವ್ಯಾಮುಗ್ಧದೊಳೇ ಮುಗುಳೊಳಮಾ ಮಾಟಕ್ಕೆಯನಱಿಸಿ ಸುೞಿವುದಳಿ ಕೆಲಕೆಲದೊಳ್ (ಕವಿರಾ. ೩-೧೨೭). [ಸಂ.]

**ವ್ಯಾಮೋಹ** (ನಾ). ೧. ಅತಿಶಯವಾದ ಮೋಹ ; ಹೆಚ್ಚಿನ ಪ್ರೀತಿ : ಬೆಸಸಿಮಿದನೆನ್ನ ಮನದೊಂದು ಸಂಶಯಂ ಪತ್ತುವಿಡುವಿನಂ ವ್ಯಾಮೋಹಂ ಪ್ರಶಮಿಸುವಿನಂ (ಸುಕುಮಾ. ೫-೭) ; ತನಯನ ಮೇಲಣ ವ್ಯಾಮೋಹವುಳ್ಳುದಕೆ ತಲೆಯನೇತಕೆ ಬೈತಿರಿ (ಬಸಪು. ೨೪-೨೪). ೨. [ಕಾಮಶಾ] ದಶವಿಧ ಕಾಮಾವಸ್ಥೆಗಳಲ್ಲಿ ಒಂದು : [ಮನೋವ್ಯೆ]ಕಲ್ಯ ರೋಮಾಂಚಕಸ್ತಂಭಕ ಕಂಪ [ಸ್ವೇದವೈವರ್ಣ್ಯ] ಸಂತಾಪನಾಹಾರ ವ್ಯಾಮೋಹ ಗದ್ಗದಾಶ್ರು ಮೋಕ್ಷ ಮೂರ್ಛಾಧಿ ನಾನಾವಿಕಾರಂಗಳನೊಡನೊಡನೆ ತೋಱುವುದುಂ (ಪಂಪಭಾ. ೪-೫೯ ವ). [ಸಂ.]

**ವ್ಯಾಮೋಹಿತ** (ಗು). ೧. ಅತಿಶಯವಾದ ಮೋಹಕ್ಕೆ ಒಳಗಾದ. (ನಾ). ೨. ಅತಿಶಯವಾದ ಮೋಹಕ್ಕೆ ಒಳಗಾದವನು : ಕಿರಾತನತಿವ್ಯಾಮೋಹಿತನಾಗಿ ಪೋಗದಲ್ಲಿಯೇ ನಿಂದಂ (ಪಂಚತಂ. ಅ. ೨೧೨-೨೩). [ಸಂ.]

**ವ್ಯಾಯಾಮ** (ನಾ). ೧. ಅಂಗಸಾಧನೆ ; ಕಸರತ್ತು : ವ್ಯಾಯಾಮದಿಂ ಮೆಯ್ಸಡಿಲದೆಸೆಯೆ (ಕಾದಂಪೂ. ೩೭) ; ಒಲಿನಿನ್‌ಗೆ ವ್ಯಾಯಾಮದಿಂದಲೂ . . . ಪ್ರಶಂಸೆಯಿಂದಲೂ ಉತ್ಸಾಹವುಂಟಾಗಿದ್ದಿತು (ಮಲಿನಾ. ೧೦೭). ೨. ದೇಹಪರಿಶ್ರಮ ; ದಣಿವು : ವ್ಯಾಯಾಮಶ್ರಮದಿಂ ಸಡಿಲ್ದವಯವಂ . . . ಸಮುತ್ಪಾತಕೌಕ್ಷೇಯಂ ರಂಜಿಸುವೊರ್ಬ ವಿಕ್ರಮಭುಜಂ ಸಂರಂಭದಿಂ ಬರ್ಪುದುಂ (ದಶಕು. ೪-೨) ; ಅಡಿಗೆಯವನಿಗೆ ಸಾಕಷ್ಟು ವ್ಯಾಯಾಮವೊದಗಿಸುವುದೇ ಅವುಗಳ ಏಕಮಾತ್ರ ಪ್ರಯೋಜನವಾಗಿತ್ತು (ಪುನರು. ೨೦೦). ೩. ಪ್ರಯತ್ನಪೂರ್ವಕವಾದ ಕ್ರಿಯೆ ; ಸಾಧನೆ : ಬೇಂಟೆಯಾತಂಗೆ ಮೃಗವ್ಯಾಯಾಮಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟಂ (ಪಂಪಭಾ. ೫-೪೭ ವ) ; ಧರ್ಮಪದದಲ್ಲಿ ಬುದ್ಧನು 'ವ್ಯಾಯಾಮ' ಅಮರಜೀವನಕ್ಕೆ ಹೆದ್ದಾರಿ . . . ಎಂದು ಸಾರಿದ್ದಾರೆ (ಭಾರದ. ೩೭೪). ೪. = ವ್ಯಾಮ ೧ : ಗಾರ್ಹಪತ್ಯಾಗ್ನಿವೇದಿಕೆಯ ಅಗಲವು ಒಂದು 'ವ್ಯಾಯಾಮ' ದಷ್ಟಿದ್ದು ಐದುವರಸೆ . . . ನಿರ್ಮಿತವಾಗಬೇಕು (ಗಣಚ. ೧೯೩). [ಸಂ.]

**ವ್ಯಾಯಾಮಶಾಲೆ** (ನಾ). ಅಂಗಸಾಧನೆ ಮಾಡುವ ಮನೆ ; ಗರಡಿಮನೆ : ಜನಜೀವನದ ಕ್ಷೇಮಕ್ಕೆ ಆಸ್ಪತ್ರೆ, ವ್ಯಾಯಾಮಶಾಲೆಗಳು ಅಗತ್ಯ (ಬಂಕಿಮ. IX, ಮುನ್ನುಡಿ). [ಸಂ. ವ್ಯಾಯಾಮಶಾಲಾ]

**ವ್ಯಾಯೋಗ** (ನಾ). [ಕಾವ್ಯಮೀ] ದಶರೂಪಕಗಳಲ್ಲಿ ಒಂದು ; IP "ವ್ಯಾಯೋಗದಲ್ಲಿ ಇತಿವೃತ್ತವು ಪ್ರಸಿದ್ಧವಾದುದಾಗಿರಬೇಕು. ಸ್ತ್ರೀಪಾತ್ರಗಳು ಕಡಮೆ. ಪಂಚಸಂಧಿಗಳಲ್ಲಿ ಗರ್ಭ ಮತ್ತು ವಿಮರ್ಶ ಸಂಧಿಗಳಿರುವುದಿಲ್ಲ. ಬಹುಮಂದಿ ಪುರುಷಪಾತ್ರಗಳಿಂದ ಕೂಡಿರಬೇಕು. ಇದು ಏಕಾಂಕರೂಪಕ. ಇದರಲ್ಲಿ ನಾಯಕನು ಪ್ರಖ್ಯಾತ" (ಸಂಕಣ) : ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ — ಎಂದು ರೂಪಕಗಳು ಹತ್ತುವಿಧ (ಸಂನಾಟ. ೨೯). [ಸಂ.]

**ವ್ಯಾಲ, ವ್ಯಾಳ** (ಗು). ೧. ಕೆಟ್ಟ ; ದುಷ್ಟ. ೨. ಕ್ರೂರವಾದ ; ಹಿಂಸ್ರ. (ನಾ). ೩. ಹಾವು ; ಸರ್ಪ : ಮುಡಿದ ಪೂಮಾಲೆಯುಗ್ರವ್ಯಾಲನಾದೊಡಂ . . . ಮಲಯಮಾರುತಂ ಸುಡುವ ಕಿಚ್ಚಾದೊಡಂ ಶಿವಭಕ್ತರಿತರ ಧನಕೆಳಸುವರೆ ಧಾತ್ರೀಧವಾ (ಪದ್ಮರಾ. ೬-೧೭). ೪. ಕ್ರೂರಮೃಗ ; ಹಿಂಸ್ರಪ್ರಾಣಿ. ೫. ವಂಚಕ ; ಮೋಸಗಾರ. ೬. ಸೊಕ್ಕಿದ ಆನೆ ; ಮದ್ದಾನೆ. ವ್ಯಾಳ : ೩. "ಉರಗಂ ಸರೀಸೃಪಂ . . . ಭುಜಗನಾವ್ಯಾಳನೆನಲು ಸರ್ಪಂಗೆ ನಾಮಂ" (ಮಂಗರಾ. ೧೧೬-೧) ; ವ್ಯಾಳ ಕಡೆಯಮದಾಗೆ ವೇದಾಗಮಪುರಾಣಜಾಲಂಗಳುಲಿವ ತೊಡರಾಗೆ ಕಣ್ಣೆಸದಂ ತ್ರಿಶೂಲಿ (ಭಕ್ತಾಚ. ೧-೧೩). ೪. ಸಿಂಹಶರಭಶಾರ್ದೂಲವ್ಯಾಳಮೃಗಮಿಥುನಂಗಳ್ . . . ವಿಷಮ ಸ್ವಭಾವ ಮನಪ್ಪುಕೆಯ್ವುದುಂ (ಪಂರಾಮಾ. ೧-೭೧ ವ); ವಿಪಿನಂ ಕ್ರೂರವ್ಯಾಳವೃಕಸೂಕರ . . . . ನಿಷೇವಿತಮಲ್ಲಾ ! (ರಾಮಾಶ್ವ. ೨೮-೧೩). ೫. ಪರದಂ ವ್ಯಾಳಂ ಪೆಂಡತಿ ದುರಾತ್ಮೆ ವಿಟನೆಗ್ಗಂ (ಮದತಿ. ೧೧-೫೧). ೬. ಉಭಯವ್ಯಾಳದಂತಿ [ವ]ಧ್ಯಕ್ರಮಂಗಳೊಳ್ ಭಾರ್ಗವರ್ ಸುರಿಗಿಱಿವಂತಿಱಿಯೆ (ಪಂಪಭಾ. ೧೧-೯೨ ವ) ; ತುರಗ ಕುಳೀರ ಕುಕ್ಕುರ ವ್ಯಾಳ ಕಚ್ಛಪ ಕರಿ ಮತ್ಸ್ಯಮಕರಾದಿಗಳ ಹರವರಿಯಿಂ ಶೀಕರಗಳಿಂ ನೊರೆಗಳಿಂ ಕರಮೆ ವಿರಾಜಿಸುತಿಹುದು (ನಾಗಕು. ೨-೭). ೭. ನಾಯಿ. ೮. ದುಷ್ಟ ; ಕೆಡುಕ . "ಪನ್ನಗನೊಳುರ್ವ ಭಯಕಾರನೊಳು ಕೋಳ್ಮಿಗದೊಳಿಭದೊಳಾ ವ್ಯಾಳಮಕ್ಕುಂ" (ಮಂಗರಾ. ೧೪೩-೨೨) ; "ಉರಗಂ ಭಯಕಾರಿ ಮದೇಭದುರ್ಜನಂ ಶುನಕಮತೀವಹಿಂಸಕರ ಕೋಳ್ಮೃಗಮೆಂಬಿವು ವ್ಯಾಳವಾಚಕಂ" (ನಾನಾರ. ೭೫). ೩ , ೮ : ಅಂಗುಳೊಳಡಸಿದ ವಿಷಮುಂ ಭಂಗುರತರ ವಿಷಮದೃಷ್ಟಿಯುಂ ವ್ಯಾಳಸಮಾಸಂಗಮುಮುಮರ್ದಿರೆ ಮದನಹರರಿಗೆಣೆಯೆನಿಪುದಱಿನೆಮಗೆ ಖಳರಭಿವಂದ್ಯರ್ (ಕಾವ್ಯಾವ. ೭೭೩). ೯. ಒಂದು ಸಸ್ಯದ

ಹೆಸರು ; ಚಿತ್ರಮೂಲ : "ಚಿತ್ರಮೂಲ ವ್ಯಾಳವಗ್ನಿ ಚಿತ್ರಕವಕ್ಕು" (ಮಂಗರಾ. ೬೯-೨೬). **೧೦. [ಗಣಿತ]** ಏಳು ಎಂಬುದರ ಸಂಕೇತ. "ಶುನಕಂ ಕೋಕಮೃಗಂ ದುರ್ಜನ ಭಯವರನುಂ ಸರ್ಪಮಿಭಮತಿಹಿಂಸಕಂ ಮುನಿಸಂಖ್ಯೆ ವ್ಯಾಳಶಬ್ದಂ" (ನಾನಾಕಂ. ೧೦೫). **[ಸಂ.]**

**ವ್ಯಾಲಂಬಿವಾಲ** (ನಾ). ೧. ಅಲ್ಲಾಡುವ ಬಾಲ. ೨. ಅಲುಗಾಡುತ್ತಿರುವ ಬಾಲವುಳ್ಳುದು : ಬದ್ಧೋದರಂ ದಕ್ಷಿಣೋಚ್ಚರದಂ ಕ್ರೋಡನಿತಂಬನಂಬುದರವಂ ವ್ಯಾಲಂಬಿವಾಲಂ . . . ಸಿಂಧುರಂ (ಚಂದ್ರಪ್ರ. ೯-೯೯); ಸಮದಂತಮುಜ್ಜ್ವಳಮುಖಂ ವ್ಯಾಲಂಬಿವಾಲಂ ಲಸಧ್ವನಿ ಚೇತೋಗತಿ . . . ಏಳ್ತಂದುದುದಭಂಗಭಂಗ ವಿಳಸದ್ರಂಗತ್ತುರಂಗವ್ರಜಂ (ರಾಜಶೇ. ೧೩-೬೮). **[ಸಂ.]**

**ವ್ಯಾಲಕುಂಡಲ** (ನಾ). ಸರ್ಪಗಳನ್ನು ಕಿವಿಯಾಭರಣವಾಗಿ ಉಳ್ಳವನು ; ಶಿವ : ಜೋ ಜೋ ಎನ್ನಿರಿ ವ್ಯಾಲಕುಂಡಲಗೆ (ಅವಿಂಗೀ. ೩೫೭-೩೪). **[ಸಂ.]**

**ವ್ಯಾಲಗಂಧಿ** (ನಾ). ಒಂದು ಬಗೆಯ ಸಸ್ಯ ; ನಾಂಗುಲಿಕ : "ವ್ಯಾಲ[ಪಾಠಾಂ. ಳ] ಗಂಧಿಯೆನೆ ನಾಂಗುಲಿಕವಕ್ಕುಂ" (ಮಂಗರಾ. ೪೦-೩೦). [< ಸಂ. ವ್ಯಾಲಗಂಧಾ]

**ವ್ಯಾಲಗ್ನ** (ಗು). ವಿಶೇಷವಾಗಿ ಕೂಡಿದ , — ಬೆರೆತ : ಮಕುಟವ್ಯಾಲಗ್ನರತ್ನಪ್ರಭಾ ಪರಿವೇಷಂ (ಆದಿಪು. ೭-೧೨೭) ; ಬಾಷ್ಪಸರಿದ್ವ್ಯಾಲಗ್ನಕೀರ್ಣಭ್ರಮರಕಮವ್ಯತಾ ಪಾಂಡುಗಂಡಸ್ಥಲಂ (ರಾಜಶೇ. ೭-೭೬). **[ಸಂ.]**

**ವ್ಯಾಲಾಧರತ್ವ** (ನಾ). ೧. ಸರ್ಪವನ್ನು ಧರಿಸಿರುವುದು. ೨. ಸರ್ಪವನ್ನು ಹಿಡಿಯುವುದು ; ವ್ಯಾಲಾಧರತ್ವದಿಂದಿಹರು ಗಾರುಡಿಗರುಂ (ಏಕೋಪು. ೨-೭೪). **[ಸಂ.]**

**ವ್ಯಾಲಾಯುಧ** (ನಾ). ಒಂದು ಬಗೆಯ ಸಸ್ಯ ; ಹುಲಿಯುಗುರುಗಿಡ : "ವ್ಯಾಲಾ[ಪಾಠಾಂ. ಡಾ, ಳಾ]ಯುಧಂ, ವ್ಯಾಘ್ರನಖಂ, ಕರಜಂ, ಚಕ್ರಕಾರಕಂ — ೪ ವ್ಯಾಘ್ರನಖವೆಂಬ ಗಂಧದ್ರವ್ಯ , ಹುಲಿಯುಗುರುಗಿಡವು" (ಸಿದ್ಧಾಂತಿ. ೧೪೧). **[ಸಂ.]**

**ವ್ಯಾಲಾರಿ** (ನಾ). ಹಾವಿನ ವೈರಿ ; ಗರುಡ : "ಖಗಜಾಲಪತಿ . . . ವ್ಯಾಲಾ[ಪಾಠಾಂ. ಳಾ]ರಿ ವೈನತೇಯಂ ಸುರಪರಿಪುಗರುತ್ಮನೆನಲ್ಕೆ ಗರುಡನಕ್ಕುಂ" (ಮಂಗರಾ. ೭-೨೧). **[ಸಂ.]**

**ವ್ಯಾಲಿ** (ನಾ). ಒಂದು ಬಗೆಯ ಸಸ್ಯ : "ವ್ಯಾಲಿ[ಪಾಠಾಂ. ಳಿ] ಕೋಟರಪುಷ್ಪಿ ಯೆನಲಮ್ಮೆವಳ್ಳಿ" (ಮಂಗರಾ. ೪೪-೪೬). [?]

**ವ್ಯಾಲಿಕ** (ನಾ). ೧. ವಂಚನೆ ; ಮೋಸ : "ವ್ಯಾಲಿ[ಪಾಠಾಂ. ಳಿ]ಕಂ ವಂಚನಂ ವಿಪ್ರಕಾರಣಮೆನಲ್ಕಾಳಿಗೊಳುಹಂ" (ಮಂಗರಾ. ೧೩೦-೧೭). ೨. ಸುಳ್ಳು ; ಅಸತ್ಯ : (ಶಿ). [< ಸಂ. ವ್ಯಲೀಕ]

**ವ್ಯಾಲೋಲ, ವ್ಯಾಳೋಳ** (ಗು). ೧. ಚಲಿಸುವ ; ಅಲುಗಾಡುವ : ವ್ಯಾಲೋಲ ಕರ್ಣೋತ್ಪಲಮನಮರೆ ಸೈತಿಕ್ಕುತಂ (ಕಾದಂಬ. ೪೯) ; ಮೃಡಾಣೀವರನಂ ವ್ಯಾಲೋಲಬಾಲೇಂದುಶೇಖರನಂ ತಾಳ್ದಿದನಾತ್ಮಹೃತ್ಕಮಳದೊಳ್ (ಪಂಚತಂ. ೭೦-೯). ೨. ಕೆದರಿರುವ ; ಚೆಲ್ಲಾಪಿಲ್ಲಿಯಾದ; ಅಸ್ತವ್ಯಸ್ತವಾದ. ೩. ನಶ್ವರವಾದ ; ಶಾಶ್ವತವಲ್ಲದ : ವ್ಯಾಲೋಲರಾಜ್ಯವಿಭವವಿಶಾಲವಿಭೂಷಣಕಳಾಪಮಂ ಕಳೆದೊಲವಿಂದೋಲಾಡುತಿರ್ದ್ದನುಪಶಮಲೀಲಾರಸದೊಳ್ ಸರಸ್ವತೀಶೃಂಗಾರಂ (ಅರ್ಧನೇ. ೪-೫೯). **ವ್ಯಾಳೋಳ** : ೧. ತೀರ್ಥಸಮೀಪಮಂಬುನಿವಹವ್ಯಾಳೋಳ ಕಾಳಿಂದಿಯಾ ವನಮುಂ (ಪಂಪಭಾ. ೫-೭೪). **[ಸಂ.]**

**ವ್ಯಾವರ್ಣನೆ** (ನಾ). ಅತಿಶಯವಾದ ಬಣ್ಣನೆ ; ವ್ಯಾಪಕವಾದ ವರ್ಣನೆ : ಸ್ವರ್ಗಲೋಕದ ವ್ಯಾವರ್ಣನೆಯಂ ಮಾಡುವಲ್ಲಿ ಪನ್ನೆರಡನೆಯ ಸಹಸ್ರಾರಕಲ್ಪಮಂ ನೋಡುತುಮಿರ್ಪುದುಂ (ಧರ್ಮಾಮೃ . ೮-೩೨);ಎಲ್ಲಾ ವ್ಯಾವರ್ಣನೆಗಳು ಸ್ಥಾಪ್ಯದೊಳಗು ಎಲ್ಲ ವಚನಂಗಳು ತಾಪದೊಳಗು (ಶೂನ್ಯಸಂ. ೧೭೩). **[ಸಂ. ವ್ಯಾಪರ್ಣನ]**

**ವ್ಯಾವರ್ಣಿತ** (ಗು). ೧. ಬಹುವಾಗಿ ಬಣ್ಣಿಸಿದ ; ವಿಶೇಷವಾಗಿ ವರ್ಣಿಸಲ್ಪಟ್ಟ. (ನಾ). ೨. ವಿಶೇಷವಾಗಿ ಸ್ತುತ್ಯನಾದ ವ್ಯಕ್ತಿ : ವೃದ್ಧ ಕಂಚುಕಿ ವ್ಯಾ[ಪಾಠಾಂ. ಬ್ಯಾ] ವರ್ಣಿತರಪ್ಪವನಿಚರ ಗಗನಚರ ಕುಮಾರಕರನಪಧರಿಸಿ (ಜಾವುಂಪು. ೧೭). **[ಸಂ.]**

**ವ್ಯಾವರ್ಣಿಸು** (ಕ್ರಿ). ವಿಶೇಷವಾಗಿ ಬಣ್ಣಿಸು ; ಅತಿಶಯವಾಗಿ ವರ್ಣಿಸು : ತನಗ ವ್ಯಾವರ್ಣಿಸಿ ಪೇಟ್‌ ಕೇಳ್ದು (ಪದ್ಮರಾ. ೧೨-೬) ; ಕವಿಗಳ ರೂಪಂ ವ್ಯಾವರ್ಣ್ಯಿಪರೆನೆ ರೂಪನದೇವೊಗಟ್ಟೆ (ಸೌಇಇ. XX, ೪೯ -೩೪ ; 1076) ; ಪೊಸಗನ್ನಡದಿಂ ವ್ಯಾವರ್ಣಿಸುವೆಂ ಸತ್ಕೃತಿಯಂ (ಧರ್ಮಾಮೃ. ೧-೪೦). [ವ್ಯಾವರ್ಣನೆ + - ಇಸು]

**ವ್ಯಾವರ್ತ** (ನಾ). ೧. ಒಂದು ಬಗೆಯ ಸಸ್ಯ : ಬಿಳಿಯ ಹೂಲಿಯ ಬೇರು ವ್ಯಾವರ್ತದ ಬೇರು ಇವನ್ನು ತೇದು ಮೈಗೆ ಪೂಸಿಕೊಂಡರೆ ಅಗುಳಿಕೆ ತೆಗೆಯುವುದು (ವಿಷವಿ. ೨೦೩). ೨. [ನಾಟ್ಯ] ನರ್ತನದಲ್ಲಿ ತೋರಬೇಕಾದ ಕೈಬೆರಳುಗಳ ಒಂದು ಭಂಗಿ ; **P** "ಕಿರುಬೆರಳು ಮೊದಲುಮಾಡಿ ತೋರುಬೆರಳು ವರೆಗಿನ ಬೆರಳುಗಳನ್ನು ಬಗ್ಗಿಸುತ್ತ ಅಂಗೈಯನ್ನು ಪಕ್ಕೆಯಿಂದ ತಂದು ಎದೆಗೆದುರಾಗಿ ಹಿಡಿಯುವುದು" (ಲಾಸ್ಯರಂ. ೨೮೬ ಗದ್ಯಾನುವಾದ) : ನೆಗಳ್ದಿರ್ದಾ ವೇಷ್ಟಿತಮೇ ಮಿಗೆ ಕಿಱುವೆರಳಾದಿಯಾಗಿ ಬರೆ ವ್ಯಾವರ್ತಂ (ಲಾಸ್ಯರಂ. ೪-೯). **[ಸಂ.]**

**ವ್ಯಾವರ್ತಕ** (ಗು). ೧. ಸೇರಿಸದ ; ಬಿಟ್ಟ ; ಪ್ರತ್ಯೇಕಿಸಿದ : ಉಳಿದ ದ್ರಾವಿಡಭಾಷೆಗಳಲ್ಲಿ ಕಾಣುವ ವ್ಯಾವರ್ತಕ ಹಾಗೂ ಅಭಿವ್ಯಾಪಕವೆಂಬ ವಿಂಗಡಣೆ ಬ್ರಾಹೂಈ ಭಾಷೆಯಲ್ಲಿ ಇಲ್ಲ (ದ್ರಾವಿವಿ. ೧೬೪). (ನಾ). ೨. ವಿಶೇಷ ಲಕ್ಷಣ : ಅವಿನೀತನ ಸೋದರಮಾವನಾದ ಕೃಷ್ಣವರ್ಮನಿಗೆ ಅಶ್ವಮೇಧಯಾಜಿ ಎಂಬುದು ವ್ಯಾವರ್ತಕ ವಿಶೇಷಣವಾಗಿತ್ತು (ಕರ್ನಾಅ. ೨೨). ೩. ಬೇರ್ಪಡಿಸುವ ಪದಾರ್ಥ ; ಪ್ರತ್ಯೇಕಿಸುವ ಸಾಧನ : ಅವಚ್ಛೇದ, ಅವಚ್ಛೇದಕ, ಅವಚ್ಛಿನ್ನವೆಂಬ ಪದಗಳಿಗೆ ಪರ್ಯಾಯ ಪದಗಳಾಗಿ ವ್ಯಾವೃತ್ತಿ, ವ್ಯಾವರ್ತಕ, ವ್ಯಾವರ್ತ್ಯ . . . ಎಂದು ವ್ಯವಹರಿಸುವರು (ಹಿಂದಸಾ. ೧೯೯). **[ಸಂ.]**

**ವ್ಯಾವರ್ತಿತ** (ನಾ). [ನಾಟ್ಯ] ನೃತ್ಯದಲ್ಲಿನ ನಾಲ್ಕು ಬಗೆಯ ಹಸ್ತಚಲನೆಗಳಲ್ಲಿ ಒಂದು : ಆವೇಷ್ಟಿತ, ಉದ್ವೇಷ್ಟ, ವ್ಯಾವರ್ತಿತ, ಪರಿವರ್ತಿತ — ಈ ನಾಲ್ಕು ಹಸ್ತಕರಣಭೇದಂಗಳ್ (ಲಾಸ್ಯರಂ. ೪-೬ ವ). **[ಸಂ.]**

**ವ್ಯಾವಸಾಯಿಕ** (ಗು). ಯಾವುದಾದರೊಂದು ಕಸುಬಿಗೆ ಸಂಬಂಧಿಸಿದ : ನಾಗಾರಾಧನೆಯಲ್ಲಿ ಪಾತ್ರವಹಿಸುವ 'ವೈದ್ಯ'ರು ಅಂತಹ ವ್ಯಾವಸಾಯಿಕ ಜನಗಳು (ಜಾನಗೀ. ೧೦). **[ಸಂ.]**

**ವ್ಯಾವಹಾರಿಕ** (ಗು). ೧. ವ್ಯವಹಾರಕ್ಕೆ ಸಂಬಂಧಿಸಿದ ; ವ್ಯವಹಾರದಲ್ಲಿರುವ : ಕೆಲವು ವ್ಯಾವಹಾರಿಕಕಾರಣಗಳಿಂದ . . . ಇಲ್ಲಿಯವರೆಗೂ ತಡೆದೆವು (ವೀರಯೋ. Xii, ಪೀಠಿಕೆ). ೨. ದಿನಬಳಕೆಯಲ್ಲಿರುವ ; ಪ್ರಚಲಿತವಾದ ; ರೂಢಿಯಲ್ಲಿರುವ : 'ವ್ಯಾವಹಾರಿಕಭಾಷೆ' ಪರಾ. ೩. ಕೋರ್ಟು ವಹಿವಾಟಿಗೆ ಸಂಬಂಧಿಸಿದ ; ಕಾನೂನಿಗೆ ಸಂಬಂಧಿಸಿದ. ೪. ಉಪಯೋಗಕರವಾದ. (ನಾ). ೫. ಬಳಕೆಯಲ್ಲಿರುವುದು ; ರೂಢಿಯಲ್ಲಿರುವುದು : ಭಾಷೆಗಳನ್ನು ವ್ಯಾವಹಾರಿಕ, ಗ್ರಾಂಥಿಕ ಎಂದು ವಿಭಾಗಿಸಬಹುದು. ವ್ಯಾವಹಾರಿಕವೆಂದರೆ ಜನರು ಮಾತನಾಡುತ್ತಿರುವ ಭಾಷೆ (ಕೈಪಿಡಿ. ೨೯೩). ೬. ಉಪಯೋಗ ; ಪ್ರಯೋಜನ : ಪ್ರಲೋಭನ ಪಿಶಾಚಿ ತನ್ನ ಧ್ವನಿಯನ್ನೇರಿಸಿ . . . ಯಾವುದು ವ್ಯಾವಹಾರಿಕವೆಂಬ ಪ್ರಶ್ನೆಯ ಕಡೆಗೆ ಅವನನ್ನು ತುಯ್ಯಲು ಹವಣಿಸುತ್ತಿತ್ತು (ಪುನರು. ೧೯೫). **[ಸಂ.]**

**ವ್ಯಾವಹಾರಿಕಜೀವನ** (ನಾ). ಪ್ರಾಪಂಚಿಕಬಾಳು ; ಲೌಕಿಕಜೀವನ : ನಮ್ಮ ವ್ಯಾವಹಾರಿಕಜೀವನವು ಈ ಎರಡು ನೀತಿಗಳ ಸಮನ್ವಯವಾಗಬೇಕು (ಧರ್ಮಸಾ. ೧೪೭). **[ಸಂ.]**

**ವ್ಯಾವಹಾರಿಕಭಾಷೆ** (ನಾ). ದಿನಬಳಕೆಯ ಮಾತು ; ರೂಢಿಯಲ್ಲಿರುವ ಭಾಷೆ ; ಆಡುಮಾತು : ಸಂಸ್ಕೃತ ಪ್ರಾಕೃತಗಳೆರಡೂ ಆಸ್ಥಾನ ಮತ್ತು ವ್ಯಾವಹಾರಿಕ ಭಾಷೆಗಳಾಗಿದ್ದವೆಂದು ಹೇಳಬಹುದು (ಕರ್ನಾಅ. ೫) ; ವ್ಯಾವಹಾರಿಕಭಾಷೆಯಲ್ಲಿ ಗ್ರಾಮ್ಯತೆ, ಶಬ್ದಸಂಸ್ಕಾರರಾಹಿತ್ಯವೇ ಹೆಚ್ಚು (ಸಂಶೋಧ. ೭೯). **[ಸಂ. ವ್ಯಾವಹಾರಿಕಭಾಷಾ]**

**ವ್ಯಾವೃತ** (ಗು). ಮುಚ್ಚಿದ ; ಮರೆಮಾಡಿದ ; ಆಚ್ಛಾದಿಸಿದ : ವ್ಯಾವೃತ ಖಡ್ಗಗಳಿಂ ಲೀಲಾವಹ ಮಹಿಷೀವಿತಾನದಿಂ ಕಂಚುಕಿವೇತ್ರಾವಳಿಯಿಂ ನೃಪಕುಟಿಯವೊಲಾವಗ ಮೆಸದತ್ತು ಚಿತ್ರಕೂಟನಗೇಂದ್ರಂ (ಕುಸುಮಾ. ೧-೭೦) ; ವ್ಯಾವೃತವಿದ್ರುಮಮುತ್ಕಳಿಕಾ ವಿದ್ಯತಮನಂತಹರಿಮಯಂ ಶಿಖಿಯುತಮಂತಾ ವನಮಮೃತಾಬ್ಧಿಗೆ ಸರಿ ಭಾವಿಪೊಡಮ ಬಾಧ್ಯದಿಂದಭಂಗದಿನಧಿಕಂ (ಶಾಂತೀಶ್ವ. ೧೩-೪೫). **[ಸಂ.]**

**ವ್ಯಾವೃತ್ತ** (ಗು). ಪ್ರತ್ಯೇಕಿಸಿದ ; ಹೊರತುಪಡಿಸಿದ : ಸಾಮಾನ್ಯ ವಿಶೇಷ ವ್ಯಾವೃತ್ತ ವಿರುದ್ಧಾವಿರುದ್ಧ ಧರ್ಮಕ್ರಮದಿಂ (ಸುಕುಮಾ. ೩-೩೯ ವ). **[ಸಂ.]**

**ವ್ಯಾವೃತ್ತಿ** (ನಾ). ೧. ಪ್ರತ್ಯೇಕಿಸುವುದು ; ಹೊರತುಪಡಿಸುವುದು : ಸಕಳಾಳಾಪ ಕಳಾಕಳಾಪಕಥಿತವ್ಯಾವೃತ್ತಿಯೊಳ್ ಕೂಡಿ ಚಿತ್ರಕರಂಬೋಲ್ (ಕವಿರಾ. ೧-೧೫೦) ; ಜೀವ ಸಂಜ್ಞೆಯ ಹೊತ್ತ ಚಿದ್ರೂಪವನು ತದ್ವ್ಯಾವೃತ್ತಿಯನು ಮಾಡಿ . . . ವಿಶುದ್ಧಸಂವಿತ್ತತ್ವವದು ತಾನೆಂದು ನಿಲುವುದು ಮುಕ್ತಿ (ನಿಭಾಗ. ೩-೧೨-೪೪). ೨. ಸುತ್ತ ತಿರುಗುವುದು ; ಪರಿಭ್ರಮಣ. ೩. [ಕಾವ್ಯಮೀ] ಪದಗಳು, ವರ್ಣಗಳು ಒಂದಕ್ಕಿಂತ ಹೆಚ್ಚು ಸಲ ಆವೃತ್ತಿಗೊಳ್ಳುವಿಕೆ ; ಯಮಕ : ಮಗುಟ್ಚುಂ ಮ[ಗುಟ್ಚು] ಮಾತಂ ನೆಗಟ್ಟಿರೆ ಪೇಟ್ಚಾಗಳಕ್ಕುಮಾ ವ್ಯಾವೃತ್ತಿ (ಕವಿರಾ. ೩-೨೦೦) ; ಪದವರ್ಣವ್ಯಾವೃತ್ತಿ ದಲದು ಯಮಕಂ (ಕಾವ್ಯಾವ. ೫-೨೫). **[ಸಂ.]**

**ವ್ಯಾಸ** (ನಾ). ೧. ಭಾಗಮಾಡುವುದು ; ವಿಭಜಿಸುವುದು . ೨. ಹರಡುವಿಕೆ ; ವಿಸ್ತರಿಸುವಿಕೆ : "ವ್ಯಾಸಃ, ಪ್ರಪಂಚಃ, ವಿಸ್ತಾರಃ – ಈ ೩ ಹಿರಿದು ಮಾಡುಹ" (ಹಲಾಯು. ೧೨೭-೮೦). ೩. ಹರಹು ; ವಿಸ್ತಾರ : ಯಥಾಕ್ರಮದಿಂ ದ್ವಿಲಕ್ಷಯೋಜನವಲಯವ್ಯಾಸಮುಂ ಪಂಚಲಕ್ಷಯೋಜನಪ್ರಮಾಣಸೂಚೀವ್ಯಾಸಮುಂ ಅಕ್ಕುಂ (ತತ್ವಪ್ರ. ೧೨೮) ; ಇದಟೊಳ್ "ಓಜವಡೆದೋದುಗುಂ" ಎಂಬರ್ಥಮನೇ ಬಿತ್ತರಿಸಿ ಪೇಟ್ಟುದಱಿಂ ವ್ಯಾಸಮೆನಿಪುದು (ಅಪ್ರತಿ. ೧೪-೨) . ೪. ವಿವರಣೆ : ವ್ಯಾಸಮುನಿ ಪ್ರಣೂತಕೃತಿಯಂ ಸಲೆ ಪೇಟ್ಟು ಪೊದ[ಟ್ಟ] ಸತ್ಯವಿವ್ಯಾಸಸಮಾಗಮಾನ್ವಿತಾದಿ ಪುರಾಣಮನೆಯ್ದೆ ಪೇಟ್ಟು (ಪಂಪಭಾ. ೧೪-೬೨). ೫. [ರೇಖಾಗ] ವರ್ತುಲ ಅಥವಾ ಗೋಳದ ಕೇಂದ್ರಬಿಂದುವಿನ ಮೂಲಕ ಹಾದು, ವೃತ್ತಪರಿಧಿಯ ಎರಡು ಬಿಂದುಗಳನ್ನು ಸೇರಿಸುವ ಸರಳರೇಖೆ; ವರ್ತುಲವನ್ನು ಸಮವಾಗಿ ವಿಭಾಗಿಸುವ ರೇಖೆ : ಭೂಗೋಳದ ವ್ಯಾಸವು ಅಥವಾ ಭೂಗರ್ಭದ ಪಾರಳತೆಯು ೭೯೧೨ ಮೈಲುಗಳುಳ್ಳದ್ದಾಗಿದೆ (ಭೂಗೋಳ. ೩). ೬. ಒಟ್ಟುಗೂಡಿಸುವವನು : ಕವಿಗಳೂ, ವ್ಯಾಸರೂ, ಲೇಖಕರೂ ಸಾವಿರ ಗಟ್ಟಲೆಯಾಗಿದ್ದರು (ಭಾಇಪ್ರ. ೨೬೩). ೭. ಒಬ್ಬ ಮುನಿಯ ಹೆಸರು ; ಸತ್ಯವತಿ ಮತ್ತು ಪರಾಶರಮುನಿಯ ಮಗನಾಗಿ ಜನಿಸಿ, ಮಹಾಜ್ಞಾನಿಯಾಗಿ ಮಹಾಭಾರತವೇ ಮೊದಲಾದ ಪುರಾಣಗಳನ್ನು ಬರೆದ ಋಷಿ; ಕೃಷ್ಣದ್ವೈಪಾಯನ ; IP ಅಖಂಡ ವೇದರಾಶಿಯನ್ನು ನಾಲ್ಕು ಭಾಗಗಳಾಗಿ ಮಾಡಿ ಬೇರೆ ಬೇರೆ ಶಾಖೆಗಳಾಗಿ ಮಾಡಿದುದರಿಂದ 'ವ್ಯಾಸ' ಎಂದು ಹೆಸರಾಯಿತು: ವ್ಯಾಸಮುನೀಂದ್ರ ರುಂದ್ರವಚನಾಮೃತವಾರ್ಧಿಯನೀಸುವೆಂ ಕವಿವ್ಯಾಸನೆನೆಂಬ ಗರ್ವಮೆನಗಿಲ್ಲ (ಪಂಪಭಾ. ೧-೧೩) ; ಸ್ತುತಿಗೆಯ್ವೆಂ ಕೃತ ಪಂಚಮಶ್ರುತಿಪುರಾಣವ್ಯಾಸನಂ ವ್ಯಾಸನಂ (ಜಗವಿ. ೧-೮). ೮. ಚೆಲ್ಲಾಪಿಲ್ಲಿಯಾಗಿ ಒಗೆಯುವುದು : (ಕಿ).

ವ್ಯಾಸನ ತೋಳು = ೧. ನಂದಿಧ್ವಜಕ್ಕೆ ಅಳವಡಿಸುವ, ತೋಳಿನ ಆಕಾರ ದಲ್ಲಿರುವ ಒಂದು ಅಲಂಕಾರ : ವ್ಯಾಸನ ತೋಳು – ವೀರಶೈವರು ನಂದಿಧ್ವಜಕ್ಕೆ ಕಟ್ಟುವ ಒಂದು ಬಿರುದು (ಶರಸಾ. ೨೪-೭). ೨. ಮಾಸ್ತಿಕಲ್ಲಿನಲ್ಲಿ ಕೆತ್ತಿರುವ ತೋಳಿನ ಆಕಾರ : ಬರಿಯ ತೋಳು ಇರುವ ಮಾಸ್ತಿಕಲ್ಲುಗಳನ್ನು ವ್ಯಾಸನ ತೋಳು ಎಂದು ಕರೆಯುತ್ತಾರೆ (ಕಶಾಅ. ೩೧೯). 'ವ್ಯಾಸಧ್ವಜ' ಪರಾ. **[ಸಂ.]**

**ವ್ಯಾಸಂಗ** (ನಾ). ೧. ಆಸಕ್ತಿ ; ಒಲವು : ಸಾಸಿಗನೂರ್ವರನುಜರೆನಗವರನ್ನ ವ್ಯಾಸಂಗದೊಳು ಕಾಣ್ಬರು (ಭರಚ. ೪೫-೧೨೩). ೨. ಒಂದೇ ಮನಸ್ಸಿನಿಂದ ಮಾಡುವ ವಿದ್ಯಾಭ್ಯಾಸ,– ಅಭ್ಯಾಸ : ನನ್ನ ವ್ಯಾಸಂಗ ಚೆನ್ನಾಗಿ ನಡೆದಿತ್ತು (ಹೊಸಕ್ಕಿ. ೩). ೩. ಆಯಾಸ ; ಶ್ರಮ : ವ್ಯಾಸಂಗಪರಂಪರಾಭಿಃ – ಆಯಾಸದ ಮೇಲಾಯಾಸಂ ಗಳಿಂ (ನೀತಿವಾ. ೨೩-೮೦). ೪. ಅಗಲಿಕೆ ; ವಿಯೋಗ : ಎನ್ನೊಬ್ಬ ತಂಗಿ ಕೈಲಾಸ ದೊಳ್ಪಸುದಾಳಿದಳು ವ್ಯಾಸಂಗದಾ ನೋವು ನಿನ್ನ ಕಂಡಗಲಿತು (ಭರಚ. ೩೫-೮೭).

ವ್ಯಾಸಂಗ ಮಾಡು = ಅಭ್ಯಾಸ ಮಾಡು : ಅವರ ಗ್ರಂಥವನ್ನು ವ್ಯಾಸಂಗಮಾಡುವ ಅದೃಷ್ಟ ಒದಗಲಿಲ್ಲ (ಚಂಗಾಳ್ಯ. ೨). **[ಸಂ.]**

**ವ್ಯಾಸಂಗಗೋಷ್ಠಿ** (ನಾ). ಅಧ್ಯಯನಕೂಟ : ಈ ದಿನದ ವ್ಯಾಸಂಗಗೋಷ್ಠಿಗೆ ನೀವೆ ಅಧ್ಯಕ್ಷರು (ಹೇಮಕೂ. ೧೦೩). **[ಸಂ.]**

**ವ್ಯಾಸಂಗವೇತನ** (ನಾ). ವಿಶೇಷವಾದ ಅಭ್ಯಾಸಕ್ಕೆ ಪ್ರೋತ್ಸಾಹರೂಪವಾಗಿ ಕೊಡುವ ವೇತನ, – ಧನಸಹಾಯ ; ವಿದ್ಯಾರ್ಥಿವೇತನ : ಅಲ್ಲಿಯ ವಿಶಿಷ್ಟ ಸಮಸ್ಯೆಗಳನ್ನು ಅಭ್ಯಾಸ ಮಾಡಲು, ಸಂಶೋಧನಾವ್ಯಾಸಂಗವೇತನವನ್ನು ಗಳಿಸಿಕೊಂಡನು (ಸಸ್ಯಕ. ೭೮). **[ಸಂ.]**

**ವ್ಯಾಸಕೂಟ** (ನಾ). ವ್ಯಾಸರಾಯರ ಅನುಯಾಯಿಗಳ ಪಂಥ, – ಗುಂಪು : ವ್ಯಾಸಕೂಟವೆಂದರ ಜ್ಞಾನಿಗಳ ಪಂಥ (ಹೇಮಕೂ. ೧೦೩) ; ಅದೇ ಸುಮಾರಿನಲ್ಲಿ ವ್ಯಾಸ ಕೂಟವು ಬಳಕೆಗೆ ಬಂದಿತು (ಭಾರದ. ೨೧೩). 'ದಾಸಕೂಟ' ಪರಾ. **[ವ್ಯಾಸ + ಕೂಟ]**

**ವ್ಯಾಸಧ್ವಜ** (ನಾ). ನಂದಿಧ್ವಜಕ್ಕೆ ಅಳವಡಿಸುವ ಒಂದು ಬಗೆಯ ತೋಳಿನಾಕಾರದ ಅಲಂಕಾರ ; **P** ಶಿವನ ಗುಡಿಯಲ್ಲಿ ಹರಿ ಸರ್ವೋತ್ತಮ ತ್ವವನ್ನು ಸಾರಿ ಹೇಳಿದ ವೇದವ್ಯಾಸನ ತೋಳುಗಳನ್ನು ನಂದೀಶ್ವರನು ಕತ್ತರಿಸಿದನೆಂಬ ಕತೆಯು ಬಳಕೆಯಲ್ಲಿದ್ದು, ಕತ್ತರಿಸಿದ ಆ ತೋಳುಗಳ ಸಂಕೇತವಾದ ತೋಳಿನಾಕಾರದ ಈ ಅಲಂಕಾರವನ್ನು 'ವ್ಯಾಸನ ತೋಳು' ಎಂದು ಕರೆಯುವ ವಾಡಿಕೆ ಬೆಳೆದುಬಂದಿದೆ : ನಂದಿಯ ಕಂಭದ ಧ್ವಜ ಉಪ್ಪರಗುಡಿಪತಾಕೆ ವ್ಯಾಸಧ್ವಜ ಒಪ್ಪುತ್ತಿರ್ಪವಯ್ಯಾ (ಚನ್ನವ. ೧೫೭-೩೫೭). **[ಸಂ.]**

**ವ್ಯಾಸಪೀಠ** (ನಾ). ೧. ಭಾಷಣಕಾರರು ಅಥವಾ ವ್ಯಾಖ್ಯಾನಕಾರರು ಕುಳಿತುಕೊಳ್ಳುವ ಪೀಠ, – ಉನ್ನತಾಸನ : ಅದು ವ್ಯಾಸಪೀಠದ ಮೇಲಣ ವಕ್ತೃತ್ವವೂ ಅಲ್ಲ (ಕಥಕ. ೭೯) ; ಪತ್ರಿಕೋದ್ಯಮಿಯ ವ್ಯಾಸಪೀಠದಿಂದ ಅವರು ಮಾಡಿದ ಕಾರ್ಯವು ಪತ್ರಿಕೋದ್ಯಮಿಗಳಿಗೆಲ್ಲ ಆದರ್ಶಪ್ರಾಯವಾಗಿದೆ (ಮಹಾಯೋ. ೧೫೨). ೨. (ಪವಿತ್ರಗ್ರಂಥಗಳ ಪಠಣ ಮಾಡುವಾಗ) ಪುಸ್ತಕವನ್ನು ಒರಗಿಸಿ ಇಟ್ಟುಕೊಳ್ಳುವ ಮರದ ಒಂದು ಉಪಕರಣ : ಎದುರಿಗೆ, ಮಡಿಸಲು ಬರುವಂತಹ ವ್ಯಾಸಪೀಠ (ವಂಶವೃ. ೫). **[ಸಂ.]**

**ವ್ಯಾಸರೇಖೆ** (ನಾ). = ವ್ಯಾಸ ೫ : ಭೂಮಿಯ ವ್ಯಾಸರೇಖೆ ಮೇರುವಿನಿಂದ ಮೇರುವಿಗೆ ೭,೯೦೦ ಮೈಲಿ (ಭೂವಿವ. ೮). **[ಸಂ. ವ್ಯಾಸರೇಖಾ]**

**ವ್ಯಾಸಸ್ಮೃತಿ** (ನಾ). ವೇದವ್ಯಾಸರಿಂದ ರಚಿತವಾದ ಸ್ಮೃತಿ,– ಧರ್ಮಶಾಸ್ತ್ರ: ವ್ಯಾಸಸ್ಮೃತಿ . . . ವಶಿಷ್ಠಸ್ಮೃತಿಗಳೆಂಬಿವೇ ಆಯಾಯ ನಾಮಧೇಯವುಳ್ಳವ ರಿಂದುಕ್ತವಾದ ಹತ್ತೊಂಬತ್ತು ಧರ್ಮಶಾಸ್ತ್ರಗಳು (ವಿವೇಕ. ೪). **[ಸಂ.]**

**ವ್ಯಾಸಹಸ್ತ** (ನಾ). = ವ್ಯಾಸಧ್ವಜ : ಪುಣ್ಯಪದವಿಗಳ ಬೇಹವರು ಬಹು ದೆಂದು ಕರೆಯಲೆತ್ತಿದ ಹಸ್ತವೋ ಎನಿಪಂತೆ ಗಳಿಗಳ ಘನವ್ಯಾಸಹಸ್ತಂ ಮೆಱೆದುದು (ಹಚಕಾ. ೧೦-೩೮) ; ಸುತ್ತ ನೆಗಹಿದ ವೃಷಭಧ್ವಜಂಗಳಿಂ ಕತ್ತಲಿಸಲೆತ್ತಿದ ವ್ಯಾಸಹಸ್ತಂಗಳಿಂ . . . ಬಸವೇಶ್ವರಂ ಸಕಲಗಣಂಗಳ್ವೆರಸಿ ಪುರವಂ ಪೊಱಮಟ್ಟು ಕಿಱಿದಂತರಂ ಪೋಗೆ (ನನ್ನಚಾ. ೨-೫೦ ವ). **[ಸಂ.]**

**ವ್ಯಾಹತ** (ಗು). ೧. ತಡೆಗಟ್ಟಿದ ; ಬಿಟ್ಟುಬಿಟ್ಟ. (ನಾ). ೨. ತಡೆಹಿಡಿಯುವಿಕೆ ; ಬಿಟ್ಟುಬಿಡುವಿಕೆ : ಸಮರೋತ್ಸಾಹಶಕ್ತಿಗೆ ಠಾವದಲ್ಲ ವ್ಯಾಹತವೆ ಮತವೆಂದು . . . ಬೆಸಗೊಂಡ (ಕುವ್ಯಾಸ. ೧೨-೯೩). ೩. ವಿರುದ್ಧವಾದುದು ಸಾಧಕವಾದುದು : ಸರ್ವನಿಯಾಮಕ ಬ್ರಹ್ಮನ ವ್ಯಾಪಾರವನ್ನು ಈ ನಿಯಮಗಳಿಂದ ಕಟ್ಟಿಹಾಕುವ ಭಾವ ವ್ಯಾಹತವಾಗುವುದು (ಭಾತತ್ತ್ವ. ೪೮೭). **[ಸಂ.]**

**ವ್ಯಾಹತಿ** (ನಾ). ೧. ಅಡ್ಡಿಪಡಿಸುವುದು ; ತಡೆಯುವುದು. ೨. ವ್ಯರ್ಥಪಡಿಸುವುದು. ೩. ಹಿಂದಕ್ಕೆ ಓಡಿಸುವುದು ; ಹಿಮ್ಮೆಟ್ಟಿಸುವುದು. ೪. [ಕಾವ್ಯಮೀ] ಅರ್ಥದೋಷಗಳಲ್ಲಿ ಒಂದು : ವ್ಯಾಹತಿ (ಯಾವುದಾ ದರೂ ಒಂದು ವಸ್ತುವನ್ನು ಹೊಗಳಿ ಅಥವಾ ನಿಂದಿಸಿ ಆಮೇಲೆ ಅದಕ್ಕೆ) ವಿರುದ್ಧವಾಗಿ ಮತ್ತೇನನ್ನಾದರೂ ಹೇಳುವುದು (ಕೈಪಿಡಿ. ೩೨೯). **[ಸಂ.]**

**ವ್ಯಾಹಾರ** (ನಾ). ೧. ಉಚ್ಚರಿಸುವುದು; ನುಡಿಯುವುದು : "ಅಭಿಧಾನಂ, ವ್ಯಾಹಾರಃ, ಉದೀರಣಂ, ಕಥನಂ – ಈ ೪ ಮೊದಲಾಗುಳ್ಳುವು ನುಡಿಯ ಭೇದಂಗಳ್" (ಹಲಾಯು. ೨೩-೧೩೭). ೨. ಧ್ವನಿ ; ಶಬ್ದ : ನೆಯ್ದಿಲ್ಗೊಳಂ ಮೇಲ್ಮರಲ್ದರಲುತ್ತಿರ್ದುವು ಚಂಚರೀಕ ಮಧುರವ್ಯಾಹಾರವಾಚಾಲಿತಂ (ಪಂರಾಮಾ. ೭-೬). ೩. ನಗೆಮಾತು; ಹಾಸ್ಯದ ನುಡಿ. **[ಸಂ.]**

**ವ್ಯಾಹೃತ** (ಗು). ೧. ಹೇಳಿದ ; ವಿವರಿಸಿದ ; ನಿರೂಪಿಸಿದ. ೨. ಪ್ರಸಿದ್ಧನಾದ ; ಗಣ್ಯನಾದ : ಸತಿಶಿರೋಮಣಿ ಕುಳ್ಳಿರ್ಕೆ ವ್ಯಾಹೃತ ಗೃಹಸ್ಥನು ಕುಳ್ಳಿರೆನುತವೆ ಮುನಿಪ ಮಂಡಿಸಿದ (ಕುವ್ಯಾಹ. ೧೭-೪೪). [ಸಂ.]

**ವ್ಯಾಹೃತಿ** (ನಾ). ೧. ಉಚ್ಚಾರಣೆ ; ನುಡಿಯುವಿಕೆ. ೨. ಹೇಳಿಕೆ ; ನಿರೂಪಣೆ. ೩. ಪ್ರತಿದಿನವೂ ಸಂಧ್ಯಾವಂದನೆ ಮಾಡುವಾಗ ಪ್ರಣವಪೂರ್ವಕವಾಗಿ ಜಪಿಸುವ ಮಂತ್ರ ; ಓಂ ಭೂಃ ಭುವಃ ಸ್ವಃ ಎಂಬ ಮಂತ್ರೋಚ್ಚಾರಣೆ : ವ್ಯಾಹೃತಿಯ ಶಿಕ್ಷಾಕ್ಷತದ ವಿಮಳಾಹುತಿ ಸ್ವಾಹಾ ವಷಟ್ಕೃತಿ ಸೋಹಿ ತಂದುದು ಸುರರ ಸುಹವಿರ್ಭಾಗ ಭೋಗಿಗಳ (ಕುವ್ಯಾಸ. ೭-೩೩) ; ಅದು ಸಹಜಬುದ್ಧಿ ಮತ್ತು ಅಂತಃಪ್ರೇರಣೆಯಿಂದ ಪ್ರಕಟವಾದ ಛಂದೋಮಯಿ ವ್ಯಾಹೃತಿ (ಭಾರದ. ೩೬). [ಸಂ.]

**ವ್ಯಾಳ** 'ವ್ಯಾಲ' ನೋ.

**ವ್ಯಾಳಕಂಕಣ** (ನಾ). ಹಾವುಗಳನ್ನು ಕಂಕಣವಾಗಿ ಧರಿಸಿಕೊಂಡವನು ; ನಾಗಾಭರಣ ; ಶಿವ : ಭಾಳಾಕ್ಷಭಕ್ತ ಕೊಂಗುಲಿಯನಾರಂಬವಂ ವ್ಯಾಳಕಂಕಣಗೆ ತ್ರೈದಶಸೇರುಧೂಪವನು ಅರ್ಪಿಸುವ ನೇಮವಿಡಿದು (ಪ್ರಾಭರಾ. ೧೨-೬). [ಸಂ. ವ್ಯಾಲಕಂಕಣ]

**ವ್ಯಾಳಕುಳ** (ನಾ). ಹಾವುಗಳ ಗುಂಪು ; ಸರ್ಪವಂಶ : ವ್ಯಾಳಕುಳಾಂಗನಾ ಜನದ ದೈನ್ಯವಚನಪರಂಪರೆಗೇಳ್ಬ ಕರುಣಂಗೆಯ್ಯು (ಜಗಪಿ. ೩-೧೧೪ ವ) ; ನಾನಾ ವ್ಯಾಳ ಕುಳಾಧಿಷ್ಠಾನಂ . . . ಹಿಮತೇಜಂ (ಹಮ್ಮೀರ. ೧-೪೩). [ಸಂ. ವ್ಯಾಲಕುಲ]

**ವ್ಯಾಳಗಜ** (ನಾ). ಸೊಕ್ಕಿದ ಆನೆ ; ಮದ್ದಾನೆ : ವ್ಯಾಳಗಜಂಗಳನಗ್ಗದ ಸೂಳೆಯರೊಕ್ಕಲನನರ್ಘ್ಯವಸ್ತುಗಳನಿಳಾಪಾಳಂ ಸೋಲ್ತೊಡೆ (ಪಂಪಭಾ. ೭-೩) ; ವ್ಯಾಳಗಜಂಗಳಂ ಕೆಲಬರುದ್ಧತವಾಜಿಗಳಂ ಕೆಲಂಬರ್ . . . ಸಮುತ್ತಾಳದೊಳೇಱ (ನಳಚಂ. ೨೪೩). [ಸಂ. ವ್ಯಾಲಗಜ]

**ವ್ಯಾಳನಖ** (ನಾ). ಒಂದು ಬಗೆಯ ಔಷಧೀಸಸ್ಯ : "ವ್ಯಾಳತಿಲಃ, ವ್ಯಾಳನಖಃ - — ಈ ಯೆರಡುಂ ವ್ಯಾಳನಖ" (ಓಷಧಿ. ೧೫೨). [ಸಂ. ವ್ಯಾಲನಖ]

**ವ್ಯಾಳವಿಷ** (ನಾ). ಹಾವಿನ ನಂಜು ; ಸರ್ಪವಿಷ : ಸಾಮ್ರಾಜ್ಯಭೋಗವ್ಯಾಳ ವಿಷಕಂಜುವೆನು (ಕುವ್ಯಾಕ. ೧೭-೫೧) ; ವ್ಯಾಳವಿಷ ಸೋಂಕಿದವೊಲ್ ಭೂಪಾಲ ಕರಿರಾಯ ಮರದೊರಗಿದನು (ಕಠಿಕ. ೧೧೭-೨). [ಸಂ. ವ್ಯಾಲವಿಷ]

**ವ್ಯಾಳಾಢ್ಯ** (ನಾ). ಸೊಕ್ಕಿದವನು ; ಉದ್ಧತ : ವ್ಯಾಳಾಢ್ಯಂ ಪೊರೆ ಪಾಪಿ ಕಷ್ಟರನಣಂ ತಜ್ಞಾಢ್ಯದಿಂ ದುರ್ಜರೋಚ್ಛಾಳಂ . . . ಪಾತಾಳಂ ತುಂಬಿಳೆಯಿಂದಲುಣ್ಮಿ ಕವಿಯಿತ್ತೆಂಬಂತೆ ದಿಕ್ಚಕ್ರದೊಳ್ ಕಾಳಾಭೀಳಮಹಾಂಧಕಾರವೆಸೆಗುಂ (ಹಮ್ಮೀರ. ೩-೧೭). [ಸಂ. ವ್ಯಾಲಾಢ್ಯ]

**ವ್ಯಾಳಿ** (ನಾ). ಒಂದು ಬಗೆಯ ಕ್ರೂರಪ್ರಾಣಿ ; ಸಿಂಹವನ್ನು ಸಂಹರಿಸ ಬಲ್ಲುದೆಂದು ನಂಬಲಾದ ಒಂದು ಹಿಂಸ್ರಮೃಗ : ಸಿಂಹ, ಶಾರ್ದೂಲ, ವ್ಯಾಳಿಗಳು ಮೈಕೊಡವಿ ಕಿವಿ ಕೇಸರ ಲಾಂಗೂಲಗಳನ್ನು ನಿಮಿರಿಸಿಕೊಂಡು ದಿಕ್ತಟಗಳು ಬಿರಿಯುವಂತೆ ಗರ್ಜಿಸಿ . . . ನಡೆದವು (ಶಾಂತಲಾ. ೨೫೧) ; ಸಿಂಹವನ್ನು ಕ್ಷಣಾರ್ಧದಲ್ಲಿ ಸಂಹರಿಸಬಲ್ಲ ಪ್ರಾಣಿ 'ವ್ಯಾಳೀ' ಎಂದು ಪ್ರಾಚೀನ ಹೇಳಿಕೆ ಇದೆ (ಸಂಗೀಚಂ. ೩೧೮). 'ಯಾಳಿ' ಪರಾ. [< ಸಂ. ವ್ಯಾಲ?]

**ವ್ಯಾಳೇಭ** (ನಾ). = ವ್ಯಾಳಗಜ : ಲೀಲೆಯೊಳೆ ಪಿಡಿದು ನಿಲಿಪಂ ವ್ಯಾಳೇಭಮನೊಂದು ಪೊಯ್ಲಿನಿಂ (ಕಾದಂಪೂ. ೪೩೮) ; ಯುವರಾಜಂ . . . ಏಱದಂ ದ್ವಿರದಮಂ ವ್ಯಾಳೇಭವಜ್ರಾಂಕುಶಂ (ಪುಷ್ಪಪು. ೫-೧೫). [ಸಂ. ವ್ಯಾಲೇಭ]

**ವ್ಯಾಳೋಳ** 'ವ್ಯಾಲೋಲ' ನೋ.

**ವ್ಯುಚ್ಛಿತ್ತಿ** (ನಾ). ೧. ಕತ್ತರಿಸುವಿಕೆ ; ಬೇರ್ಪಡಿಸುವಿಕೆ. ೨. ಸಂಪೂರ್ಣ ಹಾಳು ; ವಿನಾಶ : ಘೋರಸಂಸಾರನಾನಾವ್ಯಸನವ್ಯುಚ್ಛಿತ್ತಿಯೊಳ್ . . . ವಾಗ್ಭದೂಮುದ್ರೆ ಯೊಳು ಮುದ್ರಿಸಿ ನಿಂದತ್ತಾದಿತೀರ್ಥೇಶ್ವರನ ಚರಿತದೊಳ್ ವಾಕ್ಯಮಾಣಿಕ್ಯಕೋಶಂ (ಆದಿಪು. ೧೬-೭೯). [ಸಂ.]

**ವ್ಯುಚ್ಛೇದ** (ನಾ). ೧. = ವ್ಯುಚ್ಛಿತ್ತಿ ೧ : 'ವ್ಯುಚ್ಛೇದಕಾಲ' ಪರಾ. ೨. = ವ್ಯುಚ್ಛಿತ್ತಿ ೨ : 'ಧರ್ಮವ್ಯುಚ್ಛೇದ' ಪರಾ. [ಸಂ.]

**ವ್ಯುಚ್ಛೇದಕಾಲ** (ನಾ). ೧. ಬೇರ್ಪಡೆಯಾದ ಸಮಯ ; ವಿರಹಕಾಲ. ೨. [ಜೈನ] ಜೀವನು ಒಂದು ಗುಣಸ್ಥಾನದಿಂದ ಇನ್ನೊಂದು ಗುಣಸ್ಥಾನಕ್ಕೆ ಹೋಗಿ ಮೊದಲಿನ ಗುಣಸ್ಥಾನಕ್ಕೆ ಬರುವ ಸಮಯ : ಜೀವವು ತಿರುಗಿ ತನ್ನ ಗುಣಸ್ಥಾನವನ್ನು ಸಂಪಾದಿಸುವವರೆಗಿನ ನಡುವಿನ ಕಾಲಕ್ಕೆ ಅಂತರಕಾಲವೆನ್ನುವರು. ಇದಕ್ಕೆ ವಿರಹಕಾಲ, ವ್ಯುಚ್ಛೇದಕಾಲವೆಂದೂ ಹೆಸರಿವೆ (ಜೈನಪ. ೩೧೭). [ಸಂ.]

**ವ್ಯುತ್ಕ್ರಮ** (ನಾ). ೧. ಸರಿಯಾದ ದಾರಿಯನ್ನು ಬಿಟ್ಟುಹೋಗುವಿಕೆ ; ಉಲ್ಲಂಘನೆ : ಮಹಾರಾಜ, ಈ ವ್ಯುತ್ಕ್ರಮವು ಬೇಡ (ಮಹಾಣ. ೭೦). ೨. ತಿರುವುಮುರುವು ಮಾಡಿದ ಸ್ಥಿತಿ ; ಅಸ್ತವ್ಯಸ್ತಕ್ರಮ. ೩. ಗೋಜು ; ಗೊಂದಲ. [ಸಂ.]

**ವ್ಯುತ್ಕ್ರಮಗಣನೆ** (ನಾ). ವಿರುದ್ಧವಾದ ಎಣಿಕೆ : ಇಲ್ಲಿ ಕೆಲರ್ ವ್ಯುತ್ಕ್ರಮಗಣನೆ ಯಿಂದೆ ನಿಂದಿತಕ್ರಮಮೆಂದು ಪೇಳ್ವರ್ (ಕಾವ್ಯಾವ. ೬೦೦ ವ). [ಸಂ. ವ್ಯುತ್ಕ್ರಮಗಣನಾ]

**ವ್ಯುತ್ಥಾನ** (ನಾ). ೧. ಎದುರುಬೀಳುವಿಕೆ ; ನಿಷೇಧಿಸಿದ್ದನ್ನು ಮಾಡುವುದು : "ವ್ಯುತ್ಥಾನಂ — ಅಡ್ಡವಿಡುವಿಕೆ ; ಪ್ರತಿಕೂಲವಾಗಿ ನಡೆದುಕೊಳ್ಳುವಿಕೆ" (ಸಿದ್ಧಾಂತಿ. ೧೦೨). ೨. ಮನಬಂದಂತೆ ನಡೆಯುವಿಕೆ ; ಸ್ವತಂತ್ರವೃತ್ತಿ : "ಸ್ವಚ್ಛಂದ . . . ಸ್ವತಂತ್ರ ವ್ಯುತ್ಥಾನಂ ವಿವೃತ್ತಿಯೆನಲೊಲಿದಂತೆ ನಡಹವಮಕ್ಕುಂ" (ಮಂಗರಾ. ೧೩೩-೩೦). ೩. ಮನಸ್ಸಿಗೆ ಬಂದಂತೆ ನಡೆಯುವವನು : "ಸ್ವತಂತ್ರವೃತ್ತಿಃ, ವ್ಯುತ್ಥಾನಂ — ಈ ೨ ಒಲಿದಂತೆ ನಡೆವವಂ" (ಹಲಾಯು. ೧೨೮-೯೩). ೪. ಧಾರ್ಮಿಕ ಕಾರ್ಯವನ್ನು ಕ್ರಮವಾಗಿ ಪೂರೈಸುವಿಕೆ ; ವ್ರತ ಮುಂತಾದುವನ್ನು ಪಾಲಿಸುವುದು. [ಸಂ.]

**ವ್ಯುತ್ಪತ್ತಿ** (ನಾ). ೧. ಶಬ್ದದ ಹುಟ್ಟು, — ಮೂಲ ; ನಿಷ್ಪತ್ತಿ : ರಮಂತೇ . . . ಇತಿ ರಾಮಃ ಎಂಬುದಾಗಿ ಇನ್ನೊಂದು ಪ್ರಸಿದ್ಧವಾದ ವ್ಯುತ್ಪತ್ತಿ 'ರಾಮ' ಶಬ್ದಕ್ಕಿದೆ (ಭಾರದ. ೪೯) ; ತೆಲುಗಿನ 'ಒಕ್ಕ' ದ ವ್ಯುತ್ಪತ್ತಿಯೇನಿರಬಹುದು ? (ಹಸುಹೂ. ೩೯೦). ೨. ಪರಿಣತಿ ; ನೈಪುಣ್ಯ : ವ್ಯುತ್ಪತ್ತಿಯಿಲ್ಲದೆ ಇರುವುದರಿಂದಾಗಲಿ ಅಥವಾ ಪ್ರತಿಭೆಯಿಲ್ಲದೆ ಇರುವುದರಿಂದಾಗಲಿ ಮುಖ್ಯಾರ್ಥವು ಬಾಧಿತವಾಗಿರುವಂತಹ ಶಬ್ದಗಳ ಪ್ರಯೋಗವನ್ನು (ಕವಿಯು) ಮಾಡಿದರೆ, ಅದನ್ನು ಧ್ವನಿಯೆಂದು ವಿಮರ್ಶಕರು ತಿಳಿಯಲಾಗದು (ಧ್ವನ್ಯಾಲೋ. ೧೧೪). ೩. ಪಾಂಡಿತ್ಯ ; ಬಹುಶ್ರುತತ್ವ : "ಬಹುಜ್ಞತಾ ವ್ಯುತ್ಪತ್ತಿಃ" ಅನೇಕ ವಿಷಯಗಳನ್ನು ತಿಳಿದಿರುವುದೇ ವ್ಯುತ್ಪತ್ತಿ (ಭಾರಮೀ. ೧೮೩). [ಸಂ.]

**ವ್ಯುತ್ಪತ್ತಿಶಾಸ್ತ್ರ** (ನಾ). ಶಬ್ದದ ಮೂಲವನ್ನು ಕುರಿತು ಹೇಳುವ ಶಾಸ್ತ್ರ ; ನಿರುಕ್ತಿಶಾಸ್ತ್ರ : ವ್ಯುತ್ಪತ್ತಿಶಾಸ್ತ್ರವು ಈ ಮಾತನ್ನು ಎತ್ತಿ ಹಿಡಿಯಲಾರದು (ಸಮಜೀ. ೩). [ಸಂ.]

**ವ್ಯುತ್ಪತ್ತಿಶಾಸ್ತ್ರಜ್ಞ** (ನಾ). ನಿರುಕ್ತಿಶಾಸ್ತ್ರವನ್ನು ಬಲ್ಲವನು : ಒಬ್ಬ ವ್ಯುತ್ಪತ್ತಿಶಾಸ್ತ್ರಜ್ಞರಿಗೆ ಈ ಪ್ರಶ್ನೆಯನ್ನು ಕೇಳಿದಾಗ ಅದು ಮೊದಲು 'ಮಾಗಾಯಿ' ಯಾಗಿರಬೇಕೆಂದು ಅವರು ಹೇಳಿದರು (ಸಮಜೀ. ೩). [ಸಂ.]

**ವ್ಯುತ್ಪನ್ನ** (ಗು). ೧. ಪ್ರಾಪ್ತವಾದ ; ದೊರೆತ ; ನಿಷ್ಪನ್ನವಾದ. ೨. ಪ್ರಾವೀಣ್ಯದಿಂದ ಕೂಡಿದ ; ನೈಪುಣ್ಯವುಳ್ಳ. (ನಾ). ೩. [ವ್ಯಾಕ] ಪ್ರಕೃತಿ, ಪ್ರತ್ಯಯಗಳ ಜೋಡಣೆಯಿಂದ ಹುಟ್ಟಿದ ಶಬ್ದ : ಧಾತುಗಳಲ್ಲಿ ಸಹಜ, ಪ್ರತ್ಯಯಾಂತ (ವ್ಯುತ್ಪನ್ನ), ಸಂಯುಕ್ತ (ಸಮಗ್ರ) ಎಂದು ಮೂರು ವಿಧಗಳಿವೆ (ಕೈಪಿಡಿ. ೪೨). ೪. ಪ್ರವೀಣ ; ನಿಪುಣ ; ಪಂಡಿತ : ಆಧುನಿಕ ವಿದ್ಯಾಸಂಸ್ಥೆಗಳ ಸ್ಥಾಪಕಾಚಾರ್ಯರೂ ವ್ಯವಸ್ಥಾಪಕಮಹಾಶಯರೂ ಅನ್ಯಭಾಷೆಯಲ್ಲಿ ವ್ಯುತ್ಪನ್ನರಾದವರು (ಆರ್ಯಧ. ೩) ; ಇಷ್ಟರಿಂದಲೇ ವ್ಯುತ್ಪನ್ನರಾದ ಸಹೃದಯರ ಬುದ್ಧಿಗೆ ಪ್ರಕಾಶವು ದೊರೆತು . . . ಸಂದೇಹಕ್ಕೆಡೆಯಿರುವುದಿಲ್ಲ (ಧ್ವನ್ಯಾಲೋ. ೭೭). [ಸಂ.]

**ವ್ಯುತ್ಸರ್ಗ** (ನಾ). [ಜೈನ] ಆರು ಬಗೆಯ ತಪಗಳಲ್ಲಿ ಒಂದು ; "ಗೃಹಧನಾದಿ ಬಾಹ್ಯೋಪಾದಿಗಳನ್ನೂ, ಕ್ರೋಧಾದಿ ಅಂತರಂಗೋಪಾದಿಗಳನ್ನೂ ತ್ಯಾಗಮಾಡುವುದು ; ಶರೀರದಲ್ಲಿ ನಿರ್ಮಮತೆ" (ಜೈನಕೋ. ೨೪೧) : ಪ್ರಾಯಶ್ಚಿತ್ತ ವಿನಯ ವೈಯಾಪೃತ್ಯ ಸ್ವಾಧ್ಯಾಯ ಧ್ಯಾನ ವ್ಯುತ್ಸರ್ಗಂಗಳನೊಳಕೊಂಡು

(ಆದಿಪು. ೬-೩೩ ವ) ; ವ್ಯುತ್ಸರ್ಗೋತ್ತರತಪದೊಳತಿವಿಶುದ್ಧಾಂತರಂಗನೆನಿಸಿದಂ (ಸುಕುಮಾ. ೪-೧೯). [ಸಂ.]

**ವ್ಯುಷ್ಟಿ** (ನಾ). ೧. ಮುಂಜಾನೆ ; ಪ್ರಭಾತಸಮಯ. ೨. ಹೆಚ್ಚಳ ; ಉನ್ನತಿ ; ಏಳಿಗೆ. ೩. ಪ್ರಯೋಜನ ; ಫಲ ; ಪರಿಣಾಮ : "ವ್ಯುಷ್ಟಿ — ೧. ಪ್ರಯೋಜನ, ಸಮೃದ್ಧಿ ೨" (ಸಿದ್ಧಾಂತಿ. ೩೮೩). ೪. [ಜೈನ] ಐವತ್ತುಮೂರುಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು ; ಮಗುವಿಗೆ ಮಾಡುವ ಮೊದಲನೆಯ ವರ್ಷದ ಹುಟ್ಟುಹಬ್ಬ : ದ್ವಾದಶಾಂಗದೊಳ್ ಪೇಟ್ದ ದಾನ ಪ್ರೀತಿ ಸುಪ್ರೀತಿ . . . ಅನ್ನಪ್ರಾಶನ ವ್ಯುಷ್ಟಿ ಕೇಶಾವಾಪ . . . ತ್ಯಾಗನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ). [ಸಂ.]

**ವ್ಯೂಢ** (ಗು). ೧. ವಿಶಾಲವಾದ ; ಹರವಾದ ; ದೊಡ್ಡ : ವ್ಯೂಢವಕ್ಷಸ್ಥಳನಾಜಾನು ಪ್ರಲಂಬಪ್ರಬಲಭುಜಯುಗಂ (ಆದಿಪು. ೮-೫೧) ; ವ್ಯೂಢವಕ್ಷಸ್ಥಲರುಂ . . . ಅಪ್ಪನೇಕ ವೀರದಾನವಸೇನಾಗ್ರಣಿಗಳಿಂ (ಜಗವಿ. ೨-೬೪ ವ). ೨. ರಚಿಸಿದ ; ಸನ್ನಾಹಗೊಳಿಸಿದ ; ಯೋಜಿಸಿದ : ವ್ಯೂಢಸಂಕಲ್ಪಂ ಸುರತಿಯಲಿ ರೂಢವಾಗಲ್ಕಿವರೊಡಲನು ಗೂಢಮರೆಯಿಂ ರಕ್ಷಿಸುವರಂತಾ ಶರೀರವನು (ವಿವೇಕ. ೧೫-೧೩). [ಸಂ.]

**ವ್ಯೂಢೋರಸ್ಕ** (ನಾ). ಹರವಾದ ಎದೆಯುಳ್ಳುದು ; ವಿಶಾಲವಕ್ಷಸ್ಥಳವುಳ್ಳುದು : ಮಂಗಳವಸದನಂಗೊಂಡು ಪರಿಪೂರ್ಣಾಬ್ಜಶಿರೋದ್ಧರಣನಂ ವ್ಯೂಢೋರಸ್ಕನಂ . . . ತರಿಸಿ ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇವಂ ಪೋಱಮಟ್ಟನೇಱೆ ಜಯವುಂ ಜಯಪರ್ವತಯಾನಮಂ (ಶಾಂತಿಪು. ೧೦-೧೪೨ ವ). [ಸಂ.]

**ವ್ಯೂಹ** (ನಾ). ೧. ಗುಂಪು ; ಸಮೂಹ : ಸುರವ್ಯೂಹಮಂಬರದಲ್ಲಿ ಹೂಮಳೆಗಳಂ ಹಿಡಿದು ಮೋಹರಂಬೆತ್ತು ನೋಡುತ್ತಿರಲು (ಹರಿಕಾ. ೧೩-೧೩). ೨. ಸೈನ್ಯ ; ದಳ ; ಪಡೆ : ಪರವ್ಯೂಹಭಯಂಕರಂ ನೆಗೆದು ಪಾರ್ಥಾರ್ದೆಚ್ಚೊಡೆ (ಪಂಪಭಾ. ೧೧-೧೭). ೩. ರಚನೆ ; ವ್ಯವಸ್ಥೆ : ನವನವವ್ಯೂಹಂಗಳಬುಜೋದ್ಭವನ ಪಾಳಿ ವಿಖಂಡ ನವರಸ ನವವಿಧಗ್ರಹನಾಟಕಂಗಳ ಲಕ್ಷಣವನಱಿದು . . . ನಡೆವುದು (ಕುಮಾರ. ೪-೩೭) ; ಕರದೊಯ್ದನತಿಥಿಗಳನಾ ಗಿರಿಧರಾವ್ಯೂಹಮಂ ತೋಱೆ (ಶ್ರೀರಾಮಾ. ೨೯೩-೨೫೨) . ೪. ದಳವನ್ನು ಒಂದು ವಿಶಿಷ್ಟರಚನೆಯಲ್ಲಿ ನಿಲ್ಲಿಸುವ ಕ್ರಮ ; ಸೈನ್ಯದ ರಚನೆ : ಇದು ಚಕ್ರವ್ಯೂಹಮಿಾ ವ್ಯೂಹಮನೊಡೆವದಟಂ ಪಾರ್ಥನಂತಾತನುಂ ಗಂಟಿದನೆಮ್ಮಾ ನಾಲ್ವರುಂ ಭೇದಿಸಲಱಿಯೆವು (ಪಂಪಭಾ. ೧೧-೪೭) ; ವ್ಯೂಹವನು ರಚಿಸುವೆನು ನಾಳಿನೊಳಾಹವಕೆ ತಳತಂತ್ರವೊಂದೇ ಮೋಹರಕೆ ನಡೆತರಲಿ ಷಡುರಥಾದಿ ಯಾದವರು (ಕುವ್ಯಾದ್ರೋ. ೮-೭೭). ೫. (ಆಲಂ) ತಂತ್ರ ; ಕೈವಾಡ : ಎಲೆ, ದುರ್ವಿಧಿಯೆ, ನಿನ್ನ ವ್ಯೂಹಕೆ ಪ್ರತಿವ್ಯೂಹಮಂ ಒಡ್ಡದಿರೆ ನಷ್ಟಬುದ್ಧಿಯೆ ನಾ ದಿಟಂ ದುಷ್ಟಬುದ್ಧಿಯಲ್ತು (ಚಂದ್ರಸ. ೯೨-೨೭). ೬. [ವಿಶಿಷ್ಟಾ] ಪರಮಾತ್ಮನ ಐದು ವಿಧವಾದ ರೂಪಗಳು : ಈ ಸಂಪ್ರದಾಯದಂತೆ ಪರಮಾತ್ಮನು ಪಂಚವ್ಯೂಹ ರೂಪದಿಂದ ವಿಶ್ವಾತ್ಮಕನಾಗಿಯೂ ವಿಶ್ವಾತೀತನಾಗಿಯೂ ಇರುತ್ತಾನೆ (ಭಾರದ. ೨೮೨). ೭. ಪರಮಾತ್ಮನ ಐದುವಿಧವಾದ ರೂಪಗಳಲ್ಲಿ ಒಂದು : ಪರ, ವ್ಯೂಹ, ಅಂತರ್ಯಾಮಿ, ವಿಭವ, ಅರ್ಚಾ ಎಂಬುವುಗಳೇ ಪಂಚವ್ಯೂಹಗಳು (ಭಾರದ. ೨೮೨). [ಸಂ.]

**ವ್ಯೂಹಚ್ಛೇದ** (ನಾ). ಸೈನ್ಯದ ರಚನೆಯನ್ನು ಭೇದಿಸುವುದು ; ಸೈನ್ಯದ ಕಟ್ಟನ್ನು ಒಡೆಯುವಿಕೆ : ಶಸ್ತ್ರಯುದ್ಧ, ವ್ಯೂಹಬಂಧ, ವ್ಯೂಹಚ್ಛೇದ ಮುಂತಾದ ಅಭ್ಯಾಸಕ್ರಮಗಳು ಜರುಗುತ್ತಿದ್ದುವು (ಶಾಂತಲಾ. ೭೮). [ಸಂ.]

**ವ್ಯೂಹಬಂಧ** (ನಾ). ಯುದ್ಧದಲ್ಲಿ ಸೈನ್ಯವನ್ನು ಒಂದು ವಿಶಿಷ್ಟರೀತಿಯಲ್ಲಿ ನಿಲ್ಲಿಸುವುದು ; ಸೇನಾರಚನೆ : ಶಸ್ತ್ರಯುದ್ಧ, ವ್ಯೂಹಬಂಧ, ವ್ಯೂಹಚ್ಛೇದ ಮುಂತಾದ ಅಭ್ಯಾಸಕ್ರಮಗಳು ಜರುಗುತ್ತಿದ್ದವು (ಶಾಂತಲಾ. ೭೮). [ಸಂ.]

**ವ್ಯೂಹೋತ್ಕರ** (ನಾ). ಸೈನ್ಯವನ್ನು ಒಟ್ಟುಗೂಡಿಸುವಿಕೆ : ಗುರುಮುಖದೊಳಾ ಕುಮಾರಂ... ಯಂತ್ರಪ್ರಯೋಗಮಖಿಲವ್ಯೂಹೋತ್ಕರಮೆಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪಪು. ೪-೭೦). [ಸಂ.]

**ವ್ಯೋಕಾರ** (ನಾ). ೧. ಕಬ್ಬಿಣದ ಕೆಲಸ ಮಾಡುವವನು; ಕಮ್ಮಾರ. ೨. ಕಬ್ಬಿಣ , ತಾಮ್ರ , ಹಿತ್ತಾಳೆ, ಕಂಚು ಮೊದಲಾದ ಲೋಹಗಳಿಗೆ ಸಂಬಂಧಿಸಿದ ಕೆಲಸ ಮಾಡುವವನು : "ವ್ಯೋಕಾರಃ , ಲೋಹಕಾರಃ — ಈ ೨ ಬೋಗಾರಂ" (ಹಲಾಯು. ೯೬-೪೩೪). [ಸಂ.]

**ವ್ಯೋಮ** (ನಾ). ೧. ಪಂಚಮಹಾಭೂತಗಳಲ್ಲಿ ಒಂದು ; ಆಕಾಶ ; ಗಗನ : ಶ್ರೀಮಚ್ಚಳುಕ್ಯವಂಶವ್ಯೋಮಾಮೃತಕಿರಣಂ (ಪಂಪಭಾ. ೧-೧೫) ; ಪವಮಾನವಿಸ್ತಾರಂ ವ್ಯೋಮದೊಳ್ . . . ಅಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ) ; ವ್ಯೋಮಸಾಗರಸಮಂ ನಿನ್ನ ರಾಮಾಯಣಂ (ಶ್ರೀರಾಮಾ. ೪-೯೭). ೨. ವಾಯುಮಂಡಲ ; ವಾತಾವರಣ. ೩. [ಗಣಿತ] ಬಿಂದು; ಸೊನ್ನೆ; ಶೂನ್ಯವೆಂಬುದರ ಸಂಕೇತ : ಗಗನಂ ಶೂನ್ಯಾಂಬರ ಖಂ ಮಿಗೆಯಾಕಾಶಂ ವಿಯತ್ತಳಂ ವ್ಯೋಮಾಂಬರ ಮಿಗೆ ಘನಮಾರ್ಗಂ ನಭಮುಂ ಸೊಗಯಿಪ ಬಿಂದುವಿನ ನಾಮಂ (ವ್ಯವಹಾ. ೧೦-೧೦). ೪. [ಛಂದ] ಎಂಟು ಬಗೆಯ ಅಕ್ಷರಗಣಗಳಲ್ಲಿ ಒಂದು ; ತಗಣ ; ಎರಡು ಗುರು ಒಂದು ಲಘುವಿರುವ ಗಣ (– – U) : ಧರಣಿ ಜಲಾಗ್ನಿ ಮರುದ್ ವ್ಯೋಮರವಿ ಶಶಾಂಕೇಂದ್ರನಿಲಯಮಿವು ಗಣದ ಪೆಸರ್ (ಛಂದೋಂಬು. ೧-೩೭). [ಸಂ.]

**ವ್ಯೋಮಕಪರ್ದಿ** (ನಾ). ಆಕಾಶವನ್ನೇ ಜಡೆಯಾಗಿ ಉಳ್ಳವನು ; ಶಿವ : ರಸ ಸಮೃದ್ಧಿಯೇ ಬುದ್ಧಿಯ ಸಿದ್ಧಿ ಸರ್ವರಸನಲಾ ವ್ಯೋಮಕಪರ್ದಿ (ಗಣೇಶ. ೧೦-೫೫೨). [ಸಂ. ವ್ಯೋಮಕಪರ್ದಿನ್]

**ವ್ಯೋಮಕೇಶ** (ನಾ). ೧. ಆಕಾಶವನ್ನೇ ಕೂದಲಾಗಿ ಉಳ್ಳವನು ; ಶಿವ : ರಾಮ ಸೋಮಯ್ಯನು ಪ್ರೇಮದಿಂದೊಡಗೂಡಿ ವ್ಯೋಮಕೇಶನ ಧ್ಯಾನಿಸುತಲಿ ತಾಮಸವಿಲ್ಲದೆ ಬಂದರು ಮುನಿಗುಂದದಾ ಮಹಗಿರಿಯನೀಕ್ಷಿಸುತ (ಅಬ್ಬಲೂ. ೩-೧೩). ೨. ಶಿವನ ಪ್ರಮಥಗಣಗಳಲ್ಲಿ ಒಬ್ಬನು ; ಒಬ್ಬ ಗಣನಾಥನ ಹೆಸರು : ಎಡದ ಕಣ ಪಾದದಲ್ಲಿ ವ್ಯೋಮಕೇಶನೆಂಬ ಗಣೇಶ್ವರನೆನಿಸಿರ್ಪಿರಿ ಅಯ್ಯ (ಸಿದ್ಧೇವ. ೭೪-೧೮೪). [ಸಂ.]

**ವ್ಯೋಮಗ** (ನಾ). ಆಕಾಶದಲ್ಲಿ ಸಂಚರಿಸುವಂತಹುದು ; ದೇವತೆ, ಪಕ್ಷಿ, ಗ್ರಹ, ವಿಮಾನ ಮುಂತಾದುವು : ತದ್ವ್ಯೂಹಮಂ ನಿರೀಕ್ಷಿಸೆ ಪಲರ್ ವೀರ್ಯಾನ್ವಿತರ್ ವ್ಯೋಮಗರ್ ಪಲವುಂ ಕುತ್ತಮವುಂಕೆ ಪುಟ್ಟಿದ ನರಂ ಪಂಚತ್ತ್ವಮಂ ಪೊರ್ದುಗುಂ (ಜಾತತಿ. ೨೩-೧) ; ವ್ಯೋಮಗಸ್ಯಂದನದೊಳಡಗಿ ರಥಿ ರಾವಣಂ ನೋಡಿದನು . . . ದಶರಥಸುತನ ಸತಿಯನೋರ್ವಳಂ (ಶ್ರೀರಾಮಾ. ೨೪೨-೩೮೪). [ಸಂ.]

**ವ್ಯೋಮಚರ** (ನಾ). = ವ್ಯೋಮಗ : ಅನಂತಕಾಂತವ್ಯೋಮಚರಕಾಂತಾಕಟಾಕ್ಷೈಕ ಲಕ್ಷ್ಯಂ ದಮಿತಾರಿಮಹಾರಾಜಂ ಮೃಗರಾಜಾಸನಾಸೀನನೊಡ್ಡೋಲಗಂಗೊಟ್ಟಿರೆ (ಶಾಂತಿಪು. ೨-೨೦ ವ). [ಸಂ.]

**ವ್ಯೋಮಯಾನ** (ನಾ). ೧. ಗಗನಸಂಚಾರ : ವ್ಯೋಮಯಾನಂ ತುಚ್ಛಮೆನೆಯುಂ ಗ್ರಾಮಯಾನಮತುಚ್ಛಮೆನೆಯುಂ ಧರ್ಮೋಪದೇಶಂಗೆಯುತ್ತುಮುತ್ತಮ ತೀರ್ಥೇಶ್ವರಂ ವಿಹಾರಿಸೆ (ಶಾಂತಿಪು. ೧೨-೩೩ ವ). ೨. ಆಕಾಶದಲ್ಲಿ ಸಂಚರಿಸುವ ವಿಮಾನ : "ನಡೆಮಾಡ ಪಾಱಿನೆ ವ್ಯೋಮಯಾನನಾಮಂ" (ಶಬ್ದಮಂ. ೧೧) ; ವ್ಯೋಮಯಾನದಿಂದ ಹೊರಟುಹೋಗುವವಳು (ಶಾಕುಂತ. ೯೫-೮). [ಸಂ.]

**ವ್ಯೋಮಾಪಗೆ** (ನಾ). ಆಕಾಶಗಂಗೆ ; ದೇವನದಿ : ವಿಲಸದ್ವ್ಯೋಮಾಪಗೆಯ ಸಲಿಲಮದಱೊಳ್ ನೆನೆದೊಡಮಳದಿವ್ಯಸ್ನಾನಂ (ವಿಷ್ಣುಪು. ೨-೨-೧೫೭). [ಸಂ. ವ್ಯೋಮಾಪಗಾ]

**ವ್ಯೋಷ** (ನಾ). ಮೆಣಸು, ಹಿಪ್ಪಲಿ ಮತ್ತು ಶುಂಠಿಗಳೆಂಬ ಮೂರು ಔಷಧಿಗಳ ಕೂಟ ; ತ್ರಿಕಟುಕ : "ತ್ರಿಕಟು, ತ್ರ್ಯೂಷಣಂ, ವ್ಯೋಷಂ — ಈ ೩ ತ್ರಿಕಟುಕಂ" (ಹಲಾಯು. ೧೧೧-೪೬೩). [ಸಂ.]

**ವ್ರಜ** (ನಾ). ೧. ಹೋಗುವಿಕೆ ; ತಿರುಗಾಟ. ೨. ದಾರಿ ; ಮಾರ್ಗ ; ರಸ್ತೆ. ೩. ಸಮೂಹ ; ಗುಂಪು : ಎಱೆದರ್ಥಿವ್ರಜಂಗಳ್ಗೆ ಚಿಂತಾಮಣಿಯಂ ಸಾಮಂತ ಚೂಡಾಮಣಿಯನಣಿಯರಂ ಬಂದು ಕಂಡಂ ಸುರೇಂದ್ರಂ (ಪಂಪಭಾ. ೭-೯೫); ಸುಗ್ರಾಮಾಗ್ರಹಾರವ್ರಜದಲಂಪುಗಳ . . . ಈಕ್ಷಿಸುತರಸನೈತಂದ (ತೊರರಾ. ೧-೬-೧೦) . ೪. ತುರುವಿನ ಮಂದೆ ; ದನಗಳ ಹಿಂಡು : ದ್ವಿಜವಂಶಾಂಬರತಿಗ್ಮರೋಚಿ

ಸುಬಳಕ್ಷ್ಮಾಪಾಲಪಾಣಿಗ್ರಹವ್ರಜಸಂರಕ್ಷಣದಕ್ಷನಾಶ್ರಿತಜನಾಧಾರಂ . . . ವಿದ್ವಜ್ಜನಾಳಂಕೃತಂ (ಸುಕುಮಾ. ೨-೩೯). ೫. ದನಗಳ ಕೊಟ್ಟಿಗೆ. ೬. ಆಗ್ರಾ ಮತ್ತು ಮಥುರಾದ ಸುತ್ತಮುತ್ತಲ ಪ್ರದೇಶ ; IP ನಂದಗೋಪನ ರಾಜಧಾನಿಯಾಗಿದ್ದ ಗೋಕುಲ : ಆ ಸುತರುಂ ಗೋಪಾಲವ್ಯಾಸಂಗದೆ ಕೆಲವು ಕಾಲಮಿರ್ಕುಂ ವ್ರಜದೊಳ್ (ಜಗವಿ. ೧-೭೭). ೭. (ಪರಿವ್ರಾಜಕರ) ಸಮೂಹ ; ಸಂಘ : ಸುವ್ರತನಿಲಯಂ ಸಕಲಮಹಾವ್ರತಿ ಸಂತಾನಕಲ್ಪಭೂಜಂ ದಶವರ್ಮ್ಮವ್ರಜನಿಯುಕ್ತನೆಸದಂ ಪ್ರವ್ರಜ್ಯಮಹೇಂದ್ರಸೋಮಪಣ್ಣಿತದೇವಂ (ಎಇ. XVI. ೩೯-೨೯ ; 1152). [ಸಂ.]

**ವ್ರಜಭಾಷೆ** (ನಾ). ಆಗ್ರಾ ಮತ್ತು ಮಥುರಾದ ಸುತ್ತಮುತ್ತಲಲ್ಲಿ ಪ್ರಚಲಿತವಿರುವ ಒಂದು ಭಾಷೆ ; ಹಳೆಯ ಹಿಂದಿ ಭಾಷೆ : ಈತನ ಕವಿತೆಗಳು ವ್ರಜಭಾಷೆಯಲ್ಲೂ ಗದ್ಯಗ್ರಂಥಗಳು ಆಧುನಿಕ (ಖಡೀಬೋಲೀ) ಹಿಂದಿಯಲ್ಲೂ ರಚಿತವಾಗಿವೆ (ಭಾರದ. ೪೭೫). [ಸಂ. ವ್ರಜಭಾಷಾ]

**ವ್ರಜವಧು** (ನಾ). ವ್ರಜದೇಶದ ಯುವತಿ ; ಗೋಪಿಕೆ ; ಗೊಲ್ಲಿತಿ : ಆನನಾಂಬುಜ ಸೌಭಗದ ರಸದ ಸುಧೆಯ ಸವಿಸವಿದಕ್ಕಿಗಳಿಗನವಧಿಕತೃಪ್ತಿಗಳಾಗವ್ಯೆ ವ್ರಜವಧುಗಳೇತಕೆ ಮರುಳುಗೊಂಡರು ವಿದುರ ಹೇಳೆಂದ (ನಿಭಾಗ. ೩-೨-೧೧). [ಸಂ.]

**ವ್ರಣ** (ನಾ). ೧. ಹುಣ್ಣು : ವ್ರಣಗಳಿಗೆ:- ತಲೆಹುಣ್ಣಿಗೆ — ತೆಂಗಿನ ಕಾಯ ಓಟೆಯ ರಸವ ತೊಡೆಯಲು ತಲೆಹುಣ್ಣು ಮಾಣ್ಗುಂ (ವಿವೈವಿ. ೭೭) ; ಕ್ಷಯರೋಗ . . . ಈ ರೋಗಾಣು ಶ್ವಾಸಕೋಶವನ್ನು ಸೇರಿದಾಗ ಅಲ್ಲಿ ಉಂಟಾದ ವ್ರಣ ಅತಿಸೂಕ್ಷ್ಮವಾಗಿರುತ್ತದೆ (ಕೆಲರೋ. ೮೩). ೨. ಆಯುಧ ಮೊದಲಾದುವುಗಳಿಂದ ಮೈಯಲ್ಲಿ ಆದ ಸೀಳು ; ಗಾಯ : ಕ್ಷಣಕೆ ಮರಳಿಚ್ಚತ್ತನಸ್ತ್ರವ್ರಣವ ತೋಳಿದರು (ಕುವ್ಯಾಶ. ೩-೪೮) ; ನಿನಗೀ ಕೂರ್ಗಣೆಯಿತ್ತಪುದು ನವವ್ರಣಮಣಿಯಂ ಕೊಳ್ಳೆಂದು ಸಿಂಹಳಂ ಪದದೆಚ್ಚಂ (ರಾಜಶೇ. ೬-೯೮). ೩. ಗುಳ್ಳೆ ; ಬೊಕ್ಕೆ ; ಹೂಪ್ಪಳೆ. [ಸಂ.]

**ವ್ರಣಚಿಕಿತ್ಸೆ** (ನಾ). ಹುಣ್ಣಿಗೆ ಮಾಡುವ ಔಷಧೋಪಚಾರ : ಬಹಳ ಹೊಮ್ಮಿ ಪಕ್ವವಾದ ವಿದ್ರಧಿಯಲ್ಲಿ ವ್ರಣಚಿಕಿತ್ಸೆಯನು ನಡೆಸುವುದು (ವೃದ್ಯಸಾ. I, ೨೮೦). [ಸಂ. ವ್ರಣಚಿಕಿತ್ಸಾ]

**ವ್ರಣಜಾಡ್ಯ** (ನಾ). ಹುಣ್ಣಿನ ರೋಗ : ಶ್ರೀರಂಗರಾಯರು ಚಿಕಿತ್ಸೆಗೆ ಅಸಾಧ್ಯವಾದ ಬೆನ್ನುಫಣಿಯೆಂಬ ವ್ರಣಜಾಡ್ಯವು ತಮಗೆ ಸಂಭವಿಸಿದೆ . . . ಎಂದು ತಿಳಿದು (ಮಹಾವಂ. I, ೨೩). [ಸಂ.]

**ವ್ರಣರೋಗ** (ನಾ). ಮೈಯಲ್ಲಿ ಹುಣ್ಣೇಳುವ ಒಂದು ಬಗೆಯ ರೋಗ : ಕಾಚು, ಶುಂಠಿಚೂರ್ಣ, ಮೈಲತುತ್ತ, ಬಿಳಿಯ ಧೂಪ, ಕಾಕಿಮಾರೀಬೀಜ, ಅರಿಸಿನ ಇವಂ ಚೂರ್ಣವಂ ಮಾಡಿ, ಆ ತೈಲದೊಳು ಮರ್ದಿಸಿ ಅರ್ಚನೆಯಂ ಮಾಡಿ ವ್ರಣಕ್ಕೆ ಹಚ್ಚಲು ಮೇಗಾಲು ಹುಣ್ಣು ಮಾಣ್ಗುಂ, ಆವ ವ್ರಣರೋಗಕ್ಕೂ ಇದೇ ಔಷಧ (ವಿವೈವಿ. ೧೭೩). [ಸಂ.]

**ವ್ರಣವಿದ್ರಧಿ** (ನಾ). ಕುರು ; ಬೊಕ್ಕೆ : ಗಂಡೂಷಗುಣ — ಸಕಲವಾದ ಕಂಠರೋಗವನ್ನು . . . ದಾಡೆಯೊಳಾದ ವ್ರಣವಿದ್ರಧಿ ಇವೇ ಮುಂತಾದ ರೋಗಗಳಂ ಪರಿಹರಿಸಿ ದೃಷ್ಟಿಪ್ರಸನ್ನತೆಯನ್ನುಂಟುಮಾಡುವುದು (ಸಕವೈ. ೨೭).
[ IP ಇದು ಒಂದೇ ಅರ್ಥದ ಎರಡು ಶಬ್ದರೂಪಗಳು ಸೇರಿ ಆದ ರೂಪ]

**ವ್ರಣವೈದ್ಯ** (ನಾ). ೧. (ಮೈಮೇಲೆ ಉಂಟಾಗುವ) ಗಾಯಗಳನ್ನು ಗುಣಪಡಿಸುವ ವೈದ್ಯ. ೨. ಗಾಯಗಳನ್ನು ಗುಣಪಡಿಸುವುದಕ್ಕೆ ಸಂಬಂಧಿಸಿದ ವೈದ್ಯಶಾಸ್ತ್ರ. [ಸಂ.]

**ವ್ರಣಾಶನ** (ನಾ). ಹುಣ್ಣಿನ ರಕ್ತ, ಕೀವುಗಳನ್ನು ಹೀರಿ ಬದುಕುವ ಕ್ರಿಮಿ : "ವ್ರಣಾಶನಮನಲ್ಕುಣ್ಣೆ" (ಮಂಗರಾ. ೪೯-೧೪). [ಸಂ.]

**ವ್ರಣೆ** (ನಾ). ಒಂದು ಬಗೆಯ ಸಸ್ಯ : "ತೇ[ಪಾಠಾಂ. ಕ್ಯಾ]ರಣಂ ವ್ರಣೆಯಕ್ಕು" (ಮಂಗರಾ. ೪೯-೧೪). [ಸಂ.]

**ವ್ರತ** (ನಾ). ೧. ನಡವಳಿಕೆ ; ಆಚರಣೆ ; ಆಚಾರ : ಎನಿತಾನುಂ ತೆಱದ ಕಥೆಗಳುಮಂ ದೃಷ್ಟಾಂತಂಗಳುಮಂ ತೋಱಿ ನುಡಿದುಂ ವ್ರತಕ್ಕೆ ತರಲಾಱದೆ (ಧರ್ಮಾಮೃ. ೧೧-೧೭೯). ೨. (ತಾನಾಗಿ ಕೈಗೊಳ್ಳುವ) ನಿಯಮ ; ನೋಂಪಿ ; ಕಟ್ಟುಪಾಡು : ವ್ರತಮಂ ಪೇಟ್ಕೊಡೆ ನೋಂತು . . . ಧರ್ಮದುನ್ನತಿಯಂ ಪೆರ್ಚಿಸುವಂದು ನೀನೆ ಪಿರಿಯೈ ಶ್ರೀದಾನಚಿಂತಾಮಣೀ (ಅಜಿಪು. ೧೨-೮) ; ವ್ರತವುಳ್ಳವರ ಬತಗೆಡಿಸಿತ್ತು ನೋಡಾ ಮನವು (ಅವಿಂಡೇ. ೨೫೭-೫) ; ರಾಜೇಂದ್ರ ಮೆಚ್ಚಿತಯ್ ನಿನ್ನೀ ವ್ರತಕ್ಕೆ ಋತಂ (ಶ್ರೀರಾಮಾ. ೧೪-೩೫೮). ೩. ಶಾಸ್ತ್ರೋಕ್ತವಾಗಿ ಮಾಡುವ ಪೂಜೆ, ಉಪವಾಸ ಮುಂತಾದ ಧಾರ್ಮಿಕಕ್ರಿಯೆಗಳ ಆಚರಣೆ : ಇದರಂತೆ ಬೇರೆ ಬೇರೆ ಸಮಯದ ಚಾತುರ್ಮಾಸವ್ರತ, ಗಣೇಶವ್ರತ . . . ಮುಂತಾಗಿ ಅನೇಕ ವ್ರತಗಳಿವೆ (ಭಾಷಬ್ಬ. ४೮). ೪. ಯಜ್ಞ ; ಯಾಗ : ವ್ರತ ಮುಗಿಯೆ ವ್ರತಿಗಳನು ಕಳುಹಿದ ದಾನದಲಿ ತಣಿಸಿ (ಕೌಶಿರಾ. ೧-೬೪). ೫. ನಡತೆ ; ಶೀಲ ; ಚಾರಿತ್ರ್ಯ : 'ವ್ರತಗೆಡಿಸು' ಪರಾ.

ವ್ರತತಪ್ಪು = ನಿಯಮವು ಹಾಳಾಗು ; ನೇಮಗೆಡು : ವ್ರತತಪ್ಪಲು ಶರೀರವಿಡಿವ ನರಕಂಗೆ ಮುಕ್ತಿ ಇಲ್ಲ (ಸರ್ವವ. ೧೮೭-೮೫). **ವ್ರತೋಪವಾಸ** = ನೋಂಪಿ ಮತ್ತು ಉಪವಾಸ : ವ್ರ [ಪಾಠಾಂ. ಬ್ರ] ತೋಪವಾಸಂಗಳಿಂ ಮೆಯ್ಯಂ ದಂಡಿಸುತ್ತುಂ ಸಲ್ವುದೊಂದು ದಿವಸಂ (ವಡ್ಡಾರಾ. ೧೭೨-೨೩) ; ಅಪುತ್ರವಂತನು ಮಾಡುವ ವ್ರತೋಪವಾಸಗಳು ವ್ಯರ್ಥ (ವಚಕಾ. ೮೩). [ಸಂ.]

**ವ್ರತಕೊಳ್** (ಕ್ರಿ). ನೋಂಪಿಯನ್ನು ಕೈಗೊಳ್ಳು : ಶ್ರೀಮತ್ ಎಱೆಯಪಗಾಮುಣ್ಡನು ಮದ್ದಯ್ಯನು ಬನ್ನಿಲ್ಲಿ ವ್ರತಕೊಣ್ಡರ್ (ಎಕ. II, ೪೭೮ ; 950). [ವ್ರತ + ಕೊಳ್]

**ವ್ರತಗೆಡಿಸು** (ಕ್ರಿ). ಶೀಲವನ್ನು ಹಾಳುಮಾಡು ; ಶೀಲವನ್ನು ಕೆಡಿಸು : ಶಿಲೆಯ ಸತಿಯಳ ಮಾಡಿ ತ್ರಿಪುರರ ಲಲನೆಯರ ವ್ರತಗೆಡಿಸಿ ಕೂಡಿದ ಕೆಲಸವುತ್ತಮವಾಯ್ತು (ಹರಿಸಾ. ೩೦) ; ಲಲನೆಯರು ಯೇಕಾಕಿಯಾಗಿ ಸುಳಿದೊಡೆ ನೋಡಿಯೆಳಸಿ ವ್ರತಗೆಡಿಸುವರು ಕಾಮುಕರು (ನವಮೋ. ೮-೫೨). [ವ್ರತ + ಕೆಡಿಸು]

**ವ್ರತಗೆಡು** (ಕ್ರಿ). ನೇಮಭಂಗವಾಗು ; ನಿಯಮವು ಹಾಳಾಗು : ವ್ರತಗೆಟ್ಟ ಬಳಿಕ ಘಟ ಉಳಿಯಬಲ್ಲುದೆ (ಅವಚಂ. ४೨-೧೮೨) ; ಸಿತನಾಗನಾಳ್ದನರ್ಧಾಂಗಿಗೋಸುಗವಿಂತನ್ನ ವ್ರತಗೆಟ್ಟು ನೃಪಗೆ ಸಿಕ್ಕಿದನ . . . ತಮ್ಮನ ತಱಿದಾತಗಾನತನಾಗಿ ಪೇಳು ಮೇಲ್ಗತೆಯ (ಮೋಹತ. ४-೧). [ವ್ರತ + ಕೆಡು]

**ವ್ರತಗೇಡಿ** (ನಾ). ಕಟ್ಟುಪಾಡನ್ನು ಹಾಳುಮಾಡುವವನು ; ನಿಯಮವನ್ನು ಕೆಡಿಸುವವನು : ವ್ರತಗೇಡಿ ವ್ರತಗೇಡಿ ಎಂಬುವ ತಾನೆ ವ್ರತಗೇಡಿ (ಅವಚಂ. ४೨-೧೮೨) ; ತರುಣಿ ರಜಸ್ವಲೆಯುಮಾದ ಮೂರು ದಿವಸದೊಳು ಪುರುಷ ಸಂಯೋಗ ಮಾಡಲು ಜಾರ ಪುಟ್ಟುವನು . . . ಆರು ದಿವಸದಲಿ ನಿರುತವ್ರತಗೇಡಿ . . . ತಾಂ ಸಂಭವಿಸುವ (ನವಮೋ. ೧४-४೧). [ವ್ರತ + ಕೇಡಿ]

**ವ್ರತಚರ್ಯೆ** (ನಾ). ೧. ಪುಣ್ಯಕಾರ್ಯಾಚರಣೆ : ಬಳಲಿದೆಯಲಾ ತನಗೋಸುಗಿನ್ನೆಗವಕಟಕಟ ನಿಯತಾಶನವ್ರತಚರ್ಯೆಯಲಿ ಮತ್ಪಾದಸೇವೆಯಲಿ . . . ಎನುತಾಸನದಲಿರದೆದ್ದು ತಕ್ಕೈಸಿದನು ನಿಜಸತಿಯ (ನಿಭಾಗ. ೩-೧೧-೩). ೨. [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು ; "ಬ್ರಹ್ಮಚಾರಿಯು ಹಿಂಸಾತ್ಯಾಗವೇ ಮೊದಲಾದ ವ್ರತಗಳನ್ನು ಧರಿಸಿ ಅಧ್ಯಯನವನ್ನು ಕೈಗೊಳ್ಳುವುದು (ಜೈನಕೋ. ೮೫): ಆದಾನ ಪ್ರೀತಿ . . . ಉಪನಯನ ವ್ರತಚರ್ಯಾ . . . ತ್ಯಾಗನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ).
[ಸಂ. ವ್ರತಚರ್ಯಾ]

**ವ್ರತತಿ** (ನಾ). ೧. ಹರಹು ; ವಿಸ್ತಾರ. ೨. (ಹಬ್ಬುವ) ಬಳ್ಳಿ ; ಲತೆ : ಕಲ್ಪವ್ರತತೀಸಂಸಕ್ತಕಲ್ಪಕ್ಷಿತಿರುಹಮೆನೆ ಪೊಲ್ತಿರ್ದನಾ ಕಾಂತೆಯರ್ ತಮ್ಮತಿರಾಗಂ ಪೆರ್ಚೆ ತನ್ನಿರ್ಕೆಲದೊಳಮಿರೆ ತನ್ನಾಭಿರಾಜಾಗ್ರಪುತ್ರಂ (ಆದಿಪು. ೮-೨೩) ; ಜಾಜಿ ಮೊಲ್ಲೆಗಳೆನುವ ವ್ರತತಿಗಳಿಂದ ವನ ಸದ್ವಿನಯಗೊಂಡಿಹುದು (ಬಿಜ್ಜಪು. ೧೯-೧४). ೩. ಗುಂಪು ; ಸಮೂಹ ; ಸಂದಣಿ : ಸತಿಯರೋಲಗಸಾಲೆಯೊಳು ಗುಣವತಿಯು ಸುತನಾಡಿಸುವ ಸಖಿಯರ ವ್ರತತಿಯೊಳಗಾ ತಾರೆ ನಡುವಣ ರೋಹಿಣಿಂಬಂತೆ ವಿತತದಿಂದೊಪ್ಪಿರಲು (ಬಿಜ್ಜಪು. ೯೩-೧೨). [ಸಂ. ವ್ರತತೀ]

**ವ್ರತನಿಯಮ** (ನಾ). ಯಾವುದಾದರೂ ವ್ರತಾಚರಣೆಗೆ ಸಂಬಂಧಿಸಿದ ಕಟ್ಟುಪಾಡು,— ಕಟ್ಟಳೆ : ಜಾತಾಭಿಜಂಗಮಾಗಮಜಾತಕ್ಕ(ಮ)ವಿತತೆಯಾಯ್ತು

ಮುನಿಪತಿಯೆಸೆದಿರ್ದಾ ತನು ಸಪ್ತರ್ಧಿಸಮನ್ವಿತಂ ವ್ರತನಿಯಮಯುಕ್ತ್ಯಗಸ್ತ್ಯೀಭೂತಂ (ಶಾಂತಿಪು. ೯-೧೧೨); ಸತಿಯರ ಕೈಸೋಂಕಿದನ್ನವ ಸವಿವುದತಿಶಯವಾಡಲೆನ್ನಳವೆ ಅತಿಕೃಚ್ಛ್ರ ಚಾಂದ್ರಾಯಣ ಸಾಂತಪನಾದಿ ವ್ರತನಿಯಮದ ಪವಣಲ್ಲ (ಹದಿಬ. ೨-೧೩). [ಸಂ.]

**ವ್ರತಭಂಗ** (ನಾ). ನೇಮವನ್ನು ಮೀರುವುದು ; ನಿಯಮದ ಉಲ್ಲಂಘನೆ : ಪುಸಿನುಡಿಗಳಂ ಪರಪುವುದುಂ ತಪಂಗಿಡಿಪುದುಂ ವ್ರತಭಂಗಂ ಮಾಳ್ಪುದುಂ . . . ದರ್ಶನ ಮೋಹನೀಯಕರ್ಮದಾಸ್ರವಮಕ್ಕುಂ (ಪಸಾರ. ೯೭); ವ್ರತಭಂಗಮಿಲ್ಲಮಿದಕೆಂದತಿಶಯಮುದಮಾಳ್ದು ತೊರೆದ ಪಶುಗಳ ಮೊಲೆಯಂ ಮತಿ ಮಿಗೆ ನಲಿದುಂಡವು ಜನಪತಿಯಚ್ಚರಿವಡೆದು ಕೀರ್ತಿಸುತ್ತಿರೆ ಧರೆಯೊಳ್ (ವೃಷವಿ. ೪೧-೨೭). [ಸಂ.]

**ವ್ರತಭ್ರಷ್ಟ** (ನಾ). = ವ್ರತಗೇಡಿ : ವ್ರತಭ್ರಷ್ಟರನಿಟ್ಟೊರಸುವ (ಸರ್ವಜ್ಞ. ೧೪೭-೮೭೦); ಅಧಿಕಪ್ರತಿಜ್ಞೆಗಳನಾಂತ ನಿನ್ನ ವ್ರತಭ್ರಷ್ಟನೆನಿಸಿ ಜೋಡಾಡಿ ಕಾಡುವೆನು (ಹಚಕಾ. ೨-೩೪). [ಸಂ.]

**ವ್ರತಸ್ಥ** (ನಾ). ಧಾರ್ಮಿಕ ಕ್ರಿಯಾಚಾರಗಳ ಕಟ್ಟುಪಾಡಿಗೆ ಬದ್ಧನಾದವನು ; ನೋಂಪಿಯನ್ನು ಕೈಗೊಂಡವನು ; ವ್ರತಿ : ಹುಸಿ ನುಸುಳು ಕೊಲೆ ಕಳವು ಪಾರದ್ವಾರವ ಮಾಡುವನ್ನಬರ ವ್ರತಸ್ಥನಲ್ಲದೆ ನೇಮಕ್ಕೆ ಸಲ್ಲ (ಸರ್ವಜ್ಞ. ೧೮೯-೮೪೧). [ಸಂ.]

**ವ್ರತಹಾನಿ** (ನಾ). ಹಿಡಿದ ನೇಮಕ್ಕೆ ಉಂಟಾಗುವ ಅಪಚಾರ ; ನಿಯಮಭಂಗ : ವ್ರತಹಾನಿ ಹಿಂಸೆಯೊಂದೀ ಗತಿಗಿಕ್ಕಿದುದುಟಿದ ನಾಲ್ಕುಮಾದೊಡೆ ಬಟಿಕೇಂ ಚತುರಂಗ ಬಲಸಮೇತಂ ಪ್ರತಿಪಕ್ಷಂ ಶೂರನಾದೊಡೇನಂ ಮಾಡಂ (ಯಶೋಚ. ೪-೩೪). [ಸಂ.]

**ವ್ರತಹೀನ** (ನಾ). ೧. = ವ್ರತಗೇಡಿ : ವ್ರತಹೀನರ್ ಸನ್ಮಾರ್ಗಪ್ರತಿಕೂಲರ್ ವ್ಯಸನವಶಗತರ್ ಪಾಪಿಗಳಿಂತತಿಕಷ್ಟರಪ್ಪರವನಿಯೊಳತಿಥಿಗಳೆನ್ನನ್ನದಾನವಮಂ ಕುಡುವೆಡೆಯೊಳ್ (ಆದಿಪು. ೧೫-೪೩); ವ್ರತಹೀನನ ಬೆರೆಯಲಾಗದು ಬೆರೆದರ ನರಕ ತಪ್ಪದು (ಸರ್ವಜ್ಞ. ೧೮೭-೮೭೩). ೨. ನೇಮ ತಪ್ಪುವುದು ; ನಿಯಮಬಾಹಿರತೆ : "ಅಪರಾಹ್ನ ದರ್ಭೆಯಂಜಳಿ ವ್ರತಹೀನಮುಂ ಕುತಪಮೆಂದೆನಿಕುಂ" (ನಾನಾರ. ೧೦೮). [ಸಂ.]

**ವ್ರತಾಚರಣ** (ನಾ). ೧. ಹಿಡಿದ ನೋಂಪಿಯನ್ನು ನಿಯಮಪೂರ್ವಕವಾಗಿ ಆಚರಿಸುವುದು . ೨. ಯಜ್ಞದ ಆಚರಣೆ : ಅರಸಂ ದೀಕ್ಷಿತನಿಲ್ಲಿ . . . ನೀನುಂ ಗೃಹೀತವ್ರತಾಚರಣವ್ಯಾಪೃತೆಯುಂ ಭವತ್ಪರಿಭವಂ ಸಂಚಾರಕಂ ಕೌರವೇಶ್ವರನೀತಂ ಪಶುವಾಗೆ ಬೇಳ್ದೆನಿವನಂ ಕೋಪಾಗ್ನಿಯಿಂದಗ್ನಿಜೇ (ಗದಾಯು. ೮-೪೭). [ಸಂ.]

**ವ್ರತಾಚರಣೆ** (ನಾ). = ವ್ರತಾಚರಣ ೧ : ವ್ರತಾಚರಣೆಯಲ್ಲೇ ಕಾಲ ಕಳೆದಿದ್ದೇನೆ . . . ನಿಮಗೆ ಅವೆಲ್ಲಾ ಹೇಗೆ ತಿಳಿಯಬೇಕು (ಪೇಮಕೂ. ೪). [ಸಂ. ವ್ರತಾಚರಣ]

**ವ್ರತಾಚಾರ** (ನಾ). = ವ್ರತಾಚರಣ ೧ : ಲಿಂಗದ ಪರಿಪೂರ್ಣವ ಕಾಣದಿಹ ಅಂಗಹೀನರಿಗೇಕೆ ವ್ರತಾಚಾರದ ಹೊಲಬು (ಅವಚಂ. ೨೫೭-೧೧೬೮); ವ್ರತಾಚಾರವ ಹಿಡಿದು ಬಿಟ್ಟಲ್ಲಿ ಗುರುವಾದಡೂ ಪರಿಹರಿಸಬಾರದು . . . ಜಂಗಮವಾದಡೂ ಪರಿಹರಿಸಬಾರದು (ಸಕವ. I, ೨೧೪-೮೨೭). [ಸಂ.]

**ವ್ರತಾವತರಣ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು ; IP "ಬ್ರಹ್ಮಚರ್ಯವ್ರತತ್ಯಾಗಕ್ರಿಯೆ ; ಹನ್ನೆರಡು ಅಥವಾ ಹದಿನಾರು ವರ್ಷಗಳ ನಂತರ ಬಾಲಕನು ಗುರುಸಾಕ್ಷಿಕವಾಗಿ ಪೂಜೆಮಾಡಿ ಕೈಕೊಳ್ಳಬೇಕಾದ ಸಾರ್ವಕಾಲಿಕವ್ರತ" (ಜೈನಕೋ. ೮೫): ಆದಾನ ಪ್ರೀತಿ ಸುಪ್ರೀತಿ . . . ಉಪನಯನ ವ್ರತಚರ್ಯಾವ್ರತಾವತರಣ . . . ವಿಹಾರಯೋಗ್ಯತ್ಯಾಗನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ (ಆದಿಪು. ೧೫-೧೫ ವ); ವ್ರತಚರ್ಯೆಯುಂ ವ್ರತಾವತರಣಮುಂ ವಿವಾಹಮುಂ . . . ಅಪ್ಪಯ್ವತ್ತುಮೂಱು ಗರ್ಭಾನ್ವಯಕ್ರಿಯೆಯೊಳು (ಚಾವುಂಪು. ೨೦೨). [ಸಂ.]

**ವ್ರತಿ** (ನಾ). ೧. ನಿಯಮಬದ್ಧವಾದ ನಡವಳಿಕೆಯುಳ್ಳವನು : ಅತಿಗಂಭೀರನುದಾರಧೀರನು ಮಹಾಸಂಪನ್ನ . . . ಲಂಚಕ್ಕೆ ಕೈನೀಡದಂ ವ್ರತಿ ಸದ್ಧರ್ಮ ವಿಚಾರಶಾಲಿ ಚತುರೋಪಾಯಂಗಳಂ ಬಲ್ಲವಂ ಪತಿಕಾರ್ಯಂ ವರಮಂತ್ರಿಯೈ (ಸೋಮೇಶ. ೬೧). ೨. ಯಾವುದಾದರೊಂದು ನೋಂಪಿಯನ್ನು ಹಿಡಿದು ನಿಯಮಪೂರ್ವಕವಾಗಿ ನಡೆಸುವವನು ; ನೇಮಾನುಷ್ಠಾನಗಳನ್ನು ಆಚರಿಸುವವನು : ವೀರನಾದರೆ ವೈರಿಗಳು ಮೆಚ್ಚಬೇಕು (ಬಸವ. ೬೭೧); ತನುಮನದ ಅಪಗುಣವೆಂಬ ಭವಿಯ ಕಳೆಯದೆ ಹೊಱಗೆ ವ್ರತಿಗಳೆಂದರೆ ಆರು ಮೆಚ್ಚುವರಯ್ಯಾ (ಸಿದ್ಧೇವ. ೧೦೦-೩೦೭). ೩. ತಪಸ್ಸು ಮಾಡುವವನು ; ತಪಸ್ವಿ : ವೆಗ್ಗಳಿಸುವ ಜಿತೇಂದ್ರಿಯರು ನಿಷ್ಕಾಮಿಗಳು ವ್ರತಿಗಳೊಳಗಾದವರ ಕುಸುಮಬಾಣನಂಡಲೆಯೊಳಳವಳಿವಂತೆ ಪೊಳ್ದನು (ಹಚಕಾ. ೩-೨೯); ವ್ರತಿ ವಾನಪ್ರಸ್ಥಂ ಯತಿಗಳಿರದೆ ಗೈವತಿಘೋರತಪದಾಚರಣೆ ಸತಿಯರ ಧರ್ಮಕ್ಕೆ ಸರಿಯಿಲ್ಲೆಂದು ಗೀಷ್ಪತಿಯಗಸ್ತ್ಯನೊಳಾಡಿದನು (ಹದಿಬ. ೨-೪೫); ವಜ್ರರೋಮನ ಚಿತ್ತವಜ್ರದ ಮಹಿಮೆಗಳ್ಕುತಾ ವ್ರತಿಯ ಕೈಂಕರ್ಯಮಂ ನೋಂತಿರ್ದ ವ್ಯಾಪ್ರುಮುಂ ಧ್ಯಾನಸ್ಥಮುನಿಯ ಪಕ್ಕದೊಳರೆಯ ಮೇಲಿರ್ದು ನೋಡುತಿರೆಯಿರೆ (ಶ್ರೀರಾಮಾ. ೧೪೩-೪೩). ೪. ಯಾಗಮಾಡುವವನು ; ಯಜ್ಞದೀಕ್ಷಿತ : ವ್ರತ ಮುಗಿಯೆ ವ್ರತಿಗಳನು ಕಳುಹಿದ ದಾನದಲಿ ತಣಿಸಿ (ಕಾಶಿರಾ. ೧-೭೪). ೫. [ಜೈನ] ಜೈನಸಂನ್ಯಾಸಿ ; ಸವಣ : ಈ ವ್ರತಿಗಳು ತಂತಮ್ಮ ಸೀಮೆಯಿಂ ಪೊಱಗೆ ಮಹಾವ್ರತಿಗಳೆನೆ ಪಡುವರ್ (ಪಸಾರ. ೩೧೧). [ಸಂ. ವ್ರತಿನ್]

**ವ್ರತಿಕ** (ನಾ). [ಜೈನ] ಧರ್ಮಾನುಷ್ಠಾನಗಳನ್ನು ನಿಯಮಪೂರ್ವಕವಾಗಿ ಆಚರಿಸುವವನು : ಪರಮದಯಾತತ್ಪರನೆನಿಸಿದ ಶಲ್ಯತ್ರಯವಿರಹಿತನೆರಡನೆಯ ನೆಲೆಯವಂ ತಾಂ ವ್ರತಿಕಂ (ಸುಕುಮಾ. ೬-೨೭); ವ್ರ[ಪಾಠಾಂ. ಪ್ರ]ತಿಕಂಗಂ ಭಾವಿಪಡವ್ರ[ಪಾಠಾಂ. ಪ್ರ]ತಿಕಂಗಾವುದುತ್ತರಂ ಸುರಮಣಿಯೊಳ್ ಪ್ರತಿಯಿಡೆ ಕಾಚಿನ ಮಣಿಯೊಳು ಮಿತರಂ ನಾಲಗೆ ಮುರುಂಟಿ ಪೋಗದೆ ಧರೆಯೊಳ್ (ಪುಣ್ಯಾಸ್ರ. ೫-೫೪); ಎಮ್ಮರಸನ ಕಂಡು ಕೆಲಕೆಲರು ವ್ರತಿಕರಾದರು (ಭರಚ. ೪೭-೧೦೨). [ಸಂ.]

**ವ್ರತಿಪ** (ನಾ). ತಪಸ್ವಿ ; ಋಷಿ ; ಮುನಿ : ಕರುಣಿಸುವವೊಲು ಕರುಣಿತನವನು ಮಱಿಯಲೋಸುಗವಿರದೆ ಗಗನೇಚರರ ಗತಿಯಲಿ ಬಂದನೈ ದ್ವೈಪಾಯನವ್ರತಿಪ (ಕುವ್ಯಾದ್ರೋ. ೭-೨೦). [ಸಂ.]

**ವ್ರತಿಪತಿ** (ನಾ). = ವ್ರತಿಪ : ವಂದ್ಯಂ ವರ್ಧಮಾನವ್ರತಿಪತಿ ಸುಕುಮಾರಂ ಕಥಾನಾಯಕಂ ತಚ್ಚರಿತಂ ಕಾವ್ಯಂ (ಸುಕುಮಾ. ೧-೬೦) ; ವ್ರತಿಪತಿಯಿದು ಸಂಸಾರಸ್ಥಿತಿ ಮಾಣ್ಬುದು ದುಃಖವೇಗಮಂ ನೀಮೆನುತುಂ ಪ್ರತಿಬೋಧಿಸೆ ಮಾಣ್ದಂತಾ ಕ್ಷಿತಿಪತಿಗಳ್ ಬಂದು ಪೊಕ್ಕು ಮಧುರಾಪುರಮಂ (ಮಹಾನೇ. ೧೭-೮೧). [ಸಂ.]

**ವ್ರತೀಕ** (ನಾ). = ವ್ರತಿ ೫ : ಜಯಭದ್ರಾಖ್ಯ ಸುಭದ್ರ ಪಾಂಡುಯತಿ ಕಂಸಾಚಾರ್ಯ ಲೋಹಾರ್ಯ ಸಜ್ಜಯಪಾಳಾರ್ಯ ವಿಶಾಖದತ್ತ ಜಯಬಾಹ್ವಾದಿ ವ್ರತೀಕರ್ . . . ಸಂದರ್ ಧರಾಚಕ್ರದೊಳ್ (ಸುಕುಮಾ. ೧-೧೨).

[IP ಇದು 'ವ್ರತಿಕ' ಎಂಬುದನ್ನು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ]

**ವ್ರಯ** 'ಬಿಯ' ನೋ.

**ವ್ರಹ್ಮಾದೇಯ** (ನಾ). ಬ್ರಾಹ್ಮಣರಿಗೆ ದಾನವಾಗಿ ಕೊಟ್ಟ ಭೂಮಿ, –ಉಂಬಳಿ : ಸಿರಿವಚ್ಚನುಂ ಶ್ರೀಪುರುಷನುಂ ದೇವಾಸುರರಾ ಶಿವಮಾರನುಂ ಅಗ್ರಹಾರಮೆಳಮ್ಬುಣುಸೆ ವ್ರಹ್ಮಾದೇಯಮಾಸಾಮಿಗ ಶ್ರೀ(?ವ್ರ)ತಿ ಅಱಿದು ಕೊಳೆ ಕೊಡಲಾರದೆ ಎನೆಬರು ಎಱಿದು ಸತ್ತೊರ್ (ಮೈಆರ. ೧೯೪೪, ೬-೨ ; 808). 'ಬ್ರಹ್ಮಾದೇಯ' ಪರಾ.

[IP ಇದು 'ಬ್ರಹ್ಮದೇಯ'ವೆಂಬುದರ ಅಪಲಿಖಿತವಿರಬಹುದು]

**ವ್ರಾತ** (ನಾ). ೧. ಗುಂಪು ; ಸಮೂಹ : ಅವನಿಪತಿವ್ರಾತಮಣಿಮಕುಟ ಕಿರಣದ್ಯೋತಿತಪಾದಂ (ಪಂಪಭಾ. ೧-೧೬); ದುಮ್ಮಿಕ್ಕುವರ್ಬಿಯಾಘಾತದಿಂ ಭೀಷ್ಮವಹ ಜಲಪಾತವ್ರಾತಂಗಳಿಂ ಭೀಕರಮರಣ್ಯಂ! (ಶ್ರೀರಾಮಾ. ೮೮-೨೯೧). ೨. ದೇಹಶ್ರಮ ; ಪರಿಶ್ರಮ. [ಸಂ.]

**ವ್ರಾತ್ಯ** (ನಾ). ೧. ಉಪನಯನ ಮೊದಲಾದ ಸಂಸ್ಕಾರವಿಲ್ಲದವನು ; ಅಸಂಸ್ಕೃತ : "ಸಂಸ್ಕಾರಗಳಿಲ್ಲದವನಂ ವ್ರಾತ್ಯನೆಂಬುದು" (ಪಲಾಯು. ೬೭-೨೫೦); ಶ್ರುತಿಯನುಷ್ಠಾನರಹಿತಂ ಬಹುಲಸತ್ಕಾರತತಿರಹಿತನೇ ವ್ರಾತ್ಯನವಕೀರ್ಣಯಪ್ಪನ್ನೆ ವ್ರತಹತಂ ದುಶ್ಶೀಲನೇ ಸಿತಾಖ್ಯಂ ತ್ಯಕ್ತಘಾತಕಂ ವೀರಹಾಖ್ಯಂ (ವಿಶ್ವೆಪು. ೭-೨-೨೨). ೨. ಶೂದ್ರಪುರುಷನಿಂದ ಕ್ಷತ್ರಿಯಸ್ತ್ರೀಯಲ್ಲಿ ಜನಿಸಿದವನು. ೩. ನೀಚ ;

ಅಧಮ ; ಕೆಟ್ಟವನು : ಲೋಭಿ . . . ಪತಿತ ವ್ರಾತ್ಯ ಸೋಮವಿಕ್ರಯಿಯರಾದಿಯಾದ ದುರಾಚಾರಿಗಳ ಮನೆಗಳೊಳೊರ್ಮೆಯುಂ ತಿರಿದುಂಡು ದೇಹಮಂ ಪೊರೆಯಲಾಗದು (ಭಾರಶಾಂ. ೩೬-೨೬೫); ಏ ಬಿನದಕೆ ನನ್ನಡೆಗೈತಂದೆ ವ್ರಾತ್ಯನೆಡೆಗೆ ದೇಹಿ ಎಂದು ಬಂದೆ ? (ಗಣೇಶ. ೩-೫೦). [ಸಂ.]

**ವ್ರಾಮ್ಮಣ** (ನಾ). ಬ್ರಾಹ್ಮಣ ; ಹಾರುವ : ಈದಾನಟಿತ್ತೋನ್ . . . ಸಾಸಿರ್ವ್ವರು ವ್ರಾಮ್ಮಣರು ಸಾಸಿರ ಕವಿಲೆಯೋಮಾನ್ ಕೊನ್ದೋನ್ ಅಪ್ಪೊನ್ (ಎಕ. IV (R), ಹೆಗ್ಗಡ. ೧೫೬-೧೦; ಸು. 700).

[IP ಇದು 'ಬ್ರಾಹ್ಮಣ' ಎಂಬುದರ ಅಪಲಿಖಿತ]

**ವ್ರಿತ್ತಿ , ವಿರ್ತಿ** (ನಾ). ೧. ಜೀವನೋಪಾಯಕ್ಕಾಗಿ ಬಿಟ್ಟ ಉಂಬಳಿ, – ದತ್ತಿ : ಉತ್ತರಾಯಣಸಂಕ್ರಾಂತಿಯಂದು ತಮ್ಮ ಮಲ್ಲುಗಾಣದ ನಾಲ್ಕು ವ್ರಿತ್ತಿಯೊಟಗೆ ಬಿಟ್ಟ ವ್ರಿತ್ತಿ ಓಂ XXX (ಸೌಇಇ. XX , ೬೪-೧೩; 1100). ೨. ಗ್ರಾಮಗಳ ಸಮುದಾಯ ; ಹಳ್ಳಿಗಳ ಗುಂಪು : ಉತ್ತರಾಯಣಸಂಕ್ರಾತಿಯಂದು ತಮ್ಮ ಮಲ್ಲುಗಾಣದ ನಾಲ್ಕು ವ್ರಿತ್ತಿಯೊಟಗೆ ಬಿಟ್ಟ ವ್ರಿತ್ತಿ ಓಂ XXX (ಸೌಇಇ. XX , ೬೪-೧೩; 1100). ೩. ಒಂದು ಬಗೆಯ ತೆರಿಗೆ : ಶ್ರೀಮದ್ರಾಜಗುರು ರುದ್ರಶಕ್ತಿದೇವರಿಗೆ ಯೆರಡು ವ್ರಿತ್ತಿ (ಎಕ. XVI, ಗುಬ್ಬಿ. ೭೬-೨೩; 1252). **ವಿರ್ತಿ** : ೩. ಇತ್ರ್ತಿ ವಿರ್ತಿಯ ಸಲಿಸದವರ್ ೬೦,೦೦೦ವರ್ಷ ಕುಂಭೀಪಾಕನರಕಯೊಳುತ್ತ XXX ಕುತ್ತಿಸದೆ ಮಂಗಳಮಹಾಶ್ರೀ (ಎಕ. XI, ಹೊಳಲ್ಕೆ. ೧೪-೨೪; 1210). 'ವಿತ್ತಿ' ಪಠಾ.

[IP ಇದು ಸಂಸ್ಕೃತದ 'ವೃತ್ತಿ' ಎಂಬುದರ ಅಪಲಿಖಿತ]

**ವ್ರಿತ್ತಿಮಂತ** (ನಾ). ಉಂಬಳಿಯನ್ನು ಪಡೆದವನು : ಆ ವ್ರಿತ್ತಿಮನ್ತರುಗಳ ಕುಳ ಶ್ರೀಮದ್ರಾಜಗುರುರುದ್ರಶಕ್ತಿದೇವರಿಗೆ ಯೆರಡು ವ್ರಿತ್ತಿ (ಎಕ. XVI, ಗುಬ್ಬಿ. ೭೬-೨೨; 1252); ಆ ತತ್ತಿನ ವ್ರಿತ್ತಿಮನ್ತರುಗಳಿಗೆ ಈ ಹಸುಗೆಯ ಕಾಲದಲ್ಲಿ . . . . ಕೊಟ್ಟ ಬೇಡರ ಮೂಡಿಯೊಕ್ಕಲು (ಎಕ. XII, ತಿಪಟೂ. ೪೧-೪೭ ; 1324 ?).

[IP ಇದು 'ವೃತ್ತಿವಂತ' ಎಂಬುದರ ಅಪಲಿಖಿತವಿರಬಹುದು]

**ವ್ರಿಹಿಗ** (ನಾ). ಒಂದು ಬಗೆಯ ಏಕದಳಧಾನ್ಯ ; ನೆಲ್ಲು ; ಬತ್ತ : ಕ್ರತುಗಳೆಡೆಯೊಳಗರಮನೆಯಲಿ ಪ್ರತಿದಿನವು ರಂಜಿಸುತ ದೇವರಿಗತಿಶಯದ ನೈವೇದ್ಯ ತಾನಹೆನೆಂದನಾ ವ್ರಿಹಿಗ (ರಾಮಚ. ೩೮). [< ವ್ರೀಹಿ + – ಗ$_2$./ IP ಇದು 'ವ್ರೀಹಿಗ' ಎಂಬುದನ್ನು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ]

**ವ್ರೀಡಾಕರ** (ನಾ). ಲಜ್ಜೆ ತರುವಂಥದು ; ನಾಚಿಕೆಯನ್ನುಂಟು ಮಾಡುವಂಥದು : ಅಪ್ರತಿಕಂಗೆಟಗದ ವೀರವ್ರತಮಂ ಕೇಳ್ದು ಹರ್ಷಮಂ ತಾಳ್ದದ ನಿನ್ನಬ್ರಹ್ಮಣ್ಯಂ ವರ್ಯಜನ ವ್ರೀಡಾಕರಮದಂ ವಿಚಾರಿಸವೇಡಾ (ಪಂರಾಮಾ. ೭-೫೧). [ಸಂ.]

**ವ್ರೀಡೆ** (ನಾ). ೧. ನಾಚಿಕೆ ; ಲಜ್ಜೆ ; ಸಿಗ್ಗು : ಕ್ರೀಡೆಯುಂ ವ್ರೀಡೆಯುಂ ಪಡೆವನ್ನಂ ಮುದಮಂ ಮುಕುಂದನತಿರಾಗೋದ್ರೇಕಮಂ ತಾಳ್ದಿದಂ (ಜಗವಿ. ೧೦-೧೩೮) ; ಭರ್ತೃವಾಕ್‌ಶಲ್ಯರೂಕ್ಷತೆಗೆ ಬಾಗಿದಳ್ ವ್ರೀಡೆಯಿಂ ಬಡಿಗೆ ಪೊಯ್ದಂತೆವೊಲ್ ಬೆನ್ನ (ಶ್ರೀರಾಮಾ. ೮೪೩-೪೫೮). ೨. ಒಂದು ಬಗೆಯ ಸಸ್ಯ : "ವ್ರೀಡೆ ಜಕ್ಕುಲಿಗಾರೆ" (ಮಂಗರಾ. ೪೦-೩೨). ೩. [ಕಾವ್ಯಮೀ] ಸಂಚಾರಿಭಾವಗಳಲ್ಲಿ ಒಂದು : ವ್ರೀಡಾ ಎಂದರೆ ನಾಚಿಕೆ ; ಇದು ಚಿತ್ತದ ಸಂಕೋಚಸ್ಥಿತಿ (ಭಾರಮೀ. ೩೪೭). [ಸಂ. ವ್ರೀಡಾ]

**ವ್ರೀಹಿ** (ನಾ). ಒಂದು ಬಗೆಯ ಏಕದಳಧಾನ್ಯ ; ನೆಲ್ಲು ; ಭತ್ತ : "ವ್ರೀಹಿ :, ಸ್ತಂಭಕರಿಃ – ಈ ೨ ನೆಲ್" (ಹಲಾಯು. ೯೫-೪೨೫) ; ಕರ್ಮರನುಂ ವ್ರೀಹಿಯನಾದಮಂ ಬೆಳೆಯಿಕುಂ ಜೋಳಂ ಮಹೀಭಾಗದೊಳ್ (ಚಿಟ್ಟನು. ೪-೧೦) ; ಚರು ಪುರೋಡಾಶಂಗಳಿಂ ತಿಲ ವ್ರೀಹಿಗಳ ನೆರವಿಯಿಂ . . . ದಕ್ಷನಧ್ವರಶಾಲೆ ಕಣ್ಗೆಸೆದುದು (ಚಬಪು. ೩೦-೨೪) ; [ಸಂ.]

**ವ್ರೀಳಿತ** (ಗು). ನಾಚಿಕೆಗೊಳಗಾದ ; ಲಜ್ಜೆಯ ; ಸಿಗ್ಗಿನ : ವ್ರೀಳಿತಾನನಕಮಲೆ ಕಾಂತನ ಕಾಲ ಮೇಲಡೆಗೆಡೆದು ತನ್ನನು ಪಾಲಿಸಾಯ್ತಪರಾಧವೆನ್ನದೆನುತ್ತ ಹಲು ಬಿದಳು (ನಿಭಾಗ. ೩-೪-೧೪). [< ಸಂ. ವ್ರೀಡಿತ]

**ವ್ರೀಟ್** (ನಾ). = ವ್ರೀಡೆ ೧ : ಸಾಡಿ, ನಾಟಿ . . . ವ್ರೀಡಾ, ವ್ರೀಟ್ (ಶಬ್ದಾನು. ೧೪೦ ವ್ಯಾಖ್ಯಾ) ; ವ್ರೀಟ್‌ಯಿನೆಡಗಲ್ ಕಣ್ಗಳ್ . . . ವಧು ಭೂಪಾಳಕನೊಳ್ ಮಾಡಿದಳ್ ದರಸ್ಮಿತಕೃತಿಯಂ (ಶಬ್ದಾನು. ೧೪೦ ವ್ಯಾಖ್ಯಾ). [< ಸಂ. ವ್ರೀಡಾ]

**ವ್ರೈಹೇಯ** (ನಾ). ಬತ್ತದ ಗದ್ದೆ ; ಶಾಲಿವನ : "ನೆಲ್ಲ ಗದ್ದೆ ವ್ರೈಹೇಯವೆಂಬುದು" (ಹಲಾಯು. ೨೭-೭) ; ಲೀಲೆಯಿನದಟ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗಂ ಮಾಷ್ಕಂ ಶಾಲೇಯಂ ವ್ರೈಹೇಯಂ (ಚಂದ್ರಪು. ೧-೯೧). [ಸಂ.]

✷

# ಶ



**ಶ** (ನಾ). ೧. ಕನ್ನಡ ವರ್ಣಮಾಲೆಯ ಐವತ್ತನೆಯ ಅಕ್ಷರ. ೨. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ''ಜಣಮಶಮದ್ಯೆದು'' (ಮಂಗರಾ. ೧೦೪-೯೦).

**ಶಂಕತಾಳ** (ನಾ). ಕಂಕುಳಲ್ಲಿ ಉಂಟಾಗುವ ಕುರು : ಬಾಣಂತಿಯಾಗಿದ್ದಾಗ ಅವಳಿಗೆ ಶಂಕತಾಳವಾಗಿತ್ತು (ರೂಢಿ). [?./ತಮಿ. ಚಙ್ಕಮ್ = ಕಂಕುಳು]

**ಶಂಕರ** (ಗು). ೧. ಸಂತೋಷವನ್ನುಂಟುಮಾಡುವ; ಮಂಗಳಪ್ರದವಾದ. (ನಾ). ೨. ಮನೋಹರವಾದುದು; ಸುಂದರವಾದುದು : ಮೊನೆಯುಗುರ ಗುರ್ವಿಂದೆ, ಮಿಂಚುಬೇರ್ಗಳ ಸಿಡಿಲ ಮರವನೆ, ಪದದ್ವಯಂ ರುದ್ರಶಂಕರವಾಯ್ತು (ಶ್ರೀರಾಮಾ. ೩೯೨-೮೧೪). ೩. ಮಂಗಳವನ್ನುಂಟುಮಾಡುವವನು; ಶಿವ : ಹರಹರ ಶಂಕರ ಶಿವಶಿವ ಶಂಕರ ಜಯಜಯ ಶಂಕರ ಶರಣೆನ್ನುತ್ತಿರ್ದೇನೆ ಎನ್ನ ಪಾತಕ ಪರಿಹಾರ (ಬಸವ. ೭೯) ; ರುರು ಘಂಟಾಕರ್ಣನಂಡಾಭರಣನಹಿಧರಂ . . . ಶಂಕರಂ (ರಾಜಶೇ. ೧೪-೧೫೩). ೪. [ಅದ್ವೈತ]ಮತಪ್ರವರ್ತಕರಾದ ಆದಿಶಂಕರಾಚಾರ್ಯ : ಬುದ್ಧ, ಶಂಕರ, ವಿದ್ಯಾರಣ್ಯ, ವಿವೇಕಾನಂದ ಇತ್ಯಾದಿ ಮಹಾಪುರುಷರು ಭಾರತೀಯ ಸಂಸ್ಕೃತಿಯ ಉದ್ಧಾರಕರು (ಚಮತ್ಕಾರ. ೧೦೫ ಪೀಠಿಕೆ). ೫. [ಛಂದ] ಅಂಶಗಣದಲ್ಲಿ ಒಂದು ಬಗೆ; ನಾಲ್ಕು ಅಂಶಗಳಿರುವ ಗಣ; ರುದ್ರಗಣ: ಮದನನ ತಂದೆಯ ಮುಂದುದಯಿಸೆ ಶಂಕರ ನೊಳ್ಪೊದವಿರೆ ಸಂದುದು ನೋಡಿದೆ ಸತಿ ಚೌಪದಿಗೆ (ಛಂದೋಂಬು. ೫-೨೫೨). [ಸಂ.]

**ಶಂಕರಗಂಡ**$_1$ (ನಾ). ೧. ರಾಷ್ಟ್ರಕೂಟರ ಒಬ್ಬ ಸಾಮಂತನ ಹೆಸರು : ಯಾದವ ವಂಶದೊಳ್ಪಾಣ್ಮರ ರಾಜನಾತನ ಮಗಂ ಶಂಕರಗಂಡನ್ (ಶಾಸಪ. ೫-೫; ಸು. 965). ೨. ಒಬ್ಬಾತನ ಹೆಸರು : ಪಿರಿಯಂ ಶಂಕರಗಂಡನಲ್ತೆ ಪಿರಿಯಂ ತದ್ವಾರಮಂ ಪೊತ್ತು ನಿತ್ತರಿಸುತ್ತಿರ್ಪುದಜಿಂದೆ · ನೀನೆ ಪಿರಿಯೈ ಶ್ರೀದಾನಚಿಂತಾಮಣೀ (ಅಜಿಪು. ೧೨-೯). [ಶಂಕರ + ಗಂಡ]

**ಶಂಕರಗಂಡ**$_2$ (ನಾ). ಜೋಳ; IP ''ತಮ್ಮಲ್ಲಿ ಯಾರ ತೂಕ ಹೆಚ್ಚೆಂದು ಶಿವ ಶಿವೆಯರು ಸ್ಪರ್ಧಿಸಿ ತೂಗಿಕೊಳ್ಳಲು, ಶಿವೆಯ ಕಡೆ ಒಂದು ಜೋಳದ ಕಾಳು ಹಾಕಿದಾಗ ಅವರಿಬ್ಬರ ತೂಕ ಸರಿಹೋಯಿತು.ಅಂದಿನಿಂದ ಜೋಳಕ್ಕೆ 'ಶಂಕರಗಂಡ' ನೆಂದು ಹೆಸರಾಯಿತು'' (ಶಿವಶ. ೪೩೨) : ಬರುತಿರಲ್ಕೊಂದೊಂದು ಬಿಳಿಯ ಜೋಳದ ರಾಶಿ . . . ಇರಲದಂ ಮುಂದುಗೊಂಡೊರ್ವನಾ ವ್ಯವಹಾರಿ ಕರೆವುತಂ . . . ಎಲೆಲೆ ಶಂಕರಗಂಡನಂ ಕೊಳ್ಳಿರೇ ಎನುತ ಸಲೆ ಬರ್ದುಕಿರೇಯಮೃತಮಯ ಧಾನ್ಯವೆಂದೆನುತೆ ಇರ್ಪಲ್ಲಿ ಬೊಮ್ಮಿತಂದೆಗಳೊಲಿದು ನೋಡುತಂ (ಬಾಹೂರ ಪ. ೩೧-೭); ಎಳ್ಳು ಜವೆ ಗೋಧೂಮ . . . ಹುಟ್ಟಿದವೆಲ್ಲ ಮೂವತ್ತಾಱು ಶಂಕರಗಂಡ ಮೊದಲಾಗಿ ಎಲ್ಲ ಧಾನ್ಯವನೆಣಿಸೆ ಹದಿನೆಂಟಲ್ಲಿ (ಸಂಭಪ. ೫-೧೧೩); ಮಾದಣ್ಣ . . . ಜೋಳಕ್ಕೆ, ಒಕ್ಕಲುಕಾಲದಲ್ಲಿ 'ಶಂಕರಗಂಡ' ಎಂದೇ ಕರೆದಾನು (ಬೆಳುಮ. ೨೩೭). [?]

**ಶಂಕರಪಾಳಿ** 'ಶಂಕರಪಾಳೆ' ನೋ.

**ಶಂಕರಪಾಳೆ, ಶಂಕರಪಾಳಿ, ಶಂಕರಪೋಳಿ** (ನಾ). ಸಕ್ಕರೆ, ತುಪ್ಪ ಮತ್ತು ಕಣಿಕ ಇವುಗಳಿಂದ ತಯಾರಿಸಿ ಕರಿದುಮಾಡುವ ಒಂದುಬಗೆಯ ಸಿಹಿತಿಂಡಿ: ನನ್ನ ದತ್ತೂ ಕಾಕಾ ಬರುತ್ತಾರೆ. ಅವರಿಗಾಗಿ ಅಜ್ಜಿ ಉಂಡಿ, ಅನಾರಸ, ಕರಜೀಕಾಯಿ, ಶಂಕರಪಾಳೆ ಇತ್ಯಾದಿ ಮಾಡುತ್ತಿದ್ದಾಳೆ (ಸ್ಮೃತಿಚಿ. ೪೨೩). **ಶಂಕರಪಾಳಿ:** ಶಂಕರಪಾಳಿ, ಅನರಸ - ಮುಂತಾದ ರಾಜಸ ಮತ್ತು ತಾಮಸ ಆಹಾರಗಳಿಂದ ಆದಷ್ಟು ದೂರಾಗಿರ್ರಿ (ಬ್ರಹ್ಮರ್ಷಿ. ೧೩೮). **ಶಂಕರಪೋಳಿ:** ಶಂಕರಪೋಳಿ, ಕೋಡುಬಳೆ, ಚಕ್ಕುಲಿ ಅಷ್ಟನ್ನೂ ಮಾಡಬೇಕಾದರೆ ಅರ್ಧದಿನ ಪೂರ್ತಿ ಹಿಡಿಯಿತು (ರೂಢಿ). 'ಶಂಖಪಾಲ' ಪರಾ. [← ಮರಾ. ಶಂಕರಪಾಳಾ, ಶಂಕರಪಾಳೆ; ಹಿಂ. ಶಕರಪಾರಾ ; ಪಾರ. ಶಂಕರ ಪಾರಹ್, ಸಕ್ಕರಪಾರಾ]

**ಶಂಕರಪೋಳಿ** 'ಶಂಕರಪಾಳೆ' ನೋ.

**ಶಂಕರಯ್ಯ** (ನಾ). ಒಬ್ಬಾತನ ಹೆಸರು : ಕಣ್ಣಯ್ಯನುಂ ಶಂಕರಯ್ಯನುಂ ಕುಱುಮ್ಬೂರ ಮಹಾಜನಂ ನೂಱೆಣ್ಬರ್ಗ್ಗಂ ಪದಿನಯ್ದುಗದ್ಯಾಣ ಪೊನ್ನ ಕೊಟ್ಟರ್ (ಎಕ. X, ಚಿಂತಾಮ. ೪೩-೧೪ ; 960 ?). [ಶಂಕರ + ಅಯ್ಯ]

**ಶಂಕರಾಭರಣ** (ನಾ). [ಸಂಗೀತ] ಒಂದು ರಾಗದ ಹೆಸರು: ಮಧುಮಾಧವಿ ಶಂಕರಾಭರಣ ಹಿಂದೋಳ . . . ಕರ್ನಾಟಕ ಬಂಗಾಳವೆಂಬಿಪ್ಪತ್ತೇ ರಾಗಾಂಗದಿಂದಾದ ರಾಗಂಗಳು (ವಿವೇಕ. ೧೮೮); ಮಹಾವೈದ್ಯನಾಥ ಅಯ್ಯರ್ ಅವರು ಏನೂ ಮಾತಾಡದೆ ಶಂಕರಾಭರಣರಾಗವನ್ನು ಹಾಡಲು ಸಿದ್ಧರಾದರು (ಸಂಗೀತ. ೧೩). [ಸಂ.]

**ಶಂಕರಾರಿ** (ನಾ). ಶಿವನ ಶತ್ರು; ಮನ್ಮಥ : ಭೋಂಕೆಂಬ ಅಳಿಗಳಂ ಕಾಲೊಳಗ ಕಟ್ಟೆಂದು ಶಂಕರಾರಿಯ ತಾಪದಿಂ ಮರುಳ್ಗೊಂಡಳೊಬ್ಬಳು ಮನೆಯ ಮುಂದೆ ಮುಗುದೆ (ಹಚಕಾ. ೪-೪೮). [ಸಂ.]

**ಶಂಕರಿ** (ನಾ). ೧. ಶಿವನ ಹೆಂಡತಿ; ಪಾರ್ವತಿ : ನುತಿಪೆಂ . . . ಸತತಾರಾಧಿತ ಶಂ[ಪಾಠಾಂ. ಶಾಂ]ಕರೀರಮಣ ಪಾದಾಂಭೋಜನಂ ಭೋಜನಂ (ರಾಜಶೇ. ೧-೧೮). ೨. ಶಮೀವೃಕ್ಷ. ೩. ಮಂಗಳವನ್ನುಂಟುಮಾಡುವವಳು: ನಿನ್ನಳಲ ಲೆಕ್ಕಿಸದೆ ಪತಿಹಿತಂಕರಿಯಾಗು; ಲೋಕಶಂಕರಿಯಾಗು (ಶ್ರೀರಾಮಾ. ೧೯೩-೪೭೨). ೪. ಒಂದು ಬಗೆಯ ಪಾತ್ರೆ ; ಗಿಂಡಿ : ''ಶಂಕರಿ ಸರಕಮೆನೆ ದಾರೆವಟ್ಟಲಕ್ಕುಂ'' (ಮಂಗರಾ. ೬೩-೨೫). [ಸಂ. ಶಂಕರೀ]

**ಶಂಕಹುಲ್ಲೆ** (ನಾ). ಒಂದು ಬಗೆಯ ಜಿಂಕೆ: ಚಿಗರಿಹುಲ್ಲೆ, ಕೊಂಡಗುರಿ, ಶಂಕಹುಲ್ಲೆ (ನಮ್ಮನು. ೨೩೯). [ಶಂಕ + ಹುಲ್ಲೆ (< ಪುಲ್ಲೆ)]

**ಶಂಕಾಂತರ** (ನಾ). ಬೇರೊಂದು ಅಭಿಪ್ರಾಯ ; ಸಂಶಯಭಾವನೆ: ದಿವ್ಯಾಪ್ಸರೋವೃಂದಮಿಾ ಕ್ಷಿತಿಗೇಸಿಂದ್ರನ ಶಾಪದಿಂದಿೞಿದುವೋ ಪೇೞೆಂಬ ಶಂಕಾಂತರಂ ಮತಿಗಂ ಪುಟ್ಟುವಿನಂ (ಪಂಪಭಾ. ೪-೩೯). [ಸಂ.]

**ಶಂಕಾಕಾರಿ** (ಗು). ಅನುಮಾನವನ್ನುಂಟುಮಾಡುವ ; ಸಂಶಯವನ್ನುಂಟು ಮಾಡುವ: ವಿಜಯಶ್ರೀ ಕೇಶಹಸ್ತಶಂಕಾಕಾರಿ ಶಂಕುಕೇಳೀಮಯೂರ ಶೋಭೆಯೊಳಂ . . . ಮಂಗಲಾನೇಕರವಶ್ರವಣ ಕಂಪಿತಪರಚಕ್ರನುಮಾಗಿ ನಡೆಯೆ (ಆದಿಪು. ೧೨-೭೧ ವ). [ಸಂ. ಶಂಕಾಕಾರಿನ್]

**ಶಂಕಾಕುಲ** (ನಾ). ಸಂಶಯದಿಂದ ಪೀಡಿತನಾದವನು; ಸಂದೇಹಗ್ರಸ್ತನಾದವನು : ಲಂಕೆಯಿಂದೀತನಂ ವಿಪರೀತಾತ್ಮನನೀಗಳಿಂದೆ ಕಳೆಯಿಂ ಶಂಕಾಕುಲಂ ಬಾೞ್ತೆಯಾದಪನೇ ಸಂಗರಕೇಳಿಗೆ (ಪಂರಾಮಾ. ೧೨-೭೪). [ಸಂ.]

**ಶಂಕಾಕುಳಿತ** (ಗು.) ೧. ಅನುಮಾನದಿಂದ ಪೀಡಿತವಾದ; ಸಂಶಯಗ್ರಸ್ತವಾದ. (ನಾ). ೨. ಸಂದೇಹದಿಂದ ಪೀಡಿತವಾದುದು; ಸಂಶಯಗ್ರಸ್ತವಾದುದು: ಆ ಶಿಶುವಿನಟ್ಟಿ ತೆಕ್ಕನೆ ತೀವಿತ್ತನಿತುಂ ದಿಕ್ತಟಮಂ ಘೋರೆನೆ ಶಂಕಾಕುಳಿತಮಪ್ಪಿನಂ ಭುವನಜನಂ (ಜಗವಿ. ೩-೧೨). [ಸಂ. ಶಂಕಾಕುಲಿತ]

**ಶಂಕಾವಹ** (ಗು). = ಶಂಕಾಕಾರಿ : ಆಹವಮಹಾಹುಂಕಾರ ಕಾಳಕೂಟವಿಟಪಿಪ್ರರೋಹ ಶಂಕಾವಹನಾಭಿಕೂಪಾವಲಂಬಿಕೂರ್ಚಕಳಾಪಂ (ಆದಿಪು. ೧೩-೪೫ ವ). [ಸಂ.]

**ಶಂಕಿತ** (ಗು). ೧. ಅನುಮಾನಕರವಾದ; ಸಂಶಯಾಸ್ಪದವಾದ. (ನಾ). ೨. ಸಂದೇಹ; ಅನುಮಾನ: ಶಂಕಿತದ ಮನದವನೆ ಮೊರಟದ ಬಂಕಿದೇವನ ಲೆಂಕ ನೆನಗಾತಂಕವುಂಟೇ ವೀರಭಕ್ತಂಗೆ (ಬಸಪು. ೫೨-೩೫). ೩. ಅನುಮಾನ ಹೊಂದಿದ ವ್ಯಕ್ತಿ; ಸಂದೇಹಗ್ರಸ್ತ ವ್ಯಕ್ತಿ: ಹುತ್ತದ ಮೇಲಣ ರಜ್ಜು ಮುಟ್ಟಿದರೆಯೂ ಸಾವರು ಶಂಕಿತರಾದವರು (ಬಸವ. ೭೭೧); ಪ್ರಾಣೇಶಾಚಾರ್ಯರ ನಡುಮನೆಯಲ್ಲಿ ನಿಂತು ಆಲಿಸುತ್ತಿದ್ದ ಹೆಂಗಸರು ತಮ್ಮ ಗಂಡಸರು ಎಲ್ಲಿ ದುಡುಕಿಬಿಡುತ್ತಾರೊ

ಎಂದು ಶಂಕಿತರಾದರು (ಸಂಸ್ಕಾರ. ೫೭). ೪. ಹೆದರಿದ ವ್ಯಕ್ತಿ; ಅಂಜುಕುಳಿ: "ಪರಿತ, ಚಕಿತಃ . . . ಶಂಕಿತಃ- ಈ ೬ ಪ(ಹ)ಂದ" (ಹಲಾಯು. ೫೮-೧೯೯). [ಸಂ.]

**ಶಂಕಿನಿ** (ನಾ) ಅಪ್ಸರ ಸ್ತ್ರೀ (?): ಸಜ್ಜನ ಕೀರ್ತಿಪ್ರಭೆಯಿಂದಂ ಕಾಮಿನಿ ಭೂಮಿ ಗೌರರುಚಿಯಿಂದೆಸದೇಂ ಶಙ್ಖಿನಿಯಾದಳೂ ಗೀತಾಲಙ್ಕೃತನಾನಾವಿನೋದವಿಳಸಿತ ಗತಿಯಿಂ (ಎ.ಕ. VII. ಶಿಕಾರಿ. ೧೯೭-೫೫ ; 1182). [< ಸಂ. ಶಂಖಿನೀ]

**ಶಂಕಿಸು** (ಕ್ರಿ). ೧. ಅನುಮಾನಿಸು ; ಸಂದೇಹಪಡು: ನಿಮ್ಮ ಅಂಕೆಗೆ ಝುಂಕೆಗೆ ಶಂಕಿಸಿದೆನಾವರ ಎನ್ನ ಲೆಂಕತನಕ್ಕೆ ಹಾನಿ (ಬಸವ. ೭೨೬) ; ಉಸಿರನಾರ್ಕೈದು ನಿರ್ಜೀವನೆಂದೆಂದು ಶಂಕಿಸಿ . . . ದೂರದಿಂದ ದೀವಿಗೆವಿಡಿದು ದಿಟ್ಟಿಸಿದರು (ಸಿದ್ಧರಾ. ೨-೪). ೨. ಆತಂಕಪಡು ; ಹೆದರು: ಬೆಸಸನ[ಯುಂ]ನುಡಿಯಲ್ ಶಂಕಿಸಿದಪೆ ನಾನೆಂದೊಡೇಕೆ ಶಂಕಿಸುವೈ ನೀಂ ಬೆಸವೇಱಿಸೆ (ಪಂಪಭಾ. ೧೨-೯೦) ; ದುರ್ಗಂಧಕ್ಕಿರ ಲಾಱದ ಲೆಂಕರ್ ದಂಡಂಗೊಂಡರಂತೆ ಶಂಕಿಸುತ್ತುಂ (ಧರ್ಮಾಮೃ. ೪-೧೫೮); ಬಿಂಕದತಿರಥರೆಂಟುಕೋಟಿ ತುರಂಗ ಪಾಯದಳ ಶಂಕಿಸುವನೇ ಬಳಿಕ ಯದುಕುಲ ದಂಕಕಾಱನು ನಿಂದನನಿಬರಿಗೆ (ಕುಮಾ.ಕ. ೩-೧೪). [ಶಂಕೆ + - ಇಸು]

**ಶಂಕು**$_1$ 'ಸಂಕ$_1$' ನೋ.

**ಶಂಕು**$_2$ (ನಾ.) ೧. ಗೂಟ; ಬೆಣೆ : "ಗೂಂಟಂ ಶಂಕು" (ಮಂಗರಾ. ೫೯-೧೩). ೨. ದಸಿ ; ಕಂಬ : ಶಂಕುವಿನ (Cone) ಘನಫಲವು ಸಿಲಿಂಡರದ (Cylinder) ಘನಫಲದ ಮೂರನೇ ಒಂದರಷ್ಟು ಎಂದೂ ಸಾಧಿಸಿದನು (ಗಣಿತ. ೨೮). ೩. ಮರದ ಕೊರಡು. ೪. ನೆರಳಿನಿಂದ ಕಾಲವನ್ನು ಕಂಡುಹಿಡಿಯುವ ಯಂತ್ರದ ಮುಳ್ಳು; ಛಾಯಾಯಂತ್ರದ ಸರಳುಸೂಚಿ : ಆರ್ಕಿಮಿಡೀಸನು ಮಾರ್ಸೆಲಸ್ಸನ ಹತ್ತಿರ ಹೋಗಬೇಕೆಂದು ತನ್ನ ಗೋಳಗಳು, ಶಂಕು (Sun-Dial) ಪಾದವೃತ್ತಯಂತ್ರ . . . ಮೊದಲಾದ ಸಲಕರಣೆಗಳನ್ನು ಹೊತ್ತುಕೊಂಡು ಹೋಗುತ್ತಿರಲು (ವಿಜ್ಞಾ.ಕ. ೧೮). 'ಶಂಕುಯಂತ್ರ' ಪರಾ. ೫. (ಭೂಮಿಯನ್ನು) ಅಳೆಯುವ ಒಂದು ಸಾಧನ: ಒಂದು ಅಥವಾ ಒಂದೂವರೆ ಅಂಗುಲ ದಪ್ಪವುಳ್ಳ ನಾಲ್ಕುಕಡೆಯೂ ನಾಲ್ಕು ಅಥವಾ ಆರು ಅಂಗುಲ ಪ್ರಮಾಣದ ಚಚ್ಚೌಕವಾದ ಒಂದು ತುಂಡುಹಲಗೆಗೆ ಮಧ್ಯಪ್ರದೇಶದಲ್ಲಿ ಅಡ್ಡವಾಗಿ ಎರಡು ಗೆರೆ ಕೊಯಿದು ಅದನ್ನು ಎರಡೂವರೆ ಗಜದ ಸುಮಾರು ಉದ್ದದ ಒಂದು ಕೋಲಿನ ಮೇಲೆ ಕೂಡಿಸುವುದು. ಇದನ್ನೇ ಶಂಕುವೆಂಬುವುದು (ಭೂಮಿಅ. ೨). ೬. ಒಂದುಬಗೆಯ ಮೀನು : "ಶಿಂಶುಮಾರಃ . . . ಶಂಕು, ನೀರಹಂದಿ, ಮಕರಃ, ಚೋರಮೀನು - ೮ ಜಲತಂತು ವಿಶೇಷಗಳು" (ಸಿದ್ಧಾಂತಿ. ೮೩). ೭. ಈಟಿ; ಭಲ್ಲೆ : "ತೋಮರ . . . ಶಂಕು ಯಷ್ಟಿಗಳ್ ಕೈದುಗಳ ಭೇದಮಕ್ಕುಂ" (ಮಂಗರಾ. ೮೮-೩೮); ಇಟ್ಟವನಿಟ್ಟಿಗಳೆನ್ನಂ ನಟ್ಟೊಡಮನ್ನಿಟ್ಟ ಶಂಕುಸಂಕುಲಮವನಂ ನಟ್ಟೊಡಮಿಭರದ ಮಿಭಮಂ ನಟ್ಟೊಡಮನ್ನವನ ಮುಳಿಸನಱಿಯಲ್ಕಕ್ಕುಂ (ಶಾಂತಿಪು. ೬-೭೯). ೮. ತೂತು; ರಂಧ್ರ. ೯. ಸಂಕೀರ್ಣವಾದುದು. ೧೦. ನಾಶ; ಅಳಿವು : "ಛಿದ್ರ ಸಂಕೀರ್ಣ ಕಾಷ್ಠ ಲಯಂ ಶಂಕು ಸಮಾಖ್ಯಂ" (ನಾನಾರ. ೧೪೮). ೧೧. [ಗಣಿತ] ಒಂದು ಸಂಖ್ಯೆ; ಹತ್ತು ದಶಕೋಟಿ. ೧೨. ಗಣಿತಶಾಸ್ತ್ರದ ಒಂದುವಿಧಾನ : ದಶಮಾಂಶ, ಶಂಕು ಮುಂತಾದ ಗಣಿತಶಾಸ್ತ್ರವಿಧಾನಗಳೂ ಭೂಮಿಯ ವೃತ್ತಾಕೃತಿಯೂ ಈ ಖಗೋಳಶಾಸ್ತ್ರಜ್ಞರಿಗೆ ಸ್ಪಷ್ಟವಾಗಿದ್ದುವು (ಭಾಇಪ್ರ. ೨೭೭). [ಸಂ.]

**ಶಂಕುಫಲ** (ನಾ). ಒಂದು ಬಗೆಯ ಮರ; ಶಮೀವೃಕ್ಷ: ಅಲೆಗ್ಜಾಂಡರನು ತನ್ನ ನೌಕಾನಿರ್ಮಾಣಕ್ಕೆ ಬೇಕಾದ ಪೀತದಾರು, ಶಂಕುಫಲ, ಸೀಡಾರ್ ಮುಂತಾದ ಮರಗಳನ್ನು ಕಡಿಸಿ. . . ದೊಡ್ಡ ನೌಕಾಪಡೆಯನ್ನು ನಿರ್ಮಿಸಿದನು (ಪ್ರವಾಇ. I, ೬೦). [ಸಂ. ಶಂಕುಫಲಾ]

**ಶಂಕುಯಂತ್ರ** (ನಾ). ಸೂರ್ಯನ ನೆರಳಿನಿಂದ ಕಾಲವನ್ನು ಕಂಡುಹಿಡಿಯುವ ಸಾಧನ; ಛಾಯಾಯಂತ್ರ; ನೆರಳುಗಡಿಯಾರ: ಅವರಿಗೆ ಹೊತ್ತು ತಿಳಿಯಲಿಕ್ಕೆ ಶಂಕುಯಂತ್ರದ ಹೊರ್ತು ಎರಡನೇ ಸಾಧನವಿದ್ದಿಲ್ಲ (ಮುಂಬಯಿ. ೪-೧೮೭). [ಸಂ.]

**ಶಂಕುಸ್ಥಾಪನೆ** (ನಾ). ಕಟ್ಟಡಗಳನ್ನು ಕಟ್ಟುವುದಕ್ಕೆ ಮುಂಚೆ ಖದಿರ ಮೊದಲಾದ ಮರಗಳಿಂದ ಮಾಡಿದ ಗೂಟ ಅಥವಾ ಅಡಿಗಲ್ಲನ್ನು ಇಡುವ ಒಂದು ಸಾಂಪ್ರದಾಯಿಕ ವಿಧಿ : ಶುಭಮುಹೂರ್ತದಲ್ಲಿ ಹೊಸದೇವಾಲಯದ ಶಂಕುಸ್ಥಾಪನೆಯನ್ನು ನೆರವೇರಿಸಿದರು (ಶಾಂತಲಾ. ೧೩೮). [ಸಂ. ಶಂಕುಸ್ಥಾಪನ]

**ಶಂಕೆ** (ನಾ). ೧. ಸಂದೇಹ ; ಸಂಶಯ: ಮತ್ತೊಂದುದಿವಸಂ ಶ್ರೀಧರಂ ಕುಬೇರ ಕಾಂತನೊಡನೆ ನಿದ್ರೆಗೈದಾತನ ರತ್ನಕಂಬಳಮಂ ಪೊದೆದು ತನ್ನ ಮನೆಗೆ ಬರ್ಪೂನಂ ಕಂಡು ಸವತಿಯೊಳಪ್ಪ ಶಂಕೆಯಿಂದಂ ಪ್ರಸಾದದ ಮೇಗಣಿಂದಂ ನೆಲಕ್ಕಿಕ್ಕಿ ಬಿಟ್ಟು ಸತ್ತೊಳ್ (ವಡ್ಡಾರಾ. ೩೯-೩); ಚಕ್ರಿಗುಂಟುಮಾಡಿದುದು ಪೊಟಲ್ ಸುರಾದ್ರಿಮಥಿತಾಂಬುಧಿಜಾತ ನಿನಾದಶಂಕೆಯಂ (ಪಂಪಭಾ. ೯-೨೭); ಶಂಕೆಯನೆ ಬಿಟ್ಟು ಮನದೊಳ್ ಶೊಂಕದೆ ಮಿಥ್ಯಾತ್ವಮೆಂಬ ಪರ್ಬುಲಿವಿಂಡಂ ಸೋಂಕದೆ (ಧರ್ಮಾಮೃ. ೨-೫). ೨. ಅಳುಕು; ಹಿಂಜರಿತ: ಅಂಗದ ಕಳೆ ಲಿಂಗಸಂಗವಾಗಿ ಅಂಗವೆಂಬ ಶಂಕೆಯ ಭಂಗವ ತೋಱದು (ಅಡಪ. ೪೫-೧೨೪); ಕರಿಯ ಕೊಲ್ಲುವ ಹರಿಗೆ ಮರಿಯೆಂಬ ಶಂಕೆ ತಾನೇಕೆ? (ಶ್ರೀರಾಮಾ. ೨೮-೨೦). ೩. ಅಂಜಿಕೆ; ಭಯ: ಕಲಿಗಂ ಶಂಕೆಯೆ ಚಾಗಿಗಂ ಬೆಜಗೆ . . . ಚಲವಂ ಗಂಡುಮನಪ್ಪುಕೆಯ್ವನಗವಾ ಕೌಂತೇಯರೊಳ್ ಸಂಧಿಯೇ (ಗದಾಯು. ೫-೪೬); ಆ ಹೊಹಗುರ ಶಿಶುವಿದ್ದಕಿದ್ದಂತೆ ಗಿರಿಭಾರಮಾಗಿ ಬರೆ, ನೆಗಹಲಾರದೆ ತಾಯಿ ತೇಂಕಿದಳು ಕಾತರಿಸಿ ಮಗನಭ್ಯುದಯಶಂಕೆಯಿಂ (ಶ್ರೀರಾಮಾ. ೧೮-೪೭೩). ೪. ಭರವಸೆ; ನಂಬಿಕೆ. ೫. ವಾದದಲ್ಲಿ ಎತ್ತುವ ಆಕ್ಷೇಪ: "ವಿತರ್ಕ ಸಂದೇಹ ವಿಕಲ್ಪ ಶಂಕಾಮತಿ ಭ್ರಮಾಖ್ಯಂ ವಿಚಿಕಿತ್ಸಿತಾರ್ಥಂ" (ವಸ್ತುಕೋ. ೧೧೭-೧೨). ೬. (ದೆವ್ವ, ಪೀಡೆ ಮೊದಲಾದುವುಗಳ ಸೋಂಕಿನಿಂದುಂಟಾಗುವ) ಮನೋವೈಕಲ್ಯ: ಮನೆಯಾಕೆಯಾರೋಗ್ಯವಿದ್ದಕ್ಕಿದ್ದಂತೆಯೆ ಕೆಟ್ಟತದೇತಕೊ ಅರಿಯ ಅಂಜಿಕೆಯೆನಲಾರ ಶಂಕೆಯೆಂದೆನಲಾರ ತಾನಾದಳೊಮ್ಮೆಗಧೀರೆ (ಇಂಚಾಪ. ೪೩-೨); ಗಾಳಿ ಹಿಡಿದ ಶಂಕೆ ಆದ ಎಷ್ಟೋ ಜನ ಬೆಟ್ಟಕ್ಕೆ ಹೋಗಿ, ಅಲ್ಲಿ ಕೋಳಿ ಕುರಿ ಬಲಿಕೊಟ್ಟು , ಕಲ್ಲುಹುಯ್ಯಿಸಿ ಬರುತ್ತಾರೆ (ಸಸ್ಯೂರು. ೨೦೭). ೭. ದೇಹದಲ್ಲಿ ಉಂಟಾಗುವ ಪ್ರಾಕೃತಿಕ ವಿಸರ್ಜನೆಯ ಪ್ರೇರಣೆ, - ಒತ್ತಡ : 'ಅಲ್ಪಶಂಕೆ' ಪರಾ. ೮. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು; ತನ್ನ ತಪ್ಪಿನಿಂದಾಗಲಿ, ಬೇರೆಯವರ ತಪ್ಪಿನಿಂದಾಗಲಿ ಅನರ್ಥವನ್ನು ಭಾವಿಸುವಿಕೆ : ಮತಿ ನಿರ್ವೇದಾಪಹಿತ್ಥಶ್ರಮ . . . ಶಂಕಾತ್ರಸನ . . . ಮೃತಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೫೧). ೯. [ನಾಟ್ಯ] ಇಪ್ಪತ್ತು ವಿಧವಾದ ಸಂಚಾರಿಭಾವದೃಷ್ಟಿಗಳಲ್ಲಿ ಒಂದು ; P "ಚಂಚಲ ಮತ್ತು ಸ್ಥಿರದೃಷ್ಟಿಗಳಿಂದ ಪಕ್ಕವನ್ನು ಮತ್ತೆ ಮತ್ತೆ ನೋಡಿ ಜಾಗ್ರತೆ ತಿರುಗುವುದು" (ಲಾಸ್ಯರಂ. ೨೬೫ ಗದ್ಯಾನುವಾದ): ಪಲವಿಧ ಚಲದಿಂ ನಿಲವಿಂ ಕೆಲಪೊಱಗಂ ನೋಡಿ ತಿರುಗ ಶಂಕೆಯೆನಿಕ್ಕುಂ (ಲಾಸ್ಯರಂ. ೩-೨೫). [ಸಂ. ಶಂಕಾ]

**ಶಂಕೆಗೈ** (ಕ್ರಿ). ಸಂದೇಹಿಸು; ಅನುಮಾನಪಡು: ಶಂಕೆಗೈವರಿಗಿಂತು ದ್ವೈತದ ಶಂಕೆದೋರುತ್ತಿಹುದು (ಗಗತಾ. ೧೩-೪೭). [ಶಂಕೆ + ಗೈ (< ಕೆಯ್$_1$)]

**ಶಂಕೆಪಡು** (ಕ್ರಿ). = ಶಂಕೆಗೈ: ತಂದೆಯೂ ಹಿರಿಯನೂ ಆದ ಮಹಾರಾಜನು ಏನು ಹೇಳಿದರೆ ಅದನ್ನು ಶಂಕೆಪಡದೆ ನಡೆಸಬೇಕು (ಪಚಭಾ. ೩೧). [ಶಂಕೆ + ಪಡು]

**ಶಂಖ** (ನಾ). ೧. ಸಮುದ್ರದಲ್ಲಿರುವ ಒಂದು ಬಗೆಯ ಜಲಚರಜೀವದ ಗೂಡು, — ಚಿಪ್ಪು ; ಕಂಬು: "ಕಂಬುಃ, ಶಂಖಃ - ಈ ೨ ಶಂಖಂ" (ಹಲಾಯು. ೧೧೯-೪೨); ಶಂಖದಿಂದ ಬಿದ್ದರೇ ತೀರ್ಥ (ಗಾದೆ). ೨. ಮಂಗಳಕರವಾದ ಪಂಚಮಹಾವಾದ್ಯಗಳಲ್ಲಿ ಒಂದು: ಪಟುಪಟಹತುಣವಭಂಭಾಮರ್ದಳಿ ಝಲ್ಲರೀ ಮುಕುಂದತಾಳ ಕಾಹಳ ಶಂಖವಂಶವೀಣಾಸ್ವರಂಗಳೆಸೆಯೆ (ವಡ್ಡಾರಾ. ೮೪-೧); ಕಹಳೆ ಪಟಹ ಶಂಖ ಭೇರಿ ಜಯಘಂಟೆಯೆಂಬ ಪಂಚಮಹಾವಾದ್ಯವಾದನವಿಚಕ್ಷಣರಿಂ (ವಿವೇಕ. ೧೯೦); ಶಂಖದುಂದುಭಿರವದ ಮಂಗಳಂ ಮೊಳಗುತಿರೆ . . . ಆ ಪುತ್ರಯುಗ್ಮಮಂ ಬೀಳ್ಕೊಟ್ಟನೈ ನೃಪತಿ ಯತಿಯೊಡನೆ (ಶ್ರೀರಾಮಾ. ೩೦-೮೪). ೩. ಕೆನ್ನೆಯ ಎಲುಬು: ಕಟದ ಕಡೆಗಣ್ಣ ಸಮೀಪದ ಮೇಗಣ್ಣೆ ಶಂಖಮೆಂಬ ಪೆಸರಕ್ಕುಂ (ಅಶ್ವಶಾ. ೮೭-೩೦). ೪. ಹಣೆಯ ಮೂಳೆ. ೫. ಕುಬೇರನ ನವನಿಧಿಗಳಲ್ಲಿ ಒಂದು: ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಗಳೆಂಬ ನವನಿಧಿಗಳುಂ (ಆದಿಪು. ೧೫-೩ ವ); ಕಾಳ ಮಹಾಕಾಳ . . . ಶಂಖ ಸರ್ವರತ್ನಂಗಳೆಂಬೊಂಬತ್ತು ನಿಧಿಗಳುಮನನುಕ್ರಮದೊಳರ್ಚಿಸಿ (ಚಂದ್ರಪ್ರ. ೬-೧೦೧ ವ). ೬. ಒಂದುಬಗೆಯ ಸುಗಂಧದ್ರವ್ಯ. ೭. ಬಿಳಿದು; ಶ್ವೇತ. ೮. ಸೇನಾರಚನೆಯ ಒಂದುವಿಧ ; ವ್ಯೂಹಭೇದ : "ನಿಧಿ ಕಂಬು ವ್ಯೂಹ ಸಂಖ್ಯಂ ಸಿತ ಪ್ರಾತಂ

ಶಂಖಮೆನಿಕ್ಕು'' (ನಾನಾರ. ೬೭). ೯. ಕುದುರೆಯ ಒಂದು ಅಂಗ: ಶಕ್ತಿಯಿಂ ಕೆಟಗ ಮಂಜರಿಯೆಂಬ ಪೆಸರಕ್ಕುಂ ನಡುವೆ ಶಂಖಮೆಂಬ ಪೆಸರಕ್ಕುಂ (ಅಶ್ವಶಾ. ೮೯-೨೩). ೧೦. [ಗಣಿತ] ಶತಕೋಟಿ ಸಂಖ್ಯೆಯ ಸಂಕೇತ: ''ಹರ್ವ ಪದ್ಮ ಕ್ಷೋಣಿ ಶಂಖಂ ಕ್ಷಿತಿ ಕ್ಷೋಭಪೂರ್ವಮಪ್ಪಂಕೆಯಾದಿಗೆ . . . ಚಪ್ಪೀಸ ತಾಣವರ ಸಂಖ್ಯೆಯಕ್ಕುಂ'' (ಮಂಗರಾ. ೧೦೫-೧೩) : ಏಕಂ, ದಶಂ . . . ಶಂಖಿ, ಸಮುದ್ರ, ಮಧ್ಯ, ಅಂತ್ಯ ಮತ್ತು ಪರಾರ್ಧ (ಪ್ರವಾ೯. I, ೩೫೭). ೧೧. ಏಳು ಎಂಬ ಸಂಖ್ಯೆಯ ಸಂಕೇತ: ಸಪ್ತಭಯ, ಅದ್ರಿ, ಗಿರಿ, ಮುನಿ, ಪಾತಾಳ, ಶಂಖ, ಸಾಗರ . . . ಅಶ್ವ ಇಂತಿವುಂ ೭ಕ್ಕೆ ಪೆಸರು (ವ್ಯವಹಾ. ೧೦). ೧೨. ಸಂಖ್ಯೆಯ ಸ್ಥಾನಗಳಲ್ಲಿ ಹತ್ತೊಂಬತ್ತನೆಯ ಸ್ಥಾನ ಮತ್ತು ಹತ್ತೊಂಬತ್ತು ಅಂಕೆಗಳುಳ್ಳ ಒಂದು ದೊಡ್ಡ ಸಂಖ್ಯೆ: ಏಕಂತು ಪ್ರಥಮಸ್ಥಾನಂ ದ್ವಿತೀಯಂ ದಶಸಂಜ್ಞಿಕಂ . . . ಶಂಖಂ ನವದಶಸ್ಥಾನಂ (ವ್ಯವಹಾ. ೮). ೧೩. [ನಾಟ್ಯ] ಸಂಯುತಹಸ್ತಗಳಲ್ಲಿ ಒಂದು; IP ''ಬೆರಳುಗಳು ಪರಸ್ಪರ ಅಭಿಮುಖವಾಗುವಂತೆ ಕೈಯನ್ನು ಸ್ವಲ್ಪ ಸಂಕುಚಿಸಿ ಹಿಡಿಯಬೇಕು'' (ಲಾಸ್ಯರಂ. ೨೪೧ ಗದ್ಯಾನುವಾದ): ಅಭಿನಯದರ್ಪಣದಲ್ಲಿ- ೧.ಅಂಜಲಿ. . . ೧೨. ಶಂಖ . . . ೨೪. ಅವಹಿತ್ಥ (ಆಭಾಸ್ಯ. ೪೮).

ಶಂಖಚಕ್ರದ ಕಲ್ಲು = ಶಂಖ ಮತ್ತು ಚಕ್ರಗಳನ್ನು ಕೆತ್ತಿರುವ ವೈಷ್ಣವಮುದ್ರೆಯ ಕಲ್ಲು : ಆ ಗ್ರಾಮದ ಚತುಸ್ಸೀಮೆಯಲು ಶಂಖಚಕ್ರದ ಕಲ್ಲ ನಡಿಸಿ ಕೊಟ್ಟು, (ಎ೯. XVI, ೨೨೭-೫೨; 1414). **ಶಂಖಚಕ್ರದ ಕೋಲು** = ದನಕರುಗಳಿಗಾಗಲಿ ಅಥವಾ ಮನುಷ್ಯರಿಗಾಗಲಿ ಮುದ್ರೆಹಾಕಲು ಉಪಯೋಗಿಸುವ ಶಂಖ ಮತ್ತು ಚಕ್ರಗಳ ಗುರುತಿರುವ ಕೋಲು: (೬). **ಶಂಖದ ಹುರಿಕೆ** = ಒಂದು ಬಗೆಯ ಸುಗಂಧದ್ರವ್ಯ : ''ನಖಶಂಖಃ - ಶಂಖದ ಹುರಿಕೆ, ನಖ'' (ಓಷಧಿ. ೮೪). **ಶಂಖದ ಹುಳು** = ಅಧಿಕ ತೇವಾಂಶವಿರುವ ಕಡೆಗಳಲ್ಲಿ ವಾಸಿಸುವ ಒಂದು ಬಗೆಯ ಮೃದ್ವಂಗಿ ಕೀಟ : ಶಂಖದ ಹುಳುವನ್ನು ಮುಟ್ಟಿದಕೂಡಲೇ ಅದು ತನ್ನ ಇಡೀ ದೇಹವನ್ನು ಚಿಪ್ಪಿನೊಳಕ್ಕೆ ಎಳೆದುಕೊಳ್ಳುತ್ತದೆ (ರೂಢಿ). **ಶಂಖ ಪುಟಿಸು** = (ಆಲಂ) ಕೂಗಾಡು; ಬೊಬ್ಬೆಯಿಡು : ತಮ್ಮ ಬೋರ್ಡುಗಳನ್ನೆಲ್ಲ ಸುಟ್ಟುಬಿಟ್ಟಿರುತ್ತಾರೆಂದು ಪಟ್ಟಣದೊಳಗಿನ ಎಲ್ಲ ವಕೀಲ, ಜ್ಯೋತಿಷಿ, ಡಾಕ್ಟರುಗಳು ಶಂಖ ಪುಟಿಸುವರು (ಮೋಜೀವ. ೧೭). **ಶಂಖ ಹೊಡೆ** = ಶಂಖ ಪುಟಿಸು : ಶಂಖಾ ಹೊಡೀಬ್ಯಾಡ (ತಿಡುಗು. ೨). [ಸಂ.]

**ಶಂಖಧ್ವಾನ** (ನಾ). ಶಂಖವನ್ನು ಊದುವುದರಿಂದುಂಟಾಗುವ ಧ್ವನಿ : ದಿನಾಧೀಶಬಿಂಬಂಬರಂ ಧೀಂಕಿಡ ಶಂಖಧ್ವಾನಮಾಶಾವಿವರಮನಿತುಮಂ ತೀವ ಭೇರೀರವಂ . . . ಮುಟ್ಟೆವಂದರ್ ಕಮಚೆಲ್ವಂಬೆತ್ತ ಲಂಕಾಪುರದುಪವನಮಂ (ಪಂರಾಮಾ. ೧೫-೨); ಸಮರಸಿದ್ಧರಾಗಿ ಬಂದ ಕುರುಪಾಂಡವ ವೀರರೆಲ್ಲ . . . ಕದನಕುತೂಹಲರಾಗಿ ಶಂಖಧ್ವಾನ ಮಾಡುತ್ತಿದ್ದಾರೆ (ಭಾರದ. ೧೧೧). [ಸಂ.]

**ಶಂಖನಖ** (ನಾ). ೧. ಒಂದು ಬಗೆಯ ಜಲಚರ ; ಬಸವನ ಹುಳು. ೨. ಚಿಕ್ಕ ಶಂಖ; ಗುಳ್ಳೆಶಂಖ: ''ಕ್ಷುದ್ರಶಂಖಾಃ, ಶಂಖನಖಾಃ - ೨ ಗುಳ್ಳೆಗಳು, ಗುಳ್ಳೆಶಂಖಗಳು'' (ಸಿದ್ಧಾಂತಿ. ೮೪). [ಸಂ.]

**ಶಂಖಪಾಯ** (ನಾ). ಒಂದು ಬಗೆಯ ಮೀನು : ಹೆಗ್ಗರಿಲುಂ ಕಲ್ಲಡಿ ಶಂಖಪಾಯ ನರಿಲುಂಬಂ ಸಾನ ಮೂಗುಂ . . . ಪಂದಿಗನೆಂಬ ಮೀಂದೆಗೆದನಾ ಭಕ್ತಂ ಮಹಾಲೀಲೆಯಿಂ (ತ್ರಿಪುವಿ. ೫೭-೮). [?]

**ಶಂಖಪಾಲ, ಶಂಖಪಾಳ** (ನಾ). ೧. ಅಷ್ಟಫಣಿಗಳಲ್ಲಿ ಒಂದು: ಎಂಟುದಿಕ್ಕಿನ ಭೂಮಿಯಂ ಕ್ರಮದಿಂ ಪೊತ್ತು ಅನಂತ ತಕ್ಷಕ ವಾಸುಕಿ ಶಂಖ [ಪಾಠಾಂ. ಕ]ಪಾಲ ಪದ್ಮ ಕರ್ಕೋಟಕ ಕ್ರೋಡ ಕಾಳವೆಂಬಷ್ಟಕುಲಫಣಿಗಳಿರ್ಕುಂ (ವಿವೇಕ. ೧೫೦) ; ಬೆನ್ನಿನಲ್ಲಿ ತ್ರಿಶೂಲದ ಅರ್ಧಚಂದ್ರಾಕೃತಿ ಉಳ್ಳದು ಶಂಖಪಾಲನೆನಿಸಿಕೊಂಬುದು (ವಿಷಚಿ. ೨-೨). ೨. = ಶಂಕರಪಾಳೆ. ೩. ಸೂರ್ಯ. **ಶಂಖಪಾಳ**: ೧. ''ಘನದನಂತಂ . . . ಶಂಖಪಾಳಂ ಕುಳಿಕನೆಂದು ನಾಗರಕುಲಂಗಳೆಂಟಕ್ಕೆ ನಾಮಂ'' (ಮಂಗರಾ. ೧೯-೪); ಮುಂಡಾಸವೇ ಶಂಖಪಾಳ ಸರ್ಪಾಕಾರವಾಗಿಯಾರ್ಭಟಿಸುತ್ತ ತೋಳ ಪರಿಯಂತರಂ ಸುತ್ತಿ ಹೆಡೆಯಿಂ ಮುಖವ ಬಡಿಯಲತಿ ಭೀತಿಗೊಂಡು (ಗುರುಚಾ. ೨-೭೭). [ಸಂ.]

**ಶಂಖಪಾಷಾಣ** (ನಾ). [ವಿಜ್ಞಾ] ಕಾಯಿಸಿದರೆ ಕರಗದೆ ಬೆಳ್ಳುಳ್ಳಿಯ ವಾಸನೆಯ ಹಬೆಯನ್ನು ಹೊರಸೂಸುವ, ಬಿಳಿಯ ಆರ್ಸನಿಕ್ ಎಂಬ ಖನಿಜವಸ್ತು: ಶಂಖಪಾಷಾಣವನ್ನು ಸಂಪಾದಿಸಿ ತಂದು ಬ್ರಾಂದಿಯೊಡನೆ ಸೇರಿಸಿ ಆ ವರ್ತಕನಿಗೆ ಕುಡಿಸುವುದೆಂದು ಮಾಸ್ಲೋವಳನ್ನು ಪುಸಲಾಯಿಸಿ . . . ಆಪಾದನೆ ಹೊರಿಸಿದ (ಪುನರು. ೪೭). [ಸಂ.]

**ಶಂಖಪಾಳ** 'ಶಂಖಪಾಲ' ನೋ.

**ಶಂಖಪುಷ್ಪಬಳ್ಳಿ** (ನಾ). ಬಿಳಿಯ, ನೀಲಿಯ ದೊಡ್ಡದೊಡ್ಡ ಹೂವುಗಳನ್ನು ಬಿಡುವ ಒಂದು ಬಗೆಯ ಬಳ್ಳಿ: ''ಕಂಠಿಸೊಪ್ಪು . . . ಶಂಖಪುಷ್ಪಬಳ್ಳಿ, ಬಿಳೀ ಸಟುಗ, ಬಿಳಿಯ ಗಿರಿಕರ್ಣಿಕೆ'' (ಸಸ್ಯನಿ. ೩೭). [ಶಂಖಪುಷ್ಪ + ಬಳ್ಳಿ]

**ಶಂಖಪುಷ್ಪಿ** (ನಾ). ಒಂದುಬಗೆಯ ಸಸ್ಯ: ''ಲಂಬಫಲಾ - ಶಂಖಪುಷ್ಪಿ'' (ಓಷಧಿ. ೧೪೨): ''ವನವಿಲಾಸಿನೀ - ಶಂಖಪುಷ್ಪಿ'' (ಓಷಧಿ. ೧೪೯) [ಸಂ. ಶಂಖಪುಷ್ಪೀ]

**ಶಂಖಪ್ರಣಾದ** (ನಾ). = ಶಂಖಧ್ವಾನ : ಒಗೆದತ್ತುತ್ತಾರರಾಗಂ ತ್ರಿಭುವನ ಭವನೋದ್ವೇದಿ ಶಂಖಪ್ರಣಾದಂ (ಕಾದಂಬ. ೪೨೪). [ಸಂ.]

**ಶಂಖಭಸ್ಮ** (ನಾ). ಶಂಖದಿಂದ ತಯಾರಿಸಿದ ರಾಸಾಯನಿಕ ಭಸ್ಮ : ಶಂಖಭಸ್ಮಃ- ಶಂಖವನ್ನು ಕೊಲುಮೆಯಲ್ಲಿ ಮೂರು ಮೂರು ಬಾರಿ ಕಾಸಿ ನಿಂಬೇಹುಳಿಯಲ್ಲಿ ಅದ್ದಿದರೆ ಭಸ್ಮವಕ್ಕು (ವಿಷ್ಣುವಿ. ೫೦). [ಸಂ. ಶಂಖಭಸ್ಮನ್]

**ಶಂಖಮುದ್ರೆ** (ನಾ). ೧. (ಜಪ ಪೂಜಾದಿಗಳಲ್ಲಿ) ಶಂಖದ ಆಕಾರದಲ್ಲಿ ಮಾಡುವ ವಿಶಿಷ್ಟರೀತಿಯ ಕರವಿನ್ಯಾಸ; ಮಂತ್ರಶಾಸ್ತ್ರಪ್ರಸಿದ್ಧವಾದ ಒಂದು ಬಗೆಯ ಹಸ್ತಮುದ್ರೆ: ಚಕ್ರಮುದ್ರ ಶಂಖಮುದ್ರೆಗಳು ವಿಷ್ಣುಪೂಜೆಗೆ ಅತ್ಯಾವಶ್ಯಕ (ರೂಢಿ). ೨. [ದ್ವೈತ] ಮಾಧ್ವರು ಇಟ್ಟುಕೊಳ್ಳುವ ಶಂಖ, ಚಕ್ರ, ಗದೆ, ಪದ್ಮ ಮತ್ತು ನಾರಾಯಣ ಎಂಬ ಐದು ವಿಧವಾದ ಮುದ್ರೆಗಳಲ್ಲಿ ಒಂದು: ಶಂಖಮುದ್ರೆಯಲ್ಲಿ ಪರಮಾತ್ಮನು ಪ್ರತಿಹಾರನಾಮದಿಂದ ಇರುತ್ತಾನೆಂಬ ನಂಬಿಕೆಯಿದೆ (ರೂಢಿ). [ಸಂ. ಶಂಖಮುದ್ರಾ]

**ಶಂಖರೇಖೆ** (ನಾ). [ಸಾಮುದ್ರಿ] ಶಂಖದ ಆಕಾರದ ಹಸ್ತರೇಖೆ : ಶಂಖರೇಖೆ ಯಿರಲು ನೂರುಕೋಟಿದ್ರವ್ಯಕ್ಕೆ ಅಧಿಪತಿಯಾಗುವನು (ಸಾಮುಲ. ೫೫-೨೧). [ಸಂ. ಶಂಖರೇಖಾ]

**ಶಂಖಲಿಪಿ** (ನಾ). ಶಂಖದಂತೆ ಕೊನೆಗೆ ಬಾಗಿರುವ ಒಂದು ಬಗೆಯ ಲಿಪಿ; ಒಗಟುಲಿಪಿ. [ಸಂ.]

**ಶಂಖವಟಕ** (ನಾ). ಒಂದುಬಗೆಯ ಔಷಧಿಯ ಗುಳಿಗೆ: ಶಂಖವಟಕಃ - ಹುಣಸೇಚೆಕ್ಕೆಯ ಬೂದಿ ೧ ಪಲ . . . ಗಂಧಕ ಗ ೧ ತೂಕ ಇವೆಲ್ಲವ ಕೂಡಿ ಅಲ್ಲದ ರಸದಲ್ಲೂ ಏಳು ಬಾರಿ ಬಿಲ್ವದೊಳು ಮರ್ದಿಸಿ . . . ಮೆಲ್ಲಲು ಶೂಲೆ, ಗುಲ್ಮ ಮುಂತಾದ ರೋಗ ಹರ (ವಿಷ್ಣುವಿ. ೫೦). [ಸಂ.]

**ಶಂಖವಾದ್ಯ** (ನಾ). ಒಂದು ಬಗೆಯ ವಾದ್ಯ: ಚಂಡೆಮದ್ದಳೆಗಳ ಶಂಖವಾದ್ಯಗಳ ಕೋಲಾಹಲದಲ್ಲಿ (ಪುರಪ್ಪಾಡು) ಪ್ರಥಮಪಾತ್ರವು ರಂಗಭೂಮಿಯನ್ನು ಪ್ರವೇಶಿಸುತ್ತದೆ (ಭಾರದ. ೫೨೭).

ಶಂಖವಾದ್ಯ ಮಾಡು : ೧. ಬೊಬ್ಬೆಹಾಕು; ಕೂಗಾಡು: ವೇದನೆಯನ್ನು ತಾಳಲಾರದೆ ಆಚಾರ್ಯರು ಶಂಖವಾದ್ಯ ಮಾಡಿದರು (ಚವರಿ. ೭೭) ; ೨. (ಅಳುವಾಗ) ಬಾಯಿಬಡಿದುಕೊಳ್ಳು : ತಾಯಿ ಬಿಟ್ಟುಹೋದುದರಿಂದ ಮಗು ಶಂಖವಾದ್ಯ ಮಾಡಿಕೊಂಡು ಅಳುತ್ತಿದೆ (ರೂಢಿ). [ಸಂ.]

**ಶಂಖಾಸು** (ನಾ). ಒಂದು ಬಗೆಯ ಗಿಡ; ತುಂಬೆ: ''ಶಂಖಾ[ಪಾಠಾಂ.ಕಾ]ಸುಮನೆ ತುಂಬೆ'' (ಮಂಗರಾ. ೪೫-೪೮). [?]

**ಶಂಖಿ** (ನಾ). ೧. ಕಡಲು; ಸಮುದ್ರ. ೨. ಶಂಖವನ್ನು ಊದುವವನು. ೩. ವಿಷ್ಣು. [ಸಂ. ಶಂಖಿನ್]

**ಶಂಖಿನಿ** (ನಾ). ೧. ಅಪ್ಸರೆ; ದೇವತೆ. ೨. ಮುತ್ತಿನ ಚಿಪ್ಪು. ೩. ದೇಹದಲ್ಲಿರುವ ಪ್ರಧಾನವಾದ ನಾಡಿಗಳಲ್ಲಿ ಒಂದು: ಶಂಕಿEಖಿತಿನಿ ನಾಡಿಯ ಸಪುರನಾಳದೊಳ ಗಣ ಸಣ್ಣ ಬಣ್ಣದ ಹೊಲಬನಣ್ಣಗಳೆತ್ತ ಬಲ್ಲರು (ಅವಚಂ. ಕ. ೪೨೯-೧೧೫೫); ಒಂದೊಂದು

ನಾಡಿಯಲ್ಲಿ ಒಂದೊಂದು ನದಿಗಳು ಕುಂದದೆವುಂಟು ಹನ್ನೆರಡರಲ್ಲಿ ಮಂದಾಕಿನೀ ಯಾಡಾನಾಡಿಯಲ್ಲಿ . . . ತಪತಿ ಶಂಖಿನೀನಾಡಿಯಲ್ಲಿ ವಾಸಯಂದು ತಿಳಿಯೊ (ವಿಜಸು. ೧೪-೩). ೪. ಒಂದು ಬಗೆಯ ಸಸ್ಯ ; ಕಡಿಯಾಲದ ಗಿಡ : "ಶಂಖಿನೀ, ಚೋರಪುಷ್ಪೀ, ಕೇಶಿನೀ – ೩ ಕಡಿಯಾಲದ ಗಿಡದ ಪೆಸರುಗಳು" (ಸಿದ್ಧಾಂತ. ೧೪೧). ೫. [ಕಾಮಶಾ] ಪದ್ಮಿನಿ, ಚಿತ್ರಿನಿ, ಹಸ್ತಿನಿ, ಶಂಖಿನಿ ಎಂಬ ನಾಲ್ಕು ಬಗೆಯ ಸ್ತ್ರೀಜಾತಿಗಳಲ್ಲಿ ಒಂದು ಮತ್ತು ಆ ಜಾತಿಗೆ ಸೇರಿದ ಹೆಣ್ಣು: ಕಾಮದೇವನ ಕಟಾಕ್ಷಕ್ಕಂಜಿ ರತಿದೇವಿಗಡಿಗಡಿಗೆ ಕೆಯ್‌ಮುಗಿದು ಕೆಲಸಾರ್ದಿರ್ಪ ಶಂಖಿನಿಯರಿಂ (ಗಿರಿಕ. ೭-೧೧ ವ); ಬಡವಲ್ಲದುಬ್ಬಲ್ಲದೂಡಲು . . . ಕೆಂಪ ನುಡುವತಿ ಚದುರಿನವಳೆ ಶಂಖಿನಿ [ಪಾಠಾಂ. ಣಿ]ಯೆನಿಪಳು (ಜನವ. ೨-೧೫).

[ಸಂ. ಶಂಖಿನೀ]

**ಶಂಖೋದರ** (ನಾ). ಶಂಖದ ಒಳಭಾಗ: ಕುಂಭಾಂಬುವಿಂದಂಬುಧಿಜಳಂ . . . ಕ್ಷುದ್ರಶಂಖೋದರದಿಂ ಬ್ರಹ್ಮಾಂಡಗರ್ಭಂ ಪಿರಿದೆನೆ (ಜಗವಿ. ೧-೧೯). [ಸಂ.]

**ಶಂಟ** 'ಶಾಟ$_2$' ನೋ.

**ಶಂಡ** (ನಾ). ೧. ನಪುಂಸಕ; ಶಿಖಂಡಿ: "ತೃತೀಯಾಪ್ರಕೃತಿಃ, ಶಂಡಃ, ಷಂಡಃ, ಕ್ಲೀಬಂ, ನಪುಂಸಕಂ – ೫ ನಪುಂಸಕನ ಪೆಸರುಗಳು" (ಸಿದ್ಧಾಂತ ೧೭೮). ೨. ಗುಂಪು; ನೆರವಿ. ೩. ಬೀಡು ; ಪಾಳೆಯ : "ನಿವೇಶ, ಶಿವಿರ, ಪಾಳಯ – ಈ ೩ ಶಂಡ" (ನಾಚಿರಾ. ೬). 'ಷಂಡ' ಪರಾ. [ಸಂ.]

**ಶಂಢ** (ನಾ). ೧. = ಶಂಡ ೧. ೨. ಸ್ವೇಚ್ಛೆಯಾಗಿ ತಿರುಗುವ ಗೂಳಿ. [ಸಂ.]

**ಶಂಪ** (ನಾ). ಮಿಂಚು; ವಿದ್ಯುತ್ತು: ಶಂಪದಂತ ವಿಜಯವಿಠಲ ಪೊಳೆವದೆ ಹಬ್ಬ (ಜಗದಾ. ೧೩೧). [ಸಂ. ಶಂಪಾ]

**ಶಂಪಾಕ** (ನಾ). ಗೊಂಚಲು ಗೊಂಚಲಾಗಿ ಹಳದಿಯ ಹೂವು ಬಿಡುವ ಒಂದು ಬಗೆಯ ಮರ; ಕಕ್ಕೆ: "ಕಕ್ಕೇಗಿಡ, ಕೊಂಡೆ, ರಾಜತರು . . . ಸ್ವರ್ಣಪುಷ್ಪಿ, ಸಂಪಾಕ, ಶಂಪಾಕ" (ಸಸ್ಯನಿ. ೩೦). [← ಹಿಂ. ಶಂಪಾಕ. / ಸಂ. ಸಂಪಾಕ]

**ಶಂಪೆ** (ನಾ). = ಶಂಪ : ರಸನಾಶಂಪಾಶತಂ ಸಂಚಳಿಸೆ ಪುದಿಯೆ ಫೂತ್ಕಾರಮಾಶಾಂತಮಂ ದಳ್ಳಿಸೆ ವಹ್ನಿಜ್ವಾಲೆ . . . ವಜ್ರಾವರ್ತಚಾಪಂ ಪಡೆದುದು ಭಯಮಂ ಕಾಳಕಾಳಾಹಿರೂಪಂ (ಪಂರಾಮಾ. ೫-೭೪). [ಸಂ. ಶಂಪಾ]

**ಶಂಪೆ$_2$, ಶಂಬೆ$_2$, ಶೆಂಬೆ, ಸಂಬೆ$_2$** (ನಾ). ೧. ಒಂದು ಬಗೆಯ ಮರ: "ಇಂಪುವತಿ ಶಂಪೆ[ಪಾಠಾಂ. ಸಂಪಿ]ಯಕ್ಕು" (ಮಂಗರಾ. ೩೫-೧೪); ಧರಣಿ(ರೆ)ಗೆ ಶಂಪೆಯಿಂ ಬಡಗ ಪುತ್ತಿರೆ ಕೇಳ್ ಮರುಳಾಗದಯ್ಯುಕೆಯ್ಯಿರಲಗುಬ್ಬೂಗಳೊಪ್ಪುರುಷದಿಂ ಫಣಿ ಭಾವಿಸ ಲೊಮ್ಮಿಗೊಮ್ಮಿಗುಬ್ಬರಿಸುವ ಮಣ್ . . . ಜಲಧಾರೆ ಮಹೇಂದ್ರನಾ(ಶಯಿಂ)ಕದಿಂ (ಜಟ್ಟಮ. ೧೧-೨೧). **ಶಂಬೆ$_2$**: ೨. ಒಂದು ಬಗೆಯ ಔಷಧೀಸಸ್ಯ: "ಶಂಬೆ[ಪಾಠಾಂ. ಸಿಂಬೆ, ಸೆಂಬೆ] ಪತ್ರವತಿಯಕ್ಕು" (ಮಂಗರಾ. ೪೫-೪೮) ; ತಮಟೇಬಳ್ಳಿ , ಶಂಬೆ (ವೈಶಿಗಿ. ೧೭-೫೭೭). **ಶೆಂಬೆ** : ೨. ಶೆಂಬೆಯೆಲ ಲಶುನ ವಚೆಗಳ್ "ಕಿಂಬಹುನಾ" ಭುಜಸಂಗತ ವಿಷದಾಡಂಬರಮಂ ಪಿಂಗಿಸುಗುಮವಂಬಿಲದೂಡನರದು ನಸ್ಯಮಂ ಮಾಡಲೊಡಂ (ಖಪುದ. ೭-೩೫). **ಸಂಬೆ$_2$** : ೧. "ಜಂಬೀರಜಂಬಲ, ಜಯಜಯ್ಯಾವರ – ಈಯೆರಡುಂ ಸಂಬೆಯ ಮರ" (ಓಷಧಿ. ೬೧). 'ಸಂಬೆ$_1$' ಪರಾ.

[?./ ತಮಿ. ಚೆಮ್ಪೈ]

**ಶಂಫಳಿ** (ನಾ). ತಲೆಹಿಡುಕಿ ; ಕುಂಟಣಿ: ಕುಂಟಣಿ ಶಂಫಳಿ[ಚುಂಡೀ]ಯೆನೆ ನೆಗಬ್ಬುಂ ಕೆಳದಿಯೊಳಾಳೀ ಸಖೀವಯಸ್ಯಾ ಶಬ್ದಂ" (ವಸ್ತುಕೋ. ೫೭-೮). 'ಶಂಭಲಿ' ಪರಾ.

[ಸಂ. ಶಂಫಲೀ]

**ಶಂಬ** (ನಾ). ೧. ಇಂದ್ರನ ಆಯುಧ; ವಜ್ರಾಯುಧ: "ಪವಿ ಶತಧಾರಂ ದಂಭೋಳಿ ವಜ್ರಂ . . . ಶಂಬವಿನಿತ್ತುಮುಂ ತದೇಕಾರ್ಥವಾಚಿ" (ವಸ್ತುಕೋ. ೭-೩೮); ಬೆಡಂಗಾಯ್ತು ಯುಕ್ತವ್ರಜಗರ್ವೋರ್ವೀಧ್ರ ಶಂಬಂ ನಯನಸುಖಲತಾಸ್ತಂಬಮಾತ್ರೇಯ ಬಿಂಬಂ (ಚಂದ್ರಪ್ರ. ೮-೩೪) ; ಕಣ್ಗೆ ಚೆಲ್ವಾದುದು ಚಂಚದ್ಯಕ್ಕದಂಬಂ ತಿಮಿರಕುಧರಶಂಬಂ ದಿನಾಧೀಶ ಬಿಂಬಂ (ರಾಜಶೇ. ೧೨-೩೪). ೨. ಹಡಗು ; ಬೈತ್ರ : "ದಂಭೋಳಿ ಹಡಗಿದೆರಡುಂ ಶಂಬಾಖ್ಯಂ" (ನಾನಾಕಂ. ೧೪೩). [ಸಂ.]

**ಶಂಬಪಾಣಿ** (ನಾ). ವಜ್ರಾಯುಧವನ್ನು ಹಿಡಿದವನು ; ಇಂದ್ರ : ಶಂಬಪಾಣಿ ವಿಧಾತೃ ವಿಷ್ಣುಕುಟುಂಬಿನೀ ಪರಿಪಾಲಿನೀ ತುಂಬುರಾಜಜಗಾನಲೋಲೆ ಮದಂಬೆ ರಕ್ಷಿಪುದೀಶ್ವರೀ (ವೃಷವಿ. ೭-೫೯). [ಸಂ.]

**ಶಂಬಮಣಿ** (ನಾ). ವಜ್ರ : ಶಂಬಮಣಿರದನ . . . ಕಾಂತಾಶಿರೋಮಣಿ ಕಾಂಭೋಜ ರಾಜನ ಪುತ್ರಿ ಕಾಂತ ಗೌರೀದೇವಿ (ಹಮ್ಮೀರ. ೨-೩೨ ವ). [ಸಂ.]

**ಶಂಬರ** (ನಾ). ೧. ಪ್ರದ್ಯುಮ್ನನಿಂದ ಹತನಾದ ಒಬ್ಬ ರಾಕ್ಷಸ: ಮಯನೋ ಶಂಬರನೋ ದಶಾಸ್ಯಸುತನೋ ಮ್ಹಾರೀಚನೋಯೆಂಬಿನಂ . . . ಶಿವಾಜಿಯ ಸೂರ್ಕ್ಕಂ ಮುಜಿದಿಕ್ಕಿಯಪ್ರತಿಮವೀರಾಭಿಖ್ಯೆಯನ್ನಾಳ್ದಿದಂ (ಎಕ.III, ಶ್ರೀರಂಗ. ೬೪-೭ ; 1722). ೨. ಒಂದು ಬಗೆಯ ಜಿಂಕೆ : "ವಾತಪ್ರಮೀ, ಶಂಬರಃ , ಕೃಷ್ಣಸಾರಃ – ಈ ೩ ಕೃಷ್ಣ ಮೃಗಂ" (ಹಲಾಯು. ೩೯-೭೭) ; ಶಂಬರ ಭಾಸ್ವತ್ಪುಂಡರೀಕಸ್ಫುರಿತ ಹರಿ ಮರುದ್ರಾಜಿತಂ ವಾರ್ಧಿಯಂ . . . ಪೋಲ್ತು ಚೆಲ್ವಾಯ್ತರಣ್ಯಂ (ರಾಜಶೇ. ೫-೨೫). ೩. ನೀರು; ಜಲ : ಶಕಾರಕ್ಕೆ–ಅಶನಿ–ಅಸನಿ . . . ಶಂಬರ – ಸಂಬರ (ಶಮದ. ೨೫೩ ಪ್ರಯೋ); ಇರುಳು ನರಿಗಳ ಪಿಡಿದು ತಂಪು ಚರಪಾದ ಶಂಬರವ ತಳಿದುತ್ತಮಾಶ್ವಗಳ ಮಾಡಿ (ರಾಘಚ. ೧೧-೪೧). ೪. ಮೋಡ; ಮುಗಿಲು. ೫. ಇಂದ್ರನಿಂದ ಹತನಾದ ಒಬ್ಬ ರಾಕ್ಷಸ. [ಸಂ.]

**ಶಂಬರಕೇಳಿ** (ನಾ). ನೀರಾಟ; ಜಲಕೇಳಿ : ಪರವೆ ಸೌಂದರರು ಶಂಬರಕೇಳಿಯಲ್ಲಿ ಶಂಕರನ ನೆನಹ ನೆಲೆಗೊಳಿಸಿ ಹರುಷದಿಂದೋರ್ವರೋರ್ವರ ಮೇಲೆ ಚೆಲ್ಲಿದರ್ ಪಿರಿದರ್ಘ್ಯವೀಶಗಿತ್ತಂತೆ (ಭೈರವೇ. ೨-೩೬). [ಸಂ. ಶಂಬರಕೇಲಿ]

**ಶಂಬರಜಾತ** (ನಾ). ನೀರಿನಲ್ಲಿ ಹುಟ್ಟಿದುದು ; ಕಮಲ: ಮನ್ಮಥಾರಿರೂಪನ ಚಿಕವೀರದೇವನ ಚಿದಂಬರಶಂಬರಜಾತಮಿತ್ರನಾ (ರಾಜಶೇ. ೧-೬೭). [ಸಂ.]

**ಶಂಬರಧಿ** (ನಾ). ಸಾಗರ ; ಸಮುದ್ರ : ಇದು ತಮಮೆಂಬ ಶಂಬರಧಿಯಂ ಸಲೆ ಪೀರ್ವ ಮಹೌರ್ವವಹ್ನಿಯೋ (ರಾಜಶೇ. ೧೧-೪೫). [ಸಂ.]

**ಶಂಬರಮಥನ** (ನಾ). ಶಂಬರನೆಂಬ ರಾಕ್ಷಸನನ್ನು ಕೊಂದವನು ; ಪ್ರದ್ಯುಮ್ನ: ಶಂಬರಮಥನ ಶಿಂಜಿನೀಲೋಲಕುಂತಳೆಯೆಂದು ಕರೆದೆ ಗಡ ನೀನು (ಜೈಮಿಭಾ. ೨೭-೨೨). [ಸಂ.]

**ಶಂಬರಸೂದನ** (ನಾ). = ಶಂಬರಮಥನ : "ಪ್ರದ್ಯುಮ್ನಃ . . . ಶಂಬರಸೂದನಃ . . ಮನೋಭವಃ – ಈ ೨೮ ಕಾಮ(ದೇವ)ನ ಪೆಸರ್" (ಹಲಾಯು. ೭-೩೩); ಆ ವ್ಯತಿರೇಕದೊಳತಿಕುಪಿತನಾಗಿ ಶಂಬರಸೂದನನಂಬೆರಸು ನಡೆತಂದು (ಜಗವಿ. ೧೫-೪ ವ).

[ಸಂ.]

**ಶಂಬರಹರ** (ನಾ). = ಶಂಬರಮಥನ: ನಿನ್ನಂ ವಿಜಿತಶಂಬರಹರಂ ಮೆಚ್ಚಿ ನಿಜದೊಳೊಂದಿಸುವೆನೆಂದೆಯ್ದೆ ನೆನೆದಿಂತು ನೆಗಳ್ದಂ (ಪದ್ಮರಾ. ೧೩-೧೫) ; ಜಯ ಶಂಬರಹರಾಹಿತ ಶತಾಂಬಕಸುತಸ್ತುತ ಚಿದಂಬರ ದಿನೇಶಾ (ರಾಜಶೇ. ೧೩-೫೪).

[ಸಂ.]

**ಶಂಬರಾರಿ** (ನಾ). ಶಂಬರನೆಂಬ ರಾಕ್ಷಸನ ವೈರಿ; ಮನ್ಮಥ: "ಮನಸಿಜಂ . . . ಶಂಬರಾರಿ ಶೂರ್ಪಕವೈರಿ ದರ್ಪಕಂ ಪುಷ್ಪಾಯುಧಂ . . . ಮಾರನೆನೆ ಮದನನಕ್ಕು" (ಮಂಗರಾ. ೭-೨೨) ; ಅಲ್ಲಿ . . . ಶಂಬರಾರಿಯ ಕರ್ಪುವಿಲ್ಲಿನ ಮೌರ್ವಿಯಾಗದಳಿಮಾಲೆಯ ಝುಂಕಾರಮಿಲ್ಲ (ಪುಷ್ಪಪು. ೯-೨೧ ವ). [ಸಂ.]

**ಶಂಬಲ** (ನಾ). ೧. ದಡ; ತೀರ. ೨. ಪ್ರಯಾಣಕಾಲದ ಬುತ್ತಿ; ಪಾಥೇಯ. ೩. ಈರ್ಷ್ಯೆ ; ಕರುಬು. [ಸಂ.]

**ಶಂಬವತಿ** (ನಾ). ಒಂದು ಬಗೆಯ ಗಿಡ: "ಶಂಬ[ಪಾಠಾಂ. ಸಂಬ; ಸಂಭ]ವತಿಯೆನೆ ಮೊಟಗು" (ಮಂಗರಾ. ೩೬-೧೮). [?]

**ಶಂಬಾಕೃತ** (ನಾ). ಎರಡುಸಲ ಉಳುಮೆಮಾಡಿದುದು: "ಶಂಬಾಕೃತಂ ದ್ವಿಸೀತ್ಯಮೆನಿಕ್ಕುಂ" (ವಸ್ತುಕೋ. ೬೩-೭೦). [ಸಂ.]

**ಶಂಬುಕ** (ನಾ). ೧. ಒಂದು ಬಗೆಯ ಚಿಕ್ಕಚಿಪ್ಪು; ಗುಳ್ಳೆಶಂಖ. ೨. ಬಸವನ ಹುಳು. ೩. ಒಬ್ಬ ರಾಕ್ಷಸನ ಹೆಸರು: ರಾಘವರಾಯನನುಜನು ದಂಡಕಾರಣ್ಯದಲಿ ಮುಜಿದನು ಶಂಬುಕಾಸುರನ (ತೊರರಾ. ೩-೩ ಸೂಚನೆ). [ಸಂ.]

**ಶಂಬೂಕ** (ನಾ). ೧. = ಶಂಬುಕ ೧: "ಶಂಬೂಕಮಂಭಶ್ಶುಕ್ತಿಪ್ರಖ್ಯಂ" (ವಸ್ತುಕೋ. ೨೩-೯). ೨. = ಶಂಬುಕ ೨ : ಶಂಬೂಕ ಮಾತೃವಾಹಿ ಶಂಖ ಶುಕ್ತಿ ಗಂಡುವಾಳ ಜಲೂಕ ಭೂನಾಗಾಪಾದೋದರ ಕ್ರಿಮ್ಯಾದಿ ದ್ವೀಂದ್ರಿಯಗಳ್ . . . ಅಪ್ಪುವು (ತತ್ತ್ವಪ್ರ. ೯೮). [ಸಂ.]

**ಶಂಬೆ$_1$** (ನಾ). ಹೊಲ, ಗದ್ದೆಗಳ ಎರಡನೆಯ ಉಳುಮೆ. [ಸಂ. ಶಂಬ]

**ಶಂಬೆ$_2$** 'ಶಂಪ್ಪೆ$_2$' ನೋ.

**ಶಂಭ** (ನಾ). ಕುದುರೆಯ ಒಂದು ರೋಗ (?): ಅನವರತಮಜ್ಜಜಲ ಅರಿಶಿನವರ್ನಂ ಕಫಸಂಜನಿತಂ ತುರಗಕ್ಕೆ ಶಂಭಮೆಂಬುದಕ್ಕುಂ (ಅಶ್ವವೈ. ೧೨-೫೩); ಎಣ್ಣೆ ಷಡುತೂಕ ಕನಕದ ಹಣ್ಣಿನ ರಸವೆಂಟುತೂಕ ಕುಪ್ಪೆಯ ರಸಮಂ ಕಣ್ಣಿನ ತೂಕಮದನಿತಂ ನುಣ್ಣನೆ ನಸ್ಯಂಗಳಿಂದ ಶಂಭಗಳಳಿಗುಂ (ಅಶ್ವವೈ. ೧೨-೬೭). 'ಸೆಂಬ' ಪರಾ. [ಸಂ. ?]

**ಶಂಭಲಿ, ಶಂಭಳಿ** (ನಾ). ತಲೆಹಿಡುಕಿ; ಕುಂಟಣಿ. **ಶಂಭಳಿ** : "ಕುಟ್ಟನೀ, ಶಂಭಳೀ - ೨ ತಲೆಹಿಡಿಕಿಯಾದ ಕುಂಟ್ಲಗಿತ್ತಿಯ ಹೆಸರುಗಳು" (ಸಿದ್ಧಾಂತಿ. ೧೭೨).

[ಸಂ. ಶಂಭಲೀ]

**ಶಂಭವ** (ನಾ). [ಜೈನ] ಇಪ್ಪತ್ತುನಾಲ್ಕುಜನ ತೀರ್ಥಂಕರರಲ್ಲಿ ಮೂರನೆಯವನು : ವೃಷಭ ಅಜಿತ ಶಂ[ಪಾಠಾಂ. ಸಂ]ಭವ . . . ವರ್ಧಮಾನರೆಂಬಿಪ್ಪತ್ತು ನಾಲ್ವರ್ ತೀರ್ಥಕರರ್ (ಬಾಪುಂಪು. ೪೦೨). [ಸಂ.]

**ಶಂಭಳಿ** 'ಶಂಭಲಿ' ನೋ.

**ಶಂಭು** (ಗು). ೧. ಸುಖವನ್ನುಂಟುಮಾಡುವ; ಸಂಪತ್ತನ್ನು ನೀಡುವ. (ನಾ). ೨. ಸುಖ ಮತ್ತು ಸಂಪತ್ತನ್ನು ಹೊಂದಿರುವವನು; ಶ್ರೀಮಂತ. ೩. ಶಿವ; ಈಶ್ವರ: "ಭವನೀಶಂ ಶಂಭು ರುದ್ರಂ ಪಶುಪತಿ ಗಿರಿಶಂ ಶೂಲಿ ಭರ್ಗಂ . . . ವೃಷಾಂಕಂ" (ವಸ್ತುಕೋ. ೩-೧೩); ಶಂಭು ಪದಾಬ್ಜಷಟ್ಚರಣನೋಹಿಲನಾಗ . . . ಒಂದು ದಿನದೊಳ್ ದಿವಮಂ ಪಡೆದಂ (ಉದ್ಭಟ. ೧೧-೩೮). ೪. ಬ್ರಹ್ಮ; ಸೃಷ್ಟಿಕರ್ತ: "ಬ್ರಹ್ಮಾ . . . ಶಂಭು, ಸ್ವಯಂಭೂ . . . ಕಮಲಾಸನಃ - ಈ ೨೦ ಬ್ರಹ್ಮನ ಪೆಸರ್" (ಹಲಾಯು. ೨-೭). ೫. ವಿಷ್ಣು: "ಸನಾತನಃ, ಅಜಿತಃ (ಜಿನಃ), ಶಂಭುಃ . . . ಪುರುಷೋತ್ತಮಃ- ಈ ೧೧ ನಾರಾಯಣನ ಪೆಸರ್" (ಹಲಾಯು. ೬-೨೬). ೬. ಅರ್ಹಂತ. ೭. ಪೂಜ್ಯ; ಹಿರಿಯ. ೮. ಯುಧಿಷ್ಠಿರ. ೯. ಕುಶಲ; ಕ್ಷೇಮ. "ಅಜ ರುದ್ರಂ ಪಿರಿಯರ್ ಧರ್ಮಜ ಕುಶಲಮಿದ್ದೆದು ಶಂಭು ಶಬ್ದ" (ನಾನಾರ್ಥಂ. ೯೮). [ಸಂ.]

**ಶಂಭುನಟನ** (ನಾ). ೧. ಪರಮೇಶ್ವರನ ನರ್ತನ; ನಟರಾಜನ ತಾಂಡವ. ೨. [ಛಂದ] ಅಕ್ಷರಛಂದಸ್ಸಿನ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಇಪ್ಪತ್ತಾರನೆಯದಾದ, ಪಾದದಲ್ಲಿ ಇಪ್ಪತ್ತಾರು ಅಕ್ಷರಗಳುಳ್ಳ ಉತ್ಕೃತಿ ಛಂದಸ್ಸಿನ ಒಂದು ವೃತ್ತ : ಜಸಂ ನಭಜಸಂ ನಭಲಗಂ ಬಗೆಗೊಳಲ್ ಸೊಗಯಿಸಿರ್ಪುದದು ಶಂಭುನಟನಂ (ಕೃಪಿಡಿ. ೬೯). [ಸಂ.]

**ಶಂಶೇರು, ಶಮಶೇರಿ** (ನಾ). ೧. ಕತ್ತಿ ; ಖಡ್ಗ : ಹುಜೂರಿಂದಾ ಇನಾಯತ ಆಗಿರುವ ಶಂಶೇರನ್ನು ಆ ಇಬ್ಬರು ಸಾಹೇಬರ ಮುಬಾರಕ್ ಹಸ್ತದಿಂದಾ ನಮ್ಮ ನಡುವಿಗೆ ಕಟ್ಟಿ ಬಹಳ ಖುಷಿ ಮಾಡಿದರು (ರಾಜೇಂದ್ರ. ೨೫೭). **ಶಮಶೇರಿ** : ೨. ಹಿಂದೆ ಚಲಾವಣೆಯಲ್ಲಿದ್ದ ಹದಿನೆಂಟು ಬಗೆಯ ವರಹಗಳಲ್ಲಿ ಒಂದು; ಸುಮಾರು ಮೂರೂವರೆ ರೂಪಾಯಿ ಬೆಲೆಯ ಒಂದು ಚಿನ್ನದ ನಾಣ್ಯ: ೧೨. ಶಮಶೇರಿ, ೧೩. ಅಶ್ವಪತಿ, ೧೪. ವೆಂಕಟಪತಿ, ಇವೆಲ್ಲ ಕಿಮ್ಮತ್ತು ರೂ. ೩, ಆ. ೮ (ಕಭಾಗ. ೨೮೦).

[← ಪಾರ. ಹಿಂ. ಶಮಶೀರ್, ಶಮಶೇರ್ ; ಮರಾ. ಸಮಶೇರ್]

**ಶಂಸನ** (ನಾ). ೧. ಹೊಗಳುವುದು; ಸ್ತುತಿಸುವುದು. ೨. ಹೇಳುವುದು; ನುಡಿಯುವುದು. ೩. ಕಂಠಪಾಠ ಒಪ್ಪಿಸುವುದು. [ಸಂ.]

**ಶಂಸಿತ** (ಗು). ೧. ಹೊಗಳಿದ. ೨. ಹೇಳಿದ. (ನಾ). ೩. ಖಚಿತವಾದ ನಿರ್ಧಾರವುಳ್ಳವನು ; ದೃಢಮನಸ್ಕ: "ಶಂಸಿ[ಪಾಠಾಂ. ಸಂಶಿ]ತನಾ ಸುನಿಶ್ಚಿತಂ ದೃಢಚಿತ್ತನೆಂದೆನಿಕ್ಕುಂ" (ಮಂಗರಾ. ೭೫-೫). [ಸಂ.]

**ಶಂಸು** (ನಾ). ನಂಬಿಕೆಯುಳ್ಳವನು; ವಿಶ್ವಾಸವುಳ್ಳವನು: ವಿಮಲಧರ್ಮದ ಶಂಸುಗಳು ಪಿಡಿದರಿಯ ಮರ್ದಿಸರು (ತಿಮ್ಮ ೮. ೧-೧೦). [ಸಂ.?]

**ಶಕ$_1$** (ನಾ). ೧. ನಿರ್ದಿಷ್ಟವಾದ ಕಾಲದಿಂದ ಆರಂಭಿಸುವ ಕಾಲಗಣನೆ; ಯುಗ; IP ಈ ಪದವು ವಿಶೇಷವಾಗಿ ಕ್ರಿಸ್ತಶಕ ಎಪ್ಪತ್ತೆಂಟರಿಂದ ಆರಂಭವಾಗುವ ಶಾಲಿವಾಹನ ಶಕಕ್ಕೆ ಅನ್ವಯವಾಗುತ್ತದೆ : 'ಶಕವರುಷ' ಪರಾ. ೨. ಪರಿವರ್ತನೆಯ ಕಾಲ; ಸಂಕ್ರಮಣಕಾಲ: ಈ ಹೊಸದೊಂದು ಶಕವನ್ನೇ ಕಾರ್ಲಮಾರ್ಕ್ಸ್‌ನು ಮೊದಲು ಮಾಡಿದನು (ಮಾವಾದ. ೧೦೪). [ಸಂ.]

**ಶಕ$_2$** (ನಾ). ೧. ಒಂದು ದೇಶದ ಹೆಸರು; IP ಸುಮಾರು ೧, ೨ ನೆಯ ಶತಮಾನದಲ್ಲಿ ಶಕರು ಆಳಿದ ಪಶ್ಚಿಮಭಾರತದ ಒಂದು ಪ್ರದೇಶ : ಶಕ ಕಾಶ್ಮೀರಾಂಧ್ರ ಕರ್ನಾಟಕ . . . ದೇಶಂಗಳ ಸಕಳವಿಶೇಯೋತ್ಕರಕ್ಕೆಲ್ಲಮುತ್ಸವಮಂ ಮಾಡುತ್ತಮಿರ್ದಂ (ಆದಿಪು.೧೦-೬೬). ೨. ಒಂದುಜನಾಂಗದ ಹೆಸರು: ಕ್ರಿಸ್ತಪೂರ್ವ ಮೊದಲ ಶತಮಾನದಲ್ಲಿ ಶಕರು, ಕುಷಾಣರು, ಹಿಂದೂ ವರ್ತಕರು ಬೌದ್ಧಧರ್ಮವನ್ನು ಪೂರ್ವತುರ್ಕಿಸ್ತಾನಕ್ಕೆ ಒಯ್ದರು (ಭಾರದ. ೩೪೮). [ಸಂ. ಶಕಾ]

**ಶಕಟ** (ನಾ). ೧. ಗಾಡಿ ; ಬಂಡಿ ; ರಥ: ಅನೇಕಶರಭರಿತಶಕಟಸಹಸ್ರಮನೊಂದು ಮಾಡಿ ಗಾಂಗೇಯನ ಪೆಱಗೆ ನಿಲಿಸಿದಾಗಳ್ (ಪಂಪಭಾ. ೧೧-೧೬ ವ); ಹೋಗಬಿಡೆ ನಿನ್ನನಿಲಜನ ತಲೆವಾಗಿಸುವೆನಿನ್ನೆನುತ ಶಕಟದ ಬಾಗಿಲಲಿ ಗಿರಿಯಂತೆ ನಿಂದನು ಸಮರಕನುವಾಗಿ (ಕುಮಾದ್ರೋ. ೧೩-೧೫); ಮಾರನೆಯ ದಿನ ನರಸಿಂಹ ಶಕಟಾರೂಢನಾಗಿ ಹೊರಟ (ನಾಡಿಗ. ೯೯). ೨. ಕೃಷ್ಣನಿಂದ ಹತನಾದ ಒಬ್ಬ ರಾಕ್ಷಸ: ತದಂಘ್ರಿತಳಂ ಮುಟ್ಟೆ ಸಿಡಿಲ್ ಪೊಡೆವ ತೆಱದೆ ಕೆಡೆದಂ ಶಕಟಂ (ಜಗವಿ. ೩-೨೮). ೩. [ಜ್ಯೋತಿ] ಐದುನಕ್ಷತ್ರಗಳನ್ನು ಒಳಗೊಂಡಿರುವ ಗಾಡಿಯ ಆಕಾರದಲ್ಲಿರುವ ರೋಹಿಣೀ ನಕ್ಷತ್ರ: ಮೂಱುದಿನಂಬರಂ ಶಕಟಮಂ ಚಂದ್ರಂ ಗೆಲಲ್ ಶೋಭನಂ (ಜಟ್ಟಿಮ. ೮-೧೫೩). ೪. ಮೂವತ್ತೆರಡು ಬಗೆಯ ನಾಭಸಯೋಗಗಳಲ್ಲಿ ಒಂದು: ಉದಯಾಸ್ತದೊಳೊಂದಿರೆ ಶಕಟಂ (ಜಾತಕ. ೧೩-೨). 'ನಾಭಸಯೋಗ' ಪರಾ. ೫. [ನಾಟ್ಯ] ಸಂಯುತಹಸ್ತಗಳಲ್ಲಿ ಒಂದು : ಅಭಿನಯ ದರ್ಪಣದಲ್ಲಿ-೧. ಅಂಜಲಿ . . . ೧೧. ಶಕಟ . . . ೨೪. ಅವಹಿತ್ಥ (ಆಭಾನ್ಯ. ೪೮).

[ಸಂ.]

**ಶಕಟಪ್ರಸಂಹಾರ** (ನಾ). ಶಕಟಾಸುರನನ್ನು ಕೊಂದವನು; ಕೃಷ್ಣ: ಶಕಟ ಪ್ರಸಂಹಾರನಾಡಿದನಾಡಿದಂ ಯಮಳಾರ್ಜುನದ್ರುಮಘಾತಿಯೆಂಬೀ ರವಂ ನೆಗಟಲ್ಕೆ . . . ಮುರಾರಿ ಕೈಪಟಿಗಾಡಿದಂ (ಜಗವಿ. ೩-೫೫). [ಸಂ.]

**ಶಕಟಭಂಗ** (ನಾ). [ಸಾಮುದ್ರಿ] ಪುತ್ರರನ್ನು ಮತ್ತು ಸುಖವನ್ನು ಸೂಚಿಸುವ ಸುಳಿ : ಭಗ ಮೇಲುಭಾಗದಲ್ಲಿ ದಕ್ಷಿಣಸುಳಿಯಿರಲು ರಾಜಪತ್ನಿ ಆಗುವಳು. ಆ ಸುಳಿಯು ಶಕಟಭಂಗವೆಂಬ ಪೆಸರುಳ್ಳದಾದರೆ ಅನೇಕವಾದ ಪುತ್ರರನ್ನು ಸುಖವನ್ನು ಕೊಡುವದು (ಸಾಮುಲ. ೧೪೨-೧೭). [ಸಂ.]

**ಶಕಟಭವ** (ನಾ). [ಜ್ಯೋತಿ] ಶಕಟಯೋಗದಲ್ಲಿ ಹುಟ್ಟಿದವನು: ಶಕಟಭವಂ ತದುದಿತಭೋಕ್ತೃ ಕುತ್ಸಿತಸ್ತ್ರೀಯುತಂ ಸರೋಗಂ (ಜಾತಕ. ೧೩-೧೩). [ಸಂ.]

**ಶಕಟರೇಖೆ** (ನಾ). [ಸಾಮುದ್ರಿ] ಬಂಡಿಯಾಕಾರದ ಹಸ್ತರೇಖೆ : ಹಸ್ತದಲ್ಲಿ ಶಕಟರೇಖೆಯಿರಲು ಧನವಂತನಾಗುವನು (ಸಾಮುಲ. ೧೦೩-೪). [ಸಂ. ಶಕಟರೇಖಾ]

**ಶಕಟರೇಫ** (ನಾ). ದ್ರಾವಿಡಭಾಷೆಯ ವರ್ಣಮಾಲೆಯ ಒಂದು ವಿಶೇಷಾಕ್ಷರ; 'ಱ' ಎಂಬ ಅಕ್ಷರ ; P ಬಂಡಿಯ ಚಕ್ರದ ಆಕಾರದಲ್ಲಿದ್ದುದರಿಂದ ಈ ಅಕ್ಷರಕ್ಕೆ ಶಕಟರೇಫವೆಂಬ ಹೆಸರಾಯಿತು; ಈಗ ಇದರ ಸ್ಥಾನದಲ್ಲಿ ಸಾಮಾನ್ಯರೇಫ(ರ)ದ ಬಳಕೆಯಿದೆ: ಹೀಗೆ 'ಱ' ಕ್ಕೆ ರಳ ಎಂದು 'ಱ' ಕ್ಕೆ ಶಕಟರೇಫ ಅಥವಾ ಬಂಡಿಯ 'ರ' ಎಂದೂ ಹೆಸರಾಯಿತು (ಕೃಪಿಡಿ. ೪). [ಸಂ.]

**ಶಕಟವ್ಯೂಹ** (ನಾ). ಒಂದು ಬಗೆಯ ಸೇನಾವ್ಯೂಹ ; ಯುದ್ಧದಲ್ಲಿ ಸೈನ್ಯವನ್ನು ಬಂಡಿಯಾಕಾರದಲ್ಲಿ ನಿಲ್ಲಿಸುವುದು: ಶಕಟವ್ಯೂಹದ ಪೆಱಗೆ . . . ಅಧಿಕಬಲರಪ್ಪ ಸೌಬಲ ದುಶ್ಶಾಸನಾದಿ ಪ್ರಧಾನ ವೀರಭಟಕೋಟಿಯ ನಡುವೆ ಸಿಂಧುರಾಜನ ನಿರಿಸಿ (ಪಂಪಭಾ. ೧೧-೧೩೨ ವ); ತೆಗೆದು ಯೋಜನವಾಱುಬಲಿ ಕಾಳಗಕೆ ಶಕಟ ವ್ಯೂಹವನು ಹೂಣಿಗರ ಬಲಿದನು ಕೌರವೇಂದ್ರಾನುಜರ ಗಡಣದಲಿ (ಕುಮಾದ್ರೋ. ೯-೧೭).

[ಸಂ.]

**ಶಕಟಾಸ್ಯ** (ನಾ). [ನಾಟ್ಯ] ಹದಿನಾರು ಬಗೆಯ ಭೌಮಚಾರಿಗಳಲ್ಲಿ ಒಂದು; ⅊ "ಎದೆಯನ್ನು ಉದ್ವಾಹಿತ ಮಾಡಿ ಕಾಲನ್ನು ಅಗ್ರತಲಸಂಚರದಿಂದ ಮುಂದಕ್ಕೆ ನೀಡುವುದು" (ಲಾಸ್ಯರಂ. ೩೧೬ ಗದ್ಯಾನುವಾದ) : ಪಿರಿದುದ್ವಾಹಿತದುರದಿಂ ಚರಣಮನೊಲ್ದಗ್ರತಲ[ದ] ಸಂಚರದಿಂ ನೀಡಿರೆ ಮುಂದಕ್ಕಾವುರಮೇ ಸ್ಥಿರಮಾಗಿರ ಚಾರಿಯಿದುವೆ ಶಕಟಾಸ್ಯಂ ಕೇಳ್ (ಲಾಸ್ಯರಂ. ೬-೨೧). [ಸಂ.]

**ಶಕನೃಪಕಾಲ** (ನಾ). ಶಾಲಿವಾಹನಶಕ ಗಣನೆಯ ಕಾಲ; ಶಕವರ್ಷ: ಸ್ವಸ್ತಿ ಶಕನೃಪಕಾಲಾತೀತಸಂವತ್ಸರಶತಂಗ[ಳ್] ೯೮೬ನೆಯ ಕ್ರೋಧಿಸಂವತ್ಸರಂ (ಎಕ. I (R), ೭೧-೧ ; 1064); ಈ ಕಾಲಗಣನೆಗೆ ಶಕನೃಪಕಾಲವೆಂಬ ಹೆಸರಿತ್ತು (ಮುಂಬಯಿ. ೫-೨೬). [ಸಂ.]

**ಶಕಪುರುಷ** (ನಾ). ೧. ಶಕೆಯನ್ನು ಪ್ರಾರಂಭಿಸಲು ಕಾರಣನಾದ ವ್ಯಕ್ತಿ: ಶಾಲಿವಾಹನನು ಒಬ್ಬ ಶಕಪುರುಷ (ರೂಢಿ). ೨. ಒಂದು ಕಾಲದ ಅತ್ಯಂತ ಸತ್ತ್ವಶಾಲಿಯಾದ ವ್ಯಕ್ತಿ ; ಯುಗಪುರುಷ: ಮಹಾತ್ಮಾಗಾಂಧಿಯವರು ಶಕಪುರುಷರೆಂದು ಪ್ರಪಂಚದಲ್ಲೇ ಖ್ಯಾತಿಯನ್ನು ಗಳಿಸಿ ಅಮರರಾದರು (ಕ್ರಿಯಾಶಿ. ೧೨). [ಸಂ.]

**ಶಕಲ, ಶಕಳ** (ನಾ). ೧. ತುಂಡು ; ಚೂರು : ವ್ಯೋಮವಿಸ್ತೀರ್ಣ ರಂಗಾಂತರವೀಧೀಚ್ಛನ್ನತಾರಾಸ್ಫಟಿಕಶಕಲಮಂ ನೂಂಕುತಂ . . . ಕುಂಕುಮಘನರಸಮಂ ಸಿಂಪಿಸುತ್ತಿರ್ದಂ (ಕಾದಂಪೂ. ೧೪೧) ; ಒಡೆಯೆಂಬುದು ಬೇಡೆಂಬುದು ಕಾಡೆಂಬುದು ಭಾಂಡ ಶಕಲ ಪಕ್ಕಣದವಜೊಳ್ ಕೂಡಿದ ನುಡಿಯಲ್ಲದೆಯಾ ನಾಡೊಳಗಿಲ್ಲ (ಹಮ್ಮೀರ. ೧-೪೮) ; ಎಷ್ಟು ಶಕಲವ ಕೂಡಿಸಿದರೆ ಇಡಿ ಒಂದಾದೀತು? (ಅರಳು. ೪೨೦-೧). ೨. ಅರ್ಧಭಾಗ : "ಖಂಡಃ, ಅರ್ಧಃ(ರ್ಧಂ), ನೇಮಃ, ಶಕಲಂ, ಭಿನ್ನಂ, ಸಾಮಿ - ಈ ೬ ಅರ್ಧಂ" (ಹಲಾಯು. ೧೧೮-೨೮). ೩. ಮಡಕೆಯ ಚೂರು; ಬೋಕಿ. ೪. ತಲೆಬುರುಡೆ ; ಕಪಾಲ: "ತಲೆಯೆಲುವಜಿಗೆ ಕರೋಟಿ[ಶಕಲಮು]ಕ್ಕೆ ಕಪಾಲಂ" (ವಸ್ತುಕೋ. ೭೨-೩೯). ೫. ತೊಗಲು; ತೊಗಟೆ. ೬. ಮೀನಿನ ಚರ್ಮವನ್ನು ರಕ್ಷಿಸುವ ಮೇಲುಪದರ ; ಶಲ್ಕ : "ವಲ್ಕಲಮುಂ ಶಕಲಮುಮವು ಶಲ್ಕಂಗಳ್" (ವಸ್ತುಕೋ. ೧೨೪-೩೯). **ಶಕಳ** : ೧. ಅನೇಕ ನೃಪಶಿರಕಪಾಳಶಕಳಜರ್ಜರಿತಮುಂ ಪರಸ್ಪರಸಮರರಭಸ[ಸಮುತ್ಸಾ]ರಿತಮುಂ (ಪಂಪಭಾ. ೧೩-೫೧ ವ); ತ್ರಿದಶೇಂದ್ರಮುಕುಟಮಂ ಪೊಡೆದ ದೈತ್ಯಗದೆಯಿಂ ಸಿಡಿಲ್ದು ಶಕಳಮೆ ತಾನಾದುದು ಕೃಷ್ಣ ನಿನ್ನ ಗದೆಯನೆ (ಜಗವಿ. ೯-೬೧). [ಸಂ.]

**ಶಕಲಿ** (ನಾ). ಮೀನು ; ಮತ್ಸ್ಯ : "ವೈಸಾರಿಣಃ . . . ಶಕಲೀ, ಶಲ್ಕೀ, ಸಹಸ್ರದಂಷ್ಟ್ರಃ, ಪಾಠೀನಃ - ಈ ೧೩ ಮೀನ್" (ಹಲಾಯು. ೧೨೮-೩೫). [ಸಂ. ಶಕಲಿನ್]

**ಶಕಲು** (ನಾ). ೧. ಉಪಾಯ; ಯುಕ್ತಿ: ಇದಕ್ಕ ಏನಾದರೂ ಶಕಲಾ ತೆಗದೀ ಏನು ನಿಂಗೀ ? (ರಕ್ತಧ್ವ. ೧೧೯). ೨. ಚಹರೆ; ಲಕ್ಷಣ: ಇವನ ಕಳಾ, ಶಕಲ ನನಗ ಗೊತ್ತ (ಬಾಬಲ. ೪೬). [← ಅರ. ಶಕ್ಲ್; ಹಿಂ. ಶಕಲ್; ಮರಾ. ಶಕಲ್, ಶಕ್ಕಲ್]

**ಶಕವರುಷ** (ನಾ). ಶಾಲಿವಾಹನ ಶಕಗಣನೆಯ ವರ್ಷ : ಕೋವಿದರು ಕೇಳ್ವೊಳ್ಳಿತೆನಲುಡುದೇವನಿಧಿನಯನೇಂದು ಸಂಖ್ಯಗಳೋವಿ ಶಕವರುಷಂಗಳಾಗಲು . . . ಬಸವಚರಿತೆ ಸಮಾಪ್ತವಾಯಿತ್ತು (ಬಸಪು. ೬೧-೯೨) ; ಸ್ವಸ್ತಿಶ್ರೀ ಶಕವರುಷ ೧೩೫೭ನೆಯ ಆನಂದಸಂವತ್ಸರದ ಚಯಿತ್ರ ಶು ೧ಲು ಮಾಡಿದ ಪಡಸಾಲೆ ಮಂಗಳಮಹಾಶ್ರೀ (ಎಕ. V (R), ಮೈಸೂರು. ೧೯೯-೧; -434). [< ಸಂ. ಶಕವರ್ಷ]

**ಶಕವರ್ಷ** (ನಾ). = ಶಕವರುಷ : ಶಕವರ್ಷಮೆಂಟುನೂಱಕ್ಕೆ ಕಡೆಯೊಳಱುವತ್ತು ಮೂಱು ಸಂದಂದು ಜಗತ್ ಪ್ರಕಟಪ್ಲವಸಂವತ್ಸರದ ಕಾರ್ತಿಕಂ ಮುದಮನೀಯೆ (ಆದಿಪು. ೧೬-೭೬) ; ಸ್ವಸ್ತಿ ಶಕವರ್ಷ ೯೮೦ತ್ತೆನೆಯ ವಿಳಂಬಿಸಂವತ್ಸರದ ಉತ್ತರಾಯಣ ಸಂಕ್ರಾಂತಿಯಂದು (ಎಕ. I (R), ೭೨-೨ ; 1059) ; ಶ್ರೀ ವಿಜಯನಾರಾಯಣಸ್ವಾಮಿಯನ್ನು . . . ಶಕವರ್ಷ ೧೦೩೯ ಹೇವಿಳಂಬಿಸಂವತ್ಸರ ಚೈತ್ರಶುದ್ಧ ಪಂಚಮಿ ವಡ್ಡವಾರ ಸುಪ್ರತಿಷ್ಠಿಸಿ (. . ಶಶಾ. ೧೨೧). [ಸಂ.]

**ಶಕಸಂವತ್ಸರ** (ನಾ). = ಶಕವರುಷ : ಶಕಸಂವತ್ಸರಮಂದು ಸಾಸಿರದ ನೂಱ್ಱವತ್ತೆರಡೆಲ್ಲಿನಂ ವಿಕೃತಾಬ್ದಂ ಬರೆ . . . ಮಾಡಿಸಿದಂ ಪ್ರತಿಷ್ಠೆಯನನಂತಶ್ರೀಪುರಾಣಕ್ಕೆ . . . ಜನ್ನಮರಸಂ (ಅನಂಪು. ೧೪-೮೪). [ಸಂ.]

**ಶಕಳ** 'ಶಕಲ' ನೋ.

**ಶಕಾಬ್ದ** (ನಾ). = ಶಕವರುಷ: ಶಾಲಿವಾಹನ ಶಕಾಬ್ದ ೧೭೭೫ನೇ ಸಂದ ವರ್ತಮಾನವಾದ ಪ್ರಮಾದೀಚನಾಮಸಂವತ್ಸರದ ಜೇಷ್ಠ ಬಹುಳ ೧೦ ಗುರುವಾರದಲ್ಲು (ಎಕ. III (R), ನಂಜನ. ೧೨-೧ ; 1853). [ಸಂ.]

**ಶಕಾರ** (ನಾ). 'ಶ' ಎಂಬ ಅಕ್ಷರ : ಅಕ್ಕರಂಗಳಕಾರಂ ಮೊದಲಾಗಿ ಳಕಾರಪರ್ಯಂತಂ ಪರಿಪೂರ್ಣಮಾಗಿರ್ಪುವು: ಶಕಾರ, ಷಕಾರ . . . ಕ್ಷಳಂಗಳೆಂಬಕ್ಕರಂಗಳಂ ಕಳೆ (ಶಮದ. ೩೩ ಟೀಕೆ). [ಸಂ.]

**ಶಕುಂತ** (ನಾ). ೧. ಹಕ್ಕಿ; ಪಕ್ಷಿ: ಬಸಂತವ ಪಿಕಂ ತಿಳಿವೊಲೊಕ್ಕಣ್ಣಿನ ಶಕುಂತ ತಿಳಿಯುವುದೆ (ಮದೇಪು. ೧-೧೬) ; ನಳನಳಿಸಿರ್ದ ನಂದನದಿ . . . ನಾನಾ ಶಕುಂತಂಗಳೇಕಕಾಲದೊಳುಲಿಯತೊಡಗಿದುವು (ಶ್ರೀರಾಮಾ. ೬೬-೩೪೭). ೨. ಶಕುನದ ಹಕ್ಕಿ; ಹಾಲಕ್ಕಿ: "ಪಿಂಗಲಿ ಶಕುಂತ ಭಾಸಮೆನಲು ಪಾಲ್ವಕ್ಕಿಯೆಂದೆನಿಕ್ಕುಂ" (ಮಂಗರಾ. ೫೨-೮). ೩. [ಜ್ಯೋತಿ] (ಚರ ಮತ್ತು ಸ್ಥಿರಗಳೆಂಬ) ಹನ್ನೊಂದು ಬಗೆಯ ಕರಣಗಳಲ್ಲಿ ಎಂಟನೆಯದು; ಒಂದು ಬಗೆಯ ಕಾಲಮಾನ: (೬). [ಸಂ.]

**ಶಕುಂತವರ** (ನಾ). ಪಕ್ಷಿಶ್ರೇಷ್ಠ ; ಗರುಡ : ಒರ್ಮೆ ಕೃಷ್ಣಂ . . . ಶಕುಂತವರನನೇಱ . . . ಗಂಧಮಾದನನಗಕ್ಕೆಯ್ದಿ (ಪದ್ಮರಾ. ೧೧-೮೩). [ಸಂ.]

**ಶಕುಂತಿ** (ನಾ). = ಶಕುಂತ ೧: ಮೃಗ ಶಕುಂತಿ ಬಿಡದೂಳುತಿರ್ಪೊಡಂ . . . ಪೇಱ್ ಮಱಯಧಿಕ ತಾನೆಂಬುದಂ (ಚಿಟ್ಟಮ. ೨-೧). [ಸಂ.]

**ಶಕುತಿ, ಸಕತಿ₁, ಸಕುತಿ** (ನಾ). ೧. ಕಸುವು ; ಬಲ : ಯುಕುತಿಯಿನ್ನಿದಕಿಲ್ಲ ಪಾರ್ಥನ ಶಕುತಿ ಘನವು (ಕುವ್ಯಾದ್ರೋ. ೮-೬೦) ; ಈ ಶಕುತಿಗು ಮಿಗಿಲಿಲ್ಲವು ಅದ ಬಣ್ಣಿಸಲಳವೆ? (ಅಪಲ್ಕ. ೧೯). ೨. ಒಂದು ಬಗೆಯ ಆಯುಧ: ಸಾಲಱಿದು ನಿಲಿಸಿದನು ನಿಶಿತ ಶರಾಳಿ ಚಾಪ ಕೃಪಾಣ ಪರಶು ತ್ರಿಶೂಲ ಮುದ್ಗರ ಚಕ್ರ ಸೆಲ್ಲಹ ಶಕುತಿ [ಪಾಠಾಂ ವಿಟ್ಟಿ] ತೋಮರವ (ಕುವ್ಯಾದ್ರೋ. ೯-೧). ೩. ಶಕ್ತಿದೇವತೆ ; ಪಾರ್ವತಿ : ಸಕಲಲೋಕಾಧೀಶ್ವರೇಶ್ವರ . . . ಕೇಳು ನೀ ಶಿವಶ [ಪಾಠಾಂ. ಸ]ಕುತಿಗಳನುತ್ತರಿಸಿದಮಳ ಬ್ರಹ್ಮವೆಂಬುದನು (ನಿಭಾಗ. ೪-೩-೪೧). **ಸಕತಿ₁**: ೧. ಈ ಶೂರ್ಪಣಖಿ ನಿನ್ನ ವಿಕಳಗೊಳಿಸಿದಳಂಗಜನ ಮೋಹಕದ ಮದ್ದಿನಲಾದಿಪುರುಷನ ಸಕತಿ ಸಾಧ್ಯವೆ ಸಾಕು ಕೊಳ್ಳದು ನಿನ್ನ ಬಗೆ (ತೊರರಾ. ೩-೭-೩೪). **ಸಕುತಿ**: ೧. ಸಕುತಿಯಾದೆ ನಾ ಪ್ರಾಣಲಿಂಗಕೆ ಮನವೊಲಿದು (ಮಹಾದೇ. ಬ. ೯೬-೨೨೩); ನುಡಿಯುವ ಸಕುತಿಯ ನೀಡೆನಗಂ ನೀಂ ನಡೆನುಡಿಯೊಡೆಯನ ಬಸವನ ಕನ್ನಡ ಜೇನಿನ ನುಡಿ ತಾಯೆ (ಸಾಸಮಾ. ೧೫೯). ೨. ಸರಳು ಕಡಿದವು ಸಕುತಿ ಸೆಲ್ಲಹ ಪರಶು ಕವಿದವು . . . ಅಖಿಳದೆಸೆಗಳಲಿ (ಕುವ್ಯಾದ್ರೋ. ೫-೮).
[< ಸಂ. ಶಕ್ತಿ]

**ಶಕುತಿಗೆಡಿಸು** (ಕ್ರಿ). ಬಲಗುಂದಿಸು ; ಶಕ್ತಿಯನ್ನು ಉಡುಗಿಸು : ಸೌಂದರನ ಬಲವನೊರ್ಬುಳಿಮಾಡಿ ಗರ್ಬಂಗೆಡಿಸಿ ಕಂಗೆಡಿಸಿ ಶಕುತಿಗೆಡಿಸಿ ಓಡಿಮೊಲಂಗೊಂಡೊಡೆಯುಚ್ಚಿಕೊಂಡು (ನಂಬಿರ ೧೮-೩೭). [ಶಕುತಿ + ಕೆಡಿಸು]

**ಶಕುನ** (ನಾ). ೧. ಪಕ್ಷಿ ; ಹಕ್ಕಿ : "ಶಕುನಿ . . . ಶಕುನಂ ಶಕುಂತಂ ಶಕುಂತಿಯೆನೆ ಪಕ್ಷಿ" (ಮಂಗರಾ. ೫೦-೧). ೨. ಶುಭಾಶುಭಗಳನ್ನು ಸೂಚಿಸುವ ನಿಮಿತ್ತ: ಪುತ್ರಲಾಭದ ಫಲವಿಶೇಷಿತ ಶಕುನ ಹಿಗ್ಗಿಸಿತವನಿಪನ ಮನವ (ತೊರರಾ. ೧-೬-೬); ಶಕುನವಾಗುತ್ತದೆ ಎಂದು ಬೆಳಗು ತನಕ ಕದ್ದರೆ ಆದೀತೇ ? (ಗಾದ). ೩. ಸುಳಿವು; ಸೂಚನೆ: ನೆಲನಂ ನಿಱುಗೆಯಂ . . . ಶಕುನಮನೊಳ್ಳಿತ್ತುಪಾಯಮಂ ಪಿಡಿವಂದೀತನೆ ಪಂದಿ ಕುರುಡು ಕುಂಟೆಂದಲಸದಱಿದಿಂತು ಬಲ್ಮೆಗೆ ಬೆರಲೆತ್ತಿ ಪಜ್ಜೆಯಂ ನೆಲೆಗಳಂ ಕಿಡಲೀಯದೆ ಸಿಲೆಯ ಮೇಲಾದೊಡಂ ಶಕುನಮಂ ನಿಱಪಂತೆ ನಿಱಸುವೆಂ ಪಂದಿಯಂ ನೀಂ ಮೆಚ್ಚಲುಂ (ಪಂಪಭಾ. ೫-೪೬); ಅಬ್ಬರವ ಕೇಳಿಯಾಲಿಸುತ ಸೊಪ್ಪಂ ಬೆದಕುತಿಬ್ಬಗಿಯ ತೃಣಮಂ ಶಕುನಮಂ ನೋಡಿ ಹೆಬ್ಬಂದಿ ವಿಪಿನದೊಳು ನಿಂದುದಾ ಶಬರಂಗೆ ಮೃತ್ಯು ತಾನೆಂಬಂದದಿ (ಹಚಕಾ. ೬-೬). ೪. ನಿಮಿತ್ತಗಳ ಮೂಲಕ ಮುಂದಿನ ಆಗುಹೋಗುಗಳನ್ನು ತಿಳಿಸುವ ಶಾಸ್ತ್ರ : ವರಸೂಪಶಾಸ್ತ್ರ ಭೃಗುಚಿತ್ರರಸಾಳಂಕಾರ ಗಣಿತಗಜಹಯವೈದ್ಯಂ ಸ್ವರಶಕುನಕಾವ್ಯನಾಟಕ ಭರದಿ ಕಳಾವಿದನೆನಿಪ್ಪುದತಿಚದುರವಿಟಂ (ಮದತಿ. ೧೦-೧೮) ; ಶಕುನಂ ಜೋಯಿಸಮಾದಿಯಾಗಿ ಪೆಱವುಂ ವಿಜ್ಞಾನವಿದ್ಯಾವಿಶೇಷ

ಕಳಾಳಾಪದೊಳಾಂ ಸಮಗ್ರಂ (ಸುಕುಮಾ. ೩-೨೧) ; ಮಗನ ಮದುವೆಗೆ ಶಕುನವ ನೋಡ ಹೋಹಾಗ ಇದಿರಲ್ಲೊಬ್ಬ ಮೂಕೊಱತಿಯ ಹಾವಾಡಿಗನ ಕಂಡು ಶಕುನ ಹೊಲ್ಲೆಂಬ ಚದುರನ ನೋಡಾ (ಬಸವ. ೧೦೫).

**ಶಕುನದ ಹಕ್ಕಿ** = ಶುಭಾಶುಭಗಳನ್ನು ಸೂಚಿಸುವ ಪಕ್ಷಿ; ಹಾಲಕ್ಕಿ: ಶುಭನುಡಿಯೇ ಶಕುನದ ಹಕ್ಕಿ ಶುಭನುಡಿಯೆ (ನಾದಲೀ. ೩-೨); ಈ ಶಕುಂತ ಇಲ್ಲವೆ ಶಕುನದ ಹಕ್ಕಿಯು ಭವಿಷ್ಯವನ್ನು ಸೂಚಿಸುವುದೆಂದು ಕರ್ನಾಟಕದಲ್ಲಿಯೂ ಬೇರೆ ಪ್ರದೇಶಗಳಲ್ಲಿಯೂ ಬಗೆಯಲಾಗಿದೆ (ಪರಪ. ೭೫); ಶಕುನದ ಹಕ್ಕಿಯ ಗೋಣು ಮುರಿದ ಹಾಗೆ (ಗಾದ). [ಸಂ.]

**ಶಕುನಜ್ಞಾನ** (ನಾ). = ಶಕುನ ೪ : ಬರೆಪಂ ಬಾಜನೆ . . . ಶಕುನಜ್ಞಾನಂ ರಥಾರೋಹಣಂ . . . ಅಖಿಲವ್ಯೂಹೋತ್ಕರಮೆಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪಪು. ೪-೫೯). [ಸಂ.]

**ಶಕುನಶಾಸ್ತ್ರ** (ನಾ). = ಶಕುನ ೪ : ಜ್ಯೋತಿಷ, ವೈದ್ಯ, ಶಕುನಶಾಸ್ತ್ರ ಮುಂತಾದವುಗಳಲ್ಲಿ ವೇಮನನಿಗಿಂತ ಈತನಿಗೆ ಹೆಚ್ಚು ಪ್ರವೇಶವಿದೆ (ಸಾಹಿಜೀ. ೧೧೧). [ಸಂ.]

**ಶಕುನಿ** (ನಾ). ೧. ಪಕ್ಷಿ; ಹಕ್ಕಿ: ಅಖಿಳಕಾದ್ರವೇಯವಿದ್ರಾವಣಂ ಸಕಲಶಕುನಿಗಣಸಮೇತಂ ಕ್ಷೀರಪಾರಾವಾರಾಭಿಮುಖನಾಗಿ (ಪಂಚತಂ. ೧೬೧-೬) ; ವನಮೃಗ ಶಕುನಿವ್ರಜ ಶಕುನಂ ಶುಭಮೆನೆ . . . ಎಯ್ದಿದಂ (ಜಗವಿ. ೫-೬೭). ೨. **ಶಕುನದ ಹಕ್ಕಿ; ಹಾಲಕ್ಕಿ:** ಶಕುನಿಗಳ್ ಕೂಡೆ ಕೂಗುತಿವೆ ದುಶ್ಶಕುನಮಂ (ಶ್ರೀರಾಮಾ. ೩೩-೧೪೫). ೩. **ಗುಂಡುಮುಳುಕನ ಹಕ್ಕಿ:** ''ಆತಾಪೀ, ಶಕುನಿಃ, ಚಿಲ್ಲಃ - ಈ ೩ ಗುಂಡುಮುಳುಕ (ನ ಹಕ್ಕಿ)೦'' (ಹಲಾಯು. ೪೨-೯೭). ೪. **ಹದ್ದು ಅಥವಾ ಗಿಡುಗ.** ೫. **ಕೌರವರ ಸೋದರಮಾವ; ಗಾಂಧಾರಿಯ ಸಹೋದರ:** ದುಶ್ಶಾಸನ ಕರ್ಣ ಶಕುನಿ ಸೈಂಧವರೆಂಬ ದುಷ್ಟಚತುಷ್ಟಯದೊಳ್ ಮಂತಣಮಿರ್ದು (ಪಂಪಭಾ. ೬-೬೭ ವ); ಶಕುನಿ ಬಂದನು ಕೌರವೇಂದ್ರನ ರಾಜಮಂದಿರಕೆ (ಕುಮ್ಮಾಸ. ೧೨-೮). ೬. = **ಶಕುಂತ** ೩. : ಶಕುನಿ ಚತುಷ್ಕ ನಾಗವ ಕಿಂಸ್ತುಘ್ನವೆಂಬ ನಾಲ್ಕು ಸ್ಥಿರಕರಣಂಗಳು (ವಿವೇಕ. ೨೬೨). 'ನಾಗವ' ಪರಾ. [ಸಂ.]

**ಶಕುನಿಕರಣ** (ನಾ). = ಶಕುಂತ ೩ : ಶಕುನಿಕರಣಕ್ಕೆ ವನಂ ೪ ಗಳಿಗೆ ಮೇಲೆ ತ್ಯಾಜ್ಯಾ (ಭಾಸ್ಕರ. ೭೧-೮). [ಸಂ.]

**ಶಕುನಿಗ** (ನಾ). ಶಕುನಗಳ ಸಹಾಯದಿಂದ ಭವಿಷ್ಯವನ್ನು ಹೇಳುವವನು; ನೈಮಿತ್ತಿಕ : ಕರಮುಖಚೇಷ್ಟೆಯನಱಿಗೆ ತಾಂ ಶಕುನಿಗನಂತಿರೆ (ಮದತಿ. ೧೦-೬೭); ಅರಸಂ . . . ಶಕುನಿಗರಂ ಕರೆಯಿಸಿ ಈ ಶಕುನಮದೇನಂ ಪೇಟ್ಟಪುದೆಂದು ಬೆಸಗೊಳ್ವುದುಂ (ಪಂಚತಂ. ೧೨೭-೧೭) ; ಆ ವೇಳೆಯೊಳೊರ್ವ ಶಕುನಿಗನೆಯ್ತಂದಾ ವಸುಪಾಲನನೆಯ್ದೆ ಭೂವಲ್ಲಭಗೆ ಮುಂದಪ್ಪ ಕಾರ್ಯಂಗಳನೋವದೆ ಪೇಳ್ದಂ (ಶ್ರೀಪಾಲ. ೪-೨೮).

[ಶಕುನ + -ಇಗ]

**ಶಕುನಿಪರಿಯಂಕ** (ನಾ). ಪಕ್ಷಿಗಳ ಕೆತ್ತನೆಯ ಅಲಂಕಾರದ ಕಾಲುಗಳನ್ನುಳ್ಳ ಮಂಚ: ಶಕುನಿಪರಿಯಾಙ್ಕಯತಿಂಕ ಮೃದುವಾಸಿಕೆಯ ಮೇಲೆ ಒಲವಿಂ ಕ್ಷಿತಿ ಮೂರು ಲೋಕದಾ ಸತಿಯರಸಿ ರತಿದೇವಿಯ ಬಲದ ಸುಜ್ಜೋಳ ಮ್ಯಾಲೆ ತಾನತಿಶಯದಿ ಸಿರಿದಲೆಯನಿಟ್ಟು . . . ಸುಖನಿದ್ರೆಯೊಳಗಿರಲು (ನವಮೋ. ೨೭-೨೫). [< ಸಂ. ಶಕುನಿಪರ್ಯಂಕ]

**ಶಕುನಿಮಂಚ** (ನಾ). = ಶಕುನಿಪರಿಯಂಕ : ಕರೆದೊಯ್ದು ಶಕುನಿಮಂಚದ ಮೇಲೆ ಪ್ರೀತಿಯಲಿ ಕುಳ್ಳಿರಿಸುತ (ಪ್ರೌಢರಾ. ೯-೧೭); ತೂಗುಮಂಚ ಶಳೆಮಂಚ ಶಕುನಿಮಂಚ ಚಪ್ಪರಮಂಚ . . . ಉಯ್ಯಾಲೆಯಿಂ ಮರೆಯೆ (ನವಮೋ. ೧೭-೪೧). [ಸಂ.]

**ಶಕುನಿವಟ್ಟಲು** (ನಾ). ಹಕ್ಕಿಗಳಿಗೆ ನೀರುಕುಡಿಸುವುದಕ್ಕಾಗಿ ಇಟ್ಟಿರುವ ಬಟ್ಟಲು : ಅಲರಂಬನ ಕಯ್ಯೊಳೆಸೆವ ಶಕುನಿವಟ್ಟಲುಲುಪಿನಂತುಱೆ ಮೋಹಿಸುವ ಕಲರವದಿಂದ ಮೆಱೆವ ಪಾರಿವಂಗಳ ಕಲಕಲವೆಸೆದುದದಱೊಳು (ಕುರಾಸಾಂ. ೮-೯).

[ಶಕುನಿ + ಬಟ್ಟಲು (< ಬಟ್ಟಲ್)]

**ಶಕುಲ, ಶಕುಳ** (ನಾ). ೧. ಒಂದುಬಗೆಯ ಸಣ್ಣಮೀನು ; ಸೀಗಡಿ: ''ಎಳವೀಾಂಗಳ್ ಶಕುಲಂಗಳ್'' (ವಸ್ತುಕೋ. ೨೩-೬). ೨. ಮೀನು; ಮತ್ಸ್ಯ: 'ಶಕುಲನೇತ್ರೆ' ಪರಾ. **ಶಕುಳ** : ೧. ''ಶ[ಪಾಠಾಂ.ಸು]ಕುಳಮತಿಚಿಕ್ಕಮೀನಕ್ಕು'' (ಮಂಗರಾ. ೧೨೦-೭). [ಸಂ.]

**ಶಕುಲನೇತ್ರೆ** (ನಾ). ಮೀನಿನಂತೆ ಕಣ್ಣುಗಳುಳ್ಳವಳು ; ಮೀನಾಕ್ಷಿ : ನಿರುಪಾಧಿಕಯೊಳನ್ನವ ನೀಡುವುದು ಶರಣರಿಗೆ ಮತವಲ್ಲಲೆ ಶಕುಲನೇತ್ರೆ (ಶಂಕದಾ. ೮-೨೦).

[ಸಂ. ಶಕುಲನೇತ್ರಾ]

**ಶಕುಲಾದನಿ** (ನಾ). ೧. ಒಂದುಬಗೆಯ ಔಷಧೀಸಸ್ಯ; ಕಟುಕರೋಹಿಣಿ: ''ಕಟುಃ, ಕಟುಂಭರಾ . . . ಶಕುಲಾದನೀ — ೯ ಕಟುಕರೋಹಿಣೀ ಹೆಸರುಗಳು'' (ಸಿದ್ಧಾಂತಿ. ೧೩೧). ೨. ಒಂದುಬಗೆಯ ಸಸ್ಯ ; ನೀರುಹಿಪ್ಪಲಿ : ''ಲಾಂಗಲೀ, ಶಾರದೀ, ತೋಯಪಿಪ್ಪಲೀ, ಶಕುಲಾದನೀ - ನೀರುಹಿಪ್ಪಲೀ ಹೆಸರುಗಳು'' (ಸಿದ್ಧಾಂತಿ. ೧೩೭). [ಸಂ. ಶಕುಲಾದನೀ]

**ಶಕುಳ** 'ಶಕುಲ' ನೋ.

**ಶಕೃತ್ತು** (ನಾ). (ವಿಶೇಷವಾಗಿ ಪ್ರಾಣಿಗಳ) ಮಲ; ಪುರೀಷ : ''ವರ್ಚಸುತ್ತರ್ಗಂ . . . ಶಕೃದ್ವಿಷ್ಠೆ ವಿಶ್ವಟಮೆನಲ್ ವರ್ಚಸ್ಕಮೆನಲು ಮಲಮಕ್ಕು'' (ಮಂಗರಾ. ೧೧೭-೫).

[ಸಂ. ಶಕೃತ್]

**ಶಕೆ** (ನಾ). = ಶಕ₁ ೧ : ಶಾಲೀವಾಹನನು ನಮ್ಮ ದೇಶದಲ್ಲಿ ಒಂದು ಶಕೆಯನ್ನು ಪ್ರಾರಂಭಿಸಿದನು (ರೂಢಿ). [ಸಂ. ಶಕ]

**ಶಕ್ಕು, ಷಕ್ಕು** (ನಾ). ಸಂದೇಹ; ಅನುಮಾನ: ''ಶಕ್ಕು - ಸಂಶಯ'' (ಜಾನಕೋ. ೪೫). **ಷಕ್ಕು:** ಯಾ ಮಾತಿನ ಷಕ್ಕು ಬಂದಲ್ಲಿ . . . ಅವನ ರೋಜಗಾರಿ ನಿಲ್ಲತಕ್ಕದ್ದಿಲ್ಲ (ಮಹಾವಾಂ. II, ೬೭). [← ಅರ. ಶಕ್; ಹಿಂ. ಶಕ್, ಶಕ್ಕ್ ; ಮರಾ. ಶಕ್]

**ಶಕ್ಕುಲಿ** (ನಾ). ಒಂದು ಬಗೆಯ ಕರಿದ ತಿಂಡಿ ; ಚಕ್ಕುಲಿ: ನಾಲಿಗೆಯ ದೋಸೆ ಕರ್ನಗಳ ಶಕ್ಕುಲಿ ಯಂತ್ರಜಾಲ ಶಾವಿಗೆ (ವೆಂಕಾರಾ. ೬-೪೬-೫೩). 'ಚಕ್ಕುಲಿ' ಪರಾ.

[< ಸಂ. ಶಷ್ಕುಲೀ, ಶಸ್ಕುಲೀ]

**ಶಕ್ಕೆ** (ನಾ). ಒಂದು ಬಗೆಯ ಔಷಧೀಸಸ್ಯ(?): ಶಮ್ಯಾಕ = ಶಕ್ಕೆ . . . ಮೂತ್ರಂ = ಗೋಮೂತ್ರವೆಂಬುವು, ವಿರೇಚನಾನಿ = ವಿರೇಚನದ್ರವ್ಯಗಳು (ವಿಪ್ರವಿ. ೫೯). [?]

**ಶಕ್ತ** (ಗು). ೧. ಕಸುವುಳ್ಳ; ಬಲಿಷ್ಠವಾದ. (ನಾ). ೨. **ಅರ್ಹನಾದವನು; ಯೋಗ್ಯನಾದವನು:** ''ಕ್ಷಮಃ, ಶಕ್ತಃ - ಈ ೨ ಅರ್ಹವಂ'' (ಹಲಾಯು. ೭೪-೨೩೨); ಶಿವನಾಗಮಯ್ಯಂ ಸದಮಳಾಚಾರಚಿತ್ತಶಕ್ತನು ಬಸವನಿಂ ಕೃಣಿಪತ್ತಿಯಂ ಕೈಕೊಳುತ (ಬಸಪು. ೫೫-೨). ೩. **ಅರ್ಹವಾದುದು; ಯೋಗ್ಯವಾದುದು:** ಭೂರಿವಿಜೃಂಭಣಕ್ಕೆ ಮುಖಮೇನವಗಾಹನಶಕ್ತಮೋ ನಿಜಾಕಾರದೊಳಿಟ್ಟುದೀ ಜಗದ ಚೆಲ್ವನಶೇಷಮುಮಂ ಕುಮಾರಿಯಾ (ಚಂದ್ರಪ್ರ. ೫-೧೯೯). ೪. **ದಕ್ಷತೆ; ಕುಶಲತೆ:** ಸೂಕ್ತಿ ಹೊಗಳಲು ಸರ್ವಮಯನಂ ಭಕ್ತಹೃನ್ಮಯವಾಗಿ ಕರುಣಿಸಿ ಶಕ್ತದಿಂ ಸರ್ವೇಶನಂ ಪ್ರಾಣೇಶನಂ ಮಾಡಿ (ಬಸಪು. ೩೯-೧೨). ೫. **ಶೂರ; ಪರಾಕ್ರಮಿ:** ಭಕ್ತನಿಗೆ ಭುಕ್ತಿ, ಶಕ್ತನಿಗೆ ಕತ್ತಿ (ಗಾದ). ೬. [ತರ್ಕಶಾ] **ಅರ್ಥವನ್ನು ತಿಳಿಸುವ ಶಕ್ತಿಯನ್ನು ಪಡೆದಿರುವ ಪದ :** ಪದಗಳಿಂದ ಪದಾರ್ಥಜ್ಞಾನವು, ಪದದ ಸಾಮರ್ಥ್ಯದಿಂದ ಬರುವುದು. ಸಾಮರ್ಥ್ಯವೇ ಶಕ್ತಿ. ಪದವು ಶಕ್ತ. ಅರ್ಥವು ಶಕ್ಯ (ಹಿಂದಸಾ. ೨೦೫). [ಸಂ.]

**ಶಕ್ತಿ** (ನಾ). ೧. ಕಸುವು; ಬಲ: ಅನುಪಮರಣನಿಸ್ತಾರಕನನೂನಶಕ್ತ್ಯನ್ವಿತಂ ವಿಚಾರಕ್ಷಮನೆಂಬ ನೆಗಳ್ತೆಯಿಂದೆ ಬಲ್ಲಾಳನೃಪಾಳಂ . . . ಒಪ್ಪಿಪ್ಪಂ (ಎಕ. V.ಅರಸೀ. ೩೮-೧೭; ಸು. -200); ಸೃಷ್ಟಿಯ ಶಕ್ತಿದೂತನೆಂ, ರಾಜೇಂದ್ರ, ಋತಚಿನ್ಮಯಾ ಲೀಲೆಗಾಂ ಕವಿಕ್ರತು ಕಣಾ (ಶ್ರೀರಾಮಾ. ೧೩-೩೫೩); ಶಕ್ತಿ ಇದ್ದವನಾದರೂ ಯುಕ್ತಿ ಇದ್ದವನ ಕೆಳಗೆ (ಗಾದ). ೨. **ಪಾರ್ವತಿ ; ಆದಿಶಕ್ತಿ :** ಶಕ್ತಿ ಲಕ್ಷ್ಮಿ ದುರ್ಗಿ ಎಂಬ ಕಿಱುಕುಳದೈವಮಂ ಪೂಜಿಸಿ (ಸರ್ವವ. ೧೭೮-೮೨೯) ; ಶಕ್ತಿಯೆಂಬುದು ಮಾಯೆ (ಹರಿಸಾ. ೭೩); ಶಿವ ಮತ್ತು ಶಕ್ತಿ ಈ ಈರ್ವರಿಂದಲೇ ಸಮಸ್ತಪ್ರಪಂಚವೂ ನಡೆಯುತ್ತಿದೆ (ಭಾರದ. ೨೨೫). ೩. **ಒಂದು ಬಗೆಯ ಆಯುಧ:** ದೇವಾರಿ ಮುರಾರಿಯಂ ಗೆಲಲ್ ನೆಱಿಯದೆ . . . ಶಕ್ತಿಯೊಳಿಟ್ಟಂ (ಜಗವಿ. ೧೨-೪೩); ಶಕ್ತಿ (ನಾಲ್ಕು ಹಸ್ತಗಳಷ್ಟು ಉದ್ದದ ಲೋಹಾಯುಧ. ಕರವೀರದ ಎಲೆಯನ್ನು ಹೋಲುತ್ತದೆ. ಹಿಡಿಯು ಆಕಳಿನ ಕೆಚ್ಚಲನ್ನು ಹೋಲುತ್ತದೆ) (ಕಶಾಅ. ೨೭೭). ೪. **ಹೆಣ್ಣು ; ಸ್ತ್ರೀ:** ತನ್ನ ಸತಿಗೆ ಗರ್ಭ ತಲೆದೋಱಿದಲ್ಲಿಯೆ ಮುಖವ ಕಾಬುದಕ್ಕೆ ಮುನ್ನವೆ ಲಿಂಗಧಾರಣಮಂ ಮಾಡಿ . . . ಶಕ್ತಿಯಾದಲ್ಲಿ ತನ್ನ ನೇಮದ ವ್ರತಿಗಳಿಗೆ ಕೊಟ್ಟಿಹೆನೆಂದು ಸುತನಾದಲ್ಲಿ ತನ್ನ ನೇಮದ

ವ್ರತಿಗಳಲ್ಲಿ ತಂದಿಹೆವೆಂದು ಗಣಸಾಕ್ಷಿಯಾಗಿ ವಿಭೂತಿಯ ಪಟ್ಟಮಂ ಕಟ್ಟಿ (ವಿಲೀಕ್ಷ. ೭೧). ೫. ಕತ್ತಿ; ಖಡ್ಗ. ೬. ಕಸುವುಳ್ಳವನು; ಬಲಾಢ್ಯ: ''ಗಿರಿಸುತೆ ಖಡ್ಗ ಕಾಮಿನಿ ಬಲಾನ್ವಿತರೆಂಬಿವು ಶಕ್ತಿ ಶಬ್ದಂ'' (ನಾನಾರ. ೬೧). ೭. ಒಬ್ಬ ಋಷಿ ; ವಸಿಷ್ಠರ ಮಗ: ''ಶಕ್ತಿಃ = ದೇವತೆಯುಂ, ಬಲ್ಮೆಯುಂ, ವಸಿಷ್ಠನ ಮಗನುಂ'' (ಕಾಶಕ್ಕ. ೨೦೪). ೮. [ಕಾವ್ಯಮೀ] ಕವಿತಾರಚನೆಗೆ ಮೂಲಕಾರಣವಾದ ಪ್ರತಿಭೆ: ಪ್ರತಿಭಾನಂ ಕಾವ್ಯವಿದ್ಯಾಪ್ರಚಯಪರಿಚಯಂ ವೃದ್ಧಸೇವಾನುರಾಗಂ ಸತತಾಭ್ಯಾಸ ಪ್ರಯತ್ನಂ ಕವಿತೆಗೆ ನಿಯತಂ ಕಾರಣಂ ಪೇೞ್ವುದಂತಾ ಪ್ರತಿಭಾನಂ ಶಕ್ತಿ (ಕಾವ್ಯಾವ. ೪೨೪); ಕಾವ್ಯ ನಾಟಕದಲ್ಲಿ ಮುಖ್ಯವಾದ ಅರ್ಥವನ್ನು ಕೊಡುವ ಅಭಿಧಾವೃತ್ತಿ ಅಥವಾ 'ಶಕ್ತಿ' ಇರುವಂತ 'ಭಾವಕತ್ವ', 'ಭೋಜಕತ್ವ' ಎಂಬ ಮತ್ತೆರಡು ಶಕ್ತಿಗಳಿವೆ (ಕೃಪಿಡಿ. ೧೯೩). ೯. [ಜ್ಯೋತಿ] ಮೂವತ್ತೆರಡು ಬಗೆಯ ನಾಭಸಯೋಗಗಳಲ್ಲಿ ಒಂದು ; P ಇದರಲ್ಲಿ ಎಲ್ಲ ಗ್ರಹಗಳೂ ೭, ೮, ೯ ಮತ್ತು ೧೦ನೆಯ ಸ್ಥಾನಗಳಲ್ಲಿದ್ದು ಜಾತಕನು ಧನಹೀನನಾಗಿರುತ್ತಾನೆ: ಸಮುಜ್ಝಿತ ಧನರಾಶಿ ಶಕ್ತಿಜನಿತಂ (ಜಾತತಿ. ೧೩-೧೮). 'ನಾಭಸಯೋಗ' ಪರಾ. ೧೦. [ತರ್ಕಶಾ] ಪದಕ್ಕೂ ಅರ್ಥಕ್ಕೂ ಇರುವ ಸಂಬಂಧ: ಅರ್ಥವನ್ನು ಸ್ಮರಣಕ್ಕೆ ತರಲು ಅನುಕೂಲವಾದ ಪದಾರ್ಥದ ಸಂಬಂಧಕ್ಕೆ ಶಕ್ತಿ ಎಂದು ಹೆಸರು (ಭಾತತ್ತ್ವ. ೪೪೬). ೧೧. [ಶೈವ] ಮೂವತ್ತಾರು ತತ್ತ್ವಗಳಲ್ಲಿ ಒಂದು: ವಿಸ್ತಾರವಾಗಿ ಮೂವತ್ತಾರು ತತ್ತ್ವಗಳು . . . ಶುದ್ಧಸೃಷ್ಟಿಯಲ್ಲಿ ಬಿಂದು ಮಹಾಮಾಯೆಯೆಂಬ ಶಿವತತ್ತ್ವ, ಶಕ್ತಿತತ್ತ್ವ . . . ವಿದ್ಯಾತತ್ತ್ವಗಳಾಗಿ ಪರಿಣಮಿಸಿ ಪಂಚತತ್ತ್ವಗಳಾಗುವುವು (ಹಿಂದಸಾ. ೨೯೬). ೧೨. ಐವತ್ತುನಾಲ್ಕು ಮಂತ್ರ ಸಾಧನಗಳಲ್ಲಿ ಒಂದು: ಷಡಾಮ್ನಾಯಮೂಲ . . . ಶಕ್ತಿಕೀಲಕ ಅಕ್ಷರದೇವತೆ ಅಧಿದೇವತೆ. . . ಆತ್ಮೈಕ್ಯಗಳೆಂಬ ಪಂಚಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (ವಿವೇಕ. ೮೦).

ಶಕ್ತಿಮೀರು = ಸಂಪೂರ್ಣಸಾಮರ್ಥ್ಯವನ್ನು ಉಪಯೋಗಿಸು : ಸಾಧ್ಯವಾದುದನ್ನು ಶಕ್ತಿಮೀರಿ ಮಾಡುವೆ (ಕೊತಕಾ. ೪೩). [ಸಂ.]

**ಶಕ್ತಿಗಿಡಿಸು** (ಕ್ರಿ). ಬಲವನ್ನು ಕುಂದಿಸು; ನಿತ್ರಾಣಗೊಳಿಸು: ಮುಕ್ತಿಪದದ ಹೊಲಬಂ ಮುಗುಳ್ಗಣ್ಣೆಯನ ಶಕ್ತಿಗಿಡಿಪ ಪರಿವಿಡಿಯಂ . . . ವ್ಯಕ್ತೀಕರಿಸುವುಪಾಧ್ಯಾಯರನಾಂ ಭಕ್ತಿಯಿನಭಿವಂದಿಸುವೆಂ (ಜಯಕಾ. ೧-೪).
[ಶಕ್ತಿ + ಕಿಡಿಸು (< ಕೆಡಿಸು )]

**ಶಕ್ತಿಗುಂದು** (ಕ್ರಿ). ನಿತ್ರಾಣವಾಗು ; ಶಕ್ತಿಹೀನವಾಗು : ಶರೀರದಲ್ಲಿ ರಕ್ತದ ಅಂಶ ಕಡಿಮೆಯಾದಾಗ ಶಕ್ತಿಗುಂದುವುದು (ಅಮುಸಾ. ೫೯)..
[ಶಕ್ತಿ + ಕುಂದು]

**ಶಕ್ತಿಗೆಡು** (ಕ್ರಿ). = ಶಕ್ತಿಗುಂದು: ಚಪ್ಪರಿಸಿ ಬಂದು ನಿನ್ನಂ ಮುಪ್ಪಡಿಸಿದುದು . . . ಬಸನವಮನಿನ್ನಪ್ಪಡಮಿಲ್ಲೆನಿಸಿ ಶಕ್ತಿಗೆಟ್ಟಂದುಟಿವೋ (ಅಜಿಪು. ೨-೯೭); ಬಡಿವೆತ್ತ[ಬಡವ]ನಂತೆ ಶಕ್ತಿಗೆಟ್ಟು (ಧರ್ಮಾಮೃ. ೧-೭೬); ನಿರತಮಂತ್ರದ ಶಕ್ತಿಗೆಟ್ಟಂತರದೊಳಾಡುವ ದೋವತಿಗಳೀ ಧರೆಗಿಳಿಯಲೊಡನಾತನಂಜುತ್ತಾಗಳೆಯಿತಂದು (ಬಸವಪು. ೫೭-೩). [ಶಕ್ತಿ + ಕೆಡು]

**ಶಕ್ತಿತ್ರಯ** (ನಾ). ೧. [ರಾಜನೀ] ಅರಸನಿಗಿರಬೇಕಾದ ಪ್ರಭು, ಮಂತ್ರ ಮತ್ತು ಉತ್ಸಾಹಗಳೆಂಬ ಮೂರುಬಗೆಯ ಬಲಗಳು: ಆಕೆಯ ವಳಿತ್ರಯಂಗಳುಂ ಪಗವರ ಶಕ್ತಿತ್ರಯಂಗಳುಮೊಡನೊಡನೆ ಕೆಟ್ಟುವು (ಪಂಪಭಾ. ೧-೧೪೧ ವ) ; ನಯಮೆಸಯೆ ನೆಗಟ್ದ ಶಕ್ತಿತ್ರಯದೊಳ್. . . ಪ್ರಭುಶಕ್ತಿ ಎಸೆವವೋಲೆಸೆದಂ . . . ಕಾಳಿದಾಸ ದಣ್ಣಾಧೀಶಂ (ಕ೯ಇ. ೨-೩-೭೮; -058). ೨. ಕ್ರಿಯಾಶಕ್ತಿ, ಜ್ಞಾನಶಕ್ತಿ ಮತ್ತು ಇಚ್ಛಾಶಕ್ತಿಗಳೆಂಬ ಮೂರುಶಕ್ತಿಗಳು : ಮನದಿ ಮೂರ್ತಿತ್ರಯವು ಕೇಳ್ಕೆ ಮನದಿ ಶಕ್ತಿತ್ರಯ ಜಗತ್ರಯ . . . ಮನದಿ ಸರ್ವಾರೂಪು ವ್ಯವಹರ (ಜ್ಞಾನಸಿಂ. ೧೦-೫೫). [ಸಂ.]

**ಶಕ್ತಿದಾಯಕ** (ಗು). ಬಲವನ್ನುಂಟುಮಾಡುವ; ಬಲವನ್ನು ನೀಡುವ: ಈ ಶಕ್ತಿದಾಯಕ ಆಹಾರಾಂಶಗಳೆಲ್ಲವೂ ಉರಿಯಬಲ್ಲ ಸಾವಯವಸಂಯುಕ್ತ ಪದಾರ್ಥಗಳು (ಗೃಹವಿ. ೨). [ಸಂ.]

**ಶಕ್ತಿಧರ** (ನಾ). ೧. ಶಕ್ತ್ಯಾಯುಧವನ್ನು ಧರಿಸಿದವನು. ೨. ಷಣ್ಮುಖ; ಕುಮಾರಸ್ವಾಮಿ: ಹರಿಯಿಂದಂ ಹರನಿಂದೆ ಶಕ್ತಿಧರನಿಂ ನೀರಿಂದೆ ಪಾಳಾದ ದುಷ್ಕರ ಲಂಕಾಪುರಮಂ . . . ಸುಸ್ಥಿರ ಹಮ್ಮಿರಪುರಕ್ಕೆ ತೋಡಿಸಲೊಡಂ ಮೂಢೋಕ್ತಿ ಮೂಲೋಕದೊಳ್ (ಹಮ್ಮಿರ. ೧-೬೪). [ಸಂ.]

**ಶಕ್ತಿಪರಿಷೆ** (ನಾ). [ಶೈವ] ಕಾಳಾಮುಖ ಶೈವಗುರುಗಳ ಸಂಘ: ಸೋಮಗ್ರಹಣದೊಳ್ ಕಾಲಂ ಕರ್ಚ್ಚಿ ಧಾರೆಯೆಱುದು ಕೊಟ್ಟರ್ ಶಕ್ತಿಪರಿಷೆಯ ಸ್ಥಾನಂ ನನ್ನಿಯ ಬಟುಕ್ಕ ದೇತಾಭೂಗಡೆ ಸಲ್ವ ಮಣ್ಣನೂ . . . ಬಳಿವತ್ತಮುಂ ಸಲ್ವದು (ಎಕ. III (R). ನಂಜನ. ೨೯೪-೮ ; 977) ; ಮೂವರ ಕೋಣೆಯ ಸನ್ತಾನದ ಶಕ್ತಿಪರಿಷೆಯೊಳ್ಗೆಳ್ಗೆವಡೆದು ಶಿಷ್ಯಜಾತಕ ವರ್ಷಾ ಕಾಳಾಮುಖರೆನಿಸಿದ ಕಾಳಾಮುಖರೊಳ್ (ಎಕ. VII. ಶಿಕಾರಿ. ೯೯-೪೯ ; 1113). [ಶಕ್ತಿ + ಪರಿಷೆ (< ಪರಿಸೆ )]

**ಶಕ್ತಿಪಾಣಿ** (ನಾ). ೧. = ಶಕ್ತಿಧರ ೧. ೨. = ಶಕ್ತಿಧರ ೨ : ''ಗೌರೀಪುತ್ರಃ, ಷಣ್ಮುಖಃ, ಶಕ್ತಿಪಾಣಿಃ . . . ಶರಜನ್ಮಾ(ಚ ಕಥ್ಯತೇ) - ಈ ೨೦ ಕಾರ್ತಿಕೇಯನ ಪೆಸರ್'' (ಹಲಾಯು. ೫-೨೦). [ಸಂ.]

**ಶಕ್ತಿಯೋಗ** (ನಾ). [ಜ್ಯೋತಿ] ಮೂವತ್ತೆರಡು ಬಗೆಯ ನಾಭಸಯೋಗಗಳಲ್ಲಿ ಒಂದು; ಜನನಕಾಲದಲ್ಲಿ ಏಳನೆಯ ಸ್ಥಾನದಿಂದ ಹತ್ತನೆಯ ಸ್ಥಾನ ಪೂರ್ತಿ (ನಾಲ್ಕು ಸ್ಥಾನಗಳೊಳಗೆ) ಎಲ್ಲ ಗ್ರಹಗಳೂ ಇರುವಿಕೆ : ಶಕ್ತಿಯೋಗದಲ್ಲಿ ಹುಟ್ಟಿದವನು ಹಣವಿಲ್ಲದವನಾಗುತ್ತಾನೆ (ಜಾತತಿ. ೧೩-೧೭ ಅಡಿಟ).
[ಸಂ.]

**ಶಕ್ತಿವಂತ** (ನಾ). ಬಲಶಾಲಿ ; ಶಕ್ತಿಶಾಲಿ: ಆತನು ಘನತಪೋದ್ಯುಕ್ತ ಭಾವಫಲ ಪ್ರಭಾವದ ಶಕ್ತಿವಂತನದಲ್ಲದೇ ಆರ್ಯದು ನೋಡಿದಡೆ ಭಕ್ತರೊಳು ಸಲೆ ಸಂದುವಡೆದನು (ಬಸವಪು. ೫೩-೨೦). [< ಸಂ. ಶಕ್ತಿಮತ್]

**ಶಕ್ತಿವಿಶಿಷ್ಟಾದ್ವೈತ** (ನಾ). [ವೀಶೈ] ಜೀವಾತ್ಮ ಪರಮಾತ್ಮರ ಸಾಮರಸ್ಯವನ್ನು ಪ್ರತಿಪಾದಿಸುವ ಸಿದ್ಧಾಂತ; ''ಪರಾಶಕ್ತಿ ವಿಶಿಷ್ಟ ಪರಮಾತ್ಮನಲ್ಲಿ ಮಾಯಾಶಕ್ತಿ ವಿಶಿಷ್ಟಜೀವನು ಸಮರಸವಾಗಿ ಬೆರೆಯುವುದಕ್ಕೆ ಶಕ್ತಿ ವಿಶಿಷ್ಟಾದ್ವೈತವೆಂದು ಹೆಸರು'' (ಶಕ್ತಿವಿ. ೨೦): ಜೀವಾತ್ಮ ಮತ್ತು ಪರಮಾತ್ಮ(ಅಂಗ ಲಿಂಗ)ರು ಒಂದು ಗೂಡುವುದೇ (ಸಾಮರಸ್ಯವು) ಶಕ್ತಿವಿಶಿಷ್ಟಾದ್ವೈತ ಪದದ ವಿಶಿಷ್ಟಾರ್ಥವು (ಭಾರದ. ೨೪೫). [ಸಂ.]

**ಶಕ್ತಿಶಾಲಿ** (ನಾ). = ಶಕ್ತಿವಂತ: ಅವರೂ ಸಹ ವೈದುಂಬರ ಜೊತೆಗೂಡಿ ಸಾಕಷ್ಟು ಶಕ್ತಿಶಾಲಿಗಳಾಗಿಯೇ ಇದ್ದರು (ನೊಳಂಬ. ೩೧). [ಸಂ. ಶಕ್ತಿಶಾಲಿನ್]

**ಶಕ್ತಿಹೀನ** (ನಾ). ಬಲಹೀನ ವ್ಯಕ್ತಿ; ಕಸುವು ಕಳೆದುಕೊಂಡ ವ್ಯಕ್ತಿ: ಹಾಸಿಗೆಯ ಮೇಲೆ ಶಕ್ತಿಹೀನಳಾಗಿ ಮಲಗಿದ್ದ ಪ್ರಭೆಯನ್ನು ಶೇಖರ ದಿಟ್ಟಿಸಿ ನೋಡಿದಾಗ ಒಂದು ನಿಮಿಷ ಅವನ ಮೈ ಜುಂ ಎಂದಿತು (ಮೂಪ್ರೇಮ. ೪೬). [ಸಂ.]

**ಶಕ್ತ್ಯನುರೂಪ** (ಗು). ಶಕ್ತಿಗೆ ಹೊಂದುವ; ಯಥಾಶಕ್ತಿಯಾದ: ಅಭಯದಾನಾದಿಗಳೊಳ್ ಶಕ್ತ್ಯನುರೂಪ ತ್ಯಾಗಮುಮಗೂಢ ಸಾಮರ್ಥ್ಯಶರೀರಕ್ಲೇಶ ಲಕ್ಷಣಮುಮಪ್ಪ ಶಕ್ತ್ಯನುರೂಪತಪಮುಂ (ಚಂದ್ರಪ್ರ. ೧೧-೨೨ ವ). [ಸಂ.]

**ಶಕ್ತ್ಯನುಸಾರ** (ಗು). ಶಕ್ತಿಗೆ ಸಾಧ್ಯವಾಗುವ ಮಟ್ಟಿನ: ತನ್ನ ಶಕ್ತ್ಯನುಸಾರ, ತನ್ನ ವ್ಯವಸಾಯಾನುಸಾರ ವಿಸ್ತೃತವಾದ ಮಾನವಹೃದಯವು . . . ಹೊಸದೊಂದು ಅನುಭವದ ಸ್ವೀಕಾರಕ್ಕಾಗಿ ಎದುರು ನೋಡುತ್ತಿರುತ್ತದೆ (ಚದೇವ. ೨೦). [ಸಂ.]

**ಶಕ್ತ್ಯಾನುಸಾರ** (ಗು). = ಶಕ್ತ್ಯನುಸಾರ: ನಾವು ಧನಿಯರ ಲಗ್ನಕ್ಕೆ ಹೋಗಿ ನಮ್ಮ ಶಕ್ತ್ಯಾನುಸಾರ ಮರ್ಯಾದಿ ಮುಟ್ಟಿಸಿ . . . ಕರಕೊಂಡು ಬಂದು ಈ ಊರಾಗ ಅವರ್ನ ಇಟಗೋತೀವು (ಮನಬೆ. ೩೯).

ಶಕ್ತ್ಯಾನುಸಾರವಾಗಿ = ಸಾಧ್ಯವಾದಷ್ಟು ಮಟ್ಟಿಗೆ; ಶಕ್ತಿಗೆ ತಕ್ಕಂತೆ: ಶ್ರೇಯಸ್ಸಿನ ವಿಷಯದಲ್ಲಿ ನನ್ನ ಶಕ್ತ್ಯಾನುಸಾರವಾಗಿ ಪ್ರಯತ್ನಿಸುವೆನು (ಶಾಕುಂತ. ೧೧೫-೨೪).
[< ಸಂ. ಶಕ್ತ್ಯನುಸಾರ]

**ಶಕ್ತ್ಯಾಯುಧ** (ನಾ). ಒಂದು ಬಗೆಯ ಆಯುಧ: ಯುಧಿಷ್ಠಿರನು ಶಕ್ತ್ಯಾಯುಧವನ್ನು ಅಭಿಮಂತ್ರಿಸಿ ಶಲ್ಯನ ಮೇಲೆ ಪ್ರಯೋಗಿಸಲು (ವಚಭಾ. ೩೦೨). [ಸಂ.]

**ಶಕ್ಯ** (ಗು). ೧. ಸಾಧ್ಯವಾದ; ಮಾಡಬಹುದಾದ. (ನಾ). ೨. ಸಾಧ್ಯವಾದುದು; ಮಾಡಬಹುದಾದುದು: ಶಕ್ಯಂ ತಾನಲ್ತಣಂ ಬಣ್ಣಿಪ ಫಣಿಪತಿ ವಾಕ್ಯಕ್ಕಮೆಂಬಂತು ಶೋಭಾಧಿಕ್ಯಂಬೆತ್ತತ್ತು . . . ತ್ರೈಲೋಕಾಧೀಶಾಭಿಷೇಕೋಚಿತಮಮರಕೃತಂ ಕಾಯಮಾನಂ ನವೀನಂ (ಚಂದ್ರಪ್ರ. ೧೨-೧೦೭); ತದ್ಗುರುಮಹಿಮೆಯುಂ ವಿವರಿಸಲು ಶಕ್ಯವೆ ಪುರಹರಂಗಾದಡೇವೊಗಳ್ವೆ (ಬಸವು. ೬೯-೨೦) ; ಶಕ್ಯವಲ್ಲದ ಕಾರ್ಯ ಸಕ್ಕರೆಯಲ್ಲ (ಗಾದೆ). ೩. ಒಂದು ನಿರ್ದಿಷ್ಟವಾದ ಶಬ್ದದಿಂದ ಅಭಿವ್ಯಕ್ತಗೊಂಡ ಅರ್ಥ; ಅಭಿಧೇಯ : ಪದಗಳಿಂದ ಪದಾರ್ಥಜ್ಞಾನವು, ಪದದ ಸಾಮರ್ಥ್ಯದಿಂದ ಬರುವುದು. ಸಾಮರ್ಥ್ಯವೇ ಶಕ್ತಿ. ಪದವು ಶಕ್ತ. ಅರ್ಥವು ಶಕ್ಯ (ಹಿಂದಸಾ. ೨೦೫). [ಸಂ.]

**ಶಕ್ಯತೆ** (ನಾ). ೧. ಸಾಧ್ಯವಾಗುವಿಕೆ; ಸಾಧ್ಯತೆ. ೨. ಅರ್ಹತೆ : ಈ ಸಂಬಂಧಕ್ಕೆ ಒಪ್ಪುವ ಶಕ್ಯತೆ, ಕಲ್ಪನೆಗೆ ಅತಿ ದೂರವಾಗಿತ್ತು (ದೀಪಹ. ೧೮, ೨೯); ಕಾವ್ಯಲಕ್ಷಣಗ್ರಂಥಕ್ಕೆ ಸಂಸ್ಕೃತದಲ್ಲಿ ನಾಮಧೇಯಗಳಾಗುವ ಶಕ್ಯತೆಯುಂಟು (ಧ್ವನ್ಯಾಲೋ. ೨೫ ಪೀಠಿಕೆ). [ಸಂ. ಶಕ್ಯತಾ]

**ಶಕ್ಯಾನುಷ್ಠಾನ** (ನಾ). ಅರ್ಥವನ್ನು ತಿಳಿಯಲು ಮಾಡುವ ಪ್ರಯತ್ನ: ಜನಮಂಗೀಕರಿಪುದು ನೆಟ್ಟನೆ ಸಂಬಂಧಾಭಿಧೇಯ ಶಕ್ಯಾನುಷ್ಠಾನ ನಿಜೇಷ್ಟಸಿದ್ಧಿಗಳ್ ನೆಲಸಿ ನಿಂದ ಕಾರಣದೆ ಶಬ್ದಮಣಿದರ್ಪಣಮಂ (ಶಮದ. ಪೀಠಿಕೆ ೭) ; ಸಂಬಂಧವೆಂದು ಪೂರ್ದುಗೆ ; ಅಭಿಧೇಯಮೆಂದರ್ಥಂ ; ಶಕ್ಯಾನುಷ್ಠಾನಮೆಂದಾ ಪದಾರ್ಥಮಂ ಸಾಧಿಸಲ್ತಕ್ಕುದ್ಯೋಗಂ (ಶಮದ. ಪೀಠಿಕೆ ೭ ವೃತ್ತಿ). [ಸಂ.]

**ಶಕ್ರ** (ನಾ). ೧. ದೇವತೆಗಳ ಅಧಿಪತಿ; ಇಂದ್ರ: ತ್ರಿಶಂಕುನರಾಧೀಶನ ಲಕ್ಷ್ಮಿ ಶಕ್ರನ ಮಹಾಹುಂಕಾರದಿಂ ಬಿರ್ದಳೆಂಬಿನೆಗಂ (ಕಾದಂಪೂ. ೨೫) ; ಅಧಿಕ ವಿಭವದೊಳ್ ಶಕ್ರನೆಂತಂತೆ . . . ಎಸೆದನಭಿನವಂ ಭಾರತೀಭಾಗಧೇಯಂ (ರಾಜಶೇ. ೪-೧೨೪). ೨. ಅರ್ಜುನ ವೃಕ್ಷ ; ಮತ್ತಿ ಮರ. ೩. ಕೊಡಸಿಗೆಮರ; ಕುಟಜವೃಕ್ಷ. ೪. ಬಿಳಿದು; ಶುಭ್ರವಾದುದು. ೫. ಕೃಷ್ಣ. ೬. ಕಾಲ ; ಯಮ. ೭. ಕಳ್ಳಿಯ ಗಿಡ ; ಎಲೆಗಳ್ಳಿ : "ಸಿತದೊಳಿಂದ್ರನೊಳು ಗಿರಿಮಲ್ಲಿಗೆ ಯೊಳೆಲೆಗಳ್ಳಿಯೊಳು ಶಕ್ರವಕ್ಕು" (ಮಂಗರಾ. ೧೫೧-೫೩); "ಹರಿ ಶಕ್ರಂ ವಜ್ರ ಕಾಲಂ ವಿಚಕಿಲ ಕುಟಜಂ ಶುಭ್ರಮುಂ ಶಕ್ರನಾಮಂ" (ನಾನಾರ. ೮೧). [ಸಂ.]

**ಶಕ್ರಗೋಪ** (ನಾ). ಮಳೆಗಾಲದಲ್ಲಿ ಕಾಣಿಸಿಕೊಳ್ಳುವ ಒಂದುಬಗೆಯ ಹುಳು; ಮಿಂಚುಹುಳು ; ಇಂದ್ರಗೋಪ : ಶಕ್ರಗೋಪತತಿ ಸೂಸುವ ರಕ್ತಕಣಂಗಳಾಗೆ ಕಂಗೊಳಿಸೆ ಖರಾಂಶು . . . ಫಾಲನೇತ್ರನಿರ್ದಳಿತ ಜಲಂದರೋಗ್ರಶಿರಮೆಂಬವೊಲಾದುದು ನೀಲನೀರದಂ (ವೃಷವಿ. ೧೪-೧೬). [ಸಂ.]

**ಶಕ್ರಚಾಪ** (ನಾ). ಕಾಮನಬಿಲ್ಲು ; ಇಂದ್ರಚಾಪ : ದಶದಿಙ್ಮಂಡಲಮಂ ಪಳಂಚಲೆಯೆ ಭೇರೀನಿಸ್ವನಂ . . . ಶಕ್ರಚಾಪಶತಂಗಳ್ ನೆಲೆವೆರ್ಚೆ ಲಕ್ಷ್ಮಣಸಮೇತಂ ರಾಮದೇವಂ . . . ಪುರಮಂ ಪೊಕ್ಕಂ (ಪಂರಾಮಾ. ೧೭-೪೨); ಬಸವನ ನುಡಿ ಶಿಲಾಶಾಸನವು ತಪ್ಪದ ನುಡಿಗಳಲ್ಲದೆ ಮಿಕ್ಕಿನಂತೆ ಕೆಡುತ್ತ ಹುಟ್ಟುತಿಹ . . . ಶಕ್ರಚಾಪವೆ ಸೂಡರೆ ಬೀದಿಯ ಗಾಳಿಯೇ (ಬಸವು. ೭೭-೨೫). [ಸಂ.]

**ಶಕ್ರತನುಜ** (ನಾ). ೧. ಇಂದ್ರನ ಮಗ. ೨. ಜಯಂತ. ೩. ವಾಲಿ. ೪. ಅರ್ಜುನ: ಶಕ್ರತನುಜನ ಕರೆದು ಮೊದಲಿಸಿದನು ತುಳುಕಿದನಂಬಿನಂಬುಧಿಯ (ಕುವ್ಯಾದ್ರೋ. ೧೦-೪೮). [ಸಂ.]

**ಶಕ್ರಧನು** (ನಾ). = ಶಕ್ರಚಾಪ: ಕಮಲವನಕ್ಕಿನೋದಯಂ . . . ನವಿಲಿಂಗೆ ಕಲಾಪವರ್ಣಮಂತಮರ್ದ ಮುಗಿಲ್ಗೆ ಶಕ್ರಧನುವೋಲ್. . . ರಾಜಸೂನುಗೆಸೆದತ್ತನಸುಂ ನವಯವ್ವನೋದಯಂ (ಕಾದಂಪೂ. ೪೪೨). [ಸಂ. ಶಕ್ರಧನುಸ್]

**ಶಕ್ರನಂದನ** (ನಾ). ೧. ಇಂದ್ರನ ಮಗ. ೨. ಜಯಂತ. ೩. ವಾಲಿ. ೪. ಅರ್ಜುನ: ದೃಢಸತ್ತ್ವಭಾರತ ಚಕ್ರವರ್ತಿಗಳರಸನನಿಸಿದ ಶಕ್ರನಂದನನಾತ್ಮ ಬಾರೆಂದೆನುತಲಪ್ಪಿದನು (ಕೃಷ್ಣಾಕಾ. ೨೮-೭೦). [ಸಂ.]

**ಶಕ್ರನೃತ್ಯ** (ನಾ). [ಜೈನ] ಜಿನನ ಜನ್ಮಾಭಿಷೇಕಸಮಯದಲ್ಲಿ ಜಿನನ ಮಾತಾಪಿತರ ಮುಂದೆ ಇಂದ್ರ(ಸೌಧರ್ಮೇಂದ್ರ)ನು ಮಾಡುವ ನೃತ್ಯ: ತ್ರಿದಶಗಣಾಧಿನಾಯಕನ . . . ಬಾಹುಪರಿಭ್ರಮಂಗಳೊಳ್ ಬೆದಬಿದ ಶಕ್ರನೃತ್ಯ ದೊಳೊಡಂಬಡೆ ನರ್ತಿಸುವಲ್ಲಿ ಜತ್ತವಟ್ಟದ ಮಣಿಯಂತದೇಂ ಪದುಳಮಾದುದೊ ದಿವ್ಯವಧೂಕದಂಬಕಂ (ಆದಿಪು. ೭-೧೨೫). [ಸಂ.]

**ಶಕ್ರಪುಷ್ಪಿ** (ನಾ). ೧. ಒಂದುಬಗೆಯ ಸಸ್ಯ; ಅಗ್ನಿಶಿಖೆ : "ವಿಶಲ್ಯಾ . . . ಶಕ್ರಪುಷ್ಪೀ- ೫ ಬೆಣ್ಣೆಬಿದುರುಸೊಪ್ಪು , ಅಗ್ನಿಶಿಖೆ" (ಸಿದ್ಧಾಂತಿ. ೧೪೩). ೨. ಕೋಲುಕುಟಕನ ಗಿಡ; ಲಾಂಗಲಿ. [ಸಂ. ಶಕ್ರಪುಷ್ಪೀ]

**ಶಕ್ರಭೋಗ** (ನಾ). ಇಂದ್ರನ ವೈಭವ: ಉಪಕ್ರಮಿಪ ಭಾವಲಿಂಗೈಕ್ಯವಿಂತಿವು ಮೂಜು ಶಕ್ರಭೋಗತೃಣೀಕೃತನೆ ಕೇಳ್ಕೆ ಭಾವಲಿಂಗೈಕ್ಯವೆಂದಱಿವುದು (ವೀಶೈಪು. ೮-೧೦-೪೫). [ಸಂ.]

**ಶಕ್ರರಿಪು** (ನಾ). ೧. ಇಂದ್ರನ ಶತ್ರು. ೨. ಪರ್ವತ : ಶಕ್ರರಿಪುಧರ್ಮ ಮುದ್ರಿತ ಕರಾಂಭೋಜೈಕಚಕ್ರರಥತನುಭವಾಂಭೋಧಿ ಬಾಡಬ ಸಂಗಮೇಶ ರಕ್ಷಿಪುದೆನ್ನನು (ಪ್ರೌಢರಾ. ೮-೧). ೩. ರಾವಣ. ೪. ಇಂದ್ರಜಿತು. ೫. ವೃತ್ರಾಸುರ. [ಸಂ.]

**ಶಕ್ರವೈರಿ** (ನಾ). ೧.ಇಂದ್ರನ ಶತ್ರು. ೨. ಪರ್ವತ. ೩.ರಾವಣ: ಪೃಥಿವಿಗಿಳಿ ದತ್ತತುಲಮಾ ಪೃಥುಲಪುಷ್ಪಕಂ ಪೊಕ್ಕನೆಲೆವನೆಗಾ ಶಕ್ರವೈರಿ! (ಶ್ರೀರಾಮಾ. ೨೧೮-೧೯೯). ೪. ಇಂದ್ರಜಿತು. ೫. ವೃತ್ರಾಸುರ. [ಸಂ. ಶಕ್ರವೈರಿನ್]

**ಶಕ್ರಸಾರಥಿ** (ನಾ). ಇಂದ್ರನ ರಥವನ್ನು ನಡೆಸುವವನು ; ಮಾತಲಿ: "ಮಾತಳಿ, ಶಕ್ರಸಾರಥಿಃ - ಈ ೨ ಇಂದ್ರನ ಸಾರಥಿಯ ಪೆಸರ್" (ಹಲಾಯು. ೧೧-೬೧). [ಸಂ.]

**ಶಕ್ರಸುತ** (ನಾ). ೧. ಇಂದ್ರನ ಮಗ. ೨. ಜಯಂತ. ೩. ವಾಲಿ. ೪. ಅರ್ಜುನ: ಶಕ್ರಸುತನೆನಿಪ ನಿನಗಂ ವಿಕ್ರಮಪರನಪ್ಪ ವಿಷ್ಣುಗಂ ದುರ್ಗಮಮಂ ಚಕ್ರವ್ಯೂಹಮನೊ ರ್ವನೆಯ್ದಾಕ್ರಮಿಸಿಯೆ ಕೊಂದು ತವಿಸಿದಂ ನಿಜತನಯಂ (ನೇಮಿಪು. ೧೨-೫೭); ಚಕ್ರಿಸೇವಕನೀ ಕಿರೀಟ ದರ್ಮಾನುಜಂ ಶಕ್ರಸುತನೆನ್ನ ತಾತಂ (ಜೈಮಿಭಾ. ೨೪-೨೮). [ಸಂ.]

**ಶಕ್ರಾಸ್ತ್ರ** (ನಾ). ೧. ಇಂದ್ರನ ಆಯುಧ; ವಜ್ರಾಯುಧ. ೨. ಸಿಡಿಲು: ಮುಗಿಲ ತಿಡ್ಡಂ ಕುಡುಮಿಂಚನಬ್ಬರವಮಂ ಶಕ್ರಾಸ್ತ್ರಮಂ ತಂದಲಂ . . . ತೋಱುತಿಳಿ ಗೆಟ್ಟರ್ಪಿಂದ್ರಕಾಂತಾಜನಂ (ಪುಷ್ಪಪು. ೧೪-೪೭). [ಸಂ.]

**ಶಕ್ರೇಜ್ಯ** (ನಾ). [ಜ್ಯೋತಿ]ಗ್ರಹಗಳಲ್ಲಿ ಒಂದು; ಗುರು: ಶನಿ ಶಕ್ರೇಜ್ಯಗೃಹಸ್ಥ ನಾಗೆ ನೃಪರಿಂ ಶುದ್ಧಾತ್ಮಕಂ . . . ಪುರಗ್ರಾಮಪತ್ತನಸೇನಾಶ್ರಿತನಲ್ಲಿ ಮತ್ತಧಿಕನಕ್ಕುಂ (ಜಾತತಿ. ೧೭-೩೪). [ಸಂ.]

**ಶಕ್ರೇಭ** (ನಾ). ಇಂದ್ರನ ಪಟ್ಟದ ಆನೆ ; ಐರಾವತ: "ಸಿರಿ ಶಕ್ರೇಭಂಗಳಬ್ಜಾಹ್ವಯಂ" (ನಾನಾರ. ೧೨೫). [ಸಂ.]

**ಶಕ್ವರ** (ನಾ). ಎತ್ತು; ಗೂಳಿ : ಅತಿಸ್ವಚ್ಛಸ್ವಾದುಸಲಿಲಪಾನದೊಳಂ ಮೆಲ್ಲಮೆಲ್ಲನೆ ಮೆಲ್ಕಾಡಿ ಪಥಪರಿಶ್ರಮಮನಾಱಿಸಿಕೊಂಡು ಕೆಲವು ದಿವಸಕ್ಕೆ ಬಾಲೇಂದುಶೇಖರ ಶಕ್ವರಾಕಾರಮಂ[ಪಾಠಾಂ. ವೃಷಭನ ವಿಲಾಸಮಂ] ತಾಳ್ದಿ (ಪಂಚತಂ. ೨೪-೧೫); ರತ್ನದಿಂ ನಿರ್ಮಳಗುಣನಿಳಯಂ [ಶಕ್ವರಾ]ಧೀಶನಿಂ ಸೌಖ್ಯಪದಂ ಪಂಚಾಸ್ಯನಿಂದಂ ಪರಮಜಿನ ಮತಾಂಭೋಜನೀರಾಜಹಂಸಂ (ಸುಕುಮಾ. ೯-೧೧೭). [ಸಂ.]

**ಶಕ್ವರಾರೋಹ** (ನಾ). ೧. ಎತ್ತಿನ ಮೇಲೆ ಸವಾರಿ ಮಾಡುವವನು: "ಪ್ರಚಂಡದೆತ್ತೀಜುವವನನಡ್ವವಾಹನಂ ಶಕ್ವರಾರೋಹನೆಂದೆನಿಕ್ಕುಂ" (ಮಂಗರಾ. ೭೩-೨೬). ೨. ವೃಷಭವಾಹನ ; ಶಿವ. [ಸಂ.]

**ಶಕ್ವರಿ** (ನಾ). ೧. ಬೆರಳು. ೨. ಬೆರಳುಗಳಿಂದ ಮುಟ್ಟುವುದು, - ಹಿಡಿದು ಕೊಳ್ಳುವುದು. ೩. ನಡುಕಟ್ಟು ; ನಡುಪಟ್ಟಿ. ೪. ಗೋವು; ಹಸು. ೫. ಸಾಮವೇದದ ಒಂದು ಮಂತ್ರದ ಹೆಸರು. ೬. [ಛಂದ] ವರ್ಣಛಂದಸ್ಸಿನ ಇಪ್ಪತ್ತಾರು ಬಗೆಯ ಛಂದಸ್ಸಿನಲ್ಲಿ ಹದಿನಾಲ್ಕು ಅಕ್ಷರಗಳುಳ್ಳ ಒಂದು ಸಮವೃತ್ತ: ಅಲ್ಲಿ ಉಕ್ತೆ . . . ಶಕ್ವರಿ, ಅತಿಶಕ್ವರಿ . . . ಉತ್ಕೃತಿ - ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೧-೨೧ ವ). [ಸಂ. ಶಕ್ವರೀ]

**ಶಚಿ** 'ಸಕೆ' ನೋ.

**ಶಚಿ** (ನಾ). ಇಂದ್ರನ ಪಟ್ಟದ ಅರಸಿ; ಇಂದ್ರಾಣಿ: ಶಚಿಶುಚಿತಮ ನಿಜಭೂಷಣ ರುಚಿನಿಚಯಂ ಪರೆಯೆ ಬಂದು ಸೂತೀಗೃಹಮಂ . . . ಪೊಕ್ಕು (ನೇಮಿಪು. ೮-೧೧೨);

ಆ ದಂಪತಿಗೆ ತನೂಭವನಾದಂ ಶಚಿಗಂ ಸುರಾಧಿಪತಿಗಂ ಮುಂನೆಂತಾದಂ ಜಯಂತನಂತೆ (ಎಕ. II, ೪೪೪-೧೦; 1181). [ಸಂ.]

**ಶಚೀರಮಣ** (ನಾ). ಶಚೀದೇವಿಯ ಪತಿ; ಇಂದ್ರ: ಶಚೀರಮಣ ಗರುಡರಥನತಚರಣ ಪುರವನುರುಹಿದ ಮಹಿಮ ಕುಶಧಿಸುತಧರ ದುರಿತರಹಿತವಿಷಗಳನ ಸಲಹು (ಪ್ರೌಢರಾ. ೨೧-೪೨). [< ಸಂ. ಶಚೀರಮಣ]

**ಶಚೀಪತಿ** (ನಾ). = **ಶಚೀರಮಣ**: ಭೂಪತಿತಿಲಕಂ ಮತ್ತಂ ಗೋಪುರಮಂ ಕೆಲವು ಗುಡಿಗಳಂ ವರಣಮನಗಜಾಪತಿ ಗೌರೀಶಂಗೆ ಶಚೀಪತಿನಿಭನೊಲ್ದು ರಚಿಸಿದಂ ಮಂಟಪಮಂ (ಎಕ. IV, ಎಳಂದೂ. ೧-೫೦; 1654). [ಸಂ.]

**ಶಟಗೋಪ, ಶಠಕೋಪ, ಶಠಗೋಪ, ಶಡಗೋಪ** (ನಾ). ವಿಷ್ಣುದೇವಾಲಯಗಳಲ್ಲಿ ಭಕ್ತರ ತಲೆಯ ಮೇಲಿಟ್ಟು ಆಶೀರ್ವದಿಸುವ, ವಿಷ್ಣುಪಾದಾಂಕಿತವಾದ ಒಂದು ಬಗೆಯ ಲೋಹದ ಕಿರೀಟ: ಶ್ರೀಘಂಟಾವತಾರ ಪರಕಾಲಸ್ವಾಮಿಗಳವರಿಗೆ ಮೊದಲು ತೀರ್ಥ ತಿರುಮಾಲೆ ವರಶವಿನಿಯೋಗ ಶ್ರೀಶಟಗೋಪ ಮುಂತಾದ ಸಕಲಮರಿಯಾದೆಗಳಂನ್ನು ಪ್ರಥಮತಾ ಕೊಡುವಂತೆ ಅಪ್ಪಣೆ ಕೊಡ್ಸಿ (ಮೈಆರ್. ೧೯೩೮, ೧೯-೮; 1811). **ಶಠಕೋಪ** : ಅರ್ಚಕರ್ಕೊರಲ್ಗೆ ದುಂಡುಮಲ್ಲಿಗೆದಂಡೆಯಂ ತಲೆಯರ್ದೆ ಭುಜಂಗಳ್ಗೆ ಶಠಕೋಪಮಂ ಕೆಯ್ಗೆ ತೀರ್ಥಮಂ ಬಟಿಕ್ಕಭಯಹಸ್ತಮಂ ಕುಡೆ ಅಂಗೀಕರಿಸಿ (ಚಿಕದೇ. ೧೫೧). **ಶಠಗೋಪ** : ಮಹಿಶೂರ ಸಂಸ್ಥಾನ . . . ಕೃಷ್ಣರಾಜವಡಯರವರು ಸಮರ್ಪಿಶಿದ ರತ್ನಪಡಿ ಶಠಗೋಪ (ಮೈಆರ್. ೧೯೩೮, ೩೫-೭ : ?). **ಶಡಗೋಪ**: ಕಡುಗಿ ವಿಭಾಗಿಸಿ ಕರಣದ ಪಡೆಯ ಶಡಗೋಪವೆಸರನು ಪಡೆದಗ್ಗಡೆಯ ಪಿಡಿದಿರುವನು (ಗೀತಗೋ. ೪೫). 'ಶಠಾರಿ' ಪರಾ.
[← ತಮಿ. ಚಟಕೋಪಮ್; ತೆಲು. ಶಟಕೋಪಮು./ಸಂ. ಶಟಗೋಪ = ಒಬ್ಬ ಆಚಾರ್ಯರ ಹೆಸರು]

**ಶಟವಿ** 'ಸಟವಿ$_2$' ನೋ.

**ಶಟಿ** (ನಾ). ಒಂದುಬಗೆಯ ಸಸ್ಯ; ಕಾಡುಅರಿಶಿನ: "ಶಟೀ . . . ಪಲಾಶಃ - ೫ ಗಂಟಿಕಚೋರ" (ಸಿದ್ಧಾಂತಿ. ೧೪೭). [ಸಂ. ಶಟೀ]

**ಶಟುಕರ್ಮ** (ನಾ). ಬ್ರಾಹ್ಮಣನು ಆಚರಿಸಬೇಕಾದ ಅಧ್ಯಾಪನ, ಅಧ್ಯಯನ, ಯಜನ, ಯಾಜನ, ದಾನ ಮತ್ತು ಪ್ರತಿಗ್ರಹಗಳೆಂಬ ಷಟ್ಕರ್ಮಗಳು : ಜಪ ನಿಯಮ ಹೋಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾನ ಪರಾಯಣರುಂ . . . ಶಟುಕರ್ಮ್ಮನಿಯತರುಂ (ಸೌಇಇ. XX, ೧೯೯-೨೪; 1240).
[< ಸಂ. ಷಟ್ಕರ್ಮನ್]

**ಶಟ್ಟೆ** (ನಾ). ಒಂದುಬಗೆಯ ಮೀನು : ಮುದುಕಿ . . . ಮೊಮ್ಮಗನಿಗಾಗಿ . . . 'ಖೊಟ್ಟೆ ರೊಟ್ಟಿ' ಹಾಗೂ 'ಶಟ್ಟೆಯ ಖಾರಪಳದಿ' ಮಾಡಿಟ್ಟಿದ್ದಾಳೆ (ಹೊಸಕ. ೭೬).
[?]

**ಶಠ** (ಗು). ೧. ಕೆಟ್ಟತನದ; ದುಷ್ಟತನದ. (ನಾ). ೨. ದುಷ್ಟ; ಧೂರ್ತ: "ಖಳನುಗ್ರಂ ಪಾಪಿ ದುಷ್ಟಾತಕ(ನವನೆ) ಶಠಂ ದುರ್ಜನಂ ತಾನನಾರ್ಯಂ" (ವಸ್ತುಕೋ. ೧೦೦-೧೧) ; ಧನುವಿನೊಳಿರೆ ಚಂದ್ರಂ . . . ಶಠನುಮವಂ (ಜಾತತಿ. ೨೦-೯); ಹಿಂಸಾಪರನ ಪಿಸುಣನ ಶಠನ ಕೃಪಣನ ನರಕವಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ (ಕುಮಾದ್ರೋ. ೮-೩೭); ಶಠನು, ಸ್ವಜನನಿರ್ದಯನಾ ಸುಯೋಧನನು (ಭಾಸನಾ. ೬೯). ೩. ಮೋಸ; ವಂಚನೆ: ಠಕ್ಕಿತೆಯರಧಮೆಯರು ಕತ್ತಿಗೆ ಮಿಕ್ಕ ಗೋಟುಗಳಣಕಿಗಳು ಶಠದಿಕ್ಕೆಯರು (ಬಸವು. ೪೦-೫೨). ೪. [ಕಾವ್ಯಮೀ] ಶೃಂಗಾರನಾಯಕರಲ್ಲಿ ಒಂದು ವಿಧ; ಅನೇಕ ನಾಯಿಕೆಯರಲ್ಲಿ, ಸಮಾನಾನುರಾಗವನ್ನು ತೋರುತ್ತ, ಅಂತರಂಗಿಕವಾಗಿ ಒಬ್ಬಳನ್ನು ಹೆಚ್ಚಾಗಿ ಪ್ರೀತಿಸುವವನು: ಶಠನೆಂದರೆ, ಅನೇಕ ನಾಯಿಕೆಯರಲ್ಲಿ ಹೊರಗೆ ಸಮಾನವಾದ ಅನುರಾಗವನ್ನು ತೋರಿಸುತ್ತ ಒಳಗೆ ಒಬ್ಬಳನ್ನು ಹೆಚ್ಚಾಗಿ ಪ್ರೀತಿಸುತ್ತ ಮತ್ತೊಬ್ಬಳಿಗೆ ತೊಂದರೆಮಾಡುವವನು (ಕೃಪಿಟಿ. ೨೧೦); ಶೃಂಗಾರನಾಯಕರಲ್ಲಿ ದಕ್ಷಿಣ, ಧೃಷ್ಟ, ಅನುಕೂಲ, ಶಠ ಎಂದು ನಾಲ್ಕು ವಿಧ (ಸಂನಾಟ. ೧೮). [ಸಂ.]

**ಶಠಕೋಪ** 'ಶಟಗೋಪ' ನೋ.

**ಶಠಗ** (ನಾ). ಕಪಟಿ; ವಂಚಕ: ಬರು ಶಠಗನ ಭಕ್ತಿ ದಿಟವೆಂದು ನೆಚ್ಚಲು ಬೇಡ (ದೇದಾವ. ೨೧-೩೪). [ಶಠ + - ಗ$_2$]

**ಶಠಗೋಪ** 'ಶಟಗೋಪ' ನೋ.

**ಶಠಣೆ** (ನಾ). ಕೆಟ್ಟಸ್ವಭಾವ; ದುಷ್ಟತನ: ಮಣಿದೆಸವ ಭೂಪನಂ ಮನ್ನಿಸದೆ ಶಠಣೆಯಿಂ ಭೃಗುರಾಮನು ನಟ್ಟ ಸುಸ್ತಂಭದೊಲು ನಿಂದಿರಲು (ಪರಶು. ೩೮-೩೦). [< ಶಠ]

**ಶಠತನ** (ನಾ). = **ಶಠಣೆ** : ಮಠಪತಿಯಾದರೂ ಶಠತನ ಬಿಡಲಿಲ್ಲ (ಗಾದೆ).
[ಶಠ + - ತನ]

**ಶಠತೆ** (ನಾ). ವಂಚನೆ; ಕಪಟ: ಶಸ್ತ್ರವನು ಸಹನೆಯಲಿ, ಶಠತೆಯನು ಸತ್ಯದಲಿ ಜಯಿಸಿದ ಕಲಿ (ಅಮತಂ. ೩೮-೪). [ಸಂ. ಶಠತಾ]

**ಶಠತ್ವ** (ನಾ). ಕೆಟ್ಟತನ ; ದುಷ್ಟತನ : "ಚಹ ಚುಹ . . . ಡುಹ - ಪರಿಕಲ್ಕನೇ, ಶಠತ್ವದೊಳ್" (ಕಾಶಕ್ಕ. ೬೫). [ಸಂ.]

**ಶಠಪ್ರಕೃತಿ** (ನಾ). ದುಷ್ಟಸ್ವಭಾವದವನು: ಶಠಪ್ರಕೃತಿ ನಿರ್ಗುಣಂ ಸಕಲಧರ್ಮಭೂಪಾವಳೀಕುಠಾರನಿರದೆಯ್ದಿದಂ (ಪಂಚತಂ. ೯೧-೧೭). [ಸಂ.]

**ಶಠಾಗಮಿಕ** (ನಾ). ವಂಚನೆಯಲ್ಲಿ ಪಾರಂಗತನಾದವನು; ದಗಾಕೋರ: ಶಠಾಗಮಿಕ ನಿನಗಂಜುವನು (ಕುವ್ಯಾಳ. ೧೪-೨೯). [ಸಂ.]

**ಶಠಾರಿ** (ನಾ). = ಶಟಗೋಪ: ವ್ಯಕ್ತಿವಡೆದ ಶಠಾರಿಯ ಭಕ್ತಿಯಂತೆಯುಂ ಸನ್ನದಮಾದ ನಾಥಮುನಿಯ ಬಿನ್ನಣದಂತೆಯುಂ . . . ಶ್ರೀವೈಷ್ಣವರ ಭಾಗ್ಯದಂತೆಯುಂ ತೋರ್ಪ ಶ್ರೀರಾಮಾನುಜರಡಿಗೆಜಿಗಿ (ಚಿಕದೇ. ೧೯೯); ಅರ್ಚಕ ತಲೆಯ ಮೇಲೆ ಶಠಾರಿ ಇಟ್ಟುಕೊಂಡು ಸೊಂಟದುದ್ದ ನೀರಿನಲ್ಲಿ ನಿಂತುಕೊಳ್ಳುತ್ತಾನೆ (ಗರುಡಾ. ೭೮). [← ತಮಿ. ಚಟಾರಿ]

**ಶಠೆ$_1$** (ನಾ). ವಂಚಕಿ ; ಮೋಸಗಾತಿ: ಕಿಸುಗುಳಿ ಕಳ್ಳಿ ಮೂರ್ಖೆ ಶಠೆ ಪಾಪಿ ಕುರೂಪಿಯ ಸತ್ಯವಾದಿ . . . ದುರಾತ್ಮೆಯಪ್ಪ ವಧು ಸಜ್ಜನಮೇ (ಮದತಿ. ೮-೭).
[ಶಠ + - ಎ$_2$]

**ಶಠೆ$_2$** (ನಾ). ಮೋಸ; ವಂಚನೆ: ಶಠೆಯಿಂದಾದ ಅಜಾಂಡಬ್ರಹ್ಮಾಂಡಕೋಟಿಗಳ ನುಂಗಿಪ್ಪ ಲಿಂಗವೇ (ಉಂಪಿ.ಕ. ೪೯-೧೫೨); ಅಮಿತವಹ ಪ್ರಿಯಯಿಂದ ಶಠೆಯಿಂದ ಲಾದೊಡಂ ನಮಸ್ಕಾರಕೃತ ಲಿಂಗ ಸರ್ವಪಾಪಂ ಹರೋಹರಯೆಂದುದಾಗಿ ಮತ್ತ ಸುಮತಿಗಳು ಗುರುಲಿಂಗಜಂಗಮಕೆ ವಂದಿಸಲು (ಗುರುಬಾ. ೭-೯೬). [ಸಂ. ಶಠ]

**ಶಡಗೋಪ** 'ಶಟಗೋಪ' ನೋ.

**ಶಣಕಿ** (ನಾ). ಒಂದು ಬಗೆಯ ಮೂಲಿಕೆ: "ಕಲಪುಃ - ಶಣಕಿ" (ಓಷಧಿ. ೨೦).
[?./ ತಮಿ . ಚನಕಿಪ್ಪುಣ್ಣು, ಚಾಣಾಕ್ಕಿ]

**ಶಣಗ** (ನಾ). (?): "ಗಂಟಿಕ್ಕುಮಂ ಶಣಗನಕ್ಕು" (ಮಂಗರಾ. ೧೦೨-೩). [?]

**ಶಣಪುಷ್ಪಿಕೆ** (ನಾ). ೧. ಗಜ್ಜುಗದ ಗಿಡ. ೨. ಸೆಣಬಿನ ಗಿಡ. [ಸಂ. ಶಣಪುಷ್ಪಿಕಾ]

**ಶಣಸೂತ್ರ** (ನಾ). ಸೆಣಬಿನ ಹಗ್ಗ: ಪ್ರಣವಂ ಶೃಂಖಲೆ ಸಾರಮೇಯಮುಮದಾಮ್ನಾಯಂ ಪುರಾಣವ್ರಜಂ ಶಣಸೂತ್ರಂ . . . ನಾರಾಚಂ ತಪೋವಿಸ್ತರಂ (ಶಬಶಂ. ೩-೨೫). [ಸಂ.]

**ಶತ** (ನಾ). ೧. ಒಂದು ಸಂಖ್ಯಾವಾಚಕ; ನೂರು: ಯಕ್ಕಂ ದಾಹಂ ಶತಂ ಸಾವಿರ ದಾಸಾವಿರ ಲಕ್ಕ ದಹಲಕ್ಕಾ (ಭಾಸ್ಕರ. ೧೧-೬); ವರುಷಶತ ಗತವಾದರಳಿಯದನುರಾಗದಲಿ, ಹರುಷಭೋಗದಲಿ! (ಚಿತ್ರಾಂಗ. ೬೫-೧೬೬೦). ೨. ಬಹಳ; **ಅನೇಕ** : 'ಶತದಲ' ಪರಾ. ೩. [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಮೂರನೆಯ ಸ್ಥಾನ ಮತ್ತು ಮೂರು ಅಂಕೆಗಳನ್ನುಳ್ಳ ಒಂದು ಸಂಖ್ಯೆ: ತೃತೀಯಂ ಶತಮಿತ್ಯಾಹುಃ (ವ್ಯವಹಾ. ೮).

**ಶತಂಪಾತಾಳ** = (ಆಲಂ) ಅತ್ಯಂತವಾದ ಆಳ; ಬಹಳ ಆಳ: ಹರಲಾಲನಿಗೆ . . . ನೈರಾಶ್ಯದ ಶತಂಪಾತಾಳದ ಪಂಕವನ್ನು ಆಲೋಡನ ಮಾಡಿ ನೋಡುವ ಅವಧಿ ಹೆಚ್ಚಿತು (ಇಪ್ಪಕ. ೩೨೮). **ಶತಂಸಾಟ** = (ಆಲಂ) ಹೆಚ್ಚುಹೆಚ್ಚಾಗಿ; ಬಹಳವಾಗಿ (?): ನಾನು ಶತಂಸಾಟ ಹಟ ಮಾಡಿ . . . ಆ ಐದು ರೂಪಾಯಿ ಬರುವ ಹಾಗೆ ಮಾಡಿದೆ (ಸರಸ. ೨). **ಶತಶತಮಾನ** = ನೂರಾರು ವರ್ಷ; ಅನೇಕ ವರ್ಷ: ಶತಶತಮಾನಗಳಿಂತು ಧುಮುಕಿದೆ! ಘನತಿಮಿರದ ಪಾತಾಳದ ಗರ್ಭಕೆ ಧುಮುಕಿದೆ!

(ಪಾಂಚಜ. ೫೪-೫). **ಶತಾಯ ಗತಾಯ** = (ಆಲಂ) ಏನೇ ಆದರೂ; ಎಷ್ಟೇ ಕಷ್ಟವಾದರೂ : ಶತಾಯ ಗತಾಯ ನಿಮ್ಮ ಕೇಸು ನಡಸೋದಷ್ಟೇ ಅಲ್ಲ, ಗೆಲ್ಲಿಸಿ ಕೊಡೋದು ನನ್ನ ಭಾರ (ಚಂದತೋ. ೧೪೯). [ಸಂ.]

**ಶತಕ** (ನಾ). ೧. ನೂರರ ಮೊತ್ತ; ನೂರು. ೨. ನೂರು ವರ್ಷಗಳ ಕಾಲಮಾನ; ನೂರುವರ್ಷ; ಶತಮಾನ : ಇದರ . . . ಅಂತರಿಕವಿಭಜನೆ ಅರ್ಥಪೂರ್ಣವಾಗಿದೆ, ಪಾಂಡಿತ್ಯಪೂರ್ಣವಾಗಿದೆ ಎಂದು ಈ ಶತಕದ ಆದಿಯಲ್ಲಿ ವರ್ಣಿಸಿದ್ದಾನೆ (ಗ್ರಂಥಾಲ. ೨೫); ಕ್ರಿಸ್ತಾಬ್ದದ ನಾಲ್ಕೈದನೆಯ ಶತಕಗಳ ನಡುವಣ ಧಾರ್ಮಿಕ ಹಾಗೂ ಸಾಮಾಜಿಕ ಸ್ಥಿತ್ಯಂತರಗಳ ಸ್ಥೂಲಪರಿಚಯವಾದರೂ ಇರುವುದು ಅವಶ್ಯವಿದೆ (ಕರ್ನಾಟ. ೪೩೦). ೩. ಸಾಮಾನ್ಯವಾಗಿ ನೂರುಪದ್ಯಗಳುಳ್ಳ ಒಂದು ಕೃತಿ : ಧರೆಯೊಳ್ ಕೈಕೊಂಡು ರಕ್ಷಾಶತಕವನೊಲವಿಂ ಪ್ರೇಮದಿಂ ನಚ್ಚಿ ಪೇಳ್ವಂ ಹರಿದೇವಂ (ರಕ್ಷಾಶ. ೧೭-೧೦೦); ಜಳದಿಂದಂ ಗಂಧದಿಂದಂ ಸರಳಶತಕದಿಂದಂ ಸುಪುಷ್ಪಂಗಳಿಂದಂ ವಿಳಸತ್ಸಾನ್ನಾಯ್ಯದಿಂದಂ ಥಳಥಳಿಸುವ ದೀಪಂಗಳಿಂ . . . ಪೂಜಿಸಿದನೊಸೆದು (ಬಾಧಪು. ೧೧-೧೭೬). [ಸಂ.]

**ಶತಕುಂಭ** (ನಾ). ೧. ಒಂದು ಪರ್ವತದ ಹೆಸರು; ಇದರಲ್ಲಿ ಚಿನ್ನವು ದೊರಕುವುದೆಂಬ ಪ್ರತೀತಿಯಿದೆ. ೨. ಒಂದು ಯಾಗದ ಹೆಸರು: ಅವರು ಶತಕುಂಭವೆಂಬ ಯಜ್ಞವನ್ನು ನೋಡುವುದಕ್ಕಾಗಿ . . . ಹೋದರು (ಬಾಲಪ್ರ. II. ೬೨೪). [ಸಂ.]

**ಶತಕೋಟಿ** (ನಾ). ೧. ಇಂದ್ರನ ಆಯುಧ; ವಜ್ರಾಯುಧ : ದೂಟಿ ಬಿದ್ದವು ಸೀಸಕವು ಶತಕೋಟಿ ಘಾಯದ ಘಟನೆಯೊಳು ಶತಕೋಟಿ ಘಾಯಕೆ ಸಿಡಿದ ಹೇಮಾಚಳದ ತುದಿಯಂತೆ (ಕುವ್ಯಾಗ. ೭-೧೨); ಸಾನಂದಮುನಿವರದ ಯೇನಾದ್ರಿ ಶತಕೋಟಿ ನೀನೆ ಗತಿಯಾಗೆನಗ (ಗುರುಚಾ. ೯-೪೭). ೨. ಒಂದು ಸಂಖ್ಯೆ; ನೂರುಕೋಟಿ : "ಏಕಂ ದಹಂ . . . ಶತಕೋಟಿಯರ್ಬುದನ್ಯರ್ಬುದಂ" (ಮುಗರಾ. ೧೦೫-೧೨); ಸಲಿಸಿ ತಾಂ ಶತಕೋಟಿವರುಷಂಗಳೊಳ ಮೇಣ್ ಸಾಸವಯ ತೋರದ ಶಿಲೆಗಳನ ಮಲಿದುಗ್ರತಪವಂ ಮಾಡಿದಾತಂಗೆ ಒಲಿದು (ಬಸಪು. ೧-೬೫). ೩. [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಹತ್ತನೆಯ ಸ್ಥಾನ ಮತ್ತು ಹತ್ತು ಅಂಕೆಗಳಿರುವ ಒಂದು ಸಂಖ್ಯೆ : ಕೋಟಿ ದಹಕೋಟಿ ಶತಕೋಟಿ ಅರ್ಬುದಾ . . . ಇವು ೩೨ ವೃಘಡಣೆ ಹೆಸರುಗಳು (ಭಾಸ್ಕರ. ೧೧-೭). [ಸಂ.]

**ಶತಕ್ರತು** (ನಾ). ೧. ನೂರುಯಾಗ : ಕೃತಯುಗದೊಳ್ ಹರಿಶ್ಚಂದ್ರನೆಂಬ ಚಕ್ರವರ್ತಿ ಶತಕ್ರತುವಂ ನಿರ್ವರ್ತಿಸಿ . . . ಮಹೀತಳಮಲ ಮಂ ಧರಾಮರರ್ಕಳ್ಗೆ ದಕ್ಷಿಣೆಗೊಟ್ಟಂ (ಪಂಪಭಾ. ೬-೧೭ ವ). ೨. ನೂರುಯಾಗಗಳನ್ನು ಮಾಡಿದವನು; ಇಂದ್ರ : ಕ್ರಮದಿಂ ಪೂಜಿಸುವಂ ಶತಕ್ರತುವೆ ಪೂಜಾವಸ್ತು ಕಲ್ಪದ್ರುಜಾತಮೆ ಪೂಜ್ಯಂ (ಪುಷ್ಪಪು. ೧೧-೫೭). [ಸಂ.]

**ಶತಖಂಡ** (ನಾ). ೧. ನೂರಾರು ಚೂರಾದುದು; ಛಿದ್ರಛಿದ್ರವಾದುದು : ಕಾವೇರಿಯ ನೀರ್ವೊಲಿತ್ತ ಬರೆ ನಿಮ್ಮ ಬಲಂ ಶತಖಂಡಮಾಗದೇ (ಕಾವ್ಯಸಾ. ೪೩೫ಶೂದ್ರಕ); ಪ್ರತಿಮಾರೂಪಮಘಾತಿ ಪ್ರತಿರೂಪದ ಗರ್ವಪರ್ವತಾರೂಢತೆಯಿಂ ಶತಖಂಡಂ ಮಾಡಿದುವೇನತರ್ಕ್ಯಮೋ ಜಿನನ ಪಡೆದಘಾತಿವಿಘಾತಂ (ಶಾಂತಿಪು. ೧೨-೩೭). ೨. ಚಿನ್ನ; ಬಂಗಾರ. [ಸಂ.]

**ಶತಘ್ನಿ** (ನಾ). ೧. ಚೂಪಾದ ಮೊನೆಗಳಿಂದ ಕೂಡಿದ ಗುಂಡಾಗಿರುವ ಒಂದು ಬಗೆಯ ಆಯುಧ : ಬಿಲ್ಲು ತೀರು . . . ಶತಘ್ನಿ . . . ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿ ಸಾಧನವಿಶೇಷಂಗಳಿಂದಲೂ (ವಿವೇಕ. ೨೬೭); ಶತಘ್ನಿಗಳ್, ಯಷ್ಟಿಗಳ್ . . . ಭೀಕರಂ ತಾನಾಗಿ ಜ್ರಂಭಿಸಿದುದು (ಶ್ರೀರಾಮಾ. ೬೫೦-೪೪). ೨. ತೋಪು; ಫಿರಂಗಿ : ಕೋಟೆಕೊತ್ತಳಗಳ ತಾಗಿ ಕೆಂದೂಳ್ಗಹ ದಾಟಿ ಪಾಯುವ ಶತಘ್ನಿಗಳ ಮಿಾಟಿನ ಗುಂಡುಗಳೆಸೆದುವು (ಕಂವಿ. ೧೨-೧೯); ಹತ್ತಿರಿರ್ದೊಂದರೆಯನತ್ತಿ ಸಿಡಿರೋಷದಿಂ ಬಿಟ್ಟನ್ ಶತಘ್ನಿ ಗುಂಡಿಡುವಂತೆ (ಶ್ರೀರಾಮಾ. ೩೦೭-೧೩೨). ೩. ಹೆಣ್ಣುಚೇಳು. ೪. ಒಂದು ಬಗೆಯ ಗಂಟಲುರೋಗ. ೫. ಒಂದು ಬಗೆಯ ಗಿಡ. [ಸಂ. ಶತಘ್ನೀ]

**ಶತಚೂರ್ಣ** (ನಾ). ನೂರಾರು ಚೂರು; ಛಿದ್ರಛಿದ್ರ : ಕೋಪಿಸುತೆದ್ದು ಸೆಳೆದು ಸಟಿನೆ ಸೀಳಿ ಸಂದಣಿಸಿ ಶತಚೂರ್ಣವಾಗಿ ನೆಲದೊಳು ಬೀಳೆ (ನಂಬರ. ೭-೮೭). [ಸಂ.]

**ಶತಚ್ಛಿದ್ರ** (ನಾ). = ಶತಚೂರ್ಣ : ವರಧರ್ಮರೂಪನಂ ಕಾನನಕೆ ಕಳುಪೆನ್ನು ತೊರೆವ ನಾಲಗೆ ಶತಚ್ಛಿದ್ರಮಾಗದೆ (ವಂಕಾರಾ. ೨-೬-೫೧). [ಸಂ.]

**ಶತತಂತ್ರಿ** (ನಾ). ಒಂದು ಬಗೆಯ ವಾದ್ಯ : ಅವರ ಗಾಯನದಲ್ಲಿ ಸಹಾಯ ನೀಡಲು ಕಾಲಕ್ರಮೇಣ 'ಶತತಂತ್ರಿ' ಅಥವಾ 'ವಾನಾ' ಎಂಬ ವಾದ್ಯವನ್ನೂ, 'ಭೂಮಿದುಂದುಭಿ' ಎಂಬ ಲಯವಾದ್ಯವನ್ನೂ ಅವರು ಸೃಷ್ಟಿಸಿಕೊಂಡರೆಂದು ತಿಳಿದುಬಂದಿದೆ (ಸಂಗೀತಂ. ೨೨). [ಸಂ. ಶತತಂತ್ರೀ]

**ಶತತಾರೆ** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು; ನೂರು ನಕ್ಷತ್ರಗಳನ್ನು ಒಳಗೊಂಡಿರುವ ಒಂದು ತಾರಾಪುಂಜ; ಶತಭಿಷಾನಕ್ಷತ್ರ. [ಸಂ. ಶತತಾರಾ]

**ಶತದಲ, ಶತದಳ** (ನಾ). ಅನೇಕ ಎಸಳುಗಳನ್ನು ಹೊಂದಿರುವುದು; ತಾವರೆ; ಕಮಲ : ಅಭವಂ ಕ್ಷಿತಿಧರೇಂದ್ರಸುತಾಸ್ಯಶತದಲ [ಪಾಠಾಂ. ಳ]ಮದಮಧುವ್ರತನು (ಬಸಪು. ೧೩-೩೦). **ಶತದಳ** : ಈ ಮಾನಸಜಾತ ಶತದಳಂ ಗುಣಯುಕ್ತಂ . . . ಕುಡುಗೆ ನಲವಂ ಗೆಲವಂ (ವಸ್ತುಪಂ. ೧೨೨). [ಸಂ.]

**ಶತದಲಾಸನ** (ನಾ). ಕಮಲವನ್ನು ಪೀಠವಾಗಿ ಉಳ್ಳವನು; ಬ್ರಹ್ಮ : ಶತದಲಾ [ಪಾಠಾಂ. ಳಾ]ಸನ ಶತಮಖಾಮರ . . . ನಶಶತದಳಂ ಪ್ರತ್ಯಕ್ಷಮಾಗಿರ್ದು (ಬಸಪು. ೧೭-೨೭). [ಸಂ.]

**ಶತದಳ** 'ಶತದಲ' ನೋ.

**ಶತಧರ್ಮ** (ನಾ). = ಶತಕ್ರತು ೨ : ಪರಮೇಷ್ಠಿ ಶತಧರ್ಮವಂದಿತಪದಾಂಭೋಜ ಒಲಿದು ಪಾಲಿಪುದೆನ್ನ ಸಂಗಮೇಶ್ವರಪ್ರಸನ್ನ (ಪ್ರೌಢರಾ. ೧೭-೧). [ಸಂ.]

**ಶತಧಾರ** (ನಾ). ನೂರು ಅಲಗುಗಳನ್ನುಳ್ಳುದು; ವಜ್ರಾಯುಧ : ಶತಧಾರೋದ್ಯತ್ತನುತ್ರಂ ತವದೊಣೆ ವಿಧೃತೋಚ್ಚಂಡಗಾಂಡೀವಮುಜ್ಜೃಂಭಿತ . . . ಅತ್ಯುದ್ಧತ ಬಾಹಾದರ್ಪಂ (ನೇಮಿಪು. ೧೨-೧೫೨). [ಸಂ.]

**ಶತಧೃತಿ** (ನಾ). ೧. = ಶತಕ್ರತು ೨ : ಶತಧೃತಿ ಸೂಸಿದನು ಪುಷ್ಪಾಂಜಲಿಯ ಮಳೆಯ (ನಿಭಾಗ. ೬-೮-೭೨). ೨. ಬ್ರಹ್ಮ : ತನ್ನಯ ಲೀಲೆಯದು ಮಿಗಿಲೊತ್ತ ತಾನದನರಿತು ತನ್ನಯ ಚಿತ್ತದಲಿ ನಿರ್ಮಿಸುತಲಾ ಶತಧೃತಿಯನಾವಾಗ (ಗಗತಾ. ೫-೨೨). ೩. **ಗೌತಮ** ಋಷಿಯ ಮಗನೂ ನಿಮಿಕುಲದ ಪುರೋಹಿತನೂ ಆದ **ಶತಾನಂದ** : ಈ ರಹಸ್ಯಮಂ ನಿನ್ನ ಬಿಲ್ಲೋಜನಪ್ಪ ಶತಧೃತಿಯಂ ಕೇಳೆಂದು ಮಾರ್ನುಡಿದಂ (ರಾಮಾಶ್ವ. ೪೮-೨). [ಸಂ.]

**ಶತಧೃತಿಪೌತ್ರ** (ನಾ). ಬ್ರಹ್ಮನ ಮೊಮ್ಮಗನಾದ ರಾವಣ : ಶತಧೃತಿ ಪೌತ್ರನುಂ ಜಿತಜಗತ್ರಯವೀರನುಮಾಗಿ ನೀಂ ಮಹಾಸತಿಗವನಿಜೆಗನ್ಯವಧುಗಾಟಿಸೆ (ಪಂಚತಂ. ೧೭೫-೩). [ಸಂ.]

**ಶತನಾಮೆ** (ನಾ). ೧. ಒಂದುಬಗೆಯ ಸೊಪ್ಪು; ಸಬ್ಬಸಿಗೆ : "ಶತನಾಮೆ [ಪಾಠಾಂ. ಮಿ] ಶತಪುಷ್ಪಿಯೆನೆ ಸಬ್ಬಸಿಗೆ ಚೋಪಾರನಾಮಂ" (ಮಂಗರಾ. ೪೧-೩೪). ೨. ಒಂದುಬಗೆಯ ಹೂವು : (೬). [ಸಂ. ಶತನಾಮಾ]

**ಶತಪತ್ರ** (ನಾ). ೧. = ಶತದಲ : ವಿದಳಿತನುತ ಶತಪತ್ರದ ಪುದುವಿನೊಳಿರದಗಲೆ ವೋಡ ಹಂಸನನಡಿಸಲ್ (ಚಂಪಭಾ. ೧-೫೭); ಭಾವಿಸೆ ಪೋಲ್ತುದು . . . ಜಲದೇವಿಯ ಪಿಂಛಾತಪತ್ರಮನ ಶತಪತ್ರಂ (ಗದಾಯು. ೬-೪೧). ೨. **ಸಾರಸಪಕ್ಷಿ** : "ಸಾರಸದಲ್ಲಿಯುಂ ಶತಪತ್ರಮೆಂಬುದು" (ಪಲಾಯು. ೧೩೨-೯). ೩. ಮರಕುಟಿಗನ ಹಕ್ಕಿ. ೪. ಒಂದು ಬಗೆಯ ಹೂವು; ಸೇವಂತಿಗೆ. ೫. ಇಂದ್ರ. "ತಾವರೆ ಸಾರಸವಕ್ಕಿಯು ಸೇವಂತಿಗೆ ಸುರಪ ನಾಲ್ಕು ಶತಪತ್ರಾಖ್ಯಂ" (ನಾನಾಕಂ. ೬೨). [ಸಂ.]

**ಶತಪತ್ರಕ** (ನಾ). = ಶತಪತ್ರ ೩ : "ಶತಪತ್ರಕಃ, ದಾರ್ವಾಘಾಟಃ - ೨ ಮರಗುಟಕನ ಹಕ್ಕಿ" (ಸಿದ್ಧಾಂತಿ. ೧೫೪). [ಸಂ.]

**ಶತಪಥ₁** (ನಾ). ನೂರು ಅಧ್ಯಾಯಗಳನ್ನೊಳಗೊಂಡ, ಶುಕ್ಲಯಜುರ್ವೇದಕ್ಕೆ ಸಂಬಂಧಿಸಿದ ಒಂದು ಬ್ರಾಹ್ಮಣಗ್ರಂಥ : ಮನುವು ಆ ಮತ್ಸ್ಯವನ್ನು ಆ ನದಿಯಲ್ಲಿ ದೊಡ್ಡದಾಗಿ ಬೆಳೆಸಿದ್ದು . . . ಮೊದಲಾದ ಸಂಗತಿಗಳೆಲ್ಲವೂ ಶತಪಥದಲ್ಲಿ ಹತ್ತನೆಯ ಕಂಡಿಕೆಯವರೆಗೂ ಪ್ರಸಕ್ತಗೊಂಡಿದೆ (ಭಾರದ. ೧೪೩). [ಸಂ.]

**ಶತಪಥ$_2$** (ನಾ). ಅನೇಕ ಹೆಜ್ಜೆಗಳನ್ನು ಅತ್ತಿಂದಿತ್ತ ಇತ್ತಿಂದತ್ತ ಹಾಕುವಿಕೆ : ಶತಪಥಮಲವನೇಕವಂ, ಏಕಾಂಗಿ ? (ಶ್ರೀರಾಮಾ. ೨೭೮-೬).

**ಶತಪಥ ತಿರುಗು** = ಅತ್ತಿಂದಿತ್ತ ಇತ್ತಿಂದತ್ತ ನಡೆದಾಡು: ಅವರು ಚಣಕಾಲ ಏನು ಮಾಡುವುದೆಂದು ಶತಪಥ ತಿರುಗಿದರು (ರಾಜ್ಯೋದ. ೮೯೦); ಬೆಟ್ಟದ ಒಡೆಯರು . . . ಒಂದೆಡೆಯಲ್ಲಿ ಶತಪಥ ತಿರುಗುತ್ತಿದ್ದರು (ಒಡಕ. ೧೨). **ಶತಪಥ ಹಾಕು** = ಶತಪಥ ತಿರುಗು: ಆಚೀಚೆ ಪ್ಲೇಟ್‌ಫಾರ್ಮಿನಲ್ಲಿ ಶತಪಥ ಹಾಕಿದ (ಆಳಿ. ೬); ಏನು ಮಾಣ . . . ಶತಪಥ ಹಾಕುತ್ತೀಯಲ್ಲ (ಮೂಕಜ್ಜಿ. ೭೦). [< ಸಂ. ಶತಪದ್]

**ಶತಪಥಂಬೋಗು** (ಕ್ರಿ). ಅತ್ತಿಂದಿತ್ತ ಇತ್ತಿಂದತ್ತ ನಡೆದಾಡು, - ತಿರುಗಾಡು: ಆ! ಚಂದ್ರಶಾಲೆಯೊಳೊರ್ಮೆಯುಂ ಶತಪಥಂಬೋಗೆ ಬಸವಳಿವ ಗರ್ಭಿಣಿ (ರಾಮಾಶ್ವ. ೩೩-೩). [ಶತಪಥ$_2$ + ಪೋಗು]

**ಶತಪಥಬ್ರಾಹ್ಮಣ** (ನಾ). ನೂರುಅಧ್ಯಾಯಗಳನ್ನೊಳಗೊಂಡ ಶುಕ್ಲ ಯಜುರ್ವೇದಕ್ಕೆ ಸಂಬಂಧಿಸಿದ ಒಂದುಬ್ರಾಹ್ಮಣಗ್ರಂಥ : ಯಜುರ್ವೇದದ ಕಾಣ್ವಶಾಖೆಯ ಶತಪಥಬ್ರಾಹ್ಮಣದ ಕಡೆಯ ಕೆಲವು ಅಧ್ಯಾಯಗಳೇ ಬೃಹದಾರಣ್ಯಕ (ಭಾರದ. ೩೮) ; ಶತಪಥಬ್ರಾಹ್ಮಣದಲ್ಲಿ "ಯಾರು ಯಥಾರ್ಥಜ್ಞಾನದಿಂದ ಯಜ್ಞಗಳನ್ನಾಚರಿಸುವುದಿಲ್ಲವೋ ಅವರು ಮರಣಾನಂತರ ಪುನಃ ಹುಟ್ಟಿ ದುಃಖವನ್ನನುಭವಿಸುವರು" ಎಂದು ಹೇಳಿರುವುದು (ಭಾತತ್ತ್ವ. ೨೪). [ಸಂ.]

**ಶತಪದ** (ನಾ). = ಶತಪಥ$_2$ : ಶ್ರೀಮಂತರೊಬ್ಬರೆ ತಮ್ಮ ಮನೆಯ ಪಡುಸಾಲೆಯ ಶತಪದ ಮಾಡುತ್ತಲಿದ್ದಾರೆ (ತಿರುಗು. ೩೧). [ಸಂ. ಶತಪದ್]

**ಶತಪದಂಗೆಯ್** (ಕ್ರಿ). ಅತ್ತಿಂದಿತ್ತ, ಇತ್ತಿಂದತ್ತ ತಿರುಗಾಡು, – ನಡೆದಾಡು : ಕೆಯ್ಯ ಭಲ್ಲೆಯದೊಬ್ಬನಾ ಜಾಮದ ಪ್ರಹರಿ ಸಿಲುಬೆಗಳ ಮುಂಗಡೆಯೊಳತ್ತಿತ್ತ ಶತಪದಂಗೆಯ್ವು (ಗೊಲ್ಗೊಥಾ. ೧೫-೩೬೩). [ಶತಪದ + ಕೆಯ್$_1$]

**ಶತಪದಿ** (ನಾ). ಅನೇಕ ಕಾಲುಗಳುಳ್ಳ ಒಂದುಬಗೆಯ ಹುಳು; ಜರಿ:ಶತಪದಿಗಳಿಗೆ ಶರೀರದ ಪ್ರತಿಭಾಗಕ್ಕೂ ಒಂದು ಜೊತೆ ಒಟ್ಟು ೧೨-೬೯ ಜೊತೆ ಕಾಲುಗಳಿವೆ (ಕೀಟಪ. ೧೫). [ಸಂ. ಶತಪದೀ]

**ಶತಪರ್ವ** (ನಾ). ಅನೇಕ ಗಂಟು ಅಥವಾ ಗಿಣ್ಣುಗಳನ್ನು ಹೊಂದಿರುವುದು; ಬಿದಿರು: "ವಂಶಃ . . . ಶತಪರ್ವಾ, ಯವಫಲಃ, ವೇಣುಃ, ಮಸ್ಕರಃ, ತೇಜಸಃ – ೧೦ ಬಿದುರು ಹೆಸರುಗಳು" (ಸಿದ್ಧಾಂತಿ. ೧೪೯). [ಸಂ. ಶತಪರ್ವನ್]

**ಶತಪರ್ವಿಕೆ** (ನಾ). ೧. ಗರಿಕೆ ಹುಲ್ಲು: "ದೂರ್ವಾ, ಶತಪರ್ವಿಕಾ . . . ಅನಂತಾ – ೬ ಗರಿಕೆಹುಲ್ಲಿನ ಹೆಸರುಗಳು" (ಸಿದ್ಧಾಂತಿ ೧೪೯). ೨. ಬಜೆ : "ವಚಾ . . . ಶತಪರ್ವಿಕಾ – ೫ ಬಜೇ ಹೆಸರುಗಳು" (ಸಿದ್ಧಾಂತಿ. ೧೩೫). [ಸಂ. ಶತಪರ್ವಿಕಾ]

**ಶತಪುಷ್ಪೆ** (ನಾ). ಕಾಡುಸಬ್ಬಸಿಗೆ ಸೊಪ್ಪು ; ಶತನಾಮೆ: "ಶತಪುಷ್ಪಾ, ಸಿತಛತ್ರಾ . . . ಕಾರವೀ – ೭ ಕಾಡುಸಬ್ಬಸಿಕೇ ಹೆಸರು" (ಸಿದ್ಧಾಂತಿ. ೧೪೭). [ಸಂ. ಶತಪುಷ್ಪಾ]

**ಶತಪ್ರಯತ್ನ** (ನಾ). ಹೆಚ್ಚಿನ ಯತ್ನ; ಅಧಿಕ ಪ್ರಯತ್ನ : ಯಾವುದು ನಡೆಯಬಾರದು ಎಂದು ಅವರು ಶತಪ್ರಯತ್ನ ಮಾಡಿದ್ದರೋ ಅದೇ ಅತ್ಯಂತ ಅನಪೇಕ್ಷಿತವಾದ ರೀತಿಯಲ್ಲಿ ನಡೆದುಹೋಗಿತ್ತು (ಮೂರುದಾ. ೨೫೨). [ಸಂ.]

**ಶತಪ್ರಾಸ** (ನಾ). ಬಿಳಿಯ ಕಣಿಗಿಲೆ ಗಿಡ ; ಗನ್ನೇರಳೆ : "ಪ್ರತಿಹಾಸಃ, ಶತಪ್ರಾಸಃ . . . ಕರವೀರಃ – ೫ ಗನ್ನೇರಳೆ, ಕಣಗಿಲ ಗಿಡದ ಹೆಸರು" (ಸಿದ್ಧಾಂತಿ. ೧೫೯). [ಸಂ.]

**ಶತಭಿಷೆ** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು: ಶತಭಿಷ ಮೂಲಂ ಫಣೆ ರೇವತಿ ಪೂರ್ವಾಷಾಢೆಯುತ್ತರಾಭಾದ್ರೆಯುಮಾಪತಿಯೆನಿಸಿದ ನಕ್ಷತ್ರಪ್ರತತಿ (ಲೋಕೋಪ ೪-೮೫); ಇವುಗಳಲ್ಲಿ ಬಲಗಡೆಯದು ಶತಭಿಷಾ (೨೪) ಯೋಗತಾರೆ (ನಕ್ಷತ್ರ. ೨೬). [ಸಂ. ಶತಭಿಷಾ]

**ಶತಮಖ** (ನಾ). ೧. ನೂರುಯಜ್ಞಗಳನ್ನು ಮಾಡಿದವನು ; ಇಂದ್ರ: ಶತಮಖನರಸಿಗೆ ಕರ್ಣಾವತಂಸಮಾಗಲ್ಕೆ ನೋಂತ ಪಲ್ಲವಪುಷ್ಪಪ್ರತತಿಯನೆ ಮೆಱೆದು ಚೆಲ್ವೆಳಿಗತಿಶಯಮೆನಿಸಿದುದು ಪಾರಿಜಾತಕುಜಾತಂ (ಆದಿಪು. ೬-೯೯); ನಿಖಿಳನಿರ್ಜರಬಲ ಸಹಿತ ಶತಮಖನೊಡನೆ ವಿಗ್ರಹವಲಾ ಸಮ್ಮುಖಕೆ ಬಂದುದು ಭಂಗವೆಂದನು ನಗುತ ಮುರವೈರಿ (ಕುವ್ಯಾಅ. ೨೦-೧೭). ೨. [ಛಂದ] ಮೂರುಲಘುಗಳನ್ನು ಹೊಂದಿರುವ ಅಕ್ಷರಗಣ ; ನಗಣ (UUU): ಶತಮಖಭಾನುಯುಗಾಗ್ರಲಗಂ ಶೀತಕರ ತ್ರಿತಯಾಗ್ರಹರಂ ಮತಿಯುತೆ ಬಂದೊಡಿದಚ್ಯುತಕಂ ಭೂತಳದೊಳ್ಳೆ ಗಲ್ಬರ್ಧಸಮಂ (ಛಂದೋಂಬು. ೩-೨೦೭). [ಸಂ.]

**ಶತಮನ್ಯು** (ನಾ). = ಶತಮಖ ೧ : ನಿನಗೀ ಜನ್ಮಸ್ಥಿತಿಯಂ ಪೇಟ್ದೊಡೆ ಭೂಪತಿ ಶತಮನ್ಯುಗೆ ಪೇಟ್ದ ತೆಱನೆ ನಾಕಶ್ರೀಯಂ (ಚಂದ್ರಪು. ೫-೩೧). [ಸಂ.]

**ಶತಮಾನ** (ನಾ). ೧. ನೂರರ ಅಳತೆ ಅಥವಾ ಪ್ರಮಾಣ. ೨. ನೂರರಷ್ಟು; ನೂರುಮಡಿ. ೩. ಒಂದು ಪಲದ ತೂಕದ ಬೆಳ್ಳಿ. ೪. ೯೨ ತೊಲಗಳ ತೂಕದ ಒಂದು ಪ್ರಮಾಣ. ೫. ನೂರುವರ್ಷಗಳ ಅವಧಿ,–ಕಾಲಮಾನ: ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹತ್ತನೆಯ ಶತಮಾನವು ಬಹಳ ಮಹತ್ವಪೂರ್ಣವಾದುದು (ಸಾಚಿ. ೧) ; ಕ್ರಿ.ಶ. ಮೂರು ನಾಲ್ಕನೆಯ ಶತಮಾನಗಳಲ್ಲಿ . . . ಶರದ್ವಿಷುವದ್ಬಿಂಬವು ಚಿತ್ತಾನಕ್ಷತ್ರದ ಪಕ್ಕದಲ್ಲಿಯೇ ಇತ್ತು (ನಕ್ಷತ್ರ. ೬೮). [ಸಂ.]

**ಶತಮೂರ್ಖ** (ನಾ). ಅತಿಯಾದ ದಡ್ಡತನವುಳ್ಳ ವ್ಯಕ್ತಿ; ಮಹಾಅವಿವೇಕಿ: ಮೂರ್ಖರಿರುವ ಊರಲ್ಲಿ ವಿವೇಕಿಯಾಗಲೆತ್ನಿಸುವವನು ಶತಮೂರ್ಖನಾಗುತ್ತಾನೆ (ಪಂಜಪಂ. ೧೯೧); ನೀನು ಶತಮೂರ್ಖಳೆಂದು ಇಂದು ಖಾತ್ರಿಯಾಯಿತು (ಸ್ಮೃತಿಚಿ. ೩೪೯). [ಸಂ.]

**ಶತಮೂಲಿ** (ನಾ). ಒಂದು ಬಗೆಯ ಗಡ್ಡೆ; ಶತಾವರಿಗಡ್ಡೆ: "ಶೇರು ಶತಮೂಲಿ ಯೆನಲಾಸಡಿಯೆನಿಕ್ಕು" (ಮಂಗರಾ. ೪೦-೩೧). [ಸಂ. ಶತಮೂಲೀ]

**ಶತಮೂಲಿಕೆ** (ನಾ). = ಶತಮೂಲಿ: "ಶತಮೂಲಿ[ಪಾಠಾಂ.ಳಿ]ಕಾ, ಆಭೀರುಃ – ೨ ಆಸಡಿ" (ಹಲಾಯು. ೧೦೧-೪೬೫). [ಸಂ. ಶತಮೂಲಿಕಾ]

**ಶತಮೊಂಡ** (ನಾ). ಬಹಳ ಹಟಮಾರಿ: ಇವನೊಬ್ಬ ಬುದ್ಧಿಗೆಟ್ಟ ಶತಮೊಂಡ (ವೀರಯೋ. ೧೭). [ಶತ + ಮೊಂಡ (< ಮುಂಡು$_2$)]

**ಶತಯಜ್ಞ** (ನಾ). = ಶತಮಖ ೧: ಆ ಪಾರ್ವತಿ ಶತಯಜ್ಞನಜಹರಿಗಳಾದಿಯಾಗಿರ್ದ ದೇವತೆಗಳೆತ್ತರು ಬಳಿಕ್ಕೊಂದೊಂದು ಬಾಣಮಂ (ವೀಶೈಪು. ೩-೧೩-೨೮); ಯಜ್ಞಪುರುಷನ ನೇಮದಲಿ ಶತಯಜ್ಞನಪರಾಧವನು ಮಱೆದನು (ನಿಭಾಗ. ೪-೧೩ ಸೂಚನ). [ಸಂ.]

**ಶತರಂಜ** (ನಾ). ಒಂದು ಬಗೆಯ ಆಟ ; ಚದುರಂಗ: ಹಗಲು ಶತರಂಜ, ಹೆಡ್ಡ ಆಡುತ್ತಿದ್ದ (ಜಮಿನ್ದಾ. ೩೭). [← ಅರ. ಶತ್ರಂಜ್; ಪಾರ. ಹಿಂ. ಶತರಂಜ್ ; ಮರಾ. ಶತರಂಜ್, ಶತ್ರಂಜ್./ ಸಂ. ಚತುರಂಗ]

**ಶತರಂಜಿ** (ನಾ). ಅನೇಕ ಬಣ್ಣಗಳುಳ್ಳ ರತ್ನಗಂಬಳಿ: ಗದ್ದುಗೆಯ ಸಾಲ್ಗಳನಿಟ್ಟು ಶತರಂಜಿಗಳ ಹಾಯಿಕಿ ಸಿಂಗರಿಸಿತೋಲಗದ ಮಂಟಪವ (ಪ್ರಹ್ಲಾಚ. ೧೭-೪೧); ಹುಲ್ಲಿನ ಶತರಂಜಿಯ ಮೇಲೆ ಕುಳಿತಿದ್ದೆ (ಕಪ್ಪುಹು. ೫೨).
[← ಪಾರ. ಶತ್ರಂಜೀ; ಹಿಂ. ಶತರಂಜೀ; ಮರಾ. ಶತರಂಜೀ, ಸತರಂಜೀ, ಸತ್ರಜೀ]

**ಶತರುದ್ರೀಯ** (ನಾ). ಯಜುರ್ವೇದದಲ್ಲಿ ಬರುವ ಪ್ರಸಿದ್ಧವಾದ ಶಿವಸ್ತೋತ್ರ: ಹರನ ಕರುಣದ ಹದನನೀತಂಗೊರೆದು ಶತರುದ್ರೀಯವನು ವಿಸ್ತರಿಸಿ ಬಿಜಯಂಗೆಯ್ದನಾ ಮುನಿಪತಿ ನಿಜಾಶ್ರಮಕೆ (ಕುವ್ಯಾದ್ರೋ. ೧೯-೫೪); ಸ್ಮೃತಿವಿತತಪುರಾಣೌಘದೊಳತಿಶಯಮಾ ಶ್ರುತಿಸಮೂಹಮದಱೊಳ್ಗಸದಂ ಶತರುದ್ರೀಯಮದತಿಶಯಂ (ರಾಜಶೇ. ೪-೮೮). [ಸಂ.]

**ಶತವೀರ್ಯೆ** (ನಾ). ೧. ಬಿಳಿಯ ಗರುಕೆ ; ದೂರ್ವೆ : "ಗೋಲೋಮಿ, ಶತವೀರ್ಯಾ – ೨ . . . ಬಿಳೀಗರಿಕೆಹುಲ್ಲು" (ಸಿದ್ಧಾಂತಿ. ೧೪೯). ೨. ಶತಾವರಿಯ ಗಿಡ : "ಶತವೀರ್ಯಾ – ಹೇರಾಸಡಿ, ಮಧುದ್ರಾಕ್ಷೆ, ಮೂರ್ವ, ರಂ(ಐ)ಚ(ಕೆ)ಗ" (ಓಷಧಿ. ೧೬೧). [ಸಂ. ಶತವೀರ್ಯಾ]

**ಶತವೃದ್ಧ** (ನಾ). ೧. ನೂರುವರ್ಷ ವಯಸ್ಸಾದವನು ; ಶತಾಯು. ೨. ಬಹಳ ವಯಸ್ಸಾದವನು ; ತುಂಬಾ ಮುದುಕ : ಒರ್ವ ಶತವೃದ್ಧನಾಗಿ ನಿಂದಿರ್ದಂ (ಸಂಜಿರ. ೬-೧೪) ; ಶತವೃದ್ಧ ಕೊಡೆ ಕಮಂಡಲು ದರ್ಭೆಗಳನಾಂತು ಯತಿಯ ಬಳಿಗೆ . . . ಬಂದು (ವೀಶೈಪು. ೨-೧೩-೩೦). [ಸಂ.]

**ಶತವೇಧಿ** (ನಾ). ಒಂದು ಬಗೆಯ ವನಸ್ಪತಿ; ಹುಳಿಹಚ್ಚೆ: ಶಿಶು ಕಂಡ ಕನಸಿನಂತೆ ಪಶುವಿನ ಉದರದಲ್ಲಿ ಸೋಂಕಿದ ಶತವೇಧಿಯಂತೆ ಇದು ಲಿಂಗೈಕ್ಯವು (ಮೋಳಿಮಾ. ೧೨೪-೪೮೩). [ಸಂ. ಶತವೇಧಿನ್]

**ಶತಸಂಕುಲೆ** (ನಾ). [ಜೈನ] ಒಂದು ಬಗೆಯ ವಿದ್ಯೆ: ಪ್ರಜ್ಞಪ್ತಿ . . . ಶತಸಂಕುಲಾ [ಪಾಠಾಂ.ಳಿ]ಕುಂಭಾಂಡಿ . . . ಅಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಚಾವುಂಪು. ೧೯೭). [ಸಂ. ಶತಸಂಕುಲಾ]

**ಶತಸಪ್ತತಂತು** (ನಾ). ನೂರುಯಾಗಗಳನ್ನು ಮಾಡಿದವನು; ಇಂದ್ರ: ಶತಸಪ್ತತಂತುಗಮರಾವತಿಯಂ ಫಣಿಪತಿಗೆ ನೆಗಟ್ದ ಭೋಗಾವತಿಯಂ ಮತಿಗೆಟ್ಟು ಜಡರ್ ಬಣ್ಣಿಸುವ ತೆಱದಿ ಬಣ್ಣಿಪಮೆ ನಿನಗೆ ಮುಕ್ತಿಯ ಸುಖಮಂ (ಅಜಿಪು. ೬-೮೦). [ಸಂ.]

**ಶತಸಹಸ್ರ** (ನಾ). ೧. ನೂರುಸಾವಿರ; ಲಕ್ಷ: ಆಯುಧಶಾಲೆಯೊಳ್ ಶತಸಹಸ್ರ ರವಿಪ್ರವಿಭಾಸಿದೇವ ಚಕ್ರಾಯುಧಮಿಂದು ಬಂದು ನೆಲಸಿರ್ದುದು (ಶಾಂತಿಪು. ೮-೧೫೩). ೨. ಸಾವಿರಾರು; ಬಹಳ; ಅನೇಕ: ಶತಸಹಸ್ರ ಕಂಠಗಳು ಏಕಕಂಠವಾಗಿ "ಉಘೇ! . . . ಉಘೇ" ಎಂದು ಬೊಬ್ಬಿರಿದವು (ಶಾಂತಲಾ. ೧೦೭). [ಸಂ.]

**ಶತಸಾವಿರ** 'ಶತಸಾಸಿರ' ನೋ.

**ಶತಸಾಸಿರ, ಶತಸಾವಿರ** (ನಾ). ೧. = ಶತಸಹಸ್ರ ೧. ೨. = ಶತಸಹಸ್ರ ೨: ಶತಸಾಸಿ[ಪಾಠಾಂ.ವಿ]ರದ ಸಂಖ್ಯೆಯ ತುಱುಸಮೂಹದ ಭರದೊಳಿಂತು ಕಿರಾತರು ಗಳೆಯ್ತಂದು (ಜೀವಂಚ. ೬-೬). **ಶತಸಾವಿರ**: ೨. ಶತಸಾವಿರ ದಿವಾಕರಬಿಂಬವೆಸೆದುದು ಝಳದ ಹೊಯಿಲಿನಲಿ (ಕುವ್ಯಾಭೀ. ೬-೩೩). [< ಸಂ. ಶತಸಹಸ್ರ]

**ಶತಸ್ಸಿದ್ಧ** (ನಾ). ನೂರಕ್ಕೆ ನೂರುಪಾಲು ಆಗತಕ್ಕುದು; ಖಂಡಿತವಾಗಿ ನಡೆಯತಕ್ಕುದು: ಅವರಿಬ್ಬರೂ ಊರಿಗೆ ಬರುವುದು ಶತಸ್ಸಿದ್ಧ (ರೂಢಿ). [ಸಂ.?]

**ಶತಹ್ರದ** (ನಾ). ಮಿಂಚು; ವಿದ್ಯುತ್ತು: ಸ್ತನಿತಧನುರ್ಗುಣಧ್ವನಿ ಶತಹ್ರದ ಶಸ್ತ್ರಮರೀಚಿ ನಾಡೆ ಕರ್ಗನೆ ಕನಿವೊಡ್ದು ಕಾರಮುಗಿಲಂತಿರೆ ಭೋರನೆ ಕೊಂಡು ದಾಗಳಂಬಿನ ಮೞೆ (ಪಂರಾಮಾ. ೧೩-೪೯). [ಸಂ. ಶತಹ್ರದಾ]

**ಶತಹ್ರದೆ** (ನಾ). = ಶತಹ್ರದ: "ಶಂಪಾ, ಚಪಲಾ, ಕ್ಷಣಿಕಾ, ಶತಹ್ರದಾ . . . ಐರಾವತೀ (ಚ ವಿಜ್ಞೇಯಾ) - ಈ ೧೧ ಮಿಂಚು" (ಹಲಾಯು. ೧೧-೭೦). [ಸಂ. ಶತಹ್ರದಾ]

**ಶತಾಂಗ** (ನಾ). ೧. ವಿಶೇಷವಾಗಿ ಯುದ್ಧಸಮಯದಲ್ಲಿ ಬಳಸುವ ಬಂಡಿ, – ರಥ : "ಅನಃ, ಶತಾಂಗಃ, ಶಕಟಃ . . . ಕೂಬರೀ - ಈ ೯ ರಥಂ" (ಹಲಾಯು. ೭೩-೨೯೦). ೨. ಒಂದು ಬಗೆಯ ಮರ; ಹುಲಿಗಿಲು: "ಶತಾಂಗ — ಹುಲಿ(ಗಿ)ವಿಲು, ಗೇರು" (ಓಷಧಿ. ೧೫೯). [ಸಂ.]

**ಶತಾಂಬಕಸುತ** (ನಾ). ಇಂದ್ರನ ಮಗ ; ಅರ್ಜುನ : ಜಯಶಂಬರಹರಾಹಿತ ಶತಾಂಬಕಸುತಸ್ತುತ ಚಿದಂಬರದಿನೇಶಾ (ರಾಜಶೇ. ೧೩-೫೪). [ಸಂ.]

**ಶತಾಧಿಕ** (ನಾ). ನೂರಕ್ಕಿಂತ ಹೆಚ್ಚಾದುದು; ಮಿಗಿಲಾದುದು: ಗೌರೀದೇವಿಯು ಗಯ್ಯಾಳಿಯೆಂದು ಎಷ್ಟು ಹೆಸರು ಪಡೆದಿದ್ದಳೋ ಅದಕ್ಕಿಂತ ಶತಾಧಿಕವಾಗಿ ಪಾತಿವ್ರತ್ಯದಲ್ಲಿಯೂ . . . ಪ್ರಸಿದ್ಧಿಯನ್ನು ಪಡೆದು ಪತಿಯೊಡನೆ ಸುಖವಾಗಿದ್ದಳು (ಮಂಜುವಾ. ೬೫); ವಾಚಕರಿಗೆ ಹೇಗೋ ಅದಕ್ಕೆ ಶತಾಧಿಕವಾಗಿ ಪ್ರೇಕ್ಷಕರಿಗೂ ರಸ ದೊರಕಲಿ (ವೀರಯೋ. VII, ಮುನ್ನುಡಿ). [ಸಂ.]

**ಶತಾಧ್ವರಿ** (ನಾ). ನೂರುಯಾಗಗಳನ್ನು ಮಾಡಿದವನು ; ಇಂದ್ರ : ಆ ಧ್ವನಿಗಳ್ ನಿಜನಿಜಕರ್ಣಾಧ್ವಗಮೆನೆ ಜೈನಪೂಜೆಗಿತರೇಂದ್ರರ್ ನಾನಾಧ್ವಜನಿವೆರಸು ನೆರೆದು ಶತಾಧ್ವರಿ ಸೌಧರ್ಮನಲ್ಲಿಗಂದೇಟ್ತಂದರ್ (ಮಲ್ಲಿಪು. ೧೪-೧೦೯). [ಸಂ. ಶತಾಧ್ವರಿನ್]

**ಶತಾನಂದ** (ನಾ). ೧. ಬ್ರಹ್ಮ: "ಬ್ರಹ್ಮಾ . . . ಶತಾನಂದಃ, ಶಂಭುಃ . . . ಕಮಲಾಸನಃ - ಈ ೨೦ ಬ್ರಹ್ಮನ ಪೆಸರ್" (ಹಲಾಯು. ೨-೬); ಹರಿ ಸಿರಿದೇವಿಯ ಚರಣರಜವನ್ನು . . . ಸ್ಮರಿಸಿಕೊಳ್ಳುತ ಮೈಮರೆವ ಶತಾನಂದ ಜಗವ ಪುಟ್ಟಿಸುವ ಮಹಧೀರ (ವಿದಾಕೃ. ೭೦-೧). ೨. ಒಬ್ಬ ಋಷಿಯ ಹೆಸರು; ಗೌತಮ ಮತ್ತು ಅಹಲ್ಯೆಯರ ಮಗ: ಸುಮೇಘಪರ್ವತದಲ್ಲಿ ಅತ್ರಿ . . . ಶತಾನಂದ . . . ಉಪಮನ್ಯು ಮೊದಲಾದಷ್ಟಾಶೀತಿಸಹಸ್ರಋಷೀಶ್ವರರ್ಗನಂತಾಶ್ರಯಂಗಳುಂ (ವಿವೇಕ. ೧೭೪). ೩. ವಿಷ್ಣು. ೪. ವಿಷ್ಣುವಿನ ರಥ. [ಸಂ.]

**ಶತಾಪರಾಧ** (ನಾ). ಅನೇಕ ಅಪರಾಧ, – ತಪ್ಪು : ಮಱೆ ದೇವ ಮದೀಯ ಶತಾಪರಾಧಮಂ (ಶಬಶಂ. ೫-೧೯) ; ಶತಾಪರಾಧ ಮಾಡಿದ ಪರಮಪಾಪಿಯ ವಿಷಯದಲ್ಲೂ ಇಂಥಾ ಕೆಲಸ . . . ಸಂಕಟಕರ (ವೀರಯೋ. ೧೫). [ಸಂ.]

**ಶತಾಬ್ದ** (ನಾ). ನೂರುವರ್ಷಗಳ ಕಾಲಮಾನ; ಶತಮಾನ: ಪೆಸರೆಸೆವಗ್ರಸಂಧಿಗೆ ಕನಿಷ್ಠಿಕೆ ಮಿಕ್ಕಿರೆ ದಲ್ ಶತಾಬ್ದಮೆಂಗೆ . . . ನರಂಗೆ ಯಥೋಚಿತಾಯು(ವ)ರ್ಷಂ (ಲೋಕೋಪ. ೧೧-೧೮) ; ಕ್ರಿಸ್ತಪೂರ್ವ ಎರಡು ಮೂರನೆಯ ಶತಾಬ್ದದಿಂದ ಮೌರ್ಯ ಮತ್ತು ಶಾತವಾಹನರ ಕಾಲದಲ್ಲಿಯೇ ಕೆಲವು ದೇವಾಲಯಗಳು ಬಹಳ ಪ್ರಸಿದ್ಧವಾಗಿದ್ದವೆಂದು ಹೇಳಬಹುದು (ಹೊಯ್ಸವಾ. ೧). [ಸಂ.]

**ಶತಾಬ್ದಿ** (ನಾ). = ಶತಾಬ್ದ: ಇಪ್ಪತ್ತೊಂದನೆಯ ಶತಾಬ್ದಿಗೆ ಕಾಲಿಡುತ್ತಿದ್ದೇವೆ (ರೂಢಿ). [< ಸಂ. ಶತಾಬ್ದ]

**ಶತಾಯು** (ನಾ). ೧. ನೂರುವರ್ಷಗಳ ಆಯುಷ್ಯ: ಈ ಲೌಕಿಕರಾದ ಮನುಷ್ಯರ ಒಂದು ಮಾಸವೇ ಪಿತೃಗಳಿಗೊಂದುದಿನವಹುದಾ ದಿನ ಮುನ್ನೂಱಱುವತ್ತಾದೊಡೊಂದು ವರ್ಷವಹುದಾ ಕ್ರಮದಿಂದವರ್ಗೆ ಶತಾಯುವೆಂದಱಿಯಲ್ವೇಳ್ಕುಂ (ವಿವೇಕ. ೨೭೪). ೨. ನೂರುವರ್ಷ ಆಯುಸ್ಸುಳ್ಳವನು: ಶತಾಯುಗಳಾಗಿ ತುಂಬುಜೀವನ ನಡೆಸಿ ೧೯೬೨ನೇ ಇಸವಿ ಏಪ್ರಿಲ್ ತಿಂಗಳಲ್ಲಿ ಅವರು ನಿಧನರಾದರು (ಕಪಪು. ೬-೧೨೫). [ಸಂ.]

**ಶತಾರ** (ನಾ). ೧. ಇಂದ್ರನ ಆಯುಧ ; ವಜ್ರಾಯುಧ. ೨. [ಜೈನ] ಅರವತ್ತುಮೂರು ಇಂದ್ರಕಗಳಲ್ಲಿ ಒಂದು : ದಿವಮೆಂತಂತೆ ಶತಾರಮಗ್ರಿಮ ಸಹಸ್ರಾರಂ ಸಹಸ್ರಾರಮಪ್ರವಿಲಕ್ಷ್ಯಂ ದಿನಪೋಪಮಾನವಳಯಂ ಜಾಜ್ವಲ್ಯಮಾನಂ (ಶಾಂತಿಪು. ೧೦-೧೧೫) ; ಓರಂತೆ ತೊಳಗಿ ಪೊಳೆವ ಶತಾರ ಸಹಸ್ರಾರಕಲ್ಪಯುಗಂಗಳ್ ಶೋಭಾರಮಣೀಯಂಗಳ್ (ಸುಕುಮಾ. ೧೧-೬೬). [ಸಂ.]

**ಶತಾರಕಲ್ಪ** (ನಾ). = ಶತಾರ ೨: ವಿಶಾಖಭೂತಿಯ್ಕೆ ಪುಟ್ಟಿದಾ ಶತಾರ ಕಲ್ಪದೊಳ್ ಸಾಮಾಜಿಕದೇವನಾಗಿ ಪುಟ್ಟಿ (ಶಾಂತಿಪು. ೭-೬೧ ವ) ; ತಪಂಗೆಯ್ದು ಶತಾರಕಲ್ಪದೊಳ್ ಪುಟ್ಟಿಬಂದೀಗಳಾ ಭಾವನನುಂ ಪೂರ್ಣಘನನಾದಂ (ಪಂರಾಮಾ. ೧೦-೯೩ ವ). [ಸಂ.]

**ಶತಾರೇಂದ್ರ** (ನಾ). [ಜೈನ] ಶತಾರಕಲ್ಪದಲ್ಲಿ ಹುಟ್ಟಿದವನು ; ಇಂದ್ರ : ಆ ಕಲ್ಪಂಗಳೆರಡಕ್ಕಂ ಶತಾರೇಂದ್ರನಿಂದ್ರನಕ್ಕುಂ (ಸುಕುಮಾ. ೧೧-೬೭ ವ). [ಸಂ.]

**ಶತಾವರಿ** (ನಾ). ೧. ಶತಮೂಲಿ ಗಿಡ : ಸಿಂಗರವೆತ್ತ ಶತಾವರಿ ಸಹದೇವಿ ಕಂಗೊಳಿಸುವ ವರ್ಷಾಭೂ (ಸಾಳ್ವಸಾಂ. ೨೦) ; ಶತಾವರಿಯ ಅಂಕುರುಗಳ ಕಹಿ (ಅಷ್ಟಾಂಗ. ೧೩೯-೯೭). ೨. ಇಂದ್ರಾಣಿ ; ಶಚೀದೇವಿ. [ಸಂ. ಶತಾವರೀ]

**ಶತೃಣಂತ** (ನಾ). [ವ್ಯಾಕ] 'ಅತ್' ಎಂಬ ವರ್ತಮಾನಕೃದಂತಪ್ರತ್ಯಯವುಳ್ಳ ಪದ: ವಿದಿತಮೆನಿಪ್ಪವ್ಯಯಮುಂ ತ್ಯದಾದಿಯುಂ ಶತೃಣಂತಮುಂ ಸಂಸ್ಕೃತದೊಳ್ ಪದವಿಧಿಯಂ ನೆಱೆ ತಳೆದಲ್ಲದೆ ಕನ್ನಡದಲ್ಲಿ ಲಿಂಗಮಾಗವು ನಿಜದಿಂ . . . ಕ್ವಣತ್, ಝಣತ್, ಭ್ರಮತ್ (ಶಮದ. ೮೧). [ಸಂ.]

**ಶತ್ರ** (ನಾ). ಉಚಿತವಾಗಿ ವಸತಿ ಹಾಗೂ ಊಟವನ್ನು ಒದಗಿಸುವ ಸ್ಥಳ ; ಧರ್ಮಛತ್ರ : ಪೃಥಿವಿಗಂಗರಸಂ . . . ಶತ್ರಕ್ಕಂ ಮೂವತ್ತು ಗದ್ಯಾಣ ಪೊನ್ನಂ ಕೊಟ್ಟಂ (ಮೈಆರಿ. ೧೯೩೫, ೧೫-೬ ; 9ನೆಯ ಶತ?) ; ಸಾರಂಗೇಶ್ವರದೇವರ್ಗ್ಗಮಲ್ಲಿಯ ಶತ್ರಕ್ಕಂ ಸರ್ವ್ವನಮಶ್ಯಮಾಗೆ ಬಿಟ್ಟ ಸಿರಿಪುರಂ (ಸೌಇಇ. IX - i, ೧೧೯-೩೩; 1057). 'ಛತ್ರ' ಪರಾ. [IP ಇದು 'ಸತ್ರ' ಎಂಬುದರ ಅಪಲಿಖಿತವಿರಬಹುದು]

**ಶತ್ರಸಾಲೆ** (ನಾ). ಛತ್ರ; ಧರ್ಮಶಾಲೆ: ತ[ನ್ನ]ಮುನ್ನೆ ಪಡಿಸಲಿಸಿ ಮಾಡಿಸಿದ ವಿಷ್ಣು ಗೃಹದ ಪ್ರತಿಬದ್ಧಮಾಗೆ ಶತ್ರಸಾಲೆಯಂ ಮಾಡಿಸಿ (ಸೌಇಇ. XI- i, ೮೪-೧೪ ; 1049). [IP ಇದು 'ಸತ್ರಶಾಲೆ' ಎಂಬುದರ ಅಪಲಿಖಿತವಿರಬಹುದು]

**ಶತ್ರು** (ನಾ). ೧. ಹಗೆತನವುಳ್ಳವನು; ವೈರಿ: ಎನ್ನ ಶತ್ರುವದೊಂದು ತಾಣದೊಳ್ ಪುಟ್ಟಿರ್ದಂ ಆತನಂ . . . ಕೊಂದಿಕ್ಕುವುದೆಂದು ಬೆಸಸಿದಂ (ಜಗವಿ. ೩-೨೨ ವ). ೨. ಹಗೆಯಾದ ನೆರೆಯ ಅರಸ ; ನೆರೆಹೊರೆಯ ವೈರಿರಾಜ: ಶತ್ರುಗಳುಮ ನಭ್ಯಂತರಶತ್ರುಗಳಾಱುಮನದಿರ್ಪೆ ಗೆಲ್ದುದಱಿಂದಂ ಶತ್ರುಂತಪನೆನಿಸಿದ ಜಿತಶತ್ರುಗೆ ಜಿತಶತ್ರುನಾಮಮಾಯ್ತನ್ವರ್ಥಂ (ಅಜಿಪು. ೨-೪೯). [ಸಂ.]

**ಶತ್ರುಂತಪ** (ನಾ). ವೈರಿಗಳಿಗೆ ದುಃಖವನ್ನುಂಟುಮಾಡುವವನು: ಶತ್ರುಗಳಾಱು ಮನದಿರ್ಪೆ ಗೆಲ್ದುದಱಿಂದಂ ಶತ್ರುಂತಪನೆನಿಸಿದ ಜಿತಶತ್ರುಗೆ ಜಿತಶತ್ರುನಾಮ ಮಾಯ್ತನ್ವರ್ಥಂ (ಅಜಿಪು. ೨-೪೯). [ಸಂ.]

**ಶತ್ರುಂದಮ** (ನಾ). ಹಗೆಗಳನ್ನು ನಾಶಗೊಳಿಸಿದವನು : ಇಂದಗಿ ಸಾಧಾರಣ ಶರಸಂದೋಹದಿನೆಚ್ಚು ಕಾದಲಣಮಾಜಿದ ಶತ್ರುಂದಮನೊಳ್ ಲಕ್ಷ್ಮಣನೊಳ್ ತಂದಂ ದಿವ್ಯಾಸ್ತ್ರಗರ್ಭಶರಧಿಗೆ ಕೈಯಂ (ಪಂಪರಾಮಾ. ೧೪-೧೯). [ಸಂ.]

**ಶತ್ರುಘ್ನ** (ನಾ). ೧. ಹಗೆಗಳನ್ನು ಸಂಹರಿಸುವವನು. ೨. ಶ್ರೀರಾಮನ ತಮ್ಮ; ದಶರಥನ ಕಿರಿಯ ಮಗ: ಶುಭದಿನಮುಹೂರ್ತದೊಳ್ ಸುಮಿತ್ರ ಲಕ್ಷ್ಮಣನಂ ಕೈಕೆ ಭರತನಂ ಸುಪ್ರಭೆ ಶತ್ರುಘ್ನನಂ ಪಡೆವುದುಂ (ಪಂಪರಾಮಾ. ೩-೧೩೩ ವ) ; ಲಕ್ಷ್ಮಣ ಭರತ ಶತ್ರುಘ್ನರೊಡಗೂಡಿ ತಳೆದು ಕೌಶಿಕನ ಮಖಮಂ ಕಾಯ್ದು (ಜೈಮಿಭಾ. ೧೮-೨). [ಸಂ.]

**ಶತ್ರುತ್ವ** (ನಾ). ಹಗೆತನ; ದ್ವೇಷ: ಉಳಿದವರ ಶತ್ರುತ್ವಕ್ಕಾಗಲೀ, ಮಿತ್ರತ್ವಕ್ಕಾಗಲೀ ಬೆಲೆಯಿಲ್ಲ (ಅನ್ನಾವ. ೨೪) ; ನಿನ್ನಂತವನ ಶತ್ರುತ್ವವನ್ನು ಗಳಿಸಿ ಕಟ್ಟಿಕೊಂಡಿರುವವನು (ಸಂಜೀವಿ. ೮೫). [ಸಂ.]

**ಶತ್ರುದಲ್ಲಣ** (ನಾ). ಹಗೆಗಳನ್ನು ತಲ್ಲಣಗೊಳಿಸುವವನು; ದ್ವೇಷಿಗಳನ್ನು ಹೆದರಿಸುವವನು: ಪರನಾರಿಸೋದರನುರ್ವರ ಶತ್ರುದಲ್ಲಣನು ಕರ ಪಾಪಭಯವ ಹೊರೆವ ಗುಣಿಯಹ ನೃಪಗೆ ಸ್ಥಿರವಿಹಳು ಲಕ್ಷ್ಮಿ (ಸರ್ವಜ್ಞ. ೭೨೭). [ಶತ್ರು + ತಲ್ಲಣ (<ತಲ್ಲಟ)]

**ಶತ್ರುಸಂಘಾತ** (ನಾ). ಹಗೆಗಳ ಸಮುದಾಯ ; ವೈರಿಗಳ ಗುಂಪು: ಶತ್ರು ಸಂಘಾತಮಿದಿರ್ಚೆ ದೀಪ್ತಿಗಿದಿರಾದ ಪತಂಗದ ಮಾಳೆಯಾದುದುಂ (ಪುಷ್ಪಪು. ೩-೧೯). [ಸಂ.]

**ಶತ್ರುಹ** (ನಾ). ೧. = ಶತ್ರುಘ್ನ ೧. ೨. = ಶತ್ರುಘ್ನ ೨: ಸುಮಿತ್ರೆಯಣುಗರ ನೇಮದಲಿ ಲಕ್ಷ್ಮಣನು ಶತ್ರುಹ ನಾಮವಿಟ್ಟಾದರದಿ ಸಲಹಿದ ನಿಜಕುಮಾರಕರ (ಕೌಶಿರಾ. ೧-೭೦); ಶತ್ರುಹಂ - ಅಣ್ಣಯ್ಯ! ದೇವಿ ಸಾಕ್ಷಾಲ್ಲಕ್ಷ್ಮೀದೇವಿಯೆಂಬುದಂ ನೀನಱಿಯೆಯ? (ರಾಮಾಶ್ವ. ೨೫-೧೨). [ಸಂ.]

**ಶನಿ** (ನಾ). ೧. ಸೂರ್ಯನ ಮಗ ; ☞ ಈತನ ಬಣ್ಣ ಕಪ್ಪು. ಕೃಷ್ಣವರ್ಣದ ವಸ್ತ್ರವನ್ನು ಧರಿಸಿದ ಈತನು ಸಾಮಾನ್ಯವಾಗಿ ಕೆಡುಕನ್ನುಂಟುಮಾಡುವನೆಂದು ನಂಬಲಾಗಿದೆ: ಮೂಱು ತಿಂಗಳಾಯ್ತವಚಱನಿಂತು ನಿಂದನೊಳನೇ ಶನಿ ನಿಲ್ಲವೊಲಿಲ್ಲಿ ಪಾಱಿಗಿನ್ನೆವರೆಗಮಿರ್ದು (ಆದಿಪು. ೯-೮೯) ; ತ್ರಿಪೃಷ್ಠನರಾತಿಧ್ವ[ಜ]ನೀಸಮಸ್ತಮದ ಸಾಮಜಕುಲನಗಕುಲಕೆ ಶನಿಯುಮಶನಿಯುಮಾದಂ (ಶಾಂತಿಪು. ೫-೨೪) ; ದಿನ ದಿನ ಶನಿ ಕಾಡಿದರೆ ಬಾಳೋದು ಯಾವಾಗ? (ಗಾದೆ). ೨. ಶಿವನ ಹೆಸರುಗಳಲ್ಲಿ ಒಂದು. ೩. ಶನಿವಾರ. ೪. ಹಾವು ; ಸರ್ಪ: "ಉರಗಂ . . . ಶನಿ ಗೂಢಪಾದ್ವಿಷಧರಂ ಸರ್ಪಂ ದ್ವಿಜಿಹ್ವಾಹ್ವಯಂ" (ವಸ್ತುಕೋ. ೧೯-೭). ೫. [ಜ್ಯೋತಿ] ನವಗ್ರಹಗಳಲ್ಲಿ ಒಂದು: ಶನಿ ರೋಹಿಣಿಯೊಳ್ ಕುಜನಶ್ವಿನಿಯೊಳ್ ಗುರು ಪುಷ್ಯದೊಳ್ . . . ಇರೆ ಸಿದ್ಧದಿನಂ (ಲೋಕೋಪ. ೧-೨೦) ; ಶನಿ ಘಟ ಮೃಗಕ್ಕೆ ಗುರು ಝಷ ಧನುಗೆ ಬುಧಂ ಮಿಥುನ ವಧುಗೆ ಶಶಿ ಕರ್ಕಿಗೆ ಭೌಮನಜಾಳಿಗೆ ರವಿ ಹರಿಗುಶನನುಕ್ಷತೌಳಿಗೆ ತದಂಶ ಕಕ್ಕಮಧೀಶರ್ (ಜಾತಕ. ೧-೨೫). [ಸಂ.]

**ಶನಿಕಾಟ** (ನಾ). ಶನಿದೇವತೆಯಿಂದುಂಟಾಗಿರುವುದೆಂದು ನಂಬಲಾದ ಹಿಂಸೆ: ಯಾವ ಶನಿಕಾಟದಿಂದ ಅವನು ಹೀಗಾದನೊ (ಸಂಸ್ಕಾರ. ೨೨). [ಶನಿ + ಕಾಟ]

**ಶನಿಗ್ರಹ** (ನಾ). = ಶನಿ ೫: ಸೂರ್ಯನನ್ನು ಒಂದು ಪ್ರದಕ್ಷಿಣೆ ಹಾಕುವುದಕ್ಕೆ ಶನಿಗ್ರಹಕ್ಕೆ ೨೯ ವರ್ಷಗಳಿಗಿಂತ ಹೆಚ್ಚು ಬೇಕಾಗುತ್ತದೆ (ಆಕಾಶ. ೨೪). 'ನವಗ್ರಹ' ಪರಾ. [ಸಂ.]

**ಶನಿಪ್ರದೋಷ** (ನಾ). ಶನಿವಾರದಂದು ಬೀಳುವ ಶುಕ್ಲಪಕ್ಷದ ತ್ರಯೋದಶಿಯ ಸಂಜೆಯಲ್ಲಿ ಮಾಡುವ ಶಿವಪೂಜೆ: ಶನಿಪ್ರದೋಷದಿ ಪೋತು ಸಾವಿರ ಬಿಲ್ವಪತ್ರಾರಾಧನದ ಫಲವ ಈ ತತುಕ್ಷಣ ಕೊಟ್ಟಡೆ (ಕೌಶಿರಾ. ೧-೭೭). [ಸಂ.]

**ಶನಿಬಲ** (ನಾ). [ಜ್ಯೋತಿ] ನಿರ್ದಿಷ್ಟಸಮಯದಲ್ಲಿ ಶುಭಫಲವನ್ನು ಕೊಡಲು ಶನಿಗ್ರಹಕ್ಕೆ ಇರುವ ಶಕ್ತಿ: ಗುರುಬಲ ಶನಿಬಲದಿರವಂ ತರದಿಂದಂ ಕೇಳ್ದು ನೋಡಿ ನಡೆದರ್ ಮೊನೆಗಂ (ಹಮ್ಮಿರ. ೩-೨). [ಸಂ.]

**ಶನಿವಾರ** (ನಾ). ವಾರದ ಏಳುದಿನಗಳಲ್ಲಿ ಒಂದು ; ಶನಿಯು ಅಧಿಪತಿಯಾಗಿರುವ ದಿವಸ: ಒಂದು ಶನಿವಾರ ಮೂರನೆಯ ತರಗತಿಯ ಮಕ್ಕಳು ಶಾಲೆಗೆ ಬಂದರು (ಕಪಪ್ರ. ೩-೩೨) ; ಮಾರನೆಯ ದಿನ ಶನಿವಾರವಾಗಿದ್ದುರಿಂದ . . . ಶಾಲೆಯಿರಲಿಲ್ಲ (ಶನಿಸಂ. ೨೨೨).

**ಶನಿವಾರಸಿದ್ಧಿ** = ಶನಿವಾರವು ಶುಭಸೂಚಕವೆಂದು ಭಾವಿಸಿರುವವನು; ಒಂದು ಬಿರುದು: ಚಾಳುಕ್ಯರಾಜ್ಯರಾಜ್ಯಾಭಿವೃದ್ಧಿ ಶನಿವಾರಸಿದ್ಧಿ ಶ್ರೀಮನ್ಮಹಾಮಣ್ಡಳೇಶ್ವರ ಆಹವಮಲ್ಲ ಪೆರ್ಮ್ಮಾನಡಿಗಳು (ಕಇಆ. ೪೫-೩-೧೯; 1084); ಶನಿವಾರ ಸಿದ್ಧಿ ಸದ್ಧರ್ಮ್ಮಬುದ್ಧಿ ಗಿರಿದುರ್ಗ್ಗಮಲ್ಲ ರಿಪುಹೃದಯಸೆಲ್ಲ (ಎಕ. II, ೫೭೦-೨೩; 1183). [ಸಂ.]

**ಶನೀಶ್ವರ** (ನಾ). = ಶನಿ ೧ : ಸಾಮಾನ್ಯರ ಬಾಯಿಯಲ್ಲಿ 'ಶನ್ಯಶ್ಚರ' ಹೋಗಿ 'ಶನೀಶ್ವರ' ಆಗಿದೆ (ಜ್ಯೋತಿರ್ವಿ. ೧೩೭) ; ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡ (ಗಾದೆ). [< ಸಂ. ಶನೈಶ್ಚರ]

**ಶನೈಶ್ಚರ** (ಗು). ೧. ನಿಧಾನವಾಗಿ ಚಲಿಸುವ; ಮಂದಗತಿಯಲ್ಲಿ ಸಾಗುವ. (ನಾ). ೨. = ಶನಿ ೧: "ಅಸಿತಃ . . . ಶನೈಶ್ಚರಃ, ಶೌರಿಃ - ಈ ೬ ಶನಿಯ ಪೆಸರ್" (ಹಲಾಯು. ೯-೪೯) ; ರವಿ ಶನೈಶ್ಚರ ರಾಹು ಬುಧ ಭಾರ್ಗವರು ಕರ್ಣನ ದೆಸೆಯಲಾ ಮಿಕ್ಕವರು ಪಾರ್ಥನ ದೆಸೆಯಲಾಯಿತು (ಕುವ್ಯಾಕ. ೨೨-೬). ೩. [ಜ್ಯೋತಿ] ನಿಧಾನವಾಗಿ ಚಲಿಸುವ ಗ್ರಹ; ಶನಿಗ್ರಹ: "ಶನೈಶ್ಚರ" ಎಂದರೆ ಮೆಲ್ಲನೆ ನಡೆಯುವವನು (ಜ್ಯೋತಿರ್ವಿ. ೧೩೭). [ಸಂ.]

**ಶಪಥ** (ನಾ). ೧. ಶಾಪ. ೨. ಆಣೆ ; ಭಾಷೆ ; ಪ್ರತಿಜ್ಞೆ : "ಶಪಥಂ ಸೂರುಳ್" (ವಸ್ತುಕೋ. ೮೦-೩೪) ; ಅವನಿಯನೆಯ್ದೆ ಕೊಂಡಡಂತದನೊಡಂಬಟ್ಟು ಶಪಥಕ್ಕೆ ಮಯ್ಯೊಟ್ಟನವನಲ್ಲಿ ಹುಸಿ ಹುಟ್ಟದಿನ್ನಕಟ (ಹಚಕಾ. ೮-೬೧); ಶಪಥವುಂಟೆ ದ್ಯೂತವರ್ತಿಗೆ (ಕೌಶಿರಾ. ೧೯-೨೧). [ಸಂ.]

**ಶಪಥಂಗೆಯ್** (ಕ್ರಿ). ಆಣೆಯನ್ನು ಮಾಡು; ಪ್ರತಿಜ್ಞೆಮಾಡು : ಶಪಥಂಗೆಯ್ವುದಲ್ಲದೆಂತುಂ ಬಿಡೆನೆನುತಧಟಂದಿರ್ವರಂ ತೀರ್ಥವಾರಿ ಸ್ನಪನಂಗೆಯ್ವುತ್ತ (ವೃಷವಿ. ೧೭-೭೮). [ಶಪಥ + ಕೆಯ್]

**ಶಪನ** (ನಾ). ೧. ಬಯ್ಗುಳು; ನಿಂದೆ: ತೀವಿದುದು ಶಪನಶತಂ . . . ಅದಱೊಡನೆ ಚೈದ್ಯ ನಿನ್ನಾಯುಷ್ಯಂ (ಜಗವಿ. ೧೭-೪೮). ೨. ಆಣೆ ; ಪ್ರಮಾಣ ; ಭಾಷೆ. [ಸಂ.]

**ಶಪಿತ** (ಗು). ೧. ಶಾಪಗ್ರಸ್ತವಾದ. (ನಾ). ೨. ಶಾಪಗ್ರಸ್ತನಾದವನು; ಶಾಪಕ್ಕೊಳಗಾದವನು: ಗುರುವಿನಿಂದ ಶಪಿತನಾದ ನೀನು ತಿರಿಗಿ ತಾತನಂ ನಮಸ್ಕರಿಸಿ (ಕಬುಮಾ. ೯೮-೮). [ಸಂ.]

**ಶಪಿಯಿಸು** 'ಶಪಿಸು' ನೋ.

**ಶಪಿಸು, ಶಪಿಯಿಸು** (ಕ್ರಿ). ೧. ಶಾಪವನ್ನು ಕೊಡು : ಈ ಅಳೀಕಕಾಮಿಯಾನುಸಿರ್ದಂತೆ ಗಿಳಿಯಾಗಿ ಪುಟ್ಟುಗೆಂದು ಶಪಿಸಲೊಡನೆ (ಕಾದಂಉ. ೫೭೪) ; ಬನಕೆ ಬಂದೆನಗೆ ನಮಿಸದೆ ಹೋದನೆಂದು ನೆಟ್ಟನೆ ಶಪಿಸದಿರನು (ಹಚಕಾ. ೬-೫೫); ಕಣ್ವಮುನಿ ತಾ ಮುನಿದನಾದರೆ ಶಪಿಸುವನು (ಕುವ್ಯಾಆ. ೩-೧೫). ೨. ನಿಂದಿಸು; ತೆಗಳು : ಪೀಡಿತಗ್ರಾಮಶ್ಯಾಮಾಂಗಿ ಕೋಪಕ್ಕಳುತೆ ಬೈಯುತ್ತೆ ಶಪಿಸುತ್ತೆ ತೊಳಲುವಳ್ (ಚಿತ್ರಾಂಗ. ೫೩-೧೪೫೭). **ಶಪಿಯಿಸು** : ೧. ಪರಮಾರ್ಥಂ ನಿಜಜನಕರ್ಪರಸಿದ ಪರಕೆಗಳು ಬಯ್ದು ಬಯ್ಗುಳ್ಳಕ್ಕಳ್ಗಿರದೆಯ್ದುಗುಮದಱಿಂದಂತಿರೆ ಶಪಿಯಿಸಲಾಗದು (ಕಾದಂಉ. ೪೮೭). [ಶಪನ + - ಇಸು]

**ಶಪ್ಪ** (ನಾ). ಗುಹ್ಯೇಂದ್ರಿಯದ ಮೇಲಿನ ಕೂದಲು; ಶಾಟ: ಕೊಟ್ಟರೆ ನನ್ನಪ್ಪ ಕೊಡದಿದ್ದರೆ ಶಪ್ಪ (ಗಾದೆ). [< ಸಂ. ಶಷ್ಪ]

**ಶಫ** (ನಾ). (ಹಸು ಮೊದಲಾದ) ಪ್ರಾಣಿಗಳ ಕಾಲಿನ ಗೊರಸು, – ಕೊಳಗು: ರಾಸಭರಾಕ್ಷಸ . . . ಪಾತಾಳತಳದ ಮುಚ್ಚುಳನೊಡೆದು ಕಳೆದಪುದೆಂಬಂತೆ ಭೂತಳಮನಪ್ಪಳಿಸಿ ಪೊಯ್ಯ ನಿಷ್ಠುರಶಫಟಂಕಮುಂ ಭಯಂಕರಮಪ್ಪಿನಂ ಬಂದು (ಜಗವಿ. ೪-೪೦ ವ). [ಸಂ.]

**ಶಫರ** (ನಾ). ೧. ಹೊಳಪುಳ್ಳ ಒಂದು ಬಗೆಯ ಸಣ್ಣ ಮೀನು. ೨. ಮೀನು; ಮತ್ಸ್ಯ : ಅಖಿಲಶಫರಪದಾತ್ಯುತ್ಕರಮುಗ್ರಗ್ರಾಹರಥಂ ಭರತಂಗಿತ್ತುದು ಪಯೋಧಿಬಳ ವಿಳಸನಮಂ (ಆದಿಪು. ೧೨-೭೮); ಮನೋಜರಾಜವಿಜಯಕೇತನಶಫರ ಸಂಚಾರಮಿಲ್ಲದ ಸರೋವರಂಗಳಿಲ್ಲ (ಪಂಪರಾಮಾ. ೧-೧೦೭ ವ); ಮಡುಗಟ್ಟಿದ ಮುಖರಸದೊಳ್ತೇಂಕಿ ತೇಲ್ವ ಚಪಲಶಫರಂಗಳೆಂಬಂತೆ ಚಂಚಲಾಕ್ಷಿಗಳೆಸೆಯೆ (ರಾಜಶೇ. ೫-೧೯ ವ). [ಸಂ.]

**ಶಫರಲೋಚನೆ** (ನಾ). ಮೀನಿನಂತೆ ಕಣ್ಣುಗಳುಳ್ಳವಳು ; ಮೀನಾಕ್ಷಿ: ಕೇಳ್ವನಜಾನನೇ ಶಫರಲೋಚನೇ . . . ಈಟ್ಟುಕೊಂಡುವಳಿಗಳ್ ಸುಮನೋಮಕರಂದಗಂಧಮಃ (ಆದಿಪು. ೬-೬೮). [ಸಂ. ಶಫರಲೋಚನಾ]

**ಶಫರಿ** (ನಾ). ೧. =ಶಫರ ೧: ತರಳನಯನವೂ ಶಫರಿಗಳೊ ತಾವರೆಯೂ ಮುಖವೋ ತುಂಬಿಗಳೊ ನಿಬಿಗುರುಳುಗಳೊ (ಕುವ್ಯಾಆ. ೧೩-೧೮). ೨. ಹೆಣ್ಣುಮೀನು: "ಪ್ರೋಷ್ಠಾ, ಶಫರೀ - ಈ ೨ ಪೆ(ಹ)ಣ್ಮೀನ್" (ಪಲಾಯು. ೧೦೮-೬೬). ೩. [ಜ್ಯೋತಿ] ಕ್ಷೀಣಕಾಂತಿಯಿಂದ ಕೂಡಿದ ಒಂದು ನಕ್ಷತ್ರಪುಂಜ : ಶಫರಿಯ ಗ್ರೀಕ್ ಹೆಸರು ವೋಲನ್ಸ್ - ಹಾರುವ ಮೀನು (ನಕ್ಷತ್ರ. ೭೫). [ಸಂ. ಶಫರೀ]

**ಶಬ** 'ಸಬ' ನೋ.

**ಶಬರ** (ನಾ). ೧. ಬೇಡ ; ಕಿರಾತ : ಒರ್ವ ಶಬರ ಶಿಬಿರಾಧಿನಾಯಕಂ ಬೇಂಟೆವೋಗಿ ಪಕ್ಷಿಗಳನಲ್ಲಿಯುಂ ಪಡೆಯದೆ . . . ಕಂಪಿತಶರೀರನಾಗಿ ಬರುತ್ತುಂ (ಪಂಚತಂ. ೨೪೫-೫); ಶಬರರೊಳೊಂದಿವೂರನಿಱಿವಲ್ಲಿ ನಿಶಾತಶತಾಸ್ತ್ರಘಾತದಿಂದವಿರಳರಕ್ತಧಾರೆ . . . ಪೊಱಪೊಣ್ಮೆ ಜೀವನಂ ತವುತರೆ (ಪಾರ್ಶ್ವಪು. ೪-೬೩). ೨. ಶಿವ. ೩. ನೀರು. ೪. ಮೀಮಾಂಸಾಶಾಸ್ತ್ರದ ಜೈಮಿನೀಸೂತ್ರಗಳ ಭಾಷ್ಯಕಾರ : ಜೈಮಿನಿ, ಶಬರ, ಪ್ರಭಾಕರ, ಕುಮಾರಿಲ ಮೊದಲಾದವರು ನಿರೀಶ್ವರವಾದಿಗಳೆಂದು ಪ್ರಸಿದ್ಧಿಯಿರುವುದು (ಒಂದಸಾ. ೧೫೩). 'ಶಬರೋಕ್ತಿ' ಪರಾ. [ಸಂ.]

**ಶಬರಪಳ್ಳಿ** (ನಾ). ಬೇಡರು ವಾಸಿಸುವ ಹಳ್ಳಿ: "ಶಬರಪಳ್ಳಿ ಪಕ್ಕಣಮನಿಕ್ಕುಂ" (ಮಂಗರಾ. ೫೫-೧೦). [ಶಬರ + ಪಳ್ಳಿ]

**ಶಬರಾಧಿಪ** (ನಾ). ಬೇಡರ ಒಡೆಯ; ಮುಖಂಡ : "ಶಬರಾಧಿಪರಲ್ಲರ್ ನೆರೆದು ಬಂದು . . . ಕವರಲ್ಕೆ (ದಶಕು. ೧೦-೧೦). [ಸಂ.]

**ಶಬರಿ** (ನಾ). ೧. ಬೇಡರ ಹೆಂಗಸು; ಬೇಡಿತಿ: ಇದಿರೊಳ್ ಗರ್ಜಿಸಿ ಪುಲಿ ನಿಲೆ ಬೆದಱಿ ಕರಂ ಶಬರಿ ಬರಿಯನಪ್ಪಲೊಡಂ (ಚಂದ್ರಪ್ರ. ೫-೫೯) ; ಎಸೆದುದಾ ಗಿರಿ . . . ಕಾಡುಗಳ ಬೀಡುಗಳ ಶಬರಿಯರ ಸಂಕುಲದೊಳು (ಜೈಮಿಭಾ. ೧೦-೩) ; ರೂಪಮದೋನ್ಮತ್ತ ಶಬರಿಯ ಸುಖದೊಳು ಸಂದವು ಬಹಳ ದಿನಗಳು (ಗಾಥಾಸ. ೨-೧೯). ೨. ರಾಮನ ಭಕ್ತೆಯಾದ ಒಬ್ಬ ಬೇಡರ ತಪಸ್ವಿನಿ : ರಾಕ್ಷಸಕುಲಾಂತಕರ್ನದಿದರು ಶಬರಿಯ ನಿಜಾಶ್ರಮವ (ತೊರರಾ. ೩-೧೨-೨೬) ; ತಾಳಲಾರದ ಶೋಕಭಾರದಿಂ ದಾಶರಥಿ ಏಳಲಾರದೆ ಶಯ್ಯೆಯಿಂ ಶಬರಿಶುಶ್ರೂಷೆಯಂ ಬೇಳ್ಪತಿಥಿಯಾದನ್ (ಶ್ರೀರಾಮಾ. ೨೭೪-೩೦೧). [ಸಂ. ಶಬರೀ]

**ಶಬರೋಕ್ತಿ** (ನಾ). ೧. ಬೇಡನ ಮಾತು; ಕಿರಾತನ ನುಡಿ. ೨. ಜೈಮಿನೀಯ ಸೂತ್ರಗಳಿಗೆ ಭಾಷ್ಯವನ್ನು ಬರೆದ ಶಬರಸ್ವಾಮಿಯ ಹೇಳಿಕೆ. ೧, ೨: ಷಡಭಿಜ್ಞಂ ಕ್ಷಣಿಕಂ ಜಡಾತ್ಮನೆನಿಪಂ ನೈಯಾಯಿಕಂ ವೃತ್ರವಿದ್ವಿಡಮಾತ್ರ್ಯಂ ಸಲೆ ಶೂನ್ಯವಾದಿ ಶಬರೋಕ್ತ್ಯಾಸಕ್ತಮೀಮಾಂಸಕಂ ನಡೆವಂ ಕಾಪಿಳವೃತ್ತಿಯಂ ಬಿಡದೆ ಸಾಂಖ್ಯಂ (ಚಂದ್ರಪ್ರ. ೧-೨೫). [ಸಂ.]

**ಶಬಲ, ಶಬಳ** (ಗು). ೧. ಅನೇಕ ಬಣ್ಣಗಳಿಂದ ಕೂಡಿರುವ; ಬಣ್ಣಬಣ್ಣದ: ಮಧುಕರಕುಲಶಬಲಮಲ್ಲಿಕಾಮುಕುಳದೊಳ್ (ಆದಿಪು. ೭-೨೭ ವ). ೨. ಚುಕ್ಕೆಗಳಿಂದ ಕೂಡಿದ. (ನಾ). ೩. ಅನೇಕ ಬಣ್ಣ; ಮಿಶ್ರವರ್ಣ : "ಶಬಲಮನಲು ಸಾರಂಗಮನ ಹಲವುವರ್ಣಕ್ಕೆ ನಾಮಂ" (ಮಂಗರಾ. ೧೩೦-೨೨). ೪. ಚುಕ್ಕೆಗಳಿಂದ ಕೂಡಿದುದು. ಶಬಳ : ೩. "ಸಾರಂಗಃ, ಶಬಳಃ - ಈ ೨ ಬೆರಕೆವರ್ಣಂ" (ಹಲಾಯು. ೧೨-೫೧). ೫. ಬೆರಕೆ ; ಮಿಶ್ರಣ: "ಚಿತ್ರಿತಂ . . . ಶಬಳಮನೆ ಕಬರಮನೆ ಶಾರಮನೆ ಮಿಶ್ರಕ್ಕೆ ನಾಮಮಕ್ಕುಂ" (ಮಂಗರಾ. ೧೩೨-೫೫). [ಸಂ.]

**ಶಬಲತೆ** (ನಾ). ೧. ಅನೇಕ ಬಣ್ಣಗಳಿಂದ ಕೂಡಿರುವಿಕೆ. ೨. ಅನೇಕ ಗುಣ, –ಬಗೆ: 'ಶಬಲತೆವೆಱು' ಪರಾ. ೩. ಮಿಶ್ರಣ: ಒಮ್ಮೊಮ್ಮೆ ವ್ಯಭಿಚಾರಿಭಾವಗಳ ಶಬಲತೆಯೇ ಹೃದಯವಿಶ್ರಾಂತಿಸ್ಥಾನವಾಗಬಹುದು (ಧ್ವನ್ಯಾಲೋ. ೫೯). [ಸಂ. ಶಬಲತಾ]

**ಶಬಲತೆವೆಱು** (ಕ್ರಿ). ಬೇರೆ ಬೇರೆ ಗುಣಗಳ ಮಿಶ್ರಣವನ್ನು ಹೊಂದು: ತತ್ತನಿಪ ವಾಚ್ಯದಲಿ ಶಬಲತೆವೆತ್ತ ಬ್ರಹ್ಮದಲಾಯ್ತು ಸದಸದ್ವ್ಯಕ್ತಿಯಾದವ್ಯಕ್ತವದಱಿಂದೀ ಮಹತ್ತತ್ತ್ವ (ಅಮೃತ.೪-೧೧). [ಶಬಲತೆ + ಪೆಱು]

**ಶಬಲಿತ, ಶಬಳಿತ** (ಗು). ೧. ಅನೇಕ ಬಣ್ಣಗಳಿಂದ ಕೂಡಿದ; ಬಣ್ಣಬಣ್ಣದ: ಭಯಾನಕೋಭಯತಟಗುಹಾಗಹ್ವರ ನಿರ್ಯಜ್ಝರದಜಗರಗಲಗಲಿತಗರಲ ಶಬಲಿ[ಪಾಠಾಂ.ಳಿ]ತ ಸಲಿಲಪ್ರವಾಹೆಯಂ . . . ವೈತರಣಿಯಂ ಪೊಕ್ಕಾಗಳ್ (ಆದಿಪು. ೫-೯೭ ವ) (ನಾ). ೨. ಬಣ್ಣಬಣ್ಣವಾದುದು; ಅನೇಕ ಬಣ್ಣಗಳಿಂದ ಕೂಡಿದುದು: ವಿವಿಧ ಮಣಿಶಬಲಿತಂ . . . ದೇವಾಗಾರಂ (ಜಗವಿ. ೩-೩೩).

**ಶಬಳಿತ:** ೧. ನೀಲಮಣಿಶಬಳಿತ ವಿಭ್ರಮಮಂ ಪಡೆದುವು ಪಂಚಮುಸಮುದ್ರ ವಿದ್ರುಮಲತಾಪ್ರತಾನಾವಳಿಗಳ್ (ಶಾಂತಿಪು. ೧೧-೧೦೫); ವಿಚಿತ್ರವರ್ಣ ಶಬಳಿ[ಪಾಠಾಂ. ಲಿ]ತ ಸುವರ್ಣಪರ್ಯಣಂಗಳಿಂದುನ್ಮುಖಮಯೂಖ . . . ಮಣಿಪುತ್ರಿಕೆಗಳಿಂ (ಪಂರಾಮಾ. ೧೨-೨ ವ). [ಸಂ.]

**ಶಬಳ** 'ಶಬಲ' ನೋ.

**ಶಬಳಚ್ಛಾಯೆ** (ನಾ). ಅನೇಕ ಬಣ್ಣಗಳ ಕಾಂತಿ, – ಹೊಳಪು: ಕಣ್ಗೆಸೆದುದು ಶಬಳಚ್ಛಾಯೆಯಿಂ ಶಕ್ರಚಾಪಂ (ಮಲ್ಲಿಪು. ೮-೮೫). [ಸಂ. ಶಬಲಚ್ಛಾಯಾ]

**ಶಬಳಮರೀಚಿ** (ನಾ). =ಶಬಳಚ್ಛಾಯೆ: ವಿವಿಧವರ್ಣವಿಶೇಷಚ್ಛದಕುಸುಮಫಳಕುಳಂ ತೋರ್ಪುದು ಶಬಳಮರೀಚಿಹೃದ್ಯಮುದ್ಯಾನವನಂ (ಚಂದ್ರಪ್ರ. ೧೧-೫೧). [ಸಂ. ಶಬಲಮರೀಚಿ]

**ಶಬಳಿತ** 'ಶಬಲಿತ' ನೋ.

**ಶಬಾಲಯ** (ನಾ). ಶವಸಂಸ್ಕಾರವನ್ನು ಮಾಡುವ ಸ್ಥಳ; ಸುಡುಗಾಡು; ಸ್ಮಶಾನ: ನಡತಂದಾ ಬಿಜ್ಜಾಧರ ಪೊಳಲ ತೆಂಗಡೆಯ ಶಬಾಲಯಕಾಗಿ . . .ಪೋಗುತಿರ (ಶ್ರೀಪಾಲ. ೭-೧೫೨). [< ಸಂ. ಶವಾಲಯ]

**ಶಬಾಸ್** 'ಶಹಬಾಸ್' ನೋ.

**ಶಬಾಸು** 'ಶಹಬಾಸ್' ನೋ.

**ಶಬುದ** 'ಸಬುದ' ನೋ.

**ಶಬೆ** 'ಸಬೆ' ನೋ.

**ಶಬ್ದ** (ನಾ). ೧. ಸದ್ದು; ಸಪ್ಪುಳ; ಧ್ವನಿ: ಜಂಗಮದ ಶಬ್ದವ ಕೇಳಿ ಪ್ರಸಾದಕ್ಕೆ ಕೈ ದುಡಿಕಿದರೆ ಅದು ಪ್ರಸಾದವಲ್ಲ ಕಿಲ್ಬಿಷ (ಬಸವ. ೬೯೯); ಶಬ್ದವೆಂದರೆ ನಮ್ಮ ಕಿವಿಗಳಲ್ಲಿ ಉಂಟಾಗುವ ಒಂದು ಅನುಭವ ಮತ್ತು ಆ ಅನುಭವವನ್ನು ಉಂಟುಮಾಡಬಲ್ಲ ಕಾರಣವಿಶೇಷ (ಭೌತವಿ. ೧೫೩). ೨. [ವ್ಯಾಕ] ಅಕ್ಷರಗಳ ಗುಂಪು ; ಪದ: ಪ್ರಾಯಿಕಮಕ್ಕುಂ ದೀರ್ಘಾಮ್ನಾಯಮದಂತಲ್ಲ ಶಬ್ದದೊಳ್ ವೃತ್ತಿಗತಂ (ಕಾವ್ಯಾವ. ೨೫೧); ಅನುಕೂಲಪವನನಿಂ ಜೀವನಿಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂಗಿನವೋಲ್ ಶಬ್ದದ್ರವ್ಯಂ ಜನಿಯಿಸುಗುಂ ಶ್ವೇತಮದಱ ಕಾರ್ಯಂ ಶಬ್ದಂ (ಶಮದ. ೨). ೧, ೨ : ವೈಯಾಕರಣನಂತೆ ಶಬ್ದಮನಾಲಿಸಿಯುಂ ಬೇಂಟೆಕಾಱನಂತೆ ಅಡಿವಜ್ಜೆಯನಱಿಯಿಯುಂ (ಗದಾಯು. ೬-೨೮ ವ). ೩. ವ್ಯಾಕರಣ. ೪. [ನ್ಯಾಯ] ಹನ್ನೆರಡು ಪ್ರಮಾಣಗಳಲ್ಲಿ ಒಂದು : ಪ್ರಮಾಣವು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ . . . ಪ್ರಾತಿಭ ಎಂದು ಹನ್ನೆರಡು ಎಂದು ಕೆಲವರು ಹೇಳುತ್ತಾರೆ (ಒಂದಸಾ. ೧೩೩). ೫. [ದ್ವೈತ] ನಲವತ್ತು ವಿಧವಾದ ಗುಣಗಳಲ್ಲಿ ಒಂದು: ಶಬ್ದ ಬುದ್ಧಿ . . . ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಒಂದಸಾ. ೨೨೫). 'ದ್ರವತ್ವ' ಪರಾ. ೬. [ಶೈವ] ಶೈವಾಗಮದ ಮೂವತ್ತಾರು ತತ್ತ್ವಗಳಲ್ಲಿ ಒಂದು: ಷಟ್ತ್ರಿಂಶತ್ತತ್ತ್ವಗಳು: - ಶಿವ , ಶಕ್ತಿ . . . ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ . . . ಭೂಮಯಃ (ಇವು ಶೈವಾಗಮದಲ್ಲಿರುವ ತತ್ತ್ವಸಂದೋಹಗಳು) (ಭಾರದ. ೭೩ ಅಡಿಟಿ). 'ಷಟ್ತ್ರಿಂಶತ್ತತ್ತ್ವ' ಪರಾ. ೭. [ಜೈನ] ವಸ್ತುವಿನ ಭಾವ; ದ್ರವ್ಯತ್ವ: ಶಬ್ದಕ್ಕೆ ದ್ರವ್ಯತ್ವಮಂ ಜೈನರ್ ಪೇಳ್ವಪರ್ (ಶಮದ. ೨ ಟೀಕೆ). 'ಶಬ್ದದ್ರವ್ಯ' ಪರಾ. [ಸಂ.]

**ಶಬ್ದಂಗೆಡು** (ಕ್ರಿ). ಕಿವುಡಾಗು : ಬಳಕೋಳಾಹಲದಿಂ ವಿಯಚ್ಚರಗಣಂ . . . ಪೊಲಗೆಟ್ಟೋಡಿಯಳುರ್ಕೆಗೆಟ್ಟು ಕಿವಿ ಶಬ್ದಂಗೆಟ್ಟು ನಿಲ್ವನ್ನೆಗಂ ತಳರ್ದಂ . . . ಮಾಗಧಂ (ಜಗವಿ. ೭-೪೧). [ಶಬ್ದ + ಕೆಡು]

**ಶಬ್ದಕಲಾಪ** (ನಾ). ೧. ಶಬ್ದಗಳ ಗುಂಪು, — ಸಮೂಹ: ಈ ಪೇಟ್ಟನಿತುಂ ಶಬ್ದಕಲಾಪಂ ಸ್ತ್ರೀವಿಷಯಮಾದೊಡಿತಿಪರಮಕ್ಕುಂ ರೂಪಾನ್ಯತ್ವದೊಳಾದಿಗೆ ಲೋಪಂ ತತ್ಪ್ರತ್ಯಯಕ್ಕೆ ಸಂಭವಿಸಿರ್ಕುಂ (ಕಾವ್ಯಾವ. ೩೩೦). ೨. ವ್ಯಾಕರಣಶಾಸ್ತ್ರ. ೧,೨: ಚತುರತೆ ಸತ್ಕವಿತ್ವದೊಳಭಿಜ್ಞತೆ ಶಬ್ದಕಲಾಪದೊಳ್ ಪ್ರಸನ್ನತೆ ಮತಿಯೊಳ್ . . . ದೇವಕೀರ್ತಿ ವಿಬುಧಾಗ್ರಣಿಗೊಪ್ಪುವುದೀ ಧರಿತ್ರಿಯೊಳ್ (ಎಕ. II, ೬೩-೨೭ ; 1163). [ಸಂ. ಶಬ್ದಕಲಾಪ]

**ಶಬ್ದಕೋಶ** (ನಾ). ನಿಘಂಟು ; ಅರ್ಥಕೋಶ : ಸಂವಿಧಾನದಲ್ಲಿ ಉಪಯೋಗಿಸಿರುವ ಪಾರಿಭಾಷಿಕಶಬ್ದಗಳಿಗೆ ಪ್ರತಿಯಾಗಿ . . . ಉಪಯೋಗಿಸಬೇಕಾದ ಶಬ್ದಗಳನ್ನು ನಿರ್ದಿಷ್ಟಪಡಿಸಿದ ಒಂದು ಶಬ್ದಕೋಶವನ್ನೂ ಭಾರತಸರ್ಕಾರದವರು ಗೊತ್ತುಮಾಡಿದರು (ಭಾದಾನ. ಪೀಠಿಕೆ). [ಸಂ.]

**ಶಬ್ದಕ್ರಿ** (ನಾ). ಮಾತಿನಲ್ಲಿ ಮಾತ್ರ ಉಳಿಯುವ ಕ್ರಿಯೆ: ಶಾಸ್ತ್ರ ಬಲ್ಲಿತ್ತೆಂಬನೆ ಶಬ್ದಕ್ರಿ . . . ಇದು ಕಾರಣ ಕೂಡಲಸಂಗಯ್ಯನೇ ನಿತ್ಯ (ಬಸವ. ೫೫೨). [< ಸಂ. ಶಬ್ದಕ್ರಿಯಾ]

**ಶಬ್ದಖಂಡನ** (ನಾ). ೧. ಶಬ್ದವನ್ನು ತಪ್ಪೆಂದು ಹೇಳುವುದು,- ಖಂಡಿಸುವುದು. ೨. [ತರ್ಕಶಾ] (ಗ್ರಂಥದ ಅಥವಾ ಕಾವ್ಯದ) ಶಬ್ದವು ಪ್ರಮಾಣಬದ್ಧವಲ್ಲವೆಂದು ಖಂಡಿಸುವುದು; ತರ್ಕದಲ್ಲಿ ಒಂದು ಬಗೆ : ಶಬ್ದಖಂಡನಮರ್ಥಖಂಡನಮನುಮಾನಖಂಡನಮೆಂಬ ತರ್ಕತಂತ್ರಕೋವಿದರಪ್ಪ ವಾದಿಗಳೊಳಂ (ಗಿರಿಕ. ೨-೧೦೧ ವ). 'ಅರ್ಥಖಂಡನ' ಪರಾ. [ಸಂ.]

**ಶಬ್ದಗುಣ** (ನಾ). ೧. ಶಬ್ದವನ್ನು ಗುಣವಾಗಿ ಹೊಂದಿರುವ ದ್ರವ್ಯ; ಆಕಾಶ: "ವಿಹಾಯಸಃ . . . ಶಬ್ದಗುಣಃ, ಮೇಘದ್ವಾರಂ, ಮಹಾಬಿಲಂ — ೭ ಆಕಾಶದ ಹೆಸರುಗಳು" (ಸಿದ್ಧಾಂತಿ. ೨೬). ೨. [ಕಾವ್ಯಮೀ] ಶಬ್ದಕ್ಕೆ ಸಂಬಂಧಿಸಿದ ಗುಣ; ಇದರಲ್ಲಿ ಶ್ಲೇಷ, ಪ್ರಸಾದ, ಸಮತೆ, ಮಾಧುರ್ಯ, ಸೌಕುಮಾರ್ಯ, ಅರ್ಥವ್ಯಕ್ತಿ, ಉದಾರತ್ವ, ಓಜಸ್ಸು, ಕಾಂತಿ ಮತ್ತು ಸಮಾಧಿಗಳೆಂಬ ಹತ್ತು ಗುಣಗಳು ಇವೆ : ಶಬ್ದಾರ್ಥಗುಣಂಗಳಂ ಬೇರ್ಪಡಿಸಿ ಪೇಟದೆ . . . ಶಬ್ದಗುಣಂಗಳ್ ಪತ್ತು ಅರ್ಥಗುಣಂಗಳ್ ಪತ್ತು ಎಂಬ ಪಕ್ಷಮೆ ಲೇಸು (ಅಪ್ರತಿ. ೭-೧೧); ಶ್ಲೇಷ ಪ್ರಸಾದಾದಿ ಶಬ್ದಗುಣಗಳು ಹತ್ತೆಂದೂ ಅದೇ ಹೆಸರುಳ್ಳ ಅರ್ಥಗುಣಗಳು ಹತ್ತೆಂದೂ ಹೀಗೆ ಗುಣಗಳು ಒಟ್ಟು ಇಪ್ಪತ್ತೆಂದೂ ವಾಮನನ ಅಭಿಪ್ರಾಯ (ಕೈಪಿಡಿ. ೨೩೨). 'ಅರ್ಥಗುಣ' ಪರಾ. [ಸಂ.]

**ಶಬ್ದಗ್ರಹ** (ನಾ). ೧. ಧ್ವನಿಯನ್ನು ಹಿಡಿಯುವುದು; ನಾದವನ್ನು ಗ್ರಹಿಸುವುದು. ೨. ಶ್ರವಣೇಂದ್ರಿಯ; ಕಿವಿ: "ಕರ್ಣಃ, ಶಬ್ದಗ್ರಹಃ . . . ಶ್ರವಃ — ೬ ಕಿವಿಗಳು" (ಸಿದ್ಧಾಂತಿ. ೧೮೬). [ಸಂ.]

**ಶಬ್ದಚಿತ್ರ** (ನಾ). ೧. ಶಬ್ದಗಳ ಮೂಲಕ ಚಿತ್ರಿಸಿದ ವಸ್ತು, — ವಿಷಯ: ವಿಜಯನಗರವನ್ನು ಕುರಿತು . . . ಯಾವ ಕೃತಿಯಲ್ಲಾದರೂ ಶಬ್ದಚಿತ್ರ ತೆಗೆದಿರುವರೆ? (ಕರ್ಣಾಜ. ೭೨). ೨. ಬಾನುಲಿಯಲ್ಲಿ ಬಿತ್ತರಿಸುವ, ಶಬ್ದಗಳಿಂದ ಕೂಡಿದ ನಾಟಕ ಮುಂತಾದುವು: ಮೊನ್ನೆ ಬೆಂಗಳೂರು ಆಕಾಶವಾಣಿ ನಿಲಯದವರು ಸೊಗಸಾದ ಶಬ್ದಚಿತ್ರವನ್ನು ಬಿತ್ತರಿಸಿದರು (ರೂಢಿ). ೩. [ಕಾವ್ಯಮೀ] ವ್ಯಂಗ್ಯಶೂನ್ಯ ಹಾಗೂ ಶಬ್ದಪ್ರಧಾನವಾದ ಅಲಂಕಾರ; ಶಬ್ದಾಲಂಕಾರ: "ಚಿತ್ರ"ವು ಶಬ್ದಚಿತ್ರ, ವಾಚ್ಯಚಿತ್ರ ಎಂದು ಎರಡು ಬಗೆ; ವ್ಯಂಗ್ಯಶೂನ್ಯವಾದ ಶಬ್ದಾಲಂಕಾರವು ಶಬ್ದಚಿತ್ರಕ್ಕೂ ಅಂಥದೇ ಅರ್ಥಾಲಂಕಾರವು ವಾಚ್ಯಚಿತ್ರಕ್ಕೂ ವಿಷಯವಾಗುತ್ತದೆ (ಭಾರಮೀ. ೩೧೮). [ಸಂ.]

**ಶಬ್ದಚ್ಛಲ** (ನಾ). ಶಬ್ದಕ್ಕೆ ಅರ್ಥಾಂತರಗಳನ್ನು ಕೊಟ್ಟು ಮಾಡುವ ವಾದ: ಸರ್ವಜ್ಞಂಗೆ ಕಥಂ ಚಿದಾಹಾರಮುಂಟೆಂದು ಪರಮಾಗಮದೊಳ್ಪೇಟೆಪಟ್ಟೊಡಾಹಾರಮುಂಟೆಂಬ ಶಬ್ದಚ್ಛಲಂಬಿಡಿದು ದುರಾಗ್ರಹದಿಂ ಕೇವಳಿಜಿನಂಗೆ ಭುಕ್ತಿಯುಂಟೆಂಬೊಡೆ (ಪಸಾರ. ೫೨೦). [ಸಂ.]

**ಶಬ್ದಜ್ಞ** (ನಾ). ೧. ವ್ಯಾಕರಣವನ್ನು ತಿಳಿದವನು; ವೈಯಾಕರಣ: ತರ್ಜ್ಞರ್ಪ್ಪರೀಕ್ಷಿಸಲು ಶಬ್ದಜ್ಞಂ ಶಾಸ್ತ್ರಜ್ಞನಖಿಳತರ್ಕಜ್ಞಂ ಕಾವ್ಯಜ್ಞಂ . . . ಶ್ರೀರಾಜಗುರು ಕಳೇಶ್ವರದೇವಂ (ಶಾಸಪ. ೫೩-೬೭; 1179); ಸಂಖ್ಯಾವ್ಯಯಂಗಳಂ ಕಳೆದುಬಿದ ನಿಘಂಟುವಿನ ಸುಲಲಿತಾಕ್ಷರಂಗಳಪ್ಪ ನಾಮಪ್ರಕೃತಿಗಳಂ ಕನ್ನಡಕ್ಕೆ ಸರಿಮಾಡಿ, ಸಮಸಂಸ್ಕೃತಮೆಂಬ ಪೆಸರನಿಟ್ಟು, ಶಬ್ದಜ್ಞರ್ ಲಿಂಗಮಂ ಮಾಟ್ಪರ್ (ಶಮದ. ೮೦ ವೃತ್ತಿ). ೨. [ಸಂಗೀತ] ತಾಳಹಾಕುವವನು : "ಶಬ್ದಜ್ಞನೆಂದೆನಲ್ ತಾಳಧರನೆನಿಸಿಕ್ಕುಂ" (ಮಂಗರಾ. ೧೧೧-೩). [ಸಂ.]

**ಶಬ್ದದೋಷ** (ನಾ). [ಕಾವ್ಯಮೀ] ಕಾವ್ಯದೋಷಗಳಲ್ಲಿ ಒಂದು; ಶಬ್ದಗತ ದೋಷ: ಶಬ್ದದಲ್ಲಿ ಸ್ವಾಭಾವಿಕವಾಗಿ ಯಾವ ದೋಷವೂ ಇರುವುದಿಲ್ಲ. ಹೇಳುವವನ ದೋಷವೇ ಶಬ್ದದೋಷ. ಅದು ಪ್ರಮಾದ, ಅಶಕ್ತಿ, ಆಲಸ್ಯ ಇವುಗಳಿಂದುಂಟಾಗುವುದು (ಹಿಂದಸಾ. ೧೩೭); ಪಿಂಡಕ್ಕೆ ಬನ್ನಿರೋ, ತಂಡುಲಾರ್ಥಾರ್ಥಾರ್ಥ ತದರ್ಥನಾಯಕ ಅಷ್ಟಾರ್ಥಾರ್ಥ ಬಾಹುಗಳು, ಇತ್ಯಾದಿಗಳು ಶಬ್ದದೋಷಗಳು (ಆರ್ಯಧ. ೫೫). 'ಅರ್ಥದೋಷ' ಪರಾ. [ಸಂ.]

**ಶಬ್ದದ್ರವ್ಯ** (ನಾ). ಶಬ್ದಗಳು ಹುಟ್ಟಲು ಉಪಾದಾನಕಾರಣವಾದ ವಸ್ತು : ಅನುಕೂಲಪವನನಿಂ ಜೀವನಿಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂಗಿನವೋಲ್ ಶಬ್ದದ್ರವ್ಯಂ ಜನಿಯಿಸುಗುಂ ಶ್ವೇತಮದಱ ಕಾರ್ಯಂ ಶಬ್ದಂ (ಶಮದ. ೨). [ಸಂ.]

**ಶಬ್ದನಿರೂಪಣ** (ನಾ). ಒಂದುಪದದ ನಿಷ್ಕೃಷ್ಟವಾದ ಅರ್ಥವನ್ನು ಸ್ಪಷ್ಟಪಡಿಸುವುದು; ಶಬ್ದಾರ್ಥದ ವಿವರಣೆ: "ಧನಂ ಜೀವಂ ಶಬ್ದನಿರೂಪಣಂ ವಿಮಲಯೋಗಂ ತಾವಿವರ್ಥಾಂಕಿತಂ" (ನಾನಾರ. ೧೫೭). [ಸಂ.]

**ಶಬ್ದಪ್ರಮಾಣ** (ನಾ). ಲಿಖಿತವಾದ ಅಥವಾ ಮೌಖಿಕವಾದ ಆಧಾರಗಳ ಪ್ರಮಾಣ: ಶಬ್ದಪ್ರಮಾಣಮೆನೆ:- ಇರ್ದುದನಿರ್ದಂತೆ ತಿಳಿಸುವ ನುಡಿ (ಚಿಕಬಿ. ೧೨); ಶಬ್ದಪ್ರಮಾಣವೆಂದರೆ ವೇದಾದಿಶಾಸ್ತ್ರಗಳೆಂಬ ಆಗಮವೇ ಶಬ್ದಪ್ರಮಾಣವೆಂದು ಹಿಂದೆ ವ್ಯವಹಾರವಿರಬಹುದು (ಹಿಂದಸಾ. ೧೪೪). [ಸಂ.]

**ಶಬ್ದಪ್ರವೀಚಾರ** (ನಾ). ೧. [ಜೈನ] ಐದುಬಗೆಯ ಪ್ರವೀಚಾರಗಳಲ್ಲಿ ಒಂದು; ಶ್ರವಣಮಾತ್ರದಿಂದ ಇಂದ್ರಿಯಜನಿತಸುಖವನ್ನು ಹೊಂದುವಿಕೆ : ಪರಿಹಾಸಂ ರಸನೀತಿ . . . ವಿಶ್ರುತವಿನೋದಂ ತನ್ನೊಳಾಗಿರ್ಪನಂ ಪರಿವಾರಾಮರಕಾಮಿನೀ ಪರಿವೃತಂ ಶಬ್ದಪ್ರವೀಚಾರದಿಂ ಪರಮಾನಂದದೊಳೆಯ್ದೆ ಮಾಡಿ ತಳೆದಂ ಪ್ರೀತಿಂಕರ[ಂ] ಪ್ರೀತಿಯಂ (ವರ್ಧಮಾ. ೭-೬೫). ೨. ಶ್ರವಣಮಾತ್ರದಿಂದ ಇಂದ್ರಿಯಜನಿತ ಸುಖವನ್ನು ಹೊಂದುವವನು: ಆ ಕಲ್ಪಂಗಳೆರಡಕ್ಕಂ ಶತಾರೇಂದ್ರನಿಂದ್ರನಕ್ಕುಂ . . . ವೃಂದಾರಕರೆಲ್ಲಂ ಹಸ್ತಚತುಷ್ಟಯೋತ್ಸೇಧರುಂ ಅಷ್ಟಾದಶರತ್ನಾಕರೋಪಮಾಯುಷ್ಯರುಂ ಶಬ್ದಪ್ರವೀಚಾರರುಮಪ್ಪರ್ (ಸುಕುಮಾ. ೧೧-೬೭ ವ). [ಸಂ.]

**ಶಬ್ದಮಾಧುರ್ಯ** (ನಾ). ಪದದ ಸೊಗಸು; ಶಬ್ದದ ಇಂಪು: ವಾಲ್ಮೀಕಿಯ ಶ್ಲೋಕಗಳಲ್ಲಿ ಕಂಡುಬರುವ ಶಬ್ದಮಾಧುರ್ಯವು ಸ್ವರ್ಗೀಯವಾದುದು (ಭಾರದ. ೯೨). [ಸಂ.]

**ಶಬ್ದರೂಪ** (ನಾ). ೧. [ವ್ಯಾಕ] ವ್ಯಾಕರಣಬದ್ಧವಾದ ಪದದ ರೂಪ: ಈ ಶಬ್ದರೂಪವು ಸಂದೇಹವಾಗಿರುವುದರಿಂದ ಪ್ರಶ್ನಾರ್ಥಕಚಿಹ್ನೆಯನ್ನು ಹಾಕಲಾಗಿದೆ (ರೂಢಿ). ೨. ಶಬ್ದಪ್ರಧಾನವಾದುದು: ಇವುಗಳಲ್ಲಿ ಶಬ್ದರೂಪವಾದ ಗ್ರಂಥವನ್ನು 'ಕಾವ್ಯ', 'ಶಾಸ್ತ್ರ' ಎಂದು ಎರಡುಭಾಗ ಮಾಡಬಹುದು (ಕೈಪಿಡಿ. ೧೬೮). [ಸಂ.]

**ಶಬ್ದವಿದ್ಯೆ** (ನಾ). ವ್ಯಾಕರಣಶಾಸ್ತ್ರ: ನಯವಿದ್ಯಾವಿದರಿಂ ಕವಿಪ್ರಕರದಿಂ ತರ್ಕಜ್ಞರಿಂ ಶಬ್ದವಿದ್ಯೆಯೊಳಭ್ಯಾಸನಕಲ್ಪರಪ್ಪ ವಿಳಸದ್ಬೂದೇವರಿಂ . . . ಒಪ್ಪುವ ಗುಪ್ತವಂಶ ವಸುಧಾಧೀಶಾವಳೀರಾಜಧಾನಿಯನುಚ್ಚೈನಿಯನೆಯ್ದಿ ಬಂದನಚಿತಂ (ಪಂಚತಂ. ೧೯೩-೧೫). [ಸಂ. ಶಬ್ದವಿದ್ಯಾ]

**ಶಬ್ದವೇದಿ** (ನಾ). ಶಬ್ದಶಾಸ್ತ್ರವನ್ನು ಬಲ್ಲವನು; ವಿದ್ವಾಂಸ: ಶಬ್ದವೇದಿಗಳೆಂದು ನುಡಿದು ನಡೆವರು ನೋಡಾ ನಿಶ್ಶಬ್ದ ವೇದಿಸದಿದ್ದರೆ ಗುಹೇಶ್ವರ ನೋಡಿ ನೋಡಿ ನಗುತ್ತಿಪ್ಪ ನೋಡಾ (ಅವಚಂ. ೧೦೬-೪೮೩). [ಸಂ. ಶಬ್ದವೇದಿನ್]

**ಶಬ್ದವೇಧಿ** (ನಾ). ೧. ಕಣ್ಣಿಗೆ ಕಾಣದಿರುವ ವಸ್ತುವಿನ ಕಡೆಗೆ ಕೇವಲ ಶಬ್ದವನ್ನು ಅನುಸರಿಸಿ ಬಾಣವನ್ನು ಪ್ರಯೋಗಿಸುವಿಕೆ; ಶಬ್ದಗ್ರಹಣ ಮಾತ್ರದಿಂದ ಗುರಿಹಿಡಿದು ಹೊಡೆಯುವುದು: ಕಣ್ಣರಿಯದಾ ಕಳ್ತಲೊಳ್, ಶಬ್ದವೇಧಿಧನುರ್ವಿದ್ಯಾ ಪ್ರತಿಷ್ಠೆಯಿಂ ಕೊಂದುದಕೆ, ವಿಧಿ ನನಗೆ ವಿಧಿಸಿದೀ ಶಾಪಮಂ

ಕಾಣ್! (ಶ್ರೀರಾಮಾ. ೧೦೨-೬೪); ಕುಂಜುಶೆಟ್ಟಿ ಶಬ್ದವೇಧಿಯನ್ನೂ ಬಲ್ಲವನಂತೆ (ಶಾಂತಲಾ. ೨೨೨). ೨. ಶಬ್ದಗ್ರಹಣಮಾತ್ರದಿಂದ ಬಾಣಪ್ರಯೋಗವನ್ನು ಮಾಡುವವನು: ಧನುರ್ವೇದಿಯುಂ ಶಬ್ದವೇದಿEಧಿತಿಯುಮಪ್ಪ ಬಿಲ್ಲ ಬಿನ್ನಣಿಯನೊರ್ವನಂ ಕರೆದು (ಪಂಚತಂ. ೧೨೭-೧೮). ೩. ಒಂದು ಬಗೆಯ ಬಾಣ : ಅರ್ಜುನನು ಮಂತ್ರಾಸ್ತ್ರಗಳಿಂದಲೂ ಶಬ್ದವೇಧಿ ಬಾಣಗಳಿಂದಲೂ ಹೊಡೆಯಲು ಮೊದಲುಮಾಡಿದನು (ವಚಭಾ. ೧೭೯). ೪. ಬಿಲ್ಲುಗಾರ. ೫. ಯೋಧ; ಸಿಪಾಯಿ. ೬. ದಶರಥ. ೭. ಅರ್ಜುನ. [ಸಂ. ಶಬ್ದವೇಧಿನ್]

**ಶಬ್ದವೇಧಿತ್ವ** (ನಾ). = ಶಬ್ದವೇಧಿ ೧: ಬಾಣಪ್ರಯೋಗದಲ್ಲಿ ಆ ಲಾಘವವನ್ನೂ ಶಬ್ದವೇಧಿತ್ವವನ್ನೂ ಹೊಗಳಿದರು (ವಚಭಾ. ೧೯). [ಸಂ.]

**ಶಬ್ದವೇಧಿವಿದ್ಯೆ** (ನಾ). ಶಬ್ದಗ್ರಹಣಮಾತ್ರದಿಂದ ಬಾಣಪ್ರಯೋಗವನ್ನು ಮಾಡುವ ವಿದ್ಯೆ: ದಶರಥ, ಅರ್ಜುನಾದಿಗಳು ಶಬ್ದವೇಧಿವಿದ್ಯೆಯನ್ನಭ್ಯಸಿಸಿದ್ದರೆಂದು ಕೇಳಿದ್ದೇವಷ್ಟೆ ? ಶಬ್ದವು ನೇರವಾಗಿ ಪ್ರಸರಿಸುವುದೇ ಈ ವಿದ್ಯೆಗೆ ಮೂಲಾಧಾರವಾಗಿದೆ (ಭೌತವಿ. ೧೨೪). [ಸಂ. ಶಬ್ದವೇಧಿವಿದ್ಯಾ]

**ಶಬ್ದಶಾಸ್ತ್ರ** (ನಾ). ಶಬ್ದವನ್ನು ಕುರಿತ ಶಾಸ್ತ್ರ ; ವ್ಯಾಕರಣಶಾಸ್ತ್ರ: ಲಿಪಿ ಶಬ್ದಶಾಸ್ತ್ರಮಭಿಧಾನಪರಂಪರೆ ನಾಟಕಪ್ರಯೋಗಂ ಕಾವ್ಯಂ . . . ಅಖಿಲವ್ಯೂಹೋತ್ಕರ ಮೆಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪದಂ. ೪-೫೮); ಕರ್ಣಾಟಕ ಲಕ್ಷಣ ಶಬ್ದಶಾಸ್ತ್ರಮುಂ ಲಾಕ್ಷಣಿಕರ್ಪೇೞೆಂದು ಬೆಸಸೆ ಬಗೆವುಗ ಪೇೞ್ವಂ (ಶಮದ. ಪೀಠಿಕೆ ೩) ; ಸರ್ವಶಾಸ್ತ್ರಕ್ಕೂ ಆಧಾರಭೂತವಾದ ಶಬ್ದಶಾಸ್ತ್ರ ಹಾಗೂ ಬುದ್ಧಿಶಾಸ್ತ್ರಗಳ ಮೂಲಪುರುಷರಾದ ಪಾಣಿನೀ ಕಾಣಾದರನ್ನು . . . ಶಾಸ್ತ್ರಕಾರರು ನಿರ್ವಚಿಸಿದ್ದಾರೆ (ಭಾರದ. ೧೨೩). [ಸಂ.]

**ಶಬ್ದಶ್ಲೇಷ** (ನಾ). [ಕಾವ್ಯಮೀ] ಒಂದುಪದವನ್ನು ನಾನಾರೀತಿಯಲ್ಲಿ ವಿಭಾಗಮಾಡಿದಾಗ ನಾನಾವಿಧವಾದ ಅರ್ಥವನ್ನು ತಿಳಿಸುವ ಒಂದು ಅಲಂಕಾರ: ಎರಡರ್ಥಮೊಂದೆ ಶಬ್ದಾಂತರದೊಳ್ ನೆಗೞ್ವಂತು ಪೇೞ್ವುದರ್ಥಶ್ಲೇಷಂ ದೊರೆಕೊಳೆ ಶಬ್ದಾವಯವದೊಳೆರಡಭಿಮತಶಬ್ದಮಱೆಗೆ ಶಬ್ದಶ್ಲೇಷಂ (ಕಾವ್ಯಾವ. ೭೫೩); ಉದಾ:- ಕುವಲಯಬಾಂಧವನೆಸೆವನೆ ಕುವಲಯಮಂ ಬೆಳಗಿ ಕುವಲಯಂ ಪೂಜಿಗನ ಪಾಂಡವರೆ ಪೂಜಿಗಾಗೆ ನಿನಗೀ ಕುವಲಯಪತಿಯೆಂಬ ಪೆಂಪೊಡಂಬಡೆ ನೃಪತೀ (ಪಂಪಭಾ. ೯-೩೭). 'ಅರ್ಥಶ್ಲೇಷ' ಪರಾ. [ಸಂ.]

**ಶಬ್ದಸಂಖ್ಯೆ** (ನಾ). [ಗಣಿತ] ಪದಗಳ ಮೂಲಕ ತಿಳಿಸುವ ಸಂಖ್ಯೆ : ಪದ್ಯರೂಪದಲ್ಲಿ ಸಂಖ್ಯೆಗಳನ್ನು ಕೆಲವು ವಸ್ತುಗಳ ಹೆಸರಿನ ಮೂಲಕ ತಿಳಿಸುವ ಪದ್ಧತಿಯು ಇಂಡಿಯದ ಭಾಷೆಗಳಲ್ಲಿ ಈಗಲೂ ಇದೆ. ಉದಾ: ಸೂರ್ಯ = ೧, ಕರಿ (ಆನೆ) = ೮, ರಾಜ = ೧೬, ಅಗ್ನಿ = ೩, ವೇದ = ೪, ಬಾಣ = ೫ ಇತ್ಯಾದಿ ಶಬ್ದಸಂಖ್ಯೆಗಳು ಶುಲ್ವಸೂತ್ರಗಳಲ್ಲಿ ಕೂಡ ಕಂಡುಬರುತ್ತವೆ (ಗಣಿಚ. ೨೨೫). [ಸಂ. ಶಬ್ದಸಂಖ್ಯಾ]

**ಶಬ್ದಸಂಗ್ರಹ** (ನಾ). ಗ್ರಂಥಗಳಿಂದ ಪದಗಳನ್ನು ಆಯ್ದು ಶೇಖರಿಸುವಿಕೆ: ನಿಘಂಟುರಚನೆಗೆ ಶಬ್ದಸಂಗ್ರಹವೇ ಮೊದಲ ಮೆಟ್ಟಿಲು (ಲೂಥಿ). [ಸಂ.]

**ಶಬ್ದಸಂದರ್ಭ** (ನಾ). ಶಬ್ದದ ಬಳಕೆ, — ಪ್ರಯೋಗ : ಕವಿಯಂ ಜಕ್ಕುಲಿಪಂತೆ ನುಣ್ಪಡರ್ದ ಶಬ್ದಂ ಶಬ್ದಸಂದರ್ಭದೊಳ್ ಸವಿಯಂ ಮುಂದಿಡು ವರ್ಥಮರ್ಥದೊಳೊಡಂಬಟ್ಟೊಳ್ಪನೋರಂತೆ ಬೀಱುವ ಭಾವಂ . . . ಪೊಣ್ಮುವ ನಾನಾರಸಮಿರ್ಪ ವಸ್ತುಕೃತಿಯಂ ಪೇೞ್ವರ್ಗ್ಗಳಂ ಮೆಚ್ಚಿಪಂ (ಚಂದ್ರಪು. ೧-೫೧). [ಸಂ.]

**ಶಬ್ದಸಂದೇಹ** (ನಾ). ಶಬ್ದದ ಅರ್ಥ ಮತ್ತು ರೂಪಗಳ ಬಗ್ಗೆ ಉಂಟಾಗುವ ಅನುಮಾನ : ಇದು ಸಮಸ್ತಶಾಬ್ದಿಕಜನಮನೋಜನಿತಶಬ್ದಸಂದೇಹ ಶಲ್ಯಚಾರು ಚುಂಬಕಾಯಮಾನಾನೂನ ಕರ್ಣಾಟಕಲಕ್ಷಣಶಿಕ್ಷಾಚಾರ್ಯ ಸುಕವಿ ಕೇಶಿರಾಜ ವಿರಚಿತಮಪ್ಪ ಶಬ್ದಮಣಿದರ್ಪಣದೊಳ್ ಸಂಧಿಕಾರ್ಯಮೆಂಬ ಪ್ರಥಮಸಂಧಿ ಸಂಪೂರ್ಣಂ (ಶಮದ. ಸಂಧಿ. ೧. ಸಂಧ್ಯಂತ್ಯ ವಾಕ್ಯ). [ಸಂ.]

**ಶಬ್ದಸಂಪತ್ತು** (ನಾ). ಪದಗಳ ವಿಪುಲತೆ, — ಆಧಿಕ್ಯ: ಪರ್ಜಿಭಾಷೆಯ ವ್ಯಾಕರಣಾಂಶಗಳ, ಶಬ್ದಸಂಪತ್ತಿನ ವಿವರ ತಿಳಿದುಬರುತ್ತದೆ (ದ್ರಾವಿವಿ. ೧೮೩). [ಸಂ. ಶಬ್ದಸಂಪದ್]

**ಶಬ್ದಸಂಸ್ಕಾರ** (ನಾ). ಶಬ್ದಗಳಿಗೆ ಸಂಬಂಧಿಸಿದ ಜ್ಞಾನ ; ವ್ಯಾಕರಣ: ಬರೆಯಲುಂ ಬಾಜಿಸಲುಂ ಬಲ್ಲ ಶಬ್ದಸಂಸ್ಕಾರವುಳ್ಳಾತ ನಾಗದೇಸಿಗರ್ಗ್ಗೆ ನಿತ್ಯ ಸ್ಥಿತಿಯೊನ್ದು ಪೊೞ್ತುಊಹಾರಮುಂ ವರಿಷಕ್ಕೊನ್ದು ಕಪ್ಪಡವುವನಿಕ್ಕಿಯೋದಿಸಿ (ಎಇ. XX. ೬೮-೨೬ ; 1012). [ಸಂ.]

**ಶಬ್ದಸಾಮರ್ಥ್ಯ** (ನಾ). = ಶಬ್ದಶಕ್ತಿ: ಶಬ್ದಸಾಮರ್ಥ್ಯಮಮರೆ, ವಿಸ್ತರದಿಂ ಕರ್ಣಾಟಕ ವ್ಯಾಕರಣ ಶಬ್ದಮಣಿದರ್ಪಣಮೆಂಬ ಪೆಸರನಿಟ್ಟು . . . ಪೇೞ್ವೆಂ (ಶಮದ. ಪೀಠಿಕೆ ೩ ವೃತ್ತಿ). [ಸಂ.]

**ಶಬ್ದಸಾರಾಯ** (ನಾ). ಶಬ್ದದ ಒಟ್ಟು ಅರ್ಥಸ್ವಾರಸ್ಯ : ಒಂದು ಮಾತೆನ್ನಬಹುದ ಶಬ್ದಸಾರಾಯವನು ಒಂದು ಮಾತೆನ್ನಬಹುದೆ ಶರಣಸಂಬಂಧವನು (ಬಸವ. ೬೮೧). [ಶಬ್ದ + ಸಾರಾಯ್]

**ಶಬ್ದಸಿದ್ಧಿ** (ನಾ). ಶಬ್ದಗಳ ಸರಿಯಾದ ಬಳಕೆ, - ಪ್ರಯೋಗ: ಪಂಪನಿಗಿಂತ ಪೂರ್ವದಲ್ಲಿ ಮಾರ್ಗಕಾವ್ಯವು ಕನ್ನಡ-ಸಂಸ್ಕೃತಗಳ ಶಬ್ದಸಿದ್ಧಿಯನ್ನು ಪಡೆದು . . . ಪಂಡಿತಪ್ರತಿಭೆಯ ಮೂರ್ತಿಯಾಗಿ ತಲೆದೋರಿತ್ತೆಂದು 'ಶೂದ್ರಕ'ವು ಸ್ಪಷ್ಟವಾಗಿ ತಿಳಿಸುತ್ತದೆ (ಕಸಾಚ. ೫೧). [ಸಂ.]

**ಶಬ್ದಸಿದ್ಧಿಸ್ಮರಣ** (ನಾ). ಶಬ್ದಗಳ ಸಾಧಿತರೂಪಗಳ ನಿಯಮ: ಪರಮಾರ್ಥಂ ಪೇೞ್ ಪಟ್ಟರ್ದಧಿಕರಣಮಿವಿಂತಯ್ದುಱೊಳ್ ಶಬ್ದಸಿದ್ಧಿಸ್ಮರಣಕ್ಕಾದ್ಯಕ್ಕುದಾತ್ತಪ್ರಕರಣ ಗಣನಾವೃತ್ತಿಯಿಂ ಪೂರ್ದಿ ನಿಲ್ಕುಂ (ಕಾವ್ಯಾವ. ೬). [ಸಂ.]

**ಶಬ್ದಸುಖ** (ನಾ). ಮಧುರವಾದ ಮಾತು, ಸಂಗೀತ ಮೊದಲಾದುವುಗಳಿಂದ ಉಂಟಾಗುವ ಆನಂದ: ಶಬ್ದಸುಖಕ್ಕೆ ಮಚ್ಚಿ ಮಾತಿಂಗೆ ಮಾತನೆ ಕೊಟ್ಟು ಕೆಟ್ಟೆನಯ್ಯಾ ಅನುಭಾವ ಅಕ್ಕವೆಯಾಗದೆ ಬೆಬ್ಬನೆ ಬೆಱತೆನಯ್ಯಾ (ಬಸವ. ೨೯೩). [ಸಂ.]

**ಶಬ್ದಸುಖಿ** (ನಾ). ಮಾತುಗಳ ಪ್ರಾಧಾನ್ಯಕ್ಕೆ ಗಮನವಿಟ್ಟು ಆನಂದವನ್ನು ಪಡುವ ವ್ಯಕ್ತಿ: ಪರಮತತ್ತ್ವದ ನಿಜಸಂಯುಕ್ತರ ಅನು ನೀನೆಂಬ ಶಬ್ದಸುಖಿಗಳ ತೋಱು ಎನಗೆ (ಬಸವ. ಕ. ೮೮೦). [ಸಂ. ಶಬ್ದಸುಖಿನ್]

**ಶಬ್ದಸೌಷ್ಠವ** (ನಾ). ಶಬ್ದದ ಸೊಬಗು. [ಸಂ.]

**ಶಬ್ದಾಂತ** (ನಾ). ಪದದ ಕೊನೆ; ಶಬ್ದದ ಕೊನೆ: ತಿಳಿ ಬಹುಳದೆ ಶಬ್ದಾಂತಂಗಳ ನತ್ವಜ್ಞತ್ವಕತ್ವದೆಡೆಗೆ ಣಕಾರಂ ತಳೆಗುಂ (ಶಮದ. ೨೭೮). [ಸಂ.]

**ಶಬ್ದಾಂತರ** (ನಾ). ಬೇರೆ ಬೇರೆ ಶಬ್ದ; ಭಿನ್ನಶಬ್ದ: ಪ್ರಕರಣದಿಂ ಶಬ್ದಾಂತರದ ಕೂಟದಿಂದಭಿನಯಂಗಳಿಂದಿಷ್ಟಾರ್ಥಪ್ರಕಟನಮಕ್ಕುಂ (ಕಾವ್ಯಾವ. ೪೩೧). [ಸಂ.]

**ಶಬ್ದಾನುವಿದ್ಧ** (ನಾ). [ಯೋಗ] ದೃಶ್ಯಾನುವಿದ್ಧ, ಶಬ್ದಾನುವಿದ್ಧ, ನಿಃಸಂಕಲ್ಪ, ನಿರ್ವಿಕಲ್ಪ, ನಿರ್ವೃತ್ತಿಕ ಮತ್ತು ನಿರ್ವಾಸನ ಎಂಬ ಆರು ಬಗೆಯ ಸಮಾಧಿಗಳಲ್ಲಿ ಒಂದು : ಒಳಹೊಱಗೆ ಬೆಳಗುತಲಿ ಕರಣದ್ವಾರದಿಂದಾವ ತಿಳಿಯುತಿಹನೊ ಆತ ತಾನೆಂದೊಳಗೆ ತನ್ನನು ಕಂಡು ಮನನದೊಳೊಲಿದು ಸೋಹಮ್ಮೆನುತಲಿರೆ ಶಬ್ದಾನುವಿದ್ಧವದು (ಅಮೃತ. ೬-೫೯). [ಸಂ.]

**ಶಬ್ದಾನುಶಾಸನ** (ನಾ). ೧. ಶಬ್ದಸ್ವರೂಪವನ್ನು ತಿಳಿಸುವ ಶಾಸ್ತ್ರ; ವ್ಯಾಕರಣಶಾಸ್ತ್ರ: ಅಭಿಮತಜೈನೇಂದ್ರವಚೋವಿಭವಂ ಶಬ್ದಾನುಶಾಸನಪ್ರಭವ ವಚೋವಿಭವಮೊಡನೆಸೆಯೆ ರಂಜಿಪಂ . . . ಕವಿರತ್ನಂ (ಅಜಿಪು. ೧-೪೩). ೨. ಭಟ್ಟಾಕಳಂಕನು ಸಂಸ್ಕೃತದಲ್ಲಿ ರಚಿಸಿದ ಕನ್ನಡ ವ್ಯಾಕರಣಗ್ರಂಥ: ಅತ್ವಮದೆಂತೆಂದೊಡೆ- ಶಬ್ದಾನುಶಾಸನದಲ್ಲಿ . . . ಅತ ಓಷ್ಠ್ಯೇ . . . ಎಂಬುದಾಗಿ ಅಕಾರಕ್ಕೆ ಓಷ್ಠ್ಯಸ್ವರಂ ಪರಮಾಗೆ, ವತ್ವಸಂಧಿಯಾಗುವುದು (ಶಮದ. ೫೫ ಟೀಕೆ). [ಸಂ.]

**ಶಬ್ದಾರ್ಥ** (ನಾ). ಪದದ ಅರ್ಥ, — ಅಭಿಪ್ರಾಯ : ಇರೆ ಶಬ್ದಾರ್ಥಗಳ್ ತತ್ಪರತೆಯಿನದು ಕಾವ್ಯಂ (ಕಾವ್ಯಾವ. ೪೩೦). [ಸಂ.]

**ಶಬ್ದಾಲಂಕಾರ, ಶಬ್ದಾಳಂಕಾರ** (ನಾ). [ಕಾವ್ಯಮೀ] ಅನುಪ್ರಾಸ, ಯಮಕ ಮೊದಲಾದ ಶಬ್ದಪ್ರಧಾನವಾದ ಅಲಂಕಾರ: ಅವಱೊಳ್ ಶಬ್ದಾಲಂಕಾರ ವಿಭಾಗಂ ಯಮಕಮೆಸೆವನುಪ್ರಾಸಂ ಚಿತ್ರವಿಚಿತ್ರ ಛಿತ್ತಿವಕ್ರೋಕ್ತಿವಿಶೇಷಮುಮೆನ ಚತುರ್ವಿಧಂ ತಾನಕ್ಕುಂ (ಕಾವ್ಯಾವ. ೫೨೪); ಶಬ್ದಾಲಂಕಾರಗಳು, ಸದ್ವಿಗೋಸ್ಕರ ಕಟ್ಟಿಕೊಂಡಿರುವ ಗೆಜ್ಜೆ ಪಾಡಗಗಳಂತಿರುವುವೆಂದು ಹೇಳಬಹುದು (ಕೈಪಿಡಿ. ೨೪೮). **ಶಬ್ದಾಳಂಕಾರ:** ಮುನ್ನಂ ಶಬ್ದಾಳಂಕಾರಂ ನಿಶ್ಚಿತಮಕ್ಕೆ ಪೇೞ್ವ ಮಾೞ್ಕೆಯೊಳ್ (ಕವಿರಾ. ೨-೩). [ಸಂ.]

**ಶಬ್ದಾವೃತ್ತಿದೀಪಕ** (ನಾ). [ಕಾವ್ಯಮೀ] ದೀಪಕಾಲಂಕಾರದಲ್ಲಿ ಒಂದು ಬಗೆ; ಯಾವುದಾದರೂ ಪದ್ಯ ಅಥವಾ ಗದ್ಯಭಾಗದಲ್ಲಿ, ಒಂದೇ ಪದವು ಬೇರೆ ಬೇರೆ ಅರ್ಥಗಳಲ್ಲಿ ಮತ್ತೆ ಮತ್ತೆ ಚಮತ್ಕಾರವಾಗುವಂತೆ ಬರುವುದು: ಇದು ಅರ್ಥಂ ಬೇಱಾಗಿರ್ದೊಡಂ ಶಬ್ದಂ ಬಳಸಿವರೆ ಶಬ್ದಾವೃತ್ತಿದೀಪಕಮೆಂದುಂ (ಅಪ್ರತಿ. ೫೮-೧೬); ಉದಾ : ಚುರ್ಚೆ ಮಹೀಶೂರ ಬಾಣಮಿದಿರ್ಚದೆ ಕೆಳದಿಯವರೆಱಗಿ ನರಪತಿಗಳ್ಕಿಂ ಕರ್ಚಿದರಡಿಯುಂಗುಟಮುಂ ಕರ್ಚಿದರೊಡನುಗುವ ಸೊಗದ ಕಣ್ಣೀರ್ವೊನಲಿಂ (ಅಪ್ರತಿ. ೫೮-೫೩). [ಸಂ.]

**ಶಬ್ದಾಳಂಕಾರ** 'ಶಬ್ದಾಲಂಕಾರ' ನೋ.

**ಶಬ್ದಿಸು** (ಕ್ರಿ). ಧ್ವನಿಮಾಡು; ಶಬ್ದಮಾಡು: ರಾಜಕುಮಾರನ ಪ್ರಯಾಣಸೂಚಕವಾಗಿ ಭೇರಿಯು ಶಬ್ದಿಸಿತು (ನಾಗಕಾ. ೫೨). [ಶಬ್ದ + – ಇಸು]

**ಶಬ್ಬಿ, ಶೆಬ್ಬಿ, ಸೆಬ್ಬೆ** (ನಾ). ಮೃದುವಾಗಿರುವುದು; ಹದವಾದುದು: ರೊಟ್ಟಿ ಬಹು ಶಬ್ಬಿಯಾಗಿಹುದು; ಬಿಸಿ ಬಿಸಿ ರೊಟ್ಟಿ. ಮಲ್ಲನೊಳಗಡೆ ಬಂದು ಸುತ್ತ ನೋಡಿತು ನಾಯಿ (ತಾವರ. ೪೧-೨೩); ಮಳೆಯಲ್ಲಿ ನೆನೆದು ಮತ್ತಗಾಗಿ ನರಿಗೆ ತಿನ್ನುವುದಕ್ಕೆ ಶಬ್ಬಿಯಾಗಿತ್ತು (ಕಥಾಮಂ. IV. ೪೦). **ಶೆಬ್ಬಿ** : ಉದ್ದಿನ ಬೇಳೆಯನ್ನು ಒಡೆದು ಹೊಟ್ಟಿಲ್ಲದೆ ತೊಳೆದು ಶೆಬ್ಬಿಯಾಗಿ ರುಬ್ಬಿ (ಕಥಾಮಂ. IV. ೧೪). **ಸೆಬ್ಬೆ** : ಮಳೆಯಾಯಿತು. ಹೊಲ ಉಳುಮಗೆ ಸೆಬ್ಬೆಯಾಗಿಲ್ಲ (ರೂಢಿ). [ದೇ. ‖ ತಮಿ. ಚೆವ್ವಿ, ಚೆವ್ವೈ. / ಮರಾ. ಚವ]

**ಶಮ** (ನಾ). ೧. ನೆಮ್ಮದಿ ; ಶಾಂತಿ ; ಸಮಾಧಾನ : [ಶ] [ಪಾಠಾಂ. ಸ]ಮಮನೆ ಕೆಯ್ಕೊಳ್ವೊಡೆ ಬಿಲ್ಲುಮಂಬುಮಂ ಬಿಸುಟು ತಪಕೆ ನೀಂ ಬಗೆವೊಡೆ ವಿಕ್ರಮಮಂ ಪಗೆಯಂ ಕಿಡಿಸುವ ಶ[ಪಾಠಾಂ. ಸ]ಮದಿಂ ಮುನಿಗಾಯ್ತು ಸಿದ್ಧಿ ಭೂಪತಿಗಾಯ್ತೇ (ಪಂಪಭಾ. ೭-೫೧); ಚೈತನ್ಯದಗ್ನಿಕಣಸ್ತಿಮಿತದಿಂ ನಿಂತಿರ್ಪುದದು ಧರೆಯ ಹಿತಕೆ ಶಮದ ಸುಂದರದ ಸಾತ್ತ್ವಿಕದ ಗಾಂಭೀರ್ಯವದು ನಮಗೊಂದು ದೇವನಿಧಿ (ಮಂಕುಕ. ೧೧೨). ೨. ಮನೋನಿಗ್ರಹ: ಅಂತಃಕರಣನಿಗ್ರಹವೇ ಶಮವಕ್ಕುಂ (ವಿವೇಕ. ೧೫). ೩. [ದ್ವೈತ] ನಲವತ್ತು ಬಗೆಯ ಗುಣಗಳಲ್ಲಿ ಒಂದು: ಶಮ ದಮ ದಯೆ . . . ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಸಾ. ೨೭೫). ೪. [ಕಾವ್ಯಮೀ] ಶಾಂತರಸಕ್ಕೆ ಕಾರಣವಾದ ಸ್ಥಾಯಿಭಾವ: "ರತಿಃ, ಹಾಸಃ . . . ವಿಸ್ಮಯಃ, ಶಮಃ – ಈ ೯ ಸ್ಥಾಯಿಭಾವಂಗಳ್" (ಹಲಾಯು. ೧೬-೯೧). [ಸಂ.]

**ಶಮನ** (ನಾ). ೧. ಶಾಂತಗೊಳಿಸುವುದು; ಸಮಾಧಾನಗೊಳಿಸುವುದು. ೨. ನಿವಾರಣೆ ; ಪರಿಹಾರ : ಯಾವ ಹಾದಿಯು ತಪ್ಪೊ ಯಾವ ಹಾದಿಯು ಒಪ್ಪೊ ಎಂಬ ಶಂಕೆಗೆ ಎಲ್ಲಿ ಶಮನವೆಂದೆ! (ಕರುಶ್ರಾ. ೮೯-೧೮). ೩. ನೋವು, ರೋಗ ಮೊದಲಾದುವನ್ನು ತಗ್ಗಿಸುವುದು, – ಕಡಮೆ ಮಾಡುವುದು: ಔಷಧವೆಂಬುದು ಶೋಧನವೆಂದೂ, ಶಮನವೆಂದೂ ಸಂಕ್ಷೇಪದಿಂದ ಎರಡು ತೆರನಾಗಿರುವುದು (ಸಕವ್ಯ. ೧೮). ೪. ನಾಶಗೊಳಿಸುವುದು ; ಲಯಗೊಳಿಸುವುದು. ೫. (ಯಜ್ಞ ಯಾಗಾದಿಗಳಲ್ಲಿ ಪ್ರಾಣಿಗಳನ್ನು) ಕೊಲ್ಲುವಿಕೆ; ಬಲಿಕೊಡುವಿಕೆ. ೬. ದಕ್ಷಿಣ ದಿಕ್ಕಿನ ಅಧಿಪತಿ ; ಯಮ : ಶಮನನಂ ಕಳುಹಿದನು ಹರನು (ಬಸವು. ೪೧-೨೯); ಸುರಪ ಶಿಖಿ ಶಮನ ನೈಋತಿ ವರುಣಾನಿಲ ಧನಪತೀಶರೊಲವಿಂ ಕೆದರ್ದಂತಿರೆ . . . ಸಂಧ್ಯಾನಟಂಗೆ ನೆಗೆದುದು ಭಗಣಂ (ರಾಜಶೇ. ೧೧-೪೨). [ಸಂ.]

**ಶಮನ₂** (ನಾ). ಮೇಲುಹೊದಿಕೆ; ಉತ್ತರೀಯ: ಸಾವಳಗಿಶಿವಲಿಂಗೇಶ್ವರಮಠದಲ್ಲಿ ವಿಶೇಷಸಂದರ್ಭಗಳಲ್ಲಿ ಮಹಮ್ಮದೀಯ ಗುರುಗಳ ಲಾಂಛನವಾದ ಹಸಿರು ಸಿಲೇಮನಿ, ಶಮನ, ಟೊಪ್ಪಿಗೆಗಳ ಧಾರಣೆಯಾಗುತ್ತದೆ (ಶರಚ. ೭೧೧). [?]

**ಶಮನಶಮನ** (ನಾ). ಯಮನಿಗೆ ಯಮನಾದವನು; ಶಿವ: ಶಮನಶಮನ ಜಿತಕಾಮ . . . ವಿರೂಪಾಕ್ಷ ಕರುಣಿಸುವುದು (ಹಚಕಾ. ೧-೩). [ಸಂ.]

**ಶಮನಿಸು** (ಕ್ರಿ). ಶಾಂತವಾಗು; ಸಮಾಧಾನಗೊಳ್ಳು : ರಮಣಿ ಒಬ್ಬಳು . . . ವೀರಮೂರ್ತಿಯ ಬಳಿಗೆ ನಿಂದು, ರಮಣನಾ ಮೋರೆಮುಸುಕನು ತೆರೆದಳೆಂದು, ಶಮನಿಸದು ಗಮನಿಸದು ಕಾಂತೆಯ ಮುಖೇಂದು (ಕವಿಪ್ರ. ೪೮-೩). [ಶಮನ₁ + – ಇಸು]

**ಶಮಲ** (ಗು). ೧. ಪಾಪಕರವಾದ; ಅಪವಿತ್ರವಾದ: ವಿಮಲಮತಿ ದುಷ್ಕಾರ್ಯಮಂ ಕಾರ್ಯರೂಪೆನಿಸಿ ಶಮಲಪಾತಕವನಂ ಪುಣ್ಯಮೆನಿಸುತಂ (ವಂಕಾರಾ. ೨-೩೪-೧). (ನಾ). ೨. ಮಲ; ಅಮೇಧ್ಯ: "ವರ್ಚಃ . . . ಪುರೀಷಂ, ಶಮಲಂ, ಮಲಂ – ಈ ೧೩ ವಿಷ್ಠೆ" (ಹಲಾಯು. ೧೦೫-೧೫). ೩. ದೋಷ; ಕುಂದು : ಧ್ಯಾತೃಹೃದಯ ಮಹೌಘಶಮಲ ವ್ರಾತ ಪರ್ವತವಜ್ರನನು . . . ನೆನೆವುದು (ನಿಭಾಗ. ೩-೧೩-೩೯). [ಸಂ.]

**ಶಮಶೇರಿ** 'ಶಂಶೇರು' ನೋ.

**ಶಮಿ₁** (ನಾ). ೧. ಬನ್ನಿಯ ಮರ: "ಶಮಿಯೆನೆ ಬನ್ನಿಯಕ್ಕು" (ಮಂಗರಾ. ೩೫-೧೩); ಸಾಲ ಶಮಿ ಗುಗ್ಗುಳ ಮಧೂಕಾಶೋಕ ಬಿಲ್ವಾಮಲಕ ಜಂಬೀರಾದಿಗಳು ನುಗ್ಗಾಯ್ತು ನಿಮಿಷದಲಿ (ಕುವ್ಯಾಅ. ೧೮-೩೬); ಶಾಂತಾತ್ಮ ನಿನ್ನ ಸುತೆ . . . ಮರೆದಪಳಂತಶ್ಶಿಖಿಯಾದ ಶಮಿಯವೋಲ್ (ಶಾಕುಂತ. ೪೯-೮೨). ೨. ಕಾಳುಗಳ ಅಥವಾ ಧಾನ್ಯಗಳ ಮೇಲಿನ ಸಿಪ್ಪೆ, – ಹೊಟ್ಟು. ೩. ಕಾಯಿ; ಅಪಕ್ವಫಲ: "ಶಮಿ ಬೀಜಕೋಶಮೆನೆ ಕಾಯ್ಗೆ ನಾಮಂ" (ಮಂಗರಾ. ೩೩-೬). ೪. ಕರಿಯ ಜಾಲಿಮರ: (ಶ).

[ಸಂ. ಶಮಿ, ಶಮೀ]

**ಶಮಿ₂** (ಗು). ೧. ನೆಮ್ಮದಿಯಿಂದ ಕೂಡಿದ ; ಶಾಂತವಾದ. (ನಾ). ೨. ಶಾಂತಸ್ವಭಾವದವನು: ಏಕಾಕಿ, ಪರಮಶಮಿ ಆಗಿ ನಮ್ಮಾ ಮನವು ನಿಸ್ಸ ನೆಲೆಯಲ್ಲಿಯೇ ನೆಲೆಸಬೇಕು (ಅರಳು. ೨೩೩-೧೩). [ಸಂ. ಶಮಿನ್]

**ಶಮಿತ** (ಗು). ೧. ಶಾಂತಗೊಳಿಸಿದ. ೨. ನಿವಾರಿಸಿದ. ೩. ಸಂಹರಿಸಿದ; ಕೊಂದ: ಶಮಿತಶಮನೇ ಶೈವಾಧಾರೇ ಶಿವೇ ಶರವಾರಿಣೀ ದಮಿಸು ಭವಮಂ ಧರ್ಮಾಕಾರೇ ದಯಾವತಿ ಪಾರ್ವತೀ (ವೃಷವಿ. ೪-೧೨೭). [ಸಂ.]

**ಶಮಿಸು** (ಕ್ರಿ). ೧. ಶಾಂತಗೊಳಿಸು; ಸಮಾಧಾನಗೊಳಿಸು: ಯುಕ್ತಿಯಿಂ ಕರಣಚೇಷ್ಟಿತವ ತಿದ್ದುತೆ ಶಮಿಪ ಶಕ್ತಿವಂತನೆ ಮುಕ್ತ (ಮಂಕುಕ. ೬೪೭). ೨. ಲಯವಾಗು: ಎದೆಯ ಹಾಲಿನಲಿ ಬಗೆಯ ಸಕ್ಕರೆಯ ಹರಳು ಕರಗುತಿಹುದು. ತೇಜದಲ್ಲಿ ತಮ ಶಮಿಸಿ ಸೋಮ ರಸಿಕತೆಯೊಳರಗುತಿಹುದು (ಹೃದಸ. ೯-೨೦).

[ಶಮನ₁ + – ಇಸು]

**ಶಮೀಪೂಜೆ** (ನಾ). (ವಿಜಯದಶಮಿಯ ದಿನ) ಬನ್ನಿಯ ಮರಕ್ಕೆ ಮಾಡುವ ಪೂಜೆ, – ಅರ್ಚನೆ: ಮಹಾರಾಜರು ಪುಷ್ಪಕದಿಂದ ಇಳಿದು, ವಿಜಯದಶಮಿಯ ಶಮೀಪೂಜೆಗೆ ಸಿದ್ಧರಾಗಿದ್ದಾರೆ (ಚಂದಯ. ೧೦೩). [ಸಂ. ಶಮೀಪೂಜಾ]

**ಶಮೆ** (ನಾ). ಮನೋನಿಗ್ರಹ: ಆ ಮಹಾದೇವರುದರದೊಳು . . . ಶಮೆ ದಮೆ ಶಾಂತಿ ದಾಂತಿ . . . ಸದ್ಗುಣಸ್ತೋಮವೆಲ್ಲಂ ನೆರೆದು ರೂಪಾದುದು (ಹಚಕಾ. ೧-೧೨); ಅಂತರಿಂದ್ರಿಯನಿಗ್ರಹವೆ ಶಮೆ (ಗಗತಾ. ೩-೨೫). [ಸಂ. ಶಮ]

**ಶಮ್ಮ** 'ಸಮ್ಮ' ನೋ.

**ಶಮ್ಯಾಕ** (ನಾ). ಕಕ್ಕೆಗಿಡ : "ಕೃತಮಾಳಂ ಶಮ್ಯಾಕಂ ಚತುರಂಗುಳಮೆಂಬುದಕ್ಕು ಮಾರಗ್ವಧದೊಳ್" (ವಸ್ತುಕೋ. ೩೫-೧೩) ; ಶಮೀ ಶಮ್ಯಾಕ ಜಂಬಾಳಡಂಬದಿಂ . . . ನಿಚುಳಾಕ್ಷೋಣಂಗಳಿಂದೊಪ್ಪುಗುಂ (ವರ್ಧಮಾ. ೫-೪೮). [ಸಂ.]

**ಶಮ್ಯಾರಮ್ಯ** (ನಾ). ೧. ಬನ್ನಿಯ ಮರಗಳಿಂದ ಶೋಭಿಸುವುದು. ೨. ತಾಳವಾದ್ಯಗಳಿಂದ ಇಂಪಾದುದು. ೧, ೨: ತಾಳಪಾತವಿಧಿಯಂತೆ ಶಮ್ಯಾರಮ್ಯಮುಂ ತಳೋವಲಾತಮುಂ . . . ಅಲ್ತು (ಚಂದ್ರಪ್ರ. ೫-೫೨ ವ).

[ಸಂ. (ಶಮಿ + ಆರಮ್ಯ ; ಶಮ್ಯಾ + ರಮ್ಯ)]

**ಶಮ್ಯೆ** (ನಾ). ೧. ನೊಗದ ಕಣ್ಣಿಗೆ ಸೇರಿಸುವ ಬೆಣೆ : "ಶಮ್ಯಾ, ಯುಗಕೀಲಕಃ – ಈ ೨ ಕಳಿಯಡಕು" (ಹಲಾಯು. ೯೪-೪೨೧). ೨. ದಂಡ; ಕೋಲು. ೩. ಒಂದು ಬಗೆಯ ಕಂಚಿನ ವಾದ್ಯ ; ತಾಳ. [ಸಂ. ಶಮ್ಯಾ]

**ಶಯ** (ನಾ). ೧. ನಿದ್ರಿಸುವುದು. ೨. ನಿದ್ರೆ. ೩. ಹಾಸಿಗೆ ; ಮೆತ್ತೆ. ೪. ಕೈ ; ಹಸ್ತ: "ಪಾಣಿಃ, ಶಯಃ, ಪಂಚಶಾಖಃ, ಕರಃ, ಹಸ್ತಃ — ಈ ೫ ಕೆಯ್" (ಹಲಾಯು. ೮೪-೩೫೭). [ಸಂ.]

**ಶಯನ** (ನಾ). ೧. ಮಲಗಿರುವಿಕೆ ; ಪವಡಿಸಿರುವಿಕೆ : 'ಶಯನಂಗೆಯ್' ಪರಾ. ೨. ನಿದ್ರೆ : ಶಯನ ಕ್ಲೇಶದೊಳನ್ನಪಾನಗಮನಾಯಾಸಂಗಳೊಳ್ ನಿನ್ನ ಸೇದೆಯುಮಂ ನೋಡದತಿಪ್ರಯತ್ನಪರಿಚರ್ಯಾರಂಭದಿಂ ಸೀತೆಯುಮಂ ರಾಮನುಮಂ ಸಮಾಹಿತಮನ ಮಾಡೆಂದು ಸಂಪ್ರೀತಿಯಿಂ ಪ್ರಿಯದಿಂ ಪ್ರಾರ್ಥಿಸಿದಳ್ (ಪಂರಾಮಾ. ೬-೧೭೬) ; ಅಯನ ನೋಡಿದ್ದೂ ಇಲ್ಲ, ಶಯನ ಮಾಡಿದ್ದೂ ಇಲ್ಲ (ಗಾದ). ೩. ಹಾಸುಗೆ ; ಮೆತ್ತೆ : "ಶಯ್ಯಾ, ಶಯನೀಯಂ, ಶಯನಂ - ೩ ಹಾಸಿಗೆ" (ಸಿದ್ಧಾಂತಿ. ೨೧೦). ೪. ಮಂಚ; ಪರ್ಯಂಕ: "ಶಯನಮುಂ ಪರಿಯಂಕಮುಂ ಶಯ್ಯೆಯೆನೆ ಮಂಚಮೆನಿಸಿಕ್ಕು" (ಮಂಗರಾ. ೬೦-೧೫). ೫. ಕೂಟ; ಸಂಭೋಗ. ೬. ನೆಲೆ; ಆಶ್ರಯಸ್ಥಾನ : "ಶಯನಂ ಸ್ಥಾನಮೆನೆ ಠಾವಿಗತಿಶಯಮದಕ್ಕು" (ಮಂಗರಾ. ೧೩೪-೩೧). ೭. ರೀತಿ ; ಕ್ರಮ : "ಶಯನಂ, ಸ್ಥಾನಂ — ಈ ೨ ಬಗೆ" (ಹಲಾಯು. ೧೨೫-೭೭). [ಸಂ.]

**ಶಯನಂಗೆಯ್** (ಕ್ರಿ). ಮಲಗು; ಪವಡಿಸು: ಪರ್ಯಂಕಾಗ್ರದೊಳೊಪ್ಪಿ ನಾಡೆ ಶಯನಂಗೆಯ್ದಿರ್ದು ಮಂತ್ರಾತ್ಮಕಂ... ಗುಣಾಧಿಕಂಗಳನಣಂ ತೋರ್ಪಂತೆ ಸಂಚೇಷ್ಟಿಪಂ (ಹಮ್ಮೀರ. ೨-೨೯). [ಶಯನ + ಕೆಯ್]

**ಶಯನಗೃಹ** (ನಾ). ಮಲಗುವ ಕೋಣೆ ; ಸೆಜ್ಜೆಮನೆ: "ಅಂತಃಪುರಂ . . . ರಾಜ್ಞೀನಿವಾಸಮವರೋಧಂ ಮತ್ತಂತದು ಶಯನಗೃಹಂ" (ವಸ್ತುಕೋ. ೪೮-೧೮). [ಸಂ.]

**ಶಯನಸದನ** (ನಾ). = ಶಯನಗೃಹ: ಪುಷ್ಕಲಾವತಿಯೆಂಬ ಶಯನಸದನಮುಂ ಕುಬೇರಕಾಂತಮೆಂಬ ತವದ ಭಂಡಾರಮುಂ (ಆದಿಪು. ೧೫-೩ ವ) ; ಜಿನನಿರ್ದ ಶಯನಸದನ ಮನನಿಮಿಷವಧು ಮೂಮ ಭಕ್ತಿಯಿಂ ಬಲಗೊಳುತಂ . . . ಬಳಸುವಂಚೆಯಂ ನೆನೆಯಿಸಿದಳ್ (ಪುಷ್ಪಪು. ೧೦-೧೭). [ಸಂ.]

**ಶಯನಸ್ಥಾನ** (ನಾ). ೧. ಮಲಗುವ ಜಾಗ, — ಸ್ಥಳ: "ಪಟ್ಕಿ—ಶಯನಂ; ಶಯನಸ್ಥಾನಂ" (ಶಮದ. ಪರಿ. ೧) ; ರವಿಸೂನು ದರ್ಭಾಂಕುರದ ಶಯನಸ್ಥಾನದಲಿ ಮಾಡಿದನು ಜಾಗರವ (ಕುಮ್ಯಾಕ. ೮-೯). ೨. = ಶಯನಗೃಹ. [ಸಂ.]

**ಶಯನಾಗಾರ** (ನಾ). = ಶಯನಗೃಹ: ಶಯನಾಗಾರದಲ್ಲಿ ಜೊತೆಗಾತಿಯಿಲ್ಲದೆ ತಾನೊಂಟಿಯಾಗಿದ್ದಾಗ ಅದನ್ನು ಲಕೋಟೆಯಿಂದ ಪೂರ್ತಿತೆಗೆದು ಕಣ್ಣಾನ ತಣಿ ಯುವ ತನಕ ನೋಡುತ್ತಿದ್ದಳು (ಪುನರು. ೩೨೩). [ಸಂ.]

**ಶಯನಿಸು** (ಕ್ರಿ). = ಶಯನಂಗೆಯ್ : ಲಲನೆ ಶಯನಿಸುವಮಳಪುಷ್ಪಕನಿಳಯಲಂಬಿತ ರತ್ನಮಾಲಾಕಲಿತಮಣಿಗಣದೀಪವಿಭ್ರಮಕಾಂತಿಯಗ್ಗಳಿಸೆ (ಬಸವು. ೧೨-೩೭); ಭೂಷಣ್, ಕುಮಾರರು . . . ಸುಸ್ವಾದವರಂತ ಶಯನಿಸುವರು (ಕಂಕತೂ. ೩೭). [ಶಯನ + -ಇಸು₃]

**ಶಯನೀಯ** (ಗು). ೧. ಮಲಗಲು ಯೋಗ್ಯವಾದ. (ನಾ). ೨. ಹಾಸುಗೆ ; ತಲ್ಪ: "ಶಯನೀಯಂ ಪರ್ಯಂಕಂ ಶಯನಂ ಶಯ್ಯಾಖ್ಯೆ" (ವಸ್ತುಕೋ. ೪೯-೨೨); ಅಸುಕೆದಳಿರಿಂದ ವಿರಚಿಸುತ ಶಯನೀಯಮಂ ಮಿಸುಪ ಭಕ್ತಿಯೊಳೆ ಲಕ್ಷ್ಮಣ ನಡೆದನು (ಕುಮುರಾ. ೭-೧೦). [ಸಂ.]

**ಶಯನೋತ್ಸವ** (ನಾ). ದೇವರ ಮೂರ್ತಿಯನ್ನು ಮಲಗಿಸುವ ಒಂದು ಪೂಜಾ ವಿಧಾನ: ಮುಮ್ಮಡಿಕೃಷ್ಣರಾಜಒಡೆಯರವರು . . . ಶಯನೋತ್ಸವಕ್ಕೆ ಅಮ್ಮನವರಿಂದ ಸಹಿತವಾದ ಬೆಳ್ಳಿಯ ವೇಣುಗೋಪಾಲಸ್ವಾಮಿಯನ್ನೂ . . . ಪ್ರತಿಷ್ಠೆ ಮಾಡಿಸಿದರು (ಮಹಾವಂ. II, ೧೪೩) ; ಮಂಗಳ ಹಾಡಿದ ಮೇಲೆ — ದೇವರಿಗೆ ಶಯನೋತ್ಸವ ಮಾಡಿಸಿದ ಮೇಲೆ ಮತ್ತಲ್ಲಿಯ ಕೀರ್ತನೆ ? (ಕಭವಿ. ೫೨೫). [ಸಂ.]

**ಶಯಾನಕ** (ನಾ). ೧. ಮಲಗುವಿಕೆ. ೨. ನಿದ್ರಿಸುವಿಕೆ. ೩. ಒಂದು ಬಗೆಯ ಹೆಬ್ಬಾವು. ೪. ಓತಿಕೇತ; ಹೆಂಟೆಗೊದ್ದ : "ಶಯಾನಕಂ ಬಲಿಸೂರ್ಯಮೆನಲು ಗೋಸುಂಬೆ" (ಮಂಗರಾ. ೪೯-೧೨). [ಸಂ.]

**ಶಯಾಲು** (ಗು). ೧. ನಿದ್ರೆಮಾಡುವ ಸ್ವಭಾವವುಳ್ಳ. (ನಾ). ೨. ನಿದ್ರೆಮಾಡುವ ಸ್ವಭಾವದವನು; ತೂಕಡಿಸುವ ಸ್ವಭಾವದವನು. ೩. ಒಂದು ಬಗೆಯ ಹಾವು. ೪. ನಾಯಿ. ೫. ನರಿ. [ಸಂ.]

**ಶಯು** (ನಾ). = ಶಯಾಲು ೩: ಶೇಷ ಶಯು ವಾಸುಕಿ ರಾಜಿಳಜಾಳನಿಕೇತಂ ಕಟ್ಟಿಳಿಪುದು ಫಣಿಲೋಕದಂತೆ ತತ್ಕಾಂತಾರಂ (ಅರ್ಧನೇ. ೬-೩೭); ಶಯುದಂಷ್ಟ್ರಾವಿಷದಂಶವೊಂದೆ ಜತುಗೇಹೋದ್ದೀಪನಂ ತಾನದೊಂದು . . . ಪೇಟ್ಕ್ರಾಗಳೊರ್ಮೆಯೊ ಮೇಣಿರ್ಮೆಯೊ ಮೂರ್ಮೆಯೋ ಕುರುಕುಳಪ್ರಾರಬ್ಧದುರ್ವೃತ್ತಕಂ (ಕಾವ್ಯಾವ. ೩೪೯). [ಸಂ.]

**ಶಯ್ಯಾಗಾರ** (ನಾ). = ಶಯನಗೃಹ : ಈ ಕೊಠಡಿಗಳು . . . ಅವುಗಳಲ್ಲಿ ಮುಂದಿನದು ಕಾರ್ಯಾಗಾರ, ಹಿಂದಿನದು ಶಯ್ಯಾಗಾರ (ಸಂಟರು. ೧೮). [ಸಂ.]

**ಶಯ್ಯಾಗೃಹ** (ನಾ). = ಶಯನಗೃಹ : ಅಲ್ಲಿಂ ತಳರ್ದು ನಿರ್ವರ್ತಿತಸಂಧ್ಯೋಚಿತ ಜಿನೇಂದ್ರವಂದನಂ ಶಯ್ಯಾಗೃಹಕ್ಕೆವಂದನಲ್ಪತಲ್ಪತಲಗತನಾಗಿರೆ (ಚಂದ್ರಪ್ರ. ೨-೪೭); ನಗುವ ಸುತ್ತಮುತ್ತಲಿನ ಗುಡಿಸಿಲನ್ನು ಬೆಳಗಿ ರತ್ನದೀಪರಂಜಿತವಾದ ಸಾಮ್ರಾಟನ ಶಯ್ಯಾಗೃಹವೋ ಎನ್ನುವಂತೆ ಮಾಡಿತು (ಮಹಾಣ. ೧೫೦). [ಸಂ.]

**ಶಯ್ಯಾಗ್ರ** (ನಾ). ಹಾಸುಗೆ; ತಲ್ಪ : ಸೂಸಿರ್ದಳಕಂ . . . ಕಣ್ಗೊಳಿಪನ್ನಂ ಲೀಲೆಯಿಂದುಪ್ಪವಡಿಸಿದಳ್ ಹೃದ್ಯಾಂಗಿ ಶಯ್ಯಾಗ್ರದಿಂದಂ (ಜಗವಿ. ೨-೭೮). [ಸಂ.]

**ಶಯ್ಯಾತಳ** (ನಾ). ಹಾಸುಗೆ; ತಲ್ಪ : ಒರ್ವಂ ಶ್ರೀವಿಜಯಂ ನೀನೊರ್ವಯ್ ಖಚರೇಶ ಪೊತ್ತು ನಿಂದಿರ್ ದೂರೆವೆತ್ತುರ್ವೀಭರಮಂ ಪೋದುದು ಶರ್ವರಿ ಬೆಳಗಾದುದೇಟಿ ಶಯ್ಯಾತಳದೊಳ್ (ಶಾಂತಿಪು. ೫-೮೪) ; ಬದಗುಳಿಗನ ತೋಳ್ಕುಟ್ಟಿದ ಸುದತಿಯೊಳಿಂಬಾಗ ದಂತೆ ಕೆಟ್ಟುದು . . . ಪತಿಗೆ ಶಯ್ಯಾತಳದೊಳ್ (ಯಶೋಚ. ೨-೫೯). [ಸಂ. ಶಯ್ಯಾತಲ]

**ಶಯ್ಯಾವಸಥ** (ನಾ). = ಶಯನಗೃಹ : "ಶಯ್ಯಾವಸಥಮೆನೆ ಸೆಜ್ಜೆಮನೆಯಕ್ಕು" (ಮಂಗರಾ. ೫೮-೮). [ಸಂ.]

**ಶಯ್ಯಾಸದನ** (ನಾ). = ಶಯನಗೃಹ: ಶಯ್ಯಾಸದನಕ್ಕುದ್ಭಟನೊಯ್ಯನೆ ನಡೆತರೆ . . . ಸೆಜ್ಜೆಯ ಮನೆ ರಯ್ಯಮೆನಲ್ಕಿಗೆ ವಿರಾಜಿಸಿದುದು (ಉದ್ಭಟ. ೮-೮೮); ಶಯ್ಯಾಸದನ ಗವಾಕ್ಷಮನೊಯ್ಯನೆ ಪೊಕ್ಕುಲಿದು ನೃಪನ ಸುಖನಿದ್ರೆಯ ಕೆಯ್ಯಂ ತೊಲಗಿಸಿತು . . . ಪ್ರಭಾತಸಮೀರಂ (ಪುಷ್ಪಪು. ೮-೨೦). [ಸಂ.]

**ಶಯ್ಯೆ** (ನಾ). ೧. ಹಾಸುಗೆ; ತಲ್ಪ : "ಪಟ್ಕಿ ಸೆಜ್ಜೆಯೆನಲಾದರಿಪ ಶಯ್ಯೆಗೊಪ್ಪುವ ಪೆಸರು" (ಕಬ್ಬಿಗ. ೨೯). ೨. ಮಂಚ ; ಪಲ್ಲಂಗ : "ಪರ್ಯಂಕಃ, ಶಯನಂ, ಶಯ್ಯಾ— ಈ ೩ ಮಂಚಂ" (ಹಲಾಯು. ೫೧-೧೫೨) ; ಮಾಂದಳಿರ ತೂಗುಯ್ಯಲೆಯ ಶಯ್ಯೆಯಲಿ . . . ಎಣೆವಕ್ಕಿಗಳ ಹೋಲಿ ಭೋಗಿಸಿದರನುದಿನಂ (ಚಿತ್ರಾಂಗ. ೪೦-೧೧೩೦). ೩. ಮಲಗುವಿಕೆ : "ಧಾನ್ಯದೊಳ್ ಶಯ್ಯೆಯಲ್ಲಿ ಪೆಸರಕ್ಕು ಸೆಜ್ಜೆಯೆಂಬುದಕೆ" (ಶಬ್ದಮಂ. ೮೮). ೪. ನಿದ್ರೆ. ೫. ಹೆಂಗಸು; ಸ್ತ್ರೀ : "ವಧು ತಲ್ಪಂ ನಿದ್ರೆ ಶಯ್ಯಾಹ್ವಯಂ" (ನಾನಾರ. ೫೬). ೬. [ಕಾವ್ಯಮೀ] ಶಬ್ದ ಅಥವಾ ಪದಗಳ ಜೋಡಣೆ: ಭಾವಂ ಭಾವಜನ ಪೂವಿನಂಬಿನಂತೆ ಮನಮಂ ನಾಂಟೆ . . . ಶಯ್ಯೆ ರಯ್ಯಮಾಗೆ ಬಂಧಮುಗುಂದಲೆವಡೆಯೆ (ರಾಜಶೇ. ೫-೧೯ ವ) ; ಪದಗಳಿಗೆ ಇರತಕ್ಕ ಅನ್ಯೋನ್ಯವಾದ ಮೈತ್ರಿಗೆ ಶಯ್ಯೆ ಎಂದು ಹೆಸರು (ಕೈಪಿಡಿ. ೨೨೪). [ಸಂ. ಶಯ್ಯಾ]

**ಶರ** (ನಾ). ೧. ಅಂಬು ; ಸರಳು ; ಬಾಣ: ಶರಮನಿದಂ ಕಡಿಕಡಿದುಡಿದು . . . ರಿಪುಬಲಗಹನಾಂತರಮಂ ಸುಡಲ್ (ಆದಿಪು. ೧೨-೧೦೨) ; ಕೋದಂಡಮಂ ಸೆಳೆದು ಶರಮೂಡಿಗೆಯ ಮಡಲಿಱಿದು ಕೈಸೂಡೆಯನು ತಿದ್ದಿ . . . ನೆಱ ಮೃತ್ಯುದೇವತೆಗೆ ಬಿದ್ದನಿಕ್ಕುವೆನೆಂದು ಭೂವಲ್ಲಭಂ ನುಡಿಯೆ (ಹಚಕಾ. ೬-೨೮). ೨. ಒಂದು ಬಗೆಯ ಹುಲ್ಲು ; ಬಿಳಿಯ ಹುಲ್ಲು: "ಶರಃ, ಮುಂಜಃ - ಇವೆರಡುಂ ಮೊದೆ" (ಹಲಾಯು. ೩೨-೩೮). ೩. ಹಾಲಿನ ಕೆನೆ. ೪. ಗಾಯ; ವ್ರಣ. ೫. ನೀರು; ಜಲ: "ನೀರಂ ಶರಂ . . . ಪಾನೀಯಮೆಂದಿಂತನಾಕುಳದಿಂದಂ ತಱಿಸಲ್ಕೆ ನೀರ್ಗೆ ಪೆಸರಂ ಪರ್ಯಾಯದಿಂ ವಾಗ್ಮಿದರ್" (ವಸ್ತುಕೋ. ೨೨-೧). ೧, ೫: ಸ್ಫುರದ್ವನು ಶ್ರೀಕರ ಚಂಚಲೇಕ್ಷಣಾಂ ಶರಧ್ಯುಪಾತ್ತೋರುಶರಂ ಘನಸ್ವನಂ ಹರಿಪ್ರಭಂ ನೀರದರಾಜನಟ್ಟಿದಂ . . . ನಿದಾಘನಂ (ರಾಜಶೇ. ೮-೧೦೪). ೬. ಸರೋವರ. ೭. ಶಬ್ದ ; ಧ್ವನಿ. "ತೃಣ ಬಾಣ ಸರೋವರ ವಾರಿ ನಿಸ್ವನಂ ಕ್ರಮದಿ ಶರಾಹ್ವಯಂ" (ನಾನಾರ. ೩೬). ೮. ತೆನೆಯ ಕಾಳಿನ ಮೇಲಿರುವ ಸುಂಕು, — ಮುಳ್ಳು : "ಶರದಲ್ಲಿಯುಂ ಕಿಂಶಾರುಮೆಂಬುದು" (ಹಲಾಯು. ೧೬೧-೫). ೯. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ: "ಶರ ಕರಣಮೈದು" (ಮಂಗರಾ. ೧೦೩-೮) ; ಪಂಚವ್ರತ, ಇಂದ್ರಿಯ, ಶರ,

ವಿಷಯ . . . ಶುಕ್ಲ- ಇಂತಿನಿತುಂ ೫ಕ್ಕೆ ಹೆಸರು (ವೃಷಹಾ. ೧೦). **೧೦. = ಶರ ಷಟ್ಪದಿ:** ಶರ ಕುಸುಮ ಭೋಗ ಭಾಮಿನಿ ಪರಿವರ್ಧಿನಿ ವಾರ್ಧಕಂಗಳೆಂದಾಱು ತೆಱಂ (ಛಂದೋಂಬು. ೫-೨೫ ಆಡಿಪದ್ಯ). **೧೧. ರುದ್ರಗಣ :** ಜಯಕೀರ್ತಿಯು . . . ಬ್ರಹ್ಮ ವಿಷ್ಣು ರುದ್ರ ಎಂಬ ಹೆಸರುಗಳ ಬದಲಾಗಿ 'ರತಿ', 'ಮದನ', 'ಶರ' ಎಂಬ ಹೆಸರುಗಳನ್ನು ಬಳಸಿದ್ದಾನೆ (ಛಂದೋವಿ. ೧೩೦). **೧೨. [ಕಾವ್ಯಮೀ] ಚಿತ್ರಕಾವ್ಯದ ಒಂದು ಬಗೆ; ಬಾಣದ ಆಕಾರಕ್ಕೆ ಹೊಂದುವಂತೆ ಬರೆದ ಪದ್ಯ; ಶರಃ:** ಉದಾ : ಸುಂದರಾಕಾರಸಂಪನ್ನನೆಂದುಮೀ ನೃಪನಂದನಂ ನಂದನಂ ಬುಧ ಕೀರಾಳಿವೃಂದಕ್ಕೆ ಸಕಲತರ್ಕುಕಂ (ಕಾವ್ಯಾವ. ೫೭೧). **[ಸಂ.]**

**ಶರಕರರಸನ (ನಾ).** ಐದು ಮತ್ತು ಎರಡು–ಹೀಗೆ ಒಟ್ಟು ಏಳುನಾಲಿಗೆಗಳುಳ್ಳವನು; ಸಪ್ತಜಿಹ್ವ; ಅಗ್ನಿ : 'ಶರಕರರಸನನೇತ್ರ' ಪರಾ. **[ಸಂ.]**

**ಶರಕರರಸನನೇತ್ರ (ನಾ).** ಉರಿಗಣ್ಣುಳ್ಳವನು ; ಅಗ್ನಿನೇತ್ರ ; ಶಿವ: ಶರಕರರಸನನೇತ್ರ . . . ಶತಧರ್ಮವಂದಿತಪದಾಂಭೋಜ ಒಲಿದು ಪಾಲಿಪುದೆನ್ನ ಸಂಗಮೇಶ್ವರ ಪ್ರಸನ್ನ (ಪ್ರೌಢರಾ. ೧೭-೧). **[ಸಂ.]**

**ಶರಚೌಪದಿ (ನಾ).** [ಛಂದ] ನಾಲ್ಕುಪಾದಗಳಾಗಿ ಮಾರ್ಪಟ್ಟ ಶರಷಟ್ಪದಿ: ಶರಚೌಪದಿ : ಶರಷಟ್ಪದಿಯು ಈಚಿನ ಕವನಗಳಲ್ಲಿ . . . ನಾಲ್ಕುಚರಣಗಳಿಗೆ ತಿರುಗಿದ ರೂಪವು (ಛಂದೋವಿ. ೨೭೭). **[< ಸಂ. ಶರಚತುಷ್ಪದೀ]**

**ಶರಚ್ಚಂದ್ರ (ನಾ).** ಶರದೃತುವಿನ ಚಂದ್ರ; ಶರತ್ಕಾಲದ ಚಂದ್ರ: ಅಡಿರಕ್ತಾಂಭೋಜಮೆಂಬಂತಿರೆ . . . ಆಸ್ಯಂ ಶರಚ್ಚಂದ್ರನನಿಱಿಸೆ ಕರಂ ಧನ್ಯೆ(ಸ)ತತ್ಕನ್ಯೆಯಕ್ಕುಂ (ಶೋಕೋಪ. ೧೧-೫೦); ನಿರ್ಮಲ ಶರಚ್ಚಂದ್ರಕಿರಣಗಳಿನಂಬರಂ ಪ್ರೋಲ್ಲಾಸಗೊಳ್ವಂತೆ ದಶರಥಂ ಬಗೆಯುರ್ಬೆ (ಶ್ರೀರಾಮಾ. ೧೪-೩೭೦). **[ಸಂ.]**

**ಶರಚ್ಚಂದ್ರಿಕೆ (ನಾ).** ಶರತ್ಕಾಲದ ಬೆಳುದಿಂಗಳು : ಶರಚ್ಚಂದ್ರಿಕೆಯ ಬಳಸಿನೊಳಗಣ ಚಂದ್ರಮನಂತಿರ್ದನನುಪಮಂ ಜಿನಚಂದ್ರಂ (ಪುಷ್ಪಪು. ೧೧-೩೦). **[ಸಂ. ಶರಚ್ಚಂದ್ರಿಕಾ]**

**ಶರಜನ್ಮ (ನಾ).** ಲಾಳದ ಕಡ್ಡಿಯ ಪೊದರಿನಲ್ಲಿ ಹುಟ್ಟಿದವನು ; ಷಣ್ಮುಖ: ಚೂತಫಲಮಂ ಶಂಭು ಪಿಡಿದಿರಲು ಶರಜನ್ಮ ವಾರಣಾಸ್ಯರು ಬೇಡೆ . . . ಮುಂಬಂದವರ್ಗೆ ಕೊಟ್ಟಪೆನೆನಲು (ಪ್ರೌಢರಾ. ೧-೧೧) ; ಕರಿಮುಖನಿದು ಪೊಸತೆಂದಂ ಶರಜನ್ಮಂ ಚಿತ್ರಮೆಂದಂ (ರಾಜಶೇ. ೧೪-೧೦೫). **[ಸಂ. ಶರಜನ್ಮನ್]**

**ಶರಜಾಲ (ನಾ).** ಬಾಣಗಳ ಗುಂಪು, — ಸಮೂಹ : ಕುರುಪ್ರಭು ಕಂಡಂ ಶರಜಾಲಜರ್ಜರಿತಗಾತ್ರತ್ರಾಣನಂ ದ್ರೋಣನಂ (ಗದಾಯು. ४-४೭) ; ನರನೆಸಲಾವು ದಂಬರವಾವುದವನಿಯದಾವುದರಿಬಲವೆನಲು ಹಬ್ಬಿತು ಪಾರ್ಥಶರಜಾಲ (ಕುಮಾವ್ಯಾ. ೮-೩೩). **[ಸಂ.]**

**ಶರಟು** 2ಷರಟು' ನೋ.

**ಶರಣ್, ಶರಣು, ಸರಣ್, ಸರಣು (ನಾ). ೧. ಆಶ್ರಯ ; ರಕ್ಷಣೆ :** ಶರಣಕ್ಕೆನಗರಿಕೇಸರಿಯೆರಡುಪದಾಂಬುಜಮುಮಿಾಗಳೆಂಬುದುಮಾಗಳ್ ಹರಿ ಚಕ್ರಂಕೊಳ್ವದೆ ನರ ಶರಮುರ್ಚದೆ ದಹನಶಿಖೆಗಳಳುರದೆ ಅವನಂ (ಪಂಪಭಾ. ೫-೯೯); ನೀಂ ಶರಣೆಂದು ಬಂದ ರಿಪುಭೂಪಾಳಕರ್ಕಳಂ ಕಾದು . . . ಒಪ್ಪಿಟ್ಟಿಪವರ್ (ಎಇ. XVIII, ೫-೧೫: ಸು. 1082). **ಶರಣು : ೧.** ಭವಭವದಲ್ಲಿ ನಿಮ್ಮ ಜಂಗಮವೆ ಶರಣಯ್ಯಾ (ಬಸವ. ४೭೧); ಇದಕೆ ನುಡಿಯಿನ್ನಿಲ್ಲ ಮೌನವೇ ಶರಣೆಮಗೆ (ತಿರುರ. ದೇ. ೧೭-೮). **೨. ವಂದನೆ; ನಮಸ್ಕಾರ:** ಶರಣು ಸಿದ್ಧಿವಿನಾಯಕ ಶರಣು ವಿದ್ಯಾಪ್ರದಾಯಕ ಶರಣು ಪಾರ್ವತಿತನಯ ಮೂರುತಿ ಶರಣು ಮೂಷಿಕವಾಹನ (ಪುರಂದ. ೧-೫ ಪಲ್ಲವಿ); ಶರಣು ನಿಷ್ಕ್ರಿಯ ನಿಷ್ಕಲಾಪನೆ (ಗಗತಾ. ೧-४೩). **ಸರಣ್: ೧.** 'ಸರಣ್ಬೊಗು' ಪರಾ. **ಸರಣು : ೨.** ಮಲೆವದಟರ್ಕಡಂಗುವ ಮಹೀಪತಿಗಳು ಸರಣೆಂಣದಿರ್ದ್ದು ಮಂಡಲಿಕರಡಂಗದಾಟವಿಕರೊರ್ವ್ವರುವಿಲ್ಲೆನೆ . . . ಆಳ್ವ (ಕಇಅ. ೭४-೧೨-೧೦; -1170); ಶ್ರೀ ಸಿದ್ಧರಾಮನಾಥ ಸರಣು (ಎಇ. XXIII, ೩೦-೧; 1265) ; ನಿಂಗ ಸರಣು ಮಾಡಲ್ಲವಾ ನಾವು ನೀರಿಗಿಳಿಯೋದು? (ನಡದಾ. II , ೧४४೦).

**ಶರಣುಶರಣು (ದ್ವಿರುಕ್ತಿ):** ಶರಣುಶರಣೆಂದೆನ್ನೆ ಲಿಂಗಕೆ ಗುರುವನೆಂದುಂ ಕಾಣೆ . . . ದುರ್ಮಾರ್ಗವಂ ಮಾಣೆ (ಬಸಪು. ४೧-೭); ತೊಳಲಿ ಬಳಲುವ ಜೀವಭಾವದೊಳುಳಿವುದಾವುದು . . . ಸಮರಕೆ ಶರಣುಶರಣೆಂದ (ಕುಮಾವ್ಯಾಭೀ. ೩-४೧). **ಶರಣಾಗು = ೧. ಆಶ್ರಯ ನೀಡು; ಕಾಪಾಡು:** ದೇವರ್ಕಳಿರಾ ವಿದ್ಯಾಧರರ್ಕಳಿರಾ ಶರಣಾಗಿಮಾರಪ್ಪೊಡಮೆನ್ನಂ ರಕ್ಷಿಸಿಂ (ವಡ್ಡಾರಾ. ೫೮-೩೦). **೨. ಮನಸ್ಸನ್ನು ಒಪ್ಪಿಸು; ಸೋಲು:** ಅವನು ಶರಾಬಿಗೆ ಶರಣಾದ (ರೂಢಿ). **ಶರಣು ಮಾಡು = ೧. ನಮಸ್ಕಾರ ಮಾಡು; ಪಾದಕ್ಕೆರಗು:** ತನ್ನ ಕಾಲಿಗೆ ತಾನೇ ಶರಣು ಮಾಡಿ ಹರಸಿಕೊಂಡ ಹಾಗೆ (ಗಾದೆ). **೨. ಒಪ್ಪಿಸು ; ಸಮರ್ಪಿಸು :** ನಂಮ ಹೆಸರಲ್ಲು ಮಠವ ಕಟ್ಟಿಸಿ ನಿಮಗೆ ಶರಣುಮಾಡಿದ ವಶೀಕೃತ ಮಠದ ಧರ್ಮಕೆ ಹೇರುವ ಮಾನ್ಯದ ಎತ್ತು (ಎಕ. VII, ಶಿಮೊ. ೨೮-೧೨; 1670) ; ಗೌಡ ಮರಿಯನು ತನ್ನ ಉಂಬಳಿಯಿಂದ ಶರಣುಮಾಡಿದ ಬಗೆಲು ಗ ೬ (ಎಕ. VII, ಶಿಮೊ. ೨೯-೨४ ; 1712). **ಶರಣುಹೊಡೆ = ೧. ನಮಸ್ಕರಿಸು; ತಲೆಬಾಗು:** ಎದುರಿಗೆ ಬಂದ ಅವನಿಗೆ ಶರಣುಹೊಡೆದು ಮುಂದಕ್ಕೆ ಹೋದೆ (ರೂಢಿ). **೨. (ಆಲಂ) ಬಿಡು; ತ್ಯಜಿಸು:** ನೌಕರಿಗೆ ಶರಣು ಹೊಡೆಯವುದೇ ವಿಹಿತವೆಂದು, ಅವಳು ನಿರ್ಧರಿಸಿಕೊಂಡಳು (ಸ್ಕೂಲಮಿ. ४४); ಮಹೇಶನು ಕಾಲೇಜಿಗೆ ಶರಣುಹೊಡೆದ (ಮಾಲತೀ. ೫). **ಶರಣುಹೋಗು = ಮೊರೆಹೊಗು:** ವಿಜಯನಗರ ಸಾಮ್ರಾಜ್ಯದ ಇತಿಹಾಸಕ್ಕಂತೂ ಪ್ರವಾಸಿಗಳ ಕಥನಕ್ಕೆ ಶರಣುಹೋಗದೆ ಬೇರೆ ಮಾರ್ಗವೇ ಇಲ್ಲವಾಗಿದೆ (ಪ್ರವಾಇ. II, VIII, ಪ್ರಸ್ತಾವನ); ಇದರ ಒಗಟನ್ನು ಬಿಡಿಸಬೇಕಾದರೆ ಇವುಗಳ ಹಳಗನ್ನಡರೂಪಕ್ಕೆ ಶರಣುಹೋಗುವುದು ಅವಶ್ಯಕ (ಸಂಶೋಧ. ೬೧). **[< ಸಂ. ಶರಣ]**

**ಶರಣ (ನಾ). ೧. ಆಶ್ರಯ ; ರಕ್ಷಣೆ :** ಭದ್ರಬಾಹುಚರಣಂ ಶರಣಂ (ಮಲ್ಲಿಪು. ೧-೧೧); ಎನಗಭಿಮತಮಂ ವಿಷ್ಣು ನೆಗಟ್ಟಿದೊಡೆವಱಗದಾರ ಚರಣಂ ಶರಣಂ (ಜಗವಿ. ೧-೩४); ಸಕಲಭಯಹರನೆ ನಿನ್ನಭಯಕರಂ ಸಂಸಾರವಾರ್ಧಿತರಣಂ ಶರಣಂ (ವಸ್ತುವಂ. ೧೭-೧೨೦). **೨. ಕಾಪಾಡುವವನು; ರಕ್ಷಕ. ೩. ಮನೆ; ನಿವಾಸ:** ಕೃತಾಂತಶರಣಂ ಶರಣಂ ಶರಣಂ ಮುರಾರಿಗಾರಿಂದಱಿವೆಂ (ಜಗವಿ. ೧೭-೩೩). **४. ದೇವರಿಗೆ ತನ್ನನ್ನು ಸಮರ್ಪಿಸಿಕೊಂಡವನು ; ಭಕ್ತ:** ರಾಘವಂ . . . ಲಂಕಾಧಿಪತ್ಯಮಂ ಶರಣಂಗೊಪ್ಪಿಸಿ ತಾಂ ಸೀತಾಸಮೇತಂ ಅಯೋಧ್ಯೆಯೊಳರಸುಗೆಯ್ಯುತಿರ್ದಂ (ರಾಮಾಶ್ವ. ೧೭-೧೮). **೫. [ವೀಶೈ] ಶಿವಭಕ್ತ; ಶಿವಶರಣ:** ಅಱಿದಱಿದು ನಿಮ್ಮ ಶರಣನು ಆಚರಿಸುವಾಚರಣೆಯ ಕಂಡು ಕಣ್ದೆಱೆದೆನಯ್ಯಾ (ಬಸವ. ೫) ; ಶರಣರೇ ಕುಲದೈವವೆಂದು ಕೊಂಡಾಡುತಂ ಶರಣರ್ಗೆ ವಂಚನೆಯದಿಲ್ಲೆನಿಸಿ ಮಾಡುತಂ (ತಿರುರ. ದೇ. ೯-೧) ; ಶರಣರ ಬಾಳು ಮರಣದಲ್ಲಿ ನೋಡು (ಗಾದೆ). **೬. ಷಟ್ಸ್ಥಲಗಳಲ್ಲಿ ಒಂದು; ಐದನೆಯ ಸ್ಥಲ :** ಐಕ್ಯ ಶರಣವೆಂಬ ಸ್ಥಲದ್ವಯವು ಕಾರಣಶರೀರದಲ್ಲಿ ಪ್ರಾಜ್ಞ ಜೀವಾಶ್ರಿತವಾಗಿರುವುದು (ಶಿವಾಸೂ. ೫೦-೧४ ಟೀಕೆ); ಈ ಭಕ್ತಿ ಮಾರ್ಗವನ್ನು ಅನುಸರಿಸುತ್ತಾ ಹೋದರೆ ಕ್ರಮವಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಆಧ್ಯಾತ್ಮಿಕಸ್ಥಾನಗಳನ್ನು ಹೊಂದುತ್ತಾನೆ (ಭಾರದ. ೨೧೭).

**ಶರಣದೇಹಿಕದೇವ = ಭಕ್ತರನ್ನು ತನ್ನ ದೇಹವಾಗಿ ಉಳ್ಳವನು; ಒಂದು ಬಿರುದು :** ಶರಣದೇಹಿಕದೇವನೆಂಬೀ ಬಿರುದ ಮೆಱೆಯಲು ರಾಯಭಾರವ ಧರಿಸಿ . ಕೌರವನರಮನೆಗೆ ನಡೆತಂದನಸುರಾರಿ (ಕುಮಾವ್ಯಾಉ. ೮ ಸೂಚನೆ); ಶರಣದೇಹಿಕದೇವನೆನಿಸುವ ಬಿರಿದ ಧರಿಸಿ (ಗಗತಾ. ೫-೨೫). **ಶರಣಸತಿ ಲಿಂಗಪತಿ = [ವೀಶೈ] ಶಿವನಿಗೆ ಸರ್ವಸಮರ್ಪಣೆ ಮಾಡಿಕೊಳ್ಳುವ ಭಕ್ತಿಭಾವ ; ಸತಿಪತಿ ಭಾವ :** ಲಿಂಗವ ಗೆಲುವರೆ ಶರಣಸತಿ ಲಿಂಗಪತಿ ಎಂಬುದೊಂದಲಗು ಸಾಲದೆ ಎನಗೆ ನಿನಗೆ ಜಂಗಮಪ್ರಸಾದವೆಂಬಲಗು ಸಾಲದೆ (ಬಸವ. ೭೩४). **[ಸಂ.]**

**ಶರಣಂಬಡೆ (ಕ್ರಿ).** ಆಶ್ರಯವನ್ನು ಪಡೆ; ರಕ್ಷಣೆಯನ್ನು ಹೊಂದು : ಎನ್ನೊರ್ವನನೆ ನಂಬಿ ಶರಣಂಬಡೆಯ್ಯೆ (ವಸ್ತುವಂ. ೧೫-೧೧೧). **[ಶರಣ + ಪಡೆ]**

**ಶರಣಮಾರ್ಗ (ನಾ).** ಶರಣುಹೋಗುವ ಮಾರ್ಗ: ಸಾಧಕನು ಪರಮಾತ್ಮನಿಗೆ ಪೂರ್ಣ ಶರಣಾಗತನಾಗುವುದರಿಂದ ಇದು ಶರಣಮಾರ್ಗವೆನಿಸುವುದು (ವಚರ. ೬೧). **[ಸಂ.]**

**ಶರಣಸಂಗವ್ಯಸನ (ನಾ).** ಭಕ್ತರ ಒಡನಾಟದ ಹಂಬಲವುಳ್ಳವನು: ಶರಣಸಂಗವ್ಯಸನ ಭುಜಗಾಭರಣನಮರಮಂಡಿತಚರಣ ಚಾರುಚರಿತ್ರ . . . ಸಲಹುಗೆ ಭಕುತಜನರನು (ಕುಮಾವ್ಯಾಅ. ೧-೨). **[ಸಂ.]**

**ಶರಣಸನ್ಮತ** (ನಾ). [ವೀಶೈ] ಶಿವಶರಣರ ಸದಾಚಾರ : ಶರಣಸನ್ಮತ [ಪಾಠಾಂ. ಸನ್ನಿಹಿತ]ವಪ್ಪ ನಿಜಗುಣಭರಿತನಪ್ಪಡೆ ಸತ್ತ್ವ ರಜ ತಮ ಕ್ರೋಧ ಬಿಡದನ್ನಕ್ಕ ಅನುಭಾವವೆಲ್ಲಿಯದೊ (ಬಸವ. ೬೫೫) ; ಐಕ್ಯ ಶರಣಸನ್ಮತವಾಗಿ ಶರಣ ಪ್ರಾಣಸನ್ಮತವಾಗಿ . . . ಭಕ್ತನ ಸಮ್ಯಕ್ರಿಸನ್ನದ್ಧನಾಗಿ . . . ನಿಶ್ಚಿಂತನಾದೆಯಲ್ಲಾ (ಪ್ರೋಳಿಮಾ. ೧೩೪ ೫೧೮). [ಸಂ.]

**ಶರಣಸಾರಾಯ** (ನಾ). [ವೀಶೈ] ಶರಣರಲ್ಲಿ ಶ್ರೇಷ್ಠನಾದವನು : ಜೀವತಾಮಸದ ಮಾಯದ ಬಲೆಯ ಭ್ರಾಂತಿಗೆ ಸೋಲುವ ಶರೀರ ಸಂಸಾರಸಂಗವ ಭೇದಿಸಿ ನೋಡುವರ ದೂರ ಚಿಂತೆಯನೆ ಗೆಲಿದು ಸುಳಿದಡೆ ಗುಹೇಶ್ವರನೆಂದಱಿದ ಶರಣಸಾರಾಯನು (ಅವಚಂ. ೭೭-೩೩೭). [ಶರಣ + ಸಾರಾಯ$_2$]

**ಶರಣಸ್ಥಲ, ಶರಣಸ್ಥಳ** (ನಾ). [ವೀಶೈ] ಷಟ್ಸ್ಥಲಗಳಲ್ಲಿ ಐದನೆಯದು : ಷಡ್ವಿಧವಿಚಾರವಿಡಿದು ಆನಂದಭಕ್ತಿಯಿಂದ . . . ಆಕಾಶದ ಭ್ರಮೆಯನು ಪರಿಣಾಮದಿಂ ತಿಳಿದು ಕರ್ಮನಾಸ್ತಿಯಾಗಿ ಶರಣಸ್ಥಲವನಂಗಂಗೊಂಡುದೀಗ ಸುಜ್ಞಾನದ ನೆಲೆ (ಮಿಶ್ರಾರ್ಪ. ೬೯೦); ವ್ಯೋಮಾಂಗದಲ್ಲಿ ಜ್ಞಾನಹಸ್ತದಿಂದ ಪ್ರಸಾದಲಿಂಗಾರ್ಚನೆ ಪರವಾದುದೇ ಶರಣಸ್ಥಲ (ಶಿವಾನು. ೯೭-೩೭ ಟೀಕೆ). **ಶರಣಸ್ಥಳ** : ಎನ್ನ ಆಪತ್ತು ಸುಖ ದುಃಖವನಿನ್ನಾರಿಗೆ ಹೇಳುವೆ ಶರಣಸ್ಥಳದವರಿಗೆ ಹೇಳಿದರೆ ಮಚ್ಚರ (ಬಸವ. ೩೪೯). [ಸಂ.]

**ಶರಣಸ್ಥಳ** 'ಶರಣಸ್ಥಲ' ನೋ.

**ಶರಣಸ್ಥಾನ** (ನಾ). ರಕ್ಷಣೆಯ ಸ್ಥಳ ; ಆಶ್ರಯಸ್ಥಾನ : ಪೃಥ್ವೀಮಹಾವಲ್ಲಿಯಂ ತಾಂ ಬಳಸಿರ್ದಾವಾಲದಂತಿರ್ಪುದು . . . ಕುಲಗಿರಿಶರಣಸ್ಥಾನಮುತ್ತೀರ್ಣಫೇನಂ (ಜಗವಿ. ೧-೨೩). [ಸಂ.]

**ಶರಣಾಗತ** (ಗು). ೧. ರಕ್ಷಣೆಗಾಗಿ ಬಂದ ; ಮೊರೆಹೊಕ್ಕ : ಶರಣಾಗತಜನಭರಣಂ ಪರತರಧರ್ಮಂ ತಪಸ್ವಿಗಳ್ಗದಱಿಂದಂ ಪೊರೆಯೆನ್ನಂ (ಕಾದಂಉ. ೫೭೯) ; ಭಾಪು ಶರಣಾಗತಜನಾಯುಸ್ಥಾಪನಾಚಾರ್ಯ ಕ್ಷಮಪ್ರಾಣೋಪಕಾರಿಗೆ ಮರಳಿಯುಪಕಾರವನ ಮಾಡಲ್ಕೆ ಆಪೆವೇ ನಾವು (ಬಸಪು. ೩೨-೪೭). (ನಾ). ೨. ರಕ್ಷಣೆ ಪಡೆಯಲು ಬಂದ ವ್ಯಕ್ತಿ; ಆಸರೆಯನ್ನು ಬೇಡಿ ಬಂದ ವ್ಯಕ್ತಿ : ತನಗೆ ಶರಣಾಗತನಾದ ವಿಜಯಾದಿತ್ಯನಂ ಕಾದ ಬಲ್ಲಾಳ್ತನದೊಳ್ (ಪಂಪಭಾ. ೧೪-೩೭ವ); ಲಕ್ಷ್ಮೀಕಾಂತನು . . . ತನ್ನ ಶರಣಾಗತರನೊಂದುಪಾಯದೊಳುಳುಹದಿರನೆಂದು ಧೈರ್ಯಮಂ ತಾಳ್ದರು (ಜೈಮಿಭಾ. ೯-೩೪).

**ಶರಣಾಗತಪಡಿಪಂಜರ** = ಶರಣಾಗತರನ್ನು ಪಂಜರದಲ್ಲಿಟ್ಟು ರಕ್ಷಿಸುವಂತೆ ಕಾಪಾಡುವವನು ; ಒಂದುಬಿರುದು : ಕಾವ ಮಹಿಮಾಸ್ಪದರೊಳ್ ಶರಣಾಗತಪಡಿಪಂಜರರರವಿಂದೋದರನ ದೊರೆಯ[ರೀ] ಮೂನೂರ್ವರ್ (ಕಇಅ. ೯೭-೪-೭೦; 12ನೆಯ ಶತ). **ಶರಣಾಗತವಜ್ರಪಂಜರ** = ಶರಣಾಗತರನ್ನು ಭದ್ರವಾದ ಪಂಜರದಲ್ಲಿಟ್ಟು ಕಾಯುವಂತೆ ರಕ್ಷಿಸುವವನು; ಒಂದು ಬಿರುದು: ಪ್ರತಿಪನ್ನಮಂದರಂ ಶರಣಾಗತವಜ್ರಪಂಜರಂ ಶ್ರೀಮತ್‌ಶಾನ್ತಿವರ್ಮರಸರ ವಂಶಾವತಾರ ಮೆಂತೆಂದೊಡೆ (ಸೌಇಇ. XX, ೧೮-೯; 980); ಅತ್ಯುದಾತ್ತಮಹಿಮಂ ಶರಣಾಗತ ವಜ್ರಪಂಜರಂ (ಪಂರಾಮಾ. ೧೦-೨೩೭). [ಸಂ.]

**ಶರಣಾಗತರಕ್ಷಣ** (ನಾ). ಶರಣಾಗತರಾದವರಿಗೆ ಆಶ್ರಯ ನೀಡುವುದು : ಕ್ಷತ್ರಿಯಜಾತಿಗೆ ಸತ್ಯ ತ್ಯಾಗ ಪ್ರಜಾಪಾಲನ ಶರಣಾಗತರಕ್ಷಣ ಪ್ರಹರಣಕ್ಷಮಾದಿ ಗುಣಾಚರಣಮುಮಂ (ಆದಿಪು. ೮-೭೩ವ) ; ಶರಣಾಗತರಕ್ಷಣಮೇ ನರಪಂಗೆ ವಿಶೇಷಲಕ್ಷಣಂ ನಿಶ್ಚಯಂ (ಪಂಚತಂ. ೨೫೦-೨). [ಸಂ.]

**ಶರಣಾಗತರಕ್ಷಣೆ** (ನಾ). = ಶರಣಾಗತರಕ್ಷಣ: ಧರ್ಮಾಧರ್ಮವಿವೇಕ . . . ಶರಣಾಗತರಕ್ಷಣೆ, ಪರೋಪಕಾರ, ಸಹನೆ ಮುಂತಾದ ಮಾನವಧರ್ಮದ ವಿವೇಚನೆಯೇ ಈ ಕಥೆಗಳ ತತ್ತ್ವವಾಗಿದೆ (ಭಾರದ. ೧೧೨). [ಸಂ. ಶರಣಾಗತರಕ್ಷಣ]

**ಶರಣಾಗತಿ** (ನಾ). ಆಶ್ರಯವನ್ನು ಬಯಸುವುದು ; ಮೊರೆಹೋಗುವುದು : ಜೀವಾತ್ಮನನ್ನು ಪರಮಾತ್ಮನಲ್ಲಿ ನೀನೇ ರಕ್ಷಕನೆಂದು ಒಪ್ಪಿಸುವಿಕೆಯೇ ಶರಣಾಗತಿ (ಭಾರದ. ೨೭೪). [ಸಂ.]

**ಶರಣಾಯಾತ** (ನಾ). ರಕ್ಷಣೆಯನ್ನು ಬೇಡಿ ಬಂದವನು: ಶರಣಾಯಾತರನೆಯ್ದೆ ಕಾದು ಮುನಿಸಿಂ ಮಾಜೂನ್ತರಂ ಕೊಂದು (ಎಇ. XIII, ೩೨೯-೫; 930); ಶರಣಾಯಾತರ್ಕಳಂ ಕಾವುದು . . . ಕ್ಷತ್ರಧರ್ಮಂ (ಪುಷ್ಪಪು. ೮-೪). [ಸಂ.]

**ಶರಣಾರ್ತಿ** (ನಾ). ೧. ರಕ್ಷಣೆಯನ್ನು ಬಯಸಿ ಬಂದವನು. ೨. ನಮಸ್ಕಾರ ; ಶರಣು : ಶರಣಾರ್ತಿ ದೇವ ಶರಣೆಂದು ಕಾಲೊಳ್ ಕೆಡೆದು (ಇಶರ. ದೇ. ೩೩-೨೩); ಕಂಕುಳಲ್ಲಿ ದೊಣ್ಣೆ, ಕೈಯಲ್ಲಿ ಶರಣಾರ್ತಿ (ನೀತಿಚಿಂ)

**ಶರಣಾರ್ತಿಮಾಡು** = ನಮಸ್ಕರಿಸು : ಸಿದ್ಧಬಸವರಾಜದೇವರಿಗೆ ಶರಣಾರ್ತಿಮಾಡಿ ೧೫ ದೇವರಿಗೆ ಕೊಟ್ಟ ದುಗಿಹಟಿಗ್ರಾಮಾ (ಎಕ. XIV, ಎಳಂದೂ. ೧೫-೧೩; 1511 ?). [< ಸಂ. ಶರಣಾರ್ಥಿನ್]

**ಶರಣಾರ್ಥಿ** (ನಾ). ೧. = ಶರಣಾರ್ತಿ ೧. ೨. = ಶರಣಾರ್ತಿ ೨ : ಪಾದಾರ್ಚನೆಯ ಮಾಡುವೆನಯ್ಯಾ ಪಾದೋದಕದ ಹಂಗಿಂಗೆ ಶರಣಾರ್ಥಿ ಎಂಬೆನಯ್ಯಾ ಒಕ್ಕುದ ಕೊಂಬ ಹಂಗಿಂಗೆ (ಬಸವ. ೪೮೭) ; ತಿರಿಗೆ ತಿರಿಗಿದುದು ಬಸವನ ಜೀವವವರೊಡನೆ ಶರಣಾರ್ಥಿಯೆಂಬ ನುಡಿ ಶರಣರೊಳು ಸೇರಿತ್ತು (ಬಸರ. ೯-೧೪೫). [ಸಂ. ಶರಣಾರ್ಥಿನ್]

**ಶರಣಾರ್ಥಿಸು** (ಕ್ರಿ). ರಕ್ಷಣೆಯನ್ನು ಯಾಚಿಸು ; ಸಹಾಯವನ್ನು ಕೋರು : ಜೀಯರಿಗೆ ಒಸಗೆಯೇ ಶರಣಾರ್ಥಿ ಶರಣಾರ್ಥಿಸುವೆನೆನಲೊಡನಂತೊಡನೆ ತಾಪಸವರಂ ಶಿವಮಸ್ತು ಶಿವಮಸ್ತೆಂದು ಪರಸಲ್ಕೆ (ಬಸಪು. ೩೨-೧೪). [ಶರಣಾರ್ಥಿ + – ಇಸು$_3$]

**ಶರಣಿಸು** (ಕ್ರಿ). ೧. ಕಾಪಾಡು ; ರಕ್ಷಿಸು : ಇವನ ಕೊಲ್ಲದೆ ಶರಣಿಸಿದನು (ಜಜ್ಜರಾ. ೯-೫). ೨. ನಮಸ್ಕರಿಸು : ಶರಣಿಸಿದನುಜನೆತ್ತಿಂತೆಂದ ದಶಕಂಠ (ಜರಾಪಾ. ೩೭೭-೩೦). [ಶರಣು (< ಶರಣ್) + – ಇಸು$_3$]

**ಶರಣು** 'ಶರಣ್' ನೋ.

**ಶರಣುಗತಿ** (ನಾ). ಶರಣಾದ ಸ್ಥಿತಿ : ನೀವಿರಿಸಿದ ಮನದಲ್ಲಿ ನಾನಂಜೆನಯ್ಯಾ ಮನವು ಮಹಾಘನಕ್ಕೆ ಶರಣುಗತಿವೊಕ್ಕುದಾಗಿ (ಬಸವ. ಕ. ೭೨೯). [< ಸಂ. ಶರಣಾಗತಿ]

**ಶರಣುಗೈ** (ಕ್ರಿ). ನಮಸ್ಕರಿಸು : ಶರಣುಗೈದಾ ಬಸವನಿಗೆ ಶಿವಗುರುವು ನೀನೀ ಲೋಕಪಾವನಗರೆಯಲವತಾರವನುಯೆತ್ತಿದೆಯೆನುತಲಿ (ಬಿಜ್ಜಪು. ೫-೩). [ಶರಣು (< ಶರಣ್) + ಗೈ (< ಕೆಯ್$_1$)]

**ಶರಣುಪೊಗು** 'ಶರಣ್ಬೊಗು' ನೋ.

**ಶರಣುವೊಗು** 'ಶರಣ್ಬೊಗು' ನೋ.

**ಶರಣುಹೊಗು** 'ಶರಣ್ಬೊಗು' ನೋ.

**ಶರಣೆ** (ನಾ). [ವೀಶೈ] ಶಿವಭಕ್ತೆ ; ಶಿವಶರಣೆ : ಅನುಭಾವದ ಗಮನವ ನಾನಱಿಯೆ ಶರಣೆ ಏನಪ್ಪೆನಯ್ಯ (ಮಹಾದೇ. ಬ. ೮೦-೨೦೧) ; ೧೨ನೆಯ ಶತಮಾನದಲ್ಲಿ . . . ಅನೇಕ ಶರಣೆಯರು ವಚನಗಳನ್ನು ಬರೆದರು. ಆಧ್ಯಾತ್ಮಿಕಸಾಧನೆಯಲ್ಲಿ ಶರಣರಂತೆಯೇ ಶರಣೆಯರೂ ಮುಂದುವರಿದಿದ್ದರು (ಶೂನ್ಯಕು. ೧೧೫). [ಶರಣ + – ಎ$_2$]

**ಶರಣೆನ್, ಶರಣೆನು, ಶರಣೆನ್ನು** (ಕ್ರಿ). ೧. ಶರಣಾಗತನಾದೆನೆಂದು ಹೇಳು,– ನುಡಿ: ಶರಣೆಂದಾರ್ ಬಂದೊಡಂ ಕಾಯಲುಮೆರೆದವರ್ಗಾರ್ತಿಯಲುಂ ಮಾಡಿದಂ (ಅಜಿಪು. ೧೦-೯) ; ಶರಣೆಂಬೀ ಮಾತು ನಿಮ್ಮಲ್ಲಿ ನೆಟ್ಟನೆ ಪುಟ್ಟಿರ್ದೊಡೆ ಸಾಲ್ವುದಲ್ತೆ (ಶಾಂತೀಶ್ವ. ೮-೩೭) ; ಶರಣೆಂದ ಶೈವಲಾಂಛನಧರರಂ ಬಿಟ್ಟು (ವೃಷಪು. ೩೪-೧೦೨). **ಶರಣೆನು**: ೧. ಬಸವ ಶರಣೆನೆ ವಚನರಚನಾಸಿದ್ಧಿ ವರ್ಧಿಸುಗು (ಬಸಪು. ೧-೨೫). **ಶರಣೆನ್ನು** : ೨. ನಮಸ್ಕಾರವೆಂದು ಹೇಳು : ಸಿರ ಹಱಿದು ಅಟ್ಟೆ ನೆಲಕ್ಕೆ ಬಿದ್ದರೆ ನಾಲಗೆ ಕೂಡಲಸಂಗಾ ಶರಣೆನ್ನುತ್ತಿದ್ದೀತಯ್ಯಾ (ಬಸವ. ೬೯೧). [ಶರಣ್ + ಎನ್$_1$]

**ಶರಣೆನು** 'ಶರಣೆನ್' ನೋ.

**ಶರಣೆನ್ನು** 'ಶರಣೆನ್' ನೋ.

**ಶರಣ್ಗೊಳ್** (ಕ್ರಿ). ರಕ್ಷಣೆಗೆ ತೆಗೆದುಕೊಳ್ಳು; ಕಾಪಾಡು: ಪತಿವ್ರತ ಪುರುಷಾನುಕೂಲತೆಯಮವರ್ಗೆ ಸ್ಥಿರದಿ ನೇಮಿಸಿಯಿತ್ತು ಶರಣ್ಗೊಂಡು ಕಳುಪುತ್ತೆ (ನವಮೋ. ೫-೨). [ಶರಣ್ + ಕೊಳ್$_1$]

**ಶರಣ್ಬುಗು** 'ಶರಣ್ಬೊಗು' ನೋ.

**ಶರಣ್ಪೊಗು, ಶರಣುಪೊಗು, ಶರಣುವೊಗು, ಶರಣುಹೊಗು, ಶರಣ್ಬುಗು, ಸರಣ್ಬುಗು, ಸರಣ್ಪೊಗು** (ಕ್ರಿ). ರಕ್ಷಣೆ ಹೊಂದು ; ಆಶ್ರಯ ಪಡೆ ; ದುಷ್ಟನಾದೊಡಂ ಶರಣ್ಪೊಕ್ಕನಲ್ಲಿ ಮಹಾಪುರುಷರ್ಗೆ ಪಿರಿದು ಸ್ನೇಹಮುಂಟಾಗಿಹುದು (ಪಂಚತಂ. ೧೦೩-೫) ; ದೇವಿ ಕೇಳ್ ನಿಮ್ಮುವನು ಬೆದಱಿಸಿದಾ ವಿಹಂಗಾಧಮನನಾ ನರದೇವನುಳುಹಿದ ಗಡ ಶರಣ್ಪೊಗಲಿದುವೆ ನಿಶ್ಚಯವೆ (ತೊರರಾ. ೫-೩-೮೫) ; ಶರಣ್ಪೊಗು ಪಿಂದನಱಿದಱಿದು ಪೇಳ್ದವು ಕೆಡಲ್ ಬೇಡವೆನೆ ಖಳಂ ಖತಿಯೊಳಂದಿಂತೆಂದನು (ಚಿಬಪು. ೪೮-೪೫). **ಶರಣುಪೊಗು :** ವರುಣ . . . ಶರಣುಪೊಕ್ಕನು ಕಾಯಬೇಹುದು ಹರಣವನು ನೀನೆಂದು (ತೊರರಾ. ೧-೮-೩೬). **ಶರಣುವೊಗು :** ಶಿವಭಾವದಿ ಶರಣುವೊಗಲಾ ಮಹಿಮನಾ ದೇವತೆಗಳಂ ಕಾಯ್ದು ಸಲಹುತ್ತ (ಬಸವು. ೨೩-೧೭) ; ಮುರಾರಿಯ ಶರಣುವೊಕ್ಕರೆ ಸರ್ವಥಾ ಕೊಲ್ಲೆನು ಜಯದ್ರಥನ (ಕುಮ್ಮಾದ್ರೋ. ೮-೩೬). **ಶರಣುಹೊಗು:** ಶರಣುಹೊಗ [ಪಾಠಾಂ. ವುಗ] ನರರಾದೊಡಂ ಪತಿಕರಿಸಿ ಕಾವರು (ಬಸವು. ೨೮-೧೨); ಶರಣುಹೊಕ್ಕುದು ಬಂದು ಮಕುಟದ ಗರುವರವನೀಪಾಲಕರು (ಕುಮ್ಮಾದ್ರೋ. ೧೬-೨೦) ; ಶರಣುಹೊಕ್ಕೆನು ದೇವದೇವರ ಚರಣಕಮಲವನು (ತೊರರಾ. ೨-೭-೧೪). **ಶರಣ್ಬುಗು:** ಶರಣ್ಬುಗಲೆಂದಿರ್ಪ್ಪವನೀಶ್ವರಪ್ರತತಿಯಂ ಕೈಕೊಣ್ಡು (ಎಕ. XIII, ೩೨೯-೪; 929); ಶರಣ್ಬುಗುವೆನೆಂಬಂತೆ ಮನದೊಳೆಡೆಗುಡೆಂದಳುಪಂ ತೋಱುವಂತೆ (ಕಾದಂಪೂ. ౭౪౬); ಈಯಲಿಱಿಯಲ್ಕರಣ್ಬುಗೆ ಕಾಯಲ್ ಕ್ಷತ್ರಿಯರೆ ಬಲ್ಲರ್ (ಗದಾಯು. ೨-೧೬). **ಸರಣ್ಬುಗು :** ತಂನ ಸರಣ್ಬುಗುವರ್ಗೆ ಲೇಸುಮಂ ಪ್ರೇರಿಸಲೋಸುಗಂ ಜಪಿಸುತಿರ್ಪ್ಪರ್ (ಎಕ. XI, ದಾವಣ, ೫೯-೯; 1280). **ಸರಣ್ಪೊಗು:** ಬಡಬಾನಲಂಗೆ ಸಡೆದಿಂಗಡಲೆ ಸರಣ್ಪೊಕ್ಕುದಮರಶೈಲಮನೆಂಬೀ ಪಡೆಮಾತಂ ನೀರ್ಗಾದಿಗೆ ಪಡೆಯುತ್ತುಂ (ಸಂರಾಮಾ. ೧-೧೫೩). [ಶರಣ್ + ಪೊಗು]

**ಶರಣ್ಯ** (ಗು). ೧. ರಕ್ಷಣೆಗೆ ಯೋಗ್ಯವಾದ. (ನಾ). ೨. ರಕ್ಷಣೆ ; ಆಸರೆ. ೩. ಆಶ್ರಯಸ್ಥಳ ; ರಕ್ಷಣೆಯ ಸ್ಥಾನ. ೪. ರಕ್ಷಿಸುವವನು ; ಆಸರೆ ನೀಡುವವನು: ಶರಣಾಯಾತಶರಣ್ಯನಪ್ರತಿರಥಂ ರಾಜಾನ್ವವಾಯೈಕವಿಸ್ತರಣಂ ಮಾಗಧಕಲ್ಪಶಾಖಿಮಗಧಾಧೀಶಂ (ಶಾಂತಿಪು. ೫-೧೦೬); ಆಸ್ತಿಕಜನಶರಣ್ಯನಗಣ್ಯಪುಣ್ಯನು ಮುಸುಟೆಚೌಡಾರ್ಯ (ಬಸವು. ೩೨-೬೩). [ಸಂ.]

**ಶರತ** 'ಶರತ್ತು' ನೋ.

**ಶರತ್ಕಾಲ** (ನಾ). ವರ್ಷದ ಆರುಋತುಗಳಲ್ಲಿ ಒಂದು ; ಆಶ್ವಯುಜ ಮತ್ತು ಕಾರ್ತಿಕಮಾಸಗಳನ್ನೊಳಗೊಂಡ ಕಾಲ ; ಮಳೆಗಾಲದ ನಂತರ ಬರುವ ಋತು: "ಶರತ್ಕಾಲದೊಳುಪಜನಿತಂ ಶಾರದಂ" (ವಸ್ತುಕೋ. ೧೧೦-೬೧); ನೆಱೆ ಶೋಭಿಸುವ ಶರತ್ಕಾಲದೊಳ್ವಿರುಗಿತಧ್ವರಹಯಂ ಧರೆಯ ಮೇಲೆ (ಚೈಮಿಭಾ. ೨೫-೫); ಶರತ್ಕಾಲವು ಚಿತ್ರಗಳ ವೀಕ್ಷಣೆಗೆ ಬಹುಸೂಕ್ತಕಾಲವೆಂದೂ . . . ತ್ರಿವಿಕ್ರಮನು 'ನಳಚಂಪೂ'ವಿನಲ್ಲಿ ಹೇಳಿದ್ದಾನೆ (ಭಾರದ. ೫೨೪). [ಸಂ.]

**ಶರತ್ತು, ಶರತ, ಶರ್ಯತ್ತು, ಷರತ್ತು** (ನಾ). ೧. ಪಣ; ಪಂದ್ಯ : (೬). ೨. ಕರಾರು; ನಿಯಮ ; ನಿಬಂಧನೆ : ಸಾಂಬಾರದ ವಸ್ತುಗಳಿಗೆ . . . ಒಪ್ಪಿದ ಬೆಲೆ ಕೊಡುತ್ತೇನೆಂದೂ, ತಾನು ಇಚ್ಛಿಸಿದ ಕಡೆ ಕೋಠಿಗಳನ್ನು ಕಟ್ಟಲೂ . . . ಗಾಮಾ ಶರತ್ತು ಹಾಕಿದ (ಪ್ರವಾ. II, ೨೩೩); ಈ ಒಡಂಬಡಿಕೆಯ ಶರತ್ತುಗಳಲ್ಲಿ ಝಾಂಸಿಯ ರಾಜ್ಯವು ರಾಮಚಂದ್ರರಾಯನ ಕುಟುಂಬದಲ್ಲಿಯೇ ಇರಬೇಕೆಂದೂ . . . ನಿಷ್ಕರ್ಷೆಯಾಯಿತು (ಝಾರಾಣಿ. ೨). **ಶರತ:** ೨. ಯಾವ ಶರತವೂ ಇಲ್ಲದೆ . . . ವಾಚನ್ನು ನನಗೆ ಕಳುಹಿಸಿಕೊಟ್ಟು ಏನು ಮೋಸಮಾಡಬಲ್ಲನಾತ? (ಮುಂಗಾಮು. ೧೬) ; ಹೇಳಿದಷ್ಟು ಸಂಬಳದ ಶರತದ ಮೇಲೆ ಒಬ್ಬಳನ್ನು ಗೊತ್ತುಮಾಡಿದಾಗ (ರೂಪಸಂ. ೧೨). **ಶರ್ಯತ್ತು :** ೧. ಬಹಳ ಉದ್ದವಾದ ಮತ್ತು ಸುಂದರವಾದ ಮೀಸೆ ಇದ್ದವರಲ್ಲಿ ಶರ್ಯತ್ತು ನಡೆದು ಒಬ್ಬನಿಗೆ ಬಹುಮಾನ ದೊರೆಯಿತಂತೆ ! (ಚಿಂದ್ರಪ್ರಾ. ೨೮); ಓಡುವ ಶರ್ಯತ್ತಿನಲ್ಲಿ ನಿಮ್ಮನ್ನು ಖಂಡಿತ ಗೆಲ್ಲುತ್ತೇನೆ (ಬಿಡುಜ. ೯೬). **ಷರತ್ತು :** ೨. ಗದ್ದವರಿಗೆ ಸೋತವರು ಐದುನೂರುರೂಪಾಯಿ ಕೊಡಬೇಕೆಂಬ ಷರತ್ತು ಬೇರೆ (ಭೀಮಕಾ. ೮). ಆತ ಒಂದು ಷರತ್ತಿನ ಮೇಲೆ ಹಾಡಲು ಒಪ್ಪಿದರು (ಸುಗೀತ. ೧೮). [← ಅರ. ಹಿಂ. ಮರಾ. ಶರ್ತ್]

**ಶರತ್ಸಮಯ** (ನಾ). = ಶರತ್ಕಾಲ : "ವಸಂತ ಗ್ರೀಷ್ಮಂ ಪ್ರಾವೃಟ್ಛರತ್ಸಮಯಂ ಹೇಮಂತಂ ಶಿಶಿರಮೆಂಬಂತವು ತಾವಕ್ಕುಂ ಋತುಗಳ್ ಮತ್ತಾಱುಂ" (ವಸ್ತುಕೋ. ೧೭-೧೨); ಅಮೃತಮಯೋಕ್ತಿ ಶರತ್ಸಮಯಸುಧಾಂಶುವಿಶದಕೀರ್ತಿವಿತಾನಂ (ಆದಿಪು. ೧-೩೦); ಶರತ್ಸಮಯದಂತೆ ಸುಮನೋವನಾಭಿರಾಮಮುಂ . . . ಯಾಮ್ಯ ದಿಶೆಯಂತ ಧರ್ಮಪ್ರಭಾವ ವಿಭಾವಿತಮುಮೆಂಬ ಮಹನೀಯಮಹಿಮೆಯಂ ತಳೆದು (ಪುಷ್ಪಪು. ೯-೩೦ ವ). [ಸಂ.]

**ಶರದ** (ನಾ). = ಶರತ್ಕಾಲ : ಒರ್ಮೆಯೆ ಬಂದುದೆಂದು ಶರದಂ ಲೋಕಕ್ಕೆ ಕಣ್ ಬರ್ಪಿನಂ (ಪಂಪಭಾ. ೭-೬೧) ; ಶರದದ ಹೊಳೆಯೊ ಮೇಘಸ್ಥಿತಿಯೊ ಸುರಪತಿ ಚಾಪವಿಭ್ರಮವೊ ಇಳಿದ ಜವ್ವನದೊಲುಮೆಯೊ ಕುರುಬಲವ ಕಂಡೆನು . . . ನಿನ್ನ ಕುಮಾರನೊಡ್ಡಿನಲಿ (ಕುಮ್ಮಾಕ. ೨೬-೨). [ಸಂ. ಶರದ್]

**ಶರದಂಬರ** (ನಾ). ಶರತ್ಕಾಲದ ಶುಭ್ರವಾದ ಆಕಾಶ, – ಗಗನ : ಶರದಂಬರಮುಂ ಮತ್ತೀ ಸರವರಮುಂ ವಿಳಸದತನುಧವಳಚ್ಛವಿಗಳ್ ಹರಿಣಾಲಂಕೃತಮಂಬರಮಿ ಕೊಳಮುಚಿತ ರಾಜಹಂಸೋತ್ತಂಸಂ (ಕವಿರಾ. ೩-೪೬). [ಸಂ.]

**ಶರದಂಬುದ** (ನಾ). ಶರತ್ಕಾಲದ ಮೋಡ, – ಮುಗಿಲು: ವರಹಂಸಕದಂಬಕ ಮದು ಶರದಂಬುದಮಲ್ತು (ಕವಿರಾ. ೩-೧೦೩). [ಸಂ.]

**ಶರದಭ್ರ** (ನಾ). = ಶರದಂಬುದ : ಸುರಧನುವಂ ವಿಮಾನಮಣಿಕುಟ್ಟಿಮಮಾ ಶರದಭ್ರಮಂ ನಿಜಾಸ್ತರಣದುಪಚ್ಛದಂ . . . ನಿರಾಕರಿಸೆ (ಶಾಂತಿಪು. ೭-೧೪); ಶರದಭ್ರಾಕಾರಸೌಧ ಪ್ರಕಟವಿಘಟಿತಾಭ್ಯರ್ಣನಾನಾಗವಾಕ್ಷೋತ್ಕರದಿಂದಂ ನೋಡುವಂತ (ಕಾದಂಪೂ. ೪೭೭). [ಸಂ.]

**ಶರದಾಗಮನ** (ನಾ). ಶರತ್ಕಾಲದ ಆರಂಭ, – ಆಗಮನ: ತ್ರಿಭುವನ ಗುರುಪರಿನಿಷ್ಕ್ರಮಣಕಲ್ಯಾಣ ಶರದಾಗಮನ [ಪಾಠಾಂ. ಶಾರದಾಗಮ] ಪ್ರತೀಕ್ಷಣ ದಿವ್ಯಹಂಸರುಂ ಬ್ರಹ್ಮಕಲ್ಪಾಂತವಾಸಿಗಳುಮಪ್ಪ . . . ಎಣ್ಬರುಂ ಲೋಕಾಂತಿಕದೇವರ್ ಬಂದು (ಆದಿಪು. ೯-೬೦ ವ). [ಸಂ.]

**ಶರದಾತಪ** (ನಾ). ಶರತ್ಕಾಲದ ಬಿಸಿಲು : ಚಳದಳಕೆಯರರೆಬರದೇಂ ಕಳೆದರೊ ಶರದಾತಪಪ್ರಭೂತಶ್ರಮಮಂ (ಆದಿಪು. ೧೧-೭೪). [ಸಂ.]

**ಶರದೃತು** (ನಾ). = ಶರತ್ಕಾಲ : ಆ ಮಾಸವೆರಡಕ್ಕೊಂದು ಋತುವಹುದಾ ಋತುವೇ ಹಿಮ ಶಿಶಿರ ವಸಂತ ಗ್ರೀಷ್ಮ ವರ್ಷ ಶರದೃತುಗಳೆಂಬಾಱು ತೆಱನಾಗಿ (ವಿವೇಕ. ೩೨೦); ಇಂತೊಗೆತಂದ ಶರದೃತುವಿನೊಳಾ ಕುಮಾರಂ ವಿಜಯಯಾತ್ರೆಗೆ ಪೋಗಲು (ರಾಜಶೇ. ೬-೧೧ ವ). [ಸಂ.]

**ಶರಧರ** (ನಾ). ಮೋಡ; ಮುಗಿಲು : ಎಱಪ ಶರಧರದ ತುಱುಗಲ್ಕಱೆವ ಘನೋಪಳ ಕದಂಬಮುಡುಗಣಮನೆ ಮೇಣ್ ತಱಿಸಂದು ನುಂಗಿ (ರಾಜಶೇ. ೧-೧೨೦). [ಸಂ.]

**ಶರಧಿ** (ನಾ). ೧. ಬತ್ತಳಿಕೆ ; ಮೂಡಿಗೆ : ಕರ್ಣಂ . . . ದ್ರೋಣಾಚಾರ್ಯಂಗೆ ಪೊಡಮಟ್ಟು ಶರಧಿಯಿಂ ದಿವ್ಯಾಸ್ತ್ರಂಗಳನುರ್ಚಿಕೊಂಡು (ಪಂಪಭಾ. ೨-೭೮ ವ); ಶರಮಂ ಶರಧಿಯಿನಸುರಾರಿ ತೆಗೆದು ತೊಟ್ಟೆಚ್ಚಂ (ಜಗವಿ. ೧೩-೯೯). ೨. ಕಡಲು ; ಸಮುದ್ರ: ತರುಣಿಯ ವಿಭೂಷಣಾರ್ಥದೆ ಶರಧಿಗೆ ಪೋಪಂ ಕುಳೀರದಂತ್ಯತ್ರ್ಯಂಶಂ (ಜಾತಕ. ೧೯-೧೨); ಶರಧಿಯ ನೀರಂ ನದಿಗಳ್ ಧರಿಯಿಸಲಾರ್ತಪುವೆ (ಧರ್ಮಾಮೃ. ೬-೧೩೪) ; ನೂರುಯೋಜನದಾಚೆ, ಲಂಕೆ, ರಾಕ್ಷಸದ್ವೀಪಮಿದೆ ಶರಧಿಮೇಖಲೆಯಾಗಿ (ಶ್ರೀರಾಮಾ. ೩೯೪-೮೭೪). ೧, ೨ : ಶರಧ್ಯುಪಾತ್ತೋರುಶರಂ ಘನಸ್ವನಂ ಹರಿಪ್ರಭಂ ನೀರದರಾಜನಟ್ಟಿದಂ. . . ನಿದಾಘನಂ (ರಾಜಶೇ. ೮-೧೦೪). ೩. ನದಿ. ೪. ಕಾಡು; ಅಡವಿ. "ಬತ್ತಳಿಕೆ ಸಮುದ್ರದೊಳರಣ್ಯದಿ ನದಿಯೊಳಂ ಇದು ನಾಲ್ಕುಂ ಶರಧಿಶಬ್ದಮೆನಿಕುಂ" (ನಾನಾಕಂ. ೩೫). ೫. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : ಚೌ, ಚತು . . . ಶರಧಿ . . . ಕಷಾಯ ಇಂತಿನಿತು ಳಕ್ಕೆ ಹೆಸರು (ವ್ಯವಹಾ. ೧೧). [ಸಂ.]

**ಶರಧಿಶಯನ** (ನಾ). (ಕ್ಷೀರ) ಸಮುದ್ರದ ಮೇಲೆ ಮಲಗಿರುವವನು; ವಿಷ್ಣು : "ಹರಿ ಶೌರಿ ವಿಷ್ಣು . . . ಶರಧಿಶಯನಂ ಮುಕುಂದಂ . . . ಗೋವಿಂದನಕ್ಕುಂ" (ಮಂಗರಾ. ೬-೧೭). [ಸಂ.]

**ಶರಧಿಸಂಭವ** (ನಾ). ಕಡಲಿನಲ್ಲಿ ಹುಟ್ಟಿದವನು ; ಚಂದ್ರ : ಶರಧಿ ಸಂಭವನು ಯ್ಯೆತರಲು ನೈದಿಲೆನೀಕವರಳಿ ಪರಿಶೋಭಿಸೆ (ನನಮೋ. ೧೧-೨೬). [ಸಂ.]

**ಶರಧಿಸುತೆ** (ನಾ). ಸಮುದ್ರದಲ್ಲಿ ಹುಟ್ಟಿದವಳು ; ಲಕ್ಷ್ಮಿ : "ಶರಧಿಸುತೆ ರಾಮೆ . . . ಮನ್ಮಥಮಾತೆಯೆನಲು ಸಿರಿಗಕ್ಕು ನಾಮಂ" (ಮಂಗರಾ. ೬-೧೮); ಶರಧಿಸುತೆ ಸನಕಾದಿವಂದಿತೆ ಸುರನರೋರಗಮಾತೆ . . . ಪದ್ಮಜಮುಖ್ಯಸಕಲಾಮರಸುಪೂಜಿತೆ ಲಕ್ಷ್ಮಿ ಕೊಡುಗಮಧಿಕಸಂಪದವ (ಕುವ್ಯಾ. ಆ. ೧-೯). [ಸಂ. ಶರಧಿಸುತಾ]

**ಶರಧ್ವೃತ** (ನಾ). ೧. ಜೊಂಡಿನಿಂದ ಕೂಡಿದುದು. ೨. ಬಾಣಗಳಿಂದ ತುಂಬಿರುವುದು. ೧, ೨ : ಶುಭಸುರಭಿಸಂಭೃತಂ ರಣದಂತೆ ಶರಧ್ವ [ಪಾಠಾಂ. ವೃ]ತಂ ಸಭೆಯಂತೆ ಚಿತ್ರಪತ್ರಾನ್ವಿತಂ . . . ಆಗಿ ತಚ್ಛೈಲಮೆಸೆದಿರ್ದುದು (ಜೈಮಿಭಾ. ೧೦-೫). [ಸಂ.]

**ಶರನಿಧಿ** (ನಾ). ೧. ಕಡಲು ; ಸಮುದ್ರ : "ಕಡಲೆನೆ ಶರನಿಧಿ" (ಚತುಃ. ೩೩); ಶರನಿಧಿ [ಪಾಠಾಂ. ವರನದಿ]ಯಂದದಿಂದತಿಗಭೀರಗುಣೋನ್ನತಿಯಿಂದೆ ಸಂದ ಮಂದರಧರ ಬಾಹುಗಳ್ (ಕಾದಂಪೂ. ೩.೫೦); ಶರನಿಧಿರತ್ನರಾಶಿಗಳಿನುರ್ವರೆ ರೋಹಣಪರ್ವತಂಗಳಿಂ . . . ಒಪ್ಪಮಂ ತಳೆದುದು (ಪಂರಾಮಾ. ೫-೩೮); ಶರನಿಧಿ ತನ್ನಯ ರತ್ನಾಕರನಾಮಮನಿಲ್ಲಿ ಸಾರ್ಥಕಂಮಾಡಲ್ ಬಂದಿರುತಿರ್ದಪುದೆನೆ ಮಣಿಗಾಱರ ಪಸರಂ ಮಿಸುಗುತಿರ್ಪುದಾ ಪುರವರದೊಳ್ (ಕುಸುಮಾ. ೨-೧೦೩). ೨. ಬಾಣಗಳಿಗೆ ಆಶ್ರಯಸ್ಥಾನವಾದುದು ; ಬತ್ತಳಿಕೆ : ಕಡಿದುಡಿದ ಕೋಲ್ಗಳ ರಾಸಿಯಂ ನೋಡೆ ಸಾಜಮಾಗಿ ಶರನಿಧಿಯಂತೆ ಕಾಣಿಸಿತು (ಅದ್ಭುತ. ೪೫-೧೫). ೩. [ಜೈನ] ಸಾಮಾನ್ಯ ಎಣಿಕೆಗೆ ನಿಲುಕದ ಬಹುದೀರ್ಘಕಾಲ; ಸಾಗರ ಎಂಬ ಕಾಲಗಣನೆ : ಮೂವತ್ತು ಮೂಱು ಶರನಿಧಿ ಜೀವನ ಪರಿಸಂಖ್ಯೆ ತತ್ಪ್ರಮಾಣಸಹಸ್ರಾಬ್ದಾವಧಿ ಸುಧಾಶನಸ್ಮರಣಾವಸರಮನಿತ್ತ ಪಕ್ಷಮಾಗುಸಿರ್ವ ಪದಂ (ಚಂದ್ರಪ್ರ. ೧೧-೩೫). [ಸಂ.]

**ಶರನ್ನವರಾತ್ರಿ** 'ನವರಾತ್ರಿ' ಪರಾ.

**ಶರಪಂಜರ** (ನಾ). ೧. ಬಾಣಗಳಿಂದ ಮಾಡಿದ ಪಂಜರ : ತಱಿದೊಟ್ಟಿ ಸೂರ್ಯಹಾಸದ ಮಱುವಕ್ಕದ ಪುದಿದು ಪೆಣೆದ ಶರಪಂಜರದಿಂ ಪೊಱಿಮಟ್ಟ ಮೃಗೇಂದ್ರನಂತಿರಿರ್ದನುಪೇಂದ್ರಂ (ಪಂರಾಮಾ. ೯-೬೨) ; ಗುರುಸುತನನೊಟ್ಟೈಸಿ ಫಲುಗುಣ ತಿರುಗಿ ಹಾಯ್ದನು ಮುಂದೆ ಶರಪಂಜರವ ಹೂಡಿದನು (ಕುವ್ಯಾಕ. ೧೪-೩೦). ೨. ಬಾಣಗಳ ಮಂಚ ; ಶರತಲ್ಪ : ಕುರುಕುಳವನಸಿಂಹಂ ಶರಪಂಜರದೊಳೊಱಗಿದಂ (ಪಂಪಭಾ. ೧೧-೪೭ ವ). [ಸಂ.]

**ಶರಪರಿಣತಿ** (ನಾ). ಬಾಣಪ್ರಯೋಗದ ನೈಪುಣ್ಯ, — ಪ್ರೌಢಿಮೆ : ಗುಣಾರ್ಣವನ ಶರಪರಿಣತಿಯಿಂದೆ ಕುಲಶೈಲಂ ಬೀೞ್ವಂತೆ ನೆಲನದಿರೆ ಬೀೞ್ದಾಗಳ್ (ಪಂಪಭಾ. ೧೨-೨೦೩ ವ) ; ಲಕ್ಷ್ಮಣಂ . . . ಶರಪರಿಣತಿಯಂ ನೆಱೆಯೆ ಮೆಱೆದು ಕಾದುತ್ತಿರ್ದಂ (ಪಂರಾಮಾ. ೧೭-೧೩). [ಸಂ.]

**ಶರಪುಂಖಿ** (ನಾ). ೧. ಗರಿಗಳಿಂದ ಕೂಡಿದ ಬಾಣದ ಹಿಂಭಾಗ; ಹಿಳುಕು. ೨. ಒಂದು ಬಗೆಯ ವನಸ್ಪತಿ : "ಶರಪುಂಖಿ ಗೋರ್ಗಿ ತಾನದು" (ವಸ್ತುಕೋ. ೩೮-೩೦) ; ಶರಪುಂಖಿಯನಂಬಿಲದಿಂ ನಿರೂಹಮಂ ಮಾಳ್ಕೆ ಮೊಕ್ಕಳಂ ಕದಡಿ ಬಸಿಱು ಪರಿವೊಡೆ ಮೊಸರಂ ಕುಡುವುದು ಪರಿಭವಿಸಿರ್ಕಟ್ಟುಗಟ್ಟಿವಂತಿರ ನಿಲ್ಗುಂ (ಅಶ್ವಶಾ. ೧೧-೩೫); ಶುಂಠಿಯನೂ ಶರಪುಂಖಿಯನೂ ನೀರಿಂದ ಅರೆದು ನೀರಲ್ಲಿಯೇ ಕುಡಿಯ ಕೊಡಿಸಲು ನೀರ ಕೋಳಿ ಕಚ್ಚಿದ ವಿಷ ಹರವಹುದು (ವೈದ್ಯಸಾ. II. ೨೦೩).
[< ಸಂ. ಶರಪುಂಖಾ]

**ಶರಪುಂಖೆ** (ನಾ). ೧.= ಶರಪುಂಖಿ ೧. ೨. = ಶರಪುಂಖಿ ೨ : "ಶರಪುಂಖಾ— ಕೊಗ್ಗಿ" (ಓಷಧಿ. ೧೬೦). [ಸಂ. ಶರಪುಂಖಾ]

**ಶರಬಂಡಿ** (ನಾ). ಬಾಣಗಳನ್ನು ತುಂಬಿರುವ ಗಾಡಿ : ಚೂರಿಸುವ ಮೊಗಸೂಸಿಗೆಯ ಕೊಲ್ಲಾರಿಗಳ ಶರಬಂಡಿಗಳ ಹೊಂದೇರು ಕವಿದುವು ಕೋಲ ಕೋಲಾಹಲದ ತೋಹಿನಲಿ (ಕುವ್ಯಾಶ. ೨-೪೪). [ಶರ + ಬಂಡಿ]

**ಶರಬಂಧ** (ನಾ). ಬಾಣಗಳನ್ನು ಕಟ್ಟುವುದು : ಬಕಾರಕ್ಕೆ ವಕಾರಂ — ದಿಶಾಬಲಿ — ದೆಸೆವಲಿ ; ಶರಬಂಧ — ಸರವಂದ (ಶಮದ. ೨೯೨ ಪ್ರಯೋ). [ಸಂ.]

**ಶರಬತ್** 'ಶರಬತ್ತು' ನೋ.

**ಶರಬತ್ತು, ಶರಬತ್, ಷರಬತ್ತು** (ನಾ). (ನಿಂಬೆ, ಕಿತ್ತಳೆ, ದ್ರಾಕ್ಷಿ, ಮೊದಲಾದ) ಹಣ್ಣುಗಳ ರಸವನ್ನು ನೀರಿಗೆ ಮಿಶ್ರ ಮಾಡಿ ಅದಕ್ಕೆ ಸಕ್ಕರೆ, ಏಲಕ್ಕಿ ಮುಂತಾದುವನ್ನು ಸೇರಿಸಿ ತಯಾರಿಸುವ ಪಾನೀಯ ; ಪಾನಕ : ಈ ಶರಬತ್ತು ತುಸು ತೆಗೆದುಕೋ(ಶಿರಂಗ. ೨೪); ಶರಬತ್ತು ತುಂಬಿಸಿದ ಎರಡು ಟಂಬ್ಲರುಗಳನ್ನು ಒಂದು ತಟ್ಟೆಯಲ್ಲಿ ತಂದಿಟ್ಟರು (ನಿಪ್ಪಾಮು. ೧). **ಶರಬತ್:** ಹೋಗು ಮಾಲೀ. ಎರಡು ಲೋಟ ಶರಬತ್ ತಯಾರಿಸು (ವಾತ್ಸಲ್ಯ. ೧೩೩); ಹತ್ತಿರದ ಅಂಗಡಿಯಿಂದ ತಂಪಾದ ಶರಬತ್ ತರಿಸಿದರು (ಬದುಜ. ೬೪). **ಷರಬತ್ತು:** ಸೊಗದೆಯ ಬೇರಿನ ಷರಬತ್ತು (ಭಾರಮಿಾ. ೪೦೦); ಷರಬತ್ತೋ, ಎಳನೀರೋ ಇವರು ಏನು ತೆಗೆದುಕೊಳ್ಳುತ್ತಾರೋ . . . ಅದನ್ನು ಅವರ ಕಯ್ಯಲ್ಲೆ ಇವರಿಗೆ ಕಳಿಸು (ಕೃಷ್ಣಭೂ. ೧೪೧). [← ಅರ. ಪಾರ. ಹಿಂ. ಮರಾ. ಶರಬತ್]

**ಶರಭ** (ನಾ). ೧. ಪುರಾಣಕಾವ್ಯಗಳಲ್ಲಿ ಉಲ್ಲೇಖಿತವಾಗಿರುವ, ಸಿಂಹಕ್ಕಿಂತಲೂ ಬಲಿಷ್ಠವೆಂದು ಭಾವಿಸಲಾಗಿರುವ, ಎಂಟುಕಾಲುಗಳ ಒಂದುಬಗೆಯ ಪ್ರಾಣಿ : "ಶರಭಮದಷ್ಟಾಪದಂ" (ವಸ್ತುಕೋ. ४೦-೧). ೨. ಒಂದುಬಗೆಯ ಕಾಡುಮೃಗ: ಶರಭಂಗಳ್ಗಡೆ ಸಿಂಹದುರ್ವು ವನಗಂಧೇಭೋತ್ಕರಕ್ಕೆಂದುಮಾಗರವಿಾ ಭೂಧರಂ (ಆದಿಪು. ೧೩-೮೨); ನುಡಿದಡೆ ದನಿಗೆ ಶರಭ ಶಾರ್ದೂಲವೆಯ್ದೆಂದು ಬಗಿವುವು (ಹಚಕಾ. ೯-೪೨). ೩. ಆನೆಯ ಮರಿ. ೪. ಮಹಾಮಂತ್ರಗಳಲ್ಲಿ ಒಂದು: ಗಾಯತ್ರಿ ಮೃತ್ಯುಂಜಯ ದಕ್ಷಿಣಾಮೂರ್ತಿ ನೀಲಕಂಠ ಶರಭ ವೀರಭದ್ರ . . . ಲಲಿತಾಶೂಲಿನ್ಯಾದಿ ಮಹಾಮಂತ್ರಂಗಳುಂ (ವಿವೇಕ. ೮೧). ೫. ವೀರಭದ್ರ : "ವೀರಂ ಭಯಂಕರಂ ದಕ್ಷಾರಿ ಶರಭನೆನೆ ವೀರಭದ್ರನನಿಕ್ಕು" (ಮಂಗರಾ. ೫-೧೫). ೬. [ಛಂದ] ಆರು ಬಗೆಯ ಪ್ರಾಸಗಳಲ್ಲಿ ಒಂದು ; ಎರಡು ವ್ಯಂಜನಗಳ ಸಂಯೋಗವುಳ್ಳ ಒಂದು ಪ್ರಾಸ : ಹರಿ ಕರಿ ವೃಷಭ ತುರಂಗಂ ಶರಭಮಜಂಗಳುಮೆನಿಪ್ಪ ಷಟ್‌ಪ್ರಾಸಕ್ಕುಂ ತರುಣಿ ನಿಜದೀರ್ಘಬಿಂದುವಿಸಿರದೊತ್ತುಂ ವ್ಯಂಜನಂ ವಿಸರ್ಗದೆ ಬರ್ಕುಂ (ಛಂದೋಂಬು. ೧-೪೬ ಅಡಿಪದ್ಯ); ಶರಭಃ — ಎರಡು ವ್ಯಂಜನಗಳ ಸಂಯೋಗಕ್ಕೆ: ಆ ಕ್ಷಣದೊಳ್ ಪರಸ್ಪರನಿರೀಕ್ಷಣದಿಂ ಮುಳಿಸುಣ್ಮೆ . . . ಬಿಗುರ್ತೀಕ್ಷಿಸ ಮಾಱಿದರ್ ವಿಕಟಶೃಂಗಸಮಗ್ರಕುಲಾಚಲಂಗಳಂ (ಕೈಪಿಡಿ. ೭೩). [ಸಂ.]

**ಶರಭಂಗ** (ನಾ). ೧. ಬಾಣದ ತುಣುಕು. ೨. ನೀರಿನ ತೆರೆ. ೧, ೨ : ಸ್ಫುರಿತಶಿಲೀಮುಖಮುತ್ಪಳಸರಕ್ತಕಂಜಾತಯುತಮುಪಾತ್ತಕಬಂಧಂ ಶರಭಂಗಾನ್ವಿತಮಿರ ದನುಕರಿಸಿದುದಾ ಬನದ ತಿಳಿಗೊಳಂ ಕೊಳುಗುಳಮಂ (ಶಬಶಂ. ೨-೫೨). [ಸಂ.]

**ಶರಭಪ್ರಾಸ** (ನಾ). = ಶರಭ ೬ : ಪ್ರತಿಪಾದದ ಮೊದಲೆರಡುಸ್ವರಗಳ ನಡುವೆ ಒಂದೇ ವಿಧದ ವಿಜಾತೀಯಸಂಯುಕ್ತವ್ಯಂಜನಗಳು ಬಂದು ಅವುಗಳ ಹಿಂದೆ ಅನುಸ್ವಾರ ವಿಸರ್ಗಗಳಿಲ್ಲದಿರಲು ಶರಭಪ್ರಾಸವಾಗುವುದು (ಕೈಪಿಡಿ. ೭೨). [ಸಂ.]

**ಶರಭಯುಗ** (ನಾ). ಶರಭಗಳ ಜೋಡಿ, — ಮಿಥುನ : ಅಮಿತಪರಾಕ್ರಮರಿವರೆನಿಪ ಮಕ್ಕಳಂ ಪಡೆವೆ ಶರಭಯುಗದರ್ಶನದಿಂ (ಪಂರಾಮಾ. ೧೫-೬೪). [ಸಂ.]

**ಶರಭರಿಪು** (ನಾ). ಶರಭದ ಶತ್ರು ; ಗಂಡಭೇರುಂಡ : ಕರಿಗೆ ರದನಂ ಭಯಂಕರತರದಂಷ್ಟ್ರಾಂಕುರಮಿಭಾರಿಗುನ್ನತಪಕ್ಷಂ ಶರಭರಿಪುಗಾದುದೆಂಬಂತಿರ ಲೆಸೆವರ್ ಪ್ರಭುಗಳಲ್ಲಿ ತತ್ಪತ್ತಸದೊಳ್ (ಶಾಪಮಂ. ೬೯-೩೭೮; 1122). [ಸಂ.]

**ಶರಮಂಚ** (ನಾ). ಬಾಣಗಳಿಂದಾದ ಮಂಚ, — ಪರ್ಯಂಕ : ಕವಲಂಬಾ ತಲೆಗಿಂಬೆನೆ ಕವುಳುಡೆ ಶರಮಂಚವೆರಸದಂತೆಯ ಹಾಸಂಬಿವು ಬಾಣಂ ಬಿಡದೆಸದಿರೆ ದಿವಿಜನದೀಸೂನು XXX ಶರಶಯನದೊಳಿರ್ದಂ (ಗದಾಯು. ೫-೩೯). [ಸಂ.]

**ಶರಮಪಟ್ಟೆಯಾಟ** (ನಾ). ಗೆರೆಗಳನ್ನು ಬರೆದು ಆಡುವ ಒಂದು ಬಗೆಯ ಆಟ; ತಿಳ್ಳಿಯಾಟ : (ಕ). [ಶರಮಪಟ್ಟೆ + ಆಟ]

**ಶರಮುಂಡಿ** (ನಾ). (ಬಾಣದಂತಹ) ಒಂದು ಬಗೆಯ ಸಾಧನ ; ಕವಣೆ ; ಮಿಂಟೆ : "ಶರಮುಂಡಿ ಮಿಂಟೆಯಕ್ಕುಂ" (ಮಂಗರಾ. ೪೭-೩೫). [?]

**ಶರರುಹ** (ನಾ). ನೀರಿನಲ್ಲಿ ಹುಟ್ಟಿದುದು; ತಾವರೆ : ಹೃದಯಸ್ಥ ವಿರಹವಹ್ನಿಗೆ ಕೈಯಂ ಸ್ಮರನೊಡ್ಡಿ ಕಾಸಿ ಬಿಲ್ಲಂ ತಿರುಪೊಯ್ಯುಸುತಿರ್ಪನಸಿತಶರರುಹಶರದಿಂ (ರಾಜಶೇ. ೯-೨೧). [ಸಂ.]

**ಶರವಣ** (ನಾ). ಲಾಳದ ಮೆಳೆ ; ಜೊಂಡಿನ ಪೊದೆ : ಅವರ ಗರ್ಭವನಾ ಮಹಾವೀರ್ಯವೆಪ್ಪೆ ತದ್‌ಯುಪತಿಯರದಂ ಧರಿಸಲಾಱದೆಮ್ಮಂ ಭಜಿಸೆ ಯವರಱುವರಲ್ಲಿರ್ದುದಂ ಶರವಣದೊಳಿರಿಸಿಮನೆ (ಪದ್ಮರಾ. ೧೦-೨೨೪). [ಸಂ.]

**ಶರವಣಭವ** (ನಾ). ಜೊಂಡಿನ ಪೊದೆಯಲ್ಲಿ ಹುಟ್ಟಿದವನು; ಸ್ಕಂದ: ಪಶುಪತಿಪ್ರಿಯರಾಗದಲ್ಲಿ 'ಶರವಣಭವ ಸಮಯಮಿದಿರಾ' ಎಂಬ ಕೀರ್ತನೆ ರಚಿತವಾಗಿದೆ (ರೂಢಿ). [ಸಂ.]

**ಶರವಣೋದ್ಭವ** (ನಾ). = ಶರವಣಭವ : ಶರವಣೋದ್ಭವ ನಂದಿಕೇಶ ಮದ್ದಳೆಗಳಂ ಹರುಷದಿಂ ಧಿಂಧಿಮಿಕಿಟೆಂದು ಧ್ವನಿಮಾಡೆ . . . ಭರತಕಟ್ಟಳೆಗೆ ಕುಣಿದನೀಶಂ (ಗುರುಬಾ. ೧-೧೯). [ಸಂ.]

**ಶರವರ್ಷ** (ನಾ). ಬಾಣಗಳ ಸುರಿಮಳೆ, — ವೃಷ್ಟಿ : ಧನುರ್ಧರನ ಶರವರ್ಷಂ ನವಪಯೋದಪ್ರಮೋದಬಿಂದುವರ್ಷದಂತೆ ಕಳೆಯೆ (ಶಾಂತಿಪು. ೪-೮೭) : ಶರವರ್ಷಮಂ ಕಱಯುತರ್ಜುನನ ಸಮ್ಮುಖಕೆ ಬಂದು ನಿಂದು (ಜೈಮಿಭಾ. ೨೨-೮). [ಸಂ.]

**ಶರವಳೆ** (ನಾ). = ಶರವರ್ಷ : ಬೊಬ್ಬಿಱದು ಶರವಳೆಯ ಸುರಿಸುರಿದುಬ್ಬರದ ಬವರದೊಳಗಹಿತರಿಗುಬ್ಬುಸವನೆಸಗುವನ ಜೋಧನು (ಕುವ್ಯಾಉ. ೩-೧೦೨) ; ಜಡಿವ ತುಂತುರ್ವನಿಗಳನು ಬಿಱುಗಾಳಿ ಮೊಗೆವವೊಲನಿತು ಸಲ್ಲಹ ಶರವಳೆಯ ಗದೆಯಿಂದ ಘಟ್ಟಿಸಿದ (ಕುವ್ಯಾಗ. ೧-೫೫). [ಶರ + ಮಳೆ (< ಮೞೆ)]

**ಶರವಿದ್ಯೆ** (ನಾ). ಬಾಣಬಿಡುವ ಕೌಶಲ; ಬಿಲ್ಲುವಿದ್ಯೆ : ಶರವಿದ್ಯಾಬಲದಿಂದ ಕೊಂಡುಕೊನೆವಾ ಯುದ್ಧಂಗಳಂ ಮೆಚ್ಚೆನಾಂ ಪಿರಿದುಂ ಮೆಚ್ಚುವೆನಿಂತುಟೊಂದು ನಿಮಿಷಂ (ಜಗವಿ. ೬-೮೦); ಅರ್ಜುನನ ಶರವಿದ್ಯೆ ವಿವರಿಸೆ ದುರ್ಜಯವಲಾ (ಕುವ್ಯಾವಿ. ೮-೪೨). [ಸಂ. ಶರವಿದ್ಯಾ]

**ಶರವೃಷ್ಟಿ** (ನಾ). = ಶರವರ್ಷ : ಅನಂತವೀರ್ಯನ ಶರವೃಷ್ಟಿಯೊಳ್ ಗಗನದಿಂ ನವಲೋಹಿತವೃಷ್ಟಿಗಳ್ ವಲುಮ್ಮನೆ ಕೊಳೆ (ಶಾಂತಿಪು. ೪-೩೩); ಶರವೃಷ್ಟಿಯನಾ ಗಿರಿಶಾಗ್ರದೊಳೆಯ್ದೆ ಕಱದನರ್ಜುನನದಟಂ (ಕಬಿಹಂ. ೪-೪೧). [ಸಂ.]

**ಶರವೇಗ** (ನಾ). (ಬಾಣದಂತೆ) ತೀವ್ರವಾದ ವೇಗ, — ರಭಸ : ಶರವೇಗದಲ್ಲಿ ಬಂದ ಹದ್ದು ಕೋಳಿಮರಿಗಳ ಮೇಲೆ ಎರಗಿತು (ರೂಢಿ). [ಸಂ.]

**ಶರವೇದ** (ನಾ). = ಶರವಿದ್ಯೆ : ಶರವೇದವಿದ್ಯೆಯಂ ತನ್ನರಸಿಗೆ ಮೆಱೆಯಲ್ಕೆ ದೇವಿ ನೋಡೆನುತೆಚ್ಚಂ (ಯಶೋಚ. ೪-೩೮) ; ಶರವೇದಮೂರ್ತಿಗಳ ತೆಱದಿಂದೆ ರಾಜಸುವ ತರಳರಂ ಮಣಿದೆತ್ತಿ . . . ಇದೆತ್ತಣ ಬಲೋತ್ಕರದೆಲ್ಲಿ ಪೇಳ್ವುದೆನೆ (ಜೈಮಿಭಾ. ೨೧-೪೪). [ಸಂ.]

**ಶರವೈರಿ** (ನಾ). ಒಂದು ಬಗೆಯ ಹಕ್ಕಿ ; ಸರಕೂಟ : ''ಶರ[ಪಾಠಾಂ.ಸ]ರವ್ಯೆರಿಯೆನಲಾ ಕಕೂಟಮೆನಿಕ್ಕು'' (ಮಂಗರಾ. ೫೧-೬). 'ಶರಾರಿ' ಪರಾ. [ಸಂ. ಶರವೈರಿನ್?]

**ಶರವ್ಯ** (ನಾ). ಬಾಣಪ್ರಯೋಗಕ್ಕೆ ನಿರ್ದೇಶಿಸುವ ಗುರಿ, — ಲಕ್ಷ್ಯ : ''ಲಕ್ಷ್ಯಂ ಶರವ್ಯಂ ನಿಮಿತ್ತಮೆನೆ ಗುಱಯಕ್ಕು'' (ಮಂಗರಾ. ೮೭-೩೫). [ಸಂ.]

**ಶರಶಯ್ಯೆ** (ನಾ). ಬಾಣಗಳಿಂದ ಸಿದ್ಧಮಾಡಿದ ಹಾಸುಗೆ, — ತಲ್ಪ: ಶರಶಯ್ಯಾಗ್ರದೊಳಿಂತು ನೀಮಿರೆ . . . ಸಂಧಾನಮಂ ವೈರಿಭೂಪರೊಳಿಂ ಸಂಧಿಸಿ ಪೇಱಮಾರ್ಗ ಮೆಱೆವಂ (ಪಂಪಭಾ. ೧೩-೬೯); ನಂದಿಹೋಗುತ್ತಿರುವ ಬೆಂಕಿಯಂತೆ ಶರಶಯ್ಯೆಯಲ್ಲಿ ಮಲಗಿರುವ ಭೀಷ್ಮನನ್ನು ಕುರಿತು ಯೋಚಿಸುತ್ತಿದ್ದ (ವಚಿಭಾ. ೩೩೨).
[ಸಂ. ಶರಶಯ್ಯಾ]

**ಶರಶಲ್ಯ** (ನಾ). ಬಾಣದ ಚೂಪಾದ ಮೊನೆ : ಶರಶಲ್ಯಮಿನಿತು ಸಿಲ್ಕಿಯುಮಂದಿಸುವಂ ಪಿಡಿಯಲರ್ದಯನಲ್ಲದೆ ನಡೆ ವಿಸ್ಮರಶರತತಿ ಕಿಟಲರಿಯವು ವಿರಹಿಯ ನೋವಿಂಗೆ ಸಾಯಲಿಲ್ಲದಱಂದಂ (ಅರ್ಧನೇ. ೪-೮೪). [ಸಂ.]

**ಶರಶಾಲಿ** (ನಾ). ಬಾಣಪ್ರಯೋಗದಲ್ಲಿ ಚತುರನಾದವನು ; ಒಳ್ಳೆಯ ಬಿಲ್ಲುಗಾರ : ಶರಶಾಲಿಯೆನಂಬುದನೀ ಶರದಿಂದೆಮಗಱಪಲೆಚ್ಚು . . . ಅಧಟನ ಪುರುಳಂ ಪೊಣರ್ದಾಗಳಱವೆನುಗ್ರಾಹವದೊಳ್ (ಆದಿಪು. ೧೨-೯೯).
[ಸಂ. ಶರಶಾಲಿನ್]

**ಶರಷಟ್ಪದಿ** (ನಾ). [ಛಂದ] ಆರು ಬಗೆಯ ಷಟ್ಪದಿಗಳಲ್ಲಿ ಒಂದು ; ℙ ''ನಾಲ್ಕುಮಾತ್ರೆಯ ಗಣವು ಒಂದೆರಡು ನಾಲ್ಕಯ್ದನೆಯ ಪಾದಗಳಲ್ಲಿ ಎರಡೆರಡೂ, ಮೂರಾರನೆಯ ಪಾದಗಳಲ್ಲಿ ಮೂರುಮೂರೂ ಒಂದು ಗುರುವೂ ಇರಲು ಶರಷಟ್ಪದಿಯೆನಿಸುವುದು'' (ಕೈಪಿಡಿ. ೯೫) : ಮೆಱೆವೆರಡಡಿಯುತ್ತರದೆರಡಡಿಯೊಳ್ ಕರಿಲಘುಗಳ್ ಮೂಱಱನೆಯಾ ಚರಣದ ಮನುವಿಂತಱುವತ್ತು ಲಘುವು ಶರಷಟ್ಪದಿಗೆ (ಛಂದೋಂಬು. ೫-೨೫೯ ಅಡಿಪದ್ಯ). [ಸಂ. ಶರಷಟ್ಪದೀ]

**ಶರಸಂಧಾನ** (ನಾ). ಬಾಣವನ್ನು ಬಿಲ್ಲಿಗೆ ಹೂಡುವುದು : ಶರಸಂಧಾನದ ಬೇಗಮಂಬುಗಳನಂಬೀಂಬಂತೆ ಮೇಣಂಬಿನಾಗರಮಂಬಂತೆನೆ ಪಾಯ್ವರಾತಿಶರ ಸಂಘಾತಂಗಳಂ ನುರ್ಗಿ (ಪಂಪಭಾ. ೧೧-೪೦) ; ಶರಸಂಧಾನದ ವೇಗಂ ಪರಿಕಿಸಲರಿದೆನಿಸಿ ದಿವಿಜಪತಿಯುಂ ದಶಕಂಧರನುಂ ಕಾಯ್ದುಸೆ (ಪಂರಾಮಾ. ೧೦-೨೦೭); ಶರಸಂಧಾನವಿಲ್ಲದ ಸಮರ ಮೆಱೆಯದು (ಕುವ್ಯಾಉ. ೩-೫೦). [ಸಂ.]

**ಶರಸಂನ್ಯಾಸ** (ನಾ). ಬಾಣಪ್ರಯೋಗವನ್ನು ಕೈಬಿಡುವುದು ; ಶಸ್ತ್ರಸಂನ್ಯಾಸ: ಎಲವೂ ಶರಸಂನ್ಯಾಸವನು ಕುರುತಿಲಕನವಸಾನದಲಿ ಮಾಡಿದೆನಳಲಿದಡೆ ಫಲವೇನು (ಕುವ್ಯಾಗ. ೧೦-೧೮). [ಸಂ.]

**ಶರಸನ್ಯಾಸ** (ನಾ). = ಶರಸಂನ್ಯಾಸ : ಎನ್ನೊಡನೆ ರಣದಲಿ ಹಳಚಿ ನೀ ತಲೆವೆರಸಿ ಮರಳಿದಡಿಳುಹುವೆನು ಕೈದುವನು ಶರಸನ್ಯಾಸ ನನಗೆಂದ (ಕುವ್ಯಾದ್ರೋ. ೫-೪೨).
[< ಶರಸಂನ್ಯಾಸ]

**ಶರಸೋನೆ** (ನಾ). ಒಂದೇ ಸಮನೆ ಸುರಿಯುವ ಬಾಣಗಳ ಮಳೆ : ಕರ್ಣನಂಬಿನ ಹರಹು ಹೇಱತು ದಳಪತಿಯ ಶರಸೋನೆ ಸಾರವಲಾ (ಕುವ್ಯಾಶ. ೨-೪೭).
[ಶರ + ಸೋನೆ₁]

**ಶರಸ್ತಂಬ** (ನಾ). ಜೊಂಡುಹುಲ್ಲಿನ ಪೊದರು ; ಲಾಳದ ಪೊದೆ : ಒಗೆದ ಶರಸ್ತಂಬದೊಳಿರ್ಬಗಿಯಾಗಿ ಮನೋಜರಾಗರಸಮುಗುತರೆ . . . ಅಗಲ್ದನಾಶ್ರಮ ದಿನುದಿತಲಜ್ಜಾವಶದಿಂ (ಪಂಪಭಾ. ೨-೩೩) ; ಚಲಿಸಿತಾತನ ವೀರ್ಯವವನಿಯಲಿ ಅದು ಶರಸ್ತಂಬದಲಿ ನೆಲೆಯಾದುದು (ಸಂಭಪ. ೧೭-೬೭). [ಸಂ.]

**ಶರಹತಿ** (ನಾ). ಬಾಣದ ಹೊಡೆತ, — ಪೆಟ್ಟು : ಅರಿಯ ಶರಹತಿಗುತ್ತರನ ತನು ಬಿರಿಯೆ ಬಸವಳಿದನು ಕಪೀಶ್ವರನೊಱಲಿದನು ರಾವಣನ ಗಾಯವ ನೆನೆದನಡಿಗಡಿಗೆ (ಕುವ್ಯಾವಿ. ೮-೫೫) : ಮನುಜಶತ್ರುಹನ ಶರಹತಿಗೆ ನೋಯದ ಮುನ್ನಂ . . . ಎಮ್ಮವರಂ ಕಂಡು ಮೆಱೆವಾಟ್ಟುದು ಮೇಲ್ (ರಾಮಾಶ್ವ. ೧೪೫-೫). [ಸಂ.]

**ಶರಾ₁, ಷರಾ₁** (ನಾ). ದಾಖಲೆ, ಪತ್ರ ಮುಂತಾದುವುಗಳ ಕೊನೆಯಲ್ಲಿ ಅಭಿಪ್ರಾಯವನ್ನು ತಿಳಿಸಲು ಬರೆಯುವ ವಿಶೇಷ ವಿಷಯ, — ಟಿಪ್ಪಣಿ : ನನ್ನ ವಿಷಯದಲ್ಲಿ ಕೆಟ್ಟ ಶರಾ ಬರೆದು . . . ಬೈದು ಹೋಗಿದ್ದಾರೆ (ಜನಜೀ. ೫೯). **ಷರಾ₁** : ನಮ್ಮ ವ್ಯವಸ್ಥೆಯನ್ನು ಮೆಚ್ಚಿಕೊಂಡಿದ್ದ ಸಾಹೇಬರು ನಮ್ಮ ಕಚೇರಿಯ ಬಗೆಗೆ ಉತ್ತಮ ''ಷರಾ'' ಬರೆದರು (ಬಂಗಾರ. ೯); ಬಸಪ್ಪನು ನ್ಯಾಯಾಲಯಕ್ಕೆ ಹೋಗದಂತೆ . . . ಬಸಪ್ಪನು ಊರಲಿಲ್ಲವೆಂದು ಸುಳ್ಳು ಷರಾ ಬರೆಯಿಸಿದರು (ಪಂಜಪಂ. ೨೧೪).
[← ಅರ. ಹಿಂ. ಶರಹ್]

**ಶರಾಗ್ನಿ** (ನಾ). ಬಾಣಗಳಿಂದುಂಟಾದ ಬೆಂಕಿ, — ಜ್ವಾಲೆ : ಎಲಲೆ ಪಾಪಿಗಳಿರ ವೃಥಾ ತಮ್ಮೊಳಗೆ ತೋಟಿ ಶರಾಗ್ನಿಯುತ್ತಲು ಮೊಳಗುತ್ತದೆ ಕೆಡೆ ಬೀಳಹೊಯ್ ಕುನ್ನಿಗಳನು (ಕುವ್ಯಾದ್ರೋ. ೧೯-೩೦); ಕಾದವು ಭಟರ ಕೈದುಗಳ್ಪಿಡಿಯಲರಿದೆನಲ್ಕಾದವು ಶರಾಗ್ನಿಗಾಹುತಿ ಗಜಹಯಾದಿಗಳ್ (ಜೈಮಿಭಾ. ೧೩-೧೩). [ಸಂ.]

**ಶರಾಫ** 'ಸರಾಫ' ನೋ.

**ಶರಾಬು, ಷರಾಬು** (ನಾ). ಮಾದಕಪಾನೀಯ ; ಸಾರಾಯಿ : ಅಪ್ಪರನ್ನು ಸಂಜೆ ಹೆಂಡದಂಗಡಿಗೆ ಕೊಂಡು ಹೋಗಿ ಚೆನ್ನಾಗಿ ಹೆಂಡ, ಹಣ ಹೆಚ್ಚಿಗೆ ಇದ್ದರೆ ಶರಾಬು ಕುಡಿಸುವುದು (ರಕ್ತರೂ. ೨೮). **ಷರಾಬು** : ಶೇಂದಿ ಷರಾಬು ಎಲ್ಲಿ ಎಲ್ಲಿ ಪರಿಯಂತರಕ್ಕೂ ಅಲಾಯಿದಾಬಾಬು ಇದೆಯೊ ಅದು ಯಾವತ್ತು ಬಾಬಿಗೂ ತಿಂಗಳುಗಟ್ಲೆ ಪ್ರಕಾರ ಐವಜು ವಸೂಲಾಗತಕ್ಕದ್ದನ್ನೆಲ್ಲಾ ವಸೂಲುಮಾಡಿಕೊಳ್ಳಬೇಕು (ಮಹಾವಂ. II. ೬೬) ; ಷರಾಬಿನಲ್ಲಿ ಮಾದಕವಸ್ತುವಿದೆಯೆಂಬುದನ್ನು ನಾವು ಅನುಭವದಿಂದ ತಿಳಿಯುತ್ತೇವೆ (ಜೀವಾತ್ಮ. ೬೦).
[← ಅರ. ಪಾರ. ಹಿಂ. ಮರಾ. ಶರಾಬ್]

**ಶರಾಭ್ಯಾಸ** (ನಾ). ಬಿಲ್ಲುವಿದ್ಯೆಯ ಕಲಿಕೆ, — ವ್ಯಾಸಂಗ : ''ಶರಾಭ್ಯಾಸಃ, ಉಪಾಸನಂ — ೨ ಬಿಲ್ಲಿನಲ್ಲಿ ಬಾಣವೆಸೆಯುವ ಧನುರ್ವಿದ್ಯೆಯನ್ನು ಕಲಿತುಕೊಳ್ಳುವಿಕೆ'' (ಸಿದ್ಧಾಂತಿ. ೨೬೪). [ಸಂ.]

**ಶರಾಯಿ, ಷರಾಯಿ** (ನಾ). ದಪ್ಪಬಟ್ಟೆಯಲ್ಲಿ ಹೊಲಿದ ಇಜಾರ, – ಪಾಯಿಜಾಮ : ಈ ಕೋಟು, ಈ ಶರಟು, ಈ ಶರಾಯಿ, ಈ ಭಗ್ನಜೋಪಡಿಯು ನಿನ್ನದೇ (ನವ್ಯಕ್ಷ. ೮೭). **ಷರಾಯಿ:** ಚಿಕ್ಕಮಕ್ಕಳು ಇಂಗ್ಲೀಷಿನವರಂತೆ ಷರಾಯಿ ಲಂಗಗಳನ್ನು ಹಾಕಿಕೊಳ್ಳುತ್ತಿದ್ದವು (ಹುಟ್ಟಪ. ೬) ; ರಾಜಣ್ಣ, ಷರಾಯಿಜೇಬಿಗೆ ಕೈತುರುಕಿ ನೋಡಿದಾಗ ಸಿಗರೇಟು ಸಿಕ್ಕಿತು (ಕಣ್ಮನಿ. ೭೫). [← ಪಾರ. ಶಲ್ವಾರ್]

**ಶರಾರತ್ತು** (ನಾ). ತಂಟೆ ; ತಕರಾರು : ಕೊಡಗು ಜನ ಯಾವತ್ತು ತಿರುಗಿಬಿದ್ದು ಶರಾರತ್ತು ಮಾಡಿದ್ದರಿಂದ (ರಾಜೇಂದ್ರ. ೨೯); ಕೆಲವರ ಗಲ್ಲು ಹಾಕಿ ಈ ಮೇರೆ ಶರಾರತ್ತು ನಡಿಸಿದ್ದರಿಂದ (ರಾಜೇಂದ್ರ. ೯೦). [← ಅರ. ಪಾರ. ಹಿಂ. ಮರಾ. ಶರಾರತ್]

**ಶರಾರಿ** (ನಾ). = ಶರವ್ಯೆರಿ : "ಆಟಿಃ, ಶರಾರಿಃ, ಆತಿಃ – ಈ ೩ ಸರಕೂಟವಕ್ಕಿ" (ಪಲಾಯು. ೪೨-೯೬). [ಸಂ.]

**ಶರಾರು** (ಗು). ೧. ಕೆಡುಕನ್ನುಂಟುಮಾಡುವ; ಹಾನಿಕರವಾದ. (ನಾ). ೨. ಕೊಲ್ಲುವವನು; ಕೊಲೆಗಡುಕ : "ಶರಾರು ಘಾತುಕ ಹಿಂಸಕಂ ಕೊಲ್ಲುವವನಕ್ಕು" (ಮಂಗರಾ. ೭೦-೧೫). ೩. ಹಿಂಸ್ರಜಂತು. [ಸಂ.]

**ಶರಾರುಕ** (ನಾ). = ಶರಾರು ೨ : ತೀರದಕಟಕಟ ರಕ್ಕಸ ಶರಾರುಕನ ಮಾಯೆಯಂ ಗೆಲುವದೀ ಪರಿ (ವಂಕಾರಾ. ೬-೪೭-೫೦). [ಸಂ.]

**ಶರಾವ** (ನಾ). ೧. ಮಣ್ಣಿನ ಓಡು ; ಶ್ರಾವೆ : ನಿರಾವರಣಗಗನದೇಶಸ್ಥಿತಾವಧೃತ ಪ್ರಕಾಶಪರಿಮಾಣಪ್ರದೀಪಕ್ಕೆ ಶರಾವಮಾನಿಕಾವರಕದ್ಯಾವರಣವಶದಿಂ ತತ್ಪರಿಮಾಣತೆ ಯೆಂತಂತೆ ನಿಶ್ಚಯದಿಂ ಅಮೂರ್ತಸ್ವಭಾವನಾಗಿಯುಂ ಬಂಧಾಪೇಕ್ಷೆಯಿಂ ವಿಕತ್ವಮುಂಟಪ್ಪುದರಿಂ (ತತ್ತ್ವಪ್ರ. ೨೩೮) ; ಕೀಟನ್ಯಾನಿಸರಶ್ರಾಂತಮುಗುಟ್ಟು ಶರಾವಂಬೊಲಮರ್ದ ವೇಶ್ಯಾಧರಮಂ ತಳ್ವದೆ ಚುಂಬಿಸಿ ನರಕದೊಳಾಳ್ದುದದೇಂ ನೀತಿಯೇ (ಉದ್ಭಟ. ೧೦-೮೦). ೨. ಧಾನ್ಯಗಳನ್ನು ಅಳೆಯುವ ಒಂದು ಪ್ರಮಾಣ: ೨ ಕುಡವ = ೧ ಮಾನಿಕಾ (ಶರಾವ – ಸೇರು – ೮ ಪಲ) (ಸಕಪ್ಪ. XIII. ಪ್ರಸ್ತಾವನ). [ಸಂ.]

**ಶರಾವತಿ** (ನಾ). ೧. ಕರ್ನಾಟಕದಲ್ಲಿ ಹರಿಯುವ ಒಂದು ನದಿಯ ಹೆಸರು: "ಶರಾವತೀ, ವೇತ್ರವತೀ, ಚಂದ್ರಭಾಗಾ, ಸರಸ್ವತಿ, ಕಾವೇರೀ – ೫. . . . ನದೀವಿಶೇಷಗಳು" (ಸಿದ್ಧಾಂತಿ. ೮೮). ೨. ಶ್ರೀರಾಮನ ಮಗನಾದ ಲವನ ರಾಜಧಾನಿ. ೩. [ಸಂಗೀತ] ಒಂದು ರಾಗದ ಹೆಸರು: ಶರಾವತೀರಾಗವು . . . ಎಲ್ಲಾ ಕಾಲಗಳಲ್ಲಿ ಹಾಡಲ್ಪಡುತ್ತದೆ (ಚತುಪ್ರ. ೧೪೯). [ಸಂ. ಶರಾವತೀ]

**ಶರಾವೆ** (ನಾ). = ಶರಾವ ೧: ದಡದಡನೆ ಹೋಗಿ, ಮೂಲೆಯ ಮಡಕೆಯಿಂದ ಮೊಗೆಯಲ್ಲಿ ಎಣ್ಣೆಯನ್ನೂ ಅದರ ಮುಚ್ಚುಳ ಶರಾವೆಯಿಂದ ಬತ್ತಿಗಳನ್ನೂ ತಂದು . . . ಹೊತ್ತಿಸುವಳು (ಚಿಚ್ಚಿಹ. ೧೦೭-೪). [ಸಂ. ಶರಾವ]

**ಶರಾಶ್ರಯ** (ನಾ). ಬಾಣಗಳಿಗೆ ಆಶ್ರಯವಾದುದು; ಬತ್ತಳಿಕೆ: "ಹೂದೆಯೊತ್ತು ಡೊಣೆ ಶರಧಿ ತೂಣಂ ಶರಾಶ್ರಯಮುಪಾಸಂಗಂ ನಿಷಂಗಮಕ್ಕುಂ" (ಮಂಗರಾ. ೮೭-೭೪). [ಸಂ.]

**ಶರಾಸನ** (ನಾ). ಬಿಲ್ಲು; ಧನುಸ್ಸು : ಮುನೀಂದ್ರನಿಂದ್ರಿಯದೊಳೊಗೆದ ಪೆಣ್ಣೂಸುಮಂ ಗಂಡುಗೂಸುಮನವಟ ಕೆಲದೊಳಿರ್ದ ದಿವ್ಯಶರಾಸನಶರಂಗಳುಮಂ ಕಂಡು (ಪಂಪಭಾ. ೨-೩೩ ವ); ಶರಾಸನಂ ಸಫಲಮಿಂದಾಯ್ತೆಂಬ ನಚ್ಚಿಂ ಮುಗುಳ್ನಗೆ ನಕ್ಕು (ಶಾಂತಿಪು. ೩-೧೭೫); ಕಲಿ ಸುಬಾಹು ಶರಾಸನವ ಪಿಡಿದಲಘುಮಹಿಮನನೆಸುತ ತಜುಬಲು . . . ತಜೆದು ಬಿಸುಟನು ಖಳನ ಹಿಂದಲೆಯ (ಕೌಶಿರಾ. ೧-೯೨). [ಸಂ.]

**ಶರಾಸನಾಗಮ** (ನಾ). ಅಸ್ತ್ರಪ್ರಯೋಗಗಳನ್ನು ಕುರಿತ ಶಾಸ್ತ್ರ; ಧನುರ್ವಿದ್ಯೆ: ಭರದಿಂ ರಾಮಂ ಕಾಕಾಸುರನ ಮುನಿದಿಸುವ ತೆಜದಿನೆಚ್ಚಂ ವಿಹಗೇಶ್ವರನೆನಿಪ ಹಂಸನಂ ವರಶರಾಸನಾಗಮವಿಶಾರದಂ ತತ್‌ಕ್ಷಣದಿಂ (ಪಂಚತಂ. ೧೨೮-೬). [ಸಂ.]

**ಶರಾಸಾರ** (ನಾ). = ಶರವರ್ಷ : ಅಂತು ನರನಾರಾಯಣರಿರ್ವರುಮನವರತ ಶರಾಸಾರಶೂನ್ಯೀಕೃತಕಾನನಮಾಗೆಚ್ಚು ಮೃಗವ್ಯವ್ಯಾಪಾರದಿಂ ಬಟಲ್ದು . . . ಬರೆವರ (ಪಂಪಭಾ. ೫-೫೦ ವ) ; ಬಿಲ್ಲೊವಜಂ ಗಾಂಡೀವಿಯೊಳ್ಕಾದಿದನವರ ಶರಾಸಾರಮಂ ನೀನೆ ಕಂಡೈ (ಗದಾಯು. ೨-೭೦). [ಸಂ.]

**ಶರಿರ, ಸರಿರ** (ನಾ). ಒಡಲು ; ಮೈ ; ದೇಹ : ಶಂಕರನೆಂದು ತನ್ನ ತಿಂಗಳ ಶಿಶುವ ಕೊಡಲ್ . . . ಉರಿವ ಕಿಚ್ಚಿನ ಹೊರೆಯೊಳಿರಿಸಲದು ಸನ್ನಿವಟ್ಟು ಶರಿರವೆಲ್ಲಂ ಕಂದಿ ಕುಂದಿತು (ಭಾವಬಂ. ೬-೧) ; ಶರಿರಮನಭಾವಗಳ ಗುರುಲಿಂಗಜಂಗಮಕೆ ಹರಣ ಮುಂತಾಗಿ ಅರ್ಪಿಸಿದ ಶರಣ ತಾ ಮರಳಿ ಜನಿಸುವನೆ (ಸರ್ವಜ್ಞ. ೧೪೫). **ಸರಿರ :** "ಸರಿರಂ ವಿಗ್ರಹದೊಳ್" (ಕರ್ಣಾನಿ. ೮೪); ಸರಿರವಿಲ್ಲದ ಲಿಂಗರೂಪಾಗಿ ಕೂಡಿಪ್ಪ . . . ಗುರು ಮನದೊಳಿರಲಡಿಯನರ್ಚಿಸುವೆಂ (ವೀಶೈಪು. ೧-೧-೩). [< ಸಂ. ಶರೀರ]

**ಶರಿರಗುಂದು** (ಕ್ರಿ). ದೇಹವು ಸೊರಗು, – ಬಡವಾಗು: ತರಳೆ ಪೌರ್ಣಮಿಯ ಮುಂದಣ ಚಂದಿರನಂತೆ ಶರಿರಗುಂದಿದಳಾ ಕ್ಷಣದಿ (ಜೀವಂಸಾಂ. ೧೨-೬೪). [ಶರಿರ + ಕುಂದು₁]

**ಶರೀಕು, ಷರೀಕು, ಷೆರೀಕು** (ನಾ). ಶಾಮಿಲು ; ಜೊತೆ : ಈ ಮೋಸದಲ್ಲಿ ಇಬ್ಬರೂ ಶರೀಕಾಗಿದ್ದಾರೆ (ರೂಢಿ). **ಷರೀಕು:** ಇಬ್ಬರೂ ಷರೀಕಾಗಿ ಸಮನ್ಸ್ ಮೇಲೆ . . . ಸುಳ್ಳು ಷರಾ ಬರೆಯಿಸಿ . . . ಅವರ ಕಡೆ ಗಣಂಗಳ ರುಜು ಹಾಕಿಸುತ್ತಿದ್ದರು (ಪಂಜಪಂ. ೪೭). **ಷೆರೀಕು:** ನಾವೆಲ್ಲರೂ ಷೆರೀಕಾಗಿರುತ್ತೇವೆ (ಆಲಮ. ೫೩). [← ಅರ. ಹಿಂ. ಶರೀಕ್]

**ಶರೀರ** (ನಾ). ೧. ಒಡಲು ; ಮೈ ; ದೇಹ : "ತನು ಗಾತ್ರಂ . . . ಶರೀರಂ ಕಳೇಬರಂ ಕಾಯಂ" (ವಸ್ತುಕೋ. ೬-೭೧); ನರಶರಕೋಟಿ ಜರ್ಜರಿಸೆ ತನ್ನ ಶರೀರಮನಸ್ತ್ರ ವೇದನಾಪರವಶನಾಗಿಯುಂ ಮಱೆದನಿಲ್ಲ ಮುಕುಂದನಂ (ಗದಾಯು. ೫-೩೮); ನರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡುವೋಗದ ಮುನ್ನ . . .ಮೃತ್ಯು ಮುಟ್ಟದ ಮುನ್ನ ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೧೬೧). ೨. [ನ್ಯಾಯ] ಹನ್ನೆರಡು ವಿಧವಾದ ಪ್ರಮೇಯಗಳಲ್ಲಿ ಒಂದು: ನ್ಯಾಯಶಾಸ್ತ್ರದಲ್ಲಿ ಹೇಗೆಂದರೆ– ಆತ್ಮ ಶರೀರ ಇಂದ್ರಿಯ ಅರ್ಥ ಬುದ್ಧಿ ಮನಸ್ಸು ಪ್ರವೃತ್ತಿ ದೋಷ ಪ್ರೇತ್ಯಭಾವ ಫಲ ದುಃಖ ಅಪವರ್ಗವೆಂದು ಹನ್ನೆರಡು ವಿಧವಾಗಿ ಪ್ರಮೇಯವನ್ನು ಒಂಬತ್ತನೆಯ ಸೂತ್ರದಲ್ಲಿ ವಿಭಾಗ ಮಾಡಿರುವರು (ಓಂದಸಾ. ೧೧೫). [ಸಂ.]

**ಶರೀರಗುಣ** (ನಾ). ದೇಹದ ಸ್ವಭಾವ; ದೇಹಪ್ರಕೃತಿ : ಒಬ್ಬೊಬ್ಬರ ಶರೀರಗುಣ ಒಂದೊಂದು ಬಗೆಯಿರುತ್ತದೆ (ರೂಢಿ). [ಸಂ.]

**ಶರೀರಜ** (ಗು). ೧. ದೇಹದಲ್ಲಿ ಹುಟ್ಟಿದ, – ಉಂಟಾದ. (ನಾ). ೨. ದೇಹದಿಂದ ಹುಟ್ಟಿದುದು : ಅಕ್ಕಜದ ರುಜೆಯೇನು ಮಾನಸವೋ ಶರೀರಜವೊ (ಕುವ್ಯಾಸ. ೧-೧೦). ೩. ಕಾಯಿಲೆ ; ರೋಗ. ೪. ಕಾಮಾಸಕ್ತಿ ; ವಿಷಯಾಭಿಲಾಷೆ. ೫. ಮಗ. ೬. ಮನ್ಮಥ ; ಕಾಮ. [ಸಂ.]

**ಶರೀರತಪ** (ನಾ). ತಪಸ್ಸು, ಉಪವಾಸ, ವ್ರತ, ವ್ಯಾಯಾಮ ಮುಂತಾದುವು ಗಳಿಂದ ದೇಹವನ್ನು ದಂಡಿಸುವಿಕೆ ; ದೇಹದಂಡನೆ : ನಿತ್ಯಹರುಷದಿ ಯಾಸು ಮಾಡುತ ದೇಹ ದಂಡಿಸೆ ನೀ ಸಕಲವರಿ ಮಗನೆ ಶರೀರತಪವಿದು (ಜ್ಞಾನಸಿಂ. ೩೧೬೩೦). [ಸಂ.]

**ಶರೀರತ್ಯಾಗ** (ನಾ). ದೇಹವನ್ನು ಬಿಡುವುದು; ಸಾವು; ಮರಣ. [ಸಂ.]

**ಶರೀರದಂಡ** (ನಾ). = ಶರೀರತಪ: ಭರತಂ ಶರೀರದಂಡಮಂ ಮಾಡಿದಂ (ಚಾವುಂಪು. ೧೧). [ಸಂ.]

**ಶರೀರಧರ್ಮ** (ನಾ). ೧. ದೇಹದ ಸ್ವಭಾವ, – ಪ್ರಕೃತಿ : (ಟ). ೨. ದೇಹದಲ್ಲಿ ತನ್ನಷ್ಟಕ್ಕೆ ನಡೆಯುವ ಶ್ವಾಸೋಚ್ಛ್ವಾಸ ಮುಂತಾದ ಕಾರ್ಯ; ದೇಹಧರ್ಮ. [ಸಂ.]

**ಶರೀರನಾಮಕರ್ಮ** (ನಾ). [ಜೈನ] ಶುದ್ಧಸ್ವಭಾವದ ಜೀವನಿಗೆ ಹೆಸರಿನ ಸಂಜ್ಞೆಯುಳ್ಳ ಕರ್ಮವು ಆಚ್ಛಾದಿತವಾಗಿ ಮನುಷ್ಯ, ತಿರ್ಯಕ್ ಮೊದಲಾದ ರೂಪಗಳನ್ನು ಕೊಡುವಿಕೆ : ಶರೀರನಾಮಕರ್ಮಂ ಪಂಚವಿಧಮಕ್ಕುಂ (ಗೊಮ್ಮಸಾ. ೩-೮). [ಸಂ. ಶರೀರನಾಮಕರ್ಮನ್]

**ಶರೀರಪೂಜೆ** (ನಾ). ಗತಿಸಿದವರ ದೇಹಕ್ಕೆ ಮಾಡುವ ಪೂಜೆ: ದಮಿತಾರಿಗ ಶರೀರಪೂಜೆಯಂ ಮಾಡಲ್ವೇಟ್ಟು (ಶಾಂತಿಪು. ೪-೫೭ ವ) ; ಕಾದಿ ಸತ್ತ ನೆಗಳ್ತೆಯ ಖೇಚರರ್ಗಲ್ಲಂ ಶರೀರಪೂಜಾಪೂರ್ವಕಂ ಸಂಸ್ಕಾರವಿಧಿಯಂ ನಿರ್ವರ್ತಿಸಿ (ಶಾಂತಿಪು. ೫-೬೪ ವ). [ಸಂ. ಶರೀರಪೂಜಾ]

**ಶರೀರಪ್ರಕೃತಿ** (ನಾ). = ಶರೀರಗುಣ : ನನ್ನ ಶರೀರಪ್ರಕೃತಿಗೆ ಅದು ಒಗ್ಗುವುದಿಲ್ಲ (ರೂಢಿ). [ಸಂ.]

**ಶರೀರಪ್ರತ್ಯಾಖ್ಯಾನ** (ನಾ). [ಜೈನ] ದೇಹವನ್ನು ತಿರಸ್ಕಾರಭಾವದಿಂದ ಕಾಣುವುದು ; ದೇಹದ ಬಗೆಗೆ ತೋರುವ ಅಗೌರವ, – ಅಲಕ್ಷ್ಯ : ಅಂ . . . ಜಾತಿಸ್ಮರರುಮಾಗಿ ಪರಸ್ಪರವೈರಮಂ ಬಿಸುಟ್ಟಾಹಾರಶರೀರಪ್ರತ್ಯಾಖ್ಯಾನಪೂರ್ವಕಂ ಸನ್ಯಸನವಿಧಿಯಿಂದಸುವಂ ವಿಸರ್ಜಿಸಿ (ಶಾಂತಿಪು. ೯-೭೦ ವ). [ಸಂ.]

**ಶರೀರಸಂಬಂಧ** (ನಾ). ೧. ಮದುವೆಯಿಂದ ಉಂಟಾಗುವ ನಂಟುತನ, – ಬಾಂಧವ್ಯ : ಉತ್ತರ – ಹಿಂದೂಸ್ಥಾನದ ಸಾರ್ವಭೌಮರಾಗಿದ್ದ ಗುಪ್ತವಂಶದ ಅರಸರೊಂದಿಗೆ ಇವರು ಶರೀರಸಂಬಂಧವನ್ನು ಬೆಳೆಸಿದ್ದರು (ಕರ್ನಾಅ. ೪); ಶರೀರಸಂಬಂಧವನ್ನು ಮಾಡಿ, ಸ್ನೇಹವನ್ನು ವೃದ್ಧಿಪಡಿಸಬೇಕು (ಮಂಜುಕ. ೧೭). ೨. ಗಂಡು ಹೆಣ್ಣುಗಳ ಪರಸ್ಪರ ದೇಹಸಂಬಂಧ. [ಸಂ.]

**ಶರೀರಸಲ್ಲೇಖನೆ** (ನಾ). [ಜೈನ] ಅಂತ್ಯಕಾಲವು ಹತ್ತಿರವಾದಾಗ ದೇವರನ್ನು ಧ್ಯಾನಿಸುತ್ತ, ಆರೈಕೆ, ಔಷಧ ಮುಂತಾದುವುಗಳನ್ನು ಬಿಟ್ಟು ಉಪವಾಸ ವ್ರತದಿಂದ ಶರೀರವನ್ನು ಕ್ರಮೇಣ ಕುಗ್ಗಿಸುತ್ತ ದೇಹತ್ಯಾಗ ಮಾಡುವುದು : ಅನಶನಾದಿ ಬಾಹ್ಯತಪಂಗಳಿಂ ಶರೀರಮಂ ಕೃಶಂ ಮಾಳ್ಪುದು ಶರೀರಸಲ್ಲೇಖನೆ (ಶ್ರಾಪಾ. ೧೫೭-೯) ; ಉಪವಾಸ ಮೊದಲಾದುವುಗಳಿಂದ ಶರೀರವನ್ನು ಕೃಶಮಾಡುವುದು ಶರೀರಸಲ್ಲೇಖನೆಯು (ಜೈನಪ. ೫೭೫). [ಸಂ. ಶರೀರಸಲ್ಲೇಖನ]

**ಶರೀರಸ್ಥ** (ಗು). ದೇಹದಲ್ಲಿ ನೆಲಸಿರುವ : ಜೀವನು ಶರೀರಕ್ಕಿಂತ ಭಿನ್ನವಸ್ತುವಾದುದಾದರೆ ಶರೀರವು ನಷ್ಟವಾದ ಮೇಲೆ ಜೀವನೂ ನಾಶವಾಗುತ್ತಾನೆಯೋ? . . . ಅವನ ಪರಿಸ್ಥಿತಿಯೇನು? ಈ ಸ್ಥಿತಿಗೂ ಶರೀರಸ್ಥಸ್ಥಿತಿಗೂ ವ್ಯತ್ಯಾಸವೇನು? (ಜೀವಾತ್ಮ. ೧೯). [ಸಂ.]

**ಶರೀರಿ** (ನಾ). ೧. ಶರೀರವಿರುವಂತಹ ಮನುಷ್ಯ, ಪ್ರಾಣಿ ಮುಂತಾದುವು: ಸಾಧಿತಸಮ್ಯಗ್ದರ್ಶನಬೋಧಚರಿತ್ರಂಗಳೆಂಬ ಧರ್ಮಮಿದವ್ಯಾಬಾಧಂ ಧರ್ಮಮಿದಲ್ಲದುದಾಧಿವ್ಯಾಧಿಪ್ರದಂ ಶರೀರಿಗಪಥ್ಯಂ (ಶಾಂತಿಪು. ೬-೪೧). ೨. ದೇಹವನ್ನು ಧರಿಸಿರುವ ಆತ್ಮ, – ಚೇತನ. [ಸಂ. ಶರೀರಿನ್]

**ಶರೀರೋಪಾದಾನ** (ನಾ). ಹುಟ್ಟು ; ಜನನ : ಜೀವಂಗಳ್ ಶುಭಾಶುಭಕರ್ಮಶೈಲೂಷಪ್ರೇರಿತಂಗಳಾಗಿ . . . ನಾನಾಕಾರಶರೀರೋಪಾದಾನಪರಿತ್ಯಜನಪುರಸ್ಸರಂ ಪರಿಭ್ರಮಿಸುಗುಂ (ಆದಿಪು. ೧೬-೫೭ವ). [ಸಂ.]

**ಶರೆ** 'ಸೆರೆ$_5$' ನೋ.

**ಶರ್ಕರಾದಂತ** (ನಾ). ಒಂದು ಬಗೆಯ ದಂತರೋಗ : ಶುಷ್ಕವಾದ ಶ್ಲೇಷ್ಮವಾತಂಗಳಿಂದ ಉಂಟಾದ ಶರ್ಕರಾದಂತವೆಂಬ ದಂತರೋಗದಲ್ಲಿ ಹಲ್ಲುಗಳು ಸುಣ್ಣಪಾರೆ ಕಲ್ಲಿನ ಹಾಗೆ ಕಠಿಣವಾಗಿ ಸ್ಥಿರವಾಗಿ ಇಹವು (ವೈದ್ಯಸಾ. II. ೧೨೨). [ಸಂ.]

**ಶರ್ಕರಾಪ್ರಭೆ** (ನಾ). [ಜೈನ] ಒಂದುನರಕದ ಹೆಸರು : ಹಂಸೆಯೆಂಬ ಹೆಸರ ಶರ್ಕರಾಪ್ರಭೆಯೆಂಬೆರಡನೆಯ ನರಕಮಿರ್ದುದಾ ನರಕಬಿಲಂಗಳೆಲ್ಲಮಿಪ್ಪತ್ತೈಯ್ದು ಲಕ್ಷಮಕ್ಕುಂ (ಅಜಿಪು. ೧೧-೬ ವ); ಲಕ್ಷ್ಮೀಧರಂಗೆ ಧರ್ಮಮಂ ಪ್ರತಿಬೋಧಿಸಲೆಂದು ಶರ್ಕರಾಪ್ರಭೆಯೆಂಬ ನರಕಕ್ಕೆ ಪೋಗಿ (ಪಂರಾಮಾ. ೧೬-೭೦ ವ). [ಸಂ. ಶರ್ಕರಾಪ್ರಭಾ]

**ಶರ್ಕರಾವರ್ತ** (ನಾ). ಸಣ್ಣ ಸಣ್ಣ ಕಲ್ಲುಗಳಿಂದ ಕೂಡಿದ ಸುಂಟರಗಾಳಿ : ಶರ್ಕರಾವರ್ತಂ ಪ್ರವರ್ತಿಸಿತು ಪಾರ್ಥಜಂ ಕರ್ಕಶದ ಬಾಣಮಂ ತೆಗೆದಿಸಲ್ (ಜೈಮಿಭಾ. ೨೩-೪೭). [ಸಂ.]

**ಶರ್ಕರಾವರ್ಷ** (ನಾ). ನೊರಜುಗಲ್ಲುಗಳ ಮಳೆ: ಮಿಗಿಲೆನಿಪವೊಲು ಶರ್ಕರಾವರ್ಷಗಳೆನಿಸಿಯೆಡೆಬಿಡದೆ ಬಿಱುಗಾಳಿಗಳು ಬೀಸಿದವು (ತಿಮ್ಮಮಾ. ೧-೩). [ಸಂ.]

**ಶರ್ಕರಿಲ** (ಗು). ೧. ನೊರಜುಗಲ್ಲುಗಳಿಂದ ಕೂಡಿದ. (ನಾ). ೨. ನೊರಜುಗಲ್ಲುಗಳಿಂದ ತುಂಬಿದ ನೆಲ : ''ಸಶರ್ಕರಂ ಶರ್ಕರಿಲಂ'' (ವಸ್ತುಕೋ. ೨೭-೫). [ಸಂ.]

**ಶರ್ಕರೆ** (ನಾ). ೧. ಸಣ್ಣಕಲ್ಲು; ನೊರಜುಗಲ್ಲು. ೨. ನೊರಜುಗಲ್ಲುಗಳುಳ್ಳ ನೆಲ, – ಭೂಮಿ : ''ಶರ್ಕರಾ, ಶರ್ಕರಿಲಃ, ಶಾರ್ಕರಃ, ಶರ್ಕರಾವಾನ್ – ೪ ನರುಜುಕಲ್ಲುಗಳುಳ್ಳ ನೆಲದ ಹೆಸರುಗಳು'' (ಸಿದ್ಧಾಂತಿ. ೪೯೫). ೩. ಸಕ್ಕರೆ : ಪುದಿದ ಶಿಥಿಲಪರಿಣಾಮದೊಳೊದವಿದ ದುರಿತಾನುಗತಮದನುಭಾಗಮೆನಿಪ್ಪುದು ಶರ್ಕರಾದಿ ಕಿಂಪಾಕದುರ್ವಿಪಾಕಪ್ರಭಾವಶಕ್ತಿಪ್ರತಿಮಂ (ಸುಕುಮಾ. ೮-೩೦); ಸಿರಿಕಂಡಂ ಬಾಳಂ ಶರ್ಕರೆ ಬೇವಿನ ಕಡ್ಡಿ ಭದ್ರಮುಸ್ತೆ ದ್ರಾಕ್ಷಂಬೆರಸರದು ಕುಡಿಯಲ್ಕೆಱದಡೆ ಪರಿಹರಿಸುಗುಮೆಯ್ದೆ ಪಿತ್ತಜನಿತಜ್ವರಮಂ (ಕಲ್ಯಾಕಾ. ೭-೩೮). ೪. ಮಡಕೆಯ ಚೂರು ; ಬೋಕಿ : ''ಶರ್ಕರಾ – ಹೆಂಚುಚೂರು, ಮರಳು, ಸಕ್ಕರೆ'' (ಸಿದ್ಧಾಂತಿ. ೪೧೫). [ಸಂ. ಶರ್ಕರಾ]

**ಶರ್ಕರೆವಿಲ್ಲು** (ನಾ). ಕಬ್ಬಿನ ಬಿಲ್ಲು: ಅಲರ್ದ ತಿಲಕುಸುಮಿರಲು ನಾಸಲರ್ಗಣ್ಣು ಶರ್ಕರೆವಿಲ್ಲ ನಿಡುಪುರ್ಬು (ಜಿರಾವಾ. ೧೮-೪೩). ☞ ಇದು 'ಇಕ್ಷುಚಾಪ', 'ಇಕ್ಷುಕೋದಂಡ' ಎಂಬ ಪದಗಳ ಸಾಮ್ಯದಿಂದ ಮಾಡಿಕೊಂಡ ರೂಪ. [ಶರ್ಕರೆ + ಬಿಲ್ಲು$_1$ (< ಬಿಲ್$_2$)]

**ಶರ್ಟು** 'ಷರಟು' ನೋ.

**ಶರ್ಧ** (ನಾ). ೧. ಗುಂಪು ; ತಂಡ. ೨. ಕಸುವು ; ಶಕ್ತಿ. ೩. ಅಪಾನವಾಯು; ಹೂಸು. [ಸಂ.]

**ಶರ್ಧಿಸು** (ಕ್ರಿ). ಅಪಾನವಾಯುವನ್ನು ವಿಸರ್ಜಿಸು : (ಕ). [ಶರ್ಧ + – ಇಸು$_1$]

**ಶರ್ಮ** (ಗು). ೧. ಸುಖವನ್ನು ಕೊಡುವ ; ಆನಂದದಾಯಕ : ಎಸೆವ ನಿರ್ಮಿತ ಶರ್ಮಭರ್ಮಹರ್ಮ್ಯದೊಳ್ನೂರ್ಮೆಯಿಂ ಪೆರ್ಮೆವೆತ್ತು ಪದಪದಮರ್ದಿರೆ (ರಾಜಶೇ. ೨-೧೨೦ ವ). (ನಾ). ೨. ಸಂತೋಷ; ಆನಂದ: ಧರ್ಮಮ ದೇಹಿಂಗ (ಮಿ) ಹಪರಶರ್ಮಕ್ಕೆ ನಿದಾನಂ (ಪುಷ್ಪಪು. ೩-೧೦೮); ನೆಗಟ್ಟನ್ನಂ ಪ್ರಜೆಗಳ್ ಸ್ವಜಾತ್ಯುಚಿತ ತತ್ತದ್ಧರ್ಮದಿಂ ಶರ್ಮದಿಂ ನೆಗಟ್ಟಂ ಶ್ರೀಚಿಕದೇವರಾಯಂ (ಅಪ್ರತಿ. ೧-೨೭). ೩. ಆಶೀರ್ವಾದ ; ಅನುಗ್ರಹ. ೪. ಆಸರೆ; ರಕ್ಷಣೆ. ೫. ಮನೆ ; ಗೃಹ. ೬. ಸಂತೋಷವನ್ನುಂಟುಮಾಡುವವನು : ಅಧಿಕಾರಿಗಳೆನಿಪವರಾರ್ ಬುಧರ್ಗೆ ನಿಪಂ ಬರ್ಮ್ಮನಖಿಳಬುಧಜನಶರ್ಮ್ಮ (ಎಕ. VII. ಶಿಕಾರಿ. ೧೦೨-೨೧: 1162). ೭. ಕೆಲವು ಬ್ರಾಹ್ಮಣರ ಹೆಸರಿನ ಮುಂದೆ ಸೇರುವ ಒಂದು ಪದ: ಕೃಷ್ಣಶರ್ಮನೆಂದೆನಗೆ ಸುತನೊರ್ವನುಂಟು (ಜೈಮಿಭಾ. ೨೬-೩೩). [ಸಂ. ಶರ್ಮನ್]

**ಶರ್ಮಕಾರಣ** (ನಾ). ಸಂತೋಷಕ್ಕೆ ಕಾರಣವಾದುದು; ಸುಖಕ್ಕೆ ನಿಮಿತ್ತವಾದುದು : ಶರ್ಮಕಾರಣಕರ್ಮವೆಂಬರು ಕೆಲರು ನಿಜಸುಖಕೆ ಭ್ರಮೆಯ ಪುಟ್ಟಿಸುವೈಶ್ವರಿಯವು . . . ಎಮಗೆ ಸಾಧನಮುಕ್ತಿಯೆಂಬರು ಕೆಲರು (ನಿಭಾಗ. ೧೧-೨೧-೭). [ಸಂ.]

**ಶರ್ಮಿ** (ಗು). ೧. ಸಂತೋಷವನ್ನುಂಟುಮಾಡುವ. (ನಾ). ೨. (ನಲ್ಲ ಅಥವಾ ನಲ್ಲೆಯರ) ವಿಗ್ರಹ, – ಪ್ರತಿಮೆ: ಗಮ್ಯೆಯಲ್ಲದ ಸತಿಯನಾವನು ಗಮ್ಯಯಲ್ಲದವರನನಾವಳು . . . ರಮಿಸುವರು ಮೇಣವರ ಯಾಮ್ಯರುಭಯವ ಕಾದ ಲೋಹದ ಶರ್ಮಿಯನು ತೋಳುಗಳಲಪ್ಪಿಸಿ ಕರ್ಮ ಸವೆವನ್ನವರ ಬಿಡಲೀಸರು ದುರಾತ್ಮಕರ (ನಿಭಾಗ. ೫-೧೧-೨೮). [ಸಂ. ಶರ್ಮಿನ್]

**ಶರ್ಯತ್ತು** 'ಶರತ್ತು' ನೋ.

**ಶರ್ವ** (ನಾ). ೧. ಶಿವನ ಹೆಸರುಗಳಲ್ಲಿ ಒಂದು : ಪೆರ್ಪಿಸಿಲರ್ಪಿಸೆ ಮೆಯ್ಯನೊಡ್ಡಿ ತಾಂ ನಿರ್ವಹಿಸಲ್ಕಮಾಱದೆ ಹಿಮಾಂಶುಕಳಾಳಿಯನೆತ್ತಿ ಪೊತ್ತನಾ ಶರ್ವಂ (ಜಾಥಪು. ೪-೮೧); ಸುಖಮನುಂಟುಮಾಳ್ಪುದಱಿಂದಂ ಶರ್ವನೆಂದು ಹೆಸರು (ಭಾರಶಾಂ. ೪೩). ೨. ವಿಷ್ಣುವಿನ ಹೆಸರುಗಳಲ್ಲಿ ಒಂದು. ೩. [ಶೈವ] ಇಪ್ಪತ್ತೆಂಟು ಶಿವಾಗಮಗಳಲ್ಲಿ ಒಂದು: ಕಾಮಿಕ, ಯೋಗಜ . . . ಶರ್ವ, ಪಾರಮೇಶ್ವರ, ಕಿರಣ, ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಭಾರದ. ೭೧). ೪. [ಛಂದ] ಗುರು ಅಕ್ಷರದ ಸಂಕೇತ : ಉರ್ವೀಮಾರುತ ಭಾಸ್ಕರಾನಿಲವಿಯದ್ವಂದ್ವಂ ಪದಾಂತಂಗಳೊಳ್ ಶರ್ವಂ ವಿಶ್ರಮಣಂ ದಿನೇಶರಡೆಯೊಳ್ಸಿಲ್ಕುಂ (ಛಂದೋಂಬು. ೨-೧೭೩). ೫. ಒಂದು ಗಣದ ಹೆಸರು ; ರುದ್ರಗಣ : ಗಿರಿಶಂ ಧೂರ್ಜಟಿ ಶರ್ವಂ ಪುರಾರಿ ಪುರರಿಪುವೆನಿಪ್ಪುವಿಂತಯ್ದು ಗಣಂ ಬರೆ (ಛಂದೋಂಬು. ೪-೨೨೮). [ಸಂ.]

**ಶರ್ವರಿ** (ನಾ). ೧. (ನಕ್ಷತ್ರಗಳಿಂದ ಪ್ರಕಾಶವಾದ) ಇರುಳು ; ರಾತ್ರಿ : ಪೋದುದು ಶರ್ವರಿ ಬೆಳಗಾದುದೇಟ ಶಯ್ಯಾತಳದೊಳ್ (ಶಾಂತಿಪು. ೫-೪೪) ; ಶರ್ವರಿಯ

ಸತ್ತ ಸಬ್ಬಲಿಮೆಯ್ಯ ಮಾಂಸಮಂ ಮುದ್ದೆಮುದ್ದೆಯೆ ಕಿತ್ತೆಳೆಯುವಂತೆ, ಕೇಳ್ವುವಯ್ ಕೋಳ್ಮಿಗಗಳೊಳ್ (ಶ್ರೀರಾಮಾ. ೧೨೯-೧೩೦). ೨. ಸಂಜೆ ; ಸಾಯಂಕಾಲ. ೩. ಅರಿಸಿನ. ೪. ಹೆಂಗಸು. [ಸಂ. ಶರ್ವರೀ]

**ಶರ್ವರೀಧವ** (ನಾ). ರಾತ್ರಿಯ ಒಡೆಯ; ಚಂದ್ರ : ಅಮರೇಂದ್ರನಮೃತಮಂ ತಪನೀಯಕಲಶದೊಳ್ತುಂಬಿ ಪರಿಪೂರ್ಣದಿಂದೆ ಪವಿತ್ರಮಹಿಮರಿಗೆ ಕಳುಹಿದ ನೆನಲ್ಶರ್ವರೀಧವಂ ಥಳಥಳಿಸಿದಂ (ಮುರಪು. ೫-೧೯). [ಸಂ.]

**ಶರ್ವರೀಶ** (ನಾ). = ಶರ್ವರೀಧವ: ಪಾರ್ವತೀವರ ಶರಣಾಗತಪ್ರಕರರಕ್ಷಕ ಶಂಕರ ಶರ್ವರೀಶಶೇಖರ ಜಯ (ರಾಜಶೇ. ೧೪-೯೯). [ಸಂ.]

**ಶರ್ವಾಣಿ** (ನಾ). ಶಿವನ ಪತ್ನಿ ; ಪಾರ್ವತಿ : ಶರ್ವಾಣಿಯ ಸೌಂದರ್ಯಮನೊರ್ವಂ ಬಣ್ಣಿಸುವೆನೆಂಬವಂ ಗಾಂಪಂ (ಗಿರಿಕ. ೪-೧೦). [ಸಂ. ಶರ್ವಾಣೀ]

**ಶರ್ವಾಣೀಶ** (ನಾ). ಶರ್ವಾಣಿಯ ಪತಿ ; ಶಿವ : ಶರ್ವಾಣೀಶಗೃಹಕ್ಕೆ . . . ಮೆಱೆಯದಾತ್ಮೀಯಕಳಾಸರ್ವಜ್ಞತೆಯಂ ಮೆಱೆದಂ ಗೀರ್ವಾಣಸ್ಥಪತಿ ನಿಮ್ಮ ಗೃಹವಿರಚನೆಯಿಂ (ಜಗವಿ. ೯-೧೩೧). [ಸಂ.]

**ಶಲ, ಶಳ** (ನಾ). ೧. ಮುಳ್ಳುಹಂದಿಯ ಮೈಮೇಲಿರುವ ಮುಳ್ಳು ; ಕಣೆ : "ಶಲಲಿ ಶಲ್ಯಕನೆಯ್ದುವ್ಯಗಮುಕ್ಕು ಶಲಲಮಾ ಶಲಮೆನಲ್ಕದಱ ಮುಳ್ಳುಕ್ಕುಂ" (ಮಂಗರಾ. ೪೯-೧೨). ೨. ಸಲಾಕೆ ; ಈಟಿ. ೩. ಶಿವಗಣಗಳಲ್ಲಿ ಒಬ್ಬ. ೪. ಒಂಟೆ. ೫. ಮುಳ್ಳುಹಂದಿ: ಕರಡಿ ಕಾಸರ ಶಲ ಮೃಗಾದನ ಖಡ್ಗ ಗೋಮಾಯು . . . ಕುರಂಗಪ್ರಮುಖಮೃಗಕುಲವುಱುಬಿ ಬಿದ್ದುದು ದಳ್ಳುರಿಯ ಬೆಳ್ಳಾರವಲೆಗಳಲಿ (ಜಿವ್ಯಾಆ. ೨೦-೫೧). **ಶಳ** : ೧. ಶಳ [ಪಾಠಾಂ. ಸಲೆ] ಸೂಚೀಭಿನ್ನವಕ್ಷಂ . . . ವಿನಿಷ್ಕ್ರಾಂತಜಿಹ್ವಾಪ್ರವಾಳಂ ಪೊಳೆದೊಂದೇಂ ಬಂದುದೋ ಬೇಡನ ಬಱಿವಱಿಯಂ ಶ್ವಾನಸೇನಾವಸಾನಂ (ಅರ್ಧನೇ. ೩-೬೨). [ಸಂ.]

**ಶಲದಿ**$_1$ 'ಸೆಲಂದಿ' ನೋ.

**ಶಲದಿ**$_2$, **ಚಲದಿ** (ನಾ). ೧. (ಮಕ್ಕಳಿಗೆ ಸಿಡುಬು, ದಡಾರ ಮುಂತಾದುವು ಕಾಣಿಸಿಕೊಂಡಾಗ ಅವು ಪೂರ್ತಿಯಾಗಿ ಹೊಮ್ಮಲೆಂದು ಕೊಡುವ) ಶೀತಕಾರಕವಾದ ಆಹಾರಪದಾರ್ಥ; ತಂಪನ್ನುಂಟುಮಾಡುವ ಆಹಾರ ಪದಾರ್ಥ: ಹುಳಿ ಶಲದಿ ವರ್ಜ್ಯವಾಗಿ ಪಥ್ಯ (ಸಕವ್ಯ. ೨೦೯); ಹುಳಿ ಶಲದಿ ವರ್ಜ್ಯ (ಕಾಮಶಾ. ೨೭೭). ೨. ತೇವದಿಂದ ಚರ್ಮದ ಸಂಧಿಗಳಲ್ಲಿ ಕೆಂಪಾಗಿ ಕೊಳೆತಂತಾಗುವುದು, — ಸೆಲೆತುಕೊಳ್ಳುವುದು : ಮಗುವಿನ ತೊಡೆಯಲ್ಲಿ ಶಲದಿಯಾಗಿದೆ (ರೂಢಿ). (ಗು). ೩. ಶೀತಕಾರಕವಾದ;ತಂಪನ್ನುಂಟುಮಾಡುವ: ಗಂಟಲುಬೇನೆ ಇರುವವರು ಶಲದಿಪದಾರ್ಥಗಳನ್ನು ತಿನ್ನಬಾರದು (ರೂಢಿ). 'ಸೆಲೆ$_2$' ಪರಾ. **ಚಲದಿ** : ೧. ಈ ರೋಗಕ್ಕೆ ಚುರುಕಾದ ಮತ್ತು ಚಲದಿಯಾದ ಪದಾರ್ಥಗಳು ಸುತರಾಂ ನಿಷಿದ್ಧ (ಬಿಚಿಕಿ. ೩೬). [ದೇ.॥ ತಮಿ. ಚಲತಿ; ತೆಲು. ಚಲಿದಿ]

**ಶಲಭ** (ನಾ). ೧. ಒಂದುಬಗೆಯ ಹುಳು ; ದೀಪದ ಹುಳು; ಪತಂಗದ ಹುಳು: "ಶಲಭಂ ಪತಂಗವಿನನುಂ . . . ಎಂದಱಿಗೆ" (ವಸ್ತುಕೋ. ೧೧೯-೬); ಅರಿಕೇಸರಿರಾಜಂ ತೇಜೋಗ್ನಿಮುಗ್ನರಿಪುನೃಪಶಲಭಂ ಮಗನಾದಂ (ಪಂಪಭಾ. ೧-೪೧); ಪೊಸಮುಸೆಯ ಸರಲ್ ನಗಧರನ ಮೇಲೆ ಪಾಯ್ವುವು ನೆಗೆದಗ್ನಿಮುಖಕ್ಕೆ ಪಾಯ್ವ ಶಲಭಂಗಳವೋಲ್ (ಪಂರಾಮಾ. ೯-೬೦) ; ಹನುಮ ತಿರುಗಲು ಮುತ್ತಿತಮರಾರಿಗಳು ಶಿಖಿಯನು ಶಲಭ ಕವಿವಂತೆ (ಕಾಶಿರಾ. ೧೧-೨೬). ೨. ಮಿಂಚುಹುಳು ; ಮಿಣುಕುಹುಳು: "ಶಲಭಂ ಬಾಣ ವಿಹಂಗಮಂ ರವಿ ಪತಂಗಾಖ್ಯಾನ" (ನಾನಾರ. ೬೨). ೩. ಮಿಡತೆ; ಮಿಡಿಚೆ: "ಪತಂಗಃ, ಶಲಭಃ — ೨ ಪತಂಗದ ಹುಳುವಿನ ಹೆಸರುಗಳು. ಮಿಡಿಚೆಗೂ ಹೆಸರಾಗುವದು" (ಸಿದ್ಧಾಂಕಿ. ೧೬೨). ೪. ಅಮಂಗಳವನ್ನುಂಟುಮಾಡುವ ಒಂದು ಬಗೆಯ ರತ್ನ : ಕರ್ಕರೆಂಬುದು ಮೊರಬಿನಂತೆ ಧರಿಸಲು ಪಾಪಂ . . . ದುಃಖಮಂ ತೋರಿಪುದು ಶಲಭಮೆಂಬುದು (ರತ್ನಶಾ. ೧೬-೪). [ಸಂ.]

**ಶಲಲ** (ನಾ). ೧. ಮುಳ್ಳುಹಂದಿ. ೨. ಮುಳ್ಳುಹಂದಿಯ ಕಣೆ, — ಮುಳ್ಳು : "ಶಲಲಿ ಶಲ್ಯಕನೆಯ್ದುವ್ಯಗಮುಕ್ಕು ಶಲಲಮಾ ಶಲಮೆನಲ್ಕದಱ ಮುಳ್ಳುಕ್ಕುಂ" (ಮಂಗರಾ. ೪೯-೧೨). [ಸಂ.]

**ಶಲಲಿ** (ನಾ). ೧. = ಶಲಲ ೨ : ಬಿಲ್ಲು ತೀರು . . . ಶಲಲೀ ಭಲ್ಲ . . . ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿಸಾಧನವಿಶೇಷಂಗಳಿಂದಲುಂ (ವಿವೇಕ. ೨೬೩). ೨. ಮುಳ್ಳುಹಂದಿ : "ಶಲಲಿ ಶಲ್ಯಕನೆಯ್ದುವ್ಯಗಮುಕ್ಕು" (ಮಂಗರಾ. ೪೯-೧೨) : ಶಲಲಿ ತರಕ್ಷು . . . ಭೀಕರದುರಗತತಿ ತದ್ಘೋರಕಾನನದಲ್ಲಿ ವರ್ತಿಪುವು (ತಿಮ್ಮಅ. ೭-೨೧). [ಸಂ. ಶಲಲೀ]

**ಶಲವು** 'ಸಲವು' ನೋ.

**ಶಲಾಕಾಗ್ರ** (ನಾ). ಹೂವಿನ ತಂತುವಿನ ಅಗ್ರಭಾಗ, — ತುದಿ : ಶಲಾಕಾಕೋಶವನ್ನು ಮೂರುಭಾಗಗಳನ್ನಾಗಿ ವಿಂಗಡಿಸಬಹುದು. ೧. ಅಂಡಕೋಶ (Ovary) ೨. ಶಲಾಕೆ (Style) ೩. ಶಲಾಕಾಗ್ರ (Stigma) (ಸಸ್ಯಶಾ. ೬೦). [ಸಂ.]

**ಶಲಾಕಾಪುರುಷ** (ನಾ). [ಜೈನ] ಇಪ್ಪತ್ತುನಾಲ್ಕು ತೀರ್ಥಂಕರರು, ಹನ್ನೆರಡು ಚಕ್ರವರ್ತಿಗಳು, ಒಂಬತ್ತು ವಾಸುದೇವರು, ಒಂಬತ್ತು ಬಲದೇವರು ಮತ್ತು ಒಂಬತ್ತು ಪ್ರತಿವಾಸುದೇವರು ಎಂಬ ಅರುವತ್ತುಮೂರು ಶ್ರೇಷ್ಠಪುರುಷರಲ್ಲಿ ಒಬ್ಬ : ಅಭ್ಯುದಯನಿಶ್ರೇಯಸಸುಖನಿಮಿತ್ತಂಗಳುಮುದಿತೋದಿತನುಂ ಶಲಾಕಾಪುರುಷನುಂ ಚಕ್ರವರ್ತಿಯುಂ ಮನ್ಮಥನು ತೀರ್ಥಂಕರಪರಮದೇವನುಮಪ್ಪ ಸುಪುತ್ರೋತ್ಪತ್ತಿಹೇತುಭೂತಂಗಳುಮಪ್ಪ . . . ಒಳ್ಗನಸನಂಬಿಕೆ ಕಂಡು (ಶಾಂತಿಪು. ೯-೨೦೮ ವ); ಚರಿತಪುರಾಣದೊಳೊಂದೆನೆ ಬರೆದರ್ಬರದಿರ್ಕಿದ ತ್ರಿಷಷ್ಟಿ ಶಲಾಕಾಪುರುಷರ ಪುರಾಣಮಂ ಕವಿಪರಮೇಶ್ವರರಂತು ಜಗಕೆ ನೋಂತರುಮೊಳರೆ (ಚಾವುಂಪು. ೨): ಜೈನಪುರಾಣಗಳಲ್ಲಿ ಪ್ರಸಿದ್ಧರಾಗಿರುವ ಅರುವತ್ತುಮೂವರು ಶಲಾಕಾಪುರುಷರು ಜನ್ಮವೆತ್ತಿ . . . ಜಗತ್ತನ್ನು ದಿಗ್ಭ್ರಮೆಗೊಳಿಸುತ್ತಾರೆ (ಭಾರದ. ೧೬೨). [ಸಂ.]

**ಶಲಾಕೆ** (ನಾ). ೧. ಚೂಪಾದ ಒಂದು ಬಗೆಯ ಆಯುಧ; ಈಟಿ ; ಶಲ್ಯ : "ಆ ಶಲಾಕೆಯಲಿ ಕೈದುವಿನಲ್ಲಿ ಸಂದ ಶಲ್ಯಮದೆಂಬುದು" (ಮಂಗರಾ. ೧೪೩-೨೩). ೨. ಲೋಹದ ತೆಳ್ಳನೆಯ ಕಂಬಿ, ಮರದ ಕೋಲು ಮುಂತಾದುವು : ವೈಡೂರ್ಯದಂಡಮುಕ್ತಾಮಣಿಜಾಲಾಲಂಕೃತರತ್ನಶಲಾಕಾಶತಕಾಂಚನ ಕುಂಭಬಿಂಬ ರಜತಚ್ಛದಚ್ಛತ್ರವಿಚಿತ್ರಜಿನೇಂದ್ರಪ್ರತಿಕೃತಿಪ್ರಕೀರ್ಣಮುಂ (ಆದಿಪು. ೧-೪೯ವ); ಶಶಿಲೇಖೆಯೆನಲ್ ಕರ್ಪೂರಶಲಾಕೆಯೆನಲ್ ವಿಳೋಚನೋತ್ಸವಮಂ ಮಾಡಿ . . . ಭುವನಮಂ ಸೋಲಿಸಿದಳ್ (ಪಂರಾಮಾ. ೪-೩೦). ೩. ಚೂಪುತುದಿಯುಳ್ಳ ಗರಿಕೆ, ಮೂಳೆ, ಸೂಜಿ ಮುಂತಾದುವು. ೪. ಮೂಳೆ ; ಎಲುಬು. ೫. ಒಂದು ಬಗೆಯ ಪಕ್ಷಿ; ಶಾರಿಕೆ. ೬. ಹೂವಿನ ಮಧ್ಯದಲ್ಲಿರುವ ತಂತು: ಎಲೆಯ ಮಧ್ಯನಾಳವು ಎಲೆಯ ತುದಿಯಿಂದ ಮುಂದಕ್ಕೆ ಬೆಳೆದು ಶಲಾಕೆಯಾಗುವುದು (ಸಸ್ಯಶಾ. ೬೧). [ಸಂ. ಶಲಾಕಾ]

**ಶಲಾಟು** (ಗು). ೧. ಎಳೆಯದಾದ ; ಬಲಿಯದ. (ನಾ). ೨. ಎಳೆಯ ಕಾಯಿ; ಹೀಚು; ಮಿಡಿ : ಅಂಕುರಪಲ್ಲವದಳಕೋರಕಕುಸುಮಶಲಾಟುಫಲ ಪಕ್ವಫಲಗಳ ಪಂಕ್ತಿಗಳುಂ (ವಿವೇಕ. ೨೨೭) ; ವಿವಿಧಾಮೃತಾನ್ನ ದೇವಾನ್ನ ದಿವ್ಯಾನ್ನದಿಂ ನವಭಕ್ಷ್ಯಘೃತ ಬಹುಶಲಾಟುಶಾಕಂಗಳಿಂ ತವೆ ತೃಪ್ತಿಪಡಿಸಿ (ರಾಘಚ. ೨-೫೦). ೩. ಬಿಲ್ವಮರ. ೪. ಒಂದು ಬಗೆಯ ಗಡ್ಡೆ. ೫. ಒಣಗಿದ ಹಣ್ಣು : (ಕಿ). [ಸಂ.]

**ಶಲಾಟುಕ** (ನಾ). = ಶಲಾಟು ೨ : "ಅಂಗುಲಿಪ್ರಹರಣ ಶಲಾಟುಕಂಗಳೋಳ್ಮಿಡಿಯೆನಿಕ್ಕುಂ" (ಶಬ್ದಮಂ. ೯೩). [ಸಂ.]

**ಶಲೆ** 'ಸೆಲೆ$_4$' ನೋ.

**ಶಲ್ಕ** (ನಾ). ೧. ತುಂಡು ; ಚೂರು. ೨. ಮರದ ತೊಗಟೆ ; ಚೆಕ್ಕೆ : "ವಲ್ಕಲಮುಂ ಶಕಲಮುಮವು ಶಲ್ಕಂಗಳ್" (ವಸ್ತುಕೋ. ೧೨೪-೩೯); ಪಗಲುಳ್ಕಮುಳ್ಕುವಂದದಿನೊಗೆವ ಗದಾಶಲ್ಕಮುಳ್ಕೆ . . . ಗದಾಹವಮಗುರ್ವುಮದ್ಭುತಮುಮಾಯ್ತು ಕುರುಪಾಂಡವರಾ (ಗದಾಯು. ೮-೧೨); ಕಾಮಿನೀಜನಂ ಅಂತು ಪೊಕ್ಕು ಶತಪತ್ರಸೂತ್ರಂಗಳೊಳಂ ರಂಭಾವಲ್ಕಲಶಲ್ಕಂಗಳೊಳಂ ಶೀರ್ಣನಾಳಿಕೇರಪರ್ಣಂಗಳೊಳಂ ಅಮರ್ಕೆಯುಂ ಪೋಲ್ಕೆಯುಂ ಒಲ್ದುಂ ಚೆಲ್ವುಮಾಗೆ (ಚಂದ್ರಪ್ರ. ೭-೧೧೫ ವ). ೩. ಕೆಲವು ಬಗೆಯ

ಕೀಟಗಳ ಮೈಮೇಲಿರುವ ಚಿಪ್ಪು: ಚರ್ಮದ ಮೇಲಿರುವ ಬಿರುಗೂದಲು, ಮುಳ್ಳು, ಕೂದಲು ಮತ್ತು ಶಲ್ಕಗಳು . . . ಸ್ವಾಭಾವಿಕಶತ್ರುಗಳಿಂದ ರಕ್ಷಿಸುತ್ತವೆ (ಕೀಟಜೆ. ೨೦). [ಸಂ.]

**ಶಲ್ಕಿ** (ನಾ). ಮೀನು : ''ಮೀನಂ ಝಷಂ ತಿಮಿ ವಿಸಾರಮಾ ಶಲ್ಕಿ . . . ಮತ್ಸ್ಯಮೆನೆ ಮೀನ್ಗೆ ನಾಮಂ'' (ಮಂಗರಾ. ೧೨೦-೬). [ಸಂ. ಶಲ್ಕಿನ್]

**ಶಲ್ಮಲಿ** (ನಾ). ಒಂದು ಬಗೆಯ ಮರ ; ಬೂರುಗ : ''ಪಿಚ್ಛಿಲಾ . . . ಶಲ್ಮಲೀ — ೫ ಬೂರುಗದ ಗಿಡ, ಚಿಕಮುಕ್ಕೀ ಹತ್ತೀಗಿಡ'' (ಸಿದ್ಧಾಂತಿ. ೧೨೨). 'ಶಾಲ್ಮಲಿ' ಪರಾ. [ಸಂ. ಶಲ್ಮಲೀ]

**ಶಲ್ಯ₁, ಶಲ್ಯೆ, ಶಲ್ಲ, ಸಲ್ಲೆ, ಸೆಲ್ಲೆ, ಸೆಲ್ಲೆಯ₁** (ನಾ). ತೆಳುವಾದ ಹೊದೆಯುವ ವಸ್ತ್ರ; ಉತ್ತರೀಯ : ನೀನಿಲ್ಲಿಯೇ ನಿಲ್ಲು ನಿಲ್ಲೆಂದು ಬಿಳಿಯ ಶಲ್ಯಮಂ (ಸೌಗಂಧಿ. ೧೯೩-೬) : ಅವರ ಅಂಗಿ ಮುಂಡಾಸು ಶಲ್ಯ ಬಣ್ಣ ಬಣ್ಣದ ಚಣ್ಣ ನೋಡಿದರೇ ಹೇಳಿಬಿಡಬಹುದು (ತುಂಗಭ. ೩) : ಹೆಗಲ ಮೇಲೊಂದು ಶಲ್ಯ ಹೊದ್ದಿದ್ದ (ದೂಪಟ್ಟಿ. ೧೦). **ಶಲ್ಯೆ** : ಹೊದೆಯಲು ಜರತಾರಿಶಲ್ಯೆ . . . ಎಂದು ನಿಷ್ಕರ್ಷೆ ಯಾಯಿತು (ರಾಯಕ. ೪೩). **ಶಲ್ಲೆ** : ಮೇಲೆ ಹೊಂಬಣ್ಣದ ಶಲ್ಲೆಯನ್ನು ಹೊತ್ತುಕೊಂಡಿದ್ದಳು (ಮುಂಬಯಿ. ೫-೨೦೦). **ಸಲ್ಲೆ** : 'ಸಲ್ಲೆವಿಕ್ಕು' ಪರಾ. **ಸೆಲ್ಲೆ** : ಕೆಂಡಂಗಳಂ ದಹಿಸಿ ಸೆಲ್ಲೆ [ಪಾಠಾಂ. ಸೇಲೆ]ಯೊಳು ಬಿಗಿದು ಕಟ್ಟಿ (ಗುರುಚಾ. ೧೦-೪೧) : ಮೋಡವೆಂಬ ಸೆಲ್ಲೆಯನ್ನು ತಲೆಗೆ ಸುತ್ತಿಕೊಳ್ಳುತ್ತೇನೆ (ಮುಂಬಯಿ. ೩-೨೭). **ಸೆಲ್ಲೆಯ** : ''ಸೆಲ್ಲೆಯ — ಹೊದಿಕೆ ; ಮುಸುಕು ; ಮೇಲುದು ; ಸೆರಗು; ಒಲ್ಲಿ'' (ಕಂಸುಹು. ೯೨). [ದೇ. ॥ ತುಳು. ಶಲ್ಯ, ಶಲ್ಲೆ. ತೆಲು. ಸೆಲ್ಲ. / ಸಂ. ಚೇಲ]

**ಶಲ್ಯ₂** (ನಾ). ೧. ಈಟಿ; ಬರ್ಜಿ : ''ಶಲಾಕೆಯಲಿ ಕೈದುವಿನಲ್ಲಿ ಸಂದ ಶಲ್ಯಮದೆಂಬುದು'' (ಮಂಗರಾ. ೧೪೩-೨೩) ; ಶರಣತತಿ ತಮ್ಮಿಚ್ಛೆಯೆಲ್ಲೆಲ್ಲಿಯುಂಟಲ್ಲಿಗೆಯ್ದಿದರುಯೆಂದುಸುರೆ ಶಲ್ಯವೆರ್ದೆಯಲ್ಲಿ ಮೂಡಿದ ಮಾಳ್ಕೆ ಹಾ ಬಸವ . . . ಬಸವ ಬಯಲಾದೆಯಾ ಎಂದು ಅಳಲಿ ಗೀತವ ಪಾಡಲು (ಗುರುಚಾ. ೨-೩೬) ; ಈ ಚಿಂತೆಯು ಭಯಂಕರವಾದ ಶಲ್ಯದಂತೆ ನನ್ನ ಹೃದಯದಲ್ಲಿ ನಟ್ಟುಕೊಂಡು ಯಾತನೆ ಕೊಡುತ್ತಿದೆ (ವಚಭಾ. ೨೯). ೨. (ಸೂಜಿ, ಕೊಂಡಿ, ಮುಳ್ಳು, ಮೊಳೆ ಮುಂತಾದ) ಚೂಪಾದ ಮೊನೆಯುಳ್ಳ ವಸ್ತು : ಇದು ಸಮಸ್ತಶಾಬ್ದಿಕಜನಮನೋಜನಿತಶಬ್ದಸಂದೇಹಶಲ್ಯಚಾರುಚುಂಬ ಕಾಯಮಾನಾನೂನ ಕರ್ಣಾಟಕಲಕ್ಷಣಶಿಕ್ಷಾಚಾರ್ಯ ಸುಕವಿಕೇಶಿರಾಜವಿರಚಿತಮಪ್ಪ ಶಬ್ದಮಣಿದರ್ಪಣದೊಳ್. . . ಸಂಪೂರ್ಣಂ (ಶಮದ. ೩೨೨ ವೃತ್ತಿ). ೩. ಮೂಳೆ; ಎಲುಬು : ಅಡಗಿನ ತೊಲ ನೆತ್ತರ ಮಿದುಳ್ಗಳ ಶಲ್ಯದ ಪುಂಜಮೊತ್ತಿ ಬಂದಡಸುವ ವಾತಪಿತ್ತಕಫದೋಷಸಮೂಹದೆ ಪತ್ತಿ ನಿಲ್ಪುದು . . . ಈಯೊಡಲು (ಜೀವಸಂ. ೧೨೯-೨೦); ಅಲ್ಲಿಂ ಮುಂದಕೆ ನಡೆಯುತ್ತಿರ್ಪೆಡೆಯಲ್ಲಿ ಶಲ್ಯದೊಳ್ಕೆಳೆ ಸೋರಲ್ ಬಿತ್ತರದಿಂದದಚೊಳ್ ಭೂಪೋತ್ತಮನೊಗೆದಂ ಪ್ರತಾಪಿ ಶಲ್ಯನೆನಿಪ್ಪಂ (ಧರ್ಮಪ. ೩-೬೩). ೪. ಮುಳ್ಳುಹಂದಿ : ''ಶ್ವಾವಿತ್, ಶಲ್ಯ: — ೨. ಮುಳ್ಳುಹಂದಿಯ ಹೆಸರುಗಳು'' (ಸಿದ್ಧಾಂತಿ. ೧೫೪). ೫. ಆವರಣ ; ಬೇಲಿ. ೬. ಮಹಾಭಾರತದಲ್ಲಿ ಉಲ್ಲೇಖಿಸಿರುವ ಮದ್ರದೇಶದ ರಾಜ; ಮಾದ್ರಿಯ ಅಣ್ಣ : ಶಲ್ಯನನಂದಶಲ್ಯನಂ ಬಗವವೊಲೇಳಿದಂ ಬಗದು ದಂತಿಯನಾಗಡ ತೋಚೆ ಕೊಟ್ಟು ತೊಟ್ಟಗೆ ರಥಮಂ ಪಡಲ್ವಡಿಸಿ ಪೊಟ್ಟನರಾತಿಯನಸ್ತ್ರಕೋಟಿಯಿಂ (ಪಂಪಭಾ. ೧೦-೧೧೧): ರವಿಜ ಗುರುಸುತ ಶಲ್ಯ ಕಲಶೋದ್ಭವರು . . . ಅವನಿಪಾಲನ ಕಂಡರಂದೇಕಾಂತಭವನದಲಿ (ಕುಮಾಭಾ. ೧-೨); ಸುಯೋಧನ ಶಲ್ಯ ಮುಖ್ಯಬಾಂಧವರನೀಡಾಡಿದೆವು ಬದುಕಲೇ ಕಿನ್ನಿಳೆಯೊಳು (ಚಿಮಭಾ. ೨-೧೭). ೭. ತೊಂದರೆ ; ಕಷ್ಟ. ೮. ಒಂದು ಬಗೆಯ ಮುಳ್ಳಿನ ಗಿಡ; ಮಂಗಾರೆಗಿಡ : ''ಪಿಂಡೀತಕಃ . . . ಶಲ್ಯಃ, ಮದನಃ — ೬ ಮಂಗಾರೆಗಿಡದ ಹೆಸರು'' (ಸಿದ್ಧಾಂತಿ. ೧೨೪). ೯. ಒಂದು ಬಗೆಯ ನರಕ: ಸಕಲ ಶಲ್ಯಸಿಂಹಗಜಾನನವ್ಯಾಘ್ರಮೆಂಬೈದು ಮಂತ್ರಿನರಕಂಗಳ ಮೇಳದಲ್ಲಿ ಮಹಾ ಚಂಡವೆಂಬರಸುನರಕವಿಹುದು (ವಿವೇಕ. ೧೮೦). ೧೦. ಪಾಪ. ೧೧. ವಿಷ. ೧೨. ತೆಗಳಿಕೆ. ೧೩. ಬಿಲ್ವವೃಕ್ಷ. ೧೪. ನೀರು. ೧೫. ಬಡಕಲು ದೇಹ. ೧೬. ತುಂಡು ; ಚೂರು : ''ಶಲಾಕೆ ಶಸ್ತ್ರಮುಂ ವಾರಿ ಕೃಶಾಂಗ ಪಾರ್ಥಿವವಿಭೇದಲವಂಗಳು ಶಲ್ಯಶಬ್ದಂ'' (ನಾನಾರ. ೧೫೪). ೧೭. [ಜೈನ] ಮುಳ್ಳಿನಂತೆ ಬಾಧೆಯನ್ನುಂಟುಮಾಡುವ ಮೋಹ : ಮಿಥ್ಯಾಶಲ್ಯಂ ಮಾಯಾಶಲ್ಯಂ ನಿದಾನಶಲ್ಯಮೆಂಬ ಮೂಱುಂ ಶಲ್ಯಂಗಳಿಂ ಪಿಂಗಿದಂ (ಧರ್ಮಾಮೃ. ೫-೧೩೧); ಶಲ್ಯಂಗಳೆರ್ದೊಡಂ ವ್ಯಕಲ್ಯಕ್ಕೆಡೆಗುಡದೆ ಧೃತಿಯನವಳಂಬಿಸಿ ನಿಶ್ಯಲ್ಯೋವ್ರತಿಯೆನಿಸಿದ ವಾತ್ಸಲ್ಯಪರಂ ಪರಮತತ್ತ್ವಮಂ ಭಾವಿಸಿದಂ (ಪಾರ್ಶ್ವಪು. ೧೨-೪೯). 'ಶಲ್ಯತ್ರಯ' ಪರಾ. ೧೮. (ಆಲಂ) ನೋವು; ವ್ಯಥೆ. ೧೯. ಹಿಂಸೆಪಡಿಸುವವನು; ಉಪದ್ರವಕಾರಿ : ಆ ಶಲ್ಯರುಗಳ ಮಾತ ಕೇಳಿ ಪಲ್ಲುದಿನುತ ನಿದ್ರಾವರಣೇಯವಹ ಗೆಲ್ಲರಾಜರು ಬಂದರಂದು (ತ್ರಿಪುಸಾಂ ೧೬-೧೭೫). [ಸಂ.]

**ಶಲ್ಯಕ** (ನಾ). ೧. ಮುಳ್ಳುಹಂದಿ : ''ಶಲಲಃ, ಶಲ್ಯಕಃ, ಶ್ವಾವಿತ್ — ಈ ೩ ಎಯ್'' (ಪಲಾಯು. ೩೯-೮೦). ೨. ಈಟಿ. ೩. ಮುಳ್ಳು. ೪. ಬೇಡ ; ವ್ಯಾಧ. [ಸಂ.]

**ಶಲ್ಯಚಿಕಿತ್ಸೆ** (ನಾ). ಆಯುಧವನ್ನು ಬಳಸಿ ಮಾಡುವ ಚಿಕಿತ್ಸೆ ; ಶಸ್ತ್ರಚಿಕಿತ್ಸೆ: ದಿವೋದಾಸನೆಂಬ ಧನ್ವಂತರಿ ಸುಶ್ರುತನನ್ನೇ ಮುಂದಾಗಿಟ್ಟುಕೊಂಡು ಔಷಧೇನವ, ವೈತರಣ, ಔರಭ್ರ ಮುಂತಾದವರಿಗೆ ಶಲ್ಯಚಿಕಿತ್ಸೆಯನ್ನೇ ಮುಖ್ಯವಾಗಿ ಉಪದೇಶಿಸಿದ (ಕವಿಕೋ. I. ೮೫೧). [ಸಂ. ಶಲ್ಯಚಿಕಿತ್ಸಾ]

**ಶಲ್ಯತಂತ್ರ** (ನಾ). ೧. ಶಸ್ತ್ರಚಿಕಿತ್ಸೆಗೆ ಸಂಬಂಧಿಸಿದ ಆಯುರ್ವೇದದ ಒಂದು ಭಾಗ : ದೇಹಾರೋಗ್ಯವನ್ನುಂಟುಮಾಡತಕ್ಕ ಆಯುರ್ವೇದವು ಶಲ್ಯತಂತ್ರ ಶಾಲಾಕ್ಯತಂತ್ರ ಕಾಯಚಿಕಿತ್ಸೆ ಭೂತವಿದ್ಯೆ . . . ವಾಜೀಕರಣತಂತ್ರಗಳೆಂಬ ಎಂಟುಭಾಗಗಳುಳ್ಳದ್ದಾಗಿದೆ (ಸುಜ್ಞಾಚಂ. ೯೪). ೨. ತಂತ್ರಶಾಸ್ತ್ರದಿಂದ ಸಿದ್ಧಿಯಾಗುವ ಮಂತ್ರ; ತಾಂತ್ರಿಕಮಂತ್ರ: ಶಾಬರತಂತ್ರ ಶಾಕಿನೀತಂತ್ರ ಡಾಕಿನೀತಂತ್ರ ಕಟಿಮಾರತಂತ್ರ ಶಲ್ಯತಂತ್ರ . . . ವಚನತಂತ್ರಾದಿ ತಾಂತ್ರಿಕಸಿದ್ಧಿಮಂತ್ರಂಗಳಂ . . . ಉಪದೇಶ ಅನುಷ್ಠಾನ ಪರೀಕ್ಷೆಗಳಿಂ ವಿವೇಕಿಸಿ ತಿಳಿದಿರಲಕ್ಕುಂ (ವಿವೇಕ. ೮೭). [ಸಂ.]

**ಶಲ್ಯತ್ರಯ** (ನಾ). [ಜೈನ] ಮಾಯಾಶಲ್ಯ, ಮಿಥ್ಯಾಶಲ್ಯ ಮತ್ತು ನಿದಾನ ಶಲ್ಯಗಳೆಂಬ ಮೂರು ಬಗೆಯ ಮೋಹಗಳು : ಪರಮದಯಾತತ್ಪರ ನೆನಿಸಿದ ಶಲ್ಯತ್ರಯವಿರಹಿತನೆರಡನೆಯ ನೆಲೆಯವಂ ತಾಂ ವ್ರತಿಕಂ (ಸುಕುಮಾ. ೬-೨೭); ಗತಗೌರವತ್ರಯಂ ನಿರ್ಜಿತದಂಡತ್ರಯನಪೇತಶಲ್ಯತ್ರಯಂ . . . ಅನಾಪ್ತಗುಪ್ತಿ ತ್ರಿತಯಂ (ಪುಷ್ಪಪು. ೧೪-೧೫). [ಸಂ.]

**ಶಲ್ಯವಿದೂರ** (ನಾ). [ಜೈನ] ಮಿಥ್ಯೆ, ಮಾಯೆ ಮತ್ತು ನಿದಾನಗಳೆಂಬ ಮೂರು ಬಗೆಯ ಮೋಹಗಳನ್ನು ತೊರೆದವನು: ಶಲ್ಯವಿದೂರ ಬಂಕರಸನಂಕದ ಮಾಚೆಯತಂದೆ . . . ಬರೆದಪಂ ಬುಧಮಾಧವನೀ ಪ್ರಬಂಧಮಂ (ಪುಷ್ಪಪು. ೧೪-೫೭). [ಸಂ.]

**ಶಲ್ಯೆ** 'ಶಲ್ಯ₁' ನೋ.

**ಶಲ್ಲಕಿ** (ನಾ). ೧. (ಆನೆಗಳಿಗೆ ಪ್ರಿಯವಾದ) ಒಂದು ಬಗೆಯ ಮರ; ಆನೆಬೇಲ; ತದಕು : ''ಗಜಭಕ್ಷ್ಯಾ, ಸುವಹಾ, ಸುರಭಿಃ . . . ಶಲ್ಲಕಿ, ಹ್ರಾದಿನಿ — ೮ ತದುಕಿನ ಗಿಡದ ಹೆಸರು, ಆನೇಬೇಲ'' (ಸಿದ್ಧಾಂತಿ. ೧೪೦). ೨. ಮುಳ್ಳುಹಂದಿ. [ಸಂ. ಶಲ್ಲಕೀ]

**ಶಲ್ಲೆ** 'ಶಲ್ಯ₁' ನೋ.

**ಶಲ್ಲೆಯ** 'ಸೆಲ್ಲೆಹ' ನೋ.

**ಶಲ್ಲೆಹ** 'ಸೆಲ್ಲೆಹ' ನೋ.

**ಶವ** (ನಾ). ೧. ಹೆಣ ; ಕಳೇಬರ : ಶವಶೃಂಗಾರಂಗೆಯ್ಯಲ್ ಭವನಕ್ಕಾ ಕಾಮಪಾಲಸಚಿವನ ನಿಜದೇಹವನುಯ್ಯೋವರಿಯೊಳ್ ಸಂತವಿಟ್ಟು ಮನ್ಮಾರ್ಗಮಂ ನಿರೀಕ್ಷಿಸುತಿರ್ದಳ್ (ದಶಕು. ೯-೧೦೩) ; ಕರ್ಣಕುಂಡಲಗಳಿಗೆ ಬದಲಾಗಿ ಬಲಗಿವಿಗೆ ನೇತಾಡುತ್ತಿರುವ ಮನುಷ್ಯನ ಶವವೂ ಎಡಗಿವಿಗೆ ಗೂಬೆಯ ಚಿತ್ರವೂ . . . ಕೆತ್ತಲಾಗಿದೆ (ಸೊಳಂಬ. ೧೦೭). ೨. ನೀರು.

**ಶವದ ಪೆಟ್ಟಿಗೆ** = ಹೆಣವನ್ನು ಇಡುವ ಪೆಟ್ಟಿಗೆ : (Coffin. ಪಾರಿಸಿ. ೧೭). [ಸಂ.]

**ಶವಪರೀಕ್ಷೆ** (ನಾ). (ಆತ್ಮಹತ್ಯೆ, ಕೊಲೆ ಮುಂತಾದ ಸಂದರ್ಭಗಳಲ್ಲಿ) ಸಾವಿನ ಕಾರಣವನ್ನು ಕಂಡುಹಿಡಿಯಲು ಮಾಡುವ ಹೆಣದ ವೈದ್ಯಕೀಯಪರೀಕ್ಷೆ;

ಮರಣೋತ್ತರ ದೇಹಪರೀಕ್ಷೆ : ಸ್ಮಿಲ್ಕೋವ್‌ನ ಶವಪರೀಕ್ಷೆಯಿಂದ . . . ಅವನು ವಿಷಪ್ರಾಶನದ ಪರಿಣಾಮವಾಗಿ ತೀರಿಕೊಂಡಿದ್ದನೆಂಬ ಅಂಶ ಸ್ಪಷ್ಟವಾಗಿತ್ತು (ಪುನರು. ೪೩). [ಸಂ. ಶವಪರೀಕ್ಷಾ]

**ಶವವಾಹಕ** (ನಾ). ಹೆಣವನ್ನು ಹೊರುವವನು : ಮೃತನ ಸಂಸಾರಕಥೆ ಶವವಾಹಕರಿಗೇಕೆ? (ಮಂಕುಕ. ೭೧೭). [ಸಂ.]

**ಶವಸಂಪುಟ** (ನಾ). ಹೆಣವನ್ನು ಇಟ್ಟು ಹೂಳುವ ಪೆಟ್ಟಿಗೆ: "ಹೆಣವಿಟ್ಟು ಹೂಳುವ ಪೆಟ್ಟಿಗೆ: ಹೆಣದ ಪೆಟ್ಟಿಗೆ, ಶವಸಂಪುಟ" (Coffin. ೧೦೮೫). [ಸಂ.]

**ಶವಸಂಸ್ಕಾರ** (ನಾ). ಮರಣಾನಂತರ ದೇಹವನ್ನು ಒಪ್ಪಮಾಡುವುದು; ಹೆಣವನ್ನು ಹೂಳುವ ಅಥವಾ ದಹನ ಮಾಡುವ ಕ್ರಿಯೆ : ನೀನು ಸತ್ತಾಗ ನಿನ್ನ ಶವಸಂಸ್ಕಾರ ಮಾಡಲು ಹಿಂದೂ ಮುಸ್ಲಿಮರಿಬ್ಬರೂ ನನಗೆ ಬೇಕು, ತನಗೆ ಬೇಕು ಎಂದು ಅದನ್ನು ಕೇಳುವಂತೆ ಬಾಳು ನಡೆಸು (ಭಾರದ. ೩೨೮). [ಸಂ.]

**ಶವಾಲು** (ನಾ). ಮಹಮ್ಮದೀಯರ ಹಿಜರಿವರ್ಷದ ಹತ್ತನೆಯ ತಿಂಗಳು: ಅದಕ್ಕೆ ದರಜವಾಬಾಗಿ ಶವಾಲುತಿಂಗಳು ೫ನೇ ತಾರೀಕಿನಲ್ಲು (ರಾಜೇಂದ್ರ. ೧೨೬). [← ಅರ. ಹಿಂ. ಶವ್ವಾಲ್; ಮರಾ. ಸವಾಲ್]

**ಶವಾಸನ** (ನಾ). [ಯೋಗ] ಎಚ್ಚರದಿಂದಿದ್ದರೂ ದೇಹ ಮತ್ತು ಮನಸ್ಸುಗಳಿಗೆ ವಿಶ್ರಾಂತಿಯನ್ನೂ ಲವಲವಿಕೆಯನ್ನೂ ಉಂಟುಮಾಡುವ, ನೆಲದಲ್ಲಿ ಬೆನ್ನ ಮೇಲೆ ಉದ್ದಕ್ಕೂ ಹೆಣದಂತೆ ಮಲಗುವ ಒಂದು ಬಗೆಯ ಆಸನ : ಶವಾಸನದಲ್ಲಿ ನನಗೆ ಸುಖವೇನೂ ಕಾಣಲಿಲ್ಲ (ಗಾಳಿಪ. ೫೮). [ಸಂ.]

**ಶ್ವಾಪದ** (ಗು). ೧. ಕಾಡುಮೃಗಕ್ಕೆ ಸಂಬಂಧಿಸಿದ. (ನಾ). ೨. ಕಾಡುಮೃಗ; ಕ್ರೂರಪ್ರಾಣಿ : ಬುಧಲಕ್ಷನಂ ಬಾಲಿಶ ದುರಾತ್ಮ ಕಾನನಕೆಂತು ಕಳಿಪುವೆಂ ಶವ್ವಾ [ಪಾಠಾಂ. ಸರ್ವಾ] ಪದಂಗಳೆಡೆಗೆ (ಪಂಚಾರಾ. ೨-೭-೪); ಕರುಳ ಖಂಡಂಗಳಂ ಧರಣಿಯೊಳಗುಳ್ಳಖಿಳತರುಣಪೈಶಾಚಶವ್ವಾಪದಂಗಳು ತಿಂದು ಸುರಿವ ರಕುತವನೀಂಟ ಸಂತೋಷಕರಮಾಗಿ ಪೊಗಳಿ ಪಾಡುವುವು (ಪಂಚಾರಾ. ೩-೧೦-೬). [< ಸಂ. ಶೌಪಾಪದ]

**ಶಶ** (ನಾ). ೧. ಮೊಲ : "ಮೊಲಂ ಶಶ[ಪಾಠಾಂ. ಶಶಕ]ಮೆನಿಕ್ಕುಂ" (ಮಂಗರಾ. ೪೮-೮); ಹರಿಣ ಶಶ . . . ಕೇಕಿಗಳಂಜುತ್ತಿರದೆ ಪವನೇಂದು . . . ಷಣ್ಮುಖರಂ ಮಿಗೆ ಸಾರ್ದುಳಿದವು (ಹಮ್ಮೀ.ರ. ೪ ೬೩). ೨. ಚಂದ್ರನಲ್ಲಿರುವ ಮೊಲದ ಆಕಾರದ ಕಲೆ, – ಗುರುತು. ೩. ಲೋಧ್ರವೃಕ್ಷ. ೪. ಜಿಂಕೆ. ೫. [ಕಾಮಶಾ] ಪುರುಷರಲ್ಲಿ ಒಂದು ಪ್ರಕಾರಕ್ಕೆ ಸೇರಿದವನು : ಮುನಿವರ ವಾತ್ಸ್ಯಾಯನಮತದೊಳು ನೆಟ್ಟನೆ ಶಶ[ಪಾಠಾಂ. ಶಿ]ವೃಷ ಹಯರೆಂದೆನಿಪ ಮನುಜರ್ ಮೂದೆಜನೆನಿಸುವರವರೊಳು . . . ಕಿಱುಕಾಮದ ಸುಖದೆಱಕದ ನಿದ್ರೆಗೆ ತೆಱಪೀಯದ ಮಿಗೆ ಪೂಗಂಪು ತುಱುಗಿದ ತನುಜಲದೊಳ್ ಪಾಱಂಗುಲದುಱುವ ಧ್ವಜದವನೇ ಶಶನು (ಜನವ. ೪-೧); ಶಶ ವೃಷ ಹಯರೆಂಬ ತ್ರಿವಿಧಪರಿಮಾಣಪುರುಷರಿಂ (ವಿವೇಕ. ೨೨೮). ೬. ಗಾತ್ರಪ್ರಮಾಣಕ್ಕನುಗುಣವಾಗಿ ವಿಂಗಡಿಸಿದ ಮನುಷ್ಯನ ಐದು ವರ್ಗಗಳಲ್ಲಿ ಒಂದು: ವರಾಹಮಿಹಿರನು ಮನುಷ್ಯರನ್ನು ಶರೀರದ ಅಳತೆ ಆಕಾರದ ಮೇಲೆ, ಐದು ಜಾತಿಗಳನ್ನಾಗಿ ವಿಂಗಡಿಸುತ್ತಾನೆ. ಹಂಸ, ಶಶ, ರುಚಕ, ಭದ್ರ, ಮಾಲವ್ಯ – ಎಂಬುವೇ ಈ ಐದು ಜಾತಿಗಳು (ಭಾರದ. ೫೧೭). [ಸಂ.]

**ಶಶಕ** (ನಾ). = ಶಶ ೧ : ಮುನಿಮುಖ್ಯರ ಪಕ್ಕದೊಳಾಗಳುಮಗಲದ ಕರಿರುರುಹರಿಣಶಶಕ ಸಾರಂಗಮ ಮೊದಲಾದ ಮೃಗಂಗಳೊಡನೆ ಬದ್ಧವೈರಮಂ ಪತ್ತುವಿಟ್ಟು (ಪಂಚತಂ. ೧೯೯-೨೦) ; ಬಸುಱ್ ಬೇವ ಶಶಕ ತೊಡೆ ಬೇವ ಹುಲ್ಲೆ ಬಾಲಂ ಬೇವ ಕೋಣ . . . ದೆಸೆಗೆಟ್ಟು ಕವಿದವು ಹರಿಶ್ಚಂದ್ರಭೂಪತಿಯ ಮೇಲೆ (ಹರಿಕಾ. ೧೦-೯). [ಸಂ.]

**ಶಶಕರ್ಣ** (ನಾ). ೧. ಮೊಲದ ಕಿವಿ. ೨. ಮೊಲದ ಕಿವಿಯಂತೆ ಕಿವಿಯುಳ್ಳ ವ್ಯಕ್ತಿ : ವಿದಿಗ್ಗತದ್ವೀಪಸಂಸ್ಥಿತರ್ ಶಷ್ಕುಲಿಕರ್ಣರುಂ . . . ಲಂಬಕರ್ಣರುಂ ಶಶಕರ್ಣರುಂ ಅಪ್ಪರ್ (ತತ್ತ್ವಾಪ್ರ. ೧೪೮). [ಸಂ.]

**ಶಶಕವಲೆ** (ನಾ). (ಮೊಲವನ್ನು ಹಿಡಿಯುವ) ಒಂದು ಬಗೆಯ ಬಲೆ: ಹಾಸುವಲೆ ಕಣ್ಣವಲೆ . . . ಸುಲಭವಲೆ ನೀರುವಲೆ ಶಶಕವಲೆಯು (ರುಕ್ಮಾಂಗ. ೧೦-೯೯). [ಶಶಕ + ಬಲೆ]

**ಶಶಕಸರ್ಪ** (ನಾ). ಮೊಲವನ್ನು ತಿಂದ ಹಾವು ; "ಹೆಬ್ಬಾವು" (ತೂರರಾ. ಕೋಶ): ಗೂಱು ಮಸಗಿತು ಶಶಕಸರ್ಪನ ತೋಱಿಕೆಯ ರುಜೆಯಂತೆ ಚಲಿಸಿದವೇಱಿಳಿವ ಜೀವದಲಿ ಕೈಕಾಲುಸುರವಲ್ಲಭನ (ತೂರರಾ. ೬-೨೩-೧೭). [ಸಂ.]

**ಶಶಧರ** (ನಾ). ೧. ಚಂದ್ರ; ಶಶಿ: ಅರಮನೆಯೊಳರಸನಂಬರತಳದೊಳ್ ವರತಾರಾಪರಿಗತಶಶಧರನಂತೊಪ್ಪಿರೆ (ಕವಿರಾ. ೨-೧೦). ೨. ಕರ್ಪೂರ. [ಸಂ.]

**ಶಶಪುರುಷ** (ನಾ). = ಶಶ ೫ : ಕೆಂಪಾಗಿ ಅಗಲವಾಗಿ ಇರುವ ಕಣ್ಣುಗಳುಳ್ಳವನು. ಸಣ್ಣವಾಗಿ ಅಗಲವಾದ ಪಲ್ಲುಳುಳ್ಳವನು. ಬಟ್ಟಮೊಗಂ . . . ಅಲ್ಪಕಾಮಸುಖಂ ಶುಚಿವಂತಂ ಧನವಂತಂ ಬಿಳಿದಾಗಿ ಪರಿಮಳವುಳ್ಳ ಕಾಮಜಲಮುಳ್ಳವರು. ಕಾಂತಿಹರುಷಂಗಳುಳ್ಳವರು. ಅಭಿಮಾನಮುಳ್ಳವರು. ಆರು ಅಂಗುಲಪ್ರಮಾಣ ಲಿಂಗದವರು. ಈ ಲಕ್ಷಣಗಳುಳ್ಳವರು ಶಶಪುರುಷರುಗಳು (ಕಾಮಶಾ. ೨೧೩). [ಸಂ.]

**ಶಶಪ್ಲುತ** (ನಾ). [ಕಾಮಶಾ] ಒಂದು ಬಗೆಯ ನಖಕ್ಷತ : ಮೊಲೆದುದಿಯ ಬಳಿಯನಂಡಲೆದ್ದುದುಗುರನೊತ್ತಿ ನಿಲಿಸುತೊಂದಿಸಿ ಸೆಳೆದು ಬಿಡಲಂತದು . . . ಸಲೆ ಶಶಪ್ಲುತಮೆಂದು ಪೆಸರಾದುದು (ಜನವ. ೭-೪೧) ; ಪಂಚನಖಯೋಗ ದ್ವಂದ್ವಯೋಗ ಅರ್ಧಚಂದ್ರಕಮಂಡಲ ಮಯೂರಪ್ಲುತ ಶಶಪ್ಲುತ ಉತ್ಪಲವೆಂಬ ಸಪ್ತವಿಧ ನಖೋಪಕ್ಷತವಿಹಿತರಿಂ (ವಿವೇಕ. ೨೩೦). [ಸಂ.]

**ಶಶಲಕ್ಷ್ಮ** (ನಾ) . ಮೊಲದ ಚಿಹ್ನೆಯನ್ನು ಹೊಂದಿರುವವನು ; ಚಂದ್ರ : ಸಂಧಿಗಳುಂ ಕೆಲವೆಡೆಯೊಳ್ ಬಂದು ವಿರೂಪಂಗಳಾಗಿ ಸಮನಿಸೆ ಕವಿತಾಬಂಧನದೊಳಾಗೆ ದೋಷಾಬಂಧುಗೆ ಶಶಲಕ್ಷ್ಮದಂತೆ ಕಲೆಯಂ ತರ್ಕುಂ (ಕವಿರಾ. ೧-೯೮) ; ಶಶಲಕ್ಷ್ಮಂ ಮಂದನೊಳ್ ಮೇಣ್ ಮಹೀಜನೊಳೊಂದಿರ್ದೊಡೆ ಸೌಮ್ಯರೀಕ್ಷಿಸದೊಡಕ್ಕುಂ ಲಗ್ನಜಂ ಪೊಂದುಗುಂ (ಜಾತಕ. ೬-೪೨). [ಸಂ. ಶಶಲಕ್ಷ್ಮನ್]

**ಶಶಲಾಂಛನ** (ನಾ). = ಶಶಲಕ್ಷ್ಮ : ಶಶಲಾಂಛನನಿಂದಂ ದ್ವಾದಶದೊಳ್ ಬುಧ ಶುಕ್ರರಿರೆ ಬೃಹಸ್ಪತಿಯಿರೆ ತಾನೆ ಶುಭಗ್ರಹಗೃಹವೆನಿಸಿದ ದಶಮದೊಳುದು ನಾಥಜಾತದುರಿತವಿನಾಶಂ (ಜಾತಕ. ೭-೬). [ಸಂ.]

**ಶಶವಿಷಾಣ** (ನಾ). ಮೊಲದ ಕೊಂಬು, – ಕೋಡು ; P ಮೊಲಕ್ಕೆ ಕೊಂಬು ಇರುವುದು ಎಷ್ಟು ಅಸಂಭವವೋ ಹಾಗೆಯೇ ಅಸಂಭವ ವಿಷಯವನ್ನು ಹೇಳುವಾಗ ಬಳಸುವ ಒಂದು ಮಾತು: ಶಶವಿಷಾಣಂ ವಿಯತ್‌ಪುಷ್ಪದಂತಿಲ್ಲದುದೇ ಸತ್ಯಂ (ರಕ್ಷಾ.ಶ. ೬೨); ಹಡೆಯಬಹುದಾ ಶಶವಿಷಾಣವ . . . ನಿಮ್ಮ ಚಿತ್ತವ ಪಡೆವುದೆಂತೋ ದೇವ (ಕೌಶಿರಾ. ೪೩-೨೭). [ಸಂ.]

**ಶಶಶೃಂಗ** (ನಾ). = ಶಶವಿಷಾಣ : ನೀನುಂತೆ ಮುಂತಣೆಯದುಲಿವ ನೀಚೋಕ್ತಿಗಳವೆಲ್ಲಿಯುಂ ಸತ್ಯಮಾಗವು ಭಾವಿಸೆ ಸಂತತಂ ಶಶಶೃಂಗದಂತೆ ಮಿಥ್ಯಂಗಳಾಗಿಂತು ವರ್ತಿಸುತಿರ್ಕುಂ (ಅರಾಜ. ೩-೩-೫೨). [ಸಂ.]

**ಶಶಾಂಕ** (ನಾ). ೧. ಚಂದ್ರ : ಪರಾಕ್ರಮಧವಳಂಗೆ ಶಶಾಂಕವಿಶದಯಶಮೆ ತರಳ್ವುರುಳಿಗೊಂಡಂತಿರ್ದ ಶಂಖಮಂ ಬಾಸಣಿಗೆಗಳೆದು (ಪಂಪಭಾ. ೬-೩ ವ) ; ತಮ ಶಶಾಂಕನ ನುಂಗಲಾಱದೆ ಕ್ರಮದಲಾ ರೋಹಿಣಿಯ ನುಂಗಲು ಭ್ರಮಿಸಿ ಹರಿತಹವೋಲು ರಾವಣ ಮೈಥಿಲಿಯ ಬಳಿಗೆ ಆಮಮ ಹರಿದನು (ಕೌಶಿರಾ. ೩೭-೧೫). ೨. ಕರ್ಪೂರ. ೩. [ಛಂದ] ಒಂದು ಗುರು, ಎರಡು ಲಘುಗಳಿರುವ ಒಂದು ಗಣ ; ಭಗಣ: ಎಂಟುಗಣಂ ಧರಣಿ ಜಲಾಗ್ನಿ ಮರುದ್ವ್ಯೋಮ ರವಿ ಶಶಾಂಕೇಂದ್ರನಿಲಯಮಿವು ಗಣನಾಮಂ (ಛಂದೋಂಬು. ೧-೩೭). ೪. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: ಶಶಾಂಕ ಸೋಮಂ ಸುಧಾಂಶು . . . ಒಂದಱ ನಾಮಂ (ವ್ಯವಹಾ. ೯-೧). [ಸಂ.]

**ಶಶಾಂಕಕಿರಣಲೇಹ್ಯ** (ನಾ). ಔಷಧಿಗಾಗಿ ಬಳಸುವ ಒಂದು ಬಗೆಯ ಲೇಹ್ಯ : ಶಶಾಂಕಕಿರಣಲೇಹ್ಯಂ, – ಎಮ್ಮೆಹಾಲು ಸೇ. ಅನ್ನು ಮೃದ್ವಗ್ನಿಯಿಂದ ಒಂದು ಸೇರು ಸಕ್ಕರೆಗೂಡಿ, ಕಾಯಿಸಿ . . . ಶುಂಠಿ, ಜೀರಿಗೆ, ಶ್ರೀಗಂಧದ ಚಕ್ಕೆ, ಕರಿಜೀರಿಗೆ ಇವು ಪ್ರತ್ಯೇಕ ಗದ್ಯಾಣ ೪ ತೂಕವಂ ಚೂರ್ಣವ ಮಾಡಿ ಪಾಕದಲ್ಲಿ ಹಾಕಿ ಲೇಹ್ಯಪಾಕವಾಗಿ ಅಟ್ಟು (ಸಕಪ್ಪ. ೧೩೭). [ಸಂ.]

**ಶಶಾಂಕಜ** (ನಾ). ಚಂದ್ರನ ಮಗ ; ಬುಧ : ಶಶಿ ಕನ್ನೆಯೊಳಿರೆ ವೀಕ್ಷಿಸೆ ಶಶಾಂಕಜಾದಿತ್ರಯಂ ನೃಪಂ ಸೇನಾಪಂ ಕುಶಲನೆನಿಕ್ಕುಂ (ಜಾತಕ. ೨೦-೬). [ಸಂ.]

**ಶಶಾಂಕಧರ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಶಿವ : ಶ್ರೀಮತ್ಶಶಾಂಕಧರ ಸತ್ಕೋಮಳಪದಪದ್ಮ ಭೃಂಗನಪುರಿಪುಸಿಂಗಂ ವಾಮಶಿವದೇವಪುತ್ರಂ ಬಾಮಂ (ಎಕ V, ಮಂಜರಾ. ೪೫-೧; ಸು. 1030). [ಸಂ.]

**ಶಶಾಂಕಲೇಖೆ** (ನಾ). ಬಾಲಚಂದ್ರ ; ಎಳೆಯಚಂದ್ರ : ಜಾಂಬೂಳೆ ತಳ್ತ ಕೆಂಜಡೆಯ ಬಲ್ಮುಡಿ ತಾಳ್ದ ಶಶಾಂಕಲೇಖೆ ಭಾಳಾಂಬಕಮುಲ್ಲಸತ್ಫಣಿಪಕುಂಡಲಂ . . . ವಿರಾಜಿಸ ರಂಜಿಸಿದಂ ಮಾಹೇಶ್ವರಂ (ಶಬಶ. ೧-೭೪). [ಸಂ. ಶಶಾಂಕಲೇಖಾ]

**ಶಶಾಂಕವಂಶ** (ನಾ). ಚಂದ್ರನು ಮೂಲಪುರುಷನಾಗಿರುವ ಚಂದ್ರವಂಶ : ರಿಪುನಗರಂ ಕರಂ ವಿಜನವಾಗಿಯುವರ್ಜ್ಜುನರಾಜರಾಜಿತಂ ವಿಪುಳಶಶಾಂಕವಂಶ ಕನಕಾಳ್ಗುತವಂತದ ವಿಭ್ರಮಾನ್ವಿತಂ ಚಪಳಭುಜಂಗಭೀಮನಕುಳಾಶ್ರಯಮುದ್ಗತ ಪುಂಡರೀಕಮ್ (ಎಕ. XI, ದಾವಣ. ೪೪-೩೭; ಸು. 1180). [ಸಂ.]

**ಶಶಾಂಕಸೂನು** (ನಾ). = ಶಶಾಂಕಜ: ಶಶಾಂಕಸೂನು ಸಿತರೆಂಬೀಯಿರ್ವರುಂ ಕೇಂದ್ರಗೇಹದೊಳಿರ್ದಂದು ರಿಪು ತ್ರಿಲಾಭಗೃಹದೊಳ್ ಮಿಕ್ಕನ್ಯರಿರ್ದಂದು ಪುಟ್ಟಿದಮರ್ತ್ಯಂಗೆ ಚಿರಾಯು ಸಂಭವಿಸುಗುಂ (ಜಾತತಿ. ೮-೧೫). [ಸಂ.]

**ಶಶಾದನ** (ನಾ). ಮೊಲವನ್ನು ತಿನ್ನುವಂತಹುದು ; ಗಿಡುಗ : "ಶಶಾದನಃ, ಪತ್ರೀ, ಶ್ಯೇನಃ – ೩ ಗಿಡಗನ ಹಕ್ಕಿ" (ಸಿದ್ಧಾಂತಿ. ೧೫೭). [ಸಂ.]

**ಶಶಿ** (ನಾ). ೧. ಚಂದ್ರ : ಶನಿ ಘಟಮೃಗಕ್ಕೆ . . . ಶಶಿ ಕರ್ಕಿಗೆ ಭೌಮನಜಾಳಿಗೆ ರವಿ ಹರಿಗುಶನನುಕ್ಷತೌಳಿಗೆ ತದಂಶಕಕ್ಕಮಧೀಶರ್ (ಜಾತತಿ. ೧-೨೫); ಶಶಿಯಂ ಜೋಡಾಡುತಿರ್ಕುಂ ಮೊಗಂ (ಲೀಲಾವ. ೭-೧೫): ಮಂಥರೆಯ ಬಾಳ್ ನಿಶೆಗೆ ಶಶಿಯುದಿಸಿದಂತಾಯ್ತು (ಶ್ರೀರಾಮಾ. ೨೩-೬೦೯). ೨. ಕರ್ಪೂರ. ೩. ಪಟ್ಟಣದ ಮಧ್ಯಭಾಗದಲ್ಲಿ ಹಾಯ್ದುಹೋಗುವ ದಕ್ಷಿಣೋತ್ತರವಾದ ಬೀದಿ: ಕಮಲಗರ್ಭನಾ ಕಲ್ಯಾಣವ ಹಸುಗೆಯ ಮಾಡಿದ ತೆಱದಿಂ ಶಶಿ ರವಿನಾಮದಲಿ ವೀಥಿಗಳ್ಮಿಱಿದಿರ್ಪವು (ನನ್ನಟಾ. ೨-೧೮). 'ಚಂದ್ರವೀಥಿ' ಹೋ. ೪. [ಯೋಗ] ಮೂಗಿನ ಎಡಹೊರಳೆಯಲ್ಲಿ ಸಂಚರಿಸುವ ಉಸಿರು : "ನಾಸಿಕದಿ ಸೇದುವನಿಲಂ ಪೂರಕಮೆನಿಕ್ಕೆಡಂ ಶಶಿ ಬಲಂ ಭಾಸ್ಕರಂ" (ಮಂಗರಾ. ೧೭-೧೪). ೫. = ಶಶಾಂಕ ೩: ಆದಿಯ ಮಧ್ಯಾಂತದ ಗುರುವಾದೊಡೆ ಶಶಿ ಸೂರ್ಯವಾಯು (ಛಂದೋಂಬು. ೧-೩೮ ಅಡಿಪದ್ಯ). ೬. = ಶಶಾಂಕ ೪ : "ಧರಣಿ ಶಶಿಯೆನಲೊಂದು" (ಮಂಗರಾ. ೧೦೩-೮) ; ಶಶಿಯಿಂದು . . . ಇಳೆ ರೂಪವ್ಯೆಕಮೊಂದಱ ನಾಮಂ (ವ್ಯವಹಾ. ೯-೧). [ಸಂ. ಶಶಿನ್]

**ಶಶಿಕರ** (ನಾ). ಚಂದ್ರನ ಕಿರಣ : ಶಶಿಕರದಿಂ ನೀರೇಱುವ ಶಶಿಕಾಂತಪ್ರತಿಮೆಯಂದದಿಂ ಘರ್ಮಾಂಬುಪ್ರಶಮಿತತಿಲಕಮದಾಗಿರೆ ಶಶಿಮುಖಿ ಮಳಯಜದ ಜಳಮನೊಲವಿಂ ಸುರಿದಳ್ (ತ್ರಿಪುವಿ. ೧೯-೪೭) ; ಶಶಿಕರಂ ಸೊಂಕಿದ ಸಸಿಗಲ್ಲ ಪುತ್ಥಳಿಯಂತೆ ಬೆಮರ್ತು (ಶಬತಂ. ೩-೩೫ ವ). [ಸಂ.]

**ಶಶಿಕಲೆ, ಶಶಿಕಳೆ** (ನಾ). ೧. ಚಂದ್ರನಲ್ಲಿರುವ ಷೋಡಶಕಲೆಗಳು. ೨. [ಕಾಮಶಾ] ಕಾಮೋದ್ರೇಕವನ್ನುಂಟುಮಾಡುವ ಸ್ಥಾನ : ಒಗವ ಶಶಿಕಲೆಯೆಲ್ಲರಿಗೆ ಸರಿಯದೆನೆ ನಿನಗೆ ಮೃಗನೇತ್ರೆ ಪೇಳ್ವೆನು (ಜನವ. ೩ ಸೂಚನೆ). **ಶಶಿಕಳೆ**: ೩. ಬಾಲಚಂದ್ರ ; ಎಳೆಯ ಚಂದ್ರ : ಮೂಡಿದನು ಕೆಂಜಡೆಯ ಶಶಿಕಳೆಯ . . . ಕಾಶೀರಮಣ ವಿಶ್ವನಾಥಂ ಸುರರ ನೆರವಿ ಜಯ ಜಯ ಎನುತಿರೆ (ಹಚಕಾ. ೧೩-೧೯). ೪. ಚಂದ್ರ : ಶಶಿಕಳೆಯೊಂದೆಯೆಂತು ಕುಮುದಾಳಿವಿಕಾಸಮನೆಯ್ದೆ ಮಾಳ್ಪುದಂತೆಸಿಯಳ ಗಾಡಿಯೊಂದೆ ಜಗತೀಜನಲೋಚನಸಂಚಯಕ್ಕೆ ಸಂತೊಸಮನೆ ಮಾಡಿ ರೂಢಿವಡೆದತ್ತು (ಬಾಧಪು. ೨-೩೩). [ಸಂ. ಶಶಿಕಲಾ]

**ಶಶಿಕಳಾಚೂಡ** (ನಾ). ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನು; ಶಿವ: ಶಶಿಕಳಾಚೂಡ ವೃಷಭಾರೂಢ . . . ಭಕ್ತಪೋಷಾ (ನವಮೋ. ೩-೧). [ಸಂ. ಶಶಿಕಲಾಚೂಡ]

**ಶಶಿಕಳೆ** 'ಶಶಿಕಲೆ' ನೋ.

**ಶಶಿಕಾಂತ** (ನಾ). ೧. ಚಂದ್ರನ ಪ್ರಕಾಶದಿಂದ ದ್ರವಿಸುವುದೆಂದು ಭಾವಿಸಲಾದ ಒಂದು ಬಗೆಯ ಕಲ್ಲು ; ಚಂದ್ರಕಾಂತಶಿಲೆ : ವೈಡೂರ್ಯದ ಗಡಗೆಗಳೆಸೆಯೆ ಬೇಱೆ ಶಶಿಕಾಂತದ ಜಂತೆಗಳೊಪ್ಪಿ ತೋಱೆ (ಸುಕುಮಾ. ೧೦-೭೭ ರಗಳೆ); ಬರೆದ ವಿಚಿತ್ರ ಪತ್ರನಿಚಯಂ ನಿಜಲೋಚನಚಂದ್ರಿಕಾಪರಂಪರೆ ನಡೆನಟ್ಟು ಸೋರ್ವ ಶಶಿಕಾಂತದ ಕೇರ್ಗಳ ನೀರ್ವೊನಲ್ಗಳಿಂ ಪರೆಯೆ (ಪಂಪರಾಮಾ. ೧-೧೧೭) ; ಕರಗುವುದು ಶಶಿಕಾಂತ ಚಂದ್ರನ ಕಿರಣ ತಾಗಲು (ಜಿಪ್ಪಾಜಿ. ೯-೪೫). ೨. [ಛಂದ] ಅಕ್ಷರ ಛಂದಸ್ಸಿನ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಆರು ಅಕ್ಷರಗಳುಳ್ಳ ಗಾಯತ್ರಿ ಛಂದಸ್ಸಿನ ಒಂದು ವೃತ್ತ: ಶೀತಕರತೋಯಂ ದ್ಯೋತಿಸಿರೆ . . . ಶಶಿಕಾಂತಂ (ಛಂದೋಂಬು. ೨-೭೭). [ಸಂ.]

**ಶಶಿಕಿರಣ** (ನಾ). ಚಂದ್ರನ ಕಾಂತಿ ; ಬೆಳುದಿಂಗಳು : ಮಲಯಾನಿಲನುಂ ಮಲಯಜಜಲಮುಂ ಶಶಿಕಿರಣಮುಂ ವಿಯೋಗಿಗಳೆರ್ದೆಯೊಳ್ಕಿಲಸಿರ್ದುವು (ಕವಿರಾ. ೩-೩೨); ಶಶಿಕಿರಣಮನಾಯ್ದಾಯ್ದೊಳ್ಪಸೆಯಲ್ ಪೋಣಿಸಿದ ತೆಱದ ಮುಕ್ತಾಹಾರಂ ನಸುಸೋಂಕೆ ಮುಗಿದುವೆಂಬಂತೆಸಗುಂ ಕುಚಕಮಲಕುಟ್ಮಲಂ (ದಶಕು. ೭-೪೦). [ಸಂ.]

**ಶಶಿಕುಲ** (ನಾ). ಚಂದ್ರವಂಶ : ಭೂಪಾಲಕ ನಿದಾನಿಸಿ ಕೇಳು ಶಶಿಕುಲಮುಕುರ ವಿತ್ತಂಡದಲಿ ನೆನೆಯವು ಭೇದಬುದ್ಧಿಗಳ ಯುಕುತಿಯಿನ್ನಿದಕಿಲ್ಲ ಪಾರ್ಥನ ಶಕುತಿ ಘನವು (ಜಿಪ್ಪಾದ್ರೋ. ೮-೭೦). [ಸಂ.]

**ಶಶಿಖಂಡ** (ನಾ). ಬಾಲಚಂದ್ರ: ಅಪನೀತಕಲಾಕಲಾಪಂ (ಸ)ಶಶಿಖಂಡನಿರ್ಮಲ ಯಶೋವಿವಿಧಾವತಂಸಂ (ಕವಿರಾ. ೩-೨೩೦) ; ಆ ಕ್ಷೋಣೀಧರವಲ್ಲಭ ದಕ್ಷಿಣದಿಙ್ಮುಖದೊಳೆಸೆದು ಶಶಿಖಂಡದವೋಲೀಕ್ಷಣಸುಖಮಾಯಮಿರ್ಪುದು ದಕ್ಷಿಣಭರತ ತ್ರಿಖಂಡದಾರ್ಯಾಖಂಡಂ (ಪಂಪರಾಮಾ. ೧-೪೫). [ಸಂ.]

**ಶಶಿಗರ್ದಿರ್ಗಲ್** (ನಾ). ಚಂದ್ರಕಾಂತ ಶಿಲೆ : ಪೊಳೆವ ಶಶಿಗರ್ದಿರ್ಗಲ್ಲಳಿಂದೆ ಬಂಧಿಸಿದ ತಿಳಿಗೊಳಲವೊತ್ತಿಲಿ ಮರುಗ ದವನ ಪಚ್ಚೆಯದಿಂದ ಬಳಸಿ ರಚಿಸಿದ ಭಿತ್ತಿ . . . ಕಮಲಚಯತೋರಣದಿ ಮೆರೆದುದು (ನವಮೋ. ೪-೩೭). [ಶಶಿ + ಕದಿರ್$_2$ + ಕಲ್$_3$]

**ಶಶಿಗೇಹ** (ನಾ). [ಜ್ಯೋತಿ] ಚಂದ್ರನ ಕ್ಷೇತ್ರ ; ಕರ್ಕಾಟಕ ರಾಶಿ: ಬುಧಂ . . . ಶಶಿಗೇಹದೊಳ್ ನೆಲಸೆ ಬಂಧುದ್ವೇಷಿ ತೋಯೋದ್ಭವ ದ್ರವಿಣಂ (ಜಾತತಿ. ೧೭-೨೪). [ಸಂ.]

**ಶಶಿಚೂಡ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಶಿವ : ಕೂಡದೆನ್ನಂ ಬಿಟ್ಟು ಕಳೆ ಶಶಿಚೂಡನಲ್ಲದತಃಪರವನಾನಱಿಯೆನಲ್ಲದಡೆ ನಾಡ ಮಾತುಗಳೇಕೆ (ಬಸವಪು. ೫೦-೯). [ಸಂ.]

**ಶಶಿಜೂಟ** (ನಾ). = ಶಶಿಚೂಡ : ಆಡಿನ ಓಕ್ಕೆಯಂ ಶಶಿಜೂಟನೀಶ್ವರನೆಂದು ಪಾಲಂ ತಾನದಱ ಮೇಲೆ ಪಾಟಕುಂಭದಿ ಕಱೆದೆಱೆದು (ಬಸವಪು. ೯-೧೨) ; ವಿಮಲ ಕಾತ್ಯಾಯನೀವದನಸನ್ನುತದಿವ್ಯಕಮಲಾರ್ಕ ಶಶಿಜೂಟ ಶರಣಜನತಾಪಹರ (ವೀಶ್ವಪು. ೨-೫೧). [ಸಂ.]

**ಶಶಿಧರ** (ನಾ). = ಶಶಾಂಕಧರ : ಕರುಣದಿಂ ಶಶಿಧರಂ ನಾಟ್ಯವಾಡಿದನಿಲ್ಲಿ ಹರುಷದಿಂದಂ ವ್ಯಾಪ್ರುಪಾದ ನೋಡಿದನಿಲ್ಲಿ (ತಿರುಶ. ದೇ. ೩-೧೮). [ಸಂ.]

**ಶಶಿನಿ** (ನಾ). ಚಂದ್ರನ ಹದಿನಾರು ಕಲೆಗಳಲ್ಲಿ ಒಂದು : ಚಂದ್ರನಾದೊಡೆ ಅಮೃತಾ ಮಾನದಾ ಪೂಷಾ ತುಷ್ಟಿ ಪುಷ್ಟಿ ರತಿ ಧೃತಿ ಶಶಿನಿ . . . ಕಾಮದಾಯಿನಿಯೆಂಬ ಷೋಡಶಕಲಾಭರಿತನಾಗಿ . . . ರಂಜಿಸುತ್ತಿರ್ಪಂ (ವಿವೇಕ. ೨೭೭). [ಸಂ. ಶಶಿನೀ]

**ಶಶಿಬಿಂಬ** (ನಾ). ಚಂದ್ರಬಿಂಬ : ಎಸೆವ ಪಾಲ್ಗಡಲಿಂದೆ ಶಶಿಬಿಂಬವೊಗೆವಂತೆ ಶಿವನ ಭಕ್ತಿಯ ಸೊಬಗು ಮೂರ್ತಿಗೊಂಡೊಗೆವಂತೆ (ಸಂಬಿರ. ೧-೧೦೭); **ಶಶಿಬಿಂಬಂ** ರವಿಬಿಂಬಮೆಂಬ ವರಘಂಟಾಯುಗ್ಮಮಂ ಕಾಂತೆಯೆಂಬೆಸವೀ ನೇಣೆನೊಳಯ್ದೆ ಕಟ್ಟಿ (ಬಾಧಪು. ೫-೭). [ಸಂ.]

**ಶಶಿಭೂಷಣ** (ನಾ). ಚಂದ್ರನನ್ನು ಧರಿಸಿದವನು ; ಶಿವ : ಸಕಳಸುಖಮಂ ಶಿವಂಗೊಡನೊಡನೆ ಅರ್ಪಿಸುತ ಇಂತು ಶಶಿಭೂಷಣನ ಸುಕುಮಾರನೊಪ್ಪಿದಂ (ಸಂಬಿರ. ೧-೧೯೭); ಶಶಿಭೂಷಣನ ಮತ್ತೊಂದಭೀಷ್ಟವನೊಲ್ದೆನವಧರಿಸು (ಬಸವಪು. ೫೦-೭೦). [ಸಂ.]

**ಶಶಿಮಂಡಲ** (ನಾ). = ಶಶಿಬಿಂಬ : ಪಡೆಯಱಿಯಲಾದೊಡ(ಂ)ಯಂ ಕಿಡಿಸುಗುಮಂತಃಕಳಂಕನೃಪಮಂಡಲಮಂ ತಡೆಯದೆ ತಮಸ್ಸ್ವಭಾವಂ ಕಿಡಿಸುವ

ಪೋಲಱಿದು ರಾಹು ಶಶಿಮಂಡಲಮಂ (ಕಪಿಸಾ. ೩-೧೪೭) ; ಶಶಿಮಂಡಲಮಂ ಗೆಲವಂದುದು . . . ಮೊಗಂ ಸಕಳಸುರಮನೋರಂಜನನಾ (ಜಗವಿ. ೩-೩೪). [ಸಂ.]

**ಶಶಿಮಣಿ** (ನಾ). = ಶಶಿಕಾಂತ ೧ : ಈ ನಗದ ನಗದ ಶಶಿಮಣಿಸಾನುಗಳಿಂದೊಱೆತು ಪರಿವ ಪರಿವೊನಲನಿರುಳ್ ತಾನೆಡೆಯಱೆಯದ ಶಿಖಿಸಂತಾನಂ ಫಣಿಗತ್ತು ಕರ್ಚಿ ಬೆಚ್ಚನ ಸುಯ್ಗುಂ (ಶಾಂತಿಪು. ೨-೯೫); ಬೆಳರ್ತ ತರುಣಿಯ ವದನಂ ಸಳೆದುದು ಕಾವನ ಕೈಯೊಳ್ ತೊಳಗುವ ಶಶಿಮಣಿಯ ಮಣಿಯ ಮುಕುರದ ಚೆಲ್ವಂ (ರಾಜಶೇ. ४-೩೨). [ಸಂ.]

**ಶಶಿಮತ** (ನಾ). ಬ್ರಹ್ಮತತ್ತ್ವ ಒಂದೇ, ಎರಡಿಲ್ಲ ಎನ್ನುವ ಸಿದ್ಧಾಂತವನ್ನು ನಂಬಿರುವವನು ; ಅದ್ವೈತಿ : ಸಾಧ್ಯವಲ್ಲವು ಮುಕುತಿ ಸಾಧ್ಯವಲ್ಲವು . . . ಋತುಗಳ ಘಸಣೆಗಂಜದ ಶಶಿಮತನಾಗದೆ ಕಕುಭಬದ್ಧನೆನಿಸಿ . . . ಪ್ರಸನ್ನವೆಂಕಟಅರಸನ ಚರಣವ ಸ್ಮರಿಸದ ಬರಿದೆ (ಪ್ರಸಕೀ. ೫೮-೧). [ಸಂ.]

**ಶಶಿಮುಖಿ** (ನಾ). ಚಂದ್ರನಂತೆ ಮುಖವುಳ್ಳವಳು ; ಇಂದುಮುಖಿ : ಶಶಿಮುಖಿಗೆ ಗರ್ಭಚಿಹ್ನಂ ತೋಱಿದುದು ನೋಡ ಸು[ರು]ಚಿರನಿಧಾನದೊಳಗಿರ್ಪ ವಸುಮತಿಯಂತ (ನಂಜರ. ೧-೯೮). [ಸಂ. ಶಶಿಮುಖೀ]

**ಶಶಿಮೌಲಿ, ಶಶಿಮೌಳಿ** (ನಾ). ಚಂದ್ರನನ್ನು ಧರಿಸಿದವನು; ಶಿವ : ಆ ಕುಸುಮವಂ ಶಶಿಮೌಲಿ [ಪಾಠಾಂ. ಳಿ] ಗರ್ಪಿತವೆನುತ ಮನದೊಳು ನೆನೆಯಲು (ಬಸಪು. ४೧-೧೦). **ಶಶಿಮೌಳಿ** : ಇನ್ನು ದೈತ್ಯರ ಹೊಱಿಗೆಯನು ನೀ ಮಱೆದ ನಿನ್ನವರಱಿಯೆಲಾ ಜಯವಿಜಯರೆಂಬವರೆಂದ ಶಶಿಮೌಳಿ (ಕೌಶಿರಾ. ४೩-೫೦). [ಸಂ.]

**ಶಶಿಮೌಳಿ** 'ಶಶಿಮೌಲಿ' ನೋ.

**ಶಶಿಲೇಖೆ** (ನಾ). ಚಂದ್ರನ ಕಲೆಗಳಲ್ಲಿ ಒಂದು : ಪತಿಯನ ಬೇಡಿ ರುದ್ರನ ಸಮಿಪಾಪದೊಳುಗ್ರತಪಕ್ಕೆ ನಿಂದಳೋ ರತಿ ಶಶಿಲೇಖೆಯಂ ನೆನದು ಬಂದಳೋ ಮೇಣಮೃತಾರ್ಣವಾಧಿದೇವತೆ . . . ಎನಲೇನಸದಿರ್ದುದೊ ರೂಪು ಕಾಂತೆಯಾ (ಕಾದಂಪೂ. ೬೬೨) : ಶಶಿಲೇಖೆಯೆನಲ್ ಕರ್ಪೂರಶಲಾಕೆಯೆನಲ್ ವಿಲೋಚನೋತ್ಸವಮಂ ಮಾಡಿ ಶಿಲೀಮುಖಕುಂತಳೆ . . . ಭುವನಮಂ ಸೋಲಿಸಿದಳ್ (ಪಂರಾಮಾ. ४-೩೦).

[ಸಂ. ಶಶಿಲೇಖಾ]

**ಶಶಿವಂಶ** (ನಾ). = ಶಶಾಂಕವಂಶ: ಅತ್ಯುತ್ಸುಕರಾಗಿ ಶಶಿವಂಶಕೇತುಗ ರಾಜ್ಯಾಭಿಷೇಕಂಗೆಯ್ಯೆ (ಶಾಂತಿಪು. ೧೦-೧೦೨ ವ); ಈ ಮಹಿಳೆಯಭಿವಂದನೀಯೆ ನಿರಾಮಯದ ಶಶಿವಂಶಜನನಿ ಸನಾಮೆಯಲ್ಲಾ (ಕುವ್ಯಾಆ. ೮-೧೮). [ಸಂ.]

**ಶಶಿವದನ** (ನಾ). ಚಂದ್ರನಂತೆ ಮುಖವುಳ್ಳವನು : ಶಶಿವದನನಿಗೆ ಬೆಣ್ಣೆಯ ನೀಡಲೋಸುಗ ಏಣಾಂಕಮುಖಿಯರು ಹೊಸಬೆಣ್ಣೆಯನು ತೆಗದು . . . ಕೊಡಲು (ಪುರಂದ. ಧಾ. ४-೨೮-४). [ಸಂ.]

**ಶಶಿವದನೆ** (ನಾ). = ಶಶಿಮುಖಿ : ಶಶಿವದನೆಯೊರೆವುತ್ತಿಪ್ಪ ಸಲ್ಲಾಪಂಗಳಾತಂಗೆ ಉರಿಯೊಳಾಜ್ಯವನೆಱೆದಡಂತುಬ್ಬರಿಸಿ ಧಗಧಗ ಎನುತ (ಬಸಪು. ४-೧) ; ಸುಹೃದನ ದರುಶನದೊಳಗೆ . . . ಶಶಿವದನೆಯುತ್ಸಾಹವತಿಶಾಳಿಸಿತು (ಕುವ್ಯಾಕ. ೧೯-೮४).

[ಸಂ. ಶಶಿವದನಾ]

**ಶಶಿಶಕಲಧರ** (ನಾ). = ಶಶಿಕಳಾಚೂಡ : ನೀಲಕಂಠಂ ಶಶಿಶಕಲಧರಂ ಕೃತ್ತಿವಾಸಂ ಪಿನಾಕಂ . . . ತೋಱಿದಂ ವಿಶ್ವರೂಪಂ (ಉದ್ಭಟ. ೧೧-೧೨೮). [ಸಂ.]

**ಶಶಿಶೇಖರ** (ನಾ). = ಶಶಿಭೂಷಣ : ಶಶಿಶೇಖರಂ ನೆಟ್ಟನೆಂತರ್ಧಾನದೊಳ್ ಸಂದನೀಶ್ವರಂ (ನಂಜರ. ೬-೧೬೬). [ಸಂ.]

**ಶಶಿಹಾಸ** (ನಾ). ೧. ಬೆಳುದಿಂಗಳಿನಂತಹ ನಗೆ. ೨. ವಿಷ್ಣುಭಕ್ತನಾದ ಕುಂತಳದೇಶದ ಒಬ್ಬ ದೊರೆ ; ಚಂದ್ರಹಾಸ : ಶಶಿಹಾಸನನುಚರರ್ಬಂದು ಕಾಣಲ್ಕೆ . . . ಅಸುವಿಡಿದಿಹನ ಕುಳಿಂದಕನೆಂದು ಶಂಕೆಯಿಂ ಕೇಳ್ದನಾ ದುಷ್ಟಬುದ್ಧಿ (ಜೈಮಿಭಾ. ೨೯-೨೦). [ಸಂ.]

**ಶಶೋರ್ಣ** (ನಾ). ೧. ಮೊಲದ ಚರ್ಮ. ೨. ಮೊಲದ ಕೂದಲಿನಿಂದ ಮಾಡಿದ ಕಂಬಳಿ : ''ಶಶೋರ್ಣಂ, ಶಶಲೋಮ — ಮೊಲದ ಕೂದಲುಗಳಿಂದ ನೆಯಿದ ಕಂಬಳಿ'' (ಸಿದ್ಧಾಂತಿ. ೩೦೬). [ಸಂ.]

**ಶಶ್ವಜ್ಜೀವನ** (ನಾ). ೧. ಶಾಶ್ವತವಾದ ಜೀವನ ; ಪರಮಪದ ; ಮೋಕ್ಷ. ೨. ನಿರಂತರವಾಗಿ ಹರಿಯುವ ನೀರು. ೧ , ೨: ಶಶ್ವಜ್ಜೀವನಮನೀವ ಕಾವ . . . ವಿಶ್ವರೂಪಿಣಿಯೆನೆ ಮೆಱೆವ ನೆಲಗಾಣದ ನಿನ್ನೀ ಮೈಮೆಯಂ ಬಣ್ಣಿಸಲಾವಂ ಸಾಲ್ವಂ (ರಾಮಾಶ್ವ. ೩೧-४). [ಸಂ.]

**ಶಷ್ಕುಲಿ** (ನಾ). ೧. ಕಿವಿಯ ತೂತು, — ರಂಧ್ರ. ೨. ಒಂದು ಬಗೆಯ ಖಾದ್ಯ ವಿಶೇಷ ; ಚಕ್ಕುಲಿ : ಶಷ್ಕುಲಿ - ಚಕ್ಕುಲಿ (ಶಮದ. ೨೬೩ ಪ್ರಯೋ.). ೩. ಒಂದು ಬಗೆಯ ಅಕ್ಕಿಗಂಜಿ. [ಸಂ. ಶಷ್ಕುಲೀ]

**ಶಷ್ಕುಲಿಕರ್ಣ** (ನಾ). ಚಕ್ಕುಲಿಯಂತಿರುವ ಕಿವಿಯುಳ್ಳ ವ್ಯಕ್ತಿ : ವಿದಿಗ್ಗತ ದ್ವೀಪಸಂಸ್ಥಿತರ್ ಶಷ್ಕುಲಿಕರ್ಣರುಂ ಕರ್ಣಪ್ರಾವರಣರುಂ ಲಂಬಕರ್ಣರುಂ ಶಶಕರ್ಣರುಂ ಅಪ್ಪರ್ (ತತ್ತ್ವ ಪ್ರ. ೧೪೮). [ಸಂ.]

**ಶಷ್ಪ** (ನಾ). ಎಳೆಯ ಹುಲ್ಲು ; ಗರುಕೆ : ''ಎಳೆಯ ಪುಲ್ ಶಷ್ಪಂ ಬಾಲತೃಣಮನಿಕ್ಕುಂ'' (ಮಂಗರಾ. ೩೩-೭). [ಸಂ.]

**ಶಸನ** (ನಾ). ೧. ಕೊಲ್ಲುವುದು. ೨. ಯಜ್ಞದಲ್ಲಿ ಮಾಡುವ ಪಶುವಧೆ : ''ಪರಂಪರಾಕಂ, ಶಸನಂ, ಪ್ರೋಕ್ಷಣಂ — ೩ ವಧಾರ್ಥಕಂ, ಯಜ್ಞದಲ್ಲಿ ವೇದೋಕ್ತಪ್ರಕಾರವಾಗಿ ಮಾಡುವ ಪಶುವಿಶಸನವೆಂಬ ಶ್ರೌತ, ಪಶುವಧೆ'' (ಸಿದ್ಧಾಂತಿ. ೨೨೧). [ಸಂ.]

**ಶಸ್ತ** (ಗು). ೧. ಹೊಗಳಿದ ; ಶ್ಲಾಘಿಸಿದ. ೨. ಉತ್ತಮವಾದ ; ಶ್ರೇಷ್ಠವಾದ: ''ಹಸ್ತಂ ಪಾಶಂ ಪಕ್ಷಂ ಶಸ್ತಕಚಪ್ರಚಯವಾಚಕಂ ತತ್ಪರದೊಳ್'' (ಪಮ್ಪುಕೋ. ೭೦-೧೯). ೩. (ಮತ್ತೆ ಮತ್ತೆ) ಹೇಳಿದ; ನುಡಿದ. ४. ಗಾಯಗೊಂಡ. ೫. ಕೊಲ್ಲಲ್ಪಟ್ಟ. (ನಾ). ೬. ಹೊಗಳಲ್ಪಟ್ಟುದು; ಕೊಂಡಾಡಲ್ಪಟ್ಟುದು : ''ಈಡಿತಂ, ಶಸ್ತಂ, ಪಣಾಯಿತಂ . . . ಸ್ತುತಂ — ೧೨ ಹೊಗಳಲ್ಪಟ್ಟದ್ದು'' (ಸಿದ್ಧಾಂತಿ. ೩೫೦). ೭. ಉತ್ತಮವಾದುದು ; ಶ್ರೇಷ್ಠವಾದುದು : ನವಪಿಷ್ಟಚರ್ಚಿಕಾ ಶಸ್ತಮುಪಾತ್ತದರ್ಭರಚನಂ ನಿಖಿಲೌಷಧಿಪುಂಜಿತಂ ಪರಿನ್ಯಸ್ತಮದೊಂದು ಪೂರ್ಣಕಲಶಂ ತಳೆದತ್ತತುಳಂ ವಿಳಾಸಮಂ (ಚಂದ್ರಪು. ೬-೫೩) ; ವಸ್ತುವೆಯಾತ್ಮಸ್ವರೂಪವೆಂಬಾ ಬುದ್ಧಿವಿಸ್ತರದ ದೇವತೆಗದೇಸ್ಥಾನಮಯಗುಣದ ಶಸ್ತವೆನಿಸಿಸುವ ಜಗತ್ತಂ ವ್ಯಾಪಿಸುತ್ತ . . . ನಾಡ ಮೆಱೆವ ಚೈತನ್ಯವೇ (ವೀಶೈಪು. ೫-೧೬-೧೪). ೮. ಶ್ರೇಷ್ಠನಾದವನು; ಉತ್ತಮ : ಪ್ರಸ್ತುತಬುಧಸ್ತವನಭಾಜನಶಸ್ತನಂ ಗುರುಭಕ್ತಿಕೀರ್ತಿ ಗಭಸ್ತಿ ಭಾಸುರನಂ ಸಮುದ್ಯತ್‌ಚಿತ್‌ಪ್ರಭಾಕರನ . . . ನೋಡಿ (ಬಸಪು. ३೯-೫४). [ಸಂ.]

**ಶಸ್ತ್ರ** (ನಾ). ೧. ಕೈದು ; ಆಯುಧ : ಶಸ್ತ್ರಸಂಪನ್ನನ ಆಗಿ ಶಲ್ಯನನೆ ಸಾರಥಿಯಾಗಿರ ಮಾಡಿ ಕಾದು ನೀಂ ನಿನ್ನಯ ಬಲ್ಲ ಮಾಟ್ಕೆಯೊಳ್ (ಪಂಪಭಾ. ೧೨-೫೩) ; ವೈರಚಿಕಿತ್ಸೆಗೆ ಇದೆ ಶಸ್ತ್ರ; ಅಣುಬಾಂಬಿಗೂ ತಾ ಪ್ರತ್ಯಸ್ತ್ರ (ಅನಿಕೇ. ೩४-೫) ; ಶಸ್ತ್ರದ ಅಭ್ಯಾಸವಿಲ್ಲದಿದ್ದರ ವಸ್ತ್ರ ಕದಿಯಲಿಕ್ಕೆ ತಿಳಿಯದೋ ? (ಗಾದೆ). ೨. ಕಬ್ಬಿಣ. ೩. ಉಕ್ಕು: ''ಶಸ್ತ್ರಂ, ತೀಕ್ಷ್ಣಂ, ಅಯಃ, ಪಾರಸವಂ — ಈ ४ ಉಕ್ಕು'' (ಹಲಾಯು. ೨೮-೧೭).

**ಶಸ್ತ್ರಾಸ್ತ್ರ** = (ನಾನಾಬಗೆಯ) ಆಯುಧಗಳು : ಧನುವ ಶಸ್ತ್ರಾಸ್ತ್ರವ ಸುದರ್ಶನ ಕನಕ ಕವಚ ಕೃಪಾಣವನು ಸ್ಯಂದನದೊಳಿಳುಹು (ಕುವ್ಯಾಉ. ೭-೬) ; ಅಖಿಳ ಶಸ್ತ್ರಾಸ್ತ್ರದಿಂ ಸಮವಿಷಮ ಸೋಲಗೆಲವುಗಳಿಲ್ಲದೆ ತ್ರಿಭುವನಕೆ ರಣರಂಗದೊಳ್ಸುಭಟ ನರ್ತನವನಭಿನಯಿಸುವಂತೆ . . . ಎಚ್ಚಾಡಿದರ್ಕರ್ಣನಂದನ ಸುಧನ್ವರಂದು (ಜೈಮಿಭಾ. ೧೨-೨೬). [ಸಂ.]

**ಶಸ್ತ್ರಕರ್ಮ** (ನಾ). ೧. ಆಯುಧಪ್ರಯೋಗ; ಶಸ್ತ್ರಪ್ರಯೋಗ : ನಿಖಿಲಕ್ಷತ್ರಿಯ ಸಮೂಹಕ್ಕೆ ಶಸ್ತ್ರಕರ್ಮಮುಮಂ . . . ಯಥಾಯೋಗ್ಯಮುಪದೇಶಂಗೆಯ್ದು (ಆದಿಪು. ೮-೬४ ವ). ೨. (ಅಂಗವಿಕಾರ, ಗಾಯ, ವ್ಯಾಧಿ ಮೊದಲಾದುವನ್ನು) ಗುಣಪಡಿಸಲು ಮಾಡುವ ಆಯುಧಪ್ರಯೋಗದ ಚಿಕಿತ್ಸೆ : ಜನಿಯಿಸಿದ ಶೋಫಮದು ಲೇಪನದಿಂ ಪೋಗದೊಡೆ ಶಸ್ತ್ರಕರ್ಮವನೆಸಪಂತೆ (ಪಾರ್ಶ್ವಪು. ೨-४೩).

[ಸಂ. ಶಸ್ತ್ರಕರ್ಮನ್]

**ಶಸ್ತ್ರಕೌಶಲ** (ನಾ). ಆಯುಧಪ್ರಯೋಗದಲ್ಲಿ ತೋರುವ ನೈಪುಣ್ಯ,— ಚಾತುರ್ಯ: ಶಸ್ತ್ರಕೌಶಲಪ್ರದರ್ಶನವಾದ ಮೇಲೆ ಗದೆಯನ್ನು ತೆಗೆದುಕೊಂಡು ಅದರಲ್ಲಿ ವಿವಿಧ ಚಲನವಲನಗಳನ್ನು ತೋರಿಸಿದನು (ವಚಭಾ. ೨४). [ಸಂ.]

**ಶಸ್ತ್ರಕ್ರಿಯೆ** (ನಾ). = ಶಸ್ತ್ರಕರ್ಮ ೨: ಉಸಿರಾಡಲು ಕಂಠನಾಳ (Larynx) ದೊಳಗೆ ತೊಂದರೆಯುಂಟಾದಾಗ . . . ಉಸಿರುಕೊಳವೆ (Trachea)ಯ ಮೇಲೆ ಶಸ್ತ್ರಕ್ರಿಯೆ ನಡೆಸಿ ಉಸಿರಾಡಲು ಒಂದು ನಾಳವನ್ನು ಇಡಬೇಕು (ಕಿಲರೋ. ೨೬). [ಸಂ. ಶಸ್ತ್ರಕ್ರಿಯಾ]

**ಶಸ್ತ್ರಚಿಕಿತ್ಸಕ** (ನಾ). ಶಸ್ತ್ರಕ್ರಿಯೆಯನ್ನು ಮಾಡಿ ವ್ಯಾಧಿಯನ್ನು ಗುಣಪಡಿಸುವವನು : ಗಾಜಿನಲ್ಲುಂಟಾಗುವ ಪರೆಯ ಬದಲಾವಣೆಗಳನ್ನು . . . ಪರಿಣತರಾದ ಶಸ್ತ್ರಚಿಕಿತ್ಸಕರಿಂದ ಚಿಕಿತ್ಸೆ ಹೊಂದಿ ದೃಷ್ಟಿ ಪಡೆಯುವುದು ಮೇಲು (ನಿಮ್ಮದೃ. ೧೭೧). [ಸಂ.]

**ಶಸ್ತ್ರಚಿಕಿತ್ಸೆ** (ನಾ). = ಶಸ್ತ್ರಕರ್ಮ ೨: ಆತನಿಗೆ . . . ಶಸ್ತ್ರಚಿಕಿತ್ಸೆಯಿಂದ ದೃಷ್ಟಿ ಹಿಂತಿರುಗುವುದೆಂಬ ನಂಬಿಕೆಯನ್ನು ತುಂಬಬೇಕು (ನಿಮ್ಮದೃ. ೧೭೨) ; ಅದಲ್ಲಾ, ತನಗೆ ಶಸ್ತ್ರಚಿಕಿತ್ಸೆಯಾಗಿ ಚೇತರಿಸಿಕೊಂಡ ಮೇಲೆ (ಯೋಧಪು. ೨). [ಸಂ. ಶಸ್ತ್ರಚಿಕಿತ್ಸಾ]

**ಶಸ್ತ್ರಚ್ಯುತಿ** (ನಾ). ಆಯುಧವನ್ನು ಪ್ರಯೋಗ ಮಾಡದಿರುವುದು; ಶಸ್ತ್ರವನ್ನು ತೊರೆಯುವುದು : ಕ್ಷಿತಿಪನಂತ್ಯದೊಳಲ್ಲಿ ಶಸ್ತ್ರಚ್ಯುತಿಯ ಮಾಡಿ ವಿರಾಗದಲಿ ವನಗತಿಕರಾವ್ಯತಂದೆವೆಂದರು ಗುರುಸುತಾದಿಗಳು (ಕುವ್ಯಾಗ. ೧೧-೨೪). [ಸಂ.]

**ಶಸ್ತ್ರಜೀವಿ** (ನಾ). (ಯುದ್ಧದಲ್ಲಿ) ಆಯುಧಪ್ರಯೋಗ ಮಾಡುವುದರಿಂದ ಜೀವಿಸುವವನು; ಯೋಧ : "ಕೆಯ್ದುವಿಡಿವಂ ಶಸ್ತ್ರಜೀವಿಯು" (ಮಂಗರಾ. ೭೫-೬). [ಸಂ. ಶಸ್ತ್ರಜೀವಿನ್]

**ಶಸ್ತ್ರಜ್ಞ** (ನಾ). ಆಯುಧಗಳ ಪ್ರಯೋಗವನ್ನು ಬಲ್ಲವನು : ಸಾಳುವನ ಕೂಡರಗಳಿಗೆ ಸಮಮೇಳವೇ ಶಸ್ತ್ರಜ್ಞನಾದಡೆ ಸೋಲುವುದೆ (ಕುವ್ಯಾಕ. ೧೧-೫೮). [ಸಂ.]

**ಶಸ್ತ್ರತ್ಯಾಗ** (ನಾ). = ಶಸ್ತ್ರಚ್ಯುತಿ : ಅಶ್ವತ್ಥಾಮನ ಮರಣವಾರ್ತೆಯಿಂದ ಮಾತ್ರ ದ್ರೋಣನು ಶಸ್ತ್ರತ್ಯಾಗ ಮಾಡುವನು (ಭಾರದ. ೧೦೨). [ಸಂ.]

**ಶಸ್ತ್ರಧರ** (ನಾ). ೧. ಆಯುಧವನ್ನು ಹಿಡಿದಿರುವವನು. ೨. ಯೋಧ. [ಸಂ.]

**ಶಸ್ತ್ರಧಾರಿ** (ನಾ). = ಶಸ್ತ್ರಧರ ೨ : ಎಲ್ಲ ಯೋಧರಿಗೂ ಆಚಾರ್ಯನೂ ಹಿರಿಯನೂ ಶಸ್ತ್ರಧಾರಿಗಳಲ್ಲಿ ಅಗ್ರೇಸರನೂ ಆದ ದ್ರೋಣನನ್ನು ಸೇನಾಪತಿಯಾಗಿ ಮಾಡಿಕೊಳ್ಳೋಣ! (ವಚಭಾ. ೨೭೯). [ಸಂ. ಶಸ್ತ್ರಧಾರಿನ್]

**ಶಸ್ತ್ರಪಾಣಿ** (ನಾ). = ಶಸ್ತ್ರಧರ ೧: ಉಭಯಪಕ್ಷದವರೂ ಶಸ್ತ್ರಪಾಣಿಗಳಾಗಿ ಹೋರಾಡುವರು (ಕರ್ಣಾಅ. ೫೯). [ಸಂ.]

**ಶಸ್ತ್ರಪ್ರಯೋಗ** (ನಾ). ೧. ಆಯುಧವನ್ನು ಪ್ರಯೋಗಿಸುವುದು. ೨. (ಶಸ್ತ್ರಚಿಕಿತ್ಸೆಯಲ್ಲಿ) ಆಯುಧಗಳನ್ನು ಬಳಸುವುದು : ದೇಹದಲ್ಲಿರುವ ಹುಣ್ಣನ್ನು ತೆಗೆಯುವ ಸಲುವಾಗಿ ಶಸ್ತ್ರಚಿಕಿತ್ಸೆ ಮಾಡುವಾಗ ಜೀವಕ್ಕೆ ಅಪಾಯವಾಗದ ರೀತಿಯಲ್ಲಿ ಶಸ್ತ್ರಪ್ರಯೋಗ ಮಾಡಬೇಕು (ಪಂಜಪಂ. ೧೮೪). [ಸಂ.]

**ಶಸ್ತ್ರಮರಣ** (ನಾ). (ಯುದ್ಧದಲ್ಲಿ) ಆಯುಧದಿಂದುಂಟಾಗುವ ಸಾವು: ದುರ್ಯೋಧನನ ವಶವರ್ತಿಗಳಾದ ರಾಜರೂ ರಾಜಪುತ್ರರೂ ಶಸ್ತ್ರಮರಣವನ್ನು ಪಡೆದು ಸದ್ಗತಿಯನ್ನು ಹೊಂದುತ್ತಾರೆ! (ವಚಭಾ. ೨೬೦). [ಸಂ.]

**ಶಸ್ತ್ರಮಾರ್ಜ** (ನಾ). ಆಯುಧವನ್ನು ಸಾಣೆ ಹಿಡಿಯುವವನು,— ಹರಿತಗೊಳಿಸುವವನು : "ಶಸ್ತ್ರಮಾರ್ಜಃ, ಅಸಿಧಾವಕಃ — ೨ ಸಾಣೆಗಾರನ ಪೆಸರು" (ಸಿದ್ಧಾಂತಿ. ೩೦೦). [ಸಂ.]

**ಶಸ್ತ್ರಯುದ್ಧ** (ನಾ). ಕತ್ತಿಯಿಂದ ಮಾಡುವ ಕಾಳಗ ; ಕತ್ತಿಕಾಳಗ. [ಸಂ.]

**ಶಸ್ತ್ರವಿಡಂಬ** (ನಾ). ಆಯುಧಗಳ ಆಡಂಬರ,— ಅಟಾಟೋಪ: ಸೊಕಮಿರ್ಕಕ್ಕಟದರ್ಪಪಾಣಿ ಯಮಜಂ . . . ದಸ್ರಾತ್ಮಜರ್ ದಂಡಮುಷ್ಟಿಕರರ್ ಶಸ್ತ್ರವಿಡಂಬ ಮೇವುದವರ್ಗಂ (ಗದಾಯು. ೩-೩೪). [ಸಂ.]

**ಶಸ್ತ್ರವಿದ** (ನಾ). = ಶಸ್ತ್ರಜ್ಞ : ಶಸ್ತ್ರವಿದರೊಳ್ ಭರದಿಂ ನಿಜಶಸ್ತ್ರವಿದ್ಯೆಯಂ ಪರಿವಿಡಿಗೆಯ್ಯ ರಾಜಸುತರೊಪ್ಪುಗುಮಾ ಪುರಗೋಪುರಂಗಳೊಳ್ (ಜಗವಿ. ೨-೧೬). [ಸಂ. ಶಸ್ತ್ರವಿದ್]

**ಶಸ್ತ್ರವಿದ್ಯೆ** (ನಾ). ಆಯುಧಗಳ ಪ್ರಯೋಗಕ್ರಮವನ್ನು ತಿಳಿಸುವ ಶಾಸ್ತ್ರ: ಶಸ್ತ್ರವಿದರೊಳ್ ಭರದಿಂ ನಿಜಶಸ್ತ್ರವಿದ್ಯೆಯಂ ಪರಿವಿಡಿಗೆಯ್ಯ ರಾಜಸುತರೊಪ್ಪುಗುಮಾ ಪುರಗೋಪುರಂಗಳೊಳ್ (ಜಗವಿ. ೨-೧೬). [ಸಂ. ಶಸ್ತ್ರವಿದ್ಯಾ]

**ಶಸ್ತ್ರವಿಧಿ** (ನಾ). = ಶಸ್ತ್ರಕರ್ಮ ೨ : ಬಾಲ್ಯದಲ್ಲಿಯೂ ವೃದ್ಧಾಪ್ಯದಲ್ಲಿಯೂ ಕ್ಷಾರವಿಧಿ, ಅಗ್ನಿವಿಧಿ, ಶಸ್ತ್ರವಿಧಿಗಳನ್ನು ವೈದ್ಯನು ಮಾಡಲಾಗದು (ಸಕವ್ಯ. ೧೫). [ಸಂ.]

**ಶಸ್ತ್ರವೈದ್ಯ** (ನಾ). ೧. ಆಯುಧದಿಂದ ಮಾಡುವ ಚಿಕಿತ್ಸೆ : ಗುರೂಪದೇಶ ಮಂತ್ರವೈದ್ಯ ಜಂಗಮೋಪದೇಶ ಶಸ್ತ್ರವೈದ್ಯ ನೋಡಾ ಭವರೋಗವ ಗೆಲುವ ಪರಿಯ ನೋಡಾ (ಬಸವ. ೬೫೫). ೨. = ಶಸ್ತ್ರಚಿಕಿತ್ಸಕ : ಗಾಯಗಳನ್ನೂ ಅಂಗವಿಕಾರಗಳನ್ನೂ, ರೋಗಗಳನ್ನೂ ಕೈಚಳಕದಿಂದಾಗಲಿ ಶಸ್ತ್ರದಿಂದಾಗಲಿ ಗುಣಪಡಿಸುವ ವೈದ್ಯ : ಶಸ್ತ್ರವೈದ್ಯ (Surgeon. ೩೦೬೩). [ಸಂ.]

**ಶಸ್ತ್ರವ್ರಣ** (ನಾ). ಆಯುಧದಿಂದಾದ ಗಾಯ : ಗಂಡರ್ ಗುಣಮನೆ ಮೆಚ್ಚುವುದು ಶಸ್ತ್ರವ್ರಣಮಂ ನಿನ್ನಂತೆ ಮೆಚ್ಚುವುದಿಚ್ಛಿಪಬೆಡಂಗಾ (ಗದಾಯು. ೨-೫). [ಸಂ.]

**ಶಸ್ತ್ರಶಯನ** (ನಾ). ಆಯುಧಗಳ ಹಾಸುಗೆ : ತುಱುಗಿದಂಬುಗಳ . . . ವಿಕ್ರಮಾಗ್ನಿಯ ತಗಹು ಬಿಡದಭಿಮನ್ಯು ಮೆಚ್ಚಿದನು ಶಸ್ತ್ರಶಯನದಲಿ (ಕುವ್ಯಾದ್ರೋ. ೬-೬೨). [ಸಂ.]

**ಶಸ್ತ್ರಶಾಲೆ** (ನಾ). ಯುದ್ಧಸಾಧನಗಳನ್ನು ಶೇಖರಿಸಿಡುವ ಮನೆ; ಆಯುಧಶಾಲೆ : ಶಸ್ತ್ರಶಾಲಾಜಾತಂಗಳಪ್ಪ ಚಕ್ರಾಸಿದಂಡಛತ್ರರತ್ನಂಗಳಿಂದಂ ಶ್ರೀಗೃಹಾದಿ ಸಮುತ್ಪನ್ನಂಗಳಪ್ಪ ಮಣಿಚರ್ಮಕಾಕಿಣೀರತ್ನಂಗಳಿಂದಂ . . . ನೆಱೆದು (ಶಾಂತಿಪು. ೧೧-೮೪ ವ); ಒಳಗೆ ತಳತಳಿಸಿ ಪೊಳೆವ ಕೆಯ್ದುಗಳ ಬಳಗಮಂ ತಳೆದ ವಿಷಮವಿಷಧರ [ಪೂರ್ಣ]ಮಪ್ಪ ಪಾತಾಳಕುಹರದಂತಗುರ್ವಿಸುವ ಶಸ್ತ್ರಶಾಲೆಯುಂ . . . ಅಲುಂಬಮಾಗೆ (ಪುಷ್ಪಪು. ೨-೯೦ ವ). [ಸಂ. ಶಸ್ತ್ರಶಾಲಾ]

**ಶಸ್ತ್ರಶಾಸ್ತ್ರ** (ನಾ). ಆಯುಧಗಳ ಪ್ರಯೋಗವನ್ನು ತಿಳಿಸುವ ಶಾಸ್ತ್ರ: ನರಸಿಂಗ ಮೊನೆಯರು ತಮ್ಮ ಪಟ್ಟಣದ ಘನಶಸ್ತ್ರಶಾಸ್ತ್ರಮಂ ಬಲ್ಲವರ್ಗಳಂ ಕ್ಷಣದಲಲ್ಲಿ ಕರಸುತ್ತವರ್ ಬರೆ (ನಂಬಿರ. ೩-೨೮). [ಸಂ.]

**ಶಸ್ತ್ರಸಂನ್ಯಾಸ** (ನಾ). = ಶಸ್ತ್ರಚ್ಯುತಿ : ಮೋಸದಿಂದ ಶಸ್ತ್ರಸಂನ್ಯಾಸ ಮಾಡಿಸಿದ ಆ ಯುಧಿಷ್ಠಿರನ ರಕ್ತವನ್ನು ಇಂದು ಭೂಮಿಯು ಕುಡಿಯಲಿ! (ವಚಭಾ. ೨೯೧). [ಸಂ.]

**ಶಸ್ತ್ರಸಜ್ಜಿತ** (ಗು). ಆಯುಧಗಳಿಂದ ಸಜ್ಜಾಗಿರುವ ; ಆಯುಧಸಹಿತವಾದ : ಸೆರೆಮನೆಯ ಸುತ್ತಲೂ ಶಸ್ತ್ರಸಜ್ಜಿತ ಪೋಲೀಸಿನವರ ಕಾವಲಿತ್ತು (ಪಂಜಪಂ. ೧೯೫). [ಸಂ.]

**ಶಸ್ತ್ರಸನ್ಯಾಸ** (ನಾ). = ಶಸ್ತ್ರಚ್ಯುತಿ : ದ್ರೋಣನಿಂದ ಶಸ್ತ್ರಸನ್ಯಾಸ ಮಾಡಿಸುವ ಉಪಾಯವನ್ನು ಅವನು ಯೋಚಿಸುತ್ತಾನೆ (ಭಾರದ. ೧೦೨). [< ಶಸ್ತ್ರಸಂನ್ಯಾಸ]

**ಶಸ್ತ್ರಾಗಾರ** (ನಾ). = ಶಸ್ತ್ರಶಾಲೆ : ಚಿತಗಾಂಗ್ ಶಸ್ತ್ರಾಗಾರದ ಮೇಲಿನ ಧಾಳಿ ಬ್ರಿಟಿಷ್‌ಸರ್ಕಾರವನ್ನು ನಡುಗಿಸಿತು (ಆತ್ಮಾರ್ಪ. ೧೪೩). [ಸಂ.]

**ಶಸ್ತ್ರಾಗ್ನಿ** (ನಾ). ಆಯುಧದಿಂದ ಹೊಮ್ಮುವ ಬೆಂಕಿ, — ಉರಿ : ಶಸ್ತ್ರಾಗ್ನಿಯಿಂ ತೀವ್ರಕೋಪದಿನುದ್ವೃತ್ತ ಬಳಾಬ್ಧಿಯಂ ಸುಡೆ (ಪಂಪಭಾ. ೧೨-೩೫). [ಸಂ.]

**ಶಸ್ತ್ರಾಘಾತ** (ನಾ). ಆಯುಧದ ಪೆಟ್ಟು, — ಹೊಡೆತ: ಜಲಜಾತಪ್ರಿಯನೆಂಟಜೊಳ್ ನಿಲೆ ಮನುಷ್ಯಂ ಕಿಚ್ಚಿನಿಂ . . . ಮಹಿಜಾತನಲ್ಲಿ ನಿಲೆ ಶಸ್ತ್ರಾಘಾತದಿಂ . . . ಅರ್ಕಜಂ ನಿಲೆ ಮಹಾಕ್ಷುದ್ವ್ಯಾಧಿಯಿಂ ಪೊಂದುಗುಂ (ಜಾತತಿ. ೨೩-೨). [ಸಂ.]

**ಶಸ್ತ್ರಾಜೀವ** (ನಾ). ಯೋಧ; ಸೈನಿಕ: "ಶಸ್ತ್ರಾಜೀವಃ, ಕಾಂಡಪೃಷ್ಠಃ — ಈ ೨ ಕೆಯ್ದುವಿಡಿವವಂ" (ಹಲಾಯು. ೬೭-೨೫೧). [ಸಂ.]

**ಶಸ್ತ್ರಾಭ್ಯಾಸ** (ನಾ). ಆಯುಧಗಳ ಪ್ರಯೋಗವನ್ನು ಕುರಿತ ವ್ಯಾಸಂಗ,— ಕಲಿಕೆ: ಇಂತು ಶಸ್ತ್ರಾಭ್ಯಾಸಮಾಗಲ್ಕೆ (ನಂಬಿರ. ೩-೮೩); ಪಡುರಸದೂಟ ಕರ್ಣನ ಕೂಡೆ ಶಸ್ತ್ರಾಭ್ಯಾಸವವ ಕೂಡೆ . . . ತಾವಿಬ್ಬರೊಂದೆನಿಸಿದರು ಜಗವಱಿಯೆ (ಕುವ್ಯಾಆ. ೬-೪೪). [ಸಂ.]

**ಶಸ್ತ್ರಾಶಸ್ತ್ರಿ** (ನಾ). ಆಯುಧಗಳಿಂದ ನಡೆಸುವ ಯುದ್ಧ : ಜಟ್ಟಿಗರೊಳ್ ಶಸ್ತ್ರಾಶಸ್ತ್ರಿಯುಂ ಖಡ್ಗಾಖಡ್ಗಿಯುಂ ದಂಡಾಂದಡಿಯುಂ ಕಚಾಕಚಿಯುಮಾಗಿ (ಅನಂಪು. ೧೧-೮೩ ವ). [ಸಂ.]

**ಶಸ್ತ್ರಿ** (ನಾ). ಚೂರಿ ; ಚಾಕು : "ಶಸ್ತ್ರೀ, ಅಸಿಪುತ್ರಿ, ಛುರಿಕಾ, ಅಸಿಧೇನುಕಾ — ೪ ಸುರಿಯಕತ್ತಿ, ಸೂರುಕತ್ತಿ, ಚೂರಿ" (ಸಿದ್ಧಾಂತಿ. ೨೬೬). [ಸಂ. ಶಸ್ತ್ರೀ]

**ಶಸ್ತ್ರಿಕೆ** (ನಾ). = ಶಸ್ತ್ರಿ : "ತಿಳಿಯೆ ಶಸ್ತ್ರಿಕೆ ಪತ್ರಮಸಿಧೇನುವೆಂದೆನಲ್ಕೆಲೆ ಸುರಗಿಯಕ್ಕು" (ಮಂಗರಾ. ೮೮-೩೬). [ಸಂ. ಶಸ್ತ್ರಿಕಾ]

**ಶಸ್ತ್ರೋಪಜೀವನ** (ನಾ). ೧. (ಯುದ್ಧದಲ್ಲಿ) ಆಯುಧಪ್ರಯೋಗ ಮಾಡುವುದರಿಂದ ಉಪಜೀವನ ನಡೆಸುವುದು : ಪಾತಕವಲಾ ದ್ರೋಣ ನಿನಗೀ ಭೂತಹಿಂಸೆಯದೇಕೆ . . . ಶಸ್ತ್ರೋಪಜೀವನವೇತಕಿದು ನಿನಗೆ (ಕುವ್ಯಾದ್ರೋ. ೧೮-೫೫). ೨. ಶಸ್ತ್ರವೃತ್ತಿಯನ್ನು ಅವಲಂಬಿಸಿ ಉಪಜೀವನ ನಡೆಸುವವನು : ಶಸ್ತ್ರೋಪಜೀವನನಿವನು ಋಷಿಯೇ (ಕುವ್ಯಾದ್ರೋ. ೧೯-೨೩). [ಸಂ.]

**ಶಸ್ಯ** (ಗು). ೧. ಹೇಳಿದ : (ಕ). ೨. ಹೊಗಳಲು ಅರ್ಹವಾದ. ೩. ಉತ್ತಮವಾದ. ೪. ಕತ್ತರಿಸಲ್ಪಟ್ಟ. ೫. ಕೊಲ್ಲಲ್ಪಟ್ಟ. (ನಾ). ೬. ಕಣದಲ್ಲಿರುವ ಕಾಳು, – ಧಾನ್ಯ. ೭. ಸಸ್ಯಗಳಿಂದ ಬರುವ ಉತ್ಪತ್ತಿ : (ಕ). [ಸಂ.]

**ಶಹ, ಶಹಾ, ಷಹ, ಷಹಾ** (ನಾ). ೧. ಚದುರಂಗದಾಟದಲ್ಲಿ ಪ್ರತಿಪಕ್ಷದ ರಾಜನಿಗೆ ಜಾಗ ಬಿಡಲು ವಿಧಿಸುವಂತೆ ಕಾಯಿ ಇಡುವುದು : ಇದು ಪಾರ್ಥನ ವೀರತ್ವಕ್ಕೆ ಚದುರಂಗದಾಟದೊಳಗಿನ ಕೊನೆಯ ಶಹ – ಪೇದೆಮಾತೇ ಅಲ್ಲವೇ? (ಬದುರ. ೭ ಪ್ರಸ್ತಾವನೆ). ೨. (ಆಲಂ) ನೇರವಾಗಿ ಒಡ್ಡುವ ಅಡ್ಡಿ, – ಆತಂಕ : ಶಿವಾಜಿಯು ನಮಗೆ ನಿಜವಾಗಿಯೇ ಶಹ ಕೊಡಬೇಕೆಂದು ಮಾಡಿರಬಹುದು. ಈ ಪ್ರಸಂಗದಲ್ಲಿ ನಾವು ಶಹಕ್ಕೆ ಕಾಡಶಹವನ್ನು ಕೊಡಲೇಬೇಕು (ಛತ್ರಪ. ೧೯೯). **ಶಹಾ** : ೧. ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ . . . ಶಬ್ದಗಳೆಂದರೆ . . . ಬಂದೋಬಸ್ತ, ಬಂಗಲಾ, ಶಹಾ (ಭಾಷಾಶಾ. ೧೬೬). ೩. ದೊರೆ ; ರಾಜ : (ಕ). **ಷಹ**: ೧. ದೊರೆಗೆ ಷಹ ಕೊಟ್ಟರೆ ಆ ಪ್ಯಾದೇಗೆ ದೇವರೇ ಗತಿ (ದುಂಬಿಕ. ೪). **ಷಹಾ** : ೧. ಸುಲ್ತಾನನಿಗೆ ಇನ್ನೊಂದು 'ಷಹಾ' ಕೊಡುತ್ತೇನೆ (ದೌಲತ್. ೭೮).

[← ಪಾರ. ಶಾಹ್; ಹಿಂ. ಮರಾ. ಶಹ್]

**ಶಹಣೆ, ಶಹಣ್ಯಾ, ಶಹಾಣೆ, ಶಾಣ**$_2$**, ಶಾಣೆ, ಶಾಣೆಯ, ಶಾಣ್ಯಾ, ಶಾಹಣೆ, ಶ್ಯಾಣ, ಶ್ಯಾಣ್ಯಾ** (ನಾ). ೧. ಜಾಣ; ಬುದ್ಧಿವಂತ : ಶಾಮರಾವ್ ಬಲು ಶಹಣೆ. ಹೇಳಿದ್ದನ್ನು ಗ್ರಹಿಸಿದ್ದಾನೆ ಅಂತ ಧೈರ್ಯ (ಮನೋಸಂ. ೮೦) ; ಬಲರಾಮನ ಜನಕರು ತಮ್ಮ ಪುತ್ರರುಗಳು ಬಹಳ ಶಹಣೆಯರು ಎಂದೇ ಹೇಳುವರು (ಮಾಮನ. ೩೬). **ಶಹಣ್ಯಾ**: (ಗು). ೨. ಜಾಣತನದಿಂದ ಕೂಡಿದ; ಚಾಲೂಕಿನ : ಶಹಣ್ಯಾ ಮಕ್ಕಳು ತನ್ನವು! (ಬನಸಿ. ೧೩೦). **ಶಹಾಣೆ** : ೧. "ಶಹಾಣೆ (ಶಾಣೆ) – ಬುದ್ಧಿವಂತ; ವಿಚಾರವಂತ" (ಜಾನಕೋ. ೪೫). **ಶಾಣ**$_2$ : ೧. ಒಳ್ಳೇ ಶಾಣಾ ಇದಾನವನು (ರೂಪಸ. ೧೦೨). **ಶಾಣೆ** : ೧. ವಾರೆ. ಶಾಣೆ ಇದ್ದಿ ನೀನು (ಬದುಜ. ೨). **ಶಾಣೆಯ** : ೧. 'ಶಾಣೆಯತನ' ಪರಾ. **ಶಾಣ್ಯಾ**: ೧. ದೇವರಿದ್ದಾನ, ನಮ್ಮ ಗಣಪತಿ ಕಲಿತು ಶಾಣ್ಯಾ ಆದರ ಸಾಕು (ಜೀವರಂ. ೩೮). **ಶಾಹಣೆ** : ೧. ತಾ ಶಾಹಣೆ ಅಂಬೊ ಸೊಕ್ಕು ಬಹಳ ಅವಗ (ಶ್ರೀರಂಗ. ೪). **ಶ್ಯಾಣ** : ೨. ದೋಸ್ತಿಮಾರ್ಗದಿಂದ ನಮ್ಮ ಕಡೆ ವಬ್ಬ ಶ್ಯಾಣಗೃಹಸ್ಥಗೆ ಕಳುಹಿಸಿ (ರಾಜೇಂದ್ರ. ೯೫). **ಶ್ಯಾಣ್ಯಾ**: ೧. ಕಲಿತು ಚಲೋ ಶ್ಯಾಣ್ಯಾ ಆಗಿದ್ದೀ (ನಾಪೂಲೀ. ೧೩); ಏನ್ ತಿಳೀತ್ಯೆತಿ ಅದರಾಗಲ್ಲಾ ನಿನಗ? ಭಾಳ ಶ್ಯಾಣ್ಯಾ ಅಂತ ತಿಳಕೊಂಡಿಯೇನು? (ಹೊಸಂಸಾ. ೨೫). [← ಮರಾ. ಶಹಾಣಾ]

**ಶಹಣ್ಯಾ** 'ಶಹಣೆ' ನೋ.

**ಶಹನ** (ನಾ). [ಸಂಗೀತ] ಒಂದು ರಾಗದ ಹೆಸರು : ಶಹನ :– ೨೮ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ . . . ಕರುಣಾರಸಪ್ರಧಾನರಾಗ (ಸಂಗೀಚಂ. ೧೫೯).

[ಸಂ. ಶಹನಾ]

**ಶಹನಾಯ್** 'ಶಹನಾಯಿ' ನೋ.

**ಶಹನಾಯಿ, ಶಹನಾಯ್** (ನಾ). ನಾದಸ್ವರದಂತಹ ಒಂದು ಬಗೆಯ ಊದುವ ವಾದ್ಯ : ಹೊಕ್ಕಳ ಹುರಿಯ ಕತ್ತರಿಸಿ ಮುಗಿಯೆ ಶಹನಾಯಿ ಆಗಸದ ಚಿಪ್ಪೊಡೆದು ಜೀವ ತೆರೆಯಿತು ಬಾಯಿ (ನಲಮು. ೭೨-೧೩) ; ಇವರಲ್ಲಿದ್ದ ಶಹನಾಯಿ ಎಂಬ ಚಿಕ್ಕ ಓಲಗವನ್ನು ನುಡಿಸುವವನ ವಾದ್ಯದಲ್ಲಿ ಬಹಳ ಕಡಿಮೆ ದ್ರವ್ಯ ಹಿಡಿಸುತ್ತಿದ್ದಿತು (ಝಾರಾಣಿ. ೭೮). **ಶಹನಾಯ್**: ಡೋಲು, ಶಹನಾಯ್, ತಾಳಗಳು ಸೂಕ್ತ ಹಿಮ್ಮೇಳ ಒದಗಿಸುತ್ತವೆ (ಭಾರಜಾ. ೧೦೯). [← ಪಾರ. ಹಿಂ. ಶಹನಾಈ]

**ಶಹಬಾಸ್, ಶಬಾಸ್, ಶಬಾಸು, ಶಹಬಾಸು, ಶಹಭಾಸ್, ಶಾಬಾಸ್, ಶಾಭಾಸ್, ಶಾಭಾಸು, ಶಾಹಬಾಸು** (ನಾ). ಲೇಸು, ಸರಿ, ಒಳ್ಳೆಯದು ಎಂಬ ಅರ್ಥವನ್ನೊಳಗೊಂಡ ಒಂದು ಕೊಂಡಾಟದ ಮಾತು: ಶತ್ರುವಿಗೆ ಬೆನ್ನು ತೋರಲಿಲ್ಲ ಶಹಬಾಸ್ (ಆರ್ಯಕ. ೬೯). **ಶಬಾಸ್**: ಅತ್ತೆಯನ್ನು ಈಗಲೂ ಹೊಡೆಯುತ್ತಿರುವ ಮಾವನಾದರೆ, ಅಳಿಯನ 'ವೀರತನಕ್ಕೆ' ಸೈಯೆಂದು ಶಬಾಸ್ ಸಹ ಕೊಡುತ್ತಾನೆ (ಹುಚ್ಚುಹು. ೧೨) ; ನಮ್ಮ ಭಾಷೆಯಲ್ಲಿ . . . ಅನ್ಯದೇಶೀಯವೆಂದು ಗುರುತಿಸಲಾಗದ ಶಬ್ದಗಳೆಂದರೆ ಕಚೇರಿ . . . ಶಬಾಸ್ (ಭಾಷಾಶಾ. ೧೬೬). **ಶಬಾಸು** : ಸುರರಿಗಲಗಣಸಾದರನು ಸಂಹರಿಸಿ ಸುರಪತಿಯಿಂ ಶಬಾಸನು ಹರುಷಮುಖದಿಂ ಪಡೆದು (ಕೋಗಯ. ೮-೮). **ಶಹಬಾಸು** : "ಶಹಬಾಸು ವಾಹ್ವಾ, ಭಪ್ಪರೆ (ಶಹಬಾಸುಗಿರಿ ಹೊಗಳಿಕೆ)" (ಜಾನಕೋ. ೪೫). **ಶಹಭಾಸ್**: ಬಾಲಗುರುಗಳು ಅವನಿಗೆ 'ಶಹಭಾಸ್' ಎನ್ನುತ್ತಾರೆ (ಝಾರಾಣಿ. ೧೬). **ಶಾಬಾಸ್**: ಈ ಸುದ್ದಿಯ ದೂತರು ಖಾನಗಬುಹೆ ಶಾಬಾಸೆಂದು . . . ಪೊಗಳಿದನು (ಕಂನವಿ. ೧೬-೪೯) ; ಸಕಲಋಷಿಸಮೂಹಂಗಳೂ ದುಷ್ಕರವಾದ ಭೀಷ್ಮನ ಪ್ರತಿಜ್ಞೆಯನ್ನು 'ಶಾಬಾಸ್' ಎಂದು ಸ್ತುತಿಸಿ (ಕೃವಾಳ. ೧೮೭). **ಶಾಭಾಸ್** : 'ಶಾಭಾಸ್‌ಗಿರಿ' ಪರಾ. **ಶಾಭಾಸು** : ದೊಡ್ಡಸರಕಾರಕ್ಕೆ ಬೇಕಾದ ಉಪಕಾರ ಮಾಡಿ ಶಾಭಾಸು ತೆಗೆದುಕೊಳ್ಳುವಂಥಾದ್ದಕ್ಕೆ . . . ತ್ರಾಣವಿಲ್ಲಾ (ರಾಜೇಂದ್ರ. ೧೮೯). **ಶಾಹಬಾಸು** : 'ಶಾಹಬಾಸುಗಿರಿ' ಪರಾ.

[← ಪಾರ. ಹಿಂ. ಶಾಬಾಶ್ ; ಮರಾ. ಶಾಬಾಸ್]

**ಶಹಬಾಸು** 'ಶಹಬಾಸ್' ನೋ.

**ಶಹಬಾಸುಗಿರಿ, ಶಹಭಾಸ್‌ಗಿರಿ, ಶಾಬಾಸ್‌ಗಿರಿ, ಶಾಭಾಸ್‌ಗಿರಿ, ಶಾಹಬಾಸುಗಿರಿ** (ನಾ). ಹೊಗಳಿಕೆ ; ಪ್ರಶಂಸೆ ; ಮೆಚ್ಚುಗೆ : ಪಾಠಕನು ಅನುಗ್ರಹಬುದ್ಧಿಯಿಂದ ಓದುತ್ತ ಸ್ವಲ್ಪ ಚೆನ್ನಾಗಿ ಬರೆದರೂ ಶಹಬಾಸುಗಿರಿ ಪಡೆಯುತ್ತ . . . ತಾನು ನಿಯಮವ್ರತನಿರತನಾಗುವುದು ಮಹಾಸತ್ವಶಾಲಿಗೇ ಸಾಧ್ಯ (ಬಂಕಿಮ. XXI. ಕವಿಕಾಣಿಕೆ). **ಶಹಭಾಸ್‌ಗಿರಿ** : ಸುಬ್ಬಪೂಜಾರಿ, ಮಕ್ಕಳಂತೆ ಸಾಕಿ, ಬೆಳೆಸಿದ ತರಕಾರಿ ಧಾನ್ಯಗಳನ್ನು ಇಟ್ಟು ಗುರಿಕಾರನು ಶಹಭಾಸ್‌ಗಿರಿಯನ್ನು ಕಲೆಕ್ಟರರಿಂದ ಪಡೆದಿದ್ದಾನೆ (ಚಿಗುಬ. ೨೫). **ಶಾಬಾಸ್‌ಗಿರಿ** : ಅವನ ಕಾರ್ಯದಕ್ಷತೆಗೆ ಮೆಚ್ಚಿ ಅಧಿಕಾರಿಯು ಶಾಬಾಸ್‌ಗಿರಿಯನ್ನು ಕೊಟ್ಟರು (ರೂಢಿ). **ಶಾಭಾಸ್‌ಗಿರಿ** : ಸಾಚಾಸಮು ಅನ್ನಿಸಿ ಶಾಭಾಸ್‌ಗಿರಿ ಪಡೆದಿದ್ದೆ (ಚಂಗೂಲಿ. ೮೩). **ಶಾಹಬಾಸುಗಿರಿ** : ಇಂಗ್ಲಿಷರ ರಾಷ್ಟ್ರೀಯ ಚಿತ್ತದ ಸ್ವರದೊಡನೆ ದನಿಗೂಡಿಸಿ ಅವರು ಬಹುಮಾನ ಶಾಹಬಾಸುಗಿರಿಗಳನ್ನು ಪಡೆದರೇ? (ನಿಬಂಧ. II. ೨೯೭).

[ಶಹಬಾಸು (< ಶಹಬಾಸ್) + – ಗಿರಿ$_2$]

**ಶಹಭಾಸ್** 'ಶಹಬಾಸ್' ನೋ.

**ಶಹಭಾಸ್‌ಗಿರಿ** 'ಶಹಬಾಸುಗಿರಿ' ನೋ.

**ಶಹರ** 'ಶಹರು' ನೋ.

**ಶಹರು, ಶಹರ, ಷಹರ, ಷಹರು** (ನಾ). ನಗರ; ಪಟ್ಟಣ : ಲೋಹ - ಪಾಷಾಣ ನಿರ್ಮಿತ ಶಹರುಗಳ ನಿಶಿತದೀಪ್ತಿ (ಸವ್ಯಧ್ವ. ೨-೧೭); ಗಂಗಾಧರರಾಯನು ಶಹರಿನ ಅರಮನೆಯಲ್ಲಿದ್ದನು (ಝಾರಾಣಿ. ೬). **ಶಹರ** : ಅದು ನೈಸರ್ಗಿಕಸಂಪತ್ತಿನಿಂದ ಕೂಡಿದ ನಾಡು. ಶಹರ ಪಟ್ಟಣಗಳಿಂದ ಅತಿ ದೂರ (ಹೇಮಂತ. ೧) ; ಶಹರಗಳಲ್ಲಿ ಗಿರಣಿ ಕಾರಖಾನೆಗಳಲ್ಲಿ . . . ದುಡಿದು ದುಃಖಪಡುವ ಅಸಂಖ್ಯ ಕೆಲಸಗಾರರೆಲ್ಲರೂ ಒಂದೇ ಬಗೆಯ ದೈನ್ಯದ ದಡ್ಡಿಯಲ್ಲಿ ಕಟ್ಟಿದ ಜೀವಿಗಳು (ಮಾವಾದ. ೧೪೯). **ಷಹರ** : ಮುಂಬಯಿ ಷಹರದಲ್ಲಿ ಅನೇಕ ಪ್ರಕಾರದ ವ್ಯಾಪಾರಗಳು ನಡಿಯುತ್ತವೆ (ಮುಂಬವ್ಯಾ. ೧೨. ಪ್ರಸ್ತಾವನೆ). **ಷಹರು** : ಪುನಹ ಷಹರು ಕಸಬೆ ಸೋಮವಾರದ ಪೇಟೆ (ಎಕ. IX, ಬೆಂಗಳೂ. ೩-೩; 1855); ಬೆಂಗಳೂರುಷಹರು ಮತ್ತು ಲಷ್ಕರುಗಳಲ್ಲಿಯೂ ಮೈಸೂರುರಾಜಧಾನಿಯಲ್ಲಿಯೂ ಮುನಿಸಿಪಾಲಿಟಿಗಳನ್ನೇರ್ಪಡಿಸಿದರು (ಮಹಾಪಂ. II. ೧೧೨).

[← ಪಾರ. ಹಿಂ. ಮರಾ. ಶಹರ್]

**ಶಹಾ** 'ಶಹ' ನೋ.

**ಶಹಾಣೆ** 'ಶಹಣೆ' ನೋ.

**ಶಹಾನಿಶಿ** (ನಾ). ಕೊನೆಯ ನಿರ್ಣಯ ; ಆಖೈರು ತೀರ್ಮಾನ : ಎಡಕಿನ ಮನಿ ರಾಮರಾಯನರ್ನೂ ಕರಸ್ರಿ, ಬಲಕಿನ ಮನಿ ಶ್ಯಾಮರಾಯನರ್ನೂ ಕರಸ್ರಿ. ಆಗೇ ಹೋಗ್ಲಿ ಶಹಾನಿಶಿ (ಹೊಸಂಸಾ. ೧೧೩). [← ಮರಾ. ಶಹನಿಶಹ್, ಶಹಾನಿಶಾ]

**ಶಹಾಪುರಿ** (ನಾ). ಶಹಾಪುರ ಎಂಬ ಊರಿನ ಟಂಕಸಾಲೆಯಲ್ಲಿ ಮುದ್ರಿತವಾದ ನಾಣ್ಯ : ಬ್ರಿಟಿಶ ಸರಕಾರದ ಅಮಲು ಆದ ಬಳಿಕ . . . ಹದಿನಾರು ಪ್ರಕಾರದ ರೂಪಾಯಿಗಳು ನಡಿಯುತ್ತಿದ್ದವು. ಅವು — ೧ಔರಂಗಾಬಾದಿ, ೨. ಬಾಗಲಕೋಟ ಅಥವಾ ಮಲ್ಹಾರಶಾಹಿ, ೩ ಅಂಕುಶೀ, ೪. ಹಲ್ಲಿಶಿಕ್ಕಾ, ೫. ಶಾಹಪುರೀ, ೬. ಕಿತ್ತೂರ ಶಹಾಪುರೀ . . . ೧೬ ಪೀರಖಾನಿ (ಕಛಾಗ. ೨೮೧). [← ಮರಾ. ಶಹಾಪುರೀ = ಶಹಾಪುರವೆಂಬ ಗ್ರಾಮಕ್ಕೆ ಸಂಬಂಧಿಸಿದ]

**ಶಹಾಮೃಗ** (ನಾ). ೧. ಹದ್ದಿನ ತಲೆ, ರೆಕ್ಕೆಗಳು ಮತ್ತು ಸಿಂಹದ ಶರೀರವೂ ಉಳ್ಳುದೆಂದು ನಂಬಲಾದ ಗ್ರೀಕರ ಒಂದು ಪೌರಾಣಿಕ ಪ್ರಾಣಿ : (೩). ೨. ಆಫ್ರಿಕಾ ಮತ್ತು ಅರೇಬಿಯಾದಲ್ಲಿ ಹೆಚ್ಚಾಗಿ ವಾಸಿಸುವ ಒಂದು ಬಗೆಯ ಪಕ್ಷಿ : ಉಷ್ಟ್ರ : ಏಶಿಯ, ಆಫ್ರಿಕಖಂಡಗಳೊಳಗಿನ ವಿಸ್ತೀರ್ಣ ಮರುಪ್ರದೇಶಗಳೇ ಶಹಾಮೃಗದ ಮೂಲಸ್ಥಾನವು (ಮುಂಬಯಿ. ೪ ೧೮೭); ಏಳೆಂಟು ರೂಪಾಯಿಗೆ ಶಹಾಮೃಗದ ಪುಚ್ಛದ ಹ್ಯಾಟು ಕೊಂಡು, ಹಳೆಯದಾದಾಗ ಮಾರಿದರೆ ಒಂದು ಬಿಲ್ಲಿ ಕೂಡ ಬರುವದಿಲ್ಲ (ಗೋಯಾತ್ರೆ. ೩೩). [← ಪಾರ. ಶಾಹೇಮೃಗ ; ಮರಾ. ಶಹಾಮೃಗ]

**ಶಹಾವಲಿ** (ನಾ). ಒಂದು ಬಗೆಯ ಸಸ್ಯ ; ಶತಾವರಿ : ಶೀಬಾರಿಬೇರು, ಶಹಾವಲಿ, ಆಷಾಢಿಬೇರು, ಆಹೇರು ಮಚ್ಚಿಗೆಗಡ್ಡೆ (ಮೃಚಿಗಿ. ೧೦-೧೭೮). [?]

**ಶಳ** 'ಶಲ' ನೋ.

**ಶಳಲು** (ಕ್ರಿ).(?) : ಒಮ್ಮೆ ಯಳಲುವರೊಮ್ಮೆ ಬಳಲುವರೊಮ್ಮೆ ತೊಳಲುವರೊಮ್ಮೆ ಶಳಲುವರೊಮ್ಮೆ ಮೂರ್ಛಿಪರೊಮ್ಮೆ ಚೇತರಿಸೊಮ್ಮೆ ಪೊರಳುವರು (ತಿಮ್ಮಸ್ತ್ರೀ. ೩-೧೭). [?]

**ಶಾಂಕರಿ** (ನಾ). ಶಂಕರನ ಪತ್ನಿ ; ಪಾರ್ವತಿ : ಶಾಂಕರಿಗೆಸದುದು ಮುಂದಲೆಯೊಳಗರಳಲೆ ಬಹುರತ್ನನೂತ್ನ ಕಾಂತಿಗಳಿಂದಂ (ಗಿರಿಕ. ೩-೮೧). [< ಸಂ. ಶಂಕರೀ]

**ಶಾಂಖಿಕ** (ನಾ). ಶಂಖದಿಂದ ಒಡವೆಗಳನ್ನು ಮಾಡುವವನು : "ಶಾಂಖಿಕಃ, ಕಾಂಬವಿಕಃ — ೨ ಶಂಖದಿಂದ ಕೈಬಳೇ ಮೊದಲಾದ್ದನ್ನು ಮಾಡಿ ಮಾರುವವನ ಪೆಸರು" (ಸಿದ್ಧಾಂತಿ. ೩೧೦). [ಸಂ.]

**ಶಾಂಡಿಲ್ಯ** (ನಾ). ೧. ಒಂದು ಬಗೆಯ ಮರ ; ಬಿಲ್ವಪತ್ರೆಯ ಮರ : "ಬಿಲ್ವಃ, ಶಾಂಡಿಲ್ಯಃ , ಶೈಲೂಷಃ, ಮಾಲೂರಃ, ಶ್ರೀಫಲಃ — ೫ ಬಿಲ್ಲವತ್ತದ ಮರ, ಬಿಲ್ವವೃಕ್ಷ" (ಸಿದ್ಧಾಂತಿ. ೧೧೯). ೨. ಒಬ್ಬ ಮಹರ್ಷಿಯ ಹೆಸರು: ಶಾಂಡಿಲ್ಯನೆಂಬ ಮುನಿಯೊರ್ವನತ್ಯಂತಪಾಷಂಡಮತಮಂ ಹರಿಸದಿಂ ನಗಳ್ಚಿ (ಆರಾಚ. ೩-೮-೯). [ಸಂ.]

**ಶಾಂತ** (ಗು). ೧. ಉಪಶಮನಗೊಂಡ; ಸಮಾಧಾನ ಹೊಂದಿದ. ೨. ತಳಮಳವಿಲ್ಲದ ; ಕ್ಷೋಭೆಯಿಲ್ಲದ : ಚಿದ್ರಾಮಾವರಕಾಂತ ಶಾಂತಶಿವನಂ ಸೋಮಾಭಿರಾಮಾಂಗನಂ ಹೃದ್ರಾಜೀವದೊಳಿಟ್ಟು ನಾಡೆ ನೆನೆದಂ ಮುದ್ರಾಜನುರ್ವೀಶ್ವರಂ (ಪಮ್ಮಾರ. ೨-೭); ಶಾಂತಗಾಂಭೀರ್ಯದಲಿ, ಭದ್ರರೂಪದಲಿ, ತನುಕಾಂತಿಯಲಿ ಮೆರೆವನಾ ಶ್ರೀರಾಮಚಂದ್ರನಂಬರಮಹಾಮಂಡಲಮ ಮೂರ್ತಿವೆತ್ತಂತೆ (ಶ್ರೀರಾಮಾ. ೨೬-೬೮೧). ೩. ಅಂತ್ಯವಾದ; ಕೊನೆಗೊಂಡ. ೪. (ದೀಪ ಮೊದಲಾದುವುಗಳ ವಿಚಾರದಲ್ಲಿ) ನಂದಿದ ; ಆರಿದ. ೫. ಮೃದುವಾದ ; ಕೋಮಲವಾದ. ೬. ಸಾಧುವಾದ; ಸಭ್ಯ. ೭. ವಾಸಿಯಾದ; ಗುಣವಾದ. ೮. ತಡೆಯಲ್ಪಟ್ಟ; ನಿಲ್ಲಿಸಲ್ಪಟ್ಟ. ೯. ಸತ್ತ; ಗತಿಸಿದ. ೧೦. ನಿಶ್ಶಬ್ದವಾದ; ಸದ್ದಿಲ್ಲದ. (ನಾ). ೧೧. ಪಂಚೇಂದ್ರಿಯಗಳನ್ನು ಗದ್ದವನು; ಜಿತೇಂದ್ರಿಯ: ಬಲುಮೊಲೆಯ ಸೋಂಕಿನಲಿ ಶಾಂತರ ತಲೆಕೆಳಕ ಮಾಡುವವು (ಕುಮಾ.ಅ. ೧೮-೧೪). ೧೨. ಪಶ್ಚಿಮ ದಿಕ್ಕು; ಪಡುವಲು: ಮರಸರ್ಪಂ . . . ಶಾಂತದೊಳ್ ತೋರ್ಪೊಡೆ ನೃಪತಿ ಜಯಂ (ಲೋಕೋಪ. ೪-೪೦). ೧೩. [ಕಾವ್ಯಮೀ] ನವರಸಗಳಲ್ಲಿ ಒಂದು : ವೀರಾದ್ಭುತ ಕರುಣಾ ಶೃಂಗಾರಭಯಾನಕರೌದ್ರ ಬೀಭತ್ಸಮಹಾಸಾರತರ ಹಾಸ್ಯಶಾಂತಾಧಾರಂ ನವವಿಧವಿಕಲ್ಪಮಾ ರಸಮಾರ್ಗಂ (ಕವಿರಾ. ೩-೧೮೮); ಸಮಭಾವ ಪ್ರಭವಂ ಶಾಂತಮಕ್ಕುಮಂತಾ ಸಮತ್ವಮುಂ ವರ್ತಿಸುಗುಂ ಸಮನಿಸಿ ಸಮ್ಯಗ್ಜ್ಞಾನಂ ತಮಮಂ ರಾಗಮುಮನಲೆದು ತೊಲಗಿಸೆ ಮನದಿಂ (ಕಾವ್ಯಾವ. ೮೨೮). ೧೪. [ತತ್ತ್ವಶಾ] ಶಾಂತ, ಉದಿತ, ಮತ್ತು ಅವ್ಯಪದೇಶ್ಯ ಎಂಬ ಮೂರುಬಗೆಯ ಭಾವನೆಗಳಲ್ಲಿ ಒಂದು : ಶಾಂತ ಉದಿತ ಅವ್ಯಪದೇಶ್ಯಗಳೆಂಬ ಈ ಮೂರುವಿಧ ಭಾವನೆಗಳಿಗೆ ಫಲವಾಗಿ ಜ್ಯೋತಿಷ್ಮತೀ ಎಂಬುದು ನಾಲ್ಕನೆಯ ಸಿದ್ಧಿ. ಇದರಲ್ಲೇ ವಿವೇಕ ಸಾಕ್ಷಾತ್ಕಾರವು (ಹಿಂದಿಸಾ. ೧೦೩).

**ಶಾಂತಂಪಾಪಂ** = ಕೆಡಕು ಪರಿಹಾರವಾಗಲಿ, ಅಮಂಗಳವುಂಟಾಗದಿರಲಿ ಎಂಬ ಅರ್ಥದಲ್ಲಿ ಹೇಳುವ ಮಾತು : ಶಾಂತಂ ಪಾಪಂ, ಶಾಂತಂ ಪಾಪಂ, ಅಕ್ಕನಿಗೆ ಮಂಗಳವಾಗಲಿ . . . ಎಂತಹ ಭೀಕರವಾದ ಘಾತನ್ನಾಡಿದೆ! (ಶಾಂತಲಾ. ೬೭). [ಸಂ.]

**ಶಾಂತಕಲ್ಯಾಣಿ** (ನಾ). [ಸಂಗೀತ] ಒಂದು ರಾಗದ ಹೆಸರು: ಶಾಂತಕಲ್ಯಾಣಿ ರಾಗವು ಯಾವಾಗಲೂ ಹಾಡುವಂತಹವು (ಚತುಪ್ರ. ೧೪೩). [ಸಂ. ಶಾಂತಕಲ್ಯಾಣೀ]

**ಶಾಂತಗುಣ** (ನಾ). ೧. ಸಮಾಧಾನವಾಗಿರುವ ಗುಣ ; ಸಮಚಿತ್ತ. ೨. ಸೌಮ್ಯಸ್ವಭಾವವುಳ್ಳವನು : ಶಾಂ [ಪಾಠಾಂ. ಕಾಂ] ತಗುಣನಟ್ಟು ಪೋಗಿ ಕರಂ ತಡೆದಂ ಸಚಿವನೇಕೆ ತಡೆದನದಲ್ಲಿರ್ಪಂ ತಿಳಿಪಿಮೆಂದೊಡೆ (ಪಾರ್ಶ್ವಪು. ೪-೮೪). [ಸಂ.]

**ಶಾಂತತೆ** (ನಾ). = ಶಾಂತಗುಣ ೧ : ಶಾಂತತೆಯನೆ ತಳೆದುಂ ರೂಪಿಂತಿದು ಕಾರ್ಗಾಲ ಮಿಂಚಿದನ ಕಣ್ ಕೋರ್ಮೆಪಂತಿರ ಪೊಳೆಯುತ್ತಿರ್ದಪುದೆಂತಕ್ಕುಮೊ ತಪದ ಮಹಿಮೆ ಮುನಿಪುಂಗವನಾ (ಕಾದಂಪೂ. ೨೪೭); ಅಲರ್ವ ಮುಕ್ತಿಯದೆಲ್ಲಿಯದು ನಿಶ್ಚಲಿತ ಶಾಂತತೆ ಎಲ್ಲಿ ಹೊಕ್ಕಡೆ ತೊಲಗುವುದೆ ಸಕಳೇಶ ನೀ ಮಾಡಿದ ಮಹಾಮಾಯೆ (ಬಸಪು. ೨೦-೨೫). [ಸಂ. ಶಾಂತತಾ]

**ಶಾಂತಪ್ರಾಸ** (ನಾ). [ಛಂದ] ಒಂದು ಬಗೆಯ ಪ್ರಾಸ; ಭಿನ್ನಸ್ವರಗಳೊಡನೆ ಸೇರಿದ ವಿಜಾತೀಯ ದ್ವಿತ್ವಪ್ರಾಸಾಕ್ಷರ : ಶಾಂತಪ್ರಾಸದ ಭೇದಮದಿಂತಕ್ಕುಂ ವರ್ಗದಕ್ಕರಂಗಳ್ ನಾಲ್ಕುಂ ಸಂತಮಿರೆ ಪೇಟ್ಟ ತಾಣದೊಳಂತಕ್ಕುಂ ಪ್ರಾಕ್ತನೋಕ್ತ ವರ್ಗಪ್ರಾಸಂ (ಕವಿರಾ. ೨-೩೭). [ಸಂ.]

**ಶಾಂತಬಿಲಹರಿ** (ನಾ). [ಸಂಗೀತ] ಒಂದು ರಾಗದ ಹೆಸರು : ವಸಂತಭೈರವಿ ಶಾಂತಬಿಲಹರಿ ನಾದರಾಮಕ್ರಿಯೆಯೆಂಬ ಮೂಱುಂ ರಾಮಕ್ರಿಯೆಯ ಮಿಶ್ರರಾಗಂಗಳು (ವಿವೇಕ. ೨೩೫). [ಸಂ. ಶಾಂತಬಿಲಹರೀ]

**ಶಾಂತಮನ** (ನಾ). ನೆಮ್ಮದಿಯಾದ ಮನಸ್ಸುಳ್ಳವನು ; ನಿರ್ವ್ಯಾಕುಲಚಿತ್ತ: ಬುಧಸಂತತಿಗಪ್ಪಂತು ಪೇಟ್ದನಿದಂ ಶಾಂತಮನಂ ಕವಿತಾಗುಣೋದಯಂ (ಕಾವ್ಯಾವ. ೪೨೨). [ಸಂ.]

**ಶಾಂತಮಾನಸ** (ನಾ). = ಶಾಂತಮನ : ಈ ನರೇಶ್ವರಂ . . . ಪ್ರಜೆಗಳಂ ನಿಜಪುತ್ರರ ಪೋಷಿಪಂದದಿಂ ನಡಸಿ ವಿವಿಕ್ತಮಾದೆಡೆಯ ಸೇವಿಸುವಂ ಸಲೆ ಶಾಂತಮಾನಸಂ (ಶಾಕುಂತ. ೬೨-೧೧೫). [ಸಂ.]

**ಶಾಂತರಸ** (ನಾ). [ಕಾವ್ಯಮೀ] ನವರಸಗಳಲ್ಲಿ ಒಂದು : ಕೇಸರಿಣೀಸ್ತನ್ಯ ಮುನನ್ನವನ್ನಗಜಪೋತಾನೀಕಮುಂಡಾಡೆ ಶಾಂತರಸಂ ಪೊಂಪುಟಿವೋದುದಾ ಮುನಿಪನಿಂ ತತ್ಕಾಂತಕಾಂತಾರದೊಳ್ (ಆದಿಪು. ೯-೯೭); ಅಭಿನವಗುಪ್ತನ ಕಾಲಕ್ಕೆ . . . ಅವನು ಶಾಂತರಸವನ್ನು ಒಪ್ಪಿ ಅದಕ್ಕೆ ಅಗ್ರಸ್ಥಾನವನ್ನು ಕೊಟ್ಟನು (ಭಾರಮೀ. ೪೧೭). [ಸಂ.]

**ಶಾಂತಾಂತರಂಗ** (ನಾ). = ಶಾಂತಮನ : ಓಮಚೂಳಂ ಕುರುಳ್ವರಿಯೋಡಿದನಿತ್ತ ಶಾಂತಾಂತರಂಗಂಗೆ ಕನಕಶಾಂತಿಮುನಿಮುಖ್ಯಂಗೆ ಪೊಡೆವಟ್ಟು ಧರಣೇಂದ್ರಂ ಪೋಗೆ (ಶಾಂತಿಪು. ೯-೨೦ ವ). [ಸಂ.]

**ಶಾಂತಾಂಶು** (ನಾ). ಸೌಮ್ಯವಾದ ಕಿರಣಗಳುಳ್ಳವನು ; ಚಂದ್ರ : ವಾರಕಾಂತೆಯರು ಶಶಿಯ ತಮ್ಮಾಸ್ಯಕ್ಕೆ ಪೋಲಿಸುವರೆಂದು ಗಗನಕ್ಕೆ ನೆಗದು ಶಾಂತಾಂಶುವಿನ ನೋಡಿರಮುಮೆಂದು ಮರಳಿ ಬರ್ಪಂತೆ . . . ಉಯ್ಯಲೆಯ ಜಡಿದೊದೆದು ತೂಗತಲಿರ್ದರಂಬರವ ಚುಂಬಿಪಂತೆ (ನವಮೋ. ೧೭-೩೬). [ಸಂ.]

**ಶಾಂತಾಗಮ** (ನಾ). [ಶೈವ] ಇಪ್ಪತ್ತೆಂಟು ದಿವ್ಯಾಗಮಗಳಲ್ಲಿ ಒಂದು : ಆ ಸಿದ್ಧಾಂತಭೇದಂಗಳಾವಾವವೆಂದೊಡೆ ಕಾಮಿಕಾಗಮ . . . ಶಾಂತಾಗಮ ಸರ್ವೋಕ್ತಾಗಮ ಪಾರಮೇಶ್ವರಾಗಮ ಕಿರಣಾಗಮ ವಾತೂಲಾಗಮವೆಂಬವೇ ಇಪ್ಪತ್ತೆಂಟು ದಿವ್ಯಾಗಮಂಗಳಕ್ಕುಂ (ವಿವೇಕ. ೬೨). [ಸಂ.]

**ಶಾಂತಾತ್ಮ** (ನಾ). = ಶಾಂತಮನ : ಶಾಂತಾತ್ಮ ಮದುವೆನಿಲ್ ನೀ ನಿಂತನ್ನ ಗೃಹಸ್ಥಧರ್ಮದಿಂದಂ ನೀನೆಂತಂತೆ ಸಲೆ ನೆಗಟ್ ಜಗತೀಸಂತತಿ ನಿಲ ನಿನ್ನ ಧರ್ಮಸಂತತಿ ನಿಲ್ಕುಂ (ಆದಿಪು. ೬-೧೩) ; ಶಾಂತಾತ್ಮಂಗೆಸದುದು ತಪಂ (ಚಂದ್ರಪ್ರ. ೧೧-೧೦); ಶಾಂತಾತ್ಮ ನಿನ್ನ ಸುತೆ ದುಷ್ಯಂತನ ಕೈವಿಡಿದು ಧರಿಸಿ ಗರ್ಭವನುರ್ವಿಸಂತೋಷಾರ್ಥಂ ಮೆರೆದಪಳ್ (ಶಾಕುಂತ. ೪೯-೪೨). [ಸಂ. ಶಾಂತಾತ್ಮನ್]

**ಶಾಂತಿ** (ನಾ). ೧. ನೆಮ್ಮದಿ ; ಚಿತ್ತಸ್ವಾಸ್ಥ್ಯ. ೨. ತಾಳ್ಮೆ ; ಸ್ಮರಣೆ : ಶಾಂತಿಯೇ ಮನ ನಿಮ್ಮ ಚರಣದ ಚಿಂತೆಯೇ ಮನವಾರ್ತೆ (ಕುಮಾ.ಅ. ೫-೧೯); ಶಾಂತಿಯಿಂ ಸುಖ ದುಃಖವುಭಯವನಿಂತು ಸೈರಿಸುವುದೆ ತಿತಿಕ್ಷೆಯು (ಗಗತಾ. ೩-೨೫). ೩. (ಭಾವೋದ್ರೇಕ ಮೊದಲಾದುವನ್ನು) ಉಪಶಮನ ಮಾಡುವುದು; ಸಮಾಧಾನಪಡಿಸುವುದು. ೪. ಅನಿಷ್ಟಪರಿಹಾರಕ್ಕಾಗಿ ಮಾಡುವ ಜಪ, ತಪ, ಹೋಮ ಮುಂತಾದ ವಿಧಿ : ಏನ ಮಾಡುವೆ ಎನ್ನ ಪುಣ್ಯದ ಫಲವು ಶಾಂತಿಯ ಮಾಡಹೋದರೆ ಕೂಡ ಬೇತಾಳನಾಯಿತ್ತು (ಬಸವ. ೩೨೬) ; ತತ್ಸಮಯೋಚಿತಶಾಂತಿಯನುತ್ಸವದಿಂ ಮಾಡಿ ವಿವಿಧರಕ್ಷಾವಿಧಿಯಂ ವತ್ಸಂಗೆ ನೆಗಟ್ಟು ಸಕಲಸುಹೃತ್ಸಂತತಿ ಪರಸೆ ನಂದನನಿರ್ದಂ ಸುಖದಿಂ (ಜಗಪಿ. ೩-೨೬) ; ಆ ನುಡಿಗೆ ರಾಜಂ ನೊಂದು, ಮೇಣ್ ಶಾಂತಿಯೇನೆಂಬುದುಂ (ರಾಮಾಶ್ವ. ೬೬-೨೬). ೫. ಒಳ್ಳೆಯ ಅದೃಷ್ಟ ; ಸೌಭಾಗ್ಯ. ೬. ಕೋಮಲತೆ ; ಮೃದುತ್ವ: (ಕಿ). ೭. ವಿರಾಮ ; ವಿಶ್ರಾಂತಿ : (ಕಿ). ೮. ಮೌನ; ನೀರವತೆ: (ಕಿ). ೯. ಯುದ್ಧದ ಗಲಭೆಯಿಲ್ಲದ ಪರಿಸ್ಥಿತಿ : ಅಕ್ಕಪಕ್ಕದ ದೇಶಗಳು ಪಂಚಶೀಲವನ್ನು ಅನುಸರಿಸಿದರೆ ಶಾಂತಿ ಸಾಧ್ಯವಾಗುತ್ತದೆ (ರೂಢಿ). ೧೦. (ಕರಾ) ದೇವಾಲಯದ ಅರ್ಚಕ, – ಪೂಜಾರಿ : ಅವರಿಗೆ ಮಲೆಯಾಳದ ತಿರಿಚೂರಿನಲ್ಲಿ ಶಾಂತಿಯ ಕೆಲಸ (ಮೂಮುಗು. ೧೨). ೧೧. [ಶೈವ] ನಿಯತಿ, ವಿದ್ಯಾ, ಪ್ರತಿಷ್ಠಾ, ಶಾಂತಿ ಮತ್ತು ಶಾಂತ್ಯತೀತ ಎಂಬ ಪರಶಿವನ ಐದು ಕಲೆಗಳಲ್ಲಿ ಒಂದು: ಷಡ್ಗುಣೈಶ್ವರ್ಯ ಸಂಪನ್ನನಾದ ಪರಮೇಶ್ವರನು ನಿಯತಿ, ವಿದ್ಯಾ, ಪ್ರತಿಷ್ಠಾ, ಶಾಂತಿ, ಶಾಂತ್ಯತೀತಗಳೆಂಬ ಐದು ಕಲೆಗಳಿಗಾಶ್ರಯವಾದ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನಮುಖಗಳಿಂದ . . . ಭಕ್ತಾನುಗ್ರಹ ಮಾಡುತ್ತಾನೆಂಬುದು ಶೈವಾಗಮದ ಸಿದ್ಧಾಂತ (ಭಾರದ. ೭೫). ೧೨. [ಜೈನ] ಇಪ್ಪತ್ತುನಾಲ್ಕು ಜನ ತೀರ್ಥಂಕರರಲ್ಲಿ ಹದಿನಾರನೆಯವನು : ತಜ್ಜಿನಚಕ್ರವರ್ತಿ ಜಿನನಾಥಂ ಷೋಡಶಂ ಧರ್ಮಚಕ್ರ ನಿಯುಕ್ತಂ ಭರತೋರ್ವಿಗಿಂತು ಸಲೆ ನೋಂತಂ ಶಾಂತಿತೀರ್ಥೇಶ್ವರಂ (ಶಾಂತಿಪು. ೧-೧೬); ವೃಷಭ ಅಜಿತ . . . ಶಾಂತಿ . . . ವರ್ಧಮಾನರೆಂಬಿಪ್ಪತ್ತುನಾಲ್ಕು ತೀರ್ಥಕರರ್ (ಚಾಪುಂಪು. ೪೦೨). [ಸಂ.]

**ಶಾಂತಿಕ** (ನಾ). = ಶಾಂತಿ ೪ : ಶಾಂತಿಕ ಪೌಷ್ಟಿಕಕ್ರಿಯಾಕುಶಲನಂ ಧರ್ಮಕಾರ್ಯಾದಿ ಕುಶಲನುಮಪ್ಪ ಬುದ್ಧಿಸಾಗರನೆಂಬ ಪುರೋಹಿತರತ್ನಮುಂ (ಆದಿಪು. ೧೧-೩ ವ) ; ಷಟ್ಪದ ನಿಬದ್ಧಝುಂಕಾರೈಕಾಕ್ಷರದಿವ್ಯಮಂತ್ರದಿಂದಂ ವಿರಚಿಸಿದನೊ ಮನಸಿಜಂಗೆ ಮಧು ಶಾಂತಿಕಮಂ (ಮಲ್ಲಿಪು. ೫-೫) ; ದಾನಂಗೊಟ್ಟಾ ದ್ವಿಜರಿಂ ಗೆಯ್ಸಿಸುಗೆ ಹೋಮಮಂ ಶಾಂತಿಕಮಂ (ಅಶ್ವಶಾ. ೪-೨೫). [ಸಂ.]

**ಶಾಂತಿಕಕ್ರಿಯೆ** (ನಾ). ಅನಿಷ್ಟಪರಿಹಾರಕ್ಕಾಗಿ ಮಾಡುವ ದಾನ, ಧ್ಯಾನ, ಪೂಜೆ, ಸಂತರ್ಪಣೆ ಮೊದಲಾದ ಕರ್ಮ: ಭಗವದರ್ಹದಭಿಷೇಕ ಮುನಿಪೂಜನ . . . ಸಂತರ್ಪಣಾದಿ ಶಾಂತಿಕಕ್ರಿಯೆಗಳಂ ನೆಗಳ್ದು (ಆದಿಪು. ೧೫-೪೮ ವ). [ಸಂ. ಶಾಂತಿಕಕ್ರಿಯಾ]

**ಶಾಂತಿಕರ್ಮ** (ನಾ). = ಶಾಂತಿಕಕ್ರಿಯೆ : ಸಕಲಮಹೀವಲಯಕ್ಕೆ ಶಾಂತಿಕರ್ಮಂ ಬಲಮನಿಸಲ್ ಜಾತಕರ್ಮಮೇಂ ನೆಱೆದತ್ತೋ (ಆದಿಪು. ೧೧-೫); ಗೋಪಿ ಬಂದು . . . ತತ್ಕಮಳಾಕ್ಷನನೆತ್ತಿ ಕೊಂಡು ಭೂಂಕರಿಸಿ ನಿಜೇಶ್ವರಂಗಱಿಪಿ ಮಾಡಿಸಿದಳ್ ಬಹುಶಾಂತಿ ಕರ್ಮಮಂ (ಜಗಪಿ. ೩-೩೨); ಸ್ಮೃತಿಗಳು ಬ್ರಹ್ಮಚಾರಿಯ ಜೀವನ . . . ಆಪದ್ಧರ್ಮ, ಪ್ರಾಯಶ್ಚಿತ್ತ ಮತ್ತು ಶಾಂತಿಕರ್ಮಗಳನ್ನೂ ವಿವರಿಸುತ್ತವೆ (ಭಾರದ. ೫೭). [ಸಂ. ಶಾಂತಿಕರ್ಮನ್]

**ಶಾಂತಿಕೆ** (ನಾ). ಸಮಚಿತ್ತ ; ಸಮತೆ: ವಿವೇಕದಿಂಪು ವಿಕಸಿತಸುಮತಿಯಲಂಪು ಶಾಂತಿಕೆಯರಳ ಪೊಸಕಂಪು (ಬಸಪು. ೬-೮). [ಶಾಂತ + – ಇಕೆ]

**ಶಾಂತಿಧನ** (ನಾ). ನೆಮ್ಮದಿಯೇ ಸಂಪತ್ತಾಗಿ ಉಳ್ಳವನು : ಶಾಂತಿಪುರಾಣದ ನಿರ್ವಾಣಂ ತಕ್ಕುದೆ ಮಲ್ಲಪಯ್ಯನಿಂ ತದನುಜನಿಂ ಶಾಂತಿಧನ ಪುನ್ನಮಯ್ಯನಿನೇಂ ತಮ್ಮುತ್ತಿರ್ವರುಂ ಕೃತಾರ್ಥರೊ ಜಗದೊಳ್ (ಶಾಂತಿಪು. ೧-೫೨). [ಸಂ.]

**ಶಾಂತಿಪರ್ವ** (ನಾ). ೧. ಸಮಾಧಾನದ ಉತ್ಸವ, – ಹಬ್ಬ : ವೇದವಿದುರುದ್ಯೋಗ ಪರ್ವಂ ಪೇದಿಸುವರಿಗೆ ಶಾಂತಿಪರ್ವಂ ಮೇದಿನಿಯೊಳಖಿಳಾಗಮಜ್ಞರ ಕರ್ಣಪರ್ವವಿದು (ಬಸಪು. ೫-೨). ೨. ಮಹಾಭಾರತದ ಹನ್ನೆರಡನೆಯ ಪರ್ವ; ಯುಧಿಷ್ಠಿರನಿಗೆ ಭೀಷ್ಮನು ಸಮಾಧಾನ ಹೇಳುವ ಪರ್ವ: ಕರ್ನಾಟ ಕೃಷ್ಣರಾಯಭಾರತಕಥಾಮಂಜರಿ ಯೊಳ್ ಶಾಂತಿಪರ್ವವು ಸಮಾಪ್ತವಾದುದು (ತಿಮ್ಮಶಾಂ. ೧೦-೮೬ ವ). [ಸಂ. ಶಾಂತಿಪರ್ವನ್]

**ಶಾಂತಿಪಾಠ** (ನಾ). ೧. ಶಾಂತಿಮಂತ್ರಗಳನ್ನು ಪಠಿಸುವಿಕೆ : "ಅಗ್ನಯೇ ನಮಃ" ಎಂಬ ಶಾಂತಿಪಾಠವನ್ನು ಒಂದು ಶಾಸನದಲ್ಲಿ ಕಾಣಬಹುದಾಗಿದೆ (ಶಾಸಗಿ. ೬೬). ೨. ಶಾಂತಿಯನ್ನು ಸಾರುವುದು : ಭಾರತದ ಶಾಂತಿಪಾಠದಿಂದಲೇ ಜಗತ್ತು ಉಳಿಯಬಲ್ಲುದೆಂದು ಪಾಶ್ಚಾತ್ಯರೂ ಅರಿತುಕೊಳ್ಳುತ್ತಿದ್ದಾರೆ (ಭಾರದ. ೫೪೧). [ಸಂ.]

**ಶಾಂತಿಪಾಲಕ** (ನಾ). ನೆಮ್ಮದಿಯನ್ನು ಕಾಪಾಡುವವನು : ಆ ಬಡಾವಣೆಯಲ್ಲಿ ಉಂಟಾದ ಕೋಮುಗಲಭೆಯು ಹಲವಾರು ಶಾಂತಿಪಾಲಕರಿಂದ ನಿಂತಿತು (ರೂಢಿ). [ಸಂ.]

**ಶಾಂತಿಪಾಲನೆ** (ನಾ). ನೆಮ್ಮದಿಯನ್ನು ರಕ್ಷಿಸುವುದು : ಚುನಾವಣೆಯ ಸಮಯದಲ್ಲಿ ನಾಗರಿಕರು ಶಾಂತಿಪಾಲನೆಯನ್ನು ಮಾಡಬೇಕೆಂದು ಹಿರಿಯ ಪೋಲೀಸ್‌ಅಧಿಕಾರಿಯು ಮನವಿ ಮಾಡಿಕೊಂಡಿದ್ದಾರೆ (ರೂಢಿ). [ಸಂ. ಶಾಂತಿಪಾಲನ]

**ಶಾಂತಿಭಂಗ** (ನಾ). ನೆಮ್ಮದಿಯ ನಾಶ; ಗೊಂದಲ : ಸಭೆಯಲ್ಲಿ ಶಾಂತಿಭಂಗ ಮಾಡಿದವರನ್ನು ಹೊರಹಾಕಲಾಯಿತು (ರೂಢಿ). [ಸಂ.]

**ಶಾಂತಿಮಂತ್ರ** (ನಾ). ೧. ಅನಿಷ್ಟನಿವಾರಣೆಗಾಗಿ (ವೈದಿಕಧರ್ಮದಲ್ಲಿ) ಪಠಿಸುವ ಕೆಲವು ಮಂತ್ರಗಳಲ್ಲಿ ಒಂದು. ೨. (ಆಲಂ) ಸಹನೆಯ ಉಪದೇಶ : "ಹಾಗೆಲ್ಲ ಹೊಡೆದಾಡಬಾರದು, ಇದರಿಂದ ಒಳ್ಳೇದಾಗೋಲ್ಲ" ಎಂದು ಮಾತ್ರ ಹೇಳಿದ. ಇನ್ನು ಹೆಚ್ಚಾಗಿ ಅವನಿಗೆ ಶಾಂತಿಮಂತ್ರವನ್ನು ಬೋಧಿಸಿ ಪ್ರಯೋಜನವಿರಲಿಲ್ಲ (ಮಾರ್ಗದ. ೧೦೪). [ಸಂ.]

**ಶಾಂತಿಮಜ್ಜನ** (ನಾ). ಅನಿಷ್ಟನಿವಾರಣಾರ್ಥವಾಗಿ ನಡೆಸುವ ಶಾಂತಿಕರ್ಮದ ಸಂದರ್ಭಗಳಲ್ಲಿ ಮಾಡುವ ಮಂತ್ರಪೂತವಾದ ತೀರ್ಥೋದಕದ ಸ್ನಾನ: ಶೀತಳೋದಕವಿಯೆಲೆ ಶಾಂತಿಮಜ್ಜನವೆರೆದನಸುರೇಂದ್ರನು (ಸವಮೂ. ೧೯-೨೨). [ಸಂ.]

**ಶಾಂತಿಮರ** (ನಾ). ಒಂದು ಬಗೆಯ ಮರ : ತಾರೇಮರ, ಶಾಂತಿಮರ (ಮೈಜಿಗ. ೭೪-೧೫೧೧). [← ತುಳು. ಶಾಂತಿಮರ, ಸಾಂತಿಮರ]

**ಶಾಂತಿಮುದ್ರೆ** (ನಾ). ಮಂತ್ರಶಾಸ್ತ್ರ ಪ್ರಸಿದ್ಧವಾದ ಒಂದು ಬಗೆಯ ಹಸ್ತಮುದ್ರೆ: ಶಾಂತಿಮುದ್ರೆ ಆವಾಹನಮುದ್ರೆ . . . ಆಚ್ಛಾದನಮುದ್ರೆ ಸಂಹಾರಮುದ್ರೆಯೆಂಬಾದಿ ಯಾಗಿ ಸಕಲಮುದ್ರೋಪಮುದ್ರಾಬಂಧಲಕ್ಷಣಂಗಳಂ ಗುರುಮುಖದಿಂದಱಿತು (ವಿವೇಕ. ೧೦೩). [ಸಂ. ಶಾಂತಿಮುದ್ರಾ]

**ಶಾಂತಿವಲಯ** (ನಾ). ೧. ಯುದ್ಧದ ಚಟುವಟಿಕೆಗಳಿಲ್ಲದ ಪ್ರದೇಶ; ಯುದ್ಧವಿರಾಮ ಪ್ರದೇಶ : ಆ ಪ್ರದೇಶವನ್ನು ಶಾಂತಿವಲಯವೆಂದು ಘೋಷಿಸಲಾಗಿದೆ (ರೂಢಿ). ೨. [ಭೂಗೋಳ] ಒಂದು ಭೂಪ್ರದೇಶ : ಈಶಾನ್ಯ ವಾಣಿಜ್ಯಮಾರುತ ಕ್ಷೇತ್ರದ ಉತ್ತರತುದಿಯಲ್ಲಿರುವ ಶಾಂತಿವಲಯಗಳು (Horse-Latitudes. ೪೦೫೬). [ಸಂ.]

**ಶಾಂತಿವಾಚನ** (ನಾ). ಮಂಗಳಕರವಾದ ಪಠನ : ಸುಲಗ್ನಾಸ್ಸಾವಧಾನ, ಸುಮುಹೂರ್ತಾಸ್ಸಾವಧಾನ ಎಂದು ಪುರೋಹಿತರೂ ಬ್ರಾಹ್ಮಣರೂ ಶಾಂತಿವಾಚನ ಮಾಡುತ್ತಿರಲು . . . ತೆರೆಯು ಒಂದು ಪಕ್ಕಕ್ಕೆ ಸರಿಯಿತು (ಶಾಂತಲಾ. ೧೦೮). [ಸಂ.]

**ಶಾಂತೆ** (ನಾ). ೧. ಪಾರ್ವತಿಯ ಹೆಸರು: ಇದೇ ಶಕ್ತಿಯೇ . . . ಇಚ್ಛಾ, ಜ್ಞಾನ, ಕ್ರಿಯಾರೂಪದಿಂದ ಭೇದವನ್ನು ತೋರಿಸಿದರೂ ಸಮಷ್ಟಿರೂಪದಲ್ಲಿ "ಶಾಂತಾ" ಎನಿಸಿಕೊಳ್ಳುವಳು (ಭಾರದ. ೨೨೨). ೨. ಋಷ್ಯಶೃಂಗನ ಹೆಂಡತಿ. ೩. ಒಂದು ಬಗೆಯ ಹುಲ್ಲು. ೪. [ಸಂಗೀತ] ಒಂದು ನಿರ್ದಿಷ್ಟ ಶ್ರುತಿ. [ಸಂ. ಶಾಂತಾ]

**ಶಾಂತೇಕ್ಷಣ** (ನಾ). (ಕತ್ತಲೆಯಿಂದ) ಕಣ್ಣು ಕಾಣಿಸದಂತಾದವನು : ರಣಮಹೀಸಂತಮಸಶಾಂತೇಕ್ಷಣರು ದಿಗುಭ್ರಮೆಯಲಿ ಸ್ವಕೀಯಕ್ಷಣನವನು ರಚಿಸಿದರು ರೌರವವಾಯ್ತು ರಾತ್ರಿಯಲಿ (ಕುಮಾದ್ರೋ. ೧೫-೩೦). [ಸಂ.]

**ಶಾಂತೋದಕ** (ನಾ). ತಂಪಾದ ನೀರು; ತಣ್ಣೀರು : ಮಿಗೆ ನಳಿನದಳದ ದೊನ್ನೆಯೊಳು ಶಾಂತೋದಕವ ಮೊಗದು ಪಾನಂಗೈಸಿ ನುಡಿಸಿದೊಡ (ನವಮೋ. ೬-೬೮). [ಸಂ.]

**ಶಾಂತೋಪನತ** (ನಾ). = ಶಾಂತಪ್ರಾಸ : ವಿನುತಪ್ರಾಸಂ ಶಾಂತೋಪನತಂ ವರ್ಗೋದಿತಂ ಸಮೀಪಗತಂ ಮತ್ತನುಗತಮಂತಗತಂ ಸಂಜನಿತವಿಭೇದೋಕ್ತಿಯಿಂದ ಮಿಂತಾಱುತೆಱಂ (ಕವಿರಾ. ೨-೩೧). [ಸಂ.]

**ಶಾಂತ್ಯತೀತ** (ನಾ). [ಶೈವ] ಪರಶಿವನ ಐದು ಕಲೆಗಳಲ್ಲಿ ಕಡೆಯದು : ಪರಮೇಶ್ವರನು ನಿಯತಿ, ವಿದ್ಯಾ, ಪ್ರತಿಷ್ಠಾ, ಶಾಂತಿ, ಶಾಂತ್ಯತೀತಗಳೆಂಬ ಐದು ಕಲೆಗಳಿಗಾಶ್ರಯವಾದ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಈಶಾನಮುಖಗಳಿಂದ . . . ಪಂಚಕೃತ್ಯಗಳನ್ನು . . . ಪಂಚಮೂರ್ತಿಗಳಿಂದ ನೆರವೇರಿಸುತ್ತ ಭಕ್ತಾನುಗ್ರಹ ಮಾಡುತ್ತಾನೆ (ಭಾರದ. ೭೫). [ಸಂ.]

**ಶಾಂತ್ಯಭಿಷೇಕ** (ನಾ). ಅನಿಷ್ಟನಿವಾರಣೆಗಾಗಿ ದೇವರ ಪ್ರತಿಮೆಗೆ ಮಾಡುವ ಅಭಿಷೇಕ : ಇರೆಂದಿರಿಸ ಶಾಂತ್ಯಭಿಷೇಕಪುರಸ್ಸರಂ ಪೂಜಾವಿಧಾನವುಂ ಸಪ್ತವಾಸರಾವಸಾನಂಬರಂ ಮಾಡಲ್ತಗುಳ್ಕುದುಂ ಪರಿಪೂರ್ಣಾವಧಿದಿವಸಸಾಯಂತನ ಸಮಯದೊಳ್ (ಶಾಂತಿಪು. ೬-೨೮ ವ). [ಸಂ.]

**ಶಾಂತ್ಯುದಕ** (ನಾ). ಅನಿಷ್ಟನಿವಾರಣೆಗಾಗಿ ಪ್ರೋಕ್ಷಿಸುವ ಮಂತ್ರಪೂತವಾದ ತೀರ್ಥಜಲ ; ಮಂಗಳೋದಕ : ನಿಷ್ಕಂಟಕೀಕೃತಾಶೇಷಜಗದಕಾಂಡೋತ್ಥಿತ ಪ್ರಚಂಡ ವಿಪಕ್ಷೋತ್ಪಾತಪ್ರಶಮನಶಾಂತ್ಯುದಕಧಾರಾಕಾರತತ್ಕ್ಷಣಕ್ಷರದಜಸ್ರದಾನ ಜಲಧಾರಾಭಿರಾಮಕರಟಘಟಾಚಕ್ರನುಂ . . . ಬರ್ಪಾಗಳ್ (ಆದಿಪು. ೧೪-೯೧ ವ); ನಾನು ಕೂಡ ಶಕುಂತಳೆಗೋಸ್ಕರ ಯಾಗಸಂಬಂಧಿಯಾದ ಶಾಂತ್ಯುದಕವನ್ನು ಗೌತಮಿಯ ಕರದಲ್ಲಿ ಕಳುಹಿಸಿಕೊಡುವೆನು (ಶಾಕುಂತ. ೩೧-೧೭). [ಸಂ.]

**ಶಾಂಬರ** (ನಾ). ಕಣ್ಕಟ್ಟು; ಇಂದ್ರಜಾಲ : ಇದು ಕಣಾ ಮಾಯಾವಿಗಳು ಮಾಡಿದ ಮಹಾಶಾಂಬರ [ಪಾಠಾಂ. ಶಾಂಬವ, ಶಾಬರ, ಶಬರಾ]ದ ಕೆಲಸದ ಸುದತಿ ಸುಳಿದರ ಬಲ್ಲೆವಾವ್ ನಮ್ಮವರ ಮಾಯೆಗಳ (ತೊರರಾ. ೬-೪೧-೬೫). [ಸಂ.]

**ಶಾಂಬರಿ** (ನಾ). ೧. = ಶಾಂಬರ : "ಮಾಯಾ, ಶಾಂಬರೀ — ೨ ಇಂದ್ರಜಾಲ ಮೊದಲಾದ ಮಾಯೆಯ ಪೆಸರು" (ಸಿದ್ಧಾಂತಿ. ೩೧೧). ೨. ಮಾಟ ; ಶೂನ್ಯ. ೩. ಮಾಟಗಾತಿ. [ಸಂ. ಶಾಂಬರೀ]

**ಶಾಂಭವ** (ಗು). ೧. ಶಿವನಿಗೆ ಸಂಬಂಧಿಸಿದ : ದೇವಿ ಶಾಂಭವ [ಪಾಠಾಂ. ವಿ] ದೀಕ್ಷೆಯಂ ಕೊಟ್ಟೋವಿ ದೃಢಶಿವಭಕ್ತಿಮಹಿಮಾಭಾವನೆಯನಿತ್ತು . . . ಶಿವ ಶಿವನಲ್ಲಿಗೆಯ್ದಿದಳು (ಬಸಪು. ೫೦-೪) ; ಭಜಿಸಿದ್ಯೆ ಭರ್ಗನನು ಶಾಂಭವಯಜನಸಾರಸಮಾಧಿ ಶಿವಪದರಜವ ಬೆರಸಿತೆ (ಕುಮಾರಾ. ೧೧-೨೭). (ನಾ). ೨. ಶಿವನ ಆರಾಧಕ ; ಶಿವಭಕ್ತ. ೩. ಶಿವನ ಮಗ. ೪. ಕರ್ಪೂರ. ೫. ಒಂದು ಬಗೆಯ ವಿಷ. ೬. ಗುಗ್ಗುಳ. ೭. [ಯೋಗ] ಶಿವನಲ್ಲಿ ಮನಸ್ಸನ್ನು ಏಕಾಗ್ರತೆಯಿಂದಿರಿಸುವುದು : ಶಾಂಭವ ವಿಶಿಷ್ಟದದ್ವೈತದೊಳಗಿಹುದಲ್ಲ ಶಾಂಭವಿಯ ಚಿದಚಿದ್ವಿಕಾರ (ಅವಚಂ. ೪. ೪೫೮-೧೨೪೫); ಯೋಗಕ್ಕೆ ಶಾಂಭವ ಭೋಗಕ್ಕೆ ರಜತಾದ್ರಿ ಆಗಮವೆಂಬಡದ ಕೇಳ್ವ ಯೋಗವ ನೆಚಿ ಬಿಟ್ಟು ಭೋಗಕ್ಕೆ ಮನವಿಟ್ಟು ಆಗಳ ಬಂದೆ ನಾ ಬಿಟ್ಟು (ಕೋಡೆಚ. ೧-೪೫). [ಸಂ.]

**ಶಾಂಭವಪ್ರಣವ** (ನಾ). ಐದು ವಿಧವಾದ ಪ್ರಣವಗಳಲ್ಲಿ ಒಂದು ಬಗೆ : ಸಾಕಲ್ಯಪ್ರಣವ ಶಾಂಭವಪ್ರಣವ ಸಾಂಖ್ಯಪ್ರಣವ ಸಾವಸ್ಯಪ್ರಣವ ಸಾಯುಜ್ಯಪ್ರಣವವೆಂಬ ಪಂಚಪ್ರಣವಮಂತ್ರಗಳಂ . . . ಬೇಜ ಬೇಜ ಉಪದೇಶ ಅನುಷ್ಠಾನ ಪರೀಕ್ಷೆಗಳಿಂ ವಿವೇಕಿಸಿ ತಿಳಿದಿರಲಕ್ಕುಂ (ವಿವೇಕ. ೮೧). [ಸಂ.]

**ಶಾಂಭವಿ** (ನಾ). ೧. ಶಂಭುವಿನ ಪತ್ನಿ ; ಪಾರ್ವತಿ : ಶಂಭು ಶಾಂಭವಿಕುಂಭ ವಕ್ಷರುಹ ಕಲಿತಕರ ಶಂಬರಜ ಶಂಬರಾಹಿತ ಮಾತುಳಾಭರಣ ಸಂಗಮೇಶ್ವರಪ್ರಸನ್ನ (ಪ್ರೌಢರಾ. ೧೫-೧) ; ಶಾಂಭವಿ ಬೆನ್ನನೆಳ್ತರೆ ವಿಲಾಸದೆ ಬಂದನಹೀಂದ್ರಭೂಷಣಂ (ಶಬಶಂ. ೫-೫೭). ೨. = ಶಾಂಭವೀಮುದ್ರೆ : ಷಣ್ಮುಖೀ ಖೇಚರೀ ಶಾಂಭವಿ ಮೊದಲಾದ ಮುದ್ರಾಭೇದಂಗಳಂ (ವಿವೇಕ. ೧೨೪). [ಸಂ. ಶಾಂಭವೀ]

**ಶಾಂಭವೀಧವ** (ನಾ). ಪಾರ್ವತಿಯ ಪತಿ ; ಶಿವ : ನಿಷ್ಕಲ ನೀಲಕಂಠ ನಿರ್ಜರನತ ನಿಷ್ಕಳಂಕ ಜಯಶಂಕರ ನಿರ್ಜಡ ಶಾಂಭವೀಧವಾ (ಶಬಶಂ. ೫-೨೪). [ಸಂ.]

**ಶಾಂಭವೀಮುದ್ರೆ** (ನಾ). [ಯೋಗ] ಶ್ವಾಸೋಚ್ಛ್ವಾಸವನ್ನು ನಿಗ್ರಹಿಸಿ, ರೆಪ್ಪೆ ಬಡಿಯದೆ ಪರಮಾತ್ಮನಲ್ಲಿ ಮನಸ್ಸನ್ನು ಕೇಂದ್ರೀಕರಿಸಿ ಮಾಡುವ ಧ್ಯಾನದ ಒಂದು ಭಂಗಿ : ನೇತ್ರಂಗಳ ತುದಿಯ ಸೂಕ್ಷ್ಮರಂಧ್ರವನುಳ್ಳ ಕೃಷ್ಣತಾರಾಮಂಡಲದ ಮಧ್ಯದಲ್ಲಿ ಶುದ್ಧಚಿತ್ತದಿಂದೆ ನಿಶ್ಚಲವಾದ ಪರಮಾತ್ಮಜ್ಯೋತಿಸ್ಸ್ವರೂಪವಪ್ಪ ದಿವ್ಯಲಿಂಗಮಂ ಕಾಣ್ಬುದೇ ಶಾಂಭವೀಮುದ್ರೆಯೆನಿಸುವುದಯ್ಯಾ (ಅಖಂಡೇ. ೨೨೬-೭೩); 'ಖೇಚರಿಮುದ್ರಾ' . . . ಇದನ್ನೇ ಶಾಂಭವೀಮುದ್ರೆ ಅಥವಾ ಉನ್ಮನ್ಯವಸ್ಥೆ ಎಂದು ಕೆಲವರು ಹೇಳುತ್ತಾರೆ (ಭಾರದ. ೧೬೬). [ಸಂ. ಶಾಂಭವೀಮುದ್ರಾ]

**ಶಾಕ**[1] 'ಸೇಕ[1]' ನೋ.

**ಶಾಕ**[2] (ನಾ). ೧. ಅಡುಗೆಗಾಗಿ ಬಳಸುವ ಕಾಯಿ, ಸೊಪ್ಪು, ಗೆಡ್ಡೆ ಮುಂತಾದುವು; ತರಕಾರಿ; ಕಾಯಿಪಲ್ಯ : ಬಾಟುಕಂ — ಸೀಟ್ಪೊಣಗಿ ಬಾಟ್ಟ ಶಾಕಂ (ಶಮದ. ಪರಿ. ೧); ದಂಟು ಕುಡಿ ಕಾಯೆಲೆ ಮಿಡಿಗಾಯಿಗಳೆಂಬ ಪಲವಗೆ ಶಾಕದೊಳುಚಿತಾನುಚಿತವ ನೆಲೆಯಱಿವುದು ನೇಮದೊಳು (ಹದಿಬ. ೮-೧೭). ೨. ಸೊಪ್ಪು, ತರಕಾರಿ ಮುಂತಾದುವುಗಳಿಂದ ತಯಾರಿಸಿದ ಮೇಲೋಗರ ; ಪದಾರ್ಥ : ಶಾಕಂ ಲೇಸಾದುವು . . . ಮಗಮಗಿಸಿದ ತುಪ್ಪಂ ನೆಗೆಬ್ಪೀ ಪದಾರ್ಥಂ ಸಾಕೆಂಬಂತಿರ್ದುದು (ನಳಚಂ. ೪೬೭) ; ಪರಿಪರಿಯ ಬಹುಭಕ್ಷ್ಯಪಾಕದ ಪರಿಮಳದ ಶಾಕಾದಿಗಳ ವೊಗ್ಗರಣೆಗಳ ಸೌರಭಕೆ ತಿಳಿದುದು ನಿದ್ರೆ ಪವನಜನ (ಕುಮಾಳ. ೧೧-೨೩); ಮಿಸುನಿಯ ವಣ್ಣದ ತೊಗರಿಯ ಬೇಳೆಯ ಕುಶಲದ ಸೂಪಶಾಕಗಳ ಶಶಿಮುಖಿಯರು ಸಂತೋಷದ ಬಡಿಸಿದರೊಸೆದು ಭೂಪಾಲನಿಗಾಗ (ಶನಪಿ. ೮-೮೬). ೩. ಶಕ್ತಿ ; ಸಾಮರ್ಥ್ಯ. ೪. ಸಪ್ತದ್ವೀಪಗಳಲ್ಲಿ ಆರನೆಯದು. ೫. ಒಂದು ಬಗೆಯ ಮರ ; ತೇಗ : "ಸಂದ್ಯಾವರ್ತಃ, ಸರಲಃ, ಸಾಲಃ, ಶಾಕಃ ಧವಃ, ಅರ್ಜುನಃ . . . ಮೋಕ್ಷಃ— ಎಂಬಿವು ಮರಗಂಳುಮಪ್ಪುವು" (ಪಲಾಯು. ೧೩೫-೨೬).

ಶಾಕಾಯಲವಣಾಯ = ೧. ತರಕಾರಿ ಮತ್ತು ಉಪ್ಪಿಗೆ ಸಾಕಾಗುವಷ್ಟು. ೨. (ಆಲಂ) ಅಹನ್ಯಹನಿಕಾಲಕ್ಷೇಪ : ನಿನ್ನ ಶ್ರಮಕ್ಕೆ ಪೂರ್ಣಫಲ ದೊರೆಯದೆ ಹೋದರೂ ಏನಾದರೂ 'ಶಾಕಾಯ ಲವಣಾಯ' ದೊರೆಯುವಂತ ಏರ್ಪಾಡು ಮಾಡುತ್ತೇನೆ (ನಾಡಿಗೇ. ೨೪೮). [ಸಂ.]

**ಶಾಕಂಭರಿ** (ನಾ). ೧. ಸಸ್ಯಗಳ ಅಲಂಕಾರವನ್ನು ಉಳ್ಳವಳು ; ವನದೇವಿ : ಕ್ಷಿತಿ ಶಾಕಂಭರಿ ವಾರದೇವತೆಯರಾಶಾದೇವಿಯರ್ . . . ಎಯ್ದಿದರ್ (ಶಬಶಂ. ೩-೧೩); ವನದೇವಿಗೆ — ಎಲೆ ಶಾಕಂಭರಿ ! ಇದೆಕೊಳ್ ಭಾಗ್ಯಲಕ್ಷ್ಮಿ ನಿನ್ನ ಕೆಳೆತನಕ್ಕೆಳಸಿ ಬಂದಿರ್ಪಳ್ (ರಾಮಾಶ್ವ. ೩೯-೮). ೨. ದುರ್ಗೆ.

ಶಾಕಂಭರಿವೇಷ = ದೇವರಿಗೆ ತರಕಾರಿಗಳಿಂದ ಮಾಡುವ ಅಲಂಕಾರ : ಚಾಮುಂಡೇಶ್ವರಿಗೆ ಇಂದು ಶಾಕಂಭರಿವೇಷವನ್ನು ಹಾಕಿದ್ದಾರೆ (ರೂಢಿ). [ಸಂ. ಶಾಕಂಭರೀ]

**ಶಾಕಟ** (ಗು). ೧. ಗಾಡಿಗೆ ಸಂಬಂಧಿಸಿದ. (ನಾ). ೨. ನೊಗಕ್ಕೆ ಹೂಡಿದ ಎತ್ತು, ಕೋಣ ಮುಂತಾದ ಪ್ರಾಣಿ : "ಯುಗ್ಯಃ, ಪ್ರಾಸಂಗ್ಯಃ, ಶಾಕಟಃ - ಈ ಮೂರು . . . ನೊಗವನ್ನು ಹೂರುವ ಎತ್ತು" (ಸಿದ್ಧಾಂತಿ. ೨೯೩). ೩. ಭೂಮಿ; ಕ್ಷೇತ್ರ. [ಸಂ.]

**ಶಾಕಟಿಕ** (ಗು). ೧. = ಶಾಕಟ ೧. ೨. ಗಾಡಿಯಲ್ಲಿ ಸಂಚರಿಸುವ : ಮತ್ತೊಂದುದಿವಸಂ ಪಲಂಬರ್ ಶಾಕಟಿಕಪರದರುಂಬೆರಸು ಬಂಡಿಗಳೊಳ್ ಪಟ್ಟಿಯುಂ ಧಾನ್ಯಮುಂ ತೀವಿಕೊಂಡು ಪೊಬಲ್ಗೆ ಮಾಱಲೆಂದು ಪೋಪನ್ನೆಗಂ (ವಡ್ಡಾರಾ. ೭೭-೧೧). [ಸಂ.]

**ಶಾಕಪಾಕಿ** (ನಾ). ಸಸ್ಯಾಹಾರವನ್ನು ಉಪಯೋಗಿಸುವವನು : ಶಾಕಪಾಕಿಗಳೆಲ್ಲ ಏಕಧರ್ಮದಿ ಕೂಡಿ ಶಾಕಪಾಕಿಗಳ ಲಗ್ಗಗಳ ಜಗದೊಳಗೆ ಏಕಮಾಡುವರು (ಕಾಲಸಂ. ೬೩-೭೪). [ಸಂ. ಶಾಕಪಾಕಿನ್]

**ಶಾಕವಂಗಿ** (ನಾ). (ಬದನೆಕಾಯಿಯಿಂದ ತಯಾರಿಸುವ) ಒಂದು ಬಗೆಯ ಮೇಲೋಗರ : ಮೃದುಮಾಡಿಯತ್ತರದೊಳಟ್ಟ ಬದನೆಯಕಾಯ ಹದನಱಿದು ತುಪ್ಪದೊಳಗುಳ್ಳಿಯಿಲ್ಲದ ರಸವ ಹುದುಗಿ ಬೇಯಿಸಿ ಸೀಳಿ ಕೀರೆ ನಱುವಲು ಚಕ್ಕವತ್ತ ಸೊಳೆ ಸಬ್ಬಸೀಗೆ ಮೊದಲಾದ ಸೊಪ್ಪುಗಳ ಬೇಱೆಬೇಱುಕ್ಕರಿಸಿದುದುರೆಯಂ

ತುಪ್ಪದೊಳು ಹುರಿದ ಹೋಳುಗಳೊಳಗೆ ಹುದುಗಿ ಕೆಲವಂ ತಾಳಿಸಿದೊಡಮವು ತಾ ಶಾಕವಂಗಿ ಹೆಸರಂ ಪಡೆದವು (ಸೂಪಶಾ. ೪-೧೭).

[ಶಾಕ$_2$ + < ವಾಂಗಿ$_1$ (ಪ್ರಾ ← ಮರಾ. ವಾಂಗೀ)]

**ಶಾಕವರ್ತಿಕ, ಶಾಕವರ್ತಿಗೆ** (ನಾ). ತರಕಾರಿಗಳಿಂದ ತಯಾರಿಸಿದ ಭಕ್ಷ್ಯವಿಶೇಷ: ಅನಿಷ್ಠುರೋಷ್ಮಪುಟಮಧ್ಯಸಂಧಾರಣಮಾತ್ರಚೂರ್ಣನೀಯಶಾಕ [ಪಾಠಾಂ. ಯಾಶಾಕ, ಯಾಶೋಕ]ವರ್ತಿಕಮುಮತಿದೂರೋಚ್ಛ್ವಾಸವಿಕಾಸನಾಸಾಂಜಲಿಪುಟ ಪೀಯಮಾನ ದುಗ್ಧಹಯ್ಯಂಗವೀನಮುಂ (ಆದಿಪು. ೧೧-೨೮ ವ). **ಶಾಕವರ್ತಿಗೆ:** ಮೃದುಲಲಿತ ಕೋಮಲತಲಸಂಗಮಾತ್ರದ್ರಾವಣೆಯಪ್ಪ ಶಾಕವರ್ತಿಗೆಗಳುಮಂ ಪಾಲ್ಗಡಲ ನೊರೆಯ ಪೊರೆಯ ತೆರಯನನುಕರಿಸಿಯುಮಲ್ಪದಶನದಂಶಮಾತ್ರ ಖಂಡನೀಯಕರಂ ಗಳೆನಿಸಿದ ಮಂಡಕಂಗಳುಮಂ . . . ಬಡ್ಡಿಸಿದಾಗಳ್ (ಸುಕುಮಾ. ೧೧-೨೯ ವ).

[ಶಾಕ$_2$ + ?]

**ಶಾಕವರ್ತಿಗೆ** '**ಶಾಕವರ್ತಿಕ**' ನೋ.

**ಶಾಕಶಾಕಟ** (ನಾ). ತರಕಾರಿಯನ್ನು ಬೆಳೆಯುವ ಭೂಮಿ; ತರಕಾರಿ ತೋಟ: ''ಶಾಕಶಾಕಟ[ಪಾಠಾಂ. ಸಾಕಸಾಕಟ] ಮೆನಲು ಶಾಕಶಾಕೀನಮೆನಲಾ ಕಾಯ ತೋಟಮೆನಿಸಿಕ್ಕು'' (ಮಂಗರಾ. ೨೯-೫). [ಸಂ.]

**ಶಾಕಶಾಕಿನ** (ನಾ). = ಶಾಕಶಾಕಟ : ''ಶಾಕಶಾಕಟಂ, ಶಾಕಶಾಕಿನಂ — ಈ ೨ ಬಾಡು, ಕಾಯ ತೋಂಟಂ'' (ಹಲಾಯು. ೨೭-೯). [ಸಂ.]

**ಶಾಕಾಹಾರ** (ನಾ). ತರಕಾರಿಗಳನ್ನೊಳಗೊಂಡ ಆಹಾರ; ಸಸ್ಯಾಹಾರ : ಜೊಮ್ಮಣ್ಣ ಕೇಶಿರಾಜ ಶಂಕಿಸಿದ್ದಂತೆ ಮಾಂಸಾಹಾರವನ್ನೇನೂ ನೀಡಲಿಲ್ಲ ; ಶಾಕಾಹಾರವನ್ನೇ ಎಡಮಾಡಿದ (ಶರಚ. ೧೧೧) ; ಹೊಯಿಸಳ ವಿಷ್ಣುವರ್ಧನಪ್ರಭುವಿನ ರಾಷ್ಟ್ರದಲ್ಲಿ ಎಲ್ಲರಿಗೂ ಶಾಕಾಹಾರಭೋಜನ ಸಮರ್ಪಕವಾಗಿ ಏರ್ಪಟ್ಟಿತ್ತು (ಶಾಂತಲಾ. ೪೭). [ಸಂ.]

**ಶಾಕಾಹಾರಿ** (ನಾ). ತರಕಾರಿಗಳನ್ನೊಳಗೊಂಡ ಆಹಾರವನ್ನು ಸೇವಿಸುವವನು; ಸಸ್ಯಾಹಾರಿ : ಊಟಕ್ಕೆ ಕರೆದವರಿಗೆ ''ನಾನು ಶಾಕಾಹಾರಿ'' ಎಂದು ಅರಿಕೆ ಮಾಡಿದರೆ ಸಾಲದು (ಸಂಚಾರು. ೧೧೮) : ಶಾಕಾಹಾರಿಗಳು ಈ ಗುಂಪಿಗೆ ಸೇರಿದ ಎಲ್ಲಾ ವಸ್ತುಗಳನ್ನೂ ಉಪಯೋಗಿಸಲಾರರು (ಆಡುಸಾ. ೭೦). [ಸಂ. ಶಾಕಾಹಾರಿನ್]

**ಶಾಕಿನ** (ನಾ). ಭೂಮಿ ; ಜಮೀನು : '**ಶಾಕಶಾಕಿನ**' ಪರಾ. [ಸಂ.]

**ಶಾಕಿನಿ** (ನಾ). ೧. ತರಕಾರಿಯ ತೋಟ. ೨. ದುರ್ಗೆಯ ಪರಿಚಾರಿಕೆಯರಲ್ಲಿ ಒಬ್ಬಳು ; ಒಬ್ಬ ಕ್ಷುದ್ರದೇವತೆ : ಉರಗಮುಖೋಗ್ರದಂಷ್ಟ್ರಸಹಜಾತೆಯ ನೂರ್ಜಿತಕಾಲಪಾಶನಿಷ್ಠುರತರರೂಪೆಯಂ ಸಹಜಶಾಕಿನಿಯಂ . . . ಬೆಸಗೊಳ್ಳುದೆ (ಕಾದಂಪೂ. ೭೦೪); ಶಾಕಿನಿಯರೊಡಲೋರೆ ನನೆಯದೆ ಡಾಕಿನಿಯರಿಗೆ ಡೊಳ್ಳು ಸಾಲಿಡದೆ ಕೌರವನ ತನಿಗರುಳ ದಂಡೆಯ ತೋರಣದ ಬಾಗಿಲಿನ ವಿಭವದಿ ವಾರಣಾಹ್ವಯನಗರಿಯನು ಹೊಗದಿಹನೆ (ಕುಮಾವ್ಯಾ. ೧೧-೧೦). [ಸಂ. ಶಾಕಿನೀ]

**ಶಾಕಿನೀತಂತ್ರ** (ನಾ). [ತಂತ್ರಶಾ] ಒಂದು ಬಗೆಯ ತಾಂತ್ರಿಕಸಿದ್ಧಿಮಂತ್ರ : ಶಾಕಿನೀತಂತ್ರ ಡಾಕಿನೀತಂತ್ರ . . . ಶಲ್ಯತಂತ್ರಾದಿ ಸಿದ್ಧಿಮಂತ್ರಂಗಳಂ . . . ಬೇಱ ಬೇಱ ವಿವೇಕಿಸಿ ನೋಡಿ (ವಿವೇಕ. ೮೧). [ಸಂ.]

**ಶಾಕಿನೀದೋಷ** (ನಾ). ಶಾಕಿನೀದೇವತೆಯಿಂದುಂಟಾಗುವುದೆಂದು ಭಾವಿಸಲಾದ ಬಾಧೆ, — ಪೀಡೆ : ಪಂಚಾಮೃತಘೃತ — ಗೋಮೂತ್ರ ಪಲ ೧, ಈ ಸಗಣಿಯ ರಸ, ಮೊಸರು, ಹಾಲು, ತುಪ್ಪ . . . ಕಾಸಿ ಹದದಲ್ಲಿಳುಹಿಕೊಂಡು ಹಸಿಅಡಕೆ ಪ್ರಮಾಣವಂ ಸಕ್ಕರೆವೆರಸಿ ಸೇವಿಸೆ ಪಿತ್ತಭ್ರಮಣೆ, ಅಪಸ್ಮಾರ, ಶಾಕಿನೀದೋಷ ಮುಂತಾದ ಸಮಸ್ತವ್ಯಾಧಿ ಪರಿಹಾರಮಕ್ಕುಂ (ಸಕವ್ಯ. ೧೪೯). [ಸಂ.]

**ಶಾಕುನ** (ಗು). ೧. ಪಕ್ಷಿಗೆ ಸಂಬಂಧಿಸಿದ. ೨. ಶಕುನಕ್ಕೆ ಸಂಬಂಧಿಸಿದ. (ನಾ). ೩. ಶಕುನಕ್ಕೆ ಸಂಬಂಧಿಸಿದ ವಿಷಯ : ತಳುವದೀಗಲೆ ಮುತ್ತಬೇಕೆನಲಲಘು ಸಾಹಸಿಗೆಂದನೊಬ್ಬನು ಸಲೆ ಬೃಹಸ್ಪತಿಯಣುಗ ಜ್ಯೋತಿರ್ಮುಖನು ಶಾಕುನವ (ಕೌಶಿರಾ. ೬೨-೨). [ಸಂ.]

**ಶಾಕುನಿಕ** (ಗು). ೧. ಹಕ್ಕಿಗೆ ಸಂಬಂಧಿಸಿದ. ೨. ಶಕುನಕ್ಕೆ ಸಂಬಂಧಿಸಿದ. (ನಾ). ೩. ಹಕ್ಕಿಗಳನ್ನು ಹಿಡಿಯುವವನು; ಹಕ್ಕಿಯ ಬೇಡ: ಮಾವುತರು . . . ಮೃಗಜೀವಿಗಳು ಶಾಕುನಿಕರೆಸೆದರು ರಾಜಸಭೆಯೊಳಗೆ (ಕುಮಾವ್ಯಾ. ೨-೨೭). ೪. ಶಕುನಗಳ ವ್ಯಾಖ್ಯಾನ, — ವಿವರಣೆ. [ಸಂ.]

**ಶಾಕೋಟ** (ನಾ). ಒಂದು ಬಗೆಯ ಮುಳ್ಳಿನ ಗಿಡ : ''ಶಾಕೋಟಃ, ಶಾಕೋಟಕೀ — ಈ ಯೆರಡುಂ ಮಿಟಲಿ'' (ಓಷಧಿ. ೧೬೩). [< ಸಂ. ಶಾಖೋಟ]

**ಶಾಕೋಟಕಿ** (ನಾ). = ಶಾಕೋಟ : ''ಶಾಕೋಟಃ, ಶಾಕೋಟಕೀ — ಈ ಯೆರಡುಂ ಮಿಟಲಿ'' (ಓಷಧಿ. ೧೬೩). [< ಸಂ. ಶಾಖೋಟಕ]

**ಶಾಕ್ತ** (ಗು). ೧. ಶಕ್ತಿಗೆ ಸಂಬಂಧಿಸಿದ; ಸಾಮರ್ಥ್ಯಕ್ಕೆ ಸೇರಿದ. ೨. ಶಕ್ತಿದೇವತೆಗೆ ಸಂಬಂಧಿಸಿದ : ಕೊಲ್ಹಾಪುರವು ಸುಮಾರು ಕ್ರಿಸ್ತಶಕ ಒಂದನೆಯ ಶತಾಬ್ದದಿಂದಲಾದರೂ ಪ್ರಸಿದ್ಧ ಶಾಕ್ತಕ್ಷೇತ್ರವಾಗಿದ್ದಿತು (ಹೊಯ್ಸಳವಾ. ೧೬೦). (ನಾ). ೩. ಶಕ್ತಿದೇವತೆಗೆ ಸಂಬಂಧಿಸಿದುದು: ಇವುಗಳಲ್ಲಿ ಕಾಪಾಲಿಕವು ಶೈವವಾದರೆ ಕೌಲವು ಶಾಕ್ತ (ಶೂನ್ಯಸಂ. ೪ ಓಸ್ಸಲ). ೪. ಶಕ್ತಿದೇವತೆಯನ್ನು ಆರಾಧಿಸುವ ಪಂಥ: ''ಶಾಕ್ತಂ, ಶಾಕ್ತೇಯಂ, ಈ ೨ ದುರ್ಗಾಮತಂ'' (ಶಾಶಕ್ಯ. ೨೦೪). ೫. ಶಕ್ತಿದೇವತೆಯನ್ನು ಪೂಜಿಸುವವನು; ದುರ್ಗೆಯ ಉಪಾಸಕ : ಶಾಕ್ತರು ಮೆರೆಯುತಿಹರಾ ಶಕ್ತಿತತ್ತ್ವಾದಿಯಲಿ (ಗಗಶಾ. ೮-೬೭); ಶಾಕ್ತರು ಹಣೆಯ ಮೇಲೆ ಕುಂಕುಮವನ್ನೂ ಭುಜಗಳ ಮೇಲೆ ಚಿನ್ನದ ಪಾದುಕೆಗಳನ್ನೂ ಧರಿಸುವರು (ಮುಂಬಯಿ. ೬-೧೧೨). [ಸಂ.]

**ಶಾಕ್ತಧರ್ಮ** (ನಾ). ಶಕ್ತಿದೇವತೆಯನ್ನು ಶ್ರೇಷ್ಠಳೆಂದೂ ಪರಾಶಕ್ತಿ ಎಂದೂ ಪ್ರತಿಪಾದಿಸುವ ಮತ : ವೈಷ್ಣವಧರ್ಮವು ಮತ್ತೆ ತಲೆಯೆತ್ತಿ ಶಾಕ್ತಧರ್ಮವು ನಶಿಸುವಂತಾಯಿತಲ್ಲಾ (ಭಕ್ತಿಮಾ. ೬೩). [ಸಂ.]

**ಶಾಕ್ತಮತ** (ನಾ). = ಶಾಕ್ತಧರ್ಮ : ಶಕ್ತಿಗೆ ಪಾರಮ್ಯವನ್ನು ಎಣಿಸಿ ವಿಚಾರ ಮಾಡುವ ದೃಷ್ಟಿಯಿಂದ ಶಾಕ್ತಮತ ಎಂದು ಎನಿಸುತ್ತದೆ (ಭಾರದ. ೨೨೧). [ಸಂ.]

**ಶಾಕ್ತಾಗಮ** (ನಾ). ಪರಾಶಕ್ತಿಯೇ ಪರದೈವವೆಂದು ಸಾರುವ ಆಗಮ; ಶೈವಾಗಮದ ಒಂದು ಪ್ರಭೇದ: ಶೈವಾಗಮದಲ್ಲಿ . . . 'ಶೈವಾಗಮ', 'ದೇವ್ಯಾಗಮ ಅಥವಾ ಶಾಕ್ತಾಗಮ', 'ವಾತುಳಾಗಮ ಅಥವಾ ತಾಂತ್ರಿಕಾಗಮ' ಮತ್ತು 'ವೀರಶೈವಾಗಮ' ಎಂದು ನಾಲ್ಕು ಒಳಭೇದಗಳಿವೆ (ಭಾರದ. ೭೪). [ಸಂ.]

**ಶಾಕ್ತೇಯ** (ನಾ). ೧. ದುರ್ಗೆಯನ್ನು ಆರಾಧಿಸುವ ಪಂಥ: ''ಶಾಕ್ತಂ, ಶಾಕ್ತೇಯಂ, ಈ ೨ ದುರ್ಗಾಮತಂ'' (ಶಾಶಕ್ಯ. ೨೦೪). ೨. ದುರ್ಗೆಯ ಉಪಾಸಕ : ಭಜಿಸುವರು ಶಕ್ತಿಯನೆ ಪರಳೆನುತ ಶಾಕ್ತೇಯರುಗಳು (ಗಗಶಾ. ೫-೭೭). [ಸಂ.]

**ಶಾಕ್ಯ** (ನಾ). ೧. ಗೌತಮಬುದ್ಧನ ವಂಶ ಮತ್ತು ಆ ವಂಶಕ್ಕೆ ಸೇರಿದವನು : ನಿವಸತಿಯಂ ತೇಗುಮರಂ ಕವಿದೆಡೆಯೊಳ್ ಮಾಡಿಕೊಂಡ ಕಾರಣದಿಂದಂ ಅವರೇ ಶಾಕ್ಯರೆನಿಪ್ಪರುಂ (ಸೌನಂದ. ೧-೨೪). ೨. ಬೌದ್ಧಮತಸಂಸ್ಥಾಪಕನಾದ ಗೌತಮ ಬುದ್ಧನ ಹೆಸರು : ''ಶೌದ್ಧೋದನಿಃ, ದಶಬಳಃ, ಬುದ್ಧಃ, ಶಾಕ್ಯಃ . . . ಸಿದ್ಧಾರ್ಥಃ — ಈ ೧೧ ಬುದ್ಧನ ಪೆಸರ್'' (ಹಲಾಯು. ೧೫-೮೫). [ಸಂ.]

**ಶಾಕ್ಯಮತ** (ನಾ). [ಬೌದ್ಧ] ಗೌತಮಬುದ್ಧನಿಂದ ಸ್ಥಾಪಿತವಾದ ಮತ; ಬೌದ್ಧಧರ್ಮ : ತಥಾಗತಮತಮಂ ತಿರಸ್ಕರಿಸಿ ತನ್ನೊಳಶಕ್ಯಾನುಷ್ಠಾನಕ್ಕೆ ಪೊಣರ್ದ ಲೋಕಾಯತಶಾಕ್ಯಮತಾವಲಂಬಿಯನವಿಲಂಬಿತಂ ಗೆಲ್ದು (ಶಾಂತಿಪು. ೮-೧೪೭ ವ). [ಸಂ.]

**ಶಾಕ್ವರ** (ನಾ). ೧. ಎತ್ತು ; ವೃಷಭ : ನೆರದೂಂದಿ ನಿಂದ ಶಾಕ್ವರವರಯೂಥ ಮನವನಿನಾಥ ಕಂಡುದಱಿಂದೂರ್ವರೆ ವಿಹರಿಪುದಂ ಬಿಸುಟಂಬರಾಂಬರರ್ ತಮ್ಮ ಸಮುದಯಂ ಬೆರಸಿರ್ಪರ್ (ಆದಿಪು. ೧೫-೬೨); ಮೇಲುವಲಗೆಯ ಸುತ್ತ ಚಮರೀಜಾಳ ಕನಕಧ್ವಜದ ತುದಿಯಲಿ ಮೇಳವಿಸಿದನು ವಿಶ್ವಕರ್ಮನು ವಿಪುಳಶಾಕ್ವರವ (ಕುಮಾವ್ಯಾ. ೭-೭). ೨. [ಜ್ಯೋತಿ] ವೃಷಭರಾಶಿ : ನವಮಂ ಮೀಣ್ ಪಂಚಮಂ ಶಾಕ್ವರ ಧನುವೆನಿಪಂದಲ್ಲಿ ನಿಂದಂದಿನಂ ನೋಡುವೊಡುಗ್ರರ್ ಕಾಕನೇತ್ರಂ ಮನುಜನೆನಿಕುಂ (ಜಾತತಿ. ೨೧-೨೨). [ಸಂ.]

**ಶಾಕ್ವರಚಿಹ್ನ** (ನಾ). ೧. ವೃಷಭದ ಗುರುತು, — ಲಾಂಛನ. ೨. ವೃಷಭದ ಗುರುತುಳ್ಳ ಧ್ವಜ : ಕೊರಲ ಕಱ ಶಿರದ ಪಱ ನೊಸಲುರಿಗಣ್ ಧೃತಚಾಪಹಸ್ತ ಶಾಕ್ವರಚಿಹ್ನಂ ವಿರಚಿಸೆ ಕೃಪಕೃತವರ್ಮರ್ಬೆರಸಾಗಳ್ ಮುಳಿದು ಬಂದನಶ್ವತ್ಥಾಮಂ (ಗದಾಯು. ೯-೨). [ಸಂ.]

**ಶಾಕ್ಕರಾರೋಹ** (ನಾ). ಎತ್ತನ್ನು ಏರಿದವನು : "ಪ್ರಚಂಡದತ್ತೇಜುವವನನತ್ತ ವಾಹನಂ ಶಾಕ್ಕರಾರೋಹನೆಂದೆನಿಕ್ಕುಂ" (ಮಂಗರಾ. ೭೩-೨೬). [ಸಂ.]

**ಶಾಖ**$_1$ 'ಸೇಕ$_1$' ನೋ.

**ಶಾಖ**$_2$ (ನಾ). ಕೊಂಬೆ ; ಗೆಲ್ಲು : ಒಂದು ಶಾಖಂ ನಾಗಕೇಶರವೊಂದು ಶಾಖಂ ನಾರಿಕೇಳವದೊಂದು ಶಾಖಂ ಚಂದನಂ ಘನಸಾರವೊಕ್ಕೊಂಬು (ಬಸವು. ೧೯-೬೪).

[ಸಂ. ಶಾಖಾ]

**ಶಾಖಾಚರ** (ನಾ). ಕೊಂಬೆಗಳ ಮೇಲೆ ಸಂಚರಿಸುವ ಕೋತಿ, ಅಳಿಲು ಮುಂತಾದ ಪ್ರಾಣಿ : ಅಂತು ಶಾಖಾಚರಂ ತಂದಿತ್ತ ಫಲಂಗಳಂ ಕೊಂಡು ಶಿವಭೂತಿಯುಮಂದಿನ ದಿವಸಮಲ್ಲಿರ್ದು (ಪಂಚತಂ. ೧೧೧-೨೦) ; ಸ್ಥಳಚರ ವನಚರ ಜಳಚರ ಶಾಖಾಚರಂಗಳಪ್ಪ ತಂತಮ್ಮ ವಾಹನಂಗಳ್ಗೆ ಯೋಗ್ಯಂಗಳಾದ ಸ್ಥಾನಂಗಳಂ ನೋಡಿ (ಬಾಭಪು. ೮-೨೦ ವ.).

[ಸಂ.]

**ಶಾಖಾಚರಬಂಧ** (ನಾ). ಮಲ್ಲಯುದ್ಧದ ಒಂದು ಪಟ್ಟು; ಕಪಿಮುಷ್ಟಿಯಂತ ಬಿಗಿಯಾದ ಹಿಡಿತ : ತಳಹತ್ತಂ ದಣುಪಟ್ಟ ಖೊಪ್ಪರವುುರೋಬಂಧಂ ಲತಾಬಂಧಮುಜ್ಜ್ವಳಶಾಖಾಚರಬಂಧಮಾಯತಿಕೆಬಂಧಂ... ಬಾಹುತಳಂ ಚಮತ್ಕರಿಸೆ ನಾನಾಕೌಶಲಂದೋಱಿದರ್ (ಶಬಶಂ. ೪-೭೫). [ಸಂ.]

**ಶಾಖಾಧ್ಯಾಯಿ** (ನಾ). ವೇದದ ಯಾವುದಾದರೊಂದು ಶಾಖೆಯನ್ನು ಅಭ್ಯಾಸ ಮಾಡುವವನು : ಆ ವೇದಪಾಠಶಾಲೆಯಲ್ಲಿ ಅನೇಕ ಜನ ಶಾಖಾಧ್ಯಾಯಿಗಳಿದ್ದಾರ (ರೂಢಿ). [ಸಂ. ಶಾಖಾಧ್ಯಾಯಿನ್]

**ಶಾಖಾನಗರ** (ನಾ). (ರಾಜಧಾನಿ ಅಥವಾ ಪಟ್ಟಣದ) ಬಡಾವಣೆ ; ಉಪನಗರ: "ಶಾಖಾನಗರಂ, ಉಪನಗರಂ — ಈ ೨ ರಾಜಧಾನಿಯ ಕೆಲದ ಬೀಡು" (ಹಲಾಯು. ೪೮-೧೩೧) ; ಶಾಖಾನಗರೋಪವನಂ ಶಾಖಾಯತಕರಮನೆತ್ತಿ (ಧರ್ಮನಾ. ೪-೫೫); ಈ ಪಟ್ಟಣದಲ್ಲಿ ಈಗ ಶಾಖಾನಗರಗಳು ಸಹಿತವಾಗಿ ಸುಮಾರು ೧,೬೦,೦೦೦ ಜನರು ವಾಸಿಸುತ್ತಾರೆ (ಮುಂಬಯಿ. ೬-೪೯). [ಸಂ.]

**ಶಾಖಾಪಥ** (ನಾ). ಕವಲುದಾರಿ ; ಸೀಳುಹಾದಿ : ಆ ದಿನ ಗುಪ್ತಸಂಕೇತವನ್ನು ಸೂಕ್ಷ್ಮವಾಗಿ ಅನುಸರಿಸುತ್ತ ಒಂದು ವಿಶೇಷಸ್ಥಾನದಿಂದ ಕಲ್ಲು ಮಾಟ ತೆಗದು ಒಂದು ಶಾಖಾಪಥವನ್ನು ಆವಿಷ್ಕಾರ ಮಾಡಿದನು (ಇಪ್ಪಕ. ೩೪೨). [ಸಂ.]

**ಶಾಖಾಪುರ** (ನಾ). = ಶಾಖಾನಗರ : ಖಳರಿಗೆ ಕೇಡುಗಾಲವಿದು ಮೊಳೆವುದಿಲ್ಲಿರ ಬಾರದೆಂದಳವಳಿವುತಲ್ಲಿಯದಲ್ಲಿ ಬಲ್ಲವರಿಳಿದು ದುರ್ಗವನ್ನದಿದರು ಶಾಖಾಪುರಾಳಿಗಳ (ತೊರರಾ. ೫-೭-೧೫). [ಸಂ.]

**ಶಾಖಾಮೃಗ** (ನಾ). ೧. ಮರದಲ್ಲಿ ವಾಸಿಸುವ ಪ್ರಾಣಿ ; ಕೋತಿ : ಶಾಖಾಮೃಗಮಲರ ಮಾಲೆಗೀಳಲ್ ಮಿಗೆ ಬಲ್ಲುದದಲ್ಲದಂತಿರೇಂ ರಚಿಯಿಕುಮೇ (ಶಬಶಂ. ೧-೧೫). ೨. ಅಳಿಲು. [ಸಂ.]

**ಶಾಖಾರಂಡ** (ನಾ). ವೇದಾಧ್ಯಯನದಲ್ಲಿ ತನ್ನ ಶಾಖೆಯನ್ನು ಬಿಟ್ಟು ಮತ್ತೊಂದು ಶಾಖೆಯನ್ನು ಅಧ್ಯಯನ ಮಾಡುವ ಬ್ರಾಹ್ಮಣ : ತನ್ನ ಶಾಖೆಯ ನೋಡದನ್ಯಶಾಖೆಯ ಪಠಿಸುವಂ ನೋಡಲಾಗಿ ಶಾಖಾರಂಡನೆನಿಸುವನು (ವೀಶ್ಯಪು. ೭-೨-೨೩). [ಸಂ.]

**ಶಾಖಾಸ್ಥಿ** (ನಾ). ಕೈ ಅಥವಾ ಕಾಲಿನ ಮೂಳೆ : "ನಳಕಮೆನೆ ಶಾಖಾಸ್ಥಿಯೆಂದೆನಲು ಕೈಕಾಲಯೆಲುವು" (ಮಂಗರಾ. ೧೧೭-೬). [ಸಂ.]

**ಶಾಖಿ** (ಗು). ೧. ಕೊಂಬೆಗಳನ್ನು ಹೊಂದಿರುವ. (ನಾ). ೨. ಮರ ; ವೃಕ್ಷ : ಒಲ್ದೆಱಪಂತೆ ತಳ್ತ ಪೂವಿನ ಪೊಸಗೊಂಚಲಿಂ ಮರನಿದೇನೆಸದಿರ್ದುವೊ ಕಲ್ಪುವಾಗದೇ ವಿನಯಮನೀ ತಪೋಧನರ ಕೈಯೊಳೆ ಶಾಖಿಗಳುಂ ನಗೇಂದ್ರ [ದಾ] (ಪಂಪಭಾ. ೧-೧೧೬); ಇತ್ತುದದೊಂದು ಶಾಖಿ ಶುಭಕಾಗೊಲವಿಂ ಶಶಿಪಾಂಡುವಸ್ತ್ರಮಂ (ಶಾಕುಂತ. ೫೦ ೮೩). ೩. ವೇದ. ೪. ವೇದದ ಯಾವುದಾದರೊಂದು ಶಾಖೆಗೆ ಸಂಬಂಧಿಸಿದುದು. ೫. ವೇದದ ಶಾಖೆಯೊಂದನ್ನು ಅನುಸರಿಸುವವನು. [ಸಂ. ಶಾಖಿನ್]

**ಶಾಖೆ** (ನಾ). ೧. ಮರದ ಕೊಂಬೆ, —ಟೊಂಗೆ : "ಶಾಖಾ, ಲತಾ — ೨ ಕೊಂಬೆಗಳ ಹೆಸರುಗಳು" (ಸಿದ್ಧಾಂತಿ. ೧೧೨). ೨. ವಿಭಾಗ ; ಅಂಗ. ೩. ತೋಳು. ೪. ಪಂಗಡ; ವರ್ಗ : ಇಂಡೊ — ಆರ್ಯನ್ ವರ್ಗ ಇಂಡೊ—ಯೂರೋಪಿಯನ್ ಕುಟುಂಬದ ಒಂದು ಪ್ರಧಾನಶಾಖೆ (ದ್ರಾವಿ. ೨೦ ಓಸ್ಥಳ). ೫. ಉಪಸಂಸ್ಥೆ : ತಾಂಡೂರ — ಇಲ್ಲಿಯ ಅಂಗಡಿಯು ಕಲಬುರ್ಗಿ ಅಂಗಡಿಯ ಶಾಖೆಯು (ಮುಂಬಪ್ರಾ. ೨೮). ೬. ಒಂದು ಸಂಸ್ಥೆಯ ಅಥವಾ ಕಚೇರಿಯ ಒಳವಿಭಾಗ : ನಗರದ ಈ ಶಾಖೆಯಲ್ಲಿ ಅನೇಕ ಕೆಲಸಗಾರರಿದ್ದಾರೆ. (ರೂಢಿ). ೭. ಪರಂಪರಾಗತವಾಗಿ ಬೇರೆ ಬೇರೆ ಅಧ್ಯಯನ ಸಂಸ್ಥೆ ಅಥವಾ ಪಂಥಗಳಿಗೆ ಅನೂಚಾನವಾಗಿ ಬಂದ ವೇದಪಾಠ ಮತ್ತು ಆ ವೇದಪಾಠವನ್ನು ಅನುಸರಿಸುವ ಪಂಥ. ೮. ನಾಲ್ಕು ವೇದಗಳಲ್ಲಿ ಯಾವುದಾದರೂ ಒಂದು ಪಾಠ : ಓದಿಸಾ ಪದಖಂಡವರ್ಗಾ ಪಾದಶಾಖೆ ಗಳೆಂಬವಱೊಳ್ (ಬಸವು. ೫೯-೪೫): ನಾನಾಗೋತ್ರದ ನಾನಾಸೂತ್ರದ ನಾನಾಶಾಖೆ ಗಳಾದ ಸಕಲವಿದ್ಯಾಪಾರೀಣರಾದ ಪಾತ್ರಭೂತರಾದ ಬ್ರಾಹ್ಮಣೋತ್ತಮರಿಗೆ... ಸರ್ವ ಮಾನ್ಯವಾಗಿ ಧಾರ[ಯ]ನೆರದು ಕೊಟ್ಟವಾಗಿ (ಎಕ. IV. ಕೃಷ್ಣರಾ. ೭೭-೨೪: 1663). ೯. [ರಾಜನೀ] ಮಂತ್ರಿಯ ಅಧಿಕಾರಕ್ಷೇತ್ರ, — ಖಾತೆ. ೧೦. [ನಾಟ್ಯ] ಆಂಗಿಕಾಭಿನಯದ ಮೂರು ವಿಧಗಳಲ್ಲಿ ಒಂದು ; "ಆಂಗಿಕಾಭಿನಯವು ಶಾಖೆ, ಅಂಕುರ, ವೃತ್ತ ಎಂದು ಮೂರು ವಿಧ... ಕರವರ್ತನೆಗಳನ್ನು ಮಾಡುವುದೇ ಶಾಖೆ" (ಲಾಸ್ಯರಂ. ೨೨೦ ಗದ್ಯಾನುವಾದ): ವಿರಚಿಪ ಕರವರ್ತನದಿಂ ದೂರವುದು ತಾ ಶಾಖೆ (ಲಾಸ್ಯರಂ. ೧-೭೧).

ಶಾಖೋಪಶಾಖೆ = ಮರದ ದೊಡ್ಡ ಕೊಂಬೆ ಮತ್ತು ಅದರ ಟಿಸಿಲುಗಳು: ಇಟ್ಟಣಿಸಿ ಛಿಟಛಿಟಿಸಿ ಶಿಖಿ... ಭುಗಿಲಿಟ್ಟು ಕವಿದುದು ತುದಿಗೆ ಬಹುಶಾಖೋಪ ಶಾಖೆಗಳ (ಕುವ್ಯಾಅ. ೨೦-೫೫); ಹೊರವಾಗಿ ಬೆಳೆಯಿತು ಹಸುರಾಗಿ ಹರಡಿತು ಶಾಖೋಪಶಾಖೆಗಳಾಗಿ (ಇಂಚಾಪ. ೧೪೪-೭). ೨. ಮೂಲಸಂಸ್ಥೆಯ ಉಪಸಂಸ್ಥೆ ಮತ್ತು ಅದರ ಒಳವಿಭಾಗಗಳು : ಬಹಳ ಹಿಂದೆಯೇ ಸ್ಥಾಪಿತವಾದ ಆ ಸಂಸ್ಥೆಯು ಈಗ ತನ್ನ ಅನೇಕ ಶಾಖೋಪಶಾಖೆಗಳನ್ನು ಬೇರೆ ಬೇರೆ ಊರುಗಳಲ್ಲಿ ತೆರೆದಿದೆ(ರೂಢಿ).

[ಸಂ. ಶಾಖಾ]

**ಶಾಗಮಟ್ಟಿ** (ನಾ). ಕೇದಿಗೆ; ತಾಳೆಹೂವು : ಹಳ್ಳವಿಲ್ಲದ ಕಡೆಯಲ್ಲಿ ಶಾಗಮಟ್ಟಿ ಎಂದರ ಕೇದಿಗೆಗೆ ಹೆಸರು, ಆ ಕೇದಿಗೆಯನ್ನಾದರೂ ಬೇಲಿಯ ಹೊರಮೈಯಲ್ಲಿ ಹಚ್ಚಬೇಕು (ಕೃಷಿಪ್ರ. ೨೦೭). 'ಚಾಗಮಟ್ಟಿ' ಪರಾ. [?]

**ಶಾಜೀರಿಗೆ** (ನಾ). ಒಂದು ಬಗೆಯ ಉತ್ತಮವಾದ ಜೀರಿಗೆ: ಜೀರಿಗೆಯನ್ನಾದರೂ ಮುಂಗಾರಿಯ ಕಾಲದಲ್ಲಿ ಬಿತ್ತಬೇಕು. ಹಾಗೆ ಶಾಜೀರಿಗೆಯನ್ನಾದರೂ ಬಿತ್ತಿದರೆ ಬರುತ್ತದೆ (ಕೃಷಿಪ್ರ. ೬೮). [← ಪಾರ. ಶಾಹಜೀರಹ್; ಮರಾ. ಶಹಾಜಿರೇ; ಗುಜ. ಶಾಜಿರು]

**ಶಾಟ**$_1$ (ನಾ). ೧. ಅರಿವೆ ; ಬಟ್ಟೆ ; ವಸ್ತ್ರ. ೨. ಶುಭ್ರವಾದ ಉಡಿಗೆ ; ಮಡಿಯಾದ ಉಡುಪು: (ಕ). ೩. ಒಂದು ಬಗೆಯ ಹೆಂಗಸರ ಉಡುಪು. ೪. ಒಳಲಂಗ. [ಸಂ.]

**ಶಾಟ**$_2$, ಶಂಟ (ನಾ). ಗುಹ್ಯಾಂಗದ ಮೇಲೆ ಬೆಳೆಯುವ ಕೂದಲು; ಶಪ್ಪ : ಊಟಕ್ಕಿಲ್ಲದ ಉಪ್ಪಿನಕಾಯಿ ಕತ್ತೆಶಾಟಕ್ಕಿಂತ ಕಡೆ (ಗಾದ). **ಶಂಟ**: ಕಂಡು ಕರಿಯದ ನೆಂಟ ಗಂಡುಕತ್ತೆಯ ಶಂಟ (ದಾಸಪ. ಕ. ೫೪-೪); ದೇವರ ಗಂಟು ಹೋದರೆ ಪೂಜಾರಿ ಶಂಟ ಹೋಯಿತು (ಗಾದ). [← ಮರಾ. ಶೇಠ್, ಶೇಂಟ್]

**ಶಾಟಕ** (ನಾ). ಬಟ್ಟೆ; ವಸ್ತ್ರ. [ಸಂ.]

**ಶಾಟಿ** (ನಾ). ೧. = ಶಾಟಕ. ೨. ಮೇಲುಹೊದಿಕೆ ; ಧೋತರ ; ವಲ್ಲಿ : "ಬೃಹತಿಕೆ ಶಾಟಿ ವೈಕಕ್ಷಮಾ ಪೊದೆವವುತ್ತರಾಸಂಗಮಕ್ಕು" (ಮಂಗರಾ. ೭೭-೯): ಚೀರ, ಸೀರೆ, ಚೇಲ, ಸಾಡಿ, ಶಾಟಿಗಳು ಮೂಲತಃ ವಲ್ಕಲಗಳು (ಕರ್ಣಾಪೂ. ೧೫೦). ೩. ಸಂನ್ಯಾಸಿಗಳು ತೊಡುವ ಕಾವಿಬಣ್ಣದ ಬಟ್ಟೆ ; ಕಾಷಾಯವಸ್ತ್ರ : ನೀರಲ್ಲಿ ನನೆದಿರ್ದ ಶಾಟಿಯಂಗಿಯ ತೋಳ ತೋಱಲ್ಕೆ ಮತ್ತೇಳುಘಳಿಗೆಯೊಳು ಬಂದೋರ್ವ ಧಾರುಣಿಯೊಳುಂ ಬಿದ್ದು ನುತಿಸುತಿರೆ (ಗುರುಚಾ. ೩-೨೪) ; ಆಚಾರ್ಯರು ಬಹಳ ಕನಿಕರದಿಂದ ಒಮ್ಮೆ ತಮ್ಮ ಶಾಟಿಯನ್ನು ಆತ್ತ ಬೀಸುತ್ತಲೇ ಆ ಹಡಗಿಗೆ ಅನುಕೂಲ ಮಾರುತನ ಸಹಾಯವಾದಂತಾಗಿ ಅದು ಸರಾಗವಾಗಿ ದಂಡೆಗೆ ಬಂದು ಮುಟ್ಟಿತು (ಭಜ್ಯೋತಿ. ೩೮). ೪. ಪಂಚೆ : ಚೆಲ್ಲಣಂ ಬಾಲಗ್ಗಪಂ ಬಿಗಿದ ಕಾಸೆ ಬಿಳಿಯೊಲ್ಲಿ ಕಾವಿಯ

ಶಾಟಿಯಂಗದಟ್ಟುಂ ಬೆಳೆದ ಚೆಳ್ಳುಗುರು (ಗುರುಚಾ. ೩-೫೦); ವರಿಷ್ಠರನ್ನು ಕಾಣಬೇಕಾದಾಗ ಸೂಟು ಬಿಟ್ಟು ಶಾಟಿ ಧರಿಸಿದರೆ ಸೃಷ್ಟಿಯೆ ನಿಂತುಹೋಗಬೇಕಾದೀತು (ಮುಂಗಾಪು. ೨೫). [ಸಂ. ಶಾಟೀ]

**ಶಾಠಿ** 'ಸಾಟ್ಟಿ$_2$' ನೋ.

**ಶಾಠ್ಯ** (ನಾ). ೧. ಮೋಸ ; ವಂಚನೆ : ಕೊಲಿಸುವ ಕೊಲ್ಲ ಶಾಠ್ಯಪರವಾಗಿಸುವಾಗುವ ಕಳ್ಳ ಕಳ್ಳರೊಳ್ ಸಲೆ ಪುದುಗೊಳ್ಳ ಪಾದರಮನಾಡಿಸುವ ಕಾಂಕ್ಷೆಯೊಳ್ ಮನಂ ಸಲಿಸುವ ಸ್ವಲ್ಪಪಾಪಪರನುಂ (ಸುಕುಮಾ. ೫-೪೪). ೨. ಹಟಮಾರಿತನ; ಚಂಡಿತನ : ತನ್ನ ಶಾಠ್ಯ, ಅನ್ಯಾಯ, ಅಜ್ಞಾನ, ಕಾಮಾಂಧತೆ — ಇವೇ ಈ ದುಃಖಮಯತೆಯನ್ನು ತಂದಿರಬಹುದೆಂಬುದರ ಕಲ್ಪನೆಯು ಅವನಿಗೆ ತುಸುವಾದರೂ ಬರಲಿಲ್ಲ (ಸಮಜೀ. ೧೨೩). ೩. ದುಷ್ಕೃತನ ; ಕೇಡಿಗಬುದ್ಧಿ. [ಸಂ.]

**ಶಾಡ್ವಲ, ಶಾಡ್ವಳ** (ಗು). ೧. ಹಸುರಾದ; ಹಚ್ಚನೆಯ : ಪಕ್ಷಂಗಳ ಶಾಡ್ವಲಚ್ಛವಿ ಮನಂಗೊಳೆ ಪಾಱುವ ಕೀರಮಾಲೆ . . . ತೋರಣದಂತೆ ರಂಜಿಕುಂ (ಜಗವಿ. ೪-೭೭). (ನಾ). ೨. ಎಳೆಯ ಹುಲ್ಲಿನಿಂದ ಕೂಡಿದ ಪ್ರದೇಶ; ಹಚ್ಚಹಸುರಾದ ಹುಲ್ಲುಗಾವಲು ; ಹಸಲೆ : ಜೀರ್ಣಚರನ್ಮೃಗಾಳಿ . . . ಜಗದ್ವಿವರಾಂತಮಪ್ಪ ರಾಮನ ಘನಚಾಪದಂಡರವಮಂ ನೆನೆದತ್ತಲುಮಿಕ್ಕಿಸುತ್ತೆ ಕಂಬನಿಗಳನಿಕ್ಕಿ ಮೇಪುಗೊಳಲೊಲ್ಲವು ರೂಢಿಯ ಶಾಡ್ವಲಂಗಳೊಳ್ (ಕಾದಂಪೂ. ೧೧೧) ; ರಾಜಿಸೆ ನೀರ್ದಾಣದೊತ್ತಿನೊಳ್ ಪಚ್ಚನೆ ಬೆಳೆದ ಹರಿತಶಾಡ್ವಲಮುಂ, ಸುತ್ತುಂ ನೀಳ್ದ ಪೂಟೆದುಂಗೆಯ ಜೊಂಪಮುಂ . . . ಚೆಲ್ವಾಯ್ತು (ರಾಮಾಶ್ವ. ೩೦-೧೯). **ಶಾಡ್ವಳ :** ೨. ಆ ಮಹಾತ್ಮಂ ಜಲದೇವತಾನುಗ್ರಹಮಂ ಪಡೆದು ಶಾಡ್ವಳರುಚಿರಗಿರಿನಿತಂಬ ದೋಪಳದೊಳೊಡಂಬಡಿನೊಳೊಱಗುವ ನಗಜೇಂದ್ರನಂತೆ (ವರ್ಧಚ. ೮-೯೭ ವ). ೩. ಎಳೆಯ ಹುಲ್ಲು ; ಗರಿಕೆ : ಬಳವಳಿದ ರಥತುರಂಗವೃಂದಮಂ ಬಿಟ್ಟು ಶೀತಳವಾರಿಯಂ ತೋಱಿ ಮೆಯ್ದೊಳೆದು ಲಲಿತಶಾಡ್ವಳವನೊಲವಿಂ ಕೊಯ್ದು ಮುಂದಿಟ್ಟು ಕಟ್ಟಿ ಪ್ರಧಾನ ನಟ್ಟಡವಿಯೊಳಗೆ . . . ವಿಶ್ರಮಿಸಲು (ಹಚಕಾ. ೭-೪೧). 'ಶಾದ್ವಲ' ಪರಾ. [ಸಂ.]

**ಶಾಡ್ವಳ** 'ಶಾಡ್ವಲ' ನೋ.

**ಶಾಣ$_1$** (ಗು). ೧. ಸೆಣಬಿನಿಂದ ತಯಾರಿಸಿದ. (ನಾ). ೨. ಹರಿತ ಗೊಳಿಸುವಿಕೆ : (ಕ). ೩. ಸಾಣೆಕಲ್ಲು ; ಮಸೆಗಲ್ಲು. ೪. ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಪರೀಕ್ಷಿಸುವ ಕಲ್ಲು; ಒರೆಗಲ್ಲು; ನಿಕಷ: 'ಖರಶಾಣ' ಪರಾ. ೫. ಗರಗಸ. ೬. ಒಂದು ತೂಕದ ಮಾನ; ನಾಲ್ಕು ಮಾಷಗಳ ತೂಕ : "ಶಾಣಮದು ನಿಕಷಮುಂ ಪರಿಮಾಣಮುಮೆರಡುಂ" (ವಸ್ತುಕೋ. ೧೨೫-೪೪) ; ೪. ಮಾಷ = ೧ ಶಾಣ ೪.೮ ಗ್ರಾಂ. (ಸಕಪ್ಪ xiii, ಪ್ರಸ್ತಾವನೆ). ೭. ಗೋಣಿತಾಟು. [ಸಂ.]

**ಶಾಣ$_2$** 'ಶಹಣೆ' ನೋ.

**ಶಾಣಶಿಲೆ** (ನಾ). ಒರೆಗಲ್ಲು : ನಿರ್ಮಲಶಾಣಶಿಲೆಗಳಂ ನೀರಾಜನಾರ್ಥಫಲಕ ವ್ಯಜನನಿಕರಂಗಳಂ . . . ಬೇಡುವರ ಬಗೆಯಱಿದವರ್ಗಾ ವಸ್ತುವಂ ಕುಡುತೆ (ಅರಾಚ. ೫-೭-೧೭). [ಸಂ. ಶಾಣಶಿಲಾ]

**ಶಾಣಾರಿಕಾಸು** (ನಾ). ಒಂದು ಬಗೆಯ ನಾಣ್ಯ : ನವಾಬರು ಅವನಿಗೆ ಸನ್ಮಾನಗಳನ್ನು ಮಾಡಿ, ೪ ಲಕ್ಷ ಶಾಣಾರಿಕಾಸುಗಳನ್ನು ಕೊಟ್ಟರೆ ನಿನ್ನ ಕಲ್ಲಿಕೋಟೆಯನ್ನು ನಿನಗೆ ಕೊಡುತ್ತೇನೆಂದು ಹೇಳಿ . . . ದೇವಸ್ಥಾನದಲ್ಲಿ ಇಳಿಸಿದ್ದನು (ಮಹಾಪಂ. I, ೨೦೧). [ಶಾಣಾರಿ? + ಕಾಸು$_2$]

**ಶಾಣಿತ** (ಗು). ಹರಿತಗೊಳಿಸಿದ : ನೋಡು ಮತ್ತ ಕಾಮಿನಿ, ವಳಿತ ಶಾಣಿತ ತೀರನು (ಕೋಹಿನೂ. ೧೦೨). [ಸಂ.]

**ಶಾಣೆ** 'ಶಹಣೆ' ನೋ.

**ಶಾಣೆತನ, ಶಾಣೆಯತನ, ಶಾಹಣೇತನ, ಶ್ಯಾಣ್ಯಾತನ** (ನಾ). ಜಾಣತನ; ಚಾತುರ್ಯ : ಧಡ್ಡಮಂದೀಗ ಛಾಡೀ ಹೇಳೋ ಶಾಣೇತನಾ ಎಲ್ಲೈತಿ? (ಉದವ್ವ. ೧೫); ಗಂಡನ್ನ ಇಟಗೊಂಬೋ ಶಾಣೇತನ ಇಲ್ಲದ ಮುಗ್ಗಲಗೇಡಿಗೆ ಇನ್ನೊಬ್ಬರ ರಂಡೆಮುಂಡೆತನದ ಗೊಡವಿ ಯಾಕ? (ಸಮಜೀ. ೨೦೫). **ಶಾಣೆಯತನ :** ಶಾಣೆಯತನವು ಮಾನವಮಾನವು ಶೈನ್ಯಗಳು ಕನಸಣ್ಣಾ (ಚಿದಾವ. ೩೪-೫). **ಶಾಹಣೇತನ :** ದಮಡಿ ದಮಡಿ ಶಾಹಣೇತನ ಮಾಡಿ ಐವತ್ತುಸಾವಿರ ರೂಪಾಯಿ ಕೂಡಹಾಕಿ (ಬಾಂಡಾಯ. ೪). **ಶ್ಯಾಣ್ಯಾತನ :** ದುಡ್ಡು ಗಳಿಸಿದರ ಉಪಯೋಗ ಮಾಡಿಕೊಂಡೇನು ಅನ್ನೂ ಶ್ಯಾಣ್ಯಾತನ ಬೇಕೊ ಬ್ಯಾಡೋ? (ಅವನಾ. ೨೦೪). [ಶಾಣೆ (< ಶಹಣೆ) + – ತನ]

**ಶಾಣೆಯ** 'ಶಹಣೆ' ನೋ.

**ಶಾಣೆಯತನ** 'ಶಾಣೆತನ' ನೋ.

**ಶಾಣೋಪಲ** (ನಾ). ಸಾಣೆಕಲ್ಲು ; ಮಸೆಗಲ್ಲು : ಪಳುಕಿನ ಶಾಣೋಪಲದೊಳ್ಮಿಗೆ ಬಗೆಗೊಳೆ ಕತ್ತುರಿಯಂ ತೇಯುತ್ತಿರ್ದೊರ್ವಳ್ ಪಾಂಗೆಂತೆನೆ (ಉದ್ಭಟದೇ. ೨-೩೭); ಕುಸುಮಶರನಸುಗೆಸರಮಂ ಮಸೆಯೆ ಸುಧಾಕಿರಣಬಿಂಬಶಾಣೋಪಲದೊಳ್ಮಸಗಿ ಪನಿ ಪತ್ತಿ ತುದಿಯೊಳ್ಮಿಸುಗುವುದೆನೆ ಮೆಱೆದುವವಳ ಪದತಳದುಗುರ್ಗಳ್ (ರಾಜಶೇ. ೭-೨೭). [ಸಂ.]

**ಶಾಣ್ಯಾ** 'ಶಹಣೆ' ನೋ.

**ಶಾತ** (ಗು). ೧. ಹರಿತವಾದ ; ಚೂಪಾದ : ಕೂಟಾಗ್ರ [ಮು]ದಗ್ರವಜ್ರಘಾತ ದಿಂದುರುಳ್ವಂತೆ ರತ್ನಮಕುಟಮರಾತಿಶಾತಶರದಿನುರುಳ್ವುದುಂ (ಪಂಪಭಾ. ೧೨-೨೦೨ ವ); ಪೊಱಮಟ್ಟತ್ತು ಕಾಂತಾರದಿಂ ಪಾಟಲನೇತ್ರಂ . . . ಶಾತಶೃಂಗಂ ಗವೇಂದ್ರಂ (ಜಗವಿ. ೫-೩೫) ; ಆ ತಳೋದರಿ . . . ಸಾವಿಗೆ ಶಾತಖಡ್ಗಕೆ ಕೈದುಡುಕಿದಳು ಕಾವಲಸುರೆಯರ (ತೊರರಾ. ೫-೩-೭೮). ೨. ತೆಳ್ಳನೆಯ : 'ಶಾತಕುಕ್ಷಿ' ಪರಾ. (ನಾ). ೩. ಹರಿತಗೊಳಿಸಿದುದು : "ನಿಶಿತಂ, ಕ್ಷತಂ, ಶಾತಂ, ತೇಜಿತಂ — ೪ ಹದವಿಡಲ್ಪಟ್ಟದ್ದು" (ಸಿದ್ಧಾಂತಿ. ೩೪೭). ೪. ತೆಳುವಾಗಿರುವಂಥದು : "ಸನ್ನಮೆನೆ ಶಾತ [ಪಾಠಾಂ. ಶಾಂತ]ಮೆನೆ ಸಣ್ಣನದು" (ಮಂಗರಾ. ೧೩೨-೨೭). ೫. ನಿತ್ರಾಣ; ನಿಶ್ಶಕ್ತಿ; ದುರ್ಬಲತೆ : (ಕ). ೬. ಸಂತೋಷ ; ಹಿಗ್ಗು : "ಮುತ್, ಪ್ರೀತಿಃ, ಪ್ರಮದಃ, ಹರ್ಷಃ . . . ಶಾತಂ, ಸುಖಂ — ೧೨ ಸಂತೋಷದ ಹೆಸರುಗಳು" (ಸಿದ್ಧಾಂತಿ. ೪೨). ೭. ಚೆಲುವು; ಮನೋಹರತೆ : (ಕ). ೮. ಒಂದು ಬಗೆಯ ಸಸ್ಯ ; ಧತ್ತೂರ. [ಸಂ.]

**ಶಾತಕುಂಭ** (ನಾ). ೧. ಹೊನ್ನು ; ಬಂಗಾರ ; ಚಿನ್ನ : ರಂಭಾಸ್ತಂಭೋಪಮಾನೋರು ಯುಗಳೆಯರ್ ಶಾತಕುಂಭರಂಭಾವನಂಗಳುಮಂ . . . ವಿಲಾಸದಿಂ ತೊಟಲ್ವಲ್ಲಿ (ಆದಿಪು. ೧೧-೯೩ ವ) ; ಕ್ಷೀರಾದಿ ಸವನಪಾವನರಸವಿಚಿತ್ರಾನೇಕಶಾತಕುಂಭಕುಂಭಂಗಳಂ . . . ಮನಂಗೊಳಿಪ ದೇವಪೂಜಾಗೃಹಮಂ ಪೊಕ್ಕು (ಪಂರಾಮಾ. ೧೨-೨ ವ); ಆ ತುರಂಗದ ಖುರಪುಟದ ನವಶಾತಕುಂಭದ ಗಾಲಿಯುಱುಬೆಯನಾ ತತುಕ್ಷಣವಾಂಪರಾರೆನೆ ಕವಿದುದುಭಯದೊಳು (ಕುವ್ಯಾಭೀ. ೪-೯೩). ೨. ಧತ್ತೂರದ ಕಾಯಿ. [ಸಂ.]

**ಶಾತಕುಕ್ಷಿ** (ನಾ). ತೆಳ್ಳನೆಯ ನಡುವಿನ ಹೆಣ್ಣು ; ತನೂದರಿ : ಚೇತನದ ವರ್ಗದಲಿ ಸೃಷ್ಟಿಗೆ ಜಾತಸೌಖ್ಯಮದಾವುದೆನಲಾ ಶಾತಕುಕ್ಷಿಯರಾದ ಪೆಣ್ಗಳ ಕೈ ಪುದಿವು ಖವಿದೊಂದೇ (ವಿವೇಭ. ೪-೩೨). [ಸಂ. ಶಾತಕುಕ್ಷೀ]

**ಶಾತನ** (ನಾ). ೧. ಹರಿತಗೊಳಿಸುವುದು. ೨. ಪತನಗೊಳಿಸುವಿಕೆ; ನಾಶಗೊಳಿಸು ವಿಕೆ : ಅನ್ಯದೈವಮದಾಟವೀಪಟುಶಾತನಕುಠಾರ ಅನ್ಯದೈವಮತಂಗಮದಹರಿ (ಬಸವು. ೫೩-೪). ೩. ಅಳಿವು ; ನಾಶ. ೪. ಬಾಡುವಿಕೆ ; ಸೊರಗುವಿಕೆ. [ಸಂ.]

**ಶಾತಮನ್ಯು** (ನಾ). ೧. ಇಂದ್ರನಿಗೆ ಸಂಬಂಧಿಸಿದುದು. ೨. ಐಂದ್ರಾಸ್ತ್ರ : ಅರ್ಜುನ ಕೊಂಡನಗ್ಗದ ಶಾ[ಪಾಠಾಂ. ಚಾ]ತಮನ್ಯುವನು ಆ ಮಹಾಬಾಣಾಭಿಮುಖದಲಿ ಸೋಮಧರಮಾರ್ಗಣವನಿಂತೀ ಭೀಮವಿಕ್ರಮ ಕರ್ಣನೆಚ್ಚನು (ಕುವ್ಯಾಕ. ೨೩-೪೭). **ಶಾತಮನ್ಯುವದೆಸೆ** = ಇಂದ್ರನಿಗೆ ಸೇರಿದ ದಿಕ್ಕು ; ಪೂರ್ವದಿಕ್ಕು : ಈತನುತ್ತರದೆಸೆಗೆ ಭೀಮನು ಶಾತಮನ್ಯುವ ದೆಸೆಗೆ ಯಮಳರ ಭೀತರಿದ್ದೆಸೆಗೆಂದು ವೇದವ್ಯಾಸ ನೇಮಿಸಿದ (ಕುವ್ಯಾಸ. ೩-೧೨). [< ಸಂ. ಶತಮನ್ಯು]

**ಶಾತೋದರಿ** (ನಾ). = ಶಾತಕುಕ್ಷಿ : ಶಾತೋದರಿ ಬಯಸುವ ನಳನೀತಂ ತಾಂ ದೂತನಾಗಿ ಪೋದೊಡೆ (ನಳಚಂ. ೨೮೪) ; ನೀತಿರಹಿತ ನರಪತಿಯ ವಿಭವಜಲಜಾತ ದಲಾಂಬುವಿನಂತೆ ಶಾತೋದರಿಯರ ಬಱುನೋಟದಂತತಿಕಾತರತೆಯನೆಯ್ದಿದಿಹುದೆ (ಕುರಾಸಾಂ. ೩೫-೩೪). [ಸಂ. ಶಾತೋದರೀ]

**ಶಾತ್ತುಮೊರೆ** (ನಾ). ೧. ವೈಷ್ಣವದೇವಾಲಯಗಳಲ್ಲಿ 'ಪ್ರಬಂಧವಾಚನ'ದ ನಂತರ ಮಾಡುವ ಪವಿತ್ರಸ್ತೋತ್ರಗಳ ಪಠಣ : ನಮೋ . . . ಪುಳಿಯೋರೆ ಯಿರದ ಮೊರೆಯದ ಶಾತ್ತುಮೊರೆಗು ಕಣ್ಮುಚ್ಚಿ ಕೈಮುಗಿದು ಕೂಳ್ ಕಾಯ್ಕು ನಿಮಗು ಮುಗಿಯದೇ ನಿಮ್ಮ ಮರೆಯೊಳು ಬಾಳ್ವ ನನಗು! (ಗಣೇಶ. ೭೦-೬). ೨. ಆಳ್ವಾರುಗಳ ಉತ್ಸವಸಮಾರಂಭದ ಕೊನೆ, — ಮುಕ್ತಾಯ : ಉತ್ಸವ ಜರುಗುತ್ತಿರುವ ಇಂದಿನ ಸನ್ನಿವೇಶದಲ್ಲಿ ನಾನು ಬಹಳ ಉಲ್ಲಾಸವಾಗಿದ್ದೇನೆ. ಇನ್ನೇನು ಮಜ್ಜನವಾಗಿ ಶಾತ್ತುಮೊರೆಯ ವೇಳೆ ಸಮಾಪಿಸುತ್ತಿದೆ (ಈಚಿಕೆ. ೮೬). [← ತಮಿ. ಚಾತ್ತುಮುಱೈ]

**ಶಾತ್ರವ** (ಗು). ೧. ಶತ್ರುವಿಗೆ ಸಂಬಂಧಿಸಿದ. (ನಾ). ೨. ಹಗೆ ; ಶತ್ರು : ವಿಕ್ರಾಂತಕ್ಷತ್ರಚಾರಿತ್ರಂಗಳಂ ಕೇಳದ ಶಾತ್ರವಗಣನನೊಳಂ ವಿರೋಧಿಧ್ವಜಿನೀ ಧೂಳೀಪಟಲಪಿಹಿತದೃಷ್ಟಿಗಳಾಗಿ (ಆದಿಪು. ಬ. ೧೪-೮೩ ವ); ಅವಯವದಿಂದುದುರ್ಚುವ ಭವಭಯಮುಂ ಶಿಥಿಲಮಾದುದೆಂದೊಡೆ ತಾಂ ಶಾತ್ರವಭಯಮೇಗಹನಮೊ ಕರ್ಮ ವೈರಿನಿರ್ಮೂಲನಾಂಘ್ರಿಕಮಲಾಂತಿಕದೊಳ್ (ಶಾಂತಿಪು. ೬-೪೧) ; ಇವು ಮಹಾರಣರಂಗದಲಿ ಶಾತ್ರವನಿವಾರಣವೈಸಲೆ (ಕುಮಾ.ಅ. ೬-೨೮). ೩. ಹಗೆತನ; ಶತ್ರುತ್ವ. ೪. ಹಗೆಗಳ ಗುಂಪು; ಶತ್ರುಸಮೂಹ. [ಸಂ.]

**ಶಾತ್ರವಮಂತ್ರಪಂಚಕ** (ನಾ). [ರಾಜನೀ] ಶತ್ರುವಿನೊಂದಿಗೆ ವ್ಯವಹರಿಸುವಾಗ ಕೈಕೊಳ್ಳುವ ಕರ್ಮಾರಂಭೋಪಾಯ, ಪುರುಷದ್ರವ್ಯಸಂಪತ್ತು, ದೇಶಕಾಲ ವಿಭಾಗ, ವಿನಿಪಾತಪ್ರತೀಕಾರ ಮತ್ತು ಕಾರ್ಯಸಿದ್ಧಿಗಳೆಂಬ ಐದು ಬಗೆಯ ಉಪಾಯಗಳು : ಅವಯವದಿಂದಲೆಗುಂ ಪಂಚವಿಧಾಹಿತವರ್ಗದುರ್ಗಪಂಚಕಮಂ ಶಾತ್ರವಮಂತ್ರಪಂಚಕಮನೊಪ್ಪುವ ತತ್ಪ್ರಭುಮಂತ್ರಶಕ್ತಿಗಳ್ ತೀವ್ರಂಗಳ್ (ಶಾಂತಿಪು. ೨-೪೭). [ಸಂ.]

**ಶಾದ** (ನಾ). ೧. ಎಳೆಯ ಹುಲ್ಲು. ೨. ಕೆಸರು; ರಾಡಿ : "ಷರಿಷಜ್ಜಂಬಾಳ ನಿಷದ್ವರಕರ್ದಮ ಶಾದ" (ವಸ್ತುಕೋ. ೨೫-೨೦). [ಸಂ.]

**ಶಾದ್ವಲ** (ಗು). ೧. ಹಚ್ಚನೆಯ ; ಹಸುರಾದ. (ನಾ). ೨. ಹಚ್ಚನೆಯ ಹುಲ್ಲುಗಾವಲು : "ಶಾದ್ವಲಃ, ಶಾದಹರಿತೆ — ಎಳೇಹುಲ್ಲಿನಿಂದ ಹಚ್ಚಗಿರುವ ದೇಶಕ್ಕೆ ಹೆಸರುಗಳು" (ಸಿದ್ಧಾಂತಿ. ೯೫). ೩. ಹಸಿರಾದ ಹುಲ್ಲು : ಶಾದ್ವಲದ ಮೇಲೆ ಕಿಸಲಯದ ಪರ್ಯಂಕದಲಿ . . . ವಿಶ್ರಮಿಸಿಕೊಳುತೆ (ಚಿತ್ರಾಂಗ. ೪೨-೧೧೪೫). [ಸಂ.]

**ಶಾನಬಾಗ** 'ಸೇನಬೋವ' ನೋ.

**ಶಾನಬಾವ** 'ಸೇನಬೋವ' ನೋ.

**ಶಾನಬೋವ** 'ಸೇನಬೋವ' ನೋ.

**ಶಾನಭಾಗ** 'ಸೇನಬೋವ' ನೋ.

**ಶಾನಭೋಗ** 'ಸೇನಬೋವ' ನೋ.

**ಶಾನಭೋಗತನ** 'ಸೇನಭೋಗತನ' ನೋ.

**ಶಾನಭೋವ** 'ಸೇನಬೋವ' ನೋ.

**ಶಾನಾಯ, ಸೇನಾಯ** (ನಾ). ಶಾನುಭೋಗನು ಶುಲ್ಕದ ರೂಪದಲ್ಲಿ ತೆಗೆದುಕೊಳ್ಳುವ, ರೈತರ ಬೆಳೆಯ ಒಂದು ಭಾಗ : 'ಶಾನಾಯಮುದ್ರೆ' ಪರಾ. ಸೇನಾಯ : 'ಸೇನಾಯಮುದ್ರೆ' ಪರಾ. [?]

**ಶಾನಾಯಮುದ್ರೆ, ಸೇನಾಯಮುದ್ರೆ** (ನಾ). ಶಾನುಭೋಗನಿಗೆ ಕೊಡಬೇಕಾದ ಆದಾಯವೆಂದು ತಿಳಿಸುವ ಮೊಹರು : ಕೋರಿನ ದವಸದಲ್ಲಿ ಸೊಲಿಗೆಗುಡ್ಡೆ ಆಯ ಎಂಬುದಾಗಿ ರುಸುಂ ಮಾಡಿ ಕೊಟ್ಟು, ಗೌಡ ಮತ್ತು ಶ್ಯಾನುಭಾಗರಿಗೆ ಶಾನಾಯಮುದ್ರೆ ಎಂಬದಾಗಿ ಕೊಡುವಂತೆ ನೇಮಕಮಾಡಿಸಿದಲ್ಲದೆ . . . ಕಾಣಿಕೆ ಕಡ್ಡಾಯ ಮುಂತಾದ್ದನ್ನು ಬಿಟ್ಟುಕೊಡುವಂತೆ ನಿಬಂಧನೆಯನ್ನು ಮಾಡಿದರು (ಮಹಾವಂ. I,೧೧೯). **ಸೇನಾಯಮುದ್ರೆ** : ಊರಲ್ಲಿ ಚಾವಡಿಯ ಕಾವಲ್ಗಾರರು . . . ಸೇನಾಯಮುದ್ರೆ, ಕಡತದ ಕಾಣಿಕೆ . . . ಲಂಚ, ಸಂಚ, ಅದು, ಇದು — ಎನ್ನುತ ಎಲ್ಲಾವನ್ನೂ ಸಲ್ಲಿಸಿಕೊಳ್ಳುತ್ತಾರೆ (ಬಟ್ಟಿಅ. ೧೫೫-೨೩). [ಶಾನಾಯ + ಮುದ್ರೆ]

**ಶಾನುಭಾಗ** 'ಸೇನಬೋವ' ನೋ.

**ಶಾನುಭಾವ** 'ಸೇನಬೋವ' ನೋ.

**ಶಾನುಭೋಗ** 'ಸೇನಬೋವ' ನೋ.

**ಶಾನುಭೋಗಿಕೆ** 'ಸೇನಬೋಯಿಕೆ' ನೋ.

**ಶಾನೆ$_1$, ಶ್ಯಾನೆ$_1$** (ನಾ). ೧. ಬಾಹುಳ್ಯ ; ಹೆಚ್ಚಳ ; ಆಧಿಕ್ಯ : ಭಸ್ಮಪರಿಧಾನದಿಂ ಪೂಜಾಗ್ನಿ ಶಾನೆಯಿಂ ಕುಳಿತೆಲ್ಲ ತಾಣದಿಂ ಯತಿಗಳ ನಿಧಾನದಿಂ ತೀರಮೆಸೆಯೆ (ಪರಶು. ೪-೬೦). (ಗು). ೨. ಅಧಿಕವಾದ; ಬಹಳ: ನಿನ್ನ ಪದವೆ ಶರಣುಂ ಶರಣೆಂದೆನುತ ಶಾನೆ ದೈನ್ಯದಲಿ . . . ರೋಧಿಸಲು (ಸೌಗಂಧಿ. ೯೫-೪); ಬೇಗೆ ಮಸಗಲಿಂತು ಶಾನೆ ದೂರವೆ ವೃಷ್ಟಿ? (ಗಿಐವಿಂ. ೧೦೭-೨೯); ಶಾನೆ ಕ್ಷೀರವ ಕೊಡುವೆ ನಿತ್ಯವು ಮಾನವರಿಗುಪಕಾರಿಯು (ಗೋಹಾಡು. ೧೩-೬೧). **ಶ್ಯಾನೆ$_1$** : ೨. ಸರ್ಪವೆಂದರ ನನಗೆ ಶ್ಯಾನೆ ಹೆದರಿಕೆ (ಚಂಗಾಳ್ವ. ೩೯). [← ತೆಲು. ಶಾನಾ]

**ಶಾನೆ$_2$, ಶ್ಯಾನೆ$_2$** (ಅ). ಹೆಚ್ಚಾಗಿ; ತುಂಬ : ಆಳುಮಂದಿ ಶಾನೆ ಇರಲಿ ಕಾಲನು ತಾ ಬೆನ್ನ ಬಿಡನು (ಪುರಂದ. ೨-೪೯-೪). **ಶ್ಯಾನೆ** : ಯಾ ಸಮಯದೊಳ್ ಸೇನೆ ಶ್ಯಾನೆಯಿರಬೇಕು (ಸೌಗಂಧಿ. ೧೮೧-೧೭). [< ಶಾನೆ]

**ಶಾಪ** (ನಾ). ೧. ಕೆಡುಕನ್ನು ಬಯಸಿ ಹೇಳುವ ಮಾತು : ನಿನಗಾನಿತ್ತ ಬ್ರಹ್ಮಾಸ್ತ್ರಮೆಂಬ ದಿವ್ಯಾಸ್ತ್ರಮುಮವಸಾನಕಾಲದೊಳ್ ಬೆಸಕೆಯ್ಯದಿರ್ಕೆಂದು ಶಾಪಮನಿತ್ತಂ (ಪಂಪಭಾ. ೧-೧೧೫ ವ); ಎಲೆ ನಪುಂಸಕ ಗಂಡುವೇಷದ ಸುಳಿವು ನಿನಗೇಕೆನುತ ಸತಿ ಕಳವಳಿಸಿ ಕರವೆತ್ತಿದಳು ಹಿಡಿ ಹಿಡಿ ಶಾಪವಿದೆಯೆನುತ (ಕುಮಾ.ಅ. ೮-೪೦) ; ತನ್ನಿಂದಾದ ಹದನನು ತಿಳಿಯ ಹೇಳಿದು ಶಾಪವನು ಕೈಗೊಳಿಸಿ ತನಗೆಂದವರ್ಗೆ ಕೈಗಳ ಮುಗಿದೆ ನಾನೆಂದ (ಕೊರರಾ. ೨-೫-೨೩). ೨. ನಿಂದೆ; ಬಯ್ಗುಳು: "ಶಾಪಃ, ಆಕ್ರೋಶಃ . . . ವಿರೂಕ್ಷಣಾ — ಈ ೫ ಬಯ್ಗುಳ್" (ಹಲಾಯು. ೨೪-೧೪೮). ೩. ಪ್ರಮಾಣ ; ಪ್ರತಿಜ್ಞೆ.

**ಶಾಪತಟ್ಟು** = ಶಾಪ ತಗುಲು : ಅದಕ್ಕೆ ಏನೋ ಶಾಪ ತಟ್ಟಿದೆ; ಅದರ ಹಣೆಯ ಬರಹವೇ ಕೆಟ್ಟದ್ದು (ಯೋಧಪು. ೭೪). **ಶಾಪಹಾಕು** = ಬಯ್ಯು ; ನಿಂದಿಸು : ಹುಡುಗರು ಸೀಬೆಮರ ಹತ್ತಿದುದನ್ನು ಕಂಡು ಆಕೆ ಒಂದೇ ಸಮನೆ ಶಾಪ ಹಾಕಲಾರಂಭಿಸಿದಳು (ರೂಢಿ). **ಶಾಪಾದಪಿಶರಾದಪಿ** = ಶಾಪದಿಂದಾಗಲಿ ಬಾಣದಿಂದಾಗಲಿ : ರಿಪುಬಲವ ಗೆಲುವಲ್ಲಿ ಶಾಪಾದಪಿಶರಾದಪಿಯೆಂಬ ಜಯಲೋಲುಪನು . . . ಮಡಿದನು (ಕುಮಾದ್ರೋ. ೧೮ ಸೂಚನೆ). [ಸಂ.]

**ಶಾಪಂಗೊಡು, ಶಾಪಕೊಡು** (ಕ್ರಿ). ಶಾಪವನ್ನು ನೀಡು ; ಶಪಿಸು : ಇರ್ಮನೀಂ ಮರ್ತ್ಯಲೋಕದೊಳ್ಪುಟ್ಟೆನುತ್ತ ಶಾಪಂಗೊಟ್ಟಂ (ಕಾದಂಬ. ೬೧೦). **ಶಾಪಕೊಡು** : ಎಂದಿಗೂ ಶಾಪಕೊಡದವನು ಸತ್ಯಾಗ್ರಹಿ! (ಪಾಂಚಜ. ೨೧-೧೦). [ಶಾಪ + ಕೊಡು$_1$]

**ಶಾಪಕೊಡು** 'ಶಾಪಂಗೊಡು' ನೋ.

**ಶಾಪಗ್ರಸ್ತ** (ನಾ). ಶಾಪಕ್ಕೆ ಈಡಾದವನು, — ಗುರಿಯಾದವನು: ಆ ಸೌದಾಸನರಪತಿಯು ಶಾಪಗ್ರಸ್ತನಾಗಿ ಆಸುರೀಧರ್ಮವನ್ನು ಸ್ವೀಕರಿಸಿ ಕಾಡಿನಲ್ಲಿ ಕಾಲ ಕಳೆಯುತ್ತಿರುವನು (ಮಣಿಸ. ೬೪) ; ನಮ್ಮವರು ಶಾಪಗ್ರಸ್ತರು, ಮೂರ್ಖರು, ನೀವು ಮನುಷ್ಯರೆಂದೇ ಅವರು ಪರಿಗಣಿಸುವುದಿಲ್ಲ (ಮಲನಾ. ೭೪). [ಸಂ.]

**ಶಾಪಮೋಕ್ಷ** (ನಾ). ಶಾಪದಿಂದ ಬಿಡುಗಡೆಯಾಗುವಿಕೆ ; ಶಾಪದ ನಿವಾರಣೆ: ಪುಂಡರೀಕನ ಶರೀರಮಂ ಕಿಡದಂತು ತಂದು . . . ಶಾಪಮೋಕ್ಷಪರ್ಯಂತಮಿರಿಸಿದಪ್ಪಂ (ಕಾದಂಬ. ೬೦೨) ; ಹೋಗದೆಂತುಂ ಮುನ್ನ ತಾವನುಭೋಗಿಸದೆ ಮೇಣ್ ಶಾಪಮೋಕ್ಷವದಾಗಿ ಬದುಕುವ ಮಾರ್ಗವೆಮಗೆಂದಿಂಗಹುದು ದೇವಾ (ಬಸಪು. ೩೪-೧೨). [ಸಂ.]

**ಶಾಪಮೋಕ್ಷಿತ** (ನಾ). ಶಾಪದಿಂದ ಬಿಡುಗಡೆ ಹೊಂದಿದವನು ; ಶಾಪದಿಂದ ಮುಕ್ತನಾದವನು : ಭೂತಳದೊಳಗೆ ಶಾಪಮೋಕ್ಷಿತರಾಗಿ ತಾವಲ್ಲಿ ಖ್ಯಾತಿ ಮಿಗೆ ಗಂಧರ್ವರಾಗಿ . . . ಕೈಲಾಸಕ್ಕೆ ಹೋಗುತ್ತಿರಲು (ಬಸಪು. ೩೪-೨೫). [ಸಂ.]

**ಶಾಪವಿಮುಕ್ತಿ** (ನಾ). = ಶಾಪಮೋಕ್ಷ : ಶಾಪಕೊಟ್ಟವರಿಂದಲೇ ಶಾಪವಿಮುಕ್ತಿಯೂ ಆಯಿತು (ರೂಢಿ). [ಸಂ.]

**ಶಾಪವಿಮೋಕ್ಷ** (ನಾ). = ಶಾಪಮೋಕ್ಷ : ನಿಮ್ಮ ಕೈಯಲಿ ಮಡಿದಡಲ್ಲದೆ ಎಮ್ಮ ಶಾಪವಿಮೋಕ್ಷ [ಪಾಠಾಂ. ವಿಶಾಪ]ವಾಗದು (ಬಸಪು. ೩೪-೧೭) ; ನಿನ್ನ ದೆಸೆಯಿಂದಾಯ್ತಲೇ ಪ್ರತಿಪನ್ನ ಶಾಪವಿಮೋಕ್ಷ (ಕುಮಾ.ಅ. ೧೩-೬೦). [ಸಂ.]

**ಶಾಪವಿಮೋಚನೆ** (ನಾ). = ಶಾಪಮೋಕ್ಷ : ಶಕುಂತಳೆಯನ್ನು ಶಾಪವಿಮೋಚನೆಯಿಂದ ಸ್ಮರಣೆಯನ್ನು ಹೊಂದಿದ ದುಷ್ಯಂತನು ಪರಿಗ್ರಹಿಸಿದನು (ಶಾಕುಂತ. ೧೧೫-೧೩) ; ನನಗೆ ಶಾಪವಿಮೋಚನೆಯಾದರೂ ನಾನು ದೇವಿಯನ್ನು ಪ್ರಾರ್ಥನೆ ಮಾಡಿಕೊಂಡು ನಿಮ್ಮನ್ನು ಪಡೆಯುತ್ತೇನೆ (ಬಂಕಿಮ. ೧೨೨). [ಸಂ. ಶಾಪವಿಮೋಚನ]

**ಶಾಪಹತ** (ನಾ). ಶಾಪಕ್ಕೆ ಗುರಿಯಾದವನು ; ಶಪಿಸಲ್ಪಟ್ಟವನು : ಅಂತು ಕರ್ಣನುಂ ಶಾಪಹತನಾಗಿ ಮಗುಳ್ದು ಬಂದು ಸೂತನ ಮನೆಯೊಳಿರ್ಪನ್ನೆಗಂ (ಪಂಪಭಾ. ೧-೧೧೫ ವ) ; ಕಣ್ಣಿನಲ್ಲಿ ನೋಡುತ್ತ ಕಣ್ಣಾಣೆನೆಂಬವನಂತೆ ಶಾಪಹತರಿಗೆಲ್ಲಕ್ಕೂ ಲಲಾಮಭೀಮ ಸಂಗಮೇಶ್ವರಲಿಂಗವು ಅಸಾಧ್ಯ ನೋಡಾ (ಸರ್ವವ. ೧೩೩-೭೭೭). [ಸಂ.]

**ಶಾಪಹಸ್ತ** (ನಾ). ಶಾಪ ನೀಡುವಾಗ ತೋರುವ ಕರವಿನ್ಯಾಸ ; ಶಪಿಸುವುದಕ್ಕೆ ಎತ್ತಿದ ಕೈ : ಧರಣಿಸುರನೆಂದೆನ್ನ ಠಕ್ಕಿಸಿ ಶರವ ಬೇಡಿದೆ ಕಾಳೆಗದೊಳೀ ಶರ ನಿರರ್ಥಕವಾಗಲೆಂದನು ಶಾಪಹಸ್ತದಲಿ (ಕುಮ್ಮಾಕ. ೯-೩೨). [ಸಂ.]

**ಶಾಪಾಂತ** (ನಾ). = ಶಾಪಮೋಕ್ಷ : ಈಗ ಶಾಪಾಂತ ಒದಗಿದೆ ; ಮಹೇಶಪುರದ ಭೈರವೀದರ್ಶನದಿಂದ ಮುಕ್ತಿಯಾಗುತ್ತದೆ! (ಬಂಕಿಮ. ೧೨೨). [ಸಂ.]

**ಶಾಪಾಯುಧ** (ನಾ). ಶಾಪವನ್ನು ಅಸ್ತ್ರವನ್ನಾಗಿ ಉಳ್ಳವನು ; ತಪಸ್ವಿ : ಆ ಪಾಕಶಾಸನ ಯಾವರ ನುಡಿಗೇಳಿ ಶಾಪಾಯುಧರರೀಗೆ ಗೋಪನಿಂತೆಂದ (ಹಮಚ. ೭). [ಸಂ.]

**ಶಾಪಾರುಹ** (ನಾ). ಶಾಪಕ್ಕೆ ಯೋಗ್ಯನಾದವನು: ಕುರುಕುಲಾನ್ವಯಜನನಿ ಕೋಪಸ್ಫುರಣದಲಿ ಶಪಿಸೆನಗೆ ಶಾಪಾರುಹನು ತಾನು (ಕುಮ್ಮಾಗ. ೧೧-೭೪). [< ಸಂ. ಶಾಪಾರ್ಹ]

**ಶಾಪಿಸು** (ಕ್ರಿ). = ಶಾಪಂಗೊಡು : ಮುನೀಶರಾ ಗಿರಿಶನ ಲಿಂಗಮಂ ಪಱಿಯೆ ಶಾಪಿಸೆ ಬಿರ್ದುದಿದೆಂಬರೆಲ್ಲರುಂ (ಸಮುಪ. ೮-೮) ; ಹರಹರ ಕಾಯವೇಡಾಯೆನ್ನದುಪತಾಪಿಸದೆ ಶಾಪಿಸದೆ ಈಯಯುಗನಂ ಕ್ರೂರಸರ್ಪನ ಬಾಯಿಗೀವರೆ (ಬಸವು. ೪೮-೧೧) ; ರುದ್ರನನು ಶಾಪಿಸಿದ ವಾಣೀಪತಿಯು ವಿನಯದಲಿ ಹೊದ್ದುವುದು ಭೂಮಿಯಲಿ . . . ಘನತೆಯಲಿ ಕಲ್ಪಾಯುವಾಗಿಹುದು (ಸಂಭಪ. ೩೩-೩೭). [ಶಾಪ + -ಇಸು]

**ಶಾಪು** (ನಾ). ೧. ಸಾಮಾನುಗಳನ್ನು ಮಾರುವ ಸ್ಥಳ ; ಅಂಗಡಿ. ೨. ದವಾಖಾನೆ; ಚಿಕಿತ್ಸಾಲಯ : ಏನು ಶಿವು, ಮುಂದಿನ ಯೋಚನೆಯೇನು? ಸರಕಾರಿ ನೌಕರಿಯೆ, ಖಾಸಗಿ ಶಾಪೇ? (ಜಾರುದಾ. ೧೯). [← ಇಂ. Shop]

**ಶಾಬ** (ನಾ). ೧. (ಯಾವುದಾದರೂ ಪ್ರಾಣಿಯ) ಮರಿ ; ಪೋತ : ಪೆದ್ದಣದೇಶಿಕ ಪ್ರವರ ಹರಿಣಧರಂ . . . ಶಿಷ್ಯಚಕೋರಶಾಬನಿಕರಂಗಳೀ ಪಿರಿದು ತಣಿಪುತ್ತೆ (ಆರಾಚ. ೧-೧-೩೩) ; ಕಿರಾತವನಿತಾಕರ್ಣೋತ್ಪಲಾಕರ್ಷಿಮರ್ಕಟಶಾಬಾಶ್ರಿತಶಾಖಿ ಪಾದಪಯುತಂ ಕಣ್ಗೊಪ್ಪಿತಾ ಕಾನನಂ (ರಾಜಶೇ. ೫-೫೫). ೨. ಮಗು ; ಶಿಶು : "ಶಿಶು ಪೋತ ಬಾಲಕ ಶಾಬ ಡಿಂಬಮರ್ಭಕ ಪಾಕಮೆನೆ ಪಡೆದ ಕೂಸೆನಿಕ್ಕುಂ" (ಮಂಗರಾ. ೯೧-೮). [ಸಂ.]

**ಶಾಬಕ** (ನಾ). = ಶಾಬ ೧ : ಕೋಮಳಶುಕಶಾಬಕಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ (ಕಾದಂಪೂ. ೧೭೮) ; ಜಲದ ನೆಳಲಿನಲೆವೆ ಚಲಿಸದಾ ಜಲಜಲೋಚನೆ ನೋಡುತಿರ್ದಳು ವಿಲಸದಭಿನವಚಿತ್ರಗತಿಯ ಕುರಂಗಶಾಬಕವ (ತೊರರಾ. ೩-೮-೨೫) ; ಕಲಿತರ್ಕೆ ಬಿಲ್ವಿಜ್ಜೆಯಂ, ವೇದಮಂ ನೀತಿನಯವಿನಯನಿಯತಿಯಂ, ಶಾರ್ದೂಲಶಾಬಕಂ ಬೇಂಟೆಕಲ್ಪಿಯ ಕಲಿಯುವಂತೆ (ಶ್ರೀರಾಮಾ. ೨೫-೭೭೧). [ಸಂ.]

**ಶಾಬರ$_1$** (ನಾ). ಇಂದ್ರಜಾಲ ; ಯಕ್ಷಿಣಿ ; ಕಣ್ಕಟ್ಟು : ಕೈಯಲ್ಲಿ ಹಿಡಿದರೆ ಕಲ್ಲು ಸಿಕ್ಕಿತ್ತಲ್ಲದೆ ಲಿಂಗವಿಲ್ಲವೆಂದೆ ಕಣ್ಣಿನಲ್ಲಿ ನೋಡಿ ಶಾಬರ ಕಳೆದೆವೆಂದಡೆ ಅದು ಕೌಳಿಕವೆಂದೆ (ಮೋಳಿಮಾ. ೨೭-೧೧೮) ; ಇದು ಭೀತಿಶಂಕೆಯೆ ? ಶಾಬರಪ್ರಯೋಗವೇ ? (ಮಾಮರಾ. ೨೧೦). 'ಶಾಬರಯಂತ್ರ' ಪರಾ. [< ಸಂ. ಶಾಂಬರ]

**ಶಾಬರ$_2$** (ಗು). ೧. ಅನಾಗರಿಕವಾದ ; ಬರ್ಬರ. ೨. ಕೀಳಾದ ; ಅಲ್ಪ. ೩. ಬೇಡರಿಗೆ ಸಂಬಂಧಿಸಿದ. (ನಾ). ೪. ಕಿರಾತ ; ಬೇಡ : "ಕೃಪಣಂ ಶಾಬರರಾರ್ದ್ರ ಲುಬ್ಧಕಮೆನಿಕ್ಕುಂ" (ನಾನಾರ. ೧೨೮). ೫. ಒಂದು ಬಗೆಯ ಮರ; ಲೋಧ್ರ. ೬. ತಪ್ಪು; ದೋಷ. ೭. ಪಾಪ. [ಸಂ.]

**ಶಾಬರಯಂತ್ರ** (ನಾ). ಮಾಯೆಯ ಯಂತ್ರ ; ವಶೀಕರಣಯಂತ್ರ : ಮಂತ್ರಸಿದ್ಧಿಯೊ ಮೇಣು ಶಾಬರಯಂತ್ರರಕ್ಷೆಯೊ (ಕುಮ್ಮಾಆ. ೧೫-೨೨). [ಶಾಬರ$_1$ + ಯಂತ್ರ]

**ಶಾಬರಲೋಧ್ರ** (ನಾ). ಲೋಧ್ರ ಮರದಲ್ಲಿ ಒಂದು ಪ್ರಕಾರ : "ಶ್ರೀಮಾನ್ – ಅರಳಿ, ವೃಷಭಕ, ಕಲ್ಲತ್ತಿ, ಬೆಲ್ಲವತ್ತ, ಶಾಬರಲೋಧ್ರ" (ಓಷಧಿ. ೧೭೭) ; ಕೊತ್ತುಂಬರಿ, ಬಜೆ, ಶಾಬರಲೋಧ್ರ ಇವಂ ಎಮ್ಮೆ ಹಾಲಿನಿಂದರೆದು ಲೇಪಿಸಿ . . . ನೀರಿನಿಂದ ತೊಳೆಯಲು ಮುಖದ ಮೇಲೆ ಹುಟ್ಟಿದ ಮೊಡವಿಬೊಕ್ಕೆಗಳು ಮಾಣುವುವು (ಸಕವ್ಯ. ೧೪೯). [ಸಂ.]

**ಶಾಬರಿ** (ನಾ). ಬೇಟೆಗಾತಿ ; ಬೇಡಿತಿ : ಸರಳಿಸುವ ಕುಕ್ಕುರಕದಂಬದ ವಿರಚಿತಾಡಂಬರದ ನವಶಾಬರಿಯರ್ಕೈದಿದರರಸ ಕೇಳ್ ಮುನಿಮೃಗ ವನಾಂತರವ (ತೊರರಾ. ೧-೫-೪೦). [ಶಾಬರ$_2$ + -ಇ]

**ಶಾಬರೆ** (ನಾ). ಒಂದು ಬಗೆಯ ಲೋಧ್ರ : "ಅಕ್ಷಿಲೋಧ್ರಃ – ಶಾಬರಾ, ಬಿಳಿಯ ಲೋಧ್ರ" (ಓಷಧಿ. ೬). [ಸಂ. ಶಾಬರ]

**ಶಾಬಾಸ್** 'ಶಹಬಾಸ್' ನೋ.

**ಶಾಬಾಸ್‌ಗಿರಿ** 'ಶಹಬಾಸುಗಿರಿ' ನೋ.

**ಶಾಬೂದಾಣ** 'ಸಾಬೂದಾಣೆ' ನೋ.

**ಶಾಬ್ದ** (ಗು). ೧. ಧ್ವನಿಗೆ ಸಂಬಂಧಪಟ್ಟ. ೨. ಶಬ್ದದಿಂದ ನಿಷ್ಪನ್ನವಾದ. ೩. ಬಾಯಿಮಾತಿನ ; ವಾಚಿಕ. ೪. ಅನುರಣನವಾಗುವ. (ನಾ), ೫. ವೈಯಾಕರಣ. [ಸಂ.]

**ಶಾಬ್ದವೇತ್ತೃತೆ** (ನಾ). ವ್ಯಾಕರಣಶಾಸ್ತ್ರದಲ್ಲಿರುವ ಪಾಂಡಿತ್ಯ : ವಿದ್ವನ್ನುತವೀರಸೇನತೆ ನಿಜಂ ತಾನೆಂದೊಡಿಂ ಶಾಬ್ದವೇತ್ತೃತೆ ಷಟ್ತರ್ಕ ವಿತರ್ಕಭೇತೃತೆಯಹಾರಾಧ್ವಾಂತ ತತ್ತ್ವಪ್ರಮಾತೃತೆಯೇಂ ಚೋದ್ಯಮೆ ವರ್ಧಮಾನಮುನಿಯೊಳ್ (ಚಂದ್ರಪ್ರ. ೧-೩೧). [ಸಂ. ಶಾಬ್ದವೇತ್ತೃತಾ]

**ಶಾಬ್ದಿಕ** (ಗು). ೧. ಧ್ವನಿ ಅಥವಾ ಶಬ್ದಕ್ಕೆ ಸಂಬಂಧಿಸಿದ : ಅದೊಂದು ಶಾಬ್ದಿಕ ಕಸರತ್ತು ! (ಕರ್ನಾಕ. ೨). ೨. ಅನುರಣನವಾಗುವ. ೩. ಆಡುಮಾತಿನ ; ವಾಚಿಕ. (ನಾ). ೪. ಶಬ್ದ ; ಪದ : ಪ್ರಕಟತರಂ ಶಬ್ದಂ ಶಾಬ್ದಿಕಸಮ್ಮತಮರ್ಥಮರ್ಥದೃಷ್ಟಿ ಮನಃಕೌತುಕಜನಕಂ ಭಾವಂ ಭಾವುಕ ಭಾವ್ಯಂ ಕಾವ್ಯತತಿಯೊಳಗ್ಗಳ ನಿನ್ನಾ (ಚಂದ್ರಪ್ರ. ೧-೫೮). ೫. ವ್ಯಾಕರಣಶಾಸ್ತ್ರ ಪಂಡಿತ ; ವೈಯಾಕರಣ : ವಳಿ ಪ್ರತ್ಯಯಂ ಮುಂತಾದುಱಿದ ಪ್ರತ್ಯಯಂಗಳಂ ಶಾಬ್ದಿಕರಿನ್ನಿತರಱಿವುದು (ಶಮದ. ೨೧೫ ಪ್ರಯೋ) ; ಸಾವಿರಗಟ್ಟಲೆ ಶಾಬ್ದಿಕರಿರುವರು ತಾರ್ಕಿಕರಿರುವರು ಬಹಳ (ಇಂಚಾಪ. ೮೧-೯೨). ೬. ನಿಘಂಟುಕಾರ ; ಕೋಶಕಾರ.

ಶಾಬ್ದಿಕತಿಳಕ = ವ್ಯಾಕರಣಪಾಂಡಿತ್ಯದಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ಸಕಳಕಳಾಬ್ರಹ್ಮಂ ಶಾಬ್ದಿಕತಿಳಕಂ ಬ್ರಹ್ಮಕವಿಚೂಡಾಮಣಿ ವಾಜಿಕುಳನಭಸ್ಥಳರವಿ (ಸೌಇಇ. XI-i, ೫೦-೨; 1005). [ಸಂ.]

**ಶಾಭಾಸ್** 'ಶಹಬಾಸ್' ನೋ.

**ಶಾಭಾಸ್‌ಗಿರಿ** 'ಶಹಬಾಸುಗಿರಿ' ನೋ.

**ಶಾಭಾಸು** 'ಶಹಬಾಸ್' ನೋ.

**ಶಾಮಂತಿಗೆ** 'ಸೇವಂತಿಗೆ' ನೋ.

**ಶಾಮಕ** (ಗು). ೧. ಅಡಗಿಸುವ ; ಉಪಶಮನಗೊಳಿಸುವ. (ನಾ). ೨. ಉಪಶಮನ ; ಶಾಂತಿ : "ಚಿಕಿತ್ಸಾ, ರುಕ್ಪ್ರತಿಕ್ರಿಯಾ – ೨ ರೋಗಕ್ಕೆ ಶಾಮಕವಾಗಿ ಔಷಧಾದಿ ಪ್ರತಿಕ್ರಿಯೆಗಳನ್ನು ಮಾಡುವಿಕೆ" (ಸಿದ್ಧಾಂತಿ. ೧೮೨). 'ಅಗ್ನಿಶಾಮಕ' ಪರಾ. [ಸಂ.]

**ಶಾಮನ** (ನಾ). ೧. = ಶಾಮಕ ೨ : ಪ್ರೇಮ ಕನಲೆ ಪಿಶಾಚಿ . . . ಮಾಮಕವಿದೆಂದಾವುದಕೂ ತಾನೆ ಬಲಿವೋಗಿ ಶಾಮನವನೊಂದುವುದು (ಮಂಕುತಿ. ೪೨೮). ೨. ಯಮ. ೩. ಕೊಲೆ ; ವಧೆ. ೪. ಕೊನೆ; ಮುಕ್ತಾಯ. [ಸಂ.]

**ಶಾಮಲ** (ನಾ). ತಲೆಗೆ ಧರಿಸುವ ವಸ್ತ್ರವಿಶೇಷ : ಕಮಲಾಕಾಂತನು ಕಪ್ಪುಹಸುವಿನ ಕಡೆ ನೋಡದೆ, ವಕೀಲನ ಶಾಮಲದ ಕಡೆ ನೋಡಿ (ಕಮಕ. ೧೭೭). [← ಬಂಗಾಳಿ. ಶಾಮಲಾ]

**ಶಾಮಿಲಾತು** (ನಾ). ಜಮೀನಿಗೆ ಸೇರಿದ ಜಂಟಿ ಆಸ್ತಿ ; ಅವಿಭಕ್ತಸ್ವತ್ತು : ಒಪ್ಪು ಇಲ್ಲದ ಭೂಮಿಗೆ ಶಾಮಿಲಾತು ಕೂಡೀತೋ ? (ಗಾದ). [← ಹಿಂ. ಶಾಮಿಲಾತ್]

**ಶಾಮೀಲ್** 'ಶಾಮೀಲು' ನೋ.

**ಶಾಮೀಲ** 'ಶಾಮೀಲು' ನೋ.

**ಶಾಮೀಲು, ಶಾಮೀಲ್, ಶಾಮೀಲ, ಷಾಮೀಲು** (ನಾ). ೧. ಒತ್ತಾಸೆ ; ನೆರವು; ಜೊತೆ : ಯಾವುದೋ ಒಂದು ನೆನಪು ಶಾಮೀಲಾಗಿ ಬಂದು ಹೀಗೆ ಮಾಡಿರಬಹುದು (ಮಸೋನಂ. ೭೯). ೨. ಜೊತೆಗಾರ; ಒತ್ತಾಸೆ ನೀಡುವವನು : ಮನೆಯವರೇ . . . ಅವನಿಗೆ ಶಾಮೀಲಾಗಿದ್ದಿರಬೇಕು (ಕಲಸ. ೯೯); ಆಗ ನಮ್ಮ ಶಾನುಭೋಗರೂ ಗುಮಾಸ್ತರೂ ಶಾಮೀಲಾಗಿ ಬಿಡುತ್ತಿದ್ದರು (ನನ್ನೂರು. ೧೫೪). **ಶಾಮೀಲ್** : ಯಾರದ್ದಾದ್ರೂ ಆದಕ್ಕೆ ನೀನೂ ಶಾಮೀಲ್ ಇರಲೇಬೇಕು (ಹಕ್ಕಿಹೋ. ೪೭). **ಶಾಮೀಲ:** ೨. ಕುಂಪನಿಸರಕಾರದಲ್ಲಿ ನಮ್ಮ ಶಾಮೀಲರ ಸಂಗಡ ಏನೊಂದು ಮನಸುಬಾ ಮಾಡಿದಾಗ್ಯೂ ತಮಗೆ ನಾವು ಚೆನ್ನಾಗಿ ಸುದ್ದಿ ಎತ್ತಿಸಿಕೊಡುತ್ತೇವೆ (ರಾಚೇಂದ್ರ. ೧೭೪). **ಷಾಮೀಲು** : ೧. ಇವರು ಮಾಡುವುದಕ್ಕೆಲ್ಲಾ ಅವರ ಷಾಮೀಲು, ಅವರು ಮಾಡುವುದಕ್ಕೆಲ್ಲಾ ಇವರ ಷಾಮೀಲು (ಗೃಹಲ. ೧೩೦). ೨. ಹಾಗಾದರೆ ನೀವೂ ಅವರ ಕಡೆ ಷಾಮೀಲಾಗಿದೀರಿ? (ಮರಳಿ. ೧೮೭) ; ಮಂಜುನಾಥ ತಾಯಿಯೊಡನೆ ಷಾಮೀಲು ಆದ (ಬೆಂಗಜ. ೧೫೩).

[← ಅರ. ಪಾರ. ಹಿಂ. ಶಾಮಿಲ್; ಮರಾ. ಶಾಮಿಲ್, ಶಾಮೀಲ್, ಸಾಮೀಲ್]

**ಶಾಮೀಲುದಾರ** (ನಾ). = ಶಾಮೀಲು ೨: ಸಹಾಯಕ ; ನೆರವಿಗ . . . ದುಷ್ಕಾರ್ಯದಲ್ಲಿ ಸಹಾಯ ಮಾಡುವವನು. ಅಥವಾ ಮೊದಲೇ ಅದಕ್ಕೆ ಅಭಿಮತ ಕೊಡುವವನು ; 'ಶಾಮೀಲು' ದಾರ (Access.೨೦೫). [ಶಾಮೀಲು + – ದಾರ₄]

**ಶಾಯಿ** (ನಾ). ಮಸಿ ; ಇಂಕು : ಕ್ರಿಷ್ಣರಾಜವಡೇರುಯುಂಬದಾಗಿ ಬಾಳ ಬಂದು ಅಕ್ಷರದಲು ಶಾಯಿಮೊಹರಾ ಮಾಡಿಯಿದೆ (ಎಕ. VI, ಕೊಪ್ಪ. ೪೮-೫೮; 1811); ಈ ಮೇಜಿನ ಒಂದು ಮೂಲೆಯಲ್ಲಿ ಶಾಯಿಯನ್ನು ಇಡುವ ಗಾಜಿನ ಒಂದೆರಡು ದೌತಿಗಳು, ಗರಿ ಲೇಖನಿಗಳು, ರತಿದಾನಿ ಕಾಣುತ್ತಿವೆ (ಏಧಿನ್ಯ. ೩೫).

[← ಪಾರ. ಸಿಯಾಹೀ; ಹಿಂ. ಸ್ಯಾಹೀ ; ಮರಾ. ಶಾಈ, ಶಾಯಿ]

**ಶಾಯಿಕುಡಿಕೆ** (ನಾ). ಮಸಿಯನ್ನು ತುಂಬಿಟ್ಟಿರುವ ಕುಡಿಕೆ : ಶಾಯಿಕುಡಿಕೆಯಲ್ಲಿ ಶಾಯಿ ಮುಗಿದುಹೋಗಿದೆ (ರೂಢ). [ಶಾಯಿ + ಕುಡಿಕೆ₁]

**ಶಾಯಿದಿ** 'ಶಾಹಿದೀ' ನೋ.

**ಶಾಯಿದಿದಾರ** (ನಾ). ಸಾಕ್ಷ್ಯ ನೀಡುವವನು ; ಸಾಕ್ಷಿಗಾರ : (ಕ).

[← ಮರಾ. ಶಾಹಿದೀದಾರ್ ]

**ಶಾರ** (ಗು). ೧. ಚುಕ್ಕೆಗಳುಳ್ಳ. ೨. ಬಣ್ಣಬಣ್ಣದ ; ನಾನಾವರ್ಣದ. ೩. ಹಳದಿ ಬಣ್ಣದ. (ನಾ). ೪. ಅನೇಕ ಬಣ್ಣಗಳಿಂದ ಕೂಡಿದುದು; ಮಿಶ್ರವರ್ಣ: "ಚಿತ್ರಿತಂ ಕಲ್ಮಾಷಂ ಕರ್ಬುರಂ . . . ಶಾರಮೆನೆ ಮಿಶ್ರಕ್ಕೆ ನಾಮ ಮಕ್ಕುಂ" (ಮಂಗರಾ. ೧೩೨-೨೫). 'ಶಾರೋದರ' ಪರಾ. ೫. ಗಾಳಿ ; ವಾಯು : "ಶಾರಃ – ವಾಯು, ನಾನಾಬಣ್ಣಗಳುಳ್ಳದ್ದು" (ಸಿದ್ಧಾಂತಿ. ೯೧೩). [ಸಂ.]

**ಶಾರದ** (ಗು). ೧. ಶರದೃತುವಿಗೆ ಸಂಬಂಧಿಸಿದ ; ಶರತ್ಕಾಲಕ್ಕೆ ಸೇರಿದ : ವಾರಣಘಟೆ ನೆರೆದು ಪತ್ತಿ ಶೀಕರಜಲಮಂ ಧಾರಿಣಿಗೆ ಸೂಸಿದಪ್ಪುವೆನೆ ಶಾರದಘನಘಟೆಯಿನೆಱಗಿದುವು ಬೆಳ್ಸರಿಗಳ್ (ಜಗವಿ. ೪-೬೭). ೨. ವರ್ಷಾವಧಿಯ; ವಾರ್ಷಿಕ. ೩. ಹೊಸತಾದ ; ನವೀನವಾದ. ೪. ಸೌಜನ್ಯದಿಂದ ಕೂಡಿದ; ನಯವಾದ. ೫. ಬಿಳಿಯ ; ಶುಭ್ರವಾದ : 'ಶಾರದನೀರದ' ಪರಾ. (ನಾ). ೬. ಶರದೃತು; ಶರತ್ಕಾಲ : ಕುವಳಯಕೀರ್ತಿಗೆ ಶಾರದಮವಧಾರಿತಮಾಯ್ತೆಂಬುದುತ್ತರಮಾರ್ಗಂ (ಕವಿರಾ. ೨-೬೩) ; ನಿಷ್ಕಲ್ಮಷಾಶಾಂಬರಸ್ಫುರಿತಂ ಶಾರದದೊಳ್ ಸುಧಾಧವಳಧಾಮಂ ಸೋಮನೊಳ್ . . . ಸಮಾನಮೆನಿಕುಂ ಪ್ರೋತ್ತುಂಗಚೈತ್ಯಾಲಯಂ (ಪುಷ್ಪಪು. ೨-೭೫). ೭. ಒಳ್ಳೆಯವನು ; ಉತ್ತಮ : "ಕರಂ ಶಾಲೀನಂ ಶಾರದಾಖ್ಯನಕ್ಕುಮಧೃಷ್ಟಂ" (ವಸ್ತುಕೋ. ೬೪-೭೬). ೮. ಒಡೆಯುವಿಕೆ ; ಚೂರು ಮಾಡುವಿಕೆ. ೯. ತಿಂದುಮಿಕ್ಕುದು; ಶೇಷ. ೧೦. ಬಡವು; ಕೃಶ. ೧೧. ಆಕಾಶ; ಗಗನ. ೧೨. ನಾವೆ; ದೋಣಿ. ೧೩. ಚತುರತೆ ; ಜಾಣತನ. ೧೪. ಸತ್ತ್ವ ; ಸಾರ. ೧೫. ಸರಸ್ವತಿ. ೧೬. ಕಾರ್ಯಭಂಗ. ೧೭. ಒಳ್ಳೆಯ ಬುದ್ಧಿ. "ಸಾರದೊಳು ಕುಶಲದೊಳು ಖಂಡನಕ್ರಿಯೆಗಳೊಳು ಭಾರತಿಯೊಳಮಲಪಾಂಡುರದೊಳು ಸುಬುದ್ಧಿಯೊಳು ಶಾರದಾಖ್ಯಂ" (ಮಂಗರಾ. ೧೪೯-೪೭) ; "ಕೌಶಲ ನಭೋಚ್ಛಿಷ್ಟಂ ಕ್ರಿಯಾಖಂಡನಂ ಋತು ಭೈತ್ರಂ ಕೃಶ ಬುದ್ಧಿ ಸಾರ ಧವಳಂ ವಾಕ್ಯಾರದಾಖ್ಯಾನಂ" (ನಾನಾರ. ೨೯). ೧೮. ಏಳೆಲೆಬಾಳೆಯ ಗಿಡ : "ಸಪ್ತವರ್ಣಃ, ಶಾರದಃ, ಶಾರದೀ, ವಿಷಮಚ್ಛದಃ – ೪ ಏಳೆಲೇಬಾಳೇಗಿಡ" (ಸಿದ್ಧಾಂತಿ. ೧೧೭). ೧೯. ನಾನಾ ಬಣ್ಣಗಳಿಂದ ಕೂಡಿದುದು; ಮಿಶ್ರವರ್ಣ. ೨೦. ಮಾಡಿದ ಕೆಲಸ : "ಗಗನಂ ಕೃಶಮುಚ್ಛಿಷ್ಟಂ ಪೊಗರುಂ ಋತು ಬುದ್ಧಿ ಜಾಳೆ ಸಿತಕೃತವಡಗುಂ ಮಿಗೆ ಸಾರಂಗಂ ನುಡಿವೆಣ್ ಸೊಗಸುವ ಪನ್ನೊಂದು ಶಬ್ದ ಶಾರದಮೆನಿಕುಂ" (ನಾನಾಕಂ. ೬೬). ೨೧. ಕಾಳು; ಧಾನ್ಯ. ೨೨. ಒಂದು ಬಗೆಯ ಮರ; ಬಕುಳ : ಸಾರರಂಭಾಕ್ರಮುಕಶಾರದ ಮುಖ್ಯಭೂರುಹವೃಂದದಿಂ (ಕುಚೇಲೋ. ೪೪). ೨೩. ಬಿಳಿಯ ಕಮಲ, – ತಾವರೆ : "ಶಾರದಂ - ಬಿಳಿಯ ತಾವರೆ" (ಓಷಧಿ. ೧೬೩) ; ಶಾರದಂಗಳ ಜಸದೇಟಿಗೆ ಲಕ್ಷ್ಮಿಯ ಮುಗುಳ್ನಗೆ ಜೊನ್ನದ ಜಾಟ್ಯೆ ರತ್ನಸಂಕುಳದಧಿದೈವಮೆಂದೆಸೆ ದುದುಜ್ಜ್ವಳಮೌಕ್ತಿಕಹಾರಮಂಡಲಂ (ಕಾದಂಬ. ೧೦೭). ೨೪. ಶರತ್ಕಾಲದಲ್ಲಿ ಹುಟ್ಟಿದುದು : "ಶರತ್ಕಾಲದೊಳುಪಜನಿತಂ ಶಾರದಂ" (ವಸ್ತುಕೋ. ೧೧೦-೭೧). [ಸಂ.]

**ಶಾರದನೀರದ** (ನಾ). ಶರತ್ಕಾಲದ ಶುಭ್ರವಾದ ಮೋಡ; ಬಿಳಿಮುಗಿಲು: ಶಾರದನೀರದನಿಕಾಶವಿಶಾಲಧವಲದುಕೂಲಾಂಬರವಿರಾಜಮಾನಮುಂ . . . ಆಗಿರ್ದಾಗಳ್ (ಆದಿಪು. ೧೧-೧೦ ವ); ಅನಿಮಿಷಚಾಪದಂತೆ ಸಿರಿ ಶಾರದನೀರದಕಾಂತಿಯಂತೆ ಯೌವನದೆಸಕಂ (ಪಂಚತಂ. ೫೯-೧೪). [ಸಂ.]

**ಶಾರದಾಬಿಲ್ಲು** (ನಾ). (ಆಂಗ್ಲರ ಆಳ್ವಿಕೆಯ ಭಾರತದಲ್ಲಿ ಮೊದಲ ಬಾರಿಗೆ ಜಾರಿಗೆ ಬಂದ) ಸ್ತ್ರೀಯರ ವಿವಾಹಕ್ಕೆ ಸಂಬಂಧಿಸಿದ ಕಾನೂನು; ಹೆಣ್ಣುಮಕ್ಕಳಿಗೆ ಹದಿನಾಲ್ಕುವರ್ಷಗಳು ಮೀರುವ ಮುಂಚೆ ಮದುವೆ ಮಾಡಬಾರದೆಂಬ ನಿಯಮ, – ಕಾನೂನು: ಇನ್ನೂ ಹದಿಮೂರೇ ಅಂತ ಹೇಳುವವ ಇದ್ದೆ ನಾನು . . . ಆದರ ಅಷ್ಟರೊಳಗ ಆ ಪೀಡಾ ಶಾರದಾಬಿಲ್ಲು ಪಾಸಾಯಿತು (ಅಶ್ವಮೇ. ೫); ಮದುವೆಯ ವಯಸ್ಸು. ಶಾರದಾಬಿಲ್ಲು ದಾಟುವ ವಯಸ್ಸು (ಹಸಿವು. ೬೪).

[P'ಹರವಿಲಾಸಶಾರದ' ಎಂಬುವನು ಈ ಮಸೂದೆಯನ್ನು ತಂದುದರಿಂದ ಇದಕ್ಕೆ ಈ ಹೆಸರು ಬಂದಿದೆ]

**ಶಾರದಾಭ್ರ** (ನಾ). = ಶಾರದನೀರದ: ಸುಂದರತುಹಿನಾಚಳಸಂಕ್ರಂದನಗಜ ಶಾರದಾಭ್ರತಾರಾದ್ರಿಪಯಃಕುಂದೇಂದುಯಶೋಭಾಸುರನೆಂದು ಪೊನಂಗೊಂಡು (ಸುಕುಮಾ. ೧-೫೭); ಶಾರದಾಭ್ರಂ ತಳ್ತ ಶಶಾಂಕನೆನಿಸಿ ಬೆಳ್ಪಟ್ಟೆಯುಂ ಪದೆದುಟ್ಟು . . . ರುಜುಭಾವದಿಂ ಕುಳ್ಳಿರ್ದು (ರಾಜಶೇ. ೧೩-೪೫ ವ). [ಸಂ.]

**ಶಾರದಾಲಿಪಿ** (ನಾ). ಚಂಬಾಕಣಿವೆ ಮತ್ತು ಕಾಶ್ಮೀರದಲ್ಲಿ ಬಳಕೆಯಲ್ಲಿರುವ ಒಂದು ಬಗೆಯ ಲಿಪಿ: ಶಾರದಾಲಿಪಿಯಲ್ಲಿ ಭೂರ್ಜಪತ್ರದ ಮೇಲೆ ಬರೆದಿರುವ ಮಹಾಭಾರತದ ಆದಿಪರ್ವದ ಒಂದು ಪ್ರತಿ ತುಂಬ ಪ್ರಸಿದ್ಧವಾಗಿದೆ (ಕನ್ನಸಂ. ೩೭). [ಸಂ.]

**ಶಾರದಿ** (ನಾ). ೧. ಆಶ್ವೀನಮಾಸದ ಹುಣ್ಣಿಮೆ. ೨. ಏಳೆಲೆಬಾಳೆಗಿಡ: "ಸಪ್ತಪರ್ಣಃ, ವಿಶಾಲತ್ವಕ್, ಶಾರದೀ, ವಿಷಮಚ್ಛದಃ – ೪. ಏಳೆಲೇಬಾಳೇಗಿಡ" (ಸಿದ್ಧಾಂತಿ. ೧೧೭). ೩. ಒಂದು ಬಗೆಯ ಗಿಡ; ನೀರುಹಿಪ್ಪಲಿ: "ಲಾಂಗಲೀ, ಶಾರದೀ, ತೋಯಪಿಪ್ಪಲೀ, ಶಕುಲಾದನೀ - ನೀರುಹಿಪ್ಪಲೀ ಹೆಸರುಗಳು" (ಸಿದ್ಧಾಂತಿ. ೧೩೭).

[ಸಂ. ಶಾರದೀ]

**ಶಾರದೆ** (ನಾ). ೧. ವಿದ್ಯಾಭಿಮಾನಿದೇವತೆಯಾದ ಸರಸ್ವತಿಯ ಹೆಸರುಗಳಲ್ಲಿ ಒಂದು : ಶಾರದೆ ರಂಜಿಸಿರ್ಪ ಮುಖಪಂಕಜಮಂ ಸಲೆ ಲಕ್ಷ್ಮಿಯೊಪ್ಪುವೀ ಪೇರುರಮಂ . . . ಚುಂಬಿಸಿಯಪ್ಪುವ ಧೈರ್ಯಮಂ ಮಹೋದಾರದೊಳೀಕ್ಷಿಸಿ (ದಶಕು. ೭-೩೦); ವಾರಿಜಾಸನೆ ಸಕಲಶಾಸ್ತ್ರವಿಚಾರದುದ್ಭವೆ ವಚನರಚನೋದ್ಧಾರೆ . . . ಶಾರದೆಯೆ ನರ್ತಿಸುಗೆ ನಲಿದೂಲಿದೆನ್ನ ಜಿಹ್ವೆಯಲಿ (ಕುವ್ಯಾಅ. ೧-೫). ೨. ದುರ್ಗೆಯ ಹೆಸರುಗಳಲ್ಲಿ ಒಂದು. ೩. ಒಂದು ಬಗೆಯ ವೀಣೆ. [ಸಂ. ಶಾರದಾ]

**ಶಾರವಿ** (ನಾ). "ಕುದುರೆ(?)" (ಆರಾಚ. ಕೋಶ) : ಶಾರವಿ [ಪಾಠಾಂ. ಲಿ]ಯನೇಱಿರ್ದ ಪಟುಭಟನ ಭಂಗಿಯಂತ . . . ಪಂಡಿತೇಂದ್ರಂ ಕೋಪದ ಮಿಗೆ . . . ದುಟ್ಟರ ನಿಟ್ಟಿಸುತ್ತೆ ನುಡಿದಂ (ಆರಾಚ. ೩-೨-೨). [?]

**ಶಾರಾಬ್ಚಾರ** (ನಾ). ಶಿಲ್ಪಿ; ರೂವಾರಿ (?): ಭುವನಗಿರಿಯ ದುರ್ಗದರಮನೆಯ ಭವಂತಿಗಳೊಳ್ ಶಾರಾಬ್ಚಾರ ನಾಗಪ್ಪನ ಮುಖದಿಂ ಶಿಲಾಸ್ತಂಭಂಗಳಂ ನಿಲಿಸಿ . . . ರಾಜಾಲಯಮಂ ದೃಢತರಮನಾಗಿಸಿ (ಕೆಳನೃ. ೧೦-೯೪ ವ). [?]

**ಶಾರಿ** (ನಾ). ೧. ಪಗಡೆಯ ಕಾಯಿ; ಲೆತ್ತದ ಕಾಯಿ: 'ಪಾಶಕಶಾರಿ' ಪರಾ. ೨. ಚದುರಂಗದ ಕಾಯಿ; ಪೇದೆ. [ಸಂ.]

**ಶಾರಿಕೆ** (ನಾ). ೧. ಒಂದು ಬಗೆಯ ಹಕ್ಕಿ; ಗೊರವಂಕ; ಮೈನಾ: ಶುಕಶಾರಿಕಾದಿ ವಿಹಗಪ್ರಕರಂ ಮುಂ ಕೇಳ್ದ ವಚನಮಂ ನುಡಿವುದು ಕೌತುಕಂ (ಕಾದಂಪು. ೬೪); ಸುಬಿಂಬಾಧರಾಸಮುದಂಚತ್ಕರಶಾರಿಕಾಶುಕರವಂ ಕೂಜತ್ಪಿಕಾಲಾಪಿನೀಕ್ರಮಸಂವಾದಿತ ಸಾಧುನಾದವಹ ವೀಣಾರಾವಮಲ್ಲೊಪ್ಪುಗುಂ (ರಾಜಶೇ. ೨-೧೬೭); ಕೋಕಿಲವು ಕುಕಿಲಿದೆ! ಶಾರಿಕೆಯ ಸ್ವರ ಕೇಳಿದೆ (ಚಿಂತನ. ೪೮-೨೨). P ಶಾರಿಕೆ ಹಾಗೂ ಸಾರಿಕೆ ಎಂಬ ಪದಗಳನ್ನು ಸಂಸ್ಕೃತದಲ್ಲಿ ಮೈನಾಹಕ್ಕಿ ಎಂಬರ್ಥದಲ್ಲಿ ಸಾಮಾನ್ಯವಾಗಿ ಬಳಸಲಾಗಿದೆ. ಆದರೆ ಕನ್ನಡಕಾವ್ಯಗಳಲ್ಲಿ ಈ ಎರಡನ್ನು ಹೆಣ್ಣುಗಿಳಿ ಎಂಬರ್ಥದಲ್ಲಿಯೂ ಕೆಲವೆಡೆ ಪ್ರಯೋಗಿಸಲಾಗಿದೆ. "ಪುರುಳಿಯೆಂದುಂ ಸಾರಿಕೆಯೆಂದುಂ ಪೆಣ್ಗಿಳಿ" (ಕಶಸಾ. ೫೫-೨೦೩). ೨. ಅಂಬಾರಿ; ಹೌದಾ: ನಿಜಚತುರ್ಬಲಂ ಬಂದು ಕೂಡಲೊಡಂ ವಿಜಯವಾರಣಮಣಿಶಾರಿಕೆಯೊಳ್ ಸಹಸ್ರಲೋಚನನುಮುತ್ಪಲನೇತ್ರೆಯುಮುಭಯಪಾರ್ಶ್ವಮನಲಂಕರಿಸಿರೆ (ಪಂಪರಾಮಾ. ೧೦-೮೭ ವ). [ಸಂ. ಶಾರಿಕಾ]

**ಶಾರಿಬೆ** (ನಾ). ಒಂದು ಬಗೆಯ ಔಷಧಿಮೂಲಿಕೆ; ಸೊಗದೆ: "ಗೋಪೀ, ಶ್ಯಾಮಾ, ಶಾರಿಬಾ, ಚಂದನಾ, ಉತ್ಪಲಶಾರಿಬಾ — ೫ ಸುಗಂಧಪಾಲಗಿಡದ ಹೆಸರು, ಸೊಗದೆಬೇರು ಪ್ರಸಿದ್ಧ" (ಸಿದ್ಧಾಂತಿ. ೧೫೭); ಶಾರಿಬಾದಿ ಗಣದ ಕಷಾಯಂಗಳನ್ನು ಸಕ್ಕರೆ ಸಹ ಸೇವಿಸೆ, ಪಿತ್ತಜ್ವರ ಗುಣವಾಗುವುದು (ಸಕವ್ಯ. ೮೧). [ಸಂ. ಶಾರಿಬಾ]

**ಶಾರೀರ** (ಗು). ೧. ಶರೀರಕ್ಕೆ ಸಂಬಂಧಿಸಿದ; ದೇಹಕ್ಕೆ ಸೇರಿದ. ೨. ಶರೀರವನ್ನು ಹೊಂದಿದ; ಸಶರೀರವಾದ. (ನಾ). ೩. ಮೈ; ದೇಹ: ವಾರವಾರಕೆ ಬೆಳೆದು ಶಾರಿ ತಗಲಿ ಬಳಲಿ ಶಾರೀರವನ್ನೆ ಪೊತ್ತು ತೆತ್ತು ವಾರಕಟುಲವಣಾದಿ ಘೋರತರಮಹಕ್ಲೇಶವಾರಿಧಿಯೊಳಗೆ ಮುಳುಗಿ (ವಿದಾಕೃ. ೫೪-೧). ೪. ದೇಹಪ್ರಕೃತಿ. ೫. ಶರೀರಸಂಬಂಧವಾದುದು; ದೈಹಿಕವಾದುದು: ಅಹಿಂಸಾದಿ ಶುಭಯೋಗವು ಶಾರೀರವು; ಸತ್ಯಮಿತಹಿತಭಾಷಣಾದಿಗಳು ವಾಚಕವು (ಹಿಂದಸಾ. ೮೯). ೬. ಎತ್ತು. ೭. ಒಂದು ಬಗೆಯ ಔಷಧ. ೮. [ವೇದಾಂತ] ದೇಹದಲ್ಲಿರುವ ಆತ್ಮ; ಜೀವಾತ್ಮ: ಜೀವ (ಪ್ರಾಣವನ್ನು ಧರಿಸಿರುವವನು), ಶಾರೀರ (ಶರೀರವುಳ್ಳವನು), ವಿಜ್ಞಾನಾತ್ಮ (ಬುದ್ಧಿಯುಳ್ಳವನು) - ಇವೆಲ್ಲ ಪರ್ಯಾಯಗಳು (ಬ್ರಹ್ಮಭಾ. ೧೬೧ ಅಡಿಟಿ). ೯. [ಜೈನ] ಐದು ಬಗೆಯ ದುಃಖಗಳಲ್ಲಿ ಒಂದು; ದೇಹದಿಂದ ಉಂಟಾಗುವ ದುಃಖ: ಅಂತು ಶಾರೀರಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತಂಗಳೆಂಬಯ್ದುಂ ತೆಱದ ದುಃಖಂಗಳೊಳರ್ದಿ (ಆದಿಪು. ೫-೮೮ ವ); ಶಾರೀರಂ ಮಾನಸಂ ಕ್ಷೇತ್ರಜಂ ಪರಸ್ಪರೋದೀರಿತಂ ಸಂಕ್ಲಿಷ್ಟಾಸುರೋದೀರಿತಂಗಳೆಂಬ ಪಂಚಪ್ರಕಾರ ದುಃಖಂಗಳನನೇಕಪ್ರಕಾರದಿನನುಭವಿಸುತ್ತಂ (ಸುಕುಮಾ. ೧೧-೪೭ ವ). ೧೦. [ಸಂಗೀತ] ಕಂಠದ ನಾದಮಾಧುರ್ಯ; ಧ್ವನಿ: ಕೋಮಲಿತ ಶಾರೀರ ಹೃದಯದ ರಾಮಣೀಯಕ ರಚನೆಯಲ್ಲಿ ಸನಾಮನೆನಿಸುವನವನೆ ಗಾಯಕನು (ಕುವ್ಯಾಉ. ೩-೯೫); ಮಹಾವೈದ್ಯನಾಥಅಯ್ಯರ್ ಅವರ ಶಾರೀರವು ಧ್ವನಿಸಂಪತ್ತಿನಿಂದ ಕೂಡಿತ್ತು (ಸಂಗೀತ. ೩). ೧೧. [ನಾಟ್ಯ] ಆಂಗಿಕಾಭಿನಯದ ಪ್ರಕಾರಗಳಲ್ಲಿ ಒಂದು: ಆಂಗಿಕಾಭಿನಯವು ಶಾರೀರ ಮುಖಜ ಚೇಷ್ಟಾಕೃತ ಎಂದು ಮೂರು ವಿಧ (ಸಂನಾಟು. ೧೧). [ಸಂ.]

**ಶಾರೀರಕ** (ಗು). ೧. ದೇಹಕ್ಕೆ ಸಂಬಂಧಿಸಿದ: ಜ್ವರ ಕುಷ್ಠ ಮೊದಲಾದ ರೋಗಂಗಳೇ ಶಾರೀರಕರೋಗವೆನಿಸಿಕೊಂಬುವು (ಸಕವ್ಯ. ೨೪). (ನಾ). ೨. ದೇಹದಿಂದ ಹುಟ್ಟಿದುದು: ಶಾರೀರಕವೆಂದೂ, ಮಾನಸವೆಂದೂ, ಆಗಂತುಕವೆಂದೂ, ಸಹಜವೆಂದೂ ನಾಲ್ಕು ವಿಧ ರೋಗಂಗಳೆನಿಸಿಕೊಂಬುವುವು (ಸಕವ್ಯ. ೨೪). ೩. = ಶಾರೀರ ೮: ಶಾರೀರಕ ಪದಕ್ಕೆ ಶರೀರದೊಳಗಿರುವ ಆತ್ಮನೆಂದರ್ಥ. . . ಈ ಶಾರೀರಕವೆಂಬ ಪದ "ಶಾರೀರ ಆತ್ಮಾ" ಎಂಬ ಉಪನಿಷತ್ತು ಮೂಲಕವಾಗಿ ಬಂದಿರುವುದು (ಹಿಂದಸಾ. ೧೮೭). ೪. ಜೀವಾತ್ಮನ ವಿಷಯವನ್ನು ವಿಚಾರಪೂರ್ವಕವಾಗಿ ತಿಳಿಸುವ ವೇದಾಂತಶಾಸ್ತ್ರ: ಆತ್ಮೈಕತ್ವದರ್ಶನಕ್ಕೆ ಪ್ರತಿಪಕ್ಷದವರಾಗಿರುವ ಅವರೆಲ್ಲರ ತಿಳಿವಳಿಕೆಗಾಗಿ . . . ಈ ಶಾರೀರಕವನ್ನು ಪ್ರಾರಂಭಿಸಿರುತ್ತದೆ (ಬ್ರಹ್ಮಭಾ. ೪೩೫ ಅಡಿಟಿ); ಸಂಕ್ಷೇಪಶಾರೀರಕವನ್ನು ಅನುಸರಿಸಿ ಕೆಲವರು ಶುದ್ಧಬ್ರಹ್ಮನೇ ಜಗತ್ತಿಗೆ ಕಾರಣ ಎನ್ನುವರು (ತತ್ತ್ವಪ್ರಾ. ೩೧೦). [ಸಂ.]

**ಶಾರೀರಾಗ್ನಿ** (ನಾ). ಜಠರದಲ್ಲಿ ಆಹಾರವನ್ನು ಜೀರ್ಣವಾಗುವಂತೆ ಮಾಡುವ ಅಗ್ನಿ; ಪಾಚಕರಸ; ಜಠರಾಗ್ನಿ: ಈ ಶಾರೀರಾಗ್ನಿಗೆ ಹಾಕತಕ್ಕ ಉರುವಲು ಯಾವುದೆಂದರೆ ನಾವು ದಿನಾಲು ತಿನ್ನುವ ಅನ್ನವೇ (ಮಂಬಯಿ. ೪-೩೧). [ಸಂ.]

**ಶಾರೀರಿಕ** (ಗು). ಶರೀರಕ್ಕೆ ಸಂಬಂಧಿಸಿದ; ದೈಹಿಕ: ಆ ಸಭೆಯಲ್ಲಿ ಶಾರೀರಿಕ ವಿಷಯಗಳನ್ನು ಕುರಿತು ಚರ್ಚಿಸಲಾಯಿತು (ರೂಢಿ). [ಸಂ.]

**ಶಾರೀರಿಕಶಿಕ್ಷಣ** (ನಾ). ಅಂಗಸಾಧನೆ; ವ್ಯಾಯಾಮ: ಶಾಲೆಗಳಲ್ಲಿ ಶಾರೀರಿಕ ಶಿಕ್ಷಣವನ್ನು ಕಡ್ಡಾಯಗೊಳಿಸಲಾಗಿದೆ (ರೂಢಿ). [ಸಂ.]

**ಶಾರೆ** 'ಸೇರೆ[1]' ನೋ.

**ಶಾರೆಗಣ್ಣು** 'ಸೇರೆಗಣ್' ನೋ.

**ಶಾರೋದರ** (ಗು). ಬೇರೆ ಬೇರೆ ಬಣ್ಣಗಳಿಂದ ಕೂಡಿದ ಮಧ್ಯಪ್ರದೇಶವುಳ್ಳ: ಕುಸುಮಚಾಪಂಗೆ ಪಕ್ಕುಮಾಡಿದ ಚಂದ್ರಾಪೀಡನನಪಾಂಗವಿಕ್ಷೇಪ ತರಳತರ ತಾರಶಾರೋದರನಯನಂಗಳಿಂದಡಿಗಡಿಗೆ ನೋಡುತ್ತಮಿರ್ದು (ಕಾದಂಉ. ೫೧). [ಸಂ.]

**ಶಾರ್ಕರ** (ಗು). ೧. ನೊರಜುಗಲ್ಲುಗಳಿಂದ ಕೂಡಿದ; ಸಣ್ಣಕಲ್ಲುಗಳುಳ್ಳ. ೨. ಸಕ್ಕರೆಯಿಂದ ಮಾಡಿದ; ಸಕ್ಕರೆಯ. (ನಾ). ೩. ನೊರಜುಗಲ್ಲಿನ ನೆಲ, — ಪ್ರದೇಶ: "ಶರ್ಕರಾ, — ಶರ್ಕರಿಲಃ, ಶಾರ್ಕರಃ, ಶರ್ಕರಾವಾನ್ — ೪ ನರುಜುಕಲ್ಲುಗಳುಳ್ಳ ನೆಲದ ಹೆಸರುಗಳು" (ಸಿದ್ಧಾಂತಿ. ೯೫). [ಸಂ.]

**ಶಾರ್ಙ್ಗ** (ಗು). ೧. ಕೊಂಬಿನಿಂದ ಮಾಡಿದ; ಕೊಂಬಿನಿಂದಾದ: 'ಶಾರ್ಙ್ಗಚಾಪ' ಪರಾ. (ನಾ). ೨. ಬಿಲ್ಲು; ಧನುಸ್ಸು. ೩. ವಿಷ್ಣುವಿನ ಬಿಲ್ಲು: ಚಿತ್ರಮಣಿ ಪ್ರಭಾವಿಳಂ ಗಗನದಿನಂದು ಬಂದು ನೆಲಸಿರ್ದುದು ಶಾರ್ಙ್ಗಮುಪೇಂದ್ರಹಸ್ತದೊಳ್ (ಜಗವಿ. ೭-೭೪). [ಸಂ.]

**ಶಾರ್ಙ್ಗಕ** (ನಾ). ಒಂದು ಬಗೆಯ ಪಕ್ಷಿ: ಈ ದಾವಾಗ್ನಿಯಲ್ಲಿ ಉಳಿದವು ಆರು ಪ್ರಾಣಿಗಳು ಮಾತ್ರ; ಅವರು ಯಾರೆಂದರೆ, ತಕ್ಷಕನ ಮಗ ಅಶ್ವಸೇನ, ಮಯನೆಂಬ ರಾಕ್ಷಸ, ಮತ್ತು ನಾಲ್ಕು ಶಾರ್ಙ್ಗಕಪಕ್ಷಿಗಳು (ವಚಭಾ. ೭೪). [ಸಂ.]

**ಶಾರ್ಙ್ಗಚಾಪ** (ನಾ). ಕೊಂಬಿನಿಂದ ಮಾಡಿದ ಬಿಲ್ಲು, — ಧನುಸ್ಸು: ಜಿನಚಂದ್ರಂ . . . ಒಂದಂಬಿನಿಂದೆಚ್ಚನಾ ದಮಿತಾರಿ ದ್ರುಮ ಶಾರ್ಙ್ಗಚಾಪ ಜಯವಜ್ರಪಾಶವಂ ಕೇಶವಂ (ಶಾಂತಿಪು. ೪-೪೮). [ಸಂ.]

**ಶಾರ್ಙ್ಗಧನ್ವ** (ನಾ). ಶಾರ್ಙ್ಗವೆಂಬ ಬಿಲ್ಲನ್ನು ಹಿಡಿದಿರುವವನು; ವಿಷ್ಣು. [ಸಂ. ಶಾರ್ಙ್ಗಧನ್ವನ್]

**ಶಾರ್ಙ್ಗಧರ** (ನಾ). ೧. ವಿಷ್ಣು. ೨. [ಜೈನ] ವಾಸುದೇವ: ಅಂತಶ್ವಗ್ರೀವಂ . . . ಚಕ್ರಮಂ ಕೊಂಡಿಡೆ ಶಾರ್ಙ್ಗಧರಂ ಕಡಗೊಂಡೊಂ ಕುಡುವಂತೆ ಮಗುಟ್ಟದಂ ಕೊಂಡಿಡೆ ತಚ್ಚಂಡಾರಿಶಿರಂ ಸಿಂಧುರಮುಂಡಿಗೆ ಧರೆಗೆನಿಸಿ ಮುಂದೆ ಬಿಟ್ಟುದು ಪರಿಯಾ (ಶಾಂತಿಪು. ೫-೭೩). [ಸಂ.]

**ಶಾರ್ಙ್ಗಪಾಣಿ** (ನಾ). ೧. ವಿಷ್ಣು. ೨. = ಶಾರ್ಙ್ಗಧರ ೨: ಪಿರಿಯಣ್ಣನ ಜರ್ವಿಂಗೋಸರಿಸಿದುದಲ್ಲದೊಡೆ ಶಾರ್ಙ್ಗಪಾಣಿಯ ಮುನಿಸುಂ ಹರಮುರಿಗಣ್ಣುಂ ಲೋಕಮನರಗಟಿಗೆಗೆ ಬೂದಿಮಾಟ್ಟುದೊಂದಚ್ಚರಿಯೇ (ಪಂಪರಾಮಾ. ೭-೧೪೫). [ಸಂ.]

**ಶಾರ್ಙ್ಗಿ** (ನಾ). ೧. ಬಿಲ್ಲುಗಾರ. ೨. ಶಾರ್ಙ್ಗವನ್ನು ಧರಿಸಿದವನು; ವಿಷ್ಣು: ಮಗಧಾದ್ಯನೇಕನೃಪರೊರ್ಮೆಯೆ ತಾಗಿದರಂದು ಶಾರ್ಙ್ಗಿಯಂ (ಜಗವಿ. ೮-೭೧);

ಸತ್ಯಭಾಮಾಪರಿಭಾಸ್ವತ್ಸಂಗದಿಂ ಶಾರ್ಙ್ಗಿಯಂ . . . ಪೋಲ್ವಂ (ಪುಷ್ಪಪು. ೧-೮೨). ೩. ಶಿವ. [ಸಂ. ಶಾರ್ಙ್ಗಿನ್]

**ಶಾರ್ಙ್ಗೀಲಿ** (ನಾ). ಒಂದು ಬಗೆಯ ಪ್ರಾಣಿ: ಭೂನಾಯಕಂ ವಿಪ್ರನೆಂದು ಮನ್ನಿಸಿ ತಿಳಿದನೂನಪಾಪಂ ಸಂಭವಿಸಿತೆಂದು ಬೆಟ್ಟೇಱಿ ಬೀಳ್ವ ಶಾರ್ಙ್ಗೀಲಿಯಾಗಿ ಅದನನುಭವಿಸಿ ತೋಳನಾಗಿ . . . ನವಿಲಾಗಿರಲ್ಕೆ (ಪದ್ಮರಾ. ೧೦-೧೭೨). [P ಇದು ಸಂಸ್ಕೃತದ 'ಶೃಗಾಲ' ಕ್ಕೆ ಸಂಬಂಧಿಸಿರಬಹುದೆ ?]

**ಶಾರ್ದೂಲ** (ನಾ). ೧. ಹುಲಿ; ವ್ಯಾಘ್ರ: ಮುನಿಪತಿಯ ಮುಖಾರವಿಂದಮಂ ನೋಡುತ್ತಿರ್ದ ಶಾರ್ದೂಲವರಾಹಗೋಲಾಂಗೂಲಸಕುಳಂಗಳಂ ನೋಡುತ್ತುಂ (ಆದಿಪು. ೫-೨ ವ); ಭೂಪಾಲನು . . . ಸಿಂಹವೃಕಶಾರ್ದೂಲಭಯವನು ಪರಿಹರಿಸಿ ಮುನಿಪಾಳಿಗಾಶ್ರಯವೆನಿಸಿದನು ಪಾವನ ತಪೋವನವ (ಕುವ್ಯಾಅ. ೫-೧) ; ಎತ್ತಲುಂ ಮೊಳೆವ ಸಿಂಹಶಾರ್ದೂಲಭಲ್ಲೂಕ ವೃಕಸೂಕರಾದಿ ದುಷ್ಟಮೃಗಂಗಳ ನಿಷ್ಠುರಧ್ವನಿಗೆ ಅಳ್ಕುವೆನಯ್! (ರಾಮಾಶ್ವ. ೩೪-೩). ೨. ಉತ್ತಮ, ಶ್ರೇಷ್ಠ ಎಂಬ ಅರ್ಥದಲ್ಲಿ ಸಮಾಸದ ಕೊನೆಯಲ್ಲಿ ಸೇರುವ ಶಬ್ದ: ನೃಪಾಲಶಾರ್ದೂಲ ಕೇಳ್ ಸಿದ್ಧಾರ್ಥಮಾನೊಂದು ಜನ್ಮಮಂ ಕೈಕೊಂಡು ತೊಡಗಿಹೆನ್ (ಶ್ರೀರಾಮಾ. ೨೮-೧೩). ೩. ಒಬ್ಬ ರಾಕ್ಷಸನ ಹೆಸರು: ಸಿಂಧುರ ಜಟಾಭಸ್ಮ ಶಾರ್ದೂಲಾಂಧಲಾಲಾತಾರಕಗುಹ ಜಲಂಧರಪ್ರಮುಖಾಸುರರನಪಹರಿಸನೇ ಹರನು (ಬಸವು. ೫೪-೫೭). [ಸಂ.]

**ಶಾರ್ದೂಲವಿಕ್ರೀಡಿತ, ಶಾರ್ದೂಳವಿಕ್ರೀಡಿತ** (ನಾ). ೧. ಹುಲಿಯ ಕ್ರೀಡೆ, ಆಟ: ರಂಗತ್ಪಿಂಗಳಲೋಚನಂ ಘುಳುಘುಳುಪ್ರಧ್ವಾನರೌದ್ರಾನನಂ . . . ವ್ಯಾಕೀರ್ಣಕರ್ಣಂ ಕುಮಾರಂಗಾಶ್ಚರ್ಯಮುಮಾರ್ಗಮಾದುದು ಭಯಂ ಶಾರ್ದೂಲ ವಿಕ್ರೀಡಿತಂ (ಪುಷ್ಪಪು. ೫-೭೦). ೨. [ಛಂದ] ವರ್ಣಛಂದಸ್ಸಿನ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹತ್ತೊಂಬತ್ತು ಅಕ್ಷರಗಳುಳ್ಳ ಅತಿಧೃತಿ ಎಂಬ ಛಂದಸ್ಸಿನ ಒಂದು ವೃತ್ತ: ಉರ್ವೀಮಾರುತಭಾಸ್ಕರಾನಿಲವಿಯದ್ವಂದ್ವಂ ಪದಾಂತಂಗಳೊಳ್ . . . ಭುವನತ್ರಯಂಗಳೊಳಗೀ ವೃತ್ತಂ ಪ್ರಸಿದ್ಧಂ ಕರಂ ಚಾರ್ವಂಭೋರುಹಪತ್ರನೇತ್ರೆ ಪೆಸರಿಂ ಶಾರ್ದೂಲವಿಕ್ರೀಡಿತಂ (ಛಂದೋಂಬು. ೨-೧೭೩). **ಶಾರ್ದೂಳವಿಕ್ರೀಡಿತ** : ೨. ಶಾರ್ದೂಳವಿಕ್ರೀಡಿತಂ ಇದು ಜಾತ್ಯಳಂಕಾರಂ (ಕಾಅ. ೪೧-೫೮-೩೦; 1087). [ಸಂ.]

**ಶಾರ್ದೂಳವಿಕ್ರೀಡಿತ** 'ಶಾರ್ದೂಲವಿಕ್ರೀಡಿತ' ನೋ.

**ಶಾರ್ವರ** (ಗು). ೧. ರಾತ್ರಿಗೆ ಸಂಬಂಧಿಸಿದ. ೨. ಕೇಡುತರುವ; ದುಷ್ಟತನದ. (ನಾ). ೩. ಕಗ್ಗತ್ತಲೆ; ಅಂಧಕಾರ: "ಶಾರ್ವರಂ — ಕಾರುಗತ್ತಲು, ಘಾತುಕ" (ಸಿದ್ಧಾಂತಿ. ೪೧೭). [ಸಂ.]

**ಶಾರ್ವರಿ₁** (ನಾ). ೧. ಇರುಳು; ರಾತ್ರಿ : ಶಾರ್ವರಿ ಪರಿಪೂರ್ಣಚಂದ್ರನಂ ಪಡೆವಂತಂತರ್ವತ್ನಿ ಸರ್ವಲಕ್ಷಣಸರ್ವಗುಣಾನ್ವಿತನೆನಿಪ್ಪ ಸುತನಂ ಪಡೆದಳ್ (ಪಂಪರಾಮಾ. ೩-೧೯); ಲಂಕಾಪುರದ ಸಿರಿ ಸೇರಿರ್ದುದಾ ಶಾರ್ವರಿಯ ಪರಿಯಿಟನಪ್ರಚಂಡ ಸುಮಾಲ್ಯವಂತಂಗೆ (ತೊರರಾ. ೧-೮-೨೫). ೨. ಶಕ್ತಿದೇವತೆಗಳಲ್ಲಿ ಒಬ್ಬಳು: ಶಾರ್ವರಿ ರತಿ ಮುಕ್ತಕೇಶಿ . . . ಎಯ್ದಿದರ್ (ಶಬಶಂ. ೩-೧೨). [ಸಂ. ಶಾರ್ವರೀ]

**ಶಾರ್ವರಿ₂** (ನಾ). ಅರುವತ್ತು ಸಂವತ್ಸರಗಳಲ್ಲಿ ಮೂವತ್ತು ನಾಲ್ಕನೆಯದು: ಆ ವರುಷವೇ ಪ್ರಭವ . . . ಶಾರ್ವರಿ . . . ಅಕ್ಷಯವೆಂದಱವತ್ತು ತೆಱನಾಗಿಹುದು (ವಿವೇಕ. ೩೪೨). [ಸಂ. ಶಾರ್ವರಿನ್]

**ಶಾರ್ವರೀಶ** (ನಾ). ರಾತ್ರಿಯ ಒಡೆಯ; ಚಂದ್ರ : ಶಾರ್ವರೀಶನ ಶಕಲನಿಟಿಲೆ ಸೂರ್ಪಕಹರನ ಮೌರ್ವಿಯಂ ಪಳಿವ ಬಂಧುರನೀಲಚಿಕುರೆ (ನವಮೋ. ೧೭-೨). [ಸಂ.]

**ಶಾಲ₁** (ನಾ). ೧. ಮನೆಯ ಒಂದು ಭಾಗ : ಶಾಲ [ಪಾಠಾಂ. ಳೆ] ಹರಿನೀಲ ಮಣಿಕಿರಣಾಳಿ ಪೊದಟ್ಟಿಸೆಯೆ ರಾಹುಗೆತ್ತಗಿದಗಿದಟ್ಟಾಳಿಕೆಗಳಲ್ಲಿ . . . ತಡೆದು ನಡೆವಂ ದಿನಪಂ (ಆದಿಪು. ೬-೧೧೫). ೨. ಮನೆ; ನಿವಾಸ : ಉನ್ನತ್ತ ಗಜಗಮನೆಯರ್ ಬಂದೊತ್ತಗೆ ನಿಲ್ಪರ್ ಶಾಲದೊಂದಂಗಣದೊಳ್ (ಸುಕುಮಾ. ೯-೬೨). ೩. ಕುದುರೆಯ ಲಾಯ. ೪. ಮರದ ಮುಖ್ಯವಾದ ಕೊಂಬೆ. ೫. ಮರದ ಕಾಂಡ. [ಸಂ. ಶಾಲಾ]

**ಶಾಲ₂, ಶಾಳ** (ನಾ). ೧. ಅಂಟುದ್ರವವನ್ನು ಸ್ರವಿಸುವ ಒಂದು ಬಗೆಯ ಎತ್ತರವಾದ ಮರ; ಸರ್ಜವೃಕ್ಷ: "ಸರ್ಜಂ ಶಾಲಂ" (ವಸ್ತುಕೋ. ೩೪-೧೧); ಶಾಲವೃಕ್ಷಗಳಿಂದ ಗೃಹಗೃಹವೂ ಶೋಭಿಸಿತು (ಶಾಂತಲಾ. ೯೯). ೨. ಮರ; ವೃಕ್ಷ: "ವೃಕ್ಷಃ . . . ಶಾಲಃ . . . ದ್ರುಮಃ, ಪಾದಪಃ — ಈ ೧೯ ಮರಂ" (ಹಲಾಯು. ೨೯-೨೩). ೩. ಸುತ್ತುಗೋಡೆ; ಆವರಣ; ಪ್ರಾಕಾರ: ಶಾಲಂ ವೇದಿದ್ವಿತಯಂ ಶಾಲೋನ್ನತ ವೇದಿಶಾಲವೇದಿಕೆ ವಿಳಸಚ್ಛಾಲಂ . . . ಸೊಗಯಿಸುತಿರ್ಕುಂ (ಪಾರ್ಶ್ವಪು. ೧೬-೧೨); ನಗರವೆಸೆದುದು . . . ಚಾಮೀಕರದ ಚಟುಳಪ್ರಭೆಯ ಶಾಲಾವರಣದಲಿ ಮಖಶಾಲೆಗಳ ಸೌಧಗಳ ಸೊಂಪಿನಲಿ (ತೊರರಾ. ೧-೯-೯). ೪. (ಶೀಘ್ರವಾಗಿ ಚಲಿಸುವ) ಒಂದು ಬಗೆಯ ಮೀನು: "ಶಾಲಃ, ಶಲಕಃ . . . ಪಲ್ಲವಕಃ — ಈ ೬ ಮತ್ಸ್ಯದ ಭೇದಂಗಳ್" (ಹಲಾಯು. ೧೧೯-೩೭). **ಶಾಳ** : ೩. ಉದಗ್ರಕನಕಶಾಳದಿಂದೊಳಗೆ ಕುಲನಗಂಗಳೆನಿಪ ದೇವಕುಲದ ಭೋಗದಿಂ (ಪಂಪಭಾ. ೧-೫೮); ಅಗಲಂ ತನಗೊರ್ಗಾವುದ ಮಿಗಿಲಿಲ್ಲೆನೆ ಶಾಳಮೂಳದಿಂದೆ ತಗುಳ್ದೊಪ್ಪುಗುಮಾ ಶ್ರೀಮಂಡಪದೊಳಗೆ ಗಣಾವನಿದೇಶಂ (ಚಂದ್ರಪು. ೧೫-೭೯). [ಸಂ.]

**ಶಾಲಕ, ಸಾಲಕ** (ನಾ). ತಂಗಿಯ ಗಂಡ ; ಮೈದುನ : "ತಂಗಿಯಧಿಪಂ ಶಾಲಕಾಖ್ಯನಕ್ಕುಂ" (ಮಂಗರಾ. ೯೨-೧೩). **ಸಾಲಕ** : ಮದನನೆನಿಪ್ಪ ಸಾಲಕನು ದುರುಳ ಕಾಷ್ಠಾಂಗಾರಕಗೆ ಕೈನೆರವ ಬಂದು (ಜೀವಂಚ. ೪-೬೬). [< ಸಂ. ಶ್ಯಾಲಕ]

**ಶಾಲಗ್ರಾಮ** (ನಾ). ವಿಷ್ಣುವಿನ ಸ್ವರೂಪವೆಂದೂ ಪೂಜಾರ್ಹವೆಂದೂ ಭಾವಿಸಲಾದ, ಪ್ರಮುಖವಾಗಿ ಗಂಡಕೀನದಿಯಲ್ಲಿ ದೊರೆಯುವ ಕಪ್ಪನೆಯ ದುಂಡುಕಲ್ಲು; ಸಾಲಿಗ್ರಾಮ: ನಿಷ್ಠೆಯಿಂದಲಿ ಶಾಲಗ್ರಾಮಶಿಲೆಯ ಸಂಪುಷ್ಪ ದೊಳಿರಿಸಿ ಪೂಜಿಸು (ಪುರಂದ. ೨-೩೮-೨); ದಿವ್ಯಶಾಲಗ್ರಾಮಶಿಲೆಯೊಳುದಿಸಿದ ಕೊಳಲ ಕೃಷ್ಣಮೂರ್ತಿಯ ಮಧುರಮುರಲಿನಾದವು ತಮದ ಕಣ ಕುಣಿಸುತಿದೆ (ಉಯ್ಯಾಲೆ. ೪-೧೧). 'ಸಾಲಗ್ರಾಮ' ಪರಾ. [ಸಂ.]

**ಶಾಲಣ, ಸಾಲಣ** (ನಾ). ಶಾಲವೃಕ್ಷದ ಅಂಟು; ರಾಳ: ಶಕಾರಕ್ಕೆ — ಅಶನಿ — ಅಸನಿ . . . ಶಾಲಣ — ಸಾಲಣ (ಶಮದ. ೨೫೩ ಪ್ರಯೋ). **ಸಾಲಣ** : ಮೇಲಿನ ಪ್ರಯೋಗವನ್ನು ನೋಡಿ. [< ಸಂ. ಶಾಲನ]

**ಶಾಲಪರ್ಣಿ** (ನಾ). ಒಂದು ಬಗೆಯ ಮರ; ಮೂರೆಲೆಹೊನ್ನೆ: "ಶಾಲಪರ್ಣಿ [ಪಾಠಾಂ. ಲಿಪರ್ಣಿ, ಲಿಪನ್ನಿ] ಯೆನಲ್ಕೆ ಹೊನ್ನೆಯಕ್ಕು" (ಮಂಗರಾ. ೩೯-೨೯). [ಸಂ. ಶಾಲಪರ್ಣೀ]

**ಶಾಲಭಂಜಿಕೆ, ಶಾಳಭಂಜಿಕೆ** (ನಾ). ೧. ಶಾಲವೃಕ್ಷದ ಮರದಿಂದ ಮಾಡಿದ ಬೊಂಬೆ. ೨. ಪುತ್ಥಳಿ; ವಿಗ್ರಹ: ಎಡೆಯಾಡುತಿಹ ನರಪನ ರೂಪುಗಾಣುತ ಮಡದಿಗೆ ಮರವಟ್ಟ ಭಾವ ತುಡುಕಿದವೊಲು ಶಾ[ಪಾಠಾಂ. ಸಾ]ಲಭಂಜಿಕೆಗಳು ಕಣ್ಣೆ ಕೊಡುವುದು ಮೋಹನರಸವ (ವರ್ಧಚ. ೧-೧೩೩); ಸಾಲ ಮಣಿಮಯದ ಸೋಪಾನ ದೊಳ್ನಿಲಿಸಿರ್ದ ಶಾ[ಪಾಠಾಂ. ಸಾ] ಲಭಂಜಿಕೆಗಳೊ ವಿಚಿತ್ರಮೆನೆ . . . ಅಬಲೆಯರ ರೂಪುಗಳ್ಕಣ್ಗೆಸೆದುವು (ಜೈಮಿಭಾ. ೩೦-೧೩). 'ಸಾಲಭಂಜಿಕೆ' ಪರಾ. ೩. ಸೂಳೆ; ವೇಶ್ಯೆ. **ಶಾಳಭಂಜಿಕೆ** : ೧. ಅನೇಕಕೂಟಕೋಟೀವಿಶಾಳಶಾಳಭಂಜಿಕಾರಂಜಿತಮುಂ ನಾಟ್ಯಶಾಳಾಳಂಕ್ರಿತಮುಂ (ಕಾಅ. ೬-೩-೨೩೩; 1062); ಪಾಂಥರ ಕಣ್ಗೆ . . . ಮನಂಗೊಳಿಸಿರ್ಪರನಂಗರಾಜಧಾರಾಗ್ರಹ ಶಾಳಭಂಜಿಕೆಗಳಂತಱವಟ್ಟಿಗೆಯೊಳ್ ಲತಾಂಗಿಯರ್ (ಪುಷ್ಪಪು. ೨-೨೦). [ಸಂ. ಶಾಲಭಂಜಿಕಾ]

**ಶಾಲಭಂಜಿಕೆಗಿಱು** (ಕ್ರಿ). ಬೊಂಬೆಯೆಂದು ಭ್ರಮಿಸು: ಶಾಲ[ಪಾಠಾಂ. ಸಾರ, ಸಾಲ] ಭಂಜಿಕೆಗೆ [ಪಾಠಾಂ. ವೆ] ತ್ತರಸಂ ನೋಡಿದಂ ಲಲಾಟಕೋಮಲೆಯಂ (ಶಮದ. ೨೪೦ ಪ್ರಯೋ). [ಶಾಲಭಂಜಿಕೆ + ಗಿಱು]

**ಶಾಲಾಕ್ಯತಂತ್ರ** (ನಾ). (ಕಣ್ಣು, ಕಿವಿ ಮುಂತಾದುವುಗಳ ರೋಗಗಳಿಗೆ ಚೂಪಾದ ಆಯುಧಗಳಿಂದ ಮಾಡುವ) ಚಿಕಿತ್ಸೆಗೆ ಸಂಬಂಧಿಸಿದ ಆಯುರ್ವೇದದ ಒಂದು ಭಾಗ : ಆಯುರ್ವೇದವು ಶಲ್ಯತಂತ್ರ ಶಾಲಾಕ್ಯತಂತ್ರ . . . ವಾಜೀಕರಣತಂತ್ರಗಳೆಂಬ ಎಂಟುಭಾಗಗಳುಳ್ಳದ್ದಾಗಿದೆ (ಸುಜ್ಞಾಚಂ. ೯೪). [ಸಂ.]

**ಶಾಲಾಜಿರ** (ನಾ). ಬಾಯಿ ಅಗಲವಾಗಿದ್ದು ಹುರಿಯಲು ಅನುಕೂಲವಾಗುವಂತಿರುವ ಮಣ್ಣಿನ ಪಾತ್ರೆ ; ಓಡು; ಶ್ರಾವೆ: "ಶಾಲಾ[ಪಾಠಾಂ. ಳಾ]ಜಿರಃ, ವರ್ಧಮಾನಃ, ಶರಾವಃ — ಈ ೩ ಶ್ರಾವೆ" (ಹಲಾಯು. ೫೨-೧೬೦). [ಸಂ.]

**ಶಾಲಾವೃಕ** (ನಾ). ೧. ನಾಯಿ: "ಕೌಲೇಯಕಃ . . . ಭಷಕಃ, ಮೃಗದಂಶಃ, ಶಾಲಾವೃಕಃ — ಈ ೮ ನಾಯ್(ಯಿ)" (ಹಲಾಯು. ೪೭-೧೨೬). ೨. ತೋಳ. ೩. ನರಿ. ೪. ಬೆಕ್ಕು. ೫. ಜಿಂಕೆ. ೬. ಕೋತಿ. [ಸಂ.]

**ಶಾಲಿ**[1] (ಗು). ೧. ಮನೆಗೆ ಸಂಬಂಧಿಸಿದ; ಗೃಹಕೃತ್ಯದ. ೨. ಪಡೆದಿರುವ; ಹೊಂದಿರುವ. ೩. ಉಜ್ವಲವಾದ; ಕಾಂತಿಯುಕ್ತವಾದ. [ಸಂ. ಶಾಲಿನ್]

**ಶಾಲಿ**[2], **ಶಾಳಿ** (ನಾ). ೧. ನೆಲ್ಲು ; ಬತ್ತ : ಕಳವೆ ಶಾಲಿಗೆ ಓಗರದ ಉದಕವನೆಱೆದವರಾರಯ್ಯ (ಮಹಾದೇ. ಬ. ೧೦-೩); ಫಳಭಾರಂಗಳಿಂ ನಮ್ರಂಗಳಾಗಿ ಶೋಭಿಸುವ ಶಾಲಿವ್ರೀಹ್ಯಾದಿ ಸಮಸ್ತಸಸ್ಯಂಗಳೊಪ್ಪೆ (ರತ್ನಕ. ೧-೩೦ ವ); ಕಾಲುವೆಯ ನೀರಿಂದ ಹೊರವಾಗಿ ಬೆಳೆದ ಶಾಲಿಗಳ ಮಡಿಯೇನು (ನವರಾ. IV, ೬೮). ೨. ಪುನುಗುಬೆಕ್ಕು. **ಶಾಳಿ** : ೧. ಪೊಸ ನೈದಿಲ ಕಂಪನ ಬೀಱಿ ಕಾಯ್ತು ಕೆಂಗೊಲೆಯೊಳೆ ಜೋಲ್ವ ಶಾಳಿ (ಪಂಪಭಾ. ೧-೫೨); ಶಾಳಿಯ ಕಂಪನೊಟ್ಟಿ ನಳಿನಂಗಳನಳ್ಕಿಸಿ . . . ತೀಡಿದುದು ಮೂಡಣ ಗಾಳಿ (ಅರ್ಧನೇ. ೪-೬೨); ಶಾಳಿಗಳಂ ಬಹುಪರಿಮಳಶಾಳಿಗಳಂ . . . ರುಚಿನಿಚಿತದಿ ಶಾಳಿಗಳಂ ಬೆಳೆವ ನೆಲನೆ ಪೊಲನಾ ನೆಲದೊಳ್ (ಪುಷ್ಪಪು. ೨-೧೪). [ಸಂ.]

**ಶಾಲಿಕೆ** (ನಾ). ಮನೆ ; ನಿವಾಸ : ಹರಿಚಂದನವಂದನಮಾಲಿಕೆಗಳ್ ಪರಿವೇಷ್ಟಿಸೆ ಮೆಱೆದುವು ಶಾಲಿಕೆಗಳ್ (ಚಂದ್ರಪ್ರ. ೪-೬೩ ರಗಳೆ). [ಸಂ. ಶಾಲಿಕಾ]

**ಶಾಲಿಗ್ಗಾಮೆ** (ನಾ). ಒಂದು ಊರಿನ ಹೆಸರು: ಭೂತಶರ್ಮ್ಮರ್ಗ್ಗೆ ಶಾಲಿಗ್ಗಾಮೆ ಸರ್ವ್ವಪರಿಯಾರ ಪರಿಗ್ರಹದಿನ್ತು ಪಾಣಿಗ್ರಹಣಂ ಕೆಯ್ದು ಕೊಟ್ಟಾರ್ (ಮೈಆರಿ. ೧೯೪೧, ೧-೩೨; 788). [< ಸಂ. ಶಾಲಿಗ್ರಾಮ]

**ಶಾಲಿಗ್ರಾಮ** (ನಾ). = ಶಾಲಗ್ರಾಮ: ತಲೆತಲಾಂತರದಿಂದ ಮನೆಯಲ್ಲಿ ಪೂಜೆ ಮಾಡಿದ ಆ ಶಾಲಿಗ್ರಾಮವನ್ನ ಅವ ನೀರಿಗೆ ಎಸೆದು ಥೂ ಎಂದು ಉಗಿದು ಬಿಡೋದ? (ಸಂಸ್ಕಾರ. ೯). [ಸಂ.]

**ಶಾಲಿನಿ** (ನಾ). ೧. ಮನೆಯ ಒಡತಿ; ಯಜಮಾನಿ. ೨. [ಛಂದ] ವರ್ಣ ಛಂದಸ್ಸಿನ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹನ್ನೊಂದು ಅಕ್ಷರಗಳುಳ್ಳ ತ್ರಿಷ್ಟುಪ್ಪೆಂಬ ಛಂದಸ್ಸಿನ ಒಂದು ವೃತ್ತ: ಭೂಮಿವ್ಯೋಮದ್ವಂದ್ವರುದ್ರದ್ವಯಂಗಳ್ ತಾಮೆತ್ತಂ ಚೆಲ್ವಾಗೆ ಶೈಲಂಗಲೊಳ್ವಿಶ್ರಾಮಂ ನಿಲ್ತಂದಕ್ಕುಮಾ ನಾಕಿಯಿಂದಂ ಭೂಮಿಖ್ಯಾತಂ ಶಾಲಿನೀನಾಮವೃತ್ತಂ (ಛಂದೋಂಬು. ೨-೧೨೧). [ಸಂ. ಶಾಲಿನೀ]

**ಶಾಲಿಪಾಲಿಕೆ** (ನಾ). ಬತ್ತದ ಗದ್ದೆಯನ್ನು ಕಾಯುವವಳು : ಎಸೆವ ಶಾಲಿಪಾಲಿಕೆಯರಂ ನೋಡುತುಂ ಮುಂತು ಪವನದ ಪೊಱೆಯನೆಯ್ದೆ ವನಲಕ್ಷ್ಮಿ ಹರಿದಂತದೊಳ್ ಪಸರಿಸಿದ ಕಹಳಾರವದಿನಿವರ ಬರವಱಿದು ಗಂಧವಹನಂ ನೀಂ ತಳ್ವದಿಲ್ಲಿಗಾರ್ಯನ ಕರೆದು ತಾರೆಂದು ಸಂತಸದೆ ಕಳಿಪಿದಳೊಯೆನೆ ಬಂದುದುದ್ಯಾನದಿಂ ತಂಬೆಲರ್ (ಪದ್ಮರಾ. ೮-೨೧). [ಸಂ. ಶಾಲಿಪಾಲಿಕಾ]

**ಶಾಲಿವನ, ಶಾಳಿವನ** (ನಾ). ಬತ್ತದ ಗದ್ದೆ: ಶಾಲಿವನಾಳಿಯ ಪೆಂಪಿನಿಂದನಾವರಿಸೆ ಪೊಲಂ ಸರೋಜಕುಮುದೋಜ್ವಲಮಾಗೆ ಕೊಳಂ . . . ಬಂದುದತಿನಿರ್ಮಲ ನೀರದವಪ್ಪ ಶಾರದಂ (ಕಾದಂಉ. ೬೩೨); ತುಂಬುರನಲ್ಲಿ ಬಿನ್ನೈಸುತುಂ ಬರಲು ಮುಂದೆ ನಳನಳಿಸುತ್ತೆ ಶಾಲಿವನವೊ[ಪಾಠಾಂ. ಶಾಸನವದೊ]ಪ್ಪಿರಲು (ನಂಬಿರ. ೯-೧೨). **ಶಾಳಿವನ** : ಸಕಲದಿಶಾಳಿಯಂ ಪುದಿದ ಶಾಳಿವನಂ (ಮಲ್ಲಿಪು. ೨-೧೨); ಸೊಂಪುವೆತ್ತ ಪೆಂಪಿನ ಕುಂಭಿನಿಯೊಳ್ ಮುಖ್ಯವಾದ ಶಾಳಿವನವಿರ್ದುದು (ಹಮ್ಮೀರ. ೧-೪೯ ವ). [ಸಂ.]

**ಶಾಲಿವಾಹನ** (ನಾ). ೧. ಶಕಪುರುಷನೆಂದು ನಂಬಲಾದ ಒಬ್ಬ ರಾಜನ ಹೆಸರು. ೨. ಕ್ರಿಸ್ತಶಕ ಎಪ್ಪತ್ತೆಂಟರಲ್ಲಿ ಶಕೆಯೊಂದನ್ನು ಆರಂಭಿಸಿದ ಒಬ್ಬ ಕನಿಷ್ಕರಾಜನ ಹೆಸರು: ವಿಕ್ರಮಸಂವತ್ಸರದ ಮೂಲಪುರುಷ ವಿಕ್ರಮಾದಿತ್ಯನನ್ನು ಶಾಲಿವಾಹನನು ಸೋಲಿಸಿದನೆಂದು ಕಥೆಗಳಿವೆ (ಕಶಾಅ. ೫೩). ೩. ಒಂದು ಬಗೆಯ ಕ್ರಿಮಿ : ವರಶಾಲಿವಾಹನಕ್ರಿಮಿಯಂತೆ ನಿರ್ಲೇಪಕರನಾಗಿ ಭ್ರಮರದಂತತಿಸುವಾಸನೆಗೆಳಸಿ (ಪರಶು. ೯-೭). [ಸಂ.]

**ಶಾಲಿವಾಹನಶಕ** (ನಾ). ಕ್ರಿಸ್ತಶಕ ಎಪ್ಪತ್ತೆಂಟರಲ್ಲಿ ದಕ್ಷಿಣ ಭಾರತದಲ್ಲಿ ಶಾಲಿವಾಹನನೆಂಬ ರಾಜನಿಂದ ಆರಂಭವಾದ ಶಕೆ : ಶಾಲಿವಾಹನಶಕದ . . . ಬಹುಳದಶಮಿಯಾ ಗುರುವಾರಕತಿಸಾಂಗದೆ ಪೇಳಿ ಮುಗಿಸಿದ ಪಂಡಿತಾಗ್ರಣಿ ವಿರೂಪಾಕ್ಷ ಲೀಲೆಯಿಂ ಚೆನ್ನಬಸವೇಶನ ಪುರಾಣವ (ಚೆಬಪು. ೬೩-೭೭); ಸ್ವಸ್ತಿಶ್ರೀವಿಜಯಾಭ್ಯುದಯ ಶಾಲಿವಾಹನಶಕವರ್ಷ ಸಾ ೧೫೯೧ ಸಂದ ವರ್ತ್ತಮಾನವಾದ ಸೌಮ್ಯನಾಮಸಂವತ್ಸರದ ಕಾರ್ತ್ತಿಕಶುದ್ಧ ೧೨ ಭಾನುವಾಸರದಲ್ಲಿ . . . ಸಿಂಹಾಸನಾಧೀಶ್ವರರಾಗಿ (ಎಕ. IV, ಹುಣಸೂ. ೧೩೯-೪; 1669); ಶಾಲಿವಾಹನಶಕದ ವರ್ಷ ಚೈತ್ರಶುದ್ಧ ಪ್ರತಿಪದೆಯಿಂದ ಆರಂಭವಾಗುತ್ತದೆ (ಭಾಹಬ್ಬ. ೫೭). [ಸಂ.]

**ಶಾಲಿಸೌಂದರ** (ನಾ). ಉಜ್ವಲವಾದ ಸೌಂದರ್ಯ; ಕಾಂತಿಯುಕ್ತವಾದ ರೂಪ: ನೀವುಮೆನ್ನಂತೆ ರಮಣೀಯಮಾದ ಶಾಲಿಸೌಂದರದ ರೂಪಂಗಳಂ ತಳೆದು . . . ಪಟ್ಟಣಕೆ ಬಹುದೆಂದು ಭೃತ್ಯರ್ಗೆ ತರಣಿಜಂ ನೇಮಿಸಿದನು (ಜೈಮಿಭಾ. ೨೭-೨೭). [ಸಂ.]

**ಶಾಲಿಹೋತ್ರ, ಶಾಳಿಹೋತ್ರ** (ನಾ). ೧. ಕುದುರೆ; ಹಯ: ನಡೆದು ಬಂದರು ಶಾಲಿಹೋತ್ರನ ನಡುವೆ ಕಂಡುಪಚರಿಸಿಕೊಂಡರು ಪಡುವಲಭಿಮುಖರಾದರನಿಬರು (ಕುವ್ಯಾಆ. ೯-೨೫). ೨. ಕುದುರೆಗಳ ಶಕ್ತಿ, ಸ್ವಭಾವ ಮುಂತಾದುವುಗಳನ್ನು ವಿವರಿಸುವ ಶಾಸ್ತ್ರ; ಅಶ್ವಶಾಸ್ತ್ರ: ತರ್ಕ ವ್ಯಾಕರಣ ಅಮರಸಿಂಹ ಛಂದಸ್ಸು ನಿಘಂಟು ಶಾಲಿಹೋತ್ರ . . . ಮಂತ್ರತಂತ್ರಸಿದ್ಧಿ ಇವೆಲ್ಲವ ಕಲಿತಡೇನೋ ಚೌಷಷ್ಟಿವಿದ್ಯಾಕಳಾವಿದನೆನಿಸಿಕೊಂಬನಲ್ಲದೆ ಲಿಂಗವಂತನೆನಿಸಿಕೊಂಬುದಿಲ್ಲ (ಮಡಿಮಾ. ೪೩-೬೧). ೩. ಅಶ್ವಶಾಸ್ತ್ರವನ್ನು ಬರೆದ ಒಬ್ಬ ಋಷಿಯ ಹೆಸರು: ಜಾತ್ಯಶ್ವಂಗಳಂ ತಿರ್ದುತಿರ್ಪವರ್ಗೇಂ ಸಾರ್ದುವೊ ಶಾಲಿಹೋತ್ರ ರವಿಪುತ್ರಾರೋಹಣಪ್ರೌಢಿಗಳ್ (ಪುಷ್ಪಪು. ೨-೫೮) ; ತುರಗಾರೋಹಣದಲಿ ನಿರ್ವಾಳಶಾಲಿಹೋತ್ರನಂತೆಸೆವ (ಮೋಹತ. ೧೭-೭೯). **ಶಾಳಿಹೋತ್ರ** : ೨. ಸಾಮುದ್ರಿಕಂ ಶಾಳಿಹೋತ್ರಂ . . . ಶುಶ್ರುತಮುಮೆಂದಿವು ಮೊದಲಾದ ನರವೈದ್ಯಮುಮಂ (ವಡ್ಡಾರಾ. ೨೩-೧೫). [ಸಂ.]

**ಶಾಲೀನ** (ಗು). ೧. ವಿನಯದಿಂದ ಕೂಡಿದ; ನಮ್ರವಾದ. ೨. ಹೋಲುವ; ಸಾಮ್ಯವುಳ್ಳ. (ನಾ). ೩. ಗೃಹಸ್ಥ. ೪. ಒಳ್ಳೆಯವನು; ಸಭ್ಯ: "ಶಾಲೀ . . . ಶಾಲೀನಃ , ಶಾರದಃ — ಈ ೫ ಒಳ್ಳಿದಂ" (ಹಲಾಯು. ೬೨-೨೨೦). [ಸಂ.]

**ಶಾಲೀನತೆ** (ನಾ). ವಿನಯ; ಸೌಜನ್ಯ: ಮನೋರಥಮಸಂಭಾವ್ಯಮೆಂದು ಭಾವಿಸುತ್ತಂ ಶಾಲೀನತೆಯನವಲಂಬಿಸಿ ನುಡಿಯಲಱಿಯದೆ ಸುದತಿ ಪೆಱತೊಂದು ನೆವದಿಂ ಕೆದಱಿದಳೊಂದಿನಿಸು ಮಂದಹಾಸದ್ಯುತಿಯಂ (ಕಾದಂಉ. ೨೪೮); ಅಲ್ಲಿಯೇ ಒಂದು ಬದಿಗೆ ಶಾಲೀನತೆಯಿಂದ ಕೂತಿದ್ದ ಹೊಸನಟಿಯನ್ನು ನೋಡಿ ಅವನಿಗೆ ಆನಂದವೆನಿಸದಿರಲಿಲ್ಲ (ಪುನರ್ಮಿ. ೨೧೫). [ಸಂ. ಶಾಲೀನತಾ]

**ಶಾಲು, ಶಾಹಲು** (ನಾ). (ವಿಶೇಷವಾಗಿ) ಉಣ್ಣೆ ಅಥವಾ ರೇಷ್ಮೆ ಎಳೆಗಳಿಂದ ನೆಯ್ದು, ಹೊದೆಯುವ ವಸ್ತ್ರ : ಕಂಬಳಿಯ ಹೊದೆವವಗೆ ಶಾಲದೇಕೆ [ಪಾಠಾಂ. ಮಡಿಯೇತಕೆ] (ಪುರಂದ. ೨-೬೨-೨); ನವರತ್ನಖಚಿತಮಾದಾಭರಣಜಾಲಮಂ ನವದುಕೂಲಂಗಳನ್ನುಚ್ಛ್ರೇಷ ಶಾಲುಗಳನವಸರದಿ ಕಾಯದೊಳ್ ತೊಟ್ಟುಟ್ಟು (ವರ್ಷವ. ೩-೧೨); ಮೋಡ ನೂತೇ ನೂಲುವದು ಬಿಳಿದಾರ ಧಾರಾಕಾರದಿ . . . ಗದ್ದೆ ಹೊಲ ತೋಟಕ್ಕೆ ಹೊಚ್ಚಿದೆ ಕೆಂಪುಖಾದಿಯ ಶಾಲನು (ನಲಮು. ೧೧-೨೦). **ಶಾಹಲು** : ಮೇಲೆ ಶಾಹಲನ್ನು ಪೊದ್ದು ನೀಲದುಂಗುರವನಿಟ್ಟು (ಯನಳ. ೧೨೩).

**ಶಾಲುಜೋಡಿ** = ಎರಡು ಶಾಲು; ಜೋಡಿ ಶಾಲು: ಸಭೆಯ ಕೊನೆಯಲ್ಲಿ ಆಚಾರ್ಯರಿಗೆ ಗೌರವಸೂಚಕವಾಗಿ ಶಾಲುಜೋಡಿಯನ್ನು ನೀಡಲಾಯಿತು (ರೂಢಿ).

[← ಪಾರ. ಹಿಂ. ಮರಾ. ಶಾಲ್]

**ಶಾಲುನಾಮೆ** (ನಾ). ಜರಿಯ ನಕಾಶೆಕೆಲಸ ಮಾಡಿದ ಶಾಲು : ಪಟಗಾರ ರಾಯಂಣನಾಯ್ಕನಿಗೆ ಬಿಳಿಚತ್ರಿ ಪಚೆ ವಂಟ ತೋಡ ಬಳೆ ಶಾಲುನಾಮೆ ಸಹ ಕೊಟ್ಟು ಕಂಪಣಕ್ಕೆ ಕರ್ತ ನೆಂದು . . . ನಿಯಮಿಸಿ (ಮೈಆರಿ. ೧೯೩೦, ೧೩-೩೨; 1345 ?).

[← ಪಾರ. ಮರಾ. ಶಾಲ್‌ನಾಮಾ]

**ಶಾಲೂಕ** (ನಾ). ತಾವರೆಯ ಗೆಡ್ಡೆ; ಕಮಲದ ಗೆಡ್ಡೆ : ಕೊಳದಿಂದಂ ತಗೆದೂಟ್ಟಿಕೊಂಡ . . . ಶಾಲೂಕಮೃಣಾಳಜಾಲಮನಿಡುತ್ತೀಡಾಡುತಂ . . . ಪೋಗಲ್ ಮದೇಭಂಗಳ್ (ಶಾಸಂಪು. ೬೩೦). [ಸಂ.]

**ಶಾಲೂರ** (ನಾ). ಕಪ್ಪೆ ; ಮಂಡೂಕ: ಜಳಮೃಣಾಳನಾಳಮಂ ಜಳವ್ಯಾಳಮೆಂದು ಕೆಲದ ಬಿಲದಿಂ ಪಿಡಿಯಲೆಂದು ಧೀಂಕಿಡುವ ವಿಷಾಪಹಾರಶಾಲೂರಜಾಲಂಗಳೊಳಂ . . . ಭೀಷಣರಮಣೀಯಮೆನಿಸಿತ್ತು (ಚಂದ್ರಪ್ರ. ೫-೪೦ ವ). [ಸಂ.]

**ಶಾಲೆ**[1] 'ಸಾಲೆ[2]' ನೋ.

**ಶಾಲೆ**[2] 'ಸಾಲಿ[1]' ನೋ.

**ಶಾಲೆ**[3] (ನಾ). ೧. ಮರದ ದೊಡ್ಡ ರೆಂಬೆ, – ಕೊಂಬೆ : "ಸ್ಕಂಧಶಾಖಾ:, ಶಾಲಾ: – ಈ ೨ ಮರದ ಹೆಗ್ಗೊಂಬು" (ಹಲಾಯು. ೩೦-೨೮). ೨. ಮನೆ; ನಿಲಯ: "ಕುಟಿ ಕುಲಂ ಶಾಲೆ . . . ಗೇಹಮನೆ ಧಿಷ್ಣ್ಯಮೆನಲಿವು ಮನೆಗೆ ಪೆಸರಕ್ಕು" (ಮಂಗರಾ. ೫೮-೭); ಆ ನಳಿನಾಕರಜಲದೆಡೆಗಾನೆಸಗಿದ ಶಾಲೆಯಲ್ಲಿ ನೆಲಸಿದೆನರಸಾ (ದಶಕು. ೧೩-೪೮). ೩. ಹಜಾರ ; ನಡುಮನೆ. ೪. ಕುದುರೆಯ ಲಾಯ; **ಅಶ್ವಶಾಲೆ**: ಕುದುರೆಗಳು ಶಾ[ಪಾಠಾಂ. ಸಾ]ಲೆಗಳೊಳಿದ್ದಹಗೆ ಉರಿದು ಬಿಕ್ಕನೆ ಬಿರಿದು ಬಿದ್ದವು ಸುರಿಯೆ ಬಾಲಂಗಳಲಿ ಕೆಂಡವು (ಬಸಪು. ೬೦-೩೮). ೫. ಮರದ ಬಿಳಲು: "ಸ್ಕಂಧಶಾಖಾ, ಶಾಲಾ – ೨ ಗಿಡಗಳಲ್ಲಿ ಕೆಳಗಡೆ ಬಿಟ್ಟಿರುವ ಬಿಳಲು ಹೆಸರುಗಳು" (ಸಿದ್ಧಾಂತಿ. ೧೧೨). ೬. ವಿದ್ಯೆಯನ್ನು ಕಲಿಸುವ ಸ್ಥಳ ; ಪಾಠಶಾಲೆ : ಶಾಲೆಯ ಬಾಗಿಲು ಮುಚ್ಚಿದ ತಕ್ಷಣ ನನಗೆ ಗಣಿತದ ವಿಷಯ ಮರತೇಹೋಯಿತು (ಶಾಲಮ. ೧). [ಸಂ. ಶಾಲಾ]

**ಶಾಲೇಯ** (ನಾ). ೧. ಬತ್ತದ ಗದ್ದೆ : "ಕಲಮೆಯ ಗದ್ದೆ ಶಾಲೇಯಮೆಂಬುದು" (ಹಲಾಯು. ೨೭-೭); ಲೀಲೆಯಿನದಟ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗಂ ಮಾಷ್ಯಂ ಶಾಲೇಯಂ ವ್ರೈಹೇಯಂ (ಚಂದ್ರಪ್ರ. ೧-೯೧). ೨. ಒಂದು ಬಗೆಯ ಸೊಪ್ಪು; ಸಬ್ಬಸಿಗೆ: "ಶಾಲೇಯ: . . . ಮಿಶ್ರೇಯಾ – ೬ ಸಬ್ಬಶಿಕೇ ಹೆಸರುಗಳು" (ಸಿದ್ಧಾಂತಿ. ೧೩೫). [ಸಂ.]

**ಶಾಲ್ಮಲಿ, ಶಾಲ್ಮಳಿ** (ನಾ). ೧. ಒಂದುಬಗೆಯ ಮರ ; ಎಲವ ; ಬೂರುಗ: ಇದು ಶಾಲ್ಮಲಿಪಾದಪಮಿಂತಿದು ಜಂಬೂವೃಕ್ಷಮಿದುವೆ . . . ದಶಾಂಗಕಲ್ಪಕುಜನಿಳಯಂಗಳ್ (ಆದಿಪು. ೨-೨೭); ಇಲ್ಲಿ ಪುಟ್ಟಿರ್ದ ಶಾಲ್ಮಲಿಗೆ ಸರಿಯೆ ಸಗ್ಗದ ಭೂರುಹಂ (ಪದ್ಮರಾ. ೧೩-೬೯); ಮರಗಳಲ್ಲೆಲ್ಲ ಅತಿ ದೊಡ್ಡದು ಶಾಲ್ಮಲಿ ಎಂಬುದನ್ನು ವೇದಕಾಲದ ಋಷಿಗಳು ಅರಿತಿದ್ದರು (ಹಸುಹೂ. ೧೯೬). ೨. ಒಂದು ನರಕದ ಹೆಸರು : ಶಾಲ್ಮಲಿ . . . ಸರೂಪವೆಂಬೈದು ಮಂತ್ರಿನರಕಂಗಳಿಂದಾಢ್ಯಮಾಗಿ ದೀಪ್ತವೆಂಬರಸುನರಕವಿಹುದು (ವಿವೇಕ. ೧೫೩). **ಶಾಲ್ಮಳಿ** : ೧. ಪಱಿದಿರ್ದ ಬೆಳ್ಳುಗಿಲ್ಗಳ ಮುಱಿಗಳೆವೆನಿಸಿದುವು ಶಾಲ್ಮಳೀಫಳತೂಳಂ (ಪುಷ್ಪಪು. ೫-೮೫). [ಸಂ. ಶಾಲ್ಮಲಿ, ಶಾಲ್ಮಲೀ]

**ಶಾಲ್ಯಕ್ಷತ** (ನಾ). ಮಂಗಳಕಾರ್ಯಗಳಲ್ಲಿ ಉಪಯೋಗಿಸುವ ಅರಿಸಿನ ಅಥವಾ ಕುಂಕುಮದೊಂದಿಗೆ ಕಲಸಿದ ಅಕ್ಕಿ ; ಅಕ್ಷತೆ ; ಮಂತ್ರಾಕ್ಷತೆ: ಶಾಲ್ಯಕ್ಷತಧೂಪದೀಪಚರುಸಂದೋಹಂಗಳಿಂ ಸರ್ವಮಂಗಳಸಂಪೂರ್ಣಮೆನಿಪ್ಪ ಜೈನಗೃಹಮಂ ಪೊಕ್ಕಂ . . . ಸಾಹಿತ್ಯವಿದ್ಯಾಧರಂ (ಪಂಪರಾಮಾ. ೪-೧೩೧); ಘುಸೃಣಾಭ್ಯುಕ್ಷಣವರ್ಣ . . . ಶಾಲ್ಯಕ್ಷತ ಪ್ರಸರಕ್ಕಾಲನತೋರಣಗ್ರಥನ ಮುಕ್ತಾಮಾಳಿಕಾಳಂಬನ ವ್ಯಸನವ್ಯಗ್ರಕರಂ ಕರಂ ಸೊಗಯಿಸಿತ್ತಂತಲ್ಲಿ ಕಾಂತಾಜನಂ (ಚಂದ್ರಪ್ರ. ೬-೫೫). [ಸಂ.]

**ಶಾಲ್ಯನ್ನ** (ನಾ). ೧. ಒಂದುಬಗೆಯ ಉತ್ತಮವಾದ ಬತ್ತ : ಕಳವೆ ರಾಜಾನ್ನ ಶಾಲ್ಯನ್ನ [ಪಾಠಾಂ. ಶಾಲಿ, ಶಾಲ್ಯಯನ]ಕ್ಕೆ ಓಗರದ ಉದಕವನೆಱೆದವರಾರಯ್ಯಾ (ಮಹಾದೇ. ಕ. ೪-೪). ೨. ಒಂದುಬಗೆಯ ಉತ್ತಮವಾದ ಅಕ್ಕಿಯಿಂದ ಮಾಡಿದ ಅನ್ನ : ಸಣ್ಣ ಶಾವಿಗೆಯು ಶಾಲ್ಯನ್ನವನು ನಿಮಿಷದೊಳ್ ಬಣ್ಣಿಸಿ ದುರ್ಗಾದೇವಿ ಬಡಿಸಿದಳಯ್ಯ (ಪುರಂದ. ೨-೧೭೯-೪); ಈಗ ನೀನೂ ನಿನ್ನ ಆಚಾರ್ಯನೂ ಇರುವಂತೆ, ಕಪ್ಪು ಆರಿಸಿ ತೆಗೆದ ಶಾಲ್ಯನ್ನವನ್ನೂ ಅನೇಕ ಸೂಪ ವ್ಯಂಜನಗಳನ್ನೂ ತಿನ್ನುತ್ತಿದ್ದರೆ? (ಬುದ್ಧಪ. ೧೦೬). ೩. (ವಿಶೇಷವಾಗಿ ವಿಷ್ಣು) ದೇವಾಲಯಗಳಲ್ಲಿ ನೈವೇದ್ಯಕ್ಕಾಗಿಯೂ ಅಭಿಷೇಕಕ್ಕಾಗಿಯೂ ಮಾಡುವ, ಹಾಲು, ಬೆಲ್ಲ ಮುಂತಾದುವುಗಳನ್ನು ಹಾಕಿಮಾಡಿದ ಅನ್ನವಿಶೇಷ. [ಸಂ.]

**ಶಾಲ್ಯಾನ್ನ** (ನಾ). = ಶಾಲ್ಯನ್ನ ೨ : ಶಾಲ್ಯಾನ್ನಂ ಸ್ಮಿತಮಲ್ಲೀ ಮೌಲ್ಯಮನತಿವ್ಯಯುತ ಯಿಂದ ಪರಿಮಳದಿಂ ನ್ಯೆರ್ವಲ್ಯದಿನೇೞಿಸಿ . . . ಏಂ ಸೊಗಯಿಸಿತೋ (ಪಾರ್ಶ್ವಪು. ೮-೫೬) ; ಶ್ರೀಕಂಠೇಶ್ವರನಿಗೆ ಶಾಲ್ಯಾನ್ನದ ಅಭಿಷೇಕ ಮಾಡಿಸಿ . . . ನಮ್ಮ ಕೆಲಸ ಮಾಡಿಸಿಕೊಳ್ಳಲು ಪ್ರಯತ್ನಿಸುತ್ತೇವೆ (ಅಲೆಮ. ೪೦). [< ಶಾಲ್ಯನ್ನ]

**ಶಾಲ್ಯೋದನ** (ನಾ). = ಶಾಲ್ಯನ್ನ ೨ : ಎಸೆವ ಪೊಂಬರಿವಾಣ ಮಿಸುನಿವಟ್ಟಲ್ಗಳೊಳ್ಮಿಸುಪ ಶಾಲ್ಯೋದನಂ ಸೂಪಘೃತಭಕ್ಷ್ಯ ಪಾಯಸ . . . ಪಾಲ್ಯೊಸರ್ಗಳಿವು ಬಗೆಗೊಳಿಸಿ ಪೊಸತನಿಸಿರಲು ಸವಿದನಚ್ಯುತಂ (ಜೈಮಿಭಾ. ೬-೪೪). [ಸಂ.]

**ಶಾವಂತಿ** 'ಸೇವಂತಿ' ನೋ.

**ಶಾವಂತಿಗೆ** 'ಸೇವಂತಿಗೆ' ನೋ

**ಶಾವಕ** (ನಾ). ಮರಿ ; ಪೋತ. [ಸಂ.]

**ಶಾವರ** (ನಾ). ಅರಗಿನ ಗಿಡ ; ಲೋಧ್ರ. [ಸಂ.]

**ಶಾವಿಗೆ** 'ಸೇವಗೆ' ನೋ.

**ಶಾವೀರ** 'ಶಾಹೀರ' ನೋ.

**ಶಾವೆ** 'ಸೇಬೆ' ನೋ.

**ಶಾಶಾಂಕಿ** (ನಾ). [ಜ್ಯೋತಿ] ನವಗ್ರಹಗಳಲ್ಲಿ ಒಂದು ; ಬುಧ : ಧರಣೀಜಂ ಪದಿನೈದು ಘರ್ಮರುಚಿ ಪತ್ತೊಂಬತ್ತು ಶಾಶಾಂಕಿ ಪನ್ನೆರಡಿಪ್ಪತ್ತು ದಿನಾಧಿನಾಥಸುತಂ . . . ದೈತ್ಯಗುರುವಿಪ್ಪತ್ತೊಂದು ಸಂವತ್ಸರಂ ಪರಮೋಚ್ಚಾಂಶದೊಳೊಂದಿ ನಿಂದೊಡದು ಪಿಂಡಾಯುಷ್ಯಮಕ್ಕುಂ (ಜಾತತಿ. ೮-೧೧). [ಸಂ.]

**ಶಾಶಾಂಕಿಮಂದಿರ** (ನಾ). [ಜ್ಯೋತಿ] ಬುಧನ ಕ್ಷೇತ್ರ ; ಮಿಥುನ ಮತ್ತು ಕನ್ಯಾರಾಶಿ : ಸುರವಂದ್ಯಂ ವೃಷತೌಲಿಯೊಳ್ ನಿಲೆ ಸುಹೃತ್ಪುತ್ರಾಧಿಕಂ . . . ಶಾ[ಪಾಠಾಂ. ಶ]ಶಾಂಕಿಮಂದಿರದೊಳ್ ಪೂರ್ಣಸುಹೃತ್ಸನೂಜಪರಿವಾರಂ ಸೌಖ್ಯಯುಕ್ತಂ (ಜಾತತಿ. ೧೭-೨೭). [ಸಂ.]

**ಶಾಶ್ವತ** (ಗು). ೧. ನಿತ್ಯವಾದ; ಅಮರವಾದ: ಜೀವಜಗತ್ತುಗಳು . . . ಸತ್ಯನಿತ್ಯಶಾಶ್ವತವಸ್ತುಗಳೇ ಆಗಿರುವುವು (ಶಕ್ತಿವಿ. ೧೪). (ನಾ). ೨. ನಿತ್ಯವಾದುದು; ಚಿರವಾದುದು : "ಸನಾತನಂ . . . ಶಾಶ್ವತಂ, ಅನಶ್ವರಂ – ಈ ೫ ಕೇಡಿಲ್ಲದ ವಸ್ತು" (ಹಲಾಯು. ೨೧-೧೫೫). ೩. ನಿತ್ಯನಾದವನು; ಪರಮಾತ್ಮ : ಸ್ವಾಮಿ ನೀನು ಶಾಶ್ವತ ನೀನು ಎತ್ತಿದೆ ಬಿರುದ ಜಗವೆಲ್ಲ ಱಿಯಲು ಮಹಾದೇವ ಮಹಾದೇವ ಇಲ್ಲಿಂದ ಮುಂದೆ ಶಬ್ದವಿಲ್ಲ (ಬಸವ. ೫೨೮); ಶಾಶ್ವತನವತರಿಸಿರ್ದಂ ಗದಾಶಂಖಚಕ್ರಾಂಕಿತಹಸ್ತಂ ವಾಸುದೇವಂ (ಜಗವಿ. ೨-೧೦೦). ೪. ಶಿವ ; ಈಶ್ವರ. ೫. ವ್ಯಾಸ. ೬. ಸೂರ್ಯ. ೭. ಸ್ವರ್ಗ. [ಸಂ.]

**ಶಾಶ್ವತಪದ** (ನಾ). ನಿತ್ಯವಾದ ಸ್ಥಿತಿ ; ಮೋಕ್ಷ ; ಮುಕ್ತಿ: ಶ್ರೀಮತ್ಸಮಂತಭದ್ರಸ್ವಾಮಿಗಳ ಜಗತ್‌ಪ್ರಸಿದ್ಧ ಕವಿಪರಮೇಷ್ಠಿಸ್ವಾಮಿಗಳ ಪೂಜ್ಯಪಾದಸ್ವಾಮಿಗಳ ಪದಂಗಳೀಗೆ ಶಾಶ್ವತಪದಮಂ (ಆದಿಪು. ೧-೧೧); ತ್ರೈಲೋಕ್ಯಸ್ವಾಮಿ ಜಿನಂ ಮಾಳ್ಕೆ ನಮಗೆ ಶಾಶ್ವತಪದಮಂ (ಜಾತತಿ. ೧-೧). [ಸಂ.]

**ಶಾಸಕ** (ನಾ). ೧. ಆಳುವವನು; ಶಾಸನ ಮಾಡುವವನು: ಕೊಲೆಮಾಡುವ ಶಾಸಕರ ಅತ್ಯಾಚಾರಗಳನ್ನು ತಾಳಿಕೊಂಡೂ ಹಿಂದೂಧರ್ಮ ಬದುಕಿತು (ಕರ್ನಾಕ. ೩೮); ವಿಜ್ಞಾನಶಾಸ್ತ್ರವು ಶರೀರದಲ್ಲಿ ಶಾಸಕನಂತಿರುವ ಒಬ್ಬ ಚೇತನನನ್ನು ಸಿದ್ಧಮಾಡಲಿಲ್ಲ (ಜೀವಾತ್ಮ. ೧೨೫). ೨. ಶಿಕ್ಷಿಸುವವನು. ೩. [ರಾಜನೀ] ಶಾಸನಸಭೆಯ ಸದಸ್ಯ: "ಶಾಸಕರು" ಎಂದರೆ . . . ಆ ರಾಜ್ಯದ ಶಾಸಕರೆಂದು ಯಾರು ತತ್ಕಾಲದಲ್ಲಿ ರಾಷ್ಟ್ರಪತಿಯವರಿಂದ ಅಂಗೀಕಾರ ಹೊಂದಿದ್ದಾರೋ ಅಂಥ ರಾಜರು, ಪ್ರಭುಗಳು (ಭಾಧಾನ. ೨೨೦). [ಸಂ.]

**ಶಾಸಕಭವನ** (ನಾ). ಶಾಸನಸಭಾಸದಸ್ಯರು ತಂಗುವ ಕಟ್ಟಡ : ಸಂಸತ್ತಿನ ಅಧಿವೇಶನಕ್ಕಾಗಿ ಬಂದ ಶಾಸಕರೆಲ್ಲಾ ಶಾಸಕಭವನದಲ್ಲಿ ಇಳಿದುಕೊಂಡಿದ್ದಾರೆ (ರೂಢಿ). [ಸಂ.]

**ಶಾಸನ** (ನಾ). ೧. ಆಡಳಿತ ನಡೆಸುವಿಕೆ ; ಆಳ್ವಿಕೆ ; ಪ್ರಭುತ್ವ : ದೇವದೇವಂ ಪುಲಿಗಿರಿನಗರೀಶಾಸನಾಂಕಂ ವೃಗಾಂಕಂ ಸೋಮೇಶಂ (ಸೋಮೇಶ. ೧). ೬

೨. ಅಪ್ಪಣೆ ; ಆಜ್ಞೆ : ''ಶಾಸನಮಾಳ್ಪೆಯುಂ'' (ವಸ್ತುಕೋ. ೬೧-೫೮) ; ಧಾತ್ರಿಯೊಳ್ನಡಿದುದೆ ನನ್ನಿ ಮಾಡಿದುದೆ ಶಾಸನಮಿತ್ತುದೆ ದೇವರಿತ್ತುದೆಂದೊಡೆ ಗುಣದೊಳ್ಪನೇಕೆ ಬೆಸಗೊಂಡಪನೀ ಗುಣದಂಕಕಾರ್ತಿಯಾ (ಆಜಿಪು. ೧೨-೧೮). 'ಶಾಸನಧಾರಕ' ಪರಾ. ೩. ಕಾನೂನು; ವಿಧಿ ; ಕಟ್ಟಳೆ : ಜನದ ಕ್ಷೇಮಕ್ಕಾಗಿಯೂ ಸೌಖ್ಯಕ್ಕಾಗಿಯೂ . . . ಯಾವ ಯಾವ ಸಾಧನಗಳೂ ಸಂಧಾನಗಳೂ ಯುಕ್ತವೋ ಅದನ್ನೆಲ್ಲಾ ಗೊತ್ತುಮಾಡುವ ಕೆಲಸಕ್ಕೆ ''ಶಾಸನ'' ಎಂದು ಹೆಸರು (ರಾಜ್ಯಶಾ. ೫೧). ೪. ಧರ್ಮ. ೫. ದಾಖಲೆ : 'ಶಾಸನಿಗ' ಪರಾ. ೬. ಶಿಕ್ಷೆ ; ದಂಡನೆ ; ಶಾಸ್ತಿ : ಫ್ರ್ಯಾಂಕ್ ಜನರಲ್ಲಿ ಯಾವನಾದರೊಬ್ಬನು ಪ್ರಾಣಹತ್ಯ ಮಾಡಿದರೆ, ಅವನಿಗೆ ರೋಮನ್ನರಿಗಿಂತ ಹೆಚ್ಚು ಶಾಸನ ಮಾಡುತ್ತಿದ್ದರು (ಮುಂಬಯಿ. ೫-೫೭). ೭. ನಿಗ್ರಹ ; ಹಿಂಡಿತ : ಜಯಜಯ ದೇವದೇವ ಪುರಶಾಸನಶಾಸನ ಶಾಸನೈಕ ಚಿನ್ಮಯಮಯನುತ್ಸಂಪದ . . . ಕರಾಲಸದ್ಭುಜಾ (ರಾಜಶೇ. ೧೩-೫೨). ೮. ಕಲಿಸುವಿಕೆ ; ಶಿಕ್ಷಣ. ೯. ತಾಮ್ರದ ತಗಡು ಅಥವಾ ಕಲ್ಲಿನ ಮೇಲೆ ದಾನ, ದತ್ತಿ ಮುಂತಾದುವುಗಳ ಬಗೆಗೆ ಕೊರೆದಿಟ್ಟ ಬರಹ ; ಶಿಲಾಲೇಖ, ತಾಮ್ರಲೇಖ ಮುಂತಾದುವು : ಚಾಗದ ಕಂಬಮಂ ನಿಱಿಸಿ ಬೀರದ ಶಾಸನಮಂ ನೆಗೞ್ಚಿ ಕೋಳ್ಪೋಗದ ಮಂಡಲಂಗಳನೆ ಕೊಂಡು (ಪಂಪಭಾ. ೧-೫೨); ತರದಿಂದಾಲಿಸಿ . . . ಮನದೊಳ್ ತದ್ವೃತ್ತಂ ಶಾಸನಂ ಬರೆದಿರ್ದಂತೆ ಜಲಕ್ಕನಾಗೆ (ಸುಕುಮಾ. ೬-೫); ವಿಶ್ವಕರ್ಧೀಶನೊರ್ವನೆನಿಸಿದನುಮೇಶನೆಂದು ಬಿದಿ ಶಾಸನಮಂ ಬರೆದಿಟ್ಟು ನಟ್ಟ ನಲ್ಮೆಸುನಿಯ ಕಂಬದಂತೆಸೆದುದಾ ಗಿರಿ (ಕಬಿಕಂ. ೧-೬೭). ೧೦. (ಲಿಖಿತಮೂಲಕವಾದ) ಒಪ್ಪಂದ ; ಕರಾರು. [ಸಂ.]

**ಶಾಸನಇಲಾಖೆ** (ನಾ). ಶಾಸನಗಳ ಬಗೆಗೆ ಆಳವಾದ ಅಭ್ಯಾಸ ಮಾಡಲು ಅನುಕೂಲವಾಗುವಂತೆ ಶಾಸನಗಳು ಮತ್ತು ಶಾಸನತಜ್ಞರಿರುವ ಇಲಾಖೆ : ಶಾಸನಇಲಾಖೆಯಲ್ಲಿ ಅನೇಕ ಜನ ಶಾಸನತಜ್ಞರಿದ್ದಾರೆ (ರೂಢಿ). [ಶಾಸನ + ಇಲಾಖೆ]

**ಶಾಸನಂಬಿಡಿಸು** (ಕ್ರಿ). ದಾನ ಮುಂತಾದ ವಿಷಯಗಳನ್ನು ಶಿಲಾಲಿಪಿಯಲ್ಲಿ ಕೊರೆಯಿಸು, — ಕಂಡರಿಸು : ಚೈತ್ಯಾಲಯಂಗಳಂ ಮಾಡಿಸಿ ಭಕ್ತಿಪೂರ್ವಕದಿಂ ಶಾಸನಂಬಿಡಿಸುವುದುಂ ಮುನಿಜನಂಗಳಂ ಪೂಜಿಸುವುದುಮಕ್ಕುಂ (ಆಜಿಪು. ೧೨-೧). [ಶಾಸನ + ಬಿಡಿಸು]

**ಶಾಸನಕವಿ** (ನಾ). ಶಾಸನದ ಸಾಹಿತ್ಯವನ್ನು ಬರೆಯುವ ಕವಿ : ನಾಗಚಂದ್ರನು ಮಹಾಕವಿಯಾಗುವ ಪೂರ್ವದಲ್ಲಿ ಅವನಿಗೆ ಶಾಸನಕವಿಯಾಗುವ ಜಾನಪದಸನ್ಮಾನವು ದೊರೆತಿರಲು ಸಾಕು (ಸಾಹಿಸಂ. ೬); ಶಾಸನದ ವಿಷಯ ಶಾಸನಕವಿಯ ಸಂವೇದನೆಗನು ಗುಣವಾಗಿ ಸೊಗಸು ಸ್ವಾರಸ್ಯಗಳು ನಿರೂಪಿತವಾಗಬಹುದು (ನೊಳಂಬ. ೮೫). [ಸಂ.]

**ಶಾಸನತಜ್ಞ** (ನಾ). ಶಾಸನವನ್ನು ಕುರಿತು ಆಳವಾದ ಅಭ್ಯಾಸ ಮಾಡಿದವನು: ಅವರು ಕರ್ನಾಟಕದ ಶ್ರೇಷ್ಠ ಶಾಸನತಜ್ಞರಲ್ಲಿ ಒಬ್ಬರು (ರೂಢಿ). [ಸಂ.]

**ಶಾಸನದೀಪಕ** (ನಾ). [ಜೈನ] ಧರ್ಮವನ್ನು ಬೆಳಗುವವನು : ಆಸನ್ನ ಭವ್ಯರರ್ಹಚ್ಛಾಸನದೊಳ್ ಭಕ್ತರೆಂದೊಡಿಂ ಪ್ರತ್ಯಕ್ಷೋದ್ಭಾಸಿಯನೀಕ್ಷಿಸಿ ಜಿನನಂ ಶಾಸನದೀಪಕರ ಭಕ್ತಿ ಕಿಱಿದಾದಪುದೇ (ಶಾಂತಿಪು. ೧೨-೩೯). [ಸಂ.]

**ಶಾಸನಧಾರಕ** (ನಾ). ೧. ಅಪ್ಪಣೆಯನ್ನು ಪಾಲಿಸುವವನು, — ನಡೆಸುವವನು. ೨. ಧರ್ಮಾನುಯಾಯಿ : ಪಾಶುಪತಾದಿ ಶಾಸನಧಾರಕರು ಬಂದು ತಾವು ತಮತಮಗೆಲ್ಲರುಂ ಮನವೊಲಿವ ಲಿಂಗ್ಯಕ್ಕರುಗಳಂ ಕಂಡು (ಬಸವು. ೫೮-೧೫). [ಸಂ.]

**ಶಾಸನಪಾಠ** (ನಾ). ಶಾಸನದಲ್ಲಿನ ಬರಹ, — ವಿಷಯ, — ಒಕ್ಕಣೆ : ನೊಳಂಬರ ವಂಶಪರಂಪರೆಯನ್ನು ತ್ರಿಣಯನಪಲ್ಲವನಿಂದ ಆರಂಭಿಸಿ ಇಱಿವನೊಳಂಬನೇಕ ವಾಕ್ಯದಿಲೀಪರಸನೊಡನೆ ಕೊನೆಗೊಳ್ಳುವುದು. ಈ ವಂಶಾವಳಿಗೆ ಸಂಬಂಧಿಸಿದ ಶಾಸನಪಾಠವು ಹೀಗಿದೆ (ನೊಳಂಬ. ೮೨). [ಸಂ.]

**ಶಾಸನಬಾಹಿರ** (ನಾ). ಕಾನೂನಿಗೆ ಹೊರತಾದುದು ; ಕಾನೂನಿನಿಂದ ಬಹಿಷ್ಕರಿಸಲ್ಪಟ್ಟುದು : ಶಾಸನಬಾಹಿರವಾದ ಕಾರ್ಯವನ್ನು ಮಾಡಬಾರದು (ರೂಢಿ). [ಸಂ.]

**ಶಾಸನಸಭೆ** (ನಾ). ೧. [ರಾಜನೀ] ರಾಜ್ಯಕ್ಕೆ ಸಂಬಂಧಿಸಿದ ಕಾಯದೆಗಳನ್ನು ರೂಪಿಸುವ ಪ್ರಜಾಪ್ರತಿನಿಧಿಗಳಿಂದ ಕೂಡಿರುವ ಸಭೆ ; ವಿಧಾನಸಭೆ ; ಸಂಸತ್ತು : ಇಲ್ಲಿ ಶಾಸನಸಭೆಗಳು ಕೂಡುವ ವಿಧಾನಸೌಧ ಎಂಬ ನವೀನ ಭವ್ಯ ಮಂದಿರವಿದೆ (ಕಪಪು. ೫-೪೯). ೨. [ಜೈನ] ಜಿನನ ಉಪದೇಶವನ್ನು ಸ್ವೀಕರಿಸಲು ಸೇರುವ ಸಭೆ ; ಸಮವಸರಣಸಭೆ : ಆ ಪರಮೇಶ್ವರಂ ಪ್ರಥಿತಷೋಡಶತೀರ್ಥಕರಂ ಸಚೋದ್ಯವಿದ್ಯಾಪರಿಪಾಕಶಾಸನಸಭಾವಳಯಂ ಗಣನಾಥಯೂಥಮಂ . . . ಇಂತೆಂದು ಬೆಸಸಿದಂ (ಶಾಂತಿಪು. ೧೨-೩). [ಸಂ. ಶಾಸನಸಭಾ]

**ಶಾಸನಸ್ಥ** (ನಾ). ಶಾಸನದಲ್ಲಿ ನಿರೂಪಿತವಾಗಿರುವಂಥದು : ತೆಂಕಲು [ಬೆಳ್ಳ] ನೂ[ರ] ಮೂಡ[ದ] ಪಡುವಲು ಶಂಖ(ರ)ಬಸ್ತಿಯ ಶಾಸನಸ್ಥವಹಯೇಕ ನಿವರ್ತ್ತನಾಂತರವಹ XXX ಯುಗಲಪ್ರಮಾಣಿನ ವಳೆಯವೆ ಅವಧಿಯಾಗಿ (ಸೌಇ. XX. ೨೩೨-೨೦; 1412). [ಸಂ.]

**ಶಾಸನಹರ** (ನಾ). ಲೇಖನವನ್ನು ತರುವವನು ; ಓಲೆಕಾರ : ಪುರೋಹಿತಂ ನಿನತೊಂದೋಲೆಗೆ ತೀರ್ವುದೊಂದು ಮನೆವಾರ್ತೆಗಿದೇನೆಂದರಸ ಬಳೆಯ ನುಡಿದಪೆಯೆಂದಟ್ಟಲೆವೇಟ್ಟನವರ್ಗೆ ಶಾಸನಹರರಂ (ಆದಿಪು. ೧೪-೩೦). [ಸಂ.]

**ಶಾಸನಿಕ** (ನಾ). ಶಾಸನವನ್ನು ಬರೆಯುವವನು ; ಶಾಸನಗಳ ಲಿಪಿಕಾರ : ಕರಣ(ಕ) ಅಥವಾ ಅಪರೂಪವಾಗಿ ಕರಣಿನ್, ಶಾಸನಿಕ ಮತ್ತು ಧರ್ಮಲೇಖಿನ್ — ಇವು ಶಾಸನಲೇಖಕರ ಇತರ ವೃತ್ತಿನಾಮಗಳು (ಭಾರದ. ೧೮). [ಶಾಸನ + - ಇಕ]

**ಶಾಸನಿಗ** (ನಾ). ದಾಖಲೆಗಳ ಅಧಿಕಾರಿ : ಆ ದೇವರಾ[ಚಾರ್ಯ್ಯ]ರ ಮಠಕ್ಕ ಆ ಶಾಸನಿಗರು ಆ ಬ್ರಹ್ಮಪುರಿಯ [ದೇವಾಲ್ಯದ] ಪೌಳಿಯ ನಿ(ನೀ)ಳದ ೨೫ ಹಸ್ತದಗಲದ ನಿವೇಶನವಂ . . . [ಕೊ]ಟ್ಟರು (ಎಇ. XIX, ೨೫-೫೨; 1245). [ಶಾಸನ + - ಇಗ]

**ಶಾಸಿತ** (ಗು). ೧. ಆಳಿದ ; ಪ್ರಭುತ್ವ ನಡೆಸಿದ. ೨. ನಿರ್ದೇಶಿಸಲ್ಪಟ್ಟ ; ಮಾರ್ಗದರ್ಶನ ಹೊಂದಿದ. ೩. ಶಿಕ್ಷೆಗೊಳಗಾದ; ದಂಡಿಸಲ್ಪಟ್ಟ. [ಸಂ.]

**ಶಾಸಿಸು** (ಕ್ರಿ). ೧. ಆಳು ; ಪ್ರಭುತ್ವ ನಡೆಸು : ಶಾಸಿಸುವ ವಿಧಿಗಳಿಗೆ ಸಿಱಗನು ಹಾಸಿ ದುಃಖಂಬಡುವ ಜಗವಿನ್ನೇಸು ಮಾಯಾಗುಣವಿಮೂಢವೊ (ನಿಭಾಗ. ೬-೧೫-೨೪). ೨. ಅಪ್ಪಣೆ ಮಾಡು ; ಆಜ್ಞಾಪಿಸು: (ಕ). ೩. ದಂಡನೆ ಮಾಡು ; ಶಿಕ್ಷಿಸು: ''ಶಾಸಿಸು-ಶಿಕ್ಷಾಯಾಂ'' (ಶಮಧಾ); ಉಳಿದೋಡಿದನ್ಯಭೂಕಾಂತರನಂತಕಾನನದೊಳಳ್ಗಿರ ಶಾಸಿಸಿ . . . ಜೋಗಮನ್ನಪಂ ಮೆಱೆದಂ (ಎಕ. XI, ದಾವಣ. ५೨-೨೨ ; ಸು. 1162) ; ಈ ಧರ್ಮ್ಮಕ್ಕಾವನಾನುಂ ತಪ್ಪಿದವನಂ ಶಾಸಿಸುವುದು (ಸೌಇ. XX. ೯೩-೬೫ ; ?). ೪. ವಿಧಿಸು; ನಿಯಮಿಸು : ಶಾಸಿಸುವರ್ ನೂಱರ್ಕಂ ಸಾಸಿರಕಂ ಪ್ರಾಂತಲೋಪಮಂ ಕೆಲವೆಡೆಯೊಳ್ (ಶಾಬ್ದಾವ. ೨೭೮). ೫. ನಿಯಂತ್ರಿಸು; ಹತೋಟಿಯಲ್ಲಿಡು : ನಾವು ನಮ್ಮ ಶರೀರಗಳನ್ನು ಶಾಸಿಸುತ್ತಿರುವಂತೆ ಈ ಕೀಟಾಣುಗಳ ಶರೀರಗಳನ್ನೂ ಬೇರೆ ಬೇರೆಯಾದ ಇಚ್ಛಾಶಕ್ತಿಗಳು . . . ನಡೆಯಿಸುತ್ತಿರಬಹುದು (ಜೀವಾತ್ಮ. ೧೨೫). ೬. ಪರಿಪಾಲಿಸು : ಶಾಸಿಸುತ ಸದ್ಧರ್ಮವನು ಹರಿ ಪರಿತೋಷಕರವೆಂದೆಲ್ಲರಿಗೆ ಕರುಣಾಸಮುದ್ರನು ನಡೆದು ತೋಱುತಿರ್ದನೀ ಧರೆಗೆ (ನಿಭಾಗ. ೪-೧೦-೧). [ಶಾಸನ + - ಇಸು]

**ಶಾಸೆ** 'ಸೇಸೆ' ನೋ.

**ಶಾಸ್ತಿ** (ನಾ). ದಂಡನೆ ; ಶಿಕ್ಷೆ : ಭೀಷ್ಮಕನನೀಗಳ್ ಶಾಸ್ತಿ[ಪಾಠಾಂ. ಸಾಸ್ತೆ]ಯಂ ಮಾಡಿನುತ್ತವೆ ಚಂದ್ರಧ್ವಜಭೂಭುಜಂ ನುಡಿದಂ (ಕುಸುಮಾ. ೧೫-೨೭); ವಿದೂಷಕನರಸಿಂಗೆ ವಿಚಾರಮುಳ್ಳೊಡೀ ದರ್ಪಕನ ತಪ್ಪಿಂಗೆ ರತಿಗೆ ಶಾಸ್ತಿ ಬಾರದೆಂದು ನಗಿಸುತ್ತುಂ ನಡೆದು (ಅನಂಪು. ೬-೧೧ ವ); ಈ ಅಧರ್ಮಾಚರಣೆಗೆ ತಕ್ಕ ಶಾಸ್ತಿಯಾಯಿತು (ವಚಭಾ. ೧೬೧). [ಸಂ.]

**ಶಾಸ್ತಿಗೆಯ್** (ಕ್ರಿ). ದಂಡಿಸು ; ಶಿಕ್ಷೆ ಮಾಡು : ಅರಸಂ ಕಡುಮುಳಿದು ಕಪಿಳನಂ ಪಿಡಿದು ಪೊಡೆಯಿಸಿ ಶಾಸ್ತಿಗೆಯ್ಯದೆ ಕರುಣಿಸಿ ನಾಡ ಗಡಿಯಿಂ ಪೊಱಮಡಿಸಿ ಕಳೆಯೆ (ಶಾಂತೀಶ್ವ. ೬-೩೮ ವ). [ಶಾಸ್ತಿ + ಕೆಯ್]

**ಶಾಸ್ತೃ** (ನಾ). ಬೋಧಿಸುವವನು ; ಗುರು : ತನ್ನ ಸ್ವಂತ ಸಂಕಲ್ಪದಿಂದ . . . ಮುಕ್ತಿಯನ್ನು ಪಡೆದು ಆ ಮುಕ್ತಿಮಾರ್ಗವನ್ನು ಬೋಧಿಸುವ ''ಶಾಸ್ತೃ'' ಎಂದರೆ ಗುರು ಆದವನು (ಭಾರದ. ೨೦೫). [ಸಂ.]

**ಶಾಸ್ತ್ರ** (ನಾ). ೧. ಅಪ್ಪಣೆ ; ಆಜ್ಞೆ ; ಕಟ್ಟಳೆ. ೨. ಧಾರ್ಮಿಕ ವಿಷಯ, ತತ್ತ್ವ ಮುಂತಾದವುಗಳ ಬಗೆಗೆ ಕ್ರಮವಾಗಿ ಬರೆದ ಪ್ರಮಾಣಗ್ರಂಥ ; ದರ್ಶನ : "ಶಾಸ್ತ್ರಮೆಂಬುದಕ್ಕುಂ ಗ್ರಂಥಂ" (ವಸ್ತುಕೋ. ೧೩೧-೭೮); ಆತ್ಮರುಚಿ ವ್ಯಪೇತ ಶಾಸ್ತ್ರಾರ್ಥರಚನೆಯೊಳ್ ಸುಕವಿಯಲ್ಲದೊಂ ರಂಜಿಪನೇ (ಜಾತತಿ. ೧-೯) ; ಹಲವು ವೇದಪುರಾಣಶಾಸ್ತ್ರವ ತಿಳಿದು ನೀ ಮರುಳಾದೆ (ಕಾಶಿರಾ. ೩೭-೧೮). 'ಷಟ್ಶಾಸ್ತ್ರ' ಪರಾ. ೩. ಸಾಂಪ್ರದಾಯಿಕವಾದ ಆಚರಣೆ, — ಪದ್ಧತಿ : ಮುತ್ತೈದೆಯರು ಒಂದನ್ನೂ ಬಿಡದೆ ಎಲ್ಲಾ 'ಶಾಸ್ತ್ರ'ವನ್ನೂ ಮಾಡಿದರು (ಸುಪಸಂ. ೩೧) ; ಶಾಸ್ತ್ರ ಹೇಳಲಿಕ್ಕೆ, ಬದನೆಕಾಯಿ ತಿನ್ನಲಿಕ್ಕೆ (ಗಾದೆ). ೪. ವಿಜ್ಞಾನ, ಗಣಿತ, ಜ್ಯೋತಿಷ್ಯ ಮುಂತಾದವುಗಳನ್ನು ವ್ಯವಸ್ಥಿತವಾಗಿ ನಿರೂಪಿಸುವ ಜ್ಞಾನ : ಆರಯೆ ತಚ್ಛಾಸ್ತ್ರವ್ಯವಹಾರಜ್ಞಾನಾರ್ಥಮಾಗಿ ಪೇಟಲ್ಪಡುಗುಂ ಧೀರರಿನಕ್ಷರಸಂಜ್ಞಾಕಾಶಂ ವ್ಯಾಕರಣದಾದಿಯೊಳ್ ಪರಿವಿಡಿಯಿಂ (ಶಮದ. ೧); ಮನುಷ್ಯ ವ್ಯಾಪಾರಗಳಲ್ಲಿ ಕೆಲವು ಮುಖ್ಯವಾಗಿ ಬುದ್ಧಿ ಕಾರ್ಯದುವು ; ಅವು ಶಾಸ್ತ್ರ ವಿಷಯಗಳು: — ಭೌತ ರಾಸಾಯನಿಕ ವಿಜ್ಞಾನ, ಗಣಿತ, ತರ್ಕ ಮೊದಲಾದವು (ರಾಜ್ಯಶಾ. ೨೪೨); ಶಾಸ್ತ್ರವೆಂದರೆ ತಿಳಿಯದೇ ಇರುವ ವಿಷಯವನ್ನು ತಿಳಿಯಪಡಿಸುವುದೆಂದರ್ಥ (ಹಿಂದುಸಾ. ೨೪೩). ೫. ಗ್ರಂಥದ ತಿಳಿವಳಿಕೆ ; ಜ್ಞಾನ : ಶಾಸ್ತ್ರಂ ಬಂದೊಡೆ ಶಾಂತಿ ಸ್ಮರಣೆ . . . ನಿಜಾತ್ಮಚಿಂತೆ ನಿಲವೇಟ್ಕುಂ (ರತ್ನಾಶ. ೭೩). ೬. (ಆಲಂ) ತೋರಿಕೆಯ ಸಂಪ್ರದಾಯ ಪಾಲನೆ; ತೋರಿಕೆಯ ನಿಯಮಪಾಲನೆ: ಅವರು ನನ್ನ ಸಮ್ಮತಿ ಕೇಳುವುದು "ಶಾಸ್ತ್ರ" ಕ್ಕೆ (ಸುಪಸಂ. ೧೪).

**ಶಾಸ್ತ್ರ ಕೇಳು** = ಜ್ಯೋತಿಷ್ಯರಲ್ಲಿ ಭವಿಷ್ಯ, ಕಾರ್ಯಸಿದ್ಧಿ ಮುಂತಾದವುಗಳ ಬಗೆಗೆ ಕೇಳು : ಲಗ್ನ ಕೂಡಿಬರುತ್ತೋ ಹೇಗೆ ಅಂತ ಶಾಸ್ತ್ರಕೇಳಬೇಕು (ರೂಢಿ). **ಶಾಸ್ತ್ರಮಾಡು** = ನೆಪಮಾತ್ರಕ್ಕೆ ಅಥವಾ ತೋರಿಕೆಗೆ ಸಂಪ್ರದಾಯವನ್ನು ಪಾಲಿಸು : ಈವತ್ತು ಮಧ್ಯಾಹ್ನವೂ ಕೂಳಿನ ಶಾಸ್ತ್ರ ಮಾಡಿದಂತೆ ಮಾಡಿದಳು (ಮೂಯುದಾ. ೨೭೩). **ಶಾಸ್ತ್ರಮುಟ್ಟು** = (ಆಣೆ ಮಾಡಿ ಹೇಳುವಾಗ) ಶಾಸ್ತ್ರಗ್ರಂಥವನ್ನು ಸ್ಪರ್ಶಮಾಡು : ತಪ್ಪಿನ ಗಂಟು ತಲಿಗಿ ಬಂದರ ಎಪ್ಪಾ ನನ್ನ ಕೆಲಸ ಅಲ್ಲಾ ಶಪ್ಪತ್‌ಮಾಡಿ ಹೇಳತೀನಂತ ಶಾಸ್ತ್ರಮುಟ್ಟತಾರ (ಹೊಸಂಸಾ. ೧೭). **ಶಾಸ್ತ್ರಹೇಳು** = ಭವಿಷ್ಯ ಮುಂತಾದುವನ್ನು ಹೇಳು : ಯಾರೋ ಒಬ್ಬನು ಅಡ್ಡಾದಿಡ್ಡಿಯಾಗಿ ರುಮಾಲನ್ನು ಸುತ್ತಿಕೊಂಡು ಕುಳಿತು ಒಬ್ಬನ ಕೈ ಹಿಡಿದು ಶಾಸ್ತ್ರ ಹೇಳುತ್ತಿರುವುದೂ ಕಾಣಿಸಿತು (ಚಿದೇವ. ೯೬). [ಸಂ.]

**ಶಾಸ್ತ್ರಕಾರ** (ನಾ). (ಆಯಾ) ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಬರೆಯುವವನು : ಆಂ — ಶಾಸ್ತ್ರಕಾರನಾದ ನಾಂ . . . ಕವಿ ಕೇಶವನೆಂ = ಕೇಶಿರಾಜಕವೀಶ್ವರನೆಂ (ಶಮದ. ೨ ಟೀಕೆ). [ಸಂ.]

**ಶಾಸ್ತ್ರಜ್ಞ** (ನಾ). ಶಾಸ್ತ್ರಗಳನ್ನು ಚೆನ್ನಾಗಿ ತಿಳಿದಿರುವವನು; ಪಂಡಿತ ; ವಿದ್ವಾಂಸ: ತಜ್ಞರ್ಪ್ಪರೀಕ್ಷಿಸಲು ಶಬ್ದಜ್ಞಂ ಶಾಸ್ತ್ರಜ್ಞನಖಿಳತರ್ಕಜ್ಞಂ ಕಾವ್ಯಜ್ಞಂ . . . ಶ್ರೀ ರಾಜಗುರು ಕಳೇಶ್ವರದೇವಂ (ಶಾಸಪ. ೯೨) ; ಶಾಸ್ತ್ರಜ್ಞನ ದೃಷ್ಟಿಗೆ ಅಶ್ವಿನೀ ಭರಣೀ ಕೃತ್ತಿಕಾದಿ ನಕ್ಷತ್ರನಾಮಗಳೂ . . . ಬರಿಯ ಹೆಸರುಗಳಲ್ಲ, ತಾರೆಗಳೂ ಅಲ್ಲ (ನಕ್ಷತ್ರ. ೪೯). [ಸಂ.]

**ಶಾಸ್ತ್ರದಾನ** (ನಾ). [ಜೈನ] ಆಹಾರ, ಅಭಯ, ಔಷಧ ಮತ್ತು ಶಾಸ್ತ್ರವೆಂಬ ನಾಲ್ಕು ಬಗೆಯ ದಾನಗಳಲ್ಲಿ ಒಂದು ; ಜೈನಶಾಸ್ತ್ರಪುರಾಣ ಇತ್ಯಾದಿ ಗ್ರಂಥಗಳ ಹಸ್ತಪ್ರತಿಯನ್ನು ಜನರಿಗೆ ಹಂಚುವುದು : ಭವಾಂಬುಧಿಯುಮ ನೀಸುವರಭಯೌಷಧ ಶಾಸ್ತ್ರದಾನಫಲವಿಲಸನದಿಂ ಎಂಬುದುಮಾ ಶ್ರೇಯೋವಚನಂ (ಆದಿಪು. ೧೦-೧೧) ; ಶಾಸ್ತ್ರದಾನಾದಿಗಳನ್ನು ಮಾಡುವವರು ಯಾವುದಾದರೂ ತಮ್ಮ ಧರ್ಮಗ್ರಂಥವೊಂದನ್ನು ಹಲವು ಪ್ರತಿಗಳಾಗಿ ಬರೆಯಿಸಿ ಹಂಚುತ್ತಿದ್ದುದರಿಂದ ಲೇಖಕರಿಗೆ ಅಥವಾ ಲಿಪಿಕಾರರಿಗೆ ಪ್ರೋತ್ಸಾಹ ದೊರೆಯುತ್ತಿತ್ತು (ಕನ್ನಸಂ. ೪೬). [ಸಂ.]

**ಶಾಸ್ತ್ರಪದ್ಧತಿ** (ನಾ). ಆಯಾ ಶಾಸ್ತ್ರಗಳಲ್ಲಿ ಸೂಚಿಸಲ್ಪಟ್ಟಿರುವ ಕ್ರಮ; ಶಾಸ್ತ್ರೋಕ್ತವಾದ ಸಂಪ್ರದಾಯ. [ಸಂ.]

**ಶಾಸ್ತ್ರಪಾರಗ** (ನಾ). ಆಯಾ ಶಾಸ್ತ್ರಗಳನ್ನು ಆಳವಾಗಿ ಅಭ್ಯಾಸ ಮಾಡಿದವನು : ಕರಣಾನುಯೋಗ ದ್ರವ್ಯಾನುಯೋಗಂಗಳಂ ಕಲ್ತು ಶಾಸ್ತ್ರಪಾರ[ಪಾಠಾಂ. ರಾವಾರ]ಗರಾಗಿ ಭಟಾರರಂ ಬೆಸಗೊಂಡು (ವಡ್ಡಾರಾ. ೧೦೩-೧೭). [ಸಂ.]

**ಶಾಸ್ತ್ರಪ್ರಮಾಣ** (ನಾ). ಶಾಸ್ತ್ರಗಳ ಆಧಾರ : ಆ ಬ್ರಹ್ಮವೆಂಬುದು ಶಾಸ್ತ್ರಪ್ರಮಾಣದಿಂದ ಮುಖ್ಯವಾಗಿ ಅರಿಯಲ್ಪಡತಕ್ಕದೇ (ಬ್ರಹ್ಮಭಾ. ೩೧). [ಸಂ.]

**ಶಾಸ್ತ್ರಮಾರ್ಗ** (ನಾ). = ಶಾಸ್ತ್ರಪದ್ಧತಿ : ಶಿವನನಾಳ್ಗೊಂಡು ದೂದಟ್ಟುವ ಪವಣವ ಶಾಸ್ತ್ರಮಾರ್ಗದೊಳುಂಟು ಪೇಳಿದಿರವನ ಕೀರ್ತಿಯನೆಂದು ನುಡಿದನು (ತ್ರಿಭುತಿ. ೧೭-೩೭). [ಸಂ.]

**ಶಾಸ್ತ್ರವಚನ** (ನಾ). ಶಾಸ್ತ್ರಗಳಲ್ಲಿ ಹೇಳಿರುವ ಮಾತು, — ಹೇಳಿಕೆ; ಪ್ರಮಾಣ ವಾಕ್ಯ : ಮಲಿನವ ಧರಿಸಲಾಗದು ಶಾಸ್ತ್ರವಚನವು ವರವಿಭೂಷಣದಿಂದಲಂಕೃತೆಯಾಗ ಬೇಕು (ಕಾಶಿರಾ. ೪೩-೧೩). [ಸಂ.]

**ಶಾಸ್ತ್ರವಿದ** (ನಾ). = ಶಾಸ್ತ್ರಜ್ಞ : ನರಯುಗ್ಮೋದಯದೊಳ್ ಬುಧಂ ನೆಲಸೆ ವಾಚಾಳಂ ಕಲಾವೇದಿ ಸೌಖ್ಯರತಂ ಶಾಸ್ತ್ರವಿದಂ ಪ್ರಿಯಂವದನೆನಿಕ್ಕುಂ (ಜಾತತಿ. ೧೭-೨೩). [ಸಂ. ಶಾಸ್ತ್ರವಿದ್]

**ಶಾಸ್ತ್ರವಿರುದ್ಧ** (ನಾ). ೧. ಶಾಸ್ತ್ರಕ್ಕೆ ವಿರೋಧವಾದುದು. ೨. [ಕಾವ್ಯಮೀ] ಕಾವ್ಯದೋಷಗಳಲ್ಲಿ ಒಂದು ; ಶಾಸ್ತ್ರಕ್ಕೆ ವಿರೋಧವಾದ ವಿಷಯಗಳ ಹೇಳಿಕೆ: ವ್ಯವಹಿತಮೇಕಾರ್ಥಂ ವ್ಯರ್ಥವಪಕ್ರಮಮಖಿಳಲೋಕಶಾಸ್ತ್ರವಿರುದ್ಧಂ ಸುವಿದಿತ ಯತಿಭಂಗಂ ಭಿನ್ನವೃತ್ತಮೆಂದಿಂತು ವಾಕ್ಯದೋಷಮಿವಕ್ಕು (ಕಾವ್ಯಾವ. ೪೫೫). [ಸಂ.]

**ಶಾಸ್ತ್ರವ್ಯುತ್ಪತ್ತಿ** (ನಾ). ಶಾಸ್ತ್ರಗಳ ವಿಚಾರವಾಗಿ ಇರುವ ಸರಿಯಾದ ಅರಿವು, — ಜ್ಞಾನ. [ಸಂ.]

**ಶಾಸ್ತ್ರಶಾಲೆ** (ನಾ). ಶಾಸ್ತ್ರಗಳನ್ನು ಕಲಿಸುವ ಸ್ಥಳ ; ವಿದ್ಯಾಲಯ : "ಸತತಂ ವಿದ್ಯಾರ್ಥಿ ಜನೋಚಿತಾಸ್ಪದಮಕ್ಕುಂ ಮಠಂ ಶಾಸ್ತ್ರಶಾಲೆ" (ವಸ್ತುಕೋ. ೪೮-೨೦). [ಸಂ. ಶಾಸ್ತ್ರಶಾಲಾ]

**ಶಾಸ್ತ್ರಶ್ರವಣ** (ನಾ). ಧಾರ್ಮಿಕ ಗ್ರಂಥಪಠಣವನ್ನು ಆಲಿಸುವುದು : ಮನನ ಶಾಸ್ತ್ರಶ್ರವಣ ನಿಯಮಾಸನ ಸಮಾಧಿಧ್ಯಾನ ವಿದ್ಯಾವಿನಯವಲ್ಲದೆ ರಣದ ಜಂಜಡವೇಕೆ ನಿಮಗೆ (ಕುವ್ಯಾಕ. ೩-೫೦). [ಸಂ.]

**ಶಾಸ್ತ್ರಸಂಪ್ರದಾಯ** (ನಾ). = ಶಾಸ್ತ್ರಪದ್ಧತಿ : ಈ ನಿಷ್ಕೃಷ್ಟತೆ ಗಾಂಭೀರ್ಯಗಳಿಂದ ಕೂಡಿದ ಶಾಸ್ತ್ರಸಂಪ್ರದಾಯಗಳು ಆ ಕಾರ್ಯಕಲಾಪಗಳಲ್ಲಿ ಭಾಗವಹಿಸಿದವರಿಗೆ ತುಂಬ ತೃಪ್ತಿಕರವಾಗಿದ್ದುವು (ಪುನರು. ೩೬). [ಸಂ.]

**ಶಾಸ್ತ್ರಸಿದ್ಧ** (ನಾ). ಶಾಸ್ತ್ರದಿಂದ ಸಮ್ಮತವಾದುದು, — ಅಂಗೀಕರಿಸಿದುದು : ಧರಣಿ ನುಂಗುವಳಿಬ್ಬರನು ಸಂಗರವ ಜಯಿಸದ ನೃಪನ ದೇಶಾಂತರವ ಚರಿಸದ ಪಂಡಿತನನಿದು ಶಾಸ್ತ್ರಸಿದ್ಧವಲೆ (ಕುವ್ಯಾಉ. ೩-೨೨) ; ಪಾತಕದಿಂದ ನರಕದ ಕೂಪದಲಿ ಮುಳುಗುವುದು ತಪ್ಪದು ಶಾಸ್ತ್ರಸಿದ್ಧವಲೇ (ಪಂಸಾ. ೬೮). [ಸಂ.]

**ಶಾಸ್ತ್ರಸಿದ್ಧಾಂತ** (ನಾ). ಶಾಸ್ತ್ರಗಳಿಂದ ನಿರ್ಣಯಿಸಲ್ಪಟ್ಟ ಸತ್ಯಸಂಗತಿ. [ಸಂ.]

**ಶಾಸ್ತ್ರಾಧ್ಯಾಯಿ** (ನಾ). ಶಾಸ್ತ್ರಗಳನ್ನು ಅಭ್ಯಾಸ ಮಾಡುವವನು, — ಅಧ್ಯಯನ ಮಾಡುವವನು : ಶಾಲೆಯಲೋದುವ ವೇದಾಧ್ಯಾಯಿಗಳಿನ್ನೂರ್ವರ್ಗ್ಗಂ ಶಾಸ್ತ್ರಾಧ್ಯಾಯಿಗಳಯ್ವದಿಂಬರ್ಗ್ಗಂ . . . ತ್ರೈಪುರುಷದೇವರ ಶಾಲೆಯ ಪರಿಷಮಾಣಿಯರ್ಗ್ಗೆ ಸರ್ವ್ವನಮಸ್ಯಮಾಗಿ ಕೊಟ್ಟ ಕಿಯ್ಯಾಣಿಕೇಶ್ವರದಗಟಿಂ ಬಡ[ಗ] ಮತ್ತರು ೧೦೦೦ (ಕಇಅ. ೬-೨-೧೯೨ ; 1058). [ಸಂ. ಶಾಸ್ತ್ರಾಧ್ಯಾಯಿನ್]

**ಶಾಸ್ತ್ರಾನ್ವಿತ** (ನಾ). = ಶಾಸ್ತ್ರಜ್ಞ : ಆ ಪ್ರತಿಭಾನಂ ಶಕ್ತಿಲೋಕಾಗಮ ಸಕಲ ಕಲಾವೇದನಂ ವಿದ್ಯೆ ಶಾಸ್ತ್ರಾನ್ವಿತನಪ್ಪಂ (ಕಾವ್ಯಾವ. ೪೨೪). [ಸಂ.]

**ಶಾಸ್ತ್ರಾಭ್ಯಾಸ** (ನಾ). ಶಾಸ್ತ್ರಗಳ ಅಧ್ಯಯನ, — ಕಲಿಕೆ : ಪಾರಾವತಪ್ರಕರಕ್ಕೆ ಮಕರಕೇತು ಶಾಸ್ತ್ರಾಭ್ಯಾಸಪ್ರಾಸಾದಂಗಳಾದ ಮಣಿಮಯಕೃತಕಗಿರಿಗಳುಂ (ಚಂದ್ರಪು. ೧-೧೦೭) ; ಶಾಸ್ತ್ರಭ್ಯಾಸದೊಳೆಂತುಂ ವಿಸ್ತೃತಮತಿಯಾದನಾದನೀ ಕಂದರ್ಪಂ (ಕುಸುಮಾ. ೭-೫೬). [ಸಂ.]

**ಶಾಸ್ತ್ರಿ** (ನಾ). ೧. = ಶಾಸ್ತ್ರಜ್ಞ : ವರಕೋವಿದ ಶಾಸ್ತ್ರಿಗಳಂ ಧರಣೀಶಂ ಕೇಳ್ದನೆಂದು ಕಲಿಗಳ ಬಗೆಯಂ (ಹಮ್ಮೀರ. ೪-೩) ; ಆ ಶಾಸ್ತ್ರದಿಂ . . . ಕಲಹಮುದ್ಗರ್ವಂ ಮನಂಗೊಂಡೊಡಾ ಶಾಸ್ತ್ರಂ ಶಸ್ತ್ರಮೆ ಶಾಸ್ತ್ರಿ ಶಸ್ತ್ರಿಕನಲಾ (ರತ್ನಾಶ. ೭೩). ೨. ಕೆಲವು ಮನೆತನಗಳಲ್ಲಿ, ಗೌರವವಾಚಿಯಾಗಿ ಹೆಸರಿನ ಕೊನೆಯಲ್ಲಿ ಸೇರುವ ಪದ: ಸಂಗಮೇಶ್ವರಶಾಸ್ತ್ರಿಗಳು ಬಹಳ ಧರ್ಮಭೀರುಗಳು (ಸಂಗೀತ. ೮೦). [ಸಂ. ಶಾಸ್ತ್ರಿನ್]

**ಶಾಸ್ತ್ರಿಗ** (ನಾ). = ಶಾಸ್ತ್ರಜ್ಞ : ಲೆಕ್ಕಿಗಂ, ಶಾಸ್ತ್ರಿಗಂ, ಬಾಗರಣೆಗಂ (ಶಬ್ದಾನು. ೪೦೮ ಪ್ರಯೋ). [ಶಾಸ್ತ್ರ + – ಇಗ]

**ಶಾಸ್ತ್ರೀಯ** (ಗು). ೧. ಶಾಸ್ತ್ರಕ್ಕೆ ಅನುಗುಣವಾದ ; ಶಾಸ್ತ್ರಕ್ಕೆ ಅನುಸಾರವಾದ: ದಕ್ಷಿಣಾದಿ ಸಂಗೀತ . . . ವೇದಕಾಲದ ಶಾಸ್ತ್ರೀಯ ಬುನಾದಿಯ ಮೇಲೆ ಬೆಳೆದು ಬಂದು ತನ್ನ ಮೂಲರೂಪ ಉಳಿಸಿಕೊಂಡಿದೆ (ಸಂಗೀತಂ. ೧೮೧) ; ಸರಳ ಶಾಸ್ತ್ರೀಯ ವ್ಯಾಸಂಗದಲ್ಲಿ ಸ್ವಲ್ಪ ಕಾಲ ಕಳೆದೆವು (ನಕ್ಷತ್ರ. ೬೭). (ನಾ). ೨. ಶಾಸ್ತ್ರಕ್ಕೆ ಅನುಗುಣವಾದುದು; ವೈಜ್ಞಾನಿಕವಾದ ರೀತಿ : ಇತರ ಶೈವಧರ್ಮಗಳಿಂದ ವೀರಶೈವಧರ್ಮ ಎಲ್ಲಿ ಎಲ್ಲಿ ಭಿನ್ನವಾಗಿದೆಯೆಂಬುದನ್ನು ಗಮನದಲ್ಲಿಟ್ಟುಕೊಂಡು . . . ಅವುಗಳನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಬೇಕಾಗಿದೆ (ಶೂನ್ಯಕು. ೧೪೬). [ಸಂ.]

**ಶಾಸ್ತ್ರೀಯದೃಷ್ಟಿ** (ನಾ). ವೈಜ್ಞಾನಿಕವಾದ ತಿಳಿವಳಿಕೆ : ಇಬ್ಬರೂ ಶಾಸ್ತ್ರೀಯದೃಷ್ಟಿ ಯಿಂದ ತಮ್ಮ ಕಾರ್ಯವನ್ನು ಮಾಡಿದ್ದರೆ ಬಲುಮಟ್ಟಿಗೆ ಏಕರೂಪತೆ ಸಾಧ್ಯ (ಕನ್ನಸಂ. ೨೪೬). [ಸಂ.]

**ಶಾಸ್ತ್ರೀಯಸಂಗೀತ** (ನಾ). ಸಂಗೀತಶಾಸ್ತ್ರದ ಸೂತ್ರಗಳಿಗೆ ಅನುಗುಣವಾದ ಸಂಗೀತ : ಮದ್ರಾಸ್ ಮತ್ತು ಮೈಸೂರುಪ್ರಾಂತ್ಯಗಳು ಈ ದೃಷ್ಟಿಯಿಂದ ಶಾಸ್ತ್ರೀಯ ಸಂಗೀತದಲ್ಲಿ ಹೆಚ್ಚು ಅಭಿರುಚಿ ಮತ್ತು ಪ್ರಗತಿ ತೋರುತ್ತವೆ (ಸಂಗೀತಂ. ೧೯೦). [ಸಂ.]

**ಶಾಸ್ತ್ರೋಕ್ತ** (ಗು). ೧. ಶಾಸ್ತ್ರದಲ್ಲಿ ಹೇಳಿರುವ, – ಪ್ರತಿಪಾದಿಸಿರುವ : ಯತಿಯೆಂಬುದುಸಿರ್ವ ತಾಣಂ ಕೃತಾಸ್ಪದಂ ವೃತ್ತಜಾತಿಪದಪದ್ಧತಿಯೊಳ್ ಸತತಂ ಛಂದೋವಿದಿತಪ್ರತೀತಶಾಸ್ತ್ರೋಕ್ತಮಾರ್ಗದಿಂದಱಿವುದಿದಂ (ಕವಿರಾ. ೧-೭೧) ; ಶಾಸ್ತ್ರೋಕ್ತ ಕರ್ಮಗಳನ್ನು ನೆರವೇರಿಸಿ ಶಿಶುವಿಗೆ 'ನಚಿಕೇತ' ಎಂದು ನಾಮಕರಣ ಮಾಡಿದರು (ಚಿತಂಜಾ. ೬೨). (ನಾ). ೨. ಸಂಪ್ರದಾಯಬದ್ಧವಾದುದು ; ವಿಧಿವತ್ತಾದುದು: ವಾಜಶ್ರವಸ ಶಾಸ್ತ್ರೋಕ್ತವಾದ ರೀತಿಯಲ್ಲಿ ಮಂಥಕರ್ಮವನ್ನು ನೆರವೇರಿಸಿದ (ಚಿತಂಜಾ. ೫೪). [ಸಂ.]

**ಶಾಸ್ತ್ರೋಕ್ತಿ** (ನಾ). ಶಾಸ್ತ್ರದಲ್ಲಿರುವ ಮಾತು, – ವಚನ : ಪರಮಾಯುಷ್ಯ ಮುಮಯ್ದುರುಳ್ವೆರಸು ನೂಱಿಪ್ಪತ್ತುವರ್ಷಂ ನರದ್ವಿರದೌಘಕ್ಕೆ . . . ಶಾಸ್ತ್ರೋಕ್ತಿಯಿಂ (ಜಾತತಿ. ೮-೧೦). [ಸಂ.]

**ಶಾಹಣೆ** 'ಶಹಣೆ' ನೋ.

**ಶಾಹಣೇತನ** 'ಶಾಣೆತನ' ನೋ.

**ಶಾಹಬಾಸು** 'ಶಹಬಾಸ್' ನೋ.

**ಶಾಹಬಾಸುಗಿರಿ** 'ಶಹಬಾಸುಗಿರಿ' ನೋ.

**ಶಾಹಲು** 'ಶಾಲು' ನೋ.

**ಶಾಹಿ, ಷಾಹಿ** (ನಾ). ರಾಜ್ಯ ; ಅರಸೊತ್ತಿಗೆ : ನಿನ್ನೊಡನೆ ಯವನಶಾಹಿಯು ನಾಶವಾಗುತ್ತದೆ (ರಾಜ್ಯೋದ. ೧೮೪). **ಷಾಹಿ :** ಅಹಮದ್ ನಗರದಲ್ಲಿ ನಿಸಾಂ ಷಾಹಿ ಸಂತತಿಯವರು (ಪಾಳಗಾ. ೧೩). [← ಪಾರ. ಹಿಂ. ಮರಾ. ಶಾಹೀ]

**ಶಾಹಿದೀ, ಶಾಯಿದಿ** (ನಾ). ೧. ಸಾಕ್ಷ್ಯ ; ರುಜುವಾತು ; ಪ್ರಮಾಣ : ಈ ವಿವರಗಳು ಶಾಶ್ವತವಾಗಿ ಇರುವ ಬಗ್ಗೆ, ಬರೆಸಿ ಶಾಹಿದೀ ಬಗ್ಗೆ, ಖಾಸಾ ದಸ್ಕತ್ತು ಮೋಹರ ಮಾಡಿ, ಮಡಗಿ ಇದೆ (ರಾಜೇಂದ್ರ. ೨೮೭). **ಶಾಯಿದಿ :** ೧. ಇಂಗ್ರೇಜ್‌ಸರದಾರರ ಶಾಯಿದಿಯಿಂದ ಗುರುಹಿರಿಯರ ಕೈಯಿಂದ . . . ಧಾರೆಯನೆರಸಿಕೊಂಡು, ವಿವಾಹವಾದರು (ರಾಜೇಂದ್ರ. ೧೧೦). ೨. ಸಾಕ್ಷಿ ಹೇಳುವವನು. [← ಅರ. ಹಿಂ. ಶಾಹಿದ್; ಪಾರ. ಶಾಹಿದೀ; ಮರಾ. ಶಾಹದೀ, ಶಾಹೀದೀ, ಶಾಯದೀ]

**ಶಾಹೀದುಡ್ಡು** 'ಶಾಹೂದುಡ್ಡು' ನೋ.

**ಶಾಹೀರ್** 'ಶಾಹೀರ' ನೋ.

**ಶಾಹೀರ್‌ಗಾಣ** (ನಾ). ಮಡಿದ ವೀರರನ್ನು ಕುರಿತು ಹೊಗಳಿ ಹಾಡುವ ಲಾವಣಿ, – ಹಾಡು : ಸೈನಿಕರಲ್ಲಿಯೂ ಪ್ರಜಾಸಾಮಾನ್ಯರಲ್ಲಿಯೂ ರಾಜನಿಷ್ಠೆ ದೇಶಾಭಿಮಾನಗಳನ್ನೂ, ಸ್ವಾಭಿಮಾನ – ಆತ್ಮವಿಶ್ವಾಸಗಳನ್ನೂ ಹುಟ್ಟಿಸುವುದಕ್ಕೆ ಈ 'ಶಾಹೀರ್‌ಗಾಣ'ದ ಉಪಯೋಗವನ್ನಲ್ಲಿ ಚೆನ್ನಾಗಿ ಮಾಡಿಕೊಂಡರು (ಕರ್ನಾಜ. ೧೧೯). [ಶಾಹೀರ್ (< ಶಾಹೀರ) + ಗಾಣ₃]

**ಶಾಹೀರ್‌ಗೀತ** (ನಾ). = ಶಾಹೀರ್‌ಗಾಣ : ಮಹಾರಾಷ್ಟ್ರದಲ್ಲಿ 'ಶಾಹೀರ್ ಗೀತ'ಗಳನ್ನು ಹೇಳುವ 'ಶಾಹೀರ'ರ ಜಾತಿಯೊಂದು ತಲೆಯೆತ್ತಿ ನಿಂತಿತು (ಕರ್ನಾಜ. ೧೧೯). [ಶಾಹೀರ್ (< ಶಾಹೀರ) + ಗೀತ]

**ಶಾಹೀರ, ಶಾವೀರ, ಶಾಹೀರ್** (ನಾ). ಜನಪದಗೀತೆಗಳನ್ನು ರಚಿಸುವವನು: ಮಹಾರಾಷ್ಟ್ರದಲ್ಲಿ 'ಶಾಹೀರ್‌ಗೀತ' ಗಳನ್ನು ಹೇಳುವ 'ಶಾಹೀರ'ರ ಜಾತಿಯೊಂದು ತಲೆಯೆತ್ತಿ ನಿಂತಿತು (ಕರ್ನಾಜ. ೧೧೯). **ಶಾವೀರ :** ಕನ್ನಡ 'ಶಾವೀರ'ರು ಹಾಡುವ ಹಾಡುಗಳೆಂದರೆ ಹೆಚ್ಚಾಗಿ, ಹೆಣ್ಣು ಗಂಡಿನ ಹೆಚ್ಚು ಕಡಮೆಯ ಹೊಡೆದಾಟದ ಹಾಡುಗಳು (ಕರ್ನಾಜ. ೧೧೦). **ಶಾಹೀರ್ :** ಮರ್‍ಹಾಟಗರು 'ಷಾಯರ್' ಎಂದಿರುವ ಪರ್ಷಿಯನ್ ಪದವನ್ನು ಕೆಡಿಸಿ 'ಶಾಹೀರ್' ಎಂದು ಮಾಡಿಕೊಂಡಿರುವರು (ಕರ್ನಾಜ. ೧೧೯). [← ಅರ. ಶಾಇರ್, ಶಾಯರ್ ; ಹಿಂ. ಶಾಯರ್ ; ಮರಾ. ಶಾಹೀರ್]

**ಶಾಹೀರಗಾನ** (ನಾ).= ಶಾಹೀರ್‌ಗಾಣ : ಲಾವಣಿ, ಗೀಗೀಪದಗಳು, ಕೀರ್ತನ ಪ್ರವಚನಗಳು ಶಾಹೀರಗಾನಗಳು (ಮೋಹಬ. ೧೯೪). [ಶಾಹೀರ + ಗಾನ₁]

**ಶಾಹೂದುಡ್ಡು, ಶಾಹೀದುಡ್ಡು** (ನಾ). ಪೇಶ್ವೆ ಆಡಳಿತದಲ್ಲಿ ಚಲಾವಣೆ ಯಲ್ಲಿದ್ದ ಒಂದು ಬಗೆಯ ತಾಮ್ರದ ನಾಣ್ಯ : ಈ ಶೀಮೆಯಲ್ಲಿ ಮೊದಲು ಪೇಶವಾಯಿ ಅಮಲು ಇದ್ದ ಕಾರಣ . . . ಶಾಹೂದುಡ್ಡಲ್ಲದೆ ಶಾಹೀದುಡ್ಡು ಅಥವಾ ಕರೆದುಡ್ಡು ನಡಿಯುತ್ತಿತ್ತು (ಕಭಾಗ. ೨೮೧). **ಶಾಹೀದುಡ್ಡು :** ಈ ಶೀಮೆಯಲ್ಲಿ . . . ಶಾಹೀದುಡ್ಡು ಅಥವಾ ಕರೆದುಡ್ಡು ನಡಿಯುತ್ತಿತ್ತು (ಕಭಾಗ. ೨೮೧) [ಶಾಹೂ₂ + ದುಡ್ಡು₁]

**ಶಾಹೂಪೈಸಾ** (ನಾ). ಪೇಶ್ವೆ ಆಡಳಿತದಲ್ಲಿ ಚಲಾವಣೆಯಲ್ಲಿದ್ದ ಒಂದು ಬಗೆಯ ತಾಮ್ರದ ನಾಣ್ಯ : ಈ ಶೀಮೆಯಲ್ಲಿ ಮೊದಲು ಪೇಶವಾಯಿ ಅಮಲು ಇದ್ದ ಕಾರಣ ಹೆಚ್ಚಾಗಿ "ಶಾಹೂಪೈಸಾ" ಯೆಂಬ ಹೆಸರಿನ ನಾಣ್ಯವು ಯೆಲ್ಲ ಕಡೆಯಲ್ಲಿ ನಡಿಯುತ್ತಿತ್ತು (ಕಭಾಗ. ೨೮೧). [← ಮರಾ. ಶಾಹೂಪೈಸಾ]

**ಶಾಳ** 'ಶಾಲ' ನೋ.

**ಶಾಳಭಂಜಿಕೆ** 'ಶಾಲಭಂಜಿಕೆ' ನೋ.

**ಶಾಳಿ** 'ಶಾಲಿ₂' ನೋ.

**ಶಾಳಿಕ್ಷೇತ್ರ** (ನಾ). ಬತ್ತದ ಗದ್ದೆ : ಪಸುರಾದುದು ಶಾಳಿಕ್ಷೇತ್ರ ವೆಸೆಗುಮಿಳೆಗತಿಭಾಗ್ಯಂ (ಹಮ್ಮೀರ. ೧-೫೦). [ಸಂ. ಶಾಲಿಕ್ಷೇತ್ರ]

**ಶಾಳಿಗೋಪಿ** (ನಾ). ಬತ್ತದ ಗದ್ದೆಯನ್ನು ಕಾಯುವವಳು : ಧವಳೇಕ್ಷುಚ್ಛಾಯ ನಿಷಣ್ಣ ವಪುಗಳಂದದೊಳೆ ನೆಗಟ್ದ ಬಣ್ಣವುನಾ ಶೈಶವದಿಂ ಕಾಕಳಿಯೊಳ್ ಚಕ್ರವರ್ತಿಯಂ ಪಾಡಿ ಶಾಳಿಗೋಪಿಯರೆಸೆದರ್ (ಶಾಂತಿಪು. ೧-೧೩೮). [ಸಂ. ಶಾಲಿಗೋಪೀ]

**ಶಾಳಿನೀವಿತಾನ** (ನಾ). [ಛಂದ] ವರ್ಣಛಂದಸ್ಸಿನ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಆರು ಅಕ್ಷರಗಳುಳ್ಳ, ಗಾಯತ್ರಿಯೆಂಬ ಛಂದಸ್ಸಿನ ಒಂದು ವೃತ್ತ : ಜ್ವಾಳಿ ತೋಯಮೆಯ್ತಂದೋಳಿವೆತ್ತೊಡಕ್ಕುಂ . . . ಶಾಳಿನೀ [ಪಾಠಾಂ. ಮಾಲಿನೀ] ವಿತಾನಂ (ಛಂದೋಂಬು. ೨-೬೪). [ಸಂ. ಶಾಲಿನೀವಿತಾನ]

**ಶಾಳಿವನ** 'ಶಾಲಿವನ' ನೋ.

**ಶಾಳಿಹೋತ್ರ** 'ಶಾಲಿಹೋತ್ರ' ನೋ.

**ಶಾಳೀವನ** (ನಾ). ಬತ್ತದ ಗದ್ದೆ : ಪ್ರವರೋದ್ಯಾನಂಗಳಿಂ ಪ್ರವಿಲಸಚ್ಛಾಳೀವನಕ್ಕಾಗಿ ಪಾಱುವ ಕೀರಾವಳಿ . . . ಎತ್ತಲುಂ ಸೊಗಯಿಕುಂ (ಸುಕುಮಾ. ೪-೪೩) ; ಫಳರಸದಿಂ ಬೆಳೆವ ನವಶಾಳೀವನಂಗಳಿಂ (ತಿರುರ. ದೇ. ೨-೧೦). [< ಶಾಲಿವನ]

**ಶಾಳ್ಮಳಿ** 'ಶಾಲ್ಮಲಿ' ನೋ.

**ಶಿಂಗಳೀಕ** 'ಸಿಂಗಳೀಕ' ನೋ.

**ಶಿಂಗರೂಪ, ಸಿಂಗರೂಪ** (ನಾ). ಪಾದರಸದಿಂದಾದ ಒಂದು ಅದಿರು ; ಇಂಗುಲಿಕ; ರಸಸಿಂಧೂರ : ಪ್ಯಾಟೆಯಲ್ಲಿ ಮಾರಾಟಕ್ಕೆ ಬರುವ ಕೆಲವು ಜಿನಸಗಳ ಹೆಸರು : - ಲೋಭಾನಾ . . . ಹಿಂಗಡಾ, ಹಿಂಗೂಳ (ಶಿಂಗರೂಪ) . . . ಎಣ್ಣೆ, ಗುಲಾಬನೀರು ಮುಂತಾದವುಗಳು (ಮುಂಬಯ್ಯಾ. ೧೧೦). **ಸಿಂಗರೂಪ :** ಪುಡಿಗಳ ಮೇಲೆ

ಕಿಮ್ಮತ್ತು ಆಗತಕ್ಕ ಜಿನಸಗಳು — ೧. ಪಸ್ಮಿ . . . ೪. ಇಂಗಳೀಕ (ಸಿಂಗರೂಪ) (ಮುಂಬವ್ಯಾ. ೧೩೭).

[← ಪಾರ. ಶಂಗರ್ಫ್ ; ಹಿಂ. ಶಿಂಗರಫ್ ; ಮರಾ. ಶಿಂಗರೂಪ್, ಶಿಂಗರೂಬ್]

**ಶಿಂಗಲೀಕ** 'ಸಿಂಗಳೀಕ' ನೋ.

**ಶಿಂಗವೆಣ್ಣಮ** (ನಾ). ಒಬ್ಬಾತನ ಹೆಸರು : ಕೋಟೆಯ ಕೊಳ್ಳಸ್ಸು ಶಿಙ್ಗವಣ್ಣಮ ಪುಟಿಯ ಗಙ್ಗ ಪ್ರಭುಮಲ್ಲನೊಬ್ಬಾಗುಣ್ಬನ್ ಅಳಿಯವ್ಪಡಗಲು ಕೊಳ್ಳುತ್ತಿರೆ (ಎಕ. XII. ತಿಪಟೂ. ೪೭-೭, ಸು. 880). [?]

**ಶಿಂಗಳೀಕ** 'ಸಿಂಗಳೀಕ' ನೋ.

**ಶಿಂಗಾಡಿ** 'ಸಿಂಗಾಡಿ' ನೋ.

**ಶಿಂಗಾಡೆ** (ನಾ). ಒಂದು ಬಗೆಯ ಸಸ್ಯ ; ಶೃಂಗಾಟಿಕ : ಶೃಂಗಾಟಕ (ಶಿಂಗಾಡೆ) . . . ಇವು ರುಕ್ಷ ಸ್ತಂಭಕ ಶೀತ ಮತ್ತು ಜಡವಿರುತ್ತವ (ಅಷ್ಟಾಂಗ. ೧೩೮-೯೦). [← ಹಿಂ. ಸಿಂಘಾಡಾ ; ಮರಾ. ಶಿಂಗಡಾ, ಶಿಂಗಾಡಾ, ಸಿಂಗಾಡಾ./ ಸಂ. ಶೃಂಗಾಟ./ ಪ್ರಾ. ಸಿಂಘಾಡಗ, ಸಿಂಘಾಡಯ]

**ಶಿಂಜಿತ** (ಗು). ೧. ಶಬ್ದಮಾಡುತ್ತಿರುವ ; ಧ್ವನಿಯಿಂದ ಕೂಡಿದ : ಮಣಿಮಯ ಮಂಜೀರ ಮಂಜುಶಿಂಜಿತವಾಚಾಳಚಾರುಚರಣೆಯರುಂ . . . ನಿಜಾಂತಃಪುರ ಪುರಂಧ್ರಿಯರ್ವೆರಸು ಪೋಗಿ (ಪಂಚತಂ. ೧೨೯-೪). (ನಾ). ೨. (ಆಭರಣಗಳ) ಧ್ವನಿ ; ನಾದ : "ಭೂಷಣರಣಿತಂ ಶಿಂಜಿತಂ" (ವಸ್ತುಕೋ. ೮೧-೩೭) ; ಪಾದತಲಂಗಳೊಂದು ಕೆಂಪೆಸೆವಿನಮತ್ತಲಿತ್ತಲೆಡೆಯಾಡುವ ದಂದುಗದಾಗಳೇಂ ಪೊದಟ್ಟೆಸೆದುದೊ ಚಾರುದೇವಗಣಿಕಾಮಣಿನೂಪುರಮಂಜುಶಿಂ[ಪಾಠಾಂ. ಸಿಂ]ಜಿತಂ (ಆದಿಪು. ೭-೨೨) ; ನಿರ್ಜಿತಮದನಧನುರ್ಜ್ಯಾಲತಾಟಂಕೃತಂ ತರ್ಜಿತವೀಣಾಶಿಂಜಿತಂ ಭಂಜಿತರತಿರಮಣೀ ರತ್ನಕಾಂಚೀಪ್ರಣಾದಂ (ಪಂಪಾರಾಮಾ. ೧೦-೧೧೦). **[ಸಂ.]**

**ಶಿಂಜಿನಿ** (ನಾ). ೧. ಬಿಲ್ಲಿಗೆ ಕಟ್ಟುವ ಹಗ್ಗ ; ಹೆದೆ : ಧನುಶರವ ಕರವಾಂತು ಶಿಂಜಿನಿ ನಿನದವೆಸಗಲು (ಉತ್ತರ. ೩೩-೪). ೨. ಕಾಲಿಗೆ ಧರಿಸುವ ಒಂದು ಬಗೆಯ ಆಭರಣ ; ಕಾಲಂದುಗೆ ; ನೂಪುರ : "ಶಿಂಜಿನಿ ನೂಪುರಮಂದುಗೆ ಮಂಜೀರಂ ಹಂಸಕಂ ತುಳಾಕೋಟಿ" (ವಸ್ತುಕೋ. ೭೭-೭). **[ಸಂ. ಶಿಂಜಿನೀ]**

**ಶಿಂಜಿನಿಗೊಳಿಸು** (ಕ್ರಿ). ಬಿಲ್ಲಿಗೆ ನಾರನ್ನು ಸೇರಿಸು ; ಹೆದೆಯೇರಿಸು : ಕಿಡಿಗಣ್ಣನಭಿಮತವಹುದೆಂದು ಶಾರ್ಙ್ಗವ ಪಿಡಿದೆತ್ತಿ ಶಿಂಜಿನಿಗೊಳಿಸಿ ನುಡಿಸಿದ ಶ್ರೀಕೃಷ್ಣ (ಮೋಹತ. ೩೯-೨೩). [ಶಿಂಜಿನಿ + ಕೊಳ್$_1$ + - ಇಸು$_3$]

**ಶಿಂತರ್ಗೆ** (ನಾ). ಒಂದು ಊರಿನ ಹೆಸರು ; ಈ ಕೊಲ್ಹಾಪುರಜಿಲ್ಲೆಯ ಈಗಿನ ಶಿತೂರ್ : ಕನ್ನವಾಡ ಗಂಗವಾಡ ಬಳೆಯವಾಡ . . . ಸರ್ಬರಸ ಕೊಟೋರ್ ಶಿನ್ತರ್ಗೆ ಆಜುಂಬಾಳಿಗೆಯೊಡಂ (ಮೈಆರಿ. ೧೯೨೯, ೧೧೮-೨ ; 9ನೆಯ ಶತ). [?]

**ಶಿಂಪಿಗ** 'ಸಿಪ್ಪಿಗ' ನೋ.

**ಶಿಂಬಿಧಾನ್ಯ** (ನಾ). ಬೀಜದ ಕಾಳುಗಳಿರುವ ಧಾನ್ಯ : ಮೂಲವ್ಯಾಧಿಗೆ . . . ಚಪ್ಪರದವರೆಕಾಯಿ ಮೊದಲಾದ ಶಿಂಬಿಧಾನ್ಯ, ದಿವಾನಿದ್ರೆ ಮುಂತಾದಿವೆಲ್ಲಂ ಅಪಥ್ಯದ್ರವ್ಯಗಳೆಂದರಿವುದು (ಸಕವ್ಯ. ೨೯೮). [< ಸಂ. ಶಿಂಬೀಧಾನ್ಯ]

**ಶಿಂಬಿನಿ** (ನಾ). ಒಂದು ಬಗೆಯ ಹುಲ್ಲು : "ಶಿಂಬಿನೀ — ಶಿಂಬಿನೀತೃಣ" (ಓಷಧಿ. ೧೬೫). **[ಸಂ. ಶಿಂಬಿನೀ]**

**ಶಿಂಶಪೆ** (ನಾ). ೧. ಒಂದು ಬಗೆಯ ಸುಗಂಧದ ಮರ ; ಅಗರು : "ಪಿಚ್ಛಿಲಾ, ಅಗುರು, ಶಿಂಶಪಾ — ೩ ಅಗುರುಗಿಡದ ಹೆಸರುಗಳು" (ಸಿದ್ಧಾಂತಿ. ೧೨೭). ೨. ಅಶೋಕವೃಕ್ಷ : "ಸಿಸವೆ — ಶಿಂಶಪ = ಅಶೋಕ, ಅಗುರು" (ತದ್ಭಕೋ. ೪೫). **[ಸಂ. ಶಿಂಶಪಾ]**

**ಶಿಂಶುಪ** (ನಾ). = ಶಿಂಶಪೆ ೨ : ಇತ್ತ ಗುಹನು ಶಿಂಶುಪವೃಕ್ಷದ ಬುಡದಲ್ಲಿ ಶ್ರೀರಾಮನ ಅನುಜ್ಞೆಯಿಂದ . . . ಫಲಮೂಲಗಳನ್ನು ದೊನ್ನೆಗಳಲ್ಲಿ ತುಂಬಿ ತುಂಬಿ ತಂದಿಟ್ಟನು (ತುಳಸೀ. ೧೯೯) ; ಬೆಳಗುಜಾವದೊಳ್ ಬಂದೆನಿಲ್ಲಿಗೆ, ಕುಳ್ತೆನೀ ಶಿಂಶುಪದ ಮರದ ಶಾಖಾಗ್ರದೊಳ್ (ಶ್ರೀರಾಮಾ. ೫೧೦-೨೮೪). **[ಸಂ. ಶಿಂಶುಪಾ]**

**ಶಿಂಶುಮಾರ** (ನಾ). ೧. ಮೊಸಳೆ ; ನೆಗಳು : ಭಯಂಕರಶಿಂಶುಮಾರವಿಕಟದಂಷ್ಟ್ರಾಕ್ರಕಚಪಾಟ್ಯಮಾನನಾರಕನಿಕರ . . . ಸಲಿಲಲಹರಿಕಾನಿಕರಕರಾಲೆಯಂ (ಆದಿಪು. ೫-೮೭ ವ) ; ಶಿಂಶುಮಾರಂ ಮಾರುತವೇಗದಿಂ ಭೋರನೆ ಬಂದತ್ತಿಯ ಮರದ ಸಮೀಪಕ್ಕೆ ಸಾರಲ್ (ಪಂಚತಂ. ೨೬೧-೭). ೨. [ಜ್ಯೋತಿ] ಮೀನಿನಾಕಾರದ ಒಂದು ನಕ್ಷತ್ರಪುಂಜದ ಹೆಸರು : ವೈಶ್ವಾನರನ ದುಸ್ಥಿತಿಯ ಮೀಱಿ ನಡೆವುದು ಶಿಂಶುಮಾರೋದಾರಚಕ್ರವ ಕಳಿದು ಸೂಕ್ಷ್ಮಶರೀರದಲಿ ಸಲುವನು ತಪೋಲೋಕಕ್ಕೆ ವರಯೋಗಿ (ಭಾಗ. ೨-೧-೪೨). **[ಸಂ.]**

**ಶಿಂಶುಮಾರಕ** (ನಾ). = ಶಿಂಶುಮಾರ ೧ : ಶಿಂಶುಮಾರಕನ ವಾನರನ ಹಯ ಕುಂಜರನ ಪಂಚಾನನನ . . . ಗುಣವಾ ನರೇಂದ್ರನೊಳಿರಲು ಬೇಹುದು (ಕುಮಾರವ್ಯಾಸ. ೩-೧೧೯). **[ಸಂ.]**

**ಶಿಕಲ, ಶಿಕಲಿ, ಶಿಕ್ಕಲಿ, ಸಿಕಲ, ಸಿಕಲಿ, ಸಿಕಿನಿ** (ನಾ). ಅಸ್ತ್ರ, ಶಸ್ತ್ರಗಳನ್ನು ಸಾಣೆ ಹಿಡಿಯುವುದು : 'ಶಿಕಲಗಾರ' ಪರಾ. **ಶಿಕಲಿ** : 'ಶಿಕಲಿಗಾರ' ಪರಾ. **ಶಿಕ್ಕಲಿ**: 'ಶಿಕ್ಕಲಿಗಾರ' ಪರಾ. **ಸಿಕಲ** : 'ಸಿಕಲಗಾರ' ಪರಾ. **ಸಿಕಲಿ** : 'ಸಿಕಲಿಗಾರ' ಪರಾ. **ಸಿಕಿನಿ** : 'ಸಿಕಿನಿವಳೆಯ' ಪರಾ.

**ಶಿಕಲಿಮಾಡು** = ಸಾಣೆಹಿಡಿ ; ಹೊಳಪು ಕೊಡು : ಶಿಕಲಗಾರರು . . . ಇವರು ಪೂರ್ವದಲ್ಲಿ ಕತ್ತಿಗಳನ್ನು ಶಿಕಲೀ ಮಾಡುವರು (ಕಭಾಗ. ೨೦೫).

[← ಅರ. ಸೈಕಲ್; ಹಿಂ. ಸಿಕಲೀ ; ಮರಾ. ಶಿಕಲ್, ಶಿಕೀಲ್, ಶಿಕ್ಕಲ್, ಸಿಕಲ್, ಸಿಕ್ಕಲ್]

**ಶಿಕಲಗಾರ, ಶಿಕಲಿಗಾರ, ಶಿಕ್ಕಲಿಗಾರ, ಸಿಕಲಗಾರ, ಸಿಕಲಿಗಾರ, ಸಿಕ್ಕಲಗಾರ** (ನಾ). ಕತ್ತಿ, ಚಾಕು, ಚೂರಿ ಮುಂತಾದುವುಗಳನ್ನು ಸಾಣೆ ಹಿಡಿಯುವವನು, — ಹರಿತಗೊಳಿಸುವವನು : ಶಿಕಲಗಾರರು . . . ಈಗ ಚೂರಿ, ನಾದಿಗರ ಕತ್ತಿ . . . ಮುಂತಾದವುಗಳನ್ನು ಸಾಣೇ ಹಿಡಿಯುವರು (ಕಭಾಗ. ೨೦೫). **ಶಿಕಲಿಗಾರ** : ನಾನು ಶಿಕಲಿಗಾರನು ಕತ್ತಿಯ ಮಾರಲಿಕ್ಕೆ ಹೋಗುವೆನು (ಕಸಾರ. ೬೭). **ಶಿಕ್ಕಲಿಗಾರ** : ನಾನು ಡೆಮಾಸ್ಥನಿಸ್ ಶಿಕ್ಕಲಿಗಾರ ಹಸುಳೆ (ಯಕ್ಷಪ್ರ. ೧೩೭). **ಸಿಕಲಗಾರ** : "ಸಾಣೆ ಹಿಡಿಯುವವ, ಶಸ್ತ್ರಮಾರ್ಜ" (ಗಂಗಾಮಾ. ೬). **ಸಿಕಲಿಗಾರ** : ಜೀನಗಾರಗೆ ಸಿಕಲಿಗಾರ ಸಾಕ್ಷಿ (ಗಾದೆ). **ಸಿಕ್ಕಲಗಾರ** : ಕಮ್ಮಾರರು, ಸಿಕ್ಕಲಗಾರರು, ಬಡಿಗರು, ದಂಡಾಳುಗಳಿಗೋಸ್ಕರ ಶಸ್ತ್ರಗಳನ್ನು ಮಾಡುವುದರಲ್ಲಿ ಅಹೋರಾತ್ರಿ ದುಡಿಯುತ್ತಿದ್ದರು (ಯದುರಾ. ೬೭).

[ಶಿಕಲ + - ಗಾರ (< - ಕಾಱ). / ಮರಾ. ಸಿಕಲಗಾರ್, ಸಿಕ್ಕಲಗಾರ್]

**ಶಿಕಲಿ** 'ಶಿಕಲ' ನೋ.

**ಶಿಕಲಿಗಾರ** 'ಶಿಕಲಗಾರ' ನೋ.

**ಶಿಕಸ್ತು, ಶಿಖಸ್ತು** (ನಾ). ೧. (ಕಾಗದದಂತೆ ಮಡಿಸಿ) ಹರಿದಿರುವುದು ; ಭಗ್ನವಾದ ಸ್ಥಿತಿ : (ಕ). ೨. (ಹಡಗು, ನಾವೆ ಮುಂತಾದುವು) ಒಡೆದುದು; ಮುರಿದುದು : (ಕ). ೩. (ಕಟ್ಟಡ ಮುಂತಾದುವು) ದುರಸ್ತು ಇಲ್ಲದೆ ಜೀರ್ಣವಾಗಿರುವಿಕೆ, — ಶಿಥಿಲಗೊಂಡಿರುವಿಕೆ : (ಕ). **ಶಿಖಸ್ತು** : ೩. "ಶಿಖಸ್ತು" ಆಗಿದ್ದರೆ "ದುರಸ್ತು" ಮಾಡಿಸುವುದು, ತಾಲ್ಲೂಕುಅಧಿಕಾರಿಗಳ ಕರ್ತವ್ಯ (ಕಲಸ. ೧೫೯).

**ಶಿಕಸ್ತಾಗು** = ಚೆದರು ; ಚೆಲ್ಲಾಪಿಲ್ಲಿಯಾಗು : ನವಾಬರಾ ದಂಡು ಹೊಡೆದು ಆಗ್ಯ ಇವರು ಶಿಕಸ್ತಾಗಿ ಗಿಡಾಬಿದ್ದು ವೋಡಿಹೋಗುವಾಗ್ಗ ನಾವು ಮುಂದ ಇರುವಲ್ಲು ಲಡಾಯಿ ಬಿತ್ತು (ಮದಚ. ೪೩-೧೨). [← ಪಾರ. ಹಿಂ. ಶಿಕಸ್ತ್; ಮರಾ. ಶಿಕಸ್ತ್, ಸಿಕಸ್ತ್]

**ಶಿಕಾರಾ, ಷಿಕಾರ** (ನಾ). (ತಂಗಲು ಅನುಕೂಲವಾಗುವಂತೆ ಇರುವ) ನದಿಯಲ್ಲಿ ತೇಲಾಡುವ ದೋಣಿಮನೆ : ಒಂದು ಬಾರಿ ಶಿಕಾರಾ(ದೋಣಿ)ದಲ್ಲಿ ಕುಳಿತು ನಾವು ವಿಹಾರಕ್ಕೆ ಹೋಗಬಾರದೇಕೆ? (ರಕ್ತಸ. ೮೭). **ಷಿಕಾರ** : ಷಿಕಾರದಂತೆ ಗೃಹನೌಕೆಯೂ ಬೆಟ್ಟ ದಾಲಸರಸಿಯು ಕಣಿವೆ ಉದಕಮಂಡಲ ತೋರೆ ಶ್ರೀನಗರದಂತೆ (ಮಾನಸ. ೬೯-೧೦). [← ಹಿಂ. ಶಿಕಾರಾ]

**ಶಿಕಾರಿ, ಷಿಕಾರಿ** (ನಾ). ೧. (ಕಾಡಿನಲ್ಲಿ) ಮೃಗಪಕ್ಷಿಗಳನ್ನು ಬೆನ್ನಟ್ಟಿ ಹೋಗಿ ಹಿಡಿಯುವ ಅಥವಾ ಕೊಲ್ಲುವ ಕ್ರೀಡೆ ; ಬೇಟೆ : ವಿಕ್ರಮಾದಿತ್ಯರಾಯನು . . . ಒಂದು ದಿನ ಶಿಕಾರಿಗಾಗಿ ಅರಣ್ಯಕ್ಕೆ ಹೋಗಿ ನಾನಾಮೃಗವಂ ಸಂಹರಿಸಿ ಬರುವಲ್ಲಿ (ಬತ್ತೀಸ. ೬೩) ; ಅವರು ಹಮೇಷಾ ಶಿಕಾರಿಗೆ ಹೋಗುತ್ತಾ ಇದ್ದಾರೆ (ರಾಜೇಂದ್ರ. ೫೫). **ಷಿಕಾರಿ** : ೧. ಷಿಕಾರಿಮಾಡುವುದು, ಷಿಕಾರಿಗೋಸ್ಕರ, ತಿನ್ನುವುದಕ್ಕಲ್ಲ ! (ಬಂಕಿಮ. ೮೨);

ಈಗ ಅವನೊಬ್ಬ ನುರಿತ ಬೇಟೆಗಾರ. ವನಮಿಗಗಳನ್ನು **ಅವುಗಳ ಜಾಡು ಹಿಡಿದು** ಷಿಕಾರಿ ಮಾಡುವುದರಲ್ಲಿ ಎತ್ತಿದ ಕೈ (ಮಗಮಾಂ. ೨೫). **೨.** ಬೇಟೆಯಾಡುವವನು ; ಬೇಟೆಗಾರ: ರಾಯರು ನಿಪುಣ ಷಿಕಾರಿಗಳೆಂದು ನಮ್ಮ ಊರಲ್ಲೆಲ್ಲಾ ಪ್ರಸಿದ್ಧರಾಗಿದ್ದರು (ರಾಯಕ. ೧೪). **೩.** ಬೇಟೆಗೆ ಗುರಿಯಾಗುವ ಪ್ರಾಣಿ: ಈಗ ನೀವು ನನ್ನ ಬಂದಿ, ನನ್ನ ಷಿಕಾರಿ (ದೌಲತ್. ೧೨೮).

**[← ಪಾರ ; ಹಿಂ. ಮರಾ. ಶಿಕಾರ್, ಶಿಕಾರೀ]**

**ಶಿಕ್ಕಲಿ** 'ಶಿಕಲ' ನೋ.

**ಶಿಕ್ಕಲಿಗಾರ** 'ಶಿಕಲಗಾರ' ನೋ.

**ಶಿಕ್ಕಾ** 'ಸಿಕ್ಕಾ' ನೋ.

**ಶಿಕ್ಕಾಮೋರ್ತಬ್ಬ** 'ಸಿಕ್ಕೆಮೋರ್ತಬ' ನೋ. .

**ಶಿಕ್ಕೆ** 'ಸಿಕ್ಕಾ' ನೋ.

**ಶಿಕ್ಥ** (ನಾ). ಅನ್ನದ ಅಗುಳು : ಮಕರಕೇತುಪ್ರಹರರೂಪಂಗೆ ಭಾಂಡೋದನದ ಶಿಕ್ಥದಿಂ ತಣಿಪುದು ಚಕಿತಮಲ್ಲವೆ ನಮಗೆ ಗುರುರಾಯ (ದುರಪು. ೧೭-೪೪). [< ಸಂ. ಸಿಕ್ಥ]

**ಶಿಕ್ಮಿ, ಷಿಕಮಿ, ಷಿಕ್ಮಿ** (ನಾ). (ಜಮೀನನ್ನು ಮೂಲಗೇಣೀದಾರನಿಂದ ನಿರ್ದಿಷ್ಟಗೇಣಿಗೆ ಪಡೆದ) ಒಳಗೇಣಿ ; ಪೋಟಿಗೇಣಿ ; ಜಮೀನುದಾರನಿಂದ ನಿರ್ದಿಷ್ಟ ಗೇಣಿಗೆ ಜಮೀನನ್ನು ಪಡೆದು ಒಳಗೇಣಿದಾರನಿಂದ ಸರ್ಕಾರಕ್ಕೆ ಸಲ್ಲಬೇಕಾದ ಭಾಗವನ್ನು ಸಂದಾಯಪಡಿಸುವುದು : (ಮೈಗೆಜೆ. IV, ೭೮೫). 'ಶಿಕ್ಮಿದಾರ' ಪರಾ. **ಷಿಕಮಿ :** (ಕ). **ಷಿಕ್ಮಿ : ಕೆಲವು ಡಿಸ್ಟ್ರಿಕ್ಟುಗಳಲ್ಲಿ ಸಾಯರು** ಅಮಾನಿಯಾಗಿಯೂ ಇನ್ನು ಕೆಲವು ಡಿಸ್ಟ್ರಿಕ್ಟುಗಳಲ್ಲಿ ಷಿಕ್ಮಿಯಾಗಿಯೂ ನಡೆಯುತ್ತಿತ್ತು (ಚಾಮವಂ. ೩೩೪).

**ಷಿಕಮಿಕುಳ** = ಕಂದಾಯವನ್ನು ನೇರವಾಗಿ ಸರ್ಕಾರಕ್ಕೆ ಕಟ್ಟದೆ ಭೂಮಾಲೀಕನ ಮೂಲಕ ಸಂದಾಯ ಮಾಡುವ ರೈತ : ಪಟ್ಟೇದಾರನ ಷಿಕಮಿಕುಳಗಳ ಗೊಣಗಾಟಗಳಿಗೆ ಸ್ವಲ್ಪವಾದರೂ ಅವಕಾಶವಿಲ್ಲದಂತೆ ನಿಮಾನಿಮಿ ಕಂದಾಯವನ್ನು ಪಟ್ಟೇದಾರನಿಗೆ ಇತರ ಕುಳಗಳು ಕೊಡುವುದು (ಭೂಮಿಅ. ೩೭). **ಷಿಕ್ಮೀಹಿಡುವಳಿದಾರ** = ಒಳಗೇಣಿಯನ್ನು ಪಡೆದವನು ; ಒಳಗೇಣಿದಾರ : ಕಂದಾಯವು ಬಾಕಿ ಉಳಿದಲ್ಲಿ ಬಾಕಿ ಷಿಕ್ಮೀಹಿಡುವಳಿದಾರರ ಜಮೀನನ್ನು ಹರಾಜು ಮಾಡಬೇಕೇ ವಿನಹ . . . ಉಳಿದ ಷಿಕ್ಮಿಹಿಡುವಳಿಗಳನ್ನು ಹರಾಜು ಮಾಡಲ್ಪಡಕೂಡದು (ಗ್ರಾಮಾಕ. ೭೮). [← ಪಾರ. ಶಿಕಮಿ, ಶಿಕ್ಮ್ ; ಹಿಂ. ಶಿಕಮಿ ; ಮರಾ. ಶಿಕಮ್, ಸಿಕಮ್]

**ಶಿಕ್ಮಿದಾರ, ಷಿಕಮಿದಾರ, ಷಿಕ್ಮಿದಾರ** (ನಾ). ಒಳಗೇಣಿ ಪಡೆದವನು ; ಒಳಸಾಗುವಳಿದಾರ : (ಮೈಗೆಜೆ. IV. ೭೮೫). **ಷಿಕಮಿದಾರ :** (ಕ). **ಷಿಕ್ಮಿದಾರ :** ಜಮೀನು, ಎಂದರೆ ಜಮೀನಿನಲ್ಲಿನ ಅಥವಾ ಅದರ ಮೇಲಿನ ಅಧಿಕಾರ, ಜಮೀನಿನ ಮಾಲೀಕನ ಮತ್ತು ಷಿಕ್ಮಿದಾರನ ಸಂಬಂಧವೂ ಸೇರಿ ಜಮೀನುಹಿಡುವಳಿ ಮತ್ತು ಕಂದಾಯದ ವಸೂಲಿ (ಭಾಧಾಸ. ೨೮೯). [ಷಿಕ್ಮಿ + -ದಾರ$_4$ / ಮರಾ. ಶಿಕಮಿದಾರ್]

**ಶಿಕ್ಯ** (ನಾ). ೧. ಪಾತ್ರೆ ಮುಂತಾದವುಗಳನ್ನು ತೂಗುಹಾಕಲು ಬಳಸುವ ಸಾಧನ; ನೆಲುವು : " ಕಾಚಂ ಶಿಕ್ಯಮವಲಂಬಮೆನೆ ನೆಲಹು" (ಮಂಗರಾ. ೬೩-೨೬). **೨.** ತಕ್ಕಡಿಯ ತಟ್ಟೆಗಳನ್ನು ಕಟ್ಟಿರುವ ಹುರಿ. [ಸಂ.]

**ಶಿಕ್ಯಿತ** (ಗು). ೧. ನೆಲುವಿನಲ್ಲಿ ನೇತುಬಿಟ್ಟ, – ಇಳಿಬಿಟ್ಟ. (ನಾ). **೨.** ನೆಲುವಿನಲ್ಲಿ ಇಟ್ಟಿದ್ದು : "ಕಾಚಿತಂ, ಶಿಕ್ಯಿತಂ — ೨ ಉಟ್ಟಿಯಲ್ಲಿಡಲ್ಪಟ್ಟದ್ದು" (ಸಿದ್ಧಾಂತಿ. ೩೪೭). [ಸಂ.]

**ಶಿಕ್ಯೋತ್ಸವ** (ನಾ). ಕೃಷ್ಣಜನ್ಮಾಷ್ಟಮಿಯ ಮರುದಿನದಂದು ಹಾಲು, ಮೊಸರು ಮತ್ತು ಬೆಣ್ಣೆಯ ಮಡಕೆಗಳ ನೆಲುವನ್ನು ತೂಗುಹಾಕಿರುವ ಮಂಟಪದಲ್ಲಿ ಕೃಷ್ಣನ ಮೂರ್ತಿಯನ್ನಿಟ್ಟು ನಡೆಸುವ ಉತ್ಸವ, – ಮೆರವಣಿಗೆ : (ಕ).

[ಸಂ.]

**ಶಿಕ್ಷ** (ನಾ). ೧. ಉಪಾಧ್ಯಾಯ ; ಗುರು : ವಿಖ್ಯಾತನಚಳಿತಂ ಶಿಕ್ಷನೆನಿಕುಮಾರ್ಕನ ದೆಸೆಯೊಳ್ (ಜಾತತಿ. ೯-೧೭). **೨.** ದಂಡಿಸುವವನು ; ಶಿಕ್ಷಿಸುವವನು: 'ದುಷ್ಟಶಿಕ್ಷ' ಪರಾ. [ಸಂ.]

**ಶಿಕ್ಷಕ** (ನಾ). ೧. ಉಪಾಧ್ಯಾಯ ; ಗುರು : "ಕಲ್ನಾಯ್ತನೆಂದು ವಿದ್ಯಾಶಿಕ್ಷಕಂ" (ಕಬ್ಬಿಕ್ಕೆ. ೩೫) ; ಒಕ್ಕಣಿಕೆಗಳನ್ನು ಎಲ್ಲೆಲ್ಲಿ ಹ್ಯಾಗೆ ಉಪಯೋಗಿಸಬೇಕೆಂಬ ವಿಷಯದಲ್ಲಿ ಶಿಕ್ಷಕನು ಹುಡುಗರಿಗೆ ಚೆನ್ನಾಗಿ ತಿಳಿಸಿಕೊಡಬೇಕು (ಮುಂಬಯಿ. ೪-೮೪); ಸದಾಶಿವರಾಯರು . . . ಸರಕಾರಿಶಾಲೆಯ ಶಿಕ್ಷಕರಾದರು (ಇಂಚಾಪ. ೬-೧೯). **೨.** ದಂಡಿಸುವವನು ; ಶಿಕ್ಷಿಸುವವನು: 'ದುಷ್ಟಶಿಕ್ಷಕ' ಪರಾ. **೩.** ಕಲಿಯುವವನು. **೪.** [ಜೈನ] ಶಿಕ್ಷಾವ್ರತಗಳನ್ನು ಬೋಧಿಸುವವನು : ನಾಲ್ಸಾಸಿರದೈನೂಱಯ್ವದಿಂಬರ್ ಶಿಕ್ಷಕರುಂ ಒಂಭೈಸಾಸಿರ್ವರವಧಿಜ್ಞಾನಿಗಳುಂ (ಆದಿಪು. ೧೬-೪೦ ವ) ; ಎರಡುಲಕ್ಕೆಯ ಪತ್ತುಸಾಸಿರದ ನಾಲ್ನೂರ್ವರ್ ಶಿಕ್ಷಕರುಂ ಇಚ್ಛಾಸಿರ್ವರವಧಿಜ್ಞಾನಿಗಳುಂ (ಚಂದ್ರಪ್ರ. ೧೫-೮೧ ವ). **[ಸಂ.]**

**ಶಿಕ್ಷಕವೃತ್ತಿ** (ನಾ). ಉಪಾಧ್ಯಾಯನ ಕೆಲಸ : ಶಿಕ್ಷಕವೃತ್ತಿಯ ಪಾವನಯಾತ್ರೆಯ ಕೊನೆಯ ಮೆಟ್ಟಿಲನು ಹತ್ತಿ ನಿಂದೆ (ಇಂಚಾಪ. ೫೪-೫೮). **[ಸಂ.]**

**ಶಿಕ್ಷಕಿ** (ನಾ). ವಿದ್ಯೆಯನ್ನು ಕಲಿಸುವವಳು ; ಉಪಾಧ್ಯಾಯಿನಿ : ಸುಮತಿ . . . ಹೆಣ್ಣುಮಕ್ಕಳ ಸಾಲೆಯಲ್ಲೇ ಶಿಕ್ಷಕಿಯಾಗಿದ್ದಾಳೆ (ಆಜೋಲೀ. ೭೩). [ಶಿಕ್ಷಕ + – ಇ$_2$]

**ಶಿಕ್ಷಣ** (ನಾ). ೧. ತಿಳಿಯುವಿಕೆ ; ಕಲಿಯುವಿಕೆ ; ಜ್ಞಾನಾರ್ಜನೆ : ವ್ಯಕ್ತಿ ಕಟ್ಟಿಕೊಂಡು ಬರುತ್ತಿರುವ ಅನುಭವವೇ ಶಿಕ್ಷಣ. ಈ ಶಿಕ್ಷಣಕ್ಕೆ ಆಧಾರ ಜೀವನ (ಶಿಕ್ಷದ. ೨). **೨.** (ವಿದ್ಯೆಯನ್ನು) ಕಲಿಸುವಿಕೆ ; ಬೋಧಿಸುವಿಕೆ. **೩.** ತರಬೇತಿ ; ತರಪೇತು: ಅರೆ ಎಡೆ ಹಸ್ತಿಶಿಕ್ಷಣವಿಚಕ್ಷಣರಿಂದರೆ ಎಡೆ ಅಶ್ವಶಿಕ್ಷೆಯಿಂ (ಶಮದ. ೫೭ ಪ್ರಯೋ). **೪.** ಶಿಕ್ಷಿಸುವುದು ; ದಂಡಿಸುವುದು: 'ದುಷ್ಟಶಿಕ್ಷಣ' ಪರಾ. [ಸಂ.]

**ಶಿಕ್ಷಣಇಲಾಖೆ** (ನಾ). ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ಪಠ್ಯಪುಸ್ತಕ, ಶಿಕ್ಷಕರ ನೇಮಕ ಮುಂತಾದ ವಿಷಯಗಳನ್ನು ನೋಡಿಕೊಳ್ಳುವ ಸರಕಾರದ ಒಂದು ಆಡಳಿತ ಶಾಖೆ : ಶಿಕ್ಷಣಇಲಾಖೆಯ ಪಠ್ಯಪುಸ್ತಕಸಮಿತಿಯು ಈ ಪುಸ್ತಕವನ್ನು ಹತ್ತನೆಯ ತರಗತಿಯ ಪಠ್ಯಪುಸ್ತಕವನ್ನಾಗಿ ಆಯ್ಕೆಮಾಡಿದೆ (ರೂಢಿ). [ಶಿಕ್ಷಣ + ಇಲಾಖೆ]

**ಶಿಕ್ಷಣಕೇಂದ್ರ** (ನಾ). ತರಪೇತನ್ನು ನೀಡುವ ಮುಖ್ಯಸ್ಥಳ : ನೂತನರೀತಿಯ ಶಿಕ್ಷಣವನ್ನು ಉಪಾಧ್ಯಾಯರಿಗೆ ಕೊಡಲು ಶಿಕ್ಷಣಕೇಂದ್ರಗಳು ಹೆಚ್ಚಬೇಕು (ಶಿಕ್ಷದ. ೧೪೯).

[ಸಂ.]

**ಶಿಕ್ಷಣತಜ್ಞ** (ನಾ). ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ನುರಿತವನು: ಶಿಕ್ಷಣತಜ್ಞರೂ ಪೌರನೀತಿವಿಶಾರದರೂ . . . ತಮ್ಮ ಓದಿನ ಪರಿಜ್ಞಾನವನ್ನು ತಮ್ಮ ಜೊತೆಯ ಜನರ ಯೋಗಕ್ಷೇಮಕ್ಕಾಗಿ ಬರೆದು ಪ್ರಸಾರಮಾಡಬೇಕು (ರಾಮರಾ. ೪೫).

[ಸಂ.]

**ಶಿಕ್ಷಣಮಂಡಲಿ** (ನಾ). ಶಿಕ್ಷಣಕ್ಕೆ ಸಂಬಂಧಿಸಿದ ಆಗುಹೋಗುಗಳನ್ನೂ ನಿಯಮಾವಳಿಗಳನ್ನೂ ರೂಪಿಸಿ ವ್ಯವಸ್ಥಿತಗೊಳಿಸುವ ಆಡಳಿತಸಂಸ್ಥೆ: ಶಿಕ್ಷಣಮಂಡಲಿಯ ಆದೇಶವನ್ನು ಪಡೆಯಲಾಗಿದೆ (ರೂಢಿ). [ಸಂ. ಶಿಕ್ಷಣಮಂಡಲೀ]

**ಶಿಕ್ಷಣಮಾಧ್ಯಮ** (ನಾ). ವಿದ್ಯಾಸಂಸ್ಥೆಗಳಲ್ಲಿ ಶಿಕ್ಷಣದ ಪ್ರಸಾರದ ಮಾಧ್ಯಮವಾಗಿ ಬಳಸುವ ಭಾಷೆ ಇತ್ಯಾದಿ : ದೇಶಭಾಷೆ ಶಿಕ್ಷಣ ಮಾಧ್ಯಮವಾಗಬೇಕು (ಗೃಹವಿ. III, ಮುನ್ನುಡಿ). **[ಸಂ.]**

**ಶಿಕ್ಷಣವೇತ್ತ** (ನಾ). ಶಿಕ್ಷಣದ ರೀತಿ, ಉದ್ದೇಶಗಳನ್ನು ಕೂಲಂಕಷವಾಗಿ ಬಲ್ಲವನು : ಪಠ್ಯವಸ್ತುವಿನ ರಚನೆ ಮತ್ತು ವ್ಯವಸ್ಥೆಯ ಕಡೆಗೆ ಶಿಕ್ಷಣವೇತ್ತರು ಹೆಚ್ಚಿನ ಗಮನಕೊಡುತ್ತಿದ್ದಾರೆ (ಶಿಕ್ಷದ. ೧೭೧). **[ಸಂ. ಶಿಕ್ಷಣವೇತ್ತೃ]**

**ಶಿಕ್ಷಣಶಾಖೆ** (ನಾ). ಸಾರ್ವಜನಿಕಶಿಕ್ಷಣಕ್ಕೆ ಸಂಬಂಧಿಸಿದ ಆಡಳಿತವನ್ನುಳ್ಳ ವಿಭಾಗ : ಶಿಕ್ಷಣಶಾಖೆಯ ಮಂತ್ರಿಗಳು ಪ್ರವಾಸದಲ್ಲಿದ್ದಾರೆ (ರೂಢಿ).

[ಸಂ. ಶಿಕ್ಷಣಶಾಖಾ]

**ಶಿಕ್ಷಣಶುಲ್ಕ** (ನಾ). ವಿದ್ಯೆಯನ್ನು ಕಲಿಯುವುದಕ್ಕಾಗಿ ಶಾಲೆಗೆ ಅಥವಾ ಗುರುವಿಗೆ ಕೊಡುವ ಹಣ : ವಿದ್ಯಾರ್ಥಿವೇತನದಿಂದ ಆ ಹುಡುಗನ ಶಿಕ್ಷಣಶುಲ್ಕ ಕಡಮೆಯಾಯಿತು (ರೂಢಿ). [ಸಂ.]

**ಶಿಕ್ಷಾಕ್ರಮಣ** (ನಾ). ತರಬೇತಿಯ ಹತೋಟಿ : ತಿಮಿರವಡಗಿದ ಲೋಕ ಶಿಕ್ಷಾಕ್ರಮಣವಡಗಿದ ದಂತಿ ಕರ್ಮಭ್ರಮೆಗಳಡಗಿದ ಯೋಗಿ (ಬುಪ್ಪಾಅ. ೮-೨೪). **[ಸಂ.]**

**ಶಿಕ್ಷಾಗುರು** (ನಾ). ೧. ಉಪಾಧ್ಯಾಯ ; ಶಿಕ್ಷಕ : ಬರಲಿ ಕರ ಕೈತವದ ಶಿಕ್ಷಾಗುರುವನೆನುತವನೀಶ ದೂತರ ಹರಿಯಬಿಟ್ಟನು ಹರಿಯ ನಿಳಯಕೆ (ಕುಮಾವ್ಯಾ. ೮-೪೭). ೨. ಧರ್ಮೋಪದೇಶ ನೀಡುವವನು ; ಧಾರ್ಮಿಕಗುರು. [ಸಂ.]

**ಶಿಕ್ಷಾಚಾರ್ಯತನ** (ನಾ). ಗುರುವಾಗಿರುವಿಕೆ : ಹಿಡಿಹಿಡಿದುಕೊಂಡರ್ತಿಯಲಿ ಬೆಂಬಿಡದೆ ಶಿಕ್ಷಾಚಾರ್ಯತನದಲಿ ಜಡಿದು ಜಂಕಿಸಿ ಮುದ್ದುತನ ಮಿಗೆ ಮಾಯೆ ತನ್ನಂತೆ ನಡೆಯ ಕಲಿಸಿದಳಂಬೆವಿಂಡಿಗೆ (ಪ್ರಭುಲಿ. ೩-೩೨). [ಶಿಕ್ಷಾಚಾರ್ಯ + – ತನ]

**ಶಿಕ್ಷಾಧ್ಯಕ್ಷ** (ನಾ). ದಂಡನೆಮಾಡುವವನು ; ಪರಮೇಶ್ವರ : ತ್ರಾಹಿಮಾಂ ಜಗದುದಯರಕ್ಷ ಶಿಕ್ಷಾಧ್ಯಕ್ಷ ತ್ರಾಹಿಮಾಂ (ಪಚಕಾ. ೫-೭೯). [ಸಂ.]

**ಶಿಕ್ಷಾಪದ** (ನಾ). [ಬೌದ್ಧ] ಧರ್ಮಸ್ವೀಕಾರ ಮಾಡುವವನು ಆಚರಿಸಬೇಕಾದ ನಿಯಮ ; ಶೀಲ : ಭಗವಂತನು ಶ್ರಾವಕರಿಗೆ ಶಿಕ್ಷಾಪದವನ್ನು ಅಕಾಲದಲ್ಲಿ ಆಜ್ಞೆ ಮಾಡಲಿಲ್ಲ (ಬುದ್ಧಪ. ಮಿಲಿಂದ. ೧೧೩) ; 'ಜೈನಶ್ರಾವಕರು ಪರಿಪಾಲಿಸಬೇಕು' ಎಂದು ವಿಮರ್ಶಕರು ತೋರಿಸಿಕೊಟ್ಟಿರುವ ಎಂಟು "ಅಣುವ್ರತ"ಗಳಂತೆಯೇ ಬೌದ್ಧಉಪಾಸಕರಿಗೂ ಕೆಲವು ಶಿಕ್ಷಾಪದಗಳು ವಿಧಿಸಲಾಗಿವೆ (ಥೇರ್ಗಾಕ. ೯೮). [ಸಂ.]

**ಶಿಕ್ಷಾರ್ಹ** (ನಾ). ದಂಡನೆಗೆ ಯೋಗ್ಯವಾದುದು ; ಶಿಕ್ಷೆಗೆ ಅರ್ಹವಾದುದು : ಲೋಕದ ಕಣ್ಣಿನಲ್ಲಿ ಅದು ಅನ್ಯಾಯ ಅಕ್ಷಮ್ಯ ಶಿಕ್ಷಾರ್ಹ ಎಂದು ಕಂಡುಬಂದರೂ . . . ಅಂಜದೆ ಉತ್ಸಾಹದಿಂದ ನೆರವೇರಿಸಿ ಕೃತಕೃತ್ಯನಾದವನು (ವೀರಯೋ. VI. ಮುನ್ನುಡಿ). [ಸಂ.]

**ಶಿಕ್ಷಾಲಯ** (ನಾ). ಶಿಕ್ಷಣವನ್ನು ನೀಡುವ ಸ್ಥಳ ; ಪಾಠಶಾಲೆ : "ಶಿಕ್ಷಾಲಯಮದೋದುವಾಗಾರವಕ್ಕು" (ಮಂಗರಾ. ೫೯-೧೦). [ಸಂ.]

**ಶಿಕ್ಷಾವಚನ** (ನಾ). ಬೋಧನೆಯ ಮಾತು ; ಉಪದೇಶದ ನುಡಿ : ಗುರುಶಿಕ್ಷಾವಚನಂಗಳಂ ಹೃದಯದೊಳ್ ಮಾಂಗಲ್ಯಗೀತಾಮೃತಸ್ವರಮಂ ಕರ್ಣದೊಳಾಂತು . . . ಮಣಿಶೃಂಗೋತ್ತುಂಗಮಂ ಮೌಳಿಯಂ ಶಿರದೊಳ್ ತಾಳ್ದಿದಂ (ಚಂದ್ರಪು. ೪-೨೫). [ಸಂ.]

**ಶಿಕ್ಷಾವಿದ** (ನಾ). ಆನೆ, ಕುದುರೆ ಮುಂತಾದ ಪ್ರಾಣಿಗಳನ್ನು ಶಿಕ್ಷಿಸಿ ಪಳಗಿಸುವವನು, – ತರಪೇತು ನೀಡುವವನು : ಇದು ಭದ್ರಾಶ್ವಂ ಶಿಕ್ಷಾವಿದನಿದಱೊಳ್ಪನ್ನ ಬಲ್ಮೆಯಂ ಮೆಱೆಯನೆ (ಮಲ್ಲಿಪು. ೯-೪೭). [ಸಂ. ಶಿಕ್ಷಾವಿದ್]

**ಶಿಕ್ಷಾವ್ರತ** (ನಾ). [ಜೈನ] ಗೃಹಸ್ಥಾಶ್ರಮದಲ್ಲಿರುವ ಶ್ರಾವಕರು ಪಾಲಿಸಬೇಕಾದ ಸಾಮಯಿಕ, ಪ್ರೋಷಧ, ಅತಿಥಿಸಂಗ್ರಹ ಮತ್ತು ಸಲ್ಲೇಖನಗಳೆಂಬ ನಾಲ್ಕು ಪ್ರಕಾರದ ವ್ರತ : ವಿವಿಧ ಪ್ರಾಣಿಗಣಂಗಳೊಳ್ ಸಮತೆ . . . ಜೀವಿತಾಂತ್ಯದೆಡೆಯೊಳ್ ಸನ್ಯಾಸಮಂ ಮಾಟ್ಪುದೆಂಬಿವು ನೇರ್ಪಟ್ಟೆಸೆವನ್ನೆಗಂ ನೆಗೞ್ವುವಂ ಶಿಕ್ಷಾವ್ರತಂ ನಾಲ್ಕುಮಂ (ಆದಿಪು. ೭-೯) ; ಶೀಪ್ರೋಷವಾಸಮುಂ ದಾನವ್ರತಮುಂ ನಿಖಿಲ ಸಮತೆಯುಂ ಸನ್ಯಾಸವ್ರಜನಮುಮೆಂಬಿವು ಶಿಕ್ಷಾವ್ರತಮಿದು ನಾಲ್ಕು ತೆಱನನೂನಾಗಮದೊಳ್ (ಶಾಂತಿಪು. ೧-೯೦). [ಸಂ.]

**ಶಿಕ್ಷಾಶಾಸ್ತ್ರ** (ನಾ). ವೇದಾಂಗಗಳಲ್ಲಿ ಒಂದು ; ಸ್ವರ, ವ್ಯಂಜನಗಳನ್ನು ಉಚ್ಚರಿಸುವ ವಿಧಾನ ಮುಂತಾದುವನ್ನು ತಿಳಿಸುವ ಶಾಸ್ತ್ರ ; ☞ ಇದು ಮುಖ್ಯವಾಗಿ ವೇದಗಳಿಗೆ ಸಂಬಂಧಿಸಿದ ಪದವಾಗಿದ್ದು, ಈಚೆಗೆ ಎಲ್ಲಕ್ಕೂ ಅನ್ವಯವಾಗುತ್ತಲಿದೆ : "ಧ್ವನಿಶಾಸ್ತ್ರ ; ಶಿಕ್ಷಾ(ಶಾಸ್ತ್ರ). (ಒಂದು ಭಾಷೆಯ) ಧ್ವನಿಪದ್ಧತಿ" (Phonology. ೯೦೮೧). [ಸಂ.]

**ಶಿಕ್ಷಾಸೂತ್ರ** (ನಾ). ಶಿಕ್ಷಾಶಾಸ್ತ್ರದ ನಿಯಮ ; ಉಚ್ಚಾರಣಾಕ್ರಮ : ಈಕ್ಷಿಸಿ ಶಿಕ್ಷಾಸೂತ್ರದ ಲಕ್ಷಣಮಂ ಲೋಕರೂಢಿ ಕೆಡದವೊಲಱಿವರ್ ಲಕ್ಷಿಪುದು ನುಡಿಗಳೊಳ್ ಬಹುಳಾಕ್ಷೇಪಣಮಿಲ್ಲದಿರೆಯುಮಱಿಯದ ಕೆಲವಂ (ಶಮದ. ೨೫೨). [ಸಂ.]

**ಶಿಕ್ಷಿಕೆ** (ನಾ). ಉಪಾಧ್ಯಾಯಿನಿ ; ಶಿಕ್ಷಕಿ : ಒಬ್ಬ ಶಿಕ್ಷಿಕೆಯರೊಡನೆ ಹೋಗಿದ್ದೆವು (ಅನ್ನ. ೮೫). [ಸಂ. ಶಿಕ್ಷಿಕಾ]

**ಶಿಕ್ಷಿತ** (ಗು). ೧. ಕಲಿತ ; ಬೋಧಿಸಲ್ಪಟ್ಟ. ೨. ತರಬೇತುಗೊಂಡ ; ಪಳಗಿದ. ೩. ಚತುರತೆಯಿಂದ ಕೂಡಿದ. (ನಾ). ೪. ವಿದ್ಯೆಯನ್ನು ಕಲಿತವನು ; ಶಿಕ್ಷಣ ಪಡೆದವನು : ಕೃತಮಱಿವೊಡೆ ಸದ್ಗುರುಶಿಕ್ಷಿತನಪ್ಪವನಱಿಗುಂ (ಚಂದ್ರಪು. ೪-೨೪). ೫. ನಿಷ್ಣಾತ ; ಪ್ರವೀಣ : "ಚತುರಃ, ಕ್ಷೇತ್ರಜ್ಞಃ . . . ಶಿಕ್ಷಿತಃ, ಪ್ರವೀಣಃ – ಈ ೧೧ ಬಲ್ಲವಂ" (ಹಲಾಯು. ೫೫-೧೮೦). [ಸಂ.]

**ಶಿಕ್ಷಿತಾಯುಧ** (ನಾ). ಶಸ್ತ್ರಪ್ರಯೋಗದಲ್ಲಿ ನಿಷ್ಣಾತನಾದವನು: "ಸ್ವಹಸ್ತಃ, ಶಿಕ್ಷಿತಾಯುಧಃ – ಈ ೨ ಕೆಯ್ವುವಿಡಿವವಂ" (ಹಲಾಯು. ೬೧-೨೦೮). [ಸಂ.]

**ಶಿಕ್ಷಿಸು** (ಕ್ರಿ). ೧. ಕಲಿಸು ; ಬೋಧಿಸು : ಶಾಸ್ತ್ರಂಗಳೊಳ್ ಪರಿಣತರ್ ನೀಮುಮಪ್ಪಿರಂತನಿತುಮನೀ ಕೂಸಿಂಗೋದಿಸಿ ಶಿಕ್ಷಿಸಿದುದಂ ತೋಱಿದಿರಪ್ಪೊಡೆ ಕೂಸು ನಿಮ್ಮ ಮಗಳಪ್ಪುದು ನಿಶ್ಚಯಂ (ಸುಕುಮಾ. ೭-೪೫ ವ); ನಯದಿಂದಂ ತಾಯುಂ ತಂದೆಯುಮೊಳ್ಪನೆ ಶಿಕ್ಷಿಪಂತೆ ಮನುಜಾವಳಿಯಂ ನಯದಿಂ ಸಂಭೋದಿಸಿ (ಸಮಪ. ೧-೨೯); ವಿದ್ಯೋಪವಿದ್ಯೆಗಳನತಿಹೃದ್ಯಂಗಳನಾತ್ಮಜಂಗೆ ಶಿಕ್ಷಿಸುವಂತಾತೋದ್ಧರವ ಮುಣ್ಮೆ (ಚಂದ್ರಪು. ೪-೪). ೨. ತರಪೇತು ಕೊಡು ; ತಿದ್ದು : ಸಕಲಶಾಸ್ತ್ರಾಭ್ಯಾಸವಂಗೆಯ್ವಮಂದಿರ್ಪಮಿವರ್ ನಮ್ಮನತ್ಯಾಗ್ರಹದಿಂ ಶಿಕ್ಷಿಸಿ ಸಾಕ್ಷರಿಕರಂ ಮಾಟ್ಪೊಡೆ ನಮ್ಮೊಲ್ಲದುದಾವುದೆಂದು . . . ಒಡಂಬಟ್ಟು (ಸುಕುಮಾ. ೨-೫೫ ವ); ದೀಕ್ಷೆಯೆನಗಿಲ್ಲ ಪಾಪಾತ್ಮನಂ ಪತಿಕರಿಸಿ ಕರುಣದಿಂ ಧರ್ಮಪಥಕೆ ಶಿಕ್ಷಿಸಿದೆ ನೀನೆ ಗುರುವು (ಚಬಪು. ೫೦-೨೦). ೩. ದಂಡಿಸು ; ಶಿಕ್ಷೆಕೊಡು : ಕಸದೊಡನೆ ಕೂಡಿ ಪೆರ್ಚಿದ ಸಸಿಯುಂ ಶಿಕ್ಷಿಸದ ಮಕ್ಕಳುಂ . . . ಒಪ್ಪಲಾರ್ಕುಮೆ ಕಡೆಯೊಳ್ (ಧರ್ಮಾಮೃ. ೨-೮೨); ಗಂಡಹೆಂಡಿರನತ್ಯುಗ್ರದಿ ಶಿಕ್ಷಿಸಲ್ ಪ್ರಜೆಗಳಂ ಭೂಪಾಲಕಂ ಬಾಧಿಸಲ್ (ಸೋಮೇಶ. ೨೯); ತನ್ನ ಸಹಜಮಲ್ಲದ ಪಿರಿದಲಂಕರಿಸಿಕೊಂಬವಳ್ಳಿಲ್ಲಳೇ ಶಿಕ್ಷಿಸಿದೊಡೆ (ಜೈಮಿಭಾ. ೫-೫೭). [ಶಿಕ್ಷೆ + – ಇಸು]

**ಶಿಕ್ಷೆ** (ನಾ). ೧. ಕಲಿಕೆ ; ಜ್ಞಾನಾರ್ಜನೆ ; ವಿದ್ಯಾಭ್ಯಾಸ : ಆ ಸಮಯದಲಿ ಬಂದನೊಬ್ಬನು ಭೂಸುರನು ಸಕುತೂಹಲನು ಬಹುದೇಶಪರಿಯಟಣ ಪ್ರವಾಸಾಭ್ಯಾಸ ಶಿಕ್ಷೆಯಲಿ (ಕುಮಾವ್ಯಾ. ೧೧-೨). ೨. ತರಬೇತು ; ಶಿಕ್ಷಣ : ನೀರಿನಲ್ಲಿ ಸಂಚರಿಸುವ ಮೀನುಗಳು ಶಿಕ್ಷೆಯಿಲ್ಲದೆಯಿದ್ದಾಗ್ಯೂ . . . ವಿಚಿತ್ರಗಮನಗಳಿಂದ ಪ್ರಕಾಶಿಸುವವು (ಅರ್ಕಮಾ. ೪೭) ; ಒಳ್ಳೆಯ ಶಿಕ್ಷೆಯಲ್ಲಿ ಬೆಳೆದವನಂತೆ ನಡೆದುಕೊಳ್ಳುತ್ತಾನೆ (ಹೊಸಕ್ಕಿ. ೧). ೩. ದಂಡನೆ; ದಂಡ : "ಶಿಕ್ಷೆ, ಪಡೆ – ಈ ೨ ದಂಡಮೆಂಬುದು" (ಹಲಾಯು. ೧೩೭-೩೭) ; ಸಾಕ್ರಟೀಸನು ನಾಸ್ತಿಕನೆಂದು ನಿರ್ಣಯಿಸಿ, ವಿಷ ಕುಡಿಸಿ ಅವನನ್ನು ಕೊಲ್ಲಬೇಕೆಂಬ ಶಿಕ್ಷೆಯನ್ನು ವಿಧಿಸಿದರು (ಮುಂಬಯಿ. ೪-೧೮೨) ; ನಾಲ್ಕುವರ್ಷದ ಹುಡುಗ ಕಳ್ಳತನ ಮಾಡಿದರೆ ಅವನಿಗೆ ಯಾವ ಶಿಕ್ಷೆಯೂ ಇಲ್ಲ (ಜೀವಾತ್ಮ. ೨೬೫). ೪. (ಶಿಕ್ಷೆ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು ಮತ್ತು ಜ್ಯೋತಿಷ ಎಂಬ ಆರುಬಗೆಯ ವೇದಾಂಗಗಳಲ್ಲಿ ಒಂದು ; ಶಿಕ್ಷಾಶಾಸ್ತ್ರ : "ವೇದಾಂಗಷಟ್ಕೃಯಂ ಶಿಕ್ಷಾದಿಗಳುಪನಿಷದಮೆಂಬುದದು ವೇದಾಂತ" (ವಸ್ತುಕೋ. ೩-೧೨) ; ಶಿಕ್ಷೆಯೇ ಉದಾತ್ತ ಅನುದಾತ್ತ ಸ್ವರಿತ ಪ್ರಚಯಗಳೆಂಬ ಚತುರ್ವಿಧಸ್ವರಕರಣಪೂರ್ವಕಮಾದ ಪದಪಾಳಿಕ್ರಮದಿಂ ವೇದಾಧ್ಯಯನಾದಿಕವ ಶಿಕ್ಷಿಸುವುದು (ವಿವೇಕ. ೪).

**ಶಿಕ್ಷೆಕೊಡು** = ದಂಡನೆಯನ್ನು ನೀಡು ; ಶಿಕ್ಷಿಸು : ತಪ್ಪು ಮಾಡಿದ್ದಕ್ಕೆ ಶಿಕ್ಷೆ ಕೊಡುವೆನೆಂಬ ಭಯದಿಂದಲೋ ಏನೋ ಎಲ್ಲರೂ ನಾನಲ್ಲ ತಾನಲ್ಲ ಎಂದುಬಿಟ್ಟರು (ಹಸುಹೊ. ೨೦೭). **ಶಿಕ್ಷೆವಿಧಿಸು** = **ಶಿಕ್ಷೆಕೊಡು** : ಅವನಿಗೆ ಗಲ್ಲಿಗೆತ್ತಬೇಕೆಂದು ಶಿಕ್ಷೆವಿಧಿಸಿರುವುದರಿಂದ, ಅವನಿದ್ದರೂ ಸತ್ತ ಕೂಟವೇ (ಕಲನ. ೧೮೩). [ಸಂ. ಶಿಕ್ಷಾ]

**ಶಿಕ್ಷೆಗೆಡು** (ಕ್ರಿ). ಅಂಕೆಯಿಲ್ಲವಾಗು ; ದಂಡನೆಗೆಡು : ಇನಿತುಂ ಮೋಹಂ . . . ಅಪ್ಪುದಱಿಂದನಿಯತಿಕೆಯಿಂದೆ ನಡೆಸಲ್ಕಿನಿತಾದುದು ಶಿಕ್ಷೆಗೆಟ್ಟ ಕಾರಣದಿಂದಂ (ಧರ್ಮಾಮೃ. ೨-೮೧). [ಶಿಕ್ಷೆ + ಕೆಡು₁]

**ಶಿಕ್ಷೆಗೆಯ್** (ಕ್ರಿ). ಕಲಿಸು ; ಬೋಧಿಸು : ತಾನುಮಾ ಮಾರ್ಗದೊಳತಿನಿಷ್ಠುರತೆಯಿಂ ಶಿಕ್ಷೆಗೆಯ್ಯುತ್ತುಂ (ಸುಕುಮಾ. ೨-೫೭ವ) ; ಆಚಾರ್ಯಂ ಶಿಷ್ಯನ ಶೀಲಾಚಾರಮನಱಿತು ಶಿಕ್ಷೆಗೆಯ್ವುದು (ಅಶ್ವಶಾ. ೧೦-೧). [ಶಿಕ್ಷೆ + ಕೆಯ್₁]

**ಶಿಕ್ಷೋಪಕರಣ** (ನಾ). ಪಳಗಿಸುವ ಉಪಕರಣ,– ಸಲಕರಣೆ : ಪಿಂಡಾನೆಗಳೊಂದುಗೂಡಿ ಶಿಕ್ಷೋಪಕರಣಂಬೆರಸು ಸುಳಿದೇಱುವ ಸುತ್ತಂ ಮೆಟ್ಟಿಸುವ ವಿಸಟಂಬರಿವ . . . ಆ ಧೋರಣರ್ನೆರೆದು (ರಾಜಶೇ. ೬-೧೧ ವ). [ಸಂ.]

**ಶಿಖಂಡ** (ನಾ). ೧. ತಲೆಯ ಎರಡೂ ಪಕ್ಕಗಳಲ್ಲಿ ಬಿಟ್ಟಿರುವ ಕೂದಲು ; ಚಂಡಿಕೆ ; ಶಿಖೆ : "ಬಾಳಕರ ಶಿಖೆ ಶಿಖಂಡಂ ಚೂಳಾಖ್ಯಂ ಕಾಕಪಕ್ಷ ಮೆಂಬುದದಕ್ಕುಂ" (ವಸ್ತುಕೋ. ೭೦-೨೧) ; ಚಂಚದ್ಭ್ರಮರಚಲಶಿಖಂಡಂ . . . ಲೀಲೆಯಿಂ ಬಾಲಕನೆನೆ ಸುಳಿದಂ ಸ್ವೈರಚಾರಂ ಸಮೀರಂ (ರಾಜಶೇ. ೧೧-೭೭). ೨. ತಲೆ ; ಶಿರಸ್ಸು: ಸ್ವಸ್ತಿಸಕಲರಾಜಶಿಖಂಡಶೇಖರಾರ್ಚಿತಚರಣಾರವಿಂದನುಂ . . . ಎನಿಸಿದ ಶ್ರೀಮತ್ತಾರಾಪೀಡದೇವಂ . . . ಕಾರ್ಯಮಂ ಬೆಸಸಿರ್ಪಂ (ಕಾದಂಬ. ೨೫೮). ೩. ನವಿಲು ಮುಂತಾದ ಪಕ್ಷಿಗಳ ತಲೆಯ ಮೇಲೆ ಇರುವ ತುರಾಯಿ ; ಕೊಟ್ಟು. ೪. ನವಿಲುಗರಿ : "ಪ್ರಚಳಾಕಃ, ಶಿಖಂಡಃ — ಈ ೨ ಹೀಲಿ" (ಹಲಾಯು. ೪೧-೪೯). [ಸಂ.]

**ಶಿಖಂಡಕ** (ನಾ). = ಶಿಖಂಡ ೧ : "ಶಿಖಂಡಕಂ ಚಂಡಿಕೆಯದು" (ಮಂಗರಾ. ೯೪-೬); ತೋರ ಮಾಮಿಡಿ ಶಿಖಂಡಕದಂತಿರೆ ಮಧ್ಯದಲ್ಲಿ ಕಂಗೊಳಿಪಳಿವಿಂದು ತದ್ರಜಮೆ ಮೃದ್ರಜದಂತಿರೆ . . . ಮಾಮಿಡಿಯುಮದೊಪ್ಪಿತು ಮಾರನ ಮಲ್ಲನಂತೆವೋಲ್ (ರಾಜಶೇ. ೯-೫೬). [ಸಂ.]

**ಶಿಖಂಡಮಂಡನ** (ನಾ). ಮುಡಿಯಲ್ಲಿ ಧರಿಸುವ ರತ್ನ ; ಚೂಡಾಮಣಿ : ಲೋಕೈಕಮಿತ್ರಂ . . . ಇಳಾವಿಳಾಸಿನಿಯ ಶಿಖಂಡಮಂಡನದಂತಿರ್ದ ಶಿಖಂಡಮೆಂಬ ಮಂಡಳದೊಳಗೆ ಬರೆವರೆ (ಪುಷ್ಪಪು. ೫-೫೯ ವ). [ಸಂ.]

**ಶಿಖಂಡಮಣಿ** (ನಾ). = ಶಿಖಂಡಮಂಡನ : ತನಗೆ ಪೊಡೆವಟ್ಟ ವಜ್ರಬಾಹುವಂ . . . ಆತ್ಮೀಯಶಿಖಂಡ [ಪಾಠಾಂ. ಶಿಖಂಡಮಂಡನ, ಶಿಖಂಡಿತ] ಮಣಿಮರೀಚಿಗಳಿಂ ನಿಜ ಪದಕಮಲದೊಡನೆ ವಸುಂಧರೆಯುಮನಲಂಕರಿಸಿದ ವಸುಂಧರೆಯುಮಂ ನಿಜಾನುಜೆಯಂ ಪರಸಿ (ಆದಿಪು. ೪-೨೪ ವ) ; ಕ್ಷಿತಿಗೆಯ್ದೆನ್ನ ಗುಣಂ ಶಿಖಂಡಮಣಿಯಾಯ್ತೆನ್ನನ್ವಯಂ ಲೋಕಪೂಜಿತಮಾಯ್ತು (ಪುಷ್ಪಪು. ೧೪-೧೨). [ಸಂ.]

**ಶಿಖಂಡರತ್ನ** (ನಾ). = ಶಿಖಂಡಮಂಡನ : ಆಸ್ಥಾನಮಂಡಪಮಂಡನೀಭೂತ ಮಣಿಮಯಾಸನ ಪ್ರಾಚ್ಯಾಚಲಶಿಖಂಡರತ್ನಮಾಗಿರ್ದ ಕುಮಾರನಂ ಸಾರೆವಂದು . . . ಕುಳ್ಳಿರ್ದು (ಆದಿಪು. ೮-೮ ವ). [ಸಂ.]

**ಶಿಖಂಡಿ** (ಗು). ೧. ಜುಟ್ಟನ್ನು ಹೊಂದಿರುವ ; ಚಂಡಿಕೆಯುಳ್ಳ. (ನಾ). ೨. ಶಿಖಂಡವುಳ್ಳ ವ್ಯಕ್ತಿ ; ಜಟಾಧಾರಿ : ಹೇ ಶಿಖಂಡಿ ಹೇ ತ್ರಿದಂಡಿ ನಿನ್ನೊಡ ಚಾಮುಂಡೀತಾಂಡವಕ್ಕೆ ಹಾಸ್ಯಲಾಸ್ಯ ಬೆರಸುವ ರಣಚಂಡೀ (ಅರಳು. ೪೦೫-೫). ೩. ನವಿಲು ; ಮಯೂರ : ಶಿಖಂಡಿಕುಲಸ್ವನಮಿತ್ತಲಿತ್ತ ಕೇಸರಿರವಮಿತ್ತಲಿತ್ತ ಮೆನುತಿರ್ಪ ರವಂ ನೆಗೆದತ್ತು ಸುತ್ತಲುಂ (ಕಾದಂಪೂ. ೧೫೭) ; ಶಿಖಂಡಿ ತಾಂಡವಕ್ಕಲಸಿದುದು . . . ಶರತ್ಪ್ರಥಮಪ್ರವೇಶದೊಳ್ (ಜಗವಿ. ೪-೩೭). ೪. ಒಂದು ಬಗೆಯ ಹಾವು : "ರಾಜಿಲೀ, ಡುಂಡುಭಃ— ೨ ಎರಡುತಲೆಗಳುಳ್ಳ ಶಿಖಂಡಿಯೆಂಬ ಸರ್ಪಭೇದದ ಹೆಸರುಗಳು" (ಸಿದ್ಧಾಂತಿ. ೭೨). ೫. ಸಪ್ತರ್ಷಿಗಳಲ್ಲಿ ಒಬ್ಬನ ಹೆಸರು. ೬. ದ್ರುಪದರಾಜನ ಒಬ್ಬ ಮಗ ; ☞ ಕಾಶಿರಾಜನ ಮಗಳಾದ ಅಂಬೆಯು ಭೀಷ್ಮನ ಮೇಲಿನ ಸೇಡುತೀರಿಸಿಕೊಳ್ಳಲು ಶಿವನನ್ನು ಕುರಿತು ತಪಸ್ಸು ಮಾಡಿ ಶಿಖಂಡಿ ಎಂಬ ಹೆಸರಿನಿಂದ ದ್ರುಪದರಾಜನ ಮಗನಾಗಿ ಜನಿಸಿದಳೆಂದು ಮಹಾಭಾರತದಲ್ಲಿ ಹೇಳಿದೆ : ಕೋಲು ಪಾರ್ಥನವಿವು ಶಿಖಂಡಿಯ ಕೋಲುಗಳು ತಾನಲ್ಲ (ಕುಮಾಭೀ. ೧೦-೯). ೭. (ಆಲಂ) ಷಂಡ ; ನಪುಂಸಕ : ನಿನಗಾಜಿರಂಗದೊಳ್ ಸಾರಥಿ ಯಪ್ಪೊಡಪ್ಪುದು ಶಿಖಂಡಿಯೆ ನಿನ್ನೊರೆಗುಂತೆ ಗಂಡರಾರ್ (ಪಂಪಭಾ. ೮-೯೭) ; ಬೇಕಾದರೆ ಅವಳು ತನ್ನನ್ನು ಶಿಖಂಡಿಯೆಂದು ಭಾವಿಸಲಿ (ಭ್ರಮಾನ. ೧೯) ; ನಪುಂಸಕನಂತೆ ಮಾತನಾಡುವ ನೀನು ಶಿಖಂಡಿಯೇ ಆಗಿಹೋಗು (ಕೊಸಷ್ಟ. ೨೦೮). [ಸಂ. ಶಿಖಂಡಿನ್]

**ಶಿಖಂಡಿಕೆ** (ನಾ). = ಶಿಖಂಡ ೧ : "ಶಿಖಾ, ಕಾಕಪಕ್ಷ, ಶಿಖಂಡಿಕಾ — ಈ ೩ ಚಂಡಿಕೆ" (ಹಲಾಯು. ೮೮-೩೭೮). [ಸಂ. ಶಿಖಂಡಿಕಾ]

**ಶಿಖಂಡಿತಾಂಡವ** (ನಾ). ನವಿಲಿನ ಕುಣಿತ ; ಜಾಗರ : ಉತ್ಕಶಿಖಂಡಿ ತಾಂಡವಮನೋಹರಮುಜ್ಜ್ವಲರತ್ನರಾಜಿರಾಜತ್ಕಟಕಂ . . . ಒಪ್ಪುಗುಂ ಕುಮುದ ಪಾಂಡುರಮಾ ವಿಜಯಾರ್ಧಪರ್ವತಂ (ಆದಿಪು. ೧-೭೩). [ಸಂ.]

**ಶಿಖರ** (ನಾ). ೧. ತುದಿ ; ಅಗ್ರಭಾಗ. ೨. ಬೆಟ್ಟದ ತುದಿ, — ಅಗ್ರಭಾಗ : ಶಿರವಮಿನಿರಶ್ಮಿಪದತಳಸರೋಜವಮಂ ತಪನತಪ್ತಶಿಖರಾಗ್ನಿ . . . ಸುಡೆ (ಸುಕುಮಾ. ೪-೧೪) ; ಬೆಟ್ಟಗಳ ಗುಲಾಬಿಬಣ್ಣದ ಶಿಖರಗಳು ಉದಯಿಸುತ್ತಿದ್ದ ಸೂರ್ಯನ ಕಾಂತಿಯಲ್ಲಿ ಪ್ರಕಾಶಿಸುತ್ತಿದ್ದವು (ಮಲೆನಾ. ೧೮). ೩. ಮರದ ತುದಿ : "ಪ್ರಾಗ್ರಂ (ತು), ಶಿಖರಂ, ಶಿರಃ - ಈ ೩ ಮರದ ತುದಿ" (ಹಲಾಯು. ೩೦-೨೨). ೪. ದೇವಾಲಯದ ಮಹಾದ್ವಾರದ ಮೇಲಿನ ಗೋಪುರ : ಪಲ್ಲವರ ಮತ್ತು ಚೋಳರ ದೇವಾಲಯಗಳ ಶಿಖರಗಳು ದ್ರಾವಿಡನಮೂನೆಯ ಮುಖ್ಯಉದಾಹರಣೆಗಳು (ಭಾರದ. ೪೯೨). ೫. [ನಾಟ್ಯ] ಅಸಂಯುತಹಸ್ತಮುದ್ರೆಗಳಲ್ಲಿ ಒಂದು ಬಗೆ ; ☞ "ಮುಷ್ಟಿಹಸ್ತದಲ್ಲಿ ಹೆಬ್ಬೆರಳನ್ನು ಮೇಲಕ್ಕೆತ್ತುವುದು" (ಲಾಸ್ಯರಂ. ೨೫ ಗದ್ಯಾನುವಾದ); ಧರಿಸಲ್ ಮುಷ್ಟಿಸ್ವಸ್ತಿಕಕರಮೆಂದುಂ ನೃತ್ತಹಸ್ತಮಕ್ಕುಂ ಮತ್ತಂ ಪಿರಿದುಂ ಸ್ವಸ್ತಿಕವೇಳೆಯೊಳೆರಡುಂ ಶಿಖರಾಖ್ಯ ಹಸ್ತಮಕ್ಕುಂ ಕಪಿತ್ಥಂ (ಲಾಸ್ಯರಂ. ೨-೭೨); ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತಹಸ್ತಗಳು ಯಾವುವೆಂದರೆ — ೧. ಪತಾಕ . . . ೮. ಶಿಖರ (ಅಭಾನ್ಯ. ೪೭). [ಸಂ.]

**ಶಿಖರಣೆ** 'ಸೀಕರಣೆ' ನೋ.

**ಶಿಖರಿ** (ಗು). ೧. ಶಿಖರವನ್ನುಳ್ಳ ; ತುದಿಯನ್ನು ಹೊಂದಿರುವ. (ನಾ). ೨. ಬೆಟ್ಟ ; ಪರ್ವತ : ಸಮಸ್ತೈಕಮೇರುವಿನ ಭುಜಶಿಖರಂಗಳ್ ಕುಲಶಿಖರಿ ಶಿಖರಂಗಳಂತಾದುವು (ಪಂಪಭಾ. ೨-೩೯ ವ) ; ದಿನಲಕ್ಷ್ಮೀಕಾಂತೆ . . . ಎಯ್ದುವರ್ಪಲ್ಲಿ ಕಾಲಿಂ ನವಮಣಿಮಯಮಂಜೀರಕಂ ನುಣ್ಣುತಂ ತೀವಿ ನಿಜಪ್ರದ್ಯೋತದಿಂ ಪಶ್ಚಿಮಶಿಖರಿಶಿರೋಭಾಗದೊಳ್ ಬಿಟ್ಟುದಂಬಂತಿನಬಿಂಬಂ ರಂಜಿಸಿತ್ತು (ಕಾದಂಪೂ. ೫೦೭). ೩. ಮರ ; ವೃಕ್ಷ : "ವೃಕ್ಷಃ, ಅಂಘ್ರಿಪಃ, ಕ್ಷಿತಿರುಹಃ, ಶಿಖರೀ . . . ದ್ರುಮಃ, ಪಾದಪಃ — ಈ ೧೯ ಮರಂ" (ಹಲಾಯು. ೨೯-೨೩). ೪. ತಲೆಯ ಮೇಲೆ ಕೊಟ್ಟುಳ್ಳ ಒಂದು ಬಗೆಯ ಪಕ್ಷಿ ; ಕೊಟ್ಟುಕ : "ಶಿಖರಿಯೆನೆ ಕೊಟ್ಟುಕಂ" (ಮಂಗರಾ. ೫೧-೬). ೫. ಒಂದು ಬಗೆಯ ಗಿಡ ; ಅಪಾಮಾರ್ಗ ; ಉತ್ತರಣೆ : "ಉತ್ತರಣೆ ಶಿಖರಿಯಪಾಮಾರ್ಗಮೆನಿಸಿಕ್ಕು" (ಮಂಗರಾ. ೩೮-೨೬). ೬. ಮುಚ್ಚುಳ : "ಉದ್ಘಟಂ ಕರಬೋನಮಕ್ಕದಟ ಮುಚ್ಚಳಂ ಶಿಖರಿಯಕ್ಕು" (ಮಂಗರಾ. ೬೨-೨೪). ೭. ಕಾಡು ; ಅರಣ್ಯ. ೮. ಬಂಗಾರ ; ಚಿನ್ನ : "ಅರಣ್ಯ ಕಾಂಚನ ಕುಜ ಪರ್ವತಂ ಶಿಖರಿಯಕ್ಕು" (ನಾನಾರ. ೭೭). ೯. ಒಂದು ಬಗೆಯ ಮಲ್ಲಿಗೆ. ೧೦. ಗೋಂದು ; ರಾಳ. ೧೧. ಒಂದು ಬಗೆಯ ಜಿಂಕೆ : ಕೋಡಗಂ ಶಿಖರಿ ಪೇರುಡು ಮುಂಗುಲಿ . . . ಮೊದಲಾದನೇಕಮೃಗಮಿರ್ಪವು ತದ್ಘನಾಂತರಾಳದೊಳ್ (ತ್ರಿಪುವಿ. ೨೭-೨೩). [ಸಂ. ಶಿಖರಿನ್]

**ಶಿಖರಿಣಿ** (ನಾ). ೧. ಶ್ರೇಷ್ಠಳಾದ ಹೆಂಗಸು ; ಉತ್ತಮ ಸ್ತ್ರೀ. ೨. ಸಕ್ಕರೆ, ಮೊಸರು ಮುಂತಾದುವುಗಳನ್ನು ಬೆರೆಸಿ ತಯಾರಿಸುವ ಒಂದು ಬಗೆಯ ಸಿಹಿಯಾದ ದ್ರವಪದಾರ್ಥ ; ಸೀಕರಣೆ : ಶಿಖರಿಣಿ ಲವಂಗಂ ನಾಗೋರ್ವೀರುಹ ಕುಸುಮಮಲ್ಲಂ ಮೆಣಸು ಸೈಂಧವಂ ಬೆಲ್ಲಂ ಪತ್ರಂ ತ್ರುಟಿಯಿನಿತುಮಂ ಕೂಡಿ ಮೊಸರೊಳ್ ಶಿವಾಲಾಕ್ಷಾಕ್ಷೌದ್ರೇಕ್ಷುರಸಮಿವಱಿಂ ಧೂಪಿಸಿ ಹಿಮಾಂಶುವಿಂದಂ ವೇಧಂಗೆಯ್ದೆ ಶಿಖರಿಣಿಯಕ್ಕುಂ ಪೆಸರೊಳ್ (ಲೋಕೋಪ. ೮-೫೪) ; ಇದು ಮಜ್ಜಿಗೆ ತಾನಿದು ಶಿಖರಿಣಿಯೆನುತುಂ ತಿಂಬಿದಿಂಬಿ ತಂದೆಚ್ಚರಬಲೆಯರ್ ಸಿರ್ಪುಗಳಿಂ (ಸುಕುಮಾ. ೧೧-೩೦); ಹುಳಿದಾಳಿದ ಸಾಜು ಶಿಖರಿಣಿ ಬಹುಕೂಟದಳೆದ ನಿಂಬೆಯ ಹಣ್ಣ ಸವಿದು ಗಳಿಲನೆ ಬಡಿಸಲೊಗ್ಗರಣೆಯಿಂಗಿನ ಕಂಪು ಸುಳಿದುದು ಬಹಿಃಸ್ಥಳಕೆ (ಮೋಹತ. ೩-೫೩). ೩. ನಾಭಿಯಿಂದ ಎದೆಯವರೆಗಿರುವ ಕೂದಲಿನ ಸಾಲು ; ಬಾಸೆ. ೪. ಒಂದು ಬಗೆಯ ದ್ರಾಕ್ಷಿ. ೫. ಒಂದು ಬಗೆಯ ಸಸ್ಯ. ೬. ಒಂದು ಬಗೆಯ ಮಲ್ಲಿಗೆ. ೭. [ಛಂದ] ವರ್ಣಛಂದಸ್ಸಿನ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ, ಹದಿನೇಳು ಅಕ್ಷರಗಳುಳ್ಳ ಅತ್ಯಷ್ಟಿಯೆಂಬ ಛಂದಸ್ಸಿನ ಒಂದು ವೃತ್ತ : ವಸಂ ಧಾತ್ರೀಚಕ್ರಂ ಸುರಪಪವನಂ ಶೀತಕರನಬ್ಜನಾಭಂ ಭೂತೇಶಂ ನೆಲಸಿ ನಿಲೆ ವಿಶ್ರಾಂತಿಯವಜೊಳ್ ಮನಂಗೊಂಡಾಜೆಂಬೀಯೆಡೆಯೊಳೆರೆ ಕರ್ಣಾಮೃತರಸಂ ಜನಾನಂದಂ ಛಂದಂ ಶಿಖರಿಣಿ ಮದೇಭೇಂದ್ರಗಮನೇ (ಛಂದೋಂಬು. ೨-೧೭೫) ; ಯಮಂ ನಂ ಸಂ ಕೋರಲ್ ಶಿಖರಿಣಿಯದೊಂದಲ್ ಭಲಗಮುಂ (ಕೃಪಿಡಿ. ೮೫). [ಸಂ. ಶಿಖರಿಣೀ]

**ಶಿಖರಿದಶನ** (ನಾ). ದಾಳಿಂಬೆಯ ಬೀಜದಂತೆ ಹೊಳೆಯುವ, ಚೂಪಾಗಿರುವ ಹಲ್ಲು : ಶಿಖರಿದಶನದ್ಯುತಿಯ ಬೆಳ್ಪಗೆಯ ಸೂಸಲೆನೆ . . . ತಿಳಿನೀರ ತುಂತುರ್ವನಿಗಳೆಸೆದಿರ್ದುವು (ಧರ್ಮಿಭಾ. ೩೦-೧೧). [ಸಂ.]

**ಶಿಖರಿದಾವರೆ** (ನಾ). ಒಂದು ಬಗೆಯ ತಾವರೆ ; ಬೆಟ್ಟದಾವರೆ : ಸುರಗಿ ಪುನ್ನಾಗ ತಮಾಲ ಕುರವಕ ಶಿಖರಿದಾವರೆ . . . ನಿನ್ನ ಬರವ ಪಾರ್ದವು (ಭೈರಸೂ. I, ೨೬೬). [ಶಿಖರಿ + ತಾವರ (< ತಾಮರೆ)]

**ಶಿಖರಿಶಿಖರ** (ನಾ). ಬೆಟ್ಟದ ಅಗ್ರಭಾಗ, — ತುದಿ : ಅಂತು ವೃಷಭೇಶ್ವರಂ ತ್ರಿಲೋಕಶಿಖರಿಶಿಖರಶೇಖರಾಯಮಾನನುಂ ಕ್ರಮೋನ್ನತನುಮಾಗಿ . . . ನೆಲಸಿರ್ದಂ (ಆದಿಪು. ೧೬-೫೧ ವ) ; ಆ ಶಿಖರಿಶಿಖರಮೆ ಕಳನಾಗಿಯುಂ ವನದೇವತಾಪೇಟಕಮೆ ನೋಟಕರಾಗಿಯುಂ (ಚಂದ್ರಪ್ರ. ೫-೭೭ ವ). [ಸಂ.]

**ಶಿಖಸ್ತು** 'ಶಿಕಸ್ತು' ನೋ.

**ಶಿಖಾ** 'ಸಿಕ್ಕಾ' ನೋ.

**ಶಿಖಾಕಲಾಪ, ಶಿಖಾಕಳಾಪ** (ನಾ). ಉರಿಯ ಗುಂಪು ; ಜ್ವಾಲೆಯ ಸಮೂಹ: ಅಸಹ್ಯಶೋಕಪಾವಕಶಿಖಾಕಲಾಪಸಂತಪ್ತಮಾನಮಾನಸನುಂ ಭಗ್ನಮನೋರಥನುಮಾಗಿ ಭಗೀರಥಂ ಬಂದು (ಅಜಿಪು. ೧೦-೩೧ ವ). **ಶಿಖಾಕಳಾಪ :** ಆತಂಗೆ ತದುತ್ಥಿತಶಿಖಿಶಿಖಾಕಳಾಪಪ್ರಶಮನದರ್ಶನದಿಂದೊಂದು ತಿಂಗಳಾಯುಷ್ಯಂ (ಆದಿಪು. ೨-೪೩ ವ) ; ಉರಿದುದು ರಾಯರಾಯಪುರವಾ ಪುರವಹ್ನಿಶಿಖಾಕಳಾಪವಾ ಪರಿದುವೆ ಕಾಂಚಿಯತ್ತಲೆನುತಂ (ಎಕ. V. ಬೇಲೂರು. ೧೭-೪೯ ; 1136). [ಸಂ.]

**ಶಿಖಾಕಳಾಪ** 'ಶಿಖಾಕಲಾಪ' ನೋ.

**ಶಿಖಾಚಕ್ರ** (ನಾ). "ಮಸ್ತಕದಲ್ಲಿರುವ ಚಕ್ರ" (ಅಖಂಡೇ. ಕೋಶ) : ಎನ್ನ ಶಿಖಾಚಕ್ರದಲ್ಲಿ ಶೂನ್ಯಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ (ಮಡಿಮಾ. ೩೭-೫೩) ; ಎನ್ನ ಶಿಖಾಚಕ್ರದಲ್ಲಿ ಅಖಂಡಬೆಳಗನೊಳಕೊಂಡು ಬೆಳಗುತಿರ್ಪಿರಯ್ಯಾ ನೀವು (ಅಖಂಡೇ. ೨೫೧-೮೨). [ಸಂ.]

**ಶಿಖಾಮಣಿ** (ನಾ). ೧. ಮುಡಿಯಲ್ಲಿ ಧರಿಸುವ ಆಭರಣ ; ಚೂಡಾಮಣಿ : ಉಷ್ಣೀಷಪಟ್ಟಂ ಶಿಖಾಮಣಿಯಿಂ ಕಂಧರವಾರದಿಂ ನೊಸಲುದಾರಾಶ್ವತ್ಥಪತ್ರಾಂಕದಿಂ ಅಲಂಕೃತನಾಗಿಯುಂ (ಶಾಂತಿಪು. ೧೦-೫೮). ೨. **ಶ್ರೇಷ್ಠ ವ್ಯಕ್ತಿ ಅಥವಾ ವಸ್ತು:** ಶ್ರೀ ಮಜ್ಜಿನಭವನಮನಖಿಲಾಮರನರಖಚರಚಕ್ರವರ್ತಿಸ್ತುತಮಂ ಮೂಮೆ ಬಲಗೊಂಡು ಭವ್ಯಶಿಖಾಮಣಿಯೆನಿಸಿದ ಸರಸ್ವತೀ ಮಣಿಹಾರಂ (ಆದಿಪು. ೪-೧) ; ಶ್ರೀಮತ್ಸಮಸ್ತಲೋಕಶಿಖಾಮಣಿ (ಜನಾಳ. ೧-೧). [ಸಂ.]

**ಶಿಖಾಮೊಹರು** (ನಾ). ನಿರೂಪಗಳಿಗೆ ಅಧಿಕಾರಯುಕ್ತವಾಗಿ ಒತ್ತಲ್ಪಡುತ್ತಿದ್ದ ರಾಜಚಿಹ್ನೆಯುಳ್ಳ ಮುದ್ರೆ : ಶಿಖಾಮೊಹರು ರುಜುವಿನಿಂದ ಬರೆದುಕೊಟ್ಟ ಶಾಸನ (ಚಿತ್ರಪಾ. ೧೦) ; ರಾಜಚಿಹ್ನೆಗಳಾದ ಪಟ್ಟದ ಕತ್ತಿ ಮತ್ತು ಶಿಖಾಮೊಹರುಗಳನ್ನು ಆ ಚಾಮರಾಜರಿಂದ ತೆಗೆದುಕೋ (ಒಡೆಕ. ೫೯). [← ಮರಾ. ಶಿಕ್ಕಾ ಮೋಹೋರ್]

**ಶಿಖಾವಟ್ಟು** (ನಾ). ಹೇಳಿಕೊಡುವುದು ; ಬೋಧನೆ : ನಿಜವಾಗಿ ಹೇಳು, ನಂಜಪ್ಪನವರು ನನ್ನ ರುಜು ಹಾಕಿ, ನಿನಗೆ ಶಿಖಾವಟ್ಟು ಮಾಡಲಿಲ್ಲವೇ ? (ಕಲಸಿ. ೧೬೩). [← ಪಾರ. ಶಕಾವತ್ = ದೂರು ; ಅರ, ಹಿಂ. ಶಿಕಾಯತ್ = ಸಿಂದೆ, ದೂರು]

**ಶಿಖಾವಲ, ಶಿಖಾವಳ** (ಗು). ೧. ಜುಟ್ಟನ್ನು ಹೊಂದಿರುವ ; ಶಿಖೆಯಿರುವ. (ನಾ). ೨. ನವಿಲು : "ಮಯೂರಃ, ಬರ್ಹಿಣಃ . . . ಶಿಖಾವಲಃ [ಪಾಠಾಂ. ಳಃ], ಶಿಖೀ, ಕೇಕಿ, ಮೇಘನಾದಾನುಲಾಸೀ – ೯ ನೌಲಿನ ಹೆಸರುಗಳು" (ಸಿದ್ಧಾಂತಿ. ೧೬೨). **ಶಿಖಾವಳ:** ೨. "ಕೇಕೀ, ಶಿಖೀ, ಶಿಖಂಡೀ . . . ಶಿಖಾವಳಃ, ಶ್ಯಾಮಕಂಠ (:) — ಈ ೧೦ ನವಿಲ್" (ಹಲಾಯು. ೪೦-೪೮). [ಸಂ.]

**ಶಿಖಾವಳ** 'ಶಿಖಾವಲ' ನೋ.

**ಶಿಖಾವುತ್ರ** (ನಾ). ಮೊಹರುಸಹಿತವಾದ ಜವಾಬು, — ಉತ್ತರ : ದೇವರಾಜ್ಯಯ್ಯನವರ ಬಳಿಗೆ ಅರ್ಜಿ ಬರಸಲಾಗಿ ದಳವಾಯಿ ದೇವರಾಜ್ಯಯ್ಯನವರು ಅಪ್ಪಣೆ ಕೊಟ ಶಿಖಾವುತ್ರ ಮಲ್ಲರಾಜ್ಯಯ್ಯನವರಿಗೆ ಬರಸಿದ ವಿವರ (ಹೈದರ. ೨೨). [ಶಿಖಾ (< ಸಿಕ್ಕಾ) + < ಉತ್ತರ]

**ಶಿಖಾಸರ** (ನಾ). ಪಟ್ಟದ ಚಿಹ್ನೆಯಾಗಿ ಧರಿಸುವ ರಾಜಮುದ್ರೆಯಿರುವ ಹಾರ : ಪಟ್ಟದಲ್ಲಿ ಚಿಕ್ಕಕೃಷ್ಣರಾಜವಡೇರಿಗೆ ಶಿಖಾಸರಾ ಹಾಕಿ ದೊಡ್ಡ ವೋಲಗವಾಗಿ (ಹೈದರ. ೩೭) ; ಈ ದಿನ ರಾತ್ರಿಯಲ್ಲಿ ಕಟ್ಟಳೆಯ ಮೇರೆಗೆ ಓಲಗವು ಬೆಳೆದ ನಂತರ . . . ಶಿಖಾಸರವನ್ನೂ ದಪ್ಪರವನ್ನೂ ಸಹ ಪೂಜಿಸಿ (ಮಹಾವಂ. I, ೩೪) ; ನಿನ್ನನ್ನಾಳುವ ಮಹಾರಾಜನಿಗೆ ಮೇಲಾಳ್ತನದ ಮುದ್ರೆಯ ಶಿಖಾಸರವಾಗಿರುವ ಮಹತ್ಕರ್ತವ್ಯ ಭಾರಗಳ ಈ ಹಳೆಯ ಪಯ್ಮದವರ ಮಹಾಸಭೆಯ ಸಭಾಸನ್ದರ್ಭದಲ್ಲಿ ಬಾಯ್ದೆರದು (ಮಂತ್ರಶ. ೭೦-೮). [ಶಿಖಾ (< ಸಿಕ್ಕಾ) + ಸರ]

**ಶಿಖಾಸೇವೆ** (ನಾ). ಬೆಂಕಿ ಕಾಯಿಸಿಕೊಳ್ಳುವುದು : ಕಳಿದರೀ ಚಂಡಾಂಶುವಂಶೋಜ್ವಲರು ಬಳಿಕಾ ಹಿಮಸಮಯವನು . . . ತಳಿರ ತಗಡಿನ ಮನೆಗಳಲಿ ತಳಿಗಳ ಶಿಖಾಸೇವೆಯಲಿ (ತೊರರಾ. ೩-೨-೫). [ಸಂ. ಶಿಖಾಸೇವಾ]

**ಶಿಖಾಸ್ರಜ** (ನಾ). ಮುಡಿಗೆ ಧರಿಸುವ ಹೂವಿನ ದಂಡೆ : ಸುರುಚಿರಕುಂದಬೃಂದದ ಶಿಖಾಸ್ರಜಮಂಬಿವನಬ್ಜಸೂತ್ರದಿಂ ವಿರಚಿಪ ಮಾಲೆಗಾರ್ತಿಯರ ಮಂತಣಮೊಪ್ಪುಗುಂ (ರಾಜಶೇ. ೨-೧೦೪). [ಸಂ. ಶಿಖಾಸ್ರಜ್]

**ಶಿಖಿ** (ಗು). ೧. ತುದಿಯಿರುವ. ೨. ಜುಟ್ಟುಳ್ಳ ; ಚಂಡಿಕೆಯುಳ್ಳ. (ನಾ). ೩. ಜುಟ್ಟು ; ಚಂಡಿಕೆ : "ಕಾಕಪಕ್ಷಂ ಶಿಖಿ ಶಿಖಂಡಕಂ ಚಂಡಿಕೆಯದು" (ಮಂಗರಾ. ೯೪-೬) ; ಈ ತೀರ್ಥವು ವಿರಾಟ್ಪುರುಷನ ಶಿಖಿಯ ಗಂಟಿನ ಧಾರೆಯಲ್ಲಿ ಹುಟ್ಟಿತೆನಲು (ಅರ್ಕಮಾ. ೧೧). ೪. ನವಿಲು ; ಮಯೂರ : ಶಿಖಿನಾದಭೀತ ಫಣಿವರ್ಜಿತ ಚಂದನಭೂಜರಾಜಿಯಿಂದೊದವಿದ ರಾಗದಿಂದವನಭೀಕ್ಷಿಸುತಾಂ ಚರಿಯಿಸುತ್ತಿರ್ಪಿನಂ (ಕಬಂಪು. ೬೨೨) ; ಗಿರಿಶಿಖರದಿ ಶಿಖಿಯನೆತ್ತಿ ಶಿಖಿಯ ಕೇಕೆ ಕರೆವುದು (ಅರಳಿ. ೪೦೫-೧). ೫. ಬೆಂಕಿ ; ಅಗ್ನಿ : ಶ್ರೀದಾಳಾಮೇಲ್ಮಿಖಿ ಮೇಲೆ ಸರ್ಪನ್ದ ಮಹಾದನ್ನಾಗ್ರದುಳ್ಳಲ್ಲವೊಲ್ ಸಾಲಾಮ್ಸಾಲ ತಪೋಗ್ರದಿನ್ತು ನಡದೊಂ ನೂಱೆಣ್ಬು ಸಂವತ್ಸರಂ (ಎಕ. II, ೨೨-೧ ; ಸು. 700) ; ಆತಂಗೆ ತದುತ್ಥಿತಶಿಖಿಶಿಖಾಕಳಾಪ ಪ್ರಶಮನದರ್ಶನದಿಂದೊಂದು ತಿಂಗಳಾಯುಷ್ಯಂ (ಆದಿಪು. ೨-೪೩ ವ) ; ರವಿ ಕಂದಿ ಜಲನಿಧಿ ಬತ್ತಿ ಶಿಖಿ ಹಿಮಂದಳೆದ ದಿನದೊಳು ಸತ್ಯನಿಧಿ ಹರಿಶ್ಚಂದ್ರರಾಯನ ವಾಕ್ಯದೊಳು ಹುಸಿಗಳು ಮೊಳೆಯವು (ಹಚಕಾ. ೨-೧೪) ; ಅತ್ತಲಿತ್ತಲು ಹನುಮ ತಿರುಗಲು ಮುತ್ತಿತಮರಾರಿಗಳು ಶಿಖಿಯನು ಶಲಭ ಕವಿವಂತೆ (ಕೌಶರಾ. ೧೧-೨೬). ೬. ಮರ ; ವೃಕ್ಷ : "ತರು ಶಾಖಿ ಪಾದಪಂ . . . ಕುಟಮನೋಕಹಂ ಶಿಖಿ ವೃಕ್ಷಂ" (ವಸ್ತುಕೋ. ೩೦-೧). ೭. ಒಂದು ಬಗೆಯ ಮರ ; ಚಿತ್ರಕ. ೮. ದ್ವಿಜ; ಬ್ರಾಹ್ಮಣ. ೯. ನವಗ್ರಹಗಳಲ್ಲಿ ಒಂದು; ಕೇತು : "ಕೇತುಃ, ಶಿಖೀ — ಈ ೨ ಕೇತುವಿನ ಪೆಸರು" (ಹಲಾಯು. ೯-೪೯). ೧೦. ಮಂಗಳಗ್ರಹ ; ಅಂಗಾರಕ. ೧೧. ಧೂಮಕೇತು ; ಬಾಲಚುಕ್ಕೆ. ೧೨. ಒಂದು ಬಗೆಯ ಲೋಹ ; ತಾಮ್ರ : "ನವಿಲೊಳಗ್ನಿಯೊಳು ತಾಂಬ್ರದೊಳು ವಕ್ರನೊಳು ವೃಕ್ಷದೊಳು ಚೂಡದೊಳು ಕೇತುವಿನೊಳಕ್ಕು ಶಿಖಿಯೆಂಬ ನಾಮಂ" (ಮಂಗರಾ. ೧೧೭-೩೯). ೧೩. ಮರದ ತುದಿ. ೧೪. ತಲೆ ; ಶಿರಸ್ಸು. ೧೫. ತಲೆಯ ರಕ್ಷಣೆಗೆ ಹಾಕಿಕೊಳ್ಳುವ ಉಕ್ಕಿನ ಟೋಪಿ. ೧೬. ಕಾಳೋರಗ; ಕೃಷ್ಣಸರ್ಪ. ೧೭. ಮೂಲಿಕೆ : "ಅಂಗಾರಕ ಪಾದಪಾಗ್ರ ನವಿಲಾನಲ ಸೀಸಕ ತಾಮ್ರ ಕೇತು ಕಾಳೋರಗ ವಿಪ್ರ ಚೂಡ ಶಿರ ಮೂಲಿಕೆಗಂ ಶಿಖಿಯೆಂಬ ವಾಚಕಂ" (ನಾನಾರ. ೪). ೧೮. ಸಿಡಿಲಿನ ಬೆಂಕಿ : "ಗೋಯೆನಲು ವಜ್ರವೆಂಬುದಕ್ಕದಱ ದನಿ ಸ್ಫೂರ್ಜಥುವೆನಿಕ್ಕದಱ ಜ್ವಾಲೆ ಶಿಖಿ[ಪಾಠಾಂ. ಬಿ ]ಯೆಂದೆನಿಕ್ಕುಂ" (ಮಂಗರಾ. ೧೩-೫). ೧೯. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : ಶಿಖಿ, ತ್ರಿ(ತಯ), ಮೂರ್ತಿ, ಶಂಕುನೇತ್ರ, ತ್ರಿಪುರ . . . ಇಂತಿನಿತುಂ ೩ಕ್ಕೆ ಹೆಸರು (ವ್ಯವಹಾ. ೧೦-೧೬). ೨೦. [ಛಂದ] ಎರಡು ಗುರುಗಳ ನಡುವೆ ಒಂದು ಲಘು ಬರುವ ಗಣ ; ರಗಣ : ಗುರು ಮೊದಾಗಿಬ ಧಾತ್ರಿ ಮುಂತೆರಡು ಬೀಜಂ ತೋಯಮಾದ್ಯಂತದೊಳ್ ಬರೆ ಪಕ್ರಂ ಶಿಖಿಯೊಂದು ಕೊಂಕು ಕಡೆಯಿಂದಾ ಮಾರುತಂ (ಛಂದೋಂಬು. ೧-೩೪). [ಸಂ. ಶಿಖಿನ್]

**ಶಿಖಿಗ್ರೀವ** (ನಾ). ೧. ನವಿಲಿನ ಕೊರಳು : (೪). ೨. ಮೈಲುತುತ್ತ : "ತುತ್ಥಾಂಜನಂ, ಶಿಖಿಗ್ರೀವಂ . . . ಕರ್ಪರೀ — ೫ ತುತ್ಥಾಂಜನದ ಪೆಸರು (ಸಿದ್ಧಾಂತಿ. ೩೦೫). [ಸಂ.]

**ಶಿಖಿತೆ** (ನಾ). ಉರಿ; ಕಾವು : ಹಲವು ತೆರದಿ ನುಡಿ . . . ಚಲುವರಸ ನಿನ್ನನಗಲ್ದ ಚಿಂತೆಯ ಶಿಖಿತೆಯಿಲ್ಲ? (ಚಕಸ. ೫೫). [ಸಂ. ಶಿಖಿತಾ]

**ಶಿಖಿಧ್ವಜ** (ನಾ). ೧. ನವಿಲನ್ನು ಪತಾಕೆಯಾಗುಳ್ಳವನು ; ಷಣ್ಮುಖ. ೨. ಒಬ್ಬ ರಾಜನ ಹೆಸರು ; ಮಯೂರಧ್ವಜ : ಎಲ್ಲಮಂ ವಾಚಿಸೆಂದಾ ಶಿಖಿಧ್ವಜ ನಾಡಲಾ ವಿಪ್ರನಿಂತೆಂದು ತನ್ನ ವೃತ್ತಾಂತಮಂ ವಿವರಿಸಿದನು (ಜೈಮಿಭಾ. ೨೬-೩೨). [ಸಂ.]

**ಶಿಖಿನಯನ** (ನಾ). ಅಗ್ನಿಯನ್ನು (ಮೂರನೆಯ) ಕಣ್ಣಾಗುಳ್ಳವನು ; ಶಿವ : ಇಲ್ಲಿಗರೆಗಾವುದದಿ ಶಿಖಿನಯನ ಕಪಿಲೇಶಲಿಂಗದಭಿಷೇಕಕ್ಕೆ ಭಕುತಿಯಿಂದೊರ್ವ ಪನ್ನೊಂದುಸಾಸಿರಕುಂಭ ಕ್ಷೀರವನು ಎಚೆಯಲು (ಪ್ರಾಥರಾ. ೨೧-೩). [ಸಂ.]

**ಶಿಖಿನೇತ್ರ** (ನಾ). = ಶಿಖಿನಯನ. [ಸಂ.]

**ಶಿಖಿವಟ್ಟೆ** (ನಾ). ಬೆಂಕಿಯ ಮಾರ್ಗ, — ವಲಯ : ಸೋಮರವಿಯಗ್ನಿಯಪ್ಪಾ ಮೂಱುನಯನದಿಂ ಕಾಮಹರ ಕಲ್ಪಿಸಿದನತುಳಬಲಕ್ಕೆದುವಂ ಆ ಮಹಾಚಕ್ರರೂಪಂ ಚಂದ್ರನಾದಿತ್ಯವಳಯ ಶಿಖಿವಟ್ಟೆಯೆನಲು (ಲಚಿಂ. ೧೧-೪). [ಶಿಖಿ + ಬಟ್ಟೆ]

**ಶಿಖಿವಾಹನ** (ನಾ). ನವಿಲನ್ನು ವಾಹನವನ್ನಾಗುಳ್ಳವನು ; ಷಣ್ಮುಖ : "ಶರಜನ್ಮಂ ಗುಹಂ . . . ಶಿಖಿವಾಹನಂ ಸ್ಕಂಧಂ ಕುಮಾರಂ ಷಡಾನನಂ ವಹ್ನಿಜಂ ತಾರಕರಿಪು ಸ್ವಾಮಿ ಕಾರ್ತಿಕೇಯಂ" (ಮಂಗರಾ. ೫-೧೭) ; ಕರೆದು ಸಿಂಹಾಸನದ ಸನ್ನಿಧಿಗೆ ಗಜಮುಖನನುರಗಕಂಕಣದ ಕರದಿಂ ಶಿಖಿವಾಹನನ [ಪಾಠಾಂ. ನವಿಲನಡರ್ದನಂ] ಶಿರವ ತಡವುತ್ತೆ (ಭಾವಚಿಂ. ೧-೩೪). [ಸಂ.]

**ಶಿಖಿಶರ** (ನಾ). ಅಗ್ನಿಮಂತ್ರವನ್ನು ಅಭಿಮಂತ್ರಿಸಿ ಬಿಡುವ ಬಾಣ ; ಆಗ್ನೇಯಾಸ್ತ್ರ : ಧನಂಜಯ ಕೊಂದರೆನ್ನಾಣೇಕೆಯರಸನ ತಂದು ಕೊಡು ಬೇಗದಲಿ ಉಪಸಂಹರಿಸು ಶಿಖಿಶರವ (ಕುವ್ಯಾಅ. ೧೧-೩೫). [ಸಂ.]

**ಶಿಖೆ** (ನಾ). ೧. ಮೊನಚಾದ ತುದಿ ; ಚೂಪಾದ ಭಾಗ. ೨. ಜುಟ್ಟು ; ಚಂಡಿಕೆ: "ಶಿಖಾ, ಕಾಕಪಕ್ಷಃ, ಶಿಖಂಡಿಕಾ – ಈ ೩ ಚೆಂಡಿಕೆ" (ಹಲಾಯು. ೮೮-೩೭೮). ೩. ನವಿಲಿನ ಜುಟ್ಟು ; ಕೊಟ್ಟು : "ಶಿಖಾ, ಚೂಡಾ – ಈ ೨ ನವಿಲ ಕೊಟ್ಟು" (ಹಲಾಯು. ೪೧-೯೮) ; ಗಿರಿಶಿಖರದಿ ಶಿಖೆಯನೆತ್ತಿ ಶಿಖಿಯ ಕೇಕೆ ಕರೆವುದು (ಅರಳು. ೪೦೫-೧). ೪. ತುದಿ ; ಅಗ್ರಭಾಗ. ೫. ಮೊಲೆಯ ತೊಟ್ಟು ; ಕುಚಾಗ್ರ: "ಕುಚಮುಖಂ, ಚೂಚುಕಂ, ವೃಂತಂ, ಶಿಖಾ – ಈ ೪ ಮೊಲೆಯ ಕೊ(ತೊ)ಟ್ಟು" (ಹಲಾಯು. ೮೭-೩೭೨). ೬. ಉರಿ ; ಜ್ವಾಲೆ : ಜೃಂಭತ್ಕೋಕೀವಿಯೋಗಾನಲವಿಪುಲ ಶಿಖಾಜಾಲ ಮುತ್ತಾಲನೃತ್ತಾರಂಭಕಸ್ಥಭೃದ್ವಿರೀಶಪ್ರಚುರತರಜಟಾವಾಲವಾಶಾಂಗನಾ ಕೌಸುಂಭಾರಕ್ತೋತ್ತರೀಯಂ ಮಸಗಿತು (ಚಕವಿ. ೬-೮). ೭. ಕಿರಣ ; ರಶ್ಮಿ. ೮. ಕಾಂತಿ ; ಪ್ರಕಾಶ : "ಅಗ್ನಿಯ ವಿಶಾಲಕಾಂತಿದ್ಯೋತಿ ಜ್ಯೋತಿಸ್ಸುಹೇತಿ ಶಿಖೆಯರ್ಚಿ ಪ್ರಭಾಖ್ಯಮಕ್ಕುಂ" (ಮಂಗರಾ. ೧೪-೮). ೯. ಕಾಮಜ್ವರ. ೧೦. ಮರದ ಶಾಖೆ ; ಕೊಂಬೆ. ೧೧. ತಲೆ ; ಮಸ್ತಕ : ಶುದ್ಧಪ್ರಸಾದವ ಶಿಖೆಯಲ್ಲಿ ಧರಿಸಿದೆ (ಘನವ. ೬೯-೫೭). [ಸಂ. ಶಿಖಾ]

**ಶಿಗ್ರು** (ನಾ). ೧. ಒಂದು ಬಗೆಯ ಮರ ; ನುಗ್ಗೆ : "ಕತಕಂ ಪ್ರಸಾದನಂ . . . ಶಿಗ್ರು ಶೋಭಾಂಜನಕಂ" (ವಸ್ತುಕೋ. ೩೫-೧೩). ೨. ತರಕಾರಿ ; ಕಾಯಿಪಲ್ಲೆ: "ಶಾಕಂ, ಹರಿತಕಂ, ಶಿಗ್ರು – ೩ ಪಲ್ಯ, ತರಕಾರಿ" (ಸಿದ್ಧಾಂತಿ. ೨೮೪). [ಸಂ.]

**ಶಿಡಕು** 'ಸಿಡುಕು' ನೋ.

**ಶಿತ** (ಗು). ೧. ಹರಿತವಾದ ; ಚೂಪಾದ : ತಣಿವಂತಿರೆ ರಸದಿಂ ಬುಧರಣೆಯರ ಮೊಸಗುವುದು ಸುಕವಿ ಸತ್ಕೃತಿಯನಣಂ ಗುಣವರ್ಮನಾಗಿ ಶಿತಮಾರ್ಗಣದಂತು ಚ್ಚಳಿಪದಿರ್ದಿನಂ ಖಳವಚನಂ (ಪುಷ್ಪಪು. ೧-೬೦). ೨. ಬಡವಾದ; ನಿಶ್ಶಕ್ತವಾದ. (ನಾ). ೩. ಬಡವಾದುದು ; ಸೊರಗಿದುದು : ರಾಗಭರಪರಿಲಿಪ್ತಮಾನಸಯೋಗ ದಿಂದ್ರಿಯಗಳಲಿಯಖಿಳೋದ್ಯೋಗವನು ವಿರಚಿಸುತಲೆಲ್ಲ ಶಿತಂಗಳಾಗಿಹವು (ತಿಮ್ಮಶಾಂ. ೭-೪೦). [ಸಂ.]

**ಶಿತಶೂಕ** (ನಾ). ೧. ಒಂದು ಬಗೆಯ ಧಾನ್ಯ ; ಯವೆ ; ಜವೆ : "ಶಿತಶೂಕಃ, ಯವಃ – ೨ ಯವೆಗಳೆಂಬ ಧಾನ್ಯದ ಹೆಸರುಗಳು" (ಸಿದ್ಧಾಂತಿ. ೨೭೮). ೨. ಗೋದಿ. [ಸಂ.]

**ಶಿತಾಸಿ** (ನಾ). ಹರಿತವಾದ ಕತ್ತಿ ; ಚೂಪಾದ ಖಡ್ಗ : ಆ ವ್ರತ ಶಿತಾಸಿ ಸಂಸಾರವ್ರತತಿಚ್ಛಿದುರಮಕ್ಕುಂ (ಶಾಂತಿಪು. ೭-೭) ; ಮಿಥ್ಯಾತ್ವಮಂ ನೆಟ್ಟನುತ್ತಮ ಸಮ್ಯಕ್ತ್ವಶಿತಾಸಿಯಿಂದಮಿಱಿ (ಜೀವಸಂ. ೧೫೪-೬). [ಸಂ.]

**ಶಿತಾಸ್ತ್ರ** (ನಾ). ಹರಿತವಾದ ಬಾಣ : ಕಡಿದೊಡೆ ಕಡುಪಿಂದಂ ಕಿಡಿಕಿಡಿಯಾಗಿ ಶಿತಾಸ್ತ್ರನಿಕರಮಂ ಪ್ರತಿವಿಂಧ್ಯಂ ಕಡಿದವನ ರಥಮನೊರ್ಮೆಯೆ ಕಡಿದಂ ತಲೆಯುಮ ನದೊಂದು ದಾರುಣಶರದಿಂ (ಪಂಪಭಾ. ೧೨-೬೪). [ಸಂ.]

**ಶಿತಿ** (ಗು). ೧. ಬಿಳಿಯ ಬಣ್ಣದ ; ಬಿಳುಪಾದ. ೨. ಕಪ್ಪುಬಣ್ಣದ ; ಕಪ್ಪಾದ: ಶ್ರೀಗಿರಿಜಾಪ್ರಿಯರ್ ಶಿತಿಸಿತಚ್ಛವಿಗಳ್ಪುತಕೌಸ್ತುಭಸ್ಫುರದ್ಭೋಗಿವಿಭೂಷಣರ್ (ಎಕ. XI, ದಾವಣ. ೩೫-೧ ; ಸು. 1160) ; ಇಂದುಮುಖಿ ಮೃಗವಿಲೋಚನೆ . . . ಭೃಂಗೀಬೃಂದಶಿತಿಕೇಶವಿಳಸಿತೆ ಚಂದವೈ ವಿನೂತೆಯಾದಳಖಿಳೋರ್ವ್ವರೆಯೊಳ್ (ಎಕ.II. ೩೨೭-೫೯ ; 1181). (ನಾ). ೩. ಕಪ್ಪುಬಣ್ಣ ; ಶ್ಯಾಮಲವರ್ಣ : "ಶಿತಿ ಕೃಷ್ಣಮಸಿತಂ ಮೇಚಕಂ ಕಾಳಮೆನೆ ಕಪ್ಪಿಗಕ್ಕುಂ" (ಮಂಗರಾ. ೧೩೧-೨೧). [ಸಂ.]

**ಶಿತಿಕಂಠ** (ನಾ). ೧. ಕಪ್ಪಾದ ಕೊರಳು ; ನೀಲಕಂಠ : ಭವದ ಗರಳವ ಗುಡಿಯ ಶಿತಿಕಂಠದೊಳು ಶಮಿಸಿ ನವಜಾತಚಿತ್ತದೊಳು ಜೀವ ರಮಿಸೆ (ಮಲದೇ. ४೬-೧). ೨. ಕಪ್ಪಾದ ಕೊರಳುಳ್ಳವನು ; ನೀಲಕಂಠ ; ಶಿವ : ಕಳಶಸಂಭವಂ . . . ಅರ್ಚಿತಶಿತಿಕಂಠನುಮಾಹುತಿಹುತಾಗ್ನಿಹೋತ್ರನುಂ ಪೂಜಿತಧರಾಮರನುಂ ನೀರಾಜಿತರಥತುರಗನುಮಾಗಿ ರಜತರಥಮನೇಱೆ (ಪಂಪಭಾ. ೧೧-೧೩೨ ವ) ; ಶಿತಿಕಂಠನಾಮಪೂರಿತವಾಕ್ಯಘೃತನಿರೀಕ್ಷಿತನಯನ ಮಣಿಮುಕುರಮಧ್ಯಬಿಂಬಿತವದನಂ (ಹಚಾರಿ. ४-೫೮) ; ಶಿವ ಶಿತಿಕಂಠ ಶಂಭು ಶಶಿಶೇಖರ (ಶಂಕಕ. ೩೨). ೩. ನವಿಲು. [ಸಂ.]

**ಶಿತಿಕಂಠಬರ್ಹ** (ನಾ). ನವಿಲಿನ ಗರಿ ; ನವಿಲುಗರಿ : ಬಾಲಕರಸೆದರ್ . . . ಚಿತ್ರಕುಸುಮಮಯವನಮಾಲರ್ ಶಿತಿಕಂಠಬರ್ಹಶೀರ್ಷರ್ (ಜಗವಿ. ೩-೭೫). [ಸಂ.]

**ಶಿತಿಕಂಠಬಾಣ** (ನಾ). ಶಿವಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ಬಾಣ : ವೀರಲಕ್ಷ್ಮಣ ಖಳನ ಮಾಯವ ಗೆಲಿದನಾ ಶಿತಿಕಂಠಬಾಣದಲಿ (ಕಾಶಿರಾ. ೨೨-೩೩). [ಸಂ.]

**ಶಿತಿಕಾಕ** (ನಾ). ಒಂದು ಬಗೆಯ ಕಾಗೆ ; ಡೊಂಬಕಾಗೆ : "ಶಿತಿಕಾಕಂ ವನಾಶ್ರಯಂ ಮೌಕುಳಿ ದ್ರೋಣಮಾ ಕಾಕೋಳಮೆನೆ ಕಾಡ ಕಾಗೆ" (ಮಂಗರಾ. ೫೧-೪). [ಸಂ.]

**ಶಿತಿಗಲ, ಶಿತಿಗಳ** (ನಾ). = ಶಿತಿಕಂಠ ೨ : ಶಿತಿಗಲನು ಶಿವಜಂಗಮಾಕಾರ ದಿಂದ್ಯೆದುತಶಿಕರುಣದಿಂದೆಮ್ಮ ಬಡತನವ ಪರಿಹರಿಸಿ . . . ಪೋದನು (ದುರಪು. ೨೯-೨೧). **ಶಿತಿಗಳ್:** ಸತತಸರ್ವಾವಿಘ್ನಕಧಿಪತಿಯುಯಂದೊಡಾ ಶಿತEತಿ3ಗಳನ ಕವಿಗಳುಂ ಪೆರೆದಲೆಯನೆಂದು ಗಣಪತಿಯ ಬಗೆಯದೆಯಿಹರು (ನವಮೋ. ೦-೧೧). [ಸಂ.]

**ಶಿತಿಗಳ** 'ಶಿತಿಗಲ' ನೋ.

**ಶಿತಿಶ್ವೇತ** (ನಾ). ಬಿಳುಪುಮಿಶ್ರಿತವಾದ ಕಪ್ಪುಬಣ್ಣ ; ಕಂದುಬಣ್ಣ : "ಶಿತಿಶ್ವೇತ ಮೆನೆ ಶ್ಯೇನಿಯನೆ ಕುಮುದವರ್ಣಂ" (ಮಂಗರಾ. ೧೩೧-೨೨). [ಸಂ.]

**ಶಿತಿಸಾರಕ** (ನಾ). ಒಂದು ಬಗೆಯ ಮರ ; ತೂಬರೆ : "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಶಿತಿಸಾರಕಃ – ೪ ತುಂಬರಗಿಡ, ತೂಬರೆಗಿಡ" (ಸಿದ್ಧಾಂತಿ. ೧೨೦). [ಸಂ.]

**ಶಿತ್ರ** (ನಾ). ಒಂದು ಬಗೆಯ ಆಯುಧ : ಐವತ್ತಾರುದೇಶಾಧೀಶ್ವರರಾದ ಆನ್ನಿಜ ಸುಲದಿ ಕಂಬುಕಂಟಿ ಕುಲಿಶಾವನ ಶಿತ್ರಾ ನಂದಿಕೋಲು ಸಂಗಮೇಶ್ವರನ ನುಡಿಗೆ ಸಬಳ ಶಾಕ್ತಿಕ ಸಯಲ್ಲಿ ಕತ್ತಿ . . . ಮೊದಲಾದಾ ಬತ್ತೀಶಾಯುಧಾಶಕ್ತ ಸಮರ್ತಕರಾದಾ (ಎಕ. XVI, ಗುಬ್ಬಿ. ೭೪-೨೦ ; ಸು. 1776). [?]

**ಶಿಥಿಲ, ಶಿಥಿಳ** (ಗು). ೧. ಸಡಿಲವಾದ ; ಅಳ್ಳಕವಾದ : ಉತ್ಸವದಿಂದೆ ಹಾಸ್ಯರಸಮಾ ಮಧುರೋಕ್ತಿಗಳಿಂದಮಲ್ತೆ ಬೀಭತ್ಸರಸಾಂತರಂ ಶಿಥಿಲಬಂಧನದಿಂ (ಕವಿರಾ. ೨-೧೦೦). ೨. ದೃಢವಲ್ಲದ ; ಜೋತುಬಿದ್ದ : ಸುಕ್ಕು ನಿರಿನಿರಿಯಾಗಿ ಬತ್ತಿದ ತೊವಲ್ ಪತ್ತಿ ಬಿಗಿದೆಲ್ಪುಗೂಡಿನಾ ಶಿಥಿಲಕಂಕಾಲತೆಯ . . . ಅಸ್ಥಿಪಂಜರದಂತೆವೋಲಸ್ಥಿರಸ್ಥವಿರೆಯಂ ಕಂಡು (ಶ್ರೀರಾಮಾ. ೨೧-೫೪೭). ೩. ಬಡವಾಗಿರುವ; ಕೃಶವಾಗಿರುವ: ಶಿಥಿಲಮಧ್ಯದ ಲಘುಶ್ವಾಸದತ್ಯಸಮರಾಗಾಧರದ ಗೂಢನಾಭಿಯ ಮಿಱೆ ಕೊಬ್ಬಿದ ನಿತಂಬಯುಗದ . . . ಅನಾಮಿಕೆಯರು

(ಹಚಕಾ. ೭-೩). ೪. **ಜೀರ್ಣವಾದ :** ದೊಡ್ಡೇಶ್ವರ (ನೊಳಂಬೇಶ್ವರ) ದೇವಾಲಯದ ದಕ್ಷಿಣಭಾಗದ ಗೋಡೆಯ ಮೇಲೆ ವರುಣಶಿವಭಟಾರರ ಹೆಸರನ್ನುಳ್ಳ ಒಂದು ಶಿಥಿಲಶಾಸನವೊಂದಿದೆ (ನೊಳಂಬ. ೧೨೦). ೫. **ಕಟ್ಟದಿರುವ; ಬಿಚ್ಚಿದ.** ೬. **(ತೊಟ್ಟಿನಿಂದ) ಕಳಚಿದ ; ಬೇರ್ಪಟ್ಟ.** ೭. **ಶಕ್ತಿಗುಂದಿದ ; ಬಲಹೀನವಾದ.** ೮. **ಕರಗಿದ ; ಲೀನವಾದ.** ೯. **ಅಸ್ಪಷ್ಟವಾದ ; ಅಸ್ಫುಟವಾದ : 'ಶಿಥಿಲಾಕ್ಷರ'** ಪರಾ. (ನಾ). ೧೦. **ದೃಢವಲ್ಲದುದು :** ಪುರುಷನ ಲಿಂಗ ಶಿಥಿಲಮಾದೊಡಂ ಘನವಹುದು (ಕಾಮಶಾ. ೨೫೩). ೧೧. **ಜೀರ್ಣವಾದುದು :** ದುರ್ಗದ ಬಾಗಿಲು ಶಿಥಿಲವಾಗಿದ್ದುದರಿಂದ ಮಲ್ಲಿಕಾರ್ಜುನನು, ಹೊಸತಾಗಿ ಬಲು ಗಟ್ಟಿಯಾದ ಬಾಗಿಲುಗಳನ್ನು ಮಾಡಿಸಿದ್ದ (ಶಾಂತಲಾ. ೪೦೦). ೧೨. **ನಿಶ್ಶಕ್ತವಾದುದು ; ಬಲಹೀನವಾದುದು :** ಅವಯವದಿಂದಂದುರ್ಚುವ ಭವಭಯಮುಂ ಶಿಥಿಲಮಾದುದೆಂದೊಡೆ ತಾಂ ಶಾತ್ರವಭಯಮೇಗಹನಮೊ ಕರ್ಮವೈರಿನಿರ್ಮೂಲನಾಂಘ್ರಿಕಮಲಾಂತಿಕದೊಳ್ (ಶಾಂತಿಪು. ೬-೪೧); ಆ ಅಂಗದ ಸಂಬಂಧ ಕೈಗೆ ತಪ್ಪಿ ಶಿಥಿಲವಾಗಿ ಕೆಲಸ ಮಾಡಲು ಅಸಮರ್ಥವಾಯಿತು (ಜೀವಾತ್ಮ. ೭೯). ೧೩. **ಅಳಿವು ; ನಾಶ :** ಶಿಥಿಲವಾಯಿತು ವೈರಿಬಲಪತಿಮಥನವಾಯಿತು ದೈತ್ಯನೂಳಿಗ ಪೃಥುವಿ ಲಘುತರವಾಯ್ತು (ಕುವ್ಯಾದ್ರೋ. ೧೫-೬೭). ೧೪. **ವಿರಳವಾದುದು :** ಮಿಗೆ ನಿಬಿಡಬಂಧಮೆಂಬುದು ತಗುಳ್ಕುವು ವರ್ಣಂಗಳಗಲದಿರೆ ಮತ್ತಕ್ಕುಂ ನೆಗಟ್ಟಲ್ಪಪ್ರಾಣಾಕ್ಷರ ನಿಗದಿತಮೇತದ್ವಿಪರ್ಯಯೋಕ್ತಂ ಶಿಥಿಲಂ (ಕವಿರಾ. ೨-೬೪). ೧೫. **ದುರ್ಬಲನಾದವನು ; ಶಕ್ತಿಹೀನನಾದವನು :** "ಅರೆಮುಪ್ಪು ಬಲ್ಪಾಗೆ ಶಿಥಿಲಸಪ್ಪಂ" (ಮಂಗರಾ. ೯೧-೧೦). ೧೬. **ಸೋಮಾರಿ ; ಜಡಸ್ವಭಾವದವನು :** "ಅಲಸಃ, ಶಿಥಿಲಃ . . . ಮಂಥರಃ — ಈ ೬ ಸೋಂಬಂ" (ಹಲಾಯು. ೬೪-೨೩೩). ೧೭. **ಸಡಿಲವಾದುದು ; ದುರ್ಬಲವಾದುದು :** ಇಮ್ಮಡಿ ವೀರನರಸಿಂಹರಾಯನ ಆಡಳಿತವು ಬಹಳ ಶಿಥಿಲವಾಗಿತ್ತೆಂದೂ, ಆತನ ರಾಜನೀತಿಯು ಅಷ್ಟಾಗಿ ಯಶಸ್ವಿಯಾಗಲಿಲ್ಲವೆಂದೂ ಹಿಂದಿನ ಪ್ರಕರಣದಲ್ಲಿ ತಿಳಿಸಲಾಗಿದೆಯಷ್ಟೆ (ಕೃದೇವ. ೧೧). ೧೮. **[ವ್ಯಾಕ] ತೇಲಿಸಿ ಉಚ್ಚಾರ ಮಾಡಬೇಕಾದ ಸಂಯುಕ್ತಾಕ್ಷರ ; ತೇಲಿಸಿ ಉಚ್ಚರಿಸಬೇಕಾದ ಒತ್ತಕ್ಷರ :** ಆದಿ ದೀರ್ಘಮಾದೊಡಂ ಗುರುವಾದೊಡಂ ಶಿಥಿಲಮಿಲ್ಲ — ಬಾಸುಟ್ಟಳ್ . . . ಪೊಕ್ಕುಟ್ಟೆ (ಶಮದ. ೪೨ ಪ್ರಯೋ). **ಶಿಥಿಳ:** ೧೦. "ಶ್ಲಥಂ, ಶಿಥಿಲಂ - ಈ ೨ ಸಡಿಲ್ದುದು" (ಹಲಾಯು. ೧೨೮-೯೨). [ಸಂ.]

**ಶಿಥಿಲಗೊಳ್ಳು** (ಕ್ರಿ). **ದುರ್ಬಲವಾಗು ; ಶಕ್ತಿಹೀನವಾಗು :** ಕಾರಣಾಂತರಗಳಿಂದ ವ್ಯವಸ್ಥೆಗೊಳ್ಳುತ್ತಿರುವ ಅನುಭವಗಳು . . . ಇದ್ದಕ್ಕಿದ್ದ ಹಾಗೆ ಯಾವುದೋ ತಡೆಯನ್ನು ಅನುಭವಿಸುತ್ತವೆ. ಆಗ ಆರಂಭವಾಗಿರುವ ವ್ಯಕ್ತಿತ್ವದ ವ್ಯವಸ್ಥೆ ಶಿಥಿಲಗೊಂಡು ಅವ್ಯವಸ್ಥೆಯನ್ನು ಕಾಣುತ್ತದೆ (ಶಿಕ್ಷದ. ೬೪೨). [ಶಿಥಿಲ + ಕೊಳ್ಳು (< ಕೊಳ್$_1$)]

**ಶಿಥಿಲತೆ** (ನಾ). ೧. **ದುರ್ಬಲತೆ ; ನಿಶ್ಶಕ್ತಿ :** ಘೋಟಪ್ರತತಿಗೆ ಗಜಯೂಥಕ್ಕೆ ಪಾದಾತಿವೃಂದಕ್ಕರಿದಾರ್ಗಂ ರೇಣು ಪಂಕಂ ಶಿಥಿಲತೆ ದೆಸೆಗೆಟ್ಟಿತ್ತು (ಗಿರಿಕ. ೬-೪೯) ; ಅರವತ್ತರ ನಂತರ ಸಾಮಾನ್ಯವಾಗಿ ಆ ಶಿಥಿಲತೆ ಮತ್ತು ಅದರ ಪ್ರಭಾವ ತೀವ್ರಗತಿಯಲ್ಲಿ ಹೆಚ್ಚುತ್ತಿರುತ್ತದೆ (ಶಿಕ್ಷದ. ೪೪೫). ೨. **ಸಡಿಲ ; ಅಳ್ಳಕ : 'ಶಿಥಿಲತೆವೆಱು'** ಪರಾ. ೩. **[ವ್ಯಾಕ] ದ್ವಿತ್ವವಿದ್ದರೂ ತೇಲಿಸಿ ಉಚ್ಚರಿಸುವುದು :** ಗದವಜಕಾರಮವಿದಿರಿರೆ ಪದಮಧ್ಯಂ ವಿಷಯಮಾಗನೇಕಾಕ್ಷರದೊಳ್ ಪುದಿಯೆ ಲಘೂಪಧೆ ಕೆಲಕೆಲ ವೊದವಿರ್ಕುಂ ರಾಂತ ಳಾಂತಮವು ಶಿಥಿಲತೆಯಂ (ಶಮದ. ೪೩). [ಸಂ. ಶಿಥಿಲತಾ]

**ಶಿಥಿಲತೆವಡೆ** (ಕ್ರಿ). **ನಿಶ್ಶಕ್ತವಾಗು ; ದುರ್ಬಲವಾಗು :** ನಡುಗುವ ತಲೆ ಜಗ್ಗಿದ ಬೆನ್ನು ಶಿಥಿಲತೆವಡೆದಂಗ ದಡದಡಿಸುತ್ತದಡಿವಿಡಿದಡಿಯಿಟ್ಟು ಮುಡದಿಯ ಮಂದಿರದೆಡೆಗಾಗಿ ಕಡುವೃದ್ಧನೆಯ್ದಿದೆ (ಜೀವಂಸಾಂ. ೧೭-೩೧). [ಶಿಥಿಲತೆ + ಪಡೆ$_1$]

**ಶಿಥಿಲತೆವೆಱು** (ಕ್ರಿ). **ಸಡಿಲವಾಗು ; ಅಳ್ಳಕವಾಗು :** ತನುಲತೆ ಸೌರಭ್ಯಮಂ ಬೀಱೆ ಸೂಸಿರ್ದಳಕಂ ಜೋಲ್ದಿರ್ದ ಬಂಬಲ್ಮುಡಿ ಶಿಥಿಲತೆವೆತ್ತಿರ್ದ ನೀವೀಭರಂ ಕಣ್ಗೊಳಿಪನ್ನಂ ಲೀಲೆಯಿಂದುಪ್ಪವಡಿಸಿದಳ್ ನಿದ್ರಾಂಗಿ (ಜಗವಿ. ೨-೭೮). [ಶಿಥಿಲತೆ + ಪೆಱು$_1$]

**ಶಿಥಿಲತ್ವ** (ನಾ). = **ಶಿಥಿಲತೆ ೩ :** ಪುಗೆ ದದಪವಕಾರಂ ವಿಧಿಯ ಗೆಕಾರಂ ವರ್ತಮಾನ ಕಾಲದ ಗುಂ ಧಾತುಗೆ ಬಿಟ ಕುಳ ರೇಫಾಂತಕ್ಕೊಗೆಗುಂ ಶಿಥಿಲತ್ವಮಗುರು ಪೂರ್ವಸ್ಥಿತಿಯಿಂ (ಶಮದ. ೪೪). [ಸಂ.]

**ಶಿಥಿಲದ್ವಿತ್ವ** (ನಾ). = **ಶಿಥಿಲ ೧೮ :** ಇನ್ನು ಶಿಥಿಲದ್ವಿತ್ವಕ್ಕೆ — ಮುಗುಟ್ಟಂ . . . ತೆಗಟ್ಟಂ, ನೆಗಟ್ಟಂ, ತಿಮಿರ್ದಂ (ಶಮದ. ೩೭ ಪ್ರಯೋ) ; 'ಶಿಥಿಲದ್ವಿತ್ವ' ಎಂದರೆ ಒತ್ತಿ ಉಚ್ಚರಿಸದೆ ತೇಲಿಸಿ ಉಚ್ಚರಿಸುವ ಒತ್ತಕ್ಷರ . . . ಅದು ಗುರುವಾಗುವುದಿಲ್ಲ. ಲಘುವಾಗಿಯೇ ಉಳಿಯುತ್ತದೆ (ಕೈಪಿಡಿ. ೧೨). [ಸಂ.]

**ಶಿಥಿಲಮತಿ** (ನಾ). **ತೀಕ್ಷ್ಣವಲ್ಲದ ಬುದ್ಧಿ ; ಮಂದಬುದ್ಧಿ :** ಎರಡನೆಯ ವ್ಯಡ ಹಮ್ಮೀರನ ನುತಿಯನ್ನ ಶಿಥಿಲಮತಿಗಂ ಪವಣೇ (ಹಮ್ಮೀ.ರ. ೧-೨೮). [ಸಂ.]

**ಶಿಥಿಲವೃತ್ತಿ** (ನಾ). = **ಶಿಥಿಲತೆ ೩ :** ಬರ್ದಿಲಂ . . . ಅದಿರ್ಮುತ್ತೆ ಪೊದಟ್ಟಿರ್ದೆಯೆಂಬಿವು ಸಹಜ ಶಿಥಿಲವೃತ್ತಿಯನಾಳ್ಗುಂ (ಶಮದ. ೪೫). [ಸಂ.]

**ಶಿಥಿಲಾಕ್ಷರ** (ನಾ). **ಅಸ್ಫುಟವಾದ ಮಾತು :** ಕೆಮ್ಮುತೊಮ್ಮೊಮ್ಮೆ ಗೂಹೆಗೂಹೆ ಗುಟ್ಟುತುಂ ಶಿಥಿಲಾಕ್ಷರಂಗಳಿಂ ನಮಃಶಿವಾಯ ನಮಃಶಿವಾಯಯೆನುತ್ತೆ ನಲಾಟದಂತೆ ನಡುಗುತ್ತುಂ (ನಂಬಿರ. ೬-೨೭). [ಸಂ.]

**ಶಿಥಿಲಿಸು** (ಕ್ರಿ). **ಸಡಿಲಗೊಳಿಸು :** ಪ್ರಾರಬ್ಧದಲ್ಲಿ ನಿನ್ನ ಪುಣ್ಯವಿನಿತಾನುಮಿರೆ ಸೇರೆ ಪಶ್ಚಾತ್ತಾಪಭಾರವದರೊಡನೆ ದಾರುಣದ ಕರ್ಮನಿಯತಿಯನಿನಿತು ಶಿಥಿಲಿಪುದು ಕಾರುಣ್ಯದಿಂ ದೈವ (ಮಂಕುತ. ೫೮೯). [ಶಿಥಿಲ + -ಇಸು$_1$]

**ಶಿಥಿಳ** 'ಶಿಥಿಲ' ನೋ.

**ಶಿದ್ಗಿಗೆ** 'ಸಿದಿಗೆ' ನೋ.

**ಶಿಪಾಯಿ** 'ಸಿಪಾಯಿ' ನೋ.

**ಶಿಪಾರಸು** 'ಶಿಫಾರಸ್ಸು' ನೋ.

**ಶಿಪಾರಸ್ಸು** 'ಶಿಫಾರಸ್ಸು' ನೋ.

**ಶಿಪಿ** (ನಾ). ೧. **ಬೆಳಕಿನ ಕಿರಣ.** ೨. **ತೊಗಲು ; ಚರ್ಮ.** [ಸಂ.]

**ಶಿಪಿಗೆಂಡೆ** 'ಸೀಪಿಯ ಗೆಡ್ಡೆ' ನೋ.

**ಶಿಪಿವಿಷ್ಟ** (ಗು). ೧. **ಕುಷ್ಠರೋಗದಿಂದ ಕೂಡಿದ.** (ನಾ). ೨. **ವಿಷ್ಣು :** ಆತ ಸಂಗ್ರಾಮನಾಯಕ ; ಇಂದ್ರಸಹಾಯಕ. ಆತ ಅಚಿಂತ್ಯ, ಶಿಪಿವಿಷ್ಟ (ಭಾರದ. ೨೮೨). ೩. **ಈಶ್ವರ ; ಶಿವ :** ಆ ನಾಯನಾರರ ಪರಮಭಕ್ತಿಯ ನಿಷ್ಠೆಯಂ ಶಿಪಿವಿಷ್ಟಂ ಕೊಂಡಾಡುತ್ತಾಗಳ್ (ತ್ರಿಪುವಿ. ೧೫೬-೪೫ ವ). ೪. **ಕುಷ್ಠರೋಗ :** "ಹೊಲ್ಲಹ ಚರ್ಮದಲ್ಲಿಯುಂ ಶಿಪಿವಿಷ್ಟಮೆಂಬುದು" (ಹಲಾಯು. ೧೩೭-೩೧). ೫. **ತಲೆಯಲ್ಲಿ ಕೂದಲಿಲ್ಲದವನು ; ಬೋಳುತಲೆಯವನು :** "ಖಳತಿಃ, ಶಿಪಿವಿಷ್ಟಃ, ಐಂದ್ರಲುಪ್ತಕಃ — ಈ ೩ ತಲೆಬಿಟದಲೆ(ಯಂ)" (ಹಲಾಯು. ೯೯-೪೫೪). ೬. **ಕಾಯಿಲೆಯವನು ; ರೋಗಿ.** ೭. **ಕುಷ್ಠರೋಗಿ.** "ಅರೋಮಕ ಕುಷ್ಠಚರ್ಮಮುಂ ಅಂಗಜವೈರಿ ರೋಗಯುತರೆಂಬಿನಿತುಂ ಶಿಪಿವಿಷ್ಟವಾಚಕಂ" (ನಾನಾರ. ೧೪೪). [ಸಂ.]

**ಶಿಫಾರಸ್** 'ಶಿಫಾರಸ್ಸು' ನೋ.

**ಶಿಫಾರಸು** 'ಶಿಫಾರಸ್ಸು' ನೋ.

**ಶಿಫಾರಸುಪತ್ರ** (ನಾ). **ವರ್ಚಸ್ಸುಳ್ಳವರು, ಒಬ್ಬ ವ್ಯಕ್ತಿಯ ಯೋಗ್ಯತೆಯನ್ನು ತಿಳಿಸಿ ಬರೆಯುವ ಕಾಗದ :** ಇವರ ಶಿಫಾರಸುಪತ್ರದ ಮೇಲೆ ನಾವು ಬದುಕುವದು ಅಷ್ಟರಲ್ಲೇ ಇದೆ (ಮೂರುದಾ. ೧೬೦). [ಶಿಫಾರಸು (< ಶಿಫಾರಸ್ಸು) + ಪತ್ರ]

**ಶಿಫಾರಸ್ಸು, ಶಿಪಾರಸು, ಶಿಪಾರಸ್ಸು, ಶಿಫಾರಸ್, ಶಿಫಾರಸು, ಶಿಫಾರ್ಸು, ಸಿಪಾರಸು, ಸಿಫಾರಸು** (ನಾ). ೧. **ಪ್ರಭಾವವನ್ನು ಬೀರುವುದು ; ವರ್ಚಸ್ಸನ್ನು ಬೀರುವುದು ; ವಶೀಲಿ :** ಶಿಫಾರಸ್ಸಿಗೆ ಬರುತ್ತಾರಲ್ಲ - ಒಬ್ಬೊಬ್ಬರು ಐದೈದು ರೂಪಾಯ್ನಾದ್ರೂ ಕೊಟ್ರೆ (ನವನೀ. ೪೦). ೨. **ಅರ್ಹತೆಯನ್ನು ಸೂಚಿಸಿ ಪ್ರಶಂಸಿಸುವುದು ; ಮೆಚ್ಚುಗೆ ; ತಾರೀಫು :** ಅಂದರೆ ಆಕೆಯ ಬಗ್ಗೆ ನಿನ್ನ ಶಿಫಾರಸ್ಸು ತಾನೇ? (ದೇವಪಂ. ೧೯೪). **ಶಿಪಾರಸು :** (೬). **ಶಿಪಾರಸ್ಸು:** ೧. ದಿವಾನರಿಗೆ ಅವನ ಶಿಪಾರಸ್ಸು ಬೇಕಿಲ್ಲ (ದೌಲತ್. ೧೧೫). **ಶಿಫಾರಸ್ :** ೩. = **ಶಿಫಾರಸುಪತ್ರ:** ಅವರು ತಮ್ಮ ಪೂರ್ಣ ಮೆಚ್ಚುಗೆಯನ್ನು ವ್ಯಕ್ತಪಡಿಸಿ ಶಾಲೆಗೆ ಸರಕಾರದ ಮಂಜೂರಾತಿಗೂ, ವರ್ಷಾಸನಕ್ಕೂ (Grant) ಶಿಫಾರಸ್ ಬರೆದು ಕಳುಹಿಸಿದರು (ಚತಸ. ೨೭). **ಶಿಫಾರಸು:** ೧. ಅವರ ಕೃತಿಗೆ ಯಾರ ಶಿಫಾರಸೂ ಅವಶ್ಯವಿಲ್ಲ (ಮಹಾಗ. II, ಸ್ನೇಹದ ಮಾತು) ; ನನಗೆ ಅವನ ಶಿಫಾರಸು ಗಿಫಾರಸು ಬೇಕಿಲ್ಲ (ರಂಗಕ. ೧೦೭). **ಶಿಫಾರ್ಸು :** ೧. ಶ್ರೀಮಂತರಿಗೆ

ದೇವರೇಕೆ? ದೇವರ ಶಿಫಾರ್ಸು ಅವರ ಮರ್ಜಿ ಏನೂ ಬೇಕಿಲ್ಲ (ಚಂಗೂಲಿ. ೧೪೧). **ಸಿಫಾರಸು** : ೧. ಅವಳ ಸಿಫಾರಸಿನಿಂದಲೂ, ಬುದ್ಧಿವಂತಿಕೆಯಿಂದಲೂ, ಬ್ರಾಹ್ಮಣಿ, ಇಂದಿರೆ ಇಬ್ಬರೂ ಅಡಿಗೆಯ ಕೆಲಸಕ್ಕಾದರು (ಬಂಕಿಮ. ೧೯೯). **ಸಿಫಾರಸು** : ೧. ಸಹಾನುಭೂತಿಯುಳ್ಳ ಮೇಲಧಿಕಾರಿಗಳ ಸಿಫಾರಸೂ ಬಹಳ ಬೇಕಾಗುತ್ತದೆ (ಮೇದಿಮ. ೨೧೦) ; ಯಾರ ಯಾರ ಸಿಫಾರಸಿನ ಪ್ರಭಾವದಿಂದಲೋ ಕೆಲಸಕ್ಕೆ ಬರುವ ಈ ಹುಡುಗ ಅಮಲ್ದಾರರುಗಳಲ್ಲಿ ಬೈಸಿಕೊಳ್ಳಬೇಕಾಯಿತಲ್ಲಾ (ಬಿಸ್ತಕ. ೨೭).

**ಶಿಫಾರಸ್ಸು ಮಾಡು, ಶಿಫಾರಸು ಮಾಡು** = ವಶೀಲಿ ಮಾಡು ; ಪ್ರಭಾವವನ್ನು ಬೀರು : ಶಿವಣ್ಣನ ಮನೆಗೆ ಹೋಗಿ ನನಗೆ ಶಿಫಾರಸ್ಸು ಮಾಡು ಎಂದು ಕೇಳಲೆ (ಚಂಗಾಳ್ಯ. ೫೭೧) ; ಸೈನ್ಯದ ಮುಖ್ಯಾಧಿಕಾರಿಗೆ ನಿನ್ನ ಸಾಹಸವನ್ನು ತಿಳಿಸಿದ್ದೇನೆ . . . ಒಂದು ಕ್ರಾಸ್‌ಗೆ ಶಿಫಾರಸು ಮಾಡಿದ್ದೇನೆ (ಮಲನಾ. ೧೧೭).

[← ಫಾರ. ಸಿಫಾರಿಶ್; ಹಿಂ. ಸಿಪಾರಸ್, ಸಿಫಾರಿಶ್; ಮರಾ. ಶಿಫಾರಸ್, ಸಿಪಾರಸ್]

**ಶಿಫಾರ್ಸು** 'ಶಿಫಾರಸ್ಸು' ನೋ.

**ಶಿಫೆ** (ನಾ). ೧. ನಾರಿನಂತಿರುವ ಸಣ್ಣ ಬೇರು. ೨. ಮರದ ಬಿಳಲು : "ಜಟಾ, ಶಿಫಾ — ಈ ೨ ಮರದ ಬೀಟಲ್" (ಹಲಾಯು. ೩೦-೨೯). ೩. ಕಮಲದ ಗಡ್ಡೆ : "ಕರಹಾಟಃ, ಶಿಫಾ, ಕಂದಃ — ೩ ತಾವರೆಗಡ್ಡೆಯ ಹೆಸರುಗಳು" (ಸಿದ್ಧಾಂತಿ. ೯೦).

[ಸಂ. ಶಿಫಾ]

**ಶಿಬಂದಿ** 'ಸಿಬ್ಬಂದಿ' ನೋ.

**ಶಿಬಿ** (ನಾ). ೧. ಇತರ ಪ್ರಾಣಿಗಳನ್ನು ಕೊಂದು ತಿನ್ನುವ ಹಿಂಸ್ರಪಶು. ೨. ಒಂದು ಬಗೆಯ ಮರ ; ಭೂರ್ಜ. ೩. ಪುರಾಣಪ್ರಸಿದ್ಧನಾದ ಒಬ್ಬ ಚಕ್ರವರ್ತಿಯ ಹೆಸರು ; ☞ ಪಾರಿವಾಳರೂಪವಾಗಿದ್ದ ಅಗ್ನಿಯನ್ನು ಗಿಡಗರೂಪವಾಗಿದ್ದ ಇಂದ್ರನಿಂದ ರಕ್ಷಿಸಿ, ಪಾರಿವಾಳದ ತೂಕದ ಮಾಂಸವನ್ನು ತನ್ನ ದೇಹದಿಂದ ಕೊಟ್ಟ ಮಹಾದಾನಿ: ಇನಜಂ ಕೊಟ್ಟ ತೊವಲ್ಕಿಬಿಮುನಿ ಕೊಟ್ಟಡಗಾ ದಧೀಚಿ ಕೊಟ್ಟೆಲ್ಬುಗಳೇಂ ಧನದನ್ತೆ ಸೇವ್ಯವೆ ಪೇಳೆನುತಂ ಹೊಂಗಳನೆ ಕೇಶವಂ ಕುಡುತಿರ್ಪ್ಪಂ (ಎಕ. VII. ಶಿಕಾರಿ. ೧೨೩-೩೧; 1158); ಬೇಡಿದೊಡೆ ತನಗುಳ್ಳ ವಸ್ತುವಂ ಕುಡದೆ ಕಡೆನೋಡುವವನಧಿಕನ ದಧೀಚ ಶಿಬಿಗಳ ಮಾಳ್ಕೆ ಖೋಡಿಯಾದುದೆ ಮಣಿಯನೀವೆಂ (ಜೈಮಿಭಾ. ೨೪-೨೧). [ಸಂ.]

**ಶಿಬಿಕೆ** (ನಾ). ೧. ಅಂದಣ ; ಪಲ್ಲಕ್ಕಿ : ಆ ವೃಷಭನಾಥನುಂ . . . ಗುಣಶ್ರೇಣಿ ಯನೇಱುವುದನಭ್ಯಾಸಂಗೆಯ್ವಂತೆ ಸುದರ್ಶನವೆಂಬ ಶಿಬಿಕೆಯನೇಱಿದಾಗಳ್ (ಆದಿಪು. ೯-೭೨ ವ) ; ಶಿಬಿಕಾಂದೋಳವಾಜಿವಾರಣವರೂಥವಿಸರಾದಿ ನಾನಾಯಾನಂಗಳುಮಂ (ಚಂದ್ರಪ್ರ. ೬-೮೫ ವ); ಶಿಬಿಕಾರತ್ನಮನಾಂತರೇಱಿದವರಂ ಭೂಪೇಂದ್ರರಲ್ಲಿಂ ಬೞಿಕ್ಕೆ ಬಲಾಢ್ಯರ್ ಖಚರೇಂದ್ರರ್ (ವರ್ಧಪು. ೧೫-೪) ; ಶಿಬಿಕಾಂದೋಳವರೂಥದಂತಿಹಯಮಂ ನೇಪಥ್ಯರತ್ನಾವಳೀಶಬಲಚ್ಛಾಯೆ ಮುಸುಂಕೆ (ಅನಂಪು. ೪-೩). ೨. ಚಟ್ಟ ; ಸಿದಿಗೆ : ಕಳಲ್ದ ಶಿಬಿಕೆಗಳ ಚಿತೆಯೊಳ್ಬೇವ ಕುಣಪಂಗಳ . . . ಚಂಡಿಕಾಲಯದೆಡೆಗೆ ನಡೆತಂದನು (ಜೈಮಿಭಾ. ೩೦-೫೫); ಮೊಗಂ ಪಳದಿಗೊಂಡರಸನಾ ಕಾಯಮಂ, ಕನಕಶಿಬಿಕೆಗೆ ನೆಗಹಿ, ಸುಡುನೆಲಕೆ ಪೊತ್ತುಯ್ವದ್ರಾಕ್ರಂದಿಸುತೆ ಜನಂ (ಶ್ರೀರಾಮಾ. ೧೯೯-೨೧೯) ; ಪೋಲೀಸರು ರಂಗನ್ನ ಶಿಬಿಕೆಯ ಮೇಲಿರಿಸಿಕೊಂಡು ಹೊರಡುವರು (ಶಕಾರ. ೩೭). [ಸಂ. ಶಿಬಿಕಾ]

**ಶಿಬಿರ** (ನಾ). ೧. ಸೈನ್ಯವು ತಾತ್ಕಾಲಿಕವಾಗಿ ಬೀಡುಬಿಡುವ ಸ್ಥಳ ; ಠಾಣ್ಯ : ಶಿಬಿರರಕ್ಷಕರ ಗರ್ಭಮುಂ ಶಿಬಿರನಿತಂಬಿನಿಯರ ಗರ್ಭಮುಂ ಒಡನೊಡನೆ ಗೞಿಯಿಸೆ ಸಿಂಹಗರ್ಜನೆಯಿಂ ಗರ್ಜಿಸಿ . . . ಬಂದಾಗಳ್ (ಗದಾಯು. ೬-೩೧ ವ) ; ಹರಿ ಕಿರೀಟಗಳೆತ್ತ ಶಿಬಿರಕೆ ತಿರುಗಿದರು (ಕುಮ್ಯಾದ್ರೋ. ೮-೭); ರಮಣನುಂಗುರವನೆದೆಯಲ್ಲಿ ಗುಟ್ಟಾಗಿ ಬೈಚಿಟ್ಟು ನಡೆದಳ್ ಶಿಬಿರದೆಡೆಗೆ (ಚಿತ್ರಾಂಗ. ೫೬-೧೫೩೭). ೨. ರಾಜನ ವಸತಿ, — ಪಾಳೆಯ. ೩. ತಾತ್ಕಾಲಿಕವಾಗಿ ನಿರ್ಮಿಸಿದ ವಸತಿ, — ಬೀಡು : ಶಿಬಿರಂ ಫಣಿಹಿಂಸನಮಿಲ್ಲದಲ್ಲಿ ತೋಲ್ಪನೆ ಪೊಲಸಿಲ್ಲದಲ್ಲಿ ಶಬರಂ ಸುಖಮಿರ್ಪನಿದೇಂ ಸುಚಿತ್ರಮೋ (ಅರ್ಧನೇ. ೩-೭೭) ; ದಾರಿಯಲ್ಲಿ ಸರಕಾರದವರು ನಿರಾಶ್ರಿತರ ನೆರವಿಗಾಗಿ ಅಲ್ಲಲ್ಲಿ ಶಿಬಿರಗಳನ್ನು ಕಟ್ಟಿರುವರು (ಪ್ರಣಸ. ೬೫). [ಸಂ.]

**ಶಿಬಿರಾಗ್ನಿ** (ನಾ). ಪಾಳೆಯದಲ್ಲಿ ಉರಿಸುವ ಬೆಂಕಿ : "ಶಿಬಿರದಲ್ಲಿ ಉರಿಸುವ ಬೆಂಕಿ: ಶಿಬಿರಾಗ್ನಿ" (Campfire. ೩೦೫೧). [ಸಂ.]

**ಶಿಬ್ಬಂದಿ** 'ಸಿಬ್ಬಂದಿ' ನೋ.

**ಶಿಯಳಾರ** 'ಸಿಯಳಾಱ' ನೋ.

**ಶಿರ**₁ (ನಾ). ೧. ರಕ್ತನಾಳ ; ನರ ; ಧಮನಿ : ಹಣೆಯ ಮೇಲಿನ ಶಿರ ಎದ್ದು ಕಾಣುತ್ತಿತ್ತು (ಮೂರಾಬ. ೨೦೦). ೨. ಲೋಹಾಂಶದ ಎಳೆಯಿರುವ ಖನಿಜದ್ರವ್ಯ: ಜ್ವಾಲಾಮುಖಿಗಳಿಂದ ಹುಟ್ಟಿದ ಶಿಲೆಗಳಲ್ಲಿಯೂ ತಾಮ್ರ ಕಬ್ಬಿಣ ಮುಂತಾದವುಗಳ ಶಿರಗಳು ವಿಶೇಷವಾಗಿ ದೊರಿಯುವುದುಂಟು (ಮುಂಬಯಿ. ೬-೧೭).

[ಸಂ. ಶಿರಾ]

**ಶಿರ**₂ (ನಾ). ೧. ತಲೆ ; ರುಂಡ : ವಕ್ತ್ರಾರುಣಂ ಸಂಜೆಯಂ ಗೆಲೆ ಪೋಲ್ತತ್ತು ತಳಪ್ರಹಾರಿಯ ಶಿರಂ ಹೇಮಾದ್ರಿಯಾಕಾರಮಂ (ಕಾವ್ಯಸಾ. ೫೨೫ ಶೂದ್ರಕ); ಎನ್ನ ಕಾಲೇ ಕಂಭ . . . ಶಿ[ಪಾಠಾಂ. ಸಿ]ರ ಹೊನ್ನ ಕಳಸವಯ್ಯಾ (ಬಸವ. ೮೨೦) ; ಶಿರದೊಳ್ ಮುಸುಱಿದ ಮದ ಮಧುಕರನಿಕರಮನಲೆವ ಪವನಸಂಚಲಶಾಖಾಂಕುರಮೆಸೆದುದು (ಲೀಲಾವ. ೧೪-೯೨); ಗರುಡನಾಕಾರದಲಿ ಬಲವನು ಸರಿಸ ಮಿಗೆ ಮೋಹಿದನು ವಿಹಗನ ಶಿರಕೆ ಕೃಪ ಕುರುರಾಯ ದುಶ್ಯಾಸನನ ನಿಲಿಸಿದನು (ಕುಮ್ಯಾದ್ರೋ. ೨-೨೧). ೨. ಅಗ್ರಭಾಗ; ತುದಿ : ಪರ್ವತ ಶಿರದಿ ಜನ್ಮವೆತ್ತಿದ ತೊರೆ ಸಮುದ್ರಾಭಿಮುಖಿಮಾಗಿ ಪರಿಯಲರಿವಂತೆ (ಶ್ರೀರಾಮಾ. ೨೫-೬೭೨). ೩. ಮರದ ತುದಿ : "ಪ್ರಾಗ್ರಂ (ತು), ಶಿಖರಂ, ಶಿರಃ — ಈ ೩ ಮರದ ತುದಿ" (ಹಲಾಯು. ೩೦-೨೭). ೪. ಮೆಣಸಿನ ಬೇರು. ೫. ಹಿಪ್ಪಲಿಯ ಬೇರು : "ಶಿರ — ಮೋಡಿ, ಹಿಪ್ಪಲೀಬೇರು" (ಗಂಗಾಮ. ೩೦೭). ೬. ಒಂದು ಬಗೆಯ ದೊಡ್ಡ ಹಾವು.

**ಶಿರದೊಳಾನ್** = (ಆಜ್ಞೆ, ಅಪ್ಪಣೆ ಮುಂತಾದುವನ್ನು) ತಲೆಯಲ್ಲಿ ಇಟ್ಟುಕೊಳ್ಳು; **ಶಿರಸಾವಹಿಸು** : ನಿಮ್ಮಯಾಜ್ಞೆಯನೆ ಶಿರದೊಳಾಂತು ಪುರಾಂತಕಂ ನೀಂ ಕರೆಯಲೋ ಎನುತಿರ್ದನು (ಬಸಪು. ೨೮-೬೪). **ಶಿರಸಾವಹಿಸಿಕೊಳ್ಳು** = ತಲೆಯಲ್ಲಿ ಧರಿಸು : ಶಿವಪ್ರಸನ್ನವರವಂ ಶಿರಸಾವಹಿಸಿಕೊಂಡು ಬಂದಂತಃಪುರಮಂ ಪೊಕ್ಕು . . . ನಿದ್ದೆಗೆಯ್ಯಾಗಳ್ (ಹಮ್ಮಿರ. ೨-೧೭ ವ). **ಶಿರಸಾವಹಿಸು** = (ಆಲಂ) ಅಪ್ಪಣೆ, ಆಜ್ಞೆಗಳನ್ನು ನಮ್ರಭಾವದಿಂದ ಒಪ್ಪಿಕೊಳ್ಳು : ನೂರೊಂದು ಮಂದಿ ನಮ್ಮ ವಂಶದ ಅರಸುಗಳೆಲ್ಲರೂ ಆತನ ಶಾಸನವನ್ನು ಶಿರಸಾವಹಿಸಿದ್ದಾರೆ (ಕೃವಾಸ. ೨೩). [ಸಂ.]

**ಶಿರ**₃ 'ಶಿರಾ' ನೋ.

**ಶಿರಂಟು**, ಸಿರಂಟು (ನಾ). ಒಂದು ಬಗೆಯ ಸಸ್ಯ : ಪಾದರು, ನೆಲವೆಂಬು, ಗಂಟುಕಾಲು, ಕೆರೆಹಿಪ್ಪಲಿ, ಶಿರಂಟು, ನಾರವೆ (ನಮ್ಮನು. ೨೩೪). **ಸಿರಂಟು** : ಸಿರಂಟುಗಿಡ (ಮೈಡಿಗಿ. ೬೪-೧೩೦೩). [?]

**ಶಿರಂದೂಗು**, ಶಿರದೂಗು (ಕ್ರಿ). ಮೆಚ್ಚುಗೆ, ಸಮ್ಮತಿ ಮೊದಲಾದ ಭಾವಗಳನ್ನು ಸೂಚಿಸಲು ತಲೆಯನ್ನು ಅಲ್ಲಾಡಿಸು ; ತಲೆದೂಗು : ಅಂಗುಲ್ಯಂಕುಶಾಕರ್ಷಣಮುಮರೆ ಶಿರಂದೂಗುತಂತೆ [ಪಾಠಾಂ. ಚಿರಂರಾಗದಿಂದೆ]ತ್ತಿ ಕೆಯ್ಯಂ ಕೆದಱುತ್ತಂ ಧೂಳಿಯಂ ಪ್ರೀತಿಯನೊದವಿಪ [ಗಂಡೋಚ್ಚಲಡ್ಡಿಂಡಿ ಮಧ್ಯಾನ ದಿನೆಂದೋ ಮುಂದೆ ಮನ್ನಂದನನೆಸೆವ ಗಜಕ್ರೀಡೆಯಿಂದಾಡುತಿರ್ಪಂ] (ಕಾದಂಪೂ. ೩೫೯). **ಶಿರದೂಗು**: ಶಿಷ್ಯನ ಸ್ವಾನುಭವನಿಸ್ಪೃಹತೆಗೆ ಯುಕ್ತಚಿತ್ತನು ಶಿರದೂಗುತಲಿ (ಗಗತಾ. ೨-೨೯). [ಶಿರ₂ + ತೂಗು₁ (< ತೂಂಕು₁)]

**ಶಿರಂಬರಂ** (ಅ). ತಲೆಯವರೆಗೂ ; ತಲೆಮಟ್ಟ : ತಳ್ತಿಱಿದೊಡುಂಗುಟದಿಂದ ಶಿರಂಬರಂ ವರಾಹಂ ದಿಟಮೆತ್ತೆ ಮತ್ತಿಱಿಯೆ ಮತ್ತೆ ಕರಂ ಸೆಳೆದೆತ್ತೆ ನೊಂದು ತಾನೊಂದೆಸೆಯೊಳ್ ವರಾಹಪತಿಯೊಂದೆಸೆಯೊಳ್ ಕೆಡೆದತ್ತರಣ್ಯದೊಳ್ (ಗಿರಿಕ. ೧-೧೧೯). [ಶಿರ₂ + ಬರಂ (< ವರಂ)]

**ಶಿರಃಕಂಪ** (ನಾ). ತಲೆದೂಗುವಿಕೆ ; ತಲೆಯ ಅಲುಗಾಟ : ನಮಗಿಂತಿರ ಮುನ್ನೆ ನೋಂತರಾರ್ ಎಂದು ಪರಮಾಶ್ಚರ್ಯಪರ್ಯಾಕುಲಿತ ಶಿರಃಕಂಪಂಬೆರಸು ಸುರಪತಿ ಕೆಯ್ಮುಗಿದು. . . ಪೊಗಟಲಱಿಯಂ ಸಭೆಯೊಳ್ (ಶಾಂತಿಪು. ೧೦-೭೫ ವ). [ಸಂ.]

**ಶಿರಃಪ್ರಧಾನಿ** (ನಾ). ಪ್ರಮುಖ ಸಚಿವ ; ಸಚಿವಮುಖ್ಯ : ಕದನಕನುವಾಗಿರಲಿ ಪಾಯದಳಮೆಂದು ನುಡಿದಂ ಸುಬುದ್ಧಿ ಮೊದಲಾಗಿಹ ಶಿರಃಪ್ರಧಾನಿಗಳ ಕೂಡೆ (ಜೈಮಿಭಾ. ೧೭-೩೦). [ಸಂ. ಶಿರಃಪ್ರಧಾನಿನ್]

**ಶಿರಃಪ್ರಹರಣ** (ನಾ). ತಲೆಯು ಕತ್ತರಿಸಿ ಹೋಗುವುದು : ಅಹಿತರ್ ಸಂಧಿಯುಮಂ ವಿಗ್ರಹಮುಮನಾತನೊಳೊಡರ್ಚರೇಕೆನೆ ಸರ್ವಸ್ವಹರಣಮಂ ಸಂಧಿ ಶಿರಃಪ್ರಹರಣಮಂ ತಮಗೆ ವಿಗ್ರಹಂ ಮಾಳ್ಪುದರಿಂ (ಶಾಂತಿಪು. ೧೦-೧೧೪). [ಸಂ.]

**ಶಿರಗೊಡಹು** (ಕ್ರಿ). (ನಿಷೇಧಾರ್ಥಸೂಚಕವಾಗಿ) ತಲೆಯನ್ನು ಅಲುಗಾಡಿಸು; ತಲೆ ಕೊಡಹು : ಪರಿಪರಿಯನ್ನವಾನವ . . . ತರತರದೊಳು ನೀಡುತಿಹಳು ಶಿರಗೊಡಹುವನು ಸಾಕೆಂದು (ಭರಚ. ೧೮-೫೫). [ಶಿರ$_2$ + ಕೊಡಹು$_1$ (< ಕೊಡಪು)]

**ಶಿರಚ್ಛೇದ** (ನಾ). ತಲೆಯನ್ನು ಕತ್ತರಿಸುವಿಕೆ, – ಛೇದಿಸುವಿಕೆ. [ಸಂ. ಶಿರಶ್ಛೇದ]

**ಶಿರಚ್ಛೇದನ** (ನಾ). = ಶಿರಚ್ಛೇದ : ತಗೆದುಕೊ ಈ ಕರವಾಳವನ್ನು, ಇದರಿಂದ ನನ್ನ ಶಿರಚ್ಛೇದನ ಮಾಡಿ ನೀನು ಆತ್ಮಹತ್ಯೆಮಾಡಿಕೊ (ದೌಲತ್. ೪೦೧) ; ಇವಳ ಶಿರಚ್ಛೇದನ ನಾಳೆ ಬೆಳಿಗ್ಗೆ ಆಗಲಿ (ಕೊಸಪ್ಪ. ೧೨೦). [ಸಂ. ಶಿರಶ್ಛೇದನ]

**ಶಿರದೂಗು** 'ಶಿರಂದೂಗು' ನೋ.

**ಶಿರಪೇಚ** 'ಸಿರಪೇಷ್' ನೋ.

**ಶಿರಪೇಚು** 'ಸಿರಪೇಷ್' ನೋ.

**ಶಿರಪೇಷು** 'ಸಿರಪೇಷ್' ನೋ.

**ಶಿರಪೊಟ್ಟಲಿ**, ಸಿರಪೊಟ್ಲ (ನಾ). ಒಂದು ಬಗೆಯ ಸಸ್ಯ : ಈ ಮುಂದೆ ಹೂವು, ಹಣ್ಣು, ಕಾಳು, ಗೆಡ್ಡೆ ಎಲ್ಲ ಸೇರಿದ ಪಟ್ಟಿಯನ್ನು ಕೊಟ್ಟಿದೆ . . . ಶಿರಪೊಟ್ಟಲಿ, ಅಂಟುಪುರುಲೆ, ಉತ್ತರಾಣಿ, ಬಸಲೆ, ಬಾಯಿಬಸಲೆ (ನಮ್ಮನು. ೨೩೮). **ಸಿರಪೊಟ್ಲ** : ಸಿರಪೊಟ್ಲಗಿಡ (ಮೈಜಿಗಿ. ೬೨-೧೨೬೫). [?]

**ಶಿರಪ್ರಧಾನ** (ನಾ). = ಶಿರಃಪ್ರಧಾನಿ : ಕೃಷ್ಣರಾಯರ ನಿರೂಪದಿಂ ಅವರ ಶಿರಪ್ರಧಾನರಾದ ಸಾಳುವಗೋವಿಂದರಾಜಯ್ಯನವರು . . . ಅಲಕೆಟೆಯ ನಾನಾಗೋತ್ರದ . . ವ್ರಿತ್ತಿಯ ಅಶೇಷಮಹಾಜನಂಗಳಿಗೆ ಧಾರೆಯನೆರದು ಕೊಟ್ಟರು (ಎಕ. XIV. ಎಳಂದೂ. ೧೯೦-೫ ; ಸು. 1519). [ಸಂ.]

**ಶಿರಬಾಗು** (ಕ್ರಿ). ೧. ನಮಸ್ಕರಿಸು ; ತಲೆಬಾಗು : ಕಡುವೇಗದಿಂದ ಮಾಗಡದ ತೀರ್ಥಕೆ ಬಂದು ಒಡನೆ ಸ್ನಾನವ ಮಾಡಿ ಮುದದಿ ಪೊಡಮಟ್ಟು ಶಿರಬಾಗಿದ [ಪಾಠಾಂ. ಶಿರವ ಮಣಿದು] ಮಲ್ಲಿಕಾರ್ಜುನನಡಿಗೆಜಗಿದನು ಭಕ್ತಿಯಲಿ (ಅಬ್ಬಲೂ. ೩-೬) ; ಪ್ಪುಡಸುಬಂತಿಯಂ ನೆನೆದು, ಪ್ರೇಮಭಕ್ತಿಯೆಲಿ ಕೈ ಮುಗಿದು ಶಿರಬಾಗಿ ಗುಡಿಯ ವಿಗ್ರಹಕೆ, ತೂರಹೊಂಟಳು (ಚಿತ್ರಾಂಗ. ೬-೧೪೯). ೨. (ಅಲಂ) ಅಪ್ಪಣೆಯನ್ನು ಸ್ವೀಕರಿಸು : ಅಧಿಕಾರಿಯು ಕೊಟ್ಟ ತೀರ್ಮಾನಕ್ಕೆ ಕಿರಿಯ ಅಧಿಕಾರಿ ಶಿರಬಾಗಿದನು (ರೂಢಿ). ೩. ಸೋಲನ್ನು ಒಪ್ಪಿಕೊಳ್ಳು : ಅಲೆಕ್ಸಾಂಡರನಿಗೆ ಅನೇಕ ರಾಜರು ಶಿರಬಾಗಬೇಕಾಯಿತು (ರೂಢಿ). [ಶಿರ$_2$ + ಬಾಗು$_1$]

**ಶಿರಬೇರು** (ನಾ). ನಾಳ ಸಹಿತವಾದ ಕುತ್ತಿಗೆ, – ಕತ್ತು : ಕರಿಮುಖ ಶಾರದೆಯರು ಲೋಕದೊಳು ಮತಿಗರುಹರೆಂಬರು ಕಾಣದವರು ಶಿರಬೇರು ನಾಸಿಕವರಿವಾಗ ಮತಿಯುಕ್ತಿಯರಿದುದೂ ಅವರಿರ್ವರಿಗೆ (ಅಮುಸಾಂ. ೧-೨೦).

[ಶಿರ$_2$ + ಬೇರು (< ಬೇರ್$_1$)]

**ಶಿರಮಡ್ಡು** (ನಾ). ಒಂದು ಬಗೆಯ ದಿವ್ಯ (?) : ಪರವಾದಿಗೆ ನಾಂ ತೊಡರ್ದು ಮುಡಿಗೆ ವಿಷಸರ್ಪ ಶಿರಮಡ್ಡುಗಳು ಮುಂತಾದ ದಿವ್ಯಂಗಳಂ ಗೆಲ್ದು ತೋರ್ದಪನ ಕೊಂತಮಂ ಪಾಯಿಸುವೆನು (ರಾಘಚ. ೧೯-೧೦೦). [?]

**ಶಿರಮುಂಡನ** (ನಾ). ತಲೆಯನ್ನು ಬೋಳಿಸುವುದು : ಎಣ್ಣೆ ಅರಿಸಿನ ಗಂಧ ಕುಂಕುಮಂ ಪುಷ್ಪಂಗಳನ್ನುಳಿದು ಶಿರಮುಂಡನದಿಂ ಬೋಳುಮುಂಡೆಯಾಗಿನ್ನುಂ ನಿರಾಶ್ರಯದಿ ಬಾಳುವೆನೆ (ನವಮೋ. ೮-೧೫). [ಸಂ.]

**ಶಿರಶ್ಛೇಧನ** (ನಾ). ತಲೆಯನ್ನು ಕಡಿಯುವಿಕೆ, – ಕತ್ತರಿಸುವಿಕೆ : ಕೆಂಚವೀರಾಖ್ಯಂಗೆ ಮುದದೆ ಪೇಳ್ದೀ ವೀರಶೈವಾಮೃತದೊಳಗಾದುದು ವಿಧಿ ಶಿರಶ್ಛೇದನದ ತಾಣಕೆರಡು ಕಾಂಡದ ಮೇಲೆ ಸಂಧಿಯೊಂದು (ವೀಶೈಪು. ೩-೧-೧೩) ; ಅಧಿಕಾರಿಗಳು ಕ್ರೂರ ಕಿರಾತನಾದ ದುಷ್ಟಬುದ್ಧಿಗೆ . . . ಶಿರಶ್ಛೇದನವನ್ನು ಮಾಡಿಸಿದ ವರ್ತಮಾನವನ್ನೂ ಪಾಂಡ್ಯರಾಜನಿಗೆ ಬಿನ್ನವತ್ತಲೆಯಲ್ಲಿ ಬರೆದು ಮಧುರಾಪುರಕ್ಕೆ ಕಳುಹಿಸಿದರು (ಕವಿಕ. ೫೪). [ಸಂ.]

**ಶಿರಸಿಜ** (ನಾ). ತಲೆಯಲ್ಲಿ ಹುಟ್ಟಿದುದು ; ತಲೆಕೂದಲು : "ಚಿಕುರಂ ಕಚಂ ಶಿರಸಿಜಂ ಕೇಶಮಾ ವಾಳಮೆನೆ ಕೂಂದಲಕ್ಕು" (ಮಂಗರಾ. ೯೪-೫). [ಸಂ.]

**ಶಿರಸು** (ನಾ). ತಲೆ ; ಶಿರ : ಪರಿಹರಿಸಿ ಮತ್ಸ್ಯಾವತಾರವನುರಗಕಟಕಂ ಸುತ್ತಿದನಲಾ ಶಿರಸಿನಲಿ ಕೂರ್ಮನ ಶಿರಂ ಹರ ಹಾರಮಧ್ಯದಲಿ (ಬಸವು. ೫೪-೪೨). [ಸಂ. ಶಿರಸ್]

**ಶಿರಸ್ತೆ**, ಷಿರಸ್ತೆ (ನಾ). ೧. ಕಂದಾಯ, ತೆರಿಗೆ ಮುಂತಾದುವುಗಳ ವಸೂಲಿಯನ್ನು ನೋಡಿಕೊಳ್ಳುವ ಇಲಾಖೆ : 'ಶಿರಸ್ತೆದಾರ' ಪರಾ. ೨. ಶಿರಸ್ತೇದಾರನ ಪದವಿ, – ಅಧಿಕಾರ : ಸರ್ವಾಧಿಕಾರಿ ನಂಜರಾಜಯ್ಯನಲ್ಲಿ ತಿಳಿಸಿ ಗಡಿಗಳಲ್ಲಿ ಅಮಲು ಶಿರಸ್ತೆ ಕಿಲ್ಲೆ ಮುಂತಾದ ಅಧಿಕಾರಗಳನ್ನು ಕೊಡಿಸುತ್ತ (ಮಹಾವಂ. I. ೧೭೫) ; ರಾಮಯ್ಯನವರಿಗೆ ತಾಲೂಕಿನ 'ಶಿರಸ್ತೆ' ಪದವಿ ಸಿಕ್ಕಿತ್ತು (ದಕ್ಷಿನ. ೯೮). ೩. ಪದ್ಧತಿ ; ರೂಢಿ : ಎರಡನೇ ಪ್ರಕಾರದಿಂದ ಹೋಗುವ ಜೀನಸುಗಳಿಗೆ ಮೊದಲನೇ ಶಿರಸ್ತೆಯ ಪ್ರಕಾರ ತಕ್ಕೊಳ್ಳಲಾದೀತು (ಮುಂಬಪ್ರಾ. ೨೪೮). **ಷಿರಸ್ತೆ** : ೩. ನಾವ್ ಷಿರಸ್ತೆ ಪ್ರಕಾರ ಬಡ್ಡಿ ತಗೋತಾವ್ (ಮೋಹಿನೀ. ೪೧).

[← ಪಾರ. ಸರಿಶ್ತ; ಹಿಂ. ಸರಿಶ್ತಾ, ಸಿರಿಶ್ತಾ; ಮರಾ. ಶಿರಸ್ತಾ, ಶಿರಿಸ್ತಾ]

**ಶಿರಸ್ತೆದಾರ**, ಶಿರಸ್ತೇದಾರ, ಸಿರಸ್ತೇದಾರ (ನಾ). ೧. ತಾಲ್ಲೂಕು ಮತ್ತು ಜಿಲ್ಲಾ ಕಚೇರಿಗಳಲ್ಲಿ ಕಂದಾಯದ ಇಲಾಖೆಗೆ ಸಂಬಂಧಪಟ್ಟ ಅಧಿಕಾರಿ ; ಮುಲ್ಕಿ ಅಧಿಕಾರಿ : ಯಾ ಸಂನ್ನದಿನ ನಕಲಂನ್ನ ನಿಂಮ ನಿಂಮ ಗಡಿಗಳ ಶಿರಸ್ತೆದಾರರ ಲೆಖಕೆ ಬರ್‍ಸಿ (ಮೈಆರಿ. ೧೯೩೮, ೧೯-೧೯ : 1811) : ಅರಮನೆ ಶಿರಸ್ತೆದಾರ ಹಿರಣ್ಣಯ್ಯನ ಮಗ ಮೋದಿಖಾನೆ ಶಿರಸ್ತೆದಾರ ನರಸ್ಯಯ್ಯನು (ಎಕ. XIV. ಮಂಡ್ಯ. ೧೩೪-೬ ; 1865) ; ಸುಬೇದಾರ, ಶಿರಸ್ತೆದಾರ, ಕಿಲ್ಲೆದಾರ ಮುಂತಾದವರಿಗೆ ಅವರವರ ಚಾಕರಿಯ ವಿಧವರಿತು ಸಂಬಳವನ್ನು ನಿಷ್ಕರ್ಷಿಸಿ . . . ಕಟ್ಟಳೆಮಾಡಿದರು (ಮಹಾವಂ. I. ೧೧೬). ೨ ನ್ಯಾಯಾಲಯದ ಕಚೇರಿಯಲ್ಲಿರುವ ಮುಖ್ಯಕರಣಿಕ : (ಮೈಗಜೆ. IV. ೭೮೭). **ಶಿರಸ್ತೇದಾರ** : ೧. ಸಾಲಿಗ್ರಾಮದ ಅರಳಿಕಟೆ ಶಿರಸ್ತೇದಾರ ಸುಬ್ಬಯ್ಯನವರ ಮಗ . . . ಸುಬ್ಬರಾಯನ ಸೇವೆ (ಎಕ. XIV. ಶ್ರೀರಂಗ. ೩೦೯-೪ ; ?) ; ಕಲೆಕ್ಟರ ಕಚೇರಿಯ ಶಿರಸ್ತೇದಾರರೂ, ಅವನ ದುರ್ಬೋಧನೆಗೆ ಒಳಗಾಗಿರುವ ಕಲೆಕ್ಟರೂ ದೇವರಾಜಪಿಳ್ಳೆಯವರಿಗೆ ಆಗದವರು (ಪ್ರತಾಪ. ೬೨). **ಸಿರಸ್ತೇದಾರ** : ೧. ಅಮಿಲಾನೆ ಸಿರಸ್ತೇದಾರಾನೆ ಹುಲಯಿಸ್ತಕಬಾಲ ವೊಕದ್ದಮಾನೆ ಮುಚಾರಿಯಾನೆ (ಎಕ. VI. ಕೊಪ್ಪ. ೪೮-೨೧ ; 1811). [← ಪಾರ. ಸರಿಶ್ತದಾರ್; ಹಿಂ. ಸಿರಿಶ್ತೇದಾರ್, ಸರಿಶ್ತೇದಾರ್; ಮರಾ. ಶಿರಸ್ತೇದಾರ್, ಶಿರಿಸ್ತೇದಾರ್]

**ಶಿರಸ್ತೇದಾರ** 'ಶಿರಸ್ತೆದಾರ' ನೋ.

**ಶಿರಸ್ತೋದ** (ನಾ). ತಲೆನೋವು ; ತಲೆಬೇನೆ : ದುಷ್ಕೃತಿಯಂ ವಿಸ್ತಾರಿಸಿ ಸಲೆ ಸುಜನ ಶಿರಸ್ತೋದಮನೇಕೆ ಮಸಗಿ ಮಾಟ್ಪರೊ ಕೆಲಬರ್ (ಲೀಲಾವ. ೧-೨೨). [ಸಂ.]

**ಶಿರಸ್ತ್ರ** (ನಾ). ೧. ತಲೆಯ ರಕ್ಷಣೆಗಾಗಿ ಧರಿಸುವ ಲೋಹದ ಟೊಪ್ಪಿಗೆ. ೨. ಟೋಪಿ, ಪೇಟ, ರುಮಾಲು ಮುಂತಾದುವು : "ಶೀರ್ಷಕಂ, ಶೀರ್ಷಣ್ಯಂ, ಶಿರಸ್ತ್ರಂ – ೩ ತಲೆಯನ್ನು ರಕ್ಷಿಸುವ ಲೋಹದ ಟೊಪ್ಪಿಗೆ, ತೊಗಲ ಟೋಪಿ, ಕುಳ್ಳಾವಿ ಮುಂತಾದ ಶಿರಸ್ತ್ರಾಣದ ಹೆಸರು" (ಸಿದ್ಧಾಂತಿ. ೨೫೭). [ಸಂ.]

**ಶಿರಸ್ತ್ರಾಣ** (ನಾ). ೧. ತಲೆಯನ್ನು ರಕ್ಷಿಸಿಕೊಳ್ಳುವ ಸಾಧನ ; ತಲೆಕಾಪು: ದಂಡನಾಯಕಂಗೆ ಶರಣಾಗತರಾಗಿ ನಿಜಶಿರಸ್ತ್ರಾಣವರಾಯಣರಾದರ್ (ಶಾಂತಿಪು. ೧೦-೨೪ ವ) ; ಬಿಲ್ಲು ತೀರು ಹೆದೆ . . . ಶಿರಸ್ತ್ರಾಣ ಮಧ್ಯತ್ರಾಣ . . . ಮಾಯಾರಿ ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿಸಾಧನವಿಶೇಷಂಗಳಿಂದಲು (ವಿವೇಕ. ೨೪೧) ; ತನ್ನ ಶಿರಸ್ತ್ರಾಣವನ್ನೂ ನಿಲುವಂಗಿಯನ್ನೂ ಅದರ ತುದಿಗೆ ಸಿಕ್ಕುಹಾಕಿ ಅಲ್ಲಿಯೇ ಸಮೀಪದಲ್ಲಿ ಕುಳಿತುಕೊಂಡರು (ಮೇದಿನಿ. ೧೪೩). ೨. ಪೇಟ, ಟೋಪಿ ಮುಂತಾದ ತಲೆಯುಡುಗೆ : ಇಂತಹದೊಂದು ಯಜ್ಞಸಮಾರಂಭದಲ್ಲಿ ನನ್ನ ಹೊಸ ಜರತಾರಿ ಶಿರಸ್ತ್ರಾಣ ಅಗ್ನಿಪ್ರವೇಶ ಮಾಡಿ ಪರಂಧಾಮಕ್ಕೆ ಹೋಯಿತು (ಗಾಳಿವ. ೧೨೯) ; ಅವರ ಬಟ್ಟೆಬರೆಗಳಲ್ಲಿ ಆಡಂಬರವಿರಲಿಲ್ಲ. ಮಾಸಲುಬಣ್ಣಕ್ಕೆ ತಿರುಗಿದ ಪಂಚೆ, ಅಂಥದೇ ಶಿರಸ್ತ್ರಾಣ (ರಂಗರೋ. ೭). [ಸಂ.]

**ಶಿರಸ್ಥಲ** (ನಾ). [ವೀಶೈ] ಲಿಂಗಧಾರಣೆಯ ಮೂರು ಸ್ಥಳಗಳಾದ ಕರ, ಉರ ಮತ್ತು ಶಿರಗಳಲ್ಲಿ ಒಂದು : ಕಾಯಸ್ಥಲ ಕರಸ್ಥಲ ಉರಸ್ಥಲ ಶಿರಸ್ಥಲ ಪ್ರಾಣ ಸ್ಥಲ ಭಾವಸ್ಥಲವೆಂದು ನುಡಿದಾಡುವರು ಆ ಸ್ಥಲದೊಳಗಣ ಸ್ವಯಸ್ಥಲವನರಿಯರು ಕಾಣಿರೇ . . . ಶಿರಸ್ಥಲವನರಿದರೆ ಶಿವನೆಂಬುದಕ್ಕೆ ಇಲ್ಲ (ವಚಸಂ. ೧೪೩-೩೩). [ಸಂ.]

**ಶಿರಸ್ನಾನ** (ನಾ). ತಲೆಗೆ ಎರೆದುಕೊಳ್ಳುವಿಕೆ ; ಅಭ್ಯಂಜನ. [ಸಂ.]

**ಶಿರಸ್ಸು** (ನಾ). ೧. ತಲೆ; ಶಿರ : "ಚೂಡದೊಳು ಶಿಖಿಯಲ್ಲಿ ಶಿರಸ್ಸೆಂಬುದು" (ಮಂಗರಾ. ೧೩೯-೭) ; ಮಧ್ಯಮಾ ಸಂಜ್ಞಿಕಾವಾಣಿಯೆ ಉರಸ್ಸು ಕಂಠ . . . ಶಿರಸ್ಸೆಂಬ ಸ್ಥಾನಾಷ್ಟಕದಲ್ಲಿ ಪ್ರಾಣವಾಯುಸಂಬಂಧಮಾಗಲು (ವಿವೇಕ. ೧೭೦) ; ಮನಸ್ಸು ಪಯಸ್ಸು ಯಶಸ್ಸು ಶಿರಸ್ಸು (ಶಬ್ದಾನು. ೧೩೩ ಪ್ರಯೋ). ೨. ಮಕುಟ ; ಕಿರೀಟ. ೩. ದಿಕ್ಕು ; ದೆಸೆ. ೪. ಹಾಸುಗೆ. ೫. ಕಬ್ಬು, ಬಿದಿರು ಮೊದಲಾದುವುಗಳ ಗಂಟು ; ಪರ್ವ. ೬. ತಲೆಬುರುಡೆ. ೭. ನಿಜವಾದುದು ; ಖಂಡಿತವಾದುದು. ೮. ಕಣ್ಣೆದುರಿನದು; ಪ್ರತ್ಯಕ್ಷ. ೯. ಪರ್ವತದ ತುದಿ ; ಶಿಖರ. "ದೆಸೆಯುಂ ತಳ್ಪಮುಂ ಪರ್ವಮುಂ ತಾಂ ನಿರುತಂ ಪ್ರತ್ಯಕ್ಷಮುಂ ಸನ್ಮಕುಟ ಶಿಖಿ ಶಿರಂಗಳ್ ಶಿರಸ್ಸೆಂದೆನಿಕುಂ" (ನಾನಾರ. ೧೬೩). [ಸಂ. ಶಿರಸ್]

**ಶಿರಾ, ಶಿರ್ರ, ಸಿರ್ರ, ಸಿರಾ** (ನಾ). (ಉಕ) ತುಪ್ಪದಲ್ಲಿ ರವೆಯನ್ನು ಹುರಿದು ಸಕ್ಕರೆ ಹಾಕಿ ಬೇಯಿಸಿ ಮಾಡುವ ಒಂದು ಬಗೆಯ ಸಿಹಿತಿಂಡಿ ; ಸಜ್ಜಿಗೆ ; ಕೇಸರಿಭಾತು : ಎರಡುನಿಮಿಷದಲ್ಲಿ ಜವಾನ ಹಾಲು ಮತ್ತು ಶಿರಾ ತಂದು ಮೇಜಿನ ಮೇಲೆ ಇರಿಸಿದ (ನಿರ್ದೋಷಿ. ೬೫) ; ನಿನಗೆ ಶಿರಾ ಮಾಡಿಕೊಡುತ್ತೇನೆ (ಸ್ವಪ್ನಚಿ. ೧೨೩). **ಶಿರ್ರ** : ಪುರೆ, ಶ್ರೀಖಂಡ, ಶಿರ ಎಲ್ಲ ತಿಂದು ತಿಂದು ಮತ್ತೆ ಚೆಲ್ಲಬೇಕಾಯ್ತು (ಇತಿಶ್ರೀ. ೫೩). **ಸಿರ್ರ** : ಗಿರಾಕಿಗಳ ಬಾಯಲ್ಲಿ ರಸಮೊಸರುವಂತೆ ತಯಾರಿಸುವ ಸಿರ, ಕರಿದ ಎಣ್ಣೆಯಲ್ಲಿಯೆ ಕರಿದರೂ . . . ರುಚಿ ಕೊಡುವ ಆ ಭಜಿ (ಮುಂಗಾಪು. ೫೭). **ಸಿರಾ**: ಅಡುಗಲಜ್ಜಿ 'ಸಿರಾ' ಮಾಡಿ ತಿನಬಯಸುವವಳು (ಗರಬಾ. ೩). [← ಹಿಂ. ಸೀರಾ = ಹಲ್ವ; ಮರಾ. ಶಿರಾ]

**ಶಿರಾಜಿ** 'ಶಿರಾದಿ' ನೋ.

**ಶಿರಾದಿ, ಶಿರಾಜಿ, ಸಿರಾಜಿ** (ನಾ). ಒಂದು ಬಗೆಯ ಆಯುಧ : ಶಿರಾದಿ ಚೂರಿ ಚಿಕ್ಕತಾರಿ . . . ವಂಕಿ ಲೌಡಿ ಜವದಾಡಿಯೆಂಬ ಬತ್ತೀಸಾಯುಧಪಾಣಿಗಳಾದ ಘನದೇವತೆಗಳಿಕುರ್ಂ (ವಿವೇಕ. ೨೬೨). **ಶಿರಾಜಿ** : ಗರಗಸಂ ಮುಸಲ ಚಿಕ್ಕರಿ ಚೂರಿ ಪಾಶಪಟಿಯ ಶಿರಾಜಿಯು ಕಠಾರಿ . . . ಮರವ ಜವದಾಡಿಟ್ಟಿಯೆಂಬ ಮೂವತ್ತೆರಡು ಪರಿಯ ಶಸ್ತ್ರಗಳಾಂತು ಘನದೇವತೆಗಳಿಕುರ್ಂ (ಚತುಪು. ೫-೨-೪೪). **ಸಿರಾಜಿ** : ನಾನು ನಿಮಗೋಸುಗ ಬಸವಾಪಟ್ಟಣದಿಂದ ಉತ್ತಮವಾದ ಸಿರಾಜಿಯನ್ನು ತಂದಿದ್ದೇನೆ (ವಿಕಾಶ. ೫೩). [← ಪಾರ. ಹಿಂ. ಶಿರಾಜ್, ಶಿರಾಜಿ = ಪರ್ಷಿಯಾದೇಶದ ಒಂದು ನಗರ./ ತೆಲು. ಸಿರಾಜಿ = ಒಂದು ದೇಶ; ಸಿರಾಣ = ಒಂದು ಆಯುಧ]

**ಶಿರೀಷ** (ನಾ). ಒಂದು ಬಗೆಯ ಮರ ಮತ್ತು ಕೋಮಲವಾದ ಅದರ ಹೂವು; ಬಾಗೆ: "ಶುಕತರು ಭಾಂಡಿ ಶಿರೀಷಂ" (ವಸ್ತುಕೋ. ೩೫-೧೪) ; ವಿನಮಿತಚೂತಕುಜಾತಸಮಾಜಂ ಶಾಳತಾಳ ಹಿಂತಾಳ ಶಿರೀಷಂ ಸ್ಥೂಳಕ್ಷ್ಮಾಳ ಕರೀರಾಶೇಷಂ (ಸುಕುಮಾ. ೧೨-೫೫ ರಗಳೆ) ; ರುದ್ರಾಕ್ಷ ಭದ್ರಾಕ್ಷ ಗುಂಜಾ ಶಿರೀಷಾದಿ ಲತಾಗೃಹಂಗಳುಂ (ವಿವೇಕ. ೨೧೧). [ಸಂ.]

**ಶಿರೀಷಕುಸುಮ** (ನಾ). ಬಾಗೆಯ ಹೂವು : ವನಭೃತ್ಕುಂತಳೆಯಾ ಶಿರೀಷ ಕುಸುಮಾಭಾಂಗಕ್ಕೆ ಕಂದಂ . . . ಚಿತ್ತಕ್ಕೆ ಸಂತಾಪಮಂ ನಿನಗಂ ಮಾಡಿದನಾವನಾತನ ವಲಂ ಗಂಧೇಭವಿದ್ಯಾಧರಂ (ಪಂಪಭಾ. ೪-೬೪) ; ಚಂದನಲೇಪಂಗಳಿಂ ಧವಳಾಯ ಮಾನಮುಂ ಶಿರೀಷಕುಸುಮಾಭರಣಂಗಳಿಂ ಹರಿತಾಯಮಾನಮುಮಪ್ಪ ಮಾರ್ಗಮಂ ನೋಡುತೆ ಬರ್ಪನ್ನೆಗಂ (ಕಾದಂಪೂ. ೧೦೧೦). [ಸಂ.]

**ಶಿರುನಾರುಗೆಡ್ಡೆ** (ನಾ). ಒಂದು ಬಗೆಯ ಸಸ್ಯ ; "ವನಕೋಲಕಂದ" (ಪಂಡಿತ. ೨೭೬) : ಕಾಡುಬೆಳ್ಳುಳ್ಳಿ, ಶಿರುನಾರುಗೆಡ್ಡೆ, ಸೀಮೆನರೀಈರುಳ್ಳಿ (ಮೈಜಿಗಿ. ೬೮-೧೩೯೭). [? + ಗೆಡ್ಡೆ (< ಗಡ್ಡೆ)]

**ಶಿರೆ** (ನಾ). ನರ ; ರಕ್ತನಾಳ ; ಧಮನಿ : "ಎಲೆಯ ಮುಖ್ಯ ಶಿರೆ, ನರ" (Nervure. ೫೦೫೧). [ಸಂ. ಶಿರಾ]

**ಶಿರೋಗೃಹ** (ನಾ). ಮಹಡಿಯ ಮೇಲಿರುವ ಅಂಗಳ ; ಚಂದ್ರಶಾಲೆ : "ಚಂದ್ರಶಾಲಾ, ಶಿರೋಗೃಹಂ — ೨ ಚಂದ್ರಶಾಲೆ" (ಹಲಾಯು. ೫೧-೧೪೯). [ಸಂ.]

**ಶಿರೋಗ್ರ** (ನಾ). ತಲೆಯ ಮೇಲುಭಾಗ : ಸುಮನೋಮಾಲೆಯುಮೊರ್ಮೆಯುಂ ಓಮದುಳೇಂ ಬಾಡಿರ್ದಗಲ್ದಿರ್ಕುಮಗ್ರಿಮಭೂಪಾಲಶಿರೋಗ್ರಮಂ (ಶಾಂತಿಪು. ೯-೧೫೧). [ಸಂ.]

**ಶಿರೋಗ್ರಂಥಿ** (ನಾ). ತಲೆಯಲ್ಲಿ ಆಭರಣವಾಗಿ ಧರಿಸುವ ಮುತ್ತಿನ ಗೊಂಡೆ: "ತೊಂಡಿಲು ಶಿರೋಗ್ರಂಥಿಯೆನಿಸಿಕ್ಕು" (ಮಂಗರಾ. ೯೯-೨೦). [ಸಂ.]

**ಶಿರೋಜ** (ನಾ). ತಲೆಯಲ್ಲಿ ಹುಟ್ಟಿದುದು ; ತಲೆಕೂದಲು : "ತಲೆರೋಮಂ ಚಿಕುರಂ ಕಚಂ ಶಿರಸಿಜಂ ಕೇಶಂ ಶಿರೋಜಂ ನವಿರ್" (ವಸ್ತುಕೋ. ೭೦-೨೦) ; ವಮೌಳಿಯೊಳುನ್ನ್ಮಮಧ್ಯ್ಮಮರಭಾರವಿಭಗ್ನಮಧೂಳಿ ಮಾಲತೀಮಾಳ ಮನಕ್ಕೆ ವಂದೆಸೆದುದಾ ದಮಿತಾರಿಯ ಕೀರ್ತಿ ಲೋಕಮಂ ವ್ಯಾಳಿ ತೊಟಲ್ದು ತನ್ನ ಗಮನಶ್ರಮಮಂ ಕಳೆಯಲ್ಕೆ ತನ್ನ ಹೀಪಾಳಶಿರೋಜರಾಜಿ ಪರಭಾಗಮನಾಶ್ರಯಿಸಿರ್ದಳೆಂಬಿನಂ (ಶಾಂತಿಪು. ೩-೩೬). [ಸಂ.]

**ಶಿರೋದಳನ** (ನಾ). ತಲೆಯನ್ನು ಸೀಳುವಿಕೆ, — ಕತ್ತರಿಸುವಿಕೆ : ಅರಿಕೇಸರಿ ಗಾತ್ಮಜರರಿನರಪ ಶಿರೋದಳನ ಪರಿಣತೋಗ್ರಾಸಿಭಯಂಕರಕರರ್ (ಪಂಪಭಾ. ೧-೨೨). [ಸಂ. ಶಿರೋದಲನ]

**ಶಿರೋದಾಹ** (ನಾ). (ಉಷ್ಣದ ಪರಿಣಾಮವಾಗಿ) ತಲೆ ಬಿಸಿಯಾಗಿರುವುದು: ಆ ಚೂರ್ಣವಂ ಸಕ್ಕರೆಗೂಡಿ ಹಸುವಿನ ಹಾಲಿನಲ್ಲಿ ಸೇವಿಸಲು ಆವರಣರೋಗ, ಮೂತ್ರ ಕೃಚ್ಛ್ರ, ರಕ್ತಪಿತ್ತ, ಕಾಮಾಲೆ, ಶಿರೋದಾಹ . . . ಪರಿಹರಮಕ್ಕುಂ (ಸಕವೈ. ೧೪೭). [ಸಂ.]

**ಶಿರೋದೇಶ** (ನಾ). ೧. ತಲೆ ; ಮಂಡೆ: ಶಿಷ್ಯನ . . . ಶಿರೋದೇಶದಲಭಯವಿಡುತ ವರನಿರಂಜನನೆಂಬ ನಾಮವ . . . ತಾನಿಡುತ (ಗಗತಾ. ೨-೩೦). ೨. ಹಣೆ ; ನೊಸಲು: "ನೀಚಕೀ, ಶಿರೋದೇಶ - ಈ ೨ ಹಣೆ" (ಹಲಾಯು. ೪೪-೧೧೨). [ಸಂ.]

**ಶಿರೋದ್ಗತ** (ನಾ). [ಸಂಗೀತ] ಹದಿನೈದು ವಿಧವಾದ ಸ್ವರದೋಷಗಳಲ್ಲಿ ಒಂದು ; IP (ಒಂಟೆಯ ಹಾಗೆ) ಕತ್ತನ್ನು ಎತ್ತಿ ಹಾಡುವ ಉಚ್ಚಾರಣಾ ದೋಷ : ಕಂಪಿತ ಚಿಂತಿತ ಅನುನಾಸಿಕ ಶಿರೋದ್ಗತ . . . ತಾಳವಿಹೀನವೆಂಬ ಪದಿನೈದು ಸ್ವರದೂಷಣಂ ಪೊರ್ದದೆ ಪಾಡಿ ಮೋಹಿಸುವ ಗಾಯಕರಿಂ (ವಿವೇಕ. ೧೯೦). [ಸಂ.]

**ಶಿರೋಧರ** (ನಾ). ಕತ್ತು ; ಕೊರಳು : "ಕೊರಲುಮಾಸ್ಕಂ ಗಳಂ ಧಮನಿ ಕಂಧರ ಶಿರೋಧರಮದಾ ಗ್ರೀವಮೆನಿಸಿಕ್ಕು" (ಮಂಗರಾ. ೯೫-೭). [ಸಂ. ಶಿರೋಧರಾ]

**ಶಿರೋಧರೆ** (ನಾ). = ಶಿರೋಧರ : "ಗ್ರೀವಾ, ಧಮನೀ, ಮನ್ಯಾ, ಶಿರೋಧರಾ, ಕಂಧರಃ, ಗಳಃ, ಕಂಠಃ — ಈ ೭ ಕೊರಲ್" (ಹಲಾಯು. ೮೫-೩೬೨). [ಸಂ. ಶಿರೋಧರಾ]

**ಶಿರೋಧಾರ್ಯ** (ನಾ). ತಲೆಯಲ್ಲಿ ಧರಿಸಲು ಅರ್ಹವಾದುದು ; ಪೂಜ್ಯವಾದುದು : ನಿನ್ನ ಆಜ್ಞೆ ನನಗೆ ಶಿರೋಧಾರ್ಯ (ರಾಜ್ಯೋದ. ೧೦೦೮). [ಸಂ.]

**ಶಿರೋಧಿ** (ನಾ). = ಶಿರೋಧರ : ತ್ವಜ್ಜನನಿಯ ಹಾರಮನಾಂತುಜ್ಜಳಿಪ ಶಿರೋಧಿ ಹಾರವ ಮನನವರತಂ ಕಜ್ಜಳಮಂ ತಳಿವಕ್ಕಿಗಳಜ್ಜಳಮುಂ ತಾಳ್ದಿ ತನಯ ನೀಂ ಸೈರಿಪುದೇ (ಚಂದ್ರಪು. ೫-೧೨) ; ಮುಳಿದು ಶಿರೋಧಿಯಂ ಕಡೆಯಲೆಚ್ಚವರಾರ್ಬಿಸ ನಾಳಕಾಂಡ ಕೋಮಳತರಕಂಠಮಂ ಕಡಿದುರುಳ್ಚಿದರಾರ್ (ರಾಜಶೇ. ೧೩-೧೦೫). [ಸಂ.]

**ಶಿರೋನಾಮ** (ನಾ). ಗ್ರಂಥ, ಲೇಖನ ಮೊದಲಾದುವುಗಳ ಪ್ರಾರಂಭದಲ್ಲಿ ಕೊಡುವ ಹೆಸರು ; ತಲೆಬರಹ ; ಶೀರ್ಷಿಕೆ : "ಭಾರತದ ಪೇಲಿಯೋ ಬಾಟನಿ" ಎಂಬ ಶಿರೋನಾಮದಿಂದೊಡಗೂಡಿದ ಒಂದು ಸಂಚಿಕೆಯನ್ನು ತನ್ನ ನೇತೃತ್ವದಲ್ಲಿಯೇ ನಡೆಸಿಕೊಂಡು ಬಂದನು (ಸಸ್ಯಕ. ೧೨೭); ವಿಷಯ ನಿರ್ಣಯಿಸುವಾಗ ಗ್ರಂಥದ ಶಿರೋನಾಮ, ಮುನ್ನುಡಿ, ಪ್ರಸ್ತಾವನೆ . . . ಇತ್ಯಾದಿಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಾನೆ (ಗ್ರಂಥಾಲ. ೧೬). [ಸಂ. ಶಿರೋನಾಮನ್]

**ಶಿರೋನಾಮೆ** (ನಾ). = ಶಿರೋನಾಮ : ವಿಷಯಕ್ಕೆ ತಕ್ಕ ಶಿರೋನಾಮಗಳನ್ನು (Titles) ಬರೆಯುವುದು - ಇವು ಇವನು ಮಾಡಿರುವ ಕೆಲಸ (ಕನ್ನಸಂ. ೨೪) ; ಒಂದೊಂದು ಅಂಶಕ್ಕೂ ಉಚಿತವೆನಿಸುವ ಶಿರೋನಾಮೆಯಿರಬೇಕು (ಶಿಕ್ಷದ. ೨೬೮). [< ಸಂ. ಶಿರೋನಾಮನ್]

**ಶಿರೋಭೂಷಣ** (ನಾ). ತಲೆಗೆ ಧರಿಸುವ ಆಭರಣ : ಯಾರ ಶಿರೋಭೂಷಣವು ಚಂದ್ರಾರ್ಧವೋ ಅವನನ್ನು ಶ್ರೇಯಃಪ್ರಾಪ್ತಿಗಾಗಿ ನಮಸ್ಕರಿಸುತ್ತೇನೆ (ಭಾರದ. ೧೨೯). **[ಸಂ.]**

**ಶಿರೋಭ್ಯಂಜನ** (ನಾ). ತಲೆಗೆ ಎರೆದುಕೊಳ್ಳುವುದು : ನೇತ್ರಾಭ್ಯಂಗನದಿಂದ ಶಿರೋರೋಗವೂ ಶಿರೋಭ್ಯಂಜನದಿಂದ ಸರ್ವರೋಗವೂ ಹರವಾಗುವುದು (ಸಕವ್ಯ. ೩೧). **[ಸಂ.]**

**ಶಿರೋಭ್ರಮಣ** (ನಾ). ತಲೆ ತಿರುಗುವಿಕೆ ; ತಲೆ ಸುತ್ತುವುದು : ದ್ರಾಕ್ಷಿಹಣ್ಣು, ಅಮರದ ವಳ್ಳಿ . . . ಶುಂಠಿ ಇವಂ ಕಷಾಯವಿಕ್ಕಿ ತೆಗೆದುಕೊಳ್ಳಲು ವಾತಪಿತ್ತಜ್ವರ, ಶಿರೋಭ್ರಮಣ, ತಲೆನೋವು, ದಾಹ ಸಹ ಗುಣವಾಗುವುವು (ಸಕವ್ಯ. ೯೪) ; ಮಱಿದುಂಬಿಗಳ್ಗೆ ಸಂಪಗೆಯತ್ತಣನೊದವಿದ ಶಿರೋಭ್ರಮಣಮನಱಿಯಿಸಿಯುಂ, ಬಸಂತಂ ಬೆಜ್ಜನನ ಮೈದೋಱಲ್ (ರಾಮಾಶ್ವ. ೧೬-೨೦). **[ಸಂ.]**

**ಶಿರೋಭ್ರಮಣೆ** (ನಾ). = ಶಿರೋಭ್ರಮಣ : ಕರ್ಣನ ಕವಿಯೆ ಕಣ್ಗೆ ಕತ್ತಲೆ ಶಿರೋಭ್ರಮಣೆಯಿಂ ಕೃಷ್ಣ ಫಲುಗುಣರ್ಗೆ (ಜೈಮಿಭಾ. ೧೩-೩೫). **[ಸಂ. ಶಿರೋಭ್ರಮಣ]**

**ಶಿರೋಭ್ರಮೆ** (ನಾ). = ಶಿರೋಭ್ರಮಣ : ತವಕ್ಷೀರ ಗ ೪ ತೂಕ, ಯಷ್ಟಿಮಧುಕ ಗ ೫ ತೂಕ, ಇಷ್ಟು ಚೂರ್ಣವಂ ಮಾಡಿ ಸಕ್ಕರೆ ಗ ೧೨ ತೂಕವನ್ನು ಬೆರೆಸಿ, ಹಸುವಿನ ಹಾಲು ಬೆಣ್ಣೆಯಲ್ಲಿ ತೆಗೆದುಕೊಳ್ಳಲು ಕ್ಷಯ . . . ಶಿರೋಭ್ರಮೆ, ಇನಿತು ವ್ಯಾಧಿಗಳ ಹರ (ಎವ್ಯವಿ. ೪೭); ಆದಿವಾರದ ದಿವಸ ನೆಲತೆಂಗಂನ್ನು ತಂದು ಕತ್ತರಿಸಿ ನೆಳಲಲ್ಲಿ ಒಣಗಿಸಿ ಚೂರ್ಣಂಗೈದು . . . ಎಳನೀರಲ್ಲಿ ತೆಗೆದುಕೊಳ್ಳಲು ಶಿರೋಭ್ರಮೆ ತೀರ್ಗುಂ (ಸಕವ್ಯ. ೧೧೩). **[ಸಂ. ಶಿರೋಭ್ರಮಾ]**

**ಶಿರೋಮಂಡನ** (ನಾ). = ಶಿರೋಭೂಷಣ : ಮಂಗಳಾಳಂಕರಣಾಭಿರಾಮ ರಾಜಭವನ ಲಕ್ಷ್ಮೀಶಿರೋಮಂಡನೋಪಮಾನ ಮೌಕ್ತಿಕಮಣಿಮಯಮಂಡಪದೊಳ್ . . . ಅಪೂರ್ವಮಾಗ ಹರಿ ಪೌರೋಹಿತ್ಯಮಂ ತಾಳೆ (ಶಾಂತಿಪು. ೧೦-೭೭ ವ). **[ಸಂ.]**

**ಶಿರೋಮಣಿ** (ನಾ). ೧. ತಲೆಯಲ್ಲಿ ಧರಿಸುವ ರತ್ನ ; ಚೂಡಾಮಣಿ. ೨. (ಅಲಂ) ಶ್ರೇಷ್ಠನಾದ ವ್ಯಕ್ತಿ : ಭಕ್ತಿತ್ರಯವಿನಿಶ್ಚಲಗುಣಿಯೆ ಸುಜನಶಿರೋಮಣಿಯೆ ಮದ್ಯ ಸವಧೀಮಣಿಯೆ (ಬಸವು. ೭೦-೭೦) ; ತೊಳಲುತಱಿಸುವ ಬಳಿ ಕಾಲ್ಗೊಡಕಿದಂತರಸುಗಳ ಶಿರೋಮಣಿಗೆ ಸಂಭ್ರಮದೊಳೈತಂದು ಬಿನ್ನೈಸಿದಂ ಚರನೊರ್ವನು (ಜೈಮಿಭಾ. ೨-೪೫). **[ಸಂ.]**

**ಶಿರೋರತ್ನ** (ನಾ). = ಶಿರೋಮಣಿ ೧: "ಚೂಡಾಮಣಿಃ, ಶಿರೋರತ್ನಂ — ೨ ತಲೆಯೊಳಗೆ ಧರಿಸತಕ್ಕ ಮಾಣಿಕ್ಯವೆಂಬ ರತ್ನಾಭರಣ" (ಸಿದ್ಧಾಂತಿ. ೯೮). **[ಸಂ.]**

**ಶಿರೋರುಹ** (ನಾ). = ಶಿರೋಜ : ಕದಲೀಗರ್ಭಶ್ಯಾಮಂ ಮೃದುಕುಟಿಲಶಿರೋರುಹಂ ಸರೋರುಹವದನಂ ಮೃದುಮಧ್ಯಮತನು ಹಿತಮಿತಮೃದುವಚನಂ ಲಲಿತ ಮಧುರಸುಂದರವೇಷಂ (ಆದಿಪು. ೧-೨೯) ; ಅರೆಮುಗಿದಿರ್ದ ದಿಟ್ಟಿ ನಸುಗರ್ಚಿದ ನಾಲಗೆ ಬಿರ್ಚ ನೆತ್ತರೊಳ್ ಪೊರೆದ ಶಿರೋರುಹಂ (ಚಂದ್ರಪ್ರ. ೧೦-೧೦೬). **[ಸಂ.]**

**ಶಿರೋಲಿಂಗ** (ನಾ). [ಜೈನ] (ಲಿಂಗದ ಆಕಾರದಲ್ಲಿ ಕಾಣುವ) ಮುಂಡನ ಮಾಡಿಸಿಕೊಂಡ ತಲೆ : ಮನ ವಚನ ಕಾಯಗತರಾಗಂಗಳಂ ಕಿಡಿಸಲೆಂದು ಮುಂಡನಂಗಯ್ವುದು ಶಿರೋಲಿಂಗಂ (ಚಾವುಂಪು. ೨೧೫). **[ಸಂ.]**

**ಶಿರೋವಲಯ** (ನಾ). ೧. ಮಲ್ಲಯುದ್ಧದ ಒಂದು ಪಟ್ಟು, — ವರಸೆ ; ಕತ್ತನ್ನು ತೋಳಿನಲ್ಲಿ ಬಳಸಿ ಹಿಡಿಯುವುದು : ತಳಹತ್ತಂ ದಣುವಟ್ಟಿ . . . ತೋರಹತ್ತಂ ಶಿರೋವಲ[ಪಾಠಾಂ. ಳ]ಯಂ ಬಾಹುತಳಂ ಚಮತ್ಕರಿಸೆ ನಾನಾಕೌಶಲಂದೋಱಿದರ್ (ಶಬಶಂ. ೪-೭೫). **[ಸಂ.]**

**ಶಿರೋವೇದನೆ** (ನಾ). ತಲೆಯಲ್ಲಿ ಉಂಟಾಗುವ ನೋವು ; ತಲೆನೋವು : ಅವರಿಗೆ ಶಿರೋವೇದನೆಯೆಂದು ಕೇಳಿದ ಕ್ಷಣದಿಂದಲೂ ನನ್ನ ಮನಸ್ಸು ಅವರನ್ನು ನೋಡುವುದಕ್ಕೆ ತಳಮಳಿಸುತ್ತದೆ (ರಾಕ್ಷಮು. ೫೭); ಶ್ರಮ — ಶಿರೋವೇದನೆಗಳಲ್ಲದೆ ಇನ್ನೇನನ್ನು ವಿದ್ಯಾರ್ಥಿ ಇದರಿಂದ ಪಡೆದುಕೊಳ್ಳುತ್ತಾನೆ? (ಗಾಳಿಪ. ೧೮೧). **[ಸಂ. ಶಿರೋವೇದನಾ]**

**ಶಿರೋವೇಷ್ಟನ** (ನಾ). ತಲೆಗೆ ಸುತ್ತುವ ವಸ್ತ್ರ ; ರುಮಾಲು ; ಪೇಟ : ಧೃತವೇತ್ರಂ ಚಾರುಚೀನಾಂಬರರಚಿತ ಶಿರೋವೇಷ್ಟನಂ ಘಂಟಿಕಾಲಂಬಿತಕೂರ್ಪಾಸಂ (ಚಂದ್ರಪ್ರ. ೨-೭೪). **[ಸಂ.]**

**ಶಿರೋವೇಷ್ಟಿ** (ನಾ). = ಶಿರೋವೇಷ್ಟನ : ಶಿರೋವೇಷ್ಟಿಯನುರಿ ಪತ್ತೆ ಭೋಂಕನೆ ಕಳೆದು ಬಿಸುಟು ತಲ್ಲಣಿಸಿ ತಲೆದಡವುತೆಡವುತ್ತೇಳ್ತಂದು ಶಿವಾಗಾರದ ಪಿಂದಣ ಜಲಕುಂಡದೊಳ್ಪಡಲಿಡುವುಪಾಧ್ಯಾಯರುಂ (ವೃಷವಿ. ೩೮-೯೮ ವ). **[ಸಂ.]**

**ಶಿರೋವ್ಯಾಧಿ** (ನಾ). = ಶಿರೋವೇದನೆ : "ಮಂಡೆನೋವದು ಶಿರೋವ್ಯಾಧಿಯೆನಿಕುಂ" (ಮಂಗರಾ. ೧೧೪-೪) ; ಮಧ್ಯದಲ್ಲಿ ಹಳ್ಳವಾಗಿ ತುದಿಯಲ್ಲಿ ಅಗಲವಾಗಿ ನಾಲಗೆ ಇದ್ದರೆ ಶಿರೋವ್ಯಾಧಿ ಹೆಚ್ಚುವುದು (ಸಕವ್ಯ. ೧೪). **[ಸಂ.]**

**ಶಿರೋವ್ಯೂಢ** (ಗು). ತಲೆಯವರೆಗೆ (ಆಳುದ್ದ) ಪೇರಿಸಿದ : ಶಿರೋ[ಪಾಠಾಂ. ಲಾ]ವ್ಯೂಢ ಧಾನ್ಯಸಂಚಯೋಪಭೋಗಿಜನನಿವಾಸಿಗಳಪ್ಪ ಸಂವಾಹಗಳುಮಂ . . . ಮಾಡಿದಂ (ಆದಿಪು. ೮-೭೩ ವ). **[ಸಂ.]**

**ಶಿರೋವ್ರತ** (ನಾ). ಮುಖ್ಯವಾದ ಒಂದು ಧಾರ್ಮಿಕವ್ರತ : ಎಲ್ಲ ಋಷಿಶ್ರೇಷ್ಠರೊಳು ಶ್ರೇಷ್ಠನೆನಿಸುತ ನಿತ್ಯದಲ್ಲಿ ಸುಖಿಸುತ್ತಿರ್ಪ ಶ್ರೀವೀರಶೈವಮತವೆಲ್ಲ ಶೈವಂಗಳ ಶಿರೋವ್ರತಮ್ಮದನುಯಾಚರಿಸುವರೆ ನಿತ್ಯರಹರು (ನವಮೋ. ೧೮-೨೦) ; ಲಿಂಗಧಾರಣ, ಲಿಂಗಪೂಜಾವ್ರತವನ್ನು ಶಾಂಭವವ್ರತ, ಪಾಶುಪತವ್ರತ, ಶಿರೋವ್ರತವೆಂದು ಶಿವಾಗಮಗಳು ಹೇಳುತ್ತವೆ (ಭಾರದ. ೨೫೦). **[ಸಂ.]**

**ಶಿರೋಸ್ಥಿ** (ನಾ). ತಲೆಬುರುಡೆ : "ಶಿರೋಸ್ಥಿ ಕರೋಟಿಯೆನೆ ಕಪಾಲಂ" (ಮಂಗರಾ. ೧೧೭-೬). **[ಸಂ.]**

**ಶಿಲ** (ನಾ). ೧. (ಕೊಯ್ಲಾದ ಮೇಲೆ) ಹೊಲದಲ್ಲಿ ಉಳಿದ ತೆನೆ, ಕಾಳು ಮೊದಲಾದುವನ್ನು ಆಯುವುದು. ೨. (ಕೊಯ್ಲಾದ ಮೇಲೆ) ಹೊಲದಲ್ಲಿ ಉಳಿದ ತೆನೆ, — ಧಾನ್ಯ : ಕೊಡುವ ಕೊಂಬವರ ನಿಹಿತಕ್ಕಂಜಿ ನಡವನ ವ್ರತ ಜಂಬುಕ ಶಿಲವ ಹಿಡಿದು ನಾಲಗಯ ಮುಟ್ಟದೆ ನುಂಗುವ ತೆಱದಂತೆ (ಏಲೇಶ್ವ. ೬೧). '**ಉಂಛಶಿಲ**' ಪರಾ. **[ಸಂ.]**

**ಶಿಲಂಧರ** (ನಾ). (?) : ಶರ ಶಕ್ತಿ ತೋಮರ ಕಣೆಯ . . . ಸುರಗಿ ಶಲ್ಲೆಹ ಕಡಿತಲೆಗಳ ಬಲು ಶಿಲಂ[ಪಾಠಾಂ. ಶಿಲಾ, ಶೀಲಂ]ಧರರು ಮೋಹರಿಸಿತೊಗ್ಗಿನಲಿ (ಕುರಾಸಾಂ. ೪೩-೮೫). **[ಸಂ.]**

**ಶಿಲಕು** 'ಶಿಲುಕು' ನೋ.

**ಶಿಲವೃತ್ತಿ** (ನಾ). (ಕೊಯ್ಲಾದ ಮೇಲೆ) ಹೊಲದಲ್ಲಿ ಉಳಿದ ತೆನೆಯ ಕಾಳುಗಳನ್ನು ಆರಿಸಿ ಜೀವಿಸುವಿಕೆ ; ಹಕ್ಕಲಾರಿಸುವ ಕಸುಬು : "ಋತಂ, ಉಂಛಶಿಲಂ, ಉಂಛವೃತ್ತಿಗೂ ಶಿಲವೃತ್ತಿಗೂ ಹೆಸರು, ಊರುಕೇರಿಗಳಲ್ಲಿ ಬಿದ್ದಿರುವ ಕಾಳನ್ನು ಆರಿಸಿಕೊಂಡುಂಡು ಬದುಕುವದಕ್ಕೆ ಉಂಛವೃತ್ತಿಯೆಂದು ಹೆಸರು" (ಸಿದ್ಧಾಂತಿ. ೨೭೪) ; ಉಂಛವೃತ್ತಿಯಿಂದಲೂ ಶಿಲವೃತ್ತಿಯಿಂದಲೂ ಜೀವಿಸುವುದು ಸರ್ವೋತ್ತಮವಾದುದು (ಆರ್ಯಧ. ೮೪). **[ಸಂ.]**

**ಶಿಲಹರೆ** (ನಾ). ಒಂದು ಸ್ಥಳದ ಹೆಸರು : ದಕ್ಷಿಣತಃ ಶಿಲಹರೇ(ಚೀ) ಗ್ರಾಮಃ (ಇಇ. XII, ೨೭೭-೫೫ ; 972). [?]

**ಶಿಲಾಕರ್ಮ** (ನಾ). ಕಲ್ಲಿನ ಕೆತ್ತನೆಯ ಕೆಲಸ ; ಶಿಲ್ಪ : ಹೇಮಕರ್ಮ್ಮ ಲೋಹಕರ್ಮ್ಮ ಶಿಲಾಕರ್ಮ ರತ್ನಕರ್ಮ . . . ಸಮಸ್ತಹಸ್ತಕುಶಳತೆಯುಳ್ಳ ವಿಸ್ವಕರ್ಮ ನಿರ್ಮಿತಮಪ್ಪ ಗವಱಾಚಾರ್ಯನಾತನ ಪುತ್ರ . . . ಮಾಡಿಶಿದ ಧರ್ಮ್ಮಪುರೋವೃದ್ಧಿಯೆನ್ತೆನ್ದಡೆ (ಎಕ. VI (R), ಕೃಷ್ಣರಾ. ೭೭-೧೧ ; 1117) ; ಇಂದ್ರಜಾಲಮೆಱಿಕಂ ಲೆಪ್ಪಂ ಶಿಲಾಕರ್ಮ ಮುತ್ಕರಣಂ ಚಿತ್ರವಿವಕ್ಷೆ ವಾಸ್ತು ಶಕುನಜ್ಞಾನಂ . . . ಅಖಿಲವ್ಯೂಹೋತ್ಕರ ಮಂಬಿನಿತಱೊಳಂ ಬಲ್ಲವರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪಪು. ೪-೫೯). **[ಸಂ. ಶಿಲಾಕರ್ಮನ್]**

**ಶಿಲಾಕೂಟ** (ನಾ). ಸಮಾಧಿಕಲ್ಲು ; ನಿಸಿದಿಕಲ್ಲು (?) : ದಹನಸ್ಥಾನದೊಳ್ಪರೋಕ್ಷ XX ನಿಮಿತ್ತವಾಗಿ ಬೈರೋಜನಿಂ ಮಾಡಿಸಿದ ಬಾಳಚಂದ್ರದೇವರ ಮಗನಾ XX ನ ಶಿಲಾಕೂಟಂ (ಎಕ. II(R), ೫೩೯-೧೪ ; ಸು. 1214). **[ಸಂ.]**

**ಶಿಲಾಕ್ಷರ** (ನಾ). ಕಲ್ಲಿನ ಮೇಲೆ ಕೆತ್ತಿರುವ ಅಕ್ಷರ ಲಿಪಿ : ವಾಗೀಶರ ದಿವ್ಯನಾಮವನ್ನು ಶಿಲಾಕ್ಷರಗಳಲ್ಲಿ ಬರೆದಿರುವೆನು (ಪುರಾವಿ. ೧೩೮). **[ಸಂ.]**

**ಶಿಲಾಜತು** (ನಾ). ೧. ಕಪ್ಪುಬಣ್ಣದ ಒಂದು ಬಗೆಯ ಖನಿಜ : ಶಿಲಾಜತುಮಯವೆಂಬ ಸ್ಥಿತಿಗೆ ಬರುವ ಇದ್ದಲಿಯು ಎಲ್ಲಕ್ಕೂ ಮೇಲಾದ್ದೆಂದು ಹೇಳುತ್ತಾರೆ (ಮುಂಬಯಿ. ೬-೨೫೬). ೨. ಒಂದು ಬಗೆಯ ಕೆಂಪುಖನಿಜ ; ಗೈರಿಕ. **[ಸಂ.]**

**ಶಿಲಾಜಿತು** (ನಾ). = ಶಿಲಾಜತು ೨ : ಓವು . . . ಶಿಲಾಜಿತು, ಚಾಕಾಯಿ, ಕೊತ್ತುಂಬರಿ ಸಂವತ್ಸರಲವಣ ಇವನ್ನೆಲ್ಲ ಸಮಾನವಾಗಿ ಕೂಡಿ . . . ತಾರೆಕಾಯ ಪ್ರಮಾಣ ಗುಳಿಗೆಯಂ ಮಾಡಿ ತೆಗೆದುಕೊಳ್ಳಲು ಸಕಲವಾದ ಗ್ರಹಿಣಿಯೂ ವಾಣ್ಗುಂ (ಸಕವೈ. ೩೪೫). **[ಸಂ. ಶಿಲಾಜಿತ್]**

**ಶಿಲಾತಲ, ಶಿಲಾತಳ** (ನಾ). ಸಮತಲವಾಗಿರುವ ಶಿಲಾಭಾಗ ; ಶಿಲಾಫಲಕ : ಪಾಂಡುಕ ಪಾಂಡುಕಂಬಲ ರಕ್ತಕಂಬಲಾತಿರಕ್ತಕಂಬಲ ವಿಶಾಲರತ್ನಶಿಲಾತಲ [ಪಾತಾಂ. ೪] ಪ್ರತಿಷ್ಠಿತ ಭಗವಜ್ಜನ್ಮಾಭಿಷೇಕಸಿಂಹಾಸನಾಲಂಕೃತಮುಮಾಗಿ (ಆದಿಪು. ೧-೪೯ ವ) ; ಎಲ್ಲೆ ಮಿತ್ರನೆ ಈ ಶಿಲಾತಲದ ಒಂದು ಭಾಗವನ್ನು ಅಲಂಕರಿಸಬೇಕು (ಶಾಕುಂತ. ೩೯-೭). **ಶಿಲಾತಳ** : ಆತನ ಪೂಣ್ಕೆ ಪೂಣ್ಕೆ ಶಿಲಾತಳಾಕ್ಷರಮೆನಿಸಿರ್ಪ ಜನೋಕ್ತಿಯಂ ಪುಸಿ ಮಾಟ್ಪನೇ (ಗದಾಯು. ೧-೭೧). **[ಸಂ.]**

**ಶಿಲಾತಳ** 'ಶಿಲಾತಲ' ನೋ.

**ಶಿಲಾಧಾತು** (ನಾ). ೧. ಒಂದು ಬಗೆಯ ಮೃದುವಾದ ಬಿಳಿಯ ಮಣ್ಣು ; ಸುದ್ದೆಮಣ್ಣು. ೨. = ಶಿಲಾಜತು ೨ : ಜಟಾಮಾಂಸಿಶಿಲಾಧಾತು ಕುಸುಂಬೆ ಹುವ್ವು . . . ಸೈಂಧವಲವಣಂಗಳು ಇದರೊಳಗೆ ಒಂದು ಯೋನಿಗೆ ಲೇಪನಂಗೆಯ್ಯೆ ಸವುಭಾಗ್ಯಮಪ್ಪುದು (ಕಾಮಶಾ. ೨೭೫). **[ಸಂ.]**

**ಶಿಲಾನ್ಯಾಸ** (ನಾ). ಕಟ್ಟಡಗಳನ್ನು ಕಟ್ಟುವ ಪ್ರಾರಂಭದಲ್ಲಿ, ಅಡಿಗಲ್ಲನ್ನು ಇಡುವ ಕಾರ್ಯ ; ಶಂಕುಸ್ಥಾಪನೆ : ನನಗೆ ಅದರ ಶಿಲಾನ್ಯಾಸ ಮಾಡುವ ಕಾಲದಲ್ಲಿಯೇ ಅಧ್ಯಕ್ಷರನ್ನೂ ಉಪಾಧ್ಯಕ್ಷರನ್ನೂ ಕರೆಸುವ ಯೋಚನೆ ಬಂದಿತ್ತು (ಒಂಟಿದ. ೧೫೩). **[ಸಂ.]**

**ಶಿಲಾಪಟ್ಟ** (ನಾ). ೧. (ಕುಳಿತುಕೊಳ್ಳಲು ಉಪಯೋಗಿಸಬಹುದಾದ) ಅಗಲವೂ ಮಟ್ಟಸವೂ ಆದ ಕಲ್ಲು ; ಹಾಸುಗಲ್ಲು : ನಿರ್ಮಲ ಶಿಲಾಪಟ್ಟದೊಳ್ ನಿಬಿಡನಿಬದ್ಧ ಪಲ್ಯಂಕಾಸನನುಂಪೂರ್ವಾಭಿಮುಖನುಮಾಗಿರ್ದಾಗಳ್ (ಆದಿಪು. ೧೧-೧೩ ವ); ಬಳಸಿರ್ದಭ್ರಾಳಿಯಿಂದಂ ತುಹಿನಗಿರಿ ಶಿಲಾಪಟ್ಟಮೆಂಬಂತೆ ಚೆಲ್ವಾದ ಲತಾಂತಂ ತಳ್ತ ಶಯ್ಯಾಶ್ರಿತ ಸಿತ ಮೃದುಳಪ್ರಚ್ಛದಚ್ಛನ್ನಶಯ್ಯಾತಲದೊಳ್ . . . ಸುಖಾಸೀನನಾಗಿರ್ದಂ (ಪಾದಂಪೂ. ೮೦). ೨. (ಸಂಬಾರ ಮುಂತಾದುವನ್ನು) ಅರೆಯಲು ಬಳಸುವ ಸಮತಟ್ಟಾದ ಕಲ್ಲು; ಅಸಿಯ ಕಲ್ಲು : "ಅಸು ಶಿಲಾಪಟ್ಟಮೆನಲಸಿಯ ಕಲ್" (ಮಂಗರಾ. ೭೧-೧೯). **[ಸಂ.]**

**ಶಿಲಾಪಟ್ಟಕ, ಶಿಳಾಪಟ್ಟಕ** (ನಾ). = ಶಿಲಾಪಟ್ಟ ೧ : ಕತ್ತುರಿ ಮೃಗಮದಮಂ ತೊಡದತ್ತಳಿಸೆ ಸುರೇಂದ್ರ ದಾರುರಸದಿಂ ವಿಶದೋದಾತ್ತ ಶಿಲಾಪಟ್ಟಕಮಂ ಬಿತ್ತರಿಸಿದರಂದು ಯತಿಗೆ ವನದೇವತೆಗಳ್ (ಶಾಂತಿಪು. ೧೧-೧೦೮). **ಶಿಳಾಪಟ್ಟಕ:** ೧. ತತ್ಸಮೀಪಸ್ಥಿತರಕ್ತಾಶೋಕಮಹೀರುಹತಳವಿಶಾಳಶಿಳಾಪಟ್ಟಕದೊಳ್ ಉತ್ತರಾಭಿಮುಖನಾಗಿ ಕುಳ್ಳಿರ್ದು (ಶಾಂತಿಪು. ೮-೧೨೨ ವ) ; ಸಹಕಾರ ಭೂರುಹದ ಮೊದಲೊಳಿರ್ದತಿ ವಿಶಾಳ ಶಿಳಾಪಟ್ಟಕದ ಮೇಲೆ ನಿಯಮಂಗೆಯ್ದು (ವರ್ಧಮಾ. ೨-೪೩ ವ). ೨. = ಶಿಲಾಪಟ್ಟ ೨: "ಅಸುವೆ ಶಿಳಾಪಟ್ಟಕಾಭಿಧಾನಮನಾಳ್ಗುಂ" (ವಸ್ತುಕೋ. ೫೦-೩೨). **[ಸಂ.]**

**ಶಿಲಾಪರೀಕ್ಷೆ** (ನಾ). ಕಲ್ಲಿನ ಗುಣಾವಗುಣಗಳನ್ನು ಕಂಡುಹಿಡಿಯುವ ವಿದ್ಯೆ: ಭೂಪರೀಕ್ಷಾ, ಶಿಲಾಪರೀಕ್ಷಾ, ರತ್ನಪರೀಕ್ಷೆ . . . ನೃತ್ಯ, ವೈದ್ಯ ಮೊದಲಾದ ಅರವತ್ತು ನಾಲ್ಕು ಕಲೆಗಳಿಗೂ ಆಗಮಶಾಸ್ತ್ರವು ಆಶ್ರಯವಾಗಿದೆ (ಭಾರದ. ೭೦). **[ಸಂ. ಶಿಲಾಪರೀಕ್ಷಾ]**

**ಶಿಲಾಪಾತ್ರೆ** (ನಾ). ಕಲ್ಲಿನ ಪಾತ್ರೆ ; ಕಲ್ಲು ಪರಟಿ : ಮರದ ಪಾತ್ರೆ, ಶಿಲಾಪಾತ್ರೆ . . . ತೆಂಗಿನ ಕರಟ ಮುಂತಾದ ಪಾತ್ರೆಗಳಲ್ಲಿ ಭೋಜನವನ್ನು ಮಾಡಿದರೆ ದಾರಿದ್ರ್ಯ ಉಂಟಾಗುವುದು (ಸಕವೈ. ೪೯). **[ಸಂ. ಶಿಲಾಪಾತ್ರ]**

**ಶಿಲಾಪೀಠ** (ನಾ). ಕಲ್ಲಿನ ಆಸನ : ಮರದ ನೆಳಲಿಂದ ಶೀತಲವಾದ ಈ ಶಿಲಾಪೀಠದಲ್ಲಿ ಕುಳಿತುಕೊ (ಶಾಕುಂತ. ೨೩-೨೭). **[ಸಂ.]**

**ಶಿಲಾಪ್ರತಿಮೆ** (ನಾ). ಶಿಲೆಯಿಂದ ಮಾಡಿದ ವಿಗ್ರಹ, – ಪುತ್ತಳಿ; ಕಲ್ಲಿನ ಬೊಂಬೆ: ಪೇಳಲಾಟಿಸಲ್ ಮಂತ್ರಿ ರಘುರಾಮಸಂದೇಶಮಂ ಮೌನದಿಂ ಕೇಳ್ದನು ಶಿಲಾಪ್ರತಿಮೆಯೊಲ್ (ಶ್ರೀ ರಾಮಾ. ೧೦೧-೩೭) ; ಸುತ್ತಲೂ ಒಂದು ಸುತ್ತು ತಿರುಗಿ ಶಿಲಾಪ್ರತಿಮೆಯಂತೆ ನಿಂತಳು (ದಾಲತ್. ೩೭೮). **[ಸಂ. ಶಿಲಾಪ್ರತಿಮಾ]**

**ಶಿಲಾಫಲಕ** (ನಾ). ೧. ಹಲಗೆಯ ಹಾಗೆ ಅಗಲವಾಗಿರುವ ಕಲ್ಲು ; ಹಾಸುಗಲ್ಲು: ಶಕುಂತಳೆಯು, ಕುಸುಮಾಸ್ತರಣದಿಂದ ಕೂಡಿದ ಶಿಲಾಫಲಕದಲ್ಲಿ ಮಲಗಿ, ಸಖಿಯರಿಂದ ಸಂತೈಸಲ್ಪಡುತ್ತಿರುವಳು (ಶಾಕುಂತ. ೩೩-೨೧). ೨. ರಾಜ ಮುಂತಾದವರು ಮಾಡಿದ ದತ್ತಿ, ದಾನ, ಆಜ್ಞೆ, ಮಂತಾದ ವಿಷಯಗಳನ್ನು ಕೆತ್ತಲು ಬಳಸುತ್ತಿದ್ದ ಕಲ್ಲಿನ ಹಲಗೆ : ನೀನು ಶ್ರವಣಬೆಳಗೊಳಕ್ಕೆ ಹೋದಾಗ ನೋಡಲಿಲ್ಲವೆ ಹೆಜ್ಜೆಹೆಜ್ಜೆಗೂ ಸಲ್ಲೇಖನದ ಮಹಿಮೆಯನ್ನು ಸಾರುವ ಶಿಲಾಫಲಕಗಳು! (ದಾಸಚಿಂ. ೨೦). **[ಸಂ.]**

**ಶಿಲಾಬಾಲಿಕೆ** (ನಾ). ಕಲ್ಲಿನಲ್ಲಿ ಕೆತ್ತಿರುವ ಹೆಣ್ಣುಬೊಂಬೆ; ಕಲ್ಲಿನಲ್ಲಿ ಕಡೆದ ಸ್ತ್ರೀ ವಿಗ್ರಹ : ಶಿಲಾಬಾಲಿಕೆಯರನ್ನು ಕಡೆದು, ದೇವಾಲಯದ ಸುತ್ತಲೂ ಕಣ್ಣಿಗೆ ರಮ್ಯವಾಗಿ ಕಾಣಬರುವ ಎಡೆಗಳಲ್ಲಿ ಜೋಡಿಸಿ ನಿಲ್ಲಿಸಿದರು (ಶಾಂತಲಾ. ೧೩೩) ; ಕೊಳಲಿನ ನೃತ್ಯದ ಶಿಲಾಬಾಲಿಕೆಯ ವಿಗ್ರಹವನ್ನು ಕೆತ್ತಿದ ಮಲ್ಲಿಯಣ್ಣ . . . ಪಾದರಿ ಮಲ್ಲೋಜ ಇವರೆಲ್ಲರೂ ವಿಷ್ಣುವರ್ಧನನ ಶಿಲ್ಪಿಗಳು (ಭಾರದ. ೫೦೫). **[ಸಂ. ಶಿಲಾಬಾಲಿಕಾ]**

**ಶಿಲಾಭೇದಿ** (ನಾ). ೧. ಕಲ್ಲನ್ನು ಸೀಳಲು ಬಳಸುವ ಒಂದು ಬಗೆಯ ಸಾಧನ; ಉಳಿ; ಚಾಣ. ೨. ಮೂತ್ರಕೋಶದ ಕಲ್ಲನ್ನು ಕರಗಿಸಬಲ್ಲ ಒಂದು ಬಗೆಯ ಸಸ್ಯ : "ಶಿಲಾಭೇದಿ ಹಿಟ್ಟಳಿಕೆಯಕ್ಕುಂ" (ಮಂಗರಾ. ೩೯-೨೫). 'ಪಾಷಾಣಭೇದಿ' ಪರಾ. **[< ಸಂ. ಶಿಲಾಭೇದ]**

**ಶಿಲಾಭೋಗ** (ನಾ). (?) : ನರಭೋಗ ಶಿಲಾಭೋಗ ಪ್ರತಿಮಾಭೋಗ ದ್ರವ್ಯಭೋಗಾದಿಗಳ ವೈಚಿತ್ರ್ಯಮುಳ್ಳ ಲೋಕದೃಷ್ಟಾಂತಗಳಂ ನಂದಿ ನಾರದ ಭರತದೇವಲಾದಿ ಪುರಾವೃತ್ತಗಳಂ ಸಮನ್ವಯಗೊಂಡು ತನ್ನ ಮರಣಕಾಲಕ್ಕೆ . . . ಶಾಸ್ತ್ರಗಳಿಂ ಸಹಾಯಗೊಳಿಸಿಕೊಳ್ಳಲಕ್ಕುಂ (ವಿವೇಕ. ೧೯೬). **[ಸಂ.]**

**ಶಿಲಾಮಂದಿರ** (ನಾ). ಕಲ್ಲಿನಲ್ಲಿ ಕಟ್ಟಿದ ಕಟ್ಟಡ, – ಮನೆ: ಶಿಲಾಮಂದಿರದಲ್ಲಿ ವಾಸಮಾಡುವುದರಿಂದ ಶೀತವನ್ನೂ ಬಿಸಿಲನ್ನೂ ಹೋಗಲಾಡಿಸಿ, ಹೆಚ್ಚಿದ ಮದವನ್ನು ಕೆಡಿಸಿ, ಪಾದರೋಗಗಳ ನಾಶಮಾಡುವುದು (ಸಕವೈ. ೫೭). **[ಸಂ.]**

**ಶಿಲಾಮುದ್ರಣ** (ನಾ). ಒಂದು ಬಗೆಯ ಮಸಿಯಿಂದ ಅಕ್ಷರಗಳನ್ನೂ ನಕ್ಷೆಯ ರೇಖೆಗಳನ್ನೂ ತೆಗೆಯಲು ಉಪಯೋಗಿಸುವ ಕಲ್ಲಿನ ಸಾಧನ ಮತ್ತು ಅದರಿಂದ ಮಾಡುವ ಮುದ್ರಣ; ಕಲ್ಲಚ್ಚು: ಈ ರೀತಿಯ ಮುದ್ರಣದಲ್ಲಿ ಮೊದಲು ಬಳಕೆಗೆ ಬಂದದ್ದು ಒಂದು ಬಗೆಯ ಶಿಲಾಮುದ್ರಣ (ಲಿಥೊಗ್ರಫಿ) (ಮುದ್ರಕ. ೩). **[ಸಂ.]**

**ಶಿಲಾಯಂತ್ರ** (ನಾ). ೧. (ಯುದ್ಧಸಮಯದಲ್ಲಿ) ಕಲ್ಲನ್ನು ತೂರುವ ಯಾಂತ್ರಿಕ ಸಾಧನ : ಗಂಡಶೈಲಾಭೀಲ ಶಿಲಾ[ಪಾತಾಂ. ಶಿಳಾ]ಯಂತ್ರಭಯಂಕರಂಗಳುಂ . . . ಯಂತ್ರಾಯುಧಾವರಣೋಪಕರಣಪರಿಣತಂಗಳಾಗಿರ್ದ ದುರ್ಗಂಗಳೊಳ್ (ಆದಿಪು. ೧೩-೫೭ ವ). ೨. ಮುದ್ರಣಕ್ಕೆ ಉಪಯೋಗಿಸುವ ಕಲ್ಲಚ್ಚಿನ ಸಾಧನ: ಅಕ್ಷರಮಾಲೆ . . . ಭೂಗೋಲಗಳನ್ನು ಶಿಲಾಯಂತ್ರದಲ್ಲಿ ಅಚ್ಚುಮಾಡಿಸಿದರು (ಸಾಹಿಸಂ. ೧೮೨). **[ಸಂ.]**

**ಶಿಲಾಯುಗ** (ನಾ). ಮುಖ್ಯವಾಗಿ ಕಲ್ಲಿನ ಉಪಕರಣಗಳೂ ಆಯುಧಗಳೂ ಬಳಕೆಯಲ್ಲಿದ್ದ, ಯಂತ್ರಗಳ ನಾಗರಿಕತೆಯಿಲ್ಲದಿದ್ದ ಕಾಲ : ಮಧ್ಯಪ್ರಾಚೀನ ಶಿಲಾಯುಗದ ಆದಿಭಾಗದಲ್ಲಿ . . . ಚಕಮಕಿ ಕಲ್ಲಿನ ಹತಾರಗಳು ಕಾಣಬರುತ್ತವೆ (ಶಿಲ್ಪನಾ. ೧೯). **[ಸಂ.]**

**ಶಿಲಾರಸ** (ನಾ). ೧. ಒಂದು ಬಗೆಯ ಸುವಾಸನೆಯ ದ್ರವ್ಯ : ಹಾಲಮಡ್ಡಿ ಕರ್ಪೂರ ಶಿಲಾರಸ ದೇವದಾರ ಲೋಲ ನಾಗರಮೋತಿ ಚಂದನ ಕರ್ಚುರ ರಾಳ ಗುಗ್ಗುಳದ ದಶಾಂಗ (ಸಿದ್ಧಪು. ೧೯-೩). ೨. [ಭೂಗೋಳ] ಜ್ವಾಲಾಮುಖಿಯಿಂದ ಹೊರಹೊಮ್ಮುವ

ಧಾತುಗಳ ರಸ : ಸಾಮಾನ್ಯವಾಗಿ ಅಗ್ನಿಶಿಲೆಗಳು ಶಿಲಾರಸದಿಂದಲೋ (ಲಾವಾ) ಅಥವಾ ಶಿಲಾಪಾಕಗಳಿಂದಲೋ (ಮ್ಯಾಗ್ಮ) ಜನ್ಮತಾಳಿದುವು (ಕವಿಕೋ. I. ೨೯೫). **[ಸಂ.]**

**ಶಿಲಾಲಿಖಿತ** (ನಾ). ಕಲ್ಲಿನ ಮೇಲೆ ಕೆತ್ತಿದ ಬರಹ, – ಬರವಣಿಗೆ : ಶಿಲಾಲಿಖಿತವೇನು ಜಲಲಿಪಿಯಂತೆ ಕೆಡುವುದೇ (ವೀಶ್ವಪು. ೩-೧೪-೮). **[ಸಂ.]**

**ಶಿಲಾಲಿಪಿ** (ನಾ). ಕಲ್ಲಿನ ಮೇಲೆ ಕೆತ್ತಿರುವ ಬರಹ; ಶಿಲಾಶಾಸನ : ಸಾತಕರ್ಣಿ ಎಂಬ ರಾಜನ ಆಳ್ವಿಕೆಯ ಎರಡನೆಯ ವರ್ಷದ ಶಿಲಾಲಿಪಿಯಿಂದ ರಾಜನು . . . ಭೂದಾನ ಮಾಡುವಂತೆ ಮಹಾವಲಭನೆಂಬ ತನ್ನ ಅಧಿಕಾರಿಗೆ ಅಪ್ಪಣೆ ಕೊಟ್ಟನೆಂದು ತಿಳಿಯುತ್ತದ (ಕರ್ನಾಅ. ೩) : ಭಾರತೀಯ ಸಂಸ್ಕೃತಿಯ ದೊಡ್ಡ ಆಸ್ತಿಯಾಗಿವೆ, ಈ ಶಿಲಾಲಿಪಿಗಳು (ಕನ್ನಸಂ. ೪೨). **[ಸಂ.]**

**ಶಿಲಾಲೇಖ** (ನಾ). = ಶಿಲಾಲಿಪಿ : ಶಿಲಾಲೇಖವು ಅಚ್ಚಳಿಯದಂತಿರುವುದು (ಶಿವಾಸೂ. ೧೩೦-೨೭) : ಆ ಕಾಲದ ಶಿಲಾಲೇಖಗಳಲ್ಲಿ ವಿವರಿಸಿದಂಥ ಇತಿಹಾಸದ ಸಂಗತಿಗಳನ್ನು ಬೈಲಿಗೆ ತಂದಿದ್ದಾರೆ (ಮುಂಬಯಿ. ೫-೨೯೬). **[ಸಂ.]**

**ಶಿಲಾವಲ್ಕ** (ನಾ). ಪಾಚಿಯೊಡನೆ ಬೆಳೆಯುವ ಒಂದು ಬಗೆಯ ಅಣಬೆ; ಕಲ್ಲುಹೂವು : ಸಾಮಾನ್ಯವಾಗಿ ಹಾವುಚ ಜಲನೀಲಿಕಾ ಶಿಲಾವಲ್ಕಗಳು ಇಲ್ಲಿ ಬೆಳೆಯುತ್ತವೆ (ಭೂವಿವ. ೧೭೭). **[ಸಂ. ಶಿಲಾವಲ್ಕಾ]**

**ಶಿಲಾವಿಗ್ರಹ** (ನಾ). ಕಲ್ಲಿನ ಬೊಂಬೆ, – ಪ್ರತಿಮೆ : ಈ ರೀತಿಯಾಗಿ ಗಣಪತಿ ಮೊದಲಾಗಿ ಹೇಳಿರುವ ಶಿಲಾವಿಗ್ರಹಗಳನ್ನೂ . . . ಪ್ರತಿಷ್ಠೆ ಮಾಡಿಸಿದರು (ಮಹಾವಂ. II. ೧೩೭). **[ಸಂ.]**

**ಶಿಲಾವೃಷ್ಟಿ** (ನಾ). ೧. ಕಲ್ಲಿನ ಮಳೆ : ಚಾರು ಮನಾನಂದದ ಸಲುವಾಗಿ ಅತ್ಯಂತ ಏಕಾಂತದಲ್ಲಿ ಆ ಒಂದು ಸಣ್ಣದಾದ ಸಾಹಿತ್ಯನೀಡವನ್ನು ನಿರ್ಮಿಸಿಕೊಂಡಿದ್ದಾಳೆ. ಅದರ ಮೇಲೆ ಇಂದು ಹಠಾತ್ ಪ್ರಶಂಸಾರೂಪದ ಶಿಲಾವೃಷ್ಟಿಯಾಗಿ . . . ಅವಳ ನಿಭೃತನೀಡವನ್ನು ಆಮೂಲಾಗ್ರ ಕೆಡವಿಬಿಡುವಂತಾಯಿತಲ್ಲ (ಇಪ್ಪತ. ೨೫೪). ೨. ಆಲಿಕಲ್ಲು. **[ಸಂ.]**

**ಶಿಲಾಶಾಸನ** (ನಾ). ರಾಜ ಮುಂತಾದವರಿಂದ ಕೊಡಲ್ಪಟ್ಟ ದತ್ತಿ, ದಾನ, ಧರ್ಮ, ಆಜ್ಞೆ ಮುಂತಾದ ನಿರೂಪಗಳನ್ನು ಕಲ್ಲಿನ ಮೇಲೆ ಕೆತ್ತಿರುವ ಬರಹ: ನುಡಿದು ತಪ್ಪದ ಭಾಷೆ ಬಸವನ ನುಡಿ ಶಿಲಾಶಾಸನವು (ಬಸಪು. ೩೭-೨೫) ; ಇದೇ ರಾಜನ ಹನ್ನೆರಡನೆಯ ವರ್ಷದ ಶಿಲಾಶಾಸನದಲ್ಲಿ ಈ ರಾಜನ ಮಗಳು . . . ಕೆರೆಯನ್ನೂ ಒಂದು ವಿಹಾರವನ್ನೂ ದಾನ ಮಾಡಿದಳೆಂದು ತಿಳಿದು ಬಂದಿದೆ (ಕರ್ನಾಅ. ೩). **[ಸಂ.]**

**ಶಿಲಾಸಂಕಟ** (ನಾ). ಒಂದು ನರಕದ ಹೆಸರು : ಕ್ಷಾರಕೂಪ ಅಂಧತಮಃಕೂಪ ಅಮೂಲವಿಶಾತನ ಮುಸಲೋಲೂಖಲಮರ್ದನ ಶಿಲಾಸಂಕಟ[ಪಾಠಾಂ. ಶಕಟ]ವೆಂಬೈದು ಮಂತ್ರಿನರಕಂಗಳಿಂದೂಪ್ಪಿ ವಿಷವರ್ತುಳವೆಂಬರಸುನರಕವಿಹುದು (ವಿವೇಕ. ೧೪೧). **[ಸಂ.]**

**ಶಿಲಾಸಂಗ** (ನಾ). ಶಿಲೆಗಳ ಸಂಬಂಧವುಳ್ಳುದು, – ಸಂಪರ್ಕವುಳ್ಳುದು: ಶೃಂಗಮಯಮುರುಶಿಲಾಸಂಗ [ಪಾಠಾಂ. ಪಾಂಗ]ಮಯಮಧಿಕಮಾತಂಗಮಯಮನುಪಮ ಭುಜಂಗಮಯಂ . . . ಅಮರಿಯರನಂಗಮಯಕೇಳಿಗಳ ಸಂಗಮಯಮೆನಿಪ ಗಿರಿ ಭಂಗಮಯಮಲ್ಲದುತ್ತುಂಗಮಯಮಾಗಿರ್ದುದು (ಚೈಮಿಭಾ. ೧೧-೭). **[ಸಂ.]**

**ಶಿಲಾಸನ** (ನಾ). ಕಲ್ಲಿನ ಆಸನ, – ಪೀಠ : ಘನಸಮಯದೊಳಿರ್ದು ಶಿಲಾ[ಪಾಠಾಂ. ಖಾ,ಳಾ]ಸನದೊಳ್ ಶೈಳೇಯಸುರಭಿತಳದೊಳ್ ಗೋವರ್ಧನ ಕಂದರದೊಳ್ ಶಿಖಿನರ್ತನಂಗಳಂ ನೋಡು ಮದನಮದಗಜಗಮನೇ (ಶಾಂತಿಪು. ೫-೧೩೧); ಮೃತ್ಯುಂಜಯನು ತನ್ನ ಆ ಶಿಲಾಸನವನ್ನು ಬಿಟ್ಟು ಎದ್ದು ನಿಂತನು (ಇಪ್ಪತ. ೩೪೦). **[ಸಂ.]**

**ಶಿಲಾಸಾರ** (ನಾ). ಕಬ್ಬಿಣ : "ಗಿರಿಸಾರಂ ಶಿಲಾಸಾರವಾಯಸಂ ಲೋಹಮನೆ ಕರ್ಬೊನ್ನಿಗಕ್ಕು ನಾಮಂ" (ಮಂಗರಾ. ೩೦-೩). **[ಸಂ.]**

**ಶಿಲಾಸ್ತಂಭ** (ನಾ). ೧. ಕಲ್ಲಿನ ಕಂಬ : ಮುನಿದೆಮ್ಮಂ ಕೊಲಲೊಡ್ಡಿದಂದಿನ ಶಿಲಾಸ್ತಂಭಕ್ಕೆ ಕೆಯ್ನಾಡಿದಂದಿನ . . . ನಿನ್ನ ಗರ್ಜನೆಯುಂ ಬೀರಮುಮಿಗಳಿಂತು ಪುಡಿಯೊಳ್ ಚೀ ಸೀ ಪೊರಳ್ವಿರ್ಪುದೇ (ಶಾಂತಿಪು. ೭-೬೦). ೨. ಶಾಸನಸ್ತಂಭ; ಶಿಲಾಶಾಸನದ ಕಂಬ : ಮಣ್ಣಾಳಕ್ಕೆಲ್ಲಂ ಪಡಿಛನ್ದಮಾಗೆ ಶಿಲಾಸ್ತಂಭಶಾಸನಮಾಗೆ ನಟ್ಟಂ (ಎಕ. III (R), ಹೆಗ್ಗಡ. ೬೦-೩೨; 1057). ೩. (ಶಿಲಾಶಾಸನದ) ಕಂಬದಂತಿರುವವನು : ಸುಯೋಧನೋರು ಮಕುಟೋದ್ವೃಟ್ಟಪ್ರತಿಜ್ಞಾಕ್ಷರಾವಳಿವಿನ್ಯಸ್ತ ವಿಶಾಲನಿಶ್ಚಳಶಿಲಾಸ್ತಂಭಂ ಕುರುಕ್ಷೇತ್ರದೊಳ್ ಪ್ರಳಯೋಗ್ರಾಂತಕನಂತಗುರ್ವನೊಳ ಕೊಂಡಿರ್ದಂ ಹಿಡಿಂಬಾಂತಕಂ (ಗದಾಯು. ೧-೫೫). **[ಸಂ.]**

**ಶಿಲಾಹಾರ** (ನಾ) (ಪ್ರಾಚೀನ ಕರ್ಣಾಟಕದ) ಒಂದು ರಾಜಮನೆತನದ ಹೆಸರು: ತಗರಪುರವರಾಧೀಶ್ವರ ಶಿಲಾಹಾರನರೇಂದ್ರ ಜೀಮೂತವಾಹನಾನ್ವಯಪ್ರಸೂತಂ (ಕೊಲ್ಹಾಶಾ. ೨೪-೩ ; ?) ; ಕೊಲ್ಹಾಪುರದ ಶಿಲಾಹಾರದ ಮುಕ್ಕಾಲುಭಾಗ ಶಿಲಾಶಾಸನಗಳು ಕನ್ನಡದಲ್ಲಿವೆ (ಭಾಷಾಶಾ. ೧೯೫). 'ಸಿಯಳಾಜ' ಪರಾ. **[ಸಂ.]**

**ಶಿಲಾಹಿ** (ನಾ). ಕಲ್ಲಿನ ಹಾವು ; ಕಲ್ಲಿನ ನಾಗರ : ಚರಲಿಂಗಮೆಂಬ ಪೊಗದೊಳ್ ತೃಪ್ತನಕ್ಕುಮಾಶ್ವರನದಂ ಬಿಟ್ಟು ಲಿಂಗಾಸ್ಯದೊಳ್ ಕುಡೆ ಶಿಲಾಹಿಗೆ ಪಾಲನೆರೆದಂತದು (ಆರಾಚ. ೧-೧೨-೨೭). **[ಸಂ.]**

**ಶಿಲಿ** (ನಾ). ೧. ಬಾಗಿಲಿನ ಕೆಳಮರ. ೨. ಹೆಣ್ಣು ಎರೆಹುಳು : "ಶಿಲೀ, ಗಂಡೂಪದೀ – ೨ ಹೆಣ್ಣುಯರುಬುಹುಳುವಿನ ಹೆಸರುಗಳು" (ಸಿದ್ಧಾಂತಿ. ೮೪). ೩. ಈಟಿ. ೪. ಬಾಣ. ೫. ಹೆಣ್ಣುಕಪ್ಪೆ. **[ಸಂ. ಶಿಲಿ, ಶಿಲೀ]**

**ಶಿಲೀಂದ್ರ, ಶಿಳೀಂದ್ರ** (ನಾ). ೧. ನಾಯಿಕೊಡೆ; ಅಣಬೆ : ಪುಟ್ಟಿದುವಲ್ಲಿಗಲ್ಲಿಗ ಶಿಲೀಂದ್ರಚಯಂ[ಪಾಠಾಂ. ಶಿಕಿಪ್ರಚಯಂ, ಶಿಖಿಪ್ರಚಯಂ] ಕರುಮಾಡದಲ್ಲಿ ಜೇನಿಟ್ಟುದು (ಜಗವಿ. ೧೨-೪); ಮಾನವನಲ್ಲೂ ಪ್ರಾಣಿಗಳಲ್ಲೂ ಐವತ್ತಕ್ಕೂ ಮೀರಿದ ಬಗೆಗಳ ಅಣಬೆ (ಬೂಜು, ಬೂಷ್ಟು, ಶಿಲೀಂದ್ರ)ಗಳಿಂದ ಸೋಂಕುರೋಗಗಳು ಕಾಣಿಸಿಕೊಳ್ಳುತ್ತವೆ (ಕವಿಕೋ. I. ೨೨೭). ೨. ಒಂದು ಬಗೆಯ ಮರ : "ಅಣಂಬೆಯಲಿ ವೃಕ್ಷದಲ್ಲಿ ನಾಮಂ ಶಿಲೀಂ[ಪಾಠಾಂ. ಶಿಳಿಂ]ಧ್ರಮೆನಿಸಿರ್ಕು" (ಮಂಗರಾ. ೧೪೩-೨೧). ೩. ಬಾಣ; ಶರ: "ಅಣಂಬ ಶರ ವೃಕ್ಷಂಗಳ್ ಶಿಲೀಂಧ್ರಾಹ್ವಯಂ" (ನಾನಾರ. ೮೭). **ಶಿಳೀಂದ್ರ**: ೧. ಪೊಡವಿ ಘನಾಗಮನೃಪನಂ ಸಡಗರದುತ್ಸವದಿನಿದಿರ್ಗೊಳಲ್ಕೆತ್ತಿದ ಬೆಳ್ಗೊಡೆಗಳ್ ತಾವೆಂಬಂತಿರೆ ಬಿಡದೆಸೆದುವು ಪರಿಕಿಸಲ್ ಶಿಳೀಂಧ್ರವ್ರಾತಂ (ತ್ರಿಪುವಿ. ೮-೩೦). **[ಸಂ.]**

**ಶಿಲೀಮುಖ, ಶಿಳೀಮುಖ** (ನಾ). ೧. ಬಾಣ; ಶರ: ಶಿಶಿರೋಪಚಾರದಿಂ ಖಚರ ಶಿರೋಮಣಿ . . . ಮನೋಜ ಶಿಲೀ[ಪಾಠಾಂ. ಳೀ]ಮುಖ ಕೀಲಿತ ಹೃತ್ಕುಶೇಶಯಂ ತಡೆದು ಮೂರ್ಛೆಯಿಂದೆಚ್ಚೆತ್ತಂ (ಪಂರಾಮಾ. ४-೯೪) : ಅವರು ಮಗುಳೆಚ್ಚರು ಶಿಲೀಮುಖದವಯವದೊಳುಚ್ಚೆದ್ದು ಗಿರಿಗಳು ಕವಿಯೆ ಕಡಿದೊಟ್ಟದೆನು ಭಾರಿಯ ವಜ್ರಬಾಣದಲಿ (ಕುಮಾಅ. ೧೨-೪೩). ೨. ದುಂಬಿ; ಭ್ರಮರ : ಶಿಲೀಮುಖ ಕುಂತಳೆ ಮದನಶಿಲೀಮುಖದಂತೆ ಭುವನಮಂ ಸೋಲಿಸಿದಳ್ (ಪಂರಾಮಾ. ೪೦-೩೦). ೧ , ೨ : ಪರಿಕಲಿತ ಶಿಲೀ[ಪಾಠಾಂ.ಳೀ]ಮುಖ ವಾನರಚಿಹ್ನಂ . . . ಎನಿಪಂತಕಕೃತ ನವತರು ವಿರ್ಪಂತಿರ್ದುದಲ್ಲಿ ಗಾಂಡಿವಿಯ ರಥಂ (ಗದಾಯು. ४-೩४) ; ಕೆದಱಿದುದು ಶಿಲೀಮುಖ ಪಾತದಿಂದ ಶೋಣಿತಪರಾಗತತಿ ಪದ್ಮವ್ಯೂಹದೊಳೆನೆ ಕೃಷ್ಣಶರಾಘಾತದಿನೊಗೆದುದು ದೈತ್ಯಬಲದೊಳರುಣಜಲೌಘಂ (ಜಗವಿ. ೧೨-೧೩); ಆ ಮಹಾವನಂ . . . ಚಮೂರಚಿತಪ್ರಹರಣವಿಶೀರ್ಣರೂಪಮುಂ ದಂತಿದಾನವವಿಲೀನಶಿಲೀಮುಖಮುಂ . . . ಆಗಿಯುಂ ಅಪರ್ಣಾನ್ವಿತಮಲ್ತು (ಚಂದ್ರಪು. ೫-೫೨ ವ). ೩. ಮೂರ್ಖ. **ಶಿಳೀಮುಖ** : ೧. ತೊಟ್ಟರೋರೊರ್ವರು ಶಿಳೀಮುಖವಿಟ್ಟರೋರೋರ್ವರ ಸಮಿಪಕೆ (ಮುಲ್ಲಾಶಾ. ೭-೨೩). ೨. ನಿಖಿಳವಿನಮನ್ನರೇಶ್ವರ ಮುಖಾಬ್ಜನೇತ್ರೋತ್ಪಳಾಳ ಕಾಳೋಳಶಿಳೀಮುಖನಿಕರದಿನೆಸೆವುದು (ಎಕ. II. ೧೩೩-೫೪; 982). ೧, ೨ : ಕಾದಲಿದಿರ್ಚಿ ಬಂದ ಪಗೆ ಸಂಪಗೆಯಂತೆ ಶಿಳೀಮುಖಕ್ಕೆ ಗೆಂಟಾದುದು (ಪಂಪಭಾ. ೧೨-೯೭); ಧನುರ್ಧರರ ಕಳಾಪದಂತೆ ರಮಣೀಯ ಶಿಳೀಮುಖಸಂಕುಳಂ ಕೊಳಂ (ಗಿರಿಕ. ೨-೫೪); ಚಳಶಿಳೀಮುಖ ರವಕೆ ಪಟುಭಟರಳುಕಿದರು ವಿರಹಿಗಳವೊಲು (ಕುಮಾಭೀ. ೭-೯). **[ಸಂ.]**

**ಶಿಲುಕು, ಶಿಲಕು, ಶಿಲ್ಕು, ಶಿಲ್ಲಕು, ಸಿಲುಕು**[4]**, ಸಿಲ್ಕು**[3]**, ಸಿಲ್ಲಕು** (ನಾ). ೧. ಹಣ, ಪದಾರ್ಥ ಇತ್ಯಾದಿ ವಸ್ತುಗಳು ಖರ್ಚಾದ ನಂತರ ಉಳಿದಿರುವ ಬಾಕಿ, – ಶೇಷ : ನಿನ್ನಿನ ಸಾಯಂಕಾಲದವರೆಗಿನ ಜಮೆಯ ಹಾಗೂ ಖರ್ಚಿನ ರಕಮುಗಳ ಬೇರೀಜು ಮಾಡಿ, ಶಿಲುಕು ತೋರಿಸಲ್ಪಟ್ಟಿತು (ಭಾಮಿನಿ. ೫೭); ತನ್ನ ಬೀಗದ ಕೋಣೆಯ ಬಾಗಿಲನ್ನು ತೆಗೆದು ಅದರಲ್ಲಿ ಎಷ್ಟು ಶಿಲುಕು ಉಳಿದಿದೆ ಎಂದು ಲೆಕ್ಕಮಾಡಿ ನೋಡಿದನು (ವಿಧಿವೈ. ೧೪೫). **ಶಿಲಕು** : ೧. ಪೂರ್ವದ ಶಿಲಕು ಸಹಾ ಖರ್ಚು ಮಾಡುತ್ತಾ (ಪ್ರದರ. ೩೦). **ಶಿಲ್ಕು** : ೧. ಅಂಗಡಿಯ ಬೀಗ ಮುರಿದು ಪೆಟ್ಟಿಗೆಯಲ್ಲಿದ್ದ ಶಿಲ್ಕನ್ನೆಲ್ಲ

ಹೊತ್ತಿದ್ದರು (ಆಲಿನಿ. ೧೩೧). ೨. ಕಾಯ್ದಿರಿಸಿದುದು; ಮೀಸಲು: ಎಲ್ಲಾ ಕೇಂದ್ರ ಬ್ಯಾಂಕುಗಳ ವಿದೇಶಿ ವಿನಿಮಯ ಶಿಲ್ಕುಗಳ (Reserves) ಸ್ವಲ್ಪ ಭಾಗವನ್ನು ಅಂತರರಾಷ್ಟ್ರೀಯ ತೀರುವೆಯ ಬ್ಯಾಂಕಿನಲ್ಲಿ ಕೇಂದ್ರೀಕೃತಗೊಳಿಸಿ . . . ಸೂಕ್ತ ಕ್ರಮಗಳನ್ನು ಆರಂಭಿಸಿತು (ಅಂತಸಂ. ೧೪೭). **ಶಿಲ್ಲಕು :** ೧. ಒಟ್ಟು ಶಿಲ್ಲಕು ಉಳಿದ ಹಣವೆಷ್ಟು, ಸೆಟ್ಟರೆ? (ಜನಪಾ. ೨೭೮). **ಸಿಲುಕು$_4$ :** ೧. "ಸಿಲುಕು-ಉಳಿತಾಯ" (ಜಾನಕೋ. ೪೯). **ಸಿಲ್ಕು$_3$ :** ೧. ಆತನ ಬಳಿಯಲ್ಲಿ ಯಾವಾಗಲೂ ಮಣಗಟ್ಟಲೆ ಅವು ಸಿಲ್ಕು ಇರುತ್ತಿತ್ತು (ಹಂಪಾ. ೧೫೦). ಸಿಲ್ಲಕು : ೨. ಪದ್ಮಾವತಿಯೂ ತನ್ನ ಹೆರಿಗೆಗೆ ಬೇಕೆಂದು ಕುರುಳುಗಳನ್ನು ಸಿಲ್ಲಕು ಮಾಡತೊಡಗಿದಳು (ಅಶೋಕ.೧೪೪). [← ಅರ. ಸಲ್ಫ್; ಮರಾ. ಶಿಲಕ್, ಶಿಲ್ಲಕ್]

**ಶಿಲುಬೆ, ಸಿಲುಬೆ, ಸಿಲುವೆ** (ನಾ). ೧. (ಕ್ರೈಸ್ತಜನಾಂಗದವರಲ್ಲಿ) ಹಿಂದಿನ ಕಾಲದಲ್ಲಿ ತಪ್ಪಿತಸ್ಥರನ್ನು ಸಾಮಾನ್ಯವಾಗಿ ಅಡ್ಡಮರ ಹಾಕಿದ ಉದ್ದವಾದ ದಸಿಗೆ ಬಂಧಿಸಿ, ಮೊಳೆಹೊಡೆದು ಸಾಯಿಸಲಾಗುತ್ತಿದ್ದ ಒಂದು ಬಗೆಯ ಮರದ ಸಾಧನ; ☞ ಈ ಸಾಧನವನ್ನು ಬಳಸಿ ಏಸುಕ್ರಿಸ್ತನನ್ನು ಶಿಕ್ಷಿಸಲಾಗಿತ್ತು: ಬ್ಲೇಕಿನ ಮತ್ತೊಂದು ಕಾಣಿಕೆ ಎಂದರೆ ಆತ ಶಿಲೆಗೆ ಬಂಧಿಸಲ್ಪಟ್ಟ ಪ್ರಮಿಥ್ಯೂಸಿನಲ್ಲಿ ಶಿಲುಬೆಗೇರಿಸಲ್ಪಟ್ಟ ಕ್ರಿಸ್ತನ ಪ್ರತಿಮೆಯನ್ನು ಕಂಡದ್ದು (ಬದ್ಧಪ್ರ. XX ಪೀಠಿಕೆ); ಭವ್ಯವಾದ ಆ ಪ್ರಾರ್ಥನಾಮಂದಿರದಲ್ಲಿ . . . ಶಿಲುಬೆಯಲ್ಲಿ ಸಿಕ್ಕಿಸಿದ ಏಸುಕ್ರಿಸ್ತರ ಪ್ರತಿಮೆಯಿತ್ತು (ರಕ್ತರೂ. ೫೩). ೨. ಏಸುವಿನ ಸ್ಮಾರಕವಾಗಿ ಕ್ರೈಸ್ತಧರ್ಮದವರು ಕೊರಳಲ್ಲಿ ಧರಿಸುವ ಲಾಂಛನ; ಕ್ರೂಜೆ : ಚಿನ್ನದ ಶಿಲುಬೆಯನ್ನುಳ್ಳ ವಿಧಿವಿಹಿತವಾದ ರಜತವರ್ಣದ ಪೋಷಾಕಿನಲ್ಲಿ ಪುರೋಹಿತರೂ . . . ಗಾಯಕರೂ ರಾರಾಜಿಸುತ್ತಿದ್ದರು (ಪುನರು. ೬೯). **ಸಿಲುಬೆ:** ೧. ಬೆತ್ಲಿಹೆಂಗೆ ಉತ್ತರದಲ್ಲಿ ಜೆರುಸಲೆಂ ರಾಜಧಾನಿ. ಯೇಸುಕ್ರಿಸ್ತನು ಸಿಲುಬೆಗೆ ಹಾಕಲ್ಪಟ್ಟ ಸ್ಥಳ (ಭೂಗೋಲ. ೧೦೫); ಕಂಬದಿಂ ಕವಿವಂದು . . . ಅರಳಿಯಡಿ ತಪಿಪಂದು ಸಿಲುಬೆಯಿಂ ಕ್ಷಮಿಪಂದು - ರವಿಯೊ ಮೇಣ್ ಕವಿಯೊ ಕಾಣಿಸುವನಂದುಮನಿಂದು? (ಗಿಳಿವಿಂ. ೨೨-೪೨); ಸತ್ಯಕ್ಕೋಸ್ಕರ ಸಿಲುಬೆಯನ್ನೇರಲಿಕ್ಕೆ ಸಿದ್ಧವಾದ . . . ಸ್ವಾಮಿಭಕ್ತಿಗೋಸ್ಕರ ಅಸುವನ್ನು ನೀಗಲು ಉದ್ಯುಕ್ತವಾದ ಜೀವನಗಳ ಗುಟ್ಟನ್ನು ಕಂಡುಹಿಡಿಯುವುದು ಸಾಮಾನ್ಯ ಕೆಲಸವಲ್ಲ (ಕವೀರ. ೭೫). **ಸಿಲುವೆ :** ೧. ಬೆರಳಲಿ ಬೇಡನ ಬಾಣ ಬೇಯುತಿರ ಸಿಲುವೆ ಮೊಳೆಗೆ ಕೆಯ್ನಾಡಿದೆಯಾ ? (ಗಿಳಿವಿಂ. ೪೧-೯). [← ಸಿರಿಯಕ್. ಸ್ಲೀಬೊ./ ತಮಿ. ಚಿಲುವೈ; ಮಲ. ಶ್ಲೀಬ; ತೆಲು. ಸಿಲುವ. / ಪಾರ. ಶಲೀಬ್]

**ಶಿಲುವು** 'ಸಿಲುಪು' ನೋ.

**ಶಿಲೆ** (ನಾ). ೧. ಕಲ್ಲುಬಂಡೆ ; ಅರೆ : ನಡೆವ ತಳರ್ನಡೆಯೊಳ್ ಪುಡಿವುಡಿಯಾದುವು ಶಿಲೆಗಳೊಡೆದು ಕರಿಗಳ್ ಭೀಮಂ ಪಿಡಿದಡರ್ದೊಡೆ ಬಾಯ್ಬಿಟ್ಟೆಲ್ಲಡಗಾದುವು (ಪಂಪಭಾ. ೨-೫); ಭೀಮ ಬಿದ್ದನು ತೊಡೆಯ ಮೇಲಿಂದೀ ಮಹಿಗೆ ತಚ್ಛೈಲಶಿಲೆ ನಿರ್ನಾಮವಾದುದು ಹಸುಳೆ ಹೊರಳಿದು ಬಿದ್ದ ಭಾರದಲಿ (ಕುವ್ಯಾಅ. ೪-೫೭). ೨. ಅರೆಯುವ ಗುಂಡು; ರುಬ್ಬುಗುಂಡು. ೩. ಹೊಸ್ತಿಲ ಮುಂದೆ ಕಾಲಿಡಲು ಹಾಕಿರುವ ಹಲಗೆ, — ಮೆಟ್ಟುಹಲಗೆ. [ಸಂ. ಶಿಲಾ]

**ಶಿಲೆದಾರ, ಶಿಲೇದಾರ, ಸಿಲೆದಾರ, ಸಿಲೇದಾರ** (ನಾ). ಅಶ್ವದಳದ ಯೋಧ; ಕುದುರೆಫೌಜಿನ ಸೈನಿಕ : ಆ ಜನರಿಗೂ ಮತ್ತು ಇಲಾಖೆಯ ಶಿಲೆದಾರರಿಗೂ ಸಾಗುವಳಿಗಾಗಿ ಜಮೀನುಗಳನ್ನು ಕೊಟ್ಟದ್ದರಿಂದ ಆ ಜನರು ಇಲ್ಲಿ ವ್ಯವಸಾಯ ಜೀವಿಗಳೆನಿಸಿ ಸ್ಥಳವಂತರಾದರು (ಮಹಾವಂ. II. ೪೮). **ಶಿಲೇದಾರ:** ಶಿಲೇದಾರನು ಅಲ್ಲಿಂದೆದ್ದು ಕುದುರೆಗೆ ಜೀನು ಹಾಕಿದನು (ಅಮಾರಾ. ೧೭). **ಸಿಲೆದಾರ :** ಚಿರಕಾಲದಿಂದಲೂ ಮೈಸೂರುಸಿಲೆದಾರರು ಹೆಸರುವಾಸಿ ಪಡೆದಿರುವರು (ಮಹಾವಂ. II, ೧೫). **ಸಿಲೇದಾರ :** ಅಶ್ವಸೇನೆಯಲ್ಲಿ ಭಾರ್ಗೀರಿಯವರೂ ಸಿಲೇದಾರರೂ ಎಂದು ಎರಡು ಬಗೆಯವರಿದ್ದರು (ಭತ್ರಶಿ. ೧೫೫).

ಶಿಲೆದಾರಿಯಿಲಾಖೆ = ಕುದುರೆಯ ಸೈನ್ಯದ ವಿಭಾಗಕ್ಕೆ ಸಂಬಂಧಿಸಿದ ಇಲಾಖೆ: ಈಚೆಗೆ ಶಿಲೆದಾರಿಯಿಲಾಖೆಯಲ್ಲಿ ತಿದ್ದುಪಾಟಾಗಿ ೭ ತುಕಡಿಗಳೇರ್ಪಟ್ಟು ಪ್ರತಿಯೊಂದಕ್ಕೂ ಒಬ್ಬೊಬ್ಬ ತುಕಡಿದಾರರನ್ನು ನೇಮಿಸಿದರು (ಮಹಾವಂ. II, ೪೭).

[← ಅರ. ಪಾರ. ಸಿಲಾಹ್‌ದಾರ್ ; ಮರಾ. ಶಿಲೇದಾರ್]

**ಶಿಲೇದಾರ** 'ಶಿಲೆದಾರ' ನೋ.

**ಶಿಲೇಮುದ್ದ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಶಿಲೇಮುದ್ದರ ಮರ್ಮ್ಮಾನ್ ಸರ್ವ್ವಸಿದ್ಧಿ ಆಚಾರ್ಯ್ಯ[ರ್ಯ್ಯ]ರ ಚಟ್ಟರ ರೆವಡಿಒವಜ್ಜರ್ ತೆಂಕಣದಿಶೆ ಮಾಡಿದೋರ್ (ಇಅ X, ೧೭೦-೧ ; 5ನೆಯ ಶತ). [?]

**ಶಿಲೋಂಛಜೀವಿ** (ನಾ). ಹಕ್ಕಲಾರಿಸುವ ಕಸುಬಿನಿಂದ ಜೀವಿಸುವವನು : ಕುಶೂಲಧಾನ್ಯ, ಕುಂಭೀಧಾನ್ಯ, ತ್ರ್ಯಾಹಿತ, ಅಶ್ವಸ್ತನ, ಶಿಲೋಂಛಜೀವಿ ಇವರುಗಳಲ್ಲಿ ಮೊದಮೊದಲು ಹೇಳಿದವರಿಗಿಂತಲೂ ಆಮೇಲಾಮೇಲೆ ಹೇಳಿದವರು ಶ್ರೇಷ್ಠರು (ಆರ್ಯಧ. ೮೭). [ಸಂ. ಶಿಲೋಂಛಜೀವಿನ್]

**ಶಿಲೋಂಛವೃತ್ತಿ** (ನಾ). ಕೊಯ್ಲಾದ ಮೇಲೆ ಹೊಲದಲ್ಲಿ ಉಳಿದ ತೆನೆಯ ಕಾಳುಗಳನ್ನು ಆರಿಸಿ ಜೀವಿಸುವಿಕೆ; ಹಕ್ಕಲಾರಿಸುವಿಕೆಯ ಕಸುಬು: ಕ್ಷಮಾಶೀಲರಾಗಿ ನಡೆದುಕೊಂಬಂಥಾ ಭೂಭುಜರೊರ್ಮೆ ಕಾಲವಶದಿಂದ ಕಡುದರಿದ್ರರಾಗಿ ಶಿಲೋಂಛವೃತ್ತಿಗಳಿಂದಂ ಬಾಳ್ಕೆಯನೆಸಗುತ್ತಿರ್ದೊಡಂ (ಭಾರಶಾಂ. ೧೪-೭೭); ಮುದ್ಗಲನು ಸತ್ಯಸಂಧನಾಗಿ, ಅಸೂಯಾರಹಿತನಾಗಿ ಶಿಲೋಂಛವೃತ್ತಿಯಿಂದ ಕುರುಕ್ಷೇತ್ರದಲ್ಲಿ ವಾಸಿಸುತ್ತಿದ್ದನು (ಭಾರದ. ೧೦೫). [ಸಂ.]

**ಶಿಲೋಚ್ಚಯ, ಶಿಳೋಚ್ಚಯ** (ನಾ). ಕಲ್ಲುಬಂಡೆಗಳಿಂದ ಕೂಡಿದುದು; ಬೆಟ್ಟ; ಪರ್ವತ : ಆ ಕುಜುವದ ಕಿಱಿದಾನುಂ ಶಿಲೋ[ಪಾಠಾಂ..ಳೋ]ಚ್ಚಯಮನೇಱಿ ನೋಟ್ಪನಲ್ಲಿ ಕಾಯೋತ್ಸರ್ಗದೊಳಿರ್ದ ಮುನೀಂದ್ರನಂ ಕಂಡು ಮನಂಗೊಂಡು ಬಲವಂದು (ನೇಮಿಪು. ೪-೧೦೬ ವ) ; ಶಿಳೋಚ್ಚಯಸಾನುವಿನ ಗಹ್ವರದ ಗಂಡಸ್ಥಾನ ದೀರ್ಘದ್ರೋಣಿಗಳಲಱಸಿದರು ಮೃಗಕುಲವ (ಕುವ್ಯಾಅ. ೧೩-೨೪). **ಶಿಲೋಚ್ಚಯ :** "ಅಚಳಃ, ಶಿಲೋಚ್ಚಯಃ, ಶೈಲಃ, ಕ್ಷಿತಿಧರಃ . . . ಅದ್ರಿಃ, ಕುಧ್ರಃ — ಈ ೧೪ ಬೆಟ್ಟು" (ಪಲಾಯು. ೨೭-೧೧). [ಸಂ.]

**ಶಿಲ್ಕು** 'ಶಿಲುಕು' ನೋ.

**ಶಿಲ್ಪ** (ನಾ). ೧. ಸಂಗೀತ, ನೃತ್ಯ, ಚಿತ್ರಕಲೆ ಮುಂತಾದ ಅರುವತ್ತುನಾಲ್ಕು ವಿದ್ಯೆಗಳು : ಪರಿನಿರ್ಮಿಪ ಮಾಜೂಡುವ ದೊರೆವಡೆದ ನಿಯೋಗದನ್ಯತದಱಿತದ ಋಣದಾಚರಣದ ಶಿಲ್ಪದ ಮೂಲದ ಸರಸಂ ಪೇಟ್ಟಲ್ಲಿ ಮಾಟ್ಕೆಗಪ್ರತ್ಯಯಮಂ (ಶಮದ. ೧೯೭) ; ಭಾರತೀಯರ ಪ್ರಕಾರ ಶಿಲ್ಪ ಮತ್ತು ಕಲೆ ಎರಡೂ ಅಭಿನ್ನಾರ್ಥದಲ್ಲಿ ಬಳಸಲ್ಪಟ್ಟಿವೆ. ಶಿಲ್ಪ ಎನ್ನುವುದು ಸಮಸ್ತಕಲೆಗಳನ್ನು ಒಳಗೊಳ್ಳುತ್ತದೆ (ಸೌಂದಸ. ೧೯೯). ೨. ಕಲ್ಲು, ಲೋಹ ಇತ್ಯಾದಿಗಳನ್ನು ಕೆತ್ತಿ ಆಕೃತಿ ಕೊಡುವ ಕಲೆ; ಕೆತ್ತನೆಯ ಕೆಲಸ : ಯಾವುದಾದರೂ ಒಂದು ವಿಷಯವನ್ನು . . . ರೇಖಾದಿಗಳಿಂದ ವ್ಯಕ್ತಪಡಿಸಿದರೆ ಚಿತ್ರವಾಗುವುದು; ಶಿಲಾಲೋಹಾದಿಗಳಿಂದ ವ್ಯಕ್ತಪಡಿಸಿದರೆ ಶಿಲ್ಪವಾಗುವುದು (ಕೃಪಿಡಿ. ೧೬೮); ಭಗವಂತನ ಔನ್ನತ್ಯವನ್ನು ಶಿಲ್ಪದಲ್ಲಿ ನಿರೂಪಿಸಲು ಸಾಧ್ಯವಾದ ಬಗೆ ಎರಡು (ಶಾಂತಲಾ. ೧೨೭). ೩. ಕೆಲಸ; ವೃತ್ತಿ; ಉದ್ಯೋಗ: ಶಿಲ್ಪವೆಂದರೆ ಜೀವನೋಪಾಯದ ಕೆಲಸವು (ಹೊಸಗ. ೮೫). ೪. ಕಟ್ಟಡ, ಸೇತುವೆ ಮೊದಲಾದುವನ್ನು ನಿರ್ಮಿಸುವ ವಿಜ್ಞಾನ; ವಾಸ್ತುಕಲೆ : 'ಶಿಲ್ಪಶಾಸ್ತ್ರ' ಪರಾ. ೫. ಸಂಗೀತ, ನೃತ್ಯ ಇತ್ಯಾದಿ ಕಲೆಗಳಲ್ಲಿರುವ ನೈಪುಣ್ಯ, — ಕುಶಲತೆ. ೬. ರಚನೆ; ನಿರ್ಮಾಣಕಾರ್ಯ: 'ಶಿಲ್ಪಿಸು' ಪರಾ. ೭. ಮಿಳ್ಳೆ; ದರ್ವಿ. [ಸಂ.]

**ಶಿಲ್ಪಕ** (ನಾ). ೧. ಯಾವುದಾದರೂ ಕುಶಲಕಲೆಯಲ್ಲಿ ನಿಷ್ಣಾತನಾದವನು: ಮಾಡುವನೊಳಂ . . . ವರ್ತಕನೊಳಂ, ಶಿಲ್ಪಕನಲ್ಲಿಯುಂ ಮೂಲದಲ್ಲಿಯುಂ - ಇಗ ಪ್ರತ್ಯಯಮಕ್ಕುಂ (ಶಮದ.೧೯೭ ವೃತ್ತಿ). ೨. [ನಾಟ್ಯ] ಹದಿನೆಂಟು ಉಪರೂಪಕಗಳಲ್ಲಿ ಒಂದು ; ಇಂದ್ರಜಾಲ, ತಂತ್ರಶಾಸ್ತ್ರ ಮುಂತಾದ ವಿಧಿಗಳನ್ನು ಚಿತ್ರಿಸುವ ಒಂದು ಬಗೆಯ ನೃತ್ಯರೂಪಕ : ಉಪರೂಪಕಗಳು–೧.ನಾಟಿಕಾ . . . ೧೩. ಶಿಲ್ಪಕ. ೧೪. ವಿಲಾಸಿಕಾ. ೧೫. ದುರ್ಮಲ್ಲಿಕಾ. ೧೬.ಪ್ರಕರಣೀ. ೧೭. ಹಲ್ಲೀಶ. ೧೮. ಭಾಣಿಕ (ಸಂನಾಟ. ೩೨); ಶಿಲ್ಪಕ - ಇದರಲ್ಲಿ ನಾಲ್ಕು ಅಂಕಗಳು. ನಾಲ್ಕು ವೃತ್ತಿಗಳು; ಶಾಂತ ಹಾಸ್ಯರಸಗಳಿಲ್ಲ . . . ಆಶಂಸೆ ಮುಂತಾದ ಇಪ್ಪತ್ತೇಳು ಅಂಗಗಳಿರುತ್ತವೆ (ಸಂನಾಟ. ೩೫). [ಸಂ.]

**ಶಿಲ್ಪಕರ್ಮ** (ನಾ). ಕುಶಲಕಾರ್ಯ; ಕುಶಲವೃತ್ತಿ: ಅಸಿ ಮಷಿ ಕೃಷಿ ವಣಿಗ್ವಿದ್ಯಾಶಿಲ್ಪಕರ್ಮಂಗಳಿಂ ಶುದ್ಧವೃತ್ತಿಯಿಂದರ್ಥೋಪಾರ್ಜನಂಗೆಯ್ವ ವಾರ್ತೆಯುಂ (ಆದಿಪು. ೧೫-೧೩ ವ). [ಸಂ. ಶಿಲ್ಪಕರ್ಮನ್]

**ಶಿಲ್ಪಕಲೆ** (ನಾ). ಕಲ್ಲಿನಲ್ಲಿ ಕೆತ್ತನೆ ಮಾಡುವ ಕುಶಲವಿದ್ಯೆ : ಕರ್ಣಾಟಕದಲ್ಲಿ ಶಿಲ್ಪಕಲೆಯು ಊರ್ಜಿತಸ್ಥಿತಿಯಲ್ಲಿದ್ದಿತೆಂದು ಹೇಳಬಹುದು (ಕರ್ಣಾಅ. ೬).
[ಸಂ. ಶಿಲ್ಪಕಲಾ]

**ಶಿಲ್ಪಕಾರ** (ನಾ). ಕಲ್ಲಿನಲ್ಲಿ ಕೆತ್ತನೆ ಮಾಡುವವನು; ಶಿಲ್ಪಿ : ಶಿಲ್ಪಕಾರರು ಮೊದಲಾದವರಂ ಕಳುಹಿಸಂದು ನೇಮಿಸಲು (ಸೌಗಂಧ. ೧೭೭-೧). [ಸಂ.]

**ಶಿಲ್ಪಜ್ಞ** (ನಾ). ಶಿಲ್ಪಶಾಸ್ತ್ರವನ್ನು ತಿಳಿದವನು : ಎಂಟನೆಯ ಶತಮಾನದ . . . ಗಣೇಶ ಮತ್ತು ನಂದಿಯ ಮೂರ್ತಿಗಳು ಶಿಲ್ಪಜ್ಞರ ಮೆಚ್ಚುಗೆ ಪಡೆದಿವೆ (ಭಾರದ.೫೧೯).
[ಸಂ.]

**ಶಿಲ್ಪವಿದ್ಯೆ** (ನಾ). ೧. ಕುಶಲಕಲೆ; ಲಲಿತಕಲೆ : ಸ್ಯರಂಧ್ರಿ-ಲೋಗರ ಮನೆಯಲ್ಲಿ ಇದ್ದವಳಾಗಿ ಮಕರಿಕಾಪತ್ರ ಮೊದಲಾದ ಶಿಲ್ಪವಿದ್ಯೆಯ ಮಾಡುವವಳು (ನಾಚಿರಾ. ೬). ೨. ಯಂತ್ರರಚನೆಯನ್ನು ಕುರಿತ ಶಾಸ್ತ್ರ : ಮಾನವನ . . . ನಾಗರಿಕತೆಯಲ್ಲಿ ಒಂದೊಂದು ಯುಗದಲ್ಲಿಯೂ ಶಿಲ್ಪವಿದ್ಯೆಯಿಂದ (Engineering) ಏನು ನೆರವು ದೊರಕಿದೆ? (ಶಿಲ್ಪಸಾ. ೧). [ಸಂ. ಶಿಲ್ಪವಿದ್ಯಾ]

**ಶಿಲ್ಪಶಾಸ್ತ್ರ** (ನಾ). ೧. ಕಟ್ಟಡ, ವಿಗ್ರಹ ಮುಂತಾದುವುಗಳ ನಿರ್ಮಾಣವನ್ನು ಕುರಿತ ವಿದ್ಯೆ ; ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ಶಾಸ್ತ್ರ : ಶಿಲ್ಪಶಾಸ್ತ್ರ ವಿಶಾರದರಪ್ಪಾಚಾರ್ಯರಂ ಬರಿಸಿ . . . ನೆಲಗಟ್ಟಂ ಶೋಧಿಸಲ್ಕುದ್ಯೋಗಮಂ ತಾಳ್ದಿರ್ಪಾಗಳ್ (ತ್ರಿಪುವಿ. ೨೧-೩ ವ); ಹೊಯ್ಸಳದೇವಾಲಯಗಳಲ್ಲಿ ವಿಗ್ರಹಗಳನ್ನು ಯಾವ ಶಿಲ್ಪಶಾಸ್ತ್ರವನ್ನನುಸರಿಸಿ ಶಿಲ್ಪಿಗಳು ಮಾಡಿದರೆಂಬುದನ್ನು ನಿರ್ಧರಿಸುವುದು ಕಷ್ಟವಾಗಿದೆ (ಹೊಯ್ಸವಾ. ೧೨). ೨. = ಶಿಲ್ಪವಿದ್ಯೆ ೨: ಸ್ಥಿತಿಸ್ಥಾಪಕತ್ವಪ್ರಕರಣವು ಶಿಲ್ಪಶಾಸ್ತ್ರದಲ್ಲಿ (Engineering) ಬಹುಮುಖ್ಯವಾದುದಾಗಿದೆ (ಭೌತವಿ. ೧೧೯). ೩. ಸಂಗೀತ, ನೃತ್ಯ, ಚಿತ್ರಕಲೆ ಇತ್ಯಾದಿ ಲಲಿತಕಲೆಗಳನ್ನು ಕುರಿತ ಶಾಸ್ತ್ರ: (೬). [ಸಂ.]

**ಶಿಲ್ಪಿ₁** (ನಾ). ೧. ಕುಶಲಕಲೆಯನ್ನು ಬಲ್ಲವನು; ಕುಶಲಕರ್ಮಿ : ಶಿಲ್ಪಿ ಗಡ ಕಲ್ಪಪತಿ ಸಂಕಲ್ಪಂ ರತ್ನೋಪಲಂ ದಳಂ ಗಡ ಶೋಭಾತಲ್ಪಮಿದೆನ್ನದ ಬೇಚ ವಿಕಲ್ಪಿಸುವನೆ ಗಾಂಪನೆನಿಸುಗುಂ (ಶಂರಾಮಾ. ೧-೧೫). ೨. ಕಲ್ಲಿನಲ್ಲಿ ಕೆತ್ತನೆ ಕೆಲಸ ಮಾಡುವವನು: ಕಲಿತರ್ಕ ಬಿಳ್ಪಿಚ್ಚೆಯಂ . . . ಬಂಡೆಯ ಕೊರೆದು ವರಶಿಲ್ಪಿ ಭುವನ ಸುಂದರಕಲಾಲಕ್ಷ್ಮಿಯಂ ಸೃಜಿಪಂತೆ (ಶ್ರೀರಾಮಾ. ೨೫-೭೭೪) ; ವಂಶಪಾರಂಪರ್ಯವಾಗಿ ನಡೆದುಕೊಂಡು ಬಂದಿದ್ದ ಸ್ಥಪತಿಗಳ ಮತ್ತು ಶಿಲ್ಪಿಗಳ ವಂಶಗಳೆಲ್ಲ ನಾಶವಾಗಿ ಹೋದವು (ಮೈವಾಸ್ತು. ೫೨). ೩. ಯಂತ್ರಶಿಲ್ಪವನ್ನು ಬಲ್ಲವನು; ಯಂತ್ರಶಿಲ್ಪಿ : ಭೂಗೋಳವನ್ನೇ ಒಂದುಗೂಡಿಸುವುದಕ್ಕೆ ಇನ್ನೂ ಕೆಲವು ಉಪಕರಣಗಳನ್ನು ಶಿಲ್ಪಿಯೇ ನಮಗೆ ಒದಗಿಸಿದ್ದಾನೆ (ಶಿಲ್ಪಸಾ. ೮). ೪. ಕಲ್ಲಿನಲ್ಲಿ ಕಡೆದ ವಿಗ್ರಹ : (೬). [ಸಂ. ಶಿಲ್ಪಿನ್]

**ಶಿಲ್ಪಿ₂** 'ಸಿಲ್ಪಿ' ನೋ.

**ಶಿಲ್ಪಿಗ** (ನಾ). ೧. ಕಲ್ಲು, ಲೋಹ ಇತ್ಯಾದಿಗಳಲ್ಲಿ ವಿಗ್ರಹ ಮುಂತಾದುವನ್ನು ಕಡೆಯುವವನು: ಕಂಚುಗಾಱರು ಕೈದುಗಾಱರು ಹೊಳೆವ ಹೊಮ್ಮಂಚಗಾಱರು ಶಿಲ್ಪಿಗರು ಸಂಚಗಾಱರು ಸದ್ವಿದ್ಯಾಧಿಕರಾದ ಪಾಂಚಾಳರಿರ್ದರಿಕ್ಕೆಲದಿ (ಮೋಹತ. ೩-೨೨); ಶಿಲ್ಪಿಗರ ಕೈದುಗಳು ಯಂತ್ರಗಳು . . . ಕಡಿಮೆ ಧಾತುಗಳಿಂದಾಗುವವು (ಮುಂಬಯಿ. ೪-೯೧). ೨. ಸೇತುವೆ, ಕಟ್ಟಡ ಮುಂತಾದುವುಗಳ ನಿರ್ಮಾಣ ಕಾರ್ಯದ ನಿರ್ದೇಶಕ ; ಯಂತ್ರಶಿಲ್ಪಿ : ಭೂ ಗಗನ ಪಾತಾಳದರಮನೆಗಳಿದಜೊಡನೆ ತೂಗೆ ಸರಿಬಾರವೆಂದೆಲ್ಲರುಂ ಪೊಗಳಲತಿವೇಗದಿಂದಾ ಶಿಲ್ಪಿಗಂ ಬಂದು ಮಯ್ಯಿಕ್ಕಿ ಬಸವನೊಡನಿಂತೆಂದನು (ಚೆಬಪು. ೫-೫೨).
[ಶಿಲ್ಪ + -ಇಗ]

**ಶಿಲ್ಪಿಸು** (ಕ್ರಿ). ರಚಿಸು; ರೂಪಿಸು: ಕನ್ನಡನಾಡಿನಲ್ಲಿ ಅವರು ಶಿಲ್ಪಿಸಿದ ಮಹತ್ಕಾರ್ಯಗಳು, ಸಮುದ್ರಗಳು ಅವರ ಸಜೀವಪ್ರತಿಮೆಗಳಾಗಿ ಅಚ್ಚಳಿಯದೆ ನಿಂತಿವೆ (ಕಜಾಸಾ. ೧೩೯). [ಶಿಲ್ಪ + -ಇಸು]

**ಶಿಲ್ಲುಕು** 'ಶಿಲುಕು' ನೋ.

**ಶಿವ** (ಗು). ೧. ಮಂಗಳಕರವಾದ; ಶುಭಕರವಾದ : ಅನಿಬರುಂ ತೊರೆಯ ಶಿವಸಲಿಲದೊಳ್ ಮೊಗಂದೊಳೆದು ಮುಂಬರಿದರಾ ಚಿತ್ರಕೂಟಕ್ಕೆ (ಶ್ರೀರಾಮಾ. ೧೩೯-೯೦೧). (ನಾ). ೨. ಮಂಗಳ; ಶುಭ: ಶಿವದ ಶಾಶ್ವತಮಪ್ಪ ಸೌಖ್ಯಮನೀಯಲಾರ್ಪ ಜಿನೇಶ್ವರ ಪ್ರವರಪಾದದೊಳಲ್ಲದರ್ತಿಯುಂ (ಧರ್ಮಾಮೃ. ೨-೫೨); ವೈರಮಂ ಹಿಂಸೆಯಂ ತೊರೆಯಲೆಳಸುವ ತಪದ ಸಾಧನೆಗೆ ಪ್ರಾರ್ಥನಾನಿರತಳಾದಳ್ ಶಿವದ ಸಫಲತೆಗೆ (ಶ್ರೀರಾಮಾ. ೩೭-೧೯೧). ೩. ಸಂತೋಷ; ಆನಂದ. ೪. ಏಳಿಗೆ; ಅಭ್ಯುದಯ. ೫. ವೇದ. ೬. ಗಂಡಸಿನ ಜನನೇಂದ್ರಿಯ ; ಶಿಶ್ನ. ೭. ದೇವತೆ. ೮. ಪಾದರಸ. ೯. ಗುಗ್ಗುಳ. ೧೦. ಮದ್ಯ. ೧೧. ಮಜ್ಜಿಗೆ. ೧೨. ಮಾಣಿಕ್ಯ. ೧೩. ಕಾಲ. ೧೪. ಪರಿಷ್ಕಾರಹೊಂದಿದ ಬಿಳಿಗಾರ. ೧೫. ಕಡಲುಪ್ಪು. ೧೬. ಕಲ್ಲುಪ್ಪು. ೧೭. ಕಬ್ಬಿಣ. ೧೮. ಚಂದನ. ೧೯. ಮೋಕ್ಷ ; ಮುಕ್ತಿ: 'ಶಿವನಿಲೆ', 'ಶಿವಪಥ' ಪರಾ. ೨೦. ಹಸುಗಳನ್ನು ಕಟ್ಟುವ ಮರದ ಕಂಬ, – ಗೂಟ. ೨೧. ತ್ರಿಮೂರ್ತಿಗಳಲ್ಲಿ ಒಬ್ಬ; ಈಶ್ವರ : ಶಿವನಾಮಾಂಕಿತಮಂ ರತ್ನವಿರಚಿತ ಮನುತ್ತಮಾಂಗದೊಳ್ ಪಾದಾಯುಗ್ಮವನೆಸೆಯೆ ತಳೆದು . . . ಇರ್ದಳ್ (ಕಾದಂಪೂ. ೬೭೦) ; ಮಾಡಿದನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ (ಬಸವ. ೨೩೪); ಶಿವನಂ ಮರುಳ್ಗೊಂಡು ಭವಾನಿಯಿರೆ ಕಂಡು (ಗಿರಿಕ. ೩-೯೮ವ). ೨೨. ಹಾವು ; ಸರ್ಪ. ೨೩. ನರಿ ; ಜಂಬುಕ : ನಿನ್ನಯ ಗೊಡವೆ ಬೇಡೆಂದಾ ಶಿವಾಗ್ರಣಿ ಪುಲಿಗೆ ಪೇಳಿದುದು (ತಿಮ್ಮಶಾಂ. ೪-೨೨). ೨೪. ಗಿಣಿ ; ಶುಕ. ೨೫. ಒಂದು ಬಗೆಯ ಮರ ಮತ್ತು ಅದರ ಕಾಯಿ; ಅಣಲೆ. ೨೬. ನೆಲ್ಲಿಗಿಡ ಮತ್ತು ಅದರ ಕಾಯಿ; ಆಮಲಕ: ಸಲೆ ಶಿವಮಯಂ ಶಿವಮಯಂ ಶಿವಮಯಂ ಸಮುಜ್ಜಲಶಿಖಿಮಯಂ . . . ಶಬರಬಲ ಬಾಣಮಯ ಬಾಣಮಯ ಬಾಣಮಯವಾಗಿ ಕಾನನಂ ಕಣ್ಗೆಸೆದುದು (ಪಚಕಾ. ೫-೧೮). ೨೭. ದಟ್ಟವಾದುದು ; ಸಾಂದ್ರವಾದುದು. ೨೮. ನೊರೆ ; ಬುರುಗು. "ಗಿರಿಜೇಂದ್ರನೊಳು ತರಣಿಯೊಳು ಫೇನದೊಳು ಸರ್ಪದೊಳು ಸಾಂದ್ರ ಶುಭದೊಳು ನರಿಯೊಳಣಲೆಯೊಳು ನೆಲ್ಲಿಯೊಳು ಶಿವಶಬ್ದಮೆಂದೆನಿಕ್ಕುಂ" (ಮಂಗರಾ. ೧೪೫-೩೦). ೨೯. ಆಲದ ಮರ ; ವಟವೃಕ್ಷ. ೩೦. ಕರಿಯ ಮದ್ದುಗುಣಿಕೆ; ಕರಿಯ ಉಮ್ಮತ್ತಿ. ೩೧. ನೀರು ; ಜಲ. ೩೨. ಬಿಳಿಯ ಬಣ್ಣ ; ಧವಳವರ್ಣ. ೩೩. ಮರಳು. ೩೪. ಒಂದು ಅಳತೆ ; ನಾಲ್ಕು ಬಳ್ಳಗಳ ಪರಿಮಾಣ; ಕೊಳಗ: "ಸಾ[ಪಾಶಾಂ.ಶಾ]ಖ್ಯಂ ಶಿವಂ ಕೊಳಗಮಕ್ಕುಂ" (ಮಂಗರಾ. ೬೧-೧೯). ೩೫. ವಿದ್ಯೆಯ ಅಧಿದೇವತೆ; ಸರಸ್ವತಿ : "ಶುಕ ಜಲ ಫೇನ ಶಂಕರ ಸರಸ್ವತಿ ಸಾಂದ್ರ ಫಣೀಂದ್ರ ಪುಣ್ಯ ಕೀಲಕಮಭಯಾದ್ರಿಜಾಮಲಕ ಭದ್ರಸುಖಂ ಧವಳಂ ಶೃಗಾಲಮುಂ ಸಿಕತ ವಟಾದಿಗಳ್ ಶಿವಮೆನಿಕ್ಕು" (ನಾನಾರ. ೭). ೩೬. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಒಂದು : ವಿಷ್ಕಂಭ . . . ಶಿವ . . . ವೈಧೃತಿಗಳೆಂಬ ಇಪ್ಪತ್ತೇಳು ಯೋಗಂಗಳುಂ (ವಿವೇಕ. ೨೭೨).

ಶಿವಶಿವ, ಶಿವಶಿವಾ (ದ್ವಿರುಕ್ತಿ) = (ಆಶ್ಚರ್ಯ, ದುಃಖ ಮುಂತಾದ ಭಾವನೆಗಳನ್ನು ಸೂಚಿಸುವ) ಒಂದು ಉದ್ಗಾರವಾಚಕ ಪದ : ಶಿವಶಿವ ನಳಿನಳಿಸುವ ಶೈಶವದೊಳ್ ಬಳಯುತ್ತುಮಿರ್ಪ ಗಿರಿಜೆಗೆ . . . ದಶವರ್ಷವದಾಯ್ತು (ಗಿರಿಕ. ೪-೨) ; ರವಿಯೊಡನೆ ತಮ ಕೈ ಮೇಳವಿಸಿತೇ ಶಿವಶಿವಾಯೆನುತಸುರ ಹಲುಮೊಟೆದ (ಕುಮ್ಮಾಅ. ೧೨-೨೭). **ಶಿವನ ಪಾದಸೇರು** = ಸಾಯು; ಮರಣಹೊಂದು : ಮುಂದ ಶಿವನ ಪಾದ ಸೇರಿದರು (ಮನಚಿ. ೧೮). **ಶಿವಪಾದಶೇಖರ** = ಒಂದು ಬಿರುದು : ಮಚ್ಚರಿಪವರ ಗಣ್ಡಂ ವನ್ನಿಚಿನ್ಮಾಮ[ಣಿ] ಶಿವಪಾದಶೇಖರಂ ನಿಜಸುತೆಗನುರಾಗದಿಂ ಮಣ್ಣಲಕ್ಕೆಲ್ಲ ಪಡಿಛನ್ದಮಾಗೆ ಶಿಲಾಸ್ತಂಭಂ ಶಾಸನವಾಗೆ ನಟ್ಟಂ (ಎಕ. IV, ಹೆಗ್ಗಡ. ೧೮೩೨; 1057). [ಸಂ.]

**ಶಿವಂಕರ** (ಗು). ೧. ಮಂಗಳಕರವಾದ; ಶುಭದಾಯಕವಾದ. (ನಾ). ೨. ಮಂಗಳವನ್ನುಂಟುಮಾಡುವವನು; ಶುಭದಾಯಕನಾದವನು: "ಶಿವತಾತಿಃ, ಶಿವಂಕರಃ- ಈ ೨ ಸುಖವಂ ಮಾಳ್ಪವಂ" (ಹಲಾಯು. ೫೬-೧೮೫). [ಸಂ.]

**ಶಿವಂಗಿ₁** 'ಸಿವಂಗಿ' ನೋ.

**ಶಿವಂಗಿ₂** (ನಾ). ಒಂದು ಬಗೆಯ ಸಸ್ಯ: ಕಳ್ಳಿ ದಾಳಿಂಬರದ ತೊಕ್ಕು ಹೆಗ್ಗುಳ್ಳದ ಬೀಜ ಕೋಷ್ಟಂ ಶಿವಂಗಿಯ ರಸಮನಾರುಮಡಿಯ ಕೂಡಿ ಎಲ್ಲಮಂ ಸಾಸುವೆಯಣ್ಣೆಯಲ್ಲಿ ಅಟ್ಟು ಪೂಸಲು ಲಿಂಗವೃದ್ಧಿ (ಕಾಮಶಾ. ೨೭೪). 'ಸೀವನ್ನಿ' ಪರಾ. [?]

**ಶಿವಕ** (ನಾ). ಗೂಟ; ಕಂಬ: "ಧ್ರುವಕಃ, ಶಿವಕಃ . . . ಕೀಳಕಃ - ಈ ೬ ಗುಡಿಯ ಗೂಂಟಂ" (ಹಲಾಯು. ೭೪-೨೯೭). [ಸಂ.]

**ಶಿವಕಲೆ** (ನಾ). ೧. ಮಂಗಳಕರವಾದ ಕುಶಲಕಲೆ : ಇನ್ನೊಮ್ಮೆ ಸಾಚಿದರ್ ತಮ್ಮ ಕಣ್ಣಿನ್ ಕಂಡು ಪೊಸಪೊಸತು ಪರಿಯಿನ್, ಆಳ ಬಾಟನ್ ಕಡೆವ ಶಿವಕಲೆಯ ಕೃಪೆಯಿನ್: ಅದು ಶಿವಂ, ಸತ್ಯಮದು, ಸುಂದರಂ (ಹೊಂಗಳು. ೪೦-೯). ೨. ಶಿವನ ಅಂಶ: ಮಗುವಿಗೆ ಎಂಟುವರ್ಷಗಳು ಕಳೆದ ಮೇಲೆ ಕ್ರಮವಾಗಿ ಕುಂಡ, ಮಂಡಪ, ಪಂಚಕಲಶಗಳನ್ನು ಸ್ಥಾಪಿಸಿ ಸುಪ್ತಾವಸ್ಥೆಯಲ್ಲಿದ್ದ ಶಿವಕಲೆಯನ್ನು ಶಿವಯೋಗಬಲದಿಂದಲೂ ಆಯಾಯ ಮುದ್ರಾಲಕ್ಷಣಗಳಿಂದಲೂ ಜಾಗ್ರದವಸ್ಥೆಗೊಳಿಸಿ (ಭಾರದ. ೨೪೯). ೩. ಭಸ್ಮ ; ವಿಭೂತಿ: "ಶಿವಕಲೆ - ವಿಭೂತಿ" (ಶರಸಾ. ೨೪-೮); ಮಗುವಿಗೆ ಎಂಟು ವರ್ಷಗಳು ಕಳೆದ ಮೇಲೆ . . . ಶಿವಕಲಾಸಮಾವಿಷ್ಟವಾದ ಲಿಂಗವನ್ನು ಮಂತ್ರೋಪದೇಶಪೂರ್ವಕವಾಗಿ ನೆಲೆಗೊಳಿಸುವನು (ಭಾರದ. ೨೪೯). [ಸಂ. ಶಿವಕಲಾ]

**ಶಿವಕವಿ** (ನಾ). ಈಶ್ವರ ಹಾಗೂ ಆತನ ಭಕ್ತರನ್ನು ಕುರಿತು ಕಾವ್ಯವನ್ನು ರಚಿಸುವವನು: ಈ ಕಾವ್ಯಮಂ ವಿಸ್ತರದಿಂ ತಾನೊಲ್ದು ಪೇಳ್ವಂ ಶಿವಕವಿ ಹರಿದೇವಂ (ಗಿರಿಕ. ೧-೩೩) ; ಶಾಂತನಂಜೇಶ್ವರನ ಪಾದತಾಮರಸ ಮತ್ತಮದಭೃಂಗ ಶಿವಕವಿ ಜನಸ್ತೋಮಸನ್ನುತ ಮಲ್ಲಣಾಚಾರ್ಯಗಕ್ಕಳಿಂ ವೀರಹಲಗೆಯ ದೇವರು . . . ಪೇಳ್ದೀ ಮಹಾವೀರಶೈವಾಮೃತಪುರಾಣದೊಳು (ವೀಶೈಪು. ೮-೧-೫). [ಸಂ.]

**ಶಿವಕೀರ್ತನ** (ನಾ). ಈಶ್ವರನ ಗುಣಗಾನ : ಶಿವಕೀರ್ತನಮಂ ಕೇಳ್ವಂ ಶಿವಾಂಘ್ರಿ ಪೂಜೆಯನೊಲಿಯಲ್ಲು ನೋಳ್ಪಂ . . . ಶಿವಂಗೆ ಕೊಟ್ಟಲ್ಲದೇನುಮಂ ಕೊಳಲೊಲ್ಲಂ (ರಾಜಶೇ. ೧೩-೧೫೭). [ಸಂ.]

**ಶಿವಕುಲ** (ನಾ). ವೀರಶೈವರ ಜಾತಿ; ಲಿಂಗವಂತರ ಮತ : ಶಿವಕುಲಮ ಮಿಗಿಲೆಂದು ವಾದದೊಳ್ ಭೂದೇವನಿವಹಕ್ಕೆ ಸಾಟಿ (ಆರಾಚ. ೧-೧-೨೮). [ಸಂ.]

**ಶಿವಕೂಟ** (ನಾ). ೧. ದೇವಾಲಯದಲ್ಲಿ ಶಿವಭಕ್ತರು ದಾಸೋಹಕ್ಕಾಗಿ ಸೇರುವ ಸ್ಥಳ : (ಕಿ). IP ನಂಜನಗೂಡಿನ ನಂಜುಂಡೇಶ್ವರದೇವಾಲಯದ ಭೋಜನ ಶಾಲೆಗೆ ಈ ಹೆಸರಿದೆ. ೨. ಜಂಗಮರ ಸಭೆ : "ಶಿವಕೂಟ: ಜಂಗಮರ ಓಲಗ" (ಕನ್ನಜಾ. ೧೯೯). [ಸಂ.]

**ಶಿವಕ್ಷೇತ್ರ** (ನಾ). ೧. ಈಶ್ವರನು ನೆಲಸಿರುವ ಸ್ಥಳ : ಸದ್ಭಕ್ತಮಹೇಶ್ವರರು ಇದ್ದ ಠಾವೆಲ್ಲ ಶಿವಕ್ಷೇತ್ರ (ಅಖಂಡೇ. ೫೫-೧). ೨. ಪ್ರಸಿದ್ಧವಾದ ಈಶ್ವರದೇವಾಲಯಗಳಿರುವ ಶ್ರೀಶೈಲ, ಕಾಶಿ, ರಾಮೇಶ್ವರ ಇತ್ಯಾದಿ ತೀರ್ಥಕ್ಷೇತ್ರ : ನಮ್ಮ ದೇಶದಲ್ಲಾದರೋ . . . ಮಧುರೆ, ರಾಮೇಶ್ವರ ಮುಂತಾದ ಶಿವಕ್ಷೇತ್ರಗಳೂ ಇನ್ನೂ ಅನೇಕ ಪುಣ್ಯಸ್ಥಳಗಳೂ ಇವೆ (ಒಡಕ. ೪೯); ಅನೇಕ ಶಿವಕ್ಷೇತ್ರಗಳಲ್ಲಿ ಶೈವಾಗಮದ ಉತ್ತರತಂತ್ರವಾದ "ವಾತುಳಾಗಮ" (ತಾಂತ್ರಿಕಾಗಮ)ದ ಅನುಷ್ಠಾನವು ಪರಂಪರೆಯಿಂದ ಅನಾದಿಯಾಗಿ ನಡೆದು ಬರುತ್ತಿದೆ (ಭಾರದ. ೭೪). [ಸಂ.]

**ಶಿವಗಣ** (ನಾ). ಈಶ್ವರನ ಭಕ್ತಸಮೂಹ ; ಪ್ರಮಥರು, ಜಂಗಮರು ಮುಂತಾದವರ ಸಮೂಹ : "ಆ ಮಹಾಶಿವಗಣಂ ಪ್ರಮಥರಕ್ಕು" (ಮಂಗರಾ. ೫-೧೪); ನೂತನಪುರಾತನಶಿವಗಣಪ್ರೀತಿಗಳು ಶಿವಧರ್ಮವರ್ಮವಿನೀತಿಗಳು (ಬಸಪು. ೫೭-೯೭); ಶಿವಗಣಕೆ ನೀಂ ಕುಡುವ ದಂತಿ ವಾಜಿ . . . ವನಿತಾಮಣಿಗಳ್ ವಿವರಿಪೊಡೇವಾಳ್ತೆ ಸರಿದ್ವವಂಗೆ ಮುಗಿಲೀವ ಪನಿಗಳಂತಿರೆ ಧರೆಯೊಳ್ (ವೃಷಪು. ೧೩-೧೫). [ಸಂ.]

**ಶಿವಗಣಾರಾಧನೆ** (ನಾ). [ವೀಶೈ] ಶಿವೈಕ್ಯರಾದವರಿಗಾಗಿ ಹನ್ನೊಂದನೆಯ ದಿನ ಮಾಡುವ ಪುಣ್ಯತಿಥಿ ಮತ್ತು ಆ ಸಂಬಂಧವಾಗಿ ಮಾಡುವ ಅನ್ನಸಂತರ್ಪಣೆ: ಸ್ವಾಮಿಗಳ ಶಿವಗಣಾರಾಧನೆಯನ್ನು ಮಠದಲ್ಲಿ ಏರ್ಪಡಿಸಿದ್ದರು (ರೂಢಿ). 'ಗಣಾರಾಧನೆ' ಪರಾ. [ಸಂ. ಶಿವಗಣಾರಾಧನಾ]

**ಶಿವಗತಿ** (ನಾ). ಮೋಕ್ಷ ; ಮುಕ್ತಿ : "ಅಪವರ್ಗಂ . . . ಕೈವಲ್ಯಪದವಿ ಶಿವಗತಿ ನಿರಾಮಯಂ ನಿರ್ವಾಣಂ" (ವಸ್ತುಕೋ. ೨೦-೧೯) [ಸಂ.]

**ಶಿವಗೀತ** (ನಾ). ಈಶ್ವರನ ಸ್ತುತಿ : ಶಿವನ ಕಹಳೆಯ ದನಿಗೆ ಬಳೆದ ಕೋಕಿಳನಿಲ್ಲಿ ಶಿವಗೀತದೊಳು ಬೆರಸಿ ಬಳೆದ ಮಧುಕರವಿಲ್ಲಿ (ಸಂಬಿರ. ೯-೪೨); ಶಿವಕಥನಂ ಶಿವಗೀತಂ . . . ಶಿವಭಕ್ತನೃತ್ಯಮೆಸೆಯಲ್ ಶಿವಮಯಮಾಗಿರ್ಪುದಾವಗಂ ತತ್ಪುರದೊಳ್ (ತ್ರಿಪುವಿ. ೯-೪). [ಸಂ. ಶಿವಗೀತಾ]

**ಶಿವಗೃಹ** (ನಾ). ಈಶ್ವರನ ಆಲಯ, – ದೇವಸ್ಥಾನ : ತನ್ನ ದೇಹದೊಳಾಂ ಬಿತ್ತರಿಪೆಂ ಶಿವಗೃಹಮಂ (ತ್ರಿಪುವಿ. ೨೦-೫) ; ಶಿವಗೃಹದಂತರಾಳಮನಣಂ ಪುಗಲಂಜಮುರಾರಿ ನಿಲ್ವಂ (ವೃಷಪು. ೨೯-೮೩). [ಸಂ.]

**ಶಿವಗೋಷ್ಠಿ** (ನಾ). ಶಿವಭಕ್ತರ ಕೂಟ; ಶರಣರ ಸಭೆ : ಶಿವಗೋಷ್ಠಿರಸದಿಂದ ಬಳೆದ ಶರಣನ ತೆಱದೆ ತನೆವಾಲನುಂಡು ಬಳೆದವು ಗಿಳಿಗಳು (ಸಂಬಿರ. ೯-೧೭). [ಸಂ. ಶಿವಗೋಷ್ಠೀ]

**ಶಿವಚರಿತ** (ನಾ). ಈಶ್ವರನ ಕಥೆ, – ಚರಿತ್ರೆ : ಶಿವಚರಿತಮನಾಕರ್ಣಿಪ ಶಿವನಡಿಯಂ ಪೂಜೆಗೆಯ್ಯ ಬಯಕೆ ಕರಂ ಸಂಭವಿಸಿದುದು ಸತಿಗೆ (ವೃಷಪು. ೩-೮). [ಸಂ.]

**ಶಿವಜನ್ಮ** (ನಾ). ವೀರಶೈವನಾಗಿ ಹುಟ್ಟುವಿಕೆ : ಶಿವಜನ್ಮದಲ್ಲಿ ಹುಟ್ಟಿ ಲಿಂಗೈಕ್ಯರಾಗಿ ತಮ್ಮಂಗದ ಮೇಲೆ ಲಿಂಗವಿರಲು . . . ಅನ್ಯರ ವಚನವ ಕೊಂಡಾಡಲು ಕರ್ಮ ಬಿಡದು (ಬಸವ. ೧೦೭). [ಸಂ. ಶಿವಜನ್ಮನ್]

**ಶಿವಜ್ಞಾನ** (ನಾ). [ವೀಶೈ] ಶಿವಸಂಬಂಧವಾದ ತಿಳಿವಳಿಕೆ, – ಅರಿವು : ಶಿವಚಿಂತೆ ಶಿವಜ್ಞಾನವಿಲ್ಲದ ಮನುಜರು ಸಗಣಿಗೆ ಸಾಸಿರಹುಳು ಹುಟ್ಟವೆ ದೇವಾ (ಬಸವ. ೧೫೭) ; ಶಿವಜ್ಞಾನದ ಸೀಮೆಗೆ . . . ರುದ್ರಾಣಿಗೆ ರಕ್ಷಣಾರ್ಥಂ ತಂದೆ ನಿಯಾಮಿಸಿ ಕೊಟ್ಟ ದಂಡಿಗೆಯ ಧವಳಛತ್ರದ . . . ವಿಳಾಸಿನಿಯರ್ವೆರಸು ನಡೆತಂದು (ಗಿರಿಕ. ೩-೯೧ ವ) ; ಶಿವನಡೆ ಶಿವನುಡಿ . . . ಶಿವಜ್ಞಾನ ಶಿವಾನುಭಾವ ಶಿವಶರಣರ ಸಂಗ ಇವನೆ ಕರುಣಿಸಿ ಬದುಕಿಸಯ್ಯ ಎನ್ನ (ಅಖಂಡೇ. ೧೪೮-೧೪೩). [ಸಂ.]

**ಶಿವಜ್ಞಾನಿ** (ನಾ). ಶಿವಜ್ಞಾನವನ್ನು ಪಡೆದಿರುವವನು : ಇದಿರ ಹಳಿದು ತನ್ನ ಬಣ್ಣಿಸುವನ್ನಕ್ಕರ ಶಿವಜ್ಞಾನಿ ಎಂತಪ್ಪನಯ್ಯಾ ಹಮ್ಮು ಬಿಮ್ಮು ಹೆಮ್ಮೆ ಹಿರಿತನವುಳ್ಳನ್ನಕ್ಕರ ಶಿವಜ್ಞಾನಿ ಎಂತಪ್ಪನಯ್ಯಾ (ಅಖಂಡೇ. ೧೯೦-೯). [ಸಂ. ಶಿವಜ್ಞಾನಿನ್]

**ಶಿವತತ್ತ್ವ** (ನಾ). [ವೀಶೈ] ಶಿವನ ಪಾರಮ್ಯವನ್ನು ಸಾರುವ ಸಿದ್ಧಾಂತ : ಶರಣ ನುಡಿದುದ ಶಿವತತ್ತ್ವ ಕಾಣಿರೋ (ಬಸವ. ೮೨೨); ವಿಶಾಲಚಿಚ್ಚಂದ್ರಮಧ್ಯಸ್ಥನೇ ಶಿವನ ಶಿವತತ್ತ್ವ ವಿದ್ಯಾತತ್ವನೇ (ವೀಶೈಪು. ೩-೧೭-೭೨); ಶುದ್ಧಸೃಷ್ಟಿಗೆ ಮೂಲಕಾರಣವಾಗಿರುವ ಜಡವಾದ ನಿತ್ಯವಾದ ದ್ರವ್ಯವೇ ಶಿವತತ್ತ್ವ (ಒಂದಸಾ. ೨೯೮). [ಸಂ.]

**ಶಿವತಾಂಡವ** (ನಾ). [ನಾಟ್ಯ] ಶಿವನ (ಉಗ್ರವಾದ) ಒಂದು ಬಗೆಯ ನೃತ್ಯ: ಎಲ್ಲ ನಾಟ್ಯಗಳಿಗೂ ಶಿವತಾಂಡವವೇ ಮೂಲ (ಭಾರದ. ೫೪೯). [ಸಂ.]

**ಶಿವತಾತಿ** (ಗು). ೧. ಮಂಗಳದಾಯಕವಾದ ; ಶುಭಕರವಾದ. (ನಾ). ೨. ಮಂಗಳಕರವಾದುದು; ಶುಭಪ್ರದವಾದುದು. ೩. ಶುಭವನ್ನು ಮಾಡುವವನು: "ಶಿವತಾತಿಃ, ಶಿವಂಕರಃ - ಈ ೨ ಸುಖವಂ ಮಾಳ್ಪವಂ" (ಹಲಾಯು. ೫೬-೧೮೫). [ಸಂ.]

**ಶಿವದಾನ** (ನಾ). ೧. ಈಶ್ವರನ ಹೆಸರಿನಲ್ಲಿ ನೀಡುವ ದಾನ : (ಕಿ). ೨. ಕಡೆದ ಮೊಸರು; ಮಜ್ಜಿಗೆ : ದಾಸಯ್ಯ ಶಿವದಾನವನೆಱೆಯ ನೋಡಯ್ಯಾ (ಬಸವ. ೩೪೩); ನೆನಹಿನ ಅವಲಂಬವೇ ಅಭಿಘಾರವಾಗಿ ನಿರ್ಮಲವೆಂಬ ಶಿವದಾನವನಳವಡಿಸಿ ಕಾದಿದ್ದರಯ್ಯ ಪಂಚೇಂದ್ರಿಯವೆಂಬ ಶುನಕ ಮುಟ್ಟದಂತೆ (ಅವಚಂ. ೨೭೭-೧೨೭೦); ನಾಲ್ವತ್ತುಒಡೆಯರುಗಳಿಗೆ ಸಲುವ ಸಕಲ ಸಯಿದಾನ ಅಭಿಗರ ಪರುಪು ಪದಾರ್ಥ ಶಿವದಾನ ವಿಳಯ ಮುಂತ್ತಾಗಿ ಸಲುವುದೆನೆ (ಎಕ. III (R), ಗುಂಡ್ಲುಪೇ. ೭೭-೧೯ ; 1478) ; ಅಲ್ಲಿ ಉಂಟು, ಇಲ್ಲಿ ಉಂಟು ಕಲ್ಲೊಳಗುಂಟೇ ಶಿವದಾನ ? (ಗಾದೆ). [ಸಂ.]

**ಶಿವದಾರ** (ನಾ). [ವೀಶೈ] ವೀರಶೈವರು ಇಷ್ಟಲಿಂಗದ ಕರಡಿಗೆಯನ್ನು ಧರಿಸಲು ಬಳಸುವ ದಾರ : ಆದಿಯಲ್ಲಿ ಶಿವದಾರವ ಕಂಡೆ ಬೀದಿಯಲ್ಲಿ ಬಿದ್ದ ಸಜ್ಜೆಯ ಕಂಡೆ ಪ್ರಾಣಲಿಂಗವ ಬೈಚಿಟ್ಟುಕೊಂಡೆ (ಅವಚಂ. ೧೩೦-೫೫೫); ತಿಳಿವೊಡಾ ಶಿವದಾರ ಸಜ್ಜೆಗಳಳವಡುವೊಡಾ ಮೂಱುತನುವಿನ ಮಲುಕಿನಂತಿರಲ್ (ಪ್ರಭುಲೀ. ೧೭-೨೩).

[ಶಿವ + ದಾರ₁]

**ಶಿವದಿಡು** (ಕ್ರಿ). ಶಿವ, ಶಿವ ಎಂದು ಆರ್ತನಾದ ಮಾಡು; ಮೊರೆಯಿಡು: ಅವರಿಂ ಮುನ್ನವೆಯ್ತಂದೊಳಗಂ ಪೊಕ್ಕು ತೋರಣದ ತಳಿರಂ ಪಱಿದು ಶಿವದಿಡುತ್ತಿರಲ್ (ನಂಬಿರ. ೬-೫೯); ಎಳಹೂಟೆಯಿಂದೆಳಸಿಕೊಂಡು ಶಿವದಿಡುವರಂ (ಲಿಂಗಪು. ೩೦-೩೮); ಶಿವ ಶಿವ ಶಿವದಿಡುತಿರೆ ಶರಣಗಣ ರಚಿಸಿರೆ ನಾಲ್ಕೊಗ ಮಂತ್ರಾವರಣ (ಗಣೇಶ. ೧೫-೩೮೩).

[< ಶಿವಧೋ + ಇಡು$_1$]

**ಶಿವದೀಕ್ಷೆ** (ನಾ). [ವೀಶೈ] ವಿಧಿವತ್ತಾಗಿ ದೀಕ್ಷೆಯನ್ನು ಸ್ವೀಕರಿಸುವಾಗ ನಡಸುವ ಸಂಸ್ಕಾರವಿಶೇಷ : ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತ ಎಂತಹುದೂ (ಬಸವ. ೯೨) ; ವಿನಯದಿಂ ಶ್ವಪಚಯ್ಯಗಳ ಪದವನಜಯುಗಳಕ್ಕೆಱಗಿ ವಂದಿಸಿ ಮನವೊಲಿದು ಶಿವದೀಕ್ಷೆಯಂ ಸಲೆ ಪಡೆದು (ಬಸಪು. ೫೭-೪) ; ಸದಾಶಿವನೀಶ್ವರಂ ಮಾಹೇಶಂ ರುದ್ರರೆನಿಪವರ್ ಶಿವದೀಕ್ಷೆವಡೆದಾರ್ಯರಾಗಿಯೂ ಸಕಲಗಣಕುಲಕೆ ದೀಕ್ಷೆಯನೆ ಮಾಡಿ (ಚೆಬಪು. ೫೫-೨೦). [ಸಂ. ಶಿವದೀಕ್ಷಾ]

**ಶಿವದೂತ** (ನಾ). ಈಶ್ವರನ ಕಿಂಕರ, – ಸೇವಕ : ಲಿಂಗವ ಪೂಜೆಯ ಮಾಡಿ ಜಂಗಮವ ಕಂಡುದಾಸೀನವ ಮಾಡಿದರೆ ಆ ಲಿಂಗಪೂಜಕರಿಗೆ ಮಾಡಿದ ಶಿವದೂತರ ದಂಡವೆಂಬುದು (ಬಸವ. ೪೨೩). [ಸಂ.]

**ಶಿವದೊಡಕು** (ನಾ). ಶಿವನ ಅಸ್ತಿತ್ವವನ್ನು ವಿವರಿಸಲು ಸಾಧ್ಯವಿಲ್ಲದ ಅನೂಹ್ಯ ಸ್ಥಿತಿ : ಕುಱುಹಿಲ್ಲ ಕುಱುಹಿಲ್ಲ ಲಿಂಗವೆಂದೆಂಬರ ತೆಱಹಿಲ್ಲ ತೆಱಹಿಲ್ಲ ಜಂಗಮವೆಂದೆಂಬರ ಇದೆ ನೋಡಾ ಶಿವಾಚಾರ ಇದೆ ನೋಡಾ ಶಿವದೊಡಕು (ಬಸವ. ೯೪೮).

[ಶಿವ + ತೊಡಕು$_3$ (< ತೊಡಂಕು$_3$)]

**ಶಿವದ್ರೋಹಿ** (ನಾ). ಶಿವನಿಗೆ ದ್ರೋಹಮಾಡಿದವನು : ಅಯ್ಯೋ ಶಿವನ ಬಾಯ ತುತ್ತನಿಂತೊಕ್ಕನೇ ಅಯ್ಯೋ ಶಿವದ್ರೋಹಿಯಾನಿನ್ನು ಬಾಳ್ವನೇ (ಅರಿರ.ದೇ. ೧೭೭-೪); ಮೃಡನ ಬೋನವನಿಂತು ತುಡುತಿಂದನು ಶಿವದ್ರೋಹಿ ಕಡುದುರುಳನಿವನು (ಬಸಪು. ೨೪-೫೬).

[ಸಂ. ಶಿವದ್ರೋಹಿನ್]

**ಶಿವಧರ್ಮ** (ನಾ). ವೀರಶೈವ ಧರ್ಮ : ಶಿವಧರ್ಮವ ಕೆಡಿಸಿದವನು ಅಧರ್ಮಕ್ಕೊಳಿವನು ಕೂಡಲಸಂಗಮದೇವ ಸಾಕ್ಷಿಯಾಗಿ (ಬಸವ. ೬೨೫) ; ಶಿವಧರ್ಮಪಥಕುಮುದ ಸಮುದಯವಿಧು ಚರಪ್ರಾಣಿ ಬಸವ ಪರಸಮಯಗಜಸಿಂಹನೆಂಬುದು ಪುರಾತನ ಸೂಕ್ತಿ (ರಾಘಚ. ೮-೩೫). [ಸಂ.]

**ಶಿವಧರ್ಮಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು: ಸನತ್ಕುಮಾರಪುರಾಣ ನಾರಸಿಂಹಪುರಾಣ ನಂದಿಪುರಾಣ ಶಿವಧರ್ಮಪುರಾಣ . . . ಭಾರ್ಗವಪುರಾಣವೆಂಬವೇ ಆಯಾಯ ನಾಮಧೇಯಮುಳ್ಳವರಿಂ ನಿರೂಪಿತಂಗಳಾದ ಹದಿನೆಂಟು ಉಪಪುರಾಣಂಗಳು (ವಿವೇಕ. ೯). [ಸಂ.]

**ಶಿವಧಾತು** (ನಾ). ೧. ಪಾದರಸ; ಪಾರದ . ೨. ಅಮೃತಶಿಲೆ ; ಹಾಲುಗಲ್ಲು : ಸ್ಫಟಿಕ, ಗೋಮೇದ, ಅಕೀಕ, ಶಿವಧಾತು . . . ಇವು ಸಿಲಿಕದ . . . ರೂಪಾಂತರಗಳಿರುತ್ತವೆ (ಮುಂಬಯಿ. ೬-೪೭). [ಸಂ.]

**ಶಿವಧೋ** (ಅ). ಆರ್ತತೆಯಿಂದ ಶಿವ ಶಿವ ಎಂದು ಮೊರೆಯಿಡುವ ಒಂದು ಶಬ್ದ : ಶಿವಧೋ ಎನುತ್ತ ಅಡಸಿ ಬಸವಂ ಸುತ್ತಿ ಮುತ್ತಿ ಗೋಳಿಡೆ (ಹಚಕಾ. ೩-೬೫) ; ಸಂಗರಬಾಧೆಗಳ್ಕಿ ಶಿವಧೋ ಎನುತಿರ್ದನದೊರ್ಬ ಭೂಸುರಂ (ದಶಕು. ೫-೪೭). 'ಅವಿಧೋ' ಪರಾ.

**ಶಿವಧೋ ಶಿವಧೋ, ಶಿವಧೊ ಶಿವಧೊ** (ದ್ವಿರುಕ್ತಿ) : ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ . . . ಹುರುಳಿಲ್ಲ ಹುರುಳಿಲ್ಲ ಕೂಡಲ ಸಂಗಮದೇವಾ ಶಿವಧೋ ಶಿವಧೋ (ಬಸವ. ೧೩); ನಿಮ್ಮ ಕಾಣದ ಕಣ್ಣಡಕದ ಕಣ್ಣನಂತ ಕಣ್ಣನಿಸಿ ಕೆಟ್ಟೆನಯ್ಯ ಶಿವಧೊ ಶಿವಧೊ (ಆದವ. ೧೫-೩೨). [ಶಿವ + ಉಧೋ? ]

**ಶಿವಧ್ಯಾನ** (ನಾ). ಈಶ್ವರನನ್ನು ಕುರಿತ ಧ್ಯಾನ : ಶಿವಧ್ಯಾನರಕ್ತಂ ಶಿವಜ್ಞಾನಯುಕ್ತಂ . . . ಶಿವಪ್ರಾಣಿಯೊಲ್ಪೊಪ್ಪಿದಂ ಮಾದಿರಾಜಂ (ವೃಷವಿ. ೧೧-೫). [ಸಂ.]

**ಶಿವನಕಡ್ಲೆ** (ನಾ). ೧. ಒಂದು ಬಗೆಯ ಸಸ್ಯ : "ಅಂಟುತೊಗರಿ, ಬಾಲರಾಕ್ಷಸ, ಶಿವನ ಕಡ್ಲೆ, ಚಿಟ್ಟಾಮುಟ್ಟಿಗಿಡ" (ಸಸ್ಯನಿ. ೧೦೨). ೨. ಒಂದು ಬಗೆಯ ಸಸ್ಯ : (ಕಿ).

[< ಶಿವ + ಕಡ್ಲೆ$_{10}$ (< ಕಡಲೆ)]

**ಶಿವನಾಭಿ** (ನಾ). ೧. ಶಿವಲಿಂಗದ ಒಂದು ವಿಶಿಷ್ಟವಾದ ರೂಪ. ೨. ಒಂದು ಬಗೆಯ ಸಸ್ಯ : "ಚಂದ್ರಿಕೆ, ಸೂತ್ರನಾಭಿ, ಶಿವನಾಭಿಗಿಡ . . . ಸರ್ಪಗಂಧ" (ಸಸ್ಯನಿ. ೧೮೩). [ಸಂ.]

**ಶಿವನಾರುಬಳ್ಳಿ** (ನಾ). ಒಂದು ಬಗೆಯ ಸಸ್ಯ : ಶಿವನಾರುಬಳ್ಳಿ , ಕಡ್ಡಿಯರಕಿನ ಗಿಡ (ಮೈಔಗಿ. ೪೮-೯೨೮). [ಶಿವನಾರು$_1$ + ಬಳ್ಳಿ]

**ಶಿವನಿ$_1$** 'ಸೀವನ್ನಿ' ನೋ.

**ಶಿವನಿ$_2$** 'ಸಿವನಿ' ನೋ.

**ಶಿವನಿಲೆ** (ನಾ). ಮೋಕ್ಷಪದವಿ; ಮುಕ್ತಿಸ್ಥಾನ: ಚನ್ನದೇವಾಚಾರ್ಯ್ಯನಾಮನ್ ಉದಿತಶ್ರೀಕಟ್ಟಪ್ಪಿನುಳ್ಳೇ ರಿಷಿಗಿರಿಶಿಲೆಮೇಲ್ನೋನ್ತು ತನ್ನೇಹಮಿಕ್ಕಿ ನಿರವದ್ಯನ್ನೇಱಿ ಸ್ವರ್ಗ್ಗಂ ಶಿವನಿಲೆ ಪಡೆದಾನ್ಸಾಧುಗಳ್ಪೂಜ್ಯಮಾನನ್ (ಎಕ. II. ೮೪-೪; ಸು. 700).

[ಶಿವ + ನಿಲೆ$_1$ (< ನಲೆ$_1$)]

**ಶಿವನೆ** 'ಸಿವನೆ' ನೋ.

**ಶಿವನ್ನಿ** 'ಸೀವನ್ನಿ' ನೋ.

**ಶಿವಪಥ** (ನಾ). ಮೋಕ್ಷದ ದಾರಿ ; ಮುಕ್ತಿಮಾರ್ಗ : ಶಿವಪಥವೊಲ್ಲದವರೊಡ ನಾಡದಂತೆ ಅನ್ಯಜಾತಿಯ ಸಂಗವ ಮಾಡದಂತೆ ಎನ್ನ ಪ್ರತಿಪಾದಿಸು ಕೂಡಲಸಂಗಮದೇವಾ (ಬಸವ. ೨೬೩) ; ವಿಗತಾಳೋಕಂ ಶಿವಪಥವಿಗಳಿತಮೆನಿಸಿದ ಜನಕ್ಕೆ ಕೃತಸನ್ಮಾರ್ಗಾನು ಗತೋಪದೇಶದಿಂದೀ ಜಗದೊಳ್ ನೀನಾದೆ ನಾಥ (ಚಂದ್ರಪ್ರ. ೫-೨೯). [ಸಂ.]

**ಶಿವಪದ** (ನಾ). ೧. ಶಿವನ ಪಾದ, – ಚರಣ : ಶ್ರೀಮತ್ ಅಱವಪ್ಪಗೆಯ ಜೋಗಿ ಮಯ್ಯಂ ಶಿವಪದಪಂಕಜಭ್ರಮರನೀಸ್ಸರದಾಸಿ ಸಾಸನಮನಿ[ಱ]ಸಿದಂ (ಸೌಇಇ. XX. ೩೮-೩೭; 1058); ಶಿವಪದಭಕ್ತಿಯೆ ತಾಯ್ಯನೆ ನವರಸದೆಡೆ ಲಕ್ಷ್ಯ ಲಕ್ಷ್ಮಣಂಗಳ ನೆಲೆಯಾಯ್ತವನಿಗೆ (ತ್ರಿಪುವಿ. ೧-೩೮); ಇವನಂತೆ ಶಿವಪದದಂದುಗೆಧ್ವನಿಗೇಳ್ವ ಕಿವಿಗೇಳ್ವ ಕಿವಿಗಳ ಪಡೆದವರಾರ್ (ತ್ರಿಭುತಿ. ೨೫-೩೮). ೨. ಮೋಕ್ಷ; ಮುಕ್ತಿ : ಕಾರ್ಯಮೆಮಗಿದುವೆ ಶಿವಪದ ಪರ್ಯಂತಂಬರಮವೋಘಮುದ್ಧರಿಸುಗೆ ತಾತ್ಪರ್ಯದಿನರ್ಹತ್ಸಿದ್ಧಾ ಚಾರ್ಯೋಪಾಧ್ಯಾಯ ಸರ್ವಸಾಧುಗಳೆಮ್ಮಂ (ಆದಿಪು. ೧-೬). [ಸಂ.]

**ಶಿವಪಸಾಯ** (ನಾ). ಈಶ್ವರನ ಪ್ರಸಾದ, – ಅನುಗ್ರಹ : ಜೋಳದ ರಾಶಿಯಂ ಶಿವಪಸಾಯದ ನಿರ್ಮಳದಿವ್ಯದೃಷ್ಟಿಯಿಂ ಮೇಳಿಸಿ ನೋಡೆ ಪೊಚ್ಚಪೊಸ ಮುತ್ತಿನ ರಾಶಿಯದಾಗೆ (ವೃಷವಿ. ೬-೨೨). [ಶಿವ + ಪಸಾಯ]

**ಶಿವಪಸಾಯತ** (ನಾ): ಈಶ್ವರನಿಂದ ಅನುಗ್ರಹೀತವಾದುದು : ಶಿವನಾಗ ಮಯ್ಯಂಗಳಿಳತನುವೆರಸಿ ವಂದಿಸುತ್ತವೆ ಶಿವಪಸಾಯತವೆಂದೆನಿಪ ಶಸ್ತ್ರಕ್ಕೆ ಹಸ್ತಂ ಸಂಧಿಸುತ್ತಂ ಸರಸವಾಡುವ ಹಾಂಗೆ ಲಾಲಿಸುತ (ಬಸಪು. ೫೭-೮೧).

[ಶಿವ + ಪಸಾಯತ (< ಪಸಾಯ$_1$)]

**ಶಿವಪಾದೋದಕ** (ನಾ). [ವೀಶೈ] ಶಿವಲಿಂಗಕ್ಕೆ ಅಭಿಷೇಕ ಮಾಡಿದ ನೀರು : ಶಿವಪಾದೋದಕಬಿಂದುಗಳವೆ ಶಿರದೊಳ್ಗಳೆದ ಮೌಕ್ತಿಕದ ಜಾಲಿಕೆಯಂದವನೀಯೆ (ತ್ರಿಪುವಿ. ೧೭-೧೧೭). [ಸಂ.]

**ಶಿವಪುರ** (ನಾ). ೧. ಶಿವನು ನೆಲಸಿರುವ ಪುಣ್ಯಕ್ಷೇತ್ರ : ಭವನಂ ಶಿವಭವನಂ ಗಳೂರೆಲ್ಲ ಶಿವಪುರಂ ವಿವಿಧ ಜನವೆಲ್ಲ ಶಿವಭಕ್ತನಿರಂತರಂ (ಮಾದರ.ದೇ. ೩೦೭-೧೭); ಪಲವು ಶಿವಪುರಂಗಳಂ ಪೊಕ್ಕು ಸಲುಗೆಯಿಂ ಬೇಡುತುಂ . . . ತಿರುವಾರೂರ್ಗೆ ನಡೆತಪ್ಪಾಗಳು (ನಂಬಿರ. ೮-೭೭). ೨. ಈಶ್ವರನ ನೆಲೆ ; ಕೈಲಾಸ : ಶಿವಪುರಕೆ [ಪಾಠಾಂ. ಶಿವನ ಪುರಿಗಾಗಿ] ಬಾಲಕಂ ತಾ ಪೋದಂ (ಬಸಪು. ೨೫-೧೧). [ಸಂ.]

**ಶಿವಪುರಾಣ** (ನಾ). ಹದಿನೆಂಟು ಮಹಾಪುರಾಣಗಳಲ್ಲಿ ಒಂದು : ಶಿವಮತ ದೊಳುಚ್ಚರಿಪ ಶಿವಪುರಾಣಂಗಳಂ . . . ತೋಱುತುಂ (ನಂಬಿರ. ೯-೧೦೦). [ಸಂ.]

**ಶಿವಪೂಜೆ** (ನಾ). ೧. ಈಶ್ವರನ ಆರಾಧನೆ : ನಡೆತಂದಳ್ ಶಿವಪೂಜೆಗೆಂದಗಜೆ ಪುಷ್ಪವ್ರಾತಮಂ ಕೊಂಡು ಸಂಗಡದೊಳ್ ಬರ್ಪ ವಿಲಾಸಿನೀನಿಕರದಿಂ (ಗಿರಿಕ. ೮-೪೧); ಶಿವಪೂಜೆಗೆ ತಂದಲರ್ಗಳನವನಿಗೆ ಕರಿ ಚೆಲ್ಲಿತಕಟ (ತ್ರಿಪುವಿ. ೨೨-೨೦); ಶಿವಪೂಜೇಲಿ ಕರಡಿ ಬಿಟ್ಟ ಹಾಗೆ (ಗಾದೆ). ೨. [ವೀಶೈ] ಇಷ್ಟಲಿಂಗದ ಪೂಜೆ : ಶಿವಪೂಜೆ ಮಾಡದಿದ್ದರೆ 'ಮಾದರಸ'ರಿಗೆ ಊಟವೇ ಸೊನ್ನೆ (ಚಿಟಮ. ೭೭). [ಸಂ. ಶಿವಪೂಜಾ]

**ಶಿವಪ್ರಸಾದ** (ನಾ). ಶಿವನಿಗೆ ಅರ್ಪಿಸಿ ಪಡೆದ ನೈವೇದ್ಯ: ಇಲ್ಲಿ ಉಂಟೆ ಶಿವಪ್ರಸಾದವನಲ್ಲಿ ಚಂಡೇಶಂಗೆ ಗೌರೀವಲ್ಲಭಂ ಕೊಟ್ಟಂದವಂ ನೀವಱಿಯದಡೆ ಕೇಳಿ (ಬಸಪು. ೫೮-೩೧); ಆ ಮಹಾನುಭಾವಂ ಮಿತವಚನಸಮೇತಂ ಶಿವಪ್ರಸಾದ ಸುಧಾಸ್ವಾದನಂಗೆಯ್ದು (ರಾಜಶೇ. ೧೩-೧೨). [ಸಂ.]

**ಶಿವಪ್ರಸಾದಿತ** (ಗು). ಶಿವನಿಂದ ಅನುಗ್ರಹೀತವಾದ : ತದ್ಗೃಹಮಂ ಪೊಕ್ಕು ಶಿವಗಣಪದಾಂಬುವಿಂ ಮಂಗಳಮಜ್ಜನಂಗೆಯ್ದು ಶಿವಪ್ರಸಾದಿತ ದಿವ್ಯಪ್ರಸಾಧನಮಂ ತಳೆದು (ವೃಷವಿ. ೫-೧೫ ವ). [ಸಂ.]

**ಶಿವಪ್ರಾಣಿ** (ನಾ). ಶಿವನನ್ನು ಪ್ರಾಣವೆಂದು ತಿಳಿದವನು; ಲಿಂಗವಂತ; ಶಿವಶರಣ : ಶಿವಪ್ರೇಮಧಾಮಂ ಶಿವಾನಂದಭೂಮಂ ಶಿವಪ್ರಾಣಿಯೊಲ್ಪೊಪ್ಪಿದಂ ಮಾದಿರಾಜಂ (ವೃಷವಿ. ೧೧-೫). 'ಜಂಗಮಪ್ರಾಣಿ' ಪರಾ. [ಸಂ. ಶಿವಪ್ರಾಣಿನ್]

**ಶಿವಪ್ರೇಮ** (ನಾ). ಶಿವನ ಬಗೆಗಿರುವ ಅನುರಾಗ, – ಭಕ್ತಿ : ಭಕ್ತಿಯೆಂಬ ನಿಧಾನವ ಸಾಧಿಸುವರೆ ಶಿವಪ್ರೇಮವೆಂಬಂಜನವನೆಚ್ಚಿಕೊಂಬುದು (ಬಸವ. ೨೪೩); ಶಿವಪ್ರೇಮಧಾಮಂ . . . ಶಿವಪ್ರಾಣಿಯೊಲ್ಪೊಪ್ಪಿದಂ ಮಾದಿರಾಜಂ (ವೃಷವಿ. ೧೧-೫).
[ಸಂ. ಶಿವಪ್ರೇಮನ್]

**ಶಿವಬಟ್ಟೆ** (ನಾ). ಈಶ್ವರನನ್ನು ಅರಿಯುವ ಮಾರ್ಗ ; ಶರಣರ ಹಾದಿ : ಶಿವಬಟ್ಟೆಯೊಳೆನ್ನನು ಇರಿಸಯ್ಯಾ ಹರನೇ ಹೊಲಬುಗೆಟ್ಟೆನು ಬಟ್ಟೆಯ ತೋಱಯ್ಯಾ (ಬಸವ. ೬೩). [ಶಿವ + ಬಟ್ಟೆ]

**ಶಿವಬೀಜ** (ನಾ). ಶಿವಭಕ್ತನಿಂದ ಜನಿಸಿದವನು : ಆದಿಯಲ್ಲಿ ಶಿವಬೀಜವಲ್ಲದವರಿಗೆ ವೇದ್ಯವಾಗದು ಶಿವಜ್ಞಾನ ಶಿವಭಕ್ತಿ ಲಿಂಗಸ್ಥಳವಳವಡದು (ಬಸವ. ೬೫೮). [ಸಂ.]

**ಶಿವಬೀಜಾಕ್ಷರ** (ನಾ). ಪಂಚಾಕ್ಷರೀಮಂತ್ರ: ಶಿವಬೀಜಾಕ್ಷರದಿಂದಂ ದಿವಿಜಾಳಿಗೆ ಬಸಿಱ ಬೇನೆ ಜವನೂರ ಲಯಂ ಭವರೋಗಂ ಕ್ಷಯಮಪ್ಪುದು (ಹಮ್ಮೀ.ರ. ೭-೪೫). [ಸಂ.]

**ಶಿವಬ್ರತಿ** (ನಾ). ಶಿವೋಪಾಸನೆಯ ವ್ರತವನ್ನು ಹಿಡಿದವನು; ಶಿವಭಕ್ತ: ಒಸದು ಶಿವಲಿಂಗಮಂ ಪೂಜಿಸುವ ಶಿವಬ್ರತಿಗೆ ಭಕ್ತಿಯಂ ಮಾಳ್ಪ ಜಗಕ್ಕೆಸೆಯೆ ಶಿವಾಲಯಮಂ ಮಾಡಿಸುವಂಗೆ ನೊಳಂಬವಟ್ಟಮೆಂಬುದು ಬರಿದೇ (ಸೌಇಇ. XX. ೪೯-೬೨; ಸು. 1076).
[< ಸಂ.ಶಿವವ್ರತಿನ್]

**ಶಿವಬ್ರಾಹ್ಮಣ** (ನಾ). ಶಿವಭಕ್ತನಾದ ಬ್ರಾಹ್ಮಣ ; ಆರಾಧ್ಯ ಬ್ರಾಹ್ಮಣ : ಪುರದ ಪಲಂಬರು ಶಿವಬ್ರಾಹ್ಮ[ಣ]ರ ಪೆಸರ್ಗೊಂಡೊಡೆ ಕೇಳದಂತಿರ್ಪ ಪರವೆಯರು ನಿಮ್ಮಡಿಗಳ ನಾಮಗ್ರಹಣಂಗೊಳಲೊಡನಂತಂತೆ ಪುಳಕಿಸುತೆ ತಲೆವಾಗಿ ಲಜ್ಜಿತೆಯಾಗಿರಲ್ (ಸಂಬರ. ೧೧-೧೮). [ಸಂ.]

**ಶಿವಭಕ್ತ** (ನಾ). ೧. ಪರಮೇಶ್ವರನಲ್ಲಿ ಭಕ್ತಿಯುಳ್ಳವನು. ೨. [ವೀಶೈ] ಶಿವದೀಕ್ಷೆಯನ್ನು ಪಡೆದವನು; ಲಿಂಗವಂತ; ವೀರಶೈವ : ಎನ್ನಿಂದ ಕಿಱಿಯರಿಲ್ಲ ಶಿವ[ಪಾಠಾಂ.ಲಿಂಗ]ಭಕ್ತರಿಂದ ಹಿರಿಯರಿಲ್ಲಾ ನಿಮ್ಮ ಪಾದಸಾಕ್ಷಿ (ಬಸವ. ೩೩೪); ಶಿವಭಕ್ತನಾದಡೆ ಹೇಂಗೆ ತಾ ಶಿವಭಕ್ತನಂ ಕೊಂದ (ಬಸಪು.೨೫-೨೨); ಶಿವಭಕ್ತಂ ಕೊಳಲೂದುವ ರವದೊಳ್ಪಿಗೆ ಸೋಲ್ತು ಮೂರ್ಛೆಯಿಂ ಬಿದ್ದಂ (ತ್ರಿಪುವಿ. ೧೫-೧೯). [ಸಂ.]

**ಶಿವಭಕ್ತಿ** (ನಾ). ಈಶ್ವರನಲ್ಲಿಟ್ಟಿರುವ ನಿಷ್ಠೆ, – ಶ್ರದ್ಧೆ : ಎಂತೋ ಶಿವಭಕ್ತಿಯ ನಾನುಪಮಿಸುವೆನಯ್ಯಾ (ಬಸವ.೪೭); ಶಿವಭಕ್ತಿಗಿಕ್ಕೆದಾಣಂ ಶಿವಭಕ್ತರ ಜನ್ಮಭೂಮಿ ಶಿವಭಕ್ತರ ಸದ್ಭವನಂ ತಾನೆನಿಸುತ್ತೊಪ್ಪುವ ಕಾರಿಯಕಾಲಿಗಾವ ಪುರವಣೆ ಧರೆಯೊಳ್ (ತ್ರಿಪುವಿ. ೬೧-೩). [ಸಂ.]

**ಶಿವಭಜನೆ** (ನಾ). ಪರಮೇಶ್ವರನ ಸ್ತುತಿ; ಶಿವನ ಸ್ತೋತ್ರರೂಪವಾದ ಹಾಡು: ಶಿವಭಜನೆಗವಸರಮನಾ ರವಿ ಕಾಣದೆ ಪಿಡಿದು ಕಮಳಮಂ ತಿರುಗುವನು (ವೃಷವಿ. ೨೯-೮೪). [ಸಂ. ಶಿವಭಜನ]

**ಶಿವಭವನ** (ನಾ). ೧. ಈಶ್ವರನ ನಿಲಯ: ಎಮೆಯಿಕ್ಕಲಿಂಬಿಲ್ಲದಿರ್ಪ ಶಿವಭವನದಿಂ ಕ್ರಮದಿಂದೆ ಮಿಗೆ ಮೆಱೆವ ತಿರುನಾಳ್ಗಳೊಪ್ಪದಿಂ ಸರ್ವದೆಸೆಗಂ ಪರೆದು (ತಿರುರ. ದೇ. ೨-೫). ೨. ನರಿಯ ವಾಸಸ್ಥಾನ. ೧ , ೨: ಆ ಕಾನನ ಚಂದ್ರ ಸೂರ್ಯಾವಾಸ ಮತ್ತಾ ಕಾನನ ಶಿವಭವನ ಆ ಕಾನನ ಹರಿಕೌಶಿಕವನೆಯಂತೆ ಭೂಕಾಂತನ ಕಣ್ಣೆಸೆಯೆ (ಜೀವಂಸಾಂ. ೨೦-೪). [ಸಂ.]

**ಶಿವಭಾವ** (ನಾ). ೧. ಮಂಗಳವನ್ನುಂಟುಮಾಡುವ ಮನಸ್ಸು, – ಚಿತ್ತವೃತ್ತಿ: ಶಿವನಡೆ ಶಿವನುಡಿ ಶಿವನೋಟ ಶಿವಭಾವ . . . ಶಿವಶರಣರ ಸಂಗ ಇವನೆ ಕರುಣಿಸಿ ಬದುಕಿಸಯ್ಯ ಎನ್ನ (ಅಖಂಡೇ. ೧೪೮-೧೪೩). ೨. ಶಿವನ ಸ್ವರೂಪ ; ಶಿವತ್ವ: ಜೀವನ ಸ್ವಾಭಾವಿಕಸ್ಥಿತಿ ಜೀವಭಾವ ; ಅವನ ವಾಸ್ತವಿಕಸ್ಥಿತಿ ಶಿವಭಾವ (ಶಕ್ತಿವಿ. ೬೧). [ಸಂ.]

**ಶಿವಮಂತ್ರ** (ನಾ). ಈಶ್ವರನನ್ನು ಸ್ತುತಿಸುವ ಸ್ತೋತ್ರಭಾಗ ; ಪಂಚಾಕ್ಷರಿ ಮಂತ್ರ : ಶಿವಮಂತ್ರದೋಲೆ ಬೈಲಿಗೆ ಕವಿಯಲ್ (ತ್ರಿಪುವಿ. ೩೩-೬೬) ; ವಿಭೂತಿಯನು ಧರಿಸಿ ಶಿವಮಂತ್ರವ ಜಪಿಸಿರ್ದವರ ಕಂಡು (ನನ್ನಚಾ. ೫-೪೩). [ಸಂ.]

**ಶಿವಮಂದಿರ** (ನಾ). ಈಶ್ವರನ ಆಲಯ, – ದೇವಸ್ಥಾನ : ಶಿವಮಂದಿರದೊಳ್ಪು ಪಿರಿದು ಪೊಗಟಲ್ಕದನಹಿರಾಜಂಗಮರಿದು (ಶಾಂತಿಪು. ೩-೬ ರಗಳೆ) ; ನರಪತಿ ಧರೆಯೊಳ್ ಶಿವಮಂದಿರಮಂ ಸಮೆಯಲ್ಕೆ (ತ್ರಿಪುವಿ. ೨೧-೫). [ಸಂ.]

**ಶಿವಮಠ** (ನಾ). ವೀರಶೈವಗುರುಗಳ ವಾಸಸ್ಥಾನ : ಶಿವಮಠದೊಳುಚ್ಚರಿಪ ಶಿವಪುರಾಣಂಗಳಂ . . . ತೋಱುತುಂ (ಸಂಬರ. ೯-೧೦೧). [ಸಂ.]

**ಶಿವಮತ** (ನಾ). ಶೈವಧರ್ಮ : ಜಿನಮತಮಂ ಶಿವಮತಮಂ ಘನವೆಂಬುದನಱಿವೊಡೆ (ತ್ರಿಪುವಿ. ೩೩-೫೮) ; ಶಿವಮತವಾರ್ಧಿವರ್ಧನಶಶಾಂಕನಂ . . . ಕುವರನನೀಗಳೆನ್ನ ಬಗೆಯುಂ ಬಯಸಿರ್ದಪುದು (ರಾಜಶೇ. ೩-೭೧). [ಸಂ.]

**ಶಿವಮಲ್ಲಿ** (ನಾ). ೧. ಒಂದು ಬಗೆಯ ಸಸ್ಯ ; ಕೊಕ್ಕರೆಹೂವಿನ ಗಿಡ : "ಶಿವಮಲ್ಲೀ, ಪಾಶುಪತಃ, ಏಕಾಷ್ಠೀಲಃ, ಬಕಃ, ವಸುಃ - ೫ ಬಕಪುಷ್ಪದ ಹೆಸರು" (ಸಿದ್ಧಾಂತಿ. ೧೩೧). ೨. ಒಂದು ಬಗೆಯ ಸಸ್ಯ; ನೀಲಿಗಿಡ : ಶಿವಮಲ್ಲಿ, ನೀಲಮಲ್ಲಿ, ಕೊಗ್ಗ (ಮೈಔಗಿ. ೪೫-೮೭೭). ೩. ಒಂದು ಬಗೆಯ ಮರ; ಅಗಸೆ.
[ಸಂ. ಶಿವಮಲ್ಲೀ]

**ಶಿವಮಾರ** (ನಾ). ಒಬ್ಬಾತನ ಹೆಸರು; ೞ ಕರ್ನಾಟಕದ ಅರಸು ಮನೆತನಗಳಲ್ಲೊಂದಾದ ಗಂಗವಂಶದ ಒಬ್ಬ ರಾಜ: ವಿಜಯಸಂವತ್ಸರ ಇಪ್ಪದಾ ಎಣ್ಣನೆಯೊಳು ಶಿವಮಾರ ಕದಮ್ಬೂರ ಆಳೆ (ಎಕ. X, ಕೋಲಾರ. ೬-೨; 753); ಸ್ವಸ್ತಿಶ್ರೀ ಶಿವಮಾರ ಪೃಥುವೀರಾಜ್ಯಂಕೆಯೆ ಪುನ್ನಾಡಱುಸಾಸಿರಕ್ಕೆ ಎಱೆಯರ್ ನೆಲ್ಲಕ್ಕಿ ಸೊಲ್ಲಿಗೆ ಬಿಟ್ಟು (ಎಕ. III. ನಂಜನ.೨೬-೧ ; ಸು. 810). 'ಸೈಗೊಟ್ಟ' ಪರಾ. [ಸಂ.]

**ಶಿವಮಾರಗಾವುಂಡ** (ನಾ). ಒಬ್ಬಾತನ ಹೆಸರು : ಎಡೆನಾಡ ಪಿರಿಯ ಪೊಟ್ಟದ ಪನ್ನಿರ್ಬ್ಬರಂ ಒಲಭರ ಶಿವಮಾರಗಾವುಣ್ಣರ ಮಗಂ ಅಯ್ಯಪಗಾವುಣ್ಣನುವಿಟ್ಟು (ಎಕ.III, ನಂಜನ. ೧೮೩-೫ ; 977). [ಶಿವಮಾರ + ಗಾವುಂಡ (< ಗಾಮುಂಡ)]

**ಶಿವಮಾರಮ್ಮ** (ನಾ). ಒಬ್ಬಾತನ ಹೆಸರು : ಪುತ್ತೂರುಡ ಶಿವಮಾರಮ್ಮಂ ದುಣ್ಣಗರ್ಗ್ಗಂ ನಲ್ಲತ್ತೂರೊಡೆ ಒಗ್ಗಮನೆ ಬಳೆಗಮುಂ ಅಯ್ದುಮ್ಬು ಮೆದಕಟನಿಯು ಎಟ್ಟುಮ್ಬು ಬಳೆ ತೊಟ್ಟಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X. ಕೋಲಾರ. ೨೩೧-೩ ; ಸು. 800?).
[ಶಿವಮಾರ + ಅಮ್ಮ]

**ಶಿವಮಾರ್ಗ** (ನಾ). = ಶಿವಬಟ್ಟೆ : ಇದು ಚೇರಮಾಂಕಭೂವರನ ಚಾರಿತ್ರ . . . ಸದಮಲಾನಂದನಂದನಚೈತ್ರ ಶಿವಮಾರ್ಗದೆ ಚರಿಸುವ ಭಕ್ತಜನಮಿತ್ರ (ತ್ರಿಭುತಿ.೧-೨೨).
[ಸಂ.]

**ಶಿವಮೂರ್ತಿ** (ನಾ). ಶಿವನ ವಿಗ್ರಹ, –ರೂಪ : ದೇವಗಣತತಿಯೊಳಗೆ ಶಾಂತಾರ್ಕ ಕೋಟಿ ಪ್ರಭಾಪುಂಜದಿಂ ಬೆಳಗೆ ಮುಂತೆ ಶಿವಮೂರ್ತಿ ಜಗವೆಲ್ಲಱೊಳು ತೊಳತೊಳಗೆ (ಸಂಬರ. ೭-೧೨೪). [ಸಂ.]

**ಶಿವಯಗವುಂಡ** (ನಾ). ಒಬ್ಬಾತನ ಹೆಸರು : ಅಧಿಕರಿಗವುಣ್ಣನೂ ಚರಮಗವುಣ್ಣನು ಶಿವಯಗವುಣ್ಣನು ಮುವರುಮಿಟ್ಟು ಇಗ್ಗಲಿಯೂರಾಗವತೆಯ ವಿಡಿಸಿದ (ಎಕ.III (R). ನಂಜನ. ೧೩೪-೫; ೨ನೆಯ ಶತ?).
[ಶಿವ + ಅಯ್ಯ (< ಅಯ್ಯ) + ಗವುಂಡ (< ಗಾಮುಂಡ)]

**ಶಿವಯೋಗ** (ನಾ). ೧. ಶುಭಯೋಗ : ಭಾದ್ರಪದಬಹುಳ ಶ್ರೀಯೇಕಾದಶಿ ಆದಿವಾರ ಪುಸ್ಯನಕ್ಷತ್ರಶಿವಯೋಗಬಾಲವಾಕರಣದಂದು (ಎಕ. IV. ಹಗ್ಗಡ. ೨೫-೧೧; 1211). ೨. [ವೀಶೈ] ಶಿವನೇ ಪರತತ್ತ್ವವೆಂಬ ಸಾಧಕನ ಚಿಂತನೆ, – ಧ್ಯಾನ: ಇಹಪರ ವೆಂಬ ಭೇದಾಭೇದವ ತಿಳಿದು ಶೈವಮಾರ್ಗದಷ್ಟಾಂಗಯೋಗವನುಳಿದು ವೀರಶೈವ

ಶಿವಯೋಗಸಂಪನ್ನನಾಗಿ ಭಕ್ತಿ ಜ್ಞಾನ ವೈರಾಗ್ಯದಲ್ಲಾಚರಿಸಿ . . . ಬದುಕಿದ ಕಾಣಾ (ಮಡಿವಾ. ೬೧-೮೯); ಭೂಪಂ . . . ಸುಖದಿಂ ಶಿವಯೋಗ ನಿದ್ರಾಮುದ್ರಿತ ಭದ್ರಾಂಗನಾಗಿರಲೊಡಂ (ಹರಿಶ್ಚಂ. ೨-೯೨ವ) ; ಶಿವಯೋಗ ಸುಖಮನಾಳ್ದೊಪ್ಪುವ ಮಾದಾರ್ಯನ ಮರುಳ್ಗಲಾರ್ತುದೆ ಸಾಮ್ರಾಜ್ಯವಿಶೇಷ ಸುಖಂ (ವೃಷಪ. ೧೧-೬). [ಸಂ.]

**ಶಿವಯೋಗಿ** (ನಾ). ಶಿವಯೋಗದಲ್ಲಿ ನಿರತನಾದವನು : ಅಂತೂರ್ಜಿತಲೆಯಾಂಡಾಖ್ಯ ಶಿವಯೋಗಿ ನಿಜದೇಹದೊಳ್ ಶಿವಗೃಹಮಂ ವಿರಚಿಪೆನೆಂದುದ್ಯೋಗಿಸಿರಲ್ (ತ್ರಿಪು. ೨೧-೫ವ) ; ಶಿವಯೋಗಿ ನಾರದಮುನೀಶ್ವರನುಸುರ್ದನಿಂತೆಂದು (ನವಮೋ. ೧೩-೧೬). [ಸಂ. ಶಿವಯೋಗಿನ್]

**ಶಿವರಸ** (ನಾ). (ಮೂರು ದಿವಸಗಳಷ್ಟು ಹಳೆಯದಾಗಿ) ಹುಳಿ ಬಂದಿರುವ ಅನ್ನದ ಗಂಜಿ, – ಅಂಬಲಿ : ಶರಣಪಥ ತನಗುಳ್ಳರೆ ಶಿವಭಕ್ತರ ಮನೆಯ ಶಿವರಸವ ಪಂಚಾಮೃತವ ಮಾಡಿಕೊಳ್ಳಬೇಕು (ಬಸವ. ೬೭೨). [ಸಂ.]

**ಶಿವರಾತ್ರಿ** (ನಾ). ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಯ ರಾತ್ರಿ ಮತ್ತು ಶಿವನ ಪ್ರೀತ್ಯರ್ಥವಾಗಿ ಅಂದು ಆಚರಿಸುವ ವ್ರತೋಪವಾಸ : ಅರ್ಚಿಸಲರಿಯೆ ಪೂಜಿಸಲರಿಯೆ ನಿಚ್ಚನಿಚ್ಚ ಶಿವರಾತ್ರಿಯ ನಾ ಮಾಡಲರಿಯೆ (ಬಸವ. ೩೪೧); ಜಿನನೆಂದು ಶಿವನೆಂದು ಪೆಸರೀಶಗುಂಟದು ಜಿನರಾತ್ರಿ ಶಿವರಾತ್ರಿಯೆಂದು ಮನುಜರು ಮನ್ನಿಸುತಿರ್ದರು (ಭರತೇ. ೭೪-೯೭); ಏಕಾದಶೀ ಮನೆಗೆ ಶಿವರಾತ್ರಿ ಔತಣಕ್ಕೆ ಬಂದ ಹಾಗೆ (ಗಾದೆ). [ಸಂ.]

**ಶಿವರಾತ್ರೆ** (ನಾ). = ಶಿವರಾತ್ರಿ : ಅಕ್ಕಿ ಮುಡಿ ೪೮ ಶಿವರಾತ್ರೆ ಪೂಜೆಗೂ (ಸೌಇಎ. ೧೯೩೨, ಉಡುಪಿ. ೨೮೩-೩೮; 1485); ಶಿವರಾತ್ರೆಯ ಪುಣ್ಯಕಾಲದಲ್ಲಿ . . . ಗ್ರಾಮಕ್ಕೆ ವಾಮನಮುದ್ರೆಯ ಕಲ್ಲನ ಚತುಸ್ಸೀಮೆಗೆ ಹಾಕಿಸಿ ಕೊಟ್ಟು (ಎಕ. III (R). ಗುಂಡ್ಲುಪೇ. ೧೭೮-೫; 1497). [< ಸಂ. ಶಿವರಾತ್ರಿ]

**ಶಿವರಾಮಕಳ್ಳಿ** (ನಾ). ಒಂದು ಬಗೆಯ ಕಳ್ಳಿಗಿಡ : ಪಾಪಾಸುಕಳ್ಳಿ, ಶಿವರಾಮಕಳ್ಳಿ, ಚಪ್ಪಟೆಕಳ್ಳಿ (ಮೃಔಗಿ. ೫೮-೧೧೬೧). [ಶಿವರಾಮ್ + ಕಳ್ಳಿ]

**ಶಿವರಾಯಿಹೊನ್ನು** (ನಾ). (ಚಿತ್ರದುರ್ಗದ ಪಾಳೆಯಗಾರನಾಗಿದ್ದ ಕಡೆಯ ಮದಕರಿನಾಯಕನ ಕಾಲದಲ್ಲಿ ಬಳಕೆಯಲ್ಲಿದ್ದ) ಒಂದು ಬಗೆಯ ಬಂಗಾರದ ನಾಣ್ಯ : ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು, ಯಾವುವೆಂದರೆ :- ೧, ಗಬರು . . . ೧, ಶಿವರಾಯಿಹೊನ್ನು, ೧,ಬಾದಷಾಯಿಹೊನ್ನು (ಚಿತ್ರಪಾ. ೧೦೪).
[ ಶಿವರಾಯಿ (IP ← ಮರಾ. ಶಿವರಾಈ = ಶಿವಾಜಿಯ ಕಾಲದ ನಾಣ್ಯ) + ಹೊನ್ನು (< ಪೊನ್)]

**ಶಿವಲಗ್ನ** (ನಾ). ಶುಭಲಗ್ನ ; ಮಂಗಳಕರವಾದ ಮುಹೂರ್ತ: ನಾಳೆ ಲಗ್ನಂ ದೇವ ತೆಱಹಿಲ್ಲ ಶಿವಲಗ್ನ ಸಾರಾಸನಂ ದೇವ (ಸಂಬಿರ. ೫-೪೮). [ಸಂ.]

**ಶಿವಲಾಂಛನ** (ನಾ). ವಿಭೂತಿ, ರುದ್ರಾಕ್ಷಿ ಮುಂತಾದ ಶಿವಾಚಾರದ ಗುರುತು, – ಚಿಹ್ನೆ : ಎನಗೊಲಿದು ಶಿವಲಾಂಛನವ ಕೊಟ್ಟ ಕಾರಣವೇನಯ್ಯ ಗುರುವೆ (ಘನವ. ೭-೫). [ಸಂ.]

**ಶಿವಲಿಂಗ** (ನಾ). ೧. ಈಶ್ವರನ ಪ್ರತೀಕವೆಂದು ಭಾವಿಸುವ ಕಲ್ಲಿನ ಅಥವಾ ಇತರ ಲೋಹದ ಒಂದು ನಿರ್ದಿಷ್ಟ ಆಕಾರ, – ಮೂರ್ತಿ: ಶಿವಲಿಂಗೇಕ್ಷಣ ಲೋಲುಪ ಶಿವಪ್ರಸಾದಾತ್ತಚಿತ್ತ ಶಿವಭಕ್ತೆ (ಗಿರಿಜಾ. ೩-೪೯); ಮಹಾಹಾಟಕೇಶ್ವರನೆಂಬ ಶಿವಲಿಂಗಮಿರೆ . . . ಪುಂಡರೀಕಂ ಮಣಿದನು (ಜೈಮಿಭಾ. ೨೪-೧೪). ೨. [ವೀಶೈ] ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗ ಎಂಬ ಆರು ಬಗೆಯ ಲಿಂಗಗಳಲ್ಲಿ ಒಂದು : ಆಚಾರಲಿಂಗವಿಡಿದು ಗುರುಲಿಂಗವ ಕಾಣಬೇಕು ಗುರುಲಿಂಗವಿಡಿದು ಶಿವಲಿಂಗವ ಕಾಣಬೇಕು ಶಿವಲಿಂಗವಿಡಿದು ಜಂಗಮಲಿಂಗವ ಕಾಣಬೇಕು (ಅವಚ. ೧೭೮-೭೫೭); ಆವ ಕುಲವಾದರೇನು ಶಿವಲಿಂಗವಿದ್ದವನೆ ಕುಲಜನು (ಬಸವ. ೬೦೭) ; ಬಿಂದುವಾಚಾರ ರಸವೆಂದು ಗುರುಲಿಂಗ ಕಳೆಯೆಂದು ಶಿವಲಿಂಗ (ಮನೋವಿ. ೨-೪೨). [ಸಂ.]

**ಶಿವಲಿಂಗಿ** (ನಾ). ಒಂದು ಬಗೆಯ ಔಷಧೀಸಸ್ಯ : ಲಿಂಗತೊಂಡೆಬಳ್ಳಿ, ಶಿವಲಿಂಗಿ (ಮೃಔಗಿ. ೧೪-೨೫೯). [< ಸಂ. ಶಿವಲಿಂಗಿನೀ./ ಹಿಂ. ಶಿವಲಿಂಗೀ]

**ಶಿವಲಿಂಗೈಕ್ಯ** (ನಾ). ಶಿವಲಿಂಗದಲ್ಲಿ ಬೆರೆತವನು, – ಐಕ್ಯನಾದವನು : ತನುಶುಚಿಗಳ ಮನಶುಚಿಗಳ ತೋಱು ಇಂತಪ್ಪ ಶಿವಲಿಂಗೈಕ್ಯರ ತೋಱಿ ಬದುಕಿಸು (ಬಸವ. ೫೦೪); ಶಿವಲಿಂಗೈಕ್ಯಾತಿಸೌಖ್ಯಂಬಡೆದು ಮಱಪಿನಿಂದಿರ್ದನೋ . . . ದೇಶಿಕೇಂದ್ರಂ (ವೃಷಪ. ೨೩-೧೪). [ಸಂ.]

**ಶಿವಲೀಲೆ** (ನಾ). ೧. ಪರಮೇಶ್ವರನ ಲೀಲೆ, – ವಿನೋದ; IP "ಲೀಲೆಗಳು - ೨೫ : ಸೋಮಧಾರಿತ್ವ, ಉಮಾಸಮೇತತ್ವ, ವೃಷಭಾರೂಢತ್ವ, ನೃತ್ಯವಿಲಾಸಿತ್ವ, ವಿವಾಹೋತ್ಸಾಹಿತ್ವ, ಭಿಕ್ಷಾಟನತ್ವ, ಕಾಮಾರಿತ್ವ, ಕಾಲಾರಿತ್ವ, ತ್ರಿಪುರಾರಿತ್ವ, ಜಲಂಧರಾರಿತ್ವ, ಅಜಾರಿತ್ವ, ವೀರಭದ್ರಾವತಾರಿತ್ವ, ಹರಿಧ್ವಂಸಿತ್ವ, ಅರ್ಧನಾರೀಶ್ವರತ್ವ, ಕಿರಾತರೂಪತ್ವ, ಕಂಕಾಳಧಾರಿತ್ವ, ಚಂಡೇಶಾನುಗ್ರಾಹಿತ್ವ, ವಿಷಾಪಹಾರಿತ್ವ, ಚಕ್ರಪ್ರದಾನದಕ್ಷತ್ವ, ವಿಘ್ನೇಶ್ವಪ್ರಧಾನಾಭಿಮುಖತ್ವ, ಉಮಾಕುಮಾರಸಹಿತತ್ವ, ಏಕಪಾದತ್ವ, ಸುಖಪ್ರದತ್ವ, ದಕ್ಷಿಣಾಮೂರ್ತಿ ಸ್ವರೂಪತ್ವ ಮತ್ತು ಮಹಾಲಿಂಗಸ್ವರೂಪತ್ವ" (ಶ್ರೀಪತ್ತ. ೩೮೫) : ಶಿವಲೀಲಾಕಥನಾವಳೀಶ್ರವಣದಿಂ ತತ್ಪಾದಪೂಜಾಸಮುತ್ಸವದಿಂ . . . ಕಾಂತಾಸಮೇತಂ ಮಹೀಧವನೊಪ್ಪಿರ್ದಂ (ರಾಜಶೇ. ೯-೨). ೨. ಶಿವನೊಂದಿಗೆ ಆಡುವ ಆಟ : ಇಂತು ಬಾಲಲೀಲೆ ಶಿವಲೀಲೆಯಾಗಿ . . . ಭವಾನಿಯಿರೆ ಕಂಡು (ಗಿರಿಜಾ. ೩-೯೮ ವ). ೩. (ಆಲಂ) ಭ್ರಮೆಯಿಂದ ಕೂಡಿದ ಮಾತು, ಕೆಲಸ ಮುಂತಾದುವು: ಹುಚ್ಚಲ್ಲ, ಬೆಪ್ಪಲ್ಲ, ಶಿವಲೀಲೆ (ಗಾದೆ). [ಸಂ. ಶಿವಲೀಲಾ]

**ಶಿವಲೋಕ** (ನಾ). ಪರಮೇಶ್ವರನು ನೆಲೆಸಿರುವ ಸ್ಥಳ; ಕೈಲಾಸ: ದುದ್ದರಸಂ . . . ಬ್ರಾಹ್ಮಣರ್ಗ್ಗೆ ಚತ್ರಮಂ ನಿಲಿಸಿ ತೊಱೆ ಗಟ್ಟಿಯ ಮಾಡಿಸಿ ಅನೇಕ ಧರ್ಮ್ಮಮ ಬೆಳಗಿ ಶಿವಲೋಕಪ್ರಾಪ್ತನಾಗಲ್ (ಎಕ. I. ೬೨-೪೮; 1095); ಶಿವಲೋಕಕ್ಕೆ ಸರಿ ಬೇಱೆ ಮಂತ್ರವಿಲ್ಲ (ಬಸವ. ೭೪೬); ಸಂತತಮುಂ ಭೋಗದೊಳಿರ್ದು ನಂಬಿ ಶಿವಲೋಕಕ್ಕೆದನೇ (ಉದ್ಭಟ. ೧೨-೧೨). [ಸಂ.]

**ಶಿವವಳ್ಳಿ, ಶಿವಳ್ಳಿ** (ನಾ). ೧. ಒಂದು ಸ್ಥಳದ ಹೆಸರು; IP ಉಡುಪಿ ತಾಲ್ಲೂಕಿನ ಈಗಿನ ಶಿವಳ್ಳಿ: ಇದನಱಿದೊ ಬಾರಣಾಸಿಯು ಶಿವವಳ್ಳಿಯುಮ ಅಱಿದ ಪಞ್ಚ ಮ(ಹಾ)ಪಾತಕನಕ್ಕು(ಕ್ಕುಂ) (ಎಇ. IX. ೨೨-೧೬; 8ನೆಯ ಶತ). **ಶಿವಳ್ಳಿ** : ೨. ಶಿರಸಿ ತಾಲ್ಲೂಕಿನ ಒಂದು ಊರಿನ ಹೆಸರು :ಶಿರಸಿಯಿಂದ ಒಂಭತ್ತು ಮೈಲು ದೂರದಲ್ಲಿರುವ ಹಿಂದಕ್ಕೆ ಸಾಂತಪುರವೆಂದು ಕರೆಯಲ್ಪಡುತ್ತಿದ್ದ ಶಿವಳ್ಳಿ ಗ್ರಾಮದಿಂದ ಈ ಹೆಸರು ಅವರಿಗೆ ಬಂದುದಾಗಿದೆ (ತುಳುನಾ. ೨೩೦). ೩. ಶಿವಳ್ಳಿ ಎಂಬ ಊರಿಗೆ ಸೇರಿದ ಒಂದು ಬ್ರಾಹ್ಮಣಪಂಗಡದ ಹೆಸರು : ಕೋಟರು, ಸಕಳಾಪುರಿ, ಶಿವಳ್ಳಿ ಇವು ಮೂರು ಹೈಗರೊಳಗಿನ ಒಳಭೇದಗಳು (ಕಭಾಗ. ೮೫); ಶಿರಸಿಯ ಹತ್ತಿರದ ಶಿವಳ್ಳಿಯವರು ಮತಾಂತರ ಹೊಂದಿದ ಹವಿಕರು ಎಂಬುದರಲ್ಲಿ ಎರಡು ಮಾತಿರಲಾರದು (ತುಳುನಾ. ೨೩೦). [ಶಿವ + ಪಳ್ಳಿ]

**ಶಿವವಿಪ್ರ** (ನಾ). = ಶಿವಬ್ರಾಹ್ಮಣ : ಜಗತಿಯೊಳು ಶ್ರೀಕಾಳಿಯೆಂಬಾ ನಗರಿಯಲ್ಲಿ ಕುಮಾರನಂಶದಿನೊಗದು ಶಿವವಿಪ್ರಂಗೆ ಪಿಳ್ಳೆಯ ನಾಯನಾರೆನಲು (ಬಸಪು. ೫೦-೧). [ಸಂ.]

**ಶಿವಶಕ್ತಿ** (ನಾ). ೧. ಪರಮೇಶ್ವರನ ಪತ್ನಿಯೆಂದು ಭಾವಿಸುವ ಶಿವನ ಶಕ್ತಿ. ೨. ದೈವಶಕ್ತಿ : ಈ ಎರಡು ಚಾಪಗಳ ಹಿಂದೆಯೂ ಒಂದು ಶಿವಶಕ್ತಿ ಇದ್ದೆ ಇರುತ್ತದೆ (ಇಂಚಾಪ. III, ೫೦೩). ೩. ಒಂದು ಬಗೆಯ ಸಸ್ಯ; ಅಗ್ನಿಶಿಖೆ: ಕರಡಿಕಣ್ಣಿನ ಗಡ್ಡೆ, ಕೋಳಿಕುಟುಮನ ಗಡ್ಡೆ, ಶಿವಶಕ್ತಿ, ಲಾಂಗುಲಿಕ (ಮೃಔಗಿ. ೩೯-೭೭೭). [ಸಂ.]

**ಶಿವಶಕ್ತಿವಾಸ** (ನಾ). ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು: ಬಳಿಕ ಹದಿನೆಂಟಂಗುಲ ಹದಿನೇಳಂಗುಲ . . . ಒಂದಂಗುಲ ಪ್ರಮಾಣಿನ ಕ್ರಮವಿಡಿದು ಜಾತಿವಾಸ ಸಜಾತಿವಾಸ . . . ಶಿವಶಕ್ತಿವಾಸ ಭುವನಾಧಿಪತಿವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವನಱಿದು (ವಿವೇಕ. ೧೯೧). [ಶಿವಶಕ್ತಿ + ವಾಸ]

**ಶಿವಶರಣ** (ನಾ). [ವೀಶೈ] ವೀರಶೈವ ಮತಾನುಯಾಯಿಯಾದ ಶಿವಭಕ್ತ : ಹಿಂಗಲಾಗದು ಶಿವಶರಣಪಥ [ಪಾಠಾಂ.ಶರಣಪಥ, ಶರಣಸ್ಥಲ]ಕ್ಕೆ ಸಲ್ಲದಾಗಿ ಕೂಡಲ ಸಂಗಮದೇವರ ಹಿಂಗಿ ನುಂಗಿದುಗುಳು ಕಲ್ಪಿಷ (ಬಸವ. ೭೩೩); ಶಿವಾನುಭಾವ ಶಿವಶರಣರ ಸಂಗ ಇವನೆ ಕರುಣಿಸಿ ಬದುಕಿಸಯ್ಯ (ಅಮುಗೆ. ೧೪೮-೧೪೩); ಅನುಭಾವಿಗಳಾದ

ಸ್ತ್ರೀ ಪುರುಷರು . . . ಶಿವಭಕ್ತಿಯನ್ನು ಪ್ರಸಾರಮಾಡಿದರು. ಈ ಅನುಭಾವಿಗಳಿಗೆ ಶಿವಶರಣರೆಂಬ ಹೆಸರಿದೆ (ಭಾರದ. ೩೦೮). **[ಸಂ.]**

**ಶಿವಶರಣೆ** (ನಾ). [ವೀಶೈ] ವೀರಶೈವಮತಾನುಯಾಯಿಯಾದ ಶಿವಭಕ್ತೆ : ನಿಜದೇವಿ ಶಿವನನ್ನೇ ಮೋಹಿಸಿ ವೀರವಿರಾಗಿಣಿಯಾಗಿ ಕಲ್ಯಾಣಕ್ಕೆ ಬಂದು ಬೊಂತಾದೇವಿ ಯೆಂಬ ಪ್ರಸಿದ್ಧ ಶಿವಶರಣೆಯಾದ ಸಂಗತಿ ಅನೇಕ ವೀರಶೈವಗ್ರಂಥಗಳು ತಿಳಿಸುತ್ತವೆ (ಮೋಳಮಾ. ೬೨ ಪ್ರಸ್ತಾವನೆ). [ಶಿವಶರಣ + - ಎ]

**ಶಿವಶಾಸನ** (ನಾ). ಶಿವನ ಅಪ್ಪಣೆ : ಭಕ್ತರೆಂದುದೆ ತನಗೆ ಶಿವಶಾಸನಂ ನೋಡ (ಸೇಬಿರ. ದೇ. ೫೯- ೧೩). **[ಸಂ.]**

**ಶಿವಸಮಯ** (ನಾ). ಶೈವಧರ್ಮ, — ಮಾರ್ಗ : ಆತನಿಂದಮ್ಮ ಶಿವಸಮಯಂ ಪ್ರಬಲಮಪ್ಪುದು (ಪದ್ಮರಾ. ೨-೫೪); ಪರಸಮಯದವನಾದಡೂ ಆಗಲಿ ಶಿವಸಮಯ ದವನಾದಡೂ ಆಗಲಿ ವರ್ಮಗಟ್ಟು ನುಡಿವ ಕರ್ಮಜೀವಿಗಳ ಬಾಯಲ್ಲಿ ಬಾಲ್ಹುಳ ಸುರಿಯದೆ ಮಾಣ್ಬುವೆ ಹೇಳಾ (ಅಖಿಂಡೇ. ೨೭೭-೭). **[ಸಂ.]**

**ಶಿವಸಾದಾಖ್ಯ** (ನಾ) [ವೀಶೈ] ಐದು ಬಗೆಯ ಸಾದಾಖ್ಯಗಳಲ್ಲಿ ಒಂದು: ಶಿವಸಾದಾಖ್ಯಸ್ವರೂಪವಾದ ಪ್ರಸಾದಲಿಂಗದಲ್ಲಿ ಯಕಾರಮಂತ್ರಸ್ವರೂಪವಾದ ಶ್ರವಣೇಂದ್ರಿಯಸಂಯೋಗವ ಮಾಡಬಲ್ಲಾತನೆ ಪ್ರಾಣಲಿಂಗಿ (ಅಖಿಂಡೇ. ೨೪೫-೯೮). **[ಸಂ.]**

**ಶಿವಸಾಯುಜ್ಯ** (ನಾ). ಶಿವನಲ್ಲಿ ಐಕ್ಯ ಹೊಂದುವುದು; ಮುಕ್ತಿ : ಸಾಧಕನು . . . ಜ್ಞಾನಮಾರ್ಗ ಅಥವಾ ಸನ್ಮಾರ್ಗವನ್ನನುಸರಿಸಿ ಧ್ಯಾನಪೂರ್ವಕ ಸಮಾಧಿಸ್ಥಿತಿಯನ್ನು ಹೊಂದಿ ಶಿವಸಾಯುಜ್ಯವನ್ನು ಹೊಂದುವನು (ಭಾರದ. ೨೦೭); ಶಿವಸಾಯುಜ್ಯಪದವಿಗೆ ಇವರಿಗಿಂತ ಹೆಚ್ಚಿನ ಅರ್ಹತೆಯನ್ನು ಪಡೆದವರಾರು? (ರಂಗರೋ. ೧೭೦). **[ಸಂ.]**

**ಶಿವಸುಖ** (ನಾ). ಶಾಶ್ವತವಾದ ಆನಂದ; ಮೋಕ್ಷಸುಖ : ಶಿವಸುಖಮನಱಿಯದೀ ಮಾನವಸುಖದ ನಿಮಿತ್ತದಿಂ ತಪಂಗೆಯ್ವವರೊಪ್ಪುವ ಮಾಣಿಕಮಂ ತೌಡಿಂಗವಯವದಿಂ ಮಾಱುಗುಡುವ ಮರುಳಂ ಪೋಲ್ಗುಂ (ಶಾಂತಿಪು. ೧೧-೯೧); ಅಗದಾಗದು ಮರ್ತ್ಯದ ಮನುಜರಿಗೆ ಶಿವಸುಖ (ಲಿಂಗವ. ೨೨-೮೭). **[ಸಂ.]**

**ಶಿವಸೂತ್ರ** (ನಾ). = **ಶಿವದಾರ** : ಈಶಂ ತನ್ನುಡಿಯ ಶಿವಸೂತ್ರಮಂ ತೋಱೆ (ಬಸವು. ೪೪-೬೧). **[ಸಂ.]**

**ಶಿವಸೆರಗು** (ನಾ). [ವೀಶೈ] "ಶಿವಸೆರಗು — ಸಮಾಧಿಕಾಲದಲ್ಲಿ ಜಂಗಮರಿಗೆ ಬಿಲ್ವಪತ್ರೆ ಮತ್ತು ದಕ್ಷಿಣೆ ಕಟ್ಟಿಕೊಡುವ ಹೊಸಬಟ್ಟೆಯ ಗಂಟು" (ಶರಸಾ. ೨೪-೮). [ಶಿವ + ಸೆರಗು$_1$ (< ಸೆಱಂಗು)]

**ಶಿವಸೊಮ್ಮು** (ನಾ). ದೇವರ ಸಂಪತ್ತು : ಆರು ಶಿವಸೊಮ್ಮ ಶಿವನವರ್ಗೀವೆನೆಂಬವರ ಘೋರಭವಭಾರವ ನಿವಾರಿಸುವ ಶಿವನವರ ಪಡೆದೆನೆಂದೊಡವೆಯಂ ಮಡಗಿ ನೀಂ ಕೆಡಬೇಡ (ದೀಕ್ಷಾಬೋ. ೫೩-೧೦೦೭); ಶಿವಾಭ್ಯಂಜನಕೆ ಮನವೊಲಿದು ತಿಲಗಳಂ ಪರಪಿ ಶಿವಸೊಮ್ಮೆಂದು ಬಲ್ಲಾವಲಿಕ್ಕಿರಲ್ಕೆ (ರಾಘಚ. ೧೨-೨೭). [ಶಿವ + ಸೊಮ್ಮು$_3$]

**ಶಿವಸೋದರಿ** (ನಾ). ಶೈವಮತಕ್ಕೆ ಸೇರಿದ ಹೆಣ್ಣು : ಎನ್ನ ಶಿವಸೋದರಿಯ ಮಠದಲಿ ಚನ್ನಪಾಯಸವುಂಟು ಬೇಕೆಂದೆನ್ನು ನಿನಗಾನೆಯ್ದು ತಂದಪೆನೆಲ ಮಹಾದೇವ (ಬಸವು. ೧೪-೧೩). [ಸಂ. ಶಿವಸೋದರೀ]

**ಶಿವಳಿಕೆ** (ನಾ). ಹಣ್ಣನ್ನು ಪರೀಕ್ಷಿಸಲು ಹಾಕುವ ಉಂಡಿಗೆ: ಹಲಸಿನ ಹಣ್ಣಿಗೆ ಶಿವಳಿಕೆ ಹಾಕು (ರೂಢಿ). [?]

**ಶಿವಳ್ಳಿ** 'ಶಿವವಳ್ಳಿ' ನೋ.

**ಶಿವಾಂಗಿ** (ನಾ). ಒಂದು ಬಗೆಯ ಮರ ; ಬಾಗೆಯ ಮರ : "ಶಿವಾಂಗಿ [ಪಾಠಾಂ. ಗ]ಯೆನೆ ಬಾಗೆಯೆನಿಕು" (ಮಂಗರಾ. ೩೮-೨೫). 'ಶಿವಂಗಿ$_2$' ಪರಾ. [?]

**ಶಿವಾಕ್ಷಿ** (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ; ರುದ್ರಾಕ್ಷಿ: ಶಿವಾಕ್ಷಿ ವೃಕ್ಷದಡಿಯಲುದಿರಿರ್ದ ಸುಪಣ್ಣ ಛಿದ್ರವಂ ಮಾಡುತ ನಾರಿನೊಳ್ ಸರವನೇಱಿಸಿ ನಾಯ ಕೊರಳಿಗೆ ಕಟ್ಟಲು (ನನ್ನಚಾ. ೫-೧೦೮); ಕೊರಲೊಳ್ಗಳ್ತ ಶಿವಾಕ್ಷಿ [ಪಾಠಾಂ. ಶಿವಾಕ್ಷ]ಮಾಲೆ ಭಸಿತಾಲೇಪಂ ಲಲಾಟಾಗ್ರದೊಳ್ (ರಾಜಶೇ. ೩-೪೪). [ಸಂ. ಶಿವಾಕ್ಷ]

**ಶಿವಾಗಮ** (ನಾ). [ವೀಶೈ] ಶಿವೋಪಾಸನೆ, ಶಿವದೀಕ್ಷೆ ಮುಂತಾದ ಶಿವಾಚಾರಗಳ ಸಾಧನೆ ಹಾಗೂ ಸಿದ್ಧಿಗಳನ್ನು ಪ್ರತಿಪಾದಿಸುವ ಧರ್ಮ; ಶೈವಧರ್ಮ; IP ಇವು ಇಪ್ಪತ್ತೆಂಟು ಬಗೆ : ಕಾಮಿಕ, ಯೋಗಜ, ಚಿಂತ್ಯ, ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಸಹಸ್ರ, ಅಂಶುಮತ್, ಸುಪ್ರಭೇದಕ, ವಿಜಯ, ನಿಶ್ವಾಸ, ಸ್ವಾಯಂಭುವ, ಅನಲ, ವೀರ, ರೌರವ, ಭಾಕುಟ್ಯ, ವಿಮಲ, ಚಂದ್ರಜ್ಞಾನ, ಬಿಂಬ, ಪ್ರೋದ್ಗೀತ, ಲಲಿತ, ಸಿದ್ಧ, ಸಂತಾನ, ಶರ್ವೋಕ್ತ, ಪಾರಮೇಶ್ವರ, ಕಿರಣ ಮತ್ತು ವಾತುಲ : ಸೌಗತ ಸಾಂಖ್ಯ ಶಿವಾಗಮಗಳಂ ನ್ಯಾಯನಯ ಪ್ರಮಾಣುಸುವಚಃಕ್ರಮದಿಂ ಸಲೆ ಸೋಲೆ ಗಲ್ಲುಪಾಧ್ಯಾಯರಜೇಯರ್ (ಶಾಂತಿಪು. ೧-೪); ಮೂಣುಪಾಲಿನವನ ಶಿವಾಗಮದ ಸೇವೆಗೆ ನೇಮಿಸಿ ಹುಡುಗರು ಪೂಜಾಕರ್ತರೆಂದು ಇವರು ಉತ್ತ ಭೂಮಿಗೆ ತೆರಿಗೆ ಇಲ್ಲವೆಂದು ಮಾಡಿ (ಮೈಆರಿ. ೧೯೩೦, ೧೩-೩೦; ಸು. 1345); ವೇದಾರ್ಥ ಪ್ರತಿಪಾದಕಗಳಾಗಿಯೂ ಪಶು ಪತಿ ಪಾಶಗಳೆಂಬ ತ್ರಿಪದಾರ್ಥಗಳನ್ನು ತಿಳಿಸುವುದಾಗಿಯೂ ನಾಲ್ಕುಪಾದಗಳಿಂದ ಕೂಡಿದುದಾಗಿಯೂ ಇರುವ ಕಾಮಿಕ . . . ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಭಾರದ. ೬೨). **[ಸಂ.]**

**ಶಿವಾಚಾರ** (ನಾ). [ವೀಶೈ] ವೀರಶೈವರ ಧಾರ್ಮಿಕ ಆಚರಣೆ ಹಾಗೂ ಸಂಪ್ರದಾಯ; ಶೈವಮತೀಯರ ಆಚಾರ : ಕುಱುಹಿಲ್ಲ ಕುಱುಹಿಲ್ಲ ಲಿಂಗವೆಂದೆಂಬರೆ ತೆಱಹಿಲ್ಲ ತೆಱಹಿಲ್ಲ ಜಂಗಮವೆಂದೆಂಬರೆ ಇದೆ ನೋಡಾ ಶಿವಾಚಾರ ಇದೆ ನೋಡಾ ಶಿವದೊಡಕು (ಬಸವ. ೯೪೮); ದೇವರಾಜಒಡೆಯರು ಸುಜನ ಶುದ್ಧ ಶಿವಾಚಾರ ಸಂಪನ್ನರುಮಪ್ಪ ನಂಮ ಶ್ರೀಗುರು ಶ್ರೀ ರುದ್ರಾಕ್ಷಿ ಒಡೆಯರ ದಿವ್ಯಶ್ರೀಪಾದಪದ್ಮಂಗಳಿಗೆ ನಾವು ಶರಣಾರ್ತಿ ಮಾಡಿ (ಎಕ. IV, ಗುಂಡ್ಲುಪೇ. ೪೭-೬-1469 ?); ಶಿವಾಚಾರ ಶಿವಭಕ್ತಿ ಶಿವಜ್ಞಾನ ಶಿವಾನುಭಾವ ಶಿವಶರಣರ ಸಂಗ ಇವನೆ ಕರುಣಿಸಿ ಬದುಕಿಸಯ್ಯ ಎನ್ನ (ಅಖಿಂಡೇ. ೧೪೮-೧೪೩). **[ಸಂ.]**

**ಶಿವಾಚಾರಿ** (ನಾ). ಶಿವಾಚಾರವನ್ನು ಅನುಸರಿಸುವವನು : ಶರಣರ್ಬಂದೊಡುಟ್ಟುದಂ ಪೊದೆದುದಂ ಉತ್ತಮಶಿವಾಚಾರಿ ಕೊಟ್ಟಪ್ಪನುಳ್ಳುದಂ (ಇಳರ. ದೇ. ೫೦-೧೭). [ಸಂ. ಶಿವಾಚಾರಿನ್]

**ಶಿವಾಚಾರ್ಯ** (ನಾ). ವೀರಶೈವಮತದ ಗುರು, — ಆಚಾರ್ಯ : ಭೂಪಂ . . . ಶಿವಸ್ಥಾನ ಶಿವಾಚಾರ್ಯನಿಳಯಂಗಳನೀಕ್ಷಿಸುತ್ತ ಸಂತಸದಿಂದೆಯ್ದುವಾಗಳ್ (ಹಮ್ಮೀರ. ೨-೯೨ವ). **[ಸಂ.]**

**ಶಿವಾಟಿ** (ನಾ). ಒಂದು ಬಗೆಯ ಮೂಲಿಕೆ; ಕೊಮ್ಮೆ ; ಗಣಜಿಲು. [ಸಂ. ಶಿವಾಟೀ]

**ಶಿವಾಟಿಕೆ** (ನಾ). ೧. = **ಶಿವಾಟಿ** : "ಗಣಜಿಲೆ ಪುನರ್ನವಿ ಶಿವಾಟಿ [ಪಾಠಾಂ. ಶಿವಾಟ]ಕೆ ಯೆನಿಕ್ಕುಂ" (ಮಂಗರಾ. ೪೦-೩೧). ೨. ಒಂದು ಬಗೆಯ ಹುಲ್ಲು. [ಸಂ. ಶಿವಾಟಿಕಾ]

**ಶಿವಾಣಿ** (ನಾ). ಶಿವನ ಹೆಂಡತಿ ; ಪಾರ್ವತಿ : ಭವನಾಶಿನಿ ಎಂಬ ಶಿವಾಣಿಯ ಸಿರದಲ್ಲಿ ಜಗಂಜ್ಯೋತಿಯ ಕಂಡೆನಯ್ಯ (ಸಿದ್ಧೇವ. ೧೨೮-೩೮೧); ರಜತಶೈಲಮಂ ಶಿವ ಶಿವಾಣಿಯರೊಡನೆ, ಬೇರ್ ಬಿಡಿಸುತಳ್ಳಾಡಿ ನೆಗಹಿದೀ ದೈತ್ಯರ ದೊರೆಯ ತೋಳ್ . . . ಪೂವೆಸಳ ಪೊರೆಗೆಗುರುಳ್ಪುದು ಸೋಲ್ತು (ಶ್ರೀರಾಮಾ. ೬೧-೫೮). [< ಸಂ. ಶಿವಾನೀ]

**ಶಿವಾಣು** (ನಾ). ಪಂಚಾಕ್ಷರಿಮಂತ್ರ (?) : ಅಖಿಲಭಕ್ತಪಾದಾಬ್ಜಮಂ ಸ್ಮರಿಸುತುಂ ಶಿವಾಣುವನುಚ್ಚರಿಸುತೇಳ್ದು ನಡೆಯಲೊಡನೆ (ಪದ್ಮರಾ.೯-೨೮). [ಶಿವ + ಅಣು? ]

**ಶಿವಾದ್ವೈತ** (ನಾ). ೧. ಶಿವ ಮತ್ತು ಜೀವರಲ್ಲಿರುವ ಅಭೇದಭಾವ : ತಾನೇ ಶಿವಾರ್ಪಿತವದುವೆ[ಪಾಠಾಂ. ಯರ್ಪಿತವಾದುದೆ]ಶಿವಾದ್ವೈತವಿದ್ಯಾನಿರತಸದ್ಭಕ್ತಿಚರಿತ ವೆಂದೊರೆದ ಪರಮಾನಂದಮೂರ್ತಿಯೆನಿಸುವ ದೇಶಿಕೋತ್ತಮನ ಚರಣಾಂಬುಜಕ್ಕೆ ಶರಣು (ಲಶಿಚಂ. ೫೪-೪೦). ೨. ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ : ಶಿವನನ್ನು ಬಿಡದ ಜೀವಿಸುವಿಕೆ ಅರ್ಥಾತ್ ಶಿವಾತ್ಮಕವಾದ ಜೀವನ ಎಂಬುದೇ ಶಕ್ತಿವಿಶಿಷ್ಟಾದ್ವೈತ ಅಥವಾ ಶಿವಾದ್ವೈತ ಸಿದ್ಧಾಂತ (ಭಾರದ. ೧೩೧). ೩. ಶಿವಾದ್ವೈತ ಸಿದ್ಧಾಂತದ ಅನುಯಾಯಿ : ಚೇತೋ ಜ್ಯೋತಿರಖಂಡಸತ್ಸ್ವರಲಸಚ್ಚಿಲ್ಲಿಂಗಯುಕ್ತಂ ಶಿವಾದ್ವೈತಂ ಭಾಸುರಭದ್ರ ಭಕ್ತಿಚಕಿತಂ ರಾಜೇಂದ್ರ ಚಕ್ರೇಶ್ವರಂ (ಹಮ್ಮೀರ. ೧-೨೭). **[ಸಂ.]**

**ಶಿವಾಧೀನ** (ನಾ). ಮರಣಹೊಂದುವುದು; ಶಿವನನ್ನು ಸೇರುವುದು; ದೈವಾಧೀನವಾಗುವುದು : ವಿಕಾರ್‍ಇಸಂವತ್ಸರದ ಮಾಘ ಬ ೧೦ ಯು ಬುಧವಾರ ದಿವಿಗಳಿಗೆ ೨೭$^1/_4$ ಗೆ ಶಿವಾಧೀನವಾದ್ದು (ಎಕ. I (R), ೨೯-೭, 1779). **[ಸಂ.]**

**ಶಿವಾನುಬಂಧ** (ನಾ). ೧. ಮಂಗಳಕರವಾದ ಸಂಬಂಧ. ೨. ಶಿವನ ಭಕ್ತಿ. ೧, ೨ : ಆ ನರೇಂದ್ರಂ . . . ಶಿವಾನುಬಂಧಸಯುಕ್ತನಾಗಿಯುಂ ದಶಾನನಾಸ್ತಂಗತ ಪ್ರಾಭವನಲ್ಲದ ಪುಣ್ಯಜನೇಶ್ವರನುಮೆನಿಸಿ ದೇವತಾಸ್ವರೂಪನಾದಂ (ಪುಷ್ಪಪು. ೩-೨೧ವ). [ಸಂ.]

**ಶಿವಾನುಭವಿ** (ನಾ). ಶೈವಮತದ ತತ್ತ್ವಜ್ಞಾನವುಳ್ಳವನು ; ಶಿವತತ್ತ್ವಜ್ಞಾನಿ: ಹತ್ತನೆಯ ಶತಮಾನದ ಆರಂಭದಲ್ಲಿ ಶ್ರೀಶೈಲಕ್ಷೇತ್ರವು ವೀರಶೈವ ಗುರುವರ್ಯರ ಶಿವಾನುಭವಿಗಳ ಕೇಂದ್ರವಾಗಿ ಹೆಸರುಗೊಂಡಿತ್ತು (ಸಾಹಿಸ. ೩೪).
[ಸಂ. ಶಿವಾನುಭವಿನ್]

**ಶಿವಾನುಭಾವ** (ನಾ). ಶಿವಸಂಬಂಧವಾದ ಆತ್ಮಜ್ಞಾನ; ಶಿವತತ್ತ್ವಜ್ಞಾನ: ಶಿವಾಚಾರ ಶಿವಭಕ್ತಿ ಶಿವಜ್ಞಾನ ಶಿವಾನುಭಾವ ಶಿವಶರಣರ ಸಂಗ ಇವನೆ ಕರುಣಿಸಿ ಬದುಕಿಸಯ್ಯ ಎನ್ನ (ಅಖಂಡೇ. ೧೪೮-೧೪೩). [ಸಂ.]

**ಶಿವಾಯ** 'ಶಿವಾಯಿ$_2$' ನೋ.

**ಶಿವಾಯಿ$_1$** (ಗು). ಬೇರೆ ವಿಧವಾದ ; ಇತರ : 'ಶಿವಾಯಿಬಾಬು', 'ಶಿವಾಯಿಮದತ್ತು' ಪರಾ. [← ಹಿಂ. ಸಿವಾಇ, ಸಿವಾಯ್, ಸಿವಾ = ಅಧಿಕವಾದ]

**ಶಿವಾಯಿ$_2$**, ಶಿವಾಯ, ಸಿವಾಯಿ (ಅ). ಹೊರತು; ವಿನಾ : ಶ್ರೀಗಂಧ ಹೊರ್ತು ಕಡಿಮೆ ಯಾವತ್ತು ಬಾಬುಗಳಂನ್ನು ಶಿವಾಯ ಬೇರೀಜಿಗೆ ದಾಖಲಾದ ಅಲಾಯಿದಾ ಸಾಗವಳಿ ಆಗಿಯಿರುವ ಬಾಜಿ ಬಾಬುಗಳು ಸಹಾ . . . ಅನುಭವಿಸುವದೂ (ಮೈಆರ. ೧೯೩೯, ೪೨-೯೭; 1825); ನಾನು ಹೇಳುವುದೆಲ್ಲಾ ಸತ್ಯ ಶಿವಾಯ ಅನ್ಯಥಾ ಅಲ್ಲಾ (ಗ್ರಾಮಾಕ. ೬೩). **ಶಿವಾಯ** : ಕೆಲಸದ ಶಿವಾಯ ಅವರಿಗೆ ಜೀವನದಲ್ಲಿ ಬೇರೆ ವಿಷಯದ ಧ್ಯಾನವೇ ಇಲ್ಲದಂತೆ ಅವರ ಬಾಳುವೆಯಾಗಿತ್ತೆಂದರೆ ಅತಿಶಯೋಕ್ತಿಯಾಗಲಾರದು (ಹೇಮಂತ. ೧೯೦). **ಸಿವಾಯಿ**: ನಾನು ಪಾಠ, ಊಟದ ಹೊತ್ತುಗಳ ಸಿವಾಯಿ ನಿಮ್ಮ ಬಂಗಲೆಯಲ್ಲಿ ಇರೋದಿಲ್ಲ (ಕಲನೆ.೪೧೬).
[← ಅರ. ಸಿವಾ ; ಮರಾ. ಶಿವಾಈ , ಶಿವಾಯ]

**ಶಿವಾಯಿಜಮೆ** (ನಾ). ೧. ಹಕ್ಕುದಾರರಿಲ್ಲದವರ ಆಸ್ತಿಪಾಸ್ತಿಯನ್ನು ಸರ್ಕಾರಕ್ಕೆ ಸೇರಿಸಿಕೊಂಡುದು : (೬). ೨. ಬೇರೆ ಬಾಬತ್ತಿನಿಂದಾದ ಜಮೆ, – ಸಂಗ್ರಹ : ಜಮಾಬಂದಿಪ್ರಕಾರ ಐನುಜಮೆ, ಶಿವಾಯಿಜಮೆಯೂ ಗುದಸ್ತಾಬಾಕಿ ಸುದಾ ದಾಖಲುಮಾಡಿ (ಮಹಾವಂ. II, ೬೪). [← ಮರಾ. ಶಿವಾಈಜಮಾ]

**ಶಿವಾಯಿಬಾಬು** (ನಾ). ಇತರ ಬಾಬತ್ತು ; ಬೇರೆ ಬಾಬತ್ತು: ಆಚಾರಬಾಬು, ಶಿವಾಯಿಬಾಬುಗಳೆಂಬ ಧಾರ್ಮಿಕನಿಬಂಧನ ಪ್ರಕಾರ ಕಲಹಗಳ (ವ್ಯಾಜ್ಯ)ನಿರ್ಣಯ ಮಾಡಿ (ಗುರುದ.೧೯). [ಶಿವಾಯಿ$_1$ + ಬಾಬು$_1$]

**ಶಿವಾಯಿಮದತ್ತು** (ನಾ). ಬೇರೆ ಬೇರೆ ವಿಧವಾದ ಸಹಾಯ, – ಉಪಕಾರ : ರಾಜ್ಯಸಂರಕ್ಷಣೆಗಾಗಿ ರಾಣೀಸಾಹೇಬರಿಂದ ಕೇಳಿಕೊಳ್ಳಲ್ಪಟ್ಟ ಫೌಜಿನ ಖರ್ಚು ಶಿವಾಯಿಮದತ್ತು ಮಾಡಿದವರ ತವಜ್ಞಾ . . . ರಾಣಿಯವರ ಕಡೆಯಿಂದ ತೆಗೆದುಕೊಳ್ಳುವದಿಲ್ಲ (ಚಾಮವಂ. ೨೨೫). [ಶಿವಾಯಿ$_1$ + ಮದತ್ತು]

**ಶಿವಾರಮಣ** (ನಾ). ಪಾರ್ವತಿಯ ಪತಿ; ಪರಮೇಶ್ವರ : ಹಲಾಯುಧನನೂರ್ಜಿತ ರಜತಶೈಲಕ್ಕೆ ಕೊಂಡೊಯ್ದನು ಶಿವಾರಮಣ (ಬಸವು. ೨೫-೫೧). [ಸಂ.]

**ಶಿವಾರ್ಚನೆ** (ನಾ). ಈಶ್ವರನ ಪೂಜೆ, – ಆರಾಧನೆ : ಕಂಡ ಕನಸು ದಿಟವಾಗಿ ಜಂಗಮ ಮನೆಗೆ ಬಂದರೆ ಶಿವಾ[ಪಾಠಾಂ.ಲಿಂಗಾ]ರ್ಚನೆಯ ಮಾಡಿಸುವೆ (ಬಸವ. ೩೭೧); ಆ ಸುಪ್ರಭಾತಸಮಯದೊಳ್ ಶಿವಾರ್ಚನೆಯಂ ಮಾಡಿ ಸಂಗ್ರಾಮಕ್ಕೆ ಸನ್ನದ್ಧನಾಗಿ ನಡೆಯಲ್ ಪ್ರಾರಂಭಿಸಿ (ಹಮ್ಮೀರ. ೩-೨೭ವ): ಶಿವಾರ್ಚ್ಚನೆಯನು ಮಾಡಿಕೊಂಡು ಸುಖದಲ್ಲಿಯಿರುವರಿಯೆಂದು ಕೊಟ್ಟ ದಾನಸಾಧ(ನ)ನಾ (ಮೈಆರ. ೧೯೩೧, ೫೨-೨೯; 1563). [ಸಂ. ಶಿವಾರ್ಚನ]

**ಶಿವಾರ್ಪಿತ** (ನಾ). ಈಶ್ವರನಿಗೆ ಸಮರ್ಪಿಸಿದುದು: ಶಿವಪ್ರಸಾದಾಮೃತಮಂ . . . ಶಿವಾರ್ಪಿತದೊಡನೆ ಕೈಕೊಂಡು (ಸಂಬಿರ. ೧೦-೩೭); ಕೇತಿಹಳ್ಳಿಗ್ರಾಮವನೂ . . . ಮಹತ್ತಿನ ಮಠದ ಅನ್ನದಾನದ ಧರ್ಮಕೆ ಶಿವಾರ್ಪ್ಪಿತವಾಗಿ ಕೊಟ್ಟೆವಾಗಿ (ಮೈಆರ. ೧೯೩೧, ೩೩-೧೩ ; 1668). [ಸಂ.]

**ಶಿವಾಲಯ** (ನಾ). ೧. ಶಿವನ ದೇವಸ್ಥಾನ; ಈಶ್ವರನ ದೇವಾಲಯ : ಉಳ್ಳವರು ಶಿವಾಲಯವ ಮಾಡುವರು ನಾನೇನ ಮಾಡುವೆ ಬಡವನಯ್ಯಾ (ಬಸವ. ೮೨೦); ಮರುಳುಗೊಂಡು ಶಿವಾಲಯಕೆ ಮಱುದಾದಡಂ ಹೋಗಿ ಶರಣು ಶರಣೆಂದೆನ್ನೆ (ಬಸವು. ೪೧-೭). ೨. ಈಶ್ವರನ ಆವಾಸಸ್ಥಾನ; ಕೈಲಾಸ. [ಸಂ.]

**ಶಿವಾಲ್ಯ** 'ಸಿವಾಲ್ಯ' ನೋ.

**ಶಿವಾಸ್ತ್ರ** (ನಾ). ಐದು ಮಂತ್ರಾಸ್ತ್ರಗಳಲ್ಲಿ ಒಂದು : ಶಿವಾಸ್ತ್ರ ಕ್ಷುರಿಕಾಸ್ತ್ರ ಪಾಶುಪತಾಸ್ತ್ರ ವ್ಯೋಮಾಸ್ತ್ರ ಅಘೋರಾಸ್ತ್ರವೆಂಬ ಪಂಚಾಸ್ತ್ರ ಮಂತ್ರಗಳಂ (ವಿವೇಕ. ೭೫).
[ಸಂ.]

**ಶಿವಾಸ್ಪದ** (ಗು). ಮಂಗಳಕರವಾಗಿರುವ ; ಶುಭಕ್ಕೆ ನೆಲೆಯಾದ : ಸದಾಚಾರ ಸಮೇತರಾದರೆಮಗೀಗೆ ಶಿವಾಸ್ಪದಮುಖ್ಯಸೌಖ್ಯಮಂ ಸೂರಿಗಳಂಗಜಾರಿಗಳ ತತ್ವವಿದಾರಿಗಳುದ್ಧಚಾರಿಗಳ್ (ಶಾಂತಿಪು. ೧-೩). [ಸಂ.]

**ಶಿವಿಕೆ** (ನಾ). ಪಲ್ಲಕ್ಕಿ; ಡೋಲಿ : ನಾನು ಬರುತ್ತಲೇ ಅವರು ಶಿವಿಕೆಗಳನ್ನೇರಿ ಗಂಗಾತೀರದತ್ತ ಹೊರಟರು (ಬಾಣಅ. ೯೧). [ಸಂ. ಶಿವಿಕಾ]

**ಶಿವಿಗೆ** 'ಸಿಬಿಗೆ' ನೋ.

**ಶಿವಿರ** (ನಾ). ಪಾಳೆಯ ; ಶಿಬಿರ: ಶಿವಿರಾಭ್ಯುನ್ನತಕಾಹಳಾಘನರವಂ ಮುಟ್ಟಿತ್ತು ದಿಕ್ಚಕ್ರಮಂ (ಚಂದ್ರಪ್ರ. ೧೦-೧೮). [ಸಂ.]

**ಶಿವೆ** (ನಾ). ೧. ಶಿವನ ಪತ್ನಿ; ಪಾರ್ವತಿ: ಚಂದ್ರಧರಂಗೆ ಮುದದಿಂದಂ ಚಂದ್ರಾನನೆ ಶಿವೆಯನೊಲ್ದು ಕೊಡು ಗಿರಿರಾಜಾ (ಗಿರಿಜಾ. ೧೦-೨೬ವ); ಶಿವೆಯ ವರದಿಂದೆ ಪುಟ್ಟಿದ ಕುವರಿಯಿವಳ್ (ರಾಜಶೇ. ೮-೭೭). ೨. ಅಳಲೆಕಾಯಿ; ಹರೀತಕಿ: "ಚೇತಕಿ ಶಿವೆ ಹೈಮಾವತಿ ಹರೀತಕಿ" (ವಸ್ತುಕೋ. ೩೫-೧೨); ಶಿವೆ[ಪಾಠಾಂ.ಸಿಲೆ]ಯಂ ಫಲತ್ರಯಮನ ಮರ್ದುವಳ್ಳಿಯಂ ಮಧುಕಮಂ . . . ಸಣ್ಣಿಸಿ ತಿನೆ ಬೇಱೆವೇಱೆ ನಿರ್ವ್ಯಾಜದಿಂ ಪ್ರಮೇಹಂ ಕಿಡುಗುಂ (ಲೋಕೋಪ. ೯-೧೩೭). ೩. ನೆಲ್ಲಿಗಿಡ ಮತ್ತು ಅದರ ಕಾಯಿ; ಆಮಲಕ: "ಧಾತ್ರೀ, ಆಮಳಕೀ, ಶಿವಾ – ಈ ೩ ನೆಲ್ಲಿ" (ಹಲಾಯು. ೧೧೧-೪೭೪). ೪. ಬನ್ನಿಮರ; ಶಮೀವೃಕ್ಷ : "ಶಮೀ, ಸಕ್ತುಫಲಾ, ಶಿವಾ – ೩ ಬನ್ನೀಮರದ ಹೆಸರುಗಳು" (ಸಿದ್ಧಾಂತಿ. ೧೨೪). ೫. ನರಿ; ಜಂಬುಕ : ಈ ಮಹೋಗ್ರಕೇಸರಿಕರಿಕಂಠಗರ್ಜಿತ ಮಹಾಟವಿಯೊಳ್ ಮಱಿಕೆಂದಿ ನೀಮುಮೀ ಮರದಡಿಯೊಳ್ ಶಿವಾಶಿವರವಂಗಳಿ ನೆಟ್ಟುಱುವಂತುಟಾದುದೇ (ಪಂಪಭಾ. ೩-೧೧). ೬. ಅದೃಷ್ಟವಂತೆ. ೭. ಮುಕ್ತಿ. ೮. ಹುಲ್ಲು; ಗರಿಕೆ. ೯. ಅರಿಸಿನ. [ಸಂ. ಶಿವಾ]

**ಶಿವೇತರ** (ನಾ). ಅಶುಭವಾದುದು : ಶೈವಾಧಾರೇ ಶಿವೇತರವಾರಿಣೇ ಡಮಿಸು ಭವಮಂ . . . ಪಾರ್ವತೀ (ಪ್ರಪಾವಿ. ೪-೧೨೭). [ಸಂ.]

**ಶಿವೈಕ್ಯ** (ನಾ). ೧. ಶಿವನಲ್ಲಿ ಸೇರುವುದು, – ಲೀನವಾಗುವುದು. ೨. ಶಿವನಲ್ಲಿ ಸೇರಿದವನು : ಶಿವನಂ ಭಜಿಸಿ ಮೆಱೆವ ಶಿವೈಕ್ಯರಾಳಾನು (ಬಸವು. ೨೭-೭೧).
[ಸಂ.]

**ಶಿವೋಚ್ಛಿಷ್ಟಭುಕ್ತಿ** (ನಾ). ಶಿವನಿಗೆ ನೈವೇದ್ಯ ಮಾಡಿದ ಪದಾರ್ಥವನ್ನು ಭುಜಿಸುವುದು : ಉದಯದೊಳ್ ಜಪ ಶಿವಾರ್ಚನೆ ಶಿವಧ್ಯಾನಗಳ್ ತದನಂತರಾಗಮ ಪುರಾಣನಿಗಮಾವಳಿಯ ಚದುರಪ್ರಸಂಗ ಮೇಣದೞ ಕಡೆಯೊಳ್ ಶಿವಾರ್ಚನೆ ಶಿವೋಚ್ಛಿಷ್ಟಭುಕ್ತಿ (ಏಕೋಪು. ೭-೪೪). [ಸಂ.]

**ಶಿವೋಪಾಸನೆ** (ನಾ). ಶಿವನ ಸೇವೆಮಾಡುವುದು ; ಶಿವನನ್ನು ಉಪಚರಿಸುವುದು: ಶಿವೋಪಾಸನೆಯ ವಿನಾ ಅನ್ಯದೇವೋಪಾಸನೆಯನ್ನು ಮಾಡದ, ಶಿವಜೀವೈಕ್ಯಬೋಧಕವಾದ ವಿದ್ಯೆಯಲ್ಲಿ ನಿರತರಾಗಿರುವವರು (ಭಾರದ. ೬೪).
[ಸಂ. ಶಿವೋಪಾಸನ]

**ಶಿವೋಹಂ** (ನಾ). 'ನಾನೇ ಶಿವನು' ಎಂಬ ಭಾವ : ಸೋಹಂ ಎಂದಡೆ ಅಂತರಂಗದ ಗರ್ವ ಶಿವೋಹಂ ಎಂದಡೆ ಬಹಿರಂಗದ ಅಹಂಕಾರ (ಅಖಂಡೇ. ೬೧-೭೧); ಶಿವೋಹಂ— ಶಿವನೇ ನಾನೆಂಬ ಭಾವ , 'ಶಿವೋಸ್ಮಿ' ಎಂಬುದು (ಶರಪಾ. ೨೪-೮). 'ದಾಸೋಹಂ' ಪರಾ. [IP ಸಂಸ್ಕೃತದಲ್ಲಿ 'ಶಿವಃ ಅಹಂ' ಎಂಬುದು ಒಂದು ವಾಕ್ಯ. ಕನ್ನಡದಲ್ಲಿ ಇದು ಒಂದು ಪದವಾಗಿ ಬಳಕೆಯಾಗಿದೆ]

**ಶಿಶಿರ** (ಗು). ೧. ತಣ್ಣಗಿರುವ; ತಂಪಾದ; ಶೀತಲವಾದ : ಅಂತು ಕಾಳಿಂದೀಜಲಶಿಶಿರ ಶೀಕರವಾರಿಚಾರಿಯುಂ . . . ಆಗಿ ಬಂದ ಮಂದಾನಿಲಕ್ಕೆ ಮೆಯ್ಯನಾಱಿಸುತ್ತುಂ (ಪಂಪಭಾ. ೫-೫೩೭). (ನಾ). ೨. ತಂಪು; ಶೀತ; ಚಳಿ. ೩. ಹಿಮ; ಮಂಜು : "ಪ್ರಾಳೇಯಂ . . . ಶಿಶಿರಂ, ಹಿಮಂ, ತುಷಾರಂ, ಮಿಹಿಕಾ, ನೀಹಾರಃ – ಈ ೮ ಮಂಜು" (ಹಲಾಯು.೧೦೭-೨೮); ಶಿಶಿರಪಯಃಕಣವೆಳಸಿದ ಕುಶೇಶಯಚ್ಛದಮನಕ್ಷಿಗಳ್ ಬಾಷ್ಪಜಲಪ್ರಶಮಿತರುಚಿಗಳ್ ಪೋಲ್ತಿರೆ (ಜಗವಿ. ೩-೮೭). ೪. ಆರು ಋತುಗಳಲ್ಲಿ ಒಂದು; ಮಾಘ ಮತ್ತು ಫಾಲ್ಗುನ ಮಾಸಗಳನ್ನೊಳಗೊಂಡಿರುವ ಋತು: ಮುಂ ಮಹಿಯೆಲ್ಲಮಂ ಶಿಶಿರರಾಜನೆ ಬಿಚ್ಚತಮಾಳ್ದಂ (ಪಂಪಭಾ. ೫-೩೧) ; ಶಿಶಿರದ ತವುದಲೆಯುಂ ನವವಸಂತಸಮಯ ಪ್ರವೇಶಮುಂ ತಮ್ಮೊಳ್ ಸಂದಿಸೆ ಬಣ್ಣಿಸಲರಿದಾದೊಡಂ . . . ವಿಭಾಗಿಸಿ ಪೇಳ್ವೆಂ (ಗಿರಿಕ. ೭-೩೫). ೫. ಹಿಮಕರ; ಚಂದ್ರ: ಗಗನಕ್ಕೆ ಶಿಶಿರನಂತೆ ಕೊಳಕ್ಕುಳ್ಳಲರ್ದಬ್ಜದಂತೆ ಕುರುಜಾಂಗಲವಿಷಯಂ ನಯನವಿಷಯಸುಖಮಂ ಪಡೆಗುಂ (ಶಾಂತಿಪು. ೯-೧೩೨). [ಸಂ.]

**ಶಿಶಿರಕರ** (ನಾ). ೧. (ಚಂದ್ರನ) ತಂಪಾದ ಕಿರಣ,— ಶೀತಲ ರಶ್ಮಿ : ಆ ಬಾಲಕರ್ . . . ಶಿಶಿರಕರನಿಕರದಂತೆ ಕುಮುದಪ್ರಕಾಶಕರರುಂ (ಸುಕುಮಾ. ೨-೫ ವ). ೨. ತಂಪಾದ ಕಿರಣಗಳುಳ್ಳವನು ; ಚಂದ್ರ : ಅಮೃತಭವಂ ಶಿಶಿರಕರಂ (ಕವಿರಾ. ೩-೭೪); ಶಿಶಿರಕರನಲ್ಲಿ ನಿಂದೊಡಮಶಿಶಿರಕಿರಣಾದಿಗಳ್ ನಿರೀಕ್ಷಿಪೊಡೆ ಫಲಂ . . . ದೊರೆಕೊಳ್ಗುಂ (ಜಾತತಿ. ೨೦-೧೫). [ಸಂ.]

**ಶಿಶಿರಾಂಶು** (ನಾ). = ಶಿಶಿರಕರ ೨ : ಅಮೃತಮಯಕಿರಣನೆಂಬುದುಮಮರದು ಶಿಶಿರಾಂಶುವೆಂಬುದುಂ ಶಶಿಗೆಂದುಂ (ಕವಿರಾ. ೩-೧೮೩). [ಸಂ.]

**ಶಿಶಿರೋಪಚಾರ** (ನಾ). ತಂಪನ್ನುಂಟುಮಾಡುವ ಶುಶ್ರೂಷೆ ; ಶೈತ್ಯೋಪಚಾರ: ತರಳಿಕೆ ತಂದ ಚಂದನದ ಚರ್ಚೆಗಳಿಂ ಮತ್ತಮನೇಕಶಿಶಿರೋಪಚಾರಂಗಳಿಂದುಪಚರಿಸಲ್ (ಕಾದಂಪೂ. ೮೮೪); ಮೂರ್ಛಾಪ್ರಸಂಗನಾದ ಪನ್ನಗಪತಾಕಂಗೆ ಶಿಶಿರೋಪಚಾರ ಕ್ರಿಯೆಗಳಂ ಮಾಡ್ಪ ಸಂಜಯನಿರವಂ ತತ್ಪರಿಜನಂ ಕಂಡು (ಗದಾಯು. ೩-೭೭ ವ); ಪರಿಹರಿಸಲೆಂದು ವಿರಹಜ್ವರಮಂ ಶಿಶಿರೋಪಚಾರಮೆಸಗಿದೊಡದು ತಾಂ ಪಿರಿದಾದುದಕಟ (ರಾಜಶೇ. ೭-೭೫). [ಸಂ.]

**ಶಿಶಿರೋಪಸೇವನೆ** (ನಾ). ೧. ಶಿಶಿರಋತುವಿನ ಆಗಮನ ; ಶಿಶಿರವನ್ನು ಪಡೆಯುವುದು. ೨. ತಂಪನ್ನು ಹೊಂದುವಿಕೆ; ಶೈತ್ಯೋಪಚಾರ. ೧ , ೨: ಘನಸಮಯಾತ್ಮನಾಥವಿರಹಾತುರೆ ಭೂವಧು ಭೂಮಿಭೃದ್ಘನಸ್ತನೆ ಶಿಶಿರೋಪಸೇವನೆಯ ನೊಂದಿರೆ ಬಂದಿರೆ ಚೈತ್ರನಾಗಳ್ (ರಾಜಶೇ. ೫-೩೦). [ಸಂ. ಶಿಶಿರೋಪಸೇವನ]

**ಶಿಶು** (ನಾ). ೧. ಕೂಸು; ಮಗು; ಹಸುಳೆ : ಬಾಲತ್ವದೊಳಂ ಗುಣಮಣಿಮಾಲಿನಿ ಶಿಶು ಸುಮತಿ . . . ಜಿನಪತಿಗೆ ವಿನಯವಿನಮಿತೆಯಕ್ಕುಂ (ಶಾಂತಿಪು. ೪-೮೭); ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ . . . ಬಯಸುತ್ತಿರ್ದೆನಯ್ಯಾ ನಿಮ್ಮ ಶರಣರ ಬರವನು (ಬಸವ. ೩೬೫). ೨. ಯಾವುದಾದರೂ ಪ್ರಾಣಿಯ ಮರಿ : "ಶಿಶು ಶಾಬಂ ಪೋತಂ ಮಱಿ" (ವಸ್ತುಕೋ. ೮೬-೨೫); ಜಲವಿಕಳಮಾಗಿರ್ದ ಜಲಾಶಯದೊಳ್ ಶಿಶುಕುಳೀರಂ ನೀರಂ ಪಡೆಯದೆ ಮಲುಮಲನೆ ಮಱುಗುತ್ತಿರ್ದುದಂ ಕಂಡು ಕರುಣಿಸಿ (ಪಂಚತಂ. ೨೯೮-೧೬). ೩. ಶಿಷ್ಯ; ವಿದ್ಯಾರ್ಥಿ. [ಸಂ.]

**ಶಿಶುಕ** (ನಾ). ಒಂದು ಬಗೆಯ ಮೀನು; ಉಣಚಿ : "ಉಲೂಪೀ, ಶಿಶುಕಃ — ೨ ಶಿಶುವಿನ ಹಾಗೆ ಚಪಲವಾದ ಉಣಚಿಮೀನಿನ ಹೆಸರುಗಳು" (ಸಿದ್ಧಾಂತಿ. ೮೨). [ಸಂ.]

**ಶಿಶುಗೀತ** (ನಾ). ಮಕ್ಕಳಿಗಾಗಿ ರಚನೆಯಾದ ಹಾಡು; ಮಕ್ಕಳ ಹಾಡು: ಜಾನಪದಗೀತ ಮತ್ತು ಶಿಶುಗೀತ; ಲಯದ ಗೂಢಾತ್ಮ ; ಅಲೆಗ್ಸಾಂಡ್ರೀಯ, ಅಷ್ಟಾಕ್ಷರೀಯ ಮತ್ತು ಸರಳರಗಳೆಯ ಛಂದೋಬಂಧಗಳು (ನವ್ಯಕಾ.೧೩೨). [ಸಂ.]

**ಶಿಶುಘಾತಕ** (ನಾ). ಮಗುವನ್ನು ಕೊಲ್ಲುವವನು; ಶಿಶುಹತ್ಯ ಮಾಡುವವನು: ಜ್ವಲನದನ ಶಿಶುಘಾತಕನ ಪರಿದಳಿತಧರ್ಮನ ಗತಿಗಳಲಿ ತಾನಿಳಿವೆನಿಂದೇ ಕೊಲ್ಲದಿರ್ದರೆ ಸೂತನಂದನನ (ಕುಮಾ.ಕ. ೧೮-೭). [ಸಂ.]

**ಶಿಶುತನ** (ನಾ). ೧. ಎಳೆಯ ಪ್ರಾಯ; ಶೈಶವ: ಶಿಶುತನದಲಿ ಸಮಸ್ತ ವಿದ್ಯಾವ್ಯಸನಿಗಳು ಯೌವನದೊಳನುಭವವಿಷಯಿಗಳು (ತೊರರಾ. ೧-೩-೧೯); ಕಲ್ಲೊಳಗುದಯಿಪ ಹಗ್ಗಿಯವೊಲ್ ಶಿಶುತನವುಳಿದೇಱುಂಜೌವನವ ವಿದಿತಮೆನಲ್ಪಡೆದರಸುಮಗನ ನಿಜವದನಂಗಾಣುತ (ಜಯಕಾ. ೨-೬೭). ೨. ಹುಡುಗಾಟಿಕೆ; ಬಾಲಿಶ ಭಾವ: ಅಸಮಪದ್ಮವ್ಯೂಹವನು ಭೇದಿಸುವನಾವವನೆನಲು ಕೇಳಿದು ಶಿಶುತನದಲಾಹವಕೆ ನಡೆದನು ನಾವು ಬೇಡೆನಲು (ಕುಮಾದ್ರೋ. ೮-೨೨). [ಶಿಶು + — ತನ]

**ಶಿಶುತೆ** (ನಾ). = ಶಿಶುತನ ೧: ಮನುಜಂ ವಜ್ರಸಮುದ್ಭವಂ ಶಿಶುತೆಯೊಳ್ ವೃದ್ಧತ್ವದೊಳ್ ಸೌಖ್ಯಭಾಜನನಕ್ಕುಂ (ಜಾತತಿ.೧೩-೧೭); ನವೋದಯದೊಳವಾ ಪ್ರಶಮಿತತಮನೊಳ್ ನೆಱೆದುದು ಶಿಶುತೆಯೊಳಂ ನಾಡೆ ರೂಢಿವೆತ್ತ ವಿವೇಕಂ (ಚಂದ್ರಪು. ೨-೧೯). [ಸಂ. ಶಿಶುತಾ]

**ಶಿಶುತ್ವ** (ನಾ). = ಶಿಶುತನ ೧: "ಶಿಶುತ್ವಂ, ಶೈಶವಂ, ಬಾಲ್ಯಂ — ೩ ಹದಿನಾರು ವರುಷಗಳಿಗೆ ಕಡಮೆಯಾದ ವಯಸ್ಸು, ಹುಡುಗುತನ" (ಸಿದ್ಧಾಂತಿ.೧೭೯). [ಸಂ.]

**ಶಿಶುಪ್ರಾಸ** (ನಾ). ಮಕ್ಕಳಿಗೆ ಪ್ರಿಯವಾಗುವಂತೆ ರಚಿಸುವ ಪ್ರಾಸಸಹಿತವಾದ ಪದ್ಯ : ಈಚೆಗೆ ಕನ್ನಡದಲ್ಲೂ ಶಿಶುಪ್ರಾಸಗಳ ರಚನೆ ಹೆಚ್ಚಾಗಿದೆ (ರೂಢಿ). [ಸಂ.]

**ಶಿಶುಮತಿ** (ನಾ). ೧. ಮಗುವಿನ ಬುದ್ಧಿ. ೨. ಮಗುವಿನಂತೆ ಬುದ್ಧಿಯುಳ್ಳವನು: ಶಿಶುಮತಿಗಳಿಗೆ ಹೇಳಯ್ಯ, ನಿನ್ನ ಹದಿಬದೆತನದ ಹಿರಿಮೆಯಂ! (ಶ್ರೀರಾಮಾ. ೨೨೨-೩೧೮). [ಸಂ.]

**ಶಿಶುಮಾರ** (ನಾ). ೧. ತಿಮಿವರ್ಗಕ್ಕೆ ಸೇರಿದ ಸಮುದ್ರಪ್ರಾಣಿ: ಮೊಸಳೆ: ಲೋಭಮಕರಾನೀಕಂಗಳಾಟಂದು ನುಣ್ಣಗೆ ನುಂಗುತ್ತಿರೆ ಮಾರರಾಗಶಿಶುಮಾರಂಗಳ್ ಮಹೋಗ್ರಂಗಳಿನ್ನೆಗಮೋರಂತೆ ತೊಟಲ್ದಂ (ಆದಿಪು. ೯-೬೦); ಮಧುವಿಂ ಕೃತಪಾನದೆ ನಸ್ಯದಿಂದೆ ತಾಂ ತೊಲಗುಗುಮುಗ್ರಮಪ್ಪ ಶಿಶುಮಾರವಿಷಂ (ಖಮದ. ೧೩-೯೭). ೨. [ಜ್ಯೋತಿ] ಒಂದು ನಕ್ಷತ್ರಪುಂಜದ ಹೆಸರು. [ಸಂ.]

**ಶಿಶುರಾಜ** (ನಾ). ೧. ಮಕ್ಕಳ ನಾಯಕ; ಶಿಶುಗಳಲ್ಲಿ ಶ್ರೇಷ್ಠನಾದವನು. ೨. ಬಾಲಚಂದ್ರ. ೧ , ೨: ಕುಮುದಾನಂದನನಪರಾಜಿತಂ ಪ್ರಸನ್ನಂ ಶಿಶುರಾಜಂ ದಲೆನೆ ಸಂದು ಪರಿಪೂರ್ಣೇಂದುವಿಲಾಸದಿನದೇಂ ಪೊಡಟ್ಟೊದವಿದನೋ (ಶಾಂತಿಪು. ೨-೨). [ಸಂ. ಶಿಶುರಾಜನ್]

**ಶಿಶುವಧ** (ನಾ). ಮಗುವಿನ ಕೊಲೆ; ಹಸುಳೆಯ ಹತ್ಯೆ : ದಿವಿಜವಧಪಟುಗೆ ನಿನಗಭಿಭವಮಿಾ ಶಿಶುವಧಮೆನಲ್ಕೆ ಮಾಣ್ಬನೆ ಮತ್ತೇಭವಧಪ್ರಚಂಡಯಮದಂಡವದೇಂ ಮಾಣ್ಬುದೆ ಪಿಪೀಲಿಕಾವಧವಿಧಿಯಂ (ಜಗವಿ. ೨-೫೪). [ಸಂ.]

**ಶಿಶುವಿಹಾರ** (ನಾ). ಮಕ್ಕಳ ದೈಹಿಕ ಹಾಗೂ ಮಾನಸಿಕವಿಕಾಸಕ್ಕೆ ಅನುಕೂಲವಾಗುವಂತೆ ರಚನೆಯಾದ ಪಾಠಶಾಲೆ; ಬಾಲವಾಡಿ: ಹೊಸದಾಗಿ ಸ್ಥಾಪಿತವಾಗಿರುವ ಒಂದು ಶಿಶುವಿಹಾರಕ್ಕೆ ಅವಳೇ ಮುಖ್ಯೋಪಾಧ್ಯಾಯಿನಿ (ದೂರಸ. ೩೩೩); ೩ ವರ್ಷಗಳಿಂದ ೬ ವರ್ಷಗಳ ತನಕ ಮಕ್ಕಳಿಗೆ ಅನುಕೂಲಿಸುವಂತೆ ಶಿಶುವಿಹಾರಗಳೆಂಬ ನೂತನಶಿಕ್ಷಣಸಂಸ್ಥೆಗಳು ಪ್ರಚಾರಕ್ಕೆ ಬರುತ್ತಿವೆ (ಶಿಕ್ಷದ. ೧೮೪). [ಸಂ.]

**ಶಿಶುವೇಷ** (ನಾ). ೧. ಮಗುವಿನ ಉಡುಗೆತೊಡುಗೆ. ೨. ಮಗುವಿನ ರೂಪ, ಆಕಾರ : ನಂಬಿಯಣ್ಣಂ ಶಿಶುವೇಷದೊಳ್ ನಳನಳಿಸಿ ತೊಳತೊಳಗಿ ಕಂಡವರ ಕಣ್ಣಾ ಮಣಿ . . . ಎನಿಸಿ (ನಂಬಿರ. ೨-೧). [ಸಂ.]

**ಶಿಶುಸಂಗೋಪನೆ** (ನಾ). ಮಕ್ಕಳನ್ನು ಸಾಕುವುದು; ಹಸುಳೆಗಳನ್ನು ಪೋಷಿಸುವುದು : ಗೃಹದೇವತೆಗೆ ಶಿಶುಸಂಗೋಪನೆಯೊಂದಿಗೆ ಮನೆಯ ಎಲ್ಲಾ ಕೆಲಸಗಳ ಹೊಣೆಯೂ ಸೇರಿದ್ದು (ಹೊಸಕ್ಕ.೩೦). [ಸಂ. ಶಿಶುಸಂಗೋಪನ]

**ಶಿಶುಹತ್ಯೆ** (ನಾ). = ಶಿಶುವಧ : ಅವನು ಹಿಂದೂಸಮಾಜದಲ್ಲಿ ಬೆಳೆದು ಬಂದಿದ್ದ ಸ್ತ್ರೀ, ಶಿಶುಹತ್ಯೆ, ಸಹಗಮನ ಮತ್ತು ಪ್ರಾಣಿಬಲಿ ಮುಂತಾದ ಪದ್ಧತಿಗಳನ್ನು ತಪ್ಪಿಸಲು . . . ಸಾಮಾಜಿಕ ಸುಧಾರಣೆಗಳನ್ನು ಕೈಗೊಂಡ (ಕವಿಕೋ. I, ೧೫೮). [ಸಂ. ಶಿಶುಹತ್ಯಾ]

**ಶಿಶ್ನ** (ನಾ). ೧. ಪುರುಷನ ಜನನೇಂದ್ರಿಯ : ಗುದ ಶಿಶ್ನ ನಖಗಳಂ . . . ಕಿಟ್ಟಂ ಮೂತ್ರಗಳ್ಸಹಂ ಭೇದಿಸಿಯೆ ಪೊಱಮಡುವವು (ಲಶಿಚಂ. ೩೯-೩೧). ೨. ಬಾಲ. [ಸಂ.]

**ಶಿಶ್ಯಸಂತತಿ** (ನಾ). ವಿದ್ಯಾರ್ಥಿಪರಂಪರೆ : ಸನ್ನಿಗಣದ ಶಾನ್ತಿಮುನಿಗಳ ಶಿಶ್ಯಸನ್ತತಿ ಶ್ರೀ ವಾದಿರಾಜದೇವರ ಶಿಷ್ಯರು (ಮೈಶಿ. ೧೯೨೯ ೩೧-೩. ; ೧೧ನೆಯ ಶತ). [IP ಇದು 'ಶಿಷ್ಯಸಂತತಿ' ಎಂಬುದರ ಅಪಲಿಖಿತ]

**ಶಿಶ್ರೂಷೆ** (ನಾ). ಸೇವೆ; ಉಪಚಾರ : ವೇಸಿಯಹ ಪರಿಯಂಕದಲಿ ನಿಜದಾಸಿಯಹ ಶಿಶ್ರೂಷೆಯಲಿ [ಪಾಠಾಂ. ಪರಿಚರ್ಯೆಯೊಳು] ನಿರ್ದೋಷಿಯಹ ಪತಿಭಕ್ತಿಯಲಿ ಮೋಹದಲಿ ತಾಯೆನಿಸಿ (ಕುವ್ಯಾಉ. ೩-೮೦). [< ಸಂ. ಶುಶ್ರೂಷಾ]

**ಶಿಷಿತ್ತಿ, ಶಿಷ್ಷಿಂತಿ, ಷಿಶಿಂತಿ, ಸಿಶ್ಶಂತಿ, ಸಿಷಿತ್ತಿ, ಸಿಷ್ಯಿಂತಿ** (ನಾ). ಗುರುಗಳಲ್ಲಿ ಅಭ್ಯಾಸ ಮಾಡುವವಳು; ವಿದ್ಯಾರ್ಥಿನಿ; ಶಿಷ್ಯೆ: ಅದೆ ಯಜೆನಾಡ ಚಿತ್ತೂರ ಮೋನಿಗುರುವಡಿಗಳ ಶಿಷಿತ್ತಿಯರ್ ನಾಗಮತಿಗನ್ತಿಯರ್ ಮೂರುತಿಂಗಳ್ ನೋನ್ತು ಮುಡಿಪ್ಪಿದರ್ (ಎಕ.II, ೨೦-೧; ಸು. 700); ಸನ್ಯಸನಂಗೆಯ್ದು ಮುಡಿಪಿದರವರ ಶಿಷಿತ್ತಿಯರಪ್ಪ ಮಾದೇವಿಕಂತಿಯರ್ (ಎಕ. XIV, ಮಂಡ್ಯ. ೧೫೦-೯; ?). **ಶಿಷ್ಷಿಂತಿ:** ಮಹತ್ತ್ವದಿಂ ಸಿರಿಯನನ್ದಿಮುನೀಂದ್ರರೆ ದೇವರುವ್ವಿಯೊಳ್ ಅವರ ಶಿಷ್ಷಿಂತಿಯರ್ (ಇಆ. XVIII, ೩೮-೯; 1076). **ಷಿಶಿಂತಿ:** ತೊಯ್ಯಬ್ಬೆರಳಿಯರ ಪೆರಿಯ ಷಿಶಿನ್ತಿಯಳ್ ಅಮಿಬ್ಬೆಕನ್ತಿಯಳ್ (ಎಕ. XIV, ತಿರುಮ. ೮೮-೧೧;?). **ಸಿಶ್ಶಂತಿ:** ಗುಣ[ಭದ್ರ] ಸಿದ್ಧಾಂ[ತಿ]ದೇವರ ಸಿಶ್ಶಂತಿಯರಪ್ಪ ಶ್ರೀಮೋನಿಮನಿಕನ್ತಿಯರ (ಸೌಇ. XX, ೩೨-೪೦; 1045). **ಸಿಷಿತ್ತಿ:** ಮಾಳವೆಕನ್ತಿಯರ ಸಿಷಿತ್ತಿಯರಪ್ಪ ಮಂಕಬ್ಬೆಕನ್ತಿಯರ್ (ಎಕ. IX (S), ಬೆಂಗಳೂ. ೯೩-೭; 1000). **ಸಿಷ್ಯಿಂತಿ:** ಶ್ರೀಮತ್ ಪ್ರಭಾಚನ್ದ್ರಸಿದ್ಧಾನ್ತದ ಭಟಾರರ ಸಿಷ್ಯಿನ್ತಿಯರಪ್ಪ ದೇವಿಯಬ್ಬೆ ಕನ್ತಿಯರ ನಿಸಿಧಿಗೆ (ಎಕ. XV, ಹೊಳನ. ೭೫-೧೦; 950). [< ಶಿಷ್ಯ + - ಇತ್ತಿ]

**ಶಿಷ್ಟ** (ಗು). ೧. ಉಳಿದ; ಮಿಕ್ಕ. ೨. ಅಪ್ಪಣೆಮಾಡಿದ; ಆಜ್ಞಾಪಿಸಿದ. ೩. ಯೋಗ್ಯವಾದ; ಉತ್ತಮವಾದ: ರೂಢಿವಶದಿಂ ಸಲೆ ಸಲ್ವುದಿದಲ್ತೆ ಶಿಷ್ಟಸಂಭಾವಿತಮಪ್ಪ ಕಾವ್ಯಸಮಯಂ (ಕಾವ್ಯಾವ. ೮೪೪); ಶಿಷ್ಟ ಸಾತ್ವಿಕಕೆ ಸೆಡೆಯುವುದೆ ಭ್ರಷ್ಟನೀಚ್ನಸನೀತಿ? (ಶ್ರೀರಾಮಾ. ೨೯೧ - ೧೫೭). ೪. ಪಳಗಿದ; ತರಪೇತು ಹೊಂದಿದ. (ನಾ). ೫. ಒಳ್ಳೆಯದು; ಉತ್ತಮವಾದುದು : ಆ ಮಾತು ಶಿಷ್ಟವಿರುದ್ಧ ಸಾಧ್ಯವಲ್ಲವೆಂದು ನಿನಗೆ ಹಿಂದೆ ಹೇಳಿದ್ದೆ (ಶಾಂತಲಾ. ೨೪೯). ೬. ಒಳ್ಳೆಯ ನಡವಳಿಕೆ; ಸದಾಚಾರ : ಬಸವ ಶಿಷ್ಟದಿಂ ಕಾಣ್ಬಳತಯಲಿ ನಡೆವಷ್ಟು ದೂರಂ ಕೀರ್ತಿ ಸುತ್ತೂಸೆದಷ್ಟುಮಂತ್ರದೊಳಿಂತು ಯೋಜನಮಾತ್ರವೈತಂದು (ಬಸಪು. ೪-೫೦). ೭. ಯೋಗ್ಯನಾದ ವ್ಯಕ್ತಿ; ಉತ್ತಮನಾದವನು : ಶಿಷ್ಟರಶಿಷ್ಟಮೆನೆ ಪಾಸಟಿಯೊಳ್ ಕೂಸನಪ್ಪಳಿಸಿ (ಜಗವಿ. ೨-೫೩ವ); ಓಲೆಯುಡುಗೊಜೆಸಹಿತ ಧರಣೀಪಾಲರಿಗೆ ಪಾಂಡವರು ಶಿಷ್ಟರು ಕಾಳಗಕೆ ನೆರವಾಗಲೋಸುಗ ಕರೆದರಲ್ಲಲ್ಲಿ (ಕುವ್ಯಾಉ. ೧-೧೫); ಮೋಹಕ್ಕೆ ಬೀಳದವನೂ, ಕ್ರೋಧವಿಲ್ಲದವನೂ, ಶಿಷ್ಟನೆಂದು ಬೋಧಾಯನರು ನುಡಿದಿದ್ದಾರೆ (ಆರ್ಯಧ. ೫೭). ೮. ಜ್ಞಾನಿ ; ತಿಳಿದವನು. ೯. ಆದೇಶ ; ಆಜ್ಞೆ. [ಸಂ.]

**ಶಿಷ್ಟಜನ** (ನಾ). ಯೋಗ್ಯರಾದ ಮಂದಿ; ಸುಸಂಸ್ಕೃತರಾದ ಜನ: ಶಿಷ್ಟಜನೋಚ್ಚಿಷ್ಟಂ ಬಹುಕಷ್ಟಂ ಬಹುದುಷ್ಟಮಪ್ಪಕರ್ಮಾಗ್ನಿಪರಿಪುಷ್ಟಂ . . . ಸಂಸಾರಂ (ಅಜಿಪು. ೨-೭೪); ನೀರ್ಗುಡಿಯಲೆಜಿವುತ್ತ ಮೊನೆವೆರಸಿದಲಗಂ ತೋರ್ಪ ಕುಡಿ ನಾಲಗೆಯೊಲೊಪ್ಪೆಯೊಪ್ಪಿದರು ಶಿಷ್ಟ[ಪಾಠಾಂ.ಪಾಂಥ]ಜನಕಟ್ಟ ಬಲುಗಾಣದಂತೆ (ಹಚಕಾ. ೪-೩೮). [ಸಂ.]

**ಶಿಷ್ಟತನ** (ನಾ). ಯೋಗ್ಯವಾಗಿರುವಿಕೆ; ಸಭ್ಯವಾಗಿರುವಿಕೆ: ಕಟ್ಟಾಳು ಶಿಷ್ಟತನಕ್ಕೆ ಹೋಹ ಕಷ್ಟವ ನೋಡಾ (ಬಸವ. ೬೯೭). [ಶಿಷ್ಟ + - ತನ]

**ಶಿಷ್ಟತೆ** (ನಾ). ಸಭ್ಯವಾಗಿರುವಿಕೆ; ಯೋಗ್ಯವಾಗಿರುವಿಕೆ: ಶಿವಾರ್ಚನ ನಿತ್ಯನೈಮಿತ್ತಿಕದ ಕರ್ಮಗಳ ಸನುಮತದಲಾರ್ಜಿಸಲು ಶಿಷ್ಟತೆ ಜನಕೆ ಕರ್ಮವಿಲೋಪಭ್ರಷ್ಟತೆ ಎನುತ ವಿಧಿಯಿರಲೆಂತುಪೇಕ್ಷೆಯ ಮಾಡಲಹುದೆಂದ (ಗಗತಾ. ೧೭-೩೧). [ಸಂ. ಶಿಷ್ಟತಾ]

**ಶಿಷ್ಟಪರಿಪಾಲಕ** (ನಾ). ಸಭ್ಯರನ್ನು ಕಾಪಾಡುವವನು; ಸಜ್ಜನರನ್ನು ರಕ್ಷಿಸುವವನು : ದುಷ್ಟನಿಗ್ರಹ ಶಿಷ್ಟಪರಿಪಾಲಕ ನಮ್ಮ ಕೂಡಲ ಸಂಗಮದೇವ (ಬಸವ. ೫೪೮). [ಸಂ.]

**ಶಿಷ್ಟಪರಿಪಾಲನೆ** (ನಾ). ಸಭ್ಯರನ್ನು ಕಾಪಾಡುವಿಕೆ; ಯೋಗ್ಯರನ್ನು ಸಲಹುವಿಕೆ: ದುಷ್ಟನಿಗ್ರಹ ಶಿಷ್ಟಪರಿಪಾಲನೆಯೇ ಭಗವದವತಾರದ ಗುರಿ (ರೂಢಿ). [ಸಂ. ಶಿಷ್ಟಪರಿಪಾಲನ]

**ಶಿಷ್ಟಪಾಲಕ** (ನಾ). = ಶಿಷ್ಟಪರಿಪಾಲಕ: ಶಿವಂ ಸರ್ವಥಾ ದುಷ್ಟನಿಗ್ರಹ ಶಿಷ್ಟಪಾಲಕಂ (ಚೆಬಪು. ೪೭-೨೭). [ಸಂ.]

**ಶಿಷ್ಟಪ್ರತಿಪಾಲನ** (ನಾ). ಯೋಗ್ಯರನ್ನು ರಕ್ಷಿಸುವುದು: ದುಷ್ಟನಿಗ್ರಹ ಶಿಷ್ಟ ಪ್ರತಿಪಾಲನಾರ್ಥಮೆನ್ನವತಾರಂ (ಜಗವಿ. ೩-೮೨); ವಿಹಿತಂ ಕ್ಷತ್ರಿಯನಂದನಂಗೆ ದಿಟಮೆಂತುಂ ನೀತಿಯೊಳ್ ದುಷ್ಟನಿಗ್ರಹ ಶಿಷ್ಟಪ್ರತಿಪಾಲನಂಗಳ್ (ಪುಷ್ಪಪು. ೫-೫). [ಸಂ.]

**ಶಿಷ್ಟಬಾಗೆ** (ನಾ). ಬಾಗೆಮರದಲ್ಲಿ ಒಂದು ಬಗೆ: ಶಿಸ್ತು, ಬಿರಡಿ, ಶಿಷ್ಟಬಾಗೆ, ಬಿಂಡಿ, ಇರಗುಂಡಿಮಾವು (ವೃಕ್ಷಶಿ. ೨೮-೫೫೨). [? + ಬಾಗೆ]

**ಶಿಷ್ಟಭಾಷೆ** (ನಾ). ತಿಳಿದವರು ಆಡುವ ಭಾಷೆ; ಸುಧಾರಿಸಿದ ಭಾಷೆ: ಇದರಂತೆ ಲಂಡನ್ನಿನ ಇಂಗ್ಲಿಷ್ ಭಾಷೆ ಇಂಗ್ಲೆಂಡಿನ ಪ್ರಮಾಣಭಾಷೆ ಅಥವಾ ಶಿಷ್ಟಭಾಷೆಯಾಯಿತು . . . ಮೈಸೂರಿನ ಕನ್ನಡಭಾಷೆ ಕರ್ನಾಟಕದ ಶಿಷ್ಟಭಾಷೆಯಾಗಿದೆ! (ದ್ರಾವಿವಿ. ೩೮೦). [ಸಂ. ಶಿಷ್ಟಭಾಷಾ]

**ಶಿಷ್ಟಾಚಾರ** (ನಾ). ೧. ಒಳ್ಳೆಯ ನಡವಳಿಕೆ, –ಸಂಪ್ರದಾಯ: ಇದು ಮಹಾಋಷಿ ಸೇವಿತಾಶ್ರಮವಿದಜಿ ಶಿಷ್ಟಾಚಾರವನು ಕೆಡಿಸಿದವರೇ ಕ್ಷಯವಹರು (ಕುವ್ಯಾಅ. ೧೮-೧೦); ನೀವು ಶಿಷ್ಟಾಚಾರದ ಮಾತು ಏನನ್ನೂ ಹೇಳಬೇಡಿ (ದೂರಸ. ೩೧). ೨. (ಆಲಂ) ತೋರಿಕೆಯ ಆಚಾರ; ಮನಃಪೂರ್ವಕವಲ್ಲದ ನಡವಳಿಕೆ: ಏನೋ ಶಿಷ್ಟಾಚಾರ ಕ್ಕಾಗಿ ಕಾರ್ಯಮಾಡಿ ಮುಗಿಸಿದರು (ರೂಢಿ). [ಸಂ.]

**ಶಿಷ್ಟಿ** (ನಾ). ೧. ಆಳ್ವಿಕೆ; ಪ್ರಭುತ್ವ: ಜಾನಪದಶಿಷ್ಟಿಯಲಿ ಸಂಪತ್ಸಮಷ್ಟಿಯಲಿ ಜ್ಞಾನಸಂಧಾನದಲಿ, ಮೌಲ್ಯಗಣನೆಯಲಿ . . . ಧಾರ್ಮಿಕತೆಯೆದ್ದು ನಿಲೆ ಆನಂದ ಧರೆಗಂದು (ಮಂಕುಕ. ೮೮೫). ೨. ಅಪ್ಪಣೆ; ಶಾಸನ; ಆಜ್ಞೆ: "ಅಪವಾದಃ . . . ಶಿಷ್ಟಿಃ, ಆಜ್ಞಾ- ೫ ಆಜ್ಞೆಗೆ ಹೆಸರುಗಳು" (ಸಿದ್ಧಾಂತಿ. ೨೪೨). ೩. ಶಿಕ್ಷೆ; ದಂಡನೆ. [ಸಂ.]

**ಶಿಷ್ಯ** (ನಾ). ೧. ವಿದ್ಯಾರ್ಥಿ; ಛಾತ್ರ : ಆದಿಗುರು ಅನಾದಿಶಿಷ್ಯ ಈ ಉಭಯಕುಳ ಸ್ಥಳವ ಬಲ್ಲರೆ ಆತ ಲಿಂಗಸಂಬಂಧಿ (ಬಸವ. ೮೦೩); ಭಕ್ತಿಯಿಲ್ಲದ ಶಿಷ್ಯಗೊತ್ತಿಕೊಟ್ಟುಪದೇಶ ಬತ್ತಿದ ಕೆಜೆಯ ಬಯಲಲ್ಲಿ ರಾಜಾನ್ನ ಬಿತ್ತಿ ಬೆಳೆದಂತೆ (ಸರ್ವಜ್ಞ. ೭೭); ಗುರುವಿನಂತೆ ಶಿಷ್ಯ, ತಂದೆಯಂತೆ ಮಗ (ನೀತಿಚಿಂ. IV, ೨೨). ೨. (ನಿರ್ದಿಷ್ಟ ಅವಧಿಯವರೆಗಿನ ಒಪ್ಪಂದದ ಮೇಲೆ) ಕೆಲಸ ಕಲಿಯುತ್ತಿರುವವನು; ಅಭ್ಯಾಸಿ : (೬). [ಸಂ.]

**ಶಿಷ್ಯತ್ವ** (ನಾ). ವಿದ್ಯಾರ್ಥಿಯಾಗಿರುವಿಕೆ; ಶಿಷ್ಯನಾಗಿರುವಿಕೆ: ಆತ್ಮೀಯ ವಿದ್ಯಾಗರ್ವಪರ್ವತಮವರ ವಚೋವಜ್ರನಿರ್ಘಾತದಿಂ ನುಚ್ಚುನುಜಿಯಾಗಿ ಪೋದೊಡೆ . . . ತಚ್ಛಿಷ್ಯತ್ವಮಂ ಪೊನ್ದು (ಆದಿಪು. ೩-೭೫ ವ); ನರೇಂದ್ರ ರಾಮಕೃಷ್ಣರ ಶಿಷ್ಯತ್ವವನ್ನು ಸ್ವೀಕರಿಸಿದ (ಧರ್ಮಸಾ. ೪೭). [ಸಂ.]

**ಶಿಷ್ಯವೃತ್ತಿ** (ನಾ). ೧. = ಶಿಷ್ಯತ್ವ: ಭೀಷ್ಮನು ತನ್ನ ಮೊಮ್ಮಕ್ಕಳನ್ನು ಅವನಲ್ಲಿ ವಿಧಿಪೂರ್ವಕವಾಗಿ ಶಿಷ್ಯವೃತ್ತಿ ಕೈಕೊಳ್ಳುವಂತೆ ನೇಮಿಸಿದನು (ವಚಭಾ. ೧೮). ೨. ವಿದ್ಯಾರ್ಥಿಗಳಿಗೆ ದೊರೆಯುವ ವೇತನ; ವಿದ್ಯಾರ್ಥಿವೇತನ : ಸ್ತ್ರೀವರ್ಗದಿಂದ ಇವರಿಗೊಂದು ಶಿಷ್ಯವೃತ್ತಿ ಸಿಕ್ಕಿದೆ (ಸಂಜೀವ. ೧೭) ; ಹರಲಾಲನು ಎಫ್. ವಾಯ್ ಪಾಸಾಗಿ ಶಿಷ್ಯವೃತ್ತಿ ಪಡೆದು ಮೂರನೆಯ ವರ್ಷದಲ್ಲಿ ಓದುತ್ತಿದ್ದಾನೆ (ಇಪ್ಪಕ. ೩೦೪). [ಸಂ.]

**ಶಿಷ್ಯವೇತನ** (ನಾ). = ಶಿಷ್ಯವೃತ್ತಿ ೨ : 'ಸಾಮ್ಯೂಲ್ ಕೋಲಿನ್ಸ್' ಎಂಬಾತನೊಬ್ಬನ ಸಹಾಯದಿಂದ ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಲ್ಲಿ ರೇಗೆ ಒಂದು ಶಿಷ್ಯವೇತನ ದೊರೆಯಿತು (ಸಸ್ಯಕ. ೧). [ಸಂ.]

**ಶಿಷ್ಯೆ** (ನಾ). ವಿದ್ಯೆಯನ್ನು ಕಲಿಯುವವಳು; ವಿದ್ಯಾರ್ಥಿನಿ: ಸಂಯಮವ ಸಾಧಿಸಿ ಮತ್ತೆ ನುಡಿದೋರಿದಳ್ ಮನ್ಮಥನ ಶಿಷ್ಯೆ (ಚಿತ್ರಾಂಗ. ೩೮-೧೦೩೪). [ಸಂ. ಶಿಷ್ಯಾ]

**ಶಿಷ್ಷಿಂತಿ** 'ಶಿಷಿತ್ತಿ' ನೋ.

**ಶಿಸವೆ** 'ಸಿಸವೆ' ನೋ.

**ಶಿಸ್ತು, ಸಿಸ್ತು** (ನಾ). ೧. ಅಲಂಕಾರ; ಶೃಂಗಾರ : ಕಸ್ತೂರಿತಿಲಕವನಿಟ್ಟು ಶಿಸ್ತಿನಿಂದಾ ಪರಿಮಳಾವ ಹಂಸೆಗಮನೆಗೆ ಧರಿಸಿ ಬೇಗಾದಿ ಆ ವನಿತೆಯಾರು ಮುತ್ತಿನಾ ಮೂಗುತಿಯಾನಿಟ್ಟಾರು (ಯನಳ. ೪೯); ಚಿತ್ರವರ್ಣಂಗಳಾದ ಬಟ್ಟೆಗಳಿಂದ ಶಿಸ್ತು ಮುಸ್ತೈದೆಗಳಂ ಮಾಡಿಕೊಂಡು (ಸೌಗಂಧಿ. ೧೮೦-೧೮); ಸೆಟ್ಟಿ ಶಿಸ್ತುಮಾಡುವುದರೊಳಗೆ ಪಟ್ಟಣ ಸೂರೆ ಹೋಯ್ತು (ಗಾದೆ). ೨. ಕಟ್ಟುಪಾಡು; ಕಟ್ಟಳೆ; ನಿಯಮ: ಹಡಗಿನಲ್ಲಿ ಶಿಸ್ತು ಎಂಬುದೇ ಉಳಿಯಲಿಲ್ಲ. ಶಿಸ್ತನ್ನು ಕಾಪಾಡಲು ಗಾಮಾನಂಥ ಗಟ್ಟಿಗನಿಗೂ ಕಷ್ಟವಾಯಿತು (ಪ್ರವಾಇ. II, ೨೨೨); ಮಕ್ಕಳು ಶಿಸ್ತಿನಿಂದ ಇರುವುದು ಒಳ್ಳೆಯದು (ಮಹಾತ್ಮ. ೭). ೩. ಒಪ್ಪ; ಓರಣ: ಮನೆಯ ಸಾಮಾನುಗಳನ್ನು . . . ಒಂದು ಬಗೆಯ

ಶಿಸ್ತಿನಿಂದ ಜೋಡಿಸಿ, ಅಣಿಯಾಗಿಡುತ್ತಿದ್ದಳು (ಮಲಮಂ. ೮೦); ಇಡೋದೆಲ್ಲ ಶಿಸ್ತಾಗಿ ಇಟ್ಟೇಯಿಲ್ವೋ (ಅಶ್ವಮೇ. ೮೦). ೪. ಗುರಿ; ಲಕ್ಷ್ಯ: ಆ ಫಿರಂಗಿಯಿಂದ ಖಾಸಾ ವೀರರಾಜೇಂದ್ರ ಒಡೆಯರವರೇ ಶಿಸ್ತುನೋಡಿ ಕೋಟೆಗೆ ಇಡುತ್ತಿದ್ದರು (ರಾಜೇಂದ್ರ. ೪೯). ೫. ಕಂದಾಯ; ತೆರಿಗೆ: ಆ ಅಮರದ ಮಾಗಣೆ ಯರಡುಸಾವಿರವರಹ ಶಿಸ್ತಿನದು ಇದೆ (ರಾಜೇಂದ್ರ. ೧೨೦). ೬. ಕಂದಾಯ ಬಾಕಿ ನಿಂತ ಕುಳಗಳ ದಾಖಲೆಯ ಪುಸ್ತಕ,— ಕಟ್ಟು: (ಶಿ). **ಸಿಸ್ತು:** ೭. ತಮ್ಮ ತಮ್ಮ ವಿಶಿಷ್ಟ ಆಚರಣೆಗಳು, ನಡತೆ ಮತ್ತು ಸಿಸ್ತಿನ ನಿಯಮಾವಳಿಗಳು ಮತ್ತು ಬೋಧನೆಗಳನ್ನು ಒಳಗೊಂಡ ಸಂನ್ಯಾಸಿಸಂಘಟನೆಗಳು ಅಸ್ತಿತ್ವಕ್ಕೆ ಬಂದುವು (ತತ್ತ್ವಪ್ರಾ. ೫೫೪). ೫. ತಾನುಗೊಡಿಗೆಯಲ್ಲಿ ಗದ್ದೆ ಖ ಆಕ್ಕೆ ಸಿಸ್ತು ಗ ೮ ಗುಬ್ಬಿ ಬಯಲಲ್ಲಿ ಗದ್ದೆ ಖಂ ೧೧ ೧/೪ (ಮೈಆರಿ. ೧೯೫೯, ೧೮-೬; 1402); ಮೂರು ವರಹಾಂನ್ನು ಆರು ಹಣವಿಗೆ ವಿವರ ಸಿಸ್ತಿನಿಂದ ಮೂರು ವರ ಗ ೩ ನಷ್ಟ (ಮೈಆರಿ. ೧೯೩೪, ೯-೯; -690); ಕೊಡಲಿಮಂದೆ ಸ್ಥಳ ವಂದಕ್ಕೆ ಹುಟ್ಟುವಳಿ ಸಿಸ್ತು ಗ ೩೦೦ ಮುಂನೂರು ವರಹ (ಮೈಆರಿ. ೧೯೩೩, ೩೪-೧೫ ; 1756).

**ಶಿಸ್ತುಕಟ್ಟು** = ಗುರಿ ತಾಗುವಂತೆ ಬೇಟೆಯ ಸಲಕರಣೆ ಜೋಡಿಸು : ರೈತನು ಹೊತ್ತಾರೆ ಎದ್ದು ಶಿಸ್ತು ಕಟ್ಟಿದ್ದ ಸ್ಥಳಕ್ಕೆ ಹೋದನು (ಪಂಜಪಂ. ೨೩). **ಸಿಸ್ತುಮಾಡು** = ಕಂದಾಯವನ್ನು ಗೊತ್ತುಮಾಡು, — ನಿಗದಿಪಡಿಸು : ಯಿ ಗ್ರಾಮದಲು ಹಳೇಪೇಠೆಯಲು ಪ್ರಕು ಯಿದ್ದ ಹೂಗೊಪಲಸ್ಥಳಕ್ಕೆ ತೆರಿಗೆಯಿಲ್ಲ ಯಿ ಸ್ಥಳಕ್ಕೆ ಸಿಸ್ತುಮಾಡಿ ಯಿ ಸ್ಥಳನ ಹಾಲುತ್ತಾರ ಕೊಡಬೇಕೆಂದು (ಎಕ. VIII, ಸೊರಬ. ೩೫೪-೧೪; 1743).

[← ಫಾರ.ಮರಾ. ಶಿಸ್]

**ಶಿಸ್ತುಗಾತಿ,** ಸಿಸ್ತುಗಾತಿ (ನಾ). ೧. ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುವವಳು : ಆಕೆ ಎಲ್ಲ ವಿಷಯಗಳಲ್ಲೂ ಶಿಸ್ತುಗಾತಿ (ರೂಢಿ). **ಸಿಸ್ತುಗಾತಿ :** ೨. ಅಂದವಾಗಿ ಅಲಂಕರಿಸಿಕೊಳ್ಳುವವಳು; ಸೊಗಸುಗಾತಿ : ಸಿಸ್ತುಗಾತಿಯರ . . . ನೋಡಿ (ಸಾಂದಕಾ. ೪-೫೨). [ಶಿಸ್ತು + — ಕಾತಿ$_5$]

**ಶಿಸ್ತುಗಾರ,** ಸಿಸ್ತುಗಾರ (ನಾ). ೧. ಅಲಂಕಾರ ಮಾಡಿಕೊಳ್ಳುವವನು; ಶೋಕಿಲಾಲ: (ಶಿ). ೨. ಸ್ತ್ರೀಲಂಪಟ : (ಶಿ). ೩. ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುವವನು: ಆತ ಮನೆಯಲ್ಲಿ ಹೇಗೋ ಹಾಗೆಯೇ ಕಛೇರಿಯಲ್ಲೂ ಶಿಸ್ತುಗಾರ (ರೂಢಿ). **ಸಿಸ್ತುಗಾರ :** ೨. ಹಸ್ತದಿ ಮಲ್ಲಿಗೆಚೆಂಡು ಸಿಸ್ತುಗಾತಿಯರ ಕುಚಗಳಿಗಣೆಯ ನೋಡಿ ಸಿಸ್ತುಗಾರರು ಇಟ್ಟು ನಗುತ (ಸಾಂದಕಾ. ೪-೫೨). [ಶಿಸ್ತು + — ಗಾರ (< - ಕಾಱ)]

**ಶಿಸ್ತುಗಾರಿಕೆ, ಸಿಸ್ತುಗಾರಿಕೆ** (ನಾ). ೧. ಅಲಂಕಾರ; ಸೊಗಸುಗಾರಿಕೆ: ಶಿಸ್ತುಗಾರಿಕೆಗೆ ಅವರು ಹೆಸರುವಾಸಿ (ರೂಢಿ). ೨. ಜಾರತನ; ಕಾಮುಕತೆ: (ಶಿ). ೩. ಕಟ್ಟುಪಾಡು; ನಿಯಮ: ಯಾವುದೇ ಕೆಲಸವನ್ನಾದರೂ ಶಿಸ್ತುಗಾರಿಕೆಯಿಂದ ಮಾಡುವುದನ್ನು ಕಲಿಯಬೇಕು (ರೂಢಿ). **ಸಿಸ್ತುಗಾರಿಕೆ:** ೨. ಅವನನ್ನು ಕುರಿತು ಹಲುಬುವ ಈ ವಿರಹಿಣಿಯ ಮಾತಿನಲ್ಲಿ ಅವನ ಸಿಸ್ತುಗಾರಿಕೆಯೂ ಇವಳ ಪ್ರೇಮವೂ ಒಟ್ಟೊಟ್ಟಿಗೆ ಹೇಗೆ ಹೊಮ್ಮುತ್ತವೆ! (ಸಮಾಲೋ. ೫೦). [ಶಿಸ್ತುಗಾರ + — ಇಕೆ]

**ಶಿಸ್ತುಗಾರ್ತಿ** (ನಾ). ೧. ಚೆನ್ನಾಗಿ ಅಲಂಕಾರ ಮಾಡಿಕೊಳ್ಳುವವಳು; ಸೊಗಸುಗಾತಿ: (ಶಿ). ೨. ಜಾರೆ; ವ್ಯಭಿಚಾರಿಣಿ : (ಶಿ).

[ಶಿಸ್ತುಗಾರ + — ತಿ$_1$ (< — ಇತ್ತಿ)]

**ಶಿಸ್ತುಪಟ್ಟೆ** (ನಾ). ಎರಡುಜಮೀನುಗಳ ನಡುವೆ ಇರುವ ಸ್ಥಳ : ಎರಡುನಂಬರಿನ ಮಧ್ಯದಲ್ಲಿ ಇರುವಂತಾ ಬದುವಿಗೆ ಶಿಸ್ತುಪಟ್ಟೆಯೆಂದು ಕರೆಯುವುದು (ಭೂಮಿಅ. ೨೪).

[ಶಿಸ್ತು$_2$ + ಪಟ್ಟೆ]

**ಶಿಸ್ತುಬಿಡು** (ಕ್ರಿ). ಎರಡು ಜಮೀನುಗಳ ನಡುವೆ ಸ್ಥಳಬಿಡು : ಪ್ರವಾಹ ಬಂದು ಬಾಂದು ಕೊಚ್ಚಿಹೋಗುವ ಸಂಭವವಿರುತ್ತಿದ್ದಿತೋ ಅಂತಹ ಸ್ಥಳದಲ್ಲಿ ಶಿಸ್ತುಬಿಟ್ಟು ಹಾಗೆ ೭-೮ ಕೈದೂರದಲ್ಲಿ ಬಾಂದು ಹಾಕಬೇಕು (ಭೂಮಿಅ. ೨೩). [ಶಿಸ್ತು$_2$ + ಬಿಡು$_1$]

**ಶಿಸ್ತುಹೊಡೆಸು** (ಕ್ರಿ). ಗುರಿಯಿಟ್ಟು ಹೊಡೆಯಿಸು : ಕರಾಚೂರಿ ನಂಜರಾಜೈಯ್ಯ ಅರಸಿನವರು ನಿಂಬೆಹಣ್ಣು ಗುರಿಯಿಡಿಸಿ ಸರ್ವಜನರಿಂದಾಲು ಶಿಸ್ತುಹೊಡೆಸಲಾಗಿ ವಬ್ಬರ ಕೈಯಿಂದಲೂ ಗುರಿ ತಗಲದೆ ಶಾಬಾಸಾಬರ ತಮ್ಮ ಹೈದರಲ್ಲಿ ಖಾನರ ಕೈಯಿಂದಾ ಬಂದೂಖಿನ ಗುರಿ ತಗಲಿದ ಕಾರಣ (ಹೈದರ. ೨೩). [ಶಿಸ್ತು + ಹೊಡೆಸು (< ಪೊಡೆಯಿಸು)]

**ಶಿಸ್ನ** 'ಶಿಸವೆ' ನೋ.

**ಶಿಳಾಜಿ** 'ಸಿಯಳಾಜಿ' ನೋ.

**ಶಿಳಾಪಟ್ಟಕ** 'ಶಿಲಾಪಟ್ಟಕ' ನೋ.

**ಶಿಳಾಜಿ** 'ಸಿಯಳಾಜಿ' ನೋ.

**ಶಿಳೀಂಧ್ರ** 'ಶಿಲೀಂಧ್ರ' ನೋ.

**ಶಿಳೀಮುಖ** 'ಶಿಲೀಮುಖ'ನೋ.

**ಶಿಳೋಚ್ಚಯ** 'ಶಿಲೋಚ್ಚಯ'ನೋ.

**ಶಿಳ್ಳಿ** 'ಸಿಳ್ಳು$_1$' ನೋ.

**ಶಿಳ್ಳಿಹೊಡೆ** 'ಸಿಳ್ಳುಹೊಡೆ' ನೋ.

**ಶಿಳ್ಳು** 'ಸಿಳ್ಳು$_1$' ನೋ.

**ಶಿಳ್ಳುದನಿ** (ನಾ). ಶೀಟಿ ಹಾಕಿದಂತೆ ಕೇಳುವ ಧ್ವನಿ : ಹಳದಿ ಹಾಗೂ ಕೆಂಪುಬಣ್ಣದ ರೆಕ್ಕೆಗಳುಳ್ಳ ಪಕ್ಷಿಯೊಂದು ಶಿಳ್ಳುದನಿಯಲ್ಲಿ ಹಾಡುತ್ತದೆ (ಪ್ರವಾಇ. I, ೧೪೪).

[ಶಿಳ್ಳು (< ಸಿಳ್ಳು$_1$) + ದನಿ$_1$]

**ಶೀಂಬಾಲ** 'ಸೀಂಬಾಲ' ನೋ.

**ಶೀಕನ್ನ** (ನಾ). ಕಾಂತಿಯುತವಾದ ಕವಿ : ಚೆಂಬಾಯ್ಲೇನನೀಂಟುತ್ತುಮಗ್ಗಳದೊಳ್ಪಾರಿವ ಗೂಗಿನಿಂ ತಣಪನಾನಿನ್ನೆನ್ನ ಶೀಕನ್ನಮಂ (ಚಿಕವಿ. ೬-೨೫೩). [< ಸಂ. ಶ್ರೀಕರ್ಣ]

**ಶೀಕರ** (ನಾ). ತುಂತುರು; ಹನಿ: ಆಕಾಶಕ್ಕುಚ್ಚಳಿಸುವನೇಕಪಯಶ್ಶೀಕರಂಗಳಿಂದಂ ಜ್ಯೋತಿರ್ಲೋಕಮಿದೊಂದುಂಟು (ಆದಿಪು.೭-೯೪); ಅಮರನದೀಶೀಕರೋದಾರತಾರಾ ರಾಮಂ . . . ಆನಂದಮಂ ಮಾಡುಗೆಂದುಂ (ಕಾದಂಪೂ. ೧); ತರಳತರತರಂಗಾ ವರ್ತಗರ್ತನೀಹಾರಶೀಕರದ ನಿಕರಂ . . . ಜಲೂಕವ್ಯಾಳಕೋಳಾಹಳಧ್ವಾನವೆರಸಿ ಜಲನಿಧಿ ಮೆಱೆದುದು (ಹಚಕಾ. ೧-೩೩). [ಸಂ.]

**ಶೀಕರಣೆ** 'ಸೀಕರಣೆ' ನೋ.

**ಶೀಕೆ** (ನಾ). ಭೂಮಿಯ ಒಂದು ಅಳತೆ (?) : ಕಿಕ್ಕುಂದನಾಡ ನಡುಭಾಗಿಯಲ್ಲಿ ಪೂರ್ವದತ್ತ ಹೊಱಗಾಗಿ ಕೇ೯ ೬ ಕಂ ಶೀಕೆ ೧ ಶಡೆ ೨ಕಂ ತೆಱುವ ವರಹ ಗದ್ಯಾಣ ೧೨೭ (ಮೈಆರಿ. ೧೯೩೩, ೨೪-೪೫ ; ಸು.1386). [?]

**ಶೀಗೆ** 'ಸೀಗೆ' ನೋ.

**ಶೀಗೆಕಾಯಿ** 'ಸೀಗೆಕಾಯಿ' ನೋ.

**ಶೀಗೆಹುಣ್ಣಿಮೆ** 'ಸೀಗೆಹುಣ್ಣಿಮೆ' ನೋ.

**ಶೀಘ್ರ** (ಗು). ೧. ವೇಗದಿಂದ ಕೂಡಿದ; ತ್ವರಿತವಾದ. (ನಾ). ೨. ಜಾಗ್ರತೆ; ತ್ವರೆ: ''ಇನಿತು ಬೋಂಕನೆ . . . ಚಕ್ಕನೆಯೆನಲ್ ನೋಡಲಿಳಿಗಿದುವ ಶೀಘ್ರಾರ್ಥ ಮಕ್ಕುಂ'' (ಕಬ್ಬಕೈ. ೪೯); ಒಂದು ದಿನದಲ್ಲಿ ಹೊತ್ತುದಕವಂ ಶೀಘ್ರದಿಂದ ತರುತ್ತ ಹಳ್ಳವನಾಚೆದಾಟಲು (ಬಸಪು. ೪೪-೫). ೩. ಬಾಣಪ್ರಯೋಗದಲ್ಲಿ ಒಂದು ವಿಧ : ಪಾತಂ ಲಕ್ಷ್ಯಂ ಶೀಘ್ರಂ ಘಾತಂ ಬಹುವೇಗಮೆಂಬಿವಯ್ದೇಸಿನೊಳಂತೀತನ ದೊರೆಯಿಲ್ಲೆನಿಸಿದುದಾತನ ಬಿಲ್ಬಲ್ಮೆ (ಪಂಪಭಾ. ೧೨-೧೮೫). [ಸಂ.]

**ಶೀಘ್ರಕಾರಿ** (ನಾ). ವೇಗವಾಗಿ ಕೆಲಸಮಾಡುವವನು; ಅವಸರದವನು : ಎಲ್ಲ ಶೀಘ್ರಕಾರಿಯೇ ಬಳಿಗಾರ ಶೆಟ್ಟಿಯಾದ ಚಂದನದಾಸನಂ ಕರೆದುಕೊಂಡು ಬಾರೆಂದು ಹೇಳಲು (ಮುದ್ರಾಮಂ.೨೯೮). [ಸಂ. ಶೀಘ್ರಕಾರಿನ್]

**ಶೀಘ್ರಕೋಪಿ** (ನಾ). ಬೇಗನೆ ಸಿಟ್ಟು ಬರುವ ಸ್ವಭಾವದವನು ; ಮುಂಗೋಪಿ: ಆ ಶೀಘ್ರಕೋಪಿಯ ಬಳಿಗೆ ಇವನನ್ನು ಕಳಿಸಿದರೆ ಜಗಳ ಕಟ್ಟಿಟ್ಟದ್ದು (ರೂಢಿ).

[ಸಂ. ಶೀಘ್ರಕೋಪಿನ್]

**ಶೀಘ್ರಗಾಮಿ** (ನಾ). ವೇಗವಾಗಿ ನಡೆಯುವವನು; ಜಾಗ್ರತೆಯಾಗಿ ಹೋಗುವವನು. [ಸಂ. ಶೀಘ್ರಗಾಮಿನ್]

**ಶೀಘ್ರತೆ** (ನಾ). ವೇಗ ; ತ್ವರೆ : ಬಲ್ಮೆ ಶೀಘ್ರತೆ ಕಿಱಿದುಂಟು ಪೇಟ್ಸೊಡ ವರಿನ್ನಳವಲ್ಲದುದಂತಣಂ ಸರಸ್ವತಿ ವರವಿತ್ತವೋಲ್ಕೆಲಬರೋದದೆ ಕೇಳದೆ ಕಲ್ತಳಂತೆ ಗರ್ವಿತರಡಸಿರ್ಪರರ್ಥ ಕೃತಿಗೇಂ ಮತಿವಂತರೊ ಪುಣ್ಯವಂತರೋ (ಗದಾಯು. ೧-೫೦).

[ಸಂ. ಶೀಘ್ರತಾ]

**ಶೀಘ್ರಲಿಖಿತ** (ನಾ). ವೇಗವಾಗಿ ಬರೆಯುವ ಬರಹದ ಒಂದು ಪ್ರಕಾರ : ನಾಗನಾರ್ಯ್ಯನ ಶೀಘ್ರಲಿಖಿತಂ (ಸೌಇಇ. XI - i, ೪೨-೩೬ ; ಸು. 971). [ಸಂ.]

**ಶೀಘ್ರಲಿಪಿ** (ನಾ). ಭಾಷಣ ಮುಂತಾಗುವವನ್ನು ಯಥಾವತ್ತಾಗಿಯೂ ಜಾಗ್ರತೆಯಾಗಿಯೂ ಬರೆದುಕೊಳ್ಳಲು ಬಳಸುವ ಸಂಕೇತಲಿಪಿ : ಶೀಘ್ರಲಿಪಿಯಿಂದ ಬರೆದುಕೊಳ್ಳುವಂತೆ ಶ್ರೀಧರ ಹೇಳುತ್ತಿದ್ದ (ವಾತ್ಸಲ್ಯ. ೧೦೦). [ಸಂ.]

**ಶೀಘ್ರವೇಧಿ** (ನಾ). ವೇಗವಾಗಿ ಬಾಣಪ್ರಯೋಗಮಾಡುವುದರಲ್ಲಿ ನಿಪುಣನಾದವನು; ನಿಷ್ಣಾತನಾದ ಬಿಲ್ಲುಗಾರ: "ಲಘುಹಸ್ತಃ, ಶೀಘ್ರವೇಧೀ — ಈ ೨ ಶೀಘ್ರವಿಸುವಾತಂ" (ಹಲಾಯು. ೭೭-೩೧೭). [ಸಂ. ಶೀಘ್ರವೇಧಿನ್]

**ಶೀಘ್ರಸಂಧಾನ** (ನಾ). ವೇಗವಾಗಿ ಬಿಲ್ಲಿಗೆ ಬಾಣವನ್ನು ಹೂಡುವಿಕೆ, — ಸೇರಿಸುವಿಕೆ: ಅಂತು ಕಡುಗೆಯ್ಯನಾಗಿ ಶೀಘ್ರಸಂಧಾನಮಿಸುವಶ್ವಗ್ರೀವನ ತಕ್ಕುಂ ಬೇಗಯ್ಮೆಯುಂ ಕಿಡೆ (ಶಾಂತಿಪು. ೫-೭೦ ವ). [ಸಂ.]

**ಶೀಘ್ರಾಸ್ತ್ರ** (ನಾ). = ಶೀಘ್ರವೇಧಿ: ಶೀಘ್ರಾಸ್ತ್ರನಾದ ಅರ್ಜುನನು ನನ್ನ ಕುದುರೆಗಳನ್ನು ಹೂಡಿದ ಅಂಥ ದಿವ್ಯರಥದಲ್ಲಿ ಕುಳಿತು ಯುದ್ಧಮಾಡುವುದಕ್ಕೆ ಉಪಕ್ರಮಿಸಿದರೆ . . . ಅವನಿಗೆ ಯಾರು ಸಮನಾಗಬಲ್ಲರು? (ವಚಭಾ. ೬೧). [ಸಂ.]

**ಶೀಘ್ರೆ** (ನಾ). ೧. ಒಂದು ಬಗೆಯ ಗಿಡ; ದಂತಿಮರ; "ಪ್ರತ್ಯಕ್ಪರ್ಣೀ" (ಪಂಡಿತ. ೨೪೪). ೨. ಒಂದು ಬಗೆಯ ಗಿಡ; ರಕ್ತಪದಿ: "ಹತ್ತಿದರ ಮುರುಟುಹಂ ರಕ್ತಪದಿ ಶೀಘ್ರೆಯದು" (ಮಂಗರಾ. ೪೩-೪೩). [ಸಂ. ಶೀಘ್ರಾ]

**ಶೀತ₁** 'ಸೀನ್₁' ಪರಾ.

**ಶೀತ₂** (ಗು). ೧. ತಣ್ಣಗಿರುವ; ಶೈತ್ಯವುಳ್ಳ. (ನಾ). ೨. ಚಳಿ; ಶೈತ್ಯ; ಥಂಡಿ: ಶೀತದಿನುಷ್ಣದಿನುತ್ಕಟವಾತದಿನನ್ಯೋನ್ಯಘಾತದಿಂ ತೀವ್ರರುಜಾವ್ರಾತದಿಂ . . . ನೋಗುಂ ಸಾಗುಂ (ಜೀವಸಂ. ೯೬-೫); ಶೀತ ಮೀರಿದವನಿಗೆ ವಾತದ ಭಯವೇನು ? (ಗಾದೆ). ೩. ನೀರು; ಉದಕ. ೪. ಜಡ; ಸೋಮಾರಿ. ೫. ಒಂದು ಬಗೆಯ ಗಿಡ; ಹಬ್ಬೆಯ ಗಿಡ: "ವಾನೀರಃ, ವಂಜುಳಃ, ಶೀತಃ, ವಿದುಳಃ, ವೇತಸಃ — ಈ ೫ ಹಚ್ಚೆ(ಬ್ಬೆ)ಯ ಮರಂ" (ಹಲಾಯು. ೩೩-೪೪). ೬. ಒಂದು ಬಗೆಯ ಗಿಡ; ಚಳ್ಳೆಗಿಡ: "ಶೇಲುಃ, ಶ್ಲೇಷ್ಮಾತಕಃ, ಶೀತಃ, ಉದ್ದಾಲಃ, ಬಹುವಾರಕಃ — ೫ ಚಳ್ಳೆಮರ, ಬೊಂಕೇಕಾಯಿಗಿಡ" (ಸಿದ್ಧಾಂತಿ. ೧೧೯). ೭. ಒಂದು ನರಕದ ಹೆಸರು: ರೌರವ ಧ್ವಾಂತ ಶೀತ ಉಷ್ಣ ಸಂತಾಪ ಅಂಬುಜ ಮಹಾಂಬುಜ ಕಾಲಸೂತ್ರಂಗಳೆಂಬುವೇ ನರಕಂಗಳು (ವಿವೇಕ. ೧೫೧). [ಸಂ.]

**ಶೀತಕ** (ನಾ). ೧. ತಣ್ಣಗಿರುವ ಪದಾರ್ಥ. ೨. ಜಡ; ಸೋಮಾರಿ: "ಮಂದಃ . . . ಶೀತಕಃ, ಅಲಸಃ, ಅನುಷ್ಣಃ — ೬ ಆಲಸ್ಯಕಾರನ ಪೆಸರು" (ಸಿದ್ಧಾಂತಿ. ೩೧೨). ೩. ತಣ್ಣಗೆ ಇಡುವಂಥದು: ಘನಇಂಗಾಲದ ಡೈಆಕ್ಸೈಡ್ ಮತ್ತು ಈಥರ್ ಇವುಗಳ ಮಿಶ್ರಣ ಒಳ್ಳೆಯ ಶೀತಕ (ರೆಫ್ರಿಜಿರೆಂಟ್) ಎಂಬುದನ್ನು ಕಂಡುಹಿಡಿದ (ಶವಿಕೋ. I, ೩೦೨). ೪. ವಸ್ತುಗಳನ್ನು ತಣ್ಣಗೆ ಇರಿಸುವ ಸಾಧನ, — ಸಲಕರಣೆ: "ತಣ್ಣಿಸುವ ಪಾತ್ರ; (ಬಿಸಿ) ಆರಿಸುವ ಪಾತ್ರ; ಶೀತಕ" (Cooler, ಇಂಕನ). [ಸಂ.]

**ಶೀತಕರ** (ನಾ). ೧. ತಂಪಾದ ಕಿರಣಗಳುಳ್ಳವನು; ಚಂದ್ರ: ತ್ರಿದಶಾಧೀಶ್ವರಮಂತ್ರಿ ಶೀತಕರರೆಂಬೀಯಿರ್ವರುಂ ಕರ್ಕಗೇಹದೊಳಿರ್ದಂದು (ಜಾತತಿ. ೬-೧೫); ಶೀತಕರನಿಂ ಸಾಂದ್ರತರಕೌಮುದೋಜ್ಜ್ವಳಂ ಪುಟ್ಟುವಂತಿರೆ ಪುಟ್ಟಿದಂ ಶಿವನ ಶಿಶುವಲ್ಲಿ (ಬಸವ. ೧-೧೨೮). ೨. ಕರ್ಪೂರ. ೩. [ಛಂದ] ಒಂದು ಗುರುವಿನ ನಂತರ ಎರಡು ಲಘುಗಳನ್ನುಳ್ಳ ಒಂದು ಅಕ್ಷರಗಣ ; ಭಗಣ : ಶೀತಕರ ತೋಯಂ ದ್ಯೋತಿಸಿರೆ . . . ಶಶಿಕಾಂತಂ (ಛಂದೋಂಬು. ೨-೭೭). [ಸಂ.]

**ಶೀತಕರಧರ** (ನಾ). ಚಂದ್ರನನ್ನು ಧರಿಸಿದವನು; ಶಿವ: ಪ್ರೀತಿಯಿಂದಿಂತಾಡುತಾಡುತ ಶೀತಕರಧರನೊಲಿದ ಭಕ್ತನು ಭೂತಳೇಶನು ನಗಲು (ಬಸವು. ೪೩-೯); ಶೀತಕರಧರನ ಪೂಜಾಸೌಖ್ಯದಿಂ ಘನಪುರಾತನರ ವಚನಾಗಮಾರ್ಥಮಂ ಬಿತ್ತರಿಪ ಗೀತಗಳ ಸೊಗಸಿನಿಂದಿರೆ ಬಂದುದಾ ಶರತ್ಕಾಲ (ಭಾವಚಿಂ. ೬-೧೧). [ಸಂ.]

**ಶೀತಕಷಾಯ** (ನಾ). ತಂಪನ್ನುಂಟುಮಾಡುವ ಕಷಾಯ: ಔಷಧಗಳನಿಡಿದು ಉದಯ ತೊಡಗಿ ಸಾಯಂಕಾಲ ಪರ್ಯಂತ ನೆನೆಸಿಕ್ಕಿ ಹಿಂಡಿಕೊಂಬುದು ಶೀತಕಷಾಯವೆನಿಸಿಕೊಂಬುದು (ವೃದ್ಧಸಾ. I, ೧೧೫); ದ್ರಾಕ್ಷಿಹಣ್ಣು, ಯಷ್ಟಿಮಧುಕ . . . ಇವಂ ಕಷಾಯವನಿಟ್ಟಾದರೂ ಶೀತಕಷಾಯವನಾದರೂ ಸೇವಿಸೆ ಸಮಸ್ತತೃಷ್ಣೆ, ಮದಮೂರ್ಛೆ, ಬುದ್ಧಿಭ್ರಂಶ ಇವೆಲ್ಲ ಪರಿಹರಮಕ್ಕುಂ (ಸಕವ್ಯ. ೨೮೫). [ಸಂ.]

**ಶೀತಕಾಲ** (ನಾ). ಚಳಿಗಾಲ; ಶಿಶಿರಋತು; ಹೇಮಂತ: ಕಾಲಭೇದ — ಕಾಲವು ಸಂಕ್ಷೇಪದಿಂದ ಶೀತಕಾಲ, ಉಷ್ಣಕಾಲ, ವರ್ಷಾಕಾಲವೆಂದು ಮೂರುತೆರನಾಗಿರುವುದು (ಸಕವ್ಯ. ೧೫); ಈ ಆರುತಿಂಗಳುಗಳ ಮಧ್ಯದ ಮೂರುತಿಂಗಳು ನಮ್ಮ ಶೀತಕಾಲ (ನಕ್ಷತ್ರ. ೪೩). [ಸಂ.]

**ಶೀತಕಿರಣ** (ನಾ). ತಂಪಾದ ಕಿರಣಗಳನ್ನುಳ್ಳವನು ; ಚಂದ್ರ : ಯಾದವಕುಲ ಮಹಾಂಬುನಿಧಿ ಶೀತಕಿರಣಂ ತನ್ನ ಶರಣರನುಳಿದನೊ (ಜೈಮಿಭಾ. ೪-೪); ವನದ ಚಕೋರದ ಸವಿದುತ್ತಿದಾವುದು ಹರಿಣವಿಲ್ಲದ ಶೀತಕಿರಣ (ಇಂಚಾಪ. ೧೬೯-೩೧). [ಸಂ.]

**ಶೀತಕೃತ್ಕರ** (ನಾ). ೧. ತಣ್ಣನೆಯ ಕಿರಣಗಳಿಂದ ತಂಪನ್ನುಂಟುಮಾಡುವವನು; ಚಂದ್ರ. ೨. ತಂಪನ್ನುಂಟುಮಾಡುವ ಚಂದ್ರನ ಕಿರಣ: ಚೂತಮನಪ್ಪಿ ಪುಷ್ಪವತಿಯಾದುದು ಮಲ್ಲಿಗೆ ಶೀತಕೃತ್ಕರವ್ರಾತಮನಪ್ಪಿಯೊಪ್ಪೆ ಕರಗಿತ್ತು ಹಿಮೋಪಲಂ (ಗಿರಿಕ. ೪-೧೧೨). [ಸಂ.]

**ಶೀತಗು** (ನಾ). = ಶೀತಕರ ೧: ಜಲರುಹಬಂಧು ಚಂದ್ರಮನಿನಕ್ಕೆ ವಿಲಗ್ನದಿನಕ್ಕೆ ಪತ್ತಿಟಿಯೊಳ್ ನಿಲೆ ಪಿತೃವಿಂ ಧನಂ ಸಮನಿಕುಂ ನಿಲೆ ಶೀತಗು ಮಾತೃವಿಂ (ಜಾತತಿ. ೧೧-೧). [ಸಂ.]

**ಶೀತಜ್ವರ** (ನಾ). ಚಳಿಯಿಂದ ಕೂಡಿದ ಜ್ವರ: "ಹಿಮಘರ್ಮಮೆನೆ ಶೀತಜ್ವರಂ" (ಮಂಗರಾ. ೧೧೪-೪); ಶೀತಜ್ವರವು ದೇಹವನ್ನು ಪ್ರವೇಶಿಸುವ ಕ್ರಮ — ತ್ವಕ್ಕನಾಶ್ರಯಿಸಿರುವ ಶ್ಲೇಷ್ಮವಾಯುಗಳು ಆದಿಯಲ್ಲಿ ಶೀತಜ್ವರವನ್ನುಂಟುಮಾಡುವುವು (ಸಕವ್ಯ. ೧೦೦). [ಸಂ.]

**ಶೀತದಂತ** (ನಾ). ಒಂದು ಬಗೆಯ ದಂತರೋಗ: ದಂತಗಳಿಗೆ ಆಧಾರವಾದ ಮಾಂಸ ಕೆಟ್ಟು ಕಪ್ಪಾಗಿ ಮೃದುವಾಗಿ ದುರ್ಗಂಧಸಹಿತವಾಗಿ ರಕ್ತವು ಸುರಿವದು. ಈ ರೀತಿಯಲ್ಲಿದ್ದುದು ಶೀತದಂತವೆನಿಸಿಕೊಂಬುದು. ಇದು ಶ್ಲೇಷ್ಮರಕ್ತಗಳಿಂದ ಹುಟ್ಟುವದು (ವೃದ್ಧಸಾ. II, ೧೨೩). [ಸಂ.]

**ಶೀತದ್ಯುತಿ** (ನಾ). ಚಂದ್ರ : ಶೀತದ್ಯುತಿ ನಿಚ್ಚಂ ಕಂದುತುಂ ಕುಂದುತು ಮುದಯಿಪ ವೆಂಬುಕ್ಕಿಗಾ ಕಾಂತೆ ಪೋಲ್ತಳ್ (ಸುಕುಮಾ. ೯-೯೧). [ಸಂ.]

**ಶೀತಬಾಧೆ** (ನಾ). ಶೈತ್ಯದಿಂದಾಗುವ ತೊಂದರೆ; ಥಂಡಿಯಿಂದಾಗುವ ಬಾಧೆ: ಅಗ್ನಿಷ್ಟಿಕೆಯನ್ನು ಸಂತತವೂ ಉರಿಸುತ್ತಾ ಶೀತಬಾಧೆಯನ್ನು ದೂರವಿರಿಸಿರಬಹುದು (ಸಂಟುರು. ೪೦). [ಸಂ. ಶೀತಬಾಧ]

**ಶೀತಭೀತ** (ನಾ). ಚಳಿಗೆ ನಡುಗುವವನು, — ಹೆದರುವವನು: ವನಿತಾಪುತ್ರರತಂ ವಿಲಜ್ಜನಲಸಂ ಧರ್ಮಧ್ವಜಂ ಶೀತಭೀತನಧೋಭಾಗಕೃಶಂ (ಜಾತತಿ. ೧೭-೧೦). [ಸಂ.]

**ಶೀತಭೀರು** (ಗು). ೧. ಚಳಿಗೆ ಹೆದರುವ. (ನಾ). ೨. ಒಂದು ಬಗೆಯ ಮಲ್ಲಿಗೆ: "ತೃಣಶೂಲ್ಯಂ . . . ಮಲ್ಲಿಕಾ, ಭೂಪದೀ, ಶೀತಭೀರುಃ — ೪ ಮಲ್ಲಿಗೇಗಿಡದ ಹೆಸರುಗಳು" (ಸಿದ್ಧಾಂತಿ. ೧೨೮). [ಸಂ.]

**ಶೀತಮರೀಚಿ** (ನಾ). = ಶೀತಕರ ೧: ಸೊಗಯಿಪ ತಾರಕೋತ್ಕರದ ಮಧ್ಯದ ಶೀತಮರೀಚಿ ರೋಹಿಣೀಯುಗಮನೆ ಚೆಲ್ವುವೆತ್ತ . . . ವನಿತಾಳಿಯ ಮಧ್ಯದೊಳಂದು ನಾಡೆಯುಂ ಬಗೆಗೊಳಿಸಿತ್ತು ಮತ್ತಜಿತಸೇನಮಹೀಶಶಿಪ್ರಭಾಯುಗಂ (ಚಂದ್ರಪ್ರ. ೭-೧೫೦). [ಸಂ.]

**ಶೀತಮಾರುತ** (ನಾ). ತಣ್ಣನೆಯ ಗಾಳಿ; ತಂಪಾದ ಗಾಳಿ: ಶೀತಮಾರುತಗಳು . . . ಧ್ರುವದ ಕಡೆಯಿಂದ ಸಮಶೀತೋಷ್ಣವಲಯದ ಕಡೆಗೆ ವರ್ಷವೆಲ್ಲಾ ಬಹಳ ತಣ್ಣಗೆ ಗಾಳಿ ಬೀಸುತ್ತದೆ (ಭೂವಿವ. ೬೧). [ಸಂ.]

**ಶೀತರುಕ್ತನುಜಾತ** (ನಾ). ಚಂದ್ರನ ಮಗ; ಬುಧ: ಶೀತರುಕ್ತನುಜಾತಂ ಪದಿನೈದಜೊಳ್ . . . ನಿಂದೊಡಲ್ಲಿ ನಿಜೋಚ್ಚಾಲಯಭಾಗದಲ್ಲಿ ಪರಮೋಚ್ಚಸ್ಥಾಯಿ ತಾನಾ ಗ್ರಹಂ (ಜಾತತಿ. ೧-೪೧). [ಸಂ.]

**ಶೀತರುಕ್ಸುತ** (ನಾ). = ಶೀತರುಕ್ತನುಜಾತ: ಇರೆ ಜಲಲಗ್ನದೊಳಸಿತಂ . . . ಶೀತರುಕ್ಸುತಂ ನೋಡಲುದಕದೊಳ್ ಪೆಱುಗುಮವಳ್ (ಜಾತತಿ. ೪-೨೦). [ಸಂ.]

**ಶೀತರುಚಿ** (ನಾ). = ಶೀತಕರ ೧: ಪ್ರೀತಿಯಿಂದಂಬುಧಿಗೆ ಮಣಿಯಂ ಶೀತರುಚಿಗಳೆಯಂ ಕೊಡುವವೊಲು ಪೂತ ನವರತ್ನಾಂಬರಂಗಳನಿತ್ತು (ಬಸವು ೧೧-೧೮). [ಸಂ.]

**ಶೀತರೋಚಿ** (ನಾ). = ಶೀತಕರ ೧: ಖರಕಿರಣಂ ತೀವ್ರಂ ಶೀತರೋಚಿ ಜಡಮೂರ್ತಿ ಕಲ್ಪವೃಕ್ಷಂ ಸ್ತಬ್ಧಂ ನಿರತಿಶಯಗುಣಂಗೀ ನೃಪವರಂಗೆ (ಶಾಂತಿಪು. ೨-೭೭); ಪಾಪಯುಗ್ಮಮಧ್ಯದೆ ಚತುರಸ್ರರಾಶಿಗಳೊಳಸ್ತದೊಳಕ್ಕಿರೆ ಶೀತರೋಚಿ ಪುಟ್ಟಿದ ಮನುಜಂ ಸುಧಾರಸಮನೀಂಟಿದೊಡಂ ಬದುಕಲ್ಕೆ ಬಲ್ಲನೇ (ಜಾತತಿ. ೬-೪೧). [ಸಂ. ಶೀತರೋಚಿಸ್]

**ಶೀತಲ, ಶೀತಳ** (ಗು). ೧. ತಣ್ಣಗಿರುವ; ತಂಪಾಗಿರುವ. (ನಾ). ೨. ತಂಪು; ಶೈತ್ಯ. ೩. ತಂಪಾದ ಪದಾರ್ಥ; ಶೈತ್ಯವಸ್ತು : ತಿಳದೊಳ್ ಶೀತಲದೊಳ್ ಪಯೋವಿಕೃತಿಯೊಳ್ ನೀರೊಳ್... ಉಪ್ಪಿನೊಳ್ ಜನಿಯಿಕುಂ ಶ್ಲೇಷ್ಮಂ ವಸಂತಾಗ್ರದೊಳ್ (ಲೋಕೋಪ. ೯-೬). ೪. ಶಾಂತಸ್ವಭಾವದ ವ್ಯಕ್ತಿ; ಸೌಮ್ಯ ಪ್ರವೃತ್ತಿಯವನು: ಲವಲೇಶವಾದರೂ ಹೊಟ್ಟೆಯ ಕಿಚ್ಚನ ಕಿಡಿಕಾರದಂಥ ಶೀತಲರು (೧ಂಚಾಪ. ೨೨-೯೮). ೫. ಸೋಮಾರಿ; ಆಲಸಿ; ಮೈಗಳ್ಳ: "ಅಳಸಂ ಮಂದಂ ಜಡಂ ಮಂಥರನನಿ (ಪನವನುಂ) ಶೀತಲಂ ದೀರ್ಘಸೂತ್ರಂ" (ವಸ್ತುಕೋ. ೧೦೦-೧೧). ೬. ಒಂದು ಬಗೆಯ ಗಿಡ : "ವಾತಕಃ, ಶೀತಲಃ, ಅಪರಾಜಿತಾ, ಶತಪರ್ಣೀ — ೪ ಸಿಡಿಲೊಲ್ಲದ ಗಿಡ" (ಸಿದ್ಧಾಂತಿ. ೧೯೬). ೭. [ಜೈನ] ತೀರ್ಥಂಕರರಲ್ಲಿ ಹತ್ತನೆಯವನು : ವೃಷಭ ... ಶೀತಲ ... ವರ್ಧಮಾನರೆಂಬಿಪ್ಪತ್ತುನಾಲ್ಕರ್ ತೀರ್ಥಕರರ್ (ಚಾವುಂಪು. ೯೦೨). **ಶೀತಳ:** ೨. ಜಳಮಂ ಶೀತಳಮಂ ನಿರಸ್ತಮಳಮಂ ತೀವಿರ್ದ ಕುಂಭಂಗಳಾಗಳೆ . . . ಎತ್ತಿ ಬಿತ್ತರಿಸಿದರ್ ಗಂಧೋದಕಸ್ನಾನಮಂಗಳಮಂ ತೀರ್ಥಕರಂಗೆ (ಪುಷ್ಪಪು. ೧೧-೪೬); ಪಾತಿವ್ರತ್ಯದೇಳ್ಗೆಯ ಪರಿಕಿಪನೆಂದೋತು ರಾಘವನುಸಿರ್ದೊಡನೆ ಸೀತೆ ಬೆಂಕಿಯ ಪುಗೆ ಶೀತಳಮಾದುದು (ಹರಿಬ. ೨-೪೭). ೮. ಒಂದು ಬಗೆಯ ಶೀತರೋಗ; ಸನ್ನಿಪಾತ: "ಶೀತಳಮೆನಲು ಸನ್ನಿ" (ಮಂಗರಾ. ೧೧೪-೪). [ಸಂ.]

**ಶೀತಲಕ್ರಿಯೆ** (ನಾ). ತಂಪುಂಟುಮಾಡುವಿಕೆ; ಶೈತ್ಯೀಕರಣ: ಮನುಷ್ಯಲೋಕದೊಳಾದ ಸುಖಮಲ್ಲ ದಾಹಕ್ಕೆ ಶೀತಲಕ್ರಿಯೆಗೆಯ್ವಂತೆ ನೋವನಾಱಿಸುವ ಸುಖಂ ಅದು ಸುಖಮೆ (ಜೀವಸಂ. ೫೧-೨೪ ವ). [ಸಂ. ಶೀತಲಕ್ರಿಯಾ]

**ಶೀತಲೆ** (ನಾ). ಸಿಡುಬು; ಮೈಲಿ: (ಕ). [ಸಂ. ಶೀತಲಾ]

**ಶೀತವಲಯ** (ನಾ). [ಭೂಗೋಳ] ಶೈತ್ಯವು ಹೆಚ್ಚಾಗಿರುವ ಸಮಭಾಜಕ ವೃತ್ತದ ಉಭಯಪಾರ್ಶ್ವಗಳಲ್ಲಿರುವ ಭೂಭಾಗ: ಅತ್ಯಂತಶೈತ್ಯಕರವಾದ ಭೂಭಾಗಗಳಿಗೆ ಶೀತವಲಯಗಳು . . . ಎಂದು ಹೆಸರು (ಭೂಗೋಳ. ೯); ಉತ್ತರದಕ್ಷಿಣಮೇರುವೃತ್ತಗಳ ಒಳಭಾಗದಲ್ಲಿರತಕ್ಕವು ಅನುಕ್ರಮವಾಗಿ ಎರಡು ಶೀತವಲಯ (ಭೂವಿವ. ೧೯). 'ಉಷ್ಣವಲಯ' ಪರಾ. [ಸಂ.]

**ಶೀತವಾತ** (ನಾ). ೧. ತಣ್ಣನೆಯ ಗಾಳಿ; ಥಂಡಿಗಾಳಿ: ಪನ್ನಗವಿತತಿ ರಸಾರಂಧ್ರಮಂ ಪಾಂಥವರ್ಗಂ ವರಕಾಂತಾಶ್ಲೇಷಮಂ ಕೆಯ್ಕೊಳಲಲೆದುದುದೀಚೀಭವಂ ಶೀತವಾತಂ (ಪುಷ್ಪಪು. ೬-೩೭). ೨. ಶೈತ್ಯದಿಂದುಂಟಾಗುವ ವಾತರೋಗ: ಸವಳದೆ ಸಿತಘೃತಮಿಶ್ರಿತಮವುಂಗುರುಂ ಸೂಸಲೆಂಬಿವಂ ಸೇವಿಸೆ . . . ಶೀತವಾತಮುಂ ಕೆಟ್ಟು ನಿರುಜನಕ್ಕುಂ ಮನುಜಂ (ಲೋಕೋಪ. ೯-೭). [ಸಂ.]

**ಶೀತವೇತಾಳವಿದ್ಯೆ** (ನಾ). ಮನುಷ್ಯ, ಪ್ರಾಣಿ ಇತ್ಯಾದಿಗಳನ್ನು ರೂಪಾಂತರಗೊಳಿಸುವ ಒಂದು ಬಗೆಯ ಮಾಂತ್ರಿಕವಿದ್ಯೆ: ಮನೋಹರ ನಗರದ ಭೀಷಣ ಸ್ಮಶಾನದೊಳು ಶೀತವೇತಾಳವಿದ್ಯೆಯಿಂ ಕುಮಾರನಂ ಜರತೀರೂಪುಧರನಂ ಮಾಡಿ ಬಿಸುಟು ಪೋಪುದುಂ (ಚಾವುಂಪು. ೭೪). [ಸಂ. ಶೀತವೇತಾಲವಿದ್ಯಾ]

**ಶೀತಶಿವ** (ನಾ). ೧. ಒಂದು ಬಗೆಯ ಸೊಪ್ಪು ; ಸಬ್ಬಸಿಗೆ. ೨. ಕಲ್ಲುಹೂವು; ಶಿಲಾಪುಷ್ಪ: "ಕಾಲಾನುಸಾರ್ಯಂ, ವೃದ್ಧಂ, ಅಶ್ಮಪುಷ್ಪಂ, ಶೀತಶಿವಂ, ಶೈಲೇಯಂ — ೫ ಕಲ್ಲುಹುವ್ವಿನ ಪೆಸರು, ಶಿಲಾಪುಷ್ಪ" (ಸಿದ್ಧಾಂತಿ. ೧೪೦). ೩. ಒಂದು ಬಗೆಯ ಉಪ್ಪು; ಸೈಂಧವಲವಣ: "ಸೈಂಧವಃ, ಶೀತಶಿವಂ, ಮಾಣಿ ಬಂಧಂ— ೩ ಸಿಂಧುಜ, ಸೈಂಧಲವಣದ ಹೆಸರುಗಳು" (ಸಿದ್ಧಾಂತಿ. ೨೮೫). ೪. ಹಾಲುಮಡ್ಡಿ; ಗುಗ್ಗುಳ: (ಕ). [ಸಂ.]

**ಶೀತಶಿವೆ** (ನಾ). = ಶೀತಶಿವ ೧: "ಶಾಲೇಯಃ, ಶೀತಶಿವಾ . . . ಮಿಶ್ರೇಯಾ — ೬ ಸಬ್ಬಸಿಕೇ ಹೆಸರುಗಳು" (ಸಿದ್ಧಾಂತಿ. ೧೩೫). [ಸಂ. ಶೀತಶಿವ]

**ಶೀತಳ** 'ಶೀತಲ' ನೋ.

**ಶೀತಳಿಕೆ₁** (ನಾ). ನೆಮ್ಮದಿ; ಸಮಾಧಾನ : ಕೂಷ್ಮಾಂಡಗಣವರ್ಯ ಬೇಪಸಂಚಳೆದು ಮುಮ್ಮಳಿಗೊಳ್ಳ ಸಂದಿಯ ಮನಕ್ಕೆ ಶೀತಳಿಕೆ ಸಂಭವಿಸಿ ಪುರುಳೊಗೆವಂತೆ ಸಾರ ಮಾಧುರ್ಯೋತ್ತರವ ನುಡಿದನು (ನಂದಿಮಾ. ೧೦-೪). [ಶೀತಳ (= ಶೀತಲ) + — ಇಕೆ]

**ಶೀತಳಿಕೆ₂** (ನಾ). ತಾವರೆ: ಒತ್ತುವ ಶೀತಳಿಕಾಕದಂಬಕಂ ಬೀಸುವ ಪುಷ್ಪವೀಜನವಮರ್ಚುವ ಕರ್ಪುರವಚ್ಚಪಾಗಳುಂ ಪೂಸುವ ಚಂದನಂ ಬಿಸುಪನಾಱಿಸಲಾಱವೆ ಸತ್ಯಭಾಮೆಯಾ (ಜಗವಿ. ೧೧-೨೦). [< ಸಂ. ಶೀತಲಕ]

**ಶೀತಾಂಗಿ** (ನಾ). ಶೀತಶರೀರಪ್ರಕೃತಿಯುಳ್ಳವಳು: ವಿನುತಶ್ಯಾಮೆ ಮೃದುಚ್ಛವಿ ದ್ವಿಜನಖಾಕ್ಷಿದ್ವಂದ್ವೆ ಶೀತಾಂಗಿ ಮಾನಿನಿ (ಮದತಿ. ೫-೨). [ಸಂ. ಶೀತಾಂಗೀ]

**ಶೀತಾಂಬು** (ನಾ). ತಣ್ಣಗಿರುವ ನೀರು; ತಂಪಾದ ಜಲ: ಯಶೋಭದ್ರೆ . . . ಇದಂ ಕೇಳ್ದು ತಟ್ಟನೆ ಮೂರ್ಛಾಗತೆಯಾಗೆ ಬಂಧುಜನಮಲ್ಲಂ ಬಂದು ಶೀತಾಂಬುವಂ ಘನಮಾಗಲ್ತಳಿದಾಗಳೆಚ್ಚಱಿಸಲ್ (ಸುಕುಮಾ. ೧೨-೧೯); ಸೊಗಯಿಸುವ ಶೀತಾಂಬುಧಾರೆಯ ನೀಂಟುತ (ಜೈಮಿಭಾ. ೩-೧೨). [ಸಂ.]

**ಶೀತಾಂಶು** (ನಾ). ತಂಪಾದ ಕಿರಣಗಳುಳ್ಳವನು; ಚಂದ್ರ: ಇನನಂ ಶೀತಾಂಶುವಂ ಮಂಜಿನ ಮುಗಿಲ ಪೊದರ್ಪಿಂ ಜನಂ ಕಾಣದಾಕಂಪನವಂ ಕೈಕೊಳ್ವುದುಂ (ಪಂರಾಮಾ. ೧-೮೦) ; ಕೀಲಿಸಿದ ಹೃದ್ಬೀಜಬಿಂದು ಚಳಾಳಿಸಿದ ಶೀತಾಂಶುವಾಗಲು ಮೇಳವಿಸಿ ತನುವೊಪ್ಪುತಿರ್ದುದು ಪಾರ್ವತೀಪತಿಯ (ಪ್ರಭುಲೀ. ೨-೧೦) ; ಒಡಲಿನೊಂದು ಸೂಡುಂ ಸೀತಾಂಗನಾವದನಶೀತಾಂಶುದರ್ಶನದತ್ತಣಿಂ ತಿಳಿದು ಮಾರ್ಪಟ್ಟುದೋ ಎನೆ (ರಾಮಾಶ್ವ. ೨೯-೨೨). [ಸಂ.]

**ಶೀತಾದ್ರಿಜಾತೆ** (ನಾ). ಹಿಮವಂತನ ಮಗಳು; ಪಾರ್ವತಿ; ಗಿರಿಜೆ: ಶೀತಾದ್ರಿಜಾತಾರ್ಧಶೋಭಿತಶರೀರ ಮನ್ಮಾಥ ನಿಗಮಾತೀತನೆ . . . ರಕ್ಷಿಸೆನ್ನಂ (ಪ್ರಾಭರಾ. ೯-೧). [ಸಂ. ಶೀತಾದ್ರಿಜಾತಾ]

**ಶೀತಾಶ್ಮ** (ನಾ). ಹಿಮಗಲ್ಲು; ಮಂಜುಗಡ್ಡೆ: ತಪ್ತಾಶ್ಮಂ ಶೀತಾಶ್ಮದಂತಿರೆ ಕೋಡುಗುಂ (ಶಾಂತಿಪು. ೭-೮೫). [ಸಂ. ಶೀತಾಶ್ಮನ್]

**ಶೀತಾಳ₁** 'ಸೀತಳ' ನೋ.

**ಶೀತಾಳ₂** 'ಸೀತಾಳೆ' ನೋ.

**ಶೀತಾಳು** (ಗು). ಶೈತ್ಯದಿಂದ ಸೊರಗಿದ: ಶೀತಾಳುಕಮಲೋಪವೀತಮೆನಿಸಲಾ ಮೊಗಂ ವೇತಾಳಸೋಂಕನನುಕರಿಸಿ ಬರೆ ಶುಭರದಂ ಸೋತಾಳಿಯಂದದೊಳ್ಕೆಡೆದಳ್ (ಪಂರಾಮಾ. ೨-೯-೨). [ಸಂ. ಶೀತಾಲು]

**ಶೀತೋದಕ** (ನಾ). = ಶೀತಾಂಬು : ಅಕಳಂಕಜಿನಾಭಿಷವೋತ್ಸುಕದೊಳ್ ನಾಂದಾಱಿಸಲ್ಕೆ ಪರಪಿದ ಕುಟಳಾಳಕದೊಳ್ ತಗುಳ್ದ ಶೀತೋದಕವನೆ ಕರ್ಬುರಿತಮಾಗಿ ಸೊಗಯಿಸಿ ತೋರ್ಕುಂ (ಶಾಂತಿಪು. ೧೦-೫೩); ಶೀತಪ್ರದೇಶಗಳಿಂದ ಉಷ್ಣಪ್ರದೇಶಗಳಿಗೆ ಹರಿಯುವ ಉದಕಪ್ರವಾಹ ಶೀತೋದಕಪ್ರವಾಹ (ಭೂವಿವ. ೯೧). [ಸಂ.]

**ಶೀಧು** (ನಾ). ಮದ್ಯ; ಹೆಂಡ; ಮಧುಃ - ಪಕ್ವವಾದ ಕಬ್ಬಿನ ರಸದಿಂದ ಮಾಡಿದ ಹೆಂಡ; ಸಾರಾಯಿ" (ಸಿದ್ಧಾಂತಿ ೧೨೫); ಅಂಥಾತ್ಮಶೀಧುಗಳ ಸಿಂಧುವನಲಸವುದೀ ದ್ಯವಸುಂದರಭಾವ ಜಾನಪದಿಕ (ಮಲೆದೇ. ೪೦-೫). [ಸಂ.]

**ಶೀನ** (ಗು). ೧. ಹೆಪ್ಪುಗಟ್ಟಿದ; ಘನೀಭೂತವಾದ. (ನಾ). ೨. ಹೆಪ್ಪಾದುದು; ಗರಣೆ : "ಶೀನಂ ಸ್ತ್ಯಾನಂ" (ವಸ್ತುಕೋ. ೯೨-೨). ೩. ಮೂರ್ಖ ; ದಡ್ಡ. ೪. ಅಜಗರ ; ಹೆಬ್ಬಾವು. [ಸಂ.]

**ಶೀನು** 'ಸೀನ್₁' ನೋ.

**ಶೀಬಾರಿಬೇರು** 'ಸೀಬರಿಬೇರು' ನೋ.

**ಶೀಮೆ** (ನಾ). ಪ್ರದೇಶ; ಪ್ರಾಂತ : ಘನಗಿರಿನಗರಕ್ಕೆ ಪಶ್ಚಿಮಭಾಗದಲ್ಲಿಯಿಹ ವೈತಳದ ಶೀಮೆ (ಎಕ. XII, ಚಿಕ್ಕನಾ. ೧-೮ ; 1622); ಬೈಲುಶೀಮೆ ಅಥವಾ ಬೆಳವಲು (ಕಭಾಗ. ೪). [< ಸಂ. ಸೀಮಾ]

**ಶೀಯವಲ್ಲವರಸ** 'ಸೀಯವಲ್ಲವರಸ' ನೋ.

**ಶೀರಣಿಗಾಱ** (ನಾ). (ಉಳಿಯಿಂದ) ಕೆತ್ತನೆ ಕೆಲಸ ಮಾಡುವವನು (?) : ಅಂದದ ಕಂಚುಗಾಱರ ತಮ್ಮಟೆ ದ್ವಂದ್ವ ಅಕಸಾಲೆ ಚಿನಿವಾರನು ಬಂದ ಶೀರಣಿಗಾಱ ಗಾಣಿಗ ಕೇಣಿ ಮಣಿಗಾಱ . . . ಹಱಿದ ಅಂಗಿಯ ಹೊಲಿವ ಸೂಜಿಗ (ನಂದಿಲೀ. ೯-೯).
[ಶೀರಣ್ (< ಚೀರಣ) + – ಗಾರ (< – ಕಾಱ]

**ಶೀರಣಿಗೆಹಂಬು** 'ಸೀರನಿಗೆಹಂಬು' ನೋ.

**ಶೀರ್ಣ** (ಗು). ೧. ಒಣಗಿದ; ಬತ್ತಿದ: ಅಸುರಾತ್ಮಜನ್ಮನ ಮಹಾವಿದ್ಯಾಬಲಂ ಶೀರ್ಣಪಲ್ವಲ[ದಂ]ತಾಗೆ (ಶಾಂತಿಪು. ೭-೩೮). ೨. ಹಳೆಯದಾದ ; ಜೀರ್ಣವಾದ. ೩. ಹರಿದುಹೋದ; ಚಿಂದಿಯಾದ: ಎನ್ನ ಮೆಯ್ಯ ದುರ್ಗಂಧಕ್ಕೆ ಪೇಸಿ ಕಂಡವರೆಲ್ಲಮೆಟ್ಟಿದು ಕಳೆಯೆ ಪರೇತವನಭೂಮಿಯೊಳ್ ಜೀರ್ಣಶೀರ್ಣಚೀರಂಗಳೊಳ್ ಪುದಿದಿರಿಸಿ ಪೋಗಿ ತಾವಿರ್ಬರುಂ . . . ಬಳೆಯೆ (ಆದಿಪು. ೩-೩೪ ವ). ೪. ಸೀಳಿದ : ರಂಭಾವಲ್ಕಲಶಲ್ಕಂಗಳೊಳಂ ಶೀರ್ಣನಾಳಿಕೇರಪರ್ಣಂಗಳೊಳಂ . . . ಗೊಜ್ಜುಗೆಯ ಮುಗುಳ ಗೆಜ್ಜೆಯುಮಂ ಬಂದುಗೆಯಂದುಗೆಯುಮಂ . . . ಮನೋಹರಮನೆ ಸಮೆದು (ಚಂದ್ರಪು. ೭-೧೧೪ ವ). ೫. ಕೃಶವಾದ; ತೆಳ್ಳಗಿರುವ. ೬. ಚೂಪಾಗಿರುವ; ಮೊನಚಾದ: ಪುಣ್ಡ್ರಂತಿಣಿಗೆಱಗೆ ನೊಳಂ ಶೀರ್ಣಶೃಂಗಾಗ್ರದಿಂ ಮಾರ್ದೊಡೆಯುತ್ತುಂ ಪಾಯ್ದು ಪಿಂಡಂ ಕಲಂಕಿ ಕೆಲೆಯುತುಂ . . . ಬಂದುದು ಮದವಿದಳತ್ತಿಂಗಳಾಕ್ಷಂ ಮಹೋಕ್ಷಂ (ಲೀಲಾವ. ೫-೮೭). [ಸಂ.]

**ಶೀರ್ಷ** (ನಾ). ೧. ತುದಿ; ಅಗ್ರ : ಗಿರಿಶೀರ್ಷಗತಂಗಳ್ ಅಱುನೂಱುಯೋಜನಂ ಪೋದಲ್ಲಿರ್ಪುವು (ತತ್ತ್ವಪ್ರ. ೧೪೮); ಆ ಗಿರಿಯ ಶೀರ್ಷದೊಳ್ಕವಲೋಕವಿರ್ಪುದದನೀಗರಿದು ಬಣ್ಣಿಸುವರಾರು (ಕುಮಾಪು. ೧-೪೫). ೨. ತಲೆ; ಶಿರ: "ಮುಂಡಃ . . . ಶೀರ್ಷಃ, ಮೂರ್ಧಾ, ಕಂ — ಈ ೮ ಮಂಡೆ" (ಹಲಾಯು. ೮೫-೩೭೪). [ಸಂ.]

**ಶೀರ್ಷಕ** (ನಾ). ೧. ತುದಿ ; ಅಗ್ರಭಾಗ. ೨. ತಲೆ; ಶಿರ. ೩. ತಲೆಯ ಬುರುಡೆ; ಓಡು. ೪. ತಲೆಗೆ ಧರಿಸುವ ಕುಲಾವಿ, ಟೋಪಿ, ರುಮಾಲು ಮುಂತಾದುವು: "ಶೀರ್ಷಕಂ ತಲೆಸುತ್ತು" (ಮಂಗರಾ. ೧೧೧-೨೮). ೫. ಶಿರಸ್ತ್ರಾಣ; ಸೀಸಕ: "ಶೀರ್ಷಕಂ, ಶೀರ್ಷಣ್ಯಂ, ಶಿರಸ್ತ್ರಂ — ೩ ತಲೆಯನ್ನು ರಕ್ಷಿಸುವ ಲೋಹದ ಟೊಪ್ಪಿಗೆ" (ಸಿದ್ಧಾಂತಿ. ... ೬. ತಲೆಯಲ್ಲಿ ಧರಿಸುವ ಹೂವು, ಆಭರಣ ಮುಂತಾದುವು: "ಮಂಡೆಯಲಿ ಮುಡಿದ ಹೂ ಚೌರಿಗಳು ಶೀರ್ಷಕಂ" (ಮಂಗರಾ. ೯೮-೨೦); ನಾನಾರತ್ನ ಸುವರ್ಣಪದಕವಿರಚನಾದಿ ಭೇದದಿಂ ಪ್ರತ್ಯೇಕಶೀರ್ಷಕೋಪಶೀರ್ಷಕಾವಘಾಟಕಪ್ರಕಾಂಡಕ ತರಲತರಬಂಧೋಪಪದಪಂಚಕಸಮೇತಂಗಳಾಗಿ (ಆದಿಪು. ೮-೫೪ ವ). [ಸಂ.]

**ಶೀರ್ಷರತ್ನ** (ನಾ). ತಲೆಯಲ್ಲಿ ಧರಿಸುವ ಶ್ರೇಷ್ಠವಾದ ಮಣಿ; ಚೂಡಾಮಣಿ: ಅಹಿರಾಜರುಚಿರಶೀರ್ಷರತ್ನದೃಢಬೀಜಕರಾಂಕುರತತ್ಪ್ರತಾಪವಲ್ಲರಿ ರವಿರೋಚಿಯೆಂಬ ವಿಷಧಿಂ ದಶದಿಕ್ಕನೆ ಪರ್ಬಿ ಪೆತ್ತುದೊ (ರಾಜಶೇ. ೫-೫). [ಸಂ.]

**ಶೀರ್ಷಾಭರಣ** (ನಾ). ೧. ತಲೆಯಲ್ಲಿ ಧರಿಸುವ ಒಡವೆ; ಶಿರೋಭೂಷಣ. ೨. ಶ್ರೇಷ್ಠವಾದುದು; ಅತ್ಯುತ್ತಮವಾದುದು: ಶೀರ್ಷಾಭರಣಂ ಧರೆಗುತ್ಕರ್ಷ ವಿಳಾಸನದ ಭೂಮಿ ಸಕಳಜನಕ್ಕಂ ಹರ್ಷಮನೀವುದು . . . ರಾಜಪುರಂ (ಯಶೋಚ. ೧-೨೭). [ಸಂ.]

**ಶೀರ್ಷಾಸನ** (ನಾ). [ಯೋಗ] ತಲೆಯನ್ನು ಕೆಳಗೆ ಮಾಡಿ ನಿಲ್ಲುವ ಒಂದು ಬಗೆಯ ಆಸನ : ಆಸನಗಳಲ್ಲಿ ಶೀರ್ಷಾಸನ, ಸರ್ವಾಂಗಾಸನ ಎರಡು ಹೊತ್ತು ಮಾಡಬೇಕಾದವುಗಳಾಗಿವೆ (ಭಾರದ. ೧೫೭). [ಸಂ.]

**ಶೀರ್ಷಿಕೆ** (ನಾ). ತಲೆಬರಹ ; ಶಿರೋನಾಮೆ: 'ಈ ವಾರದ ವ್ಯಕ್ತಿ' ಎಂಬ ಶೀರ್ಷಿಕೆ ... ಮಾಡತಕ್ಕದ್ದು (ಅಪನಾ. ೬); "ಆನಂದವರ್ಧನನ ಕಾವ್ಯಮೀಮಾಂಸೆ" ಎಂಬ ... ಕೆಯಲ್ಲಿಯೂ . . . ಪ್ರಕಟವಾದುವು (ಧ್ವನ್ಯಾಲೋ. XII, ೮೦೬). [ಸಂ. ಶೀರ್ಷಿಕಾ]

**ಶೀರ್ಷೋದಯ** (ನಾ). [ಜ್ಯೋತಿ] ಅಗ್ರಭಾಗದಿಂದ ಹುಟ್ಟುವ ರಾಶಿ; IP ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಕುಂಭ - ಈ ಐದು ಶೀರ್ಷೋದಯ ರಾಶಿಗಳು : ಅರಿ ನೀಚಗೃಹಂ ಪೊಱಗಾಗಿರೆ ಶೀರ್ಷೋದಯದೊಳಿರೆ ಸಮಸ್ತ ಗ್ರಹಮೊಂದಿರೆ ಕರ್ಕಲಗ್ನದೊಳ್ ಶೀತರೋಚಿ ಪರಿಪೂರ್ಣನಾಗೆ ನೃಪನಕ್ಕುಮವಂ (ಜಾತತಿ. ೧೨-೭). [ಸಂ.]

**ಶೀಲ, ಶೀಳ** (ನಾ). ೧. ನಡತೆ; ಸ್ವಭಾವ : "ಶೀಲಂ ಸುಚರಿತ್ರಮುಂ ಸ್ವಭಾವಮುಮಕ್ಕುಂ" (ವಸ್ತುಕೋ. ೧೨೩-೩೩) ; ಶೀಲ ಒಳ್ಳೇದಾದರೂ ಗುಣ ಕೆಟ್ಟದ್ದು (ಗಾದ). ೨. ಒಳ್ಳೆಯ ನಡತೆ; ಸದಾಚಾರ: ಶೀಲಾಲಂಕೃತೆಯನಾ ಮಹಾಸತಿಯಂ ಶ್ರೀಶೈಲಾಂಬಿಕೆಯಂ . . . ಕಲಂಕಮೇಂ ಪೊರ್ದುಗುಮೇ (ಅಜಿಪು. ೧-೭೪); ವಿದ್ಯೆ ಗುಣ ಜ್ಞಾನ ಧರ್ಮ ಆಚಾರ ಶೀಲಂಗಳ ನಮ್ಮ ಕೂಡಲಸಂಗನ ಶರಣರು ಸಾಧಿಸಿದ ಸಾಧನೆಯನೆ ಸಾಧಿಸುವುದು (ಬಸವ. ೬೧೩); ಶೀಲದ ಫಲಮೇಂ ಶ್ರೀಯೊಳ್ ಮೇಲಪ್ಪನಿತೆ ವಲಮದುವುಮಿಂ . . . ಲೀಲೆಯಿನೀ ಭವದೊಳಪ್ಪ ಸಿರಿಯದು ಪೊಲ್ಲಾ (ಜೀವಸಂ. ೨೨೭-೩೭). ೩. ಒಳ್ಳೆಯ ಆಕಾರ, – ರೂಪ. ೪. ಹೆಣ್ಣಿನ ಪಾವಿತ್ರ್ಯ,– ಪವಿತ್ರತೆ : ಶೀಲ ಒಳ್ಳೇದಾದರೂ ಗುಣ ಕೆಟ್ಟದು (ಗಾದ). ೫. ಮಡಿವಂತಿಕೆ : ನೀರು ಹೆಚ್ಚಾಗಿ ಶೀಲ, ಕೂಳು ಹೆಚ್ಚಾಗಿ ಕುಲ (ಗಾದ). ೬. (ಸಮಾಸಪದದಲ್ಲಿ ಉತ್ತರಪದವಾಗಿ ಬಂದಾಗ) 'ಪ್ರವೃತ್ತಿಯುಳ್ಳವನು', 'ಸ್ವಭಾವವುಳ್ಳವನು' ಎಂಬರ್ಥವನ್ನು ಸೂಚಿಸುವ ಶಬ್ದ: 'ದಾನಶೀಲ' ಪರಾ. ೭. [ಜೈನ] ಧಾರ್ಮಿಕ ಆಚರಣೆಯ ನಿಯಮ; IP "ದಿಗ್ವ್ರತ, ದೇಶವ್ರತಾದಿಗಳಿಗೆ ಮತ್ತು ಸಾಮಯಿಕ ಪ್ರೋಷಧೋಪವಾಸಾದಿಗಳಿಗೆ ಶೀಲವೆನ್ನುತ್ತಾರೆ" (ಆದಿಪು. ಜೈನಪಾರಿಭಾಷಿಕ ಶಬ್ದಕೋಶ): ಬಗೆಯೊಳ್ ಪೊಣ್ಮೆ ದಯಾರಸಂ ಚರಿತದೊಳ್ ಕೈಗಣ್ಮೆ ಚಾರಿತ್ರಮಾಗಮಾವಶ್ಯಕದೊಳ್ ತಗುಳ್ದು ಪಲವುಂ ಶೀಲಂಗಳಂ ತಾಳ್ದಿ (ಆದಿಪು. ೧-೫); ನಿಯಮಂ ವೃತಿ ಶೀಲಮಾಳವಳಮೆನಲ್ಕೇಟ್ಗೆಯನಾಳ್ದು ಸುಖದ ಫಲಪ್ರಾಪ್ತಿಯನಾಗಿಪ ಕಲ್ಪವೃಕ್ಷಮಲ್ಲದೆ ಧರ್ಮಂ (ಪುಷ್ಪಪು. ೧೩-೫೫). ೮. [ವೀಶೈ] ಯೋಗ್ಯವಾದ ಆಚಾರಗಳನ್ನು ಅನುಸರಿಸುವುದು; IP ಇದರಲ್ಲಿ ಇಪ್ಪತ್ತುನಾಲ್ಕು ಮತ್ತು ಅರುವತ್ತುನಾಲ್ಕು ಪ್ರಭೇದಗಳಿವೆ : ಆದಿ ಆಧಾರ ತನುಗುಣ ಉಳ್ಳನ್ನಕ್ಕರ ಸಮತೆ ಎಂಬುದೇನೋ ಕಾಲಕಲ್ಪಿತ ಉಪಾಧಿ ಉಳ್ಳನ್ನಕ್ಕರ ಶೀಲವೆಂಬುದು ಭಂಗ (ಅವಚಂ. ೧೦೫-೪೭೭) ; ಇಂತಿವಿರ್ಪತ್ತನಾಲ್ಕೀ ತೆಱದ ಶೀಲಗಳನಂತವುಂಟೈ ಕೆಂಚವೀರಾಹ್ವಯಾ ಕೇಳು (ವೀಶೈಪು. ೭-೧೬-೩೨); ತಿಳಿದೆಯಾ ಶೀಲವಱುವತ್ತನಾಲ್ಕುಂ ಮಹೋಜ್ವಳವಾದವೈ (ವೀಶೈಪು. ೭-೧೬-೫೯). **ಶೀಳ**: ೭. ಕೈಕೊಂಡು ಪರ್ಯುಷ್ಟಿಯುಮನವರತಂ ಮಾಱ್ಪ ಶೀಳೋತ್ಕರಂ ಕೂಡಿರೆ ವೈಯಾಪೃತ್ಯಮೆಂಬೀ ತಪದೊಳೆಸಗಿದಂ ಸೂರ್ಯಮಿತ್ರಬ್ರತೀಂದ್ರಂ (ಸುಕುಮಾ. ೪-೧೭).
[ಸಂ.]

**ಶೀಲಭದ್ರ** (ನಾ). ಶ್ರೇಷ್ಠವಾದ ಗುಣವುಳ್ಳವನು: ಶ್ರೀಶೀಲಭದ್ರಂ ದ್ವಿಷಜ್ಜನ ದುರ್ಭಾರಗಜಾಂಕುಶಂ ಸುಜನರತ್ನಂ ತಾಹೆನಲ್ಕೇಂ [ಕೃತಾ]ರ್ಥನೊ . . . ಶ್ರೀಧರಂ (ಜಾತತಿ ೧-೫). [ಸಂ.]

**ಶೀಲವಂತ** (ನಾ). ೧. ಒಳ್ಳೆಯ ನಡತೆಯುಳ್ಳವನು; ಸಚ್ಚರಿತ: ಶೀಲವಂತರ ಕೈಯ ಕನ್ನಡಿ ಕಾಲಕಂಠನ ಕೂರಲಗು ಕರುಣಾಳ ಬಸವಂ ಲಿಂಗಜಂಗಮದೊಳು ಸೊಬಗನು (ಬಸಪು.೧-೩೩) ; ಶೀಲವಂತರನಂತರುಂಟವಳಂತೊಱಂತೆಯನೆಯ್ದೆ ತಮ್ಮಾಲಯಸ್ಥಳದಲ್ಲಿ ತೋಡಿದರುಂಟೆ (ವೃಷವಿ. ೩೨-೪೮); ಶೀಲವಂತರಿಗೆ ಶಿಲೆಯೂ ಒಲಿಯುವುದು (ಪ್ರಸುಹ. ೪೭). ೨. ಲಿಂಗಾಯಿತರ ಒಂದು ಪಂಗಡ: ಶೀಲವಂತರ ಸಂಖ್ಯೆ ಬಹು ಸ್ವಲ್ಪವಿರುತ್ತದೆ (ಕಭಾಗ.೯೫). ೩. [ವೀಶೈ] ಅರುವತ್ತು ನಾಲ್ಕುಶೀಲಗಳನ್ನು ಪಾಲಿಸುವ ಸಂಕಲ್ಪಮಾಡಿಕೊಂಡವನು : ಲಿಂಗದ ಹೊಲಬನಱಿಯದೆ ಭಕ್ತ ಶೀಲವಂತನಾದ ಆದಿಮಧ್ಯಾವಸಾನದಲ್ಲಿ ಗುಹೇಶ್ವರಲಿಂಗವು ಅಱಿವಿನ ಮಱೆಯಲ್ಲಿಹುದನಾದರೂ ಅಱಿಯರಲ್ಲಾ (ಅವಚಂ. ೧೧೪-೫೧೬); ವೀರಮಹೇಶ್ವರಾರಾಧಕನಾದ ಶೀಲವಂತ ದಳವಾಯಿ ಪರಮ X ಪ್ಪ X ಮಠ ಕೆರೆ ತೋಟ ಯಿ XX ಮಾಡಿಸಿ (ಎಕ. XVI, ಚಿಕ್ಕನಾ. ೧-೧೧ ; 1623).
[ಸಂ. ಶೀಲವತ್]

**ಶೀಲವತಿ** (ನಾ). ಒಳ್ಳೆಯ ನಡತೆಯುಳ್ಳವಳು ; ಸದಾಚಾರಿಣಿ: ಜಳದೇವತೆ ಕೋಡುವ ತಿಳಿಗೊಳದೊಳಗಿರ್ಪಂತೆ ಶೀಲವತಿ ಸೀತೆ ವಿನಿಶ್ಚಳಮಿರೆ ಮನದೊಳ್ ಜಿನಪತಿಚಳಣಂ ದಳ್ಳುರಿಯ ನಡುವೆ ಕೋಡುತ್ತಿರ್ದಳ್ (ಪಂರಾಮಾ. ೧೬-೨೮).
[ಸಂ. ಶೀಲವತೀ]

**ಶೀಲವ್ರತ** (ನಾ). [ಜೈನ] ಮುನಿಜೀವನದ ವ್ರತಾಚರಣೆ : ದರ್ಶನವಿಶುದ್ಧ ನಾಗಿಯುಂ ಶೀಲವ್ರತಭಾವನಾರಹಿತನಸಂಯುತಂ ಜಘನ್ಯಪಾತ್ರಂ (ಆದಿಪು. ೧೦-೯ ವ); ಶೀಲವ್ರತಮಂ ತಾಳ್ದದೆ ಮೇಲೆನಿಸುವ ಪಾತ್ರದಾನಮಂ ಮಾಡದೆ ಸಲ್ಲೀಲೆಯಿಂದಿಂದ್ರನ ಸಿರಿಯಂ ಪಾಲಿಸಲೆಲೆ ಮರುಳೆ ಬಾರದವನೀತಳದೊಳ್ (ಧರ್ಮಾಮೃ. ೬-೧೫೦). [ಸಂ.]

**ಶೀಲಸಂಪನ್ನ** (ನಾ). ೧. ಒಳ್ಳೆಯ ನಡತೆಯಿಂದ ಕೂಡಿರುವ ವ್ಯಕ್ತಿ: ಅವರು ಶೀಲಸಂಪನ್ನರು (ರೂಢಿ). ೨. [ಜೈನ] ಶೀಲವ್ರತವನ್ನು ಆಚರಿಸುವವನು: ದರ್ಶನವಿಶುದ್ಧನುಂ ಶೀಲಸಂಪನ್ನನುಮಪ್ಪ ಸಂಯತನುತ್ತಮಪಾತ್ರಂ (ಆದಿಪು. ೧೦-೯ ವ); ವಿಶದಯಶೋನಿಳಯಂ ವಿಮಳಶೀಲ[ಪಾಠಾಂ. ಳ]ಸಂಪನ್ನನುಚಿತಭೃತ್ಯಾನೀಕಂ (ಸುಕುಮಾ. ೬-೩೬). [ಸಂ.]

**ಶೀಲಸಂಪನ್ನೆ** (ನಾ). ಒಳ್ಳೆಯ ನಡತೆಯನ್ನು ಹೊಂದಿರುವವಳು : ನೀನು ಶೀಲಸಂಪನ್ನೆಯಾಗಿ ಕನ್ನಡಕನ್ನೆಯರ ಚೂಡಾಮಣಿಯಾಗಿರುವೆ (ದಾನಚಿಂ. ೧೭೬). [ಶೀಲಸಂಪನ್ನ + – ಎ₂]

**ಶೀಲಿಗ** (ನಾ). ನಟನೆ ಮಾಡುವವನು: ಅಯ್ಯಾ ನಾಟಕನಲ್ಲ ಬೂಟಕನಲ್ಲ ಶೀಲಿಗನಲ್ಲ ಕಪಟನಾಟಕನಲ್ಲ . . . ನೋಡಾ ನಿರವಯಶೂನ್ಯಲಿಂಗಮೂರ್ತಿ ಗುಹೇಶ್ವರಲಿಂಗವು (ವಚಶಾ. I, ೧). [< ಸಂ. ಶೀಲಿಕ]

**ಶೀವಿಗೆಡ್ಡೆ** 'ಸೀಪಿಯ ಗೆಡ್ಡೆ' ನೋ.

**ಶೀಶೆ** 'ಸೀಸೆ' ನೋ.

**ಶೀಷೆ** 'ಸೀಸೆ' ನೋ.

**ಶೀಸೆಬಿರಟುಮರ** 'ಸೀಸೆಬಿರಟುಮರ' ನೋ.

**ಶೀಳ** 'ಶೀಲ' ನೋ.

**ಶುಂಟ, ಶೊಂಟ, ಸುಂಟ** (ನಾ). ೧. ದಡ್ಡ; ತಿಳಿಗೇಡಿ; ಮೂರ್ಖ: ಆ ಶುಂಟನಿಗೆ ಎಷ್ಟು ಹೇಳಿದರೂ ಬುದ್ಧಿ ಬಾರದು (ರೂಢಿ). **ಶೊಂಟ** : ೧. 'ಶೊಂಟಕೊಂಬು' ಪರಾ. **ಸುಂಟ**: ೧. ನಂಬಿದರ್ಗೆರಡ ಬಗೆವವನ ಸುಂಟಂ ತುಂಟಗಂಟುಕನ ಪರರೊಡವೆಗಂ ಪಂಬಲಿಸುವನ . . . ತುಚ್ಛದ ಮದಡನಂ (ಪ್ರಭುಪು. ೭-೨೩೮). ೨. ಹಠವಾದಿ; **ಮೊಂಡ**: ಅನೇಕವಾದದಿಂದನ್ಯವಾದಕೋಳಾಹಳಂಗಯ್ಯಲೊಡಂ ಸೋಲ್ತು ತಲೆ ಸತ್ತುಂ ಬಾಲಂ ಸಾಯದೆಂಬ ಸುಂಟರಂತೆ ಕುಂಠಿತಮಾದ ನೀತಿಹೀನ ನಿಷ್ಠುರವಾದದಿಂ ಜಿನುಗುತ್ತಿರೆ ನೋಡಿ (ಹಮ್ಮೀರ. ೬-೪೫ ವ). [< ಸಂ. ಶುಂಠ./ ತೆಲು. ಶುಂಠ./ ಮರಾ. ಶುಂಟ, ಶುಂಠ]

**ಶುಂಟಿಕೆ** 'ಸುಂಟಿಗೆ' ನೋ.

**ಶುಂಠ** (ಗು). ೧. ತಿಳಿವಳಿಕೆಯಿಲ್ಲದ; ಮೂರ್ಖತನದಿಂದ ಕೂಡಿದ : ಬದ್ಧವಾದ ನಯನುಡಿಯು ಇಲ್ಲದಾತನೆ ಹೊಲೆಯ ಶುದ್ಧ ತಾನೆಂಬಾತ ಶುಂಠ ಹೊಲೆಯ (ಪುರಂದ. ೧-೧೭೮-೩); ಪಂಡಿಸಲಷ್ಟ ದೆ ಧರೆಯನೊಪ್ಪಿಸಿಕೊಟ್ಟ ಶುಂಠಭೂಪರ ಬಿಟ್ಟು ಬಂದು (ಕಂಸವ. ೨೧-೬೦); ಶುಂಠಮನುಷ್ಯರಾ ಧರಣಿಪರ್ ದನುಜರ್ ಮುನಿಗಳ್ (ಕಜೇಕಂ. ೬). (ನಾ). ೨. ದಡ್ಡ; ಮೂರ್ಖ: ಶುಂಠನ ನೆರೆ ಸಲ್ಲ ಕುಂಟನ ಕೆಳೆ ಸಲ್ಲ ತುಂಟನೊಳೇಕಾಂತ ಸಲ್ಲ (೧೦ಚಾಪ. ೧೭೧-೪೫); ಶುಂಠನಿಗೆ ಎಂಟಷ್ಟು ಕಲಿಸಿದರೂ ವ್ಯರ್ಥ (ಗಾದ). [ಸಂ.]

**ಶುಂಠತನ** (ನಾ). ೧. ದಡ್ಡತನ; ಮೂರ್ಖತನ: ಅವನ ಶುಂಠತನಕ್ಕೆ ಮಿತಿಯೇ ಇಲ್ಲ (ರೂಢಿ). ೨. (ಆಲಂ) ಮೋಸ; ವಂಚನೆ: ಭೂಪರ ಹಣಗಳನ್ನು ತಿಂದು . . . ನಿಜಶ್ರೇಯಪ್ರಾಪ್ತಿಗೆ ಶುಂಠತನದಲಿ ಮೆಱೆವ ಕರಣಿಕಧೂರ್ತರನು ಕಂಡ (ಕೌಶಿರಾ. ೧೦-೩೦). [ಶುಂಠ + – ತನ]

**ಶುಂಠಿ** (ನಾ). ೧. (ಅಡುಗೆಗೂ ಔಷಧಿಗೂ ಬಳಸುವ) ಅರಿಸಿನದ ಜಾತಿಗೆ ಸೇರಿದ ಒಂದು ಬಗೆಯ ಬೇರು: ರಾಜಾನ್ನದಕ್ಕಿ ಜೀರಿಗೆ ಕೊತ್ತುಂಬರಿ ಶುಂಠಿ ಲಂಬಿವೊಡಗೂಡಿರೆ ಕಾಸಿದ ಗಂಜಿ (ಕಲ್ಯಾಕಾ. ೩-೨೫); ಜೀರಿಗೆ ಶುಂಠಿ ಹಾರಕಂ (ಸಿದ್ಧಕಾ. ೧೩-೪೩); ಅರಿಸಿನ, ಶುಂಠಿ – ಇವುಗಳು ೬ ತಿಂಗಳಿಗಿಂತ ಹೆಚ್ಚಾಗಿ ಭೂಮಿಯಲ್ಲಿರ ಬೇಕಾದ ಕಾರಣ ವರ್ಷಕ್ಕೆ ಆಗುವುದು ಒಂದೇ ಬೆಳೆ (ವ್ಯವಮ. ೫೪). ೨. (ಆಲಂ) ಶೂನ್ಯ; ಸೊನ್ನೆ: ಕಾವಲುಗಾರರಿಗೆ ಹಿಂದೂಸ್ಥಾನೀಭಾಷೆ 'ಶುಂಠಿ' (ಯದುರಾ. ೧೩). ೩. ದಡ್ಡ; ಮೂರ್ಖ : ಇವನೊಬ್ಬ ಶುದ್ಧ ಶುಂಠಿ (ರೂಢಿ).

**ಶುಂಠಿಕಷಾಯ** = ಶುಂಠಿ ಮೊದಲಾದುವನ್ನು ಹಾಕಿ ಕಾಯಿಸಿ ಮಾಡಿದ ದ್ರವ : ಶುಂಠಿಕಷಾಯ ಶೀತಕ್ಕೆ ತುಂಬಾ ಒಳ್ಳೆಯದು (ರೂಢಿ). **ಶುಂಠಿಯ ಘೃತ** = ಶುಂಠಿಯನ್ನು ಸೇರಿಸಿ ತುಪ್ಪದಲ್ಲಿ ಪಾಕಮಾಡಿ ತಯಾರಿಸುವ ಒಂದು ಬಗೆಯ ಲೇಹ್ಯ : ಶುಂಠಿಯ ಘೃತ — ತೊಕ್ಕ ತೆಗೆದ ಶುಂಠಿ ಒಂದು ಮಾನ, ಹಿಪ್ಪಲಿಮೂಲ ಒಂದು ಪಡಿ ಸಹ ಜಜ್ಜುಗುಟ್ಟಿ ಎರಡುಬಳ್ಳ ನೀರಿನಲ್ಲಿ ಹಾಕಿ . . . ಕಾಸಿ ಹದದಲ್ಲಿಳುಹಿ ದಿನಂಪ್ರತಿಯೂ ಗ ೧ ತೂಕವಂ ಸೇವಿಸೆ ನನೆಹೊರಟ ಸರ್ವಾತಿಸಾರಂ ಮಾಣ್ಗುಂ (ಸಕವ್ಯ. ೩.೨೯). [ಸಂ. ಶುಂಠಿ, ಶುಂಠೀ]

**ಶುಂಠಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಶುಂಠಿಹುಲ್ಲು, ಕರೀಕಡ್ಡಿಹುಲ್ಲು (ಮೈಜಿಗ. ೫೯-೧೯೦). [ಶುಂಠಿ + ಹುಲ್ಲು (< ಪುಲ್)]

**ಶುಂಡ** (ನಾ). ೧. ಆನೆಯ ಸೊಂಡಿಲು : ಎಸೆವ ಶುಂಡಂ ತುದಿಯಲ್ಲಿ ನೇಲ್ವ ಪೆರ್ವಾವು (ಕುಮಾಪು. ೪-೧೯೨). ೨. ಆನೆಯ ಮದೋದಕ. ೩. ಕಪ್ಪೆ; ಮಂಡೂಕ: "ಇಭಹಸ್ತಂ ಭೇಕ ಶುಂಡಾಂಕಿತಂ" (ನಾನಾರ. ೧೩೨). [ಸಂ.]

**ಶುಂಡಲ** 'ಸುಂಡಿಲ್' ನೋ.

**ಶುಂಡಾದಂಡ** (ನಾ). ಆನೆಯ ಸೊಂಡಿಲು : ದ್ವಿಪಶುಂಡಾದಂಡಸೀತ್ಕಾರ ದಿನರದಚಲಚ್ಚಕ್ರಚೀತ್ಕಾರದಿಂ . . . ಶಬ್ದಾತ್ಮಕಂ ಮಾಡಿದುದುಭಯಮಹೀ ಭೃಚ್ಚಮೂಚಕ್ರವಾಳಂ (ಚಂದ್ರಪು. ೧೦-೬೭); ಮದನಮದಗಜದ ಮದರಸಂ ಪತ್ತಿದ ಶುಂಡಾದಂಡಾಗ್ರಮನದಱ ಕಂಪಿಗೆಳಸಿ ಬಳಸಿದಳಿಮಾಲೆಯ ಲೀಲೆಯಂ ತಳೆದು (ರಾಜಶೇ. ೧೨-೫೭ ವ). [ಸಂ.]

**ಶುಂಡಾಪಾನ** (ನಾ). ಮದ್ಯಪಾನ ಮಾಡುವ ಅಥವಾ ಮದ್ಯವನ್ನು ಮಾರುವ ಸ್ಥಳ ; ಗಡಂಗು. [ಸಂ.]

**ಶುಂಡಾಲ, ಶುಂಡಾಳ** (ನಾ). ೧. ಆನೆ : ಇಕ್ಷುದಂಡಪ್ರಣೀತನಿಜಭುಜದಂಡ ಕ್ರೀಡಾವಖಂಡಿತೋಚ್ಚಂಡ ಶುಂಡಾಲ[ಪಾಠಾಂ. ಳ] ಗಾತ್ರಾಪರಮತಿಬಾಲಕದಲಿಕಾ ಕಾಂಡಲೀಲಾಚ್ಛಿನ್ನಸಿಂಧುರಮಧ್ಯಹಸ್ತಂ (ಆದಿಪು. ೧೫-೪೫ ವ); ಸಿಂಹ ಶರಭ . . . ಶುಂಡಾಲ ಶಾರ್ದೂಲ ಸರ್ಪಾದಿ ಕ್ರೂರರೂಪಂಗಳಿಂ ಬಾಧಿಸದಂತು ಶಾಂತಿಯಂ ಮಾಡಲ್ವೇಟ್ಟುದು (ಜಗವಿ. ೪-೭೭ವ). ೨. ಸೊಂಡಿಲು: "ದಿಗ್ಗಜದ ಹಸ್ತಮಂ ಶುಂಡಾಲಮೆಂಬುದು" (ಮಂಗರಾ.೧೪೦-೧೧); ಮಹಾಲಿಂಗನೆಂಬ ಬಾಲಕ ಅರಸನ ಆನೆಯ ಶುಂಡಾಲಕ್ಕೆ ಸಿಲುಕಿ ಸತ್ತುಹೋಗುತ್ತಾನೆ (ಶರಚ. ೭೦೪). ೩. ಕಪ್ಪೆ : "ಗಜಹಸ್ತ ಕಪ್ಪೆಯರಡುಂ ನಿಜದಿಂ ಶುಂಡಾಲ" (ನಾನಾಕಂ. ೧೫೪). **ಶುಂಡಾಳ** : ೧. ಇದು ಶುಂಡಾಳಂ ನರೇಂದ್ರಂ ನಿಮಗೆ ಕುಡುವನಾಗಿರ್ದಪಂ ನೋಡೆ ದೃಷ್ಟಂ (ಸುಕುಮಾ. ೩-೭). [ಸಂ.]

**ಶುಂಡಾಲಕೇತನ** (ನಾ). ಆನೆಯ ಚಿಹ್ನೆಯುಳ್ಳ ಧ್ವಜ, – ಪತಾಕೆ : ಕುಮಾರಂ ಬಾಲಕಂ ಯುದ್ಧಯೋಗ್ಯನೆ ಕೈಕೊಳ್ವುದು ದೇವರಿಂದಗಿಯನೆಂದಾಲೋಲ ಶುಂಡಾಲಕೇತನಮಂ ಚೋದಿಸಿದಂ ದಶಾಸ್ಯರಥಮಂ ಸೂತಂ ಮನೋವೇಗದಿಂ (ಪಂರಾಮಾ. ೧೦-೨೦೫). [ಸಂ.]

**ಶುಂಡಾಳ** 'ಶುಂಡಾಲ' ನೋ.

**ಶುಂಡಿಲ್** 'ಸುಂಡಿಲ್' ನೋ.

**ಶುಂಡಿಲು** 'ಸುಂಡಿಲು' ನೋ.

**ಶುಂಡೆ** (ನಾ). ೧. ಆನೆಯ ಸೊಂಡಿಲು : "ಆನೆಯ ಕೈಯಲ್ಲಿಯುಂ ಶುಂಡಾಯೆಂಬುದು" (ಹಲಾಯು. ೧೩೪-೨೦). ೨. ಮದ್ಯ; ಕಳ್ಳು: "ಮಧು . . . ಸ್ವಾದುರಸಾ, ಶುಂಡಾ . . . ಮಧು – ಈ ೨೪ ಕಳ್ಳು" (ಹಲಾಯು. ೫೫-೧೭೪). ೩. ಮದ್ಯಪಾನ ಮಾಡುವ ಸ್ಥಳ : "ಶುಂಡಾ, ಪಾನಂ, ಮದಸ್ಥಾನಂ — ೩ ಮದ್ಯಪಾನ ಮಾಡುವ ಮನೆಯ ಹೆಸರು; ಗಿಡ್ಡಂಗಡಿ" (ಸಿದ್ಧಾಂತಿ. ೩೦೮). ೪. ಕಮಲದ ಬಳ್ಳಿ. ೫. ಸೂಳೆ. [ಸಂ. ಶುಂಡಾ]

**ಶುಂಭ** 'ಸೋಂಬ' ನೋ.

**ಶುಕ** (ನಾ). ೧. ಗಿಣಿ; ಗಿಳಿ: ಶುಕಶಾರಿಕಾದಿವಿಗ್ರಹಪ್ರಕರಮುಂ ಕೇಳ್ದ ವಚನಮಂ ನುಡಿವುದು ಕೌತುಕಂ (ಕಾದಂಪೂ. ೬೪); ಒದಿತ್ತು ಕಾಣಿರೋ ಶುಕನು ಶಿವಪಥವನಱಿಯದನ್ನಕ್ಕ

(ಬಸವ. ೧೪೩); ಶುಕಪಿಕದುಂದುಭಿಧ್ವನಿಗಳುಣ್ಮೆ ಮನೋಭವರಾಜನಾ ವಸಂತಕ ಸಖಿಯುಕ್ತನಾಗಿ ಬರಲ್ (ಕುಸುಮಾ. ೧-೯೪). ೨. ಒಬ್ಬ ಋಷಿಯ ಹೆಸರು; ವ್ಯಾಸ ಮಹರ್ಷಿಯ ಮಗ : ಸುಮೇಘಪರ್ವತದಲ್ಲಿ ಅತ್ರಿ . . . ಶುಕ . . . ಉಪಮನ್ಯು ಮೊದಲಾದ ಅಷ್ಟಾಶೀತಿಸಹಸ್ರಋಷಿಗಳಿಗನಂತಾಶ್ರಯಂಗಳುಂ (ವಿವೇಕ. ೫೦೭) ; ಮನದ ರಂಭೆಯ ಗದ್ದುಗೆ ಶುಕನಾತನಸ್ತೂಲಿಸಿ, ಭಕ್ತಿಗಂಗೆಯ ಭಾರತದ ತೃಷೆಗೆ ತಂದಂ (ಗಿರಿಜಾ. ೪೫-೩). ೩. ಶಿವ; ಈಶ್ವರ. ೪. ರಾವಣನ ಒಬ್ಬ ಮಂತ್ರಿಯ ಹೆಸರು: "ಚೂತಕುಜಂ ಗಿಳಿಯತಿವರಭೂತೇಶನುಮಸುರಸಚಿವನೆಲವದಮರನೆಂಬಾತ ಶಯನಾರು ನಾಮಂ ಕೌತುಕಮಲ್ಲನಿತು ಸಲುವ ಶುಕ ಶಬ್ದಂಗಳ್" (ನಾನಾಕಂ. ೧೭). ೫. ಬೂರುಗದ ಮರ; ಶಾಲ್ಮಲೀವೃಕ್ಷ: ಶುಕಮಯಂ ಶುಕಮಯಂ ಶುಕಮಯಂ ಗಿರಿಯ ಸಾನುವಿಂದೊಸರ್ದು ಪರಿವ ಜಲ ಹರಿಮಯಂ . . . ಕಾನನಂ ಕಣ್ಗೆಸೆದುದು (ಹಚಕಾ. ೫-೧೮). ೧, ೨, ೫ : ಭಾರದ್ವಾಜ ಶಾಂಡಿಲ್ಯಕ ಶುಕವಿಮದಾಗಸ್ತ್ಯಕಂ ತಾಪಸಪ್ರೋತ್ಕರಮಂ ಸೋಮಾರ್ಕರುಕ್ಕಾಂಚಿತಮದು ನಭಮಂ ಪೋಲ್ತು ಚೆಲ್ವಾಯ್ತರಣ್ಯಂ (ರಾಜಶೇ. ೫-೭೫). ೬. ಬಾಗೆಮರ ; ಶಿರೀಷವೃಕ್ಷ : "ಮಾಕಂದಂ ಗಿಳಿ ಯೋಗಿ ಶಾಲ್ಮಲಿ ಕುಜ ರುದ್ರಂ ಶುಕವಾಚಕಂ" (ನಾನಾರ. ೧೫೪). ೭. ಮಾವಿನ ಮರ ; ಚೂತ. ೮. ಒಂದು ಬಗೆಯ ಸುಗಂಧದ ಗಿಡ ; ಮಾಚಿಪತ್ರೆ: "ಗ್ರಂಥಿಪರ್ಣಂ, ಶುಕಂ, ಬರ್ಹಂ, ಪುಷ್ಪಂ, ಸ್ಥಾಣೇಯಂ, ಕುಕ್ಕುರಂ — ೬ ಸ್ಥಾಣೇಯಕವೆಂಬ ಗ್ರಂಥ್ಯದ್ರವ್ಯದ ಹೆಸರುಗಳು, ಮಾಚಿಪತ್ರೆ" (ಸಿದ್ಧಾಂತಿ. ೧೪೨). [ಸಂ.]

**ಶುಕಕಾಮಿನಿ** (ನಾ). ಹೆಣ್ಣುಗಿಳಿ; ಶಾರಿಕೆ : ರತದೊಳಗಗ್ಗಳಂ ಮುಖರತಂ ಸುರತೋತ್ಸವಕೆಂದು ಕಾಮಿನೀಪ್ರತತಿಗೆ ತೋರ್ಪವೋಲ್ . . . ಅಮ್ರಭೂಷಿತಕ ಮನಾಮ್ರಪಕ್ವಫಳದೊಳ್ ಶುಕಕಾಮಿನಿ ಚೆಲ್ವುದೋಱಿದಳ್ (ಆದಿಪು. ೧೧-೯೭). [ಸಂ. ಶುಕಕಾಮಿನೀ]

**ಶುಕತುಂಡ** (ನಾ). ೧. ಗಿಳಿಯ ಕೊಕ್ಕು, — ಚಂಚು. ೨ [ನಾಟ್ಯ] ಇಪ್ಪತ್ತು ನಾಲ್ಕು ಬಗೆಯ ಅಸಂಯುತ ಹಸ್ತಗಳಲ್ಲಿ ಒಂದು : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತಹಸ್ತಗಳು ಯಾವುವೆಂದರೆ — ೧. ಪತಾಕ . . . ೬. ಶುಕತುಂಡ, ೭. ಮುಷ್ಟಿ . . . ೨೪. ತಾಮ್ರಚೂಡ (ಆಭಾನ್ಯ. ೪೭). [ಸಂ.]

**ಶುಕದೇರ** (ನಾ). ಗಿಣಿಯನ್ನೇ ವಾಹನವಾಗುಳ್ಳವನು; ಕಾಮ; ಮನ್ಮಥ: ಶುಕದೇರನೆಚ್ಚ ಪೂಸಗೋಲುಗಳು ಪೆರ್ಚಿ ಷಣ್ಮುಖನ ಮೈಮುತ್ತಿ (ನವಮೋ. ೩೦-೪೩). 'ಗಿಳಿದೇರ' ಪರಾ. [ಶುಕ + ತೇರು$_2$ (< ತೇರ್$_2$) + — ಅ$_7$]

**ಶುಕನಾಸ** (ಗು). ೧. ಗಿಣಿಯ ಕೊಕ್ಕಿನಂತೆ ಮೂಗನ್ನು ಹೊಂದಿರುವ. (ನಾ). ೨. ಗಿಳಿಯ ಕೊಕ್ಕಿನಂತೆ ಮೂಗುಳ್ಳವನು; ಗಿಣಿಮೂಗಿನವನು. ೩. ಒಂದು ಬಗೆಯ ಸಸ್ಯ : "ಮಂಡೂಕಪರ್ಣಃ, ಪತ್ರೋರ್ಣಃ . . . ಶುಕನಾಸಃ . . . ಅರಲುಃ — ೧೨ ಹಮ್ಮರದ ಹೆಸರುಗಳು" (ಸಿದ್ಧಾಂತಿ. ೧೨೫). ೪. ಬಾಣಕವಿಯ 'ಕಾದಂಬರಿ' ಎಂಬ ಕಾವ್ಯದಲ್ಲಿ ಚಿತ್ರಿತವಾಗಿರುವ ತಾರಾಪೀಡನೆಂಬುವನ ಮಂತ್ರಿ; ವೈಶಂಪಾಯನನ ತಂದೆ : ಶುಕನಾಸಾರ್ಯಗುರುತ್ವದಿಂದ . . . ಕುಮಾರಂಗೆ ಮಹಾ ಪ್ರಧಾನತನಮುಂ ಮಿತ್ರತ್ವಮುಂ ತಾಳ್ದಿದಂ (ಕಾದಂಪೂ. ೪೪೦). [ಸಂ.]

**ಶುಕಫಲನ್ಯಾಯ** (ನಾ). ಲೌಕಿಕನ್ಯಾಯಗಳಲ್ಲಿ ಒಂದು ; ಗಿಳಿಯ ಕೆಂಪಾದ ಕೊಕ್ಕನ್ನು ಮಂಬಿಯು ಮುತ್ತುಗದ ಹೂವೆಂದೂ ದುಂಬಿಯನ್ನು ಗಿಣಿಯು ನೇರಿಳೆಹಣ್ಣೆಂದೂ ಪರಸ್ಪರ ಭ್ರಾಂತಿಯಿಂದ ಭಾವಿಸುವಿಕೆ: ಅದು (ಲಂಕಾನಗರ) ನಿಮಗೆ ಚಿರಕಾಲವಿರತಕ್ಕುದು ವಿಚಾರಿಸ ಶುಕಫಲನ್ಯಾಯದಲಿ ಸಾರ್ದುದು ನಿಮಗೆನುತ ತತ್ಪುರಕೆ ಕಳುಹಿದನು (ಉತ್ತರಾ. ೨-೧೭). [ಸಂ.]

**ಶುಕಲೂರ್ತಿ** 'ಶುಕ್ಲೂರ್ತಿ' ನೋ.

**ಶುಕವಾಣಿ** (ನಾ). ೧. ಗಿಳಿಯ ಮಾತು. ೨. ಗಿಳಿಯಂತೆ ಮಾತನಾಡುವವಳು. [ಸಂ. ಶುಕವಾಣೀ]

**ಶುಕವೃತ್ತಿ** (ನಾ). ಗಿಣಿಯಂತೆ ಹೇಳಿಕೊಟ್ಟುದುದನ್ನು ಮಾತ್ರ ಹೇಳುವುದು; ಗಿಳಿಪಾಠ: ನಚಿಕೇತನ ಚಿತ್ತ, ಕಲಿಸಿದುದನ್ನು ಆಡುವ ಶುಕವೃತ್ತಿಗೆ ಒಗ್ಗುವುದಿಲ್ಲ (ಚಿತಂಬಾ. ೧೦೩). [ಸಂ.]

**ಶುಕಿ** (ನಾ). ಹೆಣ್ಣುಗಿಳಿ: ಗರಿಯ ತಿದ್ದೆ ಬೆಡಗಿ ಶುಕಿಯು ಕೊರಲ ಕೊಂಕಿದೆ (ಮಾಂದಳೆ . ೧೦-೧). [ಸಂ. ಶುಕೀ]

**ಶುಕ್ತ** (ನಾ). ೧. (ಹುಳಿಯಾದ) ಗಂಜಿ; ಅಂಬಲಿ: "ಅಭಿಷವಂ, ಅವಂತಿಸೋಮಂ, ತುಷೋದಕಂ, ಶುಕ್ತಂ[ಪಾಠಾಂ. ಕ್ಲಂ] — ೪ ಅಕ್ಕಿಗರ್ಚು" (ಹಲಾಯು. ೫೩-೧೬೩). ೨. ಹುಳಿ; ಆಮ್ಲ. ೩. ಒಂದು ಬಗೆಯ ಹುಳಿರಸ; ಆಮ್ಲಿಯ ದ್ರವ: (೬). ೪. ಒರಟಾದುದು ; "ಪರುಷ , ಬಿಱುಸಿಹುದು" (ನಾಚಿರಾ. ೬). [ಸಂ.]

**ಶುಕ್ತಿ** (ನಾ). ೧. ಮುತ್ತಿನ ಅಥವಾ ಕಪ್ಪೆಯ ಚಿಪ್ಪು : ಶುಕ್ತಿಕರಂಡದಲ್ಲಿ ಬಿದ್ದ ಅಪ್ಪು ಶುಕ್ತಿಯ ಭೇದವೋ ಕರಂಡದ ಭೇದವೋ ಅಪ್ಪುವಿನ ಭೇದವೋ (ಪ್ರೋಳಿಮಾ. ೧೨೮-೪೯೬); ಲಲಿತಶುಕ್ತಿಗೆ ಕರ್ಮಕಾಂಡಸ್ಥಲಂ ವಿಮಲಜಲಜಪತ್ರಮೆ (ಲಶಿಚಂ. ೫೪-೧೩) ; ದೇವೀ! ಕಡಲ ಶುಕ್ತಿಯಿಂ ಜಗುಟ್ಟ ನುಣ್ಮುತ್ತುಗಳನುಂಡ ಮಿಂಗಳೀಗಳುಗುಟ್ಟುವಿಂತನೆ . . . ಸುರಿವಶ್ರುಧಾರೆಯಿರವಿದೇಂ ಪೇಟ! (ರಾಮಾಶ್ವ. ೧೯-೨೩). ೨. ಚಿಪ್ಪು: ಕಾಳಾಯಸಶುಕ್ತಿಯಿಂ ಸಮೆದ ಸೀಸಕದಿಂ ಬಹುರಾಹು ಮಂಡಲಪ್ರಾಯಮೆನಿಪ್ಪ ದಾನವರ ಪಂದಲೆಗಳ್ ರವಿಮಂಡಲಂಬರಂ ಪಾಯೆ ಬಿಸಿಲ್ ಪೊಡರ್ಪುಗಿಡೆ ಪಾಳಿಸಿದತ್ತುಪರಾಗಲೀಲೆಯಿಂ (ಪಂರಾಮಾ. ೧೩-೭೨). ೩. ಒಂದು ಬಗೆಯ ಸುಗಂಧದ್ರವ್ಯ: "ಹನುಃ, ಹಟ್ಟವಿಲಾಸಿನೀ, ಶುಕ್ತಿಃ, ಶಂಖಃ, ಖುರಃ, ಕೋಲದಳಂ, ನಖಂ - ೭ ನಖವೆಂಬುವ ಗಂಧಿಕದ್ರವ್ಯ" (ಸಿದ್ಧಾಂತಿ.೧೪೨). ೪. ಕುದುರೆಯ ಕೊರಳು ಅಥವಾ ಎದೆಯಲ್ಲಿರುವ ಸುಳಿ. [ಸಂ.]

**ಶುಕ್ತಿಕೆ** (ನಾ). ೧. = ಶುಕ್ತಿ ೧: ಶುಕ್ತಿಕೆಗಳಿಂ ಮುಕ್ತಾಫಲಂ ಪುಟ್ಟವೇ (ಮಲ್ಲಿಪು. ೧-೭೭); ಮಿಸುಪ ಶುಕ್ತಿಕೆಗಳೆನಲ್ ದೇವಿಯ . . . ತೆಳ್ಪದಂಪುಗಳೆಸಗುಂ (ಪುಷ್ಪಪು. ೩-೪೮); ಶುಕ್ತಿಕೆ ಸಮುದ್ರಮಂ ಒಳಕೊಳ್ಳುದೇನ್? (ಶ್ರೀರಾಮಾ. ೧೭೨-೫೪೭). ೨. (ಸುಗಂಧ ಪದಾರ್ಥಗಳನ್ನಿಡುವ) ಕಪ್ಪೆಚಿಪ್ಪಿನ ಆಕಾರದ ಭರಣಿ,- ಸಂಪುಟ: ಪಳಿಕಿನ ಶುಕ್ತಿಕೆಯೊಳ್ ಕಣ್ಗೊಳಿಸುವ ಕತ್ತುರಿಯ ಕರ್ದಮಂ . . . ನಯನೋತ್ಸಳಮನಲರ್ಚಿದುದು (ಪಂರಾಮಾ.೩-೭೭) ; ಮೌಕ್ತಿಕದ ಶುಕ್ತಿಕೆಗಳೊಳಂ . . . ತೀವಿದನಿತಾನುಂ ತೆಱದ ಬಂಧುರಸುಗಂಧವಸ್ತುಸಂದೋಹಮಂ ಪಿಡಿದು . . . ಕುಬ್ಜೆಯೆಂಬ ಸ್ಯರಂಧ್ರಿ ನಡೆತರೆ (ಜಗವಿ. ೬-೧೮ ವ). [ಸಂ. ಶುಕ್ತಿಕಾ]

**ಶುಕ್ತಿಜ** (ನಾ). ಚಿಪ್ಪಿನಲ್ಲಿ ಹುಟ್ಟಿದುದು; ಮುತ್ತು: ಮಳರಹಿತತಾಮ್ರ ಪರ್ಣೀಜಳದೊಳೆ ಶುಕ್ತಿಜಮಣಿಪ್ರಕಾಂಡಪ್ರಭವಂ (ಕಾವ್ಯಾವ. ೮೮೩); ಶುಕ್ತಿಜದಳುರ್ಕೆ ಸರೋಜದ ಗುಣ್ಪು . . . ಚೆಲ್ವ ಬಿತ್ತರಿಸೆ ಪೊಡರ್ಪುವೆತ್ತು ಬಗಗೊಂಡುದು ಪೂರ್ಣಗುಣಂ ಮಹಾರ್ಣವಂ (ಶಬಶಂ. ೧-೩೪). [ಸಂ.]

**ಶುಕ್ತಿಪುಟ** (ನಾ). ಮುತ್ತು ಇರುವ ಚಿಪ್ಪು : ಕುಂತಿಯ ದಿವ್ಯಗರ್ಭೋದರಮೆಂಬ ಶುಕ್ತಿಪುಟೋದರದೊಳ್ ತನ್ನ ದಿವ್ಯಾಂಶಮೆಂಬ ಮುಕ್ತಾಫಲೋ[ದ]ಬಿಂದುವನಿಂದ್ರಂ ಸಂಕ್ರಮಿಸಿ ನಿಜನಿವಾಸಕ್ಕೆ ಪೋದಂ (ಪಂಪಭಾ. ೧-೧೩೯ ವ) ; ಕಡಲೊಳ್ಪಡಬಾನಲಜ್ವಲ ಜ್ವಾಲೆಯಿಂ ಶುಕ್ತಿಪುಟಂ ಗಿಳಿಲೆನೆ ಸಿಡಿದೊಡದಱಿಂದುಚ್ಚಳಿಸಿದಚ್ಚಮುತ್ತಂದು ತುಡುಂಕಲವ್ವಳಿಪ ಖೇಚರಾಂಗನೆಯರಂ (ರಾಜಶೇ. ೧-೧೦೨ವ). [ಸಂ.]

**ಶುಕ್ತಿಮುದ್ರೆ** (ನಾ). ಮಂತ್ರಶಾಸ್ತ್ರಪ್ರಸಿದ್ಧವಾದ ಒಂದು ಬಗೆಯ ಹಸ್ತಮುದ್ರೆ: ಅಸ್ತ್ರಮುದ್ರೆ . . . ಶುಕ್ತಿಮುದ್ರೆ, ಬೀಜಮುದ್ರೆ . . . ಸಂಹಾರಮುದ್ರೆಯೆಂಬ ಸಕಲಮುದ್ರಾ ಲಕ್ಷಣವನಱಿದಾಯಾ ಕ್ರಿಯೆಗಳಲ್ಲಿ ಪ್ರಯೋಗಿಸಿ (ವಿವೇಕ. ೧೧೩); ಪುಷ್ಪಯಪ್ಪು ವನಾಂತು ಶುಕ್ತಿಮುದ್ರೆಯಲಿ ಮಂತ್ರೋಕ್ತದಿಂ . . . ಅರ್ಘ್ಯಮುಮನಿತ್ತು (ನವಮೋ. ೧೯-೧೩). [ಸಂ. ಶುಕ್ತಿಮುದ್ರಾ]

**ಶುಕ್ತಿರಜತನ್ಯಾಯ** (ನಾ). ಲೌಕಿಕನ್ಯಾಯಗಳಲ್ಲಿ ಒಂದು ; ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯಂತೆ ಮಿನುಗುವಂಥದು ; ಬರಿಯ ಭ್ರಮೆ : ಉಪಾಧಿಯಿಂದ ತೋರ್ಪು ದಲ್ಲ ನಿಜವ ಅಯ್ಯ ಸ್ಥಾಣುಚೋರನ್ಯಾಯದಂತೆ ಶುಕ್ತಿರಜತನ್ಯಾಯದಂತೆ ರಜ್ಜು ಸರ್ಪನ್ಯಾಯದಂತೆ ಅಧ್ಯಾರೋಪವಾದ ಅವಿದ್ಯೆಯಲ್ಲಿ ಲೇಸುಂಟೇ (ಸಿದ್ಧವ. ೩೫೯). [ಸಂ.]

**ಶುಕ್ತಿಸಂಪುಟ** (ನಾ). = ಶುಕ್ತಿಪುಟ: ನಿನ್ನ ಜನ್ಮದಿಂ ಜನನುತರಾದವಾವಮಳ ಮೌಕ್ತಿಕ ರತ್ನ[ಕೆ] ಜನ್ಮಭೂಮಿಯಾದನುಪಮಶುಕ್ತಿಸಂಪುಟದವೋಲ್ ಸುರಶೇಖರ ರತ್ನಪೂಜಿತಾ (ಪುಷ್ಪಪು. ೧೨-೯೨). [ಸಂ.]

**ಶುಕ್ರ** (ಗು). ೧. ಹೊಳೆಯುವ; ಕಾಂತಿಯುತವಾದ. ೨. ಬಿಳುಪಾದ; ಬೆಳ್ಳಗಿರುವ. (ನಾ). ೩. ಬಿಳಿಯ ಬಣ್ಣ; ಧವಳವರ್ಣ. ೪. ನಕ್ಷತ್ರ; ತಾರೆ: 'ಶುಕ್ರನಕ್ಷತ್ರ', 'ಶುಕ್ರೋದಯ' ಪರಾ. ೫. ಅಗ್ನಿಯ ಹೆಸರುಗಳಲ್ಲಿ ಒಂದು: ''ಅಗ್ನಿಃ . . . ಶುಕ್ರಃ, ಚಿತ್ರಭಾನುಃ, ವಿಭಾವಸುಃ, ಶುಚಿಃ, ಅಪ್ಪಿತ್ತಂ - ೩೪ ಅಗ್ನಿಹೋತ್ರನ ಹೆಸರುಗಳು'' (ಸಿದ್ಧಾಂತಿ.೨೩). ೬. ರಾಕ್ಷಸರ ಗುರು; ಭೃಗುಋಷಿಯ ಮಗ: ''ದನುಜರ ಗುರು . . . ಭೃಗು ಶುಕ್ರಂ '' (ವಸ್ತುಕೋ. ೧೩-೭೪); ಶುಕ್ರ ವಕ್ರನಾದರೂ ತಕ್ರ ಬಿಡ (ಗಾದ). ೭. ವೀರ್ಯ; ರೇತಸ್ಸು: ಉತ್ಪತ್ತಿ ಶುಕ್ರ ಶೋಣಿತದಿಂದಾದ ಲಜ್ಜೆ ಸಾಲದೇ (ಬಸವ. ೧೫೯). ೮. ಮಾಸಗಳಲ್ಲಿ ಒಂದು; ಜ್ಯೇಷ್ಠಮಾಸ : ''ಕ್ರಮದೊಳೊಂದಿರೆ ಮಧುಮಾಧವಂ ಶುಕ್ರಂ ಶುಚಿ ನಭೋಮಾಸಂ ನಭಸಾಖ್ಯ'' (ವಸ್ತುಕೋ. ೧೭-೧೨). ೯. [ಜ್ಯೋತಿ] ನವಗ್ರಹಗಳಲ್ಲಿ ಒಂದು: 'ಶುಕ್ರದೆಸೆ' ಪರಾ. ೧೦. [ಜೈನ] ಹದಿನಾರು ಕಲ್ಪಗಳಲ್ಲಿ ಒಂಬತ್ತನೆಯದು : ಸೌಧರ್ಮ . . . ಶುಕ್ರ ಮಹಾಶುಕ್ರ ಶತಾರ . . . ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ (ಪದ್ಮಾರಾ. ೯೭-೨೭); ಈ ಹದಿನಾರು ಕಲ್ಪಗಳನ್ನು ೧೨ ಜನ ಇಂದ್ರರು ಆಳುವರು . . . ಶುಕ್ರ ಮಹಾಶುಕ್ರಗಳು ಶುಕ್ರೇಂದ್ರನಿಂದ ಆಳಲ್ಪಡುವುವು (ಜೈನಧ. ೪೩). [ಸಂ.]

**ಶುಕ್ರದೆಸೆ** (ನಾ). ೧. [ಜ್ಯೋತಿ] ಶುಕ್ರಗ್ರಹವು ಒಳ್ಳೆಯ ಫಲಗಳನ್ನು ನೀಡುವ ಕಾಲ; ☞ಆಯುರ್ದಾಯ ಗಣನೆಯಿಂದ ಬಂದಿರುವ ದೆಸೆಯನ್ನೂ ನೈಸರ್ಗಿಕ ದೆಸೆಯನ್ನೂ ಬೇರೆ ಬೇರೆಯಾಗಿ ಗಣಿಸುತ್ತಾರೆ. ಇವೆರಡೂ ಒಂದೇ ಆದರೆ ಪೂರ್ಣ ಶುಭಫಲವಿರುತ್ತದೆ. ಶುಕ್ರದೆಸೆಯ ಅವಧಿ ಇಪ್ಪತ್ತುವರ್ಷಗಳ ಕಾಲ. ೨. (ಆಲಂ) ಅಭ್ಯುದಯಕಾಲ; ಅದೃಷ್ಟದ ಕಾಲ : ಈ ಓಲೆ ನಮ್ಮ ಮನೆಗೆ ಬಂದಾಗಿನಿಂದ ಶುಕ್ರದೆಸೆ ಪ್ರಾರಂಭವಾಯಿತು (ಹೂಹಣ್ಣು. ೧೨).

[ಶುಕ್ರ + ದೆಸೆ, (< ದಸೆ)]

**ಶುಕ್ರನಕ್ಷತ್ರ** (ನಾ). ಒಂದು ನಕ್ಷತ್ರದ ಹೆಸರು; ಬೆಳ್ಳಿಚುಕ್ಕೆ : ಸೂರ್ಯ ಚಂದ್ರರಾದ ಮೇಲೆ ನಾವು ಆಕಾಶದಲ್ಲಿ ಅತ್ಯಂತ ಪ್ರಕಾಶಮಾನವಾದ ಶುಕ್ರ ನಕ್ಷತ್ರವನ್ನು ನೋಡುತ್ತೇವೆ (ಆಕಾಶ.೧೭). [ಸಂ.]

**ಶುಕ್ರಮೂಢ** (ನಾ). ೧. ಶುಕ್ರಗ್ರಹವು ಅಸ್ತಂಗತವಾಗಿರುವಿಕೆ, — ಮರೆಯಾಗಿರುವಿಕೆ; ಶುಕ್ರಾಸ್ತ. ೨. [ಜ್ಯೋತಿ] ವಿವಾಹಾದಿ ಮಂಗಳ ಕಾರ್ಯಗಳಿಗೆ ಪ್ರಶಸ್ತವಲ್ಲದ ಕಾಲ; ಅಶುಭಕಾಲ. [ಸಂ.]

**ಶುಕ್ರವಾರ** (ನಾ). ವಾರದ ಏಳುದಿನಗಳಲ್ಲಿ ಒಂದು; ಶುಕ್ರನು ಅಧಿಪತಿಯಾಗಿರುವ ದಿನ : ಭಾಗ್ಯದ ಲಕ್ಷ್ಮೀ ಬಾರಮ್ಮ . . . ಶುಕ್ರವಾರದ ಪೂಜೆಯ ವೇಳೆಗೆ ಅಕ್ಕರವುಳ್ಳ ಅಳಗಿರಿರಂಗನ ಚೊಕ್ಕಪುರಂದರವಿಠಲನ ರಾಣಿ (ಪುರಂದ. ೧-೨೦೧-೫). [ಸಂ.]

**ಶುಕ್ರಶಿಷ್ಯ** (ನಾ). ಶುಕ್ರಾಚಾರ್ಯನ ಶಿಷ್ಯ ; ರಾಕ್ಷಸ : ''ದನುಜರ್ ದೈತೇಯರ್ . . . ಸುರದ್ವಿಷರನೆ ದೈತ್ಯರ್ ಶುಕ್ರಶಿಷ್ಯರಾರ್ಗಮದೃಶ್ಯರ್'' (ವಸ್ತುಕೋ. ೬-೩೨); ಶುಕ್ರಶಿಷ್ಯಾಧಿಪ ಶಿರೋಮಾಲ ಕರಶೂಲ ನಕ್ರಕೇತನನಾಶ . . . ಸಂಗಮೇಶ ರಕ್ಷಿಪುದೆನ್ನನು (ಪ್ರೌಢರಾ. ೮-೧). [ಸಂ.]

**ಶುಕ್ರಾಸ್ತ** (ನಾ). = ಶುಕ್ರಮೂಢ ೨ : ಶುಕ್ರಾಸ್ತದಲ್ಲಿ ಮದುವೆ ಮಾಡುವುದಿಲ್ಲ (ರೂಢಿ). [ಸಂ.]

**ಶುಕ್ರೋದಯ** (ನಾ). ಬೆಳ್ಳಿಚುಕ್ಕೆ ಮೂಡುವ ಸಮಯ: ಶುಕ್ರೋದಯ ಕಾಲದಲ್ಲಿ ಬಂದ ಕಲ್ಪನಾವಿಲಾಸ (ಮುಕ್ತಕಂ. ೮೨-೧೫). [ಸಂ.]

**ಶುಕ್ಲ** (ಗು). ೧. ಬಿಳುಪಾದ. ೨. ಶುಭ್ರವಾದ. ೩. ಹೊಳಪುಳ್ಳ. (ನಾ). ೪. ಬಿಳಿಯ ಬಣ್ಣ; ಶ್ವೇತವರ್ಣ: ''ಅವದಾತಂ ಶುಭ್ರಂ . . . ಶುಕ್ಲಂ ಧವಳಂ ವಳಕ್ಷಮೆನೆ ಗೌರವರ್ಣಂ'' (ವಸ್ತುಕೋ. ೧೦೮-೬೨); ಶುಕ್ಲ ರಕ್ತ ಪೀತ ಕೃಷ್ಣ ಎಂಬ ನಾಲ್ಕು ಬಣ್ಣಗಳಿಂದ ಜಾತಿವಿಭಾಗವೆಂದು ಮಹಾಭಾಷ್ಯವಿಂದ ತಿಳಿದುಬರುತ್ತದೆ (ಓಂದಸಾ. ೧೫೭). ೫. ರೇತಸ್ಸು; ವೀರ್ಯ: ''ಧಾತು ರೇತಂ ಶುಕ್ಲಂ'' (ವಸ್ತುಕೋ. ೭೨-೩೦); ರತಿಯ ಪದದಲ್ಲಿ ಗರ್ಭಸ್ಥಿತಿಯೊಳು ಶುಕ್ಲಂ ವಿಶೇಷಮಾದಡೆ ಪುರುಷಂ (ಮದತಿ. ೧-೩೨); ಮಜ್ಜೆಯಂತದಱಿಂ ಸರೆಯಸ್ಥಿ ನಖಗಳಾ ಕೇಶಗಳುಮದಱಿಂದ್ರಿಯ ಪೆರ್ಚೆ ಶುಕ್ಲವಹುದಾ ಬಲದಿ ದೇಹ ಪರಿಪೂರ್ಣವಹುದು (ಲಶಿಚಂ. ೩೯-೩೨). ೬. ತಿಂಗಳಿನ ಮೊದಲನೆಯ ಅರ್ಧಭಾಗ; ಪಾಡ್ಯದಿಂದ ಹಿಡಿದು ಪೌರ್ಣಿಮೆಯವರೆಗಿನ ಕಾಲಮಾನ : ''ಶುಕ್ಲಃ , ಕೃಷ್ಣಃ - ಪೂರ್ವಾಪರೌ - ಕ್ರಮದಿಂದ ಪೂರ್ವಪಕ್ಷಕ್ಕೂ - ಅಪರಪಕ್ಷಕ್ಕೂ ಹೆಸರುಗಳು'' (ಸಿದ್ಧಾಂತಿ.೩೮). ೭. ಅರುವತ್ತು ಸಂವತ್ಸರಗಳಲ್ಲಿ ಮೂವತ್ತೇಳನೆಯ ಸಂವತ್ಸರ : ಆ ವರುಷವೇ ಪ್ರಭವ ವಿಭವ ಶುಕ್ಲ . . . ಕ್ರೋಧನ ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೪೨). ೮. ಕಣ್ಣು; ನೇತ್ರ: ''ಸುರತರಸದೊಳ್ ಕಣ್ಣೆನೊಳು ಬಿಳಿದಿನೊಳ್ ಕಲಿಯೊಳಿರೆ ಶುಕ್ಲಮಕ್ಕು'' (ಮಂಗರಾ. ೧೪೯-೪೪). ೯. ಒಂದು ಬಗೆಯ ಕಣ್ಣಿನ ರೋಗ. ೧೦. ಒಂದು ತಿಂಗಳಿನ ಹೆಸರು; ವೈಶಾಖ. ೧೧. ದೊಡ್ಡದು; ವಿಶಾಲವಾದುದು. ೧೨. ಕಲಿ; ವೀರ. ೧೩. ಕಸ್ತೂರಿಮೃಗದಿಂದ ದೊರಕುವ ಸುಗಂಧದ್ರವ್ಯ : ಮೂಱುಲೋಕಕ್ಕಾದ ಬೇಡಿದವರಿಗಿತ್ತು ಭಾವಕ್ಕೆ ಹೊಱಗಾದವಂಗೆ ಲೀಲೆಯುಂಟೆ ಆ ಗುಣ ಚಿಪ್ಪಿನ ಮುತ್ತಿನ ತೆಱ ಕಸ್ತುರಿಯ ಶುಕ್ಲದ ತೆಱ ಕದಳಿಯ ಕರ್ಪುರದ ತೆಱ ಬಂದುದಕ್ಕೆ ಸಂದೇಹವ ಮಾಡಲಿಲ್ಲ (ಮೋಳಿಮಾ. ೪-೧೨). ೧೪. ಅಕ್ಕಿ ತೊಳೆದ ನೀರು; ಅಕ್ಕಚ್ಚು: ''ಅಭಿಷವಂ, ಅವಂತಿಸೋಮಂ, ತುಷೋದಕಂ, ಶುಕ್ಲಂ[ಪಾಠಾಂ. ಕ್ತಂ] – ಈ ೪ ಅಕ್ಕಿಗರ್ಚು'' (ಹಲಾಯು. ೫೩-೧೭೩). ೧೫. ವಿಷ್ಣು. ೧೬. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : ''ಋಷಿಸಂಖ್ಯೆ ಶುಕ್ಲಶಬ್ದಮೆನಿಕ್ಕು'' (ನಾನಾಕಂ. ೭೭). ೧೭. ಐದು ಎಂಬ ಸಂಖ್ಯೆಯ ಸಂಕೇತ : ಪಂಚವ್ರತ, ಇಂದ್ರಿಯ . . . ಹರವಕ್ತ್ರ, ಪಾಂಚಜನ್ಯ, ಶುಕ್ಲ — ಇಂತಿನಿತುಂ ೫ಕ್ಕೆ ಪೆಸರು (ವ್ಯವಹಾ. ೧೦-೨೨). ೧೮. [ಜೈನ] ಕರ್ಮಮಲವು ನಾಶವಾಗಿ ಮೋಕ್ಷವು ಸಿದ್ಧಿಸುವ ಪರಿಶುದ್ಧವಾದ ಆತ್ಮಧ್ಯಾನ: ಶುಕ್ಲಧ್ಯಾನಮುಂ ಶುಕ್ಲ ಪರಮಶುಕ್ಲಮೆಂದಿತ್ತೆಱನಕ್ಕುಂ ಅವಱೊಳ್ ಶುಕ್ಲಮೆಂಬುದು ಪೃಥಕ್ತ್ವವಿತರ್ಕ ವಿಚಾರಮುಂ ಏಕತ್ವವಿತರ್ಕವಿಚಾರಮುಂ ಎಂದೆರಡುತೆಱನಕ್ಕುಂ (ಅಜಿಪು. ೮-೨೮ ವ). ೧೯. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಒಂದು; ಇಪ್ಪತ್ತನಾಲ್ಕನೆಯ ಯೋಗ : ವಿಷ್ಕಂಭ ಪ್ರೀತಿ . . . ಶುಕ್ಲ ಬ್ರಹ್ಮ ಐಂದ್ರ ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೩೨೦). [ಸಂ.]

**ಶುಕ್ಲಕೀಟ** (ನಾ). ಒಂದು ಬಗೆಯ ಚೇಳು : ಕುಂದುರುಜ, ರಕ್ತಪುಚ್ಛ, ಎಮ್ಮೆ ಚೇಳು, ಶುಕ್ಲಕೀಟ ಎಂದು ಚೇಳುಗಳು ನಾಲ್ಕು ತೆಱ (ವೈದ್ಯಸಾ. II. ೧೯೦). [ಸಂ.]

**ಶುಕ್ಲತ್ವ** (ನಾ). ಬೆಳ್ಳಗಿರುವುದು ; ಬಿಳುಪು. [ಸಂ.]

**ಶುಕ್ಲದ್ರವ್ಯ** (ನಾ). ಸುಂಕದ ಹಣ : ಅಂತು ಸೋಮೇಸ್ವರಭಟ್ಟರು ತಮ್ಮ ಪಿತೃಧನಂ ಶುಕ್ಲದ್ರವ್ಯಮಪ್ಪ ಧಸವಂದದ ಸರ್ವಬಾಧಾಪರಿಹಾರಂ ಮಾನ್ಯದ ಏಳುಸ್ಥಳದ ಭೂಮಿಯುಂ . . . ಕೊಟ್ಟರು (ಕಇಅ. ೭೯-೧೩-೩೪; ಸು. 1088).

[☞ ಇದು 'ಶುಲ್ಕದ್ರವ್ಯ' ಎಂಬುದರ ಅಪಲಿಖಿತವಿರಬಹುದು ]

**ಶುಕ್ಲಧಾತು** (ನಾ). ದೇಹದಲ್ಲಿರುವ ಸಪ್ತಧಾತುಗಳಲ್ಲಿ ಒಂದು: ಧಾತುಗಳು — ರಸಧಾತು, ರಕ್ತಧಾತು, ಮಾಂಸಧಾತು, ಮೇದೋಧಾತು, ಅಸ್ಥಿಧಾತು, ಮಜ್ಜಧಾತು, ಶುಕ್ಲಧಾತು ಎಂದು ಏಳು ತೆರನಾಗಿವೆ (ಸಕವ್ಯ. ೯೮). [ಸಂ.]

**ಶುಕ್ಲಧ್ಯಾನ** (ನಾ). [ಜೈನ] ಪರಿಶುದ್ಧವಾದ ಆತ್ಮಧ್ಯಾನ : ಮೃತಕಸೆಜ್ಜೆಯೊಳಿರ್ದು ಸಂನ್ಯಸನಂಗೆಯ್ದು ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಧ್ಯಾನಿಸುತ್ತಿರ್ಪನ್ನೆಗಂ (ವಡ್ಡಾರಾ. ೨೯-೨); ಪ್ರಥಮಶುಕ್ಲಧ್ಯಾನಪರಿಣತನಾಗಿರ್ದಾಯುಃಕರ್ಮಮನುೞಿಪಿ ಮತ್ತಿನುೞಿದ ಕರ್ಮಂಗಳಂ . . . ನಿರ್ಜರಾದಿ ವಿಧಿಯಿನನುಕ್ರಮದಿಂ ಕಿಡಿಸುತ್ತುಂ (ಆದಿಪು. ೧೦-೧೪ ವ) ; ತಾನೆಯ್ದೆ ಮೊದಲ ಶುಕ್ಲಧ್ಯಾನಮನೊಳಕೆಯ್ದು ಬೞಿಯಮುಪಶಾಂತಗುಣಸ್ಥಾನದೊಳ್ ನಿಂದು ಸುಕೃತನಿಧಾನಮನಾ ಯೋಗಿನಾಯಕಂ ಸಾಧಿಸಿದಂ (ಚಂದ್ರಪ್ರ. ೧೧-೨೭). [ಸಂ.]

**ಶುಕ್ಲಪಕ್ಷ** (ನಾ). ಪಾಡ್ಯದಿಂದ ಪೌರ್ಣಿಮೆಯವರೆಗಿನ ಹದಿನೈದು ದಿನಗಳ ಕಾಲಮಾನ; ಚಂದ್ರನು ವೃದ್ಧಿಹೊಂದುವ ಪಕ್ಷ: ಆಷಾಢಮಾಸದ ಶುಕ್ಲಪಕ್ಷದ ಚತುರ್ದಶಿಯೊಳಪರಾಹ್ಣವೇಳೆಯೊಳ್ ಸುಕುಮಾರಸ್ವಾಮಿಗೆ . . . ಪುಣ್ಯಸಂಪದಮೆ ಸಾರ್ಚಿದಂತೆ ಯೋಗಸಾರ್ಚಿತ ಬಂದು (ಸುಕುಮಾ. ೧೧-೩೭ ವ); ರಾಮಭಟ್ಟಾರಕರೆಂತುಮಸ್ಖಲಿತಚಿತ್ತದಿಂ ಶುಕ್ಲಧ್ಯಾನಪ್ರವಿಷ್ಟರಾಗಿ ಮಾಘಮಾಸದ ಶುಕ್ಲಪಕ್ಷದಿ ದ್ವಾದಶಿಯ ಬೆಳಗಪ್ಪ ಜಾವದೊಳ್ (ಪಂರಾಮಾ. ೧೩-೬೨ ವ) ; ಕಳೆಗಳೇಱಲು ಶುಕ್ಲಪಕ್ಷದಿ ಬಲದೊಳಿಳಿಯಲು ಮುನ್ನಡದ ಕಡೆಯಲಿ ಮೊಳೆವ ಮನುಮಥರಸಾಂಭೋನಿಧಿಯೊಳಂತದ್ದಿ ಜಲಜದಳಲೋಚನೆಯರಂ . . . ಕೈಗೊಳಿಸಿ (ಬಸಪು. ೪೦-೨೧). [ಸಂ.]

**ಶುಕ್ಲಪ್ರಮೇಹ** (ನಾ). ಒಂದು ಬಗೆಯ ಮೂತ್ರರೋಗ : ಫಲದಾನಂದರಸ: – ರಸ ಹಣ ಒಂದು ತೂಕ, ಗುಂಜಿಯ ತೂಕವನ್ನು ಆಲದ ರಸದಲ್ಲಿ ಕೊಡಲು, ವಾತ . . . ಸಂಗ್ರಹಣಿ, ಶುಕ್ಲಪ್ರಮೇಹ ಇಷ್ಟೂ ಮಾಣುವುವು (ವಿವೈವಿ. ೩೯) ; ಅವಿಪತ್ಕಾದಿ ಚೂರ್ಣ . . . ಸಮಸಕ್ಕರೆವೆರಸಿ ಸೇವಿಸಲು ಪ್ರವೃತ್ತಿಯು, ಉರಿಪೈತ್ಯ, ಶುಕ್ಲಪ್ರಮೇಹ, ತ್ರಿದೋಷದಿಂದಾದ ಗುಲ್ಮ, ಜಲೋದರ, ಹಳೆಜ್ವರ, ಕ್ಷಯ, ಪಾಂಡುರೋಗ ಸಹ ಗುಣವಹುದು (ಸಕವ್ಯ. ೩೦೨). **[ಸಂ.]**

**ಶುಕ್ಲಮೇಹ** (ನಾ). = ಶುಕ್ಲಪ್ರಮೇಹ : ಶುಕ್ಲಶೋಷಣದಿಂದಾದ ಮೂತ್ರಕೃಚ್ಛ್ರದಲ್ಲಿ ಶುಕ್ಲವೂ ರಕ್ತವೂ ಮೂತ್ರವೂ ಮೂರೂ ಕೂಡಿ ಬೀಳುವುದು. ಈ ಲಕ್ಷಣಗಳುಳ್ಳದೆ ಕ್ರಮದಿಂದ ರಕ್ತಮೇಹ, ಶುಕ್ಲಮೇಹಮೆಂದರಿವುದು (ಸಕವ್ಯ. ೩೭೦). **[ಸಂ.]**

**ಶುಕ್ಲಯೋಗ** (ನಾ). ೧. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಇಪ್ಪತ್ತ ನಾಲ್ಕನೆಯದು: ದೊರೆವೆತ್ತಾ ಪುಷ್ಯಮಾಸಂ . . . ಶುಕ್ಲಯೋಗಂ ಸಮಂತೊಂದಿರೆ ಲೋಕಕ್ಕಗ್ಗಳಂ ಸಂತಸಮೊಗೆವಿನೆಗಂ ಪುಟ್ಟಿದಂ (ಚಂದ್ರಪ್ರ. ೧೨-೩೧); ಶುಕ್ಲಯೋಗಕ್ಕೆ ಮಯಾ ೧೫ ಗಳಿಗೆ ಮೇಲೆ ತ್ಯಾಜ್ಯ (ಭಾಸ್ಕರ. ೭೦-೮). ೨. = ಶುಕ್ಲಧ್ಯಾನ : ಅಱಿವು ಬೆಳಗು ಸುಖ ಪಿರಿದಾಗಿ ತೋಱುತ ಮಱಿಸದಿಹುದು ಶುಕ್ಲಯೋಗ (ಭರಚ. ೬೯-೩೮). 'ಧರ್ಮಯೋಗ' ಪರಾ. **[ಸಂ.]**

**ಶುಕ್ಲಲೇಶ್ಯೆ** (ನಾ). [ಜೈನ] ಆರು ಬಗೆಯ ಲೇಶ್ಯೆಗಳಲ್ಲಿ ಒಂದು: ಶುಭಭಾವ ಶುಕ್ಲ ಲೇಶ್ಯಾನುಭಾವದಿಂ ಧವಳಪುಂಡರೀಕನಿಕಾಶಪ್ರಭೆ ದೊರೆಕೊಂಡುದು . . . ತನುಭೃದ್ಗಣದಾ (ಆದಿಪು. ೬-೪೨); ನಿರತಿಶಯಶುಕ್ಲಲೇಶ್ಯಾಪರಿಣಾಮಮ ಮೂರ್ತಿಗೊಂಡು ಪರಿಣಮಿಸಿದ ವೋಲ್ . . . ಧವಳಪ್ರಭಾಕರಂ ಕರಮೆಸೆದಂ (ಸುಕುಮಾ. ೧೨-೪೫). **[ಸಂ. ಶುಕ್ಲಲೇಶ್ಯಾ]**

**ಶುಕ್ಲವತ್ರಿ** (ನಾ). ಒಂದು ಬಗೆಯ ಸಸ್ಯ : ನೆಲಬೇವುಬೇರು . . . ಶುಕ್ಲವತ್ರಿಬೇರು ಇವಂ ಸಮಾಂಶವಾಗಿ ಹಾಕಿ ಕಷಾಯಂ ಮಾಡಿ ಕುಡಿಸೆ ಎಂತಹ ಜ್ವರವಾದರೂ ಗುಣಮಕ್ಕುಂ (ಸಕವ್ಯ. ಪರಿ. ೪೦೪). [?]

**ಶುಕ್ಲವೃತ್ತಿ** (ನಾ). ಬ್ರಾಹ್ಮಣರು ಬ್ರಾಹ್ಮಣರಿಂದಲೇ ಭಿಕ್ಷೆ ತೆಗೆದುಕೊಂಡು ಉಪಜೀವನ ನಡೆಸುವುದು : ಗೋಪಾಳಾ ಹಾಕ್ರಪ್ಪಾ ಎನ್ನುತ್ತ ಶುಕ್ಲವೃತ್ತಿಗಾಗಿ ಬರುವಳು (ಹುಚ್ಚಾಟ. ೯೦); ಮೊದಲು ಪಟ್ಟಣದಲ್ಲಿ ಶುಕ್ಲವೃತ್ತಿಯಿಂದ ಜೀವನ ಸಾಗಿಸುತ್ತಿದ್ದ (ಚವಂ. ೨೧). **[ಸಂ.]**

**ಶುಕ್ಲಾಂಬರ** (ನಾ). ಬಿಳಿಯ ಉಡುಗೆ; ಶ್ವೇತವಸ್ತ್ರ : ಶುಕ್ಲಾಂಬರವನುಟ್ಟ ಚಕ್ರಧರೆಗೆ ನಮಿಸಿ ವಕ್ರಬುದ್ಧಿಯ ತಿದ್ದಿಕೊಂಬೆ ನಾನು (ಕರ್ನಾಕ. ೨೭೪). **[ಸಂ.]**

**ಶುಕ್ಲಾಪಾಂಗ** (ನಾ). ಕಣ್ಣಿನ ತುದಿಯಲ್ಲಿ ಬಿಳುಪನ್ನು ಹೊಂದಿರುವಂಥದು; ನವಿಲು. **[ಸಂ.]**

**ಶುಕ್ಲೂರ್ತಿ, ಶುಕಲೂರ್ತಿ** (ನಾ). ೧. (ಉಕ) ಬ್ರಾಹ್ಮಣನು ಇತರ ಬ್ರಾಹ್ಮಣ ರಿಗೆ ನೀಡುವ ಸಹಾಯ, – ನೆರವು. ೨. ಬ್ರಾಹ್ಮಣರು ಬ್ರಾಹ್ಮಣರಲ್ಲಿ ತೆಗೆದುಕೊಳ್ಳುವ ಅಕ್ಕಿಯ ಭಿಕ್ಷೆ : ಈ ಶುಕ್ಲೂರ್ತಿ ಬೇಡೋದರಕ್ಕಿಂತ ಸರಕಾರದ ಮ್ಯಾಲೆ ಪೋಟಿಗೆ ದಾವೆ ಮಾಡ್ರಿ (ತಿಡುಗು.೬). **ಶುಕಲೂರ್ತಿ** : ೨. ಓಣಿಯಲ್ಲಿಯ ನಾಲ್ಕು ಮನೆಗಳಿಗೆ ಹೋಗಿ ಅವನ ಹೆಂಡತಿ ಬೇಡಿ ತರಹತ್ತಿದಳು. ಬರಬರುತ್ತ ಶುಕಲೂರ್ತಿಯೇ ಅವರಿಗೆ ರೂಢಿಯಾಗಿ ಬಿಟ್ಟಿತು (ಕಾಲಚ. ೫೮). **[< ಸಂ. ಶುಕ್ಲವೃತ್ತಿ]**

**ಶುಚ್ಮಲಿನ** (ನಾ). ದುಃಖದಿಂದ ಮಲಿನನಾದವನು ; ವ್ಯಥೆಯಿಂದ ಕಲುಷಿತನಾದವನು : ಭುವನದುಲ್ಲಣಕೆ ಮರುಗಿ ಶುಚ್ಮಲಿನನಾಗಿ ಸಂತಾತ್ಮವೈಭವದ ಮಲೆಗುಡಿಯ ನೆನೆದಿಂತು ಸಂಹೃಷ್ಟನಾದೆನ್ನೆ ಕೊರಗ ನೀಗಿ (ಮಲದೇ. ೫೯-೯). **[ಸಂ.]**

**ಶುಚಿ** (ಗು). ೧. ನಿರ್ಮಲತೆಯಿಂದ ಕೂಡಿದ : ಬಾಯ್ವಾಯೊಳ್ ನೆಲಸಿಯುಮತಿ ಶುಚಿ ವಾಗ್ದೇವಿ ಕೂರ್ತು ಮಾಟ್ಕೆಮಗಱಿವಂ (ಜಾತತಿ. ೧-೨). (ನಾ). ೨. ನಿರ್ಮಲ ವಾದುದು; ಶುಭ್ರವಾದುದು : "ಶುಚಿ, ಮೇಧ್ಯಂ, ಪವಿತ್ರಂ, ಪುಣ್ಯಂ, ಪಾವನಂ – ಈ ೫ ಶುದ್ಧಮಪ್ಪ ವಸ್ತು" (ಹಲಾಯು. ೨೨-೧೩೨). ೩. ಬಿಳಿಯ ಬಣ್ಣ; ಶ್ವೇತವರ್ಣ : "ಬಿಳಿದರಲ್ಲಿಯುಂ ಶುಚಿಯೆಂಬುದು ರಾಮಮುಮೆಂಬುದು" (ಹಲಾಯು. ೧೩೪-೨೨). ೪. ಪವಿತ್ರವಾದುದು; ಪರಿಶುದ್ಧವಾದುದು: "ಪಾವನಂ ಶುಚಿ ಮೇಧ್ಯಮೆನೆ ಪವಿತ್ರಮದಕ್ಕು" (ಮಂಗರಾ. ೯-೨೯) ; ಶುಚಿಯಾವಿಭಾಗ ಮಣಿಗಣರುಚಿತಾಸನದಲ್ಲಿ ತಂದು ಕುಳ್ಳಿರಿಸಿ ನೃಪಂ . . . ಚಾರಣರ ಚರಣಕಮಲಮಂ ಕ್ಷಾಲಿಸಿದಂ (ಶಾಂತೀಶ್ವ. ೬-೪೬). ೫. ಪವಿತ್ರನಾದವನು; ಪರಿಶುದ್ಧನಾದವನು: ಶುಚಿ ತಾನಾಗದೆ ಸರ್ವಶಾಸ್ತ್ರ ನಿಪುಣಂ ತಾನಾಗದೆ . . . ವಚನಬ್ರಹ್ಮದೆ ಮುಕ್ತಿಯೇ (ಸೋಮೇಶ. ೧೦೦); ಮಲಿನತರಂ ಬರೆ ಶುಚಿ ಸುವೃತ್ತನೇನಿರ್ದಪನೇ (ರಾಜಶೇ. ೮-೯೭). ೬. ಪ್ರಾಮಾಣಿಕನಾದ ಮಂತ್ರಿ. ೭. ಒಳ್ಳೆಯ ಮಿತ್ರ, – ಸ್ನೇಹಿತ. ೮. ಮುನಿ; ತಪಸ್ವಿ. ೯. ಬ್ರಾಹ್ಮಣ. ೧೦. ಬೆಂಕಿ; ಅಗ್ನಿ : "ವಸುಸಿತೇತರಗತಿ ಸ್ವಾಹಾಪ್ರಿಯಂ . . . ಧೂಮಕೇತನಂ ಶುಚಿ ವಿರೋಚನನೆನಿಕ್ಕುಂ" (ಮಂಗರಾ. ೧೪-೬) ; ಸಚರಸ್ಥಾವರಕೆಲ್ಲ ಸರ್ವಸುಖದುಃಖಂಗಳ್ ಸಮಾನಂಗಳೆಂದಚಲಾನಂದದಿ ತನ್ನನನ್ಯರೆಣಿಸಲ್ ಸುಜ್ಞಾನಿಗಳ್ ನೀರಿನೊಳ್ ಶುಚಿಯೊಳ್ ಪಾದವನಿಟ್ಟು ತೋರ್ಪ ತೆಱದೊಳ್ (ಸೋಮೇಶ. ೯೯). ೧೧. ಅಮರವಾದುದು ; ಶಾಶ್ವತವಾದುದು. ೧೨. ಅಮೃತ; ಸುಧೆ. ೧೩. ಮುಖ್ಯವಾದುದು; ಪ್ರಧಾನವಾದುದು. ೧೪. ಆಷಾಢಮಾಸ : "ಮಧುಮಾಧವಂ ಶುಕ್ರ ಶುಚಿ ನಭೋಮಾಸಂ . . . ಚೈತ್ರಾದಿ ನಾಮಂಗಳ್" (ವಸ್ತುಕೋ. ೧೭-೧೨). ೧೫. ಕಟ್ಟಿಗೆ; ಸೌದೆ: "ಲತೆ ಯೋಗಿಯಗ್ನಿ ಶುದ್ಧಂ ಋತುವಿಪ್ರಾಷಾಢಮಾಸ ಕೇಡಿಲ್ಲದದುಂ ಸಿತಮುಖ್ಯಕಾಷ್ಠಮಮೃತಂ ಮಿತಿಯಿಂ ಪನ್ನೆರಡು ನಾಮ ಶುಚಿಶಬ್ದಂಗಳ್" (ನಾನಾಕಂ. ೫೧). ೧೬. [ನಾಟ್ಯ] ಹಸ್ತಮುದ್ರೆಗಳಲ್ಲಿ ಒಂದು : ಪತಾಕ, ಅರ್ಧಚಂದ್ರ . . . ಶುಚಿ, ಕಪಿತ್ಥ, ಶಿಖರಹಸ್ತ – ಮೊದಲಾದ ನೂರಾರು ಹಸ್ತಮುದ್ರೆಗಳಿವೆ (ಬಾಲಪ್ರ. II, ೯೧೯). **[ಸಂ.]**

**ಶುಚಿಗೈ** (ಕ್ರಿ). ಚೊಕ್ಕಟಮಾಡು; ಪರಿಶುದ್ಧಗೊಳಿಸು : ಮಹಡಿಯ ಮೆಟ್ಟಲುಗಳನು ಶುಚಿಗೈವಂದು ಮೇಲಿನಿಂದುಡುಗುವರಲ್ತೆ ಮೊದಲು ಮೇಲಧಿಕಾರಿ ಸಲೆ ತಿದ್ದಿಕೊಳುವುದು ತನ್ನ ಚಾರಿತ್ರವನಂತೆ (ಇಂಚಾಪ. ೨೦೪-೬). **[ಶುಚಿ + ಗೈ (< ಕೆಯ್$_1$)]**

**ಶುಚಿಗೊಳಿಸು** (ಕ್ರಿ). = ಶುಚಿಗೈ : ಡಬ್ಬಿಯನ್ನು ಪ್ರತಿದಿನ ಖಾಲಿಮಾಡಿ, ಶುಚಿಗೊಳಿಸಿ ಬಿಸಿಲಲ್ಲಿ ಒಣಗಿಸಬೇಕು (ಅಡುಸಾ. ೪೦). **[ಶುಚಿ + ಕೊಳ್$_1$ + – ಇಸು$_3$]**

**ಶುಚಿತನ** (ನಾ). ೧. ಸ್ವಚ್ಛವಾಗಿರುವಿಕೆ ; ಪರಿಶುದ್ಧವಾಗಿರುವಿಕೆ. ೨. ಒಳ್ಳೆಯತನ; ಸಜ್ಜನಿಕೆ : ಸೆರಗಿಲ್ಲದೀವ ದಾನದೊಳರವಿಂದಪ್ರಿಯತನೂಜನಂ ಶುಚಿತನದೊಳ್ಮರುತಾತ್ಮಜರಂ ದೇವರೊಳ್ದೊರೆ ಪಂಡಿತಪುಂಡರೀಕವನಮಾರ್ತಂಡಂ (ಸೌಇಇ. XX, ೫೭-೨೧; 1084); ವಿಚರಿತಾನ್ವಯವೆರಡನೆತ್ತುವ ಶುಚಿತನವು ನಿಮಗಲ್ಲದಿತರರಲಚಲತೆಯದಾರ್ಗುಂಟೆಂಬುದ ನೋಡಿ ನೀವು (ತೊರರಾ. ೨-೩-೨೦). **[ಶುಚಿ + – ತನ]**

**ಶುಚಿತೆ** (ನಾ). = ಶುಚಿತನ ೨ : ವರಶುಚಿ ವೀರರಾಮನ ಚರಿತವನಿದನೊರೆವೆನೊಲಿದು . . . ಆದರಿಪುದು ಶುಚಿತೆ ವೀರತೆ ಬಂದು ದೊರೆಕೊಂಬುದಂತರಂಗದೊಳು (ಕುರಾಸಾಂ. ೧-೮೫). **[ಸಂ. ಶುಚಿತಾ]**

**ಶುಚಿತ್ವ** (ನಾ). = ಶುಚಿತನ ೧ : ಎಷ್ಟೇ ಬಡವರ ಮನೆಯಾಗಿರಲಿ, ಮನೆಯಲ್ಲಿ ಶುಚಿತ್ವ ಮತ್ತು ಅಚ್ಚುಕಟ್ಟುತನ ಬೇಕು (ಅಡುಸಾ. ೩೭). **[ಸಂ.]**

**ಶುಚಿರ್ಭೂತ** (ನಾ). ೧. ಚೊಕ್ಕಟ; ಪರಿಶುದ್ಧ : 'ಶುಚಿರ್ಭೂತಗೊಳಿಸು' ಪರಾ. ೨. ನಿರ್ಮಲನಾದವನು : ಜೈನದೇವತೆಗೆ ಶುಚಿರ್ಭೂತನಿತ್ತನರ್ಘ್ಯವನು (ಭರಚ. ೧೬-೪೯). **[ಸಂ.]**

**ಶುಚಿರ್ಭೂತಗೊಳಿಸು** (ಕ್ರಿ). ಚೊಕ್ಕಟಗೊಳಿಸು; ಪರಿಶುದ್ಧಗೊಳಿಸು : ಸಾಹಿತ್ಯವು ಮಾನವಜನಾಂಗದ ಮನಸ್ಸನ್ನೇ ಶುಚಿರ್ಭೂತಗೊಳಿಸಿ ಅಲ್ಲಿ ಅನೇಕ ಉದಾತ್ತ ಗುಣಗಳನ್ನೂ . . . ನೋಡುವ ನವೀನದೃಷ್ಟಿಕೋನವನ್ನೇ ನಿರ್ಮಿಸಬಲ್ಲುದು (ಪ್ರಬಂಧ. ೪). **[ಶುಚಿರ್ಭೂತ + ಕೊಳ್$_1$ + – ಇಸು$_3$]**

**ಶುಚಿರ್ಭೂತತೆ** (ನಾ). = ಶುಚಿತನ ೧ : ಕೂಡಲಸಂಗನ ಶರಣರ ಒಕ್ಕುದ ಕೊಂಡು ಅನ್ಯವನಾಚರಿಸಿದೊಡೆ ತಪ್ಪದು ಸೂಕರನ ಶುಚಿರ್ಭೂತತೆಯ ಪ್ರಾಣಿಯಂತೆ (ಬಸವ. ೬೨೮). **[ಸಂ. ಶುಚಿರ್ಭೂತತಾ]**

**ಶುಚಿವಂತ** (ನಾ). ಪರಿಶುದ್ಧವಾದ ನಡತೆಯುಳ್ಳವನು; ಸಚ್ಚರಿತ : ಧಾರ್ಮಿಕನೂ ಶುಚಿವಂತನೂ ಆದ ನಿನಗೆ ಲೋಕವೇದಗಳೆರಡಕ್ಕೂ ವಿರೋಧವಾದ ಈ ಆಚರಣೆ ಹೇಗೆ ಮನಸ್ಸಿಗೆ ಬಂತು? (ವಚಭಾ. ೫೯). **[ಸಂ. ಶುಚಿವತ್]**

**ಶುಚಿಸ್ಮಾಂತೆ** (ನಾ). ನಿರ್ಮಲವಾದ ಮನಸ್ಸುಳ್ಳವಳು; ಶುದ್ಧವಾದ ಅಂತಃಕರಣವುಳ್ಳವಳು: ಚಿಂತಿತ ಫಳದಾಯಕಮಂ ಚಿಂತಾಮಣಿಯಂ ಕುಳಾಧಿದೇವತೆ ತಂದೀವಂತೆ ಶುಚಿಸ್ಮಾಂತೆ ಶಚೀಕಾಂತೆ ಜಿನಾರ್ಭಕನನಿತ್ತಳಿಂದ್ರನ ಕೈಯೊಳ್ (ಮಲ್ಲಿಪು. ೧೨-೪೮). [ಸಂ. ಶುಚಿಸ್ಮಾಂತಾ]

**ಶುಚೀಭೂತ** (ನಾ). = ಶುಚಿರ್ಭೂತ ೨ : ಇರ್ವರುಂ ಶುಚೀಭೂತರಾಗಿ ಪೋಗಿ ಪೊಡೆವಟ್ಟು ಅರ್ಚಿಸಿ ಮಗಂಬಡೆವೆವಕ್ಕೆ ಎಂದು ಪರಸಿ ಬಂದು ಮನೆಗೆ ವಂದಿರ್ಪುದುಂ (ಜೀವಸಂ. ೩೭-೨೨ ವ). [ಸಂ.]

**ಶುಚೆ** (ನಾ). ಅಳಲು; ದುಃಖ. [ಸಂ. ಶುಚಾ]

**ಶುಚ್ಯಂಬಕ** (ನಾ). ಉರಿಗಣ್ಣುಳ್ಳವನು; ಅಗ್ನಿನೇತ್ರ; ಶಿವ: ಒಪ್ಪಿದಂ . . . ಶರಣಾನುಸಂಗಜನನಚ್ಯುತನಿಗಮನುತ ಸುಧಾಸೂತಿ ಹರಿದಶ್ವಶುಚ್ಯಂಬಕಂ (ಉದ್ಭದೇ. ೭-೩೭). [ಸಂ.]

**ಶುದ್ಧ** (ಗು). ೧. ಚೊಕ್ಕಟವಾದ ; ಶುಭ್ರವಾದ. ೨. ಪವಿತ್ರವಾದ ; ಪುನೀತವಾದ : ತನ್ನ ಬೆಳಗೆ ಬೆಳಗಾಗೆ ಶುದ್ಧಗರ್ಭಾವಾಸದೊಳ್ ಜಿನಾರ್ಭಕಂ ಬಳೆಯೆ (ಶಾಂತಿಪು. ೯-೨೧೪ ವ). ೩. ಪೂರ್ಣವಾದ; ಸಮಗ್ರವಾದ. ೪. ಅಪ್ಪಟವಾದ: ಈ ವಿಠರ್ಣ ಶುದ್ಧಹುಡುಗನಾದರೂ ಮಹಾಬುದ್ಧಿವಂತನ ಹಾಗೆ ಮಾತನಾಡುತ್ತಾನೆ (ವಚಭಾ. ೧೦೦) ; ನೀನು ಮುದುಕ, ಇಂತಹ ಮಾತುಗಳನ್ನೇ ಹೇಳುವುದು. ಇದು ಶುದ್ಧಪಾಪ (ಮಲನಾ. ೬೭). ೫. ತಪ್ಪಿಲ್ಲದ; ದೋಷರಹಿತವಾದ : 'ಶುದ್ಧಪಾಠ', 'ಶುದ್ಧಪ್ರತಿ' ಪರಾ. (ನಾ). ೬. ಚೊಕ್ಕಟ; ಶುಚಿ: "ಮಲವಿದೂಷಿತಂ ಶುದ್ಧಮದು" (ವಸ್ತುಕೋ. ೧೦೮-೬೧); ಹೊಱಗೆ ಹೂಸಿ ಏವೆನಯ್ಯ ಒಳಗೆ ಶುದ್ಧವಾಗದನ್ನಕ್ಕ (ಬಸವ. ೪೨೫). ೭. ಮಡಿ ; ನೈರ್ಮಲ್ಯ : ಶುದ್ಧಕ್ಕೆ ಹೋದರೆ ಒದ್ದೆ ಉಡಬೇಕಾಗುತ್ತದೆ (ಗಾದ). ೮. ಸಂಪೂರ್ಣ; ಸಮಗ್ರ; ಪೂರ್ತಿ: ಮುಸಲ್ಮಾನನಾದನೆಂದು ಆತ್ಮೀಯರೆಲ್ಲರೂ . . . ಶುದ್ಧವಾಗಿ ತ್ಯಜಿಸಿಬಿಟ್ಟರು (ಕಪಾಕುಂ. ೩೪). ೯. ಸರಿಯಾದುದು; ತಪ್ಪಿಲ್ಲದುದು: ಇರ್ಬರ್ಕರ್ತೃಗಳ್ಗೆ ನಿಮಿತ್ತಮಪ್ಪ ಸತಿಸಪ್ತಮಿಗೆ ಎಕಾರಮಕ್ಕುಂ; ಆ ಎಕಾರಕ್ಕೆ ಅಲುವಂ ಕೆಲರ್ ಅಂಜದೆ ಪೇೞ್ವರ್ ; ಅದುವುಮಾಗದು ; ಅಲೊಡಮೆಂದೊಡೆ ಶುದ್ಧಂ (ಶಮದ. ೨೪೯ ವೃತ್ತಿ). ೧೦. = ಶುಕ್ಲಪಕ್ಷ: "ಸಿತಪಕ್ಷಮೆನೆ ಶುದ್ಧಮಕ್ಕು" (ಮಂಗರಾ. ೧೧-೫) ; ಕೃಷ್ಣಶುಕ್ಲಪಕ್ಷಗಳನ್ನು ಬಹುಳ ಶುದ್ಧಗಳೆಂದೂ ಕರೆಯುವ ವಾಡಿಕೆಯುಂಟು (ಜ್ಯೋತಿರ್ವಿ. ೨೧೭). ೧೧. ಪರಿಶುದ್ಧನಾದವನು ; ನಿರ್ಮಲನಾದವನು: ಅಷ್ಟವಿಧಾರ್ಚನೆ ಷೋಡಶೋಪಚಾರವ ಅಂದಂದಿನ ಕೃತ್ಯವನಂದಂದಿಗೆ ಆನು ಮಾಡಿ ಶುದ್ಧನಯ್ಯಾ (ಬಸವ. ೫೦೮). ೧೨. [ಕಾವ್ಯಮಿ] ಪ್ರಹಸನದ ಒಂದು ಭೇದ; ಸರಳವಾದ ವಸ್ತುವುಳ್ಳುದು : ಪ್ರಹಸನವು ಶುದ್ಧ, ಸಂಕೀರ್ಣ, ವಿಕೃತ ಎಂದು ಮೂರು ವಿಧ (ಸಂನಾಟ. ೩೦); ವಸ್ತುಗಳು (plot) ಶುದ್ಧವೋ (simple) ಅಥವಾ ಸಂಕೀರ್ಣವೋ (complex) ಆಗಿರುತ್ತವೆ (ಅರಿಕಾ. ೮೭). ೧೩. [ಶೈವ] ಎರಡು ಬಗೆಯ ಸೃಷ್ಟಿಗಳಲ್ಲಿ ಒಂದು: ಸೃಷ್ಟಿ ಶುದ್ಧ, ಅಶುದ್ಧವೆಂದು ಎರಡು ಪ್ರಕಾರ . . . ಶುದ್ಧಸೃಷ್ಟಿಯಲ್ಲಿ ಐದು, ಅಶುದ್ಧಸೃಷ್ಟಿಯಲ್ಲಿ ಮೂವತ್ತು, ಪುರುಷನೂ ಸೇರಿ ಮೂವತ್ತಾರು ತತ್ತ್ವಗಳು (ಒಂದಸಾ. ೨೯೭). ೧೪. [ವೀಶೈ] ಶುದ್ಧ, ಸಿದ್ಧ ಮತ್ತು ಪ್ರಸಿದ್ಧಗಳೆಂಬ ಮೂರು ಬಗೆಯ ಪ್ರಸಾದಗಳಲ್ಲಿ ಒಂದು; ಗುರುವು ಸ್ವೀಕರಿಸಿ ಉಳಿದುದು: ನಿಗುತಪ್ರಸಾದವುಂ ಮೂಱುವಿಧವುಂಟಲ್ಲಿ ಉರು ಶುದ್ಧ ಸಿದ್ಧ ಪ್ರಸಿದ್ಧಂ . . . ಇನಿತುಮಂ ನಿಯಮದಿಂದಿರದೆ ಕೊಂಬರ ವಿವರಮಂ ಪೇಳ್ವೆನು (ಲಶಿಚಿಂ. ೪೭-೧೫) ; ಶುದ್ಧ ಸಿದ್ಧ ಪ್ರಸಿದ್ಧವೆಂದು ಪ್ರಸಾದಲಿಂಗ ತ್ರಿವಿಧವವಱಲ್ಲಿ ಗುರುಭುಕ್ತಶೇಷವೇ ಶುದ್ಧವೆನಿಸುವದು (ವಿವೇಕ. ೧೨೩). ೧೫. ವೀರಶೈವದ ಒಂದು ಪ್ರಭೇದ : ಶುದ್ಧ ವಿಶೇಷ ನಿರ್ವಾಣ ಎಂದು ವೀರಶೈವವು ಮೂಱು ತೆಱನಾಗಿರ್ಪುದು (ಸಿದ್ಧೇವ.೪-೯). ೧೬. [ಸಂಗೀತ] ಆರು ಸಾಧಾರಣ ರಾಗಜಾತಿಗಳಲ್ಲಿ ಒಂದು: ಶುದ್ಧ ಭಿನ್ನ ಗೌಡ ಅಷ್ಟಸಾಧಾರಣ ಸಪ್ತಸಾಧಾರಣ ಷಟ್ಸ್ವರವೆಂಬಾಱು ಸಾಧಾರಣ ಜಾತಿಗಳು (ವಿವೇಕ. ೧೮೭). ೧೭. ಶುದ್ಧ, ಸಾಳಗ ಮತ್ತು ಸಂಕೀರ್ಣಗಳೆಂಬ ಮೂರು ರಾಗಭೇದಗಳಲ್ಲಿ ಒಂದು ; ಬೇರೆಯ ರಾಗಗಳ ಅವಲಂಬನೆಯಿಲ್ಲದ ರಾಗ : ಸ್ಥಾಯಿ ಸಂಚಾರಿಗಳ ಸರಿಗಮಪಧನಿಯ ಸರದಾಯತದ ಶುದ್ಧ ಸಂಕೀರ್ಣ ಸಾಳಗದ ಪೂರಾಯತ ಸುತಾನಂಗಳಂ ತಾರಮಧ್ಯಮಂದ್ರಗಳಿಂದೆ ಸೊಗಸುಗೊಳಿಸಿ . . . ಪಾಡಿದರು (ಜೈಮಿಭಾ. ೨೧-೫೮). ೧೮. ಮೃದಂಗವಾದನದ ನಾಲ್ಕುಭೇದಗಳಲ್ಲಿ ಒಂದು : ಶುದ್ಧ ಸಾಳಗ ಸಂಕೀರ್ಣ ಠವಣೆಗಳೆಂಬ ಚತುರ್ವಿಧ ಮೃದಂಗಮಂ ಮೇಳೈಸಿ (ವಿವೇಕ. ೨೩೭). ೧೯. ತಾಳದ ಆರುಭೇದಗಳಲ್ಲಿ ಒಂದು : ಭಂಗತಾಳ ಉಪಭಂಗತಾಳ ವಿಭಂಗತಾಳ ವಿತಾಳ ಶುದ್ಧತಾಳ ಅನುತಾಳವೆಂಬಾಱು ವರ್ಗಸಂಖ್ಯಾಭೇದಮಾಗಿಹುವೆಂದು ಪೇಳ್ವ ಭರತಶಾಸ್ತ್ರ ಪರಿಣತರಪ್ಪ ತಾಳಧಾರಿಗಳಿಂ (ವಿವೇಕ. ೧೯೨).

**ಶುದ್ಧಕಳ್ಳ** = ಪಕ್ಕಾ ಕಳ್ಳ : ಒಳ್ಳಿದರ ಒಡನಾಡಿ ಕಳ್ಳನೊಳ್ಳಿದನಕ್ಕು ಒಳ್ಳಿದನು ಕಳ್ಳರೊಡನಾಡಿ ಅವ ಶುದ್ಧಕಳ್ಳ ತಾನಕ್ಕು (ಸರ್ವಜ್ಞ. ೮೨೩). **ಶುದ್ಧಮೊದ್ದು** = ಸಂಪೂರ್ಣವಾಗಿ ಅಜ್ಞಾನಿಯಾದ ವ್ಯಕ್ತಿ : 'ಶುದ್ಧಮೊದ್ದು' ಎಂದು ಮಾಲತಿ ನಿರ್ಧರಿಸಲು ತಡವಾಗಲಿಲ್ಲ (ವಾತ್ಸಲ್ಯ. ೪೭). **ಶುದ್ಧಸುಳ್ಳು** = ಅಪ್ಪಟಸುಳ್ಳು : ಅವನು ಹೇಳುತ್ತಿರುವುದೆಲ್ಲಾ ಶುದ್ಧ ಸುಳ್ಳು (ರೂಢಿ). [ಸಂ.]

**ಶುದ್ಧಕ** (ನಾ). [ವ್ಯಾಕ] ಮೂಲಾಕ್ಷರ ; ಶುದ್ಧಾಕ್ಷರ : ವರ್ಣಸಮಾಮ್ನಾಯೇ ಶುದ್ಧಕಃ ಪರಿಕೀರ್ತಿತಃ (ಶಬ್ದಾನು. ೧ ವ್ಯಾಖ್ಯಾ); ಶುದ್ಧಕ ಎಂದರೆ ವರ್ಣವೆಂತಲೂ ವರ್ಣಮಾಲೆಯೆಂತಲೂ ಅಭಿಪ್ರಾಯವಾಗುವುದು. ಶುದ್ಧಾಕ್ಷರ, ಶುದ್ಧಕ ಇವೆರಡೂ ಸಮಾನಾರ್ಥಕಗಳು (ಸಂಶೋಧ. ೧೩). 'ಸುದ್ದಗೆ' ಪರಾ. [ಸಂ.]

**ಶುದ್ಧಗೆ** 'ಸುದ್ದಗೆ' ನೋ.

**ಶುದ್ಧಗೊಳಿಸು** (ಕ್ರಿ). ಚೊಕ್ಕಟಮಾಡು; ಶುಚಿಮಾಡು : ಎರಡುದಿನ ರಜೆಯಿದ್ದದ್ದರಿಂದ ಮನೆಯನ್ನೆಲ್ಲಾ ಶುದ್ಧಗೊಳಿಸಿದೆ (ರೂಢಿ).

[ಶುದ್ಧ + ಕೊಳ್$_1$ + – ಇಸು$_3$]

**ಶುದ್ಧತಾನ** (ನಾ). [ಸಂಗೀತ] ಸ್ವರಗಳ ಕ್ರಮಸಂಚಾರದಿಂದಾಗುವ ತಾನ; ವಕ್ರಸಂಚಾರವಿಲ್ಲದ ತಾನ : ತಾನದಲ್ಲಿ ಕೂಟತಾನವೆಂದೂ ಶುದ್ಧತಾನವೆಂದೂ ಎರಡು ವಿಧ . . . ಶುದ್ಧತಾನದಲ್ಲಿ ಸ್ವರಗಳ ವಕ್ರತ್ವವಿಲ್ಲ (ಸಂಗೀಚಂ. ೮೯). 'ಕೂಟತಾನ' ಪರಾ. [ಸಂ.]

**ಶುದ್ಧತೆ** (ನಾ). ೧. ಪರಿಶುದ್ಧವಾಗಿರುವಿಕೆ; ಸ್ವಚ್ಛತೆ : ಈ ವಿನುತಸಿತಕೀರ್ತಿಯಿಾ ಸದ್ಭಾವಶುದ್ಧತೆಯಿಾ ಪ್ರಸಿದ್ಧತೆಯಿಾ ವಿಬುಧಸನ್ಮಾನತೆಯು ನಿಮಗೀಯಹಂಕೃತಿಯೆ (ಬಸಪು. ೪೭-೧೧). ೨. ದೋಷರಹಿತವಾಗಿರುವಿಕೆ ; ತಪ್ಪಿಲ್ಲದಿರುವಿಕೆ : 'ಬಿ' ಯ ಎಲ್ಲ ಪಾಠಾಂತರಗಳ ಶುದ್ಧತೆಗೂ ಇದು ಒಂದು ಅಳತೆಗೋಲೆಂದು ಭಾವಿಸಬಾರದು (ಭಾರಪ. ೪೭). [ಸಂ. ಶುದ್ಧತಾ]

**ಶುದ್ಧಧವಳಿತ** (ನಾ). ಅಚ್ಚಬಿಳಿಯ ಬಣ್ಣದವನು : ಒಬ್ಬ ಕೆಂಚನೊಬ್ಬ ಕರಿಕನೊಬ್ಬ ಶುದ್ಧಧವಳಿತನೆಂತಯ್ಯಾ (ಬಸವ. ೫೪೩). [ಸಂ. ಶುದ್ಧಧವಲಿತ]

**ಶುದ್ಧಧೈವತ** (ನಾ). [ಸಂಗೀತ] ಸ್ವರಗಳಲ್ಲಿ ಒಂದು ಬಗೆ; IP ಶುದ್ಧ, ಚತುಶ್ರುತಿ, ಷಟ್ಶ್ರುತಿ ಎಂಬ ಮೂರು ಧ್ವನಿಭೇದಗಳನ್ನುಳ್ಳ ಧೈವತಸ್ವರದ ಒಂದು ಭೇದ : ಇಲ್ಲಿ ಹೊರಗಿನ ಸ್ವರಗಳನ್ನೂ ಅಂತರಗಾಂಧಾರ, ಶುದ್ಧಧೈವತ ಮತ್ತು ಕಾಕಲಿನಿಷಾದವನ್ನೂ ಬಳಸಿಲ್ಲ (ಸಂಗೀತ. ೫೦). [ಸಂ.]

**ಶುದ್ಧನೀರು** (ನಾ). ಸ್ವಚ್ಛವಾದ ನೀರು : ಹೊಲತಿ ಶುದ್ಧನೀರ ಮಿಂದಂತಾಯಿತ್ತಯ್ಯಾ (ಬಸವ. ೬೨೯). [ಶುದ್ಧ + ನೀರು$_1$ (< ನೀರ್)]

**ಶುದ್ಧಪಾಠ** (ನಾ). [ಗ್ರಂಥಸಂ] ದೋಷರಹಿತವಾದ ಗ್ರಂಥಸ್ವರೂಪ ; ತಪ್ಪಿಲ್ಲದ ಪಾಠ : ಮೇಲೆ ಹೇಳಿದ ಎರಡು ಹಸ್ತಪ್ರತಿಗಳಲ್ಲಿ 'ಎ' ಕೆಳಮಟ್ಟದ್ದೇ ಆದರೂ ಅದು ಕೆಲವೆಡೆ 'ಬಿ'ಯಲ್ಲಿಲ್ಲದ ಶುದ್ಧಪಾಠಗಳನ್ನು ಉಳಿಸಿಕೊಂಡಿರಬಹುದು (ಭಾರಪ. ೪೭).

[ಸಂ.]

**ಶುದ್ಧಪಾರ್ಷ್ಣಿ** (ನಾ). ೧. ಬಲಯುತವಾದ ಹಿಂಚೂಣಿಸೈನ್ಯ. ೨. ಬಲಯುತವಾದ ಹಿಂಚೂಣಿಸೈನ್ಯವುಳ್ಳವನು : ಅಂತಪರಿಮಿತ ಶುದ್ಧಪಾರ್ಷ್ಣಿಯುಂ ಗುಪ್ತಮೂಲಪ್ರತ್ಯಂತನುಂ . . . ವಿಜಯಪ್ರಸ್ಥಾನೋದ್ಯುಕ್ತಂ ಮಂಗಳವಸದನಂಗೊಂಡು (ಶಾಂತಿಪು. ೧೦-೧೪೨ ವ). [ಸಂ.]

**ಶುದ್ಧಪೂರ್ವರಂಗ** (ನಾ). [ಕಾವ್ಯಮಿ] ನಾಟಕವನ್ನು ಸ್ಥಾಪಿಸುವ ಕ್ರಮದ ಒಂದು ಬಗೆ : ವಸ್ತುತಃ ಹಿಂದೆ ಎರಡು ಪದ್ಧತಿಗಳೂ ಇದ್ದುವೆಂದೂ, ಇವುಗಳಿಗೆ

ಕ್ರಮವಾಗಿ 'ಶುದ್ಧಪೂರ್ವರಂಗ', 'ಚಿತ್ರಪೂರ್ವರಂಗ' ಎಂಬ ಹೆಸರುಗಳಿದ್ದಂತೆಯೂ ತೋರುತ್ತದೆ (ಕ್ಷಪಿಡಿ. ೨೧೩). 'ಚಿತ್ರಪೂರ್ವರಂಗ' ಪರಾ. [ಸಂ.]

**ಶುದ್ಧಪ್ರತಿ** (ನಾ). [ಗ್ರಂಥಸಂ] ತಪ್ಪಿಲ್ಲದ ಪಾಠಭಾಗವುಳ್ಳ ಪ್ರತಿ; ದೋಷರಹಿತವಾದ ಪ್ರತಿ. [ಸಂ.]

**ಶುದ್ಧಪ್ರಸಾದ** (ನಾ). [ವೀಶೈ] ಶುದ್ಧ, ಸಿದ್ಧ ಮತ್ತು ಪ್ರಸಿದ್ಧ ಎಂಬ ಮೂರು ಬಗೆಯ ಪ್ರಸಾದಗಳಲ್ಲಿ ಒಂದು ; ಗುರುವು ಸ್ವೀಕರಿಸಿ ಉಳಿದುದು : ತ್ರಿವಿಧ ಪ್ರಸಾದವೆಂದೆಂಬರು ಅದೆಂತಹುದೋ ಶುದ್ಧಪ್ರಸಾದ ಗುರುವಿನದದು ಸಿದ್ಧಪ್ರಸಾದ ಲಿಂಗದದು ಪ್ರಸಿದ್ಧಪ್ರಸಾದ ಜಂಗಮದದು ಇಂತೀ ತ್ರಿವಿಧವೊಂದಾದವರ ತೋಱಾ (ಬಸವ.ಕ. ೭೯೦). [ಸಂ.]

**ಶುದ್ಧಯಿಸು** (ಕ್ರಿ). ಚೊಕ್ಕಟಮಾಡು; ನಿರ್ಮಲಗೊಳಿಸು : ಒಳಗೆ ಶೋಧಿಸಿ ಹೊಱಗೆ ಶುದ್ಧಯಿ [ಪಾಠಾಂ. ವಿ] ಸಿ ಒಳಹೊಱಗೆಂಬ ಉಭಯಶಂಕೆಯ ಕಳೆದು ಸ್ಫಟಿಕದ ಶಲಾಕೆಯಂತೆ ತಳವೆಳಗು ಮಾಡಿ (ಮಹಾದೇ. ಬ. ೨೧-೩೭) ; ಶುದ್ಧ + ಇಸಿದಂ - ಶುದ್ಧಯಿಸಿದಂ; ತಾರ + ಇಸಿದಂ - ತಾರಯಿಸಿದಂ (ಶಮದ. ೫೪ ಪ್ರಯೋ).

[ಶುದ್ಧ + -- ಇಸು₃]

**ಶುದ್ಧವಾಹಿನಿ** (ನಾ). [ಸಂಗೀತ] ಒಂದು ರಾಗದ ಹೆಸರು : ಕೌಶಿಕ . . . ಕುರಂಜಿ ಶುದ್ಧವಾಹಿನಿ ಪ್ರಥಮಮಂಜರಿ ನಟನಾರಾಯಣೀ ಫಳಮಂಜರಿ ಸಯಸೋಧರೆಯೆಂಬ ಮುವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದಾದ ರಾಗಂಗಳು (ವಿವೇಕ. ೧೮೮).

[ಸಂ. ಶುದ್ಧವಾಹಿನೀ]

**ಶುದ್ಧವಿಷ್ಕಂಭ** (ನಾ). [ಕಾವ್ಯಮೀ] ನಾಟಕದ ಒಂದು ಅಂಗ; IP "ನಡೆದು ಹೋದ ಮತ್ತು ಮುಂದೆ ನಡೆಯುವ ಕಥಾಂಶಗಳನ್ನು ಮಧ್ಯಮಪಾತ್ರಗಳ ಮೂಲಕ ಸಂಕ್ಷೇಪವಾಗಿ ಸೂಚಿಸುವುದು" (ಕ್ಷಪಿಡಿ. ೨೦೭) : ವಿಷ್ಕಂಭ — ನಡೆದುಹೋದ ಕಥಾಂಶವನ್ನು ಸಂಕ್ಷೇಪವಾಗಿ ಸೂಚಿಸುವುದು; ಇದನ್ನು ಪ್ರಧಾನ ಪಾತ್ರಗಳು ಮಾಡುವುದಿಲ್ಲ. ಮಧ್ಯಮಪಾತ್ರಗಳಿಂದಾದರೆ 'ಶುದ್ಧವಿಷ್ಕಂಭ'ವಾಗುತ್ತದೆ (ಸಂನಾಟ. ೧೫). [ಸಂ.]

**ಶುದ್ಧವೃತ್ತ** (ನಾ). ೧. ಒಳ್ಳೆಯ ನಡತೆ ; ಪರಿಶುದ್ಧವಾದ ನಡವಳಿಕೆ. ೨. ಒಳ್ಳೆಯ ನಡತೆಯುಳ್ಳವನು; ಸದಾಚಾರಿ : ಆ ಪುರುಷೋತ್ತಮಂ ತಿಳಿಪಿದಂ ಕನಸಂ ನೆನಸಾಗೆ ರಾಗದಿಂ . . . ಕುಂಭದಿಂದುತ್ತಮನಮಲಪಯಸ್ಸದ್ಮದಿಂ ಶುದ್ಧವೃತ್ತಂ (ಶಾಂತಿಪು. ೯-೨೦೦); ಭೂಮಿಪಾಲಕಂ ಸಂದು ವಿರಕ್ತಿಗಾಗಳೆ ತದೀಯ ಸಮಕ್ಷದೆ ದೀಕ್ಷೆಗಂ ಮನಂದುಂದನದಂತೆ . . . ಏಡೆಯೊಳ್ ನಿಲಲೀಗುಮ ಶುದ್ಧವೃತ್ತರಂ (ಚಂದ್ರಪು. ೭-೨೭).

[ಸಂ.]

**ಶುದ್ಧಶೈವ** (ನಾ). ೧. [ಶೈವ] ಸಾಮಾನ್ಯ, ಮಿಶ್ರ, ಶುದ್ಧ ಮತ್ತು ವೀರ ಎಂಬ ಶೈವಮತದ ನಾಲ್ಕು ಪಂಗಡಗಳಲ್ಲಿ ಒಂದು ಬಗೆ : ಶುದ್ಧಶೈವಸಂಪನ್ನರಪ್ಪ ಅಱುವತ್ತು ಮೂವರು ಅಸಂಖ್ಯಾತರು (ಆದಪ. ಮು.೫೦-೭೮); ಇಂತು ಬಸವರಾಜಂ . . . ಕೀರ್ತಿಯ ತಳೆದು . . . ಶುದ್ಧಶೈವಸರೋನಿಧಿತರಂಗಮಾಲಾನಿಮಗ್ನಚಿತ್ತನಾಗಿರ್ದಂ (ಬಸರ. ೧೨-೩); ವಾತೂಲ ಶುದ್ಧಾಖ್ಯವೆಂಬ ಗ್ರಂಥದಲ್ಲಿ ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ, ವೀರಶೈವ ಎಂದು ಶೈವಮತವನ್ನು ನಾಲ್ಕಾಗಿ ವಿಂಗಡಿಸಿದ್ದಾರೆ (ಭಾರದ. ೭೪). ೨. ಶೈವಮತದ ನಾಲ್ಕು ಪಂಗಡಗಳಲ್ಲಿ ಒಂದಾದ ಶುದ್ಧಶೈವಪಂಗಡಕ್ಕೆ ಸೇರಿದವನು : ಕೌಶಿಕ . . . ಗೌತಮರೆಂಬ ಆದಿಶೈವರ ಗೋತ್ರಸಂಭವನಾಗಿ ಮಹಾಶೈವನೆನಿಪ ಶಿವದ್ವಿಜನೇ ಶುದ್ಧಶೈವನು (ವಿವೇಕ. ೭೮). [ಸಂ.]

**ಶುದ್ಧಸಾವೇರಿ** (ನಾ). [ಸಂಗೀತ] ಒಂದು ರಾಗದ ಹೆಸರು: ಶುದ್ಧಸಾವೇರಿ ರಾಗದ . . . ತ್ಯಾಗರಾಜಕೀರ್ತನೆಗಳನ್ನು ಅವರು ಹಾಡುವುದರಲ್ಲಿ ಸೌಂದರ್ಯ, ಜೀವಂತತೆ, ಸೊಗಸು ಮತ್ತು ಗಾಂಭೀರ್ಯಗಳು ತುಂಬಿರುತ್ತಿದ್ದುವು (ಸಂಗೀತ. ೨೭).

[ಸಂ. ಶುದ್ಧಸಾವೇರೀ]

**ಶುದ್ಧಾಂತ** (ನಾ). ೧. ಅಂತಃಪುರ ; ರಾಣೀವಾಸ : ಪ್ರಿಯಕುಬ್ಜವಾಮನ ಗಣಾಲಾಪಂಗಳತ್ಯಂತಸೌಂದರಶುದ್ಧಾಂತವಧೂಕದಂಬಂಕಮನೇಂ ಮೆಯ್ಮೆರ್ಚಿಸ ಲ್ಕಾರ್ತುದೋ (ಆದಿಪು. ೧೧-೪೨); ಒಳ್ಪುವೆತ್ತ ಶುದ್ಧಾಂತನಿತಂಬಿನೀನಿವಹಮೊಲ್ದೆಳಸು ತ್ತಿರೆಯುಂ ಧರಾಂಗನಾಕಾಂತನ ಚಿತ್ತವೇಕಜಿಯೆಮೊಂದದಣಂ ಸುರತೋಪ ಭೋಗಮಂ (ಕಾದಂಪೂ. ೨೦); ಶುದ್ಧಾಂತಕ್ಕೆದಿ ಮುದದಿ ಪೊಡವಿಪತಿಯಂ ಕಂಡು ಪೊಡಮಟ್ಟು (ಪಂಚಾರಾ. ೨-೮-೧). ೨. ರಾಜನ ಅಂತಃಪುರದ ಸ್ತ್ರೀವರ್ಗ. [ಸಂ.]

**ಶುದ್ಧಾಕ್ಷರ** (ನಾ). ವರ್ಣಮಾಲೆಯ ಮೂಲಾಕ್ಷರ : ಅಂತಕಾರಾದಿ ಹಕಾರಾಂತ ಸ್ವರ ವ್ಯಂಜನ ಭೇದ ಭಿನ್ನ ಶುದ್ಧಾಕ್ಷರಂಗಳುಮಂ ಯೋಗವಾಹಚತುಷ್ಕಮುಮಂ ಸಂಯೋಗಾಕ್ಷರಂಗಳುಮಂ ಬ್ರಹ್ಮಿಗೆ . . . ಉಪದೇಶಂಗೆಯ್ದು (ಆದಿಪು. ೮-೫೯ ವ); ನಮಸ್ಸಿದ್ಧೇಭ್ಯ ಎಂದಾದಿತೀರ್ಥೇಶರ್ ವಂದಿಸಿ ದೀಕ್ಷೆಗೆಯ್ದು [ರದಱಿಂ] ಸಿದ್ಧಂ ನಮಾದ್ಯಂ ಜಗಜ್ಜಾ ಶುದ್ಧಾಕ್ಷರಮೆಂಬ ಸುದ್ದಗೆಯುಂ (ಶಾಂತಿಪು. ೧-೨). [ಸಂ.]

**ಶುದ್ಧಾತ್ಮ** (ನಾ). ೧. ನಿರ್ಮಲವಾದ ಮನಸ್ಸು. ೨. ಪರಿಶುದ್ಧವಾದ ಮನಸ್ಸುಳ್ಳವನು ; ಸಾತ್ವಿಕ : ಶುದ್ಧಾತ್ಮ ಪರಮಾತ್ಮರಿಬ್ಬರೂ ಒಂದು ರತ್ನಕ್ಕೆ ಹೆಣಗಾಟವನಾಡಿಹರು (ಬಸವ. ೯೦೫); ಮದ್ದುಮಂತ್ರಗಳ ಸಾಧ್ಯವ ಮಾಡಿಕೊಳುತಿಹ ಶುದ್ಧಾತ್ಮರುಗಳ ನೋಡಿದನು (ಅಬ್ಬಲೂ. ೩-೪೪). [ಸಂ. ಶುದ್ಧಾತ್ಮನ್]

**ಶುದ್ಧಾವಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ಕೌಶಿಕ ವೇಳಾವಳಿ ಶುದ್ಧಾವಳಿ . . . ಸಯಸೋದರಿಯೆಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದಾದ ರಾಗಂಗಳು (ವಿವೇಕ. ೨೩೩). [ಸಂ. ಶುದ್ಧಾವಲಿ]

**ಶುದ್ಧಾಶುದ್ಧಪತ್ರಿಕೆ** (ನಾ). ಗ್ರಂಥದ ಕೊನೆಯಲ್ಲಿ ಸೇರಿಸುವ ತಪ್ಪುಒಪ್ಪುಗಳ ಪಟ್ಟಿ : ಮುದ್ರಣದಲ್ಲಿ ಬಹಳ ತಪ್ಪುಗಳು ಉಳಿದು ಬಿಟ್ಟ ಕಾರಣ ನಂತರದಲ್ಲಿ ಶುದ್ಧಾಶುದ್ಧಪತ್ರಿಕೆಯನ್ನು ಸೇರಿಸಲಾಯಿತು (ರೂಢಿ). [ಸಂ. ಶುದ್ಧಾಶುದ್ಧಪತ್ರಿಕಾ]

**ಶುದ್ಧಿ** (ನಾ). ೧. ಪರಿಶುದ್ಧತೆ; ಪವಿತ್ರತೆ. ೨. ಚೊಕ್ಕಟ ಮಾಡುವುದು; ಶುಚಿಗೊಳಿಸುವುದು. ೩. (ದೋಷ, ಮೈಲಿಗೆ ಮುಂತಾದುವುಗಳನ್ನು) ಕಳೆದುಕೊಳ್ಳುವಿಕೆ. ೪. ಸಾಲ ಮುಂತಾದ ಋಣವನ್ನು ತೀರಿಸುವುದು; ಋಣಸಂದಾಯ. ೫. ದೋಷವಿಲ್ಲದಿರುವಿಕೆ; ಸರಿಯಾಗಿರುವಿಕೆ: 'ಪಾಯಶುದ್ಧಿ' ಪರಾ. ೬. ಎಚ್ಚರ ; ಜ್ಞಾನ; ಪರಿವೆ : ಮಾಮಾ ಹೇಗೋ ತನ್ನ ಕೈಯನ್ನು ಬಿಡಿಸಿಕೊಂಡಾಗ ನನ್ನ ಕೈಕಾಲುಗಳಲ್ಲಿಯ ಶಕ್ತಿ ಹೋದಂತಾಯಿತು. ನಾನು ಶುದ್ಧಿಯ ಮೇಲಿದ್ದೆ (ಸ್ಮೃತಿಚಿ. ೧೯೧); ಅವಳಿಗೆ ಮೈಮೇಲಿನ ಶುದ್ಧಿಯೇ ಇದ್ದಂತಿ ರಲಿಲ್ಲಮ್ಮಾ (ಮೂರುದಾ. ೬೨೩). ೭. ಶೋಧನೆ; ತಪಾಸಣೆ :(ಓ). ೮. ಸಮಾಚಾರ; ಸುದ್ದಿ : ಲಂಕಾನಗರಿಗೆ ಪೋಗಿ ನುಡಿದು ದಶಕಂಧರನೊಳ್ ಜಾನಕಿಯ ಶುದ್ಧಿಯಂ (ಪಂಚಾಮಾ. ೧೧-೪೨). ೯. (ತೆರಿಗೆಯ) ವಿನಾಯಿತಿ (?) : 'ಕುಳಾಗ್ರಶುದ್ಧಿ' ಪರಾ. ೧೦. [ಜೈನ] ವೀತರಾಗರಾದ ಮುನಿಗಳು ಉತ್ತಮಸಂಯಮವನ್ನು ಕಾಪಾಡಿಕೊಳ್ಳಲು ಸಾಧಿಸಬೇಕಾದ ನೈರ್ಮಲ್ಯ: 'ಅಷ್ಟವಿಧಶುದ್ಧಿ', 'ಶುದ್ಧ್ಯಷ್ಟಕ' ಪರಾ. [ಸಂ.]

**ಶುದ್ಧಿಗೊಳಿಸು** (ಕ್ರಿ). ಶುಚಿಗೊಳಿಸು; ಸ್ವಚ್ಛಮಾಡು : ಅಂಗಡಿ ಮನೆ ಮುಂಗಟ್ಟುಗಳಲ್ಲಿ ಇಮ್ಮಡಿಯ ಕಿಟಕಿ ಬಾಗಿಲುಗಳನ್ನು ತೆರೆದು, ಶುದ್ಧಿಗೊಳಿಸಲಾಗಿತ್ತು (ಪುನರು. ೧೮೨). [ಶುದ್ಧಿ + ಕೊಳ್₁ + — ಇಸು₃]

**ಶುದ್ಧಿಪತ್ರ** (ನಾ). ೧. ಸಾಮಾನ್ಯವಾಗಿ ಗ್ರಂಥಗಳ ಕೊನೆಯಲ್ಲಿ ಸೇರಿಸುವ ತಿದ್ದುಪಡಿಯ ಭಾಗ; ತಪ್ಪೊಪ್ಪೋಲೆ. ೨. ಪ್ರಾಯಶ್ಚಿತ್ತದ ಮೂಲಕ ಪಡೆದ ಪ್ರಮಾಣಪತ್ರ. [ಸಂ.]

**ಶುದ್ಧೀಕರಣ** (ನಾ). ೧. ಸ್ವಚ್ಛಗೊಳಿಸುವಿಕೆ ; ಶುಚಿಮಾಡುವಿಕೆ. ೨. ಶುದ್ಧಿಗಾಗಿ ಮಾಡುವ ಪ್ರಾಯಶ್ಚಿತ್ತಕರ್ಮ : ಈಗ ಈ ಪ್ರಕರಣ . . . ಜಗದ್ಗುರು ಶಂಕರಾಚಾರ್ಯರ ಕಡೆಗೆ ಹೋಗುವದೆಂದೂ, ನಂತರ ಟಿಳಕರ ಶುದ್ಧೀಕರಣವಾಗಬೇಕೆಂದೂ ಗೊತ್ತಾಯಿತು (ಸ್ಮೃತಿಚಿ. ೨೦೭). [ಸಂ.]

**ಶುದ್ಧೀಕರಿಸು** (ಕ್ರಿ). ೧. ನಿರ್ಮಲಗೊಳಿಸು; ಶುಚಿಗೊಳಿಸು : ನಲ್ಲಿ ಪದ್ಧತಿಯಿರುವ ಹಚ್ಚನ ದೊಡ್ಡನಗರಗಳಲ್ಲಿ ಶುದ್ಧೀಕರಿಸಿದ ನೀರು ಸಿಗುವುದು (ಆಡುಸಾ. ೮೪). ೨. ಪವಿತ್ರಗೊಳಿಸು; ಸಂಸ್ಕಾರಗೊಳಿಸು : ಇಷ್ಟೆಲ್ಲಾ ಪಾಪಕೃತ್ಯಗಳು ತುಂಬಿ ತುಳುಕುವ ಈ ದೇಹವನ್ನು ಶುದ್ಧೀಕರಿಸುವುದಕ್ಕಾಗಿ ನನ್ನ ಆತ್ಮಸಂತೋಷದಿಂದ ನನ್ನ ಹತ್ಯೆಯನ್ನು ಮಾಡುವ ಈ ಸಾಹಸಕಾರ್ಯಕ್ಕೆ ಕೈ ಹಾಕುವೆ (ದೇಶಧಾ. ೧೦೫).

೩. ಪರಿಷ್ಕರಿಸು; ಸುಧಾರಿಸು : ಸ್ಪ್ಯಾಬೋವಿನ . . . ಲೇಖನಗಳಂತೆ ಅಲಗ್ಸಾಂಡರನು . . . ಇಲ್ಲಿಂದ ಒಂದು ಗಾಯಕವಾದಕತಂಡವನ್ನು ಗ್ರೀಸ್‌ಸಂಗೀತವನ್ನು ಶುದ್ಧೀಕರಿಸಲು ಕರೆದೊಯ್ದನಂತೆ (ಭಾರದ. ೫೪೫). [ಶುದ್ಧೀಕರಣ + - ಇಸು]

**ಶುದ್ಧೆ** (ನಾ). ಪರಿಶುದ್ಧಳಾದವಳು; ಪವಿತ್ರಳಾದವಳು : ಲೋಕವಜೆಯಲು ಶುದ್ಧೆ ಜಾನಕಿ ಸಾಕು ಕಾಡದೆ ಕೂಡಿಕೊಳ್ಳು (ಕಾಶಿರಾ. ೪೩-೪೦). [ಸಂ. ಶುದ್ಧಾ]

**ಶುದ್ಧ್ಯಷ್ಟಕ** (ನಾ). [ಜೈನ] ವೀತರಾಗಿಯಾದ ಮುನಿಯು ಸಾಧಿಸಬೇಕಾದ ಎಂಟುಬಗೆಯ ಶುದ್ಧಿಗಳು : ಭಾವಶುದ್ಧಿಯುಂ ಕಾಯಶುದ್ಧಿಯುಂ ವಿನಯಶುದ್ಧಿಯುಂ ಈರ್ಯಾಪಥಶುದ್ಧಿಯುಂ ಭಿಕ್ಷಾಶುದ್ಧಿಯುಂ ಪ್ರತಿಷ್ಠಾಪನಶುದ್ಧಿಯುಂ ಶಯನಾಶನಶುದ್ಧಿಯುಂ ವಾಕ್ಯಶುದ್ಧಿಯುಮೆಂಬ ಶುದ್ಧ್ಯಷ್ಟಕದೊಳಂ (ಅಜಿಪು. ೭-೮ವ). [ಸಂ.]

**ಶುನಕ** (ನಾ). ೧. ನಾಯಿ; ಸೊಣಗ : ಸ್ವರಾಗಸಂತತಿ ಶುನಕಗೋಷ್ಠಿಯೊಳು ಚತುರಿದ್ದಿಜೋಪಚಾರಂ ದಂತಧಾವನದೊಳು . . . ಸ್ವಸ್ಥತಾಗತಿ ಮುಕ್ತರಾದವರೊಳಲ್ಲದಾ ನಾಡೊಳಿಲ್ಲ (ಪಚಕಾ. ೨-೧೧); ಕೆಳೆಯುಂ ಪಗೆಯುಂ ದುರ್ಜನನೊಳನುತ್ತಮಂ ನೋಡೆದಲ್ ಶುನಕಂ ಕೂರ್ತುಂ ಮುಳಿದುಮಪಕಾರಮಂ ಮೊಕ್ಕಳಮಾಗಿರೆ ನೆಕ್ಕಿ ಕರ್ಚಿ ಮಾಡದುದುಂಟೇ (ಪಾರ್ಶ್ವಪು. ೪-೪೭); ದಾಸರೋ ನಾವೆಲ್ಲ ಶುನಕನಂದದಿ ಜಗದ ವಾಸನೆಗಳೆಳೆತಕ್ಕೆ ದಿಕ್ಕುದಿಕ್ಕಿನಲಿ (ಮಂಕುಕ. ೩೫೫). ೨. ಒಂದು ನರಕದ ಹೆಸರು: ಶುನಕ ಸೂಕರ ಅಜ ಮಹಿಷ ಆವಿಕವೆಂಬ್ಯದು ಮಂತ್ರಿನರಕಂಗಳ ನಡುವೆ ಚಂಡಕೋಲಾಹಲವೆಂಬರಸುನರಕವಿಹುದು (ವಿವೇಕ. ೧೪೦). ೩. ಒಬ್ಬ ಋಷಿಯ ಹೆಸರು. [ಸಂ.]

**ಶುನಕಿ** (ನಾ). ಹೆಣ್ಣುನಾಯಿ : ಶುನಕನೊಡಗೂಡಿ ತಿರ್ದಿದ ಶುನಕಿಗಮಾ ತಿರ್ದೆ ತಿರ್ದು ಬೆನ್ನಡೆತಂದಾ ಶುನಕಂ ವಕ್ರಿಸಿದ ನಯಂ ಶುನಕಿಯ ತಿರ್ದಕ್ಕುಂ (ಲೋಕೋಪ. ೧೨-೩೨). [ಸಂ. ಶುನಕೀ]

**ಶುನಾಸೀರ** (ನಾ). ದೇವೇಂದ್ರ; ಇಂದ್ರ. [ಸಂ.]

**ಶುನಿ** (ನಾ). ನಾಯಿ : "ಶ್ವಾನಂ ಶುನಿ" (ವಸ್ತುಕೋ. ೯೦-೧೧); ನೆಲಕ್ಕೆ ಬಿದ್ದರೆ ನಾನೆತ್ತಿಕೊಂಬುದಕೆ ಮುನ್ನವೇ ಶುನಿ ಎತ್ತಿಕೊಂಬಂತೆ ಮಾಡಾ (ಮಹಾದೇ. ಬ. ೭೯-೨೦೦); ಕಲಿಯುಗಮಹಿಮೆಯೊ ನೆಲನ ವಾಸಿಗಳುಂಟೊ ಮೊಲ ಶುನಿಗಳನು ಕೊಲ್ಲುವದು (ಅಮುಸಾಂ. ೨-೩೫); ಸತ್ತವರ ಬಾಯೊಳಗೆ ಒತ್ತಿ ನೀರೆರೆದಂತೆ ಚಿತ್ತವಿಲ್ಲದವಳ ಸಂಸಾರ ಶುನಿ ಹೆಣನ ಹತ್ತಿ ತಿಂದಂತೆ (ಸರ್ವಜ್ಞ. ೧೭೦೩). [ಸಂ.]

**ಶುನಿಗಿಲು** (ನಾ). ಒಂದು ಬಗೆಯ ಪಕ್ಷಿ : ಶಕುನಿ ಶುನಿಗಿಲು ಟಿಟ್ಟಿಭಂ ಕೌಶಿಕಂ . . . ನಾಗರಪಕ್ಷಿ ಮುಖ್ಯಗಳ್ ಸುಖಮಿಪ್ಪವಾ ವನದೊಳು (ಪಕೋಪು. ೧೦-೬೧). [?]

**ಶುಭ** (ಗು). ೧. ಹೊಳೆಯುವ ; ಪ್ರಕಾಶಿಸುವ. ೨. ಮನೋಹರವಾದ ; ಸುಂದರವಾದ. ೩. ಮಂಗಳಕರವಾದ; ಒಳ್ಳೆಯ. (ನಾ). ೪. ಮಂಗಳಕರವಾದುದು ; ಒಳ್ಳೆಯದು : ಶ್ರೀಕಾಂತೆಯುಂ . . . ಸಮಸಂದಿಷ್ಟಾರ್ಥಮಂ ಮಾಟ್ಕೆ ಕಾಂತನ್ನಲೋಕಸ್ತುತ ನಿನ್ನೊಳಿಂದು ವಿಜಯಂ ಭದ್ರಂ ಶುಭಂ ಮಂಗಳಂ (ಪುಷ್ಪಪು. ೮-೬೪) ; ಶುಭಗಳು ಪರಿಗ್ರಾಹ್ಯಗಳು ; ಅಶುಭಗಳು ಪರಿತ್ಯಾಜ್ಯಗಳು (ಓಂದಸಾ. ೫೭). ೫. ವಿಶೇಷವಾದುದು; ಶ್ರೇಷ್ಠವಾದುದು. ೬. ಪರಿಶುದ್ಧವಾದುದು; ನಿರ್ಮಲವಾದುದು. ೭. ಒಳ್ಳೆಯ ಅದೃಷ್ಟ; ಭಾಗ್ಯ. ೮. ಸಂತೋಷ; ನಲಿವು. ೯. ಬಟ್ಟೆ; ವಸ್ತ್ರ. ೧೦. ಪೌರುಷ; ಪರಾಕ್ರಮ: "ಮಂಗಳದಲ್ಲಿ ಪಟದಲ್ಲಿ ವಿಕ್ರಾಂತದಲಿ ವಿಶೇಷದಲಿ ಶುಭಶಬ್ದಮಕ್ಕುಂ" (ಮಂಗರಾ. ೧೫೪-೬೭). ೧೧. ಅರಸುತನ; ದೊರೆತನ. ೧೨. ನಿಜವಾದುದು; ಸತ್ಯವಾದುದು. ೧೩. ಮರ ; ವೃಕ್ಷ : "ವಿಕ್ರಾಂತ ಭೂಜಾತಮಂಗಳಮುಂ ರಾಜ್ಯಪದಂ ವಿಶೇಷವಿಮಲಂ ಸತ್ಯಂ ಶುಭವಾಚಕಂ" (ನಾನಾರ. ೧೯೦). ೧೪. ಒಂದು ಬಗೆಯ ಕಳ್ಳಿಗಿಡ : (?). ೧೫. [ಜೈನ] ನಾಮಕರ್ಮಗಳಲ್ಲಿ ಒಂದು ; ಶರೀರದ ಅವಯವಗಳನ್ನು ಸುಂದರಗೊಳಿಸುವ ಕರ್ಮ : ಅಸ್ಥಿರ ಶುಭ ಅಶುಭ ಸುಭಗ . . . ತೀರ್ಥಕರನಾಮಮೆಂದಿಂತಲ್ಲಿ ಗತಿನಾಮಕರ್ಮಂ ಚತುರ್ವಿಧಮಕ್ಕುಂ (ಗೊಮ್ಮಸಾ. ೩-೭). ೧೬. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಒಂದು ; ಇಪ್ಪತ್ತುಮೂರನೆಯ ಯೋಗ : ವಿಷ್ಕಂಭ . . . ಶುಭ ಶುಕ್ಲ ಬ್ರಹ್ಮ ಐಂದ್ರ ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೩೨೦). [ಸಂ.]

**ಶುಭಂಕರಕತ್ತಿಗೆ** 'ಶುಭಂಕರಗತ್ತಿಗೆ' ನೋ.

**ಶುಭಂಕರಗತ್ತಿಗೆ, ಶುಭಂಕರಕತ್ತಿಗೆ** (ನಾ). ಒಂದು ಬಗೆಯ ಕತ್ತಿ : ಸುಂಗೆ ಶುಭಂಕರಗತ್ತಿಗೆ ಕರಗಂ ತಲೆಮಂಡೆ ಮುರುಳ ಬಾಯ್ಕೆಟ್ ಪಟೆಯಾಗಿರೆ ಕಳದೊಳಿಜೆಯಲಿರ್ದುವು ನೆರೆದು ನಿಶಾಚರರ ತಕ್ಕಿನೆಕ್ಕತುಳಂಗಳ್ (ಕಾವ್ಯಾವ. ೬೬). **ಶುಭಂಕರಕತ್ತಿಗೆ** : ಕಾಳರಕ್ಕಸಿ ಶುಭಂಕರಕತ್ತಿಗೆಯಿಂದ ಗಂಟಲಂ ಕೊಯ್ದು (ಅರ್ಧನೇ. ೫-೩೯). [ಶುಭಂಕರ + ಕತ್ತಿಗೆ]

**ಶುಭಕರ** (ಗು). ೧. ಮಂಗಳಕರವಾದ; ಕಲ್ಯಾಣವನ್ನುಂಟುಮಾಡುವ. (ನಾ). ೨. ಮಂಗಳವನ್ನುಂಟುಮಾಡುವುದು; ಕಲ್ಯಾಣವನ್ನುಂಟುಮಾಡುವಂಥದು: ಊರೂರೊಳತಿಶುಭಕರವೆನಲು ಸಿರಿಯಾಳಚರಿತೆಯನೊರೆದೊರೆದು ವಿರಚಿಪರು ಭಕ್ತಸಭಾಂತರಂಗಳೊಳು (ಬಸವಪು. ೨೫-೨೦). [ಸಂ.]

**ಶುಭಕರಣ** (ನಾ). [ಜ್ಯೋತಿ] ಒಳ್ಳೆಯ ಸಮಯ; ಶುಭಯೋಗ : ಇಂದಿನ ಕರಣ ಶುಭಕರಣ ಇಂದಿನ ಯೋಗ ಶುಭಯೋಗ (ಪುರಂದ. ೫-೧೬೧-೧೪೩); ಶುಭಕರಣದಿಂ ಕಾರ್ಯಸಿದ್ಧಿಯು ಶುಭಕರಗಳಹವಾಗಿ . . . ತಿಥಿವಾರಗಳನಾರೈದ ನಂತರದಿ (ಗಗತಾ. ೪-೭೦). [ಸಂ.]

**ಶುಭಕರ್ಮ** (ನಾ). ೧. ಮದುವೆ, ಮುಂಜಿ ಮುಂತಾದ ಮಂಗಳಕಾರ್ಯ. ೨. [ವೀಶೈ] ಕರ್ಮಚತುಷ್ಟಯಗಳಲ್ಲಿ ಒಂದು; ಸ್ವರ್ಗಪ್ರಾಪ್ತಿಯನ್ನುಂಟು ಮಾಡುವ ಕರ್ಮ : ಕರ್ಮವು ಅಶುಭಕರ್ಮ, ಶುಭಕರ್ಮ, ಜ್ಞಾನಕರ್ಮ, ಪ್ರಸಾದಕರ್ಮವೆಂದು ನಾಲ್ಕು ತೆರನಾಗಿರುವುದು. ಅಶುಭಕರ್ಮದಿಂದ ನರಕವೂ, ಶುಭಕರ್ಮದಿಂದ ಸ್ವರ್ಗವೂ ಲಭಿಸುವುವು (ಶಿವಾಸೂ. ೧೩೧). [ಸಂ. ಶುಭಕರ್ಮನ್]

**ಶುಭಕಾಮನೆ** (ನಾ). ಮಂಗಳಕರವಾದ ಅಪೇಕ್ಷೆ ; ಶುಭಾಶಯ : ಇಬ್ಬರು ಮಹಾವಿಭೂತಿಗಳ ಶುಭಕಾಮನೆ ಮಹಾರಾಜರನ್ನು ವಜ್ರಕೋಟೆಯಂತೆ ಸುತ್ತುಗಟ್ಟಿದೆ (ರೂಪೀಅಪಾ. ೫೧); ಆ ಪತ್ರದಲ್ಲಿ ಅಶೋಕನು ತನ್ನ ವಿವಾಹವಾಗುವ ಅಭಿಪ್ರಾಯವನ್ನು ಸೂಚಿಸಿ ಅವಳಿಂದ ಶುಭಕಾಮನೆಯನ್ನು ಕೇಳಿದ್ದನು (ಮೃಜಲ. ೧೬೭).
[ಸಂ. ಶುಭಕಾಮನಾ]

**ಶುಭಕಾರ್ಯ** (ನಾ). ಶುಭ ಕರ್ಮ ; ಒಳ್ಳೆಯ ಕೆಲಸ : ಶೈವಸಮಯ ಸಮುದ್ಧರಣ ವಿದ್ಯಾವಿಶಾರದನತಿವಿಭವದಿಂ ಜೀವಿಸುತ ಶುಭಕಾರ್ಯಮಂ ಮಾಡುತ್ತಲಿ (ಬಸವಪು. ೭೦-೧) ; ಶುಭಕಾರ್ಯಗಳಿಗೆ ಹೋಗುವಾಗ ಉಡುವುದಕ್ಕೆ ಉಪಯೋಗವಾಗುವಷ್ಟು ಉತ್ತಮವಾದ ಸೀರೆ ಅದು (ಪದ್ಮಸ. ೨೧೨). [ಸಂ.]

**ಶುಭಕೃತು** (ನಾ). ಅರವತ್ತುಸಂವತ್ಸರಗಳಲ್ಲಿ ಮೂವತ್ತಾರನೆಯದು : ಆ ವರ್ಷವೇ ಪ್ರಭವ . . . ಶುಭಕೃತು ಶೋಭನಕೃತು ಕ್ರೋಧಿ ವಿಶ್ವಾವಸು . . . ಅಕ್ಷಯವೆಂದಱುವತ್ತುತೆಱನಾಗಿಹುದು (ವಿವೇಕ. ೩೬೩). [ಸಂ. ಶುಭಕೃತ್]

**ಶುಭಗಳಿಗೆ** (ನಾ). ಮಂಗಳಕರವಾದ ಸಮಯ; ಒಳ್ಳೆಯ ಕಾಲ : ಯಾವ ಕೆಲಸವನ್ನೇ ಆಗಲಿ ಶುಭಗಳಿಗೆಯಲ್ಲಿ ಪ್ರಾರಂಭಿಸಬೇಕು (ರೂಢಿ).
[ಶುಭ + ಗಳಿಗೆ₁ (< ಗಟಿಗೆ)]

**ಶುಭಗೇಡಿ** (ನಾ). ಅಮಂಗಳವನ್ನು ನುಡಿಯುವವನು : ಶುಭ ನುಡಿಯೋ ಶುಭಗೇಡಿ ಅಂದರೆ ಹಂದರದವರಲ್ಲ ಬೋಳಿಯರು ಅಂದ (ಗಾದೆ). [ಶುಭ + ಕೇಡಿ₁]

**ಶುಭಚರಿತ** (ನಾ). ಪರಿಶುದ್ಧವಾದ ನಡವಳಿಕೆಯುಳ್ಳವನು : ಉಭಯಕುಲವಿಶುದ್ಧರ್ ನ್ಯಾಯವಂತರ್ . . . ಮುನ್ನ ನಿಮ್ಮಜ್ಜಪಜ್ಜರ್ ಶುಭಚರಿತ ತದೀಯಾನೂನ ವಂಶಾಧಿಪತ್ಯ ಪ್ರಭವನಯದಱಿಂದೀ ದುರ್ಯಶಕ್ಕೆಂತು ನೋಂತೈ (ಶಾಂತಿಪು. ೩-೭೬).
[ಸಂ.]

**ಶುಭಚರಿತೆ** (ನಾ). ಪರಿಶುದ್ಧವಾದ ನಡವಳಿಕೆಯುಳ್ಳವಳು : ಪರಮಾನಂದರಸಾರ್ಣವ ಪರಿಸರವೃಕ್ಷಮೋ ಕೊನರ್ತುದೆನೆ ವಸುದೇವಂ ಧರಿಯಿಸಿ ಪುಳಕಮನಾ ಶುಭಚರಿತೆಗೆ ತತ್ಪಲಮನಱಿಪಲೆಂದಿಂತೆಂದಂ (ಜಗವಿ. ೨-೮೨). [ಸಂ. ಶುಭಚರಿತಾ]

**ಶುಭತಿಥಿ** (ನಾ). ಮಂಗಳಕರವಾದ ದಿವಸ : ಶುಭತಿಥಿ ಶುಭನಕ್ಷತ್ರ ಶುಭವಾರಂ ಶುಭಮೂಹೂರ್ತಮೆನೆ ಗಣಕನಿಳಾಪ್ರಭುವೊಗೆದಂ (ಪಂಪಭಾ. ೧-೧೨೭).
[ಸಂ.]

**ಶುಭದ** (ಗು). ೧. ಮಂಗಳಕರವಾದ; ಶುಭಕರವಾದ : ಸಿತಪಕ್ಷದ ಪಂಚಮಿ ದಿನಪತಿವಾರಂ ಶುಭದ ಮೂಲನಕ್ಷತ್ರದೊಳನ್ವಿತಮಾಗೆ ನೆಗಳ್ದುದೀ ಮತ್ಕೃತಿ ಜಗದೊಳ್ (ಆದಿಪು. ೧೬-೭೭). (ನಾ). ೨. ಒಳ್ಳೆಯ ಫಲವನ್ನು ಕೊಡುವಂಥದು: ದಿನಪಾದಿ ಗ್ರಹಮಾತ್ಮೋಚ್ಚನಿಳಯದಿಂ ದ್ವಾದಶಾಲಯಂಗಳ ನವಸಂಖ್ಯೆ ನವಾಂಶಕ ದೊಳು ತಾಂ ನೆಲಸಿ ನಿಂದುದುಚ್ಚಾಭಿಲಾಷಿ ತದ್ವೆಸೆ ಶುಭದಂ (ಜಾತತಿ. ೯-೪); ಅತಿಶುಭದಂ ಪದ್ಮಜನ ಧವಳಮಂಗಳವೇಷಂ (ಪುಷ್ಪಪು. ೪-೮೨). [ಸಂ.]

**ಶುಭದಾಯಕ** (ನಾ). ೧. ಸಂತೋಷವನ್ನುಂಟುಮಾಡುವಂಥದು. ೨. ಸಂತೋಷ ವನ್ನುಂಟುಮಾಡುವವನು. [ಸಂ.]

**ಶುಭದಾಯಕಿ** (ನಾ). ೧. ಸಂತೋಷವನ್ನುಂಟುಮಾಡುವವಳು. ೨. ಮಂಗಳವನ್ನುಂಟುಮಾಡುವವಳು ; ಕಲ್ಯಾಣವನ್ನುಂಟುಮಾಡುವವಳು: ಪರಮಮಂಗಳಮೂರ್ತಿ ಶುಭದಾಯಕಿಯೆ ಕಲ್ಯಾಣಿ . . . ಕೊಡು ಕಾರುಣ್ಯದಿಂ ದೆಮಗಧಿಕಸಂಪದವ (ತೊರರಾ. ೧-೧-೪). [< ಸಂ. ಶುಭದಾಯಿಕಾ]

**ಶುಭದಿನ** (ನಾ). ಒಳ್ಳೆಯ ದಿವಸ ; ಮಂಗಳಕರವಾದ ದಿವಸ : ಶುಭದಿನ ನಕ್ಷತ್ರಮುಹೂರ್ತದೊಳ್ . . . ಜಿನೇಂದ್ರಮಂದಿರಂಗಳಂ ನಿರ್ಮಿಸಿ (ಆದಿಪು. ೮-೭೩ ವ) ; ತನ್ನ ಮಳಮಂ ಕಿಡಿಸಲ್ ಪುಟ್ಟಿದುದೆನೆ ಶುಭದಿನದೊಳ್ ಪುಟ್ಟಿದುದಖಿಳಾವಬೋಧಿ ಕೇವಳಬೋಧಂ (ಶಾಂತಿಪು. ೯-೬೮) ; ಶುಭದಿನಮುಹೂರ್ತದೊಳ್ ನಿಜವಿಭವಂ ಕೈಗಣ್ಮೆ . . . ಹೇಮಪ್ರಭೆಯಂ ಗುಣಿ ರತ್ನದತ್ತನಿತ್ತನಲಂಪಿಂ (ದಶಕು. ೨-೮೨). [ಸಂ.]

**ಶುಭಧ್ಯಾನ** (ನಾ). ಮಂಗಳಕರವಾದ ಚಿಂತನೆ, — ಮನನ : ಚತುರ್ಮುಖ ಪ್ರತಿಮಾಯೋಗದೊಳ್ ನಿಂದು ಶುಭಧ್ಯಾನಮನಪ್ಪುಕೆಯ್ದು ಮಹರ್ಷಿಯರಂ ಕಂಡೆಯ್ದೆವರ್ಪುದುಂ (ಪಂರಾಮಾ. ೮-೪೬ ವ). [ಸಂ.]

**ಶುಭಪಂತುವರಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪಲ್ಲವಿ ಶೇಷಯ್ಯರ್ ಅವರು ನಾದನಾಮಕ್ರಿಯಾ . . . ಶುಭಪಂತುವರಾಳಿ, ಪೂರ್ವಕಲ್ಯಾಣಿ ಮತ್ತು ಷಣ್ಮುಖಪ್ರಿಯ ರಾಗಗಳಲ್ಲಿ ರಚಿಸಿರುವ ಕೃತಿಗಳು ಮನಮೋಹಕವಾಗಿವೆ (ಸಂಗೀತ. ೪೮). [ಸಂ. ಶುಭಪಂತುವರಾಲೀ]

**ಶುಭಮುಹೂರ್ತ** (ನಾ). ಮಂಗಳಕರವಾದ ಗಳಿಗೆ; ಒಳ್ಳೆಯ ಸಮಯ : ನೈಮಿತ್ತಿಕನಂ ಬರಿಸಿ ತದಾತನಮುಮತ್ಕಂಠನೂತನಮುಮಪ್ಪುದೊಂದು ಲಗ್ನಮಂ ಪೇಟಿಮೆಂಬುದುಂ ಆತಂ ತನ್ಮುಹೂರ್ತಮೆ ಶುಭಮುಹೂರ್ತಮೆಂಬುದುಂ (ಶಾಂತಿಪು. ೫-೩೭ ವ). [ಸಂ.]

**ಶುಭಯೋಗ** (ನಾ). ೧. = ಶುಭಧ್ಯಾನ : ಶುಭಯೋಗಭಾಗಿಯೋಗ ಪ್ರಭುವಧ ಯಿಂದಾದ ಪಾಪದಿಂ ದುಃಖದವಪ್ರಭವಾಟವಿಯೆನಿಪ ತಮಃಪ್ರಭೆಯೊಳ್ ಜನಿಯಿಸಿ (ಪಾರ್ಶ್ವಪು. ೧೨-೭೬). ೨. ಒಳ್ಳೆಯ ಸಮಯ : ಶುಭಯೋಗದಲಿ ರೋಗ ಹರ (ಗಗತಾ. ೪-೨೧). ೩. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಒಂದು; ಮಂಗಳವನ್ನುಂಟುಮಾಡುವ ಯೋಗ : ಶುಭಯೋಗಕ್ಕೆ ರವಿ ೪೨ ಗಳಿಗೆ ಮೇಲ ತ್ಯಾಜ್ಯ (ಭಾಸ್ಕರ. ೭೦). [ಸಂ.]

**ಶುಭಲಕ್ಷಣ** (ನಾ). ಮಂಗಳಕರವಾದ ಚಿಹ್ನೆ, — ಗುರುತು : ಸಂಗತ ದಶಧ್ರುವ ಕ್ಷೇತ್ರಂಗಳ್ ಶುಭಲಕ್ಷಣಂಗಳವ್ಯತೋದ್ಭವವಾಹಂಗಳಜಮ್ಮಗ್ಗುಳೂಕಭವಂಗಳ್ ಪದಿನೆಂಟುಕೋಟಿ ಜಾತ್ಯಶ್ವಂಗಳ್ (ಶಾಂತಿಪು. ೧೦-೧೨೮); ಶುಭಲಕ್ಷಣಾಶ್ವಯುಕ್ತಮಂ . . . ಪ್ರಭಾವಿರಾಜಿತಮನೇಱಿದಂ ಪೊಂದೇರಂ (ಜಗಪು. ೫-೭೭). [ಸಂ.]

**ಶುಭಲಕ್ಷಣೆ** (ನಾ). ಮಂಗಳಕರವಾದ ಲಕ್ಷಣವನ್ನುಳ್ಳವಳು : ಶುಭಲಕ್ಷಣೆ ರತ್ನತ್ರಯವಿಭೂಷಣಾಲಂಕೃತಾಂಗಿಯಾಗಿ . . . ತಪಃಪ್ರಭಾವದಿಂ ನೆಗಟ್ಟಳ್ (ಸುಕುಮಾ. ೯-೬). [ಸಂ. ಶುಭಲಕ್ಷಣಾ]

**ಶುಭಲಗ್ನ** (ನಾ). = ಶುಭಮುಹೂರ್ತ : ಎಮ್ಮವರು ಬೆಸಗೊಂಡರೆ ಶುಭ ಲಗ್ನವೆನ್ನಿರಯ್ಯಾ (ಬಸವ. ೮೩). [ಸಂ.]

**ಶುಭಲೇಶ್ಯೆ** (ನಾ). [ಜೈನ] ಕರ್ಮಲೇಪದಿಂದ ಜೀವನಿಗೆ ಉಂಟಾಗುವ ಮಂಗಳಕರವಾದ ಬಣ್ಣ ; IP ಪೀತ, ಪದ್ಮ ಮತ್ತು ಶುಕ್ಲಗಳೆಂಬ ಮೂರು ಲೇಶ್ಯೆಗಳು: ಪೀತ, ಪದ್ಮ, ಶುಕ್ಲಲೇಶ್ಯೆ — ಶುಭಲೇಶ್ಯೆಯುಳ್ಳವರು ಏಳನೆಯ ಗುಣಸ್ಥಾನದವರೆಗೂ ಮುಂದರಿಯುವರು (ಜೈನಪ. ೩೦೨). 'ಅಶುಭಲೇಶ್ಯೆ' ಪರಾ. [ಸಂ. ಶುಭಲೇಶ್ಯಾ]

**ಶುಭವಾರ್ತೆ** (ನಾ). ಒಳ್ಳೆಯ ಸುದ್ದಿ, — ಸಮಾಚಾರ : ಸುಗ್ಗಿಯಲ್ಲಿ ಮದುವೆಯೆಂದು ನಿಶ್ಚಯಮಾಡಿದರು. ಈ ಶುಭವಾರ್ತೆಯನ್ನು ಕೇಳಿ ಮೆಚ್ಚಿ ಬಳಗದವರೆಲ್ಲ ದಿನವನ್ನು ಕಾಯುತ್ತಿದ್ದರು (ಕಾಲೂರ. ೫ ಕಥಾಸಾರ). [ಸಂ. ಶುಭವಾರ್ತಾ]

**ಶುಭವೃತ್ತ** (ನಾ). ಒಳ್ಳೆಯ ನಡವಳಿಕೆಯುಳ್ಳವನು; ಸಜ್ಜನ : ಧರ್ಮಚಿತ್ತನೆಂಬುದು ಶುಭವೃತ್ತನೆಂಬುದು ಮಹೋದಯನೆಂಬುದು ದೇವಭಕ್ತನೆಂಬುದು ಪತಿಭಕ್ತನೆಂಬುದು ಜಗದ್ವಳಯಂ ಪಡೆವಳ್ಳತ್ಮೆಲನಂ (ಅಜಿಪು. ೧೨-೨೫). [ಸಂ.]

**ಶುಭಶಕುನ** (ನಾ). ಮಂಗಳಕರವಾದ ಸೂಚನೆ, — ನಿಮಿತ್ತ : ಶುಭಕಾರ್ಯಗಳಿಗೆ ಹೊರಡುವ ಮುನ್ನ ಶುಭಶಕುನವನ್ನು ನಿರೀಕ್ಷಿಸುತ್ತಾರೆ (ರೂಢಿ). [ಸಂ.]

**ಶುಭಸೂಚನೆ** (ನಾ). = ಶುಭಶಕುನ : ಪ್ರಾಣಕ್ಕೆ ಪ್ರಾಣವೊಂದಾಗಿ ಶುಭಸೂಚನೆ ಯೊಂದಾಗಿರದ ನಚ್ಚು ಮಚ್ಚು ಪಾರವೈದುವುದೆ (ಬಸವ. ೬೯೦); ಶುಭಸೂಚನೆಗಳನಾ ಹಯಮಭಿನಯಿಸುವುದಂ ಸಮಂತಭೀಕ್ಷಿಸುತಾಗಳ್ ಸಭೆ ಜಯಜಯ ಎನುತಿರೆ (ಕುಸುಮಾ. ೮-೭೦). [ಸಂ. ಶುಭಸೂಚನಾ]

**ಶುಭಸ್ವೀಕಾರ** (ನಾ). ಮೃತನ ಶವಸಂಸ್ಕಾರವಾದ ಹದಿಮೂರನೆಯ ದಿನ (ವೈಕುಂಠಸಮಾರಾಧನೆಯ ಮರುದಿನ) ಮೃತನ ಮನೆಯವರು ಶುಭವಾದುದನ್ನು ಸ್ವೀಕರಿಸುವ ಗುರುತಾಗಿ ಆಚರಿಸುವ ಒಂದು ವಿಧಿ : ದಾಸರಿಗೆ ಬಹಿಷ್ಕಾರಪತ್ರವನ್ನು ತರಿಸಿ ಶುಭಸ್ವೀಕಾರದ ದಿವಸ ಅದನ್ನು ಓದಿಸಿದರು (ಕಥವಿ. ೪೧೫). [ಸಂ.]

**ಶುಭಾಂಗಿ** (ನಾ). ಸುಂದರವಾದ ಅವಯವಗಳುಳ್ಳವಳು; ಚೆಲುವೆ: ಶುಭಾಂಗಿ ಸರ್ವಮಂಗಳೆ ರತಿಕೋಟಿಯಂ ಪಳಿದು ರಂಜಿಸಿದಳ್ ಪದವೆತ್ತ ಚೆಲ್ವಿನಿಂ (ಶಬಶಂ. ೧-೭೭). [ಸಂ. ಶುಭಾಂಗೀ]

**ಶುಭಾವಹ** (ಗು). ಮಂಗಳವನ್ನುಂಟುಮಾಡುವ; ಒಳ್ಳೆಯದನ್ನು ಮಾಡುವ. [ಸಂ.]

**ಶುಭಾಶಯ** (ನಾ). ಒಳ್ಳೆಯದಾಗಲೆಂಬ ಹಾರೈಕೆ : ಮಂಗಳವೆನ್ನಿ ರಕ್ಷಿಸಿ ನಿಮ್ಮ ಶುಭಾಶಯ ಸಂಜೀವಿನಿಯ ನೆರವಣುಗನನೋವಿ (ಇಂಚಾಪ. ೨೪೪-೧೧೦). [ಸಂ.]

**ಶುಭೇತರ** (ನಾ). ಕೇಡುಕು; ಅಮಂಗಳ : ನಿನ್ನಸಿಮುಖದಿಂ ದಾವಣಗುಱಿಯಂ ತಱಿದೊಡೆ ದೇವಿ ಶುಭೇತರವಿನಾಶಮಂ ದಯೆಗೆಯ್ಗುಂ (ಯಶೋಚ. ೩-೧೩). [ಸಂ.]

**ಶುಭೇದಾರ** 'ಸುಬೇದಾರ' ನೋ.

**ಶುಭೇದಾರು** 'ಸುಬೇದಾರ' ನೋ.

**ಶುಭೋದಯ** (ನಾ). ಮಂಗಳಕರವಾದುದು; ಶುಭವಾದುದು : ಹದುಳದಿಂದೆಚೆ ಧಾರೆಯನು ಸಂಪದದ ಮುಟುತಿಯ ಪದವನೊಲುವಡೆ ಇದು ಶುಭೋದಯ (ಕುಪ್ವಾಕ. ೨೭-೧೭); ಕಾರುಣ್ಯದಿಂ ಮಾಳ್ಪುದು ಶುಭೋದಯವನೆನಗೆ (ಜೈಮಿಭಾ. ೨-೨೪). [ಸಂ.]

**ಶುಭೋರ** (ನಾ). ೧. ಸುಂದರವಾದ ವಕ್ಷಸ್ಥಳ. ೨. ಮನೋಹರವಾದ ವಕ್ಷಸ್ಥಳವುಳ್ಳವನು : ಅವಂ ಕಂಡಂ . . . ವಿಲಸಿತಶ್ರೀವತ್ಸಕೌಸ್ತುಭಶುಭೋರನಂ (ಜೈಮಿಭಾ. ೫-೬). [ಸಂ. ಶುಭೋರಸ್]

**ಶುಭ್ರ** (ಗು). ೧. ಹೊಳೆಯುವ ; ಕಾಂತಿಯುತವಾದ. ೨. ಬಿಳುಪಾದ ; ಬಿಳಿಯ: ಕನಕಶ್ಮೆಲದೆ ಮೂಡಿ ಶುಭ್ರಮೇಘವ ಪೊಕ್ಕನಿಮಿಷಚಾಪದಂತೆ . . . ವಿನುತ ತೋರಣಗಳೊಪ್ಪಿದುವು (ಕಂಸವಿ. ೬-೩೯). ೩. ನಿರ್ಮಲವಾದ; ಸ್ವಚ್ಛವಾದ. (ನಾ). ೪. ಬಿಳಿಯ ಬಣ್ಣ; ಬಿಳುಪು : ಪೊಡವಿಪ ಪುರಲಕ್ಷ್ಮಿಗೆ . . . ಎತ್ತಿದಾ ಬೆಳ್ಗೊಡೆಗಳ ಸಡಗರದಂತೆ ಶುಭ್ರದ ಸಾಲುಸೆಜ್ಜೆಗಳ್ಕಡುಚಲುವಿಕೆಯ ಬೀಱಿದುವು (ಕಂಸವಿ. ೬-೩೬). ೫. ನಿರ್ಮಲತೆ; ಸ್ವಚ್ಛತೆ. [ಸಂ.]

**ಶುಭ್ರಕರ** (ನಾ). ೧. ಬೆಳಕಿನ ಕಿರಣ. ೨. ಬೆಳಕಿನ ಕಿರಣಗಳುಳ್ಳವನು; ಚಂದ್ರ: ಶುಭ್ರಕರಶಕಲಶೋಭಿತ ಗುರುಜಟಾಮೌಳಿ . . . ಪೋಷಿಸೆಮ್ಮ (ನವಮೋ. ೧೦-೧). [ಸಂ.]

**ಶುಭ್ರಕರಿ** (ನಾ). ೧. ಬಿಳಿಯ ಬಣ್ಣದ ಆನೆ; ಐರಾವತ. ೨. ಐರಾವತವನ್ನು ಹೊಂದಿರುವವನು; ಇಂದ್ರ : "ಗಿರಿ ನಮುಚಿ ಬಲವೃತ್ರ ಜಂಭರಿಪುವೆನೆ ಶುಭ್ರಕರಿ ಪೂರ್ವದಿಗಧಿಪ ದಿವತ್ರಿದಿವ ಶಚಿಪಾಲನೆಂದರೆ ಶಕ್ರನಕ್ಕುಂ" (ಮಂಗರಾ. ೧೨-೨). [ಸಂ. ಶುಭ್ರಕರಿನ್]

**ಶುಭ್ರಚ್ಛದ** (ನಾ). ಬಿಳಿಯ ಬಣ್ಣದ ಪಕ್ಷಿ; ಹಂಸ : "ಕಾದಂಬಕಂ ಮನಸೌಕಸಂ ಶುಭ್ರಚ್ಛದಂ ಮರಾಳಂ" (ಮಂಗರಾ. ೫೧-೭). [ಸಂ.]

**ಶುಭ್ರವಣ್ಣ** (ನಾ). ಬಿಳಿಯ ಬಣ್ಣ; ಬಿಳುಪು : ಸಣ್ಣಸೇವಗೆ ಹಾಲುಂಡೆ ಜೇನ್ಗೂಡ ಶುಭ್ರವಣ್ಣದುದ್ದಿನ ಸವಿಗಡುಬು . . . ಭೂಪಗೆ ಮುದ್ದುವೆಣ್ಣುಗಳೆಡೆಮಾಡಿದರು (ಕಂನವಿ. ೮-೮೭). [< ಸಂ. ಶುಭ್ರವರ್ಣ]

**ಶುಭ್ರವಸನ** (ನಾ). ಬಿಳಿಯ ಸೀರೆ : ಮಿಸುಪ ಸಂಪಗೆಗಾವಿ ಸಂಧ್ಯಾವಳಿ ಚೆಲ್ವ ಪೊಸಶುಭ್ರವಸನವನುಟ್ಟು (ಕಂನವಿ. ೨೧-೧೮). [ಸಂ.]

**ಶುಭ್ರವಸ್ತ್ರ** (ನಾ). ನಿರ್ಮಲವಾದ ಬಟ್ಟೆ : ಶುಭ್ರವಸ್ತ್ರಾಸನದಿ ಕಾಂತಿಯು (ಗಗತಾ. ೪-೨೩). [ಸಂ.]

**ಶುಭ್ರವಾಹನ** (ನಾ). ೧. ಬಿಳಿಯ ಬಣ್ಣದ ಕುದುರೆ. ೨. ಬಿಳಿಯ ಕುದುರೆಗಳನ್ನು ವಾಹನವಾಗಿ ಉಳ್ಳವನು; ಅರ್ಜುನ : ಶುಭ್ರವಾಹನ ಮಯೂರಧ್ವಜ ಪ್ರದ್ಯುಮ್ನ ಬಭ್ರುವಾಹನ ಹಂಸಕೇತು ನೃಪರಿವರ್ಕೈವರಭ್ರವಾಹನನಂತೆ ಸರ್ವತ್ರಗಮನದ ವರೂಥದ ಮಹಾವೀರರು (ಜೈಮಿಭಾ. ೩೨-೨೪). [ಸಂ.]

**ಶುಭ್ರವಿಡಿ** (ಕ್ರಿ). ಶುಭ್ರತೆಯನ್ನು ಹೊಂದು; ನಿರ್ಮಲವಾಗು : ಆ ಪುರದತುಳ ಭಾಗ್ಯಕೀರ್ತಿಯ ನಗುತಾಗ ಗೋಪತಿಗಲುಹುವಂದದಲಿ ತಾ ಪಿರಿದಾಗಿ ಬಾಗಿಲ ಸಜ್ಜೆಯಭ್ರವ ವ್ಯಾಪಿಸಿದುವು ಶುಭ್ರವಿಡಿದು (ಕಂನವಿ. ೬-೧೩). [ಶುಭ್ರ + ಪಿಡಿ₁]

**ಶುಭ್ರಾಂಶು** (ನಾ). ೧. ಬಿಳುಪಾದ ಕಿರಣಗಳುಳ್ಳವನು; ಚಂದ್ರ : ಶಿವಸುಜ್ಞಾನವೆ ಯೋಗಿಗಳ್ಗೆ ನಯನಂ ಚಂಡಾಂಶುಶುಭ್ರಾಂಶುಗಳ್ ಭವನೇತ್ರಂ (ಸೋಮೇಶ. ೮೬). ೨. ಕರ್ಪೂರ. [ಸಂ.]

**ಶುಭ್ರಾತಪತ್ರ** (ನಾ). ಬಿಳಿಯ ಬಣ್ಣದ ಕೊಡೆ; ಶ್ವೇತಚ್ಛತ್ರ : ಸ್ಮರನೃಪವರ ಶುಭ್ರಾತಪತ್ರಂ ವಿಯನ್ನೀರಜನಿ ಮಧ್ಯೋಲ್ಲಸತ್ಪಾಂಡುರತರಶತಪತ್ರಂ ಬೆಡಂಗಾಯ್ತು (ಚಂದ್ರಪು. ೮-೩೪). [ಸಂ.]

**ಶುಭ್ರಾಭ್ರ** (ನಾ). ಬಿಳಿಯ ಬಣ್ಣದ ಮೋಡ : ರಜತಗಿರಿಶಿಖರಮಂ ಸಾರ್ದ ಶುಭ್ರಾಭ್ರದೊಳ್ಮೂಡಿದಮರೇಂದ್ರಚಾಪದಂತೆ . . . ಸೀಗುರಿ ಚೌರಿಗಳ ಸಾಲ್ಗಳೆಸೆದುವು (ಜೈಮಿಭಾ. ೬-೧೧); ಹಬೆಯಾಡಿಸುತ ಶುಭ್ರಾಭ್ರಚ್ಛವಿ ಮೋದಕ ಬರಲು ಮುದವಾಂತಟ್ಟವಳಂ ಹರಸುವೊಲು (ಗಣೇಶ. ೧೩-೩೩೧). [ಸಂ.]

**ಶುಭ್ರೋಪಲ** (ನಾ). ಬಿಳಿಯ ಕಲ್ಲು ; ಬಳಪ : "ಬಳಪಮದು ಶುಭ್ರೋಪಲಂ" (ಮಂಗರಾ. ೧೦೭-೧೫). [ಸಂ.]

**ಶುರು, ಷುರು, ಸುರು, ಸುರುವು₂** (ನಾ). ಮೊದಲು; ಪ್ರಾರಂಭ : ಈಗ ಯಾವ ವಿಚಾರಕ್ಕೆ ಜಗಳ ಶುರುವಾಗಿದೆ ? (ದೂಬಟ್ಟ. ೭೭); ಮೇಷ್ಟ್ರುಗಳು ಕಾಟಕೊಡಲು ಈಗಾಗಲೇ ಶುರುಮಾಡಿರುತ್ತಾರೆ (ರೂಪಸಂ. ೩೫). **ಷುರು** : ಆ ನೌಕರಿಗೆ ಷುರುವಿನಲ್ಲಿ ಲಗತ್ತಾಗಿದ್ದ ಕೆಲಸಗಳು ಈಗ ಮಾಡಲ್ಪಡುತ್ತಿರಲಿ (ಗ್ರಾಮಾಕ. ೮೪); ನೀವು ಹೊಗಳಲು ಷುರು ಮಾಡಿದರೆ, ಅದಕ್ಕೆ ಕೊನೆಯೆ ಇರುವುದಿಲ್ಲ (ಶೇಪ್ರಶ್ನ. ೩೮). **ಸುರು** : ಏಂಟಾಯಿತು, ಇನ್ನು ದಿನದ ಕೆಲಸ ಸುರುವಾಗಬೇಕು (ಅನ್ನ. ೧೯೪); ಶಿಶುವಿಗೆ ಗರ್ಭದಲ್ಲಿ ಶ್ವಾಸ ಸುರುವಾದಂದಿನಿಂದ ಆ ಜೀವ ಜನ್ಮಜನ್ಮಾಂತರಗಳನ್ನು ಹೊಂದಿ ಕೊನೆಗೆ . . . ಮುಕ್ತಿಯಲ್ಲೂ ಸಹ ವಾಯುದೇವರ ಸಂಬಂಧ ಕಡಿಯುವಂತಿಲ್ಲ (ಜಗದಾ. ೨೭೫). **ಸುರುವು₂** : ನಾವು ಅಲ್ಲಿಗೆ ಹೋಗುವಷ್ಟರಲ್ಲಿ ನಾಟಕ ಸುರುವು ಆಗಿಬಿಟ್ಟಿತು (ರೂಢಿ).

**ಷುರೂಹುಕುಮು** = ಮೊದಲು ಕೊಟ್ಟ ಅಪ್ಪಣೆ : ಆ ಅಧೀಸರವರೇ ತಾವು ಇನ್ನೊಂದು ಹುದ್ದೆಯಲ್ಲಿದ್ದಾಗ್ಗೆ ಸದರೀ ಅಪೀಲಿಗೆ ಕಾರಣವಾದ ಷುರೂಹುಕುಮನ್ನು ಕೊಟ್ಟಿದ್ದ ಪಕ್ಷದಲ್ಲಿ (ಗ್ರಾಮಾಕ. ೯೮).

[← ಅರ. ಶುರೂ, ಶುರೂಅ; ಹಿಂ. ಶುರೂ; ಮರಾ. ಶುರೂ, ಸುರೂ]

**ಶುರುಳಮುದು** (ನಾ). ವೀಳೆಯದ ಎಲೆ ಮತ್ತು ಅಡಿಕೆ; ತಾಂಬೂಲ : ಅಂತು ತಿರುಪಂಣ್ಣಾರಕೆ ಗ ೧೧೪೫ಕ್ಕಂ ಶುರುಳಮುದು ಗ ೩೮೦ ಅನ್ನು ನಿತ್ಯಗಟ್ಟಳೆ ಆರೋಗಣೆ ಗ ೪೧೨ ವರಹ ದೀಕ್ಷೆಯ ಕಟ್ಟಳೆ (ಎಕ. XIV, ಶ್ರೀರಂಗ. ೨೫೮-೧೦; 1544). 'ಚುರುಳೊಮುದು' ಪರಾ. [← ತಮಿ. ಚುರುಳಮುತು]

**ಶುಲ್ಕ** (ನಾ). ೧. ಸುಂಕ; ತೆರಿಗೆ : ಶುಲ್ಕ ಮತ್ತು ದಂಡ. ಸುಂಕಗಳು ಜನರಿಗೆ ಉಪದ್ರವಪಡಿಸದಂತೆ ಅತಿಸೂಕ್ಷ್ಮವಾದ ವಿಧಿಗಳು ಕಲ್ಪಿಸಲ್ಪಟ್ಟಿದ್ದವು (ಭಾರದ. ೩೫೪). ೨. ಕನ್ಯಾಶುಲ್ಕ; ತೆರ. ೩. ವಧುವಿಗೆ ತಂದೆ, ಗಂಡ ಮುಂತಾದವರು ಕೊಡುವ ಧನ ; ಸ್ತ್ರೀಧನ : "ಸ್ತ್ರೀದ್ರವ್ಯದೊಳು ಶುಲ್ಕಮೆಂಬಾಭಿಧಾನಮಕ್ಕುಂ" (ಮಂಗರಾ. ೧೪೩-೨೦). ೪. ವೇಶ್ಯೆಗೆ ತೆರುವ ಹಣ; ಒತ್ತೆ : ಶಾಲಾವತಿಯೊಡನೆ ಒಂದು ರಾತ್ರಿ ಕಳೆಯುವುದಕ್ಕೆ ಕೊಡಬೇಕಾದ ಶುಲ್ಕವನ್ನು ಎರಡುಸಾವಿರ ಚಿನ್ನದ ನಾಣ್ಯಗಳೆಂದು ನಿಗದಿಮಾಡಿದನು (ಹತ್ತುಮ. ೧೧೦). ೫. ವ್ಯಾಪಾರಿಗೆ ದೊರೆಯುವ ಶೇಕಡ ರುಸುಮು; ದಳ್ಳಾಳಿ ಹಣ : ಅವನ ಶುಲ್ಕ ಎಲ್ಲರಿಗೂ ತಿಳಿದ ಹಾಗೆ ಮನೆಯ ಒಟ್ಟು ಬೆಲೆಯ ಮೇಲೆ ಶೇಕಡಾ ೧೧೮ರಷ್ಟು (ಯೋಧಪು. ೩೪). ೬. ಶಿಕ್ಷಣಕ್ಕಾಗಿ ವಿದ್ಯಾರ್ಥಿಯಿಂದ ಪಡೆಯುವ ಹಣ; ಶಿಕ್ಷಣವನ್ನು ಪಡೆಯುವುದಕ್ಕಾಗಿ ವಿದ್ಯಾರ್ಥಿಯು ಉಪಾಧ್ಯಾಯ ಅಥವಾ ವಿದ್ಯಾಸಂಸ್ಥೆಗೆ ನೀಡುವ ಹಣ : ಎಷ್ಟು ಕಡಿಮೆ ಶುಲ್ಕ ತೆಗೆದುಕೊಳ್ಳುತ್ತಾರೆ ಕಾಲೇಜಿನವರು (ನನ್ನಪ. ೧೧೫); ಅನುಭವಶಾಲೆಯ ಶುಲ್ಕ ದುಬಾರಿಯಾದಲ್ಲಿ ರಿಯಾಯಿತಿಯಿಲ್ಲ (೪೦ಚಾಪ. ೧೦೮-೨೯). ೭. ಲಾಭ; ಗಳಿಕೆ. ೮. ವ್ಯಾಪಾರವನ್ನು ದೃಢಪಡಿಸಲು ಕರಾರಿನಂತೆ ತೆರುವ ಮುಂಗಡ ಹಣ; ಸಂಚಕಾರ . [ಸಂ.]

**ಶುಲ್ಬ** (ನಾ). ೧. ಹುರಿ; ಹಗ್ಗ : "ಶುಲ್ಬಂ, ವಟಾರಕಃ, ರಜ್ಜುಃ , ವಟೀ, ತ್ರಿಗುಣಃ – ೫ ನೇಣಿನ ಪೆಸರು. ಹುರಿ, ಹಗ್ಗ" (ಸಿದ್ಧಾಂತಿ. ೩೧೪). ೨. ತಾಮ್ರ : "ತಾಮ್ರಕಮುದುಂಬರಂ ಕಿಸು ಶುಲ್ಬಂ" (ವಸ್ತುಕೋ. ೨೯-೯). ೩. ಯಜ್ಞಕಾರ್ಯ; ಯಾಜ್ಞಿಕವಿಧಿ. [ಸಂ.]

**ಶುಶ್ರೂಷ** (ನಾ). ಉಪಚಾರ; ಪರಿಚರ್ಯೆ; ಸೇವೆ : "ಶುಶ್ರೂಷಮದಿಷ್ಟಮುಪಚಾರಂ ಪ್ರಸಾದನಮುಪಾಸ್ತಿ ಪರಿಚರ್ಯಮೆನೆ ಸೇವೆಯಕ್ಕುಂ" (ಮಂಗರಾ. ೮-೨೭). [ಸಂ. ಶುಶ್ರೂಷಾ]

**ಶುಶ್ರೂಷಣ** (ನಾ). = ಶುಶ್ರೂಷ : ಕಾಲಕ್ರಮದಲ್ಲಿ ಅಸೂಯಾಪ್ರಾದುರ್ಭಾವದಿಂದ ವರ್ಣಧರ್ಮಗಳ ವ್ಯತ್ಯಾಸದಲ್ಲಿ ಶೂದ್ರರು ಶುಶ್ರೂಷಣವನ್ನು ಬಿಟ್ಟರು. (ಹಿಂದಸಾ. ೨೭೧). [ಸಂ.]

**ಶುಶ್ರೂಷೆ** (ನಾ). ೧. = ಶುಶ್ರೂಷ : ಮುನಿಮಂಡಳೀಪದಪಯೋಜಶುಶ್ರೂಷೆಯಿಂ ವಿದಗ್ಧಜನವಲ್ಲಭಂ ಕಳೆವನಿಂತು ಪೊಲ್ತಂ ನೃಪಂ (ಕಾದಂಪೂ. ೨೨); ನಿನ್ನ ಪೆಸರು ನಂಬಿಯೆಂಬುದು ಇನಿತುದಿನಂ ಶುಶ್ರೂಷೆಗೆ ಸಮರ್ಥನಲ್ಲದ ಕಾರಣದಿಂ ಬಾರದಿರ್ದೆವು (ನಂಬಿರ. ೬-೯೪). ೨. ವಿಧೇಯತೆ. [ಸಂ. ಶುಶ್ರೂಷಾ]

**ಶುಶ್ರೂಷೆಗೆಯ್** (ಕ್ರಿ). ಸೇವೆಮಾಡು ; ಉಪಚರಿಸು; ಪರಿಚರ್ಯೆಮಾಡು : ವದನಂ ತೋಳ್ ತೊಡೆ ಪಾದಮೆಂಬಿವನಿವಂ ಶುಶ್ರೂಷೆಗೆಯ್ಕಲ್ಕೆ ಲಾಭದಲಂಪಿಂ ನಡೆಯಲ್ಕೆ . . . ಆ ವರ್ಣಚತುಷ್ಕಮಂ ಕುಮತಿಗಳ್ ತತ್‌ಸ್ಥಾನದೊಳ್ ಮುನ್ನ ಪುಟ್ಟಿದುವೆಂಬರ್ (ಆದಿಪು. ೮-೭೩). [ಶುಶ್ರೂಷೆ + ಕೆಯ್₁]

**ಶುಶ್ರೂಷೆಗೆಯಿಸು** (ಕ್ರಿ). ಸೇವಿಸುವಂತೆ ಮಾಡು; ಉಪಚರಿಸುವಂತೆ ಮಾಡು: ಗಿರಿರಾಜಂ ಗೌರಿಯನಾ ಹರಂಗೆ ಶುಶ್ರೂಷೆಗೆಯಿಸಲೊಡಗೊಂಡೊಯ್ವಂತಿರೆ ಸತಿಯ ಪೆಱಗೆ . . . ಕಂಚುಕಿ ಬಂದಂ (ಕಾದಂಪೂ. ೫೯೫). [ಶುಶ್ರೂಷೆಗೆಯ್ + – ಇಸು]

**ಶುಷಿ** (ನಾ). ೧. ಒಣಗುವಿಕೆ ; ಬತ್ತುವಿಕೆ. ೨. ನೆಲದಲ್ಲಿಯ ತೂತು, –ರಂಧ್ರ. [ಸಂ.]

**ಶುಷಿರ** (ಗು). ೧. ತೂತುಗಳುಳ್ಳ; ರಂಧ್ರಗಳಿಂದ ಕೂಡಿದ. (ನಾ). ೨. ತೂತು; ಕುಳಿ : "ನಿಮ್ನಂ, ಅಗಾಧಂ, ಗರ್ತಃ, ಶ್ವಭ್ರಂ, ಶು[ಪಾಠಾಂ. ಸು]ಷಿರಂ . . . ದರಃ – ೧೫ ಕುಟಿ" (ಪಲಾಯು. ೧೦೩-೨). ೩. ಕಹಳೆ, ಕೊಳಲು, ಮುಂತಾದ ರಂಧ್ರಗಳ ಮೂಲಕ ಊದುವ ವಾದ್ಯ. [ಸಂ.]

**ಶುಷ್ಕ** (ಗು). ೧. ಒಣಗಿದ ; ಬಾಡಿದ : ಶುಷ್ಕಪತ್ರಂಗಳನಾದರದಿಂ ಮೇವಜಕುಲಮಂ ದೊರೆಕೊಳೆ ನೀಂ ಸ್ವಪ್ನಕಾಲದೊಳ್ ಕಂಡುದದಱಿಂ (ಆದಿಪು. ೧೫-೩೫). ೨. ಸಾರವಿಲ್ಲದ;

ನೀರಸವಾದ : ಹೃದಯದ ಕಾವ್ಯವು ನ್ಯಾಯಾಲಯದ ಶುಷ್ಕತರ್ಕದಲ್ಲಿ ಪ್ರವೇಶಿಸಿ ಬುದ್ಧಿಯ ರಣಸಂಗ್ರಾಮದಲ್ಲಿ ತೊಡಗಿದಾಗ (ಪ್ರಬಂಧ. ೫೩). ೩. ಆಧಾರವಿಲ್ಲದ. ೪. ಪ್ರಯೋಜನವಿಲ್ಲದ ; ವ್ಯರ್ಥವಾದ. ೫. ಸಣಕಲಾದ; ಬಡಕಲಾದ : ಶುಷ್ಕತನು ಬೇತಾಳಂ ಸ್ಥೂಲಶಿರನಾರ್ದು ಕುಣಿದಂ (ಅರ್ಥನೇ. ೫-೨೭). ೬. ತೋರಿಕೆಯ; ನಟನೆಯ. ೭. ಒರಟಾದ; ಕಠಿಣವಾದ. ೮. ನೀರಸವಾದ; ನಿಸ್ಸಾರವಾದ; 'ಶುಷ್ಕಪಾಂಡಿತ್ಯ' ಪರಾ. (ನಾ). ೯. ಒಣಗಿದುದು; ನೀರಸವಾದುದು. ೧೦. ತೆಳುವಾದುದು; ಸಪೂರವಾದುದು : ಆವಾತನ ಕೆಳಗಣ ತುಟಿ . . . ಶುಷ್ಕವಾಗಿರೆ ಸೌಭಾಗ್ಯವಂತನು (ಸಾಮುಲ. ೧೭-೮). [ಸಂ.]

**ಶುಷ್ಕತಾರ್ಕಿಕ** (ನಾ). ನೀರಸನಾದ ತಾರ್ಕಿಕ: ಇರು ಮರುಳ ಶುಷ್ಕವೈಯಾಕರಣಂಗಂ ಶುಷ್ಕತಾರ್ಕಿಕ [ಪಾಠಾಂ. ಗ]ಂಗಂ ಬೆಳ್ಳಕ್ಕರಿಗಂಗಂ ವಿಷಯಮ ಕಾವ್ಯರತ್ನಮತಿಚತುರ ಕವಿಕದಂಬಕವಿಷಯಂ (ಆದಿಪು. ೭. ೧-೨೩). [ಸಂ.]

**ಶುಷ್ಕಪಾಂಡಿತ್ಯ** (ನಾ). ನಿಸ್ಸಾರವಾದ ವಿದ್ವತ್ತು; ನೀರಸವಾದ ಪಾಂಡಿತ್ಯ: ಅವನು ಶುಷ್ಕಪಾಂಡಿತ್ಯಕ್ಕೆ ಮನಸೋಲದೆ, ಹೆಚ್ಚು ಪ್ರಯಾಸವಿಲ್ಲದೆ ಚೆನ್ನಾಗಿ ಕಲಿತು . . . ಪದಕಗಳನ್ನು ಅನಾಯಾಸವಾಗಿ ಗಳಿಸಿದ್ದನು (ಪುನರು. ೩೭೦). [ಸಂ.]

**ಶುಷ್ಕವೈಯಾಕರಣ** (ನಾ). ನೀರಸನಾದ ವ್ಯಾಕರಣಪಂಡಿತ: ಇರು ಮರುಳ ಶುಷ್ಕವೈಯಾಕರಣಂಗಂ ಶುಷ್ಕತಾರ್ಕಿಕಂಗಂ . . . ವಿಷಯಮೆ ಕಾವ್ಯರತ್ನಮತಿ ಚತುರಕವಿಕದಂಬಕವಿಷಯಂ (ಆದಿಪು. ೭. ೧-೨೩). [ಸಂ.]

**ಶುಷ್ಕಸಾಧನ** (ನಾ). (ಸೌದೆ ಮುಂತಾದ) ಒಣಗಿದ ಸಾಮಗ್ರಿ; ನಿರ್ದ್ರವವಾದ ವಸ್ತು : ಹೋಮಾಗ್ನಿಯಂ ನಂದಿಸಲುಂ ಕುಂದಿಸಲುಮಾಯದೆ ಶುಷ್ಕಸಾಧನಂ [ಪಾಠಾಂ. ಸಮಿತ್ತು]ಗಳಂ ಸಂಧಿಸುವ ಕರಿಕರೇಣುಗಳುಮಂ (ಪಂಚತಂ. ೧೧೮-೧೯). [ಸಂ.]

**ಶುಷ್ಕಹೃದಯ** (ನಾ). ನೀರಸನಾದ ವ್ಯಕ್ತಿ: ಸಾಕೆನ್ನ ಮನಸೆ ನಮಗೇನಾತ್ಮತೃಪ್ತನಾ ಶುಷ್ಕಹೃದಯನ ಬಗೆಯ ಗೊಡವೆ ? (ಗೊಲ್ಲೂಘಾ. ೩-೬೮). [ಸಂ.]

**ಶುಷ್ಕೇಂಧನ** (ನಾ). ಒಣಗಿದ ಕಟ್ಟಿಗೆ, — ಸೌದೆ: ಸಮುಚ್ಛಿನ್ನಕ್ರಿಯಾನಿವೃತ್ತಿಧ್ಯಾನ ಪರಿಣತಿಯನಘಾತಿಚತುಷ್ಕಶುಷ್ಕೇಂಧನಪಾವಕನಾಗಲೊಡಂ (ಸುಕುಮಾ. ೯-೧೭). [ಸಂ.]

**ಶುಷ್ಮ** (ನಾ). ೧. ಶಕ್ತಿ; ಪರಾಕ್ರಮ. ೨. ಕಾಂತಿ; ತೇಜಸ್ಸು. ೩. ಸೂರ್ಯ. ೪. ಅಗ್ನಿ. ೫. ಗಾಳಿ; ವಾಯು. ೬. ಪಕ್ಷಿ. [ಸಂ.]

**ಶೂಕ** (ನಾ). ೧. ಧಾನ್ಯದ ಮೇಲಿನ ಊಬು; ಸುಂಕು : "ಕಿಂಶಾರು ಶೂಕಮದು" (ವಸ್ತುಕೋ. ೯೫-೨೨). ೨. (ಧಾನ್ಯ, ಆಯುಧ ಮುಂತಾದುವುಗಳ) ಚೂಪಾದ ತುದಿ, — ಮೊನೆ : ಲಸಿತದಿವ್ಯೋನ್ನತಶರೀರಂ ನಿಶಿತಶೂಲದ ಶೂಕನಿಹತಿಗೆ ಕುಸಿಯದೇ (ಬಸವು. ೩೯-೬೪). ೩. ಕರುಣೆ; ದಯೆ: "ಅನುಕ್ರೋಶಃ, ಕೃಪಾ, ಶೂಕಂ, ದಯಾ, ಕರುಣಾ, ಘೃಣಾ - ಈ ೬ ಕರುಣಂ" (ಪಲಾಯು. ೧೨೦-೩೯). ೪. (ಕೀಟಗಳ) ಬಿರುಸಾದ ಕೂದಲು, ಮೊನಚಾದ ಕೊಂಡಿ ಮುಂತಾದುವು : 'ಶೂಕಕೀಟ' ಪರಾ. ೫. ಬಿರುಸು ಕೂದಲುಗಳುಳ್ಳ ಕೀಟ. [ಸಂ.]

**ಶೂಕಕೀಟ** (ನಾ). ೧. ಮೈತುಂಬ ಬಿರುಸಾದ ಕೂದಲಿರುವ ಹುಳು; ಕಂಬಳಿಹುಳು. ೨. ಕೊಂಡಿಯಿರುವ ಕಣಜ, ಚೇಳು ಮುಂತಾದ ಕೀಟ : "ವೃಶ್ಚಿಕಃ, ಶೂಕಕೀಟಃ - ೨ ಕೊಂಡೀವಿಷದ ಚೇಳು, ಕರಿಚೇಳು, ಖಣಜದ ಹುಳುವಿಗೂ ಹೆಸರು" (ಶಿದ್ಧಾಂತಿ. ೧೫೭). [ಸಂ.]

**ಶೂಕಧಾನ್ಯ** (ನಾ). ಊಬುಸಹಿತವಾದ ಕಾಳು; ಧಾನ್ಯ : "[ಶಾಲಿ]ಸ್ತಂಬಕರಿ ಪ್ರಭೃತಿ ಶೂಕಧಾನ್ಯಮದಕ್ಕುಂ" (ವಸ್ತುಕೋ. ೯೫ ೨೨). [ಸಂ.]

**ಶೂಕರ** (ನಾ). ಹಂದಿ; ವರಾಹ: ತರುಣಿ ಮಿಂಡಾಟಿಕೆಯೊಳಾರ್ಜಿಸಿದುರು ಮಹಾವಿತ್ತದಲಿ ಜೀವಿಪ ಪುರುಷನ . . . ನರಳ ತುಳಿದಡೆ ಜನ್ಮಜನ್ಮಾಂತರದಿ ಶೂಕರಜನ್ಮ (ಅಂಬಿಕಾ. ೪೭-೬೦); ಮಕರರಾಶಿಗೆ ಗುರು ಬಂದರೆ ಶೂಕರಗೆ ಏನು ? (ಗಾದೆ). [ಸಂ.]

**ಶೂಕಲ, ಶೂಕಳ** (ನಾ). ತುಂಟ ಕುದುರೆ; ದುಷ್ಟಾಶ್ವ : ಶೂಕಲ [ಪಾಠಾಂ. ಸೂಕಳ]ಮಲ್ತಿದು ಸಕಲಗುಣಾಕರಮೆನೆ ಜನಕಮುಖವಿಲೋಕನದಿಂದುದ್ರೇಕಮನುಟಿದಿರೆ ವಾಹಕರಾ ಕುಟಿಳಾಶ್ವಕ್ಕೆ ಖರಖಲೀನಮನಿಟ್ಟರ್ (ಪಂರಾಮಾ. ೪-೧೧೪). **ಶೂಕಳ:** "ಶೂ[ಪಾಠಾಂ. ಸೂ]ಕಳನೆಂಬುದು ಸಿಲುಕುಗುದಿರೆ" (ಪಲಾಯು. ೭೨-೨೮೭). [ಸಂ.]

**ಶೂಕಲಾಶ್ವ** (ನಾ). = ಶೂಕಲ: ಪೊಲಿಕಾಲೊಳ್ ನಡೆವ ಶೂಕಲಾಶ್ವಮಂ ಬೇಗದಿಂ ಬೆಂಗವಾಯ್ದು ರಾಫೆಯೊಳೌಂಕಿ ವಾಫೆಯೊಳ್ ನಿಲಿಸಿ . . . ನಡೆತಂದು (ಗಿರಿಕ. ೨-೧೦೫ ವ). [ಸಂ.]

**ಶೂಕಶಿಂಬಿ** (ನಾ). ಒಂದು ಬಗೆಯ ಸಸ್ಯ ; ನಸುಗುನ್ನಿ ಗಿಡ : "ಆತ್ಮಗುಪ್ತಾ . . . ಶೂಕಶಿಂಬಿಃ . . . ಮರ್ಕಟೀ - ೯ ನಸುಗುನ್ನೀಗಿಡ" (ಶಿದ್ಧಾಂತಿ. ೧೩೨).
[ಸಂ. ಶೂಕಶಿಂಬೀ]

**ಶೂಕಳ** 'ಶೂಕಲ' ನೋ.

**ಶೂದ್ರ** (ನಾ). ೧. ಚತುರ್ವರ್ಣಗಳಲ್ಲಿ ನಾಲ್ಕನೆಯದು : ಶೂದ್ರಗಣದ ಮದುವೆಯೊಳೊನ್ದಂ ಪ್ರಾಯಶ್ಚಿತ್ತನಿಮಿತ್ತದೊಳಾಯದ . . . ಪಣಮುಂ ಪೆರ್ಗ್ಗಲಿ(ಗ್ಗೆ)ಗಾಯಮಿದೆನ್ದೊಸದು(ಸದು) ಕೊಟ್ಟೊರೀ ದ್ವಿಜಮುಖ್ಯರ್ (ಕ.ಇ. II. ೪-೮ ; 9-8). ೨. ಚತುರ್ವರ್ಣಗಳಲ್ಲಿ ನಾಲ್ಕನೆಯ ವರ್ಗದವನು; ಚತುರ್ವರ್ಣೀಯ : ಕ್ಷತ್ರಿಯರ್ಗೆ ಸತ್ಕಾದಿಗಳುಮಂ . . . ಶುಶ್ರೂಷಾದಿಯಂ ಶೂದ್ರಂಗೆ ವರ್ತನಂ ಮಾಡಿ (ಚಾವುಂಪು. ೩೬); ಹಾರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡುವಲ್ಲಿ ನಂದಿಮುಖವಿಲ್ಲದೆ ಮಾಡಲಾಗದು (ಬಸವ. ೬೧೪); ನಿಖಿಳವೈಶ್ಯವ್ರಜ ಘನೋರುಗಳಿಂದ ಶೂದ್ರರು ಪಾದಪದ್ಮದಲಿ . . . ಜನಿಸಿದರು (ಕಬ್ಬಾಸ. ೯-೨೨). ೩. ರತ್ನಗಳಲ್ಲಿ ಒಂದು ಬಗೆ : ಪೊಳೆವುದರಿಸಿನದ ಬಣ್ಣವನಾಂತು ಮಿಸುನಿಯೊಲು ತೊಳಪುದದು ವೈಶ್ಯಜಾತಿಯು ಸಾಣೆ [ವಿಡಿ]ದಲಗಿನೊಳುಗಾಂತಿ ಯಿಂದಮೆಳಗಪ್ಪು ಮೆರೆದಿರೆ ಶೂದ್ರಜಾತಿಯಂಬರು (ರತ್ನಶಾ. ೩-೯). 'ವೈಶ್ಯ' ಪರಾ. ೪. ಹಾವುಗಳಲ್ಲಿ ಒಂದು ಬಗೆ : ಅಡವಿ ನೀರು ಕಲ್ಲುಸಂಧಿ ಯಿ ಸ್ಥಾನದಲ್ಲಿ (ಸರ್ಪ)ಯಿರುವದು ಶೂದ್ರಜಾತಿ (ವಿಷಚಿ. ೫-೨). [ಸಂ.]

**ಶೂದ್ರಕ** (ನಾ). ೧. ಒಬ್ಬಾತನ ಹೆಸರು : ನಾಗಮ್ಮನೀ ಶೂದ್ರಕನ್ ಪೆರ್ಮ್ಮಕ್ಕಿ ಮೇಗಿರ ಪತ್ತೊನ್ದಿಡೊಡೆ ಕಾದು ರಣಸಾಗರನ್ನರಿಯಾರಂ ಕೊಟ್ಟನ್ (ಸೌ.ಇ. IX - ೧, ೩೯೨-೫; ೮ನೆಯ ಶತ); ಪಾದಪದ್ಮಂಗಳನೊತ್ತುತ್ತಿರಲು ಶೂದ್ರಕನೃಪತಿ ಸುಖಾಸೀನನಾಗಿರ್ದನಾಗಳ್ (ಕಾದಂಪೂ. ೮೦). ೨. 'ಮೃಚ್ಛಕಟಿಕಾ' ಎಂಬ ಸಂಸ್ಕೃತ ನಾಟಕದ ಕರ್ತೃವಿನ ಹೆಸರು. ೩. ಒಂದನೆಯ ಗುಣವರ್ಮನು ರಚಿಸಿದ ಒಂದು ಚಂಪೂಕಾವ್ಯದ ಹೆಸರು. [ಸಂ.]

**ಶೂದ್ರತ್ವ** (ನಾ). ಶೂದ್ರನ ಸ್ಥಿತಿ ; ಶೂದ್ರತನ : ಜಾತಿಶೂದ್ರತ್ವದ ಪರೇತವಿಮುಕ್ತಿ ಯಾಚರಣೆಯೊಳಲಾ ಬಹುದು (ಬಸವು. ೫೫-೪೨). [ಸಂ.]

**ಶೂದ್ರವಾಡ** (ನಾ). ಶೂದ್ರರು ವಾಸಿಸುವ ಸ್ಥಳ : ಈ ಗ್ರಾಮ ಶೂದ್ರವಾಡವಾಗಿದ್ದುದನೂ ಅಘ್ರಾರವ ಮಾಡಿ (ಮೈಆರ್. ೧೯೪೦, ೩೫-೬; ಸು. 15ನೆಯ ಶತ); ಶೂದ್ರವಾಡದ ಗೊರು ಗದ್ದೆಗ್ರಾಮದ ವಳಗಣ ಮಠವ ಹೊಂದಿದ ಹೊಳೆಹೊದ್ದಿನ ಸ್ಥಳ ೧ (ಮೈಆರ್. ೧೯೩೩, ೨೮-೨೮; 1630). [ಶೂದ್ರ + ಬಾಡ]

**ಶೂದ್ರಿ** (ನಾ). ಶೂದ್ರಜಾತಿಯ ಹೆಂಗಸು : ರಾಯರಂಬವರಿಲ್ಲಲಾ ಸ್ವಾಧ್ಯಾಯ ಕೆಟ್ಟುದು ಮುಟ್ಟಿದರುಪಾಧ್ಯಾಯರನು ಶೂದ್ರಿಯರು ಸೆಳೆದರು ಮೌಂಜಿಮೇಖಲೆಯ (ಕಬ್ಬಾಅ. ೧೮-೯). [ಸಂ. ಶೂದ್ರೀ]

**ಶೂದ್ರಿತಿ** (ನಾ). = ಶೂದ್ರಿ : ಶೂದ್ರಿತಿ ಸಹವಾಗಿ ಈ ಹದಿಮೂರು ಮಂದಿ ಊಯಾ . . . ಪಾರಿಪತ್ಯವ ಮಾಡಿ ನಡಸಿಯರು (ಎಕ. VIII, ತೀರ್ಥಹ. ೩೩-೭೨; ಸು. 1430); ಮಾನುಷಯೋನಿಯಲಿ ಶೂದ್ರಿತಿಗೆ ಜನಿಸೆನು (ಸಂಭವ. ೧೪-೧೮) ; ಕ್ಷತ್ರಿಯಿತಿ, ಒಕ್ಕಲಿಗಿತಿ, ಶೂದ್ರಿತಿ (ಶಬ್ದಾನು. ೧೯೧ ಪ್ರಯೋ.). [ಶೂದ್ರ + — ಇತಿ (< — ಇತ್ತಿ)]

**ಶೂದ್ರೆ** (ನಾ). = ಶೂದ್ರಿ. [ಸಂ ಶೂದ್ರಾ]

**ಶೂನ್ಯ** (ಗು). ೧. ಖಾಲಿಯಾದ; ಬರಿದಾದ. ೨. ಇಲ್ಲದ; ವಿಹೀನವಾದ : 'ಶೂನ್ಯಶೀರ್ಷ' ಪರಾ. ೩. ಅರ್ಥಹೀನವಾದ ; ಅರ್ಥವಿಲ್ಲದ. ೪. ಏಕಾಂಗಿಯಾದ ; ಒಂಟಿಯಾದ. ೫. ಹಾಳಾದ ; ನಶಿಸಿದ : (೬). (ನಾ). ೬. ಬರಿದಾದುದು; ಇಲ್ಲವಾದುದು; ರಿಕ್ತವಾದುದು : ಅಲಕಂ ಮಂದಾರಶೂನ್ಯಂ ಕದಪು ಮಕರಿಕಾಪತ್ರಶೂನ್ಯಂ ಲಲಾಟಂ ತಿಲಕಾಲಂಕಾರಶೂನ್ಯಂ (ಆದಿಪು. ೩-೧೩) ; ಎನಗೆ ಮನಮಿಂದು ಶೂನ್ಯಂ ಮನೆ ಶೂನ್ಯಂ ಬೀಡು ಶೂನ್ಯಮಾದುದು ಸಕಲಾವನಿ ಶೂನ್ಯಮಾಯ್ತು

ದುಶ್ಯಾಸನನಿಲ್ಲದೆ ಕರ್ಣನಿಲ್ಲದೆ (ಗದಾಯು. ೩-೬೯); ವನಮಿಂದು ಶೂನ್ಯಂ . . . ಎನ್ನಯ ರಾಜ್ಯಮುಮಿಂದು ಶೂನ್ಯಮೇ (ಅರ್ಧನೇ. ೫-೫೨). ೭. ನಿರ್ಜನವಾದ ಪ್ರದೇಶ; ಬಯಲು: ಶೂನ್ಯಮಂ ಪಿಡಿದೆಳಸಿ ಬೋಳೈಸಿದನ್ ಲಲ್ಲೆಗೈಯುತೆ ಕುಮಾರನಾ ಮುದ್ದುವೆಸರಂ ಮಲ್ಲನುಚ್ಚರಿಸಿ (ಶ್ರೀರಾಮಾ. ೧೦೦-೧೧). ೮. ಆಕಾಶ ; ಗಗನ : ಅದು ಆ ಪರಮದ ಪೀಠದಿನ್, ಶೂನ್ಯಕ್ಕೆ ಬೀಸಿ ಎಸೆದಪುದು ಅವನನ್ (ಬಿದ್ದಪ್ರ. ೪೮-೧೦೪೩). ೯. ವಸ್ತುವಲ್ಲದುದು : ಸತ್ ಅಸತ್ತೂ ಆಗಲಾರದು. ಶೂನ್ಯದಿಂದ ವಸ್ತುವಾಗಲಾರದು. ಇರುವ ವಸ್ತು ಶೂನ್ಯಸ್ವರೂಪವನ್ನೂ ತಾಳಲಾರದು (ಚುಕ್ಕಾರ. ೯ ಪೀಠಿಕೆ). ೧೦. ಮಾಟ; ಮಾಯ : ಪೀಡಾಪರಿಹಾರಾರ್ಥವಾಗಿ ಮೃತ್ಯುಂಜಯಜಪ . . . ಶೂನ್ಯವನ್ನು ಹಿಂತಿರುಗಿಸುವ ಪ್ರತೀಕಾರ, ಇವುಗಳೆಲ್ಲವನ್ನೂ ಮಾಡಿ ಮುಗಿಸಿದರು (ಮುಸುಗ. ೧೪೭). ೧೧. [ವ್ಯಾಕ] ಬಿಂದು; ಅನುಸ್ವಾರ : ಬಿಂದು ಮುತ್ತಂ ಪೋಲ್ತು ಸೊನ್ನೆಯಂತೆ ಬಟ್ಟಿತ್ತಾಗಿರ್ಪುದಱಿಂ ಶೂನ್ಯಶಬ್ದಂ (ಶಮದ. ೧೧ ವೃತ್ತಿ). ೧೨. [ಗಣಿತ] ಸೊನ್ನೆ : ಗಗನಂ ಶೂನ್ಯಾಂಬರಂ ಖಂ . . . ಬಿಂದುವಿನ ನಾಮ (ವ್ಯವಹಾ. ೧೦-೧೦). ೧೩. [ಯೋಗ] ಪ್ರಾಣಾಯಾಮದ ಏಳು ಬಗೆಗಳಲ್ಲಿ ಒಂದು : ''ಓಸರಿಸಿ ನಡೆಯದಿರ ಶೂನ್ಯಮಕ್ಕು''(ಮಂಗರಾ. ೧೭-೧೪); ರೇಚಕ ಪೂರಕ . . . ಶೂನ್ಯ ಉತ್ಕ್ರಾಂತಿ ಎಂಬ ಸಪ್ತಪ್ರಾಣಾಯಾಮಲಕ್ಷಣಂಗಳುಂ (ವಿವೇಕ. ೧೩೩). ೧೪. [ಬೌದ್ಧ] ದಕ್ಷಿಣಭಾರತದ ಬೌದ್ಧತತ್ತ್ವಜ್ಞಾನಿ ನಾಗಾರ್ಜುನನು ಬೋಧಿಸಿದ ಒಂದು ವಾದ; ☞ ದುಃಖ, ಜೀವ ಮತ್ತು ನಿರ್ವಾಣ ಎಂಬುವು ಪಾರಮಾರ್ಥಿಕವಲ್ಲವೆಂದು ಈ ವಾದ ಸಾರುತ್ತದೆ : ಶೂನ್ಯವೆಂದರೆ ಒಂದು ಪದಾರ್ಥವನ್ನು ವಿವರಿಸಬಹುದಾದ ನಾಲ್ಕು ಕಲ್ಪಗಳಿಗೆ ಗೋಚರವಲ್ಲದಿರುವುದು (ಭಾತತ್ತ್ವ. ೨೦೭). ೧೫. [ವೀಶೈ] ಆಕಾರವಿಲ್ಲದುದು; ನಿರವಯ; ಬಯಲು : ವಾರಿ ಬಲಿದು ವಾರಿಕಲ್ಲಾದಂತೆ ಶೂನ್ಯವೇ ಸ್ವಯಂಭುವಾಯಿತ್ತು (ಅವಚಂ. ೧೬೫-೭೪೭). ೧೬. ದಿವ್ಯಸಾಕ್ಷಾತ್ಕಾರ ; ಮೋಕ್ಷ : ಶೂನ್ಯ ಎಂಬ ಮಾತನ್ನು . . . ಸಾಧಕನಿಗೆ ಅಂತ್ಯದಲ್ಲಿ ಒದಗುವ ಬ್ರಹ್ಮಸಾಕ್ಷಾತ್ಕಾರ ಎಂಬ ಅರ್ಥದಲ್ಲಿ, ಆ ಸಾಕ್ಷಾತ್ಕಾರದ ಅನುಭವ ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ (ಶೂನ್ಯಕು. ೨೯). ೧೭. [ನಾಟ್ಯ] ಇಪ್ಪತ್ತು ವಿಧವಾದ ಸಂಚಾರಿಭಾವದ ನೋಟಗಳಲ್ಲಿ ಒಂದು; ☞ ''ಚಲಿಸದೆ ನೋಡುವ ಪದಾರ್ಥದ ಅರಿವಿಲ್ಲದಂತೆ ಮಬ್ಬಾದ ಸಮದೃಷ್ಟಿಯಿಂದ ನೋಡುವುದು'' (ಲಾಸ್ಯರಂ. ೨೬೯ ಗದ್ಯಾನುವಾದ) : ಚಲನಮನೊಂದದೆ ಸಮಪುಟವಲಸದೆ ನಿಂದಾಲಿಯಾಗಿ ದೂಸರವರ್ಣದೊಳೊಲವಿಂ ನೋಡಲ್ ಕುಱುಪಂ ನೆಲೆಗೊಳ್ಳದ ನೋಟಮದುವೆ ಶೂನ್ಯಮೆನಿಕ್ಕುಂ (ಲಾಸ್ಯರಂ. ೩-೨೭).

ಶೂನ್ಯದ ಬೊಂಬೆ = ಮಾಂತ್ರಿಕನು ನಾಶಪಡಿಸಬೇಕೆಂದಿರುವ, ಮನುಷ್ಯನ (ಮಣ್ಣಿನ) ಪ್ರತಿಕೃತಿ : (ಕಿ). [ಸಂ.]

**ಶೂನ್ಯಗಾರ** (ನಾ). ಮಾಟಮಾಡುವವನು; ಮಾಂತ್ರಿಕ : 'ಶೂನ್ಯಗಾರ್ತಿ' ಪರಾ. [ಶೂನ್ಯ + – ಗಾರ (< – ಕಾಱ)]

**ಶೂನ್ಯಗಾರ್ತಿ** (ನಾ). ಮಾಟ ಮಾಡುವವಳು : (ಕಿ). [ಶೂನ್ಯಗಾರ + – ತಿ (< – ಇತ್ತಿ)]

**ಶೂನ್ಯತತ್ತ್ವ** (ನಾ). ಬ್ರಹ್ಮಸಾಕ್ಷಾತ್ಕಾರದ ತತ್ತ್ವ : ಅದರ ಕೆಳಗಣ ಮನೆಯ ನಾಳ ಅಲ್ಲಿ ನ್ಯಾಸವಾದ ಕ್ಷಕಾರವ ಶೂನ್ಯತತ್ತ್ವ. (ಉದ್ಧವಾ. ೮-೪). [ಸಂ.]

**ಶೂನ್ಯತೆ** (ನಾ). ಬರಿದಾದುದು; ರಿಕ್ತವಾದುದು : ಇಲ್ಲಿ ಸತ್ತ್ವಾಸತ್ತ್ವ . . . ಕಾರಣತ್ವಾ ಕಾರಣತ್ವ ಮೊದಲಾದ ಸರ್ವಪ್ರಕಾರದಿಂದಲೂ ನಿರ್ಣಯಿಸಲಶಕ್ಯವಾದುದೇ ಶೂನ್ಯತೆ, ಮಿಥ್ಯೆ, ಮಾಯೆ (ಓಂದಸಾ. ೨೦೦). [ಸಂ. ಶೂನ್ಯತಾ]

**ಶೂನ್ಯದೃಷ್ಟಿ** (ನಾ). ಅರ್ಥಹೀನವಾದ ನೋಟ, – ದೃಷ್ಟಿ : ರಾಮಸಿಂಗ್ ಸ್ವಲ್ಪ ಆಶ್ಚರ್ಯದಿಂದ ಬಿಡುಗಣ್ಣಾಗಿ ಶೂನ್ಯದೃಷ್ಟಿಯಿಂದ ನೋಡುತ್ತಾನ (ವೀರಯೋ. ೨೮). [ಸಂ.]

**ಶೂನ್ಯದೈವತ** (ನಾ). [ಜ್ಯೋತಿ] ದೈವಬಲವಿಲ್ಲದವನು : ಬಲವದ್ವ್ಯಂಹಧರ್ಮಮಾರ್ಗತತ್ಪರನನಿಕುಂ ವಿಹೀನಬಲರೆಲ್ಲರುಮಾಗಿರೆ ಶೂನ್ಯದೈವತಂ (ಜಾತತಿ. ೧೭-೩). [ಸಂ.]

**ಶೂನ್ಯಪೀಠ** (ನಾ). [ವೀಶೈ] ಶಿವಧರ್ಮತತ್ತ್ವವನ್ನು ತಿಳಿಸುವ ಪೀಠ : ''ಶೂನ್ಯಪೀಠ – ಶಿವಧರ್ಮವನ್ನು ಬೋಧಿಸುವ ಪೀಠ'' (ಶರಸಾ. ೨೪-೭). [ಸಂ.]

**ಶೂನ್ಯಮಾಸ** (ನಾ). ಧನುರ್ಮಾಸ : ಶೂನ್ಯಮಾಸದಲ್ಲಿ ಶುಭಕಾರ್ಯಗಳನ್ನು ಮಾಡುವುದಿಲ್ಲ (ರೂಢಿ). [ಸಂ.]

**ಶೂನ್ಯಲಿಂಗ** (ನಾ). [ವೀಶೈ] ಬಯಲೇ ರೂಪವಾಗಿರುವ ಶಿವಲಿಂಗ : ಆದಿ ಅನಾದಿಯ ಮೇಲಣ ಜ್ಯೋತಿರ್ಮಯವಪ್ಪ ಶೂನ್ಯಲಿಂಗಮಂ ಬೆರಸಿ ಭಿನ್ನವಿಲ್ಲದಿರ್ಪ ಆಚರಣೆಯ ವೀರಮಾಹೇಶ್ವರ ಬಲ್ಲನಲ್ಲದೆ ಅಜ್ಞಾನಿ ಬಾಯಿಬಡಿಕರವರೆತ್ತ ಬಲ್ಲರಯ್ಯ (ಘನವ. ೪೭-೪೧). 'ಆಕಾಶಲಿಂಗ' ಪರಾ. [ಸಂ.]

**ಶೂನ್ಯವಾದ** (ನಾ). [ಬೌದ್ಧ] ಎಲ್ಲವೂ ಶೂನ್ಯವೆಂಬ ವಾದ ; ನಿರೀಶ್ವರ ವಾದ; ನಾಸ್ತಿಕವಾದ : ಶೂನ್ಯವಾದಪ್ರಕಾಶನಪರನಾವುದಂತರ್ಬಹೀರೂಪದಿಂ ವಿಶದ ದರ್ಶನಾವಗಮ್ಯಮದೆಲ್ಲಮಸತ್ಯಾವಭಾಸಿಯೆಂತು ಮರುಮರೀಚಿಕಾ ಸ್ವಪ್ನೇಂದ್ರಜಾಲಾದಿಗಳೊಳ್ . . . ಜೀವಮೆಂಬುದೆಲ್ಲಿತ್ತು (ಆದಿಪು. ೨-೯ ವ). [ಸಂ.]

**ಶೂನ್ಯವಾದಿ** (ನಾ). [ಬೌದ್ಧ] ಶೂನ್ಯವಾದವನ್ನು ಪ್ರತಿಪಾದಿಸುವವನು ; ನಿರೀಶ್ವರವಾದಿ ; ನಾಸ್ತಿಕ : ಮಿಥ್ಯಾಜ್ಞಾನಿಗಳು ಶೂನ್ಯವಾದಿಗಳೊಂದು ದಿವಸಮಜಿತಂಜಯನೊಡನೆ ಪೋಗಿ (ಚಾವುಂಪು. ೨೧) ; ನಿಮ್ಮಡಿ ನೀವಿಂತು ವಿಪರೀತಗ್ರಹಣಂಗೆಯ್ದು ಶೂನ್ಯವಾದಿಗಳಾಗಿರಲಾಗದು (ಪಂಚತಂ. ೨೦೩-೧೪). [ಸಂ. ಶೂನ್ಯವಾದಿನ್]

**ಶೂನ್ಯಶೀರ್ಷ** (ನಾ). ಏನನ್ನೂ ಧರಿಸಿರದ ತಲೆ; ಬರಿದಾದ ಅಗ್ರಭಾಗ : ಮಣಲ ಲಿಂಗದ ಮಸ್ತಕಾಗ್ರದ ಪುಷ್ಪಮಂಜರಿ ಮಾಣದಾಕ್ಷಣಮೆ ತಳ್ತದರ್ದಾ ಕಿರಾತನ ಮಂಡೆಯಲ್ಲಿರೆ ಕಂಡು . . . ಮಗುಳ್ದೀಕ್ಷಿಸುತ್ತಣೆಯರಂ ಬಿಡದಿತ್ತ ಲಿಂಗದ ಶೂನ್ಯಶೀರ್ಷಮನರ್ಜುನಂ (ಶಬಶಂ. ೪-೧೦೬). [ಸಂ.]

**ಶೂನ್ಯಸಂಪಾದನೆ** (ನಾ). [ವೀಶೈ] ಶಿವಶರಣ-ಶರಣೆಯರ ವಚನಗಳನ್ನು ಸಂದರ್ಭೋಚಿತವಾಗಿ ಜೋಡಿಸಿ ಬರೆದ ವೀರಶೈವಸಾಹಿತ್ಯದ ಒಂದು ಸಂಕಲನ ಗ್ರಂಥ : 'ಶೂನ್ಯಸಂಪಾದನೆ' ಎಂಬುದು ವೀರಶೈವರಿಗೆ ಅತ್ಯಂತ ಪವಿತ್ರವಾದ ಗ್ರಂಥಗಳಲ್ಲೊಂದು (ಶೂನ್ಯಕು. ೧. ಒಸ್ನಲ); ಶೂನ್ಯಸಂಪಾದನೆಯಲ್ಲಿ ಮೋಳಿಗೆಯ ಮಾರಯ್ಯಗಳ ಸಂಪಾದನೆಯನ್ನೂ ವಿವರಿಸಿದ್ದಾರೆ (ಮೋಳಿಮಾ. ೫೧ ಪ್ರಸ್ತಾವನ). [ಸಂ. ಶೂನ್ಯಸಂಪಾದನ]

**ಶೂನ್ಯಸಿಂಹಾಸನ** (ನಾ). ೧. = ಶೂನ್ಯಪೀಠ. ೨. ಅನುಭವಮಂಟಪದ ಅಧ್ಯಕ್ಷಪೀಠ : ಶೂನ್ಯಸಿಂಹಾಸನವೆನ್ನುವುದು ಕೇವಲ ಭೌತಿಕಪೀಠವಲ್ಲ, ಅದೊಂದು ಪದವಿಯೂ ಹೌದು (ಶೂನ್ಯಕು. ೧೪೫). [ಸಂ.]

**ಶೂನ್ಯಾಧ್ವ** (ನಾ). ೧. ಆಕಾಶಮಾರ್ಗ; ನಭೋಮಾರ್ಗ. ೨. ಮಾಟ ಮಾಡಿದ ವಸ್ತುಗಳನ್ನಿರಿಸಿದ ದಾರಿ. ೧, ೨: ಕುಮಂತ್ರಜಪಮಂ ತದ್ವೇಷದಿಂ ಮಾಡೆ ಕೋಮಳೆ ಶೂನ್ಯಾಧ್ವಮನ್ನೆದೆ ದಾಂಟೆ ನಿಜಪಾದಂ ಪೋಗೆ ಮೈಗಂದಿ ಬಿಳ್ಚಿಳಿದಂ . . . ಭಾಸ್ಕರಂ (ರಾಜಶೇ. ೧೩-೩೨). [ಸಂ. ಶೂನ್ಯಾಧ್ವನ್]

**ಶೂನ್ಯಾಲಯ** (ನಾ). ಯಾರೂ ವಾಸವಿರದ ಮನೆ; ಬರಿದಾದ ಮನೆ: ಹೇಳಲೇನು ಸಮುದ್ರವಿಭವವನೇಳಿಸುವ ಪಾಳೆಯದ ಸಿರಿ ಶೂನ್ಯಾಲಯಕೆ ಜೋಡಿಸಿತಲ್ಕೆ (ಕುಮ್ಯಾಗ. ೪-೧೮). [ಸಂ.]

**ಶೂನ್ಯಾಸನ** (ನಾ). ಏಕಾಂತಸ್ಥಾನ : ನಮ್ಮಯ ನಗರಿ ಶೂನ್ಯಾಸನದಲಿಹುದು (ಕುಮ್ಯಾಆ.೧೫-೨೮). [ಸಂ.]

**ಶೂರ** (ಗು). ೧. ಕಲಿತನದಿಂದ ಕೂಡಿದ; ಸಾಮರ್ಥ್ಯವುಳ್ಳ : ಶೂರ ಪದಾತಿ ಮುಂದೆ ಘಟೆ ಪಿಂದೆ ರಥಂ ನಡುವಿರ್ಕೆಲಂಗಳೊಳ್ ಸಾರ ಹಯೋತ್ಕರಂ ನೆರೆದು ನಿಲ್ವಿನ (ಶಾಂತಿಪು. ೩-೧೧೪); ಶೂರಜೋದರ ಮೇಲುವಾಯಿದು ವೀರಸಿರಿ ಬಿಗಿಯಪ್ಪ (ಕುಮ್ಯಾಭೀ. ೪-೮೭). (ನಾ). ೨. ಕಲಿ; ವೀರ : ದಾನಿಯುಮಂ ಶೂರನುಮಂ ತಾನೆಚ್ಚಱಿಕುಂ ಗದಾನಿಲಂ ಮೂರ್ಛಿತನಂ (ಗದಾಯು. ೮-೩೩). ೩. ಸಿಂಹ. ೪. ವರಾಹ; ಹಂದಿ. ೫. ಸೂರ್ಯ. ೬. ಶಾಲವೃಕ್ಷ. ೭. ಎಕ್ಕದ ಮರ. ೮. ನಾಯಿ. ೯. ಹುಂಜ. ೧೦. ಶ್ರೀಕೃಷ್ಣನ ತಾತನಾದ ಒಬ್ಬ ಯಾದವನ ಹೆಸರು; ಶೂರಸೇನ. [ಸಂ.]

**ಶೂರಣ** (ನಾ). ಒಂದು ಬಗೆಯ ಗೆಡ್ಡೆ ; ಸುವರ್ಣಗೆಡ್ಡೆ ; "ಸೂರಣ" (ಪಂಡಿತ. ೨೩೧). [ಸಂ.]

**ಶೂರತನ** (ನಾ). ಕೆಚ್ಚು; ಕಲಿತನ; ಶೌರ್ಯ : ಪುರುಷನ ಭಾವಂ, ಪುರುಷತನಂ; ಏವಂ ವೀರತನಂ, ಶೂರತನಂ, ಬಲ್ಲತನಂ (ಶಬ್ದಾನು. ೪೩೦ ಪ್ರಯೋ). [ಶೂರ + – ತನ]

**ಶೂರತೆ** (ನಾ). = ಶೂರತನ : ನೃಪಶಾಸ್ತ್ರಜ್ಞತೆಗಿಲ್ಲಿ ಮಲ್ಲಪನೊಳಶ್ಶೇಭಾಗಮಕ್ಕಿಲ್ಲಿ ಮಲ್ಲಪನೊಳ್ ಶೂರತೆಗಿಲ್ಲಿ ಮಲ್ಲಪನೊಳಾರ್ತೀವೊಳ್ಳಣಕ್ಕಿಲ್ಲಿ . . . ಕಾಣಲಾಗದು ಸಮಾನಂ ಮಾನವಾನೀಕಮಂ (ಅಜಿಪು. ೧-೨೭); ಆರು ಬಣ್ಣಿಸಬಲ್ಲರಾ ಮಮಕಾರ ನೃಪನ ಮಹಾಪ್ರತಾಪವ ಶೂರತೆಯ ಸಾಹಸವನು (ಪ್ರಭುಲೀ. ೩-೭). [ಸಂ. ಶೂರತಾ]

**ಶೂರತ್ವ** (ನಾ). = ಶೂರತನ : ಶಾಂತಿಯೆಂಬ ನಿಶಾತಖಡ್ಗದಿ ಕೋಪವೆಂಬಭಿಯಾತಿಯಂ ಖಂಡಿಸುವವಂ ತಾನಾವನವನಿಯೊಳು ಆತನೇ ಶೂರತ್ವವುಳ್ಳವನು (ಬಸವು. ೩೮-೭೪). [ಸಂ.]

**ಶೂರ್ಪ** (ನಾ). ೧. ಧಾನ್ಯಗಳನ್ನು ಕೇರಿ ಶುದ್ಧಪಡಿಸುವ ಸಾಧನ; ಮೊರ : "ಕೆ(ಗೆ) ರಸಿ(ಶಿ)ಕೂರ್ಪಮನಿಕ್ಕು ಶೂರ್ಪಮೆನಿಸಿಕ್ಕು" (ಮಂಗರಾ. ೬೨-೨೨). ೨. ಎರಡು ದ್ರೋಣಗಳ ಒಂದು ಅಳತೆ. ೩. ಒಂದು ದೇಶದ ಹೆಸರು : ಸ್ತ್ರೀರಾಜ್ಯಂ ಶೂರ್ಪ ವಂಗಂ ಮಗಧ ಮಹಿತಳಂ ಪಾಂಡ್ಯ ಸೌರಾಷ್ಟ್ರಂ (ಜಗ್ಗಮ. ೧೨-೬೨). [ಸಂ.]

**ಶೂರ್ಪಕ** (ನಾ). ೧. = ಶೂರ್ಪ ೧. : "ಶೂರ್ಪಕಂ ಪ್ರಸ್ಫೋಟಂ" (ವಸ್ತುಕೋ. ೪೯ ೨೭). ೨. ಮನ್ಮಥನ ವೈರಿಯಾದ ಒಬ್ಬ ದೈತ್ಯ : ಅರಿಭೂಪಾಲದರ್ಪ ಶೂರ್ಪಕದರ್ಪಕಂದರ್ಪಕೋಪವಮಾಪೂರ್ವರೂಪಂ ರೂಪಿಸುವೊಡರಿದೆನಿಸುವ ಮಲತರಕೀರ್ತಿ (ಪದ್ಮರಾ. ೩-೨೩). [ಸಂ.]

**ಶೂರ್ಪಕರ್ಣ** (ನಾ). ೧. ಮೊರದಂತೆ ಅಗಲವಾದ ಕಿವಿಯುಳ್ಳುದು; ಆನೆ. ೨. ಗಣಪತಿ : ಏಕದಂತನು ಶೂರ್ಪ[ಪಾಠಾಂ. ಪೂರ್ವ]ಕರ್ಣ . . . ವಿನಾಯಕ ನಂಘ್ರಿಗೊಂಡಿಸುವೆ (ಅಜ್ಞಲೂ. ೧-೬). [ಸಂ.]

**ಶೂರ್ಪಶ್ರವ** (ನಾ). = ಶೂರ್ಪಕರ್ಣ ೧ : ಕಿಸಲಯಜಾಲಾನುಸಂಸರ್ಪಿ ಶೂರ್ಪಶ್ರವ ಸಂಪ್ರಸ್ಫುತ್ತತಂಗಾಶಯ ಶಯಗಳಿತಾಪತ್ತಿತತ್ಕೀರ್ಣಪರ್ಣಂ (ಅರ್ದನೇ. ೩ ೩೬). [ಸಂ. ಶೂರ್ಪಶ್ರವಸ್]

**ಶೂಲ** (ನಾ). ೧. ಚೂಪಾದ ತುದಿಯುಳ್ಳ ಒಂದು ಬಗೆಯ ಆಯುಧ; ಈಟಿ: ಜಾನುಭಂಜನಿಶೂಲಪ್ರಕರಪರಿವೃತಂಗಳುಂ (ಆದಿಪು. ೧೩-೫೭ ವ); ಆಕಾಶವ ಶೂಲವಪ್ಪಿಕ್ಕಿದ ಬಲ್ಲಿದ ತಳವಾಟನೀತನು (ಅವಚಂ. ೧೧೯-೫೪೧); ಗಿರಿದುರ್ಗದಲ್ಲಿ ಶೂಲಗಳು ಮೆರೆದುವು (ಕುರಾಸಾಂ. ೨೦-೧೩). ೨. ಶಿವನ ಆಯುಧ; ತ್ರಿಶೂಲ: ಲಲಿತಖಟ್ವಾಂಗದ ಕಪಾಲದ ಹೊಳೆವ ಶೂಲದ ಕರದ ನಿಗಮಾವಳಿ ಶಿರೋಮಣಿ ಮೆರೆದನಂದೀಶಾನವಕ್ತ್ರದಲಿ (ಕುವ್ಯಾಅ. ೬-೭೩); ಪರಶು ಮೃಗ ಢಮರು ಶೂಲವ ಧರಿಸುತ (ಗಗತಾ. ೭-೮೫). ೩. ಮಾಂಸವನ್ನು ಸುಡಲು ಉಪಯೋಗಿಸುವ ಚೂಪಾದ ಸಲಾಕಿ; ಸುಡುಗಂಬಿ. ೪. ಮರಣದಂಡನೆಗೊಳಗಾದವರನ್ನು ಏರಿಸಿ ಕೊಲ್ಲಲು ಬಳಸುವ ಮೊನಚಾದ ಕಬ್ಬಿಣದ ಕಂಬ : ಸ್ಥೂಲಶಿರಸಾರ್ದು ಕುಣಿದಂ ಶಾ[ಪಾಠಾಂ. ಸೂ]ಲದ ತಲೆ ಕುಣಿವ ತೆಱದೆ (ಅರ್ಧನೇ. ೫-೨೭); ಬಸಿದ ಶೂಲಕೆ ಸವಣನನು ಸೇರಿಸಿದ ಗಾದೆಯ ಪೊಱೆವರೇಯುಪಯಶವ ಹೂತ್ತ (ತೊರರಾ. ೪-೫-೧೮); ದುಃಕರಶೂಲಕ್ರೀಡಾದಂ ಪರವಾಜಿ ಮಾಂಡವ್ಯನ ಪರತಪದಿಂ (ಪಮ್ಮಾರ. ೨-೧೮). ೫. ತೀವ್ರವಾದ ನೋವು, – ಯಾತನೆ: ಉದಯಿಸುಗುಂ ಶೂಲಂ ವಾತದಿನುರಿಪಂ ಪಿತ್ತದೆಚ್ಚೋಯಿಂ (ಲೋಕೋಪ. ೯-೩). ೬. (ಹೊಟ್ಟೆಯಲ್ಲಿ ಅಥವಾ ತಲೆಯಲ್ಲಿ) ಉಂಟಾಗುವ ತೀವ್ರ ನೋವಿನ ಒಂದು ಬಗೆಯ ರೋಗ : ವಾತ ಪಿತ್ತ ಶ್ಲೇಷ್ಮ . . . ಪಿಟಕಂ ಶೂಲ ಭಗಂದರಂ ಕುಷ್ಠಕ್ಷಯ ಗಂಡ ಶಿರೋವೇದನೆ ಮೊದಲಾಗೊಡೆಯ ವೇಟುನೂಱುವ್ಯಾಧಿಗಳೊರ್ಮೊದಲೆ ಮೆಯ್ಯೊಳ್ ಪುಟ್ಟಿದೊಡ (ವಡ್ಡಾರಾ. ೬೯-೧೧). ೭. ಉರುಳು; ಪಾಶ : "ಉರಲು ತಂತ್ರಿ ಶೂಲಾಖ್ಯಮಕ್ಕುಂ" (ಮಂಗರಾ. ೧೧೨-೫). ೮. ಸಾವು ; ಮರಣ. ೯. ಗುರುತು ; ಲಾಂಛನ. ೧೦. ಮಾರಾಟ ಅಥವಾ ಮಾರಾಟದ ವಸ್ತು. ೧೧. [ಕಾವ್ಯಮಿ] ಶೂಲದ ಆಕಾರದ ಚಿತ್ರಬಂಧವುಳ್ಳ ಪದ್ಯ : ಶರಶೂಲಚಾಪಚಕ್ರಾಸಿರೂಪಮಿಭರಥತುರಂಗಪದಗತಪಾಠಂ ಮುರಜಂ ಗೋಮೂತ್ರಿಕೆ ಪುಷ್ಕರಮರ್ಧಭ್ರಮಣಸರ್ವತೋಭದ್ರಂಗಳ್ (ಕಾವ್ಯಾವ. ೫೬೯). ೧೨. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಒಂಬತ್ತನೆಯದು : ಅಶ್ವಿನೀ ಮೊದಲಾದಿಪ್ಪತ್ತೇಳುನಕ್ಷತ್ರಂಗಳುಂ ವಿಷ್ಕಂಭ ಪ್ರೀತಿ ಆಯುಷ್ಮಾನ್ ಸೌಭಾಗ್ಯಶೋಭನ ಅತಿಗಂಡ ಸುಕರ್ಮ ಧೃತಿ ಶೂಲ . . . ವೈಧೃತಿಗಳೆಂಬ ಇಪ್ಪತ್ತೇಳು ಯೋಗಂಗಳುಂ (ವಿವೇಕ. ೨೬೨) ; ಯೋಗಗಳತಿಶಯವನರಿಯ್ಯೆಯ . . . ವಿಷ್ಕಂಭ ಶೂಲವು (ಗಗತಾ. ೪-೬೯). ೧೩. ಸಂಖ್ಯಾಯೋಗಗಳಲ್ಲಿ ಒಂದು ; ಏಳು ಗ್ರಹಗಳು ಮೂರುರಾಶಿಗಳಲ್ಲಿರುವಿಕೆ : ನಿಲೆ ಸಪ್ತಗ್ರಹಮೊಂದೆ ರಾಶಿಯೊಳ್ ಯೋಗಂ ಗೋಳನಾಮಂ ಯುಗಂ ನಿಲೆ ಗೇಹದ್ವಯದೊಳ್ ತ್ರಿಗೇಹದೊಳಿರಲ್ ಶೂಲಂ (ಜಾತತಿ. ೧೩-೫).

**ಶೂಲಕ್ಕೇರಿಸು** = ಶೂಲಕ್ಕೆ ಹಾಕು ; ಮರಣದಂಡನೆಗೊಳಪಡಿಸು: ಚಕ್ರವರ್ತಿಯ ಆಜ್ಞೆಯಂತೆ . . . ಧರ್ಮಗುರುಗಳನೇಕರನ್ನು ಶೂಲಕ್ಕೇರಿಸಲಾಗಿತ್ತು (ಆಶ್ರಮ. ೪೯). **ಶೂಲದಮರ** = ಮರಣದಂಡನೆಗೊಳಗಾದವರನ್ನು ಏರಿಸಿ ಕೊಲ್ಲಲು ನೆಟ್ಟಿರುವ ಕಂಬ : ಶೂಲದ ಮರಕ್ಕೋಸ್ಕರವಾಗಿಯೇ ಹುಟ್ಟಿರುವ ಕೊಳಕಳ್ಳರೇ ! (ಚಟ್ಟ್ನಅ. ೫೦-೨೧). **ಶೂಲದ ಹಬ್ಬ** = ಗುಂಡಬ್ರಹ್ಮಯ್ಯನೆಂಬ ಶರಣನನ್ನು ಶೂಲಕ್ಕೆ ಏರಿಸಿದ ದಿನ ಮತ್ತು ಆ ಶರಣನ ಸ್ಮರಣಾರ್ಥವಾಗಿ ಅಂದು ಆಚರಿಸುವ ಹಬ್ಬ : ಆ ಕಾಲದೊಳು ಬಂದುದು ಶೂಲದ ಹಬ್ಬ (ಕುರಾಸಾಂ. ೨೧-೮) ; ಆ ಗುಂಡಬ್ರಹ್ಮಯ್ಯರನ್ನು ಶೂಲಕ್ಕೆ ಏರಿಸಿದ ದಿನದ ಹಬ್ಬವೇ ಶೂಲದ ಹಬ್ಬ (ಸಡದಾ. II. ೯೭೧). [ಸಂ.]

**ಶೂಲಧರ** (ನಾ). ೧. ತ್ರಿಶೂಲವನ್ನು ಹಿಡಿದುಕೊಂಡಿರುವವನು ; ಶಿವ : "ಉಮಾಪತಿಯೆನಲು . . . ಕಪಾಲಶೂಲಧರನನೆ ಶಿವಾಖ್ಯಂ" (ಮಂಗರಾ. ೪-೧೨) ; ಶೂಲಧರಭಕ್ತನಿವಹಮನೀ ಲೋಕದ ಸುಜನನಿಕರಮಂ ಪರಮತಮಂ ಲಾಲಿಸಲುಂ ಪಾಲಿಸಲುಂ ಸೋಲಿಸಲುಂ ಮಹಿಗೆ ಬಂದ ಮಹಿಮಾಧಾರಾ (ವೃಷವಿ. ೨೪-೪೫). ೨. [ಛಂದ] ರುದ್ರಗಣದ ಭೇದಗಳಲ್ಲಿ ಒಂದು : ರುದ್ರಗಣಮಂತೆಂದೊಡೆ ೧. ಗಂಗಾಧೀಶಂ . . . ೭. ಶೂಲಧರಂ (ಛಂದೋಂಬು. ೫-೨೪೦ ವ). [ಸಂ.]

**ಶೂಲಪಾಣಿ** (ನಾ). = ಶೂಲಧರ ೧ : ಹರಹರ ಶೂಲಪಾಣಿ ಮುಕುಂದಯೆನುತವೆ ರವಿಯನೀಕ್ಷಿಸುತ . . . ತಲೆಬಾಗಿದಳು ತರಳೆ (ಕುವ್ಯಾವಿ. ೨-೨೪). [ಸಂ.]

**ಶೂಲಮುದ್ರೆ** (ನಾ). ಮಂತ್ರಶಾಸ್ತ್ರಪ್ರಸಿದ್ಧವಾದ ಒಂದು ಬಗೆಯ ಹಸ್ತಮುದ್ರೆ: ಅಸ್ತ್ರಮುದ್ರೆ . . . ಶೂಲಮುದ್ರೆ . . . ಸಂಹಾರಮುದ್ರೆಯೆಂಬ ಸಕಲಮುದ್ರಾ ಲಕ್ಷಣವನಱಿದಾಯಾ ಕ್ರಿಯೆಗಳಲ್ಲಿ ಪ್ರಯೋಗಿಸಿ (ವಿವೇಕ. ೯೩). [ಸಂ. ಶೂಲಮುದ್ರಾ]

**ಶೂಲಯೋಗ** (ನಾ). ೧. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಒಂಬತ್ತನೆಯ ಯೋಗ : ಶೂಲಯೋಗಕ್ಕೆ ದೇಶ ೫೮ ಗಳಿಗೆ ಮೇಲೆ ತ್ಯಾಜ್ಯಾ (ಭಾಸ್ಕರ. ೭೦-೧). ೨. ಏಳು ಗ್ರಹಗಳು ಮೂರುರಾಶಿಗಳಲ್ಲಿರುವಿಕೆ : ೩ ರಾಶಿಯಲ್ಲಿ ಗ್ರಹರಿರಲೂ ಶೂಲ ಯೋಗವೆಂಬುದುಂ, ಇದರಿಂದ ಮೃತ್ಯುಫಲ (ಆಯುಟೀ. ೨೪-೭). [ಸಂ.]

**ಶೂಲವರಿ** (ನಾ). ೧. ಒಂದು ಬಗೆಯ ತೆರಿಗೆ (?) : ಪೊಂಗೊಡುವೆಲದ ಗ್ರಾಮಗಳಲೂ ಅರಮನೆಗೆ ಎತ್ತಿ ಬಹ ಜೋಡಿ ಶೂಲವರಿಗಳನೂ ಬಿಟ್ಟು ತಿರುಪತಿಯ ಕೆರೆಗೆ ಮೂನೂರು ಹೊಂನನೂ ಕೊಟ್ಟು (ಸೌಇಇ. IX-ii, ೪೬೨-೩ ; 1467). [ಶೂಲ + ವರಿ]

**ಶೂಲಾಕೃತ** (ಗು). ೧. ಸುಡುಗಂಬಿಯಲ್ಲಿ ಚುಚ್ಚಿ ಬೇಯಿಸಿದ. (ನಾ). ೨. ಸುಡುಗಂಬಿಗೆ ಚುಚ್ಚಿ ಸುಟ್ಟ ಮಾಂಸ ಮೊದಲಾದುವು : "ಶೂಲಾಕೃತಂ, ಭಟಿತ್ರಂ, ಶೂಲ್ಯಂ – ೩ ಕುಡುಗೋಲಿಗೆ ಚುಚ್ಚಿ ಪಕ್ವಮಾಡುವ ಭಕ್ಷ್ಯಕ್ಕೂ, ಸುಟ್ಟು ನಂಚಿಕೊಳ್ಳುವ ಪದಾರ್ಥಕ್ಕೂ ಪೆಸರುಗಳು" (ಸಿದ್ಧಾಂತಿ. ೨೪೭). [ಸಂ.]

**ಶೂಲಾರೋಹಣ** (ನಾ). (ಮರಣದಂಡನೆಗಾಗಿ) ಶೂಲಕ್ಕೆ ಏರಿಸುವುದು : ಶಕಟದಾಸನಂ ಶೂಲಾರೋಹಣವಂ ಮಾಡಿಸುವ ಸಮಯದಲ್ಲಿ ಸಿದ್ಧಾರ್ಥಕನೆಂಬುವನು ಖಡ್ಗಪಾಣಿಯಾಗಿ ಅಟ್ಟಿ ಬಂದು . . . ಶಕಟದಾಸನಂ ಕರೆದುಕೊಂಡು ಎಲ್ಲಿಯೋ ಪಲಾಯನಂಗೈದನಂತೆ (ಮುದ್ರಾಮಂ. ೬೦೩). [ಸಂ.]

**ಶೂಲಾಸನ** (ನಾ). [ಯೋಗ] ಒಂದು ಬಗೆಯ ಆಸನ : ಸಿದ್ಧಾಸನ . . . ಶೂಲಾಸನ ಸುಖಾಸನ . . . ಅರ್ಧಾಸನಾದಿ ಎಂಭತ್ತುನಾಲ್ಕು ಆಸನಭೇದಂಗಳು (ವಿವೇಕ. ೧೩೧). [ಸಂ.]

**ಶೂಲಿ, ಶೂಳಿ** (ಗು). ೧. ಶೂಲವನ್ನು ಹಿಡಿದ,- ಧರಿಸಿದ. (ನಾ). ೨. ಶೂಲವನ್ನು ಹಿಡಿದಿರುವವನು. ೩. = ಶೂಲಧರ, ೧ : ಕೃತಯುಗಕ್ಕೆ ಅರಸು ಶೂಲಿ . . . ದ್ವಾಪರ ಯುಗಕ್ಕೆ ಅರಸು ಸರಸ್ವತಿಯ ಪತಿ (ಪೋಳಿಮಾ. ೩-೧೦) ; ಶೂಲವೀತಗ ಕೈದು ಗಲುವರ ಶೂಲಿಗಸದಳ (ಕೌಶಿರಾ. ೨೫-೮). ೪. ತೀವ್ರವಾದ ಯಾತನೆಯನ್ನು ಅನುಭವಿಸುವಿಕೆ. ೫. ತೀವ್ರವಾದ ಯಾತನೆಯನ್ನು ಅನುಭವಿಸುವವನು. **ಶೂಳಿ** : ೩. ಶೂಳಿಯಣುಗರು ಚಾಂಗುಬೊಲ್ಲೆಂದು ಪರಸುತಿರೆ ಪಶುಪಾಶಮಂ ಪಱಿಯಲೊದೆದು (ಕೊಂಗುರ.ದೇ. ೧೫೭-೧೪) ; ಕಾಲನಂ . . . ಶೂಲದಿಂದಿಱಿದೊತ್ತಿದನಲಾ ಶೂಳಿ [ಪಾಠಾಂ. ಲಿ] (ಬಸವಪು. ೫೪-೫೦). [ಸಂ. ಶೂಲಿನ್]

**ಶೂಲಿಕ** (ಗು). ೧. ಶೂಲವನ್ನು ಹೊಂದಿರುವ. (ನಾ). ೨. ಚುಚ್ಚುವಿಕೆ : (ಕ). ೩. ಕೊಲ್ಲುವಿಕೆ : (ಕ). ೪. ಅಪರಾಧಿಗಳನ್ನು ಶೂಲಕ್ಕೆ ಹಾಕುವವನು. ೫. ಮೊಲ. ೬. ಹುಂಜ. ೭. ಸುಡುಗಂಬಿಗೆ ಚುಚ್ಚಿ ಸುಟ್ಟ ಮಾಂಸ. [ಸಂ.]

**ಶೂಲಿಕೆ** (ನಾ). ೧. ಮೊನಚಾದ ಆಯುಧವನ್ನು ತುದಿಗೆ ಅಳವಡಿಸಿರುವ ಕೋಲು; ಹಾರೆಗಟ್ಟಿಗೆ : "ಒತ್ತುವ ಹಾರಗಟ್ಟಿಗ ಅಯೋಮುಖಂ ಶೂಲಿಕೆಯೆನಿಕ್ಕು" (ಮಂಗರಾ. ೪೭-೬). ೨. ಕಬ್ಬಿಣದ ಕಂಬಿಗೆ ಸಿಕ್ಕಿಸಿ ಕೆಂಡದಲ್ಲಿ ಸುಟ್ಟ ಮಾಂಸ : "ಬಱಿಗೆಂಡದೊಳು ಸುಟ್ಟಡಗು ಶೂಲಿಕೆಯೆನಿಕ್ಕು" (ಮಂಗರಾ. ೫೪-೪). ೩. ಒಂದು ಬಗೆಯ ಸಸ್ಯ : "ಶೂಲಿಕೆಯೆನಲ್ ಚಾಲ" (ಮಂಗರಾ. ೪೨-೩೭). [ಸಂ. ಶೂಲಿಕ]

**ಶೂಲಿಗೆ** 'ಸೂನಗೆ' ನೋ.

**ಶೂಲಿನಿ** (ನಾ). ೧. ಪಾರ್ವತಿ; ದುರ್ಗೆ. ೨. ಒಂದು ಮಂತ್ರದ ಹೆಸರು : ದುರ್ಗಾ ಕಾಳಿ . . . ಶೂಲಿನ್ಯಾದಿ ಮಹಾಮಂತ್ರಂಗಳಿಂ (ವಿವೇಕ. ೮೧). [ಸಂ. ಶೂಲಿನೀ]

**ಶೂಲೆ**₁ (ನಾ). ೧. ತೀಕ್ಷ್ಣವಾದ ನೋವು, – ವೇದನೆ : ಶೂಲೆ ಬಾಧಿಸುತಿಪ್ಪ ಸಂಕಟಕಾಱದಿಳಿಯೊಳು ದೊಪ್ಪದೊಪ್ಪನೆ ಕೆಡೆದು ಹೊರಳುತ ಮಿಗೆ ನರಳುತಿರಲು (ಬಸವಪು. ೪೯-೨೭) ; ಉಂಡ ಮೇಲೆ . . . ಸಂಕಟ ಪ್ರಾರಂಭವಾಗುತ್ತದೆ ೩-೪ ತಾಸುಗಳು ಸಂಕಟ ಶೂಲ ಎಲ್ಲವೂ ಕಾಡುತ್ತದೆ (ಮನೋಸಂ. ೭೮). ೨. = ಶೂಲೆ ೬ : 'ಶೂಲೆವೇನೆ' ಪರಾ. [ಸಂ. ಶೂಲ]

**ಶೂಲೆ**₂ (ನಾ). ೧. ಸೂಳೆ; ವೇಶ್ಯೆ. ೨. ಅಪರಾಧಿಗಳನ್ನು ಶೂಲಕ್ಕೇರಿಸುವ ಕಂಬ ; ಶೂಲದ ಮರ. [ಸಂ. ಶೂಲಾ]

**ಶೂಲೆಗಂಟು** (ನಾ). ತೀವ್ರವಾದ ಹೊಟ್ಟೆನೋವಿನಿಂದ ಹೊಟ್ಟೆಯಲ್ಲಿ ಉಂಟಾಗುವ ಗೆಡ್ಡೆ : ಶೂಲೆಗಂಟಗಃ- ಹುಣಸೆಚೆಕ್ಕೆ ಕೆಂಡವಾಗಲೀ ಕರಟದ ಕೆಂಡವಾಗಲೀ ಹಾಕಲು ಶೂಲೆಗಂಟು ಮೊದಲಾದುದೆಲ್ಲ ಮಾಣ್ಬುಂ (ವಿಷವಿ. ೬೪). [ಶೂಲೆ₁ + ಗಂಟು]

**ಶೂಲೆಗೂಡು** (ಕ್ರಿ). ತೀಕ್ಷ್ಣವಾದ ವೇದನೆಯಿಂದ ಕೂಡಿರು : ನರವು . . . ಕಠಿಣವಾಗಿ ಅತಿವೇಗವಾಗಿ ಇಲಿಯ ನಡೆಯಂತೆ ನಡೆಯುತ್ತಿದ್ದರೆ ಶೂಲೆಗೂಡಿದ ಕ್ಷಯವೆಂದರಿವುದು (ಸಕವ್ವ. ೧೨). [ಶೂಲೆ₁ + ಕೂಡು₁]

**ಶೂಲೆರೋಗ** (ನಾ). = ಶೂಲ ೬ : ಶೂಲಮಂತ್ರವನಱಿದೆಯಾದಡೆ ಶೂಲೆರೋಗ ನಿರೋಗವಹುದು (ಬಸವಪು. ೪೯-೨೮) ; ಶ್ರಾವಕಾಚಾರ್ಯನಂ ಶೂಲೆರೋಗಂ ಕಾಡಲ್ (ಪಾರ್ಶ್ವಪು. ೪-೯೪). [ಶೂಲೆ₁ + ರೋಗ]

**ಶೂಲೆವೇನೆ** (ನಾ). = ಶೂಲ ೬ : ಇಂಗು ಬಜೆ . . . ಮೆಣಸು ಮದ್ದಂ ಪಿಂಗಿಸುಗುಂ ಶೂಲವೇನೆಯಂ ತತ್ಕ್ಷಣದೊಳ್ (ಅಶ್ವಶಾ. ೧೧-೧೩). [ಶೂಲೆ + ಬೇನೆ]

**ಶೂಲೆವ್ರಣ** (ನಾ). ಶೂಲೆರೋಗದಿಂದಾದ ಹುಣ್ಣು : ಇಲಿಪಾಷಾಣ ವರಹತೂಕ ಇಕ್ಕಿ ಗೋಧಿ ಹಿಟ್ಟು ಸುತ್ತ ಕಟ್ಟಿ ಇಪ್ಪೇಎಣ್ಣೆಯಲ್ಲಿ ಮರ್ದಿಸಿ ಅದ . . . ಮೂವತ್ತೊಂದು ದಿನ ಆಱಿಸಿ ಕಿವಿಯಲ್ಲೆಱಿಯಲು ಶೂಲೆವ್ರಣ ಮಾಣ್ಬುಂ (ವಿಷವಿ. ೧೭೪). [ಶೂಲೆ₁ + ವ್ರಣ]

**ಶೂಲೋದ್ಭವ** (ನಾ). [ಜ್ಯೋತಿ] ಶೂಲಯೋಗದಲ್ಲಿ ಹುಟ್ಟಿದವನು : ಶೂಲೋದ್ಭವಂ ಧನದೂರಂ ವರಶೀಲಶೌರ್ಯನಿಧಿ (ಜಾತತಿ. ೧೩-೧೫). [ಸಂ.]

**ಶೂಲ್ಯ** (ಗು). ೧. ಚುಚ್ಚುಗಂಬಿಯಿಂದ ಬೇಯಿಸಿದ, – ಪಕ್ವಮಾಡಿದ. (ನಾ). ೨. ಸುಟ್ಟ ಮಾಂಸ : "ಶೂಲ್ಯಂ, ಭಟಿತ್ರಂ – ಈ ೨ ಸುಂಟಗೆ" (ಹಲಾಯು. ೫೪-೧೬೮). [ಸಂ.]

**ಶೂಳಿ** 'ಶೂಲಿ' ನೋ.

**ಶೃಂಖಲ, ಶೃಂಖಳ** (ನಾ). ೧. ಸರಪಣಿ; ಸಂಕೋಲೆ. ೨. ನಡುವಿಗೆ ಕಟ್ಟುವ ಸರಪಣಿ; ಮೇಖಲೆ. ೩. ಉಡಿದಾರ; ಸೊಂಟದ ದಾರ : "ಶೃಂಖಲಂ ಪುಂಸ್ಕಟ್ಯಾಂ – ಪುರುಷನ ಉಡದಾರ, ಕಟಿಸೂತ್ರ" (ಸಿದ್ಧಾಂತಿ. ೨೦೧). ೪. ಆನೆಯ ಕಾಲಿಗೆ ಕಟ್ಟುವ ಸರಪಣಿ : "ಶೃಂಖಲಂ, ಅಂದುಕಃ , ನಿಗಳಃ – ೩ ಆನೆಯನ್ನು ಕಟ್ಟಿಹಾಕುವ ಲೋಹದ ಸರಪಣಿ" (ಸಿದ್ಧಾಂತಿ. ೨೪೮). **ಶೃಂಖಳ** : "ಹಂಜೀರಮಂದುಕಂ ಶೃಂಖಳಂ[ಪಾಠಾಂ. ಲಂ]ಪಾದಬಂಧಂ ನಿಗಳಮೆನಲು ಸಂಕಲೆಯೆನಿಕ್ಕುಂ" (ಮಂಗರಾ. ೪೬-೨). [ಸಂ.]

**ಶೃಂಖಲಕ, ಶೃಂಖಳಕ** (ನಾ). ೧. ಸರಪಣಿ. ೨. ಮರದ ಕಾಲ್ಬಂದಿಯಿಂದ ಕೂಡಿದ ಒಂಟೆ ಮುಂತಾದ ಪ್ರಾಣಿಗಳ ಮರಿ. ೩. ಒಂಟೆ : "ದಾಸೇರಕಃ, ಕ್ರಮೇಳಕಃ, ಉಷ್ಟ್ರಃ . . . ಶೃಂಖಲ[ಪಾಠಾಂ. ಳ]ಕಃ – ಈ ೭ ಒಟ್ಟೆ" (ಹಲಾಯು. ೪೭-೧೨೫). **ಶೃಂಖಳಕಃ** ೩. "ರವಣಮುಷ್ಟ್ರಂ . . . ಶೃಂಖಳಕಮೆನೆ ದಾಸೇರಮೆನಲೊಂಟೆಗಭಿಧಾನಮಕ್ಕುಂ" (ಮಂಗರಾ. ೫೫-೭). [ಸಂ.]

**ಶೃಂಖಲಾಬದ್ಧ** (ಗು). ೧. ಸರಪಣಿಯಿಂದ ಕಟ್ಟಿದ ; ಸಂಕೋಲೆಯಿಂದ ಬಂಧಿಸಿದ : ಶೃಂಖಲಾಬದ್ಧ ಘಂಟಾಸ್ಯನಾಮುದದೆ ಕಾಂಸ್ಯಂ ಹೇಮಕೃತ ಪುಣ್ಯದಿಂದಪೂರ್ವದ ಸುಘಂಟಾಕರ್ಣನಧಿಕಪದಮಂ ಪಡೆದು . . . ಇರ್ಪನಾ ಶಿವಪುರದೊಳು (ವೀಶೈವು. ೭-೫-೪೦). (ನಾ). ೨. ಸರಪಣಿಯ ಕೊಂಡಿಗಳಂತೆ ಸೇರಿಕೊಂಡಿರುವುದು , – ಸಂಗತವಾದುದು : ಅವನು ಆ ಮುಂದಿನ ಒಂದೊಂದೇ ಸಂಗತಿಗಳನ್ನು ಶೃಂಖಲಾಬದ್ಧವಾಗಿ ಮಾಡುತ್ತ ವಿಚಾರಮಗ್ನನಾಗಲು (ಅಂಬಿಕೆ. ೧೩೫). [ಸಂ.]

**ಶೃಂಖಲೆ** (ನಾ). ೧. = ಶೃಂಖಲ ೧ : ಲಲಿತನಿಜಕನಕಮಯಶೃಂಖಲೆಯಿಂ ಹರಿಚರಣಯುಗಳಮಂ ನಿಯಮಿಸಿ . . . ಮುಂದೆ ಸಾರ್ಚಿದನಾಗಳ್ (ಕಾದಂಪೂ. ೬೪೭). ಪ್ರಣವಂ ಶೃಂಖಲೆ ಸಾರಮೇಯಮಮರ್ದಾಮ್ನಾಯಂ ಪುರಾಣವ್ರಜಂ ಶಣಸೂತ್ರಂ (ಶಬಶಂ. ೩-೨೫). ೨. = ಶೃಂಖಲ ೪ : "ನಿಗಳಃ, ಪಾದಬಂಧಃ, ಹಿಂಜೀರಃ, ಶೃಂಖಲಾ, ಅಂದುಕಃ – ಈ ೫ ಆನೆಯ ಕಾಲ್ಗಟ್ಟು" (ಹಲಾಯು. ೩೭-೭೦). ೩. ಒಂದು ಬಗೆಯ ಬಳ್ಳಿ : "ಕಾಂಡೇರಿ ಪವಿಮೂರ್ತಿ ಶೃಂಖಲೆಯಸ್ಕಿವಳ್ಳಿ ಮಂಗುರವಳ್ಳಿ" (ಮಂಗರಾ. ೪೩-೪೩). [ಸಂ ಶೃಂಖಲಾ]

**ಶೃಂಖಳ** 'ಶೃಂಖಲ' ನೋ.

**ಶೃಂಖಳಕ** 'ಶೃಂಖಲಕ' ನೋ.

**ಶೃಂಗ** (ನಾ). ೧. ಪ್ರಾಣಿಯ ಕೊಂಬು, – ಕೋಡು : "ವಿಷಾಣಂ, ಶೃಂಗಂ – ಈ ೨ ಕೊಂಬು" (ಹಲಾಯು. ೪೫-೧೧೩) ; ಮುತ್ತ ಸಿಂಗಕ್ಕೆ ತನ್ನ ಕೇಸರಮ ಜಾಲಮಾಗಿ ಪರಿಣಮಿಸೆ . . . ಕಡವೆ ಕೇಳ್ದು ನೆಟ್ಟನಾ ಎಡೆಗೆ ಬಂದು ತನ್ನೆರಡುಂ ಶೃಂಗದಿಂ ಸಿಕ್ಕುಗೊಂಡಲಂ ಬಿಡಿಸುತಿರೆಯುಂ (ರಾಮಾಶ್ವ. ೪೨-೨೮). ೨. ಬೆಟ್ಟದ ತುದಿ ; ಶಿಖರ : ಕುಡೆ ವೈಡೂರ್ಯ ಮರೀಚಿಜಾಳಜಳದಿಂ ಮುಂ ಪಾದ್ಯಮಂ ಸೇಸೆಯಂ ಕುಡೆ ಶೃಂಗಂ . . . ಮಂದರಮಂದದೇನಡರ್ದುದೋ ದೇವೇಂದ್ರನೈರಾವತಂ (ಮಲ್ಲಿಪು. ೧೨-೯೩) ; ಗಿರಿಶೃಂಗೋತ್ತುಂಗ ಚಂಚಚ್ಚಟುಲಖರರುಚಿಗ್ರಾವದಗ್ರಂಗಳೊಳ್ (ರಾಜಶೇ. ೫-೫೦). ೩. ಕೊಂಬಿನಾಕಾರದ ಒಂದು ಬಗೆಯ ಊದುವ ವಾದ್ಯ. ೪. ಎತ್ತರ ; ಔನ್ನತ್ಯ. ೫. ಆಳ್ವಿಕೆ; ಪ್ರಭುತ್ವ. ೬. ಮುಖ್ಯವಾದುದು; ಪ್ರಧಾನವಾದುದು: "ಶೃಂಗಂ, ಪ್ರಧಾನಂ – ಈ ೨ ಕಱುದಮೆಂಬುದು" (ಹಲಾಯು. ೧೩೭-೩೫). ೭. ದೊರೆ; ರಾಜ. ೮. ಆನೆಯ ದಂತ ; ಕೋರೆ : "ಪ್ರಭು ದೊಡ್ಡಿತು ಗಿರಿದುದಿವಿಭಕೋಡ್ಗಳ್ ಶೃಂಗ ಶಬ್ದ" (ನಾನಾಕಂ. ೨೪-೭೭). ೯. ಮರದ ತುದಿ. ೧ , ೯ : ವರವೃಷಭನಂತೆ ಶೃಂಗಾಂಕಿತಂ ಪರಮಮಂಗಳನಂತೆ ಕುಜನಾಮದಿಂ ಶರನಿಧಿಯುಮೊಲಖಿಳ ಪಕ್ಷಿಗಳ ರವದಿಂದೆ . . . ಒಪ್ಪುವೆತ್ತೊಂದು ವಟವೃಕ್ಷವು (ನವಮೋ. ೮-೩೮).

೧೦. ಚಂದ್ರನ ಕೋಡು,– ಕೊಂಬು. ೧೧. ಪಿಚಕಾರಿ; ಜೀರ್ಕೊಳವೆ. ೧೨. ಧನುರ್ದಂಡ. ೧೩. ಕಮಲ. ೧೪. ಕುಚ. ೧೫. ಒಬ್ಬ ಮುನಿಯ ಹೆಸರು; ಋಷ್ಯಶೃಂಗ. ೧೬. ಒಂದು ಬಗೆಯ ಸಸ್ಯ; ಜೀವಕ. ೧೭. [ರೇಖಾಗ] ತ್ರಿಕೋನದ ಮೂಲೆ, – ತುದಿ : ಪ್ರತಿಯೊಂದು ಮೂಲ ಅಥವಾ ಶೃಂಗ(vertex)ದಲ್ಲಿಯೂ ಇವುಗಳಿಗೆ ಕ್ರಮವಾಗಿ ೩, ೩, ೪, ೩, ೫ ಮುಖಗಳು ಸೇರುತ್ತವೆ (ಗಣಿಚಿ. ೨೮). ೧೮. [ಜ್ಯೋತಿ] ಒಂದು ನಕ್ಷತ್ರಪುಂಜದ ಹೆಸರು : ರೋಹಿಣಿಯು ಶೃಂಗದ ಬಲ ಅಡಿಯಲ್ಲಿದೆ (ನಕ್ಷತ್ರ. ೮). [ಸಂ.]

**ಶೃಂಗಬೇರ** (ನಾ). ಹಸಿಶುಂಠಿ; ಅಲ್ಲ : "ಆರ್ದ್ರಕಂ, ಶೃಂಗಬೇರಂ – ಈ ೨ ಅಲ್ಲದ ಕೊಂಬು" (ಹಲಾಯು. ೧೧೦-೪೬೨). [ಸಂ.]

**ಶೃಂಗರ** 'ಸಿಂಗಾರ' ನೋ.

**ಶೃಂಗರಂಗೈ** 'ಸಿಂಗರಂಗೆಯ್' ನೋ.

**ಶೃಂಗರವಡು** 'ಸಿಂಗರವಡು' ನೋ.

**ಶೃಂಗರಿಸು** 'ಸಿಂಗಾರಿಸು' ನೋ.

**ಶೃಂಗರುಹೆ** (ನಾ). ಒಂದು ಬಗೆಯ ಸಸ್ಯ : "ಶೃಂಗರುಹಾ - ಶೃಂಗಾಟಕ" (ಓಷಧಿ. ೧೭೦). [ಸಂ. ಶೃಂಗರುಹಾ]

**ಶೃಂಗವೇರ** (ನಾ). = ಶೃಂಗಬೇರ : "ಶೃಂಗವೇರಮನೆ ಹಸಿಯಲ್ಲವಕ್ಕು" (ಮಂಗರಾ. ೪೧-೩೫). [ಸಂ.]

**ಶೃಂಗಸಭೆ** (ನಾ). ರಾಷ್ಟ್ರಗಳ ಅತ್ಯುನ್ನತ ಅಧಿಕಾರಿಗಳು ನಡೆಸುವ ಸಭೆ ; ವರಿಷ್ಠರ ಸಭೆ : ರಾಷ್ಟ್ರದ ಅತ್ಯುನ್ನತ ಅಧಿಕಾರಿಗಳು ಶೃಂಗಸಭೆ ಸೇರಿ ರಾಷ್ಟ್ರದ ಏಳಿಗೆಯ ಬಗ್ಗೆ [illegible]ರ್ಚೆ ನಡೆಸಿದರು (ರೂಢಿ). [ಸಂ. ಶೃಂಗಸಭಾ]

**ಶೃಂಗಾಟ** (ನಾ). ೧. ನಾಲ್ಕು ದಾರಿಗಳು ಸೇರುವ ಸ್ಥಳ ; ಚೌಕ : "ಬಟ್ಟೆಗಳು ಕೂಡೆ ಶೃಂಗಾಟಮದು" (ಮಂಗರಾ. ೫೭-೫). ೨. ಒಂದು ಬಗೆಯ ಮುಳ್ಳಿನ ಬಳ್ಳಿ : "ಜಲ[illegible] ಶೃಂಗಾಟ(ಕ)" (ಓಷಧಿ. ೬೦). ೩. [ಜ್ಯೋತಿ] ನಾಭಸ ಯೋಗಗಳಲ್ಲಿ ಒಂದು : ಉದಯಿಸುತ ನವಮರಾಶಿಯೊಳ್ ನಿಂದೊಡೇಟುಮದು ಶೃಂಗಾಟಂ (ಜಾತತಿ. ೧೩-೨). [ಸಂ.]

**ಶೃಂಗಾಟಕ** (ನಾ). ೧. = ಶೃಂಗಾಟ ೧ : "ಬಟ್ಟೆಗೂಡಿದೆಡೆ ಶೃಂಗಾಟಕವೆಂಬುದು" (ಹಲಾಯು. ೪೮-೧೩೪). ೨. = ಶೃಂಗಾಟ ೨ : ತಾಲಪತ್ರ ಶೃಂಗಾಟಕನಿಚಯನಿಚಿತಂಗಳುಂ . . . ದುರ್ಗಮಂಗಳಪ್ಪ ದುರ್ಗಂಗಳೊಳ್ (ಆದಿಪು. ೧೩-೫೭ ವ); ಮದಮತಂಗಜಾಂಘ್ರಿತಳಮನಳಜಿಸುವ ಶೃಂಗಾಟಕಂಗಳಂ ಸಂಗಳಿಸಿಯುಂ (ಪುಷ್ಪಪು. ೭-೭೯). ೩. ಒಂದು ಬಗೆಯ ಮುಳ್ಳುಗಿಡ; ಕೊಳಗುಳಿಕೆ; "ಕೋಕಿಲಾಕ್ಷ" (ಪಂಡಿತ. ೨೩೪). ೪. = ಶೃಂಗಾಟ ೩ : ಶೃಂಗಾಟಕಸಂಭವನನವರತಂ ಸುಖಮಿರ್ಪಂ ಹಲಸಮುದ್ಭವಂ ಕೃಷಿಗೆಯ್ವಂ (ಜಾತತಿ. ೧೩-೧೩). ೫. [ವೀಶೈ] ಎರಡು ಹುಬ್ಬುಗಳ ನಡುವಿನ ಸ್ಥಳ ; ಭ್ರೂಮಧ್ಯಸ್ಥಾನ : ಸ್ವಸ್ಥ ತುರೀಯಾತೀತಾವಸ್ಥೆಯನೊಳಕೊಂಡು ತೊಳಪ ಶೃಂಗಾಟಕ ಪದ್ಮಸ್ಥಿತನೊಳನಘನೊಳ್ ನಿರವಸ್ಥನೊಳೊಡವೆರೆದು ಬಾಹ್ಯಮತಿಯಚೆತಿರ್ದಂ (ಶಬಶಂ. ೨-೧೧೩) ; ಭಂಡಿಸಿದ ಚಾರ್ವಾಕಮುಖ್ಯದುಶ್ಶಾಸ್ತ್ರಗಳ ಮಂಡಿಸಿದ ರಾಜಭೃಂಗತ್ವದೊಳ್ ಶೃಂಗಾಟಕದ ಪದ್ಮಮಧ್ಯದಲ್ಲಿ . . . ರಾಮನಾಥಾಗ್ರಗಣ್ಯಂ (ಏಕೋಪು. ೮-೫೯). [ಸಂ.]

**ಶೃಂಗಾಟಕವ್ಯೂಹ** (ನಾ). ಒಂದು ಬಗೆಯ ಸೇನಾರಚನೆ ; ನಾಲ್ಕು ದಾರಿಗಳು ಕೂಡುವ ಸ್ಥಳದಂತಿರುವ ಸೇನಾರಚನೆ : ಸಮಭೂಮಿಯೊಳ್ ಚತುರ್ಬಲಂಗಳನೊಂದುಮಾಡಿ ಶೃಂಗಾಟಕವ್ಯೂಹಮನೊಡ್ಡಿ ನಿಂದಾಗಳ್ (ಪಂಪಭಾ. ೧೨-೧೭ ವ). [ಸಂ.]

**ಶೃಂಗಾರ** (ನಾ). ೧. ಅಲಂಕಾರ ; ಭೂಷಣ : "ಸಿಂಗರಮನೆ ಶೃಂಗಾರ" (ಕವಿಕಂ. ೨೬೫); ಶರಣರಿಗೆ ನೊಸಲ ವಿಭೂತಿಯೇ ಶೃಂಗಾರ (ಬಸವ. ೭೪); ಆ ಸ್ವಾಮಿಗಾನಲ್ತು ಮೊದಲೊಳ್, ಕರ್ಣನ್. ಸೇನಾಧಿಪತ್ಯಮೇ, ಕರ್ಣನ್ ; ಶೃಂಗಾರಮೇ, ಕರ್ಣನ್ (ಅಶ್ವತ್ಥಾ. ೧೮-೩೭೯); ಬಂಗಾರವಿದ್ದರೆ ಶೃಂಗಾರ (ಗಾದೆ). ೨. ವಿಲಾಸದ ಉಡುಗೆ; ರಸಿಕವೇಷ : ತರುಣ ಶೃಂಗಾರದ ಮಹಾಬಂಧುರದ ನೂರ್ವರು ಕೌರವೇಂದ್ರನ ವರಕುಮಾರರು ಮುಂದೆ ಮೆಜೆದರು ಲಕ್ಷಣಾದಿಗಳು (ಕುಮಾವ್ಯಾ. ೮-೩೩). ೩. ಅನುರಾಗ; ಪ್ರಣಯ. ೪. ಕಾಮಲಾಲಸೆ ; ಕಾಮಾಸಕ್ತಿ. ೫. ಸಿಂದೂರ. ೬. ಗುರುತು; ಚಿಹ್ನೆ. ೭. ಲವಂಗ. ೮. ಹಸಿಶುಂಠಿ. ೯. ಸುಗಂಧಚೂರ್ಣ. ೧೦. ಕೃಷ್ಣಾಗರು; ಕಾಳಾಗರು. ೧೧. [ಕಾವ್ಯಮೀ] ನವರಸಗಳಲ್ಲಿ ಒಂದು ; ವಿಭಾವ, ಅನುಭಾವ ಮತ್ತು ಸಂಚಾರಿಭಾವಗಳಿಂದ ಪರಿಪುಷ್ಟವಾದ 'ರತಿ' ಎಂಬ ಸ್ಥಾಯಿಭಾವದಿಂದ ವ್ಯಂಗ್ಯವಾಗುವ ರಸ : ವೀರಾದ್ಭುತಕರುಣಾಶೃಂಗಾರ ಭಯಾನಕಸರೌದ್ರಬೀಭತ್ಸಮಹಾಸಾರತರ ಹಾಸ್ಯಶಾಂತಾಧಾರಂ ನವವಿಧವಿಕಲ್ಪಮಾ ರಸಮಾರ್ಗಂ (ಕವಿರಾ. ೩-೧೮೯); ಶೃಂಗಾರಾಂಭೋಧಿವೇಳಾವಿಳಸನದೆಸಕಂ . . . ಎಂಬಂತೆ ಲೀಲಾಪಾಂಗಜ್ಯೋತ್ಸ್ನಾಮೃತಾಂಭಃಪ್ಲವಧವಳಿತದಿಗ್ಭಿತ್ತಿ ಬಂದತ್ತು ಪುಷ್ಪಾಸ್ತ್ರಂಗೇಕಚ್ಛತ್ರಮಾಯ್ತಾ ಜಗಮೆನೆ ಭರತಾಂತಃಪುರಸ್ತ್ರೀಸಮೂಹಂ (ಆದಿಪು. ೧೧-೪೪); ಶೃಂಗಾರಾದಿಗಳಪ್ಪ ರಸಂಗಳ್ ವರ್ತಿಸುಗುಮಂತವಂತೆ ವಲಂ ಕಾವ್ಯಾಂಗಕ್ಕೆ ಸತ್ಕ್ರಿಯಾರೂಪಂಗಳ್ ರತ್ಯಾದಿ ಭಾವಸಂಪನ್ನಂಗಳ್ (ಕಾವ್ಯಾವ. ೭೯೩). [ಸಂ.]

**ಶೃಂಗಾರಂಗೆಯ್** (ಕ್ರಿ). ಅಲಂಕಾರಮಾಡಿಕೊಳ್ಳು; ಸಿಂಗರಿಸಿಕೊಳ್ಳು : ಚಿತ್ರಚೀನಾಂಶುಕಸುಗಂಧಾನುಲೇಪನ ನೂತ್ನರತ್ನಾಭರಣಂಗಳಿಂ ಶೃಂಗಾರಂಗೆಯ್ದು ಪರಿವೇಷ್ಟಿಸಿರ್ದಂಗನಾಜನಂಗಳಿಂ ಶೃಂಗಾರರಸಮುಂ . . . ನೆಗಟುತ್ತುಮಿರೆ (ಜಗವಿ. ೨-೩೯ ವ); ಮುಂದಿಟಿಪಿದ ಸುಗಂಧಾನುಲೇಪನ ಕುಸುಮವಸನಭೂಷಣಂಗಳಿನರಸಿಯುಂ ತಾನುಂ ಶೃಂಗಾರಂಗೆಯ್ದು ವಿಳಾಸಿನೀಜನಕ್ಕಮಿಾಯಲೊಡಂ (ಚಂದ್ರಪ್ರ. ೭-೧೫೦ ವ). [ಶೃಂಗಾರ + ಕೆಯ್$_1$]

**ಶೃಂಗಾರಂಬೆಱು** (ಕ್ರಿ). ಅಲಂಕಾರವನ್ನು ಹೊಂದು; ಶೃಂಗಾರದಿಂದ ಕೂಡಿರು: ಮಧುರಶೀತಳಸುರಭಿಸಲಿಲಸಂಭೃತಕನಕಭೃಂಗಾರಮಂ ಶೃಂಗಾರಂಬೆತ್ತು ಪಿಡಿದು ನಿಂದ ವರುಣಾಂಗನೆಯಿಂ (ಶಬಶಂ. ೧-೭೯ ವ). [ಶೃಂಗಾರ + ಪೆಱು$_1$]

**ಶೃಂಗಾರಗೊಳ್ಳು** (ಕ್ರಿ). = ಶೃಂಗಾರಂಬೆಱು : ಕುಶಲಪರಿಕರ್ಮದಿಂ ಶೃಂಗಾರಗೊಂಡು ಕಲೆ ಬಾಡಿರುವ ಮೊಗವೆತ್ತಿ ಬೇಡುತಿಹ ವರವೇ (ಮರದೇ. ೧೭-೫). [ಶೃಂಗಾರ + ಕೊಳ್ಳು$_1$ (< ಕೊಳ್$_1$)]

**ಶೃಂಗಾರಚೇಷ್ಟೆ** (ನಾ). ಪ್ರಣಯವನ್ನು ವ್ಯಕ್ತಪಡಿಸುವ ಹಾವಭಾವ; ಕಾಮಚೇಷ್ಟೆ : ಆ ದಿವಿಜವನಿತೆಯರನಿತಾನುಂ ತೆಱದ ಶೃಂಗಾರಚೇಷ್ಟೆಗಳನುಪಯೋಜಿಸಿಯುಮೆಂತುಮೇಗೆಯ್ದುಮಾ ಜಂಗಮಮೇರುವೆನಿಸಿದ ಸೌಜನ್ಯಕಂದಾಂಕುರನಂ ಸಂಚಳಿಸಲಾಱದೆ ಸಿಗ್ಗಿನನುಕಂಪೆಯಂ ತರೆ (ಶಾಂತಿಪು. ೯-೯೯ ವ); ಲೋಕದಲ್ಲಿ ಮನುಷ್ಯರಿಗೆ ಹಲವು ಬಗೆಯ ಶೃಂಗಾರಚೇಷ್ಟೆಗಳನ್ನು ಮನ್ಮಥನೇ ಹೇಳಿಕೊಡುತ್ತಾ ಇದ್ದಾನೆ (ವಚಿಊ. ೧೮). [ಸಂ. ಶೃಂಗಾರಚೇಷ್ಟಾ]

**ಶೃಂಗಾರದೃಷ್ಟಿ** (ನಾ). ೧. ಪ್ರಣಯಭಾವದ ನೋಟ. ೨. [ನಾಟ್ಯ] ಪ್ರೇಮವನ್ನು ವ್ಯಕ್ತಪಡಿಸುವ ದೃಷ್ಟಿ ; IP "ಸಂತೋಷದಿಂದ ಮತ್ತೆ ಮತ್ತೆ ನೋಡುತ್ತ ಆಲಿಗಳನ್ನು ಚಲಿಸುವುದು. ವಿ–ಹರ್ಷ ಮತ್ತು ಅನುಗ್ರಹಗಳನ್ನು ತೋರಿಸುವಾಗ" (ಲಾಸ್ಯರಂ. ೨೭೬ ಗದ್ಯಾನುವಾದ) : ಒದವಿದ ಕಣ್ಣಾಲಿಗಳತಿ ಮುದದಿಂದಂ ನೋಡಿ ನೋಡಿ ಮರಳ್ವಂ ತಿರುಗಲ್ ಉದಯಿಸುವಪಾಂಗಮದು ತಾಂ ಮದವಾರಣ ಗಮನೆ ಕೇಳ್ ಕಟಾಕ್ಷಮೆನಿಕ್ಕುಂ – ಇದು ಶೃಂಗಾರದೃಷ್ಟಿ (ಲಾಸ್ಯರಂ. ೩-೧೦). [ಸಂ.]

**ಶೃಂಗಾರಯೋನಿ** (ನಾ). ಕಾಮ ; ಮನ್ಮಥ : "ಶೃಂಗಾರಯೋನಿಃ ಶ್ರೀಪುತ್ರಃ ಶೂರ್ಪಕಾರಾತಿಃ - ೩ ಮನ್ಮಥನ ಹೆಸರುಗಳು" (ಸಿದ್ಧಾಂತಿ. ೧೮). [ಸಂ.]

**ಶೃಂಗಾರಸಾರ** (ನಾ). ಶೃಂಗಾರರಸವನ್ನು ಸತ್ತ್ವವನ್ನಾಗಿ ಉಳ್ಳವನು : ಇವಳಂ ಶೃಂಗಾರಸಾರಂ ಕುಸುಮಶರನೆ ಮೇಣ್ ಮಾಡಿದಂ (ಕಾವ್ಯಾವ. ೪೨). [ಸಂ.]

**ಶೃಂಗಾರಾಜಿತೆ** (ನಾ). ೧. ಶ್ರೇಷ್ಠವಾದ ಕೋಡುಗಳಿಂದ ಶೋಭಿಸುವವಳು ; ಕಾಮಧೇನು. ೨. ಶ್ರೇಷ್ಠವಾದ ಪರ್ವತಶೃಂಗದಿಂದ ಶೋಭಿಸುವವಳು ; ಕಾವೇರಿ. ೧ , ೨ : ಚಾರುಪಯೋಧರೆ ಮಹಿಮಾಧಾರೆ ಸದಾನಿಮಿಷಸೇವ್ಯರಸಯುತೆ ವರಶೃಂಗಾರಾಜಿತೆಯೆನಿಸುವ ಕಾವೇರಿ ಧರಾಕಾಮಧೇನುವೆನಿಪುದು ಪುಸಿಯೇ (ರಾಜಶೇ. ೨-೮). [ಸಂ. ಶೃಂಗಾರಾಜಿತಾ]

**ಶೃಂಗಾರಿ** (ಗು). ೧. ಪ್ರಣಯಭಾವದ; ಅನುರಾಗದಿಂದ ಕೂಡಿದ. ೨. ಕಾಮಾಸಕ್ತಿಯುಳ್ಳ. ೩. ಸಿಂದೂರದ ಕಲೆಯುಳ್ಳ. (ನಾ). ೪. ಅನುರಾಗಿ; ಪ್ರಣಯಿ. ೫. ಅಲಂಕಾರ; ಭೂಷಣ. ೬. ಪದ್ಮರಾಗ. ೭. ಆನೆ. ೮. ವೀಳೆಯದೆಲೆಯ ಬಳ್ಳಿ, — ಹಂಬು. [ಸಂ. ಶೃಂಗಾರಿನ್]

**ಶೃಂಗಾರಿಸು** (ಕ್ರಿ). ೧. ಅಲಂಕೃತವಾಗು; ಸಿಂಗರಗೊಳ್ಳು : ಕುಶನ ಕೇಳ್ ಪಟ್ಟಾಭಿಷೇಕದ ವಸತಿ ಶೃಂ[ಪಾಠಾಂ. ಸಿಂ]ಗಾರಿಸಿತು (ತೊರವೆ. ೨-೨-೧೪). ೨. ಪ್ರಣಯ ಭಾವವನ್ನು ವ್ಯಕ್ತಪಡಿಸು : ಮನೋಹರರೂಪಮಂ ನೆನೆವ ಯುವತಿ ಶೃಂಗಾರಿಸುವ ಚೇಷ್ಟೆಯನವಿರತಂ ನೆನೆವಂ (ಬಸವು. ೪೨-೨೧). [ಶೃಂಗಾರ + — ಇಸು$_3$]

**ಶೃಂಗಿ$_1$** (ಗು). ೧. ಕೊಂಬುಳ್ಳ ; ಕೋಡುಳ್ಳ. (ನಾ). ೨. ಬೆಟ್ಟ ; ಪರ್ವತ : "ಧರಮದ್ರಿ ಕುಧರಂ . . . ಶೃಂಗಿ ಸಾನುಮಂತಂ ಗೋತ್ರಮೆನಲು ಬೆಟ್ಟಕ್ಕೆ ನಾಮಂ" (ಮಂಗರಾ. ೨೯-೧). ೩. ಕೋರೆಯುಳ್ಳುದು ; ಆನೆ : ಶೃಂಗಿಯಲಿ ಉರಗನಲಿ . . . ದುಶ್ಚರಿತನಲಿ ವಿಶ್ವಾಸಿಸೆ (ಕುವ್ಯಾಸ. ೧ ೫೯). ೪. ಎತ್ತು; ವೃಷಭ. ೫. ಒಂದು ಬಗೆಯ ಜಿಂಕೆ; ಸಾರಂಗ : "ರುಷ್ಯಮದು ಮರುತ್ ಪೃಷತಮಾ ಶೃಂಗಿಯೆನೆ ಸಾರಂಗಮಕ್ಕು" (ಮಂಗರಾ. ೪೮-೧೦) ; ಕಂಗಳ ಮಧ್ಯದ ಮಲೆಯಲ್ಲಿ ಒಂದು ನಿಸ್ಸಂಗ ಶೃಂಗಿ ಮೇವುತ್ತದೆ (ಸಕವ. ಕ. I, ೪೨-೧೫೦). ೬. ಕುದುರೆಗಳಲ್ಲಿ ಒಂದು ಬಗೆ : ಕರ್ಣಪ್ರದೇಶದಲ್ಲಿ ಕೀಲಿನಲ್ಲಿ ಸುಳಿಯುಳ್ಳ ಅಶ್ವವು ಶೃಂಗಿಯೆನಿಸಿಕೊಳ್ಳುವದು (ಸೌಗಂಧಿ. ೩೧೨-೮). [ಸಂ. ಶೃಂಗಿನ್]

**ಶೃಂಗಿ$_2$** (ನಾ). ೧. ಒಂದು ಬಗೆಯ ಮೂಲಿಕೆ; ಹೆರಿಗೆಹಾಲೆ : "ಶೃಂಗೀ, ವೃಷಭಃ, ವೃಷಃ – ೩ ಹೆರಿಗೆಹಾಲೆಯ ಹೆಸರು" (ಸಿದ್ಧಾಂತಿ. ೧೩೮). ೨. ಒಂದು ಬಗೆಯ ಔಷಧೀಮೂಲಿಕೆ; ಅತಿಬಜೆ : "ಶ್ಯಾಮಕಂದಂ ಶೃಂಗಿಯೆಂದೊಡತಿಬಜೆಯಕ್ಕು" (ಮಂಗರಾ. ೪೧-೩೬); ಇ(ಹಿ)ಂಗು ಬಜೆ ಚಿತ್ರಮೂಲಂ ಶೃಂಗಿಯುಮಜಮೋದೆ . . . ತಿಗಡಯಿಂತಿವನಿಂಗು ಮೊದಲ್ಮಾಡಿ ಕೊಳ್ಗೆ ಭಾಗೋತ್ತರಮಂ (ಅಶ್ವಶಾ. ೧೧೧-೭). ೩. ಒಂದು ಬಗೆಯ ಸಸ್ಯ; ಕಡಸಿಗೆ : "ಆ ಶೃಂಗಿ ಕಡಸಿಗೆ ದ್ಯುತಿಯೆನಲು ಮುಷ್ಟೆಯಕ್ಕು" (ಮಂಗರಾ. ೪೫-೪೮). ೪. ಒಂದು ಬಗೆಯ ಮರ ; ಭೂರ್ಜ. ೫. ಒಂದು ಬಗೆಯ ವಿಷ : ಸಿಡಿಲೇಂ ಶೇಷನ ದಾಡೆಯೇಂ ವಡಬನೇಂ ಕಾಲಾಗ್ನಿಯೇಂ ಶೃಂಗಿಯೇಂ ತಡೆದಾಂತಗ್ಗಳೆಯಂ ಗಡಂ ಮದನನೇಂ ಪಾಪಾರಿಯೇಂ ಕಾಲನೇಂ . . . ನಿಲಲ್ಕೆಟೆಗುಮೇ (ರತ್ನಾಶ. ೧೦೫). [ಸಂ. ಶೃಂಗೀ]

**ಶೃಂಗಿಕ** (ನಾ). ಒಂದು ಬಗೆಯ ವಿಷ : "ಶೃಂಗಿಕಃ . . . ವಿಸ್ಫುಲಿಂಗಃ — ಈ ೬ ವಿಷಭೇದಂಗಳ್" (ಹಲಾಯು. ೧೦೬-೨೫). [ಸಂ.]

**ಶೃಖಂಡ** (ನಾ). ಶ್ರೀಗಂಧ ; ಚಂದನ : ಶ್ರೀಬ್ರಹ್ಮೇಸ್ವರದೇವರ ನಂದಾದೀವಿಗೆಗಂ ಶೃಖಣ್ಡಕ್ಕಂ ನಾಲ್ಕುನಾಡ ಸುಂಕಮಂ ಪೂರ್ವ್ವಮರ್ಯ್ಯಾದೆಯಂ ಪ್ರತಿಪಾಳಿಸಿ ಕೊಟ್ಟ ಸಾಸನಂ (ಕಇ. ೧೧೫-೧೯-೨೫ ; 1052). 'ಸಿರಿಕಂಡ' ಪರಾ. [< ಸಂ. ಶ್ರೀ ಖಂಡ]

**ಶೃಗಾಲ** (ನಾ). ನರಿ ; ಜಂಬುಕ : ಪಡುವಣದಡವಿಯ ರಾಜಕಾರಣಪಟು, ಬಂದಿತಾ ಶೃಗಾಲ (ದ್ಯಾವಾಪೃ. ೯-೨). [ಸಂ.]

**ಶೃಣಿ** (ನಾ). ಅಂಕುಶ : ಇಸೆ ಮದನನಾಗಳ್ಕುಸುಮಬಾಣಮಂ ಬಲುನೊಂದು ವಿರಹವಿಹ್ವಲತೆಯಿಂ ಕಯ್ಯ ಶೃಣಿ ನೆಲದಲ್ಲಿ ಬೀಳೆ ಧೈರ್ಯದ ಬೆಸುಗೆ ಬಿರ್ಚೆ ತನು ಕಾಮಾಗ್ನಿಯಿಂ ಬೆಂದುದು (ಕುಮಾಪು. ೩-೭೨). [ಸಂ.]

**ಶೃತ** (ಗು). ೧. ಕುದಿಸಿದ ; ಮರಳಿಸಿದ : ಔಷಧಗಳನಿಡಿದು ಜಜ್ಜುಗುಟ್ಟಿ ನೀರಿನಲ್ಲಿ ಹಾಕಿ ಚತುರ್ಭಾಗಾವಶೇಷವಾದುದು ಶೃತಕಷಾಯವೆನಿಸಿಕೊಂಬುದು (ವೈದ್ಯಸಾ. , I. ೧೧೫). (ನಾ). ೨. ಬೇಯಿಸಿದ ಪದಾರ್ಥ. ೩. ಕಾಸಿದ ತುಪ್ಪ : "ಶೃತಂ, ಪಕ್ವಂ — ಈ ೨ ಕಾಸಿದ ತುಪ್ಪ" (ಹಲಾಯು. ೪೬-೧೨೧). [ಸಂ.]

**ಶೆಂಕಟುನೀರ್** (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು : ಶೆಂಕಟುನೀರ್ (ಎಇ. XVIII, ೧೩೯-೧೯; ೧೪೩೪). [← ತಮಿ. ಚೆಙ್ಕಟುನೀರ್]

**ಶೆಂತಮಿಳ** (ನಾ). ಶುದ್ಧವಾದ ತಮಿಳುಭಾಷೆ : ಶೆನ್‌ತಮಿಳದೊಳಗಿನ ಅತಿಸರಸವಾದ ಕುರಲ್ ಎಂಬ ಪ್ರಾಚೀನಕಾವ್ಯದಲ್ಲಿ ಸಂಸ್ಕೃತಶಬ್ದಗಳು ಬಹುತರ ಕಾಣಿಸುವುದಿಲ್ಲ (ಮುಂಬಯಿ. ೪-೧೨೬). 'ಚೆಂದಮಿಟುಳ್' ಪರಾ. [← ತಮಿ. ಚೆನ್ತಮಿಟುಳ್]

**ಶೆಂಬಾಜ** (ನಾ). ಒಬ್ಬಾತನ ಹೆಸರು : ಕನ್ನವಾಡ ಗಂಗವಾಡ ಬಳೆಯವಾಡ ರೆರ್ನಾಡಾಳ ಸಿಯಳಾಚಿಸಾಮಿ ಸರ್ಬರಸ ಕೊಟ್ಟೋರ್ ಶಿನ್ತರ್ಗೆ ಆ ಶೆಂಬಾಜ ಗೆಯೋದಂ (ಮೈಆರಿ. ೧೯೨೯, ೧೧೮-೨; 820). [?]

**ಶೆಂಚೆ** 'ಶಂಪೆ$_2$' ನೋ.

**ಶೆಟುವಿ** 'ಸೆಟುವಿ$_2$' ನೋ.

**ಶೆಟ್ಟಿ$_1$** 'ಸೆಟ್ಟಿ' ನೋ.

**ಶೆಟ್ಟಿಗಾರ** 'ಸೆಟ್ಟಿಕಾಱ' ನೋ.

**ಶೆಡ್ಡು, ಷೆಡ್ಡು** (ನಾ). ದನಕರುಗಳನ್ನು ಕಟ್ಟುವುದು, ಸಾಮಾನುಗಳನ್ನು ಶೇಖರಿಸಿ ಇಡುವುದು, ವಾಹನಗಳನ್ನು ನಿಲ್ಲಿಸುವುದು ಇತ್ಯಾದಿಗಳಿಗಾಗಿ ಕಟ್ಟಿರುವ ಕೊಠಡಿ : ಡ್ರೈವರು ಕಾರು ಸ್ಟಾರ್ಟ್‌ಮಾಡಿ ಶೆಡ್ಡಿನಿಂದ ಹೊರತಂದನು (ಗೋಪುರ. ೧೨೦). **ಷೆಡ್ಡು** : ಸಣ್ಣ ಜಿಂಕ್‌ಷೀಟ್ ಷೆಡ್ಡಿನಲ್ಲಿ ನಮ್ಮ ಹತ್ತಿಲಲ್ಲೇ ವಾಸವಾಗಿದ್ದ ಚೆಲುವ . . . ಕೆಮ್ಮಿದ (ಚಿಂಗೂಲಿ. ೧). [← ಇಂ. Shed]

**ಶೆಬ್ಬಿ** 'ಶಬ್ಬಿ' ನೋ.

**ಶೆಲೆ** 'ಸೆಲೆ$_4$' ನೋ.

**ಶೆಲ್ಫು** (ನಾ). "(ಸಾಮಾನುಗಳನ್ನಿಡಲು) ಕಲ್ಲು, ಮರ, ಲೋಹ ಮುಂತಾದುವುಗಳ ಹಲಗೆಗಳನ್ನು ಜೋಡಿಸಿ ಮಾಡಿದ ಸಾಧನ : ಅವಳು ಶೆಲ್ಫಿನ ಮೇಲಿನ ಪುಸ್ತಕಗಳನ್ನು ತಿರುವಿಹಾಕುತ್ತಿದ್ದಹಾಗೆ . . . ಅವಳ ದೃಷ್ಟಿ ಅತ್ತ ತಿರುಗಿತು (ಜನಿವಾ. ೩೧). [← ಇಂ. Shelf]

**ಶೆಲ್ಲಹ** 'ಸೆಲ್ಲಹ' ನೋ.

**ಶೆಶಿಗಳಬೀವ** (ನಾ). ಒಬ್ಬಾತನ ಹೆಸರು : ಶೆಶಿಗಳಬೀವನುರ್ಗ್ಗವುಣ್ಣುಂಗಯ್ಯ ಕೂದಲಿಯ ನಿಱಿದು (ಎಕ VIII, ಸೊರಬ. ೨೦೨-೪; 955). [?]

**ಶೇಂಗಾ, ಸೇಂಗ, ಸೇಂಗಾ** (ನಾ). ಮೇಲೆ ಗಟ್ಟಿಯಾದ ಸಿಪ್ಪೆ ಇದ್ದು ಒಳಗಡೆ ಕಾಳುಗಳಿರುವ ಒಂದು ಬಗೆಯ ಕಾಯಿ; ನೆಲಗಡಲೆ ; ಕಡಲೆಕಾಯಿ : ತೆಂಗು. — ಶೇಂಗಾ, ಎಣ್ಣೆಯ ಕಾಳು ಮುಂತಾದುವುಗಳ ಬೇಸಾಯದಲ್ಲಿಯೂ . . . ಬಂಡವಾಳಗಾರಿಕೆಯು ತಲೆಹಾಕುವದು (ಮಾವಾದ. ೧೪೫). **ಸೇಂಗ** : ಎತ್ತು ಮೂಟೆ ಹೊತ್ತಂತೆ ಡಿಗ್ರಿಗಳನ್ನು ಹೊತ್ತು, ಸೇಂಗ ತಿಂದು ಸಂತೆಗಳಲ್ಲಿ ಟೊಪ್ಪಿಗೆಗಳನ್ನು ಮಾರಿ ಸತ್ತವರು ವಿಭೂತಿಗಳು (ಹುಚ್ಚುಹು. ೮೩). **ಸೇಂಗಾ** : ಸ್ವಲ್ಪ ಕಪ್ಪು ಅಥವಾ ಕೇಸರಿ ನೆಲವಾದರೆ ಮೆಣಸಿನಗಿಡ, ಸೇಂಗಾ . . . ಬೆಳೆಯಬಹುದು (ಕೃಷಿಪ್ರ. ೪೨); ಅವರ ಚಿತ್ತವೆಲ್ಲ ವ್ಯಾಪಾರದಲ್ಲಿ ರೂಪಾಯಿ ಆಣೆ ಕಾಸುಗಳಲ್ಲಿ ಬೆಲ್ಲದ ಪೆಂಟೆ, ಮೆಣಸಿನಕಾಯಿ ಸೇಂಗಾ ಧಾರಣೆಗಳಲ್ಲಿ (ಮೋಹಬ. ೪೧).

[← ಮರಾ. ಶೇಂಗ]

**ಶೇಕ** 'ಸೇಕ$_1$' ನೋ.

**ಶೇಕಡ** 'ಶೇಕಡಾ' ನೋ.

**ಶೇಕಡಾ, ಶೇಕಡ, ಸೇಕಡಾ** (ನಾ). ೧. ನೂರಕ್ಕೆ ಇಷ್ಟು; ಪ್ರತಿಶತ : ಪ್ರತಿನೂರಕ್ಕೆ, ಪ್ರತಿಶತ, ಶೇಕಡಾ (Per cent. ಪತ್ರಿನಿ. ೬೧). ೨. ಪ್ರತಿಶತವನ್ನು ಸೂಚಿಸುವ ಚಿಹ್ನೆ; (%) : ಇಂಗ್ಲೀಷ್‌ಭಾಷೆಯ ಮೇಲ್ಪಟ್ಟೆಯಲ್ಲಿ . . . ಸಮುಚ್ಚಯಾಕ್ಷರಗಳು, ಶೇಕಡಾ, ಆವರಣ, ಅರ್ಧವಿರಾಮ . . . ಇರುತ್ತವೆ (ಮುದ್ರಕ. ೨೩). **ಶೇಕಡ** : ೧. ಶೇಕಡ ಒಂಭತ್ತಕ್ಕಿಂತ ಕಡಿಮೆ (ಗಲಿಪ್ರ. ೭೮); ಎ ಮತ್ತು ಇ ಗುಂಪಿನವರು ಶೇಕಡ ೭-೭ ರಂತೆ (ಶಿಕ್ಷದ. ೩೪೬). **ಸೇಕಡಾ** : ೧. ಸಾಮಾನ್ಯವಾಗಿ ಒಬ್ಬರೇ ಮೇಷ್ಟರು ಇರುವ ಪಾಠಶಾಲೆಗಳ ಸಂಖ್ಯೆ ಹೆಚ್ಚು ; ಸೇಕಡಾ ಎಪ್ಪತ್ತರವರೆಗೆ ಎಂದು ಹೇಳಬಹುದಾಗಿತ್ತು (ರಂಗಕ. ೩೫).

**ಸೇಕಡಾವಾರು** = ನೂರರ ದರ; ಪ್ರತಿಶತ ಸಂಖ್ಯೆ : ಯಾವುದಾದರೂ ವಿತ್ತೀಯ ವರ್ಷದಲ್ಲಿ . . . ಗೊತ್ತುಮಾಡಬಹುದಾದಷ್ಟು ಸೇಕಡಾವಾರು ಮೊಬಲಗು (ಭಾದಾನ. ೧೫೩). [← ಹಿಂ. ಸೈಕಡೇ]

**ಶೇಕದಾರ, ಶೇಕ್ದಾರ, ಷೇಕ್‌ದಾರ** (ನಾ). ಭೂಕಂದಾಯವನ್ನು ವಸೂಲುಮಾಡುವ ಇಲಾಖೆಯ ಮೇಲ್ವಿಚಾರಕ, — ಅಧಿಕಾರಿ : ಆಯಾ ಗ್ರಾಮಗಳ ಶೇಕದಾರ, ಗೌಡ, ಶ್ಯಾನುಭಾಗ ವಗ್ಗೆರೆ ರೈತರಿಗೆ . . . ತಾಕೀತು ಮಾಡಿ

(ಮಹಾವಂ. II. ೬೦) ; ಅಮಲ್ದಾರರೂ, ಶೇಕದಾರರೂ ಫಾರಂನ್ನು ಶಾನುಭೋಗನಿಗೆ ಕೊಟ್ಟು ಬಿಟ್ಟರೆ ಕೃತಕೃತ್ಯರಾದವೆಂದುಕೊಳ್ಳುತ್ತಾರ (ಜಸ್ಟಿಸ್. ೨೪). **ಶೇಕ್ದಾರ** : ಶೇಕ್ದಾರ ಶಾನುಭೋಗರನು ಕರದುಕೊಂಡು ನಾಳಿನ ಸಂಜೆಗೈದಿರಿ (ಅರ್ಜಾವಿ. ೩೧-೪೦). **ಷೇಕ್‌ದಾರ** : ನಮ್ಮೂರಿಗೆ ಷೇಕ್‌ದಾರ್ರೇ ಕಣಪ್ಪೋ ಸರ್ಕಾರ! (ನಮ್ಮಳ್ಳಿ. ೧೧).

[← ಮರಾ. ಶೇಕದಾರ್, ಶೇಖದಾರ್]

**ಶೇಕದಾರಿ** (ನಾ). ಜಿಲ್ಲೆ ಅಥವಾ ಹೋಬಳಿಯ ಕಂದಾಯವನ್ನು ವಸೂಲು ಮಾಡುವ ಅಧಿಕಾರ, – ಹುದ್ದೆ : (ಕ). [← ಮರಾ. ಶೇಖದಾರೀ]

**ಶೇಕ್ದಾರ** 'ಶೇಕದಾರ' ನೋ.

**ಶೇಖದಾರಿಕೆ** (ನಾ). = ಶೇಕದಾರಿ. [ಶೇಕದಾರ + – ಇಕೆ]

**ಶೇಖರ**$_1$ (ನಾ). ಒಟ್ಟಾದುದು ; ಸಂಗ್ರಹ : ಆ ಜಿಲ್ಲೆಯಿಂದ ಸಂತ್ರಸ್ತರಿಗಾಗಿ ಸಾವಿರಾರು ರೂಪಾಯಿಗಳು ಶೇಖರವಾಯಿತು (ರೂಢಿ). 'ಶೇಖರಿಸು' ಪರಾ.

[ದೇ. ॥ ತಮಿ. ಚೇಕರಮ್; ಮಲ. ಶೇಖರಮ್; ತೆಲು. ಸೇಕರಮು]

**ಶೇಖರ**$_2$ (ನಾ). ೧. ತಲೆಯಲ್ಲಿ ಧರಿಸುವ ಹೂಮಾಲೆ, ಒಡವೆ ಮುಂತಾದವು: "ಆಪೀಡಃ, ಶೇಖರಃ – ಈ ೨ ಬಾಸಿಗಂ" (ಹಲಾಯು. ೯೧-೪೦೦). ೨. ಕಿರೀಟ; ಮಕುಟ. ೩. (ಬೆಟ್ಟದ) ತುದಿ; ಶಿಖರ. ೪. ಮುಖ್ಯನಾದವನು ; ಮುಖಂಡ : ಬಸವಯ್ಯ ಅಭಯಾಘನದಯಾನಂಬುಧಿಯ ಭಯಮುಭಯವವಮಾತ್ಮಶೇಖರನ ಎಂದುವುಂ ನಿಮ್ಮಡಿಯ ಸರಿಯೇ ತಂದೆ (ಬಸವು. ೫೯-೫೦). ೫. ತುದಿಯನ್ನು ಮುಟ್ಟಿದವನು : ಕೋಕನದಬಾಂಧವನುದಯಾಚಳಶಿಖರಶೇಖರನಾದಂ (ಶಂಪಭಾ. ೩-೧೧ ವ). [ಸಂ.]

**ಶೇಖರಣೆ** (ನಾ). ಕೂಡಿಸುವಿಕೆ ; ಸಂಗ್ರಹಿಸುವಿಕೆ : ಕೆಲವು ದಿನಗಳ ನಂತರ ನಿರಾಶ್ರಿತರಿಗಾಗಿ ಹಣ ಶೇಖರಣೆ ಮಾಡಬೇಕೆಂದು ಎಲ್ಲ ಶಿಬಿರದವರಿಗೂ ಸೂಚನೆ ಬಂದಿತು (ಗೋಪುರ. ೮೯); ಹಣದ ಗುಣ ಅದರ ಸದ್ವಿನಿಯೋಗದಲ್ಲಿದೆ; ಆದರೆ ಅದರ ಶೇಖರಣೆಯಲ್ಲಿಲ್ಲ (ರಂಗದೋ. ೨೫೮). [ಶೇಖರಿಸು + – ಅಣೆ]

**ಶೇಖರಿಸು** (ಕ್ರಿ). ಕೂಡಿಡು; ಸಂಗ್ರಹಿಸು : ಅನೇಕವರ್ಷಗಳು ಬೆನಿಸಿಯನರು ಖಾಸನ ಆಸ್ಥಾನದಲ್ಲಿದ್ದು ಬೇಕಾದಷ್ಟು ಒಡವೆಗಳನ್ನೂ ಚಿನ್ನವನ್ನೂ ಶೇಖರಿಸಿದರು (ಪ್ರವಾ. II. ೭) ; ಮಳೆಗಾಲದಲ್ಲಿ ಹೆಚ್ಚಾಗಿ ಬೀಳುವ ಮಳೆಯನ್ನು ಜಲಾಶಯಗಳಲ್ಲಿ ತಡೆಹಿಡಿದು, ಶೇಖರಿಸಿ ಬೇಸಿಗೆಯಲ್ಲಿ ಬಳಸುತ್ತೇವೆ (ಸಸಟ. ೪).

[ಶೇಖರ$_1$ + – ಇಸು$_3$. / ತೆಲು. ಸೇಕರಿಂಚು]

**ಶೇತಕಿ** (ನಾ). (ಉಕ) ವ್ಯವಸಾಯ ; ಕೃಷಿ ; ಒಕ್ಕಲುತನ.

**ಶೇತಕೀಶಿಕ್ಷಣಶಾಲೆ** = ಕೃಷಿವಿದ್ಯಾಲಯ : ಪ್ರತಿಹಳ್ಳಿಯಲ್ಲಿಯೂ ಶೇತಕೀಶಿಕ್ಷಣ ಶಾಲೆಯನ್ನು ತೆರೆಯುವ ಅಗತ್ಯವಿದೆ (ರೂಢಿ). [← ಮರಾ. ಶೇತಕೀ]

**ಶೇನಭಾವಿಕೆ** 'ಸೇನಬೋವಿಕೆ' ನೋ.

**ಶೇನಭೋಗ** 'ಸೇನಬೋವ' ನೋ.

**ಶೇಫ** (ನಾ). ೧. ಪುರುಷನ ಜನನೇಂದ್ರಿಯ ; ಶಿಶ್ನ : "ಶಿಶ್ನಃ, ಶೇಫಃ, ಮೇಢ್ರಃ, ಲಿಂಗಂ, ಮೇಹನಂ, ಶೇಫಸ್ – ಈ ೬ ಶೇಫಂ" (ಹಲಾಯು. ೬೫-೩೬೦). ೨. ತರಡು. ೩. ಬಾಲ. [ಸಂ.]

**ಶೇಫಸ್ಸು** (ನಾ). = ಶೇಫ ೧ : "ಶಿಶ್ನಃ, ಶೇಫಃ, ಮೇಢ್ರಃ, ಲಿಂಗಂ, ಮೇಹನಂ, ಶೇಫಸ್ – ಈ ೬ ಶೇಫಂ" (ಹಲಾಯು. ೬೫-೬೬೦); ವರತಪಸ್ವಿಂ ಸ್ಥೂಲಮಪ್ಪ ಶೇಫಸ್ಸು ಸತ್ತಿರೆ ಮೃತ್ಸಮಾನಮಪ್ಪಂದೆಮ್ಮಡಿಗೆ ಪಾಯ್ದು ತಿಂಬರು ಕಣಾ (ವೀಶೈಪು. ೪-೭-೫೦).

[ಸಂ. ಶೇಫಸ್]

**ಶೇಫಾಲಿಕೆ, ಶೇಫಾಳಿಕೆ** (ನಾ). ಒಂದು ಬಗೆಯ ಗಿಡ ; ಕರಿಯ ಲಕ್ಕಿಗಿಡ : ಬದ್ದಿರುವ ಹೂಗಳನೆ ಆರಿಸಿಕೊ ಗೌಡಸೂಸ ಶೇಫಾಲಿಕೆಯ ನೀನಳ್ಳಾಡಿಸದಯೆ (ಧ್ವನ್ಯಾಲೋ. ೧೧೩). **ಶೇಫಾಳಿಕೆ** : ಕಂಡೂಗದೊಸಗೆ ಮನಕ್ಕಧಿಕಮಾಗೆ ಶೇಫಾಳಿಕೆ ಸಂತಸದಿಂದಿಕ್ಕಿದ ಬಾಷ್ಪಪ್ರಸರಮನಿಳಿಸಿದುವು (ಕಾವ್ಯಾವ. ೮೭೭). [ಸಂ. ಶೇಫಾಲಿಕಾ]

**ಶೇಫಾಳಿಕೆ** 'ಶೇಫಾಲಿಕೆ' ನೋ.

**ಶೇಮುಷಿ** (ನಾ). ೧. ಬುದ್ಧಿ ; ಜ್ಞಾನ : ಸಭಾಮಂಡಿತಾಂತದೊಳಿಂದ್ರವಂತಿ ವಿಕಾಶಾತಿ[ಶ]ಯಿ ಶೇಮುಷಿಕಬ್ಬೆವೊತ್ತರ ಮಹತ್ತರಾಮರಮುಮು[ಮ]ಗಣ್ಯ ಲಾವಣ್ಯ ರಸ . . . ಮಾನನೀಯ ಮಹಾದೇವೀಜನಮುಮುಂ (ವರ್ಧಮಾ. ೬-೪೦ ವ). ೨. ಉದ್ದೇಶ. [ಸಂ. ಶೇಮುಷೀ]

**ಶೇರವಾನಿ, ಷೇರ್ವಾನಿ** (ನಾ). ಒಂದು ಬಗೆಯ ಸಡಿಲವಾದ ನಿಲುವಂಗಿ : ಕಡ್ಡಿಪೊಟ್ಟಣ, ಸಿಗರೇಟು ಮತ್ತು ಇಸ್ಪೀಟುಗಳ ಕೇಸುಗಳು, ಬೂದಿಕರಂಡಗಳು, ಶೇರವಾನಿ, ಶರ್ಟುಕೋಟುಗಳ ಗುಂಡಿಗಳು (ಕವಿಕೋ. I. ೬೨೧). **ಷೇರ್ವಾನಿ** : ಕೆಲವರು ಯೂರೋಪಿಯನ್ ಉಡುಪು. . ಇನ್ನು ಕೆಲವರು ಉತ್ತರ ಹಿಂದೂಸ್ಥಾನದ ಷೇರ್ವಾನಿ ಮತ್ತು ಸುರ್ವಾಲ್ (ವಿಲ್ಲಿಪ. ೪೪). [← ಪಾರ. ಮರಾ. ಶೇರವಾನ್, ಶೇರವಾನೀ; ಹಿಂ. ಶೇರವಾನೀ]

**ಶೇರು** 'ಸೀಱು$_3$' ನೋ.

**ಶೇಲು** (ನಾ). ೧. ಒಂದು ಬಗೆಯ ಮರ; ಚಳ್ಳೆಮರ : "ಶೇಲುಃ . . . ಬಹುವಾರಕಃ – ಚಳ್ಳೆಮರ, ಬೊಂಕೇಕಾಯಿಗಿಡ" (ಸಿದ್ಧಾಂತಿ. ೧೧೯). ೨. ಅಂಬಟೆಯ ಗಿಡ : "ಶೇಲುಃ, ಶ್ಲೇಷ್ಮಾತಕಃ – ಈ ೨ ಅಂಬಟೆಮರದ ಪೆಸರ್" (ಹಲಾಯು. ೩೩-೪೪).

[ಸಂ.]

**ಶೇಲೆ** 'ಸೇಲೆ' ನೋ.

**ಶೇವ** (ನಾ). ೧. ಹಾವು; ಸರ್ಪ. ೨. ಎತ್ತರ; ಔನ್ನತ್ಯ. ೩. ಸಂತೋಷ; ಆನಂದ. ೪. ಸಂಪತ್ತು ; ಐಶ್ವರ್ಯ. ೫. ಅಗ್ನಿ. ೬. ಶಿಶ್ನ. ೭. ಸೋಮರಸ.

[ಸಂ.]

**ಶೇವಂತಿ** 'ಸೇವಂತಿ' ನೋ.

**ಶೇವಣಿಗೆ** (ನಾ). ಒಂದು ಬಗೆಯ ಗಿಡ : ನಲ್ಲಿ ಶೇವಣಿಗೆ . . . ಚಂದನಂಬೆತ್ತ ಪೇರ್ಮೆಳೆಗಳೊಳು ವಲ್ಲರಿಗಳುಂ ಪರ್ವೆ (ಪ್ರಭುಪು. ೩-೧೩೦). [?]

**ಶೇವಧಿ** (ನಾ). ೧. ನಿಧಿ; ಸಂಪತ್ತು. ೨. ಕುಬೇರನ ನವನಿಧಿಗಳಲ್ಲಿ ಒಂದು.

[ಸಂ.]

**ಶೇವಲ** (ನಾ). ಒಂದು ಬಗೆಯ ಗಿಡ : "ಹಸುರುರಿಬ್ಬನ್ ಗಿಡ, ಕುದುರೆಬಾಲದ ಗಿಡ, ಶೈವಾಲ, ಶೇವಲ, ಶೈವಲಿ" (ಸಸ್ಯಸಿ. ೧೩೩). [ಸಂ]

**ಶೇಷ** (ಗು). ೧. ಉಳಿದ ; ಮಿಕ್ಕ. (ನಾ). ೨. ಉಳಿಕೆ ; ಮಿಕ್ಕುದು; ಶಿಲ್ಕು : ಶೇಷಗ್ರಹಣಂ ಉಕ್ತಾವಶಿಷ್ಟ, ಸಂಗ್ರಹಾರ್ಥಂ (ತತ್ತ್ವಪ್ರ. ೧೮೨); **ಶೇಷಕ್ಕೆ** – ಬಳ್ಳದಟಿ; ಅದಱ ಮಱಿ (ಶಮದ. ೧೩೬ ಪ್ರಯೋ). ೩. ತಿಂದು ಉಳಿದುದು ; ಎಂಜಲು ; ಉಚ್ಛಿಷ್ಟ. ೪. ದೇವರು, ಗುರುಹಿರಿಯರಿಗೆ ಅರ್ಪಿಸಿ ಪಡೆದ ಆಹಾರ ಪದಾರ್ಥ ಮುಂತಾದುವು ; ಪ್ರಸಾದ : ಶಿವಪ್ರಸಾದವನಿತ್ತು ಕುವರ ನಾಳಿನ ದಿವಸ ನಿನಗೆ ಪುಟ್ಟುವ ನಿನ್ನ ಸತಿಸಹಿತ ಈ ಶೇಷವ ತವಕದಿಂ ಸೇವಿಸೆನಲು (ಪ್ರಾಭರಾ. ೮-೭೪); ಸಕಲ ಭೋಗಾದಿ ಭೋಗಂಗಳಂ ಶಂಭುಶೇಷವನಲ್ಲದನುಭವಿಸನಾ ಭಕ್ತ (ಗುರುಚಾ. ೧೧-೧೮). ೫. (ಪುರಾಣದಲ್ಲಿ ವರ್ಣಿತವಾಗಿರುವ) ಸಾವಿರ ಹೆಡೆಗಳುಳ್ಳ ಸರ್ಪ; ಆದಿಶೇಷ : ಶೇಷಂ ಫಣಂ ಬಳ್ಕಿ ಸುರ್ಕಿದಪಂ ಸೀರೆಯ ಸಿಂಬಿಮೋಲ್ ಖಳನ್ಸಪಾಲಾಕ್ಷೌಹಿಣೀಭಾರದಿಂ (ಜಗವಿ. ೧-೩೦). ೬. ಒಂದು ಬಗೆಯ ಹಾವು : "ತನುವಿನಲಿ ಕಪ್ಪಿರಲು ಕಾಳಿಂಗನಕ್ಕು ಕಾಂಚನವರ್ಣಮಾಗೆ ಶೇಷನೆನಿಕ್ಕು" (ಪಾಂಗರಾ. ೧೧೯-೪); ಸಿರಸ್ಸಿನಲ್ಲಿ ಶಂಖ ಉಳ್ಳದು ಶೇಷನೆನಿಸಿಕೊಂಬುದು (ವಿಷಚಿ. ೨-೫). ೭. ಬಲರಾಮ. ೮. ಲಕ್ಷ್ಮಣ. ೯. ದಿಗ್ಗಜಗಳಲ್ಲಿ ಒಂದು. ೧೦. [ಗಣಿತ] ಭಾಗಾಕಾರಲೆಕ್ಕದಲ್ಲಿ ಭಾಗವಾಗದೆ ಕಡೆಯಲ್ಲಿ ಉಳಿಯುವ ಸಂಖ್ಯೆ : ಮೇಲಿನ ಲೆಕ್ಕದಲ್ಲಿ, ಯಾವುದೋ ಒಂದು ಸಂಖ್ಯೆಯನ್ನು ಬೇರೆ ಬೇರೆ ಸಂಖ್ಯೆಗಳಿಂದ ಭಾಗಿಸಿದರೆ, ಬೇರೆ ಬೇರೆ ಶೇಷಗಳು ನಿಲ್ಲುತ್ತವೆ (ಗಣಿಚಿ. ೩೦೨).

[ಸಂ.]

**ಶೇಷಧರ** (ನಾ). ಹಾವನ್ನು ಆಭರಣವಾಗಿ ಧರಿಸಿರುವವನು ; ಶಿವ : ಶೇಷಧರನಂತಿರದೆ ತಾಪಸವೇಷದಿಂದೆಯ್ತಂದು ಸೂನೃತಭಾಷಣಂ ಸಿರಿಯಾಳಸೆಟ್ಟಿಯ ಪುತ್ರನಂ ಬೇಡೆ (ಬಸವು. ೨೫-೧೪). [ಸಂ.]

**ಶೇಷಧಾಮ** (ನಾ). ಆದಿಶೇಷನನ್ನು ನೆಲೆಯನ್ನಾಗಿ ಮಾಡಿಕೊಂಡವನು; ವಿಷ್ಣು : ಸದ್ಭಾವಭಾವಹಾಹಿತಗ್ರಾಮಾಂತಕಾಶೈಲಜಾಮಾತ ಜಯಶೇಷಧಾಮಾ ಕಲಿತವಿಗ್ರಹ (ಉದ್ಭಟದೇ. ೨-೬೯). [ಸಂ. ಶೇಷಧಾಮನ್]

**ಶೇಷಪ್ರಸಾದ** (ನಾ). [ವೀಶೈ] ದೇವರು, ಗುರುಹಿರಿಯರಿಗೆ ಅರ್ಪಿಸಿ ಪಡೆದ ನೈವೇದ್ಯ : ನಿಮ್ಮ ಒಕ್ಕ ಶೇಷಪ್ರಸಾದವನಿಕ್ಕಿ ಎನ್ನ ಪಾವನಮಾಡಿ ಉಳುಹಿದೆಯಯ್ಯ ಲಿಂಗವೆ (ಕರ್ನಾಕ. ೧೩೧). [ಸಂ.]

**ಶೇಷಭೂಷಣ** (ನಾ). = ಶೇಷಧರ : ಭಾಷೆಗೆಟ್ಟರ್ದವನ ಸಭೆಯಲಿ ದೋಷವಲ್ಲಾ ಕುಳಿತಿದ್ದಡೆ ಶೇಷಭೂಷಣಭಕ್ತರಿದ್ದಹರವರೆ ಸಾಕಿನ್ನು ದೂಷಿಸಲು ನಾವಱಿಯೆವು (ಬಸಪು. ೩೭-೧೨). [ಸಂ.]

**ಶೇಷಮೂರ್ತಿ** (ನಾ). ಶಾಶ್ವತವಾಗಿರುವವನು; ಆದಿಶೇಷ : ಜಗಂ ವಿಲಯಮನೆಯ್ದುವಾ ಪದದೊಳಂ ಲಯಮೆಯ್ದದ ಶೇಷಮೂರ್ತಿ ನೀಂ (ಜಗವಿ. ೪-೫೫). [ಸಂ.]

**ಶೇಷಶಯನ** (ನಾ). ಆದಿಶೇಷನನ್ನು ಹಾಸಿಗೆಯಾಗಿ ಉಳ್ಳವನು : ವಾಸಕ್ಕೆ ಯೋಗ್ಯವಲ್ಲ ಗೋಕುಲವಿನ್ನು . . . ಸೋಳಸಾಸಿರ ಹೆಂಗಳ ಶೇಷಶಯನ ಕೃಷ್ಣ ಮೋಸಮಾಡಿದ ಮೇಲೆ (ಪುರಂದ. ಧಾ. ೪-೧೦೧ ಅನುಪಲ್ಲವಿ). [ಸಂ.]

**ಶೇಷಶಾಯಿ** (ನಾ). = ಶೇಷಶಯನ : ಕೊಡಬಹುದೇ ಮಗಳ . . . ಶೇಷಶಾಯಿಯಾದಂಥ ಪುರಂದರವಿಠಲನೆಂದಱಿಯದೆ (ಪುರಂದ. ಧಾ. ೩-೯೧-೩). [ಸಂ. ಶೇಷಶಾಯಿನ್]

**ಶೇಷಾಕ್ಷತ** (ನಾ). ಆಶೀರ್ವಾದಪೂರ್ವಕವಾಗಿ ತಲೆಯ ಮೇಲೆ ಹಾಕುವ ಅಕ್ಷತೆ; ಸೇಸೆ : ನಿರ್ವರ್ತಿತಾಶೇಷದಿಗ್ವಿಜಯಸಾಹಸಾಶ್ಚರ್ಯಾವಲೋಕನನಿರತಪುರಜನಾಶೀರ್ವಾದ ಶೇಷಾಕ್ಷತಂಗಳನಾಂತು (ಆದಿಪು. ೧೪-೧೪೮ ವ) ; ಬುದ್ಧಿವೇಳ್ದು ಶೇಷಾಕ್ಷತಮನಿಕ್ಕಿ ಪರಸಿ (ರಾಜಶೇ. ೯-೩೮ ವ). [ಸಂ.]

**ಶೇಷಾಕ್ಷತೆ** (ನಾ). = ಶೇಷಾಕ್ಷತ : ಮುದದಿಂದಿದಿರ್ವಂದುನ್ನತ ನೃಪಾಂಗನಾವ್ರತಮನ್ನಿಸಿ ತಳಿದಳ್ ಸುತಂಗೆ ಶೇಷಾಕ್ಷತೆಯಂ (ಪುಷ್ಪಪು. ೪-೭೫). [ಸಂ ಶೇಷಾಕ್ಷತ]

**ಶೇಷಾದ್ರಿ** (ನಾ). ತಿರುಪತಿಯ ಬೆಟ್ಟಗಳಲ್ಲಿ ಒಂದು : 'ಶೇಷಾದ್ರಿವಾಸ' ಪರಾ. [ಸಂ.]

**ಶೇಷಾದ್ರಿವಾಸ** (ನಾ). ತಿರುಪತಿಯ ಬೆಟ್ಟದಲ್ಲಿ ನೆಲಸಿರುವವನು; ಶ್ರೀನಿವಾಸ: ವಾಸುಕಿಶಯನನು ತಂದೆ ಪುರಂದರವಿಠಲ ಶೇಷಾದ್ರಿವಾಸನಯ್ಯ (ಪುರಂದ. ೪-೧೭೨-೩). [ಸಂ.]

**ಶೇಷಾನ್ನ** (ನಾ). ಊಟ ಮಾಡಿ ಮಿಕ್ಕ ಅನ್ನ, – ಆಹಾರ : ಮತ್ತೆ ಶೇಷಾನ್ನದಲಿ ತೋಱುತ ತುತ್ತುಗಳ ತೂಗುತ್ತ ಮಾರುತಿ ಮತ್ತಿಕೊಂಡನು ಬಾಯೊಳವನನು ಬೆರಳ ಲೇಡಿಸುತ (ಕುವ್ಯಾಆ. ೧೦-೩೨); ಏಕಾದಶೀವ್ರತಮಲಂಘ್ಯಶ್ರಾದ್ಧಮಿನಿತೊಂದು ದಿನಮ ಸಂಗತಮಾದೊಡೆಂತು ಕರ್ತವ್ಯಮೆನೆ ಪೈತೃಕದ ಶೇಷಾನ್ನಮಾಘ್ರಾಣಿಸೆ ಕೃತಭೋಜ್ಯಮಾದಪುದು (ಜೈಮಿಭಾ. ೧೧-೨೦). [ಸಂ.]

**ಶೇಷಿಸು** (ಕ್ರಿ). ಉಳಿಯುವಂತೆ ಮಾಡು; ಉಳಿಸು : ಮೊದಲಿಂದ್ರಕಂ ಮನುಷ್ಯಕ್ಷೇತ್ರಮಾತ್ರಂ ಕಡಯಿಂದ್ರಕಂ ಜಂಬೂದ್ವೀಪಪ್ರಮಾಣಂ ಎರಡುಮಂ ಶೇಷಿಸಿ ರೂಪೋನೇಕೇಂದ್ರಕ ಸಂಖ್ಯೆಯಿಂ ಭಾಗಂಗೊಂಡೊಡೆ ಬಂದ ಲಬ್ಧಂ ಹಾನಿವೃದ್ಧಿಯಕ್ಕುಂ (ತತ್ತ್ವಪ್ರ. ೧೨೦). [ಶೇಷ + – ಇಸು₃]

**ಶೇಷೆ** (ನಾ). ೧. ದೇವತಾರಾಧನೆ ಅಥವಾ ಶುಭಕಾರ್ಯಗಳಲ್ಲಿ ಪೂಜಾದಿಗಳ ನಂತರ ವಿತರಿಸುವ ಹೂವು, ಅಕ್ಷತೆ ಮುಂತಾದ ಪ್ರಸಾದ : ಜಿನಸಿದ್ಧಶೇಷೆಯನಪ್ಪಾಜಿ ಕೈಕೊಳ್ಳುದೆನುತ ಪೊಂದಟ್ಟೆಯ ನೀಡೆ (ನಾಗಕು. ೩-೧೮). ೨. ಆಶೀರ್ವಾದ ಪೂರ್ವಕವಾಗಿ ತಲೆಯ ಮೇಲೆ ಹಾಕುವ ಅಕ್ಷತೆ ; ಸೇಸೆ : ಮುದ್ದುಮಗನಂ ತೋಳ್ಗಳಿಂ ಬಾಚಿದಳ್ ತಬ್ಬಿ ಕಣ್ಣೀರ ಧಾರೆಯನೆರೆದು ತಳಿದಳಾ ತಾಯಿ ಮಂಗಳಾಶೀರ್ವಾದಶೇಷೆಯಂ (ಶ್ರೀರಾಮಾ. ೮೪-೧೭೫). [ಸಂ. ಶೇಷಾ]

**ಶೈಕ್ಷ** (ನಾ). ೧. ವೇದದ 'ಶಿಕ್ಷಾ' ಎಂಬ ಅಂಗವನ್ನು ಅಧ್ಯಯನ ಮಾಡುವ ವಿದ್ಯಾರ್ಥಿ. ೨. ಅಧ್ಯಯನ ಮಾಡುವವನು; ಕಲಿಯುವ ಸ್ವಭಾವವುಳ್ಳವನು : ಶೈಕ್ಷ – ಶ್ರುತಜ್ಞಾನಶಿಕ್ಷಾಶೀಲರುಂ ಅಖಂಡಿತವ್ರತೋಪೇತರುಂ ಅಪ್ಪ ಶಿಕ್ಷಕರುಂ (ತತ್ತ್ವಪ್ರ. ೩೪೪); ಇನ್ನು ಶೈಕ್ಷನಹೆನನಿತರೊಳೆ ಶಾಸ್ತ್ರನಿದೂ ಪರಿನಿರ್ವರ್ತಿಸಲಿರುವನೆನಿತನ್ನೊಳಾತನನುಕಂಪೆ! (ವೃಶಾಖಿ. ೭೭-೩೪೧). [ಸಂ.]

**ಶೈಕ್ಷಣಿಕ** (ಗು). ಶಿಕ್ಷಣಕ್ಕೆ ಸಂಬಂಧಿಸಿದ : ಸಾಮಾಜಿಕ-ಧಾರ್ಮಿಕ ಸಮಾನತೆ ಸ್ತ್ರೀ ಪುರುಷರಲ್ಲಿದ್ದಾಗ, ಬಾಲಕನಿಗೆ ದೊರೆವ ಶೈಕ್ಷಣಿಕ ಅವಕಾಶವು ಬಾಲಕಿಗೂ ದೊರೆಯುತ್ತಿತ್ತು (ಕರ್ನಾಕ. ೪). [ಸಂ.]

**ಶೈಕ್ಷ್ಯ** (ನಾ). ನೈಪುಣ್ಯ ; ಪ್ರಾವೀಣ್ಯ : ಗುರುಶೈಕ್ಷ್ಯಜ್ಞಾನಸಂಘಪ್ರವಣಗಣತಪೋನಿಷ್ಠಿತಾನೀತ ಸಾಧೂತ್ಕರದೊಳ್ (ಸುಕುಮಾ. ೪-೧೭). [ಸಂ.]

**ಶೈತ್ಯ** (ನಾ). ತಂಪು ; ಶೀತಲತೆ : "ಕುಳಿರೆನೆ ಶೈತ್ಯಂ" (ರನ್ನಕಂ. ೧); ಚಂದ್ರನ ಶೈತ್ಯದಲು ಬೆಳೆದ ಕಾಯಕ್ಕೆ ಬೆಳದಿಂಗಳ ಬಯಸುವ ಹಂಗೇಕಯ್ಯಾ (ಬಸವ. ೪೪೨) ಉರಿ ಶೈತ್ಯವಾದಂತೆ ವಿಷವಮೃತವಾದಂತೆ ತರಣಿ ತಂಪಾದಂತೆ (ಹಚಶಾ. ೫-೫೩). [ಸಂ.]

**ಶೈತ್ಯಕಾರಿ** (ನಾ). ಶೀತವನ್ನುಂಟುಮಾಡುವುದು : ಶೈತ್ಯಕಾರಿಯು ಪರಮಾಣು ಮಾತೃಕೆಯಲ್ಲಿ ಉತ್ಪತ್ತಿಯಾದ ಉಷ್ಣವನ್ನು ಹೀರಿ ಅದನ್ನು ತಣ್ಣಗಿಟ್ಟಿರುತ್ತದೆ (ಶಿಲ್ಪಸಾ. ೨೭೪). [ಸಂ. ಶೈತ್ಯಕಾರಿನ್]

**ಶೈತ್ಯಚುಂಬನ** (ನಾ). [ಕಾಮಶಾ] ಒಂದು ಬಗೆಯ ಚುಂಬನ : ಸ್ತ್ರೀಯು ಗಂಡನು ಮಲಗಿದ ಹಾಗೆ ತಾಂ ನಿದ್ರೆಗೈಯದೆಯುಂ ಕೃತಕನಿದ್ರೆಯಂ ಮಾಡದೆಯುಂ ಸ್ತ್ರೀ ಚುಂಬಿಸುವುದು ಶೈತ್ಯಚುಂಬನವೆಂಬುದು (ಕಾಮಶಾ. ೨೨೭). [ಸಂ.]

**ಶೈತ್ಯಪೂರ** (ನಾ). ತಂಪಿನಿಂದ ತುಂಬಿದುದು : ಕೌರವಜನಪ ಬಂದನು ತತ್ಸರೋವರಕನಿಲನಿದಿರಾದನು ಸುಗಂಧದ ಶೈತ್ಯಪೂರದಲಿ (ಕುವ್ಯಾಗ. ೩-೩೭). [ಸಂ.]

**ಶೈತ್ಯಭಾರ** (ನಾ). ತಂಪಿನಿಂದ ಭಾರವಾದುದು ; ಅತ್ಯಂತ ತಂಪಾದುದು : ಸಾರತರಶೈತ್ಯಭಾರಂ ಸ್ವೈರಚರಂ ಸುೞಿವುದಲ್ಲಿ ಚಾರುಸಮೀರಂ (ಜಗವಿ. ೨-೨೫). [ಸಂ.]

**ಶೈತ್ಯವಕ್ಕೆ** (ನಾ). ತಣ್ಣನೆಯ ಹಾಸುಗೆ : ತಕ್ಕೆಗೊಂಡನ್ನ ಪೀಡಿಸಬೇಡ ಕಡುಶೈತ್ಯವಕ್ಕೆಯೊಳಿರಿಸು (ಮೋಹತ. ೨೭-೫೯). [ಶೈತ್ಯ + ಪಕ್ಕೆ₁ (< ಪಟ್ಕೆ)]

**ಶೈತ್ಯಸಾಲೆ** (ನಾ). ತಂಪಾಗಿರುವ ಮನೆ; ಕುಳಿರ್ವನೆ : ದೇಶದೇಶದ ಬಂಧುನೃಪಜನರು ಬರಲವರ್ಗೆ . . . ಉಪವನಶೈತ್ಯಸಾಲೆಗಳಯೆಡೆ ಬಿಡಾರಮನು ತೋರಿ (ಸವಮೋ. ೧೩-೩೪). [ಶೈತ್ಯ + ಸಾಲೆ₄]

**ಶೈತ್ಯಾಲಯ** (ನಾ). = ಶೈತ್ಯಸಾಲೆ : "ಶೈತ್ಯಾಲಯಂ ಕುಳಿರ್ವನೆಯೆನಿಕ್ಕುಂ" (ಕಷ್ಟಕೈ. ೨೨). [ಸಂ.]

**ಶೈತ್ಯೋಪಚಾರ** (ನಾ). ಮೂರ್ಛೆ, ಜ್ವರ ಮೊದಲಾದ ಸಂದರ್ಭಗಳಲ್ಲಿ ನೀರು ಚಿಮುಕಿಸಿ, ಗಾಳಿ ಬೀಸುವುದೇ ಮೊದಲಾದ ತಂಪುಂಟುಮಾಡುವ ಉಪಚಾರ ; ಶೀತಲಕ್ರಿಯೆ : ಕುಂತಿಯು . . . ಮೂರ್ಛೆ ಹೋದಳು; ವಿದುರನು ಶೈತ್ಯೋಪಚಾರದಿಂದ ಅವಳನ್ನು ಎಚ್ಚರಗೊಳಿಸಿದನು (ವಚಭಾ. ೨೫); ರಾಜಮಾತೆಯವರ ಧ್ವನಿ ನಿಂತಿತು . . . ಚೇಟಿಯರು ಶೈತ್ಯೋಪಚಾರ ನಡೆಸಿದರು (ಶಾಂತಲಾ. ೧೦೭). [ಸಂ.]

**ಶೈಥಿಲ್ಯ** (ನಾ). ೧. ಅಳ್ಳಕ ; ಸಡಿಲ. ೨. ದೌರ್ಬಲ್ಯ ; ದುರ್ಬಲತೆ : ನಾವು ಅರ್ಥವನ್ನು ಭಿಕ್ಷೆಯಿಂದ ಪಡೆಯಲಾರವು . . . ಆದ್ದರಿಂದ ಈ ಶೈಥಿಲ್ಯವನ್ನು ಬಿಟ್ಟು ಕ್ಷಾತ್ರವನ್ನು ಹಿಡಿ (ವಚಭಾ. ೧೨೫). ೩. ಆಲಸ್ಯ. ೪. ಉದ್ದೇಶರಾಹಿತ್ಯ. ೫. ಔದಾಸೀನ್ಯ; ಅಲಕ್ಷ್ಯ. ೬. [ವ್ಯಾಕ] ಶಿಥಿಲವಾದ ಅಕ್ಷರದಿಂದ ಕೂಡಿದುದು : ಕೆಲವು ಶಬ್ದಗಳಲ್ಲಿ ಶೈಥಿಲ್ಯವು ಸಹಜವಾಗಿರುತ್ತದೆ (ಕೈಪಿಡಿ. ೧೩). [ಸಂ.]

**ಶೈಲ, ಶೈಳ** (ಗು). ೧. ಶಿಲೆಗೆ ಸಂಬಂಧಪಟ್ಟ. ೨. ಕಲ್ಲಿನಿಂದ ಮಾಡಿದ ; ಶಿಲೆಯಿಂದ ನಿರ್ಮಿತವಾದ. (ನಾ). ೩. ದೊಡ್ಡಗಾತ್ರದ ಕಲ್ಲು; ಬಂಡೆ. ೪. ಕಲ್ಲುಗಳಿಂದಾದುದು; ಬೆಟ್ಟ; ಪರ್ವತ : ಕಟವಪ್ರಶೈಲಮಡಱ್ೞಿನಮ್ಮಾ . . . ಪೆರ್ಗ್ಗೊರವಂ ಸಮಾಧಿ ನೆಱೆದೊನ್ (ಎಕ. II(R), ೨೫-೩; 7ನೆಯ ಶತ); ಅಮರಾಪಗೆ . . . ಗಗನದಿನಂಧಕದ್ವಿಷಜಟಾಟವಿಯೊಳ್ ಬೞಿಕಾದ ಶೈಲದೊಳ್ ಸೊಗಯಿಸೆ ಪಾಯ್ದು ದಿಂತಿದುವ ಬಂಧುರಕೂಟಕುಳಂ ಹಿಮಾಚಳಂ (ಪಂಪಭಾ. ೪-೧೩); ಸೀಳಬಹುದೇ ಸೀಸದುಳಿಯಲಿ ಶೈಲವನು (ಕುವ್ಯಾದ್ರೋ. ೧-೨೯). ೫. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : ಸಪ್ತ . . . ಶೈಲ, ಅಚಲ, ನಗ, ಸಿತಾಂಶು?, ಹಯದ್ವೀಪ, ಅಶ್ವ—ಇಂತನಿತುಂ ೭ಕ್ಕೆ ಪೆಸರು (ವ್ಯವಹಾ. ೧೦-೧೧ ವ). ೬. [ವೀಶೈ] ಜಗದ್ಗುರುವಿನ ಪಟ್ಟಾಧಿಕಾರವನ್ನು ಸ್ವೀಕರಿಸುವಾಗ ಧರಿಸುವ ರಾಜಮರ್ಯಾದೆಯ ಮೂರು ಬಗೆಯ ಲಾಂಛನಗಳಲ್ಲಿ ಒಂದು ; ಶಿಖಾಶೈಲ : "ಇವೆರಡನ್ನೂ

ಶೂನ್ಯಸಿಂಹಾಸನದ ಜಗದ್ಗುರುಪಟ್ಟವನ್ನು ಕಟ್ಟುವಾಗ ಆ ಪಟ್ಟಾಧಿಕಾರಿಯ ಕೊರಳಿಗೆ ಹಾಕುವಂಥವು'' (ಮಹಾವಿ. ಕೋಶ) : ಸ್ವರ್ಣ ಸಿಂಹಾಸನಂ ವರಶಿಖಾಶೈಲಂಗಳಂ ಅವನ ವಶಕೀ ತ್ರಿವಿಧವಂ ಕೊಟ್ಟು (ಮಹಾವಿ. ೧೩-೩೮); ಲಕ್ಷಿತ ಶಿಖಾಶೈಲ ಸ್ವರ್ಣಸಿಂಹಾಸನಗಳ ಕ್ಷೇಮದಿಂ ನಿನ್ನ ಪೂರ್ವಜ ವಜೀರನಾದ ಕ್ಷುದ್ರನಾದ ಮಲ್ಲೂಖಾನನೆಂಬನ ವಶಕ್ಕೆತ್ತು ಪೋದಂ (ಮಹಾವಿ. ೧೭-೭೪); ಪಂಚಮುದ್ರಿಕೆಗಳಂ ಕರ ಬೆರಳುಗಳ್ಗೆ ಸೇರಿಸೆ ಬಲಾತ್ಕಾರದಿಂದಾ ಶಿಖಾಶೈಲಂಗಳಂ ಕೊರಳಿಂಗೆ ಧರಿಸುತೆ (ಮಹಾವಿ. ೨೫-೨೮). ಶೈಳ : ೪. ಶೈಲಮನೆತ್ತುವುದುಂ ಗೋಪಾಳಂ ಫಣಮಣಿಗಳೆಸೆಯೆ . . . ಪಾವಿನ ಪೇಳಿಗೆಯಂ ತೆಱೆದ ತೆಱದಿನೇಂ ತೋಱಿದುವೋ (ಅರ್ಥನೇ. ೮-೧೫). **[ಸಂ.]**

**ಶೈಲಚಾಪ** (ನಾ). ಬೆಟ್ಟವನ್ನು ಬಿಲ್ಲಾಗಿ ಉಳ್ಳವನು; ಶಿವ : ಅತಿಭಕ್ತಿ ವಶೀಕೃತ ಶೈಲ ಚಾಪನಾತ್ಮದಯ ಜಿತತ್ರಿತಾಪ ಬಸವೇಶ್ವರನೀಗಮುಗೀಶಭಕ್ತಿಯಂ (ರಾಜಶೇ. ೧-೧೧). **[ಸಂ.]**

**ಶೈಲಜಾಧವ** (ನಾ). ಪಾರ್ವತಿಯ ಪತಿ ; ಶಿವ : ಹೃದ್ಗೃಹದಲ್ಲಿ ಶೈಲಜಾಧವನನ ನೆಟ್ಟು ಜಾನಿಪ . . . ತಾಪಸವರ್ಯರೊಪ್ಪಿದರ್ (ರಾಜಶೇ. ೧-೧೩೦). **[ಸಂ.]**

**ಶೈಲಜಾಧಿಪ** (ನಾ). = ಶೈಲಜಾಧವ : ದೀಪದ ಕಲಿಯೆನಿಪ್ಪ ಶಿವೈಕ್ಯಂ . . . ಶೈಲಜಾಧಿಪನೊಬ್ಬನುಂ ಜೀರ್ಣಾಲಯದೊಳಿರೆ ನೋಡಿ ತನ್ನೊಳು ಹೆದಱುತಿಂತೆಂದ (ಬಸವು. ೧೭-೧). **[ಸಂ.]**

**ಶೈಲಜೆ** (ನಾ). ಪರ್ವತರಾಜನ ಮಗಳು; ಪಾರ್ವತಿ : ಶೈಲಜಾ ಮುಖಾಬ್ಜ ಗಂಧಲುಬ್ಧ ಚಂಚರೀಕದಿಕ್ಕೇಲಸರ್ವಲೋಕಪಾಲ . . . ರಕ್ಷಿಸೆನ್ನನೀಶ್ವರ (ಉದ್ಧೃಟ. ೪-೧೦). **[ಸಂ. ಶೈಲಜಾ]**

**ಶೈಲಪ** (ನಾ). ಬೆಟ್ಟಗಳ ಒಡೆಯ ; ಗಿರಿರಾಜ : ಬಾರನ್ನ ಮಾತಾಮಹೇ ಬಾರ ಸ್ನಾಳ್ದಳನೆತ್ತುಮೊಲ್ದು ಕರೆದಂ ಶರ್ವಾಣಿಯಂ ಶೈಲ[ಪಾಠಾಂ. ಳ]ಪಂ (ಗಿರಿಕ. ೩-೧೦೫). **[ಸಂ.]**

**ಶೈಲಪತಿ, ಶೈಳಪತಿ** (ನಾ). ೧. ಹಿಮಾಲಯ ಪರ್ವತ. ೨. ಶ್ರೇಷ್ಠವಾದ ಪರ್ವತ : ವಿಜಯಾರ್ಧ ಶೈಲಪತಿ ಸವೆಯಿಸಿ ತಂದೋಳಿಯ ನಿಱಿಸಿದ ಬೆಳ್ಳಿಯ ಲಾಳಾವಿಂಡಿಗೆವೊಲಿರ್ಪುವಿದಱ ಮಡಲ್ಗಳ್ (ಶಾಂತಿಪು. ೨-೧೦೪). **ಶೈಳಪತಿ** : ೩. ಹಿಮಾಲಯದ ಒಡೆಯ; ಶಿವ : ಶೈಳಪತಿಯುಂ ಶರ್ವಾಣಿಯುಂ ಸ್ನೇಹದಿಂದಿರೆ (ಗಿರಿಕ. ೧೦-೧೪). **[ಸಂ.]**

**ಶೈಲಪುತ್ರಿ** (ನಾ). = ಶೈಲಜೆ : ಕಿಟಿಯ ಕತದ ಮದ್ದೇಷಮಂ ತಾಳ್ದಿದಂ ಸಂಗರಮಂ ಕೆಯ್ಕೊಂಡಿವಂಗಿತ್ತಪೆನಿವನೆಳಸಿರ್ದಸ್ತ್ರಮಂ ಶೈಲಪುತ್ರೀ (ಶಬಶಂ. ೪-೬೯). **[ಸಂ. ಶೈಲಪುತ್ರೀ]**

**ಶೈಲರಾಜ** (ನಾ). = ಶೈಲಪತಿ ೨ : ಕನಕಕಳಶದ ನೀರ್ಗಳ್ ಸುರಿದುವು ವಿಭುಶಿರದೊಳ್ ಶೈಲರಾಜಮಸ್ತಕದೊಳೆಱಗಿದಬ್ಧ ಜಲಂಬೋಲ್ (ಶಾಂತಿಪು. ೧೦-೧೦೩). **[ಸಂ.]**

**ಶೈಲಲಿಪಿ** (ನಾ). ಒಂದು ಬಗೆಯ ಲಿಪಿ : ಗಗನಲಿಪಿ ಧೂಮಲಿಪಿ ಜಲಲಿಪಿ ಪಿಶಾಚಲಿಪಿ ಖಗಲಿಪಿ . . . ಶೈಲಲಿಪಿ, ದೇವಲಿಪಿ ನಂದಿಲಿಪಿ ಈ ಅಗಣಿತ ಲಿಪಿಗಳನೋ ಡEದ3ಲಱಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲಾ (ಭಾಸ್ಕರ. ೭೭-೬). **[ಸಂ.]**

**ಶೈಲಾಂಗನೆ** (ನಾ). = ಶೈಲಜೆ : ಶೈಲಾಂಗನೆಯ ಲೀಲೆಯಲಾಡುವರೆಲ್ಲರು ಕಾಲಬಂಧುಗಳು (ಮೋಳಮಾ. ೧೨-೪೩). **[ಸಂ. ಶೈಲಾಂಗನಾ]**

**ಶೈಲಾಟ** (ನಾ). ೧. ಪರ್ವತನಿವಾಸಿ. ೨. ಸಿಂಹ. **[ಸಂ.]**

**ಶೈಲಾದಿ** (ನಾ). ಶಿವಗಣದಲ್ಲಿ ಒಬ್ಬ; ನಂದಿ : ಭೂತಲದಲ್ಲಿ ಮಾನುಷತ್ವಂ ಬಡವುದೆನಲಾಗಿ ಕುಲಿಶದಿಂ ತಾಡಿಸಿದ ಗಿರಿಯಂತುಟಾದನಾ ಶೈಲಾದಿ ಶಾಪದಿಂದ (ವೀರಶೈಪು. ೩-೨೦-೧೦). **[ಸಂ.]**

**ಶೈಲಾಲಿ** (ನಾ). ೧. ನರ್ತಿಸುವವನು; ನರ್ತಕ. ೨. ನಟ ; ಅಭಿನೇತೃ : ''ಶೈಲಾಲೀ, ಶೈಲೂಷಃ, ಕುಶೀಲವಃ . . . ನಟಃ - ಈ ೮ ನಟ್ಟವಿಗಂ'' (ಹಲಾಯು. ೯೭-೪೩೮); ಶಿಲಾಲಿ ಕೃಶಾಶ್ವ ಎಂಬವರು ನಟಸೂತ್ರಕಾರರೆಂದೂ ಅವರ ಅನುಯಾಯಿಗಳಾದ ನಟರಿಗೆ ಶೈಲಾಲಿ ಕೃಶಾಶ್ವಿಗಳೆಂದು ಹೆಸರಾಯಿತೆಂದೂ ಗೊತ್ತಾಗುತ್ತದೆ (ಸಂನಾಟ. ೪೧). **[ಸಂ. ಶೈಲಾಲಿನ್]**

**ಶೈಲಿ** (ನಾ). ೧. ಕ್ರಮ ; ಧಾಟಿ : ಹಿರಿಯಣ್ಣನಂ ಚಿರದಿನಂ ಬೆಂಬಿಡದೆಯಿರ್ದ ಲಕ್ಷ್ಮಣದೇವನೆಸೆದನಯ್ . . . ಸೆರೆಯೇರ್ದ ಮಳೆಗಾಲದ ಮಹಾತರಂಗಿಣಿಯ ಧೀರ ಶೈಲಿಯಲಿ (ಶ್ರೀರಾಮಾ. ೨೬-೬೮೮). ೨. [ಕಾವ್ಯಮೀ] ಕಾವ್ಯರಚನೆಯಲ್ಲಿಯ ರೀತಿ, — ಮಾರ್ಗ : ನಾಟಕದ ಗದ್ಯವು ಮೊದಮೊದಲು ಸ್ವಾಭಾವಿಕವಾದ, ಸಂಭಾಷಣೆಗೆ ಉಚಿತವಾದ, ಸರಳ ಶೈಲಿಯಲ್ಲಿರುತ್ತದೆ (ಸಂನಾಟ. ೨೧) ; ಸಣ್ಣ ಸಣ್ಣ ವಾಕ್ಯಗಳನ್ನೊಳಗೊಂಡ ಶೈಲಿಯಲ್ಲಿ ಅವರ ಮಾತುಗಳೇ ಪ್ರದರ್ಶಿಸುವಂತೆ ರಚನೆಯಾಗಿರಬೇಕು (ಶಿಕ್ಷದ. ೨೬೯). **[ಸಂ. ಶೈಲೀ]**

**ಶೈಲೂಷ** (ನಾ). ೧. = ಶೈಲಾಲಿ ೧. ೨. = ಶೈಲಾಲಿ ೨ : ''ಶೈಲಾಲೀ, ಶೈಲೂಷಃ . . . ಭರತಃ ನಟಃ - ಈ ೮ ನಟ್ಟವಿಗಂ'' (ಹಲಾಯು. ೯೭-೪೩೮). ೩. ಸೂತ್ರಧಾರ : ಜೀವಂಗಳ್ ಶುಭಾಶುಭಕರ್ಮಶೈಲೂಷಪ್ರೇರಿತಂಗಳಾಗಿ ಚತುಸ್ಸಂಸರಣಂಗಳೊಳ್ . . . ಪರಿಭ್ರಮಿಸಿಗುಂ (ಆದಿಪು. ೧೭-೫೭ ವ); ಜಯಲಕ್ಷ್ಮೀನರ್ತಕೀನರ್ತನ ಪರಿಣತ ಸೈ(ಶೈ)ಲೂಷನುರ್ವಿರ್ವೀವಧೂಟೀಪ್ರಿಯ . . . ಚಟ್ಟಯದೇವಂ (ಎಇ. XIII, ೩೦೨-೭; 1125). ೪. ಮೋಸಗಾರ ; ವಂಚಕ. ೫. ಒಂದು ಬಗೆಯ ಮರ ; ಬಿಲ್ವ : ''ಬಿಲ್ವಃ, ಶಾಂಡಿಲ್ಯಃ, ಶೈಲೂಷಃ, ಮಾಲೂರಃ, ಶ್ರೀಫಲಃ — ೫ ಬೆಲ್ಲವತ್ತದ ಮರ'' (ಸಿದ್ಧಾಂತಿ. ೧೮೯). **[ಸಂ.]**

**ಶೈಲೇಂದ್ರ** (ನಾ). ಬೆಟ್ಟಗಳಲ್ಲಿ ಶ್ರೇಷ್ಠವಾದುದು; ಹಿಮಾಚಲ : ನೋಡಿಮಮಗೀ ಶೈಲೇ[ಪಾಠಾಂ. ಳೇ]ಂದ್ರಮೆಂದೆಂದು ತೋಱಿದನಾ ತನ್ನೊಡವರ್ಪ ಭೂಪನಿಕರಕ್ಕುತ್ತುಂಗ ಹೈಮಾದ್ರಿಯಂ (ಆದಿಪು. ೧೩-೭೯). **[ಸಂ.]**

**ಶೈಲೇಯ, ಶೈಳೇಯ** (ಗು). ೧. ಕಲ್ಲುಗಳಿಂದ ತುಂಬಿದ. ೨. ಗಡುಸಾದ; ಕಠಿಣವಾದ. (ನಾ). ೩. ತೇವವಾಗಿರುವ ಕಲ್ಲಿನ ಮೇಲೆ ಬೆಳೆಯುವ ಸಸ್ಯ ; ಪಾಚಿ ; ಕಲ್ಲುಹೂವು : ''ಕಾಲಾನುಸಾರ್ಯಂ, ವೃದ್ಧಂ . . . ಶೈಲೇಯಂ — ೫ ಕಲ್ಲುಹುವ್ವಿನ ಪೆಸರು, ಶಿಲಾಪುಷ್ಪ'' (ಸಿದ್ಧಾಂತಿ. ೧೪೦). ೪. ಒಂದು ಬಗೆಯ ಸುಗಂಧ ದ್ರವ್ಯ ; ಸಾಂಬ್ರಾಣಿ. ೫. ಸಿಂಹ. ೬. ದುಂಬಿ. **ಶೈಳೇಯ** : ೭. ಶಿಲಾಜಿತುವೆಂಬ ಖನಿಜದಿಂದ ಕೂಡಿದ : ಘನಸಮಯದೊಳಿರ್ದು ಶಿಲಾಸನದೊಳ್ ಶೈಳೇಯ ಸುರಭಿತಳದೊಳ್ . . . ಶಿಖಿ ನರ್ತನಮಂ ನೀಂ ನೋಡ (ಶಾಂತಿಪು. ೫-೧೩೧). **[ಸಂ.]**

**ಶೈವ** (ಗು). ೧. ಶಿವನಿಗೆ ಸಂಬಂಧಿಸಿದ . (ನಾ). ೨. ಶಿವನ ಆರಾಧನೆಯನ್ನು ಪ್ರತಿಪಾದಿಸುವ ಆಗಮ; ಶಿವಾಗಮ : ಮಹತ್ವದ ಸಮಯಾದಿ ಶೈವಂಗಳೆಂಬುವೆಲ್ಲಾ ಶರಣೆನ್ನುತ್ತಿದ್ದುವು (ಬಸವ. ೮೧೭); ಆಗಮಗಳು — ಶೈವ, ವೈಖಾನಸ, ಪಾಂಚರಾತ್ರಾಗಮಗಳೆಂದು ಪ್ರಧಾನವಾಗಿ ಮೂರಾಗಿವೆ (ಭಾರದ. ೭೨). ೩. ಶಿವನ ಆರಾಧನೆಯನ್ನು ಪ್ರತಿಪಾದಿಸುವ ಮತ; ಶೈವಮತ. ೪. ಶಿವನ ಆರಾಧಕ ; ಶೈವ ಮತಾವಲಂಬಿ : ''ಶರಣನೆನೆ ಶೈವನೆನಿಸಿಕ್ಕು'' (ಮಂಗರಾ. ೭೨-೨೨); ಭೂವಳಯದೊಳಗೆಮ್ಮುವೞಿಯದ ಶೈವನಾವನು ಇಲ್ಲ (ಬಸವು. ೨೫-೫); ಶೈವರುಗಳಿಗೆ ಪರಶಿವನಿಳಯತತ್ತ್ವಪ್ರಾಪ್ತಿಯಾಗುವದು (ಗಗತಾ. ೮-೭೭); ಶಿವನನ್ನೆ ಪರಬ್ರಹ್ಮ ಸ್ವರೂಪವೆಂದು ತಿಳಿದು ಆರಾಧಿಸುವವರು ಶೈವರು (ಭಾರದ. ೨೦೭). ೫. [ನಾಟ್ಯ] ಇಪ್ಪತ್ತುಮೂರು ದೇಶೀಯಸ್ಥಾನಕಗಳಲ್ಲಿ ಒಂದು ; IP ''ಎಡಗಾಲನ್ನು ಸಮನಾಗಿರಿಸಿ ಬಲಗಾಲನ್ನು ಕುಂಚಿತಮಾಡಿ ಎತ್ತಿ ಎಡಮೊಳ ಕಾಲ ಹತ್ತಿರ ಅಡ್ಡಲಾಗಿ ನಿಲ್ಲಿಸುವುದು'' (ಲಾಸ್ಯರಂ. ೩೩೧ ಗದ್ಯಾನುವಾದ) : ಶೈವ- ಎಡಗಾಲ್ ಸಮಪದಮಂ ಕೀಳ್ ಪಡೆದಿರಲಾ ಜಾನುವಲ್ಲಿ ದಕ್ಷಿಣಪಾದಂ ಬಿಡದಡ್ಡಮಾಗಿ ಕುಂಚಿತಮೊಡರ್ಚುತೆತ್ತಿರ್ದೊಡಾಯ್ತು ಶೈವಸ್ಥಾನಂ (ಲಾಸ್ಯರಂ. ೭-೪೭). **[ಸಂ.]**

**ಶೈವದೀಕ್ಷೆ** (ನಾ). ಶೈವಮತದ ವ್ರತಗಳನ್ನು ವಿಧಿವತ್ತಾದ ಸಂಸ್ಕಾರದಿಂದ ಕೈಗೊಳ್ಳುವಿಕೆ : ಮಂಗಳಪ್ರದ ಶೈವದೀಕ್ಷಾಲಿಂಗಿತನನಂತ್ಯಜನೆನುತ್ತವೆ ಹೇಂಗೆ ನುಡಿಯಲುಬಹುದು (ಬಸವು. ೫೭-೬೭). **[ಸಂ. ಶೈವದೀಕ್ಷಾ]**

**ಶೈವಪುರಾಣ** (ನಾ). ಹದಿನೆಂಟು ಪುರಾಣಗಳಲ್ಲಿ ಒಂದು : ಬ್ರಹ್ಮಪುರಾಣ ಪದ್ಮಪುರಾಣ ವೈಷ್ಣವಪುರಾಣ ಶೈವಪುರಾಣ . . . ಹದಿನೆಂಟು ಮೂಲಪುರಾಣಂಗಳವು (ವಿವೇಕ. ೮). **[ಸಂ.]**

**ಶೈವಮತ** (ನಾ). ಶಿವನ ಶ್ರೇಷ್ಠತೆಯನ್ನು ಪ್ರತಿಪಾದಿಸುವ ಪಂಥ, — ಪಂಗಡ: ಶಿವಪಾರಮ್ಯವನ್ನು ಮುಖ್ಯವಾಗಿಟ್ಟುಕೊಂಡು ತತ್ತ್ವವಿಚಾರವನ್ನು ಮಾಡುವ ಸಂಪ್ರದಾಯಕ್ಕೆ ಶೈವಮತವೆಂದು ಅಭಿಪ್ರಾಯವಿದೆ (ಭಾರದ. ೩೨೦). **[ಸಂ.]**

**ಶೈವಲ, ಶೈವಳ** (ನಾ). ನೀರಿನ ಮೇಲೆ ಬೆಳೆಯುವ ಪಾಚಿ; ಹಾವಸೆ : ತಮಾಲ ನೀಲ ಭಾಸುರತರರೋಮರಾಜಿ ನವಶೈವಲದೊಳ್ನಡದಾಡಿ ತನ್ನುಖಾಂಬುರುಹ ರಸಪ್ರವಾಹದ ಮುಳುಂಗಿದುವಕ್ಕೆರಥಾಂಗಗಳಾತನಾ (ರಾಜಶೇ. ೭-೬೫). **ಶೈವಳ** : "ಶೈವಾಳಂ, ಶೈವಳಂ, ಜಳಶೂಕಂ, ನೀಳಿಕಾ – ಈ ೪ ಪಾವಸೆ" (ಪಲಾಯು. ೧೧೩-೭೮). **[ಸಂ.]**

**ಶೈವಲಿನಿ, ಶೈವಳಿನಿ** (ನಾ). ನದಿ; ಹೊಳೆ : ಕುಲದ ನಗಳ್ತೆಯುಮಂ ನೀಂ ಕಲುಷಿತಮಂ ಮಾಡಲೆನ್ನುಮಂ ಕೆಡಪಲ್ಕೇಕೆಳಸುವೆ ಕೂಲಂಕಷ ಶೈವಲಿನಿಯವೋಲ್ ತಿಳಿದ ಜಲಮುಮಂ ತಟಜಮುಮಂ (ಶಾಕುಂತ. ೬೮-೧೨೦). **ಶೈವಳಿನಿ** : "ಸಿಂಧುಃ . . . ಶೈವಳಿನೀ, ಸರಸ್ವತೀ, . . . ರೋಧೋವಕ್ತ್ರಾ – ಈ ೨೧ ತೊರೆ" (ಪಲಾಯು. ೧೧೦-೪೩). **[ಸಂ. ಶೈವಲಿನೀ]**

**ಶೈವಶಮಿ** (ನಾ). ಶೈವಮುನಿ, — ತಪಸ್ವಿ : ಯುದ್ಧವಿಧಿಯೊಳ್ಬೆನ್ನಿತ್ತು ನಾಯುಂಣದೋಡಿನಲುಂಡಿರ್ದ್ದಪನತ್ತ ಶೈವಶಮಿವೊಲ್ಸಾವಂತದಾಮೋದರಂ (ಎಕ. II, ೨೪೦-೨೭; ಸು. 1175). **[ಸಂ. ಶೈವಶಮಿನ್]**

**ಶೈವಶೃಂಗಾರ** (ನಾ). ಶೈವಮತಸ್ಥನಿಗೆ ಯೋಗ್ಯವಾದ ಅಲಂಕಾರ, — ವೇಷಭೂಷಣ: ಆಗಮಸ್ಥಾನದೊಳಿಟ್ಟ ವಿಭೂತಿಯ ತೊಟ್ಟ ರುದ್ರಾಕ್ಷಿಯ . . . ಶಾಂತಿಮುಖದ ಶೈವಶೃಂಗಾರಂ ಸರ್ವಾಂಗದೊಳ್ ಬಳೆಯೆ (ಸಂಬರ. ೧೩-೧೧೫). **[ಸಂ.]**

**ಶೈವಸಂಪನ್ನ** (ನಾ). ಶಿವಭಕ್ತಿಯಿಂದ ಪರಿಪೂರ್ಣನಾದವನು ; ಶರಣ : ಪರಮಾರ್ಥದ ತಿರುಳ ಪುಣ್ಯದಂತಿರ್ದ ಸೌಂದರನಂ ನೋಡಿ . . . ಎಲ್ಲರೂ ಶೈವಸಂಪನ್ನರಾಗಿ ಪುಳಕದ ಪುಂಜವಾಗಿ . . . ನುಡಿಯಲರಿಯದೆ ನೋಡುತ್ತಮಿರ (ಸಂಬರ. ೮-೪೦). **[ಸಂ.]**

**ಶೈವಸಿದ್ಧಾಂತ** (ನಾ). ಶೈವಧರ್ಮದ ಒಂದು ಪಂಥ, — ಸಂಪ್ರದಾಯ : ಪಾಶುಪತ, ಕಾಳಾಮುಖ, ಲಕುಲೀಶ, ಮಾಹೇಶ್ವರ, ಶೈವಸಿದ್ಧಾಂತ, ವೀರಶೈವ — ಇವೇ ಮೊದಲಾದವು ಶಿವಭಕ್ತಿ ಪಂಥದ ಮುಖ್ಯ ಪ್ರಭೇದಗಳು (ಭಾರದ. ೩೦೭). **[ಸಂ.]**

**ಶೈವಸ್ತವ** (ನಾ). ಶಿವನ ಕೀರ್ತನೆ ; ಶಿವಸ್ತುತಿ : ಅಮಲಶೈವಸ್ತವವ ಹೇಳಿದು ನಮಿಸಿದನು ಬಲವಂದು (ಕುವ್ಯಾಅ. ೭-೪೪). **[ಸಂ.]**

**ಶೈವಳ** 'ಶೈವಲ' ನೋ.

**ಶೈವಳಿನಿ** 'ಶೈವಲಿನಿ' ನೋ.

**ಶೈವಾಗಮ** (ನಾ). ಶಿವನ ಆರಾಧನೆಯನ್ನು ಪ್ರತಿಪಾದಿಸುವ ಆಗಮ; ಶೈವಧರ್ಮಶಾಸ್ತ್ರ : ಶೈವಾಗಮಾರ್ಥವಿದನಾ ಷಡಂಗಂ ಸಹಿತ ಪಾವನ ಮಹಾ ವೇದವಂ ಪರಿಸಿದಾತನೆಲೆ ಕೋವಿದೆಯ ಕೇಳು (ವೀಶೈಪು. ೭-೪-೧೩); ಶಿವೋಪಾಸನೆಗೆ ಪ್ರಾಧಾನ್ಯವನ್ನು ಕೊಟ್ಟು ಶೈವಸಿದ್ಧಾಂತವನ್ನು ಪ್ರತಿಪಾದಿಸುವುದೇ ಶೈವಾಗಮದ ವೈಶಿಷ್ಟ್ಯ (ಭಾರದ. ೭೫). **[ಸಂ.]**

**ಶೈವಾಲ, ಶೈವಾಳ** (ನಾ). = ಶೈವಲ : ಆಗಳಾಕೆಗಳ ಪಸುರ್ವಸವಸಿಯ ಬಾಸ ಲಾವಣ್ಯನದಿಯ ಶೈವಾಲಲತೆಯ ಲಾಸ್ಯಮನಪಹಾಸ್ಯಂಗೆಯ್ಯೆಯುಂ (ಪಂರಾಮಾ. ೩-೧೩೩ ವ). **ಶೈವಾಳ** : ಶೈವಾಳಜಾಳವಲ್ಲರಿ ಪೀವರಕುಚಕೋಕಮಿಥುನ ಮೊಳೆದೊಂದೊಂದರ್ಕೀವಲ್ಲಿ ಜಗುಟ್ಟುದೆನೆ ರೋಮಾವಳಿ ರಂಜಿಸಿದುದಾ ಸರೋಜಾನನೆಯಾ (ಲೀಲಾವ. ೩-೩೨); ಕರಿಮಕರನಕ್ರಶೈವಾಳವಿದ್ರುಮ . . . ವ್ಯಾಳಕೋಳಾಹಳಧ್ವಾನವೆರಸಿ ಜಲನಿಧಿ ಮೆರೆದುದು (ಹಚಕಾ. ೧-೩೩). **[ಸಂ.]**

**ಶೈವಾಳ** 'ಶೈವಾಲ' ನೋ.

**ಶೈವಾಳಂಬೊರೆ** (ಕ್ರಿ). ಪಾಚಿ ಅಂಟಿಕೊಳ್ಳು, — ಮೆತ್ತಿಕೊಳ್ಳು : ಮರಕತಮಣಿ ಕುಂಡಳರಶ್ಮಿ ರೇಖೆಯಿಂ ಗಂಡಮಂಡಳಂ ಶೈವಾಳಂಬೊರೆದ ಕನಕಾಬ್ಜದಳದಂತಿರೆ ಕಣ್ಗೆಸೆದಂ ನರೇಂದ್ರಚೂಡಾರತ್ನಂ (ಮಲ್ಲಿಪು. ೮-೧೨೩). **[ಶೈವಾಳ (= ಶೈವಾಲ) + ಪೊರೆ₂]**

**ಶೈಶವ** (ನಾ). ೧. ಎಳಮೆ ; ಶಿಶುತನ : ಪಾಡಿವದ ಚಂದ್ರಮನಂತೆ ಚಂದ್ರಾಪೀಡಂ ಪ್ರತಿದಿನಂ ಪ್ರವೃದ್ಧಮಾನನಾಗೆ... ಶೈಶವಮಂ ಪತ್ತುವಿಡುವುದಂ ಕ್ರೀಡಾವ್ಯಸನಮಗಲ್ವಂತು . . . ವಿದ್ಯಾನಿಕೇತನಮಂ ಮಾಡಿಸಿ (ಕಾದಂಪೂ. ೪೩೩); ಶೈಶವಮಂ ಸ್ಮಿತಬಂಧು ಕುಶೇಶಯನಿನನಂತಿರಿಂತು ಕಳೆದುರುತೇಜೋರಾಶಿ ವಿರಾಜಿಸಿದಂ . . . ತೀರ್ಥಕರಂ (ಪಾರ್ಶ್ವಪು. ೧೫-೩). ೨. ಶಿಶು; ಹಸುಳೆ : ಐಸಲೇ ಮುನಿನಾಥ ರಾಮನದ್ಯೆಸರವನತ್ತುಂಬ ಹರೆಯದ ಶೈಶವನ ಕೈಯಿಂದ ಸಲಹಿಸಿಕೊಂಬುದೇ ಯಜನ (ತೊರರಾ. ೧-೯-೨೯). **[ಸಂ.]**

**ಶೈಶವಕೇಳಿ** (ನಾ). ಮಕ್ಕಳಾಟ ; ಬಾಲಲೀಲೆ : **ಶೈಶವಕೇಳಿ** ಮನಕ್ಕಮೃತಾಶನ ಸೇವನೆವೊಲೀಯ ಸುಖಮಂ ಶಿಶುಗುರ್ವೀಶಂ ಮಾಡಿದನನ್ನಪ್ರಾಶನ ಚೌಲೋಪನಯನ ವಿಧಿಯಂ ಕ್ರಮದಿಂ (ಪಾರ್ಶ್ವಪು. ೭-೯೫). **[ಸಂ. ಶೈಶವಕೇಲಿ]**

**ಶೈಶವಭಾವ** (ನಾ). = ಶೈಶವ ೧ : ತ್ವದೀಯ ಭಾಗಿನೇಯಂ ಮುನ್ನಮುಳ್ಳ ಭಾಗಾಂಶಮೆಲ್ಲಮಂ ತ್ಯಾಗಭೋಗೋಪಭೋಗಾದಿ ವ್ಯಸನಕ್ಕಸದ್ವ್ಯಯಂ ಮಾಡಿ ಕಿಡಿಪಿಯುಂ ಶೈಶವಭಾವದಿಂ ತಾಳ್ದಿನ್ನೆಗಂ ಸುವಿದ್ಯಾಭ್ಯಾಸಭಾಗ್ಯಮುಂ . . . ಕಂಡು (ಸುಕುಮಾ. ೨-೫೨ ವ). **[ಸಂ.]**

**ಶೈಶಿರ** (ಗು). ೧. ಶಿಶಿರಋತುವಿಗೆ ಸಂಬಂಧಿಸಿದ ; ಚಳಿಗಾಲದ : ಒಂದಾದ ಪೋಲೊಂದು ನಿರ್ವಾಣವೂಂದಲಾ ತೈಲಾರ್ಚಿತತಿ, ಮಂಜುಮಂಜಾಗಿ ತೋರ್ದಡಂ ಕೈಗಣ್ಮದೋಟಾಯ್ತು ಶೈಶಿರಜ್ಯೋತ್ಸ್ನೆ (ಶ್ರೀರಾಮಾ. ೪೪೯-೧೧೭). (ನಾ). ೨. ಚಳಿಗಾಲ; ಮಾಗಿಕಾಲ ; ಶಿಶಿರ : ಐಕಿಲಿಂದೆ ಹೇಮಂತ ಶೈಶಿರದ ಮಾಗಿ ಮಡಲಿಡೆ ತರಣಿ ಸೋಮನಂತಿರೆ . . . ಕುಗ್ಗಿದುವು ಕೋಗಿಲೆಯ ಕಂಠಕಲರವಗಳು (ಜೈಮಿಭಾ. ೨೮-೧). **[ಸಂ.]**

**ಶೈಳ** 'ಶೈಲ' ನೋ.

**ಶೈಳಪತಿ** 'ಶೈಲಪತಿ' ನೋ.

**ಶೈಳಾಕ್ಷರ** (ನಾ). ಕಲ್ಲಿನ ಮೇಲೆ ಕೊರೆದ ಲಿಪಿ ; ಶಿಲಾಲಿಪಿ : ಮುನೀಂದ್ರರಂ ಕವಿಲೆಯುಂ ವೇದಾಢ್ಯರಂ ಕೊಂದೊಂದುಯ(ೞ)ಶಂ XX ಮಿಡದೆ ಸಾಱಿದಪವೀ ಶೈಳಾಕ್ಷರ ಭ್ರಾಜಿಗಳ್ (ಸೌಇಇ. VIII, ೩೭೯-೧೯; 1074); ವಾರಣಾಶಿಯೊಳೆಳ್ಕೋಟಿ ಮುನೀಂದ್ರರಂ ಕವಿಲೆಯಂ ವೇದಾಢ್ಯರಂ ಕೊಂದುದೊಂದಯಸಂ ಸಾರ್ದ್ದಪುದೆಂದು ಸಾಱಿದಪುದೀ ಶೈಳಾಕ್ಷರಂ ಧಾತ್ರಿಯೊಳ್ (ಕಇಅ. ೬೫-೩-೫೫, 1124). 'ಶಿಲಾಕ್ಷರ' ಪರಾ. **[ಸಂ. ಶೈಲಾಕ್ಷರ]**

**ಶೈಳೇಯ** 'ಶೈಲೇಯ' ನೋ.

**ಶೈಳೋದಕ** (ನಾ). ಪರ್ವತದಿಂದ ಹುಟ್ಟಿದ ಶೀತಲವಾದ ನೀರು : ಬಿಡದೇ ದುರ್ಮೋಹಮಂ ನಿರ್ವೃತಿಗೆಳಸದಲೇ ದೇಹಸಂಬಂಧದಿಂದಂ ಜಡನಾದಂ ದೇಹಿ ಶೈಳೋದಕವನೆಳಸಿ ಕಲ್ಲಪ್ಪವೊಲ್ಕಾಷ್ಠಮಲ್ಲಂ (ಮಲ್ಲಿಪು. ೧೩-೯೮). **[ಸಂ. ಶೈಲೋದಕ]**

**ಶೊಂಟಿ** 'ಶುಂಟಿ' ನೋ.

**ಶೊಂಟಿಕೊಂಬು** (ನಾ). ೧. ಶುಂಠಿಯ ಬೇರು : ಶೊಂಟಿಕೊಂಬು, ಜೀರಿಗೆ, ಮೆಣಸು ಹಾಕಿ ಕಷಾಯಮಾಡುತ್ತಾರೆ (ರೂಢಿ). ೨. (ಆಲಂ) ದಡ್ಡ; ತಿಳಿಗೇಡಿ : ಆ ಸಾವುಕಾರ ಸಂಕನ ಮಗ ಶುದ್ಧ ಶೊಂಟಿಕೊಂಬು (ಬೆಟುಮ. ೧೩೦). **[ಶೊಂಟಿ (< ಶುಂಟಿ) + ಕೊಂಬು₁]**

**ಶೊತ್ರಿಯ** (ನಾ). ವೇದಾಧ್ಯಯನ ಮಾಡಿದ ಬ್ರಾಹ್ಮಣ ; ವೈದಿಕ ; ಶ್ರೋತ್ರಿಯ : ಯಜ್ಞೋಪವೀತಸೂತ್ರವೊಪ್ಪಲುಜ್ಜ್ವಲೋತ್ತಮರ್ಶೋಭಿಪರಲ್ಲಿ ಶೊತ್ರಿಯರ್ (ಉದ್ಭಟ. ೪-೫೩). **[< ಸಂ. ಶ್ರೋತ್ರಿಯ]**

**ಶೊತ್ರ** 'ಸೊತ್ರ' ನೋ.

**ಶೋಕ** (ನಾ). ೧. ಅಳಲು ; ದುಃಖ : ಕೊಂತಿಯುಂ ಕರ್ಣನ ಶೋಕದೊಳ್ ಧರ್ಮಪುತ್ರನಂ ಬೀಟ್ಕೊಂಡವರೊಡನೆ ತಪಶ್ಚರಣಪರಾಯಣೆಯಾದಳ್ (ಪಂಪಭಾ. ೧೪-೧೦೭ ವ); ತನ್ನ ಕಾಣಲೊಡನಿರ್ಮಡಿಸಿದ ಶೋಕದಾವಾನಲನೆರ್ದೆಯೊಳ್ ಪೊಣ್ಮರದ ಕಿರ್ಚನಂತಳುರೆ (ಶಾಂತಿಪು. ೧-೯೪ ವ) ; ಶೋಕಂ ಮಿಗೆ ಫಣಿರಾಜಪತಾಕಂ ವಿಗಳಿತವಿವೇಕನವಿರಳಬಾಷ್ಪೋದ್ರೇಕಂ . . . ಮೂರ್ಛೆಗೆ ಸಂದಂ (ಗದಾಯು. ೩-೭೭). ೨. [ಕಾವ್ಯಮೀ] ಕರುಣರಸದ ಸ್ಥಾಯಿಭಾವ: ರತಿ ಪರಿಹಾಸಂ ಶೋಕೋದ್ಧತ ಮುತ್ಸಾಹಂ ಭಯಂ ಪ್ರಕೋಪಂ ವಿಜುಗುಪ್ಸತೆ ವಿಸ್ಮಯಾಶಯತ್ವಂ ಪ್ರತಿನಿಯತ ಸ್ಥಾಯಿಭಾವಮಿವು ತಾಮಕ್ಕುಂ (ಕಾವ್ಯಾವ. ೭೯೪). **[ಸಂ.]**

**ಶೋಕಗೀತೆ** (ನಾ). ವಿಯೋಗದ ಶೋಕವನ್ನು ವ್ಯಕ್ತಪಡಿಸುವ ಗೀತೆ : ವೈಯಕ್ತಿಕ ಕವಿತೆಯ ಅತ್ಯಂತಮುಖ್ಯವಿಭಾಗಗಳಲ್ಲೊಂದಾದ ಶೋಕಗೀತೆ(Elegy)ಗೆ ಬರುತ್ತೇವೆ (ಸಾಪಿಪ್ರ. ೯೮). [ಸಂ. ಶೋಕಗೀತ]

**ಶೋಕಗ್ರಹಣಿ** (ನಾ). ಗ್ರಹಣಿರೋಗದ ಒಂದು ಭೇದ : ಬಿಳುಗಾರ, ಕಾಂತಭಸ್ಮ, ಲೋಹಭಸ್ಮ, ಅಭ್ರಕಭಸ್ಮ ಇವು ಪ್ರತ್ಯೇಕ ಗ ೫ ತೂಕ . . . ಸೇವಿಸಲು ವಾತಗ್ರಹಣಿ, ಪಿತ್ತಗ್ರಹಣಿ, ಶ್ಲೇಷ್ಮಗ್ರಹಣಿ, ಭಯಗ್ರಹಣಿ, ಶೋಕಗ್ರಹಣಿ . . . ಮುಂತಾದ ಸಕಲರೋಗಗಳೂ ಗುಣಮಕ್ಕುಂ (ಸಕವ್ಯ. ೩೪೦). [ಸಂ. ಶೋಕಗ್ರಹಣೀ]

**ಶೋಕಬಾಷ್ಪ** (ನಾ). ದುಃಖದಿಂದ ಸುರಿಯುವ ಕಂಬನಿ : ಸೂಟ್ಟೂಟೊಳ್ ಪೆರ್ಚಿ ಬಂದೊಟ್ಟುಗುವ ಶೋಕಬಾಷ್ಪಂಗಳುಮನಾನಂದಾಶ್ರುಜಲಂಗಳುಮಂ ತೊಳೆದು (ಶಾಂತಿಪು. ೪-೧೦೪ ವ). [ಸಂ.]

**ಶೋಕರಸ** (ನಾ). = ಶೋಕ ೨ : ಮುನ್ನಾದ ಶೋಕರಸಮೆಲ್ಲಂ ಪೋಗಿ ನಿರ್ವೇಗ ರಸಂ ಪುಟ್ಟಿ ಸಿದ್ಧರಸಂ ಮುಟ್ಟಿದ ಲೋಹದಂತೆ ಶುದ್ಧಾಂತರಂಗನಾಗಿ (ಆಟಪು. ೩-೫೭ ವ). [ಸಂ.]

**ಶೋಕವರಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ಶೋಕವರಾಳಿ ವಸಂತ ವರಾಳಿ . . . ನಾಗವರಾಳಿಯೆಂಬ ವರಾಳಿಸಪ್ತಕವೇ ಶುದ್ಧವರಾಳಿಗೆ ಮಿಶ್ರರಾಗಂಗಳುಂ (ವಿವೇಕ. ೨೩೫). [ಸಂ. ಶೋಕವರಾಲೀ]

**ಶೋಕಾಂಧ** (ನಾ). ದುಃಖದಿಂದ ಕುರುಡಾದವನು, – ಕಂಗೆಟ್ಟವನು : ಶೋಕಾಂಧಂ ಕರ್ಣವಿರಹಿತನಪ್ಪುದಱಿಂ ಸಂಕ್ರಂದನನಂದನಂಗೆ ಮುಳಿದು ತರಣಿಯ ತನಯನ ನೆನೆದು (ಗದಾಯು. ೫-೩೭ ವ). [ಸಂ.]

**ಶೋಕಾಕುಲ** (ನಾ). ದುಃಖದಿಂದ ಕೊರಗುವವನು, – ಕಳವಳಪಡುವವನು: ಈಶ್ವರ ವಿರಹದ ಶೋಕಾಕುಲಂ ವಿಶೇಷಾಪ್ತಜನಂ (ಕವಿರಾ. ೩-೩೦). [ಸಂ.]

**ಶೋಕಾಕುಲಿತೆ** (ನಾ). ದುಃಖದಿಂದ ಚಿಂತೆಗೊಳಗಾದವಳು: ದಂತದ ಕೃತ್ರಿಮದ ಶಿರವ ಧರಣಿಸುತೆ ದಿಟವೆಂದು ಬಗೆದಳು ಓರಿದು ಶೋಕಾಕುಲಿತೆಯಾದಳು (ಕೌಶಿರಾ. ೧೭-೫೭). [ಸಂ. ಶೋಕಾಕುಲಿತಾ]

**ಶೋಕಾಕುಲೆ** (ನಾ). = ಶೋಕಾಕುಲಿತೆ : ಶೋಕಾಕುಲೆಯಾದ ಶಕುಂತಳೆ ನಮ್ಮ ಸಂಗಡ ಬರುವಳು (ಶಾಕುಂತ. ೭೨-೧೦). [ಸಂ. ಶೋಕಾಕುಲಾ]

**ಶೋಕಾರ್ತ** (ನಾ). ದುಃಖದಿಂದ ನರಳುವವನು ; ದುಃಖಿತ : ಘೋರತರ ಗಹನಕೊರ್ವಳೆ ಬಂದೆಯೆಂತಕಟ ಭೀರು ಹೇಳಾ ಬೆದಱಬೇಡ ವಾಲ್ಮೀಕಿ ನಾಂ ಭೂರಿಶೋಕಾರ್ತರಾಗಿರ್ದರಂ ಕಂಡು ಸುಮ್ಮನೆ ಪೋಪನಲ್ಲ (ಜೈಮಿಭಾ. ೧೯-೩೯). [ಸಂ.]

**ಶೋಕಾಶ್ರುಗಳೆ** (ಕ್ರಿ). ಕಂಬನಿ ಸುರಿಸು ; ಅಳು : ನೀನಿಲ್ಲಿಗೇಕೆದ್ದು ಬಂದನ್ನ ಕಂದ ಈಕಡು ಬರವೇನು ಕಾರಣ ಹೇಳೆಂದು ಶೋಕಾಶ್ರುಗಳೆದಳಕ್ಕೆಯಲಿ (ಮೋಹತ. ೨೭-೫೬). [ಶೋಕಾಶ್ರು + ಕಳೆ]

**ಶೋಕಿ** 'ಶೋಕು' ನೋ.

**ಶೋಕಿಗ** (ನಾ). ದುಃಖವನ್ನು ಅನುಭವಿಸುವವನು; ದುಃಖಿತ : ವ್ಯಾಕುಲಿತ ವಿಪ್ರರ ವಿಸತಿಯ . . . ದಾಯಭಾಗಿಗಳ ಶೋಕಿಗರ . . . ಸರ್ವೈಕಮತ್ಸರದೊಳಗೆ ಬದುಕುವನಾವ ಪೇಳೆಂದ (ಕುವ್ಯಾಆ. ೮-೫೧). [ಶೋಕ + – ಇಗ]

**ಶೋಕಿಗಾರ** (ನಾ). ಥಳುಕುಮಾಡುವವನು; ವಿಲಾಸಪ್ರಿಯ : ನನ್ನ ಸ್ನೇಹಿತ ಸೀತಾಪತಿ . . . ಬಹಳ ಶೋಕಿಗಾರ (ಚಸ್ತಕ. ೧೭).

[ಶೋಕಿ (< ಶೋಕು) + – ಗಾರ (< – ಕಾಱ)]

**ಶೋಕಿತೆ** (ನಾ). ದುಃಖಹೊಂದಿದವಳು ; ದುಃಖಿತೆ : ಸಾಕು ಮೂವರು ಸುತರು ತನಗೆಂದೀಕೆ ಮಾದ್ರಿದೇವಿಗಗ್ಗದ ಶೋಕಿತೆಗೆ ಮಂತ್ರೋಪದೇಶವಿಧಾನವನು ಕಲಿಸಿ ನಾಕನಿಲಯರ ವೊಲಿಸೆನಲು (ಕುವ್ಯಾಆ. ೪-೬೫). [ಸಂ. ಶೋಕಿತಾ]

**ಶೋಕಿಸು** (ಕ್ರಿ). ದುಃಖಪಡು; ವ್ಯಥೆಗೊಳ್ಳು : ನೀನ ಗಳ ಶೋಕಾಕ್ರಾಂತಯುಮಾಗೆ ಶೋಕಿಸಲ್ವಂತಯಿಸುವರಾರಂಥನೃಪತಿಯುಂ ನೃಪತಿಯುಮಂ (ಗದಾಯು. ೪-೪); ಹಾಡಲಱಿಯೆವು ಶೋಕಿಸುತ ಕೊಂಡಾಡಲಱಿಯೆವು ಬಣ್ಣಿಸುತ ಕೈಗೂಡಿ ಕೈವಿಡಿ ಗೂಡಲಲಱಿಯೆವಾವಲ್ಲಿಗೈತಂದು (ಬಸಪು. ೩೭-೧೮) ; ಇಂತು ನೀನೇಕೆ ಶೋಕಿಪ (ವರ್ಧಚ. ೮-೩೮). [ಶೋಕ + – ಇಸು]

**ಶೋಕು, ಶೋಕಿ, ಷೋಕಿ, ಷೋಕು** (ನಾ). ೧. ವಿಲಾಸ ; ಚೈನಿ : ಕಲಿಯುವುದಕ್ಕೆ ಬಂದವರು ಶೋಕುಮಾಡಿ ತಿರುಗಿದರ ಸಾಲದು (ತ್ಯಾಗಮ. ೧೮೪). **ಶೋಕಿ** : ೧. ಯುವಕರು ಬೀಡಿ ಸಿಗರೇಟು ಸೇದಿಕೊಂಡು ಶೋಕಿಯಾಡುತ್ತ . . . ಬಂದರು (ಉಯಕ. ೭೫). ೨. ಡೌಲು ; ಆಡಂಬರ ; ಥಳಕು : ಬರಿಯ ಶೋಕಿಗಾಗಿ, ವಿಲಾಸಕ್ಕಾಗಿ ಮೋಹಕ್ಕೆ ಬಲಿಬಿದ್ದು ಜನರು ಅನ್ಯರ ಆಚರಣೆ, ಸಂಸ್ಕಾರಗಳನ್ನು ಅನುಕರಿಸುವುದುಂಟು (ಯಕ್ಷಬ.೩). ೩. ಅಭಿರುಚಿ : ಬೇರೆ ಬೇರೆ ದೇಶಗಳಲ್ಲಿ . . . ಯಾವ ಜಾತಿಯ ಮೆಟ್ಟಿನ ಇಲ್ಲವೆ ಬೂಟ್ಸಿನ ಶೋಕಿ ನಡೆಯುತ್ತಿದ್ದೆಯೆಂದು ತಿಳಿಯುವರು (ಬಾಲಪ್ರ. I. ೪೭೦). **ಷೋಕಿ** : ೧. ಯೌವನದಲ್ಲಿ ಬಹುಷೋಕಿಯಿಂದ ಕಾಲ ಕಳೆದನು (ಉರ್ದುಪಾ. ೧೦೩). ೨. ಮೋಟು ಪಂಚೆ ವಿನಾ ಬತ್ತಲೆಯಾಗಿದ್ದ ಮರಾಟಿಯವನ ಮುಂದೆ ಹೊಲೆಯನು ಕೊಳೆ ಸರ್ವವ್ಯಾಪ್ತಿಯಾಗಿದ್ದರೂ, ಷೋಕಿಯಾಗಿದ್ದನು (ಮಲಮ. ೨). ೩. ಏನಾದರೂ ಅವನಿಗೆ ಬೈಸಿಕಲ್ಲು ಸವಾರಿಯ ಷೋಕಿ, ಕುದುರೆಸವಾರಿಯ ಷೋಕಿಗಿಂತಲೂ ಹೆಚ್ಚಾಗಿ ಅಮರಿಬಿಟ್ಟಿತ್ತು (ಮಲಮ. ೩೩); ನನಗೆ ಪಗಡೇಲಿ ಬಹು ಷೋಕಿ (ಮಲ್ಲಿ. ೨೧). **ಷೋಕು** : ೧. ಕೃಷ್ಣಭಟ್ಟರು ಷೋಕಿನಲ್ಲಿ ಮುಂದಾಗಿ ಓದಿನಲ್ಲಿ ಹಿಂದಾಗಿ ಒಂದೊಂದೇ ಕ್ಲಾಸುಗಳಲ್ಲಿ ಚನ್ನಾಗಿ ಸರ್ವಿಸುಮಾಡುತ್ತಾ ಇಂಗ್ಲಿಷು ಕಲಿಯತೊಡಗಿದರು (ಭ್ರಾಂತಿಸು. ೭). ೪. ಅಚ್ಚು ಕಟ್ಟು ; ಒಪ್ಪ : ದುಃಖ ದುಃಖ ಅಂತಾನ ಅದೇನು ಷೋಕಾಗಿ ಬಾಣಂತನ ಮಾಡಿಸಿಕೊಂಡಳು ಅಂತೀರಿ (ಬಾಡಬ. ೧೪). [← ಆರ. ಹಿಂ. ಮರಾ. ಶೌಕ್]

**ಶೋಕೋದ್ರೇಕ** (ನಾ). ೧. ದುಃಖದ ಆಧಿಕ್ಯ ; ದುಃಖಾತಿರೇಕ : ನಿನಗಿನಿತು ದೇವಿ ಬಗೆಪೊಡಯುಕ್ತಂ ಹೃದಯಶರೀರೇಂದ್ರಿಯಶೋಷದಾಯಕಂ ತಾನೆನಿಪ್ಪ ಶೋಕೋದ್ರೇಕಂ (ಚಂದ್ರಪು. ೩-೭೪); ಧೃತರಾಷ್ಟ್ರಂಗೆ ಮಕ್ಕಳ ಮೇಲ ನೆನೆಹಾಯ್ತಧಿಕ ಶೋಕೋದ್ರೇಕ ಪಲ್ಲವಿಸೆ (ಕುವ್ಯಾಭೀ. ೧-೫೪). ೨. ಶೋಕದಿಂದ ಉದ್ರಿಕ್ತನಾದವನು; ಶೋಕಭರಿತನಾದವನು : ಬಿಟ್ಟಳಂದಜಿತಸೇನ ನೃಪಾಲಪದಾಬ್ಜ ಮೂಲದೊಳ್ ಅದಂ ಕಾಣಲೊಡಂ ದ್ವಿಗುಣೀಭೂತಶೋಕೋದ್ರೇಕನಾಗಿ (ಚಂದ್ರಪು. ೫-೧೧ ವ). [ಸಂ.]

**ಶೋಚನೀಯ** (ಗು). ೧. ದುಃಖಪಡಬೇಕಾದ. (ನಾ). ೨. ದುಃಖಪಡಬೇಕಾದುದು : ಅವನ ಪರಶುರಾಮಚರಿತವೂ . . . ಅವುಗಳಿಂದಲೇ ಎತ್ತಿಕೊಂಡುವೆಂದು ಖಚಿತವಿರುವ ಪದ್ಯಗಳಾದರೂ ದೊರಕಿಲ್ಲ ಎಂಬುದು ಶೋಚನೀಯವೇ (ಮೂರುಉ. ೨). [ಸಂ.]

**ಶೋಚನೀಯಸ್ಥಿತಿ** (ನಾ). ದುಃಖಪಡಬೇಕಾದ ಸ್ಥಿತಿ ; ಸಂಕಟಕರವಾದ ಪರಿಸ್ಥಿತಿ : ರಾಮನಂ ಗಂಗೆಯೆಡೆ ಬೀಳ್ಕೊಂಡು ಬಂದಾ ಸುಮಂತ್ರನಾ ಕಂಡನೀ ಶೋಚನೀಯಸ್ಥಿತಿಯ ರಾಜೇಂದ್ರನಂ (ಶ್ರೀರಾಮಾ. ೧೧೧-೩೦). [ಸಂ.]

**ಶೋಚಿ** (ನಾ). ೧. ಬೆಳಕು; ಕಾಂತಿ. ೨. ಕಿರಣ ; ರಶ್ಮಿ : "ರೋಚಿಃ, ಶೋಚಿಃ, ಅಭೀಷುಃ . . . ವಿರೋಕಃ, ಗೌಃ – ಈ ೩೨ ರಶ್ಮಿಗಳ ಪೆಸರ್" (ಹಲಾಯು. ೭-೩೮).

[ಸಂ. ಶೋಚಿಸ್]

**ಶೋಚ್ಯ** (ನಾ). = ಶೋಚನೀಯ ೨ : ಆದರ್ಕಾನಂದಮಂ ತಾಳ್ದದಾಕುಲಮಂ ತಾಳ್ದುವುದೇ ಮದಗ್ರಜನೊಳಾದೀ ಪೌರುಷಂ ಶೋಚ್ಯಮೇ (ಪಂರಾಮಾ. ೬-೧೭೦).

[ಸಂ.]

**ಶೋಣ** (ಗು). ೧. ಕೆಂಪಾದ. (ನಾ). ೨. ಕೆಂಪುಬಣ್ಣ : ಗಿರಿಶಿಖರಾವನಿಯೊಳ್ ಮಿಳ್ಳಿಸಿದುದು ಕೇತನಪಲ್ಲವಮೊಂದಶೋಕಪಲ್ಲವಶೋಣಂ (ಪಂರಾಮಾ. ೧೦-೯೯); ಶೋಣನವೀನವಾಸಮನಲಂಪಿನೊಳುಟ್ಟೆಳೆಮುತ್ತುದೊಟ್ಟು (ರಾಜಶೇ. ೮-೭೩). ೩. ರಕ್ತವರ್ಣದ ಕುದುರೆ : "ರಕ್ತವರ್ಣದ ಕುದಿರೆ ಶೋಣನೆಂಬುದು" (ಹಲಾಯು. ೭೨-೨೮೩); ಬಂದುಗೆಯರಲಂ ತೊಳಗುವ ಸಿಂಧುರವಂ ಪವಳಮಂ ಪ್ರಭಾತದೊಳುದಯಿಪ್ಪಿಂದೀವರಮಿತ್ರನ ರುಚಿಯಂದಮನನುಕರಿಸಿ ತೋರ್ಪ ತುರಗಂ ಶೋಣಂ (ಅಶ್ವಶಾ. ೨-೩). ೪. ಒಂದು ನದಿಯ ಹೆಸರು : "ಶೋಣಃ, ಹಿರಣ್ಯಬಾಹುಃ – ಈ ೨ ಶೋಣ ನದಿ" (ಹಲಾಯು. ೧೧೧-೫೨); ಈ ಕುರುಬರು . . . ಮಧ್ಯಪ್ರಾಂತ, ಗಂಗಾ ಶೋಣ – ಭದ್ರಾನದೀತೀರದವರೆಗೂ ವಾಸವಾಗಿದ್ದುದನ್ನು ಇಂದು ನಿರ್ಧರಿಸಿಕೊಳ್ಳಬಹುದಾಗಿದೆ (ಕರ್ನಾಟ. ೬೨). ೫. ಬೆಂಕಿ ; ಅಗ್ನಿ. ೬. ಗಂಡುನದಿ. ೭. ಪದ್ಮರಾಗ; ಮಾಣಿಕ್ಯ. ೮. ರಕ್ತ ; ನೆತ್ತರು. ೯. ಸಿಂದೂರ ; ಚಂದ್ರ. [ಸಂ.]

**ಶೋಣಕ** (ನಾ). ಒಂದು ಬಗೆಯ ಮರ ; ತಿಗಡೆ : ''ಮಂಡೂಕಪರ್ಣಃ, ಪತ್ರೋರ್ಣಃ, ನಟಃ, ಕಟ್ವಂಗಃ . . . ಶೋಣಕಃ, ಅರಳುಃ – ೧೨ ಹೆಮ್ಮರದ ಹೆಸರುಗಳು, ದೊಡ್ಡಮರ, ತಿಗಡುಮರ'' (ಸಿದ್ಧಾಂತಿ. ೧೨೫). [ಸಂ.]

**ಶೋಣತೆ** (ನಾ). ಕೆಂಪುಬಣ್ಣ : ಅವಿಶೇಷದಿನುದ್ಗಮದೊಳ್ ಧವಳತೆ ಮಾಣಿಕ್ಯನಿಕರದೊಳ್ ಶೋಣತೆ ಮೇಘವಿತಾನದೊಳ್ ವಿನೀಳತೆ . . . ಒಂದಿರ್ಕುಂ (ಕಾವ್ಯಾವ. ೮೯೪). [ಸಂ. ಶೋಣತಾ]

**ಶೋಣತೆವೆಱು** (ಕ್ರಿ). ಕೆಂಪಾಗು : ಶೋಣತವೆತ್ತ ಮರೀಚಿಶ್ರೇಣಿಯ ಕೆಂದಳಿರನಗ್ರದೊಳ್ ತಳೆದು (ಜಗವಿ. ೧೬-೧೦೫); ಶೋಣತವೆತ್ತ ನಿಜಾಂಶುಶ್ರೇಣಿಯೊಳಿರ್ಪರುಣನಂತೆ (ಉದ್ಭಟ. ೮-೫೧). [ಶೋಣತ + ವೆಱು]

**ಶೋಣಮಣಿ** (ನಾ). ಕೆಂಪುರತ್ನ; ಮಾಣಿಕ್ಯ : ಶೋಣಮಣಿಕಳಶಕರಕಿಸಲಯಂಗಳಾ ನಭಶ್ರೀಯನಾಲಿಂಗಿಸುವ ಬಾಗಿಲ್ವಾಡಂಗಳೊಳಮವಱ ಮುಂದೆ ಸಂದಣಿಸಿದ ಮರಕತ ಮಕರತೋರಣಂಗಳೊಳತಿರಮಣೀಯಮಾಗಿ (ಪಂರಾಮಾ. ೫-೩೪ ಪ). [ಸಂ.]

**ಶೋಣಾಂಬುಜ** (ನಾ). ಕೆಂಪುತಾವರೆ; ಕೆಂದಾವರೆ : ಅರಳ್ದ ಶೋಣಾಂಬುಜ [ಪಾಠಾಂ. ಶೋಣಾಂಬರ]ಚ್ಛಾಯೆಗಳಡರ್ದುವನ ಭರದಿಂದ ಕತ್ತಲೆಯ ಮೇಲೆ ಬಹ ರವಿಯ ರಥತುರಗಖುರಪುಟದಿಂದಮೇಳ್ವ ಕೆಂದೂಳ್ಗಳೆನೆ . . . ಸಂಧ್ಯಾರಾಗವ್ಮದ ರಂಜಿಸುತಿರ್ದುದಂದು ಮೂಡಣದೆಸೆಯೊಳು (ಜೈಮಿಭಾ. ೧೭-೧೧). [ಶೋಣ + ಅಂಬುಜ]

**ಶೋಣಾಶ್ವ** (ನಾ). ಕೆಂಪು ಬಣ್ಣದ ಕುದುರೆ : ಶೋಣಾಶ್ವಂಗಳ್ ರಜತರಥಮಂ ಪೂಡೆ ಕುಂಭಧ್ವಜಂ . . . ಮಾ[ಱೊ]ಡ್ಡು ದಲ್ ಸಾಲದನ್ನೀ ಬಾಣಾವಾಸಕ್ಕೆನುತುಮಳವಂ ಬೀಱುತುಂ (ಪಂಪಭಾ. ೧೧-೫೭). [ಸಂ.]

**ಶೋಣಿತ** (ಗು). ೧. ಕೆಂಪುಬಣ್ಣದ. (ನಾ). ೨. ನೆತ್ತರು ; ರಕ್ತ : ಕುರುಕುಲ ಶೋಣಿತಪಾದಪದ್ಮತಳಂ ತಳೋದರಿಗೆ ವೃಕೋದರನಾಗಿಪಂ ಕಚಬಂಧ ಬಂಧುರತೆಯಂ (ಗದಾಯು. ೧-೭೧). ೩. ಕುಂಕುಮಕೇಸರಿ. ೪. (ಸಂತತಿಯ ಮೂಲರೂಪವಾದ) ಸ್ತ್ರೀಯ ಗರ್ಭಾಣು, – ಅಂಡಾಣು : ಉತ್ಪತ್ತಿ ಶುಕ್ರ ಶೋಣಿತದಿಂದಾದ ಲಜ್ಜೆ ಸಾಲದೇ ಮತ್ತೆ ದುರಿತಂಗಳ ಹೆಱುವ ಹೇಗತನವೇಕಯ್ಯಾ (ಬಸವ. ೧೫೯); ಸ್ತ್ರೀಯ ಶೋಣಿತ ಅಧಿಕವಾದರೆ ಸ್ತ್ರೀಯಹಳು ಪುರುಷನ ಶುಕ್ಲ ಅಧಿಕವಾದರೆ ಪುರುಷನಹನು (ವಿವ್ಯವಿ. ೨೦೭). [ಸಂ.]

**ಶೋಣಿತಮೇಹನ** (ನಾ). ಮೂತ್ರದಲ್ಲಿ ರಕ್ತಹೋಗುವ ಒಂದು ಬಗೆಯ ರೋಗ ; ರಕ್ತಮೇಹ : ಇನಿತಿನಿತು ರಕ್ತಮಂ ನೀರನಿತನಿತುಂ ಮೂತ್ರಿಸುತ್ತುಮಿರೆ ಶೋಣಿತಮೇಹನಮೆಂಬುದು (ಅಶ್ವಶಾ. ೧೧-೨೩). [ಸಂ.]

**ಶೋಣೋತ್ಪಲ** (ನಾ). ಕೆಂಪುಬಣ್ಣದ ನೈದಿಲೆ : ''ಅರುಣಂ-ಕುಂಕುಮ, ಸಿಂಧೂರ, ಶೋಣೋತ್ಪಲ'' (ಓಷಧಿ. ೩). [ಸಂ.]

**ಶೋತೆ** 'ಸೊದೆ' ನೋ.

**ಶೋಥ** (ನಾ). ಊದಿರುವುದು ; ಬಾವು : ''ಶೋಫಃ, ಶ್ವಯಥುಃ, ಶೋಥಃ– ಬಾತುಕೊಳ್ಳುವಿಕೆ, ಬಾವು'' (ಸಿದ್ಧಾಂತಿ. ೧೮೩). [ಸಂ.]

**ಶೋಥಘ್ನಿ** (ನಾ). (ಊತವನ್ನು ವಾಸಿಮಾಡುವ) ಕೊಮ್ಮೆಗಿಡ ; ''ಶ್ವೇತ ಪುನರ್ನವ'' (ಪಂಡಿತ. ೨೩೭). [ಸಂ. ಶೋಥಘ್ನೀ]

**ಶೋಧ** (ನಾ). ೧. ಶುದ್ಧಿಗೊಳಿಸುವುದು ; ಶುಭ್ರಗೊಳಿಸುವುದು. ೨. ಹುಡುಕುವುದು ; ಪತ್ತೆ ಹಚ್ಚುವುದು. ೩. ತನಿಖೆ ; ತಪಾಸಣೆ : ಸಿಂಹವು . . . ಬೇಟೆಯ ಶೋಧಕ್ಕಾಗಿ ನಡೆಯಿತು (ಮುಂಬಯಿ. ೪-೮೭). ೪. ಹೊಸದಾಗಿ ಕಂಡುಹಿಡಿಯುವುದು ; ಶೋಧನೆ : ಹೊಸ ವೈಜ್ಞಾನಿಕ ಶೋಧಗಳಿಂದ ಅವನ ಇರುವಿಕೆ ಇನ್ನೂ ಬದಲಾಗಿರಲಿಲ್ಲ (ಗ್ರಾಮಾಯ. ೨); ಉದಯನೂ ಸುರೇಶನೂ . . . ತಾವು ಮಾಡಿದ ಶೋಧದ ಬಗೆಗೆ ಹೆಮ್ಮೆಪಟ್ಟರು (ಕವಪು. ೪-೭೮). ೫. ತಪ್ಪನ್ನು ತಿದ್ದುವುದು, – ಸರಿಪಡಿಸುವುದು. [ಸಂ.]

**ಶೋಧಕ** (ಗು). ೧. ಶುದ್ಧಿಗೊಳಿಸುವ ; ಸ್ವಚ್ಛಗೊಳಿಸುವ. (ನಾ). ೨. ಬರವಣಿಗೆಯ ಲೋಪದೋಷಗಳನ್ನು ಸರಿಪಡಿಸುವವನು. ೩. ಪತ್ತೆ ಹಚ್ಚುವವನು; ಹುಡುಕುವವನು : ಶೋಧಕನಾದರೆ ಬಾಧಕವಿಲ್ಲ (ಗಾದ). [ಸಂ.]

**ಶೋಧನ** (ನಾ). ೧. ಶುದ್ಧಗೊಳಿಸುವುದು ; ಸ್ವಚ್ಛಮಾಡುವುದು. ೨. (ಲೋಹದಂತೆ) ಪರಿಶುದ್ಧಿಗೊಳಿಸುವುದು. ೩. ತಪ್ಪುಗಳನ್ನು ತಿದ್ದುಪಡಿಮಾಡುವುದು. ೪. ಸಾಲತೀರಿಸುವಿಕೆ; ಋಣ ಸಂದಾಯ. ೫. ಶಿಕ್ಷೆ; ದಂಡನೆ. ೬. ಸುಣ್ಣ. ೭. [ಗಣಿತ] ಕಳೆಯುವುದು ; ವ್ಯವಕಲನ : ''ಗತ ಮದೂನಂ ಶೋಧನಂ ಕಳೆಸುಮಕ್ಕು'' (ಮಂಗರಾ. ೧೩೦-೧೮). ೮. (ವಮನ, ವಿರೇಕ ಮೊದಲಾದುವುಗಳ ಮೂಲಕ) ಶರೀರವನ್ನು ಶುದ್ಧಿಗೊಳಿಸುವುದು: ಔಷಧವೆಂಬುದು ಶೋಧನವೆಂದೂ ಶಮನವೆಂದೂ ಸಂಕ್ಷೇಪದಿಂದ ಎರಡು ತೆರನಾಗಿರುವುದು (ಸಕವ್ಯ. ೧೮). [ಸಂ.]

**ಶೋಧನಿ** (ನಾ). ಕಸಪೊರಕೆ; ಬರಲು : ''ಸಮ್ಮಾರ್ಜನೀ, ಶೋಧನೀ – ೨ . . . ಪರಕೆ, ಕಸಬರಲು'' (ಸಿದ್ಧಾಂತಿ. ೧೦೪). [ಸಂ. ಶೋಧನೀ]

**ಶೋಧನೆ** (ನಾ). ೧. ಶುದ್ಧಿಗೊಳಿಸುವಿಕೆ. ೨. ಸೋಸುವಿಕೆ : (ಹ). ೩. ಪರಿಶೀಲನೆ ; ಪರಿಶೋಧನೆ : ರುದ್ರನಾಟಕವು ಕರುಣೆ ಭಯಗಳನ್ನು ಪ್ರಚೋದಿಸಿ ಅಂತಹ ಭಾವಗಳ ಶೋಧನೆಯನ್ನು ಮಾಡಬೇಕೆಂದು ಅರಿಸ್ಟಾಟಲನು ಹೇಳಿರುವುದು ತಾತ್ವಿಕವಾಗಿ ಸರಿಯಾದುದೇ . . . ಎಂಬುದನ್ನು ಈಗ ವಿಮರ್ಶಿಸಬಹುದು (ಅರಿಕಾ. ೧೯೭). ೪. ಹುಡುಕುವುದು; ಪತ್ತೆಹಚ್ಚುವುದು. ೫. ತನಿಖೆ; ತಪಾಸಣೆ. ೬. ತಪ್ಪುಗಳನ್ನು ತಿದ್ದುವುದು, – ಸರಿಪಡಿಸುವುದು. ೭. ಸಾಲ ತೀರಿಸುವುದು; ಋಣಸಂದಾಯ. ೮. ಹೊಸದಾಗಿ ಕಂಡುಹಿಡಿಯುವುದು; ಸಂಶೋಧನೆ : ಮಕ್ಕಳಿಗೆ ಚಟುವಟಿಕೆಯಿಂದಿರಲು ತುಂಬ ಆಸೆ. ಅವರ ಆಸಕ್ತಿಯ ಪ್ರವಾಹ ಸಾಮಾನ್ಯವಾಗಿ ಆಟ, ಸಮಾಜಜೀವನ, ರಚನೆ, ಶೋಧನೆ, ಕಲಾಕೌಶಲ – ಈ ಐದು ಮಾರ್ಗಗಳಲ್ಲಿ ಹರಿಯುತ್ತದೆ (ಶಿಕ್ಷದ. ೧೪೨). [ಸಂ. ಶೋಧನ]

**ಶೋಧಿತ** (ಗು). ೧. ಚೊಕ್ಕಟಗೊಳಿಸಿದ ; ಶುದ್ಧಮಾಡಿದ. ೨. ಸೋಸಿದ. ೩. ಸರಿಪಡಿಸಿದ ; ತಿದ್ದಿದ. ೪. ಋಣದಿಂದ ವಿಮೋಚನೆ ಹೊಂದಿದ ; ಸಾಲದಿಂದ ಬಿಡುಗಡೆ ಹೊಂದಿದ. ೫. ದೇಹದ ಕಲ್ಮಶವನ್ನು ವಿರೇಚಕಗಳ ಮೂಲಕ ಶುದ್ಧಿಗೊಳಿಸಿದ. [ಸಂ.]

**ಶೋಧಿಸು** (ಕ್ರಿ). ೧. ಚೊಕ್ಕಟಗೊಳಿಸು; ಶುದ್ಧಿಮಾಡು : ಆಗಳಾ ಗುಹಾದ್ವಾರಮಂ ಆ ಪತಾಕಿನೀಪತಿ ಪಡೆಗೆ ನಡೆಯಲಿಂ ಬರ್ಪಂತು ಶೋಧಿಸಿ [ಪಾಠಾಂ. ಮಾಡಿ] (ಆದಿಪು. ೧೩-೪೦ ವ); ಪೂರ್ವದ ರಾಜಸೂಯದ ವಿನುತಮಖಭೂಮಿಯನು ಶೋಧಿಸಲಲ್ಲಿ ಲಾಂಗಲದ ಮೊನೆಗೆ ಸಿಲುಕಿದ ಭೂಗತಾಲಯವನರುಹಾಕರವಿರಲು ಕಂಡನು . . . ಕೋಮಲೆಯ (ತೊರರಾ. ೧-೧೬-೨೭). ೨. (ಕೃತಿ ಮುಂತಾದುವುಗಳ) ದೋಷವನ್ನು ತಿದ್ದಿ ಪರಿಷ್ಕರಣಗೊಳಿಸು : (ಹ). ೩. ಸೋಸು ; ಗಾಳಿಸು : ತಣ್ಣಿತಪ್ಪಗ್ಗವಣಿಯಂ ಶೋಧಿಸೆಂದೆಂಬ ಸಣ್ಣೀರಮಪ್ಪ ಸಿರಿಗಂಧಮಂ ಬೆರಸೆಂಬ (ಬಸರ. ೭-೪೭); ಒಳ್ಳಿತಾಗವೊ ನಿನ್ನ ಸಾರಣೆಯಲ್ಲಿ ಜಂತುಗಳಿದ್ದು ಶೋಧಿಸಿತಿಲ್ಲವೋ (ಬಸವು. ೪೭-೧೪) ; ಶೋಧಿಸಿದ ತನಿಬೆಲ್ಲವಿಕ್ಕಿದ ಹೂರಿಗೆಯ ಮದೆಯಲ್ಲಿ ಪರಡಿಯ ಶಾವಿಗೆಯ . . . ನವಘೃತ ಸೂಪದಂಶಕದಲ್ಲಿ ನೋಡಲಿ ನಮ್ಮನೆಂದುದು ಧೂರ್ತ ವಟುನಿಕರ (ಕುಮ್ಯಾಅ. ೧೫-೭); ಕಷಾಯವನ್ನು ಕಂಚಿನ ಬಟ್ಟಲಿಗೆ ಶೋಧಿಸಿ ಬಿಟ್ಟರು (ಚೆಂಗಾಳ್ವ. ೧೫೫). ೪. ಅಕ್ಕಿ ಮುಂತಾದ ಧಾನ್ಯಗಳಿಂದ ಕಸವನ್ನು ಆರಿಸಿ ತೆಗೆ; ಹಸನುಗೊಳಿಸು : (ಹ). ೫. ಹುಡುಕು; ಅರಸು : ಸಜ್ಜೆಯ ಕಾಪಿನವರ್ ಪರಿತಂದು ಶೋಧಿಸಿ ನೋಡಿ ಪಚ್ಚಡಿಕೆಯಂ ಪತ್ತಿರ್ದ ಕೂಱೆಯಂ ಕಂಡು (ಪಂಚತಂ. ೧೩೦-೧೪) ; ಜಲಗಾಱನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಗಳ ಕೊಂದು ನಲಿನಲಿದಾಡುವ (ಮಹಾದೇ. ಬಿ. ೪೭-೧೦೯); ನಿನ್ನ ಶಸ್ತ್ರವ ಬಿಸುಟ ಯೋಗವಿಪನ್ನನನು ನೀನೇನ ಮಾಡಿದೆ ನಿನ್ನ ಶೋಧಿಸಿ ಬಳಿಕ ಪರರನು ಹಳಿವುದೇನೆಂದ (ಕುಮ್ಯಾದ್ರೋ. ೧೯-೨೮); ಮನೆ ಮನೆಯ ರಕ್ಕಸಮಡದಿಯರ ಮಱದೊಱಗಿದರ ಮಂಗಡವ ಶೋಧಿಸಿ ದಾಟಿದನು ಕೋಟೆಯನು (ತೊರರಾ. ೫-೨-೧೭). [ಶೋಧನ + – ಇಸು$_3$]

**ಶೋಧ್ಯ** (ಗು). ೧. ಶೋಧಿಸಬೇಕಾದ. (ನಾ). ೨. ಪರೀಕ್ಷೆಗೊಳಗಾಗಬೇಕಾದ ವ್ಯಕ್ತಿ : ದಿವ್ಯವನ್ನು ನಡೆಯಿಸುವ ನ್ಯಾಯಾಧಿಪತಿ ಮತ್ತು ದಿವ್ಯಕ್ಕೆ ಗುರಿಯಾಗಿರುವ 'ಶೋಧ್ಯ'ರಿಬ್ಬರೂ ಹಿಂದಿನ ದಿನ ಉಪವಾಸವಿದ್ದು ಮಾರನೆಯ ದಿನ ಪ್ರಾತಃಕಾಲ

ಸ್ನಾನಮಾಡಬೇಕು (ಕಶಾಅ. ೧೯೫). ೩. [ಗಣಿತ] ಕಳೆಯುವುದು ; ವ್ಯವಕಲನ : ರಜತಂ, ರಜಿತಂ . . . ವಿಶೋಧ್ಯಂ, ಶೋಧ್ಯಂ, ತ್ಯಜಿಸು, ಕಳೆ — ಇಂತಿನಿತುಂ ಕಳೆವುದಕ್ಕೆ ಪೆಸರು (ವ್ಯವಹಾ. ೧೧-೨೨). [ಸಂ.]

**ಶೋಫ** (ನಾ). ೧. ಬಾವು ; ಊತ : ಜನಿಯಿಸಿದ ಶೋಫಮದು ಲೇಪನದಿಂ **ಪೋಗದೊಡೆ ಶಸ್ತ್ರಕರ್ಮವನೆಸಪಂತೆ** (ಪಾರ್ಶ್ವಪು. ೨-೪೩); **ನೊಸಲೊಳ್ ಪುಟ್ಟಿದ ಶೋಫಂ** ಪಸರಿಸಿ ತಲೆ ಬಾತು ಸುಯ್ಯೊಡಂ . . . ವಿಗತಜೀವಿತನಕ್ಕುಂ (ಅಶ್ವಶಾ. ೭-೪೪); ಗಣಿಕೆಯ ಸಮೂಲವಂ ಅಂಬಿಲದಲ್ಲಿ ಅರೆದು ನೆತ್ತಿಗೆ ಒತ್ತಲು ಮೈಯ ಮಾಸಲು ಜಲಗರ ಶೋಫ ವಾತ ಗುಣ (ವಿವೇಕ. ೪). ೨. ಕ್ಷಯರೋಗ : "ರಾಜಯಾಕ್ಷ್ಮಾ, ಕ್ಷಯಃ, ಶೋಫಃ — ಈ ೩ ಕ್ಷಯವ್ಯಾಧಿ" (ಹಲಾಯು. ೯೪-೪೪೮). [ಸಂ.]

**ಶೋಬಾನ** 'ಸೋಬಾನೆ' ನೋ.

**ಶೋಬೆ, ಶೋಭೆ**[1] (ನಾ). ೧. ಖಾಯಿಲೆಯಿಂದುಂಟಾಗುವ ಊತ, — ಬಾವು: (ಕ). ೨. ಹೊಟ್ಟೆಯು ಊದಿಕೊಳ್ಳುವ ಒಂದು ಬಗೆಯ ಖಾಯಿಲೆ; ಜಲೋದರ: 'ಶೋಬೆರೋಗಿ' ಪರಾ. **ಶೋಭೆ**[1] : ೧. ಹೃದಯ, ಶ್ವಾಸಕೋಶ, ಪಿತ್ತಕೋಶ, ಮೂತ್ರಕೋಶ ಸಂಬಂಧವಾದ ರೋಗಗಳಿಂದಲೂ ಶೋಭೆಯುಂಟಾಗುವುದು (ಗ್ರಾಮಾಕ. ೧೪೨); ನನ್ನ ಶರೀರದಲ್ಲಿ ಈಗ ತಿಂಗಳಿಂದ ಕೇವಲವಾಗಿ ಅಲಸಿಕೆಯಾಗಿದೆ. ಜ್ವರ ಬಂದು ಬಹಳಮಟ್ಟಿಗೆ ನಿತ್ರಾಣಮಾಡಿತು. ಶೋಭೆ ಕಾಣಿಸಿದೆ (ಮಾಮರಾ. ೧೧). ೨. ಕೆಂಪಾದ ಚಂದನವನ್ನು ಧರಿಸಿದರೆ . . . ವಿಸರ್ಪರೋಗವನ್ನೂ ಶೋಭೆ ಮೊದಲಾದ ರೋಗವನ್ನೂ ಹೋಗಲಾಡಿಸುವುದು (ಸಕವ್ಯ. ೪೨). [<ಸಂ. ಶೋಫ. / ತಮಿ. ಚೋಪ್ಪೈ]

**ಶೋಬೆರೋಗಿ** (ನಾ). ಜಲೋದರರೋಗವುಳ್ಳ ವ್ಯಕ್ತಿ : ಶೋಬೆರೋಗಿ, ರಕ್ತಪಿತ್ತರೋಗಿ, ಮೇಹರೋಗಿ ಇವೇ ಮೊದಲಾದ ರೋಗವುಳ್ಳವರು ಮರ್ದನಕ್ಕೆ ಅಯೋಗ್ಯರು (ಸಕವ್ಯ. ೩೦). [ಶೋಬೆ + ರೋಗಿ]

**ಶೋಭಕೃತು** (ಗು). ೧. ಶುಭವನ್ನುಂಟುಮಾಡುವ. (ನಾ). ೨. ಅರುವತ್ತು ಸಂವತ್ಸರಗಳಲ್ಲಿ ಒಂದು : ಆ ವರ್ಷವೇ ಪ್ರಭವ . . . ಶೋಭ [ಪಾಠಾಂ. ಶೋಭನ] ಕೃತು ಕ್ರೋಧಿ ವಿಶ್ವಾವಸು . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೨೬೩). [ಸಂ. ಶೋಭಕೃತ್]

**ಶೋಭನ** (ಗು). ೧. ಹೊಳೆಯುವ ; ಪ್ರಕಾಶಮಾನವಾದ. ೨. ಮಂಗಳಕರವಾದ: ಇಂದಿನ ವಾಸರಮೆ ಶೋಭನವಿಧೇಯವಾಸರಮಿಂದಿನ ದಿವಸಮೆ ಶುಭದಿವಸಾಗ್ರೇಸರಂ (ಆದಿಪು. ೪-೩೦ ವ); ಎಲೆ ಕಮಲನಾಭನೆ ನಿನ್ನ ಭಕ್ತನು ಆವವನಾದರೂ ಶೋ[ೞ]ಭನ ಸಾಮ್ರಾಜ್ಯಪದವನು ಸುಲಭವಾಗಿ ಕಾಣುವನು (ಶೇಷಧ. ೨). (ನಾ). ೩. ಹೊಳಪು; ಕಾಂತಿ : ಶೋಭನದ ದೋಣಿಯೊ ಸಿದ್ಧರಸದ ಸದನವೋ . . . ಇಂತೊಪ್ಪುವಾ ಕಲಧೌತಶೈಲದಲಿ (ಬಸಪು. ೧-೩೯). ೪. ಮಂಗಳಕರವಾದುದು; ಕಲ್ಯಾಣಕರ ವಾದುದು: ಶುಭಮಸ್ತು, ಶೋಭನಮಸ್ತು (ಮದತಿ. ೧-೧ ಅಡಿಟಿ). ೫. ಸೊಗಸು; ಚೆನ್ನು ; ಅಂದ : ನೃತ್ಯಗೀತಂಗಳಿಂದತಿಶೋಭನಮಾಗ ಚಿತ್ತವೃತ್ತಿಯಿಂ ಶಿವನಂ ಭಜಿಸಿ (ಹಮ್ಮಿರ. ೨-೫೫ ವ); ಎಲೆ ಶೋಭನವಾದ ಹುಬ್ಬುವುಳ್ಳಾಕೆಯೆ ರುದ್ರಾದಿ ನಾಮಗಳ್ ನಾರಾಯಣನಲ್ಲಿ ಸಮನ್ವಯ ಮಾಡಬೇಕು (ತಾತ್ಪನಿ. ೪-೧). ೬. ಹಿತ; ಇಂಪು : ಕೆಲರಾ ಕುಮಿಂಗ ದ್ವಿತ್ವಮಂ ಪೇಟ್ಟರ್; ಅದಂ ಶ್ರವಣಕ್ಕೆ ಶೋಭನವಾಗದ ತಾಣದೊಳ್ ಪೇೞಲಾಗದು (ಶಮದ. ೨೨೮ ವೃತ್ತಿ). ೭. ವಿವಾಹ ಮುಂತಾದ ಮಂಗಳಕಾರ್ಯ, - ಶುಭಕಾರ್ಯ : ನೀವಱಿವೆಡೆಯೊಳ್ ರೂಪವಯೋವಿದ್ಯಾವಿಭವ ವಂಶಸಂಪತ್ತಿ ಯೊಳಿಂದೀವರನೀಕೆಗೆ ತೊಣೆಯೆನೆ ಭೂವರರೊಳ್ನೋಡಿ ಮಾಡುವುದು ಶೋಭನಮಂ (ವರ್ಧಪು. ೯-೪೦). ೮. ಮಂಗಳಕರವಾದ ದಿನ ; ಶುಭದಿವಸ : ಶುಭಾಶುಭದ ಫಲವ ಹೊತ್ತು 'ಶೋಭನ'ವಿದೊ ಬಂದಿದೆ (ನಲಮು. ೨೫-೧೪). ೯. ಮಂಗಳಪ್ರಸಂಗ ಗಳಲ್ಲಿ ಹಾಡುವ ಹಾಡು; ಸೋಬಾನೆ : ಮುತ್ತೈದೆಯರು ಪಾಡಿದರು ಶೋಭನವನು (ಭಾವಚಿಂ. ೫-೨೭); ಗಂಧರ್ವಸ್ತ್ರೀಯರು ಗಾನವ ಕೇಳಿಸಲು ರುದ್ರಕನ್ನಿಕೆಯರು ಶೋಭನವಂ ಪಾಡಲು (ಭೈರಸೂ. ೬. ೩೪). ೧೦. ನಿಷೇಕ; ಪ್ರಸ್ತ : ಮದುವೆಯಾದ ಮರುತಿಂಗಳಲ್ಲೇ ಶ್ರದ್ಧಾ ಮೈನೆರೆದಳು. ಶೋಭನವೂ ಆಯಿತು (ಹೊಸಕ್ಕ. ೧೯). ೧೧. ಮೈಥುನ; ಸಂಭೋಗ. ೧೨. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಐದನೆಯದು : ವಿಷ್ಕಂಭ ಪ್ರೀತಿ ಆಯುಷ್ಮಾನ್ ಸೌಭಾಗ್ಯ ಶೋಭನ . . . . ವೈಧೃತಿಗಳೆಂಬ ಇಪ್ಪತ್ತೇಳು ಯೋಗಂಗಳು (ವಿವೇಕ. ೩೨೦). [ಸಂ.]

**ಶೋಭನಂಬೆಱು** (ಕ್ರಿ). ಅಂದವಾಗು ; ಮನೋಹರವಾಗು : ಪೊಸಜಾದಿ ಚೆಲ್ವನೀಯುತ್ತಿರ ದೇಸಿಯಿಂ ನಿಮಿರ್ದ ಸೋರ್ಮುಡಿಯೊಳ್ ನೊಸಲಲ್ಲಿ ಶೋಭನಂಬೆತ್ತಿರೆ **ಚಾರುಚಂದನದ ಬೊಟ್ಟು . . . ಪೆಂಡವಾಸದೊಳುವೆಂಡಿರಲಂಕೃತಿಯಿಂದಮಿರ್ಪಿನಂ** (ಧರ್ಮಾಮೃ. ೪-೧೩೭). [ಶೋಭನ + ಪೆಱು]

**ಶೋಭನಗಾನ** (ನಾ). = ಶೋಭನ ೯ : ವಿದ್ಯಾಧರನರಸುರೋರಗಾದಿಗಳ ಮುತ್ತೈದೆಯರು ಶೋಭನಗಾನಂಗಳನೆಸಗೆ . . . ಬೃಹಸ್ಪತಿಯೆಯ್ದಿ ಜಾತಕರ್ಮಮಂ ರಚಿಯಿಸಿದ (ಹಾಲಾಸ್ಯ. ೧-೧೨-೧೭ ವ). [ಸಂ.]

**ಶೋಭನಗೂಡು** (ಕ್ರಿ). ಸಂತೋಷಹೊಂದು : ಭಕ್ತರು ಪಾಡೆ ಶೋಭನಗೂಡ ತಾಯ್ ಮೊಲೆಯೂಡೆ ಮುದ್ದುಗಳ ಬೇಡೆ ಧನಮಂ ನೀಡೆ ಬುಧರಿದು ಕೋಡೆನುತ ಕೊಂಡಾಡೆ (ಬಸಪು. ೨೪-೪೫). [ಶೋಭನ + ಕೂಡು]

**ಶೋಭನಿಕ** (ನಾ). ನಟರ ಒಂದು ಪ್ರಕಾರ : "ಗ್ರಂಥಿಕ"ರು ಮಾತಿನಲ್ಲಿ ವರ್ಣಿಸುತ್ತಿದ್ದ ಕಂಸವಧ ಬಲಿಬಂಧಗಳನ್ನು "ಶೋಭನಿಕರು" (ಅಥವಾ "ಶೌಭಿಕರು") ಪ್ರತ್ಯಕ್ಷವಾಗಿ ಮಾಡಿ ತೋರಿಸುತ್ತಿದ್ದರು (ಸಂನಾಟ. ೪೧). [ಸಂ.]

**ಶೋಭಸ್ಕರ** 'ಸೋಬಸ್ಕರ' ನೋ.

**ಶೋಭಾಂಜನ** (ನಾ). ನುಗ್ಗೆಯ ಮರ : "ಶಿಗ್ರು ಶೋಭಾಂಜನಕಂ" (ವಸ್ತುಕೋ. ೩೫-೧೩). [ಸಂ.]

**ಶೋಭಾಕರ** (ಗು). ೧. ಸೊಬಗನ್ನುಂಟುಮಾಡುವ ; ಸೊಗಸುಗೊಳಿಸುವ : ಅನಂತದರ್ಶನಮುಮವ್ಯಾಬಾಧಶೋಭಾಕರಾಕ್ಷರನಿರ್ವ್ಯಾಕುಲಮಪ್ಪನಂತಸುಖಮುಂ ಮೆಯ್ವೆತ್ತು ನಿನ್ನೊಳ್ಕರಂ ದೊರೆವೆತ್ತಿರ್ದುದು (ಸುಕುಮಾ. ೪-೫೨). (ನಾ). ೨. ಸೊಗಸನ್ನು ಉಂಟುಮಾಡುವಂಥದು : ನಿರತಿಶಯಕಾವ್ಯ ಶೋಭಾಕರಂ ಗಳಾಗಿರ್ಪ ಧರ್ಮಮುವು ಗುಣಮಕ್ಕುಂ (ಕಾವ್ಯಾವ. ೪೯೯); ಹರಿಹರ ಹಿರಣ್ಯಗರ್ಭಾದಿ ಸಕಲಗೀರ್ವಾಣ ಮಣಿಭವನವಾಪೀಕೂಪ ದೀರ್ಘಿಕಾತಟಾಕ ತಟನೀನಿಕರ ಶೋಭಾ ಕರಮುಂ (ಜಗವಿ. ೨-೧ ವ). [ಸಂ.]

**ಶೋಭಾಕ್ಷತೆ** (ನಾ). ಮಂಗಳಕಾರ್ಯಕ್ಕೆ ಉಪಯೋಗಿಸುವ ಅಕ್ಷತೆ : ಅಕ್ಷತೆಯೊಳು ಕುಂಕುಮದಲಗೂಡಿ ಶೋಭಾಕ್ಷತೆವಟ್ಟಲಿಟ್ಟಿಹಳು (ಮೋಹತ. ೨೧-೧೧). [ಸಂ. ಶೋಭಾಕ್ಷತ]

**ಶೋಭಾಡಂಬರ** (ನಾ). ಅತಿಶಯವಾದ ಸೊಬಗು ; ಶೋಭೆ : ವಿನುತಪ್ರಾಸ ಸಂಬಂಧಾಕ್ಷರದೊಳಲ್ಲ ಮಾತ್ರೆಗಳುಂ ತಟ್ಟಿಂಬಾಗಿ ಬೆರಸೆ ಶೋಭಾಡಂಬರಮಂ ಪಡೆಗುಮುಚಿತ ಕಾವ್ಯೋಕ್ತಿಗಳೊಳ್ (ಕವಿರಾ. ೨-೩೪). [ಸಂ.]

**ಶೋಭಾನ** 'ಸೋಬಾನೆ' ನೋ.

**ಶೋಭಾನಪಾತಕ** (ನಾ). ಮಂಗಳಗೀತೆಯನ್ನು ಹೇಳುವವನು : ಶುಕ ಶಂಖಂ ಗಜವಾಜಿ ವೀಣೆ ಪಶು ತಾಳಂ ಭೇರಿ ಶೋಭಾನಪಾಠಕ ನೃತ್ಯಂ . . . ಪೆರ್ಗಿಚ್ಚನಾರ್ ಕಂಡೊಡಂ ಶಕುನಂ ಶೋಭನಕಾಸ್ಪದಂ (ಸೋಮೇಶ. ೭೭). [ಶೋಭಾನ (< ಸೋಬಾನೆ) + ಪಾಠಕ]

**ಶೋಭಾನೆ** 'ಸೋಬಾನೆ' ನೋ.

**ಶೋಭಾವಹ** (ಗು). ೧. ಸೊಗಸಾದ ; ಮನೋಹರವಾದ. (ನಾ). ೨. ಸೊಗಸಾದುದು ; ಮನೋಹರವಾದುದು : ಶ್ರೀವನಿತಾಸ್ವಯಂವರ ವಿನೀಳಸರೋರುಹಮಾಳೆಯಂತೆ ಶೋಭಾವಹಮಾಗೆ ಖಡ್ಗಲತೆ . . . ಆವಗಮೊಪ್ಪೆ ಬೆಳ್ಗೊಡೆ ಮನೋಹರಮಾದುದು ರಾಜ್ಯಮಂಡಪಂ (ಮಲ್ಲಿಪು. ೯-೧೧೦). [ಸಂ.]

**ಶೋಭಾಷ್ಟಕ** (ನಾ). ಮದುವೆ, ಮುಂಜಿ ಮುಂತಾದ ಮಂಗಳಕಾರ್ಯಗಳಲ್ಲಿ ಸಾಂಪ್ರದಾಯಿಕವಾಗಿ ಶುಭವನ್ನು ಕೋರಿ ಹೇಳುವ ಎಂಟು ಮಂಗಳ ಶ್ಲೋಕಗಳು : ವೀಣಾನಿಕರನಾದಂ ಮೊರೆಯೆ ಶೋಭಾಷ್ಟಕ [ಪಾಠಾಂ. ಕಕುಭಾಷ್ಟಕ] ವದಿರುತಿರೆ ಚಾಂಗುಬಲಯೆಂಬಾ ರವಂಗಳಲಿ (ಬಸಪು. ೪-೭). 'ಮಂಗಳಾಷ್ಟಕ' ಪರಾ. [ಸಂ.]

**ಶೋಭಿತ** (ಗು). ೧. ಸುಂದರವಾದ ; ಅಂದವಾದ. ೨. ಅಲಂಕೃತವಾದ. (ನಾ). ೩. ಅಂದವಾದುದು ; ಮನೋಹರವಾದುದು : ಶೋಭಿತವೆನಿಪ ಛಿದ್ರಿತವಾಗಿರದಖಂಡಬಿಲ್ವಪತ್ರೆಯನಯ್ದೆ ಕೊಯ್ದು (ಬಸಪು. ೪೩-೨೭); ಚತುರಪದಗತಿಯ ಸರಸಧ್ವನಿಯ ವರ್ಣಶೋಭಿತದಲಂಕಾರದ ಸುಲಕ್ಷಣದ ಲಾಲಿತಶ್ರುತಿರಂಜನದ . . . ವಾಜಿಯಂ ಕಂಡು (ಜೈಮಿಭಾ. ४-೮). [ಸಂ.]

**ಶೋಭಿತಾಂಗ** (ನಾ). ಸುಂದರವಾದ ಅವಯವಗಳುಳ್ಳವನು; ಚೆಲುವ : ಶ್ರೀವೃಕ್ಷ ಸಂಪೂರ್ಣ ಲಾಂಛನವಕ್ಷಂ ಕರಮೊಪ್ಪಿ ತೋರ್ಪ ಧವಳಾಕ್ಷಂ ಶೋಭಿತಾಂಗಂ ಭುಜಾನನಮೆಂದಿಂತಿವಗಣ್ಯಪುಣ್ಯಜನಿತಂ ಜೀವಕ್ಕೆ ನಿರ್ವ್ಯಾಕುಲಂ (ಸುಕುಮಾ. ೫-೩೬). [ಸಂ.]

**ಶೋಭಿಸು** (ಕ್ರಿ). ೧. ಅಂದವಾಗು ; ಚೆಲುವಾಗು : ದೆಸೆ ಮುಖಧೂಮದಿಂ ದ್ವಿಜರ ಹೋಮದಿನೊಳ್ಗಿಡೆ ಹಂಸಕೋಕಸಾರಸಕಳನಾದದಿಂದೊಳಗೆ ವೇದನಿನಾದದಿನೆತ್ತಮಯ್ದೆ ಶೋಭಿಸೆ (ಪಂಪಭಾ. ೧೪-೫೭); ಹೇಳಲೇನದನಂಗ ಧರಣೀಪಾಲನವನಿಯ ಸಿರಿಯ ಸೊಂಪಿನ ಲೀಲೆಗಿದು ನೆಲವೀಡೆನಲು ಶೋಭಿಸಿತು ಸೊಗಸಿನಲಿ (ತೊರರಾ. ೧-೬-೮). ೨. ಒಪ್ಪು ; ಹೊಂದು ; ಅಳವಡು : ಗುಣವರ್ಮನ ಜಾಣ್ಮವಿರತ್ನನೋಜೆ ಶೋಭಿಸೆ ನೆಲಸಿರ್ಕೆ ಧಾರಿಣಿ ಮನಂಗೊಳೆಮತ್ತ್ರ ಪ್ತಿಯೊಳ್ನಿರಂತರಂ (ಧರ್ಮಾಮೃ. ೧-೩೯); ಕೈಶಿಕಿಯೋಳ್ ವರಾಳಿವರ್ಣಂ ಶೋಭಿಸುಗುಂ (ಪಮ್ಮಿರ. ೨-೯೦ ವ). [ಶೋಭನ + — ಇಸು$_3$]

**ಶೋಭೆ$_1$** 'ಶೋಬೆ' ನೋ.

**ಶೋಭೆ$_2$** (ನಾ). ೧. ಹೊಳಪು ; ಕಾಂತಿ ; ಪ್ರಕಾಶ : "ಉದ್ಯನ್ಮಂಡಲಾಗ್ರಂ ಸಲೆ ಘನಪದವೀಶೋಭೆಯಂ ಪೆರ್ಚಿಸುತಿರ್ಪಿನಮೊಳ್ಪಂ ಪೆತ್ತುದಾತ್ತಂ ಬೆಳಗುಗೆ ಜಗಮಂ ಗೋಪಮಾರ್ತಂಡದೇವಂ (ಜಗವಿ. ೧-೪); ಲಲಿತೆಯ ಮುಖದಲ್ಲೊಂದು ಬಗೆಯ ಶೋಭೆ, ಕಣ್ಣಿನಲ್ಲೊಂದು ಹೊಸ ಕಾಂತಿ ಸೂಸುತ್ತಿತ್ತು (ಅಲಹೂ. ೮೦). ೨. ಚೆಲುವು ; ಅಂದ ; ಸೊಗಸು : ಶೋಭಾಧಾಮಾಮರೇಂದ್ರಸ್ತುತಜಿನನಿರೆ ಕುಂಭಾಗ್ರದೊಳ್ . . . ದೇವೇಭಂ ಶ್ರೀಪಾಂಡುರಂ ಮುನ್ನಡೆರ್ದಮರಕುಭೃತ್ಕಂದರಕ್ಕೆಯ್ದಿದಾಗಳ್ (ಪಾರ್ಶ್ವಪು. ೧೪-೬೦); ಸೊಂಡಿಲೊಂದು ಚೆಲ್ಪಿನ ಪಲ್ಲಮೆಟ್ಟಿ ಬಗೆಯೊಳೂಡರ್ವಂತು ಪೊತ್ತ ನಾಲ್ಪೋಳ ಶೋಭೆಯ ಕಂದನೊಂದಿರಂ ಮನಂಬುಗಲೊಡಂ (ರಾಮಾಶ್ವ. ೭೭-೧೩); ಇವನಿಲ್ಲದೆಯೆ ಯಾವ ಸಭೆ ಸಮಾರಂಭಕ್ಕು ಶೋಭೆಯಿಲ್ಲ (ನೆಲಮು. ೨೯-೩). ೩. ವಿಶಿಷ್ಟವಾದ ಅರ್ಹತೆ, — ಯೋಗ್ಯತೆ. ೪. ಬೆಡಗು ; ವಿಲಾಸ. ೫. ಲಕ್ಷ್ಮಿ : "ಸಿರಿ ವಿಭ್ರಮ ಕಾಂತಿ ಗದಾದಿ ಶೋಭೆಯಕ್ಕು" (ನಾನಾರ. ೧೩೦). ೬. ಎಣೆ; ಜೋಡು; ಸಮಾನ : "ಪಡಿ ದೊರೆ ಪಾಸಟಿ ಪಾಟಿಯು ಗಡೆಯೆಣೆಯೆನೆ ಶೋಭೆ" (ಕವಿಕಂ. ೧೩೬). [ಸಂ. ಶೋಭಾ]

**ಶೋಭೆಗೊಳ್ಳು** (ಕ್ರಿ). ಅಂದವಾಗು; ಮನೋಹರವಾಗು : ಅರುಹಮಂದಿರ ಶೋಭೆಗೊಂಡಿರೆ . . . ಪುರಜನ ರಾಜಿಸುತ ಬಂದಿರಲು (ಬಜ್ಜಪು. ೧೧೩-೧೦೦). [ಶೋಭೆ$_2$ + ಕೊಳ್ಳು$_1$ (< ಕೊಳ್$_1$)]

**ಶೋಭೆವಡಿಸು** (ಕ್ರಿ). ಅಂದಗೊಳಿಸು; ಸೊಗಸುಗೊಳಿಸು : ತೊಂಡಲು ಝುಲ್ಲಿ ಜಲ್ಲರಿಯನಿಳುಹಿಯತಿಶೋಭೆವಡಿಸೀಯಲ್ಲಭಿತ್ತಿಯನ್ನು ಕರ್ಪೂರಕದಡಿಂ ಪೂಸಿ ಸಲ್ಲಲಿತಕುಂಕುಮವ ಕಾರಣೆಯ ರಚಿಸಿ (ನವಮೋ. ೨೦-೧೭). [ಶೋಭೆ$_2$ + ಪಡಿಸು]

**ಶೋಭೆವಡೆ** (ಕ್ರಿ). ಚೆಲುವಾಗು ; ಮನೋಹರವಾಗು : ಇಳಾಪತಿ ರಂಜಿಸಿರ್ದನತ್ಯಂತ ವಿಚಿತ್ರ ಶೋಭೆವಡೆದೋಲಗಶಾಲೆಯೊಳ್ (ಪುಷ್ಪಪು. ೭-೨೫). [ಶೋಭೆ$_2$ + ಪಡೆ$_1$]

**ಶೋಭೆವೆಱು** (ಕ್ರಿ). = ಶೋಭೆವಡೆ : ನಾನಾವನಕುಸುಮಕೃತೋತ್ತಂಸಕರ್ಣಾವತಂಸಂ ಮನುವಂಶಂ ಶೋಭೆವೆತ್ತಂ ಸುಕವಿಜನಮನೋಮಾನಸೋತ್ತಂಸಹಂಸಂ (ಆದಿಪು. ೧೧-೧೫೨); ವಿನಯ XX ದಾರಮುನ್ನತಿಕುಲಂಗಾಜಯಮೈಶ್ವರ್ಯ್ಯಮೆಂಬಿನಿತುಂ ಶೋಭಿಸೆ ಶೋಭೆವೆತ್ತನೆನುತುಂ . . . ಕೀರ್ತ್ತನಗೆಯ್ಗುಂ (ಎಕ. VII. ಶಿವಮೊ. ೯೭- ೭. 1113); ತಲೆವಾಲೆಗಳ್ ಶೋಭೆವೆತ್ತು ರಂಜಿಸೆ ಮದನಬಲಶಿಕ್ಷನಮಳಭಾಳಾಕ್ಷಂ ವಿರೂಪಾಕ್ಷನಿರ್ದಂ ವಿಲಾಸದಿಂದೆ (ಚೆಬಪು. ೨-೨೨). [ಶೋಭೆ$_2$ + ಪೆಱು]

**ಶೋಷ** (ನಾ). ೧. ಒಣಗುವಿಕೆ; ಬಾಡುವಿಕೆ. ೨. ಕ್ಷಯರೋಗ : ನುಗ್ಗೆ, ಮಂಗರವಳ್ಳಿ, ಕೀರಕಸಲೆ, ಗಣಜಿಲೆ, ಇವುಗಳ ರಸದಲ್ಲಿ ಪ್ರತ್ಯೇಕ ೭ ಭಾವನೆ ಕೊಟ್ಟು ಬಿಸಿ ನೀರಲ್ಲಿ . . . ಕೊಡಲು ಉಚ್ಚರಿಸುವುದು ಮಾಣ್ಗುಂ. ಶೋಷ ಹರ (ವಿಷ್ಣುವಿ. ೧೬). [ಸಂ.]

**ಶೋಷಂಬೆರು** (ಕ್ರಿ). ಒಣಗಿಹೋಗು ; ಬಾಡು : ಈ ಕೋಮಳ ಕಾಮಕ್ಲಿಷ್ಟೆ ಚಿತ್ತಕ್ಕಳಲನೊಲವುಮಂ ಪುಟ್ಟಿಪಳ್ ನೋಡೆ ಪತ್ರಾವಳಿ ಶೋಷಂಬೆತ್ತ ಚೈತ್ರಾಗಮಪವನ ಪರಿಸ್ಪೃಷ್ಟವಾಸಂತಿಯಾವೋಲ್ (ಶಾಕುಂತ. ೩೫-೬೧). [ಶೋಷ + ಪೆರು$_1$ (< ಪೆಱು$_1$)]

**ಶೋಷಣ** (ಗು). ೧. ಒಣಗುವಂತೆ ಮಾಡುವ ; ಒಣಗಿಸುವ. (ನಾ). ೨. ಒಣಗುವಿಕೆ ; ಬಾಡುವಿಕೆ : "ಶಕುನ ಶೋಷಣಗಳೊಳ್ ತಾಟನಿಕ್ಕುಂ" (ಶಬ್ದಮಂ. ೧೧೭). ೩. ಒಣಗಿಸುವಿಕೆ : ಗ್ರಹಣ, ಕಬಳನ, ಶೋಷಣ, ದಹನ, ಶೋಧನವೆಂಬ ಪಂಚಕ್ರಿಯೆಗಳಿಂ . . . ವಿಭೂತಿಗಳ್ಸಮದಿಂ ಜನಿಸಿ (ವಿವೇಕ. ೧೧೩). [ಸಂ.]

**ಶೋಷಣೆ** (ನಾ). ೧. ಬತ್ತಿಹೋಗುವುದು ; ಒಣಗುವುದು : ವಯಸ್ಸಾಗಿದ್ದ ಆಕೆಗೆ ಈ ದುರ್ಭರ ದುಃಖದಿಂದ ಮಿದುಳಿನ ಒಂದು ಭಾಗಕ್ಕೆ ರಕ್ತ ಶೋಷಣೆ ಉಂಟಾಗಿದ್ದಿತು (ಶಾಂತಲಾ. ೩೨೪). ೨. (ಆಲಂ) ತುಳಿತ ; ಮೆಟ್ಟುವಿಕೆ : ದಲಿತರು ಶೋಷಣೆಗೆ ಗುರಿಯಾಗುವುದನ್ನು ತಪ್ಪಿಸಬೇಕು (ರೂಢಿ). [ಸಂ. ಶೋಷಣ]

**ಶೋಷರುಜಾರ್ತ** (ನಾ). ಕ್ಷಯರೋಗಪೀಡಿತನಾದವನು; ಕ್ಷಯರೋಗಿ : ಖರಕಿರಣಂ ಚಂದ್ರಾಂಶದೊಳಿರೆ ಚಂದ್ರಂ ಖರಕರಾಂಶದೊಳ್ ನೆಲಸಿರೆ ಶೋಷರುಜಾರ್ತಂ (ಜಾತತಿ. ೨೦-೧೪). [ಸಂ.]

**ಶೋಷಿತ** (ಗು). ೧. ಬಾಡಿದ ; ಸೊರಗಿದ. ೨. (ಆಲಂ) ತುಳಿತಕ್ಕೆ ಒಳಗಾದ: ಇಡೀ ಉತ್ತರಭಾರತದ ಶೋಷಿತವರ್ಗದ ಜನತೆಯ ನಿತ್ಯಜೀವನದ ಪರಿಚಯವನ್ನು ಜಗತ್ತಿಗೆ ಮಾಡಿಕೊಟ್ಟ ಕಲಾವಿದ ಈತ (ಭಾರದ. ४೬೭). [ಸಂ.]

**ಶೋಷಿಸು** (ಕ್ರಿ). ೧. ಒಣಗು ; ಬಾಡು ; ಬತ್ತು : ಸಮಸ್ತ ದುರ್ಜನರ ಹೃತ್ಕುಮುದಂ ಮುಗಿಯೆ ಸುಜನಚಕ್ರಂಗಳೊಡಗೂಡೆ ದುರ್ಭವರಸಂ ಶೋಷಿಸೆ (ಪದ್ಮರಾ. ೨-೬೨); ತಟಾಕಗಳೆಲ್ಲವು ಶೋಷಿಸಿ ನಷ್ಟವಾಗುವದಂ ನೋಡಿ . . . ಸಿದ್ಧವಿದ್ಯಾಧರ ಸಂಘವುಯಿದೇನೆಂದು ವಿಸ್ಮಯಪಡುತ್ತಿರಲು (ಸೌಗಂಧಿ. ೨೯೮-೭); ಮನವಚನದಿಂ ಸ್ಮರಿಸುವರ ಭವವನಧಿ ಶೋಷಿಸಿ ಪೋಗುವುದು (ಜಗದಾ. ೨೪೫). ೨. ಒಣಗಿಸು ; ಶುಷ್ಕಗೊಳಿಸು; ಬತ್ತಿಸು : ರಸೆಯಂ ಸಂತಾಪಿಸುತ್ತುಂ ಜಳಭರಿತತಟಾಕಂಗಳಂ ಶೋಷಿಸುತ್ತುಂ . . . ದವಶಿಖಿಯವೊಲೆಲ್ಲತ್ತಮೋಘಂ ನಿದಾಘಂ (ಗಿರಿಕ. ೯-೧೭); ವಾಯವ್ಯಾಸ್ತ್ರದಿಂದೆ ಶೋಷಿಸಿದನಾ ಜಲವನರ್ಜುನನು (ಜೈಮಿಭಾ. ೧೩-೧೫). ೩. (ಆಲಂ); ತುಳಿ ; ಮೆಟ್ಟು : ದಲಿತರನ್ನು ಶೋಷಿಸುವುದೇ ಕೆಲವರ ಹವ್ಯಾಸವಾಗಿದೆ (ರೂಢಿ). [ಶೋಷಣ + — ಇಸು$_3$]

**ಶೌಂಡ** (ಗು). ೧. ಕುಡಿದ ; ಮತ್ತೇರಿದ. ೨. ಮದ್ಯಸೇವನೆಯ ಆಸಕ್ತಿಯುಳ್ಳ. ೩. ಆಸಕ್ತನಾದ. (ನಾ). ४. ಆಸಕ್ತನಾದವನು ; ಆಸಕ್ತಿಯುಳ್ಳವನು : ಕದನಪ್ರಾರಂಭಶೌಂಡಂ ರಿಪುನೃಪಬ[ಲದಾ]ವಾನಲಂ ವೈರಿಭೂಭೃನ್ಮದವನ್ಮಾತಂಗಕುಂಭಸ್ಥಳದಳನ[ಖ]ರೋಗ್ರಾಸಿಪಂಚಾಸ್ಯಧೈರ್ಯಂ (ಪಂಪಭಾ. ೬-೭೭). ೫. ಚತುರ; ನಿಷ್ಣಾತ: 'ಜಯಶೌಂಡ', 'ದಾನಶೌಂಡ' ಪರಾ. ೬. ಮದ್ಯಪಾನ ಮಾಡಿ ಮತ್ತನಾದವನು. [ಸಂ.]

**ಶೌಂಡಿ** (ನಾ). ಒಂದು ಬಗೆಯ ಸಸ್ಯ ; ದೊಡ್ಡಹಿಪ್ಪಲಿ : "ಕೃಷ್ಣಾ, ಉಪಕುಲ್ಯಾ, ವೈದೇಹೀ . . . ಶೌಂಡೀ . ಕೋಲಾ — ೧೦ ಪಿಪ್ಪಲೀಗೀಡದ ಹೆಸರುಗಳು" (ಸಿದ್ಧಾಂತಿ. ೧೩೪). [ಸಂ. ಶೌಂಡೀ]

**ಶೌಂಡಿಕ** (ನಾ). ಮದ್ಯವನ್ನು ತಯಾರಿಸುವವನು ಮತ್ತು ಮಾರುವವನು : "ಕಲ್ಯಪಾಲಃ, ಶೌಂಡಿಕಃ - ಈ ೨ ಕಳ್ಳವಾಳಂ" (ಪಲಾಯು. ೯೭-४೫೯). [ಸಂ.]

**ಶೌಂಡೀರ** (ಗು). ಜಂಬದಿಂದ ಕೂಡಿದ ; ಗರ್ವದಿಂದ ಕೂಡಿದ. ೨. ಮೇಲೆತ್ತಿದ. [ಸಂ.]

**ಶೌಕ** (ನಾ). ಗಿಳಿಗಳ ಗುಂಪು, — ಸಮೂಹ : "ಶೌಕಂ - ಗಿಣಿಗಳ ಹಿಂಡು" (ಸಿದ್ಧಾಂತಿ. ೧೬೬). [ಸಂ.]

**ಶೌಕ್ತಿಕೇಯ** (ನಾ). ಮುತ್ತು; ಮೌಕ್ತಿಕ : ಪಾದಾಲಂಕಾರ ಶೌಕ್ತಿಕೇಯದೀರ್ಘದೀಧಿತಿ ಕ್ಷೀರಧಾರಾಪ್ರಕ್ಷಾಳಿತಾಕ್ಷೂಣಹರಿನೀಳಮಣಿಕುಟ್ಟಿಮನುಮಾಗಿ ಪಾದಮಾರ್ಗದಿಂ ಪೋಗಿ (ಚಂದ್ರಪು. ४-೬೪ ವ). [ಸಂ.]

**ಶೌಕ್ಲಿಕೇಯ** (ನಾ). ಒಂದು ಬಗೆಯ ವಿಷ : "ಬ್ರಹ್ಮಪುತ್ರಃ, ಶೌ(ಕ್ಲಿ)ಲ್ಕಿಕೇಯಃ, ದಾರದಃ . . . ವಿಷಂ ಈ ೯ ವಿಷಂ" (ಪಲಾಯು. ೧೦೬. ೨೪). [ಸಂ.]

**ಶೌಕ್ಲ್ಯ** (ನಾ). ಬಿಳುಪು ; ಧವಳತೆ : "ಶ್ವೇತಿಮಮದು ಶೌಕ್ಲ್ಯಂ" (ವಸ್ತುಕೋ. ೧೧೫. ೨೭). [ಸಂ.]

**ಶೌಚ** (ನಾ). ೧. ನೈರ್ಮಲ್ಯ; ಪರಿಶುದ್ಧತೆ : ಸ್ವದೇಹಮಲವಿಮೋಚನಾರ್ಥಮಾಗಿ ಮೃತ್ತಿಕೆಜಲಂಗಳಿಂ ಮನೋಮಲಹರಾರ್ಥಮಾಗಿ ಮಂತ್ರಧ್ಯಾನಾದಿಗಳಿಂ ಮಾಳ್ಪುದೇ ಶೌಚವೆನಿಸುವುದು (ವಿವೇಕ. ೧೪೪); ಮೇಣೊಂದೆಡೆಯೊಳ್ ಶೌಚದ ಸ್ನಾನದ ವೇದಪಾರಾಯಣದ ಸಂಧ್ಯೋಪಾಸಿಯ ಜಪದ ತಪದ ಸಂಕೀರ್ತನೆಯ . . . ಋಷಿ ವರ್ಗದಿಂ ಸೂಗಯಿಸಿದುದು (ರಾಮಾಶ್ವ. ೪೩-೨೯). ೨. ಕಳಂಕರಹಿತವಾದ ನಡತೆ; ಸದಾಚಾರ : ಸುಕುಮಾರಸ್ವಾಮಿಯ ರೂಪಮಂ . . . ಶುಚಿತ್ವಮಂ ಶೌಚಮಂ ಶ್ರೀಯಂ . . . ನೆನೆದು (ಪದ್ಮಾರಾ. ೩೦-೧೦); ಲೋ(ಬ)ದ ದೆಶೆಯಱಿಯದ ಜಾಗಮನ್ಯವನಿತಾಜನದೊಳ್ ಸುಸಿಲಱಿಯದ ಶೌಚಂ (ಕ೯ಇ. ೨-೨-೪೫; 1058) ; ಶೌಚದ ಪೆಂಪು ತಾಂ ಪರವಧುವಿಂಗೆಱಗದಿರ್ಪುದೆ (ಜೀವಸಂ. ೨೨-೭). ೩. ಮಲ ಮೂತ್ರ ವಿಸರ್ಜನೆ: ಶೌಚಕ್ಕೆಂದು ಹೋಗಿದ್ದ ನಾನು ನಿರ್ಜನವಾದ ಅರಣ್ಯದಲ್ಲಿ ಮಲಗಿದ್ದ ಆ ಮಗುವನ್ನು ಕಂಡು ಕರೆತಂದೆ (ಪಚಭಾ. ೩೯೪). ೪. [ಜೈನ] ಹತ್ತು ಕುಲಧರ್ಮಗಳಲ್ಲಿ ಒಂದು ; ಲೋಭವನ್ನು ತ್ಯಜಿಸುವುದು : ಉತ್ತಮಕ್ಷಮಾ ಮಾರ್ದವಾರ್ಜವಸತ್ಯಶೌಚಸಂಯಮತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯಪರ್ಯಾಯ ಪರ್ಯಾಪ್ತದಶಧರ್ಮಂಗಳಿಂ ಕೈಕೊಂಡು (ಆಪು. ೬-೩೦ ವ) ; ಉತ್ತಮಕ್ಷಮಾಮಾರ್ದ ವಾರ್ಜವಶೌಚಸತ್ಯಸಂಯಮತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯಾಭಿಧಾನ ದಶಕುಲ ಧರ್ಮನಿರ್ಮಳರೆನಿಸಿದ ಸುಧರ್ಮಾಚಾರ್ಯರ ಪಾದಪದ್ಮಮಂ ನಿಜೋತ್ತಂಸಂಗಳಿಂ ಮಾಡಿ (ಸುಕುಮಾ. ೩-೪೪ ವ). ೫. [ಯೋಗ] ಯೋಗಾಂಗದ ನಿಯಮಗಳಲ್ಲಿ ಒಂದು : ನಿಯಮಗಳಲ್ಲಿ ಮೊದಲನೆಯದಾದ ಶೌಚವು ಶರೀರಕ್ಕೆ ಅನ್ವಯಿಸುತ್ತದೆ (ಭಾರದ. ೨೭೩); ನಿಯಮವೆಂದರೆ ಮಾಡತಕ್ಕದ್ದು. ಅದು ಶೌಚ ಸಂತೋಷ ತಪಸ್ಸು ಸ್ವಾಧ್ಯಾಯ ಈಶ್ವರ ಪ್ರಣಿಧಾನ ಎಂದು ಐದು ಪ್ರಕಾರ (ಒಂದಸಾ. ೧೧೫).

ಶೌಚಾಂಜನೇಯ = ಶುಚಿತ್ವದಲ್ಲಿ ಮಾರುತಿಯಂತಿರುವವನು ; ಒಂದು ಬಿರುದು : ಕದನತ್ರಿಣೇತ್ರಂ ಮನುಜಮಾಂಧಾತಂ ಪ್ರತಿಜ್ಞಾಗಾಂಗೇಯಂ ಶೌಚಾಂಜನೇಯನಕಳಂಕ ರಾಮಂ ಸಾಹಸಭೀಮಂ (ಪಂಪಭಾ. ೧-೧೪೪ ವ); ಶೌಚಾಂಜನೇಯಂ ಮಹಾಲಕ್ಷ್ಮೀ ಲಬ್ಧವರಪ್ರಸಾದಂ ಕದನಕೇಳೀವಿನೋದ ಶ್ರೀಮತ್ತ್ರಿಭು ವನಮಲ್ಲದೇವ ಪಾದಾರಾಧಕಂ (ಸೌಇಇ. XI-ii. ೧೩೫-೫ : 1087). [ಸಂ.]

**ಶೌಚಕೂಪ** (ನಾ). ಮಲವಿಸರ್ಜನೆಯ ಸ್ಥಳ; ಕಕ್ಕಸು : ಚೌಡಪ್ಪ ಅಲ್ಲಿಂದ ಎದ್ದು ಹೊರಗೆ ಹೋಗಿ ಶೌಚಕೂಪಕ್ಕೆ ಪ್ರಯಾಣ ಬೆಳಸಿದರು (ಪಳ್ಳಿಪಾ. ೫೫). [ಸಂ.]

**ಶೌಚಮಣಲೆ** (ನಾ). ಒಬ್ಬಾತನ ಹೆಸರು : ಶೌಚಮಣಲೆಯರುಂ ನನ್ನಿ ಮಳಲೂರುಂ ಸನ್ತೊನಮಾಳಕಿಱುವಟ್ಟಿಗರಾ ಪನ್ನಿರ್ವ್ವರ್ಗ್ಗಂ ರಣಪಾರರಾ ಮಣಲೆಯ ರಸರಾ ಸಮಾಧಿಯ ಸಮಾಧಿ (ಎಕ. XIV. ತಿರುಮ. ೨೫೩-೨: ಸು. 800). [?]

**ಶೌಚವಿಧಿ** (ನಾ). ೧. ಮಲಮೂತ್ರವಿಸರ್ಜನೆ, ಸ್ನಾನಮಾಡುವುದು ಮೊದಲಾದ ಶುದ್ಧಿಕಾರ್ಯ : ಬ್ರಾಹ್ಮೀಮುಹೂರ್ತದಲ್ಲಿ ಎದ್ದು ಶೌಚವಿಧಿ ತೀರಿಸಿಕೊಂಡು ಶುಚಿಯಾಗಿ ಸ್ವಸ್ಥಾನನಾಗಿ ಕುಳಿತುಕೊಂಬುದು (ಸಕವ್ಯ. ೨೪). ೨. ಬಂಧುವಿನ ಮರಣ ಸೂತಕವನ್ನು ಪರಿಹರಿಸಿಕೊಳ್ಳಲು ಮಾಡುವ ಶುದ್ಧಿಕ್ರಿಯೆ. [ಸಂ.]

**ಶೌಚಾಚಾರ** (ನಾ). ೧. ಕೊಳೆ, ಮೈಲಿಗೆ, ಸೂತಕ ಮುಂತಾದುವನ್ನು ಪರಿಹರಿಸಿಕೊಳ್ಳಲು ಮಾಡುವ ಶುದ್ಧಿಕ್ರಿಯೆ. ೨. ಕಳಂಕರಹಿತವಾದ ನಡತೆ; ಸದಾಚಾರ : ತ್ರಿದಶರ್ ಪೂಜಿಸೆ ಮಾನವರ್ ಪೊಗಟೆ ಶೌಚಾಚಾರಮಂ ದಿವ್ಯದಿಂ ವಿದಿತಂ ಮಾಡಿದರಾರ್ ಮಹಾಸತಿಯರಾರ್ ನಿಮ್ಮಂದದಿಂ. . . ಎಂದೆಱಗಿ ಸೀತಾಸಂಸ್ತವಂ ಮಾಡಿದರ್ (ಪಂರಾಮಾ. ೧೭-೬೭); ಸತ್ಯಶೌಚಾಚಾರಕುಲ ವೇದಶಾಸ್ತ್ರ ಪಾಂಡಿತ್ಯದ ಸುವಿಪ್ರರಿಪ್ಪತ್ತು ಸಾವಿರಕೆ . . . ಪೊನ್ನಂ ಕುಡುವುದು (ಜೈಮಿಭಾ. ೨-೨೭). [ಸಂ.]

**ಶೌಚಿ** (ನಾ). ಶುಚಿಯಾದ ನಡವಳಿಕೆಯುಳ್ಳವನು; ಸದಾಚಾರಿ : ವನಿತೆಯ ಮೊಲೆ ಮುಟ್ಟಿ ಶೌಚಿ ಯಾವಂ ಜಗದೊಳ್ (ಜಗವಿ. ೪-೧೧). [ಸಂ. ಶೌಚಿನ್]

**ಶೌಚೇಯ** (ನಾ). ಮಡಿವಾಳ; ಅಗಸ. [ಸಂ.]

**ಶೌಭಿಕ** (ನಾ). ನಟರ ಒಂದು ಪ್ರಕಾರ : ಕಂಸವಧ ಬಲಿಬಂಧಗಳನ್ನು "ಶೋಭನಿಕರು" (ಅಥವಾ "ಶೌಭಿಕರು") ಪ್ರತ್ಯಕ್ಷವಾಗಿ ಮಾಡಿ ತೋರಿಸುತ್ತಿದ್ದರು (ಸಂನಾಟ. ೪೧). [ಸಂ.]

**ಶೌರಸೇನ** (ಗು). ೧. ಶೂರಸೇನರಿಗೆ ಸೇರಿದ, – ಸಂಬಂಧಿಸಿದ. (ನಾ). ೨. ಪ್ರಾಕೃತಭಾಷೆಯ ಪ್ರಭೇದಗಳಲ್ಲಿ ಒಂದು : ಸಂಸ್ಕೃತ ಪ್ರಾಕೃತ ಪೈಶಾಚಿಕ ಮಾಗಧ ಶೌರಸೇನ ಭಾಂಡೀರ ಅಪಭ್ರಂಶ ವೈಕಪಿತ ಶುದ್ಧ ಮಿಶ್ರಾದಿ ಭಾಷಾಭೇದಂಗಳಿಂ ಪೇಳ್ವ (ವಿವೇಕ. ೨೪೨). [ಸಂ.]

**ಶೌರಸೇನಿ** (ನಾ). = ಶೌರಸೇನ ೨ : ಮಧ್ಯಮಾಧಮಪಾತ್ರಗಳಿಗೆ ಪ್ರಾಕೃತಭಾಷಾ ಪ್ರಭೇದವಾದ ಶೌರಸೇನೀಭಾಷೆಯೂ . . . ವ್ಯವಹಾರಾರ್ಹವಾಗಿ ವಿಹಿತವಾಗಿರುವುದು (ಭಾರದ. ೪೩೯). [ಸಂ. ಶೌರಸೇನೀ]

**ಶೌರಿ** (ನಾ). ೧. ಶೂರಸೇನನ ವಂಶದವನು; ಕೃಷ್ಣ : ಯಶೋದೆಗೆ ಸಂಭವಿಸಿರ್ದ ಕನ್ನೆಯೊಳ ಶೌರಿಯನಂದು ಪಲ್ಲಟಿಸಿ ಚೆಚ್ಚರವಾಕೆಯನೆತ್ತಿಕೊಂಡು . . . ಪರಿದೈದಿದನಾತ್ಮಗೇಹಮಂ (ಜಗವಿ. ೩-೧೧); ಸೈರಿಸುವೆನಪರಾಧಶತವ ಕುಮಾರಕನ ತಾ ಕೊಲ್ಲನೆಂದೀ ಶೌರಿ ಭಾಷೆಯ ಮಾಡಿ ಹಿಂಗಿದನಿವನ ತಾಯೊಡನೆ (ಕುವ್ಯಾಸ. ೧೦-೩೬). ೨. ಬಲರಾಮ. ೩. ವಸುದೇವ. ೪. [ಜ್ಯೋತಿ] ನವಗ್ರಹಗಳಲ್ಲಿ ಒಂದು; ಶನಿ : "ಅಸಿತಃ, ಕ್ರೋಡಃ, ಪಂಗುಃ, ಛಾಯಾತನಯಃ, ಶನೈಶ್ಚರಃ, ಶೌರಿಃ – ಈ ೮ ಶನಿಯ ಪೆಸರ್" (ಪಲಾಯು. ೯-೪೯). [ಸಂ.]

**ಶೌರಿಯ** 'ಸೌರಿಯ' ನೋ.

**ಶೌರ್ಯ** (ನಾ). ೧. ಸಾಹಸ ; ಪರಾಕ್ರಮ : "ವಿಕ್ರಾಂತಂ ಪರಾಕ್ರಮಮಂ ಶೌರ್ಯಂ" (ವಸ್ತುಕೋ. ೧೧೨-೮); ತಮ್ಮಣ್ಣನಂ ಶೌರ್ಯದಿಂದಂ ಕಾದಂ (ಪಂಪಭಾ. ೧೧-೬೧); ಬಲುಸರಿಯ ನಾರಾಚಜಾಳದ ಮಳೆಯ ನೆತ್ತರ ಹೊನಲುಗಳ ರೌಕುಳದ ಮಳೆಗಾಲದಲಿ ಹಚ್ಚಿತು ಭಟರ ಶೌರ್ಯಶಿಖಿ (ಕುವ್ಯಾದ್ರೋ. ೧೫-೨೯). ೨. ಯುದ್ಧೋತ್ಸಾಹ ಪ್ರದರ್ಶನವುಳ್ಳ ಒಂದು ಬಗೆಯ ನಾಟಕ.

ಶೌರ್ಯಮಾರ್ತಂಡ = ಪರಾಕ್ರಮದಲ್ಲಿ ಸೂರ್ಯನಂತಿರುವವನು; ಒಂದು ಬಿರುದು : ಚಲಕೆ ಬಲ್ಲಣ್ಣಂ ಶೌರ್ಯ್ಯಮಾರ್ತ್ತಣ್ಡಂ . . . ಶ್ರೀ ಮನ್ಮಹಾಮಣ್ಡಳೇಶ್ವರಂ ಲಕ್ಷ್ಮರಸರ್ (ಸೌಇಇ. XX. ೪೭. ೭; 1074). [ಸಂ.]

**ಶೌರ್ಯಮದ** (ನಾ). ಅಷ್ಟಮದಗಳಲ್ಲಿ ಒಂದು ; ಪರಾಕ್ರಮದಿಂದುಂಟಾದ ಅಹಂಕಾರ : ಅಂತು ಶೌರ್ಯಮದಜ್ವರಂ ಮಂತ್ರಿವರ್ಗವೈದ್ಯವಚನೌಷಧಿಗಳಿಂ ಪತ್ತುವಿಡೆ (ಆಪು. ೧೨-೧೧೯ ವ). [ಸಂ.]

**ಶೌರ್ಯವಂತ** (ನಾ). ಪರಾಕ್ರಮಿ ; ಶೂರ. [ಸಂ. ಶೌರ್ಯವತ್]

**ಶೌರ್ಯವಡೆ** (ಕ್ರಿ). ಪರಾಕ್ರಮವನ್ನು ಹೊಂದು; ಸಾಮರ್ಥ್ಯವನ್ನು ಪಡೆ : ಮದ್ದೂರ ಸುಭಟರು . . . ಮಾರ್ಬಲವ ಹೊದ್ದಿಯಿಱಿದು ನಾನೂರು ಮೂಗಿಱಿದಾಗ ಸದ್ದದ ಶೌರ್ಯವಡೆದರು (ಕಂನವಿ. ೧೩-೫೭). [ಶೌರ್ಯ + ಪಡೆ$_1$]

**ಶೌರ್ಯವಿಪನ್ನ** (ನಾ). ಪರಾಕ್ರಮದಿಂದ ಕಷ್ಟಕ್ಕೆ ಒಳಗಾದವನು; ಸಾಹಸದಿಂದ ಕುಗ್ಗಿದವನು : ತನ್ನೊಡನೆ ಹಗೆಬೆಳೆದ ಶೌರ್ಯವಿಪನ್ನರನು ತೋಱೆ ಜನಾರ್ದನ (ಕುವ್ಯಾಗ. ೧೭-೨). [ಸಂ.]

**ಶೌರ್ಯವೃದ್ಧ** (ನಾ). ಪರಾಕ್ರಮದಿಂದ ಹಿರಿಯನೆನಿಸುವವನು; ಸಾಹಸದಿಂದ ದೊಡ್ಡವನಾದವನು : ಜ್ಞಾನವೃದ್ಧರು ವಿಪ್ರರಲಿ ಸನ್ಮಾನನೀಯರು ಶೌರ್ಯವೃದ್ಧರು ಮಾನವೇಂದ್ರರೊಳಧಿಕವಿದು ಪೌರಾಣಸಿದ್ಧವಲೆ (ಕುವ್ಯಾಸ. ೮-೩೦). [ಸಂ.]

**ಶೌರ್ಯಸಖ** (ನಾ). ಪರಾಕ್ರಮದ ಕಾರ್ಯಗಳಲ್ಲಿ ನೆರವಾಗುವ ಸ್ನೇಹಿತ : ಕಾರ್ಯಸಖಂ ಶಕುನಿ ಗಡಾ ಶೌರ್ಯಸಖಂ ಸೂತಜಂ ಗಡಾ (ಗದಾಯು. ೨-೨೭). [ಸಂ.]

**ಶೌಲ್ಬಿಕ** (ನಾ). ತಾಮ್ರದ ಕೆಲಸಮಾಡುವವನು. [ಸಂ.]

**ಶೌಷ್ಕಲ** (ನಾ). ೧. ಒಣಗಿದ ಮಾಂಸ ಅಥವಾ ಮೀನು ತಿಂದು ಜೀವಿಸುವವನು. ೨. ಒಣಗಿದ ಮಾಂಸವನ್ನು ಮಾರುವವನು. [ಸಂ.]

**ಶ್ಮಶಾನ** (ನಾ). ಹೆಣಗಳನ್ನು ಸುಡುವ ಅಥವಾ ಹೂಳುವ ಪ್ರದೇಶ; ಸುಡುಗಾಡು; ಮುಸಣ : ಎನ್ನುಮನೀತನಂತೆ ಪೆಡಂಗಯ್ಯುಡಿಯೆ ಕಟ್ಟಿಯೊಂದೆ ವಡೆಗುಟ್ಟಿ ನೀಮೆಲ್ಲ ನಂಟರ್ ನೋಡೆ ಶ್ಮಶಾನಕ್ಕುಯ್ದು ಸೂಲದೊಳಿಕ್ಕಿ ಕೊಲ್ವರ್ (ವಡ್ಡಾರಾ. ೧೪ ೧೨); ಶ್ಮಶಾನಧರಯರಮನೆ ಪ್ರೇತಗಾಹಿನ ತವಗ ಮಣಿಪೀಠ . . . ಸಂಬಳಿಗೋಲು ಕರವಾಳು ಸತ್ಯಭಂಡಾರ ಪತಿಯಾಜ್ಞೆ ಭಾಸುರತರ ಕ್ಷತ್ರಧರ್ಮಗಳಿಂದೇ ಕಾಣುತಿರ್ದನು ಹರಿಶ್ಚಂದ್ರನು (ಹಚಕಾ. ೧೧-೪೬). [ಸಂ.]

**ಶ್ಮಶಾನವಾಸಿ** (ನಾ) ಸುಡುಗಾಡಿನಲ್ಲಿ ವಾಸಿಸುವವನು; ಶಿವ. [ಸಂ. ಶ್ಮಶಾನವಾಸಿನ್]

**ಶ್ಮಶಾನವೈರಾಗ್ಯ** (ನಾ) ಸ್ಮಶಾನವನ್ನು ನೋಡಿದ ಕ್ಷಣದಲ್ಲಿ ಮಾತ್ರ ಉಂಟಾಗುವ ವಿರಕ್ತಿ ; ತಾತ್ಕಾಲಿಕವಾದ ವೈರಾಗ್ಯ. [ಸಂ.]

**ಶ್ಮಶ್ರು** (ನಾ). ೧. ಕೂರ್ಚ; ಮೀಸೆ : ಅಭಿನವೋದ್ಭಿದ್ಯಮಾನಮೃದುಕುಟಿಲ ಶ್ಮಶ್ರುಮಧುಕರಪಟಲಪರಿವೃತಮುಗ್ಧಮುಖಸರಸಿಜನುಂ (ಆದಿಪು. ೩-೬೦ ವ); ಕುವಲಯನಯನಂ ತುಂಗಘೋಣಂ ಗಭೀರಧ್ವನಿ ಸೂಕ್ಷ್ಮಶ್ಮಶ್ರು . . . ಅಂತಂತಸೆಯೆ ನೃಪಸುತಂ ನೋಡೆ ಕಣ್ಗೆಡ್ಡಮಾದಂ (ಪುಷ್ಪಪು. ೪-೬೬). ೨. ಗಡ್ಡ ; ದಾಡಿ : ಎಳಮಿಂಚಂ ಪೋಲ್ವ ಬಂಬಲ್ಜಡೆ ಬಳೆದ ಘನಶ್ಮಶ್ರು ಭಸ್ಮತ್ರಿಪುಂಡ್ರಂ ತೊಳಪುದ್ಯದ್ವಾಳಮಾಲಂಬಿತ ವಿಳಸಿತರುದ್ರಾಕ್ಷಮಾಲಾಳಿ . . . ಮಿಸುಗೆ ಚರಿಯಿಪರ್ ತಪ್ಪಲೊಳ್ ತಾಪಸೇಂದ್ರರ್ (ರಾಜಶೇ. ೧-೧೩೨); ಪರ್ವತವಾಸೀಕಿರಾತರು ಅವರ ವಿಶಾಲದೇಹ ನಿಬಿಡ ಶ್ಮಶ್ರು ಹಾಗೂ ಮಧುರಸದಯವ್ಯವಹಾರವನ್ನು ನೋಡಿ ಮುಗ್ಧರಾದರು (ಕುಂಹಿಂ. ೪೯). [ಸಂ.]

**ಶ್ಮಶ್ರುಲೇಖ** (ನಾ). ೧. ಗೆರೆಯಂತಿರುವ ಮೀಸೆ. ೨. ಗೆರೆಯಂತಹ ಮೀಸೆಯನ್ನು ಹೊಂದಿದವನು : ಯೂಥಪತಿ ಪ್ರಥಮೋದ್ಭಿನ್ನದಾನಲೇಖಾನುಕಾರಿ ಶ್ಮಶ್ರುಲೇಖನುಂ ಗಜಮದಮಳಿನಕೇಸರಿಜಟಾಕುಟಿಳಕುಂತಳಕಳಾಪನುಂ (ಕಾದಂಪೂ. ೧೬೬): ಅವಿರಳಗಳದಶ್ರುಬಿಂದುಸಂದೋಹಮಿಶ್ರಿತಶ್ಮಶ್ರುಲೇಖನುಂ . . . ಆಗಿ (ಚಂದ್ರಪ್ರ. ೫-೯ ವ). [ಸಂ. ಶ್ಮಶ್ರುಲೇಖಾ]

**ಶ್ಯಾಣ** 'ಶಹಣೆ' ನೋ.

**ಶ್ಯಾಣ್ಯಾ** 'ಶಹಣೆ' ನೋ.

**ಶ್ಯಾಣ್ಯಾತನ** 'ಶಾಣೆತನ' ನೋ.

**ಶ್ಯಾನಭಾಗ** 'ಸೇನಬೋವ' ನೋ.

**ಶ್ಯಾನಭಾವ** 'ಸೇನಬೋವ' ನೋ.

**ಶ್ಯಾನಭೋಗ** 'ಸೇನಬೋವ' ನೋ.

**ಶ್ಯಾನುಭಾಗ** 'ಸೇನಬೋವ' ನೋ.

**ಶ್ಯಾನುಭೋಗ** 'ಸೇನಬೋವ' ನೋ.

**ಶ್ಯಾನೆ$_1$** 'ಶಾನೆ$_1$' ನೋ.

**ಶ್ಯಾನೆ$_2$** 'ಶಾನೆ$_2$' ನೋ.

**ಶ್ಯಾನೆ$_3$** (ನಾ). (?) : ಯರೆಕೆರೆಗೆ ಬರುವ ಶ್ಯಾನೆ ಬಡಗವತ್ತಿನಲ್ಲಿ ಗಂಗ್ನಾಡಿಯವರು (ಎಕ. III. ತಿರುಮ. ೬೩-೪೯೭; 1748). [?]

**ಶ್ಯಾಮ** (ಗು). ೧. ಕಪ್ಪುಬಣ್ಣದ; ಕಡುನೀಲವರ್ಣದ. (ನಾ). ೨. ಕಪ್ಪುಬಣ್ಣ; ಅಸಿತ ವರ್ಣ : ''ಶ್ಯಾಮಂ ಕಾಳಂ'' (ವಸ್ತುಕೋ. ೧೦೮-೬೩); ಸಾಮಂತಚೂಡಾಮಣಿಯ ಮೈಯ ಬಣ್ಣಂ ವಿಧಾತ್ರನೆಂಬ ಚಿತ್ತಾರಿಯ ವರ್ಣಕ್ರಮಂಗೆಯ್ದು ಕದಳೀಗರ್ಭಶ್ಯಾಮಮೆಂಬ ಬಣ್ಣದಂತಾದುದು (ಪಂಪಭಾ. ೨-೫೯ ವ). ೩. ಕಪ್ಪುಮಿಶ್ರವಾದ ಕಡುಹಸುರು ಬಣ್ಣ : ''ಶ್ಯಾಮಂ, ಶ್ಯಾಮಳಂ . . . ಹರಿತ್- ಈ ೬ ಪ(ಹ)ಸುರ್'' (ಹಲಾಯು. ೧೨೧-೪೧); ಅರಮನೆಯ ಉದ್ಯಾನಶಾದ್ವಲಶ್ಯಾಮವೇದಿಕೆಯಲ್ಲಿ ರಾಣಿಯರ್ ತಮ್ಮ ಮಕ್ಕಳ್ವೆರಸಿ ವಿಹರಿಸುತ್ತಿರೆ (ಶ್ರೀಣಾಮಾ. ೧೯-೪೯೬). ೪. ದತ್ತೂರದ ಗಿಡ. ೫. ಪ್ರಿಯಂಗುವೃಕ್ಷ : ''ಫಳಿನಿ ಶ್ಯಾಮಂ ಪ್ರಿಯಂಗು ನಾಮಂ'' (ವಸ್ತುಕೋ. ೩೩-೪). ೬. ಹೊಂಗೆಮರ. ೭. ಒಂದು ಬಗೆಯ ಏಕದಳಧಾನ್ಯ; ಸಾಮೆ. ೮. ಮೋಡ. ೯. ಸಮುದ್ರದ ಉಪ್ಪು. ೧೦. ಕರಿಯ ಮೆಣಸು. ೧೧. ಕೋಗಿಲೆ. ೧೨. ನೀಲವರ್ಣದವನು. ೧೩. ವಿಷ್ಣು. ೧೪. ರಾಮ : ರಾಮನಂ . . . ಕುವಲಯಶ್ಯಾಮನಂ ನಿಜತನು ಶ್ಯಾಮನಂ ಘನಪುಣ್ಯನಾಮನಂ ಸಂತತಂ ನಾ ಮನಂದಣಿಯೆ ರಮಿಸದೆ ಬಾಳ್ಕೆನೆಂತು (ಜೈಮಿಭಾ. ೧೯-೨೨); ಲಕ್ಷ್ಮಣದೇವನಸದನಯ್ . . . ಶ್ಯಾಮಶ್ರೀಯೊಲ್ಮೆಯಲಿ (ಶ್ರೀರಾಮಾ. ೨೬-೬೮೭). ೧೫. ಕೃಷ್ಣ. [ಸಂ.]

**ಶ್ಯಾಮಂತಿಗೆ** 'ಸೇವಂತಿಗೆ' ನೋ.

**ಶ್ಯಾಮಕ** (ಗು). ೧. ಕಪ್ಪನೆಯ; ಶ್ಯಾಮಲವರ್ಣದ : ಅರಸಿಯರ ತನು ಶ್ಯಾಮಕಾಗ್ರಂಗಳೊಳ್ ಸ್ನೇಹವಶಾನಂಗಾಗ್ನಿಯಂ ನೀರ್ದಳೆದು ನದಿಪುವಂತಾದ ನಂಘೋದಲೀಲಂ (ಶಾಂತಿಪು. ೮-೩೧). (ನಾ). ೨. ಒಂದು ಬಗೆಯ ಏಕದಳ ಧಾನ್ಯ; ಸಾಮೆ: ''ಶ್ಯಾಮಾಕಃ, ಶ್ಯಾಮಕಃ - ಈ ೨ ಸಾವೆ'' (ಹಲಾಯು. ೯೬-೪೩೦). ೩. ಸಾವೆಯ ಹುಲ್ಲು. [ಸಂ.]

**ಶ್ಯಾಮಕಂಠ** (ನಾ). ೧. ಕಡುನೀಲಿಬಣ್ಣದ ಕೊರಳುಳ್ಳುದು; ನವಿಲು : ''ಕೇಕೀ, ಶಿಖೀ . . . ಶ್ಯಾಮಕಂಠ(?) - ಈ ೧೦ ನವಿಲ್'' (ಹಲಾಯು. ೪೦-೮೪). ೨. ಕಪ್ಪು ಕೊರಳುಳ್ಳವನು ; ನೀಲಕಂಠ ; ಶಿವ. [ಸಂ.]

**ಶ್ಯಾಮಕಂಧರ** (ನಾ). ೧. = ಶ್ಯಾಮಕಂಠ ೧. ೨.= ಶ್ಯಾಮಕಂಠ ೨ : ಶ್ಯಾಮಕಂಧರನೀವನೀ ಕೃತಿಗತಿಚಮತ್ಕೃತಿಯ (ಬಸವು. ೧-೫); ಶ್ಯಾಮಕಂಧರ ನಾಗಾಸುರಚರ್ಮಾಂಬರ ಪ್ರೇಮದಿಂದೊಲಿದು ರಕ್ಷಿಪುದು (ಹರಿಸಾಂ. ೧-೧). ೩. ಹಾವು; ಸರ್ಪ : ಶ್ಯಾಮಕಂಧರರಾಜಕಟಕಂ ಶ್ಯಾಮಕಂಧರನೀವನೀ ಕೃತಿಗತಿಚಮತ್ಕೃತಿಯ (ಬಸವು. ೧-೫). [ಸಂ.]

**ಶ್ಯಾಮಕಂಧರಗಮನ** (ನಾ). ನವಿಲನ್ನು ವಾಹನವಾಗಿ ಉಳ್ಳವನು; ಷಣ್ಮುಖ: ಶ್ಯಾಮಕಂಧರಗಮನಜನಕಂ ಶ್ಯಾಮಕಂಧರರಾಜಕಟಕಂ ಶ್ಯಾಮಕಂಧರನೀವನೀ ಕೃತಿಗತಿಚಮತ್ಕೃತಿಯ (ಬಸವು. ೧-೫); ಶ್ಯಾಮಕಂಧರಗಮನನಯ್ಯ ಪಾಲಿಪುದೆನ್ನ (ಪ್ರೌಢರಾ. ೧೦-೧). [ಸಂ.]

**ಶ್ಯಾಮಗಾತ್ರ** (ನಾ). ೧. ನೀಲವರ್ಣದ ಶರೀರವುಳ್ಳವನು. ೨. ವಿಷ್ಣು. ೩. ಕೃಷ್ಣ : ಶ್ಯಾಮಗಾತ್ರಪ್ರೀಯ ತಾಮರಸಶರವಿಜಯ . . . ಪಾಲಿಪುದು ಕಾಮಿತವನಿತ್ತು ಮುದದಿ (ಪ್ರೌಢರಾ. ೧-೧). [ಸಂ.]

**ಶ್ಯಾಮತೆ** (ನಾ). ಕಪ್ಪುಬಣ್ಣ : ಶ್ಯಾಮತೆಯಂ ವಿರೂಪತೆಯನಾರಯೆ ನಿನ್ನ ಸಖಂ ಮನೋಜನಂತಾ ಮದನಂಗಮಾದುದು ವಸಂತನ ಪೊರ್ದುಗೆಯಿಂದಮುತ್ಸವೋದ್ದಾಮತೆ (ಚಂದ್ರಪ್ರ. ೬-೭೮). [ಸಂ. ಶ್ಯಾಮತಾ]

**ಶ್ಯಾಮತೆವೆಱು** (ಕ್ರಿ). ಕಪ್ಪುಬಣ್ಣವನ್ನು ಹೊಂದು : ನಿಬಿಡಮೆನೆ ಮುಸುಂಕಿದ ಮಧುಮುದಿತಮಧುಕರಪ್ರತಾನದಿಂ ಶ್ಯಾಮತೆ [ಪಾಠಾಂ. ಶ್ಯಾಮಳತೆ]ವೆತ್ತು ನಿಜಮೂಲದೊಳ್ ಬಳಸಿ ತಳರ್ತ ಚೆಂದಳಿರ್ಗಳುಟ್ಟ ಪೀತಾಂಬರದಂತಿರೆ (ಶಬಶಂ. ೨-೪೨ ವ). [ಶ್ಯಾಮತೆ + ಪೆಱು]

**ಶ್ಯಾಮಪುಷ್ಪಿ** (ನಾ). ಒಂದು ಬಗೆಯ ಸಸ್ಯ : ''ಧ್ಯಾಮಂ - ಗಂಜಳಿಗೆಬುಲ್ಲು, ಶ್ಯಾಮಪುಷ್ಪಿ, ಶ್ಯಾಮಲೋಧ್ರ'' (ಒಷಧಿ. ೮೨). [ಸಂ. ಶ್ಯಾಮಪುಷ್ಪೀ]

**ಶ್ಯಾಮಲ, ಶ್ಯಾಮಳ** (ಗು). ೧. ಕಪ್ಪನೆಯ : ಹಾ! ರಮಣ . . . ನಿನ್ನ ಘನಶ್ಯಾಮಲ ಕೋಮಲಗಾತ್ರಮುಮಂ, ನಿನ್ನ ಸೊಬಗುಗುವ ಮುಖಕಮಲಮುಮಂ . . . ಕಂಡು ಸೋಲ್ತು ಮೆಚ್ಚಿದಂ (ರಾಮಾಶ್ವ. ೩೬-೭). (ನಾ). ೨. ಕಪ್ಪು ; ಕಡುನೀಲವರ್ಣ. ಶ್ಯಾಮಳ: ೨. ಪದಧೂಳೀಸ್ತೋಭದಿಂ ದಿಗ್ಯುವತಿವದನಮಂ ಶ್ಯಾಮಳಂ ಮಾಡಿ (ಆದಿಪು. ೧೪-೮೮); ಕಾಳಾಗುರು ಧೂಪೋದ್ದಾಮಧೂಮಸ್ತೋಮಜಲಜೀಮೂತಸಮುದಯ ಶ್ಯಾಮಳಮುಂ . . . ಎನಿಸಿ ಗೋವರ್ಧನನಗಂ ಸೊಗಯಿಸೆ (ಜಗವಿ. ೪-೮೨ ವ). ೩. ಅಚ್ಚ ಹಸುರು : ''ಶ್ಯಾಮಂ, ಶ್ಯಾಮಳಂ . . . ಹರಿತಂ, ಹರಿತ್ - ಈ ೬ ಪ[ಹ]ಸುರ್'' (ಹಲಾಯು. ೧೨೧-೪೧). [ಸಂ.]

**ಶ್ಯಾಮಲಾಂಗ, ಶ್ಯಾಮಳಾಂಗ** (ನಾ). ೧. ನೀಲವರ್ಣದ ಶರೀರವುಳ್ಳವನು. ೨. ವಿಷ್ಣು. ೩. ಕೃಷ್ಣ. ೪. ಶಿವ : ಶ್ಯಾಮಳಾಂಗೀಸಂಗತಾಂಗಂ ಶ್ಯಾಮಲಾಂ [ಪಾಠಾಂ. ಳಾಂ]ಗ ದೃಗಂಕಪಾದಂ . . . ಸಿದ್ಧವಟನಾಥಂ (ಬಸವು. ೧-೩). **ಶ್ಯಾಮಳಾಂಗ** : ೩. ಮೇಘಶ್ಯಾಮಳಾಂಗಂ ತ್ರಿಭಂಗದಿನಿಂಬಾಗಿರೆ . . . ತಾನಾಗಳಾಡಿದಳ್ (ಜಗವಿ. ೩-೧೭). [ಸಂ.]

**ಶ್ಯಾಮಲಾಂಗಿ** (ನಾ). ಕಪ್ಪಾದ ದೇಹವುಳ್ಳವಳು; ಕಾಳಿ; ಪಾರ್ವತಿ : ಶ್ಯಾಮಲಾಂ [ಪಾಠಾಂ. ಳಾಂ]ಗೀ ಸಂಗತಾಂಗಂ . . . ಸಿದ್ಧವಟನಾಥ (ಬಸಪು. ೧-೫). [ಸಂ. ಶ್ಯಾಮಲಾಂಗೀ]

**ಶ್ಯಾಮಲಿತ** (ಗು). ಕಪ್ಪಾದ; ಶ್ಯಾಮಲವಾದ : ಅತಿಬಹಳದಹ್ಯಮಾನ ಕಾಳಾಗುರುಧೂಪಧೂಮಯಷ್ಟಿಘಟಿತಘನಶ್ಯಾಮಲಿ [ಪಾಠಾಂ. ಳಿ]ತವ್ಯೋಮತಳ ಧೂಪಂಗಳಿಂದಂ (ಆದಿಪು. ೨-೩೨ ವ); ಬಹುಳಕಾಲಾಗರುಧೂಮ ಶ್ಯಾಮಲಿತ ಕಲಧೌತ ಧೂಪಘಟಂಗಳಿಂ ಕ್ಷೀರಾದಿ ಸವನಪಾವನರಸವಿಚಿತ್ರಾನೇಕಶಾತಕುಂಭಕುಂಭಂಗಳಿಂ . . . ಯಥಾವಿಧಿಯಿನಭಿಷವಮಂ ತೀರ್ಚಿ (ಪಂರಾಮಾ. ೧೨-೨ ವ). [ಸಂ.]

**ಶ್ಯಾಮಲೆ** (ನಾ). = ಶ್ಯಾಮಲಾಂಗಿ. [ಸಂ. ಶ್ಯಾಮಲಾ]

**ಶ್ಯಾಮಳ** 'ಶ್ಯಾಮಲ' ನೋ.

**ಶ್ಯಾಮಳಾಂಗ** 'ಶ್ಯಾಮಲಾಂಗ' ನೋ.

**ಶ್ಯಾಮಾಂಗ** (ನಾ). ೧. ಕಪ್ಪಾದ ಶರೀರ; ಕಪ್ಪುಬಣ್ಣದ ದೇಹ : ಈ ಭಾಗದೊಳಭಿನವಪ್ರಿಯಂಗುಶ್ಯಾಮಾಂಗಮರ್ಧಚಂದ್ರಬುದ್ಬುದವ್ಯಾಕೀರ್ಣ ತ್ರಿಶೂಲ . . . ಅನೇಕಾಹವ ದೃಷ್ಟದೋಸ್ಸಾಹಸಮಿದು ವರಾಟ ಸುಭಟಬಲಂ (ಆದಿಪು. ೧೩-೪೫ ವ). ೨. ಶ್ಯಾಮಲಶರೀರವುಳ್ಳವನು; ವಿಷ್ಣು : 'ಶ್ಯಾಮಾಂಗಸಖ' ಪರಾ. ೩. ಬುಧಗ್ರಹ. ೪. [ಛಂದ] ವರ್ಣಛಂಧಸ್ಸಿನ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ, ಪಾದದಲ್ಲಿ ಮೂರು ಅಕ್ಷರಗಳುಳ್ಳ ಮಧ್ಯೆ ಎಂಬ ಛಂದಸ್ಸಿನ ಒಂದು ವೃತ್ತ : ಭೂಮಿಪ್ರೋದ್ದಾಮಂ ಕೇಳ್ ಶ್ಯಾಮಾಂಗೀ ಶ್ಯಾಮಾಂಗಂ [ಪಾಠಾಂ. ವಾಮಾಂಗೀ ವಾಮಾಂಗಂ] (ಛಂದೋಂಬು. ೨-೫೬). [ಸಂ.]

**ಶ್ಯಾಮಾಂಗಸಖ** (ನಾ). ವಿಷ್ಣುವಿನ ಸ್ನೇಹಿತ ; ಶಿವ : ಶ್ಯಾಮಾಂಗಸಖ ಪಾಹಿ ಮಂದರನಿಲಯನೆ ಪಾಹಿ (ಪ್ರೌಢರಾ. ೨೧-೪೩). [ಸಂ.]

**ಶ್ಯಾಮಾಂಗಿ** (ನಾ). ೧. ಶ್ಯಾಮಲವರ್ಣದವಳು : ಭೂಮಿಪ್ರೋದ್ದಾಮಂ ಕೇಳ್ ಶ್ಯಾಮಾಂಗೀ ಶ್ಯಾಮಾಂಗ [ಪಾಠಾಂ. ವಾಮಾಂಗೀ ವಾಮಾಂಗಂ] (ಛಂದೋಂಬು. ೨-೫೬) ; ಗ್ರಾಮಶ್ಯಾಮಾಂಗಿ ಕೋಪಕ್ಕಳುತೆ ಬೈಯುತ್ತ ಶಪಿಸುತ್ತ ತೊಳಲುವಳ್ ಗದ್ದೆಯಂ ಮರುಳಮರ್ದಳಂತೆ (ಚಿತ್ರಾಂಗ. ೫೩-೧೪೫೫). ೨. ಕಾಳಿ ; ದುರ್ಗೆ. [ಸಂ. ಶ್ಯಾಮಾಂಗೀ]

**ಶ್ಯಾಮಾಕ** (ನಾ). = ಶ್ಯಾಮಕ ೨ : "ಶ್ಯಾಮಾಕಃ, ಶ್ಯಾಮಕಃ – ಈ ೨ ಸಾವೆ" (ಹಲಾಯು. ೯೬-೪೩೦); ಶ್ಯಾಮಾಕ . . . ಕ್ಷೀರಾದಿ ಚರು ಪುರೋಡಾಶಾದಿಗಳಿಂದಲು (ವಿವೇಕ. ೧೩೫). [ಸಂ.]

**ಶ್ಯಾಮೆ** (ನಾ). ೧. ಇರುಳು; ರಾತ್ರಿ : "ತಮಿಾ . . . ವಾಸತೇಯಿೀ, ಶ್ಯಾಮಾ, ರಾತ್ರಿಃ – ಈ ೧೯ ಇರುಳಿನ ಪೆಸರ್" (ಹಲಾಯು. ೧೮-೧೦೮). ೨. ಮಕ್ಕಳಿಲ್ಲದ ಮಧ್ಯವಯಸ್ಸಿನ ಹೆಂಗಸು : ಅಲ್ಲಿ ಪ್ರಮದೆಯರು . . . ಶ್ಯಾಮೆಯರು ಮತ್ತು ಪದ್ಮರಾಗಿಣಿಯರು (ಧ್ವನ್ಯಾಲೋ. ೯೪). ೩. ಪ್ರಿಯಂಗುಮರ : "ಪ್ರಿಯಂಗುಃ, ಫಲಿನೀ, ಶ್ಯಾಮಾ – ಈ ೩ ಪ್ರಿಯಂಗು" (ಹಲಾಯು. ೩೨-೪೦). ೪. ಒಂದು ಬಗೆಯ ಸಸ್ಯ; ಕರಿಯ ತಿಗಡೆ : "ಶ್ಯಾಮಾ, ಪಾಳಿಂದೀ . . . ಕಾಲಮೇಷಿಕಾ – ೬ ಕರಲಾಲ್‌ತಿಗಡೆ" (ಸಿದ್ಧಾಂತಿ. ೧೩೬). ೫. ಸೊಗದೇಬೇರು : "ಶ್ಯಾಮಾ-ಪ್ರಾಯದವಳು, ಸೊಗದೇಬೇರು, ರಾತ್ರಿ" (ಸಿದ್ಧಾಂತಿ. ೪೦೮). ೬. ನೆರಳು; ಛಾಯೆ. ೭. ಕಪ್ಪುಬಣ್ಣದ ಹೆಂಗಸು. ೮. ಹಸು. ೯. ಅರಿಸಿನ. ೧೦. ಹೆಣ್ಣು ಕೋಗಿಲೆ. ೧೧. ನೀಲಿಗಿಡ. ೧೨. ತುಳಸಿ. ೧೩. ಯಮುನಾನದಿ. ೧೪. ದುರ್ಗೆ. ೧೫. ಕಮಲದ ಬೀಜ. [ಸಂ. ಶ್ಯಾಮಾ]

**ಶ್ಯಾಲ** (ನಾ). ಹೆಂಡತಿಯ ಸಹೋದರ; ಭಾವಮೈದುನ. [ಸಂ.]

**ಶ್ಯಾಲಕ** (ನಾ). = ಶ್ಯಾಲ : ಅರ್ಜುನ ನೆನೆದುದೇ ತಡ; ಆ ಕ್ಷಣದಲ್ಲಿಯೇ ಕೃಷ್ಣ ಗರುಡನಿಂದ ತನ್ನ ಶ್ಯಾಲಕನ ರಥಾಗ್ರಕ್ಕೆ ಇಳಿಯಲು ಸೇನೆಯಲ್ಲಿ ಉತ್ಸವವಾಯಿತು (ಬಿದುರ. ೫೯). [ಸಂ.]

**ಶ್ಯಾವ** (ನಾ) . ಕಪ್ಪುಮಿಶ್ರವಾದ ಕೆಂಪು; ಕಂದುಬಣ್ಣ : "ಶ್ಯಾವಃ, ಕಪಿಶಃ – ೨ . . . ಕೆಂಪಾದ ಬಣ್ಣ" (ಸಿದ್ಧಾಂತಿ. ೪೮). [ಸಂ.]

**ಶ್ಯಾವಂತಿ** 'ಸೇವಂತಿ' ನೋ.

**ಶ್ಯಾವಂತಿಗೆ** 'ಸೇವಂತಿಗೆ' ನೋ.

**ಶ್ಯಾವದಂತ** (ನಾ). ಹಲ್ಲು ಕಪ್ಪಾಗುವ ಒಂದು ಬಗೆಯ ದಂತರೋಗ : ಶ್ಯಾವದಂತವೆಂಬ ದಂತರೋಗದಲ್ಲಿ ಹಲ್ಲುಗಳು ಪಿತ್ತ ರಕ್ತದೋಷಗಳಿಂದ ಬೆಂದು ಕಂದುವ ಕಾರಣ ಕಪ್ಪಾಗಿಹವು (ವೈದಸಾ. II, ೧೨೨). [ಸಂ.]

**ಶ್ಯೇತ** (ಗು). ೧. ಬಿಳುಪಾದ ; ಧವಳವರ್ಣದ. (ನಾ). ೨. ಬಿಳುಪು ; ಶ್ವೇತವರ್ಣ : "ಶುಕ್ಲಃ, ಶುಭ್ರಃ, ಶುಚಿಃ, ಶ್ವೇತಃ, ವಿಶದಃ, ಶ್ಯೇತಃ . . . ಅರ್ಜುನಃ – ೧೩ ಬಿಳುಪು ಬಣ್ಣದ ಹೆಸರುಗಳು" (ಸಿದ್ಧಾಂತಿ. ೪೭). [ಸಂ.]

**ಶ್ಯೇನ** (ನಾ). ೧. ಬಿಳಿಯ ಬಣ್ಣ; ಬಿಳುಪು. ೨. ಗಿಡುಗ; ಡೇಗೆ : ಮಾನಿಸರ ನುಡಿವ ತೆಱದಿಂ ಶ್ಯೇನನುಮರವೊಱಸುಮಿಂತು ಗಟಪಿದಪುದಿದಂ ಶ್ರೀನಾಥ ಬೆಸಸಿಮವಧಿ ಜ್ಞಾನದಿನಱಿದು (ಶಾಂತಿಪು. ೯-೯೧); ಇವರ್ . . . ನಗೆನುಡಿಗಳಿಂದೆ ಕೈಯೊಳಗಾದರೆನವೇಡ ಪಾಱುವರ್ ಶ್ಯೇನನಂತೆ (ಅರಾಚ. ೨-೫-೪೬). ೩. ಒಂದು ಬಗೆಯ ಸೇನಾವ್ಯೂಹ. ೪. ಹಿಂಸೆ. [ಸಂ.]

**ಶ್ಯೇನವ್ಯೂಹ** (ನಾ). (ಗಿಡುಗನ ಆಕಾರದಲ್ಲಿದ್ದು, ಭೇದಿಸುವುದಕ್ಕೆ ತೊಡಕಾಗಿರುವ) ಒಂದು ಬಗೆಯ ಸೈನ್ಯವ್ಯೂಹ : ಮರುದಿನ ಪಾಂಡವರು ಶ್ಯೇನವ್ಯೂಹವನ್ನೂ ಕೌರವರು ಮಕರವ್ಯೂಹವನ್ನೂ ರಚಿಸಿ ಯುದ್ಧಕ್ಕೆ ಮೊದಲು ಮಾಡಿದರು (ವಚಭಾ. ೨೭೨). [ಸಂ.]

**ಶ್ಯೋನಾಕ** (ನಾ). ಒಂದು ಬಗೆಯ ಮರ ; ತಿಗಡೆಮರ ; "ಪತ್ರೋರ್ಣ" (ಪಂಡಿತ. ೨೫೬). [ಸಂ.]

**ಶ್ರಂಥನ** (ನಾ). ೧. (ಹೂವಿನಂತೆ) ಒಂದನ್ನೊಂದು ಸೇರಿಸಿ ಕಟ್ಟುವುದು. ೨. (ಗ್ರಂಥದ) ರಚನೆ : "ಶ್ರಂಥನಂ ಗ್ರಂಥನಂ ಗುಂಫಮೆನೆ ರಚನೆಗಭಿಧಾನಮಕ್ಕುಂ" (ಮಂಗರಾ. ೧೨೬-೩). ೩. ಸಡಿಲಗೊಳಿಸುವುದು. ೪. ನಾಶಪಡಿಸುವುದು. ೫. ಕೊಲ್ಲುವುದು. [ಸಂ.]

**ಶ್ರದ್ಧಾಂಜಲಿ** (ನಾ). ೧. ಮೃತರಿಗಾಗಿ ಶ್ರದ್ಧೆಯಿಂದ ಬಿಡುವ ತರ್ಪಣ : ಗಂಗೆಯಲ್ಲಿ ಮತ್ತೊಮ್ಮೆ ಮಿಂದು ತನ್ನ ಬದುಕಿಗೆ ಈ ರೂಪ ಬರುವುದಕ್ಕೆ ನಿಮಿತ್ತವಾಗಿ ಒದಗಿಬಂದಿದ್ದ ಶೆಟ್ಟರ ಪುಣ್ಯಆತ್ಮಕ್ಕೆ ತನ್ನ ಶ್ರದ್ಧಾಂಜಲಿಯನ್ನರ್ಪಿಸಿದ (ಹೊಸಕ್ಕಿ. ೩೯). ೨. ಮೃತರಿಗೆ ಸಲ್ಲಿಸುವ ಶ್ರದ್ಧಾಪೂರ್ವಕವಾದ ವಂದನೆ : ಹೊಸ ಬತ್ತಿಯಲಿ ಸ್ವಂತ ಬೆಳಕು ಹಿಡಿದು ಎದೆಹಣತೆಯಲಿ ಸಲಿಸು ಶ್ರದ್ಧಾಂಜಲಿಯ ಅವನ ಹೊಂಗನಸುಗಳ ದೀಕ್ಷೆ ಪಡೆದು (ನಲಮು. ೫೧-೧೧). [ಸಂ.]

**ಶ್ರದ್ಧಾಭಕ್ತಿ** (ನಾ). ೧. ವಿಶ್ವಾಸದಿಂದ ಕೂಡಿದ ಭಕ್ತಿ. ೨. [ವೀಶೈ] ಆರು ವಿಧವಾದ ಭಕ್ತಿಗಳಲ್ಲಿ ಒಂದು : ಭಕ್ತಿ ಆರು ವಿಧವಾಗಿದೆ. ಶ್ರದ್ಧಾಭಕ್ತಿ, ನೈಷ್ಠಿಕಭಕ್ತಿ, ಸಾವಧಾನಭಕ್ತಿ, ಅನುಭಾವಭಕ್ತಿ, ಆನಂದಭಕ್ತಿ, ಸಮರಸಭಕ್ತಿ, ಭಗವತ್ತಾದಾತ್ಮ್ಯವೇ ಭಕ್ತಿಯ ಅಂತಿಮಗಮ್ಯ (ಭಾರದ. ೧೧೯) ; ನಮ್ಮ ಶಿವಶರಣರೂ ತಮ್ಮ ಷಟ್ಸ್ಥಲ ತತ್ತ್ವಜ್ಞಾನದಲ್ಲಿ ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭಾವಭಕ್ತಿ, ಆನಂದಭಕ್ತಿ ಸಮರಸಭಕ್ತಿಯೆಂಬುದಾಗಿ ಭಕ್ತಿಯನ್ನು ಸಾಧಕನ ನೆಲೆಗನುಸರಿಸಿ ಷಡ್ವಿಧವಾಗಿ ಹೇಳಿರುವರು (ಸಾಹಿವಿ. ೪೮). [ಸಂ.]

**ಶ್ರದ್ಧಾಲು, ಶ್ರದ್ಧಾಳು** (ಗು). ೧. ವಿಶ್ವಾಸದ; ನಂಬಿಕೆಯ. (ನಾ). ೨. ವಿಶ್ವಾಸವುಳ್ಳವನು; ನಂಬಿಕಸ್ಥ : ಅವನೊಬ್ಬ ದಯಾಮಯಿಯೂ ಶ್ರದ್ಧಾಲುವೂ ಆದ ಅಧಿಕಾರಿಯಾಗಿದ್ದನು (ಪುನರು. ೨೨೨). **ಶ್ರದ್ಧಾಳು** : ೩. ಗರ್ಭಿಣಿಯಾಗಿ ಬಯಕೆಯುಳ್ಳವಳು : "ಶ್ರದ್ಧಾಳುಃ, ದೋಹದವತೀ – ೨ ಬಸುರಿಂದ ಬೈಕೆಯುಳ್ಳವಳ ಹೆಸರುಗಳು" (ಸಿದ್ಧಾಂತಿ. ೧೩೩). [ಸಂ.]

**ಶ್ರದ್ಧಾವಂತ** (ನಾ). ವಿಶ್ವಾಸವುಳ್ಳವನು ; ನಿಷ್ಠೆಯುಳ್ಳವನು : ಈತನು ರಾಜಕಾರ್ಯನಿಪುಣನೂ, ಕಾರ್ಯನಿಷ್ಠನೂ, ಶ್ರದ್ಧಾವಂತನೂ ಮತ್ತು ಧರ್ಮಭೀರುವೂ ಆಗಿದ್ದನೆಂದು ಅನೇಕ ಶಾಸನಗಳಲ್ಲಿ ಹೇಳಿದೆ (ಸೋಳಂಬ. ೫೭). [ಸಂ. ಶ್ರದ್ಧಾವತ್]

**ಶ್ರದ್ಧಾಳು** 'ಶ್ರದ್ಧಾಲು' ನೋ.

**ಶ್ರದ್ಧೆ** (ನಾ). ೧. ನಂಬಿಕೆ; ವಿಶ್ವಾಸ : ಗುರುವೇದಾಂತ ವಾಕ್ಯಂಗಳೊಳು ದೃಢತರಮಾದ ವಿಶ್ವಾಸವೇ ಶ್ರದ್ಧೆಯೆನಿಸುವುದು (ವಿವೇಕ. ೧೫). **೨. ಬಯಕೆ; ಅಪೇಕ್ಷೆ** : ಶುದ್ಧಜೀವನು ಶಿವಶಕ್ತಿಯರೆಂಬ ತಂದತಾಯಿಗಳನ್ನು ಸೇರಿ ಸುಖಿಸಬೇಕೆಂಬ (ಹಂಬಲ) ಉತ್ಕಟೇಚ್ಛೆಗೆ "ಶ್ರದ್ಧೆ" ಎಂದು ಹೆಸರು (ಭಾರದ. ೨೫೪). **೩. ಗರ್ಭಿಣಿಯ ಬಯಕೆ, — ಆಸೆ** : "ದೋಹಳಂ, ದೌಹೃದಂ, ಶ್ರದ್ಧಾ, ಲಾಲಸಾ — ಈ ೪ ಬಯಕೆ" (ಹಲಾಯು. ೮೨-೩೪೪). **೪. ಗೌರವ** ; ಮನ್ನಣೆ. **೫. ಸೂರ್ಯನ ಮಗಳು** : ಸೂರ್ಯಪುತ್ರಿಯಾದ ಶ್ರದ್ಧೆಯು ಪರ್ಜನ್ಯನಂತೆ ಬಲಶಾಲಿಯೂ ಪೂಜ್ಯನೂ ಆದ ಸೋಮನನ್ನು ದ್ಯುಲೋಕದಿಂದ ತಂದಳು (ಋಗ್ಸಾರ. ೫೨). **[ಸಂ. ಶ್ರದ್ಧಾ]**

**ಶ್ರದ್ಧೇಯ** (ಗು). ೧. ನಂಬಿಕೆಗೆ ಅರ್ಹವಾದ ; ವಿಶ್ವಾಸಾರ್ಹವಾದ. (ನಾ). ೨. ನಂಬಲರ್ಹನಾದ ವ್ಯಕ್ತಿ; ವಿಶ್ವಾಸಯೋಗ್ಯ : ಇಂತಹ ಯಶಸ್ವಿಯಾದ ಶ್ರದ್ಧೇಯರಾದ ಪುರುಷರಿಗೆ ಪ್ರಾಯಶ್ಚಿತ್ತದ ಅಗತ್ಯವೇ ಇಲ್ಲ (ಪ್ರೇಮಾತ್ಮ. ೨೩೭). **[ಸಂ.]**

**ಶ್ರಮ** (ನಾ). ೧. ದಣಿವು; ಆಯಾಸ ; ಬಳಲಿಕೆ : ವನಿತಾಸೇವನೆ . . . ಶ್ರಮಮತ್ಯ ಜೀರ್ಣಮಿವಱಿಂ ಕಾರ್ಗಾಲದೊಳ್ ಮಾರುತಂ ಜನಿಯಿಕ್ಕುಂ (ಲೋಕೋಪ. ೯-೪); ಪಸಿದಿರ್ ನೀರಡಿಸಿದಿರೆಂದು ಸೇದೆಯಂ ಶ್ರಮಮನಱಿವುದೆನಸುಂ ಗಂಟು (ಸುಕುಮಾ. ೨-೬೫). **೨. ಕಷ್ಟ ; ತೊಂದರೆ** : 'ಶ್ರಮಿಸು' ಪರಾ. **೩. ಯತ್ನ**; ಪ್ರಯತ್ನ. ೪. ಅಂಗಸಾಧನೆ; ವ್ಯಾಯಾಮ. ೫. ಶಸ್ತ್ರಾಭ್ಯಾಸ : "ಬವರಮನಲ್ ಸಂಗ್ರಾಮಂ . . . ಶ್ರಮಮೆನಲ್ಕಭ್ಯಾಸಂ" (ಭಾರಪಿ. ೯೨). 'ಗರುಡಿಶ್ರಮ' ಪರಾ. ೬. ತಪಸ್ಸು. ೭. [ಕಾವ್ಯಮೀ] ಸಂಚಾರಿಭಾವಗಳಲ್ಲಿ ಒಂದು : ಮತಿನಿರ್ವೇದಾವಹಿತ್ಥ ಶ್ರಮಮದ... ಮೋಹಾಮಯಮೃತಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೫); "ಪುನಃ ಶರೀರಖೇದಂ ಶ್ರಮಂ" – ಇದು ಪ್ರಯಾಣ, ವ್ಯಾಯಾಮ ಮೊದಲಾದವುಗಳಿಂದ ಒದಗುವುದು (ಭಾರಮೀ. ೩೪೬). **[ಸಂ.]**

**ಶ್ರಮಂಗಳಿ** (ಕ್ರಿ). ಆಯಾಸವನ್ನು ನಿವಾರಿಸು; ಬಳಲಿಕೆಯನ್ನು ಹೋಗಲಾಡಿಸು : ತುಂತುರ್ಗಳಂ ತಳೆದು ಬರ್ಪಲರಿಂದೆ ಬೀಸಿ ಇಂತೊಯ್ಯನೊಯ್ಯನೆ ಶ್ರಮಂಗಳಿ ರಾಮಭದ್ರಂ ಸಂತಾಪದಿಂದಿರೆ ಸುಖಂಗೊಡು ದೇವಿ ನೀನು (ಉರಾಚ. ೬೦).

[ಶ್ರಮ + ಕಳಿ₁ (< ಕಟಿ₁)]

**ಶ್ರಮಗಾರ** (ನಾ). ಕಷ್ಟಪಟ್ಟು ಕೆಲಸಮಾಡುವವನು; ಶ್ರಮಜೀವಿ : ಶ್ರಮಗಾರರಿಗೆ ಜ್ವರದ ಕಾಟ ಇಲ್ಲವೆಂದಲ್ಲ (ಚಟ್ಟುಜೀ. ೧೩೪). [ಶ್ರಮ + — ಗಾರ (< - ಕಾಱ)]

**ಶ್ರಮಗೃಹ** (ನಾ). ಶಸ್ತ್ರಾಭ್ಯಾಸದ ಸ್ಥಳ ; ಗರುಡಿಯ ಮನೆ : "ಖಲೂರಿಕೆ ಶ್ರಮ [ಪಾಠಾಂ. ವ]ಗೃಹಂ ಗರುಡ್ಡಿಸಾಧನೆಯ ಮನೆಯೆನಿಕ್ಕುಂ" (ಮಂಗರಾ. ೫೯-೧೦). **[ಸಂ.]**

**ಶ್ರಮಗೆಯ್** (ಕ್ರಿ). ಶಸ್ತ್ರಾಭ್ಯಾಸವನ್ನು ಮಾಡು : "ಖಲೂರಿಕಾ ಎಂಬುದು ಶ್ರಮಗೆಯ್ವ ಠಾವು" (ಹಲಾಯು. ೭೭-೩೧೬). [ಶ್ರಮ + ಕೆಯ್₁]

**ಶ್ರಮಜೀವಿ** (ನಾ). = ಶ್ರಮಗಾರ : ಅಜಂತಾಚಿತ್ರಕಾರರು ಸಾಮಾನ್ಯ ಶ್ರಮಜೀವಿಗಳು, ಕೃಷೀವಲರು, ಕರ್ಮಕುಶಲರು ಇವರ ಜೀವನವನ್ನು ನಿರೂಪಿಸಿದ್ದಾರೆ (ಭಾರದ. ೫೮೦).

[ಸಂ. ಶ್ರಮಜೀವಿನ್]

**ಶ್ರಮಣ** (ಗು). ೧. ದುಡಿಯುವ; ಕಷ್ಟಪಡುವ . ೨. ಕೀಳಾದ; ನೀಚತನದ. (ನಾ). ೩. ಶ್ರಮಪಡುವಿಕೆ. ೪. ನೀಚ ; ಅಧಮ. ೫. ಯತಿ; ಮುನಿ : ಶ್ರಮಣರು ಊರ ಹೊರಗೆ ವಾಸಮಾಡುತ್ತ ಸದಾ ದೇವರ ಧ್ಯಾನದಲ್ಲಿ ಕಾಲಕಳೆಯುತ್ತಾರೆ (ಪ್ರವಾಇ. I, ೧೩೨). ೬. [ಬೌದ್ಧ] ಸಂನ್ಯಾಸಿ ; ಕ್ಷಪಣ : ಬೇರೆ ಬೇರೆ ಕ್ಷತ್ರಿಯರು, ಬ್ರಾಹ್ಮಣರು, ವೈಶ್ಯರು, ಶೂದ್ರರು, ವಿವಿಧ ಶ್ರಮಣ ಬ್ರಾಹ್ಮಣ ಜನರು ಅಲ್ಲಿ ಸಭೆ ಸೇರುತ್ತಿದ್ದರು (ಬುದ್ಧಪ. ಮಿಲಿಂದ. ೧೭). ೭. [ಜೈನ] ಸಂನ್ಯಾಸಿ ; ಶ್ರವಣ : ನಿಜವಾಗಿಯೂ ನರನು ಸಮತೆಯಿಂದ ಶ್ರಮಣನಾಗುತ್ತಾನೆ (ಜೈನಪ. ೫೦). ೮. (?) : ಅಱಿತಿಹೆನಱಿತಿಹೆನೆಂದು ಹೊಱಹೊಮ್ಮುವಾಗ ಕಾಯ ಮಱುಜವಣೆಯ ಮಹಾ ಪ್ರಳಯಕ್ಕೆ ಶ್ರಮ [ಪಾಠಾಂ. ವ]ಣವೆ ಅವತಾರಕ್ಕೆ ಹೊಱಗಾದ ನಿರಂಗವ ಅಸಗ ನೀರಡಿಸಿ ಸತ್ತಂತಾಯಿತ್ತು ಅವನಿರವು (ಮೋಳಿಮಾ. ೭೨-೨೮೫). **[ಸಂ.]**

**ಶ್ರಮಣಕ** (ನಾ). = ಶ್ರಮಣ ೬ : ಈ ಮುಂಡಕರು, ಶ್ರಮಣಕರು, ಇಭ್ಯರು, ಕೃಷ್ಣರು, ಬಂಧುಪಾದಾಪತ್ಯರು – ಇವರೆಲ್ಲ! (ಬುದ್ಧಪ. ೧೦೪). **[ಸಂ.]**

**ಶ್ರಮಣಿ** (ನಾ). ೧. ಸಂನ್ಯಾಸಿನಿ : ರಾವಣಂ ಧರಣಿಜೆಯ ಕಡ್ಡೊಯ್ಯಲು ಶ್ರಮಣಿ ಪೇಳಿದ ಪರಿಯೊಳಿಲ್ಲಿಪರಿಯಂತ ಸಂಭ್ರಮದಿಂದ ಬಂದುದಾದುದು (ವೆಂಕಾರಾ. ೪-೩-೪). ೨. [ಬೌದ್ಧ] ಭಿಕ್ಷುಣಿ : ಬೌದ್ಧರಲ್ಲಿ ಸ್ತ್ರೀಯರೂ ಕೂಡ ಸಂನ್ಯಾಸಿಗಳಂತೆ ವಿರಕ್ತರಾಗಿ ಸಂಘಗಳಲ್ಲಿ ಸೇರಿ ಶ್ರಮಣಿಗಳಾಗುತ್ತಿದ್ದರು (ಕರ್ನಾಸಂ. ೮೩). **[ಸಂ. ಶ್ರಮಣಾ]**

**ಶ್ರಮಣೆ** (ನಾ). ೧. ವಿರಾಗಿಣಿ ; ವಿರಕ್ತೆ. ೨. [ಜೈನ] ಸಂನ್ಯಾಸಿನಿ; ಕಂತಿ : "ಶ್ರಮಣಾ, ಭಿಕ್ಷುಕೀ, ಮುಂಡಾ – ಈ ೩ ಕಂತಿ" (ಹಲಾಯು. ೮೦-೩೩೩). **[ಸಂ. ಶ್ರಮಣಾ]**

**ಶ್ರಮದಾನ** (ನಾ). ಸಾಮಾಜಿಕ ಸೇವೆಗಾಗಿ ಮಾಡುವ ಶ್ರಮದ ಕೆಲಸ : ನಿಮ್ಮ ಶಾಲೆಯವರು ಮಾಡಿದ ಶ್ರಮದಾನದ ಬಗೆಗೆ ಬರೆಯಿರಿ (ಕಪಪು. ೩-೭೫). **[ಸಂ.]**

**ಶ್ರಮದಾಯಕ** (ಗು). ಕಷ್ಟವನ್ನುಂಟುಮಾಡುವ; ಆಯಾಸಕರವಾದ : ಅತ್ಯಂತ ಶ್ರಮದಾಯಕ ಮತ್ತು ಸಹನಾತೀತಕೆಲಸವನ್ನು ನಾವು ಏಕೆ ಮಾಡಬೇಕು ? (ಬಂಗಾಪ. ೫೪). **[ಸಂ.]**

**ಶ್ರಮಪಡಿಸು** (ಕ್ರಿ). ತೊಂದರೆಯನ್ನು ಅನುಭವಿಸುವಂತೆ ಮಾಡು : ಶ್ರಾದ್ಧದ ಊಟಕ್ಕೆ ಕರೆದು ಶ್ರಮಪಡಿಸಿದ ಹಾಗೆ (ಗಾದ). [ಶ್ರಮಪಡು + — ಇಸು₁]

**ಶ್ರಮಪಡು** (ಕ್ರಿ). ಕಷ್ಟಪಡು; ತೊಂದರೆ ಅನುಭವಿಸು : "ನೀನ್ಯಾರು ಯಾರಪ್ಪ? ಬಹಳ ಶ್ರಮಪಟ್ಟು ಬಂದಿದ್ದೀಯೆ ಎಲ್ಲಿಂದ ಬಂದೆ?" (ನೀತಿಚಂ. VII, ೧೯). [ಶ್ರಮ + ಪಡು₁]

**ಶ್ರಮರಹಿತ** (ಗು). ೧. ಆಯಾಸವಿಲ್ಲದ; ದಣಿವಿಲ್ಲದ. (ನಾ). ೨. ಕಷ್ಟವಿಲ್ಲದವನು : ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲದೊಡಾಳ್ದನಾಳ್ ಸರೋಗನರೋಗಂ ಶ್ರಮರಹಿತಂ ಕ್ಲೇಶಕೃತಶ್ರಮನೆಂಬೀ ಲೋಕಯಾತ್ರೆ ಕಿಡದೆ (ಶಾಂತಿಪು. ೮-೧೪೦). **[ಸಂ.]**

**ಶ್ರಮಸಹಿಷ್ಣುತೆ** (ನಾ). ಕಷ್ಟವನ್ನು ತಾಳಿಕೊಳ್ಳುವುದು; ದಣಿವನ್ನು ಸಹಿಸಿಕೊಳ್ಳುವುದು : ನಮ್ಮ ದೇಶದಲ್ಲಿಯೇ ಆಹಾರಪದ್ಧತಿಯ ವೈವಿಧ್ಯತೆಗೆ ಅನುಗುಣವಾಗಿ ಜನರ ಎತ್ತರ, ದೇಹದಾರ್ಢ್ಯ, ಶ್ರಮಸಹಿಷ್ಣುತೆ ಮತ್ತು ಆರೋಗ್ಯ ವಿವಿಧವಾಗಿರುತ್ತವೆ (ಗೃಪವಿ. ೧). **[ಸಂ. ಶ್ರಮಸಹಿಷ್ಣುತಾ]**

**ಶ್ರಮಸ್ಥಾನ** (ನಾ). ಶಸ್ತ್ರಾಭ್ಯಾಸವನ್ನು ಮಾಡುವ ಸ್ಥಳ : ಈಪೊತ್ತು, ಪ್ರಾತಃಕಾಲ, ಸೈನ್ಯಗಳ ಶ್ರಮಸ್ಥಾನದ ಬಯಲಲ್ಲಿ, ತನ್ನದೊಂದು ಹೊಸಕಲ್ಪಿತದ ಸೇನಾನಿಯಮದಂತೆಯೇ ತಮ್ಮ ಹಗ್ಗಡೆಗೆ ವೀರವನ್ನವನೊಪ್ಪಿಸಲಿಲ್ಲವೆಂದು . . . ನೂಂಕಿಸಿಬಿಟ್ಟನು (ಮಂತ್ರಶ. ೬೮-೪). **[ಸಂ.]**

**ಶ್ರಮಾಪಹಾರಿ** (ನಾ). ಆಯಾಸವನ್ನು ಹೋಗಲಾಡಿಸುವಂಥದು : ಕಲ್ಯಾಣಮಲ್ಲನು . . . ಶ್ರಮಾಪಹಾರಿಯಾದ ತೀವ್ರಮದ್ಯವನ್ನು ಒಂದು ಪಾತ್ರೆಗೆ ಬಗ್ಗಿಸಿಕೊಂಡು ಹೀರಿಬಿಟ್ಟನು (ಚನ್ನಬೀ. ೪೮). **[ಸಂ. ಶ್ರಮಾಪಹಾರಿನ್]**

**ಶ್ರಮಿ** (ನಾ). ಕಷ್ಟಪಡುವ ವ್ಯಕ್ತಿ : ದಮಿ ನೀನು, ನಾನು ದುರ್ದಮ್ಯ, ನಿನ್ನ ಕರುಣೆಯೊಳೆ ನನ್ನ ತೊಯ್ಸಿ, ಶ್ರಮಿ ನೀನು ನಿನ್ನ ಶ್ರವಮಾಡಿಕೊಂಡೆ ಮೈಮುರಿಯೆ ನನ್ನ ಗೈಸಿ (ಅರಳು. ೧೪೬-೧೨). **[ಸಂ. ಶ್ರಮಿನ್]**

**ಶ್ರಮಿಕ** (ನಾ). = ಶ್ರಮಗಾರ : ಇಂದಿಗೆ ಬಂಡವಾಳಗಾರ ಮಧ್ಯಮವರ್ಗವನ್ನು ಇದುರಿಸಿ ನಿಂತ ಎಲ್ಲ ವರ್ಗಗಳಲ್ಲಿಯೂ ಕೇವಲ ಶ್ರಮಿಕವರ್ಗವೇ . . . ನಿಜವಾಗಿಯೂ ಕ್ರಾಂತಿಕಾರಿಯಾಗಿರುವುದು (ನೂವಾದ. ೯೯); ಮಲೇರಿಯಾ ಬೆಳವಣಿಗೆ, ಶ್ರಮಿಕರ ಸಂಖ್ಯೆ ಕಡಿಮೆಯಾದುದು, ಇವೆಲ್ಲ ಸಾಗುವಳಿಯ ಕ್ಷೇತ್ರ ಕಡಿಮೆಯಾಗಲು ಮುಖ್ಯ ಕಾರಣಗಳು (ಕರವೀ. ೯). **[ಸಂ.]**

**ಶ್ರಮಿಸು** (ಕ್ರಿ). ೧. ಕಷ್ಟಪಡು ; ದುಡಿ : ಸೇವೆಗೋಸ್ಕರ ಶ್ರಮಿಸುತ್ತಲೇ ಇರುವುದರಿಂದ ಪರಮಾತ್ಮನನ್ನು ಅಮರನಾಗಿರುವಂತೆ ಹರಸಿದ್ದಾನೆ (ಸನದಿ. ೩೯). ೨. ತಪಸ್ಸುಮಾಡು (?) : ಮೆರೆವ ಸಂಗೀತರಸ ಗರಿಗಣ್ಗಳಡಿಗೆತಿಯ ನಿರುತ ನರ್ತನದಿಂ ವಸಂತ ನೃಪಾಲಕನಪುರಿವ ವಿನಿಯೋಗದಾಸ್ಥಾನಮೆನೆ ಮೆರೆದುದಾ ವನ ಶ್ರಮಿಸುವರ ಪಾವನ (ಸವಮೋ. ೨೪-೫೨). [ಶ್ರಮ + — ಇಸು₁]

**ಶ್ರಮೆ** (ನಾ). ದಣಿವು ; ಆಯಾಸ : ಸ್ವಾಮಿಯ ಪಾದಗಳ ಮೇಲೆ ಬಿದ್ದು, ಶ್ರಮೆಯಿಂದಲೂ ಶಿವನ ಅನುಗ್ರಹದಿಂದಲೂ ನಿದ್ರೆಗೈದರು (ಪುರಾಪಿ. ೨೨೭); ಭ್ರಮೆಯಿದ್ದವಗೆ ಶ್ರಮೆಯಿಲ್ಲ, ಶ್ರಮೆಯಿದ್ದವಗೆ ಭ್ರಮೆಯಿಲ್ಲ (ಗಾದ). **[ಸಂ. ಶ್ರಮ]**

**ಶ್ರಯ**$_1$ (ನಾ). ಆಸರೆ ; ರಕ್ಷಣೆ : ಶಿವಶಿವ ಮಹಾದೇವಾ ಶ್ರಯ [ಪಾಠಾಂ ಮ]ವೆನಲು ತಾನೀ ಶಿಶುವ ಕತಿಪಯದಿನವನಾರ್ಯದು ಹರಿಣಾನ್ವಯಕೆ ಶೇರಿಸಿಕೊಡುವುದೇ ಸದ್ಧರ್ಮವೆನಗೆಂದ (ನಿಭಾಗ. ೫-೫-೨೨). [ಸಂ.]

**ಶ್ರಯ**$_2$ (ನಾ). ೧. ಸಾಗುವಳಿಯಿಂದ ಭೂಮಿಯನ್ನು ಅಭಿವೃದ್ಧಿಪಡಿಸುವುದು: ಶ್ರಯ ನಷ್ಟ ಗ ೨ . . . ಬಿರಾಡದಿಂದಲು ಭತ್ತ ಸುಂಕ (ಮೈಆರಿ. ೧೯೬೬. ೨೮-೨೩; 1629). ೨. ಭೂಮಿಯನ್ನು ಅಭಿವೃದ್ಧಿಪಡಿಸಲು ನಿಕೃಷ್ಟ ಭೂಕಂದಾಯದಿಂದ ಪ್ರಾರಂಭಿಸಿ ವರ್ಷಂಪ್ರತಿ ಹೆಚ್ಚುತ್ತಾ ಹೋಗಿ ಕೊನೆಯ ಮಟ್ಟಕ್ಕೇರುವ ಪ್ರಗತಿಪರ ವಾರ್ಷಿಕ ಕಂದಾಯ (ಠೈಸ್‌ಗ. II. ೫೬೨). ೩. ಕಡಮೆ ಕಂದಾಯದ ಕರಾರಿನಿಂದ ಮಾಡುವ ಭೂಮಿಯ ಸಾಗುವಳಿ: ಆ ಪ್ರಕಾರಕ್ಕೆ ಶ್ರಯಕ್ಕೆ ಮಾಡಿಕೊಂಡಿದ್ದೇನೆ (ಮಹಾಪಂ. II. ೭೯). [?]

**ಶ್ರಯಣ** (ನಾ). ಆಶ್ರಯಿಸುವಿಕೆ ; ಅವಲಂಬನ : "ಶ್ರಾಯಃ, ಶ್ರಯಣಂ - ೨ ಆಶ್ರಯಿಸುವಿಕೆ, ಅವಲಂಬಿಸುವಿಕೆ" (ಸಿದ್ಧಾಂತಿ. ೩೫೯). [ಸಂ.]

**ಶ್ರಯಣೀಯ** (ನಾ). ಆಶ್ರಯಿಸಿದವನು; ಅವಲಂಬಿಸಿದವನು : ನಯಶಾಲಿ ವತ್ಸಗೋತ್ರಶ್ರಯಣೀಯನನೇಕಸಕಳಶಾಸ್ತ್ರಾರ್ಥವಿನಿಶ್ಚಯಮತಿಕೃತಿಮಾಧವಸೋಮಯಾಜಿ ಸಲೆ ನೆಗಟ್ಟಂ (ಪಂಪಭಾ. ೧೪-೪೨). [ಸಂ.]

**ಶ್ರಯಪಟ್ಟೆ** (ನಾ). ಪ್ರಗತಿಪರ ಭೂಕಂದಾಯದ ದಾಖಲಿನ ಪತ್ರ; ಕಂದಾಯದ ಪಟ್ಟೆ : ಪಾಳುಭೂಮಿ ಸಾಗುವಳಿಮಾಡುತ್ತೇನೆಂದು . . . ದರಖಾಸ್ತು ಮಾಡಿದವಲ್ಲಿ ಅದಕ್ಕೆ ಸಹ ಆಮಿಲ ಶಿರಸ್ತೆದಾರರ ರುಜುವಿನಿಂದ ಶ್ರಯಪಟ್ಟೆ ಬರೆದುಕೊಡುವ ಕಾಯಿದೆ ತಪ್ಪೀಲು (ಮಹಾಪಂ. II. ೬೧). [ಶ್ರಯ$_2$ + ಪಟ್ಟೆ$_3$]

**ಶ್ರಯಸಾಗುವಳಿ** (ನಾ). ಕಡಿಮೆ ಕಂದಾಯದ ಕರಾರಿನಿಂದ ಸಾಗುವಳಿ ಮಾಡುವ ಭೂಮಿ : (ಕಿ). [ಶ್ರಯ$_2$ + ಸಾಗುವಳಿ]

**ಶ್ರವ**$_1$ 'ಸವ$_3$' ನೋ.

**ಶ್ರವ**$_2$ 'ಸಬ' ನೋ.

**ಶ್ರವ**$_3$ (ನಾ). ೧. ಕೇಳುವಿಕೆ; ಆಲಿಸುವಿಕೆ. ೨. ಶ್ರವಣೇಂದ್ರಿಯ; ಕಿವಿ : ಶ್ರವ [ಪಾಠಾಂ. ಮ]ದಿಂ ಭಾಳಕ್ಕೆ ಬಾನಲ್ಬರಿದ ಕುರುಳ ಕಸ್ತೂರಿಕಾರೇಣುಚಾಳದ್ರವಮಂ ಕಂಡರ್ದಿಕೊಂಡೊಳ್ನನೆಯ ಮೊನೆಯೊಳಾಂ ಬಂದಪೆಂ (ಅರ್ಧನೇ. ೫-೭೩). [ಸಂ.]

**ಶ್ರವಣ**$_1$, ಸವಣ$_1$ (ನಾ). ಅಕ್ಕಸಾಲಿಗನ ಚಿಮ್ಮಟ, - ತಂಡಸ : (ಕಿ). **ಸವಣ**$_1$ : (ಕಿ). [ದೇ. ‖ ಮಲ. ಚವಣ; ತೆಲು. ಶ್ರಾವಣ, ಸ್ರಾವಣ]

**ಶ್ರವಣ**$_2$ (ನಾ). ೧. ಕೇಳುವಿಕೆ ; ಆಲಿಸುವಿಕೆ : ಅಂತು ನಿಜತನೂಜನ ಮರಣಶ್ರವಣಾಶನಿಘಾತದಿಂ ಕುಳಶ್ಶೈಲಂ ಕೆಡೆವಂತೆ ಕೆಡೆದು ಮೂರ್ಛಾಗತನಾದ ಧರ್ಮಪುತ್ರನಂ . . . ಮುಂದಿಟ್ಟೊಡಗೊಂಡು ಬೀಡಿಂಗೆ ಪೋದರಾಗಳ್ (ಪಂಪಭಾ. ೧೧-೧೦೬ ವ) ; ನಾನಾಕಥಾಶ್ರವಣದಿಂದಧ್ವಶ್ರಮಂಗಳಂ ನೀಗುತಂ (ಶ್ರೀರಾಮಾ. ೩೯-೩೦೭); ಶ್ರವಣದಿಂದ ಮನನ, ಮರಣದಿಂದ ಮುಕ್ತಿ (ಗಾದೆ). ೨. ಕಿವಿ; ಶ್ರವಣೇಂದ್ರಿಯ : ಮಹೋಗ್ರರಿಪುಭೂಭುಜಶ್ರವಣಭೈರವಾಡಂಬರಂ ಗುಹಾಗಹನಗಹ್ವರೋದರವಿಶೀರ್ಣಮಾದಂದದೇಂ ಮುಹುಃಪ್ರಕಟಮಾದುದಾ ರವಿತನೂಭವಜ್ಯಾರವಂ (ಪಂಪಭಾ. ೧೨-೧೩೬); ಶಿವಂ ಪ್ರತ್ಯಕ್ಷನಾಗುತಾಗ ಮನದಿಷ್ಟ ಬೇಡೆನಲು ಮಾಡಿದಘವನು ಪೇಳಿ ತನಗೆ ಶ್ರವಣದಿ ಕೇಳ್ವ ಉಲುಹ ನಿರ್ಮಲಗಯ್ಯು ಅನುನಯದಿ ನಿನ್ನುದರದೊಳಗಿರಿಸಿಕೊಳ್ಳುದೆಂದವನಿಪಂ ಬಿನ್ನೈಸಲು (ಪ್ರೌಢರಾ. ೧೪-೧೩). ೩. (ಕೇಳುವುದರ ಮೂಲಕ) ಕಲಿಯುವುದು; ಅಧ್ಯಯನಮಾಡುವುದು. ೪. ಯಜ್ಞಭೇದಗಳಲ್ಲಿ ಒಂದು. ೫. ಒಳ್ಳೆಯ ಗಾಯನ ; ಸುಮಧುರಸಂಗೀತ. ೬. ಮೂಗು; ನಾಸಿಕ. ೭. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಇಪ್ಪತ್ತೆರಡನೆಯ ನಕ್ಷತ್ರ : ಶ್ರವಣಂ ಧನಿಷ್ಠ ರೋಹಿಣಿ (ಲೋಕೋಪ. ೪-೮೩): ಅಶ್ವಿನಿ ಭರಣಿ . . . ಶ್ರವಣ ಧನಿಷ್ಠ ಶತವಿಶಾಖ ಪೂರ್ವಾಭಾದ್ರಪದ ಉತ್ತರಾಭಾದ್ರಪದ ರೇವತಿಗಳೆಂಬಿಪ್ಪತ್ತೇಳು ನಕ್ಷತ್ರಂಗಳುಂ (ವಿವೇಕ. ೨೫೪) ; "ಅಧ್ವರಭೇದ ನಾಸಿಕಂ ಪಾಡುವ ಗಾನ ಕರ್ಣ ಭಗಣಾದಿಗಳುಂ ಶ್ರವಣಾಭಿಧಾನಮುಂ" (ನಾನಾರ. ೫೧). ೮. [ವೇದಾಂತ] ಗುರುಮುಖದಿಂದ ವೇದಾಂತದ ನುಡಿಗಳನ್ನು ಆಲಿಸುವುದು, — ಕೇಳುವುದು: ಶ್ರವಣಮನನವಾ ನಿಧಿಧ್ಯಾಸನವೆನೆ ತ್ರಿಪುಟಿಭೇದಂಗಳಿಂದಂ ಪುಟ್ಟಿ ರಾಜಿಸಿರ್ಪ ಪರೋಕ್ಷದನುಭವಂ (ವೀಶೈಪು. ೫-೧೧-೧೧); ಇದುವೆ ಶ್ರವಣವು ಪ್ರಥಮವಾದುದು ಯಿದುವೆ ತನಗೆಯು ನಿಶ್ಚಯಕೆ ಬರೆ (ಜ್ಞಾನಸಿಂ. ೧೨-೧೭). ೯. [ಜೈನ] ಜೈನಸಂನ್ಯಾಸಿ : ಶ್ರವಣರುಗಳಂ ನೋಡಿ ಜೇಡರ ದಾಸಿಯಿಂತೆಂದ (ಬಸವಪು. ೫೧-೩೬) ; ಜಿನ್ನನೇ ದೈವವಲ್ಲದೆ ಬೇಜೆಯಿಲ್ಲೆನುತ ತನ್ನ ಪುರಜನಕ್ಕೆಲ್ಲ ಶ್ರವಣರನೆ ಭಜಿಸೆಂದು ಮುನ್ನ ಡಂಗುರ ಸಾಜೆ (ಪ್ರೌಢರಾ. ೧೮-೩೫). [ಸಂ.]

**ಶ್ರವಣಪಟುತೆ** (ನಾ). ಕಿವಿಯ ಗ್ರಹಣಶಕ್ತಿಯ ಚುರುಕುತನ, — ಸೂಕ್ಷ್ಮತೆ : ಕಿವಿಯಂ ಜಿನವರಚರಿತಶ್ರವಣಪಟುತೆ ಪಿಂಗದನ್ನಮಾರ್ಜಿಪನೆಬಿನಂ (ಚಂದ್ರಪ್ರ. ೪-೧೭). [ಸಂ. ಶ್ರವಣಪಟುತಾ]

**ಶ್ರವಣಭೂಷಣ** (ನಾ). ೧. ಕಿವಿಯ ಆಭರಣ ; ಕರ್ಣಕುಂಡಲ. ೨. ಶ್ರವಣನಕ್ಷತ್ರ. ೧ , ೨ : ಶ್ರವಣಭೂಷಣದಿಂದೆ ಹಸ್ತಾಭರಣದಿಂದೆ ದಿವಿಜಪದಮೆಸವಂತೆ ಕುಂತಳಶ್ರೀಯ ವೈಭವದಿಂದೆ ರಮಣೀಯ ಕಾಂಚೀಪ್ರದೇಶದಿಂ ಭೂಭಾಗ ಮೊಪ್ಪುವಂತೆ . . . ವಿಷಯ ಕಂಗೊಳಿಸಿರ್ದಳು (ಚೈಮಿಭಾ. ೩೧-೧೦). [ಸಂ.]

**ಶ್ರವಣವಿವರ** (ನಾ). ಕಿವಿಯ ತೂತು, — ರಂಧ್ರ : ಶ್ರವಣವಿವರದೊಳ್ ತಪ್ತಾಯಸಮಂ ಪೊಯ್ವಂತೆ ದಾರಕವಿದಾರಣಮುಂ ದಾರಪರಾಭವಮುಂ ತನಗಟಲನೆರ್ದೆವಟಲುಮನೊದವಿಸೆ (ಪಂರಾಮಾ. ೯-೪೬ ವ). [ಸಂ.]

**ಶ್ರವಣಶೂಲ** (ನಾ). ೧. ಕಿವಿನೋವು; ಕರ್ಣಶೂಲೆ. ೨. ಕಿವಿಗೆ ಶೂಲದಂತೆ ಇರಿಯುವುದು; ಕರ್ಣಕಠೋರವಾದುದು : ಪರಸುವ ಪೌರರ ಪರಕೆಯ ಸರಂ ಶ್ರವಣಶೂಲಮಾಗಿ ಕಿವಿಯೊಳ್ ಪುಗುವಂತಿ[ರೆ] ಕಿವಿಯಂ ಪುಗೆ ನೆರೆದರಸರ ಮಕ್ಕಳ್ ವಿರಸರಾದರಾ ಸಂಕಟದೊಳ್ (ಶಾಂತಿಪು. ೬-೩). 'ಕರ್ಣಶೂಲ' ಪರಾ. [ಸಂ.]

**ಶ್ರವಣಸುಖ** (ನಾ). ಕೇಳುವುದಕ್ಕೆ ಹಿತಕರವಾದುದು ; ಆಲಿಸುವುದಕ್ಕೆ ಸುಖಕರವಾದುದು : ಭವದಗ್ರಜ ದಿಗ್ವಿಜಯೋತ್ಸವಮಧಿಕಮಹೋತ್ಸವಂ ವಲಂ ನಿನಗಾದಂ ಶ್ರವಣಸುಖಮಂದೆ ದಿಜ್ಞಾತ್ರವರ್ಣನಂಗೆಯ್ಯೆನುಂತದೇನೆನ್ನಳವೇ (ಆಬಪು. ೧೪-೫೧). [ಸಂ.]

**ಶ್ರವಣಾಭರಣ** (ನಾ). ೧. ಕಿವಿಯ ಆಭರಣ. ೨. ಶ್ರವಣನಕ್ಷತ್ರದಿಂದ ಕೂಡಿದುದು. ೧ , ೨ : ಮಲಯಮೇಖಲೆಯಂತೆ ಚಂದನಪಲ್ಲವಾವತಂಸೆಯುಂ ನಕ್ಷತ್ರಮಾಲೆಯಂತೆ ಚಿತ್ರಾಶ್ಲೇಷಶ್ರವಣಾಭರಣಭೂಷಿತೆಯುಂ (ಕಾದಂಪೂ. ೪೯). [ಸಂ.]

**ಶ್ರವಣಾಮಯ** (ನಾ). ಕಿವಿಯ ರೋಗ ; ಕರ್ಣವ್ಯಾಧಿ : ಶ್ರವಣಾಮಯಮುಂ ನಿಜಭೃತ್ಯವೈರಮುಂ ಪಾಪಕರ್ಮವಿರಸತೆಯುಂ . . . ಸಮನಿಸುಗುಂ ಸುರೇಜ್ಯನವ ರೋಹಿಣಿಯೊಳ್ (ಜಾತಕ. ೯-೨೬). [ಸಂ.]

**ಶ್ರವಣೀಯೆ** (ನಾ). ಶ್ರವಣಸುಖವನ್ನುಂಟುಮಾಡುವವಳು : ಇವರಪ್ಪೊಡೆ ವಿದ್ಯಾದೇವತಾತ್ಮಿಕೆಯರ್ ಶ್ರವಣೀಯೆಯರಲ್ಲದನುಭವನೀಯೆಯರಲ್ಲರ್ (ಶಾಂತಿಪು. ೨-೮೧ ವ). [ಸಂ. ಶ್ರವಣೀಯಾ]

**ಶ್ರವಣೇಂದ್ರಿಯ** (ನಾ). ಶಬ್ದವನ್ನು ಗ್ರಹಿಸುವ ಅಂಗ; ಕಿವಿ : ಶ್ರವಣೇಂದ್ರಿಯ ವಿಷಯದಿಂದೆ ಎರಳೆ ಕೆಡುವುದು ಬೇಟೆಗಾಜನ ಸರಳಿನಲಿ (ಅಖಂಡೇ. ೭-೪). [ಸಂ.]

**ಶ್ರವಿಷ್ಠೆ** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಇಪ್ಪತ್ತೆರಡನೆಯ ನಕ್ಷತ್ರ; ಧನಿಷ್ಠೆ : "ಧನಿಷ್ಠಾ, ಶ್ರವಿಷ್ಠಾ - ಈ ೨ ಧನಿಷ್ಠೆ" (ಹಲಾಯು. ೧೦-೫೧). [ಸಂ. ಶ್ರವಿಷ್ಠಾ]

**ಶ್ರವ್ಯ** (ಗು). ೧. ಕಿವಿಗೆ ಬೀಳುವ: ಕೇಳುವ. ೨. ಕೇಳಲು ಅರ್ಹವಾದ; ಇಂಪಾದ. (ನಾ). ೩. ಕೇಳಲು ಯೋಗ್ಯವಾದುದು; ಕಿವಿಗೆ ಇಂಪಾದುದು: ವಿಚಾರಕ್ಷಮಮುಚಿತಪದಂ ಶ್ರವ್ಯಮವ್ಯಾಕುಲಂ ವ್ಯಾಪ್ತದಿಗಂತಂ ಕಾವ್ಯಮೆಂದನ್ವಿತಸುಕವಿಜನಂ ಮೆಚ್ಚೆ ನಿಚ್ಚಂ (ಆದಿಪು. ೧-೨೭); ಪರ್ವತದಿಂದ ಹೊಮ್ಮುವ ಆನಂದದ ಬುಗ್ಗೆಯಂತೆ ನಮ್ಮ ಈ ಹಾಡುಗಳು ಬೃಹಸ್ಪತಿಗೆ ಶ್ರವ್ಯವಾಗಿವೆ (ಭಾವಗೀ. ೧೧೧). ೪. [ಕಾವ್ಯಮೀ] ಕಾವ್ಯದ ಎರಡು ಭೇದಗಳಲ್ಲಿ ಒಂದು; ಕೇಳಲು ಹಿತವಾದ ಕಾವ್ಯ : ನಾಂದೀವಿಧಿಯಂ ನಿರ್ವರ್ತಿಸಿ ದೃಶ್ಯ ಶ್ರವ್ಯ ದೃಢಮಾತ್ರಾದಿ ಪ್ರಯೋಗಂಗಳೊಳಂ ನಾನಾವಿಧವಾದ್ಯಂಗಳೊಳಮಾಂಗಿಕಾಭಿನಯಂಗಳೊಳಮೆಸೆಯೆ (ಆದಿಪು. ೭-೧೧೫ ವ);

'ಶ್ರವ್ಯ'ವೆಂದರೆ ಕೇಳುವುದಕ್ಕೆ ಅನುಕೂಲವಾದವುಗಳು. ಮಹಾಕಾವ್ಯ, ಖಂಡಕಾವ್ಯ, ಕಥೆ ಮುಂತಾದ ಗ್ರಂಥಗಳೆಲ್ಲಾ ಈ ಪಂಗಡಕ್ಕೆ ಸೇರುತ್ತವೆ (ಕೈಪಿಡಿ. ೧೮೧). 'ದೃಶ್ಯ' ಪರಾ. [ಸಂ.]

**ಶ್ರವ್ಯಕಾವ್ಯ** (ನಾ). ಕೇಳಲು ಹಿತವಾದ ಕಾವ್ಯ : ದೃಶ್ಯಕಾವ್ಯ ಶ್ರವ್ಯಕಾವ್ಯಗಳೆರಡಕ್ಕೂ ತಿರುಳು ಒಂದೇ (ಭಾರವಿಮ. ೭). [ಸಂ.]

**ಶ್ರವ್ಯೋಪಕರಣ** (ನಾ). ಕೇಳಲು ಸಹಾಯಕವಾದ ಉಪಕರಣ, – ಸಾಧನ : ವಿವಿಧರೀತಿಯಲ್ಲಿ ಪಾಠೋಪಕರಣಗಳಾಗಿ ಬಳಕೆಗೆ ಬರುತ್ತಿವೆ. ಅವನ್ನು ಪ್ರದರ್ಶಿಸಲು ಅನುಕೂಲಿಸುವ ದೃಶ್ಯ ಮತ್ತು ಶ್ರವ್ಯೋಪಕರಣಗಳೂ ಪ್ರಚಾರಕ್ಕೆ ಬರುತ್ತಿವೆ (ಶಿಕ್ಷದ. ೨೯೦). [ಸಂ.]

**ಶ್ರಾಂತ** (ಗು). ೧. ದಣಿದ; ಆಯಾಸಗೊಂಡ. ೨. ಶಾಂತವಾದ; ನೆಮ್ಮದಿಯ. ೩. ವಿಶ್ರಮಿಸಿಕೊಳ್ಳುತ್ತಿರುವ : ವಿದಿತ ಪ್ರತ್ಯಕ್ಷನಾಶಾಕರಿನಿಕಟತಟಶ್ರಾಂತದಾನಂ ಭರಂಗಯ್ಯುದಿರೊಳ್ ವಿಕ್ರಾಂತತುಂಗಂ ಹರಿಗನಿರೆ (ಪಂಪಭಾ. ೬-೭೭). (ನಾ). ೪. ದಣಿವುದು ; ಆಯಾಸಗೊಂಡುದು : ರಾಯನಿಂದುಮೊದಲಿನ ಉತ್ಸಾಹಮೂರ್ತಿಯಲ್ಲ, ಉಲ್ಲಾಸಮೂರ್ತಿಯಲ್ಲ. ಮನಸ್ಸು ಚಿಂತಾಕುಲ, ದೇಹ ಶ್ರಾಂತ (ಆಳ್ವಿಕ. ೧೬೭). ೫. ಬಳಲಿದವನು ; ಆಯಾಸಗೊಂಡವನು : ಆ ವನಾಂತರಾಳ ಮಧ್ಯಸ್ಥಿತವಿಶಾಲವಟವಿಟಪಿಯನೆಯ್ತಂದದಱ ಕೆಳಗಯ್ಯುರುಮನಿಟಿಪಿ . . . ಪರಿಶ್ರಮಶ್ರಾಂತರ್ ನಿದ್ರಾ[ಭ]ರಪರವಶರಾಗಿರೆ (ಪಂಪಭಾ. ೩-೧೦೨ ವ); ದಿನವೆಲ್ಲಾ ದುಡಿದು ತಾವು ಶ್ರಾಂತರಾಗಿದ್ದೀರಿ (ಸಣ್ಣಕ. I, ೮-೩). ೬. ಶಾಂತನಾದವನು ; ಉದ್ವೇಗವಿಲ್ಲದವನು : ಕುಂತೀಸುತ ಭೀಮಗದಾಭ್ರಾಂತಂ ಜಂಘಾವ್ಯಪೇತನುಣ್ಮುವ ರಕ್ತಾತ್ಮಾಂತ ಪ್ರವಾಹಸಹಿತ ಶ್ರಾಂತಂಯೋಗಿಯ ಮುನಿವೊಲಿರ್ದನಾ ಕುರುರಾಜಂ (ಗದಾಯು. ೯-೧೫). ೭. ಇಂದ್ರಿಯನಿಗ್ರಹವುಳ್ಳವನು; ಮುನಿ: "ಇಂದ್ರಿಯದೃಢನು ಶಾಂತಂ ಶ್ರಾಂತನೆನಿಸಿಕ್ಕು" (ಮಂಗರಾ. ೭೪-೪). ೮. ಹಸಿದವನು; ಕ್ಷುಧಿತ : "ಕ್ಷುತ್ಕ್ಷಾನ್, ಬುಭುಕ್ಷಿತಃ, ಶ್ರಾಂತಃ, ಜಿಘತ್ಸುಃ, ಕ್ಷುಧಿತಃ – ಈ ೫ ಹಸಿದಾತಂ" (ಹಲಾಯು. ೫೯-೨೦೫). ೯. [ನಾಟ್ಯ] ದಣಿವನ್ನು ತೋರುವ ಅಭಿನಯ; IP "ದೃಷಿಯನ್ನು ಬಹಳ ದೂರ ಪ್ರಸರಿಸದೆ ಸ್ವಲ್ಪ ಮೇಲುದೃಷ್ಟಿಮಾಡಿ ರೆಪ್ಪೆಯ ರೋಮಗಳನ್ನು ಸೇರಿಸಿ ಕರೀಗುಡ್ಡೆ ಬೀಳುವುದೋ ಎನ್ನುವಂತೆ ಕಡೆಗಣ್ಣಿನಿಂದ ನೋಡುವುದು" (ಲಾಸ್ಯರಂ. ೨೪೯ ಗದ್ಯಾನುವಾದ) : ಕಡುದೂರಂ ಪರಿಯದೆ ಮೇಲೊಡರ್ಚಿದ[ರೆ] ನೋಟದಿಂದೆ ಮೆಲ್ಲನೆ ಪಕ್ಷ್ಮಮನೊಡಗೂಡಿಯಾಲಿಬೀಳ್ವವೊಲಿದುಕಿಱಿದಾ ನೋಟಮದುವೆ ಶ್ರಾಂತಮೆನಿಕ್ಕುಂ (ಲಾಸ್ಯರಂ. ೩-೨೮). [ಸಂ.]

**ಶ್ರಾಂತಿ** (ನಾ). ಬಳಲಿಕೆ; ಆಯಾಸ : ಶ್ರಾಂತಿಯುಂ ಘನಮಾದತ್ತು ತುರಂಗಮಕ್ಕ ದಱಿನಾಂ ನೀರ್ದಾಣಮಮಂ ನೋಡಿ ಮೆಲ್ಲನೆ ಸಾರ್ದಲ್ಲಿ ಬಟಲ್ಕೆಯಂ ಕಳೆದು ಪೋಪೆಂ (ಕಾದಂಪೂ. ೬೫) ; ಶಿಖರಶಾಖೆಯ ನೆಟಲಿಂ ಮುಸುಳಿಸಿ ಖಚರಶ್ರಾಂತಿ [ಪಾಠಾಂ. ಶ್ರುತಿ] ಯನೆಸೆದುದು ಭುವನೈಕಭವನದಂತಾ ಭೂಜಂ (ಜಗವಿ. ೪-೪೬); ಘನಶ್ಯಾಮ, ರಾಧೇಶ್ಯಾಮ ಎಂದು ಕರೆದು ನಾವು ಸ್ವಲ್ಪಹೊತ್ತು ನಮ್ಮ ಶ್ರಾಂತಿಯನ್ನು ಕಳೆದುಕೊಳ್ಳುತ್ತೇವೆ (ಈಚಿಕ. ೧೨೪). [ಸಂ.]

**ಶ್ರಾಣ** (ಗು). ೧. ಕುದಿಸಿದ. ೨. ಬೇಯಿಸಿದ. ೩. ಒದ್ದೆಯಾದ; ತೇವವಾದ. [ಸಂ.]

**ಶ್ರಾಣೆ** (ನಾ). ಅನ್ನದ ಗಂಜಿ : "ಯವಾಗೂಃ, ಉಷ್ಣಿಕಾ, ಶ್ರಾಣಾ (ಶ್ರೋಣಾ), ತರಳಾ, ವಿಲೇಪಿಕಾ – ಈ ೫ ಗಂಜಿ" (ಹಲಾಯು. ೩೩-೧೭೫). [ಸಂ. ಶ್ರಾಣಾ]

**ಶ್ರಾದ್ಧ** (ಗು). ೧. ನಂಬಿಕೆಯುಳ್ಳ; ನಿಷ್ಠೆಯುಳ್ಳ. (ನಾ). ೨. (ಮೃತರಾದ ಪಿತೃಗಳ ಆತ್ಮತೃಪ್ತಿಗಾಗಿ) ಶ್ರದ್ಧಾಪೂರ್ವಕವಾಗಿ ಆಚರಿಸುವ ಕರ್ಮ : ಮತ್ತೂರ್ಮೆ ಜಾಲದೊಳ್ಸಿಕ್ಕುತ್ತಯಾಗಿರ್ದ ಮೀನದಂ ಶ್ರಾದ್ಧಕ್ಕುತ್ತುತ್ತಮಲೋಹಿತ ಮತ್ಸ್ಯಮುಮುತ್ತಮಮೆಂದೊಂದು ಕಡೆಯನಡಿಸಿದನರಸಂ (ಯಶೋಚ. ೩-೫೦); ಚಂಡಿ ಪೇಳಿದವೊಲಾ ಶ್ರಾದ್ಧಮಂ ಮಾಡಿ (ಜೈಮಿಭಾ. ೧೦-೩೦). [ಸಂ.]

**ಶ್ರಾದ್ಧದೇವ** (ನಾ). ಪಿತೃಗಳ ಒಡೆಯ; ಯಮ : ಭೂವರನೆ ನಿನ್ನ ಕೊಂಡೊಯ್ಯನೆ ನಲಾ ಶ್ರಾದ್ಧದೇವನೊಳು ಮರಳಿ ರಾಜಶ್ವೇತನಾಡಿದಂ (ವೀಶೈಪು. ೨-೯-೧೭). [ಸಂ.]

**ಶ್ರಾದ್ಧಭೋಕ್ತೃ** (ನಾ). ಶ್ರಾದ್ಧದ ಅನ್ನವನ್ನು ತಿನ್ನುವವನು. [ಸಂ.]

**ಶ್ರಾಪ** 'ಸಾಪ' ನೋ.

**ಶ್ರಾಪಿಸು** 'ಸಾಪಿಸು' ನೋ.

**ಶ್ರಾಯ** (ನಾ). ೧. ಆಸರೆ; ಆಶ್ರಯ. ೨. ಆಶ್ರಯಿಸುವುದು; ಅವಲಂಬಿಸುವುದು: "ಶ್ರಾಯಃ, ಶ್ರಯಣಂ – ೨ ಆಶ್ರಯಿಸುವಿಕೆ" (ಸಿದ್ಧಾಂತಿ. ೩೪೫). ೩. ಸುಭಿಕ್ಷದ ಕಾಲ; ಏಳಿಗೆಯ ಸಮಯ : ಸಮನಾದ ಶ್ರಾಯ ಬಂದಾಗ, ಅಲ್ಲಿ ನಿಲ್ಲುವುದಕ್ಕೂ ಜನರು ಬಂದು ಕಿಕ್ಕಿರಿಯುತ್ತಾರೆ (ನಂಬಿನಾ. ೧) ; ಮಿಡಿಯ ಶ್ರಾಯ ಕಳೆಯಿತು; ಗೊರಟು ಮೂಡಿದ್ದರೆ ನನ್ನನ್ನು ಮಾತ್ರ ದೂರಬಾರದು (ಸ್ವಪ್ನಹೂ. ೪೮). [ಸಂ.]

**ಶ್ರಾವಕ** (ನಾ). ೧. ಕೇಳುವವನು; ಆಲಿಸುವವನು : ಗಾಯಕಗಣಕಂಠರವಂ ಶ್ರಾವಕಮಧುರಸ್ನಿಗ್ಧಮೆಸೆದುದಾಸ್ಥಾಯಿಕೆಯೊಳ್ (ಅಜಿಪು. ೫-೧೧); ಸಂಪನ್ನಸಂಗೀತಗಾರರು ಶ್ರಾವಕರಿಗೆ ವಾಗ್ಗೇಯಕಾರರ ಹೃದಯವನ್ನು ಕೊಂಚವಾದರೂ ಬಿಚ್ಚಿ ತೋರಿದ್ದಾರೆನ್ನಬಹುದು (ಸಂಗೀತ. ೧). ೨. ವಿದ್ಯಾರ್ಥಿ; ಶಿಷ್ಯ. ೩. [ಜೈನ] ಐದು ಅಣುವ್ರತ, ಮೂರುಗುಣವ್ರತ ಮತ್ತು ನಾಲ್ಕು ಶಿಕ್ಷಾವ್ರತಗಳನ್ನು ಪಾಲಿಸುವವನು; ಗೃಹಸ್ಥ : ಗೃಹೀತೋಪಾಸಕವ್ರತಂ ಶ್ರುತಕೀರ್ತಿಯೆಂಬಂ ಶ್ರಾವಕಾಗ್ರಣಿಯಾವಂ (ಆದಿಪು. ೧೦-೬೫ ವ); ಅಹಿಂಸಾಪರಮೋಧರ್ಮ ಎಂಬ ಶ್ರಾವಕರ ನಾನಾರನೂ ಕಾಣೆ (ಅವಚಿ. ೧೭೦-೭೬೪); ಪರಮಶ್ರಾವಕನಮಳಂ ಧರಣಿಯೊಳೀ ಶಿವೆಯನಾಯಕಂ ವಿಭುವೆಸೆದಂ (ಎಕ. II. ೩೨೭-೪೬; 1181). [ಸಂ.]

**ಶ್ರಾವಕತನ** (ನಾ). [ಜೈನ] ಗೃಹಸ್ಥಧರ್ಮವನ್ನು ಅನುಸರಿಸುವಿಕೆ : ವಿನಯದಿ ನವಳ ಶ್ರಾವಕತನಮಂ ಲೇಸಾಗಿ ಕಿಡಿಸಿ ತಿಳಿಪಿ ಬಟಿಕ್ಕಾ ವನಿತೆಯನೇಗೆಯ್ದುಂ . . . ಧರ್ಮದೊಳ್ಪತ್ತಿಸುವಂ (ಧರ್ಮಾಮೃ. ೪-೧೯೪). [ಶ್ರಾವಕ + – ತನ]

**ಶ್ರಾವಕತ್ವ** (ನಾ) = ಶ್ರಾವಕತನ : ಪ್ರಭಾವತೀಮಹಾದೇವಿಯ ಶ್ರಾವಕತ್ವಮಂ ಕಿಡಿಸುವ ಉಪಾಯಮಂ ಚಿಂತಿಸಿ ತನ್ನೊಳಿಂತೆಂದಳ್ (ಧರ್ಮಾಮೃ. ೪-೨೦೧). [ಸಂ.]

**ಶ್ರಾವಕಧರ್ಮ** (ನಾ). [ಜೈನ] ಶ್ರಾವಕರ ಮತ; ಜೈನಧರ್ಮ : ಜಿನವರ್ಮನುಂ ಪಲವುಂ ಜಿನಾಲಯಂಗಳಂ ಮಾಡಿಸಿ ದಾನ ಪೂಜೆ ಶೀಲೋಪವಾಸಮೆಂದಿಂತು ಚತುರ್ವಿಧಮಪ್ಪ ಶ್ರಾವಕಧರ್ಮದೊಳಗ್ಗಳನಾಗಿ (ವಡ್ಡಾರಾ. ೭೪-೩); ಶ್ರಾವಕ ಧರ್ಮದೊಳ್ ದೊರೆಯೆನಲ್ ಪೆಱರಿಲ್ಲೆನೆ ಸಂದ ರೇವತೀ ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ತಾನೆ . . . ಎಂದು ಭವ್ಯಾವಳಿ ಮೆಚ್ಚಿ ಬಣ್ಣಿಪುದು (ಅಜಿಪು. ೧-೫೩); ಜೈನಆಚಾರಶಾಸ್ತ್ರದಲ್ಲಿ ಶ್ರಾವಕಧರ್ಮ, ಮುನಿಧರ್ಮಗಳೆರಡರ ವಿವರವೂ ಇದೆ (ಜೈನಪ. ೪೫೭). [ಸಂ.]

**ಶ್ರಾವಕಬ್ರತ** (ನಾ). [ಜೈನ] ಶ್ರಾವಕರು ಪಾಲಿಸಬೇಕಾದ (ಐದು ಅಣುವ್ರತ, ಮೂರು ಗುಣವ್ರತ ಮತ್ತು ನಾಲ್ಕು ಶಿಕ್ಷಾವ್ರತಗಳೆಂಬ ಹನ್ನೆರಡು) ವ್ರತಗಳು: ತನ್ನಂ ತಾನೆ ಪೞಿದು ನಿಂದಿಸಿ ಪಾಪಕ್ಕಂಜಿ ಅಣುವ್ರತಂ ಮೊದಲಾಗೊಡೆಯ ಶ್ರಾವಕ ಬ್ರತಂಗಳಂ ಕೈಕೊಂಡು (ವಡ್ಡಾರಾ. ೧೧-೩೦). [< ಸಂ. ಶ್ರಾವಕವ್ರತ]

**ಶ್ರಾವಕಮಾನಿ** (ನಾ). ಶ್ರಾವಕನೆಂದು ಗೌರವಹೊಂದುವವನು, – ಮನ್ನಣೆ ಪಡೆಯುವವನು : ಶ್ರಾವಕಮಾನಿಗಳನನೇಕವಿಧವಿನುಪಜೀವಿಪರಜ್ಞಾನಿಗಳ ಬುದ್ಧಿ ಪೌರುಷಹೀನಮುಜೀವಿಕೃತಂ ಬೃಹಸ್ಪತಿಮತದೊಳ್ (ಶಾಂತಿಪು. ೮-೧೩೧). [ಸಂ. ಶ್ರಾವಕಮಾನಿನ್]

**ಶ್ರಾವಕವ್ರತ** (ನಾ). = ಶ್ರಾವಕಬ್ರತ : ಸಕಲಶ್ರಾವಕವ್ರತಾರೋಪಣಪವಿತ್ರನಾಗಿ ಧರ್ಮಕಥಾಪ್ರಸಂಗದೊಳಂ ಲಬ್ಧಪ್ರಸ್ತಾವನವರೊಳಾದಿತ್ಯಗತಿಗಳಂ ಮನ್ನಿಸಿ (ಆದಿಪು. ೨-೩೩ ವ) ; ಪರಮಶ್ರಾವಕವ್ರತಪ್ರಾಸಾದಕ್ಕಧಿಷ್ಠಾನಸೋಪಾನಪಂಕ್ತಿಗಳಾಗಿ ನೆಗಟ್ಟೆವೆತ್ತ ವಿಮಳಾಣುಬ್ರತಪಂಚಕಮುಂ (ಸುಕುಮಾ. ೫-೪೧ ವ). [ಸಂ.]

**ಶ್ರಾವಕಾಚಾರ** (ನಾ). [ಜೈನ] ಶ್ರಾವಕವ್ರತದ ಆಚರಣೆ : ಇಂತೀ ಸಮಿಾಚೀನ ಶ್ರಾವಕಾಚಾರಂಗಳಂ ನಿರತಿಚಾರಮಾಗೆ ತಾಳ್ದಿದ ದೇಶವಿರತಂಗಿಚ್ಚೆ ವಾರ್ತೆ . . . ತಪಮೆಂದಾರ್ಯಕರ್ಮಮಾಱುತೆಱನಕ್ಕುಂ (ಸುಕುಮಾ. ೬-೨೫ ವ). [ಸಂ.]

**ಶ್ರಾವಕಿ** (ನಾ). ೧. ಕೇಳುವವಳು; ಆಲಿಸುವವಳು. ೨. [ಜೈನ] ಶ್ರಾವಕವ್ರತವನ್ನಾಚರಿಸುವವಳು : ಅರ್ಹದ್ದಾಸಿಯರ್ಮೊದಲಾಗಿ ನಾಲ್ಕು ಲಕ್ಕೆಶ್ರಾವಕಿಯರುಂ (ಚಾವುಂಪು. ೨೪೬); ಶ್ರಾವಕಧರ್ಮದೊಳ್ ದೊರೆಯೆನಲ್ ಪೆಱರಿಲ್ಲೆನೆ ಸಂದ ರೇವತೀ

ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ತಾನೆಶೀಲದೊಳ್ ದೇವಕಿ ತಾನೆ . . . ಎಂದು ಭವ್ಯಾವಳಿ ಮೆಚ್ಚಿ ಬಣ್ಣಿಪುದು (ಅಜಿಪು. ೧-೫೩) ; ಪಂಗುಶ್ರೀಯೆಂಬ ಶ್ರಾವಕಿಯಕ್ಕುಂ (ಶ್ರಾವಕಾ. ೧೭). [ಶ್ರಾವಕ + — ಇ₃]

**ಶ್ರಾವಣ** (ಗು). ೧. ಕೇಳುವುದಕ್ಕೆ ಸಂಬಂಧಿಸಿದ. ೨. ಶ್ರವಣನಕ್ಷತ್ರದಲ್ಲಿ ಜನಿಸಿದ. (ನಾ). ೩. ಕಿವಿಗೆ ಕೇಳುವಂತಹುದು : ವ್ಯವಹರಿಪುವೆರಡುರೂಪಿಂದವಕ್ಕರಂ ಶ್ರಾವಣಂ ಸ್ವನ್ಯಕಾಕಾರಂ ವಿವಿಧಾಕಾರಂ ಲಿಪಿಭೇದ ವೃತ್ತಿಯಿಂ ಚಾಕ್ಷುಷಂ ಪುರಾತನ ಮತದಿಂ (ಶಮದ. ೩). ೪. ಚಾಂದ್ರಮಾಸದ ಐದನೆಯ ತಿಂಗಳು; ಶ್ರವಣ ನಕ್ಷತ್ರದಿಂದ ಕೂಡಿದ ಹುಣ್ಣಿಮೆಯುಳ್ಳ ಮಾಸ : ಶ್ರಾವಣಬಹುಳಪಕ್ಷದಶಮಿ ಜೀವವಾರದೊಳಾದಿವೃಷಭೇಂದ್ರಾವತಾರದ ಬಸವಚರಿತೆ ಸಮಾಪ್ತವಾಯಿತು (ಬಸಪು. ೬೧-೯೨) ; ಬಳಿಕಾ ಮಾಸವೇ ಚೈತ್ರ ವೈಶಾಖ ಆಷಾಢ ಶ್ರಾವಣ ಭಾದ್ರಪದ ಆಶ್ವೀಜ ಕಾರ್ತಿಕ ಮಾರ್ಗಶಿರ ಪುಷ್ಯ ಮಾಘ ಫಾಲ್ಗುನಮೆಂದು ಹನ್ನೆರಡು ತೆಱನಾಗಿಹುದು (ವಿವೇಕ. ೩೨೧). ೫. ಶ್ರಾವಣಮಾಸದ ಹುಣ್ಣಿಮೆ. ೬. ಮುಂಗಾರು ಮಳೆಗಾಲ : ಶ್ರಾವಣಾ ಬಂತು ಕಾಡಿಗೆ ಬಂತು ನಾಡಿಗೆ ಬಂತು ಬೀಡಿಗೆ ಶ್ರಾವಣಾ ಬಂತು (ಕೃಷ್ಣಾಕು. ೩೪-೧) ; ಬೇಸಗೆ ಬಣಬಣ, ಚಳಿಗೋ ಒಣಒಣ, ಶ್ರಾವಣ ತಣ್ಣಗೆ ನಡುವೆ (ನಲಮು. ೧೦-೧೪). [ಸಂ.]

**ಶ್ರಾವಣಮಾಸ** (ನಾ). = ಶ್ರಾವಣ ೪ : ಶ್ರಾವಣಮಾಸದ ಚವತಿಯ ಉಪವಾಸ ಹಾವನು ಮನೆಯಲಿ ತಂದಿಟ್ಟುಕೊಂಡು . . . ಮಣ್ಣುಹುತ್ತಿಗೆ ಹಾಲನೆಱೆದೆಯೆ ಮೂಳಿ (ಪುರಂದ. ಧಾ. ೫-೧೨೭-೫). [ಸಂ.]

**ಶ್ರಾವಣಿ** (ಗು). ೧. ಕೇಳುವಂತೆ ಮಾಡುವ. (ನಾ). ೨. ಶ್ರವಣನಕ್ಷತ್ರದಿಂದ ಕೂಡಿದ ಶ್ರಾವಣಮಾಸದ ಹುಣ್ಣಿಮೆಯ ದಿನ ; ಹೊಸ ಯಜ್ಞೋಪವೀತವನ್ನು ಧರಿಸುವ ಅಂದಿನ ಸಮಾರಂಭ; ಉಪಾಕರ್ಮ; ನೂಲ ಹುಣ್ಣಿಮೆ : ಶ್ರಾವಣಿಯಾದ್ದರಿಂದ ನಾವು ಹೋದಾಗ ಸುಮಾರು ೫೦೦ ಜನ ವಟುಗಳು ಅಗ್ನಿಕಾರ್ಯ ಮಾಡುತ್ತಿದ್ದರು (ದಿಲ್ಲಿಪ. ೫೭); ಶ್ರಾವಣಿಯ ದಿನ . . . ಜನಿವಾರವನ್ನು ಹಾಕಿಕೊಂಡ ನೆನಪು ಅವನಿಗಾಯಿತು (ಕವಲು. ३೭). [ಸಂ. ಶ್ರಾವಣೀ]

**ಶ್ರಾವಣಿಕ** (ನಾ). = ಶ್ರಾವಣ ೪ : "ಶ್ರಾವಣಃ, ನಭಾಃ ಶ್ರಾವಣಿಕಃ - ೩ ಶ್ರಾವಣ ಮಾಸದ ಹೆಸರುಗಳು" (ಸಿದ್ಧಾಂತಿ.೪೦). [ಸಂ.]

**ಶ್ರಾವಿಕೆ** (ನಾ). = ಶ್ರಾವಕಿ ೨ : ಮುನಿನಾಥರ್ ಕಲ್ಪಕಾಂತಾಜನತತಿಗಣಿನೀ ಶ್ರಾವಿಕಾ ಸಂಕುಲಂ . . . ಸಿಂಹಾದಿ ತಿರ್ಯಕ್ ಸಮೂಹಂ ಎಂಬೀ ದ್ವಾದಶಗಣಂಗಳಿರ್ಕುಂ (ಆದಿಪು. ೧೦-೩೬); ಮೂವತ್ತಾರುಸಾವಿರ ಶ್ರಾವಿಕೆಯರು ಜೈನಧರ್ಮವನ್ನು ಪ್ರಸಾರಮಾಡಿದರೆಂಬ ಪ್ರತೀತಿಯಿದೆ (ಕರ್ನಾಕ. ೧೦). [ಸಂ. ಶ್ರಾವಿಕಾ]

**ಶ್ರಾವಿತ** (ಗು). ೧. ಕೇಳುವಂತೆ ಮಾಡಿದ. (ನಾ). ೨. ಕೇಳುವಂತೆ ಮಾಡಿದುದು. 'ರಾಜಶ್ರಾವಿತ' ಪರಾ. [ಸಂ.]

**ಶ್ರಾವೆ, ಸರವೆ₁, ಸ್ರಾವೆ** (ನಾ). ೧. ಅಗಲವಾಗಿರುವ (ಮಣ್ಣಿನ) ಪಾತ್ರೆ ; ಶರಾವೆ : "ಶಾಳಾಜಿರಃ, ವರ್ಧಮಾನಃ, ಶರಾವಃ - ಈ ೩ ಶ್ರಾವೆ" (ಪಲಾಯು. ೫೨-೧೬೦) ; ತಮತಮಗೆ ಭಕ್ತರು ತೀವಿ ಪೊಂಗಳಸಂಗಳೊಳು ತತ್ ಶ್ರಾ [ಪಾಠಾಂ. ಸಾ]ವೆಗಳೊಳುಂ ಪೊನ್ನ ತಂಬುಗೆಗಳೊಳು ವೊಗೆವೊಗದು ತಂದು . . . ಲಿಂಗಾರ್ಪಿತಂಗಳೆನೊಂದಿಸುತ ಕೈಕೊಳುತ (ಬಸಪು. ೫೮-೬೮). ೨. (ಮಣ್ಣಿನ) ಮುಚ್ಚುಳ, — ತಟ್ಟೆ : ಒಂದು ಮಡಿಕೆಗೆ ಕೆಳಗೆ ನಾಲ್ಕು ಸಣ್ಣ ರಂಧ್ರಗಳನ್ನು ಮಾಡಿ ಅವುಗಳಿಗೆ ಕಡ್ಡಿಗಳನ್ನು ಸಿಕ್ಕಿಸಿ ಒಳಗೆ ಈ ಒಣಗಿದ ದ್ರವ್ಯಗಳನ್ನು ಹಾಕಿ ಒಂದು ಶ್ರಾವೆಯನ್ನು ಮುಚ್ಚಿ (ಸಕವ್ಯ. ಪರಿ. ೫೦೨). ೩. ಮಣ್ಣಿನ ಹಣತೆ; ಪ್ರಣತಿ : ಎದೆಮಟ್ಟದ ಕಂಬಗಳ ಮೇಲೆ ಇಟ್ಟಿದ್ದ ನೂರಾರು ಶ್ರಾವೆಗಳಿಂದ ಬೆಳಗುತ್ತಿದ್ದ ಕಂದುಬಣ್ಣದ ಬೆಳಕಿನಲ್ಲಿ ರಾತ್ರಿದರ್ಬಾರು ಆರಂಭವಾಗಿತ್ತು (ಕೃಷ್ಣಭೂ. ೨೨೪). **ಸರವೆ₁** : ೧. ರಸವ ತೆಗೆದುಕೊಂಡು ಸರವೆಯಲ್ಲಿ ಹನಿಸಿ (ವಾತಾಚಿ. ೪೪-೫). ೩. ಜ್ಞಾನಸರವೆಯನೆ ಹಚ್ಚಿ (ಚಿದಾವ. ೧೦೫-೩). **ಸ್ರಾವೆ** : ೧. ಸಾವಿರ ಚಿನ್ನದ ತಗಡಿನ ಸೀರೆಯ ಸಾವಿರ ಸ್ರಾವೆಯಲ್ಲಿರಿಸಿ (ಜಿನರಾ. ೮-೧೨೧); ಶ್ರಾವಕರ್ . . . ಅನ್ನಮಂ ಬೇಡಿಕೊಂಡು ಸ್ರಾವೆಯೊಳ್ ಬಸದಿಯೊಳಿಟ್ಟಿರ್ದು (ರಾಜಾವ. ೮೯-೨೬). [< ಸಂ. ಶರಾವ]

**ಶ್ರಾವ್ಯ** (ಗು). ೧. ಕೇಳಬಹುದಾದ; ಆಲಿಸತಕ್ಕ. (ನಾ). ೨. ಕಿವಿಗೆ ಇಂಪಾದುದು; ಶ್ರವಣಯೋಗ್ಯವಾದುದು : ಶ್ರಾವ್ಯಮಾದೆಡೆಯೊಳ್ ಎರಡುಂ ಪತ್ತುಗುಂ - ಸೂಚಿಸುಗು, ಸೂಚಿಕುಂ; ಮಾಡುಗುಂ, ಮಾಟ್ಕುಂ (ಶಮದ. ೨೨೭, ಪ್ರಯೋ). ೩. [ಕಾವ್ಯಮೀ] ಎರಡು ಬಗೆಯ ಕಾವ್ಯಗಳಲ್ಲಿ ಒಂದು; ಕೇಳಬಹುದಾದುದು; ಶ್ರವಣಯೋಗ್ಯ ವಾದುದು : (ನಾಟ್ಯಧರ್ಮವನ್ನು ಅನುಸರಿಸಿ) ವಸ್ತುವಿನಲ್ಲಿ ಕೆಲವು ಭಾಗಗಳು 'ಶ್ರಾವ್ಯ'ವಾಗಿಯೂ ಮತ್ತೆ ಕೆಲವು ಭಾಗಗಳು 'ಅಶ್ರಾವ್ಯ'ವಾಗಿಯೂ ಇರುತ್ತವೆ (ಕೈಪಿಡಿ. ೨೦೭). [ಸಂ.]

**ಶ್ರಾಹೆ, ಸ್ರಾಹೆ** (ನಾ). ಹನ್ನೆರಡು ತಿಂಗಳ ಅವಧಿ ; ವರ್ಷ : ಮಾನ್ಯಕಾಱಮರ್ೞು ಶ್ರಾಹೆಗೆ ಪರಿಯರ ಗದ್ಯಾಣವನ್ತಿಱುವರ್ (ಸೌಇಇ. IX - i. ೭೭-೨೯; 992); ತದ್ವರ್ಷಂ ಮೊದಲಾಗಿಯೆರಡು ಶ್ರಾಹೆಯ ಸಿದ್ಧಾಯಮೊಳಗಾಗಿ ಸರ್ಬ್ಬಬಾಧಾಪರಿಹಾರಂಗೊಟ್ಟು (ಎಇ. XV. ೭೯-೨೦; 1050). **ಸ್ರಾಹೆ** : ಎಲ್ಲಾ ಕಾಲಕೆ ಸರ್ವ್ವನಮಸ್ಯವಪ್ಪಂತಾಗಿ ಕೊಟ್ಟ ಕೆಯ ಸ್ರಾಹೆ ಲೊಕ್ಕಿ ಗದ್ಯಾಣ ಹದಿನಾಱು (ಸೌಇಇ. XX. ೩೨೦-೭; 12ನೆಯ ಶತ).
[< ಸಂ. ಶರದ್, ಶರದಾ]

**ಶ್ರಿತ** (ಗು). ೧. ಆಶ್ರಯಿಸಿದ ; ಮರೆಹೊಕ್ಕ. ೨. ಮನ್ನಿಸಿದ ; ಗೌರವಿಸಿದ. ೩. ಆಚ್ಛಾದಿಸಿದ ; ಹೊದಿಸಿದ. ೪. ಹೊಂದಿದ ; ಕೂಡಿದ. (ನಾ). ೫. ಆಸರೆಗಾಗಿ ಬಂದವನು : ಬಿಸಿಲಿನ ಬೇಗೆಗೆ ತಲೆಯಾನಿಸಿ ತರುವುಂ ಶ್ರಿತರ ತಂಪಿಸುವುದಲೆ ನೆಳಲಿಂ (ಶಾಕುಂತ. ೬೩-೧೦೭). [ಸಂ.]

**ಶ್ರಿತಜನ** (ನಾ). ಆಶ್ರಿತರಾದ ಜನ ; ಮರೆಹೊಕ್ಕವರು : ಮಾರುತಮತ ಶ್ರಿತಜನ ಚತುರರ ಸತತಸಂಗತಿ ಕೊಡು ಮುಕುತಿಗೆ ದಿತಿಸುತಮಥನ (ವಿದಾಕ್ಯ. ೬೦-೨).
[ಸಂ.]

**ಶ್ರೀ** (ನಾ). ೧. ಸಿರಿ; ಸಂಪತ್ತು; ಐಶ್ವರ್ಯ : ಶ್ರೀಗೆ ನೆಗಟ್ತೆಗೆ ವೀರಶ್ರೀಗಾಗರಂ (ಪಂಪಭಾ. ೯-೧) ; ಶ್ರೀಗೆಂತುಂ ವಿನಯಮೊಂದೆ ಭೂಷಣಮಲ್ತೇ (ಪಂರಾಮಾ. ೫-೧೬); ಶ್ರೀಗೆಣೆಯಿಲ್ಲ ವಿಕ್ರಮದಳುರ್ಕೆಯೊಳೆಲ್ಲಿಯುಮಾ ನರೇಂದ್ರನಿಂ ಮೇಗಣಮಿಲ್ಲ ಪೆಂಪಿನೆಡೆಯೊಳ್ ದೊರೆಯಪ್ಪವರಿಲ್ಲ ಮಾನಿಸರ್ (ಜೀವಸಂ. ೧೮-೩೫). ೨. ಅಭಿವೃದ್ಧಿ; ಏಳಿಗೆ. ೩. ಘನತೆ; ಗಾಂಭೀರ್ಯ. ೪. ಕಾಂತಿ; ಶೋಭೆ : "ಲಕ್ಷ್ಮೀ, ಶ್ರೀ, ಕಾಂತಿ, ವಿಭ್ರಮುಮೆಂಬಿವು ಶೋಭೆಯಲ್ಲಿಯುಂ ವರ್ತಿಸುಗುಂ" (ಹಲಾಯು. ೧೩೫-೨೭). ೫. ಸಂಪತ್ತಿನ ಅಧಿದೇವತೆ ; ಲಕ್ಷ್ಮಿ : ಶ್ರೀ ತಳ್ತುರದೊಳ್ ಕೌಸ್ತುಭಜಾತದ್ಯುತಿ ಬಳಸಿ ಕಾಂಡಪಟದಂತಿರೆ ಸಂಪ್ರೀತಿಯಿನಾವನನಗಲಲ್ಕೀತಿ ನಿರಂತರನುದಾರನಾ ನೃಪತುಂಗಂ . . . ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್ (ಕವಿರಾ. ೧-೧); ಶ್ರೀಗಗಲುರಮಂ ಕೀರ್ತಿಶ್ರೀಗೆ ದಿಗಂತಮುಮನಹಿತರಶ್ರೀಗೆಲ್ಲ ಜಯಶ್ರೀಗೆ ಭುಜಶಿಖರಮಂ ನೆಲೆಯಾಗಿಸಿ ನೀಂ ನೆಲಸು ನೇಸಱುಳ್ಳಿನಮರಿಗಾ (ಪಂಪಭಾ. ೨-೧); ಶ್ರೀಗಂ ಪರಮಾತ್ಮಪದಶ್ರೀಗಂ ನೆಲೆ ಧರ್ಮಂ (ಮಲ್ಲಿಪು. ೧೦-೧). ೬. ಹೆಚ್ಚುಗಾರಿಕೆ ; ಶ್ರೇಷ್ಠತೆ. ೭. ಅಲಂಕಾರ. ೮. ಬುದ್ಧಿಶಕ್ತಿ; ಪ್ರತಿಭೆ. ೯. ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗಗಳು : ಶ್ರೀಯುಂ ಶ್ರೀಯುಂ ಶ್ರೀಯುಂ ರಾಯರ ಪತಿ ಕೊಡೆ ಕಡಂಗಿ ನತನುತಹಿತವರ್ಗಾಯವನಱಿದು ಮುಕುಂದಂ ಶ್ರೀಯಂ ಪೊಕ್ಕಂ (ಹಮ್ಮೀರ. ೨-೪೨). ೧೦. ಲವಂಗ : "ಕೇಶವನರಸಿಯೊಳು ಲೋಕೇಶನ ಪರರಾಣಿಯಲ್ಲಿಯೈಶ್ವರ್ಯದೊಳುಂ ಯೋಷಿಜ್ಜನದೊಳಗೆ ವರ್ತಿಪ ಶ್ರೀಶಬ್ದಂ" (ನಾನಾಕಂ. ೧೬೦). ೧೧. (ದೇವರು, ವ್ಯಕ್ತಿ, ಪವಿತ್ರಗ್ರಂಥ ಮೊದಲಾದ ಹೆಸರುಗಳ ಹಿಂದೆ ಸೇರುವ) ಒಂದು ಗೌರವಸೂಚಕ ಪದ : ಶ್ರೀ ಮಾಸೇನರ್ಪ್ಪರಮ ಪ್ರಭಾವ ರಿಷಿಯರ್ಕಟ್ಬಪ್ಪಿನಾ ಪೆಟ್ಟದುಳ್ಳೀಸಂಗಂಗಳ ಪೇೞ್ದ ಸಿದ್ಧ ಸಮಯನ್ತಪ್ಪಾದೆ ನೋನ್ತಿಮ್ಬಿನಿನ್ . . . ಸ್ವರ್ಗ್ಗಾಗ್ರಮನೇಱಿದಾರ್ (ಎಕ. II (R), ೩೦-೧; 700); ಪ್ರೌಢವಿಲಾಸಿನೀಮನಸಿಜಾ ಶ್ರೀ ಶೀಲಭದ್ರಂ (ಜಾತತಿ. ೧-೫); ತಿಪ್ಪಣಾರ್ಯನೆಂದೆಂಬ ಸುಕವಿ ಶ್ರೀ ಹನುಮದ್ವಿಲಾಸವಂ ಭಕ್ತಿಯೊಳ್ ಗೈದನೊಮ್ಮನದಿಂದ (ಹನುಮ. ೧೧೪). ೧೨. ಸ್ವಾಮಿಗಳನ್ನು ಗೌರವಸೂಚಕವಾಗಿ ಸಂಬೋಧಿಸುವ ಒಂದು ಶಬ್ದ : ಶ್ರೀಗಳವರ ದರ್ಶನದಿಂದ ಧನ್ಯನಾಗಿ ಮಕ್ಕಳನ್ನವರ ಪಾದಗಳಲ್ಲಿ ಸಮರ್ಪಿಸಿದನು (ಕಭವಿ. ೩೧೦); ಶ್ರೀಗಳವರು . . . ಧರ್ಮನಿಷ್ಠೆ ಅಗತ್ಯವೆಂದು ಬೋಧಿಸಿದರು (ಮುಯ್ಯಿ. ೧೯೭). ೧೩. ಮಂಗಳಸೂಚಕವಾಗಿ ಬರವಣಿಗೆಯ ಪ್ರಾರಂಭ ಅಥವಾ

ಅಂತ್ಯದಲ್ಲಿ ಬರೆಯುವ ಪದ : ಕಾಗದ ಬರೆಯುವಾಗ ಮೇಲುಗಡೆ ಶ್ರೀ ಎಂದು ಬರೆಯುವುದು ಸಂಪ್ರದಾಯ (ರೂಢಿ). ೧೪. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು : ಅಮೃತಾ ಮಾನದಾ ಪೂಷಾ ತುಷ್ಟಿ . . . ಶ್ರೀ ಅಂಗದಾ ಪೂರ್ಣಾ ಪೂರ್ಣಾಮೃತಾ ಕಾಮದಾಯಿನಿಯೆಂಬ ಷೋಡಶಕಲಾಭರಿತನಾಗಿ (ವಿವೇಕ. ೨೬೭). ೧೫. ಒಂದು ಬಗೆಯ ಸಸ್ಯ. ೧೬. [ಛಂದ] ವರ್ಣಛಂದಸ್ಸಿನ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಪಾದದಲ್ಲಿ ಒಂದು ಅಕ್ಷರವಿರುವ ಉಕ್ತೆ ಎಂಬ ಛಂದಸ್ಸಿನ ಒಂದು ವೃತ್ತ : ಶ್ರೀ ವೃತ್ತಂ – ಶ್ರೀ ಶಂ ಕಾಂ ತೇ (ಛಂದೋಂಬು. ೨-೫೧). ೧೭. [ಜೈನ] ಅಷ್ಟದಿಕ್ಕನ್ನಿಕೆಯರಲ್ಲಿ ಒಬ್ಬಳು : ಅಲಂಬೂಷೆ ಮಿತ್ರಕೇಶಿ ಪುಂಡರೀಕಿಣಿ ವಾರುಣ್ಯಾದರ್ಶೆ ಶ್ರೀ ಹ್ರೀ ಧೃತಿಯೆಂಬಣ್ಬರುಂ ದಿಕ್ಕನ್ಯೆಯರಂ ಮರುದೇವಿ ಮಹಾದೇವಿಗೆ ಚಾಮರಮನಿಕ್ಕಲುಂ (ಆದಿಪು. ೬-೩ ವ). ೧೮. [ಸಂಗೀತ] ಒಂದು ರಾಗದ ಹೆಸರು.

ಶ್ರೀಓನಾಮ = ಬರವಣಿಗೆಯ ಆರಂಭ ಅಥವಾ ಅಂತ್ಯದಲ್ಲಿ ಮಂಗಳಕರವಾದುದು ಎಂಬರ್ಥದಲ್ಲಿ ಉಪಯೋಗಿಸುವ ಪದ : ಈ ಪ್ರಾಣಿಗೆ ಈ ಶಾಸ್ತ್ರದಲ್ಲಿ ಈಗ ತಾನೆ ಶ್ರೀ ಓ ನಾಮ ಆಗುತ್ತಿದೆ (ಶಿವರಾ. ೧೪). ಶ್ರೀರೂಪವಿದ್ಯಾಧರಿ = ವಿದ್ಯಾಧರಿಯಂತೆ ಅತಿಶಯವಾದ ರೂಪವುಳ್ಳವಳು; ಒಂದು ಬಿರುದು: ಎಸೆವ ಜಯಶ್ರೀಯೆನಲ್ಮಿಕ್ಕ ಕಾಂತಾತಿಳಕಂ ಶ್ರೀರೂಪವಿದ್ಯಾಧರಿಗೆ ಸಮನಿವಳಂನ್ಯಕಾಂತಾ ಕದಂಬಂ (ಸೌಇ. XX, ೯೯-೩೦; ಸು. 1076). **[ಸಂ.]**

**ಶ್ರೀಕಂಠ** (ನಾ). ೧. ಸುಂದರವಾದ ಕೊರಳುಳ್ಳವನು ; ಶಿವ : "ಈಶಾನಃ . . . ಶ್ರೀಕಂಠಃ, ಉಗ್ರಃ, ಹರಃ, . . . ನೀಲಲೋಹಿತಃ – ಈ ೪೫ ಮಹಾದೇವರ ಪೆಸರ್" (ಹಲಾಯು. ೩-೧೧) ; ಶ್ರೀಕಂಠನೆನಿಸುವ ಕಣೆಗಳ್ ವೈಕುಂಠನನೆಯ್ದಿ ಮುಸುಋುತಿರ್ದುವು ರಣದೊಳ್ (ಜಗವಿ. ೧೮-೨೮) ; ಶ್ರೀಮಂನ್ಮಹಾದೇವದೇವೋತ್ತಮಂ ಶ್ರೀನಂಜಲುಗೂಡು ಶ್ರೀಕಂಠದೇವರ ಅಮೃತಪಡಿ ಅಂಗರಂಗಭೋಗಕ್ಕೆ ಸಮರ್ಪ್ಪಿಸಿ ಕೊಟ್ಟ ಗ್ರಾಮದ ಶಿಲಾಶಾಸನದ ಕ್ರಮ (ಮೈಆರಿ. ೧೯೪೬, ೧೮-೪; 1488). ೩. [ಸಂಗೀತ] ಒಂದು ರಾಗದ ಹೆಸರು : ಕೌಶಿಕೆ . . . ಶ್ರೀಕಂಠ ಬೃಹಸ್ಪತಿ . . . ಎಂಬ ಮೂವತ್ತುನಾಲ್ಕು ಭಾಷಾಂಗದಿಂದಾದ ರಾಗಂಗಳು (ವಿವೇಕ. ೧೮೮). **[ಸಂ.]**

**ಶ್ರೀಕಂಠಯ್ಯ** (ನಾ). ಒಬ್ಬಾತನ ಹೆಸರು : ಶ್ರೀಕಣ್ಠಯ್ಯ (ಎಕ. II, ೧೨೫; 10ನೆಯ ಶತ). [ಶ್ರೀಕಂಠ + ಅಯ್ಯ]

**ಶ್ರೀಕಂಠರಿಪು** (ನಾ). ಶಿವನ ಶತ್ರು ; ಮನ್ಮಥ : ಶ್ರೀಕಂಠರಿಪುವಿನಸ್ತ್ರಾನೀಕಂ ಬಗವುಗಲದೊರ್ಮೆ ಸತ್ರಾಜಿತ್ಕನ್ಯಾಕಾರಂ ಬಗವೊಕ್ಕುದು (ಜಗವಿ. ೧೧-೧). **[ಸಂ.]**

**ಶ್ರೀಕಂಠಸಖ** (ನಾ). ಶಿವನ ಸ್ನೇಹಿತ ; ಕುಬೇರ : "ಐಳಬಿಲಃ, ಪೌಲಸ್ತ್ಯಃ . . . ಶ್ರೀಕಂಠಸಖಃ . . . ಪುಣ್ಯಜನೇಶ್ವರಃ – ಈ ೧೭ ಕುಬೇರನ ಪೆಸರ್" (ಹಲಾಯು. ೧೪-೭೮). **[ಸಂ.]**

**ಶ್ರೀಕಂಡಿಯ್ಯ** (ನಾ). ಒಬ್ಬಾತನ ಹೆಸರು : ತಾಟ್ನೆಲ್ಲರ x x ಮನ್ದೆಯರಾ ಶ್ರೀಕಣ್ಡಯ್ಯ ತುಱುಗೊಣ್ಡಲ್ಲಿ ಪುಯಲ್ಲಾಗಿ ತುಱು ಆಟ್ಟಿ ಸತ್ತ (ಎಕ. X, ಶ್ರೀನಿವಾ. ೫೦-೮; ಸು. 880 ?). [IP ಇದು 'ಶ್ರೀಕಂಠಯ್ಯ' ಎಂಬುದರ ಅಪಲಿಖಿತವಿರಬಹುದು]

**ಶ್ರೀಕರ** (ನಾ). ೧. ಸಂಪತ್ತನ್ನುಂಟುಮಾಡುವಂಥದು : ಶ್ರೀಕರದ ಸರ್ವಜ್ಞನಾಮಂ ಪ್ರಾಕಟಮನಲು ಸಲುವುದೆಲ್ಲಾ ಲೋಕದೊಳಗ (ಬಸವು. ೨-೩೮); ಪರಿಶೋಭಿಸಿತು ಮುಂದೆ . . . ಶ್ರೀಕರಂ ಪದ್ಮಾಕರಂ ಚೆಲ್ವನ (ಜೈಮಿಭಾ. ೧೫-೮). ೨. ವೈಭವದಿಂದ ಕೂಡಿದುದು: ಶ್ರೀಕರಮೆನಿಸುವ ಚೀನಪತಾಕಾವಳಿತೋರಣಾವಳೀವೃತಪುರಮಂ ವೈಕುಂಠನೊಸೆದು ನೋಡುತ್ತೆ (ಜಗವಿ. ೧೨-೧). ೩. ಲಕ್ಷ್ಮೀಪತಿ ; ವಿಷ್ಣು. ೪. ಕೆಂಪುತಾವರೆ; ಕೆಂದಾವರೆ. ೫. ಲಕ್ಷ್ಮಿಯ ಕೈ. ೧, ೫ : ಆವಗಂ ನಿರ್ಮಲಶ್ರೀಕರಗ್ರಾಹಿ ಮತ್ತಾವಗಂ ಪ್ರಣುತವನಮಾಲಾಸುಶೋಭಿ ತಾನಾವಗಂ ಮನ್ಮಥೋದ್ಭವಕಾರಿ ಹರಿವೊಲಾನೆಂಬ ಪೆಂಪಿಂದೆಸೆದುದು (ಜೈಮಿಭಾ. ೩-೧). **[ಸಂ.]**

**ಶ್ರೀಕರಣ** (ನಾ). ೧. ಲೇಖನಿ. ೨. ಲೆಕ್ಕಪತ್ರಗಳ ಮುಖ್ಯಾಧಿಕಾರಿ ; ಕರಣಿಕ : ಮಂತ್ರಿ ಪುರೋಹಿತ ಶ್ರೀಕರಣಮುಂ ಸಾಸಿರ್ವ್ವರುಂ ಅಱುನೂರ್ವ್ವರುಂ ಸಹಿತಂ ತಮ್ಮ ಪ್ರಸಾದಪರನಪ್ಪೊನ್ನೆ ಆರಿದ (ಹಾರೀತ) ಗೋತ್ರಜನ್ನೆ . . . ಗೋಪಾಲದೇವರ್ ಕೊಟ್ಟರ್ (ಎಇ. XXI, ೧೭೮-೬; ಸು.8ನೆಯ ಶತ); ಶ್ರೀಕರಣಮೆನೆ ನೆಗೞ್ದನಂ . . . ಕರಣರತ[ನ]ಮೆಂಬುದು ಜಗಜ್ಜನಂ ಶ್ರೀಧರನಂ (ಜಾತತಿ. ೧-೬); ಇನ್ತೆನಿಸಿದ ಕರಣಂಗಳೊಡನೆ ಬರೆ ಬೆಳ್ವಲನಾಡಧಿಕಾರಿ ಶ್ರೀಕರಣಂ ಬಾಹತ್ತರನಿಯೋಗಾಧಿಪತಿ ಮಹಾಪ್ರಚಂಡ ದಂಡನಾಯಕಂ ತೇಜಿರಾಜಂ (ಕಇಆ. ೧೨-೭೫-೪೩; 1170).

ಶ್ರೀಕರಣದ ಹೆಗ್ಗಡೆ = ಲೆಕ್ಕಪತ್ರಗಳ ಮುಖ್ಯಸ್ಥ : ಶ್ರೀಮನ್ಮಹಾಪ್ರಧಾನಂ ಸರ್ವ್ವಾಧಿಕಾರಿ ಪಿರಿಯ ದಂಡನಾಯಕಂ ಭರತಿಮಯ್ಯಂಗಳುಂ ಶ್ರೀಕರಣದ ಹೆಗ್ಗಡೆ ಬೂಚಿಮಯ್ಯಂಗಳುಂ (ಎಕ. II (R), ೬೧-೧೦೨; 1163); ಶ್ರೀಕರಣದ ಹೆಗ್ಗಡೆ ಎಲೆಯಣ್ಣನ ಕಯ್ಯಲು ಕ್ರಯದಾನಂ ಕೊಣ್ಡು (ಎಕ. XIV, ಶ್ರೀರಂಗ. ೨೨೪-೪; ಸು. 1175). **[ಸಂ.]**

**ಶ್ರೀಕರಣಬೋವ** (ನಾ). = ಶ್ರೀಕರಣ ೨ : ಅಪೂರ್ವ್ವಯಮೊಳಗಾಗಿ ಗ್ರಾಮಕೆ ಶ್ರೀಕರಣಬೋವಮಯ್ಯಂಗಳ ಬಳಿಯ ಹೊನ್ನು ಸಹಿತ ಅಚಳಪ್ರಕಾಶಸ್ವಾಮಿಗಳ ಕಯ್ಯಲು ಧಾರಾಪೂರ್ವ್ವಕಂ ಮಾಡಿ ತಾಂಮ್ರಶಾಸನಮಂ ಕೊಟ್ಟರು (ಮೈಆರಿ. ೧೯೪೦, ೩-೨೭; 1215). [ಶ್ರೀಕರಣ + ಬೋವ (< ಬೋಯ)]

**ಶ್ರೀಕಲ** (ನಾ). ಒಂದು ಬಗೆಯ ಸಸ್ಯ : ಶ್ರೀಕಲ, ಸೂರ್ಯಾವರ್ತ, ನಿರಿಡಿಬಿತ್ತ (ಮೈಔಗಿ. ೪೧-೮೨೦). [?]

**ಶ್ರೀಕಾಂತ** (ನಾ). ಲಕ್ಷ್ಮೀಪತಿ ; ವಿಷ್ಣು : ಶ್ರೀಕಾಂತಂ ವಿಶದಯಶಃಶ್ರೀಕಾಂತಂ ಬೀಡುವೊಕ್ಕು ಸುಖಮಿರೆ (ನೇಮಿಪು. ೧೨-೧); ಶ್ರೀಕಾಂತ ಎನ್ನ ಮೇಲೆ ಎಳ್ಳಷ್ಟು ದಯವಿಲ್ಲ (ಪುರಂಪ. ಧಾ. ೧-೮೪ ಪಲ್ಲವಿ). **[ಸಂ.]**

**ಶ್ರೀಕಾಂತೆ** (ನಾ). ಸಂಪತ್ತಿನ ಅಧಿದೇವತೆ ; ಲಕ್ಷ್ಮಿ : ಮಹೀಕಾಂತೆಯುಮಂ ಶ್ರೀಕಾಂತೆಯುಮಂ ಕಣ್ಗಡೆ ಜಡಿಯೆ (ಗದಾಯು. ೯-೨೯ ವ); ಶ್ರೀಕಾಂತೆ ಭೂಕಾಂತೆಯರ್ ನಮ್ಮನುಳಿವರು ಮುಂದೆ ಅನ್ಯರನೊಲಿದಪರು (ಇಂಚಾಪ. ೮೮-೩೦). **[ಸಂ. ಶ್ರೀಕಾಂತಾ]**

**ಶ್ರೀಕಾರ** (ನಾ). ೧. ಪುಸ್ತಕ, ಪತ್ರ ಮೊದಲಾದವುಗಳ ಪ್ರಾರಂಭದಲ್ಲಿ ಬರೆಯುವ 'ಶ್ರೀ' ಎಂಬ ಶುಭಸೂಚಕವಾದ ಅಕ್ಷರ : ವಿಮಳತ ಶ್ರೀಕಾರದಾಕಾರ ಮನೆಣೆಕೆಗೊಳ್ಳದೆ ಮಿಱುಗುವುವು ಕುಮುದದಳಲೋಚನೆಯ ಕರ್ಣಂಗಳಂ ಪೊಸತಿವೆನಿಸಿ (ಬಸವು. ೪-೨೭). ೨. ಮೊದಲು ; ಪ್ರಾರಂಭ : ಬಿಲ್ಲಾಣನಾಗೆಂದು ಹರಸಿದುದೆ ನನಗಾಚ್ಛೆ ಮೇಣದುವೆ ನನ್ನ ಕಲಿಕೆಗೆ ಗಡಾ ಶ್ರೀಕಾರ ! (ಹಚ್ಚೆರ. ೨೯-೨೩). **[ಸಂ.]**

**ಶ್ರೀಕಾರ್ಯ** (ನಾ). ಪೂಜಾಕಾರ್ಯ ; ಸೇವೆ : ಗಂಗೇಶ್ವರದೇವರ ದೇವಾಲ್ಯವಂ ಮಾಡಿಸಿ ಆ ದೇವರ ಶ್ರೀಕಾರ್ಯ್ಯಕೆ ಅಮೃತರಾಸಿ ಗುರುಗಳ ಕಾಲಂ ಕರ್ಚ್ಚಿ . . . ಬಿಟ್ಟ ದತ್ತಿ (ಎಕ. VII, ಶಿವಮೊ. ೫-೪೯; 1218); ನಂಜನಾಥದೇವರ ಶ್ರೀಕಾರ್ಯಕ್ಕೆ ಬಿಟ್ಟ ಮಗ್ಗ ತೆಱಿಗೆ (ಮೈಆರಿ. ೧೯೨೮, ೩೭-೬; ?). **[ಸಂ.]**

**ಶ್ರೀಖಂಡ**$_1$ (ನಾ). ೧. ಶ್ರೀಗಂಧದ ಮರ ; ಚಂದನವೃಕ್ಷ : "ಮಳಯರುಹಂ ಚಂದನದ್ರುಮಂ ಶ್ರೀಖಂಡಂ" (ವಸ್ತುಕೋ. ೭೭-೧೩). ೨. ಶ್ರೀಗಂಧದ ಕೊರಡನ್ನು ತೇದು ಮಾಡಿದ ಲೇಪನ ವಸ್ತು, — ಗಂಧ : ದೇವರ್ಗ್ಗೆ [ಶ್ರೀ]ಖಣ್ಡಕ್ಕಂ ಧೂಪಕ್ಕಂ . . . ಬಿಟ್ಟ ಗಟ್ಟೆ ಕಮ್ಮ ನಾಲ್ವತ್ತ X (ಸೌಇ. XX, ೨೦-೨೦; 1015); ಮೆಯ್ಗಣ್ಪುಗಳಂ ಶ್ರೀಖಂಡ ಕರ್ಪೂರದೆ ರಚಿಸಿತೊ ಮುಕ್ತಾಳಿಯಂ ತೊಟ್ಟುದೋ . . . ಎಂಬಂತದೇಂ ವರ್ಪಮದೊ ನೃಪನತಿಸ್ಫೂರ್ತಿ ಕೀರ್ತಿಪ್ರತಾನಂ (ಪುಷ್ಪಪು. ೩-೧೪). **[ಸಂ.]**

**ಶ್ರೀಖಂಡ**$_2$ (ನಾ). ಗಟ್ಟಿಯಾದ ಕೆನೆಮೊಸರಿಗೆ ಸಕ್ಕರೆ, ಏಲಕ್ಕಿಪುಡಿ, ಕೇಸರಿ ಮುಂತಾದುವನ್ನು ಹಾಕಿ ತಯಾರಿಸುವ ಒಂದು ಬಗೆಯ ಸಿಹಿಖಾದ್ಯ : ಶ್ರೀಖಂಡವು ಪೌಷ್ಟಿಕ, ವೀರ್ಯವರ್ಧಕ (ಅಷ್ಟಾಂಗ. ೧೨೦-೩೩); ವೀರಪ್ಪ ಈ ದಿನ ಮೇಜವಾನಿ ಉತ್ತಮ ಮಾಡಿಸಿದ್ದ ! ಪುರೆ, ಶ್ರೀಖಂಡ, ಶಿರ ಎಲ್ಲ ತಿಂದು ತಿಂದು ಮತ್ತೆ ಚೆಲ್ಲಬೇಕಾಯ್ತು (ಇತಿಶ್ರೀ. ೫೩).

[<— ಮರಾ. ಶ್ರೀಖಂಡ. / ಗುಜ. ಸಿಖಂಡ. / ಪ್ರಾ. ಛಿಹಂಡಅ]

**ಶ್ರೀಖಂಡಶರ್ಕರೆ** (ನಾ). ಒಂದು ಬಗೆಯ ಔಷಧೀಸಸ್ಯ : "ಶಾರ್ಕರಜಾ – ಶ್ರೀಖಂಡಶರ್ಕರ" (ಓಷಧಿ. ೧೭೩). [?]

**ಶ್ರೀಗಂಧ** (ನಾ). ೧. ಶ್ರೀಗಂಧದ ಮರ : ಕೃಷ್ಣಾಗರು ಶ್ವೇತಾಗರು ಶ್ವೇತಗುಗ್ಗುಲ ಶ್ರೀಗಂಧ ಕರ್ಪೂರವೆಂಬ ದಶಾಂಗಗಳಂ (ವಿವೇಕ. ೧೦೫). ೨. ಶ್ರೀಗಂಧದ ಕೊರಡು, — ಚೆಕ್ಕೆ : ಶ್ರೀಗಂಧವನ್ನು ತೇದು ಕುಡಿಯೆ ಓಕರಿಕೆ ಮಾಣ್ಗುಂ (ವಿವೈವಿ. ೭).

೩. = ಶ್ರೀಖಂಡ ೨ : ಕೇಸರಿ, ಶ್ರೀಗಂಧ, ಅಗರು, ಪನ್ನೀರು ಮುಂತಾದ ಸಹಜ ಸುಗಂಧದ್ರವ್ಯಗಳಲ್ಲಿ ಮುಳುಗಿ ತೇಲಿದವರು ಆ ಕಾಲದವರು (ಸಾಹಿಜೀ. ೫೨).

ಶ್ರೀಗಂಧದ ಮರ = ಚಂದನದ ಮರ : ಶ್ರೀಗಂಧದ ಮರವು ಒಂದು ಉಪಸಸ್ಯ (ಸಸ್ಯಶಾ. ೧೦೮). [ಸಂ.]

**ಶ್ರೀಗದಿತ** (ನಾ). [ಕಾವ್ಯಮೀ] ಉಪರೂಪಕಗಳಲ್ಲಿ ಒಂದು ವಿಧ : ೧. ನಾಟಿಕಾ . . . ೧೨. ಶ್ರೀಗದಿತ. ೧೩. ಶಿಲ್ಪಕ . . . ೧೮. ಭಾಣಿಕಾ — ಎಂದು ಉಪರೂಪಕಗಳು ಹದಿನೆಂಟು ವಿಧ (ಸಂನಾಟ. ೩೨). [ಸಂ.]

**ಶ್ರೀಗಿರಿ** (ನಾ). ೧. ಶ್ರೀಶೈಲ: ಶಿಲಾದನುಗ್ರಹಪವನೊರ್ಚಿದನಾದಿಯೆನಿಪ್ಪ ಶ್ರೀಗಿರಿಯ ನೈರುತ್ಯಭಾಗದಲಿ (ಬಸವು. ೧-೬೪). ೨. ತಿರುಪತಿ ಬೆಟ್ಟ : ಏಳಯ್ಯ ಬೆಳಗಾಯಿತು . . . ಏಳು ಶ್ರೀಗಿರಿಯೊಡೆಯ ವೆಂಕಟೇಶ (ಪುರಂದ. ಧಾ. ೧-೧೭೭ ಪಲ್ಲವಿ). [ಸಂ.]

**ಶ್ರೀಘನ** (ನಾ). ೧. ಹುಳಿಮೊಸರು. ೨. ಗೌತಮಬುದ್ಧ : "ಸರ್ವಜ್ಞಸ್ಸುಗತಃ, ಬುದ್ಧಃ . . . ಶ್ರೀಘನಃ, ಶಾಸ್ತಾ, ಮುನಿಃ — ೧೮ ಬುದ್ಧದೇವರ ಹೆಸರುಗಳು" (ಸಿದ್ಧಾಂತಿ. ೧೬). [ಸಂ.]

**ಶ್ರೀಚಕ್ರ** (ನಾ). [ತಂತ್ರಶಾ] ಐಶ್ವರ್ಯವನ್ನು ಹೊಂದುವುದಕ್ಕಾಗಿ ಪೂಜಿಸಲ್ಪಡುವ ಲಕ್ಷ್ಮೀಮಂತ್ರದ ಬೀಜಾಕ್ಷರಗಳನ್ನುಳ್ಳ ಪವಿತ್ರಯಂತ್ರ : ಶ್ರೀಚಕ್ರಾದಿ ಯಂತ್ರಗಳನ್ನು ಸಂಪ್ರದಾಯದಂತೆ ನಿರ್ಮಿಸಿ, ತಾಂತ್ರಿಕ ಕಲ್ಪರೀತ್ಯಾ ಪೂಜೆ ಮಾಡುವುದು ಬಹಿರ್ಯಾಗವೆನಿಸುತ್ತದೆ (ಭಾರದ. ೨೨೭); ಇತರ ಭುವನೇಶ್ವರಿಗಳಲ್ಲಿ ಹನ್ನೆರಡು ಕಿರಣದ ನಕ್ಷತ್ರ, ವೃತ್ತ, ಶ್ರೀಚಕ್ರ, ೧೬ ಕಿರಣದ ನಕ್ಷತ್ರ ಇತ್ಯಾದಿ ನಕಾಸೆಗಳಿವೆ (ಹೊಯ್ಸವಾ. ೫೫). [ಸಂ.]

**ಶ್ರೀಚಾವುಂಡಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ಚಾವುಣ್ಡಯ್ಯ (ಎಕ. II, ೩೯-೧; ಸು. 960). [ಶ್ರೀ + ಚಾವುಂಡ + ಅಯ್ಯ]

**ಶ್ರೀಚೂರ್ಣ** (ನಾ). ಶ್ರೀವೈಷ್ಣವರು ನಾಮದ ಮಧ್ಯರೇಖೆಗೆ ಬಳಸುವ ಕೇಸರಿಬಣ್ಣದ ಪುಡಿ ; ತಿರುಚೂರ್ಣ : ಶ್ರೀಚೂರ್ಣಧಾರಣೆಯಿಂದ ಶ್ರೇಯಸ್ಸೂ, ಶ್ರೀಹರಿಯಲ್ಲಿ ಭಕ್ತಿಯೂ ಹೆಚ್ಚುವುವು (ಸಕವ್ಯ. ೪೧). [ಸಂ.]

**ಶ್ರೀಜಾಯಾವಲ್ಲಭ** (ನಾ). ಐಶ್ವರ್ಯಕ್ಕೆ ಒಡೆಯನಾದವನು; ರಾಜ; ಚಕ್ರವರ್ತಿ : ಶ್ರೀಜಾಯಾವಲ್ಲಭನಪರಾಜಿತನಯವಿನಯಗುಣನಿದಾನಂ ಬುಧಸಾಮಾಜಿಕಮತಮನೆ ಫೇಟ್ಬು ವಿರಾಜಿತಮನನದರ (ಶಾಂತಿಪು. ೨-೫೯). [ಸಂ.]

**ಶ್ರೀತಾಲ, ಶ್ರೀತಾಳ** (ನಾ). ಒಂದು ಬಗೆಯ ತಾಳೆ. **ಶ್ರೀತಾಳ:** "ಬಂಧಿನೀ — ಶ್ರೀತಾಳ" (ಒಷಧಿ. ೧೦೫). [ಸಂ.]

**ಶ್ರೀತಾಳ** 'ಶ್ರೀತಾಲ' ನೋ.

**ಶ್ರೀತಾಳಿ** (ನಾ). = ಶ್ರೀತಾಲ : "ಕರತಾಳಿ ಹಿಂತಾಳಿ ಶ್ರೀತಾಳಿಯೆನಿಕ್ಕುಂ" (ಮಂಗರಾ. ೧೦೫-೧೫). [ಸಂ. ಶ್ರೀತಾಲೀ]

**ಶ್ರೀತಾಳಿಕ** (ನಾ). = ಶ್ರೀತಾಲ : ಪ್ರೇಂಖೋಲಿತಮನಸಿಜವಿಜಯಪ್ರಶಸ್ತಿ ಲೇಖನೋಚಿತಚ್ಛದ ಶ್ರೀತಾಳಿಕಮುಮಪ್ಪ ವೇಲಾವನದೊಳಾವಾಸಿತವಿಜಯಕಟಕನಾಗಿ ಪೂರ್ವಸ್ಥಿತಿಯೊಳೆ ಪೋಗಿ (ಆದಿಪು. ೧೩-೩ ವ). [ಸಂ. ಶ್ರೀತಾಲಿಕ]

**ಶ್ರೀತಾಳೆ** (ನಾ). = ಶ್ರೀತಾಲ : "ಲೇಖಾಯನಃ — ಶ್ರೀತಾಳೆ" (ಒಷಧಿ. ೧೧೩); ತಾಳೆವಲೆ, ವಾಲೆ, ಶ್ರೀತಾಳೆ ಎಲೆ, ತೆಂಗಿನ ಎಲೆ . . . ಇವುಗಳಲ್ಲಿ ಊಟಮಾಡುವುದರಿಂದ ಮೂತ್ರಕೃಚ್ಛ್ರ . . . ಮುಂತಾದ ರೋಗಗಳನ್ನು ಹೋಗಲಾಡಿಸುವುದು (ಸಕವ್ಯ. ೪೯). [< ಸಂ. ಶ್ರೀತಾಲ]

**ಶ್ರೀತುಲಸಿ, ಶ್ರೀತುಳಸಿ** (ನಾ). ತುಳಸಿಯಲ್ಲಿ ಒಂದು ಬಗೆ : ಶ್ರೀತುಲಸಿಯನ್ನು ಧರಿಸುವುದರಿಂದ ಸಕಲಪಾಪಗಳನ್ನೂ ನಾಶಮಾಡಿ . . . ವಾತ ಶ್ಲೇಷ್ಮ ದೋಷಂಗಳನ್ನು ನಾಶಮಾಡುವುದು (ಸಕವ್ಯ. ೪೫). **ಶ್ರೀತುಳಸಿ :** ವಿಷ್ಣುತುಳಸಿ, ಕರೀತುಳಸಿ, ಶ್ರೀತುಳಸಿ (ಮೈಔಗಿ. ೫೭-೧೧೪೯). 'ವಿಷ್ಣುತುಳಸಿ' ಪರಾ. [ಸಂ. ಶ್ರೀತುಲಸೀ]

**ಶ್ರೀತುಳಸಿ** 'ಶ್ರೀತುಲಸಿ' ನೋ.

**ಶ್ರೀತೊಲಸಿ, ಶ್ರೀತೊಳಸಿ** (ನಾ). = ಶ್ರೀತುಲಸಿ : ಪಕ್ಕಕ್ಕೊಂದುಪವಾಸ ಪುಕ್ಕಟೆ ಶ್ರೀತೊಲಸಿ ಸಿಕ್ಕಿಸಿಕ್ಕಿದಲಿ ಹರಿನಾಮ ಭವಭವದಿ ಸಿಕ್ಕಿ ಸಾಯುವದು (ಸರ್ವಜ್ಞ. ೯೧೪). **ಶ್ರೀತೊಳಸಿ :** ಅಹೋರಾತ್ರ ಶತಬಿಲಪತ್ರ ಶ್ರೀತೊಳಸಿ ಸಹ ಮುಡಿ ೯ ಅಂತುಯೆಪ್ಪತ್ತು ಯೆಂಟು ಮುಡೆ ಅಕ್ಕಿಯ ಭೂಮಿಯ (ಸೌಇಇ. IX - ii, ೬೦೯-೫೯; 1544); ಲೊಕ್ಕಿಬೇರು, ಶ್ರೀತೊಳಸಿಬೇರು, ಇವಿಷ್ಟನ್ನೂ ಸಮಭಾಗವಾಗಿ, ಬಿಸಿನೀರಿನಿಂದರೆದು ಕೊಡಲು ಶೀತಜ್ವರ ಪರಿಹಾರಮಕ್ಕುಂ (ಸಕವ್ಯ. ೬೩). [< ಸಂ. ಶ್ರೀತುಲಸೀ]

**ಶ್ರೀತೊಳಸಿ** 'ಶ್ರೀತೊಲಸಿ' ನೋ.

**ಶ್ರೀದ** (ನಾ). ೧. ಸಂಪತ್ತನ್ನು ಕೊಡುವವನು. ೨. ಕುಬೇರನ ಹೆಸರುಗಳಲ್ಲಿ ಒಂದು : "ಐಳಬಿಲಃ, ಪೌಲಸ್ತ್ಯಃ, ವೈಶ್ರವಣಃ, ಕಿನ್ನರೇಶ್ವರಃ, ಧನದಃ, ಶ್ರೀದಃ . . . ಪುಣ್ಯಜನೇಶ್ವರಃ — ಈ ೧೭ ಕುಬೇರನ ಪೆಸರ್" (ಹಲಾಯು. ೧೪-೬೮); ಶ್ರೀದನೈಶ್ವಭವಂ ತಾನೆನೆ ಲೋಕಪಾಳತೆಯನೇಕಾಯತ್ತಮಂ ಮಾಡಿ ನಿಂದಭಿರೂಪಂ ಸುತನಾದನಲ್ತೆ ನರಸಿಂಹಕ್ಷೋಣಿಪಾಳೋತ್ತಮಂ (ಎಕ. IV, ನಾಗಮಂ. ೭೦-೨೦; 1178). ೩. ವಿಷ್ಣು. [ಸಂ.]

**ಶ್ರೀದಯಿತ** (ನಾ). ೧. ಲಕ್ಷ್ಮಿಯ ಗಂಡ ; ವಿಷ್ಣು. ೨. ಸಂಪತ್ತಿಗೆ ಒಡೆಯ ; ರಾಜ : ಶ್ರೀದಯಿತಂ ಮನುಕುಲಗಗನಾದಿತ್ಯಂ ಹಿಮಮನೆಯ್ದೆ ಷಟ್ಖಂಡಮುಮಂ ಸಾಧಿಸಿ ಜಿತದಿಙ್ಮಂಡಲನಾದ ಮಹಾತ್ಮಂ (ಆದಿಪು. ೧೫-೧); ಶ್ರೀದಯಿತಂ ವರವಿಜಯ ಶ್ರೀದಯಿತಂ . . . ಇರ್ದನಖಿಳವಿನೋದದೆ (ಶಾಂತೀಶ್ವ. ೪-೧). [ಸಂ.]

**ಶ್ರೀದಯಿತೆ** (ನಾ). ಸಂಪತ್ತಿನ ಅಧಿದೇವತೆ ; ಲಕ್ಷ್ಮಿ : ಶ್ರೀದಯಿತೆಗೆ ನಿರ್ವಾಣಶ್ರೀದಯಿತೆಗೆ ದರ್ಶನಾಂಗಮೆಂತುಂ ಚಿತ್ತಾಹ್ಲಾದಕರಮೆಂದು ನಂಬಿದನಾದರದಿಂ ಸುಕವಿನಿಕರಪಿಕಮಾಕಂದಂ (ಧರ್ಮಾಮೃ. ೧೧-೧). [ಸಂ. ಶ್ರೀದಯಿತಾ]

**ಶ್ರೀದಸಖ** (ನಾ). ಕುಬೇರನ ಸ್ನೇಹಿತ; ಶಿವ: ಶ್ರೀದಸಖಂ ಪುರರಿಪುಬಿಲ್ಯೋದಕಪತಿನಾಮ ನಲ್ಲಿ ಸನ್ನಿದನಾಗಿರ್ದಾ ದೇವೇಂದ್ರನ ಪರಿಭವಭೇದವನಾಱಿಸಿ (ಜಗವಿ. ೧೪-೧). [ಸಂ.]

**ಶ್ರೀದಾನ** (ನಾ). ಸಂಪದ್ಭರಿತವಾದ ದಾನ : ಆದರದಿಂ ಗೋದಾನಂ . . . ಧನದಾನಂ ಶ್ರೀದಾನಂಗುಡುತುಮೊಪ್ಪಿದಂ ಗಿರಿರಾಜಂ (ಗಿರಿಕ. ೩-೬೩). [ಸಂ.]

**ಶ್ರೀದೇವಿ** (ನಾ). ೧. ಮಂಗಳವನ್ನುಂಟುಮಾಡುವ ದೇವತೆ ; ಗೃಹದೇವತೆ : ವೈರಿದೇವತೆಗಳ್ ಎಮ್ಮ ಮನೆಯಂ ಪುಗದಿರ್ಕೆಂದು ಶ್ರೀದೇವಿಯರನುಪಾಸ್ತಿಗೆಯ್ವುದು (ಚಾವುಂಪು. ೨೨೨). ೨. ಸಂಪತ್ತಿನ ಒಡತಿ ; ಲಕ್ಷ್ಮಿ : ಕಂಡೆ ತಿರುಪತಿ ವೆಂಕಟೇಶನ . . . ಉರದಿ ಶ್ರೀದೇವಿ ಇರಲು ಕಂಡೆನು (ಪುರಂದ. ಧಾ. ೧-೭೪-೩). [ಸಂ. ಶ್ರೀದೇವೀ]

**ಶ್ರೀದ್ವಾರ** (ನಾ). ಹೆಬ್ಬಾಗಿಲು ; ರಾಜದ್ವಾರ : ಶ್ರೀದ್ವಾರ — ಸಿರಿಯದರ, ಸಿರಿಯದಾರ, ಸಿರಿಯಬಾರ (ಶಮದ. ೨೯೬ ಪ್ರಯೋ); ತೊರೆಮಾವಿನ ಹಳ್ಳಿ, ದುರ್ಗದ ಶ್ರೀದ್ವಾರದ ಒಳವಾಗಿಲು (ಸುಗುಣ. ೧೨೮-೧). [ಸಂ.]

**ಶ್ರೀಧರ** (ನಾ). ೧. ಲಕ್ಷ್ಮಿಯನ್ನು ಹೊಂದಿರುವವನು ; ವಿಷ್ಣು : "ವಿಷ್ಣುಃ, ಕೃಷ್ಣಃ . . . ಶ್ರೀಧರಃ, ಅಚ್ಯುತಃ, ಉಪೇಂದ್ರಃ . . . ಗದಾಧರಃ — ಈ ೪೫ ನಾರಾಯಣನ ಪೆಸರ್" (ಹಲಾಯು. ೫-೨೪); ಶ್ರೀಧರಂ ಶ್ರೀರಿ(೦)ಶಿಕೇಶಿ ಶ್ರೀಪದುಮನಭಂ ಶ್ರೀದಮೋದರ (ಎಕ. VI, (R) ಕೃಷ್ಣರಾ. ೪೧-೯; 13ನೆಯ ಶತ); ವಿಶ್ವೇಶ್ವರನ ಕಟ್ಟಿದಿರೊಳಿಂದುಮ ಶ್ರೀಧರಂ ನಮಿಸಿದ ತೆಱದೊಳಿರ್ದಹನು (ಬಸವು. ೫೩-೬೭). ೨. ಚಂದ್ರಕಲೆಯನ್ನು ಧರಿಸಿದವನು ; ಶಿವ. ೧, ೨ : ಶ್ರೀಧರನೆಂದು ಶಂಕರನಂ ಮಾಂಕರಿಸಿಯುಂ ಧರಣೀಧರನೆಂದು ಸುರಶೈಳಮಂ ಚಾಳಿಸಿಯುಂ ಶಂಖಚಕ್ರಾನ್ವಿತನೆಂದು ಉದಧಿಯಂ ಕಲಂಕಿಯುಂ . . . ಮಾಣದೆ (ಜಗವಿ. ೯-೫೩ ವ). [ಸಂ.]

**ಶ್ರೀನಂದನ** (ನಾ). ಲಕ್ಷ್ಮಿಯ ಮಗ ; ಮನ್ಮಥ : "ಪ್ರದ್ಯುಮ್ನಃ . . . ಶ್ರೀನಂದನಃ, ಮನೋಭವಃ — ಈ ೨೮ ಕಾಮ(ದೇವ)ನ ಪೆಸರ್" (ಹಲಾಯು. ೭-೩೩). [ಸಂ.]

**ಶ್ರೀನಾಥ** (ನಾ). ೧. ಲಕ್ಷ್ಮಿಯ ಪತಿ ; ವಿಷ್ಣು : ಶ್ರೀನಾಥ ಗದುಗಿನ ವೀರನಾರಾಯಣ (ಪುರಂದ. ೨-೧೯೬-೫). ೨. ಸಂಪತ್ತಿಗೆ ಒಡೆಯನಾದವನು ; ಸಾರ್ವಭೌಮ : ಕನ್ಯಾನೂನೋಚಿತರತ್ನಮಂ ತನಗೆ ಮಾಡಲ್ಕೆಂದು ಬಂದಿರ್ದನೀ ಶ್ರೀನಾಥಂ (ಶಾಂತಿಪು. ೫-೮೧). [ಸಂ.]

**ಶ್ರೀನಾರಿ** (ನಾ). ಲಕ್ಷ್ಮಿ ; ಇಂದಿರೆ.

ಶ್ರೀನಾರೀನಿಳೆಯ = ಶ್ರೀ ಎಂಬ ಸ್ತ್ರೀಗೆ ಆವಾಸಸ್ಥಾನನಾದವನು ; ಒಂದು ಬಿರುದು : ಶ್ರೀನಾ[ರೀ] ನಿಳೆಯಂಶ್ರೀಮಿನಾಂಬರದಿವ್ಯಸ್ಥಾ[ನಾ][ಮೋ]ದಿ ಚೂಡಾಮಣಿ ಮುನಿಪಂ ಧ್ಯಾನಾರೂಢದೆ ನೋಡಿ ತಾನೊಪ್ಪೆ ಕೇವಳಜ್ಞಾನಪ್ರಸಿದ್ಧಮೇಂ ಪ್ರಕಟಿಸಿದ (ಕಇಇ. ೩೮-೫೨-೧; ?). [ಸಂ. ಶ್ರೀನಾರೀ]

**ಶ್ರೀನಾರೀಕಾಂತ** (ನಾ). ೧. ಲಕ್ಷ್ಮೀರಮಣ ; ವಿಷ್ಣು : "ಜ್ಞಾನಂ ಚಾರಿತ್ರಮೋಕ್ಷಾಗಮತತಿ ಯಜನಾಥಾತ್ಮಕಂ ವೇದವಿಪ್ರಂ ಶ್ರೀನಾರೀಕಾಂತಮುಖ್ಯಂ ಸುಲಲಿತ ಪರಮಾತ್ಮೋದರಂ ಬ್ರಹ್ಮಶಬ್ದಂ" (ನಾನಾರ. ೮೦). ೨. ಐಶ್ವರ್ಯಲಕ್ಷ್ಮಿಗೆ ಒಡೆಯನಾದವನು ; ಒಂದು ಬಿರುದು : ಆರೂಢವತ್ಸರಾಜನುದಾರಗುಣಂ ವಿನುತಕಂದುಕಾದಿತ್ಯಂ ಶ್ರೀನಾರೀಕಾನ್ತಂ ನಿರ್ಜ್ಜಿತವೈರಿವ್ರಜನೆನಿಸಿ ಪಿಟ್ಟುಗಂ ಸಲೆ ನೆಗಳ್ದಂ (ಸೌಇಇ. XX, ೧೮-೧೨; 980). [ಸಂ.]

**ಶ್ರೀನಾರೀಪತಿ** (ನಾ). = ಶ್ರೀನಾಥ ೨ : ಶ್ರೀನಾರೀಪತಿ ದೀಕ್ಷೆಯಂ ಕೊಳಲೊಡಂ ಭೋಂಕಲ್ ಮನಃಪರ್ಯಯಜ್ಞಾನಂ ಪುಟ್ಟಿದುದಂತು . . . ಜಗಕ್ಕಾಶ್ಚರ್ಯಮಾಯ್ತಾಶನಾ (ಆದಿಪು. ೧೬-೭೩); ಶ್ರೀನಾರೀಪತಿ ಬಂದಿಸಿ ಮಾನಿತಗಣಧರಯತೀಂದ್ರರಂ . . . ಸಮವಸರಣಮಂ ಪೊಱಮಟ್ಟು (ಶಾಂತಿಪು. ೯-೧). [ಸಂ.]

**ಶ್ರೀನಿಕೇತನ** (ನಾ). ೧. ಲಕ್ಷ್ಮಿಯ ನೆಲೆ, — ಆವಾಸಸ್ಥಾನ. ೨. ಭಂಡಾರ ; ಕೋಶಗೃಹ : ಶ್ರೀನಿಕೇತನಸಂಜಾತ ಕಾಳಮಹಾಕಾಳನೈಸರ್ಪ ಪಾಂಡುಕಪದ್ಮ ಪಿಂಗಳಮಾಣವಕಶಂಖಸರ್ವರತ್ನಂಗಳೆಂಬೊಂಭತ್ತು ನಿಧಿಗಳಿಂದಂ (ಶಾಂತಿಪು. ೧೧-೮೪ ವ). ೩. ಲಕ್ಷ್ಮಿಗೆ ಆವಾಸಸ್ಥಾನನಾದವನು ; ವಿಷ್ಣು. [ಸಂ.]

**ಶ್ರೀನಿಲಯ, ಶ್ರೀನಿಳಯ** (ನಾ). ೧. = ಶ್ರೀನಿಕೇತನ ೧. ೨. [ಜೈನ] ಸೌಧರ್ಮಕಲ್ಪದ ಒಂದು ವಿಮಾನ : ಶ್ರೀವಧೂಚಂಚನತ್ಕಾಂಚನಲೀಲಾಮಂದಿರ ಶ್ರೀನಿಲಯಪೃಥುಲವಕ್ಷಸ್ಥಲಂ ತೀರ್ಥನಾಥಂ (ಅಜಿಪು. ೫-೯೪). **ಶ್ರೀನಿಳಯ** : ೩. ಲಕ್ಷ್ಮಿಗೆ ವಾಸಸ್ಥಾನನಾಗಿರುವವನು ; ಸಂಪತ್ತಿಗೆ ನೆಲೆಯಾದವನು : ದಳತ್ಪದ್ಮದಿಂದಧಿಕಶ್ರೀನಿಳಯಂ ಸುಪುತ್ರನೊಗೆತರ್ಕುಂ ನಿಮ್ಮೊಳುರ್ವೀಶ್ವರಾ (ಪುಷ್ಪಪು. ೩-೧೨೨). [ಸಂ.]

**ಶ್ರೀನಿವಾಸ** (ನಾ). ೧. ಲಕ್ಷ್ಮಿಯ ವಾಸಸ್ಥಾನ, – ನೆಲೆ. ೨. = ಶ್ರೀನಿಕೇತನ ೩: ಶ್ರೀನಿವಾಸ ನೀನೇ ಪಾಲಿಸೋ ಶ್ರಿತಜನಪಾಲ ಗಾನಲೋಲ ಶ್ರೀಮುಕುಂದನೇ (ಪುರಂದ. ೧-೭ ಪಲ್ಲವಿ); ಶ್ರೀವೆಂಕಟಾಚಲನಿವಾಸ ಶ್ರೀನಿವಾಸಚರಣಾರವಿಂದ ಕರುಣಾವಿಧಾಯಕ ಕೈಂಕರ್ಯಧೌರೇಯನುಂ (ಎಕ. III, ಶ್ರೀರಂಗ. ೭೪-೭೫; 1722). [ಸಂ.]

**ಶ್ರೀನಿಸರ್ಗ** (ನಾ). ಅತಿಶಯವಾದ ದಾನವನ್ನು ಮಾಡುವವನು : ವರಮಾರ್ಗ್ಗಂ ಶ್ರೀನಿಸರ್ಗ್ಗಂ ವಿನಯವಿನತಭರ್ಗ್ಗಂ ಜಿತಾರಾತಿವರ್ಗ್ಗಂ ಸ್ಥಿರಕಾರ್ಯ್ಯಂ . . . ಧರೆಗೆಲ್ಲಂ ರಾಚಮಲ್ಲಂ ಕುಡುತವಿರಲೆ ಬಲ್ಲಂ (ಎಇ. XIV, ೨೮೦-೧೩; 1181). [ಸಂ.]

**ಶ್ರೀನಿಳಯ** 'ಶ್ರೀನಿಲಯ' ನೋ.

**ಶ್ರೀನೀಡ** (ನಾ). ಲಕ್ಷ್ಮಿಯ ವಾಸಸ್ಥಾನ : ಶ್ರೀನೀಡಂ ಪುರಮಬ್ಧಿತತ್ವನಯಘೋಷಂ ಕರ್ಣಧಾರಂ ಮಹಾಮಾನಸ್ತಂಭಕುಳಂ ಶಿಳಂ . . . ಆಗೇನೊಪ್ಪಿರ್ಪುವೊ ಪೋಲ್ವು ದಿವ್ಯಜಿನಚೈತ್ಯಂಗಳ್ ಬಹಿತ್ರಂಗಳಂ (ಪುಷ್ಪಪು. ೨-೭೪). [ಸಂ.]

**ಶ್ರೀಪ** (ನಾ). ವಿಷ್ಣು : ಜಕ್ಕಣಾಚಾರ್ಯನಿಂ ಶ್ರೀಪನುತಪದಭಕ್ತ ಮಹಿಮೆಗಳ ನೆಱೆ ಕೇಳ್ದು . . . ಮೆಱೆದನುಱೆ ಪ್ರೌಢಭೂಪಂ (ಪ್ರೌಢರಾ. ೧ ಸೂಚನೆ). [ಸಂ.]

**ಶ್ರೀಪಂಚಮಿ** (ನಾ). ಮಾಘಶುದ್ಧಪಂಚಮಿ : ಅಂತು ಯೌವನಂ ನೆಱೆವಿನಂ ಒಂದುದೆವಸಂ ಶ್ರೀಪಂಚಮಿಯೊಳುಪವಾಸನಿರತೆಯಾಗಿ (ಶಾಂತಿಪು. ೫-೧೮ ವ). [ಸಂ. ಶ್ರೀಪಂಚಮಿ]

**ಶ್ರೀಪತಿ** (ನಾ). ೧. ಲಕ್ಷ್ಮಿಯ ಗಂಡ : ಶ್ರೀಪತಿಯುಂ ಸಕಲಚಕ್ರಿಶ್ರೀಪತಿಯುಮು ಮಾಪತಿಯುಮೆಮಗಮಾದರದಿಂ ಶ್ರೀಪದಮಂ ಸಕಳಚಕ್ರಿಶ್ರೀಪದಮಂ ಪರಮಪದಮನೀಗಭಿವಂದ್ಯರ್ (ಲೋಕೋಪ. ೧-೧); ಶ್ರೀಪತಿಗೆ ಸೊಬಗನುಡುಪತಿಗೆ ಶಾಂತಿಯನು . . . ಕೊಟ್ಟ ಗುರುಮೂರ್ತಿ ಪಂಪಾಪತಿ ವಿರೂಪಾಕ್ಷನೆಮಗಿಷ್ಟಸಿದ್ಧಿಯಂ ಮಾಳ್ಕೆ (ಹಚಕಾ. ೧-೧); ಶ್ರೀಪತಿವಿಭವಂ ಮನಸಿಜರೂಪಂ ದೇವೇಂದ್ರಸೂನು ರಾಮನೃಪಾಲಂ (ಎಕ. IV. ಎಳಂದೂ. ೧-೩೨; 1654). ೨. ಸಂಪತ್ತಿಗೆ ಒಡೆಯನಾದವನು; ರಾಜ : ಶ್ರೀಪತಿಗೆ ಯುದ್ಧಮಲ್ಲಮಹೀಪತಿಗೆ ನೆಗೞ್ತೆ ಪುಟ್ಟೆ ಪುಟ್ಟಿದನಖಿಳಕ್ಷ್ಮಾಪಾಲ ಮೌಳಿಮಣಿ . . . ರಂಜಿತಚರಣಂ (ಪಂಪಭಾ. ೧-೧೮). ೩. [ಜೈನ] ಜಿನ ; ಅರ್ಹಂತ: ಶ್ರೀಪತಿ ಸುರದಾರಕರೊಡನಾ ಪೊತ್ತುಂ ನೆಱೆದು ರತ್ನಧೂಳೀಪಟಲವ್ಯಾಪಿತ ತನುಮೃದುಮುಗ್ಧಾಲಾಪಂ ಬಳೆದಂ ಸರಸ್ವತೀಮಣಿಹಾರಂ (ಆದಿಪು. ೮-೧); ಶ್ರೀಪತಿ ಜಿನಪತಿ ಮದ್ಯಗಿನೀಪುತ್ರಂ . . . ಭಾನುಮತಿಗೆ ವರನೆನೆತೆಱದಿಂ (ಪುಷ್ಪಪು. ೭-೫೩). ೪. [ಛಂದ] ವಿಷ್ಣುಗಣದಲ್ಲಿ ಒಂದು ಬಗೆ; ಆದಿಯಲ್ಲಿ ಒಂದು ಗುರುವೂ ಕಡೆಯಲ್ಲಿ ಎರಡು ಲಘುಗಳೂ ಬರುವ ಅಂಶಗಣ (–UU) : ವಿಷ್ಣುಗಣಮೆಂತೆಂದೊಡೆ : — ೧. ಗೋವಿಂದಂ . . . ೭. ಶ್ರೀಪತಿ. ೮. ಮುರರಿಪು (ಛಂದೋಂಬು. ೫-೨೪೦ ವ). [ಸಂ.]

**ಶ್ರೀಪರ್ಣ** (ನಾ). ೧. ಒಂದು ಬಗೆಯ ಮರ. ೨. ತಾವರೆ ; ಕಮಲ. [ಸಂ.]

**ಶ್ರೀಪರ್ಣಿ** (ನಾ). ೧. ಒಂದು ಬಗೆಯ ಸಸ್ಯ ; ಕುಂಬಳೆಗಿಡ : "ಗಂಭಾರೀ . . . ಶ್ರೀಪರ್ಣೀ, ಭದ್ರಪರ್ಣೀ, ಕಾಶ್ಮರ್ಯಾಃ -೭ ಶಿವನೆಯ ಮರದ ಹೆಸರು. ಕೆಲವರಿದಕ್ಕೆ ಕುಂಬಳೆಗಿಡವೆಂದು ಅರ್ಥ ಹೇಳುವರು" (ಸಿದ್ಧಾಂತಿ. ೧೨೦). ೨. = ಶ್ರೀಪರ್ಣ ೧ : "ಶ್ರೀಪರ್ಣೀ — ನರಿವಾಲ, ಸಿವನ್ನಿದ್ದ್ವಯ, ನರುವಲು, ಬೆಲ್ಲವತ್ತ, ಉತ್ಪಲ" (ಒಷಧಿ. ೧೭೭). [ಸಂ. ಶ್ರೀಪರ್ಣೀ]

**ಶ್ರೀಪರ್ಣಿಕೆ** (ನಾ). = ಶ್ರೀಪರ್ಣ ೧ : "ಶ್ರೀಪರ್ಣಿಕಾ . . . ಕಟ್ಫಲಃ — ೫ ಕಿರಿಯ ಶಿವನೀಮರದ ಹೆಸರುಗಳು" (ಸಿದ್ಧಾಂತಿ. ೧೨೧). [ಸಂ. ಶ್ರೀಪರ್ಣಿಕಾ]

**ಶ್ರೀಪರ್ಬತ** (ನಾ). ತಿರುಪತಿ ಬೆಟ್ಟ : ಇ ದತ್ತಿಯನಳಿದೋಂ ಶ್ರೀಪರ್ಬ್ಬತಮುಂ ವಾರಣಾಸಿಯುಂ ಕವಿಲೆಯುಂ ಬ್ರಾಹ್ಮಣರುಂ ತಪೋಧನರುಮನಳಿದ ಪಞ್ಚಮಹಾಪಾತಕಂ (ಎಕ. IV, ಚಾಮರಾ. ೧೮-೨೧; ಸು. 1000 ?). [< ಸಂ. ಶ್ರೀಪರ್ವತ]

**ಶ್ರೀಪರ್ವತ** (ನಾ). ೧. ಶ್ರೀಶೈಲ: ಮಲ್ಲರಸನೆಂದೊಬ್ಬ ಧರಣೀವಲ್ಲಭಂ . . . ಎಲ್ಲಾ ತ್ಯಜಿಸಿ ತಾಂ ಶ್ರೀಪರ್ವತಕೆ ಹೋಗಿ (ಬಸಪು. ೧೯-೨೦). ೨. ತಿರುಪತಿ ಬೆಟ್ಟ : (೬). [ಸಂ.]

**ಶ್ರೀಪಾದ** (ನಾ). ೧. ಮಂಗಳಕರವಾದ ಚರಣ, — ಪಾದ : ನಿಮ್ಮ ಶ್ರೀಪಾದವ ಮುಟ್ಟಿ ಎನ್ನ ಕರ್ಮ ಹಱಿಯಿತು (ಬಸವ. ೭೯೩); ಶ್ರೀಪಾದಮಂ ತೊಳೆದು ಪಾದೋದಕಮಂ ತಳೆದು (ನಂಬಿರ. ೮-೩೧). ೨. ಗುರುಹಿರಿಯರನ್ನು ಸಂಬೋಧಿಸುವಾಗ ಬಳಸುವ ಗೌರವಸೂಚಕಶಬ್ದ : ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರಿಂದ ವಟು ಲಕ್ಷ್ಮೀನಾರಾಯಣನಿಗೆ ಬ್ರಹ್ಮೋಪದೇಶವಾಯಿತು (ಕಭವಿ. ೩೨೫). [ಸಂ.]

**ಶ್ರೀಪಿಷ್ಟ** (ನಾ). ದೇವದಾರುವೃಕ್ಷದ ಅಂಟು ; ಗುಗ್ಗುಳ : "ಶ್ರೀಪಿಷ್ಟ — ಧೂಪ" (ಗಂಗಾಮ. ೩೧೧). [ಸಂ.]

**ಶ್ರೀಪುರುಷ** (ನಾ). ಒಬ್ಬಾತನ ಹೆಸರು ; IP ಗಂಗವಂಶದ ಒಬ್ಬ ರಾಜ : ಸ್ವಸ್ತಿಶ್ರೀ ಶ್ರೀಪುರುಷ ಪ್ರಿಥಿವೀರಾಜ್ಯಗೆಯೆ ವೈಳಕಟ್ಟೂಡರ ತಟ್ಟೆಯೂರಾಳ ಆವುಕ್ಕ ಇಯುರೆ (ಎಕ. IV, ಗುಂಡ್ಲುಪೇ. ೮೬-೧; ಸು. 750). [ಸಂ.]

**ಶ್ರೀಫಲ, ಶ್ರೀಫಳ** (ನಾ). ೧. ಒಂದು ಬಗೆಯ ಮರ ; ಬಿಲ್ವಪತ್ರೆ : ಇರ್ದುದು . . . ಆತನ ಸುಕೃತದ ಬೀಜಂ ಪೂತ ಶ್ರೀಫಲ ಸುವರ್ಣಕಾದ್ರಿನಿವಾಸಂ (ಹಮ್ಮೀರ. ೮-೩೦). ೨. ಬಿಲ್ವದ ಕಾಯಿ : ಶ್ರೀಫಲಪಯೋಧರೆಯೆ ಕೇಳು (ನವಮೋ. ೩-೧೭). **ಶ್ರೀಫಳ** : ೨. ಶ್ರೀಫಲೋದ್ವೃತ್ತಳಂ ಬಂಧುರಗೋಲಾಂಗೂಲಮಂ ಕೊರ್ವಿಸೆ ಸೊಗಯಿಪುದೀ ಕಾನನೋದ್ದೇಶಂ (ಪುಷ್ಪಪು. ೫-೭೯). [ಸಂ.]

**ಶ್ರೀಫಲಿ** (ನಾ). ೧. ನೀಲಿಯ ಗಿಡ : "ನೀಲೀ . . . ರಂಜನೀ, ಶ್ರೀಫಲೀ . . . ದೋಲಾ, ನೀಲಿನೀ — ೧೧ ನೀಲೀಗಿಡದ ಹೆಸರುಗಳು" (ಸಿದ್ಧಾಂತಿ. ೧೩೬). ೨. ನೆಲ್ಲಿಮರ : "ಶ್ರೀಫಲೀ — ನೆಲ್ಲಿ" (ಒಷಧಿ. ೧೭೭). [ಸಂ. ಶ್ರೀಫಲೀ]

**ಶ್ರೀಫಳ** 'ಶ್ರೀಫಲ' ನೋ.

**ಶ್ರೀಬಳ್ಳಿ** (ನಾ). ಶ್ರೀಕಾರವನ್ನು ಬರೆದು ಬಳಿಕ ಬರೆಯುವ ವರ್ಣಗಳು ಮತ್ತು ಅವುಗಳ ಕಾಗುಣಿತ : ಅಕ್ಷರಾರಂಭಕಾಲದಲ್ಲಿ ಅಂಥಾ ಮಂಗಳಾಚರಣರೂಪವಾದ 'ಶ್ರೀಬಳ್ಳಿ' 'ಓಬಳ್ಳಿ' ಎಂಬ ವರ್ಣಮಾಲೆಗಳು (ಬಳ್ಳಿಗಳು) ನೆಲೆಗೊಂಡವು (ಕನ್ನಇ. ೧೨೪). 'ಕಾಬಳ್ಳಿ' ಪರಾ. [ಶ್ರೀ + ಬಳ್ಳಿ]

**ಶ್ರೀಮಂತ$_1$** (ನಾ). ಚೊಚ್ಚಿಲ ಗರ್ಭಿಣಿಸ್ತ್ರೀಗೆ ಮಾಡುವ ಒಂದು ಸಂಸ್ಕಾರ; ಸೀಮಂತ : ಆಕೆ ಗರ್ಭಿಣಿಯಿದ್ದಾಗ ಮಾಡಿದ 'ಶ್ರೀಮಂತ'ವೂ ಮಧುರವಾಗಿದ್ದು ಈಗ ಅಳಿಸಿಹೋಗುತ್ತಿರುವ ಪರಂಪರೆಯ ಸವಿನೆನಪನ್ನು ತಂದುಕೊಡುತ್ತವೆ (ಸಮಜೀ. ೭ ಪೀಠಿಕೆ). [< ಸಂ. ಸೀಮಂತ]

**ಶ್ರೀಮಂತ$_2$** (ನಾ). ೧. ಸಂಪತ್ತಿನಿಂದ ಕೂಡಿದುದು ; ಐಶ್ವರ್ಯದಿಂದ ಕೂಡಿದುದು. ೨. ಸಂಪತ್ತುಳ್ಳವನು ; ಹಣವಂತ ; ಧನಿಕ : ಗೋಮಿನೀಪತಿ

ಗೋಬ್ರಾಹ್ಮಣರಕ್ಷಣ ಶ್ರೀಮಂತ ಸಲಹೆನ್ನನೊಲಿದು (ಶತಸಾಂ. ೬೨-೯). ೩. (ಆಲಂ) ಪರಿಪೂರ್ಣವಾದುದು : ಅಂತರಿಕಜೀವನವೆಲ್ಲ ಹೀಗೆ ಶ್ರೀಮಂತವಾದಂತೆ ಸ್ವಾಮಿದಾಸರಲ್ಲಿ ಇನ್ನೊಂದು ವಿಕಾಸವು ಕಾಣಿಸಿಕೊಂಡಿತು (ಸಮಜೀ. ೧೦೨೦); ವೈಯಕ್ತಿಕ ಮಿತಿಯನ್ನು ದಾಟಿದಾಗ ಮಾತ್ರ ಕೇಶವನ ಅಂತರಂಗ ಅನೇಕಪ್ರಜ್ಞೆಗಳಿಂದ ಶ್ರೀಮಂತವಾಗಿದೆ (ಹೊಸಕ್ಕ. ೨೯೬). [ಸಂ. ಶ್ರೀಮತ್]

**ಶ್ರೀಮಂತಿಕೆ** (ನಾ). ೧. ಸಂಪತ್ತು ; ಸಿರಿವಂತಿಕೆ : ಹೀರ ಶ್ರೀಮಂತಿಕೆಯಿಂದಲ್ಲದಿದ್ದರೂ . . . ಸಂಸ್ಕೃತಿಪಂತರು ಎನಿಸಿಕೊಂಡವರಿಗೆ 'ಎವರ್‌ಗ್ರೀನ್'ನಲ್ಲಿ . . . 'ಡಿನ್ನರಿದೆ' ಎಂದರೆ ಅದೊಂದು ಗೌರವದ ಸಂದರ್ಭ (ಒಂಟಿದ. ೧). ೨. (ಆಲಂ) ಘನತೆ ; ಗೌರವ : ಇಂತಹ ಗ್ರಂಥಗಳಿಂದ ನಮ್ಮ ಶಾಸ್ತ್ರಸಾಹಿತ್ಯದ ಶ್ರೀಮಂತಿಕೆ ನಿಜವಾಗಿಯೂ ಹೆಚ್ಚುತ್ತದೆಂದು ನನ್ನ ಭಾವನೆ (ಸಂಶೋಧ. ೨೩೩). [ಶ್ರೀಮಂತ + - ಇಕೆ]

**ಶ್ರೀಮಜ್ಜನ** (ನಾ). ೧. ಮಂಗಳಕರವಾದ ಸ್ನಾನ. ೨. ಗೌರವಾನ್ವಿತ ಜನ. ೧, ೨ : ಶ್ರೀಮಜ್ಜನಲಲಿತಂ ಸುಮನೋಮಾಳಾರಂಮ್ಯವುದ್ಯವಸ್ತು ಬ್ರಜಶೋಭಾಮಂಡನ ವೆಣೆಯೆನಿಪುದು ಭೂಮಹಿಳೆಯ ಕುಂತಳಕ್ಕೆ ಕುಂತಳದೇಶಂ (ಎಇ. XV, ೩೪-೮; 1189). [ಸಂ. (ಶ್ರೀ + ಮಜ್ಜನ ; ಶ್ರೀಮತ್ + ಜನ)]

**ಶ್ರೀಮತಿ** (ನಾ). ೧. ಸಂಪತ್ತನ್ನುಳ್ಳವಳು ; ಐಶ್ವರ್ಯವುಳ್ಳವಳು. ೨. ಹೆಂಗಸರನ್ನು ಸಂಬೋಧಿಸುವಾಗ ಬಳಸುವ ಒಂದು ಗೌರವಸೂಚಕ ಪದ: ಶ್ರೀಮತಿ ವಿಶಾಲಾಕ್ಷಿಯವರು ಅನೇಕ ಕಾದಂಬರಿಗಳನ್ನು ಬರೆದಿದ್ದಾರೆ (ರೂಢಿ). ೩. ಹೆಂಡತಿ : ನನ್ನ ಶ್ರೀಮತಿ ಮನೆಯಲ್ಲಿ ಇಲ್ಲ (ರೂಢಿ). [ಸಂ. ಶ್ರೀಮತೀ]

**ಶ್ರೀಮತು** (ಗು). ೧. ಸಂಪತ್ತುಳ್ಳ ; ಶ್ರೀಮಂತವಾದ. (ನಾ). ೨. 'ಗೌರವಾನ್ವಿತನಾದ' ಎಂಬರ್ಥದಲ್ಲಿ ಬಳಸುವ ಪದ : ಸ್ವಸ್ತಿಶ್ರೀಮತು ಆಳುಅರಸರ್ ಗುಣಸಾಗರಾದ್ವಿತೀಯನಾಮಧೇಯನ್ ಕದಮ್ಬುಮಣ್ಡಲಮನಾಳುತ್ತುಂ . . . ಕಿಟ್ಟೂನ ದೇವಕೆ ಎಲ್ಲಮಾನ್ಸರ್ವಪರಿಹಾರಂ ಬಿಟ್ಟ (ಎಕ. VI, ಕೊಪ್ಪ. ೩೮-೧; ಸು. 675 ?); ಪಶ್ಚಿಮರಾಯ ಭೋಜದೇವ ದಿಸಾಪಟ್ಟ ಶ್ರೀಮತು ಪ್ರತಾಪಚಕ್ರವರ್ತಿ ಸಿಂಗಣದೇವ ದಕ್ಷಿಣಭುಜಾದಂಡನಾಯಕ (ಎಇ. XXX, ೯-೬; 1220). [ಸಂ. ಶ್ರೀಮತ್]

**ಶ್ರೀಮಾನಿನಿ** (ನಾ). ೧. ಗೌರವಾನ್ವಿತ ಹೆಂಗಸು : ವ್ಯೋಮಾದಿ ಜಲಾಂತಂ ತಾಮಾಗೆ ನಿತಾಂತಂ ಶ್ರೀಮಾನಿನಿ ಕೇಳಾ ನಾಮಂ ತನುಮಧ್ಯಂ (ಛಂದೋಂಬು. ೨-೭೮). ೨. ಲಕ್ಷ್ಮಿ. [ಸಂ. ಶ್ರೀಮಾನಿನೀ]

**ಶ್ರೀಮುಂಜ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬಾಲಾದಿತ್ಯರಾಳು ಶ್ರೀಮುಞ್ಜ ನೆಮ್ಮೊನ್ನೀಲಸಿನ್ದಮನಸಿಜರಾನಿಱಿದು ಪಿಡಿದು ತಾನ್ಸೊನ್ದಿದಾನ್ (ಮೈಆರಿ. ೧೯೪೧, ೨-೨; ಸು. 8ನೆಯ ಶತ). [?]

**ಶ್ರೀಮುಖ** (ನಾ). ೧. ಸುಂದರವಾದ ಮುಖ : ಅದು-ಎಂತಹ ಗಡ್ಡವನ್ನಾದರೂ ಒಲ್ಲೆನೆಂದು ಆಕ್ಷೇಪಿಸಿ ದಂಗೆಯೇಳುವ ಶ್ರೀಮುಖವಹುದು (ಮಂತ್ರಶ. ೯೧-೧). ೨. ಬರಹದ ರೂಪದಲ್ಲಿರುವ ರಾಜಾಜ್ಞೆ ಮುಂತಾದುವು ; ನಿರೂಪ : ಈಶನೀ ಪಲ್ಲಕ್ಕಿಯಂ ಕಳುಹಿದಂ ನೀಂ ಸುಖಾಸೀನನಾಗೇಳು . . . ಎಂದೆನುತ್ತಿತ್ತ ಶ್ರೀಮುಖವನು ಶ್ರೀಶಿರದೊಳಾಂತು (ರಾಘಚ. ೧೪-೮೧); ಪೋಪರು ಮಹಾಖಾನನಿಗೆ ಒಂದು ಶ್ರೀಮುಖವನ್ನು ಬರೆಸಿಕೊಟ್ಟುದಲ್ಲದೆ . . . ಬೆಲೆಯಾದ ಬಹುಮಾನಗಳನ್ನೂ ಕಳುಹಿಸಿಕೊಟ್ಟರು (ಪ್ರವಾಇ. II, ೬). ೩. ಅರುವತ್ತು ಸಂವತ್ಸರಗಳಲ್ಲಿ ಏಳನೆಯದು: ಶ್ರೀಮುಖಸಂವತ್ಸರದ ಮಾರ್ಗಶಿರ ಸು ೧೦ (ಎಕ. IX, ನೆಲಮಂ. ೯-೨; 1333); ಆ ವರ್ಷವೇ ಪ್ರಭವ ವಿಭವ ಶುಕ್ಲ ಪ್ರಮಾದೂತಂ ಪ್ರಜೋತ್ಪತ್ತಿ ಆಂಗೀರಸ ಶ್ರೀಮುಖ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೨೬೩). [ಸಂ.]

**ಶ್ರೀಮುದ್ರೆ** (ನಾ). ೧. ವಿಷ್ಣುವಿನ ಶಂಖ, ಚಕ್ರ, ಗದೆ, ಪದ್ಮ ಮೊದಲಾದ ಲಾಂಛನ : ಹರಿಯ ದಾಸರು ಎನ್ನ ಬಂಧುಬಳಗಾದರು ಹರಿಯ ಶ್ರೀಮುದ್ರೆ ಆಭರಣವಾಯಿತು (ಕನಕ. ೯೭-೧). ೨. [ದ್ವೈತ] ವೈಷ್ಣವರ ಲಾಂಛನವಾದ ಶಂಖ, ಚಕ್ರ, ಗದೆ, ಪದ್ಮ ಮೊದಲಾದವುಗಳ ಗುರುತುಳ್ಳ (ಲೋಹದ) ಸಾಧನ ಮತ್ತು ಆ ಸಾಧನದಿಂದ ದೇಹದ ಮೇಲೆ ಧರಿಸುವ ಗುರುತು : (೬). [ಸಂ. ಶ್ರೀಮುದ್ರಾ]

**ಶ್ರೀಮುದ್ರೆಗಿಡ** (ನಾ). ಒಂದು ಬಗೆಯ ಗಿಡ : ಶ್ರೀಮುದ್ರೆಗಿಡ, ತುತ್ತಿ, ಕಿಸಂಗಿ, ತುರುಬೀಗಿಡ, ಗಿಡುತಿಂಗಿ (ಮೃಡಿಗಿ. ೧-೬). [ಶ್ರೀ + ಮುದ್ರೆ + ಗಿಡ (< ಗಿಡು)]

**ಶ್ರೀಯಮ್ಮ** (ನಾ). ಒಬ್ಬಾತನ ಹೆಸರು : ತೊಣ್ಣನ್ನರ ಮಗನುಂ ಪೊರಿಗೊಣ್ಣೆನ್ನಮ್ಮಗನುಂ ಶ್ರೀಯಮ್ಮನೆ[ಮ್ಮೊ] XX ಮ್ಬೆಸರ್ ಅರಿಧೀರನೆ [ಮ್ಮೊ] ದ XXX (ಸೌಇ. XX, ೧೦-೩; 8ನೆಯ ಶತ). [ಶ್ರೀ + ಅಮ್ಮ]

**ಶ್ರೀಯಾಣ್ಮ** (ನಾ). ಲಕ್ಷ್ಮೀಪತಿ ; ವಿಷ್ಣು : ಮೃದು ಮಧುರವಹ ಮಹಾಸ್ತೋತ್ರದಿಂದೆ ಪೊಗಳುವೆ ಶ್ರೀಯಾಣ್ಮನ (ವೀಶೈಪು. ೩-೬-೨೬). [ಶ್ರೀ + ಆಣ್ಮ (< ಆಳ್ಮ)]

**ಶ್ರೀಯುತ** (ಗು). ೧. ಸಂಪತ್ತಿನಿಂದ ಕೂಡಿದ. (ನಾ). ೨. ಐಶ್ವರ್ಯವಂತ : ಶ್ರೀಯುತನೊಳುದಾರತೆ ವಾಕ್ಶ್ರೀಯುತನೊಳಮತ್ಸರತ್ವಮಾಗದುದಾರಂ ಶ್ರೀಯುತ ನಮತ್ಸರಂ ವಾಕ್ಶ್ರೀಯುತನಾದೊಡೆ ಕೃತಾರ್ಥರಾಗರೆ ಕವಿಗಳ್ (ಗದಾಯು. ೧-೪೯). ೩. ದೇವರು, ಪೂಜ್ಯವ್ಯಕ್ತಿ ಮುಂತಾದವರ ಹೆಸರಿನ ಹಿಂದೆ ಸೇರುವ ಒಂದು ಗೌರವಸೂಚಕಪದ : ಶ್ರೀಯುತ ಶಾಂತಿವರ್ಮ ಪೆಱರಾಪ್ಪು ವಿಚಾರಿ ಪೊಡಂಥವರ್ತಕನ್ಯಾಯಮೆ (ಪುಷ್ಪಪು. ೧-೭೮). [ಸಂ.]

**ಶ್ರೀರಂಗ** (ನಾ). ೧. ವಿಷ್ಣುವಿನ ಹೆಸರುಗಳಲ್ಲಿ ಒಂದು : ಲೋಕವ ಕಾಯ್ದ ಪತ್ತವತಾರ ಶ್ರೀರಂಗ (ಶತಸಾಂ. ೧೪-೭೭). ೨. ದಕ್ಷಿಣಭಾರತದ ತಮಿಳುನಾಡಿನಲ್ಲಿರುವ ಪ್ರಸಿದ್ಧವಾದ ಒಂದು ವೈಷ್ಣವಕ್ಷೇತ್ರ : ಶ್ರೀರಂಗ, ಶ್ರೀಮುಷ್ಣ, ಕುಂಭಕೋಣ, ಮನ್ನಾರುಗುಡಿ ಮುಂತಾದ ಅನೇಕ ವಿಷ್ಣುಕ್ಷೇತ್ರಗಳಿರುವುದು (ಮಹಾಪಂ. I, ೧೭೯). ೩. ಕರ್ನಾಟಕದ ಮೈಸೂರುಜಿಲ್ಲೆಯಲ್ಲಿ ಇರುವ (ಇತಿಹಾಸ)ಪ್ರಸಿದ್ಧವಾದ ಒಂದು ವೈಷ್ಣವಕ್ಷೇತ್ರ ; ಶ್ರೀರಂಗಪಟ್ಟಣ : ಶ್ರೀರಂಗದ ಕಂದಾಡಿ ಅಂಣನವರ ಶಿಶ್ಯರಾದ ವೇದಾಂತಿ ರಾಮಾನುಜ ಜೀಯವರಿಗೆ ನಮಸ್ಕರಿಸಿ ಸಮರ್ಪಿಸಿದೆವು (ಎಕ. VI (R), ಪಾಂಡವ. ೧೩೦-೮; 1544). [ಸಂ.]

**ಶ್ರೀರಂಜನಿ** (ನಾ). [ಸಂಗೀತ] ಒಂದು ರಾಗದ ಹೆಸರು : ಶ್ರೀರಂಜನಿಯು . . . ಎಲ್ಲ ಕಾಲಗಳಲ್ಲಿಯೂ ಹಾಡುವಂತಹುದು (ಚತುಪ್ರ. ೧೩೮). [ಸಂ. ಶ್ರೀರಂಜನೀ]

**ಶ್ರೀರಮಣ** (ನಾ). ೧. ಲಕ್ಷ್ಮಿಗೆ ಒಡೆಯನಾದವನು ; ವಿಷ್ಣು : ಶ್ರೀರಮಣ ವಿಬುಧಪತಿ ವಾರಿಜಭವಾದಿ ವೃಂದಾರಕಪ್ರಚಯ . . . ಪಾಲಿಪುದೆನಗೆ ಚಾರುಮತಿಯಂ (ಕಬ್ಬಿಗ. ೧). ೨. ಕೃಷ್ಣ : ಶ್ರೀರಮಣಂ ಪುಟ್ಟಿರೆ ಕೋಟೀರಾದ್ಯಾಭರಣಚಕ್ರ ಮುಖ್ಯಾಯುಧನಾನಾರಶ್ಮಿಯನು ವಿಜ್ಯಂಭಿಸೆ ರಾರಾಜಿಸಿದತ್ತು ಕೌಸ್ತುಭಂ ಪೇರುರದೊಳ್ (ಜಗವಿ. ೩-೧). ೩. ಸಂಪತ್ತಿನ ಒಡೆಯ ; ಚಕ್ರವರ್ತಿ : ಶ್ರೀರಮಣನೆಱಗಿ ಮುಕ್ತಿಶ್ರೀರಮಣನ ಪಾದಪೀಠದೊಳ್ ಸುರಸಭೆ ಕಣ್ಣಾರೆ ನಡೆನೋಡೆ ಮದನಾಕಾರಂ ತಳರ್ದಂ ಸರಸ್ವತೀಮಣಿಹಾರಂ (ಆದಿಪು. ೧೪-೧). [ಸಂ.]

**ಶ್ರೀರಮಣಿ** (ನಾ). ಸಂಪತ್ತಿನ ಅಧಿದೇವತೆ ; ಲಕ್ಷ್ಮಿ : ಶ್ರೀರಮಣಿಯಂ ದ್ವಿಷದ್ಬಳಪಾರಾವಾರದೊಳುದಗ್ರ ಭುಜವಿಜಯಮಹಾಮೇರು[ವಿ]ನೆ ಕಡೆದು ಪಡೆದಳವಾರುಮನಿಱಿಸಿದುದುದಾತ್ತನಾರಾಯಣನಾ (ಪಂಪಭಾ. ೪-೧); ಶ್ರೀರಮಣಿಗೆ ನೆಲೆ ತನ್ನಯ ಪೇರುರಮಂ ಮಾಟ್ಪೆನೆಂಬ ಬಗೆ ಮಿಗೆ . . . ಪೊಣ್ದಿರ್ದಂ ಕೌರವಕುಲವಿಲಯಕೇತು ಸಾಹಸಭೀಮಂ (ಗದಾಯು. ೮-೧). [ಸಂ. ಶ್ರೀರಮಣೀ]

**ಶ್ರೀರಾಗ** (ನಾ). ೧. ಅತಿಶಯವಾದ ಸಂತೋಷ, — ಆನಂದ : ಶ್ರೀರಾಗಂ ಮೆಲ್ಲೆರ್ದೆಗಂ ಶ್ರೀರಾಗಮನೀಯೆ ಪಾಡಿದರ್ ಶಶಿಮುಖಿಯರ್ (ಉದ್ಭಟ. ೩-೧). ೨. [ಸಂಗೀತ] ಒಂದು ರಾಗದ ಹೆಸರು : ಮಧುಮಾಧವಿ ಶಂಕರಾಭರಣ . . . ಶ್ರೀರಾಗ ಸಾಳಗ . . . ಕರ್ನಾಟಕಬಂಗಾಳಮೆಂಬಿಪ್ಪತ್ತೇ ರಾಗಾಂಗದಿಂದಾದ ರಾಗಂಗಳು (ವಿವೇಕ. ೧೮೮). [ಸಂ.]

**ಶ್ರೀರಾಮಟಂಕೀವರಹ** (ನಾ). ಶ್ರೀರಾಮನ ಪಟ್ಟಾಭಿಷೇಕದ ಚಿತ್ರವಿರುವ ಒಂದು ಚಿನ್ನದ ನಾಣ್ಯ : ಶ್ರೀರಾಮಟಂಕೀವರಹಾ ಮುಂತಾದ ವಳಯ ನಾಣ್ಯ ಸುಂದರ (ಕುಚೇಲೋ. ೧೩೪). [ಶ್ರೀರಾಮ + < ಟಂಕ + ವರಹ]

**ಶ್ರೀರಾಮೆ** (ನಾ). = ಶ್ರೀರಮಣಿ : "ಶ್ರೀರಾಮೆ ಲಕ್ಷ್ಮೀಗೋಮಿನಿ ವಾರಿರುಹಾವಸಥೆ . . . ದನುಜಾರಿಪ್ರಿಯೆಯೆಂದಿವಿಂದಿರಾನಾಮಂಗಳ್" (ವಸ್ತುಕೋ. ೫-೨೬). [ಸಂ. ಶ್ರೀರಾಮಾ]

**ಶ್ರೀರುದ್ರ** (ನಾ). ೧. (ವಿಶೇಷವಾಗಿ ರುದ್ರಾಭಿಷೇಕಸಮಯದಲ್ಲಿ) ರುದ್ರನನ್ನು ಕುರಿತು ಹೇಳುವ ವೇದಮಂತ್ರ : ರಸಿಕದಿಂ ಶ್ರೀರುದ್ರವಂ ಪಠಿಯಿಸುತ ಮನೆಗೆಯ್ತರಲು (ಬಸವು. ೫೩-೩೯). ೨. ಉಪನಿಷತ್ತುಗಳಲ್ಲಿ ಒಂದು : ಶ್ರೀರುದ್ರ ಬೃಹದಾರಣ್ಯಕ . . . ಎಂಬಿವು ಮೊದಲಾದವೇ ಉಪನಿಷತ್ತುಗಳು (ವಿವೇಕ. ೪). **[ಸಂ.]**

**ಶ್ರೀಲ** (ಗು). ೧. ಪ್ರಸಿದ್ಧವಾದ ; ಪ್ರಖ್ಯಾತವಾದ : ತಿರುವಲಿನಾಚಿಯಿಂದ ಜ್ಞಾನವು ಪುಟ್ಟ ಶ್ರೀಲಸೋಮೇಶನಿಂದುಪದೇಶಮಂ ಪಡೆದವಂ ವೀರಶೈವನಾದಂ (ಪ್ರಭುರಾ. ೭-೨೦). (ನಾ). ೨. ಹಣವಂತ ; ಧನಿಕ : "ಲಕ್ಷ್ಮೀವಾನ್, ಲಕ್ಷ್ಮಣಃ, ಶ್ರೀಲಃ, ಶ್ರೀಮಾನ್ — ೪ ಸಂಪತ್ತುಳ್ಳವನ ಹೆಸರುಗಳು" (ಸಿದ್ಧಾಂತಿ. ೩೨೭). **[ಸಂ.]**

**ಶ್ರೀವಚ್ಛ** (ನಾ). ೧. ಶ್ರೀವತ್ಸ; ವಿಷ್ಣು : ಶ್ರೀವಚ್ಛಂ ಸಿರಿಯಿಂ ಸಮೃದ್ಧನೆಸೆವಾ ನಾಗಾಂಬಿಕಾಸೂನು ಭೋಗಾವಾಸಂ ವಸುಧೈಕಬಾಂಧವನುದಾರಂ (ಎಕ. VII, ಶಿಕಾ. ೧೯೭-೩೭; 1182 ?). 'ಸಿರಿವಚ್ಚ' ಹೋ. [< ಸಂ. ಶ್ರೀವತ್ಸ]

**ಶ್ರೀವತ್ಸ** (ನಾ). ೧. ಎದೆಯ ಮೇಲೆ ಕಪ್ಪುಮಚ್ಚೆಯುಳ್ಳವನು ; ವಿಷ್ಣು : ಭವದೀಯ ಮನೋಹರಬಾಲ್ಯವಿನೋದಾಮೃತದೊಳೆಯ್ದೆ ತೀವಿದ ಮತ್ಸ್ವಾಂತವನಿಂತೀ ವಿಷದಿಂ ತೀವುವುದೇ ಶ್ರೀವತ್ಸವತ್ಸವತ್ಸಸವತ್ಸಾ (ಜಗವಿ. ೩-೯೨). ೨. ವಿಷ್ಣುವಿನ ಎದೆಯ ಮೇಲಿರುವ ಕಪ್ಪು ಮಚ್ಚೆ : ಶ್ರೀವತ್ಸಂ ಕೌಸ್ತುಭಂ ಪೇರುರದೊಳೆಸೆದಿರೆ ಕಂಬು ಚಕ್ರಂ ಗದಾ ರಾಜೀವಂ ಹಸ್ತಂಗಳೊಳ್ ತಳ್ತಿರೆ . . . ಸುರವಿಜಯಿಯಂ ತೋಱಿದಂ ಜಾಲಗಾಱಂ (ದಶಕು. ೭-೧೩೭). **[ಸಂ.]**

**ಶ್ರೀವತ್ಸಕಿ** (ನಾ). ಕೊರಳಿನಲ್ಲಿ ಶುಭಸೂಚಕವಾದ ದೇವಮಣಿಯೆಂಬ ಹೆಸರಿನ ಸುಳಿಯಿರುವ ಕುದುರೆ : "ಆ ದೇವಮಣಿಯೆಂಬ ಕುಱುಹಿರಲದುಂ ಶ್ರೀವತ್ಸಕಿಯೆನಿಕ್ಕು" (ಮಂಗರಾ. ೮೨-೧೫). **[ಸಂ. ಶ್ರೀವತ್ಸಕಿನ್]**

**ಶ್ರೀವತ್ಸಲಾಂಛನ** (ನಾ). = ಶ್ರೀವತ್ಸ ೧: ಜಯಮಂಗಲಂ . . . ಶ್ರೀವತ್ಸಲಾಂಛನಗೆ ಸಿರಿದೇವಿಯರಸನಿಗೆ (ಪುರಂದ. ೩-೨೨೦-೨). **[ಸಂ.]**

**ಶ್ರೀವನಿತೆ** (ನಾ). ಐಶ್ವರ್ಯದ ಅಧಿದೇವತೆ ; ಲಕ್ಷ್ಮಿ : ಶ್ರೀವನಿತಾಪ್ರಸವದಿನಾ ಲಾವಣ್ಯದಿನತಿಗಭೀರಭಾವದೆ ನೀನಿಂತಾ ವಾರಿಧಿಯಂ ಪೋಲ್ತೆ (ಕವಿರಾ. ೩-೪೦); ಶ್ರೀವನಿತೆಗೆ ನಿಜವಿಜಯಶ್ರೀವನಿತೆಯ ಸವತಿಯಾಗೆ ರಿಪುನೃಪರಂ ಶೌರ್ಯಾವಷ್ಟಂಭದೆ ಗೆಲ್ದ (ಗದಾಯು. ೪-೧); ಶ್ರೀವನಿತೆಯರಸನೆ ವಿಮಲರಾಜೀವಪೀಠನ ಪಿತನೆ ಜಗಕತಿಪಾವನನೆ . . . ಕಾವುದಾನತಜನವ (ಕುಮ್ಮಾರ. ೧-೧). **[ಸಂ. ಶ್ರೀವನಿತಾ]**

**ಶ್ರೀವರ** (ಗು). ೧. ಚೆಲುವಾದ ; ಸುಂದರವಾದ : ಶ್ರೀವರ ಸಲ್ಲಕೀವನದ ಪಲ್ಲವಮಂ ನಲವಿಂದೆ ಮೇದು . . . ಕುಂಜಾವಳಿಯೊಳ್ ವಿಹಾರಿಸಿ ವಿರಾಜಿಸುತ್ತಿರ್ಪುದು ಗಂಧಸಿಂಧುರಂ (ಪಾರ್ಶ್ವಪು. ೪-೧೧೨). (ನಾ). ೨. ಐಶ್ವರ್ಯಕ್ಕೆ ಒಡೆಯನಾದವನು; ಚಕ್ರವರ್ತಿ : ಶ್ರೀವರ ವಿದ್ಯಾಧರಜನತಾವಿಭು ನಿಜಸುತೆಗೆ ಸಮನಿಪತಿಶಯಭಾಗ್ಯಕ್ಕಾವಗಮೊಸೆದಂ ಮನದೊಳ್ (ವರ್ಧಪು. ೪-೧). ೩. ಲಕ್ಷ್ಮಿಯ ಪತಿ ; ವಿಷ್ಣು : ಶ್ರೀವರನೊಡನೆಯೆ ವನಜಳದೇವತೆಗಳ್ ಬರ್ಪುವೆನಿಸಿ ತನ್ನೊಡವರೆ ಮಾದೇವಿಯರಿನೆಸೆದನೋ ಧೃತಲಾವಣ್ಯರಸಂ ಸರಸ್ವತೀಮಣಿಹಾರಂ (ಆದಿಪು. ೧೨-೧); ಶ್ರೀವರಂ ನಿನ್ನ ತಪಕ್ಕೆ ಮೆಚ್ಚಿ ವರವಿತ್ತಂ (ಜಗವಿ. ೨-೬೯). ೪. ಕೃಷ್ಣ : ಶ್ರೀವರಂ ನಸುನಗೆಯೊಳಾಗಳಱಿದಂದದಿಂದಾವಾಗ ಬಂದನನಿಲಜನಿತ್ತ ಕರೆ . . . ಎನೆ (ಜೈಮಿಭಾ. ೭-೫೪). **[ಸಂ.]**

**ಶ್ರೀವಲ್ಲಿ** (ನಾ). ಒಂದು ಬಗೆಯ ಸಸ್ಯ : "ಕಟುಫಲಾ — ಶ್ರೀವಲ್ಲಿ" (ಓಷಧಿ. ೨೩).
**[ಸಂ. ಶ್ರೀವಲ್ಲೀ]**

**ಶ್ರೀವಾಸ** (ನಾ). ೧. ವಿಷ್ಣು. ೨. ಶಿವ. ೩. ಕಮಲ. ೪. ಒಂದು ಬಗೆಯ ಸುಗಂಧದ್ರವ್ಯ ; ಗುಗ್ಗುಳ : "ಪಾಯಸಃ, ಶ್ರೀವಾಸಃ, ವೃಕ್ಷಧೂಪಃ, ಶ್ರೀವೇಷ್ಟಃ, ಸರಳದ್ರವಃ — ೫ ಸರಳ ದೇವದಾರುವೃಕ್ಷದ ಬೊಂಕೆ, ರಾಳದ ಬೊಂಕೆ" (ಸಿದ್ಧಾಂತಿ. ೨೦೮). **[ಸಂ.]**

**ಶ್ರೀವಿಲಾಸ** (ನಾ). ಕಾಂತಿಯಿಂದೊಡಗೂಡಿದ ಸೌಂದರ್ಯವನ್ನುಳ್ಳುದು : ಸರಸಿರುಹಮಿಂದುದೀಧಿತಿಪರಾಜಿತಶ್ರೀವಿಲಾಸಮಿಾ ನಿನ್ನ ಮುಖಂ ಹರಿಣಧರ ವಿಜಯಶೋಭಾಕರಂ (ಕವಿರಾ. ೩-೭೧). **[ಸಂ.]**

**ಶ್ರೀವಿಲಾಸಿನಿ** (ನಾ). ೧. ಚೆಲುವೆಯಾದ ಹೆಣ್ಣು. ೨. [ಛಂದ] ವರ್ಣಛಂದಸ್ಸಿನ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಪಾದದಲ್ಲಿ ಒಂಭತ್ತು ಅಕ್ಷರಗಳುಳ್ಳ ಬೃಹತಿ ಎಂಬ ಛಂದಸ್ಸಿನ ಒಂದು ವೃತ್ತ : ಪಾವಕೇಂದ್ರಹುತಭುಗ್ಗಣಂ ಭಾವಿಸಿರ್ದೊಡಱ ನೀಂ ಮಹಾದೇವನಿಷ್ಟಮಿದು ನಿಶ್ಚಯಂ ಶ್ರೀವಿಲಾಸಿನಿ ಧರಿತ್ರಿಯೊಳ್ (ಛಂದೋಂಬು. ೨-೪೯ ಅಡಿಟ). **[ಸಂ. ಶ್ರೀವಿಲಾಸಿನೀ]**

**ಶ್ರೀವಿಶದವರ್ಣೆ** (ನಾ). ಮನೋಹರವಾದ ಬಿಳಿಯ ಬಣ್ಣವುಳ್ಳವಳು ; ಸರಸ್ವತಿ: ಶ್ರೀವಿಶದವರ್ಣೆ ಮಧುರಾರಾನ್ವೋಚಿತೆ ಚತುರರುಚಿರಪದರಚನೆ ಚಿರಂನೇವಿಸರಸ್ವತಿ ಪಂಸೀಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್ (ಕವಿರಾ. ೧-೩).
**[ಸಂ. ಶ್ರೀವಿಶದವರ್ಣಾ]**

**ಶ್ರೀವೃಕ್ಷ** (ನಾ). ೧. ಬಿಲ್ವವೃಕ್ಷ. ೨. ಅರಳಿಮರ ; ಅಶ್ವತ್ಥ : "ಶ್ರೀವೃಕ್ಷಃ, ಪಿಪ್ಪಲಃ, ಅಶ್ವತ್ಥಃ, ಬೋಧಿಃ — ಈ ೪ ಅರಳಿ" (ಹಲಾಯು. ೭೩-೪೩); ಶ್ರೀವೃಕ್ಷಪನಸ ನಿವಹಮುಮಾವಿಷ್ಕೃತಕುಸುಮವಿಸರಮೆನೆ ಶಿಖರಿವನಂ ತೀವಿರೆ (ಜಗವಿ. ೧೭-೧); ನಿತ್ಯವು ಚಲಿತಪವಮಾನಾಂತರ ಶ್ರೀವೃಕ್ಷಪರ್ಣಾಗ್ರಜಲಕಣಕ್ಷಣಚಲನಪಾತ್ರೌ ಬಳಿಕಮಿಂತುಟುಕಾಗಿ ಮೈಮಱೆದು . . . ಪೋಪತಿ ಮರಾತ್ಮರಿಗೆ (ಬಸವು. ೪೦-೭೧). ೩. ಶುಭಲಕ್ಷಣಸೂಚಕವಾದ ಚಿಹ್ನೆ : ಶ್ರೀವೃಕ್ಷಸ್ವಸ್ತಿಕನಂದ್ಯಾವರ್ತಪ್ರಮುಖಾಷ್ಟೋತ್ತರಶತಪ್ರಶಸ್ತಲಕ್ಷಣಮುಂ . . . ತನಗನುಸಂಗತಮಾಗೆ ಯೌವನಪ್ರಾಪ್ತನಾಗಿ (ಶಾಂತಿಪು. ೧೦-೯೪ ವ); ಶ್ರೀವೃಕ್ಷಸಂಪೂರ್ಣಲಾಂಛನವಕ್ಷಂ ಕರಮೊಪ್ಪಿ ತೋರ್ಪ ಧವಳಾಕ್ಷಂ ಶೋಭಿತಾಂಗಂ ಭುಜಾನನಮೆಂದಿಂತಿವಗಣ್ಯಪುಣ್ಯಜನಿತಂ ಜೀವಕ್ಕೆ ನಿರ್ವ್ಯಾಕುಲಂ (ಸುಕುಮಾ. ೫-೩೭). ೪. [ಅಶ್ವಶಾ] ಕುದುರೆಯ ಕೊರಳಿನಲ್ಲಿರುವ ಶುಭಸೂಚಕವಾದ ಸುರುಳಿಗೂದಲು : ಶ್ರೀವೃಕ್ಷಂ ಕನ್ನಡಿ ನಂದ್ಯಾವರ್ತಂ ವರ್ಧಮಾನಕಂ ಸ್ವಸ್ತಿಕಮೆಂಬೀ ವಿವಿಧಲಾಂಛನಂಗಳನಾವರಿಸಿದ ವಾಜಿಗಾಯು ತ್ರಿಂಶದ್ವರ್ಷಂ (ಅಶ್ವಶಾ. ೫-೩೭). **[ಸಂ.]**

**ಶ್ರೀವೃಕ್ಷಕಿ** (ನಾ). = ಶ್ರೀವತ್ಸಕಿ : "ಶ್ರೀವೃಕ್ಷಮೆಂಬ ಕುಱುಪನುಳ್ಳ ಕುದಿರೆ ಶ್ರೀವೃಕ್ಷಕೀ ಎಂಬುದು" (ಹಲಾಯು. ೭೨-೨೮೪). **[ಸಂ. ಶ್ರೀವೃಕ್ಷಕಿನ್]**

**ಶ್ರೀವೆಱು** (ಕ್ರಿ). ಐಶ್ವರ್ಯವನ್ನು ಹೊಂದು ; ಸಂಪದ್ಭರಿತವಾಗು : ಉತ್ತಮೋತ್ತಮದುನ್ನತ ಶ್ರೀವೆತ್ತ ಸಿರಿಗಿರಿಗೆಣೆಯೆನಲು ಪ್ರಭೆವೆತ್ತ ಪುರವಂ ರಚಿಸಿ (ಬಸವು. ೧೦-೧೩). [ಶ್ರೀ + ಪೆಱು]

**ಶ್ರೀವೇಷ್ಟ** (ನಾ). ಒಂದು ಬಗೆಯ ಸುಗಂಧದ್ರವ್ಯ ; ಗುಗ್ಗುಳ : "ಪಾಯಸಃ, ಶ್ರೀವಾಸಃ, ವೃಕ್ಷಧೂಪಃ, ಶ್ರೀವೇಷ್ಟಃ, ಸರಳದ್ರವಃ — ೫ ಸರಳದೇವದಾರು ವೃಕ್ಷದ ಬೊಂಕೆ, ರಾಳದ ಬೊಂಕೆ" (ಸಿದ್ಧಾಂತಿ. ೨೦೮). **[ಸಂ.]**

**ಶ್ರೀವೈಷ್ಣವ** (ನಾ). ಶ್ರೀವೈಷ್ಣವಮತದ ಅನುಯಾಯಿ : ಶ್ರೀ ಮತ್ತು ಪಿರಿಯ ಪೆರುಮಾಳಿಗರು ಶ್ರೀವೈಷ್ಣವರಿಂಗೆ ಬಿಟ್ಟ ಪುರ (ಎಕ. IV, ಎಳಂದೂ. ೨೦-೫; 1272 ?). **[ಸಂ.]**

**ಶ್ರೀವೈಷ್ಣವಮತ** (ನಾ). ಶ್ರೀರಾಮಾನುಜಾಚಾರ್ಯರಿಂದ ಸ್ಥಾಪಿತವಾದ ವಿಶಿಷ್ಟಾದ್ವೈತಮತ : ಈ ಮತಕ್ಕೆ ವಿಶಿಷ್ಟಾದ್ವೈತಮತವೆಂದೂ ಶ್ರೀವೈಷ್ಣವಮತವೆಂಬೂ ಹೆಸರು (ಭಾರದ. ೨೯೭). **[ಸಂ.]**

**ಶ್ರೀಶ** (ನಾ). ಲಕ್ಷ್ಮೀಪತಿ ; ವಿಷ್ಣು : ನಿಜೋದಾರತೆಯೊಳ್ ಅನುಪಮಗುಣದೊಳ್ ಶ್ರೀಶಂ ಘನಮೆನೆ ಮಾಲೋಪಮಾನಭೇದಮಿದಕ್ಕುಂ (ಕವಿರಾ. ೩-೮೨); ವಿಮಲಶ್ರೀಶ ಸರಸ್ವತೀನಿಳಯ ಕೀರ್ತಿಶ್ರೀವಧೂಕಾಂತಗೌತಮಗೋತ್ರಾಂಬುಜಮಿತ್ರ (ಪಂಚತಂ. ೩೧೧-೧೪). **[ಸಂ.]**

**ಶ್ರೀಶೈಲ** (ನಾ). ಒಂದು ಪರ್ವತದ ಹೆಸರು ; IP ಈಗಿನ ಆಂಧ್ರಪ್ರದೇಶದ ಕರ್ನೂಲುಜಿಲ್ಲೆಯಲ್ಲಿರುವ ಒಂದು ಪುಣ್ಯಕ್ಷೇತ್ರ. ಪ್ರಸಿದ್ಧವಾದ ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಒಂದಾದ ಮಲ್ಲಿಕಾರ್ಜುನಲಿಂಗವು ಸ್ಥಾಪಿತವಾಗಿರುವ ಮತ್ತು ಹದಿನೆಂಟು ಶಕ್ತಿಯೋಗಪೀಠಗಳಲ್ಲಿ ಒಂದಾದ ಭ್ರಮರಾಂಬಿಕೆಯಿರುವ ಪುಣ್ಯಕ್ಷೇತ್ರ : ಮಟ್ಟೆದಗವಡರ್ರಾಚಗವಡಯಿವರ ಕುಲದೇವರು ಶ್ರೀಶೈಲದ ಮಲ್ಲಿಕಾರ್ಜುನ (ಎಕ. XIV, ಗುಂಡ್ಲುಪೇ. ೧೪೮-೩೮; 1087 ?); ಶ್ರೀಶೈಲವಿಪಿನೋದಾತ್ತ ಭೂಮಿಯೊಳವಿರಳಸಮಾಧಿಸ್ಥನಾಗಿರಲು (ಬಸವು. ೩೪-೪). **[ಸಂ.]**

**ಶ್ರೀಸಂಗ** (ನಾ). [ಜೈನ] ಜೈನಮುನಿಗಳ ಸಂಘಗಳಲ್ಲಿ ಒಂದು : ಶ್ರೀಮಾಸೇನರ್ಪ್ಪರಮಪ್ರಭಾವರಿಷಿಯರ್ಕ್ಕಟ್ಬಪ್ಪಿನಾ ವೆಟ್ಟದುಳ್ಳ್ರೀಸಂಗಂಗಳ ಪೇಟ್ಟ ಸಿದ್ಧಸಮಯನ್ತಪ್ಪಾದ ನೋನ್ತಿಮ್ಬಿನಿನ್ . . . ಪೂಜೆ[ಗೊಟ್ಟು]ಯೆ ಅವರ್ಸ್ಸರ್ಗ್ಗಾಗ್ರ ಮಾನೇಜಿದಾರ್ (ಎಕ. II (R). ೩೦-೧; ಸು. 700). [< ಸಂ. ಶ್ರೀಸಂಘ]

**ಶ್ರೀಸಂಜ್ಞ** (ನಾ). ಲವಂಗ : "ಲವಂಗಂ, ದೇವಕುಸುಮಂ, ಶ್ರೀಸಂಜ್ಞಂ — ೩ ಲವಂಗದ ಹುವ್ವು, ಲವಂಗ" (ಸಿದ್ಧಾಂತಿ. ೨೧೭). [ಸಂ.]

**ಶ್ರೀಸಾಮಾನ್ಯ** (ನಾ). ಸಾಧಾರಣವರ್ಗದ ವ್ಯಕ್ತಿ ; ಜನಸಾಮಾನ್ಯ : ಶ್ರೀಸಾಮಾನ್ಯರ ಕತ್ತಿಯನ್ನು ಹೊರದೆಗೆದು . . . ಕ್ಷೌರಮಾಡಲು ಸಿದ್ಧಮಾಡಿಕೊಳ್ಳುತ್ತಿದ್ದ (ನನ್ನೂರು. ೨೩೦). [ಸಂ.]

**ಶ್ರೀಸೂಕ್ತ** (ನಾ). ಋಗ್ವೇದದ ಒಂದು ಮಂತ್ರ : ವಾದಿರಾಜರು . . . ಶ್ರೀಸೂಕ್ತಮಂತ್ರವನ್ನು ಪಠಿಸಿ ಸುವರ್ಣವೃಷ್ಟಿಯಾಗುವಂತೆ ಮಾಡಿದರು (ಕಭವಿ. ೧೪೫). [ಸಂ.]

**ಶ್ರೀಹಸ್ತಿನಿ** (ನಾ). ಒಂದು ಬಗೆಯ ಗಿಡ ; ಗುರುಗುಲು ಗಿಡ : "ಶ್ರೀಹಸ್ತಿನೀ, ಭೂರುಂಡೀ-೨ ಹಣ್ಣೇಗಿಡದ ಹೆಸರುಗಳು, ಗುರುಗಲಗಿಡ" (ಸಿದ್ಧಾಂತಿ. ೧೨೭). [ಸಂ. ಶ್ರೀಹಸ್ತಿನೀ]

**ಶ್ರೀಹೊನ್ನೆ** (ನಾ). ಒಂದು ಬಗೆಯ ಮರ : ಹೊಳೆಹೊನ್ನೆ, ಶ್ರೀಹೊನ್ನೆ, ಕೂವೆ, ಬೂಬ್ಬ (ಮೈಬಿಗಿ. ೧೭-೨೮೮). [ಶ್ರೀ + ಹೊನ್ನೆ (< ಪೊನ್ನೆ)]

**ಶ್ರುಂಗಾರ** (ನಾ). ಒಂದು ಬಗೆಯ ಆಯುಧ (?) : ಬಿಲ್ಲು ನಾರಾಚ ಗದೆ ಸೂಲ್ಲಿ ಚಕ್ರ ವಂಕ್ಕಿ ಚೂರ್‍ರಿ ಜಯಬಾಡಿ ಶ್ರುಂಗಾರ ತೊಡುಪೂ . . . ಮೊದಲಾದಾ ಬತ್ತೀಶಾಯುಧಾಶಕ್ತ (ಎಕ. XVI, ಗುಬ್ಬಿ. ೭೪-೨೨; ಸು.1672). [?]

**ಶ್ರುತ** (ಗು). ೧. ಕೇಳಿದ ; ಆಲಿಸಿದ : ದೇವನಿಕಾಯದೊಡನೆ ನಾಮೆಲ್ಲಮರ್ಚಿಸಿ ಬಂದೆವಿದು ದೃಷ್ಟಮೆಂದಿಂತು ಶ್ರುತಾನುಭೂತದೃಷ್ಟಕಥೆಗಳಂ ತೋಱಿ ಜೀವಸಿದ್ಧಿಗೆಯ್ಕೆ (ಚಾವುಂಪು. ೧೫). ೨. ಹೆಸರುವಾಸಿಯಾದ ; ಪ್ರಸಿದ್ಧ : ಶ್ರೀಮದರ್ಹಣಂದಿ ತ್ರೈವಿದ್ಯದೇವರ್ ಶ್ರುತಗುರುಗಳುಮಪ್ಪ ಶ್ರೀಸಕಳಚನ್ದ್ರಭಟ್ಟಾರಕದೇವರ್ಗ್ಗೆ . . . ಮಾಡಿಸಿದ ನಿಶಿಧಿ (ಮೈಆರಿ. ೧೯೨೯, ೧೪-೨೧; 1236). (ನಾ). ೩. ಕೇಳಬಹುದಾದುದು: ಮರಳು ಕೌರವ ಜಂಗಮ ಸ್ಥಾವರದ ದೇಹಕೆ ನೆಳಲಹುದು ದಿನಕರನ ದೇಹಕೆ ನೆಳಲು ಶ್ರುತವೋ ದೃಷ್ಟವೋ ನಿನಗೆ (ಕುಮ್ಮಾದ್ರೋ. ೧೫-೫೪). ೪. ಪ್ರಸಿದ್ಧವಾದುದು : ಪರಿಚಿತಸ್ಥಾನಂಗಳಂ ಮತ್ತೆ ವಿಶ್ರುತಗಳಂ, ಶ್ರುತಗಳಂ . . . ಪಣ್ಣೆಡೆಗಳಂ ಪುಡುಕಿದಳ್ ಕುದಿವೆದೆಯೊಳಲೆದು ತೊಳಲಿ (ಶ್ರೀರಾಮಾ. ೨೫೭-೭೪೯). ೫. ಹೆಸರುವಾಸಿಯಾದವನು; ಕೀರ್ತಿವಂತ : ವೈಶ್ರವಣಂ ಶ್ರುತನಾದಂ ಭೂಪರಿನ್ನರಾರೆಂಬಿನೆಗಂ (ಮಲ್ಲಿಪು. ೩-೭). ೬. ವೇದ : ಸಲ ಶ್ರುತಂಗಳನೊರೆಯಲಾದುದು ಸುಳುಹಿನಿಂ (ಗಗತಾ. ೧೩-೪೭). ೭. [ಜೈನ] ಐದು ವಿಧವಾದ ಜ್ಞಾನಗಳಲ್ಲಿ ಒಂದು ; ಮತಿಜ್ಞಾನದಿಂದ ತಿಳಿದ ಅರ್ಥದ ಆಧಾರದಿಂದ ಬೇರೊಂದು ಅರ್ಥವನ್ನು ತಿಳಿಯುವ ಜ್ಞಾನ: ಮತಿಶ್ರುತಾವಧಿಮನಃಪರ್ಯಯಕೇವಲಜ್ಞಾನಭೇದದಿಂ ಪಂಚವಿಧಂ (ಆದಿಪು. ೧೦-೬೩ ವ) ; ಮತಿಶ್ರುತಾವಧಿಮನಃಪರ್ಯಯ ಕೇವಲಜ್ಞಾನಮೆಂದೈದು ತೆಱನಕ್ಕುಂ (ಶ್ರಾವಕಾ. ೪-೧೫). ೮. ಎಂಟು ವಿಧವಾದ ಜ್ಞಾನಗಳಲ್ಲಿ ಒಂದು : ಕುಮತಿ ಕುಶ್ರುತ ವಿಭಂಗ ಮತಿ ಶ್ರುತ ಅವಧಿ ಮನಃಪರ್ಯಯ ಕೇವಲಜ್ಞಾನವಿಕಲ್ಪದಿಂ ಜ್ಞಾನಮಷ್ಟವಿಧಂ (ತತ್ತ್ವಪ್ರ. ೧೭). [ಸಂ.]

**ಶ್ರುತಕೀರ್ತಿ** (ಗು). ೧. ಪ್ರಖ್ಯಾತವಾದ ; ಪ್ರಸಿದ್ಧವಾದ. (ನಾ). ೨. ಪ್ರಸಿದ್ಧನಾದವನು ; ಕೀರ್ತಿವಂತ : ಮದ್ದುರುಮೂರ್ತಿ ಶಾಶ್ವತಬಹಳಶ್ರುತ [ಪಾಠಾಂ. ಸತ್, ಸಿತ] ಕೀರ್ತಿ ಎನ್ನೊಳಾವರಿಸಿರ್ದ ಪಟುಗರ್ವೋನ್ನತಿಯನಪಹರಿಸಿ . . . ಸಲಹಿದಿರಿ (ಬಸಪು. ೨೭-೬೫). ೩. [ಜೈನ] ಒಬ್ಬ ಮುನಿಯ ಹೆಸರು : ಆರ್ಯನುತ ಗೃಧ್ರಪಿಂಛಾಚಾರ್ಯಜಟಾಚಾರ್ಯವಿಶ್ರುತಶ್ರುತಕೀರ್ತ್ಯಾಚಾರ್ಯಪುರಸ್ಸರಮಪ್ಪಾಚಾರ್ಯ ಪರಂಪರೆಯ ಕುಡುಗೆ ಭವ್ಯೋತ್ಸವಮಂ (ಆದಿಪು. ೧-೧೨). [ಸಂ.]

**ಶ್ರುತಕೇವಲಿ, ಶ್ರುತಕೇವಳಿ** (ನಾ). [ಜೈನ] ಶ್ರುತಜ್ಞಾನ ಮತ್ತು ಕೇವಲಜ್ಞಾನಗಳನ್ನು ಪಡೆದವನು : ಶ್ರುತಕೇವಲಿ ವಿಷ್ಣುಪ್ರತಿಪತಿಚರಣಂ ನಂದಿ ಪರಮಮುನಿ . . . ಭದ್ರಬಾಹುಚರಣಂ ಶರಣಂ (ಪಂರಾಮಾ. ೧-೮). **ಶ್ರುತಕೇವಳಿ :** ಚತುರ್ದಶಪೂರ್ವಧಾರಿಗಳಪ್ಪ ಶ್ರುತಕೇವಳಿಗಳ್ ನಾಲ್ಕನೆಯವರ್ ಗೋವರ್ಧನರೆಂಬ ಭಟಾರರ್ (ವಡ್ಡಾರಾ. ೭೩-೨೭); ಶ್ರುತಕೇವಳಿಗಳು ಪಲಬರುಮತೀತರಾದಿಂ ಬಳಿಕ್ಕೆ ತತ್ಸಂತಾನೋಂನತಿಯಂ ಸಮನ್ತಭದ್ರಪ್ರತಿಪ್ಪರ್ತ್ತಳೆದರು ಸಮಸ್ತವಿದ್ಯಾನಿಧಿ ಗಳ್ (ಎಕ. II (R). ೫೭೯-೧೭; 1124). [ಸಂ. ಶ್ರುತಕೇವಲಿನ್]

**ಶ್ರುತಕೇವಳಿ** 'ಶ್ರುತಕೇವಲಿ' ನೋ.

**ಶ್ರುತಜ್ಞಾನ** (ನಾ). ೧. [ಜೈನ] ಓದುವುದರಿಂದ ಮತ್ತು ಕೇಳುವುದರಿಂದ ಉಂಟಾಗುವ ಜ್ಞಾನ : ನೂಱಯ್ವತ್ತೆಂಟು ದಿವಸದಿಂ ಸಮೆಯೆ ನೋಂಪ ವಿಶ್ರುತಶ್ರುತಜ್ಞಾನಮುಮಂ ಯಥೋಚಿತವಿಧಿಯಿಂ ನೋಂತು (ಆದಿಪು. ೩-೪೦ ವ); ಮತಿಜ್ಞಾನದಿನಱಿತರ್ಥಮನಾಧಾರಂ ಮಾಡಿ ಮತ್ತೊಂದರ್ಥಮನಱಿವ ಶ್ರುತಜ್ಞಾನಮುಂ (ತಸೂವ್ಯ. ೧೭). ೨. ಕುಮತಿ, ಕುಶ್ರುತ, ವಿಭಂಗ ಎಂಬ ಮೂರು ರೀತಿಯ ಅಜ್ಞಾನಗಳಲ್ಲಿ ಒಂದು : ಮತ್ಯಜ್ಞಾನಂ ಶ್ರುತಜ್ಞಾನಂ ವಿಭಂಗಜ್ಞಾನಮುಮೆಂಬ ಅಜ್ಞಾನತ್ರಿತಯಮುಂ (ಸುಕುಮಾ. ೮-೪ ವ). [ಸಂ.]

**ಶ್ರುತಜ್ಞಾನಾವರಣೀಯ** (ನಾ). [ಜೈನ] ಶ್ರುತಜ್ಞಾನವನ್ನು ಆವರಿಸುವ ಕರ್ಮ; ಶ್ರುತಜ್ಞಾನವನ್ನು ಉಂಟುಮಾಡುವ ಕರ್ಮ : ಮತಿಜ್ಞಾನಾವರಣೀಯಂ ಶ್ರುತ ಜ್ಞಾನಾವರಣೀಯಂ . . . ಕೇವಲಜ್ಞಾನಾವರಣೀಯಮೆಂಬೀ ಪ್ರಕಾರದ ಪಂಚಪ್ರಕಾರ ಜ್ಞಾನಾವರಣೀಯಮಂ (ಸುಕುಮಾ. ೩-೩೯ ವ). [ಸಂ.]

**ಶ್ರುತದುಷ್ಟ** (ನಾ). [ಕಾವ್ಯಮೀ] ಕಾವ್ಯದೋಷಗಳಲ್ಲಿ ಒಂದು ; ಕೇಳಲು ಅಹಿತವಾಗಿರುವುದು: ಶ್ರುತದುಷ್ಟಮರ್ಥದು(ಷ್ಟಂ) ಶ್ರುತಿಕಷ್ಟಂ ಕಲ್ಪನೋಕ್ತಿಕಷ್ಟ (ಮು)ಮೆಂದೀ . . . ನಾಲ್ಕುಮಿಲ್ಲಿ ಕೃತಿದೋಷಂಗಳ್ (ಕವಿರಾ. ೧-೬೨). [ಸಂ.]

**ಶ್ರುತದೇವತೆ** (ನಾ). ವಿದ್ಯೆಯ ಅಧಿದೇವತೆ ; ಸರಸ್ವತಿ : ಶ್ರುತದೇವತೆಯ ಚತುರ್ಭುಜದಂಡದ ಚತುರನುಯೋಗದ . . . ಸುಸಾರಸಮುಚ್ಚಯಮಂ ಕ್ಷಿತಿಗೆಯ್ದೆ ಪ್ರಕಟಂಮಾಡಿ (ಕುಮುರಾ. ೧-೧೮). [ಸಂ. ಶ್ರುತದೇವತಾ]

**ಶ್ರುತದೇವಿ** (ನಾ). = ಶ್ರುತದೇವತೆ : ಶ್ರುತದೇವೀವಚನಾಮೃತಂ ಶ್ರುತಕಥಾಲಾಪಂ ಶ್ರುತಸ್ಕಂಧಸಂತತಿ . . . ಆರೂಢಸರ್ವಜ್ಞಭೂಪತಿಗೊಲ್ದಾಗಳುಮಿಾಗೆ ಮಂಗಳಮಹಾಶ್ರೀಯಂ (ಪಂಪಭಾ. ೧೪-೩೨); ರತಿವನಿತೆಗೆ ವಿಧವತೆಯಂ ಶ್ರುತದೇವಿಗೆ ಚತುರವೃತ್ತಿಯಂ ಮಾಟ್ಟ ತಪಶ್ಶ್ರುತಮೆರಡುಂ ನಿರುಪಮಮಿಾ ಕ್ಷಿತಿಯೊಳ್ (ಚಂದ್ರಪ್ರ. ೧-೩೫). [ಸಂ. ಶ್ರುತದೇವೀ]

**ಶ್ರುತಪಂಚಮಿ** (ನಾ). [ಜೈನ] ಜ್ಯೇಷ್ಠಶುದ್ಧ ಪಂಚಮಿಯಂದು ಮಾಡುವ ಒಂದು ಬಗೆಯ ವ್ರತ ; ಶಾಸ್ತ್ರಗ್ರಂಥಗಳನ್ನು ಪೂಜೆಮಾಡುವ ಹಬ್ಬ : ದೇವಣನು ಸಿದ್ಧಚಕ್ರದ ನೋಂಪಿ ಶ್ರುತಪಂಚಮಿ ನೋಂಪಿಗೆ ಮಾಡಿಸಿದ ಪಂಚಪರಮೇಷ್ಠಿಗಳ ಪ್ರತಿಮೆ (ಕಇಆ. ೭೩-೧೧-೪; 14ನೆಯ ಶತ ?). [ಸಂ. ಶ್ರುತಪಂಚಮೀ]

**ಶ್ರುತಪಡಿಸು** (ಕ್ರಿ). ಕೇಳುವಂತೆ ಮಾಡು ; ತಿಳಿಸು : ಶಿಕ್ಷಣಕ್ಷೇತ್ರದಲ್ಲಿ ಗೋಚರಿಸುವ ಫಲಾಫಲಗಳನ್ನು ಸಮಾಜಕ್ಕೂ ಸಮಾಜದ ಮನೋಭಾವ ಮತ್ತು ಆಶಯಗಳನ್ನು ಶಿಕ್ಷಕವರ್ಗಕ್ಕೂ ಶ್ರುತಪಡಿಸುವುದು (ಶಿಕ್ಷದ. ೭೫೭). [ಶ್ರುತ + ಪಡಿಸು]

**ಶ್ರುತಪಾರಗ** (ನಾ). ವೇದವಿದ್ಯಾಪಾರಂಗತ : ಒಡಮೆಯನರ್ಥಿಗಿತ್ತೆಂ . . . ಈಗಳೊಂದಡಕೆಯುಮಿಲ್ಲ ಕೈಯೊಳೆರದಂ ಶ್ರುತಪಾರಗನೆಂತು ಸಂತಸಂಬಡಿಸುವೆಂ . . . ಕುಂಭಸಂಭವಾ (ಪಂಪಭಾ. ೨-೪೬). [ಸಂ.]

**ಶ್ರುತಮೂರ್ತಿ** (ನಾ). ಜ್ಞಾನವೇ ಆಕಾರಗೊಂಡಂತಿರುವವಳು ; ಸರಸ್ವತಿ : ಶ್ರುತಮೂರ್ತಿಯಾಗಿಯುಂ ರುಚಿರತನು ಕರಂ ಬಿಳಿಯಳಾಗಿಯುಂ ಚತುರವಚೋನ್ವಿತೆ . . . ವಾಗ್ದೇವಿ ಕೂರ್ತು ಮಾಟ್ಕೆಮಗಱಿವಂ (ಜಾತತಿ. ೧-೨). [ಸಂ.]

**ಶ್ರುತವಿದ್ಧ** (ನಾ). ಇನ್ನೊಬ್ಬರಿಂದ ಕೇಳಿ ತಿಳಿದುಕೊಂಡು ಮಾಡಿದ ಚಿತ್ರಣ : ಶ್ರುತವಿದ್ಧಾತ್ಮವಿದ್ಧಪರವಿದ್ಧಮೆಂಬ ವಿದ್ಧಪದ್ಧತಿಯೊಳಂ . . . ಅಪೂರ್ವಭಿತ್ತಿಯಂ ತಳೆದು (ಚಂದ್ರಪ್ರ. ೧೫-೬೯ ವ). 'ಶ್ರುತಿವಿದ್ಧ' ಪರಾ. [ಸಂ.]

**ಶ್ರುತವಿಹೀನ** (ನಾ). ಶಾಸ್ತ್ರಗಳನ್ನು ತಿಳಿಯದವನು : ಇವರೊಳೊರ್ವನಂ ಮದೀಯ ಭುಜಬಲಾವಷ್ಟಂಭದಿಂದಂಭೋಧಿವರಂ ನಿಮಿರ್ದ ಸಕಲವಸುಂಧರಾವಳಯಮಂ ರಕ್ಷಿಸುವಂತು ಮಾಟ್ಪೊಡಿವರ್ ಶ್ರುತವಿಹೀನರ್ (ಪಂಚತಂ. ೧೭-೫). [ಸಂ.]

**ಶ್ರುತವಿಲಾಸ** (ನಾ). ಶಾಸ್ತ್ರಗಳ ಪಾಂಡಿತ್ಯದಿಂದ ಶೋಭಿಸುವವನು ; ವಿದ್ಯಾವಂತ : ವಸುಧೆಯೊಳೊಳ್ಪುವೆತ್ತ ನರರೇಮಱೆವನ್ನರೆ . . . ಗುಣವ್ಯಸನರ ನೀಂಬರಂ ಶ್ರುತವಿಳಾಸರೆ ನೀಂಬರವೇನುದಾತ್ತರೇ (ಪುಷ್ಪಪು. ೧-೭೬).
[ಸಂ. ಶ್ರುತವಿಲಾಸ]

**ಶ್ರುತಸ್ಕಂಧ** (ನಾ). [ಜೈನ] "ತೀರ್ಥಂಕರರ ದಿವ್ಯಧ್ವನಿಯನ್ನು ಹೃದಯದಲ್ಲಿ ಧರಿಸಿಕೊಂಡು ಗಣಧರರು ರಚಿಸಿದ ದ್ವಾದಶಾಂಗರೂಪದ ಸೂತ್ರ" (ಆದಿಪು. ಜೈನಪಾರಿಭಾಷಿಕಶಬ್ದಕೋಶ) : ನೆವಂ ತಾಳ್ದಿದಪಾಸ್ತದುರ್ನಯತಮೋಬಂಧಂ ಶ್ರುತಸ್ಕಂಧಮಾದಱೆವಿಂದಂ ಗಣನಾಯಕರ್ ಸಮೞೆ (ಆದಿಪು. ೧-೩೯). [ಸಂ.]

**ಶ್ರುತಹೀನ** (ನಾ). = ಶ್ರುತವಿಹೀನ : ಶ್ರುತಹೀನರಂತೆ ಕಿಮ್ಮನೆ ಕೃತಘ್ನರಾದಂದು ನಮಗಿಹಂ ಪರಮುಂಟೇ (ಸುಕುಮಾ. ೨-೭೭). [ಸಂ.]

**ಶ್ರುತಾನುಗಂತ** (ನಾ). ಒಂದು ಬಗೆಯ ತಂತೀವಾದ್ಯ : ದುಕ್ಕಡಿ ಗೀತಾನುಗಂತ ಶ್ರುತಾನುಗಂತ ಉಭಯಾನುಗಂತ ವೀಣಾನುಗಂತವೆಂಬ್ಛೆದು ತೆಱನಾಗಿಹುದು (ವಿವೇಕ. ೧೯೦). 'ಗೀತಾನುಗಂತ' ಪರಾ. [< ಸಂ. ಶ್ರುತಾನುಗಂತೃ]

**ಶ್ರುತಾರ್ಥಾಪತ್ತಿ** (ನಾ). [ತರ್ಕಶಾ] ಎರಡು ವಿಧವಾದ ಅರ್ಥಾಪತ್ತಿಗಳಲ್ಲಿ ಒಂದು ; ಒಂದು ವಿಷಯವನ್ನು ಕೇಳಿ, ಅದರಿಂದ ಮತ್ತೊಂದು ವಿಷಯವನ್ನು ಕಲ್ಪಿಸುವುದು : ಬದುಕಿರ್ದ ದೇವದತ್ತನು ಗೃಹದೊಳಗಿಲ್ಲವೆಂದೊಡೆ ಕೇಳಿ ಶ್ರುತಮಾದ ತದ್ವಚನದಿಂ ಸ್ಥಾನಾಂತರದೊಳಿರ್ಪನೆಂದು ತಿಳಿವುದೇ ಶ್ರುತಾರ್ಥಾಪತ್ತಿ ಪ್ರಮಾಣ ವೆನಿಸುವುದು (ವಿವೇಕ. ೨೧); ಅರ್ಥಾಪತ್ತಿಯು ದೃಷ್ಟಾರ್ಥಾಪತ್ತಿ ಮತ್ತು ಶ್ರುತಾರ್ಥಾಪತ್ತಿ ಎಂದು ಎರಡು ವಿಧ (ಭಾತತ್ತ್ವ. ೬೦೨). 'ದೃಷ್ಟಾರ್ಥಾಪತ್ತಿ' ಪರಾ. [ಸಂ.]

**ಶ್ರುತಿ** (ನಾ). ೧. ಕೇಳುವಿಕೆ ; ಶ್ರವಣ. ೨. ಕೇಳಿದುದು : ಶ್ರುತಿ ಎಂದರೆ ಕೇಳಿದ್ದು, ಸ್ಮೃತಿ ಎಂದರೆ ಕೇಳಿದ್ದನ್ನು ತಲೆಯಲ್ಲಿ ತಾಳಿದ್ದು (ಭಾರದ. ೧೨೦). ೩. ಕಿವಿ ; ಕರ್ಣ : ಶ್ರುತಿಸೌಖ್ಯಾವಹವಲ್ಲಕೀಕ್ವಣಿತದೊಳ್ ಕರ್ಪೂರಪಾಲೀವಿಮಿಶ್ರಿತ ತಾಂಬೂಲರಸೋತ್ಕಟ ಪ್ರಮದದೊಳ್ . . . ಸಿದ್ಧದಂಪತಿಗಳ್ ಕ್ರೀಡಿಸುತಿರ್ಪರ್ (ಆದಿಪು. ೯-೧೧೮); ಶ್ರುತಿಯಂ ಭೇರೀರವಮಶ್ರುತಪೂರ್ವಂ ತಾಗೆ ಜಾನಪದಜನಮನಿತುಂ ಪ್ರತಿಹತಮಾದತ್ತು (ಪಾರ್ಶ್ವಪು. ೧೧-೬೯). ೪. ಶಬ್ದ ; ಧ್ವನಿ. ೫. ಸುದ್ದಿ ; ವಾರ್ತೆ. ೬. ವೇದ : ವಿದ್ಯಾಪ್ರತತಿಗೆ ಸ್ವಯಂವರಪತಿಯುಂ ಸಮಸ್ತಶ್ರುತಿಗಳಿಗೆ ಸಂಕೇತ ನಿಕೇತನಮುಮೆನಿಸಿದಂ (ಕಾದಂಪೂ. ೭೫೯); ಶ್ರುತಿಗಗಮ್ಯದ್ವಾದಶಾಂತ್ಯಸಪ್ರತಿಮಮಹಿಮಂಗೆ ಪ್ರತಿಯುಂಟೇ (ಬಸವ. ೫೨೯); ಶ್ರುತಿಪೌರಾಣದಾಗಮಸಿದ್ಧಿದಾಯಕಿಯೆ . . . ಶಾರದೆಯೆ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ (ಜುವ್ವಾಆ. ೧-೫). ೭. (ಆಲಂ) ವೈವಿಧ್ಯವಿಲ್ಲದುದು ; ಒಂದೇ ರಾಗ ; ಏಕನಾದ : ಅಳುವಿನ ಶ್ರುತಿ ಅವನಿಗೆ ಏಕನಾದವಾಗಿತ್ತು (ಗೋಪುರ. ೨); ಹೆಂಗಸರ ಮಾತಿಗೆ . . . ರಾಗ ಯಾವುದಾದರೂ ಶ್ರುತಿ ಒಂದೇ (ಹೊಸಕ್ಕಿ. ೧೮). ೮. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : "ಶ್ರುತಿ ಯುಗಾಂಬುಧಿ ನಾಲ್ಕು" (ಮಂಗರಾ. ೧೦೩-೮). ೯. [ಸಂಗೀತ] ಸ್ವರದ ಅಂಶ: 'ಶ್ರುತಿಗಮಕ' ಪರಾ. ೧೦. ಗಾಯನವಾದನ ಪ್ರಸ್ತುತಿಗೆ (ಪ್ರಯೋಗಕ್ಕೆ) ಆಧಾರವೆಂದು ಇಟ್ಟುಕೊಳ್ಳುವ ಸ್ವರ : ಶ್ರುತಿಸ್ಫೂರ್ತಿ ಕಮ್ಮನೆ ಕಸ್ತೂರಿಯ ಕಂಪಿನಂತೆ ಕವಿಗುಂ ನಾದಸ್ವರಪ್ರಕ್ರಮಂ ಘನರತ್ನಾವಳಿಯಂತೆ ತೋಱೆ ಚಿಕದೇವಂ ಬಾಜಿಕುಂ ಬೀಣೆಯಂ (ಚಿಕವಿ. ೪-೧೧೩); ಷಡ್ಜ ಮಧ್ಯಮ ಪಂಚಮಗಳಿಗೆ ನಾಲ್ಕು ನಾಲ್ಕು ಶ್ರುತಿಗಳ ಅಂತರವಿರುವ 'ಖರಹರಪ್ರಿಯ' ರಾಗದಿಂದ ಅಭ್ಯಾಸವನ್ನಾರಂಭಿಸುವುದು ಸ್ವಲ್ಪ ಕಷ್ಟ (ಹೇಮಕೂ. ೧೦೪).

ಶ್ರುತಿಮಾಡು = ಗಾಯನವಾದನ ವ್ಯವಹಾರದಲ್ಲಿ ಆಧಾರವೆಂದು ಇಟ್ಟುಕೊಂಡ ಸ್ವರದೊಡನೆ ವಾದ್ಯಗಳ ಧ್ವನಿಯನ್ನು ಒಂದುಗೂಡಿಸು : ಈ ಹಾಡಿಗೆಂದೆ ಶ್ರುತಿಮಾಡಿಟ್ಟ ವೀಣೆ — ಕೃಷ್ಣೆ, ಕಾವೇರಿ, ವರದೆ, ತುಂಗಭದ್ರೆ! (ನಲಮು. ೩-೨೫). [ಸಂ.]

**ಶ್ರುತಿಕಟು** (ನಾ). [ಕಾವ್ಯಮೀ] ಒಂದು ಬಗೆಯ ಪದದೋಷ ; ಪರುಷಾಕ್ಷರಗಳಿಂದ ಕೂಡಿ ಕೇಳುವುದಕ್ಕೆ ಕರ್ಕಶವಾಗಿರುವ ಪದ : ದೋಷವುಳ್ಳ ಪದಗಳನ್ನು — ೧. ಶ್ರುತಿಕಟು . . . ೧೩. ವಿರುದ್ಧಮತಿಕೃತ್ ಎಂದು ವಿಭಾಗಿಸಬಹುದು . . . ಶ್ರುತಿಕಟು — ಪರುಷಾಕ್ಷರಗಳಿಂದ ಕೂಡಿ ಕಿವಿಗೆ ಅಶ್ರಾವ್ಯವಾಗಿ ಇರುವುದು (ಕೈಪಿಡಿ. ೨೨೭). [ಸಂ.]

**ಶ್ರುತಿಕಠೋರ** (ನಾ). [ಕಾವ್ಯಮೀ] ವಾಕ್ಯದೋಷಗಳಲ್ಲಿ ಒಂದು ; ಕೇಳಲು ಕರ್ಕಶವಾಗಿರುವ ಪದಗಳಿಂದ ಕೂಡಿದ ವಾಕ್ಯ : ಅನರ್ಥಕ, ಶ್ರುತಿಕಠೋರ . . . ಖಂಡಿತ ವ್ಯಸ್ತಸಂಬಂಧ ಅಸಮ್ಮತ ಅಪಕ್ರಮ ಛಂದೋನೀತಿ ಯತಿಭ್ರಷ್ಟ ದುಷ್ಟ ಅಸತ್ಕ್ರಿಯೆಂಬೆಂಟು ವಾಕ್ಯದೋಷಮಿಲ್ಲದೆ (ವಿವೇಕ. ೧೪೦). [ಸಂ.]

**ಶ್ರುತಿಕಷ್ಟ** (ನಾ). ೧. [ಕಾವ್ಯಮೀ] ನಾಲ್ಕು ವಿಧವಾದ ಕಾವ್ಯದೋಷಗಳಲ್ಲಿ ಒಂದು ; ಕೇಳುವುದಕ್ಕೆ ಕರ್ಕಶವಾಗಿರುವುದು: ಶ್ರುತಿದುಷ್ಟಮರ್ಥದುಷ್ಟಂ ಶ್ರುತಿಕಷ್ಟಂ ಕಲ್ಪನೋಕ್ತಿ ಕಷ್ಟಮುಮೆಂದೀ ಕೃತಕೃತ್ಯಮಲ್ಲವಲ್ಲಭಮತದಿಂ ನಾಲ್ಕುಮಿಲ್ಲಿ ಕೃತಿದೋಷಂಗಳ್ (ಕವಿರಾ. ೧-೭೦). ೨. [ವ್ಯಾಕ] ಕರ್ಣಕಠೋರವಾಗಿರುವಂತೆ ಅಕ್ಷರಗಳನ್ನು ಕೂಡಿಸುವಿಕೆ : ಪದಂಗಳೆರಡಱಂತರಾಳರೇಫೆಗಳಂ ಕೂಡಿದಂತೆ ಶ್ರುತಿಕಷ್ಟಮಾಗೆ ಸಂಧಿಯಂ ಮಾಡಲಾಗದು . . . ಶ್ರುತಿಕಷ್ಟಕ್ಕೆ — 'ವಿದ್ಯಿಟ್ಟ್ರೀಯರೆಂದು' ಮಾಡಲಾಗದು (ಶಮದ. ೬೩ ಪ್ರಯೋ) ; ಕನ್ನಡದ ಕೇಶಿರಾಜನು ಶ್ರುತಿದುಷ್ಟ ಮತ್ತು ಶ್ರುತಿಕಷ್ಟಗಳನ್ನು ಸಂಧಿದೋಷಗಳಾಗಿಯೇ ಹೇಳಿದನು (ಭಾಷಾಶಾ. ೨೩). [ಸಂ.]

**ಶ್ರುತಿಗಮಕ** (ನಾ). [ಸಂಗೀತ] ಸ್ವರಾಂಶವನ್ನು ಅತ್ಯಂತ ಸೂಕ್ಷ್ಮವಾಗಿ ಇಂಪಾಗಿರುವಂತೆ ಕಂಪಿಸುವುದು : ಸ್ಫುರಿತ, ಪ್ರಮಿತ, ದೀರ್ಘ, ಲಲಿತೋಚ್ಚದ . . . ಕೋಮಲವೆಂಬಿವಿಪ್ಪತ್ತೆರಡೇ ಶ್ರುತಿಗಮಕಂಗಳು (ವಿವೇಕ ೨೪೪). [ಸಂ.]

**ಶ್ರುತಿಗರೆ** (ಕ್ರಿ). ವೇದಘೋಷಮಾಡು ; ವೇದಮಂತ್ರವನ್ನು ಹೇಳು : ವಸುಧೆಗೊಡೆಯ ರಾಮು ಹಸೆಗೇಳೆನುತಲಿ ಋಷಿಗಳೆಲ್ಲರು ಶ್ರುತಿಗರೆದರಾಗ (ಕರ್ನಾಕ. ೨೮೯). [ಶ್ರುತಿ + ಕರೆ$_1$]

**ಶ್ರುತಿಗಾನ** (ನಾ). ವೇದದ ಪಠನ.

ಶ್ರುತಿಗಾನೈಕಸುಖ = ವೇದಪಠನದಲ್ಲಿ ಆನಂದಿಸುವವನು ; ಬ್ರಹ್ಮ : ಇರ್ದಂ ಜಗತ್ಪ್ರತಿಯೊಡ್ಡೋಲಗದೊಳ್ ಚತುರ್ಮುಖನತರ್ಕ್ಯಬ್ರಹ್ಮತೇಜಸ್ಕಿಖಂ ಶ್ರುತಿಗಾನೈಕಸುಖಂ ನಮಚ್ಛತಮಖಂ ವಾಣೀವಧೂಟೀಸಖಂ (ಜಗವಿ. ೧-೨೭). [ಸಂ.]

**ಶ್ರುತಿಗೂಡು** (ಕ್ರಿ). [ಸಂಗೀತ] ಆಧಾರವೆಂದು ಇಟ್ಟುಕೊಂಡ ಸ್ವರದೊಡನೆ ಹೊಂದಿಕೊಳ್ಳು,— ಏಕೀಭವಿಸು : ಪಾಡುತವೆ ತಾಯ್ಮೆಚ್ಚುತಿರೆ ಶ್ರುತಿಗೂಡಿ ಮಱಿದುಂಬಿಗಳು (ಸಾಳ್ವಭಾ. ೩-೯); ಪರಿಸರದೊಳ್ ಸಂಚುವೆತ್ತಿಂಚರದಿಂ ತನ್ನ ಚೆನ್ನ ಕಿನ್ನರಿಯೊಳ್ ಶ್ರುತಿಗೂಡಿ ಪಾಡುವ ಕಿನ್ನರಿಯ ಸರಸಸಂಗೀತಮಂ ಕೇಳ್ದು (ಶಬಶಂ. ೩-೩೫ ವ); ಶ್ರುತಿಗೂಡಿದಾಗ ಹೊಮ್ಮುವದು ಹಾಡಿನ ಲಹರಿ, ಗಾಳಿಯ ಬೆನ್ನ ಮೇಲೆ ಮೋಡದ ಸವಾರಿ (ನಲಮು. ೩೨-೨೪). [ಶ್ರುತಿ + ಕೂಡು$_1$]

**ಶ್ರುತಿಗೊಳಿಸು** (ಕ್ರಿ). [ಸಂಗೀತ] ಗಾಯನವಾದನ ವ್ಯವಹಾರದಲ್ಲಿ ಆಧಾರವೆಂದು ಇಟ್ಟುಕೊಂಡ ಸ್ವರದೊಡನೆ ವಾದ್ಯಗಳ ಧ್ವನಿಯನ್ನು ಒಂದುಗೂಡಿಸು : ಅವರ ಶಿಷ್ಯರು ವಾದ್ಯಗಳನ್ನು ಶ್ರುತಿಗೊಳಿಸಿ ಗಾಯನಕ್ಕೆ ಸಿದ್ಧಪಡಿಸಿಟ್ಟಿದ್ದರು (ರೂಢಿ). [ಶ್ರುತಿ + ಕೊಳ್$_1$ + - ಇಸು$_1$]

**ಶ್ರುತಿಪಥ** (ನಾ). ೧. ಶಬ್ದವು ಪ್ರವೇಶಿಸುವ ಮಾರ್ಗ ; ಕಿವಿ : ಮಣಿಮೇಖಲಾರವಂ ಶ್ರುತಿಪಥಮಂ ಪಳಂಚೆ (ಪಂಪರಾಮಾ. ೩-೫೧); ಈ ದಾರುಣದ ವಾಣಿ ಶ್ರುತಿಪಥ ಮಂಟುವನ್ನೆಗಂ ಹಾ ಕಷ್ಟಮೆನುತ . . . ಬನ್ನಬಡುವಯ್ಯನಂ ಪಿಡಿದೆತ್ತಿ ಸಂತೈಸಿ (ವೆಂಕಾರಾ. ೨-೮-೨೨). ೨. ಸಂಪ್ರದಾಯ. [ಸಂ.]

**ಶ್ರುತಿಪುರುಷ** (ನಾ). ವೇದಗಳ ಒಡೆಯ ; ವೇದಪುರುಷ : ಶ್ರುತಿಪತಿ ಗೋಪತಿ ಲಕ್ಷ್ಮೀಪತಿ . . . ಆದಿಪುರುಷಂ ಶ್ರುತಿಪುರುಷನಿರಲ್ಕೆ ಮಿಕ್ಕ ಪುರುಷರಪೂಜ್ಯರ್ (ಜಗವಿ. ೧೭-೧೭). [ಸಂ.]

**ಶ್ರುತಿಪೂರ** (ನಾ). ೧. ಕಿವಿಯ ಆಭರಣ ; ಕರ್ಣಪೂರ : ಸ್ತುತಿಗೆಯ್ವೆಂ ಕೃತಪಂಚಮ ಶ್ರುತಿ ಪುರಾಣವ್ಯಾಸನಂ ವ್ಯಾಸನಂ ಕೃತಿಲೋಕಶ್ರುತಿಪೂರಕಲ್ಪಕವಿತಾಗೀರ್ಬಾಣನಂ ಬಾಣನಂ (ಜಗವಿ. ೧-೮). ೨. ಕಿವಿಗೆ ಇಂಪಾದುದು. ೧, ೨ : ವಿಶ್ರುತ ತೀರ್ಥ ಕೃತ್ಪುರಾಣಂ ಶ್ರುತಿಪೂರಮೆನಲ್ ಕರಂ ಸುತಾರ್ಥಿನಿ ಕೇಳ್ವಳ್ (ಪುಷ್ಪಪು. ೩-೧೧೨). [ಸಂ.]

**ಶ್ರುತಿಪೆಟ್ಟಿಗೆ** (ನಾ). ಹಾಡುವಾಗ ಆಧಾರಶ್ರುತಿಗಾಗಿ ಉಪಯೋಗಿಸುವ, ಒಂದು ಬಗೆಯ ವಾದ್ಯ : ಆಧಾರಷಡ್ಜವನ್ನು ತಿಳಿಯಲು ತಂಬೂರಿಯನ್ನೋ ಶ್ರುತಿಪೆಟ್ಟಿಗೆಯನ್ನೋ ಇಟ್ಟುಕೊಂಡಿರುವರಷ್ಟೆ ? (ಭಾತವಿ. ೧೨೧). [ಶ್ರುತಿ + ಪೆಟ್ಟಿಗೆ]

**ಶ್ರುತಿಬಾಹಿರ** (ನಾ). ವೇದಗಳನ್ನು ನಂಬದವನು : ಜೀವಿಗಳು ಶ್ರುತಿಬಾಹಿರರುಗಳ್ ತಾವಿಹಗೆ ಪಶುಪತಿಗಳಹರೇ ಭಾವಿಸಲು ಪ್ರತ್ಯಕ್ಷವಾಗಿದು ತೋಱುತಿರ್ದುದಲಾ (ಬಸಪು. ೫೪-೭). [ಸಂ.]

**ಶ್ರುತಿಮಾರ್ಗ** (ನಾ). ವೇದೋಕ್ತವಾದ ಸಂಪ್ರದಾಯ : ಶ್ರುತಿ[ಪಾಠಾಂ. ಮತ] ಮಾರ್ಗಂ ಬಿಡದಾತ ಸುಪ್ರತಿ (ಸೋಮೇಶ. ೮): ಕಲಿಯುಗದ ಪ್ರಾಬಲ್ಯದಿಂದ ಶ್ರುತಿಮಾರ್ಗಗಳು ನಿರ್ವೀರ್ಯವಾಗುತ್ತಾ ಬಂದಾಗ . . . ಆಗಮೋಕ್ತ ಕರ್ಮಾನುಷ್ಠಾನವೇ ಪ್ರಶಸ್ತವೆನಿಸುವುದು (ಭಾರದ. ೬೮). [ಸಂ.]

**ಶ್ರುತಿರಸಾಯನ** (ನಾ). ಕಿವಿಗೆ ಆಪ್ಯಾಯಮಾನವಾದುದು : ಕರ್ಣರಸಾಯನ: ಪಾರ್ಥ ಹೇಳ್ವ ಮಾತಿನಾಳಾಪವನು ಕೇಳುವೆ ಶ್ರುತಿರಸಾಯನವ (ಕುಮ್ಯಾಭಾ. ೬-೧೨). [ಸಂ.]

**ಶ್ರುತಿವಚನ** (ನಾ). ವೇದೋಕ್ತಿ : ಪಿತೃಸಮೋ ಭ್ರಾತಾ ಎನಿಪ್ಪುದು ಶ್ರುತಿವಚನವು (ಕುಮ್ಯಾಕ. ೧೭-೨೦); ಬಿಂಕವೇ ಶ್ರುತಿವಚನ ಸಮ್ಮತಿ (ನಗತಾ. ೧೩-೪೭). [ಸಂ.]

**ಶ್ರುತಿವಿದ್ಧ** (ನಾ). = ಶ್ರುತವಿದ್ಧ : ರಸಚಿತ್ರಧೂಳೀಚಿತ್ರದೋಜೆಯುಮಂ ಶ್ರುತಿವಿದ್ಧ ಮಾತೃವಿದ್ಧಂ ಪರವಿದ್ಧಮೆಂಬ ವಿದ್ಧಪದ್ಧತಿಯುಮಂ ಲಾಕ್ಷಾರಸರೇಖಾಶುದ್ಧಿಯುಮಂ . . . ನೋಡಿ (ಮಲ್ಲಿಪು. ೫-೪೨). [ಸಂ.]

**ಶ್ರುತಿವಿರಸಪದ** (ನಾ). ಕೇಳಲು ಕರ್ಕಶವಾದ ಪದ : ಶ್ರುತಿವಿರಸಪದ ಕ್ಷೇಪಸ್ಥಿತಿಕಷ್ಟಂ ಗ್ರಾಮ್ಯಶಬ್ದಸಂದರ್ಭಸಮನ್ವಿತಮುಮಸಭ್ಯಾರ್ಥಕೃತಿಸ್ಥಿತಿಯುಂ ನೀರಸಮೆನಿಪ್ಪುದಕ್ಕುಂ ದೋಷಂ (ಕಾವ್ಯಾವ. ೪೪೩). [ಸಂ.]

**ಶ್ರುತಿಶರಣ** (ನಾ). ವೇದಾದಿ ಶಾಸ್ತ್ರಗಳ ಹೇಳಿಕೆಯನ್ನು ಪಾಲಿಸುವವನು,- ಅನುಸರಿಸುವವನು : ವ್ಯಾಕರಣಾಧಿಕರಣವು ಶ್ರುತಿಮೂಲಕವು ; ಶ್ರುತಿಶರಣರು ವ್ಯಾಕರಣಾಧಿಕರಣ ಪ್ರಕಾರ ನಡೆಯಬೇಕೆಂದು ಸಿದ್ಧಾಂತ (ಓಂದಸಾ. ೧೭೭). [ಸಂ.]

**ಶ್ರುತಿಶೂನ್ಯ** (ನಾ). ೧. ಶ್ರವಣಶಕ್ತಿಯನ್ನು ಕಳೆದುಕೊಂಡವನು ; ಕಿವುಡ. ೨. ಕಿವಿಗಳಿಲ್ಲದುದು ; ಹಾವು. ೧, ೨ : ನಿಜಶ್ರುತಿಶೂನ್ಯವಾಗಿ ಮಾರುತಭುಗುವಲ್ಲು ದಂಡಧರನಾಗಿ ದಿಟಂ ಜವನಲ್ಲು . . . ಎನೆ ಪ್ರದ್ಯನಿದೇಂ ವಿರುದ್ಧನೋ (ಪುಷ್ಪಪು. ೧೩-೩೫). [ಸಂ.]

**ಶ್ರುತಿಸಹ್ಯ** (ಗು). ಕೇಳಲು ಹಿತವಾದ ; ಶ್ರವಣಯೋಗ್ಯವಾದ : ಗಮಕಸಮಾಸದಿಂ ಅಱಕುಳಕ್ಕಳದಿಂ ಶ್ರುತಿಸಹ್ಯಸಂಧಿಯಿಂ ಸಮುಚಿತಮಾಗಿ ಬರ್ಪ ಸತಿಸಪ್ತಮಿಯಿಂ . . . ಯತಿವಿಲಂಘನದಿಂದರಿದಲ್ತೆ ಕನ್ನಡಂ (ಶಮದ. ೫, ಸಮಾಪ್ತಿವಾಕ್ಯಂಗಳ್). [ಸಂ.]

**ಶ್ರುತಿಸುಭಗ** (ನಾ). ಕೇಳಲು ಇಂಪಾದುದು; ಕರ್ಣಾನಂದವಾದುದು: ಅತಿನಿಪುಣರೞಿಗೆ ತೋರ್ಪಂ ಶ್ರುತಿಸುಭಗವೆನಿಪ್ಪ ರೂಪಕಾಲಂಕೃತಿಯಂ (ಕವಿರಾ. ೩-೧೧). [ಸಂ.]

**ಶ್ರುತಿಹೀನ** (ನಾ). [ಸಂಗೀತ] ಸ್ವರದೋಷಗಳಲ್ಲಿ ಒಂದು : ಕಂಪಿತ ಚಿಂತಿತ . . . ಶ್ರುತಿಹೀನ [ಪಾಠಾಂ. ವಿವರ್ಜಿತ] ಕಾಕಸ್ವರ ಪ್ರಯಾಣ ಅಸಮಾನ ತಾಳವಿಹೀನವೆಂಬ ಪದಿನೈದು ಸ್ವರದೂಷಣಂ ಪೊರ್ದದೆ ಪಾಡಿ ಮೋಹಿಸುವ ಗಾಯಕರಿಂ (ವಿವೇಕ. ೨೭೭). [ಸಂ.]

**ಶ್ರುತ್ಯರ್ಥ** (ನಾ). ವೇದಗಳಲ್ಲಿನ ಅರ್ಥ ; ಶಾಸ್ತ್ರಗಳಲ್ಲಿನ ಅಭಿಪ್ರಾಯ : ನೂತನಶ್ರುತ್ಯರ್ಥ ನುಡಿಗಲಿತುದೋ ಘನಸ್ವಾತಂತ್ರ್ಯವೃತ್ತಿ ಬೋಧಿಸತೊಡಗಿತೋ ಎಂಬ ಚಾತುರ್ಯದಿಂದಿರ್ದ ಮುನಿನಾಥನಂ ಕಂಡು (ಪಚಕಾ. ೫-೭೭); ಶ್ರವಣ ಎಂದರೆ ಸತ್ಸಂಪ್ರದಾಯಜ್ಞರಾದ ಗುರುಗಳ ಉಪದೇಶದಿಂದ 'ಶ್ರುತ್ಯರ್ಥ ಇದೇ ಸರಿ, ಮತ್ತೊಂದಲ್ಲ' ಎಂದು ನಿರ್ಧರಿಸುವುದು (ಭಾತತ್ತ್ವ. ೯೧೨). [ಸಂ.]

**ಶ್ರುತ್ಯಾರೂಢ** (ನಾ). ೧. ವೇದಾದಿ ಶಾಸ್ತ್ರಗಳಲ್ಲಿ ಪ್ರತಿಪಾದಿತವಾದುದು. ೨. ವೇದಾದಿ ಶಾಸ್ತ್ರಗಳಲ್ಲಿ ಪ್ರತಿಪಾದಿತನಾದವನು ; ಪರಮಾತ್ಮ ; ಭಗವಂತ: ನಿತ್ಯಾನಂದಂ . . . ಶ್ರುತ್ಯಾರೂಢಂ ಶುಭಗುಣಯುತಂ ಶುದ್ಧಸಿದ್ಧಾಂತಸಾರಂ ಭೃತ್ಯಾಧಾರಂ ಭುವನಶರಣಂ ತ್ವಾಂ ಶರಣ್ಯಂ ಪ್ರಪದ್ಯೇ (ರಾಜಶೇ. ೧೩-೫೮). [ಸಂ.]

**ಶ್ರೇಢೀಬದ್ಧ** (ನಾ). [ಜೈನ] ಮೂರು ವಿಧವಾದ ನರಕಬಿಲಗಳಲ್ಲಿ ಒಂದು ; ''ಇಂದ್ರಕಬಿಲದ ನಾಲ್ಕೂದಿಕ್ಕುಗಳಲ್ಲಿ ಸಾಲಾಗಿರುವ ಬಿಲಗಳು'' (ಆದಿಪು. ಜೈನಪಾರಿಭಾಷಿಕಶಬ್ದಕೋಶ) : ಆ ಬಿಲಂಗಳುಮಿಂದ್ರಕ ಶ್ರೇಢೀಬದ್ಧ ಪ್ರಕೀರ್ಣಕಂಗಳೆಂದು ಮೂಱುತೆಱನಕ್ಕುಂ (ಆದಿಪು. ೫-೮೩ ವ). [ಸಂ.]

**ಶ್ರೇಣಿ** (ನಾ). ೧. ಪಂಕ್ತಿ; ಸಾಲು: ಎಳಗೊಂಗೊಳ್ಗಂಬದಿಂ ಬಾಳೆಯ ತೊಲೆಯಿನಳಿಸ್ಸಾರ ಕಲ್ಹಾರಪುಷ್ಪಂಗಳ ಘಂಟಾಶ್ರೇಣಿಯಿಂ ಕೇತಕಿಯ ದಳದ ಕಿಳ್ಗಂತೆಯಿಂ . . . ಕಣ್ಗೊಳಿಕುಂ ನಾನಾಲತಾಂತಪ್ರಸರ ಸರಯುತಂಗಳ್ ಪ್ರಪಾಮಂಟಪಂಗಳ್ (ರಾಜಶೇ.೨-೨೧). ೨. ಗುಂಪು ; ಸಮೂಹ : ಸಕಳೋದ್ಯಾನಂಗಳೊಳ್ ಸಂತತ ಸರಸ ಫಳವ್ರಾತದಿಂ ಸೇವ್ಯಮಲ್ಲಲ್ಲಿ ಕರಂ . . . ಚೂತೋತ್ಕರಂ ದಾಡಿಮತತಿ ಪನಸಶ್ರೇಣಿ ಜಂಬೀರಜಾಳಂ (ಪುಷ್ಪಪು. ೯-೧೫); ತೀರರುಹಫಲಪುಷ್ಪಭಾರಾವನತತರುಲತಾಶ್ರೇಣಿ ತಾಂ ಮಣಿನಿಕಾ ಶೋದಕ ನದೀವಕ್ಷ್ದರ್ಪಣದಿ ಮಾರ್ಪೊಳೆವವೊಲ್ ಬಾಗಿ (ಶ್ರೀರಾಮಾ. ೧೫೦-೨೨೧). ೩. ವರ್ತಕರ ಅಥವಾ ಕಸುಬುದಾರರ ಮುಖ್ಯಸ್ಥರು ಸೇರಿ ನಡೆಸುವ ಸಭೆ: ಪ್ರಾಯಕವಾಗಿ ಪ್ರತಿಕಸಬು ಕೈಗಾರಿಕೆಯಲ್ಲಿಯೂ ವ್ಯವಸ್ಥೆಯು ಆ ಕಸಬುದಾರರಲ್ಲಿ ಮುಖ್ಯಸ್ಥರು ಸೇರಿದ ಶ್ರೇಣಿಯೆಂಬ ಸಭೆಯಲ್ಲಿ ನಡೆಯುತ್ತಲಿತ್ತು (ಭಾಇಪ್ರ. ೧೪೨); ಗುಂಪುಗಳ ಅಭಿಪ್ರಾಯದ ಮೇಲೆ ರಚಿಸಲ್ಪಟ್ಟ ಪೂಗ, ಶ್ರೇಣಿ, ಕುಲ ಎಂಬ ವಿಚಾರಣಾ ಸಮಿತಿಗಳಿರುತ್ತಿದ್ದವು (ಭಾರದ. ೫೭). ೪. ದರ್ಜೆ ; ವರ್ಗ : ನಿಮ್ಮ ಹುಡುಗ ಯಾವ ಶ್ರೇಣಿಯಲ್ಲಿ ತೇರ್ಗಡೆಯಾಗಿದ್ದಾನೆ ? (ರೂಢಿ). ೫. ಮಜಲು; ಮೆಟ್ಟಿಲು : ಜೀವನದ ಯಾವ ಕ್ಷೇತ್ರದ ಆಶೋತ್ತರವೇ ಆಗಲಿ, ಮೂರು ಶ್ರೇಣಿಯಲ್ಲಿ ಉತ್ಕರ್ಷವೆನಿಸಬೇಕು. ವ್ಯಕ್ತಿಯ ಅಭ್ಯುದಯ, ಸಮಾಜದ ಅಭ್ಯುದಯ, ಮಾನವತ್ವದ ಅಭ್ಯುದಯ — ಇವೇ ಆ ಅಂತಿಮ ಆಶೋತ್ತರದ ಮೂರು ಮೆಟ್ಟಲು (ಶಿಕ್ಷದ. ೩೭೯). ೬. ಒಂದು ಬಗೆಯ ಸಸ್ಯ : ''ಶ್ರೇಣಿ — ವೇಣುಪತ್ರಿ'' (ಓಷಧಿ. ೧೭೦). [ಸಂ. ಶ್ರೇಣಿ, ಶ್ರೇಣೀ]

**ಶ್ರೇಣಿಕೆ** (ನಾ). ೧. ಗುಂಪು ; ಸಮೂಹ : ಬುಧಜನಪ್ರೀಣನಾಗ್ರೇಸರಗ್ರಾಮಣಿಯಾದಂ ದಾನಚಿಂತಾಮಣಿ ಗುಣಮಣಿ ಶ್ರೇಣಿಕಾಶ್ರೇಣಿಯಿಂದಂ (ಅಜಿಪು. ೧೨-೧೫). ೨. ಡೇರೆ ; ಗುಡಾರ. [ಸಂ. ಶ್ರೇಣಿಕಾ]

**ಶ್ರೇಣಿಬದ್ಧ** (ನಾ). = ಶ್ರೇಢೀಬದ್ಧ : ಆ ನರಕಬಿಲಂಗಳೆಲ್ಲಮೆಣ್ಬತ್ತುನಾಲ್ಕುಲಕ್ಷಪರಿ ಪ್ರಮಾಣಮಾಗಿಯುಮಿಂದ್ರಕಶ್ರೇಣಿಬದ್ಧಪ್ರಕೀರ್ಣಕಂಗಳೆಂದು ಮೂಱುತೆಱನಕ್ಕುಂ (ಸುಕುಮಾ. ೧೧-೪೧ ವ) ; ಸೌಧರ್ಮೇಶಾನಾದಿಗಳ ವರವಿಮಾನಂಗಳಿಂದ್ರಕ ಶ್ರೇಣಿಬದ್ಧ ಪ್ರಕೀರ್ಣಕಂಗಳೆಂದು ಮೂದೆಱಂ (ಚಂದ್ರಪ್ರ. ೩-೩೨ ವ). [ಸಂ.]

**ಶ್ರೇಯ** (ನಾ). ೧. ಉತ್ತಮವಾದುದು; ಯೋಗ್ಯವಾದುದು: ಶ್ರೇಯಮನೆನಗಱಿಪಲು ಪಾಧ್ಯಾಯನೆ ತನಗಱಿಯನಱಿವನಪ್ಪೊಡೆ ಭರತಂ ಜ್ಯಾಯನ ರಾಜ್ಯಮನಯ್ಯ ಕನೀಯಂ ಕೈಕೊಂಡ ತೊಂದು ತನಗಾವುಚಿತಂ (ಪಂರಾಮಾ. ೭-೫೩); ಶ್ರೇಯಂ ಶ್ರೇಯಂ ದ್ವಿಷದ ವಸಾಯಕಸಾಯಕಪರಂಪರಂ ಲಲಿತಯುವತ್ಯಾಯತನತ್ಯಾಯತನಂ ಗೇಯೋದ್ಯಾಯತ್ತ ಕಳಕಳಂ ಸಕಳಕಳಂ (ಕಾವ್ಯಾವ. ೫೪೯). ೨. ಶುಭ ; ಮಂಗಳ: ಸ್ವಸ್ತ್ಯಾದಿಗೆ . . . ಶ್ರೇಯಂ, ಶಿವಂ, ಶುಭಂ, ಸ್ವಸ್ತಿ, ಮಂಗಳಂ (ಶಮದ. ೧೫೦ ಪ್ರಯೋ). ೩. ಪುಣ್ಯ ; ಸುಕೃತ: ''ಧರ್ಮಃ, ಪುಣ್ಯಂ, ವೃಷಃ, ಶ್ರೇಯಃ, ಸುಕೃತಂ — ಈ ೫ ಪುಣ್ಯದ ಪೆಸರ್'' (ಹಲಾಯು. ೨೧-೧೨೫); ಮಾರದಿರ್ ಚಲಕೆ ಜೀವನಶ್ರೇಯಮಂ (ಶ್ರೀರಾಮಾ. ೩೧೦-೨೨೪); ದಾಯ ಸಮಸಂಸ್ಕೃತಿ ಭೂಭಾಗ್ಯವಾದಂದು ಶ್ರೇಯ ನೆರೆವುದು ಜಗಕೆ (ಮಂಕುಕ. ೮೮೩). ೪. ಮೋಕ್ಷ. [ಸಂ. ಶ್ರೇಯಸ್]

**ಶ್ರೇಯಸಿ** (ನಾ). ಒಂದು ಬಗೆಯ ಸಸ್ಯ ; ಅಣಿಲೆ : ''ಶ್ರೇಯಸೀ — ರಾಸ್ನೆ, ಅಳಲೆ, ಗಜಹಿಪ್ಪಲಿ, ಪ್ರಿಯಂಗು, ಅಗುಳುಶುಂಠಿ'' (ಓಷಧಿ. ೧೭೦). [ಸಂ. ಶ್ರೇಯಸೀ]

**ಶ್ರೇಯಸ್ಕರ** (ಗು). ೧. ಸಂತೋಷದಾಯಕವಾದ ; ಆನಂದದ. ೨. ಮಂಗಳಕರವಾದ ; ಶುಭವನ್ನುಂಟುಮಾಡುವ. (ನಾ). ೩. ಒಳ್ಳೆಯದು; ಮಂಗಳಕರ : ಮಕ್ಕಳಿಗೆ ಒಳ್ಳೆಯ ಅಭ್ಯಾಸಗಳನ್ನು ಕಲಿಸಿದರೆ, ಮುಂದೆ ಅವರಿಗೂ ವಂಶಕ್ಕೂ ಶ್ರೇಯಸ್ಕರ (ಗೃಹವಿ. ೧೨೯); ಲೋಕರೂಢಿಗೆ ಮರ್ಯಾದೆ ಕೊಟ್ಟು ನಾನು ಗಂಡು ಹುಟ್ಟಲಿ ಅನ್ನೋದು ಶ್ರೇಯಸ್ಕರ ಖರೆ (ಗಂಡಾಯಿ. ೨೪೦). ೪. [ಜೈನ] ಅಂತರಾಳದಲ್ಲಿರುವ ಲೋಕಾಂತಿಕದೇವತೆಗಳಲ್ಲಿನ ಒಂದು ಕುಲ : ವಹ್ನ್ಯರುಣಾಂತರದೊಳ್ ಶ್ರೇಯಸ್ಕರ ಕ್ಷೇಮಂಕರರುಂ ಅರುಣಗರ್ದತೋಯ ಮಧ್ಯದೊಳ್ ವೃಷಕೋಷ್ಠಕಾಮಧರರುಂ (ತತ್ತ್ವಪ್ರ. ೨೨೨). [ಸಂ.]

**ಶ್ರೇಯಸ್ಸು** (ನಾ). ೧. ಶುಭ ; ಮಂಗಳ : ಮೇಣೆಂಬ ವಿಕಲ್ಪಾರ್ಥದಿಂ ಸಕಾರಾಂತದಲ್ಲಿ . . . ಮನ, ಮನಸ್ಸು ; ಶ್ರೇಯ, ಶ್ರೇಯಸ್ಸು (ಶಮದ. ೬೬ ಪ್ರಯೋ); ದೈವವು ಅನುಕೂಲವಾದರೆ ಶ್ರೇಯಸ್ಸಿನ ಮೇಲೆ ಶ್ರೇಯಸ್ಸು (ವಚಕಾ. ೫). ೨. ಶ್ರೇಷ್ಠತೆ ; ಉತ್ಕೃಷ್ಟತೆ. ೩. ಅಭಿವೃದ್ಧಿ ; ಏಳಿಗೆ. ೪. ಅತಿಶಯವಾದ ಸಂತೋಷ ; ಪರಮಸುಖ. [ಸಂ. ಶ್ರೇಯಸ್]

**ಶ್ರೇಯಾಂಸ** (ನಾ). ೧. ಅಭ್ಯುದಯವನ್ನು ಹೊಂದಿದವನು ; ಏಳಿಗೆಯನ್ನು ಪಡೆದವನು. ೨. [ಜೈನ] ಹನ್ನೊಂದನೆಯ ತೀರ್ಥಂಕರ : ಶ್ರೀಮತ್ಕಾಶ್ಯಪಗೋತ್ರ ಮಹಾಮಹಿತೇಕ್ಷ್ವಾಕುವಂಶತಿಳಕಂ ನತಪೌಲೋಮಿಪತಿ ನಿರುಪಮಸುಖಧಾಮಂ ಶ್ರೇಯಾಂಸನಿಗೆ ನಿಃಶ್ರೇಯಸಮಂ (ಚಾವುಂಪು. ೧೫೪). [ಸಂ.]

**ಶ್ರೇಯೋಮಾರ್ಗ** (ನಾ). ಶಾಶ್ವತಸುಖವನ್ನು ನೀಡುವ ಹಾದಿ ; ಮೋಕ್ಷಪಥ: ಶ್ರೇಯೋಮಾರ್ಗದೊಳೊಂದಿದಾರ್ಯರೊಡನೊಲ್ದಾಳೋಚನಂ ಮಾಡಿಯುಂ ಪ್ರಾಯಶ್ಚಿತ್ತ ಮನೊಲ್ಲದಿರ್ಪ ಮುನಿಪಂ . . . ಏಂ ಶಾಶ್ವತಶ್ರೀಯಂ ತಾಳ್ದುಗುಮೋ (ಮಲ್ಲಿಪು. ೧೧-೩೩ ವ). [ಸಂ.]

**ಶ್ರೇಷ್ಠ** (ಗು). ೧. ಉತ್ತಮವಾದ ; ಉತ್ಕೃಷ್ಟವಾದ. ೨. ಬಹಳ ಅಭಿವೃದ್ಧಿಯ; ಅತ್ಯಂತ ಏಳಿಗೆಯ. ೩. ಹಿರಿಯ ; ವರಿಷ್ಠ. (ನಾ). ೪. ಉತ್ತಮವಾದುದು; ಉತ್ಕೃಷ್ಟವಾದುದು : ವಜ್ರವು ರತ್ನಗಳಲ್ಲಿ ಶ್ರೇಷ್ಠವಾದದ್ದು (ಮುಂಬಯಿ. ೪-೧೭೯). ೫. ಮುಖ್ಯವಾದುದು ; ಪ್ರಧಾನವಾದುದು : ವಿದ್ಯಕ್ಕಿಂತ ಬುದ್ಧಿ ಶ್ರೇಷ್ಠ, ಬುದ್ಧಿಗಿಂತ ಆಹಾರ ಶ್ರೇಷ್ಠ (ಗಾದೆ). ೬. ಹೆಚ್ಚುಗಾರಿಕೆ ; ಮೇಲ್ಮೆ : 'ಶ್ರೇಷ್ಠಗೆಡು' ಪರಾ. ೭. ಉತ್ತಮನಾದವನು; ಮೇಲಾದವನು : ಕಳುಹು ರಕ್ಕಸಗನ್ನೊಡನೆ ನಿನ್ನಾ ಜ್ಯೇಷ್ಠನಂ, ಕಾಕಪಕ್ಷಧರ ಕಲಿರಾಮನಂ, ಶ್ರೇಷ್ಠನಂ (ಶ್ರೀರಾಮಾ. ೨೮-೧೯). ೮. ಸೃಷ್ಟಿಕರ್ತ; ಬ್ರಹ್ಮ : "ಪಿತಾಮಹಂ . . . ಶ್ರೇಷ್ಠಂ ಜಗಾತ್ಮನಂಬುರುಹಾಸನಂ ಹೇಮಕುಕ್ಷಿ ಸುರಜ್ಯೇಷ್ಠಂ ವಿರಂಚಿಯೆನೆ ಬ್ರಹ್ಮನಕ್ಕುಂ" (ಮಂಗರಾ. ೩-೯). ೯. ಶಿವ ; ಪರಮೇಶ್ವರ. ೧೦. ವಿಷ್ಣು. ೧೧. ಕುಬೇರ. ೧೨. ಬುದ್ಧ. ೧೩. ರಾಜ ; ದೊರೆ. [ಸಂ.]

**ಶ್ರೇಷ್ಠಗೆಡು** (ಕ್ರಿ). ಹೆಚ್ಚಳಿಕೆಯು ಕುಂದು ; ಹಿರಿಮೆಯು ಅಳಿ : ಪರಿಪೂರ್ಣವಪ್ಪ ಸಮ್ಯಕ್‌ಜ್ಞಾನವಂತರೆಲ್ಲರು ಆಶೆ ಎಂಬ ಪಾಶವು ತಲೆದೋಱೆ ತಮ್ಮ ಜ್ಞಾತೃ ಅಲ್ಲಿಯೆ ಶ್ರೇಷ್ಠಗೆಟ್ಟಿತ್ತು (ಮೋಳಿಮಾ. ೧೫೨-೭೮೩). [ಶ್ರೇಷ್ಠ + ಕೆಡು]

**ಶ್ರೇಷ್ಠತನ** (ನಾ). ಹಿರಿಮೆ ; ಮೇಲ್ಮೆ : (೬). [ಶ್ರೇಷ್ಠ + - ತನ]

**ಶ್ರೇಷ್ಠತೆ** (ನಾ). = ಶ್ರೇಷ್ಠತನ : ಶಿವನಿಗಿಂತ ಜಿನನ ಶ್ರೇಷ್ಠತೆಯನ್ನು ಸಾರಲು ಕವಿಯು ಹವಣಿಸಿರುವನೆಂಬುದರಲ್ಲಿ ಸಂದೇಹವೇ ತಲೆಯೆತ್ತಲಾರದು (ಸಾಹಿಸ. ೧೩೭). [ಸಂ. ಶ್ರೇಷ್ಠತಾ]

**ಶ್ರೇಷ್ಠತ್ವ** (ನಾ). = ಶ್ರೇಷ್ಠತನ. [ಸಂ.]

**ಶ್ರೇಷ್ಠನ್ಯಾಯಾಲಯ** (ನಾ). ಉಚ್ಚನ್ಯಾಯಾಲಯ : ಅವರು ಶ್ರೇಷ್ಠನ್ಯಾಯಾಲಯಕ್ಕೆ ಅಪೀಲು ಹೋದರು (ರೂಢಿ). [ಸಂ.]

**ಶ್ರೇಷ್ಠಪಾರ್ಷ್ಣಿ** (ನಾ). ಉತ್ತಮವಾದ (ಬೆನ್ನಿನ) ಭಾಗವನ್ನುಳ್ಳುದು : ಸುಸಂಚಿತ ಪ್ರೋಹಫಳೀಹಸ್ತಗಾತ್ರನುಂ ಪರಿಪೂರ್ಣ ಶ್ರೇಷ್ಠ[ಪಾಠಾಂ. ತುಷ್ಟ, ಶ್ಲಿಷ್ಟ] ಪಾರ್ಷ್ಣಿಯುಮಂಸಳಕಾಳಭಾಗನುಂ . . . ಅಪ್ಪ ವಿಜಯಪರ್ವತಗಜೇಂದ್ರಂ ಬಂದು ಮುಂದೆ ನಿಲ್ವುದುಂ (ಆದಿಪು. ೧೨-೫೬ ವ). [ಸಂ.]

**ಶ್ರೇಷ್ಠಶಾಕ** (ನಾ). ಒಂದು ಬಗೆಯ ಸಸ್ಯ : "ಜೀವಂತೀ -- ಸಿಹಿಪಾಲೆ, ಮದೆ, ಹೊಂಬಾಳೆ, ಅಣಿಕೆ, ಶ್ರೇಷ್ಠಶಾಕ" (ಓಷಧಿ. ೬೩). [ಸಂ.]

**ಶ್ರೇಷ್ಠಾಗಮ** (ನಾ). [ವೀಶೈ] ವಾತೂಲಾಗಮದ ಹನ್ನೆರಡು ಭೇದಗಳಲ್ಲಿ ಏಳನೆಯದು : ವಾತೂಲ ಉತ್ತರವಾತೂಲ ಕಾಲಜ್ಞಾನ ಪರಾಜಿತ ಸರ್ವಾಗಮ ಸರ್ವಾಜ್ಞಾಗಮ ಶ್ರೇಷ್ಠಾಗಮ . . . ವಿಶ್ವಾತ್ಮಕಾಗಮವೆಂದು ವಾತೂಲಾಗಮದ ದ್ವಾದಶಭೇದಂಗಳು (ವಿವೇಕ. ೭೨). [ಸಂ.]

**ಶ್ರೇಷ್ಠಿ** (ನಾ). ೧. ಒಂದೇ ವಿಧವಾದ ವ್ಯಾಪಾರ ಅಥವಾ ಕಸುಬಿನವರ ಸಂಘದ ಮುಖಂಡ ; ವಾಣಿಜ್ಯೋದ್ಯಮ ಸಂಘದ ಮುಖ್ಯಸ್ಥ : ವರ್ತಕರಲ್ಲಿ ಮುಖ್ಯನಾಗಿದ್ದವನೇ ಶ್ರೇಷ್ಠಿಯೆನಿಸಿದ್ದನು (ಬಾಂಪ್ರ. ೬೬). 'ಕುಲಶ್ರೇಷ್ಠಿ' ಪರಾ. ೨. ವ್ಯಾಪಾರವನ್ನು ವೃತ್ತಿಯನ್ನಾಗಿ ಉಳ್ಳವನು ; ವೈಶ್ಯಕುಲದವನು ; ಸೆಟ್ಟಿ: ಧರ್ಮಪುರಮೆಂಬುದು ಪೊಲಲಲ್ಲಿ ನಾಗದತ್ತನೆಂಬೊಂ ಶ್ರೇಷ್ಠಿ (ವಡ್ಡಾರಾ. ೧೮-೩); ಜೈನರು ಮೊತ್ತಮೊದಲು ವ್ಯಾಪಾರಕ್ಕಾಗಿ ನಮ್ಮ ನಾಡಿನಲ್ಲಿ ನೆಲೆಸಿದರೆನ್ನಬೇಕು. ಇವರೇ ಶ್ರೇಷ್ಠಿಗಳು (ಶೆಟ್ಟಿಗಳು) (ತುಳುನಾ. ೧೮೮). [ಸಂ. ಶ್ರೇಷ್ಠಿನ್]

**ಶ್ರೇಷ್ಠೆ** (ನಾ). ೧. ಅತ್ಯುತ್ತಮಳಾದ ಹೆಂಗಸು. ೨. ಉತ್ತಮವಾದ ಹಸು : "ನೈಚಿಕಿ ಶ್ರೇಷ್ಠೆಯೆನೆ ತಲೆಯಾವೆನಿಕ್ಕು" (ಮಂಗರಾ. ೫೪-೪). [ಸಂ. ಶ್ರೇಷ್ಠಾ]

**ಶ್ರೋಣ** (ನಾ). ೧. ಬೇಯಿಸಿದ ; ಪಕ್ವಮಾಡಿದ. (ನಾ). ೨. ಹೆಳವ ; ಕುಂಟ: "ಶ್ರೋಣಃ, ಪಂಗುಃ -- ೨ ಕಾಲಿಲ್ಲದ ಕುಂಟನ ಹೆಸರುಗಳು" (ಸಿದ್ಧಾಂತಿ. ೧೮೨). [ಸಂ.]

**ಶ್ರೋಣಿ** (ನಾ). ೧. ಜಘನ ; ನಿತಂಬ : ಹರಿಣೀಲೋಚನೆ ಪಂಕಜಾನನೆ ಘನಶ್ರೋಣೀಸ್ತನಾಭೋಗಭಾಸುರೆ ಬಿಂಬಾಧರೆ . . . ಅಚಲದೇವಿ ಕನ್ನುಸತಿಯಂ ಸೌಂದರ್ಯದಿಂದೇಳಿಪಳ್ (ಎಕ. II, ೩೭೬-೫೮; 1181); ಬಗೆಯಂ ಬಲ್ಪೆಳೆಗೆಯ್ದುದೀಗಳಿ ವಳೀ ಮಾಧುರ್ಯವು . . . ಈ ಪೃಥುಳವೃತ್ತಶ್ರೋಣಿಯಾ ಬೇಟದುಜ್ಜುಗವೀ ವಿಭ್ರಮ (ರಾಜಶೇ. ೬-೭೦). ೨. ಹೆಳವ ; ಕುಂಟ : "ಖಂಜಃ, ಪಂಗುಃ, ಶ್ರೋಣಿಃ — ಈ ೩ ಪೆಟವಂ" (ಹಲಾಯು. ೧೦೦-೫೫೬). ೩. ದಾರಿ ; ರಸ್ತೆ. [ಸಂ.]

**ಶ್ರೋಣಿತ** (ನಾ). ೧. ಕೆಂಪುಬಣ್ಣ : ಕಾಳಮ್ಮಯ ಕಟೆಯಲಾಗಿ ಹಾಲು ರೋಹಿತವಾಗಿ ಬಿದ್ದಿತ್ತು . . . ಶ್ರೋಣಿತವಳಿದು ಹೋಗಲಾಗಿ ಹಾಲು ಹೆಪ್ಪಾಯಿತ್ತು (ಮೋಳಿಮಾ. ೨೨೩-೭೭೬). ೨. ನೆತ್ತರು ; ರಕ್ತ : ಹೊರ ಊರ ಬೈಲಲ್ಲಿ ಮುಸುಕೀತು ಜಗಳವು ವಸವಂತವಾಡ್ಯಾರು ಶ್ರೋಣಿತವ (ಕಾಲಸಂ. I, ೨೩). [< ಸಂ. ಶೋಣಿತ]

**ಶ್ರೋತ** (ನಾ). ಕರಣ ; ಇಂದ್ರಿಯ : "ಶ್ರೋತಂ ಖಮಿಂದ್ರಿಯಂ ಹೃಷಿಕಮಕ್ಷಂ ಕರಣಮಾತನುವಿನಿಂದ್ರಿಯಂಗಳು" (ಮಂಗರಾ. ೯೭-೧೫). [ಸಂ. ಶ್ರೋತಸ್]

**ಶ್ರೋತವ್ಯ** (ಗು). ೧. ಕೇಳಬಹುದಾದ ; ಶ್ರವಣಾರ್ಹವಾದ. (ನಾ). ೨. ಕೇಳುವಂಥದು ; ಶ್ರವಣಯೋಗ್ಯವಾದುದು : ಪ್ರಭುದೇವರ 'ಅನಾಯಾಸದ ಅನು', 'ಚಿಂತೆಯಿಲ್ಲದ ಅನುಭಾವ ಗೊಹೇಶ್ವರ' ಇನ್ನೂ ಶ್ರೋತವ್ಯ. ಇನ್ನೂ ಮಂತವ್ಯ (ವಚಸಂ. VIII, ಒಳಗೆ ಪ್ರವೇಶ). ೩. ಶ್ರವಣಯೋಗ್ಯನಾದವನು : ಶ್ರೋತವ್ಯನನು ಸಂಕೀರ್ತಿತವ್ಯನನು ಅವ್ಯಯನನಕ್ಷಯನನಭವನನವ್ಯಥನನಜ್ಞಾನದಲಿ ಯೋಗವ್ಯನೆಂದೇ ಸೆಣಸಿದೆವಲಾ (ಕುವ್ಯಾಅ. ೬-೭೪). [ಸಂ.]

**ಶ್ರೋತಾರ** (ನಾ). ಕೇಳುವವನು ; ಶ್ರೋತೃ : ಸಹಾನುಭೂತಿಯಿಂದ ಕವಿ ಶ್ರೋತಾರರು ಒಂದಾಗುತ್ತಾರೆ. ಕವಿತೆ ಸಫಲವಾಗುತ್ತದೆ (ವಿಚಾರಮಂ. ೧೪೭); ಉಪನ್ಯಾಸಗಳನ್ನು ಮೈಸೂರಿನಲ್ಲಿ, ಹಲವಾರು ಶ್ರೋತಾರರ ಮುಂದೆ ಮಾಡಿಯೂ ಆಯಿತು (ಪಾಸಗ. V, ಪ್ರಸ್ತಾವನೆ). [ಸಂ. ಶ್ರೋತೃ]

**ಶ್ರೋತೃ** (ನಾ). ೧. = ಶ್ರೋತಾರ : ಕಲ್ಯಾಣಾರ್ಥಿಯಪ್ಪಾತಂ ವಿವಕ್ಷಿತಮಪ್ಪ ವಸ್ತುವಂ ಪೇಟ್ಟುವರ್ಗಳು ಮುನ್ನಮಾಪ್ತಾಗಮವಕ್ತೃ ಕಥೆ ಶ್ರೋತೃವೆಂಬಿವಂ ಪೇಟ್ದುದವರೊಳ್ (ಚಾವುಂಪು. ೫); ದಾಕ್ಷಿಣ್ಯವಂತನುಂ . . . ಮಧ್ಯಸ್ಥನುಮೆಂಬ ದಶವಿಧಶುದ್ಧಗುಣಂಗಳಿಂ ನೆರೆದಂ ಶ್ರೋತೃವೆಂಬೊನಕ್ಕುಂ (ಅಜಿಪು. ೧೧-೨ ವ). ೨. ವಿದ್ಯಾರ್ಥಿ. [ಸಂ.]

**ಶ್ರೋತ್ರ** (ನಾ). ೧. ಕಿವಿ ; ಕರ್ಣ : "ಶ್ರವಣಂ ಕರ್ಣಂ ಶ್ರೋತ್ರಂ ಕಿವಿ" (ವಸ್ತುಕೋ. ೭೦-೧೮); ರುದ್ರ ಮುಖದಲ್ಲಿ . . . ಶ್ರೋತ್ರದಲ್ಲಿ ದಶದಿಕ್ಕುವೂ ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ ಅಕ್ಷಯನಗಣಿತನು (ಬಸವ. ೫೩೬); ಶ್ರೀ ವಾಗ್ದೇವಿಗೆ ಶಬ್ದದಿನಾವಾವಿಂದ್ರಿಯದ ವಿಷಯಮಂ ಶ್ರೋತ್ರದೊಳುದ್ಭಾವಿಪ ನಿರ್ಮಲಮೂರ್ತಿಗಿಳಾಪಂದ್ಯಗೆ ಶಾಸ್ತ್ರಮುಖದೊಳವನತನಪ್ಪೆಂ (ಶಮದ. ೧). ೨. ವೇದ. ೩. ವೇದಾಧ್ಯಯನ ಮಾಡಿದ ಬ್ರಾಹ್ಮಣರಿಗೆ ಕೊಟ್ಟ ಭೂಮಿಯನ್ನು ಗುತ್ತಿಗೆಯಾಗಿ ಪಡೆದ ರೈತರ ಮೇಲೆ ಹಾಕಲಾಗುತ್ತಿದ್ದ ಒಂದು ಬಗೆಯ ತೆರಿಗೆ : ಶ್ರೋತ್ರ ನಿಧಿ ನಿಕ್ಷೇಪ ಜಲ ಪಾಷಾ(ಷಾ)ಣ ತೇಜಸ್ವಾ (ಸ್ವಾ)ಮ್ಯಮಿತ್ಯಾದಷ್ಟ ಕೋಗಸಹಿತಂ . . . ಬ್ರಾಹ್ಮಣೇಭ್ಯಃ ಪ್ರಾದಾತ್ (ಎಇ. XXXII, ೭೨-೭೭: ಸು.೮೦೦). [ಸಂ.]

**ಶ್ರೋತ್ರಗುತ್ತಗೆ** (ನಾ). ವೇದಾಧ್ಯಯನ ಮಾಡಿದ ಬ್ರಾಹ್ಮಣರಿಗೆ ತೆರಿಗೆಯಿಲ್ಲದಂತೆ, ಕೊಟ್ಟ ಭೂಮಿಯ ಗೊತ್ತುವಳಿ, — ಕರಾರು : ಬೊಮ್ಮಣ್ಣ ಹೆಗ್ಗಡೆಯ ಸೊಸೆ ಮಾರುವೆಗೆ ವಿತ್ತಿಯ ಕಯ್ಯಲು ಶ್ರೋತ್ರಗುತ್ತಗೆಯಾಗಿ

ಮಾಡಿಕೊಂಡ ಹಣ ಬೊಂಮಣ ಹೆಗ್ಗಡೆಗೆ ಮೂಱು ಹಣ (ಎಕ. VIII. ತೀರ್ಥಹ. ೧೪೮-೨೦; 1417). 'ಶ್ರೋತ್ರಿಯಗುತ್ತಗೆ' ಪರಾ. [ಶ್ರೋತ್ರ + ಗುತ್ತಗೆ]

**ಶ್ರೋತ್ರನಾಶ** (ನಾ). ಶ್ರವಣಶಕ್ತಿಯನ್ನು ಕಳೆದುಕೊಂಡವನು ; ಕಿವಿ ಕೇಳಿಸದವನು ; ಕಿವುಡ : ಎನ್ನ ಮಾಟ ಕುರುಡ ಸಭೆಯಲ್ಲಿರ್ದು ನಗೆಯ ನಕ್ಕಂತಾಯಿತ್ತು ಶ್ರೋತ್ರನಾಶನಲ್ಲಿ ಜಯಸ್ವರನ ಪಾಡಿದಂತಾಯಿತ್ತು (ಮೋಳಿಮಾ. ೧೦-೩೩). [ಸಂ.]

**ಶ್ರೋತ್ರಪಥ** (ನಾ). = ಶ್ರುತಿಪಥ : ಶ್ರೋತ್ರಪಥಕೆಳಿದುಬಹ ವೇದಬೃಂಹಿತಕೆ ಮನದೆಲ್ಲ ಸದ್ದಡಗಿ ಮತ್ತೆಲ್ಲು ದೊರೆಯದಿಹ ಗಾಂಭೀರ್ಯವಳವಡಲು ಸನ್ನಿಧಿಯ ಜನಕೆ (ಮಲೆದೇ. ೨೨-೭). [ಸಂ.]

**ಶ್ರೋತ್ರವಿಜ್ಞಾನ** (ನಾ). ಕಿವಿಗಳಿಂದ ಪಡೆಯುವ ಜ್ಞಾನ : ಪ್ರವೃತ್ತಿವಿಜ್ಞಾನವು — ಚಕ್ಷುರ್ವಿಜ್ಞಾನ, ಶ್ರೋತ್ರವಿಜ್ಞಾನ . . . ಮನೋವಿಜ್ಞಾನ ಎಂದು ಆರು ಪ್ರಕಾರವಾಗಿದೆ (ಹಿಂದಸಾ. ೭೯). 'ಚಕ್ಷುರ್ವಿಜ್ಞಾನ' ಪರಾ. [ಸಂ.]

**ಶ್ರೋತ್ರಸುಖ** (ನಾ). ಕಿವಿಗೆ ಹಿತವಾದುದು ; ಕರ್ಣಾನಂದಕರವಾದುದು: ಅರ್ಥಭೂತಂಗಳನೆನಿತಾನುಮಂ ನುಡಿವ ನಾಗರಕಶ್ರೋತ್ರಸುಖಮುಖರ ವಾರ್ತಾಮೃತಾಕ್ಷರಂಗಳಂ ಕೇಳುತ್ತುಂ (ಶಾಂತಿಪು. ೬-೧೨ ವ); ಹೂತುದರಸನ ಹರುಷಲತೆ ಪುರುಹೂತವಿಜಯದ ವಿಜಯವಾರ್ತಾ ಶ್ರೋತ್ರಸುಖ ಸಂಪ್ರೀತಿನಯನಜಲಾಭಿಷೇಕದಲಿ (ಕುವ್ಯಾಸ. ೧-೩). [ಸಂ.]

**ಶ್ರೋತ್ರಿ** (ನಾ). ಕೇಳಿಸಿಕೊಳ್ಳುವವಳು : "ಶ್ರೋತ್ರಿ — ಕಿವಿಯುಳ್ಳಾಕೆ" (ಗಂಗಾಮ. ೩೧೨). [ಸಂ. ಶ್ರೋತ್ರೀ]

**ಶ್ರೋತ್ರಿಯ** (ನಾ). ವೇದಾಧ್ಯಯನ ಮಾಡಿದ ಬ್ರಾಹ್ಮಣ ; ವೈದಿಕ : ಒಬ್ಬ ಶ್ರೋತ್ರಿಯನಪ್ಪ ಪಾರ್ವಂ ಯಜ್ಞನಿಮಿತ್ತಂ ಒಂದಾಡಂ ಬೇಱೂರಿಂ ಮಾಱುಗೊಂಡು ಪೆಗಲೊಳಿಕ್ಕಿ ಪೋಪನಂ . . . ಕಂಡು (ಪಂಚತಂ. ೧೪೭-೮) ; ಶ್ರೋತ್ರಿಯರು ತಾವೆಂದು ದಾನಕೆ ಪಾತ್ರರಾವೆಂದೆಂಬ ಗಡ್ಡದ ಹೋತ್ರಗಳ ಮನೆಮನೆಯ ಹೊಕ್ಕಱಸಿದನು ಹನುಮಂತ (ಕೌಶಿರಾ. ೧೦-೨೫).

**ಶ್ರೋತ್ರಿಯವಾಗು** = ವೇದಾಧ್ಯಯನ ಮಾಡಿದ ಬ್ರಾಹ್ಮಣರಿಗೆ ತೆರಿಗೆಯಿಲ್ಲದೆ ಕೊಟ್ಟ ಆಸ್ತಿಯಾಗು : ಹೊಸಹಳ್ಳಿಯ ಗ್ರಾಮವನೂ ನಮಗೆ [ಶ್ರೋ]ತ್ರಿಯವಾಗಿ ಕೊಟ್ಟುಯಿದ್ದರಾಗಿ ಆ ಗ್ರಾಮದ ಸೀಮೆಯ ಮೇಲೆ ನಾಲು ಕಾಲುವೆಯನು ತಂದು ಆ ಹೊಸಹಳ್ಳಿ ಗ್ರಾಮವನೂ ಯಿ ದಿನ ಪರ್ಯ್ಯಂತರ ಶ್ರೋತ್ರಿಯವಾಗಿ ಅನುಭವಿಸಿಕೊಣ್ಣು (ಎಕ. III, ಶ್ರೀರಂಗ. ೧೩೬-೯; 1468). [ಸಂ.]

**ಶ್ರೋತ್ರಿಯಅಗ್ರಹಾರ** (ನಾ). ವೇದಾಧ್ಯಯನ ಮಾಡಿದ ಬ್ರಾಹ್ಮಣರಿಗೆ ತೆರಿಗೆಯಿಲ್ಲದೆ ಕೊಟ್ಟ ಭೂಮಿ, - ಉಂಬಳಿ : ಮಹಾಜನಂಗಳಿಗೆ ಸೂರ್ಯೋಪರಾಗಪು(ಂ)ಣ್ಯಕಾಲದಲು ಕೊಟ್ಟ ಶ್ರೋತ್ರಿಯಅಗ್ರಹಾರ ದಾನ (ಸೌಇಇ. IX - ii, ೪೪೦-೧೨; 1419). [ಸಂ.]

**ಶ್ರೋತ್ರಿಯಗುತ್ತಗೆ** (ನಾ). = ಶ್ರೋತ್ರಗುತ್ತಗೆ : ಹೆಬಾರುವರಿಗೆ ಕೊಟ್ಟ ಶ್ರೋತ್ರಿಯ ಗುತ್ತಗೆಯ ಶಿಲಾಶಾಸನದ ಕ್ರಮನೆಂತೆಂದರೆ (ಎಕ. III (R), ನಂಜನ. ೨೯೨-೭; 1527). [ಶ್ರೋತ್ರಿಯ + ಗುತ್ತಗೆ]

**ಶ್ರೋತ್ರಿಯಮಾನ್ಯ** (ನಾ). ವೇದಾಧ್ಯಯನ ಮಾಡಿದ ಬ್ರಾಹ್ಮಣರಿಗೆ ತೆರಿಗೆ ಇಲ್ಲದೆ ಕೊಟ್ಟ ಭೂಮಿ. [ಸಂ.]

**ಶ್ರೋತ್ರೇಂದ್ರಿಯ** (ನಾ). ಶ್ರವಣೇಂದ್ರಿಯ ; ಕಿವಿ : ನಿಂತ ಅರ್ಧಭಾಗದಲ್ಲಿ ಆಕಾಶದೊಂದಂಶ ಕೂಡಲು ಶ್ರೋತ್ರೇಂದ್ರಿಯವಾಯಿತು (ನಾನಾಗು. ೧೧-೧೪). [ಸಂ.]

**ಶ್ರೌತ** (ಗು). ೧. ಕಿವಿಗೆ ಸಂಬಂಧಿಸಿದ. ೨. ವೇದಗಳಿಗೆ ಸಂಬಂಧಿಸಿದ. ೩. ವೇದಗಳಿಂದ ಅನುಮೋದಿತವಾದ; ವೇದವಿಹಿತವಾದ : ತ್ರಿದಶರಿಗೆ ಸರಿತೂಕ ಸಾಮರ್ಥ್ಯದಲಿ ಶುದ್ಧ ಶ್ರೌತ ಸನ್ಮಾರ್ಗದಲಿ ಶಿವಶಿವ ರಾಜಋಷಿಗಳಲಾ ಮಹೀತಳಕೆ (ಕುವ್ಯಾಸ. ೮-೧೫). (ನಾ). ೪. ಕೇಳಬಹುದಾದುದು ; ಶ್ರಾವ್ಯವಾದುದು : ಶ್ರೌ[ಪಾಠಾಂ. ಶ್ರೋ]ತಮಿದು ತನಗೆ ಗಂಗಾಸ್ರೋತದವೊಲಳುಂಬಮಾಗಿ ಗಡೆಗೊಳ್ವದೆ . . . ಬರಿಸದೊಳಗೆ ಸಮೆವಿನೆಗಮಿದಂ (ಪಂಪಭಾ. ೧೪-೫೨). ೫. ಉಪದೇಶ ; ಬೋಧೆ: ವಿಮಲಶ್ರೌತಂ[ಪಾಠಾಂ. ಶ್ರುತಂ] ಕೈವಲ್ಯಮೆಂಬ ಸಂಕಲ್ಪಮಿನಿತೆ ನೇರ್ಗಿಱಿಯಂ ವಿಶ್ವಮನಱಿವ ಮಹಿಮೆಯಿಂ ವರ್ಧಮಾನಜಿನಪತಿಗೆ ವರ್ಧಮಾನಮುನೀಂದ್ರಂ (ಪಂರಾಮಾ. ೧-೧೫). ೬. ವೇದವಿಹಿತವಾದ ಕಾರ್ಯ, — ಕರ್ಮ : ದ್ವೈತವೇನದ್ವೈತವೇನಾತ್ಮದರ್ಶನಿಗೆ? ಶ್ರೌತಾದಿವಿಧಿಯೇನು? ತಪನಿಯಮವೇನು ? (ಮುಂಕುಕ. ೮೦೯). ೭. ವೇದೋಕ್ತ ವಿಧಿಗಳನ್ನು ಮಾಡಿಸುವವನು ; ಪುರೋಹಿತ: ವಾಕ್ಯಮಾಲೆಗೆ ಅಹಿಂಸಾ ಪರಮೋಧರ್ಮಮೆಂಬುದನೀ ತತ್ವವಿತುರ್ವರೇಣ್ಯರಱಿದರ್ ತ್ರೈಲೋಕ್ಯಚೂಡಾಮಣೀ (ತತ್ವವಿತುರ್ವರೇಣ್ಯರೆಂದು ಶ್ರೌತರ್) (ಶಮದ. ೭೫ ಪ್ರಯೋ). [ಸಂ.]

**ಶ್ರೌತಕರ್ಮ** (ನಾ). ವೇದೋಕ್ತವಾದ ಅನುಷ್ಠಾನ ; ವೇದವಿಹಿತವಾದ ವಿಧಿ: ಮೊದಲಣ ಋಕ್ಕಿನಲ್ಲಿ ಧರ್ಮವೆಂದರೆ ಶ್ರೌತಕರ್ಮವೆಂದೂ ಎರಡನೆಯದರಲ್ಲಿ ಸ್ಮಾರ್ತಕರ್ಮವೆಂತಲೂ ಅರ್ಥವಾದಂತಾಯಿತು (ಆರ್ಯಧ. ೮). [ಸಂ. ಶ್ರೌತಕರ್ಮನ್]

**ಶ್ರೌತಪಥ** (ನಾ). ವೇದೋಕ್ತವಾದ ಹಾದಿ ; ಶ್ರುತಿಯು ವಿಧಿಸುವ ಮಾರ್ಗ : ಅಹುದಹುದಲೇ ಶ್ರೌತಪಥದಲಿ ಬಹಿರಿ ನೀವೇ ಸ್ಮಾರ್ತವಿಧಿ ಸನ್ನಿಹಿತರೆಂಬುದನಱಿಯದೇ ಮೂಜಗದ ಜನವೆಲ್ಲ (ಕುವ್ಯಾಅ. ೮-೩೦). [ಸಂ.]

**ಶ್ರೌತಸೂತ್ರ** (ನಾ). (ಆಶ್ವಲಾಯನ, ಸಾಂಖ್ಯಾಯನ, ಕಾತ್ಯಾಯನ ಮೊದಲಾದವರಿಂದ ರಚಿತವಾದ) ಯಜ್ಞಯಾಗಾದಿಗಳನ್ನು ಆಚರಿಸುವ ನಿಯಮಗಳನ್ನು ವಿವರಿಸುವ ಧರ್ಮಶಾಸ್ತ್ರಗ್ರಂಥ : ಗೃಹ್ಯಸೂತ್ರಗಳೂ ಶ್ರೌತಸೂತ್ರಗಳೂ ಪ್ರತಿಮೆಯ ಅಸ್ತಿತ್ವಕ್ಕೆ ಆಧಾರವಾಗಿವೆ (ಭಾರದ. ೫೧೦); ವೇದಗಳಲ್ಲಿ ಅಥರ್ವಣವೇದವೇ ಮುಖ್ಯ. ಆ ವೇದಕ್ಕೂ ಶ್ರೌತಸೂತ್ರಗಳಿವೆ (ಹಿಂದಸಾ. ೧೫೭). [ಸಂ.]

**ಶ್ರೌತಿ** (ನಾ). ೧. ವೇದಾಧ್ಯಯನ ಮಾಡಿದ ಬ್ರಾಹ್ಮಣ ; ವೇದ ಪಾರಂಗತನಾದ ಬ್ರಾಹ್ಮಣ : ಆ ವಿಪ್ರನು . . . ಒಬ್ಬ ಶ್ರೌತಿಯ ಮನೆಬಾಗಿಲಿಗೆ ಹೋಗಿ "ಭವತಿ ಭಿಕ್ಷಾಂದೇಹಿ" ಎಂದು ಕೂಗಿದನು (ನೀತಿಚಿಂ. XI, ೧೦). ೨. ಸ್ಮಾರ್ತರ ಹೆಸರಿನ ಕಡೆಯಲ್ಲಿ ಸೇರುವ ಒಂದು ಪದ. [ಸಂ. ಶ್ರೌತಿನ್]

**ಶ್ಲಕ್ಷ್ಣ** (ಗು). ೧. ತೆಳ್ಳಗಿರುವ ; ಸೂಕ್ಷ್ಮವಾದ. ೨. ಕೋಮಲವಾದ ; ಮೃದುವಾದ. ೩. ನಯವಾದ ; ನುಣುಪಾದ. (ನಾ). ೪. ಸೂಕ್ಷ್ಮವಾದುದು: "ಸೂಕ್ಷ್ಮಃ, ಲೇಶಃ, ಲವಃ, ಶ್ಲಕ್ಷ್ಣಃ . . . ಕಣಃ, ಅಣುಃ . . . ಅಲ್ಪಃ, ತ್ರುಟಿಃ — ಈ ೧೫ ಕಿಱಿದು" (ಹಲಾಯು. ೧೧೪-೩). ೫. ಮಧುರವಾದ ಮಾತುಗಳನ್ನಾಡುವವನು : "ಶ್ಲಕ್ಷ್ಣಃ, ಮಧುರವಾಕ್ - ಈ ೨ ಇನಿದಂ ನುಡಿವವಂ" (ಹಲಾಯು. ೬೦-೨೧೦). [ಸಂ.]

**ಶ್ಲಕ್ಷ್ಣಪಾರ್ಷ್ಣಿ** (ನಾ). ಮೃದುವಾದ (ಬೆನ್ನಿನ) ಭಾಗವನ್ನುಳ್ಳುದು : ಉಪಸಂದಿಗ್ಧಕರ ಶ್ಲಕ್ಷ್ಣಪಾರ್ಷ್ಣಿಯಂ . . . ವಪುಷ್ಮಮಂ ಸಂಪದುಪೇತಮಂ ತರಿಸಿ ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇವಂ ಪೊಱಮಟ್ಟನೇಱಿ ಜಯವಂ ಜಯಪರ್ವತಯಾನನಾಗಮಂ (ಶಾಂತಿಪು. ೧೦-೧೪೩). [ಸಂ.]

**ಶ್ಲಥ** (ಗು). ೧. ಸಡಿಲವಾದ ; ಅಳ್ಳಕವಾದ. ೨. ಶಿಥಿಲವಾದ ; ದುರ್ಬಲವಾದ: ಆ ಜರೆ ಬಂದಾಗಳ್ ಶ್ಲಥಶರೀರ ಕರಣಂಗಳನಾನೊಂದಿದೆಂ (ವಿಷ್ಣುಪು. ೧-೫-೭೮). (ನಾ). ೩. ಸಡಿಲವಾದುದು : "ಶ್ಲಥಂ, ಶಿಥಿಳಂ — ಈ ೨ ಸಡಿಲ್ದುದು" (ಹಲಾಯು. ೧೨೮-೯೨). [ಸಂ.]

**ಶ್ಲಥೆ** (ನಾ). [ಕಾಮಶಾ] ಸ್ತ್ರೀಜಾತಿಯ ಒಂದು ಭೇದ : ಉದ್ದವ ಕಪ್ಪಿನ ತನುವಿನನುದಿನ ವಿರಹದನುಭವದ ಕುಳಿಕಂಕುಳಿನವಳೇ ಶ್ಲಥೆ (ಜನವ. ೫-೧); ಉದ್ದವುಳ್ಳವಳು ಕಪ್ಪಾದವಳು ಹಲವು ಕಾಮಗಳಿಕೆಯನ್ನು ಸ್ಮರಿಸುವವಳು ಕುಳಿ ಕಂಕುಳುಳ್ಳವಳು ಇವಳು ಶ್ಲಥೆ ಎನಿಸುವಳು (ಕಾಮಶಾ. ೨೧೪). [ಸಂ. ಶ್ಲಥಾ]

**ಶ್ಲಾಘನೀಯ** (ನಾ). ಹೊಗಳಲು ಅರ್ಹವಾದುದು ; ಪ್ರಶಂಸಿಸಲು ಯೋಗ್ಯವಾದುದು : ತಪ್ಪುಮಾಡಿದವರಿಗೆ ಶಿಕ್ಷೆಯನ್ನು ವಿಧಿಸುವುದಕ್ಕಿಂತ . . . ಅವರನ್ನೂ ಉತ್ತಮ ಪ್ರಜೆಗಳನ್ನಾಗಿ ಪರಿವರ್ತಿಸಲು ಆಕೆ ಸರ್ವ ಪ್ರಯತ್ನಪಡುತ್ತಿದ್ದುದು ಅತಿ ಶ್ಲಾಘನೀಯವಾಗಿತ್ತು (ಶಾಂತಲಾ. ೧೫೫). [ಸಂ.]

**ಶ್ಲಾಘಿ** (ಗು). ಹೊಗಳಿಕೆಗೆ ಅರ್ಹವಾದ : ಮೃಗರಾಜಾಸನದಿಂದಮೆರ್ದು ಮುದದಿಂದಂ ದ್ರಾಘಿಮಶ್ಲಾಘಿಬಾಹುಗಳಿಂದಂ ತೆಗೆದಪ್ಪಿಕೊಂಡನರಸಂ ಶ್ರೀರೂಪಕಂದರ್ಪನಂ (ಸುಕುಮಾ. ೧೧-೨). [ಸಂ. ಶ್ಲಾಘಿನ್]

**ಶ್ಲಾಘಿಸು** (ಕ್ರಿ). ಹೊಗಳು ; ಪ್ರಶಂಸಿಸು : ಭಟರು ಸಂತೋಷದಿಂ ಪ್ರಭುವಂ ಶ್ಲಾಘಿಸುತ (ಸೌಗಂಧಿ. ೨೪೭-೨೦). [ಶ್ಲಾಘನ್ಸ + - ಇಸು]

**ಶ್ಲಾಘೆ** (ನಾ). ೧. ಮೆಚ್ಚುಗೆ ; ಪ್ರಶಂಸೆ : ''ಅರ್ಥವಾದಃ, ಪ್ರಶಂಸಾ . . . ಶ್ಲಾಘಾ, ವರ್ಣನಂ (ನಾ)—ಈ ೧೦ ಸ್ತುತಿಯ ನಾಮಂ'' (ಹಲಾಯು. ೨೪-೧೪೪). ೨. ಸಂತೋಷ ; ಆನಂದ. ೩. ಸೇವೆ. ೪. ಆಸೆ ; ಬಯಕೆ. [ಸಂ. ಶ್ಲಾಘಾ]

**ಶ್ಲಾಘ್ಯ** (ಗು). ೧. ಹೊಗಳತಕ್ಕ ; ಪ್ರಶಂಸೆಗೆ ಅರ್ಹವಾದ. (ನಾ). ೨. ಹೊಗಳಿಕೆ ; ಪ್ರಶಂಸೆ. ೩. ಪ್ರಶಂಸಾರ್ಹವಾದುದು : ಹರಿವೈಭವಶ್ಲಾಘ್ಯ ಮಲ್ಲದಿರಲು ಲಸದಷ್ಟರೋದ್ಯಾನ ಸೌಭಾಗ್ಯಮೊಂದಿರದೊಡೆಸೆವ ರಾಜೇಂದ್ರಂಗೆ ಸೊಗಸು ವೀಡಾಗಿ ರಂಜಿಸದೊಡೀ ಹಸ್ತಿನಾವತಿಯನಮರಾವತಿಗೆ ಸರಿಯೆಂಬರೇ ಪ್ರೌಢರು (ಜೈಮಿಭಾ. ೨-೧೧). ೪. ಉತ್ಕೃಷ್ಟವಾದುದು ; ಶ್ರೇಷ್ಠವಾದುದು : ಶ್ಲಾಘ್ಯದಿಂದಾದ ಮಜ್ಜನ ಭೋಜನದ ಸದಾರೋಗ್ಯದಿಂ . . . ಅರಸನಿರುತಿರ್ದನು (ಜೈಮಿಭಾ. ೮-೯). [ಸಂ.]

**ಶ್ಲಿಷ್ಟ** (ಗು). ೧. ಸೇರಿದ ; ಹತ್ತಿದ : ಅಪರಿಭಿನ್ನಾಂತ ಶ್ಲಕ್ಷ್ಣಶ್ಲಿಷ್ಟ ಸನ್ನಿಕಾಂತರ ಸುಸನ್ನಿವಿಷ್ಟ ಸುಸಂವೃತ್ತಾಂತದರ್ಧಚಂದ್ರಾಕಾರವಿಂಶತಿನಖಮುಂ (ಆದಿಪು. ೧೨-೫೭ ವ). (ನಾ). ೨. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ; ಒಂದೇ ಶಬ್ದಾನುಪೂರ್ವಿಯಲ್ಲಿ ಅನೇಕ ಅರ್ಥಗಳನ್ನಿಟ್ಟು ವರ್ಣಿಸುವುದು ; ಶ್ಲೇಷ: ವಾಸ್ತವಮುಪಮೆಯತಿಶಯಂ ಶ್ಲಿಷ್ಟ[ಪಾಠಾಂ. ಶ್ಲೇಷ]ವೆಂದು ನಾಲ್ಕುಂ ಪ್ರಕಾರದಿಂ ನೆಗೆದಿರ್ಕುಂ (ಕಾವ್ಯಾವ. ೬೧೫); ಪದವೊಂದನೇಕಮರ್ಥಂ ಪುದಿದಿರೆ ತಾಂ ಶ್ಲಿಷ್ಟಂ ಅದುವೆ ಭಿನ್ನಮಭಿನ್ನಂ (ಉದಯಾ. ೫೪). [ಸಂ.]

**ಶ್ಲಿಷ್ಟರೂಪಕ** (ನಾ). [ಕಾವ್ಯಮೀ] ಶ್ಲೇಷೆಯಿಂದ ಕೂಡಿದ ರೂಪಕಾಲಂಕಾರ: ಶ್ಲೇಷಮೂಲಕವಾದ ರೂಪಕಕ್ಕೆ 'ಶ್ಲಿಷ್ಟರೂಪಕ'ವೆಂದು ಹೆಸರು (ಕೃಪಿಡಿ. ೨೮೫). [ಸಂ.]

**ಶ್ಲಿಷ್ಟಾಕ್ಷರ** (ನಾ). ಸಂಧಿಯಾಗುವ ಅಕ್ಷರ, — ವರ್ಣ : ಸನ್ನುತಮಪರಾರ್ಥಂ ಸಂಪನ್ನಂ ಶ್ಲಿಷ್ಟಾಕ್ಷರೋಪರಚಿತಮದೋಷಂ (ಕವಿರಾ. ೧-೯೭). [ಸಂ.]

**ಶ್ಲೀಪದ** (ನಾ). ೧. ಆನೆಯ ಕಾಲಿನಂತೆ ಕಾಲು ಊದಿಕೊಳ್ಳುವ ಒಂದು ಬಗೆಯ ರೋಗ ; ಆನೆಕಾಲು ರೋಗ : ''ಶ್ಲೀಪದಂ, ಪಾದವಲ್ಮೀಕಂ — ಈ ೨ ಒಟಲೆಗಾಲ್'' (ಹಲಾಯು. ೯೯-೪೫೦). ೨. ಒಂದು ಬಗೆಯ ಚರ್ಮರೋಗ ; ವಿಸರ್ಪ : ''ಶ್ಲೀಪದಂ ವಿಸರ್ಪಮೆನೆ ವಿಷಭಮಕ್ಕುಂ'' (ಮಂಗರಾ. ೧೧೩-೨); ಗೋಮೂತ್ರದಲ್ಲಿ ಅಣಿಲೆಕಾಯ ಕಲ್ಕವ ಮಾಡಿ ಕೊಡಿಸಲು ಶ್ಲೀಪದವೆಂಬ ಗ್ರಂಥಿಗಳು ಶಮನವಹವು (ವೈದ್ಯಸಾ. II. ೧೮೯). [ಸಂ.]

**ಶ್ಲೇಷ** (ನಾ). ೧. ಸೇರುವಿಕೆ ; ಕೂಡುವಿಕೆ : ''ಸಂಧಿಃ, ಶ್ಲೇಷಃ — ಸಂಬಂಧಿಸೋಣವು, ಕೂಡಿ ಬೆರತಂತೆ ಸೇರುವಿಕೆ'' (ಸಿದ್ಧಾಂತಿ. ೩೫೮). ೨. ಅಪ್ಪುಗೆ ; ಆಲಿಂಗನ. ೩. [ಕಾವ್ಯಮೀ] ಒಂದಕ್ಕಿಂತ ಹೆಚ್ಚು ಅರ್ಥಗಳನ್ನು ಕೊಡುವ ಶಬ್ದಗಳ ಜೋಡಣೆ ; ಶಬ್ದ ಮತ್ತು ಅರ್ಥಾಲಂಕಾರದ ಒಂದು ಭೇದ : ನಾನಾರ್ಥಮೇಕರೂಪಾಧೀನವಚೋರಚಿತಮಪ್ಪೊಡಕ್ಕುಂ ಶ್ಲೇಷಂ . . . ಉದಯಾರೂಢಂ ಕಾಂತ್ಯಾಸ್ಪದನನುರಕ್ತಾತ್ಮಮಂಡಳಂ ಕುಮುದಕರಂ ಮೃದುತರ ಕರಂಗಳಿಂದತಿಮುದಮಂ ಲೋಕಕ್ಕೆ ಪಡೆಗುಮಿಂತೀ ರಾಜಂ (ಕವಿರಾ. ೩-೧೦೮, ೧೧೯); ಪ್ರವರಾರ್ಥಾಲಂಕಾರಂ ವಿವಿಧವಿಕಲ್ಪ ಪ್ರಪಂಚಿತಂ ಕ್ರಮದಿಂ ವಾಸ್ತವಮುಪಮೆಯತಿಶಯಂ ಶ್ಲೇಷ[ಪಾಠಾಂ. ಶ್ಲಿಷ್ಟ]ವೆಂದು ನಾಲ್ಕುಂ ಪ್ರಕಾರದಿಂ ನೆಗೆದಿರ್ಕುಂ (ಕಾವ್ಯಾವ. ೬೧೫). ೪. ವೈದರ್ಭಮಾರ್ಗದ ಹತ್ತು ಶಬ್ದಗುಣಗಳಲ್ಲಿ ಒಂದು : ಶ್ಲೇಷ — ಪದಗಳು ಅನೇಕವಿದ್ದರೂ ಅವೆಲ್ಲವೂ ಹೊಂದಿಕೊಂಡು ಒಂದೇ ಪದದಂತೆ ತೋರುತ್ತಿರುವುದು (ಕೃಪಿಡಿ. ೨೩೩); ಶ್ಲೇಷ, ಪ್ರಸಾದ, ಸಮತೆ, ಮಾಧುರ್ಯ, ಸುಕುಮಾರತೆ, ಅರ್ಥವ್ಯಕ್ತಿ, ಉದಾರತ್ವ, ಓಜಸ್ಸು, ಕಾಂತಿ, ಸಮಾಧಿ ಈ ಹತ್ತುಗುಣಗಳೇ ವೈದರ್ಭಮಾರ್ಗದ ''ಪ್ರಾಣ'' (ಭಾರಮೀ. ೨೯). ೫. ವೈದರ್ಭಮಾರ್ಗದ ಹತ್ತು ಅರ್ಥಗುಣಗಳಲ್ಲಿ ಒಂದು : ಶ್ಲೇಷ — (ಚತುರನಾದವನ) ಕಾರ್ಯ ಕೌಟಿಲ್ಯಾದಿ ಚಮತ್ಕಾರವಾದ ಘಟನೆಗಳು (ಕೃಪಿಡಿ. ೨೩೫). ೬. [ನಾಟ್ಯ] ಇಪ್ಪತ್ತು ಬಗೆಯ ಹಸ್ತಭೇದಗಳಲ್ಲಿ ಒಂದು : ಧೂನನ, ಶ್ಲೇಷ, ವಿಶ್ಲೇಷ, ಕ್ಷೇಪ, ರಕ್ಷಣ . . . ಆಹ್ವಾನ, ತರ್ಜನ — ಈ ಇಪ್ಪತ್ತು ಕರಕರ್ಮಭೇದಂಗಳ್ (ಲಾಸ್ಯರಂ. ೪-೧೩ ವ). [ಸಂ.]

**ಶ್ಲೇಷರೂಪಕ** (ನಾ). [ಕಾವ್ಯಮೀ] ಶ್ಲೇಷಾರ್ಥದಿಂದ ಕೂಡಿದ ರೂಪಕಾಲಂಕಾರ : ಕುಮುದಾನಂದನಕರವತಿಕಮಲಾಕರರಾಗಹರಮುದಾರಂ ನಿನ್ನಾ ವಿಮಳ ಯಶೋವಿಧುವೆಂಬುದು ಕಮನೀಯಂ ಶ್ಲೇಷರೂಪಕಾಲಂಕಾರಂ — (ಶ್ಲೇಷರೂಪಕಂ) (ಕವಿರಾ. ೩-೨೧). [ಸಂ.]

**ಶ್ಲೇಷಾಕ್ಷೇಪ** (ನಾ). [ಕಾವ್ಯಮೀ] ಆಕ್ಷೇಪಾಲಂಕಾರಗಳಲ್ಲಿ ಒಂದು; ಶ್ಲೇಷೆಯ ಮೂಲಕ ಪ್ರಸಿದ್ಧವಾದ ಅರ್ಥವನ್ನು ವಿರೋಧಿಸುವ ಅಲಂಕಾರ: ಸರಸಿಜವಿರೋಧಿ ಕಾಂತ್ಯಾಕರಮಮೃತಮಯಂ ತ್ವದೀಯ ಮುಖಶಶಿಯುಂಟಾಗಿರೆ ಶಶಿಯದೇವುದೆಂಬುದು ನಿರುತಂ ಶ್ಲೇಷಾನುವಿದ್ಧಮಪ್ಪಾಕ್ಷೇಪಂ (ಶ್ಲೇಷಾಕ್ಷೇಪಂ) (ಕವಿರಾ. ೩-೧೦೨). [ಸಂ.]

**ಶ್ಲೇಷಾರ್ಥಾಂತರನ್ಯಾಸ** (ನಾ). [ಕಾವ್ಯಮೀ] ಶ್ಲೇಷೆಯಿಂದ ಕೂಡಿದ್ದು, ಸಾಮಾನ್ಯಾರ್ಥ ಹಾಗೂ ವಿಶೇಷಾರ್ಥಗಳೆರಡೂ ಒಂದರಿಂದ ಒಂದು ಸಮರ್ಥಿತವಾಗುವ ಅಲಂಕಾರ : ದಿನನಾಯಕನಪರದಿಗಂಗನೆಯೊಳ್ ನೆರೆದುದಿತರಾಗನಾದಂ ಪೀನಂ ಜನಿಯಿಸುಗುಮಧಿಕರಾಗಮನೆನಸುಮಪಕ್ರಮದೆ ವಾರುಣೀ ಸಂಶ್ಲೇಷಂ (ಶ್ಲೇಷಾರ್ಥಾಂತರನ್ಯಾಸಂ) (ಕವಿರಾ. ೩-೩೪). [ಸಂ.]

**ಶ್ಲೇಷಾರ್ಥಿ** (ನಾ). ಮಾತಿನಲ್ಲಿ ಎರಡುರೀತಿಯ ಅರ್ಥಗಳ ಕಡೆ ಗಮನ ಕೊಡುವವನು : ಶ್ಲೇಷಾರ್ಥಿಯವಳ ನುಡಿಯಂ ಶ್ಲೇಷಮನಭಿರೂಪರೂಪಮಂ ಬಯಸುವವಂ . . . ಈ ತೆಱದೆ ಮಾಡಿ ಧೂರ್ತಂ ನುಡಿದಂ (ಪಾರ್ಶ್ವಪು. ೩-೮೯). [ಸಂ. ಶ್ಲೇಷಾರ್ಥಿನ್]

**ಶ್ಲೇಷಾಲಂಕಾರ** (ನಾ). [ಕಾವ್ಯಮೀ] ಒಂದು ಬಗೆಯ ಶಬ್ದಾಲಂಕಾರ ; ಒಂದಕ್ಕಿಂತ ಹೆಚ್ಚು ಅರ್ಥಗಳನ್ನು ಕೊಡುವ ಶಬ್ದಗಳ ಜೋಡಣೆಯನ್ನು ಉಳ್ಳ ಅಲಂಕಾರ : ಒಂದೇ ಶಬ್ದಾನುಪೂರ್ವಿಯಲ್ಲಿ ನಾನಾರ್ಥಗಳನ್ನಿಟ್ಟು ಆ ಅರ್ಥಗಳ ಮೂಲಕ ಬೇರೆಬೇರೆ ವಸ್ತುಗಳನ್ನು ವರ್ಣಿಸುವುದು ಶ್ಲೇಷಾಲಂಕಾರ (ಕೃಪಿಡಿ. ೨೭೩). [ಸಂ.]

**ಶ್ಲೇಷೆ** (ನಾ). = ಶ್ಲೇಷ ೩ : ಶ್ಲೇಷೆ — ಒಂದೇ ಶಬ್ದಾನುಪೂರ್ವಿಯಲ್ಲಿ ನಾನಾರ್ಥಗಳನ್ನಿಟ್ಟು . . . ವರ್ಣಿಸುವುದು ಶ್ಲೇಷಾಲಂಕಾರ (ಕೃಪಿಡಿ. ೨೭೩). [ಸಂ. ಶ್ಲೇಷಾ]

**ಶ್ಲೇಷೋಪಮೆ** (ನಾ). [ಕಾವ್ಯಮೀ] ಶ್ಲೇಷಾರ್ಥದ ಮೂಲಕ ಸಾದೃಶ್ಯವನ್ನು ಕಲ್ಪಿಸುವಿಕೆ ; ಶ್ಲೇಷೆಯಿಂದ ಕೂಡಿದ ಉಪಮಾಲಂಕಾರ : ಪರಮಶ್ರೀನಿಳಯಂ ಶಶಧರಕಾಂತಿವಿರೋಧಿ ರೋಚಿವದನಂ ನಿನ್ನಾ ಸರಸಿರುಹದವೋಲೆಂಬುದು ನಿರುತಂ ಶ್ಲೇಷೋಪಮಾವಿಕಲ್ಪವಿಶೇಷಂ — (ಶ್ಲೇಷೋಪಮೆ) (ಕವಿರಾ. ೩-೭೨); ಶ್ಲೇಷೋಪಮೆಗೆ — ಸಮವೃತ್ತ ಸಂಧಿಲಕ್ಷಣ ಸಮನ್ವಿತಂ ಜಾತ್ಯಲಂಕೃತಿಭ್ರಾಜಿತಮುತ್ತಮಕಾವ್ಯಬಂಧದಂತಾ ದಮಿತಾರಿಗೆ ಸಾಜಮೊಪ್ಪುಗುಂ ಕಿಱುದೊಡೆಗಳ್ (ಕಾವ್ಯಾವ. ೬೭೦). [ಸಂ. ಶ್ಲೇಷೋಪಮಾ]

**ಶ್ಲೇಷ್ಮ** (ನಾ). ೧. ವಾತ, ಪಿತ್ತ, ಶ್ಲೇಷ್ಮಗಳೆಂಬ ಶರೀರದಲ್ಲಿರುವ ಮೂರು ಧಾತುಗಳಲ್ಲಿ ಒಂದು ; ಕಫ : ''ಶ್ಲೇಷ್ಮದಲ್ಲಿಯುಂ ಖೇಟವೆಂಬುದು'' (ಹಲಾಯು. ೧೩೨-೭); ಏನೆಂಬೆಂ ಬಾಲ್ಕದೊಳ್ ಮೇಲಱಿಯದೆ ಮಲದಿಂ ಮೂತ್ರದಿಂ ಶ್ಲೇಷ್ಮದಿಂ ತೊಯ್ದಾನಾರೆಂದೇನುಮಂ ಭಾವಿಸದೆ ಬಧಿರನಂತಂಧನಂತಿರ್ದು (ರತ್ನಾಕ. ೪); ಘನಕಷ್ಟದಿಂದವಂ ನಾಲಗೆಯನಜರಂಧ್ರಕಿಟ್ಟು ಶ್ಲೇಷ್ಮವನೆ ಸವಿದು (ಪ್ರೌಢರಾ. ೧-೮); ಕಣ್ಣು ಉರಿಗೆಂಡವಾಗಿ ಅಂಗುಳು ಹುರಿಹೆಂಚಾಗಿ ಗಂಟಲು ಶ್ಲೇಷ್ಮದ ಕೆಸರಿನಲ್ಲಿ ಅಡಗಿಹೊಗುತ್ತದೆ (ನಂಟರು. ೩೪). ೨. ಶೀತ ; ಥಂಡಿ. [ಸಂ. ಶ್ಲೇಷ್ಮನ್]

**ಶ್ಲೇಷ್ಮಕ್ಷಯ** (ನಾ). ದೇಹದಲ್ಲಿ ಕಫವು ಕಡಮೆಯಾಗುವುದರಿಂದ ಉಂಟಾಗುವ ಒಂದು ಬಗೆಯ ಕ್ಷಯರೋಗ : ಊರ್ಧ್ವವಾಗಿ ಏರುವ ಶ್ವಾಸವುಳ್ಳುದೆ ಶ್ಲೇಷ್ಮಕ್ಷಯಲಕ್ಷಣಂ (ಸಕವೈ. ೨೪೭). [ಸಂ.]

**ಶ್ಲೇಷ್ಮಕಾಸ** (ನಾ). ಕಫದಿಂದ ಕೂಡಿದ ಕೆಮ್ಮು : ಉಗುಳು ಶ್ವೇತವರ್ಣವಾಗಿ ಬಹಳ ಶ್ಲೇಷ್ಮದಿಂ ಕೂಡಿಕೊಂಡಿಹುದೆ ಶ್ಲೇಷ್ಮಕಾಸ (ಸಕವೈ. ೨೦೭). [ಶ್ಲೇಷ್ಮ + ಕಾಸ]

**ಶ್ಲೇಷ್ಮಗುಲ್ಮ** (ನಾ). ಕಫದೋಷದಿಂದ ಹೊಟ್ಟೆಯು ಊದಿಕೊಳ್ಳುವ ಒಂದು ಬಗೆಯ ರೋಗ ; ಗಡ್ಡೆರೋಗ : ಮೆಣಸು, ಬೆಳ್ಳುಳ್ಳಿ, ಇಂಗು, ಎಲೆಗಳ್ಳಿಯ ಹಾಲು . . . ಯವಕ್ಷಾರ, ಇವು ಎಲ್ಲವನ್ನು ಸಮಾನಂಗೊಂಡು ನೀರಲ್ಲಿ ಅರೆದು ಗುಳಿಗೆ ಮಾಡಿ

ಏಳುದಿನ ನುಂಗೆ ಎಂಥಾ ಗುಲ್ಮ, ಶ್ಲೇಷ್ಮಗುಲ್ಮ, ಸನ್ನಿಪಾತಗುಲ್ಮ ಇವು ಎಲ್ಲಾ ಮಾಣುವುವು (ವಿವೈವಿ. ೧೭೭). [ಸಂ.]

**ಶ್ಲೇಷ್ಮಗ್ರಹಣಿ** (ನಾ). ಕಫದೋಷದಿಂದ ಉಂಟಾಗುವ ಅತಿಸಾರ : ಕಚೋರ, ಶುಂಠಿ . . . ಸೈಂಧವಲವಣ, ಮಾದಳದ ಹಣ್ಣಿನ ಕೇಸರ ಸಹ ಇವಂ ಬಿಸಿನೀರಿನಿಂದರೆದು ಕುಡಿಯೆ ಶ್ಲೇಷ್ಮಗ್ರಹಣಿ ಹರ (ಸಕವೈ. ೩೪೮). [ಸಂ. ಶ್ಲೇಷ್ಮಗ್ರಹಣೀ]

**ಶ್ಲೇಷ್ಮಚರ್ಮ** (ನಾ). ತಣ್ಣಗಿರುವ ಚರ್ಮ, — ತೊಗಲು : ನೋಡುತಿರೆ ರಾಘವಂ, ಮೂಡಿತೊಂದಕಶೇರುಕಶ್ಮಲಸರೀಸೃಪಂ ಮಂಜೆ ಮೈಗೊಂಡಂತೆವೋಲ್ ಶ್ಲೇಷ್ಮಚರ್ಮದಿಂ ಭೀಕರತೆವೆತ್ತುದಾ ವಿಕೃತತಿರ್ಯಗ್ಯೋನಿ (ಶ್ರೀರಾಮಾ. ೨೬೪-೩೯). [ಸಂ. ಶ್ಲೇಷ್ಮಚರ್ಮನ್]

**ಶ್ಲೇಷ್ಮಜಿಹ್ವೆ** (ನಾ). ನಾಲಗೆಯಲ್ಲಿ ಮುಳ್ಳುಗಳೇಳುವ ಒಂದುಬಗೆಯ ರೋಗ: ಬೂರಗದ ಮರದ ಮುಳ್ಳಿನ ಹಾಗೆ ಮುಳ್ಳುಂಟಾಗಿದ್ದುದು ಶ್ಲೇಷ್ಮಜಿಹ್ವೆ ಎನಿಸಿಕೊಂಬುದು (ವೈದ್ಯಸಾ. II. ೧೦೭). [ಸಂ. ಶ್ಲೇಷ್ಮಜಿಹ್ವಾ]

**ಶ್ಲೇಷ್ಮಜ್ವರ** (ನಾ). ಕಫದೋಷದಿಂದುಂಟಾಗುವ ಜ್ವರ : ಶುಂಠಿ, ಹಿಪ್ಪಲಿ . . . ಜೀರಿಗೆ, ಲವಂಗ ಇವುಗಳನ್ನು ಸಮಾಂಶವಾಗಿ ಅರೆದು ಜೇನುತುಪ್ಪಗೂಡಿ ಸೇವಿಸೆ ಶ್ಲೇಷ್ಮಜ್ವರ ನಾಶವಾಗುವುದು (ಸಕವೈ. ೮೭). [ಸಂ.]

**ಶ್ಲೇಷ್ಮಣ** (ಗು). ೧. ಕಫಸಂಬಂಧವಾದ. (ನಾ). ೨. ಶ್ಲೇಷ್ಮವ್ಯಾಧಿಯುಳ್ಳವನು ; ಕಫಸಂಬಂಧವಾದ ರೋಗವುಳ್ಳವನು : "ಶ್ಲೇಷ್ಮಲಃ, ಶ್ಲೇಷ್ಮಣಃ, ಕಫೀ — ೩ ಶ್ಲೇಷ್ಮವ್ಯಾಧಿಯುಳ್ಳವನ ಹೆಸರುಗಳು" (ಸಿದ್ಧಾಂತಿ. ೧೮೭). [ಸಂ.]

**ಶ್ಲೇಷ್ಮನಾಡಿ** (ನಾ). ಕಫದ ಆಧಿಕ್ಯವನ್ನು ಸೂಚಿಸುವ ನಾಡಿ : ಶ್ಲೇಷ್ಮನಾಡಿಯು ಏಕತಾಳದ ಹಾಗೆ ಸ್ಥಿರವಾಗಿ ಆಡುವುದು (ಸಕವೈ. ೧೧). [ಸಂ.]

**ಶ್ಲೇಷ್ಮರಾಜಚೂರ್ಣ** (ನಾ). ಕಫವನ್ನು ಹೋಗಲಾಡಿಸವ ಒಂದು ಬಗೆಯ ಪುಡಿ, — ಚೂರ್ಣ : ಶ್ಲೇಷ್ಮರಾಜಚೂರ್ಣ — ಹಿಪ್ಪಲಿ, ಶುಂಠಿ, ಗಂಟುಭಾರಂಗಿ, ಅಜಮೋದ, ಮೆಣಸು, ಜೀರಿಗೆ . . . ಸೇವಿಸುತ್ತ ಬರಲು ಖಾಸ, ಶ್ವಾಸ, ಮಂದಾಗ್ನಿ, ಕ್ಷಯ, ಪಾಂಡು . . . ಆಹಿಕ ತ್ರ್ಯಾಹಿಕ ಚಾತುರ್ಥಿಕಜ್ವರ ಮುಂತಾಗಿ ಶೀಘ್ರದಿಂ ಗುಣಮಕ್ಕುಂ (ಸಕವೈ. ೨೧೩). [ಸಂ.]

**ಶ್ಲೇಷ್ಮರೋಗ** (ನಾ). ಕಫದ ಆಧಿಕ್ಯದಿಂದುಂಟಾಗುವ ರೋಗ : ತಲೆ ಅತ್ಯಂತ ಭಿನ್ನಂತಪ್ಪುದುಂ . . . ಶ್ವಾಸ, ಕೆಮ್ಮು ಇನಿತು ಶ್ಲೇಷ್ಮರೋಗಲಕ್ಷಣ (ವಿವೈವಿ. ೧೪೯). [ಸಂ.]

**ಶ್ಲೇಷ್ಮಲ, ಶ್ಲೇಷ್ಮಳ** (ನಾ). = ಶ್ಲೇಷ್ಮಣ ೨ : "ಶ್ಲೇಷ್ಮಲಃ, ಶ್ಲೇಷ್ಮಣಃ, ಕಫೀ — ೩ ಶ್ಲೇಷ್ಮವ್ಯಾಧಿಯುಳ್ಳವನ ಹೆಸರುಗಳು" (ಸಿದ್ಧಾಂತಿ. ೧೮೭). **ಶ್ಲೇಷ್ಮಳ:** "ಶ್ಲೇಷ್ಮೋಪೇತಂ ಶ್ಲೇಷ್ಮಳಂ" (ವಸ್ತುಕೋ. ೭೩-೩೭). [ಸಂ.]

**ಶ್ಲೇಷ್ಮಳ** 'ಶ್ಲೇಷ್ಮಲ' ನೋ.

**ಶ್ಲೇಷ್ಮಾತಕ** (ನಾ). ಒಂದು ಬಗೆಯ ಮರ ; ಚಳ್ಳೆಮರ : "ಶೇಲು ಶ್ಲೇಷ್ಮಾತಕ ತರು ಪೀಲುವೆನಲ್ಲುಡಫಲಂ" (ವಸ್ತುಕೋ. ೩೪-೮). [ಸಂ.]

**ಶ್ಲೇಷ್ಮಾತಿಸಾರ** (ನಾ). = ಶ್ಲೇಷ್ಮಗ್ರಹಣಿ : ನೋವು ಉಂಟಾಗಿ ನಯವಾಗಿ ಮಿಂಚಾಗಿ ಗಟ್ಟಿಯಾಗಿ ನಿಬಿಡವಾಗಿ ಅಡಿಗಡಿಗೆ ತೀವ್ರಗೈವುತ್ತಿಹುವುದೆ ಶ್ಲೇಷ್ಮಾತಿಸಾರವೆನಿಸಿಕೊಂಬುದು (ಸಕವೈ. ೩೦೭). [ಸಂ.]

**ಶ್ಲೋಕ** (ನಾ). ೧. ಸ್ತೋತ್ರರೂಪವಾದ ಪದ್ಯ : ಶ್ಲೋಕಾರ್ಥೋಪನ್ಯಾಸ ಶ್ಲಾಘ್ಯನಿನಾದವಮುದಮಾಗಳ್ ನವವರ್ಮಾಗೀಶ್ಲೇಷಂ ಮಿಗೆ ತೋಟಿಲುಪಶ್ಲೋಕಿಸಿ ದಿಂಬಟಿಕ್ಕೆ ಕೊಟ್ಟು ಶೇಷಾಕ್ಷತಮಂ(?) (ಸುಕುಮಾ. ೨-೭೪). ೨. ಕೀರ್ತಿ ; ಪ್ರಸಿದ್ಧಿ : "ಕೀರ್ತಿಃ, ಶ್ಲೋಕಃ, ಯಶಃ, ಅಭಿಖ್ಯಾ, ಸಮಖ್ಯಾ — ಈ ೫ ಕೀರ್ತಿಯ ಪೆಸರ್" (ಹಲಾಯು. ೨೫-೧೫೨). ೩. [ಛಂದ] ಎಂಟು ಅಕ್ಷರಗಳುಳ್ಳ, ನಾಲ್ಕು ಪಾದಗಳಿಂದ ಕೂಡಿದ, ಅನುಷ್ಟುಭ್ ಛಂದಸ್ಸಿನ ಒಂದು ವೃತ್ತ ; IP ಇದರಲ್ಲಿ ಪ್ರತಿಪಾದದ ೫,೬ನೆಯ ಅಕ್ಷರಗಳು ಕ್ರಮವಾಗಿ ಲಘು ಮತ್ತು ಗುರುವಾಗಿದ್ದು, ೧, ೩, ೪ನೆಯ ಪಾದಗಳ ೭ನೆಯ ಅಕ್ಷರ ಲಘುವಾಗಿರಬೇಕು : ಯಮಕಂ [ಪ]ದಾಪಾದಾರ್ಧ ಸಮಶ್ಲೋಕ[ಸು]ಗೋಚರಂ (ಕವಿರಾ. ೨-೧೨೯) ; ಅಯ್ದಾಜೇಟಿಂಬೆಡೆಯೊಳಮಯ್ದುಗೆ ಗುರು ಲಘು ಕರಾಬ್ಧಿಪದ [ಪಂಚಕ]ದೊಳ್ ಮೆಯ್ದೋಜುಗೆ ಲಘುಲಕ್ಷಣಮೆಯ್ದುಗೆ ಪರಿಪೂರ್ಣಮಷ್ಟವರ್ಣಂ ಶ್ಲೋಕಂ (ಛಂದೋಂಬು. ೩-೨೦೭). ೪. ಲೌಕಿಕಕಾವ್ಯಗಳಲ್ಲಿ ಬಳಕೆಯಾಗುವ ಎರಡು ಪಾದಗಳಿಂದ ಕೂಡಿದ ಪದ್ಯ : ಶ್ಲೋಕ: — ಕಡೆಕಡೆಗೆ ಇದು ಎರಡೇ ಪಾದಗಳಾಗಿ, ಮೊದಲನೆಯ ಮತ್ತು ಮೂರನೆಯ ಪಾದಗಳ ಕಡೆಯ ಗಣದ ದ್ವಿಲಗು (U – U –) ಲಕ್ಷಣ ಮಾರ್ಪಟ್ಟು ಲೌಕಿಕ ಕಾವ್ಯದ ಶ್ಲೋಕವಾಯಿತು (ಕೈಪಿಡಿ. ೧೦೭). [ಸಂ.]

**ಶ್ವದಂಷ್ಟ್ರೆ** (ನಾ). ಒಂದು ಬಗೆಯ ಔಷಧೀಸಸ್ಯ ; ನೆಗ್ಗಿಲು : "ಗೋಕ್ಷುರಃ, ಸ್ಥಳಶೃಂಗಾಟಃ, ಶ್ವದಂಷ್ಟ್ರಾ, ತ್ರಿಕಂಟಕಃ — ಈ ೪ ನೆಗ್ಗಿಲು" (ಹಲಾಯು. ೩೩-೪೮). [ಸಂ. ಶ್ವದಂಷ್ಟ್ರಾ]

**ಶ್ವನಿಶ** (ನಾ). (ನಾಯಿಗಳು ಬಗುಳುವ) ಅಮಾವಾಸ್ಯೆಯ ಹಿಂದಿನ ರಾತ್ರಿ ; ಕೃಷ್ಣಚತುರ್ದಶಿ : "ಶ್ವನಿಶವೆಂದರೆ ಕೃಷ್ಣಚತುರ್ದಶೀ" (ಸಿದ್ಧಾಂತಿ. ೪೫೮). [ಸಂ.]

**ಶ್ವಪಚ** (ನಾ). ನಾಯಿಯನ್ನು ಬೇಯಿಸಿ ತಿನ್ನುವವನು ; ಚಂಡಾಲ : ಚತುರ್ವೇದಿಯಾದರೇನು ಲಿಂಗವಿಲ್ಲದವನೇ ಹೊಲೆಯ ಶ್ವಪಚನಾದರೇನು ಲಿಂಗವಿದ್ದವನೇ ವಾರಣಾಸಿ (ಬಸವ. ೭೦೭); ಪೊಡವಿಪತಿ ಮಡಿದ ಕೇಡಡಸಿತಲ್ಲದೊಡೆನ್ನ ಗುಪ್ತಮಂಗಳಸೂತ್ರದೆಡೆಯ ಹೊಳೆಹೊಳೆವ್ಯೆದೆದಾಳಿಯನಿದಂ ಶ್ವಪಚನೆಂತು ಕಂಡಪನೆಂದಳು (ಹಚಕಾ. ೧೨-೩೮). [ಸಂ.]

**ಶ್ವಪಚಕ** (ನಾ). = ಶ್ವಪಚ : ಆ ಶ್ವಪಚಕರ್ ಬೆದಱಿಯಾ ಗೋವಿನ ಪೃಷ್ಠಭಾಗಕ್ಕೆ ಕಾಯ್ದ ನೀರಂ ತಂದೆಱೆದು (ಪಂಚತಂ. ೧೯-೧೭). [ಸಂ.]

**ಶ್ವಪಚಿ** (ನಾ). ಚಂಡಾಲಸ್ತ್ರೀ : ಕಾನನಕೆ ಶ್ವಪಚಿ ಸಹಿತಂ ಪೋಗಿ ಬಿಲದಲ್ಲಿ ತಾನಿರುತ ಮಾರ್ಗದೊಳು ಬರುವವರನಪಹರಿಸಿ ನಿರ್ದಯದಿಂ ಕೊಂದು ಗೋಮಹಿಷಿಗಳ ತಿಂದು ಪಲದಿವಸಮಾಗಲು (ಪ್ರೌಢರಾ. ೧೪-೨೦). [ಸಂ. ಶ್ವಪಚೀ]

**ಶ್ವಭ್ರ** (ನಾ). ೧. ಕಂಡಿ ; ತೂತು ; ರಂಧ್ರ : "ನಿಮ್ನಂ, ಅಗಾಧಂ, ಗರ್ತಃ, ಶ್ವಭ್ರಂ . . . ದರಃ — ಈ ೧೫ ಕುಟಿ" (ಹಲಾಯು. ೧೦೩-೨). ೨. ಪಾತಾಳ ; ನರಕ : ಘುಳುಮ್ಮನಿಟಿಗುಂ ಶ್ವಭ್ರಾಂತಮಂ ತಾಪಿನಂ (ಆದಿಪು. ೫-೮೧); ಉರ್ವೀಸುತ[ಂ] ಸ್ಥಾಯಿಯಾದೊಡೆ ಮಂದೇಂದುಜರಾಳ್ದರಾದೊಡಱ್ ನೀಂ ಬಂದಂ ನರಂ ಶ್ವಭ್ರ [ಪಾಠಾಂ. ಸ್ವಭ್ರಮ, ಸ್ವಭ್ರ]ದಿಂ (ಜಾತತಿ. ೨೬-೨೫). [ಸಂ.]

**ಶ್ವಯಥು** (ನಾ). ೧. ಬಾತುಕೊಳ್ಳುವಿಕೆ ; ಊದಿಕೊಳ್ಳುವಿಕೆ. ೨. ಬಾವು ; ಶೋಭೆ : "ಶೋಫಃ, ಶ್ವಯಥುಃ — ಈ ೨ ಬಾ(ವು)ಹು" (ಹಲಾಯು. ೯೮-೪೪೮). [ಸಂ.]

**ಶ್ವಯು** (ನಾ). ಒಂದು ಬಗೆಯ ಹಾವು ; ಹೆಬ್ಬಾವು ; ಅಜಗರ : ದಂಡಕನೃಪಂ ಲೋಭಾಭಿಭೂತಂ ವಿಷಾವಿಲದಂಷ್ಟ್ರಂ ಶ್ವಯುವಾಗಿ ಪುಟ್ಟಿ ಸುಟಿಗುಂ ಮುಂ ಬಯ್ತ ಭಂಡಾರದೊಳ್ (ಆದಿಪು. ೨-೧೫); ಮೊಗಂಗಳಂ ನೆಗಪಿ ಸುಯ್ದು ಶ್ವಯುನಿಕರದ ಮೇಗೊಗೆವ ನಿಡುಸುಯ್ಯ ಕಡುವೆಂಕೆಗಳಿಂ ಕಟಿಪುವುವು ಕಪಿಗಳದಱೊಳ್ ಹಿಮಮಂ (ಚಂದ್ರಪ್ರ. ೫-೫೨). [< ಸಂ. ಶಯು]

**ಶ್ವವೃತ್ತಿ** (ನಾ). ೧. ನಾಯಿಯ ಬಾಳು. ೨. ಸೇವೆ ; ಚಾಕರಿ : "ಸೇವಾ, ಶ್ವವೃತ್ತಿಃ — ೨ ಚಾಕರಿ ಮಾಡಿ ಜೀವಿಸುವಿಕೆ" (ಸಿದ್ಧಾಂತಿ. ೨೭೪). [ಸಂ.]

**ಶ್ವಶುರ** (ನಾ). ಹೆಂಡತಿಯ ಅಥವಾ ಗಂಡನ ತಂದೆ ; ಮಾವ : ಎಲೆ ದೇವಿ ಮತ್ತಿನಳಿಯಂದಿರವೋಲೆನ್ನುವಂ ನಲಿದು ಮನ್ನಿಸನವಂ ಶ್ವಶುರನಾನೆಂದು ತಾನಲರ್ದು ವಂದಿಸನು (ಆರಾಚ. ೩-೧೭-೩). [ಸಂ.]

**ಶ್ವಶುರಗೃಹ** (ನಾ). ಮಾವನ ಮನೆ : ಆ ಹುಡುಗಿಗೆ ಏನು ಅರ್ಥವಾಯಿತೋ ಏನೋ ! ಆದರೆ ಇದಕ್ಕಿಂತ . . . ಕಾವ್ಯಮಯವಾದ ಶ್ವಶುರಗೃಹವರ್ಣನೆಯು ಸಾಧ್ಯವಿಲ್ಲ (ಬಂಕಿಮ. ೧೨೭). [ಸಂ.]

**ಶ್ವಶುರ್ಯ** (ನಾ). ಹೆಂಡತಿಯ ಅಥವಾ ಗಂಡನ ಸಹೋದರ; ಭಾವಮೈದುನ: "ಶ್ವಶುರ್ಯಃ — ೧. ಗಂಡನ ಒಡಹುಟ್ಟಿದವನು. ೨. ಹೆಂಡತೀ ಒಡಹುಟ್ಟಿದವನು" (ಸಿದ್ಧಾಂತಿ. ೪೦೬). [ಸಂ.]

**ಶ್ವಶ್ರು** (ನಾ). ಹೆಂಡತಿಯ ಅಥವಾ ಗಂಡನ ತಾಯಿ ; ಅತ್ತೆ : ''ಶ್ವಶುರ ಶ್ವಶ್ರೂನಾಮವದೆಸೆಗುಂ ಕೂಸಿತ್ತ ಮಾವನೊಳಮತ್ತೆಯೊಳಂ'' (ವಸ್ತುಕೋ. ೫೬-೨೪). [ಸಂ. ಶ್ವಶ್ರೂ]

**ಶ್ವಸನ** (ನಾ). ೧. ಉಸಿರಾಡುವಿಕೆ ; ಉಸಿರಾಟ. ೨. ಉಸಿರು ; ಶ್ವಾಸ. ೩. ಗಾಳಿ ; ವಾಯು : ಯಮುನಾನದೀತರಂಗಮನಮುಂಕಿ ವನಲತೆಯ ಮನೆಗಳಂ ಸೋಂಕಿ ವನಭ್ರಮಣಪರಿಶ್ರಮಮಂ ಮುನ್ನಮೆ ಕಳೆದುದು ಬಂದದೊಂದು ಮಂದಶ್ವಸನಂ (ಪಂಪಭಾ. ೫-೫೩); ಶ್ವಸನನುಮರ್ಕಪ್ರಭೆಯುಂ ನುಸುಳದೆನಲ್ ಪಾಯ್ವ ಕಣೆಯ ಕಣೆಗಟ್ಟಲೆಯೊಳ್ ಮಿಸುಪ ಕಲಧೌತಪುಂಖಪ್ರಸರಂ ಖದ್ಯೋತತತಿವೊಲಾದುದು ನಭದೊಳ್ (ಜಗವಿ. ೧೨-೧೨). ೪. ಶ್ವಾಸರೋಗ ; ಉಬ್ಬಸ : ಬಿಸರುಹಸಖನಿರೆ ಮಕರದೊಳಸದ್ಗ್ರಹದ್ವಿತಯಮಿರೆ ನಿಶಾನಾಥ'ಂಗಿರ್ದೆಸೆಯೊಳ್ ಮನುಜಂ ಪ್ಲೀಹ ಶ್ವಸನ ಕ್ಷಯ ಗುಲ್ಮವಿದ್ರಧಿವ್ಯಾಧಿಯುತಂ (ಜಾತತಿ. ೨೦-೧೩). ೫. ಒಂದು ಬಗೆಯ ಮುಳ್ಳುಗಿಡ; ಮಂಗಾರೆಗಿಡ : ''ಪಿಂಡೀತಕಃ . . . ಶ್ವಸನಃ — ಮಂಗಾರೆ ಗಿಡದ ಹೆಸರು'' (ಸಿದ್ಧಾಂತಿ. ೧೨೪). ೬. [ಛಂದ] ಆದಿಯಲ್ಲಿ ಎರಡು ಲಘುಗಳೂ ನಂತರ ಒಂದು ಗುರುವೂ ಬರುವ ಅಕ್ಷರಗಣ ; ಸಗಣ (UU– ) : ಶ್ವಸನೇಂದುಜ್ವಲನಾಮರಾವನಿ ಜಲಂ ದೈತ್ಯಾರಿ ಕಾಮಾಂತಕಪ್ರಸರೋದ್ಯದ್ಗಣದಿಂ . . . ಸಂದುದು ಕರಂ ಮತ್ತೇಭವಿಕ್ರೀಡಿತಂ (ಛಂದೋಂಬು. ೨-೧೭೫). [ಸಂ.]

**ಶ್ವಸನಪಥ** (ನಾ). ಗಾಳಿಯು ಚಲಿಸುವ ದಾರಿ ; ಆಕಾಶ : ಶ್ವಸನಪಥಮಮಳ ಮಾಯ್ತಿಂದೊಸಗೆಗಳಂ ಬೀಱುವಂತೆ ಶರದಾಗಮದೊಳ್ (ಕವಿರಾ. ೨-೭೧). [ಸಂ.]

**ಶ್ವಸನಾಶನ** (ನಾ). ಗಾಳಿಯನ್ನೇ ಆಹಾರವಾಗಿ ಉಳ್ಳುದು ; ಹಾವು. [ಸಂ.]

**ಶ್ವಸಿತ** (ಗು). ೧. ಉಸಿರಾಡಿದ. (ನಾ). ೨. ಉಸಿರಾಡುವುದು ; ಉಸಿರಾಟ. ೩. ಉಸಿರು ; ಶ್ವಾಸ : ಪೌರವಧ್ರೂಶ್ವಸಿತಪದ್ಮಗಂಧವಿಚಾರಂ . . . ಸುೞಿವುದಲ್ಲಿ ಚಾರುಸಮಿರಾರಂ (ಜಗವಿ. ೨-೨೫); ಶ್ವಸಿತದ ಕಂಪು ಕಂಪನಭಿವರ್ಧಿಸೆ ಬಣ್ಣದ ಸೊಂಪು ಬಣ್ಣವೇೞಿಸೆ . . . ಮಾಲೆಗೇನೆಸೆದುವೊ ಮಾಲೆಗಾರ್ತಿಯರ ವರ್ತನೆ (ಪುಷ್ಪಪು. ೨-೮೦). ೪. ನಿಟ್ಟುಸಿರು ; ದೀರ್ಘಶ್ವಾಸ. ೫. [ನಾಟ್ಯ] ನೃತ್ಯದ ಒಂದು ಭಂಗಿ ; IP ''ಗಡ್ಡವನ್ನು ಒಂದು ಅಂಗುಲದಷ್ಟು ಕೆಳಕ್ಕೆ ಇಳಿಸುವುದು'' (ಲಾಸ್ಯರಂ. ೫೦ ಗದ್ಯಾನುವಾದ) : ನಿಡುಚಿಬುಕಂ ವ್ಯಾದೀರ್ಣಂ ಬಿಡದಂಗುಲದುದ್ದ ಕೆಳಗದಾಗಲ್ ಶ್ವಸಿತಂ (ಲಾಸ್ಯರಂ. ೩-೧೦೦). [ಸಂ.]

**ಶ್ವಾನ** (ನಾ). ೧. ನಾಯಿ ; ಶುನಕ : ಶ್ವಾನಂಗಳ್ ಗಂಧಮಾರ್ತಂಡನನತಿಹಿತದಿಂ ಕಾಪುಗೊಂಡಿರ್ದುವು (ಕಾವ್ಯಾವ. ೧೮೩); ಶ್ವಾನಕುಕ್ಕಟಕಾಕಬಕಪವಮಾನಖಿಗಪತಿ . . . ಮೃಗಪೋತಕನ ಗುಣವಾ ನರೇಂದ್ರನೊಳಿರಲುಬೇಹುದು (ಕುವ್ಯಾಉ. ೩-೧೯೯); ಮಂಗವನ್ನು ಕೊಬ್ಬಿದ ಶ್ವಾನವೊಂದು ಬೆಂಬತ್ತಿ ಹಿಡಿದು ಕಚ್ಚಿ ಎಳೆದುಬಿಟ್ಟಿತು (ಹೇಮಂತ. ೩೦೦). ೨. [ವಾಸ್ತು] ಕಟ್ಟಡದ ಆಯಪ್ರಮಾಣದಲ್ಲಿ ಅನುಸರಿಸಬೇಕಾದ ಎಂಟು ಆಯ ಪ್ರಕಾರಗಳಲ್ಲಿ ಒಂದು : ಗಜ, ಉಷ್ಟ್ರ (ಒಂಟೆ), ಖರ, ಸಿಂಹ, ವೃಷ, ಧ್ವಜ, ಧೂಮ, ಶ್ವಾನ ಎಂಬ ಆಯಗಳನ್ನರಿತು ನಿರ್ಮಾಣವಾಗತಕ್ಕದೆಂದೂ . . . ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಭಾರದ. ೮೦). 'ಧೂಮಾಯ' ಪರಾ. [ಸಂ.]

**ಶ್ವಾನಜ್ಞಾನ** (ನಾ). ೧. ಕ್ಷಣಕ್ಷಣಕ್ಕೂ ಬದಲಾಗುತ್ತಿರುವ ಬುದ್ಧಿ ; ಅಸ್ಥಿರಚಿತ್ತ. ೨. ಹಿಂದಿನ ಜನ್ಮದಲ್ಲಿ ನಡೆದ ಸಂಗತಿಗಳ ನೆನಪನ್ನುಂಟುಮಾಡುವ ಜ್ಞಾನ ; ಜಾತಿಸ್ಮರಣೆ : ಶ್ವಾನಜ್ಞಾನ, ಗಜಜ್ಞಾನ ಕುಕ್ಕುಟಜ್ಞಾನವೆಂಬ ಜ್ಞಾನತ್ರಯಂಗಳೇನಾದುವು (ಬಸವ. ೭೮೪). 'ಗಜಜ್ಞಾನ' ಪರಾ. [ಸಂ.]

**ಶ್ವಾನಜ್ಞಾನಿ** (ನಾ). ೧. ಚಂಚಲಚಿತ್ತನಾದವನು. ೨. ಪೂರ್ವಜನ್ಮದ ನೆನಪುಳ್ಳವನು ; ಜಾತಿಸ್ಮರ : ಶ್ವಾನಜ್ಞಾನಿಗಳೆಲ್ಲರು ಸಮ್ಯಕ್‌ಜ್ಞಾನವ ಬಲ್ಲರೆ ಲೌಕಿಕಧ್ಯಾನಮೌನಿಗಳೆಲ್ಲರು ಸ್ವಾನುಭಾವಿಗಳಹರೇ (ಮೋಳಿಮಾ. ೨೦೧-೭೪೮). [ಸಂ. ಶ್ವಾನಜ್ಞಾನಿನ್]

**ಶ್ವಾನವೃತ್ತಿ** (ನಾ). = ಶ್ವವೃತ್ತಿ ೨ : ಹೀನಸೇವಾವೃತ್ತಿ ಧರೆಯಲಿ ಶ್ವಾನವೃತ್ತಿಯದೆಂತುಟೆಂದರೆ ಶ್ವಾನನಿಜಚಾರಿತ್ರಸೇವಕನಸ್ವತಂತ್ರಕನು (ಕೌಶಿರಾ. ೩೮-೫೮). [ಸಂ.]

**ಶ್ವಾಪದ** (ನಾ). ೧. ಕ್ರೂರವಾದುದು ; ಉಗ್ರವಾದುದು : ''ವ್ಯಾಲಂ ಶ್ವಾಪದ ಭುಜಂಗಮುಂ ಕ್ರೂರಾರ್ಥಂ'' (ವಸ್ತುಕೋ. ೧೩೦-೭೫). ೨. ಕ್ರೂರಮೃಗ ; ದುಷ್ಟಪ್ರಾಣಿ: ಅಖಿಳವೃಕವರಾಹಶ್ವಾಪದಂಗಳೇ ಬಲಂಗಳಾಗಿಯುಂ (ಪಂಚತಂ. ೨೫-೯); ಚತುರಮಾತುಳ್ಳ ಸುಕುಮಾರಿ ಮಾರಸತಿಗತಿಶಯದ ರೂಪಾಂತರಣ್ಯದೊಳ್ ಚರಿಪುದೇಂ ಶ್ವಾಪದಂಗಳ ಸಂತೆಯೊಳ್ (ವೆಂಕಾರಾ. ೩-೯-೧೫). ೩. ಹುಲಿ ; ವ್ಯಾಘ್ರ : ಬರುತ್ತಿದೆ ಹೊಸನಾತ ಹತ್ತಿದ ಶ್ವಾಪದ! ಎಲ್ಲಿಯಾದರೂ ಓಡಿ ಹೋಗಬೇಕು (ಕ್ಷಿತಿಜ. ೧೦೧). [ಸಂ.]

**ಶ್ವಾಸ** (ನಾ). ೧. ಉಸಿರು : ದೊಡ್ಡನ ಶ್ವಾಸ ಮಾತ್ರ ಆಡುತ್ತಿತ್ತು (ಕಾಲೂರ. ೭ ಕಥಾಸಾರ). ೨. ಉಸಿರುಬಿಡುವುದು : ಶ್ವಾಸಮತಿಮೂರ್ಛೆಯಕ್ಕುಂ ಮಾಸುಗುಮಾನನದ ವರ್ಣಮುಂ . . . ಆಸುರದ ಸಮೀರಣಸ್ಥವಿಷದಿಂ (ಖಮದ. ೫-೨೨); ಶ್ವಾಸದಲ್ಲಿ — ಶ್ವಾಸ, ಉಚ್ಛ್ವಾಸ, ನಿಶ್ವಾಸಗಳೆಂದು ಮೂರುವಿಧಗಳುಂಟು. ಶ್ವಾಸವೆಂದರೆ — ಮೂಗಿನಿಂದ ಗಾಳಿಯನ್ನು ಹೊರಗೆ ಬಿಡುವುದು (ಹಸಾರ. ೧-೪ ವಿಶೇಷಾರ್ಥ [illegible]. ೩. ನಿಟ್ಟುಸಿರು; ದೀರ್ಘಶ್ವಾಸ. ೪. ಗಾಳಿ ; ವಾಯು. ೫. ಗೂರಲು ; ಉಬ್ಬಸ : ತಲೆ ಅತ್ಯಂತ ಭಿನ್ನಂತಪ್ಪುದುಂ . . . ಶ್ವಾಸ, ಕೆಮ್ಮು ಇನಿತು ಶ್ಲೇಷ್ಮರೋಗಲಕ್ಷಣ (ವಿವೈವಿ. ೧೮೯). [ಸಂ.]

**ಶ್ವಾಸಕ** (ನಾ). ಉಚ್ಚಾರಣೆ : ''ಶ್ವಾಸಕಂ ಜಿಹ್ವಾರವಂ'' (ಮಂಗರಾ. ೯೭-೧೬). [ಸಂ.]

**ಶ್ವಾಸಕುಠಾರಚೂರ್ಣ** (ನಾ). ಗೂರಲುರೋಗನಿವಾರಕವಾದ ಒಂದು ಬಗೆಯ ಔಷಧಿ : ಶ್ವಾಸಕುಠಾರಚೂರ್ಣ — ಪರಂಗಿಚಕ್ಕೆ, ಗಂಟುಭಾರಂಗಿ, ಶುಂಠಿ, ಮೆಣಸು, ಹಿಪ್ಪಲಿ, ವಾದಕ್ಕಿ, ಜಾಕಾಯಿ, ಜಾಪತ್ರೆ, ಸಬ್ಬಸಿಗೆ . . . ಚೂರ್ಣವ ಮಾಡಿ . . . ಈ ಬಗೆಯ ಸೊಪ್ಪುಗಳ ರಸದಲ್ಲಿ ಪ್ರತ್ಯೇಕ ಮೂರು ಭಾವನೆಯಂ ಮಾಡಿ ನೆಳಲಲ್ಲಿ ಒಣಗಿಸಿ ನಿತ್ಯವೂ ೧ ತೂಕವಂ ತೆಗೆದುಕೊಳ್ಳೆ ಶ್ವಾಸಖಾಸ ಹರ (ಸಕವೈ. ೨೩೭). [ಸಂ.]

**ಶ್ವಾಸಕೋಶ** (ನಾ). ಉಸಿರಾಟಕ್ಕೆ ಸಹಕಾರಿಯಾದ ಅಂಗ ; ಪುಪ್ಫುಸ : ಹೃದಯದ ಬಡಿತ, ಶ್ವಾಸಕೋಶಗಳ ಸಂಕೋಚ ವಿಕಾಸ (ಶಿಕ್ಷದ. ೭೩); ದೇಶ ಆಕಾಶಗಳ ಶ್ವಾಸಕೋಶಗಳೆಸಗಿ ಉಸಿರನಿತ್ತು ನಾಡಿನಾಡಿಗಳಲ್ಲಿ ಕಾಡುಕಾಡುಗಳನ್ನೆ ಕೂಡಿ ಹರಿಸಿತ್ತು! (ಅನಿಕೇ. ೫೩-೭). [ಸಂ.]

**ಶ್ವಾಸಕ್ರಿಯೆ** (ನಾ). ಉಸಿರಾಟದ ಕಾರ್ಯ : ವೈದ್ಯರು ಬಂದು ನೋಡುವಷ್ಟರಲ್ಲಿ ಅವರ ಶ್ವಾಸಕ್ರಿಯೆ ನಿಂತುಹೋಯಿತು (ರೂಢಿ). [ಸಂ. ಶ್ವಾಸಕ್ರಿಯಾ]

**ಶ್ವಾಸಧಾರಣೆ** (ನಾ). ೧. ಉಸಿರನ್ನು ಬಿಗಿಹಿಡಿಯುವಿಕೆ. ೨. [ಯೋಗ] ಪ್ರಾಣಾಯಾಮದಲ್ಲಿ ಒಳಗೆಳೆದುಕೊಂಡ ಉಸಿರನ್ನು ಬಿಗಿಹಿಡಿಯುವಿಕೆ ; ಕುಂಭಕ : ಆಚಾರ್ಯರು ಧರ್ಮರಾಯನ ಬಾಯಲ್ಲಿಯೂ ಈ ಮಾತು ಹೊರಟ ಮೇಲೆ ತನ್ನ ಮಗ ಸತ್ತದ್ದು ನಿಜವಾಗಿರಬೇಕೆಂದು . . . ಶ್ವಾಸಧಾರಣೆಯನ್ನು ಮಾಡಿ ಪ್ರಾಣವನ್ನು ಬಿಟ್ಟರು (ನೀತಿಚಂ. IV, ೩೧). [ಸಂ. ಶ್ವಾಸಧಾರಣ]

**ಶ್ವಾಸನಾಳ** (ನಾ). ಉಸಿರನ್ನು ಪುಪ್ಪುಸಗಳಿಗೆ ಒಯ್ಯುವ ಕೊಳವೆ, — ನಳಿಕೆ: ಕೀಟಕಗಳ ಶ್ವಾಸೋಚ್ಛ್ವಾಸವು ಶ್ವಾಸನಾಳಗಳಿಂದ (Trachae) ನಡೆಯುತ್ತದೆ (ಕೀಟಪಿ. ೭). [ಸಂ. ಶ್ವಾಸನಾಲ]

**ಶ್ವಾಸಿಸು** (ಕ್ರಿ). ೧. ಉಸಿರಾಡು ; ಶ್ವಾಸೋಚ್ಛ್ವಾಸಮಾಡು : ಅನ್ ಎಂದರೆ ಶ್ವಾಸಿಸು ಉಸಿರಾಡು ಎಂದರ್ಥ, ಜೀವನದ ಉಸಿರೇ ಆತ್ಮ (ಕವಿಕೋ. I, ೭೩೧). ೨. ವಾಸನೆ ನೋಡು ; ಆಘ್ರಾಣಿಸು : ಮೋಹಿಸಿತು ಮಾಯಾಮೃಗವು ರಘುಪತಿಯ ಚಿಗಿವುದೆಡಬಲಕುದಿರ್ದ ತಱಗೆಲೆ ಜಗುಳೆ ಬೆದಱುವುದವನಿಜೇಶನ ಸೊಗಡನು ಶ್ವಾಸಿಸುವುದಂಜುವುದನಿಲದುಱುಬೆಯಲಿ (ತೊರರಾ. ೩-೮-೬೫). [ಶ್ವಾಸ + - ಇಸು]

**ಶ್ವಿತ್ರ** (ನಾ). ಚರ್ಮವು ಬಿಳುಪಾಗುವ ಒಂದು ಬಗೆಯ ರೋಗ ; ತೊನ್ನು : ತರಣಿಯಿಂ ಪೋಗದಾ ಶ್ವಿತ್ರರುಜೆಯಂ ಶಿವಸ್ಮರಣದಿಂದೇನಳಿಯನೇ ಮಯೂರಂ (ಪದ್ಮರಾ. ೪-೫೮); ಅರಿದಳ, ಗಂಧಕ . . . ಕಾಸಿ ಹದದಲ್ಲಿ ಇಳುಹಿ ಮೈಗೆ ಲೇಪ ಇಕ್ಕಿಸಲು ಹದಿನೆಂಟು ತೆಱದ ಕುಷ್ಠ, ಶ್ವಿತ್ರ, ದದ್ರು ಮುಂತಾದ ಸಕಲ ವ್ರಣಂಗಳು ನಾಶವಹವು (ವೈದ್ಯಸಾ. I, ೩೯೫). [ಸಂ.]

**ಶ್ವೇತ** (ಗು). ೧. ಬಿಳಿಯ ಬಣ್ಣದ: 'ಶ್ವೇತಕಪೋತ' ಪರಾ. (ನಾ). ೨. ಬಿಳಿಯ ಬಣ್ಣ ; ಗೌರವರ್ಣ : ಶ್ವೇತಾದಿ ಚತುರ್ವರ್ಣೋಪೇತಂ . . . ತಾನದುಮುಲ್ಕಾಪಾತಂ ವಿಪ್ರಾದಿವರ್ಣಮಂ ಸಂಹರಿಕುಂ (ಲೋಕೋಪ. ೪-೧೯); ಆತ್ಮನ ಇರವು ಶ್ವೇತವೋ ಹರಿತವೋ ಕಪೋತವೋ (ಮೋಳಿಮಾ. ೮೯-೩೫೩). ೩. ಬೆಳ್ಳಿ ; ರಜತ: "ಬೆಳ್ಳಿಯಲ್ಲಿಯುಂ ಶ್ವೇತಮೆಂಬುದು" (ಹಲಾಯು. ೧೩೧-೫). ೪. ಶ್ವೇತಾದ್ರಿ ; ಬಿಳಿಗಿರಿ. ೫. ಕ್ಷೀರಸಮುದ್ರದ ಮಧ್ಯದಲ್ಲಿರುವುದೆಂದೂ ವಿಷ್ಣುವಿನ ವಾಸಸ್ಥಾನವೆಂದೂ ನಂಬಲಾದ ಒಂದು ಉಪದ್ವೀಪ ; ವೈಕುಂಠ : "ಧವಳಂ ದ್ವೀಪವಿಶೇಷ ಪರ್ವತವಿಭೇದಂ ಬೆಳ್ಳಿಯುಂ ಶ್ವೇತಮಕ್ಕುಂ" (ನಾನಾರ. ೧೦೪). ೬. ಒಂದು ಬಗೆಯ ಗಿಡ : "ಶ್ವೇತಂ — ಅಬಲ್, ಶ್ರೀಗಂಧ" (ಓಷಧಿ. ೧೭೦). ೭. ಒಂದು ಬಗೆಯ ಕುದುರೆ ; ಬಿಳಿಯ ಬಣ್ಣದ ಕುದುರೆ : ಹಿಮಾಚಲಸಿತಪಂಕೇರುಹರುಚಿಯಂ ಪೋಲ್ವ ಶರೀರದಿನತಿಧವಳನಪ್ಪ ತುರಗಂ ಶ್ವೇತಂ (ಅಶ್ವಶಾ. ೨-೨).

ಶ್ವೇತಕೃಷ್ಣಕಾರಕ = ೧. ಬಿಳಿದನ್ನು ಕಪ್ಪಾಗಿ ಮಾಡುವವನು. ೨. (ಆಲಂ) ಮೋಸಗಾರ ; ವಂಚಕ : ದುರ್ಯೋಧನನಪ್ಪೊಡೆ ಶ್ವೇತಕೃಷ್ಣಕಾರಕಂ ಕೃಷ್ಣನಂ ತನಗೆ ಮಾಡದನ್ನೆಗಂ ಮುನ್ನಮೆ ಪನ್ನಗಶಯನನಂ ನಮಗೆ ಮಾಡುವುದುತ್ತಮಪಕ್ಷಂ (ಪಂಪಭಾ. ೯-೧೦); ಕೃಷ್ಣ ನಿನ್ನವೋಲ್ ಶ್ವೇತಕೃಷ್ಣಕಾರಕರೊಳರೇ (ಗದಾಯು. ೭-೫೩).

[ಸಂ.]

**ಶ್ವೇತಕಡವ** (ನಾ). ಒಂದು ಬಗೆಯ ಮರ : "ಮಧುರೇಣುಃ — ಶ್ವೇತಕಡವ" (ಓಷಧಿ. ೧೨೦). [ಶ್ವೇತ + ಕಡವ$_1$ (< ಕಡಂಬ)]

**ಶ್ವೇತಕಪೋತ** (ನಾ). ೧. ಬಿಳಿಯ ಪಾರಿವಾಳ. ೨. ಒಂದು ಬಗೆಯ ಪಕ್ಷಿ : ಕಚದ್ರುಮಂ ನಿರ್ಬುದ್ಧಿಯೊರ್ವನೆ ಕರುಮಾಡದೊಳ್ ಶ್ವೇತಕಪೋತನಂತಿರ್ದು ಶತ್ರುಸಂಗ್ರಹಣಕ್ಕೊಳಗಾದಂ (ಪಂಚತಂ. ೨೯-೨). ೩. ಒಂದು ಬಗೆಯ ಇಲಿ. ೪. ಒಂದು ಬಗೆಯ ಹಾವು. [ಸಂ.]

**ಶ್ವೇತಕಾಡುವಿಟ್ಟಿ** (ನಾ). ಒಂದು ಬಗೆಯ ಸಸ್ಯ : "ನಾಭಿಕಾ-ನಾಭಿ, ಶ್ವೇತಕಾಡುವಿಟ್ಟಿ" (ಓಷಧಿ. ೮೫). [ಶ್ವೇತ + ಕಾಡುವಿಟ್ಟಿ]

**ಶ್ವೇತಕುಷ್ಠ** (ನಾ). ಚರ್ಮವು ಬಿಳುಪಾಗುವ ಒಂದು ಬಗೆಯ ಕುಷ್ಠರೋಗ : ತಾರೇಕಾಯಿ, ಕಲ್ಲತ್ತಿಯ ಸೊಪ್ಪು XXX ಬಾವಂಜಿಯ ಬೀಜವನ್ನೂ ಬೆಲ್ಲ ಸಹವಾಗಿ ಒಡಲೊಳಕ್ಕೆ ಕೊಟ್ಟರೆ ಶ್ವೇತಕುಷ್ಠ ಮಾಣ್ಗುಂ (ವಿಷ್ಣುವಿ. ೮೭). [ಸಂ.]

**ಶ್ವೇತಚ್ಛತ್ರ** (ನಾ). ೧. (ಅರಸರಿಗಾಗಲಿ, ದೇವತಾವಿಗ್ರಹಗಳಿಗಾಗಲಿ ಹಿಡಿಯುವ) ಬಿಳಿಯ ಕೊಡೆ ; ಧವಳಚ್ಛತ್ರ. ೨. (ಆಲಂ) ನೆಲೆ ; ಆಶ್ರಯ: ಹಿಂದೂಧರ್ಮದ ಶ್ವೇತಚ್ಛತ್ರದ ಅಡಿಯಲ್ಲಿ, ನಾನು ಬೇರೆ, ಜಗತ್ತು ಬೇರೆ, ದೇವರು ಬೇರೆ ಎನ್ನುವವರಿಗೆ ಸ್ಥಳವಿದೆ (ಭಾರದ. ೩೦೭). [ಸಂ.]

**ಶ್ವೇತಚ್ಛದ** (ನಾ). ಬಿಳಿಯ ರೆಕ್ಕೆಗಳುಳ್ಳ ಪಕ್ಷಿ; ಹಂಸ : "ಹಂಸಃ, ಶ್ವೇತಚ್ಛದಃ, ಚಕ್ರಾಂಗಃ, ಮಾನಸೌಕಾಃ(ಕಸಃ) — ಈ ೪ ಹಂಸಂ" (ಹಲಾಯು. ೪೨-೯೮). [ಸಂ.]

**ಶ್ವೇತತುರಗ** (ನಾ). ೧. ಬಿಳಿಯ ಕುದುರೆ. ೨. ಬಿಳಿಯ ಕುದುರೆಯುಳ್ಳವನು; ಅರ್ಜುನ : ಶಬರನಿವನಲ್ಲ ಈತ ಪಲ್ಲಟವಾದನೋ ಮೇಣ್ ಶ್ವೇತತುರಗನ ಪಲ್ಲಟವೋ ಕುಂತೀತನುಜ ತಾನಲ್ಲ ನಿಶ್ಚಯವೆನುತ ಚಿಂತಿಸಿದ (ಕುವ್ಯಾಅ. ೭-೩೯). [ಸಂ.]

**ಶ್ವೇತದ್ವೀಪ** (ನಾ). ೧. ಬಿಳಿಯ ದ್ವೀಪ : ಶ್ವೇತದ್ವೀಪಮಿದೆಂಬ ಶಂಕೆ ಮಿಗೆ ಜಂಬೂದ್ವೀಪಮಂ ಪಾಂಡುರಕ್ ಖಾತಂ ಕೂಡಿ ಪೊದಟ್ದು ಪಜ್ಜಳಿಪ ಚಂದ್ರಾಲೋಕಮಂ ಕಂಡು (ಪುಷ್ಪಪು. ೧೩-೨೫). ೨.= ಶ್ವೇತ ೫ : ಅವ್ಯಾಕೃತಾಕಾಶದಲ್ಲಿ ಪರಮಪದ, ವೈಕುಂಠ, ಶ್ವೇತದ್ವೀಪ ಮೊದಲಾದ ಶಬ್ದಗಳಿಂದ ಹೇಳಲ್ಪಡುವ ಅತ್ಯದ್ಭುತಾನಂದ ಮಯವಾದ ಮುಕ್ತಿಸ್ಥಾನವೆಂಬ ಲೋಕವಿರುವುದು (ಹಿಂದಸಾ. ೨೯೩). [ಸಂ.]

**ಶ್ವೇತಪಕ್ಷ** (ನಾ). ಪಾಡ್ಯದಿಂದ ಹಿಡಿದು ಪೌರ್ಣಮಿಯವರೆಗಿನ ಕಾಲಮಾನ; ಶುಕ್ಲಪಕ್ಷ : ವಾರ್ತೆಯಾದೊಡಂ ಶ್ವೇತಪಕ್ಷದ ಚೈತ್ರಪಂಚಮಿಯ ವಾಸರಂ ಮುಗಿವನ್ನೆಗಂ ಬರದಿರಲ್ಕಾಂ ನಿವೇದಿಪೆನ್ ವೈಶ್ವಾನರಂಗೀ ಕಳೇಬರವನೆನುತೆ (ಶ್ರೀರಾಮಾ. ೮೫೧-೪೪). [ಸಂ.]

**ಶ್ವೇತಪಟ** (ನಾ). ೧. ಬಿಳಿಯ ಬಟ್ಟೆ, — ವಸ್ತ್ರ. ೨. [ಜೈನ] ಜೈನಮುನಿಗಳ ಸಂಘಗಳಲ್ಲಿ ಒಂದು : ಕಂಬಳತೀರ್ಥವೆಂಬುದಾದುದವರುಂ ಶ್ವೇತಪಟರೆಂಬೊರಾದರ್ (ವಡ್ಡಾರಾ. ೯೩-೧೯). [ಸಂ.]

**ಶ್ವೇತಪತ್ರ** (ನಾ). ೧. ವಿವರಣೆಯೊಡನೆ ಇದ್ದುದ್ದನ್ನು ಇದ್ದ ಹಾಗೆ ಹೇಳುವ ವರದಿ ; ಯಾವ ಉತ್ಪ್ರೇಕ್ಷೆಯೂ ಇಲ್ಲದ ವರದಿ : ಇದರ ಎಲ್ಲಾ ಸೂಚನೆಗಳೂ ಶ್ವೇತಪತ್ರರೂಪದಲ್ಲಿ ಪ್ರಕಟವಾದುವು (ಎಚ್ಚಸಾ. ೧೦). ೨. ಹಂಸ. [ಸಂ.]

**ಶ್ವೇತಮಂದಾರ** (ನಾ). ಒಂದು ಬಗೆಯ ಮರ ; ಬಿಳಿಯ ಮಂದಾರ : "ಪೃಥ್ವೀಕುರವಕಃ — ಶ್ವೇತಮಂದಾರ" (ಓಷಧಿ. ೧೦೩). [ಸಂ.]

**ಶ್ವೇತಮರಿಚ** (ನಾ). ೧. ಬಿಳಿಯ ಮೆಣಸು. ೨. ನುಗ್ಗೆಯ ಬೀಜ : "ಶಿಗ್ರುಜಂ, ಶ್ವೇತಮರಿಚಂ — ೨ ನುಗ್ಗೇಬೀಜದ ಪೆಸರು" (ಸಿದ್ಧಾಂತಿ. ೩೦೭). [ಸಂ.]

**ಶ್ವೇತರಕ್ತ** (ನಾ). ಬಿಳುಪು ಮತ್ತು ಕೆಂಪು ಮಿಶ್ರಿತವಾದ ರಕ್ತ ; ತಿಳಿಗೆಂಪು ಬಣ್ಣದ ರಕ್ತ : ಕೀಟಗಳ ರಕ್ತಕಣಗಳು — ಹೀಮೊಸ್ಯೆಟುಗಳು — ಮುಖ್ಯವಾಗಿ ಶ್ವೇತರಕ್ತ ಕಣಗಳು (Phagoytes) — ರಕ್ತಗತವಾಗುವ ವಿಷಾಣುಗಳನ್ನು ನುಂಗಿ ಜೀರ್ಣಿಸಿ ರೋಗ ಸೋಂಕದಂತೆ ಮಾಡಿ ಗಾಯಗಳನ್ನು ಅಂಟಿಕೊಂಡು ವಾಸಿಮಾಡುತ್ತವೆ (ಕೀಟಬಿ. ೩೩).

[ಸಂ.]

**ಶ್ವೇತರೋಚಿ** (ನಾ). ಬಿಳಿಯ ಬಣ್ಣದ ಪ್ರಕಾಶವುಳ್ಳವನು ; ಚಂದ್ರ : "ಇಂದುಃ, ಚಂದ್ರಃ . . . ಶ್ವೇತರೋಚಿಃ, ಶಶಾಂಕಃ . . . ದಾಕ್ಷಾಯಣೀರಮಣಃ — ಈ ೨೧ ಚಂದ್ರನ ಪೆಸರ್" (ಹಲಾಯು. ೮-೪೨). [ಸಂ. ಶ್ವೇತರೋಚಿಸ್]

**ಶ್ವೇತವರಾಹಕಲ್ಪ** (ನಾ). ಹದಿನಾರು ಕಲ್ಪಗಳಲ್ಲಿ ಒಂದು ; ವಾರಾಹಕಲ್ಪ.

[ಸಂ.]

**ಶ್ವೇತವಾಸ$_1$** (ನಾ). ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು : ಹದಿನೆಂಟಂಗುಳ ಮೊದಲಾಗಿ ಒಂದಂಗುಳ ಪರ್ಯಂತಮಾದ ಪರಿಮಾಣಕ್ರಮವಿಡಿದು ಜಾತಿವಾಸ . . . ಶ್ವೇತವಾಸ . . . ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವಱಿತು (ವಿವೇಕ. ೨೩೭). [ಶ್ವೇತ + ವಾಸ$_1$]

**ಶ್ವೇತವಾಸ$_2$** (ನಾ). ಬಿಳಿಯ ಬಟ್ಟೆಯನ್ನು ಧರಿಸಿದ ಬೌದ್ಧ ಅಥವಾ ಜೈನ ಸಂನ್ಯಾಸಿ : "ಮುನಿಃ . . . ಶ್ವೇತವಾಸಾಃ, ಸಂಯತಃ — ಈ ೯ ಸವಣರ ಪೆಸರ್" (ಹಲಾಯು. ೫೭-೧೯೦). [ಸಂ. ಶ್ವೇತವಾಸಸ್]

**ಶ್ವೇತವಾಹನ** (ನಾ). ೧. ಬಿಳಿಯ ಕುದುರೆಗಳನ್ನು ಹೊಂದಿರುವವನು. ೨. ಚಂದ್ರ. ೩. ಅರ್ಜುನ : ಬ್ರಹ್ಮಾಸ್ತ್ರಮಂ ಶ್ವೇತವಾಹನನಾರ್ದಿಸಲ್ಕೆ ಹಂಸಧ್ವಜನ ಜಾತಂ . . . ಬೊಬ್ಬಿಱಿದನು (ಜೈಮಿಭಾ. ೧೩-೧೭). ೪. ಒಬ್ಬಾತನ ಹೆಸರು : ಶ್ವೇತವಾಹನನ್ ಉದಯಪುರಮಾನ್ ಪೊಗುವಲ್ಲಿ (ಎಇ. IX, ೧೯-೧೨; ಸು. 800). [ಸಂ.]

**ಶ್ವೇತಾಂಗ** (ನಾ). ಚರ್ಮವು ಬೆಳ್ಳಗಾಗುವ ರೋಗವಿರುವವನು ; ಪಾಂಡುರೋಗಿ : ಜಗವಱಿಯೆ ತಾಂ ಕಳಂಕಂ ಕಳಾಹೀನ ಹಾವಗಿದುಗಿದ ವಿಷವಕ್ತ್ರ ದೋ[illegible]ಸ್ಥಿರ ಹಂದೆ ಮೃಗದಿಕ್ಕೆಗಾಡು ಹುತ್ತಿಟ್ಟಡವಿಯಾಲ ಹಬ್ಬಿದ ಹಾಳು ಶ್ವೇತಾಂಗನು (ಹ[illegible] ೪-೧೫). [ಸಂ.]

**ಶ್ವೇತಾಂಬರ** (ನಾ). ೧. ಬಿಳಿಯ ಬಟ್ಟೆ ; ಧವಳವಸ್ತ್ರ. ೨. [ಜೈನ] (ಬಿಳಿಯ ಬಣ್ಣದ ಬಟ್ಟೆಯನ್ನು ಧರಿಸುವ) ಜೈನರ ಒಂದು ಪಂಗಡ : ಆಸನ್ನಭವ್ಯನುಂ ಸ್ವಪರಹಿತಾರ್ಥಿಯುಂ ದ್ವಿಜಕುಲೋತ್ಪನ್ನನುಂ ಶ್ವೇತಾಂಬರಭಕ್ತನುಮಪ್ಪ ದ್ವೈಪಾಯಕನೆಂಬಂ (ತತ್ತ್ವಪ್ರ. ೧); ಜೈನರಲ್ಲಿ ಶ್ವೇತಾಂಬರ ದಿಗಂಬರರೆಂಬ ಎರಡು ಪಂಗಡಗಳುಂಟು (ಭಾತತ್ತ್ವ. ೨೨೭). ೩. ಶ್ವೇತಾಂಬರ ಪಂಗಡಕ್ಕೆ ಸೇರಿದವನು : ಬಂದೊಳಗಂ ಪೊಕ್ಕಾಂ ಶ್ವೇತಾಂಬರರಂ ಕಂಡು ನೀವಾರೆತ್ತಣಿಂ ಬಂದಿರಿ . . . ಎನೆ (ಧರ್ಮಾಮೃ. ೯-೪೮). 'ದಿಗಂಬರ' ಪರಾ. [ಸಂ.]

**ಶ್ವೇತಾಕ್ಷತೆ** (ನಾ). ಶ್ರಾದ್ಧಾದಿ ಅಪರಕಾರ್ಯಗಳಲ್ಲಿ ಬಳಸುವ ನೆನೆಸಿದ ಅಕ್ಕಿ.

[ಸಂ. ಶ್ವೇತಾಕ್ಷತ]

**ಶ್ವೇತಾಗುರು** (ನಾ). ಬಿಳಿಯ ಬಣ್ಣದ ಅಗರು ; ಬಿಳಿಯ ಚಂದನ : ಶ್ವೇತಾಗುರು [ಪಾಠಾಂ. ಬಿಳಿಯಗುರು] ಗುಗ್ಗುಲ ಶ್ರೀಗಂಧ ಅಗರು ಬಿಲ್ವಫಲ ತುಪ್ಪ ಜೇನುತುಪ್ಪ ಸಜ್ಜರಸ ಕರ್ಪೂರವೆಂಬ ದಶಾಂಗಧೂಪಂಗಳಂ (ವಿವೇಕ. ೯೪). 'ಕೃಷ್ಣಾಗರು' ಪರಾ. [ಸಂ.]

**ಶ್ವೇತಾತಪತ್ರ** (ನಾ). = ಶ್ವೇತಚ್ಛತ್ರ ೧ : ಉದ್ದಂಡಪುಂಡರೀಕಂಗಳಂ ಶ್ವೇತಾತಪತ್ರಂಗಳೆಂದೇ ಮಾಡಿ ಪಿಡಿಯಿಸಿಯುಂ . . . ಜಲಾರ್ದ್ರಜಲಕುಸುಮಂಗಳಂ ಸಾರ್ವಭೌಮೋಚಿತ ದ್ವಾತ್ರಿಂಶಚ್ಚಾರುಚಾಮರಂಗಳಂ ಮಾಡಿ ಬೀಸಿಸಿಯುಂ (ಆದಿಪು. ೮-೪೧ ವ); ನವಪುಷ್ಪೋತ್ಕರಪಾಂಡುಚೂತನಿವಹಂ ಶ್ವೇತಾತಪತ್ರಾಳಿ ಭೃಂಗವಧೂಝುಂಕೃತಿ ಶಂಖಪೂತ್ಕೃತಿರುತಂ (ಚಂದ್ರಪ್ರ. ೭-೩೮). [ಸಂ.]

**ಶ್ವೇತಾದ್ರಿ** (ನಾ). ಒಂದು ಪರ್ವತದ ಹೆಸರು ; ಕೈಲಾಸ ; ರಜತಗಿರಿ : ಶ್ವೇತಾದ್ರಿ ಶಿಖರದೊಳ್ಕಂಗೊಳಿಸುವುಜ್ವಲಜ್ಯೋತಿರ್ಲತೆಯೊ ಮೇಣು ಸಲ್ಲಲಿತಶುಭ್ರ ಜೀಮೂತದೊಡ್ಡಿನ ಮೇಲೆ ಪೊಳೆವ ಸೌದಾಮನಿಯೊ (ಜೈಮಿಭಾ. ೩-೧೪). [ಸಂ.]

**ಶ್ವೇತಾಭ್ರಕ** (ನಾ). ಬಿಳಿಯ ಕೊಡನಾರಿಗಡ್ಡೆ : ಶ್ವೇತಾಭ್ರಕವನ್ನು ಕುಟ್ಟಿ ವಸ್ತ್ರಗಾಳಿತ ಚೂರ್ಣಮಾಡಿ ಆವರಿಕೆಬೇರಿನ ಕಷಾಯದಲ್ಲರೆದು ಉಂಡೆ ಮಾಡಿ . . . ಕೊಟ್ಟರೆ ಬಹುಮೂತ್ರ ನಿಲ್ಲುವುದು (ಸಕವ್ಯ. ೫೦೦ ಪರಿ). [ಸಂ.]

**ಶ್ವೇತಾಮ್ಲ** (ನಾ). ಒಂದು ಬಗೆಯ ಗಿಡ : "ತ್ವಜಿಕಾ - ಶ್ವೇತಾಮ್ಲ" (ಓಷಧಿ. ೬೬). [ಸಂ.]

**ಶ್ವೇತಾರ್ಕ** (ನಾ). ಬಿಳಿಯ ಎಕ್ಕದ ಗಿಡ : "ಅಲರ್ಕಃ, ಪ್ರತಾಪಸಃ . . . ಶ್ವೇತಾರ್ಕ- ಬೆನಕನ ಯಕ್ಕೆ" (ಸಿದ್ಧಾಂತಿ ೧೩೧). [ಸಂ.]

**ಶ್ವೇತಾರ್ಜುನವೃಕ್ಷ** (ನಾ). ಒಂದು ಬಗೆಯ ಮರ ; ಬಿಳಿ ಮತ್ತಿಮರ : "ಸಾಲಃ . . . ಸಸ್ಯಸಂವರಃ - ೫ ಮತ್ತಿಗಿಡ, ಮದ್ದಿಮರ, ಶ್ವೇತಾರ್ಜುನವೃಕ್ಷ" (ಸಿದ್ಧಾಂತಿ. ೧೨೨) [ಸಂ.]

✷

# ಷ

**ಷ** (ನಾ). ೧. ಕನ್ನಡವರ್ಣಮಾಲೆಯ ಐವತ್ತೊಂದನೆಯ ಅಕ್ಷರ. ೨. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ : "ಚಷಮಾಜು" (ಮಂಗರಾ. ೧೦೪-೧೦).

**ಷಂಡ** (ನಾ). ೧. (ಮರ, ಗಿಡ ಮುಂತಾದುವುಗಳ) ಗುಂಪು ; ಸಮೂಹ ; ಮೊತ್ತ : ಅಲರ್ದಂಭೋರುಹಷಂಡಮುಳ್ಳಲರ್ದ ಚೆನ್ನೆಯ್ದಿಲ್ಲೊಳಂ . . . ಎಸಗುಂ ವಿದ್ಯಾಧರೋದ್ಯಾನದೊಳ್ (ಆದಿಪು. ೧-೬೬) ; ಉತ್ತಮಸ್ಥಳದ ಮಾಕಂದದ ಷಂಡಮನುತ್ತಮೆ ಬಂದು ಪೊರ್ದಿದಳು (ಅನಂಚ. ೯-೪೯). ೨. (ಸ್ವೇಚ್ಛೆಯಾಗಿ ತಿರುಗಾಡಲು ಬಿಟ್ಟ) ಗೂಳಿ ; ಬೀಜದ ಹೋರಿ ; ಬಸವ : "ಷಂಡಃ, ಗೋಪತಿಃ, ಇಟ್ಚರಃ- ೩ ಗೂಳಿಹೋರಿ" (ಸಿದ್ಧಾಂತಿ. ೨೯೨). ೩. ನಪುಂಸಕ ; ಕೊಜ್ಜೆ : ಊರಟಿಪಿನೊಳಂ ತಱಿಸಂದು ಗಂಡುತನಮನೆ ನೆಱಪದವಂ ಗಂಡನಲ್ಲನೆಂತುಂ ಷಂಡಂ (ಗದಾಯು. ೨-೨೪). ೪. (ಆಲಂ) ಹೇಡಿ ; ದುರ್ಬಲ : 'ಷಂಡತನ' ಪರಾ. [ಸಂ.]

**ಷಂಡಕ** (ನಾ). ನಪುಂಸಕ : "ಕ್ಲೀಬಃ, ವರ್ಷಧರಃ, ಷಂಡಃ, ಷಂಡಕಃ, ನಪುಂಸಕಃ- ಈ ೫ ನಪುಂಸಕಂ" (ಹಲಾಯು. ೭೧-೨೩೬). [ಸಂ.]

**ಷಂಡಕವೇದ** (ನಾ). [ಜೈನ] ಒಂದು ಬಗೆಯ ನೋಕಷಾಯ ; ಚಾರಿತ್ರ ಮೋಹನೀಯದ ಭೇದಗಳಾದ ಮೂರು ಪ್ರಕಾರದ ವೇದಗಳಲ್ಲಿ ಒಂದು : ದೇವರೊಳಾಗಿರ್ಕುಂ ಪುಂಸ್ತ್ರೀವೇದಂ ನಿರಯಜನಿತಸಮ್ಮೂರ್ಛಿತರೊಳ್ ಭಾವಿಸೆ ಷಂಡಕವೇದಂ ತಾವುೞಿದವರೊಳ್ ತ್ರಿವೇದಮುಂ ಪರಿಭವಿಕುಂ (ಸುಕುಮಾ. ೮-೧೩). 'ನಪುಂಸಕವೇದ' ಪರಾ. [ಸಂ.]

**ಷಂಡತನ** (ನಾ). ೧. ನಪುಂಸಕತ್ವ. ೨. ಹೇಡಿತನ ; ದೌರ್ಬಲ್ಯ : ಧರ್ಮವೆ ತಪವಲಾಯೆಂದಱಿತು ನಡೆದರೆ ಷಂಡತನವಾಯ್ತು (ಕುವ್ಯಾಅ. ೮-೪೭) ; ಎಲೈ ಪಾರ್ಥನೆ, ನೀನು ಷಂಡತನವನ್ನು ಹೊಂದಬೇಡ (ಅನಾಸ. ೬). [ಷಂಡ + - ತನ]

**ಷಂಢ** (ನಾ). ೧. = ಷಂಡ ೩ : ಥೂ ನರರ ಬೆದಿಗುದಿಗೆ ಷಂಢ ಗಂಡಸುತನಕೆ . . . ಗತವೀರ್ಯಹತಜನಕೆ (ಕೃಷ್ಣಾರು. ೨-೨). ೨. [ವ್ಯಾಕ] ನಪುಂಸಕಲಿಂಗ. [ಸಂ.]

**ಷಂಢತಿಲ, ಷಂಢತಿಳ** (ನಾ). ೧. ಜಳ್ಳಾದ ಎಳ್ಳು ; ಪೊಳ್ಳಾದ ಎಳ್ಳು. ೨. (ಆಲಂ) ನಿರುಪಯೋಗಿಯಾದ ವ್ಯಕ್ತಿ ; ಅಪ್ರಯೋಜಕ : ಸಭೆಯಲ್ಲಿ ನಮ್ಮನ್ನು ಷಂಢತಿಲವೆಂದರು. ಜಳ್ಳು ಯಾರು, ಗಟ್ಟಿ ಯಾರು ಎಂಬುದನ್ನು ಅವರಿಗೆ ತೋರಿಸಿಕೊಟ್ಟೆ (ಆಗ್ರಹ. ೧೨). **ಷಂಢತಿಳ** : ೧. "ತಿಳಪಿಂಜಃ, ತಿಳಪೇಷಃ, ಷಂಡ Eಢ3ತಿಳಃ - ಈ ೩ ಹೊಳ್ಳೆಳ್ಳು" (ಹಲಾಯು. ೯೫-೪೨೯). [ಸಂ.]

**ಷಂಢತಿಳ** 'ಷಂಢತಿಲ' ನೋ.

**ಷಕಾರ** (ನಾ). 'ಷ' ಎಂಬ ಅಕ್ಷರ : ಷಕಾರಕ್ಕೆ - ಆಮಿಷ - ಆಮಿಸ, ಔಷಧ - ಔಸದ (ಶಮದ ೨೫೩ ಪ್ರಯೋ). [ಸಂ.]

**ಷಕ್ಕು** 'ಶಕ್ಕು' ನೋ.

**ಷಟುತರ್ಕ** (ನಾ). [ತತ್ತ್ವಶಾ] ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ವೇದಾಂತ ಮತ್ತು ಪೂರ್ವಮೀಮಾಂಸೆ ಎಂಬ ಆರು ಬಗೆಯ ದರ್ಶನಗಳು : ವೇದವೇದಾಂಗ ವಿದ್ಯಾವಿದಿತರ್ ಷಟುತರ್ಕ್ಕಶತುಪ್ರವುಡಿಯೊಳತಿಶಯದುದುಗ್ರಾಹಕರು ನಿತ್ಯಯಜ್ಞರು (ಎಇ. XVIII, ೧೮೪-೯ ; 1097). [< ಸಂ. ಷಟ್ತರ್ಕ]

**ಷಟುಸ್ಥಲ** 'ಷಡುಸ್ಥಲ' ನೋ.

**ಷಟ್ಕ** (ನಾ). ಆರರಿಂದ ಒಡಗೂಡಿದುದು ; ಆರರ ಗುಂಪು : ಯಾರಿಗುಂಟು ಶಮಾದಿ ಷಟ್ಕಮಸಾರಮಾದೀ ಭುವನಭೋಗವಿಕಾರಮಂಟಪವರ್ಕಳಂತಃಕರಣಮದರಿಂದ ಸೇರಿರುವವರ್ಥಕೆ ನಿವೃತ್ತಿಯ ಸಾರಿಪುದು (ವಿವೇಭ. ೧೧-೫೭) ; ಷಟ್ಕವೆಂದರೆ ಆರು ಅಧ್ಯಾಯಗಳ ಸಮೂಹವೆಂದರ್ಥ (ಭಾತತ್ತ್ವ. ೧೦೮). [ಸಂ.]

**ಷಟ್ಕಮಲ** (ನಾ). [ಯೋಗ] ಶರೀರದ ಒಳಭಾಗದಲ್ಲಿರುವುವೆನ್ನಲಾದ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ ಮತ್ತು ಆಜ್ಞಾ ಎಂಬ ಆರು ಕಮಲಗಳು ; ಷಟ್ಚಕ್ರ : ಬಾಲ ಕೇಳ್ ಪೂರ್ವೋಕ್ತ ಷಟ್ಕುಸುಮಾಳಿ ರಾಜಿಸುತಿಹುವು ಷಟ್ಕಮಲಗಳ ಪೆಸರಾಂತು (ಗಗತಾ. ೧೮-೬). [ಸಂ.]

**ಷಟ್ಕರ್ಮ** (ನಾ). ೧. ಬ್ರಾಹ್ಮಣನು ನಿತ್ಯವೂ ಆಚರಿಸಬೇಕಾದ ಅಧ್ಯಾಪನ, ಅಧ್ಯಯನ, ಯಜನ, ಯಾಜನ, ದಾನ ಮತ್ತು ಪರಿಗ್ರಹ ಎಂಬ ಆರು ಕ್ರಿಯೆಗಳು : ವಿದಿತವೇದಾರ್ತ್ಥ ವಿದ್ಯಾಪಾರಗರ್ಷಟ್ಕರ್ಮ್ಮನಿರತರ್ . . . ಶ್ರೀಮಲ್ಲೊಕ್ಕಿಗುಣ್ಡಿಯೂರೊಡೆಯಪ್ರಮುಖಮಹಾಜನಂ ಶ್ರೀಸಾಸಿರ್ವ್ವರುಂ . . . ರಕ್ಷಿಸುತ್ತಮಿರೆ (ಕಇ. II, ೧೦-೬ ; 1079) ; ಷಟ್ಕರ್ಮಮಾರ್ಗಪ್ರೇಮಿ ಸಂತತ ವರತನೂ ಭವಕಾಮಿ ಮಂಡಗೆ ಮಾದಿರಾಜನೆನಲ್ಕೆ ಸನ್ನಾಮಿ (ಬಸಪು. ೨-೪೬). ೨. ಪ್ರತಿನಿತ್ಯ

ಆಚರಿಸಬೇಕಾದ ಸಂಧ್ಯಾಸ್ನಾನ, ಜಪ, ಹೋಮ, ದೇವತಾಪೂಜೆ, ಆತಿಥ್ಯ ಮತ್ತು ವೈಶ್ವದೇವ ಎಂಬ ಆರು ಬಗೆಯ ಕರ್ಮಗಳು : ಆಚಾರಕಾಂಡದಲ್ಲಿ ಮುಖ್ಯವಾಗಿ ಗಮನಿಸತಕ್ಕ ವಿಷಯವೆಂದರೆ ದಿನಚರ್ಯೆ ಅಥವಾ ಷಟ್‌ಕರ್ಮಗಳು (ಭಾರದ. ೫೪). ೩. ಜೀವನೋಪಾಯಕ್ಕಾಗಿ ಕೈಕೊಳ್ಳಬೇಕಾದ ಅಸಿ, ಮಸಿ, ಕೃಷಿ, ವಾಣಿಜ್ಯ , ಶಿಲ್ಪ ಮತ್ತು ಪಶುಪಾಲನೆ ಎಂಬ ಆರು ವೃತ್ತಿಗಳು : ಅಸಿಮಸಿಕೃಷಿವಾಣಿಜ್ಯಶಿಲ್ಪಪಶುಪಾಲ್ಯಮೆಂಬ ಷಟ್ಕರ್ಮಂಗಳೊಳ್ ನ್ಯಾಯದಿನರ್ಥೋಪಾರ್ಜನಂಗೆಯ್ವುದು ವಾರ್ತೆಯೆಂಬೆರಡನೆಯಾರ್ಯಕರ್ಮಂ (ಸುಕುಮಾ. ೬-೨೫ ವ) ; ಲೇಖನ ವ್ಯವಹಾರ ಕೃಷಿ ಖಡ್ಗ ಗೋಪಾಲ ಯಾಚಂಗಳೆನಿಪ ಷಟ್ಕರ್ಮದಿಂದೆ ತವೆ ಜೀವಿಪ . . . ಜನಂ ಕೂಡಿ ಬರುತಿರ್ದರು (ಚಬಪು. ೪೭-೪೩). ೪. [ಜೈನ] ಶ್ರಾವಕನು ನಿತ್ಯವೂ ಆಚರಿಸಬೇಕಾದ ಇಜ್ಯೆ, ವಾರ್ತಾ, ದತ್ತಿ, ಸ್ವಾಧ್ಯಾಯ, ಸಂಯಮ ಮತ್ತು ತಪಸ್ಸು ಎಂಬ ಆರು ಬಗೆಯ ಕರ್ಮಗಳು : ಸ್ತ್ರೀಪುರುಷನಪುಂಸಕಭೇದತ್ರಿಕಮಂ ಚಿರಂತನ ಷಟ್ಕರ್ಮಂಬೆರಸು ಹಾಸ್ಯ ರತಿ Eಹಾಸ್ಯರತ್ಯರತಿ3 ಶೋಕಭಯಜುಗುಪ್ಸಾಭಿಧಾನಷಟ್ಕಷಾಯಮುಮಂ ಕಿಡಿಸಿ (ಶಾಂತಿಪು. ೧೧-೧೧೧ ವ). [ಸಂ. ಷಟ್ಕರ್ಮನ್]

**ಷಟ್ಕರ್ಮಿ** (ನಾ). ಯಜನ, ಯಾಜನ ಮುಂತಾದ ಆರುಕರ್ಮಗಳನ್ನು ಆಚರಿಸುವವನು : ಷಟ್ಕರ್ಮಿಗಳಾದ ಬ್ರಾಹ್ಮಣರು ಅಗ್ನಿಹೋತ್ರ ಮುಂತಾದ ಪಂಚಮಹಾಯಜ್ಞಗಳನ್ನು ನಡೆಸಿಕೊಂಡು ಬರಬೇಕು (ತುಳುನಾ. ೯೯). [ಸಂ. ಷಟ್ಕರ್ಮಿನ್]

**ಷಟ್ಕಷಾಯ** (ನಾ). [ಜೈನ] ಹಾಸ್ಯ, ರತಿ, ಅರತಿ, ಶೋಕ, ಭಯ ಮತ್ತು ಜುಗುಪ್ಸೆ ಎಂಬ ಆರು ಬಗೆಯ ದೋಷಗಳು,- ಕಷಾಯಗಳು : ಚಿರಂತನ ಷಟ್ಕರ್ಮಂಬೆರಸು ಹಾಸ್ಯರತಿ Eಹಾಸ್ಯರತ್ಯರತಿ3 ಶೋಕಭಯಜುಗುಪ್ಸಾಭಿಧಾನ ಷಟ್ಕಷಾಯಮುಮಂ ಕಿಡಿಸಿ (ಶಾಂತಿಪು. ೧೧-೧೧೧ ವ). [ಸಂ.]

**ಷಟ್ಕೋಣಕುಂಭ** (ನಾ). ಆರುಮೂಲೆಗಳುಳ್ಳ ಆಕೃತಿಯ ಕ್ಷೇತ್ರಫಲ : ಒಂದೆಸೆಯ ಮೂರು ಅಳತೆಯನೊಂದಿಸು ಹತ್ತುಳಿದ ಮೂರು ದೆಸೆಗಳ ಗಳೆಯಂ ಸಂಕ್ಷೇಪಿಸಿ ಕೂಡುತೆ ಗುಣಿಸಲು ಅಂದದಿ ಷಟ್ಕೋಣಕುಂಭ ತಪ್ಪದೆ ಬರ್ಕುಂ (ಕ್ಷೇತ್ರಗ. ೨೩-೧೪). [ಸಂ.]

**ಷಟ್ಖಂಡ** (ನಾ). [ಜೈನ] ವಿಜಯಾರ್ಧಪರ್ವತದ ಉತ್ತರದಲ್ಲಿ ಗಂಗಾ ಹಾಗೂ ಸಿಂಧೂನದಿಗಳಿಂದ ಪ್ರತ್ಯೇಕಿಸಲ್ಪಟ್ಟ ಮೂರು ಭೂಭಾಗಗಳು ಮತ್ತು ಅದರಂತೆ ಆ ಪರ್ವತದ ದಕ್ಷಿಣದಲ್ಲಿರುವ ಮೂರು ಭೂಭಾಗಗಳು: ಹಿಮಶೈಲಾವಧಿಷಟ್ಖಂಡಂ ಮಹೀಮಂಡಳಂ (ಆದಿಪು. ೪-೭೮) ; ಮಹಿಭರತಂ ಷಟ್ಖಂಡಾವಹಂ (ಸುಕುಮಾ. ೧-೬೮) ; ಷಟ್ಖಂಡಕ್ಷಿತಿನಾಥನಪ್ರಧಿಕಪುಣ್ಯಂ . . . ಸಾರ್ಬುಮಿನ್ನಾತನಂ (ಚಂದ್ರಪು. ೫-೩೫). [ಸಂ.]

**ಷಟ್ಚಕ್ರ** (ನಾ). [ಯೋಗ] ಶರೀರದ ಒಳಗಿರುವುದೆಂದು ಹೇಳಲಾದ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ ಮತ್ತು ಆಜ್ಞಾ ಎಂಬ ಆರು ಚಕ್ರಗಳು ; ಷಟ್ಕಮಲ : ಷಟ್ಚಕ್ರಸಂಚಾರಿಣೀಂ . . . ಬಾಲಾಂ ಸದಾಹಂ ಭಜೇ (ಉದ್ಭಟ. ೫-೫೭) ; ಷಟ್ಚಕ್ರಮಧ್ಯದೊಳೊಪ್ಪುವ ಭಾಸುರಪ್ರಣವಂ (ಚಬಪು. ೬೦-೪೮). [ಸಂ.]

**ಷಟ್ಚರಣ** (ನಾ). ೧. ಆರುಕಾಲುಗಳುಳ್ಳುದು ; ದುಂಬಿ : "ಅಳಿ ಷಟ್ಚರಣಂ ಮಧುಪಂ . . . ಭ್ರಮರಂ" (ವಸ್ತುಕೋ. ೪೩-೨೨) ; ಉರಿವುರಿಯಿಂ ಕರಿಮುರಿಕನಾದುವುನ್ಮದ ಪರಭೃತಷಟ್ಚರಣರಾಜಕೀರಕುಲಂಗಳ್ (ಪಂಪಭಾ. ೫-೯೦). ೨. ಹೇನು. [ಸಂ.]

**ಷಟ್ತರ್ಕ** (ನಾ). ೧. [ತತ್ತ್ವಶಾ] ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ವೇದಾಂತ ಮತ್ತು ಪೂರ್ವಮೀಮಾಂಸೆ ಎಂಬ ಆರುಬಗೆಯ ದರ್ಶನಗಳು: ಶಾಬ್ದನೇತೃತೆ ಷಟ್ತರ್ಕ ವಿತರ್ಕಭೇತೃತೆ . . . ಏಂ ಚೋದ್ಯಮೆ ವರ್ಧಮಾನಮುನಿಯೊಳ್ (ಚಂದ್ರಪು. ೧-೩೦) ; ಕಮಲೋದರನು ಕೈಕೊಂಡನು . . . ವಾದಿಸುವ ಷಟ್ತರ್ಕಗಿರ್ಕದ ಭೇದ ಕೊಳ್ಳದ ಸಕಲಲೋಕದ ಬೀದಿ ವಿಸಟಂಬರಿವ ವಿಮಲವಿರಾಟರೂಪವನು (ಕುಮಾ‍ರವ್ಯಾಭಾ. ೩-೬೪). ೨. [ಜೈನ] ಬೌದ್ಧ, ನೈಯಾಯಿಕ, ಸಾಂಖ್ಯ, ಜೈನ, ವೈಶೇಷಿಕ ಮತ್ತು ಜೈಮಿನೀಯ ಎಂಬ ಆರು ಬಗೆಯ ಆಸ್ತಿಕದರ್ಶನಗಳು : ಶ್ರೀಪ್ರಭಾಚಂದ್ರದೇವಪ್ರಭೃತಿ ಷಟ್ತರ್ಕಾರ್ಕಳಂಕಂಗಣೆಯೆನೆ ನೆಗಟ್ದಂ (ಸೌಇಇ. XX. ೧೮-೩೪ ; 980).

**ಷಟ್ತರ್ಕಷಣ್ಮುಖ** = ಆರು ಜೈನದರ್ಶನಗಳಲ್ಲಿಯೂ ಪಾರಂಗತನಾದವನು; ಒಂದು ಬಿರುದು : ಷಟ್ತರ್ಕಷಣ್ಮುಖರು ಪರಮತತಪತ್ತರಣನಿರತರು . . . ಶ್ರೀಮತ್ ಶ್ರೀನನ್ದಿಪಣ್ಡಿತದೇವರ್ಗ್ಗೆ (ಸೌಇಇ. XX. ೪೬-೨೭ ; 1072). [ಸಂ.]

**ಷಟ್ತ್ರಿಂಶತ್ತತ್ತ್ವ** (ನಾ). [ಶೈವ] ಶೈವಾಗಮದಲ್ಲಿ ಹೇಳಿರುವ ಮೂವತ್ತಾರು ತತ್ತ್ವಗಳು ; ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯಾ, ಕಾಲ, ಮಾಯಾ, ಕಲಾ, ವಿದ್ಯಾ, ರಾಗ, ನಿಯತಿ, ಪುರುಷ, ಪ್ರಕೃತಿ, ಬುದ್ಧಿ, ಅಹಂಕಾರ, ಮನಸ್ಸು, ಶ್ರೋತ್ರ, ತ್ವಕ್, ಚಕ್ಷು, ಜಿಹ್ವಾ, ಘ್ರಾಣ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ವಹ್ನಿ, ಜಲ ಮತ್ತು ಭೂಮಿಯ : ಷಟ್‌ತ್ರಿಂಶತ್ತತ್ತ್ವಂಗಳ್ ದೇಹವಾಗಿ ಪರಶಿವನದಕ್ಕೆ ದೇಹಿಯಾಗಿಪ್ಪುದಜಿಂದ ತತ್ತ್ವಮಯವಾದ ಭಕ್ತನಂಗದಲ್ಲಿ ಪ್ರಾಣಮಯವಾದ ಶಿವನಿಪ್ಪನಯ್ಯ (ಆದವ. ೧೨-೨೩) ; ವರಷಟ್ತ್ರಿಂಶತ್ತತ್ತ್ವೋಪರಿಗತನ ಸವಿದ್ಯೆ ಪುಗದ ಶುದ್ಧಾತ್ಮನನಕ್ಕರನನನುಪಮನನಭವನನುರುತರಚಿದಖಂಡರೂಪನಂ ಜಾನಿಸಿದಂ (ಶಬಶಂ. ೨-೯೩). [ಸಂ.]

**ಷಟ್ತ್ರಿಂಶದ್ಗುಣ** (ನಾ). ೧. [ಜೈನ] ಆಚಾರ್ಯನಲ್ಲಿರಬೇಕಾದ ಹನ್ನೆರಡು ತಪಸ್ಸು, ಆರು ಆವಶ್ಯಕಗಳು, ದಶಧರ್ಮಗಳು, ಪಂಚಾಚಾರಗಳು ಮತ್ತು ಮೂರು ಗುಪ್ತಿಗಳು ಎಂಬ ಮೂವತ್ತಾರು ಗುಣಗಳು : ಇರೆ ಷಟ್ತ್ರಿಂಶದ್ಗುಣಂಗಳ್ ತಮಗಮರ್ದಿರಲಾಚಾರಮಯ್ದುಂ . . . ಚಾರಿತ್ರಸಂಶುದ್ಧರೀ ದುಸ್ತರ ಸಂಸಾರಾಬ್ಧಿಯಿಂದಂ ಪೋಜಿಮಡಿಸುಗೆ ಸದ್ಧರ್ಮರಾಚಾರ್ಯರೆಂದುಂ (ಸುಕುಮಾ. ೧-೩). ೨. ಮೂವತ್ತಾರು ಗುಣಗಳನ್ನು ಹೊಂದಿದವನು : ಮುನಿನಾಥಂ ದಶಧರ್ಮಧಾರಿ ದೃಢಷಟ್ತ್ರಿಂಶದ್ಗುಣಂ (ಪಂರಾಮಾ. ೧-೨೦). [ಸಂ.]

**ಷಟ್ಪದ** (ನಾ). ೧. ದುಂಬಿ ; ಭೃಂಗ : ಎಡೆಗಿರ್ದುವು ಷಟ್ಪದಂಗಳುತ್ಕೇಸರಕೋಟಿ ಸಂಕಟಕುಶೇಶಯ[ಕೋ]ಶಕುಟೀರಕಂಗಳೊಳ್ (ಪಂಪಭಾ. ೪-೪೭) ; ಕುಸುಮಕ್ಕೆ ಷಟ್ಪದಂ . . . ಈಶ್ವರಭಕ್ತಿಗೆ ಭಕ್ತನಾಸೆಮಾಳ್ಪೋರಗೆಯಾಗಿ ಸಂಕಿಲಿಯೊಳಂ ನೆರೆವಾಸೆಯೊಳಿರ್ದ ಸೌಂದರಂ (ನಂಬಿರ. ೧೪ ಸೂಚನೆ). ೨. ಹೇನು : "ಷಟ್ಪದಂ ಹೇನೆನಿಕ್ಕುಂ" (ಮಂಗರಾ. ೪೯-೧೪). ೩. [ಛಂದ] ಆರುಪಾದಗಳುಳ್ಳ ಒಂದು ಪದ್ಯಜಾತಿ ; ಷಟ್ಪದಿ : ಮಂಗರಸನತಿ ಖ್ಯಾತಿಯಂ ಪಡೆದ ಸಂಸ್ಕೃತಸೂಪಶಾಸ್ತ್ರದೊಳ್ ಪ್ರೀತಿಯಿಂದಜೀವನಿತ ತೆಗೆದು ಕನ್ನಡದಿ ವಾರ್ಧಕಮೆಂಬ ಷಟ್ಪದದೊಳು . . . ಓತು ಪೇಳ್ದಂ (ಸೂಪಶಾ. ೪ ಪೀಠಿಕೆ). [ಸಂ.]

**ಷಟ್ಪದಾರ್ಥ** (ನಾ). [ತರ್ಕಶಾ] ವೈಶೇಷಿಕದರ್ಶನದ ಮೇರೆಗೆ ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಎಂಬ ಪ್ರಪಂಚದ ಆರು ಭಾವ ಪದಾರ್ಥಗಳು : ಷಡ್ವಿಷಯವೇ ಷಟ್‌ಪದಾರ್ಥಂಗಳು (ಚಬಪು. ೬೦-೫೬) ; ಸದಾಚಾರ್ಯಸಂಬಂಧದಿಂದ ಷಟ್ಪದಾರ್ಥಗಳ ತತ್ತ್ವಜ್ಞಾನವುಂಟಾಗಿ, ಅಜ್ಞಾನ ನಿವೃತ್ತಿಯಾಗಿ, ವೈರಾಗ್ಯದಿಂದ ರಾಗದ್ವೇಷಗಳ ವಿಜಯ ಆಗುವುದು (ಹಿಂದಸಾ. ೧೨೩). [ಸಂ.]

**ಷಟ್ಪದಿ** (ನಾ). ೧. ಆರುಕಾಲುಗಳುಳ್ಳುದು : ಕೀಟಗಳು ಷಟ್ಪದಿ - ಸಂಧಿಪದಿಗಳು (Arthropoda). ಅವುಗಳ ತರಗತಿ ಷಟ್ಪದಿ (Hexapoda) (ಕೀಟಬ. ೧೫). ೨. ಹೆಣ್ಣುದುಂಬಿ: ಮದಪಿಕಂ ಮುಟ್ಟದ ತಳಿರೊ ಷಟ್ಪದಿಯೆಜಿಗದರಲೊ . . . ಎನಲೆಸೆವ ಕನ್ನಿಕೆಯ . . . ಸಿಂಗರಿಸಿವೇಳ್ಕು (ಬಸಪು. ೪-೩೧). ೩. ಹೇನು. ೪. [ಛಂದ] ಆರು ಪಾದಗಳುಳ್ಳ ಒಂದು ಪದ್ಯಜಾತಿ ; ಇದು ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ ಮತ್ತು ವಾರ್ಧಕ ಎಂದು ಆರು ಬಗೆಯಾಗಿದೆ : ಮಂದರಧರಗಣಮೊಂದಿರೆ ಕಡೆಯೊಳ್ ಕುಂದದೆ ನೆಲಸುಗೆ ಮದನಹರಂ ಇಂದುನಿಭಾನನೆ ಮುಂದಣ ತೆಜನೀಯಂದಮೆಯಾಗಲೆ ಷಟ್ಪದಿ ಕೇಳ್ (ಛಂದೋಂಬು. ೫-೨೫೯) ; ತ್ರಿದಶಶತಷಟ್‌ಶತ ತ್ರಿವಿಂಶತಿವಿದಿತಸಂಖ್ಯಾಯುಕ್ತದಿಂ ಷಟ್‌ಪದಿಗಳೆಂಟಾಶ್ವಾಸದಿಂದ ಜುಪತ್ತುಸಂಧಿಗಳಿಂ . . . ಒಪ್ಪಿದುದು ಬಸವಪುರಾಣವೀಶ್ವರಗಣಕಥನವಾಗಿ (ಬಸಪು. ೬೦-೯೦). ೨,೪ : ನಿರುತಮಂಜುಳಶಬ್ದದಿಂದೆ ಕಿವಿಗಿಂಪಾಗಿ ಚರಿಸುವ ಸುಲಲಿತಷಟ್ಪದಿಗಳೆಡೆಬಿಡದೆ ಝೇಂಕರಿಸದಿರ್ಪುವೆ ಬಂದು ನೆರೆದ ವಿದ್ವತ್ಸಭಾನೀರೇರುಹಾಕರದೊಳು (ಜೈಮಿಭಾ. ೧-೧೨). [ಸಂ. ಷಟ್ಪದೀ]

**ಷಟ್ಪ್ರಜ್ಞ** (ನಾ). ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಲೋಕವ್ಯವಹಾರ ಹಾಗೂ ತತ್ತ್ವಾರ್ಥಗಳನ್ನೂ ಚೆನ್ನಾಗಿ ತಿಳಿದವನು : ಚಾಟುಶ್ಲೋಕಗಳಲ್ಲಿಯೂ ದೇವತಾಸ್ತುತಿಗಳಲ್ಲಿಯೂ . . . ಇವುಗಳನ್ನು ಬರೆದವರು ಷಟ್ಪ್ರಜ್ಞರು (ಧ್ವನ್ಯಾಲೋ. ೨೭೯). [ಸಂ.]

**ಷಟ್ಪ್ರತ್ಯಯ** (ನಾ). ವರ್ಣ ವೃತ್ತಗಳ ಸಂಖ್ಯೆ, ಪಾದಪ್ರಸ್ತಾರ ಮೊದಲಾದುವುಗಳನ್ನು ಕಂಡುಹಿಡಿಯಲು ವಿಧಿಸಲಾದ ಪ್ರಸ್ತಾರ, ನಷ್ಟ, ಉದ್ದಿಷ್ಟ, ಏಕದ್ವ್ಯಾದಿಲಗಕ್ರಿಯಾ, ಸಂಖ್ಯಾನ ಮತ್ತು ಅಧ್ವಯೋಗ ಎಂಬ ಆರು ಕ್ರಮಗಳು; IP ಅವುಗಳ ವಿವರ ಈ ರೀತಿ ಇದೆ : ಪ್ರಸ್ತಾರ —ಇಪ್ಪತ್ತಾರು ಛಂದಸ್ಸುಗಳಲ್ಲಿ ಯಾವ ಯಾವ ಛಂದಸ್ಸಿನಲ್ಲಿ ಎಷ್ಟೆಷ್ಟು ವೃತ್ತಗಳಿವೆ, ಅವುಗಳ ಲಕ್ಷಣವೇನು ಎಂಬುದನ್ನೂ, ನಷ್ಟ – ಒಂದು ಛಂದಸ್ಸಿನಲ್ಲಿ ಒಂದು ವೃತ್ತದ ಲಕ್ಷಣವು ಗೊತ್ತಿಲ್ಲದಿದ್ದರೆ ಕಂಡುಹಿಡಿಯಲೂ, ಉದ್ದಿಷ್ಟ– ಒಂದು ವೃತ್ತವನ್ನು ಕೊಟ್ಟು ಇದು ಯಾವ ಛಂದಸ್ಸಿನ ಎಷ್ಟನೆಯ ವೃತ್ತ ಎಂಬುದನ್ನೂ ತಿಳಿಯಲು ಸಹಾಯ ಮಾಡುತ್ತವೆ. ಅಲ್ಲದೆ ಏಕಾದ್ವ್ಯಾದಿಲಗಕ್ರಿಯೆ – ಯಾವುದಾದರೂ ಒಂದು ಛಂದಸ್ಸಿನಲ್ಲಿ ಒಂದು ಲಘು ಅಥವಾ ಗುರುವಿರುವ ವೃತ್ತಗಳೆಷ್ಟಿವೆ, ಎರಡು ಲಘು ಅಥವಾ ಗುರುಗಳಿರುವ ವೃತ್ತಗಳೆಷ್ಟಿವೆ ಎಂಬ ವಿವರವನ್ನೂ, ಸಂಖ್ಯಾನ-ಒಂದು ಛಂದಸ್ಸಿನಲ್ಲಿ ಎಷ್ಟು ವೃತ್ತಗಳಿವೆ ಎಂಬುದನ್ನೂ, ಅಧ್ವಯೋಗ – ಆಯಾ ಛಂದಸ್ಸಿನ ಪ್ರಸ್ತಾರವನ್ನು ಹಾಕಲು ಎಷ್ಟು ಉದ್ದಗಲ ಸ್ಥಳ ಬೇಕೆಂಬುದನ್ನೂ ತಿಳಿಸುತ್ತವೆ: ಇಲ್ಲಿಂ ಷಟ್ಪ್ರತ್ಯಯಮಂ ಚೆಲ್ವಾಗೆ ಪೇೞ್ವೆಂ (ಛಂದೋಂಬು. ೬-೨೦). [ಸಂ.]

**ಷಟ್ಪ್ರಾಸ** (ನಾ). [ಛಂದ] ಸಿಂಹ, ಗಜ, ವೃಷಭ, ಅಜ, ಶರಭ ಮತ್ತು ಹಯ ಎಂಬ ದ್ವಿತೀಯಾಕ್ಷರಪ್ರಾಸವಿರುವ ಆರು ಬಗೆಯ ಪ್ರಾಸಗಳು : ನಿಜದಿಂ ಬಂದೊಡೆ ಗಜದೀರ್ಘಂ ಬಿಂದು ವೃಷಭ ಬೆಂಜನ ಶರಭಂ ಅಜನು ವಿಸರ್ಗಂ ಹಯಮಂಬುಜಮುಖಿ ದಡ್ವಕ್ಕರಂಗಳಿವು ಷಟ್ಪ್ರಾಸಂ (ಛಂದೋಂಬು. ೧-೪೬ ಅಡಿಟ). [ಸಂ.]

**ಷಟ್ಶಾಸ್ತ್ರ** (ನಾ). ತರ್ಕ, ವೇದಾಂತ, ಮೀಮಾಂಸೆ, ವ್ಯಾಕರಣ, ಜ್ಯೋತಿಷ ಮತ್ತು ಧರ್ಮಶಾಸ್ತ್ರ ಎಂಬ ಆರು ಪ್ರಕಾರದ ಶಾಸ್ತ್ರಗಳು : ಚತುರ್ವೇದ - ಷಟ್‌ಶಾಸ್ತ್ರ-ನಾಟಕಾಂತಸಾಹಿತ್ಯ . . . ಹೀಗೆ ಎಲ್ಲವುದರಲ್ಲಿಯೂ ಶಿಷ್ಯಾದಿಚ್ಛೇತ್ ಪರಾಜಿತಂ ಎನ್ನುವ ಮಟ್ಟಿಗೆ ಗಣಪತಿಯಾಗ ಪರಿಣತನಾಗಿದ್ದ (ಹೊಸಕ್ಷಿ. ೩೭). [ಸಂ.]

**ಷಟ್ಸಮಾಧಿ** (ನಾ). ೧. [ಯೋಗ] (ಉಪರತಿಗೆ ಅನುಸಾರಿಯಾದ) ದೃಶ್ಯಾನುವಿದ್ಧ, ಶಬ್ದಾನುವಿದ್ಧ, ನಿರ್ವಿಕಲ್ಪ ಎಂಬ ಬಾಹ್ಯಾಭ್ಯಂತರ ಭೇದದಿಂದ ಆಗುವ ಆರು ಬಗೆಯ ಸಮಾಧಿಗಳು : ಉಪರತಿಗನುಸಾರಿಗಳಾದ ದೃಶ್ಯಾನುವೇದ ಶಬ್ದಾನುವೇದ ನಿರ್ವಿಕಲ್ಪವೆಂಬವೇ ಬಾಹ್ಯಾಭ್ಯಂತರಭೇದದಿಂ ಷಟ್ಸಮಾಧಿಗಳು (ವಿವೇಕ. ೫೨). ೨. ವ್ಯಷ್ಟಿ, ನಿಶ್ಚಿತ, ವಿಲಕ್ಷಣ, ನಿರ್ವಿಷಯ, ಸಮಷ್ಟಿ ಮತ್ತು ಪೂರ್ಣ ಎಂಬ ಆರುಬಗೆಯ ಸಮಾಧಿಗಳು : ಕಂದ ಕೇಳ್ಕೆ ಷಟ್ಸಮಾಧಿಯನೊಂದಿರಲಿ ವಾಚಿಸಲಿ ಕೇಳಲಿ ಸಂಧಿಸಲಿ ಶ್ರದ್ಧೆಯನು ಕರ್ಮದ ತೊಡರ ಬಿಡಿಸುವುದು (ಗಗತಾ. ೧೭-೫೩). [ಸಂ.]

**ಷಟ್ಸಮ್ಮಾರ್ಜನೆ** (ನಾ). ಹಸುವಿನ ಹಾಲು, ಮೊಸರು, ತುಪ್ಪ ಮತ್ತು ಗೋರೋಚನ, ಗೋಮಯ, ಗೋಮೂತ್ರಗಳಿಂದ ಮಾಡುವ ಆರು ಬಗೆಯ ಶುದ್ಧೀಕರಣ : ಗೋಮಯಂ ಗೋರೋಚನಂ ದಧಿ ಕ್ಷೀರ ಘೃತ ಗೋಮೂತ್ರದಿಂದ ಷಟ್ಸಮ್ಮಾರ್ಜನೆಯನೆಸಗುವಾ ಮಹೇಶ್ವರರು ಭಸಿತಾಂಗರಾಗಲ್ಪೇಹುದು (ವೀಶೈಪು. ೭-೫-೧೭). [ಸಂ. ಷಟ್ಸಮ್ಮಾರ್ಜನ]

**ಷಟ್ಸಾಧನೆ** (ನಾ). ಆರು ಬಗೆಯ ಸಾಧನೆಗಳು : ಸತ್ಕರ್ಮೋಪದೇಶವನಱಿಹಿ ಸ್ವರ್ಗಮರ್ತ್ಯದಲ್ಲಿ ಸುಖಿಪೀವ ಗುರುಗಳು ನೂಱಾಱು ವಿಚಾರಮುಖದಿಂದ ಷಟ್ಸಾಧನೆಯನಱುಹುವ ಗುರುಗಳು ನೂಱಾಱು (ಸಿದ್ಧವ. ಕ. ೨೩೦-೭೫೪). [ಸಂ. ಷಟ್ಸಾಧನಾ]

**ಷಟ್ಸ್ಥಲ, ಷಟ್ಸ್ಥಳ** (ನಾ). [ವೀಶೈ] (ಅಧ್ಯಾತ್ಮಸಾಧಕನು ಏರಬೇಕಾದ) ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬ ಮೋಕ್ಷಸಾಧನೆಯ ಆರು ಹಂತಗಳು : ಆ ಜಂಗಮವನಱಿವಲ್ಲಿ ಷಟ್ಸ್ಥಲಸಂಬಂಧ ವಾಯಿತ್ತು (ಮದೇವ. ೨೭೭-೨೯) ; ಷಟ್ಸ್ಥಲವದೆಂತುಟದು ಸದಾದಿಯದೆಂತು ಕರುಣಿಸು (ಮನೋವಿ. ೨-೪೧). **ಷಟ್ಸ್ಥಳ:** 'ಷಟ್ಸ್ಥಳಸಿದ್ಧಾಂತ' ಪರಾ. [ಸಂ.]

**ಷಟ್ಸ್ಥಲಬ್ರಹ್ಮ** (ನಾ). [ವೀಶೈ] ಲಿಂಗಾಂಗಸಾಮರಸ್ಯ ; ಷಟ್ಸ್ಥಲಾನುಷ್ಠಾನದಿಂದ ಪಡೆಯುವ ಪರಮಾತ್ಮ : ಷಟ್ಸ್ಥಲಬ್ರಹ್ಮವನಱಿದಾತನೇ ಶರಣ ಆತನೇ ಲಿಂಗೈಕ್ಯ ಇಂತೀ ಷಟ್ಸ್ಥಲಬ್ರಹ್ಮವೆಂಬುದು ಅಪ್ರಮಾಣ ಅಗೋಚರ ಅನಿರ್ವಾಚ್ಯ (ಚನ್ನವ. ಕ. ೧೬೦-೮೬೮) ; ಇದೆ ಷಟ್ಸ್ಥಲಬ್ರಹ್ಮವಿದೆ ಸಚ್ಚಿದಾನಂದವಿದೆ ನಿತ್ಯಪರಿಪೂರ್ಣ ವೞಿವುದು (ಮನೋವಿ. ೨-೪೧). [ಸಂ. ಷಟ್ಸ್ಥಲಬ್ರಹ್ಮನ್]

**ಷಟ್ಸ್ಥಲಬ್ರಹ್ಮಿ** (ನಾ). [ವೀಶೈ] ಲಿಂಗಾಂಗಸಾಮರಸ್ಯವನ್ನು ಹೊಂದಿದ ಶಿವಯೋಗಿ ; ಷಟ್ಸ್ಥಲಸಿದ್ಧಾಂತವನ್ನು ತಿಳಿದುಕೊಂಡಿರುವವನು : ಘಟಭೇದವಱಿತು ಆತ್ಮದ ಸುಖದುಃಖವನಱಿತು ಭಕ್ತಿಗೆ ಸತ್ಯ ವಿರಕ್ತಿಗೆ ಮಲತ್ರಯದೂರ ಸರ್ವಜೀವಕ್ಕೆ ದಯ ಹೆಚ್ಚುಕುಂದಿಲ್ಲದೆ ನಿಶ್ಚಯವಾಗಿ ನಿಂದ ನಿಶ್ಚಿತಾಂಗನೇ ಷಟ್ಸ್ಥಲಬ್ರಹ್ಮಿ ಸರ್ವಸ್ಥಲಭರಿತ ಸರ್ವಾಂಗಲಿಂಗಿ (ಮೋಳಿಮಾ. ೧೯-೪೬೬) ; ಷಟ್ಸ್ಥಲಬ್ರಹ್ಮಿಗಳ ಪಾವನಗೃಹಗಳಿಂದೆ . . . ಮಾದೇವನರಮನೆ ಬೆಡಂಗಾಗಿ ಮೆಱೆದುದು (ಭಾವಚಿಂ. ೧-೨೯). [ಸಂ. ಷಟ್ಸ್ಥಲಬ್ರಹ್ಮಿನ್]

**ಷಟ್ಸ್ಥಲಸಿದ್ಧಾಂತ, ಷಟ್ಸ್ಥಳಸಿದ್ಧಾಂತ** (ನಾ). [ವೀಶೈ] ಷಟ್ಸ್ಥಲಗಳಿಂದ ಆತ್ಮಸಾಧನೆಯನ್ನು ಮಾಡಬಹುದೆಂಬ ತತ್ತ್ವ : ಶಿವಶರಣರ ತತ್ತ್ವಸಿದ್ಧಾಂತಕ್ಕೆ ಶಕ್ತಿವಿಶಿಷ್ಟಾದ್ವೈತ, ಷಟ್ಸ್ಥಲಸಿದ್ಧಾಂತ, ಭೇದಾಭೇದ ಇವೇ ಮೊದಲಾದ ಹೆಸರುಗಳಿವೆ (ಭಾರದ. ೩೦೮). **ಷಟ್ಸ್ಥಳಸಿದ್ಧಾಂತ :** ಷಟ್‌ಸ್ಥಳಸಿದ್ಧಾಂತದ ಬಗೆಗೆ ತನ್ನ ಅನುಭವಗಳನ್ನು ಹೇಳುವಾಗಲ್ಲ . . . ಶಿವಶರಣರನ್ನು ಮನಸಾರೆ ಹೊಗಳಿದ್ದಾರೆ (ಶರೀಫ. ೭೦ ಕವಿಕಾವ್ಯಪರಿಚಯ). [ಸಂ.]

**ಷಟ್ಸ್ಥಳ** 'ಷಟ್ಸ್ಥಲ' ನೋ.

**ಷಟ್ಸ್ಥಳಸಿದ್ಧಾಂತ** 'ಷಟ್ಸ್ಥಲಸಿದ್ಧಾಂತ' ನೋ.

**ಷಡಂಗ** (ನಾ). ೧. ಚತುರಂಗಬಲ, ದಿವಿಜಸೈನ್ಯ ಮತ್ತು ಖೇಚರಸೈನ್ಯ ಎಂಬ ಆರು ಬಗೆಯ ಸೇನಾಬಲ : ಕರಿರಥತುರಗ ಪದಾತಿವಿದ್ಯಾದೇವ ಪರಿವೃತನೆಯ್ದಿದನಾಗ ಕರಮೆಸೆದುದು ಷಡಂಗದಿ ಕೂಡಿ ಚಕ್ರೇಶ್ವರನೆಯ್ತಪ್ಪ ಮಾಳ್ಕೆಯೊಳು (ಅನಂಚ. ೮-೭೦). ೨. ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು ಮತ್ತು ಜ್ಯೋತಿಷವೆಂಬ ಆರು ವೇದಾಂಗಗಳು ಅಥವಾ ಉಪವೇದಗಳು : ವಿತತಮಂತ್ರಾಖ್ಯಾನ ವೇದಸ್ಮೃತಿ ಪುರಾಣ ಷಡಂಗವಿಂದ್ರನ ಸುತನ ದೆಸೆಯುಚ್ಚಾಟನ ಸ್ತಂಭಾದಿ ವಿದ್ಯಗಳು ಕ್ಷಿತಿಪ ಕೇಳ್ಕೆ ಕರ್ಣನತ್ತಲು (ಕುವ್ಯಾಕ. ೨೨-೫) ; ಆ ವೇದಕ್ಕೆ . . . ಕ್ರಮದಿಂ ಛಂದಸ್ಸು ಕಲ್ಪ ವ್ಯಾಕರಣ ಶಿಕ್ಷೆ ಜ್ಯೋತಿಷ ನಿರುಕ್ತಗಳೆಂಬವೇ ಷಡಂಗಗಳು (ವಿವೇಕ. ೪). ೩. ಹಸುವಿನಿಂದ ದೊರೆಯುವ ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ ಮತ್ತು ಗೋರೋಚನ ಎಂಬ ಆರು ಬಗೆಯ ದ್ರವ್ಯಗಳು. ೪. [ಸಂಗೀತ] ಅನುದ್ರುತ, ದ್ರುತ, ಲಘು, ಗುರು, ಪ್ಲುತ ಮತ್ತು ಕಾಕಪಾದ ಎಂಬ ತಾಳದ ಆರು ಅವಯವಗಳು : ತಾಳಕ್ಕೆ ಬರುವ ಅವಯವಗಳಿಗೆ ಅಂಗಗಳು ಎಂದು ಹೆಸರು. ಇವುಗಳ ಸಂಖ್ಯೆ ಆರು . . . ಅನುದ್ರುತ, ದ್ರುತ, ಲಘು, ಗುರು, ಪ್ಲುತ ಮತ್ತು ಕಾಕಪಾದ ಇವೇ ಷಡಂಗಗಳು (ಸಂಗೀತಂ. ೫೪). ೫. [ವೀಶೈ] ನೆಲ, ಜಲ, ಬೆಂಕಿ, ಗಾಳಿ, ಆಕಾಶ ಮತ್ತು ಆತ್ಮ ಎಂಬ ಆರು ಅಂಗಗಳು : ಆತ್ಮಗೂಡಿ ಪಂಚಭೂತಂಗಳನೆ ಷಡಂಗ[ವಾತಾಂ. ಷಡ್ವಿಧ ಅಂಗ]ವೆಂದೆನಿಸಿ (ಮಹಾದೇ. ಬ. ೧೧೩-೨೩೫) ; ಪೃಥ್ವಿ ಅಪ್ಪು ತೇಜ ವಾಯು ಆಕಾಶ ಆತ್ಮರೆಂಬ ಷಡಂಗಂಗಳಂ . . . ಪರಿವಿಡಿದು (ವಿವೇಕ. ೧೧೦). ೬. = ಷಟ್ಸ್ಥಲ : ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯರೆಂಬ ಷಡಂಗಗಳಲ್ಲಿ . . . ಷಡ್ಬ್ರಹ್ಮಂಗಳನೇಕೀಕರಿಸಿ ವೊಂದೆಯಾಗಿಪ್ಪ ಗುರುವೆ (ಮನೋವಿ. ೯-೨೩ ಟೀಕು). ೭. ಓಂ ನಮಃಶಿವಾಯ ಎಂಬ ಆರು ಅಕ್ಷರಗಳುಳ್ಳ ಮಂತ್ರ: ಯೋಜಿಸಲು ಮಂತ್ರಂಗಳಿಗೆ ಮಿಗೆ ರಾಜಮಂತ್ರವಿದೆಂದೆನಿಸಿ ವಿಭ್ರಾಜಿಸುವದೀ ಮಂತ್ರವಿದಕೆ ಷಡಂಗವೆನಲಿಹುದು (ಬಸಪು. ೩-೬೮). ೮. [ಚಿತ್ರಶಾ] ರೂಪಭೇದ, ಪ್ರಮಾಣ, ಭಾವ, ಲಾವಣ್ಯಯೋಜನ, ಸಾದೃಶ್ಯ ಮತ್ತು ವರ್ಣಿಕಾಭಂಗ ಎಂಬ ಆರು

ಲಕ್ಷಣಗಳು : ಭಾರತೀಯರಿಗೆ ತಂತ್ರಜ್ಞಾನವಿದ್ದಿತೇ ಇಲ್ಲವೇ ಎನ್ನುವುದಕ್ಕೆ ಷಡಂಗ ಲಕ್ಷಣಗಳು ಉತ್ತರಿಸಬಲ್ಲವು (ಭಾರದ. ೫೮೦). [ಸಂ.]

**ಷಡಂಗಬಲ** (ನಾ). = ಷಡಂಗ ೧ : ಎಡೆನೆಱೆಯದು ಭುವನತಳಂ ನಡೆವ ಚತುರ್ಬಲಕೆ ದಿವಿಜಖೇಚರಸೈನ್ಯಕ್ಕೆಡೆನೆಱೆಯದು ಗಗನಮುಮೆನೆ ಷಡಂಗಬಲಮಿಂತು ತಳರೆ ತಳರ್ದಂ ಭರತಂ (ಆದಿಪು. ೧೧-೩೪). [ಸಂ.]

**ಷಡಂಗಸೇನೆ** (ನಾ). = ಷಡಂಗ ೧ : ಷಡಂಗಸೇನಾವಿರಾಜಮಾನನುಂ ಸಪ್ತಾಂಗ ಸಂಪತ್ಸಮೇತನುಂ . . . ಆಗಿ (ಚಂದ್ರಪ್ರ. ೭-೩೫ ವ). [ಸಂ. ಷಡಂಗಸೇನಾ]

**ಷಡಂಗಿ** (ನಾ). ಆರುವೇದಾಂಗಗಳನ್ನು ತಿಳಿದವನು ; ಷಡಂಗಗಳನ್ನು ಅರಿತವನು : ಮಾಧವಭಟ್ಟರ ತನೆ(ನ)ಯಂ ಬಸವೆ(ವ)ಯ ಷಡಂಗಿ ಸಂಗತಚರಿತಂ (ಎ.ಕ.XIII, ೪೫-೪೨; 1112). [ಸಂ. ಷಡಂಗಿನ್]

**ಷಡಂಘ್ರಿ** (ನಾ). ಆರುಕಾಲುಗಳುಳ್ಳದು ; ದುಂಬಿ : ಹಂಸನಿಲ್ಲದ ಸರಸಿ ಬಲುವಿದ್ವಾಂಸರಿಲ್ಲದ ಸಭೆ ಷಡಂಘ್ರಿಗೆ ಮಿಸಲೆನಿಸದ ಕಮಲ . . . ಪೀತಸುವಾಸವಿಲ್ಲದ ತೊಡುಗೆಯಂತಾವಾಸ ನೆರೆಯದು ಮಕ್ಕಳಿಲ್ಲದೆ ಭೂಪದಶರಥಗೆ (ಕೌಶಿರಾ. ೧-೨೮). [ಸಂ.]

**ಷಡಂತರಂಗತಪ** (ನಾ). [ಜೈನ] ಪ್ರಾಯಶ್ಚಿತ್ತ, ವಿನಯ, ವೈಯ್ಯಾವೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ ಮತ್ತು ಧ್ಯಾನ ಎಂಬ ಆರು ಬಗೆಯ ಅಂತರಂಗತಪಸ್ಸುಗಳು : ಅನಶನಾವಮೋದರ್ಯಾದಿ ಷಡ್ವಿಧಬಾಹ್ಯತಪಮುಂ ಪ್ರಾಯಶ್ಚಿತ್ತವಿನಯಾದಿ ಷಡಂತರಂಗತಪಮುಂ . . . ತನ್ನೊಳುಂ ಸಚ್ಛನ್ನಮಾಗಿ (ಪುಷ್ಪಪು. ೧೪-೧೭ ವ). 'ಅಭ್ಯಂತರತಪಸ್ಸು' ಪರಾ. [ಸಂ.]

**ಷಡಕಿ** 'ಸಡಕು' ನೋ.

**ಷಡಕ್ಷರ** (ನಾ). ೧. ಆರುಅಕ್ಷರಗಳು : ಇಂತೀ ಷಡ್ಧಾತುವೆ ಷಡಕ್ಷರಮಯವಾಗಿ ಅವೆ ಲಿಂಗಂಗಳಾಗಿ (ಚನ್ನವ. ಕ. ೧೬೧-೩೮೮). 'ಷಡಕ್ಷರಮಂತ್ರ' ಪರಾ. ೨. ಶಿವ. ೩. = ಷಡಕ್ಷರಿ ೨ : ಚಿತ್ತಂಬಿಡಿದಪ್ಪುದೀ ಕೃತಿ ಷಡಕ್ಷರದೇವಕೃತಂ (ರಾಜಶೇ. ೧-೮೪). [ಸಂ.]

**ಷಡಕ್ಷರಮಂತ್ರ** (ನಾ). ಓಂ ನಮಃಶಿವಾಯ ಎಂಬ ಆರುಅಕ್ಷರಗಳುಳ್ಳಮಂತ್ರ: ವೀರಶೈವರ ಉಪಾಸನಾಮಂತ್ರವೆಂದರೆ ಷಡಕ್ಷರಮಂತ್ರವು (ಶಿವಾಸೂ. ೧೧೩). [ಸಂ.]

**ಷಡಕ್ಷರಿ** (ನಾ). ೧. = ಷಡಕ್ಷರಮಂತ್ರ : ವದನದಲ್ಲಿ ಷಡಕ್ಷರಿಯ ಬರೆಯಯ್ಯಾ (ಬಸವ. ೪೯೯) ; ಏಕಾಕ್ಷರಿ . . . ಪಂಚಾಕ್ಷರಿ, ಷಡಕ್ಷರಿ ಮುಂತಪ್ಪ ಪ್ರಸಿದ್ಧಮಂತ್ರಂಗಳೊಳವಲ್ತೆ (ರಾಮಾಶ್ವ. ೧೧೭-೨). ೨. ರಾಜಶೇಖರವಿಳಾಸ ಮೊದಲಾದ ಚಂಪೂಕಾವ್ಯಗಳನ್ನು ಬರೆದ ಒಬ್ಬ ಕನ್ನಡಕವಿಯ ಹೆಸರು : ಅಖಿಳಕಾವ್ಯಕಳಾವಿದರೊಲ್ದು ಕೇಳ್ದು ಮಚ್ಚದೆ ನುತಿಗೆಯ್ಯದಿರ್ಪರೆ ಷಡಕ್ಷರಿ ದೇವಕೃತ ಪ್ರಬಂಧಮಂ (ರಾಜಶೇ. ೧೪-೧೭೮) ; ಜೇಂಗೊಡದಂತೆ ಝೇಂಕರಿಪ ತುಂಬಿಗಳೆಂತರದಂತೆ . . . ಚಿತ್ತಂಗೊಳಲಾರ್ಪುದೀ ಕೃತಿ ಷಡಕ್ಷರಿದೇವಕೃತಂ ರಸಜ್ಞರಾ (ಶಬಶಂ. ೧-೨೭). [ಸಂ. ಷಡಕ್ಷರೀ]

**ಷಡಧ್ವ** (ನಾ). [ವೀಶೈ] ಮಂತ್ರ, ಪದ, ವರ್ಣ, ಭುವನ, ತತ್ತ್ವ ಮತ್ತು ಕಲಾ ಎಂಬ ಆರು ಮಾರ್ಗಗಳು : ಜಯ ಷಡಧ್ವವಿಶುದ್ಧ ಜಯ ಷಟ್ಸ್ಥಲಬ್ರಹ್ಮ ಜಯ ಸಚ್ಚಿದಾನಂದ ಜನ್ಮದೂರ (ಮನೋವಿ. ೯-೨೩) ; ಷಡಧ್ವವೆಂದಾವಾವವೆನಲು ನಿರ್ಮಳನೇ ಕಲಾಧ್ವ ತತ್ತ್ವಾಧ್ವ ಭುವನಾಧ್ವ ವರ್ಣಾಧ್ವಂ ಪದಾಧ್ವವಿವಱೊವೊಳಗೆ ಮಂತ್ರಾಧ್ವಂಗಳಿಂದಾಱು ಪರಿ (ವೀಶೈಪು. ೬-೪-೧೨). [ಸಂ.]

**ಷಡಭಿಜ್ಞ** (ನಾ). [ಬೌದ್ಧ] ದಿವ್ಯದೃಷ್ಟಿ, ದಿವ್ಯಶ್ರುತಿ, ಪೂರ್ವಾನುಸ್ಮೃತಿ, ಪರೇಂಗಿತಜ್ಞಾನ, ಪರೋಕ್ಷವಿಷಯಜ್ಞಾನ, ಗಗನಗಮನಾದಿವಿದ್ಯಾಬುದ್ಧಿ ಎಂಬ ಆರು ಶಾಸ್ತ್ರಗಳನ್ನು ತಿಳಿದವನು ; ಬುದ್ಧ : "ಬುದ್ಧಂ ಸಮಂತಭದ್ರಂ ಸಿದ್ಧಾರ್ಥಂ ಮುನಿ ತಥಾಗತಂ ಷಡಭಿಜ್ಞಂ" (ವಸ್ತುಕೋ. ೨-೧೦) ; ಷಡಭಿಜ್ಞಂ ಕ್ಷಣಿಕಂ ಜಡಾತ್ಮನೆನಿಪಂ ನೈಯಾಯಿಕಂ . . . ನಡೆವಂ ಕಾಪಿಳವೃತ್ತಿಯಂ ಬಿಡದೆ ಸಾಂಖ್ಯಂ ನೋಟ್ಪೊಡೆಂದೊಲ್ದುದೊಳ್ಪಡರ್ವನ್ನಂ ಶ್ರುತಕೀರ್ತಿದೇವನೊಳ್ ನಿಂದಳ್ ವಾಣಿ (ಚಂದ್ರಪ್ರ. ೧-೨೫). [ಸಂ.]

**ಷಡಯನ** (ನಾ). = ಷಟ್ಚರಣ ೧ : ಷಡಯನಕುಲದಂತಿರೆ ಕರ್ಪಿಡಿದೊಪ್ಪುವುದರ್ಹ ನಿನ್ನ ಪದಪಂಕರುಹಕ್ಕೊಡನೆಱಗಿದಮರಸಮಿತಿಯ ಬೆಡಂಗುವೆತ್ತಳಕಪಂಕ್ತಿ (ಜಿನಾಲ. ೬೨) ; ಒಡವೆಳೆದು ಸುರರೊಳಿದಱೊಳ್ ನುಡಿವುದು ಶುಕಸಮಿತಿ ದೇವಭಾಷೆಯನೆ ತೊದಳ್ಗೆಡೆಗುಡದೆ ಪಾಡುವುದು ಸಲೆ ಷಡಯನತತಿ ದೇವಗಾನಮನೆ ನುಣ್ಪಿನಿಂ (ಚಂದ್ರಪ್ರ. ೧೨-೯೭). [ಸಂ.]

**ಷಡರಿ** (ನಾ). ಮನುಷ್ಯನ ಏಳಿಗೆಗೆ ಅಡ್ಡಿ ಬರುವ ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮತ್ಸರಗಳೆಂಬ ಆರು ಶತ್ರುಗಳು : ಕರಣವಿಷಯಕ್ಕಿಂಬು ಗೊಡದಚ್ಚರಿಯ ಭಾಷೆ ಷಡರಿಗಳಂ ಪರಿಹರಿಪ ಭಾಷೆ (ಬಸಪು. ೬-೬). 'ಅರಿಷಡ್ವರ್ಗ' ಪರಾ. [ಸಂ.]

**ಷಡಾಧಾರ** (ನಾ). ೧. ದೇಹದಲ್ಲಿರುವ ಷಟ್ಚಕ್ರಗಳ ಸ್ಥಾನ : ಆಧಾರ ಒಂದಲ್ಲದೆ ಷಡಾಧಾರವಿಲ್ಲವೆಂದೆ ಒಂದು ಬೀಜದಲ್ಲಾದ ವೃಕ್ಷದ ಹಣ್ಣಿನ ರುಚಿಗೆ ನಾನಾಫಲದ ರಸದ ರುಚಿಯುಂಟೇ (ಮೋಳಿಮಾ. ೧-೧) ; ಈ ಷಡಕ್ಷರಿಯೆ ಮುಖ ಭುಜಯುಗ ದೇಹ ಮಧ್ಯ ಪದದ್ವಯ ಷಡಾಧಾರಂಗಳಲ್ಲಿ ಸಂಬಂಧವಾಗಿರ್ಪ ಕಾರಣ (ಉದ್ಭವಾ. ೬-೫). ೨. = ಷಟ್ಚಕ್ರ : ಆಧಾರ ಸ್ವಾಧಿಷ್ಠಾನ ಮಣಿಪೂರಕ . . . ಆಜ್ಞೆ ಎಂಬ ಷಡಾಧಾರ ಬಳಿ ವಿಡಿದು ನೆತ್ತಿಯಿಂದುತ್ತರಕ್ಕೆ ಉಚ್ಚಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಆದವ. ೧೧-೨೧). [ಸಂ.]

**ಷಡಾಧಾರಚಕ್ರ** (ನಾ). = ಷಟ್ಚಕ್ರ : ಶರೀರದಲ್ಲಿ ಷಡಾಧಾರಚಕ್ರವುಂಟೆಂಬ ಜಡೆಗಡಿಗೆದಲೆಯ ಬಿಡುಗುರುಳಣ್ಣಗಳು ಕೇಳಿರೋ (ಮೋಳಿಮಾ. ೮೪-೩೩೪) ; ಅಂತಪ್ಪ ಅಸಾಧ್ಯವಾದ ಪರಬ್ರಹ್ಮವ ಷಡಾಧಾರಚಕ್ರದಲ್ಲಿ ಷಡುಸೋಪಾನವಿಟ್ಟರಸುತ್ತಿಹರೆಂಬುದೀಗ 'ಮನೆಮನೆಯ ಹೊಕ್ಕು ಸುತ್ತುತ್ತೈದಾರೆ' ಎಂಬ ಶಬ್ದಕ್ಕರ್ಥ (ವಚಸಂ. ೫೫೬-೧೧ ಟೀಕು). [ಸಂ.]

**ಷಡಾನನ** (ನಾ). ೧. ಆರುಮುಖಗಳು : ಈ ನಮ್ಮ ನಿಜತತ್ತ್ವಚಿತ್ಕಳಾರೂಪೀ ಷಡಾನನಂಗಳೊಳೆ ಷಟ್ಗುಣವರೂಪಾಗಿರ್ಪೆ ನೀನೆ ಷಣ್ಮುಖಿ ಷಟ್ಸ್ಥಲಬ್ರಹ್ಮ ಕೇಳ ಬೇಕೆಂದೊಡಾಂ ಪೇಳ್ವೆನಿನ್ನು (ಚೆಬಪು. ೩-೬). ೨. ಆರುಮುಖಗಳುಳ್ಳವನು ; ಷಣ್ಮುಖ : "ಷಡಾನನಂ ವಹ್ನಿಜಂ ತಾರಕರಿಪು ಸ್ವಾಮಿ ಕಾರ್ತಿಕೇಯಂ" (ಮಂಗರಾ. ೫-೧೬) ; ಶಾತಕುಂಭಾಚಲನಿಲಯ ಷಡಾನನಗಣಪತಾತ . . . ಸಂಗಮೇಶ್ವರ ಓತು ರಕ್ಷಿಸೆನ್ನಂ (ಪ್ರಾಥರಾ. ೯-೧). [ಸಂ.]

**ಷಡಾಯತನ** (ನಾ). [ಬೌದ್ಧ] ಪಂಚೇಂದ್ರಿಯಗಳು ಹಾಗೂ ಮನಸ್ಸು : 'ಷಡಾಯತನ' ವೆಂಬುದು ಪಂಚೇಂದ್ರಿಯಗಳು ಮತ್ತು ಮನಸ್ಸು (ಭಾರದ. ೧೯೫). [ಸಂ.]

**ಷಡಾರ** (ನಾ). [ಸಂಗೀತ] ಒಂದು ರಾಗದ ಹೆಸರು : ಷಡಾರ ಟೀಕರಾಗ ಮಾಳವಿ ಪಂಚಮಾಳವಿ ಕೌಶಿಕೆ . . . ಹಿಂದೋಳವೆಂಬೆಂಟು ಅಪ್ಪಸಾಧಾರಣದಿಂದಾದ ರಾಗಂಗಳು (ವಿವೇಕ. ೧೮೭). [?]

**ಷಡಾವಶ್ಯಕ** (ನಾ). [ಜೈನ] ಮುನಿಗಳು ಪ್ರತಿನಿತ್ಯ ಆಚರಿಸಬೇಕಾದ ಸಾಮಾಯಿಕ, ತೀರ್ಥಂಕರಸ್ತವನ, ಪಂಚಪರಮೇಷ್ಠಿವಂದನ, ಪ್ರತಿಕ್ರಮಣ, ಪ್ರತ್ಯಾಖ್ಯಾನ ಮತ್ತು ಕಾಯೋತ್ಸರ್ಗ ಎಂಬ ಆರು ಕ್ರಿಯೆಗಳು : ಚತುರ್ವಿಧ ಸತ್ಕಥಾನಿರತನುಂ ಚಾರಿತ್ರವಂತನೆಂಬೊಂ . . . ಪಂಚಸಮಿತಿಸಮೇತನುಂ ನಿರುದ್ಧ ಪಂಚಾಸ್ರವನುಂ ಷಡಾವಶ್ಯಕ [ಪಾಠಾಂ. ಷಟ್ಕಷಾಯ] ಸಂಯುತನುಂ (ಚಾವುಂಪು. ೬). [ಸಂ.]

**ಷಡಾವಶ್ಯತೆ** (ನಾ). = ಷಡಾವಶ್ಯಕ : ಹಿತಸಾಧುಸಮಾಧಿ ವ್ಯಾಪೃತಿ ಗುರುವಂದಿತ ಜಿನಪ್ರವಚನ ಷಡಾವಶ್ಯತೆಯೆನಿಸಿ ನೆಗಳ್ದುವೀ ಜಿನಪತಿಶಾಸನದೀಪಕತೆ ಶ್ರುತಾಭಿಪ್ರಣಯಂ (ಶಾಂತಿಪು. ೯-೧೧೬). [ಸಂ. ಷಡಾವಶ್ಯತಾ]

**ಷಡಿಂದ್ರಿಯ** (ನಾ). ಕಣ್ಣು, ಕಿವಿ, ಮೂಗು, ನಾಲಿಗೆ, ದೇಹ ಮತ್ತು ಮನಸ್ಸು ಎಂಬ ಆರು ಇಂದ್ರಿಯಗಳು : ಹೃದಯದಲ್ಲಿ ಮಹಾಲಿಂಗವೆಂದು ಶ್ರೋತ್ರದಲ್ಲಿ ಪ್ರಸಾದಲಿಂಗವೆಂದು . . . ಇಂತು ಷಡಿಂದ್ರಿಯಂಗಳಲ್ಲಿ ಷಡ್ವಿಧಲಿಂಗವಾಗಿ ತೋಱಿತ್ತು (ಚನ್ನವ . ಕ. ೧೮೫-೩೫೮). [ಸಂ.]

**ಷಡೀರಣ** (ನಾ). [ವೈದ್ಯಶಾ] ಉಪಶಮನಕಾರಕವಾದ ಆರು ಬಗೆಯ ಸಸ್ಯಮೂಲವಾದ ದ್ರವ್ಯಗಳು : ಚಿತ್ರಮೂಲ, ಕೊಡಸಿಗನ ಚೆಕ್ಕೆ, ಆಗಳುಶುಂಠಿ, ಕಟುಕರೋಹಿಣಿ, ಅತಿಬಜೆ, ಅಣಿಲೆಕಾಯಿ,ಈ ಆಱು ಕೂಡಿ ಷಡೀರಣವೆನಿಸಿಕೊಂಬುದು (ವೈದ್ಯಸಾ.I, ೩.೨೩). [ಸಂ.]

**ಷಡುಋತು** (ನಾ). ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ ಮತ್ತು ಶಿಶಿರ ಎಂಬ ಆರು ಋತುಗಳು : ಷಡಧ್ವ ಷಡುಋತುಗಳಿಲ್ಲದಂದು . . . ಅಖಂಡೇಶ್ವರಾ ನಿಮ್ಮ ನೀವಱಿಯದೆ ಅನಂತಕಾಲವಿರ್ದಿರಂದು (ಅಖಂಡೇ. ೨-೪). [< ಸಂ. ಷಡೃತು]

**ಷಡುಖಂಡ** (ನಾ). = ಷಟ್ಖಂಡ : ರಾಜ ನಾನೊಬ್ಬನಲ್ಲದೆ ಷಡುಖಂಡಕೆ ರಾಜರಿಬ್ಬರೆ (ಭರತೇ. ೩೯-೫೭). [< ಸಂ. ಷಟ್ಖಂಡ]

**ಷಡುಗವ್ಯ** (ನಾ). ಹಸುವಿನಿಂದ ದೊರಕುವ ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ ಮತ್ತು ಗೋರೋಚನವೆಂಬ ಆರು ವಸ್ತುಗಳು : ಹವ್ಯಕವ್ಯಗಳೆಲ್ಲ ಗೋವಿಂದ ಷಡುಗವ್ಯ ಸಮ್ಮಾರ್ಜನೆ ಗೋವಿಂದ (ಶರಚ. ೭೮೭). [< ಸಂ. ಷಡ್ಗವ್ಯ]

**ಷಡುಚಕ್ರ** (ನಾ). = ಷಟ್ಚಕ್ರ : ಸಪ್ತಧಾತು ಷಡುಚಕ್ರ ಷಡುವರ್ಗ ಪಂಚಭೂತ . . . ಭಾವಜ್ಞಾನ ಮೊದಲಾದ ಬಾಹತ್ತರವಿನಿಯೋಗಮಂ ತಳೆದು (ಆದವ. ಮು. ೧೭೪-೨೪೯); ದೃಷ್ಟ ಷಡುಚಕ್ರವಕ್ಷರವನಿರಿಸಿದರಾರು (ದೀಕ್ಷಾಬೋ. ೪೦-೭೭೮). [< ಸಂ. ಷಟ್ಚಕ್ರ]

**ಷಡುದರುಶನ, ಷಡುದರ್ಶನ** (ನಾ). [ತತ್ತ್ವಶಾ] ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ವೇದಾಂತ ಮತ್ತು ಪೂರ್ವಮೀಮಾಂಸೆ ಎಂಬ ಆರು ಬಗೆಯ ದರ್ಶನಗಳು : ಕಲಿಯುಗದಲ್ಲಿ ಷಡುದರುಶನ ಪಲ್ಲವಿಸಿತ್ತು (ಮೋಳಿಮಾ. ೧-೧೧) ; ಆಚಾರ ಶಿವಾಚಾರವೆಂದಱಿಯದ ಕಾರಣ ಷಡುದರುಶನಂಗಳೆಲ್ಲಾ ತಮತಮಗೆ ಶರಣೆನ್ನುತ್ತಿದ್ದುವು (ಬಸವ. ೮೧೭). **ಷಡುದರ್ಶನ** : ಷಡು[ಪಾಠಾಂ. ಟ್]ದರ್ಶನಂಗಳ ಶೋಧಿಸಿ ಕಡುಮುಕ್ತಿಯ ಪಡೆವೆನೆಂಬ ಜಡಮತಿಯವನಲ್ಲ ನೋಡಾ ಲಿಂಗೈಕ್ಯನು (ಅಖಂಡೇ. ೩೧೫-೨). [< ಸಂ. ಷಡ್ದರ್ಶನ ]

**ಷಡುದರ್ಶನ** 'ಷಡುದರುಶನ' ನೋ.

**ಷಡುಪದ** (ನಾ). = ಷಟ್ಪದ ೧ : ಕಡುಚಲ್ವ ಮಡದಿಯರು ನಡುಬಾಗಿ ಕುಸುಮಮಂ ವಡನೆತ್ತುತಿರಲು . . . ಷಡುಪದಾಳಕದ ನಿಡುಜಡೆಯು ಬೆಂಗಡೆ ನಿಮಿರ್ದು ಕಡುರಮ್ಯಮಾಗಿ ಕಂಗೊಳಿಸುತಿರ್ದರು (ನವಮೋ. ೨೪-೫೮). [< ಸಂ. ಷಟ್ಪದ ]

**ಷಡುಭ್ರಮೆ** (ನಾ). ಜಾತಿ, ವರ್ಣ, ಆಶ್ರಮ, ಕುಲ, ಗೋತ್ರ ಮತ್ತು ನಾಮ ಎಂಬ ಆರು ವಿಧವಾದ ಭ್ರಾಂತಿಗಳು :ಷಡುಭ್ರಮೆಗಳಲ್ಲಿ ಭ್ರಮಿತರನೇನೆಂಬೆನಯ್ಯಾ (ಆದವ. ಮು. ೮೮-೧೪೭). [< ಸಂ. ಷಡ್ಭ್ರಮ]

**ಷಡುರಸ** (ನಾ). ೧. ಉಪ್ಪು, ಕಾರ, ಸಿಹಿ, ಕಹಿ, ಹುಳಿ ಮತ್ತು ಒಗರು ಎಂಬ ಆರು ಬಗೆಯ ರುಚಿಗಳು,–ಭೋಜ್ಯರಸಗಳು : ಷಡುರಸಾದಿಗಳು ಮನವ ಸೋಂಕದ ಮುನ್ನವೆ ಪರಿಪೂರ್ಣಭಾವಿ ತಾನಾಗಿ (ಆದವ. ಮು. ೧೯೯-೨೦೦) ; ಎಲ್ಲಿ ಷಡುರಸಮಯದ ಭೋಜನ . . . ಅಲ್ಲಿ ನಿನ್ನುರವಣೆಗಳೊಪ್ಪುವದು (ಕುಮ್ಮಾದ್ರೋ. ೧೩-೭೩). ೨. ಷಡ್ರಸದಿಂದ ಕೂಡಿದ ಪದಾರ್ಥ,– ಖಾದ್ಯ : ಮೇಲಾದ ಷಡುರಸಗಳನು ಶಾಲಿಯ ದಿವ್ಯಾನ್ನ ಸದ್ಯೋಘೃತಗಳ ಲೋಲಾಕ್ಷಿಯರು ಬಡಿಸಿದರು (ಕಂನವಿ. ೮-೮೫). [< ಸಂ. ಷಡ್ರಸ]

**ಷಡುರುಚಿ** (ನಾ). = ಷಡುರಸ ೧ : ಷಡಕ್ಷರವೇ ಷಡುರುಚಿಯಾಗಿ ತೋಱಿಹುದಾಗಿ . . . ಗುರುಲಿಂಗವಾಗಬೇಕಾಯಿತ್ತು (ಆದವ. ಮು. ೨೦೦-೩೫೨) ; ಪಂಚಭಕ್ಷ್ಯವನು . . . ಚದುರಿನಿಂದೆ ಪರಿಪಾಕಮಂಗೈದೊಲಿದು ವಂಚನಿಲ್ಲದೆಯಸುರದಂಪತಿಗಳಿಗೆ ನೀಡೆ ಷಡುರುಚಿಯೊಳುಂಡು (ನವಮೋ. ೯-೫). [< ಸಂ. ಷಡ್ರುಚಿ]

**ಷಡುಲಪನ** (ನಾ). = ಷಡಾನನ ೨ : ಷಡುಲಪನ ಪೋಗೆ ವಿಘ್ನೇಶ ಹರನಂ ಸುತ್ತಿ . . . ಕೊಡು ಪಣ್ಣನೆಂದು ಬೇಡೆ (ಪ್ರೌಢರಾ. ೧-೧೧). [< ಸಂ. ಷಡ್ಲಪನ]

**ಷಡುಲಿಂಗ** (ನಾ). [ವೀಶೈ] ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗ ಎಂಬ ಆರು ಬಗೆಯ ಲಿಂಗಗಳು : ಇಂತು ಷಡುಸ್ಥಲಂಗಳಾದ ದೆಸೆಯಿಂ . . . ಷಡುಲಿಂಗವಾಗಬೇಕಾಯಿತ್ತು (ಆದವ. ಮು. ೨೦೦-೩೫೨) ; ಆಚಾರಾದಿ ಮಹಾಲಿಂಗಾಂತವಾದ ಷಡ್ಲಿಂಗಗಳಲ್ಲಿ ವರ್ತಿಸುವ ಪ್ರಾಣಲಿಂಗವು ಪ್ರಾಣಭಿನ್ನ ಭಾವಭಿನ್ನವಾಗಿ ತೋರಲಾಗದು (ಚೆನ್ನಸಾ. ೧೦೩). [< ಸಂ. ಷಡ್ಲಿಂಗ ]

**ಷಡುವರ್ಗ** (ನಾ). = ಷಡರಿ : ಕಾದಿದ್ದರಯ್ಯಾ ಷಡುವರ್ಗವೆಂಬ ತೊತ್ತಿರು ಮುಟ್ಟದಂತೆ (ಅವಚಂ. ೨೭೭-೧೨೭೦) ; ಕಾಮವಿಕಾರವಾದಿ ಷಡುವರ್ಗವಱಿಯದುದು ನೇಮವಿದೆಂದು ನಡೆವ ಹಂಪೆಯ ಮಹಾದೇವ ಗುರುರಾಯ ರಕ್ಷಿಸುಗೆಮ್ಮನು (ಹಚಕಾ. ೧-೧೧). [< ಸಂ. ಷಡ್ವರ್ಗ]

**ಷಡುವರ್ಣ** (ನಾ). ಬಿಳಿ, ಕೆಂಪು, ಹಸಿರು, ಹಳದಿ, ನೀಲಿ ಮತ್ತು ಮಿಶ್ರವರ್ಣವಾದ ಚಿತ್ರ ಎಂಬ ಆರು ಬಗೆಯ ಬಣ್ಣಗಳು : ಅಪ್ಪುವಿನ ಮಱೆಯ ಷಡುವರ್ಣದ ಟಿಪ್ಪಣದಂತೆ . . . ಇಂತಿಹ ತದ್ರೂಪು ತದ್ರೂಪಂಗಳ ಹೊದ್ದಿಹವಾದ ಕಾರಣ ಇಂತೀ ಆತ್ಮತತ್ವಭೇದದಲ್ಲಿ ಆಗುಚೇಗೆಯನಱಿಯಬೇಕು (ಮೋಳಿಮಾ. ೧೧-೪೧) ; ಆ ಮನವು ಮಹದಲ್ಲಿ ಲಯವಾದಲ್ಲಿ ಆತ್ಮನಾವೆಡೆಯಲ್ಲಿದ್ದಿತ್ತು ಷಡುವರ್ಣದೊಳಗಲ್ಲ (ಆದವ. ಮು. ೨೦೯-೩೭೫). [< ಸಂ. ಷಡ್ವರ್ಣ]

**ಷಡುಸಕ್ಕರಿಗ** (ನಾ). ಒಂದು ಬಗೆಯ ಮೀನು : ಗಱಿಮೆಱೆವ ಕಾಗೆಂಡೆಯಯ್ಯರೆಗ . . . ಹಿರಿಯ ಷಡುಸಕ್ಕರಿಗ ನಿಱಿಲು ಹಂದೆಗನಾನೆಮೊಗನೆಂಬ ಪರಿಪರಿಯ ಮಾನ್ಗಳಂ ಗುದಿಗೆಯ್ದರು (ಹಚಕಾ. ೫-೪೫). [?]

**ಷಡುಸಮಾರ್ಜನೆ** 'ಷಡುಸಮ್ಮಾರ್ಜನೆ' ನೋ.

**ಷಡುಸಮ್ಮಾರ್ಜನೆ, ಷಡುಸಮಾರ್ಜನೆ** (ನಾ). = ಷಟ್ಸಮ್ಮಾರ್ಜನ : ಇಂದೆನ್ನ ಮನೆಗೆ ಪ್ರಮಥರು ಬಂದಹರೆಂದು ಗುಡಿ ತೋರಣವ ಕಟ್ಟಿ ಷಡುಸಮ್ಮಾರ್ಜನೆಯ ಮಾಡಿ ರಂಗವಾಲಿಯನಿಕ್ಕಿ ಉಘೆ ಚಾಂಗು ಭಲಾ ಎಂಬೆ (ಬಸವ. ೩೭೭) ; ಪಾದತೀರ್ಥವ ಕೊಂಡು ಷಡುಸಮ್ಮಾರ್ಜನೆಯ ಮಾಡಿ (ಚನ್ನವ. ಕ. ೧೪೯-೩೧೪). **ಷಡುಸಮಾರ್ಜನೆ** : ಮೃಡಭಕ್ತಗಣತತಿ ತಂಡತಂಡದಲಿ ಸಡಗರದೊಳೆಯ್ತರೆ ಮೃಗಮದದ ಷಡುಸಮಾರ್ಜನೆ ಮಾರ್ಗದೊಳು ಬೆಡಗಡರೆ (ಬಸಪು. ೬-೨೦). [< ಸಂ. ಷಟ್ಸಮ್ಮಾರ್ಜನ ]

**ಷಡುಸಾದಾಖ್ಯ** (ನಾ). ಕರ್ಮ, ಕರ್ತೃ, ಮೂರ್ತಿ, ಅಮೂರ್ತಿ, ಶಿವ ಮತ್ತು ಮಹಾ ಎಂಬ ಆರು ಸಾದಾಖ್ಯಗಳು : ಆ ವೃಕ್ಷದಿಂದ ಷಡುಸಾದಾಖ್ಯಂಗಳು ಹುಟ್ಟಿದವು ಆ ಷಡುಸಾದಾಖ್ಯಂಗಳ ನೆಳಲಲ್ಲಿ ಕುಳ್ಳಿರ್ದು ನಾನು ಬಸವ ಬಸವ ಎನುತಿರ್ದೆನು (ಅವಚಂ. ೧೯೭-೮೯೨). [< ಸಂ. ಷಟ್ಸಾದಾಖ್ಯ]

**ಷಡುಸ್ಥಲ, ಷಟುಸ್ಥಲ, ಷಡುಸ್ಥಳ** (ನಾ). = ಷಟ್ಸ್ಥಲ : ನುಡಿದ ನುಡಿಯೊಳಗೆ ಷಡುಸ್ಥಲ ಬಂದು ಎನ್ನ ಮನವನಿಂಬುಗೊಳ್ಳದಿದ್ದರೆ ಸುಡುವೆನೀ ತನುವ (ಬಸವ. ೮೯೭). **ಷಟುಸ್ಥಲ** : ಅಂದೊಂದು ಪರಿ ಇಂದೊಂದು ಪರಿಯೆ ಷಟುಸ್ಥಲಂಗಳು (ಆದವ. ಮು. ೬೧-೯೭). **ಷಡುಸ್ಥಳ** : ಈ ಷಡುಸ್ಥಳನಿರ್ಣಯ ಸಾಧಕರಿಗಳವೆ ಪೂರ್ವಸಂಸ್ಕಾರದ ಸಹಜದೊಡೆಯರಿಗಲ್ಲದೆ (ಚನ್ನವ. ಕ. ೫೭೮-೧೨೮೧). [< ಸಂ. ಷಟ್ಸ್ಥಲ]

**ಷಡುಸ್ಥಳ** 'ಷಡುಸ್ಥಲ' ನೋ.

**ಷಡೂರ್ಮಿ** (ನಾ). ಹಸಿವು, ನೀರಡಕೆ, ಶೋಕ, ಮೋಹ, ಮುಪ್ಪು ಮತ್ತು ಮರಣ ಎಂಬ ಆರು ಬಗೆಯ ತೊಂದರೆಗಳು : ಅರಿಷಡ್ವರ್ಗಂಗಳು ಷಡೂರ್ಮಿಗಳು . . . ಇಂತಿವು ಆದಿಯಾಗಿ ತೋಱುವ ತೋಱಿಕೆಯೆ ನಾನಲ್ಲ ಎನ್ನವೇ ಅಲ್ಲ (ಮಹಾದೇ. ಬ. ೧೧೧-೨೩೫) ; ಶೋಕ ಜರೆ ಮರಣ ಮೋಹಾಕಾರವಂತವಱ ಜೋಕೆಯಿಂ ಕ್ಷುತ್ಪಿಪಾಸಂಗಳಾಱು ನೀ ಕೇಳ್ ಷಡೂರ್ಮಿಗಳ್ (ಮನೋವಿ. ೫-೩೨). [ಸಂ.]

**ಷಡೂಷಣ** (ನಾ). ಹಿಪ್ಪಲಿ, ಚವ್ಯ, ಶುಂಠಿ, ಚಿತ್ರಮೂಲ, ಮೋಡಿ ಮತ್ತು ಮೆಣಸು ಎಂಬ ಆರು ಬಗೆಯ ಉಷ್ಣಕಾರಕ ವಸ್ತುಗಳು. [ಸಂ.]

**ಷಡೃತು** (ನಾ). = ಷಡುಋತು. [ಸಂ.]

**ಷಡ್ಕ** 'ಸಡ್ಡುಕ' ನೋ.

**ಷಡ್ಗವ** (ನಾ). ೧. ಆರು ಎತ್ತುಗಳ ನೊಗ. ೨. ನೊಗ ಹೇರಿದ ಆರು ಎತ್ತು, ಕುದುರೆ ಮೊದಲಾದುವು : "ಆಱು ಪಶು ಷಡ್ಗವಮಕ್ಕು" (ಮಂಗರಾ. ೫೫-೯). [ಸಂ.]

**ಷಡ್ಗವ್ಯ** (ನಾ). = ಷಡುಗವ್ಯ : ನಾರಿಯರು ಷಡ್ಗವ್ಯಸಮ್ಮಾರ್ಜನೆಯನೆಸಗಿ ತಾರ ಚೂರ್ಣದ ರಂಗವಲ್ಲಿಯಂ ವಿಸ್ತರಿಸಿ . . . ಅಲಂಕರಿಸಿರೆ (ನವಮೋ. ೧೮-೪೧). [ಸಂ.]

**ಷಡ್ಗೀತ** (ನಾ). [ಸಂಗೀತ] ಒಂದು ಬಗೆಯ ತಾಳ : ಚಂಚತ್ಪುಟ ಚಾಚತ್ಪುಟ ಷಡ್ಗೀತ . . . ಜಯಾಳವೆಂಬವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೫೪). [?]

**ಷಡ್ಗುಣ** (ನಾ). ೧. ಆರುಪಟ್ಟು ; ಆರುಮಡಿ : 'ಷಡ್ಗುಣಿಸು' ಪರಾ. ೨. ರೂಪ, ವಿದ್ಯೆ, ಸಾಹಸ, ಜ್ಞಾನ, ಸೌಭಾಗ್ಯ, ಮತ್ತು ಭೂಮಿಯ ಒಡೆತನ ಎಂಬ ಆರುಗುಣಗಳು : ಕಡುರೂಪು ವಿದ್ಯ ಸಾಹಸ ಜ್ಞಾನ ಸೌಭಾಗ್ಯ ಪೊಡವಿಯೊಡೆತನಗಳಿಂದಂ ಸಲೆ ವಿರಾಜಿಸುತ ಬಿಡದೆ ಷಡ್ಗುಣಗಳೈಶ್ವರ್ಯಸಂಪನ್ನನೆನಿಸುತ (ನವಮೋ. ೩-೨೯). ೩. ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ, ತೇಜಸ್ಸು ಎಂಬ ಭಗವಂತನ ಆರು ಗುಣಗಳು : ನಾರಾಯಣನಾದೊಡೆ . . . ಜ್ಞಾನ ಶಕ್ತಿ ಬಲ ಐಶ್ವರ್ಯ ತೇಜ ವೀರ್ಯಂಗಳೆಂಬ ವೈಷ್ಣವೋಕ್ತ ಷಡ್ಗುಣಸಹಿತನಾಗಿ . . . ದೇವತೆಗಳಿಂದೋಲೈಸಿಕೊಳುತ್ತಿರ್ಪಂ (ವಿವೇಕ. ೨೩೧) ; ಆತ್ಮತತ್ವವನ್ನು ತಿಳಿಯಲೋಸ್ಕರ ಷಡ್ಗುಣಪರಿಪೂರ್ಣನಾದ ಶ್ರೀಕೃಷ್ಣನಂ ಕುರಿತು ಪ್ರಶ್ನೆಮಾಡುತ್ತಿದ್ದನೂ (ಉತ್ತಟೀ. ೧-೭). ೪. ಕ್ಷಮೆ, ದಯೆ, ಶಾಂತಿ, ಸ್ಥೈರಣೆ, ಸತ್ಯ ಮತ್ತು ನಿತ್ಯ ಎಂಬ ಆರು ಗುಣಗಳು : ಕ್ಷಮೆ ದಯೆ ಶಾಂತಿ ಸ್ಥೈರಣೆ ಸತ್ಯ ನಿತ್ಯವೆಂಬ ಷಡ್ಗುಣ ಸಂಪದಂಗಳ ನಿಮಿಷಾರ್ಧವಗಲದಿರಬೇಕು (ಮಡಿಮಾ. ೯-೧೦). ೫. ಐಶ್ವರ್ಯ, ಜ್ಞಾನ, ಯಶಸ್ಸು, ಶ್ರೀ, ವೈರಾಗ್ಯ ಮತ್ತು ಧರ್ಮ ಎಂಬ ಆರು ಬಗೆಯ ಗುಣಗಳು : (ಕ). ೬. [ರಾಜನೀ] ನೆರೆರಾಜ್ಯಗಳೊಡನೆ ರಾಜನು ಇಟ್ಟುಕೊಳ್ಳುವ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ ಮತ್ತು ಸಮಾಶ್ರಯ ಎಂಬ ಆರು ಬಗೆಯ ಸಂಬಂಧಗಳು; IP ಈ ಗುಣಗಳ ನಿರ್ದೇಶನದಲ್ಲಿ, ವಿವರಣೆಯಲ್ಲಿ ಅನೇಕ ವ್ಯತ್ಯಾಸಗಳಿವೆ: "ಷಡ್ಗುಣಗಳು - ಸಂಧಿ ; ೨ ವಿಗ್ರಹ ; ೩ ಯಾನ; ೪ ಆಸನ; ೫ ದ್ವೈಧೀಭಾವ ; ೬ ಸಮಾಶ್ರಯ" (ನಾನಾಶ. ೨೯೦). [ಸಂ.]

**ಷಡ್ಗುಣಿಸು** (ಕ್ರಿ). ಆರರಷ್ಟಾಗು ; ಆರುಪಟ್ಟಾಗು : ಆ ಆತ್ಮ ಪ್ರಜ್ಞೆ ದಿಗ್ದೇಶ ಮುಟ್ಟಿ ಎಂಟೆದೆಯ ರೂಪ ತಳೆದು ಅಗೂ ಬ್ರಹ್ಮ ಬಿಂದು ಚೈತನ್ಯದಿಂದ ಷಡ್ಗುಣಿಸಿ ಘನದಿ ಬೆಳೆದು (ಅರಳು. ೫೫-೨). [ಷಡ್ಗುಣ + - ಇಸು]

**ಷಡ್ಗ್ರಂಥ** (ನಾ). ಒಂದು ಬಗೆಯ ಮರ ; ಹುಲಿಗಿಲು : "ಷಡ್ಗ್ರಂಥಃ, ಮರ್ಕಟೀ, ಅಂಗಾರ ವಲ್ಲರೀ - ೩ ಕ್ರಮದಿಂ (ಕರಂಜಭೇದಾಃ) . . . ಕೆಂಪುಬಣ್ಣದ ಗೊಂಚಲುಗಳುಳ್ಳ ಹುಲಿಗಿಲಿಗಿಡಕ್ಕೂ ಹೆಸರುಗಳು" (ಸಿದ್ಧಾಂತಿ. ೧೨೩). [ಸಂ.]

**ಷಡ್ಗ್ರಂಥಿ** (ನಾ). ೧. ಒಂದು ಬಗೆಯ ಸುವಾಸನೆಯ ಬೇರು : "ವನಿತೆ ಷಡ್ಗ್ರಂಥಿ ಕರ್ಪೂರಶುಂಠಿ" (ಮಂಗರಾ. ೪೧-೩೩). ೨. ಹಿಪ್ಪಲಿಯ ಬೇರು. ೩. ಬಜೆ. ೪. ಕಚೋರ. ೫. ಒಂದು ಬಗೆಯ ಸಸ್ಯ : "ಗಜಗ, ಗೆಜ್ಜಿಗೆಬಳ್ಳಿ . . . ಷಡ್ಗ್ರಂಥಿ" (ಸಸ್ಯನಿ. ೨೫). [ಸಂ.]

**ಷಡ್ಗ್ರಂಥಿಕೆ** (ನಾ). ೧. ಒಂದು ಬಗೆಯ ಸಸ್ಯ ; "ವನಹರಿದ್ರಾ" (ಪಂಡಿತ. ೨೪೫). ೨. ಒಂದು ಬಗೆಯ ಬೇರು ; ಬಜೆ: "ಬಜೆ ಷಡ್ಗ್ರಂಥಿಕೆ" (ವಸ್ತುಕೋ. ೩೮-೩೩). [ಸಂ. ಷಡ್ಗ್ರಂಥಿಕಾ]

**ಷಡ್ಗ್ರಂಥೆ** (ನಾ). ೧. = ಷಡ್ಗ್ರಂಥಿಕೆ ೨ : "ವಚಾ, ಉಗ್ರಗಂಧಾ, ಷಡ್ಗ್ರಂಥಾ, ಗೋಲೋಮಿ, ಶತಪರ್ವಿಕಾ - ೫ ಬಜೇ ಹೆಸರುಗಳು" (ಸಿದ್ಧಾಂತಿ. ೧೩೩). ೨. ಕಚೋರ. [ಸಂ. ಷಡ್ಗ್ರಂಥಾ]

**ಷಡ್ಜ** (ಗು). ೧. ನಾಲಿಗೆ, ಹಲ್ಲು, ಅಂಗುಳು, ಮೂಗು, ಗಂಟಲು ಮತ್ತು ಎದೆ ಎಂಬ ಆರು ಸ್ಥಾನಗಳಲ್ಲಿ ಹುಟ್ಟುವ. (ನಾ). ೨. [ಸಂಗೀತ] ಸಪ್ತ ಸ್ವರಗಳಲ್ಲಿ ಮೊದಲನೆಯದು : ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಂಗಳೆಂಬ ಸಪ್ತಸ್ವರಮುಮಂ . . . ಭರತದ ಸಾರಸರ್ವಸ್ವಮುಮಂ ನಾಟ್ಯ ಧರ್ಮಮೊಳ್ ಸೌಧರ್ಮಕಲ್ಪೇಶ್ವರಂ ಪ್ರತ್ಯಕ್ಷಂ ಮಾಡಿದಾಗಳ್ (ಆಜಿಪು. ೫-೩೦ ವ) ; ಮಧುರದ ಷಡ್ಜ ಪಂಚಮದೆರಡು ತಂತಿಯನಾರಯಿದು ನುಣ್ಚೊರಲು ಬೆರಲೊಂದಾದುದನೆ ಬಾಜಿಸಿದಳಾ ಚದುರೆ (ಸಾಳ್ವಭಾ. ೧೮-೭). [ಸಂ.]

**ಷಡ್ಜೀವ** (ನಾ). [ಜೈನ] ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಪಂಚೇಂದ್ರಿಯಅಸೈನೀ ಮತ್ತು ಪಂಚೇಂದ್ರಿಯಸೈನೀ ಎಂಬ ಆರು ಬಗೆಯ ಜೀವಿಗಳು : ಏಕವಿಹಾರಿಯುಂ ದ್ವಿವಿಧಸಂಯಮಧಾರಿಯುಂ ತ್ರಿಗುಪ್ತಿಗುಪ್ತನುಂ ಚತುಷ್ಕಷಾಯದರ್ಪದಳನನುಂ ಪಂಚಸಮಿತಿನಿಯತನುಂ ಷಡ್ಜೀವದಯಾನಿರತನುಂ . . . ಪಂಚದಶಪ್ರಮಾದಪರಿವರ್ಜಿತನುಮಾಗಿ (ಆಜಿಪು. ೩-೧ ವ) ; ಷಡ್ಜೀವನಿಕಾಯ ಜೀವಿದಯೆಯುಂ . . . ಪಂಚೇಂದ್ರಿಯ ವಿಷಯವಿಚ್ಛಿತ್ತಿಯುಂ ತನ್ನೊಳುಂ ಸಚ್ಛನ್ನಮಾಗಿ (ಪುಷ್ಪಪು. ೧೪-೧೭ ವ). [ಸಂ.]

**ಷಡ್ಡಕ** 'ಸಡ್ಡುಕ' ನೋ.

**ಷಡ್ದರ್ಶನ** (ನಾ). = ಷಟ್ತರ್ಕ ೧ : ಮಾಚಲದೇವಿಯರುಂ ಷಡ್‌ದರ್ಶನಸರಸಿರುಹ ನಿಕರಕ್ಕಾದಿತ್ಯನೆನಿಸಿದುದಯಾದಿತ್ಯನುಂ ತಂತಮ್ಮ ದೇವತಾರ್ಚನೆಯ ತದನಂತರ ದೊಳ್ಮಾಹೇಶ್ವರನ ಜನಪರಿವ್ರಿತರಾಗಿ ಕುಳ್ಳಿರ್ದ್ದು (ಸೌಇಇ. XX, ೪೯-೪೧ ; 1076 ?) ; ಇಂತು ಷಡ್ದರ್ಶನಂ ಕೀಳಾದುವು ಮೃಡದರ್ಶನಂ ಮೇಲಾದುದು (ಬಸರ. ೮-೬೫). [ಸಂ.]

**ಷಡ್ದಶನ** (ನಾ). ಆರುಹಲ್ಲುಗಳಿರುವ ಎತ್ತು : "ಷಡ್ದಶನಮೆನಲಱುಹಲ್ಲಿನ ನಡ್ಡಮಕ್ಕುಂ" (ಮಂಗರಾ. ೫೩-೨). [ಸಂ.]

**ಷಡ್ದ್ರವ್ಯ** (ನಾ). ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲಎಂಬ ಆರು ದ್ರವ್ಯಗಳು : ಸಮನಿಸಿ ಜೀವಂ ತಾಮವು ಸಮಂತು ಷಡ್ದ್ರವ್ಯಮೆನಿಕುಂ (ಚಂದ್ರಪ್ರ. ೧೭-೨೦); ನೆರೆದುದು ಷಡ್ದ್ರವ್ಯನಿಯತಭವನಂ ಭುವನಂ (ಧರ್ಮನಾ. ೨-೪). [ಸಂ.]

**ಷಡ್ಧಾತು** (ನಾ). ಶರೀರದಲ್ಲಿರುವ ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ ಮತ್ತು ಮಜ್ಜೆ ಎಂಬ ಆರು ಮೂಲಧಾತುಗಳು : ಷಡ್ಧಾತುವಿನಲ್ಲಿ ಷಡಕ್ಷರರೂಪಿಂದ ಷಡ್ಲಿಂಗ ಸ್ಥಾಪ್ಯವಾಗಿಹವು (ಚನ್ನವ.ಕ. ೧೭೧-೩೫೮) ; ಅಷ್ಟಮದಂಗಳು ಅರಿಷಡ್ವರ್ಗಂಗಳು ಷಡೂರ್ಮಿಗಳು ಷಡ್ಭಾವವಿಕಾರಂಗಳು ಷಟ್ಕರ್ಮಂಗಳು ಷಡ್ಧಾತುಗಳು . . . ಇಂತಿವೆ ಆದಿಯಾಗಿ ತೋಱುವ ತೋಱಿಕೆಯೆ ನಾನಲ್ಲ ಎನ್ನವೇ ಅಲ್ಲ (ಮಹಾದೇ. ಬ. ೧೦೧-೨೩೫). [ಸಂ.]

**ಷಡ್ಬಲ** (ನಾ). ೧. ರಾಜನ ಬಳಿ ಇರಬೇಕಾದ, ವಂಶಪರಂಪರೆಯಿಂದ ಬರುವ ಮೂಲಸೈನ್ಯ, ಸೇವಕವರ್ಗ, ಮಿತ್ರರಾಜರ ಸೇನೆ, ವ್ಯಾಪಾರಸ್ಥರ ಸಂಘಗಳ ಬಲ, ಸೆರೆಹಿಡಿಯಲ್ಪಟ್ಟ ಶತ್ರುಸೈನ್ಯ ಮತ್ತು ವನಚರರ ಸೈನ್ಯ ಎಂಬ ಆರು ಬಗೆಯ ಸೈನ್ಯಗಳು : ಸಾಧಿತಶತ್ರುಷಡ್ಬಲರನುಕ್ರಮದಿಂ ಚರರಂ ದ್ವಿಷನ್ನೃಪಾಷ್ಟಾದಶತೀರ್ಥದೊಳ್ನಡೆಯಿಸಲ್ಕಱಿವರ್ (ಶಾಂತಿಪು. ೨-೪೨) ; ಪೃಥ್ವೀಪಾಲ ಭೂಪಾಲಂ . . . ಷಡ್ಬಲಬಲಿಷ್ಠನುಂ ದುರ್ಗಪಂಚಕಸಮಗ್ರನುಂ . . . ಆಗಿರ್ಪಂ (ಚಂದ್ರಪ್ರ. ೯-೧೦೭ ವ). ೨. [ಜ್ಯೋತಿ] "ಸ್ಥಾನ ಚೇಷ್ಟಾ, ನಿಸರ್ಗ ಕಾಲ ದಿಕ್ ದೃಷ್ಟಿ ಎಂಬ ಗ್ರಹಗಳ ಆರು ವಿಧವಾದ ಬಲ" (ಜಾತಕ. ಪರಿ. ೩೯೧). [ಸಂ.]

**ಷಡ್ಬಿಂದು** (ನಾ). ಒಂದು ಬಗೆಯ ಹುಳು ; ನೆಲಗಿರುಬ : ಷಡ್ಬಿಂದುಹುಟು ವಿಷಕ್ಕೆ-ಘೃತಮಂ ಪಾಲಂ ಕುಡಿಸಲ್ಕತಿಶ(ಭ)ಯಷಡ್ಬಿಂದುಕೀಟಕಂಗಳ ವಿಷಮಂ ಕ್ಷಿತಿಯೊಳಮಾಗಳೆ ಕಿಡಿಸುಗುಂ (ಖಮದ. ೧೩-೧೧೩) ; ಷಡ್ಬಿಂದು ಎಂಬ ಹುಳು ಕಚ್ಚಿದರೆ ಎಕ್ಕೆಯ ಹಾಲನು ಕಚ್ಚಿದ ಗಾಯಕ್ಕೆ ಇಕ್ಕಿಸುವುದು. ಷಡ್ಬಿಂದು ಎಂದರೆ ನೆಲಗಿರುಬ ಎಂಬರು (ವೃದ್ಧಸಾ. II, ೨೧೩). [ಸಂ.]

**ಷಡ್ಭಾಗ** (ನಾ). (ರಾಜನಿಗೆ ಕೊಡುತ್ತಿದ್ದ ಧಾನ್ಯದ ಉತ್ಪತ್ತಿಯ) ಆರರ ಲ್ಲೊಂದು ಪಾಲು,– ಭಾಗ : ಷಡ್‌ಭಾಗಮಂ ಕೊಂಡು ತಪ್ಪದೆ ಭೂಪರ್ ಪ್ರತಿ ಪಾಳಿಪರ್ ಪ್ರಜೆಗಳಂ (ಆದಿಪು. ೧-೫೧) ; ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದನಿತಿಲ್ಲ (ಬಸವ. ೩೮೫). [ಸಂ.]

**ಷಡ್ಭಾವವಿಕಾರ** (ನಾ). ಹುಟ್ಟುವುದು, ಇರುವುದು, ಬೆಳೆಯುವುದು, ರೂಪಾಂತರ ಹೊಂದುವುದು, ಸೊರಗುವುದು ಮತ್ತು ಸಾಯುವುದು – ಹೀಗೆ ದೇಹಕ್ಕೆ ಇರುವ ಆರು ಬಗೆಯ ಬದಲಾವಣೆಗಳು : ಷಡೂರ್ಮಿಗಳು ಷಡ್ಭಾವವಿಕಾರಂಗಳು . . . ಇಂತಿವಾದಿಯಾಗಿ ತೋಱುವ ತೋಱಿಕೆಯೆ ನಾನಲ್ಲ

ಎನ್ನವೇ ಅಲ್ಲ (ಮಹಾದೇ.ಬ. ೧೧೧-೨೩೫) ; ಜಾಯತೆ ಅಸ್ತಿತೆ ವಿಪರಿಣತೆ ವಿವರ್ಧತೆ ಅಪಕ್ಷೀಯತೆ ವಿವಶ್ಯತೆ ಎಂಬ ಷಡ್ಭಾವವಿಕಾರಮುಳ್ಳಾತನೆನಿಸಿ (ವಿವೇಕ. ೨೫೭). **[ಸಂ.]**

**ಷಡ್ಭಾಷೆ** (ನಾ). ಮಹಾರಾಷ್ಟ್ರೀ, ಮಾಗಧಿ, ಶೌರಸೇನೀ, ಪೈಶಾಚೀ, ಚೂಲಿಕಾ ಪೈಶಾಚೀ ಮತ್ತು ಅಪಭ್ರಂಶ ಎಂಬ ಆರು ಭಾಷೆಗಳು : (೬). 'ಪ್ರಾಕೃತ' ಪರಾ. **[ಸಂ. ಷಡ್ಭಾಷಾ]**

**ಷಡ್ಭ್ರಮೆ** (ನಾ). = ಷಡುಭ್ರಮೆ : ಅರಿಷಡ್ವರ್ಗಂಗಳು ಷಡೂರ್ಮಿಗಳು ಷಡ್ಭ್ರಮೆಗಳು . . . ಅಂತಃಕರಣಂಗಳು ಇಂತಿವಾದಿಯಾಗಿ ತೋಱುವ ತೋಱಿಕೆಯೇನೂ ನಾನಲ್ಲ (ಮಹಾದೇ. ಕ. ೧೮೫-೩೮೧) ; ಜಾತಿವರ್ಣಾಶ್ರಮಸಮೇತ ಕುಲಗೋತ್ರನಾಮಾತಿಶಯಮೆಂಬ ಷಡ್ಭ್ರಮೆಯಿಂತಿವಂ ಪ್ರೀತಿಯಿಂ ಜೀವ ಮುಯ್ಯಾತು ಬೆಂಬಿಡನು (ಮನೋವಿ. ೫-೩೦) . **[ಸಂ. ಷಡ್ಭ್ರಮ]**

**ಷಡ್ಯಂತ್ರ** (ನಾ). ಒಳಸಂಚು ; ಗುಪ್ತಕಾರಸ್ಥಾನ : ಅವಳನ್ನು ಮೋಸಗೊಳಿಸಲು ಷಡ್‌ಯಂತ್ರವನ್ನು ಹುಡುಕುತ್ತಿದ್ದಾರೆ (ಕೊತಕಾ. ೩೫) ; ಮನುಷ್ಯನ ಸರ್ವಸ್ವವನ್ನೂ ಕಳೆದುಕೊಳ್ಳುವ ಈ ಷಡ್ಯಂತ್ರ ಮಾಡಿದವರಿಗೆ ದುಃಖದ ನಿಜವಾದ ಅನುಭವವಿಲ್ಲ (ಶೇಪ್ರಶ್ನ. ೨೮೧). **[ಸಂ.?/ ಹಿಂ. ಷಡ್ಯಂತ್ರ್]**

**ಷಡ್ರತ್ನಿ** (ನಾ). ಆರು ಮೊಳ : ಅಲ್ಲಿಯ ನಿಳಿಂಪರೆಲ್ಲಂ ಷಡ್ರತ್ನಿಪ್ರಮಾಣದೇಹರುಂ . . . ಅಪ್ಪರ್ (ಸುಕುಮಾ. ೧೧-೭೨ ವ). **[ಸಂ.]**

**ಷಡ್ರಸ** (ನಾ). ೧. = ಷಡುರಸ ೧ : ಷಡ್ರಸಗಳನ್ನು ಸೇರಿಸಿ ನಳಪಾಕ ಭೀಮಪಾಕಗಳನ್ನು ಇಳಿಸುವವರೇ ಪಾಕಕಲಾನಿಪುಣರು (ಜೀವಾತ್ಮ. ೧೭೨). ೨. = ಷಡುರಸ ೨ : ನೃಪಂ . . . ಷಡ್ರಸಾದಿಗಳನಾರೋಗಿಸಿ ವಿಮಳಹಂಸತೂಲದೊಳ್ಪವಡಿಸಿದನು (ಜೈಮಿಭಾ. ೨-೭೪). **[ಸಂ.]**

**ಷಡ್ರುಚಿ** (ನಾ). ೧. = ಷಡುರಸ ೧ : ನಾಲಿಗೆಗೆ ವಿಷಯ ರಸ-ಉದಕದಲ್ಲಿ ಕೂಡಿಕೊಂಡು ಷಡ್‌ರುಚಿಗಳ ಗುರುತಿಸುವುದು (ಚೆನ್ನಸಾ. ೧೩೦). ೨. = ಷಡುರಸ ೨: ಪೂಜಾಫಲದಿಂ ಕನ್ನಯ್ಯನ ಮಾಂಸವೆಲ್ಲ ಪರಮಷಡ್ರುಚಿಯಾಯಿತ್ತಯ್ಯ ನಿನ್ನ ರಸೆಗೆ (ಸಿದ್ಧವ. ೧೦೯-೩೩೩). **[ಸಂ.]**

**ಷಡ್ಲಿಂಗ** (ನಾ). = ಷಡುಲಿಂಗ : ಷಡಾಧಾರಂಗಳಲ್ಲಿ ಷಡಕ್ಷರರೂಪದಿಂದ ಷಡ್ಲಿಂಗಸ್ಥಾಪ್ಯವಾಗಿಹವು (ಚೆನ್ನವ. ಕ. ೧೬೦-೩೫೮); ಷಡ್ಲಿಂಗಾವರಣ ಸಚ್ಚಿದಾಕಾರ . . . ಜಯ ಜಯ ಕೃಪಾರತ್ನಾಕರ (ಏಕೋಪು. ೧-೧). **[ಸಂ.]**

**ಷಡ್ವದನ** (ನಾ). ೧. ಆರುಮುಖಗಳು : ಮದನಾರಿಯ ಷಡ್ವದನಗಳಿವು (ದೀಕ್ಷಾಬೋ. ೭೧-೫೫). ೨. = ಷಡಾನನ ೨ : ಪಠನಾಗಾರಕ್ಕೆಯ್ದಿ ಷಡ್ವದನನಂ ಗದ್ದುಗೆಯೊಳಿರಿಸಿ . . . ಓಂಕಾರಮಂ ಬರೆಯಲೆನ್ನ ಕೈವಿಡಿದು . . . ಹೊಡೆದನಯ್ಯ (ಭಾವಚಿಂ. ೧-೩೮) ; ಷಡ್ವದನನಳವಿಗ್ಗೆತಂದು ಬಿಲ್ಲೊಳ್ನೆಯನುಚಿ ನೇವರಿಸಿ (ಚೆಬಪು. ೪೦-೧೩). **[ಸಂ.]**

**ಷಡ್ವರ್ಗ** (ನಾ). ೧. = ಷಡರಿ : ಪಂಚೇಂದ್ರಿಯ ಷಡ್ವರ್ಗ ಸಪ್ತಧಾತು ಅಷ್ಟಮದಂಗಳ ತಡೆಯಬಲ್ಲಡೆ ಕೂಡಲಸಂಗಯ್ಯನಲ್ಲಿ ಅದೆ ಅಚ್ಚಶೀಲ (ಚೆನ್ನವ. ಕ. ೫೩೯-೧೧೭೮). ೨. [ಜ್ಯೋತಿ] ಲಗ್ನ, ಹೋರೆ, ದ್ರೇಕ್ಕಾಣ, ನವಾಂಶ, ದ್ವಾದಶಾಂಶ ಮತ್ತು ತ್ರಿಂಶಾಂಶ ಎಂಬ ಆರು ವಿಧವಾದ ವರ್ಗ : ಭವನಂ ದ್ವಾದಶಭಾಗಂ ನವಾಂಶಕಂ ತ್ರಿಂಶದಂಶ ಹೋರಾ ದ್ರೇಕ್ಕಾಣವೆನಿಪ್ಪಿನಿತುಂ ಷಡ್ವರ್ಗವೆಂಬ ಪೆಸರಿಂ ಪ್ರವರ್ತಿಕುಂ (ಜಾತತಿ. ೧-೪೫). **[ಸಂ.]**

**ಷಡ್ವರ್ಣ** (ನಾ). ೧. = ಷಡುವರ್ಣ : ಶ್ವೇತಾದಿ ಷಡ್ವರ್ಣದ್ರವ್ಯವನೊಲವಿನಿಂದಲರ್ಪಿಸಿ (ಚೆಬಪು. ೭೧-೭೦). ೨. ಆರು ಅಕ್ಷರಗಳು : ರುದ್ರತ್ವಮಂ ತಾಂ ಪೊರೆದತ್ತೀ ಮಂತ್ರ ಕೋಟಿಸ್ಫುಟಮಕುಟಮಹಾರತ್ನಷಡ್ವರ್ಣಮಂತ್ರಂ (ರಾಜಶೇ. ೪-೮೫); ಮಕಾರದಿಂ ಬಕಾರಾದಿ ಷಡ್ವರ್ಣಂಗಳು . . . ಉದಿಸಿದವು (ಉದ್ಧವಾ. ೭-೨). **[ಸಂ.]**

**ಷಡ್ವಿಧ** (ನಾ). ಆರು ಬಗೆ, – ಪ್ರಕಾರ : ಷಡ್ವಿಧ ಲಿಂಗಾಂಗದ ಮೂಲವನಱಿದು ಷಡ್ವಿಧ ಅರ್ಪಿತಾವಧಾನವನಾಚರಿಸಿ . . . ನಡೆನುಡಿಸಂಪನ್ನರಾದವರೇ ಶಿವಭಕ್ತರು ಕಾಣಾ (ಮಡಿಮಾ. ೧೧-೧೨) ; ಅನಶನಾವಮೋದರ್ಯಾದಿ ಷಡ್ವಿಧಬಾಹ್ಯತಪಮುಂ . . . ತನ್ನೊಳುಂ ಸಚ್ಛನ್ನಮಾಗಿ (ಪುಷ್ಪಪು. ೧೪-೧೭ ವ). **[ಸಂ.]**

**ಷಡ್ವಿಧಭಕ್ತಿ** (ನಾ). ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ ಮತ್ತು ಸಮರಸಗಳೆಂಬ ಆರು ವಿಧವಾದ ಭಕ್ತಿ : ಆ ಅಂಗಕ್ಕೆ ಕಲೆಗಳನೆ ಷಡ್ವಿಧ ಶಕ್ತಿಗಳೆಂದೆನಿಸಿ ಆ ಶಕ್ತಿಗಳಿಗೆ ಷಡ್ವಿಧಭಕ್ತಿಯನಳವಡಿಸಿ (ಮಹಾದೇ. ಬ. ೧೧೩-೨೩೫) ; ಶ್ರದ್ಧಾಭಕ್ತಿ ನಿಷ್ಠಾಭಕ್ತಿ ಅವಧಾನಭಕ್ತಿ ಅನುಭವಭಕ್ತಿ ಆನಂದಭಕ್ತಿ ಸಮರಸಭಕ್ತಿಯೆಂಬ ಷಡ್ವಿಧಭಕ್ತಿಗಳಂ ಪರಿವಿಡಿದಪ್ಪುದು (ವಿವೇಕ. ೧೧೧). **[ಸಂ.]**

**ಷಡ್ವಿಷಯ** (ನಾ). ರೂಪ, ಶಬ್ದ, ರಸ, ಗಂಧ, ಸ್ಪರ್ಶ ಮತ್ತು ಜ್ಞಾನ ಎಂಬ ಆರು ವಿಷಯಗಳು : ಷಡ್ವಿಷಯವೇ ಷಟ್ಪದಾರ್ಥಂಗಳು (ಚೆಬಪು. ೬೧-೫೬). **[ಸಂ.]**

**ಷಣ್ಮತ** (ನಾ). ೧. ಶೈವ, ವೈಷ್ಣವ, ಶಾಕ್ತ, ಸೌರ, ವೈನಾಯಕ ಮತ್ತು ಸ್ಕಾಂದ ಎಂಬ ಆರು ಭಕ್ತಿಮಾರ್ಗದ ಧರ್ಮಗಳು : ಷಣ್ಮತದಿಂದ ಬಳಲುವ ಕಥೆಯಿದಲ್ಲವುಯಿಂದಿದುವೆ ನಿಜಮುಕ್ತಿ ತಾನಹ ಮುಕ್ತಿ ಮಹಮುಕ್ತಿ (ಜ್ಞಾನಸಿಂ. ೧-೨೪); ಶೈವ, ವೈಷ್ಣವ, ಶಾಕ್ತ, ಸೌರ, ಗಾಣಾಪತ್ಯ, ಸ್ಕಾಂದಗಳೆಂಬ ಷಣ್ಮತಗಳು ಪೂಜ್ಯದೇವತಾ ವಿಭಾಗದಿಂದ ವಿಭಕ್ತಗಳಾಗಿರುವುವು (ಹಿಂದಸಾ. ೯). ೨. ಆರು ಮತಗಳ ಅನುಯಾಯಿಗಳು : ಷಣ್ಮತರಿರುವ ಮ್ಯಾರೆಯ ಮಿೀರದಂತಾಗಮರು ಧರ್ಮಜರ ತೆರನನರಿದಾರ್ಕೆದು ದುಷ್ಕರ ಮುರಿದು ಜನರಕ್ಷಣೆಯಗರೆಯದೆ ತೆರಿಗೆ ದಂಡಗಳಾಸೆಗ್ಯೆವರೆ (ಬಿಜ್ಜಪು. ೭೦-೩೨). **[ಸಂ.]**

**ಷಣ್ಮುಖ** (ನಾ). ೧. ಆರುಮುಖಗಳು : ಆತ್ಮಾದಿ ಷಡಂಗಗಳೂ ಷಣ್ಮುಖಗಳೂ ಷಟ್ಕರಗಳೂ ಷಟ್‌ಪದಾರ್ಥಗಳೂ ಆಗಿ ರೂಪುಗೊಳ್ಳುವವು (ಶಿವಾಸೂ. VI. ಪ್ರಸ್ತಾವನ). ೨. ಆರು ಮುಖಗಳುಳ್ಳುದು : ಆ ವರೆಗೂ ಮೂಕವಾಗಿ ನಡೆದ ಆಟ . . . ಒಮ್ಮೆಲೇ ಚತುರ್ಮುಖವಾಗಿ, ಷಣ್ಮುಖವಾಗಿ ಕಲೆಯಹತ್ತಿತು (ಮೂರುದಾ. ೮). ೩. ಆರು ಮುಖಗಳುಳ್ಳವನು ; ಕುಮಾರಸ್ವಾಮಿ : ಷಣ್ಮುಖ ನೋಡುವಡೆ ತಾರಕಧ್ವಂಸಿ (ಸಿದ್ಧವ.ಕ. ೫೭-೧೮೨) ; ಷಣ್ಮುಖನಿಂದೆ ತಾರಕಂ ಮಡಿದ ಸಮನಂತರದೊಳು ತಲೆದಡಹಿದಳ್ ಧರಾವನಿತೆ (ಚೆಬಪು. ೪೧-೨). ೪. ಅಗ್ನಿ : (೬). ೫. ಒಂದು ಬಗೆಯ ಹುಣ್ಣು (?): ಅಂಬುಳುವಾದಡೆ ಷಣ್ಮುಖನೆಂಬರು ಸೀವಳಿಗೆಯಾಗೆ ಸಲೆ ಮಾರಿಯ ಹುಣ್ಣೆಂಬರು ತುಱಿಯಾದಡೆ ಫಣೆಯೆಂಬರ್ ಮತಿಹೀನಜನರದೇನಂ ಮಾಡರ್ (ಸಮಪ. ೯-೨೭). **[ಸಂ.]**

**ಷಣ್ಮುಖಪ್ರಿಯ** (ನಾ). [ಸಂಗೀತ] ಒಂದು ರಾಗದ ಹೆಸರು : ಷಣ್ಮುಖಪ್ರಿಯ-೫೬ನೇ ಮೇಳಕರ್ತರಾಗ. ಪ್ರಾಚೀನನಾಮ 'ಚಾಮರ'. ಪ್ರಸಿದ್ಧರಾಗ. ಎಲ್ಲಾ ವೇಳೆಯಲ್ಲೂ ಹಾಡಬಹುದು (ಸಂಗೀಚಂ. ೧೪೩). **[ಸಂ.]**

**ಷತ್ವ** (ನಾ). 'ಷ' ಎಂಬ ಅಕ್ಷರ : ಷತ್ವಕ್ಕೆ ಮತ್ವಂ – ಉಷ್ಮನ್ – ಉಮ್ಮೆ (ಶಮದ. ೨೬೫ ಪ್ರಯೋ). **[ಸಂ.]**

**ಷಬಕೂನು** (ನಾ). ರಾತ್ರಿಕಾಲದಲ್ಲಿ ಮಾಡುವ ದಾಳಿ,– ಮುತ್ತಿಗೆ : ಹೈದರಲ್ಲಿಖಾನಬಹದರವರು . . . ಗೋಪಾಲಹರಿರಾಸ್ತೆದವರ ದಂಡಿನ ಮೇಲೆ ಷಬಕೂನು ಮಾಡಿ ಮರುದಿನ ವಿಭಾಮು ಕೊಡಲಾಗಿ (ಹೈದರ. ೪೩).

[ ← ಪಾರ. ಮರಾ. ಶಬ್‌ಖೂನ್]

**ಷರಟು, ಶರಟು, ಶರ್ಟು** (ನಾ). ಅಂಗಿ : ಒಂದು ದಟ್ಟಿ ಪಂಚೆ - ಖಾದಿಯದು. ಮೇಲಕ್ಕೊಂದು ಅರೆತೋಳಿನ ಷರಟು (ಆಲಹೂ. ೧೧೭) ; ಆಗಸನಿಂದ ಬಂದ ಚೆಡ್ಡಿ ಷರಟಿನ ಅಲಂಕಾರ (ಮಾರ್ಗದ. ೨೪). **ಶರಟು** : ಈ ಕೋಟು, ಈ ಶರಟು, ಈ ಶರಾಯಿ . . . ನಿನ್ನದೇ ತೆಗೆದುಕೋ (ನವ್ಯಧ್ವ. ೮೭). **ಶರ್ಟು** : ಕೇಶವನು ಬಕ್ಕತಲೆ ಮಾಡಿಕೊಂಡು ಬರಿ ಶರ್ಟಿನ ಮೇಲೆ ನಿಂತಿದ್ದ ಹಾಗೆ ಧೋತರವನ್ನು ಮೇಲೇರಿಸಿದ (ಸಮಜೀ. ೪೮೩) ; ಇಸ್ತ್ರಿ ಮಾಡಿರದಿದ್ದರೂ ಸ್ವಚ್ಛವಾದ ಅರ್ಧತೋಳಿನ ಶರ್ಟು (ಮೂರುದಾ. ೨೪೩).

[← ಇಂ. Shirt]

**ಷರತ್ತು** 'ಶರತ್ತು' ನೋ.

**ಷರಬತ್ತು** 'ಶರಬತ್ತು' ನೋ.

**ಷರಾ$_1$** 'ಶರಾ' ನೋ.

**ಷರಾ$_2$** (ನಾ). ಮುಹಮ್ಮದೀಯರ ಮದುವೆಯಲ್ಲಿ ಓದುವ ಇಸ್ಲಾಂಧರ್ಮಶಾಸ್ತ್ರದ ವಾಕ್ಯ : ನಿನ್ನನ್ನು ಮಸಜಿದಿಗೆ ಕರೆದುಕೊಂಡು ಹೋಗಿ ಷರಾ (ಮದುವೆಯಾಗುವ ಮಂತ್ರ)ವನ್ನು ಓದಿಸುವೆನು (ಕೋಹಿನೂ. ೬೫).

[← ಅರ. ಹಿಂ. ಶರ್ಅ; ಮರಾ. ಶರಾ]

**ಷರಾಕಟ್ಟು** (ಕ್ರಿ). (ಹಣ ಕಟ್ಟಿದುದಕ್ಕೆ) ದಾಖಲೆ ಮಾಡು ; ಟಿಪ್ಪಣಿ ಬರೆ : ಅಸಲಿನಲ್ಲಿ ಸ್ವಲ್ಪ ಕೊಟ್ಟು ಪತ್ರಕ್ಕೆ ಷರಾಕಟ್ಟದಿದ್ದ್ರೆ ಅವರಂತೂ . . . ಜಮೀನು ಹರಾಜು ಮಾಡುವುದೇ ಸರಿ (ತುಂಬಿಕೊ. ೫೩). [ಷರಾ<sub></sub>(< ಶರಾ) + ಕಟ್ಟು]

**ಷರಾಬು** 'ಶರಾಬು' ನೋ.

**ಷರಾಯಿ** 'ಶರಾಯಿ' ನೋ.

**ಷರಾರತಿ** (ಗು). ಮಾತ್ಸರ್ಯವುಳ್ಳ ; ಮತ್ಸರದಿಂದ ಕೂಡಿದ : ದಿಂಡಿಗಲ್ಲು ಕಡೆ ಷರಾರತಿ ಪಾಳ್ಳೇಗಾರರ ತಂಬೀ ಬಗ್ಗೆ ಹೈದರಲ್ಲಿಖಾನಬಹದರವರಿಗೆ ಮೊಕರೂರು ಮಾಡಿ (ಹೈದರ. ೩೪). [← ಅರ. ಹಿಂ. ಮರಾ. ಶರಾರತೀ]

**ಷರಿಯತ್ತು** (ನಾ). ಮುಸಲ್ಮಾನರ ಧರ್ಮಶಾಸ್ತ್ರ : ಈ ಎರಡನೆಯ ಸೂಕ್ತಿಯಲ್ಲಿ ಸಂಪೂರ್ಣ ಕುರಾನ್, ಷರಿಯತ್ತಿನಲ್ಲಿ ಅರ್ಧ, ತರೀಖತ್‌ನಲ್ಲಿ ಕಾಲು ಭಾಗ – ಇಷ್ಟೂ ಅಡಗಿದೆ (ನಗಹೂ. ೬೭). [← ಅರ. ಹಿಂ. ಶರೀಅತ್ ; ಮರಾ. ಶರೀಯತ್]

**ಷರೀಕು** 'ಶರೀಕು' ನೋ.

**ಷರ್ತಿ** (ನಾ). "ಷರ್ತಿ ಎಂದರೆ ತಾಲ್ಲೂಕಿನ ವರಮಾನವನ್ನು ಗುತ್ತಿಗೆಗೆ ಕೊಡುವ ಏರ್ಪಾಡು" (ಮಹಾವಂ. ೭೮). [← ಅರ. ಹಿಂ. ಶರ್ತೀ]

**ಷವರ್ಣ** (ನಾ). 'ಷ' ಎಂಬ ಅಕ್ಷರ. [ಸಂ.]

**ಷಷ್ಟಿ** (ನಾ). ಒಂದು ಸಂಖ್ಯೆ ; ಅರುವತ್ತು : ತ್ರಿಶತಸಂಯುತಷಷ್ಟಿರುಜೆಗಳ ವಶದಿ ನೊಂದುಮ್ಮಳಿಸುವದಜಿಂ... ಉತ್ತಮತಪಸಿಗೆನ್ನೊಡಲ ಅಶನವಾಗಿ ಕೃತಾರ್ಥನಪ್ಪೆನು (ಬಸಪು. ೨೪-೧೪). [ಸಂ.]

**ಷಷ್ಟಿಕ** (ನಾ). ಅರುವತ್ತುದಿನಗಳಲ್ಲಿ ಫಸಲಿಗೆ ಬರುವ ಒಂದು ಬಗೆಯ ಭತ್ತ : ಚರಕನ ಕಾಲದಲ್ಲಿ . . . ಷಷ್ಟಿಕವೆಂಬ ಜಾತಿ ಬೇಸಗೆಯ ೬೦ ದಿನಗಳಲ್ಲಿ ತೆನೆ ಬಿಡುವುದೆಂದೂ ತಿಳಿಯಲಾಗಿತ್ತು (ಶಾಸಗ. ೧೩). [ಸಂ. ಷಷ್ಟಿಕಾ]

**ಷಷ್ಟಿಕಾವ್ರೀಹಿ** (ನಾ). = ಷಷ್ಟಿಕ : ಕಳಮಷಷ್ಟಿಕಾವ್ರೀಹಿ ಯವಯಾವನಾಳ . . . ಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ (ಆದಿಪು. ೬-೭೨ ವ). [ಸಂ.]

**ಷಷ್ಟಿಕೆ** (ನಾ). = ಷಷ್ಟಿಕ : "ಯವ್ಯಂ, ಯವಕ್ಯಂ, ಷಷ್ಟಿಕ್ಯಂ . . . ಷಷ್ಟಿಕೆಗಳು ಬೆಳೆಯುವ ಕ್ಷೇತ್ರವಾಗಿದೆಯೋ ಅವರ ಪೆಸರುಗಳು" (ಸಿದ್ಧಾಂತಿ. ೨೭೫). [ಸಂ. ಷಷ್ಟಿಕಾ]

**ಷಷ್ಟಿಕ್ಯ** (ನಾ). ಷಷ್ಟಿಕಧಾನ್ಯವನ್ನು ಬಿತ್ತಿದ ಭೂಮಿ : "ಯವ್ಯಂ, ಯವಕ್ಯಂ, ಷಷ್ಟಿಕ್ಯಂ . . . ಷಷ್ಟಿಕೆಗಳು ಬೆಳೆಯುವ ಕ್ಷೇತ್ರವಾಗಿದೆಯೋ ಅವರ ಪೆಸರುಗಳು" (ಸಿದ್ಧಾಂತಿ. ೨೭೫). [ಸಂ.]

**ಷಷ್ಟಿಪೂರ್ತಿ** (ನಾ). ಅರವತ್ತುವರ್ಷಗಳು ತುಂಬಿದಾಗ ನೆರವೇರಿಸುವ ಸಮಾರಂಭ ; ಷಷ್ಟ್ಯಬ್ದ ಸಮಾರಂಭ : ಅವರ ಷಷ್ಟಿಪೂರ್ತಿಯು ವಿಜೃಂಭಣೆಯಿಂದ ಜರುಗಿತು (ರೂಢಿ). [ಸಂ.]

**ಷಷ್ಟಿಹಾಯನ** (ನಾ). ಅರವತ್ತುವರ್ಷದ ಆನೆ : ಬಳಿಸೂನು . . . ಬಳಗರ್ವದೆ ಷಷ್ಟಿಹಾಯನಂ ತುಂಗಗಜಂ ಕಳಭಕ್ಕಿದಿರ್ಚಿದಂತಿರೆ ಮುಳಿದು ಕುಮಾರಂಗಿದಿರ್ಚಿ ನಿಂದವಸರದೊಳ್ (ಜಗವಿ. ೧೭-೧೩೦). [ಸಂ.]

**ಷಷ್ಟ್ಯಬ್ದ** (ನಾ). = ಷಷ್ಟಿಪೂರ್ತಿ : ಅವರ ಷಷ್ಟ್ಯಬ್ದದಂದು ಬಡವರಿಗೆ ಅನ್ನದಾನ ಮಾಡಿದರು (ರೂಢಿ). [ಸಂ.]

**ಷಷ್ಠ** (ಗು). ೧. ಆರನೆಯ : 'ಷಷ್ಠಭಾಗ' ಪರಾ. (ನಾ). ೨. ಆರನೆಯದು. [ಸಂ.]

**ಷಷ್ಠಭಾಗ** (ನಾ). (ಭೂಮಿಯ ಹುಟ್ಟುವಳಿಯಲ್ಲಿ ಅರಸನಿಗೆ ಸಲ್ಲಿಸಬೇಕಾದ) ಆರನೆಯ ಒಂದು ಭಾಗ ; ಷಡ್ಭಾಗ : ಜನಪರ್ಗೆ ನಿಖಿಲವರ್ಣದ ಜನಗಳ್ ಕುಡುತಿರ್ಪ ಷಷ್ಠಭಾಗವಮದಳಿಗುಂ (ಶಾಕುಂತ. ೨೭-೪೮); ಷಷ್ಠಭಾಗದೊಳೆ ಬಾಳ್ಪರಸಂಗಮಿದಲ್ತೆ ಬೇಹರಂ (ಶಾಕುಂತ. ೬೧-೧೦೪). [ಸಂ.]

**ಷಷ್ಠಾಷ್ಟಕ** (ನಾ). ೧. [ಜ್ಯೋತಿ] ವಧು ಮತ್ತು ವರರ ರಾಶಿಗಳು ಪರಸ್ಪರ ಆರು ಮತ್ತು ಎಂಟನೆಯ ಮನೆಗಳಲ್ಲಿರುವುದು ; ವಿವಾಹಕ್ಕೆ ಯೋಗ್ಯವಲ್ಲದ ಸಂಬಂಧ. ೨. (ಆಲಂ) ಪರಸ್ಪರ ವಿರೋಧ,– ವೈಮನಸ್ಯ : ಮದುವೆ ಯಾದಾಗಿನಿಂದಲೂ ಗಂಡನಿಗೂ ಹೆಂಡತಿಗೂ ಷಷ್ಠಾಷ್ಟಕವಾಗಿ ಕಡೆಗೆ ಬೇರೆಯಾಗಿ ಹೋದರು (ರೂಢಿ). [ಸಂ.]

**ಷಷ್ಠಿ** (ನಾ). ೧. ಕೃಷ್ಣಪಕ್ಷ ಅಥವಾ ಶುಕ್ಲಪಕ್ಷದ ಆರನೆಯ ದಿನ, – ತಿಥಿ : ಕಾಳದ ಪಂಚಮಿ ಷಷ್ಠಿ ಬಿದಿಗೆಯೆಂಬಿವು ಸಮಸ್ತಸುರಪುರಗೃಹಪ್ರತಿಷ್ಠೆಗೆ ಶುಭದಂ (ಲೋಕೋಪ. ೨-೫೦) ; ಆ ಪಕ್ಷಂಗಳೊಳಗೆ ಅಗ್ನಿಯೇ ದೇವತೆಯಾಗುಳ್ಳ ಪಾಡ್ಯ . . . ಷಣ್ಮುಖನಧಿದೇವತೆಯಾದ ಷಷ್ಠಿ (ವಿವೇಕ. ೨೬೨). ೨. ದುರ್ಗಾದೇವಿಯ ಹೆಸರುಗಳಲ್ಲಿ ಒಂದು. ೩. ಶಕ್ತಿದೇವತೆಗಳಲ್ಲಿ ಒಂದು : ವಿಜಯೆ ಯಮದೂತಿ ಪರಾಜಿತೆ ಮಕರಿ ಜಯೆ ಅಜಿತೆ ಷಷ್ಠಿ ಕಾಳರಕ್ಕಸಿ ಬಂದರು ಸೋಜಿಗದ ಶಕ್ತಿಯರುಗೂಡಿ (ಸಿದ್ಧಪು. ೮-೯೦). ೪. [ವ್ಯಾಕ] ನಾಮವಿಭಕ್ತಿಗಳಲ್ಲಿ ಆರನೆಯದು ; ಸಂಬಂಧವನ್ನು ಸೂಚಿಸುವ ವಿಭಕ್ತಿ : ಪತಿಕುಲ ಜಾತ್ಯವಯವ ವಿಶ್ರುತಲಕ್ಷಣ ಸಂನಿಧಾನ ಸಂಸ್ಪರ್ಶ ಸಮಾಗತ ಸಂಬಂಧದೊಳಂ ತದ್ಗತ ಸಂಬಂಧದೊಳುಮುಂಟು ಷಷ್ಠಿಗೆ ಯೋಗಂ (ಶಮದ. ೧೩೨).

**ಷಷ್ಠೀಹಬ್ಬ** = ಮಾರ್ಗಶಿರಶುದ್ಧಷಷ್ಠಿ ಮತ್ತು ಅಂದು ಆಚರಿಸುವ ಕಾರ್ತಿಕೇಯನ ಪೂಜಾ ಸಮಾರಂಭ ; ಸುಬ್ಬರಾಯಷಷ್ಠಿ : (೩).

[ಸಂ. ಷಷ್ಠೀ]

**ಷಷ್ಠೋಪವಾಸ** (ನಾ). ಆರುದಿನಗಳ ಉಪವಾಸ : ಸಹೇತುಕವನದೊಳ್ ಷಷ್ಠೋಪವಾಸದಿಂ ವೈಶಾಖಶುದ್ಧನವಮಿಯ ಪೂರ್ವಾಹ್ಣದೊಳ್ . . . ದೀಕ್ಷೆಗೊಂಡು (ಚಾವುಂಪು. ೧೦೮); ದುಷ್ಕರಕರ್ಮಾರಿ ಷಷ್ಠೋಪವಾಸದೊಳಿರ್ದು ಸೌಷ್ಠವಮತಿಮಾರ್ಗ ದಿರವ ಪುಟ್ಟಿದ ಜನಕೆಲ್ಲ ತೋಱಲು (ಅನಂಚ. ೧೩-೮೪). [ಸಂ.]

**ಷಷ್ಠೋಪವಾಸಿ** (ನಾ). ಅರುದಿನಗಳವರೆಗೆ ಉಪವಾಸವ್ರತವನ್ನು ಮಾಡುವವನು : ಆ ಮುನೀಶ್ವರಂ ಷಷ್ಠೋಪವಾಸಿ ನಿಯಮನಿಯಮಿತನಾಗಿರ್ಪುದುಂ (ಮಲ್ಲಿಪು. ೧೩-೧೯೧). [ಸಂ. ಷಷ್ಠೋಪವಾಸಿನ್]

**ಷಹ** 'ಶಹ' ನೋ.

**ಷಹಜಾದ** (ನಾ). ರಾಜಕುಮಾರ ; ದೊರೆಯ ಮಗ : ಸುಲ್ತಾನರು ಕ್ಷೇಮ. ಆದರೆ ಷಹಜಾದರನ್ನು ಇಂಗ್ರೇಜಿಗಳಿಗೆ ಒಪ್ಪಿಸುವರಂತೆ (ಅಸ್ಥಾವ. ೨೯).

[ ← ಹಿಂ ಶಹಜಾದಾ; ಮರಾ. ಶಹಾಜಾದ]

**ಷಹರ** 'ಶಹರು' ನೋ.

**ಷಹರು** 'ಶಹರು' ನೋ.

**ಷಹಸಾದೆ** (ನಾ). ದೊರೆಯ ಮಗಳು ; ರಾಜಕುಮಾರಿ : ದಿಲ್ಲೀ ಷಹಸಾದೆಯಿಂದ ರಾಜ್ಯವನ್ನು ಹೊಂದಿದ ಸಾಹುಮಹಾರಾಯನ ದರಬಾರು ಕಟ್ಟಕಡೆಗೆ ಯಾವ ಗತಿಗೆ ಇಳಿಯಿತು ಬಲ್ಲಿರ ? (ಮುಸುಗ. ೪೮). [← ಹಿಂ. ಶಾಹಜಾದೀ; ಮರಾ. ಶಹಾಜಾದೀ]

**ಷಹಾ** 'ಶಹಾ' ನೋ.

**ಷಹೀದ, ಷಹೀದು** (ನಾ). ಧರ್ಮಕ್ಕಾಗಿ (ಅಥವಾ ಯುದ್ಧ ಇತ್ಯಾದಿ ಸಂದರ್ಭಗಳಲ್ಲಿ) ಆತ್ಮಾರ್ಪಣೆ ಮಾಡುವವನು ; ಹುತಾತ್ಮ : ಜ್ಞಾನಿಯ ಲೆಕ್ಕಣಿಕೆಯ ತುದಿಯಲ್ಲಿರುವ ಮಸಿಯ ಹನಿಯು ಧರ್ಮಾರ್ಥವಾಗಿ ಪ್ರಾಣವನ್ನು ಕೊಟ್ಟ ಷಹೀದನ ರಕ್ತಕ್ಕಿಂತ ಪವಿತ್ರವಾದುದು (ಹಮಪ. ೩೮). **ಷಹೀದು** : ನಾವು ಶತ್ರುಗಳಿಗೆ ಬೆನ್ನ ಕೊಟ್ಟು ಬಂದುದು ಅಯುಕ್ತವಾಯಿತು, ಇಲ್ಲ ಅವರಿಗೆ ಹೊಡೆಯಬೇಕು, ಇಲ್ಲ ಷಹೀದು ಆಗಬೇಕು (ಚಿತ್ರಪಾ. ೬೪). [ ← ಅರ. ಪಾರ. ಹಿಂ. ಮರಾ. ಶಹೀದ]

**ಷಹೀದು** 'ಷಹೀದ' ನೋ.

**ಷಾಃಪಸಂದ್, ಷಾಪಸಂದ್** (ನಾ). ಒಂದು ಬಗೆಯ ಕುದುರೆಗಾಡಿ : ಮೈಸೂರಿನಲ್ಲಿ ಆಗಲೂ ಷಾಃಪಸಂದನ್ನು ನೋಡಬಹುದು (ರೂಢಿ). **ಷಾಪಸಂದ್** : ಸೊಗಸುಗಾರರಾದ ಮೈಸೂರಿನವರಿಗೆ 'ಷಾಪಸಂದ್' ಬೇಕು. ಈ ಜಟಕಾವನ್ನು ಷಾಪಸಂದ್ ಆಗಿ ಪರಿವರ್ತಿಸಲು ಸಾಧ್ಯವಿದೆ (ನಾಡಿಗೇ.೪೯). [?]

**ಷಾಗಿರ್ದ್‌ಪೇಷಾ** 'ಷಾಗಿರ್ದಪೇಷ್' ನೋ.

**ಷಾಗಿರ್ದ್‌ಪೇಷಾಕಚೇರಿ** 'ಷಾಗಿರ್ದಪೇಷ್‌ಕಚೇರಿ' ನೋ.

**ಷಾಗಿರ್ದಪೇಷ್, ಷಾಗಿರ್ದ್‌ಪೇಷಾ** (ನಾ). ಕಚೇರಿಯಲ್ಲಿ ಕೆಲಸಮಾಡುವ ನೌಕರ, – ಚಾಕರ : 'ಷಾಗಿರ್ದಪೇಷ್‌ಕಚೇರಿ' ಪರಾ. **ಷಾಗಿರ್ದ್‌ಪೇಷಾ:** 'ಷಾಗಿರ್ದ್‌ಪೇಷಾಕಚೇರಿ' ಪರಾ. [← ಪಾರ. ಮರಾ. ಶಾಗಿರ್ದ್‌ಪೇಶಾ]

**ಷಾಗಿರ್ದಪೇಷ್‌ಕಚೇರಿ, ಷಾಗಿರ್ದ್‌ಪೇಷಾಕಚೇರಿ** (ನಾ). ಅಠಾರಾ ಕಚೇರಿಗಳಲ್ಲಿ ಒಂದು : ವ್ಯಾಸರಾಯರು ಅರಮನೆಗೆ ಸೇರಿದ ಷಾಗಿರ್ದಪೇಷ್‌ಕಚೇರಿಯ ಕೆಲಸವನ್ನೂ, ಸಂದಲ್ ಇಲಾಖೆಯ ಕೆಲಸವನ್ನೂ ಸಹ ನೋಡುತ್ತಿದ್ದರು (ಮಹಾವಂ. II, ೨೮). **ಷಾಗಿರ್ದ್‌ಪೇಷಾಕಚೇರಿ** : ಚೋಪದಾರ, ಮಹಲದಾರ, ನಕೀಬ . . . ಮುಂತಾದವರು ಅಲಾಹಿದ ಷಾಗಿರ್ದ್‌ಪೇಷಾಕಚೇರಿ ದಾಖಲ್ (ಮಹಾವಂ. I, ೨೨೭).

[ಷಾಗಿರ್ದಪೇಷ್ + ಕಚೇರಿ]

**ಷಾಗಿರ್ದ** (ನಾ). ಒಬ್ಬನ ಕೈಕೆಳಗೆ ಕಲಿಯುತ್ತಿರುವವನು ; ಅಭ್ಯಾಸಿ ; ಶಿಷ್ಯ : ಉಸ್ತಾದ್‌ಗೆ ಹೆಸರು ತರೋ ಷಾಗಿರ್ದ ಆಗಬೇಕು (ಭೀಮಕಾ. ೭).

[← ಪಾರ. ಹಿಂ. ಶಾಗಿರ್ದ್; ಮರಾ. ಶಾಗಿರ್ದ, ಶಾಗೀರ್ದ್, ಶಾಗಿರ್ತ್ ]

**ಷಾಜಲು** (ನಾ). (?) : ಸದರಹೂ ನಗದು ಜಿನಸು ಸಂದಿದ್ದಕ್ಕೆ ವಡ್ಡರ ಕಡೆಯಿಂದ ರಶೀತಿ ತೆಗೆದುಕೊಳ್ಳುವುದು. ವಡ್ಡರಿಗೆ ಷಾಜಲು ಕೊಡ ಕೆಲಸವಿಲ್ಲಾ (ಮಹಾವಂ. II, ೭೭).

[?]

**ಷಾಡವ** (ನಾ). [ಸಂಗೀತ]ಆರೋಹಣ ಹಾಗೂ ಅವರೋಹಣಗಳಲ್ಲಿ ಆರು ಸ್ವರಗಳನ್ನು ಹೊಂದಿರುವ ರಾಗ : ಠಕ್ಕೆ ಸ್ಯಂಧವಿ ಪಂಚಮ ಷಾಡವ ದೇವಗುಪ್ತ . . . ಉಪಾಂಗವೆಂಬೆಂಟು ಷಟ್‌ಸ್ವರಜಾತಿಯಿಂದಾದ ರಾಗಂಗಳುಂ ಷಟ್ಸ್ವರಜಾತೀಯಂಗಳು (ವಿವೇಕ. ೧೪೭) ; ಷಾಡವ – ಆರೋಹಣ ಮತ್ತು ಅವರೋಹಣಗಳಲ್ಲಿ ಆರು ಸ್ವರಗಳನ್ನು ಹೊಂದಿರುವ ರಾಗ. ಉದಾ : ಶ್ರೀರಂಜಿನಿ, ಮಲಯಮಾರುತ (ಸಂಗೀಚಂ. ೬೧). [ಸಂ.]

**ಷಾಡ್ಗುಣ್ಯ** (ನಾ). ೧. ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ ಮತ್ತು ತೇಜಸ್ಸು ಎಂಬ ಭಗವಂತನ ಆರು ಗುಣಗಳು : ಶುದ್ಧಸತ್ತ್ವವೆಂಬುದು . . . ಷಾಡ್ಗುಣ್ಯಮಯವು (ಹಿಂದಸಾ. ೨೩೮). ೨. ಸರ್ವಜ್ಞತ್ವ, ನಿತ್ಯತೃಪ್ತತ್ವ, ಅನಾದಿಬೋಧಸಿದ್ಧಿತ್ವ, ಸ್ವತಂತ್ರತ್ವ, ನಿತ್ಯಾಲುಪ್ತಶಕ್ತಿತ್ವ ಮತ್ತು ಅನಂತ ಶಕ್ತಿತ್ವ ಎಂಬ ಪರಮೇಶ್ವರನ ಆರು ಗುಣಗಳು : ಆ ಷಾಡ್ಗುಣ್ಯ ರತ್ನಂಗಳಾ ಭೇದವಿಲ್ಲದೆ ತಡಿಯೊಳೇ ಪಡೆವರು (ವಿಕ್ರಪು. ೫-೮-೧೯). ೩. [ರಾಜನೀ] ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ ಮತ್ತು ಸಮಾಶ್ರಯಗಳೆಂಬ ರಾಜನೀತಿಯ ಆರು ಗುಣಗಳು : ದಮಿತಾರಿಗೆ ಷಾಡ್ಗುಣ್ಯದೊಳ್ ಯಾನಮುಮುಪಾಯಚತುಷ್ಟಯದೊಳ್ ದಂಡಮುಮಲ್ಲದುಳಿದ ಗುಣಪಂಚಕಮು ಮುಪಾಯತ್ರಯಮುಂ ದೊರೆಯಲ್ಲವು (ಶಾಂತಿಪು. ೨-೫೦ ವ) ; ಮುನೀಂದ್ರೋತ್ತಮರ್ ಪೇಳ್ದ ನೀತಿಕ್ರಮದಿಂ ಷಾಡ್ಗುಣ್ಯಮಂ ಯೋಜಿಸುವುದೆ ಸುನಯಂ ಪ್ರಾಪ್ತಕಾಲಾನು ರೂಪಂ (ಪಂಚತಂ. ೨೧೯-೯). [ಸಂ.]

**ಷಾಣ್ಮಾತುರ** (ನಾ). ಆರು ಜನ ತಾಯಂದಿರನ್ನುಳ್ಳವನು ; ಕಾರ್ತಿಕೇಯ ; ಷಣ್ಮುಖ ; ☞ ''ಈತನು ಪಾರ್ವತೀಪುತ್ರನಾದ ಕುಮಾರಸ್ವಾಮಿ. ಈತನು ಹುಟ್ಟಿದ ಕೂಡಲೇ ಕೃತ್ತಿಕಾ ನಕ್ಷತ್ರಾಭಿಮಾನಿದೇವತೆಗಳು ಆರು ಮಂದಿಯೂ ಈತನಿಗೆ ಸ್ತನ್ಯವನ್ನು ಕೊಡುವುದಕ್ಕೆ ಬಂದರು. ಆಗ ಕುಮಾರನು ಆರು ಮುಖಗಳಿಂದ ಕೂಡಿ ಆ ಆರುಮಂದಿಯ ಸ್ತನ್ಯವನ್ನೂ ಪಾನಮಾಡಿ, ಅವರ ಅಭಿಮಾನಪುತ್ರನೆನಿಸಿಕೊಂಡ ಕಾರಣ ಈ ಹೆಸರು ಬಂದಿದೆ : ''ಕಾರ್ತಿಕೇಯಃ . . . ಷಾಣ್ಮಾತುರಃ . . . ಕುಮಾರಸ್ವಾಮಿಯ ಹೆಸರುಗಳು '' (ಸಿದ್ಧಾಂತಿ. ೨೦). [ಸಂ.]

**ಷಾತೂದು** (ನಾ). ಹಿಪ್ಪಲಿನೇರಿಳೆ ; ಕೋರಿಹಣ್ಣು : ಕಮಿಷನರ್ ಕಬ್ಬನ್‌ರವರು . . . ತರಿ, ಖುಷ್ಕಿ, ಬಾಗಾಯಿತು, ಷಾತೂದು, ಕಾಫಿ ಇವುಗಳ ವ್ಯವಸಾಯಕ್ಕೆ ವಿಶೇಷ ಪ್ರೋತ್ಸಾಹವನ್ನಿತ್ತರು (ಮಹಾವಂ. II, ೧೦೫).

[← ಪಾರ. ಹಿಂ. ಶಹತೂತ್ ; ಮರಾ. ಶಹಾತೂತ್]

**ಷಾದಮಾನಿ** (ನಾ). ಕ್ಷೇಮ ; ಕುಶಲ ; ಸೌಖ್ಯ : ಸಾಹೇಬ್ ತಮ್ಮ ಷಾದಮಾನಿ ದರಹಮೇಷ ಕಲಮು ಮಾಡಿಸುತಾ ಇರಬೇಕು (ಚಿತ್ರಪಾ. ೭೭).

[← ಪಾರ. ಶಾದಮಾನೀ ; ಮರಾ. ಶಾದಮಾನೀ, ಷಾದಮಾನೀ]

**ಷಾಪಸಂದ್** 'ಷಾಃಪಸಂದ್' ನೋ.

**ಷಾಮಿಾಲು** 'ಶಾಮಿಾಲು' ನೋ.

**ಷಾಷ್ಟಿಕ್ಯ** (ನಾ). ಅರುವತ್ತುದಿನಗಳಲ್ಲಿ ಫಸಲಿಗೆ ಬರುವ ಬೆಳೆಗೆ ಯೋಗ್ಯವಾದ ಭೂಮಿ : ''ಅಱುವತ್ತುದಿನಕ್ಕೆ ಬೆಳೆವ ಷಷ್ಟಿಕಗದ್ದೆ ಷಾಷ್ಟಿಕ್ಯಮೆಂಬುದು'' (ಹಲಾಯು. ೨೭-೮) ; ''ಹಲವು ಧಾನ್ಯಂಗಳಱುವತ್ತು ದಿವಸಕೆ ಬೆಳೆವ ಮಹಿಯೆಲ್ಲ ಷಾಷ್ಟಿಕ್ಯವು'' (ಮಂಗರಾ. ೨೯-೪). [ಸಂ.]

**ಷಾಹಿ** 'ಶಾಹಿ' ನೋ.

**ಷಾಳ್ಗುಣ್ಯ** (ನಾ). = ಷಾಡ್ಗುಣ್ಯ ೧ : ಖಡ್ಗ, ಖಳ್ಗ; ಷಾಡ್ಗುಣ್ಯ, ಷಾಳ್ಗುಣ್ಯ (ಶಬ್ದಾನು. ೧೪೦ ಪ್ರಯೋ). [< ಸಂ. ಷಾಡ್ಗುಣ್ಯ]

**ಷಿಕಮಿ** 'ಶಿಕ್ಮಿ' ನೋ.

**ಷಿಕಮಿದಾರ** 'ಶಿಕ್ಮಿದಾರ' ನೋ.

**ಷಿಕಾರ** 'ಶಿಕಾರಾ' ನೋ.

**ಷಿಕಾರಿ** 'ಶಿಕಾರಿ' ನೋ.

**ಷಿಕ್ಮಿ** 'ಶಿಕ್ಮಿ' ನೋ.

**ಷಿಕ್ಮಿದಾರ** 'ಶಿಕ್ಮಿದಾರ' ನೋ.

**ಷಿಡ್ಗ** (ನಾ). ವಿಷಯಲಂಪಟ ; ವ್ಯಭಿಚಾರಿ ; ಹಾದರಿಗ. [ಸಂ.]

**ಷಿರಸ್ತೆ** 'ಶಿರಸ್ತೆ' ನೋ.

**ಷಿಶಿಂತಿ** 'ಶಿಷಿತ್ತಿ' ನೋ.

**ಷೀವಟ** 'ಸೀವಟ$_2$' ನೋ.

**ಷುತಾರ್‌ನಲ್** (ನಾ). ಒಂಟೆಯ ಬೆನ್ನಿನ ಮೇಲಿಟ್ಟು ಸಾಗಿಸುವ ಸಣ್ಣ ಫಿರಂಗಿ , – **ತೋಪು** : ನಾಲ್ಕುಕಡೆಯಿಂದ ಗೋಲಿ ಷುರುವಾಯಿತು . . . ರೈಫಲ್, ಜಂಜಾಲು, ಷುತಾರ್‌ನಲ್, ಹತ್ಯಾರ್‌ದಲ್, ಬಂದೂಖ್ ವಗೈರೆ ಸಲಾಖಿ ಒಂದೇ ಆವರ್ತಿ ಆಯಿತು (ಚಿತ್ರಪಾ. ೬೪).

[<– ಪಾರ. ಹಿಂ. ಶುತುರ್‌ನಾಲ್ ; ಮರಾ. ಶುತರ್‌ನಾಲ್, ಶುತುರ್‌ನಾಲ್]

**ಷುರು** 'ಶುರು' ನೋ.

**ಷೆಡ್ನು** 'ಶೆಡ್ನು' ನೋ.

**ಷೆರೀಕು** 'ಶರೀಕು' ನೋ.

**ಷೆರೀಫ** (ನಾ). ಶಾಂತಿಪಾಲನೆ, ನ್ಯಾಯನಿರ್ವಹಣೆ ಮುಂತಾದುವುಗಳನ್ನು ನೋಡಿಕೊಳ್ಳುವ ಅಧಿಕಾರಿ : ನ್ಯಾಯಾಲಯಗಳ ಷೆರೀಫರಿಗೂ . . . ನ್ಯಾಯವಾದಿಗಳಿಗೂ . . . ಕೊಡಬಹುದಾದ ಫೀಜುಗಳ ಪಟ್ಟಿಗಳನ್ನು ಸಹ ನಿರ್ಧರಿಸಬಹುದು (ಭಾಧಾನ. ೧೨೪). [ < ಇಂ. Sheriff]

**ಷೆರ್ವಾನಿ** 'ಶೇರವಾನಿ' ನೋ.

**ಷೇಕ್‌ದಾರ** 'ಶೇಕದಾರ' ನೋ.

**ಷೇಖ್** (ನಾ). ಮುಖಂಡ ; ನಾಯಕ : ಪ್ರತಿಯೊಂದು ಬುಡಕಟ್ಟಿಗೂ ಒಬ್ಬ ಷೇಖ್ ಅಥವಾ ನಾಯಕನಿದ್ದನು (ಇಸ್ಲಾಂಸಂ. ೬೪). [← ಅರ. ಹಿಂ. ಮರಾ. ಶೇಖ್]

**ಷೇರು** (ನಾ). ಬಂಡವಾಳದಲ್ಲಿ ಇಂತಿಷ್ಟು ಹಣವೆಂದು ನಿಗದಿಯಾದ ಮೊತ್ತ; ಬಂಡವಾಳದ ಪಾಲು : ಲಾಭದ ದರ ಕಡಮೆಯಾಗುವುದರಿಂದ ಷೇರಿನ ಬೆಲೆ ಇಳಿಯುವುದು (ಹಣಪ್ರ. ೫೦). [ ← ಇಂ. Share]

**ಷೇರುದಾರ** (ನಾ). ಬಂಡವಾಳದ ಪಾಲನ್ನು ಹೊಂದಿದವನು ; ಷೇರು ಕೊಂಡವನು : ಇವುಗಳ ಕೆಲಸಕ್ಕೆ ಬೇಕಾದ ಹಣ ಷೇರುದಾರರು ಕೊಡುವ ಬಂಡವಾಳ (ಹಣಪ್ರ. ೧೬೪). [ಷೇರು + – ದಾರ$_4$]

**ಷೋಕಿ** 'ಶೋಕಿ' ನೋ.

**ಷೋಕಿಲಾಲ್** (ನಾ). ಸೊಗಸುಗಾರ ; ವಿಲಾಸಪ್ರಿಯ : ಅವನು ಸುಮಾರು ಇಪ್ಪತ್ತುವರ್ಷದ ಸ್ಪುರದ್ರೂಪಿ, ಸ್ವಲ್ಪ 'ಷೋಕಿಲಾಲ್' (ಅಲಮ. ೧೩).

[ಷೋಕಿ (< ಶೋಕಿ) + ಲಾಲ್$_0$ ( ← ಹಿಂ. ಲಾಲ್)]

**ಷೋಕೀದಾರ** (ನಾ). = ಷೋಕಿಲಾಲ್ : ಷೋಕೀದಾರರು ಆ ಹೋಟೆಲಿನಲ್ಲಿ . . . ಕಾಲಹರಣ ಮಾಡುವರು (ಭಾಚೀಮು. ೬೮). [ಷೋಕಿ (< ಶೋಕಿ) + - ದಾರ$_4$]

**ಷೋಕು** 'ಶೋಕು' ನೋ.

**ಷೋಡಶ** (ಗು). ೧. ಹದಿನಾರನೆಯ : ಆ ಷೋಡಶತೀರ್ಥನಾಥನೊರೆಗಂ ದೊರೆಗಂ ದೊರೆಯಾರಘಾಂತಕರ್ (ಶಾಂತಿಪು. ೧೨-೨೧) : ಇದಂ . . . ಷೋಡಶವತ್ಸರ ಪರ್ಯಂತಮಾಗಿ ಮಾಳ್ಪುದು (ಹಮ್ಮೀರ. ೭-೭೭ ವ). (ನಾ). ೨. ಒಂದು ಸಂಖ್ಯೆ ; ಹದಿನಾರು : ಅಲ್ಲಿ ಷೋಡಶಮುಖದ ಬೊಮ್ಮನಂ ಕಂಡವನ ಮಲ್ಲಡಿಗೆ ನಮಿಸೆ (ಜೈಮಿಭಾ. ೩೨-೪೩). ೩. ವ್ಯಕ್ತಿಯ ಮರಣಾನಂತರ ಹನ್ನೆರಡು ಅಥವಾ ಹದಿನಾರನೆಯ ದಿನದಂದು ಆಚರಿಸುವ ಶ್ರಾದ್ಧ : (೬). ೪. ಒಂದು ಬಗೆಯ ಮಹಾಯಜ್ಞ : ಅಗ್ನಿಷ್ಟೋಮ . . . ಷೋಡಶ ವಾಜಪೇಯ ಪೌಂಡರೀಕಾದಿ ಮಹಾಕ್ರತುಗಳಂ (ವಿವೇಕ. ೧೪೩).

**ಷೋಡಶಮಹಾರಾಯರು** = ಪುರಾಣಪ್ರಸಿದ್ಧರಾದ ಹದಿನಾರು ಜನ ಚಕ್ರವರ್ತಿಗಳು : ಗಯ ಅಂಬರೀಷಕ ಶಶಬಿಂದು ದಂತಿ ಪೃಥು ಮರುತ್ವಂತ ಭರತ ಸುಹೋತ್ರ ರಾಮ ದಿಲೀಪ ರಘು ರಂತಿದೇವ ಯಯಾತಿ ಮಾಂಧಾತೃ ನೃಗ ಭಗೀರಥರೆಂಬ ಷೋಡಶಮಹಾರಾಯರುಗಳುಂ (ವಿವೇಕ. ೨೫೯) ; IP ಈ ಹದಿನಾರು ಜನರ ಹೆಸರು ಮಹಾಭಾರತದಲ್ಲಿಯ ದ್ರೋಣಪರ್ವ ಹಾಗೂ ಶಾಂತಿಪರ್ವದಲ್ಲಿ ಬೇರೆ ಬೇರೆ ಪ್ರಕಾರ ಇದೆ. ಸಗರ, ಶಿಬಿ, ನಹುಷ, ಮತ್ತು ನಳ - ಈ ನಾಲ್ಕು ಹೆಸರು ಕೆಲವೆಡೆ ಬರುತ್ತವೆ. **ಷೋಡಶರಾಯರು** = ಷೋಡಶಮಹಾರಾಯರು: ಷೋಡಶರಾಯರಾ ಕಥೆಯಿಂದ ನೃಪತಿಯ ಸಂತವಿಟ್ಟನು (ಕುಮಾವ್ಯಾ ದ್ರೋ. ೭-೩೯). **ಷೋಡಶರು** = [ವೀಶೈ] ಪ್ರಸಿದ್ಧರಾದ ಹದಿನಾರು ಜನ ಶಿವಶರಣರು : ವೀರಗಲಸದ ಷೋಡಶರಿಗೆಯು ತೇರಸಗಣಂಗಳಿಗೆ ನಮಿಸಿಯಪಾರಪರಿಯಲಿ ಹರಸಿಕೊಂಡೆಹೆವು (ಬಸವು. ೪೮-೧೮).

[ಸಂ. ಷೋಡಶನ್]

**ಷೋಡಶಕರ್ಮ** (ನಾ). ಗರ್ಭಾಧಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೌಲ, ಉಪನಯನ, ವೇದವ್ರತಚತುಷ್ಟಯ ( = ಮಹಾನಾಮ್ನಿ, ಮಹಾವ್ರತ, ಉಪನಿಷದ್ವ್ರತ, ಗೋದಾನವ್ರತ), ಸಮಾವರ್ತನ, ವಿವಾಹ ಮತ್ತು ಅಂತ್ಯೇಷ್ಟಿ ಎಂದು ಮನುಷ್ಯನಿಗೆ ಧಾರ್ಮಿಕವಾಗಿ ಮಾಡಬೇಕಾದ ಹದಿನಾರು ಪ್ರಕಾರದ ಸಂಸ್ಕಾರಕರ್ಮಗಳು : ಸಕಲಧರ್ಮಶಾಸ್ತ್ರಗಳಲ್ಲೂ ಶೂದ್ರರಿಗೆ ಪಂಚಮಹಾಯಜ್ಞಗಳು, ವೈಶ್ವದೇವ, ಆಹ್ನಿಕ, ಷೋಡಶಕರ್ಮಗಳು, ದೇವಾರ್ಚನೆ . . . ಇತ್ಯಾದಿ ವೇದೋಕ್ತ ಧರ್ಮಾಧಿಕಾರವು ಅಪಾರವಾಗಿರುವುದು (ಒಂದಸಾ. ೧೬೨).

[ಸಂ. ಷೋಡಶಕರ್ಮನ್]

**ಷೋಡಶಕಲೆ, ಷೋಡಶಕಳೆ** (ನಾ). ೧. ಚಂದ್ರನಲ್ಲಿರುವ ಅಮೃತಾ, ಮಾನದಾ, ಪೂಷಾ, ಪುಷ್ಟಿ, ತುಷ್ಟಿ, ರತಿ, ಧೃತಿ, ಶಶಿನೀ, ಚಂದ್ರಿಕಾ, ಕಾಂತಿ, ಜ್ಯೋತ್ಸ್ನಾ, ಶ್ರೀ, ಪ್ರೀತಿ, ಅಂಗದಾ, ಪೂರ್ಣಾ, ಪೂರ್ಣಾಮೃತ ಎಂಬ ಹದಿನಾರು ಬಗೆಯ ಕಲೆಗಳು : ಅಪ್ಪುಮುದಸಿರಿಯನೀವಾ ಸಿಷ್ಟಷೋಡಶಕಲಾಪೂರ್ಣ ಚಚ್ಚಂದ್ರಮಾಭೀಷ್ಟಾವ್ಯುತಂಗೊಂಬ ಯೋಗಿ (ವೀಶ್ವಪು. ೫-೧೬-೨). ೨. ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಚಿತ್ತ, ಮನಸ್ಸು, ಅಹಂಕಾರ, ವಿದ್ಯೆ, ವಾಕ್ಕು ಮತ್ತು ಶಕ್ತಿಗಳೆಂಬ ಹದಿನಾರು ಪ್ರಕಾರದ ಕಲೆಗಳು : ಜ್ಞಾನೇಂದ್ರಿಯ ಕರ್ಮೇಂದ್ರಿಯ ಚಿತ್ತ ಮನ ಅಹಂಕಾರ ವಿದ್ಯೆ ವಾಕ್ಕು ಶಕ್ತಿಗಳೆಂಬ ಷೋಡಶಕಲೆಯಿಂ ವಿಕಲಮಾಗಿ (ವಿವೇಕ. ೧೯೮). **ಷೋಡಶಕಳೆ** : ೧. ಮೃಗಧರನೆಂತು ಷೋಡಶಕಳಾಪರಿಪೂರ್ಣತೆಯಿಂ ಪ್ರಮೋದಮಂ ಬಗೆಗಡೆ ಮಾಳ್ಕುಂ . . . ಅಂತೆ ಷೋಡಶಮಹಾವಿಷಯಂಗಳಿನೊಪ್ಪಿ ಮಾಳ್ಕುದುರ್ವಿಗೆ ಮುದಮಂ ಸುಖೈಕನಿಧಿಪೂರ್ವವಿದೇಹಮುಖ್ಯರ್ವಸಂಪದಂ (ಪುಷ್ಪಪು. ೨-೬). ೨. ಇಂತು ಹದಿನಾಱುಪ್ರಣವಂಗಳ ಷೋಡಶವರ್ಣಸ್ವರೂಪವಾದ ಷೋಡಶಕಳೆಗಳೆಂದು ಭಾವಿಸಿ (ಚನ್ನವ. ಕ. ೬೭-೧೯೧) ; ಎನ್ನ ತ್ರಿವಿಧಾತ್ಮರು ನಿಮ್ಮ ಹೆಂಡಿರು . . . ಷೋಡಶಕಳೆಗಳು ನಿಮ್ಮ ರಾಣಿವಾಸ (ಏಚಸಂ. ೨೫೫-೪೫). ೩. ಪಂಚಭೂತಗಳು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು ಹಾಗೂ ಮನಸ್ಸು : ನೀಡದಂದದಲಿಪ್ಪ ಲಿಂಗಕೆ ಷೋಡಶಾತ್ಮಕ ರಸವಿಭಾಗವ ಮಾಡಿ ಷೋಡಶಕಳೆಗಳಿಗೆ ಉಪಚಯಗಳನ ಕೊಡುತಾ . . . ಆನಂದಾತ್ಮ ಚರಿಸುವ ಲೋಕದೊಳು ತಾನು (ಹಸಾರ. ೪-೨). [ಸಂ. ಷೋಡಶಕಲಾ]

**ಷೋಡಶಕಲ್ಪ** (ನಾ). [ಜೈನ] ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಟ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣತ, ಆರಣ, ಅಚ್ಯುತ ಎಂಬ ಹದಿನಾರು ಸ್ವರ್ಗಗಳು: ಷೋಡಶಕಲ್ಪಮೆಂಬ ನೆಲೆಮಾಡಮನಾಂತಿರಲೊಂದೆ ಕಂಬಮಂ ಮಾಡಿದನಬ್ಜ ಗರ್ಭನೆನಲ್ . . . ಎಸೆದತ್ತು ಮಂದರಂ (ಮಲ್ಲಿಪು. ೧೨-೮೨); ಷೋಡಶಕಲ್ಪದೊಳ್ . . . ಇಂದ್ರನಾದನಾ ಯೋಗೀಂದ್ರಂ (ವರ್ಧಪು. ೧೩-೨೭). [ಸಂ.]

**ಷೋಡಶಕಳೆ** 'ಷೋಡಶಕಲೆ' ನೋ.

**ಷೋಡಶತೀರ್ಥಕರಭಾವನೆ** (ನಾ). ತೀರ್ಥಂಕರನಾಗುವುದಕ್ಕೆ ಕಾರಣವಾದ ದರ್ಶನವಿಶುದ್ಧಿ, ವಿನಯಸಂಪನ್ನತೆ, ಶೀಲವ್ರತಗಳಲ್ಲಿ ಅನತಿಚಾರ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗ, ಶಕ್ತಿತಸ್ತ್ಯಾಗ, ಶಕ್ತಿತಸ್ತಪ, ಸಾಧುಸಮಾಧಿ, ವೈಯಾವೃತ್ಯ, ಅರ್ಹದ್ಭಕ್ತಿ, ಆಚಾರ್ಯಭಕ್ತಿ, ಉಪಾಧ್ಯಾಯಭಕ್ತಿ, ಪ್ರವಚನಭಕ್ತಿ, ಆವಶ್ಯಕಾಪರಿಹಾಣಿ, ಮಾರ್ಗಪ್ರಭಾವನೆ ಮತ್ತು ಪ್ರವಚನವತ್ಸಲತ್ವ ಎಂಬ ಹದಿನಾರು ಬಗೆಯ ಮನೋವೃತ್ತಿಗಳು: ಷೋಡಶತೀರ್ಥಕರಭಾವನೆಗಳಂ . . . ಪಂಚಮಹಾಕಲ್ಯಾಣಂಗಳುಮಂ ನಾಮೋದ್ದೇಶಂಗೆಯ್ದು (ಆದಿಪು. ೩-೪೦ ವ); ತತ್ವಾರ್ಥಸೂತ್ರದೊಳ್ ಪೇಳ್ದ ಷೋಡಶತೀರ್ಥಕರಭಾವನೆಗಳಂ ಭಾವಿಸಿ (ಅಜಿಪು. ೩-೨ ವ).

[ಸಂ. ಷೋಡಶತೀರ್ಥಕರಭಾವನಾ]

**ಷೋಡಶದಾನ** (ನಾ). ಹಸು, ಭೂಮಿ, ಚಿನ್ನ, ವಸ್ತ್ರ, ಆಭರಣ, ಛತ್ರ, ಚಾಮರ, ಶಯ್ಯೆ, ಬೀಸಣಿಗೆ, ಸಾಲಗ್ರಾಮ, ಧನ, ಧಾನ್ಯ, ದೀಪ, ಪಾದುಕೆ, ತುಪ್ಪ ಮತ್ತು ಕನ್ಯೆಯನ್ನು ಉಪಾಯನವಾಗಿ ನೀಡುವ ಹದಿನಾರು ಬಗೆಯ ದಾನ : ಮಾಡಿ ಷೋಡಶದಾನವನು ಮನ ಬೇಡಿದಂದದ ಲನ್ನಪಾನವ ನೀಡಿ ವಿಪ್ರರಿಗೆ (ಅಮೃತ. ೨-೧೦೦); ಬೇಡಿ ಬೇಡಿದ ವಸ್ತುವ ಪಣ್ಮಗುವಿಗೆ ನೀಡುವ ನೇಮಗಾಱರಿಗೆ ಷೋಡಶದಾನದ ಫಲ ಸುಲಭದೊಳು ಕೈಗೂಡುವುದು (ಹದಿಬ. ೫-೨೪). [ಸಂ.]

**ಷೋಡಶಪದಾರ್ಥ** (ನಾ). [ನ್ಯಾಯಶಾ] ವಾದದ ಅಂಶಗಳನ್ನು ಒದಗಿಸುವ ಹದಿನಾರು ಬಗೆಯ ವಿಭಾಗ, - ಪ್ರಕರಣ : ನ್ಯಾಯವೇ ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ ಸಿದ್ಧಾಂತ ಅವಯವ ತರ್ಕ ನಿರ್ಣಯ ವಾದ ಜಲ್ಪ ವಿತಂಡೆ ಹೇತ್ವಾಭಾಸ ಛಲ ಜಾತಿ ನಿಗ್ರಹಸ್ಥಾನಂಗಳೆಂಬ ಷೋಡಶಪದಾರ್ಥಂಗಳಂ ಪೇಳುತ್ತವೇ ಪ್ರಪಂಚಕ್ಕೀಶ್ವರಕರ್ತೃತ್ವಮಂ ನಿಶ್ಚೈಸುವುದು (ವಿವೇಕ. ೧೨).

[ಸಂ.]

**ಷೋಡಶಪಾತ್ರ** (ನಾ). ಹದಿನಾರು ಜನ ಮಂತ್ರಿವರ್ಗ : ಷೋಡಶಪಾತ್ರEತ್ರ3ಗಳೊಳಗಾ ರಾಯನಾಳೋಚಿಸಿದನಿಂತೆಂದು (ಕುರಾಸಾಂ. ೧೬-೨). [ಸಂ.]

**ಷೋಡಶಪ್ರಾಯ** (ನಾ). ೧. ಹದಿನಾರು ವರ್ಷಗಳ ವಯಸ್ಸು ; ಹದಿನಾರರ ಹರೆಯ. ೨. ಹದಿನಾರುವರ್ಷ ಪ್ರಾಯದವನು : ಶಿವಪೂಜೆಗೆ ನವಯೌವನವಾದಂತೆ ಮೆಱೆವ ಷೋಡಶಪ್ರಾಯಂ ಪ್ರಜ್ವಳಮೂರ್ತಿಯೆನಿಸಿದ ಬಸವರಾಜಂ ಕಾರಣಿಕಪುರುಷಂ ಶಿವಭಕ್ತಿಸರ್ವಾಂಗಚರಿತಂ ನೆನೆದು ನೋಡಿ (ಬಸರ. ೨-೩೬). [ಸಂ.]

**ಷೋಡಶಭಾವನೆ** (ನಾ). = ಷೋಡಶತೀರ್ಥಕರಭಾವನೆ : ತೀರ್ಥಕರಪುಣ್ಯಕ್ಕೆ ಹೇತುಗಳಪ್ಪ ಷೋಡಶಭಾವನೆಗಳಂ ಭಾವಿಸಿ (ಚಾವುಂಪು. ೩೦) ; ದಶಗ್ರೀವಂ . . . ತಪಂಗೊಂಡು ಷೋಡಶಭಾವನೆಗಳಂ ಭಾವಿಸಿ (ಪಂರಾಮಾ. ೧೬-೭೩ ವ).

[ಸಂ. ಷೋಡಶಭಾವನಾ]

**ಷೋಡಶವರ್ಣ** (ನಾ). ೧. ಅ ಆ ಇ ಈ ಉ ಊ ಋ ೠ ಎ ಏ ಐ ಒ ಓ ಔ ಅಂ ಅಃ ಎಂಬ ಹದಿನಾರು ಅಕ್ಷರಗಳು :

ಷೋಡಶವರ್ಣ ದ್ವಾದಶಾಚಾರ ಸಗುಣನಿರ್ಗುಣಲೀಲೆಯ ಕರುಣಿಸಿ (ಚನ್ನವ. ಕ. ೩೫೪-೭೩೮). ೨. ಚಿನ್ನದ ಶುದ್ಧತೆಯ ಒಂದು ಪರಿಮಾಣ ; ಚಿನ್ನದ ಶುದ್ಧತೆಯ ಹದಿನಾರು ಪರಿಮಾಣ : ತನ್ನ ಶಕ್ತಿಯಿಂದ ಷೋಡಶವರ್ಣ ಪೂರ್ಣವಾದ ಸುವರ್ಣವನ್ನಾಗಿ ಮಾಡುವಂತೆ . . . ಮಾಡುವುದು (ಶಿವಾಸೂ. ೧೨೮).

[ಸಂ.]

**ಷೋಡಶಸಂಸ್ಕಾರ** (ನಾ). = ಷೋಡಶಕರ್ಮ: ಷೋಡಶಸಂಸ್ಕಾರಗಳು ಆತ್ಮ ಗುಣಗಳೊಡನೆ ಆಚರಿಸಬೇಕೆಂಬುದು ಮುಖ್ಯ ಕಟ್ಟಳೆಯಾಗಿದೆ (ಭಾರದ. ೨೬೬).

[ಸಂ.]

**ಷೋಡಶಸ್ವಪ್ನ** (ನಾ).[ಜೈನ] ಜಿನಗರ್ಭಾವತರಣಕಾಲದಲ್ಲಿ ಜಿನನ ತಾಯಿಯು ಕಾಣುವ ಐರಾವತ, ಬಿಳಿಯ ಹೋರಿ, ಸಿಂಹ, ಲಕ್ಷ್ಮಿ, ಹೂವಿನ ಹಾರ, ಚಂದ್ರ, ಬಾಲಸೂರ್ಯ, ಎರಡು ಎಳೆಯ ಮೀನು, ರತ್ನಕುಂಭಗಳ ಜೊತೆ, ತಾವರೆಕೊಳ, ಸಮುದ್ರ, ಸಿಂಹಾಸನ, ದೇವವಿಮಾನ, ನಾಗವಿಮಾನ, ರತ್ನಸಮೂಹ ಮತ್ತು ಉಜ್ವಲಜ್ವಾಲೆ ಎಂಬ ಹದಿನಾರು ಬಗೆಯ ಸ್ವಪ್ನದೃಶ್ಯಗಳು: ನೆಗಟ್ದ ಕವಿತಾಗುಣಾರ್ಣವನ ವರ್ಣಿಸುವುದಂ ಪೊಗಟ್ದು ಬಗೆದೋದುವರ್ ಮನದೊಳಾಟಿಸುವುದಂ ಪಡೆವರೀ ಷೋಡಶಸ್ವಪ್ನದ ಫಲಂಗಳಂ ಪಡೆಯಲಣಮಾಗದ ಸುಖಂಗಳಂ ಮಂಗಳಂ (ಆದಿಪು.. ೭-೨೭) ; ಷೋಡಶಸ್ವಪ್ನದರ್ಶನಾನಂತರಂ ನಿಜಾಸ್ಯಾಬ್ಜಮಂ ಗಜಂ ಪುಗುವುದಂ ಕಂಡು ಅವಧಿಜ್ಞಾನಿಯಪ್ಪ ತನ್ನರಸನಿಂ ತತ್ಫಲಮನಱಿದು ಸುಖಮಿರ್ಪಿನಂ (ಚಾವುಂಪು. ೧೩೩). [ಸಂ.]

**ಷೋಡಶಿ**[1] (ನಾ). ೧. ಒಂದು ಬಗೆಯ ಯಜ್ಞ : ಅಗ್ನಿಷ್ಟೋಮ . . . ಅತಿರಾತ್ರ ಉಕ್ಥ ಷೋಡಶಿ ವಾಜಪೇಯ ಪೌಂಡರೀಕ ಸರ್ವಸೃಷ್ಟ ಅಶ್ವಮೇಧಾದಿ ಕ್ರತುಗಳಂ (ವಿವೇಕ. ೧೪೩). ೨. ಒಂದು ಬಗೆಯ ಯಜ್ಞಪಾತ್ರೆ : ಅತಿರಾತ್ರಿ (ಎಂಬ ಯಾಗ)ದಲ್ಲಿ ಷೋಡಶಿ (ಎಂಬ ಪಾತ್ರೆ)ಯನ್ನು ಗ್ರಹಣ ಮಾಡಬೇಕು (ಬೃಹ್ಮಭಾ. ೨೨).

[ಸಂ. ಷೋಡಶಿನ್]

**ಷೋಡಶಿ**[2] (ನಾ). ಹದಿನಾರು ವರ್ಷ ವಯಸ್ಸಾದವಳು ; ಹದಿನಾರರ ಹರೆಯದವಳು : ಮಹಡಿಯ ಮೇಲೆ ನಿಂತಿದ್ದ ನವೀನರಲ್ಲೊಬ್ಬಳು . . . ಸುಮುಖಿಯಾಗಿಯೂ ಷೋಡಶಿಯಾಗಿಯೂ ಕೃಶಾಂಗಿಯಾಗಿಯೂ ಇದ್ದಳಲ್ಲದೆ ಮುದ್ದಾದ ಸಣ್ಣದಾದ ಮುಖವುಳ್ಳವಳಾಗಿದ್ದಳು (ಕಪಾಕುಂ. ೫೭).

[ಸಂ. ಷೋಡಶೀ]

**ಷೋಡಶೋಪಚರಣೆ** (ನಾ). ದೇವತೆಗಳಿಗೂ ಪೂಜ್ಯರಿಗೂ ಮಾಡುವ ಆವಾಹನ, ಆಸನ, ಪಾದ್ಯ, ಅರ್ಘ್ಯ, ಸ್ನಾನೋದ್ವರ್ತನ, ವಸ್ತ್ರ, ಉಪವೀತ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ಆಚಮನ, ಫಲ, ತಾಂಬೂಲ ಮತ್ತು ನಮಸ್ಕಾರ ಎಂಬ ಹದಿನಾರು ಬಗೆಯ ಉಪಚಾರ,-ಸತ್ಕಾರ : ಮಣಿದು ಭಯದಿಂ ಷೋಡಶೋಪಚರಣೆಯೆಸೆಯೆ ಶಿವರಾತ್ರವಿಧಿಯಲಿ ಪ್ರಣವಯುತ ಪಂಚಾಕ್ಷರಿಯನುಚ್ಚರಿಸುತಾಚರಿಸೆ . . . ಬೆಳಗಾಗಲು (ಬಸಪು. ೪೧-೨೩.).

[ಸಂ. ಷೋಡಶೋಪಚರಣ]

**ಷೋಡಶೋಪಚರ್ಯ** (ನಾ). = ಷೋಡಶೋಪಚರಣೆ: ಇಷ್ಟಲಿಂಗವೆಂಬ ಭಾವನೆಯಿಂದ ಅಷ್ಟವಿಧಾರ್ಚನೆ ಷೋಡಶೋಪಚರ್ಯಂಗಳಿಂದಿಷ್ಟಲಿಂಗಧಾರಣ ದಿಂದಿಪ್ಪುದು ಧಾರಣಯೋಗ (ಆದವ. ೧೩೫-೨೩೧). [ಸಂ. ಷೋಡಶೋಪಚರ್ಯಾ]

**ಷೋಡಶೋಪಚಾರ** (ನಾ). = ಷೋಡಶೋಪಚರಣೆ : ಅಷ್ಟವಿಧಾರ್ಚನೆ ಷೋಡಶೋಪಚಾರವಲ್ಲದೆ ನಿಮ್ಮ ಮುಟ್ಟಲಱಿಯದವರ ಕಂಡರೆ ಅಯ್ಯನೆಂತೆಂಬೆನವರ (ಬಸವ. ೮೯೮) ; ಆ ಷೋಡಶೋಪಚಾರಂಗಳಾ ವಾಹನ ಸುತೋಷದಾಸನಶಯ್ಯ ವರ್ಘಪಾದ್ಯಾಚಮನ ಭೂಷಣಂ ವಸ್ತ್ರೋಪವೀತವಾ ಛತ್ರ ಚಾಮರ ದರ್ಪಣಂಗಳಿನ್ನೂ ಈಶಪ್ರದಕ್ಷಣ ನಮಸ್ಕಾರವಧಿಕಶುಭವೇಷಿಯೇ ಸ್ತೋತ್ರಮಯ ಪೌರಾಣಪಠಣಂ ವಿಶೇಷತೌರ್ಯತ್ರಯಂಗೂಡಿ ಹದಿನಾಱಿವರ ವಿವರವಾ ಸ್ಕಾಂದದಲ್ಲಿ (ವೀಶ್ಮಪು. ೭-೧೧-೩). [ಸಂ.]

**ಷೋದ** 'ಷೋದಾ' ನೋ.

**ಷೋದಾ, ಷೋದ** (ಗು). ೧. ಸ್ವೇಚ್ಛಾವೃತ್ತಿಯ ; ಸ್ವಚ್ಛಂದತೆಯ : ದುರ್ವ್ಯಯ, ದುರ್ವ್ಯಸನಗಳಿಗೆ ಸಿಕ್ಕಿದವನು ; ಶಕ್ತಿಯನ್ನೂ ಆಯುಸ್ಸನ್ನೂ ಬೇಗ ಬೇಗ ಕಳೆದು ಕೊಳ್ಳುತ್ತಿರುವವನು ; ಷೋದಾಮನುಷ್ಯ (Fast-person. ೯೦೫೩). (ನಾ). ೨. ನೀತಿಗೆಟ್ಟ ವ್ಯಕ್ತಿ ; ಸ್ವಚ್ಛಂದಪ್ರವೃತ್ತಿಯ ವ್ಯಕ್ತಿ : "ಸಡಿಲ ನಡತೆಯ ವ್ಯಕ್ತಿ ; ನೀತಿಗೆಟ್ಟವನು(ಳು); ಷೋದಾ" (Rcp. ೯೦೫೩). **ಷೋದ** : ೧. ಅವನು ಮನ್ಮಥನಲ್ಲ . . . ಸುಮಾರು ನಲವತ್ತು ನಲವತ್ತೈದು ವರ್ಷ ಸ್ವಾಭಾವಿಕವಾಗಿ ದುರ್ಬಲವಾದ್ದೋ ಅಥವಾ ಕೆಟ್ಟ ಜೀವನದಿಂದ ಶಿಥಿಲವಾದ್ದೋ ಕೋಲು ನೀಳಾದ ಶರೀರದ , ಕುಣಿಗಣ್ಣಿನ , ಬತ್ತಿದ ಕೆನ್ನೆಗಳ, ಷೋದಭಾವದ ಮನುಷ್ಯ (ಕಲನೆ. ೨೩೪).

[<— ಪಾರ. ಹಿಂ. ಶೋಹದಾ ; ಮರಾ. ಶೋದಾ, ಸೋದಾ, ಸೋಧಾ]

**ಷ್ಠೀವನ** (ನಾ). ಉಗುಳುವಿಕೆ : "ಖಾತ್ಕಾರಂ ಷ್ಠೀವನದೊಳ್" (ವಸ್ತುಕೋ. ೮೧-೪೦).

[ಸಂ.]

✷

# ಸ



**ಸ$_1$** (ನಾ). ಕನ್ನಡ ವರ್ಣಮಾಲೆಯ ಐವತ್ತೆರಡನೆಯ ಅಕ್ಷರ ; ಅವರ್ಗೀಯ ವ್ಯಂಜನಗಳಲ್ಲಿ ಒಂದು : ತಳಿಗುಂ ಮೇಲಣ ಕ ಸ ಪಂ ತಳದ ತಕಾರ ಸ್ವರೂಪಮಂ . . . ಧರಿಯಿಸುಗುಂ (ಶಮದ. ೨೬೪).

**ಸ$_2$** (ನಾ). ಒಂದು ಅಳತೆ ; ಶಾಸನಗಳಲ್ಲಿ ಬರುವ 'ಸಲಗೆ' ಎಂಬುದರ ಸಂಕ್ಷಿಪ್ತರೂಪ : ಮಠಪತಿ ದಾಸ ವೈಷ್ಣವರಾಹಾರದಾನಕಂ ಬಿಟ್ಟ ದತ್ತಿ ಮಾಚ ಸಮುದ್ರದ ಮೂಡಣ ಕೋಡಿಯಲ್ಲಿ ಸಿಂದೇಶ್ವರದೇವರಿಗೆ ಸ ೨ ಗೋಪಾಳದೇವರಿಗೆ ಸ ೨ (ಎಕ. XIV, ನಾಗಮಂ. ೧೧೦-೬೭ ; ಸು. 1224). [< ಸಲಗೆ$_1$]

**ಸ$_3$** (ನಾ). ೧. [ಛಂದ] ಅಕ್ಷರಗಣಗಳಲ್ಲಿ ಒಂದು ; ಆದಿಯಲ್ಲಿ ಎರಡು ಲಘುಗಳಿದ್ದು ಕಡೆಯಲ್ಲಿ ಒಂದು ಗುರುವಿರುವ ಗಣ ; ಸಗಣ (UU- ) : ಮಯರಸತಜಭನಲಗವಿನಿಚಯಮೆಂಬಿವು ನಿಯಮದಿಂ ಗಣಾಕ್ಷರಮಕ್ಕುಂ (ಛಂದೋಂಬು. ೧-೩೬) ; ''ಯಮಾತಾರಾಜಭಾನಸಲಗಂ'' ಎಂಬ ಸೂತ್ರದಲ್ಲಿ, ಕ್ರಮವಾಗಿ ಮೂರು ಮೂರಕ್ಷರಗಳನ್ನು ತೆಗೆದುಕೊಂಡರೆ ಮೊದಲನೆಯಕ್ಷರವು ಗಣದ ಹೆಸರನ್ನು ಸೂಚಿಸುವುದು (ಕೃಪಿಡಿ. ೭೦). ೨. [ಸಂಗೀತ] ಸಂಗೀತದ ಸಪ್ತಸ್ವರಗಳಲ್ಲಿ ಒಂದು ; ಷಡ್ಜ : ಸ್ಥಾಯಿ ಸಂಚಾರಿಗಳ ಸರಿಗಮಪಧನಿಯ ಸರದಾಯತದ . . . ತಾರ ಮಧ್ಯ ಮಂದ್ರಗಳಿಂದೆ ಸೊಗಸುಗೊಳಿಸಿ (ಜೈಮಿಭಾ. ೨೦-೫೪) ; ನಿನ್ನೊಳು ನಾ ನನ್ನೊಳು ನೀ . . . ಇದೆ ಒಲವಿನ ಸರಿಗಮಪದನೀ (ಗೋಕುನಿ. ೨೫-೧೦). [ಸಂ.]

**ಸಂಕ$_1$**, ಶಂಕು$_1$, ಸಂಕು$_1$, ಸಂಕೆ$_2$ (ನಾ). ಪಂಚಮಹಾವಾದ್ಯಗಳಲ್ಲಿ ಒಂದು ; ಊದಿದರೆ ಧ್ವನಿಯನ್ನುಂಟುಮಾಡುವ, ಸಮುದ್ರದಲ್ಲಿ ದೊರೆಯುವ ಒಂದು ಬಗೆಯ ಚಿಪ್ಪು ; ಕಂಬು ; ಶಂಖ : ಪಲ್ಲವ ಸತ್ತಿಗೆ ಸಂಕಂ ಝಲ್ಲರಿ ಜಯಮಂಗಳಂಗಳಂ ಚೋಳಮಹೀವಲ್ಲಭನಿತ್ತಡೆ ಕುಡಿಯರ ವಲ್ಲಭನುಜ್ ಮಣ್ಣಳೀಕಪದಮಂ ಪಡೆದಂ (ಎಕ. IV, ಹಗ್ಗಡ. ೧೮-೧೦ ; 1057) ; ಪಂಕರುಹದಲರ್ದ ಮೊಲ್ಲೆಯ ಸಂಕದ ಗೋಕ್ಷೀರದಿಂದುಕಾಂತದ ಹಂಸೆಯ? ಸಂಕುಳದಂದದ ಮೇಘಚಯಂ ಕಱಿಗುಂ ಪಿರಿಯ ಪೆರ್ಮಟಿಯುಮಂ ಜಗದೊಳ್ (ಅಟ್ಟಮ. ೮-೧೭) ; ಸಂಕಂ ಕೂಂಕುವ ಮುದ್ದುಮೊಗಜಿಗೊರಲ್ಗಳ್ಪೆರ್ವ ಕಂದಂ ಕರಂ ಬಿಂಕಂ ತೆಂಗುವ ಗೂಢಜತ್ರು ಸುದೃಢಾಯದ್ಬಾಹುಕಾಂಡಂ . . . ನಿರಾತಂಕಂ ನೆರ್ಗಿಪುದಾಸೆಯಳ್ಕಿನಿದಿರ್ಗೊಳ್ಳೊಳ್ಳೆಂಡಿರಂ ಗಂಡರಂ (ಚಿಕವಿ. ೩-೨೦). **ಶಂಕು$_1$** : ಶಂಕು ಶಲಾಕೆಯುಂ ಗಟಿಗೆವಟ್ಟಲುಮೊಪ್ಪಿರೆ ವೇದನಾದದೊಳ್ ಸಂಕರಮಾಗಿ . . . ಮಂಗಳಗೀತತೂರ್ಯಘೋಷಂ ಕಡಲೂರ್ಮಿಯಂತುಲಿಯೆ (ಸೂಕ್ತಿಸು. ೬-೫೭) ; ಶ್ರೀ ನಗರೇಶ್ವರದೇವರಿಗೆ . . . ಕೊಟ್ಟ ಉಪಕರಣ . . . ದೂಪಾರತಿ ಬಟ್ಟಲು ಶಂಕು (ಎಕ. IX, ಬೆಂಗಳೂ. ೯೦-೧೧ ; ಸು. 1400). **ಸಂಕು$_1$** : ದೇಗುಲದ ಭೇರಿ ಮೊಟಗೆ, ಸಂಕಿನೊಂದು ನಿಡುಸರಂ ಪೆರ್ಚೆ . . . ರಜನೀಮುಖಮೆಡ್ಡಮಾದುದು (ರಾಮಾಶ್ವ. ೨೩-೧). **ಸಂಕೆ$_2$** : ತಕ್ಕಿನ ಪವಳದ ಸಂಕೆಯ ಟೆಕ್ಕೆಯ ಮಣಿಗಳನನೇಕಮಂ ಕೊಂಡು (ಧರ್ಮಾಮೃ. ೨-೩೭).

**ಸಂಕದೋಲೆ** = ಶಂಖದಿಂದ ಮಾಡಿದ ಅಥವಾ ಶಂಖದಾಕಾರದ ಓಲೆ: ಸಾವರ ಹಿಡಿದು ಸಂಕದೋಲೆಯನಿಕ್ಕಿ ವಿಧಿಯಲ್ಲಿ ಸಾಯಸಗೊಳ್ಳದೆ ಭಾವವಡೆದಂತೆ ಭ್ರಮೆಗೊಳಗಾದ ಮತ್ತೆ ಇವನೇನನ್ನದಿಪ್ಪುದೇ ಸರ್ವಜ್ಞಾನದ ಒಳಗು (ಮೋಳಿಮಾ. ೧೧೫-೪೧೮) ; ಪಂಕಸಂಕಲಿತವಾಮಕರಾಬ್ಜಂ ತಕ್ರಘಟಾಂಚಿತಮಸ್ತಕಂ ಸಂಕದೋಲೆ ಜಳಪಂಕಕಣಂ . . . ಅಮರ್ದೊಪ್ಪಿರೆ ಬಂದಳ್ಗೋಪವಧೂಟಿ ವಿಳಾಸದಿಂ (ವೃಷವಿ. ೭-೯).

[< ಸಂ. ಶಂಖ]

**ಸಂಕ$_2$** (ನಾ). ಸಣ್ಣ ತೊರೆ, ಹೊಳೆ, ಹಳ್ಳ ಮುಂತಾದುವುಗಳನ್ನು ದಾಟಲು ಅಡ್ಡಮರವನ್ನಿಟ್ಟು ಮಾಡುವ ಸೇತುವೆ ; ಪೂಲು : ತೊರೆಯಿಳಿದ ಮೇಲೆ ಸಂಕವನ್ನಿಕ್ಕಲೇನಹುದು? (ಶ್ರೀರಾಮಾ. ೬೭-೩೨೪) ; ನಡುಹಳ್ಳದೆಡೆಯೊಳು ಸಂಕವು ಮುರಿದಂತೆ (ಚಂದ್ರವೀ. ೧೩.೨-೨೭) ; ಸಂಕ ಮುರಿದಲ್ಲೇ ಸ್ನಾನ, ಗ್ರಹಚಾರ ಹಿಡಿದಲ್ಲೇ ದಾನ (ಗಾದೆ). [<— ಮರಾ. ಸಾಂಕೂ, ಸಾಂಕವ./ ಪ್ರಾ. ಸಂಕಮ ; ಪಾಲಿ. ಸಂಕಮೋ./ ತುಳು. ಸಂಕ./ ಸಂ. ಸಂಕ್ರಮ]

**ಸಂಕಟ** (ಗು). ೧. ಇಕ್ಕಟ್ಟಾದ ; ದುರ್ಗಮವಾದ : ಎಱಗಿರ್ದುವು ಷಟ್ಪದಂಗಳು ತ್ಕೇಸರಕೋಟಿ ಸಂಕಟಕುಶೇಶಯ[ಕೋ]ಶಕುಟೀರಕಂಗಳೊಳ್ (ಪಂಪಭಾ. ४-४೭). (ನಾ). ೨. ಇಕ್ಕಟ್ಟಾದುದು ; ದುರ್ಗಮವಾದುದು : ಜಾನುಭಂಜನೀ ಶೂಲ ಪ್ರಕರಪರಿವೃತಂಗಳುಂ ಕೂಪಕೂಟಾವಪಾತಲೋಹಕಂಟಕಸಂಕಟಂಗಳುಂ . . . ಅಪ್ಪ ದುರ್ಗಂಗಳೊಳ್ (ಆದಿಪು. ೧೩-೫೭ ವ). ೩. ಬಾಧೆ ; ನೋವು : ಸಾವ ಸಂಕಟವನದ ನಾನೇನೆಂಬೆನಯ್ಯಾ ಅದು ಅಗಣಿತದುಃಖ (ಸಿದ್ಧೇವ. ಕ. ೮೩-೧೩೭). ४. ಕಷ್ಟ ; ತೊಂದರೆ; ಹಿಂಸೆ : ರಣಸಾಗರನಾ ಸಾಂ(ಸಂ)ಕಟದುಳ್ ಉದೆಯಪುರಂ ಧರೆಗಿ[ೞ]ಶನ್ ಪಡೆವೊಗುವಲ್ಲಿ (ಎಕ. IX, ೧೭-೨ ; ಸು. 800) ; ಕಟಿಸೂತ್ರ ವಿಳಿದು ನಡೆಯಲೀಯದಿರಲದ ನಟಿನಳಿಲನೆ ಮುಱಿದಿಟ್ಟು ಚಟುಲಾಕ್ಷಿಯರು ರಾಮನ ನೋಡುವ ಸಂಕ[ಪಾಠಾಂ. ಗ]ಟವನದೇನ ಪೇಳುವೆನು (ಕುಉಸಾಂ. ೩೦-೧೭) ; ಕಂಟಕದ ಸಂಕಟವ ಕಳೆದು ಮೇಲೇರ್ದರೂ ತಟ್ಟೆಡೊಡನೆಯೆ ತೆರೆವ ಕದವದಲ್ಲ (ಅನಿಕೇ. ೨-೯) ; ಸಂಕಟ ಬಂದರೆ ವೆಂಕಟರಮಣ (ಗಾದೆ). ೫. ದುಃಖ; ಅಳಲು ; ವ್ಯಥೆ : ಪೊಡೆವಡುವಪ್ಪಿಕೊಳ್ಳ . . . ನಲ್ಲರಗಲ್ಕೆಗೆ ಕಣ್ಣ ನೀರ್ಗಳಂ ಮಿಡಿವ ಬಹುಪ್ರಕಾರಜನಸಂಕಟಮೊಪ್ಪಿದುದಾ ಪ್ರಯಾಣದೊಳ್ (ಆದಿಪು. ४-೫೭) ; ಖಾಯಿಲೆಯಿಂದ ನರಳಿ ಬಡಕಲಾಗಿದ್ದ ಅವಳ ಮೈಯನ್ನು ನೋಡಿ ನನ್ನ ಮನಸ್ಸಿಗೆ ತುಂಬಾ ಸಂಕಟವಾಯಿತು (ಪ್ರತಾಪ. ४४). ೬. ಒಂದು ನರಕದ ಹೆಸರು : ಸಂಕಟ . . . ವಿಕಟವೆಂಬೈದು ಮಂತ್ರಿನರಕಂಗಳಿಂ ಮೋಹಿಸಿ ವಿಕರಾಳವೆಂಬರಸುನರಕವಿಹುದು (ವಿವೇಕ. ೧೫೩). [ಸಂ.]

**ಸಂಕಟಿಕ** (ನಾ). ದಾರದ ಕುಣಿಕೆ , — ಗಂಟು : ''ಸಂಕಟಿಕಮೆನಲು ಹಮ್ಮುಗೆಯ ಕುಣಿಕೆಗಳು'' (ಮಂಗರಾ. ೮೭-೩೧). [ಸಂ. ?]

**ಸಂಕಟಕಾಲ** (ನಾ). ತೊಂದರೆಯ ಸಮಯ ; ಕಷ್ಟದ ಕಾಲ : ತಮ್ಮ ಸಂಕಟಕಾಲದಲ್ಲಿ ಎರಡನೆಯವರು ತಮಗೆ ಸಹಾಯ ಮಾಡಬೇಕೆಂದು ಮನಸ್ಸು ಇದ್ದರೆ ತಾವು ಅವರ ಆಪತ್ತನ್ನು ದೂರಮಾಡಲಿಕ್ಕೆ ಕೈಲಾದ ಮಟ್ಟಿಗೆ ಯತ್ನಮಾಡಬೇಕು (ಮುಂಬಯಿ. ४-೮೫). [ಸಂ.]

**ಸಂಕಟಗೊಳ್** (ಕ್ರಿ). ತೊಂದರೆಗೆ ಸಿಲುಕು ; ಕಷ್ಟಕ್ಕೆ ಗುರಿಯಾಗು : ದೇಗುಲಕೆ ಸಾರದೆ ಹಗಲ ಕಂಬಿಯನಿಳುಹದೆಲ್ಲಿಯು ನಿಲ್ಲದಡಿಯಿಡಬಾರದಿಂತಪ್ಪ ಬಲಿದವಸ್ಥೆಯೊಳೆಯ್ದೆ ಸಂಕಟಗೊಳಲದೇತಕೆ (ಬಸವು. ४४-೧೩).

[ಸಂಕಟ + ಕೊಳ್$_1$]

**ಸಂಕಟಜ್ಯೋತಿಗ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಹಳ್ಳದ ಜೋಗಾಯಿ ಬೇತಾಳ ಬೊಮ್ಮಯ್ಯಾ ಮುಳ್ಳಿನ ಮಹಾವೀರ ಸಂಕಟ(ಚೌತಿ)ಜ್ಯೋತಿಗನು (ವಿಸಾಸು. ೫೮-೨). [ಸಂಕಟ + ಜ್ಯೋತಿಗ?]

**ಸಂಕಟಪಡು** (ಕ್ರಿ). ೧. ಆಯಾಸವನ್ನು ಹೊಂದು ; ಬಳಲು : ತಮ್ಮಾ ನೀನು ಹಸಿವೆಯಿಂದ ಸಂಕಟಪಡುವುದಿಲ್ಲವೋ? (ಮುಂಬಯಿ. ४-೭೭) ; ಅಯ್ಯಾ ಮಾರ್ಗಸ್ಥನೆ ಯಾಕೆ ಇಷ್ಟು ಸಂಕಟಪಡುತ್ತೀಯೆ? (ನೀತಿಚಿಂ. XII, ೧೨). ೨. ಕಷ್ಟಪಡು ; ತೊಂದರೆಗೊಳಗಾಗು : ಮುಂದಣ ಪರಿಣಾಮವನ್ನು ಪರಿಕಿಸದೆಯೇ ತಿನ್ನುವ ಅನ್ನಕ್ಕೂ ಮಣ್ಣನ್ನು ತೂರಿಕೊಂಡು ಸಂಕಟಪಡಬೇಕೆನಿಸಿದ ನನ್ನ ಅಲ್ಪಬುದ್ಧಿಯನ್ನು ಸುಟ್ಟರು (ಚೆನ್ನಬೇ. ೧೦) ; ಇಂಡಿಯಾದಲ್ಲಿ ಮೊಟ್ಟಮೊದಲು ಮಹಮ್ಮದೀಯ್ಯರಿಂದ ಸಂಕಟಪಟ್ಟದ್ದು ಸಿಂಧುದೇಶ (ಭೂಗೋಳ. ೭೧). [ಸಂಕಟ + ಪಡು$_1$]

**ಸಂಕಟಿ$_1$**, ಸಂಗಟಿ$_1$ (ನಾ). ೧. ರಾಗಿ ಅಥವಾ ಇತರ ಧಾನ್ಯದ ಹಿಟ್ಟಿನಿಂದ ಬೇಯಿಸಿ ಮಾಡುವ ಮುದ್ದೆ : ನವಣೆಯ ಪಿಟ್ಟಂ ನೆಲದಾಟದ ಗಂಡೆಯುಮಂ ಕೂಡಿ ಹಿಟ್ಟಗುಟ್ಟಿ ಸಂಕಟಿಯಾಗಿ[ಪಾಠಾಂ. ಸಂಟೆಯಾಗಿ, ಸಂಕುಟೆಯಂ] ತೊಳಸಿ ತುಪ್ಪಮನಾದೊಡಂ ಪಾಲನಾದೊಡಂ ಕಲಸಿ ಮೆಲಲ್ ವೀರ್ಯವೃದ್ಧಿಯಕ್ಕುಂ (ಲೋಕೋಪ. ೯-೪೫ ಟೀಕು). ೨. ತೆಳುವಾದ ಅಂಬಲಿ ; ಗಂಜಿ : ''ಸಂಕಟ (ಸಂಗಟ) – ಅಳ್ಳಕನುಚ್ಚು, ಅಳ್ಳಕಸಜ್ಜಕ'' (ಜಾನಕೋ. ೪೭). **ಸಂಗಟಿ$_1$** : ೧. ನುಚ್ಚು, ಅಂಬಲಿ, ಗಂಜಿ, ಗುಗ್ಗರಿ, ಸಂಗಟಿ, ರೊಟ್ಟಿ ಮೊದಲಾದವು (ನಾಣ್ಣುಡಿ. ೬೯). ೨. ಸಜ್ಜೆಯ ಸಂಗಟಿಯು, ಚಳಿಗಾಲದಲ್ಲಿ ಹಿಂಡುವ ಎಮ್ಮೆಗಳಿಗೆ ಬಹಳ ಹಿತಕರವಾಗಿದೆ (ಗೋಗ್ರಾಸ. ೭೦). [ದೇ. ‖ ತಮಿ. ಚಙ್ಕಟಿ ; ತೆಲು. ಸಂಕಟಿ]

**ಸಂಕಟಿ$_2$** 'ಸಂಕಡಿ$_2$' ನೋ.

**ಸಂಕಟಿಸು** (ಕ್ರಿ) ಇಕ್ಕಟ್ಟಾಗುವಂತೆ ತುಂಬು ; ಇರುಕು ; ಇಡಿಕಿರಿ : ಭಟರುಗಳು ವಿದ್ವಾನುಗಳು . . . ಗಮಕಿ ಗಾಯಕರು ಮಿಗೆ ಸಂಕಟಿಸಿ ಮೆಚಿದುದು ಚಪ್ಪರದೊಳು (ಜೀವಂಚ. ೭-೫೭). [ಸಂಕಟ + – ಇಸು$_3$]

**ಸಂಕಡಿ$_1$** 'ಸಂಗಡಿ$_1$' ನೋ.

**ಸಂಕಡಿ$_2$**, ಸಂಕಟಿ$_2$, ಸಂಗಟ (ನಾ). ೧. ಸ್ಥಳಸಂಕೋಚ ; ಇಕ್ಕಟ್ಟು. ೨. ಇಕ್ಕಟ್ಟಾದ ಸ್ಥಳ ; ಆಯಕಟ್ಟಾದ ಪ್ರದೇಶ : ಮಣಲತ್ತಿ ಹೊತ್ತಿ ಕವಿದಿಕ್ಕುವ ಪೆರ್ಗೊಡವಾವಿನೋಳಿ ಸಂಕಡಿಯೆಡೆಗೆಯ್ದೆ ವಂದಿಡುವ ಡೆಂಕಣಿ ಮುಟ್ಟಿವರಲ್ಕೆ ಬಿಟ್ಟು ಮುಂಗೆಡುಪುವ ಕಟ್ಟುಗಾಲಿಗಳಿನದ್ಭುತಮಾದುದು ಕೋಂಟೆಗಾಳೆಗಂ (ಕುಸುಮಾ. ೧೧-೪೨). ೩. ದುಃಖ ; ವ್ಯಥೆ ; ಕ್ಲೇಶ. ೧,೩: ಬಡತನಮೆಂಬುದು ಸತಿಯರ ನಡುವಿನೊಳಾಲೀಢವಲಗುವಿನ್ನಣದೊಳ್ ಸಂಕಡಿ[ಪಾಠಾಂ. ಟಿ] ಕುಚಮಧ್ಯದೊಳಾ ಕೋಳ್ಕುಡಿ ಕುಂಟಣಿವದಿರೊಳಲ್ಲದಿಲ್ಲಾ ನಾಡೊಳ್ (ಧರ್ಮಪ. ೧-೪೩). ೪. ನಿಬಿಡವಾಗಿರುವ ಗೊಂಚಲು : ಚಂದನದ ವಂದನಮಾಲೆಗಳಿಂ ಗೊಜ್ಜೆಯ ಸಂಕಡಿಗಳಿಂ . . . ಕಂಪಿನ ಕಡಾರಮುಂ ತಣ್ಪಿನ ತಾಣಮುಮೆನಿಸಿರ್ದ ಲತಾಮಂಟಪಮಂ ಪೊಕ್ಕು (ಕುಸುಮಾ. ೧೨-೧೫೭ ವ). **ಸಂಕಟಿ$_2$** : ೩. ಆರಿಗೆ ಪೇಳುವೆನೀ ಸಂಕಟಿಯ[ಪಾಠಾಂ. ಸಂಕಟವ, ಸಂಗಡಿಯ] (ಹಚಕಾ. ೧೨-೩೦ ರಗಳೆ). **ಸಂಗಟ** : ೩. ಆವ ಫಲವನದಾವ ರಸವನದಾವ ಚಿಗುರ ಕಪೋತಿ ಬಯಸುವಳಾವ ಸಂಗಟವಾದಡಾತನದನು ಮನದೊಳಗೆ ಭಾವಿಸದೆ (ನಿಭಾಗ. ೧೧-೧೩-೫೩). [< ಸಂ. ಸಂಕಟ]

**ಸಂಕಡಿಗೊಳ್** (ಕ್ರಿ). ದುಃಖಪಡು ; ವ್ಯಥೆಗೊಳ್ಳು : ಮಾನಹಾನಿಯಿಂದಾದ ಬರ್ದುಂಕದೇವುದೆನುತುಂ ಸಲೆ ಸಂಕಡಿಗೊಂಡರಾ ನೃಪರ್ (ಶಾಂತೀಶ್ವ. ೭-೧೩೦). [ಸಂಕಡಿ$_2$ + ಕೊಳ್$_1$]

**ಸಂಕಥೆ** (ನಾ). ಮಾತುಕತೆ ; ಸಂಭಾಷಣೆ : ''ಸಂಕಥಾ, ಅನ್ಯೋನ್ಯಸಂಗೀತಿಃ — ಈ ೨ ಕೂಡೆಕೂಡೆ ಮಾತಾಡುವುದು'' (ಹಲಾಯು. ೧೨೮-೯೪). [ಸಂ. ಸಂಕಥಾ]

**ಸಂಕಪಾಲ**, ಸುಂಕಪಾಳ (ನಾ). ಒಂದು ಬಗೆಯ ನಾಗ ; ಅಷ್ಟಕುಲಫಣಿಗಳಲ್ಲಿ ಒಂದು : ''ಸಂಕಪಾಳ(ಲ) — ಶಂಕಪಾಲ = ಒಬ್ಬ ನಾಗ'' (ತದ್ಭಕೋ. ೪೧); ಅಂಕಡೊಂಕ ಸಂಕಪಾಲ ಮೂರುತಲೆಗೆ ಹತ್ತು ಕಾಲು (ಒಗಟು. ೬). **ಸುಂಕಪಾಳ** : ಬೇರೆ ವಿಷಯುಕ್ತಸರ್ಪಗಳು . . . ಸುಂಕಪಾಳ, ಜೋಗಿ, ಸುರ್ಗಂಡ, ಅಜಗರ ಮುಂತಾದವುಗಳು ಪ್ರಸಿದ್ಧ ಉಂಟು (ಕಭಾಗ. ೭೭). [< ಸಂ. ಶಂಖಪಾಲ]

**ಸಂಕಮ** (ನಾ). ಇಂದ್ರ : ಪಾಂಡುರಾಜತನಯಂ ಗಾಂಡೀವಿಯೆಂ . . . ಅಣ್ಣನೆಂದೊಂದು ಮಾತನಣಂ ಮಿಾಜದೆ ನಿಂದEದುತಿ ಸಂಕಮ[ಪಾಠಾಂ. ನಿಂದು ಶಂಕರ, ನಿಂದ ಪಂಕಮ, ನಿಂದ ಸಂಕತ]ನ ನೀನಾರಾಧಿಸೆಂದಿಂತಿದ ಮುನಿ ಪಾರಾಶರನೊಲ್ದು ಪೇಟ್ ಹರEಠಿತಿ ಬರ್ಪನ್ನಂ ತಪಂಗೆಯ್ದಪೆಂ (ಪಂಪಭಾ. ೮-೫) ; ನೆಗಟ್ದಾ ಭಾರತಮಲ್ಲ ಶಂತನುಜ Eಸಂಕಮಜತಿ ಬಾಣಾಘಾತದಿಂ ಭೀಮ ಭೀಮಗದಾದಂಡವಿಘಾತದಿಂ ಕುರುನೃಪಾನೀಕಂ ಪಡಲ್ವಟ್ಟು . . . ಬಿಟ್ಟಶ್ವದಿಂ ಬಿಟ್ಟ ದಂತಿಗಳಿಂದಂ ಜವನುಂಡು ಕಾಜಿದವೊಲಾಯ್ತೆತ್ತಂ ಕುರುಕ್ಷೇತ್ರದೊಳ್ (ಗದಾಯು. ೩-೨) ; IP ಈ ಪದದ ಬಗೆಗೆ ಇರುವ ಕೆಲವು ಅಭಿಪ್ರಾಯಗಳನ್ನು ಇಲ್ಲಿ ಸೂಚಿಸಲಾಗಿದೆ. ''ಶಂತನುಜ — ಶಂತನು ಪುತ್ರನಾದ ಭೀಷ್ಮ. ಭೀಮಾರ್ಜುನರ ಸಾಹಸವರ್ಣನೆಯ ಸಂದರ್ಭದಲ್ಲಿ ಭೀಷ್ಮನ ಬಾಣಪ್ರಯೋಗದ ಹೊಗಳಿಕೆಗೆ ಔಚಿತ್ಯ ಕಾಣಿಸುವುದಿಲ್ಲ. ಮುಂದಿನ ಪದ್ಯದಲ್ಲಿಯೇ ಭೀಮನ ಗದೆಯ ಪ್ರಶಂಸೆ ಬರುತ್ತದೆ. ಅರ್ಜುನನ ಹೆಸರು ಪದ್ಯದಲ್ಲಿ ಇನ್ನೆಲ್ಲೂ ಬಂದಿಲ್ಲ. ಇದನ್ನು ನೋಡಿದರೆ ''ಶಂತನುಜ'' ಎಂಬುದು ಮೂಲಪಾಠವಾಗಿರಲಾರದೆಂದೂ ಅದಕ್ಕೆ ಪ್ರತಿಯಾಗಿ ಅಲ್ಲಿ ಅರ್ಜುನನ ಹೆಸರು ಇದ್ದಿರಬೇಕೆಂದೂ ತೋರುತ್ತದೆ; [ಶಕ್ರಸುತ] ಎಂದೋ [ಸಂಕಮಜ] ಎಂದೋ ಇದ್ದಿರಬಹುದೆ? ''ಸಂಕಮ'' ಎಂಬುದಕ್ಕೆ ಇಂದ್ರ ಎಂಬ ಅರ್ಥವಿರುವಂತೆ ತೋರುತ್ತದೆ (ಪಂಪಭಾ. ೮-೫ರ ಪಾಠಾಂತರಗಳನ್ನು ನೋಡಿ)'' (ಗದಾಸಂ. ಟಿಪ್ಪಣಿಗಳು. ೧೧೭) – ಹೀಗೆ ಶ್ರೀ. ತೀನಂಶ್ರೀಯವರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಪಂಪಭಾರತ ೮-೫ರ ಪದ್ಯದಲ್ಲಿ ವರ್ಣಿತವಾಗಿರುವ ಅರ್ಜುನನ ತಪಸ್ಸು ಶಂಕರನನ್ನು ಕುರಿತದ್ದೋ ಅಥವಾ ಇಂದ್ರನನ್ನು ಕುರಿತದ್ದೋ ಎಂಬುದರ ಬಗೆಗೇ ಹಲವು ಭಿನ್ನಾಭಿಪ್ರಾಯಗಳಿವೆ. (ಉದಾಹರಣೆಗೆ ಕನ್ನಡ ಸಾಹಿತ್ಯ ಪರಿಷತ್ತಿನ 'ವಿಕ್ರಮಾರ್ಜುನ ವಿಜಯ'ದ ಪುನರ್ಮುದ್ರಣದ ಉಪೋದ್ಘಾತವನ್ನು ನೋಡಿ). ಇದರ ಮೇರೆಗೆ 'ಶಂಕರನ' ಎಂಬ ಪಾಠಾಂತರವು ಹೆಚ್ಚು ಸ್ವೀಕಾರಯುಕ್ತವಾಗಬಹುದಾದ್ದರಿಂದ 'ಸಂಕಮ' ಎಂಬ ಪಾಠಾಂತರರೂಪವನ್ನು ಬಿಡುವುದು ಉಚಿತವಾಗಬಹುದೆ? [< ಸಂ. ಶಕ್ರನ್?]

**ಸಂಕಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ಪೆರ್ಗ್ಗಡೆ ರೇತಯ್ಯನ ವೆದ ಸಂಕಯ್ಯ (ಎಕ. II (R), ೨೪೨-೨ ; ಸು. 1000). [ಸಂಕ? + ಅಯ್ಯ$_1$]

**ಸಂಕರ$_1$** (ನಾ). ಶಿವ ; ಈಶ್ವರ : ''ಸಂಕರ — ಶಂಕರ = ಶಿವ'' (ತದ್ಭಕೋ. ೪೧). 'ಸಂಕರಗೊಂಡ' ಪರಾ. [< ಸಂ. ಶಂಕರ]

**ಸಂಕರ$_2$** (ನಾ). ೧. ಕಲಬೆರಕೆ ; ಮಿಶ್ರಣ : ಕರ್ಣಾಟಕಸಾಮ್ರಾಜ್ಯದ ಮಹಾಪ್ರಯತ್ನದ ಫಲವಾಗಿ ದಕ್ಷಿಣದೇಶದಲ್ಲಿ ಪ್ರಾಚೀನಭಾರತೀಯಸಂಗೀತವು ಬಹಳ ಮಟ್ಟಿಗೆ ಸಂಕರವಿಲ್ಲದೆ ನಿಂತಿತು (ಗಾನಕ. ೪೮). ೨. ಅಂತರ್ಜಾತೀಯವಿವಾಹಗಳಿಂದ ಉಂಟಾಗುವ ಮಿಶ್ರಜಾತಿ, — ಸಂಕೀರ್ಣವರ್ಣ : ಸರಿಯೆನಿಸದ ಬೇಜ್ ಬೇಜ್ ಬೆರಸಿದಾಗಳಲ್ಲಿ ಪುಟ್ಟಿದರನೆ ನೋಡಿ ಸಂಕರದವರೆಂದು ಬಗೆವುದು (ಜನಪ. ೨-೧೮). ೩. ಅಡ್ಡತಳಿ ; ಮಿಶ್ರತಳಿ : *ಬಲುಮೆಯ ಸಂಕರದ(ಹೈಬ್ರಿಡ್) ಫಲವನ್ನೂ ಪಡೆಯಬಹುದು (ಕವಿಕೋ. I, ೨೨೨). ೪. ಗುಡಿಸಿಹಾಕುವಂಥದು ; ಕಸ : ''ಸಂಕರಃ, ಅವಕರಃ — ಈ ೨ ಕಸವು'' (ಹಲಾಯು. ೫೦-೧೪೭) ; ಎರಟ್ಟಿಡಿಯ ಪೂಮರದಿಂ ಕಟಿಪೂಗಳತ್ತಮಿತ್ತಂ ಕವಿದಲ್ಲಿ ಮೆಲ್ಲನುಗೆ ತೇಂಕುವ ಪೂವಿನ ಸಂಕರಂಗಳಂ ನೂಂಕುವುವೂರ್ಮಿಮಾಲಿನಿಯ ತುಂಗತರತ್ತರಲೋರ್ಮಿಮಾಲೆಗಳ್ (ಆದಿಪು. ೧-೬೧). ೫. ಹೊಲಸಾದುದು ; ತಿಪ್ಪೆ : ''ಸಂಕರಃ = ತಿಪ್ಪೆಯುಂ, ಬೆರಕೆಯ ಜಾತಿಯುಂ'' (ಕಾಶಕ್ಕ. ೧೮೫) ; ಆ ತಿಳಿವಿನ ಅರುಣಾಂಕುರ ಮೊಳೆಯಲು ಬಾಳ್ಕೆಯು ಶಂಕರ ; ಇಲ್ಲದಿರಲು ಬರಿ ಸಂಕರ (ಚಿಂತನ. ೨೭-೧೭). ೬. [ಕಾವ್ಯಮಿಾ] ಮಿಶ್ರಾಲಂಕಾರಗಳಲ್ಲಿ ಒಂದು ; ಒಂದರಲ್ಲಿ ಮತ್ತೊಂದು ಕಲೆತುಹೋಗುವ ಅಲಂಕಾರ : ಸಂಸೃಷ್ಟಿಯಲ್ಲಿರುವ ಅಲಂಕಾರಗಳು ಒಂದರಲ್ಲಿ ಮತ್ತೊಂದು ಕಲೆಯದೆ ತಿಲತಂಡುಲಗಳಂತೆ ಇರುತ್ತವೆ. ಆದರೆ 'ಸಂಕರ' ವೆನ್ನುವುದು ಹಾಲುನೀರುಗಳಂತೆ ಸೇರಿಹೋಗಿ ಒಂದಕ್ಕೆ ಮತ್ತೊಂದು ಉಪಜೀವಕವಾಗಿರುತ್ತದೆ (ಕೈಪಿಡಿ. ೨೪೯). [ಸಂ.]

**ಸಂಕರ$_3$** (ನಾ). ಗೊಬ್ಬರ ಮತ್ತು ಧಾನ್ಯವನ್ನು ಸಾಗಿಸಲು ಎತ್ತಿನ ಹೆಗಲ ಮೇಲೆ ಹೊರಿಸುವ ಇಬ್ಬಾಯಿಯ ಚೀಲ ; ಹಸುಬೆಯ ಚೀಲ : (೬). [?]

**ಸಂಕರಗೊಂಡ** (ನಾ). ಒಬ್ಬಾತನ ಹೆಸರು : ಮಾರಸಿಂಗದೇವಂ ಮೆಚ್ಚಿ ಅಸಗಯ್ಯನ ಮಗಂ ಸಂಕರಗೊಂಡಂಗೆ ಕಲ್ನಟುಗೊಟ್ಟಂ (ಎಕ. V, ಚೆನ್ನರಾ. ೨೭೭-೧೭ ; 971). [ಸಂಕರ$_1$ + ಗೊಂಡ$_1$ (< ಗಾಮುಂಡ)]

**ಸಂಕರಗೊಳ್** (ಕ್ರಿ). ಬೆರಕೆಯಾಗು ; ಮಿಶ್ರವಾಗು : ಕಡಿವಿರ್ದ ಭಟರ್ . . . ಸಿಡಿಲ್ವುಡಿದ ರಥಂಗಳ್ ಪೋಟ್ಪೋದೊಡಲೊಂದೊಂದೆಸಗೆ ಬಿದ್ದ ಭದ್ರಗಜಂಗಳ್ ಪರಿವರುಣಜಲದ ತೊಟೆಗಳ ತರಂಗದೊಳ್ ತೇಂಕಿ ಸಂಕರಗೊಳಲ್ (ಮಹಾಪ್ರ. ೧೨-೨೨೦). [ಸಂಕರ$_2$ + ಕೊಳ್$_1$]

**ಸಂಕರಜಾತಿ** (ನಾ). ಮಿಶ್ರಜಾತಿ, - ಜನಾಂಗ : "ಸಂಕೀರ್ಣಾಃ — ಸಂಕರಜಾತಿಗಳೆಂಬಲ್ಪಡುವರು" (ಸಿದ್ಧಾಂತಿ. ೩೦೮). **[ಸಂ.]**

**ಸಂಕರದೇಶ** (ನಾ). ಮಿಶ್ರಗುಣಲಕ್ಷಣಗಳನ್ನೊಳಗೊಂಡ ದೇಶ : ಅಲ್ಪನೀರುಳ್ಳದ್ದಾಗಿಯೂ ಅಲ್ಪವೃಕ್ಷಂಗಳುಳ್ಳದ್ದಾಗಿಯೂ ಇರುವ ದೇಶವೇ ಜಾಂಗಲದೇಶವೆನಿಸಿಕೊಂಬುದು . . . ಬಹಳ ನೀರು ಉಂಟಾದ ದೇಶವು ಅನೂಪದೇಶವೆನಿಸಿಕೊಂಡು ಶ್ಲೇಷ್ಮವ್ಯಾಧಿವಾತರೋಗಗಳನ್ನುಂಟುಮಾಡುವುದು. ಈ ಎರಡೂ ಲಕ್ಷಣಗಳೂ ಕೂಡಿರುವ ಸಂಕರದೇಶವು ಸಾಧಾರಣದೇಶವೆನಿಸಿಕೊಂಬುದು (ಸಕವೈ. ೧೫). **[ಸಂ.]**

**ಸಂಕರರೋಗ** (ನಾ). ಮಿಶ್ರಗುಣಲಕ್ಷಣಗಳಿಂದ ಕೂಡಿದ ಖಾಯಿಲೆ, — ರೋಗ : ಈ ಎರಡೂ ಲಕ್ಷಣಗಳೂ ಕೂಡಿರುವ ಸಂಕರದೇಶವು ಸಾಧಾರಣದೇಶವೆನಿಸಿಕೊಂಬುದು. ಸಂಕರರೋಗಗಳನ್ನುಂಟುಮಾಡುವುದು (ಸಕವೈ. ೧೫). **[ಸಂ.]**

**ಸಂಕರಾತ್ರಿ** (ನಾ). ಸಂಕ್ರಾಂತಿ ಹಬ್ಬ : ನಮ್ಮ ವಂಶಕೆ ವರುಷಕೊಂದು ಸಂಕರಾತ್ರಿಯ ಹಬ್ಬದೊಳಗೆ ಪಾಲುಪೊಂಗಲ ಮಾಳ್ಪೆವೆಂದು ಆಗ ಹಬ್ಬವ ಮಾಡಿದ (ಗೋಹಾಡು. ೨೩-೧೦೨). [< ಸಂ. ಸಂಕ್ರಾಂತಿ]

**ಸಂಕರಿಸು** (ಕ್ರಿ). ಕಲೆ ; ಸೇರು : ಸುಪ್ರಮಾನಂದಬಾಷ್ಪಗಳಿಂದಲೂ ಸಕಲಾಂಗದೊಳು ಸಂಕರಿಸಿದ ರೋಮಾಂಕುರಂಗಳಿಂದಲೂ (ಕಕುಮಾ. ೩.೨೨-೧೦). [ಸಂಕರ$_2$ + - ಇಸು$_1$]

**ಸಂಕರೀಕರಣ** (ನಾ). ೧. ಮಿಶ್ರಗೊಳಿಸುವುದು ; ಬೆರಸುವುದು. ೨. ಅನೀತಿ ; ಪಾಪ. ೩. ಗಲಿಬಿಲಿ ; ಗೊಂದಲ. **[ಸಂ.]**

**ಸಂಕರುಷ** (ನಾ). ನಿವಾರಿಸುವಿಕೆ ; ತೊಡೆದುಹಾಕುವಿಕೆ : ಕೋಲ ಸೈರಿಸು ಸೈರಿಸಾದಡೆ ಭಾಳಲಿಪಿ ಸಂಕರುಷ ವಿಪುಳ ಶರಾಳಿಯಿವೆ ಕೊಳ್ಳೆನುತ ನಕುಳನನೆಚ್ಚನಾ ಕರ್ಣ (ಕುವ್ಯಾಕ. ೪-೧೪). [< ಸಂ. ಸಂಕರ್ಷ]

**ಸಂಕರುಷಣ** (ನಾ). ೧. ಬಲರಾಮ : ಪುರವ ಹೊಱವಂಟವರು ಬರಲಬ್ಬರಣೆಯಾಯ್ತುರಮನೆಯೊಳಗೆ ಸಂಕರುಷಣಂಗಱುಹಿದರು ಸಂನ್ಯಾಸಿಯ ಸಮಾಧಿಗಳ (ಕುವ್ಯಾಆ. ೧೯-೪೦); ಸಂಕರುಷಣನು ನುಡಿದನನುಜಗೆ ಕುರುನೃಪನ ಹದನ (ಕೃಷ್ಣಾಸ. ೧೯-೩೭). ೨. ಆಕರ್ಷಕವಾದ ರೂಪುಳ್ಳವನು ; ವಿಷ್ಣು : ಪಂಕಜಾಕ್ಷ ನೀನು ಎನ್ನ ಮಂಕುಬುದ್ಧಿ ಬಿಡಿಸಿ ನಿನ್ನ ಕಿಂಕರನ್ನ ಮಾಡಿಕೊಳ್ಳೊ ಸಂಕರುಷಣ (ಕನಕ. ೯೮-೨); ಹರಿ ನರಸಿಂಹ ಪ್ರದ್ಯುಮ್ನ ಜನಾರ್ಧನ ಪುರುಷೋತ್ತಮ ಸಂಕರುಷಣ (ಎಕ. VI (R). ಶ್ರೀರಂಗ. ೧೦ ; 17ನೆಯ ಶತ). [< ಸಂ. ಸಂಕರ್ಷಣ]

**ಸಂಕರ್ಷಣ** (ನಾ). ೧. ಆಕರ್ಷಿಸುವಿಕೆ ; ಸೆಳೆತ. ೨. ಪರಿಹರಿಸುವಂಥವನು ; ನಿವಾರಕ : ಸಕಲಜಗತ್ಪವಿತ್ರತೀರ್ಥಸಲಿಲಸಂಪಾದಿತ ನಿಖಿಲಾಘಸಂಕರ್ಷಣಾಂ [ಪಾಠಾಂ. ಮರ್ಷಣಂ] ಸಂಕರ್ಷಣಂ ಜಂಗಮಹಿಮಾಚಲಮ ಬರ್ಪಂತೆಯುಂ ಬಂದು (ಗದಾಯು. ೭-೫೭ ವ). ೩. ಶ್ರೀಕೃಷ್ಣನ ಅಣ್ಣ ; ಬಲರಾಮ : ಸಂಕರ್ಷಣನಾತನ ಮನದುತ್ಕರ್ಷತೆಯನಱಿದು . . . ಧರ್ಮಪುತ್ರನನಿಂತೆಂದಂ (ಪಂಪಭಾ. ೧೩-೯೦ ವ). **[ಸಂ.]**

**ಸಂಕಲ** (ನಾ). ಗುಂಪು ; ಸಮೂಹ ; ಮೊತ್ತ : (ಚತುನಿ. ೬ I. ೮೦ ). **[ಸಂ.]**

**ಸಂಕಲನ, ಸಂಕಳನ** (ನಾ). ೧. ಒಟ್ಟುಗೂಡಿಸುವುದು ; ಕಲೆ ಹಾಕುವುದು ; ಸಂಗ್ರಹಿಸುವುದು : ಸಲೆ ಮಥನಪಕ್ವಕ್ರಿಯಾಸಂಕಲನಮಾನಂಗಳೊಳು ಪ್ರತಿತಸ್ಥಳಮದಾಗಲು ಮೇಲೆ ಇದು ಸನ್ಮಾರ್ಗವಲ್ಲೆನುತ (ಬಸವು. ೫೦-೩೯). ೨. ಆಯ್ದು ಕೂಡಿಸಿದ ಸಾಹಿತ್ಯಭಾಗಗಳ ಸಂಪುಟ, — ಸಂಗ್ರಹ : ಸಂಗೀತದ ಕೃತಿಕಾರರ ಕೀರ್ತನೆಗಳ ಮತ್ತು ಕೃತಿಗಳ ಸಂಕಲನಗಳೂ ಪ್ರಕಟವಾಗಿವೆ (ಸಂಗೀತ. V ಮುನ್ನುಡಿ) ; ಇದು ವಚನಗಳನ್ನು ಸಂಕಲನ ಮಾಡಿರುವ ಗ್ರಂಥ (ಶೂನ್ಯಕು. ೧). ೩. [ಗಣಿತ] ಕೂಡುವುದು ; ಒಟ್ಟು ಮೊತ್ತವನ್ನು ಕಂಡುಹಿಡಿಯುವುದು : ಪರಿಕರ್ಮಗಳು ಎಂಬ ಪದದಲ್ಲಿ ಸಂಕಲನ, ವ್ಯವಕಲನ, ಗುಣಕಾರ, ಭಾಗಹಾರ, ವರ್ಗಮೂಲ, ಘನಮೂಲ ಮುಂತಾದುವುಗಳು ಅಡಕವಾಗುತ್ತವೆ (ಗಣಿಚ. ೨೦೨). 'ವ್ಯವಕಲನ' ಪರಾ. **ಸಂಕಳನ** : ೧. 'ಸಂಕಳಿಸು' ಪರಾ. **[ಸಂ.]**

**ಸಂಕಲಿಕೆ** (ನಾ). ೧. ಕೂಟ ; ಸೇರುವೆ : (೬). ೨. ವಧೂವರರು ವಿವಾಹ ಸಮಯದಲ್ಲಿ ಉಡುವ (ಜೋಡಿ)ವಸ್ತ್ರ : ಹಳದಿಯ ಬಣ್ಣದ ಸಂಕಲಿಕೆಯೊಂದನ್ನು ವಧುವಿಗೆ ಉಡಿಸಿದ್ದರು (ಎದಿರೇ. ೯). 'ಸಂಕಲಿಕೆಪಂಚೆ' ಪರಾ.

[ಸಂಕಲ + - ಇಕೆ./ ಸಂ. ಸಂಘಾಟಿಕಾ = ೧. ಜೊತೆ, ಜೋಡಿ. ೨. ಸ್ತ್ರೀಯ ಉಡುಪು]

**ಸಂಕಲಿಕೆಪಂಚೆ** (ನಾ). ವಿವಾಹಸಮಯದಲ್ಲಿ ವಧುವಿನ ಕಡೆಯವರು ವರನಿಗೆ ಕೊಡುವ ಜೋಡಿಪಂಚೆ : ಒಂದು ಬೆಳ್ಳಿಯ ರೂಪಾಯಿ, ತಾಮ್ರದ ಪಂಚಪಾತ್ರ, ಉದ್ಧರಣೆ, ಸಂಕಲಿಕೆಪಂಚೆ, ಪಾದರಕ್ಷೆ, ಕೊಡೆ ಇಷ್ಟನ್ನು ವರೋಪಚಾರವಾಗಿ ಕೊಟ್ಟು . . . ಮದುವೆ ಮಾಡಿಕೊಟ್ಟರು (ವಂಶವೃ. ೧೯೫). [ಸಂಕಲಿಕೆ + ಪಂಚೆ]

**ಸಂಕಲಿಕೆಸೀರೆ** (ನಾ). ವಿವಾಹಸಮಯದಲ್ಲಿ ವರನ ಕಡೆಯವರು ವಧುವಿಗೆ ಕೊಡುವ (ಜೋಡಿ) ಸೀರೆ : ತೌರಿನಲ್ಲಿ ಏನು ಇಟ್ಟಿದ್ದಾರೆ ? . . . ಸಂಕಲಿಕೆಸೀರೆ ಯಾವುದು? (ಸಾವಿಸ. ೪೫). [ಸಂಕಲಿಕೆ + ಸೀರೆ]

**ಸಂಕಲಿತ, ಸಂಕಳಿತ** (ಗು). ೧. ಒಟ್ಟುಗೂಡಿಸಿದ ; ಸಂಗ್ರಹಿಸಿದ. ೨. ಮಿಶ್ರವಾದ : ಒಲಿದು ಜಂಗಮಲಿಂಗ ಗುರುಪದಜಲಜಪರಿಚರಿಯಕ್ರಿಯಾಸಂಕಲಿತಭಕ್ತಿಯೊಳಲಸದಾಗಳು ಮಾಡಬೇಕೆಂದು (ಬಸವು. ೨೨-೨೫). (ನಾ). ೩. ಒಟ್ಟುಗೂಡಿಸಿದುದು ; ಸಂಗ್ರಹ : ಈಗ ಪ್ರಸಿದ್ಧವಾಗಿರುವ ಶೂನ್ಯಸಂಪಾದನೆಯು ಗೂಳೂರ ಸಿದ್ಧವೀರಣ್ಣೊಡೆಯನಿಂದ ಸಂಕಲಿತವಾದದ್ದು (ಶೂನ್ಯಕು. ೩೫). ೪. [ಗಣಿತ] ಕೂಡುವುದು ; ಸಂಕಲನ. **ಸಂಕಳಿತ** : ೧. ಸಂಕಳಿತ ಬಹುಳ ತಾರಾಸಂಕುಳದಿಂ ಪೋಲ್ತುದಭ್ರಮಾವೃತತಿಮಿರಂ ತೇಂಕುವ ಮಲ್ಲೀಮುಕುಳದ ಸಂಕುಳಮಂ ತಳೆದು ನಿಂದ ಜಗುನೆಯ ಮಡುವಂ (ಪುಷ್ಪಪು. ೮-೧೧). **[ಸಂ.]**

**ಸಂಕಲಿತಜ್ವರ** (ನಾ). ಒಂದು ಬಗೆಯ ಜ್ವರ : ಗಂಟುಭಾರಂಗಿ, ಪರ್ಪಾಟಕ . . . ಇವಂ ಕಷಾಯವಿಕ್ಕಿ ಕೊಡಲು ಚಾತುರ್ಥಿಕ, ಶೀತಜ್ವರ, ಸಂಕಲಿತಜ್ವರ ಸಹ ಮಾಣ್ಗುಂ (ಸಕವೈ. ೧೧೮). **[ಸಂ.]**

**ಸಂಕಲಿಸು, ಸಂಕಳಿಸು** (ಕ್ರಿ). ೧. ಸೇರಿಸು ; ಕೂಡಿಸು : ಸ್ಥಿತಋಣಮಂ ತೆಗದು ಪೃಥಕ್ ಸ್ಥಾಪಿಸುತ್ತಂ ವಿರಲು ಅದಕ್ಕೆ ಸಂದೃಷ್ಟಿಯಿದಂ ಸಂಕಲಿಸುತ್ತಂ ವಿರಲು ರೂಪೋನ್ಯಕಸ್ಪರ್ದ (ಗೊಮ್ಮಸಾ. ೪೮-೨). ೨. (ಕತೆ, ಹಾಡು ಮೊದಲಾದುವನ್ನು) ಆಯ್ದು ಕಲೆಹಾಕು ; ಸಂಗ್ರಹಿಸು : ಗೌರಮ್ಮ ಸ್ಮಾರಕ ಕಥಾಸ್ಪರ್ಧೆಯ ಕತೆಗಳನ್ನು . . . ಸಂಕಲಿಸುವ ಸಮಯದಲ್ಲಿ ಗಾತ್ರಕ್ಕೆ ಇನ್ನು ಕೆಲವು ಹೊಸ ಕತೆಗಳನ್ನು ಸೇರಿಸಬೇಕಾಗಿ ಕಂಡಿತು (ತೇಮೋಡ. ೩ ನಿವೇದನೆ) ; ಬೆಳುವಲದಲ್ಲಿ ಸಂಕಲಿಸಲಾದ ಹಾಡಿನಲ್ಲಿ ಗಂಗೆಯು . . . ಪಾತಾಳದಿಂದ ಹೊರಬಿದ್ದು ಕತ್ತೆಯ ಮೂಗನ್ನು ಸೀಳಿದಳೆಂದು ಹಾಡಿನಲ್ಲಿ ಬಂದಿದೆ (ಕನ್ನಜಾ. ೧೭೯). **ಸಂಕಳಿಸು** : ೧. ಪ್ರಥಮ ದ್ವಿತೀಯೋಭಯಪಂಕ್ತಿ ಸಂಬಂಧಿ ಋಣಮಿದು ಇದಂ ಸಂಕಳಿಸಿ ಅಧಿಕದ್ವಿರೂಪಮ ತೆಗೆದು (ಗೊಮ್ಮಸಾ. ೪೫-೨).

[ಸಂಕಲನ + - ಇಸು$_1$]

**ಸಂಕಲೆ**$_1$, ಸಂಕವಾಲಿ, ಸಂಕವಾಲೆ, ಸಂಕಾಲೆ, ಸಂಕೊಲೆ, ಸಂಕೋಲೆ (ನಾ). ೧. (ಕಬ್ಬಿಣದ) ಸರಪಣಿ ; ಚೈನು : "ಹಿಂಜೀರಮಂದುಕಂ ಶೃಂಖಳಂ ಪಾದಬಂಧಂ ನಿಗಳಮೆನಲು ಸಂಕಲೆಯೆನಿಕ್ಕುಂ" (ಮಂಗರಾ. ೪೬-೨) ; ರಂಗಮಂಟಪದ ಮುಖದ ಮೂಱುಂ ಕದವನಿಕ್ಕುತಂ ವಿಸ್ತರದ ಸಂಕಲೆಗಳಂ ಹೂಡಿ ಬಿಯ್ಗಂಗಳನಿಕ್ಕಿ (ಕಣ್ಣರ. ದೇ. ೧೩೫-೭). ೨. ಬೇಡಿ ; ಕೋಳ : ತನ್ನಂ ಸಂಕಲೆಯೊಳಿಟ್ಟು ಸೆಱೆಗೆಯ್ದು ಪಲಕಾಲಂ ನವೆಯಿಸಿದ ಪಗೆಯುಮಂ ನೆನೆದು (ಪದ್ಮರಾ. ೧೯೦-೨೦) ; ಭೋಂಕನೆ ಪೋಪನೆಂಬಾಗ ಪಂಕಜಾಕ್ಷಿಯ ಕಡೆಗಣ್ಣ ಕಾಂತಿಯ ಬೆಳ್ಳಿಸಂಕಲೆಗಳನಿಕ್ಕುಸುವೆನು (ಭರತ. ೯-೪೦). ೩. ಸೆರೆ ; ಬಂಧನ : ಮುಂ ಪೇಟ್ದ ಸುರದೇವಂ ಪಿಂಗಳಕನೆಂಬೊರಾಕ್ಷಸನಾಗಿ ದೋಷದಿಂ ಸಂಕಲೆಯೊಳಿರ್ದ ಸುರದೇವನ ತಾಯಿಯುಮರಸನ ಮಗಳಾಗಿ ಪುಟ್ಟಿ (ಚಾವುಂಪು. ೭೧) ; ನೂಲ ಸಂಕಲೆಗಡಿದು ಕನಕದ ಕೋಳವನು ಕಾಲಿಂಗೆ ಕೀಲಿಪ ಕಾಳುಮತಿಯವನಂತೆ ಸತಿಸುತ ಕೂಟಭಯವೆಂದು ಬಾಳಿಕೆಯನತಿಗಳೆದು (ಪ್ರಭುಲೀ. ೧೩-೫). **ಸಂಕವಾಲಿ** : ೨. ಅತ್ಯಂತ ಬಂಧನವಾದರೂ ಹೂವಿನಾ ಸಂಕವಾಲಿಯಂತೆ ಅರ್ಥಿಯಾಗಿಪ್ಪುದು ನಿನ್ನ ಒಲುಮೆ ಅವಗೆ (ಪೋಕ್ಷದೀ. ೨೯-೨). **ಸಂಕವಾಲೆ** : ೩. ಶ್ರೀಕೃಷ್ಣ ಕಂಸನ ಕೊಂದು ತಾಯಿ ತಂದೇರ ಸಂಕವಾಲೆ ಕಡಿಸಿ ನಮಸ್ಕಾರ ಮಾಡಿ (ತಾತ್ವನಿ. ೮೫-೭). **ಸಂಕಾಲೆ** : ೨. ಕಾಲಮೇಘದ ಮಳೆಯ ಸಂಕಾಲ

ತೆಗಿಸೆಂದು ದೇವೇಂದ್ರನಿಗೆ ಓಲೆ ಬರೆಸಿದರು (ಜಗೀತ. ೧೧೭). **ಸಂಕೊಲೆ :** ೧. ಇವೆರಡೆಂತಿ ರ್ಪುವು ಚಿನ್ನ ಕಬ್ಬಿನದ ಸಂಕೊಲೆಗಳಂತಿರ್ಪವು (ಅರಸಾ. ೧-೨೦೨). **ಸಂಕೋಲೆ :** ೨. ರತ್ನದ ಸಂಕೋಲೆಯಾದರೆ ತೊಡರಲ್ಲವೆ ಮುತ್ತಿನ ಬಲೆಯಾದರೆ ಬಂಧನವಲ್ಲವೆ (ಮಹಾದೇ. ಬ. ೪೨-೯೨) ; ತಪ್ಪು ಮಾಡಿದವಗೆ ಒಪ್ಪುವುದು ಸಂಕೋಲೆ ತಪ್ಪಿಲ್ಲದಿಪ್ಪ ಶರಣಂಗೆ ಸಂಕೋಲೆ ಬಪ್ಪುದದೇಕೆ (ಸರ್ವಜ್ಞ. ೧೨೬೮). [< ಸಂ. ಶೃಂಖಲಾ]

**ಸಂಕಲೆ₂** (ನಾ). ಅಡ್ಡಗಟ್ಟೆ ; ಸೇತುವೆ (?) : ಕಲ್ಲೆಡೆಯಲಿ ಮಣ್ಣು ಜರಿದುಬೀಳದ ಹಾಗೆ ಅಲ್ಲಲ್ಲಿ ಬಜ್ಜರಸರಿಯ ತಳ್ಳಿ ನಿಲಿಸಿಯಲೆ ಬಡಿವಲ್ಲಿ ಮಿಾಸಲ ಕಲ್ಲ ಸಂಕಲೆಯ ಕಟ್ಟಿದರು (ಪಾರ್ತಿಸು. ೯೪). [< ಸಂಕ₂?]

**ಸಂಕಲೆಗಿಡಿಸು** (ಕ್ರಿ). ಬೇಡಿಯನ್ನು ಕಳಚು ; ಬಂಧನದಿಂದ ಮುಕ್ತಗೊಳಿಸು : ನುಡಿಸಿದರಖಿಲೋಪಚಾರದಿಂ ಸಂಕಲೆಗಿಡಿಸಿದರ್[ಪಾಠಾಂ. ಬುಧ ನಳ ಕಡಿಸಿದರ್] ಮಜ್ಜನಗೆಯ್ಸಿ ಉಡಿಸಿದು ನವ್ಯವಸ್ತ್ರವನಾಯಾ ತಾಣಕೆ ತೊಡಿಸಿದರ್ ಮಣಿಭೂಷಣವ (ಮೋಹತ. ೪೧-೩೦). [ಸಂಕಲೆ₁ + ಕಿಡಿಸು (< ಕೆಡಿಸು₁)]

**ಸಂಕಲೆಯಿಕ್ಕು** (ಕ್ರಿ). ಬೇಡಿ ತೊಡಿಸು ; ಬಂಧಿಸು : ಓಪನಂ ಮಿಡುಕಲೀಯದೆ ಕಾಲ್ಪಿಡಿದಟ್ಟು ತೋರಕಣ್ಬನಿಗಳನಿಕ್ಕಿದಳ್ ತರಳಲೋಚನೆ ಸಂಕಲೆಯಿಕ್ಕಿದಂತೆವೋಲ್ (ಪಂಪಭಾ. ೪-೯೭) ; ಸಂಕಲೆಯಿಕ್ಕಿ ಕೈಗಳೆರಡಂ ರವಿಬಿಂಬಮನೆಯ್ದೆ ಮುಟ್ಟುವಾ ಬಿಂಕದ ವೃಕ್ಷದಗ್ರದಲಿ ಕಟ್ಟಿಸಿ ತೂಗುವರು (ನನ್ನಚಾ. ೫-೧೩೧). [ಸಂಕಲೆ₁ + ಇಕ್ಕು]

**ಸಂಕಲೆವಂದ** (ನಾ). ಸರಪಣಿಯಿಂದ ಕಟ್ಟಿರುವುದು ; ಶೃಂಖಲಾಬಂಧ : ಶರಬಂಧ — ಸರವಂದ ; ಶೃಂಖಲಾಬಂಧ — ಸಂಕಲೆವಂದ (ಶಮದ. ೨೯೨ ಪ್ರಯೋ). [< ಸಂ. ಶೃಂಖಲಾಬಂಧ]

**ಸಂಕಲೆವಡೆ** (ಕ್ರಿ). ಸರಪಣಿಯಿಂದ ಕಟ್ಟಲ್ಪಟ್ಟಿರು : ಭೋಂಕನೆ ಹೊಕ್ಕರು ಸೆಜೆವನೆಯೊಳು ಹೊನ್ನ ಸಂಕಲೆವಡೆದ ಬಾಲಕನ ಸಂಕಟವನು ಕಂಡು ಬಲರಾಮದೇವ ಮಿಾನಾಂಕ ದುಃಖದೊಳಪ್ಪಿದರು (ಮೋಹತ. ೪೧-೨೯). [ಸಂಕಲೆ₁ + ಪಡೆ₁]

**ಸಂಕಲೆವನೆ** (ನಾ). ಬಂದೀಖಾನೆ ; ಸೆರೆಮನೆ : ಜನಮನದ ಸಂಕಲೆವನೆಯೊ ಲೋಚನಮೃಗದ ತಡೆವೇಂಟೆಕಾತಿಯೊ . . . ಎಂದೆನಿಸಿದೂರ್ವಶಿ ಬಂದಳರ್ಜುನ ದೇವನರಮನೆಗೆ (ಕುವ್ಯಾಅ. ೮-೧೧). [ಸಂಕಲೆ₁ + ಮನೆ]

**ಸಂಕಲೆವೀಡು** (ನಾ). = ಸಂಕಲೆವನೆ : ಕಾಮನ ಕಿಸುಗಣ್ಮಲರ್ವೀಡು ವಿಯೋಗಿಗೆ ಸಂಕಲೆವೀಡು ವಸಂತದಂತಿಗುಪನಗರವನಂ (ಚಂದ್ರಪ್ರ. ೧-೧೧೩). [ಸಂಕಲೆ₁ + ಬೀಡು₂]

**ಸಂಕಲ್ಪ** (ನಾ). ೧. (ಮನಸ್ಸಿನ) ನಿರ್ಧಾರ ; ನಿರ್ಣಯ ; ಪ್ರತಿಜ್ಞೆ : ಭವಿಯೆಂಬುದು ಹುಸಿ ಭಕ್ತಿಯೆಂಬುದು ಉಪದೇಶ ಶೀಲವೆಂಬುದು ಸಂಕಲ್ಪ ಸಮತೆಯೆಂಬುದು ಸೂತಕ (ಅವಚಂ. ೧೧೭-೫೨೪) ; ಒರ್ಮೊದಲೆ ಬಿರಿದತ್ತು ಪ್ರಣಯನೃತ್ಯದ ಮೋಹಸಂಕಲ್ಪಬುದ್ಬುದಂ ! (ಚಿತ್ರಾಂಗ. ೫೪-೧೪೮೭). ೨. ಮನಸ್ಸಿನಲ್ಲಿ ಉಂಟಾಗುವ ಭಾವನೆ ; ಆಲೋಚನೆ : ಸ್ಮೃತಿ, ಸಂಕಲ್ಪ . . . ಕಾಮು, ವಶ ಈ ಹದಿನಾರು ಮನಸ್ಸಿನ ವಿಕಾರಗಳೆಂದಿರುವುವು (ಅಮೃತ. ೬-೨೭ ಟೀಕು) ; ನಿನ್ನ ಮಾರ್ಗವು ಬೇರೆಯಾಗುವ ಯೋಚನ ಯಾವಾಗ ನಿನ್ನ ಸಂಕಲ್ಪದಲ್ಲಿ ಬರುತ್ತೋ ಆ ದಿನದಿಂದಲೇ ನಿನ್ನ ಮೇಲಿನ ನನ್ನ ಯಜಮಾನಿಕೆ ತನಗೆ ತಾನೇ ಅಳಿದುಹೋಗುತ್ತೆ (ವಂಶವೃ. ೧೯೦). ೩. ಇಚ್ಛೆ ; ಅಭಿಪ್ರಾಯ : ಭವಬಂಧನವಲ್ಲಿಯದೂ ಸಂಕಲ್ಪವಿಕಲ್ಪವೆಂಬ ಸಂದೇಹ ಕಳೆದುಳಿವಂಗೆ (ಬಸವ. ೮೭೦) ; ಭೂಜಾಳಿ ಶೌರಿಯ ಸಂಕಲ್ಪದೆ ಪತ್ರಪುಷ್ಪಫಲಭಾರಾಕ್ರಾಂತಮಾಗಿ ರ್ದುವು (ಜಗವಿ. ೩-೭೮) ; ಪರಮಾತ್ಮನ ಸಂಕಲ್ಪ ಅತ್ಯದ್ಭುತವೂ ವಿಲಕ್ಷಣವೂ ಹಾಗೆಯೇ ಅನಂತವೂ ಅಪಾರವೂ ಅಹುದು (ಶಕ್ತಿವಿ. ೫೨). ೪. ಕಳವಳ ; ಚಿಂತೆ : ಲಲಿತಾಂಗಿ ಸಂಕಲ್ಪಮಂ ಮಾಡಬೇಡ ನಾಂ ತಿಳಿಪುವೆಂ ಪೊಸತಪ್ಪ ಚೋದ್ಯಮಂ (ಚಿಬಪು. ೪-೪). ೫. ಯಾವುದಾದರೂ ಶಾಸ್ತ್ರವಿಧಿಯನ್ನು ಕೈಗೊಳ್ಳುವ ಮೊದಲು ಮಾಡುವ ಸಾಂಪ್ರದಾಯಿಕ ಪ್ರತಿಜ್ಞಾವಿಧಿ ಮತ್ತು ಅದಕ್ಕೆ ಸಂಬಂಧಿಸಿದ ಮಂತ್ರ : ನಿರಶನವ್ರತವೆಂದು ಮಂತ್ರೋಚ್ಚರಿತಸಂಕಲ್ಪದಲಿ ಕೌರವರರಸ ಪವಡಿಸಿದನು ಕೃತ ಪ್ರಾಯೋಪವೇಶದಲಿ (ಕುವ್ಯಾಅ. ೨೧-೧೭) ; ಪುರೋಹಿತರು ಮಂತ್ರಾಕ್ಷತೆಗಳನ್ನು ತಟ್ಟೆಯಲ್ಲಿಟ್ಟುಕೊಂಡು ಸಂಕಲ್ಪವನ್ನು ಹೇಳಲೋಸುಗ ಮದುವಣಿಗನ **ಗೋತ್ರ** ನಾಮಗಳನ್ನು ಕೇಳಿದರು (ಕವಿಕ. ೫೦) ; ಕೆಲವೆಡೆಯಲ್ಲಿ ಬ್ರಾಹ್ಮಣರು ಸಂಕಲ್ಪವನ್ನು ಹೇಳುತ್ತಿದ್ದರು (ಮಂಜುಕ. ೬). ೬. [ಕಾಮಶಾ] ಹತ್ತು ವಿಧವಾದ ಕಾಮಾವಸ್ಥೆಗಳಲ್ಲಿ ಒಂದು ; (ಮನಸ್ಸಿನಲ್ಲಿ) ಪ್ರಿಯನನ್ನು ಕೂಡಲು ಬಯಸುವುದು : ಮನದಲ್ಲಿ ಸಂಕಲ್ಪಕ್ಷೇಪದೆ ನೆರವುದದುವೆ ಸಂಕಲ್ಪಾಖ್ಯಂ (ರಸರ. ೧-೪೦) ; ನೆಜೆ ನೋಟ ಚಿಂತೆ ಸಂಕಲ್ಪ ಜಾಗರ ಕೃಶ ಅರತಿ ಲಜ್ಜಾಹೀನೋನ್ಮಾದ ಮೂರ್ಛೆವೆಯನಿತು ಒಂಬತ್ತವಸ್ಥೆಗಳೆಯ್ದಲರಗಿಳಿ ಬಂದಿತಾ ಸಮಯ (ಜೀವಂಸಾ. ೧೨-೪೯). 'ದಶಕಾಮಾವಸ್ಥೆ' ಪರಾ.

**ಸಂಕಲ್ಪಮಾಡು** = ೧. ನಿರ್ಣಯಿಸು ; ತೀರ್ಮಾನಿಸು : ಅತ್ತಿಮಬ್ಬೆ . . . ಅಣ್ಣಿಗನಿಗಾಗಿ ಅರಮನೆ ನಿರ್ಮಾಣವಾಗಬೇಕೆಂದು ಸಂಕಲ್ಪಮಾಡಿದಳು (ದಾನಚಿಂ. ೧೭೫). ೨. ಯಾವುದಾದರೂ ಶಾಸ್ತ್ರವಿಧಿಯನ್ನು ಕೈಗೊಳ್ಳುವ ಮೊದಲು ಮಂತ್ರೋಚ್ಚಾರಪೂರ್ವಕವಾದ ಪ್ರತಿಜ್ಞಾವಿಧಿಯನ್ನು ಆಚರಿಸು : ಶುಭಾಶುಭ ಕಾರ್ಯಗಳನ್ನು ಕೈಗೊಳ್ಳುವಾಗ, ನದಿಯಲ್ಲಿ ಸ್ನಾನಮಾಡುವಾಗ 'ಸಂಕಲ್ಪ' ಮಾಡುವುದು ಹಿಂದುಗಳ ಪುರಾತನಪದ್ಧತಿ (ನಸದಿ. ೧೭). **ಸಂಕಲ್ಪಮಾತ್ರ** = ಬರಿಯ ಅಭಿಪ್ರಾಯ ; ಕೇವಲ ಇಚ್ಛೆ : ಆ ನಿವೃತ್ತಿಕಲೆಯ ಸಂಕಲ್ಪಮಾತ್ರದಿಂದ ಮಾಯಾಶಕ್ತಿ ಹುಟ್ಟಿತ್ತು (ಸಿದ್ಧೇವ. ೧೫-೩೯). [ಸಂ.]

**ಸಂಕಲ್ಪಜ** (ನಾ). ಇಚ್ಛಾಮಾತ್ರದಿಂದ ಜನಿಸಿದವನು ; ಕಾಮ ; ಮನ್ಮಥ. [ಸಂ.]

**ಸಂಕಲ್ಪಜನ್ಮ** (ನಾ). = ಸಂಕಲ್ಪಜ : ರತಿಗೆ ಕಾಮನಂ ಸಂಕಲ್ಪಜನ್ಮನಂ ಮಾಡಿಕೊಟ್ಟು ಗಿರಿಜೆಯಂ ಗಿರಿರಾಜನಲ್ಲಿಗೆ ಪೋಗವೇಳ್ದು (ಗಿರಿಕ. ೧೦-೮ ವ). [ಸಂ. ಸಂಕಲ್ಪಜನ್ಮನ್]

**ಸಂಕಲ್ಪನವಧೆ** (ನಾ). ಮನಸ್ಸಿನಲ್ಲಿ ನಿರ್ಧರಿಸಿದ ಕೊಲೆ : ಸಂಕಲ್ಪನವಧೆಗಿನಿತಾಯ್ತು ದಿಟದೊಳೇನೇನಾಗರ್ (ಯಶೋಚ. ೪-೬೨). [ಸಂ. ಸಂಕಲ್ಪನವಧಾ]

**ಸಂಕಲ್ಪಭಂಗ** (ನಾ). (ಮನಸ್ಸಿನ) ನಿರ್ಧಾರ ಕೈಗೂಡದಿರುವುದು,- ನೆರವೇರದಿರುವುದು : ಸಂಕಲ್ಪಭಂಗಾಸ್ಪದವ ಮಾಡುವುದೊಳ್ಳಿತೇ ನಿಜಸದನಕಭಿಮುಖರಾಗಿ ಕರುಣಿಪುದೆಂದನಾ ಭೂಪ (ಕುವ್ಯಾಅ. ೨೦-೪೭). [ಸಂ.]

**ಸಂಕಲ್ಪಭ್ರಮೆ** (ನಾ). (ಮನಸ್ಸಿನ) ನಿರ್ಧಾರದ ಭ್ರಾಂತಿ ; ಚಿತ್ತವಿಕಲ್ಪದ ಸ್ಥಿತಿ : ಮಹಾಜ್ಞಾನಸ್ವರೂಪರಪ್ಪ ಶರಣರೇ ಲಿಂಗವೆಂದಜಿದ ಮಹಾತ್ಮಂಗೆ ಸಂಕಲ್ಪಭ್ರಮೆಯುಂಟೇ (ಸಿದ್ಧೇವ. ೨೧-೫೮). [ಸಂ. ಸಂಕಲ್ಪಭ್ರಮಾ]

**ಸಂಕಲ್ಪಮಂತ್ರ** (ನಾ). ಸಂಕಲ್ಪಮಾಡುವಾಗ ಹೇಳುವ ಮಂತ್ರ : ಭರತಖಂಡದಲ್ಲಿ, ಭರತವರ್ಷದಲ್ಲಿ ವಾಸಿಸುವ ನಾನು ಈ ಪವಿತ್ರನದಿಯಲ್ಲಿ ಮಿಂದು ಈ ರೀತಿ ಪ್ರಮಾಣ ಮಾಡುತ್ತೇನೆ ಎಂದಿದೆ 'ಸಂಕಲ್ಪ' ಮಂತ್ರದಲ್ಲಿ (ನಸದಿ. ೧೮). [ಸಂ.]

**ಸಂಕಲ್ಪಶಕ್ತಿ** (ನಾ). (ಮನಸ್ಸಿನ) ನಿರ್ಧಾರವನ್ನು ಸಾಧಿಸುವ ಶಕ್ತಿ : ನಿಮ್ಮ ಆಶೀರ್ವಾದದಿಂದ ನನ್ನ ಸಂಕಲ್ಪಶಕ್ತಿಯನ್ನು ಹುರಿದುಂಬಿಸಿ ಈ ಕೆಲಸವನ್ನು ಮುಂದುವರಿಯುವಂತೆ ಮಾಡಿದ್ದೀರಿ (ವಂಶವೃ. ೩೪೯). [ಸಂ.]

**ಸಂಕಲ್ಪಸಿದ್ಧಿ** (ನಾ). ೧. (ಮನಸ್ಸಿನ) ಬಯಕೆಯು ಈಡೇರುವಿಕೆ : ಸಂಕಲ್ಪಸಿದ್ಧಿಯಾದುದು ಸಂಕೆಯನುಟಿ ನಳನೃಪಾಲ (ನಳಚಂ. ೧೬೦). ೨. ಒಂದು ಶಾಸ್ತ್ರವಿಧಿ : ಆಲಯವನು ಶೃಂಗರಿಸಿ ಮೇಲೆ ಪುಣ್ಯಾರ್ಚನೆ ಸಂಕಲ್ಪಸಿದ್ಧಿಯ [ಪಾಠಾಂ. ನಾಮಕರಣವ] ಲೋಲ ಮಾಡಿಸಿದ ಬ್ರಾಹ್ಮಣನು (ಅಬ್ಬಲೂ. ೨-೪೮). [ಸಂ.]

**ಸಂಕಲ್ಪಹಾನಿ** (ನಾ). = ಸಂಕಲ್ಪಭಂಗ : ನೆನೆಯದಿರು ಸಂಕಲ್ಪಹಾನಿಯನನುಚಿತಕೆ ಮನ ತಾರದಿರು (ಕುವ್ಯಾಅ. ೨೨-೩೫). [ಸಂ.]

**ಸಂಕಲ್ಪಹಿಂಸೆ** (ನಾ). ಮನಸ್ಸಿನಲ್ಲಿ ನಿರ್ಧರಿಸಿದ ಹಿಂಸೆ ; ಭಾವನಾಹಿಂಸೆ : ಸಂಕಲ್ಪಹಿಂಸೆಯೊಂದಜೋಳಾಂ ಕಂಡೆಂ ಭವದ ದುಃಖಮುಂಡೆಂ (ಯಶೋಚ. ೪-೭೦). [ಸಂ. ಸಂಕಲ್ಪಹಿಂಸಾ]

**ಸಂಕಲ್ಪಿತ** (ಗು). ೧. ಇಚ್ಛಿಸಿದ ; ಬಯಸಿದ. ೨. ಉದ್ದೇಶಿತವಾದ. ೩. ಕಲ್ಪಿಸಿದ ; ಊಹಿಸಿದ. (ನಾ). ೪. ಮನಸ್ಸಿನಲ್ಲಿ ಯೋಚಿಸಿ ನಿಶ್ಚಯಿಸುವವನು, — ತೀರ್ಮಾನಿಸುವವನು : ಸರ್ವಾಂಗ ಗುಣಲುಪ್ತ ಪ್ರಮುದಚಿತ್ತಂ ಪ್ರಳಯದೂರಂ ದಮಿತ ಕಾಲಾಕಾಲ ಸಂಕಲ್ಪಿತ ವಿಕಲ್ಪಿತನು (ಬಸಪು. ೭-೩). [ಸಂ.]

**ಸಂಕಲ್ಪಿಸು** (ಕ್ರಿ). ೧. ಬಯಸು ; ಇಚ್ಛಿಸು : ಬಲ್ಪಿನರಡನೆಯೊಳ್ಪರಂ ಫಣಿತಲ್ಪ ನಿನ್ನಯ ಪದವಿಯಂ ಸಂಕಲ್ಪಿಸುವನೇ (ಬಸಪು. ೨-೧೯) ; ಹೆಗಡೆಯ ನಿರ್ಧಾರದ ಮುಂದೆ ಏನಿದೆ? ಸಂಕಲ್ಪಿಸಿಕೊಂಡ ಮೇಲೆ ಮುಗಿದೇ ಹೋಯ್ತು (ದೇವಹಂ. ೧೪೪). ೨. ಒದಗಿಸು ;

ದೊರಕಿಸು : ಎಲ್ಲ ಜೀವರಿಗನ್ನಪಾನಾದಿವಸ್ತುವನು ಸಂಕಲ್ಪಿಸಿ (ನವಮೋ. ೬೨-೪೭). ೩. ಯಾವುದಾದರೂ ಶಾಸ್ತ್ರವಿಧಿಯನ್ನು ಕೈಗೊಳ್ಳುವ ಮೊದಲು ಮಂತ್ರೋಚ್ಚಾರಪೂರ್ವಕವಾಗಿ, ಸಾಂಪ್ರದಾಯಿಕ ಪ್ರತಿಜ್ಞಾ ವಿಧಿಯನ್ನು ಆಚರಿಸು : ಶ್ರೀಗುರುವಿಂಗೆ ಸಾವಿರ ಅಜಪಾಗಾಯತ್ರೀಮಂತ್ರಮಂ ನಿವೇದಯಾಮಿಯೆಂದು ಸಂಕಲ್ಪಿಸುವುದು (ವಿವೇಕ. ೮೫). [ಸಂಕಲ್ಪ + - ಇಸು₁]

ಸಂಕವರಿ (ಕ್ರಿ). ಸೇತುವೆಯಂತೆ ಬೆಳೆ, — ವೃದ್ಧಿಯಾಗು : ಪುಂಜೀಭೂತ ಬೃಹಜ್ಜೀಮೂತದೊಡ್ಡುಗಳ್ ಒಳಗೊಳ್ಳಂದದಿಂ ಪೆರ್ಬಂಡೆ ಪೆರ್ಮರಂ ಮಳಲೊಟ್ಟು ಮಣ್‌ಗುಡ್ಡೆಗಳ್ ಸಂಕವರಿದುವಾ ರಾಕ್ಷಸದ್ವೀಪಕೀ ವಾನರದ್ವೀಪಕ್ಕೆತಿ ತಾಂ ವಾರ್ಧಿವೀಧೀತೋರಣಂಗಟ್ಟುವೋಲಂತೆ ! (ಶ್ರೀರಾಮಾ. ೫೯೩-೨೩೭). [ಸಂಕ₂ + ಪರಿ₂]

ಸಂಕವಾಲಿ 'ಸಂಕಲೆ₁' ನೋ.

ಸಂಕವಾಳೆ 'ಸಂಕಲೆ₁' ನೋ.

ಸಂಕಷ್ಟ (ನಾ). ತೊಂದರೆ ; ಕಷ್ಟ : ನಾವು ಮುಂದೆ ಹಲವು ಸಂಕಷ್ಟಗಳಿಗೀಡಾಗ ಬೇಕಾಗುವುದು . . . ಎಂದು ಅವರು ತಿಳಿದರು (ಜಗಸಂ. ೩೦). [ಸಂ.]

ಸಂಕಳನ 'ಸಂಕಲನ' ನೋ.

ಸಂಕಳಿತ 'ಸಂಕಲಿತ' ನೋ.

ಸಂಕಳಿಸು 'ಸಂಕಲಿಸು' ನೋ.

ಸಂಕಾನಿ (ನಾ). ಒಂದು ಬಗೆಯ ಸಸ್ಯ : (ಮೃಔಗಿ. ೭೩-೧೪೮೯) ; ಸಂಕಣಿ, ಸಂಕಾನಿ (ಸಸ್ಯನಿ. ೧೨೪). [?]

ಸಂಕಾಳೆ 'ಸಂಕಲೆ₁' ನೋ.

ಸಂಕಾಶ (ಗು). ೧. ಹತ್ತಿರದ ; ಸಮೀಪದ. ೨. ಸದೃಶವಾದ ; ಸಮಾನವಾದ : ಪಯಃಪಯೋಧಿಫೇನಸಂಕಾಶದುಕೂಲಪ್ರಚ್ಛದಾಚ್ಛಾದಿತ ವಿಚಿತ್ರನೇತ್ರೋಭಯೋಪಧಾನ ಶಯ್ಯಾತಲದೊಳ್ (ಆದಿಪು. ೫-೨೨ ವ) ; ಶರತ್ಸಮಯಸಮುದಿತ ಶಶಾಂಕಸಂಕಾಶ ವಿಶದವರ್ಣನುಂ (ಅಜಿಪು. ೩-೨ ವ). (ನಾ). ೩. ಹತ್ತಿರ ; ಸಾಮೀಪ್ಯ. ೪. ಕಾಣಿಸಿಕೊಳ್ಳುವಿಕೆ ; ದರ್ಶನ. ೫. ಕಾಂತಿ ; ಪ್ರಕಾಶ : "ವಾಸವ ಕಲ್ಪಭೂಜ ಫಳಿಕಾರ್ಕ ವಿಚಿತ್ರ ವನೇಜಮಿತ್ರ ಸಂಕಾಶಮಿವರ್ಕಮಕ್ಕು" (ನಾನಾರ. ೧೪). ೬. ಹೋಲುವಂಥದು ; ಸಮಾನವಾದುದು : ಅದೊಂದಿನಿಸು ಬೇಗದಿಂ ನವಜಪಾಪ್ರಸೂನಾಭಮಾಯ್ತು . . . ಮತ್ತದೊಂದಿನಿಸುಬೇಗದಿಂ ಮೃದುಮೃಣಾಳ ಸಂಕಾಶಮಾಯ್ತು (ಆದಿಪು. ೧೨-೭). ೭. ಹೋಲುವವನು ; ಸದೃಶನಾದವನು : ಅಖಿಳ ನಿಗಮಾವಳಿ ಶಿರೋಮಣಿ ಶೀತಕರ ಸಲ್ಲಲಿತ ಮಸ್ತಕಮಣಿ ನಭೋಮಣಿ ಕೋಟಿಸಂಕಾಶ (ತೊರರಾ. ೬-೫೩-೧೦೨) ; ಜಯಜಯ ಕುಂದಮಂದಾರೇಂದು ಸಂಕಾಶ (ತ್ರಿಭುತಿ. ೧೨-೭) ; ಸೂರ್ಯಸಂಕಾಶನಾಗಿ ಶೋಭಿಸುತ್ತಿರುವ ಕರ್ಣನು ಹೇಗೆ ಅಂಗರಾಜ್ಯಕ್ಕೆ ಅರ್ಹನಲ್ಲ? (ವಚಿಭಾ. ೨೭). [ಸಂ.]

ಸಂಕಾಶಿ (ನಾ). ಹೋಲುವಂಥದು ; ಸದೃಶವಾದುದು : ಶರದಮಲಗಗನತಲ ವಿಭವಸಂಕಾಶಿಯಂ ಕರಿಮಕರಕರದಲಿತ ವೀಚಿವಾರಾಶಿಯಂ (ಆದಿಪು. ೭-೨೭ ರಗಳೆ). [ಸಂ. ಸಂಕಾಶಿನ್]

ಸಂಕಿರಣ (ನಾ). ೧. ಕೂಟ ; ಸಭೆ ; ಗೋಷ್ಠಿ : 'ವಿಚಾರಸಂಕಿರಣ' ಪರಾ. ೨. ಬೆರಕೆ ; ಮಿಶ್ರಣ : ದೇಹ ಹೇಗೆ ಅನೇಕ ಅಂಗಾಂಗಗಳಿಂದ ಕೂಡಿ ಜಟಿಲವಾಗಿದೆಯೋ ಹಾಗೆಯೇ ನಾವು ವ್ಯಕ್ತಿ ಎಂದು ಕರೆಯುವುದು . . . ದೈಹಿಕ ಮಾನಸಿಕಅಂಶಗಳ ಸಂಕಿರಣ (ತತ್ವಪ್ರಾ. ೧೭೫). [< ಸಂಕೀರ್ಣ]

ಸಂಕಿಸು (ಕ್ರಿ). ಅನುಮಾನಿಸು ; ಶಂಕಿಸು : ವಿಜಯಾರ್ಥಮಿಲ್ಲಿಗೆ ಗೆಂಟು ನಮಗೆ ಸಮೀಪವರ್ತಿಯಾಗಿ ರಾವಣನಿರ್ಪೊನಾತಂಗೆ ನಾಮುಂ ಮುನ್ನಂ ಸಂ[ಪಾಠಾಂ. ಶಂ] ಕಿಸುತಿರ್ಪಮದಱಿಂ ನಮ್ಮ ಯಾಗಮಂ ಕಾಯಲ್ಸಮರ್ಥನಪ್ಪಂಗೆ ಸೀತೆಯಂ ಕುಡುವಮೆನೆ (ಚಾವುಂಪು. ೨೮೨) ; ಬಂದರ್ ಬಿಂಕದಿಂ ಸಂಕಿಸದೆ ಸಕಲವಿದ್ಯಾಧರ ಸ್ತ್ರೀಸಮೂಹಂ (ಧರ್ಮಾಮೃ. ೮-೨೦೩). [ಸಂಕೆ + - ಇಸು₁]

ಸಂಕೀರ್ಣ (ಗು). ೧. ಮಿಶ್ರವಾದ ; ಬೆರೆತ. ೨. ಇಕ್ಕಟ್ಟಾದ ; ಕಿರಿದಾದ. ೩. ನಾನಾ ಬಗೆಯ ; ವಿಧವಿಧವಾದ : ಕನಲಿಕೆಯಿಂದ ವಿಷ್ಣೂನ ಅಗಲಿಕೆಯಿಂದ ಎದುರು ಬಂದಿದ್ದ ಸಂಕೀರ್ಣಮನೋರೋಗಗಳನ್ನು ಎದುರಿಸುವ ಸಾಮರ್ಥ್ಯ ತುಸು ವಾದರೂ ಪ್ರಮಿಳೆಯಲ್ಲಿರಲಿಲ್ಲ (ಸಮಜೀ. ೮೭೨). ೪. ಚೆದರಿದ ; ಹರಡಿದ : ವ್ಯಕ್ತಿಯ ಭಾಷೆಯನ್ನು ಭಾಷೆಯ ಸಂಕೀರ್ಣರೂಪವೆಂದು ಹೇಳಬಹುದು (ದ್ರಾವಿವಿ. ೩೭೯). ೫. ಅಸ್ಪಷ್ಟವಾದ ; ಅಸ್ಫುಟವಾದ . ೬. ಜಟಿಲವಾದ ; ಕ್ಲಿಷ್ಟವಾದ ; ಗಹನವಾದ : ಮನಸ್ಸು ಸಂಕೀರ್ಣರೀತಿಯ ವಿವರಗಳನ್ನು ಸರಳಗೊಳಿಸಲು ಯತ್ನಿಸುವುದುಂಟು (ಶಿಕ್ಷದ. ೫೩೨). (ನಾ). ೭. ಸೇರಿಕೊಂಡಿರುವುದು ; ಮಿಳಿತವಾಗಿರುವುದು : ಉತ್ತರಶ್ರೇಣಿಯೊಳುದಗ್ರಹಿಮಶಿಖರಿಶೇಖರಶಾರದ ನೀರದಾಕಾರಸುಧಾಧವಲಿತೋತ್ತುಂಗಪ್ರಾಸಾದಕೂಟಕೋಟಿಸಂಕೀರ್ಣಮುಂ . . . ಆಗಿ (ಆದಿಪು. ೧-೭೦ ವ) ; ಅತಿಶಯೋಕ್ತಿಯು ಉಳಿದ ಅಲಂಕಾರಗಳೊಡನೆ ಸಂಕೀರ್ಣ ವಾಗುವುದು (ಧ್ವನ್ಯಾಲೋ. ೨೧೩). ೮. ಕಿಕ್ಕಿರಿದಿರುವುದು ; ತುಂಬಿರುವುದು : ನಾಗಲತಾವಿಸ್ತೀರ್ಣಮದಪ್ಪುದು ಪೂಗದ್ರುಮಸಂಕೀರ್ಣಮೆನಿಪ್ಪುದು (ಸುಕುಮಾ. ೧೦-೫೭). ೯. ನಾನಾವಿಧವಾಗಿರುವುದು ; ವಿವಿಧರೀತಿಯಿಂದ ಕೂಡಿದುದು : ಈ ಯುಗದ ಕಾಲವಿಸ್ತಾರವು ಮೊದಲಿನ ಯುಗಗಳಿಗಿಂತ ಇಮ್ಮಡಿಯಾಗಿದೆ. ಸಾಹಿತ್ಯನಿರ್ಮಿತಿಯೂ ಸಂಕೀರ್ಣವಾಗಿದೆ (ಕಸಾಚ. ೨೪೩). ೧೦. ಗಹನವಾದುದು ; ಜಟಿಲವಾದುದು ; ಕ್ಲಿಷ್ಟವಾಗಿರುವುದು : ಆ ಗೂಗೆಗಳ್ ದಿವಸಾಂಧಂಗಳಾಗಿಯುಂ ನಮ್ಮೊಳ್ ಪಗೆಯುಂಟಾಗಿಯುಂ ಘೋರಾಂಧಕಾರದಿಂದತಿಸಂಕೀರ್ಣಮಪ್ಪ ಗುಹಾ ಗಹ್ವರಂಗಳೊಳ್ ಪೊಕ್ಕಿರ್ಪುವು (ಪಂಚತಂ. ೨೧೭-೩೦) ; ಭಾರತದ ಕಾಲದ ರಾಜ್ಯಗಳು ವಿಸ್ತಾರವಾಗಿದ್ದುವಲ್ಲದೆ ಆಡಳಿತಕ್ರಮವು ಬಹುಸಂಕೀರ್ಣವಾಗಿದ್ದಿತು (ಭಾರದ. ೮೫). ೧೧. ಭಿನ್ನಜಾತಿಯವರೊಡನೆ ಏರ್ಪಡುವ ಸಂಬಂಧ : "ಸಂಕೀರ್ಣಾಃ- ಸಂಕರ ಜಾತಿಗಳೆಂಬಲ್ಪಡುವರು" (ಸಿದ್ಧಾಂತಿ. ೩೦೮) ; ಅಗಲರ್ ಸೂಳೆಯನಾಳರ್ ಕುಲಜೆಯಂ ಸಂಕೀರ್ಣವಂ ಮಾಳ್ಪರ್ (ಸೋಮೇಶ. ೪೬). ೧೨. ಭದ್ರ, ಮಂದ, ಮೃಗ ಮತ್ತು ಸಂಕೀರ್ಣಗಳೆಂಬ ಆನೆಯ ನಾಲ್ಕು ಜಾತಿಗಳಲ್ಲಿ ಒಂದು ; ಮದವೇರಿದ ಆನೆ ; ಸೊಕ್ಕಿದ ಆನೆ : ನಿಯಮಿಸುವರ್ ಭದ್ರ ಮಂದ ಮೃಗ ಸಂಕೀರ್ಣಾನ್ವಯದ ನೃಪಕರಿಗಳಂ (ಪುಷ್ಪಪು. ೨-೫೭). ೧೩. [ಛಂದ] ಆರ್ಯಾಗೀತಿಯ ಒಂದು ಮಾತ್ರಾವೃತ್ತದ ಹೆಸರು; ಪ್ರಹೇಳಿಕೆಯ ಒಂದು ಪ್ರಭೇದ : ಸಂಕೀರ್ಣಕೆಸೆವ [ಪಾಠಾಂ. ಸಂಕೀರ್ಣಕಕ್ಕೆ] ದುವಯಿಗೆ ಮಾತ್ರಾವೃಂದಮುಮಂ ಗಣವಿವರಣೆಯಂದಮುಮಂ ತಿಳಿಯೆ ಪೇಳ್ವೆಂ (ಛಂದೋಂಬು. ೪-೨೨೭). ೧೪. [ಕಾವ್ಯಮೀ] ಮಿಶ್ರಾಲಂಕಾರದ ಒಂದು ಪ್ರಭೇದ ; ವಿವಿಧ ಅಲಂಕಾರಗಳನ್ನು ಬೆರಸುವುದರಿಂದ ನಿಷ್ಪನ್ನವಾಗುವ ಅಲಂಕಾರ : ಸಂಕೀರ್ಣಮೆಂಬುದುಕ್ತಾಳಂಕಾರಸಮೂಹಸಂಕರ ಕ್ರಮಮಕ್ಕುಂ (ಕವಿರಾ. ೩-೧೫೭) ; ಸಂಕೀರ್ಣಸಮೇತಕಂ ಅಂಗಾಂಗಿಕಂ ಎಂದು ಎರಡು ತೆಱಂ (ಉದಯಾ. ೧೫). ೧೫. ಪದದೋಷಗಳಲ್ಲಿ ಒಂದು ; ವಾಕ್ಯದ ಪದಗಳು ಮಿಶ್ರವಾಗಿ ಅರ್ಥಮಾಡುವುದಕ್ಕೆ ಕಷ್ಟವಾಗುವುದು : ಸಂಕೀರ್ಣ - ಎರಡು ಮೂರು ವಾಕ್ಯಗಳಿರುವ ಕಡೆಯಲ್ಲಿ ಒಂದರ ಪದಗಳು ಮತ್ತೊಂದರೊಡನೆ ಬೆರೆದುಹೋಗಿ (ಅರ್ಥ ಮಾಡುವುದಕ್ಕೆ ಕಷ್ಟವಾಗಿ) ಇರುವುದು (ಕೃಪಿಡಿ. ೨೨೮). ೧೬. [ನಾಟ್ಯ] ಪ್ರಹಸನದ ಶುದ್ಧ, ಸಂಕೀರ್ಣ, ವಿಕೃತಗಳೆಂಬ ಮೂರು ಪ್ರಕಾರಗಳಲ್ಲಿ ಒಂದು ; ಬಹುಜನ ಭ್ರಷ್ಟರ ಚರಿತ್ರೆಯನ್ನೊಳಗೊಂಡ ಪ್ರಹಸನ : ಪ್ರಹಸನವು ಶುದ್ಧ, ಸಂಕೀರ್ಣ, ವಿಕೃತ ಎಂದು ಮೂರು ವಿಧ . . . ಬಹುಜನ ಭ್ರಷ್ಟರ ಚರಿತ್ರೆ ಇದ್ದರೆ ಅದು ಸಂಕೀರ್ಣವಾಗುತ್ತದೆ (ಸಂನಾಟು. ೩೦). ೧೭. [ಸಂಗೀತ] ರಾಗದ, ಶುದ್ಧ, ಸಂಕೀರ್ಣ, ಸಾಳಗಗಳೆಂಬ ಮೂರು ಭೇದಗಳಲ್ಲಿ ಒಂದು ; ಯಾವುದಾದರೊಂದು ರಾಗದ ಮೂಲಭಾವದ ಛಾಯೆಯಿಂದ ರಂಜಿಸುವ ರಾಗ : ನುತ ಶುದ್ಧ ಸಾಳಂಗ ಸಂಕೀರ್ಣಮಂ ಯಥೋಚಿತ ತಾರ ಮಧುರ ಮಂದ್ರಂಗಳಿಂ ಹಾಡಿ ಭೂಪತಿಯ ದುಗುಡವನು ತೊಳೆದರು ರಾಗರಸಲಹರಿಯಿಂದ ನಾಮಿಕ ಸತಿಯರು (ಹಚಕಾ. ೭-೬) ; ಶುದ್ಧದ ಸಾಳಗದ ಸಂಕೀರ್ಣ ದೇಸಿಯ ವಿವಿಧ ರಚನೆಗಳ . . . ಸೂಳುಗಳ ಲಯಮಾನವಱಿದವನವನೆ ಗಾಯಕನು (ಕುವ್ಯಾಉ. ೩-೯೭) ; ಶುದ್ಧ ಸಾಳಗಂ ಸಂಕೀರ್ಣಂ ಬೆರೆದೊಪ್ಪಲ್ಪಾಡಿದಂ (ವೀರವಿ. ೬-೯೦). ೧೮. ತಾಳದ ಅಂಗಗಳಲ್ಲಿ ಒಂದು ; ಒಂಬತ್ತು ಲಘುಗಳ ಕಾಲದ ಮಿತಿಯುಳ್ಳ ಒಂದು

ತಾಳ : ಜಾತಿ . . . ಇದು ಐದು ವಿಧವಾಗಿದೆ. ಅವು ಕ್ರಮವಾಗಿ (೧) ತ್ರಿಶ್ರ (೨) ಚತುರಶ್ರ (೩) ಖಂಡ (೪) ಮಿಶ್ರ (೫) ಸಂಕೀರ್ಣ. ಈ ಐದು ಜಾತಿಗಳೂ ಲಘುವಿಗೆ ಮಾತ್ರ ಸಲ್ಲುತ್ತವೆ (ಸಂಗೀತಂ. ೫೭). ೧೯. ಶುದ್ಧ, ಸಾಳಗ, ಸಂಕೀರ್ಣ, ಠವಣೆಗಳೆಂಬ ನಾಲ್ಕು ವಿಧದ ಮೃದಂಗವಾದನಗಳಲ್ಲಿ ಒಂದು : ಶುದ್ಧ ಸಾಳಗ ಸಂಕೀರ್ಣ ಠವಣೆಗಳೆಂಬ ಚತುರ್ವಿಧ ಮೃದಂಗಮಂ ಮೇಳೈಸಿ . . . ಬಾಜಿಸುವಾವುಜಕಾರರಿಂ (ವಿವೇಕ. ೧೯೧) ; ಶುದ್ಧ ಸಾಳಂಗ ಸಂಕೀರ್ಣ ಠವಣೆಗಳೆಂಬ ಚತುರ್ವಿಧ ಮೃದಂಗಮಂ ಮೇಳೈಸಿ (ಭೈರವ. ೫-೫ ವ). [ಸಂ.]

**ಸಂಕೀರ್ಣಕ** (ನಾ). ೧. ಹತ್ತುವಿಧವಾದ ಪಾತಕಗಳಲ್ಲಿ ಒಂದು : ಮನೋವಾಕ್ಕಾಯವೆಂಬ ತ್ರಿಕರಣದಲ್ಲಿ ಮಹಾಪಾತಕವೆಂದು ಅತಿಪಾತಕವೆಂದು ಪ್ರಾಸಂಗಿಕವೆಂದು ಪಾತಕವೆಂದು ಉಪಪಾತಕವೆಂದು ಜಾತಿಭ್ರಂಶಕಮೆಂದು ಸಂಕೀರ್ಣಕಮೆಂದು . . . ದಶವಿಧಮಾದ ಪಾತಕಂಗಳನುದ್ಘೋಷಿಸುತಿರ್ಕುಂ (ವಿವೇಕ. ೧೫೪). ೨. [ಛಂದ] ಆರ್ಯಾಗೀತಿಯ ಒಂದು ಮಾತ್ರಾವೃತ್ತದ ಹೆಸರು ; ಪ್ರಹೇಳಿಕೆಯ ಒಂದು ಪ್ರಭೇದ : ಕಂದದ ಪೂರ್ವಾರ್ಧದೊಳನುಸಂದಿಸಲಾರ್ಯಾಪರಾರ್ಧಮದನು ಕ್ರಮದಿಂದೊಂದಿರ್ದೊಡೆ ಸಂಕೀರ್ಣಕಮೆಂದಂ (ಛಂದೋಂಬು. ೪-೨೩೪). [ಸಂ.]

**ಸಂಕೀರ್ಣಗೊಳಿಸು** (ಕ್ರಿ). ಒಟ್ಟುಗೂಡಿಸು : ಕಲೆಹಾಕು : ಪ್ರಶ್ನಾವಳಿಗಳನ್ನು ಹೆಚ್ಚು ಹೆಚ್ಚು ಸಂಕೀರ್ಣಗೊಳಿಸಿ ಐರಿಂದ ೧೩ ವರ್ಷ ವಯಸ್ಸಿನವರಗಿನ ಮಕ್ಕಳನ್ನು ಪರೀಕ್ಷಿಸಿ (ಶಿಕ್ಷದ. ೫೭೭). [ಸಂಕೀರ್ಣ + ಕೊಳ್$_1$ + -ಇಸು$_1$]

**ಸಂಕೀರ್ಣಜಾತಿ** (ನಾ). ೧. ಭಿನ್ನಜಾತಿ ; ಮಿಶ್ರಜಾತಿ. ೨. [ಕಾಮಶಾ] (ನಾಲ್ಕು ಬಗೆಯ ಸ್ತ್ರೀಜಾತಿಯ ಗುಣಗಳು ಮಿಶ್ರವಾಗಿ ಉಂಟಾಗುವ) ಒಂದು ಮಿಶ್ರಜಾತಿ, — ಮಿಶ್ರವರ್ಣ : ೧ಂತೀ ನಾಲ್ಕುಂ ಜಾತಿಯ ಕಾಂತೆಯರವಯವ ಗುಣಂಗಳೊಂದೊಂದಜೊಳತ್ಕಂತಂ ಕೂಡಿದೂಡಜ ನೀಂ ಭ್ರಾಂತೇಂ ಸಂಕೀರ್ಣ ಜಾತಿಯೆಂದಾ ವಧುವಂ (ಮದತಿ. ೨-೬). ೩. [ಸಂಗೀತ] ಹಾಡಿನ ಒಂದು ಪ್ರಕಾರ: ಭರತಮುನಿಯು . . . ರಾಗಪದ್ಧತಿಯ ಪೂರ್ವರೂಪವಾದ ಜಾತಿಗಳು, ಏಳೇಳು ಮತ್ತು ನಾಲ್ಕು ಸಂಕೀರ್ಣಜಾತಿ, ಇವುಗಳನ್ನೆಲ್ಲಾ ವಿವರಿಸಿದ್ದಾನೆ (ಭಾರದ. ೫೩೮). [ಸಂ.]

**ಸಂಕೀರ್ಣತೆ** (ನಾ). ೧. ವಿಧವಿಧವಾಗಿರುವುದು ; ನಾನಾ ಬಗೆಯಿಂದ ಕೂಡಿದುದು : ವಾಸ್ತವವಾಗಿ ಆ ಮನೆ ಬೃಹತ್ತಾಗಿತ್ತು ; ಅದರ ಶೈಲಿ ಸಂಕೀರ್ಣತೆಯಿಂದ ನವೀನವಾಗಿತ್ತು (ಪುನರು. ೩೦೭). ೨. ಜಟಿಲತೆ ; ಕ್ಲಿಷ್ಟತೆ : ರಾಮಿಯ ಭಾವಸೃಷ್ಟಿಯೆಲ್ಲ ನೆನಪಿನದಾಗುವುದರಿಂದ ಸಂಕೀರ್ಣತೆ ಇಲ್ಲಿ ಸಾಧ್ಯವಾಗಿಲ್ಲ (ಹೊಸಕ್ಕ. ೨೮೩) ; ಶಿಕ್ಷಕವೃತ್ತಿಗೆ ಅಂಥ ನಿರಾಶೆ ಕಟ್ಟಿ ಬಂದುದು. ಅದರ ಫಲವಾಗಿ . . . ಗುಪ್ತಮನಸ್ಸಿನಲ್ಲಿ ಸಂಕೀರ್ಣತೆಗಳೇರ್ಪಟ್ಟರೆ ಆಶ್ಚರ್ಯವೇನಲ್ಲ (ಶಿಕ್ಷದ. ೭೭೪). [ಸಂ. ಸಂಕೀರ್ಣತಾ]

**ಸಂಕೀರ್ಣರಾಗ** (ನಾ). = ಸಂಕೀರ್ಣ ೧೭ : ಶುದ್ಧ ಮಿಶ್ರ ಸಂಕೀರ್ಣರಾಗಂಗಳಂ ರಂಜಿಸಿ ಪಾಡಿ ಮೋಪಿಪ ಸಂಗೀತವಿಶಾರದರಿಂ (ರಾಜಶೇ. ೫-೧೯ವ). [ಸಂ.]

**ಸಂಕೀರ್ಣರಾಶಿ** (ನಾ). ನಾನಾವಿಧವಾದ ವಸ್ತುಗಳ ರಾಶಿ, — ಸಮೂಹ. [ಸಂ.]

**ಸಂಕೀರ್ಣಲಿಂಗ** (ನಾ). [ವೀಶೈ] ಐದು ವಿಧವಾದ ಲಿಂಗಗಳಲ್ಲಿ ಒಂದು : ಸ್ವಯಂಭುಲಿಂಗ ಬಾಣಲಿಂಗ ಚರಲಿಂಗ ಸಂಕೀರ್ಣಲಿಂಗ ಪ್ರಾಣಲಿಂಗವೆಂಬ ಪಂಚವಿಧಲಿಂಗಂಗಳಂ ತಮ್ಮ ತಮ್ಮ ಶಕ್ತ್ಯಾನುಸಾರಮಾದರ್ಚನಾತತ್ಪರರಾಗಲ್ವೇಳ್ಕುಂ (ವಿವೇಕ. ೯೨). [ಸಂ.]

**ಸಂಕೀರ್ಣವಡು** (ಕ್ರಿ). ಗೊಂದಲಗೊಳ್ಳು ; ಕ್ಷೋಭೆಗೊಳ್ಳು ; ಕಸಿವಿಸಿಗೊಳ್ಳು (?) : ಮನಕೆ ಬಂದಂತೆಂಬರಲ್ಲದೆ ಸಲೆ ಗುಣಾವಗುಣ ಜನಪರೆಣಿಪರ್ ಲೋಕಸಮ್ಮತಯೆನುತ ಕರ ಸಂಕೀರ್ಣವಟ್ಟನು ಹನುಮ ಕಟ್ಟುಮ್ಮಳವ ತಾಳಿದ ರಾಮನೆಂದುದಕೆ (ಕಾಶಿರಾ. ೩೮-೫೪). [ಸಂಕೀರ್ಣ? + ಪಡು$_1$]

**ಸಂಕೀರ್ಣವಿಷ್ಕಂಭ** (ನಾ). [ಕಾವ್ಯಮೀ] ನಾಟಕ ಅಥವಾ ದೃಶ್ಯಕಾವ್ಯಗಳಲ್ಲಿ ನಡೆದು ಹೋದ ಮತ್ತು ಮುಂದೆ ನಡೆಯುವ ಕಥಾಂಶವನ್ನು ಮಧ್ಯಮ ಮತ್ತು ನೀಚಪಾತ್ರಗಳ ಸಂಭಾಷಣೆಯ ಮೂಲಕ ಸೂಚಿಸುವುದು : ಮಧ್ಯಮಪಾತ್ರಗಳೂ ನೀಚಪಾತ್ರಗಳೂ ಸೇರಿ ಸೂಚಿಸಿದರೆ ಅದಕ್ಕೆ 'ಸಂಕೀರ್ಣವಿಷ್ಕಂಭ' ಅಥವಾ 'ಮಿಶ್ರವಿಷ್ಕಂಭ'ವೆಂದು ಹೆಸರು (ಕೃಪಿಡಿ. ೨೦೭). 'ಮಿಶ್ರವಿಷ್ಕಂಭ' ಪರಾ. [ಸಂ.]

**ಸಂಕೀರ್ಣಾಂಶಕೆ** (ನಾ). [ಕಾಮಶಾ] ಸ್ತ್ರೀಯರಲ್ಲಿ ಒಂದು ಬಗೆ, — ಜಾತಿ ; ಸ್ತ್ರೀಯರ ಪದ್ಮಿನಿ, ಶಂಕಿನಿ, ಹಸ್ತಿನಿ ಮತ್ತು ಚಿತ್ತಿನಿ ಎಂಬ ನಾಲ್ಕು ಜಾತಿಯ ಗುಣಗಳನ್ನು ಹೊಂದಿದವಳು : ನೆಗತದಂಶಕತತಿ ನುಡಿ ಕೂಡಿ ಬಂದಡೆ ಸಂಕೀರ್ಣಾಂಶಕೆಯೆಂದಜ (ಮದತಿ. ೩-೬). [ಸಂ. ಸಂಕೀರ್ಣಾಂಶಕಾ]

**ಸಂಕೀರ್ತನ** (ನಾ). (ಪರಮಾತ್ಮನ) ಗುಣಗಳ ಕೀರ್ತನೆ ; ಸ್ತೋತ್ರ ; ಸ್ತುತಿ : ಹಲವು ಮಾತೇನೊಂದು ಪದ್ಮದೊಳೊಲಿಸಿ ಮಾತಾಡಿಸುವನೆಮ್ಮೊಡನೆಳವೆಜೆಯ ತಲೆಯಭವನಂ ಸಂಕೀರ್ತನಂ ಮಾಡಿ (ಬಸವು. ೪೨ ೬೦) ; ಸಿಸ್ತಿಂತೆಯಿಂದ ಹರಿನಾಮ ಸಂಕೀರ್ತನತತ್ಪರರಾಗಿ ಎಲ್ಲರೂ ಪ್ರಯಾಣ ಸಾಗಿಸಿದರು (ಕಥಾ. ೧೮೮). [ಸಂ.]

**ಸಂಕೀರ್ತನಂಗೆಯ್** (ಕ್ರಿ). ಸ್ತುತಿಸು : ಸ್ತೋತ್ರಮಾಡು : ಸಹಜಸದ್ಗುಣಗಣಮಂ ಸರಸರವದಿಂ ಸಾರ್ದು ಸಂಕೀರ್ತನಂಗೆಯ್ದು ಶ್ರುತಿಸತಿಯರಿಂ (ಶಬಶಂ. ೧ ೭೯ವ). [ಸಂಕೀರ್ತನ + ಕೆಯ್$_1$]

**ಸಂಕೀರ್ತನೆ** (ನಾ). ೧. = ಸಂಕೀರ್ತನ : ಶ್ರೀ ಪರಮಾತ್ಮನ ಗುಣನಾಮಸಂಕೀರ್ತನೆಗಳನ್ನು ಹಾಡುವಂತೆ ಆದೇಶವನ್ನಿತ್ತಂತೆಯೂ ಭಾಸವಾಯಿತು (ವಿದಾಸ. ೩. ೫೮೭). ೨. ಸ್ತುತಿಸುವುದು ; ಸ್ತೋತ್ರಮಾಡುವುದು : ಅಂತುಮಲ್ಲದ ತನ್ನಹಾದಿ ಮಹಂತರುಗಳತ್ಕಂತ ವಿಮಲಾನಂತಸಂಕೀರ್ತನೆಗಳಿಂದ ಶ್ರಾಂತವೊಪ್ಪುತಿರೆ (ಬಸವು. ೬೧-೭೮) ; ವಿಠಲನ ಭಜನೆ ಸಂಕೀರ್ತನೆಗಳಲ್ಲಿ ತಲ್ಲೀನನಾಗಿ . . . ತಾಳ ಹಾಕುತ್ತ ಕುಣಿಯುತ್ತ ಇದ್ದುಬಿಡುತ್ತಿದ್ದನು (ಭಾರದ. ೫೯೩). [ಸಂ. ಸಂಕೀರ್ತನ]

**ಸಂಕೀರ್ತಿತವ್ಯ** (ನಾ). ಸ್ತುತಿಗೆ ಅರ್ಹನಾದವನು ; ಸ್ತುತಿಸಲ್ಪಡಬೇಕಾದವನು : ಸೇವ್ಯನನು ಸತ್ಸ್ತುತಿಗಳಲಿ ದೃಷ್ಟವ್ಯನನು ದೃಢಚಿತ್ತದಲಿ ಮಂತ್ರವ್ಯನಾ ಶ್ರೋತವ್ಯನನು ಸಂಕೀರ್ತಿತವ್ಯನನು . . . ಅಜ್ಞಾನದಲಿ ಯೋಗವ್ಯನೆಂದೇ ಸೆಣಸಿದವಲಾ . . . ಶಿವಶಿವಾಯೆಂದ (ಕುಮ್ಮಾವ್ಯ. ೬-೬೪). [ಸಂ.]

**ಸಂಕು$_1$** 'ಸಂಕ$_1$' ನೋ.

**ಸಂಕು$_2$** (ನಾ). ಗೂಟ ಅಥವಾ ಬೆಣೆಯಂತಿರುವ ಆಯುಧ : ನಡುವ ಸರಲ್ಗೆ ಮಯ್ಯೊಳಗಡಂಗುವ ಸಂಕುಗೆ ದಿಂಕುಗೊಳ್ಳ ಕಕ್ಕಡೆಗಿದಿರುರ್ಚುವಿಟ್ಟಿಗಿದಿರಾನೆಯ ಕೋಟ್ಕಳ ಕೋಳ್ಗೆ ನೊಂದು . . . ಬಿಟ್ಟುವಿರ್ದ ನೆಲೆಯಿಂ ಕೆಲವುನ್ಮದಗಂಧಸಿಂಧುರಂ (ಪಂಪಭಾ. ೧೦-೯೪) ; ತರುಣಿ ಸೂತಕಿ ವಾಮಕರದಿಂದ ತತ್ಸೂತ್ರಮಿರದಾಂತು ವರಹಸ್ತದಿಂದ ಸಂಕುಳ E ವ ತ ಪಿಡಿದುಯಿರದೆ ತನ್ನಾಳಮಂ ಕೊಯ್ದುಮಳರತ್ನಕ್ಕೆ ಒಪ್ಪವಿಟ್ಟಂತೊಳೆವೊಲು ಬಾಲಚಿಂತಾಮಣಿಯ ಮೈದೊಳೆದು (ನವಮೋ. ೧೫-೧೮). [< ಸಂ. ಶಂಕು]

**ಸಂಕುಗೊರಲ್** (ನಾ). ಶಂಖದ ಆಕಾರದ ಕೊರಳು ; ಶಂಖದಂತಿರುವ ಕೊರಳು : ರಂಗ ನಿನ್ನಯ ಸಂಕುಗೊರಲ ಗೋಚರದಿಂದ ಹಿಂಗುಗು ಗಡ ಭವಪಾಶ (ಶತಸಾಂ. ೩-೧೪) ; ಸಂಕುಗೊರಲೊಳ್ ತಳ್ತ ಮುತ್ತಿನ ಸರಂಗಳ್ (ಚಿಕವಿ. ೫-೧೦) ; ಚಲ್ಲಗಂಗಳ ಚಲ್ಲಗಾರ್ತಿಯರ್ ಸಂಕುಗೊರಲ ಕೊಂಕುಗುರುಳ ನೀಜೆಯರ್ (ರಾಮಾಶ್ವ. ೧೨೨-೨೬). [ಸಂಕು$_1$ (< ಸಂಕ$_1$) + ಕೊರಲ್]

**ಸಂಕುಚನ** (ನಾ). ಕುಗ್ಗುವಿಕೆ : ಅಂಗಾಂಗಗಳ ಸಂಕುಚನ ಪ್ರಕುಚನಗಳೂ ನಿಂತುಹೋಗಿದ್ದುವು (ಶಾಂತಲಾ. ೩೨೪). [ಸಂ.]

**ಸಂಕುಚಿತ** (ಗು). ೧. ಕುಗ್ಗಿದ ; ಚಿಕ್ಕದಾದ. ೨. ಸೀಮಿತವಾದ ; ಪರಿಮಿತವಾದ. (ನಾ). ೩. ಕುಗ್ಗಿದುದು ; ಚಿಕ್ಕದಾದುದು : ಎದೆಹಾಲು ಕೊಡುವುದರಿಂದ ನವಪ್ರಾಸದಲ್ಲಿ ಹಿಗ್ಗಿದ ಗರ್ಭಕೋಶವು ಮತ್ತೆ ಬೇಗ ಸ್ವಾಭಾವಿಕವಾಗಿ ಸಂಕುಚಿತವಾಗುತ್ತದೆ (ಗೃಹವಿ. ೧೦೭). ೪. ಅಲ್ಪವಾದುದು ; ಸೀಮಿತವಾದುದು : ಈ ಪರಿಷತ್ತು ಸಾಹಿತ್ಯವೆಂಬ ಮಾತಿಗೆ ಕೊಟ್ಟಿರುವ ಅರ್ಥವಾದರೋ, ಹೀಗೆ ಸಂಕುಚಿತವಾದದ್ದಲ್ಲವೆಂದು ಅದರ ನಿಬಂಧಾವಳಿಯ ಮೊದಲಲ್ಲಿರುವ ಉದ್ದೇಶವಿವರಣೆಯಿಂದಲೇ ಸ್ಪಷ್ಟಪಡುತ್ತಿದೆ (ಸಾಹಿಶ. ೫೯). [ಸಂ.]

**ಸಂಕುಚಿತತ್ವ** (ನಾ). ಅಲ್ಪತನ ; ಸಣ್ಣತನ : ಉಪಾಧಿಕವಾದ ಅವನ ಸಂಕುಚಿತತ್ವ ಹಿಮ್ಮೆಟ್ಟುತ್ತದೆ (ಸೌಂದಸ. ೬೪). [ಸಂ.]

**ಸಂಕುಚಿತದೃಷ್ಟಿ** (ನಾ). ಪರಿಮಿತವಾದ ದೃಷ್ಟಿಕೋನ ; ಸೀಮಿತವಾದ ದೃಷ್ಟಿ : ಎಲ್ಲವನ್ನೂ ಸಂಕುಚಿತದೃಷ್ಟಿಯಿಂದ ನೋಡುವುದು ಸರಿಯಲ್ಲ (ರೂಢಿ). [ಸಂ.]

**ಸಂಕುಚಿಸು** (ಕ್ರಿ). ೧. ಚಿಕ್ಕದಾಗು ; ಕುಗ್ಗು ; ಮುದುರು : ಈ ರೀತಿ ಸಂಕುಚಿಸುವುದರಿಂದ ಕೋನಯುತಚಲನ ಮೊತ್ತಸ್ಥಾಯಿತ್ವನಿಯಮದಂತೆ, ಅದು ಇನ್ನೂ ಹೆಚ್ಚು ವೇಗದಿಂದ ಸುತ್ತಾಡಿರಬೇಕು (ಭೂಹುಟ್ಟು. ೨೦) ; ನೀವು ತಡ ಮಾಡಿದರೆ ಬಾಳೆಲ್ಲ ಸಂಕುಚಿಸಿ ಕುಗ್ಗಿಸುವದಾತ್ಮನನು (ಚಂದುಟ. ೨೮). ೨. ಕುಗ್ಗಿಸು ; ಮುದುರಿಸು : ನಾನು ದೇಹವನ್ನು ಆದಷ್ಟು ಸಂಕುಚಿಸಿ ನಿದ್ದೆಹೋಗುವ ಪ್ರಯತ್ನದಲ್ಲಿದ್ದೆ (ಮುಂಗಾಮು. ೮೮) . ೩. (ಆಲಂ) ಕೃಪಣತನ ಮಾಡು ; ಜೀನತನ ತೋರಿಸು : ಕವಿ ಬುಧ ಗಾನ ವೈಣಿಕ ವಚನಶೂರರ ಮನ್ನಿಸುತ ಸಂಕುಚಿಸದೆ ದಣಿಸಿದನು ಪುರಜನಪರಿಜನಂಗಳನು (ಆನಂರಾ. ೧-೨೪-೩೯). [ಸಂಕುಚನ + -ಇಸು₁]

**ಸಂಕುಬುಲ್ಲು** (ನಾ). ಒಂದು ಬಗೆಯ ಹುಲ್ಲು : "ಕಚ್ಚುಕಾಡ್ಯಂ — ಸಂಕುಬುಲ್ಲು" (ಓಷಧಿ. ೨೫). [? + ಪುಲ್ಲು (< ಪುಲ್)]

**ಸಂಕುಮದ** (ನಾ). ಒಂದು ಬಗೆಯ ಸುಗಂಧದ್ರವ್ಯ ; ಜವ್ವಾಜಿ : ಪ್ರೀತಿಯಿಂ ಮಾಳ್ಪ ಪಂಚಾಮೃತಾಭಿಷೇಚನಾದಿ ಮೃಗಮದ ಸಂಕುಮದ ಘನಸಾರ ವೃಕ್ಷಸಾರ ಪುಷ್ಪಸಾರ ಕೇಸರಾದಿ ನಾನಾಸುಗಂಧಾಳಿಗಳಿಂ (ಸೌಪಂ. ೮-೨) ; ಚಾರುತರ ಹರಿಚಂದನಾಗರುಸಾರ ಕುಂಕುಮ ಸಂಕುಮದ ಕಸ್ತೂರಿ ಪುನುಗು ಕದಂಬ ಕರ್ಪೂರಾನುಲೇಪನದಿ . . . ನಡೆತಂದನು ಸಭಾಂತರಕೆ (ಆನಂರಾ. ೫-೫-೧೯). [<— ತೆಲು. ಸಂಕುಮದ]

**ಸಂಕುರ** (ನಾ). = ಸಂಕರ₃ : ಸುಂಕದಾದುದು ಸಂಕುರಕ್ಕೆ [ಪು]ಟ್ಟಿಗೆ ಒನ್ದರೆ ಮಳವೆಗೆ ಪಟ್ಟಿ ಪದಿನಾಱು ಪಲಂ (ಎ.ಇ. IX, ೨೨-೬ ; ಸು. ೮೦೦). [IP ಇದು 'ಸಂಕರ' ಎಂಬುದರ ಅಪಲಿಖಿತವಿರಬಹುದೆ?]

**ಸಂಕುಲ, ಸಂಕುಳ₁** (ಗು). ೧. ತಬ್ಬಿಬ್ಬಾದ ; ಭ್ರಾಂತಿಗೊಂಡ ; ದಿಗ್ಭ್ರಮೆ ಹೊಂದಿದ. ೨. ತುಂಬಿದ ; ಕಿಕ್ಕಿರಿದ. ೩. ಅವ್ಯವಸ್ಥೆಗೊಂಡ ; ಗೊಂದಲಮಯವಾದ. (ನಾ). ೪. ಗುಂಪು ; ಸಮೂಹ : "ನಿಕುರುಂಬಂ ನಿವಹಂ ವ್ರಜಂ ಸಮುದಯಂ . . . ಸಂಕುಲಮುತ್ಕರಂ . . . ವ್ರಾತಮೇಕಾರ್ಥಕಂ" (ವಸ್ತುಕೋ. ೧೦೨-೨೬) ; ರತ್ನಕೃತ ಕೃತಕಖದ್ಯೋತಸಂಕುಲಮಯಂ . . . ಲತಾಭವನಮಂ ಪೊಕ್ಕು (ಶ್ರೀರಾಮಾ. ೨೦-೫೩೩). ೫. ತುಮುಲಯುದ್ಧ ; ದೊಂಬಿಕಾಳಗ. **ಸಂಕುಳ₁** : ೪. ಪುಷ್ಪಸಂಕುಳದೊಳ್ ನೀನೆ ವಿಲಾಸಿಯ್ಯೆ ಮಿಡಿಗಳೊಳ್ ನೀಂ ಚೆಲ್ವನ್ನೆ (ಆದಿಪು. ೧೧- ೯೬) ; ನಡೆತಂದು ಧರೆಯೊಳು ವಿಶಾಲತೆಯೊಳತಿಪೆಸರ್ವಡೆದಿರ್ಪ ಪುರಪಟ್ಟಣ ಗ್ರಾಮಸಂಕುಳದ ನಡುವೆ ಕಿಱುವಳ್ಳಿಯಾಗಿಯು ಕಣ್ಗೆ ಮೆಱೆದು ಹೆಂಪಿನೊಳಿರ್ಪುದು (ಸಿದ್ಧರಾ. ೧-೩೧). [ಸಂ.]

**ಸಂಕುಲತೆ** (ನಾ). ಗೊಂದಲ ; ಕ್ಷೋಭೆ : ಸ್ತವಮಂ ಪಳಿಯಂ ಕಪರ್ದಿ ಮಂಜುಲಗುಣವಾರ್ಧಿ ಕೇಳ್ದುಮೆರಡಂ ಸರಿಗಂಡು ಮನೋನುರಾಗಸಂಕುಲತೆ ಯನಾಳ್ದನಂತೆ ನುತಿಯುಂ ಪಳಿಯುಂ ಸಮನಲ್ತೆ ಭವ್ಯದೊಳ್ (ಶಬಶಂ. ೪-೧೧೭). [ಸಂ. ಸಂಕುಲತಾ]

**ಸಂಕುಲಸಮರ** (ನಾ). ದೊಂಬಿಯುದ್ಧ ; ಗುರುತನುಜನಸ್ತ್ರವ ತಿರುಹೆ ಸೇನಾವನಧಿ ಗರ್ಜಿಸಲಾಯ್ತು ಸಂಕುಲಸಮರಸೌರಂಭ (ಕುವ್ಯಾಭೀ. ೫-೩). [ಸಂ.]

**ಸಂಕುವಿಡು** (ಕ್ರಿ). ಅಂಕುಶದಿಂದ ತಿವಿ,- ಚುಚ್ಚು : ಸಾಂದ್ರಮೆನಲ್ಕೆ ಸಂಕುವಿಡೆ ತದ್ರುಚಿ ರಾಜಿಸೆ ಮೌಕ್ತಿಕಾವಳೀರುಂದ್ರವರತ್ರೆ ಬಿತ್ತರಿಸೆ ಚಂಚಿಯಿನಂ ಚಿತಮಾಗೆ ಪಟ್ಟದಂತೀಂದ್ರನುಮಿಂತು ಪಣ್ಣಿ ಮಿಗೆ ಕಂಗೊಳಿಸುತ್ತಮೆ ಬಂದುದು (ಶಾಂತೀಶ್ವ. ೧೦-೬೧). [ಸಂಕು₂ + ಇಡು₁]

**ಸಂಕುಸುಕ** (ನಾ). ಕೆಟ್ಟವನು ; ದುಷ್ಟ : ಹುಸಿಕನಂ ಸಂಕುಸುಕನಂ ಶಠನನುತ್ಕಟನ . . . ತಪ್ಪನೆಣಿಸದಲೆ ಮಲರಹಿತಮಾಯಾವಿದೂರ ಸಿದ್ಧೇಂದ್ರಯತಿರಾಜ ರಕ್ಷಿಪುದೆನ್ನನು (ಸಿದ್ಧೇಪು. ೬-೯೮). [ಸಂ.]

**ಸಂಕುಳ₂** 'ಸಂಕುಲ' ನೋ.

**ಸಂಕೃತಿ** (ನಾ). [ಛಂದ] ವರ್ಣಛಂದಸ್ಸಿನ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಒಂದು ; ಪ್ರತಿಯೊಂದು ಚರಣದಲ್ಲಿಯೂ ಇಪ್ಪತ್ತುನಾಲ್ಕು ಅಕ್ಷರಗಳು ಬರುವ ಸಮವೃತ್ತಗಳ ಸಮುದಾಯ : ಅಲ್ಲಿ ಉಕ್ತೆ ಅತ್ಯುಕ್ತೆ ಮಧ್ಯೆ . . . ಸಂಕೃತಿ ಅತಿಕೃತಿ ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೧-೪೬ ವ) ; ಸಮವೃತ್ತಗಳು . . . ೧ ಉಕ್ತೆ . . . ೨೪ ಸಂಕೃತಿ ೨೫ ಅಭಿಕೃತಿ ೨೬ ಉತ್ಕೃತಿ ಎಂಬಿವು ಸಂಜ್ಞೆಗಳು (ಕೈಪಿಡಿ. ೭೮). [ಸಂ.]

**ಸಂಕೃಷ್ಟ** (ನಾ). [ಸಂಗೀತ] ಒಂದು ಬಗೆಯ ತಾಳ : ಧ್ರುವ ಮಟಯ ರೂಪಕ . . . ಪಂಚಪಾಣಿ ಸಂಕೃ [ಪಾಠಾಂ. ಕ್ರಿ] ಷ್ಟ ಖಂಜಾ ಖಂಜ . . . ಜಯಾಳವೆಂಬವೇ ಮೊದಲಾದ ನೂಱೊಂದು ತಾಳಂಗಳಾದೊಡೆ (ವಿವೇಕ. ೧೯೨). [ಸಂ.]

**ಸಂಕೆ₁, ಸಂಖೆ₁** (ನಾ). ೧. ಅನುಮಾನ ; ಸಂದೇಹ : ಇವಳೊಳ್ ಸಂಕೆವೇಡಂ (ರಾಮಾಶ್ವ. ೧೫-೯). ೨. ಭ್ರಾಂತಿ ; ಭ್ರಮೆ : ಪಸರಿಸಿದ ಪದ್ಮರಾಗದ ಪೊಸಗೆಂಪಂ ಮಾಂಸಮೆಂದು ಮುಂ ಕರ್ದುಕಲ್ಕಾಟಸಿಯಿಂ ಬೞಿಕದನುರಿಯೆಂಬ ಸಂಕೆಯಿಂ ಪೊರ್ದದಿರ್ದುವೀ ಮತ್ಸ್ಯಂಗಳ್ (ಆದಿಪು. ೧೨-೧೨೨) ; ಮನಕ್ಕೆ ಸಂಕೆಯನ್ನೊಲಗಿಸಿದಂ (ಸೌಇಇ. XI-i, ೪೧-೬೬ ; 969) . ೩. ಭಯ ; ಅಂಜಿಕೆ : ಉರುಬರ್ಹಮಂ ನೆಗಪಿಕೊಂಡು ಮಯೂರದ ಮೊತ್ತಮಿರ್ಪುಗುಂದಿರೆ ಪುದಿದಾ ನೆಟಿಲ್ಗೆಳಸಿ ಸಾರ್ದುದು ಸಂಕೆಯನೊಕ್ಕು ಪನ್ನಗೋತ್ಕರಂ (ಶಾಂತೀಶ್ವ. ೧೨-೨೪). **ಸಂಖೆ₁** : ೧. ಶನಿ ರಾಹು ಕೇತು ಕುಜರಿಂ ಘನಮೆನಿಸಿದ ಕಲಹಮಕ್ಕುಮಿನಗುರುಶಶಿಯಿಂದನಿತಾನುಂ ಸಂಖೆ(ಶಂಕೆ)ಯಿಲ್ಲದೆ . . . ನೋಡೆ(ಡಿ) ನಿರ್ಣಯಮಕ್ಕುಂ (ಜಟ್ಕಮ. ೧೨-೧೭೭). [< ಸಂ. ಶಂಕಾ]

**ಸಂಕೆ₂** 'ಸಂಕ₁' ನೋ.

**ಸಂಕೆ₃** (ನಾ). ೧. ಒಂದು ಬಗೆಯ ಸಸ್ಯ ; ಮೆಂತ್ಯದ ಗಿಡ. ೨. ಒಂದು ಗಂಧದ್ರವ್ಯ; ಸ್ಪೃಕ್ಕೆಯ ಬೇರು : "ಮರುನ್ಮಾಲಾ . . . ಲಂಕೋಯಿಕಾ - ೧೧ ಸ್ಪೃಕ್ಕೆಯೆಂಬ ಗ್ರಂಥ್ಯದ್ರವ್ಯ, ಸಂಕೇಬೇರು" (ಸಿದ್ಧಾಂತಿ. ೧೪೩). [< ಸಂ. ಸ್ಪೃಕ್ಕಾ]

**ಸಂಕೆ₄, ಸಂಖೆ₂** (ನಾ). ಅಂಕಿ ; ಅಂಕೆ : ಬೆಂಕಿಯುಂ ನೇಸಱುಂ ಸೋಂಕದ ಪೊಸವಗೆಯ ಪಲಸಾಸಿರ್ಸಂಕೆಯ ಸಸಿವಟ್ಟುಗಳಂ (ಚಿಕವಂ. ೧೧೬-೫). **ಸಂಖೆ₂** : ಬರುತಿರ್ದುವು ಲಕ್ಕಸಂಖೆಯೊಳಾ ಬಲದಿರವ ಬಣ್ಣಿ ಪೊಡಾರಳವು (ಕಂನವಿ. ೧೧-೩೬). [< ಸಂ. ಸಂಖ್ಯಾ]

**ಸಂಕೆಗಿಡು** (ಕ್ರಿ). ೧. ಅನುಮಾನವಿಲ್ಲದಾಗು. ೨. ಭಯವಿಲ್ಲದಾಗು ; ಹಿಂಜರಿಕೆಯಿಲ್ಲವಾಗು : ಪದೆಯಿಸೆ ಸೋಂಕಿ ಸಂಕೆಗಿಡೆ [ಪಾಠಾಂ. ಸಂಕಿಸದೆ] ಮೇಳಿಸಿ ಮೆಯ್ಯಿಡೆ ತಳ್ತು ತೋಳ ತಳ್ಪಿದಿರ್ಗೊಳೆ ಮೆಲ್ಲನಪ್ಪಿ (ಕಾವ್ಯಾವ. ೮೦೦). [ಸಂಕೆ₁ + ಕಿಡು (< ಕೆಡು₁)]

**ಸಂಕೆವೆಱು** (ಕ್ರಿ). ಅನುಮಾನಹೊಂದು ; ಶಂಕಿಸು : ಸಮಭೂತಳಮಂ ಅಂತು ಕಂಡಾ ಮಹಾಪುರುಷಶಿಖಂಡಮಣಿಮಂಡನಂ ಮಗುೞ್ದು ಬರುತ್ತಿದಿರೊಳ್ ಬರ್ಪ ರುದ್ರದತ್ತಾದಿಗಳಂ ಭೋಂಕನೆ ಕಂಡು ಸಂಕೆವೆತ್ತು ನಿಲ್ವುದುಂ (ನೇಮಿಪು. ೪-೧೦೦ ವ). [ಸಂಕೆ₁ + ಪೆಱು]

**ಸಂಕೇತ** (ನಾ). ೧. ಸೂಚನೆ ; ಸುಳಿವು ; ಸಂಜ್ಞೆ : ದುರ್ಯೋಧನನ ಸಂಕೇತದೊಳ್ ಮುನ್ನಮೆ ಸಮೆದಿರ್ದ ಪುರೋಚನಂ . . . ಕಳಮಾವೃತ ಕರಪಲ್ಲವೆಯರಪ್ಪ ಪುರಂಧ್ರಿಯರುಂ ಬದ್ಧವಣದ ಪಱೆಗಳುಂ ಬೆರಸಿದಿರ್ವಂದು (ಪಂಪಭಾ. ೩-೨ ವ) ; ಪ್ರೀತಿ ಮಿಗೆ ಶಂಖಪಟಹವಿನೂತೋದ್ಧುರಸಿಂಹಘಂಟಿಕಾನಿಸ್ವನಸಂಕೇತದೆ ಭಾವನಭೌಮ ಜ್ಯೋತಿಷ ವೈಮಾನಿಕಾಮರನೆರತಂದರ್ (ಸುಕುಮಾ. ೮-೬೪) . ೨. ಗುರುತು ; ಚಿಹ್ನೆ : ಹೆಸರನ್ನು ಉತ್ತರಪತ್ರಿಕೆಗಳ ಮೇಲೆ ಬರೆಯುವುದನ್ನು ತಪ್ಪಿಸಿ ಸಂಕೇತಗಳನ್ನು ಮಾತ್ರ ಹಾಕುವ ಏರ್ಪಾಟು (ಶಿಕ್ಷದ. ೩೪೮). ೩. ಸೂಚಕವಾದ ಗುರುತು, ವ್ಯಕ್ತಿ, ವಸ್ತು ಇತ್ಯಾದಿ : ದೇವರ ಸಂಕೇತವೇ ಆದ ಗುಡ್ಡನು . . . ಜನರನ್ನು ಸಂತೃಪ್ತಿಗೊಳಿಸುತ್ತಾನೆ (ಜೋಗಿದೇ. ೧೫) ; ಶ್ವೇತವರ್ಣವು ಒಪ್ಪಂದದ ಸಂಕೇತ (ಹೇಮಂತ. ೭೭೧). ೪. ಒಪ್ಪಂದ ; ಒಡಂಬಡಿಕೆ ; ಕರಾರು. ೫. ಪ್ರಣಯಿಗಳು ಪರಸ್ಪರ ಸೇರಲು ಗೊತ್ತುಮಾಡಿಕೊಳ್ಳುವ ಏರ್ಪಾಡು,- ವ್ಯವಸ್ಥೆ. ೬. ಪ್ರಣಯಿಗಳು ಪರಸ್ಪರ ಸೇರುವ ಸ್ಥಳ : 'ಸಂಕೇತಭೂಮಿ' ಪರಾ.

೭. ಸಮಯ ; ಅವಕಾಶ : ''ಕಾಲದಲಿ ಸಿದ್ಧಾಂತದಲಿ ವಿಶೇಷದಲಿ ಸಂಕೇತದಲಿ ಸಮಯಾಖ್ಯಮೆನಿಸಿರ್ಕು'' (ಮಂಗರಾ. ೧೩೪-೬೬). ೮. ಕಟ್ಟುಪಾಡು : ಈ ಶಬ್ದಕ್ಕೆ ಇದು ಅರ್ಥವೆಂಬುದು ಸಂಕೇತ (ಭಾರಮಿ. ೨೪೪ ಅಡಿಟ). ೯. ನಿದರ್ಶನ ; ದೃಷ್ಟಾಂತ ; ಉದಾಹರಣೆ : ಹಿಂದ ಬರಿ ಮರವಾದುದಿಂದವರ ಬಾಳ್ವೊಂದು ಸಂಕೇತವಾಯ್ತು (ಶ್ರೀರಾಮಾ. ೧೪೫-೮೫) ; ಈ ಅಚಲತೆಯು ಸಂಕೇತವಾಗಿ ಆಕೆಯನ್ನು ಚಿತ್ರಕಾರ ಶಿಲಾಸನದ ಮೇಲೆ ಕೂಡಿಸುತ್ತಾನೆ (ಭಾರದ. ೫೮೦). ೧೦. [ಕಾವ್ಯಮೀ] ಅಭಿವ್ಯಕ್ತಿಯ ಪ್ರಕಾರಗಳಲ್ಲಿ ಒಂದು : ಈ ಪ್ರತಿಮಾಸಂಕೇತ ಇತ್ಯಾದಿಗಳಲ್ಲಿ ವ್ಯಕ್ತವಾಗುವುದು ವಸ್ತು ಹೊರಗೆ ಹೇಗೆ ತೋರುವುದೋ ಹಾಗೆಯೇ ಅಲ್ಲ. ಕಲಾವಿದನ ಪ್ರತಿಭಾದೃಷ್ಟಿಗೆ ಹೇಗೆ ಗೋಚರಿಸಿತೊ ಹಾಗೆ (ಸೌಂದಸ. ೭೧). [ಸಂ.]

**ಸಂಕೇತಂಗೊಳಿಸು** (ಕ್ರಿ). ಸಂಕೇತಸ್ಥಳವನ್ನು ಗೊತ್ತುಮಾಡು ; ಕೂಡುವ ಸ್ಥಳವನ್ನು ಸೂಚಿಸು : ಪಾದರಿಗೆಯ ದೂದವಿಯಂತೆ ಪಜಿರಂ ಸಂಕೇತಂಗೊಳಿಸದ (ಧರ್ಮಾಮೃ. ೫-೯೯). [ಸಂಕೇತ + ಕೊಳ್$_1$ + -ಇಸು$_3$]

**ಸಂಕೇತಕ** (ನಾ). ೧. ಒಪ್ಪಂದ ; ಒಡಂಬಡಿಕೆ ; ಕರಾರು. ೨. ಪ್ರಣಯಿಗಳು ಸೇರಬೇಕೆಂದು ಮೊದಲೇ ಗೊತ್ತುಮಾಡಿಕೊಂಡ ಸ್ಥಳ ; ಸಂಕೇತಸ್ಥಳ. [ಸಂ.]

**ಸಂಕೇತನ** (ನಾ). ೧. = ಸಂಕೇತಕ ೧. ೨. = ಸಂಕೇತಕ ೨ : ದಾರಿಕೆ ಲಂಜಿಕೆ ಪಣವಧು . . . ತಾಂ ದೂದವಿಯಭಿಸಾರಿಕೆ ಸಂಕೇತನಕ್ಕೆ ಪೋಪವಳಕ್ಕುಂ (ವಸ್ತುಕೋ. ೫೩-೭). [ಸಂ.]

**ಸಂಕೇತನಭವನ** (ನಾ). ಪ್ರಣಯಿಗಳು ಸೇರಬೇಕೆಂದು ಮೊದಲೇ ಗೊತ್ತುಮಾಡಿಕೊಂಡ ಮನೆ : ತೋರಮುತ್ತಿನ ಹಾರಮಂ ತೊಟ್ಟು ಚಂದ್ರಮುಖಿ . . . ಐದಿದಳ್ಸಂಕೇತನ[ಪಾಠಾಂ. ಸಂಕೇತ]ಭವನದೊಳ್ಕಾದಿರ್ದ ಕಾಂತನೆಡೆಗೆ (ಜೈಮಿಭಾ. ೨೬-೯). [ಸಂ.]

**ಸಂಕೇತನಿಕೇತ** (ನಾ). ಗೊತ್ತುಮಾಡಿದ ಮನೆ, — ನಿವಾಸ : ಸೊಬಗಿಂಗೆ ತಾಯ್ಮನೆ ವಿಳಾಸಕ್ಕೋಜೆ ಲಾವಣ್ಯಲಕ್ಷ್ಮಿಗೆ ಸಂಕೇತನಿಕೇತಮೆಂಬುದು ಜನಂ ರೂಪಂ ಮಹಾದೇವಿಯಾ (ಪುಷ್ಪಪು. ೯-೪೬). [ಸಂ.]

**ಸಂಕೇತಭಾಷೆ** (ನಾ). ಸಂಗ್ರಹವಾಗಿ ಮತ್ತು ರಹಸ್ಯವಾಗಿರಲು, ನಿರ್ದಿಷ್ಟ ಪದಗಳಿಗೆ ಬದಲಾಗಿ ಬೇರೆ ಪದಗಳನ್ನು ಒಂದು ಕ್ರಮವಿಲ್ಲದೆ, ಸ್ವಚ್ಛಂದವಾಗಿ ಬಳಸಿರುವ ಭಾಷೆ ; ಗೂಢಲೇಖನ : ''ಸಂಕೇತ, ಸಂಕೇತಭಾಷೆ'' (Code. ಪತ್ರಿಸಿ. ೧೮). [ಸಂ. ಸಂಕೇತಭಾಷಾ]

**ಸಂಕೇತಭೂಮಿ** (ನಾ). ಪ್ರೇಮಿಗಳು ಸೇರಬೇಕೆಂದು ಮೊದಲೇ ಗೊತ್ತುಮಾಡಿಕೊಂಡ ಸ್ಥಳ ; ಸಂಕೇತಸ್ಥಳ : ''ಕೊಂಬೆನಲ್ ಸಂಕೇತಭೂಮಿ'' (ಕಬ್ಬಿಕೈ. ೩೮). [ಸಂ.]

**ಸಂಕೇತಲಿಪಿ** (ನಾ). ಸಂಗ್ರಹವಾಗಿ ಮತ್ತು ರಹಸ್ಯವಾಗಿರಲು, ನಿರ್ದಿಷ್ಟ ಪದ, ಅಕ್ಷರಗಳಿಗೆ ಬದಲಾಗಿ, ಒಂದು ಕ್ರಮವಿಲ್ಲದೆ ಸ್ವಚ್ಛಂದವಾಗಿ ಸೇರಿಸಿದ ಬೇರೆ ಪದ, ಅಕ್ಷರಗಳಿಂದ ಕೂಡಿದ ಲಿಪಿ : ಸ್ಪೇನಿನವರ ರಾಜಕೀಯ ಸಂಕೇತಭಾಷ (diplomatic Code language)ಯನ್ನೊಳಗೊಂಡ ಒಂದು ಪತ್ರವು ಫ್ರೆಂಚರ ಕೈಗೆ ಬೀಳಲು ವೀಟಾ ಅದರ ಅರ್ಥವನ್ನು ಕಂಡುಹಿಡಿದು ಸ್ಪೇನಿನವರ ಸಂಕೇತಲಿಪಿಯನ್ನು ತಿಳುಹಿದನು (ಗಣಿಚ. ೧೦೨). [ಸಂ.]

**ಸಂಕೇತಸದ್ಮ** (ನಾ). = ಸಂಕೇತನಿಕೇತ : ಇದಮೋಘಂ ಕಾರ್ಯಸಿದ್ಧಿಪ್ರಮದೆಗೆ ಕುಲಗೇಹಂ ಮತಶ್ರೀಗೆ ನೃತ್ಯಾಸ್ಪದಮನ್ಯಕ್ಕಾಪಲಕ್ಷ್ಮೀಲಲನೆಗೆ ಕೃತಸಂಕೇತಸದ್ಮಂ (ಚಂದ್ರಪ್ರ. ೯-೧೩೦). [ಸಂ. ಸಂಕೇತಸದ್ಮನ್]

**ಸಂಕೇತಸಮಯ** (ನಾ). ಪ್ರೇಮಿಗಳು ಪರಸ್ಪರ ಸೇರಲು ಗೊತ್ತುಮಾಡಿಕೊಳ್ಳುವ ವೇಳೆ, — ಕಾಲ : ಸಂಕೇತಸಮಯಮಂ ನಲವಿಂ ಕಿವಿಯೊಳ್ ಪಚ್ಚುವಚ್ಚರಸಿಯಧರ ಮಯೂಖಂ ಕರ್ಣಪೂರಪಲ್ಲವಶಂಕೆಯನೊದವಿಸೆ ಸುರೋತ್ತಮಂ ಸೊಗಯಿಸಿದಂ (ಚಂದ್ರಪ್ರ. ೪-೭೫). [ಸಂ.]

**ಸಂಕೇತಸ್ಥಲ, ಸಂಕೇತಸ್ಥಳ** (ನಾ). = ಸಂಕೇತಕ ೨ : ಸಂಕೇತಸ್ಥಲಕ್ಕೆ ಬರಲೊರ್ವ ಜಾರ (ವಿಕೋಪು. ೪-೬೫). **ಸಂಕೇತಸ್ಥಳ** : ''ಪನಂ - ಸಂಕೇತಸ್ಥಳಂ'' (ತಮದ. ಪರಿ. ೨); ''ಸಂಕೇತಸ್ಥಳಕ್ಕೆ ಪನವೆಂದು ಕೊಂಬೆಂದು ಪೆಸರೆಂದೆನಿಕ್ಕುಂ'' (ಕಬ್ಬಿಕೈ. ೯೩). [ಸಂ.]

**ಸಂಕೇತಸ್ಥಳ** 'ಸಂಕೇತಸ್ಥಲ' ನೋ.

**ಸಂಕೇತಸ್ಥಾನ** (ನಾ). = ಸಂಕೇತಕ ೨ : ಆಗೋ, ಜಾರಿಣಿ ಸಂಕೇತಸ್ಥಾನಕ್ಕೆ ಹೋಗುವಂತೆ, ಹೊರಟೇ ಬಿಡುತ್ತೇನೆ (ಭಾರದ. ೨೫). [ಸಂ.]

**ಸಂಕೇತಿಸು** (ಕ್ರಿ). ಸೂಚನೆ ಕೊಡು ; ಸೂಚಿಸು : ಈ ಚಾಕ್ಕಾರರು . . . ಉದಾಹರಣೆಗೆ ವಿಭಕ್ತಿ ವಚನ ಲಿಂಗಗಳನ್ನೂ ಸಂಕೇತಿಸುತ್ತಿದ್ದರು (ಭಾರದ. ೫೫೬) ; ಅವನು ತಲೆಯೊಲೆತದಿಂದ ಸಂಕೇತಿಸಿ, ಅಕ್ಕಪಕ್ಕಕ್ಕೆ ಕಣ್ಣು ಹಾಯಿಸದೆಯೇ ದಾರಿ ಮುಂದುವರಿಸಿದನು (ಪುನರು. ೫೧೮). [ಸಂಕೇತ + - ಇಸು$_3$]

**ಸಂಕೇಶ್ವರಿ** 'ಸುಂಕೇಶ್ವರ' ನೋ.

**ಸಂಕೊಲೆ** 'ಸಂಕಲೆ$_1$' ನೋ.

**ಸಂಕೋಚ** (ಗು). ೧. ಮುದುಡಿದ ; ಸಂಕುಚಿತವಾದ : ಮೊದಲೊಳ್ ನೇಸಜ ಪಕ್ಕೆ ಕೋಕವಿರಹಂ ಸಂಕೋಚಪದ್ಮಂ ತಮಂ ಪುದಿದಾ ಸಂಜೆಯ ತೂರ್ಯಂ (ಸೂಕ್ತಿಸು. ೮-೧) (ನಾ). ೨. ಕುಗ್ಗುವಿಕೆ ; ಸಂಕುಚಿತಗೊಳ್ಳುವಿಕೆ ; ಮುದುಡಿಕೊಳ್ಳುವಿಕೆ: ಶ್ವಾಸಕೋಶಗಳ ಸಂಕೋಚ ವಿಕಾಸ (ಶಿಕ್ಷದ. ೭೩). ೩. ಭಯ ; ಅಂಜಿಕೆ : ವಿರಹವ್ಯಾಕುಳವಾಗೆ ಚಕ್ರಮಿಥುನಂ ಸಂಕೋಚಮಂ ತಾಳ್ದು (ಸೂಕ್ತಿಸು. ೮-೩೦೧). ೪. ನಾಚಿಕೆ ; ಲಜ್ಜೆ : ಸಂಕೋಚವೇನೆಂಬುದನೆ ತಿಳಿಯದವಳಂತೆ ನಿಂತಿರ್ದವಳ ಪುರುಷಭಂಗಿಯಂ ನಿಡಿದಾಗಿ ದೃಷ್ಟಿಸುತೆ (ಚಿತ್ರಾಂಗ. ೨೪-೬೫೫) ; ಸಾವಿರರೂಪ ಸಾವಿರಗುಣ ಇದ್ದರೂ ಹೆಣ್ಣುಮಕ್ಕಳ ಸಂಕೋಚ ಏನು ಮಾಡಿದರೂ ತೊಲಗದು (ಇಪ್ಪಕ. ೪೨೯). ೫. ಒಂದು ಬಗೆಯ ಮೀನು. ೬. ಕುಂಕುಮಕೇಸರಿ. [ಸಂ.]

**ಸಂಕೋಚದೃಷ್ಟಿ** (ನಾ). ದಾಕ್ಷಿಣ್ಯ ; ಭಿಡೆಯ : ಸಂಕೋಚದೃಷ್ಟಿಯಿಂದ . . . ವೆಚ್ಚಮಾಡಲು ಹಿಂದೆ ಮುಂದೆ ನೋಡಬೇಡಿರಿ (ರೂಪಸಂ. ೨೩). [ಸಂ.]

**ಸಂಕೋಚನ** (ನಾ). ೧. ಕುಗ್ಗುವಿಕೆ ; ಸಂಕುಚಿತಗೊಳ್ಳುವಿಕೆ . ೨. ಸಂಗ್ರಹಿಸುವುದು ; ಸಂಕ್ಷೇಪಿಸುವುದು : ಒಂದು ಪದಪ್ರಯೋಗದಲ್ಲಿ, ನೂತನ ಛಂದೋವಿಸ್ತಾರದಲ್ಲಿ, ಸಂಕೋಚನದಲ್ಲಿ . . . ಇತರರಲ್ಲಿ ಕಾಣದ ಗುಣ ಇವರ ಕಾವ್ಯಗಳಲ್ಲಿದೆ (ಅನುಕ. ೩೬). [ಸಂ.]

**ಸಂಕೋಚಿಸು** (ಕ್ರಿ). ೧. ಸಂಕುಚಿತಗೊಳ್ಳು ; ಮುದುಡು ; ಬಾಡು : ಸಂಕೋಚಿಸಿದವು ಮುಖಾರವಿಂದ ದಿಶಾಂಗನಾಜನದ (ತೊರರಾ. ೬-೨೭-೩). ೨. ಕುಗ್ಗಿಸು ; ಸಂಕುಚಿತಗೊಳಿಸು : ಎನಸುಂ ಗಂಧರ್ವರಾಜಾತ್ಮಜೆಯ ವಿರಹವೃತ್ತಾಂತಸಂತಪ್ತನಾಗಿರ್ದನೊಳಾನುಂ ಕಾಯೆನೆಂದಾದವೆ ಕರುಣಿಸಿದಂತೆಯ್ದೆ ಸಂಕೋಚಿಸಿತ್ತೊಯ್ಯನೆ ಸುತ್ತಂ ಸೂಸಿದ . . . ಅಹಿಮರುಚಿಗಳಂ ತಿಗ್ಮರುಜಾಮಲಿಬಿಂಬಂ (ಕಾದಂಬ. ೩೬೪); ಶರೀರಮಂ ಸಂಕೋಚಿಸಿ ನಟ್ಟ ದಿಟ್ಟಿಗಳ್ಸರಸು ನಿನ್ನನೆ ನೋಡುತ್ತುಮಿರ್ಕುಂ (ಪಂಚತಂ. ೧೬೬-೧೧). [ಸಂಕೋಚ + - ಇಸು$_3$]

**ಸಂಕೋಲೆ** 'ಸಂಕಲೆ$_1$' ನೋ.

**ಸಂಕ್ರಂದನ** (ನಾ). ೧. ಕೂಗಿಕೊಳ್ಳುವುದು ; ಕಿರಿಚುವುದು. ೨. ಇಂದ್ರ : ನಂದನ ಸಂಕ್ರಂದನ ವಂದನೀಯ ಪದದೊಳ್ ನಿಲ್ವಂ ತಪೋರಾಜ್ಯದೊಳ್ (ಪಂರಾಮಾ. ೬-೮೬) ; ಹಿಂದೆ ಸಂಪದದೊಳುಚಿ ಗರ್ವದಿಂ ಮೆಜೆದ ಸಂಕ್ರಂದನನ ಸಿರಿಯ ನೀರೊಳಗೆ ನೆರಹಿದ ಮುನಿಪನಂದವಂ ಮಾಡುವೆನು (ಹಚಕಾ. ೮-೯). ೩. ಯುದ್ಧ ; ಕದನ. [ಸಂ.]

**ಸಂಕ್ರಂದನಗಜ** (ನಾ). ಇಂದ್ರನ ಆನೆ ; ಐರಾವತ : ಸಂಕ್ರಂದನಗಜ ಶಾರದಾಭ್ರತಾರಾದ್ರಿಪಯಃಕುಂದೇಂದುಯಶೋಭಾಸುರನೆಂದು ಮನಂಗೊಂಡು (ಸುಕುಮಾ. ೧-೫೬). [ಸಂ.]

**ಸಂಕ್ರಂದನಗುರು** (ನಾ). ಇಂದ್ರನ ಗುರು ; ಬೃಹಸ್ಪತಿ : ಇಂದುಸುತಂ ಕೂಡಿರೆ ಸೂರ್ಯೇಂದುಗಳೊಳ್ ನೋಡೆ ಸೌಮ್ಯರುದಯದೊಳಿರೆ ಸಂಕ್ರಂದನಗುರುವಂತ್ಯದೆ ಹನ್ನೊಂದಬ್ದದಿನತ್ತಲಗ್ಗಳಂ ಬಾಚನವಂ (ಜಾತತಿ. ೬-೩೩). [ಸಂ.]

**ಸಂಕ್ರಂದನನಂದನ** (ನಾ). ಇಂದ್ರನ ಮಗ ; ಅರ್ಜುನ : ಒಂದೆ ಸರಲಿಂದಮವನೆರ್ದೆಯಂ ದೊಕ್ಕನೆ ತಿಣ್ಣಮೆಚ್ಚು ಕೊಲಲೊಲ್ಲನೆ ಸಂಕ್ರಂದನನಂದನತನಯಂ ತಂದೆಯ

ಪೂಣ್ಕೆಯನೆ ನೆನೆದು ದುಶ್ಶಾಸನನಂ (ಪಂಪಭಾ. ೧೧-೯೭) ; ಸಂಕ್ರಂದನನಂದನನ ನಿರ್ಗಳ ನಿಸ್ಸಹಾಯಪರಾಕ್ರಮೋಕ್ರಿಗೇಳ್ಗ್ನು (ಶಬಶಂ. ೪-೬೫ ವ). [ಸಂ.]

**ಸಂಕ್ರಮ** (ನಾ). ೧. ಒಟ್ಟಿಗೆ ಹೋಗಿಬರುವುದು. ೨. ಒಟ್ಟಿಗೆ ಸೇರುವುದು. ೩. ವರ್ಗಾವಣೆ ; ಸ್ಥಳಾಂತರ. ೪. ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ದಾಟುವ ದಿನ : ದಿಕ್ತಟಾಂತರವಳಯಗಳೊಳ್ ನಟಿಯೆ ಬಳ್ಳಿಗಳಂ ನಡು ರಿಕ್ತೆ ರಾಗಿಯಂ ಪರಿಕಿಸ ಸಂಕ್ರಮಂ ಮಕರದೊಳ್ ಪಗಲಾದೊಡ ಜೋಳಮಕ್ಕುಂ (ಜಬ್ಬಮ. ೯-೬). ೫. ಕಟ್ಟೆ ; ಸೇತುವೆ : "ಸಂಕ್ರಮಃ, ದುರ್ಗಸಂಚಾರ ೨ ಹೊಳೆ, ಕಂದಕ, ಬೆಟ್ಟ ಮುಂತಾದ ದುರ್ಗಗಳನ್ನು ಸುಲಭವಾಗಿ ದಾಟುವ ಕಟ್ಟ, ಸೇತುವೆ ಮುಂತಾದ ಗಮನಸಾಧನದ ಹೆಸರು" (ಸಿದ್ಧಾಂತಿ. ೩೭೪). [ಸಂ.]

**ಸಂಕ್ರಮಣ** (ನಾ). ೧. ಒಟ್ಟಿಗೆ ಹೋಗುವಿಕೆ ; ಸಹಗಾಮಿತ್ವ. ೨. ಒಟ್ಟಿಗೆ ಸೇರುವುದು, — ಕೂಡುವುದು : ಪೂರ್ವಾಪರವಿಷಯ ವಿವಿಕ್ತಾರ್ಥವ್ಯಂಜನಯೋಗ ಸಂಕ್ರಮಣಲಕ್ಷಣಲಕ್ಷಿತಮಪ್ಪ ಪೃಥಕ್ತ್ವವಿತರ್ಕವಿಚಾರಮೆಂಬ ಮೊದಲ ಶುಕ್ಲಧ್ಯಾನ ದೊಳ್ ಸಮಾಹಿತನುಪಶಾಂತಗುಣಸ್ಥಾನದೊಳ್ ಪ್ರಾಣಪರಿತ್ಯಾಗಂಗೆಯ್ದು (ಆದಿಪು. ೬-೩೪ ವ) ; ಕೆಲವರಿಗೆ ಆವೇಗಗಳ ಸಂಕ್ರಮಣದಲ್ಲಿ ಅಭಿರುಚಿ (ಕಾವ್ಯಕು. ೧೩). ೩. ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ದಾಟುವ ದಿನ : ಗ್ರಹಣ ಸಂಕ್ರಮಣ ಪುಣ್ಯತಿಥಿಗಳೊಳಂ ಮೊದಲಾಗಿಯುಂ . . . ತೈಲಮುಮನಿಕ್ಕುವುದು. ಮೆಚೆವುದುಂ (ಸುಕುಮಾ. ೨-೬೯ ವ) ; ಇಂದು ಪಿತೃದಿನವಿಂದು ಸಂಕ್ರಮಣೆಂದು ಸೂರ್ಯ ಗ್ರಹಣ ಹರಿದಿನವಿಂದು ಯಜ್ಞಾರಂಭದಿನ ವನ್ನಂತಿ ಲೇಸೆಂದು (ಕುವ್ಯಾವಿ. ೬-೧೩). ೪. ಸೂರ್ಯನು ಮಕರರಾಶಿಯನ್ನು ಪ್ರವೇಶಿಸುವ ದಿನ ಮತ್ತು ಅಂದು ಆಚರಿಸುವ ಹಬ್ಬ ; ಸಂಕ್ರಾಂತಿ ಹಬ್ಬ ; ಪೊಂಗಲ್ ಹಬ್ಬ : ಮಹಾಮಾಘಮಾಸದ ಶುಕ್ಲಪಕ್ಷದ ಸಂಕ್ರಮಣದಂದು ತನ್ನವಸಾನಮನಱಿದು (ಎಕ. II (R), ೨೧೪-೧೮ ; 1130). ೫. ಮೂಗಿನ ಎರಡು ಹೊರಳೆಗಳ ಗಾಳಿ : "ನಾಸಿಕದಿ ನಿಂದಾನಿಲಂ ಕುಂಭಕಮೆನಿಕ್ಕು ನಾಸಿಕದಿ ಬಿಡುವಾನಿಲಂ ರೇಚಕಮೆನಿಕ್ಕು . . . ಎಡಬಲಂಬೆರಸಿ ಸಂಕ್ರಮಣಮಕ್ಕು" (ಮಂಗರಾ. ೧೬-೧೪). ೬. (ಆಲಂ) ವ್ಯತ್ಯಾಸಗೊಳ್ಳುತ್ತಿರುವ ಕಾಲ ; ಪರ್ವಕಾಲ ; ಸಂಧಿಕಾಲ : ಪ್ರತಿನಿತ್ಯ ಸಂಕ್ರಮಣವು ನಡೆದೆ ಇದೆ, ಆದರೆ ಪ್ರತಿದಿನ ಬದಲಾವಣೆಯು ಬಹಳ ಸ್ವಲ್ಪ (ಕರ್ಣಾಪೂ. ೯೭). ೭. [ಜ್ಯೋತಿ] ನಕ್ಷತ್ರರಾಶಿ : ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನುಸ್ಸು, ಮಕರ, ಕುಂಭ, ಮೀನ — ಈ ೧೨ ಸಂಕ್ರಮಣಂಗಳು (ಭಾಸ್ಕರ. ೬೪-೮). [ಸಂ.]

**ಸಂಕ್ರಮಣಕಾಲ** (ನಾ). ೧. (ಸಂಪ್ರದಾಯದಂತೆ) ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ದಾಟುವ ಕಾಲ : ಪಂಚಾಂಗಪರಿಷ್ಕಾರವಿಲ್ಲದೆ, ವಾಸ್ತವವಾದ ಸಂಕ್ರಮಣಕಾಲಗಳಿಗೂ ಪಂಚಾಂಗಗಳಲ್ಲಿ ವಾಡಿಕೆಯಿರುವ ಸಂಕ್ರಮಣಕಾಲ ಗಳಿಗೂ ಸುಮಾರು ೨೩ ದಿನಗಳಷ್ಟು ವ್ಯತ್ಯಾಸ ಬಂದುಹೋಗಿದೆ (ಗಣಿಚ. ೨೪೦). ೨. (ಆಲಂ) ವ್ಯತ್ಯಾಸಗೊಳ್ಳುತ್ತಿರುವ ಕಾಲ ; ಸಂಧಿಕಾಲ ; ಪರ್ವಕಾಲ : ಭಾರತದ ಒಂದು ಸಂಕ್ರಮಣಕಾಲದಲ್ಲಿ ತುಳಸೀದಾಸನ ಪ್ರಾದುರ್ಭಾವವಾಯಿತು (ಭಾರದ. ೪೭೦). [ಸಂ.]

**ಸಂಕ್ರಮಣಾವಸ್ಥೆ** (ನಾ). ಒಂದು ಸ್ಥಿತಿಯಿಂದ ಮತ್ತೊಂದು ಸ್ಥಿತಿಗೆ ಬದಲಾಗುವ ಸ್ಥಿತಿ : ಭಾಷಾಶೈಲಿಯಲ್ಲಿ ಈ ಯುಗದ ಸಂಕ್ರಮಣಾವಸ್ಥೆಯ ನಿದರ್ಶನವು ಸ್ಪಷ್ಟವಾಗಿದೆ (ಕಸಾಚ. ೧೪೮) ; ಆ ಸಂಕ್ರಮಣಾವಸ್ಥೆಯು ಸಂದ ಮೇಲೆ ಸರಕಾರವೂ ಕರಗಿ ಮಾಯವಾಗುವುದು (ಮಾವಾದ. ೧೬೭). [ಸಂ. ಸಂಕ್ರಮಣಾವಸ್ಥಾ]

**ಸಂಕ್ರಮಣಿ** (ನಾ). [ಜೈನ] ಒಂದು ಬಗೆಯ ವಿದ್ಯೆ : ಪ್ರಜ್ಞಪ್ತಿ ಕಾಮರೂಪಿಣಿ ಅಗ್ನಿಸ್ತಂಭಿನಿ . . . ಪ್ರಹರಿಣಿ ಸಂಕ್ರಮಣಿ ಆವರ್ತನಿ . . . ಭ್ರಾಮರಿ ಆಭೋಗಿನಿಯೆಂಬಿವು ಮೊದಲಾಗ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಚಾವುಂಪು. ೧೯೫). [ಸಂ. ಸಂಕ್ರಮಣೀ]

**ಸಂಕ್ರಮಿತ** (ಗು). ಒದಗಿದ ; ಪ್ರಾಪ್ತವಾದ : ಅಮಲತಾರೆಯಲಹಿತ ಜಯ ಸಂಕ್ರಮಿತಲಗ್ನದಲರಸನುದಧಿಕ್ರಮನುರುಸ್ಕಂಧಾವಲಂಬನನಾದನೊಲವಿನಲಿ (ತೊರರಾ. ೬-೬-೧೦). [ಸಂ.]

**ಸಂಕ್ರಮಿಸು** (ಕ್ರಿ). ೧. ಕೂಡು ; ಸೇರು ; ಒದಗು : ಪೂರ್ವೋಕ್ತ ಸರ್ವಾರ್ಥ ಸಿದ್ಧೀಶ್ವರನಾ ಭುವನಾಂಬಿಕೆಯ ಮುಖಾಂಬುಜಾತಮಂ ಪೊಕ್ಕು ಗರ್ಭಸರೋ ವರಾಂಬುವಿನೊಳ್ ಚಂದ್ರಬಿಂಬದಂತೆ ಸಂಕ್ರಮಿಸಿದಾಗಳ್ (ಆದಿಪು. ೬-೩೦ ವ); ಸ್ವರ್ಗಾವತರಣಕಲ್ಯಾಣವಿಧಿಪೂರ್ವಕಂ ವಿಮಳವಾಹನಚರಾಹಮಿಂದ್ರಂ ಜಯಸೇನ ಮಹಾದೇವಿಯಂ ಗರ್ಭದೊಳು ಸಂಕ್ರಮಿಸಿ ನವಮಾಸಂ ನೆಱೆಯೆ (ಚಾವುಂಪು. ೯೦). ೨. ಒಟ್ಟಾಗಿ ಸೇರು ; ಒಂದುಗೂಡು : ಉಟ್ಟ ಕೌಸುಂಬಾಂಬರರುಚಿಯುಂ ತೊಟ್ಟ ಪದ್ಮರಾಗಾಭರಣಕಿರಣಂಗಳುಂ ಸಂಕ್ರಮಿಸಿದಂತೆ ಒಳಕೊಂಡ ಕೆಂಪಿನಿಂ ದಿನವಳಯಂ ಪೋಲ್ತಿರ್ದುದು (ಆದಿಪು. ೧೨-೧ ವ) ; ಹಿಮವರ್ಷಬಿಂದುಗಳ್ ಸಂಕ್ರಮಿಸಿರೆ ವನತರು ನಿಕಾಯದೊಳ್ ನವಮುಕುಳೌಘಮನಾಂತ ಸುರಭಿಜಾತಂ ಭ್ರಮರಾಳಿಗೆ ಪರಿಮಳಾನುಮಿತಮಾಯ್ತೆತ್ತಂ (ಜಗಪು. ೧೪-೮). ೩. ತಲ್ಲೀನನಾಗು ; ಮಗ್ನನಾಗು : ತಲ್ಲಣಿಗ ಹೇಳ್ದ ಕಬ್ಬದ ಪಾಂಗಿನಂತಲ್ಲವೆಲ್ಲಿಯುಂ ವಿದ್ವತ್ಸಭಾವಲಯ ಮೆಚ್ಚೆ ಕೈಯಲ್ಲಿರಿಸಿದಾಮಳಕದಂತೊರೆವೆನೀ ಕಾವ್ಯದಲ್ಲಿ ಸಂಕ್ರಮಿಸಿದರ್ಗೆ (ಲಿಂಗಪು. ೧-೨೨). ೪. ಕೂಡಿಸು ; ಸೇರಿಸು ; ಅಳವಡಿಸು : ಕುಂತಿಯ ದಿವ್ಯಗರ್ಭೋದರಮೆಂಬ ಶುಕ್ತಿಪುಟೋದರದೊಳ್ ತನ್ನ ದಿವ್ಯಾಂಶಮೆಂಬ ಮುಕ್ತಾಫಲೋ[ದ]ಬಿಂದುವನಿಂದ್ರಂ ಸಂಕ್ರಮಿಸಿ ನಿಜನಿವಾಸಕ್ಕೆ ಪೋದಂ (ಪಂಪಭಾ. ೧-೧೩೭ ವ); ನಮಿಸಿದಂ ಶಿವನಡಿಗೆ ಭಕ್ತಿಯಿಂ ಕೂಡಿ ಸಂಕ್ರಮಿಸಿದಂ ತನ್ನ ಬಲಮಂ (ಚಿಬಪು. ೩೩-೯). ೫. ಬದಲಾಯಿಸು ; ವ್ಯತ್ಯಾಸವಾಗು : ಯೋಗದಿಂ ಯೋಗಾಂತರಮುಂ ವ್ಯಂಜನದಿಂ ವ್ಯಂಜನಾಂತರಮುಂ ಸಂಕ್ರಮಿಸುವುದು (ಅಜಪು. ೮-೨೮ ವ) ; ಭ್ರಮಿತಮನಹ್ಹಾದಂಗೆ ಫಣಿದಷ್ಟನ ನಾಲಗೆಗಂತು ತಿಕ್ತವರ್ಗಮೆ ಮಧುರಂಗಳಾಗಿ ಮಧುರಂಗಳೆ ತಿಕ್ತರಸಂಗಳಾಗಿ ಸಂಕ್ರಮಿಸುಗುಮಂತೆ ಕಿಲ್ಬಿಷವಿಷಂ ಪುದಿದಿರ್ದ ಕುದೃಷ್ಟಿಗಾತ್ಮತತ್ತ್ವಮೆ ಮೃಷತತ್ತ್ವಮಾಗಿ ಮೃಷತತ್ತ್ವಮ ತತ್ತ್ವಮೆಯಾಗಿ ತೋಱುಗುಂ (ಸಮಪು. ೧೧-೧೫೬). ೬. ಉಂಟಾಗು ; ಘಟಿಸು ; ಲಭಿಸು : ನಿಜಾಂಗಸಂಧಿಬಂಧಮನಿನಿತಂ ನಿಮಿರ್ಚಲಣಮಾಱದೆ ಗರ್ಜಿಸುತಿರ್ದುದಲ್ಲಿ ಸಂಕ್ರಮಿಸಿದ ಮಾಗೆಯೊಂದು ತುಹಿನೋತ್ಕಟ ಸಂಕಟದಿಂ ಮೃಗಾಧಿಪಂ (ಕುಸುಮಾ. ೬-೧೭) ; ಕಮಲವದನೆಯ ಖೂಳತನದಲಿ ತಂದ ಯವ್ವನದೆಸಕ ಮಸುಳಿಸದ ಬಾಲತನ ವೃದ್ಧತ್ವ ಹೊದ್ದದ ಸೋಲ ಲಯ ಸಂಕ್ರಮಿಸದಭಿನವಶೂಲಿ ಸಮರಕಪಾಲಿ ಖಳ ದಶಮೌಳಿಯವನೆಂದ (ತೊರರಾ. ೬-೨೦-೫೫). ೭. ಹೆಚ್ಚಾಗು ; ಅತಿಶಯಿಸು : ಸಂಕ್ರಮಿಸಿತಾಟೋಪವಸುರನ ಕೊಲೆಗೆ ತಂದನು ಮನವನನಿಲಸುತ (ತೊರರಾ. ೫-೨-೪೭). ೮. ವ್ಯಾಪ್ತವಾಗು ; ಹಬ್ಬು ; ಹರಡು : ಅಲ್ಲಿ ಸಂಕ್ರಮಿಸಿ ಪೋಗದ ಕಂಪನುಣಲ್ಕೆ ಕರ್ಣದತ್ತೆಳಸಿ ಜನಂಗುತಿರ್ಪ ನೆವದಿಂ ಸ್ಮರಮಂತ್ರಮನೋದುವಂತೆ ಕರ್ಣೊಳ್ಳಳಿಪಾಳಿಸಂಕುಳಂ ನೆನೆಯಿಸಿತ್ತಸಿತೋತ್ಪಲಕರ್ಣಪೂರಮಂ (ಕಾದಂಪೂ. ೮೫೩).

[ಸಂಕ್ರಮಣ + -ಇಸು]

**ಸಂಕ್ರಾಂತಿ** (ನಾ). ೧. = ಸಂಕ್ರಮಣ ೩ : ದೇಸಿಗಣದ ಗೋಪನಂದಿಪಂಡಿತದೇವರ್ಗ್ಗೆ ಗರಿಂಣಿನೆಯ ಶ್ರೀಮುಖಸಂವತ್ಸರದ ಪೌಷ್ಯಸುದ್ಧ ೧೩ ಆದಿವಾರ ಸಂಕ್ರಾಂತಿಯಂದು . . . ರಾಚನ ಹಳ್ಳಿಯುಮಂ ಬೆಳ್ಗೊಳ ಪನ್ನೆರಡುಮಂ ಧಾರಾಪೂರ್ವಕಂ ಮಾಡಿ ಬಿಟ್ಟ ದತ್ತಿ (ಎಕ. II (R), ೫೭೮-೪೯ ; 1094) ; ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ ಗ್ರಹಣ ಸಂಕ್ರಾಂತಿಯಿಂದ ವೆಗ್ಗಳ . . . ಕೂಡಲಸಂಗಮದೇವಾ ನಿಮ್ಮ ಮಾಣದ ನೆನೆವವಂಗೆ (ಬಸವ. ೬೧೧) ; ಒಂದು ರಾಶಿಯಿಂದ ಮತ್ತೊಂದಕ್ಕೆ ಅವನು ಹೋಗುವುದೇ ಸಂಕ್ರಾಂತಿಯೆಂದೆನಿಸಿಕೊಳ್ಳುತ್ತದೆ (ಮುಂಬಯಿ. ೬-೬೯). ೨. = ಸಂಕ್ರಮಣ ೪ : ಮುಂದಣ ಸಂಕ್ರಾಂತಿಗೆ ಅದು ನಡೆಯಬೇಕೆಂದು ಇಬ್ಬರೂ ಸೇರಿ ನಿರ್ಧರಿಸಿದರು (ಕುಡಿಕೂ. ೭). ೩. = ಸಂಕ್ರಮಣ ೬ : ತಿಳಿಯದಿರಲೇನ್ ತಿರೆಗೆ ಬಾನರಿಯದೇನಿರ್ದಯ ಪರಿವರ್ತನೆಯ ಪುಣ್ಯಸಂಕ್ರಾಂತಿಯಂ (ಶ್ರೀರಾಮಾ. ೧೨೩-೭೦೯).

ಸಂಕ್ರಾಂತಿಧವಳ = ಒಂದು ಬಿರುದು ; IP ಕದಂಬರ ಎರಡನೇ ಜಯಕೇಶಿಯ ಬಿರುದು : ಲೋಕೈಕಕಲ್ಪದ್ರುಮ ಸಂಕ್ರಾಂತಿಧವಳಂ ಮೂರ್ತಿ ನಾರಾಯಣಂ (ಎಕ. XIII, ೩೨೦-೩ ; 1125). [ಸಂ.]

**ಸಂಕ್ರಾಂತಿಪುರುಷ** (ನಾ). ೧. ಮಕರಸಂಕ್ರಮಣದ ಅಧಿದೇವತೆ : ಸಂಕ್ರಾಂತಿ ಪುರುಷನು ಪಶ್ಚಿಮದಿಕ್ಕಿನ ಕಡೆಗೆ ಪ್ರಯಾಣಮಾಡಿರುವುದರಿಂದ ಪಶ್ಚಿಮದಿಕ್ಕಿನ ದೇಶದ

ಜನರಿಗೆ ತೊಂದರೆ ಹೆಚ್ಚು (ರೂಢಿ). ೨. (ಆಲಂ) ಎಲ್ಲವೂ ಬದಲಾಗಬೇಕೆಂಬ ಪಕ್ಷ ಹಿಡಿದು ಪ್ರಗತಿಮಾರ್ಗವನ್ನು ಸಾಧಿಸುವ ಪುರುಷ, — ಮನುಷ್ಯ; ಕ್ರಾಂತಿಕಾರ : ಆಗಸ್ಟೀನ್ . . . ಈತ ಪ್ರಾಚೀನಯುಗ ಮತ್ತು ಮಧ್ಯಯುಗದ ಸಂಕ್ರಾಂತಿಪುರುಷನಾಗಿದ್ದಾನೆ (ಕವಿಕೋ. I. ೬೯೫) ; ಇದನ್ನು ಸಾಧಿಸಿದಾಗ ರಾಷ್ಟ್ರದ ಜೀವನದಲ್ಲಿ ಪರ್ವಣಿಕಾಲ ಬಂದೀತು. ಭಾರತೀಯರು ಸಂಕ್ರಾಂತಿಪುರುಷರಾದಾರು (ನವ್ಯರಾ. ೧೬). [ಸಂ.]

**ಸಂಕ್ರಾಂತಿವೃತ್ತ** (ನಾ). [ಭೂಗೋಳ] ಭೂಮಧ್ಯರೇಖೆಯ ಉತ್ತರಕ್ಕೆ ಅಥವಾ ದಕ್ಷಿಣಕ್ಕೆ ಸೂರ್ಯನು ಚಲಿಸುವುದನ್ನು ಸೂಚಿಸುವಂತೆ ಭೂಪಟದ ಅಥವಾ ಗೋಳದ ಮೇಲೆ ಎಳೆದಿರುವ ಗೆರೆ : ಸೂರ್ಯಮಂಡಲವು ಯಾವ ಸ್ಥಳಗಳ ಮೇಲೆ ಹುಟ್ಟಿ ಸಂಚರಿಸಿ ಮುಳುಗುವಂತೆ ತೋರುತ್ತೊ ಆ ಸ್ಥಳಗಳನ್ನು ತೋರಿಸುವುದಕ್ಕಾಗಿ ಭೂಗೋಳದ ಸುತ್ತಲೂ ಬರೆಯಲ್ಪಟ್ಟಂತೆ ಭಾವಿಸಲ್ಪಟ್ಟಿರುವ ರೇಖೆಗಳಿಗೆ ''ಸಂಕ್ರಾಂತಿವೃತ್ತಗಳು'' ಎಂದು ಹೆಸರು (ಭೂಗೋಳ. ೮). [ಸಂ.]

**ಸಂಕ್ರಾಂತಿಹಬ್ಬ** (ನಾ). (ಸಂಪ್ರದಾಯದ ಪ್ರಕಾರ) ಸೂರ್ಯನು ಮಕರರಾಶಿಯನ್ನು ಪ್ರವೇಶಿಸುವ ದಿನ ಹಿಂದುಗಳು ಆಚರಿಸುವ ಹಬ್ಬ ; ಪೊಂಗಲ್‌ಹಬ್ಬ; ಮಕರಸಂಕ್ರಮಣ : ಸಂಕ್ರಾಂತಿಹಬ್ಬದಲ್ಲೂ ಗೋವುಗಳ ಪೂಜೆ ನಡೆಯುತ್ತಿತ್ತು (ಹುಟ್ಟಿಹ. ೭೦). [ಸಂಕ್ರಾಂತಿ + ಹಬ್ಬ (< ಪರ್ಬ)]

**ಸಂಕ್ರಾಮ** (ನಾ). ೧. ದುರ್ಗಮವಾದ ಮಾರ್ಗ, — ಹಾದಿ. ೨. ಕ್ಲಿಷ್ಟಕರವಾದ ಪ್ರಗತಿ. ೩. ಸೇತುವೆ ; ಸಂಕ. [ಸಂ.]

**ಸಂಕ್ಲಿಷ್ಟ** (ನಾ). ಕಷ್ಟಕ್ಕೆ ಈಡಾದವನು ; ತೊಂದರೆಗೆ ಸಿಲುಕಿದವನು : ಪೂರ್ವಜನ್ಮಭಾವಿತ ತೀವ್ರಸಂಕ್ಲೇಶ ಪರಿಣಾಮೋಪಾರ್ಜಿತಾಶುಭಕರ್ಮೋದಯದಿಂ ಸಂತತಂ ಕ್ಲಿಷ್ಟರಪ್ಪುದಱಿಂ ಸಂಕ್ಲಿಷ್ಟರ್ (ತತ್ತ್ವಪ್ರ. ೧೨೩). [ಸಂ.]

**ಸಂಕ್ಲಿಷ್ಟಾಸುರೋದೀರಿತ** (ನಾ). [ಜೈನ] ಐದು ಬಗೆಯ ದುಃಖಗಳಲ್ಲಿ ಒಂದು ; ರಾಕ್ಷಸರಿಂದ ಉಂಟಾಗುವ ದುಃಖ : ಶಾರೀರಂ ಮಾನಸಂ ಕ್ಷೇತ್ರಜಂ ಪರಸ್ಪರೋದೀರಿತಂ ಸಂಕ್ಲಿಷ್ಟಾಸುರೋದೀರಿತಂಗಳೆಂಬ ಪಂಚಪ್ರಕಾರದುಃಖಂಗಳನನೇಕ ಪ್ರಕಾರದಿನನುಭವಿಸುತ್ತಂ (ಸುಕುಮಾ. ೧೧-೪೭ ವ). IP 'ದನುಜೋದೀರಿತ' ಎಂಬುದಕ್ಕೆ ಬದಲಾಗಿ ಇಲ್ಲಿ ಈ ಶಬ್ದವನ್ನು ಬಳಸಲಾಗಿದೆ. [ಸಂ.]

**ಸಂಕ್ಲೇಶ** (ನಾ). ದುಃಖ ; ಸಂಕಟ : ಯತಿಪತಿಗಳಧ್ಯಯನಂ ನಿನಗನಿಷ್ಟಮಪ್ಪುದಱಿ ನಧ್ಯಯನಾಂತರಾಯಮಂ ಮಾಡಲೆಂದವರೋದುವಾವಾಸದೊಳ್ ಸಂಕ್ಲೇಶಮಾಗ ಸಾರಮೇಯ ಪೂತಿ ಕಳೇವರಮನಿಕ್ಕಿದೊಡೆ (ಆದಿಪು. ೩-೩೮ ವ) ; ಈಶಾನರಸುರರಾಜಾದೇಶಂ ನವಿಕಲ್ಪಯೆಂದೆನುತ್ತಿರ್ಪುಚಿತಕ್ಲೇಶಮಿದದಱಿಂದೀ ಸಂಕ್ಲೇಶಂ ಕರಮೊಳ್ಕಿತಿ ವರನಾಂ ಕೆಯ್ಕೊಂಡೆಂ (ಶಾಂತಿಪು. ೩-೫೮) ; ಪಾಪವಾಗುವುದೂ ತನ್ನಿಂದಲೇ ಸಂಕ್ಲೇಶವಾಗುವುದೂ ತನ್ನಿಂದಲೇ (ಭಾರದ. ೧೯೯). [ಸಂ.]

**ಸಂಕ್ಲೇಶಂಬಡು** (ಕ್ರಿ). ತೊಂದರೆ ಪಡು ; ಕಷ್ಟಪಡು : ಊರಿಲ್ಲ ಕೇರಿಯಿಲ್ಲೆಲ್ಲಿ ಚರಿಗೆವುಗುವಮಂತು ಕೆಮ್ಮನೇಕೆಮ್ಮಂ ತಾಂಗಿದಪಿರೆಂದೊಡೆ ಪಿರಿದೊಂದು ಪೊಟಲುಂಟು ನೀಮುಂ ಸಂಕ್ಲೇಶಂಬಡದಿರಿಂದಿನ ದಿವಸಮಿರ್ಕೆಂದೊಡೆ (ವಡ್ಡಾರಾ. ೯೧-೧).

[ಸಂಕ್ಲೇಶ + ಪಡು$_1$]

**ಸಂಕ್ಲೇಶಕರ** (ನಾ). ಕಷ್ಟವನ್ನುಂಟುಮಾಡುವಂತಹುದು; ಕ್ಲೇಶಯುಕ್ತವಾದುದು : ದೇಶಂ ಪರರಾಷ್ಟ್ರಾದಿ ನಿವೇಶಾಂತಂ ತದ್ವಿರುದ್ಧವಚನಂ ಮಿಗೆ ಸಂಕ್ಲೇಶಕರಂ ಕೃತಿಕರ್ತೃಗೆ . . . ದೇಶವಿರುದ್ಧಂ (ಕವಿರಾ. ೧-೧೧೦). [ಸಂ.]

**ಸಂಕ್ಷಿಪ್ತ** (ಗು). ೧. ರಾಶಿಯಾದ ; ಗುಂಪಾದ. ೨. ಸಂಗ್ರಹಗೊಳಿಸಿದ ; ಅಡಕಗೊಳಿಸಿದ : ಈ ಮುಂದೆ ಕೊಡುವ ರೇಖಾಚಿತ್ರದಲ್ಲಿ ಉಪಯೋಗವಾಗಿರುವ ಸಂಕ್ಷಿಪ್ತಪದಗಳ ಪೂರ್ಣರೂಪ ಇಂತಿದೆ (ದ್ರಾವಿವಿ. ೬ ಚಿಸ್ಟಲ್). (ನಾ). ೩. ಸಂಗ್ರಹ ಮಾಡಿದುದು ; ಅಡಕಗೊಳಿಸಿದುದು : ಈ ಪದದ ವಿವರಣೆ ಮತ್ತೆ ಬರಲಿರುವುದರಿಂದ ಇಲ್ಲಿ ಸಂಕ್ಷಿಪ್ತವಾಗಿ ನಿರೂಪಿಸಿದೆ (ದ್ರಾವಿವಿ. ೩೪). ೪. ಚಿಕ್ಕದಾದುದು ; ಕುಗ್ಗಿದುದು : ಹನುಸಂಕುಲಂ ವದನದ[ಡೆ ಕೇಶಾಲ್ಪಂ] ಸಂಕ್ಷಿಪ್ತಮಾಗುವ ಗುಜ್ಜುಮಂ ನಿಧುವನ ಸಮುದ್ಭೂತಂ ನೂತಂ ಮೃಗಾನ್ವಯಸಿಂಧುರಂ (ಬಂಹರಿ. ೨-೪೯). [ಸಂ.]

**ಸಂಕ್ಷುಬ್ಧ** (ಗು). ೧. ಕ್ಷೋಭೆಗೊಂಡ ; ಅಲ್ಲೋಲಕಲ್ಲೋಲವಾದ. (ನಾ). ೨. ಕ್ಷೋಭೆಗೊಂಡುದು ; ಗಲಭೆಯಿಂದ ಕೂಡಿದುದು : ಇಂಡಿಯದ ಹೊರಗೆ ರಾಷ್ಟ್ರಾನ್ಯೋನ್ಯ ಪರಿಸ್ಥಿತಿ ಸಂಕ್ಷುಬ್ಧವಾಗಿ ಭೀತಿಜನಕವಾಗಿತ್ತು (ರಾಜ್ಯಶಾ. ೧೫). [ಸಂ.]

**ಸಂಕ್ಷುಭಿತ** (ಗು). ೧. ಒಟ್ಟಿಗೆ ಸೇರಿಸಿ ಮೇಲಕ್ಕೆಸೆದ, — ಚಿಮ್ಮಿದ. ೨. ಜೋರಾಗಿ ಅಲ್ಲಾಡಿಸಿದ, — ಕಲಕಿದ. ೩. ಒಟ್ಟಾಗಿ ಹಾರುತ್ತಿರುವ : ಅಲೆಗಳ್ ಪುರ್ವಿನ ಗಂಟು ಸಂಕ್ಷುಭಿತಪಕ್ಷಿಶ್ರೇಣಿಯೇ ಡಾಬು ಮೇಣ್ ಬಲವದ್ರೋಷವಿಚಾಲಿತಾತ್ಮವಸನಂಬೋಲಿರ್ಪ ಫೇನಾಳಿಯಿಂ ಸೆಳೆಯುತ್ತುಂ (ಧನ್ಯಾಲೋ. ೬೭). [ಸಂ.]

**ಸಂಕ್ಷೇಪ** (ನಾ). ೧. ಒಟ್ಟಿಗೆ ಸೇರಿಸಿ ಎಸೆಯುವುದು. ೨. ಅಡಕಗೊಳಿಸುವುದು ; ಕಡಮೆ ಮಾಡುವುದು ; ಸಂಗ್ರಹಿಸುವುದು : ಸಂಕ್ಷೇಪದಿಂ ಸನ್ಮಾರ್ಗಸ್ವರೂಪಣ ನಿರೂಪಣಂಗೆಯ್ವ (ಸುಕುಮಾ. ೫-೪೪ ವ) ; ರಾತ್ರಿ ನಡೆದ ಘಟನೆಗಳೆಲ್ಲವನ್ನು ಸಂಕ್ಷೇಪವಾಗಿ ತಿಳಿಸಿದೆ (ಬಾಣಾಳಿ. ೧೯೯). ೩. ಸಂಕ್ಷಿಪ್ತಗೊಳಿಸಿದುದು ; ಅಡಕಗೊಳಿಸಿದುದು ; ಸಂಗ್ರಹ : ''ಸಮಾಸಃ, ಸಮಾಹಾರಃ, ಸಂಕ್ಷೇಪಃ, ಸಂಗ್ರಹಃ — ಈ ೪ ಕಿರಿದು ಮಾಡುಹ'' (ಹಲಾಯು. ೧೨೬-೮೧). ೪. ವೇಗ ; ತ್ವರಿತ ; ಶೀಘ್ರತೆ : ಅರಿಯಂ ಸಂಕ್ಷೇಪದೊಳಾಂತರಿಯಂ ಗೆಲಿಸುಗುಮದಶ್ವಸಾಧನಪತಿಯಂ ಭರದಿನದನೇಱೆ ಲಕ್ಷಣ ನಿರತಂ ಸುರಪತಿಯ ವಾಹನಂ ಕೇವಳಮೇ (ಅಶ್ವಶಾ. ೨-೫೦). ೫. [ಜೈನ] ಭವ್ಯಜೀವಪದಾರ್ಥಗಳ ಸ್ವರೂಪನಿರ್ದೇಶವನ್ನು ಸಂಗ್ರಹವಾಗಿ ಮಾಡಿರುವುದು: ಸಂಕ್ಷೇಪಂ ಓಘಂ ಸಾಮಾನ್ಯಮೆಂಬಿವು ದರ್ಶನಚಾರಿತ್ರಮೋಹನೀಯೋದ್ಭೂತಗುಣಸ್ಥಾನದ ಪರ್ಯಾಯಶಬ್ದಂಗಳ್ (ತತ್ತ್ವಪ್ರ. ೧೭). [ಸಂ.]

**ಸಂಕ್ಷೇಪಣ** (ನಾ). ಸಂಕ್ಷಿಪ್ತಗೊಳಿಸುವುದು ; ಅಡಕಗೊಳಿಸುವುದು : ''ಸಂಕ್ಷೇಪಣಂ, ಸಮಸನಂ - ೨ ದೊಡ್ಡದಾಗಿರುವುದನ್ನು ಚಿಕ್ಕದಾಗಿ ಮಾಡುವಿಕೆ, ಸಂಗ್ರಹಿಸುವಿಕೆ'' (ಸಿದ್ಧಾಂತಿ. ೩೬೨) ; ಉಳಿದವು ಯಥಾನುಸಾರ ಸಂಕ್ಷೇಪಣ ವಿಸ್ತರಣ ಪರಿವರ್ತನಗಳನ್ನು ಎತ್ತಿವೆ (ಸಂಶೋಧ. iii ಅಂಕ). [ಸಂ.]

**ಸಂಕ್ಷೇಪರುಚಿ** (ನಾ). [ಜೈನ] ಹತ್ತು ಪ್ರಕಾರದ ದರ್ಶನಾರ್ಯರಲ್ಲಿ ಒಂದು ಪ್ರಕಾರಕ್ಕೆ ಸೇರಿದವನು ; ಜೀವಾದಿ ಪದಾರ್ಥಗಳ ಸಂಕ್ಷೇಪಕಥನಮಾತ್ರದಿಂದಲೇ ಸಮ್ಯಗ್ದರ್ಶನದ ಪ್ರಾಪ್ತಿಯನ್ನು ಹೊಂದುವವನು : ಜೀವಾದಿ ಪದಾರ್ಥ ಸಮಾನ ಸಂಬೋಧನ ಸಮುದ್ಭೂತರುಚಿಗಳೇ ಸಂಕ್ಷೇಪರುಚಿಗಳೆಂಬರ್ (ತತ್ತ್ವಪ್ರ. ೧೭೩). 'ಮಾರ್ಗರುಚಿ' ಪರಾ. [ಸಂ.]

**ಸಂಕ್ಷೇಪಿಸು** (ಕ್ರಿ). ಸಂಕ್ಷಿಪ್ತಗೊಳಿಸು ; ಸಂಗ್ರಹಿಸು ; ಅಡಕಗೊಳಿಸು : ಪ್ರಥಮಾವಿಭಕ್ತಿಯಿಲ್ಲವೆನ್ನಲು ಕೊಡುವ ಕಾರಣಗಳನ್ನು ಕೆಳಗಿನಂತೆ ಸಂಕ್ಷೇಪಿಸಬಹುದು (ಸಂಶೋಧ. ೫೨). [ಸಂಕ್ಷೇಪಣ + -ಇಸು$_1$]

**ಸಂಕ್ಷೋಭ** (ನಾ). ೧. ಅಲ್ಲೋಲಕಲ್ಲೋಲ ; ಕ್ಷೋಭೆ : ಈ ಕಾಳೆಗ ಚತುರ್ದಶ ಭುವನಜನಸಂಕ್ಷೋಭವಾಯ್ತೆಂದ (ಕುವ್ಯಾಕ. ೨೨-೧೧). ೨. ಕಂಪಿಸುವುದು ; ನಡುಗುವುದು. ೩. ಮನಸ್ಸಿನ ಉದ್ವೇಗ ; ಚಿತ್ತವಿಕಾರ. [ಸಂ.]

**ಸಂಕ್ಷೋಭಿತ** (ಗು). ೧. ಕಲಕಿದ ; ಕದಡಿದ ; ಅಲ್ಲೋಲಕಲ್ಲೋಲವಾದ : ಪೂರ್ಣಪಾತ್ರಹರಣ ವಿಲುಠ್ಯಮಾನವಸನಭೂಷಣಮುಂ ಸಂಕ್ಷೋಭಿತನಗರಮುಮೆನಿಸಿ ಮಹಾಸಂಭ್ರಮಂ ವಿಜೃಂಭಿಸುವುದುಂ (ಕಾದಂಪೂ. ೪೧೦). (ನಾ). ೨. ಅಲ್ಲೋಲಕಲ್ಲೋಲವಾದುದು ; ಗಲಿಬಿಲಿ : ಪತ್ತಿ ಪ್ರಮಾದಫಲಕಮನತ್ಯುಗ್ರಗ್ರಾಹನಿವಹಸಂಕ್ಷೋಭಿತದೊಳ್ ಮತ್ತೀ ರತ್ನಾಕರದೊಳ್ ಪುತ್ರಿಕೆಯೆನೆ ಬಟ್ಟಲಿಂತು ಬಾಟ್ಸುದೆ ಚೋದ್ಯಂ (ಕವಿರಾ. ೨-೩೬). [ಸಂ.]

**ಸಂಕ್ಷೋಭಿಸು** (ಕ್ರಿ). ಕದಡಿದಂತಾಗು ; ಹಾಳಾಗು : ನೋಡುತಿರೆ, ಪಿಂಗಿತಾ ಮುಖಸೌಮ್ಯತಾಮುದ್ರೆ? ಸಂಕ್ಷೋಭಿಸಿತು ನಿದ್ರೆ? (ಶ್ರೀರಾಮಾ. ೨೭೩-೨೭೪).

[ಸಂಕ್ಷೋಭ + -ಇಸು$_1$]

**ಸಂಕ್ಷೋಭೆ** (ನಾ). = ಸಂಕ್ಷೋಭ ೧ : ಪ್ರೇಮಬೀಜಗಳಿಹುವು ವೈರಬೀಜಗಳವೊಲೆ ಸೌಮ್ಯಮುಂ ಸಂಕ್ಷೋಭೆಯಂತೆ ಪ್ರಕೃತಿಯಲಿ (ಮಂಕುಕ. ೨೪೬). [ಸಂ. ಸಂಕ್ಷೋಭ]

**ಸಂಚಿ$_1$** 'ಸಂಕೆ$_1$' ನೋ.

**ಸಂಚಿ$_2$** 'ಸಂಕೆ$_4$' ನೋ.

**ಸಂಖ್ಯ** (ನಾ). ಯುದ್ಧ ; ಕದನ : ''ಸಂಗ್ರಾಮಃ, ಸಮಿತಿಃ, ಸಮಿತ್, ಸಮರಂ, ಸಂಖ್ಯಂ . . . ವಿಗ್ರಹಃ — ಈ ೩೫ ಕಾಳಗಂ'' (ಹಲಾಯು. ೭೫-೨೯೯). [ಸಂ. ಸಂಖ್ಯಾ]

**ಸಂಖ್ಯಿಕ** (ನಾ). ಎಣಿಸುವಿಕೆ ; ಲೆಕ್ಕಹಾಕುವಿಕೆ ; ನಿರ್ದಿಷ್ಟಅಂಕೆಯನ್ನು ಕಂಡುಹಿಡಿಯುವುದು. [ಸಂ.]

**ಸಂಖ್ಯಾತ** (ನಾ). ೧. ಎಣಿಕೆ ಮಾಡಿದುದು ; ಎಣಿಸಿದುದು. ೨. ಎಣಿಸಲು ಸಾಧ್ಯವಾಗುವಂಥದು ; ಎಣಿಕೆಗೆ ಸಿಗುವಂಥದು : ಸೌಧರ್ಮೇಂದ್ರನ ಋತು ವಿಮಾನಂ ನಡುವಾಗ ಸಂಖ್ಯಾತಾಸಂಖ್ಯಾತಯೋಜನವಿಸ್ತೀರ್ಣಂಗಳ್ (ಸುಕುಮಾ. ೧೧-೬೦ ವ) ; ಸಂಖ್ಯಾತ ತಿರ್ಯಗ್ಗಾದಿಯಸಂಖ್ಯಾತಂ ದೇವದೇವಿಯರ ಕೋಷ್ಠದೊಳೆಲ್ಲಂ ಖ್ಯಾತಂ (ಅನಂಪು. ೧೪-೪೬). ೩. ಸಂಖ್ಯೆ ; ಅಂಕೆ : ''ಗಣಿತಂ ಸಂಖ್ಯಾತಂ ಬಹುಗಣ ಶಬ್ದಂ ಭೇದದಲ್ಲಿ ಸಂಖ್ಯೆಯಡಕ್ಕುಂ'' (ವಸ್ತುಕೋ. ೧೦೩-೩೪). ೪. [ಜೈನ] ಕಾಲಪ್ರಮಾಣಬೇದಗಳಲ್ಲಿ ಒಂದು : ಸಮಯ ಸಮೂಹಮಸಂಖ್ಯಾತ ಮಾದೊಡಾವಳಿಯೆನಿಕ್ಕುಮಾವಳಿ ಸಂಖ್ಯಾತಮೆನಿಪ್ಪುದಾದೊಡುಚ್ಛ್ವಾಸಮೆನಿಕ್ಕುಂ ಸ್ತೋಕಮಕ್ಕುಮೇಬುಚ್ಛ್ವಸಂ (ಪಂರಾಮಾ. ೧-೪೯). ೫. ದ್ರವ್ಯಪ್ರಮಾಣಭೇದಗಳಲ್ಲಿ ಒಂದು : ದ್ರವ್ಯಪ್ರಮಾಣದಲ್ಲಿ ಸಂಖ್ಯಾತ, ಅಸಂಖ್ಯಾತ, ಅನಂತಂಗಳೆಂದು ಮೂರು ಭೇದಗಳಿವೆ. ಯಾವುದರ ಸಂಖ್ಯೆಯು ಪಂಚೇಂದ್ರಿಯಗಳಿಗೆ ಗಮ್ಯವಾಗಿರುವುದೋ ಅದು ಸಂಖ್ಯಾತವಾಗಿದೆ (ಜೈನಪ. ೩೦೪). [ಸಂ.]

**ಸಂಖ್ಯಾತೀತ** (ಗು). ೧. ಎಣಿಸಲಾಗದ ; ಅಸಂಖ್ಯಾತವಾದ : ಅಲ್ಲಿ ಮೊದಲ್ಗೊಂಡು ಸ್ಥಳಯಾತ್ರೆಗೆ ಪೋಗಿ ಸಂಖ್ಯಾತೀತ ಸಾರಧನಮಂ ಪಡೆದು ಬರ್ಪೆಡೆಯೊಳ್ (ಶಾಂತಿಪು. ೯-೯೦ ವ) ; ಅರಸ ಕೇಳ್ಳೆ ನಿಮ್ಮ ದಳದೊಳು ಗುರುತನುಜ ಕೃತವರ್ಮ . . . ನೇಪಾಳರು ಕುರೂಷಾದಿಗಳು ಸಂಖ್ಯಾತೀತ ಬಲವೆಂದ (ಕುವ್ಯಾಕ. ೧೫-೪). (ನಾ). ೨. ಎಣಿಕೆಗೆ ಅತೀತವಾದುದು ; ಅಸಂಖ್ಯಾತವಾದುದು : ಅತ್ಯದ್ಭುತಮಪ್ಪ ದೇವಪಡೆ ಸಂಖ್ಯಾತೀತವೇನಾದುದೋ (ಮಲ್ಲಿಪು. ೧೨-೧೫೦) ; ಭಾನುತನಯನ ಕದನಕೊದಗಿದ ಸೇನೆ ಸಂಖ್ಯಾತೀತವೆಂದನು ಸಂಜಯನು ನೃಪಗೆ (ಕುವ್ಯಾಕ. ೧೦-೫).

[ಸಂ.]

**ಸಂಖ್ಯಾನ** (ನಾ). ೧. ಎಣಿಸುವಿಕೆ ; ಗಣನೆ. ೨. [ವ್ಯಾಕ] ಸಂಖ್ಯಾವಾಚಿಯಾದ ನಾಮಪದ : ನೀನಱಿ ಸಂಖ್ಯೇಯದ ಸಂಖ್ಯಾನದ ದೊರೆವೆತ್ತ ಭಾವದೇಕತೆ ಬಹುತಾಧೀನಂ ವಿಶೇಷಣಂ ಬಹುತಾನತಮೆ ವಿಶೇಷ್ಯಮೇಕವಚನಮೆಯಕ್ಕುಂ (ಶಮದ. ೧೩೯). ೩. [ಛಂದ] ಷಟ್ಪ್ರತ್ಯಯಗಳಲ್ಲಿ ಒಂದು ; IP ಅಕ್ಷರ ಛಂದಸ್ಸಿನ ಹಿಂದಿನ ಮುಂದಿನ ಛಂದಸ್ಸುಗಳಲ್ಲಿ ಎಷ್ಟು ಸಮವೃತ್ತಗಳು, ಅರ್ಧಸಮ ವೃತ್ತಗಳು ಮತ್ತು ವಿಷಮವೃತ್ತಗಳಿವೆ ಎಂಬುದನ್ನು ತಿಳಿಸಲು ಸಹಕಾರಿಯಾದ ಒಂದು ಕ್ರಮ : ಸಂಖ್ಯಾನಮಂ ಪೇಟ್ಟೆಂ (ಛಂದೋಂಬು. ೬-೨೬೫). [ಸಂ.]

**ಸಂಖ್ಯಾಪೂರಣ** (ನಾ). [ವ್ಯಾಕ] (ಪ್ರತ್ಯಯದಿಂದ) ಸಂಖ್ಯೆಗಳನ್ನು ಪೂರ್ತಿ ಗೊಳಿಸುವುದು : ಅನೆಯ ಪ್ರತ್ಯಯಮನಿತಿನಿತನಿತೆಂಬ ಲಸತ್ಪ್ರಮಾಣಪೂರಣದೊಳ್ ನೆಟ್ಟನೆ ಸಂಖ್ಯಾಪೂರಣದೊಳ್ ಜನಿಯಿಪುದು (ಶಮದ. ೨೦೭). [ಸಂ.]

**ಸಂಖ್ಯಾಪ್ರಕೃತಿ** (ನಾ). [ವ್ಯಾಕ] ಸಂಖ್ಯಾವಾಚಕವಾಗಿರುವ ಪದದ ಮೂಲರೂಪ, — ಪ್ರಕೃತಿಪದ : ನಾಮಪ್ರಕೃತಿ ಆಖ್ಯಾತಪ್ರಕೃತಿ (ಧಾತು)ಗಳಿರು ವಂತೆಯೇ ಗುಣಪ್ರಕೃತಿ ಸಂಖ್ಯಾಪ್ರಕೃತಿಗಳೂ ಇದ್ದುವೆಂದು ತೋರುತ್ತದೆ. ಆದರೆ ಅವು ಸ್ವತಂತ್ರಶಬ್ದಗಳಾಗಿದ್ದುದು ಈಗ ಕಂಡುಬರುವುದಿಲ್ಲ (ಕೃಪಿಡಿ. ೧೫). [ಸಂ.]

**ಸಂಖ್ಯಾಬಲ** (ನಾ).. ಹೆಚ್ಚಿನ ಸಂಖ್ಯೆಯಿಂದ ಸಿಗುವ ಬೆಂಬಲ : ಇಂಥ ಶಾಸ್ತ್ರೀಯ ವಿಚಾರಗಳಲ್ಲಿ ಸಂಖ್ಯಾಬಲದ ಮೇಲೆ ವಿಷಯ ನಿರ್ಧಾರವಾಗುವುದಿಲ್ಲ (ದ್ರಾವಿವಿ. ೪೯). [ಸಂ.]

**ಸಂಖ್ಯಾರಹಿತ** (ಗು). ಎಣಿಸಲಾಗದ ; ಅಸಂಖ್ಯಾತವಾದ : ವರುಣಸಭೆಯೊಳಗಿಹವು ಭುಜಗೇಶ್ವರ ಸಮುದ್ರನದೀನದಾವಳಿ ಗಿರಿತರುವ್ರಜವೆನಿಪ ಸಂಖ್ಯಾರಹಿತವಸ್ತುಗಳು (ಕುವ್ಯಾಕ. ೧-೮೮). [ಸಂ.]

**ಸಂಖ್ಯಾರುಚಿ** (ನಾ). ಮತಿ ; ಬುದ್ಧಿ ; ಪ್ರಜ್ಞೆ : ''ಸಂಖ್ಯಾರುಚಿ ಮತಿ ಪ್ರಜ್ಞೆ ಮೇಧ ಸಂವಿತ್ತುಮುಪಲಬ್ಧಿಯೆನೆ ಬುದ್ಧಿಯಕ್ಕುಂ'' (ಮಂಗರಾ. ೬೬-೨). [ಸಂ.]

**ಸಂಖ್ಯಾವಸ್ತು** (ನಾ). ಸಂಖ್ಯೆಗಳಿಂದ ನಿರ್ದೇಶಿಸಲ್ಪಡುವ ವಸ್ತು : ಸಂಖ್ಯಾವಸ್ತು ವಿನೊಳಂ ಸಂಖ್ಯೆಯೊಳಂ ಭಾವದೊಳಂ ನೆಲಸಿದೇಕವಚನಂ ಬಹುವಚನಮಂ ಪೇಟ್ಟುದು (ಶಮದ. ೧೩೯ ವೃತ್ತಿ). [ಸಂ.]

**ಸಂಖ್ಯಾವಾಚಕ** (ನಾ). [ವ್ಯಾಕ] ಸಂಖ್ಯೆಯನ್ನು ತಿಳಿಸುವ ಪದ : ನಾವು ಎಣಿಕೆ ಮಾಡುವಾಗ ಒಂದು, ಎರಡು . . . ಮೊದಲಾದ ನಾಮಪದಗಳನ್ನು ಉಪ ಯೋಗಿಸುತ್ತೇವೆ. ಸಂಖ್ಯೆ ಮಾಡಿದ ವಸ್ತುಗಳನ್ನು ಇವು ತಿಳಿಸವುದರಿಂದ ಇವಕ್ಕೆ ಸಂಖ್ಯಾವಾಚಕಗಳೆಂಬ ಹೆಸರು ಬಂದಿದೆ (ಮಧ್ಯಮ. ೨೮). [ಸಂ.]

**ಸಂಖ್ಯಾವಾಚಿ** (ನಾ). = ಸಂಖ್ಯಾವಾಚಕ : ಏಟು = ಸಂಖ್ಯಾವಾಚಿ (ಶಮದ. ಪರಿ. ೧). [ಸಂ. ಸಂಖ್ಯಾವಾಚಿನ್]

**ಸಂಖ್ಯಾಶಾಸ್ತ್ರ** (ನಾ). ಅಂಕಿ, ಅಂಶಗಳನ್ನು ಸಂಗ್ರಹಿಸಿ, ವಿಂಗಡಿಸಿ, ಉಪಯೋಗಿಸುವ ಶಾಸ್ತ್ರ ; ಸಂಖ್ಯಾಪರಿಶೀಲನಶಾಸ್ತ್ರ : ಅಂಕಿಅಂಶಗಳನ್ನು ಶೇಖರಿಸಿ ಅವುಗಳನ್ನು ವರ್ಗೀಕರಿಸಿ . . . ಕೂಲಂಕಷವಾಗಿ ಪರಿಶೀಲನೆ ಮಾಡುವ ಶಾಸ್ತ್ರಕ್ಕೆ ಅಂಕಿಅಂಶಗಳ ಶಾಸ್ತ್ರ ಎಂದು ಹೆಸರು. ಇದನ್ನು ಸಂಖ್ಯಾಶಾಸ್ತ್ರ ಎಂಬ ಹೆಸರಿನಿಂದ ಕರೆಯುವುದು ಹೆಚ್ಚು ರೂಢಿ (ಕವಿಕೋ. I: ೮ ). [ಸಂ.]

**ಸಂಖ್ಯೆ** (ನಾ). ೧. ಎಣಿಸುವುದು ; ಲೆಕ್ಕ ಮಾಡುವುದು ; ಗಣನೆ. ೨. ಅಂಕೆ ; ಅಂಕಿ : ''ಗಣಿತಂ ಸಂಖ್ಯಾತಂ ಬಹುಗಣಶಬ್ದಂ ಭೇದದಲ್ಲಿ ಸಂಖ್ಯೆಯದಕ್ಕುಂ'' (ವಸ್ತುಕೋ. ೧೦೩-೩೪) ; ಪವಣೊಳಂ ಸಂಖ್ಯೆಯೊಳಂ ವತ್ವಮಕ್ಕುಂ (ಶಮದ. ೯೯ ವೃತ್ತಿ). ೩. ಲೆಕ್ಕ : ''ಸಂಖ್ಯೆಯನೆ ಲೆಕ್ಕಮಕ್ಕು'' (ಮಂಗರಾ. ೧೦೪-೧೦). ೪. ಒಟ್ಟು ಅಂಕಿ ; ಮೊತ್ತ : ಹುಟ್ಟುತ ದ್ರವ್ಯವನಱಿಯದವಂಗೆ ಐಶ್ವರ್ಯವಂತ ಮಗನಾದರೆ ಲಕ್ಷಸಂಖ್ಯೆಯ ಹಿರಣ್ಯವ ತಂದು ಸಂತೋಷಪಡಿಸುವಂತೆ (ಬಸವ. ೭೦೫) ; ಮಡಿದುದಾ ನಿನ್ನ ರಣಕಲಿ ಕುಮಾರನ ಕೈಲಿ ಕದನಮುಖದಲಿ ಫಲ್ಗುಣನ ಸೇನೆಯಲಿ ಜನಂ ವಿಪುಲ ಸಂಖ್ಯೆಯಲಿ (ಚಿತ್ರಾಂಗ. ೮೩-೨೨೮೮). ೫. ಚರ್ಚೆ ; ವಾದ ; ಸಮರ್ಥನೆ : ಸಂಖ್ಯೆ ಯೆಂದರೆ ಚರ್ಚೆಯೆಂದೂ ವಿಚಾರಣೆಯೆಂದೂ ಎಣಿಕೆಯೆಂದೂ ಅರ್ಥ (ಭಾರದ. ೧೨೫). ೬. ಬುದ್ಧಿಶಕ್ತಿ ; ಅರಿವು : ''ಪ್ರೇಕ್ಷಾ . . . ಸಂಖ್ಯಾ, ಸಂವಿತ್ತಿಃ, ಉಪಲಬ್ಧಿಃ — ಈ ೧೩ ಬುದ್ಧಿ'' (ಹಲಾಯು. ೫೫-೧೭೯) . ೭. = ಸಂಖ್ಯಾವಾಚಕ : ಸಂಖ್ಯೆಗೆ — ಒಂದು ನಾಲ್ಕು . . . ಎರಡ್ಮೆದು (ಶಮದ. ೧೩೯ ಪ್ರಯೋ). [ಸಂ. ಸಂಖ್ಯಾ]

**ಸಂಖ್ಯೇಯ** (ಗು). ೧. ಸಂಖ್ಯೆಗೆ ಸಂಬಂಧಿಸಿದ. ೨. ಎಣಿಸಬಹುದಾದ. (ನಾ). ೩. ಎಣಿಸಬಹುದಾದುದು : ''ಗಣನೀಯಂ ಸಂಖ್ಯೇಯಂ'' (ವಸ್ತುಕೋ. ೧೦೩-೩೪). ೪. = ಸಂಖ್ಯಾವಸ್ತು : ನೀನಱಿ ಸಂಖ್ಯೇಯದ ಸಂಖ್ಯಾನದ ದೊರೆವೆತ್ತ ಭಾವದೇಕತೆ ಬಹುತಾಧೀನಂ ವಿಶೇಷಣಂ ಬಹುತಾನತಮೆ ವಿಶೇಷ್ಯ ಮೇಕವಚನಮೆಯಕ್ಕುಂ (ಶಮದ. ೧೩೯) ; ಸಂಖ್ಯೇಯ : ಪತ್ತುದೆಸೆ — ಪತ್ತುದೆಸೆಗಳ್ (ಕೃಪಿಡಿ. ೫೭). [ಸಂ.]

**ಸಂಖ್ಯೇಯವಾಚಕ** (ನಾ). [ವ್ಯಾಕ] ಸಂಖ್ಯಾವಸ್ತುವಿಗೆ ಸಂಬಂಧಿಸಿದ ಪದ : ಜಾತಿವಾಚಕ, ಸಂಖ್ಯೇಯವಾಚಕ, ವಿಧೇಯವಾಚಕಗಳ ಮೇಲೆ ಬಹುವಚನಕ್ಕೆ. ಪ್ರತಿಯಾಗಿ ಏಕವಚನವು ವಿಕಲ್ಪದಿಂದ ಬರುವುದು (ಕೃಪಿಡಿ. ೫೭). [ಸಂ.]

**ಸಂಗ$_1$** (ನಾ). ಗುಂಪು ; ಸಮೂಹ : ನಿಘಂಟು — ನಿಗಂಟು ; ಸಂಘ — ಸಂಗ (ಶಮದ. ೨೫೫ ಪ್ರಯೋ) ; ಸಂಘ, ಸಂಗ ; ಝುಂಕೆ, ಜಂಕೆ (ಶಬ್ದಾನು. ೧೪೨ ಪ್ರಯೋ).

[< ಸಂ. ಸಂಘ]

**ಸಂಗ$_2$** (ನಾ). ೧. ಜೊತೆಗೂಡುವುದು ; ಜೊತೆಗೆ ಸೇರುವುದು. ೨. ಒಡನಾಟ ; ಸಹವಾಸ ; ಗೆಳೆತನ : ಕೂಡಲಸಂಗಮದೇವರನಱಿವರೆ ಶರಣರ ಸಂಗವೇ ಮೊದಲು (ಬಸವ. ೭೦) ; ಅಂಗಜನ ಸಂಗವಿಲ್ಲದ ಕಂಗಳಿಗೆ ರುಚಿಸದೆಂಬಂತೆ ಹೆಂಗಳಲಿ ಶೃಂಗಾರವಿಂದ್ರಜಾತಂಗಾಕೆ ತೋರಿದಳ್ (ಚಿತ್ರಾಂಗ. ೫೦-೧೩೭೭) ; ಅಲ್ಪರ ಸಂಗ ಅಭಿಮಾನ ಭಂಗ (ಗಾದೆ). ೩. ಕೂಡುವಿಕೆ ; ಸಂಭೋಗ : ಸಂಗದಿಂದಾಯಿತ್ತು ತನು ಆ ತನುವಿಂದಾಯಿತ್ತು ಮಱವೆ (ಅವಚಂ. ೨೨೯-೧೦೩೯) ; ದೇವಸ್ತ್ರೀಯರ ಸಂಗಕೆಣಿಸು ವುದೆಲ್ಲಾ ಕಾಯದ ಗುಣವಿಕಾರ ಕಾಣಿರಣ್ಣ (ಸಿದ್ಧೇವ. ೪೦-೧೦೮) ; ಕಂಗೆಡವೇಡೆಲೆ ಸಖಿ ನಿನಗವನೊಳು ಸಂಗವಪ್ಪಂತೆ ಮಾಡುವೆನು (ಮೋಹತ. ೨೮-೨೮). ೪. ಹೊಂದಿಕೆ ;

ಸಾಮರಸ್ಯ : ಕುದಿಕುದಿದತ್ತಣಿಂ ಕುದುರ ನೂಜಬ್ೊಳಾ ಬಲದಾನ ಪತ್ತು ತಾಗಿದುವನ ದೋಷಮಾ ಪಿರಿದುಸಂಖ್ಯೆಯೊಳೇಕಬಹುತ್ವಸಂಗದಿಂ (ಕವಿರಾ. ೧-೧೨೦). ೫. ಕೂಡಲ ಸಂಗಮದಲ್ಲಿರುವ ಲಿಂಗ ಅಥವಾ ಶಿವನ ಹೆಸರು : ಸಂಗನ ಶರಣರಿಗೆ ಆನು ಸರಿಯೆಂದು ಗಳಹಲುಬಹುದೆ (ಬಸವ. ೩-೯) ; ಪರಿಮಳಂ ತೀಡಿದಡೆ ಕಡೆಗೆ ಸಂಗಂಗೆನುತೆ ಚರಿತದಿಂ ಮುಖವಾಸಮಂ ಸುತ್ತಿ ರಂಜಿಸುತ (ಬಸರ. ೩-೧೫). ೬. (ಆಲಂ) ಸದಾಕಾಲ ಹೆಂಗಸರ ಸಹವಾಸದಲ್ಲಿರುವವನು ; ಹೆಣ್ಣಿಗ : ಅವನೊಬ್ಬ ಶುದ್ಧ ಸಂಗ, ಅವನಿಂದ ಯಾವ ಕೆಲಸವೂ ಆಗುವುದಿಲ್ಲ (ರೂಢಿ). [ಸಂ.]

**ಸಂಗಗುಣ** (ನಾ). ಸಹವಾಸದಿಂದುಂಟಾಗುವ ಗುಣ, — ಸ್ವಭಾವ : ಘಟದೊಳಗೆ ರಸವಿದ್ದು ರಸದೊಳಗೆ ಘಟವಿದ್ದು ಸಂಗಗುಣದಿಂದ ನೀರಾಗಿ ಸಂಗ ಹಿಂಗಲಿಕ್ಕೆ ಉಭಯ ರಂಗವೂ ಒಂದಾದ ತೆಱದಂತ (ಮೋಳಮಾ. ೧೮೭-೭೦೨). [ಸಂ.]

**ಸಂಗಟ** 'ಸಂಕಡಿ$_2$' ನೋ.

**ಸಂಗಟದಳೆ** (ಕ್ರಿ). ದುಃಖವನ್ನು ಹೊಂದು ; ಸಂಕಟಪಡು : ಅಳಿದರೆಂದರೆ ಸ್ವಲ್ಪ ಸಂಗಟದಳೆದು ಮರತಿರಿಯಾಗ ಪಾಂಡವರುಳಿದರೆಂದರೆ ಹರುಷವೆಂಬಿರಿ (ಜನಭಾ. ೨೩-೪). [ಸಂಗಟ (< ಸಂಕಡಿ$_2$) + ತಳ್$_1$]

**ಸಂಗಟಿ$_1$** 'ಸಂಕಟಿ$_1$' ನೋ.

**ಸಂಗಟಿ$_2$** 'ಸಾಂಗಡ' ನೋ.

**ಸಂಗಟಿಸು** 'ಸಂಗಡಿಸು' ನೋ.

**ಸಂಗಡ$_1$**, ಸಂಗಾತ$_1$ (ನಾ). ೧. ಒಂದಾದುದು ; ಜೊತೆಯಾದುದು : ಸಂಗಡದಿಂ ಲೋಪಮಕ್ಕುಂ (ಶಮದ. ೯೬ ವೃತ್ತಿ). ೨. ಸಮಾನವಾದುದು ; ಸಮಜೋಡಿ : "ಸರಿ ದೂರ ಪಡಿ ಗಡೆ ಪಾಟಿ . . . ಹೋಟಿ, ಸಂಗಡಂ — ಈ ೧೮ ಸಮಾನಕ್ಕೆ ಪೆಸರ್" (ಕಶಸಾ. ೫೯-೨೯೧) ; ಲಯಾಗ್ನಿಯ ನಂಟು . . . ಸಿಡಿಲ ಸಂಗಡಮಿಾಶನ ಬೆಂಕೆಗಣ್ಣ ಬಾಂಧವನೆನೆ ಶೌರಿ ಮರ್ದಿಸಿದನಪ್ರತಿಮರನಿಪ್ಪ ಮಲ್ಲರಂ (ಜಗವಿ. ೬-೭೩). ೩. ಜೊತೆ ; ಸಹವಾಸ : ಸಂಗಮನ ಕರುಣವೇ ತನಗೆ ಬೆಂಬಲವಾಗಿ ಸಂಗಮಧ್ಯಾನವೇ ತನಗೆ ಸಂಗಡವಾಗಿ (ಬಸರ. ೫-೪೭) ; ನುಡಿಜಾಣ್ಮೆ ನಡೆಜಾಣ್ಮೆ ನನಗೂ ದೇವರಿಗೂ ಸಂಗಡದ ಭೂಪರು ಪೇಳಲೆಂದ (ಭರಚ. ೩೯-೧೦೭). ೪. ಗುಂಪು ; ಸಮೂಹ : ಪಚ್ಚೆಯ ಪಸಲೆಯ ಪಸುರನಸಕಳಿದು ನಿಮಿರ್ದ ನೆಲವಡಲಗೆಯ ಜಾಗಂಗಳುಮವನೆ ಸಂಗಡಂಗೊಂಡಿರ್ದ ಸತ್ತಿ ಸಂಗಡಂಗಳುಂ (ಆದಿಪು. ೮-೧೫ ವ); ದೀಕ್ಷಿತರ ಸಂದಣಿ ಮಾಯವಾದಿಗಳ ನೆರವಿ ಸನ್ಯಾಸಿಗಳ ಸಂಗಡವುಪಾಧ್ಯಾಯರುಗಳ ಕೂಟ (ಸಮ್ಮಕೌ. ೭-೧೯). ೫. ಭಾರ ಎತ್ತುವ ಒಂದು ಸಾಧನ : ರಂಧ್ರ ಉಂಟಾಗಿ ಯಿದ್ದಂಥಾ ಬತುವಾಗಿ ಯಿದ್ದಂಥಾ ಹಸ್ತಗಳಿಂದ ಯತ್ತಲ್ಪಟ್ಟಂಥಾ ಕಲ್ಲುಗಳು ಯಿವಕ್ಕೆ ಸಂಗಡಯೆಂಬ ಹೆಸರು (ವಿದ್ವಟೀ. ೨-೩೧). **ಸಂಗಾತ$_1$** : ೩. ಆ ತಳ್ವಿಗೊಪ್ಪೆನಚ್ಚಿಕೆ ಗಳುಂಟವರ ಸಂಗಾತದೊಳ್ವಪಿಸಂದೆನಿಲ್ಲಿ (ಭರಚ. ೫೯-೭೬).

[< ಸಂ. ಸಂಘಾತ. / ತೆಲು. ಸಂಗಡಮು]

**ಸಂಗಡ$_2$**, ಸಂಗಾಟ, ಸಂಗಾತ$_2$ (ಅ). ಜೊತೆಗೆ ; ಕೂಡ : ಸೋವೀರನಾಯಕನವರ ಸಂಗಡ ಜಂಬೂರ ಗುಡ್ಡಗಲುಡನ ಮಗ . . . ಸಮರಂಗದಲ್ಲಿ ಕಾದಿ ಸುರಲೋಕ ಪ್ರಾಪ್ತನಾದ (ಎಕ. VII, ಶಿಕಾರಿ. ೭೩-೧ ; 1048 ?) ; ನನ್ನ ಸಂಗಡ ಕಾದಿದವರಲ್ಲಿ ಯಾರೂ ನಿನ್ನ ಹಾಗೆ ಕತ್ತಿಯನ್ನು ಬೀಸುವುದಿಲ್ಲ (ಆರ್ಯಕ. ೪). **ಸಂಗಾಟ** : ಕಿರಿಬಳ್ಳು ಹಿಡಿದ ಮಡದೀಯ ಸಂಗಾಟ ಸಿಡಿಪಿಡಿ ಯಾಕೊ ಸಿರಿರಾಯ (ಕನ್ನಜಾ. ೧೨೫). **ಸಂಗಾತ$_2$** : ನಿನ್ನಯ ಪದಕೆ ಕೆಡಹುವೆನ್ನೆವರ‍ನು ನಡೆ ತನ್ನ ಸಂಗಾತ (ಕುವ್ಯಾಉ. ೧೦-೭) ; ಯಮ ಕೊಂಡೊಯ್ಯುವಾಗ ಸಂಗಾತ ಇನ್ನಾರಯ್ಯ (ಪುರಂದ. ೧-೨೪-೩). [< ಸಂಗಡ$_1$]

**ಸಂಗಡಂಗೊಳ್** (ಕ್ರಿ). ಜೊತೆಗೂಡು : ಪಚ್ಚೆಯ ಪಸಲೆಯ ಪಸುರನಸಕಳಿದು ನಿಮಿರ್ದ ನೆಲವಡಲಗೆಯ ಜಾಗಂಗಳುಮವನೆ ಸಂಗಡಂಗೊಂಡಿರ್ದ ಸತ್ತಿ ಸಂಗಡಂಗಳುಂ (ಆದಿಪು. ೮-೧೫ ವ). [ಸಂಗಡ$_1$ + ಕೊಳ್$_1$]

**ಸಂಗಡಗಿತ್ತಿ** (ನಾ). ಜೊತೆಗಾತಿ ; ಸಖಿ : ಮುಂಗುಡಿಯೊಳ್ ಬಂದ ಸಂಗಡಗಿತ್ತಿ ಯರಿಂ ತದ್ವೃತ್ತಾಂತಮಂ ಭೂಕಾಂತಂ ಕೇಳ್ವುದುಂ (ನಳಚಂ. ೨೧೭ ವ).

[ಸಂಗಡ$_1$ + - ಗಿತ್ತಿ]

**ಸಂಗಡತಿ**, ಸಂಗಡಿತಿ (ನಾ). = ಸಂಗಡಗಿತ್ತಿ : ಕಡುನೇಹದುಪಪತಿಗೆ ಜಯಮಕ್ಕೆ ತನ್ನ ಸಂಗಡತಿಯರ್ಗೊಲವಕ್ಕೆನುತ್ತೆ ಮಾರಿಗೆ ಪರಕೆವಿಡಿದೆತ್ತಿದಳ್ ಕುಲಟೆಯೊರ್ವಳ್ (ಚೆಬಪು. ೯-೧೧) ; ಕೂಗಿದನು ಬಾರೆ ಸಂಗಡತಿ ತಡವಾತು (ಕನ್ನಜಾ. ೨೪೯). **ಸಂಗಡಿತಿ** : ತಾಯಿಯ ನೇಮದ ಬೇಹಿನ ಕೆಲಸದ ಆಳೀ ಮುಪ್ಪಿನ ಸಂಗಡಿತಿ (ಸಪ್ವ. ೬-೬). [ಸಂಗಡ$_1$ + - ತಿ$_1$ (< - ಇತ್ತಿ)]

**ಸಂಗಡದಾಳ** (ನಾ). ಜೋಡಿತಾಳ : ಸಂಘಾತತಾಳ — ಸಂಗಡದಾಳ (ಶಮದ. ೨೯೩ ಪ್ರಯೋ). [< ಸಂ. ಸಂಘಾತತಾಲ]

**ಸಂಗಡಮಿಟ್ಟು** (ನಾ). ಸಹಮರಣ ; ಜೊತೆಸಾವು : ಪಡಲಿಟ್ಟಂತೆ ಪೊಲಾಯ್ತು ಕೀಚಕಬಲಂ ಗಂಧರ್ವರಿಂದಿಂಬರುಳ್ಗಡಿದೇಂ ಸಂಗಡಮಿಟ್ಟುವಾಯ್ತೆ (ಪಂಪಭಾ. ೮-೮೧) ; "ಸಾಮೂಹಿಕಮರಣ" (ಪಂಪದೀ. ೨೯೩). [< ಸಂ. ಸಂಘಾತಮೃತ್ಯು]

**ಸಂಗಡವರ್** (ಕ್ರಿ). ಜೊತೆಯಲ್ಲಿ ಬರು : ಬೀರಮಂ ಚಾಗದ ಪೆಂಪುಮಂ ಪೊಗಟ್ಟ ಸಂಗಡವರ್ಪವರೊಳ್ಪಿನಿಂದ . . . ಚೆಲ್ವನಾಯ್ತುರಜೋಜಂಗರ ಲೀಲೆ ಸುರೇಂದ್ರಲೀಲೆಯಿಂ (ಪಂಪಭಾ. ೪-೮೭). [ಸಂಗಡ$_2$ + ವರ್]

**ಸಂಗಡವೆಕ್ಕಣ** (ನಾ). ಸಾಮೂಹಿಕನೃತ್ಯ : ಸಂಘಾತಪ್ರೇಕ್ಷಣ — ಸಂಗಡವೆಗ್ಗಣ, ಸಂಗಡವೆಕ್ಕಣ (ಶಮದ. ೨೯೨ ಪ್ರಯೋ). 'ಗೊಂದಳವೆಕ್ಕಣ' ಪರಾ.

[< ಸಂ. ಸಂಘಾತಪ್ರೇಕ್ಷಣ]

**ಸಂಗಡಿ$_1$** 'ಸಂಗೈಡು' ನೋ.

**ಸಂಗಡಿ$_2$**, ಸಂಕಡಿ$_1$ (ನಾ). ೧. ಜೊತೆಗಾರ ; ಸ್ನೇಹಿತ : "ಸಂಗಡಿ, ಸಂಗಡಿಗ —ಸಂಗಡ ಇರುವವನು" (ಗಂಗಾಮ. ೩೧೪). ೨. "ಸ್ನೇಹ" (ಪಟ್ಟಸಿ) : ತಡೆದನಿವನೆಂದೀತನನು ಸಂಗಡಿಯ ಮನದಲಿ ಮಾಡದಂತಿರೆ ತೊಡಚಿಬಿಡಿ ನೀವೆನುತ ತಿರುಗಿದನಿನಜನಿದ್ದೆಡೆಗೆ (ತೊರರಾ. ೬-೩೯-೧೦). **ಸಂಕಡಿ$_1$** : ೩. ರಿಕಾಪು ; ಅಂಕವಣೆ : ಪತಿಗಲ್ಲದೆ ಪೆಱರ್ಗೆಡೆಗುಡದ ತೆಱದೆ ನಡೆವಿಡಿದ ಬೆನ್ನ ಸಂಕಡಿ ಚಂಡಾಕೃತಿಯ ತೆಱನಱಿದು ನಿಮ್ನೋನ್ನತಿವೆತ್ತುದು ಚರಣಕಾಂಡಮಶ್ವಾಗ್ರಣಿಯಾ (ಕುಸುಮಾ. ೮-೫೩). [<— ತೆಲು. ಸಂಗಡಿ./ ಸಂ. ಸಂಘಟ್ಟಿನ್]

**ಸಂಗಡಿ$_3$** 'ಸಾಂಗಡ' ನೋ.

**ಸಂಗಡಿಕೆ** (ನಾ). ಹೊಂದಾಣಿಕೆ ; ಸಾಮರಸ್ಯ : ಅಹಂಕಾರ ವಿಂಗಡಿಕೆಗೆ ಕಾರಣ ; ಸಂಗಡಿಕೆಗಲ್ಲ (ಸವ್ಯಕಾ. ೧೯). [ಸಂಗಡ$_1$ + - ಇಕೆ]

**ಸಂಗಡಿಗ** (ನಾ). = ಸಂಗಡಿ$_2$ ೧ : ಮರುಳ ಪಯಣಕ್ಕೆ ತಱಗೆಲೆಯೆ ಸಂಗಡಿಗನೆಂಬಂತೆ ಪಾಪಿಯಪ್ಪಂಗೆ ಕುತ್ಸಿತಧರ್ಮಮೆ ಸದ್ಧರ್ಮಮಾಗಿ ತೋರ್ಕುಂ (ಧರ್ಮಾಮೃ. ೧-೧೯೫) ; ಚಂಗಳೆಯ ಮಗನ ಕೆಳೆಯೊ ನಂಬಿಯ ಸಂಗಡಿಗನೋ (ಬಸಪು. ೪೭-೩೬) ; ತನ್ನ ಕುದುರೆಯನ್ನೇರಿ ಉಳಿದ ಸಂಗಡಿಗರೊಡನೆ ಹೊರಟುಹೋದನು (ಬಂಗಾಹ. ೫೪).

[ಸಂಗಡ$_1$ + - ಇಗ]

**ಸಂಗಡಿಗಾರ** (ನಾ). = ಸಂಗಡಿ$_2$ ೧ : ವಿಟ ಚಟ ವಿದೂಷಕರೆಂಬ ಸಂಗಡಿಗಾರರಿಂ ಕೂಡಿಕೊಂಡು (ಸೌಗಂಧಿ. ೪೯೮-೯). [ಸಂಗಡಿ$_2$ + - ಗಾರ (< - ಕಾಱ)]

**ಸಂಗಡಿಗಿತ್ತಿ** (ನಾ). = ಸಂಗಡಗಿತ್ತಿ : (ಶ). [ಸಂಗಡಿಗ + - ಇತ್ತಿ]

**ಸಂಗಡಿತ** (ನಾ). ೧. ಸೇರಿರುವುದು ; ಕೂಡಿರುವುದು. ೨. ತಾಗುವಿಕೆ ; ಘರ್ಷಣೆ ; ತಾಕಲಾಟ. ೧, ೨ : ಓಡಿತ ಚಮರಚ್ಛತ್ರದಲಿ ಸಂಗಡಿತ ಕುಚಗಳ ಮಧ್ಯದಲಿ . . . ಸಂತತ ಹೊಡೆಹು ವಾದ್ಯದ ರವದೊಳಲ್ಲದೆ ನಾಡೊಳಿಲ್ಲೆಂದ (ಜೀವಂಚ. ೨-೧೩). [< ಸಂ. ಸಂಘಟಿತ]

**ಸಂಗಡಿತಿ** 'ಸಂಗಡತಿ' ನೋ.

**ಸಂಗಡಿಸು**, ಸಂಗಟಿಸು, ಸಂಗಣಿಸು, ಸಂಗಳಿಸು (ಕ್ರಿ). ೧. ಒಟ್ಟಾಗು ; ಗುಂಪಾಗು : ಸಂಗಡಿಸಿದ ಕಿಱುಜೆಡೆಗಳ ತೊಂಗಲ್ಗಳಿನೊಪ್ಪೆ (ಕಾದಂಪೂ. ೩೫೭); ಸಂಗಡಿಸಿ ನಲಿನಲಿದು ನಡೆವ ತುರಂಗ ಕರಿಘಟೆಗಳ ವಿಕೀರ್ಣದ ಹಿಂಗಡೆಯ ಬಿಜ್ಜಳಮಹೀಶನ ಮುಂಗಡೆಯೊಳೊಪ್ಪಿ (ಬಸಪು. ೫-೪೪) ; ಹೊಡಕರಿಸಿ ಹೊದರೆದ್ದು ಬಲ ಸಂಗಡಿಸಿ ತಲೆವರಿಗೆಯಲಿ ಕರ್ಣನ ಬಿಡುಸರಳ ಬೆದಱಿಕೆಗೆ ಬೆದಱದೆ ನೂಕಿತಳವಿಯಲಿ (ಕುವ್ಯಾಅ. ಒರೀ. ೨೦-೩೪). ೨. ಜೊತೆಗೂಡು ; ಸೇರಿಕೊಳ್ಳು : ಅಂಗನೆಯರ

ಪುರ್ವಿನಂತ್ಯದೊಳ್ಳಿಭ್ರಮಂ ಸಂಗಡಿಸಿ ಸರ್ವಜನದ ಅಂಗಾದಿಯ ಕರಣವ ಸೂಚಿಗೊಂಬುದು (ಅಂಜಚ. ೧-೭೮) ; ಪ್ರಾಯದೊಳು ಸಂಗಡಿಸಿದ ಸಿರಿಗಂಭೀರ ವಿಕ್ರಮ ಶೃಂಗಾರ ಶೋಭೆಯೊಳೆಸೆದ (ಭರಚ. ೧-೫೨). **೩. ಕೂಡಿಸು ; ಸೇರಿಸು** : "ಸಂಗಡಿಪುದೆನಲ್ ಕೂಡಿಪುದು" (ಕಶರ. ೧೦೩) ; ಇಂಗುಳದ ಬೇರ ಪುಡಿಗೆ ಸಮಂಗೂಡಿದ ಕಟುಕತ್ರಯಮಂ ಲವಣದೊಡನೆ ಸಂಗಡಿ(ಣೆ)ಸಿ ಕೆಮ್ಮುತಿರ್ದ ತುರಂಗಮಕಿಕ್ಕಲ್ಕೆ ನಿರುಜನಕ್ಕುಂ (ಅಶ್ವಶಾ. ೭-೩೬) ; ಕಂಗೊಳಿಸುವ ರನ್ನದ ಪಲ್ಲಕ್ಕಿಯೊಳ್ . . . ತುಂಗವಿಕ್ರಮನ ದಿವ್ಯಾಯುಧಗಳ ತಂದು ಸಂಗಡಿಸಿದರರ್ತಿಯಲಿ (ಕಂನವಿ. ೨೨-೮). **೪. ಒಟ್ಟುಗೂಡಿಸು ; ಸಂಗ್ರಹಿಸು ; ಕಲೆಹಾಕು** : ತರಳಿಕೆ ಮಾಣದಿನ್ನೆನಸನಟ್ಟಿಪೆ ಸಂಗಡಿಸಿಂಧನಂಗಳಂ ವಿರಚಿಸು ಬೇಗಮಿಂ ಚಿತೆಯಂ (ಕಾದಂಪೂ. ೯೩೬) ; ಸಂಗಡಿಸಿದರು ಯಜ್ಞಸಂಭಾರಂಗಳನು (ನಿಭಾಗ. ೧೦-೯೯-೨). **೫. ಉಂಟಾಗು ; ಸಂಭವಿಸು** : ಸಂಗಡಿಸೆ ತನ್ನೊಳರುಣ ಪಿಶಂಗಸಿತದ್ಯುತಿಗಳೆಂಬನುಕ್ರಮರುಚಿ (ಜಗವಿ. ೧೬-೧೦೬) ; ಸಿಂಗರಕಿನಿಯನ ದಿಟ್ಟಿ ನೆರಂಗೆಯ ತಾಂ ಪೊಣ್ಮೆ ಪೂಣ್ಬು ಪೊಂಗಿತ್ತಾಗಳ್ ಬೆಂಗೊಟ್ಟುದು ಶಾಂತಿರಸಂ ಸಂಗಡಿಕುಮ ಪರರಸಂಗಳೇಂ ಸಿಂಗರದೊಳ್ (ಚಿಕವಿ. ೬-೨೪೩). **೬. ಅಡ್ಡವಾಗು ; ಎದುರಾಗು** : ಹೃದಯವಿದಿರ್ತರನಾಯ್ತೆನಗೊದವಿದ ಕಾರ್ಯಗಳ ಭಿನ್ನದೇಶತೆಯಿಂದಂ ಇದಿರೊಳ್ ಸಂಗಡಿಸಿದ ಶೈಲದೆ ತಾಗಿದ ಪೊಳೆಯ ಪೊನಲ ಮಾಳ್ಕೆಯಿನೀಗಳ್ (ಶಾಕುಂತ. ೨೯-೫೨). **೭. ಉತ್ಸಾಹಗೊಳ್ಳು ; ಸಂಭ್ರಮಪಡು** : ತಿರುಗೆ ತಿರುಗುತ್ತಂ ಸಂಗಡಿಸಿ ಪರಿದುಬುಬೆನುತ್ತುಂ ಬಡಿಕೋಲಿಂದಿಟ್ಟನಧಿಕಬಲನಾ ಮೊಲನಂ (ಗಿರಿಕ. ೧-೮೭); ಸಂಗಡಿಸಿ ಕೇತಯ್ಯಗಳ ಪಾದಂಗಳಿಗೆ ನಸುಬಾಗಿ ಹೊಡವಡುತ (ಬಸಪು. ೬೦-೩೪). **ಸಂಗಟಿಸು** : ೩. ಇಂಗಿತದಿಂದ ಕನ್ನೆಯ ಚಿತ್ತದ ಭಂಗವ ಕಂಡು ರಥವನು ಸಂಗಟಿಸಿರುವ ನೆವದಿಂದ ಹರಿಯಾಲಿಂಗನವ ಮಾಡಿ (ಕಾಮಕ. ೧-೪೬). **ಸಂಗಣಿಸು** : ೨. ವಿರಾಟನಾತ್ಮೀಯಚತುರಂಗಚಮೂಸಮೂಹಂಗಳಂ ಸಂಗಣಿಸಿ ಭೋಂಕೆನೆ ನೂಂಕೆ ಕಂಡು (ನೇಮಿಪು. ೧೦-೧೪೮ ವ). **ಸಂಗಳಿಸು** : ೧. ಮಹಾಪ್ರಸಾದಮೆಂದಾ ಜನಂಗಳ್ ಸಂಗಳಿಸಿ ಪೋಗೆ (ನೇಮಿಪು. ೩-೧೩೬ ವ). ೨. ಕವಿವ ಜಡೆಯ ತೂಂಗಲಿಂ ಸಂಗಳಿಸಿ ಬೆಡಂಗನೊಳಗೊಂಡ ಗಂಡಮಂಡಲಂಗಳೊಳಂ (ಕಾದಂಪೂ. ೯೨೭); ಗೆಜ್ಜೆಗಳುಲಿಪಂ ಸಂಗಳಿಸೆ ಚಲನದೊಳ್ (ಚಂದ್ರಪು. ೮-೪೮) ; ರಸಪ್ರಸರದೊಳ್ ಸವಿ ಸಂಗಳಿಪಂತೆ (ಕುಸುಮಾ. ೧-೫). ೩. ಇಳಿಸಲಿಳಿಸಲ್ ಮಾರ್ಕೊಳ್ ಮಾರ್ಕೊಳ್ ಪುಗಲ್ ಪುಗಲೆಂದು ಸಂಗಳಿಸಿ ಸರದಿಂ ಕೊಳ್ ಕೊಳ್ಳೆಂದೆಚ್ಚೊಡೆ (ಶಾಂತಿಪು. ೪-೨೪) ; ಸಿಂಗರಿಸಿದ ಮಕರತೋರಣದ ಸಂಗಳಿಸಿದ ನನೆಯ ಸೂಸಕಂಗಳ . . . ಗಾಡಿವಡೆದ ಮಂಟಪದ ಮಧ್ಯದಲ್ಲಿ ನೆರೆದ ವಿಬುಧರಿಂ (ರಾಜಶೇ. ೮-೫ ವ). ೪. ಸಂಗಳಿಸಾ ಸ್ವಾಮಿಕಾರ್ಯಪರರಂ ಚರರಂ (ಶಬ್ದಾನು. ೩೩೩ ವ್ಯಾಖ್ಯಾ) ; ಉಪವಾಸದಿಂ ಬಿಲ್ಪದಳವಂ ಸಂಗಳಿಸಿ ಪೊತ್ತು ಪೆಗಲೊಳು ಕೊಡುತ (ಕೃಷ್ಣವಿ. ೬-೧೧) ; ಕಳೆದುಹೋದುದಕಳದೆ ಉಳಿದರಲ್ಲಿ ತಣಿದು ಸಂಗಳಿಸಯ್ಯಾ ಮನುಜ ಸತ್ಕಾರ್ಯಫಲವ (ಕವಿಪು. ೫೨-೧). ೫. ಕೆಳೆ ಸಂಗಳಿಸುಗೆ ನಿಮಗಮೆಮಗಮಿಂ ಲತೆಗಳರಾ (ಆದಿಪು. ೧೧-೧೨೯) ; ನಿನ್ನೊಳಾತನೊಳ್ ಪರಿಚಯವೆಂತು ಸಂಗಳಿಸಿತು (ಕಾದಂಉ. ೨೯) ; ಬಲುದುಗುಡ ಸಹದೇವನಲಿ ಸಂಗಳಿಸಿತೇ (ಕುಪ್ಯಾದ್ರೋ. ೨-೩೩). **೮. ಉಂಟುಮಾಡು**: ಪ್ರೀತಿ ಕೌತುಕಂಗಳಂ ಸಂಗಳಿಪ ಲಕ್ಷ್ಮೀಮಂಡಪಮಧ್ಯಾಧ್ಯಾಸಿತ ಭಾಸುರಕೇಸರಿ ವಿಷ್ಟರಾಗ್ರಮನಲಂಕರಿಸಿ ತ್ರಿಲೋಕೇಶ್ವರನಂ (ವರ್ಧಪು. ೧೫-೮೦ ವ) ; ಮಹೀಭಾಗದೊಳ್ ರಾಗಮಂ ಸಂಗಳಿಸುತ್ತುಂ ಬಂದುದೆತ್ತಂ ಧೃತಬಹುಕುಸುಮವ್ಯೂಹಮಾ ಸ್ತ್ರೀಸಮೂಹಂ (ಕುಸುಮಾ. ೫-೧೧೮) ; ಅಡಿದಳದ ಬಲ್ದೊಂಪು ಕೆಂದಳಿರ ಪೆಂಪನವಗಡಿಸಿ ಮರನೇಱಿಸೆ ಪೊದಳ್ದುಗುರ್ ಶುಕ್ತಿಜದ ಬೆಡಗಿಂಗೆ ಭಂಗಮಂ ಸಂಗ[ಪಾಠಾಂ. ಗೊ]ಳಿಸೆ (ಪದ್ಮರಾ. ೩-೨೭). **೯. ಒದಗಿಸಿಕೊಳ್ಳು**: ಏಂ ಗಾವಿಲನಯೊ ನಿನ್ನಂ ನುಂಗುವುದರ್ಕಿವರನೆತ್ತವೇೞ್ಕುಮೆ ನೆರಮಂ ಸಂಗಳಿಸಲ್ಕೇೞ್ಕುಮೆ (ಪಂಪಭಾ. ೩-೧೭). **೧೦. ಮಾಡು** : ಅಳಂಕರಿಸಿದರುತ್ತುಂಗಗುಣಂಗಭಿಷವಸನ್ಮಂಗಳಮಂ ಸಂಗಳಿಪ್ಪ ಸಂಭ್ರಮದಿಂದಂ (ವರ್ಧಪು. ೧೪-೨೧). **೧೧. ಮಾಡಿಸು ; ನೆರವೇರಿಸು** : ಆ ತೀರ್ಥಕರಂಗೆ ಸಂಗಳಿಸಿ ಮಂಗಳಮಜ್ಜನಮಂ (ವರ್ಧಪು. ೧೪-೧೦೧). **೧೨. ಹೋಲು ; ಸದೃಶವಾಗು** : ಜಂಗಮಕಲ್ಪಲತಾಕೃತಿ ಸಂಗಳಿಸಿರೆ ಮೆಲ್ಲಮೆಲ್ಲನೆಯ್ತಂದೊರ್ವಳ್ ಪೊಂಗವಳಿಗೆಯ ಪಿಡಿದು ಮನಂಗೊಳೆ ನೃಪಸತಿಗೆ ನೀಡಿದಳ್ ತಂಬುಲಮಂ (ವರ್ಧಮಾ. ೧೧-೪೭). **೧೩. ಎಣಿಸು ; ಲೆಕ್ಕ ಹಾಕು** : ಮಿಳಿರ್ವ ಪತಾಕೆಗಳ್ ಮಕರತೋರಣಮಣ್ಣಳಿ ಮಾನಗಮ್ಬುಮಗ್ಗಳಿಸಿರೆ xxx ದ ಚೈತ್ಯಗೃಹಾವಳಿ ಲೆಕ್ಕಿಪಂಗೆ ಸಂಗಳಿಪಡೆ ಲಕ್ಕೆಗಂ ಮಿಗಿಲ್ (ಎಕ. VIII. ಸೊರಬ. ೨೬೨-೨೦ ; 1077). **೧೪. ಕೊಡು ; ನೀಡು** : ಮಂಗಳಶ್ರೀ ಹಸ್ತಜಲವನು ಸಂಗಳಿ[ಪಾಠಾಂ. ಣೆ]ಸಿ ಕೈಗಟ್ಟಿ ಸಹಿತವ ಸಾಂಗದಲಿ ಮಾಡಿದಳು ಮಾಯಾದೇವಿ ಪೂಜೆಯನು (ಪ್ರಭುಲೀ. ೪-೪೬).

[ಸಂಗಡ$_1$ + – ಇಸು$_3$]

**ಸಂಗಣಿಸು** 'ಸಂಗಡಿಸು' ನೋ.

**ಸಂಗತ** (ಗು). ೧. ಕೂಡಿದ ; ಸೇರಿದ : ಸಂಗತಗುಣನಸಿಲತೆಯನಸುಂಗೊಳೆ ಭುಜವಿಜಯಗರ್ವದಿಂ ಸ್ಥಾಪಿಸಿದಂ (ಪಂಪಭಾ. ೧-೩೮) ; ಸಂಗತದಶಧ್ರುವಕ್ಷೇತ್ರಂಗಳ್ ಶುಭಲಕ್ಷಣಂಗಳಮೃತೋದ್ಭವವಾಹಂಗಳ್ . . . ಪದಿನೆಂಟುಕೋಟಿ ಜಾತ್ಯಶ್ವಂಗಳ್ (ಶಾಂತಿಪು. ೧೦-೧೨೮) ; ನಮಗಂ ತಮಗಂ ಸಂಗತಸಂಬಂಧ ಬಂಧುರಂ ಬಂಧುತನಂ (ಸುಕುಮಾ. ೨-೬೪). ೨. ದೈಹಿಕಸಂಬಂಧವನ್ನು ಹೊಂದಿದ ; ಲೈಂಗಿಕವಾಗಿ ಕೂಡಿದ. ೩. ಒಟ್ಟಾದ ; ಗುಂಪಾದ : ಸಂಗತಧೂಮಾವಳಿಯನಿಭಂಗಳೆ ಗತ್ತೊಳಱಿ ಪಾಯ್ದು ಪೊಗೆ ಪುಗೆ ಕಣ್ಣಂ ಸಿಂಗಂಗಳಳುರೆ ಗರ್ಜಿಸಿ . . . ಸತ್ತುವು ಪಲವುಂ (ಪಂಪಭಾ. ೫-೯೨). ೪. ಯೋಗ್ಯವಾದ ; ತಕ್ಕ : ಸಂಗತಜಿನಧರ್ಮಮತಿಗೆ ನಾಂಗಳ್ ನಿಱಿಯ ತೆಱೆಯೆ ಬಣ್ಣಿಸಂ (ಅಜಪು. ೬-೭೯) ; ಸಂಗತಕೋಣಚತುಃಕಳಶಂಗಳ ದೇದೀಪ್ಯಮಾನದೀಪಂಗಳ . . . ವಿಳಾಸಮಸದಳಮದಱೊಳ್ (ಚಂದ್ರಪು. ೧೨-೧೦೮). (ನಾ). ೫. ಒಟ್ಟಿಗೆ ಸೇರಿರುವುದು ; ಗುಂಪುಗೂಡಿರುವುದು : ಸಂಗತದಿ ನೀಗಳಿಂತೀ ರಂಗಮೆ ರಣರಂಗಮಾಗೆ ಕಾದುವಂ (ಪಂಪಭಾ. ೨-೮೦). ೬. ಯೋಗ್ಯವಾದುದು ; ತಕ್ಕುದು : ಆದೊಡಮನ್ನ ಕವಿತೆಗಬ್ಬದ ಬಗ್ಗೆ ಈ ದಿವ್ಯಸಭೆಗೆ ಸಂಗತಮೆ (ಹದಿಬ. ೧-೪೫) ; ಈ ರಾತ್ರಿಯೆ ನೀವು ಈ ಊರಿನಿಂದ ಪ್ರಯಾಣ ಮಾಡುವುದು ಸಂಗತವಲ್ಲ (ಶ್ರೀರಾಯ. ೭೬). ೭. ಯುಕ್ತವಾದ ನುಡಿ ; ಒಪ್ಪತಕ್ಕ ಮಾತು : "ಸಂಗತಂ, ಹೃದಯಂಗಮಂ — ೨ ಮನಸ್ಸಿಗೆ ಒಪ್ಪಿದ ಮಾತು" (ಸಿದ್ಧಾಂತಿ. ೫೫). ೮. ಸ್ನೇಹ ; ಮಿತ್ರತ್ವ : "ಸಹಭುಜಂ ಸಂಗತಂ ಪ್ರೀತಿ ಸಖ್ಯಂ ಸ್ನೇಹಮೆನಲು ಮೈತ್ರಕ್ಕೆ ನಾಮಂ" (ಮಂಗರಾ. ೧೨೮-೮). ೯. [ರಾಜನೀ] ಹದಿನಾರು ವಿಧವಾದ ಒಪ್ಪಂದಗಳಲ್ಲಿ ಒಂದು ; ಮಿತ್ರತ್ವವನ್ನು ಉಳಿಸಿಕೊಂಡು ಮುಂದುವರಿಯುವಂತೆ ಮಾಡಿಕೊಳ್ಳುವ ಸಂಧಿ : ಸಂಪ್ರಧಾನ ಕಪಾಲ ಉಪಹಾಸನ ಸಂತಾನ ಸಂಗತ ಉಪನ್ಯಾಸ ಪ್ರತೀಕಾರ ಸಂಯೋಗ ಪುರುಷಾಂತರ ಅದೃಷ್ಟಪುರುಷ ಆತ್ಮಾಮಿಷ ಉಪಗ್ರಹ ಪರಿಕ್ರಮ ಅರಿಪರದೂಷಣ ಸ್ಕಂಧೋಪನಯಮೆಂದು ಷೋಡಶವಿಧಮಕ್ಕುಂ . . . ಮಿತ್ರಭಾವದೊಳೆ ನೆಗಟ್ಟಿ ಸಂಧಿ ಸಂಗತಮೆಂಬುದಕ್ಕುಂ (ಪಂಚತಂ. ೨೨೦-೩). [ಸಂ.]

**ಸಂಗತವಡಿಸು** (ಕ್ರಿ). ಸಾಂಗೋಪಾಂಗಗೊಳಿಸು ; ಸಮರ್ಪಕವಾಗಿಸು : ಮಂಗಳವಾದ್ಯ ಶೋಭನವಾದ್ಯ ಜಾತಕರ್ಮಂಗಳ ಬುಧತತಿಯಿಂದ ಸಂಗತವಡಿಸಿ ಪ್ರದ್ಯುಮ್ನಾಖ್ಯವೆಂದೆಂಬ ತುಂಗನಾಮವನಿಟ್ಟರು (ಮೋಹತ. ೪-೭೯).

[ಸಂಗತ + ಪಡು$_1$ + – ಇಸು$_3$]

**ಸಂಗತಿ$_1$** (ನಾ). ೧. ಕೂಡುವಿಕೆ; ಸೇರುವಿಕೆ : ಪ್ರಸಿದ್ಧ ವರದಾ ಪುಣ್ಯಾಂಬು ಗೋದಾವರೀ ಸಂಗತ್ಯೋ[ರ್ಜಿ]ತ [ಪಾಠಾಂ. ತ್ಯಂಜಿತ, ತ್ಯೂಚಿತ, ತ್ಯೂರ್ಚಿತ]ವಾರಿಸಾರ ಯಮುನಾನೀಳೋರ್ಮಿ ನೀರಂ ಭುಜೋತ್ತುಂಗಂಗೀಗರಿಗಂಗೆ ಮಂಗಳಮಹಾಶ್ರೀಯಂ (ಪಂಪಭಾ. ೧೪-೩೧). ೨. ಕೂಟ ; ಸಂಭೋಗ. ೩. ಒಡನಾಟ ; ಸಹವಾಸ ; ಗೆಳೆತನ : ದೊರಕೊಂಡೆಯೆಂತು ಮುಂ ಪಂಜರಬಂಧನಮಾದುದೆಂತು ನಿನಗೀ ಚಂಡಾಲರ ಸಂಗತಿಯೆಂತು . . . ಪೇೞಿದೆಲ್ಲಮನೀಗಳ್ (ಕಾದಂಪೂ. ೯೧) ; ನಿನ್ನ ಸಂಗತಿಯೊಳೆ ಕಲ್ಬಿಷಂ ಕಿಡುವುದುಂ (ಜಗವಿ. ೧-೬೪). ೪. ಜೊತೆ ; ಸಂಗಡ : ರಚೆ ಆರಂಭವಾದ ಮೇಲಾದರೆ ಎಂದಿನಂತೆ ಅಂಕೋಲೆಯವರಗಾದರೂ ಸಂಗತಿಗೆ ಜನವಿರುತ್ತಿತ್ತು (ಮೂರುದಾ. ೬೧). ೫. ಸಂಬಂಧ ; ಬಾಂಧವ್ಯ : ಅಧಿಕರಣಗಳು . . . ಹಿಂದಿನ ಸಂದರ್ಭಕ್ಕನುಸರಿಸಿ ಯಾವದಾದರೊಂದು ಸಂಗತಿಯನ್ನು ಎಂದರೆ ಸಂಬಂಧವನ್ನು ನಿಮಿತ್ತವಾಗಿ ಮಾಡಿಕೊಂಡುಬರುತ್ತದೆ (ಬ್ರಹ್ಮಭಾ. ೨-೩೭). ೬. ಸಭೆ ; ಸಮಿತಿ : "ಸಂಗತಿಃ, ಸಭಾ — ೨ ಸಮಿತಿಯೆಂಬುದು" (ಹಲಾಯು. ೧೩೭-೩೫).

೭. ಒಳ್ಳೆಯ ಗತಿ, — ಇರವು : ಸಂಗನ ಬಸವಂ ಸಂಗತಿಯಂ ಮಾಳ್ಕೆ ಭಕ್ತಿಯೊಳಗನವರತಂ (ಎಇ. XXI, ೨-೧೦೨ ; 1260). **೮. ವಿಷಯ ; ವಿಚಾರ :** ಮರದ ಮೇಲೆ ಗೂಡಿನಲ್ಲಿದ್ದ ಹೆಣ್ಣುಗುಬ್ಬಿಯು ತನ್ನ ಗಂಡ ಬಂದ ಕೂಡಲೇ ಈ ಸಂಗತಿಯನ್ನು ಹೇಳಿತು (ನೀತಿಚಿಂ. VIII, ೫) ; ವಿಷ್ಣುಒಲೆಯನ್ನು ಯಶಸ್ವಿಯಾಗಿ ಉಪಯೋಗಿಸಬೇಕಾದಲ್ಲಿ ಕೆಳಗಿನ ಸಂಗತಿಗಳನ್ನು ನೆನಪಿನಲ್ಲಿಟ್ಟುಕೊಳ್ಳಬೇಕು (ಅಡುಸಾ. ೧೬). **೯. [ಕಾವ್ಯಮೀ] ಒಂದು ವಿಷಯ ಅಥವಾ ಘಟನೆಗೆ ಸಂಬಂಧಿಸಿದ ಕಾವ್ಯವಸ್ತು ; ಸಾಂಗತ್ಯ :** ಅಂಗೀಕರಣಶಕ್ತಿಯು ಪ್ರಧಾನವಾಗಿದ್ದ ಕಾವ್ಯವಸ್ತುವನ್ನು ರತ್ನಾಕರವರ್ಣಿಯು 'ಚರಿತ'ವೆಂದೂ ನಿರ್ಮಾಣಶಕ್ತಿಯು ಹೆಚ್ಚಾಗಿದ್ದಲ್ಲಿ ಅಂಥ ಕಾವ್ಯವಸ್ತುವನ್ನು 'ಸಂಗತಿ'ಯೆಂದೂ ರತ್ನಾಕರವರ್ಣಿಯು ತಿಳಿಸಿದಂತೆ ತೋರುತ್ತದೆ (ನವ್ಯಕಾ. ೧೦೬). **೧೦. [ಸಂಗೀತ] ಹಾಡುವಾಗ ಒಂದೇ ಸಾಲನ್ನು ಸ್ವರವ್ಯತ್ಯಾಸದೊಂದಿಗೆ ಪುನಃ ಪುನಃ ಹಾಡುವುದು:** ಅವರ ಕೃತಿಗಳಲ್ಲಿ ಬರುವ ಸಂಗತಿಗಳು ಸಹಜರೀತಿಯಲ್ಲಿ ಒಂದಾದ ಮೇಲೊಂದು ಕಾಣಿಸಿಕೊಳ್ಳುತ್ತವೆ (ಸಂಗೀತ. ೪೮). [ಸಂ.]

**ಸಂಗತಿ$_2$ (ಅ). = ಸಂಗಡ$_2$ :** ನಾ ಸಂಗತಿ ಬರುವವಳೆ (ಅರಗಿ. ೨೬೮) ; ಅವನ ಸಂಗತೀಲ ಮಾತಾಡಿ ಗುಡಿಯ ಜೀರ್ಣೋದ್ಧಾರ ಮಾಡಿಸೋಣ (ಹೊಸಂಸಾ. ೧೧). [< ಸಂಗತಿ$_1$]

**ಸಂಗತಿಗೈ (ಕ್ರಿ). ಸಾಂಗತ್ಯರೂಪವಾಗಿ ರಚಿಸು :** ಸತಿಯರೊಲಿದು ಸಮನಿಸುವ ಪತಿಶುಶ್ರೂಷೆಯ ಬಗೆಯನಱಿತು ಸಂಗತಿಗೈದದನು ಬಣ್ಣಿಪೆನು (ಹದಿಬ. ೩-೩).
[ಸಂಗತಿ$_1$ + ಗೈ (< ಕೆಯ್$_1$)]

**ಸಂಗತಿಗೊಳಿಸು (ಕ್ರಿ). ಹೊಂದಿಸು ; ಒದಗಿಸು :** ಆವ ವೇಳೆಯೊಳಾವುದನುಗೂಳ ಲೆಳಸಿದರಾ ವೇಳೆಯೊಳವನೆಲ್ಲ ಸಾವಧಾನದೊಳು ಸಂಗತಿಗೊಳಿಸುವುದಿಷ್ಟ ದೇವತೆಯೆಂದೆಣಿಸುವುದು (ಹದಿಬ. ೪-೧೬). [ಸಂಗತಿ$_1$ + ಕೊಳ್$_1$ + – ಇಸು$_3$]

**ಸಂಗತಿರಕ್ತ (ನಾ). (ಕೆಟ್ಟ) ಸಹವಾಸದಲ್ಲಿ ಅಭಿಲಾಷೆಯುಳ್ಳವನು :** ಮಾಯಾವಿ ಸಂಘಾತ ಸಂಗತಿರಕ್ತಂ ರತಿಲಂಪಟಂ . . . ನಿದ್ರಾಳು ತಾನಾದ ಭೂಪತಿಗಾದ್ಯೆಸಿರಿ ಗಾಳಿಗೊಡ್ಡಿದ ಸೊಡರ್ವಾಳಾಗದೇಂ ಪೋಕುಮೇ (ರಾಜಶೇ. ೬-೧೨೪). [ಸಂ.]

**ಸಂಗತಿವಡೆ (ಕ್ರಿ). ಸಂಬಂಧವನ್ನು ಹೊಂದು , — ಪಡೆ :** ವಿತತ ನಪುಂಸಕಲಿಂಗ ದ್ವಿತೀಯೆಯೊಳ್ ನತ್ವಮತ್ವವಿಧಿ ಮತ್ವಮೆ ಸಂಗತಿವಡೆಗುಂ (ಶಮದ. ೧೦೬).
[ಸಂಗತಿ$_1$ + ಪಡೆ$_1$]

**ಸಂಗತಿವೆಱು (ಕ್ರಿ). ೧. ಸೇರಿಕೊಳ್ಳು ; ಕೂಡಿಕೊಳ್ಳು :** ಸಾಕ್ಷಾದ್ದಿನಾಧೀಶಬಿಂಬಂ ಕ್ಷಿತಿಗೆಟ್ಟಂದತ್ತೆನಲ್ . . . ಆಕಾಶದಿನಿೞಿದು ಮುರಾರಾತಿಹಸ್ತಾಗ್ರದೊಳ್ ಸಂಗತಿವೆತ್ತಿರ್ದತ್ತು (ಜಗವಿ. ೭-೭೧). **೨. = ಸಂಗತಿವಡೆ :** ಭಂಗುರಭಿದುರಚ್ಛಿದುರಪದಂಗಳ್ ಸಲೆ ಕರ್ಮ ಕರ್ತ್ರುವೊಳ್ ಕರ್ತ್ರುವೊಳಂ ಸಂಗತಿವೆತ್ತಿರ್ಕುಂ (ಕಾವ್ಯಾವ. ೯೪೪). [ಸಂಗತಿ$_1$ + ಪೆಱು$_1$]

**ಸಂಗತ್ಯ (ನಾ). ೧. ಕೂಡುವಿಕೆ ; ಸೇರುವಿಕೆ. ೨. ಕ್ರಮಬದ್ಧವಾದ ಮಾತು, –ನುಡಿ :** "ಸಂಗತ್ಯಮಂದೆನಲು ಕ್ರಮವಿಡಿದ ನುಡಿಯೆನಿಕ್ಕುಂ" (ಮಂಗರಾ. ೧೩೬-೩೯). **೩. "ಸಂಗತಿ; ವೃತ್ತಾಂತ"** (ಶೂನ್ಯಸಂ. ಕೋಶ): ಬಸವರಾಜದೇವರ ಪೂರ್ವಾಪರ ಸಂಗತ್ಯಮಂ ತಿಳಿಯಪೇಳಿ (ಶೂನ್ಯಸಂ. ೯೦-೨೫). **೪. ಜೊತೆ ; ಸಹವಾಸ :** ಆ ಸ್ಥಿತಿಯಿಂ ಸತಿ ಸಂಗತ್ಯದ ಕತದಿಂ ಕೆಟ್ಟಾರೊಳಾದೊಡಂ ಮಱೆವಾಳ್ದುಂ (ಮದಚ. ೮-೧೬); ಆಂ ಕಿಱಿಯಂದಿಂ ತೊಟ್ಟು ರಾಜಪುತ್ರರ ಸಂಗತ್ಯದ ಬೆಳೆದೆನಪ್ಪುದಱಿಂ ರಾಜಕುಮಾರಾಕಾರನಾಗಿರ್ಪೆಂ (ಬಂಹರಿ. ೨-೩೫ ವ). [ಸಂ.]

**ಸಂಗತ್ವ (ನಾ). ಜೊತೆಯಾಗಿರುವಿಕೆ ; ಸಾಹಚರ್ಯ :** ಸಾಂಖ್ಯಜ್ಞಾನದಿಂದ ತತ್ಕಾಲಕ್ಕೆ ಜೀವನು ಅಸಂಗನೆಂದು ತೋರಿದಾಗ್ಯೂ ಪ್ರಕೃತಿಯೋಗದಿಂದ ಅವನಿಗೆ ಸಂಗತ್ವ ಬರುವುದು (ಪಂಚದ. ೬-೨೩೧). [ಸಂ.]

**ಸಂಗದೋಷ (ನಾ). ಸಹವಾಸದಿಂದುಂಟಾಗುವ ಅವಗುಣ :** ಗೃಹಸ್ಥಾಶ್ರಮದಲ್ಲಿ ದೋಷವಿದೆಯೆಂದು ಅದನ್ನು ಬಿಟ್ಟು ಮತ್ತೊಂದು ಆಶ್ರಮವನ್ನು ಹಿಡಿದರೆ, ಅಂಥವನಿಗೆ ಈ ಸಂಗದೋಷ ಬಂದೇ ಬರುತ್ತದೆ (ವಚಭಾ. ೩೫೨). [ಸಂ.]

**ಸಂಗಮ (ನಾ). ೧. ಕೂಡುವುದು ; ಸಮಾಗಮ :** "ಸಂಭೇದಃ, ಸಂಗಮಃ, ಸಂಭೇದ್ಯಂ — ಈ ೩ ಕೂಡಲ್" (ಹಲಾಯು. ೧೧೦-೪೭) ; ಮಠದಲ್ಲಿ ನೆರೆದವರಿಗೆ ಈ ತ್ರಿಮೂರ್ತಿಗಳ ಸಂಗಮ ಸಮಸ್ಯೆಯಾಗಿತ್ತು (ದೀಪಹ. !! **೨. ಎರಡು ನದಿಗಳು ಸೇರುವ ಸ್ಥಳ. ೩. ಕೃಷ್ಣಾ ಮತ್ತು ಮಲಪ್ರಭಾ ನದಿಗಳು ಸೇರುವ ಕ್ಷೇತ್ರ; ಸಂಗಮಕ್ಷೇತ್ರ :** ಕಪ್ಪಡಿಯ ಸಂಗಮವಂ ಪೊಕ್ಕು (ಬಸರ. ೨-೫೦). **೪. ಕಾವೇರಿ ಮತ್ತು ಕಪಿಲಾನದಿಗಳು ಸೇರುವ ಕ್ಷೇತ್ರ :** ಕುನ್ದಗಾಮುಣ್ಡರುಂ ಸಂಗಮದೆ ಪೃಥುವೀಗಾಮುಣ್ಡರುಂ . . . ಎನೆಬ್ಬರುಂ ನರಸಾಕ್ಷಿಯಾಗೆ ಪಡೆದಾಮ್ (ಎಕ. IV, ಶ್ರೀರಂಗ. ೧೬೦-೨೧ ; ಕ್ರಿ. 800). **೫. ಕೂಡಲಸಂಗಮದಲ್ಲಿರುವ ಲಿಂಗ ಅಥವಾ ಶಿವನ ಹೆಸರು :** ಸಂಗಮನ ಕರುಣವೇ ತನಗೆ ಬೆಂಬಲವಾಗೆ (ಬಸರ. ೫-೪೫) ; ಕರುಣನಿಧಿ ಹರನೆ ಸಂಗಮನೆ ಎಂದೆನುತ (ಕನ್ನಜಾ. ೨೩೫). [ಸಂ.]

**ಸಂಗಮಂಗ (ನಾ). ಒಂದು ಊರಿನ ಹೆಸರು (?) :** ಸ್ವಸ್ತಿಶ್ರೀ ಸಂಗಮಙ್ಗದ ಮೆಮ್ಮಗಳ್ ಮಲಕೆರಿ ಒಡಯ ದುಗ್ಗಬ್ಬೆ ತುಮ್ಬು ಮಾಡಿಸಿದಾಳ್ (ಎಕ. X (S), ಮುಳಬಾ. ೩೦೮-೧ ; ೫ನೆಯ ಶತ). [?]

**ಸಂಗಮಕ್ಷೇತ್ರ (ನಾ). ೧. ಸೇರುವ ಸ್ಥಳ ; ಕೇಂದ್ರಭಾಗ :** ಈತನು ಅಹಂತತ್ವ ಅಥವಾ ಜೀವಾತ್ಮನ ಅನಂತ ಜೀವನಧಾರೆಯ ಸಂಗಮಕ್ಷೇತ್ರ (ಭಾರದ. ೪೪). **೨. ಗಂಗೆ, ಯಮುನೆ ಮತ್ತು ಸರಸ್ವತಿ ನದಿಗಳು ಸೇರುವ ಸ್ಥಳ :** ಗಂಗೆ ಯಮುನೆ ಸರಸ್ವತಿಯೆಂಬ ಮೂಱು ಗಂಗೆ ಕೂಡಿದ ಮಧ್ಯವೀಗ ಸಂಗಮಕ್ಷೇತ್ರ (ಘನವ. ೨೫-೫). [ಸಂ.]

**ಸಂಗಮದೇವ (ನಾ). = ಸಂಗಮ ೫ :** ಕರುಣರಸನಿಧಿಘನತರಂಗ ಸಂಗಮದೇವ (ಬಸರ. ೩-೮೭) ; ಪ್ರಾಣವಾ ಗುರು ತಾನೆನಿಪ್ಪ ಧುರೀಣ ಜಂಗಮಲಿಂಗವೇ ಮತ್ ಪ್ರಾಣಲಿಂಗಮಿದಕ್ಕೆ ಸಂಗಮದೇವನೇ ಸಾಕ್ಷಿ (ಬಸಪು. ೩೫-೫೦). [ಸಂ.]

**ಸಂಗಮರವರಿ, ಸಂಗಮವರಿ (ನಾ). ಒಂದು ಬಗೆಯ ಬಿಳಿಯ ಕಲ್ಲು ; ಅಮೃತಶಿಲೆ :** ನೆಲದ ಮೇಲೆ ಸಂಗಮರವರೀ ಕಲ್ಲಿನ ಹಾಸಿಗೆಯುಂಟು (ಮುಂಬಯಿ. ೫-೨೯೫); ಹೊನ್ನಳ್ಳಿ ಎಂಬ ಗ್ರಾಮದಲ್ಲಿಯೂ ಮೇಲಾದ ಸಂಗಮರವರೀ ಶಿಲೆಗಳು ದೊರೆಯುತ್ತವೆ (ಕಭಾಗ. ೨೯). **ಸಂಗಮವರಿ :** ನೆಲಕ್ಕೆ ಸಂಗಮವರಿ ಕಲ್ಲನ್ನು ಹೊಂದಿಸಿಕೊಟ್ಟಿದ್ದಾರೆ (ಗಂಗಾಸಾ. ೭) ; **ಅಂಗಳಕ್ಕೆ ಹೊದಿಸಿದ ಬಿಳಿಯ ಸಂಗಮವರಿ ಕಲ್ಲುಗಳ ಮೇಲೆ** ಇನ್ನೊಬ್ಬ ತರುಣಿ ಕುಳಿತಿದ್ದಳು (ಭೂಮಿತಾ. ೧೦೫). [<— ಪಾರ.ಸಂಗಮರವರ, ಸಂಗಮರ್ಮರ್; ಮರಾ. ಸಂಗಮರವರ, ಸಂಗಮರವರೀ ; ಹಿಂ. ಸಂಗಮರ್ಮರ್]

**ಸಂಗಮವರಿ 'ಸಂಗಮರವರಿ' ನೋ.**

**ಸಂಗಮಿಸು (ಕ್ರಿ). ಕೂಡು ; ಬೆರೆ ; ಸೇರು :** ಸಂಗಮಿಸೆ ತನ್ನ ಕಣ್ ಗಂಗೆ ತಮ್ಮನ ಕಣ್ಣ ಜಗುನೆಯಂ (ಶ್ರೀರಾಮಾ. ೧೬೪-೩೩೩); [illegible]ಪರೂ ಬೇರೆಂದೆ ಸಮದೂರದೊಳು ಸರಿವ ವಿಷಯಾತ್ಮ ಸಂಗಮಿಸುವಾನಂತ್ಯವೇ (ಮಲದೇ. ೧೭-೨). [ಸಂಗಮ + – ಇಸು$_3$]

**ಸಂಗಮೇಶ (ನಾ). = ಸಂಗಮ ೫ :** ಸಂದನಮಳಂ ಸಂಗಮೇಶಂ ನಿಜನಿವಾಸಕ್ಕೆ (ಬಸರ. ೧೩-೪೦) ; ಸರ್ಪಭೂಷಣ ಸಂಗಮೇಶಂಗರ್ಪಿಸುವೆನಿಂದುಗ್ರಗರಳವನು (ಬಸಪು. ೫೮-೪೧). [ಸಂ.]

**ಸಂಗಮೇಶ್ವರ (ನಾ). = ಸಂಗಮ ೫ :** ಸಂಗಮೇಶ್ವರಂಗೆ ಹೊಸಪುಷ್ಪಮಂ ತಿಳಿಯಗ್ಘವಣಿಯಂ ತಂದು (ಬಸರ. ೨-೬೭) ; ಜನಿಸಿದಾಗಳ್ ಸಂಗಮೇಶ್ವರನೆನಗೆ ಸದ್ಗುರುವಾಗಿ ಬೋಧಿಸಿ ವಿನುತಶೈವಾಚಾರಮಾರ್ಗದೊಳಿರಿಸಿ ಸಲಹಿದನು (ಬಸಪು. ೩-೪೪). [ಸಂ.]

**ಸಂಗಯ್ಯ (ನಾ). = ಸಂಗಮ ೫ :** ನಡೆ ನೀನು ಕಪ್ಪಡಿಯ ಸಂಗಯ್ಯನಲ್ಲಿ ಒಡಗೂಡು (ಅವಚಂ. ೨೫೫-೧೧೬೫) ; ಓಡದಿರು ಸಂಗಯ್ಯ ಹೋ ನಿಲುವೋಡದಿರು ನಾ ನಿಮ್ಮನೊಂದಂ ಬೇಡೆನು (ಬಸಪು. ೯-೩೨). [ಸಂಗ$_2$ + ಅಯ್ಯ$_1$]

**ಸಂಗರ (ನಾ). ೧. ಆಣೆ ; ಭಾಷೆ ; ಪ್ರತಿಜ್ಞೆ :** "ಆಗೂಃ, ಸಂಗರಃ . . . ಪ್ರತಿಜ್ಞಾ — ಈ ೬ ಪ್ರತಿಜ್ಞೆ" (ಹಲಾಯು. ೧೧೮-೩೦). **೨. ಕದನ ; ಕಾಳಗ :** ಸಂಗರನಿಕಷದೊಳೆಮ್ಮಂದಮಂ ನೀನೆ ಕಾಣ್ಬೈ (ಆದಿಪು. ೧೪-೮೨) ; ತರಳತನದಲಿ ನುಡಿಯದಿರು ಸಂಗರಕೆ ಕರೆ ನಿಮ್ಮಯ್ಯನನು (ಕುಮಾದ್ರೋ. ೬-೯) ; ಸಂಗರದೊಂದು ದಂದುಗಮೇಕೆ? (ರಾಮಾಶ್ವ. ೯೧-೮). **೩. ಕಬಳಿಸುವಿಕೆ ; ನುಂಗುವುದು. ೪. ಮಾಂಸ. ೫. ದಡ್ಡ ; ಮೂರ್ಖ. ೬. ದುಃಖ ; ವ್ಯಥೆ. ೭. ಶಮೀವೃಕ್ಷದ ಫಲ. ೮. ಹಗಲಿರುಳು ; ಅಹೋರಾತ್ರಿ .** "ಧುರ ಮಾಂಸಂ ಮೂರ್ಖ ದುಃಖ ಶಮಿಫಲಿನಮಹೋರಾತ್ರಿಗಳ್ ಸಂಗರಾಖ್ಯಂ" (ನಾನಾರ. ೨೦). [ಸಂ.]

**ಸಂಗರಕೋಳಾಹಳ** (ನಾ). ೧. ಯುದ್ಧದ ಕೋಲಾಹಲ , — ಗೊಂದಲ ; ಕದನಕೋಲಾಹಲ. ೨. ಯುದ್ಧದಲ್ಲಿ ಕೋಲಾಹಲವನ್ನುಂಟು ಮಾಡುವವನು ; ಕದನದಲ್ಲಿ ಗೊಂದಲವೆಬ್ಬಿಸುವವನು : ಸಿಂಗರಿಸಿದ ತುರಗವನೇಱಿ ಕರದೊಳು ಕಂಗೊಳಿಸುವ ಖಡ್ಗವಿಡಿದು ಸಂಗರಕೋಳಾಹಳರಾದ ರಾವುತ ತುಂಗವಿಕ್ರಮರೆಯ್ದಿದರು (ಜೀವಂಸಾಂ. ೫-೩೭). 'ಕದನಕೋಳಾಹಳ' ಪರಾ. [ಸಂ. ಸಂಗರಕೋಲಾಹಲ]

**ಸಂಗರಪಿಶುನ** (ನಾ). ಯುದ್ಧವನ್ನು ಸೂಚಿಸುವಂಥದು ; ಯುದ್ಧಸೂಚಕ : ನೋಡಿದಂ ತಿರ್ಯಗಾಲೋಕನನುದ್ಯಚ್ಚಕ್ರಮಂ ಸಂಗರಪಿಶುನವಿದಂಬನ್ನಗಂ ವಾರಿಜಾಕ್ಷಂ (ಜಗಪಿ. ೧೭-೧೩೬). [ಸಂ.]

**ಸಂಗರರಂಗ** (ನಾ). ಯುದ್ಧಭೂಮಿ ; ರಣರಂಗ : ಸಂಗರರಂಗದೊಳಿಱಿವ ಬೆಡಂಗವೆಸರ್ನೆಗಟೆ ನೆಗಟ್ದು ಸಂಗರಮಂ ತೋರ್ಪಂ (ಗದಾಯು. ೧-೧೫). [ಸಂ.]

**ಸಂಗರಸಮರ್ಥ** (ನಾ). ರಣಪರಾಕ್ರಮಿ : ಸಮಯವಿದು ಸಂಗರಸಮರ್ಥರು ಬರಲಿ (ಕುವ್ಯಾದ್ರೋ. ೩-೧). [ಸಂ.]

**ಸಂಗರಸಾಸಿಗ** (ನಾ). = ಸಂಗರಸಮರ್ಥ : ಆ ಸುರೇಶ್ವರದತ್ತ ವಜ್ರಾವರ್ತ ಕಾರ್ಮುಕವ ಭಾಸುರಾಸ್ತ್ರಮುಖಾಗ್ರದಲಿ ಮೇಳೈಸಿ ಮಿಗೆ ಬೋಳೈಸಿ ಸಂಗರಸಾಸಿಗನ ಬಲ್ಲಹನ ಬಳಿಗೈದೆಂದು ಬೀಳ್ಕೊಟ್ಟ (ತೊರರಾ. ೩-೬-೪೮). [ಸಂಗರ + ಸಾಸಿಗ]

**ಸಂಗರಹಿತ** (ನಾ). ಏಕಾಕಿ ; ಒಂಟಿ : ಗಂಗೆ ನೀ ಪಾತಾಳಕೆ ಹಂಗ ಬಂದದಿ ಹೇಳ ಮಂಗಳಮೂರುತಿ ಮಾರಾಯನ ಜಡೆವಿಟ್ಟು ಸಂಗರಹಿತಳಾಗಿ ಹರಿವುತ (ಸಿದ್ಧಪು. ೫-೮೫); ನಾನು ಅಜ್ಞಾನವನ್ನು ಕಳೆದುಕೊಂಡು ಸಂಗರಹಿತನಾಗಿ ದ್ವಂದ್ವಗಳನ್ನು ಮೀರಿ, ಸಿದ್ಧಪುರುಷನಾಗಿದ್ದೇನೆ (ವಚಭಾ. ೩೫೨). [ಸಂ.]

**ಸಂಗರಾಜಿರ** (ನಾ). = ಸಂಗರರಂಗ : ಸಂಗರಾಜಿರದೊಳ್ ಕೌರವರೆಂಬ ಕಾಕಕುಳಕೆನ್ನೀಯೊಂದೆ ಬಿಲ್ ಸಾಲದೇ (ಪಂಪಭಾ. ೧೨-೧೩೫). [ಸಂ.]

**ಸಂಗಲಿಪ್ತ** (ನಾ). ಮೈತ್ರಿಯಿಂದ ಕೂಡಿದುದು ; ಸ್ನೇಹದಿಂದ ಕೂಡಿದುದು : ಅವರ ಚಿತ್ತ ಸಂಗಲಿಪ್ತವಾಗಿರಲಿಲ್ಲ ಗುತ್ತಿಯ ಹೃದಯದಂತೆ (ಮಲೆಮ. ೭೨೬). [ಸಂ.]

**ಸಂಗಲಿಸು** (ಕ್ರಿ). ೧. ಕೂಡು ; ಸೇರು ; ಸಂಗ್ರಹಗೊಳ್ಳು : ಗಿಂಡಿ ಮಿಂಚುವಡಿಗವೀಣೆ ಸಂಗಲಿಸಿದುವು ಲಾವಂಚದ ಬೀಸಣಿಗೆಗಳು (ಭರಚ. ೧೫-೨೭). ೨. ಸಂಗ್ರಹಮಾಡು; ಸಂಗ್ರಹಿಸು : ಆತ್ಮಸಾರಪುಸ್ತಕವ ಸಂಗಲಿಸಿದರರುಹನಾಜ್ಞೆಯೊಳು (ಭರಚ. ೫೯-೪೭). ೩. (ಆಲಂ) ಒಟ್ಟು ಅಭಿಪ್ರಾಯವನ್ನು ನೀಡು ; ಒಮ್ಮತವಾದ ಸಲಹೆಯುಂಟಾಗು (?): ಹಂಗಳ ಜನಕರೆಲ್ಲರನು ಮನ್ನಿಸಿ ಸರಸಾಂಗದೊಳಿರ ರಾಯನಿತ್ತ ಸಂಗಲಿಸಿದುದತ್ತ ನಮಿರಾಜಗಾಪ್ತಜನಂಗಳ ವಾಕ್ಯವೇನೆಂಬೆ (ಭರಚ. ೩೭-೩೧). [< ಸಂಕಲಿಸು]

**ಸಂಗವ** (ನಾ). ೧. ಕೂಡುವಿಕೆ ; ಸೇರುವಿಕೆ : ಸಂಗಮ – ಸಂಗವ; ಹಿಮ– ಹಿವ (ಶಮದ. ೨೭೩ ಪ್ರಯೋ). ೨. ಕೂಡಲಸಂಗಮ; ಸಂಗಮಕ್ಷೇತ್ರ : ಸಂಗವದ ಸಂಗಮೇಶ್ವರ XXX ಯ ಪೊಳೆಗೆ ನೂಱು ಮತ್ತಂ XXX (ಸೌಇಇ XI-i , ೧೦೩-೩೫ ; 1068?). [< ಸಂ. ಸಂಗಮ]

**ಸಂಗವಂತ** (ನಾ). ಪ್ರಾಪಂಚಿಕವಿಷಯಗಳಿಗೆ ಅಂಟಿಕೊಂಡಿರುವವನು; ಸಂಗಿ (?) : ಲಿಂಗಪರೀಕ್ಷಿತನು ಸಂಗವಂತನೆಂದೆನ್ನದಿರಯ್ಯಾ ಶರಣ ಮನಬಂದಂತೆ ಮಾಡುವ (ಚನ್ನವ. ಕ. ೫೮೩-೧೨೯). [ಸಂ. ಸಂಗವತ್]

**ಸಂಗವಳ್ಳಿ** (ನಾ). ಒಂದು ಊರಿನ ಹೆಸರು : ಸಸ್ತಿಶ್ರೀ ಗೊಗ್ಗಿಯ ಮನೆವಗತಿ ಸಂಗವಳ್ಳಿಯ ಮೇಗೆ ವಡಸತ್ತಿಗನೊಟ XXX ಣ್ಣೆ (ಎಕ. V (R) . ಮೈಸೂರು. ೧೭೮-೬ ; ಸು. 10ನೆಯ ಶತ). [ಸಂಗ? + ಪಳ್ಳಿ$_1$]

**ಸಂಗವಿಸು** (ಕ್ರಿ). ''ಕೊಡು; ತೋರು; ಕಾಣು'' (ತೊರರಾ. ಕೋಶ): ಪಡೆಯ ಪದಘಟ್ಟಣೆಯ ದಟ್ಟಣೆಗಡಿಗಡಿಗೆ ಸಂಗವಿ[ಪಾಠಾಂ. ವಿಂಗಡಿ]ಸಿದಬುಧಿಯ ಹಡಗಿನ ವೊಲೊಲೆದಾಡುತಿರ್ದುದು ಕಟ್ಟೆ ಕಡಲಿನಲಿ (ತೊರರಾ.೬-೬-೧೧). [< ಸಂಗಮಿಸು?]

**ಸಂಗವೋಯ** (ನಾ). ಒಬ್ಬಾತನ ಹೆಸರು (?) : ಪ್ರಥಮಮ್ ದುರ್ಗ್ಗನಕೆಱೆ ಮೂಡ್ಡೆ ಕಡೆಗೋಡೆ ಎ ಸಂಗವೋಯರಾ ಕೆಱೆ (ಮೈಆರಿ. ೧೯೧೪, ೧೨-೧೬ ; 810). [?]

**ಸಂಗಸುಖ** (ನಾ). ಸಹವಾಸದಿಂದುಂಟಾಗುವ ಆನಂದ, – ಸೌಖ್ಯ : ಇದರ ಸಂಗಸುಖದನುಭಾವವನು ಕೂಡಲಸಂಗಮದೇವ ತಾನೇ ಬಲ್ಲ (ಬಸವ. ೫೧೭); ಶಶಿಮುಖಿಯರ ಸಂಗಕ್ಕೆ ಎಣಿಸುವ ಪಶುಪ್ರಾಣಿಗಳು ಪಶುಪತಿಯ ಸಂಗಸುಖಕ್ಕೆ ಏಕೆ ಎಣಿಸಲೊಲ್ಲರಯ್ಯ (ಸಿದ್ಧೇವ. ೪೧-೧೦೯). [ಸಂ.]

**ಸಂಗಸೂತಕಿ** (ನಾ). ೧. ಸಹವಾಸದಿಂದುಂಟಾಗುವ ದೋಷಕ್ಕೆ ಒಳಗಾದವನು. ೨. ಪರಸ್ತ್ರೀಯರ ಸಹವಾಸ ಮಾಡುವವನು (?) : ಸಂಗವಿಡಿದಂತೆ ಸಂಗವಿಡಿದು ನೋಡದಿರಯ್ಯಾ ಶರಣ ಸಂಗಸೂತಕಿಯಲ್ಲ ನೋಡಯ್ಯಾ (ಚನ್ನವ. ಕ. ೫೮೩-೧೨೯). [ಸಂ. ಸಂಗಸೂತಕಿನ್]

**ಸಂಗಳಿ** (ನಾ). ಗುಂಪು ; ಸಮೂಹ : ಅಬಲಿಸಿ ಕುಮುದಿನಿಯನಿಳಾವಳಯಕ್ಕತಿ ತಾಪವಿತ್ತನಿದು ತಕ್ಕರ ಸಂಗಳಿಗಣಕಮೆಂದು ಕಡಲೊಳ್ ಬಿಟಲೆಂದನುಗೆಯ್ದ ನರ್ಕನಸ್ತಾಚಲದಿಂ (ಶಬ್ದಾನು. ೪೭೮ ವ್ಯಾಖ್ಯಾ). [?./ ಪ್ರಾ. ಸಂಘದಿ./ ಸಂ. ಸಂಹತಿ]

**ಸಂಗಳಿಕೆ** (ನಾ). ಸಂಗ್ರಹಿಸುವಿಕೆ ; ಸಂಕಲನ ; ಸಂಪಾದನೆ : ದ್ರವ್ಯಸಂಗಳಿಕೆಯು ಗೋವಿಂದ ಮಹದಿವ್ಯಪ್ರಕಾಶವು ಗೋವಿಂದ (ಮೈಲಾರ. ೧೪೨-೨). [? + – ಇಕೆ]

**ಸಂಗಳಿಸು** 'ಸಂಗಡಿಸು' ನೋ.

**ಸಂಗಾಟ** 'ಸಂಗಡ$_2$' ನೋ.

**ಸಂಗಾಣಿ** (?). (?): ಅದೆಂತುತ್ಸಾಹಮಂತನಾದೊಡರುಹಚ್ಛಾಸನದೊಳ ಪ್ರತ್ಯಕ್ಷಮನುಮಾನಮಾಗಮಮೆಂಬ ಮೂಱುತೆಱದೊಳಾಗಮಸಿದ್ಧಮಪ್ಪ ಸಂಗಾಣಿ ವಿಭಾಗಂಗಳ್ ಪ್ರತ್ಯಕ್ಷಮಾದೊಡೆ (ಬಂಹರಿ. ೨-೫೪ ವ). [?]

**ಸಂಗಾತ$_1$** 'ಸಂಗಡ$_1$' ನೋ.

**ಸಂಗಾತ$_2$** 'ಸಂಗಡ$_2$' ನೋ.

**ಸಂಗಾತಿ$_1$** (ನಾ). ೧. ಒಡನಾಡಿ ; ಜೊತೆಗಾರ : ಈತ ನರನೆಂಬವ ಕಣಾ ಸಂಗಾತಿ ನಾರಾಯಣಋಷಿಗ (ಕುವ್ಯಾಅ. ೬-೨೬) ; ಬಾಲ್ಯದಿಂದಲೂ ಇಬ್ಬರೂ ಸಂಗಾತಿಗಳು (ದಾನಚಿಂ. ೮). ೨. ಜೊತೆಗಾತಿ ; ಸ್ನೇಹಿತೆ : ಮದುವೆಯ ಸಂಗಾತಿಯು ಜೀವನದ ಸಂಗಾತಿಯೇ ಆಗುವಳು (ಕನ್ನಜಾ. ೧೧೯). ೩. ಹೆಂಡತಿ ; ಪತ್ನಿ : ಸುಡು . . . ಕಲಹ ಕೋಪಂ ಮಾಟ್ಪಿ ಸಂಗಾತಿಯುಂ (ಸೋಮೇಶ. ೨೧). [< ಸಂ. ಸಂಘಾತಿನ್]

**ಸಂಗಾತಿ$_2$** (ನಾ). (ಮನುಷ್ಯರ ಚರ್ಮದ ಮೇಲಿರುವ) ಚಿಕ್ಕ ಕರಿಯ ಮಚ್ಚೆ ; ಕಾರೆಳ್ಳು : ಸುರೇಶ ಅವಳ ಎಡಗೆನ್ನೆಯ ಮೇಲಿದ್ದ ಕಪ್ಪು ಸಂಗಾತಿಯನ್ನೇ ಬಹಳ ಹೊತ್ತು ನೋಡುತ್ತಾ ಕುಳಿತಿದ್ದ (ಕಂಕಣ. ೫೭). [?]

**ಸಂಗಾತಿವೆಣ್** (ನಾ). ಜೊತೆಗಾತಿ ; ಸ್ನೇಹಿತೆ ; ಸಖಿ : ಸಂಗಾತಿವೆಂಗಳ ಸರಸಭಾಷಣವ ಮನಂಗೊಳಿಸದೆ ಮಱುಗುವಳು (ಹದಿಬ. ೭-೧೦). [ಸಂಗಾತಿ$_1$ + ಪೆಣ್]

**ಸಂಗಿ** (ನಾ). ೧. ಕೂಡಿದುದು ; ಸೇರಿದುದು : ದಿಶಾಯುವತಿಕೇಳಿಕೀರ್ಣಪಟವಾಸಚೂರ್ಣಂ . . . ವಿಶಾಲತರತುಂಗಸೌಧತಳಸಂಗಿ ಪೌರಾಂಗನಾವಶೀಕರಣಚೂರ್ಣಮಾದುದು ಬಳಾಘಧೂಳೀಚಯಂ (ಆದಿಪು. ೧೧-೧೫). ೨. ಸಂಗವ್ಯಾಮೋಹದಲ್ಲಿ ಸಿಲುಕಿರುವಂಥದು ; ಮೋಹಿತವಾದುದು : ಪ್ರತಿದಿನಂ ಪಾದರಿಯರೊಳ್ ಸ್ನೇಹಿ ಮಧುಪ ಪುಷ್ಪಿತೆಯರೊಳ್ ಸಂಗಿಯಾ ವನಮಿದಂ ಸೋಂಕೆ ಸದ್ಗತಿಯಿಲ್ಲಂ (ಚಿಬಪು. ೧೧-೨೫). ೩. ಸಂಗದಲ್ಲಿರುವವನು ; ಒಡನಾಡಿ : ಬಱುಮಾತಿಂಗೆ ಬಯಲ ಸಂಗಿ ಒಲಿವನೆ ಮಾತು ಮನಸ್ಸು ಕೂರ್ತು ಜಗದೀಶನನಱಿ (ಗುಪ್ತಮಂ. ಕ. ೨೩೩-೬೩೩) ; ಜಂಗಮವೇನು ಸಂಗಿಯೆ ಭೂಭಾರಿಯೆ . . . ಅಲ್ಲ ಕಾಣಿರಯ್ಯ ನಿಸ್ಸಂಗಿ ನಿರಾಭಾರಿ (ಸಿದ್ಧೇವ. ೧೫೫-೪೬೨) ; ಲಿಂಗಣ್ಣನುಂ ಚಿಕ್ಕಲಿಂಗಣ್ಣನುಂ ಶರಣ ಸಂಗಿ ಸತ್ಯಣ್ಣನುಂ . . . ಇವರೆಲ್ಲರುಂ ಪ್ರಾಣಲಿಂಗಿಗಳ್ (ಚಿಬಪು. ೬-೩೫). [ಸಂ. ಸಂಗಿನ್]

**ಸಂಗಿಗ** (ನಾ). = ಸಂಗಿ ೩ : ಅಂಗದ ಸಂಗಿಗನಲ್ಲ ನಮ್ಮ ಬಸವಯ್ಯನು (ನೀಲವ. ೩-೧). [ಸಂಗ$_2$ + – ಇಗ]

**ಸಂಗಿನಿ** (ನಾ). ಜೊತೆಗಾತಿ ; ಗೆಳತಿ ; ಸ್ನೇಹಿತೆ : ನಿರ್ಜರ ಸಂಗಿನಿ, ಭಾವತರಂಗಿನಿ ಪ್ರವಹಿಸೆ ರಸಋಷಿಚಿತ್ತದಲಿ (ನವಿಲು. ೧-೨೩). [ಸಂ. ಸಂಗಿನೀ]

**ಸಂಗಿಸು** (ಕ್ರಿ). ೧. ಕೂಡು ; ಸೇರು ; ಬೆರೆ : ಸ್ಫಟಿಕ ಸ್ವಚ್ಛದ ಕಾಂತಿಯೊಳ್ವಿಲಸತ್ಪ್ರದ್ಯೋತನೋದ್ಯತ್ಪ್ರಭಾಪಟಲಂ ಸಂಗಿಸೆ ವಹ್ನಿ ಪುಟ್ಟೆ (ಶತಕ. ೯೧) ; ಇಷ್ಟಲಿಂಗದಲ್ಲಿ ನೆಟ್ಟನೆ ಅಂಗಮನಪ್ರಾಣಂಗಳು ಸಂಗಿಸಬೇಕು (ಅಖಂಡೇ. ೨೭-೪). ೨. ನೆರೆ; ಸಂಭೋಗಿಸು : ಆ ಪತಿವ್ರತೆಯಪ್ಪ ಖಗಿಯಾ ತೋಪಿನಲಿ ಪತಿಯೊಡನೆ ಸಂಗಿಸಿ . . . ಗರ್ಭವ ಧರಿಸಿ (ನಿಭಾಗ. ೧೧-೧೩-೫೪). ೩. ಒಪ್ಪು ; ಸರಿಕಾಣು : ಬ್ರಹ್ಮನ ಡಾಗು ಬೆನ್ನ ಮೇಲೆ . . . ರುದ್ರನ ಡಾಗು ತಲೆಯ ಮೇಲೆ ಡಾಗಿನ ಪಶುಗಳಿಗೆ ಅನಾಗತನ ಸುದ್ದಿ ಏಕೋ ಇದು ನಿಮಗೆ ಸಂಗಿಸದೆಂದೆ (ಮೋಳಿಮಾ. ೧೦೨-೪೦೭). ೪. ಸೇರಿಸು; ಹೊಂದಿಸು : ಅಂಗದ ಲಿಂಗಮಂ ಮನದ ಲಿಂಗಮನುತ್ತರಭಾವಲಿಂಗಮಂ ಸಂಗಿಸಿ ಪೂಜೆಗೆಯ್ದು (ಶತಕ. ೫೩) ; ಕೆಂಗಱಿಯ ಕೋಲಂಗೆ ಬೇಗದಿ ಸಂಗಿಸಿದ ಮೊನೆಯಾಗಿ (ನಿಭಾಗ. ೧೧-೧-೪೫) ; ಸಂಗೀತಕಾರರು ತಾಳಮೇಳವ ನಸು ಸಂಗಿಸಿಕೊಂಡು (ಭರಚ. ೧೨-೮೨). ೫. ನೆರೆಯುವಂತೆ ಮಾಡು ; ನೆರೆಯಿಸು : ಮಂಗಳಮೂರುತಿ ಸಿರಿಹಯವದನನ್ನ ಸಂಗಿಸುಯೆನ್ನೊಳು ರತಿಸುಖಮಯನ್ನ (ಪಾದಿಕೀ. ೧೯೯-೩).

[ಸಂಗ$_2$ + – ಇಸು$_3$]

**ಸಂಗೀತ** (ಗು). ೧. ಹಾಡಲ್ಪಟ್ಟ ; ಹಾಡಿದ : ಅತ್ರಿಯ ಪಿರಿಯ ಮಗಂ ಭುವನತ್ರಯ ಸಂಗೀತಕೀರ್ತಿಸೋಮಂ ಸಕಲಕ್ಷತ್ರಕುಲಪೂಜ್ಯಂ (ಪಂಪಭಾ. ೧-೬೧). (ನಾ). ೨. ಸಾಮೂಹಿಕವಾಗಿ ಹಾಡುವುದು ; ಸಮೂಹಗಾಯನ. ೩. ಶಾಸ್ತ್ರೀಯವಾದ ಹಾಡುಗಾರಿಕೆ ; ಗಾಯನಕಲೆ : ನಾರದನ ಸಂಗೀತವಪ್ಸರನಾರಿಯರ ನರ್ತನ ಶೃತಿ ಸ್ಮೃತಿಯಾರುಭಟೆಯುಗ್ಗಡಣೆ ಪೌರಾಣ ಪ್ರಬಂಧಗಳ ಸಾರಕರ ಸಮ್ಮೋಹನದ ಕೈವಾರ ಕೇಳಿಸಿತು (ತೊರರಾ. ೧-೮-೫೧) ; ಸಾಕೇತಪುರಜನರ್ ನೆರೆದು ಸಂಗೀತಾಭಿನಯವಾದ್ಯಕಲೆಗಳಿಂ ಕೊಂಡಾಡಿದರು ರಾಜನಂ (ಶ್ರೀರಾಮಾ. ೧೬-೪೨೭). ೪. ಹಾಡು ; ಗೀತೆ : ಸಂಗೀತವು ಪಾಡುವ ಸಮಯವೇನೊ (ಪುರಂದ. ೩-೫೨-೩). ೫. ಗೀತ, ನೃತ್ಯ, ವಾದ್ಯ — ಈ ಮೂರರ ಮೇಳ : "ನೃತ್ಯ, ಗೀತ, ವಾದ್ಯ — ಈ ೩ ಸಂಗೀತವೆಂಬುದು" (ಹಲಾಯು. ೧೬-೯೫). [ಸಂ.]

**ಸಂಗೀತಕ** (ನಾ). = ಸಂಗೀತ ೫ : ಮಯೂರೀಲಟಹಪ್ರವೃತ್ತವಿಲಸನ್ನೃತ್ಯಂಗಳಂ ಮೆಚ್ಚಿ ನೋಡೆ ಮರುಳ್ಚಿತ್ತು ಖಗಾದ್ರಿ ಚಕ್ರಧರನಂ ಸಂಗೀತಕಕ್ರೀಡೆಯಿಂ (ಅಜಿಪು. ೯-೩೪); ಸಂಗೀತಕದಿಂ ಕಾವ್ಯರಸಂಗಳನತಿಚತುರವಿಬುಧಗೋಷ್ಠಿಗಳಿಂದುತ್ತುಂಗಕುಚೆ ತಡೆದುದೀ ನಿಜಸಂಗತಿಯಿಂ ಪೊಟ್ಟುಪೋದುದರೆಗಳಿಗೆಯವೋಲ್ (ಮಲ್ಲಿಪು. ೪-೯೭). [ಸಂ.]

**ಸಂಗೀತಕಚೇರಿ** (ನಾ). ಗಾಯನಸಭೆ, — ಕೂಟ : ಇದರಿಂದ ಅವರ ಸಂಗೀತಕಚೇರಿಗಳಲ್ಲಿ ಶ್ರಾವಕರು ತಲ್ಲೀನರಾಗಿ ಸಂಗೀತಸಮಾಧಿಯಲ್ಲಿರುತ್ತಿದ್ದರೆನ್ನಬಹುದು (ಸಂಗೀತ. ೪). [ಸಂಗೀತ + ಕಚೇರಿ]

**ಸಂಗೀತಕಲೆ** (ನಾ). ಹಾಡುವ ಕಲೆ ; ಗಾಯನಕಲೆ : ಸಶಾಸ್ತ್ರೀಯ ಸಂಗೀತಕಲೆಯಲ್ಲೂ ಉದ್ದಾಮಪಂಡಿತನಾದನು (ಸಂಗೀಚಂ. ೨೫೪). [ಸಂ. ಸಂಗೀತಕಲಾ]

**ಸಂಗೀತಗಾತಿ** (ನಾ). ಸಂಗೀತವನ್ನು ಹಾಡುವವಳು ; ಗಾಯಕಿ : ಅವಳು ಒಳ್ಳೆಯ ಸಂಗೀತಗಾತಿ (ರೂಢಿ). [ಸಂಗೀತ + – ಕಾತಿ$_5$]

**ಸಂಗೀತಗಾರ** (ನಾ). ೧. ಸಂಗೀತವನ್ನು ಹಾಡುವವನು ; ಗಾಯಕ : ಸಭೆಯ ಸಂಗೀತಗಾರನು ತಾನು ಸಂತೋಷಪಡುವುದಲ್ಲದೆ ಇತರರಿಗೂ ಆನಂದವುಂಟು ಮಾಡುತ್ತಾನೆ (ಗಾಳಿಪ. ೪೦) ; ಉದ್ದಾಮ ಸಂಗೀತಗಾರರಾದ ಅಣ್ಣಾಯ್ಯನವರಲ್ಲೂ . . . ಸಂಗೀತಾಭ್ಯಾಸ ನಡೆಯಿತು (ಸಂಗೀಚಂ. ೨೫೮). ೨. ಹಾಡುವಿಕೆಯನ್ನು ಕಲಿಸುವ ಗುರು, – ಉಪಾಧ್ಯಾಯ : (೬). [ಸಂಗೀತ + – ಗಾರ (<— ಕಾಱ)]

**ಸಂಗೀತಗಾರ್ತಿ** (ನಾ). = ಸಂಗೀತಗಾತಿ : ಉತ್ತರ ಹಿಂದುಸ್ತಾನದ ಒಬ್ಬ ಸಂಗೀತಗಾರ್ತಿಯು ಅಂದು ಅವರ ಸಂಘಕ್ಕೆ ಆಗಮಿಸಿದ್ದಳು (ಜಯಂತ. ೩೬೩).

[ಸಂಗೀತಗಾರ + – ತಿ$_1$ (<— ಇತ್ತಿ)]

**ಸಂಗೀತತೂರ್ಯ** (ನಾ). ಹಾಡಿನ ಇಂಪಾದ ನಾದ : ದಿವಿಜವಾದಕ ಕರಹತತತವಿತತ ಘನಸುಷಿರಾವನದ್ಧವಾದಿತ್ರಂ ಸಂಗೀತತೂರ್ಯಮಾಗ (ಶಾಂತಿಪು. ೧೦-೬೦ವ). [ಸಂ.]

**ಸಂಗೀತಶಾಲೆ** (ನಾ). ಗಾಯನವಿದ್ಯೆಯನ್ನು ಕಲಿಸುವ ಶಾಲೆ ; ಸಂಗೀತ ಪಾಠಶಾಲೆ : ಸಂಗೀತಶಾಲಾಮಾಲಿಕಾವಳಯಿತಮಹೀತಳದಿಂದೊಳಗೆ ಪಳಿಕಿನ ಕೋಟೆಗೊಪ್ಪಿದವು ನಾಲ್ಕು ವಿನೀಲದ ಗೋಪುರಂಗಳ್ (ಬಾಧಪು. ೧೬-೧೭೪ವ) ; ಶಾಲೆಯ ಖರ್ಚು ವೆಚ್ಚಕ್ಕಾಗಿ ಹಣ ಒದಗಿಸಲು ಶಾಲೆಯು ಸಂಚಾರೀಸಂಗೀತಶಾಲೆಯಾಗಿ ಪರಿವರ್ತನಗೊಂಡು ದೇಶಾಟನೆ ಮಾಡಲು ಪ್ರಾರಂಭಿಸಿತು (ಸಂಗೀಚಂ. ೨೮೯). [ಸಂ. ಸಂಗೀತಶಾಲಾ]

**ಸಂಗೀತಶಾಸ್ತ್ರ** (ನಾ). ಗಾನಕಲೆಗೆ ಸಂಬಂಧಿಸಿದ ಶಾಸ್ತ್ರ ; ಗಾಯನಶಾಸ್ತ್ರ : ದೀಕ್ಷಿತರ ಕೃತಿಗಳಲ್ಲಡಗಿರುವ ದಾಕ್ಷಿಣಾತ್ಯ ಸಂಗೀತಶಾಸ್ತ್ರದ ತಿರುಳು ಗೋಚರವಾಗಿ ಆನಂದವಾಗುತ್ತದೆ (ಸಂಗೀಚಂ. ೨೯೯); ಸಂಗೀತಶಾಸ್ತ್ರದಲ್ಲಿ ನಮಗೆ ಗತಿಯಿಲ್ಲದಿದ್ದರೂ ಇದು ಕುಠಾರಕಂಠವೆಂಬುದನ್ನು ಗುರುತಿಸುವಷ್ಟು ಪರಿಣತಿಯಿತ್ತು (ಗಾಳಿಪ. ೬೬). [ಸಂ.]

**ಸಂಗೀತಸಭೆ** (ನಾ). = ಸಂಗೀತಕಚೇರಿ : ಒಮ್ಮೆ ಮದ್ರಾಸಿನಲ್ಲಿ ಪ್ರಾರಂಭವಾದ ಸಂಗೀತಸಭೆಯೊಂದು ಕಚೇರಿ ಕೇಳುವುದಕ್ಕೆ ಶುಲ್ಕ ವಸೂಲುಮಾಡುತ್ತಿದ್ದುದನ್ನು ಕಂಡು (ಸಂಗೀಚಂ. ೨೬೨). [ಸಂ. ಸಂಗೀತಸಭಾ]

**ಸಂಗೀತಿ** (ನಾ). ೧. ಗೀತ ; ಹಾಡು : ಮಂದಾರದ ಸರಿ ವಿರುವದ್ಭೃಂಗಸಂಗೀತಿ [ಪಾಠಾಂ. ಸಂಸಂಗಿ] ಚೆಲ್ವಂ ನೀಡಿತ್ತು (ಆದಿಪು. ೭-೨೫). ೨. ಮಾತನಾಡುವುದು ; ಸಂಭಾಷಣೆ. ೩. ಧರ್ಮಸಭೆ : ಪೂರ್ವಾಚಾರಪರಾಯಣರು ಆಗಿಂದಾಗ್ಗೆ ಧರ್ಮಸಭೆಗಳನ್ನು ನಡೆಸಿ, ಸದ್ಧರ್ಮದ ಸ್ವರೂಪವನ್ನು ಶೋಧಿಸಿ ಸ್ಥಿರಪಡಿಸಲು ಪ್ರಯತ್ನಿಸಿದರು. ಇಂತಹ ನಾಲ್ಕು ಧರ್ಮಸಭೆಗಳು — ಅವುಗಳಿಗೆ 'ಸಂಗೀತಿ'ಗಳೆಂದು ಹೆಸರು (ಭಾರದ. ೨೦೩). [ಸಂ.]

**ಸಂಗೀತೋತ್ಸವ** (ನಾ). ಗಾಯನಸಮಾರಂಭ : ಸಂಗೀತೋತ್ಸವ ಜೀವಿತೇಶ ವರವಿದ್ಯಾವ್ಯಾಸ . . . ಛೋಕರಕ್ಷಕ ಎನುತ್ತುರ್ವಿಳ್ ಮಹಾಪ್ರೌಢೆಯುತ್ತುಂಗೋರೋಜೆ ಮರಾಳಯಾನೆ ವಿಟನಂ ಕೊಂಡಾಡೆ ನಕ್ಕಂ ನೃಪಂ (ಸೂಕ್ತಿಸು. ೮-೪೧೭). [ಸಂ.]

**ಸಂಗೀರ್ಣ** (ಗು). ೧. ಒಪ್ಪಿದ ; ಸಮ್ಮತಿಸಿದ. ೨. ಸ್ತುತಿಸಿದ ; ಹೊಗಳಿದ.

[ಸಂ.]

**ಸಂಗು$_1$** (ನಾ). ಒಂದು ಬಗೆಯ ಮರ : ತಡಸು ಕೆಂದರಿ ತೆಂಗು ಸಂಗು ಕೇದಗೆ ಕದಳಿ . . . ಬೇವು ಮಂದಾರಂಗಳಡಸಿ ತುಂಬಿದ ಚೆಲುವ ಭೂಜಂಗಳಿಂದ ಮಿಗೆ ಕಾನನಂ ಕಣ್ಗೆಸೆದುದು (ಹಚಕಾ. ೫-೧೬). [ದೇ. ‖ ತಮಿ. ಚಙ್ಕು]

**ಸಂಗು$_2$** (ನಾ). ಸಂದೇಹ ; ಶಂಕೆ : ಶರಣಾಗತರಕ್ಷಕರಂ ಹರ ಹರಿ ಪಾದಾಬ್ಜಭೃಂಗರಂ ಧಾರಿಣಿಯೊಳು ಸಂಗಿಲ್ಲದೆ ಬಲ್ಲಾಳ್ಗಳನರಿಮುದದಿಂ ಪೋಳಬಿಲ್ಲ ಮೂನೂರ್ವ್ವರಂ . . . ಚಂದ್ರಭೂಷಣದೇವರ ಕಾಲಂ ಕರ್ಚ್ಚಿ ಧಾರಾಪೂರ್ವಕಂ ಮಾಡಿ ಕೊಟ್ಟರು (ಕಕುಲ. ೫-೬೨ ; ಸು. 1187). [?./ ತಮಿ. ಚಙ್ಕು = ಧೈರ್ಯವನ್ನು ಕಳೆದುಕೊಳ್ಳು]

**ಸಂಗುಡಿ$_1$** 'ಸಂಗೈಡು' ನೋ.

**ಸಂಗುಡಿ$_2$** (ನಾ). ಬಾವುಟ ; ಧ್ವಜ : ಗುಡಿ ನೇಣ್ ಕಾಂಡಪಟಂ ಮೊಱಂ ಗಳಗೆಯುಂ ತೊತ್ತೆತ್ತುವುಂ ಬಂಡಿ ಸಂಗುಡಿ ನೇಣ್ ಕಂಟಣೆ ಗೋಣಿ ದಂಡಿಗೆ . . . ಎಂಬಿವಿನಿತುಂ ದಂಡಿಂಗೆ ಸಾಮಗ್ರಿಗಳ್ (ಸೂಕ್ತಿಸು. ೧೮-೨೩). [?]

**ಸಂಗುಣ** (ನಾ). ಜಟ್ಟಿಕಾಳಗದ ಒಂದು ವರಸೆ ; ಮಲ್ಲಯುದ್ಧದ ಒಂದು ಪಟ್ಟು : ಎಸೆವ ಮುಹಗ್ಗಳಂ ಠಡಕಿ ಕಕ್ಷವಡಂ ಮುಹಡಂ ತುಳಾಡಿ ಸಂದಸುವಿಡಿವಟ್ಟೆ ಸಂಗುಣವಳುಂಬಗೆ ಪಾಸಗೆ ವನ್ನಿಮುಟ್ಟೆ . . . ಎನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣ ಮೊಪ್ಪೆ ಕಾದಿದರ್(?) (ಚಂದ್ರಪು. ೫-೭೮). [?]

**ಸಂಗುಣಿತ** (ಗು). ೧. "ಗುಣಿತವಾದ ; ಗುಣಿಸಲ್ಪಟ್ಟ" (ವರ್ಧಮಾ. ಕೋಶ) : ನವಮಾಸಾವಧಿ ನಿರ್ಯನ್ನವೀನಮಂದಾರಕುಸುಮಗಂಧಿಶ್ವಾಸಂ ನವಸಂಗುಣಿತ ದ್ವಿಸಹಸ್ರವತ್ಸರಾಂತ ಸ್ಮೃ[ತಾ]ಮೃತಾಭ್ಯವಹರಣಂ (ವರ್ಧಮಾ. ೧೦-೧೧). (ನಾ). ೨. ಗುಣಿತವಾದುದು (?) : ಅಸಂಖ್ಯಾತ ಸಂಗುಣಿತಮಕ್ಕುಂ (ಗೊಮ್ಮಸಾ. ೫೭-೨).

[ಸಂ.]

**ಸಂಗೂಢ** (ನಾ). ೧. ಸಂಪೂರ್ಣವಾಗಿ ರಹಸ್ಯವಾಗಿಟ್ಟುದು, — ಮರೆಮಾಚಿದುದು : ತನ್ನ ಭಾವೋದ್ವೇಗವನ್ನು ಸಂಗೂಢಗೊಳಿಸಿಕೊಂಡು ತನಗೆ

ಗೊತ್ತಿದ್ದುದನ್ನೆಲ್ಲ ಅವಳು ಶಾಂತವಾಗಿ ವಿವರಿಸಿದಳು (ಪುನರು. ೫೮೧). ೨. ಸಂಗ್ರಹಿತವಾದುದು ; ಸಂಕುಚಿತಗೊಂಡುದು. ೩. ಸೇರಿಸಿದುದು ; ಕೂಡಿಸಿದುದು : ''ಸಂಗೂಢಃ, ಸಂಕಲಿತಃ— ೨ ಹುದುಗಲ್ಪಟ್ಟದ್ದು, ಸೇರಿಸಲ್ಪಟ್ಟದ್ದು'' (ಸಿದ್ಧಾಂತ. ೩೪೮). ೪. ಕ್ರಮಗೊಳಿಸಿದುದು ; ವ್ಯವಸ್ಥಿತವಾದುದು. [ಸಂ.]

**ಸಂಗೃಹೀತ** (ನಾ). ಸಂಕಲನ ; ಸಂಗ್ರಹ : ಅನುಭವದ ಕಲಿಕೆಗಳೆಲ್ಲಾ ನೆನಪಾಗಿ ಬಹುಶಃ ಮೆದುಳಿನ ಸೆರಿಬ್ರಂ ಭಾಗದಲ್ಲಿ ಸಂಗೃಹೀತವಾಗಿರಬೇಕು (ಮನೋಸಂ. ೧೮೦). [ಸಂ.]

**ಸಂಗೈಡು, ಸಂಗಡಿ$_1$, ಸಂಗುಡಿ$_1$** (ನಾ). ದ್ರವಪದಾರ್ಥಗಳನ್ನು ಅಳೆಯುವ ಒಂದು ಮಾನ, — ಅಳತೆಯ ಪಾತ್ರೆ : ತುಪ್ಪದ ಸಂಗೈಡಿಗೆ ವಿ ೨ ಎಣ್ಣೆಯ ಸಂಗೈಡಿಗೆ ವಿ ೧ (ಕಾಇ. ೧೦೪-೮-೩೭ ; 1076). **ಸಂಗಡಿ$_1$** : ತುಪ್ಪಮೆಣ್ಣೆಯಿವು ಕೊಡಕ್ಕೆ ಸೊಲ್ಲಗೆ ಸಿದ್ಧಿಗೆಗರವಾನಂ ಸಂಗಡಿಗೊರ್ಮಾನಂ . . . ಅಕ್ಕುಂ (ಎಇ. XIX, ೩೩-೨೭ ; 1135). **ಸಂಗುಡಿ$_1$** : ಅಂಗಡಿಯ ಗಾಣಿಗರ . . . ತೆಂಗು ಸಾಸುವೆಯಿಪ್ಪ ಗೇರು ವಿಳಂಗವಂಕಲೆ ಮುಖ್ಯತೈಲದ ಸಂಗುಡಿಯ [ಪಾಠಾಂ. ಸಂಗಡಿವ] ಸಂವರಣೆ ಸವೆದವು ಕಪಿಯ ಬಾಲದಲಿ (ತೊರರಾ. ೫-೮-೧೧). [<— ತೆಲು. ಸಂಗಡ = ಒಂದು ಬಗೆಯ ಪಾತ್ರೆ]

**ಸಂಗೊಳಿಸು** (ಕ್ರಿ). ೧. ಕೂಡಿಸು ; ಸೇರಿಸು : ಒಂದನೆಣಿಸಿ ಎಣಿಕೆ ತುಂಬಿದ ಮತ್ತೆ ಮತ್ತೊಂದಕ್ಕೆ ಸಂಗಯಿಲ್ಲದ ಲೆಕ್ಕ ಇದಱಿಂದದ ತೞ ಲಿಂಗ ಇದ ಸಂಗೊಳಿಸಾ ಭಂಗಿತನಾಗಲಾಜ (ಮೋಳಮಾ. ೪೭-೧೯೨) ; ಲಿಂಗತ್ರಯ ವಚನತ್ರಯ ಕಂಗೊಳಿಸುವ ಕಾಲದೇಶ ಪುರುಷತ್ರಯಮಂ ಸಂಗೊಳಿಸದೆಯೊಂದನೆ ಹಿಂಗದೆ ಪಿಡಿದೊರೆವುದಬಲೆ ಪಲ್ಲವಿಪದದೊಳ್ (ಕವಿಜಿ. ೩-೩೩) ; ಅಂಗವನು ಲಿಂಗವನು ಸಂಗೊಳಿಸಲೆಂತಕ್ಕು (ಸರ್ವಜ್ಞ. ೧೭೫). ೨. ಒಟ್ಟುಗೂಡು ; ಗುಂಪಾಗು : ರುದ್ರಕನ್ಯೆಯರ ಮಾರ್ಪೊಳಪಾ ಮುಗಿಲಲ್ಲಿ ನಾಡೆಯುಜ್ವಳಿಸಿ ವಿರಾಜಿಸಿತ್ತು ನೆಗಟ್ದಿಂಗಡಲೊಳ್ದರೆಯೊಳ್ಸಮಂತು ಸಂಗೊಳಿಸಿ ವಿರಾಜಿಸಿರ್ಪ ಜಲದೇವಿಯರಾಕೃತಿಯಂತೆ ಸಂತತಂ (ವೀರವಿ. ೨-೪೦). ೩. ಒಟ್ಟುಗೂಡಿಸು ; ಕಲೆಹಾಕು : ಅಂಗನೆಯರನು ಪಡಿಯಱತಿಯರು ಸಂಗೊಳಿಸಿ ಜಡಿಕೆಯಿದು ನಿಲಿಸಿದರು (ಸಾಳ್ವಭಾ. ೩೨-೨೭) ; ಮಾಂಗಲ್ಯಕಾರ್ಯಕೆ ಸಕಲವಸ್ತುಗಳ ಸಂಗೊಳಿಸಿಯೆ ಮುದದಿಂದ (ಜನರಾ. ೮-೧೧೯). ೪. ಉಂಟಾಗು: ನಂದಯಶಯಿವ ನಾರೆನುತ ಕಾಯ್ದು ಪಿಂಗದೊದೆದೊಡೆ ಆಕೆಯೋಪನು ಗಂಗಭೂಪತಿ ಕಂಡು ವಿಸ್ಮಯ ಸಂಗೊಳಿಸಿ (ಸಾಳ್ವಭಾ. ೨೦-೭೩). ೫. ಉಂಟುಮಾಡು ; ಒದಗಿಸು : ಕಂಗಳಿಗೆ ಪುತ್ರಿಕೆಯು ನಿರ್ಧನಿಕಂಗೆ ನಿಧಿ ಮೂಕಂಗೆ ಬಾಯ್ದಱ ಹಿಂಗದೊದಗಿದ ತೆಱದಿ ಹಿಗ್ಗಿಯು ನಲಿದು ನಗೆಗೂಡಿ ಸಂಗೊಳಿಸಲಿಲ್ಲವೆ ಸುಖಂಗಳ (ನಾಗಷ. ೫-೯೧). ೬. ಗಳಿಸು ; ಸಂಪಾದಿಸು : ನಿನಗೊಂದು ತಿಂಗಳಾಯುವದಱಿಂದ ಪಿಂಗಿಸಿ ಸಕಲ ಪರಿಗ್ರಹವನು ಬೇಗ ಸಂಗೊಳಿಸಧಿಕಪುಣ್ಯವನು (ನೇಮಿಸಂ. ೩-೭೯). ೭. ಹೆಚ್ಚುವಂತೆ ಮಾಡು ; ಹೆಚ್ಚಿಸು : ಪಸರಿಸಿ ತನ್ನ ಕೀರ್ತಿ ದೆಸೆಯಂತುವರಂ ನಿಮಿರ್ದೊಪ್ಪೆ . . . ಸಲೆ ರಂಜಿಸೆ ನೀಳವಿಕ್ರಮುಪ್ರಸರಮರಾತಿಭೂಪದನEರದತಿ ಸಂಗೊಳಿಸುತ್ತಿರೆ ಭಾಗಮೇಟ್ಗೆವತ್ತೊಸಗೆಯನರ್ತಿಗೆಯ ಗುಣಮಂ ಮೆಱೆದಂ ಗುಣರತ್ನಸಾಗರಂ (ವರ್ಧಮಾ. ೬-೭೩). ೮. ನುಡಿ ; ಉಚ್ಚರಿಸು : ಕರ್ಣದೊಳಗೆ ಶಿವಮಂತ್ರಮಂ ಸಂಗೊಳಿಸುತನ್ನ ಮಸ್ತಕದ ಕಲೆಯಂ ಕರದ ಲಿಂಗದೊಳ್ಕಾಣಿಸಿ ಚಿದಂಗನೆನಿಸಿದ ಚೆನ್ನವೀರೇಶನಡಿಗೆಱಗುವೆಂ (ಚೀರಮ. ೧-೧೦). ೯. ಇರಿಸು ; ನೆಲೆಗೊಳಿಸು : ರಾವಣನು ಕುಟಿಲಾಂಗದಿಂ ಸೀತಾಂಗನೆಯ ಕಾಯ್ದು ಲಂಕೆಯೊಳು ಸಂಗೊಳಿಸಲಾ ವಾರ್ತೆಗೇಳುತ ಮಂಗರಾಜನ ಕಳುಹೆ (ದೇವಪು. ೫-೪೩).

[< ಸಂಗಡ$_1$ + ಕೊಳ್$_1$ + – ಇಸು$_3$]

**ಸಂಗೋಪನ** (ನಾ). ಪಾಲನೆ ; ಸಂರಕ್ಷಣೆ : ಪರಮಾತ್ಮನೇ ಜೀವರಿಗೆ ವಿವಿಧೈಶ್ವರ್ಯಗಳನ್ನು ಒದಗಿಸಿ ಕೊಟ್ಟು ಅವರ ಸಂಗೋಪನ ಮಾಡುವನು (ಭಾಮೃತ. ೪೦೫). [ಸಂ.]

**ಸಂಗೋಪನೆ** (ನಾ). = ಸಂಗೋಪನ : 'ಪಶುಸಂಗೋಪನೆ' ಪರಾ.

[ಸಂ. ಸಂಗೋಪನ]

**ಸಂಗೋಷ್ಠಿ** (ನಾ). ೧. ಸಂಘ ; ಸಭೆ ; ಸಮಿತಿ. ೨. ಸಹವಾಸ ; ಜೊತೆ : ಯುವತಿ ನಿನ್ನಾರಾಧ್ಯಸಂತತಿಯವರು ತಪವನದೆಲ್ಲಿ ಮಾಡುವರವನಿಯೊಳು ನೀನಾರ ಸಂಗೋಷ್ಠಿಯೊಳಗಲದಿಪ್ಪೆ (ಬಸವು. ೧೨-೨೪). [ಸಂ.]

**ಸಂಗ್ರಥಿತ** (ಗು). ಬಿಗಿದು ಕಟ್ಟಿದ : ಪೀನಬದ್ಧೋದರಂ ಸಂಗ್ರಥಿತೋದ್ಯಚ್ಚಾಮರಪ್ರಸ್ಫುರಿತಚಳಿತಕರ್ಣಂ . . . ಘನನಿನದಮದೇಂ ಬಂದುದೋ ದಂತಿಜಾಳಂ (ರಾಜಶೇ. ೧೩-೭೭). [ಸಂ.]

**ಸಂಗ್ರಹ** (ನಾ). ೧. ಹಿಡಿಯುವಿಕೆ ; ವಶಪಡಿಸಿಕೊಳ್ಳುವಿಕೆ. ೨. ಹಿಡಿತ ; ವಶ. ೩. ಹಿಡಿ ; ಮುಷ್ಟಿ. ೪. ಅಂಗೀಕಾರ ; ಸ್ವೀಕಾರ. ೫. ಪಾಲನೆ ; ರಕ್ಷಣೆ. ೬. ಒಟ್ಟುಗೂಡಿಸುವುದು ; ಕಲೆಹಾಕುವುದು : ಅವರು ನಿರಾಶ್ರಿತರ ನಿಧಿಗಾಗಿ ಹಣ ಸಂಗ್ರಹಮಾಡುತ್ತಿದ್ದಾರೆ (ರೂಢಿ). ೭. ಕಲೆಹಾಕಿದುದು ; ಸಂಗ್ರಹಿಸಿದುದು ; ಸಂಕಲನ : ಧನ ಮಮಕಾರ ಸಂಗ್ರಹ ಎಂಬ ಕಾರ್ಮಿಕತ್ರಯ ನೀನಲ್ಲ (ಸಿದ್ಧೇವ. ೪೭-೧೩೩) ; ''ಗೀತಾಂಜಲಿ''ಯು ಭಕ್ತಿಗೀತಗಳ ಸಂಗ್ರಹ (ಧರ್ಮಸಾ. ೭೯). ೮. ರಾಶಿ; ಮೊತ್ತ. ೯. ಕೂಟ ; ಗುಂಪು. ೧೦. (ಜನರನ್ನು ಒಟ್ಟುಗೂಡಿಸುವುದರಿಂದಾಗುವ) ಒಳಿತು; ಮಂಗಳ; ಕಲ್ಯಾಣ : ಕರ್ಮದಿಂದ ವ್ಯಕ್ತಿಯ ಧಾರಣವಾಗುತ್ತದೆ. ಸಮಾಜದ ಸಂಗ್ರಹವಾಗುತ್ತದೆ (ಪ್ರಬಂಧ. ೧೧೮). 'ಲೋಕಸಂಗ್ರಹ' ಪರಾ. ೧೧. (ಕೆಲವೇ ಮಾತುಗಳಲ್ಲಿ) ಅಡಕಗೊಳಿಸುವುದು ; ಸಂಕ್ಷೇಪಿಸುವುದು ; ಮೊಟಕುಗೊಳಿಸುವುದು : ''ಸಮಾಸಃ, ಸಮಾಹಾರಃ, ಸಂಕ್ಷೇಪಃ, ಸಂಗ್ರಹಃ — ಈ ೪ ಕಿಱಿದು ಮಾಡುಹ'' (ಹಲಾಯು. ೧೨೭-೮೧). ೧೨. ಸಂಕ್ಷಿಪ್ತವಾದುದು; ಅಡಕಗೊಂಡುದು : ಮುಂದಿನ ಪುಟಗಳಲ್ಲಿ ಈ ವಿವರಣೆ ಸಂಗ್ರಹವಾಗಿ ಬಂದಿದೆ (ದ್ರಾವಿ. ೧೦). ೧೩. ಪಟ್ಟಿ; ಯಾದಿ ; ಟಿಪ್ಪಣಿ. ೧೪. ಉಗ್ರಾಣ; ಕೋಠಿ : ಸಂಗ್ರಹದ ಮನೆಯಲ್ಲಿ ಭೃಂಗೀಶ್ವರನೆದ್ದು ಲಿಂಗಲೀಲೆಯಾಡುವದ ಕಂಡೆನಯ್ಯ . . . ಸಂಗ್ರಹದ ಮನೆಯಳಿದು ಭೃಂಗೀಶ ಸಿಕ್ಕದೆ ಭಂಗಿತರಾದರಲ್ಲಾ (ಸಿದ್ಧೇವ. ೧೪೧-೪೨೦). ೧೫. ಅಂಡಕೋಶ; ವೃಷಣ : ''ಸಂಗ್ರಹಂ ಮುಷ್ಟಿ, ಮುಷ್ಕಂ ವೃಷಣಮಂದೆನಲು ಲಿಂಗದೆಡೆಯಂಡಮಕ್ಕು'' (ಮಂಗರಾ. ೯೭-೧೪). ೧೬. ಗಾರುಡಮತದ ಎಂಟು ಅಂಗಗಳಲ್ಲಿ ಒಂದು; ಸರ್ಪದಂಶನದ ನಂತರ ಜೀವವುಳಿದಿದೆಯೋ ಇಲ್ಲವೋ ಎಂಬುದನ್ನು ತಿಳಿಯುವಿಕೆ : ತನುವಿಂದಪ್ಪನ ಜೀವಂ ವಿನಷ್ಟಮೆನಲೆಯ್ದಿ ಪೋದುದೊ ಮೇಣ್ ಬಿಡದಾ ತನುವಿನೊಳಿರ್ದಪುದೋ ಎಂದು ನಿರೀಕ್ಷಿಪ ಭೇದಮಲ್ತೆ ಸಂಗ್ರಹಮಕ್ಕುಂ (ಖಮದ. ೩-೪). [ಸಂ.]

**ಸಂಗ್ರಹಣ** (ನಾ). ೧. ಹಿಡಿಯುವಿಕೆ ; ವಶಪಡಿಸಿಕೊಳ್ಳುವಿಕೆ. ೨. ಒಟ್ಟುಗೂಡಿಸುವುದು; ಕಲೆಹಾಕುವುದು. [ಸಂ.]

**ಸಂಗ್ರಹಣಿ** (ನಾ). ಅತಿಸಾರ : ಅಶೀತಿ ವಾಯು . . . ಶುಂಠಿ, ಹಿಪ್ಪಲಿ, ಮೆಣಸು . . . ಚೂರ್ಣಂಗೆಯ್ದು ವಸ್ತ್ರಗಾಳಿತಂ ಮಾಡಿ ಒಳ್ಳೆಣ್ಣೆಯಿಂ ಕಲಸಿ ಕೊಳ್ಳಲು ರಕ್ತಗ್ರಹಣಿ, ಶೂಲೆ, ಅತಿಸಾರ, ಸಂಗ್ರಹಣಿ ಮುಂತಾಗಿ ಗುಣಮಕ್ಕುಂ (ಸಕವ್ಯ. ೩೪೯); ಗಂಗಾಧರರಾಯನಿಗೆ ಸಂಗ್ರಹಣೀರೋಗವು ಪ್ರಾಪ್ತವಾಯಿತು (ಝಾರಾಣಿ. ೧೧೧).

[ಸಂ. ಸಂಗ್ರಹಣೀ]

**ಸಂಗ್ರಹಾಲಯ** (ನಾ). ವಸ್ತುಗಳನ್ನು ಸಂಗ್ರಹಿಸಿ ಇಡುವ ಸ್ಥಳ ; ಉಗ್ರಾಣ ; ಕೋಠಿ : ಕೆಲಸ ದೊಡ್ಡದಿರಲಿಲ್ಲ! ಅವರ ಅಂಗಡಿಯ ಸಂಗ್ರಹಾಲಯವನ್ನು ವ್ಯವಸ್ಥಿತವಾಗಿ ಇಡಿಸುವುದು (ಜಯಂತ. ೩೭೩). [ಸಂ.]

**ಸಂಗ್ರಹಿಣಿ$_1$, ಸಂಗ್ರಾಣಿ$_1$** (ನಾ). = ಸಂಗ್ರಹಣಿ : ಇಬ್ಬರು ಕ್ಷಯರೋಗಿಗಳೂ ಒಬ್ಬ ಸಂಗ್ರಹಿಣಿರೋಗದವನೂ ಇರುವರು (ಪ್ರಕಾಶ. ೧೫೧) . **ಸಂಗ್ರಾಣಿ$_1$** : ಅರಿದಳ, ಮಣಿಸಿಲ . . . ಕರಕಕಾಯಿ, ಉಸಿರಿಕಾಯಿ ಇದ ಸರಿಮಾಡಿ ಗರುಗದ ರಸದಲ್ಲಿ ಮೂರುದಿನ ಮರ್ದಿಸಿ ಗುಂಜಿಪ್ರಮಾಣ ಗುಳಿಗೆಯಂ ಮಜ್ಜಿಗೆಯಲ್ಲಿ (ಕೊಡಲು) ಸಂಗ್ರಾಣಿ ಮಾಣ್ಗುಂ (ವಿಷವಿ. ೩೪). [< ಸಂ. ಸಂಗ್ರಹಣೀ]

**ಸಂಗ್ರಹಿಣಿ$_2$** (ನಾ). [ಜೈನ] ಒಂದು ಬಗೆಯ ವಿದ್ಯೆ : ಪ್ರಜ್ಞಪ್ತಿ ಕಾಮರೂಪಿಣಿ . . . ಸಂಗ್ರಹಿ[ಪಾಠಾಂ. ಹ]ಣಿ ಭಂಜನಿ . . . ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಚಾವುಂಪು. ೧೯೬).

[ಸಂ. ಸಂಗ್ರಹಿಣೀ]

**ಸಂಗ್ರಹಿಸು** (ಕ್ರಿ). ೧. ಕಲೆಹಾಕು ; ಒಟ್ಟುಗೂಡಿಸು ; ಶೇಖರಿಸು : ಸರ್ವಜ್ಞ ಸಕಲೇಶ್ವರನ ತಂತ್ರವಿಂತಿದಂ ನಿರ್ವಹಿಸಲೇವೇಳ್ಕುಮೆಂದಖಿಲ ಶಿವವೈಭವಂಗಳಂ ಸಂಗ್ರಹಿಸುತೆ (ಪದ್ಮರಾ. ೨-೧೪) ; ಬಹುವಸ್ತುಗಳ ನಿನಗಿತ್ತುದಿಲ್ಲೆಲ್ಲಿ ಸಂಗ್ರಹಿಸಿ ತರಿಸಿದೆ ಹೇಳೆಂದ (ಭರಚ. ೧೦-೧೧) ; ಘಮಘಮಿಸುವ ಕಾಮಿನಿಯರ ಮುಖವಾಸನೆಯಂ ಸಂಗ್ರಹಿಸಿ (ಸೌಗಂಧಿ. ೪೭೭-೬). ೨. ಜೊತೆಗೆ ಸೇರಿಸಿಕೊಳ್ಳು : ಈ ನೆವದಲ್ಲಿ ಅವನನ್ನು ಸಂಗ್ರಹಿಸಿಕೊಂಡರೆ ನಮ್ಮ ಪಕ್ಷ ಬೆಳೆಯುತ್ತದೆ (ವಚಭಾ. ೬೫). ೩. ಒಳಗೊಳ್ಳುವಂತೆ ಮಾಡು ; ಅಡಕವಾಗಿಸು ; ಸಂಕ್ಷೇಪಗೊಳಿಸು : ಮಹಾತಿಶಯವಾಕ್ಯಂಗಳರ್ಥವ ಸಂಗ್ರಹಿಸಿ ಬಳಿಕ (ಗಗತಾ. ೧೭-೨೯) ; ಈ ಕೆಳಗಿನ ಮನೋಹರವಾದ ಕಂದಪದ್ಯಗಳಲ್ಲಿ ಅತ್ತಿಮಬ್ಬೆಯ ಮಹಿಮೆಯನ್ನು ಅವನು ಸಂಗ್ರಹಿಸಿದ್ದಾನೆ (ಸಮಾಲೋ. ೧೫೩).

[ಸಂಗ್ರಹ + – ಇಸು$_3$]

**ಸಂಗ್ರಾಣ** 'ಸಂಗ್ರಾಣಿ$_2$' ನೋ.

**ಸಂಗ್ರಾಣಿ$_1$** 'ಸಂಗ್ರಹಿಣಿ$_1$' ನೋ.

**ಸಂಗ್ರಾಣಿ$_2$**, ಸಂಗ್ರಾಣ, ಸಾಂಗ್ರಾಣಿ, ಸಾಂದ್ರಾಣಿ (ನಾ). ವ್ಯಾಯಾಮ ಮಾಡುವಾಗ ಬಳಸುವ ,ವೃತ್ತಾಕಾರವಾಗಿದ್ದು ಮಧ್ಯೆ ರಂಧ್ರವಿರುವ ಚಪ್ಪಟೆಯಾದ ಕಲ್ಲು : ಪಿರಿದುಂ ಮೋಹನಮಲ್ಲಂ ದಕ್ಷಿಣಕರದಿಂದೆತ್ತಿದ ಸಂಗ್ರಾಣಿಗೆ ಸಮನೆನೆ ಸಸಿ ಸೊಗಯಿಸಿತು (ಜಯಕಾ. ೧೪-೧೧) ; ಮಹಾದ್ರಿಯ ತ್ರಾಣಗಡೆ ನೆಗಹಿದನು ಸಲೆ ಸಂಗ್ರಾಣಿಯೆತ್ತುವ ತೆಱದಿ (ಉತ್ತರ. ೧೫-೩೦). **ಸಂಗ್ರಾಣ**: ಮೊಲೆಯ ಸಂ[ಪಾಠಾಂ. ಸು]ಗ್ರಾಣವ ತುಡುಕಿ ಕುಂಕುಮದ ಧೂಳಿನೊಳು ಸಲೆ ಹೊರಳಿ . . . ಮಾರುತನು ಸಾಧನೆಗೊಳುವವೋಲ್ಸುಳಿದನು ಲತಾಂಗಿಯರಂಗಗರುಡಿಯೊಳು (ಉತ್ತರಾ. ೨೭-೬೫) ; ನಾದಬಿಂದುಗಳೆಂಬ ಸಂಗ್ರಾಣಗಳನೆತ್ತುತಾದಿಚಿತ್‌ಕಳೆಯ ಲೋಡನೆ ತಿರುಹಿ (ಕೈಕವ. ೪-೧೫-೨). **ಸಾಂಗ್ರಾಣಿ** : (೬). **ಸಾಂದ್ರಾಣಿ** : 'ಸಾಂದ್ರಾಣಿಕಲ್ಲು' ಪರಾ. [?]

**ಸಂಗ್ರಾಣಿಸು** (ಕ್ರಿ). ಗಳಿಸು ; ಸಂಪಾದಿಸು : ಪ್ರಾಣದತಿಶಯವೇನು ಮಿಗೆ ಸಂಗ್ರಾಣಿಸುವುದಿನ್ನೊಮ್ಮೆ ನಾನೇ ಕಾಣೆ ಕಾಣುವೆನವರ ಜೀವದ ನೆಲಕಡೆಯನೆಲ್ಲ (ಕುಮ್ಮಾವಿ. ಓರಿ. ೪-೫೫) ; ಇದಱ ಪೂರ್ವಾಪರವನಿಂದೆನಗೆ ಮಾನನಿಧಿ ಪೇಳೆನಲು ಭಯರಸದಾನನದ ಕಂಬನಿಯನುಱೆ ಸಂಗ್ರಾಣಿಸುತ್ತೊಡಗಿದನು ನಿಜ ಪೂರ್ವಾನು ಸಂಗತಿಯ (ಕೃಷ್ಣಾಕಾ. ೬-೬೪). [ಸಂಗ್ರಾಣ$_1$ + – ಇಸು$_3$]

**ಸಂಗ್ರಾಮ** (ನಾ). ಕಾಳಗ ; ಯುದ್ಧ : ಕಣೆಯಂ ಶೌರ್ಯಾಭಿಮಾನಕ್ಕೆಡೞಿದ ರಿಪು ಸೈನ್ಯಕ್ಕೆ ಸಂಗ್ರಾಮದೊಳ್ ಬಲ್ಕಣೆಯಂ . . . ಬಂದು ಕಂಡಂ ಸುರೇಂದ್ರಂ (ಪಂಪಭಾ. ೭-೯೫) ; ಸಂಗ್ರಾಮದಲ್ಲಿ ವೀರನುಳಿಯಲದೇನು ಬಾತೆ (ಬಸವ. ೬೩೪) ; ಭವನೆ ಭಾಳಾಂಬಕನೆ ಬಲುಹಾಗಿವನು ಕಾದಿದನಿನಿತು ಪರಿಯಿಂತಾಯ್ತು ಸಂಗ್ರಾಮ (ಕೌಶಿರಾ. ೨೭-೫೩).

**ಸಂಗ್ರಾಮಗರುಡ** = ಶ್ರೇಷ್ಠನಾದ ವೀರ ; ಒಂದು ಬಿರುದು : ಮಹಾಮಂಡಳೇಶ್ವರನುದಾರಮಾಹೇಶ್ವರಂ ಚಲಕೆ ಬಲ್ಲಂಡಂ ಶೌರ್ಯಮಾರ್ತಂಡಂ . . . ಸಂಗ್ರಾಮಗರುಡಂ (ಸುಬಮಾ. ೨೫೪ ಪುಟ). **ಸಂಗ್ರಾಮ ಜತ್ತಲಟ್ಟ** = ಸಂಗ್ರಾಮಗರುಡ: ಸಂಗ್ರಾಮಜತ್ತಲಟ್ಟ ಸುಭಟನೃಪಲಲಾಟಪಟ್ಟ (ಮುಂಬರಾ. XI, ೨೪೭-೯ ; 1121). **ಸಂಗ್ರಾಮದೊರಯ್ಯ** (?) = ಸಂಗ್ರಾಮಗರುಡ : ಶ್ರೀ ಪೃಥುವೀವಲ್ಲಭ ಪಲ್ಲವ ರಾಮಪಾದಪಂಕಜಭ್ರಮರ ಪ್ರತ್ಯಕ್ಷಕಂಜಾಸನ ಸಂಗ್ರಾಮದೊರಯ್ಯಂ ಬೀರತ್ರಿಣೇತ್ರ (ಎಕ. X, ಮುಳಬಾ. ೫೯-೫ ; ಸು. 900 ?). **ಸಂಗ್ರಾಮಧೀರ** = ಸಂಗ್ರಾಮಗರುಡ: ಉಚ್ಚಂಗಿಗೊಂಡ ಏಕಾಂಗವೀರ ಸಂಗ್ರಾಮಧೀರ (ಎಕ. II (R), ೧೭೭-೩೭ ; 1123). **ಸಂಗ್ರಾಮಭೀಮ** = ಯುದ್ಧದಲ್ಲಿ ಭೀಮನಂತೆ ಹೋರಾಡುವ ಶೂರ ; ಒಂದು ಬಿರುದು : ಮಂಡಳಿಕ ಬೇಂಟೆಕಾರ ಚೋಳಕಟಕ ಸೂಱೆಕಾಱ ಸಂಗ್ರಾಮಭೀಮ ಕಲಿಕಾಲಕಾಮ (ಎಕ. II (R), ೪೪೪-೩೫ ; 1181). **ಸಂಗ್ರಾಮರಾಮ** = ಯುದ್ಧದಲ್ಲಿ ರಾಮನಷ್ಟು ಪರಾಕ್ರಮಶಾಲಿ ; ಒಂದು ಬಿರುದು : ಶ್ರೀಮದಮರೇಂದ್ರ ವಿಭವೋದ್ದಾಮಂ ಸಂಗ್ರಾಮರಾಮನೂರ್ಜಿತತೇಜಂ (ಸೌಇಇ. XX, ೧೮-೧೧ ; 980). **ಸಂಗ್ರಾಮವಿಜಯಧ್ವಜ** = ಯುದ್ಧದಲ್ಲಿ ಜಯವನ್ನು ತರುವವನು; ಒಂದು ಬಿರುದು : ಸಹಜಕೀರ್ತಿಧ್ವಜ ಸಂಗ್ರಾಮವಿಜಯಧ್ವಜ ಚೆಂಗಿರೆಯ ಮನೋಭಂಗ (ಎಕ. II (R), ೧೭೭-೨೮ ; 1123). [ಸಂ.]

**ಸಂಗ್ರಾಮಲಂಪಟ** (ನಾ). ೧. ಯುದ್ಧಾಸಕ್ತನಾದವನು ; ರಣಲೋಲುಪ : ಖಚರಕುಮಾರರ್ ದೋರ್ವಲದೃಪ್ತರ್ ಪುರಮಂ ನೂರ್ವರ್ ಸಂಗ್ರಾಮಲಂಪಟರ್ ಪೊಱಮಟ್ಟರ್ (ಪಂರಾಮಾ. ೧೦-೨೧೭). ೨. ಜಗಳಹುಟ್ಟಿಸಲು ಆತುರನಾದವನು,– ಆಸಕ್ತನಾದವನು ; ಕಲಹಲಂಪಟ : ಸಂಗ್ರಾಮಲಂಪಟನಪ್ಪ ನಾರದಮುನೀಂದ್ರಂ ನಾರಾಯಣ ನೀರಜಸಂಭವರ್ಗೆ ನಲಿನಲಿದು ಪೇಳುತ್ತಿರ್ಪಿನಂ (ಗಿರಿಕ. ೮-೪೦ ವ).

[ಸಂ.]

**ಸಂಗ್ರಾಮಸಾಧನ** (ನಾ). ಯುದ್ಧದ ಸಿದ್ಧತೆಗಾಗಿ ಸಂಗ್ರಹಿಸಿಕೊಳ್ಳುವ ಆಯುಧ, ಯಂತ್ರ ಮೊದಲಾದ ಸಾಮಗ್ರಿ,—ಸಲಕರಣೆ : ಬೇಱೆ ಬೇಱವನೀಶರಿಗೆ ಪರಿಹಾರವನು ಕಳುಹಿದರು ಕೃಷ್ಣನ ದೂಱು ಬರಲಳವಡಿಸಿದರು ಸಂಗ್ರಾಮಸಾಧನವ (ಕುಮ್ಮಾಉ. ೧೧-೧೧). [ಸಂ.]

**ಸಂಗ್ರಾಮಸೌರಂಭ** (ನಾ). ಯುದ್ಧೋತ್ಸಾಹ ; ರಣಸಂಭ್ರಮ : ಕಂಗಳಿಗೆ ಗೋಚರಿಸಿತೀ ಭಾರತಮಹಾಸಂಗ್ರಾಮಸೌರಂಭ (ಕುಮ್ಮಾಭೀ. ೧-೫೭).

[< ಸಂ. ಸಂಗ್ರಾಮಸಂರಂಭ]

**ಸಂಗ್ರಾಮಾಂಗಣ** (ನಾ). ಯುದ್ಧಭೂಮಿ ; ರಣರಂಗ ; ಸಮರಾಂಗಣ : ನಾಳೆ ಸಂಗ್ರಾಮಾಂಗಣ[ಪಾಠಾಂ.ಸಂಗ್ರಾಮರಂಗ]ದೊಳ್ ನಿಮ್ಮ ನಮ್ಮ ಪರಾಕ್ರಮವನಱಿಯಲಕ್ಕುಂ (ಚಾವುಂಪು. ೩೧೦). [< ಸಂ. ಸಂಗ್ರಾಮಾಂಗನ]

**ಸಂಗ್ರಾಮಾವನಿ** (ನಾ). = ಸಂಗ್ರಾಮಾಂಗಣ : ಈ ವಜ್ರಾವರ್ತಚಾಪಮಂ ಮಿಾಱುವನಿನ್ನಾವನೆನುತ್ತುಂ ಸಂಗ್ರಾಮಾವನಿಗನುಜನ ಕೆಲಕ್ಕೆ ರಾಮಂ ಬಂದಂ (ಪಂರಾಮಾ. ೯-೧೧೪). [ಸಂ.]

**ಸಂಗ್ರಾಹ** (ನಾ). ೧. ಹಿಡಿತ ; ವಶ. ೨. ಹಿಡಿ ; ಮುಷ್ಟಿ. ೩. ಗುರಾಣಿಯ ಹಿಡಿ. ೪. ಅಂಡಕೋಶ ; ವೃಷಣ : "ಮುಷ್ಕಂ, ಅಂಡಃ, ವೃಷಣಃ, ಕೋಶಃ, ಸಂಗ್ರಾಹಃ, ಮುಷ್ಟಿಃ — ಈ ೬ ಅಂಡಂ" (ಹಲಾಯು. ೮೭-೩೭೯). [ಸಂ.]

**ಸಂಗ್ರಾಹಕ** (ಗು). ೧. ಸಂಗ್ರಹ ಮಾಡುವ ; ಸಂಗ್ರಹಿಸುವ ; ಶೇಖರಿಸುವ : ನನ್ನ ಸಂಗ್ರಾಹಕಬುದ್ಧಿಯೂ ಆಶ್ಚರ್ಯಕರವಾದದ್ದು . . . ನಾನು ಇದ್ದಬಿದ್ದುದೆಲ್ಲವನ್ನೂ ಜತನದಿಂದ ಕೂಡಿಸಿಡುವವಳು (ಸ್ಮೃತಿಚಿ. ೩೧೯). (ನಾ). ೨. (ತೆರಿಗೆ, ಹಣ ಮುಂತಾದುವನ್ನು ) ವಸೂಲಿ ಮಾಡುವವನು ; ವಸೂಲಿಗಾರ ; ಸಂಗ್ರಹಕಾರ. ೩. ಯಂತ್ರಗಳಲ್ಲಿ ವಿದ್ಯುತ್ತನ್ನು ಸಂಗ್ರಹಮಾಡಲು ಬಳಸುವ ಒಂದು ಯಂತ್ರಸಲಕರಣೆ : ವಿದ್ಯುತ್ ಸಂಗ್ರಾಹಕದಿಂದ . . . ವಿದ್ಯುದ್ಬಲವನ್ನು ಇಳಿಸುತ್ತಾರೆ (ಕವಿಕೋ. I, ೬೫೫). [ಸಂ.]

**ಸಂಗ್ರಾಹ್ಯ** (ಗು). ೧. ಹಿಡಿಯಬಹುದಾದ. ೨. ಗ್ರಹಿಸಲು ಯೋಗ್ಯವಾದ : ಶಿಕ್ಷಕರಿಗೂ ಸಾಮಾನ್ಯ ಓದುಗರಿಗೂ ಇದೊಂದು ಸಂಗ್ರಾಹ್ಯಕೃತಿ (ಕಥಕ. ಮುನ್ನುಡಿ). (ನಾ). ೩. ಹಿಡಿಯಬಹುದಾದುದು : ತಮದೊಡ್ಡು ಮುಷ್ಟಿಸಂಗ್ರಾಹ್ಯಮಭೇದ್ಯಂ ಸೂಜಿಗಮಪ್ಪೊಡಂ ತಾನೆನೆಯುಂ (ಕಾವ್ಯಾವ. ೮೫೩). ೪. ಒಪ್ಪಬಹುದಾದುದು : ಅವರ ಅಭಿಪ್ರಾಯ ಸಂಗ್ರಾಹ್ಯವಾದುದು (ರೂಢಿ). [ಸಂ.]

**ಸಂಘು** (ನಾ). ೧. ಗುಂಪು ; ಸಮೂಹ : ಸೇವ್ಯಮಲ್ಲಲ್ಲಿ . . . ನಾರಂಗಸಂಘಂ ಕದಳಿಸಮುದಯಂ (ಪುಷ್ಪಪು. ೯-೧೫) ; ನುಡಿಗಲಿತ ಮಾತಂಗಸಂಘ[ಪಾಠಾಂ. ಗ]ಮೊ ಹೆಡೆ ಉಡುಗಿದಸಿತಾಹಿಗಳೊ ಎನಲೆಡೆವಿಡದೆ ಸಂದಣಿಸಿ ಬೇಡರು ಬಂದರಾಯೆಡೆಗೆ (ಬಸಪು. ೫೮-೪೮). ೨. ಒಕ್ಕೂಟ ; ಸಂಸ್ಥೆ ; ಸಮಿತಿ : ಮಧುರೆಯಲ್ಲಿ ಸಂಘವೆಂದು ಸಂಸ್ಥೆಯಿದ್ದು ವಿದ್ವಾಂಸರನ್ನೂ ಗ್ರಂಥಕರ್ತರನ್ನೂ ಪ್ರೋತ್ಸಾಹಿಸುತ್ತಿತ್ತು (ಭಾಇಪ್ರ. ೧೮೯) ; ಭಾರತವು ರಾಜ್ಯಗಳ ಒಂದು ಸಂಘವಾಗಿ ಇರತಕ್ಕುದು (ಭಾಧಾನ. ೨). ೩. ಸಂಗ ; ಸಹವಾಸ : ಇಂಗಡಲಿನ ಮೇಲೆ ಮಲಗಿದ ಕೃಷ್ಣನ ಸಂಘ[ಪಾಠಾಂ. ಗ]ಕೆ ಬಹ ಲಕ್ಷ್ಮಿಯಂತೆ . . . ಅಂಗನೆ ಸಾರ್ದಳು ಬಂದು (ಜೀವಂಸಾಂ. ೨-೮೪). ೪. ಪಾಂಡ್ಯ ಅರಸರಿಂದ ಪೋಷಿತವಾಗಿದ್ದ ಪ್ರಾಚೀನ ತಮಿಳು ವಿದ್ವತ್ಸಭೆ: 'ಸಂಘಸಾಹಿತ್ಯ' ಪರಾ. ೫. [ಜೈನ] ಜೈನಮುನಿಗಳ ಪರಿಷತ್ತು ; ℙ "ನಾಲ್ಕು ಪ್ರಕಾರದ ಮುನಿಗಳ ಸಮೂಹ ; ಮುನಿ, ಆರ್ಯಿಕೆ, ಶ್ರಾವಕ, ಶ್ರಾವಿಕೆ — ಈ ಸಮುದಾಯ. ಮೊದಲೆರಡು ಗೃಹತ್ಯಾಗಿ ವರ್ಗ, ಕೊನೆಯವು ಗೃಹಸ್ಥವರ್ಗ"

(ಜೈನಕೋ. ೨೫೫) : ಸ್ವಸ್ತಿ ಕೊಳಾತ್ತೂರ್ಸಂಘದಿ ವಿಶೋಕಭಟಾರರ ನಿಸಿಧಿಗೆ (ಎಕ. II (R), ೧೦೪-೧ ; 7ನೆಯ ಶತ) ; ಸಂಘಗಳಲ್ಲಿ ಮೂಲಸಂಘವೊಂದೇ ನಿಜವಾದ ಸಂಘವೆಂದು ದಿಗಂಬರರು ಭಾವಿಸಿದ್ದುದು (ಕಶಾಅ. ೮೭). ೬. [ಬೌದ್ಧ] ಬುದ್ಧ, ಧರ್ಮ ಮತ್ತು ಸಂಘಗಳೆಂಬ ರತ್ನತ್ರಯಗಳಲ್ಲಿ ಒಂದು ; ಬೌದ್ಧಭಿಕ್ಷುಗಳ ಪರಿಷತ್ತು : ಆತನು ಕಾಣಿಸಿದ ಧರ್ಮವನ್ನು ಕಾಣಲು ಹೊರಟು, ಅದನ್ನು ಕಂಡ ಆರ್ಯರ ಸಮುದಾಯವೇ ಸಂಘ. ಆದ್ದರಿಂದ ಬುದ್ಧನಿಗೂ ಆತನ ಸಂಘಕ್ಕೂ ಅನನ್ಯವಾದ ಆಶ್ರಯವೆಂದರೆ 'ಧರ್ಮ' ವೇ (ಭಾರದ. ೧೯೧) ; ಬುದ್ಧ, ಧರ್ಮ, ಸಂಘ ಎಂಬ ಮೂರು ಶರಣಗಳಲ್ಲಿ ಶಂಕೆಯಿಲ್ಲದವನಾದನು (ಹಕ್ಕುಮ. ೪೩). [ಸಂ.]

**ಸಂಘುಟ** (ನಾ). ೧. ತಾಗುವಿಕೆ ; ಘರ್ಷಣೆ. ೨. ಯುದ್ಧ ; ಕಾಳಗ : ದಿಟ ವಿಚಾರಿಸಲಿಷ್ಟ ಲಿಂಗದ ಘಟಣೆಯೆಂಬುದು . . . ಮಾಯೆಯ ನಟಣೆಯನ್ನು ಸೈವಾರಿಸುವ ಸಂಘುಟಕೆ ಸಾಧನವೆನಿಸುವುದು ಬಸವಣ್ಣ ಕೇಳೆಂದ (ಪ್ರಭುಲೀ. ೧೭-೩೨). ೩. ಸೇರಿದುದು; ಕೂಡಿರುವುದು : ಆನಂದದಿಂ ನಲಿದೆಯ್ದಿ ಶರಣಪದಾಂಬುಜಂಗಳಿಗೆ ಸಂಧಿಸಲು ಭಾಳಸ್ಥಳಂಗಳ ವುಂದಭಕ್ತಿಯೊಳವರ ಸುಪದರವಿಂದಸಂಘುಟ ರೇಣುಪಟಲಾಘಟಿತ ಶಿರರಾಗಿ (ಬಸಪು. ೫೭-೭). ೪. ಬೀಸುವ ಕಲ್ಲು : ''ಬೀಸುವ ಕಲ್ಲು ಪೆಸರು ಸಂಘುಟ[ಪಾಠಾಂ. ಟಿ]ಯೆನಿಕ್ಕು'' (ಮಂಗರಾ. ೬೧-೧೯). [ಸಂ.]

**ಸಂಘುಟಕ** (ನಾ). ೧. ಒಟ್ಟುಗೂಡಿಸುವವನು ; ಸಂಘಟನೆ ಮಾಡುವವನು : ಈ ಕವಿಯ ದೃಷ್ಟಿಯಲ್ಲಿ, ಸೃಷ್ಟಿಯಲ್ಲಿ ಶ್ರೀಕೃಷ್ಣ . . . ಮಹಾರಾಜಕಾರಿಣಿ, ಸಂಘುಟಕನಾದ ನಾಯಕ (ಭಾರದ. ೪೭೭). ೨. [ಕಾಮಶಾ]ಹನ್ನೆರಡುವಿಧವಾದ ಚುಂಬನಗಳಲ್ಲಿ ಒಂದು : ನಿಮಿತ್ತಕ ಸಂಘುಟಕ ಸ್ಫುರಿತಕ ಭ್ರಾಂತಕ ತಿರ್ಯಕ್ಕು ಅತಿತೃಷ್ಣಕ ಉತ್ತರ ಸಂಘುಟ್ಟಕ ಜಿಹ್ವಾಮೇಳನ ಜಿಹ್ವಿಕೆ ಅಧಿಕ ಜಿಹ್ವಾಯೋಗಮೆಂಬ ದ್ವಾದಶಚುಂಬನಸಂಭ್ರಮಿಗಳಿಂ (ವಿವೇಕ. ೧೮೩). 'ಸಂಘುಟಿತ' ಪರಾ. [ಸಂ.]

**ಸಂಘುಟನ** (ನಾ). ೧. ಸೇರಿಸುವುದು ; ಕೂಡಿಸುವುದು : ರಾಜ್ಯವು ಗ್ರಾಮಪಂಚಾಯತಿಗಳ ಸಂಘುಟನವನ್ನು ನಡೆಯಿಸಲು ಕ್ರಮ ಜರುಗಿಸತಕ್ಕುದು (ಭಾಧಾನ. ೨೩). ೨. ವಶ ; ಹಿಡಿತ ; ಹತೋಟಿ : ಮುನಿಪನಿಕ್ಕಿದ ತಪದ ಪದ್ಮಾಸನದ ಪೃಥ್ವಿಯ ಸಂಘುಟನ ಸಂಜನಿಸದಿರೆ (ತೊರರಾ. ೫-೧-೩೩). [ಸಂ.]

**ಸಂಘುಟನೆ** (ನಾ). ೧. ಹೊಂದಿಸುವಿಕೆ ; ಜೋಡಿಸುವಿಕೆ : ಸಂಧಿಸದು = ಸಂಘುಟನೆಯಾಗದು, ಬಾರದೆಂಬುದರ್ಥಂ (ಶಮದ. ೬೬ ಟೀಕೆ) ; ಅಂದಿನಿಂದ ರಘುನಾಥಮಾಸ್ತರರು ಮುಂಬರುವ ಕಾಮನ ಹಬ್ಬದ ಸಂಘುಟನೆಯ ಬಗ್ಗೆ ಹೊಳಹು ಹಾಕತೊಡಗಿದರು (ರಂಗರೋ. ೧೨೦). ೨. ಹೊಂದಿಕೆ ; ಜೋಡಣೆ ; ಸಂಯೋಗ : ವ್ಯಾಸಮಹರ್ಷಿ ಭರತಖಂಡದ ಐಕ್ಯ ಮತ್ತು ಸಂಘುಟನೆಗೆ ಪ್ರೇರಕನಾದನು (ಋಕ್ಸಾರ. ೧೦೨ ಪೀಠಿಕೆ ) ; ಅಲಕ್ಷ್ಯಕ್ರಮವೆನಿಸುವ ಧ್ವನಿಯು ಅಕ್ಷರ, ಪದವೇ ಮೊದಲಾದುವು, ವಾಕ್ಯಸಂಘುಟನೆ, ಪ್ರಬಂಧ ಈ ಎಲ್ಲವುಗಳಲ್ಲೂ ಪ್ರಕಾಶಿತವಾಗುತ್ತದೆ (ಧ್ವನ್ಯಾಲೋ. ೧೨೫) ; ಅದರ ಸಂಘುಟನೆ ಬಹಳ ಕಷ್ಟ (ಕಾವ್ಯಕು. ೮). ೩. ತಾಗುವಿಕೆ ; ಘರ್ಷಣೆ ; ಹೋರಾಟ : ನಿಟಿಲಲೋಚನ ನೋಡುವರೆ ದುರ್ಘಟವೆನಿಪ ಮೋಹರದ ಬಲು ಸಂಘುಟನೆಯನು ತೋಱುವೆನು (ಕುವ್ಯಾದ್ರೋ. ೮-೬೫). [ಸಂ. ಸಂಘುಟನಾ]

**ಸಂಘುಟಿತ** (ಗು). ೧. ಒಟ್ಟಾದ ; ಒಟ್ಟುಗೂಡಿದ : ಸಂಘುಟಿತಜನಸಮುದಾಯಗಳು ಪರಸ್ಪರವಾಗಿ ವ್ಯವಹರಿಸುವುದರಲ್ಲಿ ಅಂತರ್ರಾಷ್ಟ್ರೀಯವಿಧಿಗಳಿಗೂ ಕರಾರುಬದ್ಧವಾದ ಷರತ್ತುಗಳಿಗೂ ಗೌರವ ಕೊಟ್ಟು ವರ್ತಿಸುವಂತೆ ಮಾಡುವುದಕ್ಕೆ . . . ಪ್ರಯತ್ನಿಸತಕ್ಕುದು (ಭಾಧಾನ. ೨೫). (ನಾ). ೨. [ಕಾಮಶಾ] ಹನ್ನೆರಡುವಿಧವಾದ ಚುಂಬನಗಳಲ್ಲಿ ಒಂದು : ಪುರುಷಂ ಗಡ್ಡ ಮೀಸೆಯಿಲ್ಲದವನಾದೊಡಂ ಅವಳ ಬಾಯೊಳ್ ಎರಡುತುಟಿಯನಿಕ್ಕುವುದು ಇದು ಸಂಘುಟಿತವೆಂಬ ಚುಂಬನ (ಕಾಮಶಾ. ... 'ಸಂಘುಟಕ' ಪರಾ. [ಸಂ.]

**ಸಂಘುಟಿಸು**(ಕ್ರಿ). ೧. ಕೂಡು ; ಸೇರು ; ಬೆರೆ : ಪಟುಗತಿಯ ಗರುವಾಹಿಯಲಿ ಸಂಘುಟಿಸಿ ಹಯವನು ಸುಳಿಸಿದನು (ಕುವ್ಯಾದ್ರೋ. ಓರೀ. ಪಠಿ. ೨೯೧); ಆಳಿಯರ್ ಬೀಸುವ ಚಮರಾಲವಟ್ಟತಣ್ಗಾಳಿಯಿಂದವಳೊಡಲ್ಗಿಚ್ಚು ತಾಳಿಯ ಹಾಕಿ ಪೆರ್ಮೊಱಗೊಂಡ ತಱಿದಿ ಭಡಾಳಿಸುಷ್ಣ ಸಂಘುಟಿಸಿ (ಮೋಹತ. ೨೭-೬೨). ೨. ಗುಂಪಾಗು ; ಗುಂಪುಗೂಡು : ನಿಖಿಲನಕ್ಷತ್ರಸಂದೋಹ ಸಂಘುಟಿಸಿತು (ಮೋಹತ. ೧೫-೫). ೩. ಕೂಡುವಂತೆ ಮಾಡು; ಕೂಡಿಸು : ಅವನನೊಡಬಡಿಸಿ ಸಂಘ[ಪಾಠಾಂ. ಗ]ಟಿಸು ನನ್ನೊಡನೆ ತಂದವನ (ಕುರಾಸಾಂ. ೨೪-೯). ೪. ಹೊಂದಿಸು ; ಜೋಡಿಸು : ಶಾತಾಸ್ತ್ರಮಂ ಸಂಘುಟಿಸುತ್ತುಂ ಮಾಣದೆಚ್ಚಂ ಕಪಟ ಶಬರನಂ ಕೊಳ್ಳೆನುತ್ತಣ್ಮಿ ಪಾರ್ಥಂ (ಶಬಶಂ. ೪--೩೯). ೫. ಒಂದಾಗಿಸು ; ಒಟ್ಟುಗೂಡಿಸು : ಅವರು ಚಂಪಾರಣ್ಯಜಿಲ್ಲೆಯ ಒಕ್ಕಲುಜನವನ್ನು ಸಂಘುಟಿಸಿ ಆಂಗ್ಲೇಯ ಭಂಡವಾಳಗಾರರ ವಿರುದ್ಧ ಸತ್ಯಾಗ್ರಹವನ್ನು ಹೂಡಬೇಕಾಯಿತು (ರಾಜವ. ೮). ೬. ಸಾಧ್ಯವಾಗು ; ಶಕ್ಯವಾಗು : ''ಸಂಘುಟಿಸಿತೆನಲ್ ಸಾಧ್ಯನಾಮಂ'' (ಭಾರನಿ. ೩೦). ೭. ಸಾಧ್ಯವಾಗುವಂತೆ ಮಾಡು ; ಸಾಧ್ಯವಾಗಿಸು : ಇದನ್ನು ಯೋಗ್ಯರೀತಿಯಿಂದ ನಾನು ಈ ಸಲ ಸಂಘುಟಿಸುತ್ತೇನೆ (ರಂಗರೋ. ೧೨೦). ೮. ಉಂಟಾಗು ; ಒದಗು ; ಸಂಭವಿಸು : ಇಂಗಡಲಿಂಗಮರನದೀಸಂಗಂ ಸಂಘುಟಿಪ ತೆಱದೆ ಗಂಧರ್ವಕುಲೋತ್ತುಂಗನೆನಲ್ ನೆಗೞ್ದ ಹಂಸಂಗಾದುದು ಗೌರಿಯೊಳ್ ವಿವಾಹೋತ್ಸವಂ (ಕಾದಂಪೂ. ೭೧೫) ; ನಿನ್ನನಾಂ ಕೊಲ್ಲದೊಡೆ ವಿಪುಲಪಾತಕರಾಶಿ ತನಗೆ ಸಂಘುಟಿಸದಿರ್ಪುದೆ (ಜೈಮಿಭಾ. ೧೪-೧೩). ೯. ಉಂಟುಮಾಡು ; ಪ್ರಾಪ್ತವಾಗಿಸು ; ಒದಗಿಸು : ಸುಟಿವೆತ್ತು ಕಿಡಿಗಣ್ಣನೊಳು ಕಾದಿದುಷ್ಣ ಸಂಘುಟಿಸಿದ ತನುತಾಪ . . . ತನ್ನ ಚೆಂದುಟಿಯ ಪೀರ್ದಡೆ ಶೈತ್ಯವಹುದು (ಮೋಹತ. ೯-೧೫) ; ಕಲಿವಿನಲ್ಲಿ ಜಯಾಭಿಲಾಷೆ . . ಪ್ರಶಂಸೆಯ ಆಕಾಂಕ್ಷೆ ಇವು . . . ಉದ್ದೇಶವನ್ನು ಸಂಘುಟಿಸುತ್ತವೆ (ಶಿಕ್ಷದ. ೩೦೧). [ಸಂಘುಟನ + – ಇಸು₃]

**ಸಂಘುಟ್ಟ** (ನಾ). ೧. ಸೇರಿಸುವುದು ; ಕೂಡಿಸುವುದು. ೨. ತಾಗುವಿಕೆ ; ಢಿಕ್ಕಿ. ೩. ಪ್ರತಿಭಟನೆ ; ಹೋರಾಟ. ೪. ಉಜ್ಜುವಿಕೆ ; ಘರ್ಷಣೆ. [ಸಂ.]

**ಸಂಘುಟ್ಟನ** (ನಾ). ೧. ಹತ್ತಿರದ ಸಂಪರ್ಕ. ೨. ಸೇರುವ ಸ್ಥಳ ; ಕೂಟ. ೩. ಪರಸ್ಪರ ತಾಗುವಿಕೆ ; ಢಿಕ್ಕಿ. ೪. ಭೇಟಿಯಾಗುವುದು ; ಸೇರುವುದು . ೫. ಒದಗುವುದು; ಪ್ರಾಪ್ತವಾಗುವುದು. ೬.ಘರ್ಷಣೆ; ತಿಕ್ಕಾಟ : ಎಱಿಪ ನೃಪಾಳರ ಮೌಳಿಮಾಳೆ ಕುಟ್ಟಿಮಸಂಘುಟ್ಟನದಿನತಿಮುಖರಮಾಗೆ (ಪುಷ್ಪಪು. ೪-೭೧). [ಸಂ.]

**ಸಂಘುಟ್ಟಿ** (ನಾ). ಒಡನಾಡಿ; ಜೊತೆಗಾರ. [ಸಂ. ಸಂಘುಟ್ಟಿನ್]

**ಸಂಘುಟ್ಟಿತ** (ಗು). ೧. ಗುಂಪುಗೂಡಿದ; ಕಲೆತ; ಒಟ್ಟುಗೂಡಿದ. ೨. ಪರಸ್ಪರ ತಾಗಿದ; ಸ್ಪರ್ಶಗೊಂಡ; ಮುಟ್ಟಿದ. (ನಾ). ೩. [ನಾಟ್ಯ] ದೇಶೀಯ ಭೌಮಚಾರಿಗಳಲ್ಲಿ ಒಂದು; IP ''ಸ್ಥಾನಕದಲ್ಲಿ ನಿಂತುಕೊಂಡು ಒಂದು ಚರಣದಿಂದ ನೆಲವನ್ನು ಕುಟ್ಟುವುದು'' (ಲಾಸ್ಯರಂ. ೩.೨೩ ಗದ್ಯಾನುವಾದ): ರಥಚಕ್ರ, ಪರಾವೃತ್ತತಲ, ನೂಪುರ . . . ಸಂಘುಟ್ಟಿತ, ಖುತ್ತ . . . ಸಮಸ್ಖಲಿತ ಈ ಮೂವತ್ತೈದು ದೇಶೀಯಸಂಬಂಧದ ಭೌಮಚಾರಿಗಳು (ಲಾಸ್ಯರಂ. ೬-೧೭ವ). [ಸಂ.]

**ಸಂಘುಟ್ಟಿಸು** (ಕ್ರಿ). ತಾಗು; ಘರ್ಷಿಸು : ಪೆರ್ಮರಕೆ ಸಿಡಿಲು ಬಡಿದಂತೆ ಆ ಪಿತೃಮರಣವಾರ್ತೆಗಗ್ರಜನ ವನವಾಸದಾ ಸುದ್ದಿ ಸಂಘುಟ್ಟಿಸೆ ನೆಲಕ್ಕುರುಳ್ವುದು . . . ಭರತನ ಕರುಣಮಯವಿಗ್ರಹಂ (ಶ್ರೀರಾಮಾ. ೧೦೮-೨೩೦); ಅಂತಹ ಪರಸ್ಪರ ವಿನಾಶ ಅವೆರಡೂ ಅತಿವೇಗವಾಗಿ ಸಂಘುಟ್ಟಿಸಿದಾಗ ಉಂಟಾದರೂ ಸಾಮಾನ್ಯವೇಗದಲ್ಲಿ ಚಲಿಸುತ್ತಿರುವಾಗ ಅವೆರಡನ್ನು ಬೆರಸಿದಾಗಲೂ ಉಂಟಾಗುತ್ತದೆಯೆಂದು ನಾವು ಭಾವಿಸುವುದು ಹೇಗೆ ಸರಿಯಾದೀತು? (ನಿಶಲು. ೨೩೨). [ಸಂಘುಟ್ಟನ + – ಇಸು₃]

**ಸಂಘನಾಯ್ಕಪಟ್ಟ** (ನಾ). ಸಮೂಹದ ನಾಯಕನ ಪಟ್ಟ ; ಗುಂಪಿನ ಮುಂದಾಳಿನ ಪದವಿ : ಉಭಯಸಮಯಱೂ ಕೂಡಿ ಬುಸುವಿಸೆಟ್ಟಿಯರಿಗೆ ಸಂಘನಾಯ್ಕಪಟ್ಟವ ಕಟ್ಟಿದರು (ಎಕ. II (R), ೪೭೫-೩೪ : 1366). [ಸಂಘ + ನಾಯ್ಕ (<ನಾಯಗ) + ಪಟ್ಟ₃]

**ಸಂಘರ್ಷ** (ನಾ).೧. ಉಜ್ಜುವಿಕೆ; ತಿಕ್ಕಾಟ : ''ಬಿಚ್ಚಿ ಪರಪರಿಸುಹಂ ಸಂಘರ್ಷ ವೆಂದನಿಕು'' (ಮಂಗರಾ. ೧೩೬-೪೧). ೨. ಕಾದಾಟ; ಬಡಿದಾಟ : ವ್ಯಕ್ತಿ ವ್ಯಕ್ತಿಗಳ ಸಂಘರ್ಷ . . . ರಾಷ್ಟ್ರರಾಷ್ಟ್ರಗಳ ಸಂಘರ್ಷವೆಲ್ಲಾ ಅನಿವಾರ್ಯ (ಋಕ್ಸಾರ. ೩೬ ಪೀಠಿಕೆ). [ಸಂ.]

**ಸಂಘರ್ಷಣ** (ನಾ). = ಸಂಘರ್ಷ ೨ : ಪಡೆಯೊಳನ್ಯೋನ್ಯಸಂಘರ್ಷಣದೊಳುಗುವ ಪೊಂದೊಡವುಗಳ ರೇಣುಗಳೊ (ಜೈಮಿಭಾ. ೧೨-೭) ; ಮತ ಮತಾಂತರಗಳ ಸಂಘರ್ಷಣದ ಯುಗದಲ್ಲಿ ವಾದವಿವಾದಗಳಾಗುವುದು ಹೀಗೆಯೇ (ಸಾಹಿಸ. ೧೪೬). [ಸಂ.]

**ಸಂಘುರ್ಷಣೆ** (ನಾ). ೧. ಉಜ್ಜುವಿಕೆ ; ತಿಕ್ಕಾಟ : ದಟ್ಟೈಯಿಸಿ ಬೆಳೆದಿರ್ದ ಬದಿರುಮೆಳೆ ಪವನಸಂಘುರ್ಷಣೆಗೆ ಘೀಂಕರಿಸಲಿಭದಂತೆವೋಲ್ ವಿಕಟರವಗೈದು ಕಂಪಿಸಿತು (ಚಿತ್ರಾಂಗ. ೫೧-೧೩೯೦). ೨. ಕಾದಾಟ ; ಬಡಿದಾಟ : ಕೋಲಾಹಲದಿಂದ ಸಂಧಿಗಿಂತ ವಿಸಂಧಿಯೇ ಸಂಘಟನೆಗಿಂತ ಸಂಘುರ್ಷಣೆಯೇ ಹೆಚ್ಚು ಸಂಭಾವ್ಯ (ಸಾಹಿಪ್ರ. iii, ಪ್ರಸ್ತಾವನೆ). [ಸಂ. ಸಂಘರ್ಷಣ]

**ಸಂಘುರ್ಷಿಸು** (ಕ್ರಿ). ತಾಗು ; ಘರ್ಷಿಸು : ಮನುವಿನ ಮನಸ್ಸಿನ ಧಾರೆಯು ಗಂಗಾಧರರಾಯನ ಸವಾರಿ, ವಾದ್ಯಗಳ ನಿನಾದ ಮತ್ತು ಝಾನ್ಸಿಯ ನಿವಾಸಿಗಳ ಹರ್ಷೋನ್ಮಾದಗಳೊಂದಿಗೆ ಸಂಘುರ್ಷಿಸಿ ಬೇರೆಲ್ಲಿಗೋ ಚಲಿಸಿದ್ದಿತು (ಝಾರಾಣಿ. ೬೨). [ಸಂಘುರ್ಷಣ + -ಇಸು$_3$]

**ಸಂಘುಸಾಹಿತ್ಯ** (ನಾ). ತಮಿಳುನಾಡಿನ ಅತ್ಯಂತ ಪ್ರಾಚೀನಸಾಹಿತ್ಯ : ಪಾಡು, ಮೆಲ್ಪಾಡು . . . ಗಾಥಾಸಪ್ತಶತಿಯ ರೀತಿಯಲ್ಲಾಗಲಿ, ತಮಿಳು ಸಂಘುಸಾಹಿತ್ಯದ ರೀತಿಯಲ್ಲಾಗಲಿ ಇರಬಹುದಾದ ಇಡುಕುಂಗಬ್ಬ, ಕೋಶಗಳು ಇದ್ದುವು ಎಂದು ಊಹಿಸಲವಕಾಶವಿದೆ (ಸಾಹಿವಿ. ೮೩). [ಸಂ.]

**ಸಂಘಾಟಿ** (ನಾ). [ಬೌದ್ಧ] ಬೌದ್ಧಭಿಕ್ಷುಗಳು ಧರಿಸುವ ವಸ್ತ್ರಗಳಲ್ಲಿ ಒಂದು : ಅಂಗುಳಿಮಾಲನ ತಲೆಒಡೆದು ರಕ್ತ ಸೋರಿತು. ಪಾತ್ರೆ ಚೂರಾಯಿತು. ಸಂಘಾಟಿ ಹರಿದು ಹೋಯಿತು (ಬುದ್ಧಪ. ೧೬೧). [ಸಂ. ಸಂಘಾಟಿ, ಸಂಘಾಟೀ]

**ಸಂಘಾತ** (ನಾ). ೧. ಗುಂಪು ; ಸಮೂಹ : ಮದವದ್ದಂತಿವರೂಥವಾಜಿ ಭಟಸಂಘಾತಂಗಳೀ ಲೆಕ್ಕಮೆಂಬುದನಾಂ ನಿಟ್ಟಿಸಲಾಱೆಂ (ಪಂಪಭಾ. ೧೦-೨೯) ; ಜಗತ್ಪ್ರಣೂತ ಭೂತಳಾಧಿನಾಥನರ್ಥಿಸಂಘಾತನವಬರ್ಹಿಣಾನಂದಕರಣ ಪ್ರತ್ಯಗ್ರಜಲಧರಾಗಮಂ (ಸುಕುಮಾ. ೧-೭೯ ವ). ೨. "ಹೊಂದಿಕೆ ; ಸಾಮರಸ್ಯ" (ಧರ್ಮಾಮೃ. ಕೋಶ) : ದೇವಲೋಕದಿಂ ನಿಮ್ಮ ಜನನಿಯರಪ್ಪ ನಾಲ್ವರುಂ ಬಂದು ಪೂರ್ವಸ್ವರೂಪದಿಂ ನಿನಗೆ ಸಂಘಾತಮಾಗಿರೆ ಧರ್ಮಮಂ ಪೇೞ್ದು (ಧರ್ಮಾಮೃ. ೧೪-೬೫). ೩. ಸಾಯಿಸುವಿಕೆ ; ಕೊಲೆ. ೪. ಕಫ ; ಶ್ಲೇಷ್ಮ. ೫. ನರಕದ ಒಂದು ವಿಭಾಗ. ೬. ಯುದ್ಧ ; ಕಲಹ. ೭. ಹೊಡೆತ ; ಘರ್ಷಣೆ : ಅನಿಲದ ಅಣುಗಳು . . . ಹೀಗೆ ಸರಳರೇಖೆಗಳ ಮಾರ್ಗವಾಗಿ ಓಡಾಡುತ್ತಾ ಆಗಾಗ ಒಂದಕ್ಕೊಂದಕ್ಕೆ ತಗುಲಿ ಸಂಘಾತ ಹೊಂದುವುದೆಂದೂ ಇಟ್ಟುಕೊಳ್ಳಬೇಕು (ಭೌತವಿ. ೨೮೫). ೮. ಆನೆಗಳು ಪರಸ್ಪರ ಮುಖಗಳನ್ನು ತಾಡಿಸುವುದು : ಗಜಗಳು ಪರಸ್ಪರವಾಗಿ ಮುಖಗಳಿಂದ ತಾಡಿಸಿದರೆ ಸಂಘಾEಘಾತತವೆನಿಸುವುದು (ಸೌಗಂಧಿ. ೨೭೮-೬). ೯. [ವ್ಯಾಕ] ವ್ಯಂಜನಸಹಿತವಾದ ಸ್ವರ. ೧೦. [ಕಾವ್ಯಮೀ] ಒಂದೇ ಛಂದಸ್ಸಿನಲ್ಲಿ ರಚಿತವಾದ ಕಾವ್ಯ. ೧೧. [ಜೈನ] ನಾಮಕರ್ಮಪ್ರಕೃತಿಗಳಲ್ಲಿ ಒಂದು : ಶರೀರ ಬಂಧನ ಸಂಘಾತ ವರ್ಣ ರಸ ಪಂಚಕ . . . ನಿರ್ಮಾಣ ಪರ್ಯಾಪ್ತ ನೀಚೈರ್ಗೋತ್ರಂಗಳೆಂಬ ದ್ವಿಸಪ್ತಪ್ರಕೃತಿಗಳುಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೯ ವ) ; ಪಿಂಡಾಪಿಂಡಭೇದದಿಂದಂ ಗತಿ ಜಾತಿ ಶರೀರಬಂಧನ ಸಂಘಾತ ಸಂಸ್ಥಾನ . . . ತೀರ್ಥಕರನಾಮಮೆಂದಿಂತಲ್ಲಿ ಗತಿನಾಮಕರ್ಮಂ ಚತುರ್ವಿಧಮಕ್ಕುಂ (ಗೊಮ್ಮಸಾ. ೩-೬). [ಸಂ.]

**ಸಂಘಾತತಾಳ** (ನಾ). = ಸಂಗಡದಾಳ : ಸಂಘಾತತಾಳ - ಸಂಗಡದಾಳ (ಶಮದ. ೨೯೩ ಪ್ರಯೋ). [ಸಂ. ಸಂಘಾತತಾಲ]

**ಸಂಘಾತಪ್ರೇಕ್ಷಣ** (ನಾ). = ಸಂಗಡವೆಕ್ಕಣ : ಸಂಘಾತಪ್ರೇಕ್ಷಣ – ಸಂಗಡವೆಗ್ಗಣ, ಸಂಗಡವೆಕ್ಕಣ (ಶಮದ. ೨೯೨ ಪ್ರಯೋ). [ಸಂ.]

**ಸಂಘಾತಮರಣ** (ನಾ). ಸಾಮೂಹಿಕಮರಣ : ನೀನು ಎನ್ನಂದದಲಿ ನಿನ್ನಯ ಸೂನುಗಳು ಬಾಂಧವರು ಸಹಿತಲಿ ಆನುವದು ಸಂಘಾತಮರಣವನೆಂದು ಕಡು ಮುಳಿದು (ತಿಮ್ಮಸ್ತ್ರೀ. ೩-೪೮). [ಸಂ.]

**ಸಂಘಾತಿ** (ನಾ). = ಸಂಗಾತಿ$_1$ : ಭೂತವೊಂದಾವಟದೊಳಿರ್ದು . . . ಸಂಘಾತಿಗಳು ಹೋದರೆ ಅಕಟ ದುಶ್ಚೇತನಾದೆನೆನುತ್ತಿರಲು (ಬಸಪು. ೫೭-೧೦). 'ಸಂಗಾತಿ$_1$' ಪರಾ. [ಸಂ. ಸಂಘಾತಿನ್]

**ಸಂಘಾಯಿಮ** (ನಾ). ಹೂವನ್ನು ಕಟ್ಟುವ ಒಂದು ರೀತಿ ; ಪುಷ್ಪಬಂಧದ ಒಂದು ಬಗೆ : ಪೂಗಟ್ಟುವರಂ ಕಂಡು ತಾನುಮವರ ಕೆಲದೊಳ್ ಕುಳ್ಳಿರ್ದು ನೂಲಿನಗ್ರ ಗ್ರಂಥಿಮ [ವೇಢಿಮ] ವೇಧಿಮ ಸಂಪೂರಿ[ಮ ಸಂಘಾಯಿಮ]ಮೆಂಬಯ್ದು ತೆಱದ ಪುಷ್ಪಮಾಲೆಗಳಂ ಸಮೆದು (ಬಂಹರಿ. ೨-೨೯ ವ). [< ಪ್ರಾ. ಸಂಘಾಯಿಮ = ಜೋಡಿಸಿದುದು]

**ಸಂಘಾರಾಮ** (ನಾ). [ಬೌದ್ಧ] ಬೌದ್ಧಸಂನ್ಯಾಸಿಗಳ ವಾಸಸ್ಥಳ ; ವಿಹಾರ : ಬೌದ್ಧಸನ್ಯಾಸಿಗಳು ವಾಸಮಾಡುವ ಅಥವಾ ತಾತ್ಕಾಲಿಕವಾಗಿ ತಂಗುವ ಸ್ಥಳಗಳನ್ನು ಸಂಘಾರಾಮಗಳೆಂದು ಕರೆಯುತ್ತಾರೆ (ಪ್ರವಾ೯. I, ೧೬೦) ; ನಾಗಸೇನನು ಮಿಲಿಂದ ರಾಜನ ಪ್ರಶ್ನೆಗಳನ್ನು ಬಿಡಿಸಿ ಆಸನದಿಂದ ಎದ್ದು ಸಂಘಾರಾಮಕ್ಕೆ ಹೊರಟನು (ಬುದ್ಧಪ. ಮಿಲಿಂದ. ೧೨೫). [ಸಂ.]

**ಸಂಘಿ** (ನಾ). ಸಂಘಸಾಹಿತ್ಯವನ್ನು ರಚಿಸಿದ ಪ್ರಾಚೀನ ತಮಿಳುಕವಿ : ಸಂಘಿಗಳೆಲ್ಲರ್ ತರದಿಂ ಸಂಘಟಿಸುತ್ತಂ ಜವದಿಂ ಲಂಘಿತಬುದ್ಧಿಪ್ರಚುರರ್ ಸಂಘಮದಾಗಲ್ ಭರದಿಂ (ಹಾಲಾಸ್ಯ. ೪-೭-೨). [ಸಂ. ಸಂಘಿನ್?]

**ಸಂಘೂರ್ಣಿತ** (ನಾ). ಮೇಲೇರುವಿಕೆ ; ಊರ್ಧ್ವಚಲನೆ : "ಉದ್ಘೂರ್ಣಂ ಸಮುದ್ಧೃತಂ ಸಂಘೂರ್ಣಿತಮಕ್ಕುಂ" (ವಸ್ತುಕೋ. ೧೦೫-೪೨). [ಸಂ.]

**ಸಂಚ$_1$** 'ಸಂಚು$_2$' ನೋ.

**ಸಂಚ$_2$**, ಸಂಚು$_3$, ಸಂಜಯ$_1$ (ನಾ). ೧. ಕೂಡಿಸುವುದು ; ಸಂಗ್ರಹ : ಗೀಜಗನ ಗೂಡು ಕೋಡಗಗದಣಲ ಸಂಚ ಬಾದುಮೆಯ ಮದುವೆ . . . ಓಡಿನೊಳಗಗೆಯ ಹೊಯ್ದಂತೆ (ಬಸವ. ೬೩೬); ಅಱು ಹಿರಿಯರೆಲ್ಲರು ಕೋಡಗದ ದಾಡೆಯ ಸಂಚದ ಕೂಳನುಂಡು . . . ಮುಂಚಿದರು ಕಾಲನ ನಾಲಗೆಗೆ (ಸಕವ. ಕ. II, ೨೨೭-೬೮); ಪಂಚಮಹಾಪಾತಕಿಯಂ ವಂಚಕನಂ ನುಡಿದು ಪುಸಿವನಂ . . . ಪುೞುಗೊಂಡದ ಸಂಚದೊಳಿಕ್ಕಾವ ಕಾಲಮೇಟಿದ ತೆಱದಿಂ (ದಶಕು. ೩-೧೮). ೨. ಮೊತ್ತ; ಗುಂಪು; ರಾಶಿ : ಕುದುರೆ ತಲೆಕೆಳಗಾದುದಿಳೆಯೆದ್ದುದು ರಸಾತಳಕವೞ ಭಾರಕೆ ಕೆದಱಿದವು ಕುಲಗಿರಿಯ ಹೂಟದ ಸಂಚ ದೆಸೆದೆಸೆಗೆ (ಕುವ್ಯಾಕ. ೭-೨೧) ; ಪಂಚವಾಯುವಿನ ಸಂಚಮಂ ಕೆಡಿಸಿ . . . ಕರಣಂಗಳಂ ಗೆಲಿದು (ಘನವ. ೬೬-೫೪). ೩. ಹಿಡಿತ ; ವಶ : ಪಟವಾಕಾಶವನಡರಿತ್ತೆಂದಡೆ ಪಟಸೂತ್ರದ ಸಂಚ ಕೆಳಗಿಪ್ಪುದು ನೋಡಾ (ಚನ್ನವ. ಕ. ೮೪-೧೮೦). 'ಸಂಚತಪ್ಪು$_2$' ಪರಾ. ೪. ಕೂಡಿರುವಿಕೆ ; ಕೂಟ ; ಸಂಪರ್ಕ : ಚಂದ್ರಕಾಂತದ ಗಿರಿಗೆ ಉದಕದ ಸಂಚ ಸೂರ್ಯಕಾಂತಗಿರಿಗೆ ಅಗ್ನಿಯ ಸಂಚ ಪರುಷದ ಗಿರಿಗೆ ರಸದ ಸಂಚ ಬೆರಸುವ ಭೇದವಿನ್ನೆಂತೋ (ಅವಚಂ. ೫೮-೨೫೨) ; ಉಸುರ ಸಂಚದ ನಾಡಿಯವಗಾಹಿಸಲು ಕೊಱೆದರು ಗುಱುಕಿಡುತ ತಲೆಮುಸುಕಿನಲಿ ನೆಱೆ ತೆಕ್ಕೆಗೆಡೆದುದು ನಿಖಿಳಕುರುಸೇನೆ (ಕುವ್ಯಾವಿ. ೮-೬೨); ಕೆರಳಿ ಲಕ್ಷ್ಮಣನೆಸಲು ಸಾರಥಿ ಶಿರದ ಸಂಚವು ಕಡಿದು ಬಿದ್ದುದು (ಕಾಶಿರಾ. ೩೬-೬೬). **ಸಂಚು$_3$** : ೨. ಮಿನುಮಿನುಪ ಕೈದುಗಳ ಮಿಂಚುಗಳ ಸಂಚುಗಳ . . . ಕೋಟಾವಳಿಯುಮೆಸೆದುದು (ಚಿಬಪು. ೪೨-೨೧); ಎಸೆವ ತುಱುಬೊತ್ತರಿಪ ಕತ್ತಲೆಯ ಮೊತ್ತ ನಿಟ್ಟೆಸಳುಗಣ್ ಮಿಂಚುಗಳ ಗೊಂಚಲಿನ ಸಂಚು (ನಂದಿಮಾ. ೯-೧೨). **ಸಂಜಯ$_1$** : ೧. ಸಂಚಯ — ಸಂಜಯ (ಶಬ್ದಾನು. ೧೪೩ ಪ್ರಯೋ). [< ಸಂ. ಸಂಚಯ]

**ಸಂಚಕ** (ನಾ). ಮುಂಗಡ ; ಸಂಚಕಾರ : ಸಂಚಕವನೀಯದಲೆ ಲಂಚಕರ ಹೊಗಿಸದಲೆ ಅಂಚಿತವನೊದಱಿ ಕಳುಹಿದರೆ ಅಕಸಾಲೆ ವಂಚಿಸಲಿಕಱಿಯ (ಸರ್ವಜ್ಞ. ೧೪೧೭). [?]

**ಸಂಚಕರ** 'ಸಂಚಕಾರ' ನೋ.

**ಸಂಚಕರಂಗೊಳ್** 'ಸಂಚಕಾರಂಗೊಳ್' ನೋ.

**ಸಂಚಕರಿಸು** (ಕ್ರಿ). ಹಾನಿಯನ್ನುಂಟುಮಾಡು ; ಕೇಡುಂಟುಮಾಡು : ಸಂಚಕರಿಸಿದರು ಬಿಜ್ಜಳರಾಯನ ವಂಚಿಸಿಲ್ಲದೆ ಅರಿನೃಪರು (ಬಸವ. ೫-೩೬). [ಸಂಚಕರ (< ಸಂಚಕಾರ) + -ಇಸು$_3$]

**ಸಂಚಕಾರ**, ಸಂಚಕರ, ಸಂಚಗಾರ, ಸಂಚುಕಾರ (ನಾ). ೧. ಮುಂಗಡ; ಅಗಾವು : ಅತಿಸುಖಕ್ಕೆ ಸಂಚಕಾರಮನೀವಂತನರ್ಘ್ಯಮಣಿಕಟಕಮನಾ ಬೇಂಟೆಗಾಱಂಗಿತ್ತು (ಉದ್ಭಟ. ೪-೧೨೭ ವ) ; ಭಳಿರೆ ಮೇಣುಪಚರಿಸದಿರ್ಪುದು ಸಲೆ ಸುನೀತಿಯೆ ಮರಳಿ ದ್ಯೂತಪ್ರಳಯದಾಟಕೆ ಸಂಚಕಾರವನೀವೆ ಬಾರೆಂದ (ಅಂಬಿಕಾ. ೪೮-೬೫). ೨. ಒಂದು ಬಗೆಯ ತೆರಿಗೆ : ಸಲಗೆ ಸೊಂಟಿಗೆ[ಅ]ಕ್ಕಿಗ ಸಂಚಕಾರ ಇನ್ತಿನಿತುಮ ದೇವರ್ಗ್ಗೆ ಬಿಟ್ಟರು (ಕೌ೯. XI-ii. ೧೫೮-೧೭; 1109). ೩. (ಆಲಂ) ಕೇಡು; ಹಾನಿ; ನಷ್ಟ : ಶಕುನಿಯ ಶಿರಕೆ ಕೊಟ್ಟನೆ ಸಂಚಕಾರವನು (ಕುವ್ಯಾಸ. ೧೫-೩೯);

ನೆಗಳ್ದ ಬಾಳ್ಕೆಗೆ ಸಂಚಕಾರಮಂ ಕೊಟ್ಟನೆ (ಜೈಮಿಭಾ. ೧೯-೧೮); ಇದರಿಂದ ಸಾಮಾಜಿಕರ ಸ್ವಾತಂತ್ರ್ಯಕ್ಕೆ ಸಂಚಕಾರ ಬಂದಿರಲಿಲ್ಲ (ಅಲ್ಪವಿ. ೩೯). **ಸಂಚಕರ :** ೧. ''ಸತ್ಯಂಕಾರ ಪಣಾರ್ಪಣಂ ಸಂಚಕರಂ''(ವಸ್ತುಕೋ. ೬೨-೬೪); ಕೇವಲಬೋಧದಿಂದಱಿದು ಪಾತ್ರಮಪಾತ್ರಮಿದೆಂಬ ಭೇದಮಂ ದೇವರ ದೇವ ಸಂಚಕರಮಕ್ಷಯಮೋಕ್ಷಸುಖಕ್ಕೆನಲ್ (ಪಂರಾಮಾ. ೫-೨); ಅಂತು ಪಂಚಶರಪ್ರಮಾದವಿಜಯಿ ಪಂಚಗತಿಪ್ರಾಪ್ತಿಗೆ ಸಂಚಕರಮಂ ಕೊಳ್ವಂತೆ ದೀಕ್ಷೆಯಂ ಕೆಯ್ಕೊಳಲೊಡಂ (ಪುಷ್ಪಪು. ೧೩-೧೧೩ ವ). **ಸಂಚಗಾರ :** ೧. ಆ ಕೆಲಸಕ್ಕೆಂದು ನಿನಗೆ ಒಂದುನೂರು ರೂಪಾಯಿ ಸಂಚಗಾರ ಕೊಡುತ್ತೇನೆ (ಕೊತಕಾ. ೩೫). **ಸಂಚುಕಾರ :** ೧. ಬುದ್ಧಿವಂತನಾದ ಸಾಹುಕಾರನು ಗದ್ದೆಯನ್ನು ನೋಡಿಯೇ ಸಂಚುಕಾರವನ್ನು ಮುಂಗಡ ಕೊಡಲು ಹಿಂದುಮುಂದು ನೋಡುತ್ತಾನೆ (ನಿಬಂಧ. II, ೬). ೩. ಕುಡಿದು ಏಳುವಾಗ ನಾಲ್ಕಾಣೆಕಾಸು ಒಬ್ಬೊಬ್ಬರ ಪಾಲಿಗೆ ಸಂಚುಕಾರವಾಗಿತ್ತು (ಚೋಮದು. ೩೪). [< ಸಂ. ಸತ್ಯಂಕಾರ. / ಮರಾ. ಸಚಕಾರ್]

**ಸಂಚಕಾರಂಗೊಳ್, ಸಂಚಕರಂಗೊಳ್** (ಕ್ರಿ). ಮುಂಗಡವನ್ನು ಪಡೆ,— ಹೊಂದು : ಜಿನಪದವಿಯ ವ್ಯಕ್ತಿಗೆ ಸಂಚಕಾರಂಗೊಂಬಂತೆ ಸಿದ್ಧಶೇಷೆಯಂ ಕೊಂಡು (ಪೂರ್ವಪು. ೨೮). **ಸಂಚಕರಂಗೊಳ್ :** ತತ್ಪ್ರಕಟಫಲಪ್ರಾಪ್ತಿಗೆ ಸಂಚಕರಂಗೊಳ್ವಂತೆ ಸಿದ್ಧಶೇಷೆಯನಾಗಳ್ ಕೊಂಡು (ಆದಿಪು. ೪-೨). [ಸಂಚಕಾರ + ಕೊಳ್$_1$]

**ಸಂಚಕಾರತರು, ಸಂಚುಕಾರತರು** (ಕ್ರಿ). ಹಾನಿಯನ್ನುಂಟುಮಾಡು; ವಿಪತ್ತಿಗೆ ಈಡುಮಾಡು : ಹುಡುಗರನ್ನು ಅಂಕೆಯಲ್ಲಿಡದಿದ್ದರೆ ಯಾರ ಪ್ರಾಣಕ್ಕಾದರೂ ಸಂಚಕಾರತರುವರೆಂದು ಕಳಸಾಪುರದ ಹಿರಿಯರು ಮನಗಂಡರು (ಕಳಹು. ೬೯); ನಿರ್ಗುಣಬ್ರಹ್ಮಕಲ್ಪನೆ ನಮ್ಮ ನೀತಿ ಮತ್ತು ಭಕ್ತಿಗಳ ಅನುಭವಕ್ಕೆ ಸಂಚಕಾರತರುತ್ತದೆ (ತತ್ವಪ್ರಾ. ೩೨೮). **ಸಂಚುಕಾರತರು :** ಇಲ್ಲಿ ಇವನು ಗಲಾಟೆ ಎಬ್ಬಿಸಿ ನನ್ನ ಸ್ಥಾನಕ್ಕೆ ಸಂಚುಕಾರತರುತ್ತಾನೆ (ಕಸಬು. ೮೧); ಹಿಂದೂಧರ್ಮದ ಅಸ್ತಿತ್ವಕ್ಕೇ ಸಂಚುಕಾರತಂದಾಗ ಶಂಕರಾಚಾರ್ಯರು . . . ಅದಕ್ಕೆ ಜೀವಕರೆ ಕೊಟ್ಟು . . . ಬೆಳಗುವಂತೆ ಮಾಡಿದರು (ಭಾರದ. ೩೧೭). [ಸಂಚಕಾರ + ತರು$_1$ (< ತರ್)]

**ಸಂಚಕಾರಬರು** (ಕ್ರಿ). ಕೇಡುಂಟಾಗು; ಹಾನಿಯಾಗು : ಇನ್ನೂ ಕೆಲವರಿಗೆ ಮದ್ದೀಡು ತೆಗೆದ ಮೇಲೆ ರೋಗ ಅತಿ ಉಲ್ಬಣವಾಗಿ ಪ್ರಾಣಕ್ಕೇ ಸಂಚಕಾರಬಂದಿದೆ (ಮನೋನಂ. ೭೮); ಸರ್ಕಾರದ ಕೆಲಸದಲ್ಲಿರುವವರಿಗೆ ಒಬ್ಬಳಿಗಿಂತ ಹೆಚ್ಚಾಗಿ ಪತ್ನಿಯರಿದ್ದರೆ ಅವರ ಕೆಲಸಕ್ಕೆ ಸಂಚಕಾರಬರುತ್ತದೆ (ದೂರಸ. ೩೨೭). [ಸಂಚಕಾರ + ಬರು$_1$ (<ವರ್)]

**ಸಂಚಕಾರಿ** (ನಾ). ಹಾನಿಯನ್ನುಂಟುಮಾಡುವವನು; ಕೇಡುಗಾರ : ಕರ್ಣ ಕೇಳ್ ಮಾರಿ ತಿರುಗಿದ ನಿನ್ನ ಜೀವಕಂ ರಿಪು ಸಂಚಕಾರಿಯಾಗಲ್ಬಂದನಿದೆ ನೋಡು (ತುರಂಗ. ೬೯-೨೦). [ಸಂಚಕಾರ + - ಇ$_3$]

**ಸಂಚಗಾರ** 'ಸಂಚಕಾರ' ನೋ.

**ಸಂಚಗಾರ್ತಿ** 'ಸಂಚುಗಾರ್ತಿ' ನೋ.

**ಸಂಚಗೆಡು** (ಕ್ರಿ). ಒಟ್ಟಾಗಿ ನಾಶವಾಗು, — ಹಾಳಾಗು: ಪಿನಾಕಿಯಲ್ಲಿ ಅಲ್ಲಟಪಲ್ಲಟದಿಂದ ಪಂಚೈವರ ಪ್ರಾಣಂಗಳು ಸಂಚಗೆಡವೆ (ಸಮಾವ.ಕ.೬೦೭-೭೦); ಪಂಚಮಹಪಾತಕವುಪಪಾತಕಂ ಮಿತ್ರವಂಚನಂ ಗೋಘ್ನತೆ ಕೃತಘ್ನತೆ ಬರೆದ ಸಿವುಡಿ ಸಂಚಗೆಟ್ಟುದು (ಸಿದ್ಧರಾ. ೮-೭೦). [ಸಂಚ$_2$ + ಕೆಡು$_1$]

**ಸಂಚತಪ್ಪು$_1$** 'ಸಂಚುತಪ್ಪು' ನೋ.

**ಸಂಚತಪ್ಪು$_2$** (ಕ್ರಿ). ಹಿಡಿತವು ತಪ್ಪು,— ಇಲ್ಲವಾಗು: ವ್ಯೋಮದಲ್ಲಿ ಚರಿಸುವ ಸೋಮಸೂರ್ಯರೆಂದಡೆ ಹೇಮಗಿರಿಯ ಸಂಚತಪ್ಪದು ನೋಡಾ (ಚನ್ನವ. ಕ. ೮೪-೧೮೦). [ಸಂಚ$_2$ + ತಪ್ಪು$_1$]

**ಸಂಚನೆ** (ನಾ). ಉಪಾಯ; ತಂತ್ರ; ಯುಕ್ತಿ : ಪಂಚಗತಿಯಲಿ ಕುಣಿವ ವಾಜಿಯ ಹಿಂಚು ಮುಂಚೆಡಬಲಕೆ ಲಂಘಿಪ ಸಂಚುವಿಡಿದೋರಂತೆ ಗಾಡಿಯ ಗಮಕದುಬ್ಬಿನಲಿ ಸಂಚನೆಯ ತಿರುಮುರುಹು ಮೋಹದ ದಂಚಗೆಯವೆಡೆಯಲ್ಲಿ . . . ನಡೆತಂದ (ಕೃಷ್ಣ ಕಾ. ೬-೨೦); ಮುತ್ತಿನ ಸರಂಗಳ ಸರಪಣಿಗಳಿಂದ ಕೂಡಿದ ಪವಳದ ಹಲಗೆಯಂ ವಂದುವಂದು ಒಂದು ಮಂಚಮಂ ಕೊಂಚಮಾಗಿಯಿರುವಂತೆ ಸಂಚನೆಯಂ ಗೈಸಿ (ಸೌಗಂಧಿ.೧೨೭-೯). [< ಸಂಚು$_2$]

**ಸಂಚಯ** (ನಾ). ೧. ಗುಂಪು ; ಮೊತ್ತ ; ಸಮೂಹ : ''ನಿಕರಃ, ನಿಕಾಯಃ . . . ಸಂಚಯಃ, ಸಮುದಯಃ . . . ಸ್ತೋಮಃ — ಈ ೩೯ ಸಮೂಹಂ'' (ಹಲಾಯು. ೧೧೪-೧); ಧಾರುಣೀಪಾಲಕನ ಕೇಳ್ ಗಾಂಧಾರಿಯತಿಭಕ್ತಿಯಲಿ ಮಿಗೆ ಗಾಂಧಾರರಾಜಪ್ರಮುಖನಿಜಹಿತಬಂಧುಸಂಚಯಕೆ ಚಾರುತರ ದಕ್ಷಿಣೆಗಳಿಂದಲಿ ಪಾರಲೌಕಿಕಕರ್ಮಗಳ ವಿಸ್ತಾರವನೆ ಮಾಡಿದಳು (ತಿಮ್ಮಕ್ರಿ. ೨-೨೯); ಬಾಂದೊಱಿಗಡರುವ ಶುಭ್ರಾಭ್ರಕದಂಬದವೋಲಂಚೆಯ ಸಂಚಯ ಬೆಂಚೆಯಿನುರದೇಳ್ಗುಂ (ಉದ್ಧದೇ. ೨-೨೨). ೨. ಕೂಡುವುದು; ಸೇರುವುದು : ಕಾಲವು ಸಂಕ್ಷೇಪದಿಂದ ಶೀತಕಾಲ, ಉಷ್ಣಕಾಲ, ವರ್ಷಾಕಾಲವೆಂದು ಮೂರು ತೆರನಾಗಿರುವುದು. ವಾತಾದಿಗಳಿಗೆ ಸಂಚಯವೂ ಪ್ರಕೋಪವೂ ಶಾಂತಿಯೂ ಇರುವುವು (ಸಕವ್ಯ. ೧೫). ೩. ಕೂಡಿಸಿಟ್ಟುದು; ಸಂಗ್ರಹ; ಶೇಖರಣೆ : ಕೆಯ್ಯಾರದಿಂದಮರ್ಚಿಸಿ ಮೆಯ್ಯೆರಸಸು ಪೋಗೆ ಕೊಡದ ನೀರಂ ಕೊಡದೊಳ್ ಪೊಯ್ವಂತೆ ತನ್ನ ಸಂಚಯಮುಯ್ವುದುಮುತ್ತಮಮನುಷ್ಯಗತಿಗಮರೇಂದ್ರಂ (ಶಾಂತಿಪು. ೭-೧೧೪); ಈಚಿನ ಹತ್ತುವರುಷಗಳ ಕಾಲದಲ್ಲಿ ಅವರಿಂದ ಒಂದು ಪೈ ಸಹ ಸಂಚಯವೆಂದು ಬೇರೆಯಾಗಿ ಇಡುವುದಾಗಿರಲಿಲ್ಲ (ಮಧುನ. ೪೭). [ಸಂ.]

**ಸಂಚಯನ** (ನಾ). ೧. ರಾಶಿಹಾಕುವುದು; ಗುಡ್ಡೆ ಹಾಕುವುದು. ೨. ಕೂಡಿಡುವುದು; ಸಂಗ್ರಹಿಸುವುದು. ೩. ಯಾವುದಾದರೂ ಒಂದು ವಸ್ತುವಿನ ಸ್ಥಳಾಂತರೀಕರಣ : ಈ ಪದಾರ್ಥಗಳನ್ನು ಹೊಸಸ್ಥಳಗಳಲ್ಲಿ ಡುವುದಕ್ಕೆ ಸಂಚಯನ ಅಥವಾ ಡಿಪೊಸಿಷನ್ ಎಂದು ಹೆಸರು (ಭೂವಿವ. ೧೦೭). ೪. ಅಗ್ನಿಸಂಸ್ಕಾರವಾದ ಶವವು ಪೂರ್ಣವಾಗಿ ಸುಟ್ಟನಂತರ ಎಲುಬು ಮತ್ತು ಬೂದಿಯನ್ನು ಸಂಗ್ರಹಿಸಿ ಪವಿತ್ರಜಲದಲ್ಲಿ ವಿಸರ್ಜಿಸುವುದು. [ಸಂ.]

**ಸಂಚಯಿಸು, ಸಂಚಯ್ಸು** (ಕ್ರಿ). ೧. ಒಟ್ಟುಗೂಡಿಸು; ಕಲೆಹಾಕು : ಅರಳಿರುವ ನಿನ್ನ ಹೂದೋಟದಲಿ ಸಂಚಯಿಸು ನೂರುವರುಷದ ಮೊದಲು ಮರೆಯಾದ ಹೂವುಗಳ ನರುಗಂಪು - ನೆನಹುಗಳನು (ನೆಲಮು. ೯೩-೮). ೨. ಕೂಡಿಡು; ಸಂಗ್ರಹಿಸು : ಸಂಚಯಿಸಿದ ಧನವು ಕಂಚು ಕಬ್ಬುನವಕ್ಕು ಹಂಚಕ್ಕು ಹೆರರಿಗುಣಲಕ್ಕು (ಸರ್ವಜ್ಞ. ೬೬೩). **ಸಂಚಯ್ಸು :** (೩). [ಸಂಚಯನ + - ಇಸು$_3$]

**ಸಂಚಯ್ಸು** 'ಸಂಚಯಿಸು' ನೋ.

**ಸಂಚರ** (ನಾ). ೧. ತಿರುಗಾಡುವಿಕೆ; ಸಂಚಾರ. ೨. ದಾರಿ; ಹಾದಿ. ೩. ಕಿರಿದಾದ ದಾರಿ ; ಇಕ್ಕಟ್ಟಾದ ಮಾರ್ಗ : ಮೂಱುಗುಣ ಮೂಱೊಡಲು ಸಂಚರ [ಪಾಠಾಂ.ಕ] ಮೂಱವಸ್ಥೆಯನೇಱಿ ಮಿನುಗುವ ಮೂಱುಯೋಗಾತೀತ ಮಾಯಾಮಹಿಮನೆಂದೆನಿಸಿ (ಕೃಷ್ಣಾರಾ. ೨೫-೧). ೪. ರಭಸವಾದ ಪ್ರವಾಹದ ಮೇಲ್ಭಾಗದಲ್ಲಿ ಕಟ್ಟಿದ ಸೇತುವೆ.

ಸಂಚರವಾಗು = ಚಲಿಸು ; ಸುಳಿದಾಡು : ಶುಷ್ಕತಾಶೂನ್ಯತೆಯೊಳೊಲ್ಮೆ ಸಂಚರವಾಯ್ತು (ಶ್ರೀರಾಮಾ. ೨೩-೬೧೧). [ಸಂ.]

**ಸಂಚರಣ** (ನಾ). ೧. = ಸಂಚರ ೧ : ಪಾವನತಪೋವನಸಂಚರಣಕ್ಕೆ ತಾನೆ ಮತ್ತೆ ಏಕವನಾಂತುದೀಗಳನಿವಾರಣಮೆನ್ನಯ ಚಿತ್ತವಾರಣಂ (ಚಂದ್ರಪ್ರ. ೪-೧೫). ೨. ಆಚರಣೆ ; ಅಭ್ಯಾಸ : 'ಸಂಚರಣಂಬೆಱು' ಪರಾ. [ಸಂ.]

**ಸಂಚರಣಂಬೆಱು** (ಕ್ರಿ). ಅನುಷ್ಠಾನಕ್ಕೆ ತರು; ಅಭ್ಯಾಸ ಮಾಡು : ಮತ್ಪಾದಭಕ್ತಂ ಸಪತ್ನೋತ್ಕರಸಂಹಾರಾರ್ಥಮೆನ್ನೊಳ್ ಪಡೆಯಲೆಳಸಿ ದಿವ್ಯಾಸ್ತ್ರಮಂ ದಲ್ ತಪಸ್ಸಂಚರಣಂಬೆತ್ತಿಲ್ಲಿ ನಿಂದಂ (ಶಬಶಂ. ೪-೬೯). [ಸಂಚರಣ + ಪೆಱು$_1$]

**ಸಂಚರಣೆ** (ನಾ). ೧.= ಸಂಚರ ೧ : ನೊಂದೆ ಎಪ್ಪತ್ನಾಲ್ಕು ಲಕ್ಷ ಯೋನಿಗಳಲ್ಲಿ ಒಂದೇ ಪ್ರಕಾರ ಸಂಚರಣೆಯಿಂದ (ವಿದಾಕ್ಕ. ೩೮-೧). ೨. ರೀತಿ; ಕ್ರಮ : 'ಪದಸಂಚರಣೆ' ಪರಾ. [ಸಂ. ಸಂಚರಣ]

**ಸಂಚರಿ** 'ಸಂಚುವಱಿ' ನೋ.

**ಸಂಚರಿವಳ್ಳ** (ನಾ). ಒಂದು ನಿರ್ದಿಷ್ಟ ಹಳ್ಳ : ಪಶ್ಚಿಮಃ ಪೂರ್ವದ ಬಾಲ ಚಂದ್ರಾಕಾರದ ಕೊಳದ ಸಮೀಪದ ಸಂಚರಿವಳ್ಳ ಅಲ್ಲಿಂದ ತೆಂಕಪಡುವಲು ಉತ್ತನೂರ ತೊಣ್ಣಲದ ಮುಕ್ಕೂಟಲ ಮಣ್ಕೊಱಡಿ (ಮೈಆರಿ. ೧೯೨೫,೧೦೫-೪೩; 634). [ಸಂಚರಿ$_2$ + ಪಳ್ಳ]

**ಸಂಚರಿಸು** (ಕ್ರಿ). ೧. ಸೇರು; ಕೂಡು : (೬). ೨. ಉಂಟಾಗು; ಸಂಭವಿಸು : (೬). ೩. ಬಳಕೆಗೆ ಬರು; ಪ್ರಯೋಗವಾಗು : ಧರೆಯೊಳಗೆ ಕುಸುಮಕ್ಕೆ ಚರಣಗಳು ನಾಲ್ಕಕ್ಕೆ ನೆಱೆ ಮಾತ್ರೆ ನಾಲ್ವತ್ತು ಮಿಕ್ಕೆರಡಕೇ ಎರಡೆಂಟು ಮೇಲೊಂದು ವರಮಾತ್ರೆ ಕೂಡಿ ಸಂಚರಿಸುತಿಹುದೆಪ್ಪತ್ತುನಾಲ್ಕು ಮಾತ್ರೆ (ಛಂದೋಂಬು. ೬. ೫-೩೨೪). ೪. ಚಲಿಸು ; ಅಡ್ಡಾಡು : ಚಿತ್ರಗತಿಯಾಗಿಯುಂ ನೋಡೆ ಸಂಚರಿಸುವಳ್ (ಕಾದಂಪೂ. ೫೫೩); ಮಹೀರುಹದಗ್ರದಲಿ ಸಂಚರಿಸುತಿಹ ಖಗವಿಷ್ಠೆ ಬಿದ್ದುದು ಮೇಲೆ ಭೂಸುರನ (ಕುವ್ಯಾಆ. ೧೫-೨); ಅಲ್ಲಲ್ಲಿ ಬೇಟೆಗಾರರು ಸಂಚರಿಸುತ್ತಿದ್ದರು (ಮಣಿಸ. ೪೫). ೫. (ಗಾಳಿಯು) ಸುಳಿ; ತೀಡು : ಪಶ್ಚಿಮದ ಗಾಳಿ ತಣ್ಣಗೆ ಸಂಚರಿಸಿ ಶಯ್ಯಾಗಾರವನ್ನು ಇಂಪಾಗಿ ತಂಪಾಗಿ ಇಟ್ಟಿರುತ್ತದೆ (ನಂಟರು. ೧೮). [ಸಂಚರಣ + - ಇಸು$_3$]

**ಸಂಚಲ, ಸಂಚಳ$_2$** (ಗು). ೧. ಅಲುಗಾಡುವ; ತೂಗಾಡುವ; ಅತ್ತಿತ್ತ ಚಲಿಸುವ. ೨. ಅಸ್ಥಿರವಾದ; ಚಂಚಲವಾದ; ಚಪಲತೆಯ : ಪಾಲಿಸುವೆನೆಂತು ನಿಷ್ಠೆಯಂ ಭಾವರಾಗದ ಜೀವಿ, ಸಹಜ ಸಂಚಲ ನರಂ ನಾಂ? (ಚಿತ್ರಾಂಗ. ೩೯-೧೦೫೧). (ನಾ). ೩. ಅಸ್ಥಿರತೆ; ಚಾಂಚಲ್ಯ : ಮನದ ಸಂಚಲವ ನಿಲಿಸಿ ಸಕಲ ಕರಣಂಗಳ ಅಱಿವಿಂಗಾಹುತಿಯನಿಕ್ಕಿ (ಅವಚಂ. ೨೩೮-೧೦೮೦). ೪. ಕ್ಷಣಿಕವಾದುದು; ಅಶಾಶ್ವತವಾದುದು : ಸಂ[ಪಾಠಾಂ. ಚಂ]ಚಲವಪ್ಪಾಯುವಿನಿಂ. . . ಯಮಪುರಕ್ಕೆದಿದೆ ಕಿಂಚಿತ ಅಲ್ಪಾಯುವೇಕೆಯೆಲೆ ಸುಕುಮಾರ (ನನ್ನಚಾ. ೪-೫೮). ೫. ಚಪಲತೆಯಿಂದ ಕೂಡಿದವನು : ಅಷ್ಟದಳಕಮಲವ ಮೆಟ್ಟಿ ಚರಿಸುವ ಹಂಸನ ಭೇದವ ಹೇಳಿಹೆನು . . . ವರುಣದಳಕ್ಕೆ ಏಱಲು ನಿದ್ರೆಗೆಯ್ಯುತ್ತಿಹನು ವಾಯವ್ಯದಳಕ್ಕೆ ಏಱಲು ಸಂಚಲನಾಗಿಹನು (ಸಿದ್ಧೇವ. ೧೧೪-೩೫೨). **ಸಂಚಳ$_2$** : ೩. "ಲೋಲಂ, ಚಪಳಂ . . . ಚಳಾಚಳಂ, ಸಂಚಳಂ – ಈ ೧೦ ಸಂಚಳಂ" (ಹಲಾಯು. ೧೧೫-೧೦). ೫. ಆ ನೀಚನಾ ದ್ರೋಹನಾ ಸಂಚಳನಾ ಚಂಡಾಲನಾ ಪಾತಕನಿರವನಿದಂ ನೋಡು ಪಂಕೇಜವಕ್ತ್ರೇ (ಗದಾಯು. ೮-೪೫). [ಸಂ.]

**ಸಂಚಲತೆ, ಸಂಚಳತೆ** (ನಾ). ೧. ಅಲುಗಾಟ ; ಚಲನೆ : "ಮಿಳಿರೆಂದು ಸಂ[ಪಾಠಾಂ.ಚಂ]ಚಲತೆ"(ಚತುನಿ. ೮೭); ಕೇಳನನ್ಯವಿಚಾರಮಿದು ನವನಾಳಸಂಚಲತೆಯನು ನಿಲಿಸಿ ಸುನಾಳ ಶುದ್ಧಂಗೆಯ್ದು ಕಮಲವನೂರ್ಧ್ವಮುಖಮೆನಿಸಿ (ಕ್ಷೇತ್ರಸು.೭-೧೪). **ಸಂಚಳತೆ** : ೧. ಚರಣಗತಿಗೆಳ ಸಂ[ಪಾಠಾಂ. ಚಂ]ಚಳತೆಯಿಂ ನೆರೆದ ನಕ್ಷತ್ರಂಗಳುದುರಲು (ಬಸವು. ೧೭-೧೫). ೨. ಹೊಳೆಯುವುದು; ಪ್ರಕಾಶಿಸುವುದು : ನೆಗದ ಮುಗಿಲ್ಗಳ ಭೀಕರಾಕಾರಕ್ಕಂ ಮಿಂಚುಗಳ ಸಂಚಳತೆಗಂ ಮೊಳಗಿನ ಮಹಾಧ್ವನಿಗಂ . . . ಬೆಚ್ಚದೆ ಬೆದಱದೆ (ಗಿರಿಕ. ೯-೫೮ ವ). [ಸಂ. ಸಂಚಲತಾ]

**ಸಂಚಲತ್ವ , ಸಂಚಳತ್ವ** (ನಾ). ೧. ನಡುಕ; ಕಂಪನ. ೨. ಚಾಪಲ್ಯ; ಚಂಚಲತೆ : ಪಂಚವಕ್ತ್ರಗಳನು ಹಂಚಿಸಿ ಮರ್ತ್ಯರ ಸಂಚಲತ್ವವ ನೆಱೆ ಸುಟ್ಟ ಕಂಚನಾದ್ರಿಗೆ ಬೇಗ ಮುಂಚಿಪ ಜಂಗಮಲಾಂಛನಕ್ಕೆ ನಮಸ್ಕಾರ (ಕೋಡಚ. ೧-೮). **ಸಂಚಳತ್ವ** : ೨. ಮಿಂಚಿನಂದದಿ ತಳಕ್ಕನೆ ಹೊಳೆಯೆ ಕಂಡು ಬಹು ಸಂಚಳತ್ವದೊಳಲ್ಲಿಗೈತಂದು ನೋಡಲು (ಪ್ರಭುಪು. ೫-೫೯). [ಸಂ.]

**ಸಂಚಲನ , ಸಂಚಳನ** (ನಾ). ಅಲುಗಾಟ; ಚಲನೆ : ಕೆರೆಯ ಶೀತಲಜಲದಲ್ಲಿ ಲಯಬದ್ಧವಾದ ಸಂಚಲನ, ಶಿಷ್ಯರೊಂದಿಗೆ ಹಾಸ್ಯರಂಜಿತವಾದ ಸಲ್ಲಾಪ ಇದರಲ್ಲಿ ಗುರುಗಳು ಮಗ್ನರಾಗಿದ್ದಾರೆ (ನಂಟರು. ೨೮); ಎನ್ನಿಂ ಯುಕ್ತಸ್ವರಸಂಕಲನ ಭವನಾಡಿಪ ಹಾಡಿನ ಸಂಚಲನ (ಗಣೇಶ. ೧೨-೨೯೩). **ಸಂಚಳನ** : ವದನರಸಂ ಮದನರಸಂ ಪೊದಟ್ಟುದೆನಿಸುವಿನವುಮರಿ ನರ್ತಿಸೆ ಚೆಲ್ವಂ ಪುದಿದುಱಚಲ್ಲಿಯೊಳೆಸೆದುದು ತದುರೋಜಸರೋಜಮುಕುಲಯುಗಸಂಚಳ[ಪಾಠಾಂ.ಲ]ನಂ (ಆದಿಪು. ೭-೧೯). [ಸಂ.]

**ಸಂಚಲನಾಡಿ** (ನಾ). ಶರೀರದ ನಾಡಿಗಳಲ್ಲಿ ಒಂದು : ಮಯೂರನಾಡಿ ಮಂಡುಕನಾಡಿ ಜಳೂಕನಾಡಿ . . . ಸಂಚುನಾಡಿ ಸಂಚಲನಾಡಿ . . . ಸಂತೋಷನಾಡಿ ಇಂತೀ ಪ್ರಥಮನಾಡಿಯೊಳಗಾದ ಶರೀರದಲ್ಲಿ ತೋಱುವ ನಾಡಿ ಜೀರ್ಣಪರ್ಣದಂತೆ (ಸರ್ವವ. ೨೦-೮). [ಸಂ.]

**ಸಂಚಲನೆ** (ನಾ). = ಸಂಚಲನ : ಸಂಚಲನೆ ಎಂಬುವುದು ಒಂದು ಅವಸ್ಥೆಯಿಂದ ಮತ್ತೊಂದು ಅವಸ್ಥೆಗೆ ಬದಲಾಗುವುದಿಲ್ಲ (ತತ್ವಪ್ರಾ. ೧೯೯). [ಸಂ. ಸಂಚಲನ]

**ಸಂಚಲಾಂಬಕಿ** (ನಾ). ಚಂಚಲವಾದ ಕಣ್ಣುಗಳನ್ನುಳ್ಳವಳು; ಚಪಲಾಕ್ಷಿ : ಪಂಚಭೂತಾತ್ಮಕದ ದೇಹಮಂ ನಲ್ವಿನಿಂ ಪಂಚವಕ್ತ್ರಸಮಾರ್ಪಣಂ ಮಾಳ್ಪುದಱಿವುದಾ ಸಂಚಲಾಂಬಕಿಯರ್ಪಿಸದೊಡೆ ನಿಃಫಲವೆಂದು ಪಂಚಾನನಂ ಪೇಳ್ದನು (ವೀಶೈಪು. ೮-೧೦-೨೩). [ಸಂ. ಸಂಚಲಾಂಬಕೀ]

**ಸಂಚಲಿತ, ಸಂಚಳಿತ** (ಗು). ೧. ಕಂಪಿಸುತ್ತಿರುವ; ನಡುಗುತ್ತಿರುವ. ೨. ಸಂಚರಿಸುವ; ತಿರುಗಾಡುವ. (ನಾ). ೩. ಚಂಚಲಮನಸ್ಸಿನವನು; ಚಪಲಚಿತ್ತ : ಕಲುಷಮಾನಸನೆನ್ನದಲೆ ಸಂಚಲಿತನೆನ್ನದೆ ಕುಟಿಲಕುಹಕಂಗಳ ವಿಗಡನೆನ್ನದೆ (ಬಸವು. ೩೮-೨೪). **ಸಂಚಳಿತ** : ೨. ತದ್ವೃತ್ತಾಂತಮಂ ಸಂಚಳಿತ ಚಾರಚಕ್ಷುಗಳಿಂದಂ ಧರ್ಮಪುತ್ರನಱಿದು (ಪಂಪಭಾ. ೧೩-೩೦ ವ). [ಸಂ.]

**ಸಂಚಲಿಸು , ಸಂಚಳಿಸು** (ಕ್ರಿ). ೧. ನಡುಗು; ಕಂಪಿಸು : ನಿಷ್ಠುರ ಮಾರುತಹತಿಯಿಂದಂ ತರು ಸಂಚಲಿಪಂತೆ ಮೇರು ಸಂಚಲಿಸುಗುಮೇ (ಪಂರಾಮಾ. ೮-೪೭) ; ಸಂಚಲಿಸದ ಧೀರ ನೀ ಮುಚುಕುಂದನ ಮಂಚವ ಮಱೆಯೊಕ್ಕುದಿಲ್ಲ . . . ಎಂದು ಪಂಚಾಸ್ಯ ನಗುತೆ ಕೋಲ್ಗಱೆದ (ಮೋಹತ. ೩೯-೩೨). ೨. ಅಲುಗು; ಅಲ್ಲಾಡು : ಅಂಚೆಯೋಳ್ ಸಂಚಲಿಸದೆ ಜಲಬಿಂದು ನಿಂದುವೆನೆ (ಮಲ್ಲಿಪು. ೩-೫೮). ೩. ಚಂಚಲವಾಗು; ಚಾಪಲ್ಯವನ್ನು ಹೊಂದು : ಬಿಗಿದ ಪದ್ಮಾಸನ ನಾಸಿಕಾಗ್ರದ ದೃಗುಯುಗಳ ಸಂಚಲಿಸದ ಚಿತ್ತ (ಮೋಹತ. ೭-೩೪). ೪. ಮರೆಯಾಗು; ಹೊರಟುಹೋಗು : ನೆಲೆಯಾಗದೊಡಲಿಗೆ ತೊಲಗುವ ಸಿರಿಗೆ ಸಂಚಲಿಸುವ ಭೋಗಕ್ಕೆ ಮನವ ಬೆಲೆಮಾಡಲೇತಕೆ (ವರ್ಧಚ. ೧೧-೪೧). **ಸಂಚಳಿಸು** : ೧. ವೃತ್ತಸ್ತನಂ ಕಣ್ಗೊಳಿಸೆ ತೊಳಗೆ ಬಾಹಾಮೂಲಮೂರುದ್ವಯಂ ಸಂಚಳಿಸೆ . . . ಮಿಳಿರ್ವ ಕೊಂಬಂ ನಿಳ್ಕಿ ಪೂಗೊಯ್ದಳೊರ್ವಳ್ (ಕಾವ್ಯಾವ. ೬೧೧); ನಡುಗುತೊಬ್ಬೊಬ್ಬರ ಮೊಗಂಗಳಂ ನೋಡುತಂ ಸಂಚಳಿಸುತಿರೆ ಮಿಕ್ಕುಮಿಾಱಿ ತಮ್ಮೆಲ್ಲರಂ ಮುಂಚಿ ಬಸವನ ಭಕ್ತಿ ಬಂದಿವಿಡಿಯಲ್ ಕಣಂ (ಬಸರ. ೯-೪೯). ೨. ಬಳಸಿದ ಗುಜ್ಜುಗಳ್ ನೆರೆದ ಮೇಳದ ಕನ್ನೆಯರೆತ್ತಮಿಕ್ಕೆ ಸಂಚಳಿಸುವ ಚಾಮರಂ . . . ತನಗೊಡಂಬಡೆ (ಪಂಪಭಾ. ೪-೪೦); ಕುಲಗಿರಿಶ್ರೇಣಿ ಕಿಟ್ಟೇಱೆ ತಾರಾಹಿಮರುಕ್ಖಂಡಾಂಶುಗಳ್ ಸಂಚಳಿಸೆ . . . ನೆಗೆದನಧರಿತಸ್ವರ್ಗದೇಶಂ ಖಗೇಶಂ (ಜಗವಿ. ೧೮-೩). ೫. ಚಲಿಸು; ಸುಳಿ : ನೋಡಿ ಸಡಿಲ್ದಗ್ರೂರ್ಜಿತರಸ್ಥಂ ಚಳಿಸಿದರಧಿಕರ್ ಚೇರ ಚೋಳಾಧಿಭೂಪರ್ (ಎಕ. VII ,ಶಿಕಾರಿ. ೧೫೧-೪೦; 1047) ; ಮಿಂಚಿನ ಗೊಂಚಲೆನೆ ಸಂಚಳಿಸಿ ಪೊಳೆವ ರತ್ನಾಭರಣಂಗಳ ಪೊಳೆಪಂ ಕಂಡು (ಸುಕುಮಾ. ೭-೧೮ ವ). ೬. ಬದಲಾಗು; ಪರಿವರ್ತಿಸು : ಇವರ ಚಿತ್ತಂ ಮುಂದೆ ಸಂಚ [ಪಾಠಾಂ.ಬ]ಳಿಸುವುದುಮುಂಟು (ನಂಬಿರ. ೧೩-೫೭). ೭. ತಿರುಗಾಡು; ಸಂಚರಿಸು : ಉಲ್ಲಸದಿಕೆನೆದು ಸಂಚಳಿಸುತಿರ್ದ ತನ್ನಾ ತೇಜಿಯನ್ನೇರಿ (ಚಿತ್ರಾಂಗ. ೧೭-೪೫೧). ೮. ಅಲುಗಾಡಿಸು; ಚಂಚಲಗೊಳಿಸು : ಆ ದಿವಿಜವನಿತೆಯರೆನಿತಾನುಂ ತೆಱದ ಶೃಂಗಾರಚೇಷ್ಟೆಗಳನುಪಯೋಜಿಸಿಯುಂ . . . ಸೌಜನ್ಯಕಂದಾಂಕುರನಂ ಸಂಚಳಿಸಲಾಱದೆ (ಶಾಂತಿಪು. ೯-೯೯ ವ). ೯. ಅಸ್ಥಿರಗೊಳ್ಳು; ಹೆದರು : ಈ ಮಹಾಶಿಲೆಯಂ ದೋರ್ವಳದಿಂದೆತ್ತುವುದೆನೆ ಸಂಚಳಿಸದೆ ಪೂಣ್ದೆತ್ತಿದಂ ಬಳಸ್ಥಂ ಕೃಷ್ಣಂ (ವರ್ಧಮಾ. ೩-೨೪). ೧೦. ಹರಡು; ವ್ಯಾಪಿಸು : ಕಂಚಿನ ಕಿಲುಬಂ ಪೂಸಲ್ ಸಂಚಳಿಸುವ ಪಲ್ಲಿಯಾನನದ ವಿಷಮಟಿಗುಂ (ಖಮದ. ೧೩-೯೨). ೧೧. ಓಲಾಡು (?) : ಚರಣಯುಗಂಗಳು ನವಗೆ ನಿಚ್ಚಳವೆನಿಪರ ಸುಖಶರಧಿಯೊಳು ಸಂಚಳಿಸದೊಳಾಗಿಪವುಪಾಯದನೀವುದನವರತ (ಕೊಲ್ಲಾಚ. ೪).

[ಸಂಚಲನ + - ಇಸು$_3$]

**ಸಂಚವಱಿ** 'ಸಂಚುವಱಿ' ನೋ.

**ಸಂಚವಿರಿಸು** (ಕ್ರಿ). ಒಟ್ಟುಗೂಡಿಸು; ಸಂಗ್ರಹಿಸು (?) : ಸಮಶೀಲಸಂಪಾದಿತರು ಬಂದಿದ್ದಲ್ಲಿ ತಮ್ಮ ಮನೆಯಲ್ಲಿದ್ದ ವಿಶಿಷ್ಟದ್ರವ್ಯವ ಸಂಚವಿರಿಸಿಯಿದ್ದುದನಿದ್ದಂತೆಯೆಡೆ ಮಾಡೆಂದಡೆ (ಏಲೇಶ್ವ. ೩೩). [ಸಂಚ$_2$ + ಇರಿಸು]

**ಸಂಚಳ$_1$** (ನಾ). ಒಂದು ಬಗೆಯ ಉಪ್ಪು : "ಸಂಚಳ – ಸೌವರ್ಚಲ = ಲವಣಭೇದ" (ತದ್ಭಕೋ. ೪೨). 'ಸಂಚಳಕಾರ' ಪರಾ. [< ಸಂ. ಸೌವರ್ಚಲ]

**ಸಂಚಳ$_2$** 'ಸಂಚಲ' ನೋ.

**ಸಂಚಳಕಾರ**, ಸಂಚಳಖಾರ (ನಾ). = ಸಂಚಳ$_1$ : (೬). **ಸಂಚಳಖಾರ:** "ರುಚಕ . . . ಒಂದು ತರದ ಉಪ್ಪು, ಸಂಚಳಖಾರ" (ಗಂಗಾಮ. ೨೭೩).

[ಸಂಚಳ$_1$ + ಕಾರ$_2$]

**ಸಂಚಳಖಾರ** 'ಸಂಚಳಕಾರ' ನೋ.

**ಸಂಚಳಚಿತ್ತ** (ನಾ). ಕ್ಷೋಭೆಗೊಂಡವನು ; ಚಂಚಲಚಿತ್ತನಾದವನು : ಕಲಿಬಿಲ್ಲಾಳನ ಸನ್ನ ಸಿಂಹನ ಭುಜಾವಷ್ಟಂಭಮಂ ಕಣ್ಡು ಸಂಚಳಚಿತ್ತಂ ದ್ರವಿಳಕ್ಷಮಾಪರಿವೃಢಂ ಬೆನ್ನಿತ್ತಂ . . . ಭಯಭ್ರಾನ್ತಿಯಿಂ (ಸೌಇ. XX. ೨೧-೨೩; 1019).

[ಸಂ. ಸಂಚಲಚಿತ್ತ]

**ಸಂಚಳತೆ** 'ಸಂಚಲತೆ' ನೋ.

**ಸಂಚಳತ್ವ** 'ಸಂಚಲತ್ವ' ನೋ.

**ಸಂಚಳನ** 'ಸಂಚಲನ' ನೋ.

**ಸಂಚಳಿತ** 'ಸಂಚಲಿತ' ನೋ.

**ಸಂಚಳಿಸು** 'ಸಂಚಲಿಸು' ನೋ.

**ಸಂಚಳೆ** (ನಾ). ಚಂಚಲಚಿತ್ತವುಳ್ಳವಳು; ಚಪಲೆ : ನಿಷ್ಠುರೆ ಮದೋದ್ಧತೆ ಸಂಚಳೆ . . . ದುರಾತ್ಮೆಯಪ್ಪ ವಧು ಸಜ್ಜನಮೇ (ಮದಪಿ. ೮-೭). [ಸಂ. ಸಂಚಲಾ]

**ಸಂಚಾರ** (ನಾ). ೧. ತಿರುಗಾಟ; ಅಡ್ಡಾಡುವುದು : ವಾಯುವಿಗೆ ನಾನಾ ರೂಪ ಸಂಚಾರ (ಮೋಳಮಾ. ೮-೨೭) ; ಸಂಚಾರದಿಂದ ತಱಗೆದ್ದು ತನ್ನಂಗದ ಸಂಚಿತವ ಬಿಟ್ಟು ವಾಯುವಿನ ಸಂಚಾರದಲ್ಲಿ ಎಯ್ದಿ ಸಂಚಾರ ನಿಂದು ಆ ತಱಗು . . . ಮತ್ತೊಂದು ಸಂಚಾರಕ್ಕೆ ಒಳಗಾಯಿತ್ತು (ಸಕವ. I, ४೭೦-೧೭.೨೭); ಮಿಂಚಿನಂಚಿನ ದೇವತಾಚರಣಸಂಚಾರದಾ ಪದಚಿಹ್ನೆಗಳ್ ಪೊಳೆದುವು (ಶ್ರೀರಾಮಾ. ೧೮-೪೭೩). ೨. ಪ್ರಯಾಣ; ಪ್ರವಾಸ : ಶ್ರೀಕಂಠಶಾಸ್ತ್ರಿಗಳು ಆ ದಿನ ನಸುಕಿನಲ್ಲಿಯೇ ಸಂಚಾರಕ್ಕೆ ಹೋದರೆಂದೂ ಎಂಟು – ಹತ್ತುದಿನ ತಿರುಗಿಬರುವುದಿಲ್ಲವೆಂದೂ ಗಂಗಾಸಾನಿಗೆ ಹೇಳಿದನು (ಗಂಗಾಸಾ. ೭೧). ೩. ಹಾದು ಹೋಗುವ ಮಾರ್ಗ, — ದಾರಿ. ೪. ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಚಲಿಸುವಿಕೆ; ಸಂಕ್ರಾಂತಿ. ೫. [ಸಂಗೀತ] ತಾನಗಳಲ್ಲಿ ಒಂದು ಬಗೆ : ಇಲ್ಲಿ . . . ಗಾಮಪಾ ಎಂಬುದು ವಿಶೇಷ ಸಂಚಾರವಾಗಿ ಬರುತ್ತದ (ಸಂಗೀತ. ೫೦). 'ಸಂಚಾರಿ' ಪರಾ. [ಸಂ.]

**ಸಂಚಾರಕ** (ಗು). ೧. ತಿಳಿಯುವಂತೆ ಮಾಡುವ; ತಿಳಿಸುವ. (ನಾ). ೨. ಮಾರ್ಗದರ್ಶಕ; ಮುಂದಾಳು. ೩. ಸುದ್ದಿಯನ್ನು ತಿಳಿಸುವವನು; ದೂತ; ಚಾರ. ೪. (ಆಲಂ) ಗಾಳಿ; ವಾಯು : ಅರಸಂ ದೀಕ್ಷಿತನಿಲ್ಲಿ ಋತ್ವಿಜರುಮೆಮ್ಮಾ ನಾಲ್ವರುಂ . . . ಭವತ್ಪರಿಭವಂ ಸಂಚಾರಕಂ ಕೌರವೇಶ್ವರನೀತಂ ಪಶುವಾಗೆ ಬೇಳ್ದೆನಿವನಂ ಕೋಪಾಗ್ನಿಯಿಂದಗ್ನಿಜೇ (ಗದಾಯು. ೮-೪೭). [ಸಂ.]

**ಸಂಚಾರತೆ** (ನಾ). ಚಲನೆ ; ಸಂಚಾರ : ಗಗನಂ ಕೆಟ್ಟುದು . . . ಖಗಸಂಚಾರತೆ ಶೂನ್ಯಮಾದುದು ನಿರುದ್ಯೋಗಕ್ಕೆ ಪಕ್ಕಾದುದೀ ಜಗಮೆಂದೆಂಬಿನಮೆಯ್ದೆ ಕಟ್ಟಿಕಱೆದತ್ತಾಸಾರಮಾ ಲೋಕದೊಳ್ (ಗಿರಿಕ. ೯-೫೫). [ಸಂ. ಸಂಚಾರತಾ]

**ಸಂಚಾರಮಾರ್ಗ** (ನಾ). ನಡೆಯುವ ದಾರಿ, — ಮಾರ್ಗ : ಸವಿತೃವಿನ ಸಂಚಾರಮಾರ್ಗವನ್ನೇ ಅನುಸರಿಸಿ ಇತರ ದೇವತೆಗಳೆಲ್ಲರು . . . ಮಹತ್ವವನ್ನು ಪಡೆಯುತ್ತಾರೆ (ಋಗ್ವಾರ. ೧೭೧). [ಸಂ.]

**ಸಂಚಾರಿ** (ಗು). ೧. ತಿರುಗುವ ; ಚಲಿಸುವ : ಓರೂರ್ವರ ಕಣ್ಗಳ್ ಸಂಚಾರಿ ಕಟಾಕ್ಷೇಕ್ಷಣಂಗಳಲೆದುವೊ ಲಜ್ಜಾಪ್ರಾರಂಭಮನನ್ಯೋನ್ಯ ವಿಸಾರಿನವಪ್ರಣಯದಿಂ ಕ್ರಿಯಾವಿರಮಣದೊಳ್ (ಶಾಂತಿಪು. ೬-೧೫). (ನಾ). ೨. ಸುದ್ದಿಯನ್ನು ತಿಳಿಸುವವಳು ; ದಾಸಿ ; ದೂತಿ : "ಸಂಚಾರಿಯೆನೆ ದೂತಿಯಕ್ಕುಂ" (ಮಂಗರಾ. ೯೦-೫). ೩. ಕುಂಟಣಿ; ಕುಂಟಲಗಿತ್ತಿ. ೪. ಸಂಚರಿಸುವವನು : ರಸ್ತೆಯ ದೀಪಗಳೆಲ್ಲಾ ಒಮ್ಮೆಗೇ ಆರಿಹೋಗಿ ಸಂಚಾರಿಗಳಿಗೆ ಬಹು ತೊಡಕುಂಟಾಯಿತು (ರೂಢಿ). ೫. ಪ್ರಯಾಣಮಾಡುವವನು : ಸಂಚಾರಿಯಾಗಿ ಹೊರಟಿದ್ದವನು ಈ ಗ್ರಾಮದ ಆಕರ್ಷಣೆಗೊಳಗಾಗಿ ಕೆಲದಿನಗಳ ಮಟ್ಟಿಗೆ ಅಲ್ಲಿಯೇ ನೆಲಸುವ ನಿಶ್ಚಯಮಾಡಿದನು (ರೂಢಿ). ೬. = ಸಂಚಾರಿಭಾವ : ಎಂಟುಂ ಸ್ಥಾಯಿಭಾವಕಂಗಳುಮಂ ಮೂವತ್ತುಮೂಱು ಸಂಚಾರಿ[ಪಾಠಾಂ. ಸಂಚಾರಿಕೆ]ಗಳುಮಂ ಎಂಟು ಸಾತ್ವಿಕಭಾವಂಗಳುಮಂ . . . ಪಾತ್ರಸಂಕ್ರಮಣದೊಳ್ ನೆಱೆಯೆ ತೋಱಿ (ಆಜಿಪು. ೫-೩೦ ವ); ಸಂಚಾರಿಗಳೂ ಚಿತ್ತವೃತ್ತಿಗಳೇ ಆದರೂ ಅವೂ ಕೂಡ ಅನುಭಾವಗಳಿಂದಲೇ ವ್ಯಕ್ತವಾಗಬೇಕು (ಕೃಪಿಡಿ. ೧೮೯). 'ಸಂಚಾರಿಭಾವ' ಪರಾ. ೭. [ಸಂಗೀತ] ತಾನಗಳಲ್ಲಿ ಒಂದು ಬಗೆ ; ಗಾನಕ್ರಿಯೆಯ ಸ್ಥಾಯಿ, ಆರೋಹ, ಅವರೋಹ, ಸಂಚಾರಿಗಳೆಂಬ ನಾಲ್ಕು ವಿಧಗಳಲ್ಲಿ ಒಂದು ; "ವಿಳಂಬ ಮತ್ತು ದ್ರುತಕಾಲದ ಎರಡನೇ ಮತ್ತು ಮೂರನೇ ಕಾಲಗಳ ಸ್ವರಪಂಪ ಹೊಂದಿರುವಿಕೆ" (ಸಂಗೀಚಂ. ೮೯) : ಸ್ಥಾಯಿ ಸಂಚಾರಿಗಳ ಸರಿಗಮಪಧನಿಯ ಸರದಾಯತದ ಶುದ್ಧ ಸಂಕೀರ್ಣ ಸಾಳಗದ . . . ತಾರಮಧ್ಯ ಮಂದ್ರಗಳಿಂದೆ ಸೊಗಸುಗೊಳಿಸಿ (ಜೈಮಿಭಾ. ೨೧-೫೮); ಗಾನಕ್ರಿಯೆಯು ವರ್ಣವೆಂದು ಹೇಳಿದೆ; ಅದು ಸ್ಥಾಯಿ, ಆರೋಹೀ, ಅವರೋಹೀ ಮತ್ತು ಸಂಚಾರೀ ಎಂದು [ನಾಲ್ಕುವಿಧವಾಗಿ ನಿರೂಪಿತವಾಗಿದೆ] (ಚತುಪ್ರ. ೯೩). [ಸಂ. ಸಂಚಾರಿನ್]

**ಸಂಚಾರಿಕೆ** (ನಾ). ೧. ಸಮಾಚಾರವನ್ನು ತಲುಪಿಸುವ ಹೆಂಗಸು; ದೂತಿ; ದಾಸಿ : "ದೂತೀ, ಸಂಚಾರಿಕಾ – ಈ ೨ ದೂದವಿ" (ಹಲಾಯು. ೮೧-೩೩೭). ೨. ಕುಂಟಣಿ; ಕುಂಟಲಗಿತ್ತಿ. [ಸಂ. ಸಂಚಾರಿಕಾ]

**ಸಂಚಾರಿಭಾವ** (ನಾ). [ಕಾವ್ಯಮೀ] ಬದಲಾವಣೆ ಹೊಂದುವ ಚಿತ್ತವೃತ್ತಿ; ಸ್ಥಿರವಲ್ಲದ ಭಾವ ; ಸ್ಥಾಯಿಭಾವಗಳ ಜೊತೆಯಲ್ಲಿ ಬರುವ ಇತರ ಸಣ್ಣಭಾವ : ಭಾವಂ ವಿಭಾವಮೆಸೆವನುಭಾವಂ ಸಂಚಾರಿಭಾವಮೆಂದಿಂತಿವಱಿಂದಾ ವಿಷ್ಕೃತಮಕ್ಕುಂ ರಸಮಾವುದುಮೆಂದಱಿಗೆ ಭರತಶಾಸ್ತ್ರಕ್ರಮದಿಂ (ಕಾವ್ಯಾವ. ೭೯೮); ಕೆಲವು ಅಲಂಕಾರಿಕರು ಈ ಸ್ಥಾಯಿಭಾವಗಳನ್ನೇ ಸಮುದ್ರಗಳಿಗೆ ಹೋಲಿಸಿ ಸಂಚಾರಿಭಾವಗಳನ್ನು ಅವುಗಳಲ್ಲಿ ಏಳುವ ತರಂಗಗಳಿಗೆ ಹೋಲಿಸಿದ್ದಾರೆ (ಕೃಪಿಡಿ. ೧೮೭). [ಸಂ.]

**ಸಂಚಾರಿಸು** (ಕ್ರಿ). ೧. ತಿರುಗು ; ಅಡ್ಡಾಡು; ಸಂಚರಿಸು : ಹೊತ್ತ ಶರೀರಗಳು ಮಿತಿಯಿಲ್ಲ ತಾ ಸಂಚಾರಿಸದ ನೆಲವಿಲ್ಲ (ಹರಿಸಾ. ೮೧). ೨. ಸ್ಥಾಯಿಯಾಗಿ ನಿಲ್ಲದಿರು; ನಡುನಡುವೆ (ಸಂದರ್ಭೋಚಿತವಾಗಿ) ಬಂದು ಹೋಗು : ಭಾರತಿ ಸಾತ್ವತಿ ಕೈಶಿಕೆಯಾರಭಟಿಯುಮೆಂಬ ವೃತ್ತಿಯೊಳ್ ರಸಮಂ ಸಂಚಾರಿಸುವ ಭಾವಮಂ ವಿಸ್ತಾರಿಸುವ ಬೆಡಂಗು ಬೇಱೆ ನೀಲಾಂಜನೆಯಾ (ಆದಿಪು. ೯-೨೭). ೩. ಲೇಪಿಸು; ಸವರು : ಗೋರಂಟೆಯ ಬಿತ್ತಂ ಪಱನೀರಿಂ ಕುಡಿಯಿಸುವುದಲ್ಲದೊಡೆ ಭಗದೊಳ್ ಸಂಚಾರಿಸುವುದು . . . ಗರ್ಭಂ ನಿಲ್ಕುಂ (ಲೋಕೋಪ. ೯-೧೭೮). 'ಸಂಚರಿಸು' ಪರಾ. [ಸಂಚಾರಣ್ಣ$_0$ + -ಇಸು$_3$]

**ಸಂಚಾರೀವರ್ಣ** (ನಾ). = ಸಂಚಾರಿ ೭ : ಒಂದೊಂದೇ ಸ್ವರವನ್ನು ನಿಂತು ನಿಂತು ಪ್ರಯೋಗಿಸುವುದು ಸ್ಥಾಯೀವರ್ಣವೆಂದು ತಿಳಿಯಬೇಕು . . . ಇವುಗಳ ಮಿಶ್ರಣದಿಂದ ಸಂಚಾರೀವರ್ಣವಾಗುತ್ತದೆ (ಚತುಪ್ರ. ೯೩). [ಸಂ.]

**ಸಂಚಾಲಕ** (ನಾ). ಕೆಲಸವನ್ನು ವ್ಯವಸ್ಥೆಗೊಳಿಸುವ ವ್ಯಕ್ತಿ; ವ್ಯವಸ್ಥಾಪಕ : ಸುಮಿತ್ರಾ ನಮ್ಮ ದಳದ ಸಂಚಾಲಕರು (ಭಾರತಿ. ೫೪). [ಸಂ.]

**ಸಂಚಾಲನ** (ನಾ). ೧. ಚಲಿಸುವಿಕೆ. ೨. ಚಲಿಸುವಂತೆ ಮಾಡುವುದು. [ಸಂ.]

**ಸಂಚಾಲನೆ** (ನಾ). ಕಾರ್ಯವ್ಯವಸ್ಥೆಯನ್ನು ನೋಡಿಕೊಳ್ಳುವುದು : ಅವರ ಚಿರಂಜೀವರು ತಂದೆ ಪ್ರಾರಂಭಿಸಿದ ಪತ್ರಿಕೆಯ ಸಂಚಾಲನೆಯನ್ನು ಇಂದಿಗೂ ಮಾಡುತ್ತಲೇ ಇದ್ದಾರೆ (ಮಸಾಹಿ. ೩೭). [ಸಂ. ಸಂಚಾಲನ]

**ಸಂಚಾವಳಿ** (ನಾ). (?) : ಪುರೋಡಾಶ ಕಷಾಯಸ್ನಾನೀಯೋದ್ವರ್ತನ ಸಂಚಾವಳಿ ಸ್ನಾನೋಪಕರಣಂಬೆರಸು ಜಗದೇಕಬಂಧುವಂ ಮಜ್ಜನಂಬುಗಿಸಿ (ಶಾಂತಿಪು. ೧೦-೩೭ ವ). (P ಇದು 'ಸಂಜಾವಟಿ' = ಕೆಂಪುಬಣ್ಣದ ಬಟ್ಟೆ ಎಂದಿರಬಹುದೆ?) 'ಸಂಧ್ಯಾವಳಿ' ಹೋ. [?]

**ಸಂಚಿ**, ಚಂಚಿ (ನಾ). ೧. ಚೀಲ; ಹಸುಬೆ : ಮುದ್ದು ತಿಂದು ತಿಂದು ಮನೆಯೆಲ್ಲ ಬಱಿದಾಗಿ ಪೊಪ್ಪಿತು ಮೂದೇವಿ ಮೈದುನಗೆ ಮದ್ದಿಕ್ಕೊ ಸಂಚಿಯ ಭಂಗಿ ಮುಕ್ಕಿ ಭಾವ ಬಿದ್ದುಕೊಳ್ಳುತಾನೆ ಒಳಗೆ ಕದವ ಮುಚ್ಚಿ (ಪುರಂದ. ೨-೮೪-೨): ಸಾಯಂಕಾಲ ಎರಡು

ಮೂರು ಘಳಿಗೆ ಇರುವಾಗಲೇ ಸಂಚಿ ಕಟ್ಟಿ ತನ್ನ ಸಂಗಡ ಆಳು ಇದ್ದಾನೆಂಬ ಧೈರ್ಯದಿಂದ . . . ಹೊರಟನು (ಕಥಾಮಂ. IV. ೧೭); ಸಂಚಿ ದೊಡ್ಡದಾದರೆ ಮಂಚ ಹಿಡಿದೀತೇ? (ಗಾದೆ). ೨. ಎಲೆ ಅಡಕೆಯ ಚೀಲ : ಕನ್ನಡಿ ಗಿಂಡಿ ಚಾಮರ ಸಂಚಿ ಕಾಳಂಜಿ ಸ್ವರ್ಣದ ಕಳಶಂಗಳನು ಕನ್ನೆಯರಾಂತು ನಡೆದರು (ಬೀಪಂಸಾಂ. ೧೦-೩೭); ಚೆನ್ನಿಗ ಚಿಕದೇವರಾಯನ ಸಂಚಿಯ ಹೊನ್ನಿಯೆಂಬೇಳ್ಗೆವೆತ್ತಿ ಹೆಸನು (ಹಡಬು. ೧-೩೭); ತನ್ನ ಸಂಚಿಯನ್ನು ಬಿಚ್ಚಿ ಎಲೆ ಅಡಕೆ ಹೊಗೆಸೊಪ್ಪಿನ ತುಂಡನ್ನು ಬಾಯೊಳಗಿಟ್ಟು (ಅನಾಥ. ೮೭). ಚೆಂಚಿ : ೨. ತೋಳ ಬಳೆ ಬೀಸಣಿಗೆ ಚಂಚಿ ಸುಣ್ಣದ ಕಾಯಿ . . . ವಿರಾಜಿಸಲು ಮಿಗೆ ಜಾಣ್ಮೆಯಂ ಬೀಜುವರು ದಾಸೀಚರರು (ಗುರುಚಾ. ೩-೫೦); ಗುರುಭಟ್ಟ ಚಂಚಿ ಬಿಚ್ಚಿ ನಮಗೂ ತಾಂಬೂಲ ಅರ್ಪಿಸಿದ (ದೀಪಹ. II, ೧೭೨).

ಸಂಚಿಯ ಊಳಿಗ = ರಾಜ, ರಾಣಿಯರಿಗೆ ಬೇಕಾದಾಗ ತಾಂಬೂಲವನ್ನು ಸಿದ್ಧಪಡಿಸಿ ಕೊಡುವ ಕೆಲಸ,— ಉದ್ಯೋಗ : ನನ್ನ ಸಂಚಿಯ ಊಳಿಗದ ತರಳಿಕೆಯೆಂಬುವಳು ನನ್ನೊಡನೆ ಮೊದಲು ಸ್ನಾನಮಾಡುವೆಡೆಗೆ ಬಂದು (ವಚಕಾ. ೨೨); ಅರಮನೆಯಲ್ಲಿ ಪ್ರತಿದಿನದಲ್ಲಿಯೂ ನಡೆಯುವಂತೆ ಕಟ್ಟುಮಾಡಿದ ಊಳಿಗಗಳ ವಿವರ – ಸಂಚಿಯ ಊಳಿಗ, ಚಂಬಿನ ಚೀಲದ ಊಳಿಗ (ಚಾಮವಂ. ೪೫).

[ದೇ. II ತೆಲು. ಸಂಚಿ ; ತುಳು. ತಂಚಿ, ಸಂಚಿ]

**ಸಂಚಿಕೆ, ಸಂಚಿಗೆ** (ನಾ). ೧. ತಾಳೆಗರಿಗಳನ್ನು ಕೂಡಿಸಿ ಮಾಡಿದ ಹೊತ್ತಿಗೆ ; ಬರೆಯಲೆಂದು ಮಾಡಿಕೊಂಡ ತಾಳೆಗರಿಗಳಿಂದ ಕೂಡಿದ ಪುಸ್ತಕ : ಕಂಚಿಯೊಳ್ ಬಯಲ ಲಿಂಗಣ್ಣನತಿವಾದದಿಂ ಪಂಚಾಕ್ಷರಿಯ ಮಂತ್ರವೇ ಮಹಾಘನವೆಂದು ಸಂಚಿಕೆಯ ಚೀಟಿನಿಂ ಬರೆದದಂ ತೂಗಿ ಮೆರೆವಂ (ಚೆಬಪು. ೬೨-೬೭). ೨. ಸಂಪುಟದ ಒಂದು ಬಿಡಿಭಾಗ : ಗ್ರಂಥದ ಮೊಲನೆಯ ಸಂಚಿಕೆಯನ್ನು ಪ್ರಕಟಿಸಿದನು (ಸಸ್ಕಕ. ೧೧); ನಾಕೋ ಆರೋ ಸಂಚಿಕೆ ತಗಿಯೋದರೊಳಗ ಬಂದ ಮಾಡತಾನ (ಅಪನಾ. ೮). ೩. ನಿಯತಕಾಲಿಕಗಳ ಒಂದು ಪ್ರಕಟನೆ : ವಿದ್ಯಾರ್ಥಿಗಳು ಆಗಲೇ ಬಂದ ಒಂದು ಚಿತ್ರದ ಸಂಚಿಕೆಯನ್ನು ನೋಡುತ್ತಿದ್ದರು (ರಂಗರೋ. ೧೨೨). ಸಂಚಿಗೆ : ೧. ಪರಲ ಭೂಷಣವಿಟ್ಟು ಕೈಯೊಳಗಿರುವ ಪುಸ್ತುಕ ಕಂಠ ಸಂಚಿಗೆ ಬರವ ಕಾಗದ ದೌತಿ ಹಲಗೆಯು ತಾಟಪತ್ರಗಳು ಬಳಪ ಸಹ ಮಟಕಿರದೆ ಪೋಗುವ ಗೃಹಕೆ ತೆರಳುವ ಕಿಜಿಯ ಮಕ್ಕಳ ಹಾವಭಾವಗಳಿರದೆ ನೋಡಿದಳು (ನಾಗಪ. ೩-೯೯).

[< ಸಂ. ಸಂಚ? ./ ತೆಲು. ಸಂಚಿಕ]

**ಸಂಚಿಗೆ** 'ಸಂಚಿಕೆ' ನೋ.

**ಸಂಚಿತ** (ಗು). ೧. ಕೂಡಿಟ್ಟ ; ಸಂಗ್ರಹಿಸಿದ : ನಾಟ್ಯಮಾಲಾಮರಂ ಮಂಗಳೋಪಕರಣಂಗಳಿಂದಮಿದಿರ್ಗೊಂಡೆಟಗಿ ಪೊಡವಟ್ಟು ನಿಜಸಂಚಿತಾಂಚಿತವಸ್ತುಗಳಂ ತಂದು ಮುಂದಿಡೆ (ಶಾಂತಿಪು. ೧೧-೭೦ ವ). ೨. ಅಧಿಕವಾದ ; ಹೇರಳವಾದ. (ನಾ). ೩. ಸಂಗ್ರಹಿತವಾದುದು ; ಸಂಗ್ರಹ : ತನ್ನ ಸಂಚಿತದ ಪಲವು ವಸ್ತೂತ್ಕರಗಳನು ನೃಪತಿಲಕಗೀವೆನು (ತಿಮ್ಮಕ್ರ. ೨-೧೬) ; ಸುಲಕ್ಷಣದ ಲಾಲಿತ ಶ್ರುತಿರಂಜನದ ವಿಶೇಷಾರ್ಥಸಂಚಿತದ . . . ಸುಪ್ರಬಂಧದಂತತಿಮನೋಹರಮೆನಿಪ ವಾಜಿಯಂ ಕಂಡು (ಜೈಮಿಭಾ. ೪-೮). ೪. [ತತ್ತ್ವಶಾ] ಕರ್ಮಫಲಗಳಲ್ಲಿ ಒಂದು ; ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮ : ಸಂಚಿತವೆಂದಡೆ ಗತಜನ್ಮದ ಸುಕೃತ ದುಷ್ಕೃತದ ಸಂಗ್ರಹ (ಉದ್ಯೋಪ್ರ. ೭-೩೪-೨) ; ಎನ್ನ ಪೂರ್ವಸಂಚಿತದಿನೀ ಬಟ್ಟೆಯಾದುದಲ್ಲ ಆತನೇಗೆಯ್ವುಂ (ರಾಮಾಶ್ವ. ೩೭-೧೮). [ಸಂ.]

**ಸಂಚಿತಕರ್ಮ** (ನಾ). [ತತ್ತ್ವಶಾ] ಸಂಚಿತ, ಆಗಾಮಿ, ಪ್ರಾರಬ್ಧಗಳೆಂಬ ಮೂರು ವಿಧವಾದ ಕರ್ಮಪ್ರಭೇದಗಳಲ್ಲಿ ಒಂದು ; ಜನ್ಮಾಂತರಗಳಿಂದ ಸಂಗ್ರಹವಾಗಿ ಬಂದ ಕರ್ಮ : ಪಂಡಿತನಾಗಲಿ ಮೂರ್ಖನಾಗಲಿ ಸಂಚಿತಕರ್ಮ ಉಂಡಲ್ಲದೆ ಬಿಡದು (ಬಸವ. ೭೭೩) ; ಹೊನ್ನಿನಾಸೆ ಉಳ್ಳನ್ನಕ್ಕರ ಸಂಚಿತಕರ್ಮ ಬಿಡದು (ಅಮಿಂಡೇ. ೧೩೪-೧೧೧). [ಸಂ. ಸಂಚಿತಕರ್ಮನ್]

**ಸಂಚಿತಪಾಪ** (ನಾ). ಜನ್ಮಾಂತರಗಳಿಂದ ಸಂಗ್ರಹವಾದ ಪಾಪ, —ಕೆಟ್ಟಕರ್ಮ; ಪೂರ್ವಾರ್ಜಿತಕರ್ಮ : ಸ್ವೈರಿಸೆಮ್ಮಪರಾಧವನು ಕುರುವೀರ ಸಂಚಿತಪಾಪಕರ್ಮ ವಿಕಾರವಿದು (ಕುಮ್ಯಾಗ. ೮-೨೦) ; ಪಂಚಕ್ರೋಶದಿ ಬಂದು ಸಂಚಿತಪಾಪವಳಿದು ಪಂಚಭೂತಾತ್ಮಕದೇಹವನು ಬಿಟ್ಟರೆ ಪಂಚವದನನು ಮುಕ್ತಿ ನೀಡುವನು (ಸಿದ್ಧಪು. ೧೩-೨೩). [ಸಂ.]

**ಸಂಚಿತಪುಣ್ಯ** (ನಾ). ೧. ಜನ್ಮಾಂತರಗಳಿಂದ ಸಂಗ್ರಹವಾದ ಅಥವಾ ಗಳಿಸಿದ ಪುಣ್ಯ, —ಸುಕೃತ ; ಪೂರ್ವಾರ್ಜಿತಪುಣ್ಯ : ಏಂ ಚೋದ್ಯಮೋ ಜಿನವರ ಸಂಚಿತಪುಣ್ಯಪ್ರಭಾವದಿಂದಾ ಪೊಟಲೊಳ್ (ಪುಷ್ಪಪು. ೯-೧೫). ೨. ಪೂರ್ವಾರ್ಜಿತಪುಣ್ಯವುಳ್ಳ ವ್ಯಕ್ತಿ ; ಪುಣ್ಯಶಾಲಿ : ಸಂಚಿತಪುಣ್ಯರ್ ಸಾಂಚಾಲದೇಶಮಾ ಪುಗುತಂದರ್ (ಪಂಪಭಾ. ೩-೩೭). [ಸಂ.]

**ಸಂಚಿತಸುಕೃತ** (ನಾ). ೧. = ಸಂಚಿತಪುಣ್ಯ ೧ : ಪೂರ್ವಜನ್ಮಸಂಚಿತಸುಕೃತದಿಂ ದಿವ್ಯಾಯುಧವಸ್ತುವಾಹನಂಗಳುಮಂ ದಿವ್ಯಸ್ತ್ರೀಯರುಮಂ ಸ್ವೀಕರಿಸಿ (ಪಂಪಾಮಾ. ೧೫-೧೦ ವ). ೨. ಜನ್ಮಾಂತರಗಳಿಂದ ಪುಣ್ಯವನ್ನು ಸಂಗ್ರಹಿಸಿರುವವನು ; ಪೂರ್ವಾರ್ಜಿತಪುಣ್ಯವುಳ್ಳವನು ; ಪುಣ್ಯಶಾಲಿ : ಉತ್ತಮದಾನಂ ಸಂಚಿತಸುಕೃತಂಗಲ್ಲದಸಂಚಿತಸುಕೃತಂಗೆ ಬಯಸೆ ಸಮನಿಸಿದಪುದೇ (ಶಾಂತಿಪು. ೯-೨೨). [ಸಂ.]

**ಸಂಚಿವಾರ** (ನಾ). (?) : "ನಿಧಿಸಂಗ್ರಹಭಂಡಾರ, ಮುಂಗಡಹಣದ ರಾಶಿ, ಕಪ್ಪಕಾಣಿಕೆಯಾಗಿ ಬಂದ ನಿಧಿ" (ಶಾಂತಿಪು.ಗದ್ಯಾನುವಾದ ೮೮ ಪೀಠಿಕೆ) : ಬೇಡಿದೊಡೀಯನೆಂದೆಮಗೆ ಪಾಗುಡಮಟ್ಟಿ ಮನಕ್ಕೆ ವಂದುದಂ ಬೇಡಿದನೋ ಸಮರ್ಥನದನೇವನೊ ದೈನ್ಯದ ಸಂಚಿವಾರಮಂ ನೋಡಿರೆ ನಾಲ್ಕುಪಾಯಮಿರೆ ಗರ್ವದಿನಕ್ಕುಮೆ ಸಿದ್ಧಿ (ಶಾಂತಿಪು. ೨-೩೨); ಪೆಜರೊಳ್ಳಮಾನಮಂಬೀ ನುಡಿವೆಡ ಕೊಳ್ಳೊಡೆಗೆ ಬಲ್ಲಹನಾತನ ಸಂಚಿವಾರ ದುದ್ದಾನಿಗೆ ರಾಯನಾವೆಡೆಗೆ ಚೋಳನಿವಂ ದೊರೆಯೆನ್ನೊಡಿನ್ನಭೂತೋನಭವಿಷ್ಯ ಮೆನ್ನದವರಾರಳವಂ ಜಯದುತ್ತರಂಗನ (ಎಕ. VIII, ನಗರ. ೩೫-೩೭ ; 1077). 'ಸಂಚಕಾರ' ಪರಾ. [?]

**ಸಂಚಿಸು** (ಕ್ರಿ). ೧. ಕಲೆಹಾಕು ; ಸಂಗ್ರಹಿಸು : "ಸಂಚಿಸು—ಸಂಗ್ರಹೇ" (ಶಮಧಾ) ; ಒಡಲೊಳೆ ಜೀವಮಿರ್ದು ಗಡ ಸಂಚಿಸುತಿರ್ಪುದು ಪುಣ್ಯಪಾಪಮಂ ಗಡ (ಆದಿಪು. ೨-೮) ; ಕಂಚಿನ ಕಿಲುಬಂ ಪೂಸಲ್ ಸಂಚಳಿಸುವ ಪಲ್ಲಿಯಾನನದ ವಿಷಮಟಗಿಯುಂ ಸಂಚಿಸಿ ಕಳ್ಳಂಗಳಲೆಯುಮಂ ಚೆಲ್ವಿಂ ಲೇಪಿಸಲ್ಕೆಯುಂ (ಖಮದ. ೧೩-೯೨); ಕಂಚಿನಂಗಡಿಗಳು ಮಿಂಚಿನ ಬಳಗವ ಸಂಚಿಸಿದಂತು ಪುರದೊಳು ಪಂಚಘಟೆಯ ಪರಿಯಣ ಸಗ್ಗಳೆ ಗಿಂಡಿ ಪಂಚಾರತಿಗಳಲ್ಲಿ ಹವು (ಅಂಜಚ. ೩-೮೮). ೨. ಸಂಚಯವಾಗು; ಸಂಗ್ರಹಗೊಳ್ಳು : (೬). ೩. ಕ್ರಮವಾಗಿ ಸೇರು; ವ್ಯವಸ್ಥಿತಗೊಳ್ಳು : ಮಿಂಚುವ ಚಂದ್ರಂಗಂಚಿಯ ರುಪ್ರರ್ ಸಂಚಿಸೆ ವೃತ್ತಂ[ಪಾಠಾಂ. ಚಂಚಲನೇತ್ರೇ,ಸಂಚಲನೇತ್ರೇ] ಕಾಂಚನಮಾಲೇ (ಛಂದೋಂಬು. ೨-೬೮). ೪. ಉಂಟಾಗು; ಸಂಭವಿಸು (?) : ಕಂಚುಕಿಯ ನುಡಿಗೊಲಿದು ಬಹುರತ್ನಾಂಚಿತಾಭರಣವನು ಕೊಟ್ಟವಳಿಂಚರಕೆ ಮನಸೋತು ಸೀತಾರನ್ನೆ ನಸುಮೂರ್ಛೆ ಸಂಚಿಸಿದಳಿಗೆ ಶೈತ್ಯದುಪಚರದಿಂ ಚರಿಸಿ (ಜಿರಾಮಾ. ೧೩೭). 'ಸಂಚಯಿಸು' ಪರಾ. [ಸಂಚ₂ + – ಇಸು₁]

**ಸಂಚು₁** (ಕ್ರಿ). ಸಮಯ ಕಾಯು; ಹೊಂಚುಹಾಕು : ಸಂಚುವಸತೀಜನದೊಳಂಗಭವಕೇಳೀಪ್ರಪಂಚುವರನೊಳ್ಪಮನಿಸಿದ ಬಳಿಕ ಮನದೊಳ್ಪಳಂಚುವ ಬೆದರ್ಕೆಯಂ ಬಿಟ್ಟು ನಿಜಭವನಮಂ ಪೊಱಮಟ್ಟು . . . ನಡೆವ ಜಾರೆಯರ ಚದುರೆಸೆದಿರ್ದುದು (ಜೈಮಿಭಾ. ೨೬-೧೦). [< ಸಂಚು₂]

**ಸಂಚು₂, ಚೆಂಚು, ಸಂಚ₁** (ನಾ). ೧. ಉಪಾಯ ; ಯುಕ್ತಿ ; ತಂತ್ರ : ಸಂಚುವಿಲ್ಲದ ಭಕ್ತಿ ವಂಚನೆಯಿಲ್ಲದ ಮಹಂತನ ತೋಱಾ (ಬಸವ.೫೦೪); ಕೂಡೆ ಹಾಹಾಧ್ವನಿಯ ರವವಲ್ಲಾಡಿಸಿತು ಪರಬಲವನೀತನ ತೋಡು ಬೀಡಿನ ಸಂಚ ಸೆಳೆದುದು ಹಗೆಯ ಸಾಹಸವ (ಕುಮ್ಯಾಕ. ೨೦-೧೧); ಮುಂಚಿ ಬಂದ ಸಂಚಿನ ಪ್ರಪಂಚದ ಕೊಲೆಗುತ್ತದ ಬೇನೆಗೆ ನರಲ್ವರ್ (ರಾಮಾಶ್ವ. ೭೮-೮). ೨. ಜಾಣತನ ; ನಿಪುಣತನ : ರಾಯನ ಮನದಿರವಱಿದಾಂತು ಕಿನ್ನರಿಯ ಕೊರಲ ಬೆರಲ ಸಂಚಿನಿಂದ ಬಾಜಿಸಿದಳು (ಕುರಾಸಾಂ. ೨೫-೧೫). ೩. ಸಣ್ಣ ದನಿ; ಮೆಲುದನಿ : ಇಂಚರದ ಸಂಚು ಮುಂಚ ವಿಪಂಚಿಯ ನುಣ್ಚರಮನುಱೆ ಪಳಂಚುವ ಚದುರಿಂ . . . ಒಪ್ಪಿದಳೊರ್ವಳ್ (ಉದ್ಭಟ. ೧೦-೪೮) ; ಮೆಲ್ಲನೊಯ್ಯಾರದೊಳ್ ಚರಣದ ಸಂಚುಗೇಳಿಸದಂತುಮಲ್ಲಲ್ಲಿ ನಿಂದು ಮೈ ವಂಚಿಸುತೆ ಪಿಂದೆ ಬಂದಭವಾಕ್ಷಿಯುಗಳಂಗಳಂ ಚೆಂದಳಿರ್ಗೈಗಳಂ

ಮುಚ್ಚಿದಳ್ ಗಿರಿಜೆ (ಚಬುಪು. ೪೬-೧೬). ೪. ರಹಸ್ಯ; ಮರ್ಮ : ಒಡಲುಗೊಂಡವ ನಾನು ಪ್ರಾಣವಿಡಿದವ ನೀನು ಎನ್ನೊಡಲ ಸಂಚುವ ನೀನೇ ಬಲ್ಲೆ ನಿನ್ನ ಪ್ರಾಣದ ಸಂಚುವ ನಾ ಬಲ್ಲೆ (ದೇದಾವ. ೫೮-೧೨೦); ಜನನಿಗೆ ಪುಂಡರೀಕಾಕ್ಷಿ ಸಂಚಿನ ನುಡಿಗಳಿಂತೆಂದಳು (ಕರಿಕ. ೫೫-೧). ೫. ಕುರುಹು; ಜಾಡು; ಇಂಗಿತ : 'ಸಂಚುತಪ್ಪು' ಪರಾ. ೬. ರೀತಿ; ಕ್ರಮ : ಕುಡಿದು ಕೊರಲ್ಪುರಮಮರ್ದಂ ಕಡು ಬಿಡೆಯಂಬಡೆದು ನಡೆವ ಪೊಸ ಬೆಳ್ಮುಗಿಲಂತಡಿಯಿಡುವಳೊಯ್ಯನೊಯ್ಯನೆ ಕಡೆಗಣಿಸುವಳಮೃತ ಮಾಂಬೆಯಂಚೆಯ ಸಂಚಂ (ಚಿಕವಿ. ೪-೮). ೭. ಕುಶಲಕಲೆ: 'ಸಂಚುಗಾಱ' ಪರಾ. **ಚೆಂಚು** : ೧. ಅಲ್ಲಿಗೈತರಲವಳ್ ಬಯಲಾಗುವಂ ಅಲ್ಲಮಂ ಚೆಂಚಿನಿಂ ಮತ್ತೆ ಸೋಂಕುವನು (ಪ್ರಭುಪು. ೫-೫೯). **ಸಂಚ$_1$** : ೧. ಪಂಚೇಂದ್ರಿಯಂಗಳ ಸಂಚವನಱಿಯದೆ ಕಾಲಕರ್ಮಪ್ರಳಯಕ್ಕೊಳಗಾದರು (ಅವಚಂ. ೨೮೮-೧೩೦೦). ೪. ನಿನ್ನ ಸಂಚವ ಹರಿಬ್ರಹ್ಮಾದಿಗಳಱಿಯರು (ಸರ್ವವ. ೩೧-೧೫೪); ವೃಷಭರಾಜಂ ಮುಖಮಂಡಲಮಂ ಬಸವನ ಮಸ್ತಕದೊಳಿಟ್ಟು ಪಂಚಾಕ್ಷರಿಯ ಸಂಚಮನಱಿಪಿ (ಬಸರ. ೪-೯೧).

**ಸಂಚುನಡೆಸು** = ಪಿತೂರಿ ಹೂಡು; ಒಳಸಂಚು ಮಾಡು : ಕರಾಚಿ, ಮುಂಬಯಿ, ಲಾಹೋರ್, ದೆಹಲಿಗಳಲ್ಲಿ ಭಾರತದ ವಿಮಾನದಳಗಳು ಸಂಚುನಡೆಸಿದುವು (ಆತ್ಮಾರ್ಪ. ೧೯೦). [ದೇ. ‖ ತಮಿ. ಚಮುಚು; ತೆಲು. ತುಳು. ಸಂಚು]

**ಸಂಚು$_3$** 'ಸಂಚ$_2$' ನೋ.

**ಸಂಚುಕಾರ** 'ಸಂಚಕಾರ' ನೋ.

**ಸಂಚುಕಾರತರು** 'ಸಂಚಕಾರತರು' ನೋ.

**ಸಂಚುಗಾಣಿಸು** (ಕ್ರಿ). ಸುಳಿವನ್ನು ಕಾಣಿಸು; ಕುರುಹು ತೋರು : ಅಂಚೆಯ ನಡೆದಾಡಿಸುವಂತೆ ರಾಗದ ಸಂಚುಗಾಣಿಸಿ ತೋಱುತಿಹಳು (ಭರಚ. ೧೧-೧೭). [ಸಂಚು$_2$ + ಕಾಣಿಸು]

**ಸಂಚುಗಾತಿ** (ನಾ). ಉಪಾಯಗಾತಿ; ಯುಕ್ತಿವಂತೆ : (ಕ). [ಸಂಚು$_2$ + - ಕಾತಿ$_5$]

**ಸಂಚುಗಾರ** 'ಸಂಚುಗಾಱ' ನೋ.

**ಸಂಚುಗಾರಿಕೆ** (ನಾ). ಉಪಾಯ; ತಂತ್ರ : ಸರಸ ಮೂದಲೆ ಲಲ್ಲೆ ಸಂಚುಗಾರಿಕೆ ಮನೋಹರನುಡಿ ಸುಖಾಮೋದ ಸಿರಿಯ ಸಂಬಾದಂಗಳೆಱಕವಾಂತೀ ಸೂಳೆಗೇರಿಯ . . . ಪೊಗಳಲೆಂತಳವಪ್ಪುದು (ವಂಕಾರಾ. ೫-೬-೬೬); ಅವಳು ಸಂಚುಗಾರಿಕೆಗೆ ಹಣ ಕೇಳುವಳೇ? (ಬಾಬಲ. ೩೨). [ಸಂಚುಗಾರ (< ಸಂಚುಗಾಱ) + - ಇಕೆ]

**ಸಂಚುಗಾರ್ತಿ , ಸಂಚಗಾರ್ತಿ** (ನಾ). ೧. ಗುರಿಸಾಧನೆಗೆ ತಕ್ಕ ಉಪಾಯವನ್ನು ಹೂಡುವವಳು; ಯುಕ್ತಿವಂತೆ : (ಕ). ೨. ತಲೆಹಿಡುಕಿ; ಕುಂಟಣಿ : (ಕ). **ಸಂಚಗಾರ್ತಿ** : ೩. ಗುರಿಯನ್ನು ಸಾಧಿಸಲು ರಹಸ್ಯವಾಗಿ ಪ್ರಯತ್ನಿಸುವವಳು: (ಕ). [ಸಂಚುಗಾರ (< ಸಂಚುಗಾಱ) + - ತಿ$_1$ ( < - ಇತ್ತಿ)]

**ಸಂಚುಗಾಱ, ಸಂಚುಗಾರ** (ನಾ). ೧. ವಾಸ್ತುಕಲಾನಿಪುಣ; ಕುಶಲಕರ್ಮಿ : ಕಂಚುಗಾಱರ ಕಲ್ಕುಟಿಗ ಬಡಗಿಗಳ ಸಂಚುಗಾಱರ ಕಮ್ಮಱರ . . . ಸದನದ ಸಂಚಯವೆಸೆದುದು (ಕುರಾಸಾಂ. ೪-೧೧೪); ಕಂಚುಗಾಱರು ಕೈದುಗಾಱರು . . . ಸಂಚುಗಾಱರು ಸದ್ವಿದ್ಯಾಧಿಕರಾದ ಪಾಂಚಾಳರಿರ್ದರಿಕ್ಕೆಲದಿ (ಮೋಹತ. ೩-೨೨). **ಸಂಚುಗಾರ** : ೨. ಉಪಾಯಗಾರ; ಯುಕ್ತಿವಂತ; ಹಂಚಿಕೆ ಹೂಡುವವನು : ಬಮ್ಮಲದೇವಿಯ ಮಾತಿನಲ್ಲಿ ಹೇಳುವುದಾದರೆ ಇವನೂ ಕೂಡ ಅವಳ ಅಹಿತವನ್ನೇ ಬಗೆಯುತ್ತಿರುವ ಸಂಚುಗಾರ ಗುಂಪಿನವನು (ಸವತಿ. ೨೪೮); ಗುಪ್ತಮುದ್ರಣಾಲಯವಿದ್ದ ಮನೆಯೊಂದರಲ್ಲಿ ಕೆಲವು ಸಂಚುಗಾರರೊಡನೆ ಅವಳು ವಾಸಿಸುತ್ತಿದ್ದಳು (ಪುನರು. ೨೪೧). ೩. ಗೂಢಚಾರ; ಬೇಹುಗಾರ : (ಕ). [ಸಂಚು$_2$ + - ಕಾಱ]

**ಸಂಚುಗೂಡು** (ಕ್ರಿ). (ನೈಪುಣ್ಯದಿಂದ) ಸರಿದೂಗಿಸು; ಸಮರಸವಾಗಿಸು : ಕಿನ್ನರಕನ್ನೆ ತನ್ನ ಚೆನ್ನಕಿನ್ನರಿಯಂ ತೆಗೆದು ಮೇಳಂಗೈದಾಳಾಪಿಸಿ ಕೊರಲ ಬೆರಲ ಸಂಚುಗೂಡಿ ನುಣ್ಚರಂದೆಗೆಯೆ (ರಾಜಶೇ. ೧-೧೩೫ ವ). [ಸಂಚು$_2$ + ಕೂಡು$_1$]

**ಸಂಚುಗೆಯ್ , ಸಂಚುಗೈ** (ಕ್ರಿ). ಕುತಂತ್ರಮಾಡು; ಹಂಚಿಕೆಮಾಡು : ಸೊಗಂಬಾಳ್ವರೊಳ್ ಮಿಱುವಂ ಸಂಚುಗೆಯ್ದುಂ ಪುದುವಾಳ್ವರೊಳ್ ಪಗೆಯಂ ದೂದಟ್ಟಿಯುಂ (ರಾಮಾಶ್ವ. ೪೫-೭). **ಸಂಚುಗೈ** : ತಿರುಳಂ ಸಮಂತು ಪುರುಳಂ ತೋಱಿಪ ಜೋಗವೆಣ್ಣೆ ಸಂಚುಗೈಯಲೊಡಂ ಕಱುಂಬಿ ನಿರ್ನೆರಮಿಾವುಜ್ಜುಗಕ್ಕೆ ತಡೆವರ್ಪರ್ (ರಾಮಾಶ್ವ. ೫೬-೧). [ಸಂಚು$_2$ + ಕೆಯ್$_1$]

**ಸಂಚುಗೈ** 'ಸಂಚುಗೆಯ್' ನೋ.

**ಸಂಚುತಪ್ಪು , ಸಂಚತಪ್ಪು$_1$** (ಕ್ರಿ). ೧. ಕ್ರಮ ತಪ್ಪು; ರೀತಿಗೆಡು : ಪಂಚಲಪನನ ಪಂಚಮವಯವಂಗಳಿಗೆ ಗುರಿ ಸಂಚುತಪ್ಪದ ತೆರದಿ ಲಕ್ಷಿಸಿಯೆ . . . ಎಚ್ಚೆಚ್ಚು ಬೊಬ್ಬಿರಿಯಲು (ನವಮೋ. ೬-೪೯). **ಸಂಚತಪ್ಪು$_1$** : ೨. ಕುರುಹುಗೆಡು; ಜಾಡುತಪ್ಪು: ಪೂಜಿಸಿ ಪೂಜೆಯ ಮಱೆಯುವರೆ ಜಂಗಮಲಿಂಗವೆಂದಱಿದವರು ಸಂಚತಪ್ಪುವರೆ (ಅವಚಂ. ೨೨೬-೧೦೨೩). [ಸಂಚು$_2$ + - ತಪ್ಪು$_1$]

**ಸಂಚುನಾಡಿ** (ನಾ). ಶರೀರದ ನಾಡಿಗಳಲ್ಲಿ ಒಂದು : ಮಯೂರ ನಾಡಿ ಮಂಡುಕನಾಡಿ . . . ಸಂಚುನಾಡಿ ಸಂಚಲನಾಡಿ . . . ಸಂತೋಷನಾಡಿ ಇಂತೀ ಪ್ರಥಮನಾಡಿಯೊಳಗಾದ ಶರೀರದಲ್ಲಿ ತೋಱುವ ನಾಡಿ ಜೀರ್ಣಪರ್ಣದಂತೆ (ಸರ್ವವ. ೨೦-೮). [ಸಂಚು$_7$ + ನಾಡಿ$_1$]

**ಸಂಚುನೋಟ** (ನಾ). ತುಂಟ ನೋಟ; ಚಪಲದೃಷ್ಟಿ: ಮಿತಿಮಿಾಱೆ ಪಳಂಚುವ ಸಂಚುನೋಟದಿಂ ಮಿಸುಪ ಮೊಗಂ ಸೊಗಂಬಡೆಯೆ (ಚಿಕವಿ. ೬-೫೩). [ಸಂಚು$_7$ + ನೋಟ]

**ಸಂಚುವಱಿ, ಸಂಚರಿ, ಸಂಚವಱಿ** (ಕ್ರಿ). ರಹಸ್ಯವನ್ನು ತಿಳಿ: ಆ ಮುಂದಣ ಪಯಣಗತಿಯ ಸಂಚುವಱಿಯುವ ಸಂಬಂಧಮಂ[ಪಾಠಾಂ. ಸಂಚದೋವರಿಯ ಸಂಚಮಂ] ಶರಣ ಮನದಲ್ಲಿ ತಿಳಿದು ಈ ಹೆಬ್ಬಟ್ಟೆಗಳಲ್ಲಿ ಹೋದರೆ (ಘನವ. ೪೯-೪೫). **ಸಂಚರಿ** : ಬಿನ್ನಾಣದಿಂದ ಮೆಯ್ಯೊಡ್ಡಿ ನಿಂತು, ಸಂಚರಿತು ಪೊಣರ್ಕೆಗಾರಂಭಿಸುವರು (ವಿಗಡ . ೨೮-೧೭). **ಸಂಚವಱಿ** : ಪಂಚವಿಂಶತಿತತ್ತ್ವರೂಪದ ಸಂಚವಱಿಯದೆ . . . ಅಳಲುವಾತುಮವಂಚಕರು ನೀವ್ ಪಶುಗಳು (ಕುವ್ಯಾಕ. ೬-೨೭). [ಸಂಚು$_2$ + ಅಱಿ]

**ಸಂಚುವಿಡಿ** (ಕ್ರಿ). ರೀತಿಯನ್ನರಿ ; ಜಾಡು ತಿಳಿ : ಪಂಚಗತಿಯಲಿ ಕುಣಿವ ವಾಜಿಯ ಹಿಂಚುಮುಂಚೆಡಬಲಕೆ ಲಂಘಿಪ ಸಂಚುವಿಡಿದೋರಂತೆ ಗಾಡಿಯ ಗಮಕದುಬ್ಬಿನಲಿ . . . ನಡೆತಂದ (ಕೃಷ್ಣಾಕಾ . ೬-೨೦). [ಸಂಚು$_2$ + ಪಿಡಿ$_1$]

**ಸಂಚುವೆಱು** (ಕ್ರಿ). ೧. ಉಪಾಯವನ್ನು ಹೊಂದು ; ತಂತ್ರವನ್ನು ಪಡೆ : ಆ ವೇಳೆಯೊಳ್ ಶತ್ರುಹಂಗೆ ಬೆನ್ನೊಳೆ ಹೊಂಚುವ ಸಂಚುವೆತ್ತಣುವಂ ತನ್ನೊಡೆಯನಂ ಪಿಂದುಟೆಪಿ (ರಾಮಾಶ್ವ. ೯೭-೨೫). ೨. ನೈಪುಣ್ಯವನ್ನು ಹೊಂದು, — ಪಡೆ : ಪರಿಸರದೊಳ್ ಸಂಚುವೆತ್ತಿಂಚರದಿಂ ತನ್ನ ಚೆನ್ನ ಕಿನ್ನರಿಯೊಳ್ ಶ್ರುತಿಗೂಡಿ ಪಾಡುವ ಕಿನ್ನರಿಯ ಸರಸಸಂಗೀತಮಂ ಕೇಳ್ದು (ಶಬಶಂ. ೩-೩೫ ವ). [ಸಂಚು$_2$ + ಪೆಱು$_1$]

**ಸಂಚುಹೂಡು** (ಕ್ರಿ). ಹಂಚಿಕೆ ಹೂಡು; ಕುತಂತ್ರಮಾಡು: ಎಲ್ಲರೂ ಕೂಡಿ ಏನೋ ಸಂಚುಹೂಡಿದ್ದಾರೆ (ಮೂರುದಾ. ೨೫೯); ಅಲ್ಲಿಯ ಮಾನುಷವಾತಾವರಣ ಅವನಿಗೆ ಅಪ್ರಿಯವಾಗುವಂತೆ ಸಂಚುಹೂಡಿದೆ (ಹೊಸಕ್ಕ. ೨೯೦). [ಸಂಚು$_2$+ಹೂಡು$_1$(< ಪೂಡು)]

**ಸಂಚೂರ್ಣ** (ನಾ). ಪುಡಿ ; ಚೂರು : ನಿನ್ನಂದಿನ ಶಿಲಾಸ್ತಂಭಮಂ ಸಂಚೂರ್ಣಂ ಮಾಳ್ಪ ಸತ್ವಮೆತ್ತವೋಯ್ತು (ಚಾವುಂಪು. ೧೯೭). [ಸಂ.]

**ಸಂಚೂರ್ಣಿತ** (ಗು). ಛಿದ್ರಗೊಂಡ ; ಭಂಗವಾದ : ವೃಕೋದರಗದಾಸಂಚೂರ್ಣಿತೋರುಯುಗಳನುಂ ಭೀಮಸೇನಚರಣಪ್ರಹರಣಗಳಿತ ಶೋಣಿತಾರ್ದ್ರ ಮೌಳಿಯುಂ (ಪಂಪಭಾ. ೧೩-೧೦೨ ವ); ಭುಜಾಬಲಸಂಚೂರ್ಣಿತ ವೀರಕೌರವಶತಂ ದುಶ್ಶಾಸನೋರಸ್ಸ್ಥಳೋಚ್ಚಲದುಷ್ಣಾಂಬುನಿಮಗ್ನಪೂರ್ಣಜಠರಂ . . . ಚಾಳುಕ್ಯಕಂಠೀರವಂ (ಗದಾಯು. ೨-೪೮). [ಸಂ.]

**ಸಂಚೂರ್ಣಿತಮತಿ** (ನಾ). ವಿನಾಶಕರವಾದ ಬುದ್ಧಿಯುಳ್ಳ ವ್ಯಕ್ತಿ; ಘಾತಕನಾದ ಮನುಷ್ಯ: ಆ ವಾಕ್ಯಮುಂ ವಿಜ್ಞಾನಮೆಂಬೆಯಪ್ಪೊಡೆ ಪೂರ್ವೋಕ್ತದೋಷ ಪಾಷಾಣ ಸಂಚೂರ್ಣಿತ ಮತಿಯೇ ಏನನೇತಱಿಂ ನಿಶ್ಚಯಿಸುವೈ (ಆದಿಪು. ೨-೧೧ ವ). [ಸಂ.]

**ಸಂಚೂಳಿಕೆ** (ನಾ). (ಬೆಟ್ಟ ಅಥವಾ ಪರ್ವತದ) ತುದಿ; ಶಿಖರ; ಅಗ್ರಭಾಗ : ಕುಮಾರಂಗೆ ಘೋಷಿಸುವ ಜಯಘೋಷಣೆಯಂ ಕೇಳಲಾಱದೆ ಮಣಿಮಯ ಕಿರೀಟೋದಗ್ರವಿಸ್ಫುರಿತಸಂಚೂಳಿಕಾಕನಕಾಚಳಮನೆ ಪೋಲ್ತು ಮಲ್ಲಯುದ್ಧದೊಳ್ ಬಂದು ಪೊಣರ್ದು (ಆದಿಪು. ೧೪-೧೦೮ ವ). [ಸಂ. ಸಂಚೂಲಿಕಾ]

**ಸಂಛನ್ನ** (ಗು). ೧. (ಸಂಪೂರ್ಣವಾಗಿ) ಮುಚ್ಚಿದ; ಆಚ್ಛಾದಿಸಿದ : ಬದ್ಧಾಂಜಳಿಯಾಗುತ್ತಿರ್ದುವೆಂಬಂತೆಸೆವ ಕಿಸಲಯಾಬದ್ಧ ಸಂಛನ್ನಶಾಖಾಕುಲದಿಂ ಚೆಲ್ವಾದ ಋಷ್ಯಾಶ್ರಮದ ರಚನೆಯಂ ನೋಡುತಂ ಪೋದೆನಾಗಳ್ (ಕಾದಂಪೂ. ೨೧೯); ಹರ್ಷೋತ್ಪನ್ನಪುಳಕಾವಲೀಸಂಛನ್ನಶರೀರರ್ ಬಲಾಚ್ಯುತರ್ ಬಗೆಗೊಂಡರ್ (ಪಂರಾಮಾ. ೧೩-೧೫೭); ಮಾಯಾವಿ ತಾಂ ಮೆಯ್ಗರೆದನೊಯ್ಯನೆಯೆ ನುರ್ಗಿ ತೃಣಸಂಛನ್ನಧರಣಿಯ ಮಹಾಗುಹಾವಿವರಮಂ (ಶ್ರೀರಾಮಾ. ೨೭೮-೪೧). ೨. ದಟ್ಟವಾಗಿ ತೋರುವ; ಒತ್ತಾಗಿರುವ : ಇಂತೀ ನಾಲ್ಕುಂ ಬಲಂಗಳಿಂ ಪಿಂತೆ ಸಂಧಿಸಿ ಪಿಡಿದ ಧವಳಚ್ಛತ್ರಗಳುಮಂ ಸಂಛನ್ನಪಿಂಛಾತಪತ್ರಪ್ರಕರಮುಂ . . . ಒಪ್ಪಿ ತೋಱೆ (ವರ್ಧಮಾ. ೪-೪೫ ವ). (ನಾ). ೩. ಇಡಿಕಿರಿದುದು; ದಟ್ಟವಾದುದು : ಸಂಛನ್ನಮಪ್ಪಡವಿಯ ಮಱೆಯೊಳ್ ಗೆಂಟಱಿಂದಂ ಲಲಿತಘಟೆ ಕಂಡು (ವಡ್ಡಾರಾ. ೯೬-೪); ನೀಲೋತ್ಪಲವನಷಂಡಸಂಛನ್ನಮುಮಪ್ಪಾ ಉತ್ಪಲಖೇಟಮೆಂಬುದು ಪೊಟಲ್ (ಆದಿಪು. ೩-೮ ವ). ೪. ಗುಂಪು ; ಸಮೂಹ : ಭ್ರಮಿತಾಷ್ಟಾಪದ ಮುಗ್ರಖಡ್ಗಿಮೃಗಸಂಛನ್ನಂ . . . ತಮದೊಡ್ಡೆಂಬಿನೆಗಂ ಕಱಂಗಿ ನಭಮಂ ನುಂಗಿತ್ತು ಪಾಪರ್ಧಿಸಂಭ್ರಮಕೋಳಾಹಳಲುಬ್ಧಕಂ ಕಲುಷಿತಾಂತಸ್ಸಿಂಧುವಿಂಧ್ಯಾಚಳಂ (ಪಂರಾಮಾ. ೭-೧೨೨). [ಸಂ.]

**ಸಂಛರ** 'ಸಂವಚ್ಛರ' ನೋ.

**ಸಂಛಾದನ** (ನಾ). ಆವರಿಸುವುದು; ಕವಿಯುವುದು : ವಿನಯಾಮೃತಮರೀಚಿ ಸಂಛಾದನಾಂಭೋದಸಂತತಿಯುಮುಭಯಲೋಕವಿವೇಕವಿರೋಚನಾಸ್ತಮಯವೇಲೆಯುಂ (ಆದಿಪು. ೧೪-೧೨೨ ವ). [ಸಂ.]

**ಸಂಛಾದಿತ** (ಗು). ೧. ಆವರಿಸಿದ; ಕವಿದ; ಮುಚ್ಚಿದ : ಅಂತು ತಳರ್ದು ಕೃತಪ್ರಸ್ಥಾನವಿವಿಧಮಂಗಲವಿಧಾನೋಚ್ಛ್ರಿತಚಿತ್ರಾತಪತ್ರಧೋಧೂಯಮಾನಧವಲ ಚಾಮರಸಹಸ್ರಸಂಛಾದಿತಸಹಸ್ರಕರಪ್ರಭಾಭಮಪ್ಪ ರಥಮನೇಱಿ (ಆದಿಪು. ೧೧-೧೪ ವ); ಸುರಶರಾಸನಸಹಸ್ರಸಂಛಾದಿತ[ಪಾಠಾಂ.ಸಂಚಾರಿತ] ಗಗನಮಂಡಲಮುಂ (ಗದಾಯು. ೪-೩೭ ವ). (ನಾ). ೨. ಆವರಿಸಲ್ಪಟ್ಟವನು; ಮುಚ್ಚಲ್ಪಟ್ಟವನು : ವಿರಾಜಮಾನಧವಳಛತ್ರಸಹಸ್ರಸಂಛಾದಿತನುಮಾಗಿ (ಪಂಪಭಾ. ೧೪-೨೧ ವ). [ಸಂ.]

**ಸಂಛಾದಿಸು** (ಕ್ರಿ). ಆವರಿಸು ;ಕವಿ ;ಮುಚ್ಚು : ಆ ದನುಜನ ಬಲಮನಸ್ತ್ರಪಂಜರದಿಂ ಸಂಛಾದಿಸಿ ಬಟಿಕಭಯಮನಿತ್ತಾದರಿಸಲ್ ತನಗದಾಯ್ತು ಪರಿವಾರಬಲಂ (ಜಗವಿ. ೯-೮೪). [ಸಂಛಾದನ + - ಇಸು$_{3}$]

**ಸಂಜನನ** (ನಾ). ೧.ಹುಟ್ಟು; ಮೂಲ. ೨. ಉಂಟಾಗುವಿಕೆ ; ಸಂಭವ: ದನುಜನ ಮಾಯೆಯೊಂದಿನಿಸು ಬೇಗದಿನೊರ್ಮೆಯೆ ಮಾಯಮಾಗೆ ಚೇತನವಡೆದಿಂದ್ರಜಾಲದ ವಿಮೋಹಮೊ ಮೇಣದು ಮೂರ್ಛೆಯೊಂದು ಸಂಜನನಮೊ . . . ಎಂದು ತಜ್ಞನಮನಿತುಂ ಮನಂಬಸುತುಮಿರ್ದುದು ನಿಟ್ಟಿಸಲಾಱದೇನುಮಂ (ಚಂದ್ರಪ್ರ. ೫-೭). [ಸಂ.]

**ಸಂಜನಿತ** (ಗು). ಜನಿಸಿದ; ಹುಟ್ಟಿದ : ವಿನುತಪ್ರಾಸಂ ಶಾಂತೋಪನತಂ ವರ್ಗೋದಿತಂ ಸಮಿಪಗತಂ ಮತ್ತನುಗತಮಂತಗತಂ ಸಂಜನಿತ ವಿಭೇದೋಕ್ತಿಯಿಂದಮಿಂತಾಱು ತೆಱಂ (ಕವಿರಾ. ೨-೩೧); ದನುಜಾಮರಖಚರರೊಳಾವನಾನುಮೊರ್ವಂ ವಿಮೋಹಮಂ ಪುಟ್ಟಿಸಿ ಸಂಜನಿತ ಭವಬದ್ಧರೋಷಂ ತನಯನನೆಱೆದುಯ್ದನೆಂದು ವಿಹ್ವಳನಾದಂ (ಚಂದ್ರಪ್ರ. ೫-೮). [ಸಂ.]

**ಸಂಜನಿತೋತ್ಸವ** (ನಾ). ಹುಟ್ಟಿದ ಹಬ್ಬ : ಮಿಸುಗುವ ರತ್ನಮಾಲೆಗಳ ವಂದನ ಮಾಲೆ ಮನಕ್ಕೆ ವಂದದೇನೆಸೆದುದೋ ಬೀದಿವೀದಿಗಳೊಳರ್ಭಕಸಂಜನಿತೋತ್ಸವಾನಕಂ (ಸುಕುಮಾ. ೧೦-೨೭). [ಸಂ.]

**ಸಂಜನಿಯಿಸು** 'ಸಂಜನಿಸು' ನೋ.

**ಸಂಜನಿಸು, ಸಂಜನಿಯಿಸು** (ಕ್ರಿ). ೧. ಹುಟ್ಟು; ಮೂಡು : ನೀನೀ ಪೊಡವಿಪತಿಯುದರದಲಿ ಸಂಜನಿಸುವರೆಯೆಲೆ ತಾಯೆ (ನಳಚ. ೭-೧೫); ಅರುಣ ಸಂಜನಿಸಲು ಚರಜೀವ ತವಕದಿ ಇರವ ಸೇರಲು ಭುವನದಲಿ (ಕರಚಾ.೨-೪೧). ೨. ಒದಗು; ಉಂಟಾಗು; ಸಂಭವಿಸು : ಮನುಕುಲದ ರಾಯರಲಿ ಹುಸಿ ಸಂಜನಿಸದೆಂದೊಳಗಱಿಯದೆನ್ನಯ ತನುಜಗಧಿರಾಜತ್ವವನು ಬೇಡಿದೆನು (ತೊರರಾ. ೨-೨-೪೧); ಚಿತ್ರದಲಿ ಮಿಗೆ ಸಂಜನಿಸಿತವನಲಿ ಮೋಹ (ನಳಚ. ೧-೩೭); ಸೋಂಕಿಗೊಯ್ಯನೆ ಸಂಜ್ಞೆ ಸಂಜನಿಸಿತಾ ಶ್ಯೇನಿಸೂನುವಿಗೆ (ಶ್ರೀರಾಮಾ. ೨೭೦-೮೫೭). **ಸಂಜನಿಯಿಸು** : ೧. ಆ ಮಾನಿನಿಯ ವಿಮಲಗರ್ಭದೊಳು . . . ಒಳ್ದಾಮರೆಗಣ್ಣ ಸುಲೋಚನೆಯುಂ ಲಕ್ಷ್ಮೀಮತಿಯುಂ ಸಂಜನಿಯಿಸಿ ಪಿರಿದುಂ ಚೆಲ್ವಿಕೆದಾಳಿದರು (ಜಯಕಾ. ೩-೧೯). [ಸಂಜನನ + - ಇಸು$_{3}$]

**ಸಂಜಯು$_{1}$** 'ಸಂಚ$_{2}$' ನೋ.

**ಸಂಜಯು$_{2}$** (ಗು). ೧. ಸಂಪೂರ್ಣವಾಗಿ ಗೆದ್ದ,— ಜಯಿಸಿದ. (ನಾ). ೨. ಸಂಪೂರ್ಣವಾದ ಗೆಲವು,— ಜಯ. ೩. ಧೃತರಾಷ್ಟ್ರನ ಮಂತ್ರಿಯೂ ಸಾರಥಿಯೂ ಆಗಿದ್ದ ಆಪ್ತನ ಹೆಸರು : ಕುರುಕುಳಚೂಡಾಮಣಿಯ ದಕ್ಷಿಣಕರಾಗ್ರಮಂ ಪಿಡಿದು ಸಂಜಯನಿಂತೆಂದಂ (ಪಂಪಭಾ. ೧೩-೪೯ ವ); ಸಂಜಯನ ನುಡಿಗೆ ದುರ್ಯೋಧನನಿಂತೆಂದಂ (ಗದಾಯು. ೩-೫೯ ವ); ಹೇಳು ಸಂಜಯ ಹಗೆಗೆ ಬಿದ್ದ ವಿತಾಳವಾವುದು (ಕುಮ್ಮಾಕ. ೨೫-೧). [ಸಂ.]

**ಸಂಜವನ** (ನಾ). ನಾಲ್ಕು ಮನೆಗಳಿಂದ ಉಂಟಾದ ಚೌಕ; ನಾಲ್ಕು ಮನೆಗಳ ನಡುವೆ ರೂಪಿತವಾದ ಚೌಕಿಗೆ : ''ಸಂಜವನಮಾ ವಿಭವ ಚೌಕಿಗೆಯೆನಿಕ್ಕು'' (ಮಂಗರಾ. ೫೮-೮). [ಸಂ.]

**ಸಂಜಾತ** (ಗು). ೧. ಜನಿಸಿದ; ಹುಟ್ಟಿದ : ಅನುಚರಿಯವೊಲ್ ಸಂಜೆ ಸಂಜಾತ ರಕ್ತಾಂಬರದಿಂದಂ ಬಾಸಣಿಪ್ಪಂತೆಸೆದುದಸದಳಂ ಸಾಂದ್ರಶೋಣಾಂಶುಜಾಲಂ (ಕಾದಂಉ. ೮೧೭) ; ಸೇನಾಪದಸಂಘಾತಸಂಜಾತರೇಣುಜಾತಮಂಬರಮಂ ಮುಸುಂಕೆ (ರಾಮಾಶ್ವ. ೫೦-೩). (ನಾ). ೨. ಒದಗುವಿಕೆ; ಪ್ರಾಪ್ತವಾಗುವಿಕೆ : ಶೀತಕಣದಿಂ ದ್ವಾದಶಾತ್ಮಂಗೆ ಭೀತಿಸಂಜಾತ ಸಮನಿಪುದುಂಟೆ (ವಂಕಾರಾ. ೨-೮-೧೨). ೩. ಜನ್ಮ ತಳೆದವನು; ಹುಟ್ಟಿದವನು : ಭಂಜಿಸುವೆನಖಿಳದಿಕ್ಪಾಲರಂ ಸೆಣಸಿದೊಡೆ ಸಂಜಾತನಾದುದಕೆ ಸಫಲಮಾಯ್ತೆನುತುಬ್ಬಿದಂ ಬಭ್ರುವಾಹನನಂದು (ಜೈಮಿಭಾ.೨೪-೩); ಹೃದಯಪುರುಷಸಂಜಾತನ ಪುರಾತನ ! ಚಿರನೂತನ (ಅರಳು. ೨೯೫-೧೫). ೪. ಗುಂಪು; ಸಮೂಹ. [ಸಂ.]

**ಸಂಜಾತತಿಲಕಿತ** (ನಾ). [ಗಜಶಾ] ಆನೆಯ ಸಪ್ತಮದಾವಸ್ಥೆಗಳಲ್ಲಿ ಒಂದು : ಆ ಪಟ್ಟಣದ ನರಸಿಂಗವೊನೆಯರ ಪಟ್ಟದಾನೆ ಸಂಚಿEಜಾ3ತತಿಲಕಿತ ಅರ್ಧEಆರ್ದ್ರ3ಕಪೋಳಿತ ಅತಿವರ್ತಿತ ಅನುಬಂಧಿನಿ ಕ್ರೋಧಿನಿ ಗಂಧಚಾರಿಣಿಯೆಂಬ ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ (ನಂಬಿರ. ೨-೨೦). [ಸಂ.]

**ಸಂಜಾತೆ** (ನಾ). ಜನಿಸಿದವಳು ; ಹುಟ್ಟಿದವಳು : ಧೀರರಾಜರ್ಷಿಸುತೆ ಸದ್ವಂಶಸಂಜಾತೆ ಸೀತೆ (ಶ್ರೀರಾಮಾ. ೮೭-೨೩೨). [ಸಂ. ಸಂಜಾತಾ]

**ಸಂಜಾಪು** (ನಾ). (ಉಕ) ನೆತ್ತಿಯ ಮೇಲೆ ಮಾತ್ರ ಕೂದಲನ್ನು ಉಳಿಸಿ ಮಾಡುವ ಮುಂಡನ,— ಕ್ಷೌರ : ಇವರ ಮನ್ಯಾಗ ಕ್ರಾಪಿನ ಸಂಪ್ರದಾಯನ ಇಲ್ಲ. ಮುಂಜಿಯಾದರೊಂದು ಗೋಪಾದದಷ್ಟು ಸಂಜಾಪು (ವೈನಿ. ೧೯); ಮೊದ್ಲು ಸಂಜಾಪು ಮಾಡಿ ಆಮೇಲೆ ಗಡ್ಡಾ ಮಾಡು (ಮುಂಗಾಪು. ೮೯); ಆ ಗುಂಡು ಸಂಜಾಪಿನ ಸಂತಾಪ ಅವನಿಗೆ ಅಸಹ್ಯವಾಗಿತ್ತು (ದೀಪಹ. I, ೭೪).

[<— ಪಾರ. ಸಂಜಾಫ್; ಮರಾ. ಸಂಜಾಪ್]

**ಸಂಜಾಯಿತ** (ನಾ). ಬೆಲೆಯನ್ನು ಗೊತ್ತುಪಡಿಸದೆ ಅಂಗಡಿಯಿಂದ ಸಾಮಾನು ತರುವುದು : ನೆರವರಿ ವರಾಡ ಕಡ ಮಸವರಿ ವಂಚನೆ ವಟ್ಟ ಲಂಚ ಹೊರನಿಲ ಹಸ್ತಾಂತರ ಸಂಜಾಯಿತ ನಿಲಗಳ ಪರಿವಿಡಿಯಂ ನಿಲಿಸಿ ಸೀಮೆಯಂ ರಕ್ಷಿಸಿದಂ (ಕೆಳನೃ. ೭-೨೯); ಹೊರಗೆಲ್ಲ ಹಸ್ತಾಂತ್ರ ಸಂಚಾEಜಾ3ಯಿತ ನಿಲಗಳ ಮುಂತಾದುಂ ನಿಲ್ಲಿಸಿ ಸೀಮೆಯನ್ನು ರಕ್ಷಿಸಿ (ಕೆಳವಂ. ೪೫-೩). [<— ಮರಾ. ಸಜಾಇತೀ, ಸಜಾಈತ್]

**ಸಂಜಾವಣಿ** (ನಾ). ಜೀವವನ್ನು ನೀಡುವುದೆಂದು ನಂಬಲಾದ ಒಂದು ಬಗೆಯ ಮೂಲಿಕೆ : ಮತ್ತಂ ಮಱುಜವಣಿ ಪರುಷಕಣಿ ಸಂಜಾವಣಿ . . . ಸಿದ್ಧಲೇಪಾದಿ ಸುವಸ್ತುಗಳನೇಕಮಾಗಿ ಅಲ್ಲಿಯಣ ಶಿವಭಕ್ತರಿಗೆ ಸುಕೃತಾನುರೂಪದಿಂದಾನಂದ ಕರಗಳಾಗಿರ್ಕು (ವಿವೇಕ. ೨೧೦).

[☞ ಇದು 'ಸಂಜೀವಿನಿ' ಯೆಂಬುದರ ಅಪಲಿಖಿತವಿರಬಹುದು]

**ಸಂಜೀವ** (ಗು). ೧. ಹೋದ ಪ್ರಾಣ ಮರಳಿ ಬರುವಂತೆ ಮಾಡುವ; ಬದುಕಿಸುವ : ಕೊಂಚೆವಕ್ಕಿಯ ಮೆಯ್ಯನಾ ಬಾಣಮಂ ಬಿಡಿಸಿ ಪ್ರಾಣಮಂ ಬರಿಸಿ ಸಂಜೀವ ಜೀವನದಿಂದೆ (ಶ್ರೀರಾಮಾ. ೨-೪೬). (ನಾ). ೨. ಹೋದ ಪ್ರಾಣ ಮರಳಿ ಬರುವಂತೆ ಮಾಡುವಿಕೆ; ಬದುಕಿಸುವಿಕೆ. ೩. ಒಟ್ಟಿಗೆ ವಾಸಿಸುವುದು; ಕೂಡಿ ಬಾಳುವುದು. ೪. ಚೈತನ್ಯವನ್ನು ನೀಡುವವನು; ಚೈತನ್ಯದಾಯಕ : ನಾದಮೂರ್ತಿದಯಾವಲೋಕನ ಭಕ್ತವತ್ಸಲ ಭಕ್ತಸಂಜೀವ (ಬಸವು. ೧೯-೯). [ಸಂ.]

**ಸಂಜೀವಕ** (ನಾ). ೧. = ಸಂಜೀವ ೨ : ಸಂಜೀವಕನ ಮಣಿಯನೀಗ ತಾರದೊಡೆ ತನ್ನಂ ಜನನಿ ಪೆತ್ತಳೇತಕೆ (ಜೈಮಿಭಾ. ೨೪-೩). 'ಮೃತಸಂಜೀವಕ' ಪರಾ. ೨. = ಸಂಜೀವ ೩. [ಸಂ.]

**ಸಂಜೀವನ** (ನಾ). ೧. ಹೋದ ಪ್ರಾಣವು ಮರಳಿ ಬರುವಂತೆ ಮಾಡುವ ಅಥವಾ ಬದುಕಿ ಉಳಿಯುವಂತೆ ಮಾಡುವ ದಿವ್ಯೌಷಧ, – ಸಿದ್ಧರಸ : ಸಂಜೀವನವ ಕೈಯಲ್ಲಿ ಹಿಡಿದಿರ್ದು ಸಾಯುವ ಹುಟ್ಟುವ ಜೀವವ ನಾ ಕಂಡೆ (ಮೋಳಿಮಾ. ೧೩-೪೮); ಸರುಜಂ ಸಂಜೀವನಮಂ ಸವಿದಂತೆ . . . ಜಾತ್ಯಂಧಂ ಕಣ್ಬಡೆದಂತೆ ನಿರತಿಶಯ ಸಮ್ಮದಮನೊಳಕೊಂಡು (ಶಬಶಂ. ೫-೧೪ ವ). ೨. ಚೈತನ್ಯ ನೀಡುವಂಥದು; ಚೈತನ್ಯದಾಯಕವಾದುದು : ಈ ವನಂ ಶುಕಪಿಕದ ಜೀವನಂ ಪಥಿಕಜನಪಾವನಂ ಸೌಖ್ಯಸಂಜೀವನವೆನುತ್ತಲಂದಾ ವನವನಾ ನೃಪಂ ಕೊಂಡಾಡುತೆಯ್ತರುತ್ತಿರಲು (ಹಚಕಾ. ೩-೬೧); ಕಡುದುಃಖಮೆಂಬ ವಿಷಮಂ ಪಡೆದತಿನೊಂದಿರ್ದ ಜಗಕೆ ಸಂಜೀವನಂ (ಲಾಸ್ಯರಂ. ೧-೨೬). ೩. = ಸಂಜೀವ ೩. ೪. ಒಂದು ನರಕದ ಹೆಸರು : ಸುದಮನ ಸುತೀಕ್ಷ್ಣ ಪದ್ಮ ಸಂಜೀವನ ಶತಮಹಾಶನಮೆಂಬೈದು ಮಂತ್ರಿನರಕಂಗಳಿಂ ಪರಿವೇಷ್ಟಿಸಿ ಸುಘೋರವೆಂಬರಸುನರಕವಿಹುದು (ವಿವೇಕ. ೧೫೨). ೫. ಬದುಕಿರುವಿಕೆ : (೬). [ಸಂ.]

**ಸಂಜೀವನಯೋಗ** (ನಾ). (ಜ್ವರ, ಪೈತ್ಯರೋಗ ಇತ್ಯಾದಿಗಳನ್ನು ಗುಣಪಡಿಸುವ) ಒಂದು ಬಗೆಯ ಚಿಕಿತ್ಸೆ : ಸಂಜೀವನಯೋಗ - ಬಿಳಿಗಣಜಿಲ ಬೇರಂ ನೆಳಲಲ್ಲಿ ಒಣಗಿಸಿ . . . ಚೂರ್ಣವಂ ಮಾಡಿ, ಜೀರಿಗೆಚೂರ್ಣ ಸಕ್ಕರೆಯಂ ಸಮನಾಗಿ ಕೂಡಿ ಒಂದು ಮಂಡಲಂ ತೆಗೆದುಕೊಳ್ಳೆ ಪೈತ್ಯರೋಗ, ಶ್ವಾಸ, ಕಾಸ, ಹಳೆಯ ಜ್ವರ ಸಹ ಮಾಣ್ಗುಂ (ಸಕವೈ. ೧೩೪). [ಸಂ.]

**ಸಂಜೀವನೆ** (ನಾ). ಚೈತನ್ಯವನ್ನುಂಟುಮಾಡುವವಳು; ಚೈತನ್ಯದಾಯಕಿ : ಆ ವಧು . . . ಮನೋಜಸಿದ್ಧಸಂಜೀವನೆ ನೇತ್ರಪಾತ್ರನಟನಸ್ಥಳಿ ವಿಶ್ವಜಗದ್ವಿಲಾಸಜನ್ಮಾವನಿ ಯೋಷಿದಾತ್ಮಗುಣನಾಮಮೆನಿಪ್ಪಳದೇಂ ಸುರೂಪೆಯೋ (ಚಂದ್ರಪು. ೬-೨೬).

[ಸಂ. ಸಂಜೀವನಾ?]

**ಸಂಜೀವಿನಿ** (ನಾ). ೧. ಜೀವವನ್ನು ನೀಡುವುದೆಂದು ನಂಬಲಾಗಿರುವ ಒಂದು ಮೂಲಿಕೆ : ಸಚರಾಚರಪತಿಯನಾಸ್ಯದಲಿ ಬೆರಳಿಂದೊರಸಿ ಹಿಂಡಿದನಮಲಸಂಜೀವಿನಿಯ ಮೂಲಿಕೆಯ (ತೊರರಾ. ೬-೩೬-೬೫). ೨. ಪರಮೌಷಧ; ಸಿದ್ಧರಸ : ಭಗವದ್ಗೀತೆ ಯೆಂದರೆ ಶ್ರೀಕೃಷ್ಣನುಸುರಿದ ಉಪದೇಶಾಮೃತ. ಅರ್ಜುನನು ಸವಿದ ದಿವ್ಯಸಂಜೀವಿನಿ (ಧರ್ಮಸಾ. ೧೦೪); ಸದ್ಭಾವನೆಗಳನ್ನು ಮೂಡಿಸಲು ಸಂಜೀವಿನಿಯಂತಿದೆ (ಶಿಕ್ಷದ. ೧೫೬).

[ಸಂ. ಸಂಜೀವಿನೀ]

**ಸಂಜೀವಿನೀಗುಳಿಗೆ** (ನಾ). ಒಂದು ಬಗೆಯ ಔಷಧಿಗುಳಿಗೆ : ನವಜ್ವರಕ್ಕೆ ದೇಶಾವರಜೀರಿಗೆ, ಒಳ್ಳೆ ಜೀರಿಗೆ, ಶುಂಠಿ ಈ ಮೂರನ್ನೂ ಅರೆದು ಸಂಜೀವಿನೀಗುಳಿಗೆ ಕೊಳ್ಳೆ, ನವಜ್ವರ, ನಂಜುಗೂಡಿದ ಜ್ವರ ನಿವಾರಣ (ವಿಷ್ಣುವಿ. ೫೩).

[< ಸಂಜೀವಿನಿ + ಗುಳಿಗೆ]

**ಸಂಜೀವಿನೀಚೂರ್ಣ** (ನಾ). ಒಂದು ಬಗೆಯ ಔಷಧದ ಪುಡಿ: ಸಂಜೀವಿನೀಚೂರ್ಣ.– ನೇರಿಲಬೀಜ, ಮಾವಿನಬೀಜ . . . ಚೂರ್ಣವಂ ಮಾಡಿ . . . ಅರಳಗಂಜಿಯಲ್ಲಿ ಅನುಪಾನವಿಕ್ಕಿ ಕೊಡಲು ರಕ್ತಾತಿಸಾರಂ . . . ಮಾಣ್ಗುಂ (ಸಕವೈ. ೩೧೨). [ಸಂ.]

**ಸಂಜೀವಿನೀಯೋಗ** (ನಾ). = ಸಂಜೀವನಯೋಗ : ಸಂಜೀವಿನೀಯೋಗ:– ಇಂಗಲೀಕ, ವತ್ಸನಾಭಿ, ಹಿಪ್ಪಲಿ, ಈ ಮೂರನ್ನು ಸಮಭಾಗವಂ ಮಾಡಿ ನಿಂಬೇಹಣ್ಣಿನ ರಸದಲ್ಲಿ ಅರೆದು . . . ಕೊಟ್ಟರೆ, ತಾಪಜ್ವರ ಮಾಣ್ಗುಂ (ವಿಷ್ಣುವಿ. ೫೩). [ಸಂ.]

**ಸಂಜೀವಿನೀರಸ** (ನಾ). ಒಂದು ಬಗೆಯ ಔಷಧಿ : ಸಂಜೀವಿನೀರಸ:– (ತಾಪಜ್ವರಕ್ಕೆ) ರಸ ೩ ತೂಕ ಕಪ್ಪಲಿ ೨ ತೂಕ ಮೆಣಸು ಗ ೧ ತೂಕ . . . ಗುಳಿಗೆಯಂ ಮಾಡಿ . . . ಕೊಡುವುದು (ವಿಷ್ಣುವಿ. ೫೩). [ಸಂ.]

**ಸಂಜೀವಿಸು** (ಕ್ರಿ). ಪ್ರಾಣ ಬರುವಂತೆ ಮಾಡು; ಬದುಕಿಸು : ಶಿಶುಪಶುಗಳಸುಗಳನು ನೆಜೆ ನಿಜಾಪಾಂಗಾಮೃತದ ಮಳೆಗಱೆದು ಸಂಜೀವಿಸಿದ ಜಗದೀಶ್ವರನ ಮಹಿಮೆಯನಱಿವರಾರು (ನಿಭಾಗ. ೩-೨-೧೬). [ಸಂಜೀವನ + -ಇಸು]

**ಸಂಜೀಷಹೀದ** (ನಾ). ಜೊತೆಗೂಡಿ ಆದ ಹುತಾತ್ಮರು : ಬಾಗಕೋಟೆ ಬಳ ಪುನಹಾ ಖಾನಾಜಂಗಿಯಾಗಿ ಹಿಂಮತಬಹದರ ಹಿದಾಯತ ಮೋಹೀಯದ್ದೀನಖಾನ ವಗೈರೆ ಸಂಜೀಷಹೀದರಾಗಿ (ಹೈದರ. ೨೬). [<— ಅರ. ಪಾರ. ಸಂಜೀಷಹೀದ್]

**ಸಂಜೂರಿಗೆ** (ನಾ). ಒಂದು ಬಗೆಯ ತಿನಿಸು, — ಭಕ್ಷ್ಯ : ಕರ್ಪೂರನಾಳಿಗೆ ಸಂಜೂರಿ [ಪಾಠಾಂ. ಜೋನಿ]ಗೆ ಲಡ್ಡುಗೆ . . . ಕ್ಷೀರಪೂರಿಗೆಯಂ ಪೂಸಣವಾದಿ ಭಕ್ಷ್ಯಚಯಮಂ ತಂದಿಕ್ಕಿದರ್ಕಾಂತೆಯರ್ (ಧರ್ಮಪ. ೨-೫೬). [? + ಪೂರಿಗೆ]

**ಸಂಜೆ , ಸಂದೆ** (ನಾ). ೧. ಸೂರ್ಯ ಮುಳುಗುವ ಹೊತ್ತು; ಸಾಯಂಕಾಲ : ಸುಲಿಪಲ್ ತಟ್ಟಿಲ ತಾರಕಾವಯವಮಂ . . . ವಕ್ತ್ರಾರುಣಂ ಸಂಜೆಯಂ ಗೆಲೆ ಪೋಲ್ತತ್ತು ತಳಪ್ರಹಾರಿಯ ಶಿರಂ ಹೇಮಾದ್ರಿಯಾಕಾರಮಂ (ಕಾವ್ಯಸಾ. ೫೨೫ ಶೂದ್ರಕ); ರವಿಗಂ ಸಂಜೆಗಮೊಪ್ಪಿ ತೋಱುವುದಯಾದ್ರೀಂದ್ರಾಗ್ರದೊಳ್ ದೀಪ್ತಿ ಪುಟ್ಟುವವೋಲ್ . . . ನಂದನೆ ಸೀರಿಗಂ ವಿಜಯೆಗಂ ತದ್ವಂಶದೊಳ್ ಪುಟ್ಟಿದಳ್ (ಶಾಂತಿಪು.೪-೮೫); ಬೇಸಗೆಯಲಿ ಸಂಜೆಯಾಯಿತು; ಕೆಲಸವ ಮುತ್ತಜ್ಜ ತೀರಿಸಿಕೊಂಡ (ಇಂಗೀತ. ೩೨-೧). ೨. ಸಂಧ್ಯಾವಂದನೆ : 'ಸಂಜೆಮಂತ್ರ' ಪರಾ. **ಸಂದೆ** : ೧. 'ಸಂದೆಮಸಕು', 'ಸಂದೆಸಮಯ' ಪರಾ.

**ಸಂಜೆಮಿಾಹ** = ಸಂಧ್ಯಾವಂದನೆ ಮತ್ತು ಸ್ನಾನ : ಪುಟ್ಟಲ್ಪಡೆಯದ ಕುಲದೊಳ್ಪುಟ್ಟಿಯುಮಾ ಸಂಜೆಮಿಾಹಮೆಂಬಿವನೆಲ್ಲಂ ಬಿಟ್ಟು ಸವಣರನೆ ಕೂಡಿಯೆ ಕೆಟ್ಟಂ ಕುಲದಿಂದೆ ಕೆಟ್ಟನೆಂಬರ್ಪಾರ್ವರ್ (ಸಮಪ. ೧೩-೨೫). [< ಸಂ. ಸಂಧ್ಯಾ]

**ಸಂಜೆಗಣ್ಣು** (ನಾ). ಸಾಯಂಕಾಲದ ಸಮಯದಲ್ಲಿ ಕಣ್ಣು ಕಾಣಿಸದ ಒಂದು ಬಗೆಯ ಕಣ್ಣಿನ ರೋಗ ; ಇರುಳುಗಣ್ಣು : ನೀರುಗಣ್ಣು ಜಾರುಗಣ್ಣು ಮಂಜುಗಣ್ಣು ಸಂಜೆಗಣ್ಣು (ಶುಕಸ. ೩೨೮); ಹೊಂಗೆಬೀಜ ಹಿಪ್ಪಲಿ ಈ ಎರಡನ್ನು ಗೋಮೂತ್ರದಲ್ಲಿ ತೇದು ಕಣ್ಣಿಗೆ ಇಕ್ಕಲು ಸಂಜೆಗಣ್ಣು ಮಾಣ್ಗುಂ (ವಿಷ್ಣುವಿ. ೭೫).

[ಸಂಜೆ + ಕಣ್ಣು (< ಕಣ್)]

**ಸಂಜೆಗತ್ತಲೆ** (ನಾ). ಬೈಗುಹೊತ್ತಿನ ಕತ್ತಲೆ ; ಮಬ್ಬುಗತ್ತಲೆ : ಅನಿತಱೊಳ್ ಸಂಜೆಗತ್ತಲೆ ತಾರೆ ದೀಪಮೊಳ್ಳನೆಯ ನೈದಿಲ್ ಚಕೋರಾಬ್ಧಿ ದೇಗುಲವಱೆಯ ಧ್ವನಿಗಳುಱೆ ಪೆರ್ಚಿದುವು (ಚಿಬಪು. ೫-೨೦). [ಸಂಜೆ + ಕತ್ತಲೆ (< ಕಟ್ತಲೆ)]

**ಸಂಜೆಗವಿ** (ಕ್ರಿ). ಸಂಧ್ಯಾಸಮಯವು ಆವರಿಸು ; ಸಾಯಂಕಾಲವಾಗು : ಭೂತಾಂಗನಾನಿಕರಂ ಶೋಣಿತವಾರಿಯುಂ ಕುಡಿದಗುರ್ವಪ್ಪನ್ನೆಗಂ ಸೂಸೆ ನೋಡ ಕವಿಲ್ತಿರ್ದುದು ಕೂಡೆ ಸಂಜೆಗವಿದಂತಾ ದ್ರೋಣನಿಂ ಕೊಳ್ಗುಳಂ (ಪಂಪಭಾ. ೧೨-೨೫).

[ಸಂಜೆ + ಕವಿ]

**ಸಂಜೆಗಳ್ಳ** (ನಾ). ಇರುಳುಗಳ್ಳ ; ರಾತ್ರಿಕಳ್ಳ : ಸಂಜೆಗಳ್ಳನೆ ನಿಲ್ಲು ಕೊಂದುಂಬೆ ನಿನ್ನನೆನಲು (ಭರಭ. ೮-೨೬). [ಸಂಜೆ + ಕಳ್ಳ]

**ಸಂಜೆಗಿರಣ** (ನಾ). ಸಂಜೆಯ ಹೊತ್ತಿನ ಕಿರಣ, — ರಶ್ಮಿ : ಸಂಜೆಗಿರಣ ನೆಯ್ದಿರುವ ಕಾವಿ ಆ ಮೇಘಲಿಂಗಕೆಂದು ! (ನಲಮು. ೩೪-೨೦). [ಸಂಜೆ + ಕಿರಣ]

**ಸಂಜೆಗೆಂಪು** (ನಾ). ಸೂರ್ಯ ಮುಳುಗುವ ಸಮಯದಲ್ಲಿ ಉಂಟಾಗುವ ಕೆಂಪು ಬಣ್ಣ, — ಅರುಣವರ್ಣ ; ಸಂಧ್ಯಾರಾಗ : ಚನ್ನೆಯ್ದಿಲ್ಗೊಳದವೊಲಾಯ್ತು ಸಂಜೆಗೆಂಪಿನಿಂ ಗಗನತಳಂ (ಕಾದಂಪೂ. ೫೧೧); ಕಂಜಬಾಂಧವನಸ್ತಮಿಸೆ ಪಡುವಣವೆಣ್ಣು ಮುಂ ಚೇತನಗುಂದಿ ತನ್ನ ಮಂಜುಲವದನದ ತಂಬುಲವುಗುಳ್ದಂತೆ ಸಂಜೆಗೆಂಪೆಸೆದಿರ್ದುದು (ಮೋಹತ. ೧೫-೪); ರವಿ ಮುಳುಗಿಹನು ; ಕಂದಿತು ಸಂಜೆಗೆಂಪು (ಕವಿಪು. ೨೪-೫).

[ಸಂಜೆ + ಕೆಂಪು]

**ಸಂಜೆದಾರಕಿ** 'ಸಂಜೆದಾರಗೆ' ನೋ.

**ಸಂಜೆದಾರಕೆ** (ನಾ). ಸಾಯಂಕಾಲದ ಸಮಯದಲ್ಲಿ ಗಗನದಲ್ಲಿ ಮೂಡುವ ನಕ್ಷತ್ರ ; ಸಂಜೆಯ ತಾರೆ : ಹೆಚ್ಚಿತು ಪಡುಗೆಂಪು ಸಂಜೆದಾರಕೆ ಮೂಡಿಯುಚ್ಚಹವನು ಬೀಱಿದುವು (ಕಂನವಿ. ೯-೧೭೭). [ಸಂಜೆ + ತಾರಕೆ]

**ಸಂಜೆದಾರಗೆ , ಸಂಜೆದಾರಕಿ** (ನಾ). = ಸಂಜೆದಾರಕೆ : ಸಂಜೆದಾರಗೆ ಮೂಡಿ ಭೂಮಿಗೆ ಸಿಡಿದ್ಯೆತರುವೊಲೊಪ್ಪಿದುದು (ಕಬಿವಿ. ೧೨-೨೦). **ಸಂಜೆದಾರಕಿ :** ಮೆಲ್ಲಮೆಲ್ಲನೆ ತರಣಿ ಮುಳುಗಿದಂ ಪಡುಗಡಲೊಳಲ್ಲಿಗಲ್ಲಿಗೆ ಮೂಡಿದುವು ಸಂಜೆದಾರಕಿ [ಪಾಠಾಂ.ಗೆ]ಗಳ್ (ಜೈಮಿಭಾ . ೨೭-೫). [ಸಂಜೆ + ತಾರಗೆ]

**ಸಂಜೆದಾರೆ** (ನಾ). = ಸಂಜೆದಾರಕೆ : ಹರುಷದೆ ಮುತ್ತಿನ ಸೇಸೆದಳೆದವೊಲು ಮೆಱೆದುವು ಸಂಜೆದಾರೆಗಳು (ಕಂನವಿ. ೨೧-೧೦೦). [ಸಂಜೆ + ತಾರೆ$_2$]

**ಸಂಜೆದೀವಿಗೆ** (ನಾ). ಸಾಯಂಕಾಲದ ಸಮಯದಲ್ಲಿ ಹಚ್ಚುವ ದೀಪ : ಶ್ರೀಮತು ಹೆಬ್ಬೊಳಲ ಕೊಂಗಳೇಸ್ವರದೇವರಿಗೆ ಸುಂಕದ ಹೆವ್ಮಾಡಿಯಣ್ಣ ಅರಿಸ . . . ಸಂಜೆದೀವಿಗೆಗೆ ಕೊಟ್ಟ ಗದ್ಯಾಣ ೧ ರ ಧರ್ಮ್ಮ (ಎಕ. IV, ಕೃಷ್ಣರಾ. ೪೧-೫ ; ಸು. 950 ?). [ಸಂಜೆ + ದೀವಿಗೆ]

**ಸಂಜೆಬಿಸಿಲು** (ನಾ). ಇಳಿಹೊತ್ತಿನ ಬಿಸಿಲು ; ಸಾಯಂಕಾಲಸಮಯದ, ತೀಕ್ಷ್ಣವಲ್ಲದ ಬಿಸಿಲು : ಆ ಸಂಜೆಬಿಸಿಲಿನಲ್ಲಿ, ಆ ಕಾಡಿನಲ್ಲಿ ಎತ್ತ ನೋಡಿದರೂ ಸುಂದರವಾದ ನೋಟವೇ (ಕಳಹು. ೨). [ಸಂಜೆ + ಬಿಸಿಲು (< ಬಿಸಿಲ್)]

**ಸಂಜೆಮಂತ್ರ** (ನಾ). ಸಂಧ್ಯಾವಂದನೆ ; ಆಹ್ನಿಕ : ಅಱನಂ ಬಿಟ್ಟೊಳ್ವ ಸಂಜೆಮಂತ್ರದ ಪುಟ್ಟಿದ ಮನೆ ಪೊಲ್ಲ ವೇದಮದಱಿಂದೊಲ್ಲಂ (ಸಮಪ. ೧೩-೨೪). [ಸಂಜೆ + ಮಂತ್ರ]

**ಸಂಜೆಮಟ** (ನಾ). ಸಂಧ್ಯಾವಿಧಿಗಳನ್ನು ನಿರ್ವಹಿಸಲು ಏರ್ಪಡಿಸಿದ ಸ್ಥಳ : ರವಿದೇವನೊಲ್ದು ಸಂಭಾವನೆಯಿನ್ದೆ ಮಾಡಿಸಿದ ಸಂಜೆಮಟಂ ಪ್ರಪೆಗೋಪುಚಾರ ವಿಶಾವಸಥ ಮುರಾರಿಭವನ ದ್ವಿಜಸತ್ರ ಮಿxxxನ್ತಿರೆ ನಾನಾವಿಧಧರ್ಮಂ (ಸೌಇಇ. IX - i , ೧೫೮-೨೫; 1090). [ಸಂಜೆ + ಮಟ]

**ಸಂಜೆಮಲ್ಲಿಗೆ** (ನಾ). ಸಾಯಂಕಾಲದ ಸಮಯದಲ್ಲಿ ಮಾತ್ರ ಅರಳುವ ಒಂದು ಬಗೆಯ ಔಷಧೋಪಯುಕ್ತವಾದ ಹೂವು : ಅರಳೀಮರದ ಒಳನಾರು ಜೀರಿಗೆ . . . ಸಂಜೆಮಲ್ಲಿಗೆ ಬೇರು ಒಂದು ಭಾಗ . . . ಜೇನುತುಪ್ಪದಲ್ಲಿ ಸೇವಿಸುವುದರಿಂದ ಪುರಾಣಜ್ವರ ಮಾಣ್ಗುಂ (ಸಕವ್ಯ. ೪೦೫ ಪ೦). [ಸಂಜೆ + ಮಲ್ಲಿಗೆ]

**ಸಂಜೆಮಲ್ಲೆ** (ನಾ). = ಸಂಜೆಮಲ್ಲಿಗೆ : ದಳದಳಿತ ಸಂಜೆಮಲ್ಲೆಗಳ ಪೂವೆಂಬಿನ ಬೆಳದಿಂಗಳಿಂದೆನೆ ಕಣ್ಬಯಲ ಚಲುವನೀವುದರಸಿಯ ಕೆಱೆಯೊಳು (ಮ್ಯಆರಿ. ೧೯೨೮, ೯-೩೧; 1183). [ಸಂಜೆ + ಮಲ್ಲೆ (< ಮೊಲ್ಲೆ)]

**ಸಂಜೆಮುಗಿಲ್** (ನಾ). ಸಾಯಂಕಾಲದ ಕೆಂಬಣ್ಣದಿಂದ ಕೂಡಿದ ಮೋಡ : ಬಾಳುಡಿ ಪಾಱೆ ಬೀೞೆ ಪಗಲುಳ್ಕದವೊಲ್ ರುಧಿರಂ ದಿಗಂತಮಂ ಮೇಳಿಸಿ ಕೊರ್ವಿ ಕಲ್ಪದವಸಾನದ ಸಂಜೆಮುಗಿಲ್ಗಳಂದಮಂ ಪಾಳಿಸೆ . . . ಭಯಂಕರಮಾಯ್ತು ತುರಂಗಸಂಗರಂ (ಪಂರಾಮಾ. ೧೩-೬೩); ನಭಮಂ ಸಂಜೆಮುಗಿಲ್ ಪಗಿಲ್ತ ತೆಱದಿಂ ತಳ್ಪೊಯ್ಯೆ ಭೂಷಾಮಣಿಪ್ರಭೆ . . . ಬಂದಳ್ ಕುಡುತುಂ ಶಶಿಪ್ರಭೆ ಜನಾಕ್ಷೀಂದೀವರಾನಂದಮಂ (ಚಂದ್ರಪ್ರ. ೬-೬೯), ಬಿಂಜಡದವಿಯೊಳಿಳಾಪತಿ ಸಂಜೆಮುಗಿಲ್ದುಱುಗಲಂತೆ ರುಧಿರಾರುಣದಿಂ ರಂಜಿಸುತಿರ್ಪಿನಂ (ದಶಕು. ೨-೬೦). [ಸಂಜೆ + ಮುಗಿಲ್]

**ಸಂಜೆಯುರಿ** (ನಾ). ಬೈಗುಹೊತ್ತಿನ ತೇಜ, — ಪ್ರಕಾಶ : ನಲ್ನಿಶೆಯೊಳ್ ಆಱುತಿರೆ ಸಂಜೆಯುರಿ (ಅಶ್ವತ್ಥಾ. ೧೨-೨೪೯). [ಸಂಜೆ + ಉರಿ$_2$]

**ಸಂಜೆವರಿ** (ಕ್ರಿ). ಕತ್ತಲೆ ಹರಿ ; ರಾತ್ರಿ ತೀರು, — ಮುಗಿ : ಸಂಜೆವರಿದು ಮಹಾಲಿಂಗ ಗಜೇಶ್ವರನ ಬರವಿಂಗೆ ಬೆಳಗಾಯಿತ್ತು (ಸರ್ವವ. ೭೧-೩೪೯). [ಸಂಜೆ + ಪರಿ$_2$]

**ಸಂಜೆವಱೆ** (ನಾ). ಸಾಯಂಕಾಲದಲ್ಲಿ ಬಾರಿಸುವ ನಗಾರಿ, — ಹರೆ : ಸಂಜೆವಱೆ ಮೊಳಗಿದುವು ಪಾಳೆಯದೊಳು (ಚಬಪು . ೪೭-೪೭). [ಸಂಜೆ + ಪಱೆ$_1$]

**ಸಂಜೆವಾರಿಸು** (ಕ್ರಿ). ಸಾಯಂಕಾಲದಲ್ಲಿ ಸೂರ್ಯನಿಗೆ ಅರ್ಘ್ಯವನ್ನು ಕೊಡು : ಒಂದು ದಿವಸಂ ಸಂಜೆವಾರಿಸಲೆಂದು ಪೋದಲ್ಲಿ ಆದಿತ್ಯಂಗಿದಿರಂ ನೀರಂ ಸೂಸುವಾಗಳ್ ಬೆರಲಿಂದಮುರ್ಚಿ ನೀರ್ವೆರಸು ಸೂಸಿ ತಾಮಱೆಯೊಳುಂಗುರಂ ಬಿಬ್ದಿತ್ತು (ವಡ್ಡಾರಾ. ೫-೩). [ಸಂಜೆ + ಬಾರ್$_1$ + - ಇಸು$_3$]

**ಸಂಜೆವಾಸ** (ನಾ). ಸಂಧ್ಯಾವಂದನೆ : ನಿಟ್ಟೆಯೊಳೆ ಸಂಜೆವಾಸಂ ಕೆಟ್ಟನಿವಂ ವಿಪ್ರಜ್ಯನನೆನವೇಡಱನಂ ಬಿಟ್ಟೊಳ್ವ ಸಂಜೆಮಂತ್ರದ ಪುಟ್ಟಿದ ಮನೆ ಪೊಲ್ಲ ವೇದಮದಱಿಂದೊಲ್ಲಂ (ಸಮಪ. ೧೩-೨೪). [ಸಂಜೆ + ವಾಸ$_1$]

**ಸಂಜೆವೆಱ** (ನಾ). ಸಾಯಂಕಾಲದ ಚಂದ್ರ : ಕೆಮ್ಮುಗಿಲ ತಳ್ಪೊರೆಯ ಮಱೆಯೊಳ್ ಮಿಱುಪ ಸಂಜೆವೆಱೆಯ ಮುಱುಕಮಂ ಮೆಱೆದುಂ (ವರ್ಧಪು. ೧೦-೫ ವ). [ಸಂಜೆ + ಪೆಱ]

**ಸಂಜೆವೊಟ್ಟು , ಸಂಜೆಹೊತ್ತು** (ನಾ). ಸಾಯಂಕಾಲದ ಸಮಯ ; ಇಳಿಹೊತ್ತು ; ಬೈಗು : ಹಯಕಂಠನುರಃಕಮಳಾಲಯದಿಂ ಸಿರಿ ಸಂಜೆವೊಟ್ಟು ಬರೆ ಮುಷಿತ ಸುಖೋದಯೆಯಾಗಿ ಪುಗಿಸಿ ತದ್ಭೀತಿಯಿಂದೆ ಮುಚ್ಚುವವೊಲಾಯ್ತು ನಳಿನನಿಕೋಚಂ (ವರ್ಧಪು. ೮-೨೪). **ಸಂಜೆಹೊತ್ತು :** ಅವರು ಪ್ರತಿದಿನ ಸಂಜೆಹೊತ್ತು ಹೊರಗೆ ತಿರುಗಾಡಿ ಕೊಂಡು ಬರುವ ಅಭ್ಯಾಸವಿಟ್ಟುಕೊಂಡಿದ್ದಾರೆ (ರೂಢಿ).

[ಸಂಜೆ + ಪೊಟ್ಟು]

**ಸಂಜೆಸಮಾಧಿ** (ನಾ). ಸಾಯಂಕಾಲದ ಸಮಯದಲ್ಲಿ ಮಾಡುವ ಜಪ,- ಧ್ಯಾನ : ಲಿಂಗಾರ್ಚನೆಯಿಲ್ಲದ ಮುನ್ನ ಸಿಂಗಿಯನಾರೋಗಿಸಿದಿರಿ ಸಂಜೆಸಮಾಧಿಗಳಿಲ್ಲದ ಮುನ್ನ ಉಂಡಿರಿ (ಅವಚಂ. ೩೪-೧೪೩). [ಸಂಜೆ + ಸಮಾಧಿ]

**ಸಂಜೆಹೊತ್ತು** 'ಸಂಜೆವೊಟ್ಟು' ನೋ.

**ಸಂಜೋಕ** 'ಸಂಜೋಗ$_2$' ನೋ.

**ಸಂಜೋಗ$_1$** (ನಾ). ೧. ತೀವ್ರವಾದ ತಪಸ್ಸು ; "ತೀಕ್ಷ್ಣವಾದ ಯೋಗ" (ಪ್ರಭಣ್ಣ): ಕಂಜಬಾಂಧವ ಚಂದ್ರ ಶತಕೋಟಿತೇಜಃಪುಂಜ ಶಾರ್ದೂಲಚರ್ಮದಲಿ ಸಂಜೋಗದೆ ಕುಳಿತಿರ್ದ ತಪೋಗ್ರತೆಗಂಜದೆ ಕಾಮ ನಿಟ್ಟಿಸಿದ (ಮೋಹತ. ೭-೩೩). ೨. ಒಪ್ಪಂದ; ಕರಾರು (?) : ಉಪ್ಪಿನ ಪೆ[ಂ ಟೆ] ಅಱುವತ್ತು ನಂದಾದೀವಿಗೆಯ ಸೊಡರೆಣ್ಣೆಗೆ ತಿಂಗಳಿಂಗೆ ಒಂದು ಪಣಮಂ ಬಿಟ್ಟರಿಂತೀ ಧರ್ಮ್ಮಮಂ ಖೇಣಿ ಸಂಜೋಗವೆನ್ನದೆ ಕಯ್ಕೊಂಡು ನಡಸುವರ್ (ಸೌಇಇ. XX, ೬೦-೨೭; 1088).

[< ಸಂ. ಸಂಯೋಗ]

**ಸಂಜೋಗ$_2$, ಸಂಜೋಕ** (ನಾ). ೧. ಕವಚ; ಚಿಲಖಿತ್ತು : ಅವರ ಸಂಜೋಗ ಬಿರಿದು ಕುಱುಪುಗಳನಂದವರಿಗಿತ್ತಾ ಬೈಚಪ್ಪ ಕುವರನ ಕುದುರೆಯನಾ ವಣಿಗ್ವರ ತಂದ ಹವಣಿನೊಳಗೆ ತರಿಸಿದನು (ಕುಲಾಸಾಂ. ೩೮-೭೪); ಮಿಗೆ ತನಗೆ ಸಂಜೋಗಮಂ ತೊಟ್ಟು ಹಯತತಿಗೆ ಮೊಗರಂಬ ಕಡಿಯಣಂಗಳನಿಟ್ಟು ಪಲ್ಲಣದ ಬಿಗುಹುಗಳ ತಾಪಣೆಯ ಲೇವೆಗಳನಳವಡಿಸಿ (ಚಬಪು. ೪೮-೫೧). ೨. ಏಕರೂಪದ ಉಡುಪು ; ಸಮವಸ್ತ್ರ : ಸಾರೋಟವನ್ನು ನಡೆಯಿಸುವ ಸಾರಥಿ ಭೀಮಣ್ಣನಿಗೆ ವಿಶಿಷ್ಟಪ್ರಕಾರದ ಒಂದು ಸಂಜೋಗ (ಸಮವಸ್ತ್ರ)ವಿರುವುದು (ಜನಜೀ. ೧೩೭). ೩. ಜೀನು ; ತಡಿ : ಮುತ್ತಿನ ಸಂಜೋಗದ ಕುದುರೆಯನೇಱಿಯುತ್ತಮರಾವುತರೆಯ್ದೆ (ಜೀವಂಸಾಂ. ೫-೩೮); ಕಡಲೆಂಬ ಸಂಜೋಗದಮಳಸ್ಯಂಧವಗಳಂ ಪಿಡಿದರಿಕ್ಕೆಲದಲ್ಲಿ ಸಾಣಿಗಳು ಸಿಂಗರಿಸಿ ಪೊಱಮಟ್ಟರಾ ಕುವರರು (ಭಾವಚಂ. ೮-೩). ೪. ಸರಕು ; ಸಾಮಗ್ರಿ : ಎತ್ತಿನ ಮೇಲೆ ದಂಡಿನ ಸಂಜೋಗವ ಮತ್ತಾಗಲುಱೆ ಹೇಱಿಕೊಂಡು ಬಿತ್ತರದೊಳಗೈತಹ ವಾಣಿಜಿಕರ ಮೊತ್ತವ ಬಣ್ಣಿಪರಾರು (ಕಂನವಿ. ೧೧-೩೯). ೫. ತಯಾರಿ ; ಸಿದ್ಧತೆ ; ಸನ್ನಾಹ : 'ಸಂಜೋಗಿಸು' ಪರಾ. **ಸಂಜೋಕ :** ೫. ಆ ಕುಮಾರನ ಮನವನಱಿದತಿ ಭೀಕರಾಹವಕೆನುತ ಜೋದರು ಜೋಕೆಯಲಿ ಸಂಜೋಕವನು ಮಾಡಿದರು ತದ್ಗಜವ (ತಿಮ್ಮಅ. ೫-೫೨).

**ಸಂಜೋಗಮಾಗು** = ಸನ್ನದ್ಧವಾಗು ; ಸಜ್ಜಾಗು : ಗುಳಮನಿಕ್ಕಿದರಾನೆಗಳ್ಗೆ ಪಲ್ಲಣಮನಿರದಳವಡಿಸಿದರ್ ಕುದುರೆಗಳ್ಗೆ ತೇರ್ಗಂ ವಾಜಿಗಳನ್ಕದೆ ಕಟ್ಟಿದರ್ ಸಂಜೋಗಮಾಗಿ ಕಾಲಾಳ್ಗಳುಂ ಪೊಱಮಟ್ಟರು (ಚಬಪು. ४२-೧೯).

[? ./ ಮರಾ. ಸಂಜೋಗಣೇ ./ ತೆಲು. ಸಂಜೋಕ]

**ಸಂಜೋಗಿಸು** (ಕ್ರಿ). ೧. ತಯಾರು ಮಾಡು ; ಸಜ್ಜುಗೊಳಿಸು : ಅಂತು ಪಾಕಂಗೆಯ್ದೆಲ್ಲಮಂ ಸಂಜೋಗಿಸಿ ಗಣನಿವಹಮಂ ಬರಿಸಿ (ವೃಷವಿ. ೧೪-೨೮ ವ). ೨. ಸಿದ್ಧವಾಗು; ಸನ್ನದ್ಧವಾಗು: ಇಂತು ವಿರಾಜಿಪ ವೀರರಾಜೇಂದ್ರ ವಿಕ್ರಮೋತ್ತುಂಗಂ ಸಂಗ್ರಾಮಕ್ಕೆ ಸಂಜೋಗಿಸಿ ಸಾಸವಿಮ್ಮಡಿಸಿ ಸನ್ನೆದೋಱೆ (ಹಮ್ಮಿರ. ೩-೩೮ ವ). [ಸಂಜೋಗ$_2$ + - ಇಸು$_3$]

**ಸಂಜೋಡಿಸು** (ಕ್ರಿ). ಅನುಗೊಳಿಸು : ಪಯಣವನು ಸಂಜೋಡಿಸೆಂಬನಿತರಲಿ ಅಪರಾಚಲಕೆ ರವಿಯಿಳಿದ (ಜಿರಾಮಾ. ೩೮೩-೨೧). [ಸಂಜೋಡಣೆ + -ಇಸು]

**ಸಂಜ್ಞ** (ಗು). ೧. ಎಚ್ಚರವಾಗಿರುವ ; ಪ್ರಜ್ಞೆಯಿರುವ. ೨. ಹೆಸರಿಸಿದ ; ಕರೆದ. (ನಾ). ೩. ಹೆಸರು; ಅಭಿಧಾನ: ಅತಿಮುಕ್ತಸಂಜ್ಞದ ರುದ್ರಭೂಮಿಯೊಳಗೆ ಯತಿಪತಿ ನಿಂದಿರೆ ಶೂಲಿಪತಿ ಗೌರಿಯೊಡಗೂಡಿ . . . ಬಪ್ಪಲ್ಲಿ ಕಂಡೆಜಗೆ (ವರ್ಧಚ. ೧೧-೫೯). [ಸಂ.]

**ಸಂಜ್ಞಪನ** (ನಾ). ಕೊಲ್ಲುವಿಕೆ ; ವಧೆ : "ಮಾರಣಂ, ನಿಶರಣಂ . . . ಹಿಂಸಾ, ಸಂಜ್ಞಪನಂ — ಈ ೨೧ ಕೊಲೆ" (ಹಲಾಯು. ೭೮-೩೨೩). [ಸಂ.]

**ಸಂಜ್ಞಾಕಹಳೆ** (ನಾ). ಸಾಂಕೇತಿಕವಾಗಿ, ಸೂಚನೆ ಕೊಡಲು ಊದುವ ಕಹಳೆ : ಹೊರಗೆ (ಸಂಜ್ಞಾಕಹಳೆ) (ತನ್ನ ಸೇನಾಪತಿಗಳೊಡನೆ ಬನ್ನೂರ ಲಿಂಗಣ್ಣನ ಪ್ರವೇಶ) (ಬಿಬ್ಬುಅ. ೬೪-೪). [< ಸಂ. ಸಂಜ್ಞಾಕಾಹಲಾ]

**ಸಂಜ್ಞಾತತ್ವ** (ನಾ). [ಜೈನ] ಏಳು ಬಗೆಯ ಅನ್ವಯಕ್ರಿಯೆಗಳಲ್ಲಿ ಒಂದು : ನಾಲ್ಕತ್ತೆಂಟು ದೀಕ್ಷಾನ್ವಯಕ್ರಿಯೆಗಳುಮಂ ಸಂಜ್ಞಾತತ್ವಂ ಮೊದಲಾಗೇಟನ್ವಯ ಕ್ರಿಯೆಗಳುಮನಱಿಪಿ (ಆಜಿಪು. ೧೨-೧ ವ). [ಸಂ.]

**ಸಂಜ್ಞಾನ** (ನಾ). ೧. ಇಂದ್ರಿಯಜ್ಞಾನ ; ತಿಳಿವಳಿಕೆ ; ಸಂವೇದನೆ : ಸಂಜ್ಞಾನವೆಂಬುದು ಮೂಲದ ಇಂದ್ರಿಯಜ್ಞಾನ ಅಥವಾ ವೇದನೆ — ಅನಿಸಿಕೆ (ವಿಚಾವಾ. ೧೯) ; ಅದರ ಹೊಳಪು ಬಣ್ಣಗಳು ಭಾಸವಾಗಿ ನಮಗೆ ಅದರ ಸೌಂದರ್ಯದ ಅನುಭವವಾಗುತ್ತದೆ . . . ಸಂಜ್ಞಾನವು ವಸ್ತುತಃ ಯಂತ್ರಮಾತ್ರದ ಕೆಲಸವಲ್ಲ (ಜೀವಾತ್ಮ. ೧೧೨). ೨. [ವೈಷ್ಣವ] (ವೈಖಾನಸಾಗಮದ ಪ್ರಭೇದವಾದ ಸಂಹಿತೆಯ) ಎಂಟು ಬಗೆಯ ಆಗಮಗಳಲ್ಲಿ ಒಂದು : ಮರೀಚಿಮಹರ್ಷಿಪ್ರೋಕ್ತವಾದ ಜಯ (ಆದಿ), ಆನಂದ, ಸಂಜ್ಞಾನ, ವೀರ, ವಿಜಯ, ವಿಜಿತ, ವಿಮಲ, ಕಲ್ಪಗಳೆಂಬ ಎಂಟು ಆಗಮಗಳು "ಸಂಹಿತೆ" ಗಳೆಂದೂ . . . ಪ್ರಖ್ಯಾತವಾಗಿವೆ (ಭಾರದ. ೬೫). ೩. [ಜೈನ] = ಸಮ್ಯಗ್ಜ್ಞಾನ ೨ : 'ಸಂಜ್ಞಾನಪಂಚಕ' ಪರಾ. ೪. [ಬೌದ್ಧ] ಐದು ಬಗೆಯ ಸ್ಕಂಧಗಳಲ್ಲಿ ಒಂದು ; ನಾಮನಿರ್ದೇಶದಿಂದುಂಟಾಗುವ ಪರಿಜ್ಞಾನ: ರೂಪವೇದನಾ ವಿಜ್ಞಾನ ಸಂಜ್ಞಾನ ಸಂಸಾರಸಾರಂಗಳೆಂಬಯ್ದುಂ ಸ್ಕಂಧಂಗಳ್ ದೀಪಶಿಖಾರೂಪದಿಂ ಕ್ಷಣವಿಳಂಬಿಗಳ್ (ಶಾಂತಿಪು. ೮-೧೪೨ ವ). 'ರೂಪಸ್ಕಂಧ' ಪರಾ. [ಸಂ.]

**ಸಂಜ್ಞಾನಪಂಚಕ** (ನಾ). [ಜೈನ] ಅಭಿನಿಬೋಧ ಅಥವಾ ಮತಿಜ್ಞಾನ, ಶ್ರುತಜ್ಞಾನ, ಅವಧಿಜ್ಞಾನ, ಮನಃಪರ್ಯಯಜ್ಞಾನ ಮತ್ತು ಕೇವಲಜ್ಞಾನಗಳೆಂಬ ಐದು ಬಗೆಯ ಸಮ್ಯಗ್ಜ್ಞಾನಗಳು : ಅಭಿನಿಬೋಧಕಜ್ಞಾನಮುಂ . . . ಕೇವಲಜ್ಞಾನಮುಮೆಂಬೀ ಸಂಜ್ಞಾನಪಂಚಕಮುಂ (ಸುಕುಮಾ. ೮-೪ ವ). [ಸಂ.]

**ಸಂಜ್ಞಾಪ್ರಕೃಷ್ಟ** (ಗು). ಆಹಾರ, ಭಯ, ಮೈಥುನ, ಪರಿಗ್ರಹಗಳೆಂಬ ನಾಲ್ಕು ಬಗೆಯ ಸಂಜ್ಞೆ ಅಥವಾ ಇಚ್ಛೆಗಳಿಂದ ಜಗ್ಗಲ್ಪಟ್ಟ : ಕೆಲೆಯುತ್ತುಂ ಬರ್ಪ ತರುಣವೃಷಭನಂ ಕಂಡುದಱಿಂ ಧರ್ಮಾರ್ಥಕಾಮಮೋಕ್ಷಪ್ರಯೋಜನಂಗಳೊಳು ಮನುಷ್ಯರಾಹಾರಾಭಯ ಭೈಷಜ್ಯ ಮೈಥುನ ಪರಿಗ್ರಹ ಸಂಜ್ಞಾಪ್ರಕೃಷ್ಟಬಲಮಿಲ್ಲ ದುದಱಿಂ ಬಾಲಕಾಲದೊಳಂ ವೈರಾಗ್ಯದೆ ನೆಗಟ್ಟರು (ಚಾವುಂಪು. ೫೩). [ಸಂ.]

**ಸಂಜ್ಞಾರೇಖೆ** (ನಾ). ಭೂಮಿಯ ಒಂದು ಗೊತ್ತಾದ ಮಟ್ಟದಲ್ಲಿ ಅದರ ಮೇಲ್ಮೈಯ ಕ್ಷಿತಿಜತಲದ ಮಟ್ಟರೇಖೆ : ಈ ಸಂಜ್ಞಾರೇಖೆ ಸಮುದ್ರಮಟ್ಟದ ಮೇಲೆ ಒಂದೇ ಸಮನಾದ ಎತ್ತರದ ಭೂಭಾಗಗಳಲೆಲ್ಲಾ ಹೊಕ್ಕು ಬರುತ್ತದೆ (ಭೂವಿವ. ೩೫). [ಸಂ. ಸಂಜ್ಞಾರೇಖಾ]

**ಸಂಜ್ಞಿ** (ನಾ). [ಜೈನ] ಆಹಾರ, ಭಯ, ಮೈಥುನ, ಪರಿಗ್ರಹಗಳೆಂಬ ನಾಲ್ಕು ಸಂಜ್ಞೆಗಳಿರುವ ಜೀವಿ; ಪಂಚೇಂದ್ರಿಯಜೀವಿಗಳಲ್ಲಿ ಒಂದು ಬಗೆ : ಆ ಪಂಚೇಂದ್ರಿಯಮುಂ ಸಂಜ್ಞಿಯಸಂಜ್ಞಿಯೆಂಬ ಭೇದದಿಂದಿತ್ತೆಱನಕ್ಕುಂ (ಸುಕುಮಾ. ೮-೬ ವ); ಸಂಜ್ಞಿಗಳು ಆಹಾರ, ಭಯ, ಮೈಥುನ, ಪರಿಗ್ರಹಗಳೆಂದು ನಾಲ್ಕು ವಿಧವಾಗಿವೆ. ಇಂಥ ಸಂಜ್ಞಿಗಳುಳ್ಳ ಜೀವಗಳು 'ಸಂಜ್ಞಿ' ಎಂದು ಇಲ್ಲದವುಗಳು 'ಅಸಂಜ್ಞಿ'ಯೆಂದು ಹೇಳಲಾಗುತ್ತದೆ (ಜೈನಪ. ೨೦೦). 'ಅಸಂಜ್ಞಿ' ಪರಾ. [ಸಂ. ಸಂಜ್ಞಿನ್]

**ಸಂಜ್ಞಿಜೀವ** (ನಾ). = ಸಂಜ್ಞಿ : ಸಂಜ್ಞಿಜೀವಂ ಷಟ್ಪರ್ಯಾಪ್ತಕಮಕ್ಕುಂ (ಸುಕುಮಾ. ೮-೬ ವ). [ಸಂ.]

**ಸಂಜ್ಞಿತ** (ಗು). ೧. ಹೆಸರಿಸಲ್ಪಟ್ಟ; ಕರೆಯಲ್ಪಟ್ಟ. ೨. ಅಂಕಿತಗೊಳಿಸಿದ; ಅಧಿಕಾರ ನೀಡಿದ. ೩. ಗೌರವಿಸಲ್ಪಟ್ಟ ; ಪುರಸ್ಕರಿಸಲ್ಪಟ್ಟ. (ನಾ). ೪. ಅರ್ಚನೆ; ಪೂಜೆ: "ಕಾಂಚಿತಂ ಸಂಜ್ಞಿತಯೆನಲ್ಕರ್ಚನಂ" (ಮಂಗರಾ. ೧೩೨-೨೬). [ಸಂ.]

**ಸಂಜ್ಞು** (ಗು). ೧. ತಾಗುಮಂಡಿಗಳುಳ್ಳ. (ನಾ). ೨. ಒಂದಕ್ಕೊಂದು ತಾಗುವಂತಿರುವ ಮೊಣಕಾಲುಳ್ಳವನು ; ತಾಗುಮಂಡಿಯಿರುವವನು : "ಸಂಜ್ಞುಃ, ಸಂಹತಜಾನುಕಃ – ೨ ಒಂದಕ್ಕೊಂದು ತಗಲುವ ಮೊಣಕಾಲುಗಳುಳ್ಳವನ ಹೆಸರುಗಳು" (ಸಿದ್ಧಾಂತಿ. ೧೮೧). [ಸಂ.]

**ಸಂಜ್ಞೆ** (ನಾ). ೧. ಎಚ್ಚರ ; ಪರಿವೆ ; ಬಾಹ್ಯಪರಿಜ್ಞಾನ : ಸೋಂಕಿಗೊಯ್ಯನೆ ಸಂಜ್ಞೆ ಸಂಜನಿಸಿತಾ ಶ್ವೇನಿಸೂನುವಿಗೆ (ಶ್ರೀರಾಮಾ. ೨೬೦-೮೫೭). ೨. ಅರಿವು ; ಜ್ಞಾನ. ೩. ಸನ್ನೆ ; ಸೂಚನೆ : ಭರತನುರಿಯಿಕ್ಕಿದನ್, ಕಣ್ಣರಿತು ಗುರುಸಂಜ್ಞೆಯಿಂ (ಶ್ರೀರಾಮಾ. ೧೨೦-೨೨೪). ೪. ಗುರುತು ; ಚಿಹ್ನೆ : "ನೆಟ್ಟನಂಗೈಯನೌಂಕಲು ಹಾಗಮಿಂತ್ಯದೆ ಕೈಮಾಗಿ ಸಂಜ್ಞೆಯಕ್ಕುಂ" (ಮಂಗರಾ. ೧೦೩-೭); ಭೂಪಟಗಳಲ್ಲಿ ಎತ್ತರ ಸೂಚಿಸಲು ಸಾಧಾರಣವಾಗಿ ಸಂಜ್ಞೆಗಳನ್ನು ಕಲ್ಪಿಸಿಕೊಂಡಿದ್ದಾರೆ (ಭೂವಿವ. ೩೫). ೫. ಗಾಯತ್ರೀಮಂತ್ರ : "ನಾಮದೊಳು ಮಂತ್ರದೊಳು ಸಂಜ್ಞೆಯೆನಿಸಿರ್ಕು" (ಮಂಗರಾ. ೧೪೩-೨೦). ೬. ಹೆಸರು ; ನಾಮಧೇಯ : ಕಶ್ಯಪನುಮದಿತಿಯುಂ ವರುಣನ ಶಾಪಾದೇಶದೆ ಯದುವಂಶಜರಾದರ್ ವಸುದೇವ ದೇವಕೀಸಂಜ್ಞೆಗಳಿಂ (ಜಗವಿ. ೧-೭೫). ೭. ಚತುರಂಗಬಲ ; ಚತುರ್ಬಲ. ೮. ಶಿಕ್ಷೆ ; ದಂಡನೆ. "ಚತುರ್ಬಲ ನಿಜನಾಮ ಶಿಕ್ಷೆ ವರಚೇತನ ಸೂಚನೆಯಿಂತು ಸಂಜ್ಞೆಯಕ್ಕುಂ" (ನಾನಾರ. ೧೦೦). ೯. [ವ್ಯಾಕ] ವ್ಯಾಕರಣಪ್ರಕ್ರಿಯೆಯನ್ನು ಸೂತ್ರರೂಪದಲ್ಲಿ ತಿಳಿಸುವ ಪಾರಿಭಾಷಿಕಶಬ್ದ : ಉದಿತ ಪ್ರಕರಣಗಣ ಸೂತ್ರದಿಷ್ಟದಿಂ ಸಂಜ್ಞೆಯೊಡನೆ ಪೇಟಲ್ಪಡುಗುಂ (ಶಮದ. ೫೧). ೧೦. ವಿಶೇಷಾರ್ಥವನ್ನು ಹೊಂದಿರುವ ನಾಮಪದ ಅಥವಾ ನಾಮಧೇಯ : ಬೇರೆ ಬೇರೆಯಾಗಿದ್ದ ಅಕ್ಷರಗಳನ್ನು ಕೂಡಿಸಿ ಉಚ್ಚರಿಸುವುದಕ್ಕೆ ಸಂಧಿ ಎಂದೂ ಹಾಗೆ ಸಂಧಿಯಾದಾಗ ಆಗುವ ವ್ಯತ್ಯಾಸಗಳಿಗೆ ಸಂಧಿಕಾರ್ಯಗಳೆಂದೂ ಸಂಜ್ಞೆ (ಕೈಪಿಡಿ. ೭). [ಸಂ. ಸಂಜ್ಞಾ]

**ಸಂಜ್ಞೆವೀಸು** (ಕ್ರಿ). ಸಂಕೇತಸೂಚಕವಾಗಿ (ಕಾಳಗಸಮಯದಲ್ಲಿ ಕತ್ತಿ, ಬಾವುಟ ಮೊದಲಾದುವನ್ನು ) ಬೀಸು ; ಸನ್ನೆಮಾಡು : (ಖಡ್ಗವನ್ನುರ್ಚಿಕೊಂಡೆತ್ತಿ ಸೈನಿಕರಿಗೆ ಸಂಜ್ಞೆವೀಸಿ . . . ಬಂದಿಗಳೊಡನೆ ಹೊರಟುಹೋಗುವನು) (ಮಂತ್ರಶ. ೨೨-೨೩). [ಸಂಜ್ಞೆ + ಬೀಸು]

**ಸಂಜ್ಯೋತಿ** (ನಾ). ಅತಿಶಯವಾದ ಬೆಳಕು, — ಕಾಂತಿ : ಪುರಾಂತಕನಜರ ನಮರನಯೋನಿಜಂ ಶಿವಭಜನರತ್ನಂ ಶರಣನಿಧಿಯಾಸ್ಥಾನಸಂಜ್ಯೋತಿ [ಪಾಠಾಂ. ಸಂಜೋತಿ, ಸಜ್ಯೋತಿ] (ಬಸಪು. ೨೧-೫೪). [ಸಂ. ಸಂಜ್ಯೋತಿನ್]

**ಸಂಜ್ವರ** (ನಾ). ೧. ಅತಿಯಾದ ತಾಪ, — ಕಾವು : "ಸಂತಾಪಃ, ಸಂಜ್ವರಃ — ೨ ಬಿಸಿಯ ಹೆಸರುಗಳು" (ಸಿದ್ಧಾಂತಿ. ೨೩). ೨. ಅತಿಯಾದ ತಾಪದಿಂದ ಕೂಡಿದ ಜ್ವರ ; ಸಂಪೂರ್ಣಕಾವಿನ ಜ್ವರ : ಅಂಗದೊಳೆತ್ತಲುಂ ಪುಗುಳ್ ಮೂಡಿರೆ ಬೀಳ್ಪುದರ್ಕಕರಕಲ್ಪಿತಸಂಜ್ವರನೊಂದು ಕುಂಜರಂ (ರಾಜಶೇ. ೫-೩೯). [ಸಂ.]

**ಸಂಜ್ವಲನ , ಸಂಜ್ವಳನ** (ನಾ). ೧. ತೀವ್ರವಾದ ತಾಪ ; ಹೆಚ್ಚಿನ ಬಿಸಿ. ೨. [ಜೈನ] ಚಾರಿತ್ರ್ಯದ ಪರಿಪೂರ್ಣತೆಗೆ ಸಾಧಕವಾದ ಕರ್ಮ ; "ಯಾವುದರಿಂದ ಚಾರಿತ್ರ್ಯದ ಪೂರ್ಣತೆಯಾಗುವುದಿಲ್ಲವೋ ಅದು ಸಂಜ್ವಲನವೆನಿಸುವುದು" (ಜೈನಪ. ೩೬೭): ಕ್ರಮಕ್ರಮದಿಂದಂ ಕ್ರೋಧಮಾನ ಮಾಯಾಲೋಭಸಂಜ್ವಲನಂಗಳಂ ಮೂಱುತೆಱದ ಕೃಷ್ಟಿಗಳಂ ಬೇಱಬೇಱ ಕಿಡಿಸಿ (ಆದಿಪು. ೧೦-೧೪ ವ); ಅಪ್ರತ್ಯಾಖ್ಯಾನ ಪ್ರತ್ಯಾಖ್ಯಾನ ಸಂಜ್ವಲನ ಕ್ರೋಧಮಾನಮಾಯಾ ಲೋಭಕಷಾಯ ವೇದನೀಯಮೆನಿಸಿಯುಮಿರ್ಪತ್ತೆಂಟು ತೆಱನಪ್ಪ ಮೋಹನೀಯಮುಮಂ (ಸುಕುಮಾ. ೩-೩೯ ವ). **ಸಂಜ್ವಳನ :** ೨. ಅಪ್ರತ್ಯಾಖ್ಯಾನ ಕ್ರೋಧಮಾನಮಾಯಾ ಲೋಭಂಗಳಂ ನಿರಾಕರಿಸಿ ಬಟೞಯಂ ಸಂಜ್ವಳನ ಕಷಾಯ ಚತುಷ್ಕನೋಕಷಾಯ

ನವಕನಾಮತ್ರಯೋದಶಪ್ರಕೃತಿಗಳನರೆದು (ಶಾಂತಿಪು. ೧೧-೧೧೧ವ); ಸಂಜ್ವಳನಕ್ರೋಧಮಾನ ಮಾಯಾಲೋಭಮೆಂದು ಮೇಣು ಪದಿನಾಱು ಭೇದಮಕ್ಕುಂ (ಪಸಾರ. ೫೭೭). [ಸಂ.]

**ಸಂಜ್ವಲಿತ** (ಗು). ೧. ಅತಿಯಾದ ತಾಪದಿಂದ ಕೂಡಿದ ; ಪ್ರಜ್ವಲಿಸುವ. (ನಾ). ೨. [ಜೈನ] ಒಂದು ನರಕದ ಹೆಸರು : ವಾಲುಕಾಪ್ರಭೆಯೊಳ್ ತಪ್ತ ತಪಿತ . . . ಸಂಜ್ವಲಿತ ಸಂಪ್ರಜ್ವಲಿತ ನಾಮ ನವೇಂದ್ರಕ ತತ್ಸಂಬಂಧಿ ಶ್ರೇಢೀಬದ್ಧ ಪ್ರಕೀರ್ಣಕವಿಕಲ್ಪದಿಂ ಪಂಚದಶಲಕ್ಷಬಿಲಂಗಳಪ್ಪುವು (ತತ್ತ್ವಪ್ರ. ೧೨೦). [ಸಂ.]

**ಸಂಜ್ವಳನ** 'ಸಂಜ್ವಲನ' ನೋ.

**ಸಂಡ**$_1$ (ನಾ). ಉಸಲಿ ; ಗುಗ್ಗುರಿ : "ಗುಗ್ಗರಿ ಸಂಡಮಕ್ಕು" (ಮಂಗರಾ. ೧೧೦-೬).
[ದೇ. ‖ ತಮಿ. ಚುಣ್ಣಲ್]

**ಸಂಡ**$_2$ (ನಾ). ನಪುಂಸಕ ; ಷಂಡ : "ಷಂಢ — ಸಂಡ" (ಶಮದ. ೨೫೫ ಪ್ರಯೋ); ಏನೆಲೆ ಸಂಡ! ಪೆಂಡಿರ್ವಂದು ಕರೆಯೆ ಆಱನೆಂಬ ನಿನ್ನ ಗಂಡುಗಲಿತನಮಂ ಸುಡು! (ರಾಮಾಶ್ವ. ೬೧-೨೦). [< ಸಂ. ಷಂಢ]

**ಸಂಡಗೆ, ಸಂಡಿಗೆ, ಸೊಂಡಗೆ, ಸೊಂಡಿಗೆ** (ನಾ). ೧. ಅಕ್ಕಿ, ಅರಳು ಮುಂತಾದುವುಗಳಿಂದ ತಯಾರಿಸಿ, ಒಣಗಿಸಿ ಕರಿಯುವ ಒಂದು ಬಗೆಯ ನಂಚಿಕೊಳ್ಳುವ ವಸ್ತು, — ಪದಾರ್ಥ : ಜವೆ ತಿಲಮುರ್ದಿಂಗರಿಸಿನಮೆಂಬಿವ ನಿಂಬಾಗರೆದಿಕ್ಕಿ ಬಟೆಕ್ಕಿ ಮಾಟ್ಕಿ ಸಂಡಗೆಗಳುಮಂ (ಲೋಕೋಪ. ೮-೧೭); ಕುಂಬಳದ ಸಂಡಗೆಯ ಸೇವಗೆಯೆನಿಪ್ಪುವಿವು ಮೊದಲಾಗಿ ನೂರೆಸಂಡಗೆಯನು ಹುರಿಸಂಡಗೆಯ ಬಾಳಕವನು . . . ಸಂವರಿಸಿ ತಂದೊಪ್ಪಿಸಿದಡೆ (ಸಿದ್ಧರಾ. ೮-೫೨); ನಾಲ್ಕೈದು ಸೂಳೀ ತೆಱದಿ ತೊಳೆದು ಬಸಿದೊಡೆ ಹಿಂಡಿಯೊಳಗೆಯಿನಿಸೆಣ್ಣೆಯಿರದದನು ಹುಳಿಯುಪ್ಪನಿಕ್ಕಿ ಬಿಳಿಯ ಸಂಡಗೆಗಳಂ ಮಾಡೂದು (ಸೂಪಶಾ. ೨-೨೪). ೨. (ಆಲಂ) ತೀರಾ ಒಣಗಿಹೋದುದು ; ಗಟ್ಟಿಯಾದುದು : ಒಣಗಿ ಸಂಡಗೆಯಾಯಿತು (ಕನನ. ೭೪). **ಸಂಡಿಗೆ** : ೧. ಸಂಡಿಗೆ ಸಂಭಾರಗಡಲೆ ಪ್ರಾಸಕ ಕುಕ್ಕುಟಾಂಡವನವಲಕ್ಕಿಗಳನು ದುಂಡರಳ್ಗಡಲೆ ಭಕ್ಷ್ಯಗಳ ಬಡ್ಡಿಸಿಕೊಳುತುಂಡರು ನೆಱ ಸೊಕ್ಕುವನಕ (ಮೋಹತ. ೧೮-೮೭); ನಿಮ್ಮ ಮನೆಯ ಸಂಡಿಗೆ ಹಗುರವಾಗಿ ಚೆನ್ನಾಗಿದೆ (ಮಹಾಗ. ೧೪೫); ಮನೇ ತಿಂಬುವವನಿಗೆ ಕದ ಹಪ್ಪಳ ಸಂಡಿಗೆ (ಗಾದೆ). **ಸೊಂಡಗೆ** : ೧. ಕಡಲೆಯು ಬಾಡಿ ಬೆಂದುರುಳಿಗೊಂಡುದು ಸೊಂಡಗೆ ಕೂಡೆ ಸಂಬರಂ ಬಿಡದಗಸುಂಟುಗೊಂಡುದು ಮೊಸರ್ ಕೆನೆಗೊಂಡುದು (ಸೂಕ್ತಿಸು. ೧೧-೮೯). **ಸೊಂಡಿಗೆ** : ೧. ಜನನ ಸೊಂಡಿಗೆ ಹುರಿಯಬೇಕಣ್ಣ ನಿಜವಾಗಿ ನಿಂತು ತನುವ ತುಪ್ಪವ ಕಾಸಬೇಕಣ್ಣ (ಕನಕ. ೧೫೧-೩).
[ದೇ. ‖ ತುಳು. ಸಂಡಿಗೆ]

**ಸಂಡಗೆವತ್ತಿ** (ನಾ). ಬತ್ತಿಯ ಒಂದು ಕಟ್ಟು (?) : ಹತ್ತಿಯ ಹಸರದಲ್ಲಿ ದೇವರ ಸೊಡರಿಂಗೆ ಬತ್ತಿಗೆ ಸಂಡಗೆವತ್ತಿವೊಂದು (ಎಕ. XIX, ೩೮-೨೯; 1144).
[ಸಂಡಗೆ? + ಬತ್ತಿ]

**ಸಂಡಣೆ** 'ಸಾಂಡಣೆ' ನೋ.

**ಸಂಡಾಸ** (ನಾ). (ಉಕ) ಪಾಯಖಾನೆಯ ಮನೆ ; ಕಕ್ಕಸು : ಅವನು ಸಾಲೆಯ ಒಳಅಂಗಳವನ್ನು ಪ್ರವೇಶಿಸುವದಕ್ಕೂ ಸೋಮನಾಥನು ಸಂಡಾಸದಿಂದ ಹೊರ ಬೀಳುವುದಕ್ಕೂ ಸರಿಯಾಯಿತು (ರಂಗರೋ. ೯೩). [← ಹಿಂ. ಮರಾ. ಸಂಡಾಸ್]

**ಸಂಡಿಗೆ** 'ಸಂಡಗೆ' ನೋ.

**ಸಂಡಿಗೆಗುಂಬಳ** (ನಾ). ಸಂಡಿಗೆ ಮಾಡಲು ಉಪಯೋಗಿಸುವ ಒಂದು ಬಗೆಯ ಕುಂಬಳಕಾಯಿ ; ಬೂದುಗುಂಬಳ : "ಕೂಷ್ಮಾಂಡಕಃ, ಕರ್ಕಾರು — ಈ ೨ ಸಂಡಿಗೆಗುಂಬಳ" (ನಾಚಿರಾ. ೧೧೨); ಸಂಡಿಗೆ(ಬೂದಿ)ಗುಂಬಳ . . . ಕಫವಾತಕರ (ಅಪ್ಯಾಂಗ. ೧೩೭-೮೭). [ಸಂಡಿಗೆ (< ಸಂಡಗೆ) + ಕುಂಬಳ]

**ಸಂಡಿಗೆಗೆಯ್** (ಕ್ರಿ). ಸಂಡಿಗೆಯಂತೆ (ಸಣ್ಣ ಚೂರುಗಳಾಗಿ) ಮಾಡಿ ಒಣಗಿಸು : ಗಂಡನ ಪಿಡಿದು ನುಂಗಿದ ಮಿಾನ ತಾ ಚಿನಿಖಂಡವ ಕೊಯ್ವಂತೆ ಕೊಯ್ದು ಸಂಡಿಗೆಗೆಯಲು ಶಸ್ತ್ರದೊಳೂಱ ವರ ಮೇಲುಗೆಂಡದಿ ಕರೆಯ ಕಾಸಿದಳು (ಮೋಹತ. ೧೧-೪೭).
[ಸಂಡಿಗೆ (< ಸಂಡಗೆ) + ಕೆಯ್$_1$]

**ಸಂಡಿಶ** (ನಾ). ಒಂದು ಜೊತೆ ಇಕ್ಕುಳ, — ಚಿಮುಟ. [ಸಂ.]

**ಸಂಡೀನ** (ನಾ). ೧. (ಹಕ್ಕಿಗಳು) ಒಟ್ಟಿಗೆ ಹಾರುವಿಕೆ. ೨. ಪಕ್ಷಿಗಳ ಹಾರಾಟದ ಒಂದು ಬಗೆ ; ಪಕ್ಷಿಗಳು ಕೆಳಗೆ ಇಳಿಯುವಾಗ ಅಥವಾ ಎರಗುವಾಗ ಹಾರುವ ರೀತಿ : ಪಕ್ಷವಾತಂ ಪೀನಂ ಮೆಯ್ಬೆರ್ಚುವನ್ನಂ ಭ್ರಮಿಯಿಸಿ ಸೆಡೆದಂ ಡೀನ ಸಂಡೀನ ತಿರ್ಯಗ್ಡೀನೋಡ್ಡೀನಾವಡೀನ ಪ್ರಕೃತಿಗರುಡಂ (ಜಗವಿ. ೧೮-೯೪); ನೃಸಿಂಹನನಿರುಂಕುತ್ತಲುಡ್ಡೀನ ಸಂಡೀನ ಖಗಗತಿಯಿಂದ ಪಾಱ ಸುರಸೇನೆ ಜಯ ಜೀಯ್ಯ ಮರ್ಝು ಭಾಪೆನಲು (ವೀಶ್ವಪು. ೩-೬-೨೦). [ಸಂ.]

**ಸಂತ** (ಗು). ೧. ಶಾಂತವಾದ ; ಸಮಾಧಾನದಿಂದ ಕೂಡಿದ. ೨. ಮೃದುವಾದ ; ಮೆದುವಾದ. ೩. ಚೆಲುವಾದ ; ಮನೋಹರವಾದ. ೪. ಗೌರವಾರ್ಹವಾದ ; ಪೂಜ್ಯವಾದ : ಸಂತ ಷಡುದರ್ಶನಂಗಳೊಳು ತೀರ್ಥಕ್ಷೇತ್ರದೊಳು ತೀರ್ಥಾರ್ಥವಕ್ಕುಂ (ಮಂಗರಾ. ೧೫೪-೬೮); ಸಂತ ಅರಮನೆ ಕಳಸ ಹನ್ನೆರಡೆತ್ತಿ ಮೆರದಿಹುದು (ಬಿಜ್ಜಪು. ೨೩-೩೨). ೫. ಗೌರವಕ್ಕೆ ಪಾತ್ರನಾದ; ಪೂಜ್ಯನಾದ. (ನಾ). ೬. ನೆಮ್ಮದಿ; ಸಮಾಧಾನ : ಸಂತ[ಪಾಠಾಂ. ಸಂತಸ]ವಿದ್ದ ಮನೆಗೆ ಕೊಂತವ ತಂದಂತೆ ಇದನೆಂತು ಸಂತಯ್ಸುವೆನು (ಬಸವ. ೧೦೦). ೭. ಸೌಖ್ಯ; ಕ್ಷೇಮ : ದಿಗ್ವಿಜಯಮುಮಾದಂತೆ ಡಱದೆಯ್ದೆ ನಡೆದುದೆ ಸಂತಮೆ ದಕ್ಷಿಣಭುಜಕ್ಕೆ ಭೂವಲ್ಲಭನಾ (ಆದಿಪು. ೧೪-೪೮); ಕುಶಲಮೇ ಮುನಿಮಾಳಿಗೆ ಸಂತಮೇ ಗೃಹಸ್ತೋಮದ ವರ್ತನಕ್ಕೆ ಸುಖಮೇ ಸುರಕೋಟಿಗೆ (ಅನಂಪು. ೧೩-೨೫). ೮. ಶಾಂತರೀತಿಯಲ್ಲಿ ಮಾಡಿಕೊಳ್ಳುವ ಒಪ್ಪಂದ; ಸಂಧಾನ : ಹೋರಾಟವಲ್ಲದೆ ಸಂತವಿನ್ನಾಗದೆಂದಾರಯ್ದರವರು ತಮ್ಮೊಳಗೆ (ಭರಚ. ೫೧-೩); ಸಂತವ ಮಾಡಿಕೊಂಡೊಂದಾಗಿಹುದತ್ಯಂತ ಸಮ್ಮತ ಜಗಕರಸ (ಕಂನವಿ. ೧೩-೧೧). ೯. ಸಾತ್ತ್ವಿಕಸ್ವಭಾವದ ವ್ಯಕ್ತಿ; ಸಾಧು : ಸಂತರಾಗಲಸಂತರಾಗಲಿಯಂತ ಕಾಲದಲವರು ಬೀಳ್ವರು (ಸಂಭಪ. ೪-೧೫); ಈ ಪರಿಯಲಜ್ಞಾನಿಗಳು . . . ನೆಱ ಸಂತರಾವೆಂದು ಪಾವಕಜ್ವಲ ಸ್ತಬ್ಧರುಗಳೆಲೆ ಭೂಪ ಕೇಳ್ಕೆ ಪಶುವ ಕೊಲುವರು (ನಿಭಾಗ. ೧೧-೯-೨೦); ಸಂತರಾದವರೆಷ್ಟು ಉಪದೇಶವಿತ್ತರು ತಿದ್ದಿಕೊಳಲಾರರು ಖಳರು (ಇಂಚಾಪ. ೮೦-೮೭). ೧೦. ಮೋಕ್ಷಸಾಧನೆಯ ಮೂರು ಮುಖ್ಯಮಾರ್ಗಗಳಲ್ಲಿ ಒಂದಾದ ಭಕ್ತಿಮಾರ್ಗವನ್ನು ಅನುಸರಿಸುವವನು; ಭಕ್ತಿಪಂಥದ ಅನುಯಾಯಿ : ಅವರಲ್ಲಿ ಇಬ್ಬರು ಪಂಡಿತರು ಕೆಲಮಟ್ಟಿನ ಭಕ್ತರು, ಇಬ್ಬರು ಸಮರ್ಥರಾದ ಸಂತರು. ತುಕಾರಾಮ ಮತ್ತು ರಾಮದಾಸರೇ ಆ ಸಂತರು (ಮಸಾಹಿ. ೨೩). 'ಸಂತಕವಿ' ಪರಾ. ೧೧. ಸರಿಯಾದುದು : ನಿಮ್ಮ ಬೆಡಗು ಬಿನ್ನಾಣವನಱದೆನಾಗಿ ಎಂತಿರ್ದುದಂತೆ ಸಂತ [ಪಾಠಾಂ. ಸಂತು] (ಅವಚಂ. ೧೮೮-೮೪೮). 'ಸಂತಮಿಡು' ಪರಾ.

**ಸಂತಮಾಡು** = ಸಂಧಾನವನ್ನು ಮಾಡಿಸು; ರಾಜಿಮಾಡಿಸು : ಎನಗಿರ್ವರು ನೀವು ಬೇಕು ನಿಮ್ಮೊಳಗೇಕೆ ಮುನಿಸೆಂದಾ ಮನ್ಮಥನು ವನಜವನಾ ಸಸಿಯೊಳು ಸಂತ [ಪಾಠಾಂ. ಸಂತಸ] ಮಾಡಿದನೆನೆ ಮುಂಡಾಡಿದರವರು (ಶ್ರೀಪಾಲ. ೧೧-೧೪). **ಸಂತಾಗು** = ಉಪಶಮನವಾಗು; ಶಾಂತವಾಗು : ನಾಸಿಕದುಸಿರ ದಳ್ಳುರಿ ಮೂಕುತಿ ಗಂಧಗ್ರಾಸ ಸಂತಾಗಿ ಮೆಯ್ಯೊಳಗೆ ಪೂಸಿದ ಸಿರಿಗಂಧ ಕರಿಕಾದುದು ಸದ್ವಿಳಾಸಿನಿಯರು ಭೀತಿವಡಲು (ಮೋಹತ. ೨೮-೧೭). [< ಪ್ರಾ. ಸಂತ./ ಸಂ. ಶಂತ, ಶಾಂತ./ ಹಿಂ. ಮರಾ. ಸಂತ]

**ಸಂತಂ** (ಅ). ೧. ಶಾಂತವಾಗಿ; ಸಮಾಧಾನದಿಂದ ಕೂಡಿ : ಸಂತಂ ಬಾಟ್ಟುದು ಮಿಾಱದಾ ನರಪನೊಳ್ ಸೌಜನ್ಯಲಕ್ಷ್ಮೀಮದಾಂಧಂ (ಕವಿರಾ. ೨-೧೪೨); ಪಾರ್ವತಿಯ ಸಿಂಗಮುಂ, ತನ್ನ ಬಸವನಂ ಇನ್ನಾನುಂ ಪಗೆಯಂ ಮಱತು ಸಂತಂ ಪುದುವಾಟ್ಟುದೆಂದು ಬುದ್ಧಿವೇಟಲ್ (ರಾಮಾಶ್ವ. ೪೨-೧೩). ೨. ಸುಖವಾಗಿ ; ಕ್ಷೇಮವಾಗಿ : 'ಸಂತಮಿರ್' ಪರಾ. ೩. ಮೆಲ್ಲಗೆ; ಸಾವಕಾಶವಾಗಿ ; ನಿಧಾನವಾಗಿ : ಇಂತಿಂತು ಬಣ್ಣಿಸುತ್ತುಂ ಮುಂತಿರ್ದಗರಾಜಸುತೆಯನುಚ್ಚಾಸನದೊಳ್ ಸಂತಂ ಬಿಜಯಂಗೆಯ್ಸುತ್ತುಂ ತಣಿಯದೆ ಮತ್ತೆ ನಾರದಂ ನುತಿಗೆಯ್ದಂ (ಗಿರಿಕ. ೪-೪೭). ೪. ಸಂಪೂರ್ಣವಾಗಿ; ಪೂರ್ತಿಯಾಗಿ : ಪ್ರಾಣಿಗಳ್ಗಿಂತುಂ ದುಃಖಮನಾಗಲೀಯದಿರಿಮಂತಿರ್ದಂದು ಕರ್ಮಂಗಳಂ ಸಂತಂ ಸಾಧಿಸಿ ಗೆಲ್ದು ಸಿದ್ಧಸುಖಮಂ ಕೆಯ್ಕೊಳ್ವಿರ್ (ಜೀವಸಂ. ೧೬೮-೬). ೫. ಯಾವಾಗಲೂ; ನಿರಂತರವಾಗಿ : ಅಂತುಂ ಯತಿಯ ಪೇೞ್ದಾಪರ್ಯಂತಾದ್ಯದೊಳಲಸದಾರ್ಯೆಯೊಳ್ ಕಂದದೊಳಂ ಸಂತಂ ದ್ವಿತೀಯಪಾದಗತಾಂತದೊಳಕ್ಕದು ಚತುಷ್ಪದೀಪದವಿಗಳೊಳ್ (ಕವಿರಾ. ೧-೭೭); ಆ ಸುಯೋಧನನಾಳುತ್ತಿರೆ ಸಂದ ಹಸ್ತಿನಪುರಂ ಸಂತಂ ಬಸಂತಂ

(ಪಂಪಭಾ. ೩-೭೨); ಬಳೆದುಬಿಳೆಗೆ ಲೀಲಾಕಾರಿ ಸಂತಂ ವಸಂತಂ (ವರ್ಧಪು. ೧೩-೯). ೬. ಎಲ್ಲ ಕಡೆಗೂ; ಸರ್ವತ್ರ : ಸಂತಂ ಸುತ್ತಿದ ಸೂಕ್ಷ್ಮಗೋತ್ರಚಯದಿಂ ಗಂಧರ್ವಸಿದ್ಧಾಮರೌಘಂ ತೀವಿರ್ದ ಮಹಾಗುಹಾವಳಿಗಳಿಂದೊಪ್ಪಿರ್ದುದುದ್ಯನ್ನಗಂ (ಗಿರಿಕ. ೧-೧೨೯). [< ಸಂತ]

**ಸಂತಕವಿ** (ನಾ). ಭಕ್ತಿಮಾರ್ಗವನ್ನು ಸಾರುವ ಕವಿ : ಜ್ಞಾನದ ಬೆಳಕು ಹಚ್ಚಿದ ಸಂತಕವಿ ಅಥವಾ ಭಕ್ತಕವಿಗಳಲ್ಲಿ ಮೊಟ್ಟಮೊದಲನೆಯವನು ಕಬೀರ್ (ಭಾಪದ. ೪೫೮).
[ಸಂತ + ಕವಿ]

**ಸಂತಸಾಹಿತ್ಯ** (ನಾ). ಸಂತಕವಿಗಳು ರಚಿಸಿದ ಸಾಹಿತ್ಯ : ಕಬೀರ್, ತುಕಾರಾಂ ಮುಂತಾದವರು ಸಂತಸಾಹಿತ್ಯವನ್ನು ರಚಿಸಿದವರಲ್ಲಿ ಪ್ರಮುಖರು (ರೂಢಿ).
[ಸಂತ + ಸಾಹಿತ್ಯ]

**ಸಂತತ** (ಗು). ೧. ಚಾಚಿದ ; ವ್ಯಾಪಿಸಿದ. ೨. ಒಂದಕ್ಕೊಂದು ಹೆಣೆದ; ಜೋಡಿಸಿದ. ೩. ದಟ್ಟವಾದ; ಸಾಂದ್ರವಾದ. ೪. ನಿರಂತರವಾದ; ಎಡೆಬಿಡದ : ಸಂತತ ರಥಾಂಗತತಿಗತಿಚಿಂತಾಹತಿ ನೆಲಸೆ ಧರೆಗೆ ಸಿದ್ರಾಲಸ್ಯಂ ತಿಂತಿಣಿಯಿನಾಗೆ ಸರಸಿಜಕಾಂತಂ ತಾನಸ್ತಗಿರಿಗೆ ನೆಟ್ಟನೆ ಸಾರ್ದಂ (ದಶಕು. ೧೩-೫); ಸಂತತಾನುಷ್ಠಾನಪರರನದೆಂತು ನೀವಾಕ್ರಮಿಸುವಿರಿ (ಕುವ್ಯಾಅ. ೧೮-೧೨); ಸಂತತಶ್ರವಣದಿ ಶ್ರೀಕಾಂತನ ಚರಿತ ಕೇಳಲುಬೇಕು (ಪುರಂದ. ೪-೪೯-೧). ೫. ಶಾಶ್ವತವಾದ ; ಸ್ಥಿರವಾದ : ಭರತಾವನಿಯೊಳಗಂತಕದಿಶೆಯಾರ್ಯಾಖಂಡಾವನಿ ಸಂತತ ಸೌಭಾಗ್ಯಂದಳೆದಿರ್ಪುದು (ಜಯಕಾ. ೧-೩೫). (ನಾ). ೬. ನಿರಂತರವಾದುದು; ಎಡೆಬಿಡದಿರುವುದು : ಅಂತರಿಕ್ಷದ ಎಲ್ಲೆಗಳನ್ನು ಹುಡುಕಲೆಣಿಸಿ ಮುಂದೆ ಮುಂದೆ ಹೋದ ಪಕ್ಷದಲ್ಲಿ ಬ್ರಹ್ಮಾಂಡಗಳು ಒಂದಾಗಲೊಂದು ಸಂತತವಾಗಿ ಬರುತ್ತಲೇ ಇರುವುದನ್ನು ನಾವು ನೋಡುವೆವು (ಜ್ಯೋತಿರ್ವಿ. ೧೪). ೭. ಎಡೆಬಿಡದೆ ಇರುವ ಒಂದು ಬಗೆಯ ಜ್ವರ : ಈ ವಿಷಮಜ್ವರವು ಸಂತತ, ಸತತಕ, ಅನ್ಯೇದ್ಯುಕ, ತ್ರಾಹಿಕ, ಚಾತುರ್ಥಿಕವೆಂದು ಐದು ಪ್ರಕಾರವಾಗಿರುವುದು. ಸಂತತವೆಂಬ ಜ್ವರವು ತ್ವಕ್ಕನ್ನಾಶ್ರಯಿಸಿಕೊಂಡು ಎಲ್ಲಾ ವೇಳೆಯಲ್ಲಿಯೂ ಕಾಣಿಸುವುದು (ಸಕವ್ಯ. ೯೮). [ಸಂ.]

**ಸಂತತಂ** (ಅ). ಯಾವಾಗಲೂ ; ಎಡೆಬಿಡದೆ : ಸಂತತಮೊಂದಿ ನಿಂದ ತಪದೊಳ್ ಶ್ರುತದೊಳ್ ಗುಣದೊಳ್ ವಿಶೇಷದಿಂದಿಂತಿವರೆಲ್ಲರಿಂ ಪಿರಿಯರ್ (ಸುಕುಮಾ. ೧-೩೦); ಇಂತು ಶಿವಸಂಪದವನೊಳಕೊಂಡು ಶಿವಪುರಂ ಸಂತತಂ ರಂಜಿಪುದು ಪೊನ್ನಾಂಬಲದ ಪುರಂ (ತಿರುನ. ದೇ. ೩-೨೩). [ಸಂ.]

**ಸಂತತಗ್ರಹಣಿ** (ನಾ). ಯಾವಾಗಲೂ ಭೇದಿಯಾಗುವ ಒಂದು ಬಗೆಯ ರೋಗ : ವಾದಕ್ಕಿ, ಬೂರುಗದ ಮೇಣ, ಧಾತಕೀಕುಸುಮ, ಲೋಧ್ರ ಇವಂ ಸಮಭಾಗವಾಗಿ ಹಸುವಿನ ಮಜ್ಜಿಗೆಯಿಂದರೆದು ಮಜ್ಜಿಗೆಯಲ್ಲಿ ಕಲಸಿ ಕೊಡಲು ಸಂತತಗ್ರಹಣಿ ಗುಣಮಕ್ಕುಂ (ಸಕವ್ಯ. ೩೫೩). [ಸಂ.]

**ಸಂತತಿ** (ಗು). ೧. ನೀಡಿದ; ವಿಸ್ತರಿಸಿದ. (ನಾ). ೨. ವಿಸ್ತಾರ; ಹರಹು. ೩. ಸಾಲು; ಪಂಕ್ತಿ. ೪. ನಿರಂತರವಾಗಿರುವಿಕೆ; ನಿತ್ಯತೆ. ೫. ವಂಶ; ಪೀಳಿಗೆ: ಸಂತತಿಗೆ ಪಿರಿಯ ಮಕ್ಕಳ ನಾಂ ತಡೆಯದೆ ಪಡೆವೆನೆಂದೊಡೆನ್ನಿಂ ಮುನ್ನಂ ಕುಂತಿಯೆ ಪಡೆದಳ್ (ಪಂಪಭಾ. ೧-೧೨೯); ಶಾಂತಿವರ್ಮನ ಸಂತತಿಯಲ್ಲಿ ಹರಿವರ್ಮನೇ ಕದಂಬರ ಕಡೆಯ ರಾಜನಾಗಿದ್ದಿರಬೇಕು (ಕರ್ನಾಅ. ೩೧). ೬. ಮಗ ಅಥವಾ ಮಗಳು; ಸಂತಾನ : ಸಂತತಿವೇಟ್ಕುಮೆಂದು ಸಚಿವರ್ ಸಲೆ ಪೇಟೆಯುಂ . . . ಧರಾಂಗನಾಕಾಂತನ ಚಿತ್ರವೇಕಟಿಯೆಮೊಂದದಣಂ ಸುರತೋಪಭೋಗಮಂ (ಕಾದಂಪೂ. ೨೦); ಸಂತತಿ ರಾಜ್ಯರಕ್ಷಣೆಗೆ ಪುಟ್ಟಿದ ಸಂತಸಮುಂ ಮಹೀಭುಜಂ ಸಂತತಿ ಪುಟ್ಟೆ ಬಿಟ್ಟು ಧರೆಯಂ ತಪದೊಳ್ ತಳಿಸಲ್ಕುಮೆಂಬ ಚಿಂತಾಂತರಮುಂ ಮನಕ್ಕೆ ಬರೆ (ಪಂರಾಮಾ. ೨-೩೪); ಮಕ್ಕಳಿಲ್ಲದರಿಂಗೆ ಸಂತತಿಯಾಗುತಿರಬೇಕು (ಕಾಶಿರಾ. ೪೪-೩೪). ೭. ಗುಂಪು; ಸಮುದಾಯ : ಸಕಲಸುಹೃತ್ಸಂತತಿ ಪರಸೆ ನಂದನಿರ್ದಂ ಸುಖದಿಂ (ಜಗವಿ. ೩-೨೭); ಇಂತು ವರ್ತಿಸುತಿರ್ಪುದಿದು . . . ಸಂತತಂ ಗುರುರೂಪಜಂಗಮಸಂತತಿಗೆ ಗುರುಲಿಂಗ ಲಿಂಗಕಸಂತ ಪರಿಯೊಳು ಪ್ರಾಣದೇಹಾರ್ಥ ಪ್ರಕಾರದಲಿ (ಬಸವು. ೩೯-೧೭).
[ಸಂ.]

**ಸಂತತಿಗೆಡು** (ಕ್ರಿ). ವಂಶವು ಹಾಳಾಗು ; ನಿರ್ವಂಶವಾಗು : ಜಂತಿಗರ್ ಸಂತತಿಗೆಟ್ಟರಂತಬಲೆ ತಂಬುಲಿಗರ್ ನಂಬುಗೆಗೆಟ್ಟವರಂತೆ ಪೆಜಿಸಾರ (ಧರ್ಮಾಮೃ. ೨-೬೯).
[ಸಂತತಿ + ಕೆಡು]

**ಸಂತತಿಚ್ಛೇದ** (ನಾ). ವಂಶವು ಕತ್ತರಿಸಿಹೋಗುವುದು ; ಪೀಳಿಗೆಯ ನಾಶ: ಮಗನನೀವೆನಪ್ಪೊಡೆ ಸಂತತಿಚ್ಛೇದಮುಂ ಪಿಂಡಚ್ಛೇದಮುಮಕ್ಕುಂ (ಪಂಪಭಾ. ೩-೨೫ ವ); ಮಗನನೀವನೆ ಪಾರಲೌಕಿಕವಗಡಹುದಪಖ್ಯಾತಿ ತನ್ನನು ತಗುಹುದ್ಯೈಹಿಕದಲ್ಲಿ ಬಳಿಕೀ ಸಂತತಿಚ್ಛೇದ (ಕುವ್ಯಾಆ. ೧೦-೧೩). [ಸಂ.]

**ಸಂತತಿಪೆಱು** (ಕ್ರಿ). ಮಕ್ಕಳನ್ನು ಪಡೆ, — ಹೊಂದು : ಆಹ್ವಾನಂಗಯ್ದುಶ್ಶಿನಿ ದೇವರನವರಿತ್ತ ವರದೊಳ್ . . . ಅಮಳರನಾ ವನಜದಳಾಕ್ಷಿ ಪಡೆದು ಸಂತತಿವೆತ್ತಳ್ (ಪಂಪಭಾ. ೨-೩). [ಸಂತತಿ + ಪೆಱು]

**ಸಂತತಿಹೀನ** (ನಾ). ಮಕ್ಕಳಿಲ್ಲದ ವ್ಯಕ್ತಿ : ಈಗ ಕೊಲ್ಲಲ್ಪಡಬೇಕೆಂದು ಕಳುಹಿಸಿರುವ ಹೆಣ್ಣುಮಗುವು ದೊರೆಯದ ಪಕ್ಷದಲ್ಲಿ ಅರಸನು ಸಂತತಿಹೀನನಾಗಿ ಮೃತನಾಗುವನು (ಕವಿಕ. ೭). [ಸಂ.]

**ಸಂತಧಾರೆ** 'ಸಂತರ್ಧಾರೆ' ನೋ.

**ಸಂತಪ** (ನಾ). ದುಃಖ; ಅಳಲು : ಸಂತಪವುಕ್ಕಿ ಬೇಯುತಿರ್ದಾಕೆಯಾ ಪ್ರಶ್ನಮಾಲೆಯ ಮಧ್ಯೆ ಹುದುಗಿರ್ದ ಪೆಣ್ಣದೆಯ ಸಂದೇಹಸೂತ್ರಮಂ ಸಂಭಾವಿಸಿದನಾ ಪರೇಂಗಿತಜ್ಞಂ (ಶ್ರೀರಾಮಾ. ೫೧೩-೩೯೪). [ಸಂ.]

**ಸಂತಪನ** (ನಾ). ೧. ಸುಡುವಿಕೆ; ಕಾಯಿಸುವಿಕೆ. ೨. ಪೀಡಿಸುವಿಕೆ. [ಸಂ.]

**ಸಂತಪಿಸು** (ಕ್ರಿ). ವ್ಯಥೆಗೊಳ್ಳು ; ದುಃಖಪಡು : ನಮ್ಮ ಯುಗದಲ್ಲಿ ಉದ್ಭವಿಸಿರುವ ಸ್ಥಿತಿ ಈ ಚೀನೀಜ್ಞಾನಿಯು ಊಹಿಸಿದ್ದುದಕ್ಕೂ ಮೀರಿದ ಆತ್ಮಘಾತವನ್ನುಂಟು ಮಾಡುತ್ತಿದೆಯೆಂದು ಸಂತಪಿಸಿದ್ದಾನೆ (ಋಷ್ಯಾರ. ೨೮ ಪೀಠಿಕೆ). [ಸಂತಪ + - ಇಸು]

**ಸಂತಪ್ತ** (ಗು). ೧. ಹೆಚ್ಚಾಗಿ ಕಾದ; ಅತಿಯಾಗಿ ಸುಡುವ : ಯುವರಾಜಂ . . . ಮಧ್ಯಂದಿನಸಮಯಸಂತಪ್ತತಪನಮಂಡಲಮಂ ನೋಡಿ (ಶಾಂತಿಪು. ೮-೮ ವ). ೨. ಸಂಕಟಕ್ಕೆ ಗುರಿಯಾದ; ನೊಂದ. ೩. ಸುಟ್ಟ; ಕರಿಕಾದ. ೪. ಬಳಲಿದ; ಬೇಸತ್ತ. ೫. ಒಣಗಿದ; ಬಾಡಿದ. (ನಾ). ೬. ಕಾಯಿಸಿದುದು : ''ಸಂತಾಪಿತಃ, ಸಂತಪ್ತಃ . . . ವಣಗಿಸಿ ಕಾಯಿಸಲ್ಪಟ್ಟಂಥಾದ್ದು'' (ಸಿದ್ಧಾಂತಿ. ೩೫೧). ೭. ಬಳಲಿದವನು ; ಬೇಸತ್ತುಹೋದವನು : ಕಾದಂಬರೀವಿರಹತಾಪದೊಳಂ ಸಂತಪ್ತನಾಗಿ ತಾರಾಪೀಡತನಯಂ ತಣ್ಪನಾಸೆಗೆಯ್ದಲ್ಲಿಂದಮೆಟ್ಟು (ಕಾದಂಉ. ೪೫೭). ೮. ದುಃಖಕ್ಕೀಡಾದವನು; ಸಂಕಟಕ್ಕೊಳಗಾದವನು. [ಸಂ.]

**ಸಂತಮಸ** (ಗು). ೧. ಬಹು ಕತ್ತಲೆಯಿಂದ ಕೂಡಿದ ; ಕಗ್ಗತ್ತಲೆಯ : ಸಂತಮಸಗೃಹಗುಹಾಂತರದಿಂ ತೊಲಗಿದ ಸೇನೆಯಪ್ರಸನ್ನೋಗ್ರತರ ಸ್ವಾಂತನೃಪಾಳಕ ನೋಲಗದಿಂ ತೊಲಗಿದ ಸೇವಕಂಬೊಲಾಂತುದು ಸುಖಮಂ (ಪಾರ್ಶ್ವಪು. ೧೧-೭೫). (ನಾ). ೨. ಕಗ್ಗತ್ತಲೆ; ಗಾಢಾಂಧಕಾರ : '' ಅವತಮಸಂ, ಅಂಧತಮಸಂ, ಸಂತಮಸಂ — ಈ ೩ ಕಡುಗಟ್ಟಲೆ'' (ಹಲಾಯು. ೧೮-೧೧೦); ರಣಮಹೀಸಂತಮಸ ಶಾಂತೇಕ್ಷಣರು ದಿಗುಭ್ರಮೆಯಲಿ ಸ್ವಕೀಯಕ್ಷಣನವನು ರಚಿಸಿದರು ರೌರವವಾಯ್ತು ರಾತ್ರಿಯಲಿ (ಕುವ್ಯಾದ್ರೋ. ೧೫-೩೦). ೩. ಅತಿಯಾದ ಮೋಹ, — ಭ್ರಮೆ. [ಸಂ.]

**ಸಂತಮಿಡು, ಸಂತವಿಡು, ಸಂತಿಡು** (ಕ್ರಿ). ೧. ಸಾಂತ್ವನಗೊಳಿಸು; ಸಮಾಧಾನಪಡಿಸು : ಮೇಘರಥಕುಮಾರನನೆಂತಾನುಂ ಸಂತಮಿಟ್ಟರಿಸಿ (ಅನಂಪು. ೪-೬ ವ); ನೀಂ ನಿಚ್ಚಟಿದ ರಾಮಭಕ್ತನಿರ್ಪಿನಂ . . . ಬೇಡಿದಿಷ್ಟಾರ್ಥಂಗಳನಿತ್ತುಂ ಪೋಪನಿವಱೊಳ್ ಸಂದೆಯಮಣಮಿಲ್ಲೆಂದು ಸಂತಮಿಟ್ಟು ತಾನಂತರ್ಹಿತನಾದಂ ಗಡ (ರಾಮಾಶ್ವ. ೧೪೧-೧೫). ೨. ನಿಗ್ರಹಿಸು ; ವಶದಲ್ಲಿಡು : ಗಿರಿಸುತೆಯ ಮಧುರದೃಷ್ಟಿಗಳುರವಣೆಯಂ ತಾಗೆ ತನ್ನನಾಗಳ್ ವಿಪ್ರಂ ಕರಗಿ ನಿಲಲಾಱದೆಳ್ದಾತುರಪುಳಕಮನಂತುಮಿಂತು ಸಂತಮಿ[ಪಾಠಾಂ. ವಿ]ಡುತ್ತುಂ (ಗಿರಿಕ. ೯-೯೭). **ಸಂತವಿಡು:** ೧. ಆ ಬ್ರಹ್ಮರಾಕ್ಷಸನನೆಂತಾದೊಡಂ ಸಂತವಿಟ್ಟು (ದಶಕು. ೪-೧೧೮ ವ) ; ಕರುಣಾಳುಗಳರಸ ಶಿವ ಸಂತವಿಟ್ಟನು ಸುರಕದಂಬಕವ (ಕುವ್ಯಾಕ. ೬ ಸೂಚನೆ). ೨. ನಿನ್ನೊಳಗೆ ಕರಣವ ಸಂತವಿಡಲಱಿಯದವನಾವ ದೇಶವಮಂ ಸಂತವಿಡುವೆ (ಹಚಕಾ. ೯-೯

೩. ಸುಖವಾಗಿರುವಂತೆ ಮಾಡು ; ಹಾಯಾಗಿರಿಸು : ಆ ಕೌರವನ ಕೈಯಲಿ ಕೆಲವು ನಗರಿಯ ಕೊಡಿಸಿ ನಮ್ಮನು ಸಂತವಿಡಿ (ಕುವ್ಯಾಉ. ೬-೪). ೪. (ಆಲಂ) ಒಳಗೊಳ್ಳು; ಅಡಗಿಸಿಡು: ಅರಸ ಕೇಳ್ಳೆ ನಿಮ್ಮ ಭೀಮನ ಪರಿಯನಾ ಪರಿ ಬಂಡಿ ತುಂಬಿದ ಸರಕನೆಲ್ಲವ ಸಂತವಿಟ್ಟನು ತನ್ನ ಜಠರದಲಿ (ಕುವ್ಯಾಆ. ೧೦-೩೪). ೫. ಸರಿಪಡಿಸು; ತಿದ್ದು : ಕೆಟ್ಟ ನಾಡಂ ಸಂತವಿಡುವನಂತೆ . . . ನಯಮುಂ ಬುದ್ಧಿಯುಮಾರ್ಕೆಯುಂ ಬೆರಸು ನಡೆವಾತಂ (ಧರ್ಮಾಮೃ. ೫-೧೩೧); ಇಂತಿದೇನ್ನೆ ಬ್ರಹ್ಮ ನೀಂ ಮೇರೆದಪ್ಪಿದೊಡೆ ಸಂತವಿಡುವವರಾರ್ (ಚೆಬಪು. ೧೮-೪); ನಿಜಿಗುರುಳ್ಗಳ ನೇವರಿಸುತ ಸಾಲಿಯ ಸೆಱಗ ಮೇಲುದ ಸಂತವಿಡುತ . . . ಹೆಂಗಳರಸಿಯರೆಸೆದರರ್ತಿಯಲಿ (ಕಂನವಿ. ೨೪-೪೬). ೬. ಆದರಿಸು ; ಉಪಚರಿಸು: ಗುಣನಿಳಯನಂ ಸತ್ಕರಿಸಿ ಬೀಳ್ಕೊಟ್ಟುಳಿದ ಬಂಧುಗಳನಂತೆ ಸಂತವಿಟ್ಟು (ಪದ್ಮರಾ. ೧೩-೨೩); ಮನೆಗೆಯ್ತಂದತಿಥಿಗಳಂ ಘನಕುಶಲಪ್ರಶ್ನೆ ಮಧುರಭಾಷೆಗಳಿಂದೊಯ್ಯನೆ ಸಂತವಿಟ್ಟು (ವಿಷ್ಣುಪು. ೩-೨-೯೩).

**ಸಂತಿಡು** : ೧. ಸಂಪೀಗೇ ಹುವಾ ಮುಡಿಯೋ ಕಂದಮ್ಮಾನಾ ಸಂತಿಟ್ಟೊ ಕಳುವೇನೂ (ಹುಟ್ಟಿಹ. ೧೧೨); ನಮ್ಮವ್ವ ಸಂತಿಟ್ಟು ನನ್ನ ಕಳುವ್ಯಾಳೆ (ನಾವದ. ೬೯). [ಸಂತ + ಇಡು$_1$]

**ಸಂತಮಿರ್, ಸಂತಮಿರು, ಸಂತವಿರು** (ಕ್ರಿ). ೧. ಸುಖವಾಗಿರು; ಹಾಯಾಗಿರು: ವೀರರ್ಕಳುಂ. . . ಮೂವಿಟ್ಟಿಯೊಕ್ಕಲವೋಲಿಂ ಬೆಸಕೆಯ್ಕೆ ಸಂತಮಿರುತುಂ ಕುಂತೀಸುತರ್ ತಮ್ಮ ತೋಳ್ವಲಮಂ ನಚ್ಚಿರೆ ದಾಯಿಗರ್ ಧರೆಯನಾಳ್ದಂದಟ್ಟಿರೆಂಬೇವದಿಂ (ಪಂಪಭಾ. ೯-೧೦); ಸಂತಮಿರ್ದ ಶಿಶುಗಾಯ್ತು ರೋಗಂ (ವೃಷವಿ. ೯-೧೨೨). ೨. ಶಾಂತವಾಗಿರು; ಸಮಾಧಾನದಿಂದ ಕೂಡಿರು : ಸಂತಮಿರ್ಪುದೆ ನವಗ್ರಹಮಾಶಾದಂತಿಗಳ್ ಪದುಳಮೇ (ಕಾವ್ಯಾವ. ೧೫೧); ಕೆಲಸಾರ್ ಸಿಂಹಳ ಸಂತಮಿರ್ ಮಗಧ ಮೆಯ್ಯಿಕ್ಕಾಂಧ್ರ (ಕುಸುಮಾ. ೩-೯೪); ಅಂತಕ ಸಂತಮಿರ್ ಗಳಪದಿರ್ ಲೋಕೇಶ (ಶಬಶಂ. ೧-೮೩). ೩. ಸುಮ್ಮನೆ ಇರು; ಚಲನೆಯಿಲ್ಲದಿರು : ಸಂತಮಿರ್ದೊಂದೆಡೆಯೊಳ್ ಮೇಂಗಾಲ್ಗಳಂ ಮುಟ್ಟದೊಡೆ ಪಯಣಮುಂಟೆಂಗೆ (ಲೋಕೋಪ. ೧೨-೩೧); ಇಂತಪ್ಪ ಸಿತಗನೀ ವಟುವಿಂತಪ್ಪತಿವರ್ತಿಮಾಣಿಯುಂ ಕೋಡಗಮುಂ ಸಂತಮಿರ[ಪಾಠಾಂ. ಡ]ಲಾರ್ಕುಮೇ (ಅರ್ಧನೇ. ೬-೩೪); ಸಂತಮಿರೆಂದು ಪೂಣ್ದು ಕಾಮಂ ಪ್ರಕಾಮಂ ತನ್ನ ಪುಸಿವಡೆವೆರಸು ತಪೋವನದತ್ತಣ್ಸೈತರುತುಮಿರ್ದಂ (ರಾಮಾಶ್ವ. ೫೬-೧೮). **ಸಂತಮಿರು** : ೪. ನಿಶ್ಚಿಂತೆಯಾಗಿರು; ಸ್ವಸ್ಥವಾಗಿರು : ಮನೆಮನೆಯೊಳುಸಿಕನೆ ಸಂತಮಿರತಕ್ಕ ಜನಪದಂ ಧಗೆಯ ಹೆಬ್ಬಾವಂತೆ ಹೊರಟು ತಿಂತಿಣಿವರಿದು ಬಂತು . . . ಗೊಲ್ಲೊಥಾಗಿರಿಗೆ (ಗೊಲ್ಲೊಥಾ. ೧೧-೨೭೮). **ಸಂತವಿರು** : ೧. ಸಂತವಿದ್ದ ಮನೆಗ ಕೊಂತವ ತಂದಂತೆ ಇದನೆಂತು ಸಂತಯ್ಸುವೆನು (ಬಸವ. ೧೦೦). ೨. ಮಱುಗದಿರು ಸಂತವಿರು ನಾನೀ ಬರುತ ಕಂಡೆನು ನಿನ್ನ ಮಗನನು (ನಿಭಾಗ. ೪-೭-೨೪). [ಸಂತ + ಇರ್$_1$]

**ಸಂತಮಿರು** 'ಸಂತಮಿರ್' ನೋ.

**ಸಂತಯಣ** 'ಸಂದವಣೆ' ನೋ.

**ಸಂತಯಿಕೆ, ಸಂತೈಕೆ** (ನಾ). ಸಮಾಧಾನ; ಸಾಂತ್ವನ : ಬೃಹದಶ್ವಮಹರ್ಷಿ ನಳನ ಕಥೆಯನ್ನು ಹೇಳಿ ಯುಧಿಷ್ಠಿರನಿಗೆ ಸಂತಯಿಕೆಯ ಮಾತುಗಳನ್ನು ಆಡಿದರು (ವ್ಯಾಸಜಿ. ೧೫೩). **ಸಂತೈಕೆ** : ನನಗ ಹೆದರಿಕೆ ಇಲ್ಲ, ಅದಕ್ಕೆ ನಿನ್ನ ಸಂತೈಕೆ ಬೇಡ (ಮೂರುದಾ. ೨೯೦). [ಸಂತ + - ಇಕೆ]

**ಸಂತಯಿಸು, ಸಂತಯ್ಸು, ಸಂತವಿಸು, ಸಂತೈಸು** (ಕ್ರಿ). ೧. ಸಮಾಧಾನ ಪಡಿಸು; ಸಾಂತ್ವನಗೊಳಿಸು : ಕ್ಷಿತಿಪತಿಯಂ ಬರಿಸಿ ಜಗನ್ನುತನಂ ಸಂತಯಿಸಿ [ಪಾಠಾಂ. ತೈಸಿ] (ಕವಿರಾ. ೨-೮); ಮನಸ್ತಾಪಮಂ ಮಾಡವೆಂದಾಭೀತಾತ್ಮಾರ್ಯರ್ಕಳಂ ಸಂತಯಿಸಿದನವ್ಯುತಾಸಾರಸಾರಪ್ರಣಾದಂ (ಆದಿಪು. ೬-೫೩); ಪರಿವಾರವು ಘನಶೋಕಿತಮಾಗೆ ಅವರವರಳಲನು ಸಂತಯಿಸುತ್ತ ಯಮರಾಜನ ಮಗ ಹಂಬಲಿಸುತ್ತ (ಕುವ್ಯಾದ್ರೋ. ಓರೀ. ಪರಿ. ೨೮೪ರಗಳೆ). ೨. ತಡೆದುಕೊಳ್ಳು; ನಿಗ್ರಹಿಸು; ಅಂಕೆಯಲ್ಲಿಡು: ಧಾರಾಗೃಹಂಗಳೊಳಂ ಜಲಮಂಟಪಂಗಳೊಳಮೆಂತುಮಾ ಸಂತಾಪಮಂ ಸಂತಯಿಸಲಾಱದೆ (ಕಾದಂಉ. ೭೭೩). **ಸಂತಯ್ಸು** : ೧. ಲಕ್ಷ್ಮೀಧರಂ ತನಗೆಱಗಿ ಪೊಡೆವಟ್ಟೊಡಾತನಂ ಪರಸಿ ಮನ್ನಿಮಿತ್ತಂ ಕರಂ ಸೇದೆವಟ್ಟರೆಂದು ಮನ್ಯುಮಿಕ್ಕು ಶೋಕಿಸುತ್ತಿರ್ಪುದುಂ ಲಕ್ಷ್ಮಣನುಂ ರಾಮನುಂ ಸಂತಯ್ಸಿ [ಪಾಠಾಂ. ಯಿಸಿ]ದಿಂಬಟೆಯಿಯಂ (ಪಂರಾಮಾ. ೧೫-೭ ವ); ಹೆದಱಲೇತಕೆ ನೀವೆನುತ್ತಾ ಸುದತಿ ಚಂಗಳೆ ಗಂಡನಂ ಸಂತಯ್ಸಿ[ಪಾಠಾಂ. ತೈಸಿ] (ಬಸಪು. ೨೪-೧೦); ವಿಗಡಮುನಿವರನಾಗಳಾ ಮಹೀಪಾಲನಂ ಸಂತಯ್ಸಿ [ಪಾಠಾಂ. ತೈಸು]ತಿಂತೆಂದನು (ಜೈಮಿಭಾ. ೫-೨೬). **ಸಂತವಿಸು** : ೧. ನೀಮೇನುಂ ಚಿಂತಿಸಲ್ವೇಡ ನಿಶ್ಚಿಂತರಾಗಿರಿಮೆಂದರಸನಂ ಸಂತವಿ[ಪಾಠಾಂ. ಯಿ]ಸಿ ಪೋದನ್ (ವಡ್ಡಾರಾ. ೧೫೭-೨೧); ತನಯಶೋಕವಿಲಾಪಿಯನುಗ್ರಸೇನನಂ ನಗಧರನೊಲ್ದು ಸಂತವಿಸೆ (ಜಗವಿ. ೬-೧೦೫); ಏನುಂ ಚಿಂತಿಸದಿರೆಂದಂಬಿಕಾಪತಿ ಸಂತವಿಸುತಿರಲು (ಬಸಪು. ೧೩-೧೨). ೩. ಸಂತೋಷಪಡಿಸು; ತೃಪ್ತಿಗೊಳಿಸು : ಧರಿತ್ರೀಪಾಲ ಮಾಡುವ ರಾಜಸೂಯಕೆ ಲೀಲೆಯಲಿ ಬುಧಜನವ ನಾನ್ ಸಂತವಿಪ ತೆಱನೆಂತು (ಕುವ್ಯಾಸ. ಓರೀ. ೭-೧); ರಾಮ ಕಾರ್ಯಕೆ ಪೋಪ ಕಪಿವರನ ಸಂತವಿಸೆ ತಾಮಸಮದೇನುಂಟು (ವಂಕಾರಾ. ೫-೧-೩೩). ೪. ಸಮಾಧಾನ ಹೊಂದು; ಶಾಂತವಾಗು : ಸಂತವಿಸು ರಾಜೇಂದ್ರ ಚಿತ್ತದ ಚಿಂತೆಯಿದು ತಾನ್ಯೆಸಲೇ ನಿನಗಂತಕನ ಭಯವಿಲ್ಲ (ತೊರರಾ. ೧-೪-೧೧). ೫. ಚೇತರಿಸಿ ಕೊಳ್ಳು; ಎಚ್ಚೆತ್ತುಕೊಳ್ಳು: ಕವಿಗುದೀ ಚತುರಂಗಬಲ ಸಂತವಿಸಿ ಲಗ್ಗೆಯ ಮಾಡಿ ವಾನರನಿವಹದಲಿ ಕಱೆದುದು ಶರಾಳಿಯ ಸುಭಟಮೇಘಚಯ (ಕುವ್ಯಾಸ. ೫-೮). **ಸಂತೈಸು**: ೧. ಕುಂತಿ ಶೋಕಾಕ್ರಾಂತೆಯಾಗಿರೆ ತಪೋವನದ ತಪೋವೃದ್ಧರಾ ಕಾಂತೆಯನಿಂತೆಂದು ಸಂತೈಸಿದರ್ (ಪಂಪಭಾ. ೨-೨೬ ವ); ಉಮ್ಮಳಿಸದಿರು ಕಂದಯೆಂದೆಂತಕ್ಕೆ ಸಂತೈಸಿ (ಹಚಕಾ. ೧೦-೨೨); ಅರಸ ಹದುಳಿಸು ನಿನ್ನ ಸೊಸೆಯರ ಕರೆದು ಸಂತೈಸು (ಕುವ್ಯಾಕ. ೧-೯). ೫. ಮನದ ಮಱವೆಯ ಜೊಮ್ಮಿನಲಿ ಕಪಿ ತನುವ ಸಂತೈಸುವ ರಣಶ್ರಮದನಿತಱೊಳೆ ನೂಕಿದನು ತುರಗವ ತರಣಿವಂಶಜನ ಮೊನೆಯ ಮೋಹರಕೆ (ತೊರರಾ. ೬-೩೦-೩೧). ೬. ಆದರಿಸು; ಉಪಚಾರಮಾಡು : ಶತಮನ್ಯು . . . ಕರ್ಣನ ಮಂದಿರಕೆ ಬರಲಾತನಿದಿರೆದ್ದವರ ಸಂತೈಸಿ (ಕುವ್ಯಾಆ. ಓರೀ. ೨೩-೧೨). ೭. ನಿವಾರಿಸು ; ಕಳೆ ; ನೀಗು : ಅವನಿಪಾಲನ ಬಳಲಿಕೆಯ ಸಂತೈಸು ನಡೆ ನೀನು (ಕುವ್ಯಾಕ. ೧೪-೪೦). ೮. ಸಲಹು ; ಕಾಪಾಡು : ರಾಯಕಟಕವ ಬೆದಱಿಸಿದ ನಾರಾಯಣಾಸ್ತ್ರದ ಬಾಧೆಯನು ಕಮಲಾಯತಾಂಬಕ ನಿಲಿಸಿ ಸಂತೈಸಿದನು ಪಾಂಡವರ (ಕುವ್ಯಾದ್ರೋ. ೧೯ ಸೂಚನೆ); ಶ್ರೀಶವಿಠಲರ ನೀನೆ ಸಂತೈಪುದು ಕ್ಲೇಶನಾಶನ ನಿನ್ನ ದಾಸರವನೆಂದರಿತು (ಜಗದಾ. ೫೨).

**ಸಂತಯ್ಸಿಕೊಳ್, ಸಂತಯ್ಸಿಕೊಳ್ಳು, ಸಂತವಿಸಿಕೊಳ್, ಸಂತವಿಸಿಕೊಳ್ಳು, ಸಂತೈಸಿಕೊಳ್, ಸಂತೈಸಿಕೊಳು**=೧. ಶಾಂತವಾಗು; ಸಮಾಧಾನ ತಂದುಕೊಳ್ಳು : (ಕ); ನೋಟಕನು . . . ಕೊನೆಗೆ ಸಂತವಿಸಿಕೊಂಡು ಸತ್ಯಸೃಷ್ಟಿಗೆ ಬಂದನು (ಕನಕ. ೧೨೪); ಚಿಂತೆಯಿಂ ಕೊರಗಿ ದುಃಖಿಸಲು, ಸೇರುವೆನು; ಸಂತೈಸಿಕೊಳಲು ನಿನ್ನಲ್ಲಿ ಮಲಗುವೆನು (ಕಪಾಪು. ೧೪-೩). ೨. ಚೇತರಿಸಿಕೊಳ್ಳು; ಎಚ್ಚರಗೊಳ್ಳು : ಭಟ ಮರಳೆ ಸಂತಯ್ಸಿ [ಪಾಠಾಂ. ತೈಸಿ]ಕೊಂಡಟವಟಿಸಿ ಗದೆಯಲಿ ಹೊಯ್ದು (ಕುವ್ಯಾಆ. ೧೩-೩೪); ಸವತಳಿಸಿ ಮಾರ್ತಿರುವಿನಲಿ ಸಂತವಿಸಿಕೊಂಡರ್ಜುನನು ದ್ರೋಣನ ನವನಿಶಿತಬಾಣೌಘದಲಿ ಹೂಳಿದನು ನಿಮಿಷದಲಿ (ಕುವ್ಯಾದ್ರೋ. ೯-೪೬). ೩. ಅಂಕೆಯಲ್ಲಿಡು; ಹತೋಟಿಗೆ ತರು : ಲೋಕದ ಡೊಂಕ ನೀವೇಕೆ ತಿದ್ದುವಿರಿ . . . ನಿಮ್ಮ ನಿಮ್ಮ ಮನವ ಸಂತಯ್ಸಿಕೊಳ್ಳಿ (ಬಸವ. ೧೨೪); ಅರುಣೋದಯಮಾಗೆ ನಿದ್ರೆ ತಿಳಿದೆದ್ದು ಸಾಲ್ದೊಂಡ ಪುಳಕಂಗಳಂ ಸಂತೈಸಿಕೊಂಡಾನಂದಾಶ್ರುಗಳಂ ಮುಂದುಗೊಳಿಸಿ ಸಂತಸಮಂ ಸೈತಿಟ್ಟು (ಬಸರ. ೪-೫೮). [ಸಂತ + - ಇಸು$_3$]

**ಸಂತಯ್ಸು** 'ಸಂತಯಿಸು' ನೋ.

**ಸಂತಯ್ಸುಹ** (ನಾ). ಸಮಾಧಾನ ಪಡಿಸುವಿಕೆ ; ಸಾಂತ್ವನಗೊಳಿಸುವಿಕೆ : ''ಪ್ರಣೀತಿಃ, ಅನುನಯಃ, ಪ್ರಣಿಪಾತಃ, ಸಾಂತ್ವನಂ – ಈ ೪ ಸಂತಯ್ಸು [ಪಾಠಾಂ. ತೈಸು]ಹ'' (ಹಲಾಯು. ೧೨೩-೬೪). [ಸಂತಯ್ಸು (< ಸಂತಯಿಸು) + - ಹ$_2$ (< – ಪ$_2$)]

**ಸಂತರ** (ನಾ). (?) : ಕೂಡುತಿಹ ಕತ್ತಲೆಯ ಅಂತರಿಗಿ ಸಂತರದಿ ನೋಡೆ ತಾರಕಿಗಳೋಲಂಬಕದ (ಜನಮು. ೪೮-೨೬). [?]

**ಸಂತರಣ** (ನಾ). ೧. (ನದಿಯನ್ನು) ದಾಟುವುದು. ೨. ಪಾರುಮಾಡುವುದು : ನಿ೧ ಚರಣ ದಾಸ್ಯಸಂತರಣಾ ದೃಷ್ಟಿವಿಸ್ತರಣಾ (ಸೂರ್ಯಪಾ. ೨೦-೧೯). [ಸಂ.]

**ಸಂತರಿಸು** (ಕ್ರಿ). ೧. ಪಾರುಮಾಡು; ಪಾರುಗಾಣಿಸು : ಕಂತುಜನಕ ಅಬ್ಜಲೋಚನ ವಿಜಯವಿಠಲಾ ಸಂತರಿಸುವನು ಇಹಪರಧದಲ್ಲಿ ವೊಲಿದು (ತೀರ್ಥಮ. ೨೪೧-೫). ೨. ನಿರ್ವಹಿಸು; ನಿಭಾಯಿಸು : ಕೌರವರರಸನತಿ ಸಿರಿವಂತನಿದ ಸಂತರಿಸಲಾಪನು ಬಹಳಯಾದವಸೈನ್ಯಸಾಗರವ ಧರೆಯ ಸಂಪದವಿಲ್ಲದಡವಿಯ ತಿರುಕರಾವಿನಿಬರನು ಸಲೆ ಸಂತರಿಸಲಾಪೆವೆ (ಕುವ್ಯಾಉ. ೧-೩೪). ೩. ಕೂಡಿಸು; ಕಲೆಹಾಕು : ಬಲವನು ಸಂತರಿಸಿಕೊಂಬ ನಿಮಿತ್ತವಾಗಿ ಅಲ್ಲಿ ಕೆಲವು ದಿನವಿದ್ದು (ವಚಕಾ. ೧೦).

[ಸಂತರಣ + - ಇಸು$_3$]

**ಸಂತರ್ಜನ** (ನಾ). ಭಯಪಡಿಸುವಿಕೆ; ಹೆದರಿಸುವಿಕೆ. ೨. ಬಯ್ಯುವಿಕೆ; ಜರೆಯುವಿಕೆ. [ಸಂ.]

**ಸಂತರ್ಜಿತ** (ಗು). ಭಯವನ್ನುಂಟುಮಾಡುವ; ದಿಗಿಲುಗೊಳಿಸುವ : ಆ ಘನಸಮಯಂ . . . ವಿಧುಂತುದನಂತೆ ಸಂತರ್ಜಿತ ರಾಜಹಂಸಮಂಡಳಮುಂ . . . ಎನಿಸಿರ್ದುದು (ರಾಜಶೇ. ೮-೧೧೮ ವ). [ಸಂ.]

**ಸಂತರ್ಜಿಸು** (ಕ್ರಿ). ೧. ಭಯಪಡಿಸು; ಹೆದರುವಂತೆ ಮಾಡು : ಸಾಳುವೇಂದ್ರ ನೃಪಚಂದ್ರಂ . . . ದುಷ್ಟರಂ ಸಂತರ್ಜ್ಜಿಸಿ ಶಿಷ್ಟರಂ ಪರಿಪಾಲಿಸಿ ಸಾಮ್ರಾಜ್ಯ ಸಂಪತ್ತಿಇಂ ಭೂತಳವಮನಾಳುತ್ತಿರ್ದ್ದಂ (ಕಇ. I, ೬೫-೧೩; 1484). ೨. ಜರೆ; ದೂಷಿಸು : ಶಾಂತೋಪಲಾಲನೆಗಳಿಂ ಸಂತರ್ಜಿಸಲೊಡಮೆಂತಾನುಮವಹಿತಾಂತರಂಗನುಮಾಗಿ ಕುಮಾರನಿಂತೆಂದಂ (ಅನಂಪು. ೩-೮೭ ವ). [ಸಂತರ್ಜನ + - ಇಸು$_3$]

**ಸಂತರ್ಧಾರೆ, ಸಂತಧಾರೆ** (ನಾ). ನಿರಂತರವಾಗಿ ನಡೆಯುವ ಅಭಿಷೇಕ (?) : ಶ್ರೀವೀರ ಕ್ರಿಷ್ಣಮಹಾರಾಯರೂ ಶ್ರೀ ಕಾಳಹಸ್ತೀಶ್ವರದೇವರಿಗೆ ಸಮರ್ಪ್ಪಿಸ್ತ ಮುತ್ತು ೬೧ . . . ಮಧ್ಯಮಾಣಿಕವಿಕ್ಕಿದ ಸಂತರ್ಧಾರೆಯ ಚಿಂನದ ಬಟ್ಟಲು (ಸೌಇಇ. IX-ii, ೪೮೭-೪; 1513). **ಸಂತಧಾರೆ** : ಮಲ್ಲಿಕಾರ್ಜುನದೇವರ ಸೇವೆ ಮಾಡುವ ವಿವರ ತೂಂಬೆಹು ಸಂತಧಾರೆ ಮಸರೊಗರದ ಅವಸರ ಕಾರ್ತಿಕಪೂಜೆ . . . ಸೇವೆಗೆ . . . ಹೊಲದವಸವನು ದಾರೆನೆಱದು ಕೊಟ್ಟೆಉ (ಎಕ. VI, ಕಡೂರು. ೨೫-೭; 1599).

[IP ಈ ಶಬ್ದಗಳು 'ಸಂತತಧಾರೆ' ಎಂಬ ಶಬ್ದದ ಅಪಲಿಖಿತಗಳಿರಬಹುದು]

**ಸಂತರ್ಪಣ** (ಗು). ೧. ತೃಪ್ತಿಪಡಿಸುವ; ತಣಿಸುವ. ೨. ಚೇತೋಹರವಾದ; ಹರ್ಷಕರವಾದ : ನಿಜವಿಜಯ ಸೈನ್ಯದೊಳನೇಕಮಕುಟಬದ್ಧ ಶೇಖರಸಹಸ್ರಪರಿಸ್ರಸ್ತ ಕುಸುಮಕೇಶರರಜಮುಮನವರತವಿತರಣನಿರತರಾಜಕುಮಾರಮುಷ್ಟಿವಿಕೀರ್ಯಮಾಣ ಸಂತರ್ಪಣ ಚೂರ್ಣಸಂಕೀರ್ಣ [ಪಾಠಾಂ. ದರ್ಪ]ಕರ್ಪೂರರಜಮುಂ (ಆದಿಪು. ೧೧-೩೫ ವ). (ನಾ). ೩. ತೃಪ್ತಿಗೊಳಿಸುವಿಕೆ ; ತಣಿಸುವಿಕೆ : ದುಸ್ಸ್ವಪ್ನದರ್ಶನಘರ್ಷಣಾರ್ಥಮಾಗಿ . . . ಆಹಾರದಾನಾದಿ ವಿತರಣಗೋದೋಹಪ್ಲವಾವನೀತಲಸಂತರ್ಪಣಾದಿ ಶಾಂತಿಕಕ್ರಿಯೆಗಳಂ ನೆಗಟ್ದು (ಆದಿಪು. ೧೫-೪೮ ವ); ದೇವಾರ್ಚನೆ ಮಹೀಸುರಧೇನು ಸಂತರ್ಪಣ ಮಹಾತಿಥಿ ಪೂಜೆ . . . ಮಾಡಲುಬೇಹುದವನಿಪರು (ಕುವ್ಯಾಉ. ೩-೭೭). ೪. ಒಂದು ಬಗೆಯ ಸಿಹಿ ತಿನಿಸು. ೫. ಬಹುಜನಕ್ಕೆ ನೀಡುವ ಸಂತೃಪ್ತಿಕರವಾದ ಭೋಜನ; ಸಮಾರಾಧನೆ : (೩). ೬. ತಗ್ಗಿಸುವಿಕೆ; ಉಪಶಮನ: ಕಾಂಸ್ಯಪಾತ್ರೆಯ ಗುಣ-ಇವುಗಳನ್ನು ಉಪಯೋಗಿಸಿದಲ್ಲಿ ಮಹಾಜಯಪ್ರದವಾಗಿ ರಕ್ತಪಿತ್ತರೋಗಗಳಲ್ಲಿ ಸಂತರ್ಪಣವನ್ನುಂಟುಮಾಡಿ . . . ನೇತ್ರರೋಗಬಾಧೆಗಳನ್ನು ಪರಿಹರಿಸುವುದು (ಸಕವ್ಯ. ೪೬). [ಸಂ.]

**ಸಂತರ್ಪಣಕರ** (ನಾ). ಆನಂದವನ್ನು ನೀಡುವಂಥದು; ಸಂತೋಷಕರವಾದುದು : ಕಂದರ್ಪಸುಖನಿಲಯಮೆನೆ ಸಂತರ್ಪಣಕರಮಖಿಲಭೋಗಭೂಮಿ ವಿಭಾಗಂ (ಆದಿಪು. ೫-೨೮). [ಸಂ.]

**ಸಂತರ್ಪಣೆ** (ನಾ). ೧. ಬಹುಜನಕ್ಕೆ ನೀಡುವ, ಸಂತೃಪ್ತಿಕರವಾದ ಭೋಜನ,- ಅನ್ನದಾನ: ಪುಂಣ್ಯಮಾಡಿಸಿದ ಕರ್ಚು ೧ ವರಹ ಸಂತ್ರರ್ಪಣೆ ಮಾಡಿಸಿಯಿರುವದು ೯೦ ವರಹ (ಮೈಆರಿ. ೧೯೨೯, ೯೭-೧೧; 1593); ಕಾರ್ತಿಕಮಾಸವೆಲ್ಲಾ ದೇವಾಲಯದಲ್ಲಿ ಹೀಗೆಯೇ ಪೂಜೆಪುನಸ್ಕಾರಗಳಿಗೂ ಅನ್ನದಾನ ಸಂತರ್ಪಣೆಗಳಿಗೂ ಏರ್ಪಾಡು ಮಾಡಿಸಿದ್ದಾನೆ (ಶ್ರೀರಾಯ. ೭). ೨. = ಸಂತರ್ಪಣ ೬: ಎದೆಗೆ ಮೇಲೆ ಹುಟ್ಟಿದ ರಕ್ತಪಿತ್ತಕ್ಕೆ ಮೊದಲು ಸಂತರ್ಪಣೆ ಮಾಡುವುದು (ಸಕವ್ಯ. ೧೮೩); ಈ ವಿಷೂಚಿಯಲ್ಲಿ . . . ದಾಹವೇರಿದವರಿಗೆ ಮಜ್ಜಿಗೆ ಮೊಸರು ಎಳನೀರು ಗಂಜಿ ಮುಂತಾಗಿ ದೊರತುದು ಕಿಂಚಿತ್ತು ಕೊಡಿಸಿ ಸಂತರ್ಪಣೆಯಂ ಮಾಡಿಸಿ ಆಮೇಲೆ ಚಿಕಿತ್ಸೆಯಂ ಮಾಡಿಸುವುದು (ಸಕವ್ಯ. ೩೫೯). [ಸಂ. ಸಂತರ್ಪಣ]

**ಸಂತರ್ಪಿತ** (ಗು). ತೃಪ್ತಿಗೊಳಿಸಿದ; ತಣಿಸಿದ : ವನಲತಾಂದೋಳಿತಾಮೋದ ಸಂತರ್ಪಿತ ಚಂಚಚ್ಚಂಚರೀಕಂ (ಕಾದಂಪೂ. ೧೪೬); ಸಂತರ್ಪಿತಾತಿಥಿಪಿತೃದೇವತಾ ದ್ವಿಜನ್ಮಾನನುಂ . . . ಧರಾಮರಾಗ್ರಗಣ್ಯನುಮಾಗಿ (ಪಂಚತಂ. ೮-೧೩). [ಸಂ.]

**ಸಂತರ್ಪಿಸು** (ಕ್ರಿ). ತೃಪ್ತಿಪಡಿಸು; ತಣಿಸು : ಬಹುವಿಧದನ್ನಪಾನಂಗಳಲಿ ಸಂತರ್ಪಿಸಿದರಾ ಯದುಕುಲಕುಶೇಶಯಭಾನುಗಳು ಭಾಗವತಮುಖ್ಯನನು (ನಿಭಾಗ. ೧೦-೩೪-೧೧). [ಸಂತರ್ಪಣ + - ಇಸು$_3$]

**ಸಂತವಡಿಸು** (ಕ್ರಿ). ಸಮಾಧಾನಗೊಳಿಸು; ಸಾಂತ್ವನಗೊಳಿಸು : ಎನ್ನ ವಚನ ಪುಸಿಯದೆನುತ ಶಕುನಿಗ ಸಂತವಡಿಸಿದ ವಸುಪಾಲನನು (ಶ್ರೀಪಾಲ. ೪-೩೦); ಇದಂ ಕ್ಷಮಿಯಿಸಿಮೆನುತ್ತವರ ಸಂತವಡಿಸಿ (ಸಮ್ಯಕೌ. ೮-೬೫). [ಸಂತ + ಪಡಿಸು]

**ಸಂತವಣ** (ನಾ). ಒಂದು ಬಗೆಯ ತೆರಿಗೆ : ಸೆಳಬ ಕುಲದ ಮನೆಯ ಸಂ[ತ]ವಣ ಆಯದಾಯ ಕಾಣಿಕೆ ಹೊಲದೆಱ ಕುಱಿದೆಱ ಸಮಸ್ತಕೊಳ್ಳಿ ಇನ್ನು ಹುಟ್ಟುವ ಸಂತವಣ ಇಂತಿನಿತು ಸಮಸ್ತಾಯವೆಲ್ಲಮ ಹುಗದಂತಾಗಿ ಹೊಲಗೆಱಮಾಡಿ . . . ಕೊಟ್ಟ ಶಿಳಾಸಾಸನ (ಸೌಇಇ. XX, ೯೧-೪೫; 11-12 ನೆಯ ಶತ).

[ಸಂತ$_?$ + ಪಣ$_3$]

**ಸಂತವಣೆ$_1$** (ನಾ). ೧. ಸಮಾಧಾನ ; ಸಂತೈಕೆ : ''ಪ್ರಣಿಪಾತಮನುನಯಂ ಪ್ರಣತಿಯೆಂದೆನೆ ಸಂತವಣೆಯಕ್ಕುಂ'' (ಮಂಗರಾ. ೧೩೪-೩೩); ಸಂತವಣೆಗೆಂದು [ಪಾಠಾಂ. ಸಂತವಣೆಗೆ, ಸಂತಾಮಣೆಗೆಂದು] ಮಾಡಿದ ಮಂತ್ರತಂತ್ರಾದಿಗಳ್ ಮೃತ್ಯುವಂ ಕಾಯಲಾರ್ಕುಮೆ (ಜೀವಸಂ. ೩೧-೫ ವ). ೨. ತೃಪ್ತಿ; ತಣಿವು : ಸರಸದ ಸಂತವಣೆಯ ಮನೆ ಸುಗ್ಗಿಯ ಪೊರೆವಾಗರ (ಮಡಿಕ್ಯಾ. V, ೧೧೯೨). [ಸಂತಯಿಸು + - ಅಣೆ$_4$]

**ಸಂತವಣೆ$_2$** 'ಸಂದವಣೆ' ನೋ.

**ಸಂತವಿಕ್ಕು** (ಕ್ರಿ). ಸಂತೈಸು; ಸಮಾಧಾನಮಾಡು: ಆ ಪ್ರಕಾರದಲ್ಲಿ ವಾಸುದೇವನು ತೇರಿನ ಕುದುರೆಗಳನ್ನು ಸಂತವಿಕ್ಕುವ ಸಮಯ (ಕೃವಾಆ. ೯). [ಸಂತ + ಇಕ್ಕು]

**ಸಂತವಿಡು** 'ಸಂತಮಿಡು' ನೋ.

**ಸಂತವಿರು** 'ಸಂತಮಿರ್' ನೋ.

**ಸಂತವಿಸು** 'ಸಂತಯಿಸು' ನೋ.

**ಸಂತಸ, ಸಂತೊಸ, ಸಂತೋಸ** (ನಾ). ೧. ಹಿಗ್ಗು; ನಲಿವು : ''ಹರಿಸಂ, ಸಂತಸಂ, ಅಲಂಪು - ಈ ೩ ಹರ್ಷಂ'' (ಕಶಸಾ. ೫೯-೨೮೮); ಕಮಲದಲಕರತಲದಿಂ ಪಿಡಿದೆತ್ತಿಕೊಂಡ ಸಂತಸದೊಡಮೆಯನಾಂ ಪೊಗಟಲಱಿಯೆನಿಂದ್ರಾಂಗನೆಯಾ (ಆದಿಪು. ೭-೪೬); ಇಂತಿದೆ ನೆಲೆಯೆನಗೆಂದು ಪದಾಂತರದಿಂದತನು ತನ್ನ ಪೆಸರನದರ್ಕಂ ಸಂತಸದಿನಿಟ್ಟನೆನೆ (ಚಂದ್ರಪು. ೧-೭೯); ನೀವಿಲ್ಲಿಂದಂ ಹದುಳ ಹೋದಡೆ ಸಾವಿರಮದುವೆಯ ಮಾಡಿದ ಸಂತಸಂ (ನಂಬಿರ. ೬-೭೯). ೨. ತೃಪ್ತಿ; ತಣಿವು : ತನ್ನೊಳ್ ಪುಟ್ಟಿದ ಸಂತಸದಿಂದಮಾದ ಸುಖಮದು ಸುಖಂ (ಆದಿಪು. ೬-೪೫); ಪೊಡಮಟ್ಟು ಕುಣಿಕುಣಿದು ಸಂತಸಮನೆಡೆಗೊಂಡು (ಬಸರ. ೩-೧೪). **ಸಂತೊಸ** : ೧. ವಿದ್ವಜ್ಜನಕ್ಕಾದರದಿಂದಂ ಸಂತೊಸಂ ಮಾಡುವ . . . ಬೀರದೇವಂ ಕೃತಾರ್ತ್ಥಂ (ಎಕ. VIII, ನಗರ. ೫೮-೨೭; 1062); ನೆಱೆ ಸಂತೊಸದಿಂ ಕೈ ನೀರೆಱೆಯಲ್ಕೆಂದಿರ್ಪ ಪದದೊಳತ್ಯಾಶ್ಚರ್ಯಂ ನೆಱೆದಿರೆ (ಸುಕುಮಾ. ೭-೩೨); ಅಸಿಯಳ ಗಾಡಿಯೊಂದೆ ಜಗತೀಜನಲೋಚನಸಂಚಯಕ್ಕೆ ಸಂತೊಸಮನೆ ಮಾಡಿ ರೂಢಿವಡೆದತ್ತು (ಬಾಧಪು. ೨-೩೩). **ಸಂತೋಸ** : ೧. ನಿನ್ನನಾಮೊಡಗೊಂಡು ಬಂದುದರ್ಕೆ ತಾಯ್ತಂದೆಗಂ ಸಂತೋಸಂ ಮಾಡಿಯವರಂ ಬಿಡಿಸಿಯೊಡಂಬಡಿಸಿ ಬಂದೊಡೆ ತಪಮಂ ಕುಡಲಕ್ಕುಂ (ವಡ್ಡಾರಾ. ೭೪-೧೬); ಎಱೆಯಂಗದೇವಂ . . . ಲಕ್ಷ್ಮೀಧರಂಗಂ ಲಕ್ಷ್ಮಿಗಂ ಕಾಮನಂತೆ ಸಂತೋಸಂ ಪುಟ್ಟೆ ಪುಟ್ಟಿದಂ (ಎಕ. V, ಹಾಸನ. ೭೬-೪; 1168). [< ಸಂ. ಸಂತೋಷ]

**ಸಂತಸಂಗಿಡು** (ಕ್ರಿ). ಸಂತೋಷವು ಹಾಳಾಗು, - ಕೆಡು : ಸಂತಸಂಗೆಟ್ಟು ದುರ್ಮತಿ ಸಿಂಹೋದರನಪ್ರಮತ್ತಚರಿತಂಗಾ ವಜ್ರಕರ್ಣಂಗೆ ದುಸ್ಥಿತಿಯಂ ಮಾಡುವೆನೆಂದು ಬಂದು ಪುರಮಂ ಮುತ್ತಿರ್ದಪಂ (ಪಂರಾಮಾ. ೭-೩೫). [ಸಂತಸ + ಕಿಡು ( < ಕೆಡು$_1$ )]

**ಸಂತಸಂಗೊಳ್, ಸಂತಸಗೊಳು** (ಕ್ರಿ). ಹಿಗ್ಗು; ಸಂತೋಷಿಸು : ಉದ್ದಾಲಕಂ ಸಂತಸಂಗೊಂಡು ಮನದೊಳ್ಪೊಱಗೆ ತಾನೊಪ್ಪದವನಾಗಿ ಚಂಡಿ ಪೇಳಿದವೊಲಾ ಶ್ರಾದ್ಧಮಂ ಮಾಡಿ (ಜೈಮಿಭಾ. ೧೦-೩೦). **ಸಂತಸಗೊಳು :** ಕಪಿ ವಿಶ್ರಮಿಸಿ ಮುದವಾಂತು ನಡೆವಂತೆ ಮಾಳ್ಪುದೆಂದತಿವಿನಯಮೊದವಿ ನೇಮಿಸಲಬ್ಧಿರಾಜ ಸಂತಸಗೊಳುತ ಮೈನಾಕನಿಂತೆಂದನು (ವೆಂಕಾರಾ. ೫-೧-೩೨). [ಸಂತಸ + ಕೊಳ್$_1$]

**ಸಂತಸಂಗೊಳಿಸು, ಸಂತಸಗೊಳಿಸು** (ಕ್ರಿ). ಆನಂದವನ್ನುಂಟುಮಾಡು; ಸಂತೋಷಪಡಿಸು : ನಿನಗದಂ ತಂದೀವೆನಂಜದಿರೆಂದು ಸಂತಸಂಗೊಳಿಸಿ (ಧರ್ಮಾಮೃ. ೨-೧೨೪). **ಸಂತಸಗೊಳಿಸು :** ಬಂದ ಸೊಸೆಯರ ಬಾಧಿಸದೆ . . . ಸಂತಸಗೊಳಿಸುವುದು (ಹದಿಬ. ೪-೨೪). [ಸಂತಸಂಗೊಳ್ + – ಇಸು$_3$]

**ಸಂತಸಂದಳೆ** (ಕ್ರಿ). = ಸಂತಸಂಗೊಳ್ : ಇಂದುಮುಖಿ ಸಂತಸಂದಳೆದು ಮನದೊಲವಿಂದೆ ಇರೆ (ಮಾನರ. ದೇ .೧೬೨-೨೨); ಸಂತಸಂದಳೆಯೆ ನೇತ್ರದೊಳ್ ಮುಂತೆ ಸೂಸೆ ಸಲಿಲಂ . . . ಮೆಚ್ಚುತಂ ಕೃತಿಗಳಂ (ಹಾಲಾಸ್ಯ. ೪-೭-೩೦). [ಸಂತಸ + ತಳೆ$_1$]

**ಸಂತಸಂಬಡಿಸು** (ಕ್ರಿ).= ಸಂತಸಂಗೊಳಿಸು : ವಜ್ರಬಾಹುನೃಪನನಿರಿಸಿ ಮಜ್ಜನ ಭೋಜನತಾಂಬೂಲಾಂಬರಾನುಲೇಪನಭೂಷಣಾದಿವಿವಿಧಶೇಷ ಸತ್ಕಾರಂಗಳೊಳ್ ಸಂತಸಂಬಡಿಸಿ (ಆದಿಪು. ೪-೨೫ ವ); ಈತನೆನಗೆ ಕೃತಕ್ಲೇಶನಪ್ಪುದಱಿಂದೀಯವ ಸರದೊಳೆ ಸಂತಸಂಬಡಿಸಲ್ವೇೞ್ಕುಂ (ಪಂಚತಂ. ಅ. ೪೮-೪); ಅಂತನೇಕಾಳಂಕಾರವಸನ ವಸುವಿಸ್ತರದಿಂ ಸಂತಸಂಬಡಿಸಿ (ಚಂದ್ರಪ್ರ. ೨-೧೧೦ ವ). [ಸಂತಸ + ಪಡಿಸು]

**ಸಂತಸಂಬಡು, ಸಂತಸಪಡು, ಸಂತಸಬಡು, ಸಂತಸವಡು, ಸಂತೋಸಂಬಡು** (ಕ್ರಿ). ೧. ಸಂತೋಷವನ್ನು ಹೊಂದು; ಹಿಗ್ಗು; ನಲಿ : ಎಡಱಿಱಿದೀವ ಕಲ್ಪತರುವೆಂದು ವನೀಪಕಕೋಟಿ ಸಂತಸಂಬಡೆ . . . ವಾರಣಾವತಮನೆಯ್ದಿದನಮ್ಮನ ಗಂಧವಾರಣಂ (ಪಂಪಭಾ. ೨-೯೮); **ಅಮರಶಕ್ತಿ** ಸಂತಸಂಬಟ್ಟು ಕುಮಾರರಂ ಸಮರ್ಪಿಸುವುದುಂ (ಪಂಚತಂ. ೧೮-೧೬); ಇಂಬಿನಿಂ ಮಾತೆಪಿತರತಿಸಂತಸಂಬಟ್ಟು ಇರುತಮಿರೆ ನಳನಳಿಸಿ ಬಳೆದನಾತಂ ನೋಡ (ನಂಬಿರ. ೧-೧೧೪). **೨.** ತೃಪ್ತಿಹೊಂದು; ತಣಿ : (ಕ). **ಸಂತಸಪಡು :** ೧. ಆ ವರ್ಣನಾವೈಖರಿಯನ್ನು ಕೇಳಿದವರು ಹೊಸದರಲ್ಲಿ ಸಂತಸಪಡದೇ ಇರುವುದಿಲ್ಲ (ರಾಯಕ. ೯೯); ಸಿಗರೇಟು ಸೇದುತ್ತ ಕೂತು ಸಂತಸಪಡಲು ಹವಣಿಸುತ್ತಿದ್ದ ಸೇಟಜಿ ಮಹಡಿಯ ಮೇಲೆ ಇದ್ದರು (ಕಂಬಹು. ೯೦). **ಸಂತಸಬಡು.** ೧. ರೂಢಿಯೋಲೆಯಕಾಱನರ್ಜುನನಾಡಿ ಪತಿಕರಿಸುವನು ನೀನದ ನೋಡಿ ಸಂತಸಬಡು ವರಿಬ್ಬರು ಕೃಪನು ಗುರುಸುತನು (ಕುವ್ಯಾಕ. ೯-೧೫); ಅಭ್ಯಾಸವೆಂದರೆ ಹೀಗಾಗಬೇಕೆಂದು ಅವನು ಸಂತಸಬಟ್ಟನು (ಅನ್ನ. ೧೮). **ಸಂತಸವಡು :** ೧. ಚೆನ್ನಬಸವಪೌರಾಣಮಂ ಕಿವಿಕೊಟ್ಟು ಮತ್ಸರವ ಬಿಟ್ಟು ಸಂತಸವಟ್ಟು ಕೇಳ್ವುದು ವಿಲಾಸದಿಂದೆ (ಚೆಬಪು. ೧-೩೩); ಸಂತಸವಡುತಾ ಮುನೀಂದ್ರನ ಅಂತರಂಗವ ತಿಳಿದು ಸೂತನು ಸಂತರಿಸಿ (ಕೃಷ್ಣಾರಾ. ೧೮-೩). **ಸಂತೋಸಂಬಡು :** ೧. ಗುರುಗಳೆ ಪೊಗಟ್ಬೊಡೆ ಗುರುಗಳ ಪೊಗಟ್ತೆಗೆ ರಾಗಿಸಿ ಸಂತೋಸಂಬಟ್ಟಿರ್ದೊಡೆ (ಪದ್ಮಾರಾ. ೮೨-೨೫). [ಸಂತಸ + ಪಡು$_1$]

**ಸಂತಸಂಬಡೆ, ಸಂತಸವಡೆ** (ಕ್ರಿ). = ಸಂತಸಂಗೊಳ್ : ಪ್ರಣವವೇ ಕರಚರಣಾದ್ಯವಯವಂಗಳಂ ಧರಿಸಿರ್ಬರ ಮಧ್ಯದೊಳ್ ಮಲಗಿರಲೊಡನೆಳ್ಪು ನೋಡಿ . . . ಸಂತಸಂಬಡೆದಿರ್ದ ರಾಜದಂಪತಿಗಳ್ (ಹಮ್ಮಿರ. ೨-೧೬ ವ). **ಸಂತಸವಡೆ :** ಸಂತಸವಡೆದೊರ್ವೆ ಸಲುಗೆವೆಗ್ಗಡತಿ ಕಾರ್ಗುಂತಳೆಯರಿಗೆ ಪೇಳಿದಳು (ಮೋಹತ. ೪-೬೪).

[ಸಂತಸ + ಪಡೆ$_1$]

**ಸಂತಸಂಬೆಱು, ಸಂತಸವೆಱು** (ಕ್ರಿ). = ಸಂತಸಂಗೊಳ್ : ಈ ಕನಕಲೋಚನನತುಳ ಸಂತಸಂಬೆತ್ತು ಶಿಶುವೆರಸಿ . . . ಮಂದಿರಂಬೊಕ್ಕು (ಚೆಬಪು. ೪೭-೫). **ಸಂತಸವೆಱು :** ಶಿವನಾಗಮಯ್ಯಂ . . . ಸಂತಸವೆತ್ತು ಭಕ್ತಿಸುಖಾಮೃತದೊಳೋಲಾಡುತಂತಿರಲು (ಬಸಪು. ೫೫-೨); ಸಾಮಜವರದ ಸಂತಸವೆತ್ತು ನೋಡಲು (ಮೋಹತ. ೩೭-೬೪).

[ಸಂತಸ + ಪೆಱು$_1$]

**ಸಂತಸಗಂಬನಿ** 'ಸಂತಸಗಣ್ಬನಿ' ನೋ.

**ಸಂತಸಗಣ್ಬನಿ, ಸಂತಸಗಂಬನಿ** (ನಾ). ಸಂತೋಷಾಧಿಕ್ಯದಿಂದ ಬರುವ ಕಣ್ಣೀರು ; ಆನಂದಬಾಷ್ಪ; ಹರ್ಷಾಶ್ರು : ಸುರಿವ ಸಂತಸಗಣ್ಬನಿ[ಪಾಠಾಂ. ಗಂಬನಿ] ತಳ್ತ ಕಂಪನಂ ನಿಮಿರ್ದಸೆವಂಗರೋಮತತಿ ಕಣ್ಗೊಳಿಸುತ್ತಿರೆ (ಶಬಶಂ. ೫-೧೪). **ಸಂತಸಗಂಬನಿ :** ಶಿವಯೋಗಿ ಸಾರ್ವಭೌಮನೊರ್ವಂ ದ್ವಾರದೇಶದೊಳೇಳ್ತಂದಿರ್ದಪನೆಂಬುದಂ ಕೇಳ್ದು . . . ಸಂತಸಗಂಬನಿಗಳುಣ್ಮೆ (ವೃಷಪಿ. ೫-೬೨ ವ).

[ಸಂತಸ + ಕಣ್ಬನಿ]

**ಸಂತಸಗೊನರಿಸು** (ಕ್ರಿ). ಸಂತೋಷವನ್ನು ಹೆಚ್ಚಿಸು : ಮುಂತಣ ವಿಪಿನಾಂತರದಲಿ ವೀರವಸಂತಪಾದಪನಿಚಯವನು ಸಂತಸಗೊನರಿಸುತಿರುತಿರೆ ತನ್ನ ಕಾಂತನ ಬೆದಕಿ ನೋಡಿದಳು (ಮೋಹತ. ೯-೩೨). [ಸಂತಸ + ಕೊನರಿಸು]

**ಸಂತಸಗೊಳಿಸು** 'ಸಂತಸಂಗೊಳಿಸು' ನೋ.

**ಸಂತಸಗೊಳು** 'ಸಂತಸಂಗೊಳ್' ನೋ.

**ಸಂತಸದೀವು** (ಕ್ರಿ). ಸಂತೋಷದಿಂದ ತುಂಬಿರು ,— ಕೂಡಿರು : ಗೋವಳರು ಗುಡಿಗಟ್ಟಿ ಸಂತಸದೀವಿ ಬಂದಾ ಫಣಿಯ ಹೆಣವನು ತಾವರೆಯ ಪಿಡಿ ಕೊಂಡು ಬರೆ (ಸಾಳ್ವಭಾ. ೨೨-೪೬). [ಸಂತಸ + ತೀವು]

**ಸಂತಸಪಡು** 'ಸಂತಸಂಬಡು' ನೋ.

**ಸಂತಸಬಡು** 'ಸಂತಸಂಬಡು' ನೋ.

**ಸಂತಸಮಿರ್** (ಕ್ರಿ). ಸಂತೋಷದಿಂದ ಇರು; ನಲಿದಾಡು : ಕಥೆ ಪಿರಿದು ಮಹಾಶ್ಚರ್ಯಮಿಾ ರಾತ್ರಿಯೊಳ್ ಸಂತಸಮಿರ್ಪಂತಾಗೆ ತಾಂ ಕೇಳಿಸಿದಪೆಂ (ಕಾದಂಪೂ. ೨೬೬); ಭೂಕಾಂತನೊಂದಾನೊಂದಿರುಳು ಕಾಂತಾಜನಸಹಿತುಪ್ಪರಿಗೆಯ ಮೇಲೆ ಸಂತಸಮಿರ್ದನೋಲಗದೆ (ಶ್ರೀಪಾಲ. ೨-೯೦). [ಸಂತಸ + ಇರ್$_1$]

**ಸಂತಸಮೊಂದು, ಸಂತಸವೊಂದು** (ಕ್ರಿ). = ಸಂತಸಂಗೊಳ್ : ಅನಘಾ ಮದೀಯ ವ್ರತವನೀಗಳು ಪ್ರೇಮಮುದಯಿಸಿ ಮಾಡಲಾವಡೆ ಇದುವೆ ಸುಖವೆಮಗೆ ಎನುತ ಸಂತಸಮೊಂ[ಪಾಠಾಂ. ವೊಂ]ದಿ (ಬಸಪು. ೨೪-೬). **ಸಂತಸವೊಂದು :** ಸಂತಸವೊಂದಿ ಕೊಂಡಾಡುವರು ಮುಂಡಾಡುವರು ತಮತಮಗೆ (ಬಸಪು. ೩೮-೭೬). [ಸಂತಸ + ಒಂದು$_1$]

**ಸಂತಸವಡು** 'ಸಂತಸಂಬಡು' ನೋ.

**ಸಂತಸವಡೆ** 'ಸಂತಸಂಬಡೆ' ನೋ.

**ಸಂತಸವಱೆ** (ನಾ). ಸಂತೋಷದ ಸಮಯದಲ್ಲಿ ಬಾರಿಸುವ ತಮಟೆ,– ಹರೆ : ಪಲಪಸುರ್ದೋರಣ ಪಳಿ ಗುಡಿ ಸಂತಸವಱೆ ಪೊಸ ಮುತ್ತಿನ ಬಣ್ಣವುರಂ ಮನೆಮನೆ ದಪ್ಪದೆ ಶೋಭಿಸಿತು (ಜಯಕಾ. ೨-೫೯); ತಳಿರ್ಗುಡಿ ಪಸುರ್ದೋರಣ ಸಂತಸವಱೆ ತೊಳಪ ಮುತ್ತಿನ ವರ್ಣಪೂರ ಎಳೆವೆಣ್ಗಳೊಸಗೆವಾಡುಗಳು ತೀವಿದವು (ಶ್ರೀಪಾಲ. ೨-೭೬). [ಸಂತಸ + ಪಱೆ$_1$]

**ಸಂತಸವಾಡು** (ನಾ). ಸಂತೋಷದ ಸಮಯದಲ್ಲಿ ಹಾಡುವ ಹಾಡು; ಸೋಬಾನೆ : ಕನ್ನಡಿ ಕಳಶವಿಡಿದು ಸಂತಸವಾಡ ಬಿನ್ನಾಣದಿಂ ಪಾಡುತವೆ ಕನ್ನೆಯರುಗಳಿರ್ವಂಮ ಶುಭ್ರಾಕ್ಷತೆಯನ್ನೆಱೆ ಸೂಸಿದರು (ಶ್ರೀಪಾಲ. ೧೦-೮೨). [ಸಂತಸ + ಪಾಡು$_2$]

**ಸಂತಸವಾತು** (ನಾ). ಸಂತೋಷದ ಮಾತು ,— ನುಡಿ: ಸಂತಸವಾತಿನ ಪೂರ್ಣಪಾತ್ರಮಂ ಕೊಳ್ವವೋಲೀಟ್ಟುಕೊಂಡುವಳಿಗಳ್ ಸುಮನೋಮಕರಂದ ಗಂಧಮಂ (ಅಜಿಪು. ೬-೬೯). [ಸಂತಸ + ಮಾತು$_1$]

**ಸಂತಸವಾನ್** (ಕ್ರಿ).= ಸಂತಸಂಗೊಳ್ : ಸಂತಸವಾಂತು ಸುಧರ್ಮಂ ತಾಂ . . . ಅವನೀಪತಿಗೋರಂತೆ ಸುಮಧುಪರ್ಕಮಂ ನೆಗಟ್ಚಿದನೊಲವಿಂ (ಉದ್ಭಟ. ೮-೫೫).

[ಸಂತಸ + ಆನ್$_1$]

**ಸಂತಸವೆಱು** 'ಸಂತಸಂಬೆಱು' ನೋ.

**ಸಂತಸವೊಂದು** 'ಸಂತಸಮೊಂದು' ನೋ.

**ಸಂತಸಿಕೆ** (ನಾ). ಹಿಗ್ಗು ; ಸಂತೋಷ : ಒಸಗೆಯ ಮೇಲೆ ಮತ್ತೊಸಗೆ ಪೊಕ್ಕುಟ ಪೆರ್ಚಿನ ಮೇಲೆ ಪೆರ್ಚು ಸಂತಸಿಕೆಯ ಮೇಲೆ ಸಂತಸಿಕೆ . . . ಪಸರಿಸುವಂತಿರೆ . . . ಸೀತೆ ಪಡೆದಳ್ಮಗನಂ ಸರಸಿಜನಾಭನಂ (ಅನಂಪು. ೧೨-೮೧). [ಸಂತಸ + - ಇಕೆ]

**ಸಂತಸಿಗ** (ನಾ). ಸಂತೋಷವನ್ನುಂಟುಮಾಡುವವನು: ಸಂತಸಿಗನೆ ನೀ ಕುಳ್ಳಿರೆಂದಾ ವಸುಧೇಂದ್ರರುಱೆ ಮೆಚ್ಚೆ ಭರತನು ಕುಳಿತನು (ಭರಚ. ೨೬-೭೮).

[ಸಂತಸ + - ಇಗ]

**ಸಂತಸುಖ** (ನಾ). ನೆಮ್ಮದಿಯಿಂದ ಕೂಡಿದ ಸುಖ ; ಶಾಂತವಾದ ಆನಂದ : ಇಂತೆಸೆವ ಮನ್ನೆಯಂಗುಪದೇಶವಂ ಮಾಡಿ ಸಂತಸುಖದಿಂದಲ್ಲಿ ಜಿನಸಮಯಮಂ ಕೂಡಿ (ವಾಗೀರ. ದೇ. ೨೫೪-೧೨); ತಮತಮಗೆ ಲಕ್ಷ್ಮೀಕಾಂತರಾಮರ ರೂಪುಗುಣ ವೃತ್ತಾಂತ ಸಂಗತಿಗಳನು ವಿವರಿಸುತೊಬ್ಬರೊಬ್ಬರಿಗೆ ಸಂತಸುಖದೊಳಗಿರಲು (ಸಭಾಗ. ೧೦-೩೯-೧). [ಸಂತ, + ಸುಖ]

**ಸಂತಸೊಕ** (ನಾ). = ಸಂತಸುಖ : ಭಂಡಣದೊಳಟಿದು ಪೆಂಡಿರ್ಭಂಡಾರಂ ಪೋದಡದು ವಿಧಾತೃವಶಂ ಬಲ್ಗಂಡಂಗೆ ಸಂತಸೊಕಮಾ ಪೆಂಡತಿ ಕೋಳ್ಪಟ್ಟು ಮಗುಟೆ ಪುಗುವನೆ ಪೊಟಿಲಂ (ಅನಂಪು. ೧೧-೭೦). [ಸಂತ, + ಸೊಕ (< ಸೊಗ)]

**ಸಂತಾನ** (ನಾ). ೧. ವ್ಯಾಪ್ತಿ; ಹರಹು : ನೀಂ ಕೇಳ್ದ ದಲ್ ಮೊದಲಿಂ ಪೂರ್ವ ಭವಾಂತರೋದಿತ ಭವದ್ವೃತ್ತಾಂತಸಂತಾನಮಂ (ಕಾದಂಬ. ೭.೬೨). ೨. ಸಾಲು ; ಪಂಕ್ತಿ : ಪುರುದೇವಾದಿ ಜಿನೇಂದ್ರಮಾಲೆ ಗಣಭೃತ್ಸಂತಾನಮಂದೀ ಪರಂಪರೆಯಿಂ . . . ಬಂದೀ ಕಥೆ ಗುಣ್ಪುವೆತ್ತುದು (ಆದಿಪು. ೧-೩೫). ೩. ವಂಶ; ತಲೆಮಾರು : ಎಂತಾದೊಡಮಿಾ ಶಿಶುವಂ ನಮ್ಮ ಸಂತಾನಕ್ಕುಚಿಪಿ ಕೃತಕೃತ್ಯರಪ್ಪುದರ್ಕುಪಾಯ ಮಾವುದು (ಜಗವಿ. ೩-೬ ವ); ಆ ನರಾಧಿಪ ಬಿಜ್ಜಳನ ಸಂತಾನವೆಲ್ಲಂ ಕಡೆಗ ನಿಸ್ಸಂತಾನವಾಯಿತು (ಬಸಪು. ೬೧-೩೮). ೪. ಮಗ ಅಥವಾ ಮಗಳು : ಪತಿಗಂತರಂಗೆಯರಪ್ಪ ಕಾಂತೆಯರಿಗೆ ಕಯ್ಯೊಡನೆ ಸಂತಾನ ಸೌಭಾಗ್ಯ ಸಂಪತ್ತುಗಳನು ಶ್ರೀಕಾಂತನು ಕೈಸೇರಿಸುವನು (ಹರಿಬ. ೩-೫೦). ವಂಶಕರ ಸಂತಾನಮಂ ಕಾಣದಾ ನೃಪತಿ ತಾನೊರ್ಮೆ ತಿರುಗುತಿರಲರಮನೆಯ ಸಿರಿದೋಂಟದೊಳ್ (ಶ್ರೀರಾಮಪ. ೮-೧೯೪); ಸಾವಿರ ಕೊಟ್ಟು ಸಂತಾನ ಪಡೆಯಬೇಕು (ಗಾದ). ೫. ಜನ್ಯ; ಹುಟ್ಟಿದುದು. ೬. ವಂಶಪರಂಪರೆಯಿಂದ ಬಂದುದು; ಗತಾನುಗತಿಕವಾದುದು : ಈತನ ತಂದೆಯುಂ ತನ್ನ ಸಂತಾನವನೀತಂಗೆ ಕೊಟ್ಟರಸನೊಡನೆ ತಪಂಬಟ್ಟಂ (ವಡ್ಡಾರಾ. ೧೨೯-೧೩). ೭. ಗುಂಪು; ಸಮೂಹ : ಅಧಿಕಬಳ ನಳ ಕರತಳಗಳಿತ ಕುಳಶೈಳ ಸಹಸ್ರಸಂತಾನಕಳಿತ ಸೇತುಬಂಧುರಮುಮಪ್ಪ ದಕ್ಷಿಣಸಮುದ್ರದ ತಡಿವಿಡಿದು (ಪಂಪಭಾ. ४-೧೮ ವ); ಭವ್ಯವಿದ್ವತ್ಸಂತಾನಂ ಚೇಂಕರಿಸಿ ಜಿನಪೂಜೋತ್ಸವಂ ಮಾಡೆ (ಪುಷ್ಪಪು. ೩-೧೧೧). ೮. ರಾಶಿ; ಒಟ್ಟಿಲು. ೯. ಸ್ವರ್ಗದಲ್ಲಿ ಇರುವುದೆಂದು ನಂಬಲಾದ ಐದು ಬಗೆಯ ಮರಗಳಲ್ಲಿ ಒಂದು : "ಮಂದಾರಃ, ಪಾರಿಜಾತಕಃ, ಹರಿಚಂದನಃ, ಕಲ್ಪವೃಕ್ಷಃ, ಸಂತಾನಃ – ಈ ೫ ದೇವರ ಮರಂಗಳ್" (ಪಲಾಯಿ. ೨೨-೧೩೫); ನಂದನವನಸಂಭವ ಹರಿಚಂದನ ಸಂತಾನ ಪಾರಿಜಾತಕ ವಿಲಸನ್ಮಂದಾರ ನಮೇರುದ್ರುಮಸಂದೋಹದ ಕುಸುಮಕೋಟಿಯಿಂ . . . ಗಂಧಾಂಧಮದಾಳಿಗಳ್ ಮುಸುಜೆ (ಪುಷ್ಪಪು. ೧೧-೪೪). ೧೦. [ರಾಜನೀ] ಹೆಣ್ಣನ್ನು ಮದುವೆಮಾಡಿ ಕೊಡುವುದರ ಮೂಲಕ ಮಾಡಿಕೊಳ್ಳುವ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು : ಆ ಸಂಧಿ ಯಾವುವೆಂದೊಡೆ ಸಂಪ್ರದಾನ ಕಪಾಲ ಉಪಹಾಸನ ಸಂತಾನ . . . ಸ್ಕಂಧೋಪನಯಮೆಂದು ಷೋಡಶವಿಧಮಕ್ಕುಂ . . . ಕನ್ಯಾದಾನಪೂರ್ವಕಮಪ್ಪ ಸಂಧಿ ಸಂತಾನಮೆಂಬುದಕ್ಕುಂ (ಪಂಚತಂ. ೨೨೦-೨). ೧೧. [ಶೈವ] ಇಪ್ಪತ್ತೆಂಟು ಶಿವಾಗಮಗಳಲ್ಲಿ ಒಂದು : ವೇದಾರ್ಥಪ್ರತಿಪಾದಕಗಳಾಗಿಯೂ . . . ಇರುವ ಕಾಮಿಕ . . . ಸಿದ್ಧ, ಸಂತಾನ, ಶರ್ವ . . . ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು . . . ಸಿದ್ಧಾಂತಗಳೆಂಬ ಸಂಜ್ಞೆಯನ್ನು ಪಡೆದಿವೆ (ಭಾರದ. ೬೨). ೧೨. ದೇಹ; ಶರೀರ. "ಸುರತರು ಹಸುಮಕ್ಕಳು ದೇಹ ಸಮೂಹಂ ಭೂತಲದೊಳ್ ಸಾಲ್ಕೆನಿಪ ನಾಮ ಸಂತಾನಾಖ್ಯಂ" (ನಾನಾಕಂ. ೧೧೮). [ಸಂ.]

**ಸಂತಾನಕ** (ನಾ). ೧. ವಿಸ್ತರಿಸುವಿಕೆ; ವ್ಯಾಪಿಸುವಿಕೆ. ೨. ವಿಸ್ತರಿಸಿದುದು; ವ್ಯಾಪಿಸಲ್ಪಟ್ಟುದು. ೩. = ಸಂತಾನ ೯. ೪. ದೇವವೃಕ್ಷವೊಂದರ ಹೂವು : ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತಂ (ವಡ್ಡಾರಾ. ೮೪-೮); ಸುರಿಯದೆ ಸುರಿಯಿತ್ತಮೃತದ ಸರಿ ಸಂತಾನಕನಮೇರುಮಂದಾರ ಪಾರಿಜಾತಸಮೇತಂ (ಶಾಂತಿಪು. ೨-೮೭). ೪. ಗುಂಪು ; ಸಮೂಹ : ನೀಲದಸ್ಥಾನ ದೊಳಿರ್ದ ಬೆಳ್ಮುಗಿಲ ಮಕ್ಕಳವೊಲ್ ನಿಜಪಾಂಡುದೇಹಸಂತಾನಕವಭ್ರದೊಳ್ ಮಿಱುಗೆ ಬಂದೆಱಗಿತ್ತು ಕೊಳಂಗಳೊಳ್ (ಜಗವಿ. ४-೭४). [ಸಂ.]

**ಸಂತಾನಕಾಮಿ** (ಗು). ಸಂತತಿಯ ಅಪೇಕ್ಷೆಯುಳ್ಳ; ಮಕ್ಕಳನ್ನು ಬಯಸುವ : ಸಂತಾನಕಾಮಿ ಧರಾಧಿಪಂ . . . ಋತ್ವಿಜರೊಡನೆ ಹೋಮಕುಂಡದೆಡೆ ಪೂಜೆಯೊಳ್ ಪುತ್ರಾಭಿವಾಂಛೆಯ ಸಮಾಧಿಯೊಳ್ ತಾನಿರಲ್ (ಶ್ರೀರಾಮಾ. ೧೨-೩೧೬). [ಸಂ. ಸಂತಾನಕಾಮಿನ್]

**ಸಂತಾನಕ್ರಮ** (ನಾ). ಒಂದಾದ ಮೇಲೊಂದರಂತೆ ಬರುವ ಕ್ರಮ; ವಂಶಕ್ರಮ : ಸಂತಾನಕ್ರಮಾಂತಮಾಗತ ಜೀವಿಹರಣಕ್ಕೆ ಗೋತ್ರಮೆಂಬ ಸಂಜ್ಞೆಯಕ್ಕುಂ (ಗೊಮ್ಮಸಾ. ೨-೮). [ಸಂ.]

**ಸಂತಾನಕ್ಷಯ** (ನಾ). ಮಕ್ಕಳು ನಾಶವಾಗುವಿಕೆ ; ವಂಶಹೀನನಾಗುವಿಕೆ : ಭಕ್ಷಿಸಿದಾತನ ಸಂತಾನಕ್ಷಯ ಆಯುಕ್ಷಯಂ ಕುಲಕ್ಷಯಮುಕ್ಕುಂ (ಸೌಇ. XX, ೩೮೦-೧೩; 1432). [ಸಂ.]

**ಸಂತಾನಗಾಮಿ** (ನಾ). ವಂಶಪಾರಂಪರ್ಯವಾದುದು; ಆನುವಂಶಿಕವಾದುದು: ತಂನ ಧರ್ಮ್ಮಸಖಾಯಿಯಪ್ಪ ತಣ್ಣಂತುಳದಾಸರಿಗೆ ಸಂತಾನಗಾಮಿಯಾಗಿ ಕೊಟ್ಟ ಪ್ರಸಾದ ಮಾನ ೧ (ಮೈಆರ. ೧೯೪೬, ೩೧-೨೩; 1314). [ಸಂ. ಸಂತಾನಗಾಮಿನ್]

**ಸಂತಾನಬೀಜ** (ನಾ). ಒಂದು ಬಗೆಯ ಸಸ್ಯ : (ಮೃಔಗಿ. ४೯-೯೭೭). [ಸಂ.]

**ಸಂತಾನರೂಪ** (ನಾ). [ಜೈನ] "ಅನುಭವಕ್ಕೆ ಬಾರದಿರುವ ಪೂರ್ವೋತ್ತರ ಕ್ಷಣಗಳ ಸಮೂಹವು ಸಂತಾನವು. ಇಂಥ ಸಂತಾನಗಳ ಸಮೂಹವು ಸಂತಾನರೂಪವು" (ಆದಿಪು. ಜೈನಪಾರಿಭಾಷಿಕ ಶಬ್ದಕೋಶ): ಭ್ರಾಂತಿವಶದಿಂ ಗ್ರಾಹ್ಯಗ್ರಾಹಕಸಂವೇದನಾಕಾರತ್ರಯಾಕ್ರಾಂತಂಗಳ್ ವಿಜಾತೀಯಾವ್ಯವಧಾನ ಲಘೂತ್ಪತ್ತಿಸದೃಶಾಪರಾಪರೋತ್ಪತ್ತಿಯೆಂಬಿವಱಿಂ ವಿಪ್ರಲಬ್ಧಬುದ್ಧಿಗೆ ಸಂತಾನರೂಪದಿಂ ಪುಟ್ಟುತ್ತಿರ್ದ ವಿಜ್ಞಾನಲಕ್ಷಣಂಗಳಾತ್ಮಾಭಿಧಾನಮಂ ಪುಟ್ಟಿಸುಗುಂ (ಆದಿಪು. ೨-೯ ವ). [ಸಂ.]

**ಸಂತಾನರೇಖೆ** (ನಾ). [ಸಾಮುದ್ರಿ] ಎಷ್ಟುಮಕ್ಕಳು ಹುಟ್ಟುತ್ತವೆ ಎಂಬುದನ್ನು ಸೂಚಿಸುವ, ಅಂಗೈಯಲ್ಲಿರುವ ಒಂದು ಗೆರೆ : ಹೆಬ್ಬೆರಳ ತಾಳಿನಲ್ಲಿ ಸಂತಾನರೇಖೆಯಿರುವದು (ಸಾಮುಲ. ೯೭-೮). [ಸಂ. ಸಂತಾನರೇಖಾ]

**ಸಂತಾನಲಕ್ಷ್ಮಿ** (ನಾ). ಅಷ್ಟಲಕ್ಷ್ಮಿಯರಲ್ಲಿ ಒಬ್ಬಳು; ಸಂತಾನವನ್ನು ಕೊಡುವವಳು : ಸಂತ್ಸಾನಲಕ್ಷ್ಮೀ ಅಂಮನವರೂ ಆದಿಶಕ್ತಿ ಲಕ್ಷ್ಮೀದೇವೀಭಾರತೀ ಅಂಮ್ಮನವರೂ ಸರಸ್ವತೀ ಅಂಮನವರು (ಎಕ. V (R). ತಿರುಮ. ೨೭೭-೧೩; 19ನೆಯ ಶತ). [ಸಂ.]

**ಸಂತಾನಪಡೆ** (ಕ್ರಿ). ಮಕ್ಕಳನ್ನು ಪಡೆ; ಸಂತತಿಯನ್ನು ಹೊಂದು : ಸಾವಿರ ಸಂತಾನಪಡೆದಳೆ ಮಮಕಾರ ತೀವಿಹುದಬಲನ ಮೇಲೆ (ಮೋಹತ. ೧-೧೧). [ಸಂತಾನ + ಪಡೆ,]

**ಸಂತಾನಸ್ಥ** (ನಾ). ಒಳ್ಳೆಯ ಮನೆತನದವನು; ವಂಶಸ್ಥ : ಸಂತಾನಸ್ಥಂ ನೃಪಪದಮನೆ ತಳೆದುಂ ಧರ್ಮ್ಮತತ್ಪರಂ ತೈಲನೃಪಂ . . . ಅನನ್ತಸುಖಕ್ಕೆಳಸಿ ಪುಣ್ಯಭಾಜನನಾದಂ (ಎಇ. XVI, ३೯-४७; 1153). [ಸಂ.]

**ಸಂತಾನಾಂತರ** (ನಾ). [ಜೈನ] ಒಂದಾದ ನಂತರ ಬೇರೊಂದು ಹುಟ್ಟುವುದರಲ್ಲಿರುವ ಭೇದ (?) : ಅನುಮಾನದಿಂ ಸಂತಾನಾಂತರಮಂ ಸಾಧಿಸುವೆನೆಂಬೆಯಪ್ಪೊಡಂ ಬಹಿರರ್ಥಸಿದ್ಧಿಯಕ್ಕುಂ (ಆದಿಪು. ೨-೧೦ ವ). [ಸಂ.]

**ಸಂತಾನಿಕೆ** (ನಾ). ೧. ನೊರೆ; ಬುರುಗು. ೨. ಹಾಲಿನ ಕೆನೆ. ೩. ಕೆನೆಗಟ್ಟಿದ ಹಾಲು. ೪. ಜೇಡನ ಬಲೆ. ೫. ಕತ್ತಿಯ ಅಲಗು, - ಧಾರೆ. ೬. ಸ್ಕಂಧನನ್ನು ಸಾಕಿದ ಸಪ್ತಮಾತೃಕೆಯರಲ್ಲಿ ಒಬ್ಬಳು. ೭. ಮರದ ಕೆಚ್ಚು; ದಿಂಡು. "ಸಂತಾನಿಕೆ- ಜೇಡತುಳದ ಪರೆ ; ೨. ಮರದ ಕೆಚ್ಚು; ೩. ಹಾಲಿನ ಕೆನೆ" (ನಾನಾಅ. ೨೫೦). [ಸಂ. ಸಂತಾನಿಕಾ]

**ಸಂತಾಪ** (ನಾ). ೧. ಅತಿಯಾದ ಕಾವು, -- ಬಿಸುಪು : ಸಂತಾಪಭೀತಿಯಿಂ ತನುಕಾಂತಿ ತೆರಳ್ದೋಡಿದಪುದೆನಲ್ ನಿಡುಸುಯ್ಯಿಂದಂ ತೊಲಗೆ ಮೇಲುದೆಸೆದುದು ಕಾಂತೆಯ ಚಂದನವಿಲಿಪ್ತಘನಕುಚಯುಗಳಂ (ಕಾದಂಬ. ೬.೨೫); ಕಾಯ್ದು ಲೋಹಕ್ಕಿದು ಮೇಲೆಂಬುದಮಾದತ್ತ ಹಿಮಕಿರಣಸಂತಾಪದಿಂದೆಂಬ ವೈಶಾಖದೊಳಾ ಯೋಗೀಶ್ವರಂ

ಕಲ್ಲೆಲ ನೆಲಸಿ ಹಿಮಾದ್ರೀಂದ್ರಮಿರ್ಪಂತಿರಿರ್ದಂ (ಸುಕುಮಾ. ೪-೧೩). ೨. ಬೆಂಕಿ; ಅಗ್ನಿ. ೩. ವ್ಯಥೆ; ಸಂಕಟ : "ಬೇಗುದಿ, ಉಬ್ಬೆಗಂ, ಅದವಟಲ್ — ಈ ೩ ಸಂತಾಪಂ" (ಕಶಸಾ. ೫೬-೨೨೭); ಸಂತಾಪನಂ ವಿರೋಧಿಗೆ ಸಂತಾಪಮನುಂಟುಮಾಳ್ಪ ಬಲ್ಲಾಳಂ . . . ಕೊಂದಂ ತಲ್ಲಣಿಪಂತು ಮಾರ್ಬಲಂ ಮಾರೀಚಂ (ಪಂರಾಮಾ. ೧೩-೯೮). ೪. ಮಾಡಿದ ತಪ್ಪಿಗಾಗಿ ಮರುಗುವುದು; ಪಶ್ಚಾತ್ತಾಪ. ೫. ಒಂದು ನರಕದ ಹೆಸರು : ರೌರವ ಧ್ವಾಂತ ಶೀತ ಉಷ್ಣ ಸಂತಾಪ ಅಂಬುಜ ಮಹಾಂಬುಜ ಕಾಲಸೂತ್ರಂಗಳೆಂಬಿವೇ ನರಕಂಗಳು ಸೂಚೀಮುಖ . . . ಮಹಾದಾಹ ಸಂತಾಪಂಗಳೆಂಬವೇ ಮಹಾನರಕಂಗಳು (ವಿವೇಕ. ೧೫೧). ೬. ಅತಿಯಾದ ತಾಪದಿಂದ ಕೂಡಿರುವ ಒಂದು ಬಗೆಯ ಜ್ವರ : ಆ ಘೃತವನ್ನು ಸೇವಿಸಲು ಸಕಲಜ್ವರ, ಕ್ಷಯವ್ಯಾಧಿ, ಕಾಸರೋಗ, ಸಂತಾಪ, ಹಲೀಮಕ, ತಲೆಬೇನೆ ಸಹ ಮಾಣ್ಬುಂ (ಸಕವೈ. ೧೧೪). ೭. ಉಗ್ರವಾದ ಕೋಪ, — ಸಿಟ್ಟು : ಸಂತಾಪದಿಂದ ಧ್ವನಿಯೆಲ್ಲ ನಡುಗುತ್ತಿತ್ತು (ರೂಢಿ). ೮. ಕಾಮಾವಸ್ಥೆಗಳಲ್ಲಿ ಒಂದು; ಮನ್ಮಥಜ್ವರ : ಪೂಸುವ ಚಂದನಂ ಬಿಸುಪನಾರಿಸಲಾಱವು ಸತ್ಯಭಾಮೆಯಾ . . . ಬಣ್ಣಿಸುವೊಡಳವೆ ಸತ್ರಾಜಿತೀದೇಹದಾಹಂ (ಇವೆರಡುಂ ಸಂತಾಪಂ) (ರಸರ. ೧-೯೦). [ಸಂ.]

**ಸಂತಾಪಂಗೊಳ್** (ಕ್ರಿ). ಸಂಕಟಕ್ಕೆ ಗುರಿಯಾಗು; ಗೋಳಾಡು; ದುಃಖಿಸು : ಪತಿವಿಯೋಗದೊಳ್ ಸಂತಾಪಂಗೊಳ್ಳುದುಂ . . . ಎಲ್ಲಾ ಸ್ತ್ರೀಯರ್ಗಂ ಸಾಧಾರಣಂ (ಚಾವುಂಪು. ೩೦೨). [ಸಂತಾಪ + ಕೊಳ್$_1$]

**ಸಂತಾಪದ** (ನಾ). ಅತಿಯಾದ ತಾಪವನ್ನುಂಟುಮಾಡುವವನು : ನೀರದರಾಜ ನಟ್ಟದಂ ಧರಾತಿಸಂತಾಪದನಂ ನಿದಾಘನಂ (ರಾಜಶೇ. ೮-೧೦೪). [ಸಂ.]

**ಸಂತಾಪನ** (ನಾ). ೧. ಸುಡುವಿಕೆ; ದಹಿಸುವಿಕೆ. ೨. ಸಂಕಟ; ಅಳಲು. ೩. ಒಂದು ಬಗೆಯ ನರಕ : ದುಸ್ಸಹ . . . ಸಂತಾಪನ . . . ದುರ್ಭೋಗ್ಯ ನಾನಾವಿಧಾಸಂಖ್ಯಾತ ತೀವ್ರವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷಾಲೇಶವೆಂದೆನಿಸಿ (ವಿವೇಕ. ೧೮೦). ೪. [ಕಾಮಶಾ] ಕಾಮದ ಮೂರು ಅವಸ್ಥೆಗಳಾದ ಕಾರ್ಶ್ಯ, ಜಾಗರಣ, ಸಂತಾಪನ ಎಂಬುವುಗಳಲ್ಲಿ ಕೊನೆಯದು : ಕಾರ್ಶ್ಯ ಜಾಗರಣ ಸಂತಾಪನಮೆಂಬ ಅವಸ್ಥಾತ್ರಯಪರೀಕ್ಷಕರಿಂ (ವಿವೇಕ. ೧೮೪). ೫. ಅಭಿಲಾಷೆ, ಚಿಂತೆ, ಸಂಸ್ಮೃತಿ, ವಿಭುಗುಣಸ್ಮೃತಿ, ಸಂತಾಪನ, ಕ್ರಿಯಾದ್ವೇಷ, ವಿಕಲತೆ, ಮೌನ, ಮೂರ್ಛೆ ಮತ್ತು ಮರಣಗಳೆಂಬ ಕಾಮದ ದಶಾವಸ್ಥೆಗಳಲ್ಲಿ ಒಂದು : ಅಭಿಲಾಷ . . . ಸಂತಾಪನ . . . ಮರಣಮೆಂಬ ದಶಾವಸ್ಥಾದಿ ವಿಚಾರಪರರಿಂ (ವಿವೇಕ. ೧೮೪). ೬. ಮನ್ಮಥನ ಪಂಚಬಾಣಗಳಲ್ಲಿ ಒಂದು : ಮನೋಮಥನ ಮದನ ಮೋಹನ ಸಂತಾಪನ ವಶೀಕರಣಂಗಳೆಂಬ ಕಾಮದೇವನಯ್ದುಲರಂಬಿನ ಶಕ್ತಿಗಳುಮನೊಂದುಮಾಡಿ (ಪಂಪಭಾ. ೪-೭೫ ವ). [ಸಂ.]

**ಸಂತಾಪವೆರಸು** (ಕ್ರಿ). ಅತಿಯಾದ ತಾಪದಿಂದ ಕೂಡು : ನಟ್ಟುದು ಕೂರ್ಗಣೆ ಕುವರಿಯ ಹರಣ ಕಂಗೆಟ್ಟುದು ಸಂತಾಪವೆರಸಿ (ಮೋಹತ. ೨೮-೧೫).
[ಸಂತಾಪ + ಬೆರಸು$_1$ (< ಬೆರೆಯಿಸು)]

**ಸಂತಾಪಸೂಚಕಸಭೆ** (ನಾ). ಒಬ್ಬ ವ್ಯಕ್ತಿಯ ಮರಣಾನಂತರ ತಮಗಾದ ದುಃಖವನ್ನು ಪರಸ್ಪರ ವ್ಯಕ್ತಪಡಿಸುವ ಸಲುವಾಗಿ ಆತನ ಆಪ್ತರು ಸೇರುವ ಸಭೆ : ಮರುದಿನ ಕಾಲೇಜಿನಲ್ಲಿ ನಡೆದ ಸಂತಾಪಸೂಚಕಸಭೆಯಲ್ಲಿ . . . ರಾಯರ ಪ್ರಕಟಿತಗ್ರಂಥಗಳ ಒಂದೊಂದು ಪ್ರತಿಯನ್ನು ಜೋಡಿಸಿ ಇಟ್ಟಿದ್ದರು (ವಂಶವೃ. ೧೭೦).
[ಸಂ. ಸಂತಾಪಸೂಚಕಸಭಾ]

**ಸಂತಾಪಿತ** (ಗು). ೧. ಅತಿಯಾಗಿ ಸುಟ್ಟ; ಕರಿಕಾಗುವಂತೆ ದಹಿಸಿದ : ಸದ್ಯಸ್ಸಂತಾಪಿತ ಲೋಹಪುತ್ರಿಕಾಪರಿರಂಭಸಂಭೃತಪ್ಲೋಷಗಲಜ್ಜಾಂಗಳಗಳದ್ರು ಧಿರ . . . ಮುಹ್ಯನ್ಮಾನಸಾಕ್ರಂದತ್ ಸ್ವರಪರಿಗತರ್ ಸ್ವೈರಿಸಲಾಱದೆ ತಡದಡಿಸಿ ಪರಿತಂದು (ಆದಿಪು. ೫-೮೭ ವ). ೨. ದುಃಖಿಗೊಂಡ; ವ್ಯಥೆಗೊಳಗಾದ : 'ಸಂತಾಪಿತ ಹೃದಯ' ಪರಾ. ೩. ಚೆನ್ನಾಗಿ ಕಾಯಲ್ಪಟ್ಟಿದ್ದು : "ಸಂತಾಪಿತಃ . . . ೫ ಬಿಸಿಲು, ಸೆಕೆ ಮುಂತಾದವುಗಳಲ್ಲಿ . . . ಕಾಯಿಸಲ್ಪಟ್ಟಂಥಾದ್ದು" (ಸಿದ್ಧಾಂತಿ. ೩೫೦). [ಸಂ.]

**ಸಂತಾಪಿತಹೃದಯ** (ನಾ). ೧. ದುಃಖಿಗೊಂಡ ಮನಸ್ಸು. ೨. ಸಂಕಟಕ್ಕೆ ಗುರಿಯಾದ ವ್ಯಕ್ತಿ : ತನೂಜಂ ನಿಳಯವಂ ಪೊಱಮಟ್ಟು ಸಂತಾಪಿತಹೃದಯನಾಗಿ (ಬಸವು. ೪೭-೨೩). [ಸಂ.]

**ಸಂತಾಪಿಸು** (ಕ್ರಿ). ೧. ಅತಿಯಾಗಿ ಕಾಯಿಸು, — ದಹಿಸು; ಬಹಳ ತಾಪವನ್ನುಂಟುಮಾಡು : ರಸೆಯಂ ಸಂತಾಪಿಸುತ್ತುಂ ಜಳಭರಿತತಟಾಕಂಗಳಂ ಶೋಷಿಸುತ್ತುಂ . . . ದವಶಿಖಿಯವೊಲೆಲ್ಲತ್ತಮೋಘನಿದಾಘಂ (ಗಿರಿಕ. ೯-೧೭). ೨. ದುಃಖಿಪಡು; ಸಂಕಟಪಡು : ಪರರೈಶ್ವರ್ಯಕ್ಕಸೂಯಂಗೊಳುತೆ ಪರರ ಬಲ್ಪಿಂಗೆ ಸಂತಾಪಿಸುತ್ತುಂ . . . ಗಾಸಿಯಾದಪ್ಪೆಂ (ರಣ್ನಾಶ. ೧೧); ಆವ ತೆಱದಿಂ ದುಗುಡವೇಗುವೆನೆನುತ ಸಂತಾಪಿಸುವನು (ಬಸವು. ೧೮-೬೩); ತಾರಕಂ ಬಳಿಕ ಬ್ರಹ್ಮಾಸ್ತ್ರಮಂ ಪೂಡಿ ತೆಗೆದೆಸಲ್ಕೆ ಸಂತಾಪಿಸಿತು ನಿಖಿಳಲೋಕಂ (ಚಿಬಪು. ೪೦-೧೮). ೩. ಸಂಕಟಕ್ಕೆ ಗುರಿಮಾಡು; ಹಿಂಸಿಸು : ಜಳ್ಳುರಕ್ಕಸನಿವನನೀ ಹೆಂಗಳ್ಳನನು ಸಂತಾಪಿಸುವ [ಪಾಠಾಂ. ಸಂಪಾದಿಸುತ, ಸಂಪಾತಿಯಲಿ] ರಣಗಳ್ಳನನು . . . ಹೊಳ್ಳುವಾಱಿಸಲೂದುವೆನು (ತೊರರಾ. ೫-೭-೩೬); ನಿನ್ನ ಮೇಲಣ ಭ್ರಾಂತಿ ಬಿಡದು ನಿಶಾಚರ ತನ್ನ ಸಂತಾಪಿಸುತಿಹನು (ಮೋಹತ. ೧೦-೨೫). [ಸಂತಾಪ + — ಇಸು$_3$]

**ಸಂತಾಲ** (ನಾ). ಒಂದು ಬಗೆಯ ಮರ : ನೆಲ್ಲಿ ತಂಡಸ ಕರಗ ಸಂತಾಲ ಹಿಂತಾಲ ಮತ್ತಿ . . . ಬಹುವೃಕ್ಷಂಗಳಿಂದೆ ತುಂಬಿ (ಮಹಾಪಿ. ೭-೧೮). [?]

**ಸಂತಾಳ** (ನಾ). ಲೋಹದ ತಾಳ : ಬಾಜಿಸುವ ವಾದ್ಯಂ ಸೌಶಿರಂ ಸಂತಾಳದಲ್ಲಿ ನುಡಿಸುವದು ಘನಕಾಯಿಕರವಂ ತಾನಮಾನದಿಂ ವರ್ತಿಸಲ್ (ಚತುಪು. ೬-೪-೩೩).
[? + ತಾಳ$_2$ ( = ತಾಲ) ]

**ಸಂತಿ** 'ಸಂತೆ$_2$' ನೋ.

**ಸಂತಿಗವುಂಡ** (ನಾ). ಒಬ್ಬಾತನ ಹೆಸರು : ಮಾರಗವುಣ್ಣ ಸನ್ತಿಗವುಣ್ಣಾಗಂ ಎಳ್ವದಿ ಬೊಗ್ಗಪಳ್ಳಿ ಮರಿಗ ಕುಮ್ಬಣ್ಣಗಂ ಎಳಮಕ್ಕಳ್ಗೆ ಮೆಚ್ಚವೊಗೆವೆಗ್ಗೆಯ ತೆಱೆಯ ಬಿಟ್ಟ (ಎಕ III (R). ನಂಜನ. ೩೦೩-೭; ಸು ೨ನೆಯ ಶತ). [< ಶಾಂತಿ + ಗವುಂಡ ( < ಗಾಮುಂಡ)]

**ಸಂತಿಡು** 'ಸಂತಮಿಡು' ನೋ.

**ಸಂತು$_1$** 'ಸಲ್' ಪರಾ.

**ಸಂತು$_2$** 'ಸಂತೆ$_2$' ನೋ.

**ಸಂತುಷ್ಟ** (ಗು). ೧. ಸಂತೋಷಗೊಂಡ; ಆನಂದಗೊಂಡ; ಹಿಗ್ಗಿದ : ಚಿಂತ್ಯೆಕಸುಖಿಕ್ರಾಂತರ್ ಸಂತುಷ್ಟೈಕಾಗ್ರಚಿತ್ತರಾದರ್ ತಮ್ಮೊಳ್ (ಕವಿರಾ. ೨-೫೮); ವಿಶಿಷ್ಟಜೀವನವ್ಯಕ್ತಿಯುತ ಸಂತುಷ್ಟ ತತ್ತ್ವಾತ್ಮಕವಿದಕ್ಕೆ ಸಮಾನವೊಂದುಂಟೆ (ಬಸವು. ೩-೭೦). ೨. ತೃಪ್ತಿಹೊಂದಿದ; ತಣಿದ : ಸಮಾನರಾಗಭೋಗಭರಿತ ಪರಮ ಸುಖದಿಂ ಸಂತುಷ್ಟಪುಷ್ಪಹೃದಯರಾಗಿ (ಗಿರಿಕ. ೩-೩೧ ವ). (ನಾ). ೩. ಸಂತೋಷ; ಹಿಗ್ಗು : ಸಾಷ್ಟಾಂಗವೆಱಗಿ ನಂಬುಗೆವಂತರೆದ್ದು ಸಂತುಷ್ಟದಿ ಬೀಳ್ಕೊಂಡರೊಡನೆ (ಭರತ. ೩೮-೧೨೩). ೪. ಸಂತೋಷಗೊಂಡವನು : ಸಂಪೂರ್ಣಂ ಸಂತುಷ್ಟವಾದಂ ನಿನ್ನ ಭಕ್ತಿಗೆ (ಅದ್ಭುತ. ೭-೩); ಉಂಬಳಿಭೂಮಿಯನ್ನು ಆಗೆಯುವಾಗ ದೊರೆತ ನೊಳಂಬೇಶ್ವರವಿಗ್ರಹ ಮತ್ತು ಏಳು ಕೊಪ್ಪರಿಗೆ ದ್ರವ್ಯದಿಂದ ಸಂತುಷ್ಟರಾದರು (ನೊಳಂಬ. ೬೨). ೫. ತೃಪ್ತಿಗೊಂಡವನು; ಸಂತೃಪ್ತ : ಎರೆದರ್ ಸಂತುಷ್ಟರಾದರ್ ಕದನದೊಳಿದಿರಂ ಮಿಱೆ ಮಾಱಾಂತು ನಿಂದಾಂತರಿಭೂಪರ್ ಭಸ್ಮಮಾದರ್ (ಕಾವ್ಯಸಾ. ೨೧೫ ಶೂದ್ರಕ); ಬಂದ ಜಂಗಮಕೋಟಿಯಂ ಸಾನಂದದಿಂ ಸಂತುಷ್ಟರಂ ಮಾಳ್ಪಂದವವನೊಳು (ಬಸವು. ೩೦-೭); ಶ್ರೀರಮಣ ಸಂತುಷ್ಟನಾದೊಡೆ ಬೇಱೆ ಭೋಜನವೆಮಗೆ ಬೇಹುದೆ (ಕುಮ್ಯಾ ಅ. ೧೭-೪೮). [ಸಂ.]

**ಸಂತುಷ್ಟಗೊಳಿಸು** (ಕ್ರಿ). ಸಂತೋಷವನ್ನುಂಟು ಮಾಡು; ಉಲ್ಲಾಸಪಡಿಸು : ನಿನಗೇನು ಕೊಟ್ಟು ನಾನು ಸಂತುಷ್ಟಗೊಳಿಸಬಲ್ಲೆ? (ಜಮಾನ್ತಾ. ೧೬೦); ಕವನಸಂಕಲನದಿಂದ ಸಹೃದಯರನ್ನು ಸಂತುಷ್ಟಗೊಳಿಸಿದರು (ಸುವರ್ಣ. ೧೩೭).
[ಸಂತುಷ್ಟ + ಕೊಳ್$_1$ + — ಇಸು$_3$]

**ಸಂತುಷ್ಟಾಂತರಂಗ** (ನಾ). ೧. ಸಂತೋಷಗೊಂಡ ಮನಸ್ಸು : ಆ ರತ್ನಮುದ್ರಿಕೆಯನತ್ಯಂತ ಸಂತುಷ್ಟಾಂತರಂಗಸಂಗತನಾಗಿ ಕಂಡು (ಸುಕುಮಾ. ೩-೧೫ ವ).

೨. ಸಂತೋಷಗೊಂಡ ವ್ಯಕ್ತಿ ; ಹರ್ಷಚಿತ್ತ: ಅತ್ಯಂತ ಹೃಷ್ಟೋತ್ಕೃಷ್ಟ ಸಂತುಷ್ಟಾಂತರಂಗನವರ ನವಯೌವನಕ್ಕೆ ನೆಲೆವಾದ ರೂಪಾತಿಶಯಕ್ಕಂ . . . ಬೆಕ್ಕಸಂಬಟ್ಟು (ಶಾಂತಿಪು. ೩-೫೩ ವ); ಸಂತುಷ್ಟಾಂತರಂಗರಾದ ಆ ದಂಪತಿಗಳು . . . ಕೊಂಡಾಡಿದರು (ಕವಿಕ. ೧೯). [ಸಂ.]

**ಸಂತುಷ್ಟಿ** (ನಾ). ೧. ಸಂತೋಷ; ಹಿಗ್ಗು : ಉಚಿತ ಸತ್ಕ್ರಿಯೆಗಳಿಂ ಸಂತುಷ್ಟಿಯಂ ಪಡಿಸಿ (ಬಸವು. ೨೯-೩೪). ೨. ಸಂಪೂರ್ಣವಾದ ತೃಪ್ತಿ, — ತಣಿವು : ಜಂಗಮವಾಪ್ಯಾನವಾದರೆ ಲಿಂಗಸಂತುಷ್ಟಿ (ಬಸವ. ೧೯೭); ಸಂತುಷ್ಟಿಯೇ ಸುಖಕ್ಕೆ ಮೂಲವು, ಅಸಂತುಷ್ಟಿಯು ದುಃಖಕ್ಕೆ ಕಾರಣವು (ಆರ್ಯಧ. ೮೭). [ಸಂ.]

**ಸಂತುಷ್ಟಿಪಡಿಸು** 'ಸಂತುಷ್ಟಿಬಡಿಸು' ನೋ.

**ಸಂತುಷ್ಟಿಬಡಿಸು, ಸಂತುಷ್ಟಿಪಡಿಸು** (ಕ್ರಿ). ತೃಪ್ತಿಗೊಳಿಸು ; ತಣಿಸು : ಪರಿಪರಿಯ ಯಜ್ಞವನು ವಿರಚಿಸಿ ಪುರಪತಿಯ ಸಂತುಷ್ಟಿಬಡಿಸಲು (ಕುಮಾಉ. ೪-೬೦). **ಸಂತುಷ್ಟಿಪಡಿಸು** : ಕುಮಾರರ್. . . ಉಡಲ್ಕೊಟ್ಟು ವೀಳೆಯಮನಿತ್ತು ಸಂತುಷ್ಟಿಪಡಿಸಿ (ಪಂಚತಂ. ೧೭-೩); ಉತ್ತಮ ಉಡುಗೊರೆಗಳನ್ನೂ ಯೋಗ್ಯತಾನುಸಾರ ಪ್ರಭುಗಳ ಹಸ್ತದಿಂ ಕೊಡಿಸಿ ಸಂತುಷ್ಟಿಪಡಿಸಿ ಕಳಿಸಿಕೊಟ್ಟರು (ಶಾಂತಲಾ. ೧೩೭).

[ಸಂತುಷ್ಟಿ + ಪಡಿಸು]

**ಸಂತುಷ್ಟಿವಡೆ** (ಕ್ರಿ). ಸಂತೋಷಿಸು; ಹಿಗ್ಗು : ಇಷ್ಟಾರ್ಥಫಲವು ಕೈಸಾರ್ದು ಸಂತುಷ್ಟಿವಡೆದು (ಮೈಲಾರ. ೧-೧೧). [ಸಂತುಷ್ಟಿ + ಪಡೆ$_1$]

**ಸಂತುಷ್ಟಿಸು** (ಕ್ರಿ). = ಸಂತುಷ್ಟಿವಡೆ : ಆದಿಯಿಂದಾಧರಿಸಿ ಬಹುವಿಧವಾದ ವಸ್ತುಗಳಿಂದ ಮನ್ನಣೆಯಾದಿ ಸಂತುಷ್ಟಿಸುತ (ಬಿಜ್ಜಪು. ೪೧-೨೨). [ಸಂತುಷ್ಟ + — ಇಸು$_3$]

**ಸಂತೃಪ್ತ** (ಗು). ೧. ತೃಪ್ತಿಗೊಂಡ; ತಣಿದ : ಕೋಸಲದೊಳಾ ಗೂನಿ ಮಂಥರೆಯ ಮೀರಿದ ತಿರಸ್ಕೃತೆಯುಮಂ ಸಂತೃಪ್ತ ಸುಖಿಯುಮಂ ಕಾಣೆ (ಶ್ರೀರಾಮಾ. ೨೭-೬೦೨). (ನಾ). ೨. ತೃಪ್ತಿಹೊಂದಿದವನು; ತೃಪ್ತ : ಆಪ್ತವಾಕ್ಯಂಗೇಳ್ದು ಸಂತೃಪ್ತನಾಗಿ ದೊರೆ ಬರಿಸಿದನು . . . ರಾಮನಂ (ಶ್ರೀರಾಮಾ. ೩೧-೮೦). [ಸಂ.]

**ಸಂತೃಪ್ತಿ** (ನಾ). ಸಂಪೂರ್ಣ ತೃಪ್ತಿ,— ತಣಿವು: ಪ್ರಪಂಚಕ್ಕೆಲ್ಲ ಸಂತೃಪ್ತಿಯನ್ನುಂಟುಮಾಡುವ ಮೇಘಗಳು ಭೂಮಿಯನ್ನು ತೃಪ್ತಿಗೊಳಿಸುತ್ತವೆ (ಋಣ್ಣಾರ. ೨೯೩). [ಸಂ.]

**ಸಂತೆ$_1$** (ನಾ). ೧. ಕಂಠಪಾಠ ಮಾಡುವುದಕ್ಕಾಗಿ ಮತ್ತೆ ಮತ್ತೆ ಓದುವುದು; ಬಾಯಿಪಾಠ ಮಾಡುವುದು: (ಕ). ೨. ಓದಬೇಕಾದ ಭಾಗ; ಪಾಠ: (ಕ).

[ದೇ. ‖ ತಮಿ. ಚನ್ತೈ ; ತೆಲು. ಸಂತ ./ ಮರಾ. ಸಂಥಾ]

**ಸಂತೆ$_2$, ಸಂತಿ , ಸಂತು$_2$ , ಸಂಥೆ** (ನಾ). ೧. ಗುಂಪು; ಸಮೂಹ : ಆಱುಂ ಋತುಗಳ ಪೂಗಳನೊಂದುಮಾಡಿ ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದೋಜನ ಸಾಲೆಯಿರ್ಪಂತಿರ್ದ ಪೂವಿನ ಸಂತೆಯೊಳ್ (ಪಂಪಭಾ. ೪-೮೦ ವ); ಅವಸ್ಥಾ- ಅವತೆ; ಸಂಸ್ಥಾ- ಸಂತೆ (ಶಮದ. ೨೫೭ ಪ್ರಯೋ); ಹೂಗಳ ಸಂತೆ, ಶ್ರಾವಣದ ಹಸಿರು ಚಂಗನೆ ಚಿಗಿಯುವ ಚಿಗುರಿ (ಸುವಸಂ. ೫). ೨. ಗೊತ್ತಾದ ಸ್ಥಳ ಹಾಗೂ ಕಾಲದಲ್ಲಿ ವ್ಯಾಪಾರಕ್ಕಾಗಿ ಸೇರುವ ಅನೇಕ ಬಗೆಯ ಪ್ರದರ್ಶನ, ಮನರಂಜನೆಗಳಿಂದ ಕೂಡಿದ ನೆರವಿ; ಜಾತ್ರೆ : ಹೋದ ಸಂತೆಯದೊಂದು ದುಡ್ಡು ಇತ್ತು; ಅದನ್ನು ಇಂದು ಒಬ್ಬ ಕುರುಡ ತಿರಕನಿಗೆ ಕೊಟ್ಟೆನು (ಮುಂಬಯು. ೪-೪೩); ಕಾಣಲಿಹುದನು ಕಂಡೆನೆಲ್ಲ, ಕೊಳ್ಳಲಿಹುದನು ಕೊಂಡೆನೆಲ್ಲ; ಹಿರಿವುದೆಂದೀ ಸಂತೆ ಬಲ್ಲರಾರು ನೆರಸಿದನಲ್ಲದೆ? (ಗೀಎಂ. ೫೪-೩); ಸಂತೇಹೊತ್ತಿಗೆ ಮೂರು ಮೊಳ ನೇದ ಹಾಗೆ (ಗಾದ). ೩. ಸರಕುಗಳನ್ನು ಮಾರುವುದಕ್ಕೂ ಕೊಳ್ಳುವುದಕ್ಕೂ ನಿರ್ದಿಷ್ಟದಿನಗಳಲ್ಲಿ ಜನರು ಸೇರುವ ಸ್ಥಳ; ಗುಂಪು ಸೇರಿ ವ್ಯಾಪಾರ ಮಾಡುವ ಜಾಗ : ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ (ಮಹಾದೇ. ಬ.೪೫-೧೦೬); ಕಲ್ಲುಸಕ್ಕರೆ ಕೊಳ್ಳಿರೋ ನೀವೆಲ್ಲರು . . . ಸಂತೆಸಂತೆಗೆ ಹೋಗಿ ಶ್ರಮಪಡಿಸುವುದಲ್ಲ ಸಂತೆಯೊಳಗೆ ಇಟ್ಟು ಮಾಱುವುದಲ್ಲ (ಪುರಂದ. ೧-೧೨೭-೩). ೪. "ವ್ಯಾಪಾರದ ದಿನ"(ಜಾನಕೋ.೪೭). ೫. ದೊಂಬಿ; ಗದ್ದಲ. **ಸಂತಿ**: ೩. ಸನ್ತೆಯ ಕಟ್ಟುವದಕ್ಕೆ ಕೊಟ್ಟ ಕೊಡಗಿ ಶಾಸನದ ಕ್ರಮವೆನ್ತೆನ್ದರೆ . . . ಹಸುಕರು ಸನ್ತಿಯಲು ಅಲ್ಲಾ ಕೂಡಿ (ಎಕ. IX, ಬೆಂಗಳೂ. ೬೧-೨೨; 1322). **ಸಂತು$_2$** : ೧. ಈವನ ಮಧುವಿನಾವಾಸ ಕಾವನ ಬೀಡು ಪೂವಿನ ಸಂತೆನಲ್ ಪಕ್ಕಿ ತಾವು (ವರ್ಧಚ. ೧೧-೭೨). **ಸಂಥೆ** : ೨. ಸೂಣ್ಣಿಯೊಳಾದಿತ್ಯವಾರದೊಳ್ ನೆರೆವ ಸಂಥೆಯ ಸಿಂಗವಟ್ಟಗೆಯ ಸುಂಕಮಂ ದೇವರ ನಿವೇದ್ಯಕ್ಕೆ ಬಿಟ್ಟರ್ (ಎಇ. XV, ೯೮-೨೮; 1074); ಸಂಗಿಸೆಟ್ಟಿ ಮುಟ್ಟಸೆಟ್ಟಿಗಳ್ಗೆ ಬುಧವಾರದ ಸಂಥೆಯ ಮಾಡಿಯೆನ್ದು ನಿಯಾಮಿಸಲು (ಎಕ. XI, ದಾವಣ. ೧೦೫-೨೩; 1218); ಜೋಗಿ ಎದ್ದಂತೆ ಅಲಕನೆದ್ದು ಮುಗಿಸಿದಿರಿ ಒಂದು ಸಂಥೆ (ಅರಳು. ೭೪-೧೪). ೩. ತೆಂಕಣದಿಕ್ಕಿಗೆ ಬ್ರಹ್ಮಸಮುದ್ರಕ್ಕೆ ಹೋಹ ಸಂಥೆಯ ದಾರಿಯಿಂ ಮೂಡಣಕಡೇಲು ನಡಿಸಿದ ವಾಮನಮುದ್ರೆಯ ಕಲ್ಲು ಮೇರೆ (ಎಕ. XII , ಶಿರಾ. ೯೫-೧೩೨; 1403). 'ಸಂಸ್ಥೆ' ಪರಾ.

**ಸಂತೆಕಟ್ಟು** = ೧. ವ್ಯಾಪಾರಕ್ಕಾಗಿ ಸಂತೆಯು ಸೇರು : (ಕ). ೨. ಪರಿಶೆಯನ್ನು ಏರ್ಪಡಿಸು; ಸಂತೆಯನ್ನು ಏರ್ಪಾಡುಮಾಡು : ಕಳ್ಳಕಳ್ಳರು ಕೂಡಿ ಸಂತೇಕಟ್ಟಿದ ಹಾಗೆ (ಗಾದ). **ಸಂತೆಕಟ್ಟೆ** = ವ್ಯಾಪಾರಕ್ಕಾಗಿ ಜನರು ಸೇರುವ ಸ್ಥಳ : ನೆರೆ ಸಂತೆಕಟ್ಟೆಯ ಬಳಿಯ ಹಿಂತೋಟಕ್ಕೆದಿ, ನೆರೆದಗೋರೆದುದಿಂತು (ಕವಿಪು. ೪೨-೪). **ಸಂತೆಕೂಡು** = ಸರಕುಗಳ ಮಾರಾಟಕ್ಕಾಗಿ ಸಂತೆಯು ಸೇರು: (ಕ). **ಸಂತೆನೆರೆ** = ಸಂತೆಕೂಡು : ಸಂತನೆರೆಯುವದಕ್ಕಿಂತ ಮುಂಚೆ ಗಂಟುಗಳ್ಳರ ಹಾವಳಿ (ಗಾದ). **ಸಂತೆಯ ಕಟ್ಟಿಸು, ಸಂಥೆಯ ಕಟ್ಟಿಸು** = ಪರಿಶೆಯನ್ನು ಏರ್ಪಾಟು ಮಾಡು; ಸಂತೆಯನ್ನು ಏರ್ಪಡಿಸು : ಸಾಲುಮೂಲೆ ಸಮಸ್ತ ಹಲರು ಪಞ್ಚಾಳಸಹಿತವಾಗಿ ಕೂಡಿ ಸನ್ತೆಯ ಕಟ್ಟಿಸಿದ ಸಮ್ಬನ್ಧ (ಎಕ. X,ಬೌರಿಂಗ್. ೭೨-೧೨; 1430); ಪಟ್ಟಣವನೂ ಮಾಡಿ ಸನ್ಥೆಯ ಕಟ್ಟಿಸಿ (ಎಕ. IX , ಚನ್ನಪ. ೧೨-೩೨; 1319). **ಸಂತೆಯಮಂದಿ** = ಸಂತೆಯ ದಿನದಂದು ವ್ಯಾಪಾರಕ್ಕಾಗಿ ಸೇರಿ ಅನಂತರ ಚದುರುವ ಜನ: ಸಂಸಾರವೆಂಬುದೊಂದು ಗಾಳಿಯ ಸೊಡರು ಸಿರಿಯೆಂಬುದೊಂದು ಸಂತೆಯ ಮಂದಿ (ಬಸವ. ೧೬೪). **ಸಂತೆಯ ಸುದ್ದಿ** = ಗುಂಪಿನಲ್ಲಿ ಒಬ್ಬರಿಂದೊಬ್ಬರಿಗೆ ಹರಡುವ ಮಾತು; ಗಾಳಿಮಾತು; ವದಂತಿ : ವೇದವೆಂಬುದು ಓದಿನ ಮಾತು ಶಾಸ್ತ್ರವೆಂಬುದು ಸಂತೆ[ಪಾಠಾಂ. ಥೆ]ಯ ಸುದ್ದಿ (ಅವಚಂ. ೧೧೩-೪೬೫).

[< ಸಂ. ಸಂಸ್ಥಾ./ತಮಿ. ಚನ್ತೈ; ಮಲ. ಚನ್ತ; ತುಳು. ಸಂತೆ; ತೆಲು. ಸಂತ]

**ಸಂತೆಕಾಯಿಕ** (ನಾ). ಸಂತೆಯಲ್ಲಿ ಮಾಡುವ ಕೆಲಸ : ಸಂತೆಕಾಯಿಕ . . . ಕಂತೆ ಕಾಯಿಕ ಇರುಳಕಾಯಿಕವೆಂತವಕೆ ಪೆಸರಿಟ್ಟು (ಬಿಜ್ಜಪು. ೪೮-೫೨). [ಸಂತೆ$_2$ + ಕಾಯಿಕ]

**ಸಂತೆಪಸರಾಯಿ** (ನಾ). ಸಂತೆಯ ಅಂಗಡಿಗಳ ಮೇಲೆ ಹಾಕುವ ತೆರಿಗೆ : (ಮೈಗೆಚ . IV , ೭೮೪). [ಸಂತೆ$_2$ + ಪಸರಾಯಿ]

**ಸಂತೆಪಸಿಗೆ** (ನಾ). = ಸಂತೆಪಸರಾಯಿ : ಸಂತೇಪಸಿಗೆ ಮೂಲೆವೀಸ ಸಹಾ ಕೊಡಬೇಕು (ಎಕ. XI , ಹೊಳಲ್ಕೆ. ೭-೪೫; 1568); ಸಂಕೂರ ಸಂತ್ತೆಪಸಿಗೆಯಿಂದಲು ಗ . . . ಶಿವಾರ್ಪಿತವಾಗಿ ಬಿಟೆವಾಗಿ (ಮೈಆರ. ೧೯೩೩, ೨೮-೮೭; 1630). [ಸಂತೆ$_2$ + ಪಸಿಗೆ (< ಪಸುಗೆ)]

**ಸಂತೆಮರ್ಯಾದೆ** (ನಾ). ಒಂದು ಬಗೆಯ ಗೌರವ : ಈ ಘಳಿಯಲು ಕೊಟ್ಟ ಸಂತೆಮರ್ಯಾದೆಯ ಕ್ರಮವೆನ್ತೆಂದಡೆ (ಇಎ. ೧೯೫೦, ಹಾನಗಲ್.೮೪-೨೪; ?).

[ಸಂತೆ$_2$ + ಮರ್ಯಾದೆ]

**ಸಂತೆವಟ್ಟಣ** (ನಾ). ವ್ಯಾಪಾರಕೇಂದ್ರವುಳ್ಳ ಪಟ್ಟಣ; ಸಂತೆ ನಡೆಯುವ ಪಟ್ಟಣ: ಸಂಸ್ಥಾಪತ್ತನ—ಸಂತೆವಟ್ಟಣ (ಶಮದ. ೨೯೨ ಪ್ರಯೋ); ರನ್ನವಟ್ಟಿಗೆ, ರತ್ನಪಟ್ಟಿಕಾ; ಸಂತೆವಟ್ಟಣಂ, ಸಂಸ್ಥಾಪತ್ತನಂ (ಶಬ್ದಾನು. ೩೭೮ ಪ್ರಯೋ). [ಸಂತೆ$_2$ + ಪಟ್ಟಣ]

**ಸಂತೆಸೂಳೆ** (ನಾ). ಕೀಳುಮಟ್ಟದ ಸೂಳೆ : ಪರರೊಡವೆ ಪರದಾರಗಮನಂಗಳಲ್ಲಿ ಹರಿದಾಡುವ ಸಂತೆಸೂಳೆಯ ಮಕ್ಕಳ ವಿರಕ್ತರೆಂದರೆ ನಗುವರಯ್ಯ ನಿಮ್ಮ ಶರಣರು (ಅಖಂಡೇ. ೧೪೦-೧೨೧); ಸಂತೆಸೂಳೆಯ ನೆಚ್ಚಿ ಮನೆ ಹೆಂಡತಿ ಬಿಟ್ಟ (ಗಾದ).

[ಸಂತೆ$_2$ + ಸೂಳೆ$_1$]

**ಸಂತೆಹುಟ್ಟುವಳಿ** (ನಾ). ಸಂತೆಯಿಂದ ಬರುವ ಆದಾಯ; ಸಂತೆಯಲ್ಲಿ ಸರಕುಗಳ ಮಾರಾಟದಿಂದ ಬರುವ ಲಾಭ : ಈ ಪೇಠೆಯಲ್ಲಿ ಕಟ್ಟುವ ಬಹಸ್ಪತಿವಾರ ಸಂತೆಹುಟ್ಟುವಳಿ ಸಹಾ . . . ಕೈಂಕರ್ಯಕೆ ಸಲುವುದು (ಎಕ. VI (R), ಪಾಂಡವ. ೨೧೫-೧೭೧; 1724). [ಸಂತೆ$_2$ + ಹುಟ್ಟುವಳಿ]

**ಸಂತೆಹೇಳು** (ಕ್ರಿ). (ವೇದಪಾಠ, ಅಮರಕೋಶ ಮುಂತಾದುವುಗಳನ್ನು) ಬಾಯಿಪಾಠಮಾಡು ,— ಕಂಠಪಾಠ ಮಾಡು : (ಓ).
[ಸಂತೆ$_1$ + ಹೇಳು (< ಪೇೞ್)]

**ಸಂತೈಕೆ** 'ಸಂತಯಿಕೆ' ನೋ.

**ಸಂತೈಸು** 'ಸಂತಯಿಸು' ನೋ.

**ಸಂತೊನಮಾಳ** (ನಾ). ಒಂದು ಪ್ರದೇಶದ ಹೆಸರು : ಶೌಚಮಣಲೆಯರುಂ ನನ್ನಿಮಬಲೂರುಂ ಸನ್ತೊನಮಾಳ ಕಿಱುವೆಟ್ಟಗರಾ ಪನ್ನಿರ್ವ್ವರ್ಗ್ಗಂ (ಎಕ. XIV , ತಿರುಮ. ೨೫೩-೨; ಸು. 800). [?]

**ಸಂತೊಸ** 'ಸಂತಸ' ನೋ.

**ಸಂತೋಷ** (ನಾ). ೧. ಹಿಗ್ಗು; ಆನಂದ : ತಾರುಣ್ಯದಿಂದೀ ಕಾಂತೆಗೆ ಸಂತೋಷಮಂ ಮಾಡಿಮೆನಲ್ (ಕಾದಂಪೂ. ೭೭೮); ಸಂತೋಷಮಿಲ್ಲ ಭಯಮಿಲ್ಲುಂತೆ ಪರಾಙ್ಮುಖ ಪದಿಷ್ಟರೋಳ್ ಪಗೆಯೊಳ್ತಾಂ ಮಂತಣಮನ್ಯಗೃಹಾವಾಸಂ ತನಗೆನಿಪಾಕೆ ಕೂರದಾಕೆ ವಿನೂತೆ (ಮದಹ. ೧೧-೪೪); ಪಿರಿದುಂ ಸಂತೋಷದಿಂ ವಾಣಿ ಬಂದು ಸಮಂತಿರ್ಕೆ ನವೀನಸೌರಭದವೋಲ್ ಜಿಹ್ವಾಗ್ರದೊಳ್ ರುದ್ರನಾ (ಜಗವಿ. ೧-೬). ೨. ತೃಪ್ತಿ; ತಣಿವು : ತನಗೆನಿತು ದೊರಕಿದನಿತಱಲ್ಲಿಯೇ ಪರಿಣಾಮಿಸಿರ್ಪುದೇ ಸಂತೋಷ ವೆನಿಸುವುದು (ವಿವೇಕ. ೧೩೦). ೩. [ಯೋಗ] ಯೋಗಾಂಗದ ಐದು ವಿಧವಾದ ನಿಯಮಗಳಲ್ಲಿ ಒಂದು; ದೊರೆತುದರಲ್ಲಿ ಸಮಾಧಾನ ಹೊಂದುವಿಕೆ: ನಿಯಮವೆಂದರೆ ಮಾಡತಕ್ಕದ್ದು. ಅದು ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರಪ್ರಣಿಧಾನ ಎಂದು ಐದು ಪ್ರಕಾರ (ಹಿಂದುಸಾ. ೧೦೫).

**ಸಂತೋಷದಾಳಿ** = ಉಲ್ಲಾಸವನ್ನುಂಟುಮಾಡುವ ಗೆಳತಿ: ದುರ್ಗಂಧಕ್ಕಿರಲಾಜಿದೆ . . . ಸಂತೋಷದಾಳಿಯರ್ ತೂಂತುವೋದ ಪರವಿಯಂತೆ ಬಿಟ್ಟು ಪರಿಯ (ಧರ್ಮಾಮೃ. ೪-೧೫೯). [ಸಂ.]

**ಸಂತೋಷಂಬಡಿಸು, ಸಂತೋಷಪಡಿಸು** (ಕ್ರಿ). ೧. ಸಂತಸವುಂಟುಮಾಡು; ಆನಂದಗೊಳಿಸು : ತಮ್ಮಲ್ಲಿಗೆ ವಂದ ಜನನಿಯರೊಳ್ ವಿನಯಮಂ ನುಡಿದು ಸಂತೋಷಂಬಡಿಸು (ಪಂಚಾಮಾ. ೭-೭ ವ); ಸನ್ಮಾನದಾನದರ್ಶನಾಪಾದನಂಗಳಿಂದಂತಃಪುರಮಂ ಸಂತೋಷಂಬಡಿಸಿಯುಂ (ಬಸವಪು. ೩೨-೧೦). ೨. ತಣಿಸು; ತೃಪ್ತಿಗೊಳಿಸು : ಪಂಡಿತರ್ಗೆ ವಿವಿಧವಿನೋದಂಗಳಂ ತೋಱಿ ಮೆಱೆದು ದಾನಸನ್ಮಾನಾದಿಗಳೊಳ್ ಸಂತೋಷಂಬಡಿಸಿ (ಆದಿಪು. ೪-೬೧ ವ); ನೀಂ ನಡೆಪಿದೆಳಲತೆ ನನೆದೋಱಿತೆಂದು ಬನ್ನವಿಸಿದ ಬಾಲಕಿಯರನಾಭರಣಪ್ರದಾನಾತಿ ಸನ್ಮಾನಂಗಳಿಂ ಸಂತೋಷಂಬಡಿಸುತಿರ್ದಳ್ (ಕಾದಂಬ. ೨೫). **ಸಂತೋಷಪಡಿಸು** : ೧. ಲಕ್ಷಸಂಖ್ಯೆಯ ಹಿರಣ್ಯ ತಂದು ಸಂತೋಷಪಡಿಸುವಂತೆ (ಬಸವ. ೭೦೫); ಹೀಗೆ ಪಂಚಪಾಂಡವರು ತಮ್ಮ ತಮ್ಮ ಕೆಲಸಗಳಿಂದ ವಿರಾಟರಾಜನನ್ನು ಸಂತೋಷಪಡಿಸುತ್ತ . . . ಜೀವಿಸಿಕೊಂಡಿದ್ದರು (ವಚಭಾ. ೧೮೯).
[ಸಂತೋಷಂಬಡು + — ಇಸು$_1$]

**ಸಂತೋಷಂಬಡು, ಸಂತೋಷಪಡು, ಸಂತೋಷಬಡು** (ಕ್ರಿ). ಹಿಗ್ಗು; ಆನಂದಿಸು : ಉಪಕಾರಮಂ ಮನದೆ ಬಗೆದಾದಮಾನುಂ ಸಂತೋಷಂಬಟ್ಟಂ (ವಡ್ಡಾರಾ. ೪-೧೨); ವಜ್ರಸೇನಮಹಾರಾಜನಾ ಕುಮಾರನೊಳಾದೊಂದು ಯೋಗ್ಯತೆಗೆ ಸಂತೋಷಂಬಟ್ಟು (ಆದಿಪು. ೬-೨೨ ವ); ವಸುಭಾಗಭಟ್ಟನಭೀಷ್ಟಸಿದ್ಧಿಯಾದುದೆಂದತಿ ಸಂತೋಷಂಬಟ್ಟು (ಪಂಚತಂ. ೧೮-೩೦). **ಸಂತೋಷಪಡು** : ತನ್ನ ಮಗಳ ಪ್ರಾಣವನ್ನು ಉಳಿಸಿದ್ದಕ್ಕಾಗಿ ಸಂತೋಷಪಟ್ಟು ಅವಳನ್ನು ದೇವಶರ್ಮನಿಗೆ ಮದುವೆ ಮಾಡಿಕೊಟ್ಟನು (ಕಪಪು. ೭-೭೮); ದುರ್ಯೋಧನನು . . . ತನ್ನಲ್ಲಿರುವ ಸೇನಾಸಮೂಹವನ್ನು ನೋಡಿ ಸಂತೋಷಪಡುತ್ತಿದ್ದಾನೆ (ವಚಭಾ. ೨೫೦). **ಸಂತೋಷಬಡು** : ಬಾಗಿಲ ಮುಂದೆ ನಿಂದು ಶಿವಾ ಎಂದರೆ ಸಂತೋಷಬಟ್ಟೆನೆಲಗವ್ವಾ (ಬಸವ. ೩೭೪).
[ಸಂತೋಷ + ಪಡು$_1$]

**ಸಂತೋಷಕರ** (ಗು). ೧. ಆನಂದವನ್ನುಂಟುಮಾಡುವ. (ನಾ). ೨. ಆನಂದವನ್ನು ಕೊಡುವಂಥದು : ಮುನೀಶ್ವರಮುಖದಿಂ ಹೃದಯಂಗಮ ವಚನಾಮೃತಮುದಯಿಸಿದುದು ಸಕಲಭವ್ಯಸಂತೋಷಕರಂ (ಅಜಿಪು. ೧೧-೩). [ಸಂ.]

**ಸಂತೋಷಕೂಟ** (ನಾ). (ಯಾವುದಾದರೂ ವಿಶೇಷಸಂದರ್ಭದಲ್ಲಿ) ತಮಗಾದ ಆನಂದವನ್ನು ವ್ಯಕ್ತಪಡಿಸಲು ಏರ್ಪಡಿಸುವ ಸಮಾರಂಭ : ಸಾಯಂಕಾಲ ಸಂತೋಷಕೂಟದಲ್ಲಿ ನಾನು ಅವಳನ್ನು ಸಂದರ್ಶಿಸಿ (ಮಲೆನಾ. ೧೭೫).
[ಸಂತೋಷ + ಕೂಟ$_1$]

**ಸಂತೋಷಗೊಳಿಸು** (ಕ್ರಿ). ೧. ಹರ್ಷವನ್ನುಂಟುಮಾಡು; ಆನಂದಪಡಿಸು: ದಿನಕೊಂದು ಹೊಸ ಹೊಸ ಸುಳ್ಳನು ಹೇಳುತ ಹೆಣ್ಣನು ಸಂತೋಷಗೊಳಿಸು (೧೦೦ಜಾಪ. ೧೯೦-೪೦). ೨. ತೃಪ್ತಿಪಡಿಸು; ತಣಿಸು : ದುರ್ಯೋಧನನೂ ಅವರನ್ನು ಚೆನ್ನಾಗಿ ಸನ್ಮಾನಗಳಿಂದ ಸಂತೋಷಗೊಳಿಸಿದ್ದಾನೆ (ವಚಭಾ. ೧೨೩).
[ಸಂತೋಷಗೊಳು + - ಇಸು$_3$]

**ಸಂತೋಷಗೊಳು, ಸಂತೋಷಗೊಳ್ಳು** (ಕ್ರಿ). ಹಿಗ್ಗು ; ಆನಂದಿಸು: 'ಸಂತೋಷಗೊಳಿಸು' ಪರಾ. **ಸಂತೋಷಗೊಳ್ಳು** : ಸಂತೋಷಗೊಂಡ ಕೋತಿಯು ಕುಣಿದಾಡಿದಾಗ ಅದು ಈ ಗುಂಡಿಗೆ ಬಿದ್ದು ಸತ್ತುಹೋಯಿತು (ಪ್ರವಾ೦. I, ೨೧೭).
[ಸಂತೋಷ + ಕೊಳು$_1$ (< ಕೊಳ್$_1$)]

**ಸಂತೋಷಗೊಳ್ಳು** 'ಸಂತೋಷಗೊಳು' ನೋ.

**ಸಂತೋಷಣ** (ನಾ). ೧. ಸಂತೋಷವನ್ನುಂಟು ಮಾಡುವಿಕೆ; ತಣಿಸುವಿಕೆ. ೨. ಸಂತೋಷವನ್ನುಂಟು ಮಾಡುವ ವಸ್ತು ,— ಪದಾರ್ಥ : ಮಜ್ಜುಜವಣಿ . . . ಸಂತೋಷಣ ಸಿದ್ಧಿಲೇಪಾದಿಸುವಸ್ತುಗಳನೇಕಮಾಗಿ ಅಲ್ಲಿಯಣ ಶಿವಭಕ್ತರಿಗೆ ಸುಕೃತಾನುರೂಪದಿಂದಾನಂದಕರಗಳಾಗಿರ್ಕುಂ (ವಿವೇಕ. ೨೧೦). [ಸಂ.]

**ಸಂತೋಷನಾಡಿ** (ನಾ). ಶರೀರದಲ್ಲಿರುವ ನಾಡಿಗಳಲ್ಲಿ ಒಂದು :ಮಯೂರನಾಡಿ ಮಂಡೂಕನಾಡಿ . . . ಸಂತೋಷನಾಡಿ ಇಂತೀ ಪ್ರಥಮನಾಡಿಯೊಳಗಾದ ಶರೀರದಲ್ಲಿ ತೋಱುವ ನಾಡಿ ಜೀರ್ಣಪರ್ಣದಂತೆ ರೋಮಕೂಪದಲ್ಲಿ ಸೂಸುವ ವಾಯು (ಸರ್ವಪ. ೨೦-೯೮). [ಸಂ.]

**ಸಂತೋಷಪಡಿಸು** 'ಸಂತೋಷಂಬಡಿಸು' ನೋ.

**ಸಂತೋಷಪಡು** 'ಸಂತೋಷಂಬಡು' ನೋ.

**ಸಂತೋಷಬಡು** 'ಸಂತೋಷಂಬಡು' ನೋ.

**ಸಂತೋಷಬಾಷ್ಪ** (ನಾ). ಆನಂದದಿಂದ ಬರುವ ಕಣ್ಣೀರು; ಆನಂದಬಾಷ್ಪ; ಹರ್ಷಾಶ್ರು : ಅಂತು ಸಂತೋಷಬಾಷ್ಪವಿಸರದಿಂ ಮಿಾಯಿಸುವಂತೆಯುಂ . . . ಪುತ್ರನಂಗಪ್ರತ್ಯಂಗಂಗಳಂ ನೀಡುಂ ಭಾವಿಸಿ ನೋಡಿ (ಚಂದ್ರಪು. ೩-೧೦೨ ವ). [ಸಂ.]

**ಸಂತೋಷಿ** (ಗು). ೧. ಆನಂದ ಹೊಂದಿದ. ೨. ತೃಪ್ತಿಗೊಂಡ. (ನಾ). ೩. ಆನಂದದಿಂದ ಕೂಡಿರುವವನು; ಹರ್ಷಗೊಂಡವನು :ಸಂತೋಷಿಯುತ್ಸಾಹಿಯಕ್ಕುಂ'' (ಮಂಗರಾ. ೬೯-೧೧); ನೀಲಾಬ್ಜಕಾಂತಿಯುಳ್ಳ ಜನರು . . . ರುದ್ರನಾಮ ಲಿಂಗಪೂಜಕರಾಗಿ ಸಂತೋಷಿಗಳಾಗಿರ್ಕುಂ (ವಿವೇಕ. ೧೭೭). [ಸಂ. ಸಂತೋಷಿನ್]

**ಸಂತೋಷಿತ** (ಗು). ಹರ್ಷಗೊಂಡ;ಆನಂದಿತ : ಸಂತೋಷಿತಹೃದಯದಿಂದಲ್ಲಮನ ದಿವ್ಯಾನುಭಾವದಲಿ . . . ಮುದದಿ ತಾ ನಿಲ್ಲದೆ ಚರಿಸುವಂ (ಬಸವಪು. ೮-೫೯). [ಸಂ.]

**ಸಂತೋಷಿಸು** (ಕ್ರಿ). ಹಿಗ್ಗು; ನಲಿ : ಜಾಗರವನೆಸ್ಸುಸುವ ದಿನವೆಯ್ತರಲು ಸಂತೋಷಿಸುತ ಶಿವರಾತ್ರಿಗೆ ಗಮನಿಸಲುವೇಳ್ಕು ನಾನೆನುತ (ಬಸವಪು. ೫೩-೧೧); ದಿವಸ ದಿವಸಕೆ ಕೌಸಲಾಸಂಭವನ ಸದ್ವರ್ತನೆಗೆ ಸಂತೋಷಿಸಿದನಾ ಭೂಪ (ತೊರರಾ. ೨-೧-೪).
[ಸಂತೋಷ + - ಇಸು$_3$]

**ಸಂತೋಸ** 'ಸಂತಸ' ನೋ.

**ಸಂತೋಸಂಬಡು** 'ಸಂತಸಂಬಡು' ನೋ.

**ಸಂತ್ರಸ್ತ** (ಗು). ೧. ಅತಿಯಾಗಿ ಹೆದರಿದ,— ಭಯಗೊಂಡ. (ನಾ). ೨. ಅಡ್ಡಿ; ತೊಂದರೆ: ಅದರಿಂದ ವಿಷ್ಣುವಿನ ಅಭ್ಯಾಸ ಸಂತ್ರಸ್ತವಾಗಬಹುದೆಂದು ತಿಳಿದು (ಸಮಜೀ. ೯೫೮). [ಸಂ.]

**ಸಂತ್ರಾಣಿ** (ನಾ). ೧. ಬಲವಾದ ರಕ್ಷಣೆಯನ್ನು ನೀಡುವ ವ್ಯಕ್ತಿ :ದೃಢಸತ್ಯವಾಣಿ ಸಚ್ಚರಿತಾಂಗನಾಸಂತ್ರಾಣಿ (ಬಸವಪು. ೧೧-೩೧). ೨. ಬಹಳ ಬಲಶಾಲಿಯಾದ ವ್ಯಕ್ತಿ: (ಓ).
[ಸಂ. ಸಂತ್ರಾಣಿನ್]

**ಸಂತ್ರಾಸ** (ನಾ). ಅಧಿಕವಾದ ಭಯ,— ಅಂಜಿಕೆ. [ಸಂ.]

**ಸಂತ್ರಾಸಕ** (ನಾ). ಅತಿಯಾಗಿ ಹೆದರುವವನು,— ಭಯಪಡುವವನು : ಒಳ್ಪದೊಳಟ್ಟಿಗನಪ್ಪುದು ದುಷ್ಕಷಾಯಸಂತ್ರಾಸಕನಪ್ಪುದು (ಜೀವಸಂ. ೫೧-೨೬). [ಸಂ.]

**ಸಂತ್ರಾಸಕರ** (ಗು). ೧. ಅತಿಯಾದ ಭೀತಿಯನ್ನುಂಟುಮಾಡುವ : ತಂತ್ರಂಗಳುಮೇಂ ಕಾವುವೆ ಸಂತ್ರಾಸಕರೋಗ್ರಮೃತ್ಯುರಾಜನ ಬರವಂ (ಜೀವಸಂ. ೩೧-೫). (ನಾ). ೨. ಅತಿಭಯವನ್ನುಂಟು ಮಾಡುವಂಥದು : ಉಪಗತ ವನದೇವೀಚಯ ಸ್ತಾಂತ್ರಸಂತ್ರಾಸಕರಂ ಪೊಣ್ಮಿತ್ತು ವಿಂಧ್ಯಂ ನಡುಗೆ ಘನರವಸ್ಪರ್ಧಿ ಕೈರಾತಘೋಷಂ (ಕಾದಂಪೂ. ೧೫೩). [ಸಂ.]

**ಸಂತ್ರಾಸಿ** (ನಾ). ಬಹಳ ಭೀತಿಯನ್ನುಂಟುಮಾಡುವವನು : ಆ ಸಮಯದೊಳರಿಬಲಸಂತ್ರಾಸಿ ಬಲಿಷ್ಠಂ ತ್ರಿಪೃಷ್ಠಂ . . . ಅನುವರಕ್ಕೆ ಕೆಯ್ಯಾಸುವುದುಂ (ಶಾಂತಿಪು. ೫-೫೨); ನಮ್ರಶಿರೋಧರೆ ಸೀತೆ ಲೋಕಸಂತ್ರಾಸಿಯ ರೂಪು ಪಾದನಖ ದರ್ಪಣದೊಳ್ ಪಲವಾಗಿ ತೋಱೆ (ಪಂಪರಾಮಾ. ೯-೧೧೨). [ಸಂ. ಸಂತ್ರಾಸಿನ್]

**ಸಂತ್ವರಿತ** (ಗು). ಅತ್ಯುತ್ಸುಕತೆಯಿಂದ ಕೂಡಿದ : ಏರಿದನು ಸೌಮಿತ್ರಿ ಸಂತ್ವರಿತ ಮಾನಸಂ, ಪ್ರೋದ್ದೀಪ್ತತೇಜಸಂ, ವಿರಳಪರ್ಣದ್ರುಮದ . . . ಗೋಪುರಕೆ (ಶ್ರೀರಾಮಾ. ೧೫೭-೧೪೪). [ಸಂ.]

**ಸಂಥೆ** 'ಸಂತೆ$_2$' ನೋ.

**ಸಂಥೆಗಂಟಳೆ** (ನಾ). ಸರಕುಗಳನ್ನು ತುಂಬಿ ಸಂತೆಗೆ ತರುವ ಎರಡು ಒಡಲಿನ ಚೀಲ; ಹಸುಬೆಚೀಲ : ಅಳಿಯ ವಿಠರಸರು ಸಂಥೆಗಂಟಳೆಯ ಹೇಱ ಎಂಟು ದಿ[ನ]ಕ್ಕೆ ಕಳಸಾಪುರಕ್ಕೆ ಹೋಹ ಅಡಕೆಯ ಹೇಱುಯೆರಡನು . . . ಬಿಟ್ಟರೂ (ಸೌಇಇ. XX, ೩೮೦-೭; 1432). [ಸಂಥೆ (< ಸಂತೆ$_2$) + ಕಂಟಳ್ಳೆ$_0$ (< ಕಂಟಲೆ)]

**ಸಂದ** 'ಸಲ್' ಪರಾ.

**ಸಂದಂಶ** (ನಾ). ೧. ಕೂಡಿಕೆ; ಸಂಧಿ. ೨. ಇಕ್ಕುಳ; ತಂಡಸ: "ಇಕ್ಕುಟ್– ವ್ಯಾಧಿವಿಕಾರಂ; ಸಂದಂಶಂ; ತಾಂಡಸಂ" (ಕಮದ. ಪರಿ. ೧); ಸಂದಂಶದಿಂ ಪಿಡಿದು ದಸಿಯ ಕೀಳ್ವೆನೀ ಮರನನು ಬಲಿದು ಪಿಡಿ ನೀನು (ಆರಾಚ. ೨-೮-೭೭). ೩. ವಸ್ತುಗಳನ್ನು ಹಿಡಿಯಲು ಬಳಸುವ ತೋರುಬೆರಳು ಮತ್ತು ಹೆಬ್ಬೆರಳು ಮುಂತಾದುವು. ೪. (ಕೋಪ ಮುಂತಾದುವುಗಳಿಂದ) ಅವುಡು ಕಚ್ಚುವುದು; ಔಡೊತ್ತುವುದು : ಉದಾರವೀರಚರಿತನಿರತಕದನಕರ್ಕಶಕ್ಷತ್ರಿಯಂಗೆ . . . ನಿರರ್ಥಕನಿಷ್ಠುರೋಷ್ಠಪುಟ ಸಂದಂಶಮುಂ . . . ತಕ್ಕುದಲ್ತು (ಆದಿಪು. ೧೪-೮೧ ವ). ೫. ಸ್ವರಗಳನ್ನು ಉಚ್ಚರಿಸುವಾಗ ಎರಡು ತುಟಿಗಳನ್ನು ಅಮುಕುವಿಕೆ,—ಒತ್ತುವಿಕೆ. ೬. ಕುದುರೆಯ ಬಾಯಿಯಲ್ಲಿರುವ ಮುಂಬದಿಯ ಹಲ್ಲುಗಳು :"ಎರಡು ನಡುದಂತಗಳು ಸಂದಂಶಮಕ್ಕು" (ಮಂಗರಾ. ೮೩-೨೦); ಸಂದಂಶಂ ಬೀಱುಮಶ್ವಕ್ಕೆ ರಡುಬರಿಸಮುಂ ತೀವೆ ಮೂಱಬ್ದದಿಂ ಬಂದೊಂದಿರ್ಕುಂ (ಲೋಕೋಪ. ೧೧-೭೯); ಮುಂಬಲ್ಲಂ ನಾಲ್ಕಕ್ಕಮದೆಂಬುದು ಸಂದಂಶಂ (ಅಶ್ವಶಾ. ೯-೯). ೭. ಒಂದು ನರಕದ ಹೆಸರು. ೮. [ನಾಟ್ಯ] "ಅಂಗೈಯಲ್ಲಿ ಸ್ವಲ್ಪ ಹಳ್ಳ ಬೀಳುವಂತೆ ಅರಾಳಹಸ್ತದಲ್ಲಿ ಹೆಬ್ಬೆರಳು ಮತ್ತು ತೋರುಬೆರಳು ಇವೆರಡರ ತುದಿಗಳನ್ನು ಸೇರಿಸಿ ಹಿಡಿಯುವುದು"(ಲಾಸ್ಯಸಂ. ೨೩೮ ಗದ್ಯಾನುವಾದ): ನಾಟ್ಯಶಾಸ್ತ್ರದಲ್ಲಿ ಹೇಳಿರುವ ಹಸ್ತಗಳು ಯಾವುವೆಂದರೆ ೧. ಪತಾಕ . . . ೨೧. ಸಂದಂಶ, ೨೨. ಮುಕುಳ, ೨೩. ಊರ್ಣನಾಭ, ೨೪. ತಾಮ್ರಚೂಡ (ಅಭಾಸ್ಯ. ೪೮). [ಸಂ.]

**ಸಂದಟಿ** 'ಸಂದಣಿ' ನೋ.

**ಸಂದಟಿತ** (ನಾ). ೧. ತುಂಬಿದುದು; ಭರ್ತಿಯಾದುದು : ಸಭೆಯು ಹೀಗೆ ಸಂದಟಿತವಾಗಿರಲು, ನಡುಹರಯದ ಒಬ್ಬ ಶ್ರೀಮಂತ ತರುಣನು ಮೇಜಿನ ಮೇಲೆ ಎದ್ದುನಿಂತನು (ಕಳ್ಳಕಾ. ೮೫). (ಗು). ೨. ಒತ್ತಾಗಿರುವ; ಸೇರಿದಂತಿರುವ : ಒಂದು ದಿನ ನಾರದನು . . . ಸಂದಟಿತ ಶ್ರೀತುಲಸಿಮಾಲೆಯು ಕಂಧರದಲೊಲುವುತ್ತ . . . ಸಿಂಧುಶಯನನ ಸ್ತುತಿಸುತಾ ನಭದಿಂದಿಳಿದನು (ಶ್ರೀ ಕೃಪಾ. ೩-೮). [< ಸಂದಟಿ]

**ಸಂದಟಿಸು** 'ಸಂದಣಿಸು' ನೋ.

**ಸಂದಣಿ,** ಸಂದಟಿ, ಸಂದಲಿ, ಸಂದಳಿ$_2$ (ನಾ). ೧. ಒಟ್ಟಾಗಿರುವ ಸ್ಥಿತಿ; ಒಂದುಗೂಡಿರುವಿಕೆ : (೬). ೨. ಗುಂಪು ; ಸಮೂಹ : ಎಡೆಯಾಡುವೆಯ್ದೆಯರ್ ಬಳಸಿದ ವೇದಪಾರಗರ ಸಂದಣಿಯೆಂಬಿವಱಿಂ ವಿವಾಹಮಂಗಳಮದು ಕುಂತಿಮಾದ್ರಿಗಳೊಳಚ್ಚರಿಯಾದುದು ಪಾಂಡುರಾಜನಾ (ಪಂಪಭಾ. ೧-೧೦೭); ಎಂದುಂ ನಾವಱಿಯೆವೀ ಭಕ್ತಜನಮಂಡಳಿಯ ಸಂದಣಿಯ (ಬಸವು. ೫೯-೯); ಇನನಂದನನು ಬೊಂಬಾಳದೀಪದ ಸಂದಣಿಗಳಲಿ ಸೆಳೆದಡಾಯ್ದದ ಭಟರ ಮುತ್ತಿಗೆಯ (ಕುಮಾವ್ಯಾದ್ರೋ. ೧-೧೯). ೩. ರಾಶಿ; ಒಟ್ಟಿಲು : ಒಂದೊಂದೆಡೆಯೊಳರಿದಿಕ್ಕಿದ ಪಂದಲೆಗಳ ಸಂದಣೆಗಳುಮಂ . . . ಅವಲೋಕಿಸುತ್ತಂ ಪೋಗೆ (ಕಾದಂಬ. ೨೬೯); ಪರಿಮಳದ ಸುಗ್ಗಿ ಸೌರಭದ ಸಂದಣಿಯೆನಿಪ ಸುರುಚಿರಾಮೋದದ ರಸಾಂಬೋಧಿಯೆಂದೆನಿಪ . . . ಪೂದೋಟಮಂ ದೂರದಿಂ ಕಂಡು ಸೊಂಪೇಱ (ಪುಷ್ಪರ. ಹ. ೫೨೨-೧೯); ನೊಂದು ಸೈರಿಸಿ ಮತ್ತೆ ಸರಳಿನ ಸಂದಣಿಯ ಸ್ಯೆಗಜೆದನರ್ಜುನನು (ಕುಮಾವ್ಯಾಭೀ. ೬-೨೧). ೪. ನಿಬಿಡತೆ; ಸಾಂದ್ರತೆ : ಸಂದಣಿಯಿಲ್ಲದೆ ಸೋಂಕಿನೊಳೊಂದದೆ . . . ಮಾಡುಗೆ ಮನೆಯಂ (ಮದತಿ. ೧೦-೨೧); ಸಂದಣಿಯ ಕಳಕಳದ ಮಂದಿಯ ಗೊಂ[ಪಾಠಾಂ. ದೊಂ]ದಣಿಯನೊಲ್ಲದೆ ಕೆಲಬರರವಿಂದ ವದನೆಯರುಪ್ಪರಿಗೆಗಳನೇಱ ನೋಡುವರು (ಬಸವು. ೫-೩೮); ಮನೆಯಲ್ಲಿಯ ಜನರ ಸಂದಣಿ ಬಹಳವಾಗಿ ಕಡಿಮೆಯಾಗಿತ್ತು (ಆಮೂಲೀ. ೫೫). ೫. ಸಂಭ್ರಮ; ಸಡಗರ: ನಮ್ಮ ಮನೆಯಲ್ಲಿಂದು ಹಬ್ಬ ನಮಗೆ ಸಂದಣಿ ಬಹಳ (ಶಿವಗೀ. ೧೪೩-೭೫); ಸಂದಣಿಯ ದಿನವೊಂದು ಬಿಡುವು ದಿನವೊಂದು (ಮಂಕುಕ. ೭೭೯). ೬. ಸದ್ದು; ಗದ್ದಲ : ಒಂಭತ್ತು ಬಾಗಿಲ ಮನೆ ತುಂಬಿದ ಸಂದಣಿಯಿರಲು ಕಂಬ ಮುಱಿದು ಡಿಂಬ ಬಿದ್ದು ಅಂಬರಕೆ ಹಾಱಹೋಯಿತು (ಪುರಂದ. ೧-೧೧೨-೭). ೭. ಆಧಿಕ್ಯ; ಹೆಚ್ಚಳ : ಪಿರಿದೊಂದು ದಂದುಗದ ಸಂದಣಿಯಿಂದವೆ [ಪಾಠಾಂ. ಸಂದೆಯದಿಂದವೆ, ಸಂದೆಗದಿಂದವೆ] ಮತ್ಕಾಗ್ಗನ್ನ ಕಥಾವಳಿಯೆಲ್ಲಮಂ ಬಗೆದು ನೋವೆನಗಾದುದು (ಆದಿಪು. ೩-೩೩); ಚರಣದ್ವಂದ್ವಕಾನತರಾಗಿ ಹರುಷದ ಸಂದಣಿಯ ಸೌರಂಭದಲಿ ಬೀಳ್ಕೊಂಡರಾ ಹರಿಯ (ತೊರರಾ. ೧-೮-೭೭). ೮. ಅತಿಪ್ರೀತಿ; ವ್ಯಾಮೋಹ: ಸತಿಸುತರೆಂಬ ಸಂದಣಿಯೊಳು ನೀ ಮತಿಭ್ರಷ್ಟನಾಗಿ ಮನದೊಳು ಸತತ ಶ್ರೀಲಕ್ಷ್ಮಿಯ ಪತಿಯನ್ನ ನೆನೆದರೆ ಸದ್ಗತಿಯ ಸನ್ಮಾರ್ಗ ಪಾರಂಪದವಿ ಈವನಯ್ಯ (ಪುರಂದ. ೧-೧೫೫-೨); ಸಂದಣಿಗಳ ಬಿಡಬೇಕು ದೇಹ ಬಂಧುಬಾಂಧವರ ಸ್ನೇಹವ ಬಿಡಬೇಕು (ಪುರಂದ. ೧-೧೮೪-೩). **ಸಂದಟಿ :** ೬. ಶಿವಾಜಿ ಇದ್ದ ಮನೆ ಸಂದಟಿಯಿಲ್ಲದೆ ನಿಶ್ಶಬ್ದವಾಗಿತ್ತು (ಛತ್ರಶಿ. ೧೦೯). **ಸಂದಲಿ :** ೧. 'ಸಂದಲಿಸು' ಪರಾ. **ಸಂದಳಿ$_2$ :** ೫. ಮಾನಮರ್ಯಾದೆಯಿಂ ಸಿರಿಯಿತ್ತು ಸಂದಳಿಯಗ್ಗೈದು (ಕೃಷ್ಣವಿ. ೨-೫೦). ೬. ತುಂಬಿದ ಮನೆಯ ಹೊಕ್ಕಡೆ ದಂದಳವಾಯಿತ್ತು ಈ ಸಂದಳಿಗಾಱದೆ ತುಂಬಿದ ಮನೆಗೆ ಕಿಚ್ಚನಿಕ್ಕಿದಡೆ ನಿಶ್ಚಿಂತವಾಯಿತ್ತು (ಲಿಂಗವ.ಕ. ೮೪-೯೯); ಭರದಿ ಮೊಳಗುವ ವಾದ್ಯಗಳ ಸುಭಟರ ನೆರವಿಯಂಬೆEದತಿಳದ ಸಂದಳಿ ತರತರದೆ ತತ್ಪುರದ ಬೀದಿಯೊಳಿಂಬುದುಂಬಿಹುದು (ಸಾಳ್ವಭಾ. ೨-೭); ನೆರೆದ ಮಂದಿಯ ಸಂದಳಿಯನಳಿದು (ಸಂದಿಮಾ. ೨-೨೪). ೯. ಕೂಟ; ಸಂಯೋಗ : ನಿನ್ನ ಒಲ್ಲೆಸಿಕೊಂಡ ಜೀವಿತಕ್ಕೆ ಲಿಂಗದ ಹಂಗು ಆ ಹಂಗಿನಿಂದ ಗುರುಚರದ ಹಂಗು ಈ ಮೂಱರಿಂದ ಭಕ್ತಿ ಎಂಬ ಸಂದಳಿಯ ಹಂಗು (ಸರ್ವವ. ೬೨-೩೨೭). [ದೇ. ‖ ತಮಿ. ಚನ್ನಟಿ; ತೆಲು. ಸಂದಡಿ]

**ಸಂದಣಿಗ** (ನಾ). ದೊಂಬಿಮಾಡುವವನು; ಗಲಭೆಕೋರ : ಕ್ರೂರಮೃಗ ಜಾರ ಚೋರ ಸಂದಣಿಗ ಲಂಡ . . . ಇಂತಿವರಲ್ಲಿ ತತ್ಸಭಾವವ ಭಾವಿಸಿ ವ್ಯಕ್ತೀಕರಿಸದಡೆ . . . ಆ ಭಕ್ತಂಗೆ ಭಕ್ತಿ ಇಲ್ಲ (ಮೋಉಮಾ. ೨೭-೧೧೦). [ಸಂದಣಿ ? + — ಗ$_1$]

**ಸಂದಣಿಗೆಡಹು** (ಕ್ರಿ). ಗುಂಪಾಗಿ ಬೀಳಿಸು; ಒಟ್ಟಾಗಿ ಕೆಡಹು : ಕೋಲುಗಳನಾ ಹರಿಗೆ ಹಲಗೆಯ ಮೇಳಯವನಾ ಮಱಯಲುಗಿದೆಸುವಾಳನೊಂದಂಬಿನಲಿ ಸಂದಣಿಗೆಡಹಿದನು ಪಾರ್ಥ (ಕುಮಾವ್ಯಾಆ. ೨೦-೨೩). [ಸಂದಣಿ + ಕೆಡಹು (< ಕೆಡಪು)]

**ಸಂದಣಿಗೊಳ್,** ಸಂದಣಿಗೊಳು, ಸಂದಳಿಗೊಳ್, ಸಂದಳಿಗೊಳು (ಕ್ರಿ). ೧. ಗುಂಪಾಗು; ಒಟ್ಟುಗೂಡು: ವಿದಳಿತಪದ್ಮಸೌರಭಕೆ ಸಂದಣಿಗೊಳ್ವ ಮಧುವ್ರತ ಪ್ರತಾನದಿನೆಸೆವುತ್ಪಳಪ್ರಕರದೊಳ್ ನೆಱ ಸಿಲ್ಕಿ ಜಿನುಂಗುತಿರ್ಪ ಷಟ್ಪದಶಿಶುವ್ರಂದದಿಂ . . . ಒಪ್ಪುವುದೊಂದು ಪೂಗೊಳಂ (ಗಿರಿಕ. ೪-೧೭); ಮಣಿಮಕುಟಂಗಳೊಂದೊಂದ

ನೊರಸೆ ಸಂದಣಿಗೊಂಡು ಮಿಸುಪ ನೊಸಲ್ವೆಱೆಯಿಂ ಪದಕಮಳದೊಳ್ ಸಂತಂಗೆಯ್ವು ವಂತೆ (ರಾಜಶೇ. ೫-೧೯ ವ). ೨. ದಟ್ಟವಾಗು; ಸಾಂದ್ರವಾಗು : ಶಾಖಾಸಮುಚ್ಚಯ ದೊಳ್ಸಂದಣಿಗೊಂಡು ತಾಳವನದೊಳ್ ಕಾರ್ಕಶ್ಯಮಂ ಮಾಡಿಕೊಂಡು ಯಥಾಸಾರಃ ಪಾತಮುಣ್ಮಿದುದು ಮೇಘೋನ್ಮುಕ್ತಧಾರಾರವಂ (ಕಾದಂಬ. ೫೩೩). ೩. ಮೇರೆ ಮೀರು; ಅತಿಯಾಗು : ಸಂಭ್ರಮದ ಪೊದಳ್ಕೆಯಿಂ ಮುದದ ಪೆರ್ಚುಗೆ ಸಂದಣಿಗೊಳ್ವಿನಂ ಪದಾಬ್ಜಮನಮರ್ದೊಪ್ಪೆ ಮೌಳಿ ಮಣಿದಂ (ಶಬಶಂ. ೫-೧೪). **ಸಂದಣಿಗೊಳು** : ೧. ಭರಿತಾರ್ಪಣವೆಂದು ಅಪೇಕ್ಷಿಸುವಲ್ಲಿ ಸೂಚನೆಯಱಿತು ಒಂದನೊಂದು ಇರಿಸೆಂದು ಸಂದಣಿಗೊಳುತ್ತ ಬಂದ ದ್ರವ್ಯವೆಯ್ದದೆಂದು ತಂದು ಸುರಿಯೆನುತ್ತ (ಸಕವ. ೪.III, ೫-೧೧); ಪಱಮೆವಱಿಯಿಂಡವಿದಿತ್ತದಿವರ್ಮುತ್ತೆಯಲ್ಲಿ ಸಂದಣಿಗೊಳುತುಂ (ಕಬ್ಬಿಕಾ. ೫೭). ೩. ನಲವೆರ್ಚುವ ತೂಗುವ ಬೀಗುವಳ್ತಿ ಸಂದಣಿಗೊಳೆ ಪಾಡುವ . . . ಸಂಭ್ರಮಮದೇಂ ಬಗಗೊಂಡುದೊ ಪಾಂಡುಪುತ್ರನಾ (ಶಬಶಂ. ೫-೩೭). ೪. ಸಂಭ್ರಮದಿಂದ ಕೂಡಿರು; ಸಡಗರಿಸು : ಅವಳ ಕೊಲುವ ಧೀರರ ಇನ್ನಾರನು ಕಾಣೆ ಎನಗೆ ಗಂಡ ಎಮ್ಮವ್ವೆಯ ಮಗನೆಂದು ಸಂದಣಿಗೊಳುತ್ತವಳೆ (ಅಱಿಮಾ. ೪. ೧೪೧-೧೩೫). **ಸಂದಳಿಗೊಳ್** : ೨. ಆಲದೊಳ್ ಸುದಳಿಗೊಂಡು [ಪಾಠಾಂ. ಸಂದಣಿಯಾಗಿ, ಸಂದಳಿಯಾಗಿ] ನೇಲ್ವ ಪೆಣನೊಂದಿರೆ ನಿಂದುರಿಯುಯ್ಯಲೇಱಿ ಕೈರಂದಱಿಯಲ್ಕೆ ಮಾಡಿದಡೆ ಮಂಚಿಕೆ ಮಿಂಚಿದುದಾ ಶ್ಮಶಾನದೊಳ್ (ಕಾವ್ಯಾವ. ೫೭). **ಸಂದಳಿಗೊಳು**: ೪. ಚರಣಾರವಿಂದಕೆ ಮಣಿದತಿ ಸಂದಳಿಗೊಳುವನಿತಱೊಳು ತೆಗೆದೆತ್ತಿ (ಭ್ರಸೂ. ೧೪೩-೧೦೮). [ಸಂದಣಿ + ಕೊಳ್$_1$]

**ಸಂದಣಿಗೊಳು** 'ಸಂದಣಿಗೊಳ್' ನೋ.

**ಸಂದಣಿಮರ** (ನಾ). ಮರಗಳ ಗುಂಪು,— ಸಮೂಹ; ತೋಪು : ಬಗಿದು ಹೊಕ್ಕರು ಮೆಳೆಗಳನು ಮಿಂಚುಗಳ ಕಂಬೆಳಗಿನಲಿ ದಾರಿಯ ತೆಗೆತೆಗೆದು ಸಾರಿದರು ಸಂದಣಿಮರನ ಹೆಮ್ಮರನ (ಕುವ್ಯಾಆ. ೯-೨೪). [ಸಂದಣಿ + ಮರ$_1$]

**ಸಂದಣಿಯಿಂಚರ** (ನಾ). ಗುಂಪಾಗಿ ಬರುವ ಸ್ವರ; ಕಲಕಲಧ್ವನಿ : ಇಂದುವಿನಿಂಪು ಮಾವಿನ ಸೊಂಪು ಮಧುಪಗಳೊಂದಿದ ಪೆಂಪು ಪಿಕಗಳ ಸಂದಣಿಯಿಂಚರದೊಳ್ಪಿನೆ ಮಾಧವ ಬಂದನು (ಅಂಜಚ. ೪-೧೪೪). [ಸಂದಣಿ + ಇಂಚರ$_1$]

**ಸಂದಣಿಯುಲಿ** (ನಾ). = ಸಂದಣಿಯಿಂಚರ : ಮಕರಂದಂಬೆರಸಿ ನೆಗೆವ ಸೀರ್ಪನಿ ಹೊಂಗಿಸಿ ನೀರ್ವಕ್ಕಿಗಳ ಸಂದಣಿಯುಲಿಮಂತ್ರಂ (ಜಯಕಾ. ೧೧-೩೨). [ಸಂದಣಿ + ಉಲಿ$_2$]

**ಸಂದಣಿವಡೆ** (ಕ್ರಿ). ಗುಂಪುಗೂಡು; ಒಟ್ಟಾಗು : ಎನ್ನ ಶಶಿಮೌಳಿಯಭಿಷೇಕದರಸಿ ಯರಿರಾ. . . ಬನ್ನಿರೇ ಎಂದು ಕರೆವಾ ಕೊಳಲ ದನಿವಿಡಿದು ಮುನ್ನವೇ ಮೊಗವೆತ್ತಿಕೊಂಡು ಸಂದಣಿವಡೆದು ಭೋರೆಂದು ಬರೆ (ಚಂಡೇರ. ದೇ. ೨೪೯-೧೨). [ಸಂದಣಿ + ಪಡೆ$_1$]

**ಸಂದಣಿಸು, ಸಂದಟಿಸು, ಸಂದಲಿಸು, ಸಂದಳಿಸು** (ಕ್ರಿ). ೧. ಗುಂಪುಗೂಡು; ಒಟ್ಟಾಗು : "ಸಂದಣಿಸು - ಸಮೂಹೇ, ಬಾಹುಲ್ಯೇಚ" (ಶಮಧಾ); ತೋಳ ನೀಳದ ಕೆಂದಳಿರಿಂದಂ ಸಂದಣಿಸಿರ್ದ ಮದಾಳಿಯಿಂದೋಳದಿಂ ಮಲಯಾನಿಲಲೀಲಾಂದೋಲ ದಿನೊಪ್ಪೆ (ಆದಿಪು. ೩-೩೦); ನಿಂದಿರ್ದ ವೀರಭಟರಂ ಕಂಡು ಮುಳಿದಲ್ಲಿ ಸಂದಣಿಸಿ ಕೂರಸಿಯೊಳಿಟ್ಟಣಿಸಿ ಹೊಯ್ದು (ಇಹರ. ದೇ. ೪೧-೨೦); ಕಂಬುಕಂಧರೆಯರು ನೆರೆದರೆಡೆಗೆ ಡೆಗೆ ಸಂದಣಿಸಿ (ಬಸಪು. ೫-೨೩). ೨. ದಟ್ಟೈಸು; ನಿಬಿಡವಾಗು : ಭರತೇಶ್ವರಂ . . . ಪೊಸ ಕೆಂದಳಿರ ಗೊಂದಳದೊಳೆ ಸಂದಣಿಸಿದಶೋಕಲತೆ ಯೋಲಗಶಾಲೆಯೊಳ ಗಣ ಕಪ್ಪುರವಳಿಕಿನ ಜಗುಲಿಯ ಮೇಗಣ ಕುಸುಮದೆಸಟ ಮಿಸುಗುವ ಪೊಸದಳಿಂಬದ ಮೇಗೆ ಕಿಱಿದು ಬೇಗಂ ವಿಶ್ರಮಿಸಿ (ಆದಿಪು. ೧೧-೭೧ ವ); ಬಂದ ಮಳೆಯೊಳು ಕವಿದ ಕತ್ತಲೆ ಕರಂ ಹೆಚ್ಚೆ ಸಂದಣಿಸಿ ದಿಗುಮುಖಂಗಿಡಿಸಿ ಜಗಮಂ ಮುಚ್ಚೆ (ಇಳರ. ದೇ. ೫೨-೨). ೩. ರಾಶಿಯಾಗು; ಒಟ್ಟಿಲಾಗು : ಘನಧನಿಕರ ಪಂಕ್ತಿಯ ಮುಂದೆ ಸಂದಣಿಸಿ ವಿಕ್ರಯನವಕಳಮಾದಿಧಾನ್ಯರಾಸಿಗಳೆಸೆಗುಂ (ಗಿರಿಕ. ೨-೮೩); ೪. ಹೆಚ್ಚಾಗು; ಅತಿಶಯವಾಗು : ಆಕೆ . . . ಮನದೊಳ್ ಸಂದಣಿಸಿದ ಮುದದಿಂ ಮಾಕಂದದೊಳಾಂದೋಳ ಕೇಳಿಲೀಳೆಯೊಳಿರ್ದಳ್ (ವರ್ಧಪು. ೧೫-೪೭); ನಿಂದಿರ್ದು ಕೈಮುಗಿದು ನೋಡಿ ಕಣ್ಗಳು ತೊರೆಯೆ ಸಂದಣಿಸಿ ಮೈಯೊಳಗೆ ರೋಮಾಂಚತತಿ ನೆಗೆಯೆ (ಬಸರ. ೩-೮೪); ಸೆರೆ ಬಿಗಿಯೆ ಪುಳಕಂ ಸಂದಣಿಸಿ ತನುವಿನೊಳ್ ಗುಡಿಗಟ್ಟೆ (ಪದ್ಮರಾ. ೭-೨೮). ೫. ಹೂಡು; ಸಂಧಾನಮಾಡು : ಮಹಾರಥರು ಸರಳೊಂದನೊಂದುಗಿದು ಸಂದಣಿಸೆ ಬಾಣಗಳ ಕೈಯಲಿ ಮುಂದೆಹಿಂದೆಡಬಲವ ಶೈಲವ ಬೃಂದಮೇರುವಿನಂತೆ ಮೆಱೆವರಿಬಲವ ತಱಿದನು ನರನು (ಕುವ್ಯಾದ್ರೋ. ೬೦೯. ಪರಿ. ೨೯೫). ೬. "ಸೇರಿಸು; ಜೊತೆಮಾಡು; ಜೋಡಿಸು" (ಪ್ರಭಣ್ಣ): ಸಂದಣಿಸಿದ ಮಣಿ ವಾಗಿಲೊಳೊರ್ವ ಪುಳಿಂದನಿತಂಬಿನಿ . . . ನಿಂದಿರ್ದಪಳ್ (ಜಯಕಾ. ೨-೨೦). ೭. ಸಂಧಿಸು; ಎದುರಾಗು : ಹಿಂದೆ ಹಿಡಿವರು ಮುರಿದರೆಡದಲಿ ಸಂದಣಿಸುವರು (ಕುವ್ಯಾದ್ರೋ. ೪-೨೧). ೮. ಸದ್ದುಮಾಡು; ಶಬ್ದಮಾಡು : ಭುಜಗರಿರ ಸಂದಣಿಸದಿರಿ ಗರುಡರಿರ ಉಲಿಯದಿರಿ (ಬಸಪು. ೧-೪೪). ೯. ಸಡಗರಪಡು; ಸಂಭ್ರಮಿಸು : ಮನದ್ಧೃಢದಿಂದ ನಿಮ್ಮ ನೆನೆದಹೆನೆಂದಡೆ ತನು ಸಂದಣಿಸಿತ್ತು (ಅವಚಂ. ೧೩೮-೬೩೨); ದಣಿವಱಿಯದುಕ್ಕಿ ಸಂದಣಿಸಿ ಕರಣಂಗಳುರವಣಿಸಿ ನೆನೆವರಿಗೆ ಸುರಧೇನುವಾಗಿ . . . ತ್ರಿಣಯನನು ಕರೆವುದೀ ಪಂಚಾಕ್ಷರಿ (ಶಿವಗೀ. ೧೪-೫೧); ಬಂದು ವೇದವ್ಯಾಸಮುನಿ ನೃಪಮಂದಿರವ ಹೊಗಲೆದ್ದು ಪದದಲಿ ಸಂದಣಿಸಿ ಚಾಚಿದನು ಮಕುಟವನವನಿಪಾಲಕನು (ಕುವ್ಯಾದ್ರೋ. ೭-೨೧). ೧೦. ಗೊಂದಲಗೊಳ್ಳು; ಬೆದರು : ಎತ್ತಿ ಹೊಡೆಯಲು ಬೆನ್ನ ಚರ್ಮಂ ಕಿತ್ತು ಹೋಗಲು . . . ಎತ್ತಲೋಡುವೆವೆನುತ ಸಂದಣಿಸುತ್ತ ಕೈಗಳನೊಡ್ಡಿಕೊಳುತಂ ಸುತ್ತಿಸುತ್ತಿ ಬರುತ್ತವೇಗುವೆವೆನುತ ಸುಯ್ಯುತ್ತ (ಬಸಪು. ೫೨-೧೨). ೧೧. ಉಂಟಾಗು; ಪ್ರಾಪ್ತವಾಗು : ಮಾನವರು ನಿಟ್ಟೆಯಿಂ ಶಿವನ ಮೇಲಿಡಲಂತವರ್ಗೆ ಸಾಮರ್ಥ್ಯ ಸಂದಣಿಸುವಂತೆ . . . ಬಂದು ತಂಬೆಲರು ಮೆಲ್ಲನೆ ತೀಡಲು (ಸೌಂದಪು. ೧೪-೧೧); ಶ್ರೀಮನ್ನಾರಾಯಣಂ . . . ಈಯವತಾರದೊಳ್ ಬಿಚ್ಚಗಲ್ತಂ ನಯಂಬಡೆದಂ ಬೀರನೆನಿಸಿದಂ ಪೆಂಪುದಳೆದನೆಂದು ಪೇಟ್ಸೊಡಮಚ್ಚರಿಯು ಮಾನಂದಮುಂ ಸಂದಣಿಸುತ್ತಿದೆ (ಚಿಕವಿ. ೪-೧೫೪). ೧೨. ಒತ್ತರಿಸು; ತುಂಬಿಬರು : ಅಭಿಮನ್ಯುಕುಮಾರನ ನೆನೆನೆನೆದು ಸಂದಣಿಸುವ ಕಂಬನಿಯೊಳು ನೆನೆದು ಅಳಲಿದಳಾ ದ್ರೌಪದಿ (ಕುವ್ಯಾದ್ರೋ.೬೦೯. ಪರಿ. ೨೮೪ ರಗಳೆ); ಕೋ ಮುದ್ರಿಕೆಯ ನೀನೆಂದು ಸಂದಣಿಸುವಶ್ರುಗಳಲಾ ನಿಜನಂದನನ ಕಿಱುವೆರಳಿಗಿಟ್ಟಂತೆಂದು ನುಡಿದನು (ತೊರರಾ. ೨-೪-೫); ಕಂಬನಿಗಳು ತಾವು ಸಂದಣಿಸೊಂದೊಂದಂ ಬೆಂಬಳಿಯಲಿ ಪೊಱಮಡಲು ಇಂಬಿನ ತುಱುಗೆವೆ ಪಡಿದೆಱೆದುಂದದೊಳಂಬಕಗಳ ಮುಚ್ಚಳಬಲೆ (ವರ್ಧಚ. ೫-೧೪). **ಸಂದಟಿಸು** : ೨. ಇಂದಿರೆಯರಸನು ವೃಂದಾವನವುಳಿದೊಂದಿನ ದೂರ್ಕೈದಿದನು ಗಡ ಸಂದಟಿಸಿದ ತರುವೃಂದವು ಛತ್ರಗಳಂದಾಗಲಿ ಹರಿ ತುತಿಪ ಗಡ (ಪ್ರಸಥಾ. ೩೪-೧). **ಸಂದಲಿಸು** : ೧. "ಮುಕ್ಷ-ಸಂಘಾತೇ, ಸಂಘಾತದೊಳ್: ಮುಕ್ಷತಿ-ಸಂದಲಿಸಿದಪುದು" (ಕಾಶಕ್ಕೃ. ೫೭). ೧೩. ಕೂಡು ; ಸೇರು : ತಿಳಿದು ಕೊಂಬುದು ವಿಬುಧಂ ಪ್ರೀತಿ ಮಿಗಲದರ ರೂಪಂ ನೂತ್ನಕಲಾಗ್ರಂಥದಲ್ಲಿ ಸಂದಲಿಸಿರ್ಕುಂ (ಮಾಧವಾ. ೩-೧೦೭). **ಸಂದಳಿಸು** : ೧. ತುಳಿದರೆ ಭೂಮಿ ನೆಗ್ಗುವ ದಂತಿ ಹೊಸವಜ್ರಹಳಿವೆತ್ತ ರಥವಾಜಿನಿಚಯ ತಳಿತಕೋರಿತದ ಪೊಂಬೆಳಗಿನ ಭಟರು ಸಂದಳಿಸಿತು ಖಳರಾಯನೊಡನೆ (ಮೋಹತ. ೪೦-೬); ವಾಹಕ ಜೋದರರು ಸುತ್ತ ಪುರದೊಳೆಲ್ಲ ವೀದಿವೀದಿಯೊಳುಱೆ ಬಿತ್ತರಿಸಿಹರು ಸಂದಳಿಸಿ (ಅಬ್ಬಲೂ. ೩-೭೭). ೨. ಗೋವುಗಳ ಹಿಂಡುಗಳಿಂದೊಪ್ಪುವ ಸಿದ್ಧಗಂಧರ್ವರಿಂದ ಸಂದಳಿಸಿರ್ದ ಕಿನ್ನರೋರಗರು (ಗರಮ. ೫-೩೨-೩). ೧೧. ತಳತಳಿಪ ದೀವಿಜಾಲಮಂ ಸಂದಳಿಸಿರೆ (ಬೊಂಕಶಾ. ೧೯೫೪, ಬಂಕಾಪುರ. ೨೭-೪; 1076). [ಸಂದಣಿ + -ಇಸು$_3$]

**ಸಂದಣೆ** 'ಸಂದಣಿ' ನೋ.

**ಸಂದಯ** 'ಸಂದೆಯ' ನೋ.

**ಸಂದರಿ** (ನಾ). ಕಿರಿದಾದ ಓಣಿ; ಗಲ್ಲಿ : "ಗೊಂದಿ - ಸಂದರಿ, ಸಂದಿ" (ಗಂಗಾಮು. ೧೨೧). [< ಸಂದಿ]

**ಸಂದರುಶನ, ಸಂದರುಸನ** (ನಾ). ಪರಸ್ಪರ ಸಂಧಿಸುವುದು; ಸಂದರ್ಶನ; ಭೆಟ್ಟಿ : ಸಂದರುಶನ ನಿಮಿತ್ತದೊಳಂದು ಪೊಸಜಂಗಮವು ತಾವೆಯಿತಂದು ಘನ ಶಿವಯೋಗನಿದ್ರಾಪರವಶದೊಳಿರ್ದ ಬಸವನಿರವಂ ದ್ವಾರಪಾಲರ ದೆಸೆಯೊಳಱಿದು (ಬಸಪು. ೩೫-೪೧). **ಸಂದರುಸನ** : 'ಸಂದರುಸನಂಗೆಯ್' ಪರಾ.

[< ಸಂ. ಸಂದರ್ಶನ]

**ಸಂದರುಸನ** 'ಸಂದರುಶನ' ನೋ.

**ಸಂದರುಸನಂಗೆಯ್** (ಕ್ರಿ). ಕಾಣು; ಭೆಟ್ಟಿಯಾಗು : ಈತನಂ ಸಂದರುಸನಂಗೆಯ್ದೆನಂದು ಚತುರಂಗಸೇನೆಯ ನಿಲಿಸಿ ತಾನೋರ್ವನೆ ಬಂದು (ಸೌಂದಪು. ೧೭-೨). [ಸಂದರುಸನ (< ಸಂದರುಶನ) + ಕೆಯ್$_1$]

**ಸಂದರ್ಭ** (ನಾ). ೧. ನೇಯುವಿಕೆ. ೨. ಕೂಡಿಸುವಿಕೆ; ಒಟ್ಟುಗೂಡಿಸುವಿಕೆ. ೩. (ಸಾಹಿತ್ಯ, ಸಂಗೀತ ಮುಂತಾದುವುಗಳ) ರಚನೆ; ಸೃಷ್ಟಿ : " ಶ್ರಂಥನಂ . . . ಸಂದರ್ಭಃ, ರಚನಾ— ಈ ೫ ರಚನೆ" (ಹಲಾಯು. ೧೨೧-೪೫). ೪. ಸಮಯ; ವೇಳೆ : ಆ ಸಂದರ್ಭದಲ್ಲೇ ನಾನು ಬೂತುಗರಲ್ಲಿಗೆ ಹೋಗಿದ್ದುದು (ವೀರಬಂ. ೭೨). ೫. ಅನುಕೂಲ; ಅನುವು; ಸೌಕರ್ಯ: ಆಯಾ ಸಂದರ್ಭವಿದ್ದಂತೆ ಸಭಾಪತಿಯವರಾಗಲಿ, ಉಪಸಭಾಪತಿಯವರಾಗಲಿ . . . ಅನ್ವಯಿಸತಕ್ಕುದು (ಭಾಧಾನ. ೪೫). ೬. ಅವಕಾಶ; ಆಸ್ಪದ : ಸಂದರ್ಭವೊದಗಿದುದರಿಂದ ದೇಶವನ್ನು ತಹಬಂದಿಗೆ ತರುವುದು ಆಗ ಶ್ರಮಸಾಧ್ಯವಾಯಿತು (ಮಹಾವಂ. II, ೧೪). ೭. ವಿಷಯ; ಸಂಗತಿ : ಲೋಕದ ಉಳಿದೆಲ್ಲ ಸಂದರ್ಭಗಳ ಅನುಭವವೂ ಕಲಾಅನುಭವವೂ ಒಂದೇ ಎನ್ನಲಾಗುವುದಿಲ್ಲ (ಸೌಂದಸ. ೨೧). ೮. ಸನ್ನಿವೇಶ; ಪ್ರಸಂಗ : ಇದನ್ನು ಫರ್ಮಟನು ಯಾವ ಸಂದರ್ಭದಲ್ಲಿ ವಿಚಾರಮಾಡಿದನು (ಗಣಚ. ೧೨೫). [ಸಂ.]

**ಸಂದರ್ಭಿತ** (ಗು). ೧. ಸೇರಿಕೊಂಡ; ಹೊಂದಿಕೊಂಡ : ಗರ್ಭಸ್ಥನಪ್ಪ ಶೌರಿಯ ನಿರ್ಭರಸರಸಪ್ರಕಾಶಮಾ ಜನನಿಯೊಳಾವಿರ್ಭವಿಸಿದುದೆನೆ ತನುಸಂದರ್ಭಿತ ಗೌರಿಮ ದಿನೆಸೆದುದಾ ದೇವಕಿಯಾ (ಜಗವಿ. ೨-೮೯). ೨. ರಚಿಸಿದ; ನಿರ್ಮಿಸಿದ. [ಸಂ.]

**ಸಂದರ್ಭಿಸು** (ಕ್ರಿ). ೧. (ಸಾಹಿತ್ಯಕೃತಿಯನ್ನು) ರಚಿಸು; ಸೃಷ್ಟಿಸು : ದರ್ಭಾಸನದಲ್ಲಿ ಕುಳಿತನು ಕೂಡೆ ಸಂದರ್ಭಿಸಿ ಸಕಲಕ್ರಿಯೆಗಳ ನಿರ್ಭವಕರನವ ಜೈನದೇವತೆಗೆ ಶುಚಿರ್ಭೂತನಿತ್ತನರ್ಘ್ಯವನು (ಭರಚ. ೧೭-೪೯); ಈಗಳೀ ಮಾನವಲೋಕದೊಳ್ ನೆಗಟ್ಟೆವೆತ್ತ ಬೀಣೆಗಾಱರುಂ ಮುನ್ನಿರ್ದವರುಮಾ ತೆಱದೊಳ್ ಬಿಗುಪಂ ಒಲವಂ ಕಳೆಯಂ ನಾದಮಂ ಪೊಸವಗೆಯ ತಾನಂಗಳಂ ಸಂದರ್ಭಿಸಿದುದಿಲ್ಲ (ಚಿಕವಂ. ೧೭೯-೨೨). ೨. ಅವಕಾಶ ಒದಗಿ ಬರು; ಆಸ್ಪದವುಂಟಾದು : (ಹ). ೩. ಸಂದರ್ಭಕ್ಕೆ ಅನುಗುಣವಾಗಿ ಹೇಳು; ಪ್ರಾಸಂಗಿಕವಾಗಿ ತಿಳಿಯಪಡಿಸು : ನಾಟಕದ ದೃಷ್ಟಿಯಿಂದ ಇವಕ್ಕಿಂತ ಮಹತ್ವದ್ದಾದ ಒಂದು ದೃಷ್ಟಾಂತವಿದೆ . . . ಅದನ್ನೇ ಇಲ್ಲಿ ಸಂದರ್ಭಿಸುತ್ತಿದ್ದೇನೆ (ಭಾರದ. ೫೭೮). ೪. ಸೂಚಿಸು; ಉಲ್ಲೇಖಿಸು : ಓಲೆಕಡತ ಶಾಸನಗಳನ್ನೆಲ್ಲ . . . ಓದಿ ಪರೀಕ್ಷಿಸಿದೆವು; ಅವುಗಳಲ್ಲಿ . . . ಆವ ಮಹಾಸ್ವಾಮಿಯವರಿಗೂ ಆವ ಕೊಡುಗೆಯನ್ನೂ ಸನ್ನರ್ಭಿಸಿರುವುದಿಲ್ಲ (ಮಂತ್ರಶ. ೧೫-೭). [ಸಂದರ್ಭ + -ಇಸು$_3$]

**ಸಂದರ್ಶನ** (ನಾ). ೧. ನೋಡುವಿಕೆ; ಅವಲೋಕನ; ನೋಟ : ಇನಮುಖ ಸಂದರ್ಶನಂ ನಿತ್ಯದಾನಾದಿ ನುತಾನೇಕಪ್ರಭಾತಕ್ರಿಯೆಗಳನಿತುಮಂ ಮಾಡಿದಂ (ಕುಸುಮಾ. ೪-೮೧). ೨. ಒಂದೇ ಸಮನೆ ನೋಡುವಿಕೆ; ದಿಟ್ಟಿಸಿ ನೋಡುವಿಕೆ. ೩. ರಾಜ, ಗುರುಹಿರಿಯರೇ ಮುಂತಾದವರಿಂದ ಅನುಗ್ರಹವನ್ನು ಪಡೆಯುವುದಕ್ಕಾಗಿ ಮಾಡುವ ಭೇಟಿ : ಆ ಕದಿರ ರೇಮಯ್ಯನವರಾ ಗುರುಲಿಂಗಸಂದರ್ಶನ[ಪಾಠಾಂ. ದರುಶನ]ನಿಮಿತ್ತದೊಳೆಯ್ದಿ (ಬಸವು. ೪೮-೭). ೪. ದರ್ಶನ ಕೊಡುವುದು; ಕಾಣಿಸಿಕೊಳ್ಳುವುದು : ಒಂದು ದಿವಸಮಜಿತಂಜಯ ಮಹಾರಾಜಂ ಯುವರಾಜಂಬೆರಸು . . . ಪ್ರೇಷಿತಾಶೇಷಪ್ರಕೃತಿಸಮೇತಸಚಿವಸಂದೋಹ ಸಂದರ್ಶನಾರ್ಥಂ ಸರ್ವಾವಸರ ಸಭಾಮಂಡಪದೊಳಂತಃಪುರಾಂಗನಾಜನಸಂಗತ ನಖಿಳಪ್ರಧಾನಪರಿವಾರಪರಿಕೃತನುಮಾಗಿರೆ (ಚಂದ್ರಪು. ೫-೨ ವ); ಪರೆದುವು ಸಮಸ್ತ ಸಂತಾಪಂಗಳೆಲ್ಲಗರ್ೆ ಕೃಷ್ಣಸಂದರ್ಶನದೊಳು[ಪಾಠಾಂ. ದರ್ಶನದೊಳಂದು] (ಜೈಮಿಭಾ. ೨೪-೭೦). ೫. ಪರಸ್ಪರ ಸಂಧಿಸುವುದು; ಭೇಟಿ : ಸ್ವಾಮಿದಾಸರೊಡನೆ ಆದ ಸಂದರ್ಶನದಲ್ಲಿ ಕಥಾನಾಯಕಿಯರಾದ ಮೂವರು ವಿರಹಿಣಿಯರೂ ಒಂದೆಡೆಗೆ ಬರುತ್ತಾರೆ (ಸಮಚೀ. ೨೫ ಪೀಠಿಕೆ). ೬. (ಹುದ್ದೆ ಭರ್ತಿಯ) ಆಯ್ಕೆಗಾಗಿ ಕರೆಸಿದ ಅಭ್ಯರ್ಥಿಗಳನ್ನು ಪದಾಧಿಕಾರಿಗಳು ಕಾಣುವುದು : ಈ ದಿನ ಕಚೇರಿಯಲ್ಲಿ ನಡೆದ ಸಂದರ್ಶನದಲ್ಲಿ ಅವಳು ಆಯ್ಕೆಯಾದಳು (ರೂಢಿ). [ಸಂ.]

**ಸಂದರ್ಶನಪ್ರಾಧ್ಯಾಪಕ** (ನಾ). ವಿಶ್ವವಿದ್ಯಾಲಯ ಮುಂತಾದ ಉನ್ನತ ವಿದ್ಯಾಸಂಸ್ಥೆಗಳಲ್ಲಿ ಗೌರವಪೂರ್ವಕವಾಗಿ ನೇಮಕ ಮಾಡಿಕೊಂಡ ಪ್ರಾಧ್ಯಾಪಕ: ಕನ್ನಡಅಧ್ಯಯನಕೇಂದ್ರದಿಂದ ನಿರ್ದೇಶಕರಾಗಿ ನಿವೃತ್ತರಾದ ಮೇಲೆ ಅವರನ್ನು ಮತ್ತೆ ಸಂದರ್ಶನಪ್ರಾಧ್ಯಾಪಕರನ್ನಾಗಿ ನೇಮಿಸಲಾಯಿತು (ರೂಢಿ). [ಸಂ.]

**ಸಂದರ್ಶನೀಯ** (ಗು). ೧. ನೋಡಲು ತಕ್ಕುದಾದ. (ನಾ). ೨. ಮನೋಹರವಾದುದು; ಚೆಲುವಾದುದು : ಧೃತನಾನಾವರ್ಣಪರ್ಣಚ್ಛವಿಸಮುದಯಸಂದರ್ಶನೀಯಂ (ಚಂದ್ರಪು. ೧-೧೧೨). [ಸಂ.]

**ಸಂದರ್ಶಿತ** (ಗು). ೧. ತೋರಿಸಲ್ಪಟ್ಟ; ಕಾಣಿಸಿದ. (ನಾ). ೨. ತೋರಿಸಲ್ಪಟ್ಟವನು : ಮೃಗೇಂದ್ರವಿಷ್ಟರಾರೂಢನಾಗಿರ್ದ ಪ್ರಜಾಪತಿ ಮಹೀಪಾಲನಂ ದ್ವಾರಪಾಲಕಸಂದರ್ಶಿತಂ ಕಂಡು (ಶಾಂತಿಪು. ೫-೩೦ ವ). [ಸಂ.]

**ಸಂದರ್ಶಿಸು** (ಕ್ರಿ). ೧. ನೋಡು; ಕಾಣು : ತನ್ನ ಅಂತಃಕರಣದಲ್ಲಿರುವ ಸ್ಫೂರ್ತಿಶಕ್ತಿಯಿಂದ ಅನುಭಾವಿ ಪರಮಾತ್ಮನನ್ನು ಪ್ರತ್ಯಕ್ಷ ಸಂದರ್ಶಿಸುವನು (ಜಗದಾ. ೨೫); ಅದ್ಭುತ ಪವಾಡಮಂ ಸಂದರ್ಶಿಸಿದ ವೀರ ವಿಜ್ಞಾನಿಯೊಲ್ ಬೆಪ್ಪುಬೆರಗಾಗಿ (ಚಿತ್ರಾಂಗ. ೫-೧೨೧). ೨. ಸಂಧಿಸು; ಭೇಟಿಯಾಗು : ಅಲ್ಲಮ . . . ಅನೇಕ ವ್ಯಕ್ತಿಗಳನ್ನು ಸಾಧಕರನ್ನು ಸಂದರ್ಶಿಸಿ ಅವರ ಸಮಸ್ಯೆಗಳನ್ನು ಬಗೆಹರಿಸಿ ಅವರವರಿಗೆ ಅವರವರ ಪಥವನ್ನು ತೋರಿಸಿಕೊಟ್ಟನು (ಶೂನ್ಯಕು. ೧೦೪); ನಾನು ಗಿರೆಖಾನನನ್ನು ಸಂದರ್ಶಿಸಿ ಅವನ ಜತೆಯಲ್ಲಿ ಬುಜಾ(ಮದ್ಯ) ಕುಡಿದುಬರುತ್ತೇನೆ (ಮಲನಾ. ೩೩). [ಸಂದರ್ಶನ + -ಇಸು$_3$]

**ಸಂದರ್ಷಾ** (ನಾ). ಮಾವಿನಹಣ್ಣಿನಲ್ಲಿ ಒಂದು ಬಗೆ : ಮಾವಿನ ಜಾತಿಗಳು: ಗೋಳಕಾಯಿ, ಬಾದಾಮಿ . . . ರಸಪುರಿ, ಸೇಲಂ, ಸಂದರ್‌ಷಾ (ನಮ್ಮನು. ೨೩೭). [?]

**ಸಂದಲ್** (ನಾ). ಮಹಮ್ಮದೀಯರ ಉತ್ಸವ; ಉರುಸು : 'ಸಂದಲ್‌ಇಲಾಖೆ', 'ಸಂದಲ್‌ಕಛೇರಿ' ಪರಾ. [<— ಅರ. ಮರಾ. ಸಂದಲ್]

**ಸಂದಲ್‌ಇಲಾಖೆ** (ನಾ). ಮಹಮ್ಮದೀಯರ ಉತ್ಸವ, ಮೆರವಣಿಗೆ ಮುಂತಾದುವನ್ನು ವ್ಯವಸ್ಥೆಮಾಡುವ ಆಡಳಿತಶಾಖೆ : ವ್ಯಾಸರಾಯರು ಅರಮನೆಗೆ ಸೇರಿದ ಷಾಗಿರ್ದಪೇಷ್‌ಕಚೇರಿಯ ಕೆಲಸವನ್ನೂ ಸಂದಲ್‌ಇಲಾಖೆಯ ಕೆಲಸವನ್ನೂ ಸಹ ನೋಡುತ್ತಿದ್ದರು (ಮಹಾವಂ. II, ೨೮). [ಸಂದಲ್ + ಇಲಾಖೆ]

**ಸಂದಲ್‌ಕಛೇರಿ** (ನಾ). ಸಂದಲ್‌ಇಲಾಖೆಗೆ ಸಂಬಂಧಿಸಿದ ಕಚೇರಿ : ಕಛೇರಿಗಳು- ೧ ದಿವಾನ್‌ಕಛೇರಿ . . . ೫ ಸಂದಲ್ ಕಛೇರಿ. ೬ ಸವಾರ್ ಕಛೇರಿ . . . ೧೮ ಜಿಲ್ಲೋ ಕಛೇರಿ (ಮಹಾವಂ. II, ೩೮). [ಸಂದಲ್ + ಕಛೇರಿ (< ಕಚೇರಿ)]

**ಸಂಧಲಿ** 'ಸಂದಣಿ' ನೋ.

**ಸಂದಲಿಸು** 'ಸಂದಣಿಸು' ನೋ.

**ಸಂದವಣಿ, ಸಂತಯಣ, ಸಂತವಣೆ$_2$** (ನಾ). ಸೇರಿಸುವುದು; ಕೂಡಿಸುವುದು : " ಸಂದವಣಿಯೆಂದು ಬಲ್ಲರ ಮತದಿ ಸಂದಾನಮಕ್ಕು" (ಕಬ್ಬಿಕ್ಕೆ. ೫೭). **ಸಂತಯಣ** : "ಸಂತಯಣಮೆಂದು ಸಂಧಾನಂ" (ಕಶಷಾ. ೬೭-೫೦೭). **ಸಂತವಣೆ$_2$** : "ಸಂತವಣೆಯೆನಲು . . . ಸಂಧಾನಂ" (ಕವಿಕಂ. ೨೦೪). [< ಸಂ.ಸಂಧಾನ]

**ಸಂದಷ್ಟ** (ಗು). ೧. ಕಚ್ಚಿದ; ಕಡಿದ. ೨. ಬಿಗಿಯಾಗಿ ಒತ್ತಿದ; ಬಲವಾಗಿ ಅಮುಕಿದ. (ನಾ). ೩. ಕಡಿತಕ್ಕೆ ಒಳಗಾದುದು; ಕಚ್ಚಲ್ಪಟ್ಟುದು. ೪. ಹಲ್ಲುಗಳನ್ನು ಬಹಳ ಒತ್ತಿ ಮಾತನಾಡುವುದರಿಂದುಂಟಾಗುವ ಒಂದು ಬಗೆಯ ಉಚ್ಚಾರಣಾದೋಷ. ೫. (ಆಲಂ) ನಿಂದೆಗೆ ಒಳಗಾದುದು; ದೂಷಿತವಾದುದು. ೩,೫ : ದುಷ್ಟಾಹಿಘೋರತರವಿಷವದನದಿಂದೆ ಸಂದಷ್ಟಮಾಗಿರುತಿರ್ದೊಡಂ ದೋಷಮಿರ್ದೊಡಂ ನಷ್ಟಕಲೆಯಾದೊಡಂ ಚಂದ್ರನಂತೆನ್ನ ಕಾವ್ಯದ ರಸಂ ಸುಮನಸರ್ಗೆ ಇಷ್ಟಮಾಗದೆ ಮಾಣದು (ಜೈಮಿಭಾ. ೧-೯). ೬. ಹಿಡಿತಕ್ಕೆ ಸಿಕ್ಕಿಕೊಂಡುದು; ವಶವರ್ತಿಯಾದುದು : ಕೆಟ್ಟಮಾರ್ಗದಲಿಂದ್ರಿಯಂಗಳ ಚಿಟ್ಟುಮುಱಿಯಾಟದಲಿ ಮನ ಸಂದಷ್ಟವಾಗಿಯನಿತ್ಯಸಂಸಾರದ ಸುಖಕ್ಕೆಳಸಿ . . . ಬಳಲುವುದುಚಿತವೇ (ಕುವ್ಯಾಉ. ೪-೧೨). ೭. [ನಾಟ್ಯ] ತುಟಿಗಳ ಹತ್ತು ಬಗೆಯ ಚಲನೆಗಳಲ್ಲಿ ಒಂದು ; ಹಲ್ಲುಗಳಿಂದ ಅವುಡನ್ನು ಕಚ್ಚುವುದು : ವಿವರ್ತಿತ, ಕಂಪಿತ, ವಿಸೃಷ್ಟ, ನಿಗ್ರಹೀತ, ಸಂದಷ್ಟ, ಸಮುದ್ಗ, ಉದ್ವೃತ್ತ, ವಿಕಾಶ್ಯ, ಆಯತ, ರೇಚಿತ ಹತ್ತು ಅಧರಭೇದಂಗಳ್ . . . ಕೆಳಗಿರ್ದಧರಮ[ನ]ತಿ ಕೋಮಳದಿಂದಂ

ಪಲ್ಗಳೊಂದೆ ಸಂದಷ್ಟಾಸ್ಯಿಂ (ಲಾಸ್ಯರು. ೩-೮೧ ವ). ೮. [ಸಂಗೀತ] ಹಲ್ಲುಗಳನ್ನು ಬಿಗಿಯಾಗಿ ಕಚ್ಚಿಕೊಂಡು ಹಾಡುವವನು : ಗಾಯಕ ದೋಷಗಳು- ೧ ಸಂದಷ್ಟ = ಹಲ್ಲುಕಚ್ಚಿ ಹಾಡುವವನು . . . ೨೫ ಅನುನಾಸಿಕ = ಮೂಗಿನಲ್ಲಿ ಹಾಡುವವನು (ಸಂಗೀಚಂ. ೧೦೩). ೯. [ಕಾವ್ಯಮೀ] ಯಮಕಾಲಂಕಾರದ ಪ್ರಭೇದಗಳಲ್ಲಿ ಒಂದು: ಪರಿವೃತ್ತಂ ಸಂದಷ್ಟಂ ನಿರಂತರಾವಳಿ ಸಮುದ್ಗಮೆಂಬಿವು ಮೊದಲಾಗಿರೆ ಯಮಕಭೇದಮನಿತುಂ ಪರಿಭಾವಿಸೆ ತತ್ಪ್ರಪಂಚದೊಳ್ ಪೊಕ್ಕಿರ್ಕುಂ (ಕಾವ್ಯಾವ. ೫೪೬).

[ಸಂ.]

**ಸಂದಳಿ$_1$** (ಕ್ರಿ). ೧. ಸಂಬಂಧವನ್ನು ಕಳೆದುಕೊಳ್ಳು; ಬಾಂಧವ್ಯವನ್ನು ತೊರೆದುಕೊಳ್ಳು : ಕೂಡಿದ ಮತ್ತೆ ಹಿಂದಣ ಹಂಗುಹಱಿದು ಸಂದಳಿದು ಅಂದಂದಿಗೆ ಬಂದುದ ಕಂಡು ಬಾರದುದಕ್ಕೆ ಭ್ರಮೆಯಿಲ್ಲದಿರಬೇಕು (ಮೋಳಿಮಾ. ೩೯-೧೬೪); ಕ್ಷುಧೆ ತೃಷೆ ನಿದ್ರೆಯೆಂಬಿವರ ಭಂಗಮಡಂಗಲು ಲಿಂಗದೊಳ್ ಸದಾ ನಿಧನದ ಬಾಧೆ ಹಿಂಗಿ ತನುಜೀವದ ಸಂದಳಿದ ಪ್ರಯಾಸದಿಂ ವಿಧಿವಿಹಿತ ಪ್ರಯತ್ನಗತಿ ಹೊದ್ದಡೆ ರಾಜಿಪುದಯ್ಯ ಚಿತ್ಪ್ರಭಾನಿಧಿ ಭವದೀಯಭಕ್ತಿ (ಶತಕ. ೪೮). ೨. ಭೇದಭಾವವನ್ನು ಕಳೆದುಕೊಳ್ಳು; ಭಿನ್ನತೆಯಿಲ್ಲವಾಗು : ಮಾನಸವಚನಕಾಯದೊಳು ಸಂದಳಿದು ನಿಮಗಾನೊಲಿದು ಎನ್ನನೊಚ್ಚತಗೊಟ್ಟೆನು (ಶಿವಗೀ. ೨೮-೧೨೫); ಕಂದನ ಕಳೆ ಕಂಡು ಆನಂದಪಡುವರು ಸಂದಳಿದು ಮಲ್ಲಯ್ಯ ಮಲ್ಲಯ್ಯ ಎಂಬುವ ಕಂದನ ನುಡಿ ಕೇಳಿ ತಣಿವರು (ಸಿದ್ಧಪು. ೫-೩೧). [ಸಂದು$_1$ + ಅಳಿ$_i$ (< ಅಱ್$_1$)]

**ಸಂದಳಿ$_2$** 'ಸಂದಣಿ' ನೋ.

**ಸಂದಳಿಗೊಳ್** 'ಸಂದಣಿಗೊಳ್' ನೋ.

**ಸಂದಳಿಗೊಳು** 'ಸಂದಣಿಗೊಳ್' ನೋ.

**ಸಂದಳಿಸು** 'ಸಂದಣಿಸು' ನೋ.

**ಸಂದಾನ$_1$** (ನಾ). ರಾಜಿ; ಒಪ್ಪಂದ.

**ಸಂದಾನ ಹಚ್ಚಿಸು** = ರಾಜಿಗೆ ಏರ್ಪಾಡುಮಾಡು; ಒಪ್ಪಂದಕ್ಕೆ ಪ್ರಯತ್ನಿಸು: ದಳವಾಯಿ ದೇವರಾಜ್ಜಯ್ಯನವರ ಬಳಿಗೆ ಸಂದಾನ ಹಚ್ಚಿಸಿ ಸದರಹೂ ಹನ್ನೆರಡು ಲಕ್ಷರೂಪಾಯಿ ನಿಮಗೆ ಕೊಡುತ್ತೇನೆ (ಹೈದರ. ೩೫).

[ IP ಇದು 'ಸಂಧಾನ' ಎಂಬುದರ ಅಪಲಿಖಿತ?]

**ಸಂದಾನ$_2$** (ನಾ). ೧. (ದನಗಳನ್ನು ಕಟ್ಟುವ) ಹಗ್ಗ; ರಜ್ಜು : "ದಾಮನ್, ಸಂದಾನಂ — ೨ ದನಗಳನ್ನು ಕಟ್ಟಿಹಾಕುವ ಕೊರಳ ಕುಣಿಕೆ, ಹಗ್ಗ,ದಾವಣಿ" (ಸಿದ್ಧಾಂತಿ. ೨೯೭). ೨. ಸರಪಣಿ; ಸಂಕೋಲೆ. ೩. ಸರಪಣಿಯನ್ನು ಬಿಗಿಯುವ , ಆನೆಯ ಮೊಣಕಾಲಿನ ಕೆಳಭಾಗ. ೪. ಆನೆಯ ಕುಂಭಸ್ಥಳದಿಂದ ಹರಿಯುವ ಮದೋದಕ. ೫. ವಿಭಾಗಿಸುವಿಕೆ; ಭಾಗಮಾಡುವಿಕೆ. ೬. ಕಟ್ಟುವಿಕೆ; ಜೋಡಿಸುವಿಕೆ : 'ಸಂದಾನಿಸು' ಪರಾ. [ಸಂ.]

**ಸಂದಾನಿತ** (ಗು). ೧. ಕಟ್ಟಿದ; ಜೋಡಿಸಿದ. (ನಾ). ೨. ಕಟ್ಟಿದುದು : "ಬದ್ಧಂ, ಸಂದಾನಿತಂ, ಮೂತಂ, ಉದ್ದಿತಂ, ಸಂದಿತಂ, ಸಿತಂ - ೬ ಕಟ್ಟಲ್ಪಟ್ಟದ್ದರ ಹೆಸರು" (ಸಿದ್ಧಾಂತಿ. ೩೪೮). [ಸಂ.]

**ಸಂದಾನಿತಕ** (ನಾ). [ಕಾವ್ಯಮೀ] ಒಂದು ವಾಕ್ಯವು ಎರಡು ಅಥವಾ ಮೂರು ಪದ್ಯಗಳಲ್ಲಿ ವಿಸ್ತರಿಸಿದರೆ ಬರುವ ರಚನೆ : ಕಾವ್ಯದಲ್ಲಿ ಅನೇಕ ಪ್ರಭೇದಗಳುಂಟು:- ಸಂಸ್ಕೃತ, ಪ್ರಾಕೃತ ಮತ್ತು ಅಪಭ್ರಂಶಭಾಷೆಗಳಲ್ಲಿ ರಚಿತವಾದ 'ಮುಕ್ತಕ', 'ಸಂದಾನಿತಕ' . . . 'ಆಖ್ಯಾಯಿಕಾ', 'ಕಥಾ' ಇತ್ಯಾದಿಗಳು (ಧ್ವನ್ಯಾಲೋ. ೧೪೧). [ಸಂ.]

**ಸಂದಾನಿಸು** (ಕ್ರಿ). ಕಟ್ಟು; ಜೋಡಿಸು : ಏಣಿಗಳಿಗೆ ಕವೆಗೋಲುಗಳನು ಸಂದಾನಿಸಿ ಕೆಡೆನೂಕಲಾಗ ಗೋಣಡಿಯಲಿ ಬಿದ್ದು ತುರುಕರ ಮಾರ್ಬಲ ಪ್ರಾಣವ ನೀಗಾಡಿದುದು (ಕಂನವಿ. ೧೪-೬೦). [ಸಂದಾನ$_2$ + — ಇಸು$_3$]

**ಸಂದಾಯ** (ನಾ). ೧. (ತೆಗೆದುಕೊಂಡ ಹಣ ಮುಂತಾದುವನ್ನು) ಸಲ್ಲಿಸುವುದು; ಪಾವತಿ; ಸಲುವಳಿ : ಹಿಂದಣ ಸಂಚಿತ ಸಾಲಭಾರಕ್ಕೆಲ್ಲ ಸಂದಾಯವನು ಮಾಡಿ ಕತಬಿ ಹರಿಸಿಬಿಟ್ಟ (ಪುರಂದ. ೨-೧೫-೩); ಹಡಗದ ಮೇಲೆ ತೆಗೆದ ಉಪವಾಸ ಏಕಾದಶಿಗೆ ಸಂದಾಯ (ಗಾದ). ೨. ಕೊಟ್ಟುದಕ್ಕೆ ಪ್ರತಿಯಾಗಿ ಕೊಡುವುದು; ಹಿಂತಿರುಗಿಸುವುದು : ಘಾಯವಡದರು . . . ಉರವಣಿಸಿ ಹಳಚಿ ಸಂದಾಯಮಮ್ಮಾಡಿದರು ಗದೆಗದೆಗೆ ಧೊಪ್ಪುಧೊಪ್ಪೆನಲು ತಿವಿದಾಡ್ದರು (ತುರಂಗ. ೭೫-೪೩). 'ಸಲ್' ಪರಾ.

**ಸಂದಾಯಮಾಡು** = ಕಳೆ; ನೂಕು : ರಾತ್ರಿಯ ಬಹ್ವಂಶ ನಿದ್ದೆಯಿಲ್ಲದೆ ಸಂದಾಯ ಮಾಡಿದ್ದುದರಿಂದ ಬೆಳಗಿನ ಜಾವಕ್ಕೆ ಸುಖವಾದ ನಿದ್ರೆ ಅಂಟಿಕೊಂಡಿತ್ತು (ವಾತ್ಸಲ್ಯ. ೧೦೩).

[ಸಂ. ಸಂದಾಯ = ಕೊಡುವುದು ./ ತಮಿ. ಚ್ಞ್ಟಿಯಮ್, ಚನ್ತಾಯಮ್ = ದಿನಗೂಲಿ, ಹೆಚ್ಚುವರಿ ಲಾಭ; ತುಳು. ಸಂದಾಯ]

**ಸಂದಾಯಕ** (ನಾ). ೧. ಕೊಡುವಂಥದು; ನೀಡುವಂತಹುದು : ವೈಶಂಪಾಯನಮುನಿ ಹೇಳಿದನು . . . ಶ್ರೇಯಸದ ಸದ್ರೂಪುವಿನ ಸಂದಾಯಕವ ನಿರ್ಮಲ ಮಹಾಭಾರತ ಕಥಾಮೃತವ (ಕುವ್ಯಾಆ. ೨-೧೫). ೨. ಕೊಡುವವನು; ನೀಡುವವನು : ಸದ್ಗತಿ ಸಂದಾಯಕನೆಂದು ತಂದೆ ಪಡೆವಂ ಸತ್ಪುತ್ರನಂ (ಅನಂಪು. ೩-೮೪). [ಸಂ.]

**ಸಂದಾಯತ, ಸಂದಾಯಿತ** (ನಾ). = ಸಂದಾಯ ೧ : ಕುಂಪನಿಸರಕಾರಕ್ಕೆ ವರ್ಷವರ್ಷಕ್ಕೂ ಸ್ನೇಹಾ ಉದ್ದಿಶ್ಯ ಇಪ್ಪತ್ತನಾಲ್ಕು ಸಾವಿರ ರೂಪಾಯಿ ಸಂದಾಯತ ಮಾಡಿ (ರಾಜೇಂದ್ರ. ೧೦೧). **ಸಂದಾಯಿತ** : (೬). [< ಸಂದಾಯ]

**ಸಂದಾಯಿತ** 'ಸಂದಾಯತ' ನೋ.

**ಸಂದಿ** 'ಸಂದು$_2$' ನೋ.

**ಸಂದಿಕ್ಕು** (ಕ್ರಿ). ಕೂಡಿಸು; ಸೇರಿಸು; ಜೋಡಿಸು : ಬೆಂದ ನುಲಿಯ ಸಂದಿಕ್ಕಿ ಮತ್ತೊಂದ ಮಾಡಬಾರದಯ್ಯ (ಅವಚಂ. ೯೮-೪೩೮); ಅರ್ಧಾಂಗಮಂ . . . ಈಡಾಡಿದರುಯ್ಯಾ ತಿಪ್ಪೆಯತ್ತಲ್ ಜರೆಯೆನಿಸುವವಳ್ಕಂಡು ಕೊಂಡುಯ್ದು ಸಂದಿಕ್ಕಿದೊಡಂತಾ ಸಂದು ಸಂದಿಲ್ಲೆನಿಪ ತೆಱದಿ ಪತ್ತಿತ್ತಿಳಾಸೇವ್ಯವಾಗಲ್ (ಧರ್ಮಪ. ೯-೫೭). [ಸಂದು$_2$ + ಇಕ್ಕು]

**ಸಂದಿಗ** (ನಾ). ಒಂದು ಮನೆತನದ ಹೆಸರು : ಸಂದಿಗರ ಕುಡಿವುಳ್ದಂ ಕೊಡಂಗೆಯೂರ್ಗ್ಗೆ ಪೆರ್ಗ್ಗಡೆತನಂಗೆಯ್ಯುತ್ತಿರೆ (ಎಕ. VII, ಶಿಕಾರಿ. ೨೧೯-೧೩; 918). [?]

**ಸಂದಿಗಾಲಜ್ಜವೂರ್** (ನಾ). ಒಂದು ಸ್ಥಳದ ಹೆಸರು : ಇದರ್ಗೆ ಸಾಕ್ಷಿ ಗೋಯಿನ್ದಯ್ಯನುಂ ಸನ್ದಿಗಾಲಜ್ಜವೂರದ ಕಳ್ಳರ್ವಾಡಿಯ ಮಹಾಜನಮುಂ (ಎಕ. IV , ಶ್ರೀರಂಗ. ೧೬೦-೧೭; ಸು. 800). [?]

**ಸಂದಿಗುಸುಕ** 'ಸಂದುಗುಸುಕ' ನೋ.

**ಸಂದಿಗೆ** (ನಾ). ಒಂದು ಬಗೆಯ ಸುಗಂಧವಸ್ತು : ಬಕುಲ ಸಂದಿಗೆ ಮೊದಲಾದ ಸುಗಂಧದ್ರವ್ಯವನ್ನು ಮೈಗೆ ಹಚ್ಚಿ ವಸ್ತ್ರಗಳ ಮೇಲೆ ಪನ್ನೀರನ್ನು ಚಿಮುಕಿಸಿದಳು (ಮಂಜುಕ. ೬೪). [?]

**ಸಂದಿಗ್ಧ** (ಗು). ೧. ಬಳಿದ; ಹಚ್ಚಿದ; ಲೇಪಿಸಿದ. ೨. ತಬ್ಬಿಬ್ಬಾದ; ದಿಗ್ಭ್ರಮೆಗೊಂಡ. ೩. ಅಸ್ಫುಟವಾದ; ಅವ್ಯಕ್ತ. ೪. ಜಟಿಲವಾದ; ಕಷ್ಟಕರವಾದ ; ಕ್ಲಿಷ್ಟವಾದ : ನೀವು ಹೇಗಾದರೂ ಮಾಡಿ ಈ ಸಂದಿಗ್ಧ ಸಂದರ್ಭವನ್ನು ತಪ್ಪಿಸಬೇಕು (ಹಸುಹೊ. ೨೨೯). ೫. ಸಂದೇಹಾಸ್ಪದವಾದ; ಅನುಮಾನದಿಂದ ಕೂಡಿದ : ವ್ಯಗ್ರತೆಯನುಳಿದು ಸಂದಿಗ್ಧಕಾರ್ಯಂಗಳಂ ಮೆಲ್ಲನೆ ಮಾಳ್ಪೊಂದಂಗಮೆನ್ನೀ ಬಗೆಗಭಿಮತಮಾಗಿರ್ಪುದೈ (ರಾಜಶೇ. ೧೩-೮). ೬. ಅಪಾಯಕಾರಿ; ಗಂಡಾಂತರವಾದ. (ನಾ). ೭. ಅನುಮಾನ; ಶಂಕೆ; ಸಂದೇಹ : ಜೀವಾದಿಪದಾರ್ಥಂಗಳೊಳಾವುದು ಸಂದಿಗ್ಧಮಾದೊಡಂ ಬಲಗೊಳೆ ಭವ್ಯಾವಳಿಗೆ ವಿದಳಮಕ್ಕುಂ (ಅಜಿಪು. ೫-೭೦); ತಾಪಸಪ್ರತತಿ ಸಂದಿಗ್ಧಂಗಳಂ ತಿಳಿದು ಸಮ್ಮತದೊಳಹುದೆನಲ್ಕೆ ಬಂದ ಮುನಿಗಳ ಪಾದಮಂ ತೊಳೆದು . . . ಆಸನವನೀವಂ ಸಾತ್ಯಕಿ (ಜೈಮಿಭಾ. ೩೪-೫). ೮. ಜಟಿಲವಾದ ಪರಿಸ್ಥಿತಿ ; ಇಕ್ಕಟ್ಟು : ಸಂದಿಗ್ಧಮಾಗಿರ್ದ ಪಾತಕಂ ಪೋಪುದು ಮುಕುಂದಸ್ಮರಣೆಯಿಂದಂ (ಜೈಮಿಭಾ. ೨೩-೬೩); ಇವರು ತಮ್ಮ ಬುದ್ಧಿಚಾಕಚಕ್ಯತೆಯಿಂದ ಹೇಗೆ ಸಂದಿಗ್ಧದಿಂದ ಬಿಡಿಸಿಕೊಂಡರೆಂಬುದನ್ನು ಓದುವುದೇ ಒಂದು ಸೊಗಸು (ಸಂಗೀತ. Vi , ಪೀಠಿಕೆ). ೯. ಸಂದೇಹವನ್ನುಂಟು ಮಾಡುವ ವ್ಯಕ್ತಿ : ನೀವು ಹೆಂಗಸರು,

ಬಹಳ ಸಂದಿಗ್ಧರು . . . ಹಾಗೇ ಆಗಲಿ, ನಾವು ಸಂದಿಗ್ಧರು, ಸಂಶಯಚಿತ್ತರು (ಇಪ್ಪ.ಕ. ೨೬೦). ೧೦. [ಕಾವ್ಯಮೀ] ಪದದೋಷಗಳಲ್ಲಿ ಒಂದು : ಸಂದಿಗ್ಧ-ಗೊತ್ತಾದ ಒಂದು ಅರ್ಥವಿಲ್ಲದೆ ಹೀಗೋ ಹಾಗೋ ಎಂದು ಸಂದೇಹ ಹುಟ್ಟುವಂತೆ ಇರುವುದು (ಕೃಪಿಡಿ. ೨೨೭). [ಸಂ.]

**ಸಂದಿಗ್ಧತೆ** (ನಾ). ೧. ಅನುಮಾನ; ಸಂದೇಹ : ಇಲ್ಲಿಯ ಯುಕ್ತಿವಾದದಲ್ಲಿಯ ಕೆಲವು ಸಂದಿಗ್ಧತೆಗಳನ್ನು ಎತ್ತಿ ತೋರಿಸಲೇಬೇಕಾಗುವುದು (ಸಾಹಿಸ. ೩೧). ೨. ಜಟಿಲವಾದ ಪರಿಸ್ಥಿತಿ; ಇಕ್ಕಟ್ಟು : ಈ ಸಂದಿಗ್ಧತೆಯಿಂದ ಪಾರಾಗುವ ಬಗೆ ಹೇಗೆ ? (ರೂಢಿ). ೩. [ಕಾವ್ಯಮೀ] ಅರ್ಥದೋಷಗಳಲ್ಲಿ ಒಂದು : ಸಂದಿಗ್ಧತೆ – ಕವಿಯ ಭಾವವು ಹೀಗೋ ಹಾಗೋ ಎಂದು ಸಂದೇಹವಾಗುವಂತೆ ಇರುವುದು (ಕೃಪಿಡಿ. ೨೨೯). [ಸಂ. ಸಂದಿಗ್ಧತಾ]

**ಸಂದಿಗ್ಧಾರ್ಥ** (ಗು). ೧. ಸಂದೇಹಕ್ಕೆಡೆಯಾದ; ಅನುಮಾನಾಸ್ಪದವಾದ : ಕೆಲರ್ ಸಂದಿಗ್ಧಾರ್ಥವೇದವಾಕ್ಯಂಗಳಂ ವಿಚಾರಿಸುತಿರ್ಪರ್ (ಅದ್ಭುತ. ೧-೧೧). (ನಾ). ೨. ಸಂದೇಹಾಸ್ಪದವಾದ ಅರ್ಥ. [ಸಂ.]

**ಸಂದಿತ** (ಗು). ೧. ಕಟ್ಟಿದ; ಬಿಗಿದ. (ನಾ). ೨. ಕಟ್ಟಿದುದು : "ಬದ್ಧಂ, ಸಂದಾನಿತಂ, ಮೂತಂ, ಉದ್ಧಿತಂ, ಸಂದಿತಂ, ಸಿತಂ – ೬ ಕಟ್ಟಲ್ಪಟ್ಟುದರ ಹೆಸರು" (ಸಿದ್ಧಾಂತಿ. ೩೪೮). [ಸಂ.]

**ಸಂದಿಯ** 'ಸಂದೆಯ' ನೋ.

**ಸಂದಿವಾತ** 'ಸಂದುವಾತ' ನೋ.

**ಸಂದಿಸು** (ಕ್ರಿ). ೧. ಸೇರಿಸು; ಜೋಡಿಸು; ಹೊಂದಿಸು : " ಸಂದಿಸು – ಸಂಧಾನೇ (ಸೇರು, ಸೇರಿಸು) " (ಶಮಧಾ). ೨. ಸೇರು; ಕೂಡು : ಜರೆಯೆಂಬ ರಕ್ಕಸಿ . . . ಎರಡು ಪೋೞುಮನೊಂದು ಕೈಯೊಳೆ ಪಿಡಿದೊಡೊಂದೊಂದಱೊಳ್ ಸಂದಿಸಿ ಮಾನಸರೂಪುಗೊಂಡೊಡೆ ಚೋದ್ಯಂಬಟ್ಟು, ಜರಾಸಂಧನೆಂದು ಪೆಸರನಿಟ್ಟು (ಪಂಪಭಾ. ೬-೨೬ ವ); ಚಂದ್ರಿಕಾನಂದನನಾಗಳಂತೆ ತಱಿಸಂದು ಮನೋವಚನಾಂಗಶುದ್ಧಿಯಿಂ ಸಂದಿಸಿ ಶಲ್ಯದಂಡಮನಡಂಗಿಸಿ . . . ಕೊಂಡನಖಂಡಿತ ಜೈನದೀಕ್ಷೆಯಂ (ಸುಕುಮಾ. ೮-೩೮); ಪಾಸಱೆಗಳೊಳ್ ಪಾಸುವಸುಕೆದಳಿರಂ ಸೂಸಿ ಬೇಸಱಿಸಿದ ಪುಳಿಂದಿನಿಯರ ಮನದೊಳೊಂದಿನಿಸು ಸಂದಿಸಿಯುಂ . . . .ಸಾಯಂತನಸಮಯಸಮೀರಣಂ ಸೌಖ್ಯಸಾರಸರ್ವಸ್ವಮೆನಿಸಿದಾಗಳ್ (ಚಂದ್ರಪ್ರ. ೮-೪ ವ). ೩. ಗುಂಪುಗೂಡು; ಒಟ್ಟಾಗು : ಎಡೆಮಡಗದೆ ಸಂದಿಸಿ ಮೀವುಡುವ ತುಱುಂಬುವ ಜಲಾಂಬರಸ್ರಕ್ತತಿಯಿಂ ನಡೆದರ್ ಮಜ್ಜನವಳ್ಳರ ಮಡಿವಳ್ಳರ ಮಾಲೆಗಾಱರಂದದೆ ದಿವಿಜರ್ (ಅಜಪು. ೫-೯೧); ಬಂದುದು ಮಹಾಜನಂ ಬಹಳ ವೈಭವದಿಂದೆ ನಿಂದುದು ಚತುರ್ಬಲಂ ಕೆಲಕೆಲದೊಳೊಡ್ಡಾಗಿ ಸಂದಿಸಿದರಿವರವರ್ಬಳಿಕಶ್ವಯುಗಸಹಿತ ನಡೆದು ಬಹ ಫಲುಗುಣಂಗೆ (ಜೈಮಿಭಾ. ೩೩-೨೩). ೪. ಒಟ್ಟುಮಾಡು; ಸಂಗ್ರಹಿಸು : ಚಲ್ಲಿದೊಡಕುಗಳ ಚೂರ್ಣಂಗಳಂ ಬಲುಸೆಕ್ಕೆಯೆಲ್ಲವಂ ತಂದು ಸಂದಿ[ಪಾಠಾಂ. ಧಿ]ಸಿ ನೋಡಿ (ಸೋಮಚ. ೪-೮೫). ೫. ಬಾಣವನ್ನು ಹೂಡು; ಶರಸಂಧಾನ ಮಾಡು : ದೆಸೆಯಂ ನುಂಗಿ ದಿನೇಶನಂ ನೊಣೆದು ರೋದೋಭಾಗಮಂ ಪೀರ್ದು ಸಂದಿಸಿ ಮಂದೈಸಿ ಧನುರ್ಬಲಂಗಳಿಸೆ ಬಾಣಶ್ರೇಣಿ ಸೇನಾಂಗದೊಳ್ . . . ನಟ್ಟುವುಗ್ರಾಜಿಯೊಳ್ (ಪಂರಾಮಾ. ೧೩-೪೫); ಸಂದಿಸೆ ಗಱಿ ಸಂದಿಸೆ ರಘುನಂದನನೆಡೆಗಿಱಿದು ಕವಿವ ಕಣೆಯಿಂ ಮುನ್ನಂ ಬಂದುದು ನೆಲಕ್ಕೆ ರಿಪುಭಟವೃಂದಂ ಬೞಿಯಂ ನಿಶಾತವಿಶಿಖಪ್ರಸರಂ (ಕಾವ್ಯಾವ. ೭೪೨). ೬. ಕಟ್ಟು; ಬಂಧಿಸು : ಗೊಡ್ಡನಾಗಳ್ ಹೋಗಿ ಹಿಡಿತಂದು ಒಂದು ಗೂಟದೊಳಂತು ಸಂದಿಸಿ . . . ಕಱೆಯಲ್ಕೆ (ಬಸಪು. ೯-೨೬). ೭. ಸಾಮರಸ್ಯ ಉಂಟುಮಾಡು; ಹೊಂದಿಕೆಯಾಗುವಂತೆ ಮಾಡು : ಮುನಿಸಿದು ನಿನತ್ತು ಸ್ಮರಣೆಯೆನತ್ತು ಕೆಳದಿಗೆ ತನತ್ತು ಸಂದಿಸುವೆಸಕಂ (ಶಮದ. ೧೪೭ ಪ್ರಯೋ). ೮. ಹಿಂಬಾಲಿಸು; ಅನುಸರಿಸು : ಮುಂದಣ ಮಿಗಮಂ ಕೞಿಪದೆ ಸಂದಿಸಿ ಬೞಿಗೊಳ್ವ ಮಿಗಮುಮಂ ಕೞಿಪದೆ ತಾನೊಂದಳವಿದಪ್ಪದೆಚ್ಚು ಬಲಿಂದಮನಿಂ ಬಿಲ್ಲ ಬಲ್ಮೆಯಂ ಪೊಗೞಿಸಿದಂ (ಪಂಪಭಾ. ೫-೪೮); ಮಸಗಿ ಪುರಮಂ ಮೀಱಿ ಹೋಗುತ್ತ ಹಿಂದೆ ಸಂದಿಸಿ ಬಪ್ಪ ಕೌಶಿಕನ ಕಂಡು ನಿಂದವನೀಶನೊಸೆದು ನಿಲಿಸುವ ಭರದೊಳೊಂದೆರಡು ಮಾತನಾಡಿದನು (ಹಚಕಾ. ೯-೧೧); ಮುಂದೆ ಮೆಱೆಯೆ ಹೆಗ್ಗಾಳೆ ಕಲಕಂಠ ರಭಸದಿಂದಡರಿದ ವರತಪೋವನಕೆ ಸಂದಿಸಿ ಹೊಗುವೆನೆಂದೆನಲು ಬಾಗಿಲೊಳಿರ್ದ ನಂದೀಶ ಮುರಿಯಲಿಕ್ಕಿದನು (ಮೋಹತ. ೭-೨೧). ೯. ಭೇಟಿಯಾಗು; ಸಂದರ್ಶಿಸು : ಇಲ್ಲಿಗೆ ತಾನೇಕೆ ಬರಬೇಕು ನಾನೆ ಬಂದಲ್ಲಿ ಸಂದಿಪೆನು ಹೋಗೆಂದು ನಿಲ್ಲದೆ ಮಗಳ ಮುಂದಿಟ್ಟಿ, ಸೇವೆಯ ಪೆಂಗಳೆಲ್ಲರುಗೂಡಿ ನಡೆದಳು (ಭರಚ. ೪೨-೧೪೧); ಒಂದೂರೊಳಿರಲು ಗುರುವಂದನೆಯ ಮಾಡದಲೆ ಸಂದಿಸಿ ಕೂಳನುಣುತಿಪ್ಪವನ ಬದುಕು ಹಂದಿಯಂತೆಂದ (ಸರ್ವಜ್ಞ. ೫೩). ೧೦. ಕಣ್ಣಿಗೆ ಬೀಳು; ಕಾಣಿಸಿಕೊಳ್ಳು : ಮತ್ತಾರ ಕಣ್ಣಿಗೆ ಸಂದಿಸಲಿಲ್ಲ ಕರ್ಗತ್ತಲೆಯೊಳು ನಿಶಾಚರನು (ಮೋಹತ. ೧೧-೨೯). ೧೧. ಎದುರಿಸು; ಪ್ರತಿಭಟಿಸು : ಮೃಗಮದವಾರಿಯನರಸಂ ಮೊಗಮೊಗೆದೆಡೆವಿಡದೆ ಪೊಯ್ಯುದುಂ . . . ಸಂದಿಸಿ ತನ್ಮೃಗಮದಮಂ ಕುಂದದೆಯಾ ದೇವಿ ಪೊಯ್ಯುತಿರೆ (ಕುಸುಮಾ. ೫-೧೪೨); ಕೇಸಂ ದಳವಾದ ಕಟ್ಟಲೆಯನೇೞಿಸೆ ನುಣ್ಮೊಗವಚ್ಚದಿಂಗಳಂ ಸಂದಿಸೆ . . . ಬಂದಳಾಗಳಿರುಳಂದದಿನೊರ್ವಳ್ (ಕಬ್ಬಿಕಾ. ೧೩೦). ೧೨. ತಾಗು; ಮುಟ್ಟು : ಅದಱ ಕೆಲದೊಳೊಂದಿ ಸಂದಿಸಿ ಗಗನತಳಮಂ ತಱುಂಬುವಂತಿರ್ದ ಶಿಖರಿಶಿಖರಂಗಳಿಂದಂ . . . ಭಯಂಕರಾಕಾರಮಪ್ಪದ್ವೈತವನಕ್ಕೆ ಬಂದು (ಪಂಪಭಾ. ೭-೨೯ ವ). ೧೩. ತಾಗಿಸು; ಮುಟ್ಟಿಸು : ಒಂದೆಸೆಯೊಳಿಂದ್ರನು ಸುರಾವಳಿಯೊಂದೆಸೆಯೊಳಿರಲು ವಂದಿಸುತ ಮುಕುಳಿತಕರಂಗಳ ಸಂದಿಸಲು ಭಾಳಸ್ಥಳಗಳಿಂ ನಂದಿಕೇಶನನಂಕಿಸುತ ಕೀರ್ತಿಸಿದ ರರ್ತಿಯಲಿ (ಬಸಪು. ೨-೨೬). ೧೪. ಉಂಟಾಗು; ಒದಗು : ದುರಂತದುರಿತಹರಂಗಳ್ ಸಂದಿಸಿ ನೆಗಱ್ದುವನುಕ್ರಮದಿಂದೆ ಚತುಸ್ತ್ರಿಂಶದತಿಶಯಂಗಳ್ ಜಿನನಂ (ಅಜಿಪು. ೭-೧೫); ಹಿಂದೆ ಹಲವುಜನ್ಮದೊಳು ಬಾಹ್ಯವಿಜ್ಞಾನ ಬಂದುದು ಹೋದುದೆಲ್ಲರಿಗೆ ಬಂದಂತರಂಗ ವಿಜ್ಞಾನವಾರಿಗು ಮುನ್ನ ಸಂದಿಸಿತಿಲ್ಲ (ಭರಚ. ೨-೨೪); ಸಂದಿಸಿದ ಭೋಗ ಪಡೆಯುವಡೆ ದಾನವನು ಕುಂದದಲೆ ಮಾಡು (ಸರ್ವಜ್ಞ. ೬೪೬). ೧೫. ಉಂಟುಮಾಡು: ತಜ್ಜಲದೋಪಹತಿಯಿಂ ಬೇಱೊಂದು ಸರೋವರಮೆಂಬ ಸಂದೆಯಮಂ ಸಂದಿಸುವ ಚ್ಛೋದಸರೋವರಮಂ ಕಂಡು (ಕಾದಂಉ.೫೩೯). ೧೬. ಇಡು; ಇರಿಸು : ಕೇಸಡಿಗಳೊಳಿಕ್ಕುವಿರ್ಪುವೊರೆದ ತಾವರೆಯೆಲೆಗಳೊಳಂ ಕೆಂದಳಂಗಳೊಳ್ ಸಂದಿಸುವ ಕರ್ಪೂರರಜದೊಳ್ ಪೊರೆದ ಹಿಮದ ಜೊಬ್ಬುಗಳೊಳಂ . . . ಸಂತಾಪಮಂ ಸಂತಯಿಸಲಾಱದೆ (ಕಾದಂಉ. ೭೭೩). ೧೭. ಒಡ್ಡು; ಚಾಚು ; ನೀಡು : ಕಂಕೆಲ್ಲಿಯಂ ಲೀಲೆಯಿನೊಡೆವಡೆಯೊಳ್ಮಾಣದಾತ್ಮಂಗವಂ ಸಂದಿಸುವಂ (ಕಾದಂಉ. ೩೦೫). ೧೮. ಬರು : ಪತ್ತಿರೆ ಕಾರಕದೊಳ್ ಮುಂದೊತ್ತಿ ಸಮಸ್ತಕ್ರಿಯಾಪದಂ ಪದವಿಧಿ ತಾನೊತ್ತರಿಸುಗುಮದಱೊಳ್ ತಳ್ತಿತ್ತಮದಂತಕ್ಕೆ ಬಿಂದು ಸಂದಿಸಿ ನಿಲ್ಕುಂ (ಕಾವ್ಯಾವ. ೨೧೪); ಸಂದ ಪಕಾರಕ್ಕೆ ಹಕಾರಂ ದೊರೆಕೊಳ್ಗುಂ ವಿಕಲ್ಪದಿಂ ಸಂಯೋಗಂ ಸಂದಿಸಿದೆಡೆ ದುಷ್ಕರಂ (ಶಮದ. ೧೫೭). 'ಸಂಧಿಸು' ಪರಾ.

**ಸಂದಿಸುಕೊಳು, ಸಂದಿಸಿಕೊಳ್ಳು** = ೧. ಸೇರಿಸಿಕೊಳ್ಳು; ಕೂಡಿಸು : ಇಂದುಮೌಳಿಗೆ ಮುನ್ನವರ್ಪಿಸಿ ಸಂದ ನಿರ್ಮಾಲ್ಯದ ಶಿರೋಬ್ಜಮನಿಂದು ಸಂದಿಸಿಕೊಳುವರೇ (ಬಸಪು. ೪೯-೧೮). ೨. ಸಂಧಿ ಮಾಡಿಕೊಳ್ಳು : ಆ ಮಂತ್ರಿ ಪಾತ್ಸಾವನು ನೆಱೆ ಸಂದಿಸಿಕೊಂಡು ಬೇಗದಲಿ ನಿಂದು ಕಾಣಿಕೆಯಿಕ್ಕಿ ರೊಕ್ಕದಾಸೆಯನಿತ್ತು ತಂದನು ದಂಡನಾ ನೆಲಕೆ (ಕಂನವಿ. ೧೧-೩). [ಸಂದು$_{2}$ + – ಇಸು$_{3}$]

**ಸಂದೀಪಿತ** (ಗು). ೧. ಜ್ವಲಿಸುವ ; ದಹಿಸುವ. ೨. (ಕೋಪದಿಂದ) ಕೆರಳಿದ; ಉದ್ರಿಕ್ತವಾದ : 'ಸಂದೀಪಿತಚಿತ್ತ' ಪರಾ. [ಸಂ.]

**ಸಂದೀಪಿತಚಿತ್ತ** (ನಾ). (ಕೋಪದಿಂದ) ಕೆರಳಿದ ಚಿತ್ತವುಳ್ಳವನು : ಆ ಪದದೊಳ್ ರಣಪ್ರಣಯಮುತ್ಸುಕಮಂ ತರೆ ಕೋಪವಹ್ನಿ ಸಂದೀ[ಪಿ]ತಚಿತ್ತನೆಯ್ದಿ ಕಡುಪಿಂ . . . ಪಿಡಿದಂ ಹಯಕಂಧರನಂ (ವರ್ಧಮಾ. ೪-೮೫). [ಸಂ.]

**ಸಂದೀಪ್ತಿ** (ನಾ). ಬೆಳಕು ; ಪ್ರಕಾಶ : ಆ ಕರುಣೆಯೆಳನಗೆಯ ಕಡೆನೋಟದೊಂದು ಕಳಿಮನಕಿತ್ತ ಸದ್ಭಾವ ಸಂದೀಪ್ತಿಯೊಳಗೆ ನನ್ನೊಳಗು ಹೊರಗು ನಾಗುಡಿಬಳಸಿನೊಳಗಲೆದ ಚರಿತಾರ್ಥವೆಡೆಗೊಂಡಿತೀ ಕಬ್ಬದೊಳಗೆ (ಮಲದೇ. ೫೯-೨). [ಸಂ.]

**ಸಂದು$_{1}$** 'ಸಲ್' ಪರಾ.

**ಸಂದು$_2$**, ಸಂದಿ (ನಾ). ೧. ಸೇರುವೆ; ಸಂಯೋಗ; ಕೂಟ: ಇತ್ಯಕ್ಕುತ್ಸಂ . . . ಮಂತ್ರಿ-ಮಂತು; ಸಂಧಿ - ಸಂದು (ಶಮದ. ೨೭೯ ಪ್ರಯೋ). ೨. ಮೂಲೆ; ಕೋನ : ದೆಸೆಗಳ ಸಂದಂ ಪಱಿದಾಗಸದಿಂದಂ ಪತ್ತುವಿಡಿಸುವಂತೆವೊಲಿಳೆಯುಂ ಮಸಕದೊಳೆ ಪೊತ್ತು ನೆಗೆದವೊಲೆಸೆದುದು ದಿಗ್ವಜಯಭೂರಿಭೇರೀ ಪಿನದಂ (ಆದಿಪು. ೧೨-೫೪); ಚತುರಾಘಾಟದ ಸೀಮೆ ಯಾವುದೆಂದರೆ ತದ್ಪರಪ್ತೋಲದ ಬ[ಡ]ಗಿಪೊಲದ ಸಂದಿನಲೀಶಾನ್ಯದ ಗುಡ್ಡ (ಸೌಇ. XX, ೧೮-೩೮;980). ೩. ಬಿರುಕು; ಸೀಳು : ಪತ್ತಿ ಬಿಡದ ಮಲ್ಲರನಾನೆ ಮೆಟ್ಟಿದುದೆ ಸಂದಂ[ಪಾಠಾಂ. ಡೆಂ, ತೆಂ]ಬಂತಾಪೆಡೆಯುಂ ಪಿಡಿದೊಡಂ ಪಿರಿದೆಡೆಯೆ ಗಾಯಮಾಗೆ (ಅರ್ಥನೇ. ೮-೧೧೬ ವ); ಒಂದದ ಪಗಲಿರುಳೆರಡಱ ಸಂದುಗಳಂ ವರುಣಶಿಲ್ಪಿ ರಕ್ತಾಂಬರದಿಂ ಸಂದಿಸಿ ಪೊಲ್ದವೊಲೆಸೆದುದು ಮಂದೈಸಿದ ಸಂಜೆಗೆಂಪು ಪಡುವಣದೆಸೆಯೊಳ್ (ಜಗವಿ. ೧೭-೯೫); ಹಿಂದೆ ಹಿಂಗಿದ ಭಟರ ಸೋಲದ ಸಂದ ಸಂಧಿಸಿ ಬೆಸುವೆನತಿಶಯದಿಂದ ರಾಕ್ಷಸ ರಾಜತೇಜದ ಸುಪ್ರತಾಪಕವ (ತೊರರಾ. ೬-೪೦-೭); ಆನೆ ಮೆಟ್ಟಿದ್ದೇ ಸಂದು, ಸೆಟ್ಟಿ ಬಿಟ್ಟಿಲ್ಲೇ ಪಟ್ಟಣ (ಗಾದೆ). ೪. ಹೋಳು; ಸೀಳಾದ ಭಾಗ : ಒಂಬತ್ತು ತಿಂಗಳ್ಗೆ ಪೆತ್ತರ್ ಪದೆದಿರ್ಪ ರ್ಧಾಂಗಮಂ ಕಂಡಗಿದಿವು ನಮಗೇಂ ಬಾರ್ತೆಯೆಂದೊಲ್ಲದೀಡಾಡಿದರುಯ್ದಾ ತಿಪ್ಪೆಯತ್ತಲ್ ಜರೆಯೆನಿಸುವಳ್ಕಂಡು ಕೊಂಡುಯ್ದು ಸಂದಿಕ್ಕಿದೊಡಂತಾ ಸಂದು ಸಂದಿಲ್ಲೆನಿಪ ತೆಱದಿ ಪತ್ತಿತ್ತಿಳಾಸೇವ್ಯಮಾಗಲ್ (ಧರ್ಮಪ. ೯-೫೭). ೫. ಕಿರಿದಾದ ಓಣಿ; ಗಲ್ಲಿ : ಮೇನವನು ಆ ಸಂದುಬೀದಿಯಿಂದ ಕಾಳಾದೇವಿ ರಸ್ತೆಗೆ ಓಡಿಬಂದನು (ಕಾಬಝೂ. ೯). ೬. ತೂತು; ರಂಧ್ರ : ಪ್ರಾಣಿಗಳು ಮನೆಯೊಳಗೆ ಬರುವ ಬಿಲ, ಸಂದುಗಳನ್ನೂ ಸಿಮೆಂಟಿನಿಂದ ಮುಚ್ಚಿಬಿಡಬೇಕು (ಅಡುಸಾ. ೪೯). ೭. ಎಡೆ; ಸ್ಥಳ : ಅನ್ತ ಬನ್ದು ತಾಯೂರ ಇಗ್ಗಲಿಯ ಆರಿಪುರ ಮೂಱೂರ ಸನ್ದಿನಲ್ಲಿ ತಣ್ಣಾಲಿಗಾಲ ಮೂಡಣ ಪೇರೊಟ್ಟೆಯಿಂ (ಎಕ. III. ನಂಜನ. ೧೩೯-೧೯; 915); ಬಗೆಯೊಳ್ ಪೊಣ್ಮದಲಂಪು ಕಾತರತೆಯಂ ತಂದೀಯೆ ಮೆಯ್ ಮೆಯ್ಗೆ ಸಂದುಗಳೇನಪ್ಪೊಡಮಿಲ್ಲದಂತಮರ್ದಿನಂ ತಳ್ತಪ್ಪಿ . . . ನೆರೆದರ್ ಮನಃಪ್ರಿಯತಮರ್ (ರಸರ. ೩-೧೪೦). ೮. ಅವಕಾಶ; ಸಂದರ್ಭ : ತಂದದ್ದರೊಳಗರ್ಧ ಕದ್ದಾಳೊ ತನ್ನ ಸಂದು ಸುಳಿವು ನೋಡಿ ಮೆದ್ದಾಳೊ (ಪುರಂದ. ೧-೧೮೨-೩); ಸರೋಜ ನೀರಿಗಾಗಿ ಕೊಳಾಯಿ ಬದಿಗೆ ಹೋದ ಸಂದು ನೋಡಿ ನಾನು . . . ವೇಗವಾಗಿ ಹೊರಟುಬಿಟ್ಟೆನು (ಪತಿ. ೧೪); ಇವರ ಪ್ರಣಯ ಸಮಾಧಿಯನ್ನು ಕೆಣಕಲು ಮಂದಮಾರುತಕ್ಕೂ ಸಂದಿಲ್ಲದಂತಾಯಿತು (ದಾನಚಿಂ. ೧೭); ಸಂದು ನೋಡಿ ಗರಿ ಹಾಕು (ಗಾದೆ). ೯. ವ್ಯತ್ಯಾಸ; ಭೇದಭಾವ; ಭಿನ್ನತೆ : ಲಿಂಗಾಂಗಸಂಗವೆಂಬ ಸಂದ ಮೀಱಿ ಪರಮಪ್ರಕಾಶದಿಂದ ಬೆಳಗುವ ಸ್ವಯಂಜ್ಯೋತಿಯ ನಿಜದಲ್ಲಿ ನಿಂದು (ಆದವ. ೪೫-೧೨೪); ನಂದಿನಾಥಾಗ್ರೇಶ್ವರಂಗೆನಗೊಂದಿನಿತು ಸಂದಿಲ್ಲದಿಹುದಕೆ ಸಂದೆಗಮೆ (ಬಸಪು. ೧-೬೧); ಅಂದು ಮೊದಲಾಗವರ ಸಖ್ಯಕೆ ಸಂದ ಕಾಣೆನು ಕರ್ಣಕುರುಪತಿಗೊಂದೆ ಜೀವನವೊಂದೆ ಮನ ಮತವೊಂದೆ (ಕುವ್ಯಾಆ. ೬-೪೩); ಎನಗೆ ನಿನಗೆ ಸಂದು ಸಂಶಯವಿಲ್ಲವಯ್ಯ ಸಂದುಂಟು ಎಂದು ನುಡಿವುದೆಲ್ಲಾ ಬಂಧನದ ನುಡಿ ಕಾಣಿರೋ (ಸಿದ್ಧೇವ. ೧೪೪-೪೩೨). ೧೦. ಕೀಲು; ಗೆಣ್ಣು : ಒಳದೊಡೆ ಸೆಳೆದೊಡೆ ಸಂದುಗಳುಳಿದೊಡೆ ನರವೊಂದುದೆಸೆಗೆ ತಱಿಸಂದೊಡೆ ಶೀತಳಜಳಮಿಶ್ರಿತವಸ್ತ್ರವನಳವಟ್ಟಿರೆ ಸುತ್ತಲಿನಿಸು ಬೇನೆಗಳಟಿಗುಂ (ಲೋಕೋಪ. ೯-೧೬೬); ತಲೆ ಕಿವಿ ಸಂದು ಯೆಲ್ವಣಲು ಪುಷ್ಕ ನೋವಡೆ ಬಾಹಮಾಗೆ . . . ಸನ್ನಿಪಾತವಿದಿತಜ್ವರಂ (ಕಲ್ಯಾಕಾ. ೩-೧೩); ಘಟತ್ರಯದ ಭೇದವನಱಿದು ಮಾಡುವ ಕ್ರಮವೆಂತುಟೆಂದಡೆ ಕಟಿ ಮೊದಲಾದ ಕೀಳುದೆಸೆಯಲ್ಲಿ ಸಂದಿನ ಭೇದ ಅಂಗುಲಿ ಸಂದು ಇಪ್ಪತ್ತು ಮಡಸಂದೆರಡು (ಸರ್ವವ. ೨೧-೧೦೧); ಒಂದಲ್ಲ ಮಗಳಿಗೆ ಸಂದೆಲ್ಲಾ ಬೇನೆ (ಗಾದೆ). ೧೧. ಶೀತದಿಂದ ಮಕ್ಕಳಿಗೆ ಬರುವ ಒಂದು ಬಗೆಯ ಖಾಯಿಲೆ : 'ಸಂದುರೋಗ' ಪರಾ. ೧೨. ಗಿಡಮರಗಳಲ್ಲಿ ಮೊಳಕೆಯೊಡೆಯುವ ಸ್ಥಳ; ಗಿಣ್ಣು; ಕಣ್ಣು : ಕೊನೆಯೊಳ್ಕೊನೆಗೊಂಬಿನ ಸಂದಿನೊಳೆಲ ಪಣ್ತುದಿರ್ದು ಪೋದ ನೆಲೆಯೊಳ್ಕೊನರ್ಗಳ್ ಕೊನೆದೋಱಿ ಮದನನಲಗಿನ ಮೊನೆದೋಱಿದನೊಡನೆ ಬಿರಯಿಗೆಳಮಾವುಗಳೊಳ್ (ಮಲ್ಲಿಪು. ೫-೧೧). ೧೩. ಸಹವಾಸ; ಸಂಬಂಧ : ಅಂಧಕ ದೃಷ್ಟನ ಹಿಂದೆ ಇದ್ದು ನಡೆವಂತೆ ಎನ್ನಂಗದ ಸಂದ ಬಿಡಿಸಿ ಲಿಂಗದ ಲೀಲೆಯ ತೋಱಾ (ಸಿದ್ಧವ. ಕ. ೪೧-೧೨೯). ೧೪. ಸಂಶಯ; ಅನುಮಾನ : ಭಕ್ತಿಯಿಂದ ಜ್ಞಾನ ಜ್ಞಾನದಿಂದ ವೈರಾಗ್ಯ ವೈರಾಗ್ಯದಿಂದ ನಿಜದ ನಿಶ್ಚಯ ಅದಕ್ಕೆ ಸಂದಿಲ್ಲ (ಮೋಳಿಮಾ. ೧೭-೬೫). ೧೫. ಕುಂದು; ಕೊರತೆ : 'ಸಂದುಗಾಣು' ಪರಾ. **ಸಂದಿ** : ೧. ಇಂದ್ರಿಯಂಗಳ ಇಚ್ಛೆಯಲ್ಲಿ ತ್ರಿವಿಧವ ಹಿಡಿದಿಗುಹುವರ ಸಂದಿಯಲ್ಲಿ ನುಸುಳದೆ . . . ಇಪ್ಪುದೆ ಮಹಾನಿಜದ ನೆಲೆ (ತಾಱುಗಾ. ೪-೭). ೩. ಸಿಕ್ಕಿದೆರಲೆಯಂತೆ ಪಲ್ಲ ಸಂದಿಯಡಕೆಯಂತೆ (ಧರ್ನಾಮೃ. ೯-೨೩); ಮುನೀಶ್ವರಂ ಕರುಣೆಸಿಯೊತ್ತಿದುಂಗುಟಮನಿನಿಸಂ ಸಡಿಲಿಸೆ ಸಂದಿಯಿಂ ಪೊಱಮಟ್ಟು (ಪುಣ್ಯಾಸ್ರ. ೫-೫೭ ವ). ೫. ಸಂದೀಯ ಮನೆಯನ್ನ ಗೊಂದೀಯ ಮನೆಯನ್ನ . . . ನಮಕೊಮರ ಸಂದೀಯ ಹೊಕ್ಕನು ನಡುಗೇರಿ (ಕನ್ನಜಾ. ೧೫೪). ೬. ಬಾಗಿಲ ಸಂದಿಯಿಂದ ಕಂಡರೂ ಕಾಣದಂತೆ (ಅನ್ನ. ೨೮). ೭. ಕೂಡ್ಲುಕುಪ್ಪೇ ಬಲ್ಲೇನಹಳ್ಳಿಯ ಎರಡರ ಸಂದಿಯಲ್ಲಿ ನಿಂದು ಪಡುವಲು ನೋಡಿ (ಎಕ. III, ಶ್ರೀರಂಗ. ೧೩೩-೩೪; 1458). ೧೦. ಕಟಿ ಮುಮ್ಮಡಂ ಪರಡು ಸಂದಿ ನೊಸಲ್ ಪಣೆ ಕಣ್ ಕದಂಪಿವೆಂಬೆಡೆಯನೆ ನಟ್ಟುವುರ್ಚಿದುವು ನೇರ್ದುವು ಸೀಳ್ದುವು ಪಾರ್ಥನಂಬುಗಳ್ (ಪಂಪಭಾ. ೧೧-೧೩೬); ಗುತ್ತಿಗೂ ಕಾಲು ಸಂದಿ ತಪ್ಪಿಹೋಯ್ತು (ಮಲೆಮ. ೪೫೩). ೧೬. ಕಿರಿದಾದ ಸ್ಥಳ; ಇಕ್ಕಟ್ಟಾದ ಜಾಗ, — ಎಡೆ : ಬೆಳೆಗೆಯ್ಯ ಸಂದಿಯೊಳು ಗೊಂದಿಯೊಳು ಗಬ್ಬರಿಸಿ ತಮತಮಗೆ ಬೀಱಿ ಕರೆದರು (ಸಿದ್ಧರಾ. ೨-೪೮); ಅಂಗಡಿಯ ಸಂದಿಗಳೊಳುತ್ತುಂಗಾಲಯದ ಪಕ್ಕದಲ್ಲಿ ಪಾಟ್ಯೋಡೆಗಳೊಳ್ ಪೊಂಗುತ್ತುಂ ನೆರೆದರ್ ಕುಟಿಲಾಂಗನೆಯರ್ (ಉದ್ಭಟ. ೧೦-೧೦೭); ತಮ್ಮ ಮೋಟಾರನ್ನು ಒಂದು ಸಂದಿಯಲ್ಲಿ ನಿಲ್ಲಿಸಿ ಟಿಕೇಟನ್ನು ತರಲು ಹೋದರು (ಕಲಾಸಾ. ೧೧). ೧೭. ಕವಡೆಯಾಟದ ಗರಗಳಲ್ಲಿ ಒಂದು (?): ಸಂದಿ ಕಳಂತಿ ಗಜಾಗರವೆಂದಚ್ಚಂ.ಕೊಂಡು ಕವಡೆಯಂ ತೂಗಿ . . . ಆಡುತಿರ್ದರ್ (ದಶಕು. ೮-೮೮).

**ಸಂದು ಸಂದು, ಸಂದಿ ಸಂದಿ** = ೧. ಕೀಲು; ಗೆಣ್ಣು : ಪುಯ್ಯಲಿಡೆ ಸುಡವೊತ್ತಿಸಿಯುಂ ಸಂದುಸಂದುಗಳೊಳ್ ಸೂಜಿಯುಂ ಪೆಟ್ಟಿಯುಂ (ಧರ್ಮಾಮೃ. ೩-೭೩); ಮಂದವೀರ್ಯನ ಮೇಲೆ ಹಾಯಿದು ಸಂದುಸಂದಿಗೆ ಕಡಿದು ವಿಪ್ರರ ಮಂದಿಗಿತ್ತನು ಮಹಿಯ ಪುನರಪಿಯವರ ಕಾಹಿಂಗೆ (ಸಂಭಪ. ೨೭-೫೮); ಪೊಱಗೀ ಖಳನಂ ಕಂಡೊಡೆ ಪೆಱದೆಗೆಯದೆ ಸಂದುಸಂದಿಯಂ ಪರಸಿಂದಂ ತಱಿಯೆನೆ (ಧರ್ಮಾಮೃ. ೬-೧೧೩). ೨. (ಮರದ) ಗಿಣ್ಣು; ಪರ್ವ : ಸಂದುಸಂದನು ಕಡಿದು ಕಬ್ಬನು ತಂದು ಗಾಣದಲಿಕ್ಕಿ ಅರೆದಡೆ ಬೆಂದು ಪಾಕಗೂಳ ಸಕ್ಕರೆಯಾಗಿ ನೊಂದೆನೆಂದು ಸವಿಯ ಬಿಟ್ಟಿತ್ತೆ (ಮಹಾದೇ. ಬ. ೨೮-೫೮). **ಸಂದುಗೊಂದು, ಸಂದಿಗೊಂದಿ , ಸಂದುಗೊಂದಿ** = ೧. ಮೂಲೆಮುಡುಕು : ಸಂದುಗೊಂದಱಸುತ್ತ ಗುರುಸುತರಂದವನು ನಾನಱಿಯದಂತಕಮಂದಿರವ ಪೊಕ್ಕಲ್ಲಿ ಶಮನನ ಕೇಳ್ದೆನರ್ಥಿಯಲಿ (ತಿಮ್ಮಸ್ತ್ರೀ. ೧-೬೭): ಪಿಳ್ಳಂಗೋವಿಯ ಚೆಲ್ವ ಕೃಷ್ಣನ ಎಲ್ಲಿ ನೋಡಿದಿರಿ . . . ನಂದಗೋಪನ ಮಂದಿರಂಗಳ ಸಂದುಗೊಂದಿನಲಿ (ಪುರಂದ. ೧-೧೩೭-೧); ನಿನ್ನಂಗದಲ್ಲಿ ಗುರು ಕೊಟ್ಟ ಲಿಂಗವೆಂಬುದೊಂದು ಕುಱುಹು ಇರುತಿರಲಿಕ್ಕೆ ನಿಜಲಿಂಗದ ಸಂಗವ ನಱಿಯದೆ ಸಂದಿಗೊಂದಿಯಲ್ಲಿ ಹೊಕ್ಕಿಹೆನೆಂಬ ಗೊಂದಣವೇತಕ್ಕೆ (ಮದೇವ. ೨೭೩-೧೩). ೨. ತೀರ ಇಕ್ಕಟ್ಟಾದ ಓಣಿ ; ಕಿರಿದಾದ ಗಲ್ಲಿ, — ಕೇರಿ : ನಾನು ಊರಿನ ಸಂದುಗೊಂದುಗಳನ್ನೆಲ್ಲಾ ತಲೆಮರೆಸಿಕೊಂಡು ಅಲೆಯುತ್ತಿರುವಾಗ ನೀವೆಲ್ಲ ಶಾಲೆಯಲ್ಲಿ . . . ಇರುವುದನ್ನು ನೆನೆದುಕೊಂಡು ಹೊಟ್ಟೆಕಿಚ್ಚುಪಡುತ್ತಿದ್ದೆ (ಶಾಲಮ. ೧೯೧); ಮೇಲುದುರ್ಗದ ಸಂದಿಗೊಂದಿಯೊಳಾಳು ಹರಿದುದು (ಕುವ್ಯಾಸ. ೩-೫೫); ಪ್ರತಿಯೊಂದು ಸಂದುಗೊಂದಿಗೂ ದಣಿದು, ಅಲೆದಾಡಿ ಇಂಬಳಗಳಿಂದ ಕಚ್ಚಿಸಿಕೊಂಡು ಸುತ್ತಾಡಿದ್ದೇ ಬಂದಿತು (ಕುಡಿಕೂ. ೧೫೩). [< ಸಂ. ಸಂಧಿ]

**ಸಂದುಕ** 'ಸಂದೂಕ' ನೋ.

**ಸಂದುಕಟ್ಟು** 'ಸಂದುಗಟ್ಟು' ನೋ.

**ಸಂದುಕಡಿ** (ಕ್ರಿ). ಸಂಬಂಧವು ತಪ್ಪಿಹೋಗು; ಪ್ರತ್ಯೇಕವಾಗಿ ಉಳಿ: ಅಳಿದುಳಿದ ಸಂಸ್ಕೃತಗ್ರಂಥಗಳನ್ನೋ ಪಾಲಿಗ್ರಂಥಗಳನ್ನೋ ಓದಿಕೊಂಡು, ಅದರಿಂದ ಸಂದುಕಡಿದ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವ ಶಕ್ತಿ ಬೇಕಾಗುತ್ತದೆ (ಆಳನಿ. ೧೪೭).

[ಸಂದು$_2$ + ಕಡಿ$_1$]

**ಸಂದುಕೂಡಿಸು** 'ಸಂದುಗೂಡಿಸು' ನೋ.

**ಸಂದುಕೊಡು** 'ಸಂದುಗೊಡು' ನೋ.

**ಸಂದುಗಟ್ಟು**, ಸಂದುಕಟ್ಟು (ನಾ). ೧. ಸರಿಯಾದ ಕಾಲ; ಕ್ಲುಪ್ತಸಮಯ: ಅನುದಿನದೊಳಾ ಬಾಹಿರನು ಕಿಚ್ಚಿನಲಿ ಚುಚ್ಚುವ ಸಂದುಗ[ಪಾಠಾಂ.ಕ]ಟ್ಟನು ನೆನೆವುತಿರ್ದನು ಖಳ ಪುರೋಚನನೊಡೆಯನಾಜ್ಞೆಯಲಿ (ಕುವ್ಯಾಅ. ೮-೮೬). ೨. ಸಂದಿಗ್ಧ ಕಾಲ; ವಿಷಮಪರಿಸ್ಥಿತಿ; ಪೇಚು : ಕ್ರಾಂತಿಯ ಸಂದುಗಟ್ಟನಲ್ಲಿ ನಿಂತ ಸಮಾಜವು ತನ್ನ ಕುರಿತು ಇಟ್ಟುಕೊಂಡ ತಿಳುವಳಿಕೆ, ಕಟ್ಟಿಕೊಂಡ ಮನವರಿಕೆಗಳನ್ನು ಅದರ ಭೌತಿಕಬದುಕಿನಲ್ಲಿಯ ಒಳತೊಡಕು–ತಿಕ್ಕಾಟಗಳಿಂದ ಅರ್ಥಮಾಡಿಕೊಳ್ಳಬೇಕು (ಮೂವಾದ. ೮೨). **ಸಂದುಕಟ್ಟು** : ೧. ಖಳ ಪುರೋಚನನೊಡೆಯ ನಿಶ್ಚಯಂ ಸಂದುಕಟ್ಟಂ ನೋಡುತಿರ್ದನುರಿಗೊಳಿಸಲ್ಕೆ (ಕುರಂಗ. ೧೩-೧೬); ಆ ಸಂದುಕಟ್ಟಿನ ತೊಡಕಿಗೆ ಸಮುಚಿತ ಪರಿಹಾರವೇನೆಂಬುದನ್ನೂ . . . ಜಾಗರೂಕತೆಯಿಂದ ಪರಿಗಣಿಸಿ (ಮಂತ್ರಶ. ೭೩-೨); ಕೃಷ್ಣಪ್ಪನಾಯಕನೂ ಶಾಸ್ತ್ರಿಗಳೂ ಈ ಸಂದುಕಟ್ಟಿನಿಂದ ಹೇಗೆ ಪಾರಾಗಬೇಕೆಂಬುದನ್ನು ಆಲೋಚನೆ ಮಾಡಿದರು (ಶ್ರೀರಾಯ. ೭೧). ೩. ಸರಿಯಾದ ಅವಕಾಶ, – ಸಂದರ್ಭ : ಸಂದುಕಟ್ಟಜೀದು ಲಲ್ಲೆಯನಾಡುತ (ನಳಚಂ. ೪೫೯); ಸಂದುಕಟ್ಟನು ನೋಡಿಯಮರರು ಬಂದು ದನುಜನ ಸತಿಯನೊಯ್ದರು (ಸಂಭಪ. ೮-೧೨); ಮೂರ್ತಿ ಸಮಯ ಸಂದುಕಟ್ಟು ಸಾಧಿಸಿ ತನ್ನನ್ನು ಪ್ರದರ್ಶಿಸಿಕೊಳ್ಳಲು ಬಂದರೆ ಗೌರ . . . ಅಡಗಿಕೊಂಡು ಬಿಡುತ್ತಿದ್ದಳು (ಕತ್ತಬಿ. ೬೪). ೪. ಎರಡು ಓಣಿಗಳು ಸೇರುವ ಸ್ಥಳ; ಮೂಲೆ : (ಕ). ೫. ಸೇರಿಕೆ; ಕೂಟ: (ಕ). ೬. ಮರ್ಮಾಂಗ; ಮರ್ಮಸ್ಥಾನ: ಅಡಹಾಯಿದಂಗನೆಯರ ಸಂದುಕಟ್ಟಿನೊಳ್ ಬಿಡದೆ ಚುಂಬಿಸಿದಧರವನು ತೊಡೆದಲ್ಲದೆ ಯೊಗ್ಯವಲ್ಲೆಂದು ಮೊಗವಾವುದವಿಡಿದಿರ್ದಳೊತ್ತಿನಲಿ (ಮೋಹತ. ೪-೮). ೭. [ಜ್ಯೋತಿ] ಆಕಾಶ ಕಾಯಗಳ ಕೂಟದ ಪ್ರಾರಂಭ : (ಕ). [ಸಂದು$_2$ + ಕಟ್ಟು$_2$]

**ಸಂದುಗಾಣು** (ಕ್ರಿ). ಕೊರತೆಯನ್ನು ಕಾಣು; ಕುಂದುಗಾಣು (?) : ಅಂದು ಮೊದಲಾಗವರು ಜ್ಞಾನಕೆ ಸಂದುಗಾಣರು ಕುಂತಿಪುತ್ರರು (ಸಂಭಪ. ೧೫-೧೦೩).
[ಸಂದು$_2$ + ಕಾಣು (< ಕಾಣ್)]

**ಸಂದುಗುಸುಕ**, ಸಂದಿಗುಸುಕ (ನಾ). ೧. ಅವಕಾಶ ದೊರೆತಾಗ (ಇನ್ನೊಬ್ಬರನ್ನು ಕುರಿತು) ಮಾತನಾಡುವವನು ; ನಿಂದೆಗಾರ : ಸಂದುಗುಸುಕರ ನುಡಿಗಳಿಗೆ ಮನಸಂದು ಯನ್ನೊಚಕೆಡರ ತರಬೇಡ (ಜಿರಾಮಾ. ೪೨೮-೧೨). **ಸಂದಿಗುಸುಕ** : ೨. ರಾಜಿಯನ್ನು ಒಲ್ಲದವನು (?): ಸಂದಿಗ್ಯೆತಂದಾಗ ಸಮರವಗ್ಯವನೆಂದೆಂಬಾ ಸಂದಿಗುಸುಕವನಲ್ಲ (ಜಿರಾಮಾ. ೪೮೫-೨೩). [ಸಂದು$_2$ + ಕುಸು + - ಕ$_3$]

**ಸಂದುಗೂಡಿಸು**, ಸಂದುಕೂಡಿಸು (ಕ್ರಿ). ೧. ಸೇರಿಸು; ಜೋಡಿಸು ; ಈ ಕತ್ತಿಯನ್ನು ಸಂದುಗೂಡಿಸುವುದೊಂದು ದೊಡ್ಡ ಕೆಲಸವಲ್ಲ (ಈಕಥ. ೮). **ಸಂದುಕೂಡಿಸು**: ೧. (ಕ). ೨. ಬಿರುಕನ್ನು ಮುಚ್ಚು; ಒಡಕನ್ನು ಕೂಡಿಸು : ತುಪ್ಪಕ್ಕೆ ಮುಪ್ಪುಬಂದರೆ ಸಂದುಕೂಡಿಸುತ್ತದೆ, ಮನುಷ್ಯನಿಗೆ ಮುಪ್ಪು ಬಂದರೆ ಮಣ್ಣುಕೂಡಿಸುತ್ತದೆ (ಗಾದೆ).
[ಸಂದು$_2$ + ಕೂಡು$_1$ + - ಇಸು$_3$]

**ಸಂದುಗೊಡು**, ಸಂದುಕೊಡು (ಕ್ರಿ). ಅವಕಾಶಕೊಡು; ಆಸ್ಪದ ನೀಡು : ಚಾತುರ್ವೇದವಿದ್ಯೆಯ ಸಂದುಗೊಡದಾ ಹರಿಯ ಹೊಗಳುವುದೆಂದೆನ್ನ (ಸಂಭಪ. ೩೬-೫೭); ಇಂದು ನಾಳೆಯೆಂಬ ಮಂದಬುದ್ಧಿಗೆ ಸಂದುಗೊಡದಿರಣ್ಣಾ (ಅಪಂಡೇ. ೬೨-೧೪); ಕುಂದದಣಿವಕ್ಕಿಗಳ ಗಣನೆಗೆ ಸಂದುಗೊಡದಿವೆ ಕುಚಗಳೆಂದೆನೆ ಮಂದಯಾನೆ ಯರೊಪ್ಪಿದರು (ಅನಂರಾ. ೧-೨೩-೧೩). **ಸಂದುಕೊಡು** : ಕಳ್ಳಗೆ ಸಂದುಕೊಟ್ಟರೆ ಒಡವೆಗೆ ಹುಯ್ಯಲಿಕ್ಕಿದ (ಗಾದೆ). [ಸಂದು$_2$ + ಕೊಡು$_1$]

**ಸಂದುಬಳ್ಳಿ** (ನಾ). ಒಂದು ಬಗೆಯ ಬಳ್ಳಿ ; ''ಅಸ್ಥಿಸಂಹಾರಕ, ಕಾಂಡಿರ'' (ಪಂಡಿತ. ೨೮೫). [ಸಂದು$_?$ + ಬಳ್ಳಿ]

**ಸಂದುಬೀಳು** (ಕ್ರಿ). ಬಿರುಕುಂಟಾಗು; ಸೀಳು : ಅವನ ಪಾದದ ಹಿಮ್ಮಡಿಯೆಲ್ಲಾ ಸಂದುಬಿದ್ದಿದೆ (ರೂಢಿ). [ಸಂದು$_2$ + ಬೀಳು$_1$ (< ಬೀೞ್$_1$)]

**ಸಂದುಬೇನೆ** (ನಾ). ಶೀತದಿಂದಾಗಿ ದೇಹದ ಕೀಲುಗಳ ಚಲನೆಗೆ ಅಡ್ಡಿಯುಂಟಾಮಾಡುವ ಒಂದು ಬಗೆಯ ಕಾಯಿಲೆ; ಸಂಧಿವಾತ : ನನಗೆ ಸಂದುಬೇನೆಯಾಗಿದ್ದುದರಿಂದ ನನಗೆತ್ತೆತ್ತಲೂ ಅಲುಗಾಡಲು ಬರುತ್ತಿದ್ದಿಲ್ಲ (ಮೊಪಾಸಾ. ೧೫). [ಸಂದು$_2$ + ಬೇನೆ]

**ಸಂದುರೋಗ** (ನಾ). ಶೀತದಿಂದ ಅಳ್ಳೆಗಳು ಸೆಳೆದುಕೊಂಡು ಮೇಲುಸಿರು ಬಿಡುವ ಒಂದು ಬಗೆಯ ಮಕ್ಕಳ ಕಾಯಿಲೆ : (ಕ). [ಸಂದು$_2$ + ರೋಗ]

**ಸಂದುವಡೆ** (ಕ್ರಿ). ಸೇರು; ಜೊತೆಗೂಡು : ಬೆಂದ ಆವಿಗೆ ಭಾಂಡ ಒಂದೊಂದು ಭೋಗವನು ಅಂದದಿ ಸಂದುವಡೆದು [ಪಾಠಾಂ. ಅಂದಂದಿಗುಂಡು, ಒಡೆದು] ಹಂಚಾದಂತೆ ಬಿಂದುವಿನ ದೇಹ (ಸರ್ವಜ್ಞ. ೩೫೦). [ಸಂದು$_2$ + ಪಡೆ$_1$]

**ಸಂದುವಾತ**, ಸಂದಿವಾತ (ನಾ). = ಸಂದುಬೇನೆ : ಸಂಧಿವಾತ – ಸಂದುವಾತ (ಶಮದ. ೨೮೯ ಪ್ರಯೋ); ಇಂಗುಳದ ಸೆಕ್ಕೆಯ ಇಳಿಯ ಕಿವಿಚಿ ತಂದು ಹಳೇನೀರಲ್ಲಿ ಅರೆದು ದೇಹಕ್ಕೆ ಕೊಳ್ಳಲು ಸಂದುವಾತ ಮಾಣ್ಗುಂ (ವಿವ್ಯಪ. ೧೨೬). **ಸಂದಿವಾತ** : ಅವರು ಸಂದಿವಾತದಿಂದ ನರಳುತ್ತಿದ್ದಾರೆ (ರೂಢಿ). [ಸಂದು$_2$ + ವಾತ]

**ಸಂದುವಿಡು** (ಕ್ರಿ). ಸ್ಥಳಬಿಡು; ತೆರಪುಗೊಳಿಸು : ಚಂದನರಸಂಗಳಿಂ ತೊಯ್ದೆಳೆಯ ದವನದ ಮೇಲ್ಮೊದಕೆಯಿಂದೊಳಗೆ ಬಾಳೆಲೆಯ ಪಲಗೆಗಳ ಪರಿಸರದೊಳೊಂದಿ ಸಂದುವಿಡದಂತೆ ತರಂಗೊಳಿಸಿ ರಚಿಸಿದ . . . ಪೊಂದಾವರೆಯ ಮೊಗ್ಗೆಗಳ ನುಣ್ಪೊಗರಿಗಳಿಂ (ರಾಜಶೇ. ೧೦-೩೧ ವ). [ಸಂದು$_2$ + ಬಿಡು$_1$]

**ಸಂದುಸೇರುವೆ** (ನಾ). ಖಚಿತವಾದ ಜೋಡಣೆ; ಬಿಗಿಯಾದ ಜೋಡಣೆ : (ಕ).
[ಸಂದು$_2$ + ಸೇರುವೆ]

**ಸಂದೂಕ** , ಸಂದುಕ (ನಾ). ೧. ಬಿದಿರು, ಮರ ಮುಂತಾದುವುಗಳಿಂದ ಮಾಡಿದ ದೊಡ್ಡ ಪೆಟ್ಟಿಗೆ; ಪೆಟಾರಿ: ನವಾಬರ ಶರೀರವನ್ನು ತೊಳೆಯಿಸಿ ಸಂದೂಕದಲ್ಲಿ ಇರಿಸಿ . . . ಕಳುಹಿಸಿಕೊಟ್ಟರು (ಮಾಹಾವಂ. I, ೨೩೨). ೨. ಅಮೂಲ್ಯ ವಸ್ತುಗಳನ್ನಿಡುವ ಕಬ್ಬಿಣದ ಪೆಟ್ಟಿಗೆ ; ತಿಜೋರಿ : ಆ ಕೋಟೆ ಅರಸುಗಳು ಬರೆದುಕೊಟ್ಟಂಥಾ ಕೈಕಾಗದವನ್ನು ಸಂದೂಕದ ಒಳಗೆ ಹಾಕಿ (ರಾಜೇಂದ್ರ. ೩೭); ಚಿಕ್ಕಮ್ಮಣ್ಣಿಯವರ ಸಂದೂಕದಾಗೆ ನಗ ನತ್ತು ಏನೇನೆಲ್ಲಾ ಅವೆ (ಸಾಹೇಬ್. ೩೭೫). **ಸಂದುಕ** : ೧. ಪುಸ್ತಕಗಳು ದೊಡ್ಡ ಸಂದುಕವನ್ನು ಸೇರಿದಂತಿವೆ (ಅನ್ನ. ೨೭); ಕಪ್ಪುರದ ಕಟ್ಟಿಗೆ . . . ಆದರಿಂದ ಸಂದುಕ ಮೊದಲಾದ ಬಗೆಬಗೆಯ ಒಡವೆಗಳನ್ನು ಮಾಡುತ್ತಾರೆ (ಮುಂಬಯಿ. ೪-೭೨). ೨. ಇಂದುಧರನನು ನೋಡಿ ಕಂಗಳ ಸಂದುಕವ ಮುಚ್ಚುತ್ತ ಹೃದಯದಲಂದು ಧ್ಯಾನಿಸಿದನು ಚಿದಾನಂದಾತ್ಮಗುರುವರನ (ಜ್ಞಾನಸಿಂ. ೧೬-೮೨); ಇದೀಗ ಸಂದುಕದಲ್ಲಿ ಉಳಿದದ್ದು ಏಳು ಎಂಟು ನೂರ ರೂಪಾಯಿ (ಗಂಮಾಯಿ. ೧೩೭).
[← ಅರ. ಹಿಂ. ಸಂದೂಕ್ ; ಮರಾ. ಸಂದೂಕ್, ಸಂದುಕ್ ]

**ಸಂದೃಪ್ತ** (ಗು). ಬಹಳವಾಗಿ ಸೊಕ್ಕಿದ; ಉನ್ಮತ್ತವಾದ : ಕೋಡೊಳೀಡಿಱಿಯ ಲಾರ್ಪಿಂ ಬರ್ಪ ಸಂದೃಪ್ತಸಿಂಧುರಮಂ ಪಾಯ್ದು ಪಳಂಚಿ ಪೊಯ್ದುನಸಿಯಿಂ ಧೀರೋತ್ತಮಂ ಧೀವರಂ (ಶಬಶಂ. ೩-೫೭). [ಸಂ.]

**ಸಂದೃಷ್ಟಿ** (ನಾ). ೧. (ಪೂರ್ಣ) ನೋಟ; ಅವಲೋಕನ. [ಸಂ.]

**ಸಂದೆ** 'ಸಂಜೆ' ನೋ.

**ಸಂದೆಗ** 'ಸಂದೆಯ' ನೋ.

**ಸಂದೆಗಂಗೋ** (ಕ್ರಿ). ಸಂಶಯಕ್ಕೆ ಸಿಕ್ಕು ; ಸಂದೇಹಕ್ಕೊಳಗಾಗು : ಸಂದಗಂಗೋ [ಪಾಠಾಂ. ಗಾ]ದಿರವೇಡ ದೈವಬಲವುಳ್ಳವರ್ಗಾಗದುದುಂಟೆ ಲೋಕದೊಳ್ (ಲೀಲಾವ. ೯-೧೩೮). [ಸಂದೆಗ (< ಸಂದೆಯ) + ಕೋ$_1$]

**ಸಂದೆಗಂಬಡು** 'ಸಂದೆಯಂಬಡು' ನೋ.

**ಸಂದೆಗನಡು** (ನಾ). ಇದೆಯೋ ಇಲ್ಲವೋ ಎಂಬ ಅನುಮಾನ ಬರುವಷ್ಟು ತೆಳ್ಳಗಿರುವ ಸೊಂಟ : ಪುಸಿನಡುವಿನ ಸಂದೆಗನಡುವಿನ ಪಿಡಿನಡುವಿನ . . . ನವಡಮರುಗನಡುವಿನ ಮದಯೌವನೆಯರು ನಡೆದರು (ಜಯಕಾ. ೫-೩೩).
[ಸಂದೆಗ (< ಸಂದೆಯ) + ನಡು$_2$]

**ಸಂದೆಮಸಕು** (ನಾ). ೧. ಸಂಜೆಯ ಮಬ್ಬುಗತ್ತಲೆ. ೨. (ಆಲಂ) ಸಂಶಯ; ಅಸ್ಪಷ್ಟತೆ : ಮಂದಾಕ್ಷಿ ನಮಗಿಹುದು. ಬಲುದೂರ ಸಾಗದದು ಸಂದೆ ಮಸಕಿನೊಳಿಹುದು ಜೀವನದ ಪಥವು ಒಂದುಮೆಟಕದು ಕೈಗೆ ; ಏನೊ ಕಣ್ಣೆಣಕುವುದು ಸಂದಿಯವೆ ನಮ್ಮ ಗತಿ (ಮಂಕುಕ. ೪೪).
[ಸಂದೆ (< ಸಂಜೆ) + ಮಸಕು$_2$ (< ಮುಸುಕು)]

**ಸಂದೆಯ,** ಸಂದಯ, ಸಂದಿಯ, ಸಂದೆಗ, ಸಂದೆಹ, ಸಂದೇಗ (ನಾ). ೧. ಅನುಮಾನ; ಸಂಶಯ : "ಸಂದೆಯಮೆಂದು ಸಂದೇಹಂ" (ಕಶಸಾ. ೭೦-೭೦೧); ಇಂತು ಪೇಟ್ದ ಮಾಟ್ಕೆಯೊಳೊಂದುವುದುಮನೊಂದಿ ಬಾರದುದುಮಂ ಪೀನಂ ಸಂದೆಯಮಿಲ್ಲದೆ ಸಲೆ ತಱಿಸಂದೋಸರಿಸುವುದು ಕಾವ್ಯರಚನಾಕ್ರಮದೊಳ್ (ಕವಿರಾ. ೨-೧೯); ನೀನು ಸಂದೆಯಮಣಮಿಲ್ಲದಿದನೆ ನಂಬು (ಆದಿಪು. ೫-೬೨); ಅಜಂ ಸಮೆದ ತೋಯೋದ್ದೇಶಮೋ ಸಂದೆಯಂ ಬಗೆಗಾದತ್ತೆನಿಸಿರ್ದುದೇಂ ಪಿರಿದೊ ವೈಶಂಪಾಯ ನಾಬ್ಜಾಕರಂ (ಗದಾಯು. ೬-೧೧); ಆದೊಡಂ ನಿಮ್ಮೊಳಾರ್ಗೀ ಬಾಲೆಯೊಲಿವಳ ವರ್ಗಿವಳನಿತ್ತಪೆಂ ಸಂದೆಯಮಿಲ್ಲಂ (ಅದ್ಭುತ. ೯-೯). **ಸಂದಯ** : ೧. ಸಂದ[ಪಾಠಾಂ.ದೆ]ಯದ ಮನದ ನಾಕಜಸಂದೋಹದ ಬಗೆಯನಘಹರಂ ಕಳೆಯಲ್ಕಿ ಎಂದುಸಿರೆ ಗಾಳಿಯೊಳ್ ತಿರಿತಂದರ್ ತಱಿಗೆಲೆವೊಲಮರರಂಬರತಳದೊಳ್ (ಶಾಂತಿಪು. ೧೦-೪೩); ಮನಸಿಜ ವಳಂ ಕುಳಿರ್ವಮರ್ದಿನ ರಸದೊಳಮರಲಸರಲ ಕೂರ್ಪಿನೊಳಂ ಪೋ ಜನಿಯಿಸಿದಂ ಸಂದಯಮೇನೆನಿಸಿದಳಾ ರಮಣಿ ಗುಣದೊಳಂ ರೂಪಿನೊಳಂ (ಮಲ್ಲಿಪು. ೩-೫೫); ಸಂದಯಮಲ್ಲುದಯಿಪ ನೃಪನಂದನ[ನೀ ಕು]ವಲಯಾಧಿನಾಥಂ ಕಮಲಾನಂದಕರನೆಂದು ಸೂಚಿಸುವಂದದಿನಲರ್ದತ್ತು ನೈದಿಲುಂ ನೀರಜಮುಂ (ಕುಸುಮಾ. ೬-೫೮). **ಸಂದಿಯ** : ೧. ಒಂದುಮೆಟುಕದು ಕೈಗೆ; ಏನೊ ಕಣ್ಕೆಣಕುವುದು ಸಂದಿಯವೆ ನಮ್ಮ ಗತಿ (ಮಂಕುತಿ. ೪೪). ೨. ಅನುಮಾನದಿಂದ ಕೂಡಿದವನು; ಸಂಶಯಗ್ರಸ್ತ : ಸಂದಿಯರೊಂದಿ ಬಗ್ಗರ ಸಮಕ್ಷದೊಳಿದ್ದುರಿದದ್ದು ದುರ್ಜನಂ ನಿಂದಿಸುತಿರ್ಪನುತ್ತಮರ ಕಾವ್ಯಮಂ (ನಳಚಂ. ೬). **ಸಂದೆಗ** : ೧. "ಸಂದೆಗಂ ಸಂಶಯಾರ್ಥಂ" (ಕರ್ಣಾನಿ. ೮೬); ದಿವ್ಯಪುರುಷಂ ಪ್ರತ್ಯಕ್ಷಂ ನಿನ್ನ ಮುಂದೆ ನುಡಿಯಲ್ಕಿನ್ನುಮದೇನೆಂಬೆ ಸಂದೆಗಕ್ಕೆಡೆಯುಂಟೇ (ಕಾದಂಪೂ. ೯೪೫); ಪುರಪುರಂಧ್ರಿಯರ ಸಂದಣಿಸಿ ಬಳೆದ ಮೊಲೆಯೆಡೆಯಿನಿಱಿದೆಂದುಮಿಲ್ಲದ ಮುತ್ತಿನಾರಮಿಂದೆ ಸಂದುದೆಂಬ ಸಂಧೆಗದ ದಂದುಗಮನವರೊಡನಾಡಿಗಳ ಚಿತ್ತದೊಳ್ ಬಿತ್ತಿಯುಂ (ಚಂದ್ರಪ್ರ. ೮-೪೪ ವ); ಸಂದೆಗಮಂ ಮನದುಬ್ಬೆಗಮಂ ಬಿಡು (ಉದ್ಭಟ. ೩-೪೧). **ಸಂದೆಹ** : ೧. ಇದಕೆಮ್ಮ ಮನದ ಸಂದೆಹ [ಪಾಠಾಂ.ಗ]ಮಂ ಬಿಡಿಸಿಕೊಟ್ಟು . . . ಬಳಿಕ ಸಂಕಿಲಿಯನೊಚ್ಚತವಾಗಿ ಕೊಂಬುದೆನೆ (ನಂಬಿರ. ೧೩-೫೬); ಸಂದೆಹಂಗಳು ಬೇಡ ರಾವಣಯಿಂದುಮುಖಿಯನು ಕೊಡದಿರೆಲ್ಲರ ಕೊಂದು ಕೂಗುವ ರಾಮ (ಕೌಶಿರಾ. ೧೫-೨೯). **ಸಂದೇಗ** : ೧. ಜಗದ ನಗವೊನಲಿನಲಿ ಕೊಚ್ಚಿ ಹೋಗುವುದು ಸಂದೇಗದ ಹುಟ್ಟು (ಪಾಂಚಜ. ೫೦-೧೨). [< ಸಂ. ಸಂದೇಹ]

**ಸಂದೆಯಂಬಡು** , ಸಂದೆಗಂಬಡು , ಸಂದೆಯವಡು (ಕ್ರಿ). ಅನುಮಾನಿಸು; ಶಂಕೆಪಡು: ಸಂದೆಯಂಬಡದೆ ಜಲಕ್ಕನೀಗಳಱಿದೆಂ ಸಿರಿ ಕಳ್ದೊಡವುಟ್ಟಿತೆಂಬುದಂ (ಪಂಪಭಾ. ೨-೪೯); ಜನಿಯಿಸುವರಲ್ತೆ ದೇವರ್ ಮನುಜರ್ಗದಱಿಂದೆ ಸಂದೆಯಂಬಡಲೇಂ (ಕಾದಂಉ. ೬೪೯). **ಸಂದೆಗಂಬಡು**: ಆಪ್ತನನನಾಪ್ತನೆಂದುಂ ಹಿತನನಹಿತನೆಂದು ಮವಿಚಾರದಿಂ ಸಂದೆಗಂಬಡುವಂಗೆಂದುಂ ಸುಖಮಾಗಲರಿಯದು (ಪಂಚತಂ. ೪೪-೬); ಜನಮೇಜಯನರೇಶ್ವರಂ ತನ್ನ ಮನದೊಳ್ಸಂದೆಗಂಬಟ್ಟು ಬೆಸಗೊಂಡನು (ಜೈಮಿಭಾ. ೯-೨). **ಸಂದೆಯವಡು** : ಒಂದಿಷ್ಟು ಧರ್ಮವ ಕೇಳ್ದ ತಪವ ಮಾಳ್ಪ ಸಂದೆಯವಡುವ ತತ್ತ್ವದೊಳು ಎಂದಿಗುಂ ಮುಕ್ತಿವಡೆವನಲ್ಲವಂತಪ್ಪ ಮಂದಭವ್ಯನ ಸಮಾನ್ಯಭವ್ಯ (ಶಾಂತೀಚ. ೧೧-೨೬). [ಸಂದೆಯ + ಪಡು$_{1}$]

**ಸಂದೆಯವಡು** 'ಸಂದೆಯಂಬಡು' ನೋ.

**ಸಂದೆರಂಗು** (ನಾ). ಸಂಜೆಯ ಕೆಂಬಣ್ಣ ; ಸಂಧ್ಯಾರಾಗ: ಬಂಧುಗಳಿಗೊಲಿದಿತ್ತನಗ್ಗದ ಸಂದೆರಂಗಿನ ಜವಳಿಪಳಿಗಳ (ಅಕ್ರೂಚ. ೮-೪೨). [ಸಂದೆ (< ಸಂಜೆ) + ರಂಗು]

**ಸಂದೆಸಮಯ** (ನಾ). ಸಂಜೆಯ ಹೊತ್ತು ; ಸಾಯಂಕಾಲ : ಹೊತ್ತುಯಿಳಿದು ಸಂದೆಸಮಯವಾಯಿತು (ಸೌಂದಕಾ. ೭-೧೮). [ಸಂದೆ (< ಸಂಜೆ) + ಸಮಯ$_{1}$]

**ಸಂದೆಹ** 'ಸಂದೆಯ' ನೋ.

**ಸಂದೇಗ** 'ಸಂದೆಯ' ನೋ.

**ಸಂದೇಶ** (ನಾ). ೧. ಆಜ್ಞೆ; ಅಪ್ಪಣೆ: ಮುನ್ನಂ ನಿಮಗೆ ಪುಟ್ಟಿದುವಾಱುಂ ಮಕ್ಕಳೆಂಬಿವು ಪಾತಾಳದೊಳಿರ್ದ ಹಿರಣ್ಯಕಶಿಪುವಿನ ಮಕ್ಕಳೆ ಮದೀಯ ಸಂದೇಶದಿಂ ಪುಟ್ಟಿ ಪೋದುವು (ಜಗವಿ. ೩-೫ ವ). ೨. ಸುದ್ದಿ; ಸಮಾಚಾರ: ಸಂದೇಶಂ ದೇವಿಯ ದೆಸೆಯಿಂದಂ ನೀಂ ತಂದುದಿಲ್ಲ (ಕಾದಂಉ. ೩೯೮); ಇವರು ತಮ್ಮ ಗುರುಗಳಿಂದ ಒಂದು ಸಂದೇಶವನ್ನು ತಂದಿರುವರು (ಶಾಕುಂತ. ೬೫-೧೧). ೩. ಮಹಾತ್ಮರ ದಿವ್ಯಪ್ರೇರಣೆಯ ಮಾತು, – ಹೇಳಿಕೆ: ಬಾಹ್ಯಕಲಾಪಗಳು ವ್ಯತ್ಯಾಸವನ್ನು ಹೊಂದುತ್ತಿದ್ದರೂ ಮುಖ್ಯ ಧ್ಯೇಯದ ಅನ್ವೇಷಣಕ್ಕೆ ಇಲ್ಲಿಯವರೆಗೂ ವೈದಿಕಋಷಿಗಳ ಸಂದೇಶವೆ ಮಾರ್ಗದರ್ಶಕಗಳಾಗಿವೆ (ಋಕ್ಸಾರ. ೯೫ ಪೀಠಿಕೆ); ಇದು ಗಾಂಧೀಜಿಯ ಸಂದೇಶದ ನುಡಿ (ಅನಿಕೇ. ೩೪-೧). ೪. ಒಂದು ಬಗೆಯ ಸಿಹಿತಿಂಡಿ: ಸಂಜೆಯ ಮುಂದೆ ಕೇವಲ ಒಂದು ಸಂದೇಶ ಮಾತ್ರ ತಿಂದು ನೀರುಕುಡಿದನು (ಇಪ್ಪತ. ೩೬೯); ಐದು ರೂಪಾಯಿಗಳನ್ನು ತೆಗೆದುಕೊಡುತ್ತ ಗೋವರ್ಧನನು "ಸಂದೇಶ ತಿನ್ನಿರಿ" ಎಂದ (ಎರಸಿ. ೧೦೮). [ಸಂ.]

**ಸಂದೇಶಕಾವ್ಯ** (ನಾ). ಸಂದೇಶವನ್ನೇ ವಿಷಯವಾಗಿಟ್ಟು ರಚಿಸಿದ ಕಾವ್ಯ; ಮೇಘದೂತದ ಮಾದರಿಯ ಕಾವ್ಯ : ಸಂಸ್ಕೃತದಲ್ಲಿನ ಹಾಗೆ, ಕನ್ನಡದಲ್ಲೂ ಸಂದೇಶಕಾವ್ಯಗಳು ರಚಿತವಾಗಿವೆ (ರೂಢಿ). [ಸಂ.]

**ಸಂದೇಶಹರ** (ನಾ). ಸುದ್ದಿಯನ್ನು ಒಯ್ಯುವವನು; ದೂತ: "ಸಂದೇಶಹರಃ, ದೂತಃ, ೨ ದೂತನ ಹೆಸರುಗಳು" (ಸಿದ್ಧಾಂತಿ. ೨೩೯). [ಸಂ.]

**ಸಂದೇಶಿಸು** (ಕ್ರಿ). ತಿಳಿಸು; ಹೇಳು : ಉಸಿರ್ವುಜ್ಜುಗದಿಂದಧರಂ ನಸುಗೆತ್ತಲ್ ಶ್ವಾಸಮಧುಪಮಾಲೆಗೆ ಸಂದೇಶಿಸಿದಪಳೊ ರಹಸ್ಯಮನೆನಲೆಸೆದೆಂತೆಂತಾನು ಮುಸಿರಲುದ್ಯತೆಯಾದಳ್ (ಕಾದಂಉ. ೨೯೬); ಅದೇ ಅಭಿಪ್ರಾಯವನ್ನು . . . ಡಿ. ಶ್ರೀನಿವಾಸಚಾರರೂ ಸಂದೇಶಿಸಿದರು (ಚಿಂಗಾಳ್ಯ i, ಮುನ್ನುಡಿ). [ಸಂದೇಶ + – ಇಸು$_{3}$]

**ಸಂದೇಹ** (ನಾ). ೧. ಅನುಮಾನ ; ಸಂಶಯ : ಅಱಿವು ಆಚಾರಹೀನರಾದ ಸಂಕಲ್ಪರಲ್ಲಿ ಕೊಂಬುವುದು ಸಂದೇಹಕಂದಿನ ಪ್ರಸಾದ (ಚನ್ನವ. ೩೯-೧); ಜಗದ ಜೀವರ ಯಂತ್ರಮಯಹಾಹೆಗಳನಾಡಿಸಿ ತೋರ್ಪ ನಾಟಕಿ ಮಗುವುತನದಲಿ ಬಾಲಕರ ಕೇಳೀ ಕಲಾಪದಲಿ ಸೊಗಸುವುದು ಸೋಜಿಗವಲಾ ಶ್ರುತಿ ನಗುವುದಕೆ ಸಂದೇಹವೇನು (ತೊರರಾ. ೧-೮-೭೭); ಅವರನ್ನು ಕಂಡು ನನಗೆ ಸಂದೇಹವಾಯಿತು (ಬಾಣಿಅ. ೭೮). ೨. ಅಪಾಯ; ವಿಪತ್ತು. ೩. [ಕಾವ್ಯಮೀ] ಔಪಮ್ಯ ಮುಂತಾದ ಅರ್ಥಾಲಂಕಾರಗಳಲ್ಲಿ ಒಂದು : ಸಮಾಸೋಕ್ತಿ . . . ಸಂದೇಹ ಭ್ರಾಂತಿ . . . ಉದಾತ್ತವೆಂಬ ಅಱುವತ್ತೈದಲಂಕಾರಂಗಳಿಂದೊಡಗೂಡಿ (ವಿವೇಕ. ೧೭೯); ಸಾದೃಶ್ಯಮೂಲಕವಾಗಿ ಉಕ್ತವಾಗಿರುವ ಸಂದೇಹವು ಸಂದೇಹಾಲಂಕಾರವಾಗುವುದು (ಕೈಪಿಡಿ. ೨೬೬). [ಸಂ.]

**ಸಂದೇಹಗ್ರಸ್ತ** (ನಾ). ಅನುಮಾನದಿಂದ ಕೂಡಿದವನು; ಸಂಶಯದಿಂದ ಕೂಡಿದವನು: ದುಷ್ಯಂತನ ಪಿತೃಗಳು ಸಂದೇಹಗ್ರಸ್ತರಾದರು (ಶಾಕುಂತ ೯೪-೧೫); ಅವನು ಕ್ಷಣಕಾಲ ಸಂದೇಹಗ್ರಸ್ತನಾದನು (ಪುನರು. ೧೯೫). [ಸಂ.]

**ಸಂದೇಹವಳಿ** (ಕ್ರಿ). ಅನುಮಾನವನ್ನು ಕಳೆದುಕೊಳ್ಳು; ಶಂಕೆಯಿಲ್ಲವಾಗು: ಒಂದೇ ಹೊಲದಲ್ಲಿ ಮೇದು ಮಂದೆಯಲ್ಲಿ ನಿಂದು ಸಂದೆಯ ಕಳೆದು ಉದಯದ ಸಂದೇಹವಳಿದು ವೀರಬೀರೇಶ್ವರಲಿಂಗದಲ್ಲಿಗೆ ಹೋಗುತ್ತಿರಬೇಕು (ಸರ್ವವ. ೮೨-೪೫೫). [ಸಂದೇಹ + ಅಳಿ$_{1}$ (< ಅೞಿ$_{1}$)]

**ಸಂದೇಹಾಪನೋದ** (ನಾ). ಅನುಮಾನದ ಪರಿಹಾರ; ಸಂಶಯನಿವಾರಣೆ: ಈ ಪರಿಯಲುರು ಧರ್ಮಕಥನಾಳಾಪದಲಿ ಮುನಿಸುತಗೆ ಸಂದೇಹಾಪನೋದವ ಗೈದು ತಿಳುಹಿದನಾ ಮಹೀಸುರನ (ಕುವ್ಯಾಅ. ೧೫-೧೮). [ಸಂ. ಸಂದೇಹಾಪನೋದನ]

**ಸಂದೇಹಾಲಂಕಾರ** (ನಾ). = ಸಂದೇಹ ೩ : ಹಗಲೋ ಅಥವಾ ಇರುಳೋ ಎಂಬ ಸಂದೇಹಾಸ್ಪದದಿಂದ ತೋರುತಿಹುದೆಂದು ವರ್ಣಿಸಲ್ಕೆ ಸಂದೇಹಾಲಂಕಾರವೆನಿಪುದು (ಕುವಲ. ೨೫-೫); ಸಾದೃಶ್ಯಮೂಲಕವಾಗಿ ಉಕ್ತವಾಗಿರುವ ಸಂದೇಹವು ಸಂದೇಹಾಲಂಕಾರವಾಗುವುದು (ಕೈಪಿಡಿ. ೨೬೬). [ಸಂ.]

**ಸಂದೇಹಿ** (ಗು). ೧. ಸಂಶಯಗೊಳ್ಳುವ ; ಅನುಮಾನಿಸುವ : ಉಂಡುದು ಬಂದಿತ್ತೆಂಬ ಸಂದೇಹಿ ಮಾನವಾ ನೀ ಕೇಳಾ ಉಂಡುದೇನಾಯಿತ್ತೆಂಬುದ ನಿನ್ನ ನೀ ತಿಳಿದು ನೋಡಾ (ಬಸವ. ೨೦೦): ಮಿಂದು ದೇವರ ಪೂಜಿಸಿಹೆನೆಂಬ ಸಂದೇಹಿ ಮಾನವ ನೀ ಕೇಳಾ (ಅವಚಂ. ೨೬೦-೧೧೮೫). (ನಾ). ೨. = ಸಂದೇಹಗ್ರಸ್ತ : ನಂಬುಗೆಗಂಜಿ ಹಿಂದುಮುಂದಾದ ಸಂದೇಹಿ ನಾನಯ್ಯ (ಮೋಳಿಮಾ. ೫-೧೮); ಸಂದೇಹಿ ತಜ್ಜೀವ ದೇವ ನಿಸ್ಸಂದೇಹಿಯಾಗಿಹನಾವಗಂ (ಬಸಪು. ೫೧-೨೮). [ಸಂ. ಸಂದೇಹಿನ್]

**ಸಂದೇಹಿಸು** (ಕ್ರಿ). ಅನುಮಾನಿಸು; ಸಂಶಯಪಡು : ಇಲ್ಲವೆಂದು ಸಂದೇಹಿಸಿದವಂಗೆ ಉಂಟೆಂದು ತೋಱಿದನು (ಅವಚಂ. ೨೫೯-೧೧೭೯); ಪಡಿಬಲಂ ನೀನಾಗಿ ಸಂದೇಹಿಸದೆ ಬೆನ್ನ ಬಡಿದಟ್ಟಿ (ಚೀರಮ. ೯-೪೬); ವೈದಿಕಋಷಿಗಳೂ ಈಶ್ವರನ ಅಸ್ತಿತ್ವದ ಬಗ್ಗೆ ಸಂದೇಹಿಸಿದ್ದಾರೆ (ಭಾರದ. ೧೨೧). [ಸಂದೇಹ + - ಇಸು$_3$]

**ಸಂದೋಹ** (ನಾ). ೧. ಹಾಲು ಕರೆಯುವುದು, – ಹಿಂಡುವುದು. ೨. ಹಿಂಡಿನ ಎಲ್ಲಾ ಗೋವುಗಳಿಂದ ಕರೆದ ಒಟ್ಟುಹಾಲು. ೩. ಸಮೂಹ; ಗುಂಪು : ಸಂದೆಯದ ಮನದ ನಾಕಜಸಂದೋಹದ ಬಗೆಯನಘಹರಂ ಕಳೆಯಲ್ಕಃ ಎಂದುಸಿರೆ ಗಾಳಿಯೊಳ್ ತಿರಿತಂದರ್ ತಱಗೆಲೆವೊಲಮರರಂಬರತಳದೊಳ್ (ಶಾಂತಿಪು. ೧೦-೪೩); ಬಹುದುಃಖಾವರ್ತ ಸಂದೋಹದೊಳ್ ಸುೞಿಗುಂ ಮಾಣದೆ ಮಾಯ್ದ ಕರ್ಣವಶದಿಂ ಜೀವಂ ಭವಾಂಭೋಧಿಯೊಳ್ (ಸುಕುಮಾ. ೬-೭). ೪. ರಾಶಿ; ಗುಡ್ಡೆ : ಕಟಲ್ಚುಗೆಮ್ಮ ಮನದಿಂ ದುರ್ಮೋಹಸಂದೋಹಮಂ (ಆದಿಪು. ೧-೫); ಸಮ್ಮದಸಂದೋಹಮನಾನೆ ಪೆತ್ತೆನಿದಂ (ಕಾದಂಪೂ. ೮೬೪); ಕೃಷ್ಣನೆಮಗೀಗಾನಂದಸಂದೋಹಮಂ (ಜಗವಿ. ೧-೧). ೫. [ಜ್ಯೋತಿ] (ಗ್ರಹಗಳ) ಕೂಟ; ರಾಶಿ (?) : ರಾಹು ನೆಲಸಿದೊಡೆ ಸಪ್ತಮ ಗೇಹದೊಳೀಕ್ಷಿಪೊಡೆ ಸೂರ್ಯಶಶಿಗಳ್ ಶುಭಸಂದೋಹಂ ಕಾಣದೊಡನಲಂಗಾಹುತಿ ಪನ್ನೆರಡುವರ್ಷದಿಂದವನಕ್ಕುಂ (ಜಾತತಿ. ೬-೩೪). [ಸಂ.]

**ಸಂದೋಹಕ** (ನಾ). = ಸಂದೋಹ ೩ : ಅನಂತರಮದತ್ತಲುಂ ತರದೆ ಸುತ್ತಿದತ್ತಾ ಕುಮಾರನೇಱಿದ ವರೂಥಮಂ ಖಚರಯಾನಸಂದೋಹಕಂ (ಚಂದ್ರಪು. ೬-೨೯). [ಸಂ.]

**ಸಂದೋಹನ** (ನಾ). ೧. (ಹಾಲಿನಂತೆ) ಕೊಡುವಿಕೆ; ನೀಡುವಿಕೆ. ೨. ಸಮೂಹ; ಗುಂಪು. [ಸಂ.]

**ಸಂಧ** (ಗು). ೧. ಪಡೆದಿರುವ; ಹೊಂದಿರುವ. ೨. ಜೋಡಿಸಿದ ; ಹೆಣೆದ. ೩. ಇಟ್ಟ; ಇರಿಸಿದ. (ನಾ). ೪. ಪಡೆದುದು; ಹೊಂದಿದುದು : ''ಸಂಧಂ ಸಲೆ ವಶಗತಿಯೊಳಮೊಂದಿದಭಿಪ್ರಾಯದೊಳಮನುಸರಿಸಿರ್ಕುಂ'' (ವಸ್ತುಕೋ. ೧೧೯-೧೦). [ಸಂ.]

**ಸಂಧರಣ** (ನಾ). ೧. (ಬಟ್ಟೆ ಮುಂತಾದುವನ್ನು) ಧರಿಸುವಿಕೆ; ತೊಡುವಿಕೆ. ೨. ಕೂಡಿಸುವಿಕೆ; ಸಂಗ್ರಹಮಾಡುವಿಕೆ : ಸುರುಚಿರಾಂಬರನೂತ್ನರತ್ನಾಭರಣಕಿರಣಾಲಂಕರಣ ಸಂಧರಣದಿಂದಾದರಿಸಿ ಬಸವಂಗಾತನಿಂತೆಂದ (ಬಸವು. ೫-೬೬). [ಸಂ.]

**ಸಂಧರಿಸು** (ಕ್ರಿ). ತಾಳು; ಹೊರು : ನರೆ ಗುರುವಾಗೆ ವೈರಾಗ್ಯವೆ ಮನದೊಳು ಹೊರದೋಱೆ ವಿಗ್ರಹಮೋಹ ಅರಸುತನವನರ್ಕಕೀರ್ತಿಗೆ ಮಾಡಿ ಸಂಧರಿಸಿದ ಖಚರ ದೀಕ್ಷೆಯನು (ವರ್ಧಚ. ೭-೫೬). [ಸಂಧರಣ + - ಇಸು$_3$]

**ಸಂಧಾನ** (ನಾ). ೧. ಸೇರಿಸುವುದು ; ಹೊಂದಿಸುವುದು : ''ಸಂತವಣೆಯೆನಲು . . . ಸಂಧಾನಂ'' (ಕವಿಕಂ. ೨೦೪); ಧನಸಂಧಾನಕ್ಕೆ ಮನೆಬಿಟ್ಟು ಹೊರಬಿದ್ದನು (ಇಪ್ಪತ. ೩೪೫). ೨. ಸಂಯೋಗ; ಸೇರುವೆ : ಏನನುಸುರ್ದಪೆನೆನ್ನ ಜನ್ಮಫಲಾನುಭೋಕ್ತವ್ಯಕ್ಕೆ ಮಿಗೆ ಸಂಧಾನವಾಯಿತು (ಬಸವು. ೩-೨೨); ಇಪ್ಪತ್ತುನಾಲ್ಕು ತಂಡದ ಅನಂತರು ಶಿವನ ಒಡ್ಡೋಲಗದ ವೈಭವವ ನಡೆಸುವ ಪರಿಚಾರಕರು ಬಂದು ಶರಣ ಲಿಂಗದೃಷ್ಟಿ ಸಂಧಾನವಾಗಲೆಂದು ಸಮುಖವಂ ಮಾಡೆ (ಘನವ. ೫೧-೪೫). ೩. ಸೇರಿಸುವಂಥದು; ಬೆಸೆಯುವಂಥದು : ದೃಶ್ಯ ಜಡ ಸಂದಾನವೆನಿಸುವ ನಶ್ವರದ ಮನ ನೇತ್ರವಾಗಾದಿ ಸ್ವಚೇಷ್ಟಾ ದುರ್ಬಲಗಳಿಂತಾವನೊಬ್ಬನನು ಆಶ್ರಯಿಸಿ (ಅಮೃತ. ೩-೭೮). ೪. ಬಂಧ; ರಚನೆ : ಮಾನಿತಪದಮಂ ಪದಸಂಧಾನಮನರ್ಥಪ್ರತೀತಿಯಂ ಕವಿಹೃದಯ ಸ್ಥಾನಮನಱಿದೋದದೆ ಕಣ್ಬೇನೆಯ ಕರಡಿಯವೊಲೂಳ್ದಪಂ ವಾಚಕನೇ (ಛಂದೋಂಬು ೧-೩೦ ಅಡಿಪದ್ಯ). ೫. (ಬಿಲ್ಲಿನ ಹೆದೆಗೆ) ಬಾಣವನ್ನು ಹೂಡುವುದು : ಸಮಕೃಷ್ಟಂ ಸಮವೇಧನಂ ಸಮಭವತ್ಸಂಧಾನಮೆಂದಿರ್ವರೇಸುಮನಾಗಳ್ ನಡೆನೋಡಿ ನೋಡಿ (ಶಾಂತಿಪು. ४-४८); ಅವಯವದೆರ್ದೆಗೊಳ್ಳದಿದಾರುವನೆಂದೊಡೆ ಬಾಣಕೃತಿ ಪುಳಿಂದನ ಸಂಧಾನವನೆಯ್ದಿದತ್ತು ಮತ್ತಿನ ಕವಿಕುಳದೆರ್ದೆಗೊಳ್ಳದೆಂಬುದೊಂದಚ್ಚರಿಯೇ (ಕಾದಂಪೂ. ೪). ೬. ಒಟ್ಟಾಗಿ ಕಟ್ಟುವಿಕೆ ; ಬಂಧಿಸುವಿಕೆ. ೭. ಹಗ್ಗ; ಮಿಣಿ; ರಜ್ಜು : ''ಸಂಧಾನಂ, ದಾಮನೀ, ದಾಮ – ಈ ೩ ಕಣ್ಣಿ'' (ಹಲಾಯು. ೪೬-೧೨೨). ೮. (ಔಷಧ ಮುಂತಾದುವುಗಳನ್ನು) ಮಿಶ್ರಮಾಡುವಿಕೆ. ೯. ಬೆರಸಿದುದು; ಮಿಶ್ರಣ. ೧೦. ಒಡಂಬಡಿಕೆ; ರಾಜಿ : ದೇವಿ ಚಿತ್ತೈಸುವುದು ವರವಸುದೇವನಟ್ಟಿದನು ಸಂಭಾವಿಸುವುದರಿರಾಯರಲಿ ಸಂಧಾನಸೌರಂಭ (ಕುವ್ಯಾಉ. ೬-೧೫); ಆಗದೇ ಸಂಧಾನ ಭಾಗ್ಯವ ನೀಗಿದ್ಧೆ ನೀನಕಟ ಹೆಡಕನು ತಾಗಿದಲ್ಲದೆ ನಿನಗೆ ಸೇರವು ಉಚಿತಬೋಧೆಗಳು (ಕೌಶಿರಾ. ೧೮-೪೬); ಮೂರುಸಲ ಒಪ್ಪಂದ, ನೂರುಸಲ ಯುದ್ಧ ಅವರಿವರ ಸಂಧಾನ ಮೊದಲೇ ನಿಷಿದ್ಧ (ನಲಮು. ೫-೧೮). ೧೧. ಸಹವಾಸ ; ಸಂಗ : ಆರ್ಯರಿಗೂ ಪಣಿಗಳಿಗೂ ಸಂಧಾನವೇ ಇರಲಿಲ್ಲ (ತುಳುನಾ. ೧೩). ೧೨. ಒಳ್ಳೆಯದನ್ನು ಬಯಸುವವನು; ಸ್ನೇಹಿತ : ಆ ನುಡಿಗಳಾಲಿಸುತ ಸಂಧಾನರನು ಸನ್ಮಾನದಲಿ ಯದುರಾನಿಸಿದ ಪೀಠಾಗ್ರದೊಳು ಕುಳ್ಳಿರಿಸಿ (ಬಿಜ್ಜಪು. ೮೧-೧೩). ೧೩. ಗುರಿಯಿಡುವುದು. ೧೪. ಗುರಿ; ಲಕ್ಷ್ಯ. ೧೫. ಹೊರುವಿಕೆ; ತಾಳುವಿಕೆ. ೧೬. ಹೆಂಡವನ್ನು ತಯಾರಿಸುವಿಕೆ : ''ಸಂಧಾನಂ, ಅಭಿಷವಃ — ೨ ಹೆಂಡ ಮಾಡುವುದಕ್ಕೆ ಹೆಸರು'' (ಸಿದ್ಧಾಂತಿ. ೩೧೯). ೧೭. ಅಂಬಲಿ; ಗಂಜಿ : ''ಧಾನ್ಯಾಮ್ಲಂ, ಅರನಾಳಂ, ಸಂಧಾನಂ, ಕಾಂಜಿಕಂ, ಸೌವೀರಂ — ಈ ೫ ಅಂಬಿಲಂ'' (ಹಲಾಯು. ೫೩-೧೬೩). ೧೮. ಜೀರ್ಣೋದ್ಧಾರ; ದುರಸ್ತಿ. ೧೯. ಒಂದು ಬಗೆಯ ಮದ್ಯ. ೨೦. ಉಪ್ಪಿನಕಾಯಿಯನ್ನು ತಯಾರಿಸುವಿಕೆ. ೨೧. ಒಂದು ಬಗೆಯ ಲೋಹ; ಕಂಚು. ೨೨. ಉಪಾಯ; ಹಂಚಿಕೆ : 'ಸಂಧಾನಂಗೆಯ್' ಪರಾ. ೨೩. [ಕಾವ್ಯಮಿ] ಉಪಮಾಲಂಕಾರಗಳಲ್ಲಿ ಒಂದು : ವಿಪರೀತಂ ತರುತತಿಯವೊಲಪರಾಗಂ ಶುದ್ಧಭೂಮಿವೋಲ್ ಪದ್ಮಿನಿವೋಲುಪಗತವಿಭ್ರಮರಹಿತಂ ಕುಪಿತಾಕೃತಿಯೆಂಬುದುಪಮೆ ಸಂಧಾನಾಂಕಂ (ಕವಿರಾ. ೩-೮೩). [ಸಂ.]

**ಸಂಧಾನಂಗೆಯ್** (ಕ್ರಿ). ೧. ಉಪಾಯ ಹೂಡು; ಯುಕ್ತಿಮಾಡು : ಪೆಱರ ಬಗೆಯಱಿದು ಸಂಧಾನಂಗೆಯ್ದು ವಂಚಿಸುವುದು ವಂಚನೆಯೆಂಬುದು (ಪಂಚತಂ. ೧೯-೯). ೨. ಸಿದ್ಧಪಡಿಸು; ತಯಾರಿಸು : ಮೂಱುಂ ಕೊಂಡಂಗಳೊಳುತ್ತರವೇದಿಕೆಯೊಳಗ್ನಿ ಸಂಧಾನಂಗೆಯ್ದು (ಪಂಪಭಾ. ೬-೩೩ ವ). [ಸಂಧಾನ + ಕೆಯ್$_1$]

**ಸಂಧಾನಗೊಳಿಸು** (ಕ್ರಿ). ೧. ಸೇರಿಸು; ಜೋಡಿಸು : ಬಳಸಿಯಾ ಗಿರಿಯ ಚೌದೆಸೆಯ ಕೋಡುಗಳೊಳಗಳವಡಿಸಿಯೆ ಪಿರಂಗಿಗಳ ತಳುವದೆ ಸಂಧಾನಗೊಳಿಸಿ ದುರ್ಗವನಿಡುವಳವ ನಾನೇನ ಬಣ್ಣಿಸುವೆ (ಕಂಠವಿ. ೧೬-೩೭). ೨. ತಿಳಿಸು; ಹೇಳು : ಆ ನರೇಂದ್ರರ ಸುದ್ದಿಯನು ಸಂಧಾನಗೊಳಿಸುವರಿಲ್ಲಲಾ . . . ಎನುತ ಹಮ್ಮೈಸಿದಳು ಸೀತೆ (ತೊರರಾ. ೫-೩-೬). [ಸಂಧಾನ + ಕೊಳ್$_1$ + - ಇಸು$_3$]

**ಸಂಧಾನಿ** (ನಾ). ಕೂಡಿದುದು ; ಸೇರಿದುದು : ವಜ್ರಾಯುಧಂ ಜೀರ್ಕೊಟವಿಯಿನಮೃತಸ್ಯಂದಿಸಂಧಾನಿಯಪ್ಪಂಬುವನಾಗಳ್ ಪೋಗದೊತ್ತುತ್ತರಸಿಯರ ತನುಶ್ಯಾಮಕಾಗ್ರಂಗಳೊಳ್ ಸ್ನೇಹವಶಾನಂಗಾಗ್ನಿಯಂ ನೀರ್ದಳಿದು ನದಿಪುವಂತಾದನಂಭೋದಲೀಲಂ (ಶಾಂತಿಪು. ೮-೩೧). [ಸಂ. ಸಂಧಾನಿನ್]

**ಸಂಧಾನಿತ** (ಗು). ೧. ಕಟ್ಟಿದ; ಜೋಡಿಸಿದ : ಸಂಧಾನಿತ ಗುರುಭಾಷಾಸಿಂಧು ಸುಧಾಪಾನ ಸಮ್ಮದೋನ್ಮತ್ತಂ . . . ಬಿನ್ನವಿಸಿದಪೆಂ (ಅನಂಪು. ೩-೩). ೨. ಕಟ್ಟಿದುದು; ಜೋಡಿಸಿದುದು : ''ಬದ್ಧಂ ಪ್ರಾಧ್ವಂಕೃತಮಪಿನದ್ಧಂ ಸಂಧಾನಿತಂ'' (ವಸ್ತುಕೋ. ೧೦೭-೫೪). [ಸಂ.]

**ಸಂಧಾನಿಸು** (ಕ್ರಿ). ೧. ಒದಗಿಸು; ಉಂಟುಮಾಡು : ಧ್ಯಾನಿಸುವವರಿಗೆ ದಿವ್ಯ ಭೋಗಗಳ ಸಂಧಾನಿಸುವನುಪಮಮಹಿಮಾ (ಭರಚ. ೩೭-೧). ೨. ಬಾಣವನ್ನು ಹೂಡು; ಹೆದೆಯೇರಿಸು : ಸುರಗಿರಿಯ ಬಿಲ್ಲಾಗಿ ನೆಲನಂ ತಾಳಿದುರಗನಂ ತಿರುವಾಗಿ ಬಲಿದು ಕಮಲಾಕ್ಷನಂ ಶರವಾಗಿ ತೊಟ್ಟು ತಿಟ್ಟನೆ ತಿರುಗುವಾ ಪುರವನಿಸುವಂದು ಸಂಧಾನಿಸಿ (ಸೌಂದಪು. ೬-೩೦). ೩. ಗುಂಪಾಗು; ಒಟ್ಟಾಗು : ಬಾಲೆಯರೆದ್ದು . . . ಏನೊಂದನಿಂದಿಗೊಲ್ಲೆವು ವ್ರತವೆಂದು ಸಂಧಾನಿಸಿ ಕಟ್ಟಿ ನುಡಿದರು (ಭರಚ. ೮-೨೮). [ಸಂಧಾನ + - ಇಸು$_3$]

**ಸಂಧಾನೋಪಮೆ** (ನಾ). [ಕಾವ್ಯಮಿ] ಉಪಮಾಲಂಕಾರಗಳಲ್ಲಿ ಒಂದು : ವಿಪರೀತಂ ತರುತತಿಯವೊಲಪರಾಗಂ ಶುದ್ಧಭೂಮಿವೋಲ್ ಪದ್ಮಿನಿವೋಲುಪಗತವಿಭ್ರಮರಹಿತಂ ಕುಪಿತಾಕೃತಿಯೆಂಬುದುಪಮೆ ಸಂಧಾನಾಂಕಂ (ಸಂಧಾನೋಪಮೆ) (ಕವಿರಾ. ೩-೮೩). [ಸಂ. ಸಂಧಾನೋಪಮಾ]

**ಸಂಧಾಮ** (ನಾ). ಕುದುರೆಗೆ ಬರುವ ಒಂದು ರೋಗ : ಆಮಳಕದನಿತನಿಕ್ಕುಗೆ ಸಾಮುದ್ರಸಮೇತಮರ್ಕಮೂಲಮನದು ಸಂಧಾಮವಿನಾಶನಮರುಣೋದ್ಧಾಮಂ ತುರಗಕ್ಕೆ ಪಿಂಡಂ (ಅಶ್ವಶಾ. ೭-೩೭). [?]

**ಸಂಧಾರಣ** (ನಾ). ೧. ಹಿಡಿಯುವಿಕೆ; ಆಧಾರವಾಗಿರುವಿಕೆ : ಉಂಡಳ್ ಪ್ರಸಾದಮಂ, ಪ್ರಾಣೇಶನಾಗಮನದಾಶೆಯಿಂದನ್ನೆಗಂ ಪ್ರಾಣಸಂಧಾರಣಾರ್ಥಂ (ಶ್ರೀರಾಮಾ. ೩೨-೧೮೭). ೨. ಧರಿಸುವಿಕೆ; ತೊಡುವಿಕೆ. ೩. ಅಂಕೆಯಲ್ಲಿ ಇಡುವಿಕೆ; ನಿಗ್ರಹ. ೪. ಆಚರಿಸುವಿಕೆ; ಆಚರಣೆ. ೫. ಹೊಂದಿರುವಿಕೆ; ಪಡೆದಿರುವಿಕೆ. ೬. ನೆನಪಿನಲ್ಲಿಟ್ಟುಕೊಳ್ಳುವಿಕೆ. ೭. ಕಾಪಾಡುವಿಕೆ; ಪೋಷಣೆ. [ಸಂ.]

**ಸಂಧಾರಿತ** (ಗು). ೧. ಧರಿಸಿದ; ತೊಟ್ಟ : ಆರೋಪಿತಚಾಪಂ ಸಂಧಾರಿತಕವಚಂ ಧೃತೋಗ್ರಶರಧಿಯುಗಂ ತಾಂ (ಪಂಪಭಾ. ೮-೧೨). (ನಾ). ೨. ಹೊಂದಿರುವವನು; ಪಡೆದಿರುವವನು : ಉತ್ತಮಶೀಲವಿಶುದ್ಧವೃತ್ತಿಸಂಧಾರಿತನಪ್ಪಂ (ಜೀವಸಂ. ೧೬೨-೨೮). [ಸಂ.]

**ಸಂಧಿ** (ನಾ). ೧. ಸೇರಿಕೆ; ಸಂಯೋಗ : ಆ ತಂತಿಗಳಲ್ಲಿ ಸಂಧಿಗಳ ತಾಪಭೇದಕ್ಕನು ಗುಣವಾದ ವಿದ್ಯುತ್ಪ್ರವಾಹವು ಹರಿಯುವುದು (ಭೌತವಿ. ೨೪೫). ೨. ಸಂಪರ್ಕ; ಸಾಹಚರ್ಯ. ೩. ಅಂಗೀಕಾರ; ಸಮ್ಮತಿ. ೪. ದೇಹದ ಕೀಲು,–ಸಂದು : ಶರೀರ ಸಂಧಿ ನಾಡಿಗಳಲ್ಲಿ ಸಮಾನ, ಪ್ರಾಣದೇವರೂ . . . ಇರುವರೆಂದು ತಿಳಿಯಬೇಕು (ಹಸಾರ. ೪-೨೦ ತಾತ್ಪರ್ಯ). ೫. ಬಿರುಕು; ಸೀಳು. ೬. (ಕಳ್ಳರು ಗೋಡೆಗೆ ಹಾಕುವ) ಕನ್ನ; ಕಂಡಿ : "ಸುರುಂಗಾ, ಸಂಧಿಃ – ಈ ೨ ಕನ್ನಂ" (ಹಲಾಯು. ೧೨೭-೮೬). ೭. ಹಳ್ಳ; ತಗ್ಗು : "ಕುಣಿಯಲ್ಲಿ ಕೂಟದಲಿ ಸಂಧಿಯೆಂಬುದು" (ಮಂಗರಾ. ೧೪೩-೨೩). ೮. ಸರಿಯಾದ ಕಾಲ,–ಅವಕಾಶ. ೯. ಸಂದಿಗ್ಧಪರಿಸ್ಥಿತಿ: 'ಸಂಧಿಕಾಲ' ಪರಾ. ೧೦. ಬಿಡುವು; ವಿರಾಮ. ೧೧. ಎರಡುಯುಗಗಳ ನಡುವಿನ ಕಾಲ : ಹಿಂದೆ ತ್ರೇತಾದ್ವಾಪರಯುಗಗಳ ಸಂಧಿಯಲ್ಲಿ, ದುರ್ದೈವವಶದಿಂದ . . . ದೊಡ್ಡ ಕ್ಷಾಮವುಂಟಾಯಿತು (ಅಶ್ವಮೇ. ೨೭). ೧೨. ಸೂರ್ಯನು ಹುಟ್ಟುವುದಕ್ಕೆ ಸ್ವಲ್ಪ ಮುಂಚೆ ಅಥವಾ ಪೂರ್ತಿ ಮುಳುಗುವುದಕ್ಕೆ ಮೊದಲು ಕಂಡುಬರುವ ಬೆಳಕು, – ಪ್ರಭೆ. ೧೩. ಯೋನಿ. ೧೪. ಸೀರೆ ಮುಂತಾದ ಉಡುಪುಗಳ ನೆರಿಗೆ, – ನಿರಿ. ೧೫. ಅಲ್ಪ; ಸ್ವಲ್ಪ : "ಅಲ್ಪ ನೃಪಕೂಟಂ ರಂಧ್ರ ಸಂಧೀವಚಂ" (ನಾನಾರ. ೧೬೫). ೧೬. [ಕಾವ್ಯಮೀ] ಕಾವ್ಯ, ನಾಟಕ ಮುಂತಾದುವುಗಳಲ್ಲಿಯ ಒಂದು ಭಾಗ; ಪರಿಚ್ಛೇದ; ಅಧ್ಯಾಯ : ಪ್ರಮುದಮದನಮಾದ್ಯದೌವನೋದ್ಯಾನ ರಾಮಂ ರಮಣರಣಿ[ತ]ಗೋಷ್ಠೀಬಂಧ ಸಂಧಿಪ್ರಬಂಧಂ (ಕವಿರಾ. ೩-೨೧೧) ; ಮುಂದಣ ಸಂಧಿಯ ಕಥೆಯ ವಿಸ್ತಾರವ ಚಂದದಿ ಕೇಳು (ಬಸಪ. ೨-೩); ಸಂಧಿ ಮುಗಿದರೂ ಮಂದಿ ಹೋಗಲಿಲ್ಲ (ಗಾದೆ). ೧೭. ಕಥಾರೂಪದಲ್ಲಿರುವ ಒಂದು ಬಗೆಯ ಸಾಹಿತ್ಯ ಪ್ರಕಾರ : ತುಳುಭಾಷೆಯ ಕತೆಗಳಲ್ಲಿ ಪಾಡ್ದನಗಳು ಎಂಬೊಂದು ವರ್ಗವಿದೆ; ಅದು ದೈವಗಳ ಪುರಾಣಗಳ ವರ್ಗ. ಅವನ್ನು ಸೃಷ್ಟಿಸಿದ ಜನವರ್ಗ 'ಸಂಧಿಗಳು' ಎಂಬ ಇನ್ನೊಂದು ಬಗೆಯ ಸಾಹಿತ್ಯವನ್ನೂ ಪಡೆದಿದೆ. ಅವು ಬರಿಯ ಕತೆಗಳು (ಸುವರ್ಣ. ೧೨೦). ೧೮. [ವ್ಯಾಕ] ಒಂದು ಪದದ ಅಂತ್ಯಾಕ್ಷರ ಮುಂದಿನ ಪದದ ಪ್ರಾರಂಭದ ಅಕ್ಷರದೊಂದಿಗೆ ಸೇರುವ ಕ್ರಿಯೆ : ಎರಡುಂ ಪಲವುಂ ವರ್ಣ ಪರಸ್ಪರಂ ಕೂಡುವಂದಮದು ಸಂಧಿ ಪಲಂ (ಶಮದ. ೪೯); ಉಚ್ಚಾರಣೆಯಲ್ಲಿ ವರ್ಣಗಳು ನಡುವೆ ಕಾಲವಿಳಂಬವಿಲ್ಲದಂತೆ ಕೂಡುವುದಕ್ಕೆ ಸಂಧಿಯೆಂದೂ . . . ಹೆಸರು (ಮಧ್ಯಮ. ೧೬). ೧೯. [ರಾಜನೀ] ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ ಮತ್ತು ಸಮಾಶ್ರಯಗಳೆಂಬ ಆರು ನೀತಿಗಳಲ್ಲಿ ಒಂದು; ರಾಜಿ; ಒಡಂಬಡಿಕೆ; ಕರಾರು: ಅಹಿತರ್ ಸಂಧಿಯುಮಂ ವಿಗ್ರಹಮುಮನಾತನೊಳೊಡರ್ಚರ್ (ಶಾಂತಿಪು. ೧೦-೧೧೪); ಇವಟಿಲ್ಲಿ ನಾವಾವ ಸಂಧಿಯಂ ಪೊಣರ್ಚುವೊಡಮರಿಮರ್ದನ ನೊಡಂಬಡುವನಲ್ಲ (ಪಂಚತಂ. ೨೨೧-೫); ಸೀತೆಯನೊಪ್ಪಿಸುವುದು ರಘುಜಾತನೊಳೊಡರಿಪುದು ಸಂಧಿಯಂ (ಪಂರಾಮಾ. ೧೪-೭೭).

**ಸಂಧಿಸಂಧಿ** (ದ್ವಿರುಕ್ತಿ) : ಅಂತು ಸಂಧಿಸಂಧಿಯೊಳ್ ಸಹಸ್ರ ಸಿಂಹಬಲನೆನಿಪ ಸಿಂಹಬಲನ[ನ]ಶ್ರಮದೊಳ್ ಕೊಂದು (ಪಂಪಭಾ. ೮-೭೮ ವ); ಕೈದುಗಳೊಳೂಟಿ ನೆಗಪುವುದುಂ ಸಂಧಿಸಂಧಿಗಳಂ ಗಂಟುಗಡಿವುದುಂ . . . ಎಂದಿವು ಮೊದಲಾದ ಪಲವುಂ ತೆಱದ ದಾರುಣೋದಗ್ರನಿಗ್ರಹವಿಗ್ರಹಕ್ಕೆ ತಮ್ಮ ವಿಗ್ರಹಂಗಳನೊಡ್ಡಿ (ಸುಕುಮಾ. ೧೧-೪೭ ವ). **ಸಂಧಿಯ ಕೇತನ** = ಹಗೆತನವಿಲ್ಲವೆಂದು ಸೂಚಿಸುವುದಕ್ಕಾಗಿ ಬಳಸುವ ಬಿಳಿಯ ಬಾವುಟ; ಶಾಂತಿಧ್ವಜ : ಸನ್ಧಿಯ ಕೇತನವನ್ನೆತ್ತಿ ಹಿಡಿದು ಸನ್ಧಿವಿಗ್ರಹಿ ಪುರೋಹಿತ ನಂಜುಂಡಭಟ್ಟರು ಹೊರಗೆ ಹೊರಡಲು ಅನುಗೇಳುತ್ತಿದ್ದಾರೆ (ಚಿಟ್ಟಅ. ೬೪-೧೫). [ಸಂ.]

**ಸಂಧಿಕಾರ್ಯ** (ನಾ). ೧. ಒಪ್ಪಂದ ಮಾಡಿಕೊಳ್ಳುವಿಕೆ; ರಾಜಿಮಾಡಿಕೊಳ್ಳುವಿಕೆ: ತನ್ನಿಂದತಿಬಳನಜೇಯನೆನಿಪುನ್ನತನೊಳ್ ನುತಮಲ್ತೆ ಸಂಧಿಕಾರ್ಯಂ (ರಾಜಶೇ. ೬-೧೨೨). ೨. [ವ್ಯಾಕ] ಎರಡು ಪದಗಳು ಅಥವಾ ಪದಪ್ರತ್ಯಯಗಳು ಕೂಡುವಾಗ ಆಗುವ ಕ್ರಿಯೆ: ಬೇರೆ ಬೇರೆಯಾಗಿದ್ದ ಅಕ್ಷರಗಳನ್ನು ಕೂಡಿಸಿ ಉಚ್ಚರಿಸುವುದಕ್ಕೆ ಸಂಧಿ ಎಂದೂ ಹಾಗೆ ಸಂಧಿಯಾದಾಗ ಆಗುವ ವ್ಯತ್ಯಾಸಗಳಿಗೆ ಸಂಧಿಕಾರ್ಯಗಳೆಂದೂ ಸಂಜ್ಞೆ (ಕೈಪಿಡಿ. ೭); ಸಂಧಿಯಾಗುವಾಗ ಮುಂದೆ ಇದ್ದ ವರ್ಣವು ಬಿಟ್ಟುಹೋಗುವುದು, ಹೊಸದೊಂದು ವರ್ಣವು ನಡುವೆ ಬರುವುದು ಈ ಮೊದಲಾದ ವ್ಯತ್ಯಾಸಗಳಿಗೆ ಸಂಧಿಕಾರ್ಯಗಳೆಂದೂ ಹೆಸರು (ಮಧ್ಯಮ. ೧೭). [ಸಂ.]

**ಸಂಧಿಕಾಲ** (ನಾ). ೧. ಎರಡು ಯುಗಗಳ ನಡುವಿನ ಕಾಲ. ೨. ಇಕ್ಕಟ್ಟಿನ ಪರಿಸ್ಥಿತಿ ; ಸಂದಿಗ್ಧಪರಿಸ್ಥಿತಿ : ಇಂಥಾ ಒಂದು ಸಂಧಿಕಾಲದಲ್ಲಿ ಒಂದು ರಾತ್ರಿ, ಅನಿಲನಿಗೆ ಅಂದೇಕೋ ನಿದ್ದೆ ಬಂದಿರಲಿಲ್ಲ (ಅಪನಾ. ೨೪೨). [ಸಂ.]

**ಸಂಧಿಗ** (ನಾ). ಒಂದು ಬಗೆಯ ಜ್ವರ : ತ್ರಯೋದಶ ಸನ್ನಿಪಾತಮಾವುದೆಂದೊಡೆ: ಸಂಧಿಗ, ಅಂತಕ . . . ಪ್ರಳಾಪಗಳು (ಸಕವ್ಯ. ೧೫೧). [ಸಂ.]

**ಸಂಧಿಗೆಯ್** (ಕ್ರಿ). ರಾಜಿಮಾಡಿಕೊಳ್ಳು : ಸಂಧಿಗೆಯಲ್ಕೆ ಬೇಡಿದರೆ ಪಾಂಡುತನೂಭವರಯ್ದುಬಾಡಮಂ (ಗದಾಯು. ೩-೨೧); ಕ್ಷಿತಿಯೊಳ್ಸಮನೆನಿಪ ಮಹೀಪತಿಯೊಳ್ ಸಲೆ ಸಂಧಿಗೆಯ್ಯುದಾಗದು (ರಾಜಶೇ. ೬-೧೨೨). [ಸಂಧಿ + ಕೆಯ್]

**ಸಂಧಿತ** (ಗು). ೧. ಒಟ್ಟಿಗೆ ಸೇರಿಸಿದ. ೨. (ಬಾಣದಂತೆ) ನಾಟಿದ,–ಚುಚ್ಚಿದ. ೩. ಕಟ್ಟಿದ; ಬಂಧಿಸಿದ. ೪. ಕರಾರಿಗೆ ಒಡಂಬಟ್ಟ. ೫. ಬೆರಸಿದ; ಮಿಶ್ರಣ ಮಾಡಿದ. (ನಾ). ೬. ಖಡ್ಗಯುದ್ಧದಲ್ಲಿ ಒಂದು ಪ್ರಕಾರ; ಮೇಲೆ ಮೇಲೆ ಪರಸ್ಪರ ತಿವಿಯುವುದು: ಮೇಲೆ ಮೇಲೆ ಪರಸ್ಪರವಾಗಿ ತಿವಿಯೂಣವೆ ಸಂಧಿತವೆನಿಸಿಕೊಳ್ಳುವುದು (ಸೌಗಂಧಿ. ೨೭೮-೧೫). ೭. ಉಪ್ಪಿನಕಾಯಿ. ೮. ಮದ್ಯಸಾರ ಹೆಚ್ಚಾಗಿರುವ ಸಾರಾಯಿ. [ಸಂ.]

**ಸಂಧಿದೋಷ** (ನಾ). [ವ್ಯಾಕ] ಸಂಧಿಕಾರ್ಯ ಉಂಟಾಗುವಾಗ ಕಂಡುಬರುವ ಒಂದು ಬಗೆಯ ದೋಷ; ಪರಪದದ ಮೊದಲಕ್ಷರವು ಒತ್ತಕ್ಷರವಾಗಿದ್ದು, ಪೂರ್ವಪದದ ಕಡೆಯಕ್ಷರವು ಲಘುವಾಗಿದ್ದಲ್ಲಿ ಉಂಟಾಗುವ ದೋಷ: ಪರಪದಪೂರ್ವಂ ದ್ವಿತ್ವಾಕ್ಷರಮಾಗಿರೆ ಪೂರ್ವಪದದ ಚರಮಂ ಹ್ರಸ್ವಾಕ್ಷರಮಾಗೆ ಸಂಧಿದೋಷಂ (ಶಮದ. ೫೯). [ಸಂ.]

**ಸಂಧಿನಿ** (ನಾ). ೧. ಬೆದೆಗೆ ಬಂದ ಆಕಳು. ೨. ಹೋರಿ ಹಾಯ್ದ ಆಕಳು: "ಸಂಧಿನೀ, ವೃಷಭೇಣ ಆಕ್ರಾಂತಾ–ಗೂಳಿ ಹಾಯ್ದು ಹಿಂಬಾಲಿಸಿದ ಆಕಳು" (ಸಿದ್ಧಾಂತಿ. ೨೯೪). ೩. ಅಕಾಲದಲ್ಲಿ ಹಾಲುಕರೆಯುವ ಹಸು. [ಸಂ. ಸಂಧಿನೀ]

**ಸಂಧಿಬಂಧ** (ನಾ). ೧. ನರ; ಸ್ನಾಯು. ೨. ಒಂದು ಬಗೆಯ ಸಸ್ಯ; ನೆಲಸಂಪಿಗೆ. ೩. ಸೀಳನ್ನು ಮುಚ್ಚುವಿಕೆ: ಒಂದು ಮಡಿಕೆಗೆ . . . ಈ ಒಣಗಿದ ದ್ರವ್ಯಗಳನ್ನು ಹಾಕಿ ಒಂದು ಶ್ರಾವೆಯನ್ನು ಮುಚ್ಚಿ ಚೀರುಮಣ್ಣಿನಿಂದ ಸಂಧಿಬಂಧಮಾಡಬೇಕು (ಸಕವ್ಯ. ಪರಿ. ೫೦೨). ೪. ಸೇರಿರುವ ಸ್ಥಳ,–ಎಡೆ,– ಜಾಗ: ವಜ್ರ ವೃಷಭ ನಾರಾಚಾಸ್ಥಿ ಸಂಧಿ ಬಂಧಮುಂ . . . ತನುಗನುಸಂಗತಮಾಗೆ (ಶಾಂತಿಪು. ೧೦-೯೪ ವ). [ಸಂ.]

**ಸಂಧಿಮ** (ನಾ). [ನಾಟ್ಯ] ಹಲಗೆ, ಚರ್ಮ ಮತ್ತು ಬಟ್ಟೆ ಇವುಗಳಿಂದ ಆಯಾ ಪದಾರ್ಥಗಳ ಆಕಾರ, ರೂಪುಗಳನ್ನು ಕೃತಕವಾಗಿ ತಯಾರಿಸಿ, ಬಳಸಲಾಗುವ ರಂಗಪರಿಕರ, –ರಂಗವಸ್ತು : ಸಂಧಿಮ, ವ್ಯಾಜಿಮ, ವೇಷ್ಟಿಮ ಎಂದು ವರ್ಣಿತವಾಗಿರುವ ('ನಾಟ್ಯಶಾಸ್ತ್ರ', ಅಧ್ಯಾಯ ೨೧) ಕೃತಕವಾದ ರಂಗವಸ್ತುಗಳಿದ್ದರೂ . . . ಅನೇಕ ಕ್ರಿಯೆಗಳೂ, ಪದಾರ್ಥಗಳೂ ನಾಟ್ಯಧರ್ಮಿಯನ್ನನುಸರಿಸಿ ಅಭಿನಯಿಸಲ್ಪಡುತ್ತಿದ್ದುವು (ಸಂನಾಟ. ೨೭). [ಸಂ.]

**ಸಂಧಿವಾತ** (ನಾ). ದೇಹದ ಕೀಲುಗಳಲ್ಲಿ ಉರಿಯೂತವೂ ನೋವೂ ಉಂಟಾಗುವ ಒಂದು ಬಗೆಯ ರೋಗ: ತಾಯಿ ಮನೆಯಲ್ಲಿ ಸಂಧಿವಾತದಿಂದ ಹಾಸಿಗೆ ಹಿಡಿದಿದ್ದಳು (ಶ್ಯಾಮತಾ. ೩೫); ನನಗೆ ಆರೋಗ್ಯವಿಲ್ಲ, ಒಡೆತ ಮತ್ತು ಸಂಧಿವಾತಗಳಿಂದ ಸಂಕಟಪಡುತ್ತಿದ್ದೇನೆ (ಪುನರು. ೧೫೮). [ಸಂ.]

**ಸಂಧಿವಾತಜ್ವರ** (ನಾ). ದೇಹದ ಕೀಲುಗಳಲ್ಲಿ ಉರಿಯೂತ ಮತ್ತು ನೋವುಗಳೊಂದಿಗೆ ಬರುವ ಒಂದು ಬಗೆಯ ಜ್ವರ: ಮದುಳುಪೊರೆಯುರಿಯೂತ, ಸಂಧಿವಾತಜ್ವರ (Rheamatic fever) ಮತ್ತು ಇತರೆ ಸಾಲ್ಮೊನೆಲ್ಲಾ ರೋಗಾಣುಗಳಿಂದ ಬರುವ ಕಾಯಿಲೆಗಳು ಈ ರೋಗವನ್ನು ಹೋಲುತ್ತವೆ (ಕಲರೋ. ೬೨). [ಸಂ.]

**ಸಂಧಿವಿಕಲ್ಪ** (ನಾ). [ವ್ಯಾಕ] ಬೇರೆಬೇರೆಯಾಗಿದ್ದ ಅಕ್ಷರಗಳು ಸೇರಿದಾಗ ಕೆಲವು ಕಡೆ ಸಂಧಿಯಾಗಿ ಕೆಲವೆಡೆಗಳಲ್ಲಿ ಸಂಧಿಯಾಗದಿರುವಿಕೆ: ಕರಗತ್ವದರ್ಗೆಯಲ್ಲದೆ ಪರಮಿರೆ ಪದ್ಮಾರ್ಥ ವ್ಯಾಕವೇಷ್ಟನದೆಡೆಗಂ ಸ್ಫುರದನುಕೃತಿಗಂ ಸ್ವರಮವು ಪರಮಿರೆ ಖತ್ವಕ್ಕಮಂತೆ ಸಂಧಿವಿಕಲ್ಪಂ (ಶಮದ. ೬೧); ಕೆಲವು ಕಡೆಗಳಲ್ಲಿ ಸಂಧಿಯಾದರೂ ಆಗಬಹುದು, ಆಗದಿದ್ದರೂ ಇರಬಹುದು. ಇದಕ್ಕೆ ಸಂಧಿವಿಕಲ್ಪವೆಂದು ಹೆಸರು (ಕೈಪಿಡಿ. ೧೧). [ಸಂ.]

**ಸಂಧಿವಿಗ್ರಹ** (ನಾ). ಶಾಂತಿ ಮತ್ತು ಯುದ್ಧ: ಕಾಲೋಚಿತ ಸಂಧಿವಿಗ್ರಹದೊಳೊಂದಂ ಕಾರ್ಯಮಂ ಪ್ರಾಪ್ತಮಪ್ಪುದನಾಪ್ತೋಕ್ತಮನುಂತೆ ರಾಭಸಿಕವಾಕ್ಯಾತಕ್ಕೆ ಮಯ್ಯಪ್ಪುದೇ (ಶಾಂತಿಪು. ೩-೬೩). [ಸಂ.]

**ಸಂಧಿವಿಗ್ರಹಿ** (ನಾ). ರಾಜ್ಯದ ಶಾಂತಿ, ಯುದ್ಧ ಮುಂತಾದ ವಿಷಯಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವವನು; ವಿದೇಶಾಂಗ ಸಚಿವ: "ಸೇನಾನಾಯಕಂ ಸಂಧಿವಿಗ್ರಹಿ" (ಮಂಗರಾ. ೮೦-೧೧); ಸಂಧಿವಿಗ್ರಹಿ ರಾಚಾಚ್ಚೆಯಿಂ (ರಾಜಶ್ರೇಷ್ಠಿಯಾ) ಲೇಖಮನಿಂತೆಂದು ಬಾಜಿಸಿದಂ (ಚಾವುಂಪು. ೧೮೩); ಸನ್ನಿವಿಗ್ರಹಿ ಸೇನಬೋವ ರಾಜಿಮಯ್ಯನ ಮಗಂ (ಎಕ. 1 (R), ೬೨-೫೨; 1095); ಕುಂತಿಯ ತನುಜರಟ್ಟಿದ ಪಾವುದಂಗಳನನಿತುವನು ತೆಗೆಸಿದನು ಕೆಲದಲಿ ಸಂಧಿವಿಗ್ರಹಿಯ (ಕುವ್ಯಾವಿ. ೧೦-೩೩). [ಸಂ. ಸಂಧಿವಿಗ್ರಹಿನ್]

**ಸಂಧಿಸಾಧಿಸು** (ಕ್ರಿ). ತಕ್ಕ ಸಂದರ್ಭವನ್ನು ಎದುರುನೋಡು; ಹೊಂಚುಹಾಕು: ಸಂಧಿಸಾಧಿಸಿ ಇವನನ್ನು ಹಿಡಿಯುವ ಪ್ರಯತ್ನ ಮಾಡೆ ಮಾಡುತ್ತಿದ್ದರು (ಮಂಜುಕ. ೭೪). [ಸಂಧಿ + ಸಾಧಿಸು]

**ಸಂಧಿಸು** (ಕ್ರಿ). ೧. ಕೂಡು; ಸೇರು: ಸ್ಯಂದನಮದಗಜಕೇತನ ಸಂದೋಹದೊಳೆಯ್ದೆ ಸೆಣಸಿದಂತಿರೆ ನಭದೊಳ್ ಸಂಧಿಸಿ ನಿಂದುವು ಕೇತುಗಳೆಂದಪಜಯಹೇತುಗಳ್ ಖಗೇಂದ್ರಾಧಿಪನಾ (ಶಾಂತಿಪು. ೩-೧೦೨); ಅನಿಲಜನೊಡನೆ ಬಳಿ ಸಂಧಿಸಿತು ಸನ್ನಾಹದಲಿ ಪರಿವಾರ (ಕುವ್ಯಾದ್ರೋ. ೧೮-೨೪). ೨. ಕೂಡಿಸು; ಸೇರಿಸು: ಒಂದಂ ಕ್ರಿಯಾ ವಿಶೇಷಣಮಂ ದೊರೆಕೊಳೆ ಸೈತು ಪೇ(ಟ್ಟುಮ)ದಜೊಳ ಪಡಿತಂ ಸಂಧಿಸಿ ಪೇಟ್ಟೊಡೆ ಕೃತಿಯೊಳಗೊಂದಿರದೆರಡಕ್ಕೆ ಬಿಟ್ಟ ಕಜುವಂ ಪೋಲ್ಗುಂ (ಕವಿರಾ. ೨-೯); ಆ ಶಿರವನಟ್ಟೆಯೊಳಂತು ಸಂಧಿಸಲೊಡನೆ ಮಸ್ತಕವಿಂತುಟೊಂದೆಸೆಗೋರೆಯಾಗಿರ್ದುದು ವಿರಾಜಿಸುತ (ಬಸವು. ೫೨-೪೪); ಸಂಧಿಸಿದ ಧನ ಪೋಗುವನ್ನೆಗಂ ಮಿತ್ರಡಸುವಂದು ಪರಿಯಂತ ಜೀವನವಿಯೋಗಂಗಳುಂ ಬಂದೊದಗುವನಕ ಸತಿಸುತಬಂಧು ಸಂಗಮಗಳೆಂದರಿಯನೇಂ ಪೇಳ್ವುದು (ಪಂಕಾರಾ. ೨-೩೩-೧೭). ೩. ಕಟ್ಟು; ಬಂಧಿಸು: ಒಂದು ಗುದ್ದಲಿಯಂ ಹೆಡಗೆಯಂ ತಂದುಕೊಂಡಾ ಬಾವಿಗಂ ಶಿವಮಂದಿರಕೆ ಕುಜುಹಾಗರಮ ಕಂಬಂಗಳಂ ನೆಟ್ಟು ಒಂದು ಮಿಳಿಯಂ ಕಟ್ಟಿಯಗವುತ ಸಂಧಿಸಿದ ಬಲುಸೂತ್ರವಂ ಪಿಡಿದೊಂದು ರಾಶಿಯ ಮಣ್ಣಗಡಕುತ ಹೊತ್ತು ಹಾಯ್ಕುತಿರೆ (ಬಸವು. ೪೯-೪೪). ೪. ಬಾಣವನ್ನು ಹೂಡು; ಶರಸಂಧಾನ ಮಾಡು: ಅರವಿಂದಗರ್ಭನ ಮಸ್ತಕವನುದ್ದಂಡಚಾಪದಲಿ ಸಂಧಿಸಿದ ಸರಳಿಂ ಪಜೆಯಿಲೆಸಬಂದ ಶಬರೇಶ್ವರನೊ (ಬಸವು. ೪೪-೩); ಬಿಡುವ ತೊಡಚುವ ಸಂಧಿಸುವ . . . ಭೇದಿಸುವ ಸಮಚಾಪಳವ ನುಡಿವ ಕವಿ ಯಾರೈ (ಕುವ್ಯಾಸ. ೧೦-೬೮); ಮಂದಮತಿಗಳು ನಿಲಲು ರಘುಕುಲನಂದನನು ಕಂಡಜೆದು ತಿರುವಿಗೆ ಸಂಧಿಸಿದನಾಲೀಢಪದದಲವೋಘ ಮಾರ್ಗಣವ (ತೊರರಾ. ೪-೪-೨೮). ೫. ಮುಟ್ಟು; ಸೋಕು: ಮುನ್ನೆಂತಹಗೆ ನಡೆತಪ್ಪಡೆಯೊಳಿಡುಮುಡುಕಿನಿಂದೊಬ್ಬ ಮುಂತೆ ಸಂಧಿಸಲೊಡನವನ ತಲೆಯಂ ತಜೆದು ಗಗನಕ್ಕೆ ಬಿಸುಟು (ಬಸವು. ೨೧-೧೩). ೬. ಎದುರಿಸು; ವಿರೋಧಿಸು: **ಅತಿರಥ ಸಮರಥ ಮಹಾರಥಾರ್ಧರಥರೊಂದೆ** ವಿಂದೆಯಲ್ಲದೊಂದೊರ್ವರೊಳ್ ಸಂಧಿಸಿ ಗೊಂದಣಿಸಿ ನಿಂದಾಗಳ್ (ಪಂಪಭಾ. ೧೧-೧೪೬ ವ); ಹೊಸರಥವ ತಾ ಹೋದನೇ ಸಂಧಿಸುವೆನಿನ್ನನಿಲಜನು ಕುಂತಿಯ ಬಸುಱ ಹೊಕ್ಕರೆ ಹೊಗುವೆನು (ಕುವ್ಯಾದ್ರೋ. ೧೨-೨೦). ೭. ನೋಡು; ಕಾಣು: ಸಂಧಿ [ಪಾಠಾಂ. ನಿಂದಿ]ಸಲು ಶಿವಭಕ್ತಿಯೊಳಗಿದುವೊಂದು ಪಕ್ಷಮದಾಗೆ ಸಂಶಯವೊಂದಲೇಕಿನ್ನೆನುತ ತನ್ನಯ ಸಖನ ಕೈಯಿಂದ ಸೌಂದರಿಗೆ ಸಲುವೊತ್ತೆಯಂ ನಯದಿಂದ ಕಳುಹಲು (ಬಸವು. ೪೦-೧೧); ಚಂದಿರನಂಫ್ರಿಗೆ ರಾಹುವನೆಱಗಿಪಯಿಂದುಧರನ ಕಾವನನು ಸಂಧಿಸಿ ಮಾತಾಡಿಪ ಸನ್ಮಂತ್ರಿಗಳೆಂದೊಪ್ಪುವನಾ ರಾಜ (ಜೀವಂಸಾಂ. ೧-೬೧); ಕಂಗೊಳಿಸುವ ಕಾಮಗೆ ಬೃಹಸ್ಪತಿ ಪೂದೊಂಗಲನಿತ್ತು ಸಂಧಿಸಿದ (ಮೋಹತ. ೫-೪೩). ೮. ಉಂಟಾಗು; ಒದಗು: ಅಜೆಯದೆಸಗಿದ ರಸಾಯನದ ಸೇವನೆಯಿಂದ ಭೋಂಕೆನಲಕಾಲದೊಳ್ ಸಂಧಿಸಿದ ಜರೆಯಿಂದೆ (ಕಾದಂಬು. ೨೬೧); ಬೆನ್ನೊಳೆ ಪೋದಂ ದೋಷದ ಬೆನ್ನೊಳೆ ಸಂಧಿಸುವ ದಂಡದಂತರಸಂ (ಯಶೋಚ. ೨-೪೮); ಉಬ್ಬರದುಪಪ್ಲವ ಸಂಧಿಸದು ನೃಪಬಾಧ ಬಾಧಿಸದು . . . ದಶರಥನೃಪನ ರಾಜ್ಯದಲಿ (ತೊರರಾ. ೧-೩-೨೮). ೯. ಜರುಗಿಸು; ನಡೆಸು : ಆಂ ಸಂಧಾನಮಂ ವೈರಿಭೂಪರೊಳಂ ಸಂಧಿಸಿ ಪೇಟೆಮಾರ್ಗ ಮೆಜೆವಂ ಸಂಪತ್ತುಮಂ ಶ್ರೀಯುಮಂ (ಪಂಪಭಾ. ೧೩-೬೯); ಮಹಾರಾಜಾಧಿರಾಜನುಮಪ್ಪೆನ್ನ ತಂದೆಯುಂ ಗಂಧರ್ವಲೋಕಾಧಿಪತಿಯಪ್ಪ ಚಿತ್ರರಥರಾಜನುಮೊಂದಾಗಿ ಮದುವೆಯಂ ಸಂಧಿಸುವಂತೆ ಮಾಟ್ಪೆಂ (ಕಾದಂಬು. ೩೮೩). ೧೦. ಸಿದ್ಧಗೊಳಿಸು; ಅಣಿಮಾಡು : ಮುರಿದಾಗಳೇ ಸಂಧಿಸಿದ ತನ್ನಯ ಹಯರಥಾದಿಗಳ (ಕುವ್ಯಾಕ. ೧೧-೨೮). ೧೧. ಕೈಗಳನ್ನು ಜೋಡಿಸು; ನಮಸ್ಕರಿಸು : ಸಂಧಿಸುವ ಕೈಯಿಂದೆ ಮುಟ್ಟಲು ಕಂದಿದಪುದೋ (ಬಸವು. ೩೫-೨೩). ೧೨. ದಾಟು; ಕ್ರಮಿಸು: ಮುಹೂರ್ತಮಾತ್ರದೊಳ್ ಗಡ ಪದಿನೈದು ಯೋಜನಮನೊರ್ವನೆ ಸಂಧಿಸಿ ಪೋದಂ . . . ಮಹೀಭುಜಂ (ಕಾದಂಪು. ೬೨೧). [ಸಂಧಿ + - ಇಸು]

**ಸಂಧಿಸ್ವರ** (ನಾ). [ವ್ಯಾಕ] (ಅ + ಇ; ಅ + ಉ; ಅ + ಏ; ಅ + ಓ ಅನುಕ್ರಮವಾಗಿ) ಸಂಧಿಯಾದಾಗ ಹುಟ್ಟುವ ಏ, ಓ, ಐ ಮತ್ತು ಔ ಎಂಬ ನಾಲ್ಕು ಅಕ್ಷರಗಳು : ಸಂಸ್ಕೃತ ವರ್ಣಮಾಲೆಯಲ್ಲಿ ಎ, ಒ ಗಳಿಲ್ಲ, ಏ, ಓ ಗಳನ್ನು ಸಂಧಿಸ್ವರಗಳೆಂದು ಕರೆದು ಕ್ರಮವಾಗಿ ಐ ಔಗಳ ಜೊತೆಗೆ ಸೇರಿಸುತ್ತಾರೆ (ಕೈಪಿಡಿ. ೫). [ಸಂ.]

**ಸಂಧುಕ್ಷಿತ** (ಗು). ೧. ಉಜ್ವಲಗೊಂಡ; ಪ್ರಕಾಶಹೊಂದಿದ. (ನಾ). ೨. ಹೊಳೆಯುವಂಥದು ; ಪ್ರಕಾಶದಿಂದ ಕೂಡಿದುದು : ಪ್ರೇಮಾಮೃತ ಸಂಧುಕ್ಷಿತಮಿಾ ಮಾನಸಜಾತಶತದಳಂ ಗುಣಯುಕ್ತಂ (ವಸ್ತವಂ. ೧೬-೧೨೨). [ಸಂ.]

**ಸಂಧುಕ್ಷ್ಯಮಾಣ** (ಗು). ೧. ಅಧಿಕವಾಗಿ ಬೆಳಗುವ, — ಪ್ರಕಾಶಗೊಂಡ; ಜ್ವಲಂತ : ಅನ್ನೆಗಮನವರತ ಸಂಧುಕ್ಷ್ಯಮಾಣ ಕಾಲಾಗುರುಧೂಪಧೂಮ್ರಸುರಭಿ ಪರಿಮಳಮಿಳದಳಿಕುಳಾಕುಳೀಕೃತಕನ್ಯಾಪರಿವಾರವಿಲಾಸವಿಲಾಸಿನೀವಿನೋದ್ಯಮಾನೆಯಂ . . . ಪ್ರತೀಹಾರಂ ಮಗಧಾಧಿರಾಜಾಭಿಮುಖಂ ಮಾಡಿ (ಶಾಂತಿಪು. ೫-೧೦೫ ವ). ೨. ತೇಜಸ್ಸಿನಿಂದ ಕೂಡಿದ; ದೇದೀಪ್ಯಮಾನವಾದ : ಇತ್ತ ಕನಕಶಾಂತಿ ತಪೋಧನನುಂ ಧ್ಯಾನಾನಲ ಸಂಧುಕ್ಷ್ಯಮಾಣದಾರುಣದುರಿತಾರಣ್ಯನಾಗಿ ಯೋಗದೊಳಿರೆ (ಶಾಂತಿಪು. ೯-೧೯ ವ). ೩. ಚೇತನಗೊಂಡ; ಚೈತನ್ಯಹೊಂದಿದ. ೪. ಹೆಚ್ಚಾದ; ಅಧಿಕಗೊಂಡ. [< ಸಂ. ಸಂಧುಕ್ಷ್ಯಮಾಣ]

**ಸಂಧೇಯ** (ಗು). ೧. ಜೋಡಿಸಲು ತಕ್ಕುದಾದ; ಸೇರಿಸಲು ಯೋಗ್ಯವಾದ. ೨. ಸಂಧಾನ ಮಾಡಲು ಅರ್ಹವಾದ. ೩. ಗುರಿಯಿಡಲು ತಕ್ಕುದಾದ. (ನಾ). ೪. ಸಂಧಾನ ಮಾಡಿಕೊಳ್ಳಲು ಅರ್ಹನಾದವನು : ಉಚಿತಜ್ಞಂ ತಜ್ಞೋಽನ್ಯತಾವೃತಂ ತನ್ನ್ಯಪಾತ್ರಜಂ ಸಂಧೇಯಂ (ರಾಜಶೇ. ೬-೧೨೦). [ಸಂ.]

**ಸಂಧ್ಯಂಗ** (ನಾ). [ಕಾವ್ಯಮಿಾ] ಕಾವ್ಯಪರಿಚ್ಛೇದಕ್ಕೆ ಅಥವಾ ಸಂಧಿಗೆ ಪೂರಕವಾಗುವ ಭಾಗ, — ಅಂಗ : ಉಪಯೋಗವೆ ಬೀಜಂ ಬಿಂದು ಪತಾಕೆ ಪ್ರಕರಿ ಕಾರ್ಯಮೆನೆ ಪಂಚವಿಧಂ ನಿಪುಣಕವಿರಚನೆಯೊಳ್ ಸಪ್ರಪಂಚದಿಂದೊಂದಿ ತೋಱುಗುಂ ಸಂಧ್ಯಂಗಂ (ಕಾವ್ಯಾವ. ೯೫೮). [ಸಂ.]

**ಸಂಧ್ಯಕ್ಷರ** (ನಾ). = ಸಂಧಿಸ್ವರ : ಸಂಧ್ಯಕ್ಷರಮೆನೆ ಯಥಾರ್ಥದಿಂ ವ್ಯವಹರಿಸು ಗುಮೇಕಾರಮಾದಿಯಾಗಿರೆ ನಾಲ್ಕುಂ (ಕಾವ್ಯಾವ. ೧೨); ಗುರುವುಂ ದೀರ್ಘಮುಂ ಗೂಢಸಂಧಿಯುಮಾಗಿ ಸ್ವಭಾವದಿಂದೇಕಾರಂ ಮೊದಲಾದ ಸಂಧ್ಯಕ್ಷರಂಗಳಪ್ಪುವು (ಶಮದ. ೧೧ ವೃತ್ತಿ). [ಸಂ.]

**ಸಂಧ್ಯಾಂಬುದ** (ನಾ). ಸೂರ್ಯಾಸ್ತಸಮಯದಲ್ಲಿ ಕಂಡುಬರುವ ನಸುಗೆಂಪು ಬಣ್ಣದ ಮೋಡ : ಪೀತವಸನಂ ಸಂಧ್ಯಾಂಬುದಕ್ಕೆಂದು ನೀಳನಗೇಂದ್ರಂ ನಡೆತರ್ಪ ವಾಟ್ಕೆಯೊಳ್ . . . ನಡೆತಂದನಾಯತ ಸಿತಾಂಭೋಜೇಕ್ಷಣಂ ಲಕ್ಷ್ಮಣಂ (ಪಂರಾಮಾ. ೬-೭೭). [ಸಂ.]

**ಸಂಧ್ಯಾಕಾಲ** (ನಾ). ೧. ಸೂರ್ಯನ ಉದಯ ಹಾಗೂ ಅಸ್ತದ ಕಾಲ; ಪ್ರಾತಃಸಂಧ್ಯೆ ಮತ್ತು ಸಾಯಂಸಂಧ್ಯೆ. ೨. ಸಾಯಂಕಾಲ; ಸಂಜೆ : "ಸಂಧ್ಯಾ, ಪಿತೃಪ್ರಸೂಃ - ೨ ಸಂಧ್ಯಾಕಾಲದ ಹೆಸರುಗಳು " (ಸಿದ್ಧಾಂತಿ. ೩೫). ೩. ಎರಡು ಯುಗಗಳ ನಡುವಿನ ಕಾಲ. ೪. ಪ್ರಪಂಚದ ನಾಶ; ಲಯಕಾಲ; ಪ್ರಳಯ. ೨ , ೪ : ಸಂಧ್ಯಾಕಾಲದಂತೆ ನೃತ್ಯನ್ನಿಲಕಂಠಮುಂ . . . ಕ್ರೂರಸತ್ವಮಾಗಿಯುಂ ಮುನಿಜನಸೇವಿತಮುಮೆನಿಪುದು (ಕಾದಂಪೂ. ೧೧೦). [ಸಂ.]

**ಸಂಧ್ಯಾತಪನ** (ನಾ). ಸಂಜೆಯ ಸೂರ್ಯ : ಸಂಧ್ಯಾತಪನಂಗೆ ತೋರಣ ಕನನ್ನುಕುರಂ ದೊರೆಯಾಗಿ (ಚಂದ್ರಪ್ರ. ೬-೩೭). [ಸಂ.]

**ಸಂಧ್ಯಾತಮ** (ನಾ). ಸೂರ್ಯ ಮುಳುಗಿದ ಮೇಲೆ ಆವರಿಸುವ ಕತ್ತಲೆ; ಸಂಜೆಗತ್ತಲೆ : ನೀಲಿಯ ಜವನಿಕೆವೋಲ್ ಪಿಂಗೆ ಸಂಧ್ಯಾತಮಂ . . . ನಿಶಾನರ್ತಕಿಯ ವದನದಂತಿಂದು ಕಣ್ಗೆಡ್ಡಮಾದಂ (ಚಂದ್ರಪ್ರ. ೮-೩೦). [ಸಂ.]

**ಸಂಧ್ಯಾತ್ರಯ** (ನಾ). ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲ ಎಂಬ ಮೂರು ಕಾಲಗಳು; ತ್ರಿಕಾಲ : ಸಂಧ್ಯಾ [ಪಾಠಾಂ. ದ್ವಿ]ತ್ರಯದೊಳಗಭವಗೆ ವಂದಿಸಿದ ಮಹಾತ್ಮಕರ್ಗೆ ಬಹುಕರ್ಮಂಗಳ್ ಬೆಂದು ಕೈವಲ್ಯಪದಕಂ ಸಂದಿಹರಾತನ ಸಗೋತ್ರಕುಲಬಂಧುಜನಂ (ನನ್ನಚಾ. ೬-೯೧). [ಸಂ.]

**ಸಂಧ್ಯಾನ** (ನಾ). (ಉಪನಯನವಾದ ಮೇಲೆ ದ್ವಿಜನು ಮಾಡುವ) ನಿತ್ಯ ವೈದಿಕಕರ್ಮಗಳಲ್ಲಿ ಒಂದು; ತ್ರಿಕಾಲಗಳಲ್ಲಿ ಮಾಡುವ ಧ್ಯಾನ ಅಥವಾ ಪ್ರಾರ್ಥನೆ : ಸ್ನಾನ ಜಪತಪನೇಮಗಳು ಸಂಧ್ಯಾನ ದೇವಾರ್ಚನೆಗಳಾದಿ ವಿಧಾನ ದೊಳಗಾಚರಿತರಾಗಿಹರು (ಬಿಜ್ಜಪು. ೯೬-೨೪); ಝಗಝಗಿಪ ಮಣಿಪೀಠದಲ್ಲಿ ಮಂಡನಗೈಸೆ . . . ಖಗಗಮನನಿಪ್ಪತ್ತುನಾಲ್ಕುನಾಮವ ಬಿಡದೆ ಜಪಿಸಿ ಸಂಧ್ಯಾನ ತೀರ್ಚಿ (ನವಮೋ. ೧೭-೬). [< ಸಂ. ಸಂಧ್ಯಾವಂದನ]

**ಸಂಧ್ಯಾನಕ** (ನಾ). ಸಾಯಂಕಾಲದಲ್ಲಿ ಬಾರಿಸುವ ನಗಾರಿ, — ಹರೆ : ನಿನದತ್ಸಂಧ್ಯಾನಕಂ ನಿಗ್ಗವಣೆಯ ಪಜೆ ಪೂರ್ವಾಚಲಂ ತುಂಗರಂಗಂ ತನಗಾದತ್ತೆಂಬಿನಂ ನೀಲಿಯ ಜವನಿಕೆವೋಲ್ ಪಿಂಗೆ ಸಂಧ್ಯಾತಮಂ (ಚಂದ್ರಪ್ರ. ೮-೩೦). [ಸಂ.]

**ಸಂಧ್ಯಾಪಯೋದ** (ನಾ). = ಸಂಧ್ಯಾಂಬುದ : ಹೋಮವೇದಿಯ ಸುತ್ತಲ್ ಅಂಚಿಸುತ ಸುರಚ್ಛಾಯಾಪುಂಜಂ ಸಂಧ್ಯಾಪಯೋದಕಪಿಶಂ ಚರಿಕುಂ (ಶಾಕುಂತ. ೪೪-೭೮). [ಸಂ.]

**ಸಂಧ್ಯಾಪೇರಿ** (ನಾ). ಸಂಜೆಯ ಸಮಯದಲ್ಲಿ ನಡೆಸುವ ಮೆರವಣಿಗೆ : ಸಂಧ್ಯಾಪೇರಿಯೊಂದು 'ಡೆಕ್ಕನ ಜಮಖಾನೆ'ಯಿಂದ ಹೊರಡುತ್ತದೆಂದು ಕೇಳಿದ್ದನು (ಭೂಮಿತಾ. ೯೩). [( ಸಂ. ಸಂಧ್ಯಾ) + ಪೇರಿ$_1$ (< ಫೇರಿ)]

**ಸಂಧ್ಯಾಭ** (ನಾ). (ಸಂಧ್ಯಾಕಾಲದಲ್ಲಿ ಕಂಡುಬರುವ) ಕೆಂಬಣ್ಣ; ಕೆಂಪುಬಣ್ಣ : "ಅರುಣಂ ಶೋಣಂ ಕೋಕನದ ರೋಚಿ ರಕ್ತಮದು ಲೋಹಿತಂ ಸಂಧ್ಯಾಭಂ" (ಮಪ್ಪುಕೋ. ೧೦೮-೬೪). [ಸಂ.]

**ಸಂಧ್ಯಾಭಿವಂದನ** (ನಾ). = ಸಂಧ್ಯಾನ : ಅರಸನುಪ್ಪವಡಿಸಿದನವನೀಶ್ವರವಿಹಿತ ಸಂಧ್ಯಾಭಿವಂದನ ವರಮಹೀಸುರವರ್ಗಸತ್ಕಾರವನು ನೆಜೆ ಮಾಡಿ (ಕುವ್ಯಾಭೀ. ೮-೮). [ಸಂ.]

**ಸಂಧ್ಯಾಭ್ರ** (ನಾ). = ಸಂಧ್ಯಾಂಬುದ : ಅಮರಾನೀಕದ ಸುತ್ತು ಪೋಲೆ ದಿನನಾಥಾವಂದ್ಯ ಸಂಧ್ಯಾಭ್ರವಿಭ್ರಮಮಂ (ಶಾಂತಿಪು. ೪-೧೧೩). [ಸಂ.]

**ಸಂಧ್ಯಾರಾಗ** (ನಾ). ೧. ಸಾಯಂಕಾಲದಲ್ಲಿ ಸೂರ್ಯ ಮುಳುಗಿದ ನಂತರ ಕಂಡುಬರುವ ಕೆಂಪುಬಣ್ಣ; ಸಂಜೆಗೆಂಪು : ಪಡೆದಿದೆ ಸಂಧ್ಯಾರಾಗಂ ನಿರಂತರಂ ಗಗನವಿವರಮೊಪ್ಪಿತು (ಕವಿರಾ. ೧-೧೧೩); ರಾಗಮೆ ದೊರೆಕೊಳಿಕುಂ ದೋಷಾಗಮನಮ ನೆಂದು ಪೇಟ್ವ ತೆಱದಿಂ ಸಂಧ್ಯಾರಾಗಮೆ ದೊರೆಕೊಳಿಸಿತು ತಿಮಿರಾಗಮುಮಂ ಜಾರಚೋರಜನವಲ್ಲಭಮಂ (ಪುಷ್ಪಪು. ೧೩-೨೦). ೨. ಕೆಂಪುಬಣ್ಣ; ಕೆಂಬಣ್ಣ : ದಿವಿಜಗಜಂ ಸಜ್ಜರದಿಂದವೆಟ್ಟುದೆನೆ ಕಾಣಲದ್ರಿಯಾ ದಂತಿಗೆ ಕಟ್ಟುವ ಚಿಮ್ಮೊಗವಡಮೆನೆ ಚೆಲ್ವುವೆತ್ತುದಂದುದಯಸಮಯಸಂಧ್ಯಾರಾಗಂ (ಜಗವಿ. ೧೬-೧೩೮); ಸುರವರನಂದನ ವನಮಂ ಸುರವರನಂದನನ ಬಾಣದುರಿ ಪರ್ವಿದುದೀ ಪರಿಯೆಂದಱುಪುವ ತೆಱದಿಂ ಪರಿರಂಜಿಸುತಿರ್ದುದುದಯಸಂಧ್ಯಾರಾಗಂ (ರಾಜಶೇ. ೧೨-೨೬). ೩. ಕೆಂಪುಬಣ್ಣದ ಸೀರೆ, — ಬಟ್ಟೆ : "ದಸರಿಗಬ್ಬುಳ ನೀಲಿಗಂಧ ಸಂಧ್ಯಾರಾಗ . . . ದೇವಾಂಗಮೆಂದು ಪಟಭೇದಮಕ್ಕುಂ" (ಮಂಗರಾ. ೧೧೧-೨೮); ಚಂದ್ರಾತಪಂ ಭೂತಿಳಕಮುಂ ಮಣಿವಟ್ಟು ಪಿಂಚಾವಳಿಯು ಸಂಧ್ಯಾರಾಗವುಂ (ಬಸಪು. ೧೧-೨೪); ಸಾರಂಗವಟ್ಟೆ ಪಳಿ ಸಂಧ್ಯಾರಾಗಂ . . . ತೆಳಗಾವಿಯೆಂಬಾ ಸೀರೆಗಳಂ ಸತಿಯರೊಲೆಯೊಳುರುಪಿದರಾಗಳ್ (ತ್ರಿಷಪು. ೧೦-೨೮). ೪. ಮಂಗಳದ್ರವ್ಯವಾದ, ಒಂದು ಬಗೆಯ ಕೇಸರಿಬಣ್ಣದ ಪುಡಿ; ಚಂದ್ರ ; ಸಿಂದೂರ. ೫. ಒಂದು ಬಗೆಯ ಸಸ್ಯ : ಸುಗಂಧರಾಜ, ನೆಲ ಸಂಪಿಗೆ, ಸಂಧ್ಯಾರಾಗ (ಪ್ರಮಿಗಿ. ೬೩-೧೨೮೨). ೬. (ಆಲಂ) ಕಡೆಗಾಲ; ಇಳಿಹೊತ್ತು (?) : ಸಾವು ಬರುವುದು ಎಲ್ಲರಿಗೂ ಸಮನಾಗಿ ಸಂಧ್ಯಾರಾಗದಿ ಜೀವ ಹೋರಾಡುವುದು ತನ್ನಯ ಗುರಿಯ ಮುಟ್ಟುವ ಜಾವದಿ (ನೆಲಮು. ೫೨-೨೧). [ಸಂ.]

**ಸಂಧ್ಯಾರುಚಿ** (ನಾ). = ಸಂಧ್ಯಾರಾಗ ೧ : ಆರಕ್ತಮಾಗಿ ನೇಜಿಲದೋರೆಯನನು ಕರಿಪುದಾದುದಾಗಸಮೆನೆ ಸಂಧ್ಯಾರುಚಿಯನಕ್ಕುಮೆಂದವಧಾರಿಸಿ ನೆಜೆಯಱಿದು ಕೊಳ್ಳದಿದು ನೇಯಾರ್ಥಂ (ಕಾವ್ಯಾವ. ೫೦೮); ಪರೆದುದು ಸಂಧ್ಯಾರುಚಿ ಮೆಯ್ಗರೆದುದು ತಾರಾಳಿ . . . ದಿನಮುಖದೊಳ್ (ಚಂದ್ರಪ್ರ. ೮-೧೦೦). [ಸಂ.]

**ಸಂಧ್ಯಾರುಣ** (ನಾ). = ಸಂಧ್ಯಾರಾಗ ೧ : ಪಡುವಣಂಭೋನಿಧಿಯ ವಡಬಾನಳನ ಶಿಖಿಯೋ . . . ತಾನೆನಲು ಲೋಕದೊಳಿಡಿದು ಸಂಧ್ಯಾರುಣವೆಸೆಯೆ (ಜೀವಂಚ. ೧೭-೪); ಸಂಧ್ಯಾರುಣದ ಗಗನಮಂಡಲದೊಳಂಕುರಿಸಿದುಡುಗಣದಂತೆ ರಂಜಿಸಿತು (ಜೈಮಿಭಾ. ೧೨-೬). [ಸಂ.]

**ಸಂಧ್ಯಾರುಣಿತ** (ಗು). ಸಂಜೆಯ ಕೆಂಪುಬಣ್ಣದಿಂದ ಕೂಡಿದ : ಸಂಧ್ಯಾರುಣಿತ ಪಶ್ಚಿಮಾಚಲಗುಹಾವಿವರದಂತಿರ್ಪ ಬಾಯಂ ತೆಜೆದು ಕಲ್ಪಾಂತ ಕಠೋರ ಘನಘನಧ್ವನಿಯನೇಳಿಪಂತೆ ಗಜಱಿ (ರಾಜಶೇ. ೫-೧೨೦ ವ). [ಸಂ.]

**ಸಂಧ್ಯಾವಂದನ** (ನಾ). = ಸಂಧ್ಯಾನ ; ☞ ಇದರಲ್ಲಿ ಪ್ರಾತಃಸಂಧ್ಯಾ, ಮಾಧ್ಯಾಹ್ನಿಕಸಂಧ್ಯಾ ಮತ್ತು ಸಾಯಂಸಂಧ್ಯಾ ಎಂದು ಮೂರು ಬಗೆಗಳಿವೆ : ಮಱುದಿವಸಂ ಪ್ರಭಾತಸಮಯದೊಳ್ . . . ಸಂಧ್ಯಾವಂದನಕ್ರಿಯಾ ನಿಮಿತ್ತ ಸ್ನಾನಾನಂತರಂ ಅರ್ಘ್ಯಮನೆತ್ತಿ ದಿನೇಶಂಗರ್ಪಿಸಿ (ಸುಕುಮಾ. ೩-೩ ವ); ಮುದ ದೊಳಿದ್ದು . . . ಪುಣ್ಯಸಂಪದದ ಸಂಧ್ಯಾವಂದನಂ ಮಾಡಿ (ಪಚಿಕಾ. ೪-೫೯). [ಸಂ.]

**ಸಂಧ್ಯಾವಂದನೆ** (ನಾ). = ಸಂಧ್ಯಾನ : ಜಲದ ಸಂಧ್ಯಾವಂದನೆಗೆ ನೀವೊಲಿದು ತರುತಿರೆ ನಿಮ್ಮ ಲೋಚನ ಹೊಳೆಯೆ ಜಲಚರವೆಂದು ವಾರಿಯ ನೀವು ಚೆಲ್ಲುತಿರೆ (ಕಾಶಿರಾ. ೧೧-೬); ನೆಂಟರು ಸಂಧ್ಯಾವಂದನೆಯಲ್ಲಿ ನಿರತರಾದರು (ಚಿಂಗಾಳ್ಯ. ೧೨). [ಸಂ. ಸಂಧ್ಯಾವಂದನ]

**ಸಂಧ್ಯಾವಳಿ** (ನಾ). ಕೆಂಪುಬಣ್ಣದ ಸೀರೆ : ಮಿಸುಪ ಸಂಪಗೆಗಾವಿ ಸಂಧ್ಯಾವಳಿ ಚೆಲ್ವ ಪೊಸ ಶುಭ್ರವಸನವನುಟ್ಟು . . . ಐದಿದರು (ಕಂಸವಿ. ೨೧-೧೮). [(ಸಂ. ಸಂಧ್ಯಾ) + ಪಳಿ$_4$ (< ಪಟ್ಟಿ$_5$)]

**ಸಂಧ್ಯಾಶ್ಲೇಷ** (ನಾ). ೧. ಸಂಧ್ಯೆಯಿಂದ ಕೂಡಿದುದು. ೨. (ಆಲಂ) ಕೆಂಬಣ್ಣದಿಂದ ಕೂಡಿಕೊಂಡಿರುವವನು : ದಿನಕರನುದಯಂಗೆಯ್ದಂ ವಿನಿಹಿತ ತಿಮಿರಂ ವಿಶಿಷ್ಟ ಸಂಧ್ಯಾಶ್ಲೇಷಂ (ಕವಿರಾ. ೨-೭೪). [ಸಂ.]

**ಸಂಧ್ಯೆ** (ನಾ). ೧. ಸೇರಿಕೆ; ಸಂಯೋಗ. ೨. ಸಂಜೆ : ಅಲ್ಲಿಂ ತಳರ್ದು ನಿರ್ವರ್ತಿತಸಂಧ್ಯೋಚಿತಜಿನೇಂದ್ರವಂದನಂ ಶಯ್ಯಾಗೃಹಕ್ಕೆ ವಂದನಲ್ಪತಲ್ಪತಲಗತ ನಾಗಿರೆ (ಚಂದ್ರಪ್ರ. ೨-೪೭). ೩. ಸೂರ್ಯ ಹುಟ್ಟುವ ಮುಂಚೆ ಮತ್ತು ಸೂರ್ಯ

ಮುಳುಗಿದ ಕೂಡಲೆ ಆಕಾಶದಲ್ಲಿ ಕಂಡುಬರುವ ಕೆಂಪುಬಣ್ಣ. ೪. ಮುಂಜಾವ; ನಸುಕು. ೫. ಎರಡು ಯುಗಗಳ ನಡುವಿನ ಕಾಲ; ಸಂಧಿಕಾಲ. ೬. ಬೆಳಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲಗಳೆಂಬ ದಿನದ ಮೂರು ಕಾಲಗಳು. ೭. ಬ್ರಾಹ್ಮಣನು ತ್ರಿಕಾಲಗಳಲ್ಲಿ ಮಾಡುವ ಆಹ್ನಿಕ, - ಸಂಧ್ಯಾವಂದನೆ : ಬ್ರಾಹ್ಮೀಮುಹೂರ್ತದಲ್ಲೆದ್ದು . . . ನಿತ್ಯಕೃತ್ಯವಂಗೈದು ಸಂಧ್ಯಾದಿಗಳನ್ನು ಆಚರಿಸಬೇಕು (ಭಾರದ. ೫೪); ವಿಕಾಸನ ಸಂಕೋಚನಗಳಿಗೆ ಕಾರಣವಾದ ಕಾಲಶಕ್ತಿಯ ರೂಪಗಳೆಂದು ಈ ಸಂಧ್ಯೆಗಳಿಗೆ ಆರ್ಯರು ಅಷ್ಟು ಪ್ರಾಶಸ್ತ್ಯಕೊಟ್ಟರು (ಮಹಾಣ. ೩೦೭). ೮. ವಾಗ್ದಾನ; ಮಾತು. ೯. ಒಪ್ಪಂದ; ಒಡಂಬಡಿಕೆ. ೧೦. ಗಡಿ; ಎಲ್ಲೆ; ಸೀಮೆ: "ಅವಧಿಯಲ್ಲಿಯುಂ ಸಂಧ್ಯಾ ಎಂಬುದು" (ಹಲಾಯು. ೧೩೬-೩೩). ೧೧. ಚಿಂತನೆ; ಧ್ಯಾನ. ೧೨. ಒಂದು ಬಗೆಯ ಹೂವು. ೧೩. ದಿನದ ತ್ರಿಕಾಲಗಳಿಗೂ ಅಧಿಷ್ಠಾತ್ರಿಯಾದ ದೇವತೆ. [ಸಂ. ಸಂಧ್ಯಾ]

**ಸಂಧ್ಯೋಪಾಸನೆ** (ನಾ).= ಸಂಧ್ಯಾನ: ಬೆಳಗಿನ ಜಾವದಲಿ ಸೇನೆಯೆಲ್ಲವೂ ಸೂರ್ಯಾಭಿಮುಖವಾಗಿ ನಿಂತು ಸಂಧ್ಯೋಪಾಸನೆಯಲ್ಲಿದ್ದಾಗ, ಮೋಡವಿಲ್ಲದೆ ಗುಡುಗಿತು (ವಚಭಾ. ..೭). [ಸಂ. ಸಂಧ್ಯೋಪಾಸನ]

**ಸಂಧ್ಯೋಪಾಸ್ತಿ** (ನಾ). = ಸಂಧ್ಯಾನ : ಮೇಣೊಂದೆಡೆಯೊಳ್ ಶೌಚದ ಸ್ನಾನದ ವೇದಪಾರಾಯಣದ ಸಂಧ್ಯೋಪಾಸ್ತಿಯ . . . ಪುರಾಣಶ್ರವಣದ ಋಷಿವರ್ಗದಿಂ ಸೊಗಸಿದುದು (ರಾಮಾಶ್ವ. ೪೩-೩೦). [ಸಂ.]

**ಸಂನ್ಯಸನ** (ನಾ). [ಜೈನ] ಕಷಾಯಗಳು ಹಾಗೂ ಆಚಾರವನ್ನು ಕಡಮೆಮಾಡಿ ಪಂಚಪರಮೇಷ್ಠಿಧ್ಯಾನದಲ್ಲಿ ತತ್ಪರನಾಗಿ ಪ್ರಾಣತ್ಯಾಗ ಮಾಡುವ ಒಂದು ಬಗೆಯ ನೇಮ : ನೋಂತುಂ ಪಸಿದುಮಂತ್ಯದೊಳ್ ಸಂನ್ಯಸನದಿಂ ಪರತ್ರೆಯಂ ಸಾಧಿಸುವೆಂ (ಪಂರಾಮಾ. ೧೫-೭೯ ವ). [ಸಂ.]

**ಸಂನ್ಯಸನವಿಧಿ** (ನಾ). = ಸಂನ್ಯಸನ : ಪರಸ್ಪರ ವೈರಮಂ ಬಿಸುಟ್ಟಾಹಾರಶರೀರ ಪ್ರತ್ಯಾಖ್ಯಾನಪೂರ್ವಕಂ ಸಂನ್ಯ[ಪಾಠಾಂ. ಸನ್ಯ]ಸನವಿಧಿಯಿಂದಸುವಂ ವಿಸರ್ಜಿಸಿ (ಶಾಂತಿಪು. ೯-೭೧ ವ); ತಾನುಂ ಜಿನದೀಕ್ಷೆಯಂ ಕೊಂಡು ತಪಂಗೆಯ್ದು ಸಂನ್ಯಸನವಿಧಿಯಿಂ ಮುಡಿಪಿ ಮಹರ್ಧಿಕದೇವನಾಗಿ ಪುಟ್ಟಿದಂ (ಧರ್ಮಾಮೃ. ೧೨-೨೪೩). [ಸಂ.]

**ಸಂನ್ಯಾಸ** (ನಾ). ೧. ತೊರೆಯುವಿಕೆ; ಬಿಡುವಿಕೆ. ೨. ಐಹಿಕಸುಖವನ್ನು ಸಂಪೂರ್ಣವಾಗಿ ತ್ಯಜಿಸುವಿಕೆ; ವೈರಾಗ್ಯ; ವಿರಕ್ತಿ : ಬ್ರಹ್ಮವೇ ತಾನಾದ ಮನುಜನು ಹಮ್ಮಳಿದು ನಿಸ್ಸಂಗನಾಗಿಹ ಧರ್ಮವೇ ಸಂನ್ಯಾಸವು (ಅಮೃತ. ೧೦-೯೬). ೩. = ಸಂನ್ಯಾಸಾಶ್ರಮ : ಸಂನ್ಯಾಸವು ವೇದೋಕ್ತವಲ್ಲ . . . ಗೃಹಸ್ಥಾಶ್ರಮವೇ ಆಶ್ರಮ ಸಂನ್ಯಾಸ ಪರಿಗ್ರಾಹ್ಯವಲ್ಲ (ಹಿಂದಸಾ. ೭೩). ೪. (ಒಬ್ಬನ ವಶಕ್ಕೆ ಒಪ್ಪಿಸಿದ) ನ್ಯಾಸ; ಇಡುಗೆ. ೫. (ಆಟಗಳಲ್ಲಿ ಪಂದ್ಯ ಕಟ್ಟಿದವರು ಒಡ್ಡುವ) ಪಣ; ಬಾಜಿ. ೬. ಸಾವು; ಮರಣ. ೭. ಒಂದು ಬಗೆಯ ಗಿಡ ಮತ್ತು ಅದರಿಂದ ತಯಾರಿಸಿದ ಸುಗಂಧತೈಲ. ೮. ಕರಾರು; ಸಂಧಾನ. [ಸಂ.]

**ಸಂನ್ಯಾಸಾಶ್ರಮ** (ನಾ). ಬ್ರಹ್ಮಚರ್ಯೆ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸಗಳೆಂಬ ನಾಲ್ಕು ಆಶ್ರಮಗಳಲ್ಲಿ ಕೊನೆಯದು; ಸಂನ್ಯಾಸಿಯಾಗಿರುವಿಕೆ : ಛಾಂದೋಗ್ಯೋಪನಿಷತ್ತನ್ನು ಮಾತ್ರ ವಿಚಾರಿಸಿದರೆ ಸಂನ್ಯಾಸಾಶ್ರಮವಿಲ್ಲ (ಹಿಂದಸಾ. ೧೫೪). [ಸಂ.]

**ಸಂನ್ಯಾಸಿ** (ನಾ). ೧. ತೊರೆಯುವವನು; ಬಿಡುವವನು. ೨. ಐಹಿಕ ಸುಖವನ್ನು ಸಂಪೂರ್ಣವಾಗಿ ತೊರೆದವನು; ವಿರಾಗಿ; ವಿರಕ್ತ. ೩. ಚತುರಾಶ್ರಮಗಳಲ್ಲಿ ಕೊನೆಯದನ್ನು ಸ್ವೀಕರಿಸಿದವನು; ಸಂನ್ಯಾಸಾಶ್ರಮವನ್ನು ಅವಲಂಬಿಸಿದವನು : "ಭಿಕ್ಷುಃ, ಪರಿವ್ರಾಟ್, ಕರ್ಮಂದಿನ್, ಪಾಕಾಕೋಶರಿನ್ – ಈ ೪ ಸಂನ್ಯಾಸಿಯ ಪೆಸರು" (ನಾಚಿರಾ. ೧೨೯); ಬಾಲಕಿಗೆ ಸಂನ್ಯಾಸಿದೇವರ ಮೇಲೆ ಮನವಾಯ್ತು (ಕುವ್ಯಾಅ. ೧೯-೩೬); ನಿತ್ಯಕರ್ಮಗಳ ಸುಮ್ಮನೇ ಬಿಟ್ಟಾತ್ಮಚಿಂತೆಯಲೊಮ್ಮೆಯೂ ಮನವಿರದೆ ಬಱಿದೇ ಹೆಮ್ಮೆಗವ ಸಂನ್ಯಾಸಿಯಾದುದಱಿಂದ ಫಲವೇನು (ಅಮೃತ. ೧೦-೯೬). ೪. ಆಹಾರವನ್ನು ಸೇವಿಸದಿರುವವನು. [ಸಂ. ಸಂನ್ಯಾಸಿನ್]

**ಸಂಪ$_{1}$** 'ಸಂಪು$_{2}$' ನೋ.

**ಸಂಪ$_{2}$** (ನಾ). ಒಂದು ಬಗೆಯ ಎತ್ತು : ನಿಲುವ ಸಂಪನು ಬೋಳ ಬಟ್ಟ ಕರಿಮಾಸ ಮುಂದೊಲೆವ ನಾನಾಪರಿಯ ಕಬ್ಬಸಿಗಳೊಳಗಾದ ಪಲವು ಪರಿಯೆತ್ತು ತೊಂಭತ್ತಾಱು ಲಕ್ಷಮೇಳೈಸಿ ಪಿಡಿದುವು ಗೆಲ್ಲಕೆ (ಸಿಂಗಿರಾ. ೩೫-೭). [?]

**ಸಂಪಗೆ, ಸಂಪಿಗೆ** (ನಾ). ೧. ಒಂದು ಬಗೆಯ ಮರ ಮತ್ತು ಸುಗಂಧದಿಂದ ಕೂಡಿದ ಅದರ ಹೂವು; ಚಂಪಕ : ಕಾದಲಿದಿರ್ಚೆ ಬಂದ ಪಗೆ ಸಂಪಗೆಯಂತೆ ಶಿಳೀಮುಖಕ್ಕೆ ಗೆಂಟಾದುದು (ಪಂಪಭಾ. ೧೨-೮೭); ಕೇದಗೆ ಸಂಪಗೆ . . . ಜಾದಿ ಮೊದಲಾದನೇಕಂ ಪೂದೋಂಟಂ ಸುರಭಿಪರಿಮಳಾಮೋದಂಗಳ್ (ಎಕ. VIII, ಸಾಗರ. ೧೯-೫೦; 1042); ಕಂಸ್ಪುಳ್ಳ ಸಂಪಗೆಯ ಪೂಗಳಂ ತಿಱಿತಂದು . . . ಒರ್ವ ಮಾಲೆಗಾಱಂ ಭರದಿ ಕೊಡಲು (ಬಸರ. ೧-೨೭). ೨. ಸಂಪಗೆಯ ಹೂವಿನ ಬಣ್ಣದ ಸೀರೆ : ಕ್ಷೀರಮಂಡಲ ಸಂಪಗೆ ತಾಳೆಸುರಳಿಯ ಸೀರೆಯನಾರು ಬಣ್ಣಿಪರು (ಅಮುಸಾಂ. ೪-೧೧). 'ಸಂಪಗೆಗಾವಿ' ಪರಾ. **ಸಂಪಿಗೆ** : ೧. ಕೊಟಾರ್ಯಿಪಡುಯ್ಯೊಱೆವರುಂ ಸಮ್ಪಿಗೆ ಸರ್ವ್ವಪರಿಹಾರ ಉಣ್ಬರುಂ ಗೊಮಣ್ಣ ಕೊಟ್ಟ (ಎಕ. VI. ಕೊಪ್ಪ. ೩೯-೬: ಸು. 700); ಸಂಪಿಗೆಯ ಕಂಪುಂಡ ಭ್ರಮರದಂತೆ ಸೌರಾಷ್ಟ್ರ ಸೋಮೇಶ್ವರಲಿಂಗದ ಪರಮಸುಖದೊಳು ಪರವಶವಾದ ಲಿಂಗೈಕ್ಯ (ಆದವ. ೪೯-೧೪೦); ಸಂಪಿಗೆಯ ಬಿರಿಮುಗುಳ ಬಾಗಿಲ್ಗಳಂ ತೆಗೆದು ಸೊಂಪಮರ್ದ ಜಾದಿನನೆಗಳ ಕೊನೆಗಳಂ ಬಿಗಿದು . . . ತೀಡಿದುದು ಸುಪ್ರಭಾತಾನಿಲಂ (ಉದ್ಭಟ. ೧೦-೧೨೦); ಸಂಪಿಗೆಯ ಬೀಜಗಳು ನೂರಾರು ಹಾಕಿದರೆ ಅವುಗಳಲ್ಲಿ ನಾಲ್ಕು ಮೂರುನಾಟುತ್ತವೆ (ಕೃಪಿಪ್ರ. ೨೦೦).

[< ಸಂ. ಚಂಪಕ./ ತಮಿ. ಚಮ್ಪಕ, ಚಮ್ಪಙ್ಕಿ, ಚೆಮ್ಪಕ; ಮಲ. ಚಮ್ಪಕ, ಚೆಮ್ಪಕ; ತುಳು. ಸಂಪಗೆ, ಸಂಪಯಿ, ಸಂಪಿಗೆ; ತೆಲು. ಸಂಪಂಗಿ, ಸಂಪಗೆ, ಸಂಪೆಗ; ಕೊಡ. ಚಪ್ಪಯೆ]

**ಸಂಪಗೆಗಾವಿ** (ನಾ). ಸಂಪಗೆಯ ಬಣ್ಣದ ಸೀರೆ : ಮಿಸುಪ ಸಂಪಗೆಗಾವಿ ಸಂಧ್ಯಾವಳಿ ಚೆಲ್ವ ಪೊಸಶುಭ್ರವಸನವನುಟ್ಟು ಎಸೆಯುವುದಯ ಸಂಜೆಯಿರುಳರಸನ ಬಲುಜಸವ ಬೀಱುತಲೈದಿದರು (ಕಂಸವಿ. ೨೧-೧೮). [ಸಂಪಗೆ + ಕಾವಿ]

**ಸಂಪಗೆಯರಳು** 'ಸಂಪಗೆಯಲರ್' ನೋ.

**ಸಂಪಗೆಯಲರ್, ಸಂಪಗೆಯರಳು** (ನಾ). ಸಂಪಿಗೆಯ ಹೂವು; ಚಂಪಕಪುಷ್ಪ: ನಾಗದ ಝಳುಂಬಕಂಗಳೊಳಂ ಸಂಪಗೆಯಲರ ಕಿಂಕಿಣಿಗಳೊಳಂ (ಕಾದಂಉ. ೭೮೧). **ಸಂಪಗೆಯರಳು** : ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದಡೆ ರಂಜನೆಯಲ್ಲದೆ ಅದಱ ಗಂಜಳ ಬಿಡದಲ್ಲ (ಬಸವ. ೯೩); ಉಳಿದ ಪುಷ್ಪದ ಪರಿಮಳವು ಪಥಿಸಿದರೆ ಸಂಪಗೆಯರಳ ಪರಿಮಳ ಪಥ್ಯವೇ ತುಂಬಿಗಳ ತಿಂತಿಣಿಗೆ (ಕುವ್ಯಾದ್ರೋ. ೪-೪೩).

[ಸಂಪಗೆ + ಅಲರ್$_{2}$]

**ಸಂಪಗೆವಣ್ಣ** (ನಾ). ೧. ನಸುಹಳದಿ ಹಾಗೂ ನಸುಗೆಂಪು ಬೆರೆತ ಸಂಪಗೆ ಹೂವಿನ ಬಣ್ಣ : ಸಂಪಗೆವಣ್ಣಮನುಗುಟ್ಟೆಳಗೆಂಪೊಂದಿದ ಪಸುರನಾಳ್ದ ತುದಿ ನಡು ಮೊದಲೆಂಬಿಂಪುಳ್ಳೆಸಟ್ಟಳ ಮೆಯ್ಯಿಂ ಕಂಪಂ ಕೆದಱಿದಪುವರಸ ಕಟಮೆಯ ಕೆಯ್ಗಳ್ (ಲೀಲಾಪ. ೫-೫೨). ೨. ಸಿಂಧೂರವರ್ಣದ ಬಟ್ಟೆ , — ವಸ್ತ್ರ : ಎಳೆದು ಬಿಳಿದು ಚಂದ್ರಗಾವಿ ಸಂಪಗೆವಣ್ಣ ಹಳದಿ ತನ್ನದು ನನ್ನದೆನುತ ಕಲಹವಾಡುತ ಬಿರುದಿಗೆ ಪೊಜಮಟ್ಟರು ಕಲಿಗಳು ರಣಕನುವಾಗಿ (ಕುರಾಸಾಂ. ೧೧-೧೯). [ಸಂಪಗೆ + ಬಣ್ಣ]

**ಸಂಪಗೆವೂ, ಸಂಪಗೆಹೂ, ಸಂಪಿಗೆಹೂ, ಸಂಪಿಗೆಹೂವು** (ನಾ). = ಸಂಪಗೆಯಲರ್ : ಕಾಲ್ಸಮನಿಸ ಪೊಸಬಂಡಿನ ಮೆಲ್ಸರಿಯಂ ಸುರಿಯುತಿರ್ಪ ಸಂಪಗೆವೂಗಳ್ ಬಲ್ಸೆಱೆವಿಡಿವಂತಿರ್ದುವು . . . ಪೆಣ್ದುಂಬಿಗಳಂ (ಕಬ್ಬಿಕಾ. ೬೦). **ಸಂಪಗೆಹೂ**: ಕೆಂಪಿಯೊರ್ವಳು ಬಂದು ರಾಯನ ಹಸ್ತಕ್ಕೆ ಸಂಪಗೆಹೂಗಳ ನೀಡಿ . . . ನಿಂದಳು (ಭರಚ. ೫-೩೨). **ಸಂಪಿಗೆಹೂ**: (ಕಿ). **ಸಂಪಿಗೆಹೂವು** : "ಚಂಪಕ ಸಂಪಿಗೆಹೂವು" (ಗಂಗಾಮ. ೧೨೭); "ಚಾಂಪೇಯ - ಸಂಪಿಗೆ ಹೂವು" (ಅಕಾನಿ. ೧೦-೨೩); ಶರತ್ಕಾಲದಲ್ಲಿ ಪಾದರಿ ಸಂಪಿಗೆ ಹೂವುಗಳನ್ನೂ . . . ಧರಿಸಬೇಕು (ಸಕವ್ಯ. ೪೫). [ಸಂಪಗೆ + ಪೂ$_{2}$]

**ಸಂಪಗೆಹೂ** 'ಸಂಪಗವೂ' ನೋ.

**ಸಂಪಣ** 'ಸಂಪಳೆ' ನೋ.

**ಸಂಪತ್ತಿ** (ನಾ). ೧. ಐಶ್ವರ್ಯ; ಸಿರಿ : ಬಿಡದೀಯಲ್ತಕ್ಕ ಸಂಪತ್ತಿ (ಶಮದ. ೨೩೪ ಪ್ರಯೋ); ಇಂತು ಸದ್ಭಕ್ತಿ ಸಂಪತ್ತಿಯಿಂ ಚೋಳಭೂಕಾಂತನಿರಲು (ಭಾವಚಿಂ. ೨-೨೨).

೨. ಸಮಗ್ರತೆ ; ಸಂಪೂರ್ಣತೆ. ೩. ಮೇಲ್ಮೆ; ಶ್ರೇಷ್ಠತೆ : ಮೆಱೆದರ್ ತಂತಮ್ಮ ಸಂಪತ್ತಿಯಂ ಕದನೋಚ್ಚಂಡಭುಜರ್ (ಪುಷ್ಪಪು. ೮-೩೯). ೪. ಆಧಿಕ್ಯ; ಹೆಚ್ಚಳ. ೫. ಒಳ್ಳೆಯ ಸ್ಥಿತಿ ; ಸುಸ್ಥಿತಿ . ೬. ಏಳಿಗೆ; ಅಭಿವೃದ್ಧಿ. ೭. ಅದೃಷ್ಟ; ಭಾಗ್ಯ: ಅನ್ಯನಾವಂ ವಿಟಂ ತೆರಳ್ಚುಗುಮಪತ್ಯಮಿಲ್ಲದ ಕುಲಕ್ಕೆ ಸಂಪತ್ತಿಯಂ (ಚಂದ್ರಪು. ೩-೬೩). [ಸಂ.]

**ಸಂಪತ್ತು** (ನಾ). ಐಶ್ವರ್ಯ; ಸಿರಿ : ಕಡಲು ಶಶಿಯುದಯಕ್ಕೆ ಹೆಚ್ಚುತ್ತಧಿಕವಿಭವದಲಿ ಕಡೆಗೆ ಸಂಪತ್ತೆಂಬುದಸ್ಥಿರ ಬಡತನಂಗಳು ಸಹಜವೆಂಬುದು ಕಡಲೊಳಾಳ್ವುದು (ಕೌಶಿರಾ. ೧೫-೩೭). [< ಸಂ. ಸಂಪದ್]

**ಸಂಪದ** (ನಾ). ೧. ಐಶ್ವರ್ಯ; ಸಂಪತ್ತು : ಎನ್ನ ಮತಿಯೆನ್ನ ಸುಖ[ವೆ]ನ್ನ ನಿಧಿ ಸಂಪದಂ ಬರುತ್ತೈದನಿದಿರ್ಗೊಳ್ಳಿರೇ ಎನ್ನ ಕಂದನಂ (ಸಂಬಿರ. ೯-೭೦); ತೊಲಗದ ಸಂಪದಂ ಸೊಬಗುಗುಂದದ ಯೌವನದೇಳ್ಗೆ . . . ಅನಾರತಂ ಸಮುಜ್ವಲಮೆನಿಸಿರ್ಪುದಾ ನಿಷಧದೇಶದ ಸನ್ನುತಸಜ್ಜನರ್ಕಳಾ (ನಳಚಂ. ೧೦); ಮುದದೊಳಾ ಬಸವದಂಡೇಶ್ವರಂ ತದ್ರಾಜಸದನಕ್ಕೆ ಧನಧಾನ್ಯ ಮೊದಲಾದ ಸಂಪದವನಿಂಬಿಟ್ಟನಾಕ್ಷಣದೊಳು (ಚೆಬಪು. ೫-೨೫). ೨. ಮೇಲ್ಮೆ; ಹೆಚ್ಚುಗಾರಿಕೆ : ನಾನು . . . ಅವಳ ಗುಣಸಂಪತ್ತಿಗೆ ಮಾರುಹೋದೆ. ಅರಮನೆಯ ಅರಸುಕುಮಾರಿಯರಲ್ಲಿಯೂ ಆ ಸಂಪದ ತೋರದು (ಹಾಷುತ್ತ. ೯೭). ೩. ಏಳಿಗೆ; ಉತ್ಕರ್ಷ : ಸದ್ಧರ್ಮಚಕ್ರಕ್ಕೆ ಸಂಪದಮಂ ಲೋಕದ ದೃಷ್ಟಿಗಸ್ತಪದಮಂ . . . ಪಡೆಯುತ್ತಿಕ್ಷ್ವಾಕುವಂಶೇಂದ್ರ ಶೈಲದಿನತ್ಯೂರ್ಜಿತತೇಜನು ಧ್ವವಿಸಿದಂ ತ್ರೈಲೋಕ್ಯನಾಥಂ ಜಿನಂ (ಪುಷ್ಪಪು. ೧೦-೨). ೪. ಆದೃಷ್ಟ; ಭಾಗ್ಯ. ೫. ಬಯಸಿದ ವಸ್ತುಗಳನ್ನು ಪಡೆಯುವಿಕೆ. ೬. ಆಧಿಕ್ಯ;ಹೆಚ್ಚಳ. ೭. ಪ್ರಯೋಜನ; ಫಲ. ೮. ಸಿದ್ಧಿ; ಸಾಧನೆ. ೯. ಸಂಪತ್ತಿನಿಂದ ಕೂಡಿದವನು; ಐಶ್ವರ್ಯವಂತ: ಎಲ್ಲರುಂ ಗುಣಯುತರ್ಕಱಿನರೆನಿಸರ್ಮನುಜರೆಲ್ಲರುಂ ಕಾಂತಾರಮಿತಭೋಗಸಂಪದರ್ಜರೆನಿಸರವ ನಿಳೆಯೊಳು (ಜೈಮಿಭಾ. ೨-೧೦). [ಸಂ. ಸಂಪದ್]

**ಸಂಪದವರು** (ಕ್ರಿ). ಐಶ್ವರ್ಯವು ಉಂಟಾಗು; ಶ್ರೀಮಂತಿಕೆ ಬರು : ಹುಟ್ಟುದರಿದ್ರಗೆ ಬಹಳ ಸಂಪದವರೆ ನೆಟ್ಟನೆ ಕೊರ್ಬುವಂದದಲಿ (ಮೋಹತ. ೧೭-೫). [ಸಂಪದ + ಬರು$_1$ (< ವರ್)]

**ಸಂಪದವಿ** (ನಾ). ಶ್ರೇಷ್ಠವಾದ ಸ್ಥಾನ; ಪರಮಪದವಿ; ಮೋಕ್ಷ : ಕಾಲಕಾಲ ನಿನ್ನ ಭಜನೆ ಗುಂಪಿನೊಳಗೆ ಇದ್ದು ಗುಪ್ತದಲ್ಲಿ ಸಂಪದವಿಗೆ ಮಾರ್ಗಮಾಡಿಕೊಂಡು ಜ್ಞಾನ ಸಂಪಾದಿಸಿಕೊಳ್ಳುತ ಇದ್ದೆನು (ವಿಶಾಸು. ೪೭-೧). [ಸಂ.]

**ಸಂಪದವೇಱು** (ಕ್ರಿ). ಅತಿಶಯತೆಯನ್ನು ಹೊಂದು : ಕರಣಂ ಕಳೆಯೇಱೆ ಸಿರಿಮೊಗಂ ಸಂಪದವೇಱೆ ದಂಡಿಗೆಯಿಂ ಘಳಿಲನಿಳಿದು (ಬಸರ. ೧೦-೧೪). [ಸಂಪದ + ಏಱು$_1$ (< ಏಱ್$_1$)]

**ಸಂಪದೆ** (ನಾ). ಸಿರಿತನವುಳ್ಳವಳು; ಐಶ್ವರ್ಯವಂತೆ : ಉದಯಾಸ್ತೋನ್ನತ ಶೈಲಸೇತುಹಿಮವತ್ಕುತ್ಕೀಳಪರ್ಯಂತ ಸಂಪದೆಯಂ . . . ಸಾಧಿಸಿ ಕಬ್ಬಿಗಂಗೆ ನೆಲನಂ ನಿರ್ವ್ಯಾಜದಿಂದಂ ನಿಮಿರ್ಚಿದ ಗೆಲ್ಲಂ ಭುವನೈಕರಾಮಮಹಿಪಂಗಕ್ಕುಂ (ಕಾವ್ಯಾವ. ೧೭೩). [ಸಂ. ಸಂಪದಾ]

**ಸಂಪದ್ಯುಕ್ತ** (ಗು). ೧. ಶ್ರೀಮಂತವಾದ; ಸಂಪತ್ತಿನಿಂದ ಕೂಡಿದ. (ನಾ). ೨. ಅತಿಶಯವಾದ ಸಂಪತ್ತುಳ್ಳವನು : ಸಂಪದ್ಯುಕ್ತನಾದ ನೀನು ನರರಿಗೆಲ್ಲ ಶಕ್ತಿರೂಪನಾಗಿದ್ದೀಯೆ (ಋಗ್ವಾರ. ೧೮). [ಸಂ.]

**ಸಂಪನ್ನ** (ಗು). ೧. ಸಿರಿವಂತಿಕೆಯ; ಐಶ್ವರ್ಯದಿಂದ ಕೂಡಿದ. ೨. ಸಮೃದ್ಧವಾದ: ತಮಿಳು ಹಳೆಯ ಭಾಷೆಯಾಗಿರುವುದರ ಜೊತೆಗೆ ಸಂಪನ್ನ ಭಾಷೆಯೂ ಹೌದು (ದ್ರಾವಿವಿ. ೧೦೭). ೩. ಶ್ರೇಷ್ಠವಾದ : ಸಂಪನ್ನಸಾಹಸ ಪುಳಿಂದರು ಜೋಡಿಯಿಂ ಕವಿದು ಹೊಕ್ಕು ಹಂದಿಯ ತಿವಿದರು (ಹಚಕಾ. ೬-೯); ವೃಷಭನ ರೂಪಾಗಿ [ಯ]ಜಮಾನನುಂ ಆಚಾರ್ಯ್ಯನುಂ ತಾನೆಯಾಗಿ ಯೋಗಾದಿ ಸಂಪಂನ[ಬ]ಳೆಯಂಗಳೆಲ್ಲವಂ ಸಂಪಾದಿಸೀ(ಸಿ) (ಎಇ. XXIII, ೧೯೪-೭;1265). ೪. ಅದೃಷ್ಟಶಾಲಿಯಾದ; ಸುದೈವದಿಂದ ಕೂಡಿದ. ೫. ಮುಗಿಸಿದ; ಕೊನೆಗಾಣಿಸಿದ. ೬. ಸಮಗ್ರವಾದ; ಪರಿಪೂರ್ಣವಾದ : ಸಂಪನ್ನಭಕ್ತಿಯುಕ್ತನಿಳಿಂಪವಧೂವಿತತಿ ವಿಮಳಗಂಧೋದಕದಿಂ ಸಿಂಪಿಣಿಯನೆಸಗಿ ನಿಜತನುವಂ ಪುಳಕಕುಳಕ್ಕೆ ಮಾಡಿದತ್ತಾಶ್ರಯಮಂ (ವರ್ಧಪು. ೧೪-೪೧). ೭. ಮಾಗಿದ; ಪಕ್ವವಾದ. ೮. ಪಡೆದ; ಗಳಿಸಿದ : ಸನ್ನುತಕುಲಾಚಾರಗುಣವೇದಶಾಸ್ತ್ರಸಂಪನ್ನ ಭೂಸುರರಿನಿಬರೀ ತೆರದ ಸೌಖ್ಯತರಮನ್ನಣೆಗಳಂ ಪಡೆದು (ಜೈಮಿಭಾ. ೨-೨೮). ೯. ತಕ್ಕ; ಅರ್ಹವಾದ; ಯುಕ್ತವಾದ. (ನಾ). ೧೦. ಸಿರಿ; ಐಶ್ವರ್ಯ. ೧೧. ಸುಕುಮಾರತೆ; ಲಾವಣ್ಯ. ೧೨. ಶ್ರೀಮಂತ; ಧನಿಕ : ದಾಸೋಹವೆಂಬ ಸೋಹಗೊಂಡು ಹೋಗಿ ಗುರುವ ಕಂಡೆ ಲಿಂಗವ ಕಂಡೆ ಜಂಗಮವ ಕಂಡೆ ಪ್ರಸಾದವ ಕಂಡೆ ಇಂತೀ ಚತುರ್ವಿಧಸಂಪನ್ನನಾದೆ (ಬಸವ. ೭೭೮). ೧೩. ಸಜ್ಜನ; ಉತ್ತಮ : ಅತಿಗಂಭೀರನುದಾರಧೀರನು ಮಹಾಸಂಪನ್ನ ಸತ್ಯಾತ್ಮಂ . . . ಪತಿಕಾರ್ಯಂ ವರಮಂತ್ರಿಯೈ (ಸೋಮೇಶ. ೭೧); ನಾಲ್ಕು ಮಂದಿ ಸಂಪನ್ನರಿಗೆ ತಿಳಿಸಿ ಅವರು ಹೇಳಿದಂತೆ ಹಂಚಿಕೊಳ್ಳೋಣ (ಕಥಾಮಂ. IV, ೭೧). ೧೪. ಹೊಂದಿದವನು; ಕೂಡಿದವನು : ಒಂದು ದೆವಸಂ . . . ನಿತ್ಯನೇಮಸಂಪನ್ನನಾಗಿ ಬಿಜ್ಜಳನರಮನೆಗೆ ಪೂಜಿಮಟ್ಟು ನಡೆತಪ್ಪಾಗಳು (ಬಸರ. ೬-೬); ಎನ್ನ ಬಹುಮಾನಾವಮಾನವು ನಿನ್ನದೈಸಲೆ ಮಾವ ನೀ ಸಂಪನ್ನ ಕೃತ್ರಿಮವಿದ್ಯನಾದರೆ ತೊಡಚು ಸಾಕದನು (ಕುವ್ಯಾಸ. ೧೨-೨೦). [ಸಂ.]

**ಸಂಪನ್ನತೆ** (ನಾ). ೧. ಶ್ರೀಮಂತಿಕೆ; ಸಿರಿತನ. ೨. ಸಮೃದ್ಧಿ; ಬಾಹು[illegible]: ಅಂಬುಜಾಕರದ ಸೀಕರಮಂ ನಡೆಗೊಂಡು ಮಾಳೆಸಂಪನ್ನತೆಯೊಳ್ ಪೊ[illegible]ಟ್ಟು ಪೊಸವೂವಿನ ಕಂಪಿನೊಳಟ್ಟು . . . ಸಮೀರ[ನ್ನ]ಸುಸೋಂಕಿ (ಶಾಂತಿಪು. ೧೮ ೧೧೨); ಮನ್ನಿಸಿದನವರುಗಳನತಿಸಂಪನ್ನತೆಯ ಧನಧಾನ್ಯದಲಿ (ತೊರರಾ. ೮ ೫-೧೭). ೩. ಒಳ್ಳೆಯತನ; ಸೌಜನ್ಯ : ಎನ್ನೊಡನೇಕೆ ನಿನ್ನ ಮತಿ . . . ನಿನ್ನ ಸಂ[illegible]ನ್ನತ ನಿನ್ನ ಮಂತ್ರಗತಿ (ಗಿರಿಕ. ೬-೩೭); ತನ್ನನಿಯನಿಗೂಳಿಗದವಳಪ್ಪುದು ಸಂಪನ್ನತೆಯ[illegible]ಬಗೆವುದು (ಹಬಿಬ. ೩-೩೫). ೪. ಶ್ರೇಷ್ಠತೆ; ಮೇಲ್ಮೆ : ಇನ್ನು ಸುಡು ಸುಡು ಧವ ಸಂಪ್ರತಿಪನ್ನ ಗುಣದಾಚಾರಗಳ ಸಂಪನ್ನತೆಯನೆಂದೊಜಿಲಿ ಮಱುಗಿತು ನಿಖಿಳಪರಿವಾರ (ಕುವ್ಯಾಆ. ೮-೯೦); ಸಂಸ್ಕೃತಿಯ ಸೌಜನ್ಯಭಕ್ತಿಯಲಿ ಸೊಬಗಿನಲಿ ಸರ್ವಸಂಪನ್ನತೆಯೊಳಾತಂಗೆ ಸಮನಿಲ್ಲ ತ್ರೈಜಗದೊಳುಂ (ಚಿತ್ರಾಂಗ. ೭೨-೧೯೮೫). ೫. ಸೊಬಗು; ಅಂದ : ಅವನ ಮನುಜತೆಯ ತನು ನೋಟ್ಪವಱೊಳ್ ಮಾಣಿಸಿದುದಾದಮೆಮೆ[illegible]ಮಿಕ್ಕುವುದಂ ಎನಿಸಿ ಸಕಲಸೌಂದರ್ಯಸಾರಸಂಪನ್ನತೆಯನಪ್ಪುಕೆಯ್ದು (ಚಂದ್ರಪು. ೪-೮೪[illegible]). [ಸಂ. ಸಂಪನ್ನತಾ]

**ಸಂಪನ್ನತೆವಿಡಿ** (ಕ್ರಿ). ಅಂದವಾಗು; ಸೊಗಸಾಗು : ಪ[illegible]ರ ಚಳೆಯ ಕತ್ತುರಿಯ ಸಾರಣೆ ಮುತ್ತಿನುನ್ನತರಂಗವಲ್ಲಿಗಳ ಚೆನ್ನಾದ ಕುಂಕುಮಗಾರಣೆಯಿಂದ ಸಂಪನ್ನತೆ ವಿಡಿದುದಾಸ್ಥಾನ (ಕಂನವಿ. ೮-೧೧). [ಸಂಪನ್ನತೆ + ಪಿಡಿ$_1$]

**ಸಂಪನ್ನಿಕೆ** (ನಾ). ೧. ಐಶ್ವರ್ಯ;ಸಂಪತ್ತು : ಮಾನನಿಧಿಯಾಜ್ಞೆಯಲಿ ನಡೆದನನೂನ ಸಂಪನ್ನಿಕೆ [ಪಾಠಾಂ. ನ್ನತೆ]ಯ ನಿಜಸುಖದಾನಿ ನಿತ್ಯಾತುಮನ ನೆನೆವುತ ಸಲಹಿದನು ಧರೆಯ (ನಿಭಾಗ. ೪-೯-೪೬). ೨. ಒಳ್ಳೆಯತನ ; ಸಜ್ಜನಿಕೆ : ಮುನ್ನ ಮಾಡಿದ ಕ್ರೋಧವಿನ್ನು ಮರೆದಿಹುದಿಲ್ಲ ಚನ್ನೆಯನು ಕೊಡುವ ಸಂಪನ್ನಿಕೆಯ ಕಾಣೆ (ಕಂದಕೊ. ೧೯೧-೪). ೩. (ಫಲಪುಷ್ಪಗಳಿಂದ ತುಂಬಿ) ಸಮೃದ್ಧವಾಗಿರುವಿಕೆ : ಬೇರಿಗೆ ನೀರನೆಱೆದಲ್ಲಿ ಆ ಗಿಡುವಿಗೆ ಕಡೆ ನಡು ಪೊದಲೆನ್ನದೆ ಸರ್ವಾಂಗವ ವೇಧಿಸಿ ಸಂಪನ್ನಿಕೆಯು ದೃಕ್ಕಿಂಗೆ ತೋಱುವಂತೆ (ಅಱಿವಮಾ. ೫. ೧೦೯-೧೭); ಆ ತೋಂಟವತಿಸಂಪನ್ನಿಕೆಯನಪ್ಪುಗೆಯ್ದು ರಂಜಿಸದಿರ್ದೊಡೆ ಮಾರ್ದನಿಯದೇಂ ಮೊದಲ್ ಕೆಱೆಗೆ ಕುಱಿತರ್ಥಮಿಲ್ಲಿರ್ದ ಕೆಲಸಕೆ ನೆಱೆವುದೇಯೆಂದು (ಪದ್ಮರಾ. ೬-೪೨). [ಸಂಪನ್ನ + - ಇಕೆ./ ಸಂ. ಸಂಪನ್ನಕ]

**ಸಂಪನ್ನೆ** (ನಾ). ೧. ಸಂಪತ್ತನ್ನು ಹೊಂದಿರುವವಳು; ಐಶ್ವರ್ಯವಂತೆ: ಕುಲರೂಪಯೌವನಸೌಭಾಗ್ಯದಿ ಸಂಪನ್ನೆಯರಪ್ಪ ವನಿತೆಯರ್ಗೆ ಸುಭಗನುಮನುಕೂಳನುಮಪ್ಪ ಪುರುಷನೊಡನಿರ್ಪುದಱಿಂದಮಗ್ಗಳಂ ಜನ್ಮಫಲಮುಳ್ಳೊಡೆ ಪೇೞಿಂ (ಚಾಪುಂಪು. ೩೦೨); ವರರಾಜೀವಲೋಚನೆ ರಚಿತರಂಜನೆ ಸಕಲಸಂಪನ್ನೆ . . . ಮಾಯಾದೇವಿ ಹುಟ್ಟಿದಳಖಿಳವಿಭವದಲಿ (ಪ್ರಭುಲೀ. ೩-೧೦); ಚಿಕ್ಕದೇವರಾಜಚಂದ್ರಮನ ಪಟ್ಟದ ರಾಣಿ ಸಕಲಸದ್ಗುಣಸಂಪನ್ನೆ (ಹದಿಬ. ೧-೧೪). ೨. ಶ್ರೇಷ್ಠಳಾದವಳು; ಉತ್ತಮ ಸ್ತ್ರೀ : ಇಂಥ ತಂದೆಯ ಧರ್ಮಬುದ್ಧಿಯ ವಾತಾವರಣದಲ್ಲಿ ಬೆಳೆದ ರೋಹಿಣಿ ಸಂಪನ್ನೆಯಾಗಿದ್ದಳು (ರಂಗರೋ. ೭೧). [ಸಂ. ಸಂಪನ್ನಾ]

**ಸಂಪನ್ಮೂಲ** (ನಾ). ಸಂಪತ್ತಿನ ಆಕರ, – ನೆಲೆ : ಆಮದಿನಿಂದ ದೇಶದ ಸಂಪನ್ಮೂಲಗಳ ಬೆಳವಣಿಗೆಯಾಗುತ್ತದೆ . . . ಸಂಪನ್ಮೂಲಗಳನ್ನು ಹೆಚ್ಚಿಸಲು ಹೊರದೇಶಗಳಿಂದ ಆಮದುಮಾಡಿಕೊಳ್ಳುವ ಯಂತ್ರೋಪಕರಣಾದಿಗಳು ಅಗತ್ಯ (ಕವಿಕೋ. I, ೮೨೪). [ಸಂ.]

**ಸಂಪಯ್ಯ** (ನಾ). ಒಬ್ಬಾತನ ಹೆಸರು : ಕಾಮಯ್ಯನು ಸಮ್ಪಯ್ಯನು XXX ಮೂವದಿಮ್ಬರು ಈ ಧರ್ಮ್ಮಮಾ XXX (ಎಕ. IV (R), ಕೊಳ್ಳೆಗಾ. ೩೮-೮; ಸು. 9ನೆಯ ಶತ). [ಸಂಪ$_7$ + ಅಯ್ಯ$_1$]

**ಸಂಪರಾಯ** (ನಾ). ೧. ಕಾಳಗ; ಯುದ್ಧ. ೨. ಕೇಡು; ವಿಪತ್ತು. ೩. ಭವಿಷ್ಯತ್ಕಾಲ. ೪. ಮಗ. ೫. ಸಾವು; ಮರಣ. [ಸಂ.]

**ಸಂಪರ್ಕ** (ನಾ). ೧. ಒಂದರೊಡನೊಂದನ್ನು ಬೆರೆಸುವಿಕೆ; ಮಿಶ್ರಮಾಡುವಿಕೆ. ೨. ಸೇರಿಕೆ; ಸಂಯೋಗ. ೩. ಸಂಬಂಧ; ಸಹವಾಸ : ಪ್ರಕೃತಿಯ ಸಂಪರ್ಕವನ್ನು ಮಾತ್ರವಲ್ಲದೆ ಸೃಷ್ಟಿಮೂಲವಾದ ಒಂದು ನರ್ತನವನ್ನೂ ಅವುಗಳಲ್ಲಿ ನಾವು ಕಾಣಬಹುದು (ಸೌಂದಸ. ೧೩೪). [ಸಂ.]

**ಸಂಪರ್ಕಭಾಷೆ** (ನಾ). ಪರಸ್ಪರ ವ್ಯವಹಾರದಲ್ಲಿ ಬಳಸುವ ಭಾಷೆ : ಯಾವುದೇ ಜೀವಂತಭಾಷೆ ತನ್ನ ಸಂಪರ್ಕಭಾಷೆಗಳ ಪ್ರಭಾವದಿಂದ ಹೇಗೆ ತಾನೆ ದೂರವಿರಲು ಸಾಧ್ಯ? (ದ್ರಾವಿವಿ. ೧೧೧). [ಸಂ. ಸಂಪರ್ಕಭಾಷಾ]

**ಸಂಪರ್ಕಸಾಧನ** (ನಾ). ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ತಂತಿ, ರೈಲು ಮುಂತಾದುವುಗಳ ಮೂಲಕ ಸಂಬಂಧವನ್ನು ಉಂಟುಮಾಡುವ ಸಾಧನ : ಸಂಪರ್ಕಸಾಧನಗಳು ಹೆಚ್ಚಿದಂತೆಲ್ಲಾ ದೇಶದ ಪ್ರಗತಿ ತ್ವರಿತವಾಗಿ ಸಾಗುತ್ತದೆ (ರೂಢಿ). [ಸಂ.]

**ಸಂಪರ್ಕಿಸು** (ಕ್ರಿ). ೧. ಸಂಬಂಧವನ್ನು ಹೊಂದು; ಕೂಡು : ಕೀಟಗಳಲ್ಲಿ . . . ಉಭಯಲಿಂಗಿ ಹೆಣ್ಣಿನ ಆಕಾರ ಮತ್ತು ನಡತೆ ಅಪೂರ್ವ. ಗಂಡಿನೊಡನೆ ಸಂಪರ್ಕಿಸಬಹುದು (ಕೀಟಜ. ೫೯). ೨. ಭೇಟಿಯಾಗು; ಸಂಧಿಸು : ಹೆಚ್ಚಿನ ಮಾಹಿತಿಗಳಿಗೆ ನಿಮ್ಮ ಕ್ಷೇತ್ರದ ಅಧಿಕಾರಿಯನ್ನು ಸಂಪರ್ಕಿಸಿ (ರೂಢಿ). [ಸಂಪರ್ಕ + - ಇಸು$_3$]

**ಸಂಪಲ್** (ನಾ). ಒಂದು ಊರಿನ ಹೆಸರು : ಕುಮ್ಬಿಸೆಯ ಮನೆ ಮನೆಯರ ಚೋರವಯ್ಯ ಸಮ್ಪಲೊಳಿಮ್ರ್ಮತ್ತಲ್ ಸಾಲೆಯು ಬಿಟ್ಟಂ (ಎಕ. VIII, ಸೊರಬ. ೮೯-೧; 912). [?]

**ಸಂಪಲಿ** 'ಸಂಬಲಿ' ನೋ.

**ಸಂಪಳ** 'ಸಂಪಳೆ' ನೋ.

**ಸಂಪಳಗ** (ನಾ). ಹಳದಿವರ್ಣ ಮಿಶ್ರವಾದ ಬಿಳಿಯ ಬಣ್ಣದ ಒಂದು ಜಾತಿಯ ಕುದುರೆ : ಶ್ವೇತಾಂಗದೊಳ್ ವಿರಾಜಿಸೆ ಪೀತಚ್ಛವಿ ನಿಬಿಡಮಾಗೆ ಹರಿ ಸಂಪಳಗಂ (ಅಶ್ವಶಾ. ೨-೧೭). 'ಕಾರಳಗ', 'ಬೋರಳಗ', 'ಸಂಪ$_2$' ಪರಾ. [? + ಅಳಗ$_1$]

**ಸಂಪಳಿ** 'ಸಂಪಳೆ' ನೋ.

**ಸಂಪಳಿಸು** 'ಸಂಬಳಿಸು$_2$' ನೋ.

**ಸಂಪಳೆ,** ಸಂಪಣ, ಸಂಪಳ, ಸಂಪಳಿ (ನಾ). (ದೋಸೆ ಹಿಟ್ಟಿನ ಹದಕ್ಕೆ) ಕಲಸಿದ ಹಿಟ್ಟು : ಕಾಯ್ದ ಕರ್ಬೊನ್ನ ಪೆರ್ಗಾವಲಿವೋಲಾಯ್ತು ನೆಲಂ ಸಂಪಳೆ[ಪಾಠಾಂ. ಸಂಪಣೆ, ಸಿಂಪಣೆ, ಸಿಂಪಳೆ, ಸಿಂಪಣೆ] ಯನೆಱೆವವೊಲ್ಕಾಯ್ದು ಚುಯ್ಯೆಂದುವೇೞುಂ ಕುಲ ಪಾರಾವಾರಂ (ಜಗವಿ. ೧೭-೭೩); (ಸೂಕ್ತಿಸು. ೧೦-೧೦೨ ನೋ); ಸಂಪಳೆಯೊಳುಳ್ಳಿ ಶುಂಠಿಯಿಕ್ಕಿ . . . ಮಿಸುಪ ಚೊಟ್ಟೆಯೊಳು ಬಿಡೆ ಬುಱುಬುಱನೆಯುಬ್ಬುವುದು (ಸೂಪಶಾ. ೧-೬೦); ಕಡಲೆಯ ಬೇಳೆಯ ನೆನೆಯಿಕ್ಕಿ ಸಣ್ಣವಾಗಿ ಅರೆದು . . . ಸಂಪಳೆಯ ಕಲಸಿ, ಕಾವಲಿಯ ಮೇಲೆ ದೋಸೆಯಾಗಿ ಅಡುವುದು (ಭೀಮಸೂ. ೨೦). **ಸಂಪಣ** : ಬೇಸಗೆಕಾಲಮೆಂಬಬಳೆ ಬಟ್ಟುಗಳೆಂಬೊಲೆಗಲ್ಲಗಳಲ್ಲಿ ಬೈತೀ ಸಕಳೋರ್ವಿಯೆಂಬ ಪೊಸಗಾವಲಿಯಂ ರವಿವಹ್ನಿಯಿಂದೆ ತೋಯಾಶಯವೆಂಬ ಸಂಪಣಮನರ್ಪಿಸಿ ತಳ್ತುರಿಯಲ್ಕೆ ಕಾಷ್ಠೆಗಳ್ ದೋಸೆಯನ್ನಟ್ಟವೋಲ್ ಮಳಲರಾಶಿಗಳೊಪ್ಪಮನಾಳ್ದುವಾಕ್ಷಣಂ (ಬಾಧಪು. ೪-೭೮). **ಸಂಪಳ** : ಬಿಳಿಯ ಕಡಲೆಯ ಸಣ್ಣ ಹಿಟ್ಟು ಸೋದಿಸಿ ಹಾಲಿನೊಳಗಿಕ್ಕಿ ಸಂಪಳವ ಮಾಡಿ ತೆಂಗಿನ ಕರಟದೊಳಗೆ ಕಿಱುವೆರಲ ಗಾತ್ರದ ವೆಜ್ಜವಂ ಮಾಡಿ ತುಂಬಿ ತುಪ್ಪವನು ಕಾಸಿ ಇಳಿಯ ಬಿಡೆ (ಸೂಪಶಾ. ೧-೫೭). **ಸಂಪಳಿ** : ಆ ಕುದುಪಲಕ್ಕಿವಿಟ್ಟಿನೊಳುಳಿದ ತರಿಯ ನುಚ್ಚೋಗರದ ತೆಱದಿನಟ್ಟಱಿದು ಕತ್ತರಿಸಿದೆಳೆಯಲ್ಲ ನೀರುಳ್ಳಿ ಜೀರಿಗೆಯಿಕ್ಕಿಯಿರುಳು ಸಂಪಳಿ[ಪಾಠಾಂ. ಳೆ] ಮಾಳ್ಪುದು (ಸೂಪಶಾ. ೧-೬೧). [?]

**ಸಂಪಾಕ** (ನಾ). ೧. ಹದವಾಗಿ ಬೇಯಿಸುವುದು, – ಪಕ್ವಗೊಳಿಸುವುದು. ೨. ಹದವಾಗಿ ಮಾಗುವುದು. ೩. ಒಂದು ಬಗೆಯ ಮರ; ಕಕ್ಕೆ. [ಸಂ.]

**ಸಂಪಾತ** (ನಾ). ೧. ಡಿಕ್ಕಿ; ತಾಕಲಾಟ : ಇಂತಹ ಸ್ಥಾಯಿ ತರಂಗವೇರ್ಪಡಬೇಕಾದರೆ ವಿರುದ್ಧದಿಕ್ಕುಗಳಲ್ಲಿ ಪ್ರಸರಿಸುತ್ತಿರುವ ಎರಡು ಅಲೆಗಳು ಒಟ್ಟುಗೂಡಿ ಸಂಪಾತವಾಗಬೇಕು (ಭೌತವಿ. ೧೬೭). ೨. ಪರಸ್ಪರ ಎರಡು ವಸ್ತುಗಳು ಸಂಧಿಸುವ ಸ್ಥಳ; ಸಂಗಮ. ೩. ಗುಂಪು; ದಟ್ಟಣೆ : ವಾಹನಗಳ ಸಂಪಾತದಲ್ಲಿ ಕಾರು ಸಿಕ್ಕಿಬಿತ್ತು (ರೂಢಿ). ೪. ನಡೆಯುವುದು; ಚಲಿಸುವುದು. ೫. ಕೆಳಗಿಳಿಯುವಿಕೆ; ಅವರೋಹಣ. ೬. ಕೆಳಗೆ ಬೀಳುವಿಕೆ; ಪತನ. ೭. ಪಕ್ಷಿಗಳ ಹಾರಾಟದಲ್ಲಿ ಒಂದು ಬಗೆ. ೮. ಎಡೆಬಿಡದೆ ಸುರಿಯುವಿಕೆ : ಕನಕವಾಲುಕವೆತ್ತಿ ದಿವ್ಯಾಮೋದದ ಪನ್ನೀರ ಸಂಪಾತವನು (ಜ್ಞಾನಚ. ೬-೮೭). [ಸಂ.]

**ಸಂಪಾತನ** (ನಾ). ಬೀಳುವಿಕೆ; ಪತನ : ಶತ್ರುಶಲಭಸಂಪಾತನವಿಸ್ಫುರಿತಪ್ರದೀಪನಾ ಕುರುಧರೆಯೊಳ್ ೯:ರುಪತಿಯನಱಸಿದಂ ಪವನಸುತಂ (ಗದಾಯು. ೬-೨೭). [ಸಂ.]

**ಸಂಪಾದ** (ಗು). ೧. ಗಳಿಸಿದ; ಪಡೆದ : ಉದುಭಟನೆನಿಪ್ಪ ಮಹಂತನಿಪ್ಪನು . . . ಶ್ರುತಿವೇದಾಂತಶಾಸ್ತ್ರಪುರಾಣಸಂಪಾದ್ಯೈಕಭಕ್ತಿಯಲಿ (ಬಸಪು. ೫೭-೬). (ನಾ). ೨. ಪೂರೈಕೆ; ನೆರವೇರಿಕೆ. ೩. ಗಳಿಕೆ; ಸಂಪಾದನೆ. [ಸಂ.]

**ಸಂಪಾದಕ** (ಗು). ೧. ಗಳಿಸುವ; ಸಂಪಾದಿಸುವ. (ನಾ). ೨. ನೆರವೇರಿಸುವವನು; ಪೂರೈಸುವವನು. ೩. (ಪ್ರಕಟಿಸತಕ್ಕ) ಗ್ರಂಥವನ್ನು ಪರಿಷ್ಕಾರ ಮಾಡುವವನು : ಗ್ರಂಥಕರ್ತನ ಒಂದು ಕೃತಿಯ ಸ್ವಹಸ್ತಾಕ್ಷರಪ್ರತಿ ದೊರಕಿದರೆ ಅದನ್ನು ಪರಿಷ್ಕಾರಗೊಳಿಸುವ ಅವಶ್ಯಕತೆಯೇನೂ ಇರುವುದಿಲ್ಲ. ಸಂಪಾದಕನು ಇದಕ್ಕಾಗಿ ಕಷ್ಟಪಡಬೇಕಾದುದಿಲ್ಲ (ಕನ್ನಸಂ. ೧೩೭). ೪. (ಪ್ರಕಟವಾಗುವ) ಪತ್ರಿಕೆ ಮೊದಲಾದುವನ್ನು ಪರಿಷ್ಕರಿಸುವವನು : ಕೆಲವೇ ತಿಂಗಳುಗಳಲ್ಲಿ ಅವನು ಗೆಝೆಟಿನ ಸಂಪಾದಕನಾದನು (ಮಾವಾದ. ೧೭). [ಸಂ.]

**ಸಂಪಾದಕತ್ವ** (ನಾ). ೧. (ಪ್ರಕಟಿಸತಕ್ಕ) ಗ್ರಂಥವನ್ನು ಪರಿಷ್ಕರಿಸುವಿಕೆ : ಸಂಪಾದಕತ್ವದ ಗುಂಗು ನಿನಗೆ ಏನು ಮಾಡಿದರೂ ಕಡಿಮೆ ಆಗಲಿಲ್ಲ (ಇಷ್ಟಕ. ೨೯೪). ೨. (ಪ್ರಕಟವಾಗುವ) ಪತ್ರಿಕೆಯನ್ನು ಪರಿಷ್ಕರಿಸುವಿಕೆ : ಪರಮೇಶ್ವರ ಪಿಳ್ಳೆ, ಕರುಣಾಕರ ಮೆನನ್ ಮೊದಲಾದವರು ಹಿಂದು ಪತ್ರಿಕೆಯ ಸಂಪಾದಕತ್ವವನ್ನು ವಹಿಸಿದರು (ಪತ್ರಿಕಾ. ೨೯). [ಸಂ.]

**ಸಂಪಾದಕಿ** (ನಾ). ೧. (ಪ್ರಕಟಿಸತಕ್ಕ) ಗ್ರಂಥವನ್ನು ಪರಿಷ್ಕರಿಸುವವಳು : ಆಕೆ ಸಂಶೋಧನ ಸಂಸ್ಥೆಯಿಂದ ಪ್ರಕಟವಾಗುವ ಗ್ರಂಥಗಳ ವಿಭಾಗದ ಸಂಪಾದಕಿಯಾಗಿದ್ದಾಳೆ (ರೂಢಿ). ೨. (ಪ್ರಕಟವಾಗುವ) ಪತ್ರಿಕೆಯನ್ನು ಪರಿಷ್ಕರಿಸುವವಳು : ಆಕೆ ದಿನಪತ್ರಿಕೆಯೊಂದರ ಕಛೇರಿಯಲ್ಲಿ ಸಂಪಾದಕಿಯಾಗಿದ್ದಾಳೆ (ರೂಢಿ). [ಸಂಪಾದಕ + - ಇ$_2$]

**ಸಂಪಾದಕೀಯ** (ನಾ). ಸಂಪಾದಕರು ಅಥವಾ ಸಂಪಾದಕನ ಜವಾಬ್ದಾರಿಯ ಮೇಲೆ ಬರೆದು ಪ್ರಕಟವಾದ ವೃತ್ತಪತ್ರಿಕೆಯ ಲೇಖನ : ಆ ಕಾಲದಲ್ಲಿ ರಾಜಕಾರಣಿಗಳು ವೃತ್ತಪತ್ರಿಕೆಗಳ ಸಂಪಾದಕೀಯಗಳನ್ನು ಓದಿ ತಮ್ಮ ಅಭಿಪ್ರಾಯ ಗಳನ್ನು ಸರಿಯಾಗಿ ಅಣಿಗೊಳಿಸುತ್ತಿದ್ದರು (ಪತ್ರಿಕಾ. ೨). [ಸಂ.]

**ಸಂಪಾದನ** (ನಾ). ೧. ಗಳಿಕೆ; ಆರ್ಜನೆ : ನಿನ್ನ ಸಂಪಾದನಂ ಮೆಯ್ಯ ಸಾಕುವ ಭಾಗ್ಯವಲ್ತೆ (ಸಂಸಪ. ೨೨-೩೦). ೨. ಪೂರೈಸುವಿಕೆ; ನೆರವೇರಿಕೆ. ೩. (ಪ್ರಕಟಿಸತಕ್ಕ) ಗ್ರಂಥದ ಪರಿಷ್ಕಾರ : ಈ ಸಂಪಾದನದಲ್ಲಿ, ಈ ಕಥನರೀತಿಯಲ್ಲಿ . . . ವಿನಯದಿಂದೊಪ್ಪಿಸಿ ವಿರಮಿಸುತ್ತೇನೆ (ಬದುಕ. ೧೧ ಪ್ರಸ್ತಾವನೆ). [ಸಂ.]

**ಸಂಪಾದನಂಗೆಯ್** (ಕ್ರಿ). ಗಳಿಸು; ಸಂಪಾದಿಸು : ಮರಳಿ ಬಂದಾವು ಭಿನ್ನವಿಲ್ಲದ ತೆಱದೆ ಸಂಪಾದನಂಗೆಯ್ದು ನೋಡಿ ನಿಮಗಾಗ ಬಳಿಕೆ ಉನ್ನತ ಸುಮುಕ್ತಿಯೊಳಗಿಂಬಿಟ್ಟು ಪೋದಪೆಂ (ಚೆಬಪು. ೬೨-೪). [ಸಂಪಾದನ + ಕೆಯ್$_1$]

**ಸಂಪಾದನವಿಭಾಗ** (ನಾ). (ಪ್ರಕಟಿಸತಕ್ಕ) ಗ್ರಂಥಗಳನ್ನು ಪರಿಷ್ಕರಿಸುವ ಶಾಖೆ: ಸಂಶೋಧನಸಂಸ್ಥೆಯ ಸಂಪಾದನವಿಭಾಗದಲ್ಲಿ ಕೆಲಸ ಚೆನ್ನಾಗಿ ನಡೆಯುತ್ತಿದೆ (ರೂಢಿ). [ಸಂ.]

**ಸಂಪಾದನೆ** (ನಾ). ೧. ಗಳಿಕೆ; ಆದಾಯ : ಕಳ್ಳ ಹಾದರಿಗರ ಸಂಪಾದನೆ ಹೊಳ್ಳ ಕುಟ್ಟಿ ಕೈ ಹೊಟ್ಟಾದಂತೆ ಕಾಣಾ (ದೇವಾವ. ೨೨-೩೮); ವಿವಿಧವೇದಾಂತಾದಿ ಪರಮಾರ್ಥವನಱಿಪಿಯ ದಱಿಂದೊಡಂಬಡದವರಿಗಾತಂ ದೃಷ್ಟ ಸಂಪಾದನೆಗಳಂ ತೋಱಿ (ಬಸವು. ೨೭-೬೦); ಹೊಂಗನೂರ ಸಂಪಾದನೆ ವಡೇರ ಹೊಲದ ತೆವರಿನ ಮೇಲೆ ತೆಂಕಮುಖನೆ ೧ (ಎಕ.III, ತಿರುಮ. ೬೩-೬೯೦;1748); ರಾಯರಿಗೆ ಸಂಪಾದನೆಯ ಯೋಚನೆ ಮಾಡಬೇಕಾದ ಅವಶ್ಯಕತೆ ಯೇನೂ ಇಲ್ಲ (ರಾಯಕ. ೨). ೨. (ಪ್ರಕಟಿಸತಕ್ಕ) ಗ್ರಂಥವನ್ನು ಪರಿಷ್ಕರಿಸುವಿಕೆ: 'ಗ್ರಂಥಸಂಪಾದನೆ' ಪರಾ. ೩. [ವೀಶೈ] (ಆಧ್ಯಾತ್ಮಿಕವಾದ) ಸೂಳ್ನುಡಿ; ಸಂವಾದ; ಚರ್ಚೆ (?) : ಪುರಹರಕ್ಷೇತ್ರದಲ್ಲಿ ಪುರಪತಿಯೊಡನೆ ಸಂಪಾದನೆ ಮಹಾಹರಕ್ಷೇತ್ರದಲ್ಲಿ ಕ್ಷೇತ್ರಪತಿಯೊಡನೆ ಸಂಪಾದನೆ (ಸರ್ವವ. ೩೧-೧೫೨); ಎನಗೆಯಣ್ಣಂಗೆ ಸಂಪಾದನೆಗಳುಂಟನೃತವೆನ್ನ ಚಿಹ್ನೆಗೆ ಪೊರ್ದೆ ಭೂದೇವಿಯಂ ಬಿಟ್ಟಿಗಾನೀಯೆನಾಂ ಭೋಗಿಯೆಂದು ಫಣಿಪತಿ ಮುಳಿಯನೆ (ಭಾವಚಿಂ. ೯-೬). [ಸಂ. ಸಂಪಾದನ]

**ಸಂಪಾದಿತ** (ಗು). ೧. ಗಳಿಸಿದ; ಪಡೆದ : ಸಂದು ಸಿದ್ಧಾಂತಾಗಮಶ್ರುತಿವೃಂದವೇದಾಂತ ಪ್ರಯುಕ್ತಿಗಳಿಂದ ಸಂಪಾದಿತವಿವರಣಾನುವಮತಚತುರತೆಯಿಂ (ಬಸವು. ೫೩-೭). ೨. ಉಂಟಾದ; ಪ್ರಾಪ್ತವಾದ : ಸಂಪಾದಿತ ಶರಾಸನಕಂಪಂಗಜಿತಂಗೆ . . . ಮಗಂ ಪುಟ್ಟಿದಂ (ಅಜಿಪು. ೬-೨೯). ೩. (ಪ್ರಕಟಿಸತಕ್ಕ) ಗ್ರಂಥವನ್ನು ಪರಿಷ್ಕರಿಸಿದ : ಅನೇಕ ಸಂಪಾದಿತ ಕೃತಿಗಳು ಪ್ರಕಟವಾಗಿವೆ (ರೂಢಿ). [ಸಂ.]

**ಸಂಪಾದಿಸು** (ಕ್ರಿ). ೧. ಪಡೆ; ಹೊಂದು : ಎನ್ನ ಗುಣಾವಗುಣವ ಸಂಪಾದಿಸುವೆ ಅಯ್ಯಾ (ಬಸವ. ೨೭); ಈ ದುರಂತದ ಸಮರಜಯ ನಿನಗಾದಡೊಳ್ಳಿತು ಶಲ್ಯನಲಿ ಸಂಪಾದಿಸಿದರೆ ಸೇನಾಧಿಪತ್ಯವ (ಕುವ್ಯಾಶ. ೧-೨೩); ಸಂಪಾದಿಸಿದ ಹಣದ ಮುಖ್ಯ ಅಂಶವು ಆಹಾರ ವಸ್ತುಗಳನ್ನು ಕೊಂಡುಕೊಳ್ಳಲು ಖರ್ಚಾಗುವುದು (ಅಡುಸಾ. ೫೭). ೨. ಕೂಡಿಸು; ಸಂಗ್ರಹಮಾಡು : ಎಸೆದುದಧ್ವರವೆರಡಱಭಿಮುಖ ವಸತಿಯಭಿವಳಯದಲಿ ಸಂಪಾದಿಸಿದ ಸಕಲದ್ರವ್ಯವಾ ಮುನಿವರನನುಜ್ಞೆಯಲಿ (ತೊರರಾ. ೧-೭-೩೩); ಒಕ್ಕಣಿಸಿದಿನಿತೆಲ್ಲಮಂ ಸಂಪಾದಿಸದೆ ಮಾಣೆನು ತಂದಮಲವಸ್ತ್ರತಾಂಬೂಲವರದಕ್ಷಿಣೆಗಳಿಂದೆ ಸತ್ಕರಿಸಿ ಕಳುಹಿಸದೆ ಬಿಡೆನು (ಜೈಮಿಭಾ. ೧೦-೨೭); ಸಿರಿಯನಾವಾವ ವಿಧದಿಂದ ಸಂಪಾದಿಸಿದ ಮರುಳ ರಾವಣನೇನು ಸಾಹಸಿಗನು (ವಂಕಾರಾ. ೫-೩-೩೩). ೩. ಉಂಟಾಗು ; ಸಂಭವಿಸು : ಆದಿಬೊಮ್ಮಕೆ ಮಗುವುತನ ಸಂಪಾದಿಸಿತುಯೆಂಬುದು ವೃಷಾಪರಿವಾರವಿದು ಬಲ್ಲವರಿಗಚ್ಚರ ಮಾತು (ತೊರರಾ. ೧-೮-೭೮). ೪. ಉಂಟುಮಾಡು : ಖೇದಮನೆನಗಿ ನಿತಂ ಸಂಪಾದಿಸಿದಾ ಕನ್ನೆಗಳವಿಗಟೆದಟಲಂ ಸಂಪಾದಿಸುವೆಂ (ಪಂರಾಮಾ. ೪-೮೮). ೫. ಕಟ್ಟು ; ಜೋಡಿಸು : ಬಳಸಿದ ತುಳಸಿಯ ಸಂಪಾದಿಸಿದ ಸಂಪಗೆಯ . . . ವನಮಾಲೆಗಳುಮಂ (ಜಗವಿ. ೬-೧೬ ವ). ೬. ಸಮಾಧಾನಪಡಿಸು ; ಸಂತೈಸು : ಹಾದಿಯ ಮಿಾಱಿ ಬಂದವರು ತಾವ ನಾಣ್ಚಿಹೋದರು ನಿನಗೇನು ಕೊಬಿತೆ ಈ ದೇಹದಂಡಣೆ ಮಾಳ್ಪರೆಯೆಂದು ಸಂಪಾದಿಸಿದಳು ತಾಯಿ ಮಗನಾ (ಭರಚ. ೫೨-೧೩೬). ೭. (ಪ್ರಕಟಿಸಬೇಕಾದ) ಗ್ರಂಥವನ್ನು ಪರಿಷ್ಕರಿಸಿ ಮುದ್ರಣಗೊಳಿಸು : ಕ್ರಿ.ಪೂ. ೨೭೪ರ ಸುಮಾರಿನಲ್ಲಿ ಇಲಿಯಡ್ ಮತ್ತು ಒಡೆಸ್ಸಿ ಕಾವ್ಯಗಳನ್ನು ಪ್ರಾಚೀನಹಸ್ತಪ್ರತಿಗಳ ಆಧಾರದ ಮೇಲೆ ಪರಿಷ್ಕರಿಸಿ ಸಂಪಾದಿಸಿದನು (ಕನ್ನಸಂ. ೧೪). ೮. (?) : ಭೀತಿಯಿಂದ ಪ್ರತಿಗಳ [ಪಾಠಾಂ. ಪ್ರಕೃತಿಗಳ, ಪ್ರೀತಿಗಳ] ಸಂಪಾದಿಸ ಮಾತೆ ಪಿತರ ಕೊಂದು ತನ್ನನೆ ಕೆಡಿಸಿದ ಹೇಸಿಕೆಯಿಲ್ಲದವ (ಶಿವಗೀ. ೧೨೭-೬೩೩); "ಹೇಳು, ಪ್ರವಚನ ಮಾಡು?" (ಶಿವಗೀ. ಕೋಶ) ; ಉತ್ತಮಂ ಶಿವಭಕ್ತಿಪದಮೇ ಚಿತ್ತಚಾರಿಯೆ ಕರ್ತನೊರ್ಬನೆನುತ್ತ ಸಂಪಾದಿಸಲಖಿಳಸಮಯಿಗಳು ನಡೆತಂದು (ಬಸವು. ೫೩-೫೭).

[ಸಂಪಾದನ + - ಇಸು$_{3}$]

**ಸಂಪಾಳಿ$_{1}$** (ಗು). ಮದಿಸಿದ ; ಸೊಕ್ಕಿದ (?) : ಲಂಪಟನಾಗಿ ನಾರಿಯರ ಮುಖಾಬ್ಜದ ಇಂಪನು ಕಣ್ಣಿಂದ ನಾ ನೋಡುತ ಸಂಪಿಗೆ ಅರಳಿನ ಮೇಲೆಱಗಿರುವಂಥ ಸಂಪಾಳಿ ಅಳಿಗಳಂತಾದೆನಲ್ಲೊ ಹರಿ (ಪುರಂದ. ೧-೧೧೮-೫). [?]

**ಸಂಪಾಳಿ$_{2}$** (ನಾ). ರಚನೆ; ವಿನ್ಯಾಸ : ಮೇಲುಮುತ್ತಿನ ಸೂಸಕದ ನೇಪಾಳದಮರಿಯ ಡಾಳಿಗಳ ಸಂಪಾಳಿಯಲಿ [ಪಾಠಾಂ. ಸಂಮೇಳದಲಿ] ಪರುಠವಿಸಿದರು ವೈವಾಹಮಂಟಪವ (ಸಂಭಪ. ೨೮-೧೪). [?]

**ಸಂಪಾಳಿಸು** (ಕ್ರಿ). ಕಾಪಾಡು; ರಕ್ಷಿಸು : ಸೋಲಿಸಿತಲಾ ಚೂಣಿಯಲಿ ಸಂಪಾಳಿಸಿದ ಸೌಗಂಧವಿನ್ನು ವಿಶಾಲಪದುಮವದೆಂತುಟೆನುತವೆ ತೂಗಿದಳು ಶಿರವ (ಕುವ್ಯಾ ಆ. ೧೦-೪).

[ಸಂಪಾಳನ$_{0}$ + - ಇಸು$_{3}$]

**ಸಂಪಿಗೆ** 'ಸಂಪಗೆ' ನೋ.

**ಸಂಪಿಗೆಹೂ** 'ಸಂಪಗೆವೂ' ನೋ.

**ಸಂಪಿಗೆಹೂವು** 'ಸಂಪಗೆವೂ' ನೋ.

**ಸಂಪು$_{1}$** 'ಸೊಂಪು$_{1}$' ನೋ.

**ಸಂಪು$_{2}$**, ಸಂಪ$_{1}$ (ನಾ). ಮುಷ್ಕರ; ಚಳುವಳಿ : ಲಂಡನ್ನಿನಲ್ಲಿಯ ಬಸ್ಸುಗಳ ಸಂಪು ಭೀಕರಸ್ವರೂಪವನ್ನು ತಾಳುತ್ತವೆ (ಸಮುಜೀ. ೫ ಪೀಠಿಕೆ); ಕೂಲಿಕಾರರ ಸಂಪಿಗಾಗಿ ಶೀನೂನ ಕೆಲಸ ಹೋಯಿತು (ಮೋಜೀವ. ೪); ಇಲಿಯಂತಿದ್ದ ಪ್ರಾಥಮಿಕಅಧ್ಯಾಪಕರ ವರ್ಗ ತಮ್ಮ ಸಂಪಿನ ಯಶಸ್ಸಿನಿಂದ ಒಮ್ಮೆ ನಮ್ಮ ಆಡಳಿತಗಾರರಿಗೆ ಹುಲಿಯಂತೆ ತೋರಿತು (ಸಾಸಮಾ. ೧೭). **ಸಂಪ$_{1}$** : ಸಮಾಜದವರು ನಮ್ಮ ಸಂಘದ ಸೂಚನೆಗಳಿಗೆ ಒಪ್ಪದ ಪಕ್ಷದಲ್ಲಿ ಈ ಸಂಘದವರು ಸಂಪವನ್ನು ಮಾಡಬೇಕು (ಉದವ್ಯ. ೨೧).

[← ಮರಾ. ಸಂಪ]

**ಸಂಪು$_{3}$** (ನಾ). (ನೆಲದ ಕೆಳಮಟ್ಟದಲ್ಲಿ ಕಟ್ಟಿದ) ನೀರಿನ ತೊಟ್ಟಿ : ನಮ್ಮ ಕಚೇರಿಯಲ್ಲಿ ಸಂಪು ಇದ್ದರೂ ನೀರಿನ ಕೊರತೆ ತಪ್ಪಿದ್ದಲ್ಲ (ರೂಢಿ). [← ಇಂ. sump]

**ಸಂಪುಟ** (ನಾ). ೧. ಕುಳಿ; ಬಿಲ. ೨. (ಆಭರಣ, ಸಾಲಿಗ್ರಾಮ ಮುಂತಾದ ಅಮೂಲ್ಯವಸ್ತುಗಳನ್ನಿಡುವ) ಭರಣಿ; ಕರಂಡಕ; ಡಬ್ಬಿ: ಸಂಪುಟಂ ಪತ್ತುಗೆವಿಟ್ಟೋರಂದದಿಂ ಸಿಂಪುಗಳುಗುಟೆ ಸಿಡಿಲ್ತಂದ ಮುಕ್ತಾಫಲಶ್ರೇಣಿಗಳಿಂದಂ ಪಶ್ಚಿಮಾಂಬೋಧಿಯ ಪುಳಿನಚಯಂ ಬೆಳ್ಪನಾಳ್ದಿರ್ದುವಾಗಳ್ (ಕಾದಂಪೂ. ೧೪೨); ಭಸಿತದ ಬೊಟ್ಟುಗಳ ಚೆಲುವಿಂದೆ ಸಂಪುಟಗಳ ವಿರಕ್ತರು ಪಿಂಗಡೆಯೊಳೆಸೆಗುಂ (ಶಂಕದಾ. ೧೨-೩೨). ೩. ಪೆಟ್ಟಿಗೆ. ೪. ಹಸ್ತಪ್ರತಿ ಅಥವಾ ಮುದ್ರಿತಪ್ರತಿಗಳನ್ನು ಸೇರಿಸಿ ಮಾಡಿದ ಗ್ರಂಥದ ಬಿಡಿಭಾಗ : ದ್ರಾವಿಡಭಾಷೆಗಳನ್ನು ಆಡುವವರ ಒಟ್ಟು ಜನಸಂಖ್ಯೆಯನ್ನು ಕುರಿತ ಅಂಕಿಅಂಶಗಳ ವಿವರ ದಶವಾರ್ಷಿಕಜನಗಣತಿಯ ಕೆಲವು ಸಂಪುಟಗಳಲ್ಲಿ ಸಿಗುತ್ತದೆ (ದ್ರಾವಿವಿ. ೬೫). ೫. ಪುಸ್ತಕ; ಹೊತ್ತಗೆ : ಚಿತ್ರಗುಪ್ತರೆಂಬ ಕರಣಿಕರ ಸಂಪುಟಕ್ಕೆ ಬರಸದೆ ಯಮರಾಜನೆಂಬ ಅರಸಿಗೆ ಕೋಟಿನಿಕ್ಕದೆ . . . ಸುಖಿಯಾಗಿಪ್ಪ ಒಕ್ಕಲಮಗನ ತೋಱಿ ಬದುಕಿಸಯ್ಯಾ (ಸರ್ವವ. ೧೦೬-೫೬೮); ಕಾಳಿದಾಸನ ಕೃತಿಗಳನು ಕನ್ನಡಿಸಿದೆ ಹೊಸಸಂಪುಟವನು ಹೊರತಂದೆ (ಇಂಚಾಪ. ೫೨-೫೦). ೬. ಸರಕಾರವನ್ನು ರಚಿಸಿ ರಾಜ್ಯಾಡಳಿತದ ಹೊಣೆಯನ್ನು ಹೊತ್ತಿರುವ ಸಮಿತಿ ; ಮಂತ್ರಿಮಂಡಲ : ಹೊಸ ಸಂಪುಟವು ಇಂದು ಪ್ರಮಾಣವಚನವನ್ನು ಸ್ವೀಕರಿಸಿತು (ರೂಢಿ). ೭. ಯಾವುದಾದರೊಂದು ಕಾರ್ಯದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವ ಸಮಿತಿ : ನಾಡಿನ ತೋಟಗಳ ಆಡಳಿತಕ್ಕೆ 'ತೋಟವಾರಿಯಂ' ಎಂಬ ಸಂಪುಟವಿತ್ತು. ಇದು ಊರಿನ ಮಹಾಜನರ ಪ್ರತಿನಿಧಿಗಳನ್ನೂ ಒಳಗೊಂಡಿತ್ತು (ಶಾಸಗಿ. ೩೫). ೮. ಹಲವು ಬೇರೆ ಬೇರೆ ಭಾಗಗಳನ್ನು ಒಳಗೊಂಡಿರುವಂಥದು; ಘುಟಿಕೆ : ಹಣ್ಣು ಒಂದು ಎಂದು ಎಲ್ಲರೂ ಒಪ್ಪುತ್ತಾರೆ ಅದರ ಅದರ ತೊಗಟೆ, ನಾರು, ರಸ, ಬೀಜ . . . ಇವೆಲ್ಲಾ ಒಂದು ಸಂಪುಟವಾಗಿರುವಾಗ ಒಂದು ಪದಾರ್ಥವೆಂಬ ವ್ಯವಹಾರವಿರುತ್ತದೆ. ಹೀಗೆಯೇ ವ್ಯಕ್ತಿಯು ದೇಹೇಂದ್ರಿಯಾದಿಗಳ ಸಂಪುಟ (ಭಾರದ. ೨೬೬). ೯. ಜೋಡಿಸಿದುದು; ಸೇರಿಸಿದುದು: 'ಸಂಪುಟಿಸು' ಪರಾ. ೧೦. [ನಾಟ್ಯ] ಇಪ್ಪತ್ತುನಾಲ್ಕು ಬಗೆಯ ಸಂಯುತಹಸ್ತಗಳಲ್ಲಿ ಒಂದು: ೧. ಅಂಜಲಿ, ೨. ಕಪೋತ . . . ೧೪. ಸಂಪುಟ, ೧೫. ಪಾಶ . . . ೨೪. ಅವಹಿತ್ಥ (ಆಭಾನ್ಯ. ೪೮). ೧೧. (?) : "ರತ್ನಗಳ ಸ್ಥಾಪಿಸುವ ಭೇದಿಸುವನಂತದನುವಡೆವ ಕೀಲಿಸುವಲ್ಲಿಯುಂ ಮತ್ತ ಸಂತಸದಿ ಪೇಳ್ವೆನೀ ಸ್ಥಾನಗಳು ವಳಿತಾಗೆ ಪೆಸರು ಸಂಪುಟಮೆಂಬುದು" (ರತ್ನಶಾ. ೨೨-೪). [ಸಂ.]

**ಸಂಪುಟಕ** (ನಾ). ೧. ಭರಣಿ; ಡಬ್ಬಿ : "ಸಮುದ್ಗಕಃ, ಸಂಪುಟಕಃ - ೨ ಕರಾಟದ ಪೆಸರುಗಳು. ಭರಣಿ, ಸಂಪುಟ" (ಸಿದ್ಧಾಂತಿ. ೨೧೧). ೨. [ಕಾಮಶಾ] ಒಂದು ಬಗೆಯ ರತಿಬಂಧ : ಸಸಿನೆ ಕಾಲೆರಡನೊಂದಿಸಿ ನೀಡಿ ಮಗುಳ್ದೊಱಗಳಸಿಯಳಾ ತೆಱದೆ ಪುರುಷಂ ಕಾಲ್ಗಳ ಪಸರಿಸದೆ ಮೇಲೆ ಕೂಡೊಸೆದೊಱಗಿ ರಮಿಸೆ ಶೋಭಿಸುವದದು ಸಂಪುಟಕಂ (ಜನವ. ೯-೧೫). [ಸಂ.]

**ಸಂಪುಟಕರಣ** (ನಾ). = ಸಂಪುಟಕ ೨ : ವನಿತೆ ಮಗುಳ್ದೊಱಗಿ ಮೆಲ್ಲನೆ ತನ್ನ ಕಾಲೆರಡನಿನಿಯನಿರ್ವರಿಯನೊಂದಿಸಲಂತವಂ ಘನನಿತಂಬವನೆ ಮಡವಿನೊಳೊತ್ತಿ ನೆರೆಯಲಂಗನೆ ಅದೇ ಸಂಪುಟಕರಣಮೆನಿಪುದು (ಜನವ. ೯-೧೬). [ಸಂ.]

**ಸಂಪುಟಿಸು** (ಕ್ರಿ). ಒಂದರ ಮೇಲೆ ಮತ್ತೊಂದನ್ನು ಜೋಡಿಸು; ಮುಚ್ಚು; ಸೇರಿಸು : ಭೂಧರಯಂತ್ರವೆಂತೆಂದರೆ ಭೂಮಿಯಲ್ಲಿ ಗೇಣು ಆಱಂಗುಲ ಉದ್ದ ಚೌಕವಾಗಿ ಹಳ್ಳವ ತೆಗೆದು ಆ ಹಳ್ಳದಲ್ಲಿ ಸಂಪುಟಿಸಿದ ಶ್ರಾವೆಯನಿರಿಸಿ (ವೈದ್ಯಸಾ. I, ೮೬). [ಸಂಪುಟ + - ಇಸು$_3$]

**ಸಂಪುಷ್ಟ** (ನಾ). ೧. (ಮುಖ್ಯವಾಗಿ ಸಾಲಿಗ್ರಾಮವನ್ನು ಇಡುವ) ಡಬ್ಬಿ, - ಭರಣಿ : ಆಚಾರ್ಯರು ದಿನವೂ ಸಂಪುಷ್ಟದ ಪೂಜೆಯನ್ನು ತಪ್ಪದೆ ಮಾಡುತ್ತಿದ್ದರು (ರೂಢಿ). ೨. (ಆಲಂ) ಕೊನೆ; ಮುಕ್ತಾಯ; ನಾಶ : ಅವನ ಸಂಪಾದಕೀಯ ಸತ್ತೆಯು ಬೇಗನೆ 'ಸಂಪುಷ್ಟ'ಕ್ಕೆ ಬಂದಿತು (ಮಾವಾದ. ೧೬); ಕಾಳಿನ ಸಂಟೇ ಸಂಪುಷ್ಟಕ್ಕೆ ಬಂದದ್ದನ್ನು ನೋಡಿ ಅಯ್ಯನವರ ಎದೆ ಒಡೆಯಿತು (ಜನಜೀ. ೧೦). [< ಸಂ. ಸಂಪುಟ]

**ಸಂಪುಷ್ಟಫಲ** (ನಾ). [ಜ್ಯೋತಿ] ಉತ್ತಮವಾದ ಫಲ : ಕ್ರಮದಿಂ ಲಗ್ನದಶಾಧಿಪಂ ನಿಲೆ . . . ಸ್ಥಿರೋದಯಗೃಹದ್ರೇಕ್ಕಾಣದೊಳ್ ಕಷ್ಟ ಮಧ್ಯಮ ಸಂಪುಷ್ಟಫಲಂ (ಜಾತತಿ. ೯-೮). [ಸಂ.]

**ಸಂಪೂಜಿತ** (ಗು). ಗೌರವಿಸಲ್ಪಟ್ಟ; ಆದರಕ್ಕೆ ಪಾತ್ರವಾದ : ರಾಜವದುಪಚರಣ ನಿಯಮ ಸಂಪೂಜಿತಾರ್ಥಿಗಳಂ ನಿರಂತರ ರಾಜವದುಪಚರಣನಿಯಮದಿಂದಂ ಭಜಿಸಿ ಭಜಿಸಿ (ಬಸಪು. ೬-೩೦). [ಸಂ.]

**ಸಂಪೂತೆ** (ನಾ). ಪವಿತ್ರಳಾದವಳು : ಕಣ್ಮುಚ್ಚಿದಳ್ ಆ ಅಮರಸನ್ಮಾನ್ಯೆ . . . ಸಂಪೂತೆ ಮೇಣ್ ಶಿವಕಳೇಬರೆ, ಧನ್ಯೆ ! (ಶ್ರೀರಾಮಾ. ೨೭೭-೩೮೦). [ಸಂ. ಸಂಪೂತಾ]

**ಸಂಪೂರಿಮ** (ನಾ). ಹೂವುಗಳನ್ನು ಕಟ್ಟುವ ಒಂದು ರೀತಿ; ಪುಷ್ಪಬಂಧದ ಒಂದು ಬಗೆ : ಪೂಗಟ್ಟುವರಂ ಕಂಡು ತಾನುಮವರ ಕೆಲದೊಳ್ ಕುಳ್ಳಿರ್ದು ನೂಲಿನಗ್ರ ಗ್ರಂಥಿಮ [ವೇಢಿಮ] ವೇಧಿಮ ಸಂಪೂರಿ[ಮ ಸಂಘಾಯಿಮ]ಮೆಂಬಯ್ದುಂ ತೆಱದ ಪುಷ್ಪಮಾಲೆಗಳಂ ಸಮೆದು (ಬಂಹರಿ. ೨-೨೯ ವ). [ಸಂ. ?]

**ಸಂಪೂರ್ಣ$_1$** (ಗು). ೧. ತುಂಬಿದ; ಭರ್ತಿಯಾದ. ೨. ಅಖಂಡವಾದ; ಇಡಿಯಾದ. (ನಾ). ೩. ತುಂಬಿದುದು; ಭರ್ತಿಯಾದುದು : "ಸಂಪೂರ್ಣಮಂ ನೆಱೆದುದನಲಕ್ಕು" (ಕಬ್ಬಿಕ. ೬೦). ೪. ಅಖಂಡವಾದುದು; ಇಡಿಯಾಗಿರುವಂಥದು: ಅಮಾವಾಸ್ಯೆಯಂದು ಚಂದ್ರಂ ಕರಂ ಕುಂದಿ ತನ್ನಿಂ ಕರಂ ಪ್ರಭುವರ ಸಾರ್ವನೆಂದಾದಿತ್ಯಮಂಡಳದೊಳಗಂ ಪೊಕ್ಕಿರ್ದೊಡಮಾತನುಮಾತನಂ ಸಂಪೂರ್ಣಂ ಮಾಡಿ ಕಳಿಪಿದನಿಲ್ಲ (ಜೀವಸಂ. ೩೨-೯ ವ). ೫. ಮುಗಿದುದು; ಪೂರೈಸಿದುದು : ಛಂದೋಂಬುಧಿ ಸಂಪೂರ್ಣಂ (ಛಂದೋಂಬು. ೬-೨೭೯ ವ). ೬. ನಾಲ್ಕುಯುಗಗಳಲ್ಲಿ ಮೊದಲನೆಯದು; ಕೃತಯುಗ : "ಸಂಪೂರ್ಣದಲ್ಲಿಯುಂ ಕೃತಮೆಂಬುದು . . . ಕಲಹದಲ್ಲಿಯುಂ ಕಲಿಯೆಂಬುದು" (ಹಲಾಯು. ೧೩೧-೩). ೭. [ಸಂಗೀತ] ಆರೋಹಣ ಅವರೋಹಣಗಳಲ್ಲಿ ಸಪ್ತಸ್ವರಗಳುಳ್ಳ ರಾಗ : ಗಾಗ, ಕ್ರಮವಾಗಿ ಸ್ವರೂಪಗೊಂಡ ರೀತಿಯಲ್ಲಿ ಆರ್ಚಿಕ (ಏಕಸ್ವರ ಪ್ರಯೋಗ), ಗಾತಿಕ (ದ್ವಿಸ್ವರಪ್ರಯೋಗ), ಸಾಮಿಕ (ಮೂರುಸ್ವರಗಳ ಪ್ರಯೋಗ) . . . ಸಂಪೂರ್ಣ (ಏಳುಸ್ವರಗಳ ಪ್ರಯೋಗ) ಎಂಬ ಹಂತಗಳು ಕಂಡುಬಂದಿವೆ (ಸಂಗೀಚಂ. ೨೨); ಪಂತುವರಾಲಿಯೆಂಬ ರಾಗವು ಸಂಪೂರ್ಣವು (ಚತುಪ್ರ. ೬೪). [ಸಂ.]

**ಸಂಪೂರ್ಣ$_2$** (ಅ). ಪೂರ್ತಿಯಾಗಿ; ಸಮಗ್ರವಾಗಿ : ಆರ್ಥಿಕವ್ಯವಹಾರದಲ್ಲಿ ನ್ಯಾಯವಾದ ಸಂಪೂರ್ಣ ಸ್ಥಾಪನೆಯಾಗುವವರೆಗೆ ಜೀವನದಲ್ಲಿ ಶಾಂತಿಯು ನಿರ್ಮಾಣವಾಗಲಾರದು (ಪ್ರಬಂಧ. ೧೨೦). [< ಸಂಪೂರ್ಣ$_1$]

**ಸಂಪೂರ್ಣತೆ** (ನಾ). ಪರಿಪೂರ್ಣತೆ; ಸಮಗ್ರತೆ : ಸಂಪೂರ್ಣತೆಯಿಂ ಸರ್ವವಿಷಯ ಭಾಷಾದಿಗಳಂ ನಿರ್ಣಯಮಾಗಱಿಪಿದೆಂ (ಛಂದೋಂಬು. ೫-೨೩೯). [ಸಂ. ಸಂಪೂರ್ಣತಾ]

**ಸಂಪೂರ್ಣತ್ವ** (ನಾ). = ಸಂಪೂರ್ಣತೆ. [ಸಂ.]

**ಸಂಪೂರ್ಣವ್ರಿತ್ತಿ** (ನಾ). ಸಮಗ್ರವಾದ ಕೊಡುಗೆ; ಪೂರ್ಣವಾದ ದತ್ತಿ : ಅಂಗಭೋಗ ರಂಗಭೋಗ ತ್ರಿಕಾಲಾರ್ಚ್ಚನಾಳಂಕಾರಕ್ಕೆ ಸಂಪೂರ್ಣ್ನವ್ರಿತ್ತಿ XXX ಲ್ಲಿಸುವ ಬಗೆಯಿಂದ (ಸೌಇಇ. XX, ೧೧೧-೪೬ ; 1140). [ಸಂಪೂರ್ಣ$_1$ + ವ್ರಿತ್ತಿ]

**ಸಂಪೂರ್ಣೆ** (ನಾ). [ಸಂಗೀತ] ಧೈವತ ಸ್ವರದಲ್ಲಿ ಹುಟ್ಟುವ ಮೂರು ಶ್ರುತಿಗಳಲ್ಲಿ ಒಂದು: ಭಾಷಾಂಗಿ ವರ್ತಕಿ ಸಂಪೂರ್ಣೆ[ಪಾಠಾಂ. ರ್ಣೆ]ಯೆಂಬ ಮೂಱು ಶ್ರುತಿಗಳೇ ಧೈವತಸ್ವರದಿಂದಾದವು (ವಿವೇಕ. ೧೮೬). 'ಪೂರ್ಣೆ' ಪರಾ. [ಸಂ. ಸಂಪೂರ್ಣಾ]

**ಸಂಪೂರ್ಣೇಂದು** (ನಾ). ಪೂರ್ಣಚಂದ್ರ; ಹುಣ್ಣಿಮೆಚಂದ್ರ : ಪ್ರಜಾಪತಿಮಹಾರಾಜಂ ಪಾಗುಡಂಗಟ್ಟಿ ಸಂಪೂರ್ಣೇಂದುಮುಖಿಯನಿಂದು ನಾಳೆನ್ನದೆ ಬಂದ ಪೊೞ್ತಿ ಪೊೞ್ತಾಗೆ ರಥನೂಪುರಚಕ್ರವಾಳಕ್ಕೆ ಬೇಗಮಟ್ಟುವುದುಂ (ಶಾಂತಿಪು. ೫-೩೭ ವ). [ಸಂ.]

**ಸಂಪೂರ್ತಿ** (ನಾ). ಪರಿಪೂರ್ಣವಾದುದು; ಸಮಗ್ರವಾದುದು : ಕರ್ತು ಭೃತ್ಯಾಚಾರಿ ಪಶುಪತಿ ಮೂರ್ತಿಬಸವಾಮಾತ್ಯನಿಂ ಸಂಪೂರ್ತಿಯಾಗಲು ಪೂಜೆವಡೆದಪೆವೆನುತ ಬಪ್ಪವರು (ಬಸಪು. ೬-೧೨); ಭೂಪನುತ್ಕೃಷ್ಟಮುಖಮಿನ್ನು ಸಂಪೂರ್ತಿಯಾದಪುದು (ಜೈಮಿಭಾ. ೫-೭೨). [ಸಂ.]

**ಸಂಪೃಕ್ತ** (ಗು). ೧. ಬೆರೆಸಿದ; ಮಿಶ್ರಗೊಳಿಸಿದ. ೨. ಜೋಡಿಸಿದ; ಸೇರಿಸಲ್ಪಟ್ಟ. (ನಾ). ೩. ಮಿಶ್ರಗೊಂಡುದು; ಬೆರಸಿದುದು : "ಚಿತ್ರಃ . . . ಸಂಪೃಕ್ತಃ ಖಚಿತಃ - ಈ ೧೧ ಬೆರಸಿದುದು" (ಹಲಾಯು. ೧೨೨-೫೪). ೪. ಕೂಡಿಕೊಂಡುದು; ಸೇರಿಕೊಂಡುದು: ವಿಜ್ಞಾನವಾದಮನಾಶ್ರಯಿಸಿ ಪೂರ್ವಪೂರ್ವಚಿತ್ತವಿಶೇಷ ಪ್ರಭವಂಗಳುತ್ತರೋತ್ತರ ಚಿತ್ತಕ್ಷಣಂಗಳ್ ಉಪಾದಾನೋಪಾದೇಯ ಕ್ಷಣಸಂಪೃಕ್ತಂಗಳ್ (ಆದಿಪು. ೨-೯ ವ). [ಸಂ.]

**ಸಂಪ್ರಜ್ವಲಿತ** (ಗು). ೧. ಅಧಿಕಪ್ರಕಾಶದಿಂದ ಕೂಡಿದ ; ಬಹುವಾಗಿ ಹೊಳೆಯುತ್ತಿರುವ. ೨. ಹೊತ್ತಿಸಿದ; ಪ್ರಕಾಶಗೊಳಿಸಿದ. (ನಾ). ೩. [ಜೈನ] ಒಂದು ನರಕಬಿಲದ ಹೆಸರು : ವಾಲುಕಾಪ್ರಭೆಯೊಳ್ ತಪ್ತ . . . ಸಂಪ್ರಜ್ವಲಿತ ನಾಮವವೇಂದ್ರಕ ತತ್ಸಂಬಂಧಿ ಶ್ರೇಢೀಬದ್ಧಪ್ರಕೀರ್ಣಕವಿಕಲ್ಪದಿಂ ಪಂಚದಶ ಲಕ್ಷಬಿಲಂಗಳಪ್ಪುವು (ತತ್ತ್ವಪ್ರ. ೧೨೦). [ಸಂ.]

**ಸಂಪ್ರಣಿಧಾನ** (ನಾ). ೧. ಧ್ಯಾನ; ಚಿಂತನೆ: "ಸಂಪ್ರಣಿಧಾನಂ ತತ್ತ್ವಾದಿಚಿಂತನಂ ತಾಂ ಧ್ಯಾನಂ" (ವಸ್ತುಕೋ. ೨೧-೧೮). ೨. ಯೋಗ್ಯವಾದ ನಡೆವಳಿಕೆಯುಳ್ಳವನು; ತಕ್ಕ ರೀತಿನೀತಿಯನ್ನು ಬಲ್ಲವನು : ಅದಱಿಂ ಸಂಪ್ರಣಿಧಾನನಂ ಪ್ರಣಿಧಿಯಂ ನೀಂ ದೇವ ಮುನ್ನಟ್ಟಿ ನೋಟ್ಟುದು ತಚ್ಚೇತನೆಯೊಳ್ ಪೊದಟ್ಟ ನಯಮಂ ಮತ್ತಿತ್ತದೋಜಾಗೆ ಮಾಟ್ಟುದು ಕಾಲೋಚಿತ ಸಂಧಿವಿಗ್ರಹದೊಳೊಂದಂ ಕಾರ್ಯಮಂ (ಶಾಂತಿಪು. ೩-೭೩). [ಸಂ.]

**ಸಂಪ್ರತಿ$_1$** (ನಾ). ೧. ಸದ್ಯದ ಸಮಯ; ಪ್ರಕೃತಕಾಲ : ವಿತತನರುಹದ್ವಲಂ ಯತಿಪತಿ ಮಹಿಪತಿ ಮಕುಟನಿಕಟತಾಟಿತಚರಣಂ ಕ್ಷಿತಿಪೂಜ್ಯಂ ಜಿತದುರಿತಂ ನುತಸಂಪ್ರತಿಭೂತ ಭಾವಿ ಪರಿಣತತತ್ತ್ವಂ (ಶಾಂತಿಪು. ೧-೧೮). ೨. ಸಂಧಾನ; ಒಪ್ಪಂದ : ಎಲೆ ಸಮೀರಕುಮಾರ ಸಂಪ್ರತಿಗೆಳಸಿದ್ಯೆ ಕಲಿತನವ ನೀರೊಳು ಕಲಕಿದ್ಯೆ ಕೈವಾರವಾದುದೆ ಕೌರವೇಂದ್ರನಲಿ (ಕುಮ್ಯಾಉ. ೬-೧೯); ಸುರರಿಗಸದಳವಿವು ಬಳಿಕ್ಕಿವನೆರಡು ಕಡಿ ಮಾಡಿದರೆ ಕದನದಲರಿವಧಾಸಮಯಕ್ಕೆ ಸಂಪ್ರತಿಯಹುದಲೇ (ತೊರರಾ. ೪-೨-೪೫); ಅಂತಸುರರೊಡನೆ ಸಂಪ್ರ[ಪಾಠಾಂ. ಪ್ರೀ]ತಿಯನೆಸಗಿ ನಾನೋಪಾಯಂದಿಂದೊಡಂ ಬಡಿಸಿಯೊಡಗೊಂಡು ಬಂದು (ವಿಷ್ಣುಪು. ೧-೨-೧೭೯ ವ). ೩. ನಕಲು; ಪ್ರತಿ : ರಾಯರ ರಾಯಸದ ಸಂಪ್ರತಿ ಬರದು ಕೊಟೆಉ (ಸೌಇಇ. IX - ii , ೪೩೮-೨೮; 1418). ೪. ಸಮೂಹ; ತಂಡ : ಕರಣ ಸಂಪ್ರತಿಯ ಸಂಪದದ ಗಣಕರ್ಕಳಂ . . . ನೋಡುತಂ (ಬಸರ. ೫-೬೩); ಅತಿಕೋಪಶಿಖಿಯ ದಳ್ಳುರಿಯೆಂಬ ಮಾಳ್ಕೆಯುನ್ನತ ಸಂಚೆಗೆಂಪುದೋಱಿತ್ತು ಕಾಮಾಂಧ ಸಂಪ್ರತಿಯೆನಲು ಕತ್ತಲೆಯ ಮೊತ್ತ ಮುಸುಗಿತ್ತು (ನವಮೋ. ೯-೨೨). ೫. [ವ್ಯಾಕ] ಮೂರು ಕಾಲಗಳಲ್ಲಿ ಒಂದು;

ವರ್ತಮಾನ ಕಾಲ : ಭೂತ ಭವಿಷ್ಯತ್ಕ್ರಿಯೆಗಳುಪೇತ ವಿಭಕ್ತಿಗಳನುೞಿಯೆ ಕೃತ್ತದ್ಧಿತಸಂಭೂತಂ ಸಂಪ್ರತಿವಿಧಿಗಳೊಳಾ ತೆಱದಿಂ ಮಧ್ಯಮೋತ್ತಮ ಕ್ರಿಯೆಗಳೊಳಂ (ಶಮದ. ೭೩). [IP ಸಂಸ್ಕೃತದಲ್ಲಿ ಇದು ಅವ್ಯಯ]

**ಸಂಪ್ರತಿ₂** (ಅ). ೧. ತಕ್ಷಣ; ಕೂಡಲೆ. ೨. ಈಗ; ಪ್ರಕೃತಕ್ಕೆ : ಬಡವನೌಕಸ ಪಡೆಯ ನೆಚ್ಚಯೆ ಕೆಡದಯೋಧಿಗೆ ತೆರಳು ಸಂಪ್ರತಿ ಪೊಡವಿಜೆಯ ಹಂಬಲನು ಬಿಡು (ಕೌಶಿರಾ. ೧೫-೧೭). [ಸಂ.]

**ಸಂಪ್ರತಿಕಾರ** (ನಾ). ಮುದ್ರಿತ ಅಥವಾ ಕೈಬರೆಹದ ಗ್ರಂಥ ಮುಂತಾದುವುಗಳ ನಕಲನ್ನು ತಯಾರಿಸುವವನು; ಪ್ರತಿಕಾರ : ಸಂಪ್ರತಿಕಾರರ ಕೈವಾಡವು ಸ್ಪಷ್ಟವಾಗಿರುವಾಗ ಈ ಪ್ರಮಾಣವು ಇನ್ನೂ ಅನಿಶ್ಚಿತವಾಗದೇ? (ಕಸಾಚ. ೭೭). [ಸಂ.]

**ಸಂಪ್ರತಿಪತ್ತಿ** (ನಾ). ೧. ಹತ್ತಿರಕ್ಕೆ ಬರುವಿಕೆ; ಬಳಿಸಾರುವಿಕೆ. ೨. ಪ್ರಾಪ್ತಿ; ಗಳಿಕೆ. ೩. ಸರಿಯಾದ ತಿಳಿವಳಿಕೆ. ೪. ಉಂಟಾಗುವುದು; ಸಂಭವಿಸುವುದು. ೫. ಒಪ್ಪಂದ; ಒಡಂಬಡಿಕೆ. [ಸಂ.]

**ಸಂಪ್ರತಿಪನ್ನ** (ಗು). ೧. ಸಮೀಪಕ್ಕೆ ಹೋದ; ಬಳಿಸಾರಿದ. ೨. ಪಡೆದ; ಹೊಂದಿದ : ಇನ್ನು ಸುಡುಸುಡು ಧರ್ಮಸಂಪ್ರತಿಪನ್ನ ಗುಣದಾಚಾರಗಳ ಸಂಪನ್ನತೆ ಯನೆಂದೊಱಲಿ ಮಱುಗಿತು ನಿಖಿಳಪರಿವಾರ (ಕುವ್ಯಾಆ. ೮-೯೦); ಎನ್ನವರೊಳಾನೆನ್ನೊಳೆ ನ್ನವರನ್ನರಲ್ಲೆಂದಱಿದು ಸಂಪ್ರತಿಪನ್ನ ಬುದ್ಧಿಗಳಾಗಿಹುದು ನೀವು (ನಿಭಾಗ. ೧೦-೧೦-೩೧). ೩. ಒಪ್ಪಿದ; ಅನುಮೋದಿಸಿದ. ೪. ಪೂರೈಸಿದ; ನೆರವೇರಿಸಿದ. [ಸಂ.]

**ಸಂಪ್ರತ್ಯಯ** (ನಾ). ೧. ದೃಢವಾದ ನಂಬಿಕೆ; ಸಂಪೂರ್ಣವಾದ ವಿಶ್ವಾಸ. ೨. ಒಪ್ಪಂದ; ಒಡಂಬಡಿಕೆ. ೩. ಸರಿಯಾದ ತಿಳಿವಳಿಕೆ. ೪. ಎಣಿಕೆ; ಕಲ್ಪನೆ. [ಸಂ.]

**ಸಂಪ್ರಥಿತ** (ಗು). ಹೆಸರಾದ; ಪ್ರಸಿದ್ಧಿಗೊಂಡ : ವ್ಯಥಿತವಾಯಿತು ವೈರಿಬಲ ಸಂಪ್ರಥಿತ ಸಾಹಸನಾದ ನೀನು (ಕುವ್ಯಾಉ. ೨-೩). [ಸಂ.]

**ಸಂಪ್ರದ** (ಗು). ೧. ಧಾರಾಳಿಯಾದ; ಕೊಡುಗೈಯ. (ನಾ). ೨. ಉಡುಗೊರೆ; ಕಾಣಿಕೆ. ೩. ಶೀಘ್ರತೆ; ವೇಗ : "ಪರಿದು ನಡೆವಲ್ಲಿ ಉಚಿತದಲಿ ಸಂಪ್ರದಮೆನಿಕು" (ಮಂಗರಾ. ೧೫೭-೭೩). [ಸಂ.]

**ಸಂಪ್ರದಾನ** (ನಾ). ೧. ಕೊಡುವಿಕೆ; ನೀಡುವಿಕೆ. ೨. ಕೊಡುಗೆ; ದಾನ: ಒಪ್ಪದ ಸಂಪ್ರದಾನದ ಪರಿತೋಷವು ಒಪ್ಪದು ವಿರಸಾಂತ್ಯದೊಲವು (ಗಾಥಾಸ. ೧-೭೮). ೩. ಕಾಣಿಕೆ; ಉಡುಗೊರೆ. ೪. [ವ್ಯಾಕ] ಕಾರಕಗಳಲ್ಲಿ ಒಂದು; ಚತುರ್ಥೀವಿಭಕ್ತಿಯ ಅರ್ಥ : ಪರಿಪಾಡಿಯೆ ಕರ್ತೃ ಕರ್ಮಂ ಕರಣಾಖ್ಯಂ ಸಂಪ್ರದಾನಂ; . . . ಅಧಿಕರಣಮುಮೆನೆ ಕಾರಕಂಗಳಾಱುಂ ನೆಗೞ್ಗುಂ (ಕಾವ್ಯಾವ. ೮೫); ಸಂಪ್ರದಾನವೆಂದಾವುದಾನೊಂದು ವಸ್ತುವನೀಯಿಸಿಕೊಂಬ ಪಾತ್ರಂ; ಅಲ್ಲಿ ಚತುರ್ಥಿಯಕ್ಕುಂ. ಅದು, ರುಚಿ, ಈರ್ಷ್ಯ . . . ಇಷ್ಟಂ-ಎಂಬಿನಿತಱೊಳ್ ವರ್ತಿಸುಗುಂ (ಶಮದ. ೧೩೦ ವೃತ್ತಿ); ವಿಭಕ್ತ್ಯರ್ಥಗಳು ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಸಂಬಂಧ, ಅಧಿಕರಣ ಎಂದು ಏಳು ವಿಧ. ಇವುಗಳಲ್ಲಿ ಸಂಬಂಧವನ್ನುಳಿದು ಮಿಕ್ಕುವಕ್ಕೆ ಕಾರಕವೆಂದು ಸಂಜ್ಞೆ (ಕೈಪಿಡಿ. ೫೩). ೫. [ರಾಜನೀ] ಹದಿನಾರು ಬಗೆಯ ಸಂಧಿಗಳಲ್ಲಿ ಒಂದು ಪ್ರಕಾರ; ಉಡುಗೊರೆಯನ್ನು ಕೊಡುವುದರ ಮೂಲಕ ಮಾಡಿಕೊಳ್ಳುವ ಸಂಧಾನ : ದ್ರವ್ಯ ವಾಹನಮಂ ಕೊಟ್ಟು ಮನ್ನಿಪುದು ಸಂಪ್ರದಾನಮೆಂಬುದಕ್ಕುಂ (ಪಂಚತಂ. ೨೨೦-೨). [ಸಂ.]

**ಸಂಪ್ರದಾನಕಾರಕ** (ನಾ). = ಸಂಪ್ರದಾನ ೪ : ಕೊಟ್ಟ ವಸ್ತು ಯಾವುದನ್ನು ಸೇರುವುದೋ ಅದು ಸಂಪ್ರದಾನಕಾರಕವೆನಿಸುವುದು. ಇದನ್ನು ತಿಳಿಸುವ ಶಬ್ದದ ಮೇಲೆ ಚತುರ್ಥಿ ಬರುವುದು (ಕೈಪಿಡಿ. ೫೫). [ಸಂ.]

**ಸಂಪ್ರದಾಯ** (ನಾ). ೧. ಪೂರ್ವಿಕರಿಂದ ಪರಂಪರೆಯಾಗಿ ಬಂದಿರುವ ಆಚಾರ, – ವ್ಯವಹಾರ : ಬ್ರಹ್ಮಚಾರಿ ಯತಿ ದೀಕ್ಷಿತರಿಗೆ ಸೂತಕಾದಿ ಹೊಲೆಗಳಿಲ್ಲ ವೆಂಬುದು ಮೊದಲಾದಾಚಾರಭೇದಮಿರ್ಪುದಱಿಂ ಸಂಪ್ರದಾಯ . . . ಎಂಬುದು ಮೊದಲಾದವುಗಳಂ ತಿಳಿದು (ವಿವೇಕ. ೧೮೭); ಸಂಪ್ರದಾಯದ ಬೇರುಗಳು ಜನಾಂಗದ ರಕ್ತ-ರಕ್ತದಲ್ಲಿ ದೂರಹೋಗಿವೆ. ಒಮ್ಮೊಮ್ಮೆ ಜನರು ಧರ್ಮವನ್ನು ಮರೆಯಬಹುದು; ಆದರ ಸಂಪ್ರದಾಯವನ್ನು ಮರೆಯುವುದು ಕಠಿಣವಾಗುತ್ತದೆ (ಕನ್ನಚಾ. ೧೨೯). ೨. (ಪರಂಪರಾಗತವಾಗಿ ಬಂದ) ರೂಢಿ; ಪದ್ಧತಿ : ಪೂಜ್ಯರೆ, ಬಂಧುಜನಗಳು ಜಲಾಶಯದವರೆಗೆ ಸಂಗಡ ಬರತಕ್ಕದೆಂಬುದು ಸಂಪ್ರದಾಯವಲ್ಲವೆ? (ಶಾಕುಂತ. ೫೫-೨೪); ದಕ್ಷಿಣಾಪಥಕ್ಕೆ ಸೇರಿದ್ದ ಚೋಳ, ಪಲ್ಲವ ಇತ್ಯಾದಿ ರಾಜ್ಯ, ರಾಜಧಾನಿ, ರಾಜರ ಹೆಸರು ಇವೆಲ್ಲ ಪೂರ್ಣವಾಗಿ ವೈದಿಕಶ್ರದ್ಧೆಯನ್ನೂ ಸಂಪ್ರದಾಯವನ್ನೂ ತೋರಿಸುತ್ತವೆ (ಋುಕ್ಸಾರ. ೧೦೮ ಪೀಠಿಕೆ); ಕೇಳಬೇಕಾದ ಕುಶಲ ಕೇಳೋದು, ಹೇಳಬೇಕಾದ್ದನ್ನ ಹೇಳೋದೂ ನಮ್ಮ ಅನೂಚಾನವಾಗಿ ಬಂದ ಸಂಪ್ರದಾಯ (ಹೊಸಕ್ಷಿ. ೧೧೮). ೩. ಬಗೆ; ಪ್ರಕಾರ; ವಿಧ : ನಮ್ಮ ನಾಲ್ಕು ಮುಖ್ಯ ಸಂಪ್ರದಾಯಗಳಾದ ಭರತನಾಟ್ಯ, ಕಥಕ್ಕಳಿ, ಮಣಿಪುರಿ ಕಥಕ್ ಅಲ್ಲದೆ ಕೂಚ್ಚುಪುಡಿ, ಒಡಿಸ್ಸಿ ಮುಂತಾದ ಕಡಿಮೆ ಪ್ರಖ್ಯಾತಿಯ ಸಂಪ್ರದಾಯಗಳೂ . . . ಬೆಳೆದು ಬಂದಿವೆ (ಭಾರದ. ೫೫೪). ೪. ಗುರುಪರಂಪರೆಯಿಂದ ಬಂದ ಉಪದೇಶ; ಬೋಧನೆ: "ಆಮ್ನಾಯಃ, ಸಂಪ್ರದಾಯಃ, ಪಾರಂಪರ್ಯಂ, ಗುರುಕ್ರಮಃ – ಈ ೪ ಎಡೆವಱಿಯದ ಗುರೂಪದೇಶಂ" (ಹಲಾಯು. ೭೭-೨೪೮). ೫. [ಶಕ್ತಿವಿ] "ಎಲ್ಲಾ ವೇದಾಂತಗಳಂತೆಯೇ ಇದರಲ್ಲೂ ದರ್ಶನ ಮತ್ತು ಸಂಪ್ರದಾಯವೆಂದು ಎರಡು ಭಾಗಗಳಿವೆ. ದರ್ಶನದ ಸ್ವರೂಪವನ್ನು ಭಕ್ತಿ ವಿಶಿಷ್ಟಾದ್ವೈತವೆಂದು ಸಂಪ್ರದಾಯವನ್ನು ಷಟ್ಸ್ಥಲಸಿದ್ಧಾಂತವೆಂದೂ ಕರೆಯಲಾಗಿದೆ" (ಶಕ್ತಿವಿ. ೧೯). [ಸಂ.]

**ಸಂಪ್ರದಾಯನಿಷ್ಠ** (ನಾ). ಪೂರ್ವದಿಂದ ಬಂದ ಆಚಾರ, ವಿಚಾರಗಳಲ್ಲಿ ನಂಬಿಕೆಯಿಟ್ಟಿರುವವನು : ಬ್ರೇವೆ ಪೂರ್ವಾಚಾರಪ್ರಿಯ, ರಷ್ಯಾದಲ್ಲಿ ನೆಲಸಿದ್ದ ಇತರ ಜರ್ಮನರಂತೆ ಅವನು ಸಂಪ್ರದಾಯನಿಷ್ಠ (ಪುನರು. ೨೮). [ಸಂ.]

**ಸಂಪ್ರದಾಯನಿಷ್ಠೆ** (ನಾ). ಹಿಂದಿನಿಂದ ಬಂದ ಆಚಾರ, ವಿಚಾರಗಳಲ್ಲಿಟ್ಟಿರುವ ನಂಬಿಕೆ, – ಶ್ರದ್ಧೆ : ಜನರು ತಮ್ಮಲ್ಲಿ ಬೆಳೆದು ಬಂದ ಆಹಾರಪದ್ಧತಿಗಳನ್ನು ಬೇಗ ಬದಲಾಯಿಸಲು ಸುಲಭವಾಗಿ ಒಪ್ಪುವುದಿಲ್ಲ. ಇದಕ್ಕೆ ಕಾರಣ . . . ಸಂಪ್ರದಾಯನಿಷ್ಠೆ (ಗೃಪಪಿ. ೪). [ಸಂ. ಸಂಪ್ರದಾಯನಿಷ್ಠಾ]

**ಸಂಪ್ರದಾಯವಂತ** (ನಾ). ಪ್ರಾಚೀನಪದ್ಧತಿಯನ್ನು ಅನುಸರಿಸುವವನು : ಬಿಗುವಿನ ಬರವಣಿಗೆಗೆ ಶ್ರೀ ಗೋವಿಂದಪೈಗಳ ಸಾಹಿತ್ಯಕ್ಕೆ ಸರಿಸಾಟಿಯಾಗುವ ಶೈಲಿಯು ಸಂಪ್ರದಾಯವಂತರಲ್ಲಿಯೂ ಅಪರೂಪ (ವಿಚಾಮಂ. ೧೧೩). [ಸಂ. ಸಂಪ್ರದಾಯವತ್]

**ಸಂಪ್ರದಾಯಶರಣ** (ನಾ). ಪ್ರಾಚೀನಪರಂಪರೆಯಲ್ಲಿ ನಂಬಿಕೆಯುಳ್ಳವನು : ವಾಲ್ಮೀಕಿಯ ಮಾತುಗಳಲ್ಲಿ ಚ, ಚು ತಪ್ಪದೆ ಎಲ್ಲವೂ ನಿಜವೆಂದು ಸಂಪ್ರದಾಯಶರಣರು ಹೇಳುತ್ತಾರೆ (ಭಾರದ. ೮೭). [ಸಂ.]

**ಸಂಪ್ರದಾಯಸ್ಥ** (ನಾ). = ಸಂಪ್ರದಾಯನಿಷ್ಠ : ನಮ್ಮ ಕುಲಕ್ಕೆ ಇರುವವರು ಒಬ್ಬ ಮಗ ಒಬ್ಬ ಮಗಳು; ಅವರು ಸಂಪ್ರದಾಯಸ್ಥರ ಮಕ್ಕಳಂತೆ ಬೆಳೆದು ಮುಂದಕ್ಕೆ ಬರುವುದು ಹೇಗೆ? (ವಚಭಾ. ೪೨); ಸಕೇಶಿಯಾದ ಭಾಗೀರಥಿ ಸಂಪ್ರದಾಯಸ್ಥರ ದೃಷ್ಟಿಯಲ್ಲಿ ತ್ಯಾಜ್ಯಳಾಗಿದ್ದಳು (ಭಾರಥಿ. ೩೯). [ಸಂ.]

**ಸಂಪ್ರದಾಯಿನಿ** (ನಾ). (ವರವನ್ನು) ನೀಡುವವಳು : ಚರಾಚರಲೋಕಾಲೋಕ ಸಂಪ್ರದಾಯಿನಿ . . . ಸರಸ್ವತೀದೇವಿ ವರದೆಯಕ್ಕೆಮಗೆಂದುಂ (ಕಾವ್ಯಾವ. ೨). [ಸಂ.ಸಂಪ್ರದಾಯಿನೀ]

**ಸಂಪ್ರಮೋದ** (ನಾ). ಅತ್ಯಧಿಕವಾದ ಸಂತೋಷ; ಅತ್ಯಾನಂದ : "ಪ್ರೀತಿ ಸುಖಂ ಮುದಂ ಸಮ್ಮದಂ ಹರ್ಷಮಾನಂದಮುದ್ಧವಂ ಸಂಪ್ರಮೋದಂ ಸುಸುಖಮೆನಿಸಿಕ್ಕು" (ಮಂಗರಾ. ೮-೨೫). [ಸಂ.]

**ಸಂಪ್ರಯೋಗ** (ನಾ). ೧. ಒಟ್ಟಾಗಿ ಸೇರಿಸುವುದು, – ಕೂಡಿಸುವುದು. ೨. ಜೋಡಣೆ; ಸೇರ್ಪಡೆ. ೩. ಸಂಯೋಗ; ಸಂಬಂಧ : ಇಂತೀ ಪೇೞ್ದ ಮನೋಜ್ಞಾದಿ ಸಂಪ್ರಯೋಗಮೆನಗೆ ಪುಟ್ಟದಿರ್ಕೆಂಬ ಚಿಂತಾಪ್ರಬಂಧಮ ಸಂಕಲ್ಪಂ (ಅಜಿಪು. ೮-೨೮ ವ); ಪ್ರತ್ಯಕ್ಷವು ಇಂದ್ರಿಯಾರ್ಥಗಳ ಸಂಪ್ರಯೋಗದಿಂದ ಹುಟ್ಟುವ ಜ್ಞಾನ (ಭಾತತ್ತ್ವ. ೩೮೩). ೪. ಸಂಭೋಗ : ಇಚ್ಚೆಕಾರ್ತನದ ಲಲ್ಲೆಗಳಂ ನುಡಿದಂತಲಂಪಿನುಬ್ಬ ದಿಗಮನಾ ಲತಾಂಗಿಗೆ ನೃಪಂ ಪಡೆದಂ ನವಸಂಪ್ರಯೋಗದೊಳ್ (ಕಾವ್ಯಾವ. ೮೦೦); ನೆಗೆದುವು ಕಂಪನಂ ಪುಳಕಮುಂ ಬೆಳರ್ವಾಯ್ದೆಱೆ ಬತ್ತ

ಘರ್ಮವಾರಿಗಳೊಗೆತಂದುವು . . . ಇಂತು ಮಾಗಿ ಬೇಸಗೆ ಮಟ್‌ಗಾಲವೆಂಬಿವೊಡನಾದುವು ನಲ್ಲರ ಸಂಪ್ರಯೋಗದೊಳ್ (ಸೂಕ್ತಿಸು. ೧೪-೪೦). ೫. ಇಂದ್ರಜಾಲ; ಕಣ್ಕಟ್ಟು. [ಸಂ.]

**ಸಂಪ್ರಶ್ನೆ** (ನಾ). ವಿನಯಪೂರ್ವಕವಾದ ಪ್ರಶ್ನೆ : ಭೂವರನೆ ಸಂಪ್ರಶ್ನೆಯಿದು . . . ಸಾವು ಸನಿಹಕೆ ಬಂದ ಮನುಜರಿಗಾವುದೈ ಕರ್ತವ್ಯ (ನಿಭಾಗ. ೨-೧-೨). [ಸಂ. ಸಂಪ್ರಶ್ನ]

**ಸಂಪ್ರಸರ** (ಗು). ಚೆನ್ನಾಗಿ ಹರಡಿದ; ವಿಶಾಲವಾದ : ರಸಭರಿತ ಖರ್ಜೂರಫಲ ಸಂಪ್ರಸರ ಛತ್ರ ವನೆಸಗಿಯುಪವನವೆಸೆದುದೈ ಧಾರ್ಮಿಕನ ವೊಲು ಯದುರಾಯನಿದಿರಿನಲಿ (ಕುವ್ಯಾಉ. ೭-೨೪). [ಸಂ.]

**ಸಂಪ್ರಸಾರಣೆ** (ನಾ). (ವೇದೋಕ್ತಕ್ರಮವನ್ನು ತಿಳಿಯಪಡಿಸಲು ವ್ಯಾಕರಣ ಶಾಸ್ತ್ರದಲ್ಲಿ ಹೇಳಿರುವ ಸಂಜ್ಞೆಗಳನ್ನು) ತಿಳಿಯಪಡಿಸುವುದು; ವಿಶದಗೊಳಿಸುವುದು : ಪರಮಯಜ್ಞವಿಧಾನವಿಹಿತೋತ್ಕರಶ್ರುತಿ ಸ್ಮೃತಿ ಸಂಪ್ರಸಾ [ಪಾಠಾಂ. ಧಾ]ರಣೆಗಿರಿಸಿದನು ಪುಸ್ತಕವನಿತ್ತು ಮುನೀಂದ್ರ ನಿಜಸುತನ (ತೊರರಾ. ೧-೭-೩೮). [ಸಂ. ಸಂಪ್ರಸಾರಣ]

**ಸಂಪ್ರಸ್ಕಂದನ** (ನಾ). ಅಪೇಕ್ಷೆ; ಆಸಕ್ತಿ : ಸಂಪ್ರಸ್ಕಂದನವು ಶ್ರದ್ಧೆಯ ಲಕ್ಷಣ (ಬುದ್ಧಪ. ಮಿಲಿಂದ. ೪೭). [ಸಂ.]

**ಸಂಪ್ರಹರಣ** (ನಾ). ಹೊಡೆಯುವಿಕೆ; ತಾಡಿಸುವಿಕೆ : ಅಹಿತಶಿರವಿದಲಾಯೆನುತ ಗೃಹಮಹಿಳೆಯರು ವಿಹಿತಾಂಗುಲಿಯ ಸಂಪ್ರಹರಣದಿ ಪರಿಭವಿಸಿದರು ಘೊಳ್ಳೆನಲು ನಿಖಿಳಜನ (ಕುವ್ಯಾಆ. ೨೨-೪೧). [ಸಂ.]

**ಸಂಪ್ರಹಾರ** (ನಾ). ಪರಸ್ಪರ ಹೊಡೆದಾಟ; ಕಲಹ; ಯುದ್ಧ : "ಸಂಗ್ರಾಮಃ . . . ಸಂಪ್ರಹಾರಃ, ಸಮ್ಮರ್ದಃ, ವಿಗ್ರಹಃ — ಈ ೩೫ ಕಾಳೆಗಂ" (ಹಲಾಯು. ೭೫-೨೯೯). [ಸಂ.]

**ಸಂಪ್ರಾಪ್ತ** (ಗು). ೧. ಸಂಪೂರ್ಣವಾಗಿ ಸಾಧಿಸಿದ; ಪೂರ್ಣಸಿದ್ಧಿಯನ್ನು ಪಡೆದ. ೨. ನೆರವೇರಿಸಿದ; ಪೂರೈಸಿದ; ೩. ಸಂಪಾದಿಸಿದ; ಗಳಿಸಿದ. ೪. ಉಂಟಾದ; ಸಂಭವಿಸಿದ. (ನಾ). ೫. ಒದಗಿದುದು; ಸಂಭವಿಸಿದುದು : ಖೂಳನಿವನನು ಹೊಯ್ದುರೊಳಗೊಳಗಾಳುದೋಟಿ ವಿಕಾರಿವಿಪ್ರನ ಕಾಳುಶಾಪದ ಫಲವಲಾ ಸಂಪ್ರಾಪ್ತವಾಯ್ತು (ಕುವ್ಯಾಕ. ೯-೧೨) ; ಪ್ರಿಯೇ ನನಗೆ ಸಂಪ್ರಾಪ್ತಮಾಗಿದೆ ವನವ್ರತಂ (ಶ್ರೀರಾಮಾ. ೮೭-೨೩೧). ೬. ನೆಲೆಗೊಂಡವನು : ಸದಮಳಾವಿರಳಾ ಪುನರ್ಭವಪದವಿಯಲಿ ಸಂಪ್ರಾಪ್ತನಾದಗ್ಗದ ಮಹಿಮನರಿವಾಳತಾಂಡಾರಿಯರ ಮಗ ನಾನು (ಬಸಪು. ೨೭-೧೯). [ಸಂ.]

**ಸಂಪ್ರಾಪ್ತಿ** (ನಾ). ೧. ಸಾಧನೆ; ಸಿದ್ಧಿ. ೨. ಪಡೆಯುವಿಕೆ; ಹೊಂದುವಿಕೆ. ೩. ಪಡೆದುದು; ಗಳಿಕೆ : ಉನ್ನತಭಕ್ತಿಸಂದರುಶನ ಗುಣತ್ವದಲಿ ಸಕಳಪಾಪಕ್ಷಯಮೆನಿಸಿ ವರಸುಕರಮೋಕ್ಷಾಂಗನೆಯನೊಂದುಗು ನಿಕಟಫಲಸಂಪ್ರಾಪ್ತಿಯಿದು (ಬಸಪು. ೩-೬೯). [ಸಂ.]

**ಸಂಪ್ರಾಪ್ತಿಸು** (ಕ್ರಿ). ಉಂಟಾಗು ; ಒದಗು : ಅಸಮಬಸವಪುರಾಣವಂ . . . ವಸುಧೆಯೊಳು ಬರೆದರ್ಗೆ ಸಂಪ್ರಾಪ್ತಿಸುವುದಾದ್ಯರ ಸುಪ್ರಸಾದಾನಂದಸಂಸಿದ್ಧಿ (ಬಸಪು. ೬೧-೮೦). [ಸಂಪ್ರಾಪ್ತ + — ಇಸು$_3$]

**ಸಂಪ್ರಾರ್ಥನಂಗೈ** (ಕ್ರಿ). ವಿಶೇಷವಾಗಿ ಪ್ರಾರ್ಥಿಸು : ದೇವಋಷಿಗಣಂ . . . ಸರಸತಿಯ ಸದನಕೈತಂದು ವಂದನೆಗೈದು ನುತಿಯಿಂದ ಸಂಪ್ರಾರ್ಥನಂಗೈದರು (ವಂಕಾರಾ. ೨-೩-೨೮). [ಸಂಪ್ರಾರ್ಥನ$_0$ + ಕೈ$_1$(< ಕೆಯ್$_1$)]

**ಸಂಪ್ರಿಯ** (ಗು). ೧. ಪರಸ್ಪರ ಒಲವುಳ್ಳ. ೨. ಅತಿಶಯವಾದ ಪ್ರೀತಿಯುಳ್ಳ; ಅತ್ಯಂತ ಪ್ರೇಮವುಳ್ಳ. (ನಾ). ೩. ಅತಿಶಯವಾದ ಪ್ರೀತಿ; ಅತ್ಯಧಿಕವಾದ ಒಲವು: ಈಸು ಸಂಪ್ರಿಯ ನಮ್ಮಲುಂಟೇ ಲೇಸು (ಕುವ್ಯಾಸ. ೧೩-೨೪). ೪. ಅತ್ಯಂತ ಪ್ರೀತಿಯ ವಸ್ತು : (೬). [ಸಂ.]

**ಸಂಪ್ರೀತ** (ಗು). ಸಂಪೂರ್ಣ ತೃಪ್ತಿಗೊಂಡ; ತಣಿದ : ಮಾತ ಮಿಾಱದೆ ನಡೆವೆನೆಂಬತಿ ಪ್ರೀತಿಸಂಗತಿ ಮನದಿ ಕೊಟ್ಟನು, ಭೂತಳೇಶ್ವರನೊಲಿದು ತನ್ನರ್ಧಾಂಗಿಯಳ ನುಡಿಯ ನೀತಿಯೊಳನುದಿನದಿ ಶಿವ ಸಂಪ್ರೀತ [ಪಾಠಾಂ. ತಿ] ಮನದಲಿ (ಕೃಷ್ಣಾಕಾ. ೭-೨೦). [ಸಂ.]

**ಸಂಪ್ರೀತಿ** (ನಾ). ೧. ಅತಿಶಯವಾದ ಅಕ್ಕರೆ, — ಒಲವು ; ವಾತ್ಸಲ್ಯ : ಸೀತೆಯುಮಂ ರಾಮನುಮಂ ಸಮಾಹಿತಮನಂ ಮಾಡೆಂದು ಸಂಪ್ರೀತಿಯಿಂ ಪ್ರಿಯದಿಂ ಪ್ರಾರ್ಥಿಸಿದಳ್ಗುಣಪ್ರಿಯೆ ಸುಮಿತ್ರಾದೇವಿ ಸೌಮಿತ್ರನಂ (ಪಂರಾಮಾ. ೬-೧೭೭) ; ತಾತನಾಗಿಯೆ ಶಿಕ್ಷಿಸುಗು ಸಂಪ್ರೀತಿಯಲಿ ಗುರುಭಕ್ತಿವೊಮ್ಮೆಯು ದಾತನಾಗಿಯೆ ರಕ್ಷಿಸುತಮಿಹುದೊಲಿದು ಗುರುಭಕ್ತಿ (ಬಸಪು. ೩೯-೨೩); ಮಾತೃಪಿತೃಗಳು ಶತ್ರುಭಾವವನಾಂತು ನಿಜಸಂತಾನದಲಿ ಸಂಪ್ರೀತಿಯನು ನೆಲೆಗೊಳಿಸಿ ಸರ್ವಜ್ಞಾಧಿಕಾರದಲಿ ಖ್ಯಾತರನು ಮಾಡದಡೆ . . . ಯೋಗ್ಯರಹರೇ (ಕುವ್ಯಾಉ. ೩-೨೦). ೨. ಸಂತೋಷ; ಹಿಗ್ಗು : ಆ ತತುಕ್ಷಣಮೊಯ್ದದಂ ಸಂಪ್ರೀತಿಯೊಳೆ ಮಾಡಿದಳು ಪಾಕವನಾ ತರುಣಿ (ಬಸಪು. ೨೪-೨೭). [ಸಂ.]

**ಸಂಪ್ರೋಕ್ಷಣ** (ನಾ). ಶುದ್ಧಿಗಾಗಿ ಮಂತ್ರೋಚ್ಚಾರಣಪೂರ್ವಕ, ಮಂತ್ರಪೂತ ನೀರನ್ನು ಚಿಮುಕಿಸುವುದು : ಲಿಂಗಾಲಯದಲ್ಲಿ ಸತ್ತಿತ್ತೆಂದು ಸಂಪ್ರೋಕ್ಷಣವ ಮಾಡಬೇಕೆಂಬ ಸಂದೇಹಿಗಳ ನೋಡಿರೇ (ಮೋಳಿಮಾ. ೫೧-೨೧೨); ಶೋಧಿಸಿತು ಬಳಿಕವನಿ ನಿರುಪಮವ್ಯೆದಿಕೋಕ್ತಿಯಲೊಡನೆ ಬಲಿದುದು ವೇದಿ ದರ್ಭಾಸ್ತರಣ ಸಂಪ್ರೋಕ್ಷಣ ಸುಸಾಂಗದಲಿ (ತೊರರಾ. ೬-೪-೨೧). [ಸಂ.]

**ಸಂಪ್ರೋಕ್ಷಣೆ** (ನಾ). = ಸಂಪ್ರೋಕ್ಷಣ : ಶುಭಕರ ಪೂಜಾದ್ರವ್ಯಾದಿ ವಸ್ತುವ . . . ನೆರಪಿ ಸಂಪ್ರೋಕ್ಷಣೆಯನು ಮಾಳ್ಪ ಸಮಯಕ್ಕೆ ಪರಮಾಯುಮಾಸನ್ನಮಾಗೆ (ಗೊಮ್ಮಟಚ. ೬-೧೪೭). [ಸಂ. ಸಂಪ್ರೋಕ್ಷಣ]

**ಸಂಪ್ರೋಕ್ಷಿಸು** (ಕ್ರಿ). (ಮಂತ್ರಜಲವನ್ನು) ಚಿಮುಕಿಸು; ಸಿಂಪಡಿಸು : ತಾವು ತಮ್ಮ ಪವಿತ್ರ ಹಸ್ತಗಳಿಂದ ನಮ್ಮ ಕತ್ತಿಗಳ ಮೇಲೆ ಗಂಗಾಜಲವನ್ನು ಸಂಪ್ರೋಕ್ಷಿಸಬೇಕು (ಝಾರಾಣಿ. ೧೭೭). [ಸಂಪ್ರೋಕ್ಷಣ + — ಇಸು$_3$]

**ಸಂಪ್ಲವ** (ನಾ). ೧. ನೆರೆ; ಪ್ರವಾಹ. ೨. ಗುಂಪು; ಸಂದಣಿ. ೩. ಗದ್ದಲ; ಕೋಲಾಹಲ. ೪. ನಾಶ; ಪ್ರಳಯ : ಪದಿನಾಲ್ಕು ಮನುಗಳ್ ಮುಗಿಯಲ್ ಬ್ರಹ್ಮದೇವಂಗೊಂದು ದಿನಮಕ್ಕುಂ. ಆಗಳ್ ಮೂಲೋಕಂ ಸಂಪ್ಲವಮಪ್ಪುದು (ಅದ್ಭುತ. ೨೫-೧೭). [ಸಂ.]

**ಸಂಪ್ಲವನ** (ನಾ). ಯುದ್ಧದ ಒಂದು ಪಟ್ಟು; ಮೇಲಕ್ಕೆ ನೆಗೆದು ಎದುರಾಳಿಯನ್ನು ತಾಗುವಿಕೆ : ವರಾಹಮತಸಂಪ್ಲವನಪಾರಿಪ್ಲವಗದಾಪರಿರಂಭ . . . ಲಘುವಿನ್ಯಸ್ತ ವೆಂಬೀ ವಿವರದಲಿ ಕಾದಿದರು ಕೌತುಕವೆನಲು ಸುರನಿಕರ (ಕುವ್ಯಾಗ. ೬-೨೫). [ಸಂ.]

**ಸಂಪ್ಲವಿಸು** (ಕ್ರಿ). ೧. ತುಂಬು; ಆವರಿಸು : ಓ "ಲಕ್ಷ್ಮಣಾ . . . ಎಂದು ಲೋಕ ಶೋಕವನೆಲ್ಲ ಕರೆವಂತೆ ಸಂಪ್ಲವಿಸಿತಾ ರೋದನಂ, ವಿಪಿನಜಂ ಬಹುದೂರದಾ! (ಶ್ರೀರಾಮಾ. ೨೩೯-೩೦೯). ೨. ಮುಳುಗಿಸು : ನಿನ್ನ ಹೆಸರಳಿದು ನೀರಾದುದಾ ಪ್ರಭವಂ ಜೀವನಪ್ಲವಮೆನ್ನ ಸಂಪ್ಲವಿಸಿ ನಿನ್ನ (ಗೀವಿಂ. ೫೭-೨). [ಸಂಪ್ಲವ + — ಇಸು$_3$]

**ಸಂಫಲ** (ನಾ). ಅತಿಶಯವಾದ ಫಲ; ಶ್ರೇಷ್ಠವಾದ ಉತ್ಪತ್ತಿ : ನಿನ್ನ ನಡೆನುಡಿಯ ನೋಟವುಂ ಚಿಂತಿಸಿದುದಂ ಹಸ್ತದೊಳು ಮುಟ್ಟಿತೆಲ್ಲವುಂ ಚಿಂತಾಮಣಿಯು ಕಾಮಧೇನು ಕಲ್ಪದ್ರುಮದ ಸಹಸ್ರಸಂಫಲನೀವವು (ಪ್ರಭುಪು. ೬-೬೮). [ಸಂ.]

**ಸಂಫುಲ್ಲ** (ಗು). ೧. ಸಂಪೂರ್ಣವಾಗಿ ಅರಳಿದ; ಪೂರ್ಣವಾಗಿ ವಿಕಸಿತವಾದ: ಅಲ್ಲಿಗಲ್ಲಿಗೆ ಕೆದಱಿದವೊ ಸಂಫುಲ್ಲಕಮಲದಳಂಗಳುಂ ನುಣ್ಪಲ್ಲವೋ ಪೊಸಗಂಧ (ಬಸಪು. ೪೭-೧೪). ೨. ಮೇಲಾದ; ಅತಿಶಯವಾದ : ನಿಮ್ಮಯ ಮಲ್ಲಡಿಗಳಂ ಪೂಜಿಸುವ ಸಂಫುಲ್ಲಭಕ್ತಿಯನಿತ್ತು ಪರಿಪಾಲಿಸಿದೆ (ಬಸಪು. ೫೦-೬೨). [ಸಂ.]

**ಸಂಫುಲ್ಲಾಕ್ಷ** (ನಾ). ವಿಶಾಲವಾದ ಕಣ್ಣುಗಳುಳ್ಳವನು; ಕೃಷ್ಣ : ಸಂಫುಲ್ಲಾಕ್ಷನ ಕೇಳೊ ವೈಷಿಕವಾದ ಹೀನಕಂಪ ಕುಡಿವೇನೇನೊ (ವಿಸಾಸು. ೪೭-೧). [ಸಂ.]

**ಸಂಬಂಧ** (ನಾ). ೧. ಒಟ್ಟಾಗಿ ಸೇರಿಸುವಿಕೆ, — ಜೋಡಿಸುವಿಕೆ. ೨. ಸಂಪರ್ಕ; ಸಹವಾಸ: ಸಂಬಂಧ ಅಸಂಬಂಧವೆಂದು ಹೆಸರಿಟ್ಟುಕೊಂಡು ನುಡಿವಿರಿ ಸಂಬಂಧವಾವುದು ಅಸಂಬಂಧವಾವುದು ಬಲ್ಲಡೆ ನೀವು ಹೇಳಿರಿ (ಅವಚಂ. ೪೩-೧೮೭). ೩. ಜೋಡಣೆ; ಸಂಯೋಗ. ೪. ಹೊಂದಿಕೆ; ಹೊಂದಾಣಿಕೆ : ಜನಮಂಗೀಕರಿಪುದು ನೆಟ್ಟನೆ ಸಂಬಂಧಾಭಿಧೇಯ ಶಕ್ಯಾನುಷ್ಠಾನ ನಿಜೇಷ್ಟ ಸಿದ್ಧಿಗಳ್ ನೆಲಸಿ ನಿಂದ ಕಾರಣದೆ ಶಬ್ದಮಣಿದರ್ಪಣಮಂ (ಶಮದ. ೭).

೫. (ಮದುವೆ ಮುಂತಾದುವುಗಳಿಂದ ಉಂಟಾಗುವ) ಬಾಂಧವ್ಯ; ನೆಂಟು; ನೆಂಟಸ್ತಿಕೆ : ಅಸಂಬಂಧ ಸಂಬಂಧವಾಯಿತ್ತು ಲಿಂಗಸಾರಾಯರ ಸನುಮತದಿಂದ (ಬಸವ. ೮೪೩); ಅಂಧಕಾಸುರಮಥನ ನೀನೇ ಬಂಧಿಸಿದೆಲಾ ಪೂರ್ವವರಸಂಬಂಧವನು ನೀ ಸೆಱಗ ಬಿಡಿಸೆಂದೊಱಲಿದಳು ತರಳೆ (ಕುವ್ಯಾಸ. ೧೫-೨೬); ಹಿಂದಣ ನಾಯಕರು ಹೀಗೆ ಪರಸ್ಪರ ಸಂಬಂಧ ಮಾಡಿಕೊಂಡು ನಂಟಸ್ತಿಕೆ ಬೆಳಸಿದ್ದರೆ, ನಾಡುನಾಡುಗಳಲ್ಲಿ ಕಚ್ಚಾಟ ನಡೆಯುತ್ತಿರಲಿಲ್ಲ (ಹುಲಿಪಾ. ೧೯೧). ೬. ಸ್ನೇಹ; ಗೆಳೆತನ. ೭. ನೆಂಟ; ಬಂಧು. ೮. ಸ್ನೇಹಿತ; ಗೆಳೆಯ. ೯. ಅರ್ಹತೆ; ಯೋಗ್ಯತೆ. ೧೦. [ವ್ಯಾಕ] ಷಷ್ಠಿ ವಿಭಕ್ತಿಯ ಅರ್ಥ : ಸಂಬಂಧದೊಳಮುಂಟು ಷಷ್ಠಿಗೆ ಯೋಗಂ (ಶಮದ. ೧೩೨); ವಿಭಕ್ತ್ಯರ್ಥಗಳು ಕರ್ತೃ , ಕರ್ಮ, ಕರಣ, ಸಂಪ್ರದಾನ, ಅಪಾದಾನ, ಸಂಬಂಧ, ಅಧಿಕರಣ ಎಂದು ಏಳುವಿಧ. ಇವುಗಳಲ್ಲಿ ಸಂಬಂಧವನ್ನುಳಿದು ಮಿಕ್ಕುವಕ್ಕೆ ಕಾರಕವೆಂದು ಸಂಜ್ಞೆ (ಕೃಪಿಡಿ. ೫೩). [ಸಂ.]

**ಸಂಬಂಧಕ** (ಗು). ೧. ಸಂಬಂಧಿಸಿದ; ಸಂಬಂಧಪಟ್ಟ. (ನಾ). ೨. ಒಂದರೊಡನೊಂದು ಸೇರಿಸುವಂಥದು; ಪರಸ್ಪರ ಕೂಡಿಸುವಂಥದು : ಆದಿ ಸಂಧಿಪದಿಗಳಲ್ಲಿ ದೇಹದ ಪ್ರತಿತುಂಡಿನಲ್ಲೂ ಎರಡು ದ್ವಂದ್ವ ನರಗಂಟುಗಳಿದ್ದುವು; ಇವು . . . ಉದ್ದ ಸಂಬಂಧಕಗಳಿಂದ (Connectives) ಒಟ್ಟುಗೂಡಿವೆ (ಕೀಟಜ. ೪೮). ೩. ಸೇರಿದವನು ; ಒಳಪಟ್ಟವನು : ಜೀವನು ಭಗವಂತನ ಸರ್ವವ್ಯಾಪಕವಾದ ಆಧ್ಯಾತ್ಮಿಕತತ್ತ್ವದ ಸಹಜಸ್ವರೂಪಕ್ಕೂ ಮತ್ತು ಸಂಬಂಧರಹಿತವಾದ ವಿಶೇಷಗಳನ್ನು ಒಳಕೊಂಡಿರುವ ಭೌತಜಗತ್ತಿನ ಜಡತ್ವವೆಂಬ ಅವನ ಖಂಡವಾದ ಅವನ ಹೊರಗಿನ ತೋರ್ಕೆಗೂ ಸಂಬಂಧಕನಾಗಿದ್ದಾನೆ (ತತ್ತ್ವಪ್ರಾ. ೩೮೯). ೪. ನೆಂಟ ; ಬಂಧು. ೫. ಗೆಳೆಯ; ಸ್ನೇಹಿತ. [ಸಂ.]

**ಸಂಬಂಧಪಡು** (ಕ್ರಿ). ಸಂಬಂಧಿಸು ; ಸೇರು : ಈ ವಿಷಯಕ್ಕೆ ಸಂಬಂಧಪಟ್ಟ ಪತ್ರಗಳೇನಾದರೂ ಬಂದಿರಬಹುದೇ (ಮುಂಗಾಮು. ೧೬): ಪೀಂಚಲು ಏನನ್ನೇ ಹೇಳಿದರೂ ಅದೆಲ್ಲ ತನಗೂ ತನ್ನ ಗಂಡನಿಗೂ ಸಂಬಂಧಪಟ್ಟದ್ದೆ ಆಗಿರುತಿತ್ತು (ಮಲೆಮ. ೭೫೫). [ಸಂಬಂಧ + ಪಡು$_1$]

**ಸಂಬಂಧಬೆಳೆಸು** (ಕ್ರಿ). (ಮದುವೆಯ ಮೂಲಕ) ನೆಂಟಸ್ತಿಕೆಯನ್ನು ಪಡೆ : ಬೆಂಗಳೂರಿನವರಿಗೆ ತಮ್ಮಲ್ಲಿ ಸಂಬಂಧಬೆಳೆಸಬೇಕೆಂದು ತುಂಬಾ ಆಸೆಯಿತ್ತು (ಬೆಳುಮ. ೧೯೦). [ಸಂಬಂಧ + ಬೆಳೆಸು (< ಬೆಳೆಯಿಸು)]

**ಸಂಬಂಧಭಕ್ತಿ** (ನಾ). ಶ್ರದ್ಧೆಯಿಂದ ಕೂಡಿದ ಭಕ್ತಿ : ಸರ್ವರುಂ ಸಾನಂದದಿಂ ಸಂಬಂಧಭಕ್ತಿಯೊಳೊಂದಿ ಸಹಜಶುಭಸ್ಥಿತಿಯೊಳಾ ಊರೊಳಿರುತಿರಲು (ಬಸಪು. ೫೫-೨೭). [ಸಂ.]

**ಸಂಬಂಧಸಂಬಂಧ** (ನಾ). [ವ್ಯಾಕ] ಒಂದನ್ನೊಂದು ಅನುಸರಿಸಿ ಬರುವ ಷಷ್ಠೀವಿಭಕ್ತಿ : ಸಂಬಂಧಸಂಬಂಧಕ್ಕೆ: ನೊಸಲ ಕಣ್ಣ ದೇವಂ, ತೋಳ ಬಾಳ ಕಾಂತಿ, ಹರಿಯ ಪೊಕ್ಕುಳ ತಾವರೆ (ಶಮದ. ನ. ೧೪೩ ವೃತ್ತಿ). [ಸಂ.]

**ಸಂಬಂಧಸೂಚಕಾವ್ಯಯ** (ನಾ). [ವ್ಯಾಕ] ''ಪದಗಳಿಗಾಗಲಿ ಪದಸಮುಚ್ಚಯಗಳಿಗಾಗಲಿ ವಾಕ್ಯಗಳಿಗಾಗಲಿ ಸಂಬಂಧವನ್ನು ಕಲ್ಪಿಸುವ ಅವ್ಯಯಗಳಿಗೆ ಸಂಬಂಧಸೂಚಕಾವ್ಯಯಗಳೆಂದು ಹೆಸರು'' (ಮಧ್ಯಮ. ೧೫೫). [ಸಂ.]

**ಸಂಬಂಧಾಕ್ಷರ** (ನಾ). ಸಮಾನವಾದ ಅಕ್ಷರ : ಸಂಬಂಧಾಕ್ಷರದೊಳೆಲ್ಲ ಮಾತ್ರೆಗಳುಂ ತಳ್ತಂಬಾಗಿ ಬೆರಸೆ ಶೋಭಾಡಂಬರಮಂ ಪಡೆಗುಮುಚಿತಕಾವ್ಯೋಕ್ತಿಗಳೊಳ್ (ಕವಿರಾ. ೨-೩೪). [ಸಂ.]

**ಸಂಬಂಧಾತಿಶಯೋಕ್ತಿ** (ನಾ). [ಕಾವ್ಯಮಿ] ಅತಿಶಯೋಕ್ತಿ ಎಂಬ ಅಲಂಕಾರದ ಒಂದು ಪ್ರಭೇದ ; ಪರಸ್ಪರಸಂಬಂಧವಿಲ್ಲದಿದ್ದರೂ ಸಂಬಂಧವನ್ನು ಸೂಚಿಸುವಿಕೆ: ಒಂದಕ್ಕೊಂದಕ್ಕೇ ಸಂಬಂಧವಿಲ್ಲದಿದ್ದರೂ ಸಂಬಂಧವನ್ನು ವರ್ಣಿಸುವುದೇ ಸಂಬಂಧಾತಿಶಯೋಕ್ತಿ (ಕೃಪಿಡಿ. ೨೭೫). [ಸಂ.]

**ಸಂಬಂಧಿ** (ಗು). ೧. ಸೇರಿದ ; ಸಂಬಂಧಪಟ್ಟ. (ನಾ). ೨. ನೆಂಟ ; ಬಂಧು ; ಸಂಬಂಧಿಕ : ಸಯಿಧಾನವ ತಂದು ನೀಡುವೆನಲ್ಲದೆ ಸಂಬಂಧಿ ನಾನಲ್ಲಯ್ಯಾ (ಬಸವ. ೭೮೨); ಸಂಬಂಧ ಅಸಂಬಂಧವೆಂದು ಹೆಸರಿಟ್ಟುಕೊಂಡು ನುಡಿವಿರಿ . . . ಕಾರ್ಯಸಂಬಂಧ ಜೀವಸಂಬಂಧ ಪ್ರಾಣಸಂಬಂಧ ಇಂತೀ ತ್ರಿವಿಧ ಸಂಬಂಧವನಱಿದಡೆ ಆತನೆ ಸಂಬಂಧಿ ಕಾಣಾ (ಅವಚಂ. ೪೩-೧೮೬) ; ರಾಜ್ಯದ ಶ್ರೀಮಂತಸರದಾರರೂ ಅವನ ಸಂಬಂಧಿಗಳೂ ಪಲ್ಲಕ್ಕಿಯಲ್ಲಿ ಕುಳಿತು . . . ಅರಮನೆಗೆ ಬರುತ್ತಾರೆ (ಪ್ರವಾ. II, ೨೯೪). ೩. ಹೆಣ್ಣು ಕೊಡುವುದರಿಂದ ಅಥವಾ ತರುವುದರಿಂದ ಸಂಬಂಧ ಬೆಳೆಸಿದವನು; ಬೀಗ : ಆರಿನ್ನು ಗತಿ ನಿನಗೆ ಸಂಬಂಧಿ ಬಾಣನಂ ಹಾರೈಸುವೊಡೆ ನಿನ್ನ ಬೇರ್ಗೊಲೆಗೆ ಶಿವನಿಪ್ಪ ಕಾರಣಮನಂಗತ್ವಮೇ ಪ್ರಾಪ್ತಂ (ಜೈಮಿಭಾ. ೭-೪೦). [ಸಂ. ಸಂಬಂಧಿನ್]

**ಸಂಬಂಧಿಕ** (ನಾ). ನೆಂಟ ; ಬಂಧು : ನನ್ನ ಸಂಬಂಧಿಕರ ಮನೆಯಲ್ಲಿ ಒಂದು ಮರದ ಮಂಚವಿದೆ (ಕಂಬಹು. ೭೧) ; ಒಡಹುಟ್ಟಿದ ಸಂಬಂಧಿಕರೇ ದೂರವಾಗಿದ್ದಾರೆ (ವಾತ್ಸಲ್ಯ. ೭೪). [< ಸಂ. ಸಂಬಂಧಕ]

**ಸಂಬಂಧಿಸು** (ಕ್ರಿ). ೧. ಹೊಂದು ; ಹೊಂದಿಕೆಯಾಗು ; ಅಳವಡು : ಅಸಗಂಗೆ ಸವಣರಿಗೆ ಸಂಬಂಧಿಸುವುದೇ ಕೆಳೆ (ಬಸಪು. ೨೮-೩೮). ೨. ಹೊಂದಿಸು : ಮತ್ತಂ ಜಿನಾಗಮಾರ್ಥಂಗಳಂ ಸಂಬಂಧಿಸಲಱಿಯದೆ ದುರಾಗ್ರಹದಿಂದಾನೆ ದೇವರೆಂದು ಡೊಳ್ಳುಮಂ . . . ತೋಱಿ (ಧರ್ಮಾಮೃ. ೬-೨೧೭). ೩. ಸೇರು ; ಸಂಬಂಧಪಡು : ಅವರು ಹೇಳುತ್ತಿದ್ದ ಕತೆಗಳೆಂದರೆ ಹೆಚ್ಚಾಗಿ ಊರಿಗೆ ಸಂಬಂಧಿಸಿದವುಗಳೇ (ಮುಂಗಾಮು. ೯೫) ; ಉರುವಲಿನ ಮತ್ತು ಅರಣ್ಯಗಳ ಮಿತವ್ಯಯ ಇತ್ಯಾದಿಗಳಿಗೆ ಸಂಬಂಧಿಸಿದ ಜಗತ್ತಿನ ಅತ್ಯಂತ ದೊಡ್ಡಸಮಸ್ಯೆಯೊಂದಕ್ಕೆ . . . ಕ್ರಿಯಾತ್ಮಕಪರಿಹಾರವನ್ನೊದಗಿಸುತ್ತದೆ (ಅಡುಸೌ. ೧೯). [ಸಂಬಂಧ + – ಇಸು$_3$]

**ಸಂಬಟಿಗಾರ** (ನಾ). ಸಂಬಾಳಿ ನುಡಿಸುವವನು (?) : ನಾಗಂಣ ಗೊರವಗೆಡೆ ಸಂಬಟಿಗಾರ ಬೊಂಮಗೆಡೆ (ಎಕ. VIII, ತೀರ್ಥಹ. ೧೧೪-೧೬ ; 1379). [ಸಂಬಟಿ ? + - ಗಾರ (< - ಕಾಱ)]

**ಸಂಬಯಸು** (ಕ್ರಿ). ಅತಿಯಾಗಿ ಅಪೇಕ್ಷೆಪಡು : ಆ ನಿತ್ಯವಂತನದೇತಱೊಳಗಿದ್ದಿಹ ನೆಂಬುದನಱಿಯದೆ ಉದರದ ಹುತ್ತಕ್ಕಾಗಿ ಮಹಾಸುಪದದಾಸೆಯ ಸಂಬಯಸಲೇಕೆ (ಮೋಳಿಮಾ. ೧೭೩-೬೫೦). [ಸಂ$_0$ + ಬಯಸು$_1$]

**ಸಂಬಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮತ್ಸಂಬಯ್ಯಂ ಬದಿರೂರನಾಳುತ್ತಿಱ್ದು ಕೆಱೆಗೆ ಬಿತ್ತುಕಟ್ಟಂ ಬಿಟ್ಟ ಯಿಾ ಧರ್ಮವನಳಿದೊ ವಾರಣಾಸಿಯನಳಿದೊಂ (ಎಕ. X, ಮುಳಬಾ. ೧೨೬-೧೬ ; 961). [ಸಂಬು$_1$ + ಅಯ್ಯ$_1$]

**ಸಂಬರ$_1$** 'ಸಂಬಾರ' ನೋ.

**ಸಂಬರ$_2$** (ನಾ). ೧. ಸೇತುವೆ ; ಸಾರ. ೨. ಒಂದು ಬಗೆಯ ಜಿಂಕೆ : ಇಂಡಿಯದ ಒಂದು ಜಾತಿಯ ಜಿಂಕೆ ; ಸಂಬರ ; ಕಡವೆ (Sambur. ಇಂಕನ). ೩. ನೀರು ; ಜಲ : ಶಂಬರ — ಸಂಬರ (ಶಮದ. ೨೫೩ ಪ್ರಯೋ) ; ಭರದೆ ಸಂಬರದೊಳಗೆಯೆನ್ನಯ ಪರಮಪ್ರಿಯಕರರಾದ ನಾರೀಜನರು ಶ್ರಮದಿಂದ ಕರಗಳಿಂ ನೀರ್ಗಡಿದು ಮೇಲಕೆ ಧರಿಸಿ ತಮ್ಮ ಶರೀರಗಳನುರೆ ತರಿಸುವರು ಜಲಕೇಲಿಪರವಶರಾಗಿ ಹರುಷದಲಿ (ರಘುವಂ. ೧೯೨-೬೦). ೪. ಹತ್ತೋಟಿ ; ಅಂಕೆ. ೫. ಒಂದು ಪರ್ವತದ ಹೆಸರು. [ಸಂ.]

**ಸಂಬರಕಾಗೆ** 'ಸಂಬಾರಗಾಗೆ' ನೋ.

**ಸಂಬರಗವಳ** (ನಾ). ಮಸಾಲೆಪುಡಿಯನ್ನು ಬೆರೆಸಿದ ಅನ್ನದ ತುತ್ತು—ಕವಳ : ಕಕಾರ ತೃತೀಯತೆಗೆ — ಕರ್ಪೂರಕರಂಡಕ - ಕಪ್ಪುರಗರಡಗೆ . . . ಸಂಭಾರಕಬಳ - ಸಂಬರಗವಳ (ಶಮದ. ೨೯೩ ಪ್ರಯೋ). [ಸಂಬರ$_1$ (< ಸಂಬಾರ) + ಕವಳ$_2$ (= ಕವಲ)]

**ಸಂಬಲ$_1$** 'ಸಂಬಳ$_1$' ನೋ.

**ಸಂಬಲ$_2$, ಸಂಬಳ$_2$** (ನಾ). ೧. ಪ್ರಯಾಣಕಾಲಕ್ಕೆ ಬೇಕಾಗುವ ಹಣ, ಬುತ್ತಿ ಮುಂತಾದ ಪ್ರಯಾಣಸಾಮಗ್ರಿ; ಪಾಥೇಯ : ''ಪಾಥೇಯಮನೆ ಸಂಬಲಮನಿಕ್ಕು'' (ಮಂಗರಾ. ೬೯-೧೩). ೨. ನೀರು ; ಜಲ. **ಸಂಬಳ$_2$** : ೧. ''ಪಾಥೇಯಂ, ಸಂಬಳಂ - ಈ ೨ ಸಂಬಳಂ'' (ಹಲಾಯು. ೫೯-೨೦೩); ಉಡಲುಂ ತುಡಲುಂ ಸಂಬಳಮುಮಂ ಕೊಟ್ಟು ಕಳಿಪಿದಾಗಳ್ (ವಡ್ಡಾರಾ. ೪-೧೦) ; ಪಾಪವಿಲ್ಲದ ಪಯಣಕ್ಕೆ ನಿನ್ನ ನುಡಿ ಸಂಬಳಮಾಯ್ತು (ಪಂರಾಮಾ. ೫-೯) ; ಅವಳುಮನೊಲಿಸಿ ಕಂಟಿಸಿ ಗೋವರ ಗುಗ್ಗುರಿಗೆ ಮಾಡಿಯುಂ ತಣಿಯಯ್ ಪೆರ್ಮಾವುಲಿಗನಯೋ ಪೇಟೇಂ ಸ್ತ್ರೀವಧೆ ನಿನಗಶ್ವಮೇಧಮೋ ಸಂಬಳಮೋ (ಕಾವ್ಯಾವ. ೧೬೬). [ಸಂ.]

**ಸಂಬಲಿ, ಸಂಪಲಿ, ಸಂಬಳಿ$_2$, ಸಂಬೊಳಿ$_2$** (ನಾ). ತಲೆಹಿಡುಕಿ ; ಕುಂಟಲಗಿತ್ತಿ : "ಸಂಬಲಿ (ಸಂಬೊಳಿ) - ಶಂಭಲೀ = ಕುಂಟಣಿ" (ತದ್ಭಕೋ. ೪೩). **ಸಂಪಲಿ :** ಮದನನ ಚಾಪ ಮನ್ಮಥನ ಗಂಧ ಚದುರರ ಮಾತು ಸಂಪಲಿಯ ಗನ್ನ . . . ಅಜನ ಕೊರಳ ಸೂತಯಂತೆ (ಸಕಪ. ಕ.1, ೨೬೫-೭೧). **ಸಂಬಳಿ$_2$ :** (ಪ್ರಭಣ್ಣ). **ಸಂಬೊಳಿ$_2$ :** (ಕಿ).

[< ಸಂ. ಶಂಬಲೀ]

**ಸಂಬಳ$_1$, ಸಂಬಲ$_1$** (ನಾ). ೧. (ಮಾಡಿದ ಕೆಲಸಕ್ಕೆ ಪ್ರತಿಫಲರೂಪವಾಗಿ ಕೊಡುವ) ವೇತನ ; ಮಜೂರಿ : ಕುಂಬಾಱರ್ ಸಂಬಳಮಿಲ್ಲದ ದಂಡಿನಾಳಂತೆ ಬೆರ್ಚೆ (ಧರ್ಮಾಮೃ. ೨-೬೯); ಮೆಯ್ಯನೆಸುವೆಯೊ ಮೇಣು ಮಾರ್ಗಣೆ ಕಯ್ಯಲುಂಟೇ ನಿನಗೆ ಸಂಬಳವೇನು ಸಮರದಲಿ (ಕುಮ್ಯಾದ್ರೋ. ೧೫-೫೬) ; ಒಂದು ಘಳಿಗೆ ನಿಂದು ನಮ್ಮನೋಲೈಸಿದಱಿಂದಿವರ್ಗೇನು ಸಂಬಳವ್ಯ (ಭರಚ. ೨೬-೫೬). ೨. ಹಣ ; ಧನ : ಕೊಟ್ಟನೆರಡು ಲಕ್ಕ ಪೊನ್ನ ಕಟ್ಟಿಸಿ ಮಂದಿಗೆ ಸಂಬಳವನು[ಪಾಠಾಂ. ದಿವ್ಯಾಂಬರಗಳ] (ಕುರಾಸಾಂ. ೪೩-೭); ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ (ಪುರಂದ. ೨-೪೯ ಅನುಪಲ್ಲವಿ). ೩. ಒಂದು ಬಗೆಯ ಆದಾಯ ತೆರಿಗೆ : ಕೆಂಗೂರು ಮಾರವಂಗಲಕ್ಕೆ ಹದಿಕೆ ಸಂಬಳ ಉಳುವ ಆಮದುವಣ . . . ನಡಸಿದವರಿಗೆ ಆಯುಂ ಶ್ರೀಯುಂಯಕ್ಕು (ಮೈಆರಿ. ೧೯೩೮ ; ೪೨-೧೨; ಸು. 1175); ಕೊನೆದೆಱೆ ಖಾಣ ಸಂಬಳವೊಳಗಾದ ಪೂರ್ಬ್ಬಾಯ ಅಪೂರ್ಬ್ಬಾಯಯೆಲ್ಲವನೂ ಕಾರುಣ್ಯಂ ಮಾಡಿ ಧಾರಾಪೂರ್ಬ್ಬಕಂ ಮಾಡಿ ಕೊಟ್ಟರು (ಎಕ.VI, ಕಡೂರು. ೪೯-೪೨ ; 1291) ; ಅರಮನೆಗೆ ತೆಱುವ ಸಂಬಳ ಸರತಿ ಕುಡಿಕೆ ಚಿಟಿಗೆ ಅಧಿಕಾರಿ ಸೇನಬೋವರ ಸಂಬಳ ಎಲ್ಲವನು ಬಿಟ್ಟೆಉೂ (ಎಕ.III, ಮಳವ. ೬೭-೫ ; 1550). ೪. ಕಾಣಿಕೆ ; ಉಡುಗೊರೆ : ನಿನ್ನ ಕುಮಾರರಾಮನ ಕಳುಪುವುದೆಮ್ಮ ಕನ್ನೆಯನಪನಿಗಿತ್ತಪೆವು ನನ್ನಿಯಿಾ ಮಾತು ಸದಾಶಿವನಾಣೆ ಕೇಳ್ ನಿನ್ನ ಸಂಬಳಕೆ ರಾಜ್ಯವನು ಕೊಟ್ಟೆನು ಬಿದಿರೆಯ ಕೊಟ್ಟೆನು (ಕುರಾಸಾಂ. ೧೭-೬೫). ೫. (?) : ಮಾಯೆಯ ಬೆಂಬಳಿಯವ ನೀ ನಿನಗದು ಕಾರಣ ಸಂಬಳವೆ ತತ್ತ್ವಾರ್ಥರಹಸ್ಯವಿದೆಂಬನು ದೇಶಿಕನು (ಯೋಗಾಂವಿ. ೩-೧೪). **ಸಂಬಲ$_1$ :** ೬. ಒಂದು ಬಗೆಯ ಆಯುಧ (?): ಸಂಬಲ ಶಿವಾಂಕ ಸಮಲಂಕೃತಶರೀರೇ ಶಂಬರಜ ಬಾಣ ಪರಿಪಾಲಿನಿ ಸುಧೀರೆ (ಹಾಲಾಸ್ಯ. ೨-೧೩-೪೫).

**ಸಂಬಳಸಾರಿಗೆ** = ಸಂಬಳ ಮತ್ತು ಓಡಾಟದ ವೆಚ್ಚ : ಕೆಲಸ ಮಾಡುವರೆಲ್ಲರಿಗೂ ಮೊದಲೇ ಗೊತ್ತಾಗುವ ಸಂಬಳಸಾರಿಗೆ ಸಿಕ್ಕುವುವು (ಪಣಪ್ರ. ೫).

[ದೇ. ॥ ತಮಿ. ಮಲ. ಚಮ್ಬಳ ; ತುಳು. ಸಂಬಳ ; ತೆಲು. ಸಂಬಡ, ಸಂಬಳ. / ಪಾಲಿ. ಸಮ್ಬಲ. / ಪ್ರಾ. ಸಂಬಲ./ ಸಂ. ಶಂಬಲ]

**ಸಂಬಳ$_2$** 'ಸಂಬಲ$_2$' ನೋ.

**ಸಂಬಳಂಗೊಡು, ಸಂಬಳಕೊಡು** (ಕ್ರಿ). (ಮಾಡಿದ ಸೇವೆಗಾಗಿ) ವೇತನವನ್ನು ನೀಡು; ಪಗಾರ ಕೊಡು : ಆಯಾಯೂಟಿಗವಾಂತರೊಳ್ಗಿಗನಿತರ್ಕೊಳ್ಸಂಬಳಂ ಗೊಟ್ಟೊಡಂ ಬೀಯಕ್ಕಾದುದು ನಾಲ್ಕುಕೋಟಿಧನಮುಂ (ಮೈಸೂಮ. ೫-೮೭). **ಸಂಬಳಕೊಡು :** ಜನಾಂಗಕ್ಕೆ ಸಹಾಯ ಮಾಡಬೇಕೆಂದು ಟೊಂಕ ಕಟ್ಟಿ ನಿಂತಿರುವ ನಮಗಾದರೂ ಸಂಬಳ ಕೊಡಬಾರದೇ ಸರ್ಕಾರದವರು ಎನ್ನಿಸಿತು (ರಾಯಕ. ೮).

[ಸಂಬಳ$_1$ + ಕೊಡು$_1$]

**ಸಂಬಳಂಗೊಳ್** (ಕ್ರಿ). ದಾರಿಯ ಬುತ್ತಿಯನ್ನು ಪಡೆ : ಬಾಷ್ಪಜಳಮಂ ಕಳೆದಟ್ಟಿಱ ನೀಯೆ ಸಂಬಳಂಗೊಳ್ವವೊಲಾ ತಳೋದರಿಯ ಚಿತ್ತಮನಿಟ್ಟುಳಿಗೊಂಡನರ್ಜುನಂ (ಪಂಪಭಾ. ೭-೬೮). [ಸಂಬಳ$_2$ (= ಸಂಬಲ$_2$) + ಕೊಳ್$_1$]

**ಸಂಬಳಂಬಡೆ** (ಕ್ರಿ). ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಹಣವನ್ನು ಪಡೆ : ಆ ದುರಾತ್ಮಂ ಕಾಮರೂಪಭೂಪಂಗೆ ಲೇಖವಾಹಕನಾಗಿ ಮನ್ನೆಯ ಮಂಡಲಿಕ ಸಾಮಂತಾದಿ ಮೇದಿನೀಪ್ರಭುಗಳ ಸಭೆಗೆ ಲೀಲೆಯಿನೋಲೆಯನಡಿಕಿ ಸಂಬಳಂಬಡೆದು ಜಗಂ ತೆಗಟೆ ಜೀವಿಸುತ್ತುಂ (ವರ್ಧಪು. ೩-೧೨ ವ). [ಸಂಬಳ$_1$ + ಪಡೆ$_1$]

**ಸಂಬಳಕೊಡು** 'ಸಂಬಳಂಗೊಡು' ನೋ.

**ಸಂಬಳಗಾರ** (ನಾ). ತಿಂಗಳಿಗೆ ಅಥವಾ ವರ್ಷಕ್ಕೆ ನಿಗದಿಯಂತೆ ವೇತನವನ್ನು ಪಡೆಯುವವನು : (ಕಿ). [ಸಂಬಳ$_1$ + – ಗಾರ (< - ಕಾಱ)]

**ಸಂಬಳಗುಂಡು** (ನಾ). (?) : ತನುವಂಚಕ ಭಕ್ತನೆ ಮನವಂಚಕ ಭಕ್ತನೆ ಧನವಂಚಕ ಭಕ್ತನೆ ಅಲ್ಲಲ್ಲ ನಿಲ್ಲು ಮಾಣು ಇವರು ಸಾವಿಂಗೆ ಸಂಬಳಗುಂಡನಿಱಿದುಕೊಂಬವರು ಭಕ್ತರಪ್ಪರೆ (ಅವಚಂ. ಕ. ೨೮೫-೭೮೨). "ಪ್ರಯಾಣಕಾಲದ ಸಾಮಗ್ರಿಯ ಗಂಟು" (ಅವಚಂ. ಕ. ಕೋಶ). [ಸಂಬಳ$_?$ + ಗುಂಡು$_?$]

**ಸಂಬಳಗೋಲ್** 'ಸಂಬಳಿಗೋಲ್' ನೋ.

**ಸಂಬಳಿ$_1$, ಸಂಬಾಳಿ$_1$, ಸಂಬೊಳಿ$_1$, ಸಂಬೋಳಿ, ಸಂಭಾಳಿ$_1$, ಸಂಭೋಳಿ, ಸೆಂಬಳಿ$_1$, ಸೆಂಬುಳಿ** (ನಾ). ೧. ಎಚ್ಚರಿಕೆಯನ್ನು ಸೂಚಿಸುವ ದಾರಿಬಿಡಿ ಎಂಬ ಮಾತು : ನಸುಕುಸಿದ ದೇಹ ಕಂಕರಿಗೋಲನಿಱಿದು ಬಾಱಿಸುತ ಕೈವಿಡದ ಸಂಬಳಿ ಸಂಬಳೆಂದೆಂದು ಕೊಸರುತಿಹ ಬಾಯ್ಬೆರಸಿ ಬೀದಿಬೀದಿಯೊಳು ಸುಳಿದಂ ಸತ್ಯಸಂಪನ್ನನು (ಹಚಕಾ. ೧೧-೩೨); ಸಂಬಳಿ ಜೀಯ ಇಂದು ಮಳೆಯಾದುದಱಿಂದವೆ ಮಾಱಿದಿಂಧನಂ ಕೊಂಬುವರಿಲ್ಲ (ನನ್ನಚ.೫-೩೧೦). 'ಸಂಬಳಿಗೋಲ್' ಪರಾ. **ಸಂಬಾಳಿ$_1$ :** ೧. ಭೂಪಂ ವಿಳಯದಲಿ ಸಂಬಾಳಿ ಪಾಯವಧಾರುಗಳ ರಭಸ ತುಳುಕಿದವು (ಕುಮ್ಯಾದ್ರೋ. ಒರಿ೯. ೨೮೬ ಪರಿ). **ಸಂಬೊಳಿ$_1$ :** ೧. ತಾನು ಹದುಳಿರಿಸಿಕೊಂಡಿದ್ದ ಭಕ್ತನು ಮದಿಸಿ ಪುರವೀಧಿಯಲಿ ಬರುತಂ ಸಂಬೊಳಿಯನ್ನನೆಮ್ಮುವನಿನಿತು ಬಗೆಗೊಳ್ಳ (ಬಸಪು. ೫೫-೫). ೨. ಹೊಲೆಯ; ಅಂತ್ಯಜ: ಅಂಬಿಕಾಪತಿ ಚೆನ್ನಯನ ಮನೆಯಂಬಲಿಯುಂಬಾಗಲೆಂಜಲಿದೆಂಬ ಭಾವನೆಯುಂಟೆ ಸಂಬೊಳಿಯೆಂದು ತೊಲಗಿದನೆ (ಬಸಪು. ೫೬-೫೦). **ಸಂಬೋಳಿ :** ೧. ಆನು ದೇವಾ ಹೊಱಗಳವನು ಸಂಬೋಳಿ ಸಂಬೋಳಿ [ಪಾಠಾಂ. ಸಂಬೊಳಿ ಸಂಬೊಳಿ] ಎನ್ನುತ್ತ ಇಂಬಿನಲ್ಲಿ ಇದೇನೆ (ಬಸವ. ೯೩೩); ಕುಹಕವೇಷದಿಂ ಯಾಗಶಾಲೆಯ ಮುಂದೆ ಸಂಬೋಳಿ ಸಂಬೋಳಿಯೆಂದೊಱಲುತ್ತಂ ಪೋಗುತ್ತಿರಲು (ತ್ರಿಷ್ಟವಿ. ೪-೧೦ ವ) ; ಸಮಿಾಪಕೆ ಬಂದನೊಳಗಿರ್ಪುದಲ್ಲೆಂದು ಸಂಬೋಳಿಯಂ ನುಡಿವುತಿದಿರಿಂಗೆ ನಡೆತಂದನು (ರಾಘಚ. ೧೨-೪೫). **ಸಂಭಾಳಿ$_1$ :** ೧. 'ಸಂಭಾಳಿಕೆ' ಪರಾ. **ಸಂಭೋಳಿ:** ೨. ಇನ್ನು ನಿಮಗೂ ತಮಗೂ ಸೊಮ್ಮು ಸಂಬಂಧವಿಲ್ಲವೆಂದು ಕಂಡಾಗ ತೊಲಗುವಂತೆ ಸಂಭೋಳಿಯೆಂಬ ನಾಮಾಂಕಿತವಂ ಕೊಟ್ಟು ತೊಱೆ ಪತ್ರಮಂ ಬರೆದರಾಗಿ (ಉರಿಪ. ಕ. ೧೭೭-೨೪೦). **ಸೆಂಬಳಿ$_1$ :** ೧. 'ಸೆಂಬಳಿಗೋಲ್' ಪರಾ. **ಸೆಂಬುಳಿ :** ೧. 'ಸೆಂಬುಳಿಗೋಲ್' ಪರಾ. [ದೇ. ॥ ತೆಲು. ಸಂಬಳಿ, ಸಂಬಡಿ, ಸಂಬರಿ]

**ಸಂಬಳಿ$_2$** 'ಸಂಬಲಿ' ನೋ.

**ಸಂಬಳಿ$_3$** (ನಾ). ಸಂಪುಟಿ; ಭರಣಿ; ಕರಂಡ : ಕನ್ನೆಯರು ಕನಕಮೌಕ್ತಿಕದ ಸಂಬಳಿ ಹಡಪ ಪನ್ನೀರ ಗಿಂಡಿ ಸಗ್ಗಳಿಯಖಿಳ ವಿನಿಯೋಗವನ್ನೈದಿ ವೋಲೈಸಿ ಬಂದರಾ ಸೌಂದರಿಯ ಕೆಲಬಲದೊಳಾನಂದದಿ (ಚತುಪು. ೨-೬-೫೩). [← ಮರಾ. ಸಂಬಳೀ]

**ಸಂಬಳಿಗ** (ನಾ). ಬುತ್ತಿಯನ್ನು ಒಯ್ಯುವವನು : ತನು ಮನ ಧನ ವಂಚನೆಯುಳ್ಳನ್ನಕ್ಕ ಭಕ್ತನೆ ಇವರೆಲ್ಲರು ಎದೆಯಲ್ಲಿ ಕಲ್ಲನಿಱಿದುಕೊಂಡು ಸಾವಿಂಗೆ ಸಂಬಳಿಗರು ಕಾಣಾ (ಅವಚಂ. ೨೮೫-೭೯೩). [ಸಂಬಳ$_2$ (= ಸಂಬಲ$_2$) + – ಇಗ]

**ಸಂಬಳಿಗೆ** (ನಾ). ೧. ವೀಳೆಯದೆಲೆಯನ್ನು ಇಡಲು ಸಾಮಾನ್ಯವಾಗಿ, ಲೋಹ ಮುಂತಾದುವುಗಳಿಂದ ಮಾಡಿದ ಮುಚ್ಚಳವಿರುವ ಡಬ್ಬಿಯಂಥ ಒಂದು ಸಾಧನ : ಎಱೆಯ ಕೆಱೆಯಂತೆ ಬತ್ತಿರ್ದ ಗಲ್ಲಮುಂ ಆನೆ ಮೆಟ್ಟಿದ ಸಂಬಳಿಗೆಯಂತೆ ಬತ್ತಿದ ಮೂಗುಂ (ಧರ್ಮಾಮೃ. ೪-೭೫); ಕೆಂಬರಲ ಸಂಬಳಿಗೆಗಳೊಳಂ ಗರುಡೋದ್ಗಾರದ ಪಚ್ಚೆಯ ಕರಡಿಗೆಗಳೊಳಂ ತೀವಿದನಿತಾನುಂ ತೆಱದ ಬಂಧುರ ಸುಗಂಧವಸ್ತುಸಂದೋಹಮಂ ಪಿಡಿದು (ಜಗವಿ. ೬-೧೮ ವ); ಮಿಗಿಲು ದೋವತಿ ದರ್ಭೆ ಸಂಬಳಿಗೆಗಳನೊಂದೆಡೆಯಲಿ ಮಡಗಿ (ಬಸಪು. ೫೬-೨೮); ಸುಲಲಿತಕ್ರಮುಕದೊಂದೆಲೆಯ ಸಂಬಳಿಗೆಯ ಲಲನೆ ನಿಂದಿರ್ದಳು (ಮೋಹತ. ೫-೪೦). ೨. ಹೊಲ, ಗದ್ದೆಗಳಿಗೆ ನೀರು ಹಾಕುವ ಒಂದು ಬಗೆಯ ಸಾಧನ; ಕೈಕಪಿಲೆ : "ಎರಡು ಜತೆ ಅಗಲ ಬಾಯಿಯ ಪಾತ್ರೆಗಳಿಗೆ, ಎರಡೂ ಕಡೆಯಲ್ಲಿ ಹಗ್ಗಗಳನ್ನು ಜತೆಯಲ್ಲಿ ತೂಗುತ್ತಾರೆ. ತೂಗುವವರು ಆಚೀಚಿನ ಎತ್ತರದ ದಂಡೆಯಲ್ಲಿ ನಿಂತಿರುತ್ತಾರೆ, ನಡುವೆ ನೀರಿನ ಕುಳಿಯಿರುತ್ತದೆ; ಅಲ್ಲಿಗೆ ಕೆರೆಯ ನೀರು ಬರುತ್ತದೆ. ಇಂಥ ನೀರಿನ ಪಾತ್ರೆಗಳಿಗೆ 'ಸಂಬಳಿಗೆ' ಎನ್ನುತ್ತಾರೆ" (ಜಾನಗೀ. ೯೩); ಆ ಬತ್ತದ ಸಸಿಗಳಿಗೆ ಸಂಬಳಿಗೆಯಿಂದ ನೀರುಹಾಕಬಹುದು (ಮರಮ. ೧೨). ೩. ಹೋಳು; ಭಾಗ; ಹಲ್ಲೆ : ಕಱುತ್ತುದಗ್ರತರವಾರಿಯಿನಂದರಸಾಸವಾರಿ ಪೊಯ್ದೊಡೆ ತರವಾರಿ ಸೀಸಕ ಸಿರಂ

ಸಮನಾಗಿಸಲಂತೆ ಮತ್ತ ಮೆಯ್‌ನಿಡುಪಿನೊಳೆಯ್ದೆ ಸಂಬಳಿಗೆಯಾಗಿರೆ ಪೋಟ್ಬುಡಿದಿರ್ದನುರ್ವಿಯೊಳ್ (ನೇಮಿಪು. ೧೧-೧೬೩).

[ದೇ. ॥ ತಮಿ. ಚಮ್ಬಳಿ; ತೆಲು. ಸಂಬಳಿಕ, ಸಂಬೆಲ, ಸಂಬೆಳ./ಸಂ. ಸಂಪುಟಕ]

**ಸಂಬಳಿಗೆಗಾತಿ** (ನಾ). ಎಲೆಯ ಬುಟ್ಟಿಯನ್ನು ಹಿಡಿದಿರುವವಳು: ಸಂಬಳಿಗೆ ಗಾತಿಯೂ ಮೊಗವಾವುಡದವಳೂ ಹತ್ತಿರದಲ್ಲಿಯೆ ಇದ್ದರು (ಕರ್ಣಾಜ. ೧೦೦).

[ಸಂಬಳಿಗೆ + – ಕಾತಿ$_5$]

**ಸಂಬಳಿಗೆದೆಗೆ** (ಕ್ರಿ). ಒಳಗೇ ಅಡಗಿಹೋಗು; ಮೇಲೆ ಕಾಣದಂತೆ ಹುದುಗಿ ಕೊಳ್ಳು : ಕಂಬಿ ಹೆಗಲೊಳಗಾಳೆ ಕುಸಿದು ಕಾಯಂ ತಗ್ಗೆ ಸಂಬಳಿಗೆದೆ[ಪಾಠಾಂ. ತೆ]ಗೆದು ಹೆಗಲೆಲುವುಗಳು ನೆಟ್ ತಗ್ಗೆ (ಒಪಿರ. ಹ. ೨೧೪-೨೦). [ಸಂಬಳಿಗೆ + ತೆಗೆ$_1$]

**ಸಂಬಳಿಗೆವೋಗು** (ಕ್ರಿ). = ಸಂಬಳಿಗೆದೆಗೆ : ತೆಗೆದೆಚ್ಚರ್ಜುನನಂಬು ತೀವೆ ತುದಿಯಿಂ ಬಾಲಂಬರಂ ಪಂದಿ ಸೌಳಗವೋಪಂತಿರೆ ನೋಡ ಸಂಬಳಿಗೆವೋಯ್ತೆಂಬನ್ನೆಗಂ ಕೊಂಡುದು (ಪಂಪಭಾ. ೮-೧೬); ''ಸಂಬಳಿಗೆವೋಯ್ತು - ಸಂಪುಟವಾಗಿ ಹೋಯಿತು ಎಂದರೆ ಮೈಯಲ್ಲೇ ಅಡಗಿತು'' (ಪಂಪದೀ. ೨೭೪).

[ಸಂಬಳಿಗೆ + ಪೋಗು$_1$ (< ಪೋ$_1$)]

**ಸಂಬಳಿಗೋಲ್, ಸಂಬಳಗೋಲ್, ಸಂಬಳಿಗೋಲು, ಸಂಬೋಳಿಗೋಲ್, ಸೆಂಬಳಿಗೋಲ್, ಸೆಂಬುಳಿಗೋಲ್** (ನಾ). (ಹೊಲೆಯನು ತನ್ನ ಬರುವಿಕೆಯನ್ನು ಸೂಚಿಸಿ, ಜನರು ಪಕ್ಕಕ್ಕೆ ಸರಿಯುವಂತೆ ಎಚ್ಚರಿಕೆಯನ್ನು ನೀಡಲು, ನೆಲದ ಮೇಲೆ ಕುಟ್ಟಲು ಬಳಸುತ್ತಿದ್ದ)ದೊಣ್ಣೆ,–ಕೋಲು : ಚಂಡಾಲಕನ್ಯೆ . . . ಸಂಬಳಿಗೋಲಿಂದಿರದ ಪಳಂಚಿಸಿದಳ್ ಜರ್ಝರರವಮೊಗೆಯಲ್ಕೆ ನೃಪಸಭಾಕುಟ್ಟಿಮಮಂ (ಕಾದಂಪೂ. ೩೪); ಹೊತ್ತ ಕಱುವಿಡಿದ ಸಂಬಳಿಗೋಲನೀಶ್ವರಂ ಉತ್ತಮೋತ್ತಮ ಕರುಣವಾರಿಧಿ ಸುಧಾಕರಂ (ಸಾಮರ. ಪ. ೨೪೯-೫); ಸಂಬಳಿಗೋಲ ಮುಂಜೂಱೊಳಗೆ ಸಮಂತಿಱಿಬ್ಬು (ಆರಾಚ. ೧-೭-೧೩). **ಸಂಬಳಗೋಲ್** : ಕರತಳ ದೊಳ್ಪಿಡಿದದೊಂದು ಸಂಬಳ[ಪಾಠಾಂ. ಳಿ]ಗೋಲಿಂ ಗಿರಿಶಂ ಪೊಲೆಯನ ಮಾಳ್ಕೆಯೊಳಿರ ದಾಗಳ್ ಕಪಟವೇಷದಿಂದೇಳ್ತಂದಂ (ತ್ರಿಪುವಿ. ೪-೧೦). **ಸಂಬಳಿಗೋಲು** : ಪಿಡಿದ ಸಂಬಳಿಗೋಲು ಕಾರೊಡಲು ಕೆಂಗಣ್ಣು (ಹಚಕಾ. ೧೧-೧೭); ಸಂಬಳಿಗೋಲ ತಿರುಹುತ ಒಂದಾಗಿ ಹಡಪಿಗಸಹಿತ ಮುಂದುವರಿದು (ಹರಿಸಾಂ. ೩-೧೨೪); ಸಂಬಳಿಗೋಲು ಕೈಪಂಜು ಜಂಟಿಸಿಯೆ ಪಿಡಿದು . . . ಪರಾಕೆಂದುಯಚ್ಚರಿಸಿ ಘೋಷಿಸುತ್ತೆ (ನವಮೋ. ೧೧-೩೦); **ಸಂಬೋಳಿಗೋಲ್** : ಕೈಯಲಿ ಧರಿಸಿದಾ ಸಂಬೋಳಿಗೋಲ್ಪೆಗಳುರು ತೊಗಲ ಮಿಳಿವರೆಯ ಮಾದಿಗವರಿಜನೊಪ್ಪಿದನು (ಸಾಳ್ವಭಾ. ೩೧-೧೩). **ಸೆಂಬಳಿಗೋಲ್** : ತಿದಿಯುಂ ಸೆಂ[ಪಾಠಾಂ. ಸಂ]ಬಳಿಗೋಲು[ಂ]ಕೆಂಪುಂ ಪೊಸಮಿಳಿಯುಂ ಬೆರಸಂತೆ ಬಂದು ಪೊಟಿಲಂ ಪೊಕ್ಕರ್ (ಬಂಪರಿ. ೯-೬೨). **ಸೆಂಬುಳಿಗೋಲ್** : ಅಳಿವೃತಮಪ್ಪ ಕೊಂಬಳಿಯೆ ಸೆಂಬುಳಿಗೋಲ್ ವಸನಂ ಮಿಸುರ್ಪ ಕೆಂದಳಿರತಿಪಕ್ವ ಬಂಧುರ ಫಲಂ ಸತಿ ಮುಟ್ಟಿದ ಪೊನ್ನ ಬಟ್ಟಲ್ (ಶಾಂತಿಪು. ೭-೧೩೭). [ಸಂಬಳಿ$_1$ + ಕೋಲ್$_1$]

**ಸಂಬಳಿಗೋಲು** 'ಸಂಬಳಿಗೋಲ್' ನೋ.

·**ಸಂಬಳಿತವೋಗು** (ಕ್ರಿ). = ಸಂಬಳಿಗೆದೆಗೆ (?) : ಅಲಗನೆ ಕಿರ್ತ್ತು ಪೊಯ್ಯೆ ನಿರತಂ ಕಣಕಾಲು ಮೊಳಕಾಲ್ ಮುಖಂ ಭುಜೆನು ತಲೆ ಬಳೆಯಾಗೆ ಸಂಬಳಿತವೋಪಿನ ದೊಂದೆರಡಟ್ಟಿಯೋಡಲುಂ ತೊಲಗದೆ ನಿಂದು XX ಳಿಱಿದರಿಬ್ಬರುಮಾಹವರಂಗ ಭೂಮಿಯೊಳ್ (ಎಕ. VIII, ಸೊರಬ. ೧೭೫-೧೩; 1156).

[IP ಇದು 'ಸಂಬಳಿಗವೋಗು' ಎಂಬುದರ ಅಪಲಿಖಿತವಿರಬಹುದೆ?]

**ಸಂಬಳಿಸು$_1$** 'ಸಂಬಾಳಿಸು$_1$' ನೋ.

**ಸಂಬಳಿಸು$_2$, ಸಂಪಳಿಸು** (ಕ್ರಿ). ಹೋಳುಮಾಡು ; ತುಂಡುಮಾಡು : ಕುಂಬಳದ ಕಾಯ ಕೈಸೇವಗೆಯ ಸಮವಾಗಿ ಸಂಬಳಿ[ಪಾಠಾಂ. ರಿ]ಸಿಕೊಂಡೊಣಗಲಿಕ್ಕಿ ತುಪ್ಪದೊಳಗಿಳಿಯಂ ಬಿಟ್ಟು ಹುರಿದು (ಸೂಪಶಾ. ೧-೫೩); ಅವರೆಡದ ಕಾಲ ಕೆಱಹುಗಳನೊರ್ವಳ ಕಯ್ಯೊಳವರಱಿಯದಂದದಿಂ ತರಿಸಿ ಸಂಬಳಿಸಿ . . . ಸಂಭಾರಮಂ ಹಾಕಿ ಪಾಕಗಳನು ಸವಿಯಪ್ಪ ತೆಱದಿ ಹಸನಾಗಿ ಮಾಡಿಸಿ (ಸಮ್ಯಕೌ. ೯-೩೩); ಕಡಿದರಿದು ಕತ್ತರಿಸಿ ಸಂಬಳಿಸಿ ಸಂಹರಿಸುತೊಡನೊಡನೆ ತುಂಡರಿಸಿ . . . ಕೆಡೆದುವಾಗ (ಪರಶು. ೩೧-೪೩). **ಸಂಪಳಿಸು** : ೧. ತೆಳುಪು ತೆಂಗಿನಕಾಯ ದೊಡ್ಡ ಸೇವಗೆಯಂದದೊಳಗೆ ಸಂಪಳಿ [ಪಾಠಾಂ. ಬರಿ]ಸಿ (ಸೂಪಶಾ. ೩-೧೩). [ಸಂಬಳ$_7$ + - ಇಸು$_3$]

**ಸಂಬಾಧ** (ಗು). ೧. ಇಕ್ಕಟ್ಟಾದ ; ಒತ್ತಾದ. (ನಾ). ೨. ಇಕ್ಕಟ್ಟು; ಒತ್ತಡ. ೩. ಇಕ್ಕಟ್ಟಾಗಿರುವ ಸ್ಥಳ : ''ಸಿಂದೆಡೆಯೊಳಂ ಬ್ಯಶದೊಳಂ ಸಂಬಾಧಮೆಂದೆನಿಕು'' (ಮಂಗರಾ. ೧೪೩-೨೦). ೪. ಕಷ್ಟ; ದುಃಖ; **ಅಳಲು**: ಪ್ರಕಟಿಸುತ ಮುಂಬರಿವ ನಿಟ್ಟುಸಿರ ಸಂಬಾಧದಿಂದ ಪೊಯಿವೆಳ್ಳೆಗಳಲಿ ನಿಕಟಪೀಠಾಗ್ರದೊಳಿರ್ಪ ಬೊಪ್ಪನ ನೋಡಿ (ಪಂಪಾರಾ. ೨-೮-೨). ೫. ಅಡ್ಡಿ; ವಿರೋಧ. ೬. ಅಂಜಿಕೆ; ಭಯ. ೭. ಶಾಪ. ೮. ನಿಂದೆ; ತೆಗಳಿಕೆ.*೯. ಸಾವು; ಮರಣ. ೧೦. ಸ್ತ್ರೀ ಜನನಾಂಗ : ''ಸಾವುಂ ನಿಂದೆ ಭಗಂಗಳೆಂಬಿನಿತು ಸಂಬಾಧಾಹ್ವಯಂ'' (ನಾನಾರ. ೧೫೭). [ಸಂ.]

**ಸಂಬಾರ, ಸಂಬರ$_1$, ಸಂಭರ, ಸಾಂಬಾರ್, ಸಾಂಬಾರ, ಸಾಂಬಾರು** (ನಾ). ೧. ಅಡುಗೆಯ ರುಚಿಯನ್ನು ಹೆಚ್ಚಿಸುವ ಕೊತ್ತಂಬರಿ , ಮೆಣಸು , ಜೀರಿಗೆ ಮುಂತಾದ ಮಸಾಲೆವಸ್ತು; ಉಪಸ್ಕರ: ಹುಳಿ ಮೆಣಸು ಸಂಬಾರ (ಸೌಇವಿ. ಮಂಗಳೂರು. ೪೬೫-೩೪, 1312); ನಂಬುತಿರು ನಂಬದಿರು ಎಂಬುವರು ಮಾನವರು ಸಂಬಾರವರೆವ ಬಲು ಕಲ್ಲ ಹರನೆಂದು ನಂಬುವವರಾರು (ಸರ್ವಜ್ಞ. ೨೦೪). ೨. ಹುರಿದ ಮೆಣಸಿನ ಕಾಯಿ, ಧನಿಯ, ಜೀರಿಗೆ ಮುಂತಾದುವನ್ನು ಕುಟ್ಟಿ ಅಥವಾ ಅರೆದು ಮಾಡಿದ ಪುಡಿ: ಇಂಬಿಂ ಮಾದುಫಲಂ ಪೊಸ ನಿಂಬೆಯ ರಸದಿಂದಮೂಡಿ ಮೆಣಸಿನ ಪುಡಿಯಿಂ ಸಂಬಾರವೆರಸು[ಪಾಠಾಂ. ಯಲ್ಲಂ ಬೆರಸು] ಮಾಡಿದರ್ದಳಿತಾಂಬುಜ ವದನೆಯರು ಮಿಸುವ ಪೊಸಬಾಡುಗಳಂ (ಪುಣ್ಯಾಸ್ರ. ೩-೪೭); ಮೃಗಕುಲದ ಕಂಡಂಗಳಂ ಕೊರೆದು . . . ಲವಣಾದಿ ಸಂಬಾರಮಂ ಪಚ್ಚಿ ಬೇಯಿಸಿ (ನವಮೋ. ೯-೬). **ಸಂಬರ$_1$** : ೧. ನೀಂ ಪೆಸರ ಪಂದಿಯಾದಂದಾಂ ಪುಟ್ಟಿದೆನಪ್ಪೊಡಂದೆ ಬೇಂಟೆಯ ನೆವದಿಂದಂ ಪಿಡಿದು ತಂದು ಪಂದಿಗಲಂಪಿಂ ಸಂಬರಮನಱಿಯಿಸದೆ ಮಾಣ್ಬಪೆನೇ (ಜಗವಿ. ೧೭-೩೭); ಕಡಲೆಯು ಬಾಡಿ ಬೆಂದುರುಳಿಗೊಂಡುದು ಸೊಂಡಗೆ ಕೂಡೆ ಸಂಬರಂ ಬಿಡದಗಸುಂಟುಗೊಂಡುದು (ಸೂಕ್ತಿಸು. ೧೧-೮೯). ೨. ನೀಡೆ ಪರಿಮಳಿಪ ಸಂಬರದಾಡಂಬರಮೆಸೆಯೆ ಪೊರೆದು . . . ಖಾದ್ಯಪ್ರತಾನಮಂ ಸತಿ ಸಮೆದಳ್ (ವೃಷವಿ. ೧೪-೪೯). ೩. ಸಾಮಗ್ರಿ ; ಲವಾಜಮೆ: ಗಂಧಪುಷ್ಪಾದಿ ಮಂಗಳದ ಸಾಮಗ್ರಿಗಳ ನಾನಾಸುಖದ ಶುಭದ ಸಂಪದದ ಸಂಬರಂ ಸಮನಿಸಿತು (ಶ್ರೀರಾಮಾ. ೫೮-೧೨೩). **ಸಂಭರ**: ೩. ಹೆಸರುವಡೆದ ದಿವ್ಯಮೂಲಿಕೆ ಪಾಷಾಣ ರಸದ್ರವ್ಯಸಕಲಸಂಭರವ ಬೆಸಗೊಂಡು ಬೇಡಲು ತೂಗುವ ಗಂಧಿಗವಸರಂಗಳಿರ್ದುವಿಕ್ಕೆಲದಿ (ಮೋಹತ. ೩-೧೯). **ಸಾಂಬಾರ್** : ೪. ಮಸಾಲೆಪದಾರ್ಥವನ್ನು ತಿರುವಿ, ತೊಗರಿಬೇಳೆ, ತರಕಾರಿಗಳನ್ನು ಹಾಕಿ ಮಾಡುವ ಒಂದು ಬಗೆಯ ಮೇಲೋಗರ ; ಹುಳಿ : ಮಡಿಬಟ್ಟೆಯಲ್ಲಿ ತೈರಶಾತಂ ಸಾಂಬಾರ್‌ಶಾತಂ ಅಂದರೆ ಮೊಸರನ್ನ ಹುಳಿಯನ್ನ ಎರಡನ್ನೂ ಕಟ್ಟಿಕೊಡುವಳು (ಚಿಂಗೂಲಿ. ೧೨೩); ಅವರು ದಿನವೂ ತಿಥಿಒಡೆ, ಬೋಂಡಾ ಸಾಂಬಾರ್ ತಯಾರಿಸುತ್ತಿದ್ದಾರೆ (ನಾಡಿಗೇ. ೧೧೧). **ಸಾಂಬಾರ** : ೧. ಅವಳು ಖಾರ ಸಾಂಬಾರವನ್ನು ಮೊದಲೇ ರುಬ್ಬಿ ಅಣಿಮಾಡಿ ಇಟ್ಟುಕೊಳ್ಳುತ್ತಿದ್ದಳು (ಮಗಮಾಂ. ೨೫). ೫. ಮೆಣಸಿನಲ್ಲಿ ಒಂದು ಬಗೆ : ಮೆಣಸಿನಲ್ಲಿ ಮೂರುಜಾತಿಗಳುಂಟು; ಕರಿಮಳಿಸಾರು; ಸಾಂಬಾರ, ಅರಿಶಿಣ ಮೂರ್ತಿಗ (ಕಭಾಗೆ. ೨೭೫). **ಸಾಂಬಾರು**: ೨. ಇಡ್ಲಿಯನ್ನು ಸಾಂಬಾರು ಅಥವಾ ತೆಂಗಿನಕಾಯಿ ಚಟ್ನಿಯೊಡನೆ ತಿನ್ನಬಹುದು (ಅಡುಸೌ. ೯೫). [< ಸಂ. ಸಂಭಾರ]

**ಸಂಬಾರಕಾಗೆ** 'ಸಂಬಾರಗಾಗೆ' ನೋ.

**ಸಂಬಾರಗಾಗೆ, ಸಂಬರಕಾಗೆ, ಸಂಬಾರಕಾಗೆ** (ನಾ). ಒಂದು ಬಗೆಯ ಕಾಗೆ; ಕೆಂಪುಕಾಗೆ; ಕೆಂಬೋತ: ಸುಂದರೇಶ್ವರಂ ಸಂಬಾರಗಾಗೆಗೆ ಮೃತ್ಯುಂಜಯ ಮಂತ್ರೋಪದೇಶಮನಿತ್ತ ಲೀಲೆಯಂ ನಿಮಗೆ ನಿರವಿಪೆಂ (ಹಾಲಾಸ್ಯ. ೩-೧೫-೧ ವ). **ಸಂಬರಕಾಗೆ** : (೬). **ಸಂಬಾರಕಾಗೆ** : ಮೇಲೆ ತಿರುಗುತ್ತಿದ್ದ ಒಂದು ಸಂಬಾರಕಾಗೆ ಅವಳನ್ನು ಹೆದರಿಸಿತು (ಚೀನಬಾ. ೨೨೧). [ಸಂಬಾರ$_7$ + ಕಾಗೆ]

**ಸಂಬಾರಚಕ್ಕುಲಿ** (ನಾ). ಮಸಾಲೆಪದಾರ್ಥ ಬೆರೆಸಿ ಮಾಡಿದ ಕಾರದ ಚಕ್ಕುಲಿ: ಸಾರವಾಗೆಸೆವ ಖರ್ಜೂರಚಕ್ಕುಲಿ ಸಂಬಾರಚಕ್ಕುಲಿ . . . ನೀಡುವರು (ಇಚಿಸಾಂ. ೧೧-೮೦). [ಸಂಬಾರ + ಚಕ್ಕುಲಿ]

೨. ಅಂಬಿಗರ ಜಾತಿ; ಬೆಸ್ತರ ಜಾತಿ: ಸೂತಕುಲಸಂಭವನೆ ಭುವನಖ್ಯಾತ ಕರ್ಣನು ಸಾಕಿದಾತನು ಸೂತನಾದಡೆ ಮಾವ ಕೇಳನ್ವಯಕೆ ಹಳಿವುಂಟೆ (ಕುವ್ಯಾಕ. ೮-೩).
[ಸಂ.]

**ಸೂತಕೃತೆ** (ನಾ). ಹೆರಿಗೆಯನ್ನು ಮಾಡಿಸುವವಳು ; ಸೂಲಗಿತ್ತಿ: "ಸೂತಕೃತ [ಪಾಠಾಂ. ಸೂತಿಕೃತಿ]ಯೆನೆ ಸೂಲಗಿತ್ತಿಯಕ್ಕುಂ" (ಮಂಗರಾ. ೯೧-೮). [ಸಂ. ಸೂತಕೃತಾ]

**ಸೂತಗ** (ನಾ). ಸಂತಾನ: ಸಹಳಿಯ ಬೊಂಮದೇವಹೆಗ್ಗಡೆ XX ಮನಾಯಕ ಅರಸ XXX ಣಗೆ ತೃತೀಯ ಸೂತಗದ ಬಲಾಡಿ ಗಉಂಡ . . . ಮಲ್ಲಿನಾಥಭಟ್ಟರ ಮಕ್ಕಳು (ಎಕ. VIII, ತೀರ್ಥಹ. ೧೦೬-೮; 1419). [< ಸೂತಕ ]

**ಸೂತಜ** (ನಾ). ೧. ಸೂತಕುಲದಲ್ಲಿ ಜನಿಸಿದವನು: ಗಂಗೆಗೆ ಕೆಯ್ಯೆಡೆಯೆಂದುತ್ತುಂಗಸ್ತನಿ ಕೊಟ್ಟು ಪೋಗೆ ಸೂತಂ ಕಂಡಾತ್ಮಾಂಗನೆಗೆ ರಾಧೆಗಿತ್ತು ಮನಂಗೊಳೆ ರಾಧೇಯನೆನಿಸಿ ಸೂತಜನಾದೈ (ಪಂಪಭಾ. ೯-೬೫); ಗಗನಸ್ಥಳಕೆ ರಥವನು ಬಿಸುಡೆ ಯೋಜನದಳವಿಯಲಿ ಲಂಘಿಸಿತು ಹಯತತಿ ಸೂತಜರು ಸಹಿತ (ಕುವ್ಯಾದ್ರೋ. ೧೩-೧೬). ೨. ಕರ್ಣ: ಸೂತಜನ ರಥದ ಗಾಲಿಗೆ ಸಿಲ್ಕನಿಕ್ಕಿದ ಮಹೀತಳದೊಳೆಡರಿಲ್ಲಿವಂಗೆ ನಾಂ ಮುಳಿದೊಡೆ (ಜೈಮಿಭಾ. ೨೬-೪೨). [ಸಂ.]

**ಸೂತಜಾತಿ** (ನಾ). = ಸೂತಕುಲ ೨ : ಸೂತಜಾತಿಯೊಳೇ ಧನುರ್ವೇದಾತಿಶಯವೆಂತಾಯ್ತು (ಕುವ್ಯಾಕ. ೨೨-೨೨). [ಸಂ.]

**ಸೂತತನ** (ನಾ). ಸಾರಥಿಯಾಗಿರುವಿಕೆ; ಸಾರಥಿತನ: ಪುರಾಂತಕ ಸೂತತನಕಲಸಿದರೆ ಕಾದಲಿ ಕೌರವನ ಕೂಡೆ (ಕುವ್ಯಾದ್ರೋ. ೩-೬೨). [ಸೂತ + - ತನ]

**ಸೂತತ್ವ** (ನಾ). = ಸೂತತನ : ಬೊಮ್ಮಂಗಾಯಿತೇ ಸೂತತ್ವವಾದಡೆ ರಾಯ ಹೇಳ್ಕೆ ತ್ರಿಪುರದಹನದ ಕಥೆಯ (ಕುವ್ಯಾಕ. ೫-೩೬). [ಸಂ.]

**ಸೂತನಂದನ** (ನಾ). ೧. ಸೂತಕುಲದಲ್ಲಿ ಜನಿಸಿದವನು. ೨. ಕರ್ಣ : ಪೂತು ಮಝರೇ ಸೈರಿಸಾದಡೆ ಸೂತನಂದನ ಎನುತ ಬಾಣವ್ರಾತದಲಿ ಹೊದಿಸಿದನು ಕರ್ಣನ ರಥವನಾ ಪಾರ್ಥ (ಕುವ್ಯಾಕ. ೨೨-೨೨). [ಸಂ.]

**ಸೂತಸುತ** (ನಾ). ೧. ಸೂತನ ಮಗ. ೨. ಕರ್ಣ : ಬೀರವಟ್ಟಮನಾನಿರೆ ನೀನೀ ಸೂತಸುತಂಗೆಡೆಗೊಂಡು ಕೈವಾರದಿಂದೊಸೆದಿತ್ತೊಡಮೇನಾಯ್ತು (ಪಂಪಭಾ. ೧೨-೪೩); ಪೂತುರೇ ಕಲಿ ಪಾರ್ಥ . . . ದ್ರೋಣನ ಸೂತಸುತ ಕೃಪ ಗುರುತನೂಜರ ಗೆಲಿದೆ ಬಳಿಕೇನು (ಕುವ್ಯಾವಿ. ೮-೫೨). [ಸಂ.]

**ಸೂತಿ** (ನಾ). ೧. ಹುಟ್ಟು ; ಜನನ : "ಜನನಂ ಜನ್ಮಂ ಪ್ರಸವಂ ಜನಿಜನಿರುತ್ಪತ್ತಿ ಸೂತಿಯೇಕಾರ್ಥಮಿವಿಂತಿನಿತುಂ" (ವಸ್ತುಕೋ. ೧೮-೩); ಸೂತಿಯಿಂ ಕಪ್ಪಾದ ಹಲ್ಲುಗಳು ಮೆಱೆವುತಿರ್ಪಾತನೇ ಮುನ್ನ ಸುರೆಯಂ ಕುಡಿದನೆಂದಱಿವುದು (ವೀಶೈಪು. ೪-೨೨-೪). ೨. ಹೆರಿಗೆ ; ಪ್ರಸವ. ೩. ಮಗು; ಕೂಸು : "ಸೂತಿ ತಾನೆನಿಕುಮಪತ್ಯಶಬ್ದಮದು ಕೇವಲಮಾತ್ಮಜವರ್ಗವಾಚಕಂ" (ವಸ್ತುಕೋ. ೫೪-೧೬). [ಸಂ.]

**ಸೂತಿಕಸೂಲೆ** (ನಾ). ಹೆರಿಗೆಯ ಕಾಲದಲ್ಲಿ ಉಂಟಾಗುವ ನೋವು; ಪ್ರಸವವೇದನೆ : ಅತುಳ ಸೂತಿಕಸೂಲೆ ವೆಗ್ಗಳಿಸಿ (ನವಮೋ. ೧೫-೧೪).
[ಸೂತಿಕ$_{o}$ + ಸೂಲೆ]

**ಸೂತಿಕಾಗೃಹ** (ನಾ). ಬಾಣಂತಿಯ ಕೋಣೆ; ಹೆರಿಗೆಮನೆ : ಎಸೆವ ಸೂತಿಕಾಗೃಹಮಂ ತಾರಾಪೀಡನರೇಂದ್ರಂ ಪುಗುವುದುಂ (ಕಾದಂಪೂ. ೪೧೩); ಕಂಸಂ ತದೀಯ ಬಾಲಹಿಂಸಾಪರನಾಗಿ ಸೂತಿಕಾಗೃಹ[ಪಾಠಾಂ. ಸದನ]ಮಂ ಪೊಕ್ಕು (ಜಗವಿ. ೨-೫೩ ವ).
[ಸಂ.]

**ಸೂತಿಕಾಗೇಹ** (ನಾ). = ಸೂತಿಕಾಗೃಹ: ರಂಜಿಸುವ ಸೂತಿಕಾಗೇಹದೊಳು ಭೂಪನ ಕುಮಾರನೆಸೆದಂ (ಭಾವಚಿಂ. ೩-೫೮). [ಸಂ.]

**ಸೂತಿಕಾಮಂದಿರ** (ನಾ). = ಸೂತಿಕಾಗೃಹ: ವಿನಯನಿಭೃತೆ ಪೊಕ್ಕಂದ್ರಾಣಿ ಸೂತಿಕಾಮಂದಿರಮಂ (ಪುಷ್ಪಪು. ೧೦-೧೫). [ಸಂ.]

**ಸೂತಿಕಾಮರುತ** (ನಾ). ಹೆರಿಗೆಯ ಸಮಯದಲ್ಲಿ ಉಂಟಾಗುವ ಒತ್ತಡ; ಪ್ರಸೂತಿಕಾಲದ ವಾಯು : ಸೂತಿಕಾಮರುತ ಬೀಸಿದಾತುರಕೆ ಬೆಸಸುವ ಯಾತನೆಗೆ ಕಾಣೆ ಲೆಖ್ಖ (ವಿದಾಕ್ಯ. ೫೪-೪). [ಸಂ.]

**ಸೂತಿಕಾರೋಗ** (ನಾ). ಹೆರಿಗೆಯ ನಂತರ ಉಂಟಾಗುವ ರೋಗ ; ಬಾಣಂತಿ ಖಾಯಿಲೆ : ಕುಂಡಲಾದಿ(ಘೃತ)ಲೇಹ್ಯ . . . ಸೇವಿಸಲು ಐದು ಬಗೆಯ ಕಾಸಗಳು . . . ಕೃತ್ರಿಮವಿಷಗಳು, ಸೂತಿಕಾರೋಗಗಳು . . . ಇವೆಲ್ಲಾ ಮಾಣುವುವು (ಸಕವೈ. ೪೪೨ ಪಂ). [ಸಂ.]

**ಸೂತಿಕಾವಾಯು** (ನಾ). ೧. = ಸೂತಿಕಾಮರುತ : ಒರಳಿನೊಳಗಡಸಿ ಹಿಂಡುವ ಕಬ್ಬಿನಂತಳ್ಳ ಭರದಿ ಗಾಣದೊಳಿಟ್ಟು ತಿರುಪುವವೊಲಿಡಿದಡಿಸಿ ಹುರಿಗಳಂ ಬಿಗಿದು ಡಾಣೆಯಲೆಱಗುವಂತೊಗೆವ ಸೂತಿಕಾವಾಯುವಿಂದ ಇರದೆ ತಲೆಕೆಳಗಾಗಿ ಬಿದ್ದು (ಲಶಿಚಂ. ೩೯-೪೧). ೨. ಹೆರಿಗೆಯ ನಂತರ ಉಂಟಾಗುವ ನೋವು ; ಬಾಣಂತಿ ಖಾಯಿಲೆ: ವಿಷಬದ್ದಿಬೇರು, ಈಶ್ವರೀಬೇರು . . . ಇವನ್ನೆಲ್ಲಾ ಸಮಭಾಗ ಹಾಕಿ ಚೂರ್ಣ ಮಾಡಿ ಬಿಸಿನೀರಿನಲ್ಲಿ ಕೊಟ್ಟರೆ ಸನ್ನಿಪಾತಗಳು . . . ಸೂತಿಕಾವಾಯುಗಳು . . . ಇವೆಲ್ಲಾ ಗುಣವಾಗುವುವು (ಸಕವೈ. ೪೨೧ ಪಂ). [ಸಂ.]

**ಸೂತಿಕಾಸದನ** (ನಾ). = ಸೂತಿಕಾಗೃಹ : ದಶರಥಂ ಸುತಮುಖದರ್ಶನೋತ್ಸುಕಂ . . . ಸುಮಿತ್ರಾದೇವಿಯ ಸೂತಿಕಾಸದನಮಂ ಪೊಕ್ಕು (ಪಂರಾಪು. ೩-೧೩೪ ವ); ಕಂಸಂ . . . ಸೂತಿಕಾಸದನಮಂ ಪೊಕ್ಕು (ಜಗವಿ. ೩-೧೩ ವ). [ಸಂ.]

**ಸೂತಿಕೆ** (ನಾ). ಹಡೆದವಳು; ಬಾಣಂತಿ: ಉದಯಮಜಾಳಿ ತೌಳಿ ಘಟ ಕರ್ಕಟಕಾಲಯಮಾಗೆ ಮೂಡಲಿರ್ದುದು . . . ದಂಪತಿ ಮೀನಚಾಪಭೃತ್ಸ್ವದತಿಗಳಾಗೆಯುಂ ಬಡಗಲಿರ್ದುದು ಸೂತಿಕೆಯಿರ್ದ ಗೇಹದೊಳ್ (ಜಾತತಿ. ೪-೧೬).
[ಸಂ. ಸೂತಿಕಾ]

**ಸೂತಿಮಸಗು** (ಕ್ರಿ). ಹೆರಿಗೆಯ ನೋವು ಹೆಚ್ಚಾಗು: ಮಱುಗಿದನೋವೊ ಸೂತಿಮಸಗಿತ್ತೆನಲಂತವಳೊರ್ವಳಿರ್ದು ಕೂರ್ತಿರದೆ ಕುಕಿಲ್ದು (ಪದ್ಯಸಾ. II, ೮೨೪).
[ಸೂತಿ + ಮಸಗು]

**ಸೂತಿಮಾಸ** (ನಾ). ಗರ್ಭಿಣಿಗೆ ತಿಂಗಳು ತುಂಬುವುದು; ಪ್ರಸವವು ಸನ್ನಿಹಿತವಾದ ತಿಂಗಳು: "ಸೂತಿಮಾಸಃ, ವೈಜನನಃ — ಈ ೨ ಪೊಟ್ಟು (ಹೊತ್ತು) ಶೀವುವುದು" (ಹಲಾಯು. ೮೨-೩೪೫); "ಸೂತಿಮಾಸಂ ಹೊತ್ತಿನೊಳಗಕ್ಕು" (ಮಂಗರಾ. ೯೧-೮). [ಸಂ.]

**ಸೂತೀಜನ** (ನಾ). ಹೆರಿಗೆಯನ್ನು ಮಾಡಿಸಬಲ್ಲ ಸ್ತ್ರೀಯರು; ಸೂಲಗಿತ್ತಿಯರು: ವನಿತೆಯ ತನುರಕ್ಷೆಗೆ ತಕ್ಕನುಚರಜನ . . . ಸೂತೀಜನ ಸಖಿಜನಮೆನಿತನಿತುಮನವನಿಪತಿ ನಿಯೋಜಿಸಿ ತಳರ್ದಂ (ಪುಷ್ಪಪು. ೪-೧೪). [ಸಂ.]

**ಸೂತ್ಕೃತ** (ನಾ). ೧. [ನಾಟ್ಯ] ಉಸಿರಾಡುವುದರಲ್ಲಿ ಒಂದು ಬಗೆ; "ವೇದನೆಯನ್ನು ತೋರಿಸುವಂತೆ ಉಸುರು ಬಿಡುವುದು" (ಲಾಸ್ಯರಂ. ೨೬೮ ಗದ್ಯಾನುವಾದ): ಸಮಮುಂ ಭ್ರಾಂತವಿಲೀನಂ ಕ್ರಮದಾಂದೋಳಿತಮುಮೆಸೆವ ಕಂಪಿತಮುಂ ಸಂಭ್ರ[ಮ]ದ ಸ್ತಂಭಿತಮುಚ್ಛ್ವಾಸಮುಮುಱೆ ನಿಃಶ್ವಾಸ ಸೂತ್ಕೃತಂ ಸೀತ್ಕೃತಮುಂ (ಲಾಸ್ಯರಂ. ೩-೬೬). ೨. [ಕಾಮಶಾ] ರತಿಕ್ರೀಡೆಯಲ್ಲಿ ಉಂಟಾಗುವ ಒಂದು ಬಗೆಯ ಧ್ವನಿ: ಬದಿರಗಣ್ಣೊಡೆದ ದನಿಯದು ಸೂತ್ಕೃತಂ (ಜನವ. ೧೦-೨೩). [ಸಂ.]

**ಸೂತ್ತುಂಗ** (ಗು). ೧. ಉಬ್ಬಿದ; ಉಬ್ಬಿರುವ. (ನಾ). ೨. ಉಬ್ಬಿರುವುದು: ಶರದೊಡನೆ ಗಭೀರಂ ಬಂಧುರಂ ನಾಭಿನೇತ್ರಾಂಬುರುಹದೊಡನೆ ದೀರ್ಘಂ ಬಾಹು ಸೂತ್ತುಂಗಮಾಗಿಪ್ಪುರದೊಡನೆ ವಿಶಾಳಂಬೆತ್ತುಮಾರಕ್ತಭಾಸ್ವತ್ಕರಜದೊಡನೆ ಸುಸ್ನಿಗ್ಧಂ ಕನತ್ಕಾಂತಿದಂತಂ (ವರ್ಧಮಾ. ೬-೬೫). [ಸಂ.]

**ಸೂತ್ರ** (ನಾ). ೧. ದಾರ; ನೂಲು : "ತಂತು ಗುಣಂ ಸೂತ್ರಂ" (ವಸ್ತುಕೋ. ೬೬-೮೬); ಮಣಿಗಳ ಸೂತ್ರದಂತ ತ್ರಿನಯನ ನೀನಿಪ್ಪೆಯಯ್ಯ (ದೇದಾವ. ೨-೩); ಮಾಲೆಯ ಮಣಿಗಳಲ್ಲಿ ಸೂತ್ರವು ಸೇರಿಕೊಂಡಿರುವಂತೆ . . . ಆ ಸ್ಥಿರತತ್ತ್ವವು ಜ್ಞಾನಧಾರೆಗಳಲ್ಲಿ ಓತಪ್ರೋತವಾಗಿ ಹಾಸುಹೊಕ್ಕಿನಂತೆ ಹೊಂದಿಕೊಂಡಿರುತ್ತದೆ (ಜೀವಾತ್ಮ.೪೩). ೨. ಜನಿವಾರ; ಯಜ್ಞೋಪವೀತ. ೩. ಬೊಂಬೆಯನ್ನು ಹಿಡಿದೆಳೆದು ಆಡಿಸಲು ಉಪಯೋಗಿಸುವ ದಾರ. ೪. ಸಾರವತ್ತಾದ ನಾನಾರ್ಥಕವಾದ ಅರ್ಥಗಳನ್ನು ಹೊಂದಿರುವ ಸಂಕ್ಷಿಪ್ತಹೇಳಿಕೆ : ಅಲ್ಪಾಕ್ಷರಮುಂ ಅಸಂದೇಹಮುಂ ಸಾರಮುಳ್ಳುದುಂ ಪಲವುಂ ಪದಾರ್ಥಂಗಳನೊಳಕೊಂಡುಂ . . . ಅರ್ಥೋತ್ಪತ್ತಿ

**ಸಂಬು$_2$** (ನಾ). (?) : ಅಕ್ಕಾರದಲೂ ವೊಂದು ವರಹ ಸಿವನ ಸಂಬು ಮಾಡಿದ ಪಾಲವೃತ್ತಿಗೆ ಕಟ್ಟಿದ ಸಿದ್ಧಾಯ . . . ಕೊಗ್ಗುವೆಯ ಸಂಬುಮಾಡಿದ ಭೂಮಿ ಚತುಸ್ಸೀಮೆಗಳೊಳಗಾಗಿ ಕಟ್ಟಿದ ಸಿದ್ಧಾಯ ಗ ೨ (ಎಕ. VIII, ಸಾಗರ. ೬೦-೩೩; 1472) [?]

**ಸಂಬುಕ** (ನಾ). ಒಂದು ಬಗೆಯ ನಾವೆ : ಸಂಬುಕ ಪಡಗು ಜೋಗುಗಳಿಗೆ ಸುಂಕಮ ಕೊಂಬ ರಾಜೇಂದ್ರನಿದಿರೊಳು ತುಂಬುವೇಱಿಗೆ ಸುಂಕವ ಕೊಂಬ ನೃಪರಾಡಂಬರ ನೆಱೆಯಲಾರ್ತಪುದೆ (ಕುರಾಸಾಂ. ೧೦-೨೧). [?]

**ಸಂಬುದ್ಧ** (ಗು). ೧. ಸಂಪೂರ್ಣ ಎಚ್ಚರಗೊಂಡ, —ಜಾಗೃತವಾದ. ೨. ಪೂರ್ಣವಾಗಿ ತಿಳಿದ; ಗ್ರಹಿಸಿದ. ೩. ದೂರದೃಷ್ಟಿಯುಳ್ಳ; ಯುಕ್ತಾಯುಕ್ತ ವಿವೇಚನೆಯುಳ್ಳ : ಶ್ರೀರಾಮನಾಹ್ಲಾದರೂಪಿ . . . ಸುಸ್ಥಿರಂ ; ಸಂಬುದ್ಧ ಪ್ರಜ್ಞಾಮಹೇಶ್ವರಂ ! (ಶ್ರೀರಾಮಾ. ೫೭-೯೮). (ನಾ). ೪. ಜ್ಞಾನಿ; ಪ್ರಾಜ್ಞ : ಬಲಾನ್ವಿತನಪ್ರತಿಮನೀ ತಥಾಗತಂ ಸಂಬುದ್ಧನೀ ಶಾಸ್ತನು (ವೈಶಾಖಿ. ೮೮-೬೮೮). [ಸಂ.]

**ಸಂಬುದ್ಧಿ** (ನಾ). ೧. ಸಂಪೂರ್ಣಜ್ಞಾನ. ೨. [ವ್ಯಾಕ]ಸಂಬೋಧನ ವಿಭಕ್ತಿ: ಆಮಂತ್ರಣದೊಳ್ ಸ್ವರಾಂತಂಗಳ ಪ್ರಥಮೈಕವಚನಕ್ಕೆಲ್ಲಿಯುಂ ಲೋಪಂ, ಆ ಸಂಬುದ್ಧಿಯೊಳ್ ಹ್ರಸ್ವದೀರ್ಘಮೆಂಬೆರಡು ಕಾಕುಗಳಂ ವಿಕಲ್ಪದಿಂ ಪೇೞ್ವರ್ (ಶಮದ. ೧೨೩ ವೃತ್ತಿ). [ಸಂ.]

**ಸಂಬುನಾಥ** (ನಾ). ಈಶ್ವರ; ಶಿವ; ಶಂಭು : ಶ್ರೀಸಂಬುನಾಥದೇವರ ಬಾಗಿಲುವಾಡದ ಕಂಭ ಎರಡನೂ ಜಗಭಕ್ತಗ ಮಾರೆಯನ ಮಗ ಮೂಲಿಭಕ್ತನು ಮಾಡ್ಸಿದ (ಎಕ. IV(R), ಚಾಮರಾ. ೨೮೨-೨, 1416). [ಸಂಬು$_1$ + ನಾಥ]

**ಸಂಬುಮಡಕೆ** (ನಾ). (?) : ಹತ್ತಿ ಪ ೧ ಸಂಬುಮಡಕೆ ಗ ೧ (ಎಕ. VI, ಕಡೂರು. ೪೯-೫೭; 1291). [?]

**ಸಂಬೆ$_1$, ಸೆಂಬೆ$_2$** (ನಾ). ಒಂದು ಬಗೆಯ ಉತ್ತಮ ಜಾತಿಯ ಬತ್ತ, — ನೆಲ್ಲು: 'ಸಂಬೆನೆಲ್ಲು' ಪರಾ. **ಸೆಂಬೆ$_2$** : 'ಸೆಂಬೆಬತ್ತ' ಪರಾ.

[ದೇ. ‖ ತಮಿ. ಚಮ್ಬಾ; ಮಲ. ಚಮ್ಬಾ; ತೆಲು. ಸಂಬವುಲು]

**ಸಂಬೆ$_2$** 'ಶಂಪೆ$_2$' ನೋ.

**ಸಂಬೆನೆಲ್ಲು** (ನಾ). ಒಂದು ಬಗೆಯ ಉತ್ತಮಜಾತಿಯ ಬತ್ತ : (೬). 'ಸೆಂಬೆಬತ್ತ' ಪರಾ. [ಸಂಬೆ$_1$ + ನೆಲ್ಲು (< ನೆಲ್)]

**ಸಂಬೊಳಿ$_1$** 'ಸಂಬಳಿ$_1$' ನೋ.

**ಸಂಬೊಳಿ$_2$** 'ಸಂಬಲಿ' ನೋ.

**ಸಂಬೋಧನ** (ನಾ). ೧. ತಿಳಿಯಪಡಿಸುವಿಕೆ; ಉಪದೇಶ; ಬೋಧನೆ. ೨. ಕರೆಯುವ ರೀತಿ, — ಬಗೆ. ೩. = ಸಂಬೋಧನವಿಭಕ್ತಿ : ಪ್ರಥಮ ದ್ವಿತೀಯೆ ಸಂಬೋಧನಗಳಲ್ಲಿ ವಕಾರಾಗಮವು ಬರುತ್ತದೆ (ಹೊಸಗ. ೩೭); ಅಕಾರಾಂತ ನಪುಂಸಕಲಿಂಗ ಪ್ರಕೃತಿಗಳಿಗೆ ಏಕವಚನದಲ್ಲಿ ಪ್ರಥಮಾ ಸಂಬೋಧನ, ದ್ವಿತೀಯಾವಿಭಕ್ತಿ ಪ್ರತ್ಯಯಗಳು ಸೇರುವಾಗ ನಡುವೆ ವಕಾರಾಗಮ ಬರುವುದು (ಶಬ್ದಾದ. ೧೪). [ಸಂ.]

**ಸಂಬೋಧನವಿಭಕ್ತಿ** (ನಾ). [ವ್ಯಾಕ]ಎಂಟು ವಿಭಕ್ತಿಗಳಲ್ಲಿ ಒಂದು : ಸಂಬೋಧನ ವಿಭಕ್ತಿ : (೧) ಇತರರನ್ನು ತನ್ನ ಕಡೆಗೆ ಗಮನಿಸುವಂತೆ ಮಾಡುವಾಗ ಈ ವಿಭಕ್ತಿಯನ್ನು ಪ್ರಯೋಗಿಸುವರು (ಕೃಪಿಡಿ. ೫೩); ಸಂಬೋಧನವಿಭಕ್ತಿಯಲ್ಲಿ ಎ,ಏ ಎಂಬ ಪ್ರತ್ಯಯಗಳು ಪ್ರಕೃತಿಗೆ ಸೇರುತ್ತವೆ (ಮಧ್ಯಮ. ೬೧). [ಸಂ.]

**ಸಂಬೋಧನೆ** (ನಾ). ೧. ಉಪದೇಶ; ಬೋಧನೆ: ಗುರುಸಂಬೋಧನೆಯಿಂ ನಿನ್ನಂ ಪ್ರತಿಬೋಧಿಸಲಾಂ ಬಂದೆಂ (ಸುಕುಮಾ. ೫-೨೬). ೨. ಕರೆಯುವ ರೀತಿ, — ಬಗೆ: 'ಅಮೇರಿಕೆಯ ಸೋದರ ಸೋದರಿಯರೆ' ಎಂಬ ಸಂಬೋಧನೆಯನ್ನು ಕೇಳಿದೊಡನೆ ಇಡೀ ಸಭಾಗೃಹವೇ ಸಂತೋಷ , ಉತ್ಸಾಹದಿಂದ ಸ್ವಾಗತಿಸಿತು (ಧರ್ಮಸಾ. ೫೦). ೩. = ಸಂಬೋಧನ ವಿಭಕ್ತಿ : ಸಂಬೋಧನೆ ದೀರ್ಘೋಕ್ತಿಯೊಳಿಂಬಾಗಿರೆ ಬರ್ಕುಮದನೆ ಪಲವೆಡೆಗಳೊಳೆಂದುಂ ಬಲ್ಲವರಿಡದಿರ್ಕೆ (ಕವಿರಾ. ೨-೨೩); ಸಂಬೋಧನೆಯೆಂಬುದು ಅಭಿಮುಖೀಕರಣಮಂ ಪೇೞ್ವುದು (ಶಮದ. ೧೨೬ ವೃತ್ತಿ); ಸಂಬೋಧನೆಯಲ್ಲಿ ಸಾಮಾನ್ಯವಾಗಿ ಎ ಏ ಎಂಬ ಪ್ರತ್ಯಯಗಳು ಸೇರುತ್ತವೆ (ಕೃಪಿಡಿ. ೪೧).

[ಸಂ. ಸಂಬೋಧನ]

**ಸಂಬೋಧಿಸು** (ಕ್ರಿ). ೧. ಉದ್ದೇಶಿಸಿ ನುಡಿ ; ಕುರಿತು ಹೇಳು : ಉರಗಧ್ವಜಂ ಗರುಡಧ್ವಜನಂ ಸಂಬೋಧಿಸಿ ನುಡಿಯೆ (ಗದಾಯು. ೭-೪೧ ವ); ಮೇದಿನೀಪತಿ ಕಂಡು ತನಗೊಬ್ಬಗೆಂದು ಸಂಬೋಧಿಸಿದಂದು ಕುಳ್ಳಿರನು (ಭರಚ. ೪-೧೫); ಕ್ಷಾತ್ರಪೂರ್ಣವಾದ ಮಾತುಗಳಿಂದ ಶ್ರೀಕೃಷ್ಣನನ್ನು ಸಂಬೋಧಿಸಿ ಉಭಯ ಬಲಮಧ್ಯದಲ್ಲಿ ತನ್ನ ರಥವನ್ನು ನಿಲ್ಲಿಸುವಂತೆ ಕೇಳುತ್ತಾನೆ (ಭಾರದ. ೧೧೧). ೨. ಹೆಸರು ಹಿಡಿದು ಕರೆ, — ಕೂಗು : ಸಮಾನಕುಲ-ಪ್ರಾಯ- ಸ್ವಭಾವದವರು, ಹಾಗೆ "ಭಾವ — ಮಾವ" ಮೊದಲಾಗಿ ಪರಸ್ಪರ ಸಂಬೋಧಿಸುವುದು ಪ್ರಕೃತಿಯಲ್ಲವೇ? (ವೀರಬಂ. ೩೯); ದೇಹಸಂಬಂಧವಿಲ್ಲದವರ ಪತ್ನಿಯರನ್ನು ಮಾತನಾಡಿಸುವಾಗ ನೀವು ತಾವು ಅಮ್ಮ ತಾಯಿ ಅಕ್ಕ ತಂಗಿ ಶ್ರೀಮತಿ ಎಂದು ಮರ್ಯಾದೆಯಾಗಿ ಸಂಬೋಧಿಸಬೇಕು (ಆರ್ಯಧ. ೬೨); ವಿವೇಕಾನಂದರು . . . ಸಂಬೋಧಿಸಿದ ರೀತಿ ಅಮೇರಿಕೆಯ ಜನರನ್ನು ಹುಚ್ಚರನ್ನಾಗಿ ಮಾಡಿತು (ಧರ್ಮಸಾ. ೪). ೩. ತಿಳಿವಳಿಕೆಯನ್ನು ಕೊಡು ; ಬೋಧಿಸು : ಮುನ್ನ ಮಹಾಬಳನಾದಂದೆನ್ನಂ ಪ್ರಿಯಸಚಿವನಾಗಿ ಸಂಬೋಧಿಸಿ ಮಾನೋನ್ನತರೀಗಳುಮಟ್ಟಿಱೊಳೆನ್ನಂ ಸಮಱಿಲ್ಕೆ ಬಂದರಿಂತುಟೆ ಮೋಹಂ (ಆದಿಪು. ೫-೭೭); ನಿನ್ನಾಧಿಯನಾನಭೀಕ್ಷಿಸಿ ಗುಣಪ್ರಣಯಿತ್ವದೆ ಬಂದೆನಲ್ತಂ ಸಂಬೋಧಿಸಲ್ (ಚಂದ್ರಪು. ೫-೩೦). ೪. ತಿಳಿಯಪಡಿಸು ; ವಿವರಿಸು : ಉಜ್ವಲಗುಣಗಣಂಗಳಿಂದಂ ಬೆಳಗುಗುಮಿಾ ತೆಱದೆ ನಿನ್ನ ದರ್ಶನರತ್ನಂ ಎಂದು ಸಂಬೋಧಿಸಿ (ಸುಕುಮಾ. ೬-೪೬). [ಸಂಬೋಧನ + - ಇಸು$_1$]

**ಸಂಬೋಧೆ** (ನಾ). ೧. = ಸಂಬೋಧನ ೨ : ಸ್ಮರಣೆ ಸಂಬೋಧೆಯಲಿ ಹೋ ಅದೋಯೆಂದೆನಿಕು (ಮಂಗರಾ. ೧೫೬-೭೩). ೨. ಉಪದೇಶ; ಬೋಧನೆ: ಧರ್ಮಪ್ರಜ್ಞೆಯನ್ನು ಎಚ್ಚರಿಸುವ ವಿವರಣಾತ್ಮಕ ಕಾವ್ಯಕೃತಿಗಳು . . . ಸಂಭಾಷಣಾ ರೂಪದ ಸಂಬೋಧೆ ಇವೇ ಮೊದಲಾದವುಗಳ ಈ ಕಾಲದಲ್ಲಿ ಅಸಾಧಾರಣವಾದ ಕೆಲಸ ಆಗಿದೆ (ಶಂಕಕಂ. IX, ಪೀಠಿಕೆ). [ಸಂ. ಸಂಬೋಧ]

**ಸಂಬೋಳಿ** 'ಸಂಬಳಿ$_1$' ನೋ.

**ಸಂಬೋಳಿಗೋಲ್** 'ಸಂಬಳಿಗೋಲ್' ನೋ.

**ಸಂಬ್ಯಾರ, ಸಂಬಿಯಾರ** (ನಾ). ಒಂದು ಬಗೆಯ ಬತ್ತ : ಯಿಾ ಅಱುವತ್ತು ಹಾನೆ ಗದ್ದೆಗೆ ಕಟ್ಟಿದ ಗೋಣಿ ಸಂಬ್ಯಾರ ಭತ್ತ ಮೂಡೆ ಹತ್ತು (ಕಇ. III -i, ೧೧-೩೬; 1542). **ಸಂಬಿಯಾರ** : ಯಿ ಹೊಂನ ಬಡಿಯ ಭತ್ತ ಮುಡೆ ಸಂಬಿಯಾರ ಹತ್ತು (ಕಇ . III – i, ೧೧-೪೩; 1542). [< ಸಂಬೆ$_1$ ?]

**ಸಂಭರ** 'ಸಂಬಾರ' ನೋ.

**ಸಂಭರಣ** (ನಾ). ೧. ಒಟ್ಟುಗೂಡಿಸುವುದು ; ಸೇರಿಸುವುದು. ೨. ಸಿದ್ಧಗೊಳಿಸುವುದು. [ಸಂ.]

**ಸಂಭವ** (ನಾ). ೧. ಹುಟ್ಟು; ಉತ್ಪತ್ತಿ : ಜಳಧಿಯೊಳೆ ತಿಮಿಂಗಿಳಗಿಳ ಮಕರಪ್ರಕರಶಂಖಸಂಭವಮಕ್ಕುಂ (ಕಾವ್ಯಾವ. ೮೮೩). ೨. ಕಾರಣ; ಹೇತು. ೩. ಸಾಧ್ಯತೆ; ಶಕ್ಯತೆ : ಆಹಾರಕ್ಕೆ ಬೂದಿ ಅಥವಾ ಮಸಿ ಬೀಳುವ ಸಂಭವ ಕಡಿಮೆ (ಅಡುಸಾ. ೨೪); ವನ್ಯಜಾತಿಯನ್ನೇ ಒಕ್ಕಲುಮಕ್ಕಳು ಆಹಾರಧಾನ್ಯವನ್ನಾಗಿ ಪಳಗಿಸಿಕೊಂಡಿರಬಹುದಾದ ಸಂಭವ ಹೆಚ್ಚು (ಶಾಸಗ. ೧೬). ೪. ಕೂಡಿಸುವಿಕೆ; ಸೇರಿಸುವಿಕೆ. ೫. ಬೆರಕೆ; ಮಿಶ್ರಣ. ೬. ಸಮಾನತೆ. ೭. [ತತ್ತ್ವಶಾ] ಹನ್ನೆರಡು ಬಗೆಯ ಪ್ರಮಾಣಗಳಲ್ಲಿ ಒಂದು: ಪ್ರಮಾಣವು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿ, ಸಂಭವ, ಐತಿಹ್ಯ, ಲಿಪಿ, ಲೋಕಪ್ರಸಿದ್ಧಿ, ಚೇಷ್ಟೆ, ಪ್ರಾತಿಭ ಎಂದು ಹನ್ನೆರಡು ವಿಧವೆಂದು ಕೆಲವರು ಹೇಳುತ್ತಾರೆ (ಹಿಂದಸಾ. ೧೩೩). [ಸಂ.]

**ಸಂಭವನೀಯ** (ಗು). ೧. ಶಕ್ಯವಾದ; ಸಾಧ್ಯವಾದ. ೨. ಉಂಟಾಗಬಹುದಾದ; ಒದಗಲು ಸಾಧ್ಯವಾದ. (ನಾ). ೩. ಶಕ್ತ; ಸಾಧ್ಯವಾಗುವಂಥದು: ಅವರೆಲ್ಲರ ವಿರೋಧವನ್ನು ಕಡೆಗಣಿಸಿ ಯಶೋದೆ ಮುಂದುವರಿಯುವುದು ಸಂಭವನೀಯವಿರಲಿಲ್ಲ (ವಾತ್ಸಲ್ಯ. ೩೧೪). [ಸಂ.]

**ಸಂಭವನೀಯತೆ** (ನಾ). ಶಕ್ಯ; ಸಾಧ್ಯತೆ : ಈ ಆದೇಶದ ಉತ್ತರದಲ್ಲಿ ಹೆಚ್ಚು ಸಂಭವನೀಯತೆಯು ಇರುವ ಹಾಗೆ ಕಾಣುತ್ತದೆ (ಸಮಜೀ. ೪).

[ಸಂ. ಸಂಭವನೀಯತಾ]

**ಸಂಭವಸ್ಥಾನ** (ನಾ). ಹುಟ್ಟುವ ನೆಲೆ ; ಉಗಮಸ್ಥಾನ : ಖೋಡಿಯ ಕಟಕ ಭಂಗದ ಸಂಭವಸ್ಥಾನ ಅಳುಕಿನಂಗಡಿ . . . ದುಗುಡದ ಕಳನೆನಿಸಿತೀ ನಗರ (ಕುವ್ಯಾಅ. ೧೨-೫). [ಸಂ.]

**ಸಂಭವಿಸು** (ಕ್ರಿ). ೧. ಹುಟ್ಟು ; ಜನಿಸು ; ಜನ್ಮತಾಳು : ಅವರನ್ವಯತಿಳಕಂ ಲೋಕವಿಶ್ರುತಂ ಪಿರಿಯ [ಕೋ]ಟಿ ಗಾವುಣ್ಡಂ ಸಂಭವಿಸಿದಂ (ಸೌಇಇ. XI-i, ೪೫-೯; 980); ಆತುಕೊಂಬರೆ ಸರಿಸನಲ್ಲ ವಿಜಾತಿಯಲಿ ಸಂಭವಿಸಿದನೆ ಘಡ ಸೂತನಂದನ (ಕುವ್ಯಾಕ. ೧೦-೪೧); ಕರುಣಾಳು ರಾಘವನಲಿ ತಪ್ಪಿಲ್ಲ ಕಡುಪಾತಕಂಗೈದು ಪೆಣ್ಣಾಗಿ ಸಂಭವಿಸಿದೊಡಲಂ ಹೊರೆವುದೆನ್ನೊಳಪರಾಧವುಂಟು (ಜೈಮಿಭಾ. ೧೯-೨೭). ೨. ಉಂಟಾಗು; ಒದಗಿ ಬರು; ಆಗು : ಸಾಕ್ಷಿಯಾಗಿ ತಪ್ಪಿ ನುಡಿವರ್ಗೆ ಪಾಪಮ ಸಂಭವಿಸುವುದು (ಪಂಚತಂ. ೧೭೬-೧೭); ಅವನಿಪನ ದರುಶನವೆನಗೆ ಸಂಭವಿಸಲರಿಯದು (ಕುವ್ಯಾಕ. ೧೪-೩೪); ಕಂಡೆನಿದೊಂದು ಕನಸನು ಕಾನನದೊಳರವಿಂದಮುಖಿ ಸಹಿತೆಮಗೆ ಸಂಭವಿಸಿತು ಪರಿಭ್ರಮಣ (ತೊರರಾ. ೨-೨-೧೫). ೩. ಸಾಧ್ಯವಾಗು; ಶಕ್ಯವಾಗು : ಅಪಚಜದೊಂದ ಪದ್ಮದೊಳೆ ನೇಲ್ದೊಳಗಾದಳಿಗಮ್ಮ ವೃತ್ತಿ ಸಂಭವಿಸದು (ಆದಿಪು. ೧೧-೧೨೬). ೪. ನೆರವೇರು ; ಈಡೇರು : ಇವನ ಕೊಂದರೆ ತಂದೆ ಮಿಗೆ ಮೆಚ್ಚುವನೊ ಮುನಿವನೊ ತನ್ನ ನುಡಿ ಸಂಭವಿಸದೆಂಬನೊ (ಕುವ್ಯಾದ್ರೋ. ೫-೪೯). ೫. ಒಟ್ಟಾಗು ; ಗುಂಪುಗೂಡು : ವಿವಿಧಾಸ್ತ್ರವಲ್ಲಿ ಸಂಭವಿಸಿ ಬರೆಯಾಗ್ರಹಿಸಿ ತವೆ ತಾಳ್ದನಂತೆ (ಪದ್ಮರಾ. ೧೧-೨೦). ೬. ಒಟ್ಟುಗೂಡಿಸು; ಮಿಶ್ರಣಮಾಡು (?): ನೆಯ್ ಬಜೆ ಬಂಜೆವಾಗಲ ಮೂಲಮೆಂಬಿವನೆ ಕೇವಳಮಕ್ಕದಲ್ಲದೊಡಂ ತ್ರಿಶೂಲಿಯನಕ್ಕೆ ಸಂಭವಿಪುದಂ ಕುಡಿ ಪಿಂಗುಗುಂ ಕೊಟ್ಪಾವು ತಿಂದ ಮಹಾವಿಷಂ (ಲೋಕೋಪ. ೧೦-೨೨). [ಸಂಭವ + - ಇಸು₃]

**ಸಂಭಾರ** (ನಾ). ೧. ಸಂಗ್ರಹಿಸುವುದು ; ಕೂಡಿಸುವುದು. ೨. (ಪೂಜೆ, ವಿವಾಹ, ಯಜ್ಞ ಮುಂತಾದ) ಯಾವುದಾದರೊಂದು ಕಾರ್ಯಕ್ಕೆ ಬೇಕಾಗುವ ಸಾಮಗ್ರಿ,- ಸಲಕರಣೆ : ಧರೆಯ ಮೇಲೆ ನರಸುರಾದಿಗಳೆಲ್ಲ ಸಂಭಾರ[ಪಾಠಾಂ. ಸಬಾರ, ಸಭಾರ]ವ ಹೊತ್ತು ಬಂದೈದಾರೆ (ಅವಚಂ. ೮೯-೩೯೮); ಮುನಿಪರ ಚಳಯದಲಿ ತರಿಸಿದನು ಸಂಭಾರವನು (ಕಾಶಿರಾ. ೧-೫೮); ದೊರೆಯದಿಹ ಸಂಭಾರಮಿಲ್ಲ ನಡೆಸಿನ್ನು ಯಜ್ಞವನು (ಜೈಮಿಭಾ. ೩೩-೪); ಸಮಸ್ತ ಸಂಭಾರಗಳೂ ಹೊರಡುವ ಮುನ್ನ ಪಾಳೆಯ ವನ್ನು ಅಣಿಗೊಳಿಸಲೆಂದು ಒಂದು ಕುದುರೆಯ ದಳವೇ ಮೊದಲು ಹೊರಟಿತು (ಸವತಿ. ೧೧೧). ೩. ಅಡುಗೆಗೆ ಉಪಯೋಗಿಸುವ ಮಸಾಲೆಪದಾರ್ಥ; ಉಪಸ್ಕರ; ಸಂಬಾರ: "ವೇಶವಾರಃ, ಉಪಸ್ಕರಃ -೨ ಹಿಂಗು, ಜೀರಿಗೆ ಮುಂತಾದ ಸಂಭಾರದ ಹೆಸರು, ಮಸಾಲಾ" (ಸಿದ್ಧಾಂತಿ. ೨೮೪); ಬಿದಿರಕ್ಕಿಯಂ ಕುದಿಸಿ ಮದಮೃಗದ ಮಾಂಸಮಂ ಹದದೊಳಟ್ಟುಟ್ ತೊಳಸಿ ಸಂಭಾರಮನ್ನಿಕ್ಕಿ . . . ಸದಮದದೊಳುಂಡು (ಹಚಕಾ. ೫-೩೪). ೪. ಘಟಕ; ಅಂಗ. ೫. ಗುಂಪು; ಸಮೂಹ. ೬. ಆಧಿಕ್ಯ ; ಹೆಚ್ಚಳ. [ಸಂ.]

**ಸಂಭಾರಕಬಳ** (ನಾ). = ಸಂಬರಗವಳ. [ಸಂ. ಸಂಭಾರಕಬಲ]

**ಸಂಭಾರಗಡಲೆ** (ನಾ). ಉಪ್ಪು, ಕಾರ ಮುಂತಾದ ಮಸಾಲೆ ಹಚ್ಚಿದ ಕಡಲೆ : ಸಂಡಿಗೆ ಸಂಭಾರಗಡಲೆ ಪ್ರಾಸಕ . . . ಭಕ್ಷ್ಯಗಳ ಬಡ್ಡಿಸಿಕೊಳುತುಂಡರು (ಮೋಹತ. ೧೮-೮೭); ಸಂಡಿಗೆ, ಸಂಭಾರಗಡಲೆ (ಉಸಳಿ ಅಥವಾ ಉಪ್ಪುಕಾರ ಹಚ್ಚಿ ಹುರಿದ ಕಡಲೆ) . . . ಮೊದಲಾದ ತಿನಿಸುಗಳನ್ನು ತರಿಸಿ ತಿನ್ನುತ್ತ (ಕರ್ಣಾಜ. ೧೦೩). [ಸಂಭಾರ + ಕಡಲೆ]

**ಸಂಭಾರಣೆ** (ನಾ). ಅತಿಶಯತೆ ; ಹೆಚ್ಚಳ : ಮನಸಿಜನ ಮಸೆದಲರ್ಗಣೆಯೆನಿಸಿಯುಂ ಕುಡುಮಿಂಚಿನ ಸಂಭಾರಣೆಯೆನಿಸಿಯುಮೆಸೆದು ವಿವಿಧ ನರ್ತನಪ್ರವರ್ತನದೊಳತಿ ಚದುರೆಯೆನಿಸಿ ನರ್ತಿಸುವ ನರ್ತಕಿಯುಂ (ನೇಮಿಪು. ೪-೪೫ ವ). [ಸಂಭಾರ + - ಅಣೆ₄]

**ಸಂಭಾವಕ** (ನಾ). ಚೆನ್ನಾಗಿ ಯೋಚಿಸುವವನು ; ಊಹಿಸಲು ಶಕ್ಯನಾದವನು (?) : ನಾವು ತಱುವಾಯವರೆನಲು ಜಯ ಜೀವಿಗಳು ನೀವನ್ಯಗುಣಸಂಭಾವಕ[ಪಾಠಾಂ. ವಿತ]ರಲಾ ಎಂದನಶ್ವತ್ಥಾಮ ಶಲ್ಯಂಗೆ (ಕುವ್ಯಾಶ. ೧-೨೦). [ಸಂ.]

**ಸಂಭಾವನಾಗ್ರಂಥ** (ನಾ). ಗಣ್ಯರಿಗೆ, ಗೌರವಾರ್ಥವಾಗಿ ವಿಶೇಷಸಂದರ್ಭದಲ್ಲಿ ಅರ್ಪಿಸುವ, ವಿವಿಧ ಲೇಖನಗಳುಳ್ಳ ಗ್ರಂಥ : ಬಿ.ಎಂ. ಶ್ರೀ. ಅವರ ಸಂಭಾವನಾಗ್ರಂಥ 'ಸಂಭಾವನೆ' ನಮ್ಮ ಕಚೇರಿಯಲ್ಲಿದೆ (ರೂಢಿ). [ಸಂ.]

**ಸಂಭಾವನಾರ್ಥ** (ನಾ). [ವ್ಯಾಕ] ಒಂದು ಕ್ರಿಯೆಯು ನಡೆಯಬಹುದು ಎಂಬುದನ್ನು ಸೂಚಿಸುವ ಅರ್ಥ : ಹೊರಡು, ಹೊರಡನು, ಹೊರಟಾನು ಎಂಬ ರೂಪಗಳು ಕ್ರಮವಾಗಿ ವಿಧ್ಯರ್ಥ – ನಿಷೇಧಾರ್ಥ– ಸಂಭಾವನಾರ್ಥಗಳಿಗೆ ಸೇರಿದುವು (ಮಧ್ಯಮ. ೭೩); ಕ್ರಿಯೆ ನಡೆಯದಿರುವುದಕ್ಕಿಂತಲೂ ನಡೆಯುವ ಸಂಭವವೇ ಹೆಚ್ಚು ಎಂಬುದನ್ನು ಸಂಭಾವನಾರ್ಥದ ರೂಪಗಳು ತೋರಿಸುತ್ತವೆ (ಮಧ್ಯಮ. ೯೭). [ಸಂ.]

**ಸಂಭಾವನಾಲಂಕಾರ** (ನಾ). [ಕಾವ್ಯಮೀ] ಅಲಂಕಾರಗಳಲ್ಲಿ ಒಂದು ಬಗೆ ; ಮುಂದೆ ನಡೆಯಬಹುದಾದ ಕಾರ್ಯವು ಹೀಗೆಯೇ ಆಗುವುದೆಂದು ಊಹಿಸುವುದು : ಆವುದಾನೊಂದು ಕಾರ್ಯ ಸಿದ್ಧ್ಯರ್ಥವಾಗುವದಕ್ಕೆ ಹಿಂಗಾದಡೆ ಹಿಂಗಾದೀತೆಂಬ ಊಹೆಯಂ ಮಾಡಿದೊಡೆ ಸಂಭಾವನಾಲಂಕಾರವೆನಿಸುವುದು (ಕುವಲ. ೧೨೧). [ಸಂ.]

**ಸಂಭಾವನೆ** (ನಾ). ೧. ಚಿಂತನೆ ಮಾಡುವುದು ; ಯೋಚಿಸುವಿಕೆ. ೨. ವಿಚಾರ; ಆಲೋಚನೆ ; ಅಭಿಪ್ರಾಯ : ಮನದೊಳ್ ನಿರ್ವೇದಮಾದಂ ದೊರೆಕೊಳೆ ಭವಸಂಬಂಧದೊಳ್ ತೊಟ್ಟ ಸಂಭಾವನ ಚಿತ್ರಂಬೊಕ್ಕು ಹಸ್ತಾಮಳಕದ ತೆಱದಿಂ ತೋಱೆ (ಶಾಂತಿಪು. ೯-೧೦೩); ಒಬ್ಬಾನೊಬ್ಬ ಪುರುಷನು ಈ ಆತ್ಮನನ್ನು ಆಶ್ಚರ್ಯಕರವಾದ ವಸ್ತುವನ್ನು ಕಂಡ ಹಾಗೆ ಕಾಣುತ್ತಾನೆ ಶಾಸ್ತ್ರಾಚಾರ್ಯೋಪದೇಶದಿಂದ ಆತ್ಮನನ್ನು ತಿಳಿದರೂ ಆ ಸಂಭಾವನೆ ಹೋಗದಿದ್ದರೆ ಮನಸ್ಸಿನಲ್ಲಿ ಸಂಶಯನಿವೃತ್ತಿಯಾಗಿ ಸ್ಪಷ್ಟವಾಗಿ ಕಾಣುವುದಿಲ್ಲ (ಕೃವಾಭೀ. ೩೪). ೩. ಊಹೆ ; ಎಣಿಕೆ : ಒಂದಾನೊಂದು ಪದಾರ್ಥವನ್ನು ಮತ್ತೊಂದು ಪದಾರ್ಥವನ್ನಾಗಿ ಸಂಭಾವನೆ ಮಾಡುವುದೇ ಉತ್ಪ್ರೇಕ್ಷೆ (ಕೃಪಿಡಿ. ೨೬೬). ೪. ನಂಬಿಕೆ ; ಭರವಸೆ : ರಾಜಒಡೆಯನು ಮಂಡಲೇಶ್ವರರ ಸನ್ನಿಧಾನದಲ್ಲಿ ವಿಚಾರಣೆಗೆ ತಲೆಬಾಗುವನೆಂಬ ಸಂಭಾವನೆಯು ಮಂಡಲೇಶ್ವರನಿಗೆ ಇರಲಿಲ್ಲ (ಶ್ರೀರಾಯ. ೧೭೪). ೫. ಮನ್ನಣೆ; ಸನ್ಮಾನ : ಕಿಱಿದಾನುಂ ಬೇಗದಿಂ ಯಥೋಚಿತಸಂಭಾವನೆಯಿಂ ರಾಜನ್ಯಕಮಂ ಬೀಡಿಂಗೆ ವಿಸರ್ಜಿಸಿ (ಶಾಂತಿಪು. ೧೧-೮೩ ವ); ಸಕಲ ಸುರರ ಸಂಭಾವನೆಯ ಕೊಳ್ಳ ಲೋಕವಿಸ್ತರಣಪ್ರಭಾವ ನಯನತ್ರಯಂ ದೇವಗಂಗಾಧರಂ ಪೊರೆಗೆ (ಜೈಮಿಭಾ. ೧-೨); ಇಂದ್ರನ ಈ ಸಂಭಾವನೆಯಿಂದ ನಾನು ಅನುಗ್ರಹಿಸಲ್ಪಟ್ಟೆನು (ಶಾಕುಂತ. ೯೭-೨೨). ೬. ಕೆಲಸಕ್ಕಾಗಿ ಕೊಡುವ ಹಣ; ಶುಲ್ಕ: ಸಂಗೀತಕಚೇರಿಯಾದ ಮೇಲೆ ಕಚೇರಿಯ ಸಂಭಾವನೆಯನ್ನು ಮಹಾವೈದ್ಯನಾಥ ಅಯ್ಯರ್ ಅವರು ತೆಗೆದುಕೊಳ್ಳುತ್ತಿರಲಿಲ್ಲ (ಸಂಗೀತ. ೬) ; ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮತ್ತು ಕಡಮೆ ಸಂಭಾವನೆಗೆ ಕೆಲಸಗಾರರು ದೊರೆಯುತ್ತಾರೆ (ಮುದ್ರಕ. ೨೦). ೭. ದಕ್ಷಿಣೆ ; ಕಾಣಿಕೆ : ತನ್ನನ್ನೊಬ್ಬ ಭಿಕ್ಷೆ ಎತ್ತುವ, ಸಂಭಾವನೆಯ ಬ್ರಾಹ್ಮಣ ಎಂದು ಈ ಗೌಡ ಬಗೆದುಬಿಟ್ಟನಲ್ಲ . . . ಈಗ ನಾನು ಸಂಭಾವನೆ ಎತ್ತುವ ಹಾರುವನಂತೆಯೇ ಕಾಣುತ್ತಿರಬೇಕು (ಸಂಸ್ಕಾರ. ೯೮). ೮. ಔಚಿತ್ಯ ; ಯುಕ್ತತೆ. ೯. ಯೋಗ್ಯತೆ; ಅರ್ಹತೆ. ೧೦. ಕೀರ್ತಿ ; ಖ್ಯಾತಿ. ೧೧. ಸಂಶಯ; ಸಂದೇಹ. ೧೨. ಪ್ರೀತಿ; ವಿಶ್ವಾಸ. ೧೩. "ಸಂಭಾವನೆ" ಯೆನ್ನುವದು ಒಂದು ವಿಧವಾದ ಜ್ಞಾನ. ಈ ಜ್ಞಾನವು ನಿಶ್ಚಯಜ್ಞಾನಕ್ಕಿಂತ ಕೀಳಾಗಿಯೂ ಸಂದೇಹಜ್ಞಾನಕ್ಕಿಂತ ಉತ್ಕೃಷ್ಟವಾಗಿಯೂ ಇರುವುದು" (ಕೃಪಿಡಿ. ೨೬೬): ಜ್ಞಾನಸ್ವರೂಪದಲ್ಲಿರುವ ಪ್ರಾಮಾಣ್ಯ, ಸಂಶಯ, ಸಂಭಾವನಾ ಮೊದಲಾದ ಅಂಶಗಳು ಸಾಕ್ಷಿ ಸ್ವರೂಪೇಂದ್ರಿಯಕ್ಕೆ ಗೋಚರಗಳಾಗುವುವು (ಹಿಂದಸಾ. ೨೮೬). ೧೪. [ವ್ಯಾಕ] ಒಂದು ಕ್ರಿಯೆಯು ನಡೆಯಬಹುದು ಎಂಬುದನ್ನು ಸೂಚಿಸುವ ರೂಪ : ಒಂದು ಕ್ರಿಯೆ ನಡೆದರೂ ನಡೆಯಬಹುದು ಎಂದು ಊಹಿಸುವುದಕ್ಕೆ 'ಸಂಭಾವನೆ' ಎಂದು ಹೆಸರು (ಮಧ್ಯಮ. ೯೭). ೧೫. ದಯೆ ; ಕರುಣೆ (?) : ತಮ್ಮಡಿಯ ಸಂಭಾವನೆಯ ಬಲುಹಿರಲಾವ ಭಯಮೇಕೆ (ಗಗತಾ. ೧೭-೬೪). [ಸಂ. ಸಂಭಾವನ, ಸಂಭಾವನಾ]

**ಸಂಭಾವಿತ** (ಗು). ೧. ಯೋಚಿಸಿದ ; ಆಲೋಚನೆ ಮಾಡಿದ. ೨. ಗೌರವಿಸಿದ; ಮಾನ್ಯಮಾಡಿದ. ೩. ಗೌರವಕ್ಕೆ ಪಾತ್ರವಾದ ; ಮನ್ನಣೆಯುಳ್ಳ : ಒಂದು ವರ್ಷ ಮನೆಯಲ್ಲಿ ಕುಳಿತಿರುವುರದಕ್ಕಿಂತ, ಸ್ವಲ್ಪ ಸಂಭಾವಿತಆಫೀಸಿನಲ್ಲಿ ದುಡಿದರೆ ಅನುಕೂಲ (ವಾತ್ಸಲ್ಯ. ೧೪೧). ೪. ಊಹಿಸಿದ ; ಕಲ್ಪಿಸಿದ. ೫. ತಕ್ಕುದಾದ; ಯೋಗ್ಯವಾದ. ೬. ಸಾಧ್ಯವಾದ. ೭. ಹುಟ್ಟಿದ ; ಉತ್ಪನ್ನವಾದ. ೮. ತಣಿದ;

ತೃಪ್ತಿಗೊಂಡ. ೯. ನಿರೀಕ್ಷಿಸಿದ ; ಎದುರುನೋಡಿದ. (ನಾ). ೧೦. ಕಲ್ಪನೆ; ಊಹೆ. ೧೧. ಯೋಗ್ಯ ; ಸಭ್ಯ : ಇಂತಲ್ಲಿ ಪುಟ್ಟಿದ ದ್ರವ್ಯಮೆಲ್ಲಮಂ ಸಂಭಾವಿತರಪ್ಪ ಶೆಟ್ಟಿಯರ ಕಯ್ಯಲ್ಲಿರಿಸಿ ದೇವಕಾರ್ಯ್ಯಕ್ಕೆ ತಕ್ಕ ಬೀಯಮಂ ಮಾರ್ಪ್ಪುದು (ಕಾಆ. ೧-೧-೧೦; 1092); ಆವನ್ನೆ ನೀನಧಿಕತರಸಂಭಾವಿತನು ಹೇಳು (ಕುವ್ಯಾಸ. ೩-೨೧); ಅವನನ್ನು ನೋಡಿದರ, ಮಾತು ಕೇಳಿದರೆ ಸಂಭಾವಿತ ಎಂದು ತೋರುತ್ತಿತ್ತು (ಸಾವಿಸ. ೧೪). [ಸಂ.]

**ಸಂಭಾವಿತಾತ್ಮ** (ನಾ). = ಸಂಭಾವಿತ ೧೧ : ಮಾತ್ರಾಭಾಂಡಿಕೆಯುಮನಾಷಾಢ ಭೂತಿಯುಮಂ ಕಾಣದೆ ಅರ್ಥನಾಶದಿಂ ವಿಕಳಚಿತ್ತನಾಗಿನಿಸಾನುಂ ಬೇಗದಿಂ ತನ್ನಿಂ ತಾನೆ ಸಂಭಾವಿತಾತ್ಮನುಮಾಗಿ (ಪಂಚತಂ. ೭೩-೨). [ಸಂ. ಸಂಭಾವಿತಾತ್ಮನ್]

**ಸಂಭಾವಿಸು** (ಕ್ರಿ). ೧. ಧ್ಯಾನಮಾಡು ; ಚಿಂತನೆಮಾಡು : ಆವನನರ್ಚಿಪರ್ ಮಖದೊಳಾವನ ಮಂತ್ರ ಜಪಂಗಳಿಂದೆ ಸಂಭಾವಿಪರ್ . . . ಆ ದೇವನೊಳಕ್ಕಟಾ ಪೂಣರ್ದಂ (ಶಬಶಂ. ೪-೧೧೭) ; ಶ್ರೀವರನ ಸರ್ವತ್ರದಲ್ಲಿ ಸಂಭಾವಿಸುತ ಪೂಜಿಸುತ ಮೋದಿಪ ಕೋವಿದರಿಗುಂಟೇನೋ ಭವದುಃಖಾದಿದೋಷಗಳು (ಜಗದಾ. ೨೩೯). ೨. ಯೋಚನೆ ಮಾಡು ; ಆಲೋಚಿಸು : ಜೀವ ಪರಮರ ಭೇದವನು ಸಂಭಾವಿಸದೆ . . . ಮಾಯಾವಿಲಾಸದ ನೆಲೆಯ ನೋಡದೆ ಸಾವುತಿಹುದೇ ದ್ವೈತ (ಕುವ್ಯಾಉ. ೪-೭೫) ; ಮುಂದಣ ಜನ್ಮಕೇನಹಿರಿ ಈ ವಿವೇಕವ ಚಿತ್ತದಲಿ ಸಂಭಾವಿಸದೆ ಸುಜ್ಞಾನದೀಪ್ತಿಗೆ ಸೋವಬೇಡಜ್ಞಾನತಿಮಿರವನು (ತೊರರಾ. ೪-೪-೬೮). ೩. ತೃಪ್ತಿಪಡಿಸು ; ತಣಿಸು : ಅತಿವ್ಯಸನಕ್ಷೀಣಧನಜನಂಗಳಂ ಮೂಲಧನದಾನದಿಂ ಸಂಭಾವಿಸಿಯುಂ (ಚಂದ್ರಪು. ೨-೬೧); ದೇವ ನಿಮ್ಮಡಿ ಸಹಿತ ಕಂಡೆನು ದೇವದೇವನ ಚರಣವನು ಸಂಭಾವಿಸಿದ ನಮ್ಮಿಬ್ಬರನು ದಕ್ಷಾಧ್ವರಧ್ವಂಸಿ (ಕುವ್ಯಾದ್ರೋ. ೯-೮); ನಿನ್ನಯ ಭಾವದ ಬಗೆದೋಜೆಯವನ . . . ಸೆಳೆದು ಸಂಭಾವಿಸು ಮೋಹರತಿಯೊಳು (ಕಂನವಿ. ೯-೫೭). ೪. ಹೊಗಳು; ಸ್ತುತಿಸು : ಬಿರುದುಗಳ ಸಂಭಾವಿಸುವ [ಪಾಠಾಂ. ಳಿಸುತ, ಳಿಸುವ] ವಂದಿಗಳ . . . ಎಚ್ಚಾಡಿದರು (ತೊರರಾ. ೬-೫೦-೧೨). ೫. ಪೂಜ್ಯಭಾವದಿಂದ ಕಾಣು; ಗೌರವಿಸು: ಮಾವಂಗೆ ಭಾವಂಗೆ ಮೇಣತ್ತೆಗ್ಯದ ಸಂಭಾವಿಸುತೆ ಸೇವಿಸುತೆ ಕಾಂತಂಗೆ ಸುರತ ಸಂಜೀವನವನೀವ ನವಯುವತಿಯಹ ಲಕ್ಷಣಂ ಸುಕೃತಫಲಂ (ಜೈಮಿಭಾ. ೫-೫೪). ೬. ಸಂತೈಸು ; ಸಾಂತ್ವನಗೊಳಿಸು : ನಳಿನನಾಭನು . . . ಸೆಳೆದು ಬಿಗಿಯಪ್ಪಿದನು ಭರತನ ಬಳಿಕ ಶತ್ರುಘ್ನಾದಿಗಳ ಮತ್ತೊಲಿದು ಉಪಚರಿಸುತ್ತ ಸಂಭಾವಿಸಿದನೆಲ್ಲರನು (ಕಾಶಿರಾ. ೪೪-೪೫). ೭. ಮಾಡು; ನೆರವೇರಿಸು : ಸಂಭಾವಿಸುವುದರಿರಾಯರಲಿ ಸಂಧಾನಸೌರಂಭ (ಕುವ್ಯಾಉ. ೬-೧೫). ೮. ಉಂಟಾಗು; ಸಂಭವಿಸು : ರಾವಣನು ಮುನ್ನಂದು ಸೀತಾದೇವಿಗಳುಪಿದ ಕಥೆಯವೋಲ್ ಸಂಭಾವಿಸಿದ ಕೀಚಕವಿಡಂಬವ ಕೇಳು (ಕುವ್ಯಾವಿ. ೨-೨). ೯. ಒದಗಿಸು; ಪೂರೈಸು : ತುರಂಗಕೆ ಜೀವನವನೀ ಕಳನೊಳಗೆ ಸಂಭಾವಿಸುವೆ ನೋಡು (ಕುವ್ಯಾದ್ರೋ. ೧೦-೨೮). ೧೦. ಒಂದಾಗು; ಒಟ್ಟಾಗು : ತಾವರೆ ತಾವರೆಗಳು ಗಾಳಿಯಿಂದ ಸಂಭಾವಿಸಿ ಕೂಡುವಾಗೊಳಗೆ ತೀವಿದ ರಜವೀಚಿಗಾಚೆ ಗಹಂತಿತ್ತನಾ ವಿಭು ಕುಟುಕುದಂಬುಲವ (ಭರಚ. ೧೧-೫೨). ೧೧. ನಿರ್ವಹಿಸು; ಹೊರು : ನೀವು ಸೇನಾಪತ್ಯವನು ಸಂಭಾವಿಸಿರೆ ಸಾಕಿನ್ನು (ಕುವ್ಯಾಶ. ೧-೧೮).

[ಸಂಭಾವನ + - ಇಸು$_{3}$]

**ಸಂಭಾವ್ಯ** (ಗು). ೧. ಯಥೋಚಿತವಾದ; ತಕ್ಕ ; ಯೋಗ್ಯವಾದ : ಭವ್ಯಕಲ್ಪದ್ರುಮ ಫಲಂಗಳನವ್ಯಯಾಮೃತದಿಂದ ತಾಳಿಸಿ . . . ಸಂಭಾವ್ಯ ಸರಸರಸಾಯನಂಗಳನೆಲ್ಲವಂ ತುಂಬಿ (ಬಸಪು. ೮-೩೮). ೨. ಉಂಟಾಗಬಹುದಾದ; ಸಂಭವನೀಯ. ೩. ಊಹಿಸಬಹುದಾದ. ೪. ಗೌರವಾರ್ಹವಾದ; ಮನ್ನಣೆಗೆ ಪಾತ್ರವಾದ. (ನಾ). ೫. ಯೋಗ್ಯವಾದುದು; ಅರ್ಹವಾದುದು : ಎತ್ತಿಕೊಂಡ ವಸ್ತುವಿನ ಸಮರ್ಪಕವಾದ, ಸಂಭಾವ್ಯವೆನ್ನಿಸುವ ನಿರ್ವಹಣೆಯಿಂದ ಬೆಲೆ ಬರುತ್ತದೆ (ಪಂಶೀ. ೧೦೭). ೬. ಸಾಧ್ಯ ; ಶಕ್ಯ : ಅವರಿಬ್ಬರೂ ಸಮಕಾಲೀನರಾಗಿರುವುದು ಸಂಭಾವ್ಯವಲ್ಲ (ಕರ್ಣಾಅ. ೨೨); ಎರಡು ಮೂರು ಪ್ರತಿಮಾಡಿ ಒಂದೇ ಕಡೆಯಲ್ಲಿ ಇಟ್ಟಾಗ ಸಿಟ್ಟಿನ ಭರದಲ್ಲಿ ಹೀಗೆ ಆಗುವುದು ಸಂಭಾವ್ಯ (ಗಂಮಾಯಿ. ೨೬೫). ೭. ಯೋಗ್ಯತೆ; ಅರ್ಹತೆ. ೮. ಗೌರವಕ್ಕೆ ಪಾತ್ರವಾದವನು; ಪೂಜ್ಯ : ಭೂವ್ಯೋಮ ಪಾತಾಳಲೋಕಂಗಳಲ್ಲಿ ಸಂಭಾವ್ಯರೆಂದೆನಿಸಿ ಕೊಳ್ವಖಿಳದೇವರ್ಕಳಿಂ ಸೇವ್ಯನಾದಜನ ಪಟ್ಟದ ರಾಣಿ (ಜೈಮಿಭಾ. ೧-೪). [ಸಂ.]

**ಸಂಭಾವ್ಯತೆ** (ನಾ). ಸಾಧ್ಯತೆ ; ಸಂಭವನೀಯತೆ : ಈ ಸಂಭಾವ್ಯತೆ ಒಂದೊಂದು ಸಂದರ್ಭದಲ್ಲಿ ಒಂದೊಂದು ಬಗೆಯಾಗಿರುತ್ತದೆ (ಭಾರಮಿಾ. ೨೦೫). [ಸಂ. ಸಂಭಾವ್ಯತಾ]

**ಸಂಭಾವ್ಯೆ** (ನಾ). ಮನ್ನಣೆಗೆ ಪಾತ್ರಳಾದವಳು; ಪೂಜ್ಯೆ : ಸಂತರ್ಗೆ ನಿಚ್ಚ ಸಂತಸದೆಡೆಯಂ ತೋಱಿ ಸೇವಕರ್ಕಳಿಂ ಸಂಭಾವ್ಯೆಯೆನಿಪ್ಪ ಗಂಡಕಿ ಕಾಣಿಸಿಕೊಂಡಳ್ (ರಾಮಾಶ್ವ. ೭೮-೨೬). [ಸಂ. ಸಂಭಾವ್ಯಾ]

**ಸಂಭಾಷಣ** (ನಾ). ೧. ಮಾತುಕತೆ; ಸಂವಾದ : ಸ್ವಾಗತವಚನಪುರಸ್ಸರಂ ಸಂಭಾಷಣ ಪ್ರಸ್ತಾವದೊಳ್ ವಸ್ತುವಿಚಾರಂ ಪುಟ್ಟೆ (ಶಾಂತಿಪು. ೮-೧೨೬ ವ); ವರಶಿವೈಕ್ಯರು ಭವಿಜನಸಮಾಚರಣಸಂಭಾಷಣಸದಾಸಂಸರ್ಗದೂರಕರು (ಬಸಪು. ೬-೧೬). ೨. ಕರಾರು; ಒಪ್ಪಂದ. ೩. ಯುದ್ಧಸಮಯದಲ್ಲಿ ಸೈನಿಕರು ಬಳಸುವ ಗೂಢಶಬ್ದ, - ಸಂಕೇತ. ೪. ಕೂಟ; ಸಂಭೋಗ. [ಸಂ.]

**ಸಂಭಾಷಣಂಗೆಯ್** (ಕ್ರಿ). ಮಾತುಕತೆಯಾಡು ; ಸಂಭಾಷಿಸು : ದೇವರುಮಾ ಸಂಜೀವಕಂ ಬಂದು ಕಾಣಲೊಡಂ ಪರಮಮಿತ್ರನಂ ಕಂಡಂತೆ ಸಂಭ್ರಮವೆರಸು ಮನ್ನಿಸಿ ಸಂಭಾಷಣಂಗೆಯ್ವುದು (ಪಂಚತಂ. ೫೫-೧೭); ಸಂಭಾಷಣಂಗೆಯ್ದು ನಂದಗೋಪನ ಮುಖಾರವಿಂದಮಂ ನೋಡಿ ದಾನವಲ್ಲಭನಿಂತೆಂದಂ (ಜಗವಿ. ೫-೮೨ ವ).

[ಸಂಭಾಷಣ + ಕೆಯ್$_{1}$]

**ಸಂಭಾಷಣೆ** (ನಾ). ೧. = ಸಂಭಾಷಣ ೧ : ಸಮಬಂಧುಗಳನಪ್ಪಿ ಸಂದರ್ಶನೋತ್ಸವ ದೊಳನ್ಯೋನ್ಯಸಂಭಾಷಣೆಗಳಿಂದೆ ಮುದಿತರಾಗಿ (ಜೈಮಿಭಾ. ೩೩-೨೫); ಮುಕ್ತಾಂಬೆಯು . . . ತಾನಾಗಿ ಸಂಭಾಷಣೆಯನ್ನು ಪ್ರಾರಂಭಿಸಿದಳು (ರಾವಿಜ. ೧೧೧); ಎಲ್ಲಾ ತರದ ಮಂದಿಯ ಸಂಗಡ ಸಂಭಾಷಣೆಯ ಮಾಡಿದ್ದೇನೆ (ಮುಂಬಯಿ. ೫-೧೫೨). ೨. = ಸಂಭಾಷಣ ೪: 'ಸಂಭಾಷಣೆಗೆಯ್ಸು' ಪರಾ.

**ಸಂಭಾಷಣೆ ನಡೆಸು** = ಮಾತುಕತೆಯಾಡು; ಸಂಭಾಷಿಸು : ಯಜಮಾನನೊಂದಿಗೆ ಟಾರ್ಟರ್‌ಭಾಷೆಯಲ್ಲಿ ಕೂಗಿ ಸಂಭಾಷಣೆ ನಡೆಸುತ್ತಾನೆ (ಮಲೆನಾ. ೨೫).

[ಸಂ. ಸಂಭಾಷಣ]

**ಸಂಭಾಷಣೆಗೆಯ್ಸು** (ಕ್ರಿ). ಕೂಡುವಂತೆ ಮಾಡು ; ನೆರೆಯುವಂತೆ ಮಾಡು : ಪೂಸರಲಿಂದೆಚ್ಚು ಶಿವನ ತಂದೀಗ ಸಂಭಾಷಣೆಗೆಯ್ಸುವೆ ನಿಮಗೆ (ಮೋಹತ. ೭-೨೮).

[ಸಂಭಾಷಣೆ + ಕೆಯ್ಸು]

**ಸಂಭಾಷಿಸು** (ಕ್ರಿ). = ಸಂಭಾಷಣಂಗೆಯ್ : ದೂತನಾತಂಗಿದಿರೆಯ್ದಿ ನಿಜಾಸನಾರ್ಧದೊಳ್ಕುಳ್ಳಿರಿಸಿ . . . ಸಂಭಾಷಿಸುತ್ತಮಿರೆ (ಶಾಂತಿಪು. ೨-೭೦ ವ); ದಂದಶೂಕ ಪ್ರಮಾಥಿಯಂ ಯಥೋಚಿತಸ್ನಿಗ್ಧಮಧುರಾಳಾಪದಿಂ ಸಂಭಾಷಿಸಿ (ಜಗವಿ. ೮-೮೦ ವ); ಮಾವಾಜಿಯೂ ಅತ್ತೆಯ್ಯನೂ ಸಂಭಾಷಿಸುತ್ತಿರುವಾಗ್ಯೆ ಅಪ್ಪಾಜಿಯೂ ಬಂದರು (ಚಂಗಾಳ್ವ. ೬೧). [ಸಂಭಾಷಣ + - ಇಸು$_{3}$]

**ಸಂಭಾಷೆ** (ನಾ). ೧. = ಸಂಭಾಷಣ ೧. ೨. = ಸಂಭಾಷಣ ೨. ೩. = ಸಂಭಾಷಣ ೩. ೪. ಅಕ್ರಮಸಂಬಂಧ. [ಸಂ. ಸಂಭಾಷಾ]

**ಸಂಭಾಳಿ$_{1}$** 'ಸಂಬಳಿ$_{1}$' ನೋ.

**ಸಂಭಾಳಿ$_{2}$** 'ಸಂಬಾಳ' ನೋ.

**ಸಂಭಾಳಿಕೆ** (ನಾ). ಎಚ್ಚರಿಕೆಯನ್ನು ಸೂಚಿಸುವ ಒಂದು ಪದ: ಜೋಳಿಜೋಳಿಯೊಳೆಸಗುವ ಸಕಲಂ ಮಕುಟಾಳಿಮಾಣಿಕ್ಯದೀಪ್ತಿಗಳ ಏಱಿಪ ರನ್ನವಾವುಗೆವಚ್ಚೆ ಜತನ ಸಂಭಾಳಿಕೆ ಬಹುಪರಾಕಯ್ಯ (ಮೋಹತ. ೨೦-೬೧).

[ಸಂಭಾಳಿ$_{1}$ (< ಸಂಬಳಿ$_{1}$) + - ಕೆ]

**ಸಂಭಾಳಿಸು$_{1}$** 'ಸಂಬಾಳಿಸು$_{1}$' ನೋ.

**ಸಂಭಾಳಿಸು$_{2}$** 'ಸಂಬಾಳಿಸು$_{2}$' ನೋ.

**ಸಂಭಿನ್ನ** (ಗು). ೧. ಸಂಪೂರ್ಣವಾಗಿ ತುಂಡಾದ, - ಭಾಗವಾದ. ೨. ಹರಿದ; ಜೀರ್ಣವಾದ. ೩. ಬಿರಿದ; ಸೀಳಿದ : ಮಸಕಂಗುಂದಿದ ನೋಟ . . . ಪಿಸುಟ್ಟ ಚರಣಂ ಸಂಭಿನ್ನ ಪಾರ್ಷ್ಣಿಸ್ಥಳಂ ವಸುಧಾಧೀಶನೊಳೊಂದಿರಲ್ ಸುದತಿ ಕಂಡಳ್ ಬಾಷ್ಪನೇತ್ರಂಗಳಿಂ (ನಳಚಂ. ೭೨೩). ೪. ಚೆದುರಿದ; ಹರಡಿಕೊಂಡ : ವಿಸ್ಫಾರವಿದ್ಯುತ್ಸಂಭಿನ್ನಾಂಭೋಭೃದುದ್ಯತ್ತಟಚಟುಳಚಳನ್ಮೀನಫೇನಪ್ರತಾನಂ ಶುಂಭದ್ಗಂಭೀರವಮಂ

ರಂಜಿಸಿದುದು (ರಾಜಶೇ. ೧-೯೦). ೫. ಮಿಶ್ರಣಗೊಂಡ ; ಸೇರಿಸಲ್ಪಟ್ಟ. ೬. ಅಡಕವಾದ ; ಒತ್ತಾದ. ೭. ಸಂಪೂರ್ಣವಾಗಿ ಅರಳಿದ. [ಸಂ.]

**ಸಂಭಿನ್ನವಿದ್ಯೆ** (ನಾ). [ಜೈನ] ಒಂದು ಬಗೆಯ ವಿದ್ಯೆ : ಪವಮಾನಸುತಂ ಸಂಭಿನ್ನವಿದ್ಯೆಯಿಂ ಮಾಡಿ ಪೊಟಲನಾಗಸದೊಳ್ತನ್ನ ವರೂಥಿನಿಯೆಲ್ಲಮನಿರಿಸಿ (ಪಂರಾಮಾ. ೧೧-೭೩). [ಸಂ. ಸಂಭಿನ್ನವಿದ್ಯಾ]

**ಸಂಭುಕ್ತ** (ಗು). ೧. ತಿಂದ. ೨. ಅನುಭವಿಸಿದ. (ನಾ). ೩. (?) : ಪ್ರಸಿದ್ಧಿ ಎದ್ಧ ತ ಸ್ತ್ರೀಯರೊಡನೆ ಪಸರ ಪಡೆದವಂ ಉತ್ತಮಸಂಭುಕ್ತನೆಂಬುದು (ಕಾಮಶಾ. ೨೫೨). [ಸಂ.]

**ಸಂಭೂತ** (ಗು). ೧. ಒಟ್ಟಾಗಿ ಸೇರಿಸಿದ ; ಜೊತೆಗೂಡಿಸಿದ. ೨. ಹುಟ್ಟಿದ ; ಉತ್ಪನ್ನವಾದ. ೩. ಒಡಗೊಂಡ; ಯುಕ್ತವಾದ : ಭೂತಚತುಷ್ಟಯಸಂಭೂತ ಚೈತನ್ಯಂ ಪಿಷ್ಟೋದಕಗುಡಧಾತಕ್ಯಾದಿಯತ್ತಣಿಂ ಮದಶಕ್ತಿ ಪುಟ್ಟುವಂತೆ ಪುಟ್ಟುಗುಂ (ಶಾಂತಿಪು. ೮-೧೨೩ ವ). ೪. ತಯಾರಿಸಿದ ; ರಚಿಸಿದ. ೫. ಯೋಗ್ಯ ; ತಕ್ಕ. (ನಾ). ೬. ಹುಟ್ಟಿದವನು; ಜನಿಸಿದವನು : ಈತನೇ ಧೃತರಾಷ್ಟ್ರನೆರಡನೆಯಾತ ಪಾಂಡು ವಿಲಾಸಿನೀಸಂಭೂತನೀತನು ವಿದುರನೆಂದಾಯ್ತುವರಿಗಭಿಧಾನ (ಕುವ್ಯಾಆ. ೩-೧೦). [ಸಂ.]

**ಸಂಭೃತ** (ಗು). ೧. ಕಲೆಹಾಕಿದ; ಒಟ್ಟುಗೂಡಿಸಿದ : ದೇವತಾನಿವಹದಲಿ ವರಮಂತ್ರಾವಳಿಗಳಲಿ ಸಂಭೃತದ್ರವ್ಯಾವಳಿಗಳಲಿ . . . ದೇವದೇವಾಧೀಶನೊಬ್ಬನೆ ಭಾವಿಸಲು ಪರಮಾತ್ಮನು (ನಿಭಾಗ. ೩-೧೫-೩). ೨. ಸೇರಿದ ; ಕೂಡಿದ : ಕುಚಯುಗಕುಂಭ ಸಂಭೃತಕುಂಕುಮಪಂಕಾಂಕಿತೆಯುಂ . . . ಎನಿಸಿ (ಸುಕುಮಾ. ೧೧-೧೫ ವ); ಸಂಭೃತ ಸುಮುಕ್ತಾಫಲನಿಭೋತ್ಕರ ಸೈಕತಾಳಿಮಯ . . . ಸುಮನಸ್ಸುತೆಯ ಕಂಡನು ರಾಮ ಜಾಹ್ನವಿಯ (ತೊರರಾ. ೧-೧೨-೯); ಉಚ್ಚಳದ್ರುಧಿರಶಂಬರ ಸಂಭೃತಮುರ್ವಿರಂಗದಶ್ವರಥ ಭಟೇಭಭೂರಿರವಸಂಗತಮೆಣ್ದೆಸೆಯಾಗೆ (ರಾಜಶೇ. ೬-೭೮). ೩. ಅಣಿಗೊಳಿಸಿದ; ಸಜ್ಜುಮಾಡಿದ : ಮಣಿಮಯಸ್ತಂಭಸಂಭೃತದೊಳತಿಸುರಚಿರಪ್ರವಾಳ ಜಳಾಂತರವಿರಾಜಮಾನತಳದೊಳ್ (ಸುಕುಮಾ. ೯-೧೭ ವ). ೪. ಇಟ್ಟ ; ಇರಿಸಿದ. ೫. ತುಂಬಿದ ; ಭರ್ತಿಮಾಡಿದ : ಪಂಚರತ್ನಗರ್ಭವಿವಿಧೌಷಧಿ ಸಂದರ್ಭ ಶಾತಕುಂಭಕುಂಭಸಂಭೃತಮಂಗಲಜಲಂಗಳಿಂದಂ ಮಿಸಿಸೆ (ಆದಿಪು. ೪-೩೫ ವ); ಗಂಧಸಲಿಲಸಂಭೃತವಿಶಾಳಹರಿನೀಲಭಂಗಾರಂಗಳಿಂ (ಮಲ್ಲಿಪು. ೯-೧೩೩). ೬. ಪಡೆದ; ಗಳಿಸಿದ. ೭. (ಶಬ್ದದಂತೆ) ಗಟ್ಟಿಯಾದ ; ಜೋರಾದ. ೮. ಒಯ್ದ; ಸಾಗಿಸಿದ. ೯. ಪೋಷಿಸಿದ. ೧೦. ಹೆಚ್ಚಾದ ; ಅಧಿಕವಾದ : ಆ ನಳಿನಧರನನು ನೋಡಿ ಸಂಭೃತಪುಳಕಪೂರದಲಿ . . . ನಲಿದು ಸ್ತುತಿಸುವ ನೂತನತ್ವವ ತಿಳಿದ ಪರಿ ವಿವರಿಸುವೆನು (ಕೃಷ್ಣಾಕಾ. ೨೬-೩೮). (ನಾ). ೧೧. ಸೇರಿದುದು ; ಕೂಡಿದುದು: ಅಂತು ನಯನಹೃದಯಸಂಪನ್ನಿಧಿಯಾದ ವೇದಿಯಿಂದವೊಳಗೆ ಚತುಃ ಕ್ರೋಶವಿಷ್ಕಂಭಸಂಭೃತಮಾಗಿ (ಚಂದ್ರಪ್ರ. ೧೫-೩೮ ವ); ಸ್ವರ್ಗದಂತೆ ಶುಭಸುರಭಿಸಂಭೃತಂ . . . ಆಗಿ ತಚ್ಛೈಲಮೆಸೆದಿರ್ದುದು (ಜೈಮಿಭಾ. ೧೦-೫). [ಸಂ.]

**ಸಂಭೃತತೋಷ** (ನಾ). ಸಂತೋಷದಿಂದ ಕೂಡಿರುವವನು ; ಹರ್ಷಚಿತ್ತ : ಆ ಮುನಿಸಂತತಿಯಂ ಕಾಣುತ್ತಮುಂಭವೃತ್ತಿಬುಧಂ ಸಂಭೃತತೋಷನಾದಂ (ಯಾದಚಂ. ೧೬-೨೨). [ಸಂ.]

**ಸಂಭೇದ** (ನಾ). ೧. ಒಡೆಯುವಿಕೆ ; ಭಾಗಮಾಡುವಿಕೆ; ಭಿನ್ನಗೊಳಿಸುವಿಕೆ. ೨. ಕೂಡಿಕೆ ; ಸೇರಿಕೆ. ೩. ನದಿಗಳು ಒಂದರೊಡನೊಂದು ಸೇರುವಿಕೆ ; ಕೂಡಲು; ಸಂಗಮ : "ಸಂಗಮಂ ಸಂಭೇದಂ" (ವಸ್ತುಕೋ. ೨೪-೧೨). ೪. ಅರಳುವಿಕೆ. ೫. ಏಕರೂಪತೆ ; ಒಂದೇ ತೆರನಾಗಿರುವಿಕೆ. ೬. ಮುಷ್ಟಿ ಬಿಗಿಯುವಿಕೆ . ೭. ಪ್ರತಿಭಟನೆ; ದಂಗೆ. ೮. (ಭೇದೋಪಾಯದಿಂದ) ಗುಂಪನ್ನು ಒಡೆಯುವವನು ; ಪ್ರತ್ಯೇಕಿಸುವವನು : ನಿಜವೈರಿವಾರಸಂಭೇದರನೂನಶೌರ್ಯರ್ (ಶಾಂತಿಪು. ೨-೪೨). [ಸಂ.]

**ಸಂಭೇದ್ಯ** (ನಾ). = ಸಂಭೇದ ೩ : "ಸಂಭೇದಃ, ಸಂಗಮಃ, ಸಂಭೇದ್ಯಂ – ಈ ೩ ಕೂಡಲ್" (ಹಲಾಯು. ೧೧೦-೪೬). [ಸಂ.]

**ಸಂಭೋಗ** (ನಾ). ೧. ಅನುಭವಿಸುವುದು ; ಉಪಭೋಗ. ೨. ಅತಿಶಯವಾದ ಆನಂದ; ಪರಮಸುಖ : ಸಕಲಸಿರಿಸಂಪತ್ತಿನ ಸಂಭೋಗವೆತ್ತ ! ಕಷ್ಟದ ಕಟ್ಟಿಗೆಯ ಹೊರೆಯೆತ್ತ ! (ಮೋಳಮಾ. ೬೯ ಪ್ರಸ್ತಾವನೆ). ೩. ಕಾಮ; ಬಯಕೆ; ಉತ್ಕಟೇಚ್ಛೆ : "ಕಾಮದೊಳು ಭುಕ್ತಿಯೊಳು ಸಂಭೋಗಮೆಂದೆನಿಕು" (ಮಂಗರಾ. ೧೪೩-೨೧). ೪. ಕೂಟ; ಸುರತ : ಸ್ವರ್ಗಲಕ್ಷ್ಮಿಯ ಮೇಲಲ್ಕಜೊಳಂದದೇಂ ನಲಿದನೋ ಸಂಭೋಗ ಸಮ್ಮರ್ದನಿರ್ದಯನಿಷ್ಪೀಡಿತ ದೇವವಾರವನಿತಾಬಿಂಬಾಧರಂ ಶ್ರೀಧರಂ (ಆದಿಪು. ೫-೭೧); ಕಳಿದ ತರಣಿಯ ಕಿರಣದಲಿ ನಿರ್ಮಲಿನ ಜಲದಲಿ ದುಗ್ಧಪಾನಂಗಳಲಿ ವರಯುವತಿಯರ ಸಂಭೋಗಾಂತರಂಗದಲಿ . . . ಆಯುಷ್ಯಾಭಿವೃದ್ಧಿಯ ಬೆಳವಿಗೆಗಳಹವು (ಕುವ್ಯಾಉ. ೩-೫೫). ೫. ತಿನ್ನುವಿಕೆ. ೬. ಆಹಾರ : "ಭುಕ್ತಿಯುಂ ಕಾಮಮುಂ ರತಿಸಂಭೋಗ ಸಮಾಹ್ವಯಂ" (ನಾನಾರ. ೧೬೪). ೭. ಸ್ವಾಮಿತ್ವ ; ಒಡೆತನ. ೮. ಬಳಕೆ; ವಿನಿಯೋಗ. ೯. [ಗಜಶಾ] ಆನೆಯ ಸೊಂಡಿಲಿನ ಬಹಿಷ್ಕರ್ಷ ಎಂಬ ಭಾಗದ ಮೇಲಿರುವ ಒಂದು ಅಂಗ. ೧೦. [ಕಾವ್ಯಮೀ] ಸಂಭೋಗ ಮತ್ತು ವಿಪ್ರಲಂಭ ಎಂಬ ಎರಡು ಬಗೆಯ ಶೃಂಗಾರಗಳಲ್ಲಿ ಒಂದು; ನಾಯಕ ನಾಯಿಕೆಯರು ಅನ್ಯೋನ್ಯವಾಗಿ ಅನುರಕ್ತರಾಗಿ ಭೋಗಿಸುವುದು: ಸ್ತ್ರೀಪುಂಸರತಿಸಮುತ್ಥವ್ಯಾಪಾರಂ ತಾನದಲ್ತೆ ಶೃಂಗಾರಂ ಮೇಳಾಪದಿನಗಲ್ಕೆಯಿಂ ಸುನಿರೂಪಿತ ಸಂಭೋಗ ವಿಪ್ರಲಂಭ ಸಮಾಖ್ಯಂ (ಕಾವ್ಯಾವ. ೭೯೯); ಮಹಾಕಾವ್ಯ . . . ಜಲ ಕ್ರೀಡೆ, ಮಧುಪಾನ, ಸಂಭೋಗ – ವಿಪ್ರಲಂಭ – ಶೃಂಗಾರ . . . ನಾಯಕನ ಜಯಪ್ರಾಪ್ತಿ, ಈ ಹದಿನೆಂಟು ವಿಷಯಗಳ ವರ್ಣನೆಗಳಿಂದ ಕೂಡಿದ್ದು (ಕೈಪಿಡಿ. ೧೮೦). [ಸಂ.]

**ಸಂಭೋಗಕಾಯ** (ನಾ). [ಬೌದ್ಧ] ಸಂತೋಷರೂಪವಾದ ಶರೀರವುಳ್ಳವನು; ಆನಂದವೇ ದೇಹವಾಗಿರುವವನು : ಮಹಾಯಾನದ ಪ್ರಕಾರ, ಬುದ್ಧನು ಮನುಷ್ಯ ಮಾತ್ರನಲ್ಲ, ದೇವತೆಗಳನ್ನು ಮೀರಿಸಿದ ದೇವ, ದೇವಾಧಿದೇವ, 'ಧರ್ಮಕಾಯ'ನಾದ ಆತನು ತನ್ನ ಬುದ್ಧಕ್ಷೇತ್ರದಲ್ಲಿ 'ಸಂಭೋಗಕಾಯ'ದಿಂದ ವಾಸಿಸುತ್ತ, ಲೋಕದ ಮೇಲಿನ ಅನುಗ್ರಹಕ್ಕಾಗಿ 'ನಿರ್ಮಾಣಕಾಯ'ದಿಂದ ಕಾಣಿಸಿಕೊಂಡು ತನ್ನ ಲೀಲೆಗಳನ್ನು ನಡಸುತ್ತಾನೆ (ಭಾರದ. ೨೦೫). [ಸಂ.]

**ಸಂಭೋಗಿಸು** (ಕ್ರಿ). ಕೂಡು; ನೆರೆ : ರಾಗದಿನಗಸುತೆಯೊಳ್ಸಂಭೋಗಿಸುತಿಪ್ಪಲ್ಲಿಗಗ್ನಿ ಬರೆ ನಾಣ್ಚಿಕೆಯಿಂದಾ ಗಿರಿಜೆ ಪೋಗೆ (ಸಮಪ. ೮-೫೪); ಆಕೆಯನಾಗಳಾ ಮನೆಯ ಮುಂದೆ ಸಂಭೋಗಿಸುತ್ತಿರಲು (ಚಿಬಪು. ೬೩-೧೩). [ಸಂಭೋಗ + - ಇಸು]

**ಸಂಭೋಗ್ಯ** (ನಾ). ಬಳಸಲು ಯೋಗ್ಯವಾದುದು; ಉಪಯೋಗಿಸಲು ತಕ್ಕುದು: ತ್ರಿದ್ವ್ಯೇಕದಿನಾಂತರಿತ ಬದರಾಕ್ಷಾಮಲಕ ಪ್ರಮಾಣಾಹಾರಂಗಳುಮಪ್ಪ ಮಿಥುನಂಗಳ್ಗೆ ಸಂ[ಪಾಠಾಂ. ಸು]ಭೋಗ್ಯಮಾಗಿ ಸಲೆ ಜಘನ್ಯಭೋಗಭೂಮಿಯ ಕಡೆಯ ಪಲಿತೋಪಮದೆಂಟನೆಯ ಭಾಗಮುಟಿದುದು (ಆದಿಪು. ೬-೪೮ ವ). [ಸಂ.]

**ಸಂಭೋಳಿ** 'ಸಂಬಳಿ[1]' ನೋ.

**ಸಂಭ್ರಮ** (ನಾ). ೧. ಸುತ್ತುವುದು ; ತಿರುಗುವುದು. ೨. ಉತ್ಸಾಹ ; ಸಡಗರ: ಅಂತಃಪುರದ್ವಾರದೇಶದೊಳಿರ್ದ ರಾಜಲೋಕಮೆಲ್ಲಮುಂ ಸಂಭ್ರಮಂಬೆರಸು ತೊಲಗಲೊರ್ವ ಪುರುಷಂ ಪ್ರಹೃಷ್ಟವದನಂ ತ್ವರಿತಗತಿಯಿಂ ಬಂದು ಪೊಡಮಟ್ಟು (ಕಾದಂಪೂ. ೪೨೫); ಎಲ್ಲಿ ನೋಡಲು ಶಿವಾಗಮಶಾಸ್ತ್ರವೋದುವರ ಸಲ್ಲಲಿತರವದ ಸಂಭ್ರಮವು (ಸೌಂದಪು. ೫-೯೭). ೩. ಗಡಿಬಿಡಿ; ತರಾತುರಿ : "ಸಂಭ್ರಮಃ, ತ್ವರಾ – ೨ ಆತುರಪಡುವಿಕೆ, ತ್ವರೆಪಡುವಿಕೆ" (ಸಿದ್ಧಾಂತಿ. ೩೬೫). ೪. ಅಧಿಕ ಸಂತೋಷ, -ಆನಂದ: ಅನ್ನೆಗಂ ತೊಳಲುತಬಸುವ ಬಳ್ಳಿ ಕಾಲ್ವೊಡಕಿದಂತರಸುಗಳ ಶಿರೋಮಣಿಗೆ ಸಂಭ್ರಮದೊಳ್ಕೆತಂದು ಬಿನ್ನಸಿದಂ ಚರನೊರ್ವನು (ಜೈಮಿಭಾ. ೨-೪೫). ೫. ಬೊಬ್ಬೆ ; ಆರ್ಭಟ: ನುಡಿಗೆ ತೆಱಪಿಲ್ಲೊಬ್ಬರೊಬ್ಬರು ಹೊಡೆವ ಕಡೆವಾ ಸಂಭ್ರಮಂಗಳು ಬಿಡದೆ ಕಾದಿತ್ತುಭಯಬಲವೊಂದೆರಡು ಗಳಿಗೆವರ (ಕಾಶಿರಾ. ೨೬-೪೦). ೬. ಹೆದರಿಕೆ ; ಭಯ : ಅತ್ಯಾದರಸ್ಸಂಭ್ರಮಮುತ್ಪಾದಯತಿಯೆಂಬುದು (ಪಂಪಭಾ. ೩-೪ ವ). ೭. ಗೌರವ ; ಸನ್ಮಾನ : "ಸಂಭ್ರಮಃ – ಆದರಂ" (ನೀತಿವಾ. ೨೬-೨೬). ೮. ತಲ್ಲಣ ; ತಳಮಳ: ಎನ್ನ ಬಗೆದ ಬಗೆಯನೊಡಂಬಡುಗುಮೊಡಂಬಡನೆಂಬ ಸಂಭ್ರಮದೊಳ್ . . . ಕುಮಾರನಂ ಸಾರೆವಂದು (ಆದಿಪು. ೮-೮ ವ). ೯. ದಿಗ್ಭ್ರಮೆ ; ಕಕ್ಕಾಬಿಕ್ಕಿ.

೧೦. ಗೊಂದಲ; ಕ್ಷೋಭೆ. ೧೧. ಅಜ್ಞಾನ ; ಮೌಢ್ಯ. ೧೨. ತಪ್ಪು; ದೋಷ. ೧೩. ವೈಭವ; ಆಡಂಬರ. ೧೪. ಹಬ್ಬ; ಉತ್ಸವ : ಅವರ ಆಗಮನವು ಸುಮಿತ್ರೆಗೆ ಒಂದು ಸಂಭ್ರಮವಾಗಿಯೇ ಪರಿಣಮಿಸಿತ್ತು (ಹೇಮಂತ. ೧೪). ೧೫. ಪುಳಕ ; ರೋಮಾಂಚನ. ೧೬. ತುಟಿ ; ಅಧರ. ೧೭. ಒಂದು ಬಗೆಯ ಮರ ; ಅಣಿಲೆ; ಹರೀತಕ : "ರೋಮಾಂಚನಮೋಷ್ಠವಿಭ್ರಮಣ ಶೀಘ್ರು ಹರೀತಕ ಸಂಭ್ರಮಾಹ್ವಯಂ" (ನಾನಾರ. ೬೪). [ಸಂ.]

**ಸಂಭ್ರಮಕಾಱ** (ನಾ). ಸಡಗರದಿಂದ ಕೂಡಿರುವವನು ; ಉತ್ಸಾಹಿ : ಅತ್ತಲಿತ್ತಲೆಡೆಯಾಡುವ ಸಂಭ್ರಮಕಾಱರಿಂ . . . ಕಿಕ್ಕಿಱಿಗಿಱಿದ ವಿವಾಹಮಂಟಪಮಂ . . . ನೋಡುತುಂ (ಸಂಬರ. ೬-೩೫). [ಸಂಭ್ರಮ + - ಕಾಱ]

**ಸಂಭ್ರಮಮಾನ್**, ಸಂಭ್ರಮವಾನ್ (ಕ್ರಿ). ಸಡಗರಿಸು ; ಉತ್ಸಾಹಗೊಳ್ಳು : ಆಗಳಾ ಸಂಭ್ರಮಮಾಂತ ಜನರ ಕಳಕಳದಿಂ ದಳಂಬಡೆದು ಭೋರ್ಗರೆದುಲಿವ ಕೊರಲ ಗಂಟೆಯುಮುರದ ಗೆಜ್ಜೆಯುಮಂದಂಬಡೆಯೆ (ಜಗವಿ. ೪-೮೦ ವ). **ಸಂಭ್ರಮವಾನ್** : ಮಾನಕ್ಕಿ ದೊರಕಲು ಸಂತಸದಿ ಕೊಂಡಧಿಕಸಂಭ್ರಮವಾಂತು ಪರಿತರಲ್ (ಬಸವು. ೨೭-೧೭). [ಸಂಭ್ರಮ + ಆನ್]

**ಸಂಭ್ರಮವಡೆ** (ಕ್ರಿ). ಸಡಗರಿಸು ; ಉತ್ಸಾಹಗೊಳ್ಳು : ಸಂಭ್ರಮವಡೆದ ಶೋಣಿತಪುರನಿಖಿಳಕುಟುಂಬವ ನೋಯಿಸದಂತೆ ಕುಂಭಾಂಡನಿಂದೆ ಕಾಣಿಸಿಕೊಂಬುದು (ಮೋಹತ. ೪೦-೮೮). [ಸಂಭ್ರಮ + ಪಡೆ]

**ಸಂಭ್ರಮವಾನ್** 'ಸಂಭ್ರಮಮಾನ್' ನೋ.

**ಸಂಭ್ರಮವೆಱು** (ಕ್ರಿ). = ಸಂಭ್ರಮವಡೆ : ಎಮ್ಮಂ ಕಂಡು ಸಂಭ್ರಮವೆತ್ತಿ . . . ದಂಡಪ್ರಣಾಮವನಿಕ್ಕಿ ವಂದಿಸುತ (ಬಸವು. ೨-೨೧). [ಸಂಭ್ರಮ + ಪೆಱು]

**ಸಂಭ್ರಮವೊಗೆ** (ಕ್ರಿ). ಸಂತೋಷವುಂಟಾಗು ; ಹಿಗ್ಗು : ಕಿನ್ನರಯ್ಯನನೊಡನೆ ಕೈವಿಡಿದೆತ್ತಿ ಕಲಕೇತೊಡೆಯನತಿಸಂಭ್ರಮವುವೊಗೆವುತಿರೆ ತೆಗೆದು ಬಿಗಿದಪ್ಪಿ (ಬಸವು. ೨೯-೩೩). [ಸಂಭ್ರಮ + ಒಗೆ]

**ಸಂಭ್ರಮಾಕುಳ** (ನಾ). ಆತುರದಿಂದ ಕೂಡಿದವನು : ಸಂಭ್ರಮಾಕುಳನುಮ ವನತೋತ್ತಮಾಂಗನುಮಾಗಿ ಬಂದು ಮುಂದೆ ನಿಂದು ಸೇನಾಗ್ರಗಣ್ಯಂ ಬೆಸನಂ ಪಾರುತ್ತುಮಿರೆ (ಶಾಂತಿಪು. ೫-೪೫ ವ). [ಸಂ. ಸಂಭ್ರಮಾಕುಲ]

**ಸಂಭ್ರಮಿ** (ನಾ). = ಸಂಭ್ರಮಾಕುಳ : ಬಱಿಯ ಸಂಭ್ರಮಿಗಳೊಡತಣದನುಭಾವ ಐವತ್ತೆರಡಕ್ಷರ ತಮ್ಮಲ್ಲಿ ತಾವು ಉಲಿದಂತೆ ಉಲಿದವು (ಅವಚಂ. ೧೪೦-೬೪೫). [ಸಂ. ಸಂಭ್ರಮಿನ್]

**ಸಂಭ್ರಮಿತ** (ಗು). ಸಡಗರಗೊಂಡ ; ಉತ್ಸಾಹದಿಂದ ಕೂಡಿದ : ಸಂಭ್ರಮಿತ ಸಖಿಯರ ನಡುವೆ ಸೀತೆ ತಾಂ . . . ಬಂದಳು (ಶ್ರೀರಾಮಾ. ೪೯-೫೫). [ಸಂ.]

**ಸಂಭ್ರಮಿಸು** (ಕ್ರಿ). ೧. ಉತ್ಸಾಹಗೊಳ್ಳು ; ಸಡಗರಿಸು : ಅಮರದುಂದುಭಿ ಮೊಳಗಲಿಳೆ ಸಂಭ್ರಮಿಸೆ (ನಳಚ. ೧-೩೨); ನನ್ನ ಬಳಿಗೊಂದು ಮೂಷಕ ಧಾವಿಸೆ ಗಜಮುಖನೈತಂದನೊ ಎನ್ನುತ ನಾ ಸಂಭ್ರಮಿಸುತ ಕಂಡೆನು ಸನ್ನುತನ (ಗಣೇಶ. ೧-೨೦). ೨. ವಿಜೃಂಭಿಸು ; ಶೋಭಿಸು : ತೋರಣಗಳುಪ್ಪರಿಸಿದವು ಬಂಗಾರಿ ಬಿಗಿದವು ಬಹಳ ಕದಳೀಸಾರದಲಿ ಸಂಭ್ರಮಿಸಿದವು ಸೌಧಾಳಿ ನಾಲ್ದೆಸೆಯ (ತೊರರಾ. ೧-೭-೧೩). ೩. ಆತುರಗೊಳ್ಳು ; ಅವಸರಪಡು : ಗರುಡನಿರ ಉಲಿಯದಿರಿ ಗಜಗಮನ ಸಂಭ್ರಮಿಸದಿರು (ಬಸವು. ೧-೪೪). ೪. ಕುತೂಹಲಗೊಳ್ಳು ; ಆಶ್ಚರ್ಯಹೊಂದು: ಅಂತೊಪ್ಪುವ . . . ವಿಚಿತ್ರದ ರಚನೆಯಿಂದಿರ್ಪ ವಸಂತಮಂಟಪದ ಸೊಂಪಂ ಕಂಡು ಸಂಭ್ರಮಿಸಿ ನೋಳ್ಪಾಗಳ್ (ಹಮ್ಮೀರ. ४-೧೯ ವ). ೫. ದಿಗ್ಭ್ರಮೆಗೊಳಗಾಗು; ಕಕ್ಕಾಬಿಕ್ಕಿಯಾಗು: ಸದ್ಗುರುಮೂರ್ತಿಯಂ ಕಾಣುತ್ತ ದಿಕ್ಕನೆ ಹೆದಱಿ ಸಂಭ್ರಮಿ[ಪಾಠಾಂ. ದಣಿ]ಸುತ್ತ ಬಸವನು . . . ನಮಿಸಿ (ಬಸವು. ४-೫೮). ೬. ಹೆದರು; ಭಯಪಡು: ವೃಷಭಾಧಿಪತಿ ಮಾಡುವ ಘನತಪಕೆ ಸಂಭ್ರಮಿಸದಿರಿ ನೀವು (ಬಸವು. ೨-೧೮). ೭. ಅಧಿಕವಾಗು; ಹೆಚ್ಚಾಗು : ನಯ ವಿನಯ ಭಯ ಸಭಕ್ತಿಯು ಸಂಭ್ರಮಿಸುತಿರಲು ಸನ್ನಿಧಿಗೆ ಬಂದಗ್ರಜಾತನ ಪನ್ನಳಿನದಲಿ ಬಿದ್ದು ಹೊರಳುತ್ತಂ (ಬಸವು. ४೫-೫೦). [ಸಂಭ್ರಮ + - ಇಸು]

**ಸಂಭ್ರಾಂತ** (ಗು). ೧. ಕಕ್ಕಾಬಿಕ್ಕಿಯಾದ ; ಗಲಿಬಿಲಿಗೊಂಡ. ೨. ಹೆದರಿದ ; ಭಯಪಟ್ಟ. (ನಾ). ೩. ಗಡಿಬಿಡಿ ; ಅವಸರ. ೪. [ನಾಟ್ಯ] ಸಂಭ್ರಮದಿಂದ ನಡೆಯುವುದನ್ನು ಸೂಚಿಸುವ ಒಂದು ಭಂಗಿ : ಆವಿದ್ಧಚಾರಿಯಂ ಪದೆದಾವರಿಸಿದ ಕಾಲ್ಗಳೊಡನೆ ಕಯ್ಯಲಪದ್ಮದೆ ವ್ಯಾವೃತ್ತಂ ಪರಿವೃತ್ತದೆ ತೀವಿ [ರೆ] ಪಿಂದೊಡೆಯೊಳೆಯ್ದೆ ಸಂಭ್ರಾಂತಾಖ್ಯಂ (ಲಾಸ್ಯರಂ. ४-೧೭೫). ೫. [ಜೈನ] ಒಂದು ನರಕಬಿಲದ ಹೆಸರು : ರತ್ನಪ್ರಭೆಯೊಳ್ ಸೀಮಂತಕ ನಿರಯ ರೌರವ ಭ್ರಾಂತ ಉದ್ಭ್ರಾಂತ ಸಂಭ್ರಾಂತ . . . ತ್ರಸಿತ ಅವಕ್ರಾಂತ ವಿಕ್ರಾಂತಾಖ್ಯ . . . ತ್ರಿಂಶಲ್ಲಕ್ಷಬಿಲಂಗಳಪ್ಪುವು (ತತ್ತ್ವಪ್ರ. ೧೨೦). [ಸಂ.]

**ಸಂಭ್ರಾಂತಿ** (ನಾ). ಗಾಬರಿ ; ಕಳವಳ : ಅವನ ಮುಖವು ಸಂಕೋಚದಿಂದಲೂ ಸಂಭ್ರಾಂತಿಯಿಂದಲೂ ಕೆಂಪಗಾಗಿತ್ತು (ವಂಶವೃ. ೩೯೪). [ಸಂ.]

**ಸಂಯತ** (ಗು). ೧. ನಿಗ್ರಹಿಸಿದ ; ಹತೋಟಿಗೆ ತಂದ. ೨. ಜೋಡಿಸಿದ ; ಸೇರಿಸಿದ : ಕಿರೀಟಮುಂ ಸಂಯತ ಕೇಶಾಳಿಯುಮಂತವು ಮೌಳಿ (ವಸ್ತುಕೋ. ೧೨೫-೪೭). ೩. ಸೆರೆಸಿಕ್ಕಿದ ; ವಶವಾದ. ೪. ಅಣಿಗೊಳಿಸಿದ. (ನಾ). ೫. ಇಂದ್ರಿಯಗಳನ್ನು ಜಯಿಸಿದವನು ; ಜಿತೇಂದ್ರಿಯ. ೬. ಶಿವನ ಹೆಸರುಗಳಲ್ಲಿ ಒಂದು. ೭. ಸೆರೆಸಿಕ್ಕಿದವನು ; ಬಂದಿ : "ಬದ್ಧಃ, ನದ್ಧಃ, ಸಂಯತಃ - ಈ ೩ ಕಟ್ಟುಪಟ್ಟವಂ" (ಹಲಾಯು. ೫೭-೧೮೫). ೮. [ಜೈನ] "ಪಂಚೇಂದ್ರಿಯಗಳನ್ನು ನಿಗ್ರಹಿಸಿ, ಕಷಾಯಗಳನ್ನು ಗೆದ್ದು ಪಂಚಸಮಿತಿ ಮೂರುಗುಪ್ತಿಗಳನ್ನು ಪಾಲಿಸುತ್ತಾ ದರ್ಶನ, ಜ್ಞಾನಗಳಿಂದ ಪರಿಪೂರ್ಣನಾದ ಶ್ರಮಣ ; ಪ್ರಾಣಸಂಯಮ ಮತ್ತು ಇಂದ್ರಿಯಸಂಯಮಗಳನ್ನು ಪಾಲಿಸುವವನು ; ಮುನಿ" (ಜೈನಕೋ. ೨೬೬): ಅಲ್ಲಿ ದರ್ಶನವಿಶುದ್ಧನುಂ ಶೀಲಸಂಪನ್ನನುಮಪ್ಪ ಸಂಯತನುತ್ತಮಪಾತ್ರಂ (ಆದಿಪು. ೧೦-೯ ವ); ಸಮಸ್ತಾಗಮಪದಾರ್ಥಾವಧಾರಣಗುಣಸಮೇತನುಮಪ್ಪಗ್ನಿಭೂತಿಸಂಯತಂಗೆ ಸಮರ್ಪಣಂಗೆಯ್ದು . . . ಪೂರ್ವಾಭಿಮುಖವಾಗಿ (ಸುಕುಮಾ. ೮-೫೮ ವ). [ಸಂ.]

**ಸಂಯತ್ತು** (ನಾ). ಕಾಳಗ ; ಯುದ್ಧ : "ಸಂಗ್ರಾಮಃ . . . ಸಮುದಯಃ, ಸಂಯತ್ . . . ವಿಗ್ರಹಃ - ಈ ೩೫ ಕಾಳೆಗಂ" (ಹಲಾಯು. ೭೫-೨೯೯); ವಿಯತ್, ಸಂಯತ್, ವಿದ್ಯುತ್, ಜಗತ್ . . . ಇವರ್ಕೆ ದ್ವಿತ್ವದಿಂ ಉತ್ವಮುಂಟು (ಶಮದ. ೮೭ ಅಡಿಟಿ). [ಸಂ. ಸಂಯತ್]

**ಸಂಯಮ** (ನಾ). ೧. ನಿಗ್ರಹ ; ಹತೋಟಿ. ೨. ಮನೋನಿಗ್ರಹ : ತುಳ್ಕಿ ಬಂದಳ್ಕರೆಯ ದುಕ್ಕಮಂ ಕಾಣಿಸದ ಸಂಯಮದ ಶೀಘ್ರತೆಯಿನಲ್ಲಿಂದೆ ಬೀಳ್ಕೊಂಡನ್ (ಶ್ರೀರಾಮಾ. ೮೭-೨೧೯). ೩. ಏಕಾಗ್ರತೆ : ಚದುರಿರುವ ಮನಸ್ಸನ್ನು ಒಟ್ಟುಗೂಡಿಸುವ ಉಪಾಯವೊಂದುಂಟು. ಅದರ ಹೆಸರು ಸಂಯಮ (ಮಹಾಣ. ೫೭). ೪. ತಾಳ್ಮೆ ; ಸಹನೆ. ೫. ಪ್ರಯತ್ನ ; ಶ್ರಮ. ೬. ಪ್ರಳಯ ; ನಾಶ. ೭. ಮನುಷ್ಯತ್ವ ; ಮಾನವೀಯತೆ: ಎನಸುಂ ನೀನೇಕಾಶ್ರಮಕನುಚಿತವಹ ಗುಣದೆ ಜಂತುಗಳ ತವಿಸದ ಪುಟ್ಟಿನ ಸಂಯಮಗುಣಮಂ ಚಂದನತರುವಂ ಕೃಷ್ಣಸರ್ಪಶಿಶುವೋಲ್ ಕಿಡಿಪೈ (ಶಾಕುಂತ. ೧೦೫-೧೮೧). ೮. ಹರಕೆ. ೯. [ಜೈನ] ಶ್ರಮಣನು ಆಚರಿಸಬೇಕಾದ ಕ್ಷಮೆ, ಮಾರ್ದವ, ಆರ್ಜವ, ಸತ್ಯ, ಶೌಚ, ಸಂಯಮ, ತಪಸ್ಸು, ತ್ಯಾಗ, ಅಕಿಂಚನ್ಯ ಮತ್ತು ಬ್ರಹ್ಮಚರ್ಯಗಳೆಂಬ ಹತ್ತು ಬಗೆಯ ಧರ್ಮಗಳಲ್ಲಿ ಒಂದು : ಉತ್ತಮ ಕ್ಷಮಾ ಮಾರ್ದವಾರ್ಜವ ಸತ್ಯ ಶೌಚ ಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯ ಪರ್ಯಾಯ ಪರ್ಯಾಪ್ತ ದಶಧರ್ಮಂಗಳಂ ಕೈಕೊಂಡು (ಆದಿಪು. ೬-೩೦ ವ); ಅವರ ಗುಣಮವರ ಸಂಯಮಮವರ ತಪಶ್ಚರಣಮೆಂಬುದವರಿವರಳವಲ್ಲ (ಯಶೋಚ. ೧-೪೫). ೧೦. ಜೈನಗೃಹಸ್ಥನು ನಿತ್ಯವೂ ಆಚರಿಸಬೇಕಾದ ಆರು ಬಗೆಯ ಕರ್ಮಗಳಲ್ಲಿ ಒಂದು : ಇಜ್ಯೆಯುಂ ವಾರ್ತೆಯುಂ ದತ್ತಿಯುಂ ಸ್ವಾಧ್ಯಾಯಮುಂ ಸಂಯಮಮುಂ ತಪಮುಮೆಂಬೀ ಆರ್ಯಾಷಟ್ಕರ್ಮಂಗಳ್ ಶ್ರಾವಕಜನಕ್ಕೆ ಕುಲಧರ್ಮಂಗಳ್ (ಚಾವುಂಪು. ೨೦೧); ಇಜ್ಯೆ ವಾರ್ತೆ ದತ್ತಿ ಸ್ವಾಧ್ಯಾಯ ಸಂಯಮ ತಪಮೆಂದಾರ್ಯಕರ್ಮಮಾಱುತೆಱನಕ್ಕುಂ (ಸುಕುಮಾ. ೬-೨೫ ವ). [ಸಂ.]

**ಸಂಯಮನ** (ನಾ). ೧. ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವುದು; ಮನೋನಿಗ್ರಹ : ಇಹಪರದ ಭೋಗದ ವಿರಕ್ತಿಯಲಿಹುದೆ ತಾ ಯಮ . . .

ಸಂಯಮನವದ ನಿಗ್ರಹಿಸಿ ವಶವನು ಮಾಡೆ ಪ್ರತ್ಯಾಹಾರವೆನಿಸುವದು (ಅಮೃತ. ೬-೭೯). ೨. ಅಂಕೆಗೊಳಪಡಿಸುವುದು. ೩. ನಿಗ್ರಹಿಸುವವನು ; ದಮನ ಮಾಡುವವನು: ೪. ನಾಲ್ಕು ಮನೆಗಳಿಂದಾದ ಚೌಕ ; ಚತುಶ್ಶಾಲೆ. [ಸಂ.]

**ಸಂಯಮನಕರಣ** (ನಾ). [ಕಾಮಶಾ]ಸಂಭೋಗದಲ್ಲಿ ಒಂದು ಬಗೆ : ಕನ್ನೆ ಮಗುಳ್ದಂ ಮಲಗಿ ತನ್ನೆರಡು ಕಾಲ ಬೆರಳಂ ನೆಗಪಿ ಪಿಡಿಯೆ ಪುರುಷಂ ಕರವನು ಮುನ್ನವಳ ತೊಡೆಯೆಡೆಯೊಳಂ ನಡಪಿ ಕೊರಲ್ಪಿಡಿವುತಂ ನೆರೆಯಲದು ಸಂಯ[ಪಾಠಾಂ. ಶಲ್ಯ]ಮನಕರಣವು (ಜನವ. ೯-೩೫). [ಸಂ.]

**ಸಂಯಮಮಂತ್ರ** (ನಾ). [ಜೈನ] ಐದು ಬಗೆಯ ಮಂತ್ರಗಳಲ್ಲಿ ಒಂದು: ಸಂಯಮಮಂತ್ರಂ ಸಕಳನಿವೃತ್ತಿಗೆ ಹೇತು (ಚಾವುಂಪು. ೨೨೧). [ಸಂ.]

**ಸಂಯಮಿ** (ನಾ). ೧. ಇಂದ್ರಿಯಗಳನ್ನು ಜಯಿಸಿದವನು ; ಜಿತೇಂದ್ರಿಯ. ೨. ಮುನಿ ; ಋಷಿ : ಸಂಯಮದಿಂದಂ ತಪದಿಂದಮುಪಜಿತಾಘಮನುಪಶಮಿಸುವ ಪರಮಮುನಿಯೆ ಸಂಯಮಿಯಕ್ಕುಂ (ಅಜಿಪು. ೬-೫೯); ಸಂಯಮಿಗಳುಂ ಬೆಚ್ಚಿ ಕಣ್ಣಾಗಿರೆ, ಚಿಕೀರ್ಷೆಯಾವೇಗದಾ ವಹ್ನಿಫಣಿಲೇಲಿಹ್ಯಮಾನಜಿಹ್ವೆಗಳಂತೆ . . . ಧಗಧಗಿಸುತ (ಶ್ರೀರಾಮಾ. ೧೩-೩೩೦). [ಸಂ. ಸಂಯಮಿನ್]

**ಸಂಯಮಿಸು** (ಕ್ರಿ). ಅಂಕೆಗೆ ಒಳಪಡಿಸು ; ಹತೋಟಿಗೆ ತರು : ರಾಗೋದ್ರೇಕವೇ ಮುಖ್ಯಲಕ್ಷಣವಾದ ಪಾಶವಾತ್ಮವನ್ನು ತಪಸ್ಸಿನಿಂದ ಸಂಯಮಿಸಿದರೆ ದಿವ್ಯಾತ್ಮ ಬೆಳಗುತ್ತದೆ (ಇಸ್ಲಾಂಸಂ. ೨೬೨). [ಸಂಯಮನ + - ಇಸು$_3$]

**ಸಂಯಾತ್ರೆ** (ನಾ). ೧. ಕಡಲಿನ ಮೇಲೆ ಮಾಡುವ ಪ್ರಯಾಣ ; ಸಮುದ್ರಯಾನ. ೨. ಜೊತೆಯಾಗಿ ಪ್ರಯಾಣ ಮಾಡುವುದು. [ಸಂ ಸಂಯಾತ್ರಾ]

**ಸಂಯಾಮ** (ನಾ). ೧. ನಿಲ್ಲಿಸುವುದು ; ತಡೆಯುವುದು : "ಸಂಯಾಮಃ, ಸಂಯಮಃ - ೨ ಚೆನ್ನಾಗಿ ಸಾಕುಮಾಡಿ ನಿಲ್ಲಿಸಿಬಿಡುವುದು" (ಸಿದ್ಧಾಂತಿ. ೩೬೨). ೨. ನಿಗ್ರಹ; ಅಂಕೆ. [ಸಂ.]

**ಸಂಯುಕ್ತ** (ಗು). ೧. ಸೇರಿದ ; ಕೂಡಿದ. ೨. ಮಿಶ್ರವಾದ ; ಬೆರಕೆಗೊಂಡ. ೩. ಗಳಿಸಿದ ; ಪಡೆದ. ೪. ಸಂಬಂಧಿಸಿದ. (ನಾ). ೫. ಕೂಡಿದವನು ; ಸೇರಿದವನು : ಸೂರಿಗಳಿಗತಿಮೂರ್ಖರಿಗೆ ಗಂಭೀರರಿಗೆ ಭಂಡರಿಗೆ ವೇದಾಚಾರ ಸಂಯುಕ್ತರಿಗನಾಚಾರಪ್ರಸಕ್ತರಿಗೆ . . . ಎತ್ತಣ ಸೇರುವೆಗಳ್ಕೆ (ಕುವ್ಯಾಆ. ೬-೩೪). ೬. ಬೆರಕೆಯಾದುದು ; ಮಿಶ್ರಣ : ಇದೊಂದನ್ನು ಪಡೆಯಲು ನಾವು - ಇದು ಸೇರಿದ ಅಂಗಾರದ ಸಂಯುಕ್ತಗಳನ್ನು ಕಾಯಿಸಬೇಕು (ಬಾಲಪ್ರ. II. ೬೯೭). ೭. = ಸಂಯುಕ್ತ ಕ್ರಿಯಾಪದ : ಧಾತುಗಳಲ್ಲಿ ಸಹಜ, ಪ್ರತ್ಯಯಾಂತ (ವ್ಯುತ್ಪನ್ನ), ಸಂಯುಕ್ತ (ಸಮಗ್ರ) ಎಂದು ಮೂರು ವಿಧಗಳಿವೆ (ಕೃಪಿಡಿ. ೪೨). [ಸಂ.]

**ಸಂಯುಕ್ತಕ್ರಿಯಾಪದ** (ನಾ). [ವ್ಯಾಕ] "ಎರಡು ಅಥವಾ ಹಲವು ಧಾತುಗಳ ಬೇರೆ ಬೇರೆ ಕ್ರಿಯಾರೂಪಗಳು ಒಟ್ಟು ಸೇರಿ ಆಗುವ ಕ್ರಿಯಾಪದಕ್ಕೆ ಸಂಯುಕ್ತಕ್ರಿಯಾಪದವೆಂದು ಹೆಸರು" (ಮಧ್ಯಮ. ೧೦೯). [ಸಂ.]

**ಸಂಯುಕ್ತಪ್ರಕಟನೆ** (ನಾ). ವ್ಯಕ್ತಿಗಳು ಅಥವಾ ಸಂಘ ಮುಂತಾದುವುಗಳು ಒಟ್ಟಾಗಿ ಕೊಡುವ ಹೇಳಿಕೆ, - ಪ್ರಕಟಣೆ ; ಜಂಟಿಹೇಳಿಕೆ : ಗೋಕಾಕ್ ವರದಿಯನ್ನು ಕುರಿತು ಸಂಯುಕ್ತಪ್ರಕಟನೆಯನ್ನು ಅವರಿಬ್ಬರೂ ಕೊಟ್ಟರು (ರೂಢಿ). [ಸಂ. ಸಂಯುಕ್ತಪ್ರಕಟನ]

**ಸಂಯುಕ್ತವ್ಯಂಜನ** (ನಾ). [ವ್ಯಾಕ] ಒಂದು ವ್ಯಂಜನದೊಂದಿಗೆ ಸೇರಿದ ವ್ಯಂಜನ : ಹಳಗನ್ನಡದಲ್ಲಿ ರೇಫಯುಕ್ತವಾಗಿದ್ದ ಒತ್ತಕ್ಷರಗಳು ಈಗ ಸಜಾತೀಯ ಸಂಯುಕ್ತವ್ಯಂಜನಗಳಾಗಿವೆ : ಉರ್ದು, ಪರ್ದು . . . ಉದ್ದು, ಹದ್ದು ಈ ರೀತಿಯಾಗಿವೆ (ಕೃಪಿಡಿ. ೬). [ಸಂ.]

**ಸಂಯುಕ್ತಾಕ್ಷರ** (ನಾ). [ವ್ಯಾಕ] ಒತ್ತುಳ್ಳ ಅಕ್ಷರ ; ಒತ್ತಕ್ಷರ : ಎರಡು ಅಥವಾ ಅದಕ್ಕಿಂತ ಹೆಚ್ಚಾದ ಸಂಖ್ಯೆಯ ವ್ಯಂಜನಗಳು ಒಟ್ಟಿಗೆ ಕೂಡಿಕೊಂಡಿದ್ದರೆ ಸಂಯುಕ್ತಾಕ್ಷರ ಅಥವಾ ಒತ್ತಕ್ಷರ ಎಂದು ಹೆಸರು (ಮಧ್ಯಮ. ೧೫). [ಸಂ.]

**ಸಂಯುಗ** (ನಾ). ೧. ಸೇರಿಕೆ ; ಕೂಡಿಕೆ. ೨. ಮಿಶ್ರಣ. ೩. ಕಾಳಗ; ಯುದ್ಧ : ನಿಮ್ಮಯ ಮಲ್ಲಡಿ . . . ಕೊಂತದ ಧಾರೆಗಳುರ್ಚೆ ಸಂಯುಗಾವನಿತಳದೊಳ್ ವಿಧಾತ್ರ ವಶದಿಂ ನಿಮಗಂ ನಡೆವಂತುಟಾದುದೇ (ಗದಾಯು. ೪-೧೮); ಚಟುಳ ಹಯಸಂಕುಳವ ಕಾಲಾಳುಗಳ ಸಂದಣಿಯ ಸ್ಫುಟವಱಿಯಬಾರದವೊಲರೆದಾರ್ಭಟಿಸಿದನು . . . ಸಂಯುಗದಲಿ ಸಮಿರಸುತ (ತೊರರಾ. ೫-೫-೭೨). [ಸಂ.]

**ಸಂಯುತ** (ಗು). ೧. ಸೇರಿದ ; ಕೂಡಿಕೊಂಡ. ೨. ಬೆರಸಲ್ಪಟ್ಟ ; ಮಿಶ್ರವಾದ. ೩. ಸೇರಿಸಿದ; ಕೂಡಿಸಿದ. ೪. ರಾಶಿಹಾಕಿದ. ೫. ಅಣಿಯಾದ ; ಸಜ್ಜುಗೊಂಡ. (ನಾ). ೬. [ನಾಟ್ಯ] ಹಸ್ತಾಭಿನಯದಲ್ಲಿ ಒಂದು ಬಗೆ : ಸಂಯುತಾ ಸಂಯುತಮೆಂಬಱುವತ್ತುನಾಲ್ಕು ಹಸ್ತದ ತೆಱನೊಳ್ ತೆಱನಱಿದು ಮೆಱೆದಳವಳಭಿನಯಮಂ (ಮಲ್ಲಿಪು. ೮-೫೧). [ಸಂ.]

**ಸಂಯುತಹಸ್ತ** (ನಾ). [ನಾಟ್ಯ] (ಅಂಜಲಿ, ಕಪೋತ, ಕರ್ಕಟ ಮುಂತಾದ ಹಸ್ತಾಭಿನಯವನ್ನು ತೋರಿಸುವಾಗಿನ) ಜೋಡಿಸಿದ ಕೈ : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತಹಸ್ತಗಳು ಯಾವುವೆಂದರೆ - ೧. ಅಂಜಲಿ, ೨. ಕಪೋತ . . . ೧೩. ವರ್ಧಮಾನ (ಅಭಾನ್ಯ. ೪೮). [ಸಂ.]

**ಸಂಯುತೋರುಕರಣ** (ನಾ). [ಕಾಮಶಾ] ಸಂಭೋಗದಲ್ಲಿ ಒಂದು ಬಗೆ : ತರುಣಿ ಮಗುಳ್ದು ಮಲಗಿ ತಾನೆ ಹರಿಣಿಯಾದೊಡೊಲ್ದು ನೆರೆವ ಪುರುಷನಶ್ವನಾಗೆ ವೃಷನದಾಗಲಱಿವಿನಿಂ ಎರಡು ತೊಡೆಯನೊಂದುಗೂಡಿ ಸುರತಮಾಯಲದುವೆ . . . ಸಂಯುತೋರು [ಪಾಠಾಂ. ಸಂಯತೋಪ, ಸಂಹ್ಯತೋಪ] ಕರಣವು (ಜನವ. ೯-೪). [ಸಂ.]

**ಸಂಯೋಗ** (ನಾ). ೧. ಒಂದಾಗುವಿಕೆ ; ಕೂಡಿಕೆ : ಅನಲಾನಿಲಸಂಯೋಗ ಮುರಿಪ ದಿರ್ಕುಮೆ ಪಗೆಯಂ (ಗದಾಯು. ೧-೬೬); ಉರಿ ಕರ್ಪೂರ ಸಂಯೋಗ ನಿಷ್ಪತ್ತಿಯಾದಲ್ಲಿ ಮರಳಿ ರೂಪಿಸಿ ಪಿಡಿಯಲುಂಟೆ ಅಯ್ಯಾ (ಅಪಿಂಡೇ. ೩೪೧-೫೬). ೨. ಬಾಂಧವ್ಯ ; ನಂಟು : ಎರಡೂ ಪಂಗಡಗಳಲ್ಲಿಯ ದೇವ ದೇವತೆಗಳಲ್ಲಿ ಸಂಯೋಗ ತರಬೇಕೆಂದು ಆಯಾ ಪಂಗಡಗಳ ಪ್ರಮುಖರು ಪ್ರಯತ್ನಮಾಡಿದಂತೆ ಕಂಡುಬರುವುದು (ಕನ್ನಜಾ. ೧೫೧). ೩. ಸಹವಾಸ ; ಒಡನಾಟ : ಸರ್ಪನ ಸಂಯೋಗ ಜ್ಯೋತಿಯ ಪತಂಗನ ಬೆಸನದಂತೆ (ಬಸವ. ೮೧೨); ಅಲ್ಲಮಪ್ರಭು . . . ಶ್ರೀಗುರುವಿನ ಸಂಯೋಗ ಚಿರಕಾಲ ಪ್ರಾಪ್ತವಾಯಿತು ಎಂದು ಸಮಾಧಾನಪಟ್ಟುಕೊಳ್ಳುತ್ತಾನೆ (ಶೂನ್ಯಕು. ೧೪೯). ೪. ಐಕ್ಯವಾಗುವಿಕೆ ; ಲೀನ: ತತ್ಪದವೇ ಲಿಂಗ ತ್ವಪದವೇ ಅಂಗ ಅಸಿಪದವೇ ಲಿಂಗಾಂಗ ಸಂಯೋಗ (ಸಿದ್ಧೇವ. ೬-೧೬); ಶಿವನು ತಾನೇ ಲಿಂಗಮಾತ್ಮನೆಂಬುದೆಯಂಗವವಱ ಸಮ್ಯಗ್ಯೋಗವೆನಿಪುದೇ ಸಂಯೋಗ (ಲಶಿಚಿಂ. ೫೧-೧). ೫. ಕೂಟ ; ಸಂಭೋಗ : ಬಹಳ ಸಂಯೋಗದಿಂದಲೂ ವಿದಾಹಗಳಾದ ವಸ್ತುಗಳ ಸೇವನೆಯಿಂದಲೂ ಆ ರಕ್ತಪೈತ್ಯವೆಂಬ ದುಷ್ಟರಕ್ತವು ಅಕಾಲದಲ್ಲಿ ಯೋನಿಯಲ್ಲಿ ಸ್ರವಿಸುವುದು (ಸಕವ್ಯ. ೧೯೪). ೬. [ಗಣಿತ] ಕೂಡುವಿಕೆ ; ಸಂಕಲನ : ಯುತಂ, ಯುಕ್ತಂ, ಮಿಶ್ರಂ, ಸಮ್ಮಿಶ್ರಂ, ಸಂಯೋಗಂ . . . ಬತಂ ಇಂತಿನಿತುಂ ಕೂಡೂದಕ್ಕೆ ಹೆಸರು (ವ್ಯವಹಾ. ೧೧-೧೯). ೭. [ರಾಜನೀ] ಇಬ್ಬರು ರಾಜರ ನಡುವೆ ಒಂದೇ ಉದ್ದೇಶಕ್ಕಾಗಿ ನಡೆಯುವ ರಾಜಿ : ಅರಿವಿಜಿಗೀಷುಗಳೇಕಾರ್ಥಸಿದ್ಧಿಯಂ ಕುಱಿತು ನಡೆವ ಸಂಧಿ ಸಂಯೋಗಮೆಂಬುದಕ್ಕುಂ (ಪಂಚತಂ. ೨೨೦-೧೩). ೮. [ಯೋಗ] ಪರಮಾತ್ಮನಲ್ಲಿ ಐಕ್ಯಹೊಂದುವುದು; ಸಾಯುಜ್ಯವನ್ನು ಪಡೆಯುವುದು : ಪುರುಷ ಪುರುಷೋತ್ತಮರ ಸಂಯೋಗವನ್ನು ಯೋಗದರ್ಶನ ಹೇಳುತ್ತದೆ (ಭಾರದ. ೧೨೬). ೯. [ದ್ವೈತ] ನಲವತ್ತು ಗುಣಗಳಲ್ಲಿ ಒಂದು : ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ, ಪರಿಮಾಣ, ಸಂಯೋಗ . . . ಎಂದು, ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಸಾ. ೨೭೫). ೧೦. [ಜ್ಯೋತಿ] ಎರಡು ಗ್ರಹಗಳ ಕೂಟ. [ಸಂ.]

**ಸಂಯೋಗಾಕ್ಷರ** (ನಾ). = ಸಂಯುಕ್ತಾಕ್ಷರ : ಬೆರಸಿರೆ ಪುಂ ಸಂಯೋಗಾಕ್ಷರಂಗಳೇಕಸ್ವರಂಗಳಿಂ ಸುಪ್ರಾಸಂ ನೆರೆದು ವಿಪರ್ಯಾಸಕ್ರಮಮಿರ ಸತತಂ ಶಾಂತಪೂರ್ವಮಕ್ಕುಂ ಪ್ರಾಸಂ (ಕವಿರಾ. ೨-೩೫); ಅಂತಕಾರಾದಿ ಹಕಾರಾಂತ ಸ್ವರ ವ್ಯಂಜನಭೇದಭಿನ್ನಶುದ್ಧಾಕ್ಷರಂಗಳುಮಂ ಯೋಗವಾಹ ಚತುಷ್ಕಮುಮಂ ಸಂಯೋಗಾಕ್ಷರಂಗಳುಮಂ ಬ್ರಾಹ್ಮಿಗೆ ದಕ್ಷಿಣಹಸ್ತದೊಳುಪದೇಶಂಗೆಯ್ದು (ಆದಿಪು. ೮-೫೯ ವ). [ಸಂ.]

**ಸಂಯೋಗಿಸು** (ಕ್ರಿ). ೧. ಕೂಡಿಸು ; ಸೇರಿಸು : (ಕ). ೨. ನೆರೆ ; ಸಂಭೋಗಿಸು: (ಕ). [ಸಂಯೋಗ + - ಇಸು₃]

**ಸಂಯೋಜಕ** (ಗು). ೧. ಕೂಡಿಸುವ ; ಸೇರಿಸುವ : ಈ ಕೇಸರದಂಡವನ್ನು ಮತ್ತು ಈ ಪರಾಗಕೋಶವನ್ನು ಒಂದು ಸಂಯೋಜಕ ಅಂಗದಿಂದ (Connective) ಕಟ್ಟಿದೆ (ಸಸ್ಯಶಾ. ೫೯). (ನಾ). ೨. ಏರ್ಪಡಿಸುವವನು ; ವ್ಯವಸ್ಥಾಪಕ : ಈ ಕಾರ್ಯಕ್ರಮದ ಸಂಯೋಜಕರು ಯಾರು? (ರೂಢಿ). [ಸಂ.]

**ಸಂಯೋಜನ** (ನಾ). ಸೇರಿಸುವಿಕೆ ; ಕೂಡಿಸುವಿಕೆ : ಶಲ್ಯಗೆ ಹೇಳಿದನು ಸಾರಥ್ಯ ಸಂಯೋಜನಸಮಾಹಿತವ (ಕುವ್ಯಾಕ. ೬-೧). [ಸಂ.]

**ಸಂಯೋಜನೆ** (ನಾ). ೧. ಒಟ್ಟಿಗೆ ಸೇರಿಸುವುದು. ೨. ಏರ್ಪಡಿಸುವಿಕೆ; ವ್ಯವಸ್ಥೆಗೊಳಿಸುವಿಕೆ. [ಸಂ. ಸಂಯೋಜನ]

**ಸಂಯೋಜಿತ** (ಗು). ೧. ಕೂಡಿಕೊಂಡ ; ಹೊಂದಿಕೊಂಡ : ಸಾಮಾನ್ಯಶಿಕ್ಷಣಕ್ಕೆ ವಿಜ್ಞಾನ ಸಂಯೋಜಿತಸ್ವರೂಪದಲ್ಲಿರುವುದು ಅಗತ್ಯ (ಶಿಕ್ಷದ. ೧೬೦); ಎರಡಡಿ ಉದ್ದದ ತೊಟ್ಟಿಗೆ ಅಂಟಿಕೊಂಡಿದ್ದಂತೆ ದೊಡ್ಡದೊಂದು ಸಂಯೋಜಿತ ಪತ್ರ (ಹಸುಹೂ. ೪೧). ೨. ಏರ್ಪಡಿಸಿದ ; ವ್ಯವಸ್ಥೆಗೊಳಿಸಿದ. [ಸಂ.]

**ಸಂಯೋಜಿತವಾಕ್ಯ** (ನಾ). [ವ್ಯಾಕ] "ಸ್ವತಂತ್ರವಾಗಿ ನಿಲ್ಲಬಲ್ಲ ಎರಡು ಅಥವಾ ಅನೇಕ ಉಪವಾಕ್ಯಗಳು ಸೇರಿ ಒಂದು ವಾಕ್ಯವಾಗಿದ್ದರೆ ಅದಕ್ಕೆ ಸಂಯೋಜಿತವಾಕ್ಯವೆಂದು ಹೆಸರು" (ಮಧ್ಯಮ. ೧೯೭). [ಸಂ.]

**ಸಂಯೋಜಿಸು** (ಕ್ರಿ). ೧. ಕೂಡಿಸು ; ಸೇರಿಸು : ಕವಿಯ ಜೀವನ - ವ್ಯಕ್ತಿತ್ವಗಳಿಗೂ ಅವನ ಗ್ರಂಥಗಳಿಗೂ ನಡುವೆ ಒಂದು ಸೇತುವೆಯನ್ನು ಕಟ್ಟಿ ಎರಡನ್ನೂ ಸಂಯೋಜಿಸಬಹುದು (ತವನಿ. ೧೯); ಸುಕವಿಯು ಅಲಕ್ಷ್ಯಕ್ರಮಧ್ವನಿಯ ಆತ್ಮವನ್ನು ತನ್ನ ಕಾವ್ಯದಲ್ಲಿ ಸಂಯೋಜಿಸಿಕೊಂಡರೆ ಸಾರ್ಥಕ್ಯ ಬರುವುದು (ಧ್ವನ್ಯಾಲೋ. ೮೭). ೨. ಏರ್ಪಡಿಸು ; ವ್ಯವಸ್ಥೆಗೊಳಿಸು : ವಾರ್ಷಿಕೋತ್ಸವಕ್ಕೆ ಒಂದು ನಾಟಕವನ್ನು ಸಂಯೋಜಿಸಲಾಗಿತ್ತು (ರೂಢಿ). [ಸಂಯೋಜನ + - ಇಸು₃]

**ಸಂರಂಭ** (ನಾ). ೧. ಪ್ರಾರಂಭ ; ಆರಂಭ. ೨. (ಹೆದರಿಕೆ, ಸಂತೋಷ ಮುಂತಾದುವುಗಳಿಂದಾಗುವ) ಗಲಿಬಿಲಿ ; ಗೊಂದಲ. **೩.** ಸಿಟ್ಟು ; ಕೋಪ. ೪. ತೀವ್ರತೆ ; ಗಾಢತೆ. **೫.** ದ್ವೇಷ; ಮತ್ಸರ : ಮೊಗಲ್ ರಾಜ್ಯ ಒಡೆದದ್ದೂ ಅದರ ಶಾಖೆಗಳಿಗೂ ಇತರ ರಾಜ್ಯಗಳಿಗೂ ಕಲಹಗಳಾಗುತ್ತಿದ್ದದ್ದೂ ಪ್ರಸಿದ್ಧವಾದ ಸಂಗತಿ. ಆ ನಡುವೆ ಎದ್ದು ಇಳಿದುವು ಮಹಾರಾಷ್ಟ್ರರ ಮತ್ತು ಸಿಕ್ಕರ ಸಂರಂಭಗಳು (ರಾಜ್ಯಶಾ. ೧೧). ೬. ಆವೇಶ ; ಆಟೋಪ : "ಆವೇಶಃ, (ಸಂವೇಗಃ), ಸಂರಂಭಃ, ಸಂಭ್ರಮಃ, ಆಟೋಪಃ - ಈ ೫ ಸಂಭ್ರಮಂ" (ಹಲಾಯು. ೧೧೯-೩೭); ಮುಂಗಾರ ಶಬ್ದಚಿತ್ರವನ್ನು ಆಲಿಸಿ ಮಳೆಗಾಲದ ಮುಮ್ಮಳೆಯ ಸಂರಂಭವು ಬಗೆಯನ್ನು ಕದಡಿದರೆ (ಚಿತ್ರಸ್ವ. ೧೪ ಮುನ್ನುಡಿ). **೭.** ಗರ್ವ ; ಸೊಕ್ಕು. ೮. ಹುರುಪು ; ಉತ್ಸಾಹ : ಇವರ್ ಬಲದೇವ ವಸುದೇವರಾದರೆಮಗಚೇಯರೆಂದು ಮನದೊಳ್ ಸುರಗತಿಯಂ ನಿಶ್ಚಯಿಸಿ ಸಮರ ಸಂರಂಭಮನುಟಿದಿರ್ಪುದುಂ (ಪಂರಾಮಾ. ೧೬-೧೭ ವ). **೯.** ಸಡಗರ ; ಸಂಭ್ರಮ : ನಿರ್ಮಳಗುಣೋನ್ನತ ಸೌಂದರಂಗೆಱಗಿ ಕೊಂಡೊಯ್ದರಖಿಳ ಸಂರಂಭದಿಂದ (ಸೌಂದಪು. ೫-೯೫). ೧೦. (ಮದುವೆ ಮುಂತಾದ) ಸಮಾರಂಭ ; ಉತ್ಸವ. [ಸಂ.]

**ಸಂರಂಭವತಿ** (ನಾ). ಸಡಗರದಿಂದ ಕೂಡಿರುವವಳು ; ಸಂಭ್ರಮದಿಂದಿರುವವಳು: "ಪಡಪುಗಾರ್ತಿಯುಮನುತ್ತೆಂದೊಡನೆಯೆ ತಾಂ ಹೊನಹುಗಾರ್ತಿಯೆನೆ . . . ಸಂ [ಪಾಠಾಂ. ಸೌ] ರಂಭವತಿಗೆ ನಾಮ" (ಕವಿಕಂ. ೧೭೯); ನಾಲ್ಕಾರು ಮಂದಿ ಸಂರಂಭವತಿಯರು ಮಧು ಮದ್ಯಾದಿಗಳ ಬೆಳ್ಳಿಗಳಸಗಳನ್ನೆರಡೂ ಕಯ್ಗಳಿಂದಾಂತು . . . ಭರಿಸುತ್ತಿರುವರು (ಚಿಟ್ಟಿಅ. ೮೩-೧೦). [ಸಂ. ಸಂರಂಭವತೀ]

**ಸಂರಂಭಾನ್ವಿತ** (ನಾ). ೧. ಶ್ರೇಷ್ಠ ಜಾತಿಯ ಬಾಳೆಯಿಂದ ಕೂಡಿದುದು. ೨. ಶ್ರೇಷ್ಠಳಾದ ರಂಭೆಯಿಂದ ಕೂಡಿರುವಂಥದು. **೩.** ಕ್ಷೋಭೆಗೊಳಗಾಗಿರುವಂಥದು. ೧, ೨, ೩ : ಆ ವನಂ ವನಧಿಯಂತೆ ವಲ್ಲಕಿಯಂತೆ ವರಪ್ರವಾಳ ಮಂಡಿತಮುಂ . . . ಸಗ್ಗದಂತೆ ಸಮರದಂತೆ ಸಂರಂಭಾನ್ವಿತಮುಮೆನಿಸಿದುದು (ರಾಜಶೇ. ೨-೭೮ ವ). [ಸಂ.]

**ಸಂರಕ್ಷ** (ಗು). ಸಲಹುವ ; ಕಾಪಾಡುವ : ಪರಸಮಯಸಂದೋಹಪರ್ವತವನೊಡೆವವಂ ಶರಣಜನಸಂತಾನಸಂರಕ್ಷವಜ್ರಪಂಜರಂ (ವೀಶೈಪು. ೬-೪-೧). [ಸಂ.]

**ಸಂರಕ್ಷಕ** (ನಾ). ಕಾಪಾಡುವವನು ; ಸಲಹುವವನು. [ಸಂ.]

**ಸಂರಕ್ಷಣೆ** (ನಾ). ಚೆನ್ನಾಗಿ ಕಾಪಾಡುವುದು, - ರಕ್ಷಿಸುವುದು : ನೀನು ನಮ್ಮ ಸಂರಕ್ಷಣೆಮಾಡದಿದ್ದರೆ, ಪರದೇಶಿಗಳಾದ ನಮ್ಮನ್ನು ಯಾರು ಕೇಳುತ್ತಿದ್ದರು (ಮುಂಬಯಿ. ೪-೧೯೫). [ಸಂ. ಸಂರಕ್ಷಣ]

**ಸಂರಕ್ಷಿಸು** (ಕ್ರಿ). ೧. ಸಲಹು ; ಕಾಪಾಡು : ಬಾಲೆನ ದಾದಿವೆಂಗಳು ಸಂರಕ್ಷಿಸಲು (ಮೋಹತ. ೧೭-೫೯); ಇನ್ನು ಮುಂದೆ ನಾನು ಅವನನ್ನು ನನ್ನ ಮಗನ ಹಾಗೆ ಸಂರಕ್ಷಿಸುವೆನು (ಮುಂಬಯಿ. ೪-೭೯). ೨. ಎಚ್ಚರಿಕೆಯಿಂದ ನೋಡಿಕೊಳ್ಳು ; ಜೋಪಾನಮಾಡು: ಪ್ರಾಚೀನವಾದದ್ದನ್ನು ನಾವು ಸಂರಕ್ಷಣೆಮಾಡಿಕೊಂಡಿರುವ . . ನವೀನವಾದದ್ದನ್ನೂ ಸ್ವಾಧೀನಕ್ಕೆ ತಂದುಕೊಳ್ಳಬೇಕು (ಸಾಹಿಶ. ೯೧). [ಸಂರಕ್ಷಣ - - ಇಸು₃]

**ಸಂರಾಜ್ಞಿ** (ನಾ). ಚಕ್ರವರ್ತಿನಿ : ಗಂಡನ ಮನೆಯಲ್ಲಿ ಸಂರಾಜ್ಞಿಯಂತಿದ್ದು . . . ವಧುವು ಸುಖದಿಂದ ಬಾಳಬೇಕೆಂದು ಹಾಡಿ ಹರಸಿತು, ವೇದಮಂತ್ರ (ಭಾರದ. ೩೯೦). [ಸಂ. ಸಂರಾಜ್ಞೀ]

**ಸಂರಾವ** (ನಾ). ೧. ಶಬ್ದ ; ಸದ್ದು : "ಶಬ್ದಃ, ನಿನಾದಃ . . . ಸಂರಾವಃ, ವಿರಾವಃ - ೧೭ ಧ್ವನಿಯ ಹೆಸರುಗಳು, ಅಂದರೆ ಕೂಗುವಿಕೆ, ಸದ್ದಾಗುವಿಕೆ" (ಸಿದ್ಧಾಂತಿ. ೫೭). ೨. ಗಲಾಟೆ ; ಗೊಂದಲ : ವಿವಾಹಮಂಟಪ ಜಯಘೋಷದಿಂದ ಸಂರಾವಗೊಂಡಿತು (ಕಣ್ಣುಮು.. ೨೨). [ಸಂ.]

**ಸಂರೂಢ** (ಗು). ೧. ಒಟ್ಟಾಗಿ ಬೆಳೆದ. ೨. (ರೋಗ, ಗಾಯ ಮುಂತಾದುವುಗಳಂತೆ) ಗುಣಹೊಂದಿದ; ವಾಸಿಯಾದ. ೩. ಮೊಳಕೆಯೊಡೆದ. ೪. ದೃಢವಾಗಿ ಬೆಳೆದ, - ಬೇರೂರಿದ. ೫. ದಿಟ್ಟತನದ ; ಧೈರ್ಯದಿಂದ ಕೂಡಿದ. [ಸಂ.]

**ಸಂರೇಚಕ** (ನಾ). (ಉಸಿರನ್ನು) ಚೆನ್ನಾಗಿ ಹೊರದೂಡುವುದು; ಹೊರಹಾಕುವುದು : ವಿಕಚೇಂದೀವರಪತ್ರಪಾತ್ರನಟನಂಗೋಪಾಂಗಗಂಭೀರ ಕುಂಭಕ ಸಂರೇಚಕಪೂರಕಂ ಪರಿಮಳೋನ್ಮಿಶ್ರಂ ದಳದ್ರೋಮ ರೋಮಕುಳಂ ನಂಜನಸುಯ್ಯ ಗಾಳಿ ನೃಪನಂ ಕೊಂದಿಕ್ಕಿತು (ಶಾಂತಿಪು. ೬-೯೩). [ಸಂ.]

**ಸಂರೋಧ** (ನಾ). ೧. ಸಂಪೂರ್ಣವಿರೋಧ ; ತಡೆ ; ಅಡ್ಡಿ. ೨. ಅಟ್ಟುವಿಕೆ; ಕಳಿಸುವಿಕೆ. [ಸಂ.]

**ಸಂಲಗ್ನ** (ಗು). ೧. ದೃಢವಾಗಿ ಸೇರಿಕೊಂಡ ; ಗಟ್ಟಿಯಾಗಿ ಕೂಡಿಕೊಂಡ : ಮಗ್ನತಯಿನೆಱಗಿ ಸುಯ್ಯಲರಗ್ನಿಯಿನಟಿದಳಿಗಳುದುರುತಿರೆ ಪೊತ್ತುದು ಸಂಲಗ್ನ ವಿರಹಾಗ್ನಿತಾಪೋದ್ವಿಗ್ನೆಯ ನಾಸಿಕಮಭೇದಮಂ ಚಂಪಕದೊಳ್ (ಚಂದ್ರಪ್ರ. ೫-೧೩೦); ಬ್ರಹ್ಮಸಂಲಗ್ನಮನಸೊರ್ವ ತೇಜಸ್ವಿಋಷಿ ಧ್ಯಾನಸ್ಥನಾಗಿರ್ದನು (ಶ್ರೀರಾಮಾ. ೧೩೩-೨೧೩). (ನಾ). ೨. ಸೇರುವಿಕೆ ; ಸಂಯೋಗ : ಪಾಂಡಿತ್ಯ ಪ್ರತಿಭೆಗಳ ಸಂಲಗ್ನದಿಂದ . . . ಈ ಕೃತಿ ಲೋಕಮಾನ್ಯವಾಗಿದೆ (ಸಾಹಿಪ್ರ. xiii, ಪ್ರಸ್ತಾವನೆ); ಮಾನಸಸರೋವರದಿಂದ ಹರಿದು ಬರುವ ಬಹುಪೂಜೆಯ ವಿವಿಧ ವಾಹಿನಿಗಳು ನಿನ್ನ ಧ್ಯಾನಸಮುದ್ರದಲ್ಲಿ ಸಂಲಗ್ನವಾಗಿವೆ (ಅಗ್ನಿಹಂ. ಮುನ್ನುಡಿ). **೩.** [ನಾಟ್ಯ] "ಹೆಬ್ಬೆರಳಿನೊಡನೆ ಉಳಿದ ಕಾಲ್ಬೆರಳುಗಳನ್ನು ಸೇರಿಸುವುದು" (ಲಾಸ್ಯರಂ. ೨೮೩ ಗದ್ಯಾನುವಾದ) : ಅಧಃಕ್ಷಿಪ್ತ, ಉತ್ಕ್ಷಿಪ್ತ, ಕುಂಚಿತ, ಪ್ರಸೃತ, ಸಂಲಗ್ನ - ಈ ಐದು ಚರಣಾಂಗುಲಿಯ ಭೇದಂಗಳ್ (ಲಾಸ್ಯರಂ. ೩-೧೧೫ ವ). [ಸಂ.]

**ಸಂಲಬ್ಧ** (ಗು). ೧. ಪಡೆದ ; ಗಳಿಸಿದ. (ನಾ). ೨. ಗಳಿಕೆ ; ಸಂಪಾದನೆ: ಮನದೊಳ್ ತೊಟ್ಟಾಗ್ರಹಂ ಮದ್ವಿಭುಗಮಿಭುವರಂ ಶೌರ್ಯಸಂಲಬ್ಧಮಕ್ಕುಂ (ಚಂದ್ರಪ್ರ. ೯-೧೧೪); ಪಾಂಡಿತ್ಯ ಪ್ರತಿಭೆಗಳ ಸಂಲಗ್ನದಿಂದ ಸಂಲಬ್ಧವಾದ ಅಪೂರ್ವತೇಜಸ್ಸಿನಿಂದ ಈ ಕೃತಿ ಲೋಕಮಾನ್ಯವಾಗಿದೆ (ಸಾಹಿಪ್ರ. xiii, ಪ್ರಸ್ತಾವನೆ). [ಸಂ.]

**ಸಂಲಾಪ** (ನಾ). ೧. (ಸರಸವಾದ) ಮಾತುಕತೆ ; ಸಲ್ಲಾಪ : ಪರಿಹಾಸಂ ರಸನೀತಿ ಮನ್ಮಥಕಥಾಸಂಲಾಪಮಾತೋದ್ಯಬಂಧುರವಾದ್ಯಂ ಪರಿವಾದಿವಿಶ್ರುತವಿನೋದಂ (ವರ್ಧಮಾ. ೭-೬೫). **೨.** ನಾಟಕದಲ್ಲಿಯ ಒಂದು ಬಗೆಯ ಸಂಭಾಷಣೆ. - ಸಂವಾದ. [ಸಂ.]

**ಸಂಲಾಪಕ** (ನಾ). [ಕಾವ್ಯಮಿಾ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು ; ಸಂಭಾಷಣಾರೂಪವಾದ ಒಂದು ಬಗೆಯ ನಾಟಕ : ೧. ನಾಟಿಕಾ . . . ೧೦. ರಾಸಕ. ೧೧. ಸಂಲಾಪಕ . . . ೧೮. ಭಾಣಿಕಾ – ಎಂದು ಉಪರೂಪಕಗಳು ಹದಿನೆಂಟು ವಿಧ (ಸಂನಾಟ. ೩೨). [ಸಂ.]

**ಸಂಲಾಪಿ** (ಗು). ೧. (ಸರಸವಾಗಿ) ಮಾತನಾಡುವ ; ಸಂಭಾಷಿಸುವ. (ನಾ). ೨. ಮಾತುಕತೆ ; ಸಲ್ಲಾಪ. ೩. ಮಾತುಕತೆಯಾಡುವವನು ; ಸಂವಾದಿ.
[ಸಂ. ಸಂಲಾಪಿನ್]

**ಸಂಲೀನತೆ** (ನಾ). ಬೆರೆತು ಹೋಗುವಿಕೆ ; ಲೀನವಾಗುವಿಕೆ : ಈ ಪುನರ್ಮಿಳನವೆ ಪರಸಿವ್ರತಿ ಎನಲೀ ಸಂಲೀನತೆಯೇ ಭವವೃತಿ (ಗಣೇಶ. ೧೬-೪೦೨). [ಸಂ. ಸಂಲೀನತಾ]

**ಸಂವ** (ಗು). ಸಂತೋಷವನ್ನುಂಟುಮಾಡುವ ; ಹರ್ಷದಾಯಕವಾದ : ಶಿಬಿಕೆ, ಸಿವಿಕೆ, ಶಂಬ, ಸಂವ (ಶಬ್ದಾನು. ೧೪೪ ಪ್ರಯೋ). [< ಸಂ. ಶಂಬ]

**ಸಂವಚರ** 'ಸಂವಚ್ಚರ' ನೋ.

**ಸಂವಚಿಸು** (ಕ್ರಿ). ಮಾತನಾಡು ; ಸಂಭಾಷಿಸು : ಇಂತು ಸಂವಚಿಸುತ್ತಾ ದಳಂ ಪಿಟ್ಟುಮಂಜಿನ ದಟ್ಟ ಕಣ್ಕಟ್ಟನೊಳ್ ಮುಂದೆ ಪರಿದತ್ತು (ಶ್ರೀರಾಮಾ. ೪೭೭-೯೬).
[ಸಂವಚನ್$_0$ + - ಇಸು$_3$]

**ಸಂವಚ್ಚರ, ಸಂಛರ, ಸಂವಚರ, ಸಂವಚ್ಛರ, ಸೌವತ್ಸರ** (ನಾ). ೧. ಹನ್ನೆರಡು ತಿಂಗಳುಗಳ ಕಾಲ ; ಒಂದು ವರ್ಷ. ೨. = ಸಂವತ್ಸರ ೨ : ನನ್ದನಯೆಂಬ ಸಂವಚ್ಚರಮಾಗೆ (ಹೈಆರ್. ೧೯೩೬, ೨೫-೨; 872); ಶ್ರೀಮುಖ ಸಂವಚ್ಚರದಲು ದೇವಿಕೆಜೆಯ ಹಸುಬೆಯ ಗೌಡುಗಳ ಮಗ . . . ಕೊಟ ಮಾನ್ಯದ ಹೊಲ (ಎಕ. XI, ಜಗಳೂ. ೧೪-೧ ; 1693 ?). **ಸಂಛರ** : ೨. ಶಕವರುಷ ಶಾವಿರದ ೧೪೮೨ ದುರ್ಮತಿ ಸಂಛರದ ಮಾರ್ಗಶಿರ ಶುದ್ಧೋದ್ವಾ[ದ] ಶೀ ಪುಣ್ಯ(ಂ)ಕಾಲದಲು (ಎಕ. XI, ದಾವಣ. ೧೮-೨೧; 1561). **ಸಂವಚರ** : ೨. ಭಿಲ್ಲಮದೇವವರಿಷದ ೪ನೆಯ ಸಾಧಾ[ರ]ಣ ಸಂವಚರದ . . . [ಸಂ] ಕ್ರಮಣದ [ನ್ದು] (ಸೌಇಇ. XX, ೧೭೬-೫; 1190). **ಸಂವಚ್ಛರ** : ೨. ಸ(ಶ)ಕ ನೃಪಕಾಲಾತೀತ ಸಂವಚ್ಛ(ತ್ಸ)ರ ಸ(ಶ) ತಂಗಳೆಣ್ಬುನೂಱ ತೊಂಭತ್ತಮೂಱನೆಯ ಪ್ರಜಾಪತಿ ಸ [ಂ] ವಚ್ಛ (ತ್ಸ)ರಂ (ಇಆ. XII, ೨೫೬-೭; 971). **ಸೌವತ್ಸರ** : ೨. ವಿರೋಧಿಸೌವತ್ಸರದ ಚೈತ್ರ ಸು ಸಪುತಮಿ ವಡವಾರದಂದು . . . ಪರೋಕ್ಷವಿನಯಮಂ ಮಾಡಿ (ಮೈಆರ್. ೧೯೩೨, ೨೨-೫ ; 1229). [< ಸಂ. ಸಂವತ್ಸರ]

**ಸಂವಚ್ಛರ** 'ಸಂವಚ್ಚರ' ನೋ.

**ಸಂವಜ** (ನಾ). ಕಾಳಗ ; ಯುದ್ಧ : ಕಲಗೌಡನ ಮಗ ಬಯಿಚನ್ನ ಲಕ್ಕಣ್ಣನ ಸಂವಜದಲ್ಲಿ ಸಸ್ತ್ರಗಾಯದಿಂದ ಬಿದ್ದ ಕುಕ್ಕುಗ್ರಾಮಾಧಿಪತಿ ಮಞ್ಚಿಗೌಡನ ಮಗನು ವೀರಸ್ವರ್ಗಾಧಿಪನಾದ (ಎಕ. IX. ಚನ್ನಪ. ೧೬೨-೭; 1426).
[☞ ಇದು 'ಸಂವಾಜ'ದ ಅಪಲಿಖಿತ]

**ಸಂವಡ್ಡಿಯ** (ನಾ). ಮಹನೀಯ ; ಶ್ರೇಷ್ಠ ವ್ಯಕ್ತಿ : ವಡ್ಡಾಚಾರವ ನುಡಿದಂದೆಡ್ಡವೆ ಪೊಗಳ್ವಂಗೆ ಗುಡ್ಡಶಾಸ್ತ್ರಾನ್ವಿತ ಸಂವಡ್ಡಿಯನೆನ್ದು ಪೊಗಳ್ವುದು ವಡ್ಡಬ್ಯವಹಾರಿ ಮುದ್ದನಂ ಧರೆ ಸತತಂ (ಸೌಇಇ. IX - i, ೨೯೭-೫೯ ; 1177).
[< ಪ್ರಾ. ಸಂವಡ್ಡಿಅ./ ಸಂ. ಸಂವೃದ್ಧ]

**ಸಂವತ್ಸರ** (ನಾ). ೧. ಹನ್ನೆರಡು ತಿಂಗಳುಗಳ ಅವಧಿ ; ಒಂದು ವರ್ಷ: "ಹಾಯನಃ, . . . ಸಂವತ್ಸರಃ, ಸಮಃ – ಈ ೬ ವರ್ಷಂ" (ಹಲಾಯು. ೨೦-೧೧೬); ತಾನುಮಾ ಮಾರ್ಗದೊಳತಿನಿಷ್ಠುರತೆಯಿಂ ಶಿಕ್ಷೆಗೆಯ್ಯುತ್ತುಂ ಕತಿಪಯಸಂವತ್ಸರಗಳ್ ಪೋಪುದುಂ (ಸುಕುಮಾ. ೨-೫೭ ವ). ೨. ಒಂದು ನಿರ್ದಿಷ್ಟಕಾಲದಿಂದ ಪ್ರಾರಂಭಿಸುವ ಕಾಲಮಾನಪದ್ಧತಿಯ ವರ್ಷ ; ವಿಕ್ರಮಾದಿತ್ಯ ಶಕೆಯ ಒಂದು ವರ್ಷ; ☞ ಇದರಲ್ಲಿ ಪ್ರಭವ, ವಿಭವ ಮೊದಲಾದ ಅರುವತ್ತು ಸಂವತ್ಸರಗಳಿವೆ: ದುಂದುಭಿಗಭೀರನಿನದಂ ದುಂದುಭಿಸಂವತ್ಸರೋದ್ಭವಂ (ಆದಿಪು. ೧-೩೩); ಸಕವರುಷ ೧೨೭೭ ನೆಯ ಮನ್ಮಥಸಂವತ್ಸರದ ಜೇಷ್ಟ ಶುದ್ಧ ೭ ಸೋ ಆ ಬೆಮ್ಮತ್ತನ ಕಲ್ಲ ಸಿದ್ಧನಾಥದೇವರಿಗೆ ಕಲ್ಲವುಪ್ಪರಿಗೆಯನೂ ಎತ್ತಿಸಿ (ಎಕ. XI, ಚಿತ್ರದು. ೨-೧೮; 1355); ೩. ಶಿವ. [ಸಂ.]

**ಸಂವತ್ಸರಲವಣ** 'ಸಂವರ್ಚಲವಣ' ನೋ.

**ಸಂವತ್ಸಲವಣ** 'ಸಂವರ್ಚಲವಣ' ನೋ.

**ಸಂವದನ** (ನಾ). ೧. ಪರಸ್ಪರ ಮಾತನಾಡುವಿಕೆ ; ಸಂಭಾಷಿಸುವಿಕೆ. ೨. ಸಮಾಚಾರವನ್ನು ತಿಳಿಸುವುದು. ೩. ಪರಿಶೀಲನೆ; ಪರೀಕ್ಷೆ. ೪. ಮಂತ್ರ, ಮದ್ದು ಮುಂತಾದುವುಗಳಿಂದ ವಶಮಾಡಿಕೊಳ್ಳುವಿಕೆ : "ಸಂವದನಂ, ವಶಕ್ರಿಯಾ – ಮಣಿಮಂತ್ರೌಷಧಾದಿಗಳಿಂದ ಇತರರನ್ನು ಸ್ವಾಧೀನವಾಗಿ ಮಾಡಿಕೊಳ್ಳುವದಕ್ಕೆ ಪೆಸರು" (ಸಿದ್ಧಾಂತಿ. ೩೫೫). ೫. ತಾಯಿತ; ಯಂತ್ರ. [ಸಂ.]

**ಸಂವನನ** (ನಾ). = ಸಂವದನ ೪ : "ಶೂಲೀಕರ್ಮ, ಸಂವನನಂ, ಕಾರ್ಮಣಂ, ವಶೀಕರಣಂ – ಈ ೪ ವಶಂ ಮಾಡುವುದು" (ಹಲಾಯು. ೧೯೯-೩೧). [ಸಂ.]

**ಸಂವರ** (ನಾ). [ಜೈನ]ಜೀವನಿಗೆ ಹೊಸದಾಗಿ ಕರ್ಮವು ಬಂದು ಸೇರದಂತೆ ತಡೆಗಟ್ಟುವುದು ; ಕರ್ಮನಿರೋಧ : ಜೀವಾಜೀವ ಪುಣ್ಯಪಾಪಾಸ್ರವ ಸಂವರ ನಿರ್ಜರಬಂಧಮೋಕ್ಷಮೆಂದಿಂತು ನವಪದಾರ್ಥಂಗಳುಂ (ಪದ್ಮರಾ. ೬-೧೮);ಕರ್ಮಾಸ್ರವಮಂ ಜನಿಯಿಸಲೀಸದೆ ಸದ್ಗುಣದಿನಂತವಂ ತೆಗೆವುದದುವೆ ಸಂವರಮಕ್ಕುಂ (ಸುಕುಮಾ. ೮-೩೨); ಜೀವನು ಸಮ್ಯಗ್ದರ್ಶನ ಮೊದಲಾದುವುಗಳಿಂದ ತನಗುಂಟಾಗಬಹುದಾದ ಹೊಸಕರ್ಮದ ಸಂಬಂಧವನ್ನು ನಿಲ್ಲಿಸಬಹುದು. ಇದಕ್ಕೆ ಸಂವರ ಎಂದು ಹೆಸರು (ಭಾತತ್ತ್ವ. ೨೫೭). [ಸಂ.]

**ಸಂವರಣ** (ನಾ). ೧. ಮರೆಮಾಡುವುದು; ಮುಚ್ಚುವುದು : ಆ ಕೃತಕಾರಾಮ ಸಂವರಣನನುಪಲಕ್ಷಿತಭಾಷಾಸಂಕೇತಜನಂಗಳ್ಪಿಡಿದು ಬರ್ಪೊನಲ್ಲಿ ಫುಲ್ಲಶರನುಮಂ ಚಲ್ಲದೊಳ್ ಪದವಡಿಸಲುಂ (ಶಾಂತಿಪು. ೮-೭ ವ). ೨. ಒಳಗೆ ಇಟ್ಟುದು ; ಭದ್ರಪಡಿಸಿದುದು : ಪದಿನಾಱುಕರಣದವರಂ ಬರಿಸಿ ನಯದಿಂ ನಿರುತವಾದಾಯಮೇಂ ವೆಚ್ಚಮೇಂ ಸಂದುದೇಂ ಪರಿಕಿಸಲ್ ನಿಂದುದೇಂ ಸಂವರಣಮೇಂ ದಿನಕೆ ಚರಿಪುದೇನೆಂದಿಂತೊಳಗು ಮುಟ್ಟೆ ಕೇಳ್ದು ಪಿರಿದಾದ ಲೆಕ್ಕದ ವಿವರಮಂ (ಪದ್ಮರಾ. ೪-೨೩). ೩. ಹೊದಿಕೆ ; ಆಚ್ಛಾದನೆ. ೪. ಗುಟ್ಟು ; ರಹಸ್ಯ. ೫. ಮಾರುವೇಷ. ೬. ನೆವ; ನೆಪ. ೭. ಮದುವೆಗೆ ವರ ಅಥವಾ ವಧುವನ್ನು ಆರಿಸುವಿಕೆ: ನರಪತಿಗಪರಿಮಿತಂ ಪೆಂಡಿರದೆಂತೆನೆ ರಾಜಕಾರ್ಯಸಂವರಣಾರ್ಥಂ ದ್ವಿರದಗತಿ ವನಿತೆಯರ್ಕಳುಮನೇಕರುಂ ಧರೆಯೊಳುಚಿತಂ (ಮದತಿ. ೮-೫೪). ೮. ನೇವರಿಸುವಿಕೆ; ಸವರುವಿಕೆ : ದೃಢಪರಿಷ್ವಂಗಂ ವಿಮುಕ್ತಾಂಗಸಂವರಣಂ ಕೈತವವೃತ್ತವೇಂ ನೆಗಟ್ಟುದೋ ಸಂಭೋಗಕೋಲಾಹಲಂ (ಜಗವಿ. ೧೧-೫೭). [ಸಂ.]

**ಸಂವರಣಕಾಱ** (ನಾ). (ಯುದ್ಧಕ್ಕೆ) ಸನ್ನದ್ಧನಾದವನು ; ಸಜ್ಜುಗೊಂಡವನು: ಮುತ್ತಿನ ಸತ್ತಿಗೆಯಂತೆಲ್ಲಾ ದೆಸೆಯೊಳ್ ಸೇವ್ಯನುಂ ಪಡೆವಳನಂತೆ ಸಂವರಣಕಾಱನುಂ ಸತ್ಪುರುಷನಂತೆ ನಿರ್ಮತ್ಸರನುಂ . . . ಅಪ್ಪುದು (ಧರ್ಮಾಮೃ. ೫-೯೯).
[< ಸಂ. ಸಂಭರಣಕಾರ]

**ಸಂವರಣಮಾಲಿಕೆ** (ನಾ). ಮದುವೆಯಲ್ಲಿ ವಧೂವರರು ಪರಸ್ಪರ ಹಾಕುವ ಹಾರ : ಅರ್ಜುನನು ಲಕ್ಷ್ಯವನ್ನು ಭೇದಿಸಿದ್ದನ್ನು ನೋಡಿ ದ್ರೌಪದಿಯು ಸಂವರಣಮಾಲಿಕೆಯನ್ನು ಅವನ ಕೊರಳಲ್ಲಿ ಹಾಕಿದಳು (ವಚಭಾ. ೫೨).
[ಸಂ. ಸಂವರಣಮಾಲಿಕಾ]

**ಸಂವರಣೆ$_1$, ಸವರಣೆ, ಸವುರಣೆ, ಸವ್ವರಣೆ, ಸಾವರಣೆ, ಸೌರಣೆ, ಸೌವರಣೆ** (ನಾ). ೧. ಒಟ್ಟುಗೂಡಿಸುವುದು ; ಕಲೆಹಾಕುವುದು : (೬). ೨. ಸಿದ್ಧಗೊಳಿಸುವುದು; ಅಣಿಮಾಡುವುದು : (೬). ೩. ಗುಂಪು; ಸಮೂಹ: ಆತನಾಳ್ ಕುದುರೆ ಸಂವರಣೆ ನಿನ್ನದು ಬಸವ (ಬಸರ. ೫-೧೭೯). ೪. ಸಂಗ್ರಹ; ಶೇಖರಣೆ : ಅಂಗಡಿಯ ಗಾಣಿಗರ . . . ಕುಸುಬೆ ಕವುಂಗು ಬೇವುವುಡಲಿಕೆ ಹುಲಿಗಿಲು ತಾರೆಯಗಸೆಗಳ ತೆಂಗು ಸಾಸುವೆಯಿಪ್ಪೆ ಗೇರು ವಿಳಂಗವಂಕಲೆ ಮುಖ್ಯ ತೈಲದ ಸಂಗುಡಿಯ ಸಂವರಣೆ ಸವೆದವು ಕಪಿಯ ಬಾಲದಲಿ (ತೊರರಾ. ೫-೮-೧೧); ಸಾರಿ ಬರೆ ಬರೆ ಮಾಲೆಗಾಱರ ಕೇರಿಯಲಿ ಪರಿಪರಿಯ ಕುಸುಮದ ಸೌರಭದ ಸಂವರಣೆ ಸಂಜೆಯ ತುಂಬಿಗಳಲೆಸೆವ ಸಾರಹೃದಯಸುದಾಮಸದನಕ್ಕಾ ರಮಾಪತಿ ಬರಲು (ಅಕ್ರೂಚ. ೬-೩೭). ೫. ಸಜ್ಜು ; ಸನ್ನಾಹ : "ಪಣ್ಣಿಕಮೆನಲ್ ಸಂವರಣೆ"

(ಶಬ್ದಮಂ. ೪೩); ಶರಧಿಯೇಳಂ ಕಳಿದು ಮಂದರವನಡರಿ ಭೂವರನ ಮುಂದಾಡುತಿಹ ಪೇರಣ ದಲೆಂಬ ಸಂವರಣೆಗುಂಟಾದ ವಾಜಿಗಳೆಯ್ದೆ ಚಾರಿವರಿದಾಡಿದವು ಶತಕೋಟಿಯು (ಪಚಕಾ. ೩-೨೧); ನೆರೆದ ನಿಜಸೇನಾಧಿಪರ ಸಂವರಣೆಗಳ ನೋಡಿದನು (ಕುವ್ಯಾದ್ರೋ. ೪-೧೫). ೬. ಕಾಪು ; ರಕ್ಷಣೆ: ಅರಸಾದಂ ಸಂವರಣೆಗೆ ಪರರಾಷ್ಟ್ರಂ ಗಂಗವಾಡಿ ತೊಂಬತ್ತಱುಸಾಸಿರಮುಂ ಬ್ರಾಹ್ಮಣದತ್ತಿಗೆ ವರಸಪ್ತಮಚಕ್ರವರ್ತಿ ವಿಷ್ಣುನೃಪಾಲಂ (ಯಶೋಚ. ೧-೧೧); ಪಲತೆಱದ ಸಂವರಣೆಯಂ ಮಾಡುತತ್ಯಂತ ಸುಯ್ದಾನದಿಂ ದುರ್ಗಮಂ ಕಾಯ್ದು ಸುರಸಂತಾನಮಿರ್ದುದು (ಚಬಪು. ೪೨-೧೨); ಪಟ್ಟಣ ಮೊದಲಾದ ಗಡಿಯ ದುರ್ಗಂಗಳಿಗೊಟ್ಟೈಸಿ ಸಂವರಣೆಗಳ ಕಟ್ಟೆಚ್ಚಱೊಳಿರಿಸು (ಕಂನವಿ. ೧೧-೧೨೯). ೭. ಗತಿ; ಪರಿಸ್ಥಿತಿ : ನಾರಿಯ ಕುಮಾರಂಗೆ ಬಂದ ಸಂಕಟದ ಸಂವರಣೆಯನದಾವ ಜೀವರು ಕೇಳ್ದರು (ಹಚಕಾ. ೧೨-೬). **ಸವರಣೆ :** ೫. ಕದನಸವರಣೆಗಳಲಿ ನಡೆವುದು ಮದಮುಖರು (ಚೋಗಯ. ೧೮-೮); ಕನಕ, ನಮ್ಮ ಗಂಟು ಕಟ್ಟಿದೆವು. ನೀನೂ ಸವರಣೆ ಮಾಡಿಕೋ ! (ಕಭವಿ. ೧೧೪); ಬೆಳಗ್ಗೆಯೆಲ್ಲಾ ಪ್ರಯಾಣದ ಸವರಣೆಯಲ್ಲಿಯೇ ಕಳೆಯಿತು (ರಾಗಿಣಿ. ೨೨೮). ೮. ಪೂರಕವಾದುದು ; ಸಹಾಯಕವಾದುದು : ಇದೆಲ್ಲವೂ ಮುಂದೆ ಬರತಕ್ಕ ನಿರ್ವೇದಭಾವಕ್ಕೆ, ಶಾಂತರಸಕ್ಕೆ ಸವರಣೆಯೆಂದು ಅವನ ಆಶಯವಾಗಿರಬಹುದು (ಕಾವ್ಯಸ. ೫೮). **ಸವುರಣೆ :** ೯. ಎಚ್ಚರಿಕೆ; ಜೋಪಾನ : ಬೊಪ್ಪ ಕಳುಹಿದ ವಸ್ತುವನೆಲ್ಲವ ರಾಮನೊಪ್ಪಿಸಿಕೊಂಡು ದುರ್ಗವನು ಒಪ್ಪವಿಟ್ಟನು ಸವು [ಪಾಠಾಂ. ಸೌ] ರಣೆಯಿಂದ (ಕುರಾಸಾಂ. ೪೨-೩೫). **ಸವ್ವರಣೆ:** ೬. ಕಾಮೆಯನಾಯಕನು . . . ಕೆಳಗೆ ಸವ್ವರಣೆಯಾ ನಡೆವುತ್ತಿದ್ದಲ್ಲಿ (ಎಕ. XII, ತಿಪಟೂ. ೬೩-೯; 1138). **ಸಾವರಣೆ :** ೪. ಕಳುಪು ಸಾವ [ಪಾಠಾಂ. ಸೌ] ರಣೆಯನೆರಡು ಲಕ್ಕ ಪೊನ್ನನು ಕಳುಪು ಮಂದಿಗೆ ಸಂಬಳವನು (ಕುರಾಸಾಂ. ೪೨-೨೩). ೧೦. ಆಡಂಬರ ; ಡೌಲು : ಸ್ವಾತಂತ್ರ್ಯವಿಲ್ಲದೆ . . . ಸಿಂಹಾಸನವೇರಿದವರೇನು? ಇದೆಲ್ಲ ಸಾವರಣೆ ಏತಕ್ಕೆ ಬೇಕು? (ಚಟ್ನಪೂ. ೯೩). **ಸೌರಣೆ :** ೫. ತನ್ನ ಒಬ್ಬಳೇ ಮಗಳ ಲಗ್ನವೆಂದು ಭೀಷ್ಮಕರಾಜನು ಅತ್ಯಂತವಾದ ಆಸ್ಥೆಯಿಂದ ಲಗ್ನಸಮಾರಂಭದ ಸೌರಣೆ ಮಾಡಿದ್ದನು (ಭಾಮೃತ. ೩೫೮); ಅವರಾಗ ಒಳ್ಳೆಯ ಹುರುಪಿನಿಂದ ಯುದ್ಧದ ಸೌರಣೆ ನಡೆಸಿದರು (ವಿಜಸಾ. ೫೫). ೬. ಬೈಚಪ್ಪ ದುರ್ಗವ ಹೊಕ್ಕು ತಳುವದದಱ ಬಲಿಕೆಯನು ಬಳಸಿ ಬಳಸಿ ನೋಡಿ ದುರ್ಗ ಸೌರಣೆಯನಂದಲಸದೆ ಮಿಗೆ ಮಾಡಿಸಿದನು (ಕುರಾಸಾಂ. ೩೭-೫೦). ೧೧. ಸಿದ್ಧಪಡಿಸಿದ ವಸ್ತು,- ಸಾಮಗ್ರಿ : ಬಂದವರು ಒಳ್ಳೆಯವರೆಂದು ಇರಲಿಕ್ಕೆ ಅಡಿಗೆಯ ಮನೆ ಕೊಡಲು ಅವರು ನುರಿತ ಕಳ್ಳರಾಗಿ ಮನೆಯ ಸೌರಣೆಗಳನ್ನೇ ಕದ್ದರು (ಕನ್ನಜಾ. ೫೫). **ಸೌವರಣೆ :** ೫.ಭೋರನೆ ಬರುತಿರ್ದು ಕಂಡನಂದಲ್ಲಲ್ಲಿ ಚಾರುದುರ್ಗದ ಸೌವ [ಪಾಠಾಂ. ಸಂವ]ರಣೆಯ (ಅನಂಚ. ೧೮-೩೭). [< ಸಂ. ಸಂಭರಣ./ ತಮಿ. ಚವರಣೈ ; ತೆಲು. ಸವರಣ, ಸವರನ = ಅಂದ ; ಸೌಂದರ್ಯ]

**ಸಂವರಣೆ**$_2$ (ನಾ). ಅದೃಶ್ಯವಾಗುವಿಕೆ ; ಕಣ್ಣಿಗೆ ಕಾಣದಂತಾಗುವಿಕೆ: ವೀರಶೈವಸಾಹಿತ್ಯವು ಪಂಡಿತಮಾನ್ಯತೆಯ ಅಭಾವದಿಂದ ಸೊರಗಿತೆನ್ನುವುದಕ್ಕಿಂತ ಅದಕ್ಕೆ ಕೆಲಕಾಲದ ಸಂವರಣೆ ಅವಶ್ಯವಾಗಿತ್ತು (ಕಸಾಚ. ೨೨೪). 'ಆಕಾರಸಂವರಣೆ' ಪರಾ. [ಸಂ. ಸಂವರಣ]

**ಸಂವರಣೆಕಾಱ** (ನಾ). ಸಂಗ್ರಹಿಸುವವನು ; ಕಲೆಹಾಕುವವನು : ಜರುಗಿನಲಿ ಚಾಂಬೂನದದ ಸಂವರಣೆಕಾಱಂಗೆಡೆಯಲ್ಲಿದ್ದುದು ಪರಮನಿಧಿ ಮಝು ಪ್ರಾತು ಪುಣ್ಯೋದಯದ ಫಲವೆನುತ (ಕುವ್ಯಾಅ. ೧೦-೨೭). [ಸಂವರಣೆ$_1$ + - ಕಾಱ]

**ಸಂವರಣೆಗೈಸು** (ಕ್ರಿ). ರಕ್ಷಣೆಯನ್ನು ಮಾಡಿಸು ; ಕಾವಲು ಕಾಯಿಸು : ಅಲ್ಲಲ್ಲಿಗೆ ಕಾಹ ಬಲಿದು ಸಂವರಣೆಗೈಸಿದನಧಿಕದೊಳು (ಕಂನವಿ. ೧೧-೧೩೮).
[ಸಂವರಣೆ$_1$ + ಕೈಸು (< ಕೆಯ್ಸು)]

**ಸಂವರಣೆಗೊಳಿಸು** (ಕ್ರಿ). = ಸಂವರಣೆಗೈಸು : ನಂಜರಾಜೇಂದ್ರ ಬಿಡದಾಗ ಗಡಿದುರ್ಗ ಪಟ್ಟಣಕಾಕ್ಷಣ ಕಡು ಸಂವರಣೆಗೊಳಿಸಿದ (ಕಂನವಿ. ೧೧-೧೩೦).
[ಸಂವರಣೆ$_1$ + ಕೊಳ್$_1$ + - ಇಸು$_3$]

**ಸಂವರಿಸು**$_1$, **ಸವರಿಸು**$_2$, **ಸವುರಿಸು**, **ಸವ್ವರಿಸು**, **ಸಾವರಿಸು**, **ಸೌರಿಸು**, **ಸೌವರಿಸು** (ಕ್ರಿ). ೧. ಕಲೆಹಾಕು; ಒಟ್ಟುಗೂಡಿಸು : ಸಕಲೋರ್ವೀತಳಪೂಜ್ಯಮಪ್ಪ ಭವದೀಯ ಪ್ರಾಜ್ಯರಾಜ್ಯಕ್ಕೆ ಕಂಟಕನಾದಂ ಕ್ರಮದಿಂದೆ ಸಂವರಿಸಿದಂ ಕ್ರೋಧಾದಿವರ್ಗಂಗಳಂ (ಪಂಚತಂ. ೯೬-೨೧); ಬಂಡಾರಮಂ ಈಡಾಡಿ ಕಾಚಂ ಸಂವರಿಸುವ . . . ಎಗ್ಗನಂ ಪೋಲ್ತೆಂ (ಧರ್ಮಾಮೃ. ೩-೨೧); ಧನಮಂ ಸಂವರಿಪಲ್ಲಿ ಚಿಂತೆ ರಿಪುವರ್ಗ್ಗಂ ತನ್ನನಾಂತಲ್ಲಿ ಭೀತಿ (ಎಇ. XV. ೩೨೧-೪೦; 1172). ೨. ಒಟ್ಟಾಗು ; ಗುಂಪುಗೂಡು: ಸರಕಟಿಸಿ ರಿಪುಸರ್ವದಳ ಸಂವರಿಸಿ ನೂಕಿತು . . . ಕೊಬ್ಬಿದ ಕಡಲಿನಂದದಲಿ (ಕುವ್ಯಾಕ. ೧೨-೬); ಆ ಪುರದ ಸೂಳೆಯರೆಲ್ಲರನು ಸಂವರಿಸಿ ಬರವೇಳಿದನೆನಲು (ಕೊಲ್ಪಾಚ. ೨೦೩). ೩. ಸಜ್ಜು ಮಾಡು; ಸಿದ್ಧಪಡಿಸು : ಕೆಲದೊಳಿರ್ದು ವೈಶಂಪಾಯನಂಗಂ ಕಟಕಮಂ ಸಂವರಿಸಿಕೊಂಡು ಬರ್ಪುದೆಂದುಮೊಪ್ಪಿಸಿ (ಕಾದಂಉ. ೨೬೪); ನಯದಭಿಸಂಧಿಯಲಿ ಸೀವರಿಸಿ ಸಂವರಿಸಿದನು ಸೈನಿಕವ (ಕುವ್ಯಾಅ. ೨೨-೨); ಸಾರಿದರನುನಯದೊಳು . . . ಬಹುದೆನುತ ಸಂವರಿಸಿ ಕಾಳೆಗಕೆ (ಕೊಲ್ಪಾಚ. ೩೫೫). ೪. ಸಜ್ಜುಗೊಳ್ಳು ; ಅನುವಾಗು: ಸುಕುಮಾರನೊಬ್ಬನೆ ನಿಲುವುದರಿದೋ ನೂಕೆನುತ ಕುರುಸೇನೆ ಸಂವರಿಸೆ (ಕುವ್ಯಾಕ. ೨೦-೨೧); ನಾಂ ತೊಟ್ಟ ಮಾರ್ಗಣಮನಿಳಿಪುವೆಂ ಪೋಗು ಪೋಗದೊಡೆ ಕೆನ್ನೀರ್ಗಳೋಕುಳಿಗೆ ಸಂವರಿಸಿಕೊಳ್ಳು (ಚಬಪು. ೨೫-೧೬). ೫. ಕಾಪಾಡು ; ಸಲಹು : ಅರಸಿ ನೀನೀ ಮಕ್ಕಳನು ಸಂವರಿಸಿಕೊಂಡಿಹುದು (ಕುವ್ಯಾಅ. ೫-೨೨); ಮತ್ತೊಬ್ಬ ವೈಶ್ಯರಾಜಂ ಕಂಡು ಕರೆತಂದು ಯಾರ್ವರಂ ಸಂವರಿಸುತಿರೆ (ಗುರುಚಾ. ೫-೩೫). ೬. ಕಾಪಾಡಿಕೊಳ್ಳು : ಭಿಕ್ಷುವು ಹೀಗೆ ಶೀಲಸಂಪನ್ನನಾಗಿ, ತನ್ನ ಶೀಲಗಳನ್ನು ಸಂವರಿಸುವ ಮಟ್ಟಿಗೆ ಯಾವ ಕಡೆಯಿಂದಲೂ ಭಯ ಕಾಣುವದಿಲ್ಲ (ಬುದ್ಧಪ. ೧೪೯). ೭. ಸಂತೈಸು; ಸಮಾಧಾನಗೊಳಿಸು : ನೋಡೆನ್ನನಾಂ ಸಂವರಿಸಲಣಮುಮಾರ್ತಪ್ಪೆನಿಲ್ಲ (ಕಾದಂಪೂ. ೮೫೧); ಎನ್ನನಿನ್ನೆಗಮವಳ್ ಸಲೆ ಸಂವರಿಸಿರ್ದಳ್ (ಕುಸುಮಾ. ೧೩-೬೨); ಮನವ ಸಂವರಿಸಿರಲು ಬಂದನು ಶಾಂತಭೂಭುಜನು (ಸಂಭಪ. ೧೩-೨೧). ೮. ನೇರ್ಪುಗೊಳಿಸು ; ಸರಿಪಡಿಸು : ಸ್ತನದೆ ಜಾಱುವ ಮೇಲುದನೊರ್ವ ಕಾಂತೆ ಸಂವರಿಸದೆ ಬಂದು ಸಂಭ್ರಮದಿನೀಕ್ಷಿಸುತಿರ್ದಳಿಳೇಶಕಂತುವಂ (ಕುಸುಮಾ. ೮-೧೦); ಕೊಳನೆಂದು ಬಗೆದೆನು ನಿಂದು ಸಂವರಿಸಿದೆನು ಮುಂಜೆಱಗ (ಕುವ್ಯಾಸ. ೧೨-೩೭); ಎಡಗೈದುದಿಯಲಾ ಮುಂಜೆಱಗ ಸಂವರಿಸುತ್ತ ನಸುನಾಚಿಕೆಯ ಭಾವದಲಿ . . . ಬಂದಳು ರಾಮನಿದ್ದೆಡೆಗೆ (ತೊರರಾ. ೩-೪-೮). ೯. ಸರಿಹೊಂದಿಸಿಕೊಳ್ಳು; ಅನುವು ಮಾಡಿಕೊಳ್ಳು: ಎಲ್ಲರೂ ಅದರಲ್ಲಿಯೇ ಸಂವರಿಸಿ ಕುಳಿತುಕೊಂಡು . . . ಹೊರಟರು (ಶ್ರೀಕಥೆ. ೯೪). ೧೦. ಇಡು; ಇರಿಸು : ಶರನಿಧಿಯ ರತ್ನಮಂ ಸಂವರಿಪಳ್ . . . ಚಾಪಮಧ್ಯಮದ್ರೇಕ್ಕಾಣಂ (ಜಾತತಿ. ೧೯-೨೬); ಅದೊಂದು ಸರಸಿಯ ತಡಿಯ ಲಳವಡೆ ನಿಂದು ಸಂವರಿಸಿದನು ಗದೆಯನು ಬಾಹುಮೂಲದಲಿ (ಕುವ್ಯಾಗ. ೪-೭). ೧೧. ಒಪ್ಪಗೊಳಿಸು ; ಓರಣಗೊಳಿಸು : ಸೊಬಗಂ ಸಂವರಿಸುವಂತೆ ಬೆಳ್ದಿಂಗಳಂ ಬಣ್ಣವಿಡುವಂತೆ . . . ಮುಕ್ತಿಯಂ ಮೂರ್ತಿಗೊಳಿಸುವಂತೆ ಪಾರ್ವತಿಯಂ ಸಲಹುತ್ತುಮಿರೆಯಿರೆ (ಗಿರಿಕ. ೩-೧೧೯ ವ). ೧೨. ಸಂಭ್ರಮಿಸು : ಚೊಕ್ಕಟವಾಗಿ ರಂಜಿಸುವ ಬೀಡಾರವ ಹೊಕ್ಕಂತೆ ಸಂವರಿಸುತ್ತೆ ಧೊಕ್ಕನೆ ಪೊಱಮಟ್ಟು ಶ್ರೀಕೃಷ್ಣ ಸಲೆ ಪೌಜಿಕ್ಕ ಪೇಳಿಸಿದ ಭೂಭುಜರ (ಮೋಹತ. ೩೭-೨). **ಸವರಿಸು**$_2$ : ೪. ಸಮರಕ್ಕೆ ಸವರಿಸುವ ಸಾಲ್ವಗಳಂ ಸಂಹರಿಸಿ (ಸೌಗಂಧಿ. ೨೪೩- ೧೪); ತಿರಿಚಿನಾಪಳ್ಳಿಯಲ್ಲಿ ತಿರಿದುಂಬೋದಕ್ಕೆ ಇಲ್ಲಿಂದ ಕೆಯ್ ಸವರಿಸಬೇಕೇ ? (ಗಾದ). ೮. ಇವನ ತಪ್ಪನ್ನು ಮುಚ್ಚಲು ಪರದೆಯನ್ನು ಸವರಿಸಿ, ರಂಧ್ರವು ಕಾಣದಂತೆ ಮಾಡಿ . . . ಹೋಗಿ ಕುಳಿತರು (ಕಲಾಧ. ೮೯). ೯. ಬೆಳಗ್ಗೆಯಿಂದ ಊರಿಗೆ ಹೊರಡಲು ಸವರಿಸುವುದರಲ್ಲೇ ಕಳೆದುಹೋಯಿತು (ರೂಢಿ). ೧೩. ಸರಿಹೊಂದಿಸು; ವ್ಯವಸ್ಥೆ ಮಾಡು : ಒಬ್ಬೊಬ್ಬ ಬಿಲ್ಲುಗಾರನಿಗೆ ಏಳು ಏಳು ಮಂದಿ ಹರಿಗೆಯವರನ್ನು ಸವರಿಸಿ . . . ವ್ಯೂಹಗಳನ್ನು ಒಡ್ಡುತ್ತಿದ್ದರು (ಕೃವಾಭೀ. ೨೩). **ಸವುರಿಸು:** ೨. ಏಕಾಕಿಯಾಗಿಹನ ಕೂಡೆ ಕಾದುವುದುಚಿತವಲ್ಲ . . . ನಾಳೆ ಬರಲಿ ಸವುರಿಸಿಕೊಂಡು ತಾಕಲೆನ್ನೊಳು (ತುರಂಗ. ೬೪-೧೮). **ಸವ್ವರಿಸು :** ೩. ತುಳುವನಳವಿಗೆಟ್ಟೋಡಿದಂ ಕೊಂಕಣಂ ಭೋಂಕನೆ ಪುಣ್ಯಾರಣ್ಯಮಂ ಸವ್ವರಿಸಿದನ್ (ಎಕ. XII, ತಿಪಟೂ. ೪೨-೧೫ ; 1229). **ಸಾವರಿಸು:** ೩. ಅಂತಃಪಟದಾಚೆ ವಿಧಿ ತಂದ ವಧು ನೀನು ಮಾಲೆಯ ಸಾವರಿಸಿ ನಿಂತಿದ್ದೀಯೆ (ಸಱೀಗೀ. ೨-೩೨); ಸಾವರಿಸು ನಿನ್ನ ಗಂಟು (ಚಟ್ನಪೊ. ೧೦೦). ೪. ಒಂದು ನಿಮಿಷ ಸುಬ್ಬು ಮೇಲೆ ಬೀಳದೆ ಸಮಯ ಕಾಯುತ್ತಾ ಸಾವರಿಸುತ್ತಿದ್ದ (ಭೀಮಕಾ. ೮೨). ೮. ಅದನ್ನು ಸಾವರಿಸಲು ಪ್ರಯತ್ನಪೂರ್ವಕವಾಗಿ ವಿಚಾರಿಸ ಬೇಕಾಯಿತು (ಸಂಜೀವಿ. ೨೪). ೧೧. ಲೀಲೂ ಏನೂ ಆಗದವಳಂತೆ ಪುಸ್ತಕಗಳನ್ನು ಸಾವರಿಸಿ

ಇಡತೊಡಗಿದಳು (ರಂಗರೋ. ೧೬೮). **೧೪. ನಿಭಾಯಿಸು ; ಸಂಬಾಳಿಸು : ಬೇನೆಯಲ್ಲೇ ಚಂಪಕ್ಕ ಸಾವರಿಸಿಕೊಂಡು ಎದ್ದು ಕೂಡಲು ಯತ್ನಿಸತೊಡಗಿದಳು** (ಗಂಮಾಯಿ. ೨೬೫). **೧೫. ಚೇತರಿಸಿಕೊಳ್ಳು** : ಮೂರ್ತಿಗೆ ತಲೆ ತಿರುಗುವಂತೆ ಭಾಸವಾಯಿತು. ಹತ್ತಿರದ ಗೋಡೆಯನ್ನು ಸಾವರಿಸಿ ಹಿಡಿದುಕೊಂಡು ನಿಂತ (ನಿರ್ದೋಷಿ. ೧೬೬). **೧೬. ಎಚ್ಚರವಹಿಸು; ಜೋಪಾನಮಾಡು: ಕಾಮಿನಿ ಜಾರಿದಳು . . . ನಾನು ಗಕ್ಕನೆ ಹೋಗಿ ಅವಳನ್ನು ಸಾವರಿಸಿ ಹಿಡಿದೆ** (ಮುಕ್ತಿ. ೫೬); **ಒಂದು ಕ್ಷಣದಲ್ಲಿ ಅವಳು ಅವನ ಕಂಕುಳಲ್ಲಿ ತನ್ನ** ಹೆಗಲನ್ನು ಕೊಟ್ಟು, ಸಾವರಿಸಿ ಹಿಡಿದಳು (ಮಹಾತ್ಮಾ. ೪೮). **ಸೌರಿಸು** : ೧. ಪರಿಪರಿಯ ಮಣಿಚಯವ ಬಿಡದೆ ಸೌರಿಸಿಕೊಡುತ (ನವಮೋ. ೧೬-೩೬). ೩. ಆನೆ ಕುದುರೆ ಮೊದಲಾದ ವಾಹನಗಳನ್ನೂ ಸೌರಿಸಿಕೊಂಡು, ಕರ್ಣನ ಆಜ್ಞೆಯಂತೆ ಯುದ್ಧಕ್ಕೆ ಸನ್ನದ ರಾಗಿ (ಕೃವಾಲು. ೨೫೫); ಹಳ್ಳಿಯ ಹೆಣ್ಣುಮಕ್ಕಳು ಈ ಶೀಗೆಷ್ಟಣ್ಣಮೆಯ ಊಟವನ್ನು ಬೆಳತನಕ ಸೌರಿಸುವರು (ಕನ್ನಜಾ. ೧೬೫). ೯. ಮಂದಾಕಿನಿಯು . . . ವೀಳ್ಯ ಸೌರಿಸಿ ಸಜ್ಜುಗೊಳಿಸುತ್ತಿದ್ದಳು (ಇಪ್ಪಕ. ೨೪೩). ೧೧. ನನ್ನಿಂದಖಿಳವಸ್ತುವ ಸೌರಿಸಿ ಸರ್ವರನು ಬರವೇಳ್ದು (ನವಮೋ. ೩೪-೩೩); ಭೀಷ್ಮನು . . . ಮಣಿಗಳನ್ನು ತರಿಸಿ ಸೌರಿಸಿ ಹಾಕಿಸಿ (ಕೃವಾಲು. ೧೫೮). ೧೫. ಅವನ ಸಾರಥಿ ತುರಂಗಮಂ ತೇರ್ಗಳಂ ಕೆಲಸಿಡಿಯಲೆಚ್ಚಿ ಹೂಂಕರಿಸಿ ಕೈಧನುವ ಕಡಿಗಳದು ಬಿಡ ನಕುಳ ಸೌ[ಪಾಠಾಂ. ಸಂವ]ರಿಸಿ ಬರಲ್ (ತುರಂಗ. ೬೭-೯). ೧೬. ಲೇಸಾದ ಸೌಧ ಸಿಂಗರವನೀಕ್ಷಿಸಿ ಪರಿತೋಷದಿ ಸಖಿಯ ಚಿತ್ರವನು ತಾ ಸೌರಿಸಿಕೊಂಡು ಕೊಟ್ಟಳಾಕೆಯ ಜೀವಿತೇಶನ ವರಚಿತ್ರಪಠವ (ಮೋಪತ. ೩೧-೯). **ಸೌವರಿಸು** : ೮. ಸೆಜಿಗ ಸೌವರಿಸಿ ಹಿಮಗಿರಿಸುತೆಯ ನಿದ್ರೆ ಯೆಚ್ಚಬಿದಂತೆ ಮೆಲ್ಲನಾರೈದೆದ್ದು ನಿಲಲು (ಸೌಂದಪು. ೭-೧). [ಸಂವರಣೆ$_1$ + - ಇಸು$_3$]

**ಸಂವರಿಸು$_2$** (ಕ್ರಿ). ಕೊಲ್ಲು ; ನಾಶ ಮಾಡು : ಜಯದ ಸುಭಟರ ಕಾಣಿನ್ನೆ ಕಣೆಯೆರಡಬಿಲಿ ಸಂವರಿಸಿದನು ಪಾರ್ಥ (ಕುವ್ಯಾಕ. ೨೦-೪೦); ದಶರಥನುದರದಿ ಶಿಶುವಾಗಿ ಜನಿಸಿ ಅಸುರೆ ತಾಟಕಿಯನು ಸಂವರಿಸಿದವಗೆ (ಕಜಾಗೀ. ೮೪). [< ಸಂಹರಿಸು.]

**ಸಂವರಿಸು$_3$** (ಕ್ರಿ). ಆರಿಸು ; ಆಯು : ಹರಣದಲಿ ಕಕ್ಕುಲಿತೆ ಬೇಡುದ್ಧರಿಸುವುದು ಸತ್ಕುಲತೆಯನು ಸಂವರಿಸುವುದು ಸದ್ಗತಿಯನೆಂದನು ದ್ರೋಣ ನಿಜಬಲಕೆ (ಕುವ್ಯಾದ್ರೋ. ೧೫-೨೧). [ಸಂವರಣ + - ಇಸು$_3$]

**ಸಂವರೆ** (ನಾ). [ಜೈನ] ಜೀವನಿಗೆ ಕರ್ಮವು ಬಂದು ಸೇರದಂತೆ ತಡೆಗಟ್ಟುವುದು: ಶುಭಾಶುಭಪರಿಣಾಮಪ್ರಣಾಲಿಕೆಯಿಂ ಬರ್ಪ ಕರ್ಮಮಂ ಬರಲೀಯದೆ ಗುಪ್ತ್ಯಾದಿಗಳಿಂ ತಗುಳ್ಕುದಂ ಸಂವರೆಯಂಬುದು (ಆದಿಪು. ೧೦-೬೩ ವ); ಪರಮಗುಣಮೊಂದೆ ಸಂಯಮಿಗೆರಡು ತಪಂ ಮೂಱು ಗುಪ್ತಿ ನಾಲ್ಕುಕಷಾಯೋತ್ಕರದಟಿವೆಯ್ದಾಚಾರಂ ದೊರೆಕೊಳಿಸಿದ ಸುಕೃತದೊದವು ಸಂವರೆಯಕ್ಕುಂ (ಪುಷ್ಪಪು. ೧೩-೫೨). [ಸಂ. ಸಂವರ]

**ಸಂವರ್ಚಲವಣ, ಸಂವತ್ಸರಲವಣ, ಸಂವತ್ಸಲವಣ** (ನಾ). ಒಂದು ಬಗೆಯ ಖನಿಜಲವಣ : ''ಸಂವರ್ಚ[ಪಾಠಾಂ. ತ್ಸ] ಲವಣಂ ರುಚಕಮಕ್ಕು'' (ಮಂಗರಾ. ೪೩-೪೧); ''ರುಚ್ಯಂ - ಸಂವರ್ಚಲವಣ'' (ಓಷಧಿ. ೧೯೯). **ಸಂವತ್ಸರಲವಣ** : ಸೈಂಧವಲವಣ, ಬಿಡುಲವಣ, ಸಂವತ್ಸರಲವಣ, ಹಿಪ್ಪಲಿ ಇವಿಷ್ಟನೂ ಸಣ್ಣನಾಗಿ ನಿಂಬೇಹಣ್ಣಿನ ರಸದಲ್ಲಿ ಮರ್ದಿಸಿ (ವೈದ್ಯಸಾ. I, ೫೨); ಸೈಂಧವಲವಣ ಸಂವತ್ಸರಲವಣ ಗಾಜುಲವಣ . . . ಸಹ ಚೂರ್ಣವಂ ಮಾಡಿ (ದ್ರಾಕ್ಷಾಚೂ. ೨-೨). **ಸಂವತ್ಸಲವಣ** : ಮೇಲಿನ 'ಸಂವರ್ಚಲವಣ' ಉಲ್ಲೇಖದ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ.

[< ಸಂ. ಸೌವರ್ಚಲವಣ]

**ಸಂವರ್ಣಿಸು** (ಕ್ರಿ). ಅತಿಶಯವಾಗಿ ಹೊಗಳು,—ಪ್ರಶಂಸೆ ಮಾಡು : ವಿನಯಾಂಭೋನಿಧಿವರ್ಧನಂ ಜನನುತಂ ತಾನೆನ್ದು ಸಂವರ್ಣ್ಣಿಸಲ್ ಮುನಿನಾಥಂ ಸಳೆ ವಾಸುಪೂಜ್ಯನೆಸೆದಂ (ಎಕ. VI, ಕಡೂರು. ೬೯-೨೨; 1160). [ಸಂವರ್ಣನ$_0$ + - ಇಸು$_3$]

**ಸಂವರ್ತ** (ನಾ). ೧. ಎದುರಿಸುವುದು ; ತಾಗುವುದು. ೨. ನಾಶ ; ಹಾಳು. ೩. ಪ್ರಪಂಚದ ಅಳಿವು ; ಪ್ರಳಯ : ''ಲಯಸಮಯಂ . . . ಮಹಾಪ್ರಳಯಮೆಂಬುದದು ಸಂವರ್ತಂ'' (ವಸ್ತುಕೋ. ೧೭-೧೭); ವಿಲಯಕಾಲದ ಶಿವನ ಸಖಿಯೋ ಸವತಿಯೋ ಸಂವರ್ತಮೃತ್ಯುವಿಸ (ತೊರರಾ. ೧-೧೦-೭). ೪. ನಾಶಮಾಡುವವನು : ವೈರಿಭಟ ಸಂವರ್ತ ನೂತನ ಭೈರವನು ಕಲಿಪಾರ್ಥ ಸಮರೋದ್ಧಾರ ಸಾರಥಿಯಾದನು (ಕುವ್ಯಾವಿ. ೫ಸೂಚನ). ೫. ಪ್ರಳಯಕಾಲದಲ್ಲಿ ಕಂಡುಬರುವ ಏಳು ಬಗೆಯ ಮೋಡಗಳಲ್ಲಿ ಒಂದು : ಜಗಕೆ ಜಗತ್ಪ್ರಳಯಂ ಬಱಮೊಗೆದೊಡೆ ಸಂವರ್ತ ಪುಷ್ಕರಾವರ್ತಕಮಲ್ಲಿಗಮೊಂದೆ ಮಾಳ್ಕೆಯಿಂ ನೆಟ್ಟಗೆ ಕಱೆಗುಂ (ಜಟ್ಟಮ. ೮-೧೧). ೬. ವರ್ಷ ; ಸಂವತ್ಸರ : ''ಪ್ರಳಯಂ ವರ್ತನ ವತ್ಸರಂಗಳಿವು ಸಂವರ್ತಾಹ್ವಯಂ'' (ನಾನಾರ. ೧೬೧). ೭. ಆಂಗಿರಸನ ಮಗನಾದ ಒಬ್ಬ ಋಷಿಯ ಹೆಸರು : ಶತಮಖಂ ಸಂವರ್ತನಂ ಬಿಟ್ಟು ವರಬೃಹಸ್ಪತಿಯನಧ್ವರಕೆ ವರಿಸದೊಡೀಗ ವಜ್ರದಿಂದರಿದಪೆಂ ನಿನ್ನನು (ಜೈಮಿಭಾ. ೫-೪೨). [ಸಂ.]

**ಸಂವರ್ತಕ** (ನಾ). ೧. ಪ್ರಪಂಚವನ್ನು ನಾಶಪಡಿಸುವ ಒಂದು ಬಗೆಯ ಮೋಡಗಳ ಗುಂಪು. ೨. ಪ್ರಳಯಕಾಲದ ಬೆಂಕಿ ; ಪ್ರಳಯಾಗ್ನಿ. ೩. ಬಡಬಾನಳ; ಬಡಬಾಗ್ನಿ. ೪. ಬಲರಾಮನ ಹೆಸರುಗಳಲ್ಲಿ ಒಂದು. ೫. ಬಲರಾಮನ ನೇಗಿಲು. ೬. ಆನೆಯ ಬಾಲದ ಕಿಲಿ ಎಂಬ ಭಾಗದ ಹೊರಗಿರುವ ಒಂದು ಅಂಗದ ಹೆಸರು ಮತ್ತು ಆ ಅಂಗವನ್ನು ಹೊಂದಿರುವ ಆನೆ : ಕಾಚಕಿಲ್ಕ ಸಂವರ್ತಕನಂ ಪ್ರಶಸ್ತವಾಳಧಿಯಂ . . . ವಪುಷ್ಮಮಂ ಸಂಪದುಪೇತಮಂ ತರಿಸಿ ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇವಂ ಪೊಱಮಟ್ಟನೇಱಿ ಜಯವಮಂ ಜಯಪರ್ವತಯಾನನಾಗಮಂ (ಶಾಂತಿಪು. ೧೦-೧೪೨ ವ). ೭. ಒಬ್ಬ ಋಷಿಯ ಹೆಸರು : ಸಂವರ್ತಕಂ ಮೊದಲಾಗೆ ಸಕಲ ಋತ್ವಿಜರಂ ಬಡಿದು (ಪಂರಾಮಾ. ೧೦-೧೮೩ ವ).

[ಸಂ.]

**ಸಂವರ್ತಕಾಲ** (ನಾ). ಪ್ರಳಯಕಾಲ : ಸಕಲಕ್ಕೆ ಕರ್ತೃವಾಗೆಸೆವಾದಿಶಿವನಿಂದ ಸುಕರವೇದಂ ಪುಟ್ಟಿ . . . ಸಂವರ್ತಕಾಲದೊಳ್ ತವಿಸಿ ತವೆ ಸೃಷ್ಟಿಯಲ್ಲಿ ಪ್ರಕಟಮಪ್ಪಂತೊಗೆಗುಂ (ಆರಾಚ. ೩-೨-೧೧). [ಸಂ.]

**ಸಂವರ್ತಗರ್ತ** (ನಾ). ಭಯಂಕರವಾದ ಹಳ್ಳ (?) : ಈ ಧರ್ಮಮಿಂತಿದ ನುಲ್ಲಂಘಿಸಿದಾತನುಗ್ರನರಕೋದೀರ್ಣಾಂತಸಂವರ್ತಗರ್ತದೊಳಾಟ್ಟುಂ (ಶಾಪಮಂ. ೬೧-೩೪೪ ; 1123) ; ''ಪ್ರಳಯಕಾಲದ ಹಳ್ಳ'' (ಶಾಪಮಂ. ಟಿಪ್ಪಣಿ). [ಸಂ.]

**ಸಂವರ್ತನ** (ನಾ). ಪ್ರಪಂಚದ ನಾಶ, - ಲಯ : ''ಸಂವರ್ತನದೊಳು ಪರಿವರ್ತನಂ'' (ಮಂಗರಾ. ೧೪೦-೮) ; ಅವಿಧೇಯಕ್ಷತ್ರಸಂವರ್ತನಸಮಯಪರಿಕ್ಷುಬ್ಧವಾರಾಶಿವೀಚೀನಿವಹಂ ಮರ್ಯಾದೆಯಂ ದಾಂಟಿದುದು (ಮಲ್ಲಿಪು. ೮-೧೩೪). [ಸಂ.]

**ಸಂವರ್ತಮೇಘ** (ನಾ). ಪ್ರಳಯಕಾಲದ ಮೋಡ : ಶೂರ್ಪಣಖಿಯಮಿತ ದಾರುಣಸ್ವರದಿಂದ ಸಂವರ್ತಮೇಘ ಮೊರೆದಾರುಣಾಸಾರವಂ ಕರೆಯುತ್ತಲೈದುವಂತಾರ್ಭಟಿಸಿ (ವೆಂಕಾರಾ. ೩-೧೦-೧). [ಸಂ.]

**ಸಂವರ್ತಸ್ಮೃತಿ** (ನಾ). ಸ್ಮೃತಿಗಳಲ್ಲಿ ಒಂದು : ಮನುಸ್ಮೃತಿ . . . ಆಪಸ್ತಂಬಸ್ಮೃತಿ ಸಂವರ್ತಸ್ಮೃತಿ . . . ವಶಿಷ್ಠಸ್ಮೃತಿಗಳೆಂಬಿವೇ ಆಯಾಯ ನಾಮಧೇಯಮುಳ್ಳವರಿಂದುಕ್ತಮಾದ ಹತ್ತೊಂಬತ್ತು ಧರ್ಮಶಾಸ್ತ್ರಂಗಳ್ (ವಿವೇಕ. ೫). [ಸಂ.]

**ಸಂವರ್ತಿಕೆ** (ನಾ). ತಾವರೆ ಮೊದಲಾದುವುಗಳ ಎಳೆಯ ದಳ : ''ಸಂವರ್ತಿಕಾ, ನವದಳಂ - ೨ ಎಳೇರೇಕುಗಳ ಹೆಸರುಗಳು'' (ಸಿದ್ಧಾಂತಿ. ೯೧). [ಸಂ. ಸಂವರ್ತಿಕಾ]

**ಸಂವರ್ತಿಸು** (ಕ್ರಿ). ತೋರು ; ಕಾಣು (?) : ನುತಸಿದ್ಧಾನ್ತಮನನ್ತಬೀರ್ಯ ಮುನಿಗಂ ಶುದ್ಧಾಕ್ಷರಾಕಾರದಿಂ ಸತತಂ ಶ್ರೀಮುನಿಚಂದ್ರದಿವ್ಯಮುನಿಗಂ ಸಂವರ್ತ್ತಿಸುತ್ತಿರ್ಕ್ಕು ಮಪ್ರತಿಮಂ ತಾನೆನೆ ಪೆಂಪುವೆತ್ತು (ಎಕ. VII, ಶಿವಮೊ. ೪-೫೯; 1122).

[ಸಂವರ್ತನ$_?$ + - ಇಸು$_3$]

**ಸಂವರ್ಧಕ** (ಗು). ೧. ವೃದ್ಧಿಪಡಿಸುವ ; ಬೆಳೆಸುವ : ನಾಡಹಬ್ಬಗಳಲ್ಲಿಯಂತೆಯೆ ಹೋಳಿಹಬ್ಬದಲ್ಲಿಯೂ ಸಂಸ್ಕೃತಿಸಂವರ್ಧಕ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಾರೆ (ಭಾಹಬ್ಬ. ೧೯೦). (ನಾ). ೨. ಬೆಳೆಸುವಂಥದು ; ಪೋಷಕವಾದುದು : ಈ ಕೆಲವು ನೆನಹುಗಳನ್ನು ಬಿಟ್ಟರೆ ಓದುತ್ತಿರುವ ಪುಸ್ತಕಗಳೇ ಅವನ ಸ್ನೇಹಕ್ಕೆ ಸಂವರ್ಧಕವಾಗಿದ್ದವು (ಸಮಜೀ. ೨೩೦). [ಸಂ.]

**ಸಂವರ್ಧನ** (ನಾ). ೧. ವೃದ್ಧಿಹೊಂದುವುದು. ೨. ಅಭಿವೃದ್ಧಿ ಪಡಿಸುವುದು : ಆದಿಕಾಲದಲ್ಲಿ . . . ಪ್ರವಚನಪರಿಪಾಲನ, ಸಂವರ್ಧನ, ಶುಶ್ರೂಷಣವೆಂಬ ವರ್ಣಧರ್ಮಗಳೂ ಇದ್ದುವು (ಹಿಂದಸಾ. ೨೬೧). ೩. ಅಭಿವೃದ್ಧಿ ; ಏಳಿಗೆ : ದಿನಂಪ್ರತಿ ಕೆಲವೊಂದು ತಾಸು ಗಳನ್ನು ತನ್ನ ಸಂಸ್ಕೃತಿಯ ಸಂವರ್ಧನಕ್ಕಾಗಿ ಮಿಸಲಿಡಬೇಕು (ಸಮಜೀ. ೧೮೪). [ಸಂ.]

**ಸಂವಲಿತ, ಸಂವಳಿತ** (ಗು). ೧. ಬೆರೆತ ; ಕೂಡಿದ. ೨. ಸುತ್ತುವರಿದ; ಆವರಿಸಲ್ಪಟ್ಟ. **ಸಂವಳಿತ :** ೨. ಸಪ್ತಸಮುದ್ರಸಂವಳಿತ ಸಪ್ತದ್ವೀಪಮಂ ಸಪ್ತಸಪ್ತಿಕರಾಗ್ರ ಪ್ರಬಳಪ್ರತಾಪಮಸೆಯಲು ತಾಳ್ದಿಂ ಬಳಿಕ್ಕೆಯಿಂ (ಸೌಇ. XV. ೫೭ - ೧೧; 1184). [ಸಂ.]

**ಸಂವಸಥ** (ನಾ). ಗ್ರಾಮ ; ಊರು : "ಗ್ರಾಮಮಾ ಸಂವಸಥಮೆನಲೂರ ಪೆಸರ್" (ಮಂಗರಾ. ೫೭-೧). [ಸಂ.]

**ಸಂವಹನ** (ನಾ). ೧. ತಿಳಿಯಪಡಿಸುವುದು ; ನಿರೂಪಿಸುವುದು. ೨. (ಭಾವ, ಅಭಿಪ್ರಾಯ, ವಿಷಯ ಮುಂತಾದುವುಗಳನ್ನು) ಅಭಿವ್ಯಕ್ತಪಡಿಸುವುದು : 'ಸಂವಹಿಸು' ಪರಾ. ೩. ಮಾರ್ಗದರ್ಶನ. [ಸಂ.]

**ಸಂವಹಿಸು** (ಕ್ರಿ). ಅಭಿವ್ಯಕ್ತಗೊಳಿಸು : ಯಾವ ಕಾದಂಬರಿಯಾದರೂ . . . ತನ್ನ ದ್ರವ್ಯವನ್ನು ಎಷ್ಟು ಸಫಲವಾಗಿ ಸಂವಹಿಸಿರುತ್ತದೆಯೋ ಆ ಮಟ್ಟಿಗೆ ಸಫಲವಾಗಿರುತ್ತದೆ (ವಂಶವೃ. ೧ ಹಿನ್ನುಡಿ). [ಸಂವಹನ + - ಇಸು$_3$]

**ಸಂವಳನ** (ನಾ). ೧. ಒಟ್ಟಿಗೆ ಸೇರುವುದು, - ಕೂಡುವುದು. ೨. ಕೂಡಿಸುವುದು; ಮಿಶ್ರಗೊಳಿಸುವುದು : 'ಸಂವಳಿಸು' ಪರಾ. ೩. ಆವರಿಸಿರುವುದು; ಸುತ್ತುವರಿದುದು: ಶೇಷನ ಕಂಠನಾಳಸಂವಳನದೆ ನಿನ್ನ ನಳ್ಳನುಮುಳೆನ್ನು ಮುಳಿಪ್ಪ ಪೊಡರ್ಪ್ಪನಾವಗಂ . . . ತೋಱುವಂ (ಎಕ. VI. ಕಡೂರು. ೫೧-೭; 1169). [ಸಂ. ಸಂವಲನ]

**ಸಂವಳಯಿತ** (ಗು). ಬಳಸಿದ ; ಸುತ್ತುವರಿದ : ಲತಾಪ್ರತಾನಸಂವಳಯಿತ ವಿದ್ರುಮದ್ರುಮವಿಳಾಸವಿಶೇಷಿತಬಾಡವಾನಳಾವಿಳಜಳಮಂ ಮನಂ ಬಯಸಿ ನೋಡಿದನರ್ಣವಮಂ ಗುಣಾರ್ಣವಂ (ಪಂಪಭಾ. ೪-೨೫). [ಸಂ. ಸಂವಲಯಿತ]

**ಸಂವಳಿ** (ನಾ). ಚೆನ್ನಾದ ಸಾಲು : ಘುಳಿಘುಳಿಸೇಳ್ವ ಬೊಬ್ಬುಳಿಯಿಂದ ಸುಳಿಯಿಂದ ಸೆಳವು ಪೆರ್ದೆರೆ ನೊರೆಯಿಂದ ಪೊಳವು ತುಂತುರಿನ ಸಂವಳಿ ನೀರ್ವನಿಯಿಂದ ಕಳೆ ಜಲನಿಧಿಯಂದದಲಿ (ಕರಚಾ. ೮-೪೩). [ಸಂ. ಸಂವಲಿ]

**ಸಂವಳಿತ** 'ಸಂವಲಿತ' ನೋ.

**ಸಂವಳಿಸು** (ಕ್ರಿ). ಬೆರಕೆ ಮಾಡು ; ಮಿಶ್ರಗೊಳಿಸು : ಕಡುಗಾಸಿ ಚಿಮ್ಮಾಡಿ ಕುಡಿ ಮಗುಚಿ ಕತ್ತರಿಸಿ ಪೊಡವೆಡೆಗಳೊಳಗೆ ಸಿಡಿಸಿದನು ಸಂವಳಿಸಿ ಪಡೆವ ಪ್ರತಿವೆರಸಿ (ಸರ್ವಜ್ಞ. ೧೪೧೨). [ಸಂವಳನ + - ಇಸು$_3$]

**ಸಂವಾಜ** (ನಾ). ೧. ಕಲಹ ; ಘರ್ಷಣೆ : ಜೈನರಿಗೂ ಭಕ್ತರಿಗೂ ಸಂವಾಜವಾದಲ್ಲಿ (ಎಕ. II, ೩೪೪-೭ ; 1366); ಆ ಅಗ್ರಹಾರದ ಹಳ್ಳಿಗಳಿಗೆಯೂ ತಂಮ ಭಂಡಾರಸ್ಥಲದ ಒಕ್ಕಲುಗಳಿಗೆಯೂ ಸಂವಾಜವಾಗದ ಹಾಗೆ ಆ ಧರ್ಮಸ್ಥಲಕ್ಕೆ ತೆಱುವ ಒಕ್ಕಲುಗಳನು ವಿಂಗಡಿಸಿ (ಮೈಆರಿ. ೧೯೩೨, ೪೨-೨೧; 1418); ಅಂತಾ ಸಾಧಕನಾ ಮಱಿಯಂ ಕೊಡದೆ ಸಂವಾಜಮಂ ಮಾಡಲ್ (ನನ್ನಚಾ. ೪-೭೯ ವ). ೨. ಚರ್ಚೆ ; ವಾದ : ಆಸ್ಥಾನದ ಆಚಾರಿಯರು ಸೂರಿಗಳ ಕೂಡೆ ಸಂವಾಜದ ಮಾಡಿದಡೆ (ಎಕ. VIII, ತೀರ್ಥಹ. ೧೯೭-೧೨ ; 1363). [ಸಂ.]

**ಸಂವಾದ** (ನಾ). ೧. ಮಾತು ; ಸಂಭಾಷಣೆ : ಕಿಟ್ಟಿಗೆ ಇಂಥ ಸಂವಾದದಿಂದ ಏನು ಫಲವಿಲ್ಲವೆಂದು ಅನಿಸಿ, ಸುಮ್ಮನೆ . . . ಹೋದನು (ಗಂವಾಯಿ. ೪೩); ಶ್ರೀ ಕೃಷ್ಣಾರ್ಜುನಸಂವಾದಾತ್ಮಕವಾದ ಭಗವದ್ಗೀತೆಯನ್ನು ಸಂಜಯನು ಧೃತರಾಷ್ಟ್ರನಿಗೆ ನಿವೇದಿಸಿದ ವಿವರಣೆಯ ರೂಪದಲ್ಲಿದೆ (ಭಾರದ. ೧೦೯). ೨. ಚರ್ಚೆ ; ತರ್ಕ : ವಚನ, ಸಂವಾದ, ಸಂಪಾದನೆ, ಕೈವಲ್ಯಗಳ ಅಭ್ಯಾಸ ನಡೆಯಬೇಕು (ವಿಚಾಮಂ. ೭). ೩. ವಿವಾದ; ವಾಗ್ವಾದ : ದೇಶಾಧಿಪತಿ ಹರಿಶ್ಚಂದ್ರರಾಯನ ಸತ್ಯ ವಾಸವನ ಸಭೆಯೊಳಗೆ ನೆಗಳ್ದ ಪ್ರಸಂಗದಿಂ ಕೌಶಿಕ ವಸಿಷ್ಠಮುನಿಗಳಿಗೆ ಘನತರದ ಸಂವಾದಮಂ ಮಾಡಿತಂದು (ಹಚಕಾ. ೧ ಸೂಚನೆ); ಕಿಱಿಯಳಿವಳೆಂದೆನ್ನುವಂ ನೀಂ ಬಱಿದೆ ಕಾಡದಿರೆಮ್ಮ ಬೊಪ್ಪಂಗಱುಹಿಯೆಲ್ಲಾ ನಿನಗೆ ಎನಗಂ ಮತ್ತೆ ಸಂವಾದ ಮಱೆಯದಿರು (ಬಸಪು. ೧೪-೨೨); ಗೌರಿ ಗಂಗೆಯರ ಸಂವಾದದ ಹಾಡು ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಕಂಡು ಬರುವುದು (ಕನ್ನಜಾ. ೧೬೯). ೪. ಹೋಲಿಕೆ ; ಸಾದೃಶ್ಯ : ವೈದರ್ಭಗೌಡಮಾರ್ಗವಿಭೇದಂ ಬಗೆವೊಡೆ ಗತಾನುಗತಿಕಮಿದೆಂದೊಲ್ವಾದರಿಪರ್ ಕೆಲಬರ್ ಸಂವಾದದೊಳೆರಡುಂ ಸಮರ್ಥಮಪ್ಪುದಱಿಂದಂ (ಕಾವ್ಯಾವ. ೫೨೨); ಅನ್ಯಸಾದೃಶ್ಯವನ್ನೇ 'ಸಂವಾದ'ವೆನ್ನುತ್ತೇವೆ. ಅದು ಜೀವಿಗಳ ಪ್ರತಿಬಿಂಬದಂತಿರಬಹುದು (ಧ್ವನ್ಯಾಲೋ. ೨೫೯). ೫. ಹೊಂದಿಕೆ; ಸಮನ್ವಯ : ಯಾದವರು ಪಾಂಚಾಲರಲಿ ಸಂಪಾದಿಸಿದುದನ್ಯೋನ್ಯ ಘನ ಸಂವಾದ ಸುಖ ಸಂಪ್ರೀತಿ ಮೆರೆಯಲ್ಕಿಷ್ಟಸತ್ಕಾರ (ಕುವ್ಯಾಆ. ೧೭-೩೨). ೬. ಸುದ್ದಿ ; ಸಮಾಚಾರ : ನೀನು ಇದುವರೆಗೆ ನಮ್ಮ ಸಂವಾದವನ್ನು ತಿಳಿಯದ್ದರಿಂದ ಹೇಗೆ ಚಿಂತಾಮನಸ್ಕನಾಗಿರುವೆಯೋ, ಹಾಗೆಯೇ ನಾವಾದರೂ . . . ವ್ಯಥಿತರಾಗಿರುವೆವು (ಅಂಬಿಕ. ೧೩೯). ೭. ಅನುಮತಿ ; ಒಪ್ಪಿಗೆ. [ಸಂ.]

**ಸಂವಾದಾರ್ಥಿ** (ನಾ). ಚರ್ಚೆ ಮಾಡುವ ಅಪೇಕ್ಷೆಯುಳ್ಳವನು : ವಿಜಯ ಜಿಹ್ವನೆಂಬನೊರ್ವ ವಾದಿ ಸಕಲಕಲಾವೇದಿ ಸಂವಾದಾರ್ಥಿಯಾಗಿ ಬಂದು (ಸುಕುಮಾ. ೨-೧೪ ವ). [ಸಂ. ಸಂವಾದಾರ್ಥಿನ್]

**ಸಂವಾದಿ** (ಗು). ೧. ಹೋಲುವ ; ಸರಿಸಮಾನವಾದ. ೨. ತಕ್ಕ ; ಅನುಗುಣವಾದ. (ನಾ). ೩. ಹೋಲಿಕೆ ; ಸಾದೃಶ್ಯ. ೪. ಹೋಲುವಂಥದು ; ಸಮಾನವಾದುದು : ಪಾರ್ಸಿಯ ಕೆಲವು ಪ್ರಾದೇಶಿಕರೂಪಗಳಲ್ಲಿ ಇದಕ್ಕೆ ಸಂವಾದಿಯಾದ ರೂಪಗಳು ಸಿಗುತ್ತವೆ (ದ್ರಾವಿವಿ. ೩೪); ವೇದಾಂತದ ಸತ್-ಚಿತ್-ಆನಂದಕ್ಕೆ ಸಂವಾದಿಯಾಗಿ ಭುವನಸುಂದರನ ತ್ರಿತ್ವಮುಖವನ್ನು ಸ್ವರೂಪ, ರೂಪ ಮತ್ತು ಗುಣ ಎಂದು ಹೇಳುತ್ತದೆ (ಸೌಂದಸ. ೧೧೫). ೫. ತಕ್ಕುದು ; ಅನುಗುಣವಾದುದು : ಈ ವಿಷಯವಾಗಿ ಸಂವಾದಿಯೇ ಆಗಲೀ ವಿವಾದಿಯೇ ಆಗಲಿ . . . ನನ್ನ ವಿಚಾರಸಂಗತಿಗೆ ಉಪಯುಕ್ತವೇ ಆದೀತು (ಪ್ರಬಂಧ. ೩೫). ೬. [ಸಂಗೀತ] ನಾಲ್ಕು ಬಗೆಯ ಸ್ವರಗಳಲ್ಲಿ ಒಂದು : ವಾದಿ, ಸಂವಾದಿ, ವಿವಾದಿ ಮತ್ತು ಅನುವಾದಿ ಸ್ವರಗಳು (ಸಂಗೀಚಂ. ೨೦). [ಸಂ. ಸಂವಾದಿನ್]

**ಸಂವಾದಿಸು** (ಕ್ರಿ). ೧. ಮಾತನಾಡು ; ಸಂಭಾಷಿಸು : ಶ್ರೀಪಾರ್ವತೀದೇವಿಯರು ಪರಮೇಶ್ವರನ ಕೂಡೆ ಸಂವಾದಿಸಿ (ಪ್ರಭುವ. ೨) ; ಆದಿರಾಜಗೆ ಕೂಡೆ ನಮಿಸಿದರು . . . ಮೂವರ್ಗೆ ಕುಳ್ಳಿರಲಿಡಿಸೆ ಸಂವಾದಿಸಿ ಕುಳಿತರೊತ್ತಿನೊಳು (ಭರಚ. ೭೯-೨೪). ೨. ವಾದಿಸು; ಚರ್ಚಿಸು : ಯಾದವರು ಕೌರವರೊಳಗೆ ಸಂವಾದಿಸುವಡನ್ವಯದ ಮೊದಲೆರಡಿಲ್ಲ (ಕುವ್ಯಾಉ. ೧೦-೩); ವಾದದಲಿ ತಲೆವಾಗಿ ಭಂಗಿತರಾದ ಜೈನರು ಮತ್ತೆಯುಂ ಸಂವಾದಿಸಿದರೀಯಾಲವೊಂದಿದ್ದಿಹುದು (ಬಸಪು. ೫೦-೭೭). ೩. ಮಂಡಿಸು ; ಪ್ರತಿಪಾದಿಸು : ಬೌದ್ಧವೇ ಭೂಮಧ್ಯಾದಿ ಬುದ್ಧಿ ಕಡೆಯಾದ ತ್ರಯೋವಿಂಶತಿತತ್ವಾತ್ಮಜ ಪ್ರಪಂಚವೆಲ್ಲಂ ದೀಪಜ್ವಾಲೆಗಳಂತೆ ಕ್ಷಣಿಕವೆಂದು ಸಂವಾದಿಸುತ್ತವೆ (ವಿವೇಕ. ೮). [ಸಂವಾದ + - ಇಸು$_3$]

**ಸಂವಾಸ** (ನಾ). ೧. ಸಹವಾಸ ; ಒಡನಾಟ : ರಾಜಕುಲಸತತಸಂವಾಸ ಪ್ರಾಗಲ್ಭ್ಯವೇಷಮೆನಗುಳ್ಳುದಱಿಂದಮಿಾ ಪಟಮಂ . . . ಎನ್ನ ಕೈಯೊಳ್ ಕೊಟ್ಟು . . . ಅಟ್ಟಿದೊಡೆ (ಆದಿಪು. ೪-೨೧ ವ). ೨. ವಾಸ ; ವಾಸ್ತವ್ಯ : ಅಕೃತಸುಕೃತನಪ್ಪಂಗೆ ಕೈಸಾರ್ಗುಮೇ ತತ್ಪುರಸಂವಾಸಂ (ಚಂದ್ರಪ್ರ. ೧೧-೭೦). [ಸಂ.]

**ಸಂವಾಸಿ** (ನಾ). ಸಹವಾಸಿ ; ಒಡನಾಡಿ : ಆ ದೇವನ ಚಿತ್ತವಾರ್ಧಿಗಮೃತಂ ಬರ್ಪಂದದಿಂ ಸಂತತಾಂತಿಕ ಸಂವಾಸಿಗಳಂತೆ ತಮ್ಮ ನೆಲೆಯಿಂ ಲೋಕಾಂತಿಗಳ್ ಬರ್ಪುದುಂ (ಶಾಂತಿಪು. ೧೧-೯೨); ವಾಸ್ತವದಿಕ್ತಟಂ ಸಮೆದ ಮೂಷೆ ತಮಂ ಸುರಿದಿರ್ದಲಬ್ಬ ಸಂವಾಸಿ ಸಮೀರನೇರಣೆಗನಾಗೆ (ಅಜಿಪು. ೭-೭೦). [ಸಂ. ಸಂವಾಸಿನ್]

**ಸಂವಾಹ** (ಗು). ೧. ಸವಾರರಿಂದ ಏರಿದ, - ಹತ್ತಲ್ಪಟ್ಟ : ಸಂವಾಹ ವಾಜಿವ್ರಜಂ ಬರೆ ತಾನೇಱಿದ ದಿವ್ಯವಾಜಿಗಿನಿಸುಂ ಪಕ್ಕಾಗಿ ಕಾದಂಬರೀವಿರಹೋತ್ಕಂಠಿತಚಿತ್ತನಂದು ತಳರ್ದಂ (ಕಾದಂಉ. ೨೬೫). (ನಾ). ೨. ಭಾರ ಹೊರುವುದು. ೩. ಮೈ ತಿಕ್ಕುವುದು. ೪. ಮೈತಿಕ್ಕುವವನು; ಅಂಗಮರ್ದ. ೫. ಮಾರುಕಟ್ಟೆ. ೬. (ಅನೇಕ ಪ್ರಕಾರವಾದ ಅರಣ್ಯಗಳಿಂದ ಕೂಡಿ, ಪರ್ವತಶಿಖರದಲ್ಲಿರುವ) ಗ್ರಾಮ ; ಹಳ್ಳಿ : ಶಿಲಾವ್ಯೂಢಧಾನ್ಯಸಂಚಯೋಪಭೋಗಿಜನನಿವಾಸಿಗಳಪ್ಪ ಸಂವಾಹಂಗಳುಮಂ . . . ಮಾಡಿ (ಆದಿಪು. ೮-೬೩ ವ); ಇಂತು . . . ಗ್ರಾಮನಗರಖೇಡಮಡಂಬಪಟ್ಟಣ ದ್ರೋಣಾಮುಖಸಂವಾಹಗಳೊಳ್ ವಿಹಾರಿಸುತ್ತುಂ (ಸುಕುಮಾ. ೮-೨೦ ವ) ; ಆ ಮೇರುಗಿರಿಯ ದಕ್ಷಿಣದಿಶಾಭಾಗದೊಳ್ . . . ಪತ್ತನದ್ರೋಣಾಮುಖಸಂವಾಹನಿಚಯನಿಚಿತಮುಂ (ಜಗವಿ. ೨-೧ ವ). [ಸಂ.]

**ಸಂವಾಹಕ** (ನಾ). ಮೈ ತಿಕ್ಕುವವನು ; ಅಂಗಮರ್ದ : "ಸಂವಾಹಕಂ ಮರ್ದನಿಗಂ" (ಮಂಗರಾ. ೧೧೧-೨); ಸಂವಾಹಕ ಚಂಚತ್ಕೀರಸಾರೀ . . . ಸಮೀರಂ (ಅನಂಪು. ೧-೧೧೩). [ಸಂ.]

**ಸಂವಾಹನ** (ನಾ). ೧. ಭಾರ ಹೊರುವುದು. ೨. ಮೈಯನ್ನು ತಿಕ್ಕುವಿಕೆ, – ಹಿಸುಕುವಿಕೆ : "ಮರ್ದನಂ, ಸಂವಾಹನಂ – ೨ ಗುದ್ದುವಿಕೆ, ಹಿಸುಕುವಿಕೆ" (ಸಿದ್ಧಾಂತಿ. ೩೬೩). ೩. = ಸಂವಾಹ ೬ : ಪದಿನಾಱುಸಾಸಿರ ಖೇಡಂಗಳುಂ ಪದಿನಾಱುಸಾಸಿರ ಸಂವಾಹನಂಗಳುಂ (ಆದಿಪು. ೧೫-೩ ವ); ಪಲವುಂ ಗ್ರಾಮಂಗಳಿಂ ಪಟ್ಟಣನಿಕರದಿ(ದ) ಸಂವಾಹನಬ್ರಾತದಿಂ . . . ಕಣ್ಗೆಡ್ಡಮಾಗಿರ್ಪುದು ರುಚಿರತೆಯಿಂ ಮಧ್ಯದೇಶಂ (ಎಇ. XIX. ೨೨೯-೧೪ : 1179); ಮೇರುನಗಕೆ ಸಮವೆನಿಪ ಪರ್ವತಗಳ ಚಾರುಮಸ್ತಕದೊಳಗಿರುವ ಈರೇಳುಸಾವಿರ ಸಂವಾಹನಗಳು ಭೂರಮಣಗೆ ಸೇರಿಹವು (ಚಂಪ್ರಸಾಂ. ೧೬-೧೬೫). [ಸಂ.]

**ಸಂವಾಹಿತ** (ಗು). ಭಾರವನ್ನು ಹೊತ್ತ ; ಜವಾಬ್ದಾರಿಯನ್ನು ಹೊಂದಿದ (?) : ಆತನಿಕ್ಕುವುದಂ ಕಂಡು ಸಂವಾಹಿತಸಮಸ್ತಬಲಂ ಮಹಾಬಲನೆಂಬೊಂ . . . ಎಚ್ಚೊಡೆ (ಶಾಂತಿಪು. ೪-೨೩ ವ). [ಸಂ.]

**ಸಂವಿಚ್ಛೂನ್ಯ** (ನಾ). ಅರಿವಿಲ್ಲದವನು ; ತಿಳಿಗೇಡಿ : ಒಡನೆ ಮೃಗಮೊಗೆದು ಸಂವಿಚ್ಛೂನ್ಯರೆನಗೆ ಸರಿಯೆಂದು ಪೇಳ್ವಂತೆಯ್ದೆ (ಪದ್ಮರಾ. ೧೧-೧೯). [ಸಂ.]

**ಸಂವಿಜ್ಜೀವನ** (ನಾ). ಜ್ಞಾನಿ ; ಬಲ್ಲವನು : ಎನ್ನೀ ಕಾವ್ಯದೊಳೆನಿತೆಡಹಿರಲನಿತಂ ಕಳೆದು ನೇವರಿಸುವುದೊಲವಿಂದೆನಸುಂ ಸದ್ಭಾವನ ಸಂವಿಜ್ಜೀವನ ಗುರ್ಜರದೇವನ ಕಥೆಯೊಳ್ (ಉದ್ಭದೇ. ೧-೩೩). [ಸಂ.]

**ಸಂವಿತ** (ನಾ). ಬಲ್ಲವನು ; ಜ್ಞಾನಿ : ಶ್ರುತಿಪುರಾಣಾಗಮರ ಹರಸ್ಯಾದಿತ ಪುರಾತನವಚನಶಾಸ್ತ್ರಪ್ರತತಿಯೊಳು ಸೋದಿಸಿದ ಸಂವಿತರ ಸಂಗ್ರಹವು (ಕ್ಷೇತ್ರಸು. ೧-೫). [ಸಂ. ಸಂವಿದ್]

**ಸಂವಿತ್ತಿ** (ನಾ). ೧. ಗ್ರಹಣಶಕ್ತಿ ; ಅನುಭವ. ೨. ಜ್ಞಾನ ; ಬುದ್ಧಿಶಕ್ತಿ : "ಪ್ರೇಕ್ಷಾ, ಪ್ರಜ್ಞಾ . . . ಸಂವಿತ್ತಿಃ, ಉಪಲಬ್ಧಿಃ – ಈ ೧೩ ಬುದ್ಧಿ" (ಹಲಾಯು. ೫೫-೧೭೯); ಚಿತ್ತಂ ಸ್ವಾಯತ್ತಪುಸ್ತಕಂ ಪಂಚಪದಂ ಮತ್ತಲ್ಲಿ ಲಿಖಿತಮದು ಸಂವಿತ್ತಿಯನಾಗಿಸದೆ ಭಾವಕಂಗರಿದುಂಟೇ (ಉಸಾರ. ೫೫-೩೩೫). ೩. ಭಾವಸಾಮರಸ್ಯ. ೪. ಒಪ್ಪಿಗೆ ; ಅಂಗೀಕಾರ. [ಸಂ.]

**ಸಂವಿತ್ತು** (ನಾ). ೧. ಅನುಭವ ; ಅರಿವು : ಪ್ರತಿಬಿಂಬದರಿವನು ಶುದ್ಧ ಸಂವಿತ್ ಅರಿವುದು (ಅನುಸಾ. ೩ - ೧೩೨). ೨. ಜ್ಞಾನ ; ಬುದ್ಧಿ : "ಸಂಖ್ಯಾರುಚಿ ಮತಿ ಪ್ರಜ್ಞೆ ಮೇಧೆ ಸಂವಿತ್ತುಮುಪಲಬ್ಧಿಯೆನೆ ಬುದ್ಧಿಯಕ್ಕುಂ" (ಮಂಗರಾ. ೬೬-೨); ಆ ಕಲೆಯೊಳುದ್ಭವಿಸಿತಾ ಶಕ್ತಿ ಶಕ್ತಿಯಿಂ ನೀಂ ಕೇಳು ಸಂವಿತ್ತು ಸಂವಿತ್ತಿನಿಂದವಸ್ತೋಕ ಚಿತ್ತುದಿಸಿತ್ತು (ವೀಶೈಪು. ೧-೫-೩೬); ಜೀವದ ಚಿತ್ತು ಜಗತ್ತಿನ ಸತ್ತು ತಿಳಿದಾನಂದದ ಸಂವಿತ್ತು (ಅರಳು. ೨೫೮-೨). ೩. ಒಪ್ಪಂದ ; ಒಡಂಬಡಿಕೆ. ೪. ಒಪ್ಪಿಗೆ ; ಅನುಮತಿ: "ಸಂವಿತ್ . . . ಪ್ರತಿಶ್ರವಃ, ಸಮಾಧಿಃ – ೧೦ ಅಂಗೀಕಾರದ ಹೆಸರುಗಳು" (ಸಿದ್ಧಾಂತಿ. ೪೫). ೫. ಪದ್ಧತಿ ; ರೂಢಿ. ೬. ಕಾಳಗ; ಯುದ್ಧ. ೭. ಯುದ್ಧದಲ್ಲಿ ಹೇಳುವ ಎಚ್ಚರಿಕೆಯ ಮಾತು. ೮. ಹೆಸರು; ಅಭಿಧಾನ. ೯. ಸಂತೋಷಗೊಳಿಸುವುದು. ೧೦. ಗುರುತು ; ಚಿಹ್ನೆ. [ಸಂ.]

**ಸಂವಿತ್ವ** (ನಾ). ಜ್ಞಾನ ; ಪಾಂಡಿತ್ಯ : ಶುದ್ಧ ಸಂವಿತ್ವದಿನೆಯ್ದಿದಳ್ಳೆಗಳ್ದ ಜಕ್ಕಲೆನಾರಿ ಸುರೇನ್ದ್ರಲೋಕಮಂ (ಎಕ. VII, ಶಿಕಾರಿ. ೧೯೬-೯೩ ; 1212 ?). [< ಸಂವಿತ್ತು + - ತ್ವ]

**ಸಂವಿದಾನ** (ಗು). ೧. ಕೂಡಿಸಿದ; ಸೇರಿಸಲ್ಪಟ್ಟ. ೨. ಹೊಂದಾಣಿಕೆಯುಳ್ಳ ; ಸಾಮಂಜಸ್ಯವುಳ್ಳ. [ಸಂ.]

**ಸಂವಿದಿತ** (ಗು). ೧. ತಿಳಿದ ; ಗೊತ್ತಾದ. ೨. ಒಪ್ಪಿಕೊಂಡ ; ಸಮ್ಮತಿಸಲ್ಪಟ್ಟ. (ನಾ). ೩. ಒಪ್ಪಂದ ; ಒಡಂಬಡಿಕೆ. [ಸಂ.]

**ಸಂವಿದ್ರುತ** (ಗು). ನಾಶವಾದ ; ಕಳೆಯಲ್ಪಟ್ಟ : ಕರ್ಣಯುಗಳಪಾಳಿಗಳೊಳ್ ಸಂವಿದ್ರುತರಜಂಗೆ ಹರಿ ವಿಲಸದ್ರುಚಿಮದ್ವಜ್ರಕುಂಡಲಂಗಳನಿಟ್ಟಂ (ಶಾಂತಿಪು. ೧೦-೫೯). [ಸಂ.]

**ಸಂವಿದ್ರೂಪ** (ನಾ). ಜ್ಞಾನವೇ ರೂಪಾಗಿರುವವನು ; ಪರಮಾತ್ಮ : ಕಲ್ಪಿತ ಪುರುಷನಾತ್ಮನೊ ವಿಮಲಸಂವಿದ್ರೂಪನಾತ್ಮನೊ ಜೀವಪರಮನಲಿ (ಕುವ್ಯಾಸ. ೯-೧೧); ಕರ್ಮಕಲಾಪವನು ಕೆಡೆಯೊಡೆದು ಸಂವಿದ್ರೂಪನಾತ್ಮನನಱಿದು ಸುಖಿಯಾಗು (ನಿಭಾಗ. ೪-೧೮-೧೩). [ಸಂ.]

**ಸಂವಿಧಾನ** (ನಾ). ೧. ರಚನೆ ; ನಿರ್ಮಾಣ : ಈ ಕಥೆಗಳನ್ನು ಹೆಣೆದು ಮಧ್ಯದಲ್ಲಿ ಕೆಲವು ನೈತಿಕ – ಧಾರ್ಮಿಕಸಮಸ್ಯೆಗಳನ್ನೂ ಜೋಡಿಸಿಕೊಂಡಿರುವುದರಿಂದ ಸಂವಿಧಾನವು ತುಂಬ ತೊಡಕಾಗಿದೆ (ಬಂಕಿಮ. ೨೦೧). ೨. ಕೌಶಲ ; ತಂತ್ರ : ಅವನ ಎರಡು ಕಾವ್ಯಗಳು ಒಂದೊಂದೂ ಸಂವಿಧಾನಕ್ಕೆ ನಿದರ್ಶನಗಳಾಗಿವೆ. ಇಲಿಯಡ್ ಶುದ್ಧರೀತಿಯದು ಮತ್ತು ವೇದನೆಯ ಕಥೆ ; ಒಡಿಸ್ಸಿಯು ಸಂಕೀರ್ಣರೀತಿಯದು (ಅಂಕಾ. ೧೩೧). ೩. ಏರ್ಪಾಡು ; ವ್ಯವಸ್ಥೆ : ಕುಮಾರಂಗೆ ಗಮನಮಂಗಳಸಂವಿಧಾನಮಂ ಮಾಳ್ಪವೇಳೆಯಿಂ (ಕಾದಂಬ. ೪೯೯). ೪. ಕಟ್ಟಳೆ ; ನಿಯಮ : ಶಿಕ್ಷಣರಂಗದ ದೃಷ್ಟಿ ಧ್ಯೇಯಗಳೂ ರೂಪುರೇಖೆಗಳೂ ಸಂವಿಧಾನ ಮತ್ತು ಕಾರ್ಯಯೋಜನೆಗಳೂ ಮಾರ್ಪಡುತ್ತಿದೆ (ಶಿಕ್ಷದ. ೬೮೬). ೫. ಯೋಜನೆ; ಉಪಾಯ. ೬. [ರಾಜನೀ] ರಾಜ್ಯವ್ಯವಸ್ಥೆಗೆ ಸಂಬಂಧಿಸಿದ ನಿಬಂಧನೆ,– ಶಾಸನ : ಭಾರತದ ಸಂವಿಧಾನವು . . . ಹದಿನಾಲ್ಕು ಭಾಷೆಗಳಿಗೂ ಸಂಸ್ಕೃತಕ್ಕೂ ಭಾಷಾಂತರವಾಗಬೇಕು (ಭಾಧಾನ. ಪೀಠಿಕೆ). ೭. [ಕಾವ್ಯಮೀ] ಅರ್ಥಗುಣಗಳಲ್ಲಿ ಒಂದು : ಅಗ್ನಿಪುರಾಣದಲ್ಲಿ . . . ಮಾಧುರ್ಯ, ಸಂವಿಧಾನ, ಕೋಮಲತ್ವ, ಉದಾರತಾ, ಪ್ರೌಢಿ, ಸಾಮಯಿಕತಾ ಇವು ಆರೂ 'ಅರ್ಥಗುಣ'ಗಳೆಂದೂ . . . ಹೇಳಿದೆ (ಕೈಪಿಡಿ. ೨೩೨ ಅಡಿಟಿ). [ಸಂ.]

**ಸಂವಿಧಾಯಕ** (ಗು). ೧. ಕ್ರಮವಾದ ; ವ್ಯವಸ್ಥಿತವಾದ. (ನಾ). ೨. ವ್ಯವಸ್ಥೆಯನ್ನು ನೋಡಿಕೊಳ್ಳುವವನು ; ವ್ಯವಸ್ಥಾಪಕ : ಹಡಪಿಗ ಚಾಹಿ ಸೂತರ ಸಂದಣಿಗಳೌಷಧಿಕ ಹಯಗಜ ಸಂವಿಧಾಯಕರು ನಿಂದುದು (ಕುವ್ಯಾಗ. ೨-೨). [ಸಂ.]

**ಸಂವಿಭಾಗ** (ನಾ). ೧. ವಿಭಾಗ ; ವಿಂಗಡಣೆ : ಸಾತಾಸಾತಸಂವಿಭಾಗದಿನಿರ್ತೆಱನಪ್ಪ ವೇದನೀಯಮುಮಂ . . . ಕೈಕೊಂಡು (ಸುಕುಮಾ. ೩-೩೯ ವ). ೨. ಪಾಲು ; ಭಾಗ ; ಹಿಸ್ಸೆ: ವನಹರಿಣಕುಲಂ ನಿಜಲೋಚನಶೋಭಾಸಂವಿಭಾಗಮಂ ಕೊಟ್ಟುದೋ . . . ಎನೆ ಮುನಿಪನ ದೀರ್ಘಲೋಚನದ್ವಯಮೆಸೆಗುಂ (ಕಾದಂಪೂ. ೭೩೨). [ಸಂ.]

**ಸಂವಿಭಾಗಂಗೆಯ್** (ಕ್ರಿ). ಭಾಗ ಮಾಡು ; ಹಂಚು : ಪಡದೊಡಮೆಯು . . . ತನ್ನೊಡವುಟ್ಟಿದ ಗಂಡುಗೂಸುಗಳ್ಗಂ ಅವರೊಳ್ಪೆಂಗೂಸುಗಳ್ಗಂ ಸಂವಿಭಾಗಂಗೆಯ್ದು (ಚಾವುಂಪು. ೨೧೦). [ಸಂವಿಭಾಗ + ಕೆಯ್$_1$]

**ಸಂವೀಕ್ಷಣ** (ನಾ). ೧. ನೋಡುವುದು ; ದೃಷ್ಟಿಸುವುದು : ಶೋಭಾಶಯ್ಯೆಯಿಂದುಪ್ಪವಡಿಸಿ ಘೃತಸಂವೀಕ್ಷಣಂ ವಿಪ್ರ ವೇದಧ್ವನಿ ಗೀತಾಕರ್ಣನಂ . . . ನಿತ್ಯದಾನಾದಿ ನುತಾನೇಕ ಪ್ರಭಾತಕ್ರಿಯೆಗಳನಿತುಮಂ ಮಾಡಿದಂ (ಕುಸುಮಾ. ೪-೮೧). ೨. ಶೋಧನೆ ; ತಪಾಸಣೆ. [ಸಂ.]

**ಸಂವೀಕ್ಷಣಂಗೈ** (ಕ್ರಿ). ಗಮನವಿಟ್ಟು ನೋಡು ; ಎದುರು ನೋಡು : ಭೈರವ ಮುಹೂರ್ತಮಂ ಸರ್ವೇಂದ್ರಿಯಂಗಳಿಂ ಚಿತ್ತದಿಂದಾತ್ಮದಿಂ ಸಂವೀಕ್ಷಣಂಗೈದು ನೆರೆದಿರ್ದ ಪರಿಷತ್ತು ನಿಶ್ಶಬ್ದತೆಯ ಕಡಲೊಳಳ್ದತ್ತು (ಶ್ರೀರಾಮಾ. ೪೭-೫೧೬). [ಸಂವೀಕ್ಷಣ + ಕೈ$_1$ (< ಕೆಯ್$_1$)]

**ಸಂವೀಕ್ಷಿಸು** (ಕ್ರಿ). ಒಂದೇ ಸಮನೆ ನೋಡು ; ದಿಟ್ಟಿಸು : ಜಟಾಧಾರಿಯಂ . . . ಚಂದ್ರಮುಖಿ ನಿಂತು ಸಂವೀಕ್ಷಿಸಿದಳಾ ತನ್ನೆಡೆಗೆ ಬರ್ಪ ಸಂನ್ಯಾಸಿಯಂ (ಶ್ರೀರಾಮಾ. ೨೪೩-೪೧೩). [ಸಂವೀಕ್ಷಣ + - ಇಸು$_3$]

**ಸಂವೀಕ್ಷೆ** (ನಾ). ಸ್ಪಷ್ಟವಾದ ನೋಟ, – ಕಾಣ್ಕೆ : ಬುದ್ಧಿಪ್ರಕಾಶದಿಂದಂತರನುಭವ ಶೋಧೆ ಸಿದ್ಧವಾ ಶೋಧೆಯಿಂ ಸತ್ಯಸಂವೀಕ್ಷೆ (ಮಂಕುತಿ. ೫೪೫). [ಸಂ.ಸಂವೀಕ್ಷಾ]

**ಸಂವೀಜಿತ** (ಗು). ಬೀಸಲ್ಪಟ್ಟ : ವಾಜಿರಾಜಿಶ್ರವಣಚಮರಜಶ್ರೇಣಿ ಸಂವೀಜಿತಾಶಾಂಬರ ಭಾಗಂ (ಆದಿಪು. ೪-೨೪). [ಸಂ.]

**ಸಂವೀತ** (ಗು). ೧. ಉಡುಪನ್ನು ಧರಿಸಿಕೊಂಡ ; ಬಟ್ಟೆಯನ್ನು ತೊಟ್ಟ. ೨. ಮುಚ್ಚಿದ ; ಆವರಿಸಿದ. ೩. ಸಿಂಗರಿಸಿದ ; ಅಲಂಕರಿಸಲ್ಪಟ್ಟ. ೪. ಸುತ್ತುವರಿದ; ಬಳಸಲ್ಪಟ್ಟ. (ನಾ). ೫. ಮುಚ್ಚಿದುದು : "ಅಪವಾರಿತಂ,

ಪಿಹಿತಂ, ಸಂವೀತಂ, ಸಂವೃತಂ, ಸ್ಥಗಿತಂ – ಈ ೫ ಮುಚ್ಚಿದುದು'' (ಹಲಾಯು. ೧೨೨-೫೮). ೬. ಬಳಸಿದುದು; ಸುತ್ತಿಕೊಂಡಿರುವುದು : ''ವೇಷ್ಟಿತಂ, ವಲಯಿತಂ, ಸಂವೀತಂ, ರುದ್ಧಂ, ಆವೃತಂ, ೫ . . . ಸುತ್ತಿಕೊಳ್ಳಲ್ಪಟ್ಟದ್ದು'' (ಸಿದ್ಧಾಂತಿ. ೩೪೭). [ಸಂ.]

**ಸಂವ್ಯಜಿತ** (ನಾ). [ಸಂಗೀತ] ತಾಳಭೇದಗಳಲ್ಲಿ ಒಂದು : ಧ್ರುವ . . . ಏಕವೆಂಬ ಸಪ್ತತಾಳಭೇದಂಗಳಂ ಅವುಗಳೊಳು ಚಂಚತ್ಪುಟ . . . ಸಂವ್ಯಜಿತ . . . ಜಯಾಳಮೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮). [ಸಂ. ?]

**ಸಂವೃತ** (ಗು). ೧. ಮುಚ್ಚಿದ; ಹೊದಿಸಿದ : ಶುದ್ಧರತ್ನತ್ರಯಿಯಾಧೃತಭರ್ಮಂ ಕುಮತಾವಳೀ ಶಿಶಿರಘರ್ಮಂ ಸಾಧುಸಂದೋಹಸಂವೃತವರ್ಮಂ . . . ನಮಗಾರ್ಮಮಕ್ಕೆ ಜಿನಧರ್ಮಂ (ಚಂದ್ರಪ್ರ. ೧-೮). ೨. ಬಚ್ಚಿಟ್ಟ ; ಅಡಗಿಸಲ್ಪಟ್ಟ : ಮದಿರಾಪಾನಪ್ರಮತ್ತ ಪ್ರಮದಾಜನಂಗಳ್ ಬಾಧಿಸುತ್ತಮಿರೆ ಕೂರ್ಮದವೋಲ್ ಸಂವೃತೇಂದ್ರಿಯಹೃದಯ ವಿಕಾರಕಲಿತನುಂ . . . ಅಪ್ಪ ಜಿನಯೋಗಿಗೆ ನಿಕ್ಕುವಂ ಸ್ತ್ರೀಬಾಧಾಪರೀಷಹಜಯಮಕ್ಕುಂ (ತತ್ತ್ವಪ್ರ. ೩೩೪). ೩. ಭದ್ರಪಡಿಸಿದ ; ಜೋಪಾನ ಮಾಡಿದ. ೪. ಸುತ್ತುವರಿದ ; ಬಳಸಲ್ಪಟ್ಟ. ೫. ತುಂಬಿದ ; ಭರ್ತಿಯಾದ. ೬. ಸೇರಿದ ; ಕೂಡಿದ. (ನಾ). ೭. ಮುಚ್ಚಿದುದು ; ಆವರಿಸಲ್ಪಟ್ಟುದು : ತರಕ್ಷುದಂಶಶತಸಂವೃತಮಿರ್ದುದದೊಂದು ತಾಣದೊಳ್ (ರಾಜಶೇ. ೫-೯೨). ೮. ಬಳಸಿದುದು ; ಸುತ್ತುವರಿಯಲ್ಪಟ್ಟುದು : ಸಚಿತ್ತಾಚಿತ್ತಶೀತೋಷ್ಣನಿವೃತಸಂವೃತಾದಿಭೇದದಿಂ ಚತುರಶೀತಿಲಕ್ಷಪ್ರಮಾಣ ಯೋನಿಮುಖಂಗಳೊಳಾವರ್ತನ ಪರಿವರ್ತನದಿಂ ದುರಿತವರ್ತಿಯಾಗಿ ನಮೆವ ಸಂಸಾರಿಜೀವಕ್ಕೆ . . . ಮುನಿಪುಂಗವಂ ಪ್ರಸಾದಂಗೆಯ್ದಂ (ಸುಕುಮಾ. ೫-೩೨ ವ). ೯. ತುಂಬಿದುದು ; ಸಮೃದ್ಧವಾದುದು : ಪಲವು ಪರಿಯಾದ ಸಂವೃತಗಳಾದ ಪಲವು ಪುಷ್ಪಪ್ರದಾಳಗಳಿಂದ ಸಂಕುಲಮಾದ (ಕಕುಮಾ. ೨೦೪-೧೦). ೧೦. = ಸಂವೃತಾಕಾರ: ಸಂವೃತಂಗೆ ಬಂಧಮಿಲ್ಲಪ್ಪುದಱಿಂ ತತ್ಪ್ರತ್ಯನೀಕಮನಱಿಪಲ್ವೇಡಿ ತದನಂತರಂ ಸಂವರವಚನಂ (ತತ್ತ್ವಪ್ರ. ೮). ೧೧. [ವ್ಯಾಕ] ಬಾಯಿತೆರೆದು ಉಚ್ಚರಿಸಲಾಗದ ಶಬ್ದ : ಸ್ವರಗಳಲ್ಲಿ ಮೊದಲನೆಯದು ಅಕಾರ . . . ಪ್ರಯೋಗಕಾಲದಲ್ಲಿ ಇದರ ಉಚ್ಚಾರಣೆಗೆ 'ಸಂವೃತ' ಪ್ರಯತ್ನವೆಂದೂ ಪ್ರಕ್ರಿಯಾವಿವೃತಪ್ರಯತ್ನವೆಂದೂ ಸಿದ್ಧಾಂತಕೌಮುದಿಯಲ್ಲಿ ಹೇಳಿದೆ (ಸಂಶೋಧ. ೧೬). [ಸಂ.]

**ಸಂವೃತಾಕಾರ** (ನಾ). ತನ್ನ ಭಾವನೆಗಳನ್ನು ಹೊರಗೆ ತೋರ್ಪಡಿಸದಿರುವವನು; ತನ್ನ ವಿಚಾರಗಳನ್ನು ಮನಸ್ಸಿನಲ್ಲೇ ಅಡಗಿಸಿ ಇಡುವವನು : ಅಱಿಯೆ ನುಡಿದು ಮಾಣ್ದ ಸನ್ಮತಿಯ ನುಡಿಯಂ ಕೇಳ್ದು ಮುನಿದು ಸಂವೃತಾಕಾರನುಂ ನಿಭೃತೇಂಗಿತನುಮಾಗಿ . . . ನುಡಿವಾಗಳ್ (ಶಾಂತಿಪು. ೨-೫೧ ವ). [ಸಂ.]

**ಸಂವೃತಿ** (ನಾ). ಮರೆಮಾಚುವಿಕೆ ; ಮುಚ್ಚುವಿಕೆ : ಆದಿದೇವನ ತಪೋಲಕ್ಷ್ಮಿಗೆ ವಿಸ್ಮಯಾಕ್ಷಿಪ್ತಚಿತ್ತನಾಗಿ ನಿಜಾಕೃತಿಸಂವೃತಿಯಿಂ ತ್ರಿಃಪ್ರದಕ್ಷಿಣಂಗೆಯ್ದು (ಆದಿಪು. ೯-೧೦೦ ವ). [ಸಂ.]

**ಸಂವೃತ್ತ** (ಗು). ೧. ಒದಗಿದ ; ಉಂಟಾದ. ೨. ನೆರವೇರಿದ. [ಸಂ.]

**ಸಂವೃದ್ಧಿ** (ನಾ). ಚೆನ್ನಾದ ಏಳಿಗೆ ; ಅತಿಶಯವಾದ ಅಭಿವೃದ್ಧಿ : ಕ್ಷಯಮಂ ಮಿಥ್ಯಾತ್ವಕರ್ಮಕ್ಕಮರ್ಥಗುಣದ ಸಮ್ಯಕ್ತ್ವಸತ್ವಕ್ಕೆ ಸಂವೃದ್ಧಿಯುಮಂ ಮುಂ ಮಾಡಿ (ಎಕ. VII, ಶಿಕಾರಿ. ೧೯೬-೨೧ ; 1212?) ; ಸಿದ್ಧಿಯೇನೆಲೆ ಭೂಪ ಮಖಸಂವೃದ್ಧಿಯನು ನಿನಗನ್ಯವಿಷಯಶ್ರದ್ಧೆಯುಳ್ಳವನಲ್ಲಲೈ (ನಿಭಾಗ. ೪-೧೩-೧೮). [ಸಂ.]

**ಸಂವೇಗ** (ನಾ). ೧. (ಸಂತೋಷ, ಭಯ ಮುಂತಾದುವುಗಳಿಂದ ಉಂಟಾಗುವ) ಕಾತರ ; ಉದ್ವೇಗ ; ಉದ್ರೇಕ : ಮಾನವ ಅಂತಃಕರಣವನ್ನೂ ಸಂವೇಗಗಳನ್ನೂ ರಸದ ನಿರ್ಮಮಕಾರಯುತಪಾಕವಾಗಿ ಸ್ಥಿತ್ಯಂತರಗೊಳಿಸುವಾಗ ಲೇಖಕನು ತನ್ನ ವಾದವನ್ನು ಮೀರಿದ ಎತ್ತರಕ್ಕೆ ಏರಬೇಕಾಗುತ್ತದೆ. ಆದರೆ ಹದಿನಾರಾಣೆ ಮಾನವತಾವಾದಿಯು . . . ಸಂವೇಗಗಳನ್ನೇ ರಸವೆಂದು ಕರೆದು ಓದುಗರಿಗೆ ಉಣಬಡಿಸುತ್ತಾನೆ (ವಂಶವೃ. ೭ ಓನ್ನುಡಿ). ೨. ಹುರುಪು ; ಉತ್ಸಾಹ. ೩. ಆತುರ ; ತ್ವರೆ. ೪. ಗರ್ವ ; ಸೊಕ್ಕು. ೫. ಸಂಭ್ರಮ ; ಸಡಗರ: ''ಆವೇಶಃ, (ಸಂವೇಗಃ), ಸಂರಂಭಃ, ಸಂಭ್ರಮಃ, ಆಟೋಪಃ – ಈ ೫ ಸಂಭ್ರಮಂ'' (ಹಲಾಯು. ೧೯೯-೩೭). ೬. [ಜೈನ] ತೀರ್ಥಂಕರತ್ವವನ್ನು ಸಾಧಿಸಿ ಕೊಡುವ ಹದಿನಾರು ಬಗೆಯ ಭಾವನೆಗಳಲ್ಲಿ ಒಂದು ; ವೈರಾಗ್ಯ ; ''ಧರ್ಮಾನುರಾಗ ಮತ್ತು ಸಂಸಾರಭೋಗವಿರಾಗಗಳೇ ಮುಖ್ಯ ಲಕ್ಷಣವಾಗುಳ್ಳುದು ; ಸಮ್ಯಕ್ತ್ವಗುಣ'' (ಜೈನಕೋ. ೨೭೦): ತೀರ್ಥಕರ ಮಹಾಪುಣ್ಯಮಬಂಧಕಾರಗಳಪ್ಪ ದರ್ಶನವಿಶುದ್ಧಿ . . . ಸಂವೇಗೋಶಕ್ತಿತಃತ್ಯಾಗತಪಸಿ . . . ಎಂಬ ಷೋಡಶಭಾವನೆಗಳೊಳ್ (ಚಾವುಂಪು. ೨೪೧) ; ಆ ಪುರುಷನತಿಪರುಷವಚನಂಗಳಿಂ ತಿರಸ್ಕರಿಸಿ ನುಡಿದೊಡದುವೆ ನಿರ್ವೇಗದಿಂ ಸಂವೇಗಂ ಪುಟ್ಟಿ (ಸುಕುಮಾ. ೫-೭ ವ) ; ಸಂವೇಗಾಮೃತಮಂ ಸೇವಿಸೆ ನೀಗದುದೇಕಯ್ಯ ಚಿಂತೆಯೆಂಬತಿವಿಷಮಂ (ಜೀವಸಂ. ೧೭೧-೧೫). [ಸಂ.]

**ಸಂವೇದ** (ನಾ). ೧. ಇಂದ್ರಿಯಗಳ ಮೂಲಕ ಬರುವ ಜ್ಞಾನ ; ಅನುಭವ : ''ಸಂವೇದಃ, ವೇದನಾ – ೨ ಸುಖದುಃಖಾದಿ ವಿಷಯಕವಾದ ಮಾನಸಿಕಾನುಭವದ ಪೆಸರುಗಳು, ಒಳ ಅನುಭವ'' (ಸಿದ್ಧಾಂತಿ. ೩೫೬). ೨. ಬುದ್ಧಿಶಕ್ತಿ ; ಜ್ಞಾನ. [ಸಂ.]

**ಸಂವೇದನ** (ನಾ). ಇಂದ್ರಿಯಗಳಿಂದ ಅಥವಾ ಬುದ್ಧಿಯಿಂದ ಲಭಿಸುವ ಜ್ಞಾನ; ಅನುಭವ : ಈ ಸಂವೇದನದಲ್ಲಿ ಗ್ರಾಹ್ಯವೆಂಬ ಘಟಾದಿವಸ್ತುವೂ ಗ್ರಾಹಕವೆಂಬ ಜೀವಾತ್ಮವಸ್ತುವೂ ಗ್ರಹಣವೆಂಬ ಸಂವೇದನವೂ – ಈ ಮೂರೂ ತೋರುವುವು (ಓಂದಸಾ. ೧೭೭). [ಸಂ.]

**ಸಂವೇದನಶೀಲ** (ನಾ). ಗ್ರಹಿಸುವ ಶಕ್ತಿಯುಳ್ಳ ವ್ಯಕ್ತಿ : ಸ್ತ್ರೀಯರು, ಪುರುಷರಷ್ಟು ಚತುರರಾಗಿರದಿದ್ದರೂ ಅವರಿಗಿಂತ ಹೆಚ್ಚು ಸಂವೇದನಶೀಲರಾಗಿರುವುದರಿಂದ ಆಧ್ಯಾತ್ಮ ವಿಚಾರಗಳನ್ನು ಬಹುಸುಲಭವಾಗಿ ಅರಿತುಕೊಳ್ಳುತ್ತಾರೆ (ಆಶ್ರಮ. ೯೩). [ಸಂ.]

**ಸಂವೇದನಿ** (ನಾ). [ಜೈನ] ಧಾರ್ಮಿಕವ್ಯವಹಾರಗಳನ್ನು ತಿಳಿಸುವ ನಾಲ್ಕು ಬಗೆಯ ಕಥೆಗಳಲ್ಲಿ ಒಂದು : ಧರ್ಮಕಥೆಯೆಂಬುದು ಆಕ್ಷೇಪಣೆಯುಂ ವಿಕ್ಷೇಪಣೆಯುಂ ಸಂವೇದನಿಯುಂ ನಿರ್ವೇದನಿಯುಮೆಂದು ಚತುರ್ವಿಧಮಕ್ಕುಂ . . . ಜಿನಧರ್ಮಫಲ ವಿಭೂತಿಯಂ ಪೇಟ್ಟುದು ಸಂವೇದನಿಯೆಂಬುದು (ಚಾವುಂಪು. ೩೮೦). [ಸಂ. ಸಂವೇದನೀ]

**ಸಂವೇದನೆ** (ನಾ). ೧. ಜ್ಞಾನ ; ಅನುಭವ : ಭ್ರಾಂತಿವಶದಿಂ ಗ್ರಾಹ್ಯಗ್ರಾಹಕ ಸಂವೇದನಾಕಾರತ್ರಯಾಕ್ರಾಂತಂಗಳ್ (ಆದಿಪು. ೨-೯ ವ); ಮನಸ್ಸು ಹಿಗ್ಗಿದಂತೆ, ಕಲ್ಪನೆಯ ಶಕ್ತಿ ಅಧಿಕವಾದಂತೆ, ಸಂವೇದನೆಗಳೂ ಅಧಿಕವಾಗುತ್ತವೆ (ಸ್ವಪ್ನಹೊ. ೨೪೪). ೨. ಅರಿವು; ತಿಳಿವಳಿಕೆ : ಒಂದು ಬಗೆಯ ಅಂಗರಚನೆಯನ್ನುಳ್ಳ ಪ್ರಾಣಿ ಯಾವುದೇ ಒಂದು ನಿರ್ದಿಷ್ಟ ಆವರಣಕ್ಕೆ ಹೊಂದಿಕೊಂಡು ಅದು ತನಗೆ ಹಿತವೆಂಬ ಸಂವೇದನೆಯನ್ನು ಹೊಂದಿದ್ದು . . . ಈ ಆವರಣ ಒಗ್ಗದಿದ್ದಾಗ ಅನಿಷ್ಟವೆಂದೂ ಭಾವಿಸಿರಬೇಕು (ಸೌಂದಸ. ೩). ೩. ನವ್ಯಸಾಹಿತ್ಯಕ್ಕೆ ಸಂಬಂಧಿಸಿದಂತೆ ಇರುವ ಅರಿವು ; ನವ್ಯಪ್ರಜ್ಞೆ : ಇದು ನವೀನಪ್ರಜ್ಞೆಯಲ್ಲಿ ಬರೆದ ಶ್ರೇಷ್ಠಕಥೆಗಳ ಪ್ರಾತಿನಿಧಿಕಸಂಗ್ರಹವೇನಲ್ಲ . . . 'ಹೊಸ ಸಂವೇದನೆಯ ಕತೆಗಳು' ಎಂದು ಕರೆಯುವದು ಕೂಡ ಈ ಸಂಗ್ರಹಕ್ಕೆ ಭಾರವಾಗಿದೆಯೋ ಏನೋ! (ಹೊಸಕ್ತ. ೨೯೭). [ಸಂ. ಸಂವೇದನ, ಸಂವೇದನಾ]

**ಸಂವೇದಿ** (ಗು). ಸಂಪೂರ್ಣವಾಗಿ ಗ್ರಹಿಸಿದ ; ಚೆನ್ನಾಗಿ ತಿಳಿದ : ಸಾಹಿತ್ಯವಿದ್ಯಾಬ್ಧಿ ವೈದಿಕಸಂವೇದಿಮಹಾನುಭಾವಂ (ಸುಕುಮಾ. ೨.-೩೮). [ಸಂ. ಸಂವೇದಿನ್]

**ಸಂವೇದಿಸು** (ಕ್ರಿ). ೧. ಸಂಪೂರ್ಣವಾಗಿ ಗ್ರಹಿಸು ; ಚೆನ್ನಾಗಿ ತಿಳಿ : ಬಸವಪುರಾತನದ ಗೀತಾರ್ಥಮಾತ್ರಕದಿ ಕೋದ ಮಣಿಗಣಸೂತ್ರದಂತಿರೆ ಆದಿಗಣಚರಿತಂಗಳೊಳು ಸಂವೇದಿಸಲು ಬಸವನ ಚರಿತೆಯಂ ಬಣ್ಣಿಸುವೆನೊಸೆದು (ಬಸವು. ೧-೨೩); ಸಂಘರ್ಷದ ಬೇಗೆಯನ್ನು . . . ಪ್ರಜ್ಞಾಪೂರ್ವಕವಾಗಿ ಸಂವೇದಿಸಿ, ಅದರಿಂದ ಪಾರಾಗಲು . . . ಯತ್ನಿಸುತ್ತಾರೆ (ವಂಶವೃ. ೪ ಓನ್ನುಡಿ). ೨. ಹೇಳು ; ನಿರೂಪಿಸು : ಮಾದಿರಾಜಯ್ಯಂಗಳುಂ ಮಾದಣ್ಣನೊಳು ಸಂವೇದಿಸಲು ಪ್ರಾಣವನೊದಗಲಿತ್ತಂತು ಸಲಹಿದನು (ಬಸವು. ೪೭-೬೯). [ಸಂವೇದನ + – ಇಸು]

**ಸಂವೇದ್ಯ** (ಗು). ೧. ಗ್ರಹಿಸುವ ; ತಿಳಿಯಲ್ಪಡುವ. ೨. ತಿಳಿಯಪಡಿಸುವ. (ನಾ). ೩. ಅನುಭವಕ್ಕೆ ಸಿಗುವಂಥದು ; ಅನುಭವವೇದ್ಯವಾದುದು : ''ಸಂವೇದ್ಯಂ ವೇದನಿಯೆನಿಕ್ಕುಂ'' (ವಸ್ತುಕೋ. ೧೧೫-೨೫) ; ಜಗದೀಶ್ವರನ ಮಹಿಮೆ ಸಂವೇದ್ಯವಹುದಿಲ್ಲಿ ಭವ್ಯಸೌಂದರ್ಯಶೀಲದ ವನ್ಯಶಾಂತಿಯಲಿ (ಶ್ರೀರಾಮಾ. ೩೨-೧೧೭). ೪. ಎರಡು ನದಿಗಳು ಸೇರುವ ಸ್ಥಳ ; ಸಂಗಮ. [ಸಂ.]

**ಸಂವೇಶ** (ಗು). ೧. ಪ್ರವೇಶಿಸಿದ ; ಒಳಹೊಕ್ಕ : ಇನ್ನೇಕೆ ಸಂವೇಶಾನುಭೂತಾನುಭವ ದುರ್ವ್ಯಸನ ಸಾಕದಂತಿರಲಿನ್ನು ಬಿಡು (ಕುವ್ಯಾಗ. ೮-೫೯). (ನಾ). ೨. ಪ್ರವೇಶಿಸುವುದು; ಒಳಹೊಗುವುದು. ೩. ಒಳಹೊಗುವ ಸ್ಥಳ ; ಪ್ರವೇಶದ್ವಾರ : ಪುರದ ಬಹಿರಾವರಣಸೀಮಾಂತರದ ಸಂವೇಶದಲಿ ಬೀಡಾಯ್ತರಸುಮನ್ನೆಯ ಮಂಡಲೇಶ್ವರ ಸಾರ್ವಭೌಮರಿಗೆ (ತೊರರಾ. ೧-೧೨-೩೦). ೪. ನಿದ್ರೆ ; ನಿದ್ದೆ : "ನಿದ್ರಾ, ಶಯನಂ, ಸ್ವಾಪಃ, ಸ್ವಪ್ನಃ, ಸಂವೇಶಃ – ೫ ನಿದ್ದೆಯ ಹೆಸರುಗಳು" (ಸಿದ್ಧಾಂತಿ. ೭೦). ೫. ಕನಸು; ಸ್ವಪ್ನ. ೬. ಆಸನ ; ಪೀಠ. ೭. ಸುರತ; ಸಂಭೋಗ. ೮. ಮುಂಭಾಗ; ಮುಂದುಗಡೆ: ಪರುಟವಿಸಿದರು ವಿವಿಧದ್ರವ್ಯದ ಸರಸಿಗಳ ಸಂವೇಶದಲಿ [ಪಾಠಾಂ. ಸಂಕೇತಗಳ]ಕೊಪ್ಪರಿಗೆ ಯಂತ್ರದ್ರೋಣಿಗಳ ಜೂಟಾಳಸೂತ್ರಗಳ (ತೊರರಾ. ೧-೭-೮). [ಸಂ.]

**ಸಂವೇಶನ** (ನಾ). ೧. ಮಲಗಿಸುವಿಕೆ. ೨. ಮಲಗುವಿಕೆ. ೩. ಅಡಗುವಿಕೆ; ಸೇರಿಹೋಗುವಿಕೆ : ಭೂತಗಳ ಸಂವೇಶನ (ಅಡಗುವದು), ಉದ್ಗಮನ (ಹೊರಟು ಬರುವದು)– ಇವು ಭೂತಗಳ ಧರ್ಮವಲ್ಲವೆ? (ಬ್ರಹ್ಮಭಾ. ೧೯೫ ಅಡಿಟಿ). ೪. ಸುರತ ; ಸಂಭೋಗ : "ಸಂವೇಶನಂ, ನಿಧುವನಂ . . . ಮೋಹನಂ – ಈ ೭ ಸುರತಂ" (ಹಲಾಯು. ೯೩-೪೧೫). [ಸಂ.]

**ಸಂವೇಶಿಸು** (ಕ್ರಿ). ಹೊಗು ; ಪ್ರವೇಶಿಸು : ತದ್ವಾರಕಿಯ ಸಂವೇಶಿಸಿದರ್ಶ್ಯ ಗುರುಜ ಕೃಪ ಕೃತವರ್ಮರೊಲವಿನಲಿ (ಕುವ್ಯಾಗ. ೧೧-೨೫). [ಸಂವೇಶ + – ಇಸು₃]

**ಸಂವೇಷ್ಟನ** (ನಾ). ೧. ಮುತ್ತುವಿಕೆ ; ಕವಿಯುವಿಕೆ. ೨. ಮುಸುಕು ; ಆಚ್ಛಾದನೆ. [ಸಂ.]

**ಸಂವ್ಯಾನ** (ನಾ). ೧. ಮುಚ್ಚುವಿಕೆ ; ಆಚ್ಛಾದಿಸುವಿಕೆ. ೨. ಉಡುಪು ; ವಸ್ತ್ರ. ೩. ಮೇಲೆ ಹೊದೆಯುವ ಬಟ್ಟೆ ; ಉತ್ತರೀಯ, ಸೆರಗು ಮುಂತಾದವು; ಮೇಲುದು : ದುಕೂಲಾಂಬರಮನುಟ್ಟು ಪೊಸವಾವುಗೆಯಂ ಮೆಟ್ಟಿ ಕನಕ ಸ[ಂವ್ಯಾನ]ಸೂತ್ರನಾಚಮಿಸಿ (ಪಂಪಭಾ. ೧೨-೧೦೮ ವ) ; ತೆಱಂಬೊಳೆದು ಪಾಱುತಿರ್ಪ ಸಂವ್ಯಾನಮುಂ ನೊಸಲೊಳ್ ತಳ್ತ ಕುರುಳ್ಗಳುಂ . . . ಒಪ್ಪಮನೀಯೆ ವಿಹ್ವಳತೆಯಿಂ ಬಂದತ್ತು ಗೋಪೀಜನಂ (ಜಗವಿ. ೩-೯೦). [ಸಂ.]

**ಸಂಶಪ್ತಕ** (ನಾ). ಯುದ್ಧರಂಗದಿಂದ ಹಿಮ್ಮೆಟ್ಟುವುದಿಲ್ಲವೆಂದು ಪ್ರತಿಜ್ಞೆ ಮಾಡಿ, ಶತ್ರುಗಳ ಹೋರಾಟಕ್ಕೆ ಅಡ್ಡಿಯನ್ನುಂಟು ಮಾಡುವ ಯೋಧ, – ವೀರ; ℙ ಭಾರತಯುದ್ಧದಲ್ಲಿ ತ್ರಿಗರ್ತರಾಜನಾದ ಸುಶರ್ಮ ಮತ್ತು ಅವನ ತಮ್ಮಂದಿರಾದ ಸತ್ಯೇಷು, ಸತ್ಯಕರ್ಮ, ಸತ್ಯದೇವ, ಸತ್ಯರಥ – ಎಂಬ ಐವರಿಗೆ ಈ ಹೆಸರು ರೂಢಿಯಲ್ಲಿದೆ : "ಸಂಶಪ್ತಕಃ . . . ಆಣೆಯಿಟ್ಟುಕೊಳ್ಳುವದರಿಂದಲೂ ಸಂಗ್ರಾಮತ್ – ಕಾಳಗದಿಂದಲೂ, ಅನಿವರ್ತಿನಃ – ಹಿಂದಕ್ಕೆ ತಿರಗದೇಯಿರುವವರ ಹೆಸರು" (ಸಿದ್ಧಾಂತಿ. ೨೬೭) ; ಧನಂಜಯನು ಸಂಶಪ್ತಕರ ಸೈನ್ಯದ ಮೇಲೆ ನಡೆಯಲು ಆ ಬಳಿಕ ಧೃತರಾಷ್ಟ್ರನ ಕಡೆಯವರು . . . ಅಭಿಮನ್ಯು ಕುಮಾರನನ್ನು ಕೊಂದುಹಾಕಿದರು (ಭಾಸನಾ. ೫೭) ; ಈ ಸುಶರ್ಮ ಮುಂತಾದ ಸಂಶಪ್ತಕರು, ನನ್ನನ್ನು ಯುದ್ಧಕ್ಕೆ ಕರೆಯುತ್ತಾರೆ ; ನಾನು ಹೋಗುತ್ತೇನೆ (ವಚಭಾ. ೨೮೧). [ಸಂ.]

**ಸಂಶಯ** (ನಾ). ೧. ಅನುಮಾನ ; ಸಂದೇಹ : ಸಂಶಯ ವಿಪರ್ಯಯಸಾವದ್ಯಾನ ವದ್ಯವಸಾಯ ಸ್ವಭಾವರಹಿತಮಾಗಿ ಜೀವಾದಿ ಪದಾರ್ಥಯಾಥಾತ್ಮ್ಯಾವಗಮಂ ಸಮ್ಯಗ್‌ಜ್ಞಾನಂ (ಆದಿಪು. ೧೦-೬೩ ವ); ಹುಟ್ಟಿಸಿದ ದೇವ ತಾ ಹೊಣೆಗಾಱನಾಗಿರಲು ಗಟ್ಯಾಗಿ ರಕ್ಷಿಪನು ಇದಕೆ ಸಂಶಯವಿಲ್ಲ (ಕನಕ. ೬೧-೧) ; ಇದು ಗಂಭೀರವಾದ ಸಮಸ್ಯೆಗಳಿಗೆ ಮುನ್ನುಡಿಯಾಗುವುದರಲ್ಲಿ ಸಂಶಯವಿಲ್ಲ (ದೇಕನ್ನ. ೩೯). ೨. ಅಪಾಯ ; ವಿಪತ್ತು. ೩. ಮನೋವೃತ್ತಿಯ ನಾಲ್ಕು ಪ್ರಕಾರಗಳಲ್ಲಿ ಒಂದು : ವೃತ್ತಿಯು ಸಂಶಯ, ನಿಶ್ಚಯ, ಗರ್ವ ಮತ್ತು ಸ್ಮರಣ ಎಂದು ನಾಲ್ಕು ವಿಧ (ಭಾತತ್ತ್ವ. ೫೮೮) ; ಜೀವಾತ್ಮ ಪರಮಾತ್ಮರನ್ನು ಆಶ್ರಯಿಸಿಕೊಂಡಿರುವ ದ್ರವ್ಯವು ಜ್ಞಾನ. ಇದು ಪ್ರತ್ಯಾತ್ಮನಿಗೂ ಬೇರೆ ಬೇರೆಯಾಗಿ ನಿತ್ಯವಾಗಿ ಸೇರಿದ್ದರೂ ಸಾಮಗ್ರೀವಿಶೇಷದಿಂದ ಸಂಕೋಚವಿಕಾಸಗಳನ್ನು ಹೊಂದಿ ವಿಷಯಸಂಬಂಧದಿಂದ ಸಂಶಯ ನಿಶ್ಚಯ ಪ್ರತ್ಯಕ್ಷ ಪರೋಕ್ಷ ಮೊದಲಾದ ವಿಭಾಗವನ್ನು ಹೊಂದುವುದರಿಂದ ದ್ರವ್ಯವೆಂದೂ ಕ್ಷಣಿಕವೆಂದೂ ಹೇಳಲ್ಪಡುವುದು (ಹಿಂದಸಾ. ೨೩೯). 'ನಿಶ್ಚಯ' ಪರಾ. ೪. [ಕಾವ್ಯಮಿ] ಉಪಮೆಗಳಲ್ಲಿ ಒಂದು; ಉಪಮಾನ ಹಾಗೂ ಉಪಮೇಯಗಳ ನಡುವೆ ಇರುವ ಸಾದೃಶ್ಯದಿಂದ ಉಂಟಾಗುವ ಸಂದೇಹ : ಸರಸಿಜಮೋ ಮೊಗಮೋ ಮೇಣು ದ್ವಿರೇಫಮೋ ಲೋಲನಯನಯುಗಮೋ ಮನದೊಳ್ ಪಿರಿದುಂ ಸಂಶಯಮೆಂಬುದು ನಿರಂತರಂ ಸಂಶಯೋಪಮಾಲಂಕಾರಂ (ಕವಿರಾ. ೩-೭೦); ಮಾತೇನೊ ಸಂಶಯಂ ಸಂಶೀತಿಪರಂ ಚಿತ್ತಮೋಹನಂ ಭ್ರಮಮಕ್ಕುಂ ಭೂತಾರ್ಥಾಪಹ್ನವ ಸಂಭೂತಮದನ್ಯಾರ್ಥ ದೃಷ್ಟ್ಯಪಹ್ನುತಿ ನಾಮಂ (ಕಾವ್ಯಾವ. ೭೦೮). ೫. [ನ್ಯಾಯ] ಹದಿನಾರು ಬಗೆಯ ಪದಾರ್ಥಗಳಲ್ಲಿ ಒಂದು ; ಒಂದು ವಿಷಯದ ಬಗೆಗಿರುವ ಎರಡು ಪರಸ್ಪರ ವಿರುದ್ಧಧರ್ಮಗಳುಳ್ಳ ಜ್ಞಾನ : ನ್ಯಾಯವೇ ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ ಸಿದ್ಧಾಂತ ಅವಯವ ತರ್ಕ ನಿರ್ಣಯ ವಾದ ಜಲ್ಪ ವಿತಂಡೆ ಹೇತ್ವಾಭಾಸ ಛಲ ಜಾತಿ ನಿಗ್ರಹಸ್ಥಾನಂಗಳೆಂಬ ಷೋಡಶಪದಾರ್ಥಗಳಂ ಪೇಳುತ್ತ (ವಿವೇಕ. ೧೨); ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ . . . ನಿಗ್ರಹಸ್ಥಾನ ಎಂದು ಹದಿನಾರುಪದಾರ್ಥಗಳನ್ನು ನಿರೂಪಿಸಿರುವರು (ಹಿಂದಸಾ. ೧೧೨). ೬. [ಯೋಗ] ಯೋಗಾಭ್ಯಾಸದಲ್ಲಿ ಬರುವ ಹತ್ತು ಬಗೆಯ ಅಂತರಾಯಗಳಲ್ಲಿ ಒಂದು : ಆಲಸ್ಯ . . . ಮನದಲುದಿಸಿದ ಸಂಶಯ ಪ್ರಮಾದಗಳು ಅಶ್ರದ್ಧೆಗಳು ವಿಘ್ನಗಳು (ಅಮೃತ. ೬-೮೮). [ಸಂ.]

**ಸಂಶಯಾಕ್ಷೇಪ** (ನಾ). [ಕಾವ್ಯಮಿ] ಅಲಂಕಾರಗಳಲ್ಲಿ ಒಂದು ; ಸಂಶಯವನ್ನು ವಾಚ್ಯವಾಗಿಯೇ ಹೇಳುವ ಅಲಂಕಾರ : ಮದಕರಿಯೋ ಘನಸಮಯಾಂಬುದಮೋ ಘನಮಲ್ತು ನೆಗಟ್ಟುದದಜೊಳ್ ಸಪ್ತಚ್ಛದಗಂಧಸುರಭಿಪದುಳಂ ಮದಕರಿಯೆನೆ ನೆನೆಗೆ ಸಂಶಯಾಕ್ಷೇಪಕಮಂ (ಸಂಶಯಾಕ್ಷೇಪ) (ಕವಿರಾ. ೩-೧೦೪). [ಸಂ.]

**ಸಂಶಯಾತ್ಮ** (ನಾ). ನಿಶ್ಚಯಜ್ಞಾನವಿಲ್ಲದಿರುವವನು ; ಸಂದೇಹವಾದಿ. [ಸಂ. ಸಂಶಯಾತ್ಮನ್]

**ಸಂಶಯಿ** (ನಾ). ಸಂದೇಹಸ್ವಭಾವವುಳ್ಳವನು : ಹುಂಬನಂತ ಕಂಡರೂ ವೆಂಕಟರಾಯ ಅಸಾಧ್ಯ ಸಂಶಯಿ (ಗಂಮಾಯಿ. ೨೫೯). [ಸಂ. ಸಂಶಯಿನ್]

**ಸಂಶಯಿತ** (ಗು). ೧. ಅನುಮಾನ ಹೊಂದಿದ ; ಸಂದೇಹಗೊಂಡ. (ನಾ). ೨. ಅನುಮಾನವನ್ನು ಹೊಂದಿದ ವ್ಯಕ್ತಿ : ಪ್ರತಿಸಾರೆಯೂ ಸಂಶಯಿತರಾಗಿಯೇ ಪ್ರಶ್ನೆ ಕೇಳಿದರೆ ಯಾವ ಮನುಷ್ಯನೂ ಸರಿಯಾದ ಉತ್ತರವನ್ನು ಹೇಳುವುದು ಸಾಧ್ಯವಿಲ್ಲ (ಕಮನೆ. ೨೨೧). [ಸಂ.]

**ಸಂಶಯಿಸು** (ಕ್ರಿ). ಶಂಕಿಸು ; ಸಂದೇಹಗೊಳ್ಳು : ಸಾಂಶಯಿಕಃ, ಸಂಶಯಾಪನ್ನ ಮಾನಸಃ– ೨ ಸಂದೇಹಿಸುವವನ ಪೆಸರು. ಸಂಶಯಿಸಲ್ಪಟ್ಟ ವಸ್ತುವಿನ ಹೆಸರು (ಸಿದ್ಧಾಂತಿ. ೩೨೩); ಕರಿಯಿದಿರೊಳಗಿರ್ಪಂದದು ಕರಿಯಲ್ಲೆಂದೈದಿದಂದು ಸಂಶಯಿಸುತ್ತುಂ ನಿರುಕಿಸಿ ಪಚ್ಚೆಯ ನಂಬುಗೆವೆರೆದಂತಾಯ್ತೆನ್ನ ಮನದೊಳಾದ ವಿಕಾರಂ (ಶಾಕುಂತ. ೧೧೩-೧೯೪). [ಸಂಶಯ + – ಇಸು₃]

**ಸಂಶಿತ** (ಗು). ೧. ಸಂಪೂರ್ಣವಾಗಿ ಮುಗಿಸಿದ ; ಸಾಂಗವಾಗಿ ನೆರವೇರಿಸಿದ. ೨. ದೃಢವಾದ; ಸ್ಥಿರವಾದ. ೩. ಹರಿತವಾದ ; ತೀಕ್ಷ್ಣವಾದ. (ನಾ). ೪. ದೃಢವಾದ ಸಂಕಲ್ಪವುಳ್ಳವನು ; ಸ್ಥಿರಚಿತ್ತ : "ಸಂಶಿತಃ, ಸುನಿಶ್ಚಿತಃ – ಈ ೨ ದೃಢವ್ರತಂ" (ಹಲಾಯು. ೬೭-೨೪೮). [ಸಂ.]

**ಸಂಶುದ್ಧ** (ನಾ). ೧. ಸಂಪೂರ್ಣ ಶುದ್ಧವಾದುದು ; ದೋಷವಿಲ್ಲದುದು : ಲೇಖನಕ್ರಮವಿದು ಶಾಸ್ತ್ರಸಿದ್ಧವೂ ಸಂಶುದ್ಧವೂ ಆಗಿದೆ (ಸಂಶೋಧ. ೩೭). ೨. ಸಂಪೂರ್ಣ ಶುದ್ಧನಾದವನು ; ದೋಷಮುಕ್ತನಾದವನು : ನಿರ್ಗುಣರ್ ಸದ್ಗುಣರ್ ಸಂಶುದ್ಧರ್ ಸಿದ್ಧರ್ ನಿತಾಂತಂ ನಿಲಿಸುಗೆ ನಿಜನಿಶ್ಶ್ರೇಯಸಶ್ರೀಯೊಳೆಮ್ಮಂ (ಅನಂಪು. ೧-೨). [ಸಂ.]

**ಸಂಶೋಧಕ** (ನಾ). (ಹೊಸ ವಿಷಯಗಳನ್ನು ಆವಿಷ್ಕರಿಸಲು) ಸಾಹಿತ್ಯ, ಶಾಸ್ತ್ರ, ವಿಜ್ಞಾನ ಮುಂತಾದ ವಿಷಯಗಳ ಆಳವಾದ ಅಭ್ಯಾಸ ಮಾಡುವವನು: ಸಂಶೋಧಕನು ಒಬ್ಬ ನ್ಯಾಯಾಧೀಶನಂತೆ ತನ್ನ ತೀರ್ಮಾನಕ್ಕೆ ಮೊದಲು ಆತನು ಎಲ್ಲ ಕಡೆಯ ಎಲ್ಲ ಆಗುಹೋಗುಗಳನ್ನು ತಕ್ಕ ಕಾರಣ – ಸಮರ್ಥನೆ – ಊಹೆ-ತರ್ಕಾದಿಗಳಿಂದ ನಿಷ್ಪಕ್ಷವಾಗಿ ಗ್ರಹಿಸಬೇಕಾಗುತ್ತದೆ (ಸಂಶೋಧ. ೧೯೬). [ಸಂ.]

**ಸಂಶೋಧನ** (ನಾ). ೧. ಶುದ್ಧಿಗೊಳಿಸುವುದು ; ಪವಿತ್ರಗೊಳಿಸುವುದು : ತಜ್ಞಾತಿ ಸಂಶೋಧನಕ್ಕನುರಾಗಂಬೆರಸಾದಮಪ್ಪಿದನೊ ಪೇಟೀಗಳೆಂತೆಂಬಂದದಿಂದೆನಸುಂ ನೂಪುರರತ್ನಕಾಂತಿ ತನುವಂ ಪರ್ವಿತ್ತು ತನ್ವಂಗಿಯಾ (ಕಾದಂಪೂ. ೪೬). ೨. (ಸಾಹಿತ್ಯ, ಶಾಸ್ತ್ರ ಮುಂತಾದ ವಿಷಯಗಳನ್ನು ಕುರಿತು ಮಾಡುವ) ಸೂಕ್ಷ್ಮವಾದ ಹಾಗೂ ಶಾಸ್ತ್ರೀಯವಾದ ಅನ್ವೇಷಣೆ, — ಆಮೂಲಾಗ್ರವಾದ ತಪಾಸಣೆ ; ಹೊಸ ವಿಷಯಗಳ ಆವಿಷ್ಕಾರದ ಪ್ರಯತ್ನ : ಉದ್ದಿಷ್ಟವಾದ ತತ್ವದ, ವಿಷಯದ, ಅರ್ಥದ ಅಥವಾ ವಸ್ತುವಿನ ಅನ್ವೇಷಣೆ 'ಸಂಶೋಧನ'ವೆನಿಸುವುದು (ಸಂಶೋಧ. ೧೮೩). [ಸಂ.]

**ಸಂಶೋಧನಕೇಂದ್ರ** (ನಾ). ಹೊಸ ವಿಷಯಗಳ ಆವಿಷ್ಕಾರಕ್ಕಾಗಿ ಮೀಸಲಾದ ಸ್ಥಳ : ಕನ್ನಡಸಾಹಿತ್ಯಪರಿಷತ್ತಿನಲ್ಲಿ ಇತ್ತೀಚೆಗೆ ಹೊಸದಾಗಿ ಸಂಶೋಧನಕೇಂದ್ರವನ್ನು ತೆರೆಯಲಾಯಿತು (ರೂಢಿ). [ಸಂ.]

**ಸಂಶೋಧನೆ** (ನಾ). = ಸಂಶೋಧನ ೨ : ವಿಜ್ಞಾನಿ ನಿರಂತರವೂ ತನ್ನ ಸಂಶೋಧನೆಯ ವಿಷಯದಲ್ಲಿಯೇ ಮುಳುಗಿ ಅವ್ಯಾಹತವಾಗಿ ತತ್ಸಂಬಂಧಕಾರ್ಯದಲ್ಲಿ ತೊಡಗಿರಬೇಕು (ವಿಕಾಸ. ೧೮). [ಸಂ.]

**ಸಂಶೋಧಿಸು** (ಕ್ರಿ). ಹೊಸತನ್ನು ಕಂಡುಹಿಡಿ : ಪ್ರಾಚೀನಸಂಸ್ಕೃತಿಯನ್ನು ಸಂಶೋಧಿಸಿರುವ ಹಲಕೆಲ ಶಾಸ್ತ್ರಜ್ಞರು ನೂರಾರು ಧಾರ್ಮಿಕಗ್ರಂಥಗಳನ್ನು ತಿರುವಿಹಾಕಿದ್ದಾರೆ (ಕಾಲಯಾ. ೧೧೨) ; ತಾನು ಸಂಶೋಧಿಸಿದ ಸೂಕ್ಷ್ಮ ವಿಷಜೀವಾಣುಗಳಿಗೆ ವಿಧವಿಧವಾದ ಬಣ್ಣಕೊಡುವುದನ್ನು ಕಲಿತನು (ವಿಕಾಸ. ೬೬). [ಸಂಶೋಧನ + - ಇಸು₃]

**ಸಂಶೋಭಿಸು** (ಕ್ರಿ). ಹೆಚ್ಚಾಗಿ ಶೋಭಿಸು, — ಪ್ರಕಾಶಿಸು : ಒಂದೊಂದು ಭಾಷೆಯೂ ತನ್ನದೇ ಆದ ಅಂಗಸೌಷ್ಠವ ಮೈಕಟ್ಟು ರಚನಾವಿನ್ಯಾಸಗಳಿಂದ ಸಂಶೋಭಿಸುತ್ತದೆ (ಸಾಹಿಪ್ರ. V. ಪ್ರಸ್ತಾವನ). [ಸಂ.]

**ಸಂಶೋಭೆ** (ನಾ). ಅತಿಶಯವಾದ ಕಾಂತಿ, — ಪ್ರಕಾಶ : ಶ್ರೀಯ ಚೆಲ್ವಂ ನಗುತುಂ ಶಕ್ರಾಂಗಸಂಶೋಭೆಯನೆ ಸಲೆ ಮಿಗುತ್ತುಂ ಕರಂ ರಾಜಿಸುತ್ತುಂ (ಕುಸುಮಾ. ೭-೪೫). [ಸಂ. ಸಂಶೋಭಾ]

**ಸಂಶೋಷಿತ** (ಗು). ಸಂಪೂರ್ಣವಾಗಿ ಒಣಗಿಹೋಗುವಂತ ಮಾಡಿದ : ಅಂಗೀಕೃತ ಕುಟಜಶೋಭಾಪ್ರಭಾವಮಾಗಿಯುಂ ಸಂಶೋಷಿತ ಜಡಾಕರಮಲ್ತು (ಚಂದ್ರಪ್ರ. ೪-೪೨ವ). [ಸಂ.]

**ಸಂಶ್ರಯ** (ನಾ). ೧. ಮನೆ ; ವಾಸಸ್ಥಳ : ಶಕಟಾರೋಪಿತಸಂಶ್ರಯೋಪಕರಣಂ . . . ತದ್ವಿಷಯ ಪ್ರಜಾಪ್ರತತಿಯೋಡುತ್ತಿರ್ದುದತ್ತೆತ್ತಲುಂ (ಚಂದ್ರಪ್ರ. ೫-೯೨). ೨. ಆಸರೆ; ನೆಲ ; ಆಶ್ರಯ : ಸಾಧುಜನ ಸಂಶ್ರಯ ಸನಾತನ ಸಚ್ಚಿದಾನಂದೈಕವಿಗ್ರಹನೆ (ನಿಭಾಗ. ೪-೩-೩೦); ಕುಳಿತಲ್ಲಿ ನಿಂತಲ್ಲಿ, ಎಲ್ಲಾದರಲ್ಲಿ ಕಣ್ಣುಮುಚ್ಚಿ ಬಾಯಿ ತೆರೆಯಬಲ್ಲ ಪ್ರೀತಿಗೆ ಬಹಿರುಪಾಧಿಯ ಸಂಶ್ರಯವೇಕೆ? (ಗಾಳಿಪ. ೧೧೮). ೩. ಗುರಿ ; ಧ್ಯೇಯ. ೪. ಮಮತೆ; ಮೋಹ. ೫. [ರಾಜನೀ] ಸಂಧಿ, ವಿಗ್ರಹ, ಯಾನ, ಆಸನ, ಸಂಶ್ರಯ ಮತ್ತು ದ್ವೈಧೀಭಾವ ಎಂಬ ಷಡ್ಗುಣಗಳಲ್ಲಿ ಒಂದು; ತನಗಿಂತ ಹೆಚ್ಚು ಬಲಶಾಲಿಯಾದವನನ್ನು ಆಶ್ರಯಿಸುವುದು : ಸಂಶ್ರಯ - ಷಡ್ಗುಣಗಳಲ್ಲೊಂದು - ದುರ್ಗವನ್ನಾಗಲಿ, ಮತ್ತೊಬ್ಬ ರಾಜನನ್ನಾಗಲಿ ಹೆಚ್ಚು ಬಲಶಾಲಿಯಾದವನನ್ನಾಗಲಿ ಆಶ್ರಯಿಸುವುದು (ಜೈನಕೋ. ೨೭೦). [ಸಂ.]

**ಸಂಶ್ರಯಣ** (ನಾ). ೧. ಆಸರೆ ; ಆಶ್ರಯ : "ಉಪಾಶ್ರಯಂ ಸಂಶ್ರಯಣಂ" (ವಸ್ತುಕೋ. ೧೧೫-೨೪). ೨. ಮಮತೆ ; ಮೋಹ. [ಸಂ.]

**ಸಂಶ್ರವ** (ನಾ). ೧. ಮನಸ್ಸಿಟ್ಟು ಕೇಳುವುದು. ೨. ಆಣೆ ; ಪ್ರತಿಜ್ಞೆ : "ಆಗೂಃ, ಸಂಗರಃ, ಸಂಧಾ, ಪ್ರತಿಶ್ರವಃ, ಸಂಶ್ರವಃ, ಪ್ರತಿಜ್ಞಾ - ಈ ೬ ಪ್ರತಿಜ್ಞೆ" (ಹಲಾಯು. ೧೧೮-೩೦). ೩. ಒಡಂಬಡಿಕೆ; ಒಪ್ಪಂದ : "ಸಂವಿತ್ . . . ಸಂಶ್ರವಃ, ಅಂಗೀಕಾರಃ, ಅಭ್ಯುಪಗಮಃ, ಪ್ರತಿಶ್ರವಃ, ಸಮಾಧಿಃ- ೧೦ ಅಂಗೀಕಾರದ ಹೆಸರುಗಳು" (ಸಿದ್ಧಾಂತಿ. ೪೫). [ಸಂ.]

**ಸಂಶ್ರಿತ** (ಗು). ೧. ಆಶ್ರಯಿಸಿದ . ೨. ಕಾಪಾಡಲ್ಪಟ್ಟ ; ರಕ್ಷಣೆ ನೀಡಿದ. ೩. ಕೂಡಿಕೊಂಡ ; ಸೇರಿದ. (ನಾ). ೪. ವಶದಲ್ಲಿ ಇರುವವನು ; ಅಧೀನ. ೫. ಆಳು; ಸೇವಕ. ೬. ಆಶ್ರಯಿಸಿದವನು ; ಶರಣಾಗತ : ಗತಿರಹಿತರ ನಿಧಿಯಿದು ಸಂಶ್ರಿತಮುಕ್ತಿಪ್ರದಂ (ಪಸ್ತವಂ. ೨-೧೦). ೭. ಕೂಡಿದುದು ; ಸೇರಿದುದು : "ಸಂಶ್ರಿತಮೆನಲು . . . ಸಹಿತಮೆನಲು ಕೂಡಲ್ಕೆ ನಾಮಂ" (ಮಂಗರಾ. ೧೩೦-೧೮). [ಸಂ.]

**ಸಂಶ್ರುತ** (ಗು). ೧. ಗಮನವಿಟ್ಟು ಕೇಳಿದ. ೨. ವಚನ ಕೊಟ್ಟ ; ಭಾಷೆ ನೀಡಿದ. ೩. ಒಪ್ಪಿಕೊಂಡ; ಅಂಗೀಕರಿಸಿದ. (ನಾ). ೪. ಒಪ್ಪಿಕೊಂಡುದು ; ಸಮ್ಮತಿಸಿದುದು : "ಊರೀಕೃತಂ . . . ಸಂಶ್ರುತಂ, ಸಮಾಹಿತಂ, ಉಪಶ್ರುತಂ, ಉಪಗತಂ - ೧೧ ಅಂಗೀಕರಿಸಲ್ಪಟ್ಟದ್ದು" (ಸಿದ್ಧಾಂತಿ. ೩೫೨). [ಸಂ.]

**ಸಂಶ್ಲಿಷ್ಟ** (ಗು). ೧. ಚೆನ್ನಾಗಿ ಸೇರಿದ, — ಹೊಂದಿಕೊಂಡ. ೨. ಬಲವಾಗಿ ಜೋಡಿಸಿದ; ಚೆನ್ನಾಗಿ ಸೇರಿಸಿದ : ಗಾಂಡೀವಮನೇಱಿಸಿ ನೀವಿ ಜೇವೊಡೆದಾಗಳ್ . . . ಸಮುದ್ಯದ್ರಜತ[ಗಿರಿ]ತಟಸ್ಪಷ್ಟ ಸಂಶ್ಲಿಷ್ಟಮೌರ್ವೀನಿನದಂ ಪರ್ವಿತ್ತು (ಪಂಪಭಾ. ೧೨-೧೩೭). ೩. ಅಪ್ಪಿದ ; ಆಲಿಂಗಿಸಿದ. ೪. ತೊಡಕಾದ ; ಗೋಜಲಾದ. ೫. ಸಂಬಂಧಪಟ್ಟ. ೬. ಪಡೆದ; ಗಳಿಸಿದ. (ನಾ). ೭. ತೊಡಕುಗಳಿಂದ ಕೂಡಿದುದು; ಗೋಜಲು ; ಸಿಕ್ಕು : ಸೃಷ್ಟಿಯಾಶಯವದೇನಸ್ಪಷ್ಟ ಸಂಶ್ಲಿಷ್ಟ (ಮಂಕುಕ. ೨೬). ೮. [ಕಾವ್ಯಮೀ] ಕಾವ್ಯಗುಣಗಳಲ್ಲಿ ಒಂದು : ಅಶಿಥಿಲಪದಚಯ ರಚನಾತಿಶಯಂ ಸಂಶ್ಲಿಷ್ಟಮೆಂಬುದಕ್ಕುಂ (ಕಾವ್ಯಾವ. ೫೦೫). [ಸಂ.]

**ಸಂಶ್ಲೇಷ** (ನಾ). ೧. ಅಪ್ಪುವಿಕೆ ; ಆಲಿಂಗಿಸುವಿಕೆ. ೨. ಅಪ್ಪುಗೆ ; ಆಲಿಂಗನ : "ವಿಶ್ಲೇಷಂ ಪರಿರಂಭಣ[ಸಂಶ್ಲೇಷಮದುಪಗೂಹನಂ] ಪರಿಷ್ವಂಗಾರ್ಥಂ" (ವಸ್ತುಕೋ. ೧೧೪-೧೮). ೩. ಸಂಬಂಧ ; ಸಂಪರ್ಕ. ೪. ಸಂಯೋಗ ; ಮಿಲನ : ಇವರ ಕೃತಿಗಳಲ್ಲಿ ಭಗವಂತನ ಸಂಶ್ಲೇಷ ವಿಶ್ಲೇಷ ದೆಸೆಗಳಿಂದ ಉತ್ಪನ್ನವಾದ ಅನುಭವಗಳು ಪರಿವಾಹರೂಪವನ್ನು ತಾಳಿವೆ (ಭಾರದ. ೩೯೯). ೫. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು : ದೋಷಂಗಳಿಂತು ಮಿಗೆ ಸಂಶ್ಲೇಷದೊಳಾದಂದು ಸಕಲ ವಿದ್ವತ್ಸಭೆಯೊಳ್ ದೂಷಿಸುಗುಂ ಕೃತಿವಧುವಂ (ಕವಿರಾ. ೧-೧೦೦); ಯೋಗಂ ಪಲವುಮಲಂಕೃತಿಗಾಗಿರೆ ಸಂಶ್ಲೇಷಮೆಂಬುದನ್ವರ್ಥಗತಂ (ಕಾವ್ಯಾವ. ೭೭೦). [ಸಂ.]

**ಸಂಶ್ಲೇಷಣ** (ನಾ). ೧. ಒಟ್ಟುಗೂಡಿಸುವಿಕೆ ; ಸೇರಿಸುವಿಕೆ : ನೀರು ಮೂಲದ್ರವ್ಯವಲ್ಲವೆಂದು ವಿಭಜನೆಯಿಂದಲೂ ಸಂಶ್ಲೇಷಣದಿಂದಲೂ ಪ್ರತ್ಯೇಕವಾಗಿ ತೋರಿಸಿದನು (ಶಿಲ್ಪನಾ. ೧೨೪). ೨. ಸೇರಿಸುವ ಸಾಧನ. ೩. ಉತ್ಪಾದಿಸುವಿಕೆ : 'ದ್ಯುತಿಸಂಶ್ಲೇಷಣ' ಪರಾ. [ಸಂ.]

**ಸಂಶ್ಲೇಷಣೆ** (ನಾ). = ಸಂಶ್ಲೇಷಣ ೩ : 'ದ್ಯುತಿಸಂಶ್ಲೇಷಣೆ' ಪರಾ. [ಸಂ. ಸಂಶ್ಲೇಷಣ]

**ಸಂಸಂಗ** (ನಾ). ೧. ನಿಕಟಸಂಬಂಧ ; ಅತ್ಯಂತ ಹತ್ತಿರದ ಸಂಪರ್ಕ : ಇದು ಸಮವಸರಣಸಂಸಂಗದಿನಲ್ಲದೊಡಮಲಬೋಧಮುನಿಜನಸಾಮರ್ಥ್ಯದಿನಕ್ಕುಮಲ್ಲದಂದಾಗದು ಸಕಲರ್ತುಪ್ರಭಿನ್ನಗುಣಸಮವಾಯಂ (ಚಂದ್ರಪ್ರ. ೨-೭೯). ೨. ನಿಕಟಸಹವಾಸದಲ್ಲಿರುವವನು: ವಿಮಳಾಚಾರೋತ್ತುಂಗಂ ಸಮಸ್ತಬುಧಸಂಸಂಗಂ (ಕಽ. IV, ೧೫-೬೦; 1149). [ಸಂ.]

**ಸಂಸಂಗಿ** (ಗು). ೧. ನಿಕಟಸಂಪರ್ಕದಲ್ಲಿರುವ : ಜನವಕ್ತ್ರೋನ್ಮುಕ್ತನಿರ್ಯದ್ವಿಮ ಪರಿಮಳತಾಂಬೂಲಸಂಸಂಗಿಭೃಂಗೀಸ್ವನದಿಂ (ಚಂದ್ರಪ್ರ. ೧-೧೩೧). (ನಾ). ೨. ನಿಕಟಸಹವಾಸದಲ್ಲಿರುವ ವ್ಯಕ್ತಿ ; ನಿಕಟವರ್ತಿ. [ಸಂ. ಸಂಸಂಗಿನ್]

**ಸಂಸಕ್ತ** (ಗು). ೧. ಮಗ್ನವಾದ ; ಅತ್ಯಾಸಕ್ತಿಯಿಂದ ಕೂಡಿದ : ಹೇಮಪಂಕಜ ರಜಸ್ಸಂಸಕ್ತಭೃಂಗಾಂಗನಾನಿಕರಂ (ಪಂಪಭಾ. ೫-೮೦). ೨. ಸಂಪೂರ್ಣವಾಗಿ ಕೂಡಿದ, — ಸೇರಿದ. ೩. ಬಹುವಾಗಿ ಸಂಬಂಧಿಸಿದ, — ಅಂಟಿಕೊಂಡ: ವಿಷಯ ಸಂಸಕ್ತಲೋಕವನ್ ಅನಾಸಕ್ತಿಯಿಂದೊಸೆದು ನೋಳ್ಪನು ಜಾಣ (ಮಂಕುಕ. ೭೭೯). ೪. ಕಟ್ಟಿದ; ಜೋಡಿಸಿದ. ೫. ಹತ್ತಿರದ ; ಸಮೀಪದ. (ನಾ). ೬. ಕೂಡಿದುದು; ಬೆರೆತುದು : "ಸಂಸಕ್ತಂ, ಅವ್ಯವಹಿತಂ, ಅಪರಾಂತರಂ - ೩ ಬೆರೆತುಕೊಂಡಂಥಾದ್ದು" (ಸಿದ್ಧಾಂತಿ. ೩೪೧). ೭. ಸಂಬಂಧಿಸಿದುದು : ಅದಕ್ಕೆ ಸಂಸಕ್ತವಾದ ಎಲ್ಲ ಸಂದೇಹಗಳೂ ವಿವಾದಗಳೂ ಉಚ್ಚತಮ ನ್ಯಾಯಾಲಯದಿಂದ ವಿನಿಶ್ಚಯವಾಗತಕ್ಕದ್ದು (ಭಾಧಾನ. ೩೬). [ಸಂ.]

**ಸಂಸಕ್ತಿ** (ನಾ). ೧. ಅತ್ಯಾಸಕ್ತಿ ; ತಲ್ಲೀನತೆ. ೨. ಬಿಗಿಯಾಗಿ ಸೇರಿಕೊಳ್ಳುವುದು. ೩. ಗಟ್ಟಿಯಾಗಿ ಅಂಟಿಕೊಳ್ಳುವ ಗುಣ : ಎಲ್ಲಾ ದ್ರವಗಳಿಗೂ ಸಾಮಾನ್ಯವಾಗಿ ಒಂದು ಗುಣವಿದೆ. ಇದನ್ನು ಸಂಸಕ್ತಿ (ಕೊಹಿಷನ್) ಎನ್ನುತ್ತಾರೆ (ಕವಿಕೋ. I, ೨೩೧). ೪. ಸಾಮೀಪ್ಯ. [ಸಂ.]

**ಸಂಸತ್ತು** (ನಾ). ೧. ಗೋಷ್ಠಿ; ಸಭೆ : "ಸಮಾಜಃ, ಸಂಸತ್ . . . ಸದಃ – ಈ ೬ ಸಭೆ" (ಹಲಾಯು. ೧೨೩-೬೦); ವೈದ್ಯನಾಥಅಯ್ಯರ್ ಅವರೂ ಬೇರೆ ಹಿರಿಯ ವಿದ್ವಾಂಸರೂ ಆ ಸಂಸತ್ತಿನಲ್ಲಿದ್ದರು (ಸಂಗೀತ. ೫). ೨. ರಾಜ್ಯಕ್ಕೆ ಸಂಬಂಧಿಸಿದ ಶಾಸನಗಳನ್ನು ಮಾಡುವ ಪ್ರಜಾಪ್ರತಿನಿಧಿಗಳ ಸಭೆ; ಶಾಸನಸಭೆ : ಸಂಸತ್ತು ವಿಧಿದ್ವಾರಾ . . . ಯಾವುದಾದರೂ ರಾಜ್ಯದ ಕ್ಷೇತ್ರವನ್ನು ಹೆಚ್ಚಿಸಬಹುದು (ಭಾಧಾನ. ೨). [ಸಂ. ಸಂಸದ್]

**ಸಂಸತ್ಸದಸ್ಯ** (ನಾ). ಶಾಸನಸಭೆಯ ಸದಸ್ಯ : ಸಂಸತ್ಸದಸ್ಯರೊಬ್ಬರು ತಮ್ಮ ಹೇಳಿಕೆಯನ್ನು ಪತ್ರಿಕೆಗಳಿಗೆ ಕೊಟ್ಟರು (ರೂಢಿ). [ಸಂ.]

**ಸಂಸತ್ಸಭೆ** (ನಾ). = ಸಂಸತ್ತು ೨ : ಭಾರತಸಂವಿಧಾನಸಭೆಯಲ್ಲಿ ಮತ್ತು ಸಂಸತ್ಸಭೆಯಲ್ಲಿ ಕೆಲಸಮಾಡುವ ಸದವಕಾಶ ದೊರೆಯಿತು (ದಲ್ಲಿಪ. III, ಮುನ್ನುಡಿ). [ಸಂ. ಸಂಸತ್ಸಭಾ]

**ಸಂಸದೀಯ** (ಗು). ಸಂಸತ್ತಿಗೆ ಸೇರಿದ ; ಶಾಸನಸಭೆಗೆ ಸಂಬಂಧಪಟ್ಟ : ಕರ್ನಾಟಕರಾಜ್ಯವ್ಯವಸ್ಥೆ ಸಂಸದೀಯ ಪ್ರಜಾಪ್ರಭುತ್ವನೀತಿಗನುಗುಣವಾಗಿ . . . ವಿಭಾಗಿಸಿದೆ (ಕವಿವಿ. ೧೩೩೮). [ಸಂ.]

**ಸಂಸಪ್ತಕ, ಸಮಸಪ್ತಕ** (ನಾ). = ಸಂಶಪ್ತಕ : "ಸಮರಾಂಗಣದಿಂ ತೊಲಗದ ಸಮ[ಯರ್ ಸಂ]ಸಪ್ತಕರ್" (ವಸ್ತುಕೋ. ೮೨-೩) ; ನಾಲ್ಕುಯೋಜನದ ಶಕಟವ್ಯೂಹದ ಬಾಗಿಲೊಳ್ ಬಾಹ್ಲೀಕ ಸೋಮದತ್ತ ವಿಂದಾನುವಿಂದರೊಡನೆ ಸಂಸಪ್ತಕರನಿರಿಸಿ (ಪಂಪಭಾ. ೧೧-೧೩೨ ವ); ಸಂಸಪ್ತಕರಂ . . . ಧ್ವಂಸನಮಂ ಪೊರ್ದಿಸಿದಂ ಹಂಸಾಸ್ತ್ರಮಯಕ್ಕೆ ಪಾರ್ಥಂ (ನೇಮಿಪು. ೧೩-೫೪). **ಸಮಸಪ್ತಕ** : ಸಮಸಪ್ತಕರು ತಮ್ಮೊಳಗಂದು ಶಪಥವ ಮಾಡಿ ವಿಪ್ರರ ಮಂದಿಗಿತ್ತರು ಗೋಹಿರಣ್ಯಸಮಸ್ತವಸ್ತುಗಳ (ಕುವ್ಯಾದ್ರೋ. ೨-೯); ಸಾಹಸಮಲ್ಲರದ್ದರು ವೀರಸಮಸಪ್ತಕರು ಗರ್ಜಿಸುತ (ಕುವ್ಯಾದ್ರೋ. ೪-೧೦). [< ಸಂ. ಸಂಶಪ್ತಕ]

**ಸಂಸಯ** (ನಾ). ಅನುಮಾನ ; ಶಂಕೆ : ಸಂಶಯ – ಸಂಸಯ (ಶಮದ. ೨೫೩ ಪ್ರಯೋ). [< ಸಂ. ಸಂಶಯ]

**ಸಂಸರ** (ನಾ). ಜನನ ಮರಣಗಳ ಪರಂಪರೆ ; ಸಂಸಾರ : ಸಂಸರದ ವ್ಯಥೆ ಮರದು ನಿಷ್ಕಳ ಹಂಸವಿದೆ ಪರಮಾತ್ಮನೆನಿಸಿದ ಹಂಸರೂಪನೆ ಕೇಳ್ (ಜ್ಞಾನಸಿಂ. ೪-೧೧೧). [< ಸಂ. ಸಂಸಾರ]

**ಸಂಸರಣ** (ನಾ). ೧. ಚಲನೆ; ಗತಿ : 'ಸಂಸರಿಸು' ಪರಾ. ೨. ಉತ್ಪತ್ತಿ ; ಹುಟ್ಟು : ನರಕುರಿಗಳದಟಿಂತೆ ತಮಗಹ ಮರಣವನು ತಾವಱಿಯದೀ ಸಂಸರಣ ದುಃಖದಿ ಮಗ್ನರಾಗಿಯೆ ಮೃತ್ಯುವಶರಹರು (ಅಮೃತ. ೨-೨೨). ೩. ಯಾವ ಬಗೆಯ ತಡೆಯೂ ಇಲ್ಲದೆ ಸೈನ್ಯವು ಮುನ್ನುಗ್ಗುವಿಕೆ : "ಸಂಸರಣಂ ಪ್ರಾಣಿಗಳ ವ್ಯುತ್ಪತ್ತಿ ರೂಪ ಸಂಸ್ಕಾರ ನಿರಾಳವಾಗಿ ದಂಡು ನಡೆಯುವಿಕೆ" (ಸಿದ್ಧಾಂತಿ. ೩೮೮). ೪. ಮುಖ್ಯವೀಧಿ; ರಾಜಮಾರ್ಗ : "ಘಂಟಾಪಥಃ, ಸಂಸರಣಂ – ೨ ಹತ್ತಂಬಿನ ಅಗಲವುಳ್ಳ ರಾಜಮಾರ್ಗದ ಪೆಸರು" (ಸಿದ್ಧಾಂತಿ. ೯೮). ೫. ಕಾಳಗದ ಪ್ರಾರಂಭ. ೬. ಊರಿನ ಹೊರವಲಯದಲ್ಲಿ ಪ್ರವಾಸಿಗಳಿಗಾಗಿ ಕಟ್ಟಿರುವ ವಿಶ್ರಾಂತಿಗೃಹ. ೭. ಹುಟ್ಟು ಸಾವುಗಳ ಪರಂಪರೆ; ಸಂಸಾರ : "ಭವಸಂಸೃತಿ ಸಂಸರಣಂ ಜವಂಜವಂ ಜನ್ಮವೆಂಬುದದು ಸಂಸಾರಂ" (ವಸ್ತುಕೋ. ೧೮-೧); ಎನ್ನನೀ ಸಂಸರಣಾಂಭೋರಾಶಿಯಿಂದಂ ಪೊಱಮಡಿಸು (ಆದಿಪು. ೨-೪೯); ಇನ್ನಿರೆನೆಂದು ಘೋರಸಂಸರಣಪಯೋಧಿಯಂ ಪೊಱಮಡಲ್ಬಗೆದಂ ವಣಿಗನ್ವಯೋತ್ತಮಂ (ಸುಕುಮಾ. ೧೦-೩೦). [ಸಂ.]

**ಸಂಸರಿಸು** (ಕ್ರಿ). ೧. ಹೋಗು; ಚಲಿಸು : ಎರಡಿಲ್ಲದೇಕವೆನಿಸಿ ಧರ್ಮದೊಳು ಸಂಸರಿಸುವ ಸತಿಪತಿಗಳಿಗೆ . . . ಪರಸುಖ ಪದುಳಗೊಳುವುದು (ಹದಿಬ. ೬-೫೦). ೨. ಸರಿಯಾಗಿರಿಸು ; ಹೊಂದಿಕೆಯಾಗಿಡು : ಮರಗೊಂಬಂ ಮುಱಿವಲ್ಲಿ ತಳ್ತ ಮರವಾವೊಂದಾತ್ಮಶುಂಡಾಗ್ರದೊಳ್ ಭರದಿಂ ಪೊಕ್ಕೊಡೆ ಬೀಸಿ ಫೂತ್ಕರಿಸಿ ಕೊಂಬಂ ಪುಷ್ಕರಾಗ್ರಕ್ಕೆ ಸಂಸರಿಪಂತಿಟ್ಟು ಕುನುಂಗಿ (ರಾಜಶೇ. ೫-೭೩). [ಸಂಸರಣ + – ಇಸು₃]

**ಸಂಸರ್ಗ** (ನಾ). ೧. ಸಮ್ಮಿಶ್ರಣ ; ಬೆರಕೆ : "ಸಂಸರ್ಗಂ ಮೇಳಕಂ" (ವಸ್ತುಕೋ. ೧೧೩-೧೭). ೨. ಒಡನಾಟ; ಸಹವಾಸ : ಪ್ರಾಣೇಶ್ವರರ ಸಂಸರ್ಗಮ ಸ್ವರ್ಗಮಾಗೆ ನಿಜಾಯುಃಪಲ್ಯೋಪಮತ್ರಯಾವಸಾನವೆಯ್ತರೆಯುಂ ಕಾಮಾಂಧರಾಗಿ (ಶಾಂತಿಪು. ೭-೧೦ ವ); ಸಂಸರ್ಗದಿಂ ದೋಷಗುಣಂಗಳಹವು (ಪಂಚತಂ. ೧೩೧-೧೮); ಈತಂಗಳ ಸಂಸರ್ಗಮನೊಲ್ಲೆಂ (ಅದ್ಭುತ. ೪೫-೧೭). ೩. ಸಂಬಂಧ ; ಸಂಪರ್ಕ : ಮಡಿವಾಳ ಮಾಚಯ್ಯಂ . . . ಭವಿಸಂಸರ್ಗಪಥಸಂತತಪರಿತ್ಯಾಗಿ (ಬಸಪು. ೨೧-೩); ನಿನ್ನ ದೇಹವೂ ತನ್ನಲ್ಲಿರುವ ಉಷ್ಣವನ್ನು ತನ್ನ ಸಂಸರ್ಗವನ್ನು ಪಡೆದ ಪದಾರ್ಥಗಳಿಗೆಲ್ಲ ಜಡ ಚೇತನಗಳೆಂಬ ವ್ಯತ್ಯಾಸವಿಲ್ಲದೆ ಕೊಡುವುದು (ಮಹಾಣ. ೮೩). ೪. ದೇಹಸಂಪರ್ಕ; ದೈಹಿಕಸಂಬಂಧ : ಕ್ರೋಡರೂಪದಿನಾಂ ಧಾತ್ರಿಯನೆತ್ತಲಾ ವಸುಮತೀಸ್ತ್ರೀಗೆನ್ನ ಸಂಭೋಗಕಾಲದ ಸಂಸರ್ಗದೆ ಪುಟ್ಟಿದಂ ನರಕಂ (ಜಗವಿ. ೧-೬೯). ೫. ಸೋಂಕು; ಸ್ಪರ್ಶ : ಮಾಂಸ, ಮೀನುಗಳನ್ನು ಬೇಯಿಸದೆ ತಿನ್ನುವುದಿಲ್ಲವಾದುದರಿಂದ ಅವುಗಳ ಮೂಲಕ ರೋಗಾಣುಗಳ ಸಂಸರ್ಗವಾಗುವ ಸಂಭವ ಕಡಿಮೆ (ಅದುಸಾ. ೮೫). ೬. ಕೂಟ; ಸಂಭೋಗ. ೭. ಹೋಲಿಕೆ ; ಸಾದೃಶ್ಯ : ಯಾವ ದೇವದೇವಿಯರ ವಿಗ್ರಹಗಳನ್ನಾಗಲೀ ಚಿತ್ರವನ್ನಾಗಲೀ ಗಮನಿಸಿದರೆ ಅದು ಪ್ರಕೃತಿಯ ಯಾವುದೇ ವಸ್ತುವಿನ ಅಥವಾ ಪ್ರಾಣಿಯ ಸಂಸರ್ಗವನ್ನು ಹೊಂದಿರುವುದು ಕಂಡುಬರುತ್ತದೆ (ಸೌಂದಸ. ೧೩೪). ೮. [ವ್ಯಾಕ] ವಾಕ್ಯದಲ್ಲಿರುವ ಪದಗಳಿಗಿರುವ ಸಂಬಂಧ : ವಾಕ್ಯದಲ್ಲಿ ಸೇರಿರುವ ಪದಗಳು ಬಿಡಿಬಿಡಿಯಾಗಿ ತಮ್ಮ ಅರ್ಥವನ್ನು ಸೂಚಿಸಿದಷ್ಟಕ್ಕೆ ಅವುಗಳ ಅಭಿಧಾವೃತ್ತಿ ಮುಗಿಯುತ್ತದೆ . . . ವಾಕ್ಯದಲ್ಲಿ ಸೇರಿರುವ ಪದಗಳ ಈ ವಿಶಿಷ್ಟಸಂಬಂಧಕ್ಕೆ – ಅನ್ವಯಕ್ಕೆ – "ಸಂಸರ್ಗ"ವೆಂದು ಹೆಸರು (ಭಾರಮೀ. ೨೪೭). [ಸಂ.]

**ಸಂಸರ್ಗದೋಷ** (ನಾ). (ದುಷ್ಟಜನರ) ಸಹವಾಸದಿಂದ ಉಂಟಾಗುವ ಕೇಡು, – ಕೆಡುಕು : ಹಂಸನೊಳಗೆ ಶುದ್ಧನಹುದು ಹೊಱಗೆ ತೋರ್ಪ ಮಾಂಸಾಸ್ಥಿಮಲಪೂರ್ಣದೊಡಲ ಸಂಸರ್ಗದೋಷವಿಲ್ಲವೆ ನಿಮ್ಮನದಱೊಳು ಸಂಸಿದ್ಧಿಸುವೆನೆಂತು ಗುರುವೆ (ಭರಚ. ೬೯-೯೧). [ಸಂ.]

**ಸಂಸರ್ಗವಶ** (ನಾ). ದುಷ್ಟರ ಸಹವಾಸದಲ್ಲಿ ತೊಡಗುವಿಕೆ : ಬುದ್ಧಿಮಂತನುಂ ಸಂಸರ್ಗವಶದಿಂ ನಿಸರ್ಗಗುಣಮಂ ಪತ್ತುವಿಡುವುದು ಕಡುದಿಟಂ (ಪಂಚತಂ. ೮. ೯೧-೨೮). [ಸಂ.]

**ಸಂಸರ್ಗಿಸು** (ಕ್ರಿ). ಒಡನಾಡು ; ಸಹವಾಸದಲ್ಲಿರು : ಆಪ್ತತೆಯೆಂದರೆ ಕೇಶವ ಹೆದರುತ್ತಾನೆ – ಆಳದಲ್ಲಿ ಸಂಸರ್ಗಿಸುವುದು ಇನ್ನು ಮುಂದೆ ತನ್ನಿಂದ ಸಾಧ್ಯವಿಲ್ಲ ಎಂದುಕೊಂಡಿದ್ದಾನೆ (ಹೊಸಕ್ಟ. ೨೨೯). [ಸಂಸರ್ಗ + – ಇಸು₃]

**ಸಂಸರ್ಪತ್ತು** (ಗು). ವ್ಯಾಪಿಸುವಂಥ ; ಹರಡಬಲ್ಲ : ಸಂಸರ್ಪದ್ರತ್ನಾಂಶುಜಾಲಜಟಿಲಿತಮೆನೆ ಕಂದರ್ಪ ಸುಖನಿಲಯಮೆನೆ ಸಂತರ್ಪಣಕರಮಖಿಲಭೋಗಭೂಮಿ ವಿಭಾಗಂ (ಆದಿಪು. ೫-೨೮). [ಸಂ. ಸಂಸರ್ಪತ್]

**ಸಂಸಾರ** (ನಾ). ೧. ಮಾರ್ಗ ; ಪಥ ; ದಾರಿ. ೨. ಹುಟ್ಟು ; ಜನ್ಮ : ಆ ರೌದ್ರಹತಿಗೆ ತವೆ ಸಂಸಾರಂ ತತ್ಪುರಂ ಪೊಱಗೆ ಪುಟ್ಟಿದುವು . . . ಕೋಟೆಯ ಬಸಿಱೊಳ್ (ಯಶೋಚ. ೩-೭೬). ೩. ಗಂಡ, ಹೆಂಡತಿ, ಮಕ್ಕಳು ಹಾಗೂ ಬಂಧುಗಳೇ ಮೊದಲಾದವರಿಂದ ಕೂಡಿದ ಪರಿವಾರ ; ಕುಟುಂಬ : ಸಂಸಾರವೆಂಬಂಥ ಭಾಗ್ಯವಿರಲಿ . . . ತಂದೆ ನೀನೇ ಕೃಷ್ಣ ತಾಯಿ ಇಂದಿರೆದೇವಿ (ಪುರಂದ. ೪-೭೩ ಪಲ್ಲವಿ) ; ಗೋಡೆಸಂದಿನ ಬಿಲದಿ ಜೋಡುಮಕ್ಕಳು ಹಡೆದು ಕೂಡಿ ಸಂಸಾರವನು ಕಟ್ಟಿರುವೆನಮ್ಮಾ (ಕವಪು. ೩೨-೧). ೪. ಹೆಂಡತಿ ; ಪತ್ನಿ : ಅಧಿಕಾರಿಣಿ – ಎಷ್ಟು ಸಂಸಾರವೊ? ನವಕುಮಾರ – ಒಬ್ಬಳೇ ಹೆಂಡತಿ (ಕಪಾಕುಂ. ೩೩). ೫. ಲೌಕಿಕ ಜೀವನ ; ಐಹಿಕ ಜೀವನ ; ಬದುಕು ; ಬಾಳು : ಸಾರಮನಂಗಜಂಗಮಲತಾಲಲಿತಾಂಗಿಯರಿಂದಮಲ್ತೆ ಸಂಸಾರಂ (ಪಂಪಭಾ. ೧-೧೧೪); ಆರಯ್ವೊಡಸಾರಂ ಸಂಸಾರಂ (ಜನಾಲ. ೨೪-೨೪); ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯಾ (ಬಸವ. ೯); ಜಪ ತಪ ನಿಯಮ ಹೋಮಂಗಳಲಿ ಸಂಸಾರಾರ್ಣವವನುಚ್ಚಳಿಸಬಹುದೇ (ಕುವ್ಯಾಉ. ೩-೧೨೩). ೬. ಮನೆಗೆ ಸಂಬಂಧಿಸಿದುದು; ಮನೆವಾರ್ತೆ : ಸುಂದರಮ್ಮ, ಅವರ ಗೆಳತಿ 'ಸಂಸಾರ'ದ ವಿಷಯವಾಗಿ ಮಾತುಕತೆ ನಡೆಸಿದ್ದರು (ದೂಚಿಟ್ಟ. ೧೨). ೭. ಮನೆಯ ಆಡಳಿತ, – ಕಾರುಭಾರು : ತನ್ನ ಸಂಸಾರವನ್ನು . . . ಮಿತವ್ಯಯದಿಂದ ನಡೆಸಿಕೊಂಡು,

ತಂದೆತಾಯಿಗಳಿಗೆ ನೆರವಾದನು (ಸಸ್ಯಕ. ೯೭). ೮. ಪ್ರಪಂಚ ; ಜಗತ್ತು: ಕೆಲವು ಕಾಲದಿಂಬೞಿಕ್ಕೆ ಸತ್ತು ತಾನುಂ ಮಕ್ಕಳುಂ ಸಂಸಾರದೊಳ್ ತಿರಿಯುತ್ತಿರ್ದರ್ (ವಡ್ಡಾರಾ. ೮-೨೨); ಸಂಸಾರದೊಳಿನ್ನೆನ್ನವೊಲೇಂ ಸೈಪಂ ಪಡೆದರೊಳರೆ (ಪಂಪಭಾ. ೯-೩೨); ಈ ಸಂಸಾರದಲ್ಲಿ ವಿನಯದಿಂದ ಬಹಳ ದೊಡ್ಡ ಲಾಭವಾಗುವುದು (ಮುಂಬಯಿ. ೪-೭೩). ೯. ವರ್ಗ; ಗುಂಪು: ಮರದ ಹೆಸರು ಹೋಗಲಿ, ಅದರ ಸಂಸಾರದ ಹೆಸರನ್ನೂ ಹೇಳುವುದಕ್ಕೆ ಆಗಲಿಲ್ಲವೆ? (ಹಸುಹೊ. ೫೨). ೧೦. [ಜೈನ] ಹುಟ್ಟು ಸಾವುಗಳ ಪರಂಪರೆ ; ಭವಾವಳಿ : ಎನ್ನಂ ಸಂಸಾರಾರ್ಣವದತ್ತಣಿಂದೆತ್ತಿಂ (ವಡ್ಡಾರಾ. ೨೮-೨೧); ಸಂಸಾರಾಬ್ಧಿಯಂ ದಾಂಟಿ ನಿಶ್ಚಳಸೌಖ್ಯಾಸ್ಪದಮಂ ತ್ವದೀಯಜನಕಂ ಕೈಕೊಂಡೊಡೆ (ಆದಿಪು. ೧೭-೫೫); ಆರ್ತಧ್ಯಾನದಿಂ ನಿದಾನಂಗೆಯ್ದು ಸತ್ತು ಸಂಸಾರಕಾಂತಾರಾಂತರಾಳದೊಳ್ ತಿರ್ಯಗ್ಗಾತಿಯಾಗಿ ಪುಟ್ಟಿ ತಿರಿಯುತ್ತುಂ (ಸುಕುಮಾ. ೫-೮ ವ).

**ಸಂಸಾರ ತೂಗಿಸು** = ಜೀವನವನ್ನು ಸಾಗಿಸು ; ಬದುಕನ್ನು ನಿರ್ವಹಿಸು : ಅವನಾದರೂ ಗುರುವಿನ ಆಜ್ಞೆಯಂತೆ, ಸಮಾಜದಿಂದ ಬಹಿಷ್ಕೃತನಾದರೂ ಸಂಸಾರಿಯಾಗಿ ಅತೀವ ಕಷ್ಟದಿಂದ ಸಂಸಾರ ತೂಗಿಸಿದ (ಭಾರದ. ೨೯೪). **ಸಂಸಾರ ನಡಸು, ಸಂಸಾರ ನಡೆಸು** = ೧. ಗೃಹಸ್ಥನಾಗು : ರಾಜ್ಯದಲ್ಲಿ ಅಭಿಷಿಕ್ತನಾಗಿ ಪ್ರಜಾಪಾಲನೆ ಮಾಡು ; ಸಂಸಾರ ನಡಸು; ನಿನ್ನ ಪಿತೃಗಳನ್ನು ಮುಳುಗಿಸಬೇಡ (ವಚಭಾ. ೭). **೨.** = ಸಂಸಾರತೂಗಿಸು: ನಾನು . . . ಸಂಸಾರ ನಡಸಬಾರದು ಎಂದು ತಾನೇ ? (ಮಹಾಗ. ೮೨); ಸರೋಜಳ ದುರದೃಷ್ಟಕ್ಕೆ ಅವಳು ಗಂಡನೊಡನೆ ಸಂಸಾರ ನಡೆಸಲು ಬಂದ ವರ್ಷದಲ್ಲಿಯೇ ಶ್ರೀನಿವಾಸರಾಯರು ತೀರಿಹೋದರು (ಮಹಾಗ.೪). **ಸಂಸಾರಸಾಗಿಸು** = ಸಂಸಾರ ತೂಗಿಸು: ಇದ್ದುದರಲ್ಲೇ ತೃಪ್ತಿಯಿಂದ ಸಂಸಾರ ಸಾಗಿಸಬೇಕು (ರೂಢಿ). **ಸಂಸಾರ ಹೂಡು** = ಮನೆ ಮಾಡು ; ಸಂಸಾರವನ್ನು ಆರಂಭಿಸು : ಮಲ್ಲಣ್ಣಜೋಗಿ ಹೆಂಡತೀನ ಕರೆದುಕೊಂಡು ಬಂದು ಅಲ್ಲಿ ಸಂಸಾರ ಹೂಡಿದ (ಮಲ್ಲಿ. ೯). [ಸಂ.]

**ಸಂಸಾರಕ** (ಗು). ಪ್ರಾಪಂಚಿಕವಾದ : ನಿನ್ನ ಮೋಹದ ಕಂಗಳಿಗೆ ಮಗನುನ್ನ ತೋನ್ನತಸತ್ವನೆಂದೇ ಮುನ್ನ ತೋಱಿತು ಹೊಲ್ಲೆಹವೆ ಸಂಸಾರಕಭ್ರಮೆಗೆ (ಕುವ್ಯಾವಿ. ೯-೧೮). [ಸಂ.]

**ಸಂಸಾರಕ್ಷಪಕ** (ನಾ). ಸಂಸಾರಬಂಧವನ್ನು ಕಳೆದುಕೊಂಡವನು : ಆಯುರವಸಾನದೊಳ್ ಸಂಸಾರಕ್ಷಪಕನಾಗಿ ಸಮಾಧಾನಪುರಸ್ಸರಂ ಸನ್ಯಸನವಿಧಾನದಿಂ ಪರಿತ್ಯಕ್ತಜೀವಿತನಾಗಿ (ಆದಿಪು. ೨-೧೯ ವ). [ಸಂ.]

**ಸಂಸಾರಚಕ್ರ** (ನಾ). ಪ್ರಾಪಂಚಿಕಜೀವನದಲ್ಲಿ ಮತ್ತೆ ಮತ್ತೆ ತೊಡಗುವುದು ; ಹುಟ್ಟುಸಾವುಗಳಲ್ಲಿ ತಿರುಗುವುದು : ಭುವನತ್ರಯವೆಂಬ ಪಂಜರದೊಳಗೆ ಸಂಸಾರಚಕ್ರಕ್ಕೆ ಈಡಾಗಿ (ಅವಚಂ. ೧೫೭-೭೧೮). [ಸಂ.]

**ಸಂಸಾರತಾಪತ್ರಯ** (ನಾ). ಬದುಕಿನಲ್ಲಿರುವ ತೊಂದರೆ, – ಅಡ್ಡಿ : ಸಂಸಾರ – ತಾಪತ್ರಯಗಳಿಲ್ಲದೆ ಇರುವವರು ವಿರಳ (ರೂಢಿ). [ಸಂ.]

**ಸಂಸಾರನಿರ್ವೇಗ** (ನಾ). [ಜೈನ] "ಚತುರ್ಗತಿಗಳಲ್ಲಿ ಅಲೆದಾಡಿಸುವ ಐದು ಸಂಸಾರಗಳಿಂದ ವೈರಾಗ್ಯಹೊಂದುವುದು" (ಜೈನಕೋ. ೨೭೦): ಮೇಲೆ ಬಂದ ಕೃತಾಂತರಾಜವಾಹಿನಿಯ ಸಿತಪತಾಕೆಗಳನನುಕರಿಸುವ ಪಳಿತಂಗಳಂ ದರ್ಪಣದೊಳ್ನೋಡಿ ಕಂಡು ಪರಪತಾಕಿನೀಪತಾಕೆಯಂ ಕಂಡು ಸೆರಗಿಲ್ಲದ ಗಂಡನಂತಿನಿಸಪ್ಪೊಡಂ ಮಾಣದದುವೆ ಸಂಸಾರನಿರ್ವೇಗಕಾರಣಮಾಗೆ (ಆದಿಪು. ೧-೭೯ ವ) ; ಆತಂ ತನಗೆ ಸಂಸಾರನಿರ್ವೇಗಮುಂ ಪುಟ್ಟೆ . . . ವಿಶ್ವನಂದಿಯಂ ಯುವರಾಜಪದವಿಯೊಳ್ ನಿಯೋಜಿಸಿ (ಶಾಂತಿಪು. ೭-೫೧ ವ). [ಸಂ.]

**ಸಂಸಾರಪಾಶ** (ನಾ). ಐಹಿಕಜೀವನದ ತೊಡಕು ; ಭವಬಂಧನ : ಜೀಯ ಸರ್ವಸ್ವತಂತ್ರನೆ ಬಿಡಿಸು ಸಂಸಾರಪಾಶದಿಂದೆನ್ನನು (ಜೈಮಿಭಾ. ೧೩-೨೮). [ಸಂ.]

**ಸಂಸ್ಕಾರಬಂಧನ** (ನಾ). = ಸಂಸಾರಪಾಶ : ಕರುಣಾಕರಾ . . . ಸಂಸಾರಬಂಧನವನು ಮಾಣಿಸೆನಗೆ ಕೃಪೆ ಮಾಡಿ (ಬಸವ. ೭೯); ಕೋಪವೇ ಸಂಸಾರಬಂಧನ ಕೋಪದಿಂದಿಹಪರದ ಸುಕೃತವು ಲಯವನ್ನೈದುವುದು (ಕುವ್ಯಾಉ. ೩-೧೧೩). [ಸಂ.]

**ಸಂಸಾರಭೀರು** (ನಾ). ಸಾಂಸಾರಿಕಜೀವನದ ಬಗೆಗೆ ಹೆದರಿಕೆಯುಳ್ಳವನು : ಅಹೊ ಧೈರ್ಯವಂತ ಅಹೊ ಸಂಸಾರಭೀರು ನಿನ್ನಂತುಪಸರ್ಗಮನಾರಪ್ಪೊಡಂ ಸೇರಿಸಿ ರತ್ನತ್ರಯಮಂ ಸಾಧಿಸಿದೊರಿಲ್ಲಂ (ವಡ್ಡಾರಾ. ೨೯-೨೨); ಸಂಸಾರಭೀರುತ್ವದಿಂ ಸಂಸಾರಭೀರುಗಳುಮಪ್ಪ ಸಾಸಿರ್ವರರಸುಮಕ್ಕಳ್ವೆರಸು ದೀಕ್ಷೆಯಂ ಕೆಯ್ಕೊಂಡು (ಪುಷ್ಪಪು. ೯-೭ ವ). [ಸಂ.]

**ಸಂಸಾಭೀರುತ್ವ** (ನಾ). ಸಾಂಸಾರಿಕಜೀವನದ ಬಗೆಗಿರುವ ಹೆದರಿಕೆ : ಕುಂಭಕರ್ಣಾದಿಗಳ್ ರಾಮಲಕ್ಷ್ಮಣರ ನಿಷ್ಕಷಾಯತ್ವಮುಮಂ ಸಂಸಾರಭೀರುತ್ವಮುಮಂ . . . ಮೆಚ್ಚಿ (ಪಂರಾಮಾ. ೧೪-೨೦೪ ವ); ಸಂಸಾರಭೀರುತ್ವದಿಂ ಸಂಸಾರಭೀರುಗಳುಮಪ್ಪ ಸಾಸಿರ್ವರರಸುಮಕ್ಕಳ್ವೆರಸು ದೀಕ್ಷೆಯಂ ಕೆಯ್ಕೊಂಡು (ಪುಷ್ಪಪು. ೯-೭ ವ). [ಸಂ.]

**ಸಂಸಾರಭ್ರಮಣ** (ನಾ). ೧. ಪ್ರಾಪಂಚಿಕಜೀವನದಲ್ಲಿ ತೊಳಲುವಿಕೆ : ಈ ಆನಂದ . . . ಪಡೆಯುವವನ ಚಿತ್ತಹ್ರದದಲ್ಲಿ ನಿಂತು, ಅವನ ಕಿಲ್ಬಿಷಗಳನ್ನು ತೊಳೆದು ಸಂಸಾರಭ್ರಮಣಪರಿತಾಪವನ್ನು ಉಪಶಮನಗೈಯುವ ಶಕ್ತಿಯುಳ್ಳದ್ದು (ಸೌಂದಸ. ೧೧೩). **೨.** ಜಗತ್ತನ್ನು ಸುತ್ತುವಿಕೆ ; ಪ್ರಪಂಚಪರ್ಯಟನೆ : ಸಂಸಾರಭ್ರಮಣವ ನಿಶ್ಚೈಸುವ ಬಗೆಯಂ ಬಿಸುಟ್ಟು ವಿಶ್ವೇಶನಿಜಾವಾಸವನುದ್ಭ್ರಮಣಂಗೆಯ್ದಾ ಸುಖದಿಂದಿರ್ಪನೆಂಬವೋಲ್ ಬಲವಂದಂ (ದಶಕು. ೯-೧೩). [ಸಂ.]

**ಸಂಸಾರವಂದಿಗ** (ನಾ). ಸಂಸಾರದಿಂದ ಕೂಡಿದವನು ; ಗೃಹಸ್ಥ : ದುಃಖವು ಬಹುದೊಡ್ಡ ಸಂಸಾರವಂದಿಗ ಹೆಂಡಿರು ಮಕ್ಕಳು ಬಹಳ (ಇಂಚಾಪ. ೫೯-೮೫); ತಾವು ಸಂಸಾರವಂದಿಗರು, ದೊಡ್ಡ ಮನೆತನದಲ್ಲಿ ಹುಟ್ಟಿದವರು (ದೇವಹಂ. ೨೦೩).

[ಸಂಸಾರ + < ಒಂದಿಗ]

**ಸಂಸಾರಸಂಗ** (ನಾ). ಐಹಿಕಜೀವನದ ಸಹವಾಸ, – ಒಡನಾಟ : ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆನ್ನ ಬಾಳುವೆ ಸಂಸಾರಸಂಗವ ಬಿಡದು ನೋಡೆನ್ನ ಮನವು (ಬಸವ. ೩೫) ; ಸಂಸಾರಸಂಗದ ಕಷ್ಟವ ನೋಡಾ (ಅವಚಂ. ೫೫-೨೩೭). [ಸಂ.]

**ಸಂಸಾರಹೇಹ** (ನಾ). ಐಹಿಕವಿಷಯಗಳಲ್ಲಿ ಉಂಟಾಗುವ ಜುಗುಪ್ಸೆ : ದಿವ್ಯಶಿವಯೋಗಿ ಸಿದಲಿನ್ಗೇಶ್ವರನ್ಗೆ ಸಮ್ಯಜ್ಞಾನೋದಯವಾಗಿ ಸಂಸಾರಹೇಹಮಂ ಮಾಡಿ (ಎಕ. XVI, ಕುಣಿಗ, ೪೯-೨೦ ; ಸು. 1480). [ಸಂಸಾರ + ಹೇಹ (< ಹೇವ)]

**ಸಂಸಾರಾತ್ಮ** (ನಾ). ಲೌಕಿಕವಿಷಯಗಳಲ್ಲಿ ಮಗ್ನನಾದವನು : ಮುಕ್ತಾತ್ಮರೆಂದು ಸಂಸಾರಾತ್ಮರೆಂದು ನಾಮೋಕ್ತಿಯಿತ್ತೆಱನಾದುದಹುದು (ಭರಚ. ೬೮-೨೧).

[ಸಂ. ಸಂಸಾರಾತ್ಮನ್]

**ಸಂಸಾರಾನುಪ್ರೇಕ್ಷೆ** (ನಾ). [ಜೈನ] ಮುನಿಗಳು ಧ್ಯಾನಮಾಡಬೇಕಾದ ಹನ್ನೆರಡು ಬಗೆಯ ತತ್ತ್ವಗಳ ಅನುಚಿಂತನೆಗಳಲ್ಲಿ ಒಂದು ; ನರಕ, ಪಶು, ಮಾನವ ಮತ್ತು ದೇವ ಈ ನಾಲ್ಕುಗತಿಗಳೂ ದುಃಖಮಯವಾದುದೆಂದು ಭಾವಿಸುವಿಕೆ: ಪಲವುಂ ಪರ್ಯಾಯಂಗಳೊಳ್ ತೊಟಲ್ದುದೆಂಬ ಸಂಸಾರಾನುಪ್ರೇಕ್ಷೆ (ಜೀವಸಂ. ೭೭-೨೯); ಸಂಸಾರಮಂ ಚಿಂತಿಸುವುದು ಸಂಸಾರಾನುಪ್ರೇಕ್ಷೆ (ದ್ವಾದಶಾ. ೫-೨೮ ವ). 'ದ್ವಾದಶಾನುಪ್ರೇಕ್ಷೆ' ಪರಾ. [ಸಂ.]

**ಸಂಸಾರಿ** (ಗು). ೧. ಒಂದು ಹುಟ್ಟಿನಿಂದ ಮತ್ತೊಂದು ಹುಟ್ಟನ್ನು ಪಡೆಯುವ; ದೇಹಾಂತರ ಹೊಂದುವ. ೨. ಲೌಕಿಕಕ್ಕೆ ಸಂಬಂಧಿಸಿದ ; ಪ್ರಾಪಂಚಿಕವಾದ. (ನಾ). ೩. ಆತ್ಮ ; ಚೇತನ : "ಕ್ಷೇತ್ರಜ್ಞಃ, ಪುರುಷಃ, ಆತ್ಮಾ, ಸಂಸಾರೀ, ಚೇತನಃ - ಈ ೫ ಆತ್ಮನ ಪೆಸರ್" (ಹಲಾಯು. ೨೨-೧೩೪); ದೇಹಾದಿಗಳಿಗಿಂತ ಬೇರೆಯಾಗಿ ಕರ್ತೃವೂ ಭೋಕ್ತನೂ ಆಗಿರುವ ಸಂಸಾರಿಯೊಬ್ಬನಿರುವನೆಂದು ಕೆಲವರು (ತಿಳಿದಿರುವರು) (ಬ್ರಹ್ಮಭಾ. ೧೫). ೪. ಪ್ರಾಪಂಚಿಕವಿಷಯಗಳಲ್ಲಿ ತೊಡಗಿರುವವನು ; ಸಾಮಾನ್ಯ; ನಾಡಾಡಿ: ನಾಣುಗೆಟ್ಟಾದರೂ ಲಿಂಗವನೊಲಿಸುವೆ ಕೆಲದ ಸಂಸಾರಿಗಳು ನಗುತಿರ್ದೊಡಿರಲಿ (ಬಸವ. ೪೯೮); ಸಂಸಾರಿಗಳವೊಲು ಖ್ಯಾತ ಭಾಷೆಯನಳಿದವರನತಿಭಕ್ತಿಪರರೆಂದು ಕೂರ್ತು ಭಾಷಣವಾಡಲಱಿಯೆವು (ಬಸಪು. ೩೭-೧೭). ೫. ಹೆಂಡತಿ ಮಕ್ಕಳನ್ನು ಹೊಂದಿರುವವನು; ಸಂಸಾರವಂದಿಗ; ಗೃಹಸ್ಥ : ಅವಿದ್ಯಾಸಂಬಂಧವಾದ ದೇಹೇಂದ್ರಿಯದ ಸಂಗದಿಂದ ಸಂಸಾರಿಯಾಗಿಪ್ಪನು ನೋಡಾ (ಸಿದ್ಧೇವ. ೪೭-೧೩೪); ಭಾರಕರ್ತನು ನೀನು ಬಹುಸಂಸಾರಿಯೆಂಬುದ ನಿಗಮತತಿ ಕೈವಾರಿಸುತ್ತಿದೆ (ಹಂಸಾ. ೫೩): ಅವನು ಹೆಂಡಿರು ಮಕ್ಕಳನ್ನು ಕಟ್ಟಿಕೊಂಡ ಸಂಸಾರಿಯು (ಸಾಹಿಸ. ೧೩೩). [ಸಂ. ಸಂಸಾರಿನ್]

**ಸಂಸಾರಿಕ** (ಗು). ೧.ಪ್ರಪಂಚಕ್ಕೆ ಸಂಬಂಧಿಸಿದ ; ಲೌಕಿಕವಾದ : ಆ ಮಹಾತ್ಮನ ಆತ್ಮೀಯ ಸಂ[ಪಾಠಾಂ. ಸಾಂ.]ಸಾರಿಕ ಮನೋರಥಂಗಳೊಡನೆ ರಥಾಂಗಂಗಳ್ ವಿಘಟಿಸೆಯುಂ (ಚಂದ್ರಪ್ರ. ೨-೪೭ ವ). (ನಾ). ೨. ಕುಟುಂಬಸ್ಥ ; ಗೃಹಸ್ಥ: ಸಕಲಸೌಭಾಗ್ಯಮಂ ತಳೆದ ಸಂ[ಪಾಠಾಂ. ಸಾಂ]ಸಾರಿಕನ ತೆಱದಿಂದ ವಿಮಲಪದ್ಮಾಕರಂ ಕಣ್ಗೆಸದುದು (ಜೈಮಿಭಾ. ೧೫-೧೩); ಕಾಮನಿಗೆ ಸೋಲು ಉಂಟಾಗಿದ್ದರೂ ಸಂಸಾರಿಕನಾದ ಶಿವನು ಒಂದಿಲ್ಲೊಂದು ದಿನ ತನ್ನ ಬಾಳಿನಲ್ಲಿ ಕಾಮನ ಗೆಲುವನ್ನು ಒಪ್ಪಿಕೊಳ್ಳಲೇ ಬೇಕು (ಸಾಹಿಸ. ೧೩೩). [ಸಂ.]

**ಸಂಸಾರಿಗ** (ನಾ). ಪ್ರಾಪಂಚಿಕವಾದ ಕರ್ಮದಲ್ಲಿ ತೊಳಲುವ ಜೀವ: ರಾಗದ್ವೇಷಾದಿ ದೋಷಂಗಳೊಳು ಕೂಡಿದರೆಲ್ಲಂ ಸಂಸಾರಿಗರೆಂದು ಬಗೆವುದು (ಶ್ರಾವಕಾ. ೩-೪); ಶ್ರೀಧರಮೂರ್ತಿಯು ಸಂಸಾರಿಗನು (ಅಂಬುಜಾ. ೫೮). [ಸಂಸಾರ + - ಇಗ]

**ಸಂಸಾರಿಜೀವ** (ನಾ). = ಸಂಸಾರಿಗ : ಸಂಸಾರಿಜೀವಂ ತ್ರಸಸ್ಥಾವರವಿಕಲ್ಪದಿಂದಿತ್ತೆಱ ನಕ್ಕುಂ (ಆದಿಪು. ೧೦-೬೩ ವ); ಸೂಕ್ತಿಯಲಿ ಧ್ರುವನಹನು ಶಿವನುದ್ಯುಕ್ತದಿಂ ಸಂಸಾರಿಜೀವನು ಶಿವನಸಂಸಾರಿ (ಬಸಪು. ೫೧-೨೮). [ಸಂ.]

**ಸಂಸಾರಿಸು** (ಕ್ರಿ). ಹುಟ್ಟುಸಾವುಗಳ ಬಂಧನದಲ್ಲಿ ತಿರುಗು, - ತೊಳಲು : ಬಹುಭಿನ್ನತನುಗಳ ಧರಿಸಿ . . . ತನ್ನ ನೈಜವ ಮಱೆದು ಇಹಪರದೊಳು ಸಂಸಾರಿಸಿ ಭವಭಾರವ ವಹಿಸಿದೀ ವೃತ್ತಿಯೊಳಿಹ ಪ್ರತಿಚ್ಛಾಯೆಯ (ಕೈಕವ. ೫-೪೫-೩). [ಸಂಸಾರ + - ಇಸು₃]

**ಸಂಸಿಕ್ತ** (ಗು). ೧. ನೀರನ್ನು ಚಿಮುಕಿಸಲ್ಪಟ್ಟ ; ಒದ್ದೆ ಮಾಡಲ್ಪಟ್ಟ: ದೇವೇಂದ್ರನಾದಿಜಿನೇಂದ್ರಂಗೆ ಬಿನ್ನಪಂಗಯ್ಯಲೊಡಂ . . . ಮರುತ್ಕುಮಾರ ಸಮ್ಮಾರ್ಜಿತಯೋಜನಾಂತರ ರಮ್ಯಭೂಮಿಭಾಗನುಂ ಮೇಘಕುಮಾರಸಂಸಿ[ಪಾಠಾಂ. ಸ]ಕ್ತ ಪ್ರಶಮಿತರಜಃಪ್ರಸರಧರಣೀತಳನುಂ . . . ಆಗಿ (ಆದಿಪು. ಬ. ೧೦-೭೭ ವ). ೨. (ಆಲಂ) ಆರ್ದ್ರವಾದ ; ಮೃದುವಾದ : ಕರಸಿದನು ಹರಿ ಪಾಂಡುಪುತ್ರರನರಸಿ ಸಹಿತೇಕಾಂತಭವನದೊಳುರುತರ ಪ್ರೇಮೈಕರಸಸಂಸಿಕ್ತವಚನದಲಿ (ಕುವ್ಯಾಸ. ೧೧-೧೨). [ಸಂ.]

**ಸಂಸಿದ್ಧ** (ಗು). ೧. ಸಂಪೂರ್ಣವಾಗಿ ನೆರವೇರಿಸಿದ, — ನಿರ್ವಹಿಸಿದ. ೨. ಗುರಿ ಮುಟ್ಟಿದ ; ಕೊನೆಗೊಂಡ. ೩. ಸಾಧಿಸಿದ ; ಸಿದ್ಧಿಯನ್ನು ಪಡೆದ. (ನಾ). ೪. ಸಂಪೂರ್ಣತೆಯನ್ನು ಹೊಂದಿದುದು ; ಪೂರ್ಣಗೊಂಡುದು : ಅನಾದಿಸಂಸಿದ್ಧವಾದ ಜಂಗಮನಱಿದಾತ ಬಸವಣ್ಣನೊಬ್ಬನೆ (ಅವಚಂ. ೨೧೯-೧೧೭೭); ಅಭವನಖಿಳವ್ಯಾಪಕಂ ತಾನಾಗಿಯಿದು ನಾನಾಪುರಾಣಾಗಮನಿಗಮ ಸರ್ವಪ್ರಮಾಣದಲಿ ರೂಪಿಸಲು ಸಂಸಿದ್ಧವೆಂ[ಪಾಠಾಂ. ದ್ಧಿಯೆಂ]ಬಾಲಾಪಮಂ ಕೇಳ್ದು (ಬಸಪು. ೫೧-೪೦). ೫. ಸಿದ್ಧಿಯನ್ನು ಪಡೆದವನು : ವರಷಟ್ಸ್ಥಲಾಚಾರಸಂಸಿದ್ಧನಮಲಸುಸ್ಥಿತಿ ಶೈವಪಂಚಾಕ್ಷರೀಮಂತ್ರಹೃದಯಂ . . . ತೋಂಟದಾರ್ಯ ಬಿತ್ತರಿಸಿದನೆನಲ್ಕೆ (ಶಬ್ದಮಂ. ೨): ಯಂತ್ರಾಕ್ಷರಮಂತ್ರಗಳನು ಬಲ್ಲವನು ಸಂಸಿದ್ಧನೆಂಬುದು (ಕಾಮಶಾ. ೨೫೨). ೬. ಬಿಡುಗಡೆ ಹೊಂದಿದವನು; ಮುಕ್ತ. [ಸಂ.]

**ಸಂಸಿದ್ಧಿ** (ನಾ). ೧. ಪೂರ್ತಿಯಾಗುವಿಕೆ ; ಪೂರ್ಣಗೊಳ್ಳುವುದು : ಲಕ್ಷ್ಮೀಕಾಂತಂ ಮುನಿಸುವ್ರತಂ ನಮಗೆ ಮಾಳ್ಕಿಷ್ಟಾರ್ಥಸಂಸಿದ್ಧಿಯಂ (ಪಂರಾಮಾ. ೧-೧); ಏಕಾಂತರಾಮಯ್ಯನ ಕಥೆಯನಶ್ರಾಂತಮುಂ ಕೇಳಿದಡೆ . . . ಇಷ್ಟಾರ್ಥಸಂಸಿದ್ಧಿಗಳು ಸಿದ್ಧಿಸುಗು (ಬಸಪು. ೫೨-೫೦). ೨. ಪರಿಪೂರ್ಣತೆ ; ಸಂಪೂರ್ಣತೆ : ಮುಕ್ತಿಯ ಹಂಗೇನೊ ಶರಣಬಸವಂಗೆ ಇಹಪರಸಂಸಿದ್ಧಿ ಇಲ್ಲವಯ್ಯಾ (ನೀಲವ. ಕ. ೧೦-೨೩). ೩. ಸಾಧನೆ ; ಸಿದ್ಧಿ : ವಾಗ್ವರ್ಣನೆಗೂ ಮನಃಕಲ್ಪನೆಗೂ ಮೀರಿದ ಸಂಸಿದ್ಧಿಯನ್ನು ಪಡೆದ ವಿಜ್ಞಾನಿಗಳೂ . . . ವಿಶ್ವಪ್ರೇಮವನ್ನು ಬೆಳೆಸಿದರೆ . . . ಮಾನವವರ್ಗಕ್ಕೆ ಕಲ್ಯಾಣಕಾರಕವಾಗುವುದರಲ್ಲಿ ಸಂದೇಹವಿಲ್ಲ (ಋಕ್ಸಾರ. ೪ ಪೀಠಿಕೆ). ೪. ಮೋಕ್ಷ; ಮುಕ್ತಿ. ೫. ವಸ್ತುವಿನ ಸಹಜಗುಣ,- ಸ್ವಭಾವ : "ಸಂಸಿದ್ಧಿಃ, ಪ್ರಕೃತಿಃ, ಸ್ವರೂಪಂ, ಸ್ವಭಾವಃ, ನಿಸರ್ಗ - ೫ ಸ್ವಭಾವದ ಹೆಸರುಗಳು, ಅಂದರೆ ಸಹಜವಾದ ಮನೋವೃತ್ತಿ" (ಸಿದ್ಧಾಂತಿ. ೭೦). ೬. ಮತ್ತಳಾದ ಅಥವಾ ಕೆರಳಿದ ಹೆಂಗಸು. [ಸಂ.]

**ಸಂಸಿದ್ಧಿಸು** (ಕ್ರಿ). ಸಿದ್ಧಿಯನ್ನು ಪಡೆ,— ಹೊಂದು : ಹಂಸನೊಳಗೆ ಶುದ್ಧನಹುದು ಹೊಱಗೆ ತೋರ್ಪ ಮಾಂಸಾಸ್ಥಿಮಲಪೂರ್ಣದೊಡಲ ಸಂಸರ್ಗದೋಷವಿಲ್ಲವೆ ನಿಮ್ಮನದಱೊಳು ಸಂಸಿದ್ಧಿಸುವೆನೆಂತು ಗುರುವೆ (ಭರಚ. ೬೯-೯೧). [ಸಂಸಿದ್ಧಿ + - ಇಸು₁]

**ಸಂಸುಪ್ತಿ** (ನಾ). ಪ್ರಪಂಚದ ನಾಶದ ಕಾಲ ; ಪ್ರಳಯ : "ಸಂವರ್ತಃ . . . ಸಂಸುಪ್ತಿಃ, ಸಂಹಾರಃ, ಮಹಾಪ್ರಳಯಃ - ಈ ೯ ಪ್ರಳಯಕಾಲಂ" (ಹಲಾಯು ೨೦-೧೧೭). [ಸಂ.]

**ಸಂಸೃತ** (ಗು). ೧. ಸಮಿಾಪಿಸಿದ ; ಹತ್ತಿರಕ್ಕೆ ಬಂದ. ೨. ಪಡೆದ ; ಹೊಂದಿದ: ವಿತತ ಸೃಕ್ವದ ಲೋಳೆಗಳ ಸಂಸೃತ ಜಠರಜ ಸ್ವೇದಜಲಲಾಲಿತ ಹಯಾವಳಿ ಕಳನ ಗೆಲಿದವು ಹರಿಯ ನೇಮದಲಿ (ಕುವ್ಯಾಭೀ. ೩-೪). [ಸಂ.]

**ಸಂಸೃತಿ** (ನಾ). ೧. ಮಾರ್ಗ ; ಗತಿ ; ಗಮನ. ೨. ಇಹಲೋಕಕ್ಕೆ ಸಂಬಂಧಿಸಿದ ಜೀವನ ; ಪ್ರಾಪಂಚಿಕವಾದ ಬದುಕು,— ಬಾಳು ; ಸಂಸಾರ : ಸಂಸೃತಿಭೋಗ ಮಸಾರಮನ್ನು ನಿಚ್ಚನಿಸಿ ನಿಜಪ್ರಿಯಾತ್ಮಜೆಗೆ ಸಂತತಿಯಂ ಕರೆದಿತ್ತು (ಎಕ. VII. ಶಿಕಾಂ. ೨೧೯-೨೩; 918); ಪ್ರತಿಬಿಂದು ಜರಾಬಿಂದುಗಳತರ್ಕ್ಯಬಲ ಕಾಲಪುರುಷನಿಂ ಸಮನಿಸೆ ಸಂಸೃತಿಯಂ ನಿರ್ಮೂಲಿಸಿ ನಿರ್ವೃತಿಲಕ್ಷ್ಮೀವಶ್ಯತಿಲಕಬಿಂದುವನಾಂತಂ (ಪಂರಾಮಾ. ೧೦-೧೨೨); ಶ್ರುತಿಗಳೆಂಬುದೆಯೆಮ್ಮ ನುಡಿ ಸಂಸೃತಿಗಳೆಮ್ಮಯ ಚೇಷ್ಟೆ (ಕುವ್ಯಾಆ. ೧೭-೫೧). ೩. ಜನನ ಹಾಗು ಮರಣಗಳ ಚಕ್ರ,—ಪರಂಪರೆ ; ಭವಾವಳಿ; ಸಂಸರಣ : ಮನದೆ ನೆನೆವವರ ಕಿಡುಗುಂ ಜಿನಾಧಿಪಾ ನಿನ್ನ ಪಾಪನಿಚಯಂ ಗುಣಮಂ ಮುನಿಗಳುಮದಱಿಂ ತತ್ಸೇವನೆಯಿಂ ಕಿಡಿಸಲ್ಕೆ ಪತ್ತಿದರ್ ಸಂ(ಸೃ)ತಿಯಂ (ಕವಿರಾ. ೧-೯೧); ಮತಿಗೆಟ್ಟ ಮಗಳೆ ಸಂಸೃತಿಲತೆಯೊಳ್ ತೊಡರಲ್ಕೆ ನೀನಿದಂ ನೆಗಟ್ದೆ (ಆದಿಪು. ೩-೩೯); ಪುಟ್ಟುಂ ಸಾವುಮಿವಿಂತೆಡೆಗೊಟ್ಟೊಡವುಟ್ಟಿ[ದು]ವು ದೇಹಿಗೀ ಸಂಸೃತಿಯೊಳ್ (ವರ್ಧಮಾ. ೫-೧೮). ೪. ಸಂಸಾರಬಂಧನ ; ವ್ಯಾಮೋಹ ; ಮಾಯಾಪಾಶ (?) : ಬದಿಕೊಟ್ಟ ಶಾಸನಂ ಸುಕೃತದ ರಾಶಿಗೆ ಬರೆದ ಲಚ್ಚಣಂ ಸಂಸೃತಿಮೋಹದ ಸಿದ್ಧಾಂತಂ ತಾನೆಂಬುದು ಭೂಪನಮೋಘವಾಕ್ಯಂ (ಅನಂಪು. ೨-೧೧); ಕಕ್ಕಸವಾಂತು ಕಣ್ಗೆಟ್ಟು ದಿಕ್ಕುಡುಗಿದೆನೀ ಸಂಸೃತಿಯಿಂ ರಂಗ ಕಕ್ಕುಲಿತೆಯನಿದ ನಿಲಿಸು (ಶತಸಾಂ. ೧೫-೮೪); ಎನ್ನರಸಿ! ಸಂಸೃತಿಯೇನಪಾರಮೊ! ಎನಿವಿರಿದೊ! ಇನಿಗಾಲಂ ನಮೆದೊಡಂ ಸಮೆಯದ! (ರಾಮಾಶ್ವ. ೭೪-೨೮). [ಸಂ.]

**ಸಂಸೃತಿಗತಿ** (ನಾ). ಹುಟ್ಟು ಸಾವುಗಳ ಸಂಸಾರದಲ್ಲಿ ಸುತ್ತುವುದು : ಇನಿತನೆಯ ಭವದೊಳಿಂತಾಯ್ತಿನಿತನೆಯ ಭವಾಂತರಂಗಳೊಳ್ ಮತ್ತಂ ಮೇಲಿನಿತು ಸುಖದುಃಖ ಫಲಮುಂ ಜನಿಯಿಕುವೆಂದಱಿವುದರಿದು ಸಂಸೃತಿಗತಿಯೊಳ್ (ಕಾವ್ಯಾವ. ೩೭೦). [ಸಂ.]

**ಸಂಸೃತಿಚಕ್ರ** (ನಾ). ಹುಟ್ಟು ಸಾವುಗಳ ಪರಂಪರೆ ; ಪುನಃ ಹುಟ್ಟುವುದು : ನೆನೆದೊಡಾಶ್ಚರ್ಯಮಲ್ತೆ ಸಂಸೃತಿಚಕ್ರಂ (ಸುಕುಮಾ. ೫-೧೯). [ಸಂ.]

**ಸಂಸೃತಿಧರ್ಮ** (ನಾ). ಸಂಸಾರದ ನಿಯಮ,-ವಿಧಿ : ಇಂತುಟು ಸಂಸೃತಿಧರ್ಮ ಮೇಕೆ ಬಾಯಱಿವುದಿದೇಕೆ ಚಿಂತಿಸುವುದು (ಪಂಪಭಾ. ೨-೨೭); ಹೊದ್ದಿ ಸಂಸೃತಿ ಧರ್ಮವನು ತಾ ಬದ್ಧವಾಗಿಹುದಮಲಬೋಧಸದದ್ವಯಾತ್ಮನ ತಿಳಿದು ಜೀವನ್ಮುಕ್ತವಾಗಿಹುದು (ಅಮೃತ. ೩-೧೪೨). [ಸಂ.]

**ಸಂಸೃತಿವಿಧಿ** (ನಾ). ಜೀವನದ ಕ್ರಮ,— ರೀತಿ : ಜ್ವಳನಜಟಿ ನಿಜಪುರೋಪವನಳೀಳ ಮಧುಮಾಸವಿರತಿಯೊಳ್ ಮಸುಳ್ದಿರೆ ಕಂಟಳಿಸಿದ ಮೆಯ್ಯೆರಸಿನಿಸಾಕುಳನಾದೋಂ ಬಗೆದು ನೋಡಿ ಸಂಸೃತಿವಿಧಿಯಂ (ಶಾಂತಿಪು. ೫-೬೫). [ಸಂ.]

**ಸಂಸೃತಿಹರಣ** (ನಾ). ಸಂಸಾರವನ್ನು ನಿವಾರಿಸುವಿಕೆ ; ಐಹಿಕವನ್ನು ದೂರಮಾಡುವಿಕೆ : ಧರ್ಮಮೆ ದೇಹಿಗೆ ಶರಣಂ ಧರ್ಮಮೆ ಸಂಸಾರಿಗಖಿಳಸಂಸೃತಿ ಹರಣಂ (ಸುಕುಮಾ. ೬-೪೧). [ಸಂ.]

**ಸಂಸೃಷ್ಟ** (ಗು). ೧. ಒಟ್ಟಾಗಿ ಸೇರಿದ ; ಬೆರೆತ. ೨. (ಪಾಲುದಾರರಂತೆ) ಭಾಗಿಯಾದ ; ಜೊತೆಗೂಡಿದ. ೩. (ಅಗಲಿದವರು) ಮತ್ತೆ ಕೂಡಿದ; ಸಂಯೋಗಗೊಂಡ. ೪. ಹುಟ್ಟಿದ ; ಸೃಷ್ಟಿಯಾದ. ೫. ನಿರ್ವಹಿಸಿದ; ನೆರವೇರಿಸಿದ. ೬. ಸ್ವಚ್ಛವಾದ ಬಟ್ಟೆಯನ್ನು ಧರಿಸಿದ. (ನಾ). ೭. ಕೂಡಿದುದು; ಸೇರಿದುದು : ನೇತ್ರ ನಾಸಿಕ ಪಾದ ಪಾಣಿ ಶ್ರೋತ್ರವೆಂಬಿವು ತಮ್ಮೊಳೊಂದೇ

ಸೂತ್ರದಲಿ ಸಂಸ್ಯಷ್ಟವಾಗಿ ಸಮಾನಬುದ್ಧಿಯಲಿ ಗಾತ್ರವಿಡಿದಿಹವೋಲು . . . ಬೆರಸಿ ಬದುಕುವುದು (ಕುವ್ಯಾಲು. ೪-೭). [ಸಂ.]

**ಸಂಸೃಷ್ಟಿ** (ನಾ). ೧. ಸೇರಿರುವಿಕೆ ; ಕೂಡಿಕೆ : ಘನಚೋದ್ಯಂ ನಿನ್ನ ಭರ್ತ್ಯಾಳಿಯ ನಡೆವಳಿ ಬೇಚೊಂದು ಸಂಸೃಷ್ಟಿ [ಪಾಠಾಂ. ಸೃತ್ವಸಂಸೃಷ್ಟಿ] ಬೇಚೊಂದು ನಿಜಂ ಬೇಚೊಂದು ದೇಹಾಕೃತಿ (ಪಂಪಾಶ. ೪೯). ೨. ಒಟ್ಟುಗೂಡಿಸುವಿಕೆ ; ಸೇರಿಸುವಿಕೆ. ೩. ಕಲೆ ಹಾಕಿದುದು ; ಸಂಗ್ರಹ. ೪. ಒಟ್ಟಾಗಿ ಒಂದೇ ಕುಟುಂಬದಲ್ಲಿ ವಾಸಿಸುವಿಕೆ. ೫. ಪಾಲುಗಾರಿಕೆ; ಸಹಭಾಗಿತ್ವ. ೬. [ಕಾವ್ಯಮೀ] ಸ್ವತಂತ್ರವಾದ ಅನೇಕ ಅಲಂಕಾರಗಳು ಒಂದೇ ಸ್ಥಳದಲ್ಲಿ ಇರುವುದು ; ಒಂದು ಬಗೆಯ ಮಿಶ್ರಾಲಂಕಾರ : ಅನೇಕ ಅಲಂಕಾರಗಳು ಒಂದಡೆಯಲ್ಲಿರುವಾಗ 'ಸಂಸೃಷ್ಟಿ'ಯೆಂದೂ 'ಸಂಕರ'ವೆಂದೂ ಮಿಶ್ರಾಲಂಕಾರಗಳಾಗುವುವು. ಸಂಸೃಷ್ಟಿಯಲ್ಲಿರುವ ಅಲಂಕಾರಗಳು ಒಂದರಲ್ಲಿ ಮತ್ತೊಂದು ಕಲೆಯದೆ ತಿಲತಂಡುಲಗಳಂತೆ ಇರುತ್ತವೆ (ಕೈಪಿಡಿ. ೨೪೯). [ಸಂ.]

**ಸಂಸೇಕ** (ನಾ). ಚಿಮುಕಿಸುವಿಕೆ ; ಸಿಂಪಡಿಸುವಿಕೆ : ದಾನಸನ್ಮಾನಸುಧಾಸಂಸೇಕದಿಂ ಪತ್ತಿದುದೆಳಸಿ ಸುಹೃನ್ಮಂಡಳಂ (ವರ್ಧಮಾ. ೨-೬). [ಸಂ.]

**ಸಂಸೇವಿ** (ನಾ). (ನಿಷ್ಠೆಯಿಂದ) ಸೇವೆ ಮಾಡುವವನು ಅಥವಾ ಆರಾಧಿಸುವವನು : ಜಂಗಮಲಿಂಗಸಂಸೇವಿ ಪ್ರಸಾದಾಭಂಗುರಾಮಳಜೀವಿ (ಬಸವು. ೭-೩೬). [ಸಂ.ಸಂಸೇವಿನ್]

**ಸಂಸೇವಿತ** (ನಾ). = ಸಂಸೇವಿ : ಕಾಶ್ಯಪೀಡಿತಗುಣಂ ಗಂಧರ್ವಸಂಸೇವಿತಂ . . . ಅದ್ಭುತಶಕ್ತಿಯಂ ತಳೆದನಾ ವಿಶ್ವಂಭರಾಧೀಶ್ವರಂ (ಬಾಧಪು. ೨-೨೫). [ಸಂ.]

**ಸಂಸೇವ್ಯ** (ಗು). ೧. ಸೇವಿಸಲು ತಕ್ಕುದಾದ ; ಸೇವೆಗೆ ಯೋಗ್ಯವಾದ : ಇಂತೆಂದು ಬೆಸಸಿದಂ ತತ್ವವಿತತ್ವಸಂಸೇವ್ಯನಿಕುರುಂಬಾಶಯಕರ್ದಮವಮಾತ್ಮವಚನ ಬೋಧೋದಾರಕ್ಷೀರಕ್ಷಾಳಿತಮಾಗೆ (ಶಾಂತಿಪು. ೧೨-೩ ವ). (ನಾ). ೨. ಸೇವೆಗೆ ಪಾತ್ರವಾದುದು ; ಪೂಜಿಸಲು ತಕ್ಕುದು : ಸಾಸಿರಯೋಜನಮುಮರ್ದು ಸುರಾಸುರಸಂಸೇವ್ಯಮಾಗಿ . . . ಈ ಸುರಗಿರಿ ಪೆಂಪಸೇಂ ಪುದುಂಗೊಳಿಸಿದುದೋ (ಆದಿಪು. ೭-೬೪). ೩. ಅಲಂಕೃತವಾದುದು ; ಶೋಭೆಗೊಂಡುದು : ಅಂತನಂತಮಂಗಳದ್ರವ್ಯಸಂಸೇವ್ಯಮುಂ ಉತ್ಸವೋನ್ಮತ್ತ ಪರಿವಾರಜನಪರಿಪೂರ್ಣಮುಮಾಗಿ ಪರಿಣಯನಮಂಡಪಂ ರಾಜಾಶ್ರಯಶ್ರೀಗೆ ಮಂಗಳಸದನಮೆನಿಸಿತ್ತು (ಚಂದ್ರಪ್ರ. ೬-೫೫ ವ). [ಸಂ.]

**ಸಂಸ್ಕರಣ** (ನಾ). ೧. ಸಿದ್ಧಪಡಿಸುವಿಕೆ ; ಸಜ್ಜುಗೊಳಿಸುವಿಕೆ. ೨. ಸುಧಾರಣೆ : ಆರ್ಥಿಕಜೀವನ, ಸಮಾಜರಚನೆ, ರಾಜಕೀಯಸಮಾನತೆ ಮತ್ತು ಸಂಸ್ಕರಣಗಳ ಗುರಿಯನ್ನಿಟ್ಟುಕೊಂಡು ಈ ಕಾಲದ ಸರಕಾರಗಳ ಆದಾಯ ವೆಚ್ಚ ನಡೆಯುವುವು (ಹಣಪ್ರ. ೧೯೮). ೩. ತಿದ್ದುಪಾಟು ; ಪರಿಷ್ಕರಣ : ಭಾಷಾಸಂಸ್ಕರಣಪ್ರಮಾಣನಯನಿಕ್ಷೇಪರ್ ಜಿನೇಂದ್ರಾಗಮಾಶೇಷಜ್ಞರ್ . . . ಪಟಿದೊಡೇನಂ ಮಾಟ್ಪರ್ (ಸುಕುಮಾ. ೧-೪೭); ಇದರಿಂದ ನಿಖರವಾದ ಬುದ್ಧಿಶಕ್ತಿಯ ಅಳತೆ ದೊರಕಲಾರದು. ಅದನ್ನು ನಿವಾರಿಸಲು ಈಚೆಗೆ ಸಂಸ್ಕರಣವಿಮುಕ್ತಪ್ರಶ್ನಾವಳಿಗಳು ಬೆಳಕಿಗೆ ಬರುತ್ತಿವೆ (ಶಿಕ್ಷದ. ೫೮೩). ೪. ಗ್ರಂಥದ ಪರಿಷ್ಕೃತ ಆವೃತ್ತಿ ; ಪುಸ್ತಕದ ಪರಿಷ್ಕೃತ ಮುದ್ರಣ : ಈ ಪುಸ್ತಕದ ಸಂಸ್ಕರಣವು ಸದ್ಯದಲ್ಲ ಆಗಲಿದೆ (ರೂಢಿ). [ಸಂ.]

**ಸಂಸ್ಕರಿಸು** (ಕ್ರಿ). ೧. ತಿದ್ದು ; ಸರಿಪಡಿಸು ; ಸುಧಾರಣೆ ಮಾಡು : ಸ್ವಭಾವಾದಿ ಹುಟ್ಟುಗುಣಗಳನ್ನು ಸಂಸ್ಕರಿಸಲು ಉಚಿತವೆನಿಸುವ (ಶಿಕ್ಷದ. ೧೩೭); ಕೃತಿ ವಸ್ತುವಾಗುವ ಕಾಲದಲ್ಲಿ ಅವನ ಬುದ್ಧಿ ಅದನ್ನು ಎಷ್ಟರ ಮಟ್ಟಿಗೆ ಸಂಸ್ಕರಿಸಿ ತದನಂತರ ಅಭಿವ್ಯಕ್ತಗೊಳಿಸುತ್ತದೆ ಎನ್ನುವ ಅಂಶವನ್ನು ಕೈಬಿಟ್ಟಿದ್ದಾನೆ (ಸೌಂದಸ. ೮೨). ೨. ಶುದ್ಧೀಕರಿಸು ; ಚೊಕ್ಕಟಮಾಡು : ಅಲ್ಯುಮಿನಿಯಮ್ನ್ನಗಳನ್ನು . . . ಲೀನಕಾರಿಯೊಂದರಿಂದ ಸಂಸ್ಕರಿಸಿ ದೊರೆತ ದ್ರಾವಣದಿಂದ ಲೀನಕಾರಿಯನ್ನು ಆಸವೀಕರಿಸುವುದರ ಮೂಲಕ . . . ಅಲ್ಯುಮಿನಿಯಮ್ಸ್ ಕರಡುರಾಶಿ ದೊರೆಯುತ್ತದೆ (ಕವಿಕೋ. II, ೨೫). ೩. ಸತ್ತವರಿಗೆ ಉತ್ತರಕ್ರಿಯಾದಿಗಳನ್ನು ಮಾಡು,— ಅಂತ್ಯಸಂಸ್ಕಾರವನ್ನು ನೆರವೇರಿಸು : ಮತಿವರಾದಿಗಳ್ ತದ್ದಂಪತಿಗಳ್ಗೆ . . . ದಹನಕ್ರಿಯೆಯಂ ನಿರ್ವರ್ತಿಸಿ ತದ್ಧೂಪಧೂಮದೊಳಲ್ಲಿಯೆ ವಿಗತಜೀವಿತಂಗಳಾದ ತಿರ್ಯಗ್ಜಾತಿಗಳುಮಂ ಸಂಸ್ಕರಿಸಿ (ಆದಿಪು. ೫-೨೭ ವ); ದುರ್ಮರಣವಟ್ಟ ಶೂದ್ರನನು ಸಂಸ್ಕರಿಸುವವರಾವಲ್ಲ (ಹಚಕಾ. ೧೨-೨೦); ಅಂತಾ ಯಮುನೆನ್ನಂ ಕಳುಪಲ್ ಆಂ ಬರ್ಪಾಗಳ್ ಮುಂದೆ ನಾಂ ಕಾದ ಬ್ರಾಹ್ಮಣನೆನ್ನ ಕಳೇವರಮಂ ಸಂಸ್ಕರಿಸಲೆಂದಿರ್ಪಾಗಳ್ (ಧಶಕು. ೩-೧೯ ವ). ೪. ಸಿದ್ಧಪಡಿಸು ; ಸಜ್ಜುಗೊಳಿಸು. ೫. ಪವಿತ್ರಗೊಳಿಸು ; ಪಾವನಗೊಳಿಸು : ಪವಿತ್ರೀಕರಿಸು ; ಶುದ್ಧಿಮಾಡು ; ಸಂಸ್ಕರಿಸು (Sanctify. ೧೦೬೩). ೬. ಪರಿಷ್ಕರಿಸು ; ಸಂಸ್ಕಾರಗೊಳಿಸು. ೭. ರಚಿಸು ; ನಿರ್ಮಿಸು. ೮. ಅಲಂಕರಿಸು; ಸೊಗಸುಗೊಳಿಸು. [ಸಂಸ್ಕರಣ + - ಇಸು]

**ಸಂಸ್ಕಾರ** (ನಾ). ೧. ಲೋಪದೋಷಗಳಿಲ್ಲದಂತೆ ಮಾಡುವಿಕೆ ; ತಿದ್ದುಪಾಟು; ಪರಿಷ್ಕರಣ : ಯಾವದಕ್ಕೆ ಸಂಸ್ಕಾರ ಮಾಡುತ್ತೇವೋ ಆ ವಸ್ತುವಿನಲ್ಲಿ (ಹೊಸ) ಗುಣವನ್ನು ಸೇರಿಸುವುದರಿಂದಾಗಲೀ ಇರುವ ದೋಷವನ್ನು ತೆಗೆದುಹಾಕುವದರಿಂದಾಗಲೀ ಅದಕ್ಕೆ ಆಗುವ (ವಿಶೇಷಕ್ಕೆ) ಸಂಸ್ಕಾರವೆಂದು ಹೆಸರು (ಬ್ರಹ್ಮಭಾ. ೫೨) ; ಪುಸ್ತಕವ್ಯಾಪಾರಿಯಿಂದ ಗ್ರಂಥಾಲಯಕ್ಕೆ ಪುಸ್ತಕಗಳು ಬಂದನಂತರ ವಾಚಕರ ಕೈಸೇರುವವರೆಗೆ ಅವು ಅನೇಕ ಸಂಸ್ಕಾರಗಳನ್ನು ಪಡೆಯಬೇಕಾಗುತ್ತದೆ (ಗ್ರಂಥಾಲ. ೧೪). ೨. ಆಲೋಚನೆ; ಭಾವನೆ; ಕಲ್ಪನೆ. ೩. ಹಿಂದಿನವನ್ನು ಜ್ಞಾಪಿಸಿಕೊಳ್ಳುವ ಸ್ಮರಣಶಕ್ತಿ; ಸ್ಮರಣೆಗೆ ಕಾರಣವಾದ ಮಾನಸಿಕವ್ಯಾಪಾರ ; ವಾಸನೆ : "ಸಂಸ್ಕಾರಃ, ವಾಸನಾ - ಈ ೨ ಸಂಸ್ಕಾರಂ" (ಹಲಾಯು. ೧೨೬-೯೫) ; ಹಿಂದಿನ ಅನುಭವದಿಂದುಂಟಾದ ಸಂಸ್ಕಾರವೆಂಬ ಶಕ್ತಿ ಎಲ್ಲಿತ್ತೆಂದು ವಿಚಾರಿಸಿದರೆ ದೇಶದ ಯಾವುದೊಂದು ಅಂಶದಲ್ಲಿತ್ತೆಂದು ಹೇಳಬೇಕು (ಹಿಂದಪಾ. ೧೨೦). ೪. ಒಂದು ದೇಶದ ಅಥವಾ ಒಬ್ಬ ವ್ಯಕ್ತಿಯ ಮಾನಸಿಕಸಾಧನೆ; ನಾಗರಿಕತೆ ; ಸಂಸ್ಕೃತಿ : ಈ ಬುದ್ಧಿ ಬರುವುದಕ್ಕೆ ಸಂಸ್ಕಾರದ ಬಲಬೇಕು (ಹೊಸಕ್ಕ. ೩೨); ಶಿಕ್ಷಣ ಸಂಸ್ಕಾರಗಳಿಂದ ಪರಿಪಾಕ ಹೊಂದಿದ ಸ್ತ್ರೀಯರ ಪಾತ್ರಗಳಿಗೆ ರಾಮಾಯಣದಲ್ಲಿ ಕೊರತೆಯಿಲ್ಲ (ಕರ್ನಾಕ. ೭). ೫. ಸ್ವಭಾವಸಿದ್ಧವಾದ ಗುಣ ; ಸಹಜಪ್ರವೃತ್ತಿ : ಒಂದಡಿಯನಿಟ್ಟು ಹರಿ ಮತ್ತೊಂದಡಿಗಡಿಯೆತ್ತುವಾಗಳುಂ ವಿಕ್ರಮನಾದಂದಿನ ಸಂಸ್ಕಾರಂ ಬಿಡದೆಂದೆನೆ ಬಗೆಗೊಳಿಸಿದಂ ತರ್ಲರ್ಡಿವೆಡೆಯೊಳ್ (ಜಗವಿ. ೬-೪೨). ೬. ಪರಂಪರಾನುಗತವಾಗಿ ಬರುವ ವ್ಯಕ್ತಿತ್ವ, — ಗುಣ. ೭. ಶುದ್ಧಗೊಳಿಸುವುದು; ಪವಿತ್ರಗೊಳಿಸುವುದು. ೮. ಪವಿತ್ರಗೊಳಿಸುವ ಕಾರ್ಯ ; (ಜಪ, ಧ್ಯಾನ, ಉಪಾಸನೆ ಮುಂತಾದ) ನಿತ್ಯವಿಧಿ ; ನೇಮ: ಶ್ರೀ ಶಂಕರಾಚಾರ್ಯರು "ಸಂಸ್ಕಾರವು ದೋಷವನ್ನು ಹೋಗಲಾಡಿಸಿ ಸಂಸ್ಕಾರ್ಯನಲ್ಲಿ ಗುಣಾಧಾನ ಮಾಡುತ್ತದೆ" . . . ಎಂದು ತಮ್ಮ ಬ್ರಹ್ಮಸೂತ್ರಭಾಷ್ಯದಲ್ಲಿ ಹೇಳಿದ್ದಾರೆ (ಭಾರದ. ೫೪). ೯. ಸಿದ್ಧತೆ ; ಅಣಿ; ಸಜ್ಜು. ೧೦. ನುಣುಪುಗೊಳಿಸುವುದು; (ಮೆರುಗು ಕೊಡುವುದಕ್ಕಾಗಿ) ಉಜ್ಜುವುದು : ಕಬ್ಬಿಣಕ್ಕೂ ಹೊಳಪು ಕೊಡಬಹುದು, ಕಲ್ಲನ್ನೂ ನಯಮಾಡಬಹುದು – ಅವಕ್ಕೆ ಇರುವ ಗುಣವನ್ನು ಸಂಸ್ಕಾರದಿಂದ ಹೆಚ್ಚಿಸಬಹುದು (ಧ್ವನ್ಯಾಲೋ. VII ಮುನ್ನುಡಿ). ೧೧. ಅಲಂಕರಣ ; ಪ್ರಸಾಧನ ; ಅಲಂಕಾರ: "ಅಂಗವಿಲೇಪನಂ ಸಮಾಲಂಭವಿಷ್ಣಗಂಧಾದಿವಾಸಮದು ಸಂಸ್ಕಾರಂ" (ವಸ್ತುಕೋ. ೭೬-೮). ೧೨. ಆಹಾರವನ್ನು ಬೇಯಿಸುವುದು ; ಅಡುವುದು. ೧೩. ಮುಗಿಸುವಿಕೆ; ಪೂರೈಸುವಿಕೆ. ೧೪. ನಾಮಕರಣ, ಮುಂಜಿ ಮುಂತಾದ ಧಾರ್ಮಿಕವಿಧಿ : ಪೂಜಾದಿ ಸಂಸ್ಕಾರಗಳು ಪ್ರಾರಂಭವಾದುವು (ಪುನರು. ೧೭೫). 'ಷೋಡಶಸಂಸ್ಕಾರ' ಪರಾ. ೧೫. ಸತ್ತವರಿಗೆ ಮಾಡುವ ಅಪರಕರ್ಮ ; ಉತ್ತರಕ್ರಿಯೆ : ತನ್ನ ರಕ್ತಸಂಬಂಧಿಯ ಶವ ಹೀಗೆ ಸಂಸ್ಕಾರವಿಲ್ಲದೆ ಕಾಯಬೇಕಾಗಿ ಬರುತ್ತಿತ್ತೆ? (ಸಂಸ್ಕಾರ. ೧೦); ಶೀಘ್ರದಲ್ಲೇ ಮುಂದಿನ ಸಂಸ್ಕಾರಗಳನ್ನು ಮುಗಿಸಬೇಕು (ಕಂಬಹು. ೭೦). ೧೬. ಆತ್ಮನ ನವಗುಣಗಳಲ್ಲಿ ಒಂದು : ನವವಿಧಗುಣಗಳು-ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ – ಈ ೯ ವೈಶೇಷಿಕರು ಹೇಳುವ ಆತ್ಮನ ಗುಣಗಳು (ಅಮೃತ. ೬-೪೯ ಟೀಕೆ). ೧೭. [ದ್ವೈತ] ನಲವತ್ತು ಬಗೆಯ ಗುಣಗಳಲ್ಲಿ ಒಂದು : ರೂಪ, ರಸ, ಗಂಧ . . . ಅಧರ್ಮ, ಸಂಸ್ಕಾರ . . . ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧಗುಣಗಳು (ಹಿಂದಪಾ. ೨೭೫). ೧೮. [ಬೌದ್ಧ] ರೂಪ, ವೇದನೆ, ಸಂಜ್ಞೆ, ಸಂಸ್ಕಾರ ಮತ್ತು ವಿಜ್ಞಾನ ಎಂಬ ಐದು ಬಗೆಯ ಸ್ಕಂಧಗಳಲ್ಲಿ

ಒಂದು : 'ಸಂಸ್ಕಾರ' ಎಂಬುದು ಮನಸ್ಸು ಮಾತು ಮೈಗಳಿಂದ ಉಂಟಾದ ಪುಣ್ಯ – ಪಾಪಕರ್ಮಗಳ ರಾಶಿಯಾಗುವಿಕೆ (ಭಾರದ. ೧೯೫); ರೂಪ ವೇದನೆ ಸಂಜ್ಞೆ ಸಂಸ್ಕಾರ ವಿಜ್ಞಾನಗಳು [ಕೂಡಿ] 'ನಾಗಸೇನ' ನೆ? (ಬುದ್ಧಪ. ಮಿಲಿಂದ. ೩೫).

ಸಂಸ್ಕಾರಂ ಮಾಡು, ಸಂಸ್ಕಾರ ಮಾಡು = ೧. (ಹೆಚ್ಚು ರುಚಿಯುಂಟಾಗುವಂತೆ) ಸಂಸ್ಕರಿಸು; ಪರಿಷ್ಕಾರಗೊಳಿಸು : ವಿವಿಧಭಾಜನಂಗಳೊಳಡುವ ಘೃತಲವಣತೈಲಕ್ಷೀರದಧಿವ್ಯಂಜನಗಳೊಳ್ ಸಂಸ್ಕಾರಂ ಮಾಡುವಳವಿಯಱಿದುಣ್ಬ ಪಾಯಂಗಳುಮಂ . . . ಪೇಳ್ವ (ಆದಿಪು. ಬ. ೬-೭೭ ವ). ೨. ಉತ್ತರಕ್ರಿಯೆಯನ್ನು ನೆರವೇರಿಸು ; ಅಪರಕರ್ಮಗಳನ್ನು ಮಾಡು : ಒಂದು ಶವವು ಬಿದ್ದಿದ್ದಿತು, ಹತಭಾಗ್ಯನಾಗಿದ್ದವನಾ ಶವಕ್ಕೆ ಸಂಸ್ಕಾರ ಮಾಡಿರಲಿಲ್ಲ (ಕಪಾಕುಂ. ೧೨೯) ; ನಾನು ಸಂಸ್ಕಾರ ಮಾಡಬಹುದೊ, ಬಾರದೊ ವಿಷಯ ಒತ್ತಟ್ಟಿಗಿರಲಿ (ಸಂಸ್ಕಾರ. ೭). [ಸಂ.]

**ಸಂಸ್ಕಾರಮರಣ** (ನಾ). [ಜೈನ] ''ವ್ರತವನ್ನು ಸ್ವೀಕರಿಸಿ ಸಂಸ್ಕಾರವನ್ನು ಹೊಂದಿ, ಮಿಥ್ಯಾತ್ವಾದಿ ದೋಷತ್ಯಾಗದಿಂದ ಶರೀರವನ್ನು ಬಿಡುವುದು'' (ಜೈನಕೋ. ೨೭೧): ಆತ್ಮಂಗ(ರ)ಹಿತಮಪ್ಪ ಮಿಥ್ಯಾಜ್ಞಾನ ದರ್ಶನಜ್ಞಾನಚಾರಿತ್ರಂಗಳಂ ಪತ್ತುವಿಟ್ಟು ಆತ್ಮಹಿತಮಪ್ಪ ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಂ ಕೈಕೊಂಡಂತು ಮುನ್ನಿನ ಪರ್ಯಾಯಮಂ ಪತ್ತುವಿಟ್ಟು ಮತ್ತೊಂದು ಪರ್ಯಾಯಾಂತರಕ್ಕೆ ಸಲ್ವುದು ಸಂಸ್ಕಾರಮರಣಂ (ಚಾವುಂಪು. ೨೨೬). [ಸಂ.]

**ಸಂಸ್ಕಾರವಿಧಿ** (ನಾ). ಉತ್ತರಕ್ರಿಯೆಗೆ ಸಂಬಂಧಿಸಿದ ಕಟ್ಟಳೆ, – ಕ್ರಿಯೆ : ಅವರ್ಗೆಲ್ಲಂ ಸಂಸ್ಕಾರವಿಧಿಯಂ ನಾನ ಪಕ್ಕದೊಳೆರ್ದು ಮಾಡಿಸುವೆಂ (ಪಂಪಭಾ. ೧೪-೬ ವ); ಹಸ್ತಿನಾಪುರದಾ ಸಮಸ್ತ ಪ್ರಕೃತಿಜನ ಸಂತೈಸಿದರು ಸಂಸ್ಕಾರವಿಧಿಯನು ಹತಮಹೀಶರಿಗೆ (ಕುಮ್ಯಾಗ. ೧೨-೨೧). [ಸಂ.]

**ಸಂಸ್ಕಾರಹೀನ** (ನಾ). ಉಪನಯನವೇ ಮುಂತಾದ ಯಾವ ಬಗೆಯ ಸಂಸ್ಕಾರಗಳನ್ನೂ ಹೊಂದದಿರುವವನು : ''ವ್ರಾತ್ಯನೆನೆ ಸಂಸ್ಕಾರಹೀನನಕ್ಕು'' (ಮಂಗರಾ. ೭೫-೬). [ಸಂ.]

**ಸಂಸ್ಕಾರಿಸು** (ಕ್ರಿ). ಅಂತ್ಯಸಂಸ್ಕಾರವನ್ನು ಮಾಡು ; ಉತ್ತರಕ್ರಿಯೆಯನ್ನು ನೆರವೇರಿಸು : ಸಂಸ್ಕಾರಿಸಲೀ ವನಿತೆಯರ್ಗವರವರ ಪುರುಷರಂ ಕುಡವೇಱ್ಕುಂ (ಪಂಪಭಾ. ೧೪-೮). [ಸಂಸ್ಕಾರ + - ಇಸು]

**ಸಂಸ್ಕೃತ** (ಗು). ೧. ಚೆನ್ನಾಗಿ ರಚಿಸಿದ ; ನಿರ್ದಿಷ್ಟವಾಗಿ ರೂಪಿಸಿದ. ೨. ಸುಧಾರಿಸಿದ ; ಸಂಸ್ಕಾರಗೊಳಿಸಿದ. ೩. ನಯಗೊಳಿಸಿದ ; ನಾಜೂಕಾಗಿ ಮಾಡಿದ. ೪. ಸಜ್ಜುಗೊಳಿಸಿದ ; ಅಣಿಮಾಡಿದ. ೫. ಪಕ್ವಗೊಳಿಸಿದ ; ಬೇಯಿಸಿದ. ೬. ಅಲಂಕಾರಮಾಡಿದ ; ಶೃಂಗರಿಸಿದ. ೭. ಪವಿತ್ರಗೊಳಿಸಿದ ; ಪರಿಶುದ್ಧ ಮಾಡಿದ. ೮. ಚೊಕ್ಕಟಮಾಡಿದ ; ನಿರ್ಮಲಗೊಳಿಸಿದ. ೯. ಅತ್ಯುತ್ತಮವಾದ ; ಶ್ರೇಷ್ಠವಾದ. (ನಾ). ೧೦. ಚೆನ್ನಾಗಿ ಕಾಣುವಂತೆ ಮಾಡಿದುದು ; ಒಪ್ಪವಿಟ್ಟುದು : ''ಸಂಸ್ಕೃತಂ – ಒಳ್ಳೇದಾಗಿ ಕಾಣಬರುವಂತೆ ಒಪ್ಪವಿಡಲ್ಪಟ್ಟದ್ದು . . . ಚೆನ್ನಾಗಿ ಮಾಡಲ್ಪಟ್ಟ ವಸ್ತು'' (ಸಿದ್ಧಾಂತಿ. ೩೯೪). ೧೧. ವ್ಯಾಕರಣಶುದ್ಧವಾದ ಶಬ್ದ : ಸಂಸ್ಕೃತವೆಂದರೆ ವ್ಯಾಕರಣಶಾಸ್ತ್ರದಿಂದ ಶೋಧಿತವಾದ ಸಾಧುವಾದ ಶಬ್ದವು (ಭಾರದ. ೬೨೯). ೧೨. ಭಾರತೀಯ ಪ್ರಾಚೀನ ಆರ್ಯಭಾಷೆಗಳಲ್ಲಿ ಒಂದು; ಗೀರ್ವಾಣಭಾಷೆ : ನೆಗಟ್ದಿರ್ದ ಕನ್ನಡಂಗಳೊಳಗಣಿತಗುಣವಿದಿತ ಸಂಸ್ಕೃತೋಕ್ತಕ್ರಮಮಂ ಬಗೆದೊಂದು ಮಾಡಿ ಪೇೞ್ವೊಡೆ ಸೊಗಯಿಸುಗುಂ ಕಾವ್ಯಬಂಧಂ (ಕವಿರಾ. ೧-೫೭); ಸಂಸ್ಕೃತಂ ಪ್ರಾಕೃತಂ ಅಪಭ್ರಂಶಿಕಂ ಪೈಶಾಚಿಕಮೆಂಬ ಮೂಱುವರೆ ಭಾಷೆಗಳೊಳ್ ಪುಟ್ಟುವುದೆಲ್ಲಂ ಸರ್ವವಿಷಯಭಾಷಾಜಾತಿಗಳಕ್ಕುಂ (ಛಂದೋಂಬು. ೧-೯೭ ವ); ಸಂಸ್ಕೃತದೊಳ್ ಶುದ್ಧಗೆಯ್ಯೆವತ್ತೆರಡಕ್ಕುಂ (ಶಮದ. ೩೨ ವೃತ್ತಿ). ೧೩. ಸಂಸ್ಕಾರಗೊಂಡವನು; ರೀತಿನೀತಿಗಳನ್ನು ತಿಳಿದವನು : ಅದರ ಆದರ್ಶಗಳೂ ನಿಯಮಗಳೂ ವ್ಯಕ್ತಿಯ ಜೀವನದಲ್ಲಿ ಬೆರೆತು ಬೆಳೆಯಬೇಕು. ಆಗ ಮಾತ್ರ ಸಂಸ್ಕೃತರಾಗಿ ಶಾಂತಿ ಪಡೆಯಲು ಸಾಧ್ಯ (ಜೀವಾತ್ಮ. ii, ಮುನ್ನುಡಿ); ಎಷ್ಟು ಸಂಸ್ಕೃತನಾದರೂ ಮಾನವನು ಇಂದಿಗೂ ಅನಾಗರಿಕನಾಗಿಯೆ ಇದ್ದಾನೆಂದು ಬಲ್ಲವರು ಹೇಳುತ್ತಾರೆ (ಗಾಳಿಪ. ೭೭). ೧೪. ಪಂಡಿತ ; ವಿದ್ವಾಂಸ : ''ವ್ಯುತ್ಪನ್ನಃ, ಪ್ರಹತಃ, ಕ್ಷುಣ್ಣಃ, ಸಂಸ್ಕೃತಃ – ಈ ೪ ಪಂಡಿತಂ'' (ಹಲಾಯು. ೫೮-೧೯೭). [ಸಂ.]

**ಸಂಸ್ಕೃತಿ** (ನಾ). ೧. ಬುದ್ಧಿವಿಕಾಸ ; ಮಾನಸಿಕವಾದ ಪಕ್ವತೆ : ಸಂಸ್ಕೃತಿಗೂ, ನಾಗರಿಕತೆಗೂ, ಆತ್ಮಕ್ಕೂ, ಭೌತಿಕವಸ್ತುಗಳಿಗೂ ಇರುವ ಅಂತರವಿದೆ. ನಾಗರಿಕತೆ ಸಂಸ್ಕೃತಿಯಾಗಬೇಕಾದರೆ, ಅದರಲ್ಲಿ ಆಧ್ಯಾತ್ಮಿಕ ಒಳ್ಳೆಯತನ ಸೇರಬೇಕು ; ಒಳ್ಳೆಯ ತನವೇ ಸಂಸ್ಕೃತಿಯ ಸಾರ (ಭಾರದ. ೫); ಮಾನವನು ಕಾರ್ಯನಿರತನಾದಾಗ ಆತನ ಮನಸ್ಸು ವಿಕಾಸಗೊಳ್ಳುತ್ತದೆ . . . ಹೀಗೆ ತೋರಿಬರುವ ಮನೋವಿಕಾಸವನ್ನೇ ಸಂಸ್ಕೃತಿ ಎನ್ನಬಹುದು (ತುಳುನಾ. ೨೪೫). ೨. ಒಂದು ದೇಶದ ಅಥವಾ ಜನಾಂಗದ ಮಾನಸಿಕವಾದ ಸಾಧನೆ : ಜೀವನವೇ ಲಯಬದ್ಧವಾಗಿ ಒಟ್ಟಂದದಿಂದ ಶೋಭಿಸ ಬೇಕು. ಅದೇ ನಿಜವಾದ ಸಂಸ್ಕೃತಿಯ ಕುರುಹು (ಸಾಹಿಜೀ. ೧೩); ನೀನು . . . ನಮ್ಮ ಸಂಸ್ಕೃತಿಯ ಮಕುಟಮಣಿಯಾಗಿ ರಾರಾಜಿಸುತ್ತಿರುವೆ ! (ದಾಸಚಿಂ. ೧೭೬). ೩. ನಾಗರಿಕತೆ: ದೇಶದಲ್ಲಿ ಪರಂಪರೆಯಾಗಿ ನಡೆದು ಬಂದಿರುವ ಸಂಸ್ಕೃತಿ ಸಂಪ್ರದಾಯಗಳನ್ನು ಸಾಧ್ಯವಾದ ಸಮಸ್ತ ರೀತಿಗಳಲ್ಲೂ ಉಪಯೋಗಿಸಿಕೊಳ್ಳಬೇಕು (ಕ್ರಿಯಾಶಿ. ೧೭೪). [ಸಂ.]

**ಸಂಸ್ಕೃತಿಸು** (ಕ್ರಿ). ಸಂಸ್ಕೃತದಲ್ಲಿ ಮಾತನಾಡು : ಮರಗಳಲಿ ಕೋಗಿಲೆ ಕುಹೂಕುಹೂಕರಿಸುತಿರೆ, ಕಃ ಕಃ ಎನುತ್ತ ಕೆಂಬೋತ ಸಂಸ್ಕೃತಿಸುತಿರೆ (ವೃಶಾಪಿ. ೭೪-೨೬೮). [ಸಂಸ್ಕೃತ + - ಇಸು]

**ಸಂಸ್ಕ್ರಿಯೆ** (ನಾ). ೧. ಸಜ್ಜು ; ಸಿದ್ಧತೆ. ೨. (ದೇಹಶುದ್ಧಿಗಾಗಿ ಮಾಡುವ) ಧಾರ್ಮಿಕವಿಧಿ ; ಸಂಸ್ಕಾರ. ೩. ಅಪರಕರ್ಮ ; ಉತ್ತರಕ್ರಿಯೆ. [ಸಂ. ಸಂಸ್ಕ್ರಿಯಾ]

**ಸಂಸ್ಖಲಿತ** (ನಾ). ದೋಷ ; ತಪ್ಪು : ಏನು ಕರೆಸಿದಿರ್ಕೆ ಪ್ರಯೋಜನವೇನು ನಿಮ್ಮುತ್ಸಾಹಶಕ್ತಿಯೊಳೇನು ದುರ್ಘಟವೇನು ಶಂಕಿತವೇನು ಸಂಸ್ಖಲಿತ [ಪಾಠಾಂ. ಸಂಕಲ್ಪ] (ಕುಮ್ಯಾಸ. ೨-೧೦). [ಸಂ.]

**ಸಂಸ್ತರ** (ನಾ). ೧. ಹಾಸುಗೆ ; ಶಯ್ಯೆ. ೨. ಹುಲ್ಲು, ಎಲೆ ಮುಂತಾದುವು ಗಳಿಂದ ಮಾಡಿದ ಹಾಸುಗೆ : ''ಸಂಸ್ತರ : – ೧ ದರ್ಭೆಯ ಹಾಸಿಗೆ, ಯಜ್ಞ ವಿಶೇಷ ೨'' (ಸಿದ್ಧಾಂತಿ. ೪೧೨). ೩. ಪದರ ; ಮಡಿಕೆ ; ಸ್ತರ : ಅವುಗಳು ನೆಲದ ಸಂಸ್ತರಗಳಲ್ಲಿ ದೊರೆಯುತ್ತವೆ. ಆ ನೆಲದ ಭಾಗಗಳು ಪದರು ಪದರು (ಸಂಸ್ತರ) ಗಳಾಗಿ ಒಂದರ ಮೇಲೊಂದು ಸಿಗುವುವು (ಬಾಲಪ್ರ. II, ೭೫೮); ಅದರ ಮೇಲಿನ ಸಂಸ್ತರ ಕೆಂಪಾಗಿದ್ದರೆ, ಕೆಳಗಿನ ಅಂಚೆಲ್ಲ ಬಿಳಿಜೇಡಿನ ಮಣ್ಣಿನದು (ಕುಡಿಕೂ. ೩೧೪). ೪. ಯಜ್ಞ ; ಯಾಗ : ''ಸತ್ರಂ ಸವಂ . . . ಸಂಸ್ತರಂ ವಿತಾನಂ ಯಾಗಕ್ಕತ್ಕ ಮೆನಿಸಿಕ್ಕು'' (ಮಂಗರಾ. ೭೭-೧೩). [ಸಂ.]

**ಸಂಸ್ತವ** (ನಾ). ೧. ಹೊಗಳಿಕೆ ; ಸ್ತುತಿ : ಮೃದುಪದಬಂಧಮಂ ಬಗೆಯ ಭಾವದ ಮೆಯ್ಸಿರಿಯಂ . . . ಮೆಚ್ಚಿ ಪೊಣ್ಮಿದ ಪುಳಕಂಗಳಿಂ ನಯನದೊಳ್ ಕರೆಗಣ್ಮಿದ ಹರ್ಷಬಾಷ್ಪವರ್ಷದಿನನುರಾಗಮುಂ ಪಡೆವ ಸಜ್ಜನಸಂಸ್ತವವೊಂದೆ ಸಾಲದೇ (ಪಂಠಾಮಾ. ೧-೨೯); ಸುರಯೋಗೀಂದ್ರಸಮಾಜಸಂಸ್ತವಜಯಧ್ವಾನಂ . . . ಭೋಂಕನೆ ಕೇಳಲಾಯ್ತು ಗೆಲವಂದಂಬೋಧಿನಿರ್ಘೋಷಮಂ (ಜಗವಿ. ೧-೪೬). ೨. ಗುರುತು ; ಪರಿಚಯ : ''ಪರಿಚಯಂ ಸಂಸ್ತವಮೆನಲ್ಕೆ ಮೊಗವಜಿತ'' (ಮಂಗರಾ. ೧೩೪-೩೨). ೩. ಸಲುಗೆ; ಅನ್ಯೋನ್ಯತೆ. [ಸಂ.]

**ಸಂಸ್ತವನ** (ನಾ). ೧. ಸ್ತುತಿಸುವುದು : ಭಯಮಖಿಲಕಾಂಕ್ಷೆ . . . ಸಂಸ್ತವನಮೆಂಬೀ ಕ್ರಿಯೆ ಸಮ್ಯಗ್ದೃಷ್ಟಿಗೆ ನೋಡೆ ಯಥಾಕ್ರಮದಿಂ ವ್ಯತಿಕ್ರಮಂ ತಾನಕ್ಕುಂ (ಸುಕುಮಾ. ೬-೪೫); ಮಾರುತಿಯ ಮುಖಾರವಿಂದಮಂ ನೋಡಿ . . . ಸಂಸ್ತವನಪೂರ್ವಕಂ ಮುಕುಲಿತಾಂಜಲಿಗಳಾಗಿರ್ಪುದುಂ (ಪಂಠಾಮಾ. ೧೧-೬೦ ವ). ೨. ಪರಿಚಯ; ಗುರುತು : ''ಪರಿಚಯಮದು ಸಂಸ್ತವನಂ'' (ವಸ್ತುಕೋ. ೧೧೨-೯). [ಸಂ.]

**ಸಂಸ್ತಾವ** (ನಾ). ೧. ಹೊಗಳಿಕೆ ; ಸ್ತುತಿ. ೨. ಒಟ್ಟಾಗಿ ಹಾಡುವಿಕೆ. ೩. ವೇದಘೋಷ. ೪. ಯಜ್ಞದಲ್ಲಿ ಬ್ರಾಹ್ಮಣರು ವೇದಘೋಷವನ್ನು ಮಾಡಲು ಕುಳಿತುಕೊಳ್ಳುವ ಸ್ಥಳ : ''ಸಂಸ್ತಾವಃ . . . ಯಜ್ಞಗಳಲ್ಲಿ ಉದ್ಗಾತೃಗಳಾದ ಬ್ರಾಹ್ಮಣರು, ಸಾಮಗಾನಮಾಡುವದಕ್ಕೆ ಕೂತುಕೊಳ್ಳುವ

ಸ್ಥಳ, ಸಾಮಗಾನವೆನಿಪ ದೇವಸ್ತೋತ್ರಕ್ಕೂ ಹೆಸರಾಗುತ್ತೆ'' (ಸಿದ್ಧಾಂತಿ. ೩೬೭). [ಸಂ.]

**ಸಂಸ್ತುತ** (ಗು). ೧. ಅತಿಶಯವಾಗಿ ಕೊಂಡಾಡಿದ ; ವಿಶೇಷವಾಗಿ ಸ್ತುತಿಸಿದ. ೨. ಗುರುತಿನ ; ಪರಿಚಯವುಳ್ಳ. ೩. ಸಲುಗೆಯ ; ಅನ್ಯೋನ್ಯತೆಯುಳ್ಳ. (ನಾ). ೪. ಪ್ರಶಂಸೆಗೆ ಪಾತ್ರನಾದವನು : ಅತಿಲಲಿತಾರ್ಯವೇಷಮಳವಟ್ಟಿರೆ ಸಜ್ಜನಸಂಸ್ತುತಂ ನಿಜಾಕೃತಿಯೆನೆ ಬಂದಂ (ಮಲ್ಲಿಪು. ೪-೬೦). [ಸಂ.]

**ಸಂಸ್ತುತಿ** (ನಾ). ೧. ಸ್ತುತಿ ; ಹೊಗಳಿಕೆ : ಅಸಮಸದುಭಕ್ತಾಂಘ್ರಿಗಳನರ್ಚಿಸಿ ಸಮಸ್ತಾಂಗಂಗಳಂ ಹೊಂದಿಸಿ ನಮಿಸಿ ಚಾತುರ್ಯರಸಸಂಸ್ತುತಿಗಳಂ ಮಾಡಿ (ಬಸವು. ೫೮-೫೮); ದೇವಮಾನವ ಸಕಲಲೋಕಸಂಸ್ತುತಿಯ ಬೆಂಬಲದ ಸೀತೆಯ ತಪಕೆ ಮಿಗಿಲ್ ನಿನ್ನ ಆಖ್ಯಾತಮಾ ದೀರ್ಘಮೌನವ್ರತಂ (ಶ್ರೀರಾಮಾ. ೯೯-೫೭೩). ೨. ಒಟ್ಟಾಗಿ ಸ್ತೋತ್ರ ಮಾಡುವಿಕೆ. [ಸಂ.]

**ಸಂಸ್ತುತ್ಯ** (ಗು). ೧. ಅತಿಶಯವಾಗಿ ಕೊಂಡಾಡಿದ ; ಬಹಳವಾಗಿ ಪ್ರಶಂಸೆ ಮಾಡಿದ : ಸಂಗ್ರಾಮರಾಮ ಮಲೆಪರ ನಂದನವನಂ ಸಂಸ್ತುತ್ಯವಂದಿಜನಂ ಪರಮಣ್ಣಳಸೂಜೆಕಾಱಂ (ಎಕ. I(R), ೬೨-೧೪ ; 1095). ೨. ಕೊಂಡಾಟಕ್ಕೆ ಪಾತ್ರವಾದ: ಶ್ರೀವರ್ಧಮಾನಪ್ರವರಮುನಿಜನಾನಂದ ಸಂಸ್ತುತ್ಯಸಿಂಧುಸ್ತೋಮಾಳಂಕಾರಿತಾಂಭೋನಿಧಿನಿರುಪಮಬೋಧಾಕರಂ (ಸುಕುಮಾ. ೧-೧). (ನಾ). ೩. ಸ್ತೋತ್ರ ; ಸ್ತುತಿ: ಅತಿ ಸಂಸ್ತುತ್ಯವಂ ಮಾಡುತ್ತ . . . ಪೋದನು ಕ್ಷಿತ್ಯಧಿಪನು (ಬಸವು. ೫೪-೮೩). ೪. ಕೊಂಡಾಟಕ್ಕೆ ಪಾತ್ರನಾದವನು; ಸ್ತುತಿಗೆ ಅರ್ಹನಾದವನು: ಉದ್ದಾಮಸಂಸ್ತುತ್ಯನುದ್ಧತ ಶುದ್ಧಸತ್ವನಭಿರಾಮ (ಮಂಗರಾ. ೧-೧). [ಸಂ.]

**ಸಂಸ್ತೂಯ** (ನಾ). ಸ್ತುತಿಸಲ್ಪಡುವವನು ; ಕೊಂಡಾಡಲ್ಪಡುವವನು: ವನಜಭವಮುಖ್ಯಸುರನಿಕರಸಂಸ್ತೂಯ ಜಯ (ನಳಚಂ. ೨೨೨ ರಗಳೆ). [ಸಂ.]

**ಸಂಸ್ತೂಯಮಾನ** (ಗು). ೧. ನುತಿಸಲ್ಪಡುವ ; ಹೊಗಳಲ್ಪಡುವ: ಶ್ರೀಮದ್ಭೀಮರಸರ್ಸರ್ವ್ವಗುಣಜನಸಂಸ್ತೂಯಮಾನ ಧರ್ಮ್ಮಸಾರತಿ (ಕಇಅ. ೮೫-೧೮-೧೩; ಸು. 932) ; ಅನೇಕ ದಿವಿಜವಂದಿವೃಂದಸಂಸ್ತೂಯಮಾನ ತ್ರಿದಿವಾವತರಣಜನ್ಮಾಭಿಷೇಕಪ್ರತಿಬುದ್ಧನಿಜನಿಸರ್ಗಮಹಿಮಾಕರ್ಣ್ಣಂ (ಆದಿಪು. ೮-೫೫ ವ) ; ಸಕಲಜಗಜ್ಜನಸಂಸ್ತೂಯಮಾನ ಗುಪ್ತಾನ್ವಯ ಜಲಧರಮಾರ್ಗಗಭಸ್ತಿಮಾಲಿಯಂ . . . ಕಂಡು (ಪಂಚತಂ. ೧೯೪-೩). (ನಾ). ೨. ನುತಿಸಲ್ಪಡುವವನು ; ಹೊಗಳಿಕೆಗೆ ಪಾತ್ರನಾದವನು : ಸಕಲಭುವನಸಂಸ್ತೂಯಮಾನಂ ಚಾಳುಕ್ಯವಂಶೋದ್ಭವಂ (ಪಂಪಭಾ. ೧-೧೪೮ ವ); ಸಡಗರದೆ ಸಂಸ್ತೂಯಮಾನನಾಗುತ್ತಭವನಡಿಗಳಂ ವಿಷ್ಣು ಪೂಜಿಸುತೆ ಸುಖಮಿರ್ಪಂ (ಆರಾಚ. ೧-೨-೫೫). [ಸಂ.]

**ಸಂಸ್ತೆ** (ನಾ). ಲಿಖಿತವಾದ ರಾಜಶಾಸನ; ರಾಜಾಜ್ಞೆ : ಶ್ರೀಮತುಡುಗಂಣದೇವರು ತಿರುವಡಿಯ ಮೊದಲೀಸ್ವರಮೊ[ಡೆ]ಯನಾಯನಾರುಗೆ ಆ ಸ್ತಾನಿಕರಿಗೆ ಕೊಟ್ಟ ಸಂಸ್ತೆ (ಸೌಇಇ. IX-ii, ೪೧೩-೭ ; 1370). [< ಸಂ. ಸಂಸ್ಥ]

**ಸಂಸ್ತ್ಯಾಯ** (ನಾ). ೧. ಗುಂಪು ; ಸಮೂಹ : ಕನ್ಯಾರತ್ನಸಂಸ್ತ್ಯಾಯಕ್ಕೆ ನಾಯಕರತ್ನಮೆನಿಸಿದ ನಾಗಶ್ರೀಕನ್ಯಕೆ . . . ಅಗ್ನಿಭೂತಿ ಮುನಿಪನನತ್ಯಾದರದಿಂದೆ ನೋಡಿ (ಸುಕುಮಾ. ೬-೧ ವ). ೨. ರಾಶಿ ; ಒಟ್ಟಿಲು. ೩. ವಿಸ್ತಾರ ; ಹರಹು. ೪. ನೆರೆಹೊರೆಯ ಪ್ರದೇಶ ; ಹತ್ತಿರದ ಸ್ಥಳ. ೫. ಊರಿನ ಹೊರಪ್ರದೇಶ. ೬. ಮನೆ ; ವಾಸಸ್ಥಳ : ''ಸಂಸ್ತ್ಯಾಯಃ – ಸಮೂಹ, ಊರ ಸುತ್ತಣ ಬೈಲು, ಮನೆ'' (ಸಿದ್ಧಾಂತಿ. ೪೦೯). [ಸಂ.]

**ಸಂಸ್ಥಾನ** (ನಾ). ೧. ಸಾಹಚರ್ಯ ; ಒಡನಾಟ. ೨. ಮೊತ್ತ ; ಸಮೂಹ. ೩. ಆಕಾರ ; ಆಕೃತಿ. ೪. ಮೂಲರೂಪ. ೫. ಪಟ್ಟಣದ ನಡುವೆ ಅಥವಾ ಅದರ ಸುತ್ತಮುತ್ತಲಿರುವ ಬಯಲುಪ್ರದೇಶ. ೬. ಸಾಮೀಪ್ಯ ; ಹತ್ತಿರ; ಸಾನ್ನಿಧ್ಯ. ೭. ಅಕ್ಕಪಕ್ಕ ; ನೆರೆ. ೮. ನಾಲ್ಕು ರಸ್ತೆಗಳು ಕೂಡುವ ಸ್ಥಳ ; ಚೌಕ: ''ಸಂಸ್ಥಾನಂ, ಚತುಷ್ಪಥಂ - ಈ ೨ ಚೌಪಟ್ಟಂ'' (ಹಲಾಯು. ೪೮-೧೩೪). ೯. ನೆಲೆ ; ವಾಸಸ್ಥಳ : ''ಸಂಸ್ಥಾನಂ, ಸನ್ನಿವೇಶಃ - ಈ ೨ ನಿಲವು'' (ಹಲಾಯು. ೧೨೮-೯೩). ೧೦. ರಾಜ್ಯ ; ಪ್ರಾಂತ್ಯ : ಯಿಾ ಹೈದರಲ್ಲಿಖಾನರ ಹಿರೇರು ಪೂರ್ವದಲ್ಲಿ ಅರಬ್ಬದೇಶದಿಂದ . . . ಬಿಜಾಪುರದ ಸಂಸ್ಥಾನಕ್ಕೆ ಬಂದು (ಹೈದರ. ೨೧); ಅವನು ಮನಸ್ಸು ಮಾಡಿದ್ದರೆ ಮಗನ ಸಂಗಡ ಸೇರಿ ಆ ಸಂಸ್ಥಾನವನ್ನು ನಾಶ ಮಾಡಬಹುದಾಗಿತ್ತು (ಛತ್ರಶಿ. ೯೪). ೧೧. ಮುಖ್ಯನಗರ; ರಾಜಧಾನಿ : ಶಿರವ ತಡಹುತ ದೇವತತಿ ಪುರಹರನ ಬೀಳ್ಕೊಂಡರು ಮಹಾರಥ ಹರಿದು ನಿಜಸಂಸ್ಥಾನಸಂಗತವಾಯ್ತು ನಿಮಿಷದಲಿ (ಕುವ್ಯಾಕ. ೭-೪೬). ೧೨. ಮಠ : ನೀನಾಗಿ ಸಂತೋಷದಿಂದ ಜ್ಞಾನಸಾಗರನಾದ ಯತಿರಾಜನನ್ನು ನಮ್ಮ ಬಳಿಗೆ ತಂದೊಪ್ಪಿಸಿದೆ. ನಮ್ಮ ಸಂಸ್ಥಾನಕ್ಕೆ ಮಹೋಪಕಾರ ಮಾಡಿದೆ (ಕಭವಿ. ೫೭); ಶ್ರೀಮದಾಚಾರ್ಯರು ಸಂಸ್ಥಾನವನ್ನು ಪ್ರಥಮಶಿಷ್ಯರಾದ ಪದ್ಮನಾಭತೀರ್ಥರಿಗೆ ಒಪ್ಪಿಸಿ ಬದರಿಕಾಶ್ರಮಕ್ಕೆ ತೆರಳಿದ ನಂತರ, ನರಹರಿತೀರ್ಥರೇ ಮುಂತಾಗಿ ಅನೇಕ ಮಂದಿ ಮುನಿಗಳು ಇವೇ ಮೂರ್ತಿಗಳ ಆರಾಧನೆ ಮಾಡಿದರು (ಕಭವಿ. ೩೩೫). ೧೩. ರಾಜ್ಯವನ್ನು ಆಳುವ ವ್ಯವಸ್ಥೆ ; ಸರಕಾರ. ೧೪. ಇರವು; ಸ್ಥಿತಿ. ೧೫. ರಚನೆ ; ನಿರ್ಮಾಣ ; ವಿನ್ಯಾಸ: 'ಅಕ್ಷರಸಂಸ್ಥಾನ' ಪರಾ. ೧೬. ಸಾವು ; ಮರಣ. ೧೭. [ಜೈನ] ನಾಮಕರ್ಮಗಳಲ್ಲಿ ಒಂದು ; ಶರೀರದ ಆಕೃತಿಯನ್ನು ನಿಶ್ಚಯಿಸುವುದು : ನರಕ ನಗರಲಗ್ನಾಕಸ್ಮಿಕಾಗ್ನಿಸ್ಫುಲಿಂಗಸ್ಫುರದವಿರಲಲಾಕ್ಷಾಗೇಹಪೂರ್ಕೈಕಭಾವತ್ತ್ವರಿತವಿಚಲದಸ್ಥಿಗ್ರಂಥಿಸಂಸ್ಥಾನಬಂಧರ್ ಖರಪರುಷನಿನಾದರ್ ನಾರಕರ್ ಬರ್ದುತಿರ್ಪರ್ (ಆದಿಪು. ೫-೮೯); ತದುಪಾಂತಸಮಯದೊಳನ್ಯತರವೇದನೀಯದೇವಗತಿ . . . ಸಂಸ್ಥಾನಾಂಗೋಪಾಂಗಸಂಹನನ . . . ನೀಚೈರ್ಗೋತ್ರಂಗಳೆಂಬೆಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ (ಪಂರಾಮಾ. ೧೬-೮೦ ವ); ಪಿಂಡಾಪಿಂಡಭೇದದಿಂದಂ ಗತಿಜಾತಿಶರೀರಬಂಧನಸಂಘಾತಸಂಸ್ಥಾನ ಅಂಗೋಪಾಂಗಸಂಹನನ . . . ತೀರ್ಥಕರನಾಮಮೆಂದಿಂತಲ್ಲಿ ಗತಿನಾಮಕರ್ಮಂ ಚತುರ್ವಿಧಮಕ್ಕುಂ (ಗೊಮ್ಮಸಾ. ೩-೬). [ಸಂ.]

**ಸಂಸ್ಥಾನಕ** (ನಾ). [ನಾಟ್ಯ] ದೇಹವನ್ನು ಚಲಿಸದೆ ನಿಲ್ಲಿಸುವಿಕೆ : ಈ ನಟಿಯಂತರಂಗಮೆ ಮುಕುಂದನ ಚಿತ್ತಮೆ ಬಲ್ಲುದೀಕೆಗಿಂತೀ ನಯದಿಂದೆ ನರ್ತಿಪುದನೆಂಬಿನೆಗಂ ರಸಭಾವರಮ್ಯಸಂಸ್ಥಾನಕನೃತ್ಯಮಾ ಪರಮತತ್ತ್ವಸುಖೈಕ್ಯಣೆಯಾಗಿ ತೋಱೆ ಗೋಪೀನಟಿ ತೋಱಿದಳ್ (ಜಗವಿ. ೫-೧೪). [ಸಂ.]

**ಸಂಸ್ಥಾನವಿಚಯ** (ನಾ). [ಜೈನ] ಧರ್ಮಧ್ಯಾನದ ನಾಲ್ಕು ಪ್ರಕಾರಗಳಾದ ಆಜ್ಞಾ, ಅಪಾಯ, ವಿಪಾಕ ಮತ್ತು ಸಂಸ್ಥಾನವಿಚಯಗಳೆಂಬುವುಗಳಲ್ಲಿ ಒಂದು ; ''ಜೀವಾದಿ ತತ್ತ್ವಗಳೊಡಗೂಡಿದ ಲೋಕದ ಸ್ವರೂಪ, ರಚನೆ ಮತ್ತು ಅಲ್ಲಿನ ಜೀವಿಗಳ ಸ್ಥಿತಿ ಇವುಗಳ ಚಿಂತನೆ ; ಲೋಕಾಕಾರಚಿಂತನೆ'' (ಜೈನಕೋ. ೨೩೧) : ಭಟಾರರಾಜ್ಞಾವಿಚಯಮಪಾಕವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬೀ ನಾಲ್ಕು ಧರ್ಮಧ್ಯಾನಂಗಳಂ ಧ್ಯಾನಿಸುತ್ತಂ (ವಡ್ಡಾರಾ. ೧೫೪-೯); ಅಂತು ಯೋಗಯೋಗ್ಯ ಬಾಹ್ಯಸಾಮಗ್ರಿಯೊಳ್ ಮುನ್ನಮೆ ನೆಱೆದು . . . ಆಜ್ಞಾವಿಚಯಮಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬೀ ನಾಲ್ಕುಂ ಧರ್ಮಧ್ಯಾನಮಂ ಧ್ಯಾನಿಸುತ್ತುಂ (ಆದಿಪು. ೧೦-೧೪ ವ); ತವದಾಜ್ಞಾವಿಚಯ . . . ಸಂಸ್ಥಾನವಿಚಯವೆನೆಯುಂ ಪೆಸರ್ವೆತ್ತುವು ನಾಲ್ಕುಂ ತಮ್ಮೊಳೆಸೆಯೆ ಧರ್ಮಧ್ಯಾನಂ (ಪುಷ್ಪಪು. ೧೪-೩೩). [ಸಂ.]

**ಸಂಸ್ಥಾನಿಕ** (ನಾ). ೧. ಸಂಸ್ಥಾನದ ಒಡೆಯ, – ಅಧಿಪತಿ : ಉಳಿದ ಸಂಸ್ಥಾನಿಕರೆಲ್ಲ ಹೆಚ್ಚಾಗಲಿ ಕಡಿಮೆಯಾಗಲಿ ಇಂಗ್ಲಿಷ್ ಸರಕಾರದವರ ಆಶ್ರಿತರಾಗಿದ್ದಾರೆ (ಮುಂಬಯಿ. ೪-೧೧೩); ಆತನ ಕಾಲದ ಉಳಿದ ರಜಪೂತಸಂಸ್ಥಾನಿಕರೆಲ್ಲ ಮೊಗಲ ಚಕ್ರವರ್ತಿಗಳಿಗೆ ತಲೆಬಾಗಿದ್ದರು (ಕಥಕ. ೪೨). ೨. ದೇವಸ್ಥಾನದ ವ್ಯವಸ್ಥೆಯನ್ನು ನೋಡಿಕೊಳ್ಳುವವನು ; ಪಾರುಪತ್ಯಗಾರ ; ಸ್ಥಾನಿಕ : ಈ ದೇವಸ್ಥಾನದ ರಥೋತ್ಸವವನ್ನು ಇಲ್ಲಿಯ ಸಂಸ್ಥಾನಿಕನೇ ಚನ್ನಾಗಿ ಮಾಡಿಸುತ್ತಾನೆ (ಮುಂಬಯಿ. ೫-೧೦೮). [ಸಂ.]

**ಸಂಸ್ಥಾಪಕ** (ನಾ). ಸಂಸ್ಥೆ, ಪಂಥ ಮುಂತಾದುವುಗಳನ್ನು ಸ್ಥಾಪಿಸಿದವನು : ಸಮ್ರಾಜ್ಯಸಂಸ್ಥಾಪಕನೆನಿಸಿದ ವಿದ್ಯಾರಣ್ಯರೂ ವ್ಯಾಸರಾಯರಷ್ಟು ಕಾಲ ಸಾಮ್ರಾಜ್ಯಪಾಲಕರಾಗಿರಲಿಲ್ಲ (ಕಭವಿ. ೧೧೩). [ಸಂ.]

**ಸಂಸ್ಥಾಪತ್ತನ** (ನಾ). ವ್ಯಾಪಾರಕೇಂದ್ರವುಳ್ಳ ಪಟ್ಟಣ ; ಸಂತೆ ಸೇರುವ ಪಟ್ಟಣ : ಸಂಸ್ಥಾಪತ್ತನ — ಸಂತೆಪಟ್ಟಣ (ಶಮದ. ೨೯೨ ಪ್ರಯೋ). [ಸಂ.]

**ಸಂಸ್ಥಾಪನ** (ನಾ). ೧. ಕೂಡಿಹಾಕುವುದು ; ಒಟ್ಟು ಸೇರಿಸುವುದು. ೨. ನಿರ್ಧರಿಸುವುದು ; ದೃಢಪಡಿಸುವುದು. ೩. ನಿಗ್ರಹಿಸುವುದು ; ಹತೋಟಿಗೆ ತರುವುದು. ೪. ನೆಲೆಗೊಳಿಸುವಿಕೆ ; ಶಾಶ್ವತವಾಗಿ ಇರುವಂತ ಮಾಡುವಿಕೆ. ೫. ಶಾಸನ ; ನಿಬಂಧನೆ. [ಸಂ.]

**ಸಂಸ್ಥಾಪನೆ** (ನಾ). = ಸಂಸ್ಥಾಪನ ೪ : ಶಿವಾಜಿ . . . ಸ್ವಮತಾವಲಂಬಿಗಳಿಗೆ ಆಶ್ರಯವನ್ನಾಗಿ ಸ್ವರಾಜ್ಯ ಸಂಸ್ಥಾಪನೆ ಮಾಡಿದನು (ಛತ್ರಶಿ. ೧೭೫). [ಸಂ. ಸಂಸ್ಥಾಪನ]

**ಸಂಸ್ಥಾಪಿಸು** (ಕ್ರಿ). ಸ್ಥಾಪನೆಮಾಡು ; ನೆಲೆಗೊಳಿಸು : ಶ್ರುತಿಸಿದ್ಧಮಾಡಿ ವಾಮಹಸ್ತಪೀಠದೊಳಾ ಶಿವಲಿಂಗಮಂ ಗೋಮುಖವಾಮಭಾಗಮಪ್ಪಂತೆ ಸಂಸ್ಥಾಪಿಸುವದೇ ಕ್ರಿಯಾದೀಕ್ಷೆಯೆನಿಸುವದು (ವಿವೇಕ. ೧೧೪) ; ಧರ್ಮಸಂಸ್ಥಾಪಿಸುತ ಬಹುಶುಭಕರ್ಮ ತೋರುವ ಕರುಣೆಯೆ (ಕಭವಿ. ೧೨೬). [ಸಂಸ್ಥಾಪನ + – ಇಸು]

**ಸಂಸ್ಥಿತ** (ಗು). ೧. ಜೊತೆಯಾಗಿರುವ ; ಸೇರಿರುವ. ೨. ಪಕ್ಕದಲ್ಲಿರುವ ; ಹತ್ತಿರದಲ್ಲಿರುವ. ೩. ಶೇಖರಿಸಿದ ; ಸಂಗ್ರಹ ಮಾಡಿದ. ೪. ನೆಲೆಗೊಂಡ ; ಸ್ಥಿರವಾದ : ನಿಗಮಸಂಸ್ಥಿತವಾಸ್ತುರಚನಾದಿಗಳನಾಯವ್ಯಯದೆ ತಾರಾದಿಗಳ ರಾಶಿಗ್ರಹಬಲದ ವಿಪರೀತಯೋಗದಲಿ . . . ಮಾಡಿಸಿದನರಮನೆಯ (ಕುವ್ಯಾಅ. ೮-೬೮). ೫. ವಾಸಿಸುವ ; ಇರುವ. ೬. ಇಟ್ಟ ; ಇರಿಸಿದ. ೭. ಮುಗಿದ ; ಕೊನೆಗೊಂಡ. ೮. ಗತಿಸಿದ ; ಸತ್ತ. ೯. ಒಂದೇ ಆಕಾರದ; ಹೋಲುವ. ೧೦. ಆಕಾರ ಹೊಂದಿದ; ರೂಪುಗೊಂಡ. (ನಾ). ೧೧. ಗತಿಸಿದವನು; ಮರಣ ಹೊಂದಿದವನು : ''ಪರಾಸುಃ, ಉಪಸಂಪನ್ನಃ, ಪ್ರಮೀತಃ, ಸಂಸ್ಥಿತಃ, ಮೃತಃ – ಈ ೫ ಸತ್ತಾತಂ'' (ಹಲಾಯು. ೧೦೪-೭). ೧೨. ಆಕಾರ ; ರೂಪ. ೧೩. ಯಾಗ; ಯಜ್ಞ. ೧೪. ಯಜ್ಞದಲ್ಲಿ ಒಂದು ಪ್ರಕಾರ. ೧೫. ಅಂತರಂಗದ ಎಂಟು ಬಗೆಯ ಮದಗಳಲ್ಲಿ ಒಂದು: ಅನುಪಮದ ಸಂಸ್ಥಿತಂ [ಪಾಠಾಂ. ಅಸಿವಂ, ಸಸಿವಂ] ತೃಣೀಕೃತಂ ತಿಳಿಯೆ ವರ್ತಿನಿ . . . ಅಂತರಂಗದ ಮದಾಷ್ಟಕಮಿವು (ಚೆಬಪು. ೫೮-೪೪). [ಸಂ.]

**ಸಂಸ್ಥಿತಿ** (ನಾ). ೧. ಒಟ್ಟಿಗಿರುವಿಕೆ ; ಜೊತೆಯಲ್ಲಿರುವಿಕೆ. ೨. ಸನಿಹ ; ಹತ್ತಿರ. ೩. ವಾಸಸ್ಥಾನ; ನೆಲೆ. ೪. ರಾಶಿ; ಒಟ್ಟಿಲು. ೫. ಅವಧಿ; ಗಡು. ೬. ಇರವು ; ಪರಿಸ್ಥಿತಿ. ೭. ಅಂಕೆ; ನಿಗ್ರಹ. ೮. ಕೊನೆ ; ಮುಕ್ತಾಯ. ೯. ಸಾವು ; ಮರಣ. ೧೦. ಪ್ರಳಯ. ೧೧. ಆಕಾರ ; ರೂಪ. ೧೨. ಸಂಪರ್ಕ ; ಸಂಬಂಧ. ೧೩. ದೃಢವಾದ ನೆಲೆ; ಭದ್ರವಾದ ನೆಲೆ : ರಾಜಾಂಶ ಪ್ರಜಾಂಶಗಳೆರಡೂ ಕೂಡಿಕೊಂಡಿದ್ದಾಗಲೇ ರಾಜ್ಯಕ್ಕೆ ಸಂಸ್ಥಿತಿ (ರಾಜ್ಯಶಾ. ೩೧೬). [ಸಂ.]

**ಸಂಸ್ಥೆ** (ನಾ). ೧. ನೆರವಿ ; ಗುಂಪು : ''ನಿಸದಂ ಸಂತೆಯು ಸಂಸ್ಥೆಯು'' (ಕವಿಕಂ. ೨೫೫) ; ಸ್ಫಟಿಕ — ಪಟಿಕ, ಸಂಸ್ಥಾ — ಸಂತೆ (ಮಧ್ಯಮ. ೧೬೯). ೨. ಸಾರ್ವಜನಿಕ ಉದ್ದೇಶಗಳಿಗಾಗಿ ಸ್ಥಾಪಿತವಾಗಿ, ಕಾರ್ಯನಿರ್ವಹಿಸಲು ಅಧಿಕಾರ ಹೊಂದಿರುವ ಸಂಘ ; ಒಕ್ಕೂಟ : ಸಾಹಿತ್ಯಪರಿಷತ್ತು ನಿಜವಾಗಿಯೂ ಸಾರ್ವಜನಿಕವಾದ ಸಂಸ್ಥೆ ಎನ್ನುವುದನ್ನು ಎಲ್ಲರೂ ಲಕ್ಷ್ಯದಲ್ಲಿರಿಸಿಕೊಳ್ಳಬೇಕು (ಸಾಹಿಶ. ೫೦) ; ಸಂಸ್ಥೆಯ ಕೇಂದ್ರ ಆಸ್ಪತ್ರೆಯದ ವಿಯನ್ನದಲ್ಲಿದೆ (ಅಂತಸಂ. ೨೧). ೩. ವ್ಯಾಪಾರ ಕೇಂದ್ರ; ನಿಗಮ. ೪. ನೆಲೆ ; ವಾಸಸ್ಥಾನ. ೫. ಪಟ್ಟಣ; ನಗರ : (೩). ೬. ಶಯ್ಯೆ; ಹಾಸುಗೆ : (೩). ೭. ಉದ್ಯೋಗ ; ವ್ಯವಹಾರ ; ದಂಧೆ. ೮. ಸಚ್ಚಾರಿತ್ರ್ಯ ; ಶಿಷ್ಟಾಚಾರ : ''ಸಂಸ್ಥಾ, ಮರ್ಯಾದಾ, ಧಾರಣಾ, ಸ್ಥಿತಿ — ೪ ಮರ್ಯಾದೆಗೆ ಹೆಸರುಗಳು, ಹದ್ದು ತಪ್ಪದೆಯಿರುವಿಕೆ'' (ಸಿದ್ಧಾಂತಿ. ೨೧೨). ೯. ನಿಯಮ ; ನಿಬಂಧನೆ: ''ನಿಯಮದೊಳು ಸಂಸ್ಥೆ'' (ಮಂಗರಾ. ೧೪೨-೧೬). ೧೦. ಆಣೆಯಿಡುವುದು. ೧೧. ಕೊನೆ ; ಮುಕ್ತಾಯ. ೧೨. ನಾಶ ; ಹಾಳು. ೧೩. ಪ್ರಳಯ. ೧೪. ಸಾವು; ಮರಣ : ''ನಿಧನಂ . . . ಸಂಸ್ಥಾ, ನಿಷ್ಠಾ, ಅಂತಃ, ನಿಮೀಳನಂ, ದೀರ್ಘನಿದ್ರಾ – ಈ ೧೨ ಸಾವು'' (ಹಲಾಯು. ೧೦೩-೬). ೧೫. ತೋರಿಕೆ; ಪ್ರದರ್ಶನ. ೧೬. ಹೋಲಿಕೆ; ಸಾಮ್ಯ. ೧೭. ಸೋಮಯಜ್ಞದ ಒಂದು ಪ್ರಕಾರ. ೧೮. ಇರವು ; ಸ್ಥಿತಿ. ೧೯. ರೂಪ ; ಆಕಾರ. ೨೦. ಮಾಡಿದ ಕೆಲಸ, — ಕೃತ್ಯ : ''ಮರಣಂ ಮಾಡಿದ ಕಾರ್ಯಮಿಪ್ಪ ಪದಮುಂ ಸಂಸ್ಥಾಭಿಧಾನಂ'' (ನಾನಾರ. ೧೩೮). [ಸಂ. ಸಂಸ್ಥಾ]

**ಸಂಸ್ಪರ್ಶ** (ನಾ). ೧. ನಿಕಟಸಂಪರ್ಕ; ಹತ್ತಿರದ ಸಂಬಂಧ, — ಸಾಹಚರ್ಯ : ಒಂದು ಮಹಾಜೀವನ ಸಂಸ್ಪರ್ಶದ ಅನುಭವ ಬೇಕು (ಸಾಹಿವಿ. ೪೪). ೨. ಸೋಂಕು; ಮುಟ್ಟುವಿಕೆ; ಹಿಡಿಯುವಿಕೆ: 'ರಾಹುಸಂಸ್ಪರ್ಶ' ಪರಾ. ೩. ಒಂದುಗೂಡುವಿಕೆ ; ಸೇರ್ಪಡೆ : ಶೃಂಗಾರದ ಅಂಗಗಳಿಗೆ ಶೃಂಗಾರವಿರುದ್ಧವಾದ ರಸಗಳ ಸಂಸ್ಪರ್ಶವು ಬರುವುದು ದೋಷವಾಗುವುದಿಲ್ಲ (ಧ್ವನ್ಯಾಲೋ. ೧೮೬). ೪. ಇಂದ್ರಿಯಮೂಲಕವಾಗಿ ಉಂಟಾಗುವ ಅರಿವು ; ಅನುಭವ. [ಸಂ.]

**ಸಂಸ್ಪರ್ಶನ** (ನಾ). ಮುಟ್ಟುವಿಕೆ; ಸ್ಪರ್ಶ: ಮಲಹರನು ತನ್ನುತ್ತಮಾಂಗದ ಕೆಲದೊಳಿಟ್ಟಂದೆನ್ನ ಕಪ್ಪಂ ಕಳೆಯಲಾಱನು ಭಕ್ತಪದಸಂಸ್ಪರ್ಶನದೊಳಿಂದು (ಬಸಪು. ೧೨-೩೬). [ಸಂ.]

**ಸಂಸ್ಪರ್ಶೆ** (ನಾ). ಸುವಾಸನೆಯುಳ್ಳ ಒಂದು ಬಗೆಯ ಗಿಡ; ಮುಳ್ಳಗಸೆಯ ಗಿಡ: ''ಜನೀ, ಜತೂಕಾ . . . ಸಂಸ್ಪರ್ಶಾ—೬ ಕೋರಿಂದೇಗಿಡದ ಪೆಸರು, ಚಕ್ರಪರ್ತೀಸೊಪ್ಪು'' (ಸಿದ್ಧಾಂತಿ. ೧೪೭). [ಸಂ. ಸಂಸ್ಪರ್ಶಾ]

**ಸಂಸ್ಪೃಷ್ಟ** (ಗು). ೧. ಒಂದರೊಡನೊಂದು ಸೇರಿದ, — ಕೂಡಿದ. ೨. ತಾಗಿದ; ಮುಟ್ಟಿದ : ಸಂಸ್ಪೃಷ್ಟ ದೇವಾಂಶುಸಿಕ್ತರೀ ಭಕ್ತಜನ ಆತ್ಮಸಂದರ್ಶನೋತ್ಸೃಷ್ಟಭವರು (ಮಲದೇ. ೪೪-೧). [ಸಂ.]

**ಸಂಸ್ಫಾಳಿತ** (ಗು). ಹೊಡೆದ; ಆಸ್ಫಾಲನ ಮಾಡಿದ: ಸಂಸ್ಫಾಳಿತೋದ್ಧತ ಚಪಳಚಾಪಕರಾಳಮೌರ್ವೀನಾದಭೀಷಣನಾದನಾ ಭೀಮ (ಕುವ್ಯಾಕ. ೧೨-೧೩). [ಸಂ. ಸಂಸ್ಫಾಲಿತ]

**ಸಂಸ್ಫೋಟ** (ನಾ). ಕಾಳಗ; ಯುದ್ಧ: ''ಸಂಗ್ರಾಮಃ . . . ಸಂಸ್ಫೋಟಃ . . . ಸಮ್ಮರ್ದಃ, ವಿಗ್ರಹಃ — ಈ ೩೫ ಕಾಳೆಗಂ'' (ಹಲಾಯು. ೭೫-೨೯). [ಸಂ.]

**ಸಂಸ್ಮರಣ** (ನಾ). ೧. ನೆನಪು ; ಸ್ಮೃತಿ : ಸ್ಮರಬಾಣಾರ್ತವಿಟೀವಿಟಾಳಿಗೆ ವಿಯೋಗಂ ಪೂರ್ವಸಂಭೋಗಸಂಸ್ಮರಣಂ (ಶಾಂತಿಪು. ೮-೧೪೫). ೨. ಧ್ಯಾನ ; ಚಿಂತನೆ : ಶಿವಚರಣ ಸಂಸ್ಮರಣಾಂಚಿತಾಂತಃಕರಣ ಸಜ್ಜನ ಭಕ್ತೆಯೆನಿಪಳು ಬಿಜ್ಜಮಹದೇವಿ (ಬಸಪು. ೧೫-೧). [ಸಂ.]

**ಸಂಸ್ಮರಣಸಂಚಿಕೆ** (ನಾ). ವ್ಯಕ್ತಿ, ವಸ್ತು ಅಥವಾ ಘಟನೆಯ ನೆನಪಿಗಾಗಿ ಪ್ರಕಟಿಸುವ ಪುಸ್ತಕ : ವಿದ್ಯಾರ್ಥಿಗಳು ಬಹಳ ಅಭಿಮಾನದಿಂದ ತಮ್ಮ ಗುರುಗಳ ಸಂಸ್ಮರಣಸಂಚಿಕೆಯನ್ನು ಹೊರತಂದರು (ರೂಢಿ). [ಸಂಸ್ಮರಣ + ಸಂಚಿಕೆ]

**ಸಂಸ್ಮರಣೆ** (ನಾ). ೧. = ಸಂಸ್ಮರಣ ೧ : ಪೂರ್ವಾನುಭವದ ಸಂಕ್ಷಿಪ್ತಸಂಸ್ಮರಣೆ (ಕಥಕ. ೭೬). ೨. = ಸಂಸ್ಮರಣ ೨ : ಗುರುಚರಣಸಂಸ್ಮರಣೆ ಜಪವದು (ಬಸಪು. ೩೯-೨೯). [ಸಂ. ಸಂಸ್ಮರಣ]

**ಸಂಸ್ಮರಿಸು** (ಕ್ರಿ). ೧. ಜ್ಞಾಪಿಸಿಕೊಳ್ಳು ; ಸ್ಮರಿಸು. ೨. ಧ್ಯಾನಿಸು ; ಚಿಂತನೆ ಮಾಡು : ಸರಳ ರಚನೆಗೆ ವಿಷ್ಣುವನೆ ಸಂಸ್ಮರಿಸಿದರು (ಕುವ್ಯಾಕ. ೭-೮). [ಸಂಸ್ಮರಣ + – ಇಸು]

**ಸಂಸ್ಮರ್ಯ** (ನಾ). ನೆನಪಿನಲ್ಲಿರುವಂಥದು ; ಸ್ಮೃತಿಯಲ್ಲಿ ಉಳಿಯುವಂಥದು : ಕ್ಷಣಕಾಲವಾವುದು ಹೃದಯವನುಳಿವುದು ಅದು ತಾನು ಸಂಸ್ಮರ್ಯವಹುದು ಪ್ರೇಮವು ಸಂಸ್ಮರ್ಯವಾದಂಥ ಕಾಲವು ಬರಲುಳಿದಪುದ ಹೃದಯವು (ಗಾಥಾಸ. ೨೪-೯೫). [ಸಂ.]

**ಸಂಸ್ಮಾರಕತ್ವ** (ನಾ). ನೆನಪಿನಲ್ಲಿಟ್ಟುಕೊಳ್ಳುವಿಕೆ : ದೇವ ಮುನ್ನಂ ನಿಮಗದನನುವಾದಕ್ಕೆ ತರ್ಪನ್ನೊಳೊಂದಲ್ತೆ ದಿಟಕ್ಕಕ್ಕುಂ ವಿಶೇಷಂ ನಿಜನಿಪುಣಮನಃಕಾರ್ಯಸಂಸ್ಮಾರಕತ್ವಂ (ಚಂದ್ರಪು. ೯-೧೧೬). [ಸಂ.]

**ಸಂಸ್ಮಿತ** (ಗು). ಮುಗುಳುನಗೆಯಿಂದ ಕೂಡಿದ : ಜಿತಭವೋತ್ಕರಕದನಯುತ ಸಂ[ಪಾಠಾಂ. ಸ]ಸ್ಮಿತವಿರಾಜಿತವದನ (ಬಸಪು. ೩೬-೩೮). [ಸಂ.]

**ಸಂಸ್ಮೃತಿ** (ನಾ). ನೆನಪು ; ಸ್ಮರಣೆ : ಅಭಿಲಾಷೆ ಚಿಂತೆ ಸಂಸ್ಮೃತಿ ವಿಭುಗುಣನುತಿ . . . ಮರಣಮೆಂಬ ದಶಾವಸ್ಥಾದಿ ವಿಚಾರಪರರಿಂ (ವಿವೇಕ. ೧೮೪). [ಸಂ.]

**ಸಂಹತ** (ಗು). ೧. ಒತ್ತಾಗಿ ಸೇರಿಸಿದ ; ಬಿಗಿಯಾಗಿ ಜೋಡಿಸಿದ. ೨. ಕೂಡಿದ ; ಬೆರೆತ. ೩. ಗಟ್ಟಿಯಾದ ; ದೃಢವಾದ. ೪. ಮುಚ್ಚಿದ ; ಮುಚ್ಚಲ್ಪಟ್ಟ. ೫. ಒಟ್ಟು ಸೇರಿದ ; ಗುಂಪಾದ. ೬. ಗಾಯಗೊಂಡ ; ಗಾಸಿ ಹೊಂದಿದ. ೭. ಕೊಲ್ಲಲ್ಪಟ್ಟ. (ನಾ). ೮. (ಬಿಡಿಸಲಾರದಂತೆ) ಗಟ್ಟಿಯಾಗಿ ಸೇರಿರುವುದು : ''ದೃಢಸಂಧಿಃ, ಸಂಹತಃ - ದೃಢವಾದ ಕೀಲು ಉಳ್ಳದ್ದು, ಚೆನ್ನಾಗಿ ತಗಲಿಕೊಂಡಿರುವದು, ಗಟ್ಟಿಯಾಗಿ ಬೆಸಿಗೆಗೊಂಡಿರುವದು'' (ಸಿದ್ಧಾಂತಿ. ೩೪೩). ೯. [ನಾಟ್ಯ] ನರ್ತಿಸುವಾಗ ಮೊಳಕಾಲುಗಳನ್ನಿಟ್ಟುಕೊಳ್ಳುವ ಒಂದು ಬಗೆಯ ಭಂಗಿ : ಸಂಹತ, ಕುಂಚಿತ, ಅರ್ಧಕುಂಚಿತ, ನತ, ಉನ್ನತ, ವಿವೃತ, ಸಮ — ಈ ಏಳು ಮೊಳಕಾಲ ಭೇದಂಗಳ್ (ಲಾಸ್ಯರಂ. ೨-೧೫೩ ವ). ೧೦. ''ತುಟಿಗಳೆರಡನ್ನೂ ಸೇರಿಸುವುದು'' (ಲಾಸ್ಯರಂ. ೨೮೧ ಗದ್ಯಾನುವಾದ) : ವ್ಯಾದೀರ್ಣ, ಶ್ವಸಿತ, ವಕ್ರ, ಸಂಹತ, ಚಲಸಂಹತ, ಸ್ಫುರಿತ, ಚರಿತ, ಲೋಲ - ಈ ಎಂಟು ಚಿಬುಕಭೇದಂಗಳ್ (ಲಾಸ್ಯರಂ. ೩-೯೯ ವ). ೧೧. ಸ್ಥಾನಕಗಳಲ್ಲಿ ಒಂದು ; IP ''ಪಾದಗಳ ಹೆಬ್ಬೆರಳಿನ ಪಾರ್ಶ್ವವನ್ನು ಸೇರಿಸಿ ಸ್ವಭಾವವಾಗಿ ನಿಂತುಕೊಳ್ಳುವುದು, ಪುಷ್ಪಾಂಜಲಿ ವಿಕ್ಷೇಪ ಮಾಡುವಾಗ ಈ ಸ್ಥಾನಕದಲ್ಲಿ ನಿಂತುಕೊಳ್ಳಬೇಕು'' (ಲಾಸ್ಯರಂ. ೩೨೯ ಗದ್ಯಾನುವಾದ) : ಸ್ವಸ್ತಿಕ,ವರ್ಧಮಾನ, ನಂದ್ಯಾವರ್ತ, ಸಂಹತ . . . ನಾಗಬಂಧ, ವೃಷಭಾಸನ - ಈ ಇಪ್ಪತ್ತಮೂಱು ದೇಶೀಯಸ್ಥಾನಕಂಗಳ್ (ಲಾಸ್ಯರಂ. ೭-೧೨ ವ). [ಸಂ.]

**ಸಂಹತಿ** (ನಾ). ೧. ಬಿಗಿಯಾಗಿ ಹೊಂದಿಕೊಂಡಿರುವಂಥದು ; ಒತ್ತಾಗಿ ಸೇರಿಕೊಂಡುದು. ೨. ಸೇರುವೆ ; ಸಂಯೋಗ : ಮಾಹಾತ್ಮ್ಯ ಸಂಹತಿಯಿಂದಂ ಧನಮುಂ . . . ಮತಿಯುಂ ಪೆರ್ಚುಗುಂ (ಜಾತಕ. ೯-೨೫) ; ಸಿಂಹಗಳನಂತಬಳನ ಪಾದಾಂತಿಕದೊಳ್ ಸಂಹತಿಗೊಂಡಿರ್ದಪುವನೆ ಸಿಂಹಾಸನಮೆಸೆದುದು (ಲೀಲಾವ. ೮-೯೬). ೩. ಒತ್ತಾದುದು. ೪. ರಾಶಿ ; ಮೊತ್ತ. ೫. ಗುಂಪು ; ಸಮೂಹ : ''ನಿಕರಃ, ನಿಕಾಯಃ . . . ಸಂಹತಿಃ . . . ಸ್ತೋಮಃ - ಈ ೩೯ ಸಮೂಹಂ'' (ಹಲಾಯು. ೧೧೪-೧) ; ಅಂತಕಾನನಮನೆಯ್ದಿದ ಮಹಾಪ್ರಚಂಡಮಂಡಳಿಕಮಕುಟಬದ್ಧಸಾಮಂತ ಮಹಾಸಾಮಂತಸಂಹತಿಯುಮಂ . . . ನೋಡಿ (ಪಂಪಭಾ. ೧೪-೨ ವ). [ಸಂ.]

**ಸಂಹನ** (ನಾ). ದೇಹ ; ಶರೀರ : ರಣವಿಜಯನವವಸನಮಣಿಭೂಷಣಪರಿಷ್ಕೃತನಾಗಿ ತಿರುವಿನ ಗೋಣೆಯವನು ನೇವರಿಸಿದನು ಸಂತೈಸಿ ಸಂಹನವ [ಪಾಠಾಂ. ಸಾರಥಿಯ, ಸಾಹಸವ] (ಕುವ್ಯಾಶ. ೩-೪೮). [< ಸಂಹನನ. IP ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು]

**ಸಂಹನನ** (ನಾ). ೧. ತಾಕುವಿಕೆ ; ಘಟ್ಟಿಸುವಿಕೆ. ೨. ಸೇರಿಸುವಿಕೆ ; ಹೆಣೆಯುವಿಕೆ. ೩. ಕೊಲ್ಲುವಿಕೆ ; ಸಂಹರಿಸುವಿಕೆ. ೪. ನಾಶಪಡಿಸುವಿಕೆ ; ಹಾಳುಮಾಡುವಿಕೆ. ೫. ಹಾಳು ; ನಾಶ : ಜನಿಸುವುವು ವರ್ಧಿಸುವವತಿ ಸಂಹನನವೆಯ್ದುವವಖಿಳಲೋಕಂ (ಬಸವು. ೫೪-೫೭). ೬. ನಾಶಪಡಿಸುವವನು ; ಹಾಳುಮಾಡುವವನು. ೭. ದೃಢತೆ; ಗಟ್ಟಿತನ. ೮. ಶಕ್ತಿ ; ಕಸುವು. ೯. ದೇಹ ; ಶರೀರ : ಅಂತು ನಾಲ್ವತ್ತೊಂಬತ್ತು ದಿವಸದೊಳ್ ಸಮಚತುರಸ್ರ ಸಂಸ್ಥಾನಸಂಹನ[ಪಾಠಾಂ. ಸಂವಾಹ]ನಂಗಳಱುಸಾಸಿರ ಬಿಲ್ ನಿಡಿಯರಾಗಿ (ಆದಿಪು. ೫-೪೧ ವ) ; ಕ್ರವ್ಯಾದಸಂಹನನಕ್ರವ್ಯಾದನಪ್ಪೆನಗೆ ಅನಭ್ಯಸ್ತಶಸ್ತ್ರನೊಳ್ ಯುದ್ಧವತಿನಿಷಿದ್ಧಮುಂ . . . ಅಪ್ಪುದು (ಜಗವಿ. ೫-೬೧ ವ). ೧೦. ದೇಹವುಳ್ಳವನು : ಪಂಚಸಪ್ತತ್ಯುತ್ತರಪಂಚಶತಧನುಷ್ತ್ಯಾಸನೋತ್ಸೇಧಸಂಹನನನುಂ . . . ಆಗಿ ಪನ್ನೆರಡನೆಯ ಮನು ಪುಟ್ಟಿದಂದು (ಆದಿಪು. ೬-೬೧ ವ) ; ಕನಕಚ್ಛಾಯನಜೇಯಸಂಹನನನೂನಸ್ವಾಪದೇಯಾದಿನಾಥನಭೀರಸ್ವಗಿತಂ ಜಿನೇಂದ್ರ ಪದಪದ್ಮಾರಾಧಕಂ (ಸುಕುಮಾ. ೧-೯). ೧೧. ''ನಾಮಪ್ರಕೃತಿಗಳಲ್ಲಿ ಒಂದು - ಯಾವುದರ ಉದಯದಿಂದ ಶರೀರದೊಳಗಿನ ಅಸ್ಥಿಪಂಜರದ ರಚನೆಯಲ್ಲಿ ವಿಶೇಷತೆಯು ಉಂಟಾಗುವುದೋ ಅದು'' (ಜೈನಕೋ. ೨೭೧) : ತತ್ಪ್ರಯೋಗ್ಯಾನುಪೂರ್ವಿ ಶರೀರಬಂಧನಸಂಘಾತ ವರ್ಣರಸಪಂಚಕಸಂಸ್ಥಾನ ಸಂಹನನ ಷಟ್ಕಾಂಗೋಪಾಂಗದ್ವಿಕಂ . . . ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೯ ವ) ; ಅನ್ಯತರ ವೇದನೀಯ ದೇವಗತಿ ತತ್ಪ್ರಾಯೋಗ್ಯಾನುಪೂರ್ವ್ಯಾದಾರಿಕಶರೀರ ತದ್ಬಂಧನಸಂಘಾತಸಂಸ್ಥಾನಾಂಗೋಪಾಂಗಸಂಹನನ . . . ನೀಚೈರ್ಗೋತ್ರಂಗಳೆಂಬೆಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ (ಪಂರಾಮಾ. ೧೬-೮೦ ವ). [ಸಂ.]

**ಸಂಹನನನಾಮಕರ್ಮ** (ನಾ). [ಜೈನ] ''ಯಾವುದರ ಉದಯದಿಂದ ಶರೀರದೊಳಗಿನ ಅಸ್ಥಿಪಂಜರದ ರಚನೆಯಲ್ಲಿ ವಿಶೇಷತೆಯು ಉಂಟಾಗುವುದೋ ಅದಕ್ಕೆ ಸಂಹನನನಾಮಕರ್ಮವೆಂದು ಹಸರು'' (ಜೈನಪ. ೩೭೪) : ಸಂಹನನನಾಮಕರ್ಮಂ ಷಡ್ವಿಧಮಕ್ಕುಂ (ಗೊಮ್ಮಸಾ. ೪-೩). [ಸಂ. ಸಂಹನನನಾಮಕರ್ಮನ್]

**ಸಂಹರ** (ನಾ). ೧. ಒಟ್ಟುಗೂಡಿಸುವಿಕೆ ; ಕಲೆಹಾಕುವಿಕೆ. ೨. ಹೊಂದಿಕೆ ; ಹೊಂದಾಣಿಕೆ. ೩. ನಾಶ; ಹಾಳು: ''ಪೊರ್ದುಗೆ ವಿಮರ್ದನಮಿಂತಿವು ಸಂಹರಾಹ್ವಯಂ'' (ನಾನಾರ. ೧೦೬) ; ಸಕಳಮಂ ಸಂಹರಂ ಮಾಡಿ ಬಿಂಕ ದುನ್ನತಿಯಂ ಪ್ರಕಟಿಪ ಭಯಂಕರಂಗೆ . . . ಬಡದೈವಗಳು ಸರಿಯೇ (ಬಸವು. ೫೪-೨೩). [ಸಂ.]

**ಸಂಹರಣ** (ನಾ). ೧. ಅಳಿವು; ನಾಶ: ಮೂಢಮಾರ್ಗದಲಿ ಕರೆದಪಾತ್ರಂಗಿತ್ತು ಪಾತ್ರನ ಪರಿಹರಿಸಲೀ ಎರಡಱಿಂ ಸಂಹರಣವೈದುವುದಾರ್ಜಿಸಿದ ಧನವು (ಕುವ್ಯಾಉ. ೩-೨೩). ೨. ಪ್ರಪಂಚದ ನಾಶ; ಪ್ರಳಯ: ಕರಣಗುಣಸಂಹರಣ ಸಂಧ್ಯಾಂತರದವಸ್ಥಾಂತರದ ಲೋಕೋತ್ಕರದ ತಾಪತ್ರಯದ ಲಕ್ಷಣಲಕ್ಷಿತವನಱಿದು (ಕುವ್ಯಾಉ. ೪-೩೦). ೩. ಒಟ್ಟುಗೂಡಿಸುವುದು; ಕಲೆಹಾಕುವುದು. ೪. ಹಿಡಿಯುವುದು; ಗ್ರಹಿಸುವುದು. ೫. ಕುಗ್ಗುವುದು; ಸಂಕೋಚ: ಸಂಹರಣ ವಿಸರ್ಪಣಾಸ್ವರೂಪನುಂ (ಆದಿಪು. ೨-೧೦ ವ) ; ಸಂಹರಣ ವಿಸರ್ಪಣಧರ್ಮನುಂ . . .ಅಪ್ಪುದು (ಸುಕುಮಾ. ೮-೪ ವ). ೬. ಅಂಕೆ ; ಹತೋಟಿ. [ಸಂ.]

**ಸಂಹರಣದಿನ** (ನಾ). ಪ್ರಪಂಚದ ನಾಶದ ದಿವಸ; ಪ್ರಳಯದ ದಿನ: ಸಂಹರಣದಿನದಲಿ ಜಗಕೆ ಮಲೆವ ಮಹೇಶನಂದದಲಿ . . . ಪರಬಲಾಂತಕಭೀಮ ನಿಂದನು ತೞುಬಿ ಪರಬಲವ (ಕುವ್ಯಾಕ. ೧೫-೮). [ಸಂ.]

**ಸಂಹರಿ** (ನಾ). ನಾಶಮಾಡುವವನು ; ಧ್ವಂಸಗೊಳಿಸುವವನು : ರಾಮನು ಹರಿ ಕಣಾ ಭೂಭಾರಕರ ಸಂಹರಿ ಕಣಾ (ಕಾಶಿರಾ. ೧-೮೨). [< ಸಂಹಾರಿ]

**ಸಂಹರಿಸು** (ಕ್ರಿ). ೧. ನಾಶಗೊಳಿಸು ; ನಿರ್ನಾಮಮಾಡು : ರಿಪುಬಲಮಂ ಸಂಹರಿಸುವ ಬಗೆ ಬಗೆಯೊಳ್ ತಟ್ಟಿರೆ ನಿಂದಂ ನಮ್ರಬುಧಜನಂ ಜಿನಚಂದ್ರಂ (ಶಾಂತಿಪು. ೪-೫) ; ಶಿವಸಮಯವನುದ್ಧರಿಸುವೆ ಪರಸಮಯವಂ ಸಂಹರಿಸುವೆ (ಬಸರ. ೮-೪೫) ; ಸರಳಿನಲಿ ಧನುವಿನಲಿ ಗದೆಯಲಿ ಕರಹತಿಯಲಹಿತಾಸ್ತ್ರವನು ಸಂಹರಿಸಿ ಬೀಸಿತು ಭೀಮಮಾರುತ ಕರ್ಣಮೇಘದಲಿ (ಕುವ್ಯಾದ್ರೋ. ೧೩-೪೩). ೨. ಕೊಲ್ಲು; ಸಂಹಾರಮಾಡು: ಗುರುವಂ . . . ನಿರಾಯುಧನಂ ಸಂಹರಿಸಿದ ಶಕ್ರಸುತಂಗಾ ಗುರುವಧಮೆ ಯಶೋವಧಕ್ಕೆ ಕಾರಣಮಲ್ತೇ (ಗದಾಯು. ೩-೩೧) ; ನರಹರಿಯ ವೇಷಂದಳೆದು ಭೀಕರದೊಳಂದು ಹಿರಣ್ಯಕನ ಸಂ[ಪಾಠಾಂ. ಅಪ]ಹರಿಸಿದನು ಹರಿಯೆಂಬನು (ಬಸವು. ೫೭-೨೫) ; ಕೊಲಬೇಡಿವರನತಿಬಾಧಕರು ಭೀಮಾರ್ಜುನರ ಸಂಹರಿಸು (ಕುವ್ಯಾಕ. ೧೪-೪೩). ೩. ಅಡಗಿಸು ; ಇಲ್ಲದಂತೆ ಮಾಡು : ಮರಿಚಂ ಪೆಸಱಿಂಬಿಂತಿವನರೆದೆಳ್ಳ ಕಷಾಯದಿಂದೆ ನಸ್ಯಂಗೆಯ್ದಂದರೆದಲೆಬೇನೆಯನದು ಸಂಹರಿಕುಂ (ಲೋಕೋಪ. ೯-೬೨); ಪರಸಮಯಿಗಳ ದರ್ಪವಂ ಸಂಹರಿಪ ಭಾಷೆ (ಬಸವು. ೬-೪). ೪. ಕೂಡಿಸು; ಕಲೆಹಾಕು: ಹಲವು ಗುಗ್ಗುಳ ಭೂರುಹಂಗಳ ನೆಲೆಯನಾರೈದು . . . ಮಲಹರಾತ್ಮನು ತನ್ನ ತೂಕವನಳವಡಿಸಿ ಕಂಬಿಯೊಳೆರಡುಕಡೆಗಂತು ಸಂಹರಿಸಿ (ಬಸವು. ೪೩-೨೪). [ಸಂಹರಣ + - ಇಸು]

**ಸಂಹರ್ಷ** (ನಾ). ೧. ತಿಕ್ಕುವಿಕೆ; ಉಜ್ಜುವಿಕೆ. ೨. ಸ್ಪರ್ಧೆ; ಮೇಲಾಟ. ೩. ವೈರ. ೪. ಮೈ ನವಿರೇಳುವಿಕೆ ; ರೋಮಾಂಚನ. [ಸಂ.]

**ಸಂಹಾಜ** (ನಾ). ಘರ್ಷಣೆ ; ತಾಕಲಾಟ : ದೇಸದೊಳಗೆ ಸಮಯ ಸಂಹಾಜವಾದರೆ ಅವರ ಮುಂದಿಟ್ಟು ತಿದುಹುದು ಅವರು ಸಿಕ್ಷಕರ್ತ್ತರಾಗಿ ಅವರು ತಿದ್ದಿದ ಹಾಗೆ ನಡಉದು (ಎಕ. XII, ಶಿರಾ. ೭೬-೧೯ ; 1379). [< ಸಂ. ಸಂವಾಜ]

**ಸಂಹಾರ** (ನಾ). ೧. ಕೂಡಿಸುವುದು ; ಒಟ್ಟುಮಾಡುವುದು. ೨. ಕೂಡಿಸಿ ಕಟ್ಟುವಿಕೆ; ಹೆಣೆಯುವಿಕೆ: 'ವೇಣೀಸಂಹಾರ' ಪರಾ. ೩. ಸಂಗ್ರಹ; ಸಂಚಯ. ೪. ಕುಗ್ಗಿದುದು; ಆಕುಂಚನ. ೫. ಸಂಕ್ಷಿಪ್ತ; ಸಂಕ್ಷೇಪ. ೬. ಹತೋಟಿ; ಅಂಕೆ. ೭. ಕೊನೆ; ಮುಕ್ತಾಯ. ೮. ನಾಶ; ಹಾಳು: ಆರುಹತರಂ ತಗುಳ್ದು ಮಿಗೆ ಕೋವೂರ ಬಸದಿಗಳೆಲ್ಲವಂ ಸಂಹಾರಮಂ ಮಾಡಿದನು (ಬಸಪು. ೫೦-೮೦). ೯. ಪ್ರಯೋಗಿಸಿದ ಬಾಣ ಮುಂತಾದುವನ್ನು ಮಂತ್ರಶಕ್ತಿಯಿಂದ ಹಿಂದಕ್ಕೆ ಬರಿಸುವುದು: ಈ ಗೂಢವಾದ ಜೃಂಭಕಾಸ್ತ್ರದ ಪ್ರಯೋಗವೂ ಸಂಹಾರವೂ ವೇದಾನುಷ್ಠಾನದಿಂದ ದೊರೆಯತಕ್ಕವುಗಳು (ಉರಾಚ. ೧೫೭). ೧೦. ಕಲ್ಪಾಂತ್ಯದಲ್ಲಿ ಉಂಟಾಗುವ ನಾಶ; ಪ್ರಳಯ: "ಸಂವರ್ತಃ . . . ಸಂಹಾರಃ, ಮಹಾಪ್ರಳಯಃ — ಈ ೯ ಪ್ರಳಯಕಾಲಂ" (ಹಲಾಯು. ೨೦-೧೧೭). ೧೧. ಪರಮಾತ್ಮನು ಮಾತ್ರ ನಿರ್ವಹಿಸಬಲ್ಲ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಭಾವ ಮತ್ತು ಅನುಗ್ರಹಕರಣವೆಂಬ ಐದು ಬಗೆಯ ಕಾರ್ಯಗಳು ; ಪಂಚಕೃತ್ಯ : ಸೃಷ್ಟಿ ಸ್ಥಿತಿ ಸಂಹಾರ ತಿರೋಭಾವ ಅನುಗ್ರಹವೆಂಬ ಪಂಚಕೃತ್ಯ ಕರ್ತೃತ್ವವೇ ತನಗಸಾಧಾರಣ ಧರ್ಮಮಾಗುಳ್ಳುದೇ ಪತಿಪದಾರ್ಥಮಕ್ಕುಂ (ವಿವೇಕ. ೧೩೫) ; ಇವನ ವ್ಯಾಪಾರಗಳನ್ನೆಲ್ಲಾ ಸೃಷ್ಟಿ, ಸ್ಥಿತಿ, ಸಂಹಾರ, ಅಂತಃಪ್ರವೇಶ, ನಿಯಮನವೆಂದು ಐದು ರಾಶಿ ಮಾಡಿರುವರು (ಹಿಂದಸಾ. ೨೫೩). ೧೨. ಕೊಲೆ; ವಧೆ : ಸಂಹಾರಃ = ಕೊಲೆ (ಕಾಶಕ್ಯ. ೧೫೭). [ಸಂ.]

**ಸಂಹಾರಕ** (ನಾ). ೧. ಕೊಲ್ಲುವುದು; ಸಂಹರಿಸುವುದು: ತಾರಕನಂ ಗುಹಂ ಮುಳಿದು ಶಕ್ತಿಯಿನಾಂತಿಡುವಂತರಾತಿಸಂಹಾರಕವಪ್ಪ ವಿಸ್ಫುರಿತಶಕ್ತಿಯಿನಾತನನಿಟ್ಟು (ಪಂಪಭಾ. ೧೦-೧೧೨). ೨. ನಾಶಮಾಡುವವನು. [ಸಂ.]

**ಸಂಹಾರಕಾರಣ** (ನಾ). ಪ್ರಪಂಚದ ನಾಶಕ್ಕೆ ಕಾರಣನಾದವನು; ಶಿವ: ಸಂಹಾರಕಾರಣನೇ ನಮೋ (ಬಸವ. ೫೩೭); ಸಂಹಾರಕಾರಣನಾಗಿ ಕಪಾಲ ಶೂಲನಾಟ್ಯಾಡಂಬರನಾಗಿ ಇದ್ದುದಱಿಂದ (ಅಱಿಮಾ. ೪. ೧೭೧-೨೫೫). [ಸಂ.]

**ಸಂಹಾರಕಾಲ** (ನಾ). ಪ್ರಪಂಚದ ನಾಶದ ಸಮಯ ; ಪ್ರಳಯಕಾಲ : ಚಿರ ಸುಧಾ ಸಾರಪ್ರಸಾದವವರ ಮುನಿಸೆ ಸಂಹಾರಕಾಲವವರ ಕೃಪೆಯೆ (ಬಸಪು. ೩೧-೧೯). [ಸಂ.]

**ಸಂಹಾರನ್ಯಾಸ** (ನಾ). ಜಪ ಮತ್ತು ಪೂಜೆಯ ಕಾಲಗಳಲ್ಲಿ ಮಂತ್ರಪೂರ್ವಕವಾಗಿ ಬೆರಳುಗಳನ್ನು ಸ್ಪರ್ಶಿಸುವ ಒಂದು ವಿಧಾನ; ಕರನ್ಯಾಸಗಳಲ್ಲಿ ಒಂದು ಬಗೆ: ಕನಿಷ್ಠಾದ್ಯಂಗುಷ್ಠಾಂತಮಾಗಿ ನಕಾರಾದಿ ಯಕಾರಾಂತಮಾದ ವರ್ಣಂಗಳನಾ ಕ್ರಮದಿಂದಾ ಅಂಗುಲಿಗಳಗ್ರದಿಂದಾದಿ ಪರ್ಯಂತರಂ ಮಾಳ್ಪುದೇ ಸಂಹಾರನ್ಯಾಸವೆನಿಸುವುದು (ವಿವೇಕ. ೮೧) ; ಮಂತ್ರವರ್ಣಭೇದವಿಲ್ಲದೆ ಅಸ್ತ್ರಾದಿ ಹೃದಯಾಂತಮಾಗಿ ಮಾಳ್ಪುದೇ ಸಂಹಾರನ್ಯಾಸವೆನಿಸುವುದು (ವಿವೇಕ. ೮೨). [ಸಂ.]

**ಸಂಹಾರರುದ್ರ** (ನಾ). ಪ್ರಳಯಕಾಲದ ಶಿವ ; ಕಾಲಭೈರವ: ಸಂಹಾರ ರುದ್ರನಂತಿರಲಾಹವದೊಳ್ . . . ಮೆಱೆವವೆಂದರುದ್ಧತವೀರರ್ (ದಶಕು. ೭-೫೪). [ಸಂ.]

**ಸಂಹಾರಿ** (ನಾ). = ಸಂಹಾರಕ ೨ : ವೇದವೇದಾಂತಾದಿ ಕಥನಾಪಾದಿತೋಪರಿ ತತ್ವನಿಶ್ಚಯವಾದಿ ಘನಸಂಸಾರದುರ್ವ್ಯಾಪಾರಸಂಹಾರಿ (ಬಸಪು. ೧೯-೨) ; ಮಚ್ಚೆರಿಪಸುರ ಸಂಹಾರಿ ಅಚ್ಯುತನಾದಿಕೇಶವನು (ಕಂನವಿ. ೫-೫). [ಸಂ. ಸಂಹಾರಿನ್]

**ಸಂಹಾರಿಸು** (ಕ್ರಿ). ೧. ಧ್ವಂಸಮಾಡು ; ನಾಶಗೊಳಿಸು : ಒಂದೆ ತೋಳ್ಬಲದಿಂ ಸಂಹಾರಿಸಿದಂ ಮಾರ್ಬಲಮಂ (ಪಂರಾಮಾ. ೪-೬೫) ; ಮೃಗಪಕ್ಷಿಕುಲವ ಸಂಹಾರಿಸುತ ಹೇಮಕೂಟದಿ ಗುರುವಿರೂಪಾಕ್ಷನಂ ಕಂಡನವನೀಶನು (ಹಚಕಾ. ೫ ಸೂಚನೆ). ೨. ಕೊಲ್ಲು; ಸಾಯಿಸು: ಶರಭರೂಪಂ ಧರಿಸಿ ಸಂಹಾರಿಸಿಯಲಾ ನರಹರಿಯ ಚರ್ಮಾಂಬರವನುಟ್ಟನು ಪಾರ್ವತೀಶ್ವರನು (ಬಸಪು. ೫೪-೪೨); ಹಿರಣ್ಯಕ ಹಿರಣ್ಯಾಕ್ಷನಾಮದಿಂ ನೀವು ದನುಜಾಕೃತಿಯಲಿ ಧಾರುಣಿಯೊಳುದಿಸಲಚ್ಯುತ ಬಂದು ನಿಮ್ಮ ಸಂಪಾರಿಸುವನು (ಸೌಂದಪು. ೭-೧೧). ೩. ನಿವಾರಿಸು ; ಹೋಗಲಾಡಿಸು ; ಕಳೆ : ಸೂರಣದ ಗಡ್ಡೆಯಂ ಸೌವೀರದೆ ಮೇಣ್ ಕಲಸಿಕೊಂಡು ಪುಳಿಸೆಯ ಚಿಗುರಿಂ ನೀರೊಳ್ ಕುಡಿಸಲ್ಕದು ಸಂಹಾರಿಕುಮಂತದಱ ವಿಷಮಂ (ಲೋಕೋಪ. ೮-೨೮); ನೀರೊಳ್ ಮಱುಗಿಸಿ ಕುಡು ಕಾಳ್ಗೀರೆಯ ಬೇರಂ ಸಮಾಕ್ಷಿಕಂ ಘೃತದಿಂ ಸಂಹಾರಿಸುಗುಂ ವಮನಂ ವಿಷದಾರುಣಮಂ (ಖಮದ. ೨-೧೫). [ಸಂಹಾರ + – ಇಸು]

**ಸಂಹಿತ** (ಗು). ೧. ಜೋಡಿಸಿದ; ಹೊಂದಿಸಿದ. ೨. ಒಟ್ಟುಮಾಡಿದ; ಕೂಡಿಸಿದ : 'ಋಗ್ವೇದ' ಎಂದು ಒಂದೆಡೆ 'ಸಂಹಿತ'ವಾಗಿದ್ದ ಸೂಕ್ತಗಳು . . . ಒಬ್ಬನಿಂದಾಗಲಿ, ಒಂದೇ ಕಾಲಾವಧಿಯಲ್ಲಾಗಲಿ ಬರೆಯಲ್ಪಟ್ಟುವಲ್ಲ (ಭಾರದ. ೫೭೯). ೩. ಇಟ್ಟ ; ಇರಿಸಿದ. ೪. (ಬಾಣವನ್ನು) ಹೂಡಿದ ; ತೊಟ್ಟ. ೫. ಒದಗಿದ ; ಉಂಟಾದ. ೬. ಹತ್ತಿರಕ್ಕೆ ಬಂದ. ೭. ಒಪ್ಪುವ; ಅನುರೂಪವಾದ. ೮. ಸಹಿತವಾದ; ಯುಕ್ತವಾದ. (ನಾ). ೯. ಒಟ್ಟಿಗಿರುವುದು ; ಸಹಿತವಾದುದು : "ಯುತಮನ್ವಿತಂ ಸಂಹಿತಂ . . . ಸಹಿತಮೆನಲು ಕೂಡಲ್ಕೆ ನಾಮಂ" (ಮಂಗರಾ. ೧೩೦-೧೮). [ಸಂ.]

**ಸಂಹಿತೆ** (ನಾ). ೧. ಸೇರಿಕೆ ; ಸಂಯೋಗ. ೨. ಕಲೆಹಾಕಿದುದು ; ಸಂಗ್ರಹ ; ಸಂಕಲನ : 'ಋಕ್' ಎಂದರೆ 'ಪದ್ಯ', 'ಸಂಹಿತೆ'ಯೆಂದರೆ 'ಸಂಗ್ರಹಿಸಿದ್ದು, ಶೇಖರಿಸಿದ್ದು' (ಭಾರದ. ೨೦) ; ಋಗ್ವೇದದಂತಹ ಪುರಾತನಸಂಹಿತೆಯು ಉಪಲಬ್ಧವಿರುವುದು ಸುದೈವದ ಸಂಗತಿ (ಕರ್ನಾಟ. ೨೭). ೩. ಸುವ್ಯವಸ್ಥಿತವಾಗಿ ಸಂಗ್ರಹಿಸಲ್ಪಟ್ಟ ಗ್ರಂಥ ಅಥವಾ ಕಾವ್ಯಗಳ ಸಮುದಾಯ : ಶ್ರೀಮದ್ರಾಮಾಯಣಾದಿಗಳು ಅನೇಕರ ಕಥಾಚರಿತ್ರಗಳೊಡನೆ ಕೂಡಿದುದು ಸಂಹಿತೆಯೆಂದು ಹೇಳಲ್ಪಡುವದು (ಸಾತ್ವಿವಿ. ೧-೨); ಸ್ಕಂಧಪೌರಾಣದೊಳಗೊಂದು ಸಂಹಿತೆಯೊಳಿಹ ಸತ್ಕಥೆಯನು ಚಂದದಿಂದೋದಿ (ಏಕೋಪು. ೬-೫). ೪. ಕ್ರಮವಾಗಿ ಸಂಗ್ರಹಿಸಿದ ಕಾಯಿದೆ ಅಥವಾ ಕಾನೂನುಗಳು: ನಾಗರಿಕರಿಗೆ ಒಂದೇ ವ್ಯವಹಾರ ಸಂಹಿತೆಯು ಏರ್ಪಟ್ಟಿರುವಂತೆ ರಾಜ್ಯವು ಪ್ರಯತ್ನಿಸತಕ್ಕುದು (ಭಾಧಾನ. ೨೪). ೫. (ಪದಪಾಠದಿಂದ ಬೇರೆಯಾದ) ವೇದಗಳಲ್ಲಿಯ ಋಕ್ಕುಗಳ ಸಮೂಹ : ವೇದಗಳಲ್ಲಿ ಸಂಹಿತೆ, ಬ್ರಾಹ್ಮಣ, ಅರಣ್ಯಕವೆಂದು ಮೂರು ಭಾಗಗಳಿರುವುವು. ಪದ್ಯಗದ್ಯರೂಪಗಳಾದ ಮಂತ್ರಭಾಗಕ್ಕೆ ಸಂಹಿತೆಯೆಂದೂ . . . ವ್ಯವಹಾರ (ಹಿಂದಸಾ. ೧೮೩). ೬. ಬೇರೆ ಬೇರೆ ಔಷಧದ್ರವ್ಯಗಳನ್ನು ಹಾಕಿ ಮಾಡಿದ ಕಲ್ಕ, — ಕಷಾಯ : ಅಂತು ಸರ್ವಜ್ವರ ಕುಳ ೧ಕ್ಕೆ ಸಂಹಿತೆ ೯, ಕಲ್ಕ ೨೪ (ಸಕವ್ಯ. ೧೧೭) ; ಸಂಹಿತೆಗಳು — ಹೆಮ್ಮರದ ತೊಕ್ಕನ್ನಿಡಿದು ರಸವನ್ನು ತೆಗೆದು ಕುಡಿಸಲು ಚಾತುರ್ಥಿಕಜ್ವರ ಪರಿಹಾರವಾಗುವುದು (ಸಕವ್ಯ. ೧೧೮). ೭. [ಶೈವ] ದೇವಪೂಜಾತಂತ್ರವಿಧಾನವನ್ನು ತಿಳಿಸುವ ಶಾಸ್ತ್ರ ; ಶೈವಾಗಮದ ಭಾಗ : ಶೈವಾಗಮದ ಕಾಮಿಕಾದಿ ಭಾಗಗಳನ್ನು 'ಸಂಹಿತೆ'ಗಳೆಂದೂ 'ಆಗಮ'ಗಳೆಂದೂ 'ಮಹಾತಂತ್ರ'ಗಳೆಂದೂ ಕರೆಯುತ್ತಾರೆ (ಭಾರದ. ೭೩). ೮. [ವ್ಯಾಕ] ವರ್ಣಗಳು ಸಂಧಿ ನಿಯಮದಂತೆ ಕೂಡುವಿಕೆ; ಸಂಧಿ : ನಿರತಂ ಪ್ರಕೃತಿ ಪ್ರತ್ಯಯಮೆರಡುಮೊಡಂಬಟ್ಟು ತೋಱೆ ಪದಮೆನೆ ಪಡೆಗುಂ ಪರವರ್ಣದೊಳೆಳಸಿರ್ಕುಂ ಸ್ವರರಹಿತವ್ಯಂಜನಂಗಳಾ ಸಂಹಿತೆಯೊಳ್ (ಕಾವ್ಯಾವ. ೨೯) ; ಸ್ವರರಹಿತವ್ಯಂಜನಮವು ಪರವರ್ಣಮನೆಯ್ದುತಿರ್ಪುವಾ ಸಂಹಿತೆಯೊಳ್ (ಶಮದ. ४೯). [ಸಂ. ಸಂಹಿತಾ]

**ಸಂಹೂತಿ** (ನಾ). ಅನೇಕರು ಒಟ್ಟಿಗೆ ಸೇರಿ ಕೂಗಾಡುವುದು; ಗದ್ದಲ; ಗಜಿಬಿಜಿ : "ಸಂಹೂತಿಃ, ಬಹುಭಿಃಕೃತಾ — ಬಹುಮಂದೀ ಸೇರಿ ಕರೆಯಿಸುವದಕ್ಕೆ ಹೆಸರುಗಳು" (ಸಿದ್ಧಾಂತಿ. ೫೧). [ಸಂ.]

**ಸಂಹೃತ** (ಗು). ೧. ಒಟ್ಟಿಗೆ ಎಳೆಯಲ್ಪಟ್ಟ. ೨. ಸಂಕುಚಿತಗೊಂಡ ; ಆಕುಂಚನ ಹೊಂದಿದ. ೩. ಹಿಂದೆ ಸರಿದ; ಹಿಂದಕ್ಕೆ ಹೋದ. ೪. ಒಟ್ಟಾದ; ಗುಂಪುಗೂಡಿದ. ೫. ವಶಪಡಿಸಿಕೊಂಡ. ೬. ಹತೋಟಿಗೆ ತರಲ್ಪಟ್ಟ. ೭. ನಾಶಗೊಂಡ ; ಧ್ವಂಸವಾದ. (ನಾ). ೮. ಕೊಲೆಗೀಡಾದವನು; ಕೊಲ್ಲಲ್ಪಟ್ಟವನು : ಪಟ್ಟಾಭಿಷಿಕ್ತನಾಗಿ ರಾಜದ್ವಾರದಲ್ಲಿ ಮೆರವಣಿಗೆಯಂ ಬರುವಾಗಲಾದರೂ ಸಂಹೃತನಾಗಲಿ (ಮುದ್ರಾಮಂ. ೨೧೮). [ಸಂ.]

**ಸಂಹೃತಿ** (ನಾ). ೧. ಒಳಗೆ ಸೆಳೆಯುವುದು ; ಜಗ್ಗುವುದು : ಸರಳಸಾಂಗೋಪಾಂಗ ಮಂತ್ರೋಚ್ಚರಣಸಂಹೃತಿಮೋಕ್ಷವನು ವಿಸ್ತರಿಸುತ ರಹಸ್ಯದಲಿ ಕೊಟ್ಟನು ಪಾಶುಪತಶರವ (ಕುವ್ಯಾಅ. ೬-೯೯). ೨. ನಾಶ ; ಧ್ವಂಸ : ಜಗಸ್ಥಿತಿಸಮುದ್ಭವ

ಸಂಹೃತಿಹೇತುವದ ನೀರೇರುಹನಾಭ ನೀರಜಸಮುದ್ಭವ ಶಂಕರರೀಗಭೀಷ್ಟಮಂ (ಕಇಆ. ೧-೨-೩ ; 1058). ೩. ಸ್ವಾಧೀನ ಪಡಿಸುವುದು. ೪. ನಿಗ್ರಹ ; ಹತೋಟಿ. ೫. ಸಂಕಲನ ; ಸಂಗ್ರಹ. [ಸಂ.]

**ಸಂಹೃಷ್ಟ** (ಗು). ೧. ರೋಮಾಂಚನಗೊಂಡ ; ಪುಲಕಿತಗೊಂಡ. ೨. ಸಂತೋಷವನ್ನು ಹೊಂದಿದ ; ಹರ್ಷಗೊಂಡ. ೩. ನಡುಗಿದ ; ಕಂಪಿಸಿದ. (ನಾ). ೪. ಸಂತೋಷಗೊಂಡವನು; ತೃಪ್ತ : ಅದರ ಅಧ್ಯಯನದಿಂದ ನಿಸ್ತೇಜನೂ ತೇಜಸ್ವಿಯಾಗಬಲ್ಲ, ಸಂಹೃಷ್ಟನಾಗಬಲ್ಲ (ಕಾವ್ಯಕು. ೪೨); ಸಂತಾತ್ಮವೈಭವದ ಮಲೆಗುಡಿಯ ನೆನೆದಿಂತು ಸಂಹೃಷ್ಟನಾದೆನ್ನ ಕೊರಗ ನೀಗಿ (ಮಲೆದೇ. ೫೬-೧೦). [ಸಂ.]

**ಸಂಹ್ರಿತ** (ನಾ). ಭಾಗಿಸುವಿಕೆ ; ಭಾಗಾಹಾರ ಮಾಡುವಿಕೆ : ಸತ್ತು ತಗೆಯಂ, ಸಂಹ್ರಿತಂ, ತವೆ, ಭಕ್ತಿ, ಭಿನ್ನ, ಚಿನ್ನದಿತಂ, ದಾಪ್ತಭಾಷೆಗಳ್ ಭಾಗಿಸೂದೆಂದಜ಼ಿ (ವ್ಯವಹಾ. ೧೨-೧೫). [?]

**ಸಕ** (ನಾ). ಒಂದು ನಿರ್ದಿಷ್ಟವಾದ ಕಾಲದಿಂದ ಪ್ರಾರಂಭವಾಗುವ ಕಾಲಗಣನೆ ; ಯುಗಾರಂಭ ; ಶಕ : ಸ್ವಸ್ತಿ ಸಕನೃಪಕಾಲಾತೀತಸಂವತ್ಸರದ ಸಕಂಗಳೆಣ್ಣು (ಷುಆಂ. ೧೯೩೯, ೮೬-೧ ; 903) ; ವಿಶ್ವಾವಸಿಯಂ ಮಿಕ್ಕೇಳ್ನೆಯಿಂದಂ ಪೆಳಪೆ ಸಕಮನಾಂತಿರ್ದಪಂ ವಿಕ್ರಮಾದಿತ್ಯಂ (ಎಕ. VII, ಶಿಕಾರಿ. ೧೨೪-೧೯ ; 1077). [< ಸಂ. ಶಕ]

**ಸಕಂಟಕ** (ಗು). ಮುಳ್ಳನ್ನು ಹೊಂದಿದ ; ಕಂಟಕಸಹಿತವಾದ : ಶಶಿಯಿಂ ಸ್ನಿಗ್ಧಂ ಸದುಗ್ದ್ರದ್ರುಮಂ ಧರಣೀನಂದನನಿಂ ಸಕಂಟಕಕಟುತ್ವಂ ಸೌಮ್ಯನಿಂ . . . ಸೌರಿಯಿಂ ಪರುಷಂ ತತ್ತರುವಿಂಗೆ (ಜಾತತಿ. ೫-೧೧) ; ಸಕಂಟಕ ತರುಭವಗಳಹ ಕಟುಕಗಂಧದ ಬೆರಸಿಕೊಂಡಿಹ ಕುಸುಮಸಂದೋಹಗಳು . . . ಅಭಿಚಾರಕಕರಣಗಳಿಗೆ ಯಥರ್ವಮಂತ್ರೋಕ್ತರಕುಚಿತವೆಂದೆನಿಪ ಧಾತುಗಳೆನಿಸಿಕೊಂಡಿಹವು (ತಿಮ್ಮ.ಆ. ೮-೩೩). [ಸಂ.]

**ಸಕಟ** (ನಾ). ಬಂಡಿ ; ಗಾಡಿ : ತುಂಬಿದ ಸಕಟಕ್ಕೆ (ಬಂಡಿ) ಅಂಗುಲದಷ್ಟು ತೃಣಭಾರವಾದಂತೆ (ಸರ್ವಜ್ಞ. ೧೧೮-೬೧೨) ; ಸಕಟಾಕೃತಿಯ ನಾಲ್ಕುಚ್ಚೆಂಟು ಗಾಲಿಯ . . . ಬೇಡಿದ ವಸ್ತುಕಂಗಳಂ ಕುಡುವ ಕಾಳಮುಂ (ಪುಣ್ಯಾಸ್ರ. ೧೦-೩೨ ವ). [< ಸಂ. ಶಕಟ]

**ಸಕತ್**, ಸಕತ್ತು, ಸಖತ್, ಸಖತ್ತು (ಗು). ಹೆಚ್ಚಾದ ; ವಿಪರೀತವಾದ : ಅವನಿಗೆ ಸಕತ್ ಏಟು ಬಿತ್ತು (ರೂಢಿ). 'ಸಕತ್‌ಕಾಯಿಲೆ' ಪರಾ. **ಸಕತ್ತು** : 'ಸಕತ್ತು ಖಾಯಿಲೆ' ಪರಾ. **ಸಖತ್** : 'ಸಖತ್‌ಕಾಯಿಲೆ' ಪರಾ. **ಸಖತ್ತು** : 'ಸಖತ್ತು ಕಾಯಿಲೆ' ಪರಾ. [← ಮರಾ. ಸಕತ್]

**ಸಕತ್‌ಕಾಯಿಲೆ, ಸಕತ್‌ಕಾಹಿಲೆ, ಸಕತ್‌ಖಾಯಿಲೆ, ಸಕತ್ತುಖಾಯಿಲೆ, ಸಖತ್ ಕಾಯಿಲೆ, ಸಖತ್‌ಕಾಹಿಲೆ, ಸಖತ್ತುಕಾಯಿಲೆ** (ನಾ). ಹೆಚ್ಚಾದ ಕಾಯಿಲೆ ; ಉಲ್ಬಣವಾದ ವ್ಯಾಧಿ : ಅವಳ ಅಜ್ಜಿಗೆ ಸಕತ್‌ಕಾಯಿಲೆ (ಹೊಸಕ್ಕ. ೪೮). **ಸಕತ್ ಕಾಹಿಲೆ** : ವಿಜಯಳ ತಾಯಿಗೆ ಸಕತ್‌ಕಾಹಿಲೆ (ಏಕಾಂಗಿ. ೧೨೧). **ಸಕತ್‌ಖಾಯಿಲೆ** : ವಾಮನರಾಯರಿಗೆ ಸಕತ್‌ಖಾಯಿಲೆ (ಸ್ವ್ಯತಿಚಿ. ೪೦). **ಸಕತ್ತುಖಾಯಿಲೆ** : ಸಕತ್ತುಖಾಯಿಲೆಯಾಗಿ ಶ್ವಾಸ ಮೇಲಕ್ಕಾಗಿಬಿಟ್ಟಿತು (ಚಂಗಾಳ್ಯ. ೧೭೭). **ಸಖತ್‌ಕಾಯಿಲೆ**: ಅಮ್ಮನಿಗೆ ಸಖತ್‌ಕಾಯಿಲೆ (ಮನೋನಂ. ೧೦೪); ನಮ್ಮ ಭಾವನವರಿಗೆ ಸಖತ್‌ಕಾಯಿಲೆ ಅಂತಾ ನಿನ್ನೆ ಟೆಲಿಗ್ರಾಂ ಬಂತು (ನಿಂದನ. ೧೭೯). **ಸಖತ್‌ಕಾಹಿಲೆ** : ಶಾರದೆಯ ಸಖತ್‌ಕಾಹಿಲೆಯನ್ನು ಕೇಳಿ ಪಾರ್ವತಮ್ಮ ಶಾರದೆಯ ಮನೆಗೆ ಬಂದಳು (ವಿದ್ಯಾರ. ೬೧); ತಂದೆಗೆ ಸಖತ್‌ಕಾಹಿಲೆ (ಧರ್ಮಶ್ರೀ. ೯೩). **ಸಖತ್ತು ಕಾಯಿಲೆ** : ನಮ್ಮ ತಂದೆಗೆ ಸಖತ್ತುಕಾಯಿಲೆ (ಅಲೆಮ. ೧೧೪) ; ಅಣ್ಣನಿಗೆ ಸಖತ್ತುಕಾಯಿಲೆಯಾಗಿ ಅತ್ತ ಮುಖವೊ ಇತ್ತ ಮುಖವೊ ಎಂಬಂತಾಗಿದೆ (ಮಲೆಮ. ೪೦೫). [ಸಕತ್ + ಕಾಯಿಲೆ]

**ಸಕತ್‌ಕಾಹಿಲೆ** 'ಸಕತ್‌ಕಾಯಿಲೆ' ನೋ.

**ಸಕತ್‌ಖಾಯಿಲೆ** 'ಸಕತ್‌ಕಾಯಿಲೆ' ನೋ.

**ಸಕತಿ**$_1$ 'ಶಕುತಿ' ನೋ.

**ಸಕತಿ**$_2$ (ನಾ). ಆಸಕ್ತಿ ; ತತ್ಪರತೆ : ಸುಖಿಯಾದೆನೆಂಬ ಸುಖದ ಸಕತಿ [ಪಾಠಾಂ. ಸುಕುತಿ]ಯಡಗಿ ನಿಂದ ನಿಲುವು ಮುಕುತಿಗತೀತವಾದನು (ಅವಚಂ. ೨೯೨-೧೩೦೫); ಸಕಲವೇದಂಗಳೆಂದ ತೆಱದಲಿ ಸಕತಿಯನು ಫಲಗಳನು ಬಿಟ್ಟುಚಿತಂಗಳನು ಮಾಡಿ (ನಿಭಾಗ. ೧೧-೧೭-೨). [< ಸಂ. ಸಕ್ತಿ]

**ಸಕತ್ತು** 'ಸಕತ್' ನೋ.

**ಸಕತ್ತುಖಾಯಿಲೆ** 'ಸಕತ್‌ಕಾಯಿಲೆ' ನೋ.

**ಸಕರ** (ನಾ). ಒಬ್ಬಾತನ ಹೆಸರು (?) : ಸ್ವಸ್ತಿ ಶ್ರೀಮದ್ ಸಕರರ ಸೂಳೆಯಬ್ಬೆಯ ಮಗಳ್ದೇವಬ್ಬೆ ಮಾಡಿಸಿದ ತೂಮ್ಬು (ಎಕ. IX (S), ಚನ್ನಪ. ೨೮೬-೨; 886). [?]

**ಸಕರ್ಮ** (ಗು). ೧. ಯಾವುದಾದರೂ ಕರ್ಮ ಅಥವಾ ವ್ರತವನ್ನು ಆಚರಿಸುವ. ೨. ಸದೃಶವಾದ ವ್ಯಾಪಾರವನ್ನು ನಡೆಸುವ. (ನಾ). ೩. ಕ್ರಿಯೆ ಅಥವಾ ಕರ್ಮಗಳಿಂದ ಕೂಡಿದುದು : ಅತುಳಿತಾನಂದಿತ ಪರವಶೀಯುತಮಹಿಮತತ್ತ್ವಸ್ಫುರಣಗತಿ ಮತಿ ಸಕಾಯ ಸಕರ್ಮ ಚೈತನ್ಯಸ್ಥರತಿವಿತತಿ ಸತತಮುಂ ನಿಮ್ಮಲ್ಲಿರಲು (ಬಸವ. ೬೧-೫೯). 'ಅಕರ್ಮ' ಪರಾ. [ಸಂ.]

**ಸಕರ್ಮಕ** (ಗು). ೧. ಯಾವುದಾದರೂ ಕರ್ಮ ಅಥವಾ ವ್ರತವನ್ನು ಆಚರಿಸುವ. (ನಾ). ೨. [ವ್ಯಾಕ] ಕರ್ಮಪದವನ್ನು ಅಪೇಕ್ಷಿಸುವ ಒಂದು ಬಗೆಯ ಧಾತು: ಕ್ರಿಯಾಪದಂ ಕರ್ತೃಪದದೊಡನೆ ಕೂಡಿದುದಾಗಿ ಎಲ್ಲಿ ಏನೆಂಬಾಪೇಕ್ಷೆಯಂ ಬಯಸುವುದು ಅದು ಸಕರ್ಮಕಮಕ್ಕುಂ (ಶಮದ. ಸ. ೨೬೩ ವೃತ್ತಿ) ; ಧಾತುಗಳನ್ನು ಸಕರ್ಮಕ ಅಕರ್ಮಕ ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಕರ್ಮವನ್ನು ಅಪೇಕ್ಷಿಸುವುದು ಸಕರ್ಮಕ, ಅಪೇಕ್ಷಿಸದಿರುವುದು ಅಕರ್ಮಕ (ಕೈಪಿಡಿ. ೪೩). 'ಅಕರ್ಮಕ' ಪರಾ. [ಸಂ.]

**ಸಕರ್ಮಕಕ್ರಿಯಾಪದ** (ನಾ). = ಸಕರ್ಮಕ ೨ : ಅರ್ಥಪೂರ್ತಿಗಾಗಿ ಕರ್ಮಪದವನ್ನು ಅಪೇಕ್ಷಿಸುವ ಕ್ರಿಯಾಪದಕ್ಕೆ ಸಕರ್ಮಕಕ್ರಿಯಾಪದವೆಂದೂ . . . ಹೆಸರು (ಮಧ್ಯಮ. ೧೭೬). [ಸಂ.]

**ಸಕರ್ಮಕಧಾತು** (ನಾ). = ಸಕರ್ಮಕ ೨ : ಅಕರ್ಮಕ ಸಕರ್ಮಕಧಾತುಗಳನ್ನೆಲ್ಲಾ ನಾವು ಸಾಮಾನ್ಯವಾಗಿ ಉಪಯೋಗಿಸುವುದು ಕರ್ತರಿಪ್ರಯೋಗದಲ್ಲೇ (ಮಧ್ಯಮ. ೧೭೮) ; ಕರ್ಮವನ್ನು ಅಪೇಕ್ಷಿಸಿ ಕ್ರಿಯೆಯನ್ನು ತಿಳಿಸುವುದು ಸಕರ್ಮಕಧಾತು (ಶಬ್ದಾದ. ೨೧). [ಸಂ.]

**ಸಕಲ**, ಸಕಳ (ಗು). ೧. ಭಾಗಗಳನ್ನೊಳಗೊಂಡಿರುವ ; ಭಾಗಸಹಿತವಾದ. ೨. ಎಲ್ಲ ; ಸಮಗ್ರ : ದೋಷಂಗಳಿಂತು ಮಿಗೆ ಸಂಶ್ಲೇಷದೊಳಾದಂದು ಸಕಲವಿದ್ವತ್ಸಭೆಯೊಳ್ ದೂಷಿಸುಗುಂ ಕೃತಿವಧುವಂ (ಕವಿರಾ. ೧-೧೦೦) ; ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ (ಬಸವ. ೨೪೭) ; ಸಾಂಗವೇದವನೋದಿ ಸಕಲಧರ್ಮದ ತತ್ತ್ವಂಗಳನಱಿತಾಚರಿಸಿ (ಹರಿಬ. ೨-೩೦). ೩. ಮೃದುವಾದ ಸ್ವರವನ್ನು ಹೊಂದಿರುವ. (ನಾ). ೪. ಭಾಗಗಳನ್ನೊಳಗೊಂಡಿರುವುದು; ಸಮಗ್ರವಾದುದು: ಉರ್ಬ್ಬಿಯೊಳ್ಸಕಲದೊಳೊರ್ಬ್ಬನೆ ಗಣ್ಯ ಶ್ರೀಚನ್ನಮನೆನ್ನುಮೊಳ್ಪಡೆಯನ್ ಗೊನ್ನಿಸುತರಿಂ (ಎಇ. XXIV, ೨೬-೬; 885) ; ಜಡ ಅಜಡವೆಂಬುಭಯವನಱಿದು ಸಕಲವೋ ನಿಃಕಲವೋ ಬೇಱೊಂದು ಹೊಲಬೋ (ಸರ್ವಜ್ಞ. ೧೧೭-೫೭೨) ; ಸಕಲವೂ ಬೇಕು ಎಂದು ಜ್ವರಪೀಡಿತನಂತೆ ಹಾಹಾಕಾರಪಡುತ್ತ ತಪಿಸುತ್ತಿರಬೇಕಲ್ಲವೇ (ಜ್ಯೋತಿರ್ವಿ. ೭೯). ೫. ಎಲ್ಲವನ್ನೂ ತಿಳಿದವನು ; ಪರಮಾತ್ಮ ; ಸರ್ವಜ್ಞ : ಸಕಲ ನಿಷ್ಕಲವ ಕೂಡಿಕೊಂಡಿಪ್ಪೆಯಾಗಿ ಸಕಲ ನೀನೇ ದೇವಾ (ಬಸವ. ೫೩೩) ; ಮಾಯೆ ಕರ್ಮ ಮಲಂಗಳೆಂಬ ಮೂಱು ಪಾಶಂಗಳಿಂದ ಯುಕ್ತನಾದಾತನು ಸಕಲನೆನಿಸಿಕೊಂಬನು (ದಶಟೀ. ೧೧-೮). ೬. ಗುಂಪು ; ಸಮೂಹ : ''ಸಕಲಂ ತತಿ ವ್ರಾತಮಪಿಕರಂ ಶ್ರೇಣಿ . . . ಸ್ತೋಮಕ್ಕೆ ನಾಮಂ'' (ಮಂಗರಾ. ೧೨೮-೧). ೭. [ನ್ಯಾಯ] ನ್ಯಾಯದಲ್ಲಿರುವ ಏಳು ಭೇದಗಳಲ್ಲಿ ಒಂದು : ಸಕಲ ವಿಕಲಗಳೆಂಬ ಅಪೇಕ್ಷಾಭೇದದಿಂದ ಹೇಳಲ್ಪಟ್ಟ ಏಳುಭಂಗ ಅಥವಾ ಭೇದಗಳುಳ್ಳದೇ ಸ್ಯಾದ್ವಾದನ್ಯಾಯ (ಭಾರದ. ೧೮೦). ೮. ಒಂದು ನರಕದ ಹೆಸರು : ಸಕ[ಪಾಠಾಂ. ಗ]ಲ ಶಲ್ಯ ಸಿಂಹ ಗಜಾನನ ವ್ಯಾಘ್ರುವೆಂಬ್ಯೆದು ಮಂತ್ರಿನರಕಂಗಳ ಮೇಳದಲ್ಲಿ ಮಹಾಚಂಡವೆಂಬರಸುನರಕವಿಹುದು (ವಿವೇಕ. ೧೫೨). **ಸಕಳ** : ೨. ಸಕಳಸ್ವರದೊಳ್ ಕೂಡಿದಹ(ಹು)ಕಾರಮಂತ್ರದೊಳಮೆಯ್ದೆ ಮಂತ್ರಿಸಿ ಶೀತೋದಕಮಂ ಕುಡಿಸೆ

(ಚೋಳೋಪ. ೧೦-೧೨). ೪. ಈ ಸಕಳದಿಂ ಸಕಳಸಾವ್ರಾಜ್ಯಸುಖಂ ಪರವಾಣು ಪ್ರಾಯಮಾದುದು (ಮಲ್ಲಿಪು. ೫-೪೨) ; ನಿಷ್ಕಳವೆ ಸಕಳವೆಯಾಗಿ ವಿಶ್ವದೊಳೊಳಗು ಹೊಜಗಾನಲ್ಲದಿಲ್ಲಲೆ ಪಾರ್ಥ ಕೇಳೆಂದ (ಕುಮ್ಯಾದ್ರೋ. ೩-೭೦). [ಸಂ.]

**ಸಕಲಂಕತೆ** (ನಾ). ದೋಷದಿಂದ ಕೂಡಿರುವುದು ; ಕಳಂಕವನ್ನು ಹೊಂದಿರುವುದು: ಸಕಲಂಕತೆ ಚಂದ್ರಮನೊಳ್ ವಿಕಲಧ್ವನಿ ವಿಹಗದಲ್ಲಿ ಭಂಗಂ ನದಿಯೊಳ್ . . . ಅಲ್ಲದಿಲ್ಲಾ ನಾಡೊಳ್ (ಗಿರಿಕ. ೨-೬). [ಸಂ. ಸಕಲಂಕತಾ]

**ಸಕಲಕಲಾಧರ, ಸಕಳಕಳಾಧರ** (ನಾ). ೧. ಎಲ್ಲ (ಹದಿನಾರು) ಕಲೆಗಳನ್ನು ಧರಿಸಿದವನು ; ಪೂರ್ಣಚಂದ್ರ : ಸಕಲಕಲಾಧರನಂ ರಾಹು ಕೊಳ್ವ ತೆಱದಿಂ (ಪಂಚತಂ. ೧೧೩-೮). **ಸಕಳಕಳಾಧರ** : ೧. ಸಕಳಕಳಾಧರನಂತೆ ಶಸ್ತ್ರಕಳಾಧರನಾಗಿ (ಪಂಪಭಾ. ೨-೫೯ ವ). ೨. ಎಲ್ಲ ಕಲೆಗಳನ್ನು ಬಲ್ಲವನು ; ಒಂದು ಬಿರುದು : ಕುಮಾರದಿಕ್ಕುಂಜರಂ ಪರವಿದ್ಯಾಧಿಕಂ ಸಕಳಕಳಾಧರಂ ಪದ್ಮನಾಳ ಗಿರಿವಜ್ರದಣ್ಣ (ಸೌಇಇ. XX, ೭೧-೧೧; 1109). [ಸಂ.]

**ಸಕಲಕಲಾಧರೆ** (ನಾ). ಎಲ್ಲ ಕಲೆಗಳನ್ನು ಬಲ್ಲವಳು : ಸಕಲಕಲಾಧರೆ ಮಣಿದೀಪಿಕೆಯಿಂ ಬೆಳಗಿದಪೆನಮಲನಿಜಗೃಹಮಂ (ಲೀಲಾವ. ೭-೪೩).

[ಸಂ. ಸಕಲಕಲಾಧರಾ]

**ಸಕಲಚಕ್ರವರ್ತಿ** (ನಾ). [ಜೈನ] ಆರು ಖಂಡಗಳಿಗೆ ಅಧಿಪತಿಯಾದವನು : ಶ್ರೀಮದಜಿತತೀರ್ಥಕರಸಂತಾನದೊಳ್ ಸಗರನೆಂಬೆರಡನೆಯ ಸಕಲಚಕ್ರವರ್ತಿ (ಜೀವಸಂ. ೧೬-೫). [ಸಂ. ಸಕಲಚಕ್ರವರ್ತಿನ್]

**ಸಕಲಜ್ಞ, ಸಕಳಜ್ಞ** (ನಾ). ಎಲ್ಲವನ್ನೂ ತಿಳಿದಿರುವವನು ; ಸರ್ವಜ್ಞ : ಸಕಲಜ್ಞಂ ಕವಿಚಕ್ರವರ್ತಿ (ಶಾಂತಿಪು. ೧೨-೮೧) ; ಸಕಲಜ್ಞರ್ ತಿಳಿವಂತು ಪೇೞ್ ತಳೆದಂ ಸೀತೇಂದ್ರನುತ್ಸಾಹಮಂ (ಪಂರಾಮಾ. ೧೬-೭೪). **ಸಕಳಜ್ಞ** : ಸಕಳ[ಪಾಠಾಂ. ಲ]ಜ್ಞಂ ಮಾಟ್ಕುಂ ದಂಡಕವಾಟಪ್ರತರಲೋಕಪೂರಣಮಂ (ಪಾರ್ಶ್ವಪು. ೧೪-೧೩೩) ; ಸಕಳಜ್ಞಂ ಶಾಂತಿನಾಥಂ ತನಗೆಸೆವ ಕುಲಸ್ವಾಮಿ ದೇಶೀಗಣಂ (ಶಾಂತೀಶ್ವ. ೧-೬೩). [ಸಂ.]

**ಸಕಲದತ್ತಿ, ಸಕಳದತ್ತಿ** (ನಾ). ೧. ಎಲ್ಲವನ್ನೂ ಅರ್ಪಿಸುವುದು; ಸರ್ವಸ್ವವನ್ನೂ ನೀಡುವುದು. ೨. [ಜೈನ] ''ಯೋಗ್ಯನಾದ ತನ್ನ ಮಗನಿಗೆ ಅಥವಾ ಅವನು ಇಲ್ಲದಿದ್ದರೆ ಯೋಗ್ಯನಾದ ಅಣ್ಣತಮ್ಮಂದಿರಲ್ಲಿ ಒಬ್ಬನಿಗೆ ತನ್ನ ವಂಶದ ಪರಂಪರೆ ಮತ್ತು ಧರ್ಮವು ನಡೆಯಬೇಕೆಂದು ತನ್ನ ಸರ್ವಸ್ವವನ್ನು ಕೊಡುವುದು'' (ಆದಿಪು. ಜೈನಪಾರಿಭಾಷಿಕ ಶಬ್ದಕೋಶ) : ಸಕಲ [ಪಾಠಾಂ. ಳ]ದತ್ತಿಯೆಂಬುದು ತನ್ನ ಸಂತತಿಯಂ ನಿಱಿಸಲ್ವೇಡಿ ಮಗಂಗಕ್ಕೆ ಗೋತ್ರಜಂಗಕ್ಕೆ . . . ಅಪ್ಪಯಿಸಿ ಕುಡುವುದು (ಚಾವುಂಪು. ೨೧೨) ; ಆತ್ಮೀಯಸಂತತಿಸ್ಥಾಪನಾರ್ಥಂ ಪುತ್ರಂಗಂ ಗೋತ್ರಜಂಗಂ ಮೇಣ್ ಧರ್ಮಮುಮಂ ದ್ರವ್ಯಮುಮಂ ಸಮರ್ಪಿಸಿ ಕುಡುವುದು ಸಕಲದತ್ತಿಯೆಂಬುದು (ತತ್ತ್ವಪ್ರ. ೨೮೮). **ಸಕಳದತ್ತಿ** : ೨. ನಿಜಾನ್ವಯೋದ್ಧರಣಸಮರ್ಥನಪ್ಪಗ್ರ ತನೂಭವಂಗಾತ್ಮೀಯ ಧರ್ಮ ಧನ ಬಂಧುಗಳಂ ಸಮರ್ಪಿಪ ಸಕಳದತ್ತಿಯುಂ ಬೆರಸು (ಆದಿಪು. ೧೫-೧೩ ವ) ; ಆತ್ಮೀಯನ್ವಯೋದ್ಧರಣಸಮರ್ಥನಪ್ಪ ನಿಜಾತ್ಮಜಂಗೆ ಸಮಸ್ತಗೃಹಪರಿಚ್ಛೇದಮನೊಪ್ಪಿಸುವ ಸಕಳದತ್ತಿಯುಂ (ಸುಕುಮಾ. ೬-೨೫ ವ). [ಸಂ.]

**ಸಕಲರೂಪಕ** (ನಾ). [ಕಾವ್ಯಮಿ] ರೂಪಕಾಲಂಕಾರದ ಒಂದು ಪ್ರಭೇದ ; ವರ್ಣಿತವಸ್ತುವಿನ ಬೇರೆ ಬೇರೆ ಅಂಶಗಳಿಗೂ ಆರೋಪ್ಯಮಾನವಾದ ವಸ್ತುವಿನ ಅಂಶಗಳಿಗೂ ಅಭೇದವನ್ನು ಕಲ್ಪಿಸಿ ಹೇಳುವ ಪೂರ್ಣರೂಪಕ; IP ಇದಕ್ಕೆ ಸಮಸ್ತವಿಷಯರೂಪಕವೆಂದೂ ಹೆಸರಿದೆ : ಸಕಲರೂಪಕಕ್ಕೆ — ವಾರಿಜಂ ವದನಂ . . . ಫೇನವಿಸ್ತಾರಮಂಚಿತಕುಂಚಿತಾಳಕಮುನ್ಮದಾಳಿಗಳಾಗೆ (ಕಾವ್ಯಾವ. ೭೯೨). [ಸಂ.]

**ಸಕಲರ್ತು** (ನಾ). ಎಲ್ಲಾಕಾಲ ; ಸರ್ವಋತು : ಇದು ಸಮವಸರಣ ಸಂಸಂಗದಿನಲ್ಲದೊಡಮಲಬೋಧಮುನಿಜನಸಾಮರ್ಥ್ಯದಿನಕ್ಕುಮಲ್ಲದಂದಾಗದು ಸಕಲರ್ತು ಪ್ರಭಿನ್ನಗುಣಸಮವಾಯಂ (ಚಂದ್ರಪ್ರ. ೨-೭೯). [ಸಂ.]

**ಸಕಲರ್ತುಕ, ಸಕಳರ್ತುಕ** (ನಾ). = ಸಕಲರ್ತು : ಸಕಲರ್ತುಕ ವನದಿಂ ದೀರ್ಘಿಕೆಯಿಂ ಪುಷ್ಕರಿಣಿಯಿಂ ಸರೋವರದಿಂ ಕೌತುಕಮನವರ್ ಕಂಡರ್ (ಪಂರಾಮಾ. ೩-೩೪). **ಸಕಳರ್ತುಕ** : ಅಂತು ದಿವ್ಯಪ್ರಭಾವದಿಂ ಸಕಳ[ಪಾಠಾಂ. ಸರ್ವ]ರ್ತುಕ ಸೌಂದರ್ಯಮುಮಂ ಬೇಱೆವೇಱೆ ತೋಱುವ ರಾಜ್ಯಲಕ್ಷ್ಮೀವಲ್ಲಭಂ ವನಲಕ್ಷ್ಮಿಯಂ ನೋಡುವಾಗಳ್ (ಆದಿಪು. ೧೧-೮೯ ವ). [ಸಂ.]

**ಸಕಲವಟ್ಟೆ, ಸಕಳವಟ್ಟೆ** (ನಾ). ಎಲ್ಲಾ ಬಗೆಯ ಬಟ್ಟೆ (?) : ಬೊಂಗದ ನಾರಂಗದ ದೇವಾಂಗದ ಪಲತೆಱದ ಸಕಲವಟ್ಟೆಗಳಂ . . . ಪಾಸಿ (ಸುಕುಮಾ. ೧೦-೯೦). **ಸಕಳವಟ್ಟೆ** : ಸಾಹಿಯಾಣದ ಚೀನದ ಧವಳವಟ್ಟದ ಜೊಂಗದ ದೇವಾಂಗದ ಸಕಳವಟ್ಟೆ [ಪಾಠಾಂ. ಪಟ್ಟೆ]ಗಳುಮಂ ಮೆಟ್ಟುವೆಡೆಗಳೊಳೆಲ್ಲಂ ಪಾಸಿ (ಆದಿಪು. ೪-೩೪ ವ) ; ಕಂಭಂಗಳೊಳೆಲ್ಲಂ ಸುಯ್ಯಾಣದ ಚಿನ್ನದ ಪಟಿಯ ಸಕಳವಟ್ಟೆಗಳಂ ಸುತ್ತಿ[ಸಿ] (ಪಂಪಭಾ. ೩-೪೦ ವ).

[ಸಕಲ ? + ಬಟ್ಟೆ$_2$]

**ಸಕಲವ್ಯಾಪಿ** (ಗು). ಎಲ್ಲೆಡೆಯೂ ಹರಡಿರುವ ; ಸರ್ವವ್ಯಾಪಿಯಾದ : ಸಕಲವ್ಯಾಪಿ ವಿಶೇಷಪ್ರಕಾಶಕಂ ಯುಕ್ತಕಾರಿ ಯುಕ್ತಾಯುಕ್ತಂ ಪ್ರಕಟಶ್ಲೇಷ ವಿರುದ್ಧಾತ್ಮಕಂ ವಿರುದ್ಧಂ ವಿಪರ್ಯಯಂ ಯುಕ್ತಾರ್ಥಂ (ಕವಿರಾ. ೩-೨೯). [ಸಂ. ಸಕಲವ್ಯಾಪಿನ್]

**ಸಕಲವ್ಯಾಪಿನಿ** (ನಾ). ಎಲ್ಲ ಕಡೆ ಆವರಿಸುವಂತಹುದು ; ಸರ್ವವ್ಯಾಪಿ : ಸಕಲವ್ಯಾಪಿನಿಯಂ ಭವ್ಯಕಮಲನಿಕರಪ್ರಮೋದಾಯಿನಿಯಂ ತಿಗ್ಮಕರಂ ಪ್ರಭೆಯಂ ತಳೆವಂತಕಳಂಕಂ ಶ್ರೀಧರಾಖ್ಯೆಯಂ ಮುನಿ ತಳೆದಂ (ಚಂದ್ರಪ್ರ. ೨-೮೪).

[ಸಂ. ಸಕಲವ್ಯಾಪಿನೀ]

**ಸಕಲಾಕ್ಷರ** (ನಾ). [ವ್ಯಾಕ] ಸ್ವರಸಹಿತವಾದ ವ್ಯಂಜನ : ಮುದದಿ ವಿಕಲಾಕ್ಷರಂ ಪಂಚೋತ್ತರತ್ರಿಂಶವದಕೆ ಸ್ವರಮೊದಗೆ ಸಕಲಾಕ್ಷರಾಹ್ವಯಮಕ್ಕು (ರಾಘಚ. ೨-೫೬) ; ಸ್ವರಸಹಿತವ್ಯಂಜನವನ್ನು ''ಸಕಲಾಕ್ಷರ''ವೆಂತಲೂ ಸ್ವರರಹಿತವ್ಯಂಜನವನ್ನು ''ವಿಕಲಾಕ್ಷರ''ವೆಂತಲೂ ಕರೆದಿದ್ದಾನೆ (ಸಂಶೋಧ. ೧೬). 'ವಿಕಲಾಕ್ಷರ' ಪರಾ. [ಸಂ.]

**ಸಕಲಾತಿ, ಸಕಲಾತು** (ನಾ). ೧. (ಕಸೂತಿ ಕೆಲಸ ಮಾಡಿದ) ಉಣ್ಣೆಯ ಬಟ್ಟೆ ; ಬನಾತು : ಗಂಡ ಕದವ ಮುಚ್ಚೋ ಮಂಚದ ಮೇಲೆ ಮಲಗಿದೆನ್ನನು ಸಕಲಾತಿ ಹಚ್ಚಡ ಬಿಗಿಬಿಗಿದ್ದೊಚ್ಚೊ (ಪುರಂದ. ೩-೧೮೭-೮) ; ಮೇಲುತರದ ಪಟ್ಟೆ ವರ ಸೂಪು ಸಕಲಾತಿ ಜೂಲುಗಳಿಂದೆ ರಂಜಿಸುವ ಕಾಲುವೇಗದ ಶುನಿವಿಡಿದ ಕಿರಾತರು ಸಾಲಿಟ್ಟು ನಡೆದರೊಗ್ಗಿನಲಿ (ಮೋಹತ. ೧೯-೧೦) ; ಪ್ರಕಟಿತವಹ ತೇಜಿಗಳಾಱುಸಾವಿರ ಸಕಲಾತಿಯ ರಂಜಿಕೆಯ ನಿಕರದ ಕರಿ ಕಾಲಾಳುಗೂಡಿದ ಪೌಜ ಯಕಲಾಸಖಾನ ತೋಱಿದನು (ಕಂನವಿ. ೧೧-೮೮) ; ಶಾಲು ಸಕಲಾತಿ ತೇಲಿ ಹೋಗುವಾಗ ಕವುದಿ ತನ್ನ ಗತಿಯೇನು ಅಂದಿತು (ಗಾದ). ೨. ಕೆಂಪುಬಣ್ಣ : 'ಸಕಲಾತಿಬಣ್ಣ' ಪರಾ. **ಸಕಲಾತು**: ೧. ಸ್ವಚ್ಛ ದೀಪದ ಬೆಳಕು ಕುರುಡೇನು ಬಲ್ಲ ಮೊಚ್ಚೆಗಾಱ ಸಕಲಾತೇನು ಬಲ್ಲ (ಪುರಂದ. ೨-೫೮-೧೦). [ದೇ. || ತುಳು. ಸಕಲಾತಿ, ಸಕಲಾತು ; ತೆಲು. ಸಕಲಾತು, ಸಕಳಾತು. / ಅರ. ಹಿಂ. ಪಾರ. ಸಕಲಾತ್ ; ಮರಾ. ಸಕಲಾತ್, ಸಖಲಾತ್]

**ಸಕಲಾತಿದಳೆ** (ಕ್ರಿ). ಕಸೂತಿಯ ಶಾಲನ್ನು ಹೊಂದು, — ಧರಿಸು : ಕೊಡೆ ಮೇಣಗಪ್ಪಡ ಗೊಂಗಡಿ ಬಹುರಮ್ಯವಡೆದಿರ್ದ ಸಕಲಾತಿದಳೆದು ಬಿಡಯವಿಲ್ಲದೆ ಪುರದೊಳು ನೀರ್ಮನುಜರಂತೆಡೆಯಾಡುತಿರ್ದರೂರುಗರು (ಮೋಹತ. ೪-೪೧).

[ಸಕಲಾತಿ + ತಳೆ$_1$]

**ಸಕಲಾತಿಬಣ್ಣ** (ನಾ). ಕೆಂಪುಬಣ್ಣ ; ಕೇಸರಿ ಬಣ್ಣ : (ಶ). [ಸಕಲಾತಿ + ಬಣ್ಣ]

**ಸಕಲಾತಿಬಾಳೆ** (ನಾ). ಒಂದು ಬಗೆಯ ಕೆಂಪುಬಣ್ಣದ ಬಾಳೆ; ಚಂದ್ರಬಾಳೆ : ಬಾಳೆಯ ಜಾತಿಗಳು : — ರಾಜಬಾಳೆ, ಚಂದ್ರಬಾಳೆ, ಸಕಲಾತಿಬಾಳೆ, ಪಚ್ಚಬಾಳೆ (ನಮ್ಮನು. ೨೩೭). [ಸಕಲಾತಿ + ಬಾಳೆ$_1$ (< ಬಾೞೆ)]

**ಸಕಲಾತು** 'ಸಕಲಾತಿ' ನೋ.

**ಸಕಲಾಯ** (ನಾ). ರೈತ ಮತ್ತು ಸರ್ಕಾರದ ನಡುವೆ ಭಾಗವಾಗುವುದಕ್ಕೆ ಮುಂಚೆ ಇದ್ದ ಒಟ್ಟು ಬೆಳೆ : (ಶ). [ಸಕಲ + ಆಯ$_7$]

**ಸಕಲಿ** (ನಾ). ಮಂತ್ರದ ತಾಯಿತ ; ರಕ್ಷಾಬಂಧ : ತನ್ನನುಜೀವಿಗಳ್ಗೆ ಸಾದರದೊಳೆ ಕಟ್ಟಿದಂ ಸಕಲಿಯಂ ಸಕಲೀಕರಣೋಕ್ತಮಂತ್ರದಿಂ (ಮಹಾನೇ. ೪-೩೦). [?]

**ಸಕಲೀಕರಣ** (ನಾ). ೧. ಒಟ್ಟುಗೂಡುವುದು : 'ಸಕಲೀಕರಿಸು' ಪರಾ. ೨. ಮಂತ್ರದ ತಾಯಿತವನ್ನು ಕಟ್ಟುವುದು (?) : ಕೆಲರ್ ಬಲಿವಿಧಾನಂಗಳಂ

ಮಾಡುತಿರ್ದರ್ ಕೆಲರ್ ಮಿಕ್ಕ ಸಕಲೀಕರಣದಿಂದಮಿರ್ದರ್ (ಜೀವಸಂ. ೪೦-೨೯ ವ) ; ಸಕಲಚಿಂತೆಯ ಬಿಟ್ಟು ಕಾಯವಾಙ್ಮನಸೆಂಬ ತ್ರಿಕರಣಶುದ್ಧಿಯ ಪಡೆದು ಸಕಲೀಕರಣವನು ಮಾಡಿಕೊಂಡಿಪ್ಪದಾಯಕನ ಪೂಜಿಸಿ (ಭರಚ. ೭೦-೬). [ಸಂ.]

**ಸಕಲೀಕರಿಸು** (ಕ್ರಿ). ಒಟ್ಟುಗೂಡಿಸು (?) : ವಿಕಲವೆಡೆಗೊಂಡವರ್ಬಾಯ್ವಿಜೆ ಯೊಳಕ್ಷರಂ ಸಕಲೀಕರಿಸಿ ತೋಜೆಯಡಗಿ ಪ್ರವಾಹಮಿರ್ಪಕಲಂಕ ಸುಸ್ಥಲವನಜೆಯದ ಕವೀಂದ್ರರ ಕವಿತ್ವವೇತಕ್ಕೆ ಬಾರ್ತೆ (ವಿಕೋಪು. ೧-೩೮). [ಸಕಲೀಕರಣ + - ಇಸು]

**ಸಕಲೆ** (ನಾ). [ಸಂಗೀತ] ಷಡ್ಜಸ್ವರದಿಂದ ಹುಟ್ಟುವ ನಾಲ್ಕನೆಯ ಶ್ರುತಿ: ಗಹ್ವರಿ ನಿಷ್ಕಳೆ ಗೂಢೆ ಸಕಲೆಯರೆಂಬ ನಾಲ್ಕು ಶ್ರುತಿ (ವಿವೇಕ. ೧೪೭) ; ಶ್ರುತಿನಾಮ . . . ಸಕಲಾ (ಸಂಗೀಚಂ. ೧೧). [ಸಂ. ಸಕಲಾ = ತಗ್ಗುಸ್ವರವನ್ನು ಹೊಂದಿರುವುದು]

**ಸಕಲೇಶ, ಸಕಳೇಶ** (ನಾ). ಸಕಲಕ್ಕೂ ಒಡೆಯನಾದವನು; ಪರಮಾತ್ಮ; ಶಿವ. **ಸಕಳೇಶ** : ಪರಮಮಾಹೇಶ್ವರರಿಗಾಗಳು ಕರುಣಿಸುವ ವರದಾನಿ ನೀವಾಗಿರುತಿರಲು ಸಕಳೇಶ ದುರಿತವಿನಾಶ ಚಿತ್ತೈಸು (ಬಸಪು. ೪೭-೫೧) ; ಸಕಳೇಶ ನಿಮ್ಮ ಕಾರುಣ್ಯಕಟಾಕ್ಷಮದೊಂದದೆನಗೆ ಬರ್ಕುಮೆ (ವೃಷವಿ. ೧೧-೮೦). [ಸಂ.]

**ಸಕಷಾಯ** (ಗು). ೧. ಒಗರಿನಿಂದ ಕೂಡಿದ ; ಒಗರಾದ : ಸಕಷಾಯ ಕುಜಂಗಳ ದಂತಕಾಷ್ಠದೊಳ್ ಬೋಟ ಕೌಂಗು ವಾದ್ಯ(ಚ್ಚ) ಲವಂಗೋದಕ ಚೂರ್ಣಮೆಂಬಿವಂ ತೊಯ್ದುಕೊಂಡು ಪಲ್ಲುಲಿಯೆ ದಂತ ಬಳಮಂ ಪಡೆಗುಂ (ಲೋಕೋಪ. ೭-೩). ೨. [ಜೈನ] ಸುಖದುಃಖವನ್ನುಂಟುಮಾಡುವ ದೋಷದಿಂದ ಕೂಡಿದ : ಇದು ಜೀವಾಜೀವಭೇದಕ್ರಮವಿದು ಸಕಷಾಯಾಕಷಾಯೋದಯಂ (ಸುಕುಮಾ. ೩-೪೦). [ಸಂ.]

**ಸಕಳ** 'ಸಕಲ' ನೋ.

**ಸಕಳಂಕ** (ನಾ). ಕಳಂಕದಿಂದ ಕೂಡಿದುದು ; ದೋಷವನ್ನು ಹೊಂದಿದುದು : ಸಕಳಂಕವಾದ ಶಶಿಮಂಡಲಮಂ ಗೆಲೆವಂದುದಂಜನಂ ಪರೆದಲರ್ದ ಮೊಗಂ ಸಕಳಸುರಮನೋರಂಜನನಾ (ಜಗದಿ. ೩-೩೪). [ಸಂ. ಸಕಲಂಕ]

**ಸಕಳಕಳಾಧರ** 'ಸಕಲಕಲಾಧರ' ನೋ.

**ಸಕಳಕಳಾಧರಿ** (ನಾ). = ಸಕಲಕಲಾಧರೆ : ಶ್ರಿಂಗಾರವಿದ್ಯಾಧರಿ ಸಕಳಕಳಾಧರಿ (ಸೌಇಇ. XX, ೪೭-೧೨ : 1072). [ಸಂ. ಸಕಲಕಲಾಧರೀ]

**ಸಕಳಕ್ಷಮಾಪತಿತ್ವ** (ನಾ). ೧. ಎಲ್ಲವನ್ನು ಕ್ಷಮಿಸುವಿಕೆ. ೨. ಎಲ್ಲ ಭೂಮಿಗೆ ಒಡೆಯನಾಗಿರುವಿಕೆ ; ಚಕ್ರವರ್ತಿತ್ವ. ೧, ೨ : ಮತ್ಸರ ಮಹೋರಗ ಕ್ಷಮಾಗ್ರಹಮಹಾಗ್ರಹಕ್ಕಂ ಕೋಪಮದಾನೇಕಪಕ್ಕಂ ಪಕ್ಕಾಗೆ ತನ್ನನೊಪ್ಪಿಸುವುದು ಮತಿವಂತಂಗೆ ಪುರುಷಾರ್ಥಮಲ್ತು ಸಕಳಕ್ಷಮಾಪತಿತ್ವಮೆ ಸಕಳಕ್ಷಮಾಪತಿತ್ವಮಂ ಮಾಡುಗುಂ (ಶಾಂತಿಪು. ೩-೭೨ ವ). [ಸಂ. ಸಕಲಕ್ಷಮಾಪತಿತ್ವ]

**ಸಕಳಜ್ಞ** 'ಸಕಲಜ್ಞ' ನೋ.

**ಸಕಳದತ್ತಿ** 'ಸಕಲದತ್ತಿ' ನೋ.

**ಸಕಳತುರ್ಕ** 'ಸಕಲತುರ್ಕ' ನೋ.

**ಸಕಳವಟ್ಟೆ** 'ಸಕಲವಟ್ಟೆ' ನೋ.

**ಸಕಳಿ** (ನಾ). ಚೂರು ; ತುಂಡು ; ತುಣುಕು (?) : ಕಾಪಿನವರಂ ಬಂಚಿಸಿ ಪೊಟಲಂ ಪೊಜಮಟ್ಟು ಪರೇತವನಭೂಮಿಯಲ್ಲಿಗೆಯ್ದಿ ತನಗಂ ತನ್ನೊಡನೆಯರ್ಗಂ ಸಕಳಿಯನಿಟ್ಟು ಶಂಕಿಸದೆ ಬನ್ನಿಮೆಂದು ಶ್ಮಶಾನಭೂಮಿಯಂ ಪೊಕ್ಕು (ಬಂಹರಿ. ೨-೧೧ ವ); ಶಂಕಿಸುವೆಯೆಂದುದಕ್ಕೆ ಚಲಂಬಟ್ಟಾನೆ ಪುಗುವೆನೆನಲಂತೆಗೆಯ್ಸೆಂದೊಸದು ಸಕಳಿಯನಿಟ್ಟು ಸೋರೆಯ ಗುಂಡಿಗೆಯುಂ ಬೆನ್ನೊಳ್ಕಟ್ಟಿ ಕೈಮುಟ್ಟದೀ ರಸಮಂ ತೀವಿಕೊಳ್ವುದೆಂದೊಡೆ (ಬಂಹರಿ. ೪-೨೬ ವ) ; "ಮಡಕೆಯ ಚೂರು" (ಬಂಹರಿ. ಕೋಶ). [< ಸಂ. ಶಕಲ?]

**ಸಕಳೇಶ** 'ಸಕಲೇಶ' ನೋ.

**ಸಕಳೋಪಾಸನೆ** (ನಾ). ಸಾಕಾರನಾದ ಪರಮಾತ್ಮನ ಉಪಾಸನೆ, — ಆರಾಧನೆ : ಪರಶಿವನ ನಿಷ್ಕಳೋಪಾಸನೆಯು ಲಿಂಗದ ಮೂಲಕವೂ ಸಕಳೋಪಾಸನೆಯು ಮೂರ್ತಿಪೂಜೆಯ ಮೂಲಕವೂ ವ್ಯಕ್ತವಾದಂತೆ . . . ಸಾಧಕನ ಯೋಗ್ಯತೆಗೆ ಅನುಸಾರವಾಗಿ ಆಚರಿಸಲು ಮಾರ್ಗವಾಯಿತು (ಭಾರದ. ೮೧). 'ನಿಷ್ಕಳೋಪಾಸನೆ' ಪರಾ. [ಸಂ. ಸಕಲೋಪಾಸನಾ]

**ಸಕಾಯ** (ಗು). ೧. ಶರೀರಸಮೇತವಾದ ; ಕಾಯಸಹಿತವಾದ. (ನಾ). ೨. ಶರೀರಸಮೇತವಾದುದು ; ಕಾಯಸಹಿತವಾದುದು : ಸಕಾಯ ಸಕರ್ಮ ಚೈತನ್ಯಸ್ಫುರತಿವಿತತಿ ಸತತಮುಂ ನಿಮ್ಮಲ್ಲಿರಲು ಸಮ್ಮತಿಸಿ ಕರುಣಿಸು (ಬಸಪು. ೭೧-೫೯). ೩. [ವೀಶೈ] ಮೂರು ವಿಧವಾದ ಕಾಯಲಿಂಗಗಳಲ್ಲಿ ಒಂದು : ಅಕಾಯದಲ್ಲಿ ಅದ್ವೈತಚರಿತ್ರ . . . ಸಕಾಯದಲ್ಲಿ ಸದ್ವೈವಚರಿತ್ರ (ಅವಚಂ. ೧೩೮-೬೩೩) ; ಕಾಯಲಿಂಗ ತ್ರಿವಿಧ : ಇವು ಸಕಾಯ, ಅಕಾಯ, ಪರಕಾಯವೆಂದು ಇವೆ. ಸ್ಥೂಲಕ್ರಿಯೆಗಳನ್ನು ಲಿಂಗದೊಡನೆ ಬೆರಸಿ ವರ್ತಿಸಿದಲ್ಲಿ ಸಕಾಯವು (ಶಿವಾಕೋ. ೮೮). [ಸಂ.]

**ಸಕಾರ** (ನಾ). 'ಸ' ಎಂಬ ಅಕ್ಷರ, — ವರ್ಣ : ಮೇಲಣ ಸಕಾರಕ್ಕೆ ತಕಾರಂ — ಕಸ್ತೂರಿ — ಕತ್ತುರಿ (ಶಮದ. ೨೬೪ ಪ್ರಯೋ). [ಸಂ.]

**ಸಕಾರಣ** (ನಾ). ಕಾರಣಸಹಿತವಾದುದು ; ಕಾರಣದಿಂದ ಕೂಡಿದುದು: ಸಂಶೋಧಕರಿಗೆ ಸಕಾರಣವಾಗಿ ತೋರಿ ಬಂದಿದೆ (ದ್ರಾವಿವಿ. ೩೦೫) ; ಜನ ನಂಬುವುದಕ್ಕೂ ಸಕಾರಣಗಳಿದ್ದುವು (ದೇವಹಂ. ೫೪). [ಸಂ.]

**ಸಕಾಲ** (ನಾ). ಸರಿಯಾದ ಕಾಲ ; ಒಳ್ಳೆಯ ಸಮಯ : ಸಕಾಲದಲ್ಲಿ ದೊರೆಗಳವರು ಮಾಡಿದ ಸಹಾಯವು ಫಲಕಾರಿಯಾಯಿತು (ಮಹಾವಂ. II. ೫೦) ; ಸಕಾಲಕ್ಕೆ ಸರಿಯಾಗಿ ಗಂಡು ಹೆಣ್ಣು ನಮ್ಮೂರಿಗೆ ಬಂತು (ಹುಟ್ಟಿಹ. ೧೧). [ಸಂ.]

**ಸಕಾಲಿಕ** (ಗು). ೧. ಕಾಲಕ್ಕೆ ಸರಿಯಾದ ; ಸಮಯಕ್ಕೆ ಯೋಗ್ಯವಾದ : ಸಕಾಲಿಕ ಕಾರ್ಯಕ್ರಮದ ವಿಷಯದಲ್ಲಿ ನನ್ನ ಹೆಂಡತಿ ತುಂಬ ಕಟ್ಟುನಿಟ್ಟು (ಪುನರು. ೫೬೮). (ನಾ). ೨. ಕಾಲಕ್ಕೆ ತಕ್ಕುದು ; ಕಾಲೋಚಿತವಾದುದು : ನೋಳ್ಪುದೀ ಮರ ದೊಳದೆಷ್ಟೊಂದು ಫಲವಿದೆ ಮಾಗಿ ಸಕಾಲಿಕವಾಗಿ (ಇಂಚಾಪ. ೧೪೭-೨೨) ; ಮಕ್ಕಳ ಆಶಯ ಪಾಠಕ್ಕೆ ಸಂಬಂಧಿಸಿದ್ದರೂ ಸಕಾಲಿಕವಲ್ಲ (ಶಿಕ್ಷದ. ೪೫೪). [ಸಂ.]

**ಸಕೀಲ** (ಗು). ೧. ಕಟ್ಟಿದ; ಬಂಧಿಸಿದ: ಶೂಲಿ ಭಕ್ತ ಸಕೀಲ ಸುಕೃತೋತ್ಕಾಲ ಬುಧಲೋಲನ ಭವತ್ಕೃತಿಕೂಲ ಚರಲಿಂಗಾನುಭವಸುಖಜಾಲಕಾರುಣ್ಯ (ಬಸಪು. ೩೮-೬೮). (ನಾ). ೨. ಗುಟ್ಟು; ರಹಸ್ಯ: ಓಲಗದೊಳಗಿರ್ದ ತ್ರಿದಶರು ಕಮ್ಮಲರ್ಗೋಲನಂಡಲೆಗೆ ಬದ್ಧಿರಲು ನೀಲಕಂಧರ ನೋಡಿ ನಸುನಗುತದಱ ಸಕೀಲವನುಮೆಗೆ ತೋಜಿಸಿದ (ಮೋಹತ. ೨೫-೧೮). ೩. [ವೀಶೈ] "ಸ್ಥಲಗಳ ಸಂಬಂಧವನ್ನು ಯಾವುದರಿಂದ ತಿಳಿಯತಕ್ಕದ್ದೋ ಅದು ಸಕೀಲ ವೆನಿಸುವುದು" (ಶಿವಾಕೋ. ೮೧) : ಭಕ್ತ ಜಂಗಮದ ಸಕೀಲ ಸಂಬಂಧವನಾರು ಬಲ್ಲರು (ಅವಚಂ. ೨೨೩-೧೦೦೯) ; ಭಾನುದೇವನು ತ್ರಿವಿಧಲಿಂಗವನು ಅಷ್ಟವಿಧ ಸಕೀಲವನು ಅಱಿದು ಆಚರಿಸಿ (ಭೈರಸೂ. I. ೩೬೮) ; ಘನಲಿಂಗದ ಪ್ರಾಣದ ಸಕೀಲ — ಸಂಬಂಧ ನಾನೇನರಿಯೆನು (ಸಿದ್ದಪು. ೨೭-೩೦). [ಸಂ.]

**ಸಕೀಲಕ** (ನಾ). ೧. = ಸಕೀಲ ೨ : ಭಕ್ತಿ ಸಕೀಲಕದ ವಿಸ್ತರಣವಱಿಯಯಿದೇತಕೀ ಸಾವಿರ ನುಡಿಗಳಂ ನಿನಗೆನಲು ಸತಿಯೆಂದಳಿನಿಯಂಗೆ (ಬಸಪು. ೪೪-೬೭). ೨. ಸಂಬಂಧವನ್ನು ಕಲ್ಪಿಸುವವನು : ಮೆಲ್ಲಮೆಲ್ಲನೆಯಶನವನು ಸವಿಸಿ ಬಾಲಕರ ಪಟು ಮಾಡಬಲ್ಲ ಸಕೀಲಕರವೊಲು ಹೊಱಗೆ ಮೞೆದು ನಿರಾಳದಲಿ ನಿಲಲಱಿವುದೌ (ಪ್ರಭುಲೀ. ೧೨-೧೭). [ಸಂ.]

**ಸಕುಟಿಲ, ಸಕುಟಿಳ** (ಗು). ೧. ಕುಟಿಲತನದ ; ವಂಚನೆಯ : ಸಕುಟಿಲರಕ್ಷೆ ವಶ್ಯತಿಲಕಂ ಸಕಲೌಷಧಿ ಕಾಮಯಂತ್ರಮುದ್ರಿಕೆ . . . ಮನಂಗೊಳಿಸಲಿರ್ದುದು ಬಿಂಕದ ರಾಜಸಂಕುಳಂ (ನಳಚಂ. ೩೦೯). **ಸಕುಟಿಳ** : (ನಾ). ೨. ಮೋಸಗಾರ ; ವಂಚಕ : ಸಕುಟಿಳನುಂ ಕಳಾವಿಕಳನುಂ ಸಲೆ ಸಂಚಳನುಂ (ನೇಮಿಪು. ೯-೮೧). [ಸಂ.]

**ಸಕುಟಿಳ** 'ಸಕುಟಿಲ' ನೋ.

**ಸಕುಟುಂಬ** (ಗು). ೧. ಸಂಸಾರ ಸಮೇತ ; ಕುಟುಂಬಸಹಿತ : ಸಕುಟುಂಬ ಸಪರಿವಾರ ಸಮೇತನಾಗಿ — ತಿಮ್ಮ ಸಪತ್ನಿಯೊಂದಿಗೆ ವನಭೋಜನಕ್ಕೆ ಹೊರಟಿದ್ದ (ತಿಂಮತ. ೬೦). ೨. ಎಲ್ಲ ಸಂಬಂಧವನ್ನು ಉಳ್ಳ ; ಎಲ್ಲವನ್ನೂ ಒಳಗೊಂಡಿರುವ : ಬಿಡಿಸಿ ಗಳಹತ್ತವನು ಡೊಕ್ಕರಕೊಡೆಮುರಿವ ಸಕುಟುಂಬ ಡೊಕ್ಕರಕಡಸಿ ಕತ್ತರಿ ಘಟ್ಟಿಸುವ ಗಳಹತ್ತ ಡೊಕ್ಕರವ ತಡೆವ . . . ಭಟರು ಹಣಗಿದರು (ಕುವ್ಯಾಸ. ೨-೯೭). [ಸಂ.]

**ಸಕುಣ** 'ಸಕುನ' ನೋ.

**ಸಕುತಿ** 'ಶಕುತಿ' ನೋ.

**ಸಕುನ, ಸಕುಣ, ಸಗುಣ$_1$** (ನಾ). ೧. ಮುಂದಾಗುವುದನ್ನು ತಿಳಿಸುವುದು ; ನಿಮಿತ್ತ ; ಶಕುನ : ''ಶಕುನ — ಸಕುನ, ಶಕುನಿ — ಸಕುನಿ'' (ಶಮದ. ೨೫೩ ಪ್ರಯೋ). ೨. ಭವಿಷ್ಯವನ್ನು ಹೇಳುವುದೆಂದು ನಂಬಲಾಗಿರುವ ಹಕ್ಕಿ; ಹಾಲಕ್ಕಿ; ಶಕುನಪಕ್ಷಿ : ''ಸಕುನ (ಸಗುಣ) — ಶಕುನ, ಶುಭಸೂಚನೆ, ಹಾಲಕ್ಕಿ'' (ತದ್ಭಕೋ. ೪೧). **ಸಕುಣ** : ೧. ಒಂದು ಛಲೋ ಸುಬಸಕುಣದ ದಿನಾ ನೋಡಿ ಆ ದಿನ ನಿಂಗಪ್ಪನ ಗಾಡಿಗೆ ಬಣ್ಣ ಕೊಟ್ಟು . . . ಹೊಡೀಬೇಕು (ಕಮ್ಮಟ. ೪೭). **ಸಗುಣ$_1$** : ೧. ಈಗಡೆ ಉೞಿಗಂ ಸಗುಣ ನುಡಿಗುಂ (ರಾಮಾಶ್ವ. ೨-೧೫). ೨. ಎಡತೋಳು ಹಾರುತಿದೆ. ಸಗುಣನಿಮೂ ಜೀರುತಿದೆ (ಹಚ್ಚರ. ೧೯-೭೯). [< ಸಂ. ಶಕುನ]

**ಸಕುನಗಾರ** (ನಾ). ಶಕುನ ಹೇಳುವವನು ; ಮುಂದಾಗುವುದನ್ನು ತಿಳಿಸುವವನು : ಸಕುನಗಾರರೆ, ಜೋಯಿಸರೆ, ಸುಮ್ಮನಿಹುದು (ವಿಗಡ. ೫೯-೧೦).

[ಸಕುನ + - ಗಾರ (<- ಕಾಱ)]

**ಸಕುನವಕ್ಕಿ** (ನಾ). ಮುಂದಾಗುವುದನ್ನು ತಿಳಿಸುವ ಹಕ್ಕಿ ; ಶಕುನಿ ; ''ಪಿಂಗಲಿ'' (ಚತುನಿ. ೬. ೧-೭೩). [ಸಕುನ + ಪಕ್ಕಿ]

**ಸಕುನಿ** (ನಾ). = ಸಕುನವಕ್ಕಿ : ಶಕುನಿ — ಸಕುನಿ (ಶಮದ. ೨೫೩ ಪ್ರಯೋ).

[< ಸಂ. ಶಕುನಿ]

**ಸಕುನಿಗ** (ನಾ). = ಸಕುನಗಾರ : ಸಕುನಿಗನುಟ್ಟುದಂ ಕೊಟ್ಟನೆಂಬ . . . ತನ್ನ ಶಕ್ತಿಯು[ಮಂ ಮತಿಯುಮ]ನೊಂದುಮನಱಿಯದೆ (ಧರ್ಮಾಮೃ. ೧೨-೩೮).

[ಸಕುನ + - ಇಗ]

**ಸಕೃತು** (ಅ). ಒಮ್ಮೆಯೂ; ಒಂದು ಸಲವೂ: ಆಶೆಯೆಂಬ ಪಾಶದಲ್ಲಿ ಭವಬಂಧನವಾಗಿರ್ದೆನಯ್ಯಾ ಸಕೃತು ನಿಮ್ಮ ನೆನೆಯಲೆನಗೆ ತೆಱಹಿಲ್ಲವಯ್ಯಾ (ಬಸವ. ೭೯); ಸಕೃತು ಚಿಂತನೆ ಮಾಡಲೀಯದಿದನೇ ತೋಱಿ (ಶಿವಗೀ. ೫-೧೪).

[ಸಂ. ಸಕೃತ್]

**ಸಕೃತ್ಪ್ರಜ** (ನಾ). ಒಂದು ಸಾರಿ ಮಾತ್ರ ಸಂತಾನವನ್ನು ಪಡೆಯುವುದು ; ಕಾಗೆ : ''ಅರಿಷ್ಟಃ . . . ಸಕೃತ್ಪ್ರಜಃ . . . ವಾಯಸಃ — ಈ ೧೦ ಕಾಗೆ'' (ಹಲಾಯು. ೪೧-೯೨).

[ಸಂ.]

**ಸಕೃತ್ಪ್ರಸೂತೆ** (ನಾ). ಮೊದಲನೆಯ ಕರುವನ್ನು ಪಡೆದ ಹಸು ; ಚೊಚ್ಚಲ ಸೂಲಿನ ಹಸು : ''ಗೃಷ್ಟಿಃ, ಸಕೃತ್ಪ್ರಸೂತಾ — ಈ ೨ ಚೊಚ್ಚಲ ಮಣಕಂ'' (ಹಲಾಯು. ೪೭-೧೧೮). [ಸಂ. ಸಕೃತ್ಪ್ರಸೂತಾ]

**ಸಕೃದ್ಗ್ರಾಹಿ** (ನಾ). ಕೂಡಲೆ ಗ್ರಹಿಸುವವನು ; ಮೊದಲ ನೋಟದಲ್ಲೇ ತಿಳಿಯುವವನು. [ಸಂ. ಸಕೃದ್ಗ್ರಾಹಿನ್]

**ಸಕೇಶ** (ಗು). ಕೂದಲಿನಿಂದ ಕೂಡಿದ : ಸಕೇಶ ವಿಧವೆಯಾದ ಕುಚೇಷ್ಟಿತೆಯೂ, ಅವಳ ಗೆಳತಿಯಾದ ಕುಟಿಲೆಯೂ ಪ್ರವೇಶಿಸುತ್ತಾರೆ (ಮೋಹಿನೀ. ೧). [ಸಂ.]

**ಸಕೇಶಿ** (ನಾ). (ಗಂಡ ಸತ್ತ ಮೇಲೆ) ತಲೆಯ ಕೂದಲನ್ನು ತೆಗೆಯದವಳು : ನೀನು ಸಕೇಶಿಯಾಗಿ ಮನೆಗೆ ಸೇರುವಂಥಾದ್ದು ನನ್ನ ತಪ್ಪೆ ಲಕ್ಷ್ಮೀ? (ಪ್ರಶ್ನ. ೩೦) ; ಸುಮಿತ್ರೆಯು ತಂದೆಯು ನಿಗ್ರಹದ ಬಲದ ಮೂಲಕವಾಗಿ 'ಸಕೇಶಿ'ಯಾಗಿ ಉಳಿದುಕೊಂಡಳು (ಹೇಮಂತ. ೧೩೯) ; ಸಕೇಶಿಯಾದ ಭಾಗೀರಥಿ ಸಂಪ್ರದಾಯಸ್ಥರ ದೃಷ್ಟಿಯಲ್ಲಿ ತ್ಯಾಜ್ಯಳಾಗಿದ್ದಳು (ಭಾರಥಿ. ೩೯). [< ಸಂ. ಸಕೇಶಿನೀ]

**ಸಕೇಶಿತನ** (ನಾ). (ಗಂಡ ಸತ್ತ ಮೇಲೆ) ತಲೆಯ ಕೂದಲನ್ನು ತೆಗೆಯದಿರುವುದು : ಸಕೇಶಿತನ ಒಂದು ಹೊಸ ಸುಧಾರಣೆಯಾಗಿ ತಲೆಯೆತ್ತಲು ಹವಣಿಸುತ್ತಿದೆ (ಸಮಾಜೀ. ೭ ಪೀಠಿಕೆ). [ಸಕೇಶಿ + - ತನ]

**ಸಕೋಟಕಿ** (ನಾ). ಒಂದು ಬಗೆಯ ಸಸ್ಯ : ''ಭೂತವೃಕ್ಷತಾರ — ತಾರ, ಸಕೋಟಕಿ?, ಚೆಳ್ಳಿ'' (ಓಷಧಿ. ೧೨). 'ಶಾಕೋಟಕಿ' ಪರಾ. [?]

**ಸಕೋಟಿ** (ನಾ). ಒಂದು ಬಗೆಯ ಸೊಪ್ಪು : ಸೊಪ್ಪುಗಳು . . . ದುಂಡುತಗಸಿ, ಸಕೋಟಿ, ನಾರೋಬೇಡ (ನಮ್ಮನು. ೨೩೭). 'ಚಕ್ಕೋಟಿ' ಪರಾ. [< ಚಕ್ರವರ್ತಿ]

**ಸಕೋತೆ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು : ಹಣ್ಣಿನ ಗಿಡ ಮರ . . . ಪರಂಗಿ, ಕಿತ್ತಳೆ, ಸಕೋತೆ, ಮಾದಲ, ನಿಂಬೆ (ನಮ್ಮನು. ೨೩೭).

[< ಚಕ್ಕೋತ$_2$]

**ಸಕೋಪ** (ನಾ). ೧. ಸಕಾರಣವಾದ ಕೋಪ : ಧರೆಗೆ ನೀ ಪಿರಿದಾದೆನ್ನ ರೂಪವನು ಮಚ್ಚರದಿ ಗೆಲ್ದೆಯಲಾಯೆಂದು ಪಿರಿದು ಸಕೋಪದೊಳರಸುಮಗನ ಕಾವನರಲ ಸರಳ ತೆಗೆದೆಚ್ಚ (ಶ್ರೀಪಾಲ. ೪-೯೮). ೨. ಕೋಪದಿಂದ ಕೂಡಿರುವವನು ; ಕ್ರೋಧಿ : ಖಳ ದುಶ್ಶಾಸನ ವಕ್ಷಸ್ಥಳೋಚ್ಚಲತ್ಕೃಷ್ಣರಕ್ತಜಲದಿಂ ಕೋಪಾನಳನಂ ಮನ್ನಿಸದಿನ್ನುಂ ಗಳಗಳಿತ ಸಕೋಪನಿರ್ಪ ತೆಱದಿಂದಿರ್ದ್ದೆ (ಗದಾಯು. ೧-೫೭). [ಸಂ.]

**ಸಕೌಕ್ಷೇಯಕ** (ನಾ). ಕತ್ತಿಯನ್ನು ಹಿಡಿದವನು ; ಖಡ್ಗಧಾರಿ : ಗರ್ವಾಂಧಂ ಸಿಂಧುರಸ್ಕಂಧದಿನಿೞಿದು ಸಕೌಕ್ಷೇಯಕಂ ಬರ್ಪುದಂ ಕಂಡು (ಚಂದ್ರಪ್ರ. ೫-೧೧೨). [ಸಂ.]

**ಸಕ್ಕ$_1$** (ನಾ). ಬಾಯಿಯ ಕಡೆ ; ಕಟವಾಯಿ : ಭಾರ್ಗವರ್ ಸುರಿಗಿಱಿವಂತಿಱಿಯೆ ಸೂಸುವ ಕೆನ್ನೆತ್ತರ್ ಕಟಲ್ದುದಿರ್ಪ ಸಕ್ಕದ ಸಿಪ್ಪುಗಳು . . . ಅಗುರ್ವಂ ಪಡೆಯೆ (ಪಂಪಭಾ. ೧೦-೯೩ ವ). ''ಶಲ್ಕ(ಸಂ) — ಚಕ್ಕೆ'' (ಪಂಪನಿ) ; ''ಕಟವಾಯಿ'' (ಪಂಪದೀ. ೩೭೧). [< ಸಂ. ಸೃಕ್ಕ]

**ಸಕ್ಕ$_2$** (ನಾ). ಚೌಕಾಕಾರ (?) : ಕಿವಿಯು ಮುರಿಯಲ್ಲದೆ ನರಗಳಿಂದ ಕೂಡಿದ್ದಕ್ಕಾಗಿ ಸಕ್ಕವಾಗಿಯಿರಲು ದೂಷ್ಯ (ಸಾಮುಲ. ೧೩೬-೧೧). [< ಚೌಕ?]

**ಸಕ್ಕಜ$_1$** 'ಸಕ್ಕದ' ನೋ.

**ಸಕ್ಕಜ$_2$** (ನಾ). ೧. ಜೊತೆ ; ಒಡನಾಟ : ನೆರೆಹೊರೆಯ ಕೆಲದ ಕೇರಿಯ ಸಕ್ಕಜದ[ಪಾಠಾಂ. ಸಲ್ಕಜದ, ಸಕ್ಕಜನದ] ಮಕ್ಕಳೊಡನೊಕ್ಕಲಿಕ್ಕಿ ನಲಿನಲಿದು ನರ್ತಿಸುತ್ತಿರಲ್ (ನಂಬಿರ. ೨-೧೩) ; ಉಕ್ಕುತಿರ್ದುದು ವೀರರಸ ರಣಸೊಕ್ಕುತಿರ್ದುದು ಸೋಲ ಗೆಲುವಿನ ಸಕ್ಕಜಕೆ ಸಂದಿಲ್ಲದಿರ್ದುದು (ತೊರರಾ. ೬-೧೩-೪೯) ; ''ತೂಗಾಟ'' (ತೊರರಾ. ಕೋಶ). ೨. (?) : ನವದುಕೂಲವನಲ್ಲದುಡದ ಮೃಗಮದ ಕುಂಕುಮವನಲ್ಲದಂಗದೊಳು ತಿಗುರದ ಸುವಾಸನೆಯೊಳವಲಂಬಿಸದ ಚೀನಚೀನಾಂಬರವನಲ್ಲದುಳಿದ ವಸ್ತ್ರವ ಪೊದೆಯದ ಅವಿರಳಾವೋದ ಜಾತಿಯನಲ್ಲದುಳಿದ ಕುಸುಮವನು ತುಱುಬದ ಸಕ್ಕಜವನಲ್ಲದಾಡಂದೊಪ್ಪುವ ಲತಾಂಗಿಯರು ನಡೆತಂದರು (ಸೌಂದಪು. ೭-೩೬) ; ದಿಟದಿಂ ಮುದ್ದಾಡಿ ಮಾತಾಡಿ ಸಕ್ಕಜವೇನಿತ್ತಪರೆಂದು ತೊಟ್ಟೆಟೆತರುತ್ತುಂ ನೋಡಿ (ರಸರ. ೧-೮೨). [< ಸಕ್ಕ$_2$?]

**ಸಕ್ಕಜಗನ್ನಡ** (ನಾ). ಸಂಸ್ಕೃತ ಬೆರೆತ ಕನ್ನಡ ; ಮಿಶ್ರಕನ್ನಡ : ಒಳುಗನ್ನಡ ಬೆಳುಗನ್ನಡ ಪಳೆಗನ್ನಡ ದೇಶಿಯಂಗಳಾ ಕನ್ನಡಮಂ ತಿಳಿ ಸಕ್ಕಜಗನ್ನಡಮುಮನಿಳೆಯೊಳ್ಕವಿತಾಮಹಾತ್ಮೆಯಂ ಮೆಱೆವ ನರಂ (ಕವಿಜ. ೪-೨).

[ಸಕ್ಕಜ$_1$ (< ಸಕ್ಕದ) + ಕನ್ನಡ$_1$]

**ಸಕ್ಕದ, ಸಕ್ಕಜ$_1$** (ನಾ). ಸಂಸ್ಕೃತ ; ಆರ್ಯಭಾಷೆ : ''ಸಕ್ಕದಮೆಂದು ಸಂಸ್ಕೃತಂ'' (ಕಶಸಾ. ೫೭-೨೪೩) ; ಸಕ್ಕದಮುಂ ಪಾಗದಮುಮದಕ್ಕುಂ ಬಗೆದಂತೆ ಸಮಱಿ ಪೇೞಲ್ (ಕವಿರಾ. ೧-೪೧) ; ಸಕ್ಕದಂ ಕನ್ನಡಮೆಂಬೆರಡುಂ ಕವಿತೆಯನಮಳ್ಕೆತ್ರರಂತಿರೊಡನಡಪಿದಂ ಕುರುಳ್ಗಳ ಸವಣಂ (ಶಾಂತಿಪು. ೧-೧೦) ; ನೀರಿೞಿಯದ ಗಂಟಲೊಳ್ ಕಡುಬಂ ತುಱುಕಿದಂತಾಯ್ತು ; ಕನ್ನಡದ ಸೊಗಸನಱಿಯಲಾರ್ತನಿಲ್ಲೆನಗೆ ಸಕ್ಕದದ ಸೊಗಸಂ ಪೇೞ್ವುದು ಗಡ! (ರಾಮಾಶ್ವ. ೬-೯). **ಸಕ್ಕಜ$_1$** : ಲಲಿತಪದಬಂಧ . . . ಚಾಣ್ಮೆ ವಿಲಸಿತರಸಂ ಭಾವದೇಳ್ಗೆ ಸಕ್ಕಜದಿಂಪು ಸೊಂಪು ಪೆಂಪಮರ್ದು (ರೇವಣ. ೧೩-೩೩).

[< ಸಂ. ಸಂಸ್ಕೃತ]

**ಸಕ್ಕನೆ** (ಅ). ಸರಕ್ಕನೆ ; ಬೇಗ : ದಿಕ್ಕುದಿಕ್ಕಿಗೆ ಕದಲಿಸುವನಶ್ವವ ಹಾಸುಹೊಕ್ಕಾಗಿ ತುಂಡುತುಂಡಾಗಿ ಸಕ್ಕನೆ ಸರಿತದೊಳೇಱಿ ತೋಱಿದನೆವೆಯಿಕ್ಕುವಷ್ಟಱೊಳೆರಳ್ಬಾರಿ (ಭರಚ. ೩೦-೭೩). [? + - ಅನೆ$_1$]

**ಸಕ್ಕರಿಗ** (ನಾ). ಒಂದು ಕ್ಷುದ್ರದೇವತೆ : ಅಗಸರ ಮನೆ ಕೊಡತಿ ಹೊಲ್ಲಿ ಮನವುಳ್ಳ ನರಸ ಸಕ್ಕರಿಗಾ . . . ಜಂಪೆ ಜಡೆದೈವ (ವಿಸಾಸು. ೫೮-೨). [?]

**ಸಕ್ಕರೆ, ಸಖರೆ, ಸಖ್ಖರೆ, ಸರ್ಕರೆ** (ನಾ). ಕಬ್ಬು ಮೊದಲಾದುವುಗಳ ರಸವನ್ನು ಕುದಿಸಿ ಹರಳಿನಂತೆ ಮಾಡಿದ ಸಿಹಿಯಾದ ಪದಾರ್ಥ ; ಶರ್ಕರೆ : ಸಕ್ಕರೆಗೆ

ಸಿಹಿಯಾಗಿರ್ಪುದೆಂತು ಸಹಜಂ (ಧರ್ಮಾಮೃ. ೪-೪೧) ; ಮೆಱೆವ ಸಣ್ಣಕ್ಕಿಯ ಪಾಯಸ ಸೊಜ್ಜಿಗೆವೆರೆದ ಸಕ್ಕರೆಯ ಪಾಯಸ (ಕಂನವಿ. ೮-೯೦) ; ಆಸೆಯಾಗಿ ಕಬ್ಬು ತಿನ್ನುವುದಕ್ಕಿಂತ ಇರುವೆಯಾಗಿ ಸಕ್ಕರ ತಿನ್ನು (ಗಾದ). **೨.** ಸಿಹಿಯಾದುದು ; ಸವಿ : ಭಾಮಿನಿರನ್ನೆ ಲಾಲಿಸು ಸಕ್ಕರೆಯಂತ ಮಾತುಗಳ (ಮೋಹತ. ೩೮-೨) ; ರಸವಾಳೆ ಪುಟವಾಳೆ ರಾಜವಾಳೆ ಸಕ್ಕರೆಯಸವಾ ದೇವಾಳೆ ಕಬ್ಬಾಳೆ ಹಸುರುಗುಂದದ ಪಚ್ಚೆ ನಾಡವು ಮಧುರಂಗ ಪಸರಿಸಿ ಮೆಱೆದುವರ್ತಿಯಲಿ (ಕಂನವಿ. ೫-೮೬) ; ತಂದೆ ನಸುಕಿನೊಳೆದ್ದು ಅನುಭವಾಮೃತ ಓದೆ ಸಕ್ಕರೆಯ ನಿದ್ದೆಯಲಿ ಸವಿಯುತಿದ್ದೆ (ಭಾವಜೀ. ೬-೧೪೯). **ಸಖರೆ : ೧.** ಬೆಲ್ಲದ ಪೆಱಂಗೆ ವಿ ೫ ಸಖರೆಯ ಪೆಱಂಗೆ ವಿ ೭ (ಕಇಅ. ೧೦೪-೮-೩೪ ; 1076). **ಸಖ್ಖರೆ : ೧.** ಬೆಲ್ಲದ ಹೇಱೊಂದಕ್ಕಂ ಹಾಗ ಸಖ್ಖರೆಯ ಹೇಱೊಂದಕ್ಕಂ ಹಾಗ (ಎಕ. V. ಬೇಲೂರು. ೭೫-೯೯ : 1382). **ಸರ್ಕರೆ : ೧.** ಪಾಲ್ಸರ್ಕ[ಪಾಠಾಂ. ಕ್ಕ]ರೆಯಿಂದಾಮಯಮುಪಶಮಿಪೊಡೆ ವಿದ್ಯಾಮಯ ಸೇವಿಸಲದೇಕೆ ಕಟುಕೌಷಧಮಂ (ಪಾರ್ಶ್ವಪು. ೨-೪೦) ; ತುಪ್ಪಮಂ . . . ಸರ್ಕರೆಗೂಡಿ ಸಡಗರದಿನರ್ಪಿಸೂದು (ಸೂಪಶಾ. ೨೭೭ ಅನುಬಂಧ).

**ಸಕ್ಕರೆಕಾರಣ (ಉಕ) = ನಿಶ್ಚಿತಾರ್ಥ ಸಮಾರಂಭ** : ನಮ್ಮ ಮಗಳ ಸಕ್ಕರೆಕಾರಣ ಆಯಿತು (ರೂಢಿ). **ಸಕ್ಕರೆತಿದ್ದಿಸು = ಸಕ್ಕರೆ ಹಂಚುವಂತೆ ಮಾಡು, —ಹಂಚಿಸು** : ಸತ್ತ ಸಾಹೇಬನ ಸಮಾಧಿಗೂ ಸಕ್ಕರೆ ತಿದ್ದಿಸಿ ಈಗ ಜೀವಂತ ಮನುಷ್ಯನಿಗೆ ದೇವತ್ವವನ್ನು ಆರೋಪಿಸಿ ಪೂಜಿಸಹತ್ತಿದೆ (ಹೇಮಕೂ. ೧ ಮುನ್ನುಡಿ). **ಸಕ್ಕರೆನಿದ್ದೆ = ಸವಿಯಾದ ನಿದ್ದೆ** : ಎಲ್ಲ ಪ್ರಾಣಿಗಳಿಗೂ ಸಕ್ಕರೆನಿದ್ದೆಯ ಕಾಲವದು (ಸಾಹಿವಿ. ೧೦೩) ; ಉಷೆಯು ಸಕ್ಕರೆನಿದ್ದೆಯ ಮರುಳುನಗೆಯ ಬಟ್ಟೆಯಲ್ಲಿದ್ದಳು (ಸಮಜೀ. ೫೪೧). [< ಪ್ರಾ. ಸಕ್ಕರಾ ; ಪಾಲಿ. ಸಖ್ಖರಾ. / ಸಂ. ಶರ್ಕರಾ]

**ಸಕ್ಕರೆಕಂಚಿ** (ನಾ). ಕಂಚಿಕಾಯಲ್ಲಿ ಒಂದು ಬಗೆ ; ಸಿಹಿಕಂಚಿ ; ಮೋಸಂಬಿ : "ಸಕ್ಕರೆಕಂಚಿ — ಸೀಕಂಚಿ, ಮೋಸಂಬಿ" (ಜಾನಕೋ. ೪೭). [ಸಕ್ಕರೆ + ಕಂಚಿ$_1$]

**ಸಕ್ಕರೆಕಡ್ಡಿ** (ನಾ). ಕಡ್ಡಿಯಾಕಾರದಲ್ಲಿ ಮಾಡಿದ ಸಿಹಿತಿಂಡಿ: ಅಂಗಡಿಯಲ್ಲಿ ಸಕ್ಕರೆಕಡ್ಡಿ ಬತ್ತಾಸು ಕಲ್ಯಾಣಸೇವೆ ಮಾರುತ್ತಿದ್ದರು (ರೂಢಿ). [ಸಕ್ಕರೆ + ಕಡ್ಡಿ]

**ಸಕ್ಕರೆಕಾಯಿಲೆ** (ನಾ). ಒಂದು ಬಗೆಯ ರೋಗ ; ಸಿಹಿಮೂತ್ರರೋಗ : ವಯಸ್ಸಾದವರಿಗೆ ಸಕ್ಕರೆಕಾಯಿಲ ಸಾಮಾನ್ಯರೋಗವಾಗಿದೆ (ರೂಢಿ). [ಸಕ್ಕರೆ + ಕಾಯಿಲೆ]

**ಸಕ್ಕರೆಕುಂಬಳ** (ನಾ). ಸಿಹಿ ಕುಂಬಳಕಾಯಿ : ಸಕ್ಕರೆಕುಂಬಳ ತಿನ್ನಲು ಬಲು ರುಚಿ (ರೂಢಿ). [ಸಕ್ಕರೆ + ಕುಂಬಳ]

**ಸಕ್ಕರೆಗ , ಸಕ್ಪರೆಗ** (ನಾ). ಒಂದು ಬಗೆಯ ಮೀನು : ಸೀಗಡಿ ಕೊರವಂ ಬಂಪು ಬಸೇಗಂ ನೊರಗಿಂಡೆ ಬಾಳೆ ಸಕ್ಕರೆಗಂ ಹಂದಿಗನಾನೆಮೂಗ ಮದಲೆಂಬಗಣಿತ ಶಫರಾಳಿಗಳನೆ ತೆಗೆದರ್ ಬೇಡರ್ (ತ್ರಿಪುವಿ. ೨೭-೯೧). **ಸಕ್ಪರೆಗ** : ಹೆಂಗರಿಗಂ ಸಕ್ಪರೆಗಂ . . . ಪಂದಿಗನೆಂಬ ಮೀನ್ನೆಗೆದನಾ ಭಕ್ತಂ (ತ್ರಿಪುವಿ. ೫೭-೮). 'ಚಕ್ರ$_3$', 'ಷಡುಸಕ್ಕರಿಗ' ಪರಾ. [ಸಕ್ಕರೆ$_0$ + – ಗ$_2$]

**ಸಕ್ಕರೆಗಾಯಿ** (ನಾ). ಸಕ್ಕರ ಹಾಕಿ ಮಾಡಿದ ಒಂದು ಬಗೆಯ ಖಾದ್ಯ; ಹೀರೆಕಾಯಿಯ ಸಿಹಿಪಲ್ಯ : ಹೀರೆಯೆಳೆಗಾಯ್ಗಳಂ ತಂದು . . . ಕೆಲವ ದಧಿಸಾರಿಕೆಯ ಕೆಲವ ಸಕ್ಕರೆಗಾಯ ಕೆಲವ ಭಂಜಿತಶಾಕಮಂ . . . ಹೀರೆಯಕಾಯ ಪಾಕಮಂ ಹಿರಿದಾಗಿ ಹಸ ಮಾಳ್ಪುದು (ಸೂಪಶಾ. ೫-೬೭). [ಸಕ್ಕರೆ + ಕಾಯಿ$_4$ (< ಕಾಯ್$_4$)]

**ಸಕ್ಕರೆಗುತ್ತಿ** 'ಚಕ್ರಗುತ್ತಿ' ನೋ.

**ಸಕ್ಕರೆಗುತ್ತು** 'ಚಕ್ರಗುತ್ತಿ' ನೋ.

**ಸಕ್ಕರೆನೆಲ್ಲಿ** (ನಾ). ಒಂದು ಬಗೆಯ ನೆಲ್ಲಿ ; ಸಿಹಿನೆಲ್ಲಿ ; ಅರನೆಲ್ಲಿ : (ಕ). [ಸಕ್ಕರ + ನೆಲ್ಲಿ]

**ಸಕ್ಕರೆಬದನೆಗಾಯಿ** (ನಾ). ಬದನೆಕಾಯಿಯಲ್ಲಿ ಮಾಡಿದ ಒಂದು ಬಗೆಯ ಭಕ್ಷ್ಯ : ಮೊದಲು ತುಪ್ಪದೊಳುಕ್ಕರಿಸಿ ಸವಿಯುಮಂ ಹಡೆದ ಬದನೆಯೆಳೆಗಾಯ ಹೋಳಂ ಹಾಕಿಕೊಂಡು ತುಪ್ಪದೊಳು ಪರಿಮಳವಿಕ್ಕಿ ಪೊಡ್ಡಣಿಗೆಯಂ ಕೊಟ್ಟು ಸೆಖೆ ಹೋಗದಂತಿರಿಸಲು ಅದುವೆ ಪುಳಿಚಾರು ಬದನೆಯ ಕಾಯಿ. ಕನ್ನಡಿಗರದನು ಸಕ್ಕರೆಬದನೆಗಾಯೆಂದು ಹೆಸರಿಡುವರು (ಸೂಪಶಾ. ೪-೬). [ಸಕ್ಕರೆ + ಬದನೆಕಾಯಿ (< ಬದನೆಕಾಯ್)]

**ಸಕ್ಕರೆಬಾದಾಮಿ** (ನಾ). ಬಾದಾಮಿಯಲ್ಲಿ ಒಂದು ಬಗೆ ; ಸಿಹಿ ಬಾದಾಮಿ ; ಜರದಾಳು : ಸಕ್ಕರೆಬಾದಾಮಿ, ಜರದಾಳು (ಮೈಡಿಗಿ. ೬೪-೧೩೦೭) ; ಜಲ್ಲರುಹಣ್ಣು, ಮಿಷಿಮಿಸಿ, ಸಕ್ಕರೆಬಾದಾಮಿ, ಜರದಾಳು (ಸಸ್ಯನಿ. ೧೧೦). [ಸಕ್ಕರೆ + ಬಾದಾಮಿ$_2$]

**ಸಕ್ಕರೆಬಿಲ್ಲ** 'ಸಕ್ಕರೆವಿಲ್ಲ' ನೋ.

**ಸಕ್ಕರೆಬಿಲ್ಲು** 'ಸಕ್ಕರೆವಿಲ್ಲು' ನೋ.

**ಸಕ್ಕರೆಬೀರು** (ಕ್ರಿ). (ಸಂತೋಷ ಸಮಾರಂಭದಲ್ಲಿ) ಸಕ್ಕರೆಯನ್ನು ಹಂಚು, — ಬೀರು : ಅರಸುಪುತ್ರಜಾತಕರ್ಮವ ಮಾಡಿ ಸಕ್ಕರೆಬೀರಿ ಭೂಸುರಾಳಿಗಳಿಗೆಯಿತ್ತ ಭೂರಿದಾನಗಳು ಮೊರೆದವು (ಸೌಗಂಧಿ. ೧೯-೬). [ಸಕ್ಕರೆ + ಬೀರು$_1$ (< ಬೀಱು$_1$)]

**ಸಕ್ಕರೆಬುರುಡೆ** (ನಾ). ಸಕ್ಕರೆಯಿಂದ ಮಾಡುವ ಒಂದು ಬಗೆಯ ಭಕ್ಷ್ಯ : ಸಕ್ಕರೆಯನ್ನು ಮಾತ್ರ ತುಂಬಿ ಮಗುಚಿ ಬೇಯಿಸಿ ತೆಗೆಯಲು ಸಕ್ಕರೆಬುರುಡೆ (ಸೂಪಶಾ. ೧-೪೪ ಟೀಕು) ; ಈ ಯೆಣ್ಣೆಹೂರಗೆಯ ಮೃದುತರಕೆ ಸರಿಯುಂಟೆ ಜೋಯಿಸರೆ ಕೇಳಿ ಸಕ್ಕರೆಬುರುಡೆಗಳ್ಳಮ್ಮ ಬಾಯ ಬಜನಂ ಬಿಡಿಸುತಿವೆ (ಸಮ್ಯಕೌ. ೭-೨೭). [ಸಕ್ಕರೆ + ಬುರುಡೆ]

**ಸಕ್ಕರೆಮಾವು** (ನಾ). ಮಾವಿನಲ್ಲಿ ಒಂದು ಬಗೆ ; ಸಿಹಿಮಾವು : ಮಾದಲ ಪಲಸು ದಾಡಿಮ ದ್ರಾಕ್ಷಿ ಖರ್ಜೂರ ಮಾದಿಹ ಬಾಳೆ ಕಾಬಾಳೆ ಮೋದ ಸಕ್ಕರೆಮಾವು ನೇಱಿಲವಣ್ಗಳ ಯಾದವರಿತ್ತರಾಳ್ದನಿಗೆ (ಮೋಹತ. ೧೯-೫೫). [ಸಕ್ಕರೆ + ಮಾವು]

**ಸಕ್ಕರೆಮಿಟಾಯಿ** 'ಸಕ್ಕರೆಮಿಠಾಯಿ' ನೋ.

**ಸಕ್ಕರೆಮಿಠಾಯಿ, ಸಕ್ಕರೆಮಿಟಾಯಿ** (ನಾ). ಸಕ್ಕರೆಯಿಂದ ಮಾಡಿದ ಸಿಹಿತಿಂಡಿ : ಸಕ್ಕರೆಮಿಠಾಯಿ (Candy, ಇಂಕನಿ). **ಸಕ್ಕರೆಮಿಟಾಯಿ** : ಚಕ್ಕುಲಿಯ ದೋಸೆಗಳ ಸಕ್ಕರೆಮಿಟಾಯಿಗಳ ತಕ್ಕಂತೆ ಸಂತೆಯಿಂ ಕೊಂಡು ಬಾರಮ್ಮ (ಕವಪು. ೩೩-೪). [ಸಕ್ಕರೆ + ಮಿಠಾಯಿ]

**ಸಕ್ಕರೆಯಬೆಂಡೆ** (ನಾ). ಒಂದು ಬಗೆಯ ಬೆಂಡೆ : "ಮೂಲಸಾಧನಂ — ದೊಡ್ಡ ಪುಂಡರೀಕ, ಕರ್ಪೂರಬೆಂಡೆ, ಸಕ್ಕರೆಯ ಬೆಂಡೆ" (ಓಷಧಿ. ೧೨೭). [< ಸಕ್ಕರೆ + ಬೆಂಡೆ]

**ಸಕ್ಕರೆವಾಳೆ** (ನಾ). ಒಂದು ಬಗೆಯ ಬಾಳೆ : ರಸವಾಳೆ, ಪುಟವಾಳೆ, ರಾಜವಾಳೆ, ಸಕ್ಕರೆವಾಳೆ, ದೇವಾಳೆ, ಕಬ್ಬಾಳೆ, ಪಚ್ಚೆಬಾಳೆ, ನಾಡಬಾಳೆ, ಮಧುರಂಗಬಾಳೆ ಮೊದಲಾದ ನಾನಾಜಾತಿಯ ಬಾಳೆಯ ಬನಗಳೂ ಅಲ್ಲಿ ಇದ್ದುವು (ಕರ್ಣಾಜ. ೧೫೫). [ಸಕ್ಕರೆ + ಬಾಳೆ$_1$ (< ಬಾೞೆ)]

**ಸಕ್ಕರೆವಿಲ್ಲ, ಸಕ್ಕರೆಬಿಲ್ಲ** (ನಾ). ಸಿಹಿಯಾದ ಕಬ್ಬಿನ ಬಿಲ್ಲನ್ನುಳ್ಳವನು; ಮನ್ಮಥ : ಮಿಕ್ಕ ಮಾಂಸವ ಬಲು ಕೈಗೆಲಸಗಳಿಂದೆ ಚೊಕ್ಕಟಗೊಳಿಸಿ ಭೀತಿಯಲಿ ರಕ್ಕಸರಾಯಗಾತಿಥ್ಯವಗೆಯ್ದಳು ಸಕ್ಕರೆವಿಲ್ಲನರ್ಧಾಂಗಿ (ಮೋಹತ. ೧೧-೪೮) ; ಸಕ್ಕರೆವಿಲ್ಲನಾಗೆಯ್ತಹನವನನು ಚಿಕ್ಕತಾಯನು ಕಾಣ್ಬೆನೆಂದಾ (ಭರಚ. ೪೮-೮). **ಸಕ್ಕರೆಬಿಲ್ಲ** : ದಿಕ್ಕುದಿಕ್ಕಿನ ರಾಯಭಾರಿಗಳೊಡನಾಗಳಕ್ಕಱು ಮಿಗೆ ಹರುಷದಲಿ ಲೆಕ್ಕವಿಲ್ಲದ ಮಂತ್ರಿಗಳಿದೆ ನೋಡೇಳು ಸಕ್ಕರೆಬಿಲ್ಲನ ರೂಪ (ಕಂನವಿ. ೨೨-೫೦). [ಸಕ್ಕರೆವಿಲ್ಲು + - ಅ$_7$]

**ಸಕ್ಕರೆವಿಲ್ಲು, ಸಕ್ಕರೆಬಿಲ್ಲು** (ನಾ). ಸಿಹಿಯಾದ ಬಿಲ್ಲು; ಕಬ್ಬಿನ ಬಿಲ್ಲು; ಇಕ್ಷುಚಾಪ : 'ಸಕ್ಕರೆವಿಲ್ಲ' ಪರಾ. **ಸಕ್ಕರೆಬಿಲ್ಲು** : 'ಸಕ್ಕರೆಬಿಲ್ಲ' ಪರಾ. [ಸಕ್ಕರೆ + ಬಿಲ್ಲು$_1$ (< ಬಿಲ್$_2$)]

**ಸಕ್ಕಸಾಱಿಸಮುದ್ಧರಣ** (ನಾ). ಒಂದು ಬಿರುದು (?) : ಪಿರಿದಿತ್ತು ಮೆಱೆವಂ ಗೋತ್ರಪವಿತ್ರಂ ಸಕ್ಕಸಾಱಿಸಮುದ್ಧರಣ ಮಂತ್ರಿಮಾಣಿಕ್ಯ ನಾಮಾದಿ ಸಮಸ್ತ ಪ್ರಶಸ್ತಿಸಹಿತಂ (ಸೌಇಇ. IX-i, ೧೦೨-೧೯ ; 1046). [?]

**ಸಕ್ಕಿ, ಸಕ್ಷಿ, ಸಾಕ್ಕಿ** (ನಾ). ಯಾವುದಾದರೂ ಘಟನೆ ಮುಂತಾದುವನ್ನು ಕಣ್ಣಿಂದ ನೋಡಿದವನು, — ರುಜುವಾತು ಮಾಡುವವನು : "ಬಿಕ್ಕೆ ಭಿಕ್ಷೆಯೆ ಸಕ್ಕಿ ಸಾಕ್ಷಿಯೆ" (ಕರ್ಣಾನಿ. ೭೨) ; ವಸನ್ತಕುಮಾರ ಇದಕ್ಕೆ ಸಕ್ಕಿ (ಎಕ. VIII. ಸೊರಬ. ೫೭೧-೩೧ ; 692) ; ಬೆಟ್ಟದ ಮೇಲೆ ಬಟ್ಟೆಯಂ ಪೋಗರದರ್ಕೆ ಸಕ್ಕಿಯಿದಱಕ್ಷತಪಲ್ಲವಪುಷ್ಪಸಂಕುಳಂ (ಚಂದ್ರಪು. ೫-೭೧) ; ಇದರ್ಕ್ಕೆ ಸಕ್ಕಿಗಳ್ ಮಾನಸರಲ್ಲಂ (ನೀತಿಮಂ. II. ೨೦೫). **ಸಕ್ಷಿ** : ಪಿಟ್ಟಗೆಱೆ ಪನ್ನೆರಡು ಗಾಮುಣ್ಡ

ಪ್ರಜೆ ಸಕ್ಷಿ (ಎಕ. XI. ಚಿತ್ರದು. ೨೪-೨ ; ಸು. 500 ?). **ಸಾಕ್ಕಿ :** ಕ್ಷಕಾರಕ್ಕೆ ದ್ವಿತ್ವದ ಕಕಾರಂ – ಅಕ್ಷರ — ಅಕ್ಕರ . . . ಸಾಕ್ಷಿ — ಸಾಕ್ಕಿ (ಶಮದ. ೨೬೨ ಪ್ರಯೋ) ; ಶಿಲಾಶಾಸನಕ್ಕೆ ಸಾಕ್ಕಿ ಅಂಮುಳಿಜದ ಹೆಗಡೆ ಮಲ್ಲು[ದೇ]ವರು (ಸೌಇಇ. IX-ii, ೪೭೦-೩೦ ; 1465).

**ಸಕ್ಕಿಮಾಡು = ಸಾಕ್ಷಿಮಾಡು; ರುಜುವಾತು ಮಾಡು:** ದೊರೆಗಂ ಪೆಂಪಿಂಗಮಾಟಿಪ್ಪವರ ಮಹಿಮೆಯಂ ತಾಳ್ದಿದಿರ್ ನೀಮೆ ಗಂಭೀರರಿದಂತಸ್ವಾರದಿಂ ನೀಮಿರೆ ಪೆಜರೊಳರೇ ಸಕ್ಕಿ ಮಾಡಲ್ಕೆ (ಆದಿಪು. ೯-೧೧೫). **ಸಕ್ಕಿಯಾಗು = ಸಾಕ್ಷಿಯಾಗು ; ರುಜುವಾತಾಗು :** ಚೋಟನ ಸಕ್ಕಿಯಾಗೆ ತಳ್ತೆಜಿದುದ ನಾಮ ಕಣ್ಣವನೆ ಮೆಚ್ಚದೊರಾರ್ಸ್ವಗರತ್ರಿಣೇತ್ರನಂ (ಎಕ. III. ಮಂಡ್ಯ. ೪೧-೧೬ : 950).

[<— ಪ್ರಾ. ಸಕ್ಕಿ ; ಪಾಲಿ. ಸಕ್ಕಿ. / ಸಂ. ಸಾಕ್ಷಿನ್]

**ಸಕ್ಕಿಡು** (ಕ್ರಿ). ಸಾಕ್ಷಿಯಾಗಿಡು : ನಾಳೆ ದುರ್ಯೋಧನನಂ ಸಕ್ಕಿಟ್ಟು ಮಾಜುಾಂತದ ಟರೊಳಳವಂ ತೋಜುವಂ ನೀನುಮಾನುಂ (ಪಂಪಭಾ. ೧೨-೪೫). [ಸಕ್ಕಿ + ಇಡು$_1$]

**ಸಕ್ಕೋಟು** 'ಸಗಟು$_2$' ನೋ.

**ಸಕ್ಕರೆಗ** 'ಸಕ್ಕರಗ' ನೋ.

**ಸಕ್ತ** (ಗು). ೧. ಕೂಡಿದ ; ಸೇರಿದ. ೨. ಸಮೀಪದ ; ಹತ್ತಿರದ. ೩. ಆಸಕ್ತಿ ಹೊಂದಿದ; ತಲ್ಲೀನನಾದ : ಸಾರಸಹಂಸಕೋಕಿಳಕುಳಧ್ವಾನೋತ್ಕರಂ ಚೆಲ್ವನಾಯ್ತು ಕರಂ ಸಕ್ತ[ಪಾಠಾಂ. ನಾಗ, ಸಕಲ, ಸಂಕ, ತಕ್ಕ]ನಿಳಿಂಪ ದಂಪತಿಗಳಿಂದಾ ನಂದನಂ (ಪಂಪಭಾ. ೫-೮೦). ೪. ಕಾರ್ಯತತ್ಪರನಾದ ; ಶ್ರದ್ಧಾಳುವಾದ. ೫. ಸಂಬಂಧ ಪಟ್ಟ ; ಸರಿಯಾದ : ಸ[ಪಾಠಾಂ. ಶ]ಕ್ತನಿರ್ವಾಲಿತಾಂಗಲಿಂಗ ನಿಯುಕ್ತಸತ್ಕ್ರಿಯೆ ಗಳಿನಲರ್ದನುರಕ್ತಿಸಲು ಸದ್ಯಃಪ್ರಸಾದಶರೀರಿಯಂ ಮಾಡಿ (ಬಸಪು. ೪೯-೩೪). ೬. ತಡೆಯಲ್ಪಟ್ಟ ; ನಿರೋಧಿಸಲ್ಪಟ್ಟ. (ನಾ). ೭. ಆಸಕ್ತನಾದವನು : ಮಾಂಸದಲ್ಲಿ ಸಕ್ತನಾದವನಿಗೆ ಆ ಪ್ರಾಣಿಯ ಪ್ರಾಣೇಚ್ಛೆಯ ನೈಜ ಸಂವೇದನೆಯಿಲ್ಲ (ಕಾವ್ಯಕು. ೧೯). [ಸಂ.]

**ಸಕ್ತಿ$_1$** (ನಾ). ೧. ಕೂಡಿರುವುದು; ಸೇರಿರುವುದು. ೨. ಆಸಕ್ತಿ; ಶ್ರದ್ಧೆ : ಭಲ್ಲೂಕವಂಶಜರುಮಂತೆ ಕಪಿವಂಶಜರುಮಾರಣ್ಯವ್ಯಾಯಾಮಸಕ್ತಿಯಿಂ ವಿಹರಿಸುತ್ತಿರೆ (ಶ್ರೀರಾಮಾ. ೨೪೪ ೨೫೪); ತತ್ತ್ವಸಾಕ್ಷಾತ್ಕಾರಚಿತ್ತಶುದ್ಧಿಯಿನಹುದು ಚಿತ್ತಶೋಧನೆ ಮತಿಚಮತ್ಕಾರವಲ್ಲ ಬಿತ್ತರದ ಲೋಕಪರಿಪಾಕದಿಂ ಸತ್ಕರ್ಮ ಸಕ್ತಿಯಿಂ ಶುದ್ಧತೆಯೊ (ಮಂಕುತ. ೯೦೬). [ಸಂ.]

**ಸಕ್ತಿ$_2$** 'ಸಖ್ತಿ' ನೋ.

**ಸಕ್ತು** (ನಾ). ಜವೆಗೋದಿಯ ಹಿಟ್ಟು : ಯವಗೋಧೂಮಾದಿಜಾತ ಸಕ್ತು ಕಣಿಕಾದಿ ಚಯಂ ಚೂರ್ಣಂ (ತತ್ತ್ವಪ್ರ. ೨೪೪). 'ದಧಿಸಕ್ತು' ಪರಾ. [ಸಂ.]

**ಸಕ್ತುಪಿಷ್ಟ** (ನಾ). = ಸಕ್ತು : ಸಕ್ತುಪಿಷ್ಟವನಿತ್ತು ಮುನಿಪ ವಿರಕ್ತಭಾವದಲಿದ್ದು ಮಿಗೆ ನಿರ್ಮುಕ್ತನಾದನು ಸಕಲಜನ ಮಿಗೆ ನಲಿವ ರೀತಿಯಲಿ (ತಿಮ್ಮಅ. ೯-೭೨). [ಸಂ.]

**ಸಕ್ತುಫಲಿ** (ನಾ). ಒಂದು ಬಗೆಯ ಮರ ; ಬನ್ನಿ ; ಶಮೀವೃಕ್ಷ.

[ಸಂ. ಸಕ್ತುಫಲೀ]

**ಸಕ್ತುಫಲೆ** (ನಾ). = ಸಕ್ತುಫಲಿ : "ಶಮೀ, ಸಕ್ತುಫಲಾ, ಶಿಲಾ - ೩ ಬನ್ನೀಮರದ ಹೆಸರುಗಳು" (ಸಿದ್ಧಾಂತಿ. ೧೨೪). [ಸಂ. ಸಕ್ತುಫಲಾ]

**ಸಕ್ಥಿ** (ನಾ). ತೊಡೆ ; ಊರು : "ಊರುಃ, ಸಕ್ಥಿ, ಪಿಚಂಡಂ? - ಈ ೩ ಹೆರ್ದೊಡೆ" (ಹಲಾಯು. ೮೫-೩೬೧). [ಸಂ.]

**ಸಕ್ರಮ** (ಗು). ೧. ಕ್ರಮದಿಂದ ಕೂಡಿದ ; ಸರಿಯಾದ ಕ್ರಮದ : ಇವನಲ್ಲಿ ಸತ್, ಚಿತ್, ಆನಂದ ಎಂಬ ಮೂರು ಧರ್ಮಗಳು ಸಕ್ರಮಾಕ್ರಮ ಸ್ವಭಾವವಿಲ್ಲದೇ . . . ಅಕ್ರಮ ಸ್ವಭಾವದಿಂದಲೇ ಸ್ಫುರಿಸುತ್ತಿರುವುವು (ಭಾರದ. ೨೫೨). (ನಾ). ೨. ಕ್ರಮದಿಂದ ಕೂಡಿರುವುದು ; ಸರಿಯಾದ ಕ್ರಮವುಳ್ಳದು : ಅರಹಂತರಡಿ . . . ಉಪದೇಶಕರ ಚರಣ ಸಾಧುಗಳ ಸಕ್ರಮವನ್ನ ಬಗೆದಾ ಮಜೆಯರಲೊಳು ನೆಲೆಗೊಳ್ಳಿ (ಶ್ರೀಪಾಲ. ೧-೮) ; ಸಕ್ರಮವಾಗಿ ಆರ್ಜಿ ಸಲ್ಲಿಸೋಣ (ಪುನರು. ೩೩೪). [ಸಂ.]

**ಸಕ್ರಿಯ** (ಗು). ೧. ಕ್ರಿಯೆಯೊಡಗೂಡಿದ ; ಕ್ರಿಯಾತ್ಮಕವಾದ : ಅವರು ರಾಮದಾಸರಂತೆ ಮತಪ್ರಚಾರಕರು ಸಕ್ರಿಯಸಂಘಟಕರು (ಪರಪ. ೭). (ನಾ). ೨. ಚಟುವಟಿಕೆಯಿಂದ ಕೂಡಿದುದು ; ರಚನಾತ್ಮಕವಾದುದು : ಕಟ್ಟಿಗೆಯ ಉರಿ ಅನ್ನ ಬೇಯುವವರೆಗೂ ಹೇಗೆ ಸಕ್ರಿಯವೋ ಹಾಗೆಯೇ ಪದಗಳು . . . ಸಕ್ರಿಯವಾಗಿರುತ್ತವೆ (ಧ್ವನ್ಯಾಲೋ. ೧೯೪ ಅಡಿಟ). [ಸಂ.]

**ಸಕ್ಷಮ** (ಗು). ಕ್ಷಮೆಯಿಂದ ಕೂಡಿದ ; ಕ್ಷಮಾಗುಣವನ್ನು ಹೊಂದಿದ : ಸಕ್ಷಮ ದಕ್ಷ ಶಿಕ್ಷಣ ವಿಚಕ್ಷಣ ಸುಕ್ಷಣ ಲಕ್ಷಣ (ರಾಜಶೇ. ೧-೧೧) ; ಇಲ್ಲಿ ವ್ಯಕ್ತವಾದ ಸ್ತ್ರೀಯ ಅಸ್ತಿತ್ವದಲ್ಲಿ ಸಕ್ಷಮ ಸೌಂದರ್ಯವಿದೆ (ಕರ್ನಾಕ. ೯). [ಸಂ.]

**ಸಕ್ಷಿ** 'ಸಕ್ಕಿ' ನೋ.

**ಸಖ** (ನಾ). ಗೆಳೆಯ ; ಮಿತ್ರ : ಅಚ್ಚ ಸವಿಯೇ ಸುಖವೇ ಸಖನೆ ನಂಬಿಯ ಪತಿಯೆ (ನಂಬಿರ. ೭-೧೪೮) ; ನಿಮಗೆ ಸಖಂ ಕಮಲಸಖಂ (ಶಮದ. ೮೫ ಪ್ರಯೋ). [ಸಂ.]

**ಸಖತ್** 'ಸಕತ್' ನೋ.

**ಸಖತ್‌ಕಾಯಿಲೆ** 'ಸಕತ್‌ಕಾಯಿಲೆ' ನೋ.

**ಸಖತ್‌ಕಾಹಿಲೆ** 'ಸಕತ್‌ಕಾಯಿಲೆ' ನೋ.

**ಸಖತ್ತು** 'ಸಕತ್' ನೋ.

**ಸಖತ್ತುಕಾಯಿಲೆ** 'ಸಕತ್‌ಕಾಯಿಲೆ' ನೋ.

**ಸಖರೆ** 'ಸಕ್ಕರೆ' ನೋ.

**ಸಖಾಯ** (ನಾ). = ಸಖ : ಚಾರುದತ್ತನಂ ಕಂಡು ನೀ ನಿನ್ನ ಸಖಾಯರನೊಡಗೊಂಡು ಪೋಗಿ ರಜತವಾಳುಕವೆಂಬ ನದೀತೀರದೊಳ್ . . . ಪೋಗೆಂಬುದುಂ (ಬಂಹಪು. ೩-೭ ವ) ; ಶ್ವಾನ, ಯುವಾನ, ಅಧ್ವಾನ, ಸಖಾಯ, ಜ್ಯಾಯಾಂಸ, ಕನೀಯಾಂಸ, ವಿದ್ವಾಂಸ, ಭಾಸ್ವಂತ, ಶ್ರೀಮಂತ, ಹನುಮಂತ–ಇವು ಮೊದಲಾದುವು (ಶಮದ. ೮೭ ಪ್ರಯೋ). [< ಸಂ. ಸಖಿ]

**ಸಖಿ$_1$** (ನಾ). ಗೆಳತಿ ; ಸ್ನೇಹಿತೆ : ದೇವಿಯ ಬಗೆಯನಲರ್ಚಲ್ ದೇವರುಮೊಲ್ ಬಲ್ಲರಾರೊ ಸಖಿಯರ್ಕಳ್ (ಪುಷ್ಪಪು. ೩-೭೪) ; ಸಖಿಯರು ಹಾಸ್ಯಮಾಡಿದಾಗ ಆಕೆ ಕೋಪಿಸಿಕೊಳ್ಳಬಲ್ಲಳೇ ಹೊರತು ಪ್ರತ್ಯುತ್ತರವನ್ನು ಕೊಡಲಾರಳು (ಧರ್ಮಸಾ. ೬೮).

[ಸಂ. ಸಖೀ]

**ಸಖಿ$_2$** (ನಾ). ಗೆಳೆಯ ; ಸ್ನೇಹಿತ : ಇತ್ತಲುಂ ಕುಮಾರಂ ತನ್ನ ಮನದನ್ನರಪ್ಪ ಹತ್ತೆಂದು ಸಖಿಗಳಂ [ಪಾಠಾಂ. ಸಖರಂ] ಕೂಡಿಕೊಂಡು (ನಂಬಿರ. ೪-೯೩) ; ಗರುಡನು ನಿನಗೆ ಸಖಿಯಾಗಿ [ಪಾಠಾಂ. ಸಖನಾಗಿ] ವೊಗ್ಗಿರುವನೆಂದಜಂ ಕೈವಿಡಿದನಂತನಂ ಕಳುಪಿದಂ (ತುರಂಗ. ೫-೧೮). [ಸಂ.]

**ಸಖಿ$_3$** (ನಾ). ಶೃಂಗಾರರಸಪ್ರಧಾನವಾದ ಲಾವಣಿ : ಸೊಗಸಾದ ಶೃಂಗಾರದ ಲಾವಣಿ ಹಾಡಿ ಮೇಲೊಂದು 'ಸಖೀ' ಅಂದು ಮುಗಿಸಿದ (ಚಟ್ಟಸೂ. ೧೩).

[<— ಮರಾ. ಸಖೀ]

**ಸಖೇದ** (ಗು). ದುಃಖದಿಂದ ಕೂಡಿದ; ಖೇದದಿಂದ ಕೂಡಿದ. [ಸಂ.]

**ಸಖ್ಕರೆ** 'ಸಕ್ಕರೆ' ನೋ.

**ಸಖ್ತಿ, ಸಕ್ತಿ$_2$** (ನಾ). ಕಠೋರವಾದ, ಉಗ್ರವಾದ ಒತ್ತಾಯ : ಆವಾಗ್ಯೆ ದೊಡ್ಡ ಬಳ್ಳಾಪುರದ ಅಬ್ಬಾಸಕಲ್ಲೀಖಾನರಿಗೆ ಯಾ ಅಲ್ಲೀಸಾಬರಿಂದ ೧೦೦೦ ವರಹಾ ನಾಜಲು ಹಣಾ ಬರಬೇಕಾಗಿಯಿದ್ದದಕೆ . . . ಹೈದರಲ್ಲಿಖಾನರ ಸಹ ಬಹಳ ಸಖ್ತಿ ಮಾಡಲಾಗಿ (ಹೈದರ. ೩೩). **ಸಕ್ತಿ$_2$ :** ರೀತಿಯಂತೆ ಜಪ್ತಿ ಮುಂತಾದ ಸಕ್ತಿಯ ಕ್ರಮಗಳು ಜಾರಿಯಲ್ಲಿ ತರಲ್ಪಡುವವು (ಕರವೀ. ೮೫); ಸಕ್ತಿ ಮಾಡಿದರೆ ಮುಕ್ತಿ ದೊರಕುವುದೇ? (ಗಾದೆ).

[<— ಪಾರ. ಸಖ್ತೀ; ಅರ. ಸಖ್ತು, ಸಖ್ತೀ ; ಮರಾ. ಸಖ್ತ್, ಸಕತ್, ಸಕ್ತ್]

**ಸಖ್ಯ** (ನಾ). ೧. ಗೆಳೆತನ ; ಸ್ನೇಹ : "ಸಖ್ಯಂ ಸ್ನೇಹಮೆನಲು ಮೈತ್ರಕ್ಕೆ ನಾಮಂ" (ಮಂಗರಾ. ೧೨೮-೮) ; ಇಷ್ಟು ಅನ್ಯೋನ್ಯವಾಗಿ ಏಕದೇಹನ್ಯಾಯವಾಗಿ ಏಕಾತ್ಮಕವಾಗಿಯೇ ಬೆಳೆಯಿತು ಈ ಮಕ್ಕಳ ಸಖ್ಯ (ಶಾಂತಲಾ. ೧೦) ; ನನ್ನ ಶ್ಯಾಮರಾಯನ ಸಖ್ಯ ಬೆಳೆದು ಬಂದ ಪರಿಯನ್ನು ತಿಳಿಸಿದೆ (ದೀಪಹ. II. ೩೫೬). ೨. ಗೆಳೆಯ; ಸ್ನೇಹಿತ. ೩. ಸಮಾನತೆ ; ಸರಿಸಮ. ೪. ನವವಿಧ ಭಕ್ತಿಗಳಲ್ಲಿ ಒಂದು : ಭಕ್ತಿ ನವವಿಧ . . . ಶ್ರವಣ . . . ಸಖ್ಯಮಾತ್ಮಾರ್ಪಣವು (ಗಗತಾ. ೩-೫೬); ಸರ್ವದಾ ಪರಮಾತ್ಮನ ಕಂಡೆನೆಂಬ ಅತಿಶಯರತಿದಾನದೊಯಿದೆ ಸಖ್ಯದ್ವಾರಭಕ್ತಿ (ಅಧ್ಯಾಮಾ. ೧೫೯) ;

ಶ್ರವಣಂ, ಕೀರ್ತನಂ . . . ದಾಸ್ಯಂ, ಸಖ್ಯಂ, ಆತ್ಮನಿವೇದನಂ ಎಂಬ ೯ ವಿಧ ಭಕ್ತಿ (ಹಸಾರ.೨೧-೫೧ ತಾತ್ಪರ್ಯ). [ಸಂ.]

**ಸಗ** 'ಸಗ್ಗ' ನೋ.

**ಸಗಟ$_1$** 'ಸಗಟು$_2$' ನೋ.

**ಸಗಟ$_2$, ಸಗಟು$_3$** (ನಾ). ೧. ಹುಸಿ ; ಸುಳ್ಳು ; ಅನೃತ : ಮಾನಿನಿಯೆ ಆಳವಾಡುತ ಸಗಟನಾಡುವರ (ಪ್ರಾಥರಾ. ೬-೨೦). **ಸಗಟು$_3$** : ೨. ನಟನೆ : ತುರುಗವೆಯಳೆ ಬಾಯೆನ್ನುತ ನಲ್ಲಂ ಕರೆಯಲು ಅವಳೊಲು ಸಗಟಂ ಮಾಡಿದೆ ಕರಿಗಂ ಹರಿ ಸರಿಯಿಲ್ಲವು ಪಿಕಯಿಂಚರ ಕಾಲಾಯಸನ (ತ್ರಿಭುವಮೋ. ೪-೩೩). [?]

**ಸಗಟು$_1$** (ನಾ). ಬಂಡಿ ; ರಥ : ರಾಜಮಂದಿರದೊಳಗೆ ಕಾಜಿನನೆತಿಗಟ್ಟುನೊಪ್ಪವು ವಾಜಿಗಳು ಬಂದಿಸುವ ಲಾಯವು ಗಜವು ಸಗಟುಗಳು (ನಂದಿಲೀ. ೨-೬); ಬಂದು ಎಬ್ಬಿಸಿ ಆರೋಗಣೆಗೆ ಅಂದಳ ಪಲ್ಲಕ್ಕಿ ಗಜಗಳು ನಿಂದ ತೇಜಿಯು ತುರಕಿ ಸಗಟು ವೈಹಿಲಿ ನಂದಿಯಲಿ (ನಂದಿಲೀ. ೪-೧೫). [< ಶಕಟ. / ತಮಿ. ಚಕಟು ; ತೆಲು. ಸಗಟು]

**ಸಗಟು$_2$, ಸಕ್ಕೋಟು, ಸಗಟ$_1$** (ಗು). ೧. ಸಂಪೂರ್ಣ; ಎಲ್ಲ; ಇಡೀ: ತನಗೆ ತಾಂ ಬದಲಿಸಿದವಾ ಫಲಂ ಸಗಟಿನಿಂ ಭುಂಜಿಸಿದೆನೆಂತೆಂದಳು (ಪರಶು. ೧೫-೧೮) ; ಮತ್ತಲ್ಲಿ ಸಗಟಿನಿಂ ಪರಿಕಿಸಲ್ ಸುಪ್ರಪಾಲಯಮಯಂ (ಪರಶು. ೨೧-೨). (ನಾ). ೨. ಒಟ್ಟು ಮೊತ್ತ ; ರಾಶಿ : ಪದಾರ್ಥಗಳನ್ನು . . . ಪೇಟೆಗೆ ಸಾಗಿಸುವುದು, ಸಗಟಿನಲ್ಲಿ ಹಂಚುವುದು. ಚಿಲ್ಲರೆ ವರ್ತಕರಿಗೆ ಮಾರುವುದು (ಹಣಪ್ರ. ೧೮೧). **ಸಕ್ಕೋಟು** : ೧. ಅಲ್ಲಿ ಎಲ್ಲ ಸಕ್ಕೋಟು ಒಂದೇ . . . ಗಾಣಿಗರ ಮಕ್ಕಳೂ ಬ್ರಾಹ್ಮಣರ ಮಕ್ಕಳೂ ಸಾಲಾಸಾಲೂ ಬೆಂಚು ಮೇಲೆ ಒಟ್ಟಿಗೇ ಒರಗಿರುತ್ತವೆ (ಮರಮ. ೧೮೦). **ಸಗಟ$_1$** : ೧. ಸಗಟ ಮಂದಿ ಎಲ್ಲಾ ಒಗಟದ ಪುಟಗೊಳ ಮುಂದ ಹರವ್ಯಾರೋ (ಆರಳು. ೨೮೦) ; ಅದಕ ಸಗಟ ಕೇಳಿದೆ (ದೀಪಹ. II, ೧೩೦). ೨. ಖೊಬ್ಬರಿ ಬಟ್ಲ ದೊಡ್ಡವು, ಸಣ್ಣವು, ತಿಳವು ಹಾಂಗು ದಪ್ಪ, ಈ ಪ್ರಕಾರವ ಸಗಟವಾಗಿ ಇರುತ್ತವೆ (ಮುಂಬವ್ಯಾ. ೨೮೪).

[← ಮರಾ. ಸಕಟ, ಸಗಟ]

**ಸಗಟು$_3$** 'ಸಗಟ$_2$' ನೋ.

**ಸಗಟುವ್ಯಾಪಾರ** (ನಾ). ಒಟ್ಟೊಟ್ಟಿಗೆ ಮಾಡುವ ವ್ಯಾಪಾರ ; ಒಟ್ಟು ವ್ಯಾಪಾರ : ಅವರು ಜವಳಿಯ ಸಗಟುವ್ಯಾಪಾರ ಮಾಡುತ್ತಾರೆ (ರೂಢಿ).

[ಸಗಟು$_2$ + ವ್ಯಾಪಾರ]

**ಸಗಟುವ್ಯಾಪಾರಿ** (ನಾ). ವಸ್ತುಗಳನ್ನು ಒಟ್ಟೊಟ್ಟಿಗೆ ಮಾರುವ ವ್ಯಾಪಾರಿ : ಅವರು ಪುಸ್ತಕಗಳ ಸಗಟುವ್ಯಾಪಾರಿ (ರೂಢಿ). [ಸಗಟು$_2$ + ವ್ಯಾಪಾರಿ]

**ಸಗಟುಸರಕು** (ನಾ). ಒಟ್ಟೊಟ್ಟಿಗೆ ಮಾರುವ ಪದಾರ್ಥ; ಪೂರ್ತಿಯಾಗಿ ಮಾರುವ ವಸ್ತು: ಒಟ್ಟಿನ ವ್ಯಾಪಾರವನ್ನು ಮಾಡಿ, ಅದರಲ್ಲಿ ಲಾಭ ಪಡೆಯುವವರಾಗಲಿ, ಇಂತಹ ಅಂಗಡಿಗಳಲ್ಲಿ ಸಗಟುಸರಕನ್ನು ಕೊಂಡು ತಮ್ಮ ಚಿಲ್ಲರೆ ಸಾಮಾನುಗಳ ಅಂಗಡಿಗಳಲ್ಲಿ ಅವನ್ನೆ ಮಾರಿ ಲಾಭ ಮಾಡಿಕೊಳ್ಳುವರು (ತಕ್ಕಡಿ. ೨೨). [ಸಗಟು$_2$ + ಸರಕು$_2$]

**ಸಗಡೆಕೆಂದಾಳ** (ನಾ). ಒಂದು ಬಗೆಯ ಸಸ್ಯ : ಕೆಂದಾಳೆ, ಸಗಡೆಕೆಂದಾಳ, ಚೆಂಡಾಲ (ವೃಟಿಗಿ. ೬೮-೧೪೯೫). [ಸಗಡೆ$_1$ + ಕೆಂದಾಳ$_1$]

**ಸಗಡೆಸೊಪ್ಪು** (ನಾ). ಒಂದು ಬಗೆಯ ಸೊಪ್ಪು : ಮಾಯವ್ವ ತನ್ನ ಹಿತ್ತಿಲ ತೋಟದಲ್ಲಿ ಸಗಡೆಸೊಪ್ಪು ಕೊಯ್ಯುತ್ತಿದ್ದಳು (ಮಸಕೂ. ೨೮). [ಸಗಡೆ$_1$ + ಸೊಪ್ಪು$_2$]

**ಸಗಣ$_1$, ಸಗಣಿ, ಸಗಣೆ, ಸೆಗಣ, ಸೆಗಣಿ** (ನಾ). ದನಕರುಗಳ ಮಲ ; ತೊಪ್ಪೆ ; ಗೋಮಯ: "ಗೋಮಯಂ ಕರೀಷಮೆನಲು ಸಗಣಂ" (ಮಂಗರಾ. ೫೪-೫) ; ಮಿದಿದೆಚ್ಚು ಕೊಗ್ಗಿಯಂ ಕ್ಷೌದ್ರದೆ ಮೇಣ್ ಸಗಣದ ರಸಂ ಕಣಾನ್ವಿತದಿಂ ಚಿಂಚದ ಚಿಗುರನಿರುಳ್ ಕಣ್ಣಾಣದರುಮಝುಂಧತಿಯನಾದೊಡಂ ನೆಟೆ ಕಾಣ್ಬರ್ (ಲೋಕೋಪ. ೯-೭೩); ಎಮ್ಮೆಯ ಸಗಣದ ರಸದೊಳಗಿಮ್ಮಾನಂ ಘೃತಮನೆಱೆದು ಕುಡುವುದು (ಅಶ್ವಶಾ. ೧೬-೬). **ಸಗಣಿ** : ಅಜ್ಞಾನಿ ಮೃಗ ಪಶುವಿನ ಸಗಣಿಯ ಸುಟ್ಟು ಬೂದಿ ವಿಭೂತಿಯಾದ ಪರಿ ಹೇಗೆ (ವಚಶಾ. I. ೮೬) ; ಹರಿಣನೆಯ್ತಂದೆಡೆಯ ಸಗಣಿಯೊಳಗೆಡಹಿ ತರಹರಿಸಲಾಜದೆ (ಸಿದ್ಧರಾ. ೪-೪೨) ; ನನ್ನಲ್ಲಿ ಯಾವಾಗಲಾದರೂ ತಪ್ಪನ್ನು ಕಂಡರೆ ಆಗ ನನ್ನ ಮುಖಕ್ಕೆ ಸಗಣಿಯನ್ನು ಬಳಿಯಿರಿ (ಝಾರಾಣಿ. ೧೯೯). **ಸಗಣೆ** : ಸಗಣೆಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದಱ ಗಂಜಳ ಬಿಡದಣ್ಣಾ (ಬಸವ. ೯೩). **ಸೆಗಣ** : ಮೊಸರಂ ದುಗ್ಧಮನಾಜ್ಯಮಂ ಸೆಗಣಮಂ ಧಾನ್ಯಂಗಳಂ ಧೇನುವಂ ರಸಮಂ . . . ತನ್ನಿದಿರಾಗಿ ಬರ್ಪುವವ(ನಿಂ) ಕಾಣ್ಬಂತುಟತ್ಯುತ್ತಮಂ (ಲೋಕೋಪ. ೧೨-೪೮). **ಸೆಗಣಿ** : ಹೊಗರಾಂತ ಹೊಸ ಹೊನ್ನ ರಸ ಕಾಯ್ದುರೆ ಕಂಡು ಸೆಗಣಿಯೊಳೆಱೆವಂತೆ ಮೊಱದಿ ಮೃಗಮದಗಂಧಿಯರ್ ಗೋಮಯದಿಂ ಮುದ್ದುಮಗನ ದೇಹವ ಸಾರ್ಚಿದರು (ಮೋಹತ. ೧೭-೨೦) ; ದನದ ಸೆಗಣಿಯ ಉತ್ತಮ ಉಪಯೋಗವೇನು (ತಿಂಮತ. ೩೬).

**ಸಗಣಿಹಾಕು** = ೧. ಸಗಣಿಯನ್ನು ಇಡು ; ತೊಪ್ಪೆ ಹಾಕು : ಎಮ್ಮೆ ಸಗಣಿಹಾಕಿದೆ (ರೂಢಿ). ೨. (ಅಲಂ) ದೋಷಾರೋಪಣೆ ಮಾಡು; ಮಸಿಹಚ್ಚು : ನೀವು ಆಡಿಟರುಗಳಲ್ಲ . . . ಆಡಿಟರುಗಳ ಮೇಲೇಕೆ ಸಗಣಿ ಹಾಕುತ್ತೀರಿ (ಹಸುಹೂ. ೨೨೭).

[ದೇ. ‖ ತಮಿ. ಮಲ. ಚಾಣ, ಚಾಣಗ, ಚಾಣಿ; ಕೊಡ. ಚಾಣ. / ಮರಾ. ಶೇಣ. / ಸಂ. ಛಗಣ]

**ಸಗಣ$_2$** (ನಾ). [ಛಂದ] ಅಕ್ಷರಗಣಗಳಲ್ಲಿ ಒಂದು ; ಆದಿಯಲ್ಲಿ ಎರಡು ಲಘು ಕಡೆಯಲ್ಲಿ ಒಂದು ಗುರುವಿರುವ ಗಣ ; (UU –) : ಮಗಣಂ ಭೂಮಿಯೆನಿಕ್ಕುಂ ಯಗಣದಿ ಜಲ ರಗಣಮಗ್ನಿ ಸಗಣಂ ವಾತಂ ತಗಣಾಂಬರ ಜಗಣಾರ್ಕಂ ಭಗಣಂ ಶಶಿ ನಗಣ ನಾಕಮಂಬುಜವದನೇ (ಛಂದೋಂಬು. ೧-೩೯ ಅಡಿಟ) ; ಮೊದಲಿನಲ್ಲಿ ಭಗಣವನ್ನು ಹೇಳಿದೆ ; ಅದರ ನಂತರ ಮಗಣ, ಸಗಣ, ಭಗಣ ಹಾಗೆಯೇ ನಾಲ್ಕು ನಗಣಗಳು (ಚತುಪ್ರ. ೧೦೬) ; UU – ಸಗಣ ದಿಟಮೇ ಜಯಿಕುಂ (ಕೈಪಿಡಿ. ೬೦).

[ಸಂ.]

**ಸಗಣನೀರ್, ಸಗಣಿನೀರ್, ಸಗಣಿನೀರು, ಸೆಗಣಿನೀರು** (ನಾ). ಸಗಣಿಯನ್ನು ಕದಡಿದ ನೀರು : ಕತ್ತುರಿಯ ಸಗಣನೀರ್ ಬಿಡುಮುತ್ತಿನ ರಂಗವಲ್ಲಿ ಮಿಳಿರ್ವ ದುಗುಲದ ಗುಡಿ (ಪಂಪಭಾ. ೩-೨). **ಸಗಣಿನೀರ್** : ಚಿಃ ನಿರ್ಭಾಗ್ಯಂ ಮೆಟ್ಟಿದ ನೆಲನಂ ಸಗಣಿನೀರ್ದಳಿಯಿಮೆಂಬುದುಂ (ಬಂಹರಿ. ೪-೬ ವ). **ಸಗಣಿನೀರು** : ಹೊಲೆಯರು ಸೆಗಣೀನೀರನ್ನು ಚುಮುಕಿಸಿಕೊಂಡು ಮನೆಗೆ ಹೋಗುವರು (ಹುಟ್ಟಿಹ. ೬೬). **ಸೆಗಣಿನೀರು** : ಸೆಗಣಿನೀರು ಚೆಲ್ಲಿ ಮತ್ತ ಕಂಬದ ಮರೆಯಲ್ಲ ಕುಳಿತಳು (ದೇವಹಂ. ೧೨೮). [ಸಗಣ$_1$ + ನೀರ್]

**ಸಗಣಪಿಂಡ, ಸಗಣಿಪಿಂಡ** (ನಾ). ಸಗಣಿಯ ಉಂಡೆ ,– ಮುದ್ದೆ : "ಸಗಣ [ಪಾಠಾಂ. ಣಿ]ಪಿಂಡದ ಪುಂಜದಲ್ಲಿಯಾಕಾಶದೊಳ್ ಮಿಗೆ ಕುಂಬದೊಟ್ಟಲೊಳ್ ಬಾನು" (ಶಬ್ದಮಂ. ೧೦೧). **ಸಗಣಿಪಿಂಡ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಗಣ$_1$ + ಪಿಂಡ]

**ಸಗಣಿ** 'ಸಗಣ$_1$' ನೋ.

**ಸಗಣಿಗ** (ನಾ). ಸಗಣಿಯಲ್ಲಿ ವ್ಯವಹರಿಸುವವನು : ಸಗಣಿಗನ ಸಹವಾಸಕಿಂತಲೂ ಮಿಗೆ ಸೌಗಂಧಿಗನೊಡನೆ ಜಗಳವು ಸಿಗುವುದೇ ಮೇಲು (ನೀಸಾರ. ೧೯-೧೦೯).

[ಸಗಣ$_1$ + -ಇಗ]

**ಸಗಣಿಗದಡು** (ನಾ). = ಸಗಣನೀರ್ : ಹುರಿವ ಮಳಲು ಕಾಸಿದಂಬಲಿ ಕುದಿಗೊಳ್ಳ ಪಿರಿದು ಸಗಣಿಗದಡುಗಳು . . . ಎಸೆದವಲ್ಲಲ್ಲಿ (ಅನಂಚ. ೧೬-೪೭).

[ಸಗಣಿ (< ಸಗಣ$_1$) + ಕದಡು$_2$]

**ಸಗಣಿನೀರ್** 'ಸಗಣನೀರ್' ನೋ.

**ಸಗಣಿನೀರು** 'ಸಗಣನೀರ್' ನೋ.

**ಸಗಣಿಪಿಂಡ** 'ಸಗಣಪಿಂಡ' ನೋ.

**ಸಗಣೆ** 'ಸಗಣ$_1$' ನೋ.

**ಸಗಬ್ಬರಸಿ** (ನಾ). ಒಬ್ಬಾಕೆಯ ಹೆಸರು : ನೊಲಮ್ಬಂ ಆ ಪೆರ್ಮ್ಮಾಡಿ ಆ ಕೇಚಗಂ ಸಗಬ್ಬರಸಿ ಆನೆಯ ಕೊಣ್ಡದ ಉತ್ತಯ್ಯಂ ಎಱೆಗ ಕೊನ್ತದ ಬಿಜ್ಜಯ್ಯ (ಎಕ. XII, ಸಿರಾ. ೨೬-೧೦ ; ಸು. 980 ?). [? + ಅರಸಿ]

**ಸಗರ** (ಗು). ೧. ವಿಷದಿಂದ ಕೂಡಿದ ; ವಿಷಸಹಿತವಾದ. ೨. ಒಂದು ದೇಶದ ಹೆಸರು : ಸಗರ ಮೂನೂಱಱ ಬಳಿಯ ತಮ್ಮಾಳ್ಕೆಯ ಏಹೂರ ಈಸಪೇಶ್ವರದೇವರಿಂ ಮೂಡಣ ದೆಸೆಯಲು ಶ್ರೀಕೇಸ(ಶ)ವ ದೇವರ್ಗ್ಗೆ . . . ಮತ್ತರು ೧೨ (ಎಇ. XII, ೩೩೦-೨೧ : 1105) ; ಕೊಟ್ಟನು ಬಿದಿರಯ ಕೊಟ್ಟಸು ಸಗರವ ಕೊಟ್ಟನು ನಿಂಬಾಪುರವ (ಕುರಾಸಾಂ. ೧೭-೬೬). ೩. ಸಗರದೇಶದವನು : ಬಂಗಾಳ ಚೈನ ಚೋನೆಗ ಸಗರ ಹೈವಿಗ ತಲುಂಗ ಗುರ್ಜರ ಗೌಳ (ಚಬಪು. ೬-೪೯). ೪. ಸಗರದೇಶದ ಇಕ್ಷ್ವಾಕುವಂಶಕ್ಕೆ ಸೇರಿದ ರಾಜ : ಸಗರರ ಮೇಲೆ ಗಂಗೆಯನನಾಕುಲದಿಂ ತರಲಾ ಭಗೀರಥಂ ನೆಗೞೆ (ಪಂಪಭಾ. ೪-೧೩); ಸಗರಸುತರೆಲ್ಲರುಂ ಮೋಕ್ಷಗಾಮಿಗಳ್ (ಆಪು. ೧೨-೨೯).

**ಸಗರಮಾರ್ತಂಡ** = ಸಗರವಂಶಕ್ಕೆ ಸೂರ್ಯನಂತಿರುವವನು ; ಒಂದು ಬಿರುದು : ಸಗರಮಾರ್ತಣ್ಡ ಜಯಕೇಸಿದೇವರ್ (ಸೌಇ. XX, ೯೯-೨ ; 1128). [ಸಂ.]

**ಸಗರೆ** (ನಾ). ಒಂದು ಬಗೆಯ ಸಸ್ಯ : (ಷ್ಮಟಿಗಿ. ೬೭-೧೩೭೫) ; (ಸಸ್ಯನಿ. ೧೧೭). [?]

**ಸಗರ್ಭ** (ಗು). ೧. ಬಸಿರಾದ ; ಗರ್ಭದೊಡನೆ ಕೂಡಿದ. (ನಾ). ೨. ಒಡಹುಟ್ಟಿದವನು ; ಸಹೋದರ : "ಸಮಾನೋದರ್ಯಃ, ಸೋದರ್ಯಃ, ಸಗರ್ಭಃ, ಸೋದರಃ - ಈ ೪ ಒಡಹುಟ್ಟಿದಂ" (ಪಲಾಯು. ೮೪-೩೫೪). [ಸಂ.]

**ಸಗರ್ಭಾಂಗನೆ** (ನಾ). ಬಸಿರಿ ; ಗರ್ಭಿಣಿ : ಉಪಶಾಂತ ರಜೋವಿಕೃತಿಯಿನುಪಾತ್ತ ಕಾಳಿಮಪಯೋಧರಾಸ್ಯತೆಯಿಂ ಮತ್ತುಪಚಿತ ಜಡವೃತ್ತಿಯಿನೆಯ್ದೆ ಪೋಲ್ತುದಭ್ರಾಗಮಂ ಸಗರ್ಭಾಂಗನೆಯಂ (ಚಂದ್ರಪು. ೪-೪೩). [ಸಂ. ಸಗರ್ಭಾಂಗನಾ]

**ಸಗರ್ವ** (ಗು). ೧. ಅಹಂಕಾರದಿಂದ ಕೂಡಿದ ; ಸೊಕ್ಕಿನ : ಪವಮಾನಸುತನ ಸಗರ್ವವಚನವನೇನ ಹೇಳುವೆನೆನುತ ಸುಯ್ದನು ಕೌರವರ ರಾಯ (ಕುವ್ಯಾಅ. ೨೧-೬೬). (ನಾ). ೨. ಅಹಂಕಾರ; ಸೊಕ್ಕು : ತಡೆದಾಂ ಪೋಗೆ ಸಗರ್ವಮಡ್ಡಮಿಡುವಳ್ ವಕ್ತ್ರಾಬ್ಜಮಂ ಜರ್ಬುವಳ್ (ಲೀಲಾವ. ೨-೩೯). [ಸಂ.]

**ಸಗರ್ವಿತ** (ನಾ). ಗರ್ವದಿಂದ ಕೂಡಿದವನು ; ಅಹಂಕಾರಿ : ಅವನಿಪನ ಸಿಂಹಾಸನವನೇಱುವ ಸಗರ್ವಿತರಾರು ನೋಡಿದಡವೆಗಳುರಿವುದು ಹಾಯೆನುತ ಕಂಚುಕಿಗಳ್ಕೆತಂದು (ಕುವ್ಯಾವಿ. ೧೦-೭). [ಸಂ.]

**ಸಗಾಟ** (ನಾ). (ಅಗಾಧವಾದ) ಗೆಳೆತನ ; ಮೈತ್ರಿ : "ಸಗಾಟ (ಸಗಾಟಿಕೆ) = ಗೆಳೆತನ" (ಜಾಸಕೋ. ೪೬). 'ಸಗಾಟಿಸು' ಪರಾ. [< ಸಂ. ಸಗಾಢ?]

**ಸಗಾಟಿಕೆ** (ನಾ). = ಸಗಾಟ : "ಸಗಾಟ (ಸಗಾಟಿಕೆ) = ಗೆಳೆತನ" (ಜಾಸಕೋ. ೪೬). [ಸಗಾಟ + - ಇಸು₃]

**ಸಗಾಟಿಸು** (ಕ್ರಿ). ಗೆಳೆತನ ಮಾಡು ; ಸ್ನೇಹವನ್ನು ತೋರು : ಆಸದೋಱೆ ಬಗೆದೋ[ಱ]ದೊಡಂ ಸರೆದಿರ್ದೊಡಂ ಸಗಾಟಿ[ಸದೊ]ಡಂ . . . ಪೇಸದವಳ್ಗೆ ಮತ್ತಮಾಟಿಸುವುದೆ (ಪಂಪಭಾ. ೪-೯೨). [ಸಗಾಟ + - ಇಸು₃]

**ಸಗಾಡ, ಸಘಾಡ** (ನಾ). ೧. ಹೆಚ್ಚಳ ; ಅತಿಶಯ : 'ಸಗಾಡಿಕೆ' ಪರಾ. ೨. ರಭಸ ; ಒತ್ತಡ : (೬). **ಸಘಾಡ** : ೧. ನಿರ್ಭೀತನಿದ್ದನು ಭೀಮ ಸುಮ್ಮಾನದ ಸಘಾಡದಲಿ (ಕುವ್ಯಾಕ. ೧೩-೮) ; ಗಿರಿಸರಿತ್ಸಂಕುಲವ ಕಳಿಕಳಿದರಿವಿಜಯ ದಶರಥ ಮಹೀಶನ ಧರಣಿಯನು ಸಾರಿದನು ಸಂತೋಷದ ಸಘಾಡದಲಿ (ತೊರರಾ. ೧-೯-೪). ೨. ಓಡಿಬಹ ಸುಭೌಮನಾಳ ಸಘಾಡಕಂಜಿದರಾ . . . ನಾಯಕರು (ಪಶುಭಾ. ೨೦-೫೧).

[< ಸಂ. ಸಗಾಢ]

**ಸಗಾಡಿಕೆ, ಸಘಾಡಿಕೆ** (ನಾ). ೧. = ಸಗಾಡ ೧ : ಪಾಡನೇ ಪರುಠವಿಸಿ ನುಡಿವ ಸಗಾಡಿಕೆಯನೊಡ್ಡಯಿಸಿ ತಮ್ಮಯ ಖೋಡಿಯನು ತಾವಱಿಯರು (ಪ್ರಭುಗೀ. ೧೪-೨೭). **ಸಘಾಡಿಕೆ** : ೧. ಆಳುತನದ ಸಘಾಡಿಕೆಯ ನಾ ಹೇಳಲಱಿಯೆನು (ಕುವ್ಯಾಕ. ೧೫-೧) ; ಮೂಡಿದ ಬಾಲಸೂರ್ಯಪ್ರಭೆಯಿದಱ ಸಘಾಡಿಕೆಗೆಣೆಯೆ (ಕಂನವಿ. ೨೪-೫೧). ೨. ರಭಸ; ಒತ್ತಡ : ಮಾತು ಪಾಂಚಾಲರ ಸಘಾ[ಪಾಠಾಂ. ಗಾ]ಡಿಕೆ ಎನುತ ಗಹಗಹಿಸಿ ತಲೆದೂಗಿದನು ಕಲಿದ್ರೋಣ (ಕುವ್ಯಾದ್ರೋ. ೧೭-೩೧). [ಸಗಾಡ + - ಇಕೆ]

**ಸಗಾಢ** (ಗು). ೧. ಹೆಚ್ಚಾದ ; ಅತಿಶಯವಾದ. ೨. ಬಿರುಸಿನ ; ತೀವ್ರತರವಾದ. ೩. ಜೋರಿನ ; ಆಟೋಪದ. (ನಾ). ೪. ಜೋರು; ರಭಸ : ವರ ರಥವನಱುವತ್ತುಸಾವಿರವನು ಸಗಾಢದಲಿ . . . ಮೋಹರಿಸಿ (ಕುವ್ಯಾದ್ರೋ. ೯-೨೦): ಹರಿಯಂ ಸಗಾಢದಿಂ[ಪಾಠಾಂ.ಗಾಡ] ಬಾನ್ನೆತ್ತಿಕೊಂಡೊಯ್ಯದಿರನಬ್ಜಸಖನು (ಜೈಮಿಭಾ. ೪-೧೪). ೫. ಆಡಂಬರ ; ವೈಭವ : ಹೆಸರಿಡಲು ಹವಣಲ್ಲವೆಂಬೊಂದಸಮ ಸಮ್ಮೇಳದ ಸಗಾಢದ ಬೆಸುಗೆಯಲಿ ಮಮಕಾರನೃಪ ಮೋಹಿನಿಯರೆಸೆದಿಹರು (ಪ್ರಭುಲೀ. ೩-೮) ; ಕಿನ್ನರ ಕಿಂಪುರುಷಾದಿ ಯಕ್ಷರಂ ತಳೆದ ಸಗಾಢದಿಂದೆಸೆವುತಿರ್ಪುದು ನೋಟ್ಪೊಡೆ ಮೇರುಭೂಧರಂ (ಮಲ್ಲಕಾ. ೩-೧೭). [ಸಂ.]

**ಸಗಾಢತನ** (ನಾ). ಘನತೆ ; ಗಾಂಭೀರ್ಯ : ಗಳಹದಿರು ರಾಧೇಯ ನಿನ್ನಯ ಕುಲವ ನೋಡದೆ ಮೀರೆದಪ್ಪುವ ಸಲುಗೆಯಿದಲೇ ಸ್ವಾಮಿಸಂಪತ್ತಿನ ಸಗಾಢ[ಪಾಠಾಂ. ಘಾಡ]ತನ (ಕುವ್ಯಾಭೀ. ೧-೩೯) ; ಮುನ್ನಿನ ಗರಿಮಸತ್ವ ಸಗಾಢ[ಪಾಠಾಂ. ಘಾಡ]ತನವನು ದೊರಕುವುದು ಸಂಜೀವಿನಿಯ ಪರಿಯಂದು ತಿಳುಹಿದನು (ತೊರರಾ. ೬-೩೬-೪೬).

[ಸಗಾಢ + - ತನ]

**ಸಗಾಢಿಕೆ** (ನಾ). ಹೆಚ್ಚಳ ; ಅತಿಶಯ : ಸಹದೇವನ ಸಗಾಢಿ[ಪಾಠಾಂ. ಡಿ]ಕೆಯಾಳುತನವಿವರಾರ ಹವಣಲ್ಲ (ಕುವ್ಯಾಸ. ೫-೧) ; ಮಾವನ ಗಂಡುತನದ ಸಗಾಢಿಕೆಯನೀಕ್ಷಿಸುವ ತವಕದಲಿ (ಅಕ್ರೂಚ. ೭-೪೪) ; ಪ್ರಕಟಿಸಿದೆ ನೀನೈಹಿಕಾಮುಷ್ಮಿಕದ . . . ನುಡಿಗಟ್ಟಿನ ಸಗಾಢಿಕೆಯ (ಗೀವಿಂ. ೯೭-೮). [ಸಗಾಢ + - ಇಕೆ]

**ಸಗಾಢಿಕೆವೆಱು** (ಕ್ರಿ). ಹೆಚ್ಚಳ ಪಡೆ; ಅತಿಶಯವಾಗು : ಪುಳಕ ಸಗಾ[ಪಾಠಾಂ.ಘಾ]ಡಿಕೆವೆತ್ತ ಸುಮ್ಮಾನದಲಿ ಬಂದನು ರಾಯನರಮನೆಗೆ (ಕುವ್ಯಾಗ. ೪-೫೩). [ಸಗಾಢಿಕೆ + ಪೆಱು₁]

**ಸಗಾಢಿಸು** (ಕ್ರಿ). ಅತ್ಯಂತ ಹತ್ತಿರ ಬರು ; ತಾಗು : ಅಣೆವ ಹರಿಗೆಯನೊಬ್ಬನೊಬ್ಬರನಣಸಿನಲಿ ತಿವಿದಗಿವ ಭಟರೊಡ್ಡಣೆ ಸಗಾಢಿ [ಪಾಠಾಂ. ಘಾಡಿ]ಸಿತೆರಡು ಬಲದಲಿ ಭೂಪ (ಕುವ್ಯಾಭೀ. ೨-೫). [ಸಗಾಢ + - ಇಸು₃]

**ಸಗಾಳ** (ನಾ). (?) : "ಪೇಳುವೊಡೆ ಕೇಮಿ ಆರಯೆ ಮುದ್ದಣಂ ಪಯಣ ಮೂಲಿತಿ ಪರಯ ಮಾರಯಕಾಳ ತಿಮ್ಮ ಸಗಾಳ ಮೇಲೊಂದಱಿಂ ಹತ್ತು ದಶ ಕಂಸಕಾರತಯ ನಗರಯಾಗಿ ತೇಯುಂ" (ಮಂಗರಾ. ೧೦೨-೪). [?]

**ಸಗಿತ** (ಅ). ಕೂಡಿಕೊಂಡು; ಸಹಿತ : ತನಗೆ ಪುತ್ರತ್ವವರವಾನಱಿದನ್ನು ಸುಪಣ್ಡಿತನನೇಕಶೀಲಗುಣಮಾಲೆಗಳಿನ್ನಗಿದೊಪ್ಪಿದೊನ್ ವಿನಯದೇವಸೇನ ನಾಮಮಹಾಮುನಿ ನೋನ್ತು ಪಿನಿ ನದಱಿಟ್ಟು ಪಳತಂಕದ ತಾನ್ನಿವಮೇಱಿದಾನ್ (ಎಕ. II, ೧೧೩-೨ : ಸು. 700). [IP ಇದು 'ಸಹಿತ' ಎಂಬುದರ ಅಪಲಿಖಿತ]

**ಸಗುಣ₁** 'ಸಕುನ' ನೋ.

**ಸಗುಣ₂** (ಗು). ೧. ಗುಣದಿಂದ ಕೂಡಿದ; ಗುಣಯುಕ್ತವಾದ. (ನಾ). ೨. (ಸತ್ತ್ವ, ರಜಸ್ಸು, ತಮಸ್ಸು ಎಂಬ) ಮೂರು ಗುಣಗಳಿಂದ ಕೂಡಿದ ಪರಮಾತ್ಮ; ಸಾಕಾರನಾದ ಪರಮಾತ್ಮ : ಪರನಪರಂ . . . ಸಗುಣನಗುಣಂ (ಜಗವಿ. ೩-೯೮) ; ಸಗುಣನಿರ್ಗುಣನಾ ಮಹಾತ್ಮನನಂತರೂಪವನು ವಿಗಡಿಸಲು ಜಯವಹುದೆ (ಕುವ್ಯಾಭೀ. ೧-೨೧); ಶಕ್ತಿಯ ಸಂಕೋಚದಿಂದ ಪ್ರಳಯಕಾಲದಲ್ಲಿ ಪರಮಾತ್ಮನು ನಿರ್ಗುಣನೆಂದೂ, ಶಕ್ತಿಯ ವಿಕಾಸದಿಂದ ಸೃಷ್ಟಿಕಾಲದಲ್ಲಿ ಸಗುಣನೆಂದೂ ಕರೆಯಲ್ಪಡುತ್ತಿರುವನು (ಶಕ್ತಿವಿ. ೩೧). ೩. [ಯೋಗ] ಸಮಾಧಿಯಲ್ಲಿ ಒಂದು ವಿಧ; ಸಾಕಾರ ಪರಮಾತ್ಮನ ಉಪಾಸನೆಯಿಂದ ಪಡೆಯುವ ಸಮಾಧಿ: ಸಗುಣ ನಿರ್ಗುಣವೆಂದು ಯೋಗದ ಬಗೆಗಳೆರಡಾಗಿರ್ಪವದಱೊಳು ಸಗುಣವೇ ಸಾಕಾರ ನಿರ್ಗುಣವೇ ನಿರಾಕಾರ (ಅಮೃತ. ೬-೭೮). 'ನಿರ್ಗುಣ' ಪರಾ. [ಸಂ.]

**ಸಗುಣಬ್ರಹ್ಮ** (ನಾ). ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿಂದ ಕೂಡಿದ ಪರಮಾತ್ಮ ; ಸಾಕಾರನಾದ ಪರಮಾತ್ಮ : ಕುಸುಮಾ ಸಗುಣಬ್ರಹ್ಮನನ್ನು ಆರಾಧಿಸಿದ್ದರೆ ಸುಶೀಲೆಯು ನಿರ್ಗುಣಬ್ರಹ್ಮನನ್ನು ಉಪಾಸಿಸುತ್ತಿದ್ದಳು (ಸಮಜೀ. ೯೬೭). 'ನಿರ್ಗುಣಬ್ರಹ್ಮ' ಪರಾ. [ಸಂ.]

**ಸಗುಣಬ್ರಹ್ಮವಾದಿ** (ನಾ). ಸಗುಣಬ್ರಹ್ಮತತ್ತ್ವವನ್ನು ಪ್ರತಿಪಾದಿಸುವವನು: ಬ್ರಹ್ಮವಾದಿಗಳಾದ ವೇದಾಂತಿಗಳಲ್ಲಿ ಕೆಲವರು ನಿಷ್ಪ್ರಪಂಚಬ್ರಹ್ಮವಾದಿಗಳು . . . ಕೆಲವರು ಸಗುಣಬ್ರಹ್ಮವಾದಿಗಳು (ಭಾರದ. ೧೩೧). 'ನಿರ್ಗುಣಬ್ರಹ್ಮವಾದಿ' ಪರಾ.

[ಸಂ. ಸಗುಣಬ್ರಹ್ಮವಾದಿನ್]

**ಸಗುಣಾರಾಧನೆ** (ನಾ). ಸಾಕಾರಮೂರ್ತಿಯ ಪೂಜೆ , – ಉಪಾಸನೆ : ಮಣಲ ಲಿಂಗವ ಮಾಡಿದನು ನಿರ್ಗುಣನ ಸಗುಣಾರಾಧನೆಯ ಮನ್ನಣೆಗಳಲಿ ವಿಸ್ತರಿಸಿದನು ವಿವಿಧಾಗಮೋಕ್ತದಲಿ (ಕುವ್ಯಾಅ. ೬-೪೩). 'ನಿರ್ಗುಣಾರಾಧನೆ' ಪರಾ.

[ಸಂ. ಸಗುಣಾರಾಧನಾ]

**ಸಗುಣೋಪಾಸಕ** (ನಾ). ಸಾಕಾರಮೂರ್ತಿಯನ್ನು ಪೂಜಿಸುವವನು: ಭಕ್ತಿಯುಗದಲ್ಲಿ ಎರಡು ವಿಧವಾದ ಕವಿಗಳು ನಮಗೆ ಕಾಣಬರುತ್ತಾರೆ. ಮೊದಲನೆಯವರು ನಿರ್ಗುಣೋಪಾಸಕರು; ಎರಡನೆಯವರು ಸಗುಣೋಪಾಸಕರು (ಭಾರದ. ೪೫೮). [ಸಂ.]

**ಸಗುಣೋಪಾಸನೆ** (ನಾ). = ಸಗುಣಾರಾಧನೆ : ವೇದೋದಿತ ಧರ್ಮ ಕರ್ಮಾಚರಣೆಗಳನ್ನು ಭಕ್ತಿಮಾರ್ಗದಲ್ಲಿ ಸಗುಣೋಪಾಸನೆಯ ಮೂಲಕ ಆಚರಿಸುವ ವಿಧಿವಿಧಾನಗಳೂ ಆಗಮಶಾಸ್ತ್ರಗಳಲ್ಲಿ ಉಕ್ತವಾಗಿವೆ (ಭಾರದ. ೭೦).

[ಸಂ. ಸಗುಣೋಪಾಸನಾ]

**ಸಗುತ್ತಿತ್ತೆ** (ನಾ). ಒಂದು ಬಗೆಯ ವೃಕ್ಷ : ಸಗುತ್ತಿತ್ತೆ ಮರಗಿಡ:– ಇದಱ ಬೇರಂ ಆದಿವಾರ ತಂದು ಕರಮೂತ್ರದಲ್ಲಿ ತೇದು ಕಾಳಗದ ತಗರಿನ ಕೊಂಬಿಗೆ ತೊಡೆಯೆ ತಗರು ಗೆಲುವುದು (ವಿವ್ಯವಿ. ೭). [?]

**ಸಗೋತ್ರ** (ಗು). ೧. ಒಂದೇ ವಂಶದ ,–ಕುಲದ ; ಸಮಾನ ಗೋತ್ರದ. (ನಾ). ೨. ಒಂದೇ ಗೋತ್ರಕ್ಕೆ ಸೇರಿದುದು : ಮೇದಿನೀಸತಿಯೋನಿ ಧವಳಿತವಾದ ವರ್ಣಂ ಶಂಕರನ ಪರಿಯಾದುದೇ ಗಾಯತ್ರಿ ಸಾಂಖ್ಯಾಯನ ಸಗೋತ್ರವಲಾ (ಬಸಪು. ೩-೬೩) ; ಸಗೋತ್ರವಿವಾಹವು ಧರ್ಮಶಾಸ್ತ್ರನಿಷಿದ್ಧವಾಗಿತ್ತು (ಭಾರದ. ೫೫). **೩. ಒಂದೇ ವಂಶದವನು ,– ಕುಲದವನು ; ದಾಯಾದಿ** : ಮಾನವ್ಯ[ನೆಂಬ] ನಾಮನುಸೂನು ಜಗತ್ರಯಪವಿತ್ರನೊಗೆದಂ ಮುನಿಸಂತಾನನುತಂ ತನ್ನುನಿಯಿಂ ಮಾನವ್ಯಸಗೋತ್ರರಾದರಾ ವಂಶದವರ್ (ಕಇಅ. ೧-೨-೧೦ ; 1058). [ಸಂ.]

**ಸಗ್ಗ**, ಸಗ, ಸರ್ಗ$_1$ (ನಾ). ದೇವತೆಗಳು ವಾಸಮಾಡುವ ಸ್ಥಳ ; ಸುರಲೋಕ ; ನಾಕ : "ಬರ್ದಿಲಂ, ಸಗ್ಗಂ — ಈ ೨ ಸ್ವರ್ಗದ ಪೆಸರ್" (ಕಶಸಾ. ೪೮-೧೭) ; ಎಮ್ಮೂರ ಮಿನುಕಿ ಎಡೆಯೊಳ್ತಾಗಿ ತ[ಟ್ಟಿ]ಱಿದು ಸಗ್ಗಮೇಱಿದಂ (ಸೌಇ. IX-I. ೪-೯; 900?); ಕಡುತಪದಿಂದೆ ನಿನ್ನ ಪಡೆಪಾವುದೊ ಗಾವಿಲ ಸಗ್ಗಮಲ್ತೆ ಪೋ ನುಡಿಯವೊ ಮೂರ್ಖ ಸಗ್ಗದ ಫಲಂ ಸುಖಮಲ್ತೆ (ಪಂಪಭಾ. ೭-೯೩) ; ರಾಜಕುಮಾರರು . . . ಸಗ್ಗವನ್ನು ಸೂರೆಗೊಳ್ಳಲು ಹೊರಟುಹೋದರು! (ಪಾಹುತ್ತ. ೫೧). **ಸಗ** : ಅೞಿದ ಪಾಪ್ಪಕ್ಕೆ XXX ನಕ್ಕು ಪಞ್ಚಮಹಾಪಾತಕನಕ್ಕು ಕಾವೊನ್ ಸಗದುಳಿಕು (ಸೌಇ. IX - i. ೧-೧೧ ; ಸು. 9ನಯ ಶತ?); ಅಬಚನಾಗನಾಯಕರು ಸಗಕೆ ಒಯಿದರ್ (ಎಕ. XI. ಹೊಳಲ್ಕೆ. ೧೦೭-೧೦ : 1303?). **ಸರ್ಗ$_1$** : ಥೊಲ ಅವನ್ ವಿಜಸಿತ್ತಿರಾ ಕಾಳೆಗದುಳ್ ಕುಡನಗರುಳ್ ಎಱೆದು ಸರ್ಗ್ಗಪುಕ್ಕದುನ್ (ಎಕ. X (S). ಚಿಂತಾಮ. ೧೭೭-೮ ; 8ನಯ ಶತ) ; ಇದು ನಾರೀಮಯಮಪ್ಪ ಲೋಕಮಿದು ಬೇಱೊಂದಂಗನಾದ್ವೀಪಮಿಂತಿದು . . . ಸರ್ಗಕ್ಕೆಂದು ಪದ್ಮೋದ್ಭವಂ ಸುದತೀರತ್ನಸಮೂಹಮಂ ಪದಪಿನಿಂ ಬಯ್ಚಿಟ್ಟ ಭಂಡಾರಮಪ್ಪುದು (ಕಾದಂಪೂ. ೯೯೮).

ಸಗ್ಗದ **ಜತಿ** = ದೇವಲೋಕದ ಯತಿ,— ಮುನಿ : ಹರಿಸದ ಸಗ್ಗದ ಜತಿಗಳ್ ನೆರೆದಂತೆ (ಕಬ್ಬಕಾ. ೧೬೮). **ಸಗ್ಗದ ಪೆಂಡಿರ್** = ದೇವಲೋಕದ ಸ್ತ್ರೀಯರು ; ಅಪ್ಸರೆಯರು : ಸೊಗಯಿಪ ಪೊಂಕು ಲಾಲಿಸುವ ಲಲ್ಲೆ . . . ಈ ವಿಭಾವಚೇಷ್ಟೆಗಳಿನ ದೇನಲಂಪನೆರ್ದೆಗಿತ್ತರೊ ಸಗ್ಗದ ಪೆಂಡಿರಾತನಾ (ಚಂದ್ರಪು. ೪-೭೧) : ಸಗ್ಗದ ಪೆಂಡಿರ ನುಣ್ಣರಕ್ಕೆ ಮಯ್ನೆಟ್ಟೆಳವಲ್ಲೆಗಳ್ (ಕಬ್ಬಕಾ. ೨೨೦). **ಸಗ್ಗದ ಮರ** = ದೇವಲೋಕದ ವೃಕ್ಷ ; ಕಲ್ಪವೃಕ್ಷ : "ಸಗ್ಗದ ಮರನೆನಲ್ಕೆ ಸುರತರುವೆನಿಕ್ಕುಂ" (ಶಬ್ದಮಂ. ೧೧). **ಸಗ್ಗದವರ್ಗಳ್** = ದೇವಲೋಕದವರು ; ದೇವತೆಗಳು : ಮುಗಿಲೊಡ್ಡಿನ ಕೆಲದೊಳ್ ಸಗ್ಗದವರ್ಗಳೆಲ್ಲರ್ ನಿಂದರ್ (ಕಬ್ಬಕಾ. ೨೮೯). **ಸಗ್ಗದ ಹೊಳೆ** = ದೇವಲೋಕದ ನದಿ ; ಸುರಗಂಗೆ : ಭಾಗವಾಡಿಯ ಬಸವಂಗೆ . . . ಸಗ್ಗದ ಹೊಳೆ ಈಸುವ ಕೆರೆಯಂತೆ ಆಚರಿಸಿದಪುದು (ಕಾಶಕ್ಕ. ೩೦೧). **ಸಗ್ಗದಾಕೆ** = ದೇವಲೋಕದವಳು ; ಅಪ್ಸರೆ : ಕರಮೆಸೆವ ರೂಪು ಕಣ್ಣಚ್ಚರಿಯಂ ಪುಟ್ಟಿಸಿದುದೀಕೆ ಯಾವಳೊ ನೆಲದೊಳ್ ಪಿರಿದುಂ ಮಾನಸಿಯರ್ಗೀ ಪರಿ ಚೆಲ್ವಿನಿತುಂಟೆ ಸಗ್ಗದಾಕೆಯೆ ದಿಟದಿಂ (ಕಬ್ಬಕಾ. ೧೧೪). **ಸಗ್ಗದಾಣ್ಮ** = ದೇವಲೋಕದ ಒಡೆಯ ; ಇಂದ್ರ : "ಇಂದಿರ . . . ಸಗ್ಗದಾಣ್ಮನೆನಲ್ಕಾಂ ಪೊಂದುಗುಮಿಂದ್ರಾಹ್ವಯ" (ಕವಿಕಂ. ೩೩) ; ಸಗ್ಗದಾಣ್ಮನ ವಿಭವಕ್ಕಿಮ್ಮಡಿಯನೀವುದಲೆ (ವಂಕಾರಾ. ೫-೩-೩೭). **ಸಗ್ಗದೂರು** = ದೇವಲೋಕ; ಸ್ವರ್ಗ : ಸಗ್ಗದೂರನೆ ಸೂರೆಗೊಂಡಂತೆ (ಶ್ರೀರಾಮಾ. ೭-೧೭೫). **ಸಗ್ಗದೆಱೆಯ** = ಸಗ್ಗದಾಣ್ಮ : "ಸಗ್ಗದೆಱೆಯಂ ದೇವೇಂದ್ರಂ" (ಕರ್ಣಾನಿ. ೯೫).

[< ಪ್ರಾ. ಪಾಲಿ. ಸಗ್ಗ. / ಸಂ. ಸ್ವರ್ಗ]

**ಸಗ್ಗಕನಸು** (ನಾ). ಸ್ವರ್ಗಸದೃಶವಾದ ಕನಸು : ನೆಗ್ಗಿದಸುರವರೂಥಸಾರಥಿ ಸಗ್ಗಕನಸನು ಕಂಡನ್ಕೆ ಸಿಡಿದಗ್ಗಳೆಯ ಖಳನುರುಬಿ ಹೊಯ್ದನು ಕ್ಷೇತ್ರಪಾಲಕನ ಉಗ್ಗಡವನೇನೆಂಬೆ ಭುವಿಯುಂ ಧಿಗ್ಗುಧಿಗಿಲೆಂದೆನೆ ಸರಾಗದಿ ಸಗ್ಗಸಲಿಗೆಯೊಳ್ಕೆ ದುತಿರ್ದನು ಬನದ ಬಾಹೆಯಲಿ (ಅಂಬಿಕಾ. ೩೩-೫). [ಸಗ್ಗ + ಕನಸು]

**ಸಗ್ಗದುರು** 'ಸಗ್ಗದುಱು' ನೋ.

**ಸಗ್ಗದುಱು**, ಸಗ್ಗದುರು (ನಾ). ದೇವಲೋಕದ ಹಸು; ಕಾಮಧೇನು: "ಸುರಧೇನುಗಾ ಸಗ್ಗದುಱು" (ಶಬ್ದಮಂ. ೧೧). **ಸಗ್ಗದುರು**: "ಕಾಮಧೇನುಗೆ ಪೆಸರ್ ಸಗ್ಗದುರುವೆಂದಕ್ಕು" (ಕಶರ. ೧೦೨). [ಸಗ್ಗ + ತುಱು]

**ಸಗ್ಗದೊರೆ** 'ಸಗ್ಗದೊಱೆ' ನೋ.

**ಸಗ್ಗದೊಱೆ**, ಸಗ್ಗದೊರೆ (ನಾ). ದೇವಲೋಕದ ನದಿ; ದೇವಗಂಗೆ: "ಸಗ್ಗದೊಱೆಯುಮಂದೆನಲುಱೆ ಗಂಗೆಗೆ ಪೆಸರ್" (ಕವಿಕಂ. ೯೩). **ಸಗ್ಗದೊರೆ**: "ಸಗ್ಗದೊರೆಯೆನಲ್ ದೇವನದಿ" (ಕಶರ. ೧೦೨). [ಸಗ್ಗ + ತೊಱೆ$_2$]

**ಸಗ್ಗಬಗ್ಗ** (ನಾ). ಸ್ವರ್ಗದ ಒಡೆಯ ; ದೇವೇಂದ್ರ : ಇಳೆಗಿದೇಂ ರತ್ನಸಾನುವೋ ಸಗ್ಗಬಗ್ಗನಿಹ ನಿಳಯಮೋ ನಾಲ್ಮೊಗನ ನೆಲೆವನೆಯೋ (ವಂಕಾರಾ. ೬-೬೪-೫೨).

[ಸಗ್ಗ + ಬಗ್ಗ$_3$]

**ಸಗ್ಗರ** (ನಾ). ಒಂದು ಬಗೆಯ ಈಟಿ (?) : ಸುತ್ತ ಕುಣಿಸುತಲಿರುವ ಭಟರುಗಳ್ ಛತ್ರಗಳು ಚಾಮರಗಳು ಮುತ್ತು ಮಾಣಿಕ ಬಿಗಿದ ದಂಡಗಳ್ ರತ್ನ ಸಗ್ಗರಯಾಟಗಳ್ (ಬಾಣಾಕ. ೨೮). [?]

**ಸಗ್ಗಲೆ** 'ಸಗ್ಗಳೆ' ನೋ.

**ಸಗ್ಗವಡಿ** (ನಾ). ಸ್ವರ್ಗದ ಬಾಗಿಲು ; ನಾಕದ್ವಾರ : ಆ ಕುಮಾರರನಾ ಒಂದೆ ಉಂಗುಟ ಪಾಗೆ ಪಡಿ ಭೋರೆಂದು ಬೀಯಗ ಉಳಿದು ತೆಱೆದುದು ಸಂದ ಸುಜನಗೆ ಸಗ್ಗವಡಿದೆಱೆವಂತೆ ಪುಣ್ಯದಲಿ (ಸಾಳ್ವಭಾ. ೨೧-೧೩). [ಸಗ್ಗ + ಪಡಿ$_2$]

**ಸಗ್ಗವಱೆ** (ನಾ). ದೇವಲೋಕದ ವಾದ್ಯ; ಸುರದುಂದುಭಿ: ಕರಿಯ ಮಲ್ಲಿಗೆ ಸುರಿದವಾ ಸಗ್ಗವಱೆ ಮೇಲೆ ಮೊಱೆದುವು ಬನದ ಕನ್ನೆಯರು ಹರಸಿ ಮುತ್ತಿನ ಸೇಸೆಯ ನಿಕ್ಕಿದರು (ಶ್ರೀಪಾಲ. ೧೨-೫೦). [ಸಗ್ಗ + ಪಱೆ$_1$]

**ಸಗ್ಗವೆಟ್ಟು** (ನಾ). ದೇವಲೋಕದ ಬೆಟ್ಟ: ಸಗ್ಗವೆಟ್ಟೆಸೆವ ಬಿಲ್ ಪಾಶುಪತಮಂಬು ಸಮ್ಯಗ್ಗೋಪವಾಹಂ ತ್ರಿಶೂಲಮಾಯುಧಮೆನಲ್ ಬಗ್ಗದೊವಲುಡಿಗನೀರೇಳ್ಬುವನ ದೊಡೆಯನೆಸೆದಂ ರಾಜವಿಭವದಿಂದೆ (ಚಬಪು. ೨೯-೪೧).

[ಸಗ್ಗ + ಬೆಟ್ಟು$_2$ (< ಬೆಟ್ಟ)]

**ಸಗ್ಗವೆಣ್**, ಸಗ್ಗವೆಣ್ಣು, ಸಗ್ಗಹೆಣ್ (ನಾ). ದೇವಲೋಕದ ಸ್ತ್ರೀ; ಅಪ್ಸರಸ್ತ್ರೀ: ಚಂಡಾಳಿಯಾಡಿದ ಬಂಡಿನ ಭವನವ ಕಂಡು ಮೆಟ್ಟಲು ದೋಷಮೆಂದು ಪುಂಡರೀಕ ನಾಲ್ಕರಲು ಸೋಂಕದೆ ಸಗ್ಗವೆಂಡಿರೊಸೆದು ನರ್ತಿಸಿದರು (ನೇಮಿಸಂ. ೨೨-೧೩೨); ಪೊಡವಿವೆಂಗಳ ಬಿಟ್ಟು ಸಗ್ಗವೆಂಗಳಿಗೊಲ್ಲ ಜಡ ಬ್ರಹ್ಮಚಾರಿಯೆ ಅವನು (ಭರಚ. ೮-೧೦೭); ಹರಿ ನಿನ್ನ ಸಗ್ಗವೆಂಗಳ ತನುಕಾಂತಿಗಳ್ ವರನಾಸಿಕದ ಸೊಬಗೆಮ್ಮ ಅರಲೊಳಗಿದೆ (ಕಂಸವಿ. ೭-೫೨). **ಸಗ್ಗವೆಣ್ಣು** : ಮಗ್ಗುಲಿನಿಯನನುಳಿದು ಪೋಪುದುಚಿತವೆ ಮಗಳೆ ಸಗ್ಗವೆಣ್ಣೆಂಬ ಪಾತಿಗೆ ಕಾಯ್ದು (ಚಬಪು. ೧೯-೨೭). **ಸಗ್ಗಹೆಣ್** : ಮಧುರೆಯರಸನ ಮಂದಿಯೊಳ್ಕೆನೂಱರಸುಮಕ್ಕಳು ಕಾದಿ ಸಂದರು ಸಗ್ಗಹೆಂಗಳಿಗೆ (ಕಂಸವಿ. ೧೭-೫೭). [ಸಗ್ಗ + ಪೆಣ್]

**ಸಗ್ಗವೆಣ್ಣು** 'ಸಗ್ಗವೆಣ್' ನೋ.

**ಸಗ್ಗವೊನಲು** (ನಾ). = ಸಗ್ಗದೊಱೆ : ''ಸಗ್ಗವೊನಲು ಸಗ್ಗಿಗದೊಱೆಯು ಬಾಂಬೊಟೆಯುಮೊಗೆಗು ಸ್ವರ್ನದಿಯ ಪೆಸಟಿಲ್ಲಿ'' (ಶಬ್ದಮಂ. ೧೧).
[ಸಗ್ಗ + ಪೊನಲು (< ಪೊನಲ್)]

**ಸಗ್ಗವೊಳೆ** 'ಸಗ್ಗವೊಟೆ' ನೋ.

**ಸಗ್ಗವೊಟೆ, ಸಗ್ಗವೊಳೆ** (ನಾ). = ಸಗ್ಗದೊಱೆ : ''ಸಗ್ಗವೊಟೆ [ಪಾಠಾಂ. ಪಳೆ, ದೊಱೆ] ಬಾಂದೊಱೆಯೆಂದಱೆ ಸುರನದಿ'' (ಚತುನಿ. ೪೫). **ಸಗ್ಗವೊಳೆ** : ಕಂದರ್ಪನ ದೀವದ ಕಳಹಂಸೆಯ ಸಂದಣಿ ಸಗ್ಗವೊಳೆಯೊಳಾಡಲ ಬೇಕೆಂದು ನಭೋಮಾರ್ಗಕೆ . . . ಅಡರುವಂತೆ (ಜಯಕಾ. ೧೨-೬). [ಸಗ್ಗ + ಪೊಟೆ]

**ಸಗ್ಗಸಲಿಗೆ** (ನಾ). ಬಹಳ ಸಲಿಗೆ,— ಸದರ : ನೆಗ್ಗಿದಸುರವರೂಥಸಾರಥಿ ಸಗ್ಗಕನಸನು ಕಂಡನ್ಕೆ . . . ಭುವಿಯುಂ ಧಿಗ್ಗುಧಿಗಿಲೆಂದನೆ ಸರಾಗದಿ ಸಗ್ಗಸಲಿಗೆಯೊಳ್ಕೆದುತಿರ್ದನು ಬನದ ಬಾಹೆಯಲಿ (ಅಂಬಿಕಾ. ೩೩-೫).
[ಸಗ್ಗ$_{1?}$ + ಸಲಿಗೆ$_1$ (< ಸಲ್ಗೆ)]

**ಸಗ್ಗಸ್ತ, ಸರ್ಗಸ್ತ** (ನಾ). ದಿವಂಗತನಾದವನು ; ಸ್ವರ್ಗಸ್ಥ : ಪಲರಂ ಕೊನ್ದು ಸಗ್ಗಸ್ತನಾದ (ಎಕ. V. ಹಾಸನ. ೪-೫ : 1117). **ಸರ್ಗಸ್ತ** : ಗೊಟ್ಟೆಯಣ್ಣಗಾವುಣ್ಣನೂರಳಿವಿನೊಳು ಕಾದಿ ಸತ್ತು ಸರ್ಗ್ಗಸ್ತನಾದ (ಎಕ. IX. ಚನ್ನಪ. ೧೫೯-೭ ; ಸು. 904 ?).
[< ಸಂ. ಸ್ವರ್ಗಸ್ಥ]

**ಸಗ್ಗಹೆಣ್** 'ಸಗ್ಗವೆಣ್' ನೋ.

**ಸಗ್ಗಳೆ, ಚಕ್ಕಳೆ, ಸಗ್ಗಲೆ** (ನಾ). ೧. ನೀರುತುಂಬುವ ಚರ್ಮದ ಚೀಲ ; ಪಕಾಲಿ : ತೆಗೆದು ತೊಳೆತೊಳೆದೊಟಿಸಿದನು ಸಗ್ಗಳೆಯ ನೀರಿನಲಿ (ಕುಮ್ಮಾಅ. ೪-೧೮) ; ಸಗ್ಗಳೆಯ ನೀರಿಂದ ಕಾಲ್ಗುದಿಯೊಳ್ ಬಸಿವ ನೆತ್ತರಂ ತೊಳೆದು (ಜೈಮಿಭಾ. ೨೮-೫೫) ; ಸಗ್ಗಳೆಯ ನೀರಿಂದ ತೊಳೆಯುತ್ತಾನೆ (ಚಂದ್ರಸ. ೩೭-೧೫). ೨. ನೀರುತುಂಬುವ ಪಾತ್ರೆ ; ಚೊಂಬು : ''ಪಾತ್ರ ಕುಡಿನೀರಿಹುದು ಸಗ್ಗಳೆಯೆನಿಕ್ಕು'' (ಮಂಗರಾ. ೭೯-೪) ; ಹರುಷದಿಂ ಸರ್ವರಾಜ್ಯವನೀವುದರಸ ಎಂದರಸಿ ನುಡಿಯಲು ಮನಂ ಶಂಕಿಸದೆ ಸಗ್ಗಳೆಯ [ಪಾಠಾಂ. ಸುತನುಡಿಯೆ] ಕರದಲೆತ್ತಿದನೆಱೆದ ಧಾರೆಯನು ಮುನಿವರಗೆ (ಹಚಕಾ. ೮-೪೬) ; ಎತ್ತಿ ಸಗ್ಗಳೆಯ ನೀ ಧಾರೆಯನೆಱೆವಲ್ಲಿ ಮತ್ತ ಕೇಳಿದ ಮುನಿರಾಯ (ಹರಿಸಾಂ. ೩೮-೯೧); ಎಳ್ಗೆಯಿಂ ಹರಿವ ಜಲ ಶುದ್ಧ ಸಗ್ಗಳೆಯ ಜೂಳಿ ತಾ ಶುದ್ಧ (ಸರ್ವಜ್ಞ. ೧೯೧೮). **ಚಕ್ಕಳೆ**: ೧. (೬). **ಸಗ್ಗಲೆ** : ೨. ಪಕ್ಕಲೆಯ ಸಗ್ಗಲೆಯೊಳಿಕ್ಕಿರ್ದ ವಾರಿಯನು ಚೊಕ್ಕಟವೆಂದು ಕುಡಿಯುತಿರೆ ಹೊಲೆಯರು ಚಿಕ್ಕವರು ಹೇಗೆ (ಸರ್ವಜ್ಞ. ೯೫೫). [ದೇ. ‖ ತೆಲು. ಸಗ್ಗಡ],

**ಸಗ್ಗಾರ** (ನಾ). ಹೆಚ್ಚಾದ ಕಾರ : ಅಗ್ಗ ಮಗ್ಗಕೆ ಲೇಸು ಮಗ್ಗ ಜಾಡಗೆ ಲೇಸು ನುಗ್ಗೆಯಾ ಪಲ್ಯ ಉಣ ಲೇಸು ಬಾಯಿಗೆ ಸಗ್ಗಾರವೇ ಲೇಸು (ಹಾಸ್ಯಮಂ. ೬).
[< ಸಗ್ಗ ? + ಕಾರ$_2$]

**ಸಗ್ಗಾವತ್ತು** (ನಾ). ಸ್ನೇಹ ; ಸಖ್ಯ (?) : ನಮ್ಮ ಸಗ್ಗಾವತ್ತಿನ ಅರಸುಗಳು ಪರಿಯಾಪಟ್ಟಣದ ಒಳಗೆ ಇರುತ್ತಾ ಇದ್ದರು (ರಾಜೇಂದ್ರ. ೧೯೬) ; ಇದರ ಮೇಲೆ ಅವರಿಗೂ ತಮಗೂ ಪ್ರಾಕಾರಭ್ಯ ದೋಸ್ತಿ ಸಗ್ಗಾವತ್ತು ಉಂಟು (ರಾಜೇಂದ್ರ. ೨೧೧).
[?. / ಅರ. ಸಖಾವತ್ ; ಮರಾ. ಸಕೋವತ್, ಸಖಾವತ್ = ಔದಾರ್ಯ]

**ಸಗ್ಗಿ** (ನಾ). ಸತ್ತುಹೋದವನು ; ಸ್ವರ್ಗವಾಸಿ : ಮದಲೂರ ಕುಪ್ಪನ್ಸೊಟು ಗೊಳೊಲ್ ಬಿಡು ಸತ್ತು ಸಗ್ಗಿ ಆದನ್ದವಕ್ಕೆ ಮೂತೂಮ್ಬು ಕಟನಿ ಪರಿಹಾರ ಕೊಟ್ಟರ್ (ಎಕ. X. ಕೋಲಾರ, ೧೮೨-೩ ; 1000 ?).

**ಸಗ್ಗಿಯಾಗು** = ಸತ್ತುಹೋಗು; ಸ್ವರ್ಗಸ್ಥನಾಗು: ಮಲ್ಲ ಪರಿಯೊಡನೆ ತಾಗಿ ಕಾದಿ ಸಗ್ಗಿಯಾದಮ್ (ಎಕ. X. ಶ್ರೀನಿವಾ. ೧೯-೫ ; ಸು. 800) ; ಶ್ರೀ ಹೆಮ್ಮಯನ ಮಗ ಸಾನ್ತಂ ತೊಱುಗೋಳೊ ಕಾದಿ ಸತ್ತು ಸಗ್ಗಿಯಾದಂ (ಎಕ. IX (S). ಹೊಸಕೋ. ೧೯೫-೭ ; 1000).
[< ಸಂ. ಸ್ವರ್ಗಿನ್]

**ಸಗ್ಗಿಗ** (ನಾ). ಸ್ವರ್ಗದಲ್ಲಿರುವವನು ; ದೇವತೆ ; ಸುರ : ''ಬಿಡುಗಣ್ಣವರ್ . . . ಸಗ್ಗಿಗರು ಬರ್ದುಗರ್ಕದೆಯಾ ಪೆಸರು ಸಲ್ಬುದು ಸುರರ್ಗೆ'' (ಶಬ್ದಮಂ. ೧೦) ; ಸಗ್ಗಿಗರ್ ನೆಲನನೊಡಂಬಟ್ಟರ್ (ಕಬ್ಬಿಕಾ. ೩೦೮) ; ದಾಯಿಗನಾದನಗ್ಗಳದ ಸಗ್ಗಿಗರೊಳ್ (ಚಿಕವಿ. ೨-೨೧).

**ಸಗ್ಗಿಗರಡಬಳ** = ದೇವತೆಗಳ ಅಡಿಗೆಯವನು ; ಅಗ್ನಿ : ''ಅಗಿನಿ ಮರ ಗೂಟನಿಂಗಳನಗ್ಗಿಹಗ್ಗಿ ಸಗ್ಗಿಗರಡಬಳಂ ಕಿಚ್ಚು ಕೆಂಗಿಡಿಯನೆಲರ್ಗೆಳೆಯಂ . . . ಅನಲನ ನಾಮವು'' (ಶಬ್ದಮಂ. ೧೨). **ಸಗ್ಗಿಗರ ಪಿರಿಯ** = ದೇವತೆಗಳ ಹಿರಿಯ ; ಬ್ರಹ್ಮ : ''ಪೊಂಬೊಡೆಯನಂಚೆದೇರಂ ಸಗ್ಗಿಗರ ಪಿರಿಯನುಂ ಬೇದಬಿಜ್ಜಗಂ . . . ಬ್ರಹ್ಮಗೆಸೆವ ನಾಮಂ'' (ಕಬ್ಬಕೈ. ೯). **ಸಗ್ಗಿಗರರಸ** = ದೇವತೆಗಳ ರಾಜ; ಇಂದ್ರ : ವರಶಚೀವಧುಸಹಿತ ಸಗ್ಗಿಗರರಸನೈರಾವತವನೇಱಿದನು (ಸಾಳ್ವಭಾ. ೩೩-೧೪). **ಸಗ್ಗಿಗರಾಣ್ಮ** = ಸಗ್ಗಿಗರರಸ : ''ಇಂದಿರಂ . . . ಸಗ್ಗಿಗರಾಣ್ಮಂ ಈ ೪ ಇಂದ್ರನ ಪೆಸರ್'' (ಕಶಸಾ. ೪೮-೨೦). **ಸಗ್ಗಿಗರೆಱೆಯ** = ಸಗ್ಗಿಗರರಸ : ಬರ್ದುಗರಾಣ್ಮ ಸಗ್ಗಿಗರೆಱೆಯನಾಗಿ ದೇವಲೋಕದಲ್ಲಿ ಪಿರಿದಾಗಿ ಸಂತಸಮನನುಭವಿಸುತಿರ್ಪನು (ಭಾರತಾಂ. ೨೪೨). **ಸಗ್ಗಿಗರೊಡೆಯ** = ಸಗ್ಗಿಗರರಸ: ಮೊದಲೊಳ್ ಸಗ್ಗಿಗರೊಡೆಯನುಂ . . . ನುಡಿಯಿಸಿದೊಡಂ ತಾಂ ತಿಳಿಯದೆ ಅಸಡ್ಡೆಯಂ ತೋರ್ದಂ (ಅದ್ಭುತ. ೬-೨೫).
[ಸಗ್ಗ + - ಇಗ]

**ಸಗ್ಗಿಗದೊಱೆ** (ನಾ). = ಸಗ್ಗದೊಱೆ : ''ಸಗ್ಗವೊನಲು ಸಗ್ಗಿಗದೊಱೆಯು ಬಾಂಬೊಟೆಯುಮೊಗೆಗು ಸ್ವರ್ನದಿಯ ಪೆಸರು'' (ಶಬ್ದಮಂ. ೧೧). [ಸಗ್ಗಿಗ + ತೊಱೆ$_2$]

**ಸಗ್ಗಿಗವಟ್ಟೆ** (ನಾ). ದೇವತೆಗಳ ದಾರಿ ; ಆಕಾಶಮಾರ್ಗ : ''ಆಗಸಂ . . . ಸಗ್ಗಿಗವಟ್ಟೆ, ಮುಗಿಲ್ಬಟ್ಟೆ, ಬಾನ್ - ಈ ೬ ಆಕಾಶಂ'' (ಕಶಸಾ. ೪೯-೪೧) ; ''ಅಂಬರಕೆ . . . ಸಗ್ಗಿಗವಟ್ಟೆಯೆಂದು'' (ಶಬ್ದಮಂ. ೧೫). [ಸಗ್ಗಿಗ + ಬಟ್ಟೆ$_1$]

**ಸಗ್ಗಿಗವೆಟ್ಟು** (ನಾ). = ಸಗ್ಗವೆಟ್ಟು : ''ಸಗ್ಗಿಗವೆಟ್ಟೆಂದುಂ ಸೊನ್ನವೆಟ್ಟೆಂದುಂ ಮೇರುಗಿರಿ'' (ಕಶಸಾ. ೪೯-೪೪) ; ಸಗ್ಗಿಗವೆಟ್ಟೇ ಪೆರ್ವಿಲ್ಲಾಸುಗಿಯಗ್ಗಳದೊಳ್ತಿರು ಪೊಡೆಯಲರನು ಕಟ್ಟೆಗ್ಗಿಯ ಕೂರ್ಗಣೆ ನೆಲನೇ ತೇರ್ ಸಸಿ ಬಿಸುಗದಿರರ ಗಾಲಿ (ಉದ್ಭಟದೇ. ४-೪೬). [ಸಗ್ಗಿಗ + ಬೆಟ್ಟು$_2$ (< ಬೆಟ್ಟ)]

**ಸಗ್ಗಿಗವೆಣ್** (ನಾ). ದೇವಲೋಕದ ಸ್ತ್ರೀ ; ಅಪ್ಸರೆ : ಶರಣನಿಧಿಯೊಸಗೆಯಂ ನೋಳ್ಪ ಸಗ್ಗಿಗವೆಣ್ಗಳುರುಕಟಾಕ್ಷದ್ಯುತಿಯೋ (ಪದ್ಮರಾ. ೬-೯೯).
[ಸಗ್ಗಿಗ + ಪೆಣ್]

**ಸಗ್ಗಿಸು** 'ತಟ್ಗಿಸು' ನೋ.

**ಸಗ್ಗು** 'ತಟ್ಗು' ನೋ.

**ಸಗ್ಧಿ** (ನಾ). ಕೂಡಿ ಉಣ್ಣುವಿಕೆ ; ಜೊತೆಯಲ್ಲಿ ಕುಳಿತು ತಿನ್ನುವಿಕೆ. [ಸಂ.]

**ಸಘಾಟ** (ನಾ). ೧. ಬಲದ ಮುಂಚೂಣಿ ; ಸೈನ್ಯದ ಅಗ್ರಭಾಗ. ೨. ಆಡಂಬರ ; ವೈಭವ : ದೊರೆಯ ನೋಳ್ಪುದ ಮಱೆದಿಲ್ಲಿ ನಿಂದೆನು ಪುಷ್ಪಶರನ ಸಘಾಟವಿನ್ನೆಂತೊ (ನಾಗಕು. ೧೦-೬೪) ; ಈಸುದಿನವೆನ್ನೊಡನೆ ಕಾಳೆಗದೊಳದಿರಾಗಿ ಗಾಸಿಯಾಗದ ದೈತ್ಯರಿಲ್ಲ ದನುಜಾರಿಯೆಂಬೀ ಸಘಾಟ[ಪಾಠಾಂ. ಡ]ದಿ ಪೆಸರನಱಿದು ನೀಂ ಬಂದುದ ಜ್ಞಾನಕೃತಮೋ ಸಹಜಮೋ (ಚಬಪು. ೨೫-೧೪). [ಸಂ.]

**ಸಘಾಟಿಕೆ** (ನಾ). ೧. ಧೈರ್ಯ ; ಸಾಹಸ : ಜಾಣ್ಮೆಯ ಸಘಾಟಿಕೆಯ ಮಾತಿನಲಿ ಬೆಗಡುಗೊಳಿಸುತ್ತಮಳಚಾತುರ್ಯಯುತನೆನಿಸುವ (ರಾಘಚ. ೭-೪೪). ೨. ದರ್ಪ; ಉದ್ಧಟತನ : ಮಿಸುಕಬಾರದು ನಿಮ್ಮ ಭಕ್ತರ ದೆಸೆಯೊಳಾರಿಗೆ ಬದುಕಬಹುದಿನ್ನ ಸಗಗೇಕಿನಿತುಂ ಸಘಾಟಿಕೆ ಜನರನೊಗೆದಹನು (ಬಸಪು. ೨೧-೧೮); ಸಕಲಭೂವಲಯಕೆ ಮಿಾಟೆನಿಸುವಾತನೀ ಪೊಳಲಾಣ್ಮನೊರ್ವನೆ ಸಘಾಟಿಕೆಯೊಳೆಂದು ಬೆರಲೆತ್ತಿ ತೋಱಿಸುವಂತೆ (ಜೈಮಿಭಾ. ೧೭-೯). ೩. ಘನತೆ; ಗಾಂಭೀರ್ಯ; ಹಿರಿಮೆ: ಚಾಟುನುಡಿಯ ಚದುರೆಯರಿಂದಿನಿದೀವ ಕೂಟದ ಕುಶಲೆಯರಿಂದ ಬೇಟದ ಬೆಲೆವಣ್ಗಳಿಂದಾ ನಾಡು ಸಘಾಟಿಕೆಯನು ಪಡೆದಿಹುದು (ರಾಮವಿ. ೧೧-೧೭) ; ನೀನು ನೆನೆದ ಸಂಗ್ರಾಮ ಸಘಾಟಿಕೆಯಾಯ್ತು ಕಂಜಾಸ್ತ್ರ (ಭರಚ. ೫೧-೮೦) ; ಮಿಾರಿ ಹೊಕ್ಕೊಡೆ ಸಪ್ತಪಾತಾಳದ ಸಘಾಟಿಕೆಯ ತೋರಿಸುವ ಬಿಂಕದ ಬಿಲಗಳು (ಶರಚ. ೨೮೪). ೪. ಆಡಂಬರ; ವೈಭವ: ಇದೆ ನಿರಂಜನತತ್ತ್ವಸಾಮ್ರಾಜ್ಯದ ಸಘಾಟಿಕೆ (ಕುಮ್ಮಾಭೀ. ೩-೬೮) ; ಭೀಮ ಫಲ್ಗುಣರ ಸನ್ಮಾನದ ಸಘಾಟಿಕೆಯ . . . ಕಂಡು ನಲಿದಾಡಿತು ಜನಂ ಮುದದೊಳು (ಜೈಮಿಭಾ. ೩೪-೧೦) ; ಕೇಳಿದೌ ಘನಲಿಂಗವತಿಥಿ ಮಾಹೇಶ್ವರರ ಜಾಲದ ಮಹತ್ವದ ಸಘಾಟಿಕೆಯ (ಗುರುಚಾ. ೩-೪೮). [ಸಘಾಟ + - ಇಕೆ]

**ಸಘಾಡ** 'ಸಗಾಡ' ನೋ.

**ಸಘಾಡಿಕೆ** 'ಸಗಾಡಿಕೆ' ನೋ.

**ಸಘಾಡಿಕೆತನ** (ನಾ). ಹೆಚ್ಚಳ ; ಅತಿಶಯ : ಲೇಸುಲೇಸೆಲೆ ಭೀಮ ಸಮರವಿಲಾಸ ನೋಡುವುದೆಮ್ಮ ಬಿಲುವಿದ್ಯಾಸಘಾಡಿಕೆತನವ ನೀವೇ ಸಾಗಿಯರೆಗಳಿಗೆ (ಕೋಗಯ. ೨೪-೫). [ಸಘಾಡಿಕೆ (< ಸಗಾಡಿಕೆ) + - ತನ]

**ಸಘಾನ** (ನಾ). ೧. ಘನತೆ ; ಗಾಂಭೀರ್ಯ : ದಾನದಲಿ ವಿವಿಧಾಗ್ನಿಕಾರ್ಯವಿಧಾನದಲಿ ವಿಪ್ರೌಘವಚನ ಸಘಾನದಲಿ ಮಗಧೇಶನಿದ್ದನು (ಕುವ್ಯಾಸ. ೨-೬೦) ; ನೀನೆ ಕಂಡೆಯಲಾ ದುರಾತ್ಮಕ ಮಾನಜಠರದಲುಳಿದ ತನ್ನ ಸಘಾನವನು ನೋಡೆನುತ ಗದೆಯಲಿ ಕೆಡಹಿದನು (ನಿಭಾಗ. ೧೦-೬೬-೨೨). ೨. ಘನತೆಯುಳ್ಳವನು; ಗಾಂಭೀರ್ಯದವನು: ದಾನವರು ಮಾನವರೊಳಿನ್ನು ಸಘಾನರಾರಿವರಂತೆ ಪಾಂಡವರ್ಗೇನಸಾಧ್ಯವು ವೀರ ನಾರಾಯಣನ ಕರುಣದಲಿ (ಕುವ್ಯಾಗ. ೬-೩೫). 'ಸಗಾಢ' ಪರಾ. [< ಸಂ. ಸಘನ]

**ಸಘಾನತನ** (ನಾ). = ಸಘಾನ ೧ : ನೀನು ಖತಿಯನು ಹಿಡಿಯೆ ನಿನ್ನ ಸಘಾನತನವನು ಬಲ್ಲೆ ಯೋಗಿಗಳೇನನೆಂಬರು ತಮ್ಮೊಳಗೆ ಕೈಹೊಯ್ದು ಮಿಗೆ ನಗುತ (ಕುವ್ಯಾಭೀ. ೬-೪೧). [ಸಘಾನ + - ತನ]

**ಸಘಾನತೆ** (ನಾ). = ಸಘಾನ ೧ : ಅಹಿತ ಪಟುಭಟನ ಸಘಾನತೆಯನೆತ್ತಿದವು ಕುತ್ತಿದವಂಬು ದಳಪತಿಯ (ಕುವ್ಯಾಶ. ೨-೬೩) ; ಮಾನವಾಧೀಶ್ವರನ ಕೀರ್ತಿಗೆ ಹಾನಿಯಲ್ಲ್ಯೆ ಕೇಳು ನಿನ್ನ ಸಘಾನತೆಗೆ [ಪಾಠಾಂ. ಘನತೆಯ ತಾನು] ತಾ ಬಂದರೋಡುವದುಚಿತವಲ್ಲೆಂದ (ನಿಭಾಗ. ೧೦-೫೧-೪೭). [< ಸಂ. ಸಘನತಾ]

**ಸಚರ** (ಗು). ೧. ಚಲನೆಯಲ್ಲಿರುವ ; ಓಡಾಡುವ : ಸಚರವಚರ ಶೂನ್ಯಾಶೂನ್ಯ ನಿಚಯವಿಲ್ಲದಂದಿನ ಅಚಲವಪ್ಪ ಮಹಾಘನ (ಅವಚಂ. ೨೮೫-೧೨೯೮). (ನಾ). ೨. ಚಲನೆಯಲ್ಲಿರುವುದು ; ಜಂಗಮ : ಸಚರ ಸ್ಥಾವರಕೆಲ್ಲ ಸರ್ವ ಸುಖದುಃಖಗಳ್ ಸಮಾನಂಗಳ್ (ಸೋಮೇಶ. ೯೯). [ಸಂ.]

**ಸಚರಾಚರ** (ಗು). ೧. ಚಲನೆಯಲ್ಲಿರುವ ಮತ್ತು ಚಲನೆಯಿಲ್ಲದ : ಸಚರಾಚರ ವಸ್ತೂತ್ಪಾತಚಯಂ ಜನವಿಳಯಕರಮದಂ ರಕ್ಷಿಸಲೆಂದಚಳಿತವಚನಂ ಪುಣ್ಯೋಪಚಯಮನುತ್ಪಾತಶಾಂತಿಯಂ ವಿರಚಿಸಿದಂ (ಲೋಕೋಪ. ೪-೧). (ನಾ). ೨. ಚಲನೆಯಲ್ಲಿರುವ ಹಾಗೂ ಚಲನೆಯಿಲ್ಲದ ವಸ್ತು ; ಜಂಗಮಸ್ಥಾವರ : ಸಂಸಾರಕಾಯದೊಳಂ ಸಿಲುಕಿ ಮಹಾಭೂತಗೂಡಿರ್ದು ಸಹಜ ಬೇಱಾಗಿ ಸಚರಾಚರವ ಚರಿಸುತ್ತಿಹ (ಅವಚಂ. ೨೯೦-೧೩೦೨) ; ನೆರೆದ ಸಚರಾಚರವಿದೆಲ್ಲವು ನರರ ನಿಜಭೋಜನಕೆ ಜನಿಸಿದವರಸ (ಕುವ್ಯಾಉ. ೩-೬೨). [ಸಂ.]

**ಸಚಿ** (ನಾ). ೧. ಗೆಳೆತನ; ಸ್ನೇಹ. ೨. ಗೆಳೆಯ; ಸ್ನೇಹಿತ. ೩. ಇಂದ್ರನ ಹೆಂಡತಿ; ಶಚೀದೇವಿ. [ಸಂ.]

**ಸಚಿತ್ತ** (ಗು). ೧. ಚಿತ್ತದಿಂದ ಕೂಡಿರುವ. (ನಾ). ೨. ಚೈತನ್ಯವನ್ನು ಹೊಂದಿರುವಿಕೆ : ಇಂತು ಸಚಿತ್ತಾಚಿತ್ತ ಶೀತೋಷ್ಣ ನಿವೃತ ಸಂವೃತಾದಿ ಭೇದದಿಂ (ಸುಕುಮಾ. ೫-೩೨ ವ) ; ಆತ್ಮನ ಚೈತನ್ಯವಿಶೇಷಪರಿಣಾಮಂ ಚಿತ್ತಂ ಅದುಳ್ಳುದು ಸಚಿತ್ತಂ (ತತ್ತ್ವಪ್ರ. ೧೦೨). [ಸಂ.]

**ಸಚಿತ್ತನಿಕ್ಷೇಪ** (ನಾ). [ಜೈನ] ಹಸಿರು ಕಾಯಿಪಲ್ಲೆಗಳನ್ನು ಶೇಖರಿಸಿಡುವುದು (?) : ಕ್ರಮದೆ ಪರವ್ಯಪದೇಶಂ ಸಮತ್ಸರದತ್ವಂ ಸಚಿತ್ತನಿಕ್ಷೇಪ ವಿಧಾನಮತಿಕ್ರಮ ಕಾಲಮತಿಕ್ರಮಮಕ್ಕುಂ ಪಾತ್ರದಾನಮಂ ಕುಡುವೆಡೆಯೊಳ್ (ಸುಕುಮಾ. ೬-೨೨). [ಸಂ.]

**ಸಚಿತ್ತವಿರತ** (ನಾ). [ಜೈನ] ಹಸಿರು ಕಾಯಿಪಲ್ಲೆ, ಹೂವು ಮೊದಲಾದುವುಗಳನ್ನು ತಿನ್ನುವುದಿಲ್ಲವೆಂಬ ವ್ರತವನ್ನು ಕೈಕೊಂಡವನು : ಕುಸುಮಫಳ ಕಂದಮೂಲಪ್ರಸರಂಗಳನಗ್ನಿಪಕ್ವಮಲ್ಲದುವನಪೇಕ್ಷಿಸಿ ಕೊಳ್ಳದನಯ್ದನೆಯಂ ಪೆಸರಿಂದಾತಂ ಸಚಿತ್ತವಿರತನೆನಿಕ್ಕುಂ (ಸುಕುಮಾ. ೬-೩೦). [ಸಂ.]

**ಸಚಿವ** (ನಾ). ೧. ಒಡನಾಡಿ ; ಗೆಳೆಯ. ೨. ಮಂತ್ರಾಲೋಚನಸಭೆಯ ಸದಸ್ಯ; ಮಂತ್ರಿ ; ಅಮಾತ್ಯ : ಸಂತತಿವೇಟ್ಕುಮೆಂದು ಸಚಿವರ್ ಸಲೆ ಪೇಟ್ಟಿಯುಂ (ಕಾದಂಪೂ. ೨೦) ; ಸಚಿವರೊಳ್ ಸಮಾಲೋಚನಂಗೆಯ್ದು (ಜಗವಿ. ೩-೨೦ ವ) ; ರಾವುತರು ಸಚಿವಮಾತ್ಯರು ವಿಪ್ರರು . . . ಮುಸುಕಿತು (ಜೀವಂಸಾಂ. ೧೭-೨೨). [ಸಂ.]

**ಸಚಿವತೆ** (ನಾ). ಮಂತ್ರಿಯಾಗಿರುವಿಕೆ : ಇಂತಿದು ಗುರುತಟಾಕಾದಿಗಳನೆಸಗಿ ಸಚಿವತೆಯನುಳಿದಾಜಿನೆಯ ಸುಸಂಧಿ (ಪದ್ಮರಾ. ೬-೧೦೮). [ಸಂ. ಸಚಿವತಾ]

**ಸಚಿವಾಯತ್ತ** (ನಾ). ಮಂತ್ರಿಮಂಡಲದ ಮೂಲಕ ನಡೆಯುವ ರಾಜ್ಯಭಾರ ; ಸಚಿವಾಡಳಿತ : ಪ್ರಭುಸಿದ್ಧಿಯನ್ನು ಅರ್ಥಶಾಸ್ತ್ರಕಾರರು ರಾಜಾಯತ್ತ ಸಚಿವಾಯತ್ತ ಉಭಯಾಯತ್ತ ಎಂದು ಮೂರು ಬಗೆಯಾಗಿ ವಿಂಗಡಿಸಿರುತ್ತಾರೆ (ರಾಕ್ಷಮು. ೪೭). [ಸಂ.]

**ಸಚಿವಾಲಯ** (ನಾ). ಮಂತ್ರಿಮಂಡಲವಿರುವ ಕಛೇರಿ : ಅತ್ತ ಕಮ್ಮಟವಿತ್ತ ಸರಸಿಯು ನಡುವೆ ಸಚಿವಾಲಯಗಳು (ಕರುಶ್ರಾ. ೨೭-೧೫). [ಸಂ.]

**ಸಚೀಶ** (ನಾ). = ಸಚಿವ ೨ : ಬಿಜ್ಜಳನೃಪತಿಯುಲ್ಲಾಸದಿಂ ಭಂಡಾರಿ ಬಸವ ಸಚೀಶನಂ ನವರತ್ನಮಯ ಸಿಂಹಾಸನದ ಮೇಲೆ ಭಾಸುರಂ ಮಿಗೆ ಕುಳ್ಳಿರಿಸಿ (ಬಸಪು. ೫೯-೫೭). [?]

**ಸಚೇತನ** (ಗು). ೧. ಚೈತನ್ಯದ ; ಚಟುವಟಿಕೆಯುಳ್ಳ : ಅಂತಾಶ್ಚರ್ಯಭೂತೋಚ್ಚಾವಚೋಪಚಿತ ಸಚೇತನೇತರವಸ್ತುವಿಸ್ತಾರಪರಂ ಪರೋದಾರಮಪ್ಪ ಇದಱುಭಯಶ್ರೇಣಿಗಳೊಳಂ (ಶಾಂತಿಪು. ೨-೧೧೫ ವ). (ನಾ). ೨. ಚೈತನ್ಯವುಳ್ಳುದು; ಚಟುವಟಿಕೆಯುಳ್ಳುದು : ಮನುಷ್ಯರ ಆಹಾರದೊಳಗೆ ಸಚೇತನ ಅಚೇತನ ಎಂಬೆರಡು ಮುಖ್ಯ ವರ್ಗಗಳಿವೆ (ಮುಂಬಯಿ. ೫-೧೬೧). ೩. ಜೀವಂತವಾದುದು ; ಸಜೀವವಾದುದು : ಜಕ್ಕವಕ್ಕಿಗಳೆಲೇ ಬಗೆಪೋಯ್ತು ವಿಯೋಗದಿಂದೆ ಸತ್ತೊಂದಱ ಜೀವವೊಂದಱೊಡಲಂ ಪುಗೆ ಮತ್ತೆ ಸಚೇತನಂಗಳಾಗೆ (ಚಂದ್ರಪು. ೮-೧೦೨). ೪. ಚೈತನ್ಯವಿರುವವನು ; ಶಕ್ತ ; ಸಮರ್ಥ : ಒಂದು ಪಕ್ಷ ಯಾರಾದರೂ ಸಚೇತನರ ಮನೋಭಾವಗಳನ್ನು ಮುಖ್ಯತಾತ್ಪರ್ಯವಾಗಿ ವರ್ಣಿಸುವುದೇ ರಸವದಲಂಕಾರದ ಲಕ್ಷ್ಯ (ಧ್ವನ್ಯಾಲೋ. ೬೬). [ಸಂ.]

**ಸಚೇತನೆ** (ನಾ). ಎಚ್ಚರಗೊಂಡವಳು ; ಪ್ರಜ್ಞೆ ತಿಳಿದವಳು : ಮಱುದಿವಸಂ ಗರುಡನಾಭಿ ಬಂದು ಕನ್ನೆಯಂ ಸಚೇತನೆ ಮಾಡಿ ಮದುವೆ ನಿಲ್ಚಿದುಂ (ಸುಕುಮಾ. ೭-೮ ವ). [ಸಂ. ಸಚೇತನಾ]

**ಸಚೇಲ** (ಗು). ವಸ್ತ್ರದಿಂದ ಕೂಡಿದ ; ಬಟ್ಟೆ ಧರಿಸಿದ : 'ಸಚೇಲಸ್ನಾನ' ಪರಾ. [ಸಂ.]

**ಸಚೇಲಸ್ನಾನ** (ನಾ). (ಯಾವುದಾದರೂ ಮೈಲಿಗೆ ಸೋಂಕಿದಾಗ) ಉಟ್ಟ ವಸ್ತ್ರದ ಸಮೇತ ಮಾಡುವ ಸ್ನಾನ ; ತೊಟ್ಟ ಬಟ್ಟೆಯ ಸಮೇತ ಮಾಡುವ ಮೀಹ : ಶೂದ್ರರಂ ಮುಟ್ಟಿದ ಮಹೀದೇವತೆಗಳಿಗೆ ಮಾಣದೆ ಸಚೇಲಸ್ನಾನವಂ ಮಾಡಲಿಕೆ ಬೇಕೆಂದು (ಬಸಪು. ೫೫-೩೫) ; ಋಷಿಸಮೇತರಾಗಿ ಕಾಶಿಪಟ್ಟಣಮಂ ಪೊಕ್ಕು ಶೀಘ್ರದಲ್ಲೆ ವಿಧ್ಯುಕ್ತರಾಗಿ ಮಣಿಕರ್ನಿಕೆಯಲ್ಲಿ ಸಚೇಲಸ್ನಾನ ಸಂಧ್ಯಾವಂದನೆಗಳಂ ಮಾಡಿ (ಕಾಶೀಮ. ೧೫-೨) ; ಅಪ್ಪಿ ತಪ್ಪಿ ಎಂಜಲು ತಗಲಿದರೆ ಸಚೇಲಸ್ನಾನ ಮಾಡಬೇಕು (ನಮ್ಮೂರ. ೬೦). [ಸಂ.]

**ಸಚೋದ್ಯ** (ಗು). ಆಶ್ಚರ್ಯದಿಂದ ಕೂಡಿದ ; ಚೋದ್ಯದ : ಆ ಪರಮೇಶ್ವರಂ ಪ್ರಥಿತ್ವಷೋಡಶತೀರ್ಥಕರಂ ಸಚೋದ್ಯವಿದ್ಯಾಪರಿಪಾಕಶಾಸನಸಭಾವಳಯಂ (ಶಾಂತಿಪು. ೧೨-೩). [ಸಂ.]

**ಸಚ್ಚಂದನ** (ನಾ). ಶ್ರೇಷ್ಠವಾದ ಗಂಧ ; ಒಳ್ಳೆಯ ಶ್ರೀಗಂಧ : ಹಂದಿಗಮಿಂದ ನೀರ ಕೆಸಱೊಗ್ಗುವುದಲ್ಲದೆ ತಣ್ಣನೀರ ಸಚ್ಚಂದನದಣ್ಪದೊಗ್ಗುವುದೆ (ನಳಚಂ.೬). [ಸಂ.]

**ಸಚ್ಚರಿತ** (ನಾ). ೧. ಒಳ್ಳೆಯ ನಡತೆ ; ಸದಾಚಾರ : ಸತ್ಯದಲಿ . . . ಸಚ್ಚರಿತದಲಿ ಸಂಪತ್ತಿನಲಿ ಸಲೆ ಸೊಗಸಿ ಬಳುವಲದೇಶ ಮೆಱೆದಿಹುದು (ಪ್ರಭುಲೀ. ೩-೧). ೨. ಒಳ್ಳೆಯ ನಡತೆಯವನು ; ಸದಾಚಾರಿ : ಏನೆಂಬ ಪೆಂಪೊ ಮನುವುಂ ತಾನುಂ ಸಚ್ಚರಿತರಮರಕುಜಮುಂ ತಾನುಂ (ಶಮದ. ೧೪೪ ಪ್ರಯೋ) ; ಶಮದಮಾಶ್ರಯ ಸಚ್ಚರಿತನುತ್ತಮ ಶಿವಾಚಾರಪ್ರವರ್ತಿ ನಿರಸ್ತಸಕಳಾರ್ಥಿ (ಬಸಪು. ೧೭-೩). [ಸಂ.]

**ಸಚ್ಚರಿತೆ$_1$** (ನಾ). ಒಳ್ಳೆಯ ಚಾರಿತ್ರ್ಯ ; ಸದಾಚಾರ : ಕಣಿವೇಳ್ದರಾ ನಾಲ್ವರುಂ . . . ನೇಸರಂ ಮೀರಿ ಪೊಳೆದಪರೆಂಬುದಂ, ಕೀರ್ತಿಯಿಂ ಮತ್ತೆ ಸಚ್ಚರಿತೆಯಿಂ (ಶ್ರೀರಾಮಾ. ೧೭-೪೩೪). [ಸಂ. ಸಚ್ಚರಿತ]

**ಸಚ್ಚರಿತೆ$_2$** (ನಾ). ಒಳ್ಳೆಯ ಚಾರಿತ್ರ್ಯವುಳ್ಳವಳು ; ಸುಶೀಲೆ : ಹೆಚ್ಚಿದಳು ದಿನದಿನಕೆ ಶಶಿಯಂತೆ ಕಾಂತಿಯಿಂ ಸಚ್ಚರಿತೆಯಿರುತಿರಲ್ಕೊಂದು ದಿನ ರುರು ಕಂಡು (ತುರಂಗ. ೨-೨೧). [ಸಂ. ಸಚ್ಚರಿತಾ]

**ಸಚ್ಚರಿತ್ರ** (ನಾ). = ಸಚ್ಚರಿತ ೧ : ಸಚ್ಚರಿತ್ರ[ಪಾಠಾಂ. ಸಚ್ಚರಿಯ]ದೊಳಗೆ ಗುರುಭಕ್ತಿಯನಳವಡಿಸಿದಡಲ್ಲಿಯೆ ಮುಕುತಿಯು ನೋಡಯ್ಯ (ಶಿವಗೀ. ೯೬-೪೬೩) ; ಎಚ್ಚರಿಸದಿಹ ಭಾಷೆ ಶರಣರ ಹೆಚ್ಚು ಕುಂದುಗಳಂ ನುಡಿಯದಿಹ ಸಚ್ಚರಿತ್ರದ ಭಾಷೆ (ಬಸವು. ೬-೧). [ಸಂ.]

**ಸಚ್ಚಿದಾನಂದ** (ನಾ). ೧. ಶ್ರೇಷ್ಠವಾದ ಆನಂದ : ಸಚ್ಚಿದಾನಂದೈಕಘನವೆನಿಪ ನಿರುಪಮಾತ್ಮನ ನಿಲವನಱಿಯದೆ ನರಕಿ ಜಡನಾ ಜೀವವೆಂಬೀ ತರಳತನವೇ ಹಿಂಸೆಯಱಿವಡಹಿಂಸೆ ಕೇಳೆಂದ (ಕುಮ್ಮಾಭೀ. ೩-೫೧) ; ತತ್ತ್ವವಿದರಿಗೆ ಸಚ್ಚಿದಾನಂದವೇ ರಸವು (ಕರುಶ್ರಾ. ೧೦-೧೫). ೨. ಆನಂದಸ್ವರೂಪನಾದ ಪರಮಾತ್ಮ : ನಿನ್ನ ದೇಹ ಮನಃಪ್ರಾಣವಿಂದ್ರಚಾಪವು ಮುನ್ನಿನಂತೆ ಸಚ್ಚಿದಾನಂದ ನೀನೆ ಕಂಡಾ (ಶಿವಗೀ. ೩೨-೧೪೪).
[ಸಂ.]

**ಸಚ್ಚಿದ್ರೂಪ** (ನಾ). ೧. ಶ್ರೇಷ್ಠವಾದ ರೂಪ; ಭಗವಂತನ ಸ್ವರೂಪ: ಪರಮಾತ್ಮನು ಜೀವರ ಹೃದಯದಲ್ಲಿ ಸಚ್ಚಿದ್ರೂಪದಿಂದಲೂ, ಪಂಚಭೂತಗಳಲ್ಲಿ ಸದ್ರೂಪದಿಂದಲೂ ನೆಲಸಿರುವುದರಿಂದ ಶರೀರ ಶರೀರಿಭಾವವನ್ನು ರಾಮಾನುಜರು ಹೇಳಿದ್ದಾರೆ (ಶಕ್ತಿವಿ. ೧೦೫). ೨. ಶ್ರೇಷ್ಠವಾದ ರೂಪಿನಿಂದ ಕೂಡಿದವನು; ಪರಮಾತ್ಮ : ಸಚ್ಚಿದ್ರೂಪನನಾದಂ ಮೆಚ್ಚಿಸಿ (ಉದ್ಭಟ. ೧೨-೩) ; ಕಲಹಂ ತಕ್ಕುದೆ ನೋಳ್ಪೊಡಿಂತೆನಗೆ ಸಚ್ಚಿದ್ರೂಪನೊಳ್ (ಶಬಶಂ. ೪-೧೨೪). [ಸಂ.]

**ಸಚ್ಚೇತನ** (ನಾ). ಒಳ್ಳೆಯ ಮನಸ್ಸನ್ನು ಹೊಂದಿದವನು : ಅಷ್ಟವಿಧಭಕ್ತಿ ಕ್ರಿಯಾಪರಿಪುಷ್ಟಸಚ್ಚೇತನನಪಗತಾರಿಷ್ಟಕರ್ಮೇಂದ್ರಿಯಕಲನ ಬುದ್ಧೇಂದ್ರಿಯೋದ್ಧತನು (ಬಸವು. ೩೩-೩). [ಸಂ.]

**ಸಚ್ಛಿಷ್ಯ** (ನಾ). ಒಳ್ಳೆಯ ವಿದ್ಯಾರ್ಥಿ ; ಯೋಗ್ಯನಾದ ಶಿಷ್ಯ : ಗುರುಲಿಂಗದೆಱಕದಿಂ ಸಚ್ಛಿಷ್ಯನೇ ಬಲ್ಲ (ಅವಚಂ. ೨೮೧-೧೨೮೮) ; ಸಾವಿರ ಶಿಷ್ಯರಿಗೆ ಕಂಠಶೋಷಣೆ ಮಾಡುವುದಕ್ಕಿಂತ ನಿನ್ನಂಥ ಒಬ್ಬ ಸಚ್ಛಿಷ್ಯನನ್ನು ಪಡೆಯುವುದರಲ್ಲೇ ಗುರುವಿನ ಧನ್ಯತೆಯಿದೆ (ಹೊಸಕ್ಕ. ೩೮). [ಸಂ.]

**ಸಜ** 'ಸಜಾ' ನೋ.

**ಸಜಡ** (ಗು). ಜಡತ್ವದಿಂದ ಕೂಡಿದ : ನೀತಿರಹಿತಗಳಖಿಳಯಿಂದ್ರಿಯಚೇತನಂಗಳು ಕದಡುಗಳು ಕಾಮಾತುರಂಗಳು ದುಬ್ಬಿಗಳು ಸಜಡ ಪ್ರವೇಶಿಗಳು (ಬಸವು. ೪೦-೪೫). [ಸಂ.]

**ಸಜಯುವಡೆ** (ಕ್ರಿ). ಜಯವನ್ನು ಪಡೆ; ಗೆಲ್ಲು : ತನುವಿನಲಿ ಸ[ಪಾಠಾಂ. ವಿ] ಜಯವಡೆದಿಹುದಧಿಕವಿಜಿತವ್ರಜಕೆ ನಿಜವಾದಂತೆ (ನಿಭಾಗ. ೪-೧೫-೩೪).
[ಸಜಯ್ಯ$_0$ + ಪಡೆ$_1$]

**ಸಜಲತೆ** (ನಾ). ನೀರಿನಿಂದ ಕೂಡಿರುವಿಕೆ ; ತೇವ ; ಒದ್ದೆ : ದಿನದೊಳ್ ಸಜಲ[ಪಾಠಾಂ. ಳ]ತೆಯಿಂ ಮತ್ಸ್ಯನಳಿನಮಂ ಮತ್ತಮಿರುಳೊಳುನ್ನಿದ್ರತೆಯಿಂದೆನಸುಂ . . . ಅನುಕರಿಸಿದುದಾ ವಿಯೋಗವಿಧುರೆಯ ಕಣ್ಗಳ್ (ಚಂದ್ರಪ್ರ. ೫-೧೨೫). [ಸಂ. ಸಜಲತಾ]

**ಸಜಾ, ಸಜ, ಸಜೆ** (ನಾ). ೧. ಶಿಕ್ಷೆ ; ದಂಡನೆ : ನಮ್ಮದು ಸರಕಾರ ನಮಗ ಸಜಾ ಮಾಡ್ತಾವ ? (ಸ್ಮಾವಲಂ. ೮) ; ಯಾರೂ ತಾಣ ಮಾಡೋದಾಗ್ಲೀ ಬಚ್ಚೆ ಒಗ್ಯೋದಾಗ್ಲೀ ಕೂಡ್ದು. ಸಜಾ ಆಕ್ಬಿಡ್ತೀವಿ (ದಯ್ಯಮ. ೧೨). ೨. ಜೈಲುವಾಸದ ಶಿಕ್ಷೆ : ಜೈಲಿನಲ್ಲಾದರೂ ಒಳ್ಳೆಯವನೆಂದು ಸಜಾ ಕಡಿಮೆ ಮಾಡಿದರಲ್ಲ (ಗಂಗಾಳ. ೫೦). **ಸಜ** : ೧. ನಿಜ ಹೇಳದ್ರ ಸಜ ಯಾಕೆ (ದುರಂನಾ. ೯೨) ; ಕಲ್ಪನೆಗೆ ಒದಗಿತ್ತು ರೋಗದ ರಜ . . . ಹೊಸ ಕವಿಗೆ ವಿಧಿಸಿತ್ತು ಕೀರ್ತಿಯ ಸಜ (ಶಿಲಾಲ. ೭೫-೧೦). ೨. ಸಜದ ಟೈಂ ಮುಗೀತು (ಚಿಂಗೂಲಿ. ೧೬೨); ಮಾದಕದ್ರವ್ಯಗಳನ್ನು ಕಳ್ಳತನದಿಂದ ಮಾರಾಟ ಮಾಡಿದ ಅಪರಾಧಕ್ಕಾಗಿ ಅವಳು ಸಜ ಅನುಭವಿಸುತ್ತಿದ್ದಳು (ಪುನರು. ೧೪೨). **ಸಜೆ** : ೧. ಒಮ್ಮೆ ಹೊರೆಯನ್ನಿಳಿಸಿ ನಿಂತ ಅವರಿಗೆ, ಕಠಿಣ ಸಜೆಯೊಂದು ತಪ್ಪಿದಂತೆ ಕಾಣಿಸಿತು (ಮರಮ. ೬೦). ೨. ಅವನ ಸದ್ವರ್ತನೆಯಿಂದ ಸಜೆಯ ಅವಧಿ ಕಡಿಮೆಯಾಯಿತು (ರೂಢಿ).
[<- ಪಾರ. ಹಿಂ. ಮರಾ. ಸಜಾ]

**ಸಜಾತಿ** (ನಾ). ಒಂದೇ ಕುಲ ,- ವಂಶ : ನೋಡು ಸಂಭ್ರಮದಿ ನೀತ ಸಾಧಾರಣ ವಿಶೇಷ ಸಜಾತಿ ನೈಜಾಹಿತವು ಸಹಜ ವಿಜಾತಿ ಖಂಡಾಖಂಡ ಬಗೆಗಳನರಿತು ಬುಧರಿಂದ (ಹಸಾರ. ೫-೧). [ಸಂ.]

**ಸಜಾತಿವಾಸ** (ನಾ). [ಸಂಗೀತ] ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು : ಜಾತಿವಾಸ ಸಜಾತಿವಾಸ ಸುಕುಮಾರಿಕವಾಸ ಪಕ್ಷವಾಸ . . . ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವಱಿತು (ವಿವೇಕ. ೨೩೭). [ಸಜಾತಿ + ವಾಸ$_1$]

**ಸಜಾತೀಯ** (ಗು). ೧. ಒಂದೇ ಗುಂಪಿನ ; ಒಂದೇ ಜಾತಿಗೆ ಸೇರಿದ. (ನಾ). ೨. ಒಂದೇ ಗುಂಪಿಗೆ ಸೇರಿದುದು ; ಒಂದೇ ಜಾತಿಯದು : ವಿಜಾತೀಯ ದ್ವಿತ್ವವು ಸಜಾತೀಯವಾಗಿ ಮಾರ್ಪಡುವ ಹೊಸಗನ್ನಡಕ್ಕೆ ಸರಿಯಾಗಿ ಅದು 'ಅದಕ್ಕೆ' ಎಂಬ ರೂಪ ತಾಳಿದೆ (ಸಂಶೋಧ. ೬೩). [ಸಂ.]

**ಸಜೀವ** (ಗು). ೧. ಪ್ರಾಣದಿಂದ ಕೂಡಿದ ; ಜೀವದಿಂದಿರುವ. (ನಾ). ೨. ಜೀವಂತವಾಗಿರುವುದು : ಪ್ರಪಂಚದಲ್ಲಿ ಇಂದು ಸಜೀವವಾಗಿರುವ ಬಹು ಪ್ರಾಚೀನ ಸಂಗೀತವೆಂದರೆ ವೇದಗಾನ (ಭಾರದ. ೫೩೬). [ಸಂ.]

**ಸಜೀವಚಿತ್ರ** (ನಾ). ಜೀವವಿರುವಂತೆ ಭಾಸವಾಗುವ ಚಿತ್ರ ; ಜೀವಂತಚಿತ್ರ : ವಿಲೋಚನೆಯಿಟ್ಟ ಸಜೀವಚಿತ್ರಮೋ ಪೊಸನನೆದೊಟ್ಟ ಪದ್ಮಿನಿಯೊ ಕೈಗೆಯೆ ಕಣ್ಗೆಸದಿರ್ದ ಕಾಂತೆಯೋ (ಲೀಲಾವ. ೧೦-೩೭) ; ಬರೆದ ಸಜೀ[ಪಾಠಾಂ. ಸಂಜೀ, ಸಚಿ]ವಚಿತ್ರವನೀಕ್ಷಿಸಿ ರಾಮನಿರವೆಂದು ಬಿಗಿಯಪ್ಪಲೆಳಸಿ (ಕುರಾಸಾಂ. ೨೪-೧೫೦). [ಸಂ.]

**ಸಜೆ** 'ಸಜಾ' ನೋ.

**ಸಜ್ಜ** (ಗು). ೧. ಮುಚ್ಚಿದ ; ಹೊದಿಸಿದ. ೨. ಅಣಿಯಾದ ; ಸಿದ್ಧವಾದ. ೩. ಶೋಭೆಗೊಂಡ ; ಅಲಂಕೃತವಾದ. ೪. ಬಲಗೊಳಿಸಿದ ; ಭದ್ರಗೊಳಿಸಿದ. (ನಾ). ೫. ಸಾಧನ ; ಸಲಕರಣೆ. ೬. ಕವಚ ; ಜೋಡು. ೭. ಒಂದು ಬಗೆಯ ವೃಕ್ಷ ; ಸುರಹೊನ್ನೆ : ಸಿವೆ ರುಜೆ ಸರಳಂ ಶ್ರೀವಾಸವಗುರು ಸುರದಾರು ಗುಗ್ಗುಳಂ ಕುಂದುರು ಸಜ್ಜವೆನಿಪ್ಪೊಂದೊಂದನೆ ಬೇಱವೇಱ ಗುಡದೊಡನೆ ಧೂಪಮಿಕ್ಕುಗೆ ವಿಧಿಯಿಂ (ಲೋಕೋಪ. ೭-೫೮). [ಸಂ.]

**ಸಜ್ಜಂಬಡೆ** (ಕ್ರಿ). ಸಿದ್ಧವಾಗು ; ಸಜ್ಜಾಗು : ತುರಗ ಹಲ್ಲಣಿಸಿದವು ಸಮರದ್ವಿರದ ಸಜ್ಜಂಬಡೆದುವು (ಕುಮ್ಮಾದ್ರೋ. ೪-೨೨). [ಸಜ್ಜ + ಪಡೆ$_1$]

**ಸಜ್ಜಕ$_1$** 'ಸಜ್ಜಿಗೆ' ನೋ.

**ಸಜ್ಜಕ$_2$** 'ಸಜ್ಜುಕ' ನೋ.

**ಸಜ್ಜನ** (ಗು). ೧. ಒಳ್ಳೆಯ ವಂಶದಲ್ಲಿ ಹುಟ್ಟಿದ ; ಸತ್ಕುಲೀನ. (ನಾ). ೨. ಒಳ್ಳೆಯ ವಂಶದಲ್ಲಿ ಹುಟ್ಟಿದವನು ; ಸತ್ಪುರುಷ : ವಾರ್ತೆಯಂ ಪೇಟ್ದು ಸಜ್ಜನನಪ್ಪೆಂ (ನಳಚಂ. ೧೧೪) ; ಸಜ್ಜನರು ಸುಜನರು ಸತ್ಯಯುತರು (ಕುಮ್ಮಾಆ. ೮-೨೬) ; ಸಜ್ಜನರ ಸಂಗವದು ಹೆಜ್ಜೇನು ಕೊಡದಂತೆ ದುರ್ಜನರ ಸಂಗದೊಡನಾಟ ಬಚ್ಚಲಿನ ರೊಚ್ಚಿನಂತಿಹುದು (ಸರ್ವಜ್ಞ. ೮೦೯). ೩. ಹೆಂಡತಿ ; ಪತ್ನಿ : ಪೆಱರ ಸಜ್ಜನಂಗಳೊಳ್ ಬರ್ದೂಡಮೆಯ್ಯುವ ದುರ್ಗತಿಗಳೊಳಗಪ್ಪ ದುಃಖಂಗಳಂ ಪೇಟ್ (ಪದ್ಮಾರಾ. ೫೧-೧೭) ; ಶ್ರೀಜಿನವಲ್ಲಭನ ಸಜ್ಜನ ಭಗಿಯಬೆಯ ಮಾಡಿಸಿದ ಪ್ರತಿಮೆ (ಮೈಆರಿ. ೧೯೪೧, ೫೨-೧ : ೧೦೦); ಸೈಂಧವನ ಸಜ್ಜನಂ ದುರ್ಯೋದನನ ತಂಗೆ ದುಶ್ಶಳೆ ಕೇಳ್ದು (ಪಂಪಭಾ. ೧೧-೧೨೨ ವ). ೪. ಒಳ್ಳೆಯ ನಡತೆ ; ಸೌಜನ್ಯ : ಮಜ್ಜನಕ್ಕೆಱೆವನಲ್ಲದಾನು ಸಜ್ಜನವೆನ್ನಲ್ಲಿಲ್ಲಯ್ಯಾ ಎನ್ನಲ್ಲೇನನಱಸುವೆ (ಬಸವ. ೨೮೨). ೫. ಉಡುಪು; ಉಡುಗೆ. ೬. ಸಿದ್ಧತೆ ; ಏರ್ಪಾಡು. ೭. ಕವಚ ; ಮೈಗಾಪು. ೮. ಕಾಪು; ರಕ್ಷಣೆ : ''ಸಜ್ಜನ - ಉಪರಕ್ಷಣ, ಪಾಳೆಯದ ಕಾಪು'' (ನಾಚಿರಾ. ೬). ೯. ಒಂದು ಬಗೆಯ ತೊಗಲಿನ ಅಥವಾ ಬಟ್ಟೆಯ ನಡುಪಟ್ಟಿ ; ''ಉಪರಕ್ಷಣ ಬಲ್ಲಾಳದಟ್ಟಿ'' (ನಾಚಿರಾ.೬). [ಸಂ.]

**ಸಜ್ಜನಗಳ್ಳ** (ನಾ). ಒಳ್ಳೆಯವನಂತಿರುವ ಕಳ್ಳ ; ವಂಚಕ : ಇಂತೀ ಸಜ್ಜನಗಳ್ಳರ ಬಲ್ಲನಾಗಿ ಸದಾಶಿವಮೂರ್ತಿ ಲಿಂಗವು ಬಲ್ಲನು (ಅಱಮಾ. ಕ. ೧೨೧-೬೦); ಇಂತೀ ಸಜ್ಜನಗಳ್ಳರ ಕಂಡು ಬಲ್ಲವರೊಪ್ಪುವರೆ ಕಳ್ಳರ ಪ್ರಕಟ (ಏಲೇಶ್ವ. ೩೪); ಸಜ್ಜನಗಳ್ಳರ ಕಂಡು ಹೊದ್ದದೆ ಹೋದ ನಿಃಕಳಂಕ (ಮೋಳಿಮಾ. ೨೩-೪೨). [ಸಜ್ಜನ + ಕಳ್ಳ$_1$]

**ಸಜ್ಜನಗಿತ್ತಿ** (ನಾ). ಒಳ್ಳೆಯ ನಡತೆಯುಳ್ಳವಳು ; ಪತಿವ್ರತೆ : ಅಷ್ಟದಿಕ್ಕಿಗೆ ಸುಳಿದು ಮಧ್ಯದಲ್ಲಿ ನಿಲಲು ಒಮ್ಮೆ ಸಜ್ಜನಗಿತ್ತಿಯಾಗುವೆಯಮ್ಮ (ಶಿವಗೀ. ೧೫೭-೭೯೫). [ಸಜ್ಜನ + - ಗಿತ್ತಿ]

**ಸಜ್ಜನತನ** (ನಾ). ಒಳ್ಳೆಯತನ ; ಸಜ್ಜನಿಕೆ : ಕದ್ದ ಕಳವ ಮಱಸಿಕೊಂಡು ನಾ ಸಜ್ಜನನೆಂಬಂತೆ ಇದ್ದ ಗುಣವ ನೋಡಿ ಹೊದ್ದಿ ಸಾಧಿಸಲಾಗಿ ಕದ್ದ ಕಳವು ಕೈಯಲ್ಲಿದ್ದ ಮತ್ತೆ ಸಜ್ಜನತನವುಂಟೇ (ಮೋಳಿಮಾ. ೨೩-೯೧). [ಸಜ್ಜನ + - ತನ]

**ಸಜ್ಜನಮಾನ್ಯ** (ನಾ). ಸಜ್ಜನರಿಂದ ಮನ್ನಣೆ ಪಡೆದವನು : ಸಜ್ಜನಮಾನ್ಯಂ ಸುಭಗಂ ಮಹಾಕವಿ . . . ಮೃಗಪೋದ್ಭವಂ (ಜಾತತಿ. ೧೭-೧೦). [ಸಂ.]

**ಸಜ್ಜನವನಿತೆ** (ನಾ). = ಸಜ್ಜನ ೩ : ಮನೆಯಂ ನಿಲಿಸುವ ಸಜ್ಜನವನಿತೆಯನೀಡಾಡಿ ಜಡಾತ್ಮನ ತೆಱದಿಂ (ಧರ್ಮಾಮೃ. ೧೪-೧೨೭). [ಸಂ. ಸಜ್ಜನವನಿತಾ]

**ಸಜ್ಜನವೆಂಡತಿ** (ನಾ). = ಸಜ್ಜನ ೩: ಸಜ್ಜನವೆಂಡತಿಯನೊಲ್ಲದೆ ಗಾಳುವಪ್ಪ ಸೂಳೆಯಂ ಮೆಚ್ಚುವಂತೆ (ಧರ್ಮಾಮೃ. ೧೦-೭೭) ; ಪುಂಡರೀಕಿಣಿಯಧಿಪತಿ ಶ್ರೀಪಾಲಷಟ್ಖಂಡಾಧಿಪತಿಯಕ್ಕುಮವಗೆ ಬಂಡುಣಿಗುರುಳ ಜಯಾವತಿ ಸಜ್ಜನವೆಂಡತಿಯಹಳು (ಶ್ರೀಪಾಲ. ೫-೮೨). [ಸಜ್ಜನ + ಪೆಂಡತಿ (< ಪೆಂಡಿತಿ)]

**ಸಜ್ಜನವೆಣ್** (ನಾ). ಒಳ್ಳೆಯ ವಂಶದಲ್ಲಿ ಹುಟ್ಟಿದ ಹೆಣ್ಣು : ಅವಳ್ ಸಜ್ಜನವೆಣ್ (ಶಮದ. ೮೮ ಪ್ರಯೋ.). [ಸಜ್ಜನ + ಪೆಣ್]

**ಸಜ್ಜನಸತಿ** (ನಾ). = ಸಜ್ಜನ ೩ : ಕನಕಲತೆಗಳೊಡ್ಡು ನಡೆದು ಬಹಂತೆ ಸಜ್ಜನಸತಿಯರು ಬಂದರೊಸೆದು (ಭರತ. ೪೭-೭೭). [ಸಂ.]

**ಸಜ್ಜನಸ್ತ್ರೀ** (ನಾ). = ಸಜ್ಜನವೆಣ್ : ರಚ್ಚೆಯ ನೆರವಿಗೆ ನಾಣುನುಡಿಯಿಲ್ಲದಿಹುದ ಅದಱಂತೆ ಎನಬಹುದೆ ಸಜ್ಜನಸ್ತ್ರೀಯ (ಬಸವ. ೮೨೫). [ಸಂ.]

**ಸಜ್ಜನಿಕೆ** (ನಾ). ೧. = ಸಜ್ಜನತನ : ಚಿತಾಗ್ನಿಯೊಳಣ್ಮಿ ಸತ್ತ ಸಜ್ಜನಿಕೆಯ ಪೆಂಪು (ಆದಿಪು. ೧-೪೭) ; ಸಂಸಾರ ಮಾಣ್ದಲ್ಲದೆ ಶರಣ ಸಜ್ಜನಿಕೆ ಸಮಯಾಚಾರ ನಿಜವ್ರತವು ದುರಾಚಾರಿಗಳಿಗಳವಡದು (ಬಸವ. ೮೫೫). ೨. ಸತಿಯಾಗಿರುವುದು ; ಹದಿಬದೆತನ ; ಪಾತಿವ್ರತ್ಯ : ರೇವತಿ ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ತಾನೆ ರೂಪಿನೊಳ್ ದೇವಕಿ (ಎಕ. II. ೧೩೯-೧೨ ; ಸು. 950); ವಿತತಯಶಂಗಾ ವಿಪ್ರಂಗೆ ತತ್ಪ್ರಿಯಂ . . . ಸತಿ ಸಜ್ಜನಿಕೆಗರುಂಧತಿಗೆ ಮಿಗಿಲ್ (ಛಂದೋಂಬು. ೧-೧೭). [ಸಜ್ಜನ + - ಇಕೆ]

**ಸಜ್ಜನೆ$_1$** (ನಾ). ಒಳ್ಳೆಯ ನಡತೆಯವಳು; ಪತಿವ್ರತೆ: ಕಂಡಕಂಡವರೆಲ್ಲರ ಗಂಡರೆಂದೆಂಬ ದುಂಡೆಯನವಳ ಸಜ್ಜನೆಯೆಂದೆನ್ನಬಹುದೆ (ಬಸವ. ೬೧೭); ಹಗಲಿಗೆ ಹಾದರಗಿತ್ತಿ ಇರುಳಿಗೆ ಸಜ್ಜನೆಯಾಗಿ ಪುರುಷನ ಒಡಗೂಡಿಪ್ಪಳು (ಕೋಲಶಾಂ. ೩೪-೨೨). [ಸಜ್ಜನ + - ಎ$_2$]

**ಸಜ್ಜನೆ$_2$** (ನಾ). ಒಳ್ಳೆಯ ನಡತೆ : ಪತಿಯ ಸಜ್ಜನೆ ಕೆಡುಗು . . . ಹೊನ್ನೆಂಬ ಶ್ರುತಿಯ ಕೇಳಿದರೆ (ಸರ್ವಜ್ಞ. ೧೨೭೪). [ಸಂ. ಸಜ್ಜನ]

**ಸಜ್ಜಯ** (ನಾ). ಜಯ ; ಗೆಲುವು : ಸಜ್ಜಯವು ನಿಮದಿರದೆ ಬಸವಿಂತುಜ್ಜುವನೆ (ಬಿಜ್ಜಪು. ೭೭-೧೭). [ಸಂ.]

**ಸಜ್ಜರ** 'ಸಜ್ಜಾರ' ನೋ.

**ಸಜ್ಜರಸ** (ನಾ). ಒಂದು ಬಗೆಯ ಅರಗಿನಂತಹ ಅಂಟು ; ರಾಳ : ಅರಗು ಮೊದಲಾಗೆ ಘೃತ ಸಜ್ಜರಸಂ ಬೆಲ್ಲಂ ಸಣಂಬಿವಱಂ ವಿಸ್ತರಿಸಿ ಸಮೆದಿಂದ್ರಭವನಂ (ಪಂಪಭಾ. ೩-೩); ಅರಗಿನಲಿ ಭಿತ್ತಿಗಳ ನವಸಜ್ಜರಸ ಗುಡಮಿಶ್ರದಲಿ ನೆಲೆಯುಪ್ಪರಿಗೆ ಗಳನವಱಲಿ . . . ಮಾಡಿಸಿದ (ಕುವ್ಯಾಆ. ೮-೭೯). [< ಸಂ. ಸರ್ಜರಸ]

**ಸಜ್ಜಳ** (ನಾ). ಚಾಟಿ ; ಕಶೆ : "ಅಶ್ವಾದಿಗಳ ಹೊಡೆವ ಸಜ್ಜಳ ಕಶಾ" (ನಾಚಿರಾ.೩); ಧ್ವನಿಯಿಂದಮುಂ (ಕಶಾ) ಸಜ್ಜಳದಿಂದಂ ಅಂಕುಶದಿಂದಂ ಕಾಲ್ಗಳೆಂಬಿವಱಂ ಕುದುರೆಗಳುಂ ಆನೆಗಳುಂ ಪ್ರೇರಿಸಲ್ಪಟ್ಟುವು (ಜ್ಞಾಲಾಕ. ೧೩-೫). [?]

**ಸಜ್ಜಾತಿ** (ನಾ). ೧. ಒಳ್ಳೆಯ ವಂಶ ; ಸತ್ಕುಲ : ಸಜ್ಜಾತಿ ಸತಿಯರಿನಿಯರ ಸನ್ನಿಧಿಯೊಳು ಲಜ್ಜೆವೆರಸಿ ರಂಜಿಪುದು (ಹದಿಬ. ೩-೩೯). ೨. [ಜೈನ] "ಮನುಷ್ಯ ಜನ್ಮದಲ್ಲಿ ದೀಕ್ಷಾಯೋಗ್ಯವಾದ ಶ್ರೇಷ್ಠವಂಶದಲ್ಲಿ ಹೊಂದುವ ವಿಶುದ್ಧವಾದ ಜನ್ಮ" (ಜೈನಕೋ. ೨೫೭) : ಸಜ್ಜಾ[ಪಾಠಾಂ. ಜ್ಜಾ]ತಿ ಸದ್ಗೃಹಿತ್ವ ಪಾರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣಮೆಂಬೇೞುಂ ಪರಮಸ್ಥಾನನಾಮಕೃತಾನ್ವಯಕ್ರಿಯೆಗಳಂ . . . ಅಱಿಪಿ (ಆದಿಪು. ೧೫-೧೭ ವ). [ಸಂ.]

**ಸಜ್ಜಾತಿಕ್ರಿಯೆ** (ನಾ). = ಸಜ್ಜಾತಿ ೨ : ದೀಕ್ಷಾಯೋಗ್ಯಮಪ್ಪನ್ವಯದೊಳಂ ವಿಶುದ್ಧಕುಲಜಾತಿಯೊಳಮುದಿತೋದಿತವಂಶದೊಳ್ ಪುಟ್ಟುವುದುಂ ದೇಹಾದಿ ಸಾಮಗ್ರಿಯುಳ್ಳುದು ಸಜ್ಜಾತಿಕ್ರಿಯೆ (ಚಾವುಂಪು. ೨೨೫). [ಸಂ. ಸಜ್ಜಾತಿಕ್ರಿಯಾ]

**ಸಜ್ಜಾತಿತ್ವ** (ನಾ). = ಸಜ್ಜಾತಿ ೨ : ಸಜ್ಜಾತಿತ್ವಮುಂ ಸದ್ಗೃಹಿತ್ವಮುಂ . . . ಅರ್ಹಂತ್ಯಮುಂ ನಿರ್ವಾಣಮುಮೆಂಬ (ಪದವಿಯುಮೆಂಬ) ಸಪ್ತಪರಮಸ್ಥಾನಂಗಳ್ ಕರ್ತಾನ್ವಯಕ್ರಿಯೆಗಳ್ (ಚಾವುಂಪು. ೨೧೩). [ಸಂ.]

**ಸಜ್ಜಾಮಂದಿರ** (ನಾ). ಮಲಗುವ ಮನೆ ; ಶಯ್ಯಾಗೃಹ : ಅಂದಿನಿರುಳಿನಲಾರು ಪಱಿಯದ ಛಂದದಿಂದಲಿ ಬಳಿಕ ಸಜ್ಜಾಮಂದಿರಕೆ ಸಡಗರಿಸಿ ಪವಾಯೆಯು ನಲ್ಲಮನನೊಲಿದು ತಂದು ಬಿಜಯಂಗೆಯ್ಸಿದರು (ಪ್ರಭುಲೀ. ೫-೪೪). [< ಸಂ. ಶಯ್ಯಾಮಂದಿರ]

**ಸಜ್ಜಾಯಿಕ** (ನಾ). ರತ್ನಗಂಬಳಿಯನ್ನು ಮಾಡುವವನು (?) : ಒರ್ವಂ ಸಜ್ಜಾಯಿಕಂ [ಪಾಠಾಂ. ಗಂ, ತಂ] ಮಹಾನಂದದಿಂ ಸಮೆದೊಂದು ರತ್ನಗಂಬಳಿಯಂ ಕೊಂಡು ಬಂದಲ್ಲಿ . . . ಅರಮನೆಗೆ ವಂದರಸಂಗೆ ತೋಱಿದೊಡೀ ವಸ್ತುವನಾಂ ಕೊಳಲ್ಕೆ ಚೆಯೆನೆನೆ ಸಜ್ಜಾಯಿಕಂ[ಪಾಠಾಂ. ಗಂ] ಮಗುಟ್ದು ಬಂದು ಮತ್ತಮಿಲ್ಲಿಯಗ್ಗಳದ ಪದವಿಯ ಪರದರಳವಂ ನೋಟ್ಪೆನೆಂದು (ಜೀವಸಂ. ೧೦೮-೩೭ ವ). [ಸಜ್ಜಾಯ್$_1$ + - ಕ$_3$]

**ಸಜ್ಜಾರ** 'ಸಜ್ಜಾರ' ನೋ.

**ಸಜ್ಜಿಕ** 'ಸಜ್ಜಿಗೆ' ನೋ.

**ಸಜ್ಜಿಕೆ$_1$** (ನಾ). ೧. ಸಿದ್ಧತೆ : ಮದುವೆಗೆ ಎಲ್ಲಾ ಸಜ್ಜಿಕೆಯನ್ನು ಮಾಡಿಕೊಂಡಾಯಿತು (ರೂಢಿ). ೨. ಸಲಕರಣೆ ; ಸಾಮಗ್ರಿ : ಕುರ್ಚಿ ಬೆಂಚು ಇತ್ಯಾದಿ ಬಳಕೆಯ ಸಜ್ಜಿಕೆ (ಶಿಕ್ಷದ. ೩೩೩). [ಸಜ್ಜು + - ಇಕೆ]

**ಸಜ್ಜಿಕೆ$_2$** (ನಾ). ೧. ಹಾಸಿಗೆ ; ಹಾಸು : ನಾನು ನನ್ನ ಸಜ್ಜಿಕೆಯನ್ನು ಸಜ್ಜುಗೊಳಿಸಿದೆ (ದೀಪಹ. II. ೧೪೦). ೨. [ವೀಶೈ] ಲಿಂಗವನ್ನು ಇಡುವ ಪೆಟ್ಟಿಗೆ ; ಕರಡಿಗೆ : ಸಜ್ಜಿಕೆಯನಮಳಲಿಂಗಾನ್ವಿತಂಗೆಯ್ದಣಂ ಶಾಂಭವರೂಪಂ ಸಾರ್ಚಿದ್ಯೆ (ವೃಷವಿ. ೨೭-೫೬). [< ಸಜ್ಜೆ$_2$ ?]

**ಸಜ್ಜಿಖಾರ** 'ಸಜ್ಜೀಕಾರ' ನೋ.

**ಸಜ್ಜಿಗಿಖಾರ** (ನಾ). ಒಂದು ಬಗೆಯ ಕ್ಷಾರ ; ಸೋಡಾಕ್ಷಾರ : ಸಜ್ಜಿಗಿಖಾರ (ಮುಂಬವ್ಯಾ. ೧೭೭). [< ಸಜ್ಜೀಕಾರ]

**ಸಜ್ಜಿಗೆ, ಸಜ್ಜಕ$_1$, ಸಜ್ಜಿಕ, ಸೊಜ್ಜಿಗೆ** (ನಾ). ೧. ರವೆ : ಬದರಿಯ ಫಲಮಂ ಮೇಣ್ ಚಿಂಚದ ಚಿಗುರಿಂ ಕೂಡಿ ಪುದಿದ ಸಜ್ಜಿಗೆಯಿಂ ಮಾಡಿದ ಸೇವಗೆಯಂ ಘೃತಶೀತದಿನೊಯ್ಯನೆ ತೆಗಪಿ ಮಾಡುವುದು ಲಡ್ಡುಗೆಯಂ (ಲೋಕೋಪ. ೮-೧೩); ರಂಜಿಪ ಪರಡಿ ಗೌವಲೆ ಸಣ್ಣ ಸಜ್ಜಿಗೆ ಸಂಜೀವ ಘುಟಿಕೆ ದುಗ್ಧಾನ್ನ (ಮೋಹತ. ೨೬-೧೦); ಸಜ್ಜಿಗೆಯಿಂದ ಉಪ್ಪಿಟ್ಟು, ಅಂಬಲಿ ತಯಾರಿಸಬಹುದು (ಅಡುಸಾ. ೭೩). ೨. ವಿಶೇಷವಾಗಿ ರವೆಯಿಂದ ಮಾಡುವ ಒಂದು ಬಗೆಯ ಸಿಹಿತಿಂಡಿ; ಸಿರಾ : ರಸವೊಸರ್ವ ಸಜ್ಜಿಗೆಯೆಣ್ಣೆವೂರಿಗೆ (ಚೀರಮ. ೧೦-೨೮) ; ಸೀನುಭಟ್ಟರಲ್ಲಿ ಅವಲಕ್ಕಿ ಸಜ್ಜಿಗೆ, ಚಾ ಕುಡಿದು (ಹೊಸಕ್ಕ. ೪೮). ೩. ಒಂದು ಬಗೆಯ ಸಸ್ಯ (?): ಗೋಮೂತ್ರ, ಸಜ್ಜಿಗೆ, ದಂತಿ . . . ಇವನರೆದು ಗುದಕ್ಕೆ ಪೂಸಲು ಮೂಲವ್ಯಾಧಿ ಹರ (ಸಕವೈ. ೨೯೩). **ಸಜ್ಜಕ$_1$** : ೧. ಸಜ್ಜೀಯ ರುಚಿ ರೊಟ್ಟಿ ಸಜ್ಜಕದ ಹೋಳೀಗಿ ಗಜ್ಜೂರಿ ಚೆಟ್ಟು ಎಳ್ಳೆಣ್ಣೆ ತಂಗೆವ್ವ ಗುಜ್ಜ ನಿನ ಬಯಕಿ ತಿಳಿಯಾವ (ಜನಗೀ. ೫೯). ೨. ಬಸಗೋಂಡನ ಹೆಂಡತಿ, 'ಸಜ್ಜಕ - ಬಾನಿಗೆ' ಹಾಲು ಇಲ್ಲದೆ ಊಟದ ತಾಬಂಡಿಯನ್ನು ಬಸವಂತಿಯ ಮುಂದೆ ಇಡುತ್ತಿರಲಿಲ್ಲ (ದೀಪಹ. II. ೧೪೬). **ಸಜ್ಜಿಕ** : ೨. "ಸಜ್ಜಿಕ = ಸಜ್ಜಿಗೆ" (ಜಾನಕೋ. ೪೭); ಸಜ್ಜಿಕ ಬಹುಸ್ವಾದು (ಸಿದ್ಧವ. ೭೭-೪೯೯). **ಸೊಜ್ಜಿಗೆ** : ೧. ಬೆಳ್ಳಿಯರವುಡಿಯಂತಿರೆಸೆವ ಸೊಜ್ಜಿಗೆ [ಪಾಠಾಂ. ಸಜ್ಜೆಯ] ಕುಟ್ಟಿ (ಸಿದ್ಧರಾ. ೮-೫೦); ಮೇಳವಿಪ ಸೊಜ್ಜಿಗೆಯಮೃತಮಧು ಮೇಲಲಂಪೆಯ ಕಳಹಿ ಬೇಗದಲಿ (ಕುವ್ಯಾವಿ. ಒಂ೧೩. ೪-೩೩ ಅಡಿಪದ್ಯ); ತರುಣಿಯರು ಸೊಜ್ಜಿಗೆದೆಗೆದು ಕಜ್ಜಾಯಮಂ

ಮಾಳ್ಪುದು (ಸೂಪಶಾ. ೧-೯). ೩. ಮೂಲವ್ಯಾಧಿಗೆ ಗೋಮೂತ್ರ, ಸೊಜ್ಜಿಗೆ, ದಂತಿ, ನೀರಹಿಪ್ಪಲಿಯ ಬೇರು, ಚಿತ್ರಮೂಲ ಇವನ್ನರೆದು ಗುದಕ್ಕೆ ಪೂಸಲು ಮೂಲವ್ಯಾಧಿ ತಿಳಿವದು (ವಿಪ್ಪವಿ. ೮೨). [<— ಹಿಂ. ಸೂಜೀ ; ಮರಾ. ಸೋಜೀ]

**ಸಜ್ಜಿಡು** (ಕ್ರಿ). ಸಜ್ಜುಗೊಳಿಸು ; ಅಣಿಮಾಡು : ಅನ್ನಪಾನ ವಸ್ತ್ರಾಭರಣಗಳಲ್ಲಿ ತಿಲಾಂಶವಾದರೂ ಕಡಮೆಯಿಲ್ಲದ ರೀತಿಗೆ ಸಜ್ಜಿಟ್ಟು (ಕೃವಾಆ. ೧೨೭). [ಸಜ್ಜು + ಇಡು₁]

**ಸಜ್ಜಿತ** (ಗು). ೧. ಸಿದ್ಧವಾದ ; ಅಣಿಯಾದ. (ನಾ). ೨. ಸಿದ್ಧ ; ಅಣಿ : "ಹಣ್ಣಿದುದು ಸಜ್ಜಿತಂ[ಪಾಠಾಂ. ಸೈನಿಕಂ]" (ಮಂಗರಾ. ೪೭-೪); ಅಂದಂದೇ ಹರಡುತ್ತಿರುವ ರೇಡಿಯೋಯಂತ್ರಗಳಿಂದ ಸಜ್ಜಿತವಾಗಿ (ಶಿಕ್ಷದ. ೮) ; ಬೆಳ್ಳಿಯ ಆಸನಗಳು ಸಜ್ಜಿತವಾಗಿದ್ದುವು (ಶ್ರೀರಾಯ. ೧೪೬). ೩. ಸಿದ್ಧನಾದವನು ; ಅಣಿಯಾದವನು : ಅನೇಕ ಚೋಪದಾರರೂ . . . ಸಜ್ಜಿತರಾಗಿ ನಿಂತಿದ್ದಾರೆ (ದೇವೀಚೌ. ೧೧೩) ; ಶಸ್ತ್ರಾಸ್ತ್ರಸಜ್ಜಿತನಾದ ಒಬ್ಬ ವೀರಯುವಕನು ನಿಂತಿದ್ದನು (ಮಂದಾಕಿ. ೧). ೪. ಸಿದ್ಧವಾದ ಆನೆ ; ಅಣಿಯಾದ ಗಜ : "ಸಜ್ಜಿತಃ, ಕಲ್ಪಿತಃ — ಈ ೨ ಹಣ್ಣಿದಾನೆ" (ಹಲಾಯು. ೩೭-೬೭). [ಸಂ.]

**ಸಜ್ಜಿಸು** (ಕ್ರಿ). = ಸಜ್ಜಿಡು : ಜಾಣತನದಿಂ ಸಜ್ಜಿಸಿದ ಮನೆ ಕೋಣೆಯಲಿ ರಹದಲ್ಲಿ ರಾಮನು . . . ವಿಷಯಾನಂದದೊಳಗಿರಲು (ರಘುವಂ. ೧೫೪). [ಸಜ್ಜು + - ಇಸು₃]

**ಸಜ್ಜೀಕಾರ, ಸಜ್ಜಿಖಾರ** (ನಾ). ಒಂದು ಬಗೆಯ ಕ್ಷಾರ ; ಸೋಡಾಕ್ಷಾರ : ಸಜ್ಜೀಕಾರವನ್ನು ಬಿಸಿಮಾಡಿ ನೀರೊಳಗೆ ಕುದಿಸಿ ಸಾವಕಾಶವಾಗಿ ಆರಬಿಟ್ಟರೆ ಆ ನೀರಿನ ಬುಡದಲ್ಲಿ ಈ ಕ್ಷಾರದಿಂದ ಹುಟ್ಟಿದ್ದೆಂದು ಲವಣದ ಸ್ಫಟಿಕಗಳುಂಟಾಗುವವು (ಮುಂಬಯಿ. ೬-೩೩). **ಸಜ್ಜಿಖಾರ** : ಜೀನಸಗಳು . . . ಸಜ್ಜಿಖಾರ (ಮುಂಬವ್ಯಾ. ೨೧).

[< ಸಂ. ಸರ್ಜಕ್ಷಾರ]

**ಸಜ್ಜೀಕೃತ** (ಗು). ೧. ಸಜ್ಜುಗೊಳಿಸಿದ ; ಅಣಿಮಾಡಿದ : ಸಜ್ಜನ ಸಜ್ಜೀಕೃತಾನೇಕ ಪೂಜಾಪರಿಕರನುಂ ವನಮಹತ್ತರ ಪುರಸ್ಸರನುಮಾಗಿ (ಚಂದ್ರಪ್ರ. ೨-೧೧೫). ೨. ಸಿಂಗರಗೊಂಡ ; ಅಲಂಕಾರವಾದ. ೩. ಶಸ್ತ್ರಸಜ್ಜಿತವಾದ. [ಸಂ.]

**ಸಜ್ಜೀವ₁** (ನಾ). ಜೀವಂತವಾದುದು : ಕಜ್ಜದ ಪಲವು ಕಲೆಗಳಂ ತೋಱುವಭಿನವದ ಸಜ್ಜೀವಮಾಗಿರ್ದ ಪುತ್ಥಳಿಗಳ್ . . . ಕಣ್ಗೆಸೆದುವಾ ಸಭೆಯೊಳು (ಜೈಮಿಭಾ. ೧೭-೨೪). [< ಸಜೀವ]

**ಸಜ್ಜೀವ₂** (ನಾ). ೧. ಶ್ರೇಷ್ಠವಾದ ಜೀವ : ನಾನು ಸಜ್ಜೀ[ಪಾಠಾಂ. ಜೀ]ವವೋ ನೀನು ಸಜ್ಜೀವವೋ ನಿನಗೆಯೂ ಎನಗೆಯೂ ಸಂಬಂಧವಯ್ಯ (ಅಪಚಂ. ೧೨೭-೫೮೦). ೨. [ನಾಟ್ಯ] ನೇಪಥ್ಯದಲ್ಲಿ ಒಂದು ವಿಧ : ನೇಪಥ್ಯವು ಪುಸ್ತ, ಅಲಂಕಾರ, ಅಂಗರಚನಾ, ಸಜ್ಜೀವ ಎಂದು ನಾಲ್ಕು ವಿಧ (ಸಂನಾಟ. ೧೨). [ಸಂ.]

**ಸಜ್ಜು** (ನಾ). ತಯಾರಿ ; ಸಿದ್ಧತೆ : ಸುಗ್ಗಿಯುಮಾ ತೆಂಗಾಳಿಯುಮಿರ್ವರುಂ ಸಜ್ಜುವಂ ಪಡೆದು (ಅಬ್ಬಕಾ. ೧೯೬) ; ಕಿಱುನೊಟನ ಸವಿಜೇನ ಸಜ್ಜನಿಂಬನಿಯನೆಳೆದು (ರಾಮಾಶ್ರ. ೧೦೦೦-೩೦).

**ಸಜ್ಜಾಗು** = ೧. ತಯಾರಾಗು ; ಸಿದ್ಧವಾಗು : ನೆಂಟರು ಉಡುಗೆ ತೊಡಿಗೆಗಳಿಂದ ಸಜ್ಜಾಗಿ ಬರುತ್ತಿದ್ದರು (ಕಾಲೂರ. ೩೧ ಕಥಾಸಾರ ). ೨. ಯೋಗ್ಯವಾಗು ; ಉಚಿತವಾಗು; ಸರಿಯಾಗು : ಸಾಕು ಸಂಸಾರ ಸಜ್ಜಾಗಿಲ್ಲ ಒಲ್ಲೆ ಒಗತನವ (ಪುರಂದ. ೨-೪೫-೧). **ಸಜ್ಜುಮಾಡು** = ೧. ಸಿದ್ಧಮಾಡು ; ತಯಾರುಮಾಡು : ಶ್ರಾದ್ಧಕ್ಕೆ ಬೇಕಾದ ಸಾಮಾನುಗಳನ್ನು ಸಜ್ಜುಮಾಡಿದಳು (ನೀತಿಚಿಂ. ೯-೨೫). ೨. ಅಲಂಕಾರ ಮಾಡು ; ಸಿಂಗರಿಸು : ಸಡಲಿದ ತುರುಬ ಸಜ್ಜುಮಾಡುವುದಕ್ಕೆ ಕೈಸೇರಿಸುವಲ್ಲಿ ಅಂಗೈಯ ಬೆಮರುಗಳಿಂದ ಪ್ರೋಕ್ಷಣಂಗೈದು (ವಚಕಾ. ೮೫). [< ಸಜ್ಜ]

**ಸಜ್ಜುಕ, ಸಜ್ಜಕ₂, ಸಜ್ಜುಗ** (ನಾ). ೧. ಹೊಸದಾದುದು ; ನವೀನವಾದುದು : "ಪ್ರತ್ಯಗ್ರಂ, ಸದ್ಯಸ್ಕಂ — ಈ ೨ ಸಜ್ಜುಕಂ" (ಹಲಾಯು. ೧೨೬-೭೮). ೨. ಅದೇ ತಾನೆ ಅರಳಿದುದು ; ಮೊಗ್ಗು ; ಮುಗುಳು : ಅನೇಕ ಸುರಭಿಕುಸುಮಂಗಳಂ ಸಜ್ಜುಕಮಪ್ಪುವಂ ಪುಟ್ಟಿಯೊಳ್ ತೀವಿಕೊಂಡು (ಪಂಚತಂ. ೧೧೭-೬) : ಮೇಘದೊಳಗೆ ದೇವರ್ಕಳ ಸತಿಯರು ಬೇಗ ಸಜ್ಜುಕದ ಪುಷ್ಪಗಳ . . . ಸುರಿದರು (ಹರಿಸಾಂ. ೫-೨೯) ; ಸಜ್ಜುಕಮೆನಿತಿರ್ದೊಡಮೇಂ . . . ಬೀಱುಗುಮೆ ಕಂಪನರಲದ ಮುನ್ನಂ (ನೀತಿಮಂ. I. ೩೯). **ಸಜ್ಜಕ₂** : ೨. ಸಜ್ಜಕಮಂ ತುಱುಂಬಿ ಮೊಲೆಗಳ್ಗೆ ಕರಂಟಮನಿಕ್ಕಿ ಕಟ್ಟಿ (ಉದ್ಭಟ. ೧೦-೭೦). **ಸಜ್ಜುಗ** : ೨. ತಾವರೆಯ ಸಜ್ಜುಗಕ್ಕೆಣೆಯಾದ ಮೊಲೆ (ಪರಶು. ೧೧-೩೩). [< ಪ್ರಾ. ಸಜ್ಜೊಕ. / ಸಂ. ಸದ್ಯಸ್ಕ]

**ಸಜ್ಜುಕಂಬಡೆ** (ಕ್ರಿ). ಮೊಗ್ಗನ್ನು ಪಡೆ ; ಮುಗುಳನ್ನು ಹೊಂದು : ಅಂಗರಾಜನ ನುಡಿಯಂದದಮನಾಲಿಸುತೆ ಚೈತ್ರಸೇನಾನಾಥಂ ಸಂದ ಸುಖದಿಂದ ನಿಜಬಲವೃಂದಕೆ ಸೆಲಮಿತ್ತು ಸಜ್ಜುಕಂಬಡೆದೆಸೆದಂ (ಯಾದಚಂ. ೩-೨೫). [ಸಜ್ಜುಕ + ಪಡೆ₁]

**ಸಜ್ಜುಕಮೊಲೆ** (ನಾ). ಮೊಗ್ಗಿನಂತೆ ಇರುವ ಮೊಲೆ : ಸಜ್ಜುಕಮೊಲೆಯ ಪೆಣ್ಗಳು ಮುಂದೆ ನಡೆದರು (ಭರಚ. ೧೨-೬೨). [ಸಜ್ಜುಕ + ಮೊಲೆ₁]

**ಸಜ್ಜುಕಸರ** (ನಾ). ೧. ಮೊಗ್ಗಿನ ಸರ ; ಮುಗುಳ ಮಾಲೆ : ಸಜ್ಜುಕಸರ ತೊಡ ಮುಕುರ ಬಾಚಣಿಗೆಯ ಕಜ್ಜದರೊಱಗಿರ್ದರು ಸುತ್ತ (ಸೊಬಸೂ. ೨೩-೨೭) ; ಕಜ್ಜಳವಿಡುವ ಕನ್ನಡಿಯ ನೋಡುವ ಮಿಗೆ ಸಜ್ಜುಕಸರಗಳ ಮುಡಿವ . . . ಪುತ್ಥಳಿಗಳಾ ಭವನದ ವಜ್ರಭಿತ್ತಿಯೊಳೊಪ್ಪಿದುವು (ಕಂನವಿ. ೨೨-೬). ೨. ಕಾಮ ; ಮನ್ಮಥ : ಲಜ್ಜೆಯಿದೇಕೆ ಕಾಲ್ಗೆರಗಿದಪೆ ಸುಕುಮಾರ ಕಜ್ಜಳಾಕ್ಷಿಯರ ರಂಜಿಸುವ ಪಜ್ಜೆಗಳ ನುಮಂದಕೆ ನಿನ್ನ ಕೈಯಿಂದ ಸಜ್ಜುಕಸರನೊತ್ತಿಸುವನು (ನೇಮಿಸಂ. ೮-೧೩೭). [ಸಜ್ಜುಕ + ಸರ₂]

**ಸಜ್ಜುಗ** 'ಸಜ್ಜುಕ' ನೋ.

**ಸಜ್ಜುಗೆ** (ನಾ). ಸಿದ್ಧತೆ ; ಸಜ್ಜು : ಸಂಸಾರ ಹೂಡಲು ಎಲ್ಲ ಸಜ್ಜುಗೆ ಮಾಡಿರುವುದಾಗಿ ಕಾಗದ ಬರೆದಿದ್ದಾನೆ (ನಡೆದಾ. II. ೧೦೯೦). [ಸಜ್ಜು + - ಗೆ]

**ಸಜ್ಜುಗೆಯ್** (ಕ್ರಿ). ಸಿದ್ಧಗೊಳಿಸು ; ತಯಾರು ಮಾಡು : ಸಿಂಹಳೇಂದ್ರಂ ಘೂರ್ಮಿಸಿ ನಿಜಬಳಂಬೆರಸು ಕಾಳೆಗಕ್ಕೆ ಪೊಱಮಡಲುಜ್ಜುಗಿಸಿ ಸಜ್ಜುಗೆಯ್ಯುತಿರ್ಪಿನಂ (ರಾಜಶೇ. ೬-೧೧೬ ವ). [ಸಜ್ಜು + ಕೆಯ್₁]

**ಸಜ್ಜುಗೊಳ್, ಸಜ್ಜುಗೊಳ್ಳು** (ಕ್ರಿ). ಸಿದ್ಧವಾಗು ; ತಯಾರಾಗು : ಕೆಲವು ಚಂದನದ ಕಾಲ್ಮಣೆಗಳು ಅದೇ ರೀತಿ ಸಜ್ಜುಗೊಂಡಿದ್ದುವು (ಬಾಣಿಆ. ೧೨೯). **ಸಜ್ಜುಗೊಳ್ಳು** : ಉದ್ಯಾನೆಯ ಈಟಿಗಳಿಂದ ಮತ್ತು ದೊಡ್ಡ ದಾವೂ ಅಥವಾ ಕೈಗೊಡಲಿಗಳಿಂದ ಸಜ್ಜುಗೊಳ್ಳುತ್ತಾರೆ (ಕವಿಕೋ. I. ೭೫೮). [ಸಜ್ಜು + ಕೊಳ್₁]

**ಸಜ್ಜುಗೊಳಿಸು** (ಕ್ರಿ). = ಸಜ್ಜುಗೆಯ್ : ಆಯುಧಗಳನ್ನು ಸಜ್ಜುಗೊಳಿಸೋಣ (ಆರ್ಯಕ. ೨೨) ; ಲಕ್ಷ್ಮಿ ಎಲೆ ಹಾಕಿ, ನೀರಿನ ಲೋಟಗಳನ್ನಿಟ್ಟು ಆಗಲೇ ಸಜ್ಜುಗೊಳಿಸಿದ್ದಳು (ಮೂಲಾನ. ೬೫). [ಸಜ್ಜು + ಕೊಳ್₁ + - ಇಸು₃]

**ಸಜ್ಜುಗೊಳ್ಳು** 'ಸಜ್ಜುಗೊಳ್' ನೋ.

**ಸಜ್ಜುಬಡಿಸು** (ಕ್ರಿ). = ಸಜ್ಜುಗೆಯ್ : ಮೆಯ್ಯ ಸಜ್ಜುಬಡಿಸಿದೆನು (ಗೀತಗೋ. ೩೦). [ಸಜ್ಜು + ಪಡಿಸು]

**ಸಜ್ಜುಮಹಲು** (ನಾ). ಸಿದ್ಧವಾಗಿರುವ ಭವನ ; ಸಜ್ಜಾಗಿರುವ ಮಹಲು : ಅತಿಮನೋಹರಮಾಗಿಯಿರುವ ವಜ್ರರದಯತಿಶಯದೊಳೊಪ್ಪಿಹವು ಸಜ್ಜುಮಹಲುಗಳು (ಹಮಚ. ೧೭೬). [ಸಜ್ಜು + ಮಹಲು (< ಮಹಾಲು)]

**ಸಜ್ಜುವಡೆ** (ಕ್ರಿ). = ಸಜ್ಜುಗೊಳ್ : ಸಜ್ಜುವಡೆಯ ಸೌಮ್ಯತೆ ಸರ್ವಾಂಗದೊಳುಜ್ಜುಗ ಗೊಳೆಯೊಳ್ಪಡತೆ ಲಜ್ಜೆ ಬಿಂಬಿಸೆ ಲಾವಣ್ಯದೊಳೊಯ್ಯನೆ ಪಜ್ಜೆಯಿಡುವುದು ಭಾವೆಯರು (ಹರಿಬ. ೮-೩೬). [ಸಜ್ಜು + ಪಡೆ₁]

**ಸಜ್ಜೆ₁** 'ಸೆಜ್ಜೆ₁' ನೋ.

**ಸಜ್ಜೆ₂** 'ಸೆಜ್ಜೆ₂' ನೋ.

**ಸಜ್ಜೆಗೊಳಿಸು₁** 'ಸೆಜ್ಜೆಗೊಳಿಸು' ನೋ.

**ಸಜ್ಜೆಗೊಳಿಸು₂** (ಕ್ರಿ). ಅಣಿಮಾಡು ; ಸಿದ್ಧಗೊಳಿಸು : ಸಕಲಕಾರ್ಯಂಗಳನು ಸಜ್ಜೆಗೊಳಿಸುವಳು (ಕಕುಮಾ. ೨೪-೫). [ಸಜ್ಜೆ₀ (< ಸಜ್ಜು) + ಕೊಳ್₁ + - ಇಸು₃]

**ಸಜ್ಜೆನಿವಾಸ** (ನಾ). ಮಲಗುವ ಮನೆ ; ಶಯ್ಯಾಗೃಹ : ಸಜ್ಜೆನಿವಾಸಮಂ ಬಿಡುವರುಂಟೆ ಕುಮತ್ಕುಣದಂಶಭೀತಿಯಿಂ (ಬಾಧಪ್ರ. ೧-೩೭). [ಸಜ್ಜೆ₂ (< ಸೆಜ್ಜೆ₂) + ನಿವಾಸ]

**ಸಜ್ಜೆಮನೆ** 'ಸೆಜ್ಜೆವನೆ' ನೋ.

**ಸಜ್ಜೆಯೂಟಿಗ** (ನಾ). ಮಲಗುವ ಮನೆಯ ಕೆಲಸ ; ಶಯ್ಯಾಗೃಹದ ಸೇವೆ : ಮನೆವಾಳ್ತೆ ಸಜ್ಜೆಯೂಟಿಗಂ ಮೊದಲಾದುದಂ ಗಣನೆಗೊಂಡು (ಚಿಕವಂ. ೯೨-೧೪). [ಸಜ್ಜೆ$_2$ ( < ಸಜ್ಜೆ$_2$) + ಊಟಿಗ]

**ಸಜ್ಜೆವನೆ** 'ಸಜ್ಜೆವನೆ' ನೋ.

**ಸಜ್ಜೆವಳ** 'ಸಜ್ಜೆವಳ' ನೋ.

**ಸಜ್ಜ್ಯೈವಾತ್ಯಕ** (ನಾ). ಚಂದ್ರ ; ತಿಂಗಳು : ಮಾತಂಗವಮಂ ನಿರ್ಜಿತ ಸಜ್ಜ್ಯೈವಾತ್ಯಕಪ್ರದ್ಯುತಿಯೆನಿಸಿ ನಿಜಾಪಾಂಗದಿಂದಂ ಕೃಣತ್ಪಿಟ್ಟತಿಯಂ . . . ಅನುದಿನಂ ಗೆಲ್ವುದಾಶ್ಚರ್ಯಮೇ ದಲ್ (ರಾಜಶೇ. ೭-೬೨). [ಸಂ.]

**ಸಜ್ಜೋಡು** (ನಾ). ಕವಚಸಹಿತವಾದುದು : ಉಡಿದು ಬಿದ್ದುದು ಚಾಪ ಸಾರಥಿ ಕಡಿವಡೆದು ರಥ ನುಗ್ಗುನುಸಿಯಾಯ್ತಡಗುದಟಿಯಾಯ್ತಶ್ವಚಯ ಸಜ್ಜೋಡು ತಡಿಸಹಿತ [ಪಾಠಾಂ. ಬಿಡೆಜೋಡು ತನುವಿನಲಿ, ಸಜ್ಜೊಡೆದು ದಡಿಸಹಿತ, ಬರಿಜೋಡು ತಡಿಸಹಿತ] (ಕುಮಾ.ಭ. ೩-೫೧). [? + ಜೋಡು]

**ಸಜ್ಞಾನಚಕ್ಷು** (ನಾ). ಜ್ಞಾನಸಹಿತವಾದ ದೃಷ್ಟಿಯುಳ್ಳವನು : ಎನಗೆ ಶರಣ್ ಧರ್ಮದಿಂದತ್ತ ಪತ್ತಿಲ್ಲ ಪುನರ್ದೀಕ್ಷಾಪ್ರಸಾದಂ ಸದಮಳನಿಖಿಳಾನೂನ ಸಜ್ಞಾನಚಕ್ಷೂ (ಸುಕುಮಾ. ೬ ೪೫). [< ಸಂ. ಸಜ್ಞಾನಚಕ್ಷುಸ್]

**ಸಜ್ಯೋತಿ** (ಗು). ೧. ಬೆಳಕಿನಿಂದ ಕೂಡಿದ ; ಪ್ರಕಾಶಮಾನವಾದ : ಕ್ಷಿತಿನಾಥರ್ ಪಲರುಳ್ಳೊಡಂ ಬಗೆದು ಕೇಳ್ ನೀನಕ್ಕ ರಾಜಾನ್ವಯಸ್ಥಿತಿ ವಿಶ್ವಾವನಿಗೀತನಿಂದೆ ದೊರೆಯಾಯ್ತೆಂತೆನ್ನ ಸಜ್ಯೋತಿರುನ್ನತಿ ಋಕ್ಷಗ್ರಹ ತಾರಕಾನಿಕರದಿಂದೇನಾದುದೇ ರೋಹಿಣೀಪತಿಯಿಂದಾದುದು ರಾತ್ರಿಗಂಬುಜದಳವ್ಯಾಲೋಲಲೀಲೇಕ್ಷಣೇ (ಶಾಂತಿಪು. ೫-೧೦೭). (ನಾ). ೨. ಪ್ರಕಾಶಮಾನವಾದ ಬೆಳಕು : ಮರೆವ ಸಜ್ಯೋತಿ ಚಜ್ಯೋತಿ ಸಮರಸವಾಗಿ (ನವಮೋ. ೧೯-೪೭). [ಸಂ. ಸಜ್ಯೋತಿಸ್]

**ಸಟ$_1$** (ನಾ). ೧. ಅಯಾಲು ; ಕೇಸರ : 'ಸಟಾವಳಿ' ಪರಾ. ೨. ಹೆಣೆದುಕೊಂಡ ಕೂದಲು ; ಜಟೆ : ಪರದುರಿಗೆಸಮವ್ಯಳಿಪ ನಾಲಗೆ ಮಿಂಚುವ ದಾಡೆ ಬಿಟ್ಟ ಕಣ್ ತಿರುಪಿದ ಮೀಸೆ ಕೊಂಕಿದ ಸಟಂ . . . ಆಸುರತರವಾಗೆ ಬಂದು ಕವಿದತ್ತು ಘಟೋತ್ಕಚರೌದ್ರಸಾಧನಂ (ಪಂಪಭಾ. ೧೨-೭) ; ಶಿವಕೋಟಿ ಪಾರಿದವು ಭಸ್ಮವೆರದಂಗಾಂಗದವನಿಗಿಳೆ ಬಿಟ್ಟ ಸಟದಿಂದ (ಜಿನಮು. ೧೪-೧೦). [ಸಂ. ಸಟಾ]

**ಸಟ$_2$** (ನಾ). ಹೇರು ; ಹೊರೆ : "ಹೇಱು ಸಟಮನಿಕು" (ಮಂಗರಾ. ೧೦೨-೩). 'ಸಟ್ಟೆ$_2$' ಪರಾ. [?]

**ಸಟಕ** 'ಸಟ್ಟುಗ$_1$' ನೋ.

**ಸಟಕ್ಕನೆ** (ಅ). ತಟಕ್ಕನೆ ; ಕೂಡಲೆ : ಐತಾಳರು ಹದರಿದರು. ಸಟಕ್ಕನೆ ಜನಿವಾರ ವನ್ನು ಕೈಯಲ್ಲಿ ಹಿಡಿದು ಹತ್ತು ಸಾರಿ ಗಾಯತ್ರಿಮಂತ್ರ ಪಠಿಸಿ (ದೇಪಹಂ. ೫೬) ; ಬಾಗಿಲು ಸಟಕ್ಕನೆ ತೆರೆದಂತಾಗಿ ಯಾರೋ ಒಬ್ಬನು ಒಳನುಗ್ಗಿದನಂತೆ (ಏಳಿವ್ಯ. ೧೭೪). [ಸಟಕ್$_0$ + - ಅನೆ$_1$]

**ಸಟಗ$_1$** 'ಸಟ್ಟುಗ$_1$' ನೋ.

**ಸಟಗ$_2$** 'ಸಟ್ಟಗ' ನೋ.

**ಸಟಗು, ಸಟಾಗು** (ಅ). ಕೊಂಚ ; ಸ್ವಲ್ಪ : ಲಿಂಗಾಣತಿಯಿಂದ ಬಂದ ಪದಾರ್ಥವ ಸಟಗೆ ಉಂಡುಕೊಂಡಂತೆ ಮಾಡಿ (ಭಸಪ. ೨೦-೧೭) ; ಮೈಸೂರು ಭಾರಿ ಪಟ್ಣ ಅಲ್ವ ಬುದ್ದಿ, 'ಅಯ್', ನೋಡ್ಬೇಕು ಕಣಾ, ಸಟಗಾದ್ರೂ (ಮೂಲಾಸ. ೧೦೨). **ಸಟಾಗು:** ಮನೆ ಅಥವಾ ಮನುಷ್ಯರು 'ಸಟಾಗಿ' ಕಾಣಿಸುವುದು ಬಿಟ್ಟರೆ ಯಾರ ಮನೆ, ಯಾವ ಮನುಷ್ಯ ಅಂತ ಸರಿಯಾಗಿ ಕಾಣಿಸುತ್ತಿರಲಿಲ್ಲ (ನಸ್ಸೂರು. ೧೨೭). [?]

**ಸಟವಾಯಿ** 'ಸಟವಿ$_2$' ನೋ.

**ಸಟಾಗು** 'ಸಟಗು' ನೋ.

**ಸಟಾವಳಿ** (ನಾ). ಸಿಂಹದ ಕೂದಲಿನ ಸಮೂಹ,— ಕೇಸರದ ಸಮೂಹ : ಎಳವೆಱೆಗಳನಿಳಿಪ ಸಟಾವಳಿಯಿಂ ಬಿಸವಿಸರವೆಂದು ಕರಿಕಳಭಂಗಳ್ ಸೆಳೆಯುತ್ತಿರೆ ಸೊಗಯಿಸಿ ಕಣ್ಗೊಳಸರೆವುಚ್ಚಿರ್ದುದಂತದೊಂದು ಮೃಗೇಂದ್ರಂ (ಕಾದಂಪೂ.೨೫೭); ವಿವಿಧ ಸಟಾವಳಿ ಕಿಱುಜಡೆ . . . ಅಗಲ್ ಅಂಬೆಗಾಲಿಕ್ಕುವ ಪದದೊಳ್ ಸಿಂಹಶಿಶುವೊಲೆಸೆದಂ ಕೃಷ್ಣಂ (ಜಗವಿ. ೩-೩೭). [ಸಂ. ಸಟಾವಲಿ]

**ಸಟಾಳಿ** (ನಾ). = ಸಟಾವಳಿ ೧ : ತನ್ನ ಕೈಗಳಿಂ ತೊಡೆಯಲೊಡಂ ಸಡಿಲ್ದ ತನು ಕೊರ್ಬಿ ಸಟಾಳಿ ನಿಮಿರ್ದು ಕಾಂತಿ ನೂರ್ಮಡಿಸಿ ಕೊನರ್ತು ರೋಮತತಿ . . . ತಳೆದಿರ್ದುದಾಕ್ಷಣಂ (ನಳಚಂ. ೬೭೭). [ಸಂ. ಸಟಾಲಿ]

**ಸಟೀಕೆ** (ಗು). ೧. ವ್ಯಾಖ್ಯಾನ ಸಹಿತವಾದ ; ಟೀಕಿನಿಂದೊಡಗೂಡಿದ : ಸಟೀಕಾ ಕಬ್ಬಿಗರ ಕೈಪಿಡಿ ಸಂಪೂರ್ಣವು (ಕಬ್ಬಕೈ. ಪುಟ. ೨೧೧). (ನಾ). ೨. ವ್ಯಾಖ್ಯಾನ ಸಹಿತವಾದುದು. [ಸಂ. ಸಟೀಕ]

**ಸಟುಗ** 'ಸಟ್ಟಗ' ನೋ.

**ಸಟೆ$_1$** (ನಾ). ೧. ಹುಸಿ; ಸುಳ್ಳು : "ಕುಸ್ಯತಿ ಮಿಥ್ಯೆಯೆನಲು ಸಟೆ" (ಮಂಗರಾ. ೧೩೩-೨೮); ಸಟೆಯಿಲ್ಲದಂತೆ ಪ್ರಪಂಚುವಿಲ್ಲದಂತೆ ವೈಶಿಕವಿಲ್ಲದಂತೆ ನಡೆಸಯ್ಯಾ ಲಿಂಗ ತಂದೆ (ಬಸವ. ೬೧) ; ಸಟೆಯ ಭಕ್ತಿಯ ಭರದಲೇತಕೆ ಫಲವ ಬಯಸುವೆ (ಪ್ರಭುಲೀ. ೭-೬೭) ; ಸಟೆ ನುಡಿಯುವವನಿಗೆ ಮಠದ ಪೂಜೆ ಯಾಕೆ? (ಗಾದೆ). [< ಸಂ. ಶಠ]

**ಸಟೆ$_2$** (ನಾ). ೧. (ಕುದುರೆ, ಸಿಂಹ ಮುಂತಾದ ಪ್ರಾಣಿಗಳ) ಕುತ್ತಿಗೆಯ ಮೇಲಿನ ಕೂದಲು; ಕೇಸರ; ಅಯಾಲು : ಇಂದ್ರಾಯುಧದ ಕುಂಕುಮ ಕಪಿಲ ಕೇಸರ ಸಟೆಯನೊಯ್ಯನೋಸರಿಸುತ್ತಂ (ಕಾದಂಬ. ೧೯೬). ೨. ಜಡೆಗಟ್ಟಿದ ಕೂದಲು : "ಜಟಾ ಸಟೆಯೆನಲು ಜಡೆ" (ಮಂಗರಾ. ೯೫-೭). [ಸಂ. ಸಟಾ]

**ಸಟೆಗ** (ನಾ). ಸುಳ್ಳುಹೇಳುವವನು ; ಸುಳ್ಳುಗಾರ : ಬದಿಗಂ, ಸಟೆಗಂ, ನವಸಿಗಂ (ಶಮದ. ೨೦೧ ಪ್ರಯೋ). [ಸಟೆ$_1$ + - ಗ$_2$]

**ಸಟೆಗಾರ** (ನಾ). = ಸಟೆಗ : ಸಟೆಗಾರನ ಮಾತು ದಿಟವಾದರೂ ನಂಬರು (ಗಾದೆ). [ಸಟೆ$_1$ + - ಗಾರ (< - ಕಾಱ)]

**ಸಟೆಗಾರ್ತಿ** (ನಾ). ಸುಳ್ಳುಹೇಳುವವಳು ; ಸುಳ್ಳುಗಾತಿ : (ಶಿ). [ಸಟೆಗಾರ + - ತಿ$_1$ (< - ಇತ್ತಿ)]

**ಸಟೆಮಾತು** (ನಾ). ಸುಳ್ಳುಮಾತು : ಮಾಡೋದು ಪಾರಾಯಣ ಆಡೋದು ಸಟೆಮಾತು (ಗಾದೆ). [ಸಟೆ$_1$ + ಮಾತು$_1$]

**ಸಟ್ಟಕ** (ನಾ). [ನಾಟ್ಯ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು ; ಕಥಾವಿಸ್ತಾರವಿಲ್ಲದ ಸಣ್ಣನಾಟಕ : ಉಪರೂಪಕಗಳು ೧. ನಾಟಿಕಾ . . . ೪. ಸಟ್ಟಕ . . . ೧೮. ಭಾಣಿಕಾ (ಸಂನಾಟ. ೩೨). [ಸಂ.]

**ಸಟ್ಟಗ, ಸಟಗ$_2$, ಸಟುಗ, ಸಟ್ಟುಗ$_3$** (ನಾ). ೧. ಒಂದು ಬಗೆಯ ಮರ : ಇದು ಮೈಸೂರು ಕಾಡುಗಳಲ್ಲಿ ಸಟ್ಟಗ ಎಂದು ಹೇಳುವ ಮರಜಾತಿಗೆ ಸೇರಿದ್ದು (ಹಸುಹೂ. ೩೫). **ಸಟಗ$_2$** : ೧. ದಂಡ್ಲಮರ, ಸಟಗದ ಮರ (ವ್ಯಾಶಿಗಿ. ೩೩-೬೮೯). **ಸಟುಗ** : ೨. ಒಂದು ಬಗೆಯ ಔಷಧೀ ಸಸ್ಯ : ಸಟುಗದ ಗಿಡ, ಗಿರ್ಣಿಕರ್ಣಿಕೆ, ಕಂಠಿಸೊಪ್ಪು (ವ್ಯಾಶಿಗಿ. ೨೩-೪೨೧). **ಸಟ್ಟುಗ$_3$** : ೨. ಸಟ್ಟುಗದ ಬೇರನೂ ಅದರ ಬೀಜವನೂ ನೀರಿನಲ್ಲಿ ಅರೆದು ನಸ್ಯವ ಮಾಡಲು ಅರೆದಲೆಬೇನೆ ಶಮನವಹುದು (ವೃದ್ಯಸಾ. II. ೧೪೦). [?]

**ಸಟ್ಟನೆ** (ಅ). ತಕ್ಷಣ ; ಕೂಡಲೆ : "ಸಟ್ಟನೆ" ಒಳಗಿನ ಬೋಲ್ಟ್ ಸಿಕ್ಕಿಸಿದಳು (ಹಳ್ಳಿಹಾ. ೧೧೪); ಆನಂದ ಸಟ್ಟನೆ ಎದ್ದು ಕೂತ (ಏಮುಕ. ೨೫). [ಸಟ್$_0$ + - ಅನೆ$_1$ . / ತೆಲು. ಸಟ್ಟನ]

**ಸಟ್ಟಾ, ಸಟ್ಟೆ$_1$, ಸಾಟೆ$_2$** (ನಾ). ೧. ದೊಡ್ಡ ಪ್ರಮಾಣದಲ್ಲಿ ದವಸಧಾನ್ಯವನ್ನು ಕೊಳ್ಳುವಿಕೆ ; ಸಗಟುವ್ಯಾಪಾರ : ಸಟ್ಟಾ ಕೊಡುವುದಕ್ಕೆ ಠರಾಯಿಸಿದ ಬಗ್ಗೆ ಏನೂ ತಕ್ಕೊಳ್ಳಲಿಕ್ಕಿಲ್ಲ (ಮುಂಬವ್ಯಾ. ೨೨೫). ೨. ಬೆಲೆಯೇರಿದಾಗ ಹೆಚ್ಚಿನ ಲಾಭಕ್ಕೆ ಮಾರಲು ಸರಕುಗಳನ್ನು ಕೊಳ್ಳುವಿಕೆ : ಯುದ್ಧಕಾಲದ ಅತಿಲಾಭಕ್ಕೆ ನುರಿತ ವ್ಯಾಪಾರಿವರ್ಗ . . . ಸಟ್ಟಾದಲ್ಲಿಯೇ ತನ್ನ ಭವಿಷ್ಯವನ್ನು ಹುಡುಕುತ್ತಿದೆ (ಗೊಂಡಾರ. ೨೦೯) ; ವ್ಯಾಪಾರಿಗಳು ಇತರ ವ್ಯಾಪಾರಗಳಲ್ಲಿ ಊಹೆಯಿಂದ ಲಾಭದ ಎಣಿಕೆಹಾಕಿ ಮಾಲನ್ನು ಕೊಂಡು ಕೆಲವು ಸಮಯ ಕಾದು ಮಾರುವಂತೆ ಪಾಲುಗಳ ವ್ಯಾಪಾರ ನಡೆಯಿಸುವರು . . . ಇಂಥ ವ್ಯಾಪಾರದ ವಹಿವಾಟುಗಳು (ಸಟ್ಟಾ ಎಂದು

ಹೆಸರು) (ಬಾಲಪ್ರ. III, ೧೫೬೩). 'ಸಾಟ$_3$' ಪರಾ. **ಸಟ್ಟೆ$_1$ : ೧.** ಸಟ್ಟೆಯ ಜೀನಸಿನ ಮಾಪವನ್ನು ತಕ್ಕೊಂಡು ವಿಕ್ರಿಮಾಡುವದಿದ್ದರೆ . . . ಬಂದೀತು (ಮುಂಬವ್ಯಾ. ೨೧೨). **ಸಾಟೆ$_2$ : ೨.** ವ್ಯಾಪಾರದಲ್ಲಿ ಸಾಟೆಯ ಗೊಂದಲಕ್ಕಿಳಿದು ಕೈಸುಟ್ಟುಕೊಂಡಿದ್ದಾನೆ - ಎಂಬುದು ಅವರಿಗೆ ತಿಳಿದ ಸಂಗತಿ (ಚಾರುದಾ. ೭೭).

**ಸಾಟೆಮಾಡು** = ಬೆಲೆಯೇರಿದಾಗ ಮಾರುವುದಕ್ಕಾಗಿ ಕಡಮೆಬೆಲೆಗೆ ಧಾನ್ಯಗಳನ್ನು ಸಂಗ್ರಹಿಸು ,— ಸರಕುಗಳನ್ನು ಶೇಖರಿಸಿಡು : ನಾರಾಯಣ ರಖಂ ವ್ಯಾಪಾರ ಮಾಡುವುದಕ್ಕಾಗಿ ಸಾಟೆಮಾಡುತ್ತಿರುವಾಗ, ಕೇಶವ ಚಿಲ್ಲರೆ ವ್ಯಾಪಾರವನ್ನೂ ದೊಡ್ಡದಾಗಿ ಮಾಡುವ ಹಂಚಿಕೆ ಹೂಡುವನು (ರಾಚಂದ್ರ. ೮); ಅಲ್ಲಿಯ ಪ್ರಮುಖವ್ಯಾಪಾರಿಯು ಆ ಯಾವತ್ತು ಕಾಳನ್ನು ರೈತರಿಂದ ಸ್ವಲ್ಪ ಹೆಚ್ಚುಬೆಲೆಗೆ ಇಲ್ಲವೆ ಚಾಲತಿ ಬೆಲೆಗೆ ಸಾಟೆಮಾಡುತ್ತಾನೆ (ಬಾಲಪ್ರ. II, ೮೯೩).

[<— ಹಿಂ. ಮರಾ. ಸಟ್ಟಾ ./ ಪ್ರಾ. ಸಟ್ಟ]

**ಸಟ್ಟಾಟ** (ನಾ). ವಿನೋದ; ತಮಾಷೆ (?) : ಪಟ್ಟಣವಾಸಿಗರೂರುಗರೊಡನೊಂದು ಬಟ್ಟೆಯೊಳಗೆ ಹೋಗುವಾಗ ಸಟ್ಟಾಟವಾಡುತ ಹೋಹಂತೆ ಮೋಹದ ಶಿಟ್ಟವಿಹುದು ಮೋಕ್ಷರತನ (ಭರಚ. ೫-೧೦೧); ಕಟ್ಟೆದಿರೊಳು ಕಾಣುತತ್ತಿಗೆಯರೊಳಿಷ್ಟು ಸಟ್ಟಾಟವಾಡಿದರಾಗ (ಭರಚ. ೬೨-೧೮). [ಸಟ್ಟ$_0$ + ಆಟ]

**ಸಟ್ಟಾಮಾರು** (ಕ್ರಿ). ಒಟ್ಟಾಗಿ ಮಾರು : ವಸಂತ ಮನೆಯಲ್ಲಿಯ ಧಾನ್ಯದ ಚೀಲಗಳನ್ನು ಮಾರಿಕೊಂಡನಷ್ಟೇ ಅಲ್ಲ, ಒಂದೆರಡು ಹಗೆಗಳನ್ನು ಸಟ್ಟಾಮಾರಿಬಿಟ್ಟನೆಂದೂ . . . ಗೊತ್ತಾಯಿತು (ಗಂಮಾಯಿ. ೧೫೭). [ಸಟ್ಟಾ + ಮಾರು$_1$ (< ಮಾಱು$_1$)]

**ಸಟ್ಟಾವ್ಯವಹಾರ** (ನಾ). = ಸಟ್ಟಾ ೨ : ಬೆಳಗಾಗುವುದರೊಳಗಾಗಿ ಶ್ರೀಮಂತರಾಗಬಹುದು ಸಟ್ಟಾವ್ಯವಹಾರದಲ್ಲಿ, ಕಾಳಸಂತೆಯಲ್ಲಿ, ಲಾಟರಿಯಲ್ಲಿ, ಜೂಜಿನಲ್ಲಿ (ಶರಚ. ೮೩೮). [ಸಟ್ಟಾ + ವ್ಯವಹಾರ]

**ಸಟ್ಟಾವ್ಯಾಪಾರ, ಸಾಟೆವ್ಯಾಪಾರ** (ನಾ). = ಸಟ್ಟಾ ೨ : ಸಟ್ಟಾವ್ಯಾಪಾರಮಾಡಿ ಸ್ವಂತ ಅನುಕೂಲಕ್ಕೆ ತಕ್ಕಂತೆ ಬೆಲೆಯನ್ನು ಏರಿಸುತ್ತ ಇಳಿಸುತ್ತ ಹೋಗುವ ಜನರುಂಟು (ಹಣಪ್ರ. ೧೬೧) ; ಸಟ್ಟಾವ್ಯಾಪಾರ ಹುಟ್ಟಿಕೊಂಡು, ಕಳ್ಳಪೇಟೆಗಳು ಬಲಿತು ಕ್ರಮೇಣ ಯುದ್ಧಕ್ಕೆ ಅವಕಾಶವಾಯಿತು (ಕವಿಕೋ. II, ೧೦೨). **ಸಾಟೆವ್ಯಾಪಾರ :** ಕುಮಟೆಯಿಂದ ಬಂದವರೇ . . . ಒಮ್ಮೆಗೇ ಸಾಟೆವ್ಯಾಪಾರ ತೊಡಗಿದರು (ದೀಜ್ಯೋತಿ. ೪೪).

[ಸಟ್ಟಾ + ವ್ಯಾಪಾರ]

**ಸಟ್ಟಿ** 'ಚಟ್ಟಿ$_1$' ನೋ.

**ಸಟ್ಟಿವಣ** (ನಾ). ಒಂದು ಬಗೆಯ ತೆರಿಗೆ : ತಳವಾರಿಕೆಹಣ ಸಟ್ಟಿವಣ ನೋಟವಣ . . . ಅಚ್ಯುತಮಹರಾಯರಿಗೆ . . . ಯಿಷ್ಟನು ಬಿಟೆಉ (ಎಕ. VI, ಕಡೂರು. ೧೫೮-೧೦: 1542). [ಸಟ್ಟಿ$_1$ + ಪಣ$_1$]

**ಸಟ್ಟು** 'ಸಟ್ಟುಗ$_2$' ನೋ.

**ಸಟ್ಟುಗ$_1$, ಸಟಕ, ಸಟಗ$_1$, ಸಟ್ಟು$_1$, ಸೊಟಕ, ಸೊಟಗ, ಸೊಟ್ಟಗ, ಸೋಟಕ, ಸೋಟಿಗೆ$_1$** (ನಾ). ೧. ಸಾರು ಮೊದಲಾದ ದ್ರವಪದಾರ್ಥಗಳನ್ನು ತೊಳಸಲು ಉಪಯೋಗಿಸುವ ಮರ ಅಥವಾ ಲೋಹದಿಂದ ಮಾಡಿದ ಸಾಧನ; ಸೌಟು; ದರ್ವಿ : ಸಟ್ಟುಗಮಂ ತೀವಿ ಭೈಕ್ಷಮಂ ಪಿಡಿಯೆಂದು ನೀಡಿದ ಕೃಯನಿತನೆ ಕಂಡು (ಪಮ್ಪಾರಾ. ೮೯-೮) ; ಅನ್ನೆಗಂ ಭೀಮಸೇನನುಂ ಬೋನವೇಟಿಗೆಯಂ ಸಟ್ಟುಗಮುಮನೊರ್ವ ಪರಿಚಾರಕನಿಂ ಪಿಡಿಯಿಸಿಕೊಂಡು ಬಂದು (ಪಂಪಭಾ. ೮-೫೩ ವ) ; ಪುಟ್ಟಿಂ ಸಟ್ಟುಗಮಂ ಕೊಂಡಟ್ಟಾಟಿಸಿ ಬೋನಮಿಟ್ಟು ಬಂದೆಯೊ (ಗದಾಯು. ೭-೩೭); ಅಟ್ಟಡಿಗೆಯ ರುಚಿಯ ಸಟ್ಟುಗವು ಬಲ್ಲುದೆ (ಸರ್ವಜ್ಞ. ೪೨೦). **೨.** ದೋಣಿ ನಡೆಸುವ ಸಾಧನ ; ಹುಟ್ಟು : ಸಂಸಾರವೆಂಬ ಸಾಗರವ ದಾಂಟುವರೆ ಅಱುಹೆಂಬ ಹಱಿಗೋಲನಿಕ್ಕಿ ಜ್ಞಾನವೆಂಬ ಅಂಬಿಗ ಈ ಹರುಗೋಲೊಳಗೆ ಕುಳ್ಳಿರ್ದು ಸುಜ್ಞಾನವೆಂಬ ಸಟ್ಟುಗವ ಪಿಡಿದು . . . ನಾ ನಿನ್ನ ಹಾಯಿಸಿಕೊಟ್ಟಿಹೆನೆಂದನು (ತಂಸ್ವಸಂ. ೧೨೭-೩೭). **ಸಟಿಕ : ೧.** ಕಬ್ಬಿಣದ ಸವುಟನ್ನೂ ಮರದ ಸಟಕವನ್ನೂ ಕಡಗೋಲನ್ನೂ ಹಿಡಿದುಕೊಂಡು (ಕೃವಾ೭. ೧೫). **ಸಟಿಗ$_1$ : ೧.** ಒಗಟು ಮಾತಿಗೆ ಸಟಗ ತಂದ (ಗಾದ). **ಸಟ್ಟು$_1$ : ೧.** ಖರ ಸುಗಂಧವ ಹೇಱಲದಱಂತರವ ಬಲ್ಲುದೆ ಸಟ್ಟು ಪಾಕದ ಪರಿಯನಱಿವುದೆ ತಾಳಪತ್ರಗಳಱಿವುವೇ ಲಿಪಿಯ (ಜೀವಂಚ. ೧-೨೦). **ಸೊಟಕ: ೧.** "ದರ್ವಿಃ, ಕಂಬಿಃ, ಖಜಾಕಾ - ೩ ಸೌಟು, ಸೊಟಕ, ಸಟ್ಟುಗ" (ಸಿದ್ಧಾಂತಿ. ೨೮೪); ಸಂನ್ಯಾಸಿಯು ಲವಂಗಲತೆಯ ಮತ್ತೊಂದು ಕೈ ಅಥವಾ ಸೊಟಕ (ಬಂಕಿಮ. ೯೪). **ಸೊಟಗ: ೧.** ಹಳೆಯ ಮಡಿಕೆ ಕುಡಿಕೆಗಳು, ಹಿಟ್ಟಿನ ದೊಣ್ಣೆ . . . ಸೊಟಗಗಳನ್ನು ತಂದಿಟ್ಟಳು (ಸರ್ವಮಂ. ೧೭). **ಸೊಟ್ಟಗ : ೧.** ಒಂದು ಸೊಟ್ಟಗ ಬಾಡಿಗೆ ಮೋಸವಿಲ್ಲ ಎಂದುಕೊಂಡು ಹೊರಟ ನಮ್ಮ ಉದಕದ ಮಾವಯ್ಯ (ನನ್ನೂರು. ೨೧೯). **ಸೋಟಕ : ೧.** ಪಂಚಪಾತ್ರ ಸೋಟಕ (ಸಿದ್ಧಕಾ. ೧೩-೪೪). **ಸೋಟಿಗೆ$_1$ : ೧.** ಬಟ್ಟ ಹೊಂಬರಿವಾಣದಂಚಿನೊಳಗೆ ಸಾಲುಬಟ್ಟಲು ಕೆಲವು ಬಟ್ಟಲೊಳು ಇಟ್ಟ ಮಾಣಿಕದ ಸೋಟಿಗೆಗಳಿಸೆಯೆ (ಭರಚ. ೪-೬೩).

**ಸಟ್ಟುಗದ ಹದ** = ಸೌಟಿನಿಂದ ಸುರಿಯಲು ಅನುಕೂಲವಾಗುವಂಥ ಹದ : ಘಟ್ಟಿಮಜ್ಜಿಗೆಗೆ ಹಸನಾದ ಸಂಭಾರಗಳನಿಟ್ಟರೆದು ಒಲೆಗೆತ್ತಿ ಒಡೆಯದಂದದಿ ಕಾಸಿ ಸಟ್ಟುಗದ ಹದವಾಗಲಿಳುಹಿ (ಸೂಪಶಾ. ೪-೩೭). [ದೇ. ‖ ತಮಿ. ಚಟ್ಟುಕ, ಚಟ್ಟುವ; ಮಲ. ಚಟ್ಟುಕ; ತುಳು. ಸಟ್ಟುಗ, ತಟ್ಟುಗ, ಸಟ್ಟ ; ತೆಲು. ಕೊಡ. ಚಟ್ಟುವ. / ಸಂ. ಚಟುಕ]

**ಸಟ್ಟುಗ$_2$, ಸಟ್ಟು** (ನಾ). ಒಂದು ಬಗೆಯ ಅಳತೆ, — ಮಾನ : ಎಲ್ಲಾ ಅಂಗಡಿಯಲು ಸಟ್ಟುಗಂ ಜೋಳವಂ ಬಿಟ್ಟರು (ಪೂಂಕಶಾ. ೧೯೨೯, ಬಾಗವಾಡಿ. ೧೦೩-೫೨; 1165). **ಸಟ್ಟು :** ಕಂದಾಯದಲು ಸಟ್ಟು ಬೆಡಿಗೆ ಸಲ್ಲದು (ಸೌಇಇ. ಮಂಗಳೂರು. ೪೭೦-೧೮; 1297). [ದೇ. ‖ ತೆಲು. ಚಟ್ಟಿಗ, ಚಟ್ಟ]

**ಸಟ್ಟುಗ$_3$** 'ಸಟ್ಟಿಗ' ನೋ.

**ಸಟ್ಟುಗಂಬಿಡಿ** (ಕ್ರಿ). ಸೌಟುಹಿಡಿ : ಬಡ್ಡಿಸಲೆಟ್ಟಂದುದು ಸಟ್ಟುಗಂಬಿಡಿದು ಭೂಕಾಂತಂಗೆ ಕಾಂತಾಜನಂ (ಶಾಂತೀಶ್ವ. ೧೫-೫೪). [ಸಟ್ಟುಗ$_1$ + ಪಿಡಿ$_1$]

**ಸಟ್ಟುಗಜಳ** (ನಾ). ಒಂದು ನಿರ್ದಿಷ್ಟವಾದ ಅಳತೆಯ ಜೋಳ : ಕ್ರಮದಿಂದಂ ಸಟ್ಟುಗಜಳಮುಮಂ ಹಡಿದಳದಿ ಸಂಚೆ ಸೊಡರ್ಗೆಣ್ಣೆಯುಮಂ . . . ದೇವರ್ಗ್ಗೆ ನಗರವೆಲ್ಲಂ ಬಿಟ್ಟರು (ಕಇಆ. ೧೪-೪-೧೪೫ ; 1093).

[IP ಇದು 'ಸಟ್ಟುಗಜೋಳ' ಎಂಬುದರ ಅಪಲಿಖಿತ]

**ಸಟ್ಟುಗಭತ್ತ** 'ಸಟ್ಟುಗವತ್ತ' ನೋ.

**ಸಟ್ಟುಗವತ್ತ, ಸಟ್ಟುಗಭತ್ತ, ಸಟ್ಟುಭತ್ತ** (ನಾ). ಒಂದು ನಿರ್ದಿಷ್ಟವಾದ ಅಳತೆಯ ಬತ್ತ : ಹಲರು ಕೂಡಿ ಕೊಟ್ಟುದು ಸಟ್ಟುಗವತ್ತ (ಎಕ. XII. ಪಾವುಗ. ೫೨-೫೮; 1232). **ಸಟ್ಟುಗಭತ್ತ :** ಅಂಗಡಿಯಲೊಂದು ಮಾನ ಸಟ್ಟುಗಭತ್ತ (ಇಇ. ೧೯೪೭. ಬ್ಯಲ್‌ಹಾನಗಲ್. ೩೪೯-೪೪ : 1086). **ಸಟ್ಟುಭತ್ತ :** ಅಂಗಡಿಯಲು ಸಟ್ಟುಭತ್ತಮುಮಂ ಕೊಟ್ಟರ್ (ಸೌಇಇ. IX - i. ೨೭೯-೩೧; 1169). [ಸಟ್ಟುಗ$_2$ + ಬತ್ತ]

**ಸಟ್ಟುಭತ್ತ** 'ಸಟ್ಟುಗವತ್ತ' ನೋ.

**ಸಟ್ಟೆ$_1$** 'ಸಟ್ಟಾ' ನೋ.

**ಸಟ್ಟೆ$_2$** (ನಾ). ಹೇರು ; ಹೊರೆ (?) : ಸಟ್ಟೆಯನೊಪ್ಪಿಸಿದವಂಗೆ ಮತ್ತೆ ಒಪ್ಪದ ಚೀಟುಂಟೆ (ಕೋಲಶಾಂ. ೧೪-೬೪); ಮೊಟ್ಟೆ ಸಟ್ಟೆಯ ಪೊತ್ತು ಬಗೆಬಗೆ ಗಟ್ಟಿಬೆಟ್ಟವ ತೊಳಲಿ . . . ನರ ಬೇಹುತಿಹ ಸಂಸಾರದೊಳಗೆಂದ (ಪ್ರಹ್ಲಾಚ. ೮-೪೯). 'ಸಟ್ಟೆ$_2$' ಪರಾ. [?]

**ಸಡಕ** 'ಸಡಕು' ನೋ.

**ಸಡಕು, ಷಡಕಿ, ಸಡಕ, ಸಡುಕು** (ನಾ). ೧. (ಕುದುರೆ, ಎತ್ತು ಮುಂತಾದುವುಗಳ) ಅಲಂಕಾರಕ್ಕಾಗಿ ಕಟ್ಟುವ ಕುಚ್ಚು,— ಗೊಂಡೆ : ಕನಕದ ಸಡಕು [ಪಾಠಾಂ. ಸಡೆಯ]ಮಣಿಲಂಬಳದ ಹಯ ಮಿಗೆ ಗುಡಿಯಿಱಿದು ಮೊಗವೆತ್ತಿ ನರ್ತಿಸಿತಸುರನಿದಿರಿನಲಿ (ತೊರರಾ. ೬-೨೯-೧೨); ಕಿವಿಯ ಮುತ್ತಿನ ಕುಚ್ಚುಗಳ ತವೆ ಸೆಳೆಸತೆಡಕಿನ . . . ಭುವನೇಶನಶ್ವವ್ಯೆದಿದುವು (ಕಂಸವಿ. ೨೩-೯೦). **೨.** (ಕಚ್ಚಾ ಅಲ್ಲದ, ಸಿದ್ಧಪಡಿಸಿದ) ರಸ್ತೆ ; ದಾರಿ : ಬಂಡಿಗಳು ಜೋಡಾಗಿ ಹೋಗುವಷ್ಟು ಅಗಲವಾದ ಸಡಕಿನ ಮಾರ್ಗವನ್ನು ಮಾಡಿದ್ದಾರೆ (ಮುಂಬಯಿ ೬-೨೯೩); ಸಡಕಿನ ಮೇಲೆ ಎಳೆಯುವ ರೂಲುಗಳು (ಕಭಾಗ. ೩೦). **ಷಡಕಿ : ೧.** ಕೌದಿಗೆ ಮೂಲೆಘಂಟೆ ೪ ಷಡಕೀ ಮೇಲುಗಡೆ ಹುವು ೪ (ಎಕ. XIV, ನಂಜನ. ೨೮೯-ಪುಟ ೧೩೯; 1848). **ಸಡಕ : ೧.** "ಉಚ್ಚೂಡಮೆನಲಾ ತುದಿಯ ಸಡಕಮಕ್ಕು" (ಮಂಗರಾ. ೮೫-೨೭). **ಸಡುಕು : ೧.** ಅಂಬರವ್ಯೊ ಮುತ್ತಿನ ಸಡುಕಿನ

ಸಾಲು ಹೊಂಬಣ್ಣ ಹೊರಜಿ ಹೊಮ್ಮಿಣಿಯು (ದೇವಾಂಪು. ೩-೧೮೩).

[<— ಮರಾ. ಹಿಂ. ಸಡಕ್; ಅರ. ಶರಕ್]

**ಸಡಗರ$_1$** (ನಾ). ೧. ಉತ್ಸಾಹ ; ಸಂಭ್ರಮ : ರಣಾನಕರವಂಗಳಸುಂಗೊಳೆ ಪರ್ವಿ ಬೇಗದಿಂ ಸಡಗರದೇಟ್ಟೆಯುಂ ಕಳಕಳಧ್ವನಿಯುಂ ಬೆರಸಾಡುವಂತೆ (ಪಂಪಭಾ ೧೩-೩೩) ; ನಲಿದಾಡಿ ಸಂದಣಿಯ ಸಡಗರಂಗಳ ನೋಡಿ ಪುಳಕಿಸುತೆ (ಸಾಮಾರ. ೭೮-೧೩); ಪೊಡವಿಯೊರ್ಗುಡಿಸಿತೆನೆ ಮೃಡಭಕ್ತಗಣತತಿ ತಂಡತಂಡದಲಿ ಸಡಗರದೊಳೆಯ್ತರೆ (ಬಸಪು. ೬-೨೦). ೨. ಆರ್ಭಟೆ; ರಭಸ : ಅವಲಕ್ಷಣ ನಾಯ ನುಡಿಯ ಸಡಗರ ಡೊವಿಗೆ ಮೃತ್ಯುವಿನ ನುಡಿಗೊಳಗಾಯಿತ್ತು (ಬಸವ. ೫೬೯); ಘುಳಘುಳಿಸುತುರವಣಿಪ ಸಿಡಿಲ ಸಡಗರದಂತೆ (ಮಹರ. ದೇ. ೭೨-೪); ಅರಸ ವನಕಾಗಿ ನಡೆಯಲು ರಥದ ಸಡಗರವನೇವೊಗಳ್ವೆನು (ಹಚಕಾ. ೩-೨೨). ೩. ಯೋಗ್ಯವಾದುದು; ಒಳ್ಳೆಯದು : "ಸಡಗರಮೆನೆ ವೊಳ್ಳಿತೆಂದು ತಿಳಿಗೆ" (ಭಾರನಿ. ೬೪). ೪. ಸೊಗಸು; ಶೋಭೆ; ಅಂದ : ಆ ಪಟ್ಟಣಮಿಟ್ಟಣಂಬಡೆದು . . . ಇಂದಿರನ ಪೊಟಲ ಸಿರಿಯ ಸಡಗರಮಂ ಪಿಡಿಯುತಿರ್ಪುದುಂ (ಕಬ್ಬಿಕಾ. ೪೪ ವ); ಮನೋಜನ ಸಡಗರಕೆ ತೆಕ್ಕಿದಳು ಪಾರ್ಥನ ನಡವಳಿಗೆ ಮೆಚ್ಚಿದಳು (ಕುಮ್ಮಾಅ. ೮-೨೦); ಮೆಱೆದುದಾ ಶ್ರೀಶೈಲ ಸತ್ಕುಲೋಚ್ಚಯಗಳಿಂ ಸಿರಿಗೊಳದ ಸಡಗರದೊಳು (ನಂದಿಮಾ. ೧೧-೬). ೫. ಅಲಂಕಾರ; ಶೃಂಗಾರ : "ಸಡಗರ . . . ಆನಂದ, ಚಂದ, ಶೃಂಗಾರ" (ಗುವಿಮೋ. ೧೪೯). ೬. ನಿರ್ಮಾಣ ; ರಚನೆ : 'ಸಡಗರಿಸು' ಪರಾ. [ದೇ. ‖ ತುಳು. ಸಡಗರ, ಸೆಡಗರ = ಹಮ್ಮು ; ಅತಿನಾಜೂಕು; ತೆಲು. ಸಡಗರ]

**ಸಡಗರ$_2$** (ನಾ). ಒಂದು ಮನೆತನದ ಹೆಸರು : ಸ್ವಸ್ತಿಶ್ರೀ ಇನ್ದರಬಲ್ಲಹ ರಾಜ್ಯಂಗೆಯ್ಯುತ್ತಿರೆ ಸಡಗರರ ತಿಟ್ಟಮ್ಮಂ . . . ಬೆಳವತ್ತರುಂಗೊಟ್ಟೊ[ನ್] (ಸೌಇಇ. XX. ೧೬-೩; 920). [< ಸಂ. ಷಡಂಗ ?./ ತಮಿ. ಚಟಚ್ಚರ್]

**ಸಡಗರಂಗೊಳ್** (ಕ್ರಿ). ಉತ್ಸಾಹಗೊಳ್ಳು ; ಸಂಭ್ರಮಿಸು : ಎಡೆಮಾಡಿದೆಡೆಯ ಮುಂದೊಪ್ಪದಿಂ ಕುಳ್ಳಿರ್ದು ಸಡಗರಂಗೊಂಡು ಗಂಟಲ್ ಮುಟ್ಟುವಲ್ಲಿ ಪರಿಯಂತರುಣುತಿರ್ದರಾಗ (ಸಮ್ಯಕೌ. ೭-೨೫). [ಸಡಗರ$_1$ + ಕೊಳ್$_1$]

**ಸಡಗರಣೆ** (ನಾ). ೧. ಆನಂದ ; ಉಲ್ಲಾಸ : "ಸಡಗರಣೆ . . . ಆನಂದ, ಚಂದ, ಶೃಂಗಾರ" (ಗುವಿಮೋ. ೧೪೯). ೨. ಆರ್ಭಟ ; ರಭಸ : ಮೊನೆದೋಱಿದರೆ ಭುಜಗನ ಬಿಱುಬುನಾಲಗೆ ಹಲಗೆಯಣೆದರೆ ಸಿಡಿಲ ಸಡಗರಣೆ (ಕುಮ್ಮಾಭೀ. ೪-೩೪).

[ಸಡಗರ$_1$ + - ಅಣೆ$_4$]

**ಸಡಗರಿಕೆ** (ನಾ). ಉತ್ಸಾಹ ; ಸಂಭ್ರಮ : ಉಡುಗೊರೆಯೆಂದರೆ ಹುಡುಗರಿಗೆ ಒಂದು ಸಡಗರಿಕೆ (ಹಗಲಿ. ೫೧). [ಸಡಗರ$_1$ + - ಇಕೆ]

**ಸಡಗರಿಸು** (ಕ್ರಿ). ೧. ಉತ್ಸಾಹಿಸು ; ಸಂಭ್ರಮಪಡು : ನರಿಯಾಹಾರಂಬಡೆಯದೆ ಬರಬರುತ್ತ ಒಂದು ಸತ್ತ ಎತ್ತಂ ಕಂಡು ಸಡಗರಿಸಿ ಅದಱ ಪೃಷ್ಠನಾಳದಿನೊಡಲೊಳಪೊಕ್ಕು ತಿನುತಿರ್ಪನ್ನೆವರಂ (ಪಂಚತಂ. ೧೯-೬); ಸಡಗರಿಸುವಲ್ಲಿ ಲಿಂಗವ ನೆನೆದು ಕಡುದುಃಖದಲ್ಲಿ ಲಿಂಗವ ಮಱೆದು (ಮೋಳಮಾ. ೫೪-೨೨೨); ಎಂಟುಮಡಿ ಹಿಗ್ಗಿ ಹೊರೆಯೇಱುತಂ ಸಡಗರಿಸಿ . . . ಸುರುಚಿರವೆನಿಪ್ಪ ಮಿಾಸಲ ವೊಗ್ಗೆಯಂ ಕೊಂಡು (ಬಸರ. ೩-೧೮). ೨. ಕಂಗೊಳಿಸು ; ಚೆಲುವಾಗು ; ಶೋಭಿಸು : ಸಡಗರಿಸಿದುದು ಶಾಲಿ ಶಾಡ್ವಲದುಡುಗೆಯಲಿ (ತೊರರಾ. ೪-೬-೧೧). ೩. ನಿರ್ಮಿಸು ; ರಚಿಸು : ಧುರದ ಕಾಲಾಳಗಣಿತವ ಮೋಹರಿಸಿ ಹಂಸವ್ಯೂಹವನು ಸಡಗರಿಸಿದನು (ಕುಮ್ಮಾದ್ರೋ. ೯-೨೦). ೪. ಅಲಂಕರಿಸು ; ಶೃಂಗಾರಮಾಡು : ಕಾಮಾಟಿಯರ ಕರಸಿ ಪುರವರವ ಸಡಗರಿಸಲೆಂದು ಕಳುಹಲು (ನವಮೋ. ೩೪-೧೦). [ಸಡಗರ$_1$ + - ಇಸು$_3$]

**ಸಡಪುಡ** (ನಾ). ೧. ಚುರುಕುತನ ; ಲವಲವಿಕೆ; ಉತ್ಸಾಹ : 'ಸಡಪುಡಂಗೆಯ್' ಪರಾ. ೨. ವೇಗ ; ಶೀಘ್ರತೆ : 'ಸಡಪುಡನೆ' ಪರಾ. 'ಚಡಪಡ' ಹೋ.

[ದೇ. ‖ ತಮಿ. ಚಟಪುಟ = ಮಿತಿಮಿಾರಿದ ವೇಗವನ್ನು ಹೊಂದು]

**ಸಡಪುಡಂಗೆಯ್** (ಕ್ರಿ). ಚುರುಕುಗೊಳ್ಳು ; ಉತ್ಸಾಹಿಸು : ನೆಗಟ್ಟತ್ಕುದ್ಧ ತಪೋಗ್ನಿಯಿಂ ಸುಡದಿರಂ ದೇವಂ ಬಟಿಕ್ಕೆನ್ನನನ್ನೆಗಮಾ ತನ್ವಿಯುರೊತ್ತಿನೊಳ್ ಸ[ಪಾಠಾಂ. ಸು]ಡಸುEಪುತೆಡಂಗೆಯ್ವಿರ್ಪಂ (ಅಜಿಪು. ೬-೩೪). [ಸಡಪುಡ + ಕೆಯ್$_1$]

**ಸಡಪುಡನೆ, ಸಡಹುಡನೆ** (ಅ). ೧. ಕೂಡಲೆ ; ತಟ್ಟನೆ ; ಶೀಘ್ರವಾಗಿ: ಎಡೆಯಾಡುತಿರ್ಪ ವೇಣುವೆ ಕೆಡೆವಂತಿರೆ ತಂತು ತೀರ್ವುದುಂ ಹತಕಾಯಂ ಕೆಡೆವುದು ಕಾಣಲ್ಕಲ್ಲದೆ ಸಡಪುಡನಱಿವನ್ನನಾವನಾಯುವ ತವಿಲಂ (ಅರ್ಥನೇ. ೪-೧೧). **ಸಡಹುಡನೆ:** ೨. ಓತಪ್ರೋತವಾಗಿ ; ನಿರರ್ಗಳವಾಗಿ : ತೊಡರೊಳೊಂದಿ ತೋಱದೆ ಮತ್ತಂ ನುಡಿದ ಪದವೆಡಹಿಬಾರದೆ ಸಡುEಡತೆಹುಡನೋದುವುದು ಸೇನಬೋವಂ ಸಭೆಯೊಳ್ (ಸೂಕ್ತಿಸು. ೧೬-೩೫).

ಸಡಹುಡನಾಗು = ತವಕಿಸು; ಚಡಪಡಿಸು: ಸಡಹುಡನಪ್ಪ ಕಟ್ಟೆ ಕೊಡೆ ಸಂತಸದಿಂ ಪೆಱಗೇಱೆ ಬರ್ಪ ಕನ್ನಡಿವಿಡಿದಾಕೆ . . . ಒಪ್ಪೆ ಬೆಡಂಗನಾಳ್ವ ಕಣ್ಗೆಡಱದೆ ಪೆಂಡವಾಸದ ವಿಳಾಸದ ಸೂಳೆಯರೊಪ್ಪಿ ತೋಱಿದರ್ (ಪಂಪಭಾ. ೯-೧೦೩). 'ಚಡಪಡನೆ' ಪರಾ. [ಸಡಪುಡ + - ಅನೆ$_1$]

**ಸಡರು** (ನಾ). ತೊಡರು ; ಬಂಧ (?) : ಬಿಡಿಸಬಾರದ ಸಡರು ತನ್ನವರ ತೋಟಿ ಮಗುಳೊಂದುಗಿಸಿ ಬಹ ಸಾಟಿಯನುವುಗಳ ಮರ್ಮಂಗಳಂ ಚನ್ನಾಗಿ ಭೇದನಂಗೈದು (ವಂಕಾರಾ. ೬-೨೬-೩೧). [?]

**ಸಡಲಿಸು** 'ಸಡಿಲಿಸು' ನೋ.

**ಸಡಸಡೀತ** (ಗು). ಸ್ಪಷ್ಟವಾದ ; ನೇರವಾದ : ಆಕಿ ಸಡಸಡೀತ ಒಂದು ಮಾತಿನ್ಯಾಗ ಹೇಳಿದಳು (ನಿಸರ್ಗ. ೧೯೪); ಸಡಸಡೀತ (ಸ್ಪಷ್ಟ)-ನಾ ಸಡಸಡೀತ ಹೇಳಿನು. (ನಾನು ಸ್ಪಷ್ಟ ಹೇಳಿದೆನು) (ಸುವರ್ಣ. ೩೨೮). [<— ಮರಾ. ಸಡಸಡೀತ]

**ಸಡಹುಡನೆ** 'ಸಡಪುಡನೆ' ನೋ.

**ಸಡಾಳ** (ಗು). ಕಾಂತಿಯಿಂದ ಕೂಡಿದ; ಪ್ರಕಾಶಮಾನವಾದ : ಕಾವನ ಕಣ್ಗೆ ಮೊಲೆಯ ಸಡಾಳ ವೃತ್ತತೆಯಿಂದೆ ದ್ವಿತೀಯಸಂಕಲೆಯನಿತ್ತಳು ತೋಯಜಾಕ್ಷಿ (ಮೋಹತ. ೧೬-೨೩). [ಸ$_0$ + ಡಾಳ$_1$]

**ಸಡಿ** (ನಾ). ದೂರು ; ಬಯ್ಗುಳು ; ನಿಂದೆ : 'ಸಡಿನುಡಿ' ಪರಾ.

[ದೇ. ‖ ತೆಲು. ಸಡಿ]

**ಸಡಿನುಡಿ** (ನಾ). ಅಪವಾದ; ದೂರು; ನಿಂದೆ : ಧರ್ಮದಾಸನ ಗೃಹಕೃತ್ಯ ವಿಷಯವನ್ನು ಕುರಿತು ಇತರರು ಸಡಿನುಡಿ ಮಾತಗಳನ್ನಾಡಿಕೊಳ್ಳತಕ್ಕದ್ದು ಇವನಿಗೆ . . . ತಲೆತಗ್ಗಿಸುವ ಹಾಗೆ ಮಾಡಿತ್ತು (ಅದೂಟ. ೧೨೪). [ಸಡಿ + ನುಡಿ$_2$]

**ಸಡಿಫಡ** (ಅ). (ತಿರಸ್ಕಾರ, ಕೋಪಗಳನ್ನು ಸೂಚಿಸುವ) ಒಂದು ಅನುಕರಣಾವ್ಯಯ : ಸಡಿಫಡ ಸುರೇಂದ್ರಮಂತ್ರಿಯೆ ಬೆಡಂಗಿದೇಕೆ (ಗಿಂಕ. ೬-೩೬); ಅವಿಚಲಿತಭಕ್ತಿಪ್ರಯುಕ್ತನು ಜವಗೆಡುವನೇ ಶಂಕಿಪನೆ ಕೊಂಕುವನೆ ಸಡಿಫಡಯೆಂಬನಲ್ಲದೆ ಭಕ್ತನಂತಾಗಿ (ಬಸಪು. ೪೩-೫೫); ಕಡುಗಲಿಯು ವಿಂಧ್ಯಕನು ಕಾಣುತೆ ಸಡಿಫಡಂಜದಿರೋಡದಿರಿವೊಗ್ಗೊಡೆಯದಿರಿ . . . ಎನುತ ಬಿಡಿಸೆ ನಾಯ್ಗಳನು (ಸಾಳ್ವಭಾ. ೫-೩೩). [ಸಡಿ + ಫಡ$_2$]

**ಸಡಿಲ್$_1$, ಸಡಿಲು$_1$** (ಕ್ರಿ). ೧. ಅಳ್ಳಕವಾಗು; ಬಿಗಿಯಿಲ್ಲದಂತಾಗು; ಶಿಥಿಲವಾಗು: "ಸಡಿಲ್-ಸ್ರಂಸನೇ" (ಶಮಧಾ); ಬಿಗಿದಮರ್ದಿರ್ದ ತೋಳ್ ಸಡಿಲೆ (ಪಂಪಭಾ. ೨-೧೯); ಸುರತಸುಖಂ ತವಿಲಱಿಯದೆ ಭರದಿಂದಮರ್ದಪ್ಪಿದಪ್ಪು ಸಡಿಲದೆ . . . ನೆರೆದಿರ್ದರ್ (ಗಿಂಕ. ೩-೩೧); ಮುಡಿಯಲರ ಕೆದಱಿಕೆಯ ಕೇಶದ ಸಡಿಲಿದುನ್ನತ ಕುಚದ ಸೆಱಗಿನ ಮಡದಿಯರ ಮಂದೆಯಲಿ ಬಂದಳು ಕೌಸಲಾದೇವಿ (ತೊರರಾ. ೨-೩-೨). ೨. (ಆಲಂ) ಹಿಮ್ಮೆಟ್ಟು; ಹಿಂಜರಿ : ಸಡಿಲ್ದಗೂರ್ಜರ್ಜರರ್ಸ್ಪಂಚಳಿಸಿದರಧಿಕರ್ ಚೇರಚೋಳಾದಿಭೂಪರ್ (ಎಕ. VII. ಶಿಕಾರಿ. ೧೫೧-೪೦; 1047). **ಸಡಿಲು$_1$** : ೧. ಉಡುಗೆಯನುಟ್ಟು ಸಡಿಲಿದರೆ ಲಜ್ಜೆ ನಾಚಿಕೆಯಾಯಿತ್ತೆಂಬ ನುಡಿ ದಿಟವಾಯಿತ್ತು (ಬಸವ. ೬೭೫); ಕಮ್ಮೆಣ್ಣೆಯಂ ತಂದು ಸತಿಯರ್ಬೆಡಂಗಿಂ ಬಳಲ್ಮುಡಿ ಸಡಿಲೆ . . . ಗಾಡಿಯಿಂದೊತ್ತುವಲ್ಲಿ (ಪದ್ಮರಾ. ೩-೪೨); ಸವಿದಕ್ಕೆಯ ಸಡಿಲದ ನೇಹಗಳಿಂದಲವರಿ ರ್ಪರೊಪ್ಪಿದರಂದು (ಕಂನವಿ. ೧೦-೪೬). [ದೇ. ‖ ತೆಲು. ಸಡಲು, ಸಳ್ಳು, ಸಡಿಲು]

**ಸಡಿಲ್$_2$, ಸಡಿಲ, ಸಡಿಲು$_2$** (ನಾ). ಅಳ್ಳಕ; ಬಿಗಿಯಿಲ್ಲದಿರುವುದು : "ಸಡಿಲೆನಲ್ ತಲ್ಲ್ಯಪುದರ ಪೆಸರ್" (ಕಶರ. ೧೦೫). **ಸಡಿಲ** : "ಶಿಥಿಲಂ ಶ್ಲಥಂ ಸಡಿಲಮಕ್ಕುಂ" (ಮಂಗರಾ. ೧೩೬-೩೯); ನಸು ಸಡಿಲ ಬಿಡೆ ವಾಘೆಯಲಿ ಚಿಗಿದುವು ರಥದ ವಾಜಿಗಳು

(ಕುವ್ಯಾಭೀ. ೨-೨); ಸರಪಣಿಯು ಆಳತೆಯ ಮೇಲೆ ಬಹಳ ಯಳೆಯಲೂ ಬಾರದು, ಬಹಳ ಸಡಿಲವೂ ಬಿಡಬಾರದು (ಭೂಮಿಅ. ೫). **ಸಡಿಲು$_2$: 'ಸಡಿಲುಗಚ್ಚೆ' ಪರಾ.**

ಸಡಿಲವಾಗು, ಸಡಿಲಾಗು = ಅಳ್ಳಕವಾಗು; ಬಿಗಿಯಿಲ್ಲದಾಗು; ಶಿಥಿಲವಾಗು: ಬೇಲದೆಲೆ ರಸ ಸೇ ೧ ರಲ್ಲಿ ಪೆಟ್ಲುಪ್ಪು ಗ ೨ ತೂಕ ಸಕ್ಕರೆ ಗ ೩ ತೂಕ ಸಹಾಕೂಡಿಸಿ ಸೇವಿಸಿದರೆ ನಾಲ್ಕು ಘಳಿಗೆಯಲ್ಲಿ ಮೂತ್ರ ಸಡಿಲವಾಗುವುದು (ಸಕವ್ವ. ಪಂ. ೪೯೩); ನಿದ್ದೆಯ ಹೊತ್ತಾಯಿತೆಂದರೆ . . . ನರಗಳು ಸಡಿಲಾಗುತ್ತವೆ (ಮುಂಬಯಿ. ೪-೧೩೧).

[< ಸಡಿಲ್$_1$./ ತುಳು. ಸಡಿಲ್; ಕೊಡ. ಸಡಲ; ತೆಲು. ಸಡಲು, ಸಳ್ಲು. / ಪ್ರಾ. ಸಢಿಲ ./ ಮರಾ. ಸಢೀಲಾ ./ ಸಂ. ಶಿಥಿಲ]

**ಸಡಿಲ** 'ಸಡಿಲ್$_2$' ನೋ.

**ಸಡಿಲಾಳ್ಕೆ** (ನಾ). (ಆಲಂ) ಬಿಗಿಯಿಲ್ಲದ ಆಳ್ವಿಕೆ ,— ರಾಜ್ಯಭಾರ: ಕಯ್ಗೆ ಬಂದಂದಿನ ಸಡಿಲಾಳ್ಕೆಯ ಆ ಸಣ್ಣರಾಜ್ಯವನ್ನ ತನುಮನೋಧನ ಸರ್ವಸ್ವಗಳ ಸೂರೆಯಿಂದ ಸಂರಕ್ಷಿಸಿ (ಮಂತ್ರಶ. ೧೨-೨೦). [ಸಡಿಲ (< ಸಡಿಲ್$_2$) + ಆಳ್ಕೆ]

**ಸಡಿಲಿಕೆ, ಸಡಿಲ್ಕೆ** (ನಾ). ಅಳ್ಳಕವಾದುದು ; ಶೈಥಿಲ್ಯ : ಸಾನುಗಳ ಸಡಿಲಿಕೆಯ ಕರಸಂಧಾನಗಳ ಶೈಲಗಳ ಸ[illegible]ಟನಿಧಾನರಿಟ್ಟಾಡಿದರು ಹರಿಹರಿದಶ್ವರಬ್ಬರಿಸೆ (ತೊರರಾ. ೪-೪-೧೬). **ಸಡಿಲ್ಕೆ** : "ಶ್ರಂಥಿಃ, ಶ್ರಂಥನಂ, ಶ್ರಂಥನೀಯಂ, ಶ್ರಂಥ್ಯಂ-ಈ ೪ 'ಸಡಿಲ್ಕೆ'' (ಕಾಶಕ್ಕ. ೮೯). [ಸಡಿ[illegible] + - ಇಕೆ]

**ಸಡಿಲಿಸು, ಸಡಲಿಸು** (ಕ್ರಿ). ೧. ಅಳ್ಳಕಮಾಡು; ಶಿಥಿಲಗೊಳಿಸು : ತಡತಡಿಸಿ ಯತಿಯನಿಂತಿರೆ ತೊಡರ್ಚೆ ಕೆಡಪೇಟ್ಟೊಡಕ್ಕುಮದು ಯತಿಭಂಗಂ ಸಡಿ[ಪಾಠಾಂ. ಡ]ಲಿಸದಲಸದ[ದ]ಂ ಪೇಟ್ಟೆಡೆಯೊಳ್ ನಿಲ ಪೇಟಲಾರ್ಪೊಡಂತದದೋಷಂ (ಕವಿರಾ. ೧-೭೩); ಬಿಡದ ಪೊಗೆ ಸುತ್ತ-ತೋಳಂ ಸಡಿ[ಪಾಠಾಂ. ಡ]ಲಿಸದಾ ಪ್ರಾಣವಲ್ಲಭರ್ ಪ್ರಾಣಮನಂದೊಡೆಗಳೆದರ್ (ಆದಿಪು. ೫-೨೪); ಸಡಿಲಿಸಿದಳು ದುಕೂಲವನು (ತೊರರಾ. ೨-೧-೪೧). ೨. ಕಳಚು; ಬಿಚ್ಚು : ಬಿಡಿಸುತ್ತುಂ ಬೆಳ್ಳಾರಮನಡಿಯಿಡು ಕಾಣದವೊಲೊಯ್ಯನಿಸು ನಾಯಿಗಳಂ ಸಡಿ[ಪಾಠಾಂ.ಡ]ಲಿಸು ಹಾಸಮನೆನುತುಗ್ಗಡದಿಂ ಮುತ್ತಿದುದು ಪುಲ್ಲೆಯಂ ಭಿಲ್ಲಾಘಂ (ಉದ್ಭಟ. ೨-೭೦); ಗುಳವ ಸಡಿಲಿಸಿ ಹಾಯ್ಕಿ ಚೋದಾವಳಿಗಳೆಳೆದುದು (ಕುವ್ಯಾದ್ರೋ. ೫-೧೪). ೩. ಚೆದುರಿಸು; ದಿಕ್ಕಾಪಾಲು ಮಾಡು : ತುಱುಗಿದ ಪಡೆಯನು ಸಡಿಲಿಸಿ ಮೆಱೆದನು ಕಡುಸಾಹಸವ (ಕಂನವಿ. ೧೬-೪೪). ೪. ಕಳೆ; ತ್ಯಜಿಸು : ಮರುಳಲಾ ನೀನಕ್ಕ ಮುನ್ನೇನಿರದಲಿದ್ದನೆ ಬಳಿಕಲೀಗಲಿ ಶರಿರವನು ಸಡಿಲಿಸಿದನೇ ಅಜಗಣ್ಣನಾರೆಂದು ಪರಿಕಿಸದೆ ಹಂಬಲಿಸಲೇತಕೆ (ಪ್ರಭುಲೀ. ೧೨-೭). ೫. ವಿನಾಯಿತಿ ತೋರಿಸು : ಅಂಗಡಿಯವರು ಖರೀದಿಸಿದ ಜವಳಿಗೆ ಸ್ವಲ್ಪ ಸಡಿಲಿಸಿ ಹಣ ತೆಗೆದುಕೊಂಡಿದ್ದಾರೆ (ರೂಢಿ). **ಸಡಲಿಸು** : ೧. ಸಲೆ ಮುಡಿಯಂ ಸಡಲಿ[ಪಾಠಾಂ. ಸಲಿಸಿ]ಪುದುಂ ಕೆಲನಂ ನೋೞ್ಪಂತೆ ನೀರನಂ ನೋಡುವುದುಂ (ಸಮಪ. ೫-೫೩); ನಾನೂ ನನ್ನ ಹಿಡಿತವನ್ನು ಸಡಲಿಸಿದೆ (ಚಂಗಾಳ್ವ. ೪೫೭).

[ಸಡಿಲ್$_1$ + - ಇಸು$_3$]

**ಸಡಿಲು$_1$** 'ಸಡಿಲ್$_1$' ನೋ.

**ಸಡಿಲು$_2$** 'ಸಡಿಲ್$_2$' ನೋ.

**ಸಡಿಲುಗಚ್ಚೆ** (ನಾ). ೧. ಅಳ್ಳಕವಾದ ಕಚ್ಚೆ. ೨. (ಆಲಂ) ವ್ಯಭಿಚಾರದ ನಡವಳಿಕೆ : "ಸಡಿಲುಗಚ್ಚೆಯ ಗೌಡ'' ಎಂದೂ ಜನ ಅವನನ್ನು ಸಂಬೋಧಿಸುತ್ತಿದ್ದರು (ಮಣ್ಣುಪ. ೫೦). [ಸಡಿಲು$_2$ (< ಸಡಿಲ್$_2$) + ಕಚ್ಚೆ]

**ಸಡಿಲುಬಾಯಿ** (ನಾ). (ಆಲಂ) ಗುಟ್ಟು ನಿಲ್ಲದ ಬಾಯಿ : ಆತನದು ತುಂಬ ಸಡಿಲುಬಾಯಿ (ಬದುಜ. ೧೭೧). [ಸಡಿಲು$_2$ (< ಸಡಿಲ್$_2$) + ಬಾಯಿ$_1$ (< ಬಾಯ್)]

**ಸಡಿಲ್ಕೆ** 'ಸಡಿಲಿಕೆ' ನೋ.

**ಸಡಿಲ್ಚು** (ಕ್ರಿ). ೧. ಅಳ್ಳಕಮಾಡು ; ಸಡಿಲಿಸು : "ಸಡಿಲ್ಚು- ಶೈಥಿಲ್ಯೇ'' (ಶಮಧಾ); ಪೊರದೋಱ್ ತೆಂಬೆಲರ್ಪೊರೆವೊರೆಯಂ ಸಡಿಲ್ಚೆ ನಡು ಪೊಂಗಿರೆ ಮಲ್ಲಿಗೆಗಳ್ ವಸಂತದೊಳ್ ಬಿರಿದೊಡೆ (ಆದಿಪು. ೧೧-೧೦೭); ಮೆಲ್ಲಮೆಲ್ಲನಾಲಿಂಗನಮಂ ಸಡಿಲ್ಚಿ ನಡೆತಂದು (ಬಸರ. ೪-೪೦). ೨. ಕಳಚು; ಕಳೆ : ಸರ್ಪೋಪವೀತಮಂ ಸಡಿಲ್ಚಿ ಯಜ್ಞೋಪವೀತಮನಮರ್ಚಿ (ಗಿರಿಕ. ೧೦-೭೧ ವ). ೩. ಇಳಿಸು; ಸರಿಸು : ಎತ್ತಿದ ಜವನಿಕೆಯಂ ಭೋಂಕನೆ ಸಡಿಲ್ಚಿ [ಪಾಠಾಂ. ಲಿ] ಮಱೆ ಮಾಡಿ (ಸಂಬಿರ. ೧೨-೫೭).

[ಸಡಿಲ್$_1$ + - ಚು$_1$]

**ಸಡಿಲ್ಪಿಡಿ** (ನಾ). ಅಳ್ಳಕವಾದ ಮುಷ್ಟಿ ; ಶಿಥಿಲವಾದ ಹಿಡಿ: ತುಂಗರಾಯನ ಸಡಿಲ್ಪಿಡಿಯಿಂದ ಓಲೆಯನ್ನು ಕೊಂಡು, ಓದಿಕೆವೇಳ್ವನು (ಚಟ್ಟಅ. ೨೧೨-೧೦).

[ಸಡಿಲ್$_2$ + ಪಿಡಿ$_2$]

**ಸಡುಕು** 'ಸಡಕು' ನೋ.

**ಸಡುಗುಡ** 'ಸಡುಗುಡು' ನೋ.

**ಸಡುಗುಡು, ಸಡುಗುಡ** (ನಾ). ಗುಂಪುಗೂಡಿ ಆಡುವ ಒಂದು ಬಗೆಯ ಆಟ ; ಗುಡುಗಾಟ ; ಕಬಡ್ಡಿ : ಸಡುಗುಡುನಾಡುವ ಬಾಲಕನಂತೆ ನಾನಡವರಿಸಿ ಹೋಗಿ ಕೆಡಹಿದೆನೆಂಬಂತೆ ಅಱೆವಿಗೇಕೆ ಗೆಲ್ಲಸೋಲು (ಮೋಳಮಾ. ೯೯-೩೯೭) ; ಹಿಡಿಗವಡಿಕೆ ಹಿಳ್ಳುಲಗ್ಗೆ ಸಡುಗುಡು ಮೊದಲಾದ ಮಕ್ಕಳಾಟವ ಕಡುಸಡಗರದಿಂದಾಡುತಿಹನು (ನೇಮಿಸಂ. ೧೫-೧೧೭) ; ಸಡುಗುಡು ಲಗ್ಗೆ ಹಿಡಿಗವಡೆಗಳಿವು ರಾಜಪುತ್ರರಿಗೆ (ಕುರಾಸಾಂ. ೩೦-೧೭). **ಸಡುಗುಡ** : ಸಡುಗುಡಂ ಸೆಂಡು ಜಿಗಿಹಲ್ಲೆ ಬೊಹರಿಗಳಾಟದಲ್ಲಿ ಮನಗೊಂಡಾಡಿ ಬೆಳೆದು ಜವ್ವನನಾಗಿ (ಸಮ್ಯಕೌ. ೧೦-೯) ; ತೊಡೆಯ ತಟ್ಟುವರಂತೆ ತಟಪುಟನೊದಗಿ ಕಾಲಿಡುವುದು ತೆಗೆದತ್ತ ಮತ್ತೆ ಜಡನಿಲ್ಲದೊಸದು ನಡೆವುದದು ಬಿನದಕೆ ಸಡುಗುಡನಾಡುವಂದದೊಳು (ಭರಚ. ೨೯-೩೪) ; ಒಂದೆಡೆಯೊಳು ಸಡುಗುಡನಾಡುವ ವಟುವೃಂದವ ಕಂಡಳಾ ನೀರೆ (ಜ್ಞಾನಚ. ೨-೫೦). [ದೇ. ‖ ತಮಿ. ಚಟುಕುಟು]

**ಸಡೇ** (ನಾ). ಒಂದು ಬಗೆಯ ಸಸ್ಯ : ಈ ಪೇರಲಗಿಡಗಳಿಗೂ ಸಡೇದ ಗಿಡಗಳಿಗೂ ಗೊಬ್ಬರ ಬೇಕಾಗುವದಿಲ್ಲ (ಕೃಷಿಪ್ರ. ೧೫೪). 'ಸೆಡೆ$_6$' ಹೋ. [?]

**ಸಡ್ಡ** (ನಾ). ಕೈಲಾಗದುದು ; ಬಲಹೀನವಾದುದು : ಸರಿಯಾದ ಎತ್ತು ತನ್ನಿ. ಸಡ್ಡ ತರಬೇಡಿ (ರೂಢಿ).

**ಸಡ್ಡಸಬಡೆ** = ಬಲಹೀನನಾದವನು ; ನಿಷ್ಪ್ರಯೋಜಕನಾದವನು : ಕೈಲಾಗದವನು, ಸಡ್ಡಸಬಡೆ ಎನಿಸಿಕೊಂಡನು (ಚಸ್ತ್ರಕ. ೩೮).

[ದೇ. ‖ ತೆಲು. ಸಡ್ಡ = ಜಡ, ಅಲ್ಪ]

**ಸಡ್ಡಕ** 'ಸಡ್ಡುಕ' ನೋ.

**ಸಡ್ಡನೆ** (ಅ). ತಕ್ಷಣ ; ಕೂಡಲೆ ; ಥಟ್ಟನೆ : ಅಷ್ಟರಲ್ಲಿ ಅವನ ಎದೆಯ ಮೇಲೆ ಆ ಕಬ್ಬಿಣದ ಹಾರೇಕೋಲು ಸಡ್ಡನೆ ಬಿತ್ತು (ಹಳ್ಳಹಾ. ೩೪). [ಸಡ್ಡು$_0$ + - ಅನೆ$_1$]

**ಸಡ್ಡಾಳು** (ನಾ). ಬಲಹೀನನಾದವನು ; ಕೃಶಾಂಗನಾದವನು : ತೂರ ಸಡ್ಡಾಳು ಎಂದು ಹೇಳಿದೆ. ಭಾರತೀಯರೆಲ್ಲಾ ಸಾಧಾರಣವಾಗಿ ಸಡ್ಡಾಳುಗಳೇ (ಚಸ್ತ್ರಕ. ೩೭); ನಾನು ಸಡ್ಡಾಳು. ನನ್ನ ಆರೋಗ್ಯವೂ ಚೆನ್ನಾಗಿಲ್ಲ (ಶಿವರಾ. ೧೫೪).

[ಸಡ್ಡ + ಆಳು$_3$ (< ಆಳ್$_3$)]

**ಸಡ್ಡಿ** (ನಾ). ಆತಂಕ ; ಆಪತ್ತು : ಯಿ ಹೆಂಣಿಗೆ ಆದಿ ಅದಮು ಅಡ್ಡಿಸಡ್ಡಿಯೇನು ಉಂಟಾದಂನ್ನು ನಾನೇ ನೋಡಿಕೊಂಡೇನು ಯೆಂದು ಬರಸಿ ಕೊಟ್ಟ ಕ್ರಯಚೀಟು (ಮೈಅರಿ. ೧೯೨೮, ೭೭-೧೨ ; 1808). 'ಅಡ್ಡಿಸಡ್ಡಿ' ಪರಾ. [?]

**ಸಡ್ಡು$_1$, ಸೆಡ್ಡು$_2$, ಸೊಡ್ಡು$_2$** (ನಾ). ೧. (ಕುಸ್ತಿ ಮಾಡುವ ಪೂರ್ವಸಿದ್ಧತೆಯಾಗಿ) ಭುಜ ಅಥವಾ ತೊಡೆಯನ್ನು ತಟ್ಟುವಿಕೆ, - ಚಪ್ಪರಿಸುವುದು : ಚಡ್ಡೀಹಾಕುತ ಸಡ್ಡನು ಹೊಡೆಯುತ ಕುಸ್ತೀಯಾಡುವದ್ಕೆ (ಬ್ರಹ್ಮಜೀ. ೨೨೪). **ಸೆಡ್ಡು$_2$** : ೧. 'ಸಡ್ಡುಹೊಡೆ' ಪರಾ. **ಸೊಡ್ಡು$_2$** : ೨. ಸವಾಲು ; ಸ್ಪರ್ಧೆ : ಹಾಕಿದನು ಸೊಡ್ಡನೀಗ ಜೀವ ಶಿವರುಯಂಬರಿಗೆ (ಚದಾವ. ೧೪೪-೧೨).

[<— ತೆಲು. ಚೆಡ್ಡು = ತೊಡೆಯನ್ನು ತಟ್ಟು]

**ಸಡ್ಡು$_2$** (ನಾ). ಸಮ ; ಸಾಟಿ : ನಿಮ್ಮ ತಂತ್ರಗಳವು ದೊಡ್ಡವಹುದು ತಂತ್ರಗಳಿಗೆ ಸಡ್ಡಲ್ಲವಿಸ್ಕೊಂದು ಮಂತ್ರವುಂಟಿದ ನೋಡಿರೆಡ್ಡಕಜ್ಜವ ಮಾಳ್ಪೆನೆಂದ (ಭರಚ. ೪೭-೧೧೩).

[?]

**ಸಡ್ಡುಕ, ಷಡ್ಕ, ಷಡ್ಡಕ, ಸಡ್ಡಕ, ಸಡ್ಡುಗ** (ನಾ). ಹೆಂಡತಿಯ ಸಹೋದರಿಯ ಗಂಡ: ಒಂದು ಮನೆಯ ಹೆಣ್ಣುಗಳ ತಂದು ಸಡ್ಡುಕರೆಂದು ಬಾಳ್ವವರುಂಟು ಕೂಡಿ (ಭರಚ. ೫೦-೩೩) ; ಸಡ್ಡುಕನ ಸಂಹರಿಸಿದೆಂಬಪಕೀರ್ತಿ ಸಾಕವನೀಶ (ಪಶುಭಾ. ೧೦-೭೫).

**ಷಡ್ಕ** : ಆತ ನನ್ನ ಷಡ್ಕ (ಕುರಿಹಿಂ. ೭೩) ; ನನ್ನ ಷಡ್ಕ ಪತ್ರ ಬರೆದುಕೊಟ್ಟಿದ್ದ (ವೃದ್ಧವಿ. ೪೨). **ಷಡ್ಡಕ** : ವಿಜಯವರ್ಮಕ್ಷ್ಮಾಪಾಲ ಸರಸದಿಂ ತನ್ನ ಷಡ್ಡಕನಾದ ವರಕುಸುಮಧ್ವಜನ ವಂದುಗೂಡೊಂದು ಪರಮಶುಭಲಗ್ನದ ಪತ್ರಮಂ ಬರದು (ಸೌಗಂಧಿ. ೧೩೦-೧೪); ತನಗೆ ಹೆಣ್ಣು ಕೊಟ್ಟ ಮಾವನ ಇತರ ಅಳಿಯಂದಿರು ಎಂದರೆ ಷಡ್ಡಕರು (ನಮ್ಮನು. ೨೪೭). **ಸಡ್ಡಕ** : ತನ್ನ ಸಡ್ಡಕನನ್ನು ಶಪಿಸುತ್ತ ಉಡುಪಿ ಲಕ್ಷ್ಮಣಾಚಾರ್ಯ ಕೈತೊಳೆದ (ಸಂಸ್ಕಾರ. ೬); ಸಡ್ಡಕನಿಗಿಂತ ನಂಟನಿಲ್ಲ, ಲಡ್ಡಿಗೆಗಿಂತ ಕಜ್ಜಾಯವಿಲ್ಲ (ಗಾದ). **ಸಡ್ಡುಗ** : ನಮ್ಮ ಗುರಿಕಾರರು ಪಾರಂಪಳ್ಳಿ ಆ ಗುರಿಕಾರರ ಸಡ್ಡುಗರಾದರೇನು? (ಮರಮ. ೧೭೫) ; ಸಡ್ಡುಗ ನಟರಾಜನಿಂದಲೇ ನಕ್ಷೆ ಅಂದಾಜುಪಟ್ಟಿ ಮಾಡಿ ಕಳುಹಿಸುವುದಾಗಿ ದಿವಾನರು ಭರವಸೆ ಕೊಟ್ಟರು (ಸಂನ್ಯಾಸಿ. ೧೪೦).

[ದೇ. ‖ ತಮಿ. ಷಟ್ಟಕನ್; ತುಳು. ಸಡ್ಡ್‌ಕೆ; ಕೊಡ. ಸಡ್ಡ್‌ಗ; ತೆಲು. ಸಡ್ಡಕುಡು, ಷಡ್ಡಕುಡು, ಷಡ್ಡಕುಡು, ಷಡ್ಡಕುಂಡು]

**ಸಡ್ಡುಗ** 'ಸಡ್ಡುಕ' ನೋ.

**ಸಡ್ಡುಗತನ** (ನಾ). ಷಡ್ಡಕನಾಗಿರುವುದು : ಘಂಟಾನಾದದ ಎಡಿಟರರಿಗೂ ಡಿ. ಕಮಿಶನರಿಗೂ ತಾಜಾ ತಾಜಾ ಸಡ್ಡುಗತನವಿದೆ (ದೇವದೂ. ೧೨೦).

[ಸಡ್ಡುಗ (< ಸಡ್ಡುಕ) + - ತನ]

**ಸಡ್ಡುಗಾಣ್** (ಕ್ರಿ). ಭುಜ ಅಥವಾ ತೊಡೆಯನ್ನು ತಟ್ಟು : ಒಡ್ಡಿದಂಭತ್ತೈದು ಪ್ರಕೃತಿಗಳಿನ್ನೆರಡೊಡ್ಡಾಗಿ ನಿಲ್ಲುವಂತವನು ಸಡ್ಡುಗಂಡುದುರಿಸಿ ಬಿಡುವನಿನ್ನವರೆರಡೊಡ್ಡಿನ ಲೆಕ್ಕವಂತೆನಲು (ಭರಚ. ೭೪-೬). [ಸಡ್ಡು$_1$ + ಕಾಣ್]

**ಸಡ್ಡುಗೊಳ್ಳು** 'ಸಡ್ಡೆಗೊಳ್' ನೋ.

**ಸಡ್ಡುವತನ** (ನಾ). ''ಶಾಠ್ಯ, ಒರಟುತನ'' (ಹಾಲಾಸ್ಯ. ಕೋಶ) : ಗುಡ್ಡದ ತಪ್ಪಲೊಳೀಗಳ್ ಗಡ್ಡೆಗಳಂ ಮೆಲ್ದು ನಿನ್ನ ಮಟೆಗಳನೊಂದೌ ಸಡ್ಡುವತನಕಾಂ ಪೋಪೆನೆ ದಡ್ಡೆಯಿದೇತೆಱದ ಮಾತು ಬೇಸಱಮೆನಗಂ (ಹಾಲಾಸ್ಯ. ೩-೧೩-೪೨).

[ಸಡ್ಡುವ? + - ತನ]

**ಸಡ್ಡುಹೊಡೆ, ಸೆಡ್ಡುಹೊಡೆ** (ಕ್ರಿ). ೧. ಭುಜ ಅಥವಾ ತೊಡೆಯನ್ನು ತಟ್ಟು,- ಚಪ್ಪರಿಸು: ಲಂಕಾಧಿಪತಿಯು ಕೈಲಾಸಪರ್ವತವನ್ನೆ ಎತ್ತಲು ಸಡ್ಡುಹೊಡೆದು ಮುಂದೆ ಬಂದಂತೆ ಎನಿಸಿತು (ಹೇಮಂತ. ೯೨). ೨. (ಆಲಂ) ಪ್ರತಿಭಟನೆ ತೋರು ; ವಿರೋಧವನ್ನು ವ್ಯಕ್ತಪಡಿಸು : ಎಷ್ಟೋ ಸದಸ್ಯರು ಸರಕಾರದ ವಿರುದ್ಧ ಸಡ್ಡುಹೊಡೆದರು (ಗೃಹದಾ. ೧೦೦); ಕೊನೆಗೆ ದಬ್ಬಾಳಿಕೆಯನ್ನು ಪ್ರತಿಭಟಿಸಿ ಸಡ್ಡುಹೊಡೆದವು (ಎಚ್ಚಸಾ. ೬೯). **ಸೆಡ್ಡುಹೊಡೆ** : ೧. ದಂಬನು ತೊಡೆಬಡಿದು, ಸೆಡ್ಡುಹೊಡೆದು- ಹುಚ್ಚನ ಹಾಗೆ ಕಲ್ಕುಡನಂತೆ ಕುಣಿಯತೊಡಗಿದನು (ದಂಬನಾ. ೪೩). ೨. ಲೋಕದ ಎದುರಿಗೆ ಲಾಗ ಹಾಕಿ. ಸಡ್ಡುಹೊಡೆದು, ಸಲಾಮುಮಾಡಿ . . . ಬೇಡುತ್ತಾರೆ (ಗಾಳಿಪ. ೮೩) ; ಊರಿಗೆ ಊರೇ ಸಿಟ್ಟಾಗಿ ಸೆಡ್ಡುಹೊಡೆಯುತ್ತಿದೆ (ಜಮೀನ್ದಾ. ೭೮).

[ಸಡ್ಡು$_1$ + ಹೊಡೆ$_1$ (< ಪೊಡೆ$_1$)]

**ಸಡ್ಡೆ$_1$, ಚಡ್ಡೆ, ಛಡ್ಡೆ** (ನಾ). ೧. ಶ್ರದ್ಧೆ ; ಆಸಕ್ತಿ ; ಆದರ : ಸತ್ತ ಮುತ್ತಯ್ಯನ ಹೈತಿಗೆಯನಿಂದೆ ಸಡ್ಡೆಯಿನಾಗಿಸಿ ಬಂದ ಬೊಮ್ಮರಕ್ಕಸಿಯರ್ಗೆ ನಿಘ್ಮಡಗಿನೆಡೆಗೆಯ್ಯೆಂ (ರಾಮಾಶ್ವ. ೧೧೨-೧೨); ಎಲ್ಲ ತಿಳಿವನು ಕಳೆದು ನಗ್ನವಾಯ್ತೆಚ್ಚರಿಕೆ, ಗಳಹುತಿಹೆನಳಿದು ಬಲ್ಲರ ಸಡ್ಡೆಯ (ಮಲದೇ. ೫೦-೮); ಗಾನವಿದೆ ಆಲ್ಕೆಸು ಕಲೆಯಿರಲು ಓಲ್ಕೆಸು ಸಡ್ಡೆಯಿಂದೆ (ಪಾಂಚಜ. ೪೫-೧೭). ೨. ಗಣನೆ ; ಲಕ್ಷ್ಯ : 'ಸಡ್ಡೆಗೈ' ಪರಾ. **ಚಡ್ಡೆ** : ೧. ಆವ ಚಡ್ಡೆಯಿಲ್ಲದೆ ಪೂರ್ವಕವರ್ಮಾನುಸಾರವಂ ಹೆಡ್ಡರಂದದಲುಣುವ ಭಿಕ್ಷುಗಳು ನಮಗೇತಕೀ ರಾಜಗೃಹವೆಂದನು (ತುರಂಗ. ೧೫-೪೭). **ಛಡ್ಡೆ** : ೨. ಜಡ್ಡುಮತಿಗಳು ಪಾರಮಾರ್ಥದ ಛಡ್ಡೆಯಿನಿತಿಲ್ಲದರು (ಸದ್ಗುರು. ೬-೨೦) ; ದೊಡ್ಡವ ವಿದ್ಯಾಧರರೊಳೀ ಬಾಲಿಯ ಛಡ್ಡೆ[ಪಾಠಾಂ. ಥಡ್ಡೆ] ಮಾಡದ ಕೊಂದರವರು (ರಾಮವಿ. ೧೭-೭೭).

ಸಡ್ಡೆಮಾಡು, ಚಡ್ಡೆಮಾಡು = ಲಕ್ಷಿಸು ; ಗಣನೆಗೆ ತೆಗೆದುಕೊಳ್ಳು : ಸಡ್ಡೆಮಾಡದೆ ರಕ್ಕಸನ ಕೂರ್ಗಣೆಗಳ ವಿಡ್ಡೂರವನು ಹಾಱಿಹೊಯ್ದು ಅಡ್ಡವಾತಿಯಲಿ ಸ್ಯಂದನಸೂತವಾಜಿಯ ಒಡ್ಡವಣೆಯ ಖಂಡಿಸಿದ (ಮೋಹತ. ೪೦-೫೪) ; ಶಿವಂಗಿದಿರಾಗಿ ನಿಂದಿರ್ದ ದಕ್ಷನನ್ನು ಯಾರೂ ಸಡ್ಡೆಮಾಡದೆ ಸುಮ್ಮನಿರಲು (ಶರಲೀ. ೮೪); ದೊಡ್ಡದೊಡ್ಡವರ ತೃಣಪ್ರತಿಪತ್ತಿಯಿಂದೊಡ್ಡಣದೊಳು ಸಿಂಧುಸುತನು ಚಡ್ಡೆ ಮಾಡಿದುದಿಲ್ಲ (ನೇಮಿಸಂ. ೨೯-೭೦) ; ಚಡ್ಡೆಮಾಡದೆಯರಿಬಲವ ಕಡ್ಡಿಗೆ ಬಗೆಯದೆ ಕಾಳಗದೊಳಗಿರ್ದರಡ್ಡೆಯಾಳುಗಳನೇನೆಂಬೆ (ಅನಂಚ. ೨೪-೧೮).

[< ಪ್ರಾ. ಸಡ್ಡಾ, ಸದ್ಧಾ. / ಸಂ. ಶ್ರದ್ಧಾ. / ತಮಿ. ಚಟ್ಟೈ ; ತೆಲು. ಸಡ್ಡ]

**ಸಡ್ಡೆ$_2$, ಚಡ್ಡಿ$_2$, ಸೆಡ್ಡೆ** (ನಾ). ೧. ಬೀಜವನ್ನು ಬಿತ್ತಲು ಉಪಯೋಗಿಸುವ ಒಂದು ಬಗೆಯ ಉಪಕರಣ : ''ವಾಪಿ ಕೂಱಿಗೆ ಸಡ್ಡೆಯಡ್ಡೆಯಕ್ಕುಂ'' (ಮಂಗರಾ. ೧೦೯-೧); ಕಾಲಲ್ಲಿ ಕಟ್ಟಿದ ಸಡ್ಡೆಯ ಕೇಳುವವರಿಲ್ಲ ಕೈಯಲ್ಲಿ ಹಿಡಿದ ಮೊಱನ ಬೇಡವೆಂಬವರಿಲ್ಲ ಸಡ್ಡೆಗೆ ಮೂಱು ಕವೆ ಒಂದು ಬಿತ್ತುವಟ್ಟ (ಕಲ್ಯಾಶಾಂ. ೨೦). 'ಅಕ್ಕಡಿಸಡ್ಡೆ' ಪರಾ. 'ಅಡ್ಡೆ$_2$' ಹೋ. ೨. (ಓಲಗದ ಜೊತೆಗೆ ಶ್ರುತಿಯಂತೆ ಊದುವ) ಒಂದು ಬಗೆಯ ವಾದ್ಯ : ನಮ್ಮ ಹಳ್ಳಿಯ ಗ್ರಾಮದೇವತೆಯ ಉತ್ಸವದಲ್ಲಿ ಸಂಭ್ರಮದಿಂದ ಓಲಗದ ಜೊತೆಗೆ ಸಡ್ಡೆಯನ್ನೂ ಊದುವರು (ರೂಢಿ). **ಚಡ್ಡಿ$_2$** : ೧. ಬಿತ್ತಲಿಕ್ಕಂತೂ ಇನ್ನೂ ಚಡ್ಡಿ ಯಾರ ಕೈಯೊಳಗೂ ಕೊಟ್ಟಿಲ್ಲ ಅವರು (ಅಶೋಕ. ೨೧೮). **ಸೆಡ್ಡೆ** : ೧. ಒಕ್ಕಲಿಗನ ಸೆಡ್ಡೆಯ ಮೇಲೆ ಸಿರಿ ಬರಲು ಒಕ್ಕಲಿಗನು ಜೋಕುಮಾರನನ್ನು ಹೇಗೆ ಮರೆಯಬೇಕು? (ಕನ್ನಜಾ. ೧೫೭). [?]

**ಸಡ್ಡೆಕೆಡು** 'ಸಡ್ಡೆಗಿಡು' ನೋ.

**ಸಡ್ಡೆಗಿಡು, ಸಡ್ಡೆಕೆಡು** (ಕ್ರಿ). ಶ್ರದ್ಧೆ ಕೆಟ್ಟುಹೋಗು ; ಅಸಡ್ಡೆಯಾಗು : ಸಡ್ಡೆಗಿಡದೋಲೆಸಗಿ ಸದ್ಮನಿಯರಿಗೆ ಹರುಷ ಬಡ್ಡಿಸುವ ಕಲಿಗಳೆಂದೆಸಗು (ಜನಮು. ೧೫-೩೩). **ಸಡ್ಡೆಕೆಡು** : ಸಲಿಗೆ ಹೆಚ್ಚುತ ಬರಲು ಗೌರವ ತೊಲಗಿ ನರನೊಳು ಸಡ್ಡೆಕೆಡುವುದು (ನೀಸಾರಾ. ೧೯೪). [ಸಡ್ಡೆ$_1$ + ಕಿಡು (< ಕೆಡು$_1$)]

**ಸಡ್ಡೆಗೈ** (ಕ್ರಿ). ಗಣನೆಗೆ ತಂದುಕೊಳ್ಳು; ಲಕ್ಷಿಸು ; ಗಮನ ಕೊಡು : ಎಮ್ಮನಾರುಂ ಸಡ್ಡೆಗೈವರಿಲ್ಲ (ಶೇಷರಾ. ೧೯-೨೩). [ಸಡ್ಡೆ$_1$ + ಗೈ (< ಕೆಯ್$_1$)]

**ಸಡ್ಡೆಗೊಳ್, ಚಡ್ಡೆಗೊಳ್, ಸಡ್ಡುಗೊಳ್ಳು, ಸಡ್ಡೆಗೊಳು** (ಕ್ರಿ): ೧ = ಸಡ್ಡೆಗೈ: ಘನತೆಯಾದಂಥಾ ದೇವತ್ವಮಾದೊಡಂ ನಾನು ಸಡ್ಡೆಗೊಳ್ವನೆ (ಶುಕಸ. ೧೧೮). **ಚಡ್ಡೆಗೊಳ್** : ೧. ತಪಸಿಯ ಪೆಣನಿದಂ ಚಡ್ಡೆಗೊಳರು ಭಕ್ತರುಗಳೆನುತಿರೆ (ಪಾಸೋಪು. ೪-೮೧) ; ಅಡ್ಡಹಾಯ್ದುವರನಿರಿದರೆಯಟ್ಟಿ ಸೋಲಿಸುತ ಚಡ್ಡೆಗೊಳದಿರು ತಿರ್ದನು (ಮರುಚಾ. ೨-೩೪). ೨. ಆದರಿಸು ; ಗೌರವಿಸು : ಮನೆದೈವವೆಂದೆನಿಪ ವಿಗಡಮ್ಮೆಲಾರನಂ ಚಡ್ಡೆಗೊಳೆಯಾತನಿಂ ಮಿಗೆಯುಬ್ಬಸಂ ಬಂದೊಡೇನ ಮಾಡುವೆ (ಸಿದ್ಧೇಪು. ೧೭-೧೭). **ಸಡ್ಡುಗೊಳ್ಳು** : ೧. ಪತಿವ್ರತವು ಕೆಟ್ಟು ಹೋದೀತಮ್ಮ ಇನ್ನು ಪತಿಯ ಮಾತನು ಸಡ್ಡುಗೊಳ್ಳರಮ್ಮ (ಶರಚ. ೩೭೭). **ಸಡ್ಡೆಗೊಳು** : ೧. ಬಿರುವಳೆಯನು ಸಡ್ಡೆಗೊಳದೆ ನೆರೆಗಂಡುಗಲಿ ತೋಂಟೇಂದ್ರನಾಹವದೊಳು ಕುರಿದರಿದನು ಪಟುಭಟರ (ಇಚಸಾಂ. ೧೫-೬೮). [ಸಡ್ಡೆ$_1$ + ಕೊಳ್$_1$]

**ಸಡ್ಡೆಗೊಳು** 'ಸಡ್ಡೆಗೊಳ್' ನೋ.

**ಸಡ್ಯ** (ನಾ). ಧೂರ್ತತೆ : ಪಾಡ್ಯವಾದರೂ ಸಡ್ಯವಿರಬಾರದು (ಗಾದ).

[< ಸರಿ. ಶಾಠ್ಯ]

**ಸಡ್ಡಿ** (ನಾ). ಒಂದು ಬಗೆಯ ಸಸ್ಯ : ''ಮದ್ದೆ . . . ಸಡ್ಡಿ, ಅಡಲೆ, ಬಾರನೂಕ, ಪಾರುಜಂಬು'' (ಸಸ್ಯನಿ. ೯೮) ; ಮದ್ದೈ, ಹೆಚ್ಚೆಕರಕಲು, ಹೆಕ್ಕೆರಕಲು, ಸಡ್ಡಿ (ಮೈಜಿಗಿ. ೫೮-೧೧೫೭). [?]

**ಸಣಂಗಿ** (ನಾ). ಆರು ವೇದಾಂಗಗಳನ್ನು ತಿಳಿದವನು; ಷಡಂಗಗಳನ್ನು ತಿಳಿದವನು : ಗಂಗಾಧರ ಸಣಂಗಿಯರುಂ ನಾರಸಿಂಗ(ಹ) ಸಣಂಗಿಯರುಂ . . . ಬಿಟ್ಟ ಕಗ್ಗಲ ಮಾನೆಯ ಕೆಯಿ ಮತ್ತರು ೧೨ (ಇಆ. IX, ೬೫-೫; 1118). [< ಸಂ. ಷಡಂಗಿನ್]

**ಸಣಂಬು, ಸಣಬು, ಸಣವು, ಸೆಣಂಬು, ಸೆಣಬು** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ನಾರು (ಹಾಗೂ ಕೆಲವು ಸಲ ವಿಶೇಷ ಸಂದರ್ಭಗಳಲ್ಲಿ ದೇವತಾಪೂಜೆಗೆ ಉಪಯೋಗಿಸುವ) ಅದರ ಹೂವು : ಪಾಲ್ಮರದ ಪಣ್ಗಳುಮಾಳಂಬೆಯುಂ ಸಣಂಬಿನ ಪೂವುಮೆಂದಿವಂ ಸೇವಿಸುವರುಂ . . . ಪಂಚಮಹಾಪಾತಕಂಗಳಂ ಗೆಯ್ದರ್ (ವಡ್ಡಾರಾ. ೧೨೭-೧೮) ; ಅರಗು ಮೊದಲಾಗ ಘೃತ ಸಜ್ಜರಸಂ ಬೆಲ್ಲಂ ಸಣಂಬಿವೆಂಬಿವಱಿಂ ವಿಸ್ತರಿಸಿ (ಪಂಪಭಾ. ೩-೩). **ಸಣಬು** : ''ಸಣವೆನಲು

ಸಣಬು'' (ಮಂಗರಾ. ೪೨-೩೯) ; ಒಳ್ಳಿಹ ಮೈಲಾರನ ವೊಳಗೆಲ್ಲ ಸಣಬು ಹೂಬಿಗಣ ಬಣ್ಣಕರ ಲೇಸಾಯಿತ್ತಯ್ಯಾ (ಬಸವ. ೨೮೦) ; ಪರಮಜಿನಧರ್ಮಮಲ್ಲದ ಪರಿಕಿಸೆ ಭೂತಳದೊಳುಟಿದ ಧರ್ಮಗಳೆಲ್ಲಂ ಕರುವಿನ ಚಿತ್ರದ ತೆಱದಿಂ ಪೊರೆಯಟಿದಡವೊಳಗು ಸಣಬು ನೋೞ್ಪವರ್ಗೆಂದುಂ (ಪುಣ್ಯಾಸ್ರ. ೬-೨೮). **ಸಣವು** : ''ಸಣವೆನಲು ಸಣಬು'' (ಮಂಗರಾ. ೪೨-೩೯). **ಸೆಣಂಬು** : ನಾರನೆ ತೋೞಿ ಪೋಪ ಸೆಣಂಬಿನಂತೆ ತನ್ನನೆ ಮೆಱೆದು ಪೋಗದೆ (ಧರ್ಮಾಮೃ. ೧೪-೪); ಮುತ್ತದ ಪೊಸನಾರ್ ಸೆಣಂಬುಂ ಪಲವುಂ ಮೃಗವಕ್ಕಿಗಳಿಂದಮೊತ್ತಿ ಕಟ್ಟಿದ ಮರಗಂಬಿ ಜೀರ್ಗರೆವಿನಂ ಗುದುಕಿಂ ಮುಗುಟ್ಟಿರ್ ವನೇಚರರ್ (ಸೂಕ್ತಿಸು. ೩-೧೭೯). **ಸೆಣಬು** : ಕಲ್ಕತ್ತ ಸೆಣಬಿನ ಕಾರ್ಖಾನೆಗಳಿಗೆ ಬಹಳ ಪ್ರಸಿದ್ಧವಾದುದು (ನನದಿ. ೨೧). [<— ಪ್ರಾ. ಸಣ್ಣ, ಸಿಣ ./ ಸಂ. ಶಣ./ ತಮಿ. ಚಣಪ್ಪು, ಚಣಮ್ಮು./ ಮರಾ. ಸಣಬ್]

**ಸಣಕಲ** (ನಾ). ಬಹಳ ಕೃಶವಾಗಿರುವವನು,—ಬಡವಾಗಿರುವವನು : ಅವನೊಬ್ಬ ಸಣಕಲ (ರೂಢಿ). [ಸಣಕಲು + - ಅ$_7$]

**ಸಣಕಲಿ** (ನಾ). ಬಹಳ ಕೃಶವಾಗಿರುವವಳು,—ಬಡವಾಗಿರುವವಳು : ಎಷ್ಟು ತೆಳ್ಳಗಿದ್ದೀಯೇ ನೀನು? ಸಣಕಲಿ ! (ಮಲೆಮ. ೩೩೬). [ಸಣಕಲು + - ಇ$_2$]

**ಸಣಕಲು** (ನಾ). ಬಹಳ ತೆಳ್ಳಗಿರುವುದು ; ಕೃಶವಾದುದು ; ಬಡಕಲು : ಕಷ್ಟಕ್ಕೆ ಸಿಲುಕಿ ಸಣಕಲಾದ ಅವಳ ವಯಸ್ಸು ಇಷ್ಟೇ ಎಂದು ಹೇಳಲು ಬರುವಂತಿದ್ದಿಲ್ಲ (ಎಡಹ. ೬); ಒಂದು ಗುಡ್ಡದ ಬಳಿ ಸಣಕಲಾದ ಚಿಕ್ಕ ಮರದಂತೆ ನಾನಾಕೆಯ ಬಳಿ ನಿಂತ (ನಡೆದಾ. II. ೮೮೨). [< ಸಣ್ಣ + - ಕಲು$_2$ (< - ಕಲ್$_4$)]

**ಸಣಕಲೆ** (ನಾ). = ಸಣಕಲಿ : ಬಹಳ ತೆಳ್ಳಗಿರುವುದರಿಂದ ಆ ಹುಡುಗಿಯನ್ನು ಅವಳ ಸ್ನೇಹಿತೆಯರು ಸಣಕಲೆ ಎಂದು ಕರೆಯುತ್ತಾರೆ (ರೂಢಿ). [ಸಣಕಲು + - ಎ$_2$]

**ಸಣಗ** (ನಾ). ಒಂದು ಬಗೆಯ ಮರ : ಚಿಕ್ಕ ಬಿದುರೆಗೆ ವಾಯುವ್ಯದಲು ಸಣಗಮರದ ಬಳಿಯ ನಟ್ಟ ಕಲು (ಎಕ. XII. ಚಿಕ್ಕನಾ. ೩೯-೧೫೧ ; 1589). [ದೇ. ‖ ತಮಿ. ಚಣಕ]

**ಸಣಗಜ್ಜಿ** (ನಾ). ಒಂದು ಬಗೆಯ ಕಜ್ಜಿ ; ಸಣ್ಣಕಜ್ಜಿ : ಮಾರ್ಗ ದಾರೀಗ್ಬಂದ್ರು ಅಲ್ಲೀನೆ ಸ್ವಾಮಿಗಳು ಮೇಲೋಕದಿಂದಾವೆ ಇಳಿದರು ಸ್ವಾಮಿಗಳು ಆಣಗಜ್ಜಿ ಸಣಗಜ್ಜಿ ಬೇಗದಲ್ಲಿ ಎದ್ದವು (ನಾಪದ. ೧೬೦). [< ಸಣ್ಣಕಜ್ಜಿ]

**ಸಣಗಳ್** (?) (ನಾ). (?) : ಮಲೆದಲೆದು ತಾಗೆ ಕೊಂಬಿನ ತಲೆಯೊಳ್ ಕೋಡೂಣಗಿ ಸಣಗಳಾಗದ[ಪಾಠಾಂ. ಲಾದ] ಮಿಗಗಳ್ ಗಲಗಲಕೆ ನಲುಗೆ ನಲಿದುಲಿವಲಿವಂ ಕಟ್ಟಿದವೊಲಸೆದುದಾ ಮೇಷಯುಗಂ (ಅರ್ಥನೇ. ೪-೧೧೮). [?]

**ಸಣಗು** 'ಸನಗು' ನೋ.

**ಸಣಬು** 'ಸಣಂಬು' ನೋ.

**ಸಣಲೆಸದುಗ** (ನಾ). ಒಂದು ಬಗೆಯ ಸಸ್ಯ : ಸಣಲೆಸದುಗನ್ನ ಕಿತ್ತುಕೊಂಡು ಬಾ ಅಂದ್ರು (ಮಲೆಮ. ೪೦೮). 'ಸದ್ದುಕ' ಪರಾ. [?]

**ಸಣವು** 'ಸಣಂಬು' ನೋ.

**ಸಣಿ** 'ಸನಿ$_1$' ನೋ.

**ಸಣಿವಾರ** 'ಸನಿವಾರ' ನೋ.

**ಸಣು** 'ಸಣ್ಣು' ನೋ.

**ಸಣುಕ** 'ಸಣ್ಣುಕ' ನೋ.

**ಸಣ್ಕತ್ತಿ** (ನಾ). ಒಂದು ಬಗೆಯ ಸಸ್ಯ : ಸಣ್‌ಕತ್ತಿ, ಸಂಕೇಶ್ವರಿ, ವಾತನಾರಾಯಣ, ಕೆಂಪುಕೆಂಚಗ, ನೀರಂಗಿ (ಮೈಔಗಿ. ೨೯-೫೬೩): [?]

**ಸಣ್ಣ** (ನಾ). ೧. ಚಿಕ್ಕದು ; ಕಿರಿದು : ''ಸನ್ನವೆಸ ಶಾತಮನೆ ಸಣ್ಣನದು'' (ಮಂಗರಾ. ೧೩೨-೨೬) ; ಕಡುಸಣ್ಣಮಾದೊಡೆ ವಜ್ರ ಒಡೆಯದ ಪರ್ವತವನು (ಅಂಜಚ. ೭-೩೩). ೨. ಬಡವಾದುದು ; ಕೃಶವಾದುದು : ''ಸಪುರಂ ಸಣ್ಣಂ'' (ಕವಿಕಂ. ೧೭೪) ; ಸಣ್ಣಂ ನಡು ತಿಣ್ಣಂ ಮೊಲೆ (ಕಾವ್ಯಸಾ. ೨೮೧ ಶೂದ್ರಕ) ; ಪಡಿದು ಗಿಳಿ ಸೋವ ಹರಯದ ಮಡದಿಯರ ಶರೀರವರ್ಣರೂಪಂ ಗಂಧಂ ನಡುವಿನ ಸಣ್ಣಂ ತಪ್ಪೊಳಮೆಡೆಗೊಂಡವೊಲಿರ್ಪ ನೆಲ್ಗಳೇನೊಪ್ಪಿದುವೋ (ದಶಕು. ೧-೩೧). ೩. ನಯೆ ; ನುಣುಪು : ಸಣ್ಣಪುಪ್ಪ ಪೆಟ್ಟಿನೊಳಾನುಂ ನೀರೊಳ್ ಕಲಸಿದ ಪಿಟ್ಟಿನೊಳಾನುಂ ಚಂದನಾದಿದ್ರವ್ಯದೊಳಾನುಂ ಅಷ್ಟದಳಪದ್ಮ(ಮನ)ಕ್ಕೆ . . . ತಜ್ಞರಿಂ ಬರಯಿಸಿ (ಚಾವುಂಪು. ೨೨೩); ಅರೆವನಯ್ಯಾ ಸಣ್ಣವಹನ್ನಕ್ಕ ಒರೆವನಯ್ಯಾ ಬಣ್ಣಗಾಣ್ಬನ್ನಕ್ಕ ಅರೆದರೆ ಸಣ್ಣವಾದರೆ ಒರೆದರೆ ಬಣ್ಣವಾದರೆ ಕೂಡಲಸಂಗಮದೇವನೊಲಿದು ಸಲಹುವನು (ಬಸವ. ೬೮೬). ೪. ತುಂಡು; ಚೂರು : ಬಾಳೆಯ ಮುಗುಳ ಕಿಱಿದಾಗಿ ಕತ್ತರಿಸಿ . . . ಕೊತ್ತಂಬರಿಯ ಸಣ್ಣಗಳನಿಕ್ಕಿ (ಸೂಪಶಾ. ೪-೩೭) ; ಮೂಲಂಗಿ ಮಾಗುಳಿಯೆಳೆಯ ಕಾರಗೆಣಸು ಕಜ್ಜುರಿಯ ಸಣ್ಣನಂ ಸವಿದು (ಸಮ್ಯಕೌ. ೭-೨೮). ೫. ಕೀಳಾದುದು ; ತುಚ್ಛವಾದುದು : ನೆರೆಯ ಕುತರ್ಕದಿಂದರೆದು ಸಣ್ಣಿಸಿ ನುಣ್ಣಿಸಿಯಂತದಿಂದು ಪೋದರ ಕೃತಿಯೊಳ್ಳಿತನ್ಯಕೃತಿ ಪೊಲ್ಲದಿದೆಣ್ಣಗೆ ಬೆಣ್ಣೆ ಸಣ್ಣವೆಂಬರ ನುಡಿ ಬೇಡ (ಗಿರಿಕ. ೧-೧೯). ೬. ಆಕಾರದಲ್ಲಿ ಕಿರಿದಾಗಿರುವ ಉತ್ತಮದರ್ಜೆಯ ಒಂದು ಬಗೆಯ ಅಕ್ಕಿ ; ಸಣ್ಣಕ್ಕಿ : ಕಣಿವೆಯ ಸಣ್ಣ ಸತ್ಕಾಗಾಲದ ಸಣ್ಣವಣಿಯಾದ ಗೋವೆಯ ಸಣ್ಣ ಪುಣುಗುವಾಸನೆಯನಾಂತಿಹ ಸಣ್ಣಶಾಲಿಯ ತನೆಗಳೊಪ್ಪಿದುವು ಚೆಲ್ವಿಂದ (ಕಂನವಿ. ೫-೬೭). ೭. (ಬಾಲಕಿಯರು ಉಡುವ) ಒಂದು ಬಗೆಯ ಚಿಕ್ಕಸೀರೆ ; ಕಿರಿಗೆ : ಸಣ್ಣ ಸಾಲಿಯ ಸೀರೆಯ ನೆಱಿಯಾ ಬಾಲಕಿಯೊರ್ವಳು ಬಹುಸಿಂಗಾರದ ಜಾಲವ ಬೀಸಿದಳ್ಳಿಟಗೆ (ಕಂನವಿ. ೨-೯೫); ಕರಸಣ್ಣಗಳ ನೆಯ್ದು ಜೇಡರಂ ಲಾದರಂ . . . ನೀಲಿಗಾರರಾ ಪಸರಮೆಸೆಗುಂ (ಗುರುಚಾ. ೧-೩೪). (ಗು). ೮. ಕೋಮಲವಾದ ; ಸೂಕ್ಷ್ಮವಾದ ; ನವುರಾದ: ಫಳರಸದ ಪಾಲನೆಱೆದು ತಳಿರ ತೊಟ್ಟಿಲೊಳಿಟ್ಟು ಸಣ್ಣನನೆಗಳ ನನೆಯಕ್ಕಿಯನಿಕ್ಕಿ (ಗಿರಿಕ. ೨-೭೧ ವ). ೯. ತೆಳ್ಳಗಿರುವ ; ಸಪುರ ; ಬಡವಾದ. ೧೦. ಚಿಕ್ಕದಾದ ; ಪುಟ್ಟ : ನಾನು ಒಂದು ಸಣ್ಣಚೀಟಿಯಲ್ಲಿ . . . ಎಂದು ಬರೆದು, ಎದ್ದು ಹೋಗಿ ರಾಯರ ಕೈಗೆ ಕೊಟ್ಟೆ (ರಾಯಕ. ೪೬). ೧೧. ಕೀಳಾದ ; ತುಚ್ಛವಾದ ; ನಿಕೃಷ್ಟ. ೧೨. ಇಂಪಾದ; ಇನಿದಾದ : 'ಸಣ್ಣೆಂಚರ' ಪರಾ.

ಸಣ್ಣದು = ಚಿಕ್ಕದು ; ಕಿರಿದು : ''ಸಣ್ಣದೆನಲ್ಕಿಱಿದು'' (ರನ್ನಕಂ. ೬) ; ಬೀಜ ಸಣ್ಣದಾದರೆ ಮರ ಸಣ್ಣದೇ? (ಗಾದ). **ಸಣ್ಣಪ, ಸಣ್ಣವನು** = ೧. ಚಿಕ್ಕವಯಸ್ಸಿನವನು; ಬಾಲಕ ; ಹುಡುಗ : ನಾಂ ನೂಕಿದವನಲ್ಲ ಸತ್ತ ಸಣ್ಣವ ಸಾಕ್ಷಿ ಲೇಸಾತನಂ ನುಡಿಸು (ಗುರುಬಾ. ೮-೫); ಅಹುದೆಲೊ ವೀರಾಧಿವೀರ ಯೆನ್ನಿದಿರಾಂತು ಬಹುದಾಶ್ಚರ್ಯ ಸಣ್ಣವನು (ಮೋಹತ. ೩೪-೧೬). ೨. ತಮ್ಮ ; ಕಿರಿಯವನು : ಮಾರುತಿಯ ಸಣ್ಣವನ ಕೋಣೆಲಕ್ಷ್ಮೀರಮಣ ಕೈಬೀಸಿದಂ ಮುಗಿಸಲೂಳಿಗವನು (ತುರಂಗ. ೬೨-೫೫). **ಸಣ್ಣವರು** (ಬಹುವ) : ಸಣ್ಣವರುಗಳನೋದಿಸುತಿರ್ಪ ಕಸೆಯ ಕೋಲಣ್ಣಗಳ್ . . . ಕನ್ನಡಕವ ತಾಳ್ದಿಹರು (ಮೋಹತ. ೩-೪೧) ; ಸಣ್ಣವರೂ ದೊಡ್ಡವರೂ ಇರುವೆಗಳ ಹಾಗೆ ಯಾವಾಗಲೂ ಉದ್ಯೋಗದಲ್ಲಿರಬೇಕು (ಮುಂಬಯಿ. ೩-೨೦). **ಸಣ್ಣವಳು** = ಎಳೆಯ ವಯಸ್ಸಿನವಳು; ಚಿಕ್ಕವಳು : ಸವತಿ ಸಣ್ಣವಳು, ದಾಯಾದಿ ಚಿಕ್ಕವನಲ್ಲ (ಗಾದ). **ಸಣ್ಣವು** (ಬಹುವ) : ಕಸಕಸೀಹೂ ಕಮಲದ ಹೂವಿಗಿಂತ ತುಸು ಸಣ್ಣವು (ಮುಂಬಯಿ. ೪-೩೯). **ಸಣ್ಣಾಗು** = ಬಡವಾಗು ; ಕೃಶವಾಗು : ಎಣ್ಣೆಬತ್ತಿಯನೇಱಿ ನುಣ್ಣೆಳಗನೀವಂತೆ ಸಣ್ಣಾಗಿ ಸುಟ್ಟು ಬೆಳಗೀವ ಶಿವಯೋಗಿ ಸಣ್ಣಾತನೇನು (ಸರ್ವಜ್ಞ. ೫೬೫) : ದುಡಿದು ನಾ ಸಣ್ಣಾದೆ (ಇಂಚಾಪ. ೧೧೬-೬೬). [ದೇ. ‖ ತಮಿ. ಚನ್ನ; ಮಲ. ತೆಲು. ಸನ್ನ; ತುಳು. ಸಣ್ಣ./ ಮರಾ. ಸಾನ]

**ಸಣ್ಣಅಂಟುಪುರಲೆಹುಲ್ಲು** (ನಾ). ಒಂದು ಬಗೆಯ ಚಿಕ್ಕದಾದ ಅಂಟುಪುರಲೆಹುಲ್ಲು : (ಮೈಔಗಿ. ೬೦-೧೪೨೪).

[ಸಣ್ಣ + < ಅಂಟುಪುರುಲೆ + ಹುಲ್ಲು (< ಪುಲ್)]

**ಸಣ್ಣಂಚು** (ನಾ). (ಸೀರೆ, ಧೋತ್ರ ಮುಂತಾದುವುಗಳ) ಕಿರಿದಾದ ಅಂಚು ; ಚಿಕ್ಕ ಅಂಚು : ನನ್ನೂರ ಮುಂದೆ ಎಮ್ಮೆ ಕಾಯೋ ಗೊಲ್ಲ ನನ್ನರು ಕಂಡರೆ ಬರಹೇಳೊ ಅವರುಡಿಸಿರುವೊ ಸಣ್ಣಂಚಿನ ಸೀರೆ ಅಳಿದವು (ನಾಪದ. ೮೦). [ಸಣ್ಣ + ಅಂಚು$_2$]

**ಸಣ್ಣಂದು** (ನಾ). ಚಿಕ್ಕವಯಸ್ಸು ; ಚಿಕ್ಕಂದು ; ಬಾಲ್ಯ : ಅವಳ ಗುಣ ಸಣ್ಣಂದಿನಲ್ಲಿ ಒಂದು ತರನಾಗಿತ್ತು (ಹಳ್ಳಹಾ. ೯೭) ; ಅವನು ಸಣ್ಣಂದಿನಿಂದಲೂ . . . ವಿದ್ಯಾಭ್ಯಾಸಮಾಡಿದನು (ವಾರಾಕ್ಯ. ೪೭). [ಸಣ್ಣ + ಅಂದು$_2$]

**ಸಣ್ಣಕರುಳು** (ನಾ). ಜಠರದ ಕೊನೆಯಿಂದ ದೊಡ್ಡ ಕರುಳಿನವರೆಗಿನ ಅನ್ನನಾಳದ ಭಾಗ ; ಕೆಳಭಾಗದ ಕರುಳು : ಸಣ್ಣಕರುಳಿನಲ್ಲಿ ಸಹ ಅರಗದ ಹಾಗೂ ಶರೀರಕ್ಕೆ ಬೇಡವಾದ ಅನ್ನದ ಭಾಗವು ದೊಡ್ಡಕರುಳಿಗೆ ಬಂದು ಸೇರುತ್ತದೆ(ಗೋಗ್ರಾಸ. ೪೫);

ಜಂತುಹುಳು . . . ಮನುಷ್ಯನ ಸಣ್ಣಕರುಳಿನಲ್ಲಿ ಪರತಂತ್ರಜೀವಿಯಾಗಿ ಜೀವಿಸುತ್ತದ (ಪರಜೀ. ೪೯). 'ದೊಡ್ಡಕರುಳು' ಪರಾ. [ಸಣ್ಣ + ಕರುಳು (< ಕರುಳ್)]

**ಸಣ್ಣಕಾಡಿ** (ನಾ). (ಕರಾ) ಹತ್ತುಖಂಡುಗ ಅಳತೆಯ ಒಂದು ಪ್ರಮಾಣ: (ಕಸಂಗ್ಸ. ೧೭೨). [ಸಣ್ಣ + ಕಾಡಿ₂]

**ಸಣ್ಣಕಾರೆ** (ನಾ). ಒಂದು ಬಗೆಯ ಸಸ್ಯ ; ಚಿಕ್ಕಜಾತಿಯ ಕಾರೆ: "ಬಿಳಿಕಾರೆಮುಳ್ಳು, ಸಣ್ಣಕಾರೆ, ತಿಮಿಕಾರ" (ಸಸ್ಯನಿ. ೧೧೩); ಬಿಳೀಕಾರೆಮುಳ್ಳು, ಸಣ್ಣಕಾರ (ಮೈಔಗಿ. ೭೭-೧೩೩೮). [ಸಣ್ಣ + ಕಾರೆ₁]

**ಸಣ್ಣಕೆಲಸ** (ನಾ). ೧. ಸೂಕ್ಷ್ಮವಾದ ಕೆಲಸ ; ನಯವಾದ ಕೆಲಸ : ದುಕೂಲವಸ್ತ್ರದ ಗುಣ – ಇದು ಸಣ್ಣಕೆಲಸದ ವಸ್ತ್ರವಾಗಿಯೂ, ಮಹಾಲಕ್ಷ್ಮಿಗೆ ಪ್ರೀತಿಕರವಾಗಿಯೂ . . . ಇರುವುದು (ಸಕಪ್ಪ. ೩೪). ೨. ನೀಚಕೆಲಸ ; ಹೀನಕಾರ್ಯ : ಅವರು ಇಂಥಾ ಸಣ್ಣಕೆಲಸ ಮಾಡುತ್ತಾರೆಂದು ನಾನು ನಂಬಿರಲಿಲ್ಲ (ರೂಢಿ). [ಸಣ್ಣ + ಕೆಲಸ]

**ಸಣ್ಣಕೈಂಕ** (ನಾ). ಒಂದು ಬಗೆಯ ಸಸ್ಯ : ಕೊರ, ಸಣ್ಣಕೈಂಕ, ಲಿಂಬಾರ (ಮೈಔಗಿ. ೪೩-೮೪೭). [ಸಣ್ಣ + ಕೈಂಕ]

**ಸಣ್ಣಕ್ಕಿ** (ನಾ). = ಸಣ್ಣ ೬ : ಸಣ್ಣಕ್ಕಿವಿಟ್ಟನೊಳು ಬೆಣ್ಣೆಯನು ಕಲಸಿ (ಸೂಪಶಾ. ೧-೪೭) ; ಸಣ್ಣಕ್ಕಿಯೋಗರವು ಸೊಗಸಾದ ಕೆನೆಮೊಸರು ಬಣ್ಣಿಸುತ ನಾನುಣಸೆ ಒಲ್ಲದಾಯ್ತೆ (ಪುರಂದ. ೧-೮೯-೪) ; ಮೆಚ್ಚಿವ ಸಣ್ಣಕ್ಕಿಯ ಪಾಯಸ . . . ಗೌಳಿಯ ಪಾಯಸಗಳ ತಂದಾಗ ಸರಸಿಜಾಕ್ಷಿಯರು ನೀಡಿದರು (ಕಂಸವ. ೮-೯೦). [ಸಣ್ಣ + ಅಕ್ಕಿ₁]

**ಸಣ್ಣಕ್ಕಿಹುಲ್ಲು** (ನಾ). ಅಕ್ಕಿಹುಲ್ಲಿನಲ್ಲಿ ಒಂದು ಬಗೆ ; ಸಣ್ಣಜಾತಿಯ ಅಕ್ಕಿಹುಲ್ಲು : "ಗಂಡುಅಕ್ಕಬುಹುಲ್ಲು, ಸಣ್ಣಕ್ಕಿಹುಲ್ಲು, ತಪ್ಪರೆಹುಲ್ಲು, ಹೊಂಬಾಳೆಹುಲ್ಲು" (ಸಸ್ಯನಿ. ೪೯); ಗಂಡುಅಕ್ಕಬುಹುಲ್ಲು, ತಪ್ಪರೆಹುಲ್ಲು, ಹೊಂಬಾಳೆಹುಲ್ಲು, ಸಣ್ಣಕ್ಕಿಹುಲ್ಲು (ಮೈಔಗಿ. ೩೦-೫೮೫). [ಸಣ್ಣ + ಅಕ್ಕಿಹುಲ್ಲು]

**ಸಣ್ಣಕ್ಕಿಹೆಡೆಯ** (ನಾ). ಒಂದು ಬಗೆಯ ಔಷಧೀಸಸ್ಯ ; ಚಿಕ್ಕಜಾತಿಯ ಅಕ್ಕಿಹೆಡೆ: "ಭಾರದ್ವಾಜೀ–ಚಿಂಬೋತನಹಕ್ಕಿ . . . ಸಣ್ಣಕ್ಕಿಹಡೆಯ" (ಓಷಧಿ. ೧೧೧). [ಸಣ್ಣ + ಅಕ್ಕಿಹಡೆಯ (< ಅಕ್ಕಿಹಡೆ)]

**ಸಣ್ಣಕ್ಷರ** (ನಾ). ೧. ಸಣ್ಣಗಾತ್ರದ ಅಕ್ಷರ ; ಚಿಕ್ಕ ಅಕ್ಷರ. ೨. ಮುದ್ರಣದಲ್ಲಿ ಬಳಸುವ ಚಿಕ್ಕ ಅಳತೆಯ ಅಕ್ಷರ. ೩. ಇಂಗ್ಲಿಷ್‌ಭಾಷೆಯಲ್ಲಿರುವ ವಾಕ್ಯದ ಅಥವಾ ಹೆಸರಿನ ಮೊದಲಕ್ಷರವಲ್ಲದ ಅಕ್ಷರ : ಸಣ್ಣಕ್ಷರಗಳು (S. letters. ಇಂಕನಿ); ಸಣ್ಣಕ್ಷರಗಳಲ್ಲಿ ಬರೆ (ರೂಢಿ). [ಸಣ್ಣ + ಅಕ್ಷರ]

**ಸಣ್ಣಖಚೋರ** (ನಾ). ಚಿಕ್ಕಜಾತಿಯ ಒಂದು ಬಗೆಯ ಖಚೋರ : "ಕ್ರೋಧಿನೀ – ಸಣ್ಣಖಚೋರ, ಬಸ್ತಾದ್ರಿ" (ಓಷಧಿ. ೪೨) ; ಅಗಿಲು, ಸಣ್ಣಖಚೋರ , . . ತಾವರೆಗೆಣಸು, ಇವಿಷ್ಟನು ಪ್ರತ್ಯೇಕ ಎರಡುವರಹ ತೂಕಗಳನು ಸೂಕ್ಷ್ಮವಾಗಿ ಚೂರ್ಣಿಸಿ ಹಾಕಿ (ವೈದ್ಯಸಾ. II. ೧೩೫). [ಸಣ್ಣ + ಖಚೋರ]

**ಸಣ್ಣಗಣ್ಣ** (ನಾ). ಸಣ್ಣಕಣ್ಣಿರುವ ಒಂದು ಬಗೆಯ ಮೀನು : ಕೊರವಂ ಗೋಜಳೆ ಸಣ್ಣಗಣ್ಣನೊರವಂ . . . ಪಂದಿಗನೆಂಬ ಮೀನ್ನಗದನಾ ಭಕ್ತಂ (ತ್ರಿಪುಷ. ೫೭-೮). [ಸಣ್ಣ + ಕಣ್ + - ಅ₇]

**ಸಣ್ಣಗಳಮೆ** (ನಾ). ಆಕಾರದಲ್ಲಿ ಕಿರಿದಾಗಿರುವ ಉತ್ತಮದರ್ಜೆಯ ನೆಲ್ಲು: ಸಣ್ಣಗಳವೆಯೋಗರ ತೊಗರಿಯ ತೋಯೆ ಬೆಣ್ಣೆಗಾಸಿದ ತುಪ್ಪವೆರದು ಅಣ್ಣಂದಿರುಣಬನ್ನಿಯೆನಬೇಕಲ್ಲದೆ ಹೆಣ್ಣೆಗೆಂದೆಮ್ಮ ಕರೆವರೆ (ನೇಮಿಸಂ. ೨೩-೨೭೯). [ಸಣ್ಣ + ಕಳಮೆ (< ಕಲವೆ)]

**ಸಣ್ಣಗಾರೆ** (ನಾ). ನಯವಾದ ಗಾರೆ ; ನುಣುಪಾದ ಗಾರೆ : (ಕ). [ಸಣ್ಣ + ಗಾರೆ₁]

**ಸಣ್ಣಗಾಳ** (ನಾ). (ಮೀನು ಹಿಡಿಯುವ) ಚಿಕ್ಕಕೊಕ್ಕೆ, — ಕೊಂಡಿ: "ಎಡೆಗಾಣವುಂ ಸಣ್ಣಗಾಳಂ[ಪಾಠಾಂ. ಣವು] ಕಣ್ಣೆವಂದ ಗಳಗಾಣವುಂ" (ಕಬ್ಬಕ್ಕೆ. ೯೭); ಎಡೆಗಾಳ, ಗಳಗಾಳ, ಸಣ್ಣಗಾಳ (ಶಮದ. ೨೯೮ ಪ್ರಯೂ). [ಸಣ್ಣ + ಗಾಳ]

**ಸಣ್ಣಗಿರಿ** (ನಾ). ಒಂದು ಬಗೆಯ ಚಿನ್ನದ ನಾಣ್ಯ : ಬಂಗಾರದ ನಾಣ್ಯಗಳು . . . ೧ ಗಬರು . . . ೧ ಸಣ್ಣಗಿರಿ (ಚಿತ್ರಪಾ. ೧೦೪). [?]

**ಸಣ್ಣಗೆ** (ಅ). ಕೃಶವಾಗಿ ; ತೆಳ್ಳಗೆ : ಸಾರಂಗದ ಕಾಲುಗಳು ಉದ್ದವಾಗಿ ಬಹಳ ಸಣ್ಣಗೆ ಅವೆ (ಮುಂಬಯಿ. ೩-೧೮).

ಸಣ್ಣಗಾಗು = ಬಡವಾಗು ; ಕೃಶವಾಗು ; ಸೊರಗು : ಪ್ರತ್ಯೇಕ ವೃತ್ತಗಳಲ್ಲಿ ಸುತ್ತುವ ತಂದೆ ಮಕ್ಕಳನ್ನು ಕಂಡು ವಿಶ್ವವರಾದೇವಿಯೊಬ್ಬಳು ಒಳಗೊಳಗೇ ಕರಗಿ ಸಣ್ಣಗಾಗುತ್ತಾಳೆ (ಚತಂಬಾ. ೯೨) ; ಪ್ರೇಮಿಯಾದವನು ಯೋಚಿಸಿ ಯೋಚಿಸಿ ಸಣ್ಣಗಾಗಬೇಕು, ತೆಳ್ಳಗಾಗಬೇಕು . . . ಇತ್ಯಾದಿಯೆಲ್ಲಾ ಹೇಳುತ್ತಾರ (ಅಲಹೂ. ೩೩).

ಸಣ್ಣಗಿರು = ಚಿಕ್ಕದಾಗಿರು ; ಕೃಶವಾಗಿರು : ಮೂಲಸ್ಥಾನದಲ್ಲಿ ಮಹಾನದಿಯೂ ಕೂಡ ಸಣ್ಣಗಿರುತ್ತದೆ (ಪ್ರಮಹ. ೧೯). [ಸಣ್ಣ + - ಅಗೆ₃]

**ಸಣ್ಣಗೊಳಿಸು** (ಕ್ರಿ). ಅಲ್ಪಪ್ರಮಾಣದಲ್ಲಿ ಇರಿಸು : ಮತ್ತ ಮೊದಲೊಳಗೆ ಪೇಳ್ದಾ ಮೂಱು ತೆಱ ರಸಾಯನಗಳಂ ಸಣ್ಣಗೊಳಿಸಿ ಹತ್ತೆಂಟು ಮಡಕೆಯೊಳು ತಗತಗೆದು ಬೇಱವಕೆ ಉತ್ತಮದ ಹಲವು ಹೂವಿನ ಪರಿಮಳವನು ಪೊರೆಯೊತ್ತಿ (ಸೂಪಶಾ. ೨-೨೮). [ಸಣ್ಣ + ಕೊಳ್₁ + - ಇಸು₁]

**ಸಣ್ಣಜಂಘೆ** (ನಾ). ಚಿಕ್ಕದಾಗಿರುವ ಕಣಕಾಲು : ಕೊಬ್ಬಿದ ಕೊರಳ ಸಣ್ಣಜಂಘೆಗಳ ಕೊಂಕುಗುರ ಮಡಿಗಿವಿಯ . . . ಗಬ್ಬಿನಾಯ್ಗಳ ಹಾಸನುಗಿದು ಬಿಡೆ ಪಂದಿಗಳನಬ್ಬರಿಸಿ ತುಡುಕಿದುವು (ಜೈಮಿಭಾ. ೨೮-೪೭). [ಸಣ್ಣ + ಜಂಘೆ]

**ಸಣ್ಣಣಿಲ್** (ನಾ). ಚಿಕ್ಕಜಾತಿಯ ಒಂದು ಬಗೆಯ ಅಳಿಲು : ಸಣ್ಣಣಿ(ಳಿ)ಲ ವಿಷಕ್ಕೆ (ಖಮದ. ೧೩-೮೩). [ಸಣ್ಣ + ಅಣಿಲ್]

**ಸಣ್ಣತನ** (ನಾ). ೧. ಚಿಕ್ಕಂದು ; ಬಾಲ್ಯ : ಸಣ್ಣತನದಿಂದಿಂದ್ರನೊಳು ಕಾದಿ ಗೆಲಿದಮೃತವನ್ನು ತಂದಿತ್ತು ಜನನಿಯ ಬಿಡಿಸಿದ (ನವಮೋ. ೨೯-೫೦). ೨. ಕೀಳುತನ; ಕ್ಷುದ್ರತೆ; ನೀಚತನ : ಅಪ್ಪಾಜಿಯವರ ಕೆಲಸದಲ್ಲಿ ಸಹಕರಿಸದೆ ತನ್ನ ಸಣ್ಣತನವನ್ನು ತೋರುವಷ್ಟು ಮೂರ್ಖನಲ್ಲ (ಚದೇವ. ೩೦). [ಸಣ್ಣ + - ತನ]

**ಸಣ್ಣನಡು** (ನಾ). ಕೃಶವಾದ ಸೊಂಟ; ಬಡನಡು : ಸಣ್ಣನಡುವಿನ ಬೆಡಗಿನಭಿನವರಸದ ಭಾವದ ಕಡುಹುಕಾತಿಯರೈದಿದರು (ತೊರರಾ. ೧-೧೪-೨೨); ಸಣ್ಣನಡುವಿನ ಸೊಕ್ಕುಜವ್ವನದ . . . ಬಾಲೆಯರ ಮೂಱುಲಕ್ಷದಿಂ ಪೆಣ್ಣದಳಮೈದೆ ಜೋಡಿಸಿತು (ಜೈಮಿಭಾ. ೧೭-೩). [ಸಣ್ಣ + ನಡು₂]

**ಸಣ್ಣನಿದ್ದೆ** (ನಾ). ಸ್ವಲ್ಪಕಾಲದ ನಿದ್ದೆ; ಲಘುನಿದ್ದೆ : ಒಂದು ಸಣ್ಣನಿದ್ದೆ ಮಾಡುತ್ತೇನೆ (ರೂಢಿ). [ಸಣ್ಣ + ನಿದ್ದೆ]

**ಸಣ್ಣನೆ** (ಅ). ಚಿಕ್ಕದಾಗಿ ; ಸಣ್ಣಗೆ.

ಸಣ್ಣನಾಗು = ೧. ಚಿಕ್ಕದಾಗು; ಕಿರಿದಾಗು : ಅದು ಕಣ್ಣಿಗೆ ಕಾಣದಷ್ಟು ಸಣ್ಣನಾದೊಂದು ಚುಕ್ಕೆಯಂತೆ ತೋರುವುದು (ಜ್ಯೋತಿರ್ವಿ. ೮೭). ೨. ನುಣ್ಣಗಾಗು; ನಯವಾಗು : ಸುಣ್ಣದ ಕಲ್ಲನ್ನರಳಿಸಿ ಶೋಧಿಸಿಕೊಂಡು . . . ಹಾಗಲದ ಕಾಯಿಯ ರಸದಲ್ಲಿ ಸಣ್ಣನಾಗಿ ಮರ್ದಿಸಿ . . . ಶುಂಠಿರಸದಿಂ ಕೊಡಲು ಛಳಿಜ್ವರ ನಿಲ್ಲುವುದು (ಸಕಪ್ಪ. ೭೪). ೩. ಬಡವಾಗು ; ಕೃಶವಾಗು ; "ಸಣ್ಣನಾದುದು ಬಡವಟ್ಟುದು" (ಚತುನಿ. ೬). ೪. ಹತಾಶನಾಗು ; ನಿರಾಶನಾಗು : ಅಂತು ಪೂಣ್ಬು ನುಡಿದು ಪೆಱದೆಗೆಯದೆ ಪೊಕ್ಕು ಬೆರಸಿ ಸಣ್ಣನಾದ [ಪಾಠಾಂ. ಸಣ್ಣ ಸುಣ್ಣವಾದ] ಪೇರಡಿಕೆಯ ಪರಿಗೆಕಾಱರಂ ಕಂಡು (ಕಬ್ಬಿಗಾ. ೨೭೪). [ಸಣ್ಣ + - ಅನೆ₁]

**ಸಣ್ಣನೆಯ** (ಗು). ಬಹಳ ಚಿಕ್ಕದಾಗಿರುವ; ಸೂಕ್ಷ್ಮವಾದ ; ಸಣ್ಣನೆಯ ಮಳಲೊಳಗೆ ನುಣ್ಣನೆಯ ಶಿಲೆಯೊಳಗೆ ಬಣ್ಣಿಸುತ ಬರೆದ ಪಟದೊಳಗೆ ಇರುವಾತ ತನ್ನೊಳಗೆ ಇರನೆ (ಸರ್ವಜ್ಞ. ೩೩೮). [ಸಣ್ಣ + - ಅನೆಯ₂]

**ಸಣ್ಣಪರೀಕ್ಷೆ** (ನಾ). ಶಾಲೆ, ಕಾಲೇಜುಗಳಲ್ಲಿ ನಡೆಸಲಾಗುವ ವರ್ಷದ ಮೊದಲನೆಯ ಪರೀಕ್ಷೆ ; ವಾರ್ಷಿಕಪ್ರಥಮಪರೀಕ್ಷೆ : ಮಕ್ಕಳಿಗೆ ಸಣ್ಣಪರೀಕ್ಷೆ ಪ್ರಾರಂಭವಾಗಿದೆ (ರೂಢಿ). 'ದೊಡ್ಡಪರೀಕ್ಷೆ' ಪರಾ. [ಸಣ್ಣ + ಪರೀಕ್ಷೆ]

**ಸಣ್ಣಬತ್ತ, ಸಣ್ಣಭತ್ತ** (ನಾ). ಸಣ್ಣಕಾಳಿನ ಒಂದು ಜಾತಿಯ ಉತ್ತಮವಾದ ಬತ್ತ ; ಕಿರುಬತ್ತ : ಸಣ್ಣಬತ್ತದ ಅರಳು, ಶುಂಠಿ, ಭದ್ರಮುಸ್ತೆ ಇವಂ . . . ಸೇವಿಸೆ ರಕ್ತಪೈತ್ಯಂ ನಿಲ್ಗುಂ (ಸಕಪ್ಪ. ೧೮೭). **ಸಣ್ಣಭತ್ತ** : "ಅಣುಃ . . . ಸಣ್ಣಭತ್ತ, ಜೀರಿಗೆ ಸಂಬಾರದ ಭತ್ತ" (ಸಿದ್ಧಾಂತಿ. ೨೪೦). [ಸಣ್ಣ + ಬತ್ತ₂]

**ಸಣ್ಣಬರಹ** (ನಾ). ಚಿಕ್ಕಗಾತ್ರದ ಅಕ್ಷರ ; ಸಣ್ಣಲಿಪಿ ; IP ಈ ಬಗೆಯ ಲಿಪಿಯನ್ನು ಒಂದು ಕಲೆಯಾಗಿ ಕೆಲವರು ಬೆಳೆಸಿಕೊಂಡು ಬಂದಿರಬಹುದು: ಸಂಪಾದನೆಯ ಸಣ್ಣಬರಹದ ಗುರುಬಸವರಾಜದೇವರು ಸೇರಿಸಿದ ಶರಣಚಾರಿತ್ರದ ವಚನ (ಕನ್ನಶಾ. ೫೮). [ಸಣ್ಣ + ಬರಹ (< ಬರೆಪ)]

**ಸಣ್ಣಬೆರಲು** (ನಾ). ಚಿಕ್ಕಬೆರಳು; ಕಿರುಬೆರಳು : ಕೊರಲ ಮೂರೇಖೆಯ ಮಣ್ಣೊಡವಳು ಸಣ್ಣಬೆರಲ ಕೈರೇಖೆಯುಜ್ಜುವಳು (ಮೋಹತ. ೧೭-೬೪).
[ಸಣ್ಣ + ಬೆರಲು (< ಬೆರಲ್)]

**ಸಣ್ಣಭತ್ತ** 'ಸಣ್ಣಬತ್ತ' ನೋ.

**ಸಣ್ಣಮಣಲ್** (ನಾ). ಚಿಕ್ಕಕಣಗಳುಳ್ಳ ಮರಳು; ನಯವಾದ ಮರಳು : ಉಸುರನಂತೆ ಪುಗಲಿಕೀಯರುರುಚ್ಛ್ವಾಸ ನಿರಯದೊಳಗೆ ಪುಗಿಸಿ ಸಣ್ಣಮಣಲನಿಡಿದು ಪೊಯ್ಯುರಲ್ಲಿಯಕಟ ಮುಳುಗೆ (ಸಾನಂಚ. ೬-೭೮ ರಗಳೆ). [ಸಣ್ಣ + ಮಣಲ್]

**ಸಣ್ಣಮಲ್ಲಿಗೆ** (ನಾ). ಒಂದು ಬಗೆಯ ಕಿರಿದಾದ ಮಲ್ಲಿಗೆ : "ಹುರಿಸ ಬಳ್ಳಿ . . . ಸಣ್ಣಮಲ್ಲಿಗ, ಸೂಜಿಮಲ್ಲಿಗೆ . . . ದವನಮಲ್ಲಿಗೆ" (ಸಸ್ಯಾ. ೭೭); ಸಣ್ಣಮಲ್ಲಿಗೆ, ಸೂಜಿಮಲ್ಲಿಗ (ಪ್ರುಡಿಗಿ. ೪೭-೯೩೩). [ಸಣ್ಣ + ಮಲ್ಲಿಗೆ]

**ಸಣ್ಣಮಾತು** (ನಾ). ಕೀಳಾದ ನುಡಿ ; ತುಚ್ಛವಾದ ಮಾತು : ಯಾರಿಗೂ ಸಣ್ಣಮಾತುಗಳನ್ನಾಡಿ ಬಯ್ಯಬಾರದು (ರೂಢಿ). [ಸಣ್ಣ + ಮಾತು$_1$]

**ಸಣ್ಣಮುಡಿ** (ನಾ). (ಕರಾ) ಒಂದು ಅಳತೆ; ಮುಡಿಯಲ್ಲಿ ಒಂದು ಭಾಗ : (ಕಿಸಂಗ್ಲಾ. ೧೭೦). [ಸಣ್ಣ + ಮುಡಿ$_2$]

**ಸಣ್ಣಮೆಣಸು** (ನಾ). ಚಿಕ್ಕಜಾತಿಯ ಒಂದು ಬಗೆಯ ಮೆಣಸು ; ಕಿರುಮೆಣಸು: "ಕಂಬಕಃ- ಸಣ್ಣಮೆಣಸು" (ಓಷಧಿ. ೨೨). [ಸಣ್ಣ + ಮೆಣಸು (< ಮೆಬಸು)]

**ಸಣ್ಣಲಬು** (ನಾ). ಒಂದು ಬಗೆಯ ಸಸ್ಯ : (ಕಿ). [ಸಣ್ಣ + ಅಲಬು$_1$]

**ಸಣ್ಣವಟ್ಟೆ** (ನಾ). ಚಿಕ್ಕದಾರಿ; ಸಣ್ಣದಾರಿ : ನಡೆ ನೋಡುವ ಕಾವನ ಕೈಯ ಬೊಂಬೆ ಪೊಂಗೊಡವೊಲೆಯಿಂ ನಾಭಿಗಾಗಿ ಎಡೆಯಾಡುವ ಸಣ್ಣವಟ್ಟೆಯಿದೆನೆ ಬಾಸೆ ಕಡು ಸೊಗಸಿತು ಕೋಮಲೆಗೆ (ಶ್ರೀಪಾಲ. ೩-೫೭). [ಸಣ್ಣ + ಬಟ್ಟೆ$_1$]

**ಸಣ್ಣವಡಂಜಿ** (ನಾ). ಒಂದು ಬಗೆಯ ಬಟ್ಟೆ : ಮಾಂದಳಿರ ಪಟ್ಟೆ ಸಣ್ಣ ವಡಂಜಿಯುಂ ಪೊಂಬಟ್ಟೆ (ಬಸಪು. ೧೧-೨೭). [ಸಣ್ಣ + ಪಡಂಜಿ]

**ಸಣ್ಣವಳೆ** (ನಾ). ತೆಳುವಾಡ ಬಳೆ; ತೆಳ್ಳಗಿರುವ ಬಳೆ : ಕರ್ಪಸದಳಮಾದ ಸಣ್ಣವಳೆ ಕತ್ತರಿಪೀಲಿಯನಾಂತ ಚೊಲ್ಲೆಯಂ ಮಿಸುಗುವ ದೋರವಲ್ ಕರಮೆ ಮಾಸರಮಾದುದು ದೇಸಕಾರ್ತಿಯೊಳ್ (ಚಂದ್ರಪ್ರ. ೮-೫). [ಸಣ್ಣ + ಬಳೆ$_2$]

**ಸಣ್ಣವಿಷಯ** (ನಾ). ಚಿಕ್ಕಪುಟ್ಟ ವಿಷಯ; ಸಾಮಾನ್ಯಸಂಗತಿ : ಲಿಪಿ, ಶಾಸನಗಳೆಂದರೇನು, ಅದರ ಮಹತ್ವವೇನು ಎಂಬ ಸಣ್ಣವಿಷಯಗಳು ಮಹನೀಯರಾದ ತಮಗೆಲ್ಲರಿಗೂ ತಿಳಿದೇ ಇದೆ (ರಾಯಕ. ೪೭). [ಸಣ್ಣ + ವಿಷಯ]

**ಸಣ್ಣಸರವಳಿಗೆ** (ನಾ). ಗೋದಿ ಅಥವಾ ರವೆಯಿಂದ ತಯಾರಿಸಿದ (ಪಾಯಸಕ್ಕಾಗಿ ಉಪಯೋಗಿಸುವ) ಸಣ್ಣಗಾತ್ರದ ಉರುಳೆ; ಸಣ್ಣದಾದ ಸರವಳಿಗೆ : ಸರವಳಿಗೆ ಸಣ್ಣಸರವಳಿಗೆ ಮಣಿಸರವಳಿಗೆ . . . ಸಮೆದವಂತೊಳಗೆ (ಬಸರ. ೭-೧೩). [ಸಣ್ಣ + ಸರವಳಿಗೆ]

**ಸಣ್ಣಸಸಿ** (ನಾ). ಎಳೆಯ ಚಂದ್ರಬಿಂಬ; ಬಾಲಚಂದ್ರ : ಸಣ್ಣಸಸಿಗೆ ಸರಿವಂದ ನೊಸಲ್ . . . ಒಪ್ಪಿದುವಾ ಪಿಂಚರತನೂಭವಗೆ (ಜಯಕಾ. ೧೩-೧೦). [ಸಣ್ಣ + ಸಸಿ$_2$]

**ಸಣ್ಣಸಾಸಿವೆ** (ನಾ). ಚಿಕ್ಕಕಾಳುಗಳನ್ನುಳ್ಳ ಒಂದು ಬಗೆಯ ಸಾಸಿವೆ : "ತೀಕ್ಷ್ಣಫಲಾ - ಸಣ್ಣಸಾಸಿವೆ" (ಓಷಧಿ. ೭೦). [ಸಣ್ಣ + ಸಾಸಿವೆ]

**ಸಣ್ಣಸೆಣಬು** (ನಾ). ಒಂದು ಬಗೆಯ ಸೆಣಬು : ಅಪ್ಸೆಣಬು, ಸಣ್ಣಸೆಣಬು (ಮೃಡಿಗಿ. ೨೫-೪೭೪). [ಸಣ್ಣ + ಸೆಣಬು (< ಸಣಂಬು)]

**ಸಣ್ಣಸೇವಗೆ** (ನಾ). ತೆಳ್ಳನೆಯ ಸೇವಿಗೆ : ಹಾಲೋಗರೊಡೆ ಸಣ್ಣಸೇವಗೆಗಳಲ್ಲಲ್ಲಿ (ಬಸರ. ೭-೧೨); ಸಣ್ಣಸೇ[ಪಾಠಾಂ. ಶ್ಯಾ]ವಗೆಯ ಮೆದೆಯೆರೆಯಪ್ಪದಡಕಿಲಿಡ್ಡಲಿಗೆಗಳ ಬೋನ (ಸಪ್ತಕಾ. ೭-೨೫); ಸಣ್ಣಸೇವಗೆ ಹಾಲುಂಡೆ ಚೇಣ್ಣೊಡ . . . ಭೂಪಗೆ ಮುದ್ದುವೆಣ್ಣುಗಳೆಡೆಮಾಡಿದರು (ಕಂನವಿ. ೮-೮೭). [ಸಣ್ಣ + ಸೇವಗೆ (< ಸೇವಿಗೆ)]

**ಸಣ್ಣಹನಿ** (ನಾ). (ದ್ರವಪದಾರ್ಥದ) ತುಂತುರು ; ತೊಟ್ಟು : "ಕರದಿಂ ಕೆದರ್ವ ಸಣ್ಣಹನಿ ವಮಥುವಕ್ಕು" (ಮಂಗರಾ. ೪೬-೪). [ಸಣ್ಣ + ಹನಿ$_3$ (< ಪನಿ$_2$)]

**ಸಣ್ಣಹಿಟ್ಟು** (ನಾ). ನುಣುಪಾದ ಹಿಟ್ಟು ; ನಯವಾದ ಹಿಟ್ಟು : ಬೆಳತಿಗಕ್ಕಿಯ ಸಣ್ಣಹಿಟ್ಟ ಸೋಮಿಸಿ ಹುರಿದುಕೊಳುತ ಬೆಲ್ಲದ ಪಾಕದೊಳು ಹಾಕಿ ಕಲಸಿ (ಸೂಪಶಾ. ೧-೨೪). [ಸಣ್ಣ + ಹಿಟ್ಟು (< ಪಿಟ್ಟು)]

**ಸಣ್ಣಹುಡುಗ** (ನಾ). ಚಿಕ್ಕವಯಸ್ಸಿನ ಹುಡುಗ; ಬಾಲಕ: ಈ ಸಣ್ಣಹುಡುಗ ಬಹಳ ಬುದ್ಧಿವಂತ (ರೂಢಿ). [ಸಣ್ಣ + ಹುಡುಗ]

**ಸಣ್ಣಹುಡುಗಿ** (ನಾ). ಚಿಕ್ಕವಯಸ್ಸಿನ ಹುಡುಗಿ; ಬಾಲಕಿ : ಸಣ್ಣಹುಡುಗಿಯರು ಗುಂಪುಗೂಡಿ ಆಟವಾಡುತ್ತಿದ್ದಾರ (ರೂಢಿ). [ಸಣ್ಣ + ಹುಡುಗಿ]

**ಸಣ್ಣಹುಳಕ** (ನಾ). ತೇವದ ಮರಳಿನಪ್ರದೇಶದಲ್ಲಿರುವ ಒಂದು ಬಗೆಯ ಹಕ್ಕಿ : (ಕಿ). [ಸಣ್ಣ + ಹುಳಕ]

**ಸಣ್ಣಾಟ** (ನಾ). ಯಕ್ಷಗಾನದಲ್ಲಿ ಒಂದು ಪ್ರಕಾರ ; IP "ಬಯಲಾಟದಲ್ಲಿ ಸಣ್ಣಾಟಕ್ಕೆ ಒಂದು ಪ್ರತ್ಯೇಕವಾದ ಸ್ಥಾನವಿದೆ. ದೊಡ್ಡಾಟಕ್ಕೆ ಇದು ವಿರುದ್ಧವಲ್ಲದಿದ್ದರೂ ಕೆಲವು ಅಂಶಗಳಲ್ಲಿ ಭಿನ್ನತೆಯಿದೆ. ಗ್ರಾಮೀಣರು ಆರ್ಥಿಕ ಮುಗ್ಗಟ್ಟಿನಿಂದ . . . ದೊಡ್ಡಾಟವನ್ನು ಸುಲಭೀಕರಿಸಿ, ಅದರದೇ ಮೂಲಅಂಶಗಳನ್ನಿಟ್ಟುಕೊಂಡು ಸಣ್ಣಾಟವನ್ನು ಆಡಲು ಪ್ರಾರಂಭಿಸಿದರು . . . ಸಣ್ಣಾಟವನ್ನು ದಾಸರಾಟ, ಶರಣರಾಟ ಎಂದು ಕರೆಯುತ್ತಾರೆ" (ಕಜಕ. ೧೨೪) : ದೊಡ್ಡಾಟಕ್ಕೆ ಬೇಕಾಗುವಷ್ಟು ವಿಸ್ತಾರವಾದ ರಂಗಸಜ್ಜಿಕೆ ಸಣ್ಣಾಟಕ್ಕೆ ಬೇಕಾಗಿಲ್ಲ (ಕಜಕ. ೧೨೫). 'ದೊಡ್ಡಾಟ' ಪರಾ. [ಸಣ್ಣ + ಆಟ]

**ಸಣ್ಣಿ$_1$** (ನಾ). (ಮಡಿಗಾಗಿ ಉಡುವ) ರೇಷ್ಮೆವಸ್ತ್ರ ; ಮಗುಟ : ಎಣ್ಣೆ ಮಾರುವವನಿಗ ಸಣ್ಣಿ ಏಕೆ? (ಗಾದ). [<— ತುಳು. ಸಣ್ಣಿ, ಸಣಿ]

**ಸಣ್ಣಿ$_2$** (ನಾ). ಒಂದು ಬಗೆಯ ಸಸ್ಯ : ಕುಸುಂಬ, ಸಣ್ಣಿ, ಸೂರ್ಯಕಾಂತಿ, ಚಿತ್ರಮೂಲ (ನಮ್ಮನು. ೨೩೮). [?]

**ಸಣ್ಣಿಂಚರ** (ನಾ). ಇಂಪಾದ ಧ್ವನಿ : ಅಳಿನೀಜ್ಯಾಮೃದುಮಂಜಶಿಂಜಿತಸಮಂ ಸಣ್ಣಿಂಚರಂ ಬಂಚರದ್ವಳಿಯೊಳ್ತೊಡನುಣ್ಮೆ ನುಣ್ಚರದೆ ಮಿಂಚಂ ಸೀಳ್ದವೋಲ್ಪೊಣ್ಮೆ (ಲೀಲಾಪ. ೩-೬೧). [ಸಣ್ಣ + ಇಂಚರ$_1$]

**ಸಣ್ಣಿಗೆ** (ನಾ). ೧. ಅರೆದು ಪುಡಿ ಮಾಡುವ ಸಾಧನ; ಅರೆಗಲ್ಲು : ತಮ್ಮ ಮುಂನೆರಪಿದಾಯುಷ್ಯಂಬರಂ ಮಾಯಮಾಗದು ಮೆಯ್ಸಣ್ಣಿಗೆಯೊಳ್ ಮಗುಟ್ಚಿದೊಡಮೇಂ ದುಃಖಿಕ್ಕವರ್ ನೋಂತರೋ (ಆದಿಪು. ೫-೯೩); ಅಗರು . . . ಗ್ರಂಥಿಪರ್ಣಮಿವನೊಂದಿರ ಸಣ್ಣಿಗೆಯೊಳರೆದೆಯ್ದೆ ಧೂಪಿಸ ಮೃಗನಾಭಿಯಿನಧಿಕಗಂಧಕಳಭಮದಕ್ಕುಂ (ಲೋಕೋಪ. ೪೯); ಅರೆ ಸಣ್ಣಿಗೆಯೊಳ್ ಖುಷಿಘಾತುಕನಂ (ಜೀವಸಂ. ೧೫೦-೩೨ ರಗಳೆ). ೨. ಸಣ್ಣ ಪಾತ್ರೆ (?) : ಎಮ್ಮೆಹಾಲು ನಾಲ್ಕುಮಾನ ಸಣ್ಣಿಗೆಯಲ್ಲಿ ಹೊಯ್ದು ಡೋಲಾಯಂತ್ರದಲ್ಲಿ ಹಾಲು ಇಂಗುವ ಪರಿಯಂತರ ಅಟ್ಟು (ವಿಷ್ಯಪಿ. ೮೧).
[< ಸಣ್ಣ + - ಗ]

**ಸಣ್ಣಿಗೆಯೊರಲ್** (ನಾ). = ಸಣ್ಣಿಗೆ ೧. : ಚನ್ದ್ರಕಾನ್ತದ ಸಣ್ಣಿಗೆಯೊರಲ್ಗೆ ಹಿಮಾಂಶುಮಣ್ಣಳವನ್ನು ಕುಂದಣಿಗೆ ಮಾಡಿ . . . ನಿನ್ನ ಬೋಡ ಬಾಯ್ಗೆ ಮಲ್ಲಮಲ್ಲಗೆ ಊಡಿ (ಮಂತ್ರಶ. ೬೧-೧೪). [ಸಣ್ಣಿಗೆ + ಒರಲ್$_1$]

**ಸಣ್ಣಿತು, ಸಣ್ಣಿತ್ತು** (ನಾ). ಸಣ್ಣನಾದುದು ; ಚಿಕ್ಕದು : "ಸಣ್ಣಿತು ಅತಿಚೂರ್ಣ" (ಚತುನಿ. ೬. I, ೭೯); ಕುರುವಿಂದ ಸಣ್ಣಿತು ಕಾಂತಿ ದೊಡ್ಡಿತು (ಆದಿಪ. ೭೫-೧); ಮದ್ದು ಕಹಿಯಾದಷ್ಟೂ ಗುಳಿಗೆಯು ಸಣ್ಣಿತಾಗಿರಲೆಂಬುದು ರೋಗಿಯ ಹಂಬಲಹುದು (ಮಂತ್ರಶ. ೬೮-೧೮). **ಸಣ್ಣಿತ್ತು** : " ಶಿತಿಃ . . . ಶಯಿತವ್ಯಂ - ಈ ೭ ಸಣ್ಣಿತ್ತು" (ಕಾಶಕ್ಯ. ೧೮೫).
[< ಸಣ್ಣ]

**ಸಣ್ಣಿತ್ತು** 'ಸಣ್ಣಿತು' ನೋ.

**ಸಣ್ಣಿಸು** (ಕ್ರಿ). ೧. ಅರೆ; ನುರಿಯುವಂತೆ ಮಾಡು ; ನುರಿಸು : ಪಡೆಗಡ್ಡಮಿರ್ದ ಬೆಟ್ಟಬೆಟ್ಟಿದೆ ಮಟ್ಟಮಿಱುಂಬಮೆಂಬಿವಂ ಸಣ್ಣಿಸಿ ಸಾರ್ವಡೆ ನಡೆವ ದಂಡರತ್ನಂ ಪಡೆವಳ್ಳನ

ಮುಂದೆ ನಡೆಯೆ ನಡೆದಂ ಭರತಂ (ಆದಿಪು. ೧೧-೪೭ ಪಚ್ಚಿನ ಪದ್ಯ); ಹರಿಚಂದನಮಂ ಸಮಂತು ಸಣ್ಣಿಗೆಯೊಳ್ ಸಣ್ಣಿಪುದು (ಬಾಥಪು. ೬-೬೪). **೨.** ನಯಗೊಳಿಸು; ನುಣ್ಣಗೆಮಾಡು : ಕುರುಬಲಮಲ್ಲಮನರೆದು ಸ[ಪಾಠಾಂ. ಪ]ಣ್ಣಿಸಿದಂತೆ ಮಾಡಿ ತವೆ ನೆರವಿಯನನಿತಂ ಕೊಂದೊಡಮೇವಂದಪುದು (ಪಂಪಭಾ. ೧೦-೧೧೭ ವ); ಸಣ್ಣಿಗೆಯೊಳ್ ಸಣ್ಣಮಾಗರೆದು ಸಣ್ಣಿಸಿದೊಡೆ (ಸುಕುಮಾ. ೧೧-೪೭ ವ); ಹಸಿಯಕ್ಕಿಯುದ್ದು ಜೀರಿಗೆ ಮೆಣಸು ತೆಂಗಾಯ ಕುಸುರಿ ಬಿಳಿಯುಳ್ಳಿ ಸಾಸುವೆಯೆಳ್ಳುಗಳನು ಸಣ್ಣಿಸಿಯರೆದು (ಸೂಪಶಾ. ೪-೨೮). **೩.** ಬಡವಾಗು; ಕೃಶವಾಗು : ಉಣ್ಣದೊಡವೆಯ ಗಳಿಸಿ ಮಣ್ಣಿನೊಳು ತಾನಿರಿಸಿ ಸಣ್ಣಿಸಿ ನೆಲನ ಸಾರಿದನ ಬಾಯೊಳಗೆ ಮಣ್ಣು ಕಾಣಯ್ಯ (ಸರ್ವಜ್ಞ. ೬೫೭); ಎರಡು ಆಳಿನ ಬದುಕನ್ನು ಒಬ್ಬನೇ ಮಾಡಿ ಸ್ವಲ್ಪ ಮಟ್ಟಿಗೆ ಸಣ್ಣಿಸಿದ್ದಾನೆ (ಚಿಉಮು. ೪೦). **೪.** ಪುಡಿಮಾಡು; ಚೂರ್ಣಗೊಳಿಸು : ಶಿವಯಂ . . . ಶಿಲಾಜಿತುವಂ ಲೋಹವುಮಂ ಸಣ್ಣಿಸಿ ತಿನೆ ಬೇಱೆವೇಱೆ ನಿರ್ವ್ಯಾಜದಿಂ ಪ್ರಮೇಹಂ ಕಿಡುಗುಂ (ಲೋಕೋಪ. ೯-೧೩೭); ಬಿಳಿಯೆಳ್ಳು ಸಣ್ಣಿಸಿದ ತೆಂಗಾಯಿ ತನಿವಾಲುಗಳ ಬೆರಸಿಯುದಯದೊಳು ಗಱಿಗಳಕ ಮಾಡಿ ತುಪ್ಪದೊಳು ಗಾರಿಗೆಯಡುವುದು (ಸೂಪಶಾ. ೧-೨೪). **೫.** ನಾಶಮಾಡು; ಇಲ್ಲವಾಗಿಸು : ಸರೋಜದ್ಯಸಿರಿಯನೊಯ್ಯನೆ ಸಣ್ಣಿಸಿ . . . ತೀಡಿದುದು ಮೂಡಣಗಾಳಿ ಹಿಮಪ್ರವೇಶದೊಳ್ (ಉದ್ಭಟ. ೪-೨೨). **೬.** ಕ್ಷೀಣಿಸು ; ಇಲ್ಲವಾಗು : ವೃಷ್ಟಿದಿನವು ಸಣ್ಣಿಸಿದುದು (ಸಿದ್ಧೇಪು. ೨೦-೬); ಎನ್ನ ಪಂಚೇಂದ್ರಿಯ ಸಪ್ತವ್ಯಸನಂಗಳೆಲ್ಲ ಸಣ್ಣಿಸಿ ಹೋದುವಯ್ಯ (ಅಬಿಂಚೇ. ೧೦೩-೩೪). **೭.** (ಆಲಂ) ಪರೀಕ್ಷಿಸು ; ಒರೆಹಚ್ಚು : ಇಂತಹ ಕಾಲಿಕಸಂಗತಿಗಳನ್ನು ಸಾಣೆಸಿ, ಸಣ್ಣಿಸಿ ಸಾರ್ವಕಾಲಿಕವಾಗಿ ನಿಲ್ಲುವ ವಿಚಾರಗಳನ್ನಷ್ಟೇ ಸ್ವೀಕರಿಸತಕ್ಕದ್ದು (ಯಕ್ಷಪ್ರ. ೧೭೫). [ಸಣ್ಣ + - ಇಸು]

**ಸಣ್ಣೀಚಲು** (ನಾ). ಚಿಕ್ಕಜಾತಿಯ ಒಂದು ಬಗೆಯ ಈಚಲುಮರ ಮತ್ತು ಅದರ ಹಣ್ಣು : (ವೃಷಿಗಿ. ೬೦-೧೨೩೦). [ಸಣ್ಣ + ಈಚಲು₁ (< ಈಂಚಿಲ್)]

**ಸಣ್ಣೀರ** (ನಾ). ನಯವಾದುದು; ನುಣುಪಾದುದು : ಸಣ್ಣೀರಮಪ್ಪ ಸಿರಿಗಂಧಮಂ ಬೆರಸಂಬ ಹಿಮಜಲಕೆ ಸಂಪಗೆಯ ಮುಗುಳ್ಗಳಿಂ ಕೂಡೆಂಬ (ಬಸರ. ೭-೪೮). [< ಸಣ್ಣ]

**ಸಣ್ಣು, ಸಣು** (ಗು). ಕುಳ್ಳಾದ; ಗಿಡ್ಡವಾಗಿರುವ : ಸಣು ಸಣ್ಣು ಶಬ್ದೌ ಕುಬ್ಜ ವಾಮನಾವಯವವಿಶೇಷವಚನೌ (ಶಬ್ದಾನು. ೪೪೧ ವ್ಯಾಖ್ಯಾ). **ಸಣು** : ಮೇಲಿನ ಪ್ರಯೋಗವನ್ನು ನೋಡಿ. [ಸಣ್ಣ + - ಉ₄]

**ಸಣ್ಣುಕ, ಸಣುಕ** (ನಾ). ಕುಳ್ಳಾಗಿರುವವನು; ಕುಬ್ಜ : ಉಕ ಪ್ರತ್ಯಯಕ್ಕೆ-ಕಟ್ಟುಕಂ, ತಟ್ಟುಕಂ . . . ಸಣ್ಣುಕಂ, ಬೊಂದುಕಂ (ಶಮದ. ೨೦೩ ಪ್ರಯೋ); ಸಣುಕಂ, ಸಣ್ಣುಕಂ (ಶಬ್ದಾನು. ೪೪೧ ವ್ಯಾಖ್ಯಾ). **ಸಣುಕ** : ಸಣುಕಂ, ಸಣ್ಣುಕಂ (ಶಬ್ದಾನು. ೪೪೧ ವ್ಯಾಖ್ಯಾ). [ಸಣ್ಣು + - ಕ₃]

**ಸಣ್ಣೆ** (ನಾ). ಅರೆಯುವ ಸಾಧನ ; ನುರಿಸುವ ಸಾಧನ : ಎಣ್ಣೆಯೊಳ್ಕಾಸಿಯುಂ ಸಣ್ಣೆಯೊಳ್ ಸಣ್ಣಿಸಿಯುಂ ಇಂತನೇಕಪ್ರಕಾರಂಗಳಿಂ ಪೀಡಿಸಿ (ಪಸಾರ. ೧೪೯). [< ಸಣ್ಣ]

**ಸಣ್ಣೇಲಕ್ಕಿ** (ನಾ). ಚಿಕ್ಕಜಾತಿಯ ಏಲಕ್ಕಿ ; ಕಿರಿ ಏಲಕ್ಕಿ : "ಫಲಾತಿಬಹುಳ - ಸಣ್ಣೇಲಕ್ಕಿ" (ಓಷಧಿ. ೧೦೪). [ಸಣ್ಣ + ಏಲಕ್ಕಿ]

**ಸಣ್ಣೊಬ್ಬೆ** (ನಾ). (?) : ಉಮೇಶನ ಸಾಚತನದಿಂದ ಮಲ್ಲಾರಿಭಟ್ಟರಿಗೆ ಸಾಮ್ರಾಜ್ಯ ಬಿದ್ದುಹೋಗಿರದಿದ್ದರೂ ಕಾಲ್ತೊಡಕಾದಂತಾಗಿ ಸಣ್ಣೊಬ್ಬೆಯ ಮೇಲೆ ತೊಂದರೆಯಾಗ ಹತ್ತಿತು (ದಾಕೂಚ. ೩೭). [?]

**ಸತ₁** (ನಾ). ಯಾವಾಗಲೂ ಇರುವುದು ; ಶಾಶ್ವತವಾದುದು : "ಸತಮೆನೆ ಶಾಶ್ವತಕ್ಕೆ ಪೆಸರಕ್ಕು" (ಕಬ್ಬಿಕ್ಕೆ. ೫೬) ; ಭಾವಿಸೆ ಬೇಟಮೇಂ ಸತಮೆ (ಲೀಲಾವ. ೧೫-೩೯). [< ಸಂ. ಶಾಶ್ವತ. / ತಮಿ. ಚತ ; ತೆಲು. ಸತ]

**ಸತ₂** (ನಾ). ಒಂದು ಸಂಖ್ಯೆ ; ನೂರು : ಸಂವತ್ಸರಸತಂಗಳೆಣ್ಣುನೂಱಿ ಇಪ್ಪತ್ತಯ್ದನೆಯ ರುಧಿರೋತ್ಗಾರಿಯೆಂಬ ಸಂಬತ್ಸರಂ ಪ್ರವರ್ತ್ತಿಸೆ (ಮೈಆರಿ. ೧೯೨೯, ೬೬-೧; 903) ; ಸ್ವಸ್ತಿ ಸ(ಶ)ಕನೃಪ ಕಾಲಾತೀತ ಸಂವತ್ಸರಸ(ಶ)ತಂಗಳೆಣ್ಣುನೂಱಿ ಇರ್ಪತ್ತೆಣ್ಟನೆಯ ಪ್ರಭವಮೆಂಬ ವರಿಷಂ ಪ್ರವರ್ತ್ತಿಸೆ (ಎಇ. XXVI, ೬೦-೨ ; 906). 'ಸತಕ್ರತು' ಪರಾ. [< ಸಂ. ಶತ. /ಪ್ರಾ. ಸತ. / ತಮಿ. ಚತ]

**ಸತ₃** (ನಾ). ತನ್ನ ಅಧಿಕಾರಕ್ಕೆ ಸೇರಿದ ಜಾಗ, — ಸ್ಥಳ : ಬಮ್ಮದೇವಯ್ಯನ ಮಗ ಕಾಳಿದಾಸಂ ನನ್ದಾದೀವಿಗೆಗೆ ತನ್ನ ಸತದಲು ಸೋವಿಮಯ್ಯ ವಸುಗೆಲಯ್ದು ಮತ್ತರ್ಕೆಯ್ಯೊಳಗೆ (ಸೌಇಇ. IX - i, ೧೦೩-೪೬ ; 1050). [< ಸಂ. ಸ್ವತಸ್]

**ಸತ₄, ಸೊಥೆ₁** (ನಾ). **೧.** ಕಂದಿ ಹೋಗುವುದು; ನಲುಗುವುದು. **ಸೊಥೆ₁** : **೨.** ಗಾಯ ; ಪೆಟ್ಟು : ಅಲಸದಿರೊಯ್ಯನೆ ಪೊಯ್ಯುದು ತಲೆಯೊಳ್ ಸೊಥ [ಪಾಠಾಂ. ಶತೆ]ಯಂ ಏಟಿಕ್ಕಿ ನೆತ್ತರ್ ಬರಲಾ ವಿಲಚಿತ್ರನಾಗದಂತಾ ವಿಲಸದ್ಯೋಗಮನೆ ಪೂಸಲಾತಂ ಬಾಲ್ಕುಂ (ಖಮದ. ೮-೫೯). 'ಸೊಥೆವೊಯ್' ಪರಾ.

ಸತವಾಗು = ನಲುಗು ; ಕಂದಿಹೋಗು : ಸವಿ ಸಮನಾಗ ಸುತ್ತಿಬಿದ ತೋಳ್ ಸತವಾರ್ದರ್ದೆಯಿಂ [ಪಾಠಾಂ. ಸರವಾರ್ದರೆಯಂ]ಪಲಂಪನಪ್ಪುವ ಬಗ . . . ಕಾಮಸೌಖ್ಯದಿಂ ಸವೆದವೊಲಿರ್ಪುವಲ್ಲಿ ಗಗನೇಚರದಂಪತಿಗಳ್ ರತಾಂತದೊಳ್ (ಲೀಲಾವ. ೯-೪೭) ; ಸತವಾದ ದೇಸೆ ಕೆಂಪಟಿದಧರಂ ಪಟುಂಕಿದ ತನುಚ್ಛವಿ . . . ತಳಿರ ಪಾಸುಗಳೊತ್ತ ಪೊದಟ್ಟ ಬಾಸುಟಿಂದುಟುಗಿಸೆ ಚಿತ್ರಮಂ ವಿರಹ ವಲ್ಲಭನೊಳ್ ನೆರೆದಿರ್ದ ನಲ್ಲಳಂ (ಲೀಲಾವ. ೧೨-೪೮). [< ಸಂ. ಕ್ಷತ. /ತಮಿ. ಚತ್ = ಜಜ್ಜುಗಾಯಮಾಡು; ಮಲ. ಚತ, ಚತಯು = ಗಾಯಮಾಡು]

**ಸತಕ್ರತು** (ನಾ). ನೂರುಯಾಗ, — ಯಜ್ಞ : ಇನ್ತೀ ಧರ್ಮ್ಮಮಂ ತಪ್ಪದೆ ಪ್ರತಿಪಾಳಿಸಿದವರ್ಗ್ಗೆ ಕುರುಕ್ಷೇತ್ರದೊಳ್ಸತಕ್ರತುವಂ ಮಾಡಿದ ಫಲವಕ್ಕುಂ (ಕಇಆ. ೪೭-೬-೧೮; 1151). [< ಸಂ. ಶತಕ್ರತು]

**ಸತತ** (ಗು). **೧.** ನಿರಂತರವಾದ ; ಅಡೆತಡೆಯಿಲ್ಲದ : ಸತತಗಣನಾಥ ಸಿದ್ಧಿಯನೀವ ಕಾರ್ಯದಲಿ ಮತಿ ಪ್ರೇರಿಸುವಳು ಪಾರ್ವತಿದೇವಿಯು (ಪುರಂದ. ೧-೪-೧). (ನಾ). **೨.** ಸ್ಥಿರವಾದುದು : "ಸತತ[ಪಾಠಾಂ. ಸತ]ಮೆಂದು ಸ್ಥಿರಂ" (ಕಶಸಾ. ೨೪-೩೧೦). [ಸಂ.]

**ಸತತಂ** (ಅ). ಯಾವಾಗಲೂ ; ನಿರಂತರವಾಗಿ : ಸತತಂ ಛಂದೋವಿದಿತ ಪ್ರತೀತಶಾಸ್ತ್ರೋಕ್ತಮಾರ್ಗದಿಂದಱಿವುದದಂ (ಕವಿರಾ. ೧-೭೧) ; ನುತಶಬ್ದಾಲಂಕಾರದೊಳತಿಶಯಮದು ಕನ್ನಡಕ್ಕೆ ಸತತಂ ಪ್ರಾಸಂ (ಛಂದೋಂಬು. ೧-೪೬ ಅಧಿಕಪದ್ಯ ೫). [ಸಂ.]

**ಸತತಕ** (ನಾ). ಒಂದು ಬಗೆಯ ಜ್ವರ ; ಏಳು, ಹತ್ತು ಅಥವಾ ಹನ್ನೆರಡು ದಿನಗಳ ಮಿತಿಯಲ್ಲಿ ಬರುವ ಜ್ವರ : ಏಳುದಿನ, ಹತ್ತುದಿನ, ಹನ್ನೆರಡುದಿನ ಒಂದೇ ಮಿತಿಯಾಗಿ ಬಂದು ಜ್ವರ ಕಾಣಿಸಿ, ತಿರುಗಿ ಏಳುದಿನ, ಹನ್ನೆರಡುದಿನಕ್ಕೊಮ್ಮೆ ತಪ್ಪದೇ ಬರುವ ಜ್ವರವನ್ನೇ ಸತತಕವೆಂದೂ . . . ಹೇಳಲ್ಪಟ್ಟಿದೆ (ಸಕಪ್ಪ. ೯೮). [ಸಂ.]

**ಸತತಗತಿ** (ನಾ). ಯಾವಾಗಲೂ ಚಲನೆಯುಳ್ಳದು ; ಗಾಳಿ ; ವಾಯು : ಸಿಂಧುವನವೇದಿಕೆಯಂ ಸತತಗತಿವೇಗದಿಂದೂರ್ಜಿತಭುಜಬಲನೆಯ್ದಿ ನಗದ ವನವೇದಿಕೆಯಂ (ಆದಿಪು. ೧೩-೩೫). [ಸಂ.]

**ಸತತಗತಿತನೂಜ** (ನಾ). ವಾಯುವಿನ ಮಗ ; ಹನುಮಂತ : ಯತಿಪತಿಗಳ ಪಾದಾಂಭೋಜಮಂ ಭಕ್ತಿಯಿಂದಂ ಸತತಗತಿತನೂಜಂ ಪೂಜಿಸುತ್ತಿರ್ದಂ (ಪಂರಾಮಾ. ೧೧-೬೦). [ಸಂ.]

**ಸತನು** (ನಾ). ಶರೀರದಿಂದ ಕೂಡಿರುವವನು ; ಶರೀರಸಹಿತನಾದವನು : ಆತನು ಸತನುವಾದಂ ಕಾಮುಸಾಮ್ರಾಜ್ಯಲಕ್ಷ್ಮೀಲತೆಯ ಲಲಿತಲಾಸ್ಯಪ್ರೌಢಿ ಚೆಲ್ವಾದುದೀಗಳ್ (ಮಲ್ಲಿಪು. ೭-೪೭). [ಸಂ.]

**ಸತರಂಜಿ** (ನಾ). (?) : ಅಲ್ಲಲ್ಲಿ ಬೀಡನು ಬಿಡುತ ಕಪ್ಪಗಳನುಲ್ಲಸದಿ ತಾ ಕೊಳುತ ಮನ್ನಣೆಯಲ್ಲಿ ಮನ್ನಿಸುತ್ಯೆದಿ ಕಟಕವ ನಿಲ್ಲಿಸದ ಸತರಂಜ ಘನತರ ಹೊಳೆಯು ತಡಿಯಲ್ಲಿ (ನಾಗಪ. ೧೫-೩೮); ಸಿಂಧುಭೂಪತಿ ಸತರಂಜಿಯೊಳೆಯೊತ್ತಿಗ್ಯದಿದ ಚತುರಂಗಬಲಸಹಿತ ಸೇನಾಪತಿಯ ನೀ ಕಳುಹು (ನಾಗಪ. ೧೫-೪೦). [?]

**ಸತಾಯಿಸು, ಸತಾಯ್ಸು** (ಕ್ರಿ). ಹಿಂಸಿಸು ; ಪೀಡಿಸು : ಅವಳನ್ನು ಚೆನ್ನಾಗಿ ಸತಾಯಿಸಿ ಅವಳಿಂದ ಕೆಲಸ ತೆಗೆಯಿಸಿಕೊಂಡು ಬಿಡುತ್ತೇನೆ (ಸುಂದರಿ. ೨೦) ; ಸತಾಯಿಸಿದವನನ್ನೇ ಮತ್ತೆ ಸತಾಯಿಸುವುದು ವಿಧಿ (ಹೂಸಕ್ಕಿ. ೨೭). **ಸತಾಯ್ಸು** : ನೀವೂ ಸತಾಯ್ಸಿ ಸತಾಯ್ಸಿ ಅವರ್ನೂ ಎದರ್ಸ್ಕೊಂಡ್ರಿ (ರಂಚಿರ. ೨).
[ಸತ್ವಾ₀ ( IP <— ಹಿಂ. ಸತಾನಾ, ಸತಾವನಾ; ಮರಾ. ಸತಾವಣೇ) + - ಇಸು₃./ ತೆಲು. ಸತಾಯಿಂಚು]

**ಸತಾಯ್ಸು** 'ಸತಾಯಿಸು' ನೋ.

**ಸತಿ** (ನಾ). ೧. ಹೆಂಗಸು ; ಸ್ತ್ರೀ : ಸತಿಗೆ ಪಾತಿವ್ರತ್ಯವೇ ಭೂಷಣಂ (ಸೋಮೇಶ. ೫); ತಾಯಿ ಜಗದಾಂಬೆಯು . . . ಸತಿಗಳಿಗೆ ಸತೀತ್ವಸ್ವರೂಪವಾಗಿರುವಳು ; ಸತಿಯರಲ್ಲಿ ಪ್ರಧಾನೆ (ಕಪಾಕುಂ, ೩೨). ೨. ಪತಿವ್ರತೆ ; ಸಾಧ್ವಿ : "ಕುಲಪಾಲಿಕಾ . . . , ಸತೀ, ಸಾಧ್ವೀ – ಈ ೬ ಪತಿವ್ರತೆ" (ಹಲಾಯು. ೮೧-೩೪೧) ; ಸತಿಯರೀ ಕೃತಿಯನಾಲಿಸಿದೊಡಂದಂದಿಗೆ ಪತಿಭಕ್ತಿ ಬಣ್ಣವೇಱುವುದು (ಹದಿಬ. ೧-೫೨). ೩. ಹೆಂಡತಿ; ಪತ್ನಿ: ಹಸಿದು ಬಂದ ಗಂಡನಿಗೆ ಉಣಲಿಕ್ಕದೆ ಬಡಪಾದನೆಂದು ಮಱುಗುವ ಸತಿಯ ಸ್ನೇಹದಂತೆ (ಬಸವ. ೨೧೮); ಮೆಚ್ಚಿತಯ್ ನಿನ್ನೀ ವ್ರತಕೆ ಋತಂ. ಪಸುಗೆ ನೀಡಂಶಂಗಳಂ ಸತಿಯರ್ಗೆ (ಶ್ರೀರಾಮಾ. ೧೪-೩೫೯). ೪. ಗಂಡ ಸತ್ತಾಗ ಅವನ ಶವದೊಡನೆ ಸಹಗಮನ ಮಾಡುವವಳು. ೫. ಸೂಳೆ ; ವೇಶ್ಯೆ : ಚೆಂದುಟಿಗೆ ಪಲ್ಮೊನೆ ನಾಂಟದ ಮಾಳ್ಕೆಯಿಂದ ಮೆಲ್ಲಗೆ ಮಿಗೆ ಚುಂಬಿಸೆಂದು ಸತಿ ಶಿಕ್ಷಿಸಿದಳ್ಪೊಸಪಾಣ್ಬನೊರ್ವನಂ (ರಾಜಶೇ. ೧೧-೩೧).

**ಸತಿಪತಿಭಾವ** = ಗಂಡ ಹೆಂಡತಿಯರಾಗಿರುವಿಕೆ : ಹೀಗೆ ಸಾಧಕನು ದ್ವೈತಮಾರ್ಗದಲ್ಲಿ ಸಾಧನೆಯನ್ನು ಆರಂಭಿಸಿ, ಅದರಿಂದ ಮುಂದೆ ವಿಶಿಷ್ಟಾದ್ವೈತಮಾರ್ಗದ ಸತಿಪತಿಭಾವದಲಿ ಪ್ರಸರಿಸುವನು (ಶಕ್ತಿವಿ. ೧೦೧). **ಸತಿಯಾಗು** = ೧. ಹೆಂಡತಿಯಾಗು; ಪತ್ನಿಯಾಗು : ಸುರರಾಯನಿಗೆ ಸತಿಯಾಗು ಮರ್ತ್ಯದ ರಾಯರಸ್ಥಿರ ನರರ ನೆಚ್ಚದಿರಂದರಾ ಸತಿಗೆ (ನಳಚ. ३-೩೦). ೨. ಗಂಡ ಸತ್ತಾಗ ಅವನ ಶವದೊಂದಿಗೆ ಸಹಗಮನಮಾಡು : ನಾನಂತೂ ಸತಿಯಾಗುವುದು ಖಂಡಿತ . . . ಎಂದು ಅತ್ತೆಮಚ್ಚೆ ಪಟ್ಟುಹಿಡಿದಳು (ದಾನಚಿಂ. ೧೫೭). **ಸತಿಹೋಗು** = ಸತಿಯಾಗು ೨: ಗಂಡನೊಡನೆ ಅವರ ಹೆಂಡಂದಿರು ಸತಿಹೋಗುವ ರೂಢಿ ಇದ್ದವು (ಕರ್ನಾಸಂ. ೨೨೬).

[ಸಂ. ಸತೀ]

**ಸತಿಆಯ** (ನಾ). ಒಂದು ಬಗೆಯ ಆದಾಯ (?) : ಕರ್ತರಾದ ಪ್ರಸನ್ನಪೊಡೇರು ತಳವಾರಕೆ ಹಳಿನಾಯಕಿ ಕೊಟ ಸತಿಆಯ ಉಮ್ಮಳಿಹೊಲ (ಎಕ. XI. ದಾವಣ. ೬೨-೧೬ ; 1692 ?). [ಸತಿ$_1$ + ಆಯ$_1$]

**ಸತಿಗೂಡು** (ಕ್ರಿ). ಹೆಂಡತಿಯೊಂದಿಗೆ ಇರು; ಪತ್ನೀಸಹಿತನಾಗಿರು : ತೇಜಮನ್ನಣೆಯಿಂದ ಸತಿಗೂಡಿ ಕುಳಿತ ಸರೋಜಾಕ್ಷ ಮಣಿಮಂಚದೆಡೆಯ (ಮೋಹತ. ೪-೨೯); ಸತಿಗೂಡಿ ಈಸುದಿನ ಸಸ್ನುತದಿಂದೀ ವೃಕ್ಷದಲ್ಲಿ ಸುಖಮಿದರ್ು (ನನ್ನಚಾ. ೬-೨೧೫). [ಸತಿ + ಕೂಡು$_1$]

**ಸತಿಗೆ** 'ಸತ್ತಿಗ' ನೋ.

**ಸತಿತನ** (ನಾ). ಹದಿಬದೆತನ; ಪಾತಿವ್ರತ್ಯ : ದಶಶಿರಂ ಪೊತ್ತುಯ್ದುದೊರ್ಬನ ಸತಿಯನಲ್ತು ; ಸತಿತನವನುಯ್ದಿಹನ್! (ಶ್ರೀರಾಮಾ. ೫೫೧-೨೪೪). [ಸತಿ + -ತನ]

**ಸತಿಸಪ್ತಮಿ** (ನಾ). [ವ್ಯಾಕ] ಸಂಸ್ಕೃತದಲ್ಲಿ ಭಿನ್ನಕರ್ತೃಕಗಳಾದ ಎರಡು ಕ್ರಿಯೆಗಳು ಒಂದನ್ನೊಂದು ಅವಲಂಬಿಸಿ ನಡೆಯುವಾಗ ಮೊದಲನೆಯ ಕರ್ತೃಪದವನ್ನು, ಕ್ರಿಯಾವಾಚಕವಾದ ಕೃದಂತವನ್ನು ಸಪ್ತಮೀ ವಿಭಕ್ತಿಯಲ್ಲಿಟ್ಟು ಮಾಡುವ ಪ್ರಯೋಗ ; ☞ ಕನ್ನಡದಲ್ಲಿ ಈ ಬಗೆಯ ಪ್ರಯೋಗವಿಲ್ಲ. ಎರಡು ಕರ್ತೃ, ಎರಡು ಕ್ರಿಯೆಗಳಿರುವ ಸದೃಶವಾಕ್ಯರಚನೆಯನ್ನು ಸಾಂಪ್ರದಾಯಿಕವಾಗಿ ಹೀಗೆ ಕರೆಯುವುದು ರೂಢಿಯಿದೆ : ನೆಗಱ್ದಂ ಸಂಪ್ರತಿಗಂ ಭಾವಿಗಮಂನೆಗಮಂನಮಿನೆಗಮಿನಮಂಬಿವು ಸೂರಿಗಳಿಂದುದುಮಲೊಡಂಗಳ್ ನೆಗಱ್ದಂ ಭೂತಾರ್ಥದಲ್ಲಿ ಸತಿಸಪ್ತಮಿಯೊಳ್ (ಶಮದ. ೨೪೭). [ಸಂ. ಸತಿಸಪ್ತಮೀ]

**ಸತೀತಸ್ಕರ** (ನಾ). ಪತಿವ್ರತೆಯನ್ನು ಅಪಹರಿಸಿದವನು : ಪೊಕ್ಕನಣುವಂ ಸತೀತಸ್ಕರನ ಲೋಕಮಂ . . . ಧರ್ಮಕಾರ್ಮುಕಮೆಚ್ಚ ಮಾರ್ಗಣದ ಪೋಲ್ (ಶ್ರೀರಾಮಾ. ೪೬೫-೨೨೮). [ಸಂ.]

**ಸತೀತ್ವ** (ನಾ). = ಸತಿತನ : ಆವಳ ಸತೀತ್ವವು ತನ್ನ ಸ್ವಾಮಿಗೆ ಮಾತ್ರ (ಸುಗುಣ. ೯೧-೩); ತಾಯಿ ಜಗದಾಂಬೆಯು ಜಗತ್ತಿಗೆ ಮಾತೆ, ಅವಳು ಸತಿಗಳಿಗೆ ಸತೀತ್ವಸ್ವರೂಪವಾಗಿರುವಳು ; ಸತಿಯರಲ್ಲಿ ಪ್ರಧಾನೆ (ಕಪಾಕುಂ. ೩೨). [ಸಂ.]

**ಸತೀದೇವಿ** (ನಾ). ದಾಕ್ಷಾಯಣಿ ; ಪಾರ್ವತಿಯ (ಪೂರ್ವಜನ್ಮದ) ಹೆಸರು: "ದಾಕ್ಷಾಯಣೀ – ಸತೀದೇವಿ" (ಕಾಶಕ್ಯ. ೧೧೭); ಜಗದೀಶ್ವರನ ರಾಣಿಯಾದ ಸತೀದೇವಿಯಿ ಾ ವೃತ್ತಾಂತಮನಱಿದು ದಕ್ಷನ ದುರ್ಬುದ್ಧಿಯಂ ನಿಲಿಸಿ ಬರ್ಪೆನೆಂದೀಶ್ವರಂಗೆ ಬಿನ್ನವಿಸಲ್ (ವೀರವಿ. ೭-೭೮ ವ). [ಸಂ. ಸತೀದೇವೀ]

**ಸತೀಧರ್ಮ** (ನಾ). ಪತಿವ್ರತೆಯ ಧರ್ಮ, – ಕರ್ತವ್ಯ : ಸತೀಧರ್ಮ ವಿಷಯಕವಾದ ಹೊನ್ನಮ್ಮನ ವಿಚಾರಗಳೆಲ್ಲ ಸಾಂಪ್ರದಾಯಿಕವಾಗಿಯೇ ಇವೆ! (ಕರ್ನಾಕ. ೧೯೪). [ಸಂ.]

**ಸತೀನ** (ನಾ). ಒಂದು ಬಗೆಯ ದ್ವಿದಳಧಾನ್ಯ ; ಬಟ್ಟೆಗಡಲೆ : "ಬಟಾಣಿಗಡಲೆ, ಸತೀನ, ಪಟಾಣಿ" (ಸಸ್ಯನಿ. ೧೦೭). [ಸಂ.]

**ಸತೀನಕ** (ನಾ). = ಸತೀನ : "ಕಲಾಯಃ, ಸತೀನ[ಪಾಠಾಂ. ಲ]ಕಃ, ಹರೇಣುಃ, ಖಂಡಿಕಃ – ೪ ಬಟ್ಟೆಗಡಲೆಯ ಹೆಸರುಗಳು, ನೆಲಕಡಲೆ" (ಸಿದ್ಧಾಂತಿ. ೨೭೮). [ಸಂ.]

**ಸತೀರ್ಥ** (ನಾ). ಒಬ್ಬ ಗುರುವಿನ ಬಳಿಯಲ್ಲಿಯೇ (ಧಾರ್ಮಿಕ) ವಿದ್ಯೆಯನ್ನು ಕಲಿತವನು ; ಸಹಾಧ್ಯಾಯಿ : ಇದೆಲ್ಲವನ್ನು ಕಂಡು ಅವನ ಸತೀರ್ಥರು ಆಶ್ಚರ್ಯಪಡುವರು (ಭೀಷ್ಮಚ. ೫೭). [ಸಂ.]

**ಸತೀರ್ಥ್ಯ** (ನಾ). = ಸತೀರ್ಥ : ಅವರ ಪರೋಕ್ಷದಲ್ಲಿ ಅವರ ಹೆಸರನ್ನು ಎತ್ತಿಹಿಡಿಯಲು, ಮೈಸೂರಿನ ನಮ್ಮ ಸತೀರ್ಥ್ಯವೃಂದಕ್ಕೆ ಚೈತನ್ಯ ಸಾಲದೆ ಹೋಯಿತು (ನಂಟರು. ೭೭). [ಸಂ.]

**ಸತೀಲ** (ನಾ). = ಸತೀನ. [ಸಂ.]

**ಸತೀಲಕ** (ನಾ). = ಸತೀನ. [ಸಂ.]

**ಸತು$_1$**, ಸತುವು$_1$, ಸತ್ತು$_2$, ಸತ್ವ$_1$ (ನಾ). ಗಟ್ಟಿಯಾಗಿರುವ ಒಂದು ಬಗೆಯ ಲೋಹ : ಸತುವನ್ನು ಕಾಸಿದಾಗ ಬರುವ ಬಿಳಿಯ ಹೊಗೆ, ಹವೆಯಲ್ಲಿ ಇದನ್ನು (ಸತುವನ್ನು) ಕಾಸಿದರೆ, ಇದಕ್ಕೆ ಬೆಂಕಿ ಹತ್ತಿ ಬಿಳಿಜ್ವಾಲೆಯುಂಟಾಗುವುದು. ಆಗ ಬಿಳಿಹೊಗೆ (ಸತುವಿನ ಆಮ್ಲಜವಿಕಾರ) ಹೊರಡುವದು. ಅದರಿಂದುಂಟಾದ ಪದಾರ್ಥಕ್ಕೆ (ಖರ್ಪರಪುಷ್ಪ) ಸತುವಿನ ಹೂವೆಂದನ್ನುವರು (ಮುಂಬಯಿ. ೬-೨೧). **ಸತುವು$_1$** : ತಾಮ್ರದೊಡನೆ ಸತುವು ಕೂಡಿಸಿ ಹಿತ್ತಾಳೆಯೆಂಬ ಆರಿಸಿನಬಣ್ಣದ ಮಿಶ್ರಧಾತುವನ್ನು ಮಾಡುತ್ತಾರೆ (ಮುಂಬಯಿ. ೪-೧೩೭); ಭಾರತದೇಶಕ್ಕೆ ಆಮದಾಗುತ್ತಿದ್ದ ಮುಖ್ಯಪದಾರ್ಥಗಳೆಂದರೆ ಹವಳ . . . ಸತುವು, ಕಲಶಪಾತ್ರೆ ಮತ್ತು ಮದ್ಯ (ದಭಾ. ೩೧). **ಸತ್ತು$_2$** : ತಾಮ್ರ, ಸತ್ತು, ಪಾದರಸ ಪಶ್ಚಿಮಕಡೆ ಪರ್ವತಗಳಲ್ಲಿಯೂ . . . ದೊರೆಯುತ್ತದೆ (ಭೂಗೋಳ. ೧೧೮); ಇಮಾರತಿಗೆ ಹಾಕುವ ಸತ್ತುವಿನ ತಗಡುಗಳು (ಮುಂಬವ್ಯಾ. ೧೧). **ಸತ್ವ$_1$** : ಸತ್ವ ಕರಗಿಸಿ ಮುತ್ತುಗದ ಮೇಣ ಹಾಕಿ ಬೆರಸಿ ಬೆಣ್ಣೆ ಹಾಕಲು ಭಸ್ಮವಾಗುವುದು (ವಿಷ್ವವಿ. ೫೫) ; ಹಿತ್ತಾಳೆ, ಸತ್ವ, ತವರು, ಸೀಸ ಮತ್ತು ಕಂಚು (ಮುಂಬವ್ಯಾ. ೩೬ ಪ್ರಸ್ತಾವನ) 'ಸತ್ವಭಸ್ಮ' ಪರಾ.

[ದೇ. ‖ ತಮಿ. ಚತ್ತು ; ತೆಲು. ಸತ್ತು]

**ಸತು$_2$**, ಸತುವು$_2$ (ನಾ). ಕಸುವು ; ಬಲ; ಶಕ್ತಿ : ತಗರ ಹಿಂಗಾಲ ಸತು ಲೇಸು ದೊರೆಗಳಿಗೆ ಬಿಗಿಬಂದು ಲೇಸು (ಸರ್ವಜ್ಞ. ೬೨೨). **ಸತುವು$_2$** : ಇಸು ಪ್ರತ್ಯಯವನ್ನು ಸೇರಿಸಿ ಕನ್ನಡ ಕ್ರಿಯಾಪದವನ್ನು ಸಂಘಟಿಸಿಕೊಳ್ಳುವುದಾದರೆ ಭಾಷೆಗೆ ಬಿಗುವೂ ಸತುವೂ ಒದಗುತ್ತದೆಂದು ತೋರುತ್ತದೆ (ಸುವರ್ಣ. ೨೫೩).

[< ಸಂ. ಸತ್ತ್ವ. / ತುಳು. ಸತು, ಸತುವ ; ತೆಲು. ಸತ್ತುವ]

**ಸತುಕರಿಸು** (ಕ್ರಿ). ಉಪಚರಿಸು ; ಆದರಿಸು : ಜಂಗಮ ಹಸಿದು ಬಿಜಯಂಗೈದೊಡಿತ್ತಣ ದೆಸೆಯ ನೋಡುವುದಿಲ್ಲ ಸತುಕರಿಸುವುದು ಮುನ್ನಿಲ್ಲ (ಪ್ರಭುಲೀ. ೨೫-೯) ; ಕ್ಷಿತಿಪನಾ ದೂರ್ವಾಸಮುನಿಯನು ಸತುಕರಿಸಿ ಸಂತವಿಸಿ ಕಳುಹಿದನು (ನಿಭಾಗ. ೫೯-೫ ಸೂಚನೆ).

[< ಸತ್ಕರಿಸು]

**ಸತುಗುಂದು** (ಕ್ರಿ). ಶಕ್ತಿಹೀನವಾಗು ; ಬಲಗುಂದು ; ಸತ್ತ್ವಗುಂದು : ಪೊಡವಿ ನೆಱೆಯದಾ ಪಡೆಗೆ ಫಣೀಶನ ಪೆಡೆ ಸತುಗುಂದಿತು (ಜಯಿಕಾ. ೯-೫) ; ಲಾಲಿಪ ಪದ್ಮಕೈರವನಾಳ ಸತುಗುಂದಿ ಮಾಲಿದುವೆಸಳ್ಗಳು ಬಾಡಿ (ಮೋಪತ. ೯-೪೩).

[ಸತು$_2$ + ಕುಂದು$_1$]

**ಸತುಗೆಡು** (ಕ್ರಿ). = ಸತುಗುಂದು : ಅತುಳಬಲಾಢ್ಯ ಕೃಷ್ಣನ ಕೂಡೆ ಕಂದರ್ಪಜಿತು ದೇವ ಬಲಗೂಡಿ ಕಾದಿ ಸತುಗೆಟ್ಟು ತೆಱದಿ ಕೌಳಿಕವಾಂತು ತನ್ನಯ ಋತುಪೂರ್ಣವನವ ಸಾಱಿದನು (ಮೋಹತ. ೪೦-೩). [ಸತ್ತು$_2$ + ಕೆಡು$_1$]

**ಸತುವು$_1$** 'ಸತ್ತು$_1$' ನೋ.

**ಸತುವು$_2$** 'ಸತ್ತು$_2$' ನೋ.

**ಸತೃಣಾಭ್ಯವಹಾರಿ** (ನಾ). ೧. ಹುಲ್ಲು ತಿನ್ನುವವನು. ೨. (ಆಲಂ) ಪಶು ಸಮಾನನಾದವನು : ಬಗೆಯದೆ ಸತೃಣಾಭ್ಯವಹಾರಿಗಳುಸಿರ್ವರ್ಗದ್ಯಕಾವ್ಯದೊಳ್ ನಿರ್ಬಂಧಂ ಪುಗದೆಂದರರೋಚಿಗಳದಂ ತೆಗಟೆಂದಾ ಗದ್ಯಪದ್ಯಕಾವ್ಯದೊಳಕ್ಕರ್ (ಶಮದ. ೬೦). [ಸಂ. ಸತೃಣಾಭ್ಯವಹಾರಿನ್]

**ಸತೃಷ್ಣ** (ಗು). ದಾಹದಿಂದ ಕೂಡಿದ ; ತೃಷ್ಣೆಯಿಂದಿರುವ : ಆದರೆ ಮುದುಕನ ಸತೃಷ್ಣದೃಷ್ಟಿಯಿಂದ ಅದು ತಪ್ಪಿಸಿಕೊಳ್ಳಲಿಲ್ಲ (ಅರಗಿ. ೬೯). [ಸಂ.]

**ಸತೇಜ** (ಗು). ೧. ಕಾಂತಿಯಿಂದ ಕೂಡಿದ. (ನಾ). ೨. ಕಾಂತಿಯಿಂದ ಕೂಡಿದುದು : ದಯಾವತಿಯ ಕಣ್ಣುಗಳು ಸತೇಜವಾದುವು (ಜಮಿಸ್ವಾ. ೧೫೮). ೩. ಕಾಂತಿಯಿಂದ ಕೂಡಿರುವವನು; ತೇಜಸ್ವಿ: ಉದಯದಿನನಂದದಲಿ ನೃಪರಿರ್ದುದು ಸತೇಜವ್ರಜರು ಗೋವರ ಸದೆಗನಿಲ್ಲಿಗೆ ಶಿಷ್ಟನೇ ಸಹದೇವ ಹೇಳೆಂದ (ಕುವ್ಯಾಸ. ೮-೧೫). [ಸಂ. ಸತೇಜಸ್]

**ಸತ್ಕರಣೆ** (ನಾ). ಉಪಚಾರ ; ಆದರಣೆ : ಮಿಗೆ ಸತ್ಕರಣೆಯಿಂದುಪಚರಿಸುತಿರ್ದನು ತನ್ನ ಭವನದಲಿ (ಆನಂರಾ. ೧-೯-೨೨). [ಸಂ. ಸತ್ಕರಣಾ]

**ಸತ್ಕರಿಸು** (ಕ್ರಿ). ೧. ಉಪಚರಿಸು ; ಸತ್ಕಾರ ಮಾಡು : ಅರಸನು . . . ಸತ್ಕರಿಸಿದನು ಪುರಜನವ (ತೊರರಾ. ೧-೭-೬೦) ; ಚಿತ್ರಹರುಷದೊಳವರ್ ನಡೆತರಲ್ಕಾಗ ಕಾಣುತ್ತೆ ಗಿರಿರಾಜನರ್ಘ್ಯಾಸನಾದಿಗಳನೊಲ್ದಿತ್ತು ವಿವಿಧೋಪಚಾರಗಳಿಂ ಸತ್ಕರಿಸೆ (ಚಬಪು. ೩೭-೨೦). ೨. ಶುಶ್ರೂಷೆಮಾಡು ; ಆರೈಕೆಮಾಡು : ತಣ್ಣದಿರ್ಗಲ್ ಕನ್ನೆಯ್ದಿಲ ನವನಾಳಂ ಕುಳಿರ್ವಣ್ಪಿನ ಬಾವನ್ನದಿನಾಳಿಯರೆಳಸಿ ಕರಂ ಸತ್ಕರಿಸಲು ತತ್ಕೋಮಲೆಯ ವಿರಹವೇದನೆಯಾಜ್ಯಂಬೊಯ್ದಗ್ನಿಯ ತೆಱನಾಯ್ತು (ಜಯಕಾ. ೪-೪೦). ೩. ಗೌರವಿಸು; ಪೂಜ್ಯತೆಯಿಂದ ಕಾಣು : ಕೌರವೇಂದ್ರನ ಬರವಿದೇನೆಂದಿದಿರು ಬಂದನು ದ್ರೋಣನಿದಿರಾಗಿ ಧರಣಿಪನ ಸತ್ಕರಿಸಿ ನೆಲೆಯುಪ್ಪರಿಗೆಗೊಯ್ದನು (ಕುವ್ಯಾದ್ರೋ. ೮-೫೭); ಪಾವಕಂ . . . ನೀಲಧ್ವಜನ ಚಾವಡಿಗೆ ಬರಲಾತನಿದಿರೆದ್ದು ಸತ್ಕರಿಸಿ ಕೈಮುಗಿದು (ಜೈಮಿಭಾ. ೯-೭). [ಸತ್ಕರಣೆ + - ಇಸು$_1$]

**ಸತ್ಕರ್ಮ** (ನಾ). ಒಳ್ಳೆಯ ಕೆಲಸ ; ಸತ್ಕಾರ್ಯ : ನಿರತಸತ್ಕರ್ಮವು ನಿಜಕಾಂತಿಯು (ಪುರಂದ. ೧-೩೪-೨) ; ಮಾಡಿ ಸತ್ಕರ್ಮಗಳ ಕ್ರಮದಿಂ ರೂಢಿಯೊಳಗಾಚರಿಸುತಲ್ಲಿಂ ಬೇಡಿ ಗುರುಕರುಣವ (ಗಗತಾ. ೨೧-೩). [ಸಂ. ಸತ್ಕರ್ಮನ್]

**ಸತ್ಕರ್ಮಿ** (ನಾ). ಒಳ್ಳೆಯ ಕೆಲಸವನ್ನು ಮಾಡುವವನು ; ಸತ್ಕಾರ್ಯವನ್ನು ಮಾಡುವವನು : ಸಂಸರದಿ ಮುಳುಗಿಯೆ ಮಿಸುಗುತಿಹ ರವಿಯಂತೆ ನಿರ್ಲೇಪದಲಿ ಸತ್ಕರ್ಮಿ (ಜ್ಞಾಸಿಂ. ೨೨-೫೩). [ಸಂ. ಸತ್ಕರ್ಮಿನ್]

**ಸತ್ಕವಿ** (ನಾ). ೧. ಒಳ್ಳೆಯ ಕವಿ; ಉತ್ತಮಕವಿ: ಕವಿತಾರಹಸ್ಯಮಂ ಸತ್ಕವಿಯಱಿಗುಂ (ಆದಿಪು. ೧-೨೦) ; ಸತ್ಕವಿ ಕಮಳಭವನ ಭಾಸ್ವತ್ಕವಿತಾಕಾಮಧೇನು ತಾನಖಿಳಬುಧೋದ್ಯತ್ಕಾಮಿತಾರ್ಥಭಾವರಸೋತ್ಕರಮಂ ಕಱೆವುದಲ್ತೆ ಕಾವ್ಯಸ್ಥಳಿಯೊಳ್ (ಶಾಂತೀಶ್ವ. ೧-೫೮). ೨. ಉತ್ತಮಜಾತಿಯ ನೀರುಹಕ್ಕಿ : ಮರುತಪಥಮೆಂಬಿನಿಂ ಸತ್ಕವಿವಿತಾನದಿಂ . . . ಧರೆಯ ಮಂಡಲದಂತೆ ಕುವಲಯಾನ್ವಿತದಿಂದ ಸರಸಿ ಶೋಭಿಸುತಿರ್ದುದು (ನವಮೋ. ೮-೩೩). [ಸಂ.]

**ಸತ್ಕವಿತ್ವ** (ನಾ). ಉತ್ತಮವಾದ ಕವಿತ್ವ : ಚದುರ ಮಯ್ಮೆಯ ಸತ್ಕವಿತ್ವದ ಸನ್ನ ಪಂಪನ ತಮ್ಮನೋ[ರ್ವ್ವದೆ] ಪೂಗಟ್ಟೆಯ ಬಾಜಿಸಲ್ಪರೆಯಲ್ಕವಿತ್ವದ ತತ್ವದೊಳ್ಪುದಿದು ನೇರ್ವ್ವಡೆ ಪೇಟಿಲುರ್ವ್ವಿಗಪೂರ್ವ್ವಮಾಗಿರೆ ಬಲ್ಲೊನಪ್ಪುದಱಿನೊರ್ವ್ವನೆ ವಾಗ್ವಧೂ ವರವಲ್ಲಭಂ ಜಿನವಲ್ಲಭಂ (ಶಾಸಸಂ. ೯-೭ : ಸು. 950) ; ಸತ್ಕವಿತ್ವ ಸುರತ್ನಮಲ್ಲದ ಚಿತ್ಕಳೆಯ ಕುಂದಣದಿ ಕೆತ್ತಲು ಸತ್ಕೀರ್ತಿ ಸಂಹಿತೆಗೆ ಬಾರದೆ ಕುಂದ ಬೀರುವುದೆ (ನಾಗಪ. ೧-೫೩). [ಸಂ.]

**ಸತ್ಕಾರ** (ನಾ). ೧. ಉಪಚಾರ ; ಆದರಪೂರ್ವಕವಾದ ವ್ಯವಹಾರ,—ವರ್ತನೆ : ಹರಭಕ್ತರಿಗೆ ಸತ್ಕಾರಮೆಸಗುತೆ ಹರುಷದೊಳಿಹನು ಸಪ್ಪೇಂದ್ರ (ಇಚಿಸಾಂ. ೧೭-೮೭). ೨. ಗೌರವ ; ಮನ್ನಣೆ : ಸತ್ಕಾರಚಿತ್ತ ನಿಷ್ಕರ್ಮಿಗಳು ಪುಟ್ಟಲ ವರಂ ನೋಡಿಯಜನೆಂದನು (ವೀಶೈಪು. ೬-೧-೭). ೩. ಗಮನ ; ಲಕ್ಷ್ಯ. [ಸಂ.]

**ಸತ್ಕಾರ್ಯ** (ನಾ). = ಸತ್ಕರ್ಮ : ಆಕೆ ಮಾಡಿದ ಸತ್ಕಾರ್ಯಗಳು ಆಕೆಯ ವ್ಯೆಯಕ್ತಿಕ ಸದ್ಗುಣಗಳ ಪ್ರತೀಕ (ನೂಲಂಬ. ೯೯). [ಸಂ.]

**ಸತ್ಕಾರ್ಯವಾದ** (ನಾ). [ತತ್ತ್ವಶಾ] ಸಾಂಖ್ಯಮತದ ಪ್ರಕಾರ 'ರೂಪಾಂತರ' ಎಂಬ ತತ್ತ್ವದ ಮತ ; ಕಾರಣದ್ರವ್ಯವೇ ಕಾರ್ಯರೂಪವಾಗಿ ಪರಿಣಮಿಸುವಿಕೆ : "ಸತ್ಕಾರ್ಯವಾದವೆಂದರೆ ಕಾರಣಕ್ಕೂ ಕಾರ್ಯಕ್ಕೂ ಐಕ್ಯವನ್ನು ಅಭೇದವನ್ನು ಹೇಳುವುದು" (ಹಿಂದಸಾ. ೨೧೧); ಮಣ್ಣಿನಲ್ಲೇ ಮರೆಯಾಗಿದ್ದ ಗಡಿಗೆಯು ಕುಂಬಾರನ ಪ್ರಯತ್ನದಿಂದ ಹೊರಪಡುವದು ಎಂಬ ಸಾಂಖ್ಯವಾದ. ಇದನ್ನೇ ಪರಿಣಾಮವಾದವೆಂದೂ ಸತ್ಕಾರ್ಯವಾದವೆಂದೂ ಹೇಳುವರು (ಭಾರದ. ೫೩೧). [ಸಂ.]

**ಸತ್ಕಾಲಕ್ಷೇಪ** (ನಾ). ಒಳ್ಳೆಯ ರೀತಿಯಲ್ಲಿ ಕಾಲ ಕಳೆಯುವುದು ; ಉತ್ತಮ ರೀತಿಯ ಕಾಲಹರಣ : ಕಂಠಪಾಠ ಮಾಡಿದ ಜನರು ಕಲೆತು ಹಾಡಿದರೆ ಕೇಳಲು ರುಚಿಕರ ಮತ್ತು ಸತ್ಕಾಲಕ್ಷೇಪಕ್ಕೆ ಅನುಕೂಲ (ಮೂಗುತಿ. ಅನುಗ್ರಹವಾಣಿ). [ಸಂ.]

**ಸತ್ಕಾವ್ಯ** (ನಾ). ಒಳ್ಳೆಯ ಕಾವ್ಯ ; ಉತ್ತಮವಾದ ಕಾವ್ಯ : ಸತ್ಕಾವ್ಯದಲ್ಲೂ ಈ ಅಂಶಗಳಿದ್ದೇ ಇವೆ (ಕಾವ್ಯಕು. ೨). [ಸಂ.]

**ಸತ್ಕೀರ್ತಿ** (ನಾ). ಒಳ್ಳೆಯ ಹೆಸರು ; ಉತ್ತಮವಾದ ಯಶಸ್ಸು : ಸತ್ಕೀರ್ತಿಗೆ ನೋಂತೆವೆಂದು ದಿವದೊಳ್ ಪುನ್ನಯ್ಯನುಂ ಮಲ್ಲಪಯ್ಯನುಮಂತಾ ಜಿನಚಂದ್ರನುಂ ಪಿರಿದುಮೊಂದುತ್ಸಾಹಮಂ ತಾಳ್ದಿದರ್ (ಶಾಂತಿಪು. ಅನುಬಂಧ. ೧-೭); ಸತ್ಕೀರ್ತಿಯಂ ತಾಳ್ದು ರಾಜ್ಯಮನಾರಾಳ್ದರೊ ಪದ್ಮರಾಜನವೊಲ್ (ಪುಷ್ಪಪು. ೩-೨೧). [ಸಂ.]

**ಸತ್ಕೀರ್ತಿವಡೆ** (ಕ್ರಿ). ಒಳ್ಳೆಯ ಹೆಸರನ್ನು ಪಡೆ ; ಉತ್ತಮವಾದ ಯಶಸ್ಸನ್ನು ಹೊಂದು : ಸಂತಸವಡೆದುದಾ ಸೌರಾಷ್ಟ್ರ ಸಕಲದಿಗಂತಕ್ಕೆ ಸತ್ಕೀರ್ತಿವಡೆದು (ಮೋಹತ. ೨-೧೫). [ಸತ್ಕೀರ್ತಿ + ಪಡೆ$_1$]

**ಸತ್ಕುಲ, ಸತ್ಕುಳ** (ನಾ). ೧. ಒಳ್ಳೆಯ ವಂಶ; ಸದ್ವಂಶ: "ಶೀಲ ಸತ್ಕುಲಮಿವನೂಕಮಕ್ಕು" (ನಾಸಾರ. ೧೩೦); ನೀವೆನ್ನ ಸತ್ಕುಲದ್ಯೆವವೇ ಮನೆದ್ಯೆವಪೇ ಅಕಟ ಎನ್ನ ದಾತನ (ಬಸಪು. ೩೭-೩). ೨. ಒಳ್ಳೆಯ ವಂಶದಲ್ಲಿ ಹುಟ್ಟಿದವನು ; ಸದ್ವಂಶಜ : "ಸತ್ಕುಲನೊಳು ಸೌಮ್ಯನೊಳು ಚಾತ್ಯಂ" (ಮಂಗರಾ. ೧೪೨-೧೮). **ಸತ್ಕುಳ** : ೧. ಸತ್ಕುಳದೊಳಗಿಂದು ಮಹೀಭೃತ್ಕುಳದೊಳಗಚಳನಾಥನೆಸವಂತೆಸೆವಂ ತತ್ಕುಳದೊಳ್ . . . ವಿನಯಾದಿತ್ಯಂ (ಎಕ. V, ಬೇಲೂರು. ೧೨೪-೧೪; 1133). [ಸಂ.]

**ಸತ್ಕುಲಜ** (ನಾ). = ಸತ್ಕುಲ ೨ : ಎನ್ನ ತೊತ್ತಿನ ಮಗನಂ ಕುಮಾರನೆಂದು ಸತ್ಕುಲಜನೆಂದು ಬಗೆದು ಹೆಣ್ಣಂ ಕೊಟ್ಟು ನಿಮ್ಮ ಕುಲಮಂ ಕೆಡಿಸಿಕೊಳ್ಳದಿರಿ (ನಂಪಿರ. ೬-೬೬ ವ); ಶಾಪದಿಂದಾದ ದುಷ್ಕುಲಂ ಸತ್ಕುಲಜ ಭೂಪ ನಿನ್ನಯ ಸಂಗದಿಂ ಶುದ್ಧವಪ್ಪುದೆಂಬಾಪೇಕ್ಷೆಯಿಂ ಬಂದೆವೆನಲು (ಪಚಕಾ. ೭-೨೨). [ಸಂ.]

**ಸತ್ಕುಲತೆ** (ನಾ). ಒಳ್ಳೆಯ ವಂಶದಲ್ಲಿ ಜನಿಸಿರುವಿಕೆ : ಹರಣದಲಿ ಕಕ್ಕುಲಿತೆ ಬೇಡುದ್ಧರಿಸುವುದು ಸತ್ಕುಲತೆಯನು ಸಂವರಿಸುವುದು ಸದ್ಗತಿಯನು (ಕುವ್ಯಾದ್ರೋ. ೧೫-೨೧). [ಸಂ. ಸತ್ಕುಲತಾ]

**ಸತ್ಕುಲಪ್ರಸೂತ** (ನಾ). = ಸತ್ಕುಲ ೨ : ಸತ್ಕುಲಪ್ರಸೂತರು ನಿನ್ನಂತೆ ಎಷ್ಟು ದುಃಖಾರ್ಥರಾದರೂ ಧರ್ಮಮಾರ್ಗವನ್ನು ಬಿಟ್ಟುಹೋಗುವುದಿಲ್ಲ (ವಚಭಾ. ೧೦೨); ಸತ್ಕುಲಪ್ರಸೂತರಾದ ರಾಜಪುತ್ರರನ್ನೆಲ್ಲ ನಿರಾಕರಿಸಿ ಕಳುಹಿಸಿಬಿಡುತ್ತಿದ್ದನು (ಕವಿಕ. ೪೪). [ಸಂ.]

**ಸತ್ಕುಲೀನ** (ಗು). ೧. ಒಳ್ಳೆಯ ಕುಲದಲ್ಲಿ ಹುಟ್ಟಿದ : ಕಾಂತಭಕ್ತಿಯಂ ಬಿಡುವರ ಸತ್ಕುಲೀನಸತಿಯರ್ (ನಳಚಂ. ೭೩೭). (ನಾ). ೨. = ಸತ್ಕುಲ ೨ : ಲೇಸನಾಡಿದೆ ಕರ್ಣ . . . ಈಸುದಿನ ನಾವಱಿಯೆವೈ ನೀ ಸತ್ಕುಲೀನನಲ (ಕುವ್ಯಾದ್ರೋ. ೧-೩೦). [ಸಂ.]

ಸತ್ಕುವಲಯ (ನಾ). ೧. ಉತ್ತಮವಾದ ಕನ್ನೈದಿಲೆ. ೨. ಶ್ರೇಷ್ಠವಾದ ಭೂಮಂಡಲ. ೧, ೨ : ವಿಶೇಷದಸೌಖ್ಯಸಾರ್ವಭೌಮನ ತೆಱದಂತೆ ಸತ್ಕುವಲಯಾಧಿಕದಿಂದೆ ಕುಬೇರನಂತೆ ನೂತನ ವರಪದ್ಮದಿಂ ಸರಸಿ ರಾಜಿಕುಂ (ಪದ್ಮಾಚ. ೪-೧೯). [ಸಂ.]

ಸತ್ಕುಳ 'ಸತ್ಕುಲ' ನೋ.

ಸತ್ಕುಳವಂತೆ (ನಾ). ಒಳ್ಳೆಯ ವಂಶದಲ್ಲಿ ಹುಟ್ಟಿದವಳು ; ಉತ್ತಮಕುಲದಲ್ಲಿ ಜನಿಸಿದವಳು : ಆಚಭೂಪನ ಕಾನ್ತೆ ದಯಾವಂತೆ . . . ಸತ್ಕುಳವಂತೆ ಮಹಾದೇವಿಯೆಂಬ ಪೆಸರಿಂದೆಸೆವಳ್ (ಎಇ. XX, ೧೧೫-೧೫; 1167). [ಸತ್ಕುಳ (= ಸತ್ಕುಲ) + - ವಂತ + - ಎ₂]

ಸತ್ಕೃತ (ಗು). ೧. ಒಳ್ಳೆಯದಾಗಿ ಜರುಗಿದ ; ಸರಿಯಾಗಿ ನಡೆದ. (ನಾ). ೨. ಮನ್ನಣೆ; ಗೌರವ. ೩. ಸತ್ಕಾರ್ಯ; ಸತ್ಕರ್ಮ : ಪಾಱಿಯನೊಕ್ಕಾಳ್ದನ ಗೆಯ್ದ ಸತ್ಕೃತಮುಮಂ ಪಿಂತಿಕ್ಕಿ ಜೋಟಕ್ಕೆ ತಪ್ಪಿಯುಮಿಂ ಬಾಳ್ಬುದೆ (ಪಂಪಭಾ. ೯-೮೪). ೪. ಸತ್ಕಾರ ಹೊಂದಿದವನು ; ಸನ್ಮಾನವನ್ನು ಪಡೆದವನು : ಮಂಗಳನೃತ್ತಗೀತಂಗಳೆಸಗಿದುವು ಹರಿ ಪಾರ್ಥರಲ್ಲಿ ಸತ್ಕೃತರಾದರು (ಜೈಮಿಭಾ. ೩೨-೫೫). [ಸಂ.]

ಸತ್ಕೃತಿ (ನಾ). ೧. ಒಳ್ಳೆಯ ವರ್ತನೆ ; ಉತ್ತಮವಾದ ನಡವಳಿಕೆ. ೨. ಸತ್ಕಾರ ; ಆದರ ; ಆತಿಥ್ಯ : ತನ್ನಪನ ಸತ್ಕೃತಿಯ ಮಂಗಳತೆಯನು ಕೈಕೊಂಡು ಹಾಯ್ದನು ಹಂಸೆಯಲಿ ಮುನಿಪ (ತೊರರಾ. ೧-೫-೨೫). ೩. ಉತ್ತಮವಾದ ಕೃತಿ : ಶಾಂತಿಪುರಾಣಸತ್ಕೃತಿಗಡರ್ಪಪ್ಪನ್ನೆಗಂ ಪರ್ವಿ ದಾಂಗುಡಿವಿಟ್ಟತ್ತು ಯಶೋಲತಾಪ್ರತತಿ ಚೆಲ್ವಿಂದೆತ್ತಮುತ್ತಿಮಬ್ಬೆಯಾ (ಶಾಂತಿಪು. ಅನುಬಂಧ. ೧-೫); ಸತ್ಕೃತಿ ಸಂಸ್ಕೃತದಿಂದ ಜಗತ್ಕೌತುಕಮಾಗಿ ಮತ್ತೆ ಕರ್ಣಾಟದೊಳಂ ಸತ್ಕವಿನಿವಹಂ ಪೊಗಟೆ ಚಮತ್ಕೃತಿಯಂ ಪಡೆದು ಸೊಬಗುವಡೆದತ್ತು (ಕಾದಂಪೂ. ೧). [ಸಂ.]

ಸತ್ಕೊಳ (ನಾ). ಉತ್ತಮವಾದ ಕೊಳ, —ಪುಷ್ಕರಿಣಿ : ರಘುಮಹಾರಾಯನುಂ ಕ್ರೀಡಿಸಿದ ಸತ್ಕೊಳಗಳು (ಪರಶು. ೪೩-೮). [(ಸಂ. ಸತ್) + ಕೊಳ₂]

ಸತ್ಕ್ರಿ (ನಾ). ಒಳ್ಳೆಯ ಕೆಲಸ ; ಉತ್ತಮಕಾರ್ಯ : ಷಟ್ಸ್ಥಲಬ್ರಹ್ಮಿಯಾಗಿ ನಾನಾತತ್ವಂಗಳಲ್ಲಿ ಕಲ್ಪಿತನಾಗಿ ಸತ್ಕ್ರಿಯಲ್ಲಿ ಭಾವಿತನಾಗಿ (ಮೋಳಿಮಾ. ೧೫-೫೪); ಹೊಱಗೆ ಮಾಡುತ್ತಿಹ ಸತ್ಕ್ರಿಯು ಮಂಗಳಮಯವಾಗಿ ಒಳಗೆ ಕಣ್ದೆಱೆದು ಪರಮಾನಂದದ ರಸದೊಳಗೆ ಓಕುಳಿಯಾಡುತ್ತಿಹನಯ್ಯ (ಶಿವಗೀ. ೭೭-೩೭೯). [< ಸಂ. ಸತ್ಕ್ರಿಯಾ]

ಸತ್ಕ್ರಿಯೆ (ನಾ). ೧. = ಸತ್ಕ್ರಿ : ಮಾಡುವ ಸತ್‌ಕ್ರಿಯೆಯಿಂದ ಭಕ್ತನೆನಿಸಬಾರದು (ಬಸವ. ೩೧೮); ಕಲ್ಲಿಂ ಕಾಂಚನಮಂ ತಡಮಿಲ್ಲದೆ ಸತ್ಕ್ರಿಯೆಯ ಬಲದೆ ತೆಗೆವಂತೆ ಕರಂ ಪೊಲ್ಲಮೆನಿಪ್ಪೊಡಲಿಂ ಕೇಡಿಲ್ಲದ ಪುಣ್ಯಮನುಪಾರ್ಜಿಪಾತಂ ಚತುರಂ (ಚಂದ್ರಪ್ರ. ೪-೫೮). ೨. ಆದರಸಹಿತವಾದ ಆತಿಥ್ಯ ; ಆತ್ಮೀಯವಾದ ಸತ್ಕಾರ : ಅನುನಯೋಚಿತ ಸತ್ಕ್ರಿಯೆಗಳಿಗೆ ಮನದಣಿದಖಿಳಭಕ್ತರುಂ ತಾನನವರತಮುಂ ಸುಖದೊಳಿರ್ದನು (ಬಸವು. ೬೦-೬೨). ೩. ಕಲಾತ್ಮಕವಾದ ಕ್ರಿಯೆ ; ಉತ್ತಮವಾದ ಕ್ರಿಯಾರೂಪ : ಶೃಂಗಾರಾದಿಗಳಪ್ಪ ರಸಂಗಳ್ ವರ್ತಿಸುಗುಮಂತವೆಂತೆ ವಲಂ ಕಾವ್ಯಾಂಗಕ್ಕೆ ಸತ್ಕ್ರಿಯಾ ರೂಪಂಗಳ್ ರತ್ಯಾದಿಭಾವಸಂಪನ್ನಂಗಳ್ (ಕಾವ್ಯಾವ. ೭೯೩). ೪. ಶುದ್ಧೀಕರಣ ಸಮಾರಂಭ. ೫. ಅಂತ್ಯವಿಧಿ ; ಅಂತ್ಯಸಂಸ್ಕಾರ. [ಸಂ. ಸತ್ಕ್ರಿಯಾ]

ಸತ್ಕ್ರಿವಂತ (ನಾ). ಒಳ್ಳೆಯ ಕೆಲಸಗಳನ್ನು ಮಾಡುವವನು : ಸತ್ಕ್ರಿವಂತಂಗೆ ಭಕ್ತಿಸ್ಥಲವಿಲ್ಲ ನಿರ್ಮಲಚಿತ್ತಂಗೆ ಮಹೇಶ್ವರಸ್ಥಲವಿಲ್ಲ (ಮೋಳಿಮಾ. ೧೫೦-೫೭). [ಸಂ. ಸತ್ಕ್ರಿಯಾವತ್]

ಸತ್ಕ್ಷೇತ್ರ (ನಾ). ಹದವಾದ ಭೂಮಿ ; ಉತ್ತಮವಾದ ಪ್ರದೇಶ : ಉಜ್ಜ್ವಳದಾನಂ ಕಿಱಿದುಂ ಕರಂ ಪಿ[ರಿ]ದೆ ದಲ್ ಸತ್ಕ್ಷೇತ್ರಬೀಜೋಪಮಂ (ಶಾಂತಿಪು. ೭-೨೦). [ಸಂ.]

ಸತ್ತಟಾಕ (ನಾ). = ಸತ್ಕೊಳ : ಬಾಲೇಂದುಧರ ಕರುಣಾಮೃತಂ ಭಕ್ತಜನರುಗಳ ಹೃತ್ಕಮಲದೊಳ್ ತುಂಬುವ ಚೆಂದದಿಂದಾ ಪೊಳಲ ಸತ್ತಟಾಕಂ ತುಂಬಿ (ವಿಕೋಪು. ೩-೩೮). [ಸಂ.]

ಸತ್ತಮ (ನಾ). ೧. ಮುಖ್ಯವಾದುದು; ಪ್ರಧಾನವಾದುದು: "ಅಗ್ರ್ಯಂ, ಪ್ರಧಾನಂ . . . ಸತ್ತಮಂ, ಉತ್ತಮಂ, ಗ್ರಾಮಣೀಃ , ಅಗ್ರಣೀಃ — ಈ ೧೩ ಮುಖ್ಯಂ" (ಪಲಾಯು. ೧೧೫-೫). ೨. ಉತ್ತಮವಾದ ರೀತಿ : ನೀನೀ ಧರೆಯಂ ಸತ್ತಮ ಪಾಲಿಪುದು ಪಾಂಡ್ಯಭೂವರನಾಗುತೆ ಚಿತ್ತವಿಪುದೆಂದು ಬೇಡಿಕೊಳುತ್ತಿರಲು (ಹಾಲಾಸ್ಯ. ೧-೬-೫೪). ೩. ಶ್ರೇಷ್ಠನಾದವನು ; ಉತ್ತಮ : ಹೇಯಕೃತ್ಯಗಳನ್ನೆಸಗಿಯೂ ತಾವು ಸತ್ತಮರೆಂದು ಹೇಳಿಕೊಳ್ಳುವ ಜನ ಹುಚ್ಚರೋ ಅಥವಾ ತಾನು ಹುಚ್ಚನೋ (ಪುನರು. ೫೪೯). [ಸಂ.]

ಸತ್ತವಿ, ಸತ್ತವೆ (ನಾ). ಪಕ್ಷದ ಏಳನೆಯ ದಿನ : ಗುಪ್ತ — ಗುತ್ತ ; ಸಪ್ತಮಿ — ಸತ್ತವಿ (ಶಮದ. ೨೬೪ ಪ್ರಯೋ.). ಸತ್ತವೆ : ಅತಸಿ — ಅಗಸೆ . . . ಸಪ್ತಮಿ — ಸತ್ತವೆ (ಶಮದ. ೨೭೯ ಪ್ರಯೋ.). [< ಸಂ. ಸಪ್ತಮೀ]

ಸತ್ತವೆ 'ಸತ್ತವಿ' ನೋ.

ಸತ್ತಱ (ನಾ). ಒಂದು ವಂಶದ ಹೆಸರು : ನಾಗರಖಣ್ಡಮೆಪ್ಪತ್ತರ್ಕ್ಕಂ ಸತ್ತಱರ ನಾಗಾರ್ಜುನ ನಾಳ್ಗಾವುಣ್ಡುಗೆಯ್ಯುತ್ತ (ಎಕ. VII, ಶಿಕಾರಿ. ೨೯೯-೮: 918); ಬನ್ದಣಿಕೆಯ ಸತ್ತಱರ ನಾಗಾರ್ಜ್ಜುನ ನಾರ್ಗ್ಗವುಣ್ಡುಗೆಯೆ (ಎಕ. VIII, ಸೊರಬ. ೨೩೪-೭: 999). [?]

ಸತ್ತಿಗ (ನಾ). ೧. ನಿಜವನ್ನು ಹೇಳುವವನು ; ಪ್ರಾಮಾಣಿಕನಾದವನು : ನಿಲ್ಲಂ ಸುಳಿವಟ್ಟೆಗರಿರ್ಪೆಡೆಯೊಳ್ಗಲ್ಲಂ ಸತ್ತಿಗರಂ ಮಱೆದೆಂದುಂ ಕೊಲ್ಲಂ ಜಱುಚಂ ಬಾಂದಲೆಯಂಗೀಯದೆ ನಲ್ಲಮರ್ದುಣಿಸಂ ಒಲ್ಲಂ (ಉಧೃದೇ. ೨-೪೫); ಸತ್ತಿಗಂ ನೀನೆಯಾದೊಡಂ ವೇಷ್ಟನವ ಕಕ್ಷೆಯೊಳಗವಚಿಕೊಳುತಂ ಓಡಿ ಬಂದಯೇಕೆ (ಪ್ರಭುಪು. ೬-೮೮). ೨. ಸಾಮಾನ್ಯವಾಗಿ ಕಲ್ಯಾಣಿಚಾಲುಕ್ಯರ ಅರಸರಿಗೆ ಸಲ್ಲುತ್ತಿದ್ದ ಒಂದು ಬಿರುದು; ಸತ್ಯಾಶ್ರಯ: ಸತ್ತಿಗಂ ಬೆಸಸೆ . . . ಕೇತ ಪೆಣೆದಿಱಿದು ಸತ್ತೊಡೆ (ಸೌಇಇ. XI-i, ೫೦-೨; 1006); ಸಿಡಿಲೇಱ್ಗೆಯಿಂದೆಱಗಿ ಪೊಯ್ಯಾಗಳ್ ಗದಾದಂಡದಿಂ ಮುಳಿದಿಟ್ಟಂ ಕಲಿ ಸತ್ತಿಗಂ ಕುರುಕುಭೃಚ್ಛಂಡೋರುದಂಡಂಗಳಂ (ಗದಾಯು. ೮-೩೬).

ಸತ್ತಿಗನ ಚಟ್ಟ = ಸತ್ಯಾಶ್ರಯನ ಬೆಂಬಲಿಗನಾದವನು ; ಒಂದು ಬಿರುದು: ಮಂಡಳಿಕಲಲಾಟಪಟ್ಟಂ ಸತ್ತಿಗನ ಚಟ್ಟಂ (ಇಇ. V, ೧೬-೨೮; 1019). [< ಸತ್ಯಾಶ್ರಯ]

ಸತ್ತಿಗೆ, ಸತಿಗೆ (ನಾ). ಕೊಡೆ ; ಛತ್ರಿ : "ಸತ್ತಿಗೆಯದಾತಪತ್ರಂ ಛತ್ರಮೆನಿಸಿಕ್ಕು" (ಮಂಗರಾ. ೭೮-೪); ನಡೆಯಲ್ಪಂದಿಱಿಯಲ್ಕೆ ತಕ್ಕ ತುರಂಗಂ ಭೋರೆಂದು ಬರ್ಪೊಂದೊಡಂಬಡು ಬಂದೆತ್ತಿಸಿದೊಂದು ಸತ್ತಿಗೆ (ಪಂಪಭಾ. ೯-೧೦೪); ಬಿದಿರಲಂದಣವಕ್ಕು ಬಿದಿರೆ ಸತ್ತಿಗೆಯಕ್ಕು . . . ಬಿದಿರಲ್ಲಿ ಸಕಲಸಂಪದವೆಲ್ಲವು (ಬಸವ. ೨೨೧); ವನಲಕ್ಷ್ಮಿಗೆತ್ತಿದ ಪೀಲಿಯ ಸತ್ತಿಗೆಯೊ (ಗಿರಿಕ. ೨-೩೪). ಸತಿಗೆ : ಎಲತನಾಯಕರು ಕೊಟ್ಟ ಸತಿಗೆಯ ಕೊಡಗಿ (ಎಕ. XII, ಗುಬ್ಬಿ. ೫೦-೭; 1522).

ಸತ್ತಿಗೆ ಮಾನ್ಯ , ಸತಿಗೆ ಮಾನ್ಯ = (ದೇವರ ಅಥವಾ ರಾಜನ) ಛತ್ರಿಯನ್ನು ಹೊರುವವನಿಗೆ ನೀಡುವ ಜಮೀನು ; ಛತ್ರಧಾರಕನ ಸೇವೆಗೆ ಕೊಡುವ ಮಾನ್ಯ : ಚಿಕ್ಕ ಚವುಟಿಲಿ ಸತ್ತಿಗೆ ಮಾನ್ಯ ಅಯಿದು ವರಹಾ (ಮೈಆರಿ. ೧೯೨೪, ೮೯-೧೧: 1700); ಸತಿಗೆ ಮಾನ್ಯಕೆ ಉಮ್ಮಳಿಹೊಲ (ಎಕ. XII, ಪಾವುಗ. ೩೯-೩೫; 1554). [< ಸಂ. ಛತ್ರಿಕಾ./ ತುಳು. ಸತ್ತಿಗೆ, ಸತ್ಯೆ; ತೆಲು. ಸತ್ತ]

ಸತ್ತಿಗೆತ್ತಿಸು (ಕ್ರಿ). ಕೊಡೆಯನ್ನು ಹಿಡಿಯಿಸು ; ಛತ್ರಿಯನ್ನು ಹಿಡಿಯುವಂತೆ ಮಾಡು : ಕನಕಾಂಭೋಜಾತಮುದ್ದಂಡಕೋಮಳನಾಳಂ ಸಿರಿ ಸತ್ತಿಗೆತ್ತಿಸಿದ ಪೋಲಿಂಬಾಗೆ (ಶಾಂತಿಪು. ೭-೧೨೭). [ಸತ್ತಿಗೆ + ಎತ್ತಿಸು]

ಸತ್ತಿಗೆವಂತ (ನಾ). (ರಾಜಲಾಂಛನದ ಕುರುಹಾದ) ಛತ್ರಿಯನ್ನು ಹೊಂದಿದವನು ; ದೊರೆ : ದಂಡವಂತಂ, ಸತ್ತಿಗೆವಂತಂ (ಶಬ್ದಾನು. ೪೦೨ ಪ್ರಯೋ.). [ಸತ್ತಿಗೆ + - ವಂತ]

ಸತ್ತಿಯೂರ್ (ನಾ). ಒಂದು ಊರಿನ ಹೆಸರು : ಇದಕ್ಕೆ ಸಕ್ಕಿಳೆಬೆಳ್ಗುನ್ದೂರುಂ ಕಿಱುವೆಳ್ಗುನ್ದೂರುಂ ಸತ್ತಿಯೂರುಂ ಸಿಂಗೂರುನಗರಲ ಪನ್ನಿರ್ವ್ವರು (ಎಕ. III, ನಂಜನ. ೧೫೫-೮; ಸು. 970?). [ಸತ್ತಿ + ಊರ್]

**ಸತ್ತಿವಂಗಲ** (ನಾ). ಒಂದು ಊರಿನ ಹೆಸರು : ಸತ್ತಿವಂಗಲದ ಭೂಮಿಯ ಸಮ್ಮನ್ಸಂ ಮಾರಯ್ಯನುಂ ಪುಣಿಸೆಯಮ್ಮನು ವಿಜ್ಞು ತಮ್ಮ ಲೋಪಾದಿಗೊಟ್ಟರ್ (ಎಕ. IX, ಹೊಸಕೋ. ೧೧೧-೬: 997). [ಸತ್ತಿ + ಮಂಗಲ]

**ಸತ್ತು₁** 'ಸತು₁' ನೋ.

**ಸತ್ತು₂** (ನಾ). ಇರುವಿಕೆ ; ಅಸ್ತಿತ್ವ : ಸತ್ತು ಚಿತ್ತಾನಂದವೆಂಬ ಗೂತ್ತ ಹಱಿದವಂಗೆ ತಟ್ಟುಮುಟ್ಟು ಹತ್ತುವ ಭಾವವೊಂದೂ ಇಲ್ಲ (ಸರ್ಪವ. ೧೧೮-೫೭೪); ನಕಾರವೇ ಸತ್ತು ಮಃಕಾರವೇ ಚಿತ್ತು ಶಿಕಾರವೇ ಆನಂದ ವಾಕಾರವೇ ನಿತ್ಯ ಯಕಾರವೇ ಪರಿಪೂರ್ಣ (ಏಕ್ಯವ. ೭೦-೨೦೦). [< ಸಂ. ಸತ್]

**ಸತ್ತುಗ₁** (ನಾ). (ಜವೆಗೋದಿ ಮುಂತಾದ ಧಾನ್ಯದ) ಹುರಿದ ಹಿಟ್ಟು: "ಕರಂಭಃ, ದಧಿಸಕ್ತುಃ— ಈ ೨ ಮೊಸರೊಳ್ ಕಲಸಿದ ಸತ್ತುಗಂ" (ಪಲಾಯು. ೫೩-೧೬೬); ಪಲವು ದಿವಸಕ್ಕೊಂದು ಕೊಡಂ ತೀವಿದ ಸತ್ತುಗದ ಪುಡಿಯಂ ಪಡೆದು ಆ ಕೊಡನಂ ತನ್ನ ಪಟ್ಟಿರ್ಪಡೆಯೊಳ್ ಕಟ್ಟಿ (ಪಂಚತಂ. ೧೮೫-೨೨). [<— ಪ್ರಾ. ಸತ್ತುಗ, ಸತ್ತುಅ, ಸತ್ತು./ ಸಂ. ಸಕ್ತು, ಸಕ್ತುಕ./ ಮರಾ. ಸತ್ತು./ ತಮಿ. ಚತ್ತು; ತೆಲು. ಸತ್ತು]

**ಸತ್ತುಗ₂** (ನಾ). ೧. ಸಾರ ; ತಿರುಳು : "ಸತ್ತುಗ(ಕ) — ಸತ್ವಕ = ಸಾರ" (ತದ್ಭಕೋ. ೪೨); ವತ್ಸಕ್ಕೆ ತತ್ವಂ — ಸತ್ವಕ — ಸತ್ತುಗ (ಶಮದ. ೨೬೬ ಪ್ರಯೋ); ಸತ್ವಕ, ಸತ್ತುಗ (ಶಬ್ದಾನು. ೧೬೦ ಪ್ರಯೋ). ೨. ಬಲ ; ಸತ್ವ ; ಶಕ್ತಿ : ಮುಸುಮೊಗಮಾಯ್ತು ಮೊಗಂ ಕಾಲ ಸತ್ತುಗಂ ಪೋಯ್ತು (ಅಜಪು. ೨-೧೦೦). [< ಸಂ. ಸತ್ವಕ]

**ಸತ್ತುತೆಗೆ** (ಕ್ರಿ). [ಗಣಿತ] ಭಾಗಿಸು ; ಭಾಗಾಹಾರಮಾಡು : ಸತ್ತುತೆಗೆಯಂ, ಸಂಹ್ರಿತಂ, ತವ, ಭಕ್ತಿ, ಭಿನ್ನ . . . ಭಾಗಿಸೂದೆಂದಱ (ವ್ಯವಹಾ. ೧೨). [?]

**ಸತ್ತೆ₁** 'ಸತ್ತೆ' ನೋ.

**ಸತ್ತೆ₂** 'ಸಥೆ' ನೋ.

**ಸತ್ತ್ವ** (ನಾ). ೧. ಶಕ್ತಿ; ಬಲ; ಕಸುವು: ಸಮರರಸಪ್ರಿಯರೊಳ್ ಸತ್ತ್ವಮುಮಿಳೆಯೊಳ್ ರಜಮುಮೊದವೆ ರಣಗಟ್ಟಲೆಯೊಳ್ ತಮಮುಂ ಮಿಗೆ ಸತ್ತ್ವ ರಜಸ್ತಮಂಗಳುಂ ಕಾಣಲಾದುವೆರಡುಂ ಪಡೆಯೊಳ್ (ಪಂಪಭಾ. ೧೧-೭೯); ನಿನ್ನಯ ಸತ್ತ್ವಸಮೃದ್ಧಿಯಪ್ಪಿನಂ ಮಣಿಯದ ಪೊತ್ತುದಿನ್ನವರಂ . . . ತಾಳ್ದುವುದು ಪಿಂಗದೆ ಪುತ್ರ ಸಮಸ್ತಧಾತ್ರಿಯಂ (ಚಂದ್ರಪು. ೪-೧೯); ಕ್ಷಮೆಯಲ್ಲಿ, ಸತ್ತ್ವದಲಿ, ಶಾಂತಗಾಂಭೀರ್ಯದಲಿ . . . ಮರೆದನಾ ಶ್ರೀರಾಮಚಂದ್ರಂ (ಶ್ರೀರಾಮಾ. ೨೬-೬೮೧). ೨. ಸತ್ತ್ವ, ರಜಸ್ಸು, ತಮಸ್ಸುಗಳೆಂಬ ಮೂರುಗುಣಗಳಲ್ಲಿ ಒಂದು ; ಸಾತ್ತ್ವಿಕಗುಣ : ಸತ್ತ್ವವೆಂದರೆ, ಜೀವನಜ್ಞಾನ ಸುಖ ಮೊದಲಾದುವುಗಳಿಗೆ ಹೇತುವಾಗಿರುವ ಗುಣ (ಪಿಂಡಸಾ. ೨೩೭). ೩. ಇರುವಿಕೆ ; ಅಸ್ತಿತ್ವ. ೪. ಉಸಿರು ; ಜೀವ ; ಪ್ರಾಣ. ೫. ದ್ರವ್ಯ ; ಪದಾರ್ಥ. ೬. ಕೆಚ್ಚು ; ಸಾರ. ೭. ಪ್ರಕೃತಿ ; ಗುಣ ; ಸ್ವಭಾವ. ೮. ಭೂತ ; ಪಿಶಾಚಿ. ೯. ಚಿತ್ತ ; ಮನಸ್ಸು. ೧೦. ಪ್ರಜ್ಞೆ ; ವಿವೇಕ. ೧೧. ಒಳ್ಳೆಯತನ ; ಉತ್ತಮಿಕೆ. ೧೨. (ಪ್ರಕೃತಿಯ) ಪಂಚಮಹಾಭೂತಗಳಲ್ಲಿ ಯಾವುದಾದರೂ ಒಂದು. ೧೩. ಜೀವಿ ; ಪ್ರಾಣಿ. ೧೪. ಭ್ರೂಣ. ೧೫. ಜಾಣ್ಮೆ ; ಬುದ್ಧಿ ; ಚಾತುರ್ಯ. ೧೬. [ವ್ಯಾಕ] ನಾಮಪದ. [ಸಂ.]

**ಸತ್ತ್ವಗುಣ** (ನಾ). = ಸತ್ತ್ವ ೨ : ತಣಿವಿಲ್ಲದ ತವಕಂ ಪೊಣ್ಮೆ ಸತ್ತ್ವಗುಣಂ ಮತ್ತಂ ವೆಗ್ಗಳಮಾಗೆ ಮಿಕ್ಕು ಮಿಱಿ (ಬಸರ. ೮-೧೧); ಬುದ್ಧಿಯ ವಿಷಯಾಕಾರವೇ ಸತ್ತ್ವಗುಣದ ಸಮುದ್ರೇಕದಿಂದ ಜ್ಞಾನವೆಂಬ ಪ್ರಮಾಣವಾಗುವುದು (ಪಿಂಡಸಾ. ೬೧). [ಸಂ.]

**ಸತ್ತ್ವನಿಧಾನ** (ನಾ). ೧. ಜಗತ್ತಿನ ಜೀವಿಗಳನ್ನು ಸೃಷ್ಟಿಸುವವನು ; ಬ್ರಹ್ಮ. ೨. ಸಾತ್ತ್ವಿಕಗುಣದಿಂದ ಕೂಡಿದವನು ; ವಿಷ್ಣು. ೩. ರಜೋಗುಣದಿಂದ ಕೂಡಿದವನು ; ಬಲಾಢ್ಯ. ೧, ೨, ೩ : ರಾಜಹಂಸನಯನಂ . . . ರಜಮೊಂದಿಯೆ ಸತ್ತ್ವನಿಧಾನನೆಂಬ ಪೆಂಪನುಗುಣಮಾದ ಲೋಕಪಿತನೊಲ್ದು ಚತುರ್ಮುಖನೀಗೆ ರಾಗಮಂ (ಜಗವಿ. ೧-೨). [ಸಂ.]

**ಸತ್ತ್ವಶಾಲಿ** (ನಾ). ಸಮರ್ಥನಾದವನು : ಮರಣದಂಡನೆಯನ್ನು ಧೃತಿಗೆಡದ ಸ್ವೀಕರಿಸಿದ ಸತ್ತ್ವಶಾಲಿಯಾದ ಈ ಅಮರನಾಯಕ ತನ್ನ ಸಂಕಲ್ಪವನ್ನು . . . ನೆರವೇರಿಸಿ ಕೃತಕೃತ್ಯನಾದವನು (ವೀರಯೋ. VI, ಈ ನಾಟಕವನ್ನು ಕುರಿತು). [ಸಂ. ಸತ್ತ್ವಶಾಲಿನ್]

**ಸತ್ಪಥ** (ನಾ). ೧. ಒಳ್ಳೆಯ ಮಾರ್ಗ ; ಸನ್ಮಾರ್ಗ : ಅವರು ಸತ್ [ಪಾಠಾಂ. ಶಿವ] ಪಥಕ್ಕೆ ಸಲ್ಲರು ಸಲ್ಲರಯ್ಯಾ (ಬಸವ. ೯೭); ಭಾವಭೇದವಿಲ್ಲದ ಶರಣನ ಸತ್ಪಥವ ನಾನೇನೆಂಬೆನು (ಶಿವಗೀ. ೮೩-೪೦೬). ೨. ನಕ್ಷತ್ರಗಳ ಮಾರ್ಗ ; ಆಕಾಶ. ೧, ೨ : ಸುಹೃಚ್ಚಕ್ರಸಮ್ಮದ ಸಂಪಾದನಹೇತು ಸತ್ಪಥಗತಂ ಪದ್ಮೋದ್ಭವೋದ್ಭಾವಕಂ ವಿದಿ ತಾರ್ಥಾನುಗನಾಮನಲ್ತೆ ವಿನಯಾದಿತ್ಯಾವನೀಪಾಲಕಂ (ಎಕ. III, ಮಳವ. ೩೧-೧೧; 1117). [ಸಂ.]

**ಸತ್ಪಥಕುಂತಲ** (ನಾ). ಆಕಾಶವನ್ನೇ ಮುಡಿಯಾಗಿ ಉಳ್ಳವನು ; ವ್ಯೋಮಕೇಶ ; ಈಶ್ವರ : ಸತ್ಪಥಕುಂತಲ ಚಿತ್ಪಾರೀಣ . . . ಪಾಲಿಸೆನುತ್ತಂ (ಉದ್ಭದೇ. ೭-೨೬). [ಸಂ.]

**ಸತ್ಪಥಕೇಶ** (ನಾ). = ಸತ್ಪಥಕುಂತಲ : ಕೇಳ್ವುದು ಗುರ್ಜರದೇಶಾಧೀಶನ ಕಥೆಯಂ ಸತ್ಪಥಕೇಶನ ಕೃಪೆಯಿಂ ಪೇಳ್ವೆಂ (ಉದ್ಭದೇ. ೧ ಸೂಚನೆ). [ಸಂ.]

**ಸತ್ಪಥಭಾವಿ** (ನಾ). ಒಳ್ಳೆಯ ಮಾರ್ಗದಲ್ಲಿ ನಡೆಯಬೇಕೆಂಬ ಭಾವನೆ ಯುಳ್ಳವನು ; ಸನ್ಮಾರ್ಗದಲ್ಲಿ ನಡೆಯುವ ಭಾವನೆಯನ್ನು ಹೊಂದಿದವನು : ತುಷರಸವಿದ್ದುದಕಲ್ಲದೆ ಫಲ ಫಲಿಸಲಿಲ್ಲ ಕ್ರಿಯಾಸದ್ಭಾವವಿದ್ದಲ್ಲದೆ ಸತ್ಪಥಭಾವಿಯಲ್ಲ (ಪ್ರೋಳಮಾ. ೨೭೮-೩೩). [ಸಂ. ಸತ್ಪಥಭಾವಿನ್]

**ಸತ್ಪಥಾತಿಥಿ** (ಕ್ರಿ). ಆಕಾಶದಲ್ಲಿ ಸಂಚರಿಸುವವನು ; ಗಗನಗಾಮಿ : ಚಾರಣ ಮುನೀಂದ್ರರ್ ಬೆಸಸಿ ಸತ್ಪಥೋನ್ನತಿಯಂ ನನ್ನಿಮಾಡುವಂತೆ ಸತ್ಪಥಾತಿಥಿಗಳಾದರ್ (ಆದಿಪು. ೫-೨೦ ವ). [ಸಂ.]

**ಸತ್ಪದ** (ನಾ). ೧. ಒಳ್ಳೆಯ ಪದವಿ, —ಸ್ಥಾನ. ೨. ನಕ್ಷತ್ರಗಳ ಸ್ಥಳ ; ಆಕಾಶ : ಕರಮಂ ವಾರುಣಿಗೆಂದು ನೀಡಿ ಪಿರಿದುಂ ನಿಸ್ತೇಜಮಯ್ದಿರ್ದ ತನ್ನಿರವಂ ನೋಡದೆ ಸತ್ಪದಪ್ರಭುತೆಯಂ ತಾಳ್ದಿರ್ಪ ದೋಷಾಕರಂ ದೊರೆಯೇ (ಎಕ. VII, ಶಿವಮೊ. ೪-೭೪; 1122). [ಸಂ.]

**ಸತ್ಪಾತ್ರ** (ನಾ). ೧. ಉತ್ತಮವಾದ ಯೋಗ್ಯತೆ, — ಅರ್ಹತೆ : ಪೇಳಿಸುವನಂದಿನ ದಿನದ ಮೊದಲ ರಾತ್ರಿಯೆ . . . ಸತ್ಪಾತ್ರದವನಿಯಮರ್ಗನಲು (ಜೈಮಿಭಾ. ೧೧-೨೭). ೨. (ದಾನವನ್ನು ತೆಗೆದುಕೊಳ್ಳಲು) ಯೋಗ್ಯನಾದವನು, —ಅರ್ಹ ನಾದವನು : ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್‌ಪಾತ್ರಕ್ಕೆ ಸಲ್ಲದಯ್ಯಾ (ಬಸವ. ೨೨೩); ಕೊಡಬೇಕುತ್ತಮನಾದವಂಗೆ ಮಗಳಂ ಸತ್ಪಾತ್ರಕಂ ದಾನಮಂ (ಸೋಮೇಶ. ೭೯). [ಸಂ.]

**ಸತ್ಪಾತ್ರದಾನ** (ನಾ). ಯೋಗ್ಯನಾದವನಿಗೆ ದಾನಮಾಡುವುದು ; ಅರ್ಹನಿಗ ದಾನಕೊಡುವುದು : ಸದ್ಭಕ್ತನಾದಾತನು ಸತ್‌ಪಾತ್ರದಾನಯುಕ್ತನಾಗಿರಬೇಕು (ಅಖಿಂಡೇ. ೫೨-೬).

ಸತ್ಪಾತ್ರದಾನನಿಧಿ = ಯೋಗ್ಯನಾದವನಿಗೆ ದಾನ ಮಾಡುವುದರಲ್ಲಿ ನಿಧಿಯಂತಿರುವವನು; ಒಂದು ಬಿರುದು: ನೆಗಟ್ದ ಮಣಲರ ಭೀಮಂ ಸತ್ಪಾತ್ರದಾನನಿಧಿಯರ್ಹತ್ಪಾದಾಬ್ಜಾಳಿಯಿಂದ್ರಕೇಶಿನರೇಂದ್ರ (ಸೌಇಇ. XX, ೪೭-೧೬; 1074). [ಸಂ.]

**ಸತ್ಪುಣ್ಯ** (ನಾ). ಒಳ್ಳೆಯ ಪುಣ್ಯ; ಸುಕೃತ: ಪಾವಕಾಕ್ಷನನರ್ಚಿಸುತ ಜಡಜೀವಿ ಗಳಿಗೀಕ್ಷಣವನೀವುದದಾವ ಸತ್ಪುಣ್ಯವು ಶಿವಾಗಮನಿಗಮದೃಷ್ಟಿಯೊಳು (ಬಸಪು. ೬೦-೭). [ಸಂ.]

**ಸತ್ಪುತ್ರ** (ನಾ). ಒಳ್ಳೆಯ ಮಗ ; ಸುಪುತ್ರ : ಸತ್ಪುತ್ರನ ಯೋಗದಿಂದ ನಿಂಗಪ್ಪನ ದಾರಿದ್ರ್ಯ ವಿಚ್ಛಿನ್ನವಾಯಿತು (ಮುಂಬಯಿ. ೪-೭೯). [ಸಂ.]

**ಸತ್ಪುರುಷ** (ನಾ). ಒಳ್ಳೆಯವನು ; ಯೋಗ್ಯ ; ಸಜ್ಜನ : "ಸಾಧುಃ, ಸಜ್ಜನಃ, ಆರ್ಯ — ಈ ೩ ಸತ್ಪುರುಷಂ" (ಪಲಾಯು. ೬೧-೨೦೭); ಈಸು ವಿಧದೊಳಗೆ ಅಂಗವಿಲ್ಲ ಮೇಲೆ ಸತ್ಪುರುಷರ ಸಂಗವಿಲ್ಲ (ಬಸವ. ೮೮೮); ಕಪ್ಪೆಗಳು ಮೀನುಗಳು ಇಪ್ಪುದದು ತೀರ್ಥವೇ . . . ಸತ್ಪುರುಷರಿಪ್ಪುದೇ ತೀರ್ಥ (ಸರ್ವಜ್ಞ. ೭೯೯). [ಸಂ.]

**ಸತ್ಪ್ರಣೀತ** (ಗು). ೧. ಚೆನ್ನಾಗಿ ಹೇಳಿದ. (ನಾ). ೨. [ಜೈನ] ಕರ್ಮಗಳನ್ನು ನಾಶಪಡಿಸುವ ಎಂಟು ಬಗೆಯ ಧರ್ಮಗಳಲ್ಲಿ ಒಂದು : ಅಲ್ಲಿ ಸತ್ಪ್ರಣೀತ ಮೆಂಬುದು ಭಯರಾಗಾದಿದೋಷರಹಿತಪ್ರಣೀತಮಪ್ಪ ಧರ್ಮಂ (ಚಾಪುಂಪು. ೭). [ಸಂ.]

**ಸತ್ಫಲ** (ನಾ). ೧. ಒಳ್ಳೆಯ ಹಣ್ಣು ; ಉತ್ತಮವಾದ ಫಲ : "ಮಾನಸೋತ್ಪತ್ತಿಲತಾಂತ ಸತ್ಫಲಮಸಂಖ್ಯಾತಂ ಪ್ರಸೂನಾತ್ಯಯಂ" (ನಾನಾರ. ೨೭). ೨. ಉತ್ತಮವಾದ ಪರಿಣಾಮ : ತ್ರಿದಶಾನಕಲಯದಿಂ ನೀರದವಥದೊಳ್ ನಾರದಂಗೆ ತಾಂಡವದ ತಗುಳ್ದೊದವಿದುದು ತನ್ನ ಮಾಡಿದ ಕದನದ ಸತ್ಫಲಮನಾಗಳನುಭವಿಸುವವೋಲ್ (ಶಾಂತಿಪು. ೪-೫೭); ವಿವೇಕಿಪಡೆ ಸೊಗಸಾಗಿ ಮುಂತೆಯನೇಕಸತ್ಫಲಸಿದ್ಧಿಯಹುದು (ಬಸವು. ೩೫-೪೫). [ಸಂ.]

**ಸತ್ಯ** (ಗು). ೧. ನಿಜವಾದ ; ದಿಟವಾದ. ೨. ನಂಬಿಕೆಯ ; ಪ್ರಾಮಾಣಿಕವಾದ. ೩. ಒಳ್ಳೆಯ ; ಉತ್ತಮವಾದ. (ನಾ). ೪. ನಿಜ ; ಯಥಾರ್ಥ : "ಋತಂ, ಸತ್ಯಂ, ಸಮೀಚೀನಂ, ಸಮ್ಯಕ್, ತಥ್ಯಂ — ಈ ೫ ಸತ್ಯದ ಪೆಸರ್" (ಹಲಾಯು. ೨೩-೧೪೩); ಸತ್ಯವ ನುಡಿವುದೇ ದೇವಲೋಕ ಮಿಥ್ಯವ ನುಡಿವುದೇ ಮರ್ತ್ಯಲೋಕ (ಬಸವ. ೨೩೭); ಹರನೆಂಬುದೇ ಸತ್ಯ ಸತ್ಯವೆಂಬುದು ಹರನು (ಹಚಕಾ. ೧೪-೩೨). ೫. ನಿಯಮ; ಕಟ್ಟಳೆ : "ಸತ್ಯಂ ನಿಬದ್ಧಮೆನೆ ಕಟ್ಟಳೆ" (ಮಂಗರಾ. ೧೦೫-೧೪). ೬. ಆಣೆ ; ಪ್ರಮಾಣ; ಶಪಥ. ೭. ವಿಳುಊರ್ಧ್ವಲೋಕಗಳಲ್ಲಿ ಮೇಲಿನದು ; ಬ್ರಹ್ಮಲೋಕ : "ಭೂರ್ಭುವಂ ಸ್ವರ್ಮಹಂ ಜನ ತಪಂ ಸತ್ಯಮೆಂದೇಳು ಮೇಲಣ ಲೋಕಮಕ್ಕು" (ಮಂಗರಾ. ೧೦-೩೨). ೮. ನಾಲ್ಕುಯುಗಗಳಲ್ಲಿ ಮೊದಲನೆಯದಾದ ಕೃತಯುಗ ; ಸತ್ಯ ಮತ್ತು ಧರ್ಮವನ್ನುಳ್ಳ ಸ್ವರ್ಣಯುಗ. ೯. ಬ್ರಹ್ಮತತ್ತ್ವ: ಈಶ್ವರತ್ರಯಕ್ಕೆ ಅಧಿಷ್ಠಾತೃ ನಿರುಪದ್ರವ ಸತ್ತಾಮಾತ್ರಸತ್ಯ . . . ಎಂಬಿವು ಮೊದಲಾದವೇ ಅದ್ವೈತಬ್ರಹ್ಮಪರ್ಯಾಯನಾಮಂಗಳಕ್ಕುಂ (ವಿವೇಕ. ೨೭); ಸತ್ಯವೆಂದರೂ ಜ್ಞಾನವೆಂದರೂ ಅನಂತವೆಂದರೂ ಬ್ರಹ್ಮವೆಂದರೂ ಒಂದೇ (ಭಾರದ. ೧೧೪). ೧೦. ನಿಜವನ್ನು ಹೇಳುವವನು ; ಸತ್ಯವಂತ : ನಿನ್ನಂತೆ ಸತ್ಯರೀ ಕ್ಷಿತಿಯೊಳಿನ್ನಾರುಂಟು (ಹಚಕಾ. ೧೪-೧೦); ಸತ್ಯರ ನುಡಿ ತೀರ್ಥ ನಿತ್ಯರ ನಡೆ ತೀರ್ಥ (ಸರ್ವಜ್ಞ. ೮೦೦). ೧೧. [ಜೈನ] ಆತ್ಮನ ದಶಧರ್ಮಗಳಲ್ಲಿ ಒಂದು : ಉತ್ತಮಕ್ಷಮಾಮಾರ್ದವಾರ್ಜವಸತ್ಯಶೌಚಸಂಯಮತಪಸ್ತ್ಯಾಗಾಕಿಂಚನ ಬ್ರಹ್ಮಚರ್ಯಪರ್ಯಾಪ್ತದಶಧರ್ಮಂಗಳುಮಂ ಕೈಕೊಂಡು (ಆದಿಪು. ೬-೩೦ ವ). ೧೨. ಗೃಹಸ್ಥರು ಅನುಸರಿಸಬೇಕಾದ ಐದು ಬಗೆಯ ಅಣುವ್ರತಗಳಲ್ಲಿ ಒಂದು ; ನಿಜವನ್ನು ನುಡಿಯುವುದು ; ಸುಳ್ಳುಹೇಳದಿರುವುದು : ಅಹಿಂಸೆ, ಸತ್ಯ, ಅಚೌರ್ಯ, ಬ್ರಹ್ಮಚರ್ಯ, ಪರಿಗ್ರಹಪರಿಮಾಣ ಈ ಐದು ಅಣುವ್ರತಗಳನ್ನೂ . . . ಪಾಲಿಸುವವನು ವ್ರತಿಕಶ್ರಾವಕನೆನ್ನಿಸಿಕೊಳ್ಳುವನು (ಜೈನಪ. ೪೮೫).

**ಸತ್ಯಕಾನೀನ** = ನಿಜ ಹೇಳುವುದರಲ್ಲಿ ಕರ್ಣನಂತಿರುವವನು ; ಒಂದು ಬಿರುದು : ಮಹಾಪ್ರಚಣ್ಡದಣ್ಡನಾಯಕಂ ವಾಹನವಸ್ತುನಾಯಕಂ ಸತ್ಯಕಾನೀನಂ ನೀತಿನಿಧಾನಂ (ಸೌಇಇ. XX, ೬೦-೬; 1088). **ಸತ್ಯಪತಾಕ** = ಸತ್ಯವನ್ನು ಎತ್ತಿ ಹಿಡಿಯುವವನು ; ಒಂದು ಬಿರುದು : ಪೊಸಸುಗ್ಗಿಯನಾರ್ಜಿಸೆ ನಾಡು ನಾಡೆ ಸೌಖ್ಯಾಲಯಮಾಗೆ ಮಾಡಿದುದು ಸತ್ಯಪತಾಕನ ರಾಜವೈಭವಂ (ಎಕ. VII, ಶಿಕಾ. ೨೩೭-೫೪; 1173). **ಸತ್ಯಪರ** = ನಿಜದ ಪಕ್ಷ ವಹಿಸುವವನು ; ಸತ್ಯವಂತ ; ಒಂದು ಬಿರುದು : ದಾನವಿನೋದಿ ಸತ್ಯಪರ [ಆ]ಶ್ರಿತಕಲ್ಪಮಹೀಜ (ಸೌಇಇ. XX, ೭೦-೧೧; 1108). **ಸತ್ಯರತ್ನಾಕರ** = ನಿಜದಲ್ಲಿ ಸಮುದ್ರದಂತಿರುವವನು; ಒಂದು ಬಿರುದು : ಜನಕಂ . . . ವಿಶಿಷ್ಟೇಷ್ಟನಿದಾನಂ ಸತ್ಯರತ್ನಾಕರನೆನಿಸಿದ ಗೋವಿಂದರಾಜಂ (ಸುಕುಮಾ. ೧-೫೫); ಜಗದ್ವಿದಿತಾಷ್ಟಾದಸಾಶ್ವಮೇಧದೀಕ್ಷಿತ ಕುಳಪ್ರಸೂತಂ ಸತ್ಯರತ್ನಾಕರಂ (ಸೌಇಇ. XX, ೪೧-೯; 1066); ವಿಳಾಸವಲ್ಲಭಂ ಸತ್ಯರತ್ನಾಕರಂ ಗಳಗಂಡಗತ್ತರಿ . . . ಕುಮಾರ ಬೊಂಮದೇವರಸರು (ಕಇ. IV, ೪೩-೩; 1264). **ಸತ್ಯರಾಧೇಯ** = ಸತ್ಯಕಾನೀನ : ದಾನವಿನೋದ ರಿಪುಕುರುಂಗಕಂಠೀರವ X X X ಸತ್ಯರಾಧೇಯ (ಎಕ. XII, ಶಿರಾ. ೪೦-೪೮; 1040); ಸಾಹಸವೈನತೇಯಂ ಸತ್ಯರಾಧೇಯಂ (ಕಇ. ೧-೧-೨; 1092). **ಸತ್ಯಾವಲೋಕ** = ಸತ್ಯದರ್ಶಿಯಾದವನು ; ಒಂದು ಬಿರುದು : ರಾಯಕುಮಾರಚಮತ್ಕಾರಂ ಕೀರ್ತ್ತಿವಲ್ಲರೀವಳಯಿತತ್ರಿಳೋಕಂ ಸತ್ಯಾವಲೋಕಂ (ಸೌಇಇ. XX, ೪೦-೧೩; 1066). [ಸಂ.]

**ಸತ್ಯಂಕಾರ** (ನಾ). ೧. ಆಣೆ; ಪ್ರಮಾಣ; ಪ್ರತಿಜ್ಞೆ: "ಸತ್ಯಂಕಾರ — ಸಹಿ ಮಾಡೋಣ, ನಿಶ್ಚಯವಾಗಿ ಮಾಡುತ್ತೇನೆಂದು ಒಪ್ಪಿಕೊಳ್ಳೋಣ" (ಗಂಗಾಮು. ೩೨೦). ೨. ವ್ಯಾಪಾರದ ಒಪ್ಪಂದವಾದಾಗ ಮುಂಗಡವಾಗಿ ಕೊಡುವ ಹಣ ; ಅಗಾವು : "ಸತ್ಯಾಪನಂ, ಸತ್ಯಂಕಾರಃ, ಸತ್ಯಾಕೃತಿಃ — ೩ ವ್ಯಾಪಾರದ ಒಪ್ಪಂದಕ್ಕೂ ಸಂಚಕಾರಕ್ಕೂ ಹೆಸರುಗಳು" (ಸಿದ್ಧಾಂತಿ. ೨೯೬). [ಸಂ.]

**ಸತ್ಯಕಾಮ** (ನಾ). ೧. ನಿಜ ಹೇಳುವುದರಲ್ಲಿ ಆಸೆಯುಳ್ಳವನು ; ಸತ್ಯವಂತ : ಈತನಲೆ ಸತ್ಯಕಾಮನುಮೀತನೆ ಸತ್ಯಪ್ರತಿಜ್ಞನು (ವಸ್ತವಂ. ೬-೩೯). ೨. ಜಾಬಾಲಿ ಯೆಂಬ ಋಷಿಯ ಮಗ. [ಸಂ.]

**ಸತ್ಯದೂರ** (ನಾ). ನಿಜಕ್ಕೆ ದೂರವಾದುದು; ಸುಳ್ಳು: ವೇದಋಷಿಗಳಿಗೆ ಸೌಂದರ್ಯಪ್ರಿಯತೆ ಇರಲಿಲ್ಲವೆನ್ನುವುದಾಗಲೀ ಅವರಿಂದ ಕಲಾಕೃತಿಗಳು ರಚಿತವಾಗಲಿಲ್ಲವೆನ್ನುವುದಾಗಲೀ ಸತ್ಯದೂರವಾದ ಸಂಗತಿಗಳು (ಸೌಂದಸ. ೧೧೯). [ಸಂ.]

**ಸತ್ಯದೃಷ್ಟಿ** (ನಾ). ವಾಸ್ತವದೃಷ್ಟಿ ; ನಿಜವಾದ ನೋಟ : ಶರಣನದು ಸತ್ಯದೃಷ್ಟಿ (ನವ್ಯಕಾ. ೯೩); ಸೌಂದರ್ಯದ ಅನುಭವವು ಸತ್ಯದೃಷ್ಟಿ ಮತ್ತು ವಿಷ್ಣೆಗಳನ್ನು ಅಪೇಕ್ಷಿಸುತ್ತದೆ (ಶಕ್ತಿವಿ. ೨). [ಸಂ.]

**ಸತ್ಯಪಾಠ** (ನಾ). [ಗ್ರಂಥಸಂ] ಕವಿಯೇ ರಚನೆ ಮಾಡಿದ ಕೃತಿಯ ಲಿಖಿತ ಭಾಗ, — ನಿಜವಾದ ಪಾಠ ; ಮೂಲಪಾಠ : ತಿದ್ದುಪಡಿಯನ್ನು ಸತ್ಯಪಾಠವೆಂದೇ ಭಾವಿಸಲು ಸಿದ್ಧವಿಲ್ಲವಾದರೂ ಅದು ಸತ್ಯಪಾಠವಾಗಿರಬಹುದಾದ ಸಾಧ್ಯತೆಯೇನೋ ಇದೆ (ಭಾರಪ. ೮೦). [ಸಂ.]

**ಸತ್ಯಪ್ರತಿಜ್ಞ** (ನಾ). ಮಾಡಿದ ಪ್ರತಿಜ್ಞೆಯನ್ನು ದಿಟವಾಗಿ ಪೂರೈಸುವವನು : ಸತ್ಯಪ್ರತಿಜ್ಞನೆನೆ ಕುರುಪತ್ಯೂರುಕಿರೀಟಭಂಗಮಂ ಪಡೆದು ಜಗತ್ಸ್ತುತ್ಯ ಕೃತಕೃತ್ಯನೆನಿಸದ ಸತ್ಯಾಶ್ರಯವೆಸರ್ಗೆ ಮುಯ್ಯನಾಂಪನೆ ಭೀಮಂ (ಗದಾಯು. ೧-೬೪); ಈತನೆ ಸತ್ಯಪ್ರತಿಜ್ಞನಿವನೆ ಕೃತಜ್ಞಂ (ವಸ್ತವಂ. ೬-೩೯). [ಸಂ.]

**ಸತ್ಯಮಂತ** (ನಾ). ನಿಜವನ್ನು ಹೇಳುವವನು ; ಸತ್ಯಸಂಧ : ನಿಯೋಗಿಗಳಲ್ಲಂ . . . ಪ್ರತಿಕಣ್ಠಚಿನ್ನನಿಂ ಪಿರಿಯರೆ . . . ಸಲೆ ಸತ್ಯಮನ್ತರ (ಸೌಇಇ. XI-ii, ೧೪೭-೫೩; 1099). [< ಸಂ. ಸತ್ಯವತ್]

**ಸತ್ಯಯುಗ** (ನಾ). = ಸತ್ಯ ೮ : ಈ ಕಲಿಯುಗದಲ್ಲೂ ಸತ್ಯಯುಗದಲ್ಲಿಯ ಅಸಾಧಾರಣವಾದಂತಹ ಪವಾಡ ನಡೆಯುವುದು (ಶಾಂತಲಾ. ೨೬೯). [ಸಂ.]

**ಸತ್ಯರತ** (ನಾ). ಸತ್ಯದಲ್ಲಿ ಆಸಕ್ತಿಹೊಂದಿದವನು : ಸತ್ಯರತಂ ಶಾಸ್ತ್ರವಿದಂ . . . ಕನ್ಯಾನಿವಾಸೋದ್ಭವಂ (ಜಾತತಿ. ೧೭-೬). [ಸಂ.]

**ಸತ್ಯರ್ಥ** (ನಾ). = ಸತಿಸಪ್ತಮಿ : ಇನಗಮುದುಮಂನಮಂನೆಗಮಿನಮಲೊಡಂ ಸೊನ್ನೆವೆರಸು ಸತ್ಯರ್ಥದೆಕಾರನಿಜಸ್ಥಾನದೊಳಪ್ಪುವಿವನುಕೂಲಂ ಮತ್ತೆಕಾರದಾದಿಯೊಳ ಲೊಡಂ (ಶಮದ. ೨೪೭). [ಸಂ.]

**ಸತ್ಯಲೋಕ** (ನಾ). = ಸತ್ಯ ೭ : ಭುವರ್ಲೋಕದ ಸ್ಥಾವರಕ್ಕೆ ಸತ್ಯಲೋಕದ ಅಗ್ರವಣಿಯಲ್ಲಿ ಮಜ್ಜನಕ್ಕೆಟೆದು (ಅವಚಂ. ೪೭-೧೯೭); ಪರಮಜಂಗಮದಲ್ಲಿ ಹದಿನಾಲ್ಕುಲೋಕಂಗಳಡಗಿರ್ಪವು ನೋಡಾ ಅದೆಂತೆಂದೊಡೆ . . . ಮೂರ್ಧ್ನಿಯಲ್ಲಿ ಸತ್ಯಲೋಕ (ಅವಿಂಡೇ. ೧೪೨-೧೨೪). [ಸಂ.]

**ಸತ್ಯವಂತ** (ನಾ). = ಸತ್ಯಮಂತ : ಸತ್ಯವಂತರಿಗಿದು ಕಾಲವಲ್ಲ ದುಷ್ಟಜನರಿಗೆ ಸುಭಿಕ್ಷಕಾಲ (ಪುರಂದ. ೧-೧೫೧ ಪಲ್ಲವಿ). [ಸಂ. ಸತ್ಯವತ್]

**ಸತ್ಯವಾಕ್ಯ** (ನಾ). ನಿಜವನ್ನು ಹೇಳುವವನು ; ಸತ್ಯವಂತ : ಧರಣೀಪುತ್ರನಿವಾಸದೊಳ್ ನಿಲೆ ಬುಧಂ . . . ಧನಿ ಸತ್ಯವಾಕ್ಯನೆನಿಕುಂ (ಜಾತತಿ. ೧೭-೨೨); ಶ್ರಿಯುತ ಶಾಂತಿವರ್ಮಪೆಜಿರ್ . . . ನಿನ್ನವೊಲುದಾರರ ಬೀರರೆ ಸತ್ಯವಾಕ್ಯರೇ (ಪುಷ್ಪಪು. ೧-೭೮).

**ಸತ್ಯವಾಕ್ಯಪೆರ್ಮನಡಿ, ಸತ್ಯವಾಕ್ಯಪೆರ್ಮಾಡಿ, ಸತ್ಯವಾಕ್ಯಪೆರ್ಮಾನಡಿ** = ಸಾಮಾನ್ಯವಾಗಿ ಗಂಗವಂಶದ ಅರಸರಿಗೆ ಸಲ್ಲುತ್ತಿದ್ದ ಒಂದು ಬಿರುದು : ಸ್ವಸ್ತಿ ಸತ್ಯವಾಕ್ಯಪೆರ್ಮ್ಮನಡಿಗಳ ಪಟ್ಟಂಗಟ್ಟಿದ ಪದಿನಯ್ದು ವರಿಶದನ್ದು (ಎಕ. II, ಕಳ೪-೧; 884 ?); ಶ್ರೀ ಸತ್ಯವಾಕ್ಯ ಪೆರ್ಮ್ಮಾಡಿ (ಮೈಆಂ. ೧೯೩೭, ೨೦-೧; 896);

ಸ್ವಸ್ತಿಶ್ರೀ ಸತ್ಯವಾಕ್ಯಪೆರ್ಮ್ಮಾನಡಿಗಳ ಪಟ್ಟಂಗಟ್ಟಿದ ಪಂನೆರಡನೆಯ ವರ್ಷದೊಳ್ (ಮೈಆರಿ. ೧೯೪೬, ೧೯-೧;?). [ಸಂ.]

**ಸತ್ಯವಾದಿ** (ನಾ). = ಸತ್ಯಮಂತ : ನೀಂ ಸತ್ಯವಾದಿಯಯ್ (ಪದ್ಮಾರಾ. ೧೬-೨೪); ಎಲ್ಲ ಸತ್ಯವಾದಿಯಾದ ತಪಸ್ವಿಯೆ . . . ಈಕೆಯನ್ನು ವಂಚಿಸಿದುದರಿಂದ ನಮಗೆ ಬರತಕ್ಕುದೇನು? (ಶಾಕುಂತ. ೭೧-೧೫). [ಸಂ. ಸತ್ಯವಾದಿನ್]

**ಸತ್ಯವ್ರತ** (ನಾ). ನಿಜವನ್ನು ಹೇಳುವುದೇ ನಿಯಮವಾಗುಳ್ಳ ಕಟ್ಟಳೆ,—ನೇಮ : ಸತ್ಯವ್ರತದ ಕಥೆಯಂ ಬೆಸಸುವುದು (ಧರ್ಮಾಮೃ. ೧೧-೨); ಶಂಕರ ಎರಿಂಬಾದಿಗಳು ಕರ್ಣನ ಪರಮಸತ್ಯವ್ರತವ ಕೊಂಡಾಡಿದರು ಅಕಟೆನುತ (ಕುಮ್ಮಾಕ. ೨೭-೨೯). [ಸಂ.]

**ಸತ್ಯಶರಣ** (ನಾ). ಸತ್ಯಸಂಧನಾದ ಶರಣ : ನಿಮ್ಮಲ್ಲಿ ಸಮ್ಯಕ್ಕರಾದ ಸತ್ಯಶರಣರ ಕಂಡು ಕೂಡಲಸಂಗಮದೇವಾ ಅವರನಯ್ಯಯೆಂಬೆನು (ಬಸವ. ೮೯೮); ಚಿತ್ತಶುದ್ಧಿಯವರು ಸತ್ಯಶರಣರವರು ಬೆತ್ತ ಹಿಡಿದು ಪರವೂತ ಏರುವದು ತಾ ಕಂಡು ಕತ್ತು ಬಾಗಿಸಿ ಸಿದ್ಧ ಶರಣೆಂದ (ಸಿದ್ಧಪು. ೫-೩೦). [ಸಂ.]

**ಸತ್ಯಶಾಪ** (ನಾ). ನಿಜವಾದ ಶಾಪ ; ಸತ್ಯವಾದ ಶಾಪ : ಬಸವರಾಜನ ಸತ್ಯಶಾಪವು ಮಸದೊರಸಿ ಹಾಳಾಯ್ತು ಕಟಕದ ಪಸರವು (ಬಸಪು. ೬೧-೪೦). [ಸಂ.]

**ಸತ್ಯಶುದ್ಧ** (ಗು). ಸತ್ಯಸಂಧತೆಯಿಂದ ಕೂಡಿದ : ಸತ್ಯಶುದ್ಧದೇವರಿಗೆ ಧ್ಯಾನ ಮೌನ ಅನುಷ್ಠಾನವುಂಟು (ಬಸವ. ೯೩೪). [ಸಂ.]

**ಸತ್ಯಸಂಧ** (ನಾ). ನಿಜವನ್ನು ಹೇಳುವವನು ; ಸತ್ಯವಂತ : ಸತ್ಯಸಂಧಂ ದಯಾನಿಧಿ ಶಿವಜ್ಞಾನಸಂಪನ್ನಂ . . . ಅಂಜಬೇಡಂಜಬೇಡ ಎನೆ (ಬಸರ. ೧೨-೫೧); ಸತ್ಯಸಂಧಂ ಭೀಷ್ಮನೆಂದು ಮೂಲೋಕದೊಳ್ವಿಖ್ಯಾತನಾಗಿಹಂ (ಜೈಮಿಭಾ. ೯-೩೦). [ಸಂ.]

**ಸತ್ಯಸಂಧತೆ** (ನಾ). ನಿಜವನ್ನು ಹೇಳುವಿಕೆ ; ಪ್ರಾಮಾಣಿಕತೆ : ದೊರೆಯೇ ನಿನ್ನ ಸತ್ಯಸಂಧತೆಗೆ ಮೆಚ್ಚಿದೆವು (ನೀತಿಚಿಂ. XIV, ೩೧); ಸತ್ಯಸಂಧತೆ, ಶರಣಾಗತರಕ್ಷಣೆ . . . ಮಾನವಧರ್ಮದ ವಿವೇಚನೆಯೇ ಈ ಕಥೆಗಳ ತತ್ತ್ವವಾಗಿದೆ (ಭಾರದ. ೧೦೨).

[ಸಂ. ಸತ್ಯಸಂಧತಾ]

**ಸತ್ಯಸಂಧಾನ** (ನಾ). ನಿಜದೊಡನೆ ಹೊಂದಿಕೊಳ್ಳುವಿಕೆ; ಸತ್ಯಸಂಧತೆ; ಪ್ರಾಮಾಣಿಕತೆ: ಜನರ ಸತ್ಯಸಂಧಾನವಂ ನೋಡಲೆಂದುಳ್ಳುದೆಲ್ಲವ ಕೊಂಡಡೇನೆಂಬನೋ ಎಂದು ಕಾಡಿ ನೋಡಿದನ್ನೆಸೆ (ಹಚಕಾ. ೧೪-೧೩). [ಸಂ.]

**ಸತ್ಯಹೀನ** (ನಾ). ನಿಜವನ್ನು ಅರಿಯದವನು ; ಸತ್ಯದೂರನಾದವನು : ನಿನ್ನನೇನೆಂಬೆನಿದು ಪೊಸತೆನಗೆ ಮಾಣ್ಬರೇ ಸತ್ಯಹೀನಂಗೆ ನೆಜ ಮುಳಿವುದಂ (ಸಂಬಿರ. ೧೫-೧೨೯). [ಸಂ.]

**ಸತ್ಯಾಂಶ** (ನಾ). ನಿಜವಾದ ವಿವರ,—ಸಂಗತಿ ; ವಾಸ್ತವಾಂಶ : ಇದು ಸತ್ಯಾಂಶದಿಂದ ಎಷ್ಟೇ ದೂರವಿದ್ದರೂ ಒಂದು ವಿಚಾರ ಗಮನಾರ್ಹ (ದೇವಹಂ. ೪೯); ಈಗಲಾದರೂ ನೀನು ಸತ್ಯಾಂಶವನ್ನು ತಿಳಿಸಿ . . . ಋಣದಿಂದ ಮುಕ್ತನಾಗಬೇಕಾದ್ದು ಅತ್ಯವಶ್ಯಕ (ವೀರಯೋ. ೪೯). [ಸಂ.]

**ಸತ್ಯಾಗ್ರಹ** (ನಾ). ೧. ಸತ್ಯಸ್ಥಾಪನೆಗಾಗಿ (ಅನ್ಯಾಯದ ವಿರುದ್ಧ) ಆತ್ಮಬಲದಿಂದ ನಡೆಸುವ ಶಾಂತಿಪೂರ್ವಕ ಸಂಘರ್ಷ : ಒಂದಾದ ಮೇಲೊಂದು ಹೋರಾಟ, ಸತ್ಯಾಗ್ರಹ (ಆತ್ಮಾರ್ಪ. ೧೮೮). ೨. ಮುಷ್ಕರ ; ಸಂಪು : ಈ ಬನವು . . . ಗೃಹಖಾತೆಯವರ ನಿತ್ಯಸತ್ಯಾಗ್ರಹದಲ್ಲಿ ಇನ್ನಷ್ಟು ಹಾಳಾಗಿದ್ದವು (ಚತಸ. ೩೫); ಅವರ ತಾಯಿ ಮಾತ್ರ ಉಪವಾಸವ್ರತ ಕೈಕೊಂಡು ಮಗ ಮೈಲಿಗೆಯಾದುದಕ್ಕೆ ಸತ್ಯಾಗ್ರಹ ಹೂಡಿದ್ದಳು (ದಂಬನಾ. ೭೧). [ಸಂ.]

**ಸತ್ಯಾಗ್ರಹಚಳುವಳಿ** (ನಾ). = ಸತ್ಯಾಗ್ರಹ ೧ : ಸತ್ಯಾಗ್ರಹಚಳುವಳಿಯು ಅತ್ಯಂತ ಬಿರುಸಿನಿಂದ ದೇಶದ ಮೂಲೆಮೂಲೆಗಳಲ್ಲೂ ನಡೆಯುತ್ತಿತ್ತು (ಆತ್ಮಾರ್ಪ. ೧೩೮).

[ಸತ್ಯಾಗ್ರಹ + ಚಳುವಳಿ (< ಚಳವಳ)]

**ಸತ್ಯಾಗ್ರಹಿ** (ನಾ). ಸತ್ಯಸ್ಥಾಪನೆಗಾಗಿ ಆತ್ಮಬಲದಿಂದ ಹೋರಾಡುವವನು ; ಸತ್ಯಾಗ್ರಹ ಮಾಡುವವನು : ಸ್ವಾತಂತ್ರ್ಯಸಂಗ್ರಾಮದಲ್ಲಿ ತನ್ನ ಜೀವವನು ಲೆಕ್ಕಿಸದೆ ಹೋರುವವನು ವೀರಸತ್ಯಾಗ್ರಹಿ (ಪಾಂಚಜ. ೨೦-೨). [ಸಂ. ಸತ್ಯಾಗ್ರಹಿನ್]

**ಸತ್ಯಾಚರಣೆ** (ನಾ). ನ್ಯಾಯಪರಿಪಾಲನೆ ; ಸತ್ಯವನ್ನು ಬಿಡದೆ ಇರುವುದು : ನಾವು ಸತ್ಯಾಚರಣೆಗಾಗಿ ರುಕ್ಮಾಂಗದ ಹರಿಶ್ಚಂದ್ರ ಭೂಚಕ್ರಪಾಲರಾತ್ಮಜರ ಮೊಗ ನೋಡಿದರೆ ಹೇಳೆಂದು ನುಡಿದರವರು (ಜೈಮಿಭಾ. ೧೧-೩೦). [ಸಂ. ಸತ್ಯಾಚರಣ]

**ಸತ್ಯಾನಾಶ** (ನಾ). ಸರ್ವನಾಶ; ವಿನಾಶ: ಅವನು ಸತ್ತರೂ ತನ್ನ ದ್ವೇಷ ಕಸಿದುಕೊಂಡಿದ್ದಾನೆ ; ಸೇಡಿನ 'ಸತ್ಯಾನಾಶ' ಮಾಡಿದ್ದಾನೆ (ಬನಸಿ. ೪೫).,

[<— ಹಿಂ. ಸತ್ಯಾನಾಶ್; ಮರಾ. ಸತ್ಯಾನಾಶ್, ಸತ್ಯನಾಶ್, ಸತ್ಯನಾಸ್]

**ಸತ್ಯಾನೃತ** (ನಾ). ೧. ಸತ್ಯ ಮತ್ತು ಸುಳ್ಳು ; ನಿಜಸುಳ್ಳುಗಳನ್ನು ಹೊಂದಿರುವಿಕೆ : ಆತ್ಮಜ್ಞಾನಾಭ್ಯಾಸಿಯಾಗಿ ಸ್ನಾನ ಶೌಚ ಸತ್ಯಾನೃತ ಕಾಮ ಕ್ರೋಧ . . . ದರ್ಪಾದಿಗಳಂ ಬಿಟ್ಟು (ವಿವೇಕ. ೧೨೮). ೨. ವ್ಯಾಪಾರ ; ಮಾರಾಟ. [ಸಂ.]

**ಸತ್ಯಾನ್ವೇಷಣೆ** (ನಾ). ನಿಜವನ್ನು ಹುಡುಕುವುದು ; ಸತ್ಯದ ಪರಿಶೋಧನೆ : ಸತ್ಯಾನ್ವೇಷಣ, ಅನ್ವೇಷಣದ ಸಾಹಸ, ಸೌಂದರ್ಯಾನುಭವ, ಕರ್ಮಕೌಶಲ ಮತ್ತು ಅಂತಃಶಾಂತಿ ಇವು ಐದೂ ಉತ್ತಮಸಂಸ್ಕೃತಿಯ ಲಕ್ಷಣಗಳು (ಮಲ್ಲಾರ. ೯೯ ಪೀಠಿಕೆ).

[ಸಂ.]

**ಸತ್ಯಾಭಾಸ** (ನಾ). ೧. ನಿಜದಂತೆ ತೋರುವುದು ; ಸುಳ್ಳು : ಸತ್ಯಾಭಾಸವನ್ನು ಕಂಡರ ನನಗ ತುಂಬ ಅಸಹನೆ (ಬಂಕಿಮ. ೪೯೯). ೨. [ಜೈನ] ಲೋಕಾಂತಿಕ ದೇವತೆಗಳಲ್ಲಿ ಒಂದು ವರ್ಗಕ್ಕೆ ಸೇರಿದವನು : ಆದಿತ್ಯವಹ್ನಿಮಧ್ಯದೊಳ್ ಚಂದ್ರಾಭಾಸಸತ್ಯಾಭಾಸರುಂ (ತತ್ತ್ವಪ್ರ. ೨೨೨). [ಸಂ.]

**ಸತ್ಯಾರ್ಥ** (ನಾ). ನಿಜವಾದುದು ; ಸತ್ಯವಾದುದು : ತೀರ್ಥಕರಂ ಭವ್ಯಜನಸ್ವಾರ್ಥಕರಂ ನಮಗೆ ಪುತ್ರನಾದಪನಿದು ಸತ್ಯಾರ್ಥಂ (ಪುಷ್ಪಪು. ೯-೧೧೦); ಸ್ವಕಪೋಲಕಲ್ಪಿತಮಲ್ಲದ ಸಾರತರಮಾದ ಸತ್ಯಾರ್ಥಂಗಳನೇ ಸಂಗ್ರಹಿಸಿ (ವಿವೇಕ. ೨).

[ಸಂ.]

**ಸತ್ಯಾರ್ಥಿ** (ನಾ). ನಿಜವನ್ನು ಗುರಿಯಾಗಿಟ್ಟುಕೊಂಡಿರುವವನು ; ಸತ್ಯಾನ್ವೇಷಿಯಾದವನು : ಯಾರನ್ನಾದರೂ ಅನ್ಯಾಯವಾಗಿ ಸೆರೆಹಾಕುವ ಆಡಳಿತದಲ್ಲಿ ಸತ್ಯಾರ್ಥಿಯ ನಿಜವಾದ ಸ್ಥಾನ ಸೆರೆಮನೆಯೇ ಸರಿ (ಪುನರು. ೪೦೩).

[ಸಂ. ಸತ್ಯಾರ್ಥಿನ್]

**ಸತ್ಯಾಶ್ರಯ** (ನಾ). ೧. ನಿಜಕ್ಕೆ ಆಕರನಾದವನು ; ಸತ್ಯಕ್ಕೆ ಆಶ್ರಯನಾದವನು : ಎರಡನೆಯ ರುದ್ರನೆನಿಸುವ ವಸಿಷ್ಠನ ಶಿಷ್ಯನರಿದೆನಿಪ ರುದ್ರಾರ್ಚಕಂ ಗಿಂಜೆ ಗಣಕುಲಂಬೆರಸು ರುದ್ರನಸೆಳೆದು ತಂದು ಕೊಡಲಾರ್ಪ ಸತ್ಯಾಶ್ರಯಂ (ಪಚಕಾ. ೧೧-೩೯). ೨. ಸಾಮಾನ್ಯವಾಗಿ ಕಲ್ಯಾಣಚಾಲುಕ್ಯವಂಶದ ಅರಸರಿಗೆ ಸಲ್ಲುತ್ತಿದ್ದ ಒಂದು ಬಿರುದು : ಸಮಸ್ತಧಾತ್ರಿವಳಯಕ್ಕೆಂದುಂ ದಿಶಾದಂತಿಗಳ್ವರೆಗಂ ತಂದೆಯ ಕೀರ್ತಿಯೇಂ ಬಳೆದುದೋ ಸತ್ಯಾಶ್ರಯಂ ಧನ್ಯನೋ (ಗದಾಯು. ೧-೧೨).

**ಸತ್ಯಾಶ್ರಯಕುಲತಿಲಕ, ಸತ್ಯಾಶ್ರಯಕುಳತಿಳಕ** = ಸಾಮಾನ್ಯವಾಗಿ ಕಲ್ಯಾಣಿ ಚಾಲುಕ್ಯವಂಶದ ಅರಸರಿಗೆ ಸಲ್ಲುತ್ತಿದ್ದ ಒಂದು ಬಿರುದು : ಸತ್ಯಾಶ್ರಯಕುಲತಿಲಕನುಂ ಇಱಿವಬೆಡಂಗನುಂ . . . ಸಾಹಸಾಂಕನುಮೆನಿಸಿದ ಭೀಮಸೇನನಂತು ಆರೂಢಕೋಪನುಂ ಪ್ರತಿಜ್ಞಾರೂಢನುಮಾಗಿ (ಗದಾಯು. ೨-೧ ವ); ಶ್ರೀಪೃಥ್ವಿವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟಾರಕಂ ಸತ್ಯಾಶ್ರಯ ಕುಳತಿಳಕಂ (ಸೌಇಇ. XX, ೪೬-೩; 1072); ಶ್ರೀಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ (ಎಕ. II (R), ೫೩.೨-೪; 12ನೆಯ ಶತ). [ಸಂ.]

**ಸತ್ತ್ಯೋದಕ** (ನಾ). [ವೀಶೈ] ಹತ್ತು ವಿಧವಾದ ಪಾದೋದಕಗಳಲ್ಲಿ ಒಂದು : ಆ ಜಂಗಮಕ್ಕೆ ನಮಸ್ಕರಿಸಿ ಆ ಭಾಜನವನ್ನು ತನ್ನ ಕ್ರಿಯೆಗೆ ಇಟ್ಟುಕೊಂಡಂತಹದೇ ಸತ್ತ್ಯೋದಕವೆನಿಸುವುದು (ಚೆನ್ನವ. ಕ. ೭೮-೧೭೩); ಮುಂತೆ ಪರಬ್ರಹ್ಮರಂಧ್ರದೊಳಿರ್ದ ಸತ್ತ್ಯೋದಕವ ಚರಣದಿಂದೆ ಪಡೆದು (ಮೈಲಾರ. ೧-೧೦). [ಸಂ.]

**ಸತ್ರ** (ನಾ). ೧. ಯಜ್ಞ ; ಯಾಗ : "ಯಾಗಃ . . . ಸವಃ ಸತ್ರಂ — ಈ ೧೨ ಯಾಗಂ" (ಪಲಾಯು. ೬೮ ೨೬೦); ವಸುವಲಾ ಪೂರ್ವದಲಿ ನೀನರ್ಚಿಸಿದೆ ನನ್ನನು ಸತ್ರದಲಿ (ನಿಘಾಗ. ೩-೨-೫೯). 'ದೇವಸತ್ರ' ಪರಾ. ೨. ವಿಶೇಷವಾಗಿ ಹದಿಮೂರು

ದಿನಗಳಿಂದ ನೂರುದಿನಗಳವರೆಗೆ ಜರುಗುವ ಯಾಗ : 'ಸತ್ರಯಾಗ' ಪರಾ. ೩. ನೈವೇದ್ಯ ; ಎಡೆ. ೪. ಉಚಿತವಾಗಿ ಆಹಾರದಾನ ನಡೆಯುವ ಅಥವಾ ಪ್ರವಾಸಿಗರು ಇಳಿದುಕೊಳ್ಳಲು ಅನುಕೂಲವಾದ ಧರ್ಮಶಾಲೆ ; ಚತ್ರ : "ತಳಿ — ಸೇಚನೇ (ಚಿಮುಕಿಸು). ಸತ್ರೇಚ (ಸತ್ರ)" (ಶಮಧಾ); ಸ್ವಧರ್ಮ್ಮದಿಂ ನಡೆಯಿಸುವ ಸತ್ರಕ್ಕೆ ಬ್ರಾಹ್ಮಣಯದುವಳ್ (ಎಇ. XVI, ೬-೬೮; 978); ಎಟ್ಕೋಟಿ ತಪೋಧನರ ಸತ್ರಕ್ಕೆ ಮತ್ತರ್ಪ್ಪನ್ನೆರಡು (ಎಇ. XX, ೭೭-೧೮; 1012); ಕಾಶಿ, ಕಂಚಿ, ಶ್ರೀರಂಗ ಮುಂತಾದ ದಿವ್ಯಕ್ಷೇತ್ರಗಳಲ್ಲಿ ಪ್ರತಿದಿನದಲ್ಲಿಯೂ ಅನ್ನದಾನ ನಡವಂತೆ ಸತ್ರಗಳನ್ನುಂಟುಮಾಡಿದರು (ಮಹಾವಂ. II, ೧೫೫). 'ಅನ್ನಸತ್ರ' ಪರಾ. ೫. ಔದಾರ್ಯ ; ಧಾರಾಳತನ ; ದಾನಶೀಲತೆ. ೬. ಸಂಪತ್ತು ; ಐಶ್ವರ್ಯ. ೭. ಆಶ್ರಯಸ್ಥಾನ ; ನೆಲೆ : ಮರಗಳ ಪದ್ಮಾಗರಂ ದವಾಗ್ನಿಯ ಸತ್ರಂ . . . ಕೇಸರಿಗಳ ಸರಿ ಪರ್ವಿದಡವಿ ಪಡೆದುದಗುರ್ವಂ (ಚಂದ್ರಪ್ರ. ೫-೪೭); ಧಾತ್ರಿಯೊಳಾಪನ್ನಾಭಯಸತ್ರದ ಧೃತದೀಕ್ಷರಲ್ತೆ ಪುರುಕುಲದರಸರ್ (ಶಾಕುಂತ. ೨೮-೫೧). ೮. ಆವರಣ ; ಹೊದಿಕೆ. ೯. ಕಾಡು; ಅರಣ್ಯ: "ಅರಣ್ಯಂ, ಅಟವೀ, ಸತ್ರಂ . . . ದುರ್ಗಂ — ಈ ೯ ಅಡವಿ" (ಹಲಾಯು. ೩೫-೫೭). ೧೦. ನ್ಯಾಯನಿರ್ಣಯಕ್ಕಾಗಿ ಒಂದು ಬಾರಿ ಸೇರುವ ಸಭೆ ,—ಒಂದು ಅಧಿವೇಶನ : 'ಸತ್ರನ್ಯಾಯಾಧೀಶ', 'ಸತ್ರನ್ಯಾಯಾಲಯ' ಪರಾ. [ಸಂ.]

**ಸತ್ರಕಾಣಿಕೆ** (ನಾ). ಧರ್ಮಶಾಲೆ ನಡೆಸಲು ಕೊಡುವ ಕಾಣಿಕೆ ,—ಕೊಡುಗೆ : ಸತ್ರಕಾಣಿಕೆ ಸೇಸೆಯಾಸೆಗಳು ಮನ್ನೆಯ ವಾಯದಾಯ ಮಾನ್ಯ ಸಲ್ಲವು (ಸೌಇಇ. XX. ೮೫-೩೦; 1124). [ಸತ್ರ + ಕಾಣಿಕೆ (< ಕಾಣ್ಕೆ)]

**ಸತ್ರನಿಳಯ** (ನಾ). ಧರ್ಮಶಾಲೆ ; ಚತ್ರ : ಆಶ್ರಿತಜನಕ್ಕಶೋಕನಿಳಯಮನಿಸಿದ ಸತ್ರನಿಳಯಂಗಳುಂ (ಪುಷ್ಪಪು. ೯-೨೨ ವ). [ಸಂ. ಸತ್ರನಿಲಯ]

**ಸತ್ರನ್ಯಾಯಾಧೀಶ** (ನಾ). ನ್ಯಾಯನಿರ್ಣಯಕ್ಕಾಗಿ ಒಂದು ಬಾರಿ ಸೇರುವ ಸಭೆಯ ನ್ಯಾಯಾಧಿಪತಿ : "ಜಿಲ್ಲಾನ್ಯಾಯಾಧೀಶರು" ಎಂಬ ಪದಗಳ ಅರ್ಥದಲ್ಲಿ . . . ಸತ್ರನ್ಯಾಯಾಧೀಶರೂ ಅಪರಸತ್ರನ್ಯಾಯಾಧೀಶರೂ . . . ಸೇರಿರುತ್ತಾರ (ಭಾಧಾಸ. ೧೨೯). [ಸಂ.]

**ಸತ್ರನ್ಯಾಯಾಲಯ** (ನಾ). ಪ್ರಧಾನವ್ಯವಹಾರಗಳ ನ್ಯಾಯಾಸ್ಥಾನ : ಅಪರಾಧಿ ಸತ್ರನ್ಯಾಯಾಲಯಕ್ಕೆ (ಸೆಷನ್ಸ್‌ಕೋರ್ಟ್) ಒಪ್ಪಿಸಲ್ಪಟ್ಟ ಸಂದರ್ಭಗಳಲ್ಲಿ . . . ಬೇರ ಆರೋಪವನ್ನು ಮಾಡಬಹುದು (ಕವಿಕೋ. I, ೮೬೮). [ಸಂ.]

**ಸತ್ರಯಾಗ** (ನಾ). ಹದಿಮೂರರಿಂದ ನೂರುದಿನಗಳವರೆಗೂ ಜರುಗಿಸುವ ಯಾಗ,—ಯಜ್ಞ : ಸತ್ರಯಾಗಕ್ಕಾಗಿ ಏರ್ಪಾಡುಗಳು ನಡೆಯುತ್ತಿರಲಾಗಿ ಒಂದುದಿನ ಪರಾವಸು ತನ್ನ ಹೆಂಡತಿಯನ್ನು ನೋಡಿಬರಬೇಕೆಂದು ಬಯಸಿದನು (ವ್ಯಾಸಪ. ೧೭೩). [ಸಂ.]

**ಸತ್ರಶಾಲೆ** (ನಾ). ೧. ಯಜ್ಞಕಾರ್ಯಕ್ಕಾಗಿ ನಿರ್ಮಿತವಾಗಿರುವ ಪ್ರದೇಶ ; ಯಾಗಶಾಲೆ : ಮತ್ತಮೊಂದು ಪವಿತ್ರ ಸತ್ರಶಾಲೆಯಲ್ಲಿ ಹೋಮದ ಕುಂಡದಿಂ ಕಡೆಸಿಡಿಲ್ದು ಪೊದಳ್ದಿರೆ ಕಂಡು ಕೆಂಡಮಂ (ರಾಜಶೇ. ೧-೧೨೭ ವ). ೨. ಚತ್ರ ; ಧರ್ಮಶಾಲೆ : "ಸತ್ರಶಾಲಾ, ಪ್ರತಿಶ್ರಯಃ — ಈ ೨ ಸತ್ರದ ಮನೆ" (ಹಲಾಯು. ೫೦-೧೪೨). [ಸಂ. ಸತ್ರಶಾಲಾ]

**ಸತ್ರಾಣ** (ನಾ). ಶಕ್ತಿಯಿಂದಿರುವುದು ; ತ್ರಾಣದಿಂದಿರುವುದು : "ಹೂಣೆಹೊಕ್ಕು ದುದೆಸಲ್ ಸತ್ರಾಣದಿನೊಳಪೊಕ್ಕುದೆಂದು ತಿಳಿಗೆ ವಿದಗ್ಧರ್" (ಭಾರನಿ. ೬೧); ಸಲೆ ಮಿಕ್ಕು ಸತ್ರಾಣದಲಿ ಮಿಗೆ ಸರಿಪೊಕ್ಕು ಹಿಡಿದರು ಬಿನ್ನಣದ ಚೊಕ್ಕೆಯದ ಜೋಡಿಯಲಿ (ಕುವ್ಯಾಸ. ೨-೯೬). [ಸಂ.]

**ಸತ್ರಾಣಿ** (ನಾ). ಶಕ್ತಿಯಿರುವವನು ; ಬಲಶಾಲಿ : ಧಗೆಯಡಗೆ ಮರುವಲಗ ಗೌಡೊತ್ತುಗಳ ಬಲಿದವಯವದ ಸತ್ರಾಣಿಗಳ ದೇವನು ಠಾವುರಿಯಲೊದಗಿದನು ಬಾಳಿದಲಿ (ಕುವ್ಯಾಅ. ೧೦-೧೯). [ಸಂ. ಸತ್ರಾಣಿನ್]

**ಸತ್ರಾಣಿಸು** (ಕ್ರಿ).ಶಕ್ತಿ ಬರುವಂತೆ ಮಾಡು; ಬಲಗೊಳಿಸು: ಬನ್ನವಟ್ಟಿಹ ಕಪಿಕುಲಂಗಳ ಮುನ್ನ ಸತ್ರಾಣಿಸುವೆ (ಕಾಶಿರಾ. ೨೫-೨೭); ನಗಚಾಪಧರಶತ್ರು ಗರುಡಿಯೊಳ್ ಬಾಹುಮೂಲಗಳ ಸತ್ರಾಣಿಸಲೆನುತ ನೆಗಹುವ ಹೊಸಹೊನ್ನ ವಜ್ರಮುಷ್ಟಿಗಳಂತೆ ಜಘನದ ತಳಗಳೊಪ್ಪಿದುವು (ಮೋಹತ. ೨೩-೧೭). [ಸತ್ರಾಣ + – ಇಸು]

**ಸತ್ರಿ** (ನಾ). ಯಾವಾಗಲೂ ದಾನವನ್ನು ಮಾಡುವ ಗೃಹಸ್ಥ : "ಸತ್ರೀ, ಗೃಹಪತಿಃ — ೨ ಸದಾ ದಾನವನ್ನು ಮಾಡುವವನ ಹೆಸರುಗಳು" (ಸಿದ್ಧಾಂತಿ ೨೩೯). [ಸಂ. ಸತ್ರಿನ್]

**ಸತ್ವ**$_1$ 'ಸತ್ತು$_1$' ನೋ.

**ಸತ್ವ**$_2$ (ನಾ). ೧. = ಸತ್ತ್ವ ೧ : ಸನ್ನ ಸಾವಿರ ಕಾಲಾಳಿನ ಸತ್ವವೈ (ಸೋಮೇಶ. ೭೭); ಕೆಡಹಿ ಸತ್ವದಿ ಬಂದ ಪಡೆಯ ನೆಜೆ ತಜಿದು ವೀರರ ಜಡೆದು (ಹಚಕಾ. ೬-೧೫). ೨. = ಸತ್ತ್ವ ೨ : ಸತ್ವದಿಂ ಶ್ರೀವರನಾಗಿ ತೋಱುವ . . . ದೇವರ ದೇವನಾದಿಪುರುಷಂ ಜಳಶಯ್ಯೆಯೊಳಿರ್ದಪಂ (ಜಗವಿ. ೧-೩೨); ಪ್ರಕೃತಿ, ಪುರುಷ, ಜಡ, ಚೇತನ, ಸತ್ವ, ರಜಸ್ತಮೋಗುಣಗಳ ವಿಭಾಗ — ಈ ಎಲ್ಲವನ್ನು ಕುರಿತು ಸಾಂಖ್ಯದರ್ಶನ ವಿಮರ್ಶಿಸಿದೆ (ಭಾರದ. ೧೧೩). ೩. = ಸತ್ತ್ವ ೬ : "ವಿಜಿತ ಸತ್ವಾದಿಗಳು ತತ್ವಮಕ್ಕು" (ಮಂಗರಾ. ೭೭-೧೨); ಕಪ್ಪುರದ ಗಿಡದ ಹಸೀಬೇರು ಬೊಡ್ಡಿ ಟೊಂಗಿ ಎಲೆ ಇವುಗಳ ಸಣ್ಣ ಸಣ್ಣ ಚೂರು ಮಾಡಿ ಉಬ್ಬಿಗೆ ಹಾಕಿ ಸತ್ವ ತೆಗೆಯುವರು. ಈ ಸತ್ವವು ಬೆಳ್ಳಗೆ ಕಾಳು ಕಾಳಾಗಿರುವುದು (ಮುಂಬಯಿ. ೪-೭೦). ೪. ಜೀವಿ ; ಜಂತು : 'ಸತ್ವಬಾಧೆ' ಪರಾ. ೫. ಧೈರ್ಯ; ಸ್ಥೈರ್ಯ: "ಜೀವಚಯ ಶಕ್ತಿನಿಚಯಂ ಜೀವನ ಗಿರಿಜಾತ ತುರಗಧಾತುರ್ವಾದಂ ಗ್ರಾವಘನನವಮಸಂಖ್ಯೆಯ ತೀವಿದ ಸಲೆ ಸತ್ವಶಬ್ದಂ" (ನಾನಾಕಂ. ೪೪). ೬. [ವ್ಯಾಕ] ಸಕಾರ : ಸಕಾರಂ = ಸತ್ವಂ (ಶಮದ. ೬೮ ಟೀಕೆ). [ಸಂ.]

**ಸತ್ವಕ** (ನಾ). ತಿರುಳು; ಸಾರ; ಕೆಚ್ಚು: ವತ್ಸಕ್ಕೆ ತತ್ವಂ — ಸತ್ವಕ — ಸತ್ತುಗ (ಶಮದ. ೨೬೭ ಪ್ರಯೋ). [ಸಂ.]

**ಸತ್ವಗ** (ನಾ). ಬಲವುಳ್ಳವನು ; ಸತ್ವಶಾಲಿ : "ಅಕ್ಕುಡರನೆ ಸತ್ವಗರು [ಪಾಠಾಂ. ಸತ್ವಮದು]" (ಭಾರನಿ. ೬೦). [ಸತ್ವ$_2$ + – ಗ$_2$]

**ಸತ್ವಗುಂದು** (ಕ್ರಿ). ಬಲಹೀನನಾಗು ; ನಿಸ್ಸತ್ವನಾಗು : ನೀಲನ ಮೂಗಿನುಸುರನು ಬೆರಳಲಾರಯ್ದು ಸತ್ವಗುಂದಿದನೆಂದು ರಾಘವ (ಕಾಶಿರಾ. ೨೨-೫೭). [ಸತ್ವ$_2$ + ಕುಂದು$_1$]

**ಸತ್ವಗುಣ** (ನಾ). ೧. ಸತ್ವ, ರಜಸ್ಸು, ತಮಸ್ಸು ಎಂಬ ಗುಣತ್ರಯಗಳಲ್ಲಿ ಒಂದು ; ಸಾತ್ವಿಕಗುಣ : ಯಾವ ಶ್ರೀಲಕ್ಷ್ಮೀದೇವಿಯು ಸತ್ವಗುಣ, ರಜೋಗುಣ, ತಮೋಗುಣಗಳೆಂಬ ಮೂರುಗುಣಗಳಿಗೆ ಅಭಿಮಾನಿಯಾಗಿ (ಹಸಾರ. ೧-೨ ತಾತ್ಪರ್ಯ). ೨. ಸಂಜೆಗೆಂಪು ; ಸಂಧ್ಯಾರಾಗ. ೩. ದಾನ; ತ್ಯಾಗ. ೪. ಬಲ; ಪರಾಕ್ರಮ : "ಅಖಿಲೇಂದ್ರಿಯಮಸ್ತರಾಗಮುಂ ತ್ಯಾಗಪರಾಕ್ರಮಂ ತ್ರಿಗುಣಭೇದವು ಸತ್ವಗುಣಾಹ್ವಯಂ" (ನಾನಾರ. ೬೮). [ಸಂ.]

**ಸತ್ವಗೆಡು** (ಕ್ರಿ). ಬಲವಿಲ್ಲದಂತಾಗು; ಶಕ್ತಿಗುಂದು : ಸತ್ವಗೆಟ್ಟಲ್ಲಿ ಕಾಷ್ಠವನೂಱಿ ನಡೆಯಬೇಕು (ವೀಣಿಮಾ. ೧೦೭-೪೨೩). [ಸತ್ವ$_2$ + ಕೆಡು$_1$]

**ಸತ್ವಪರೀಕ್ಷೆ** (ನಾ). ಸಾಮರ್ಥ್ಯದ ಪರೀಕ್ಷೆ : ಸ್ವಾಮಿದಾಸರ ಪೂರ್ಣಸಿದ್ಧಿಯ ಸಮಯ ಸಮೀಪಿಸಿದಂತೆ ಮೋದಕರಿಂದ ಅವರ ಸತ್ವಪರೀಕ್ಷೆಯಾಗುತ್ತದೆ (ಸಮಜೀ. ೩೪ ಪೀಠಿಕೆ). [ಸಂ. ಸತ್ವಪರೀಕ್ಷಾ]

**ಸತ್ವಪ್ರಕೃತಿ** (ನಾ). [ಜೈನ] ಕರ್ಮಪ್ರಕೃತಿಗಳಲ್ಲಿ ಒಂದು : ಪಂಚಾಂತರಾಯಕರ್ಮ ಪ್ರಕೃತಿಗಳುಮೆಂದಿವಿನಿತುಂ ಸತ್ವಪ್ರಕೃತಿಗಳೆಂದುತ್ತರಪ್ರಕೃತಿಗಳು ಶ್ರೀವೀತರಾಗ ಸರ್ವಜ್ಞರಿಂದಂ ನಿರೂಪಿಸಲ್ಪಟ್ಟುವು (ಗೂಮ್ಮಸಾ. ೬-೯). [ಸಂ.]

**ಸತ್ವಬಾಧೆ** (ನಾ). [ಜೈನ] ಜೀವಿಗಳಿಗೆ ಉಂಟಾಗುವ ಬಾಧೆ ,—ಯಾತನೆ ; ಜೀವಹಿಂಸೆ: ಅಪಮೃತ್ಯುವಿನ ಸತ್ವಬಾಧೆಯ ಗಂಧಾಗಂಧಮುಮಿಲ್ಲಿನ್ನಾ ಭೋಗ ಭೂಮಿಗಳ್ . . . ತ್ರಿವಿಧಮಕ್ಕುಂ (ಶಾಂತಿಪು. ೬-೧೦೨ ವ). [ಸಂ. ಸತ್ವಬಾಧಾ]

**ಸತ್ವಭಸ್ಮ** (ನಾ). [ವೈದ್ಯಶಾ] ಸತುವನ್ನು ಕರಗಿಸಿ ಮಾಡುವ ಒಂದು ಬಗೆಯ ಭಸ್ಮ : ಸತ್ವಭಸ್ಮ :– ಸತ್ವ ಕರಗಿಸಿ ಮುತ್ತುಗದ ಮೇಣ ಹಾಕಿ ಬೆರಸಿ ಬೆಣ್ಣೆ ಹಾಕಲು ಭಸ್ಮವಾಗುವುದು (ವಿಪ್ರವಿ. ೫೧). [ಸತ್ವ$_1$ (< ಸತು) + ಭಸ್ಮ]

**ಸತ್ವರ** (ನಾ). ವೇಗ ; ಶೀಘ್ರ : "ದ್ರಾಕ್, ಚಪಳಂ . . . ಸತ್ವರಂ, ಕ್ಷಿಪ್ರಂ, ದ್ರುತಂ, ಅಂಜಸಾ, ಝಟಿತಿ — ಈ ೧೭ ಶೀಘ್ರಂ" (ಹಲಾಯು. ೧೧೭-೧೨); ಕೈಲಾಸನಾಥನು

. . . ಸತ್ವರದಿಂದ ಆ ಕಲ್ಯಾಣಮಂಡಪಕ್ಕೆ ನಡುನಡುಗುತ್ತಾ ಬಂದು (ಪುರಾವಿ. ೨೪). [ಸಂ.]

**ಸತ್ತ್ವಶಾಲಿ** (ನಾ). ಸತ್ತ್ವದಿಂದ ಕೂಡಿದುದು; ಸಾರವುಳ್ಳದು : ಸಾವಿರಾರುವರ್ಷ ಸುಪ್ತಸ್ಥಿತಿಯಲ್ಲಿದ್ದ ವೈಜ್ಞಾನಿಕಶೋಧನೆ ಬ್ರೂನೋವಿನ ಆತ್ಮಾಹುತಿಯಿಂದ ಸತ್ತ್ವಶಾಲಿ ಯಾಯಿತು (ಜುಕ್ಸಾರ. ೧೫). [ಸಂ. ಸತ್ತ್ವಶಾಲಿನ್]

**ಸತ್ತ್ವಹೀನ** (ನಾ). ೧. ಬಲವಿಲ್ಲದುದು ; ಶಕ್ತಿಹೀನವಾದುದು : ಸತ್ತ್ವಹೀನವಾದ ಮತ್ತೆ ಕಾಲೆರಡು ಕೋಲೊಂದಾಯಿತ್ತು (ಸರ್ವವ. ೩೫-೧೭೪). ೨. ಬಲವಿಲ್ಲದವನು; ಶಕ್ತಿಹೀನ: ಏನು ನಾನು ಒಣಗಿಹೋದೆ ಎಂದುಕೊಂಡೆಯ? ಇಲ್ಲ. ಇನ್ನೂ ಸತ್ತ್ವಹೀನನಾಗಿಲ್ಲ (ಮಲನಾ. ೯೧). [ಸಂ.]

**ಸತ್ತ್ವಾಢ್ಯ** (ನಾ). ಸಮರ್ಥನಾದವನು; ಸತ್ತ್ವಶಾಲಿ: ಕುಲಜಂ ಸತ್ತ್ವಾಢ್ಯಂ . . . ಬಲಯುತನಱಿವುಳ್ಳನೆನಿಪನಪ್ಪುದು ಕೆಳೆಯಂ (ಪಂಚತಂ. ೨೯೭-೧). [ಸಂ.]

**ಸತ್ತ್ವಾತಿಶಯ** (ನಾ). ಪರಾಕ್ರಮದ ಆಧಿಕ್ಯ ,— ಹೆಚ್ಚಳ : ಅರಿನೃಪರ ಸತ್ತ್ವಾತಿಶಯದುಬ್ಬರದ ಬಲುಹನು ಕಂಡು ಕಂಡೆಚ್ಚಱದೆ ಮರುಳಹುದುಚಿತವೇ (ಕುಮಾವ್ಯಾ. ೩-೧೭); ಎಮ್ಮೊಡನೆ ಸತ್ತ್ವಾತಿಶಯಮಂ ತೋಱುವಾತುರದೊಳತಿ ಬಲವ್ರಾತಮಂ ಕೂಡಿಕೊಂಡು ಭೀತಿಯಿಲ್ಲದೆ ಪರಮಹೀತಳಕೆ ಬಂದು (ಜೈಮಿಭಾ. ೭-೩೩). [ಸಂ.]

**ಸತ್ತ್ವಾಧಿಕ** (ನಾ). ೧. ಸತ್ತ್ವಶಾಲಿಯಾದುದು; ಸಾರವತ್ತಾದುದು: ಸತ್ತ್ವಭುಜಬಲಗೂಡಿ ಮಂತ್ರದ ಸತ್ತ್ವವೇ ಸತ್ತ್ವಾಧಿಕವು (ಕುಮಾವ್ಯಾಸ. ೧-೫೦). ೨. ಶಕ್ತಿಯುತನಾದವನು; ಬಲಶಾಲಿ: "ಸತ್ತ್ವಾಧಿಕಂ ಉತ್ತಮಂ ಶಕ್ತನಾ ಕ್ಷಮನಕ್ಕು" (ಮಂಗರಾ. ೭೩-೨೫); ಎನಿತು ಸತ್ತ್ವಾಧಿಕನೊ ಕಲಿಸುಧನ್ವಂ (ಜೈಮಿಭಾ. ೧೩-೪೭). [ಸಂ.]

**ಸತ್ತ್ವಾಪನ್ನ** (ನಾ). ಸತ್ತ್ವಶಾಲಿ; ಸಮರ್ಥ: ನಾಟಕಕಾರನು ಸತ್ತ್ವಾಪನ್ನನಿರದಿದ್ದರೆ ಅವನ ಪ್ರತಿಭೆಯು ಅಪ್ರತಿಹತವಾಗಿ ಕಾರ್ಯಮಾಡಲಾರದು (ಪ್ರಬಂಧ. ೨೨). [ಸಂ.]

**ಸತ್ತ್ವಾವಲಂಬ** (ನಾ). ಶಕ್ತಿಯನ್ನು ಅವಲಂಬಿಸಿದವನು; ಬಲವನ್ನು ಆಶ್ರಯಿಸಿದವನು : ಈ ಸ್ಥಾನಮಂ ಬಿಟ್ಟು ಪೆಱತೊಂದು ದುರ್ಗಸ್ಥಾನದೊಳಿರ್ದು ನೋಟ್ಪೆನೆಂದಾತ್ಮಗತಂಗೆಯ್ದು ಮತ್ತಂ ಸತ್ತ್ವಾವಲಂಬನಾಗಿ (ಪಂಚತಂ. ೪೩-೧೭). [ಸಂ.]

**ಸತ್ತ್ವೆ** (ನಾ). ಬಸುರಿ ; ಗರ್ಭಿಣಿ : "ವರಧುರ್ಯೆ ಸತ್ತ್ವೆಯಂತರ್ವತ್ನಿ ಗುರ್ವಿಯೆಂದರ ಗರ್ಭಿಣಿಯೆನಿಕ್ಕು" (ಮಂಗರಾ. ೯೧-೭). [ಸಂ. ಸತ್ತ್ವಾ]

**ಸತ್ಸಂಗ** (ನಾ). ಒಳ್ಳೆಯ ಸಹವಾಸ; ಉತ್ತಮವಾದ ಸಂಗ : ಋಷಿಪತ್ನಿಯರ ಸತ್ಸಂಗದೊಳ್ತನ್ನ ಬೇಸಱಂ ತವಿಸುವೆನು (ಜೈಮಿಭಾ. ೧೮-೩೯). [ಸಂ.]

**ಸತ್ಸಂತಾನ** (ನಾ). ಒಳ್ಳೆಯ ಮಕ್ಕಳು ;ಉತ್ತಮಸಂತಾನ : ಪರಂಪರಾನುಗತವಾದ ಸತ್ಸಂತಾನದಿಂದಲೇ ಪಿತೃಕರ್ಮಗಳು ನಡೆಯಬೇಕು (ಭಾರದ. ೧೧೨). [ಸಂ.]

**ಸತ್ಸಂಪ್ರದಾಯ** (ನಾ). ಉತ್ತಮವಾದ ಸಂಪ್ರದಾಯ. [ಸಂ.]

**ಸತ್ಸಮಾಗಮ** (ನಾ). ೧. ಉತ್ತಮವ್ಯಕ್ತಿಗಳೊಡನೆ ಬೆರೆಯುವುದು; ಸತ್ಸಂಗ : ಸಾಧುಗಳ ಕರುಣ ಸಿಕ್ಕುವುದಲ್ತೆ ಸತ್ಸಮಾಗಮದಿಂದ (ವಂಕಾರಾ. ೨-೫-೪೧). ೨. ನಕ್ಷತ್ರಗಳೊಡನೆ ಸೇರಿರುವುದು. ೧, ೨ : ಅಮಳಶ್ರೀಕಾಂತನಾಗಿರ್ಪುದುಂ ಘನಮೇ ಪೇಱ್ ವಿಧು ಸತ್ಸಮಾಗಮದೊಳೇ ಸಂದಿರ್ಪುದಾರಯ್ಕೆ ನೂತನಮೇ ತಾಂ ದ್ವಿಜರಾಜಂ (ಚಕಪಿ. ೭-೨೦). [ಸಂ.]

**ಸತ್ಸಹವಾಸ** (ನಾ). = ಸತ್ಸಂಗ : ಯತಿವರ್ಯರ ಸತ್ಸಹವಾಸ ಅನುಗ್ರಹಗಳು ದೊರೆಯಿತು (ಸಂಗೀತಂ. ೨೦೪). [ಸಂ.]

**ಸತ್ಸಹಾಯ** (ನಾ). ೧. ಒಳ್ಳೆಯ ನೆರವು ; ಉತ್ತಮ ಸಹಕಾರ. ೨. ಒಳ್ಳೆಯ ಸ್ನೇಹಿತ ; ಸನ್ಮಿತ್ರ: ದೇಶಂ ಧರ್ಮೋಪದೇಶಂ ಶ್ರುತಬಲಮ ಬಲಂ ಕೋಶಮುದ್ಬೋಧ ಕೋಶಂ ಸೌಶೀಲ್ಯಂ ಸತ್ಸಹಾಯಂ (ಚಂದ್ರಪ್ರ. ೧-೨೯). [ಸಂ.]

**ಸತ್ಸ್ವಭಾವ** (ನಾ). ಒಳ್ಳೆಯ ಸ್ವಭಾವ ,— ಗುಣ : ಸತ್ಸ್ವಭಾವದ ಸ್ಥೂಲಗಾತ್ರದ ದಾದಿ ಫೋಟೋವಿನ ಮೇಲೆ ಬಾಗಿಕೊಂಡು ಪ್ರಶ್ನಿಸಿದ್ದಳು (ಪುನರು. ೩೨೩). [ಸಂ.]

**ಸಥಿ** 'ಸಥೆ' ನೋ.

**ಸಥೆ, ಸತ್ತೆ₂, ಸಥಿ** (ನಾ). ೧. ಸಲಿಗೆ ; ಸದರ: ಖತಿಗೊಳಿಸುವ ರೋಗ ಕಳೆವುದಾಶ್ಚರ್ಯವಲ್ಲ ಸಥೆಯಿಂದಲಿ ಬಿನ್ನೈಸಿದೆ ಯಾತಕ್ಕೆ ಆಲಸ್ಯ (ಮೋಕ್ಷದೀ. ೩-೫); ಸಥ ಮಾಡಿ ಎನಗೆ ನುಡಿದಳು ಮನಕೆ ಬಂದಂತೆ ಹಿತಮಾಡಿ ನಾನವಳ ಹತ್ತಿಲಿ ಕರದವನಲ್ಲ (ಶ್ರೀಕೃಪಾ. ೫೩); ಅವನೊಡನೆ ಸಥೆಯಿಂದ ಮಾತಾಡಿದಂತೆ ದಾಸರು ಯಾರೊಡನೆಯೂ ಆಡುತ್ತಿರಲಿಲ್ಲ (ಕಥಪಿ. ೬೪೧). ೨. ಸತ್ಯ ; ನಿಜ : ಬಲ್ಲಿದ ಯಶವುಳ್ಳ ಹರಿಯೆಂಬ ಸಥೆಯಿಂದ ಎಲ್ಲ ಮುಕ್ತರು ಸುಖಿಸುವರು (ವೃಕುಂವ. ೧-೯೨). **ಸತ್ತೆ₂** : ೧. ನಿಜಗುರುವಿಗೊರೆದನೀತಂ ಶಿಷ್ಯತೆಯ ಸತ್ತೆಯಿಂದೆಂದೊಡೆ ಯತಿಗಳಿಂದುದ್ಧಾರ ವಾಗಬಾರದೆ ಭಕ್ತತತಿಯು (ಮಹಾಂತೇ. ೧೧-೩೭). ೩. ಅಧಿಕಾರಬಲ ; ಹಕ್ಕು: ಸುಜ್ಞಾನಿದೇವ ಸಾಧಿಸಿದುದೂ... ಶಾಸ್ತ್ರದ ಸತ್ತೆಯಿಂದಲ್ಲ, ದಂಡದ ದಬ್ಬಾಳಿಕೆಯಿಂದಲ್ಲ (ಶರಚ. ೩೩೭); ಭೀಮರಾಯರು . . . 'ಅದ್ಯಾವದೂ ಬೇಡ ನಾ ಹೇಳಿದಂತೆ ಮಾಡಿರಿ' ಎಂದು ಸತ್ತೆಯಿಂದ ಒತ್ತಾಯ ಪಡಿಸಿದರು (ಕಾರುಷ. ೧೭). ೪. ಪ್ರಭುತ್ವ ; ಆಧಿಪತ್ಯ: ಅರವಿಂದರು . . . ಪ್ರಚಂಡವಾದ ಲೇಖನ ಮತ್ತು ಭಾಷಣಕಾರ್ಯದಲ್ಲಿ ನಿರತರಾದರು. ಇದರಿಂದ ಬ್ರಿಟಿಷ್ ಸತ್ತೆಯು ನಡುಗಿತು (ಕಪಪು. ೭-೮೪). 'ಪ್ರಜಾಸತ್ತೆ' ಪರಾ. **ಸಥಿ** : ೧. ಏನೋ ಸಥಿಯಿಂದ ಮಾವನವರಿಗೆ ಒಂದು ಮಾತು ಹೇಳಿದೆ, ತಪ್ಪಾಯಿತು (ಮಣ್ಣಮ. ೨೩); ಅಣ್ಣನ ಮೇಲೆ ಇಷ್ಟು ಸಥಿ ಇದ್ದವರು ನೀವು ಹೊರಗೆ ಏಕೆ ನಿಲ್ಲಬೇಕಾಗಿತ್ತು? (ಭಾರಥಿ. ೧೭). ೨. ಜಾರುತದಾಯುಷ್ಯ ದೂರದ ಮುಕುತಿಗೆ ದಾರಿ ಸಥಿಯು ಕೇಳಾತ್ಮ (ಪುರಂದ. ೫-೫೨ ಅನುಪಲ್ಲವಿ). ೩. ನಿನಗೆ ನೀನೆ ಪೂಜೆ ಮಾಡಿಕೊಂಬ ದೇವ ಎನಗಾವ ಸಥಿಯಿಲ್ಲಾ ವಿಜಯವಿಠಲ ಒಲಿಯೋ (ವಿಸ್ತೋಸು. ೪೧-೭); ಮನಸ್ಸಿನಲ್ಲಿ ಬಂದ ಮಾತನ್ನು ಸಥಿಯಿಂದ ಆಡಿ ತೋರಿಸಿದನು (ಕನ್ನಡಿ. ೩೩). [<— ಮರಾ. ಸತ್ತಾ./ ಸಂ. ಸತ್ತಾ]

**ಸದಕ₁** (ನಾ). ಒಂದು ಬಗೆಯ ತೆರಿಗೆ : ಸದಕ, ಸಕಾತ್, ಅಥವಾ ಭಿಕ್ಷೆಯ ತೆರಿಗೆ, ಇದನ್ನು ಮುಸ್ಲಿಮರ ಮೇಲೆ ಮಾತ್ರ . . . ಹಾಕುತ್ತಿತ್ತು (ಇಸ್ಲಾಂಸಂ. ೪೨). [?./ ಮರಾ. ಸದಕಾ = ದಾನಧರ್ಮ]

**ಸದಕ₂** (ನಾ). (?) : ಆ ಮುದ್ದೆಯ ದಂಣಾಯಕರು ಮಾಡ್ಸಿ ಕೊಟ್ಟ ಕನಕದಂಡದ ಚವಕ ಸದಕ ಹಳತಾದಡೆ ಹೊಸತ ಮಾಡಿಸುವನು (ಸೌಇ. IX-ii. ೪೧೭-೪೩; 1377). [?]

**ಸದಕಿಕ್ಕು** (ಕ್ರಿ). (?) : ಪಸಿದ ಚಕೋರಿಗಳ್ ದ್ವಿಜಶರೀರಗಳೆಂದೆಚೆಯಲ್ಕೆ ಸಂಜೆ ಭಾವಿಸೆ ಪೊಸಜೊನ್ನಮಂ ಶಶಿಯ ಕಪ್ಪಿನಿತಿಲ್ಲದ ಮಾಲ್ಕೆಯಿಂದೆ ಶೋಧಿಸಲದು ಶುದ್ಧವಾಗೆ ಬಟಿಯಿಂ ಸದಕಿಕ್ಕಿದ ಧಾರವಟ್ಟಲಂ ಸಸಿಗಿರಿಸಿಟ್ಟವೋಲ್ ಮೃದುಕಳಂಕದಿನೊಪ್ಪಿದುದಿಂದುಮಂಡಲಂ (ಸೂಕ್ತಿಸು. ೮-೨೫೩). [?]

**ಸದಕೀರ್ತನ** (ನಾ). [ಕಾವ್ಯಮೀ] ಕವಿಸಮಯಗಳಲ್ಲಿ ಒಂದು ; "ಸದಕೀರ್ತನ ವೆಂದರೆ, ಇರುವುದನ್ನು ಇಲ್ಲದಂತೆ ಹೇಳುವುದು" (ಕೈಪಿಡಿ. ೨೪೪): ಅತತ ಸತ್ಕವಿಸಮಯಂ ಜಾತಿದ್ರವ್ಯಕ್ರಿಯಾಗುಣಾಶ್ರಯಮಸದಾಖ್ಯಾತಿ ಸದಕೀರ್ತನಂ ನಿರ್ಣೀತಂ ನಿಯಮಾರ್ಥಮೈಕ್ಯಮೆನೆ ನಾಲ್ಕುತೆಱಂ (ಕಾವ್ಯಾವ. ೮೪೫). [ಸಂ.]

**ಸದಕು, ಚದುಕು, ತದಕು₁, ತದುಕು₁** (ಕ್ರಿ). ೧. ಹೊಡೆ ; ಬಡಿ ; ಏಟುಕೊಡು : ಸದಕಿದನು ಬಳಿಕಾತ ರಣಕೊದಗಿದ ಮಹಾರಥಮಂಡಳಿಯ ಮದರದನಿಗಳ ಮಾವುತರ ರಾವ್ತರ ಹಯವ ಕಾಲಾಳ (ತೊರರಾ. ೭-೪೩-೮); ಮಕ್ಷಿಕಂಗಳು ಜೇನ ಸಾಧಿಸಿ ರಕ್ಕೆಗೋಸುಗ ಕಾಯ್ದಿರಲು ಮಧುಭಕ್ಷಕರು ಸದಕುಪವೋಲ್ (ನಿಭಾಗ. ೧೧-೧೪-೨೨); ಸ್ಮರವೀರನುಪಟಳಕಿದಿರಹರಾರು ಮಲ್ಲರು ವೇತ್ರಿಗರು ಸದಕಿದರು (ಭರಚ. ೪೮-೮೪). ೨. ಕುಟ್ಟು ; ಜಜ್ಜು : ಉದಕದೊಳಗರ್ಧ ಸಕ್ಕರೆಯಿಕ್ಕಿ ಕರಗಿಸುತ ಹದನಱಿದು ದಾಳಿಂಬ ಮಾದಲದ ಹುಳಿಯಿಕ್ಕಿ ಸದಕಿದೇಲಕ್ಕಿ ಹಸಿಯಲ್ಲಮಂ ಹಾಕಿ (ಸೂಪಶಾ. ೨-೨೫); ಸದಕಿದರು ತೇರುಗಳ . . . ಗದೆಗದೆಯೊಳಪ್ಪಳಿಸಿ (ಅಂಬಿಕಾ. ೩೮-೨೩). **ಚದುಕು** : ೧. ಚದುಕಿದರೊದರಿ ಮದಕರಿಯ (ಅಂಬಿಕಾ. ೩೮-೨೩). **ತದಕು₁** : ೧. ಮನುಜರಂ ಪೆರ್ಭೂತ ತಾಮಸದಿ ಪಿಡಿಯಲಾ ನೆವದಿ ತದ [ಪಾಠಾಂ.ದು]ಕುವನಂತೆ (ಪತಿಲ. ೧೩-೩೭); ಸಿಂಹನಾದ ಮಾಡುತ್ತ ಗಂಧರ್ವರನ್ನು ತದಕುವುದಕ್ಕೆ ಮೊದಲು ಮಾಡಿದರು (ವಚಭಾ. ೧೭೧); ಅವನ ಹಿಡಕೊಂಡು ಬಲವಾಗಿ ತದಕಿದರೆ ಸರಿ (ಸ್ವಾಮಿಸ್ತೀ. ೮೭). ೨. ಕುಂಬಳದ ಬಳ್ಳಿಯಂ ಕತ್ತರಿಸಿ ತದಕಿ ಉಪ್ಪಿನಲ್ಲಿ ಅಟ್ಟ ಮಡಕೆಗೆ ಹಾಕಿ

(ಸಕವ್ಯ. ೩೬೫). **ತದುಕು₁** : ೧. ನಾವು ಅವರನ್ನು ಚನ್ನಾಗಿ ತದುಕಿದ ಸಂತರ ಸುಮ್ಮನಾದರು (ಝಾರಾಣಿ. ೧೧೯); ಅಲ್ಲೆ ಅವನನ್ನು ತದುಕಲಿಲ್ಲ (ಮಾಮನ. ೭೧). ೩. ಹಿಂಡು ; ಕಿವುಚು ; ಹಿಸುಕು : ಆ ತರುಣಿಯ ಶೋಕವು ಕಿಟ್ಟಿಯ ಮನ, ಎದೆ, ಕರುಳುಗಳನ್ನು ತದುಕಿ ಕಳವಳವನ್ನುಂಟುಮಾಡತೊಡಗಿತು (ಗಂಮಾಯಿ. ೬೬). [< ಸದ₁]

**ಸದಕುಪ್ಪಿ** 'ಸದಗುಪ್ಪೆ' ನೋ.

**ಸದಗ** 'ಸದೆಗ' ನೋ.

**ಸದಗಪ್ರಾಣಿ** (ನಾ). ಅಲ್ಪಪ್ರಾಣಿ : ಒರ್ದರ್ದಪರು ಪಗಲಿರುಳಿಗೊಂಡ್ಡೊಂದು ಪರಿಯಾಗಿ ಸದಗಪ್ರಾಣಿಗಳು ಚೇತನಮಾಗಿ ಸರ್ವಜನಹೃದಯದಾನಂದಕರಮನಿಸಲಾರರು (ವಂಶಾರಾ. ೫-೪-೧೦). [ಸದಗ (< ಸದಗ) + ಪ್ರಾಣಿ]

**ಸದಗುಟ್ಟು** 'ಸದೆಗುಟ್ಟು' ನೋ.

**ಸದಗುಪ್ಪೆ, ಸದಕುಪ್ಪಿ, ಸದೆಗುಪ್ಪೆ** (ನಾ). ಒಂದು ಬಗೆಯ ಸಸ್ಯ ; ಸಬ್ಬಸಿಗೆ : ''ಸದಗುಪ್ಪ, ಶತಪುಷ್ಪ, ಸಿತಚ್ಛತ್ರ, ಅತಿಚ್ಛತ್ರ'' (ನಾಚಿರಾ. ೬); ಸದಗುಪ್ಪ ಬೆರೆದವಂ ಕಾಸಿದೊಡಂ ಕತ್ತುರಿಯ ಗಂಧಮಂ ಗೆಲಲಕ್ಕುಂ (ಲೋಕೋಪ. ೮-೪೦); ಹಿಪ್ಪಲಿ ಕೊತ್ತುಂಬ(ರಿ)ಲಿ ಸದಗುಪ್ಪ ವಿಳಂಗಾಗ್ನಿ ಲೋಧ್ರ ಸಿಂಧೂದ್ಭವಮಂ ತಪ್ಪದೆ ಸಮನಾಗಿರ ಯೋಜಿಪುದು ಸುತಶಿಶಿರಋತುವಿನೊಳ್ ಪ್ರತಿಪಾನಂ (ಅಶ್ವಶಾ. ೭-೮೪). **ಸದಕುಪ್ಪಿ** : ಸಬ್ಬೀಗೆಸೊಪ್ಪು, ಸಬ್ಬಸಿಗೆಸೊಪ್ಪು, ಸದಕುಪ್ಪಿಗಿಡ (ವ್ಯಜಿಗಿ. ೭-೧೧೩). **ಸದೆಗುಪ್ಪೆ** : ತುಪ್ಪದೊಳಂ ಬೆರಸುವುದೆಸವುಪ್ಪಂ ಸದೆಗುಪ್ಪ [ಪಾಠಾಂ. ಸದುಗುಪ್ಪ]ಯೊಡನೆ ಪೂಸುಗೆ (ವಿಮದ. ೧೩೫-೧೧೭). [< ಸಂ. ಶತಪುಷ್ಪಾ ./ ತಮಿ. ಚತಕುಪ್ಪಿ; ಮಲ. ಚದಕುಪ್ಪ]

**ಸದನ** (ನಾ). ೧. ಪೀಠ ; ಆಸನ. ೨. ಮನೆ ; ನಿವಾಸ : ''ಆವಾಸಃ . . . ಸದನಂ . . . ಆಲಯಃ — ಈ ೩೦ ಮನೆ'' (ಹಲಾಯು. ೪೯-೧೩೬); ಲತಾಂತದೊಳ್ಪಸದನಂ ಸದನಂ ಕದನಂಗಲಕ್ಷ್ಮಿಗಾಗಿರೆ (ಜಗವಿ. ೪-೪೨); ಸದನವನು ಹೊಕ್ಕಂತ ನಿಮಿಷಾರ್ಧದಲಿ ಕುಳ್ಳಿರ್ದನಿಬರನು ಕಳುಹಿದನು ಕಾರುಣ್ಯದಲಿ (ಕುವ್ಯಾಉ. ೭-೩೧). ೩. ನಗರ ; ಪಟ್ಟಣ: ಮಧುರೇಂದ್ರಂ ಕಡುದಿಟ್ಟನಾಗಲು ಬಟಿಕ್ಕೀಡೇರಿತೇ ದ್ವಾರಕಾಸದನಂ ವಾರ್ಧಿಯ ಕೂಡದೇ (ಸೋಮೇಶ. ೩೭). ೪. ಸಭೆ ; ಅಧಿವೇಶನ ; ಸಮಾವೇಶ : ಸಂಸತ್ತಿನ ಯಾವ ಸದನದಲ್ಲಿಯೂ ಆ ವಿಧೇಯಕವನ್ನು ಮಂಡಿಸತಕ್ಕುದಲ್ಲ (ಭಾಧಾಸ.೩). ೫. ನಾಶವಾಗುವಿಕೆ. ೬. ಬಳಲಿಕೆ ; ದಣಿವು. [ಸಂ.]

**ಸದನಾಂಗಣ** (ನಾ). ಮನೆಯ ಅಂಗಳ : ಪ್ರೌಢಪತಿಯೆಂಬಿಂದುಮುಖಿ ವಾರಾಂಗನಾಮಣಿಯೊಂದುದಿನದಲಿ ತನ್ನ ಸದನಾಂಗಣದೊಳಂದು ಸೆದು (ಬಸಪು. ೪೦-೩). [ಸದನ + ಅಂಗಣ]

**ಸದನ್ಯಗ್ರಹ** (ನಾ). ಪಾಪಗ್ರಹ ; ಕೆಟ್ಟಗ್ರಹ : ಅಸುರೇಂದ್ರಾರ್ಚಿತನಿಂದಮಷ್ಟಮ ಚತುರ್ಥಕ್ಷೇತ್ರದೊಳ್ ಕೂಡಿದಂದು ಸದನ್ಯಗ್ರಹಮಲ್ಲದಂದು ಭೃಗುಜಂಗಿರ್ವಕ್ಕದೊಳ್ ಕೂಡಿದಂ (ಜಾತತಿ. ೨೧-೩). [ಸಂ.]

**ಸದಭಿಪ್ರಾಯ** (ನಾ). ಒಳ್ಳೆಯ ಅಭಿಪ್ರಾಯ ; ಉತ್ತಮವಾದ ಆಶಯ : ಪ್ರಾಯಕಲ್ಲದುದವರ ಸದಭಿಪ್ರಾಯಮರರೆ . . . ಭಾವುಭಾವನೆ ಸುಜನರಲ್ಲ ಬೆಳೆದು (ಕುಮುರಾ. ೨-೧೧೧); ಸದಭಿಪ್ರಾಯವನ್ನು ಸೂಚಿಸಿ ಓಲೆಗಳನ್ನು ಬರೆದಿದ್ದಾರೆ (ವಿವರಿ. ೪ ಅರಿಕೆ). [ಸಂ.]

**ಸದಭಿಮತ** (ನಾ). ಎಲ್ಲರಿಂದ ಒಪ್ಪಿದುದು,—ಅಭಿಪ್ರಾಯಪಟ್ಟುದು; ಸದಭಿಪ್ರಾಯ: ಸದಭಿಮತಮಾಗಿ ನಿಲ ಪೇಟ್ಟುದು ಮಾರ್ಗ್ಗಂ ಉತ್ತಮಲ್ಲವಲ್ಲಭ ಮತದಿಂ (ಕವಿರಾ. ೨-೧೧); ಸದಭಿಮತೋದಾತ್ತಕೀರ್ತಿಯುಂ ಬಯಸುವವಂ ಪದವಾಕ್ಯಾರ್ಥಂಗಳೊಳೊಂದದಂತು ಪಿಂಗಿಸುಗೆ ದೋಷಮಂ ಕೃತಿಯಿಂದಂ (ಕಾವ್ಯಾವ. ೪೫). [ಸಂ.]

**ಸದಮದ** (ನಾ). ೧. ಅತಿಯಾದ ಮದ ; ಉನ್ಮತ್ತತೆ : ಸದಮದವಾಗಿ ಮುಡಿ ನೋಡಿ ಒಡಲ ಕೆಡಿಸಿಕೊಂಬ ಜಡಮನುಜರ ನುಡಿಯ ಕೇಳಲಾಗದು (ವಚಸಂ. ೩೮೨-೫೫). ೨. ಘೋರವಾದುದು; ಭಯಂಕರವಾದುದು: ಕಲಿತ ಭಯದ ಸುಮಾಲಿ ಹರಿತಂದು ಸದಮದದ ಕಟ್ಟೋಲಗದ ದಶವದನನಿದಿರಿನಲಿ ಹಾಯ್ಕಿದನು ಬಲುಬೆದಱಿಕೆಯ ರಣಭ್ಯರವನ ಸಂಗರಭಯಂಕರವ (ತೊರರಾ. ೫-೫-೩). ೩. ಉಲ್ಬಣವಾಗಿರುವಿಕೆ ; ತೀವ್ರತೆ : ರೋಗದ ಸದಮದದ ಬಲೆಯೊಳಗೆ ಬಿದ್ದುದ ಕೆಮ್ಮಿ ಕ್ಯಾಕರಿಸಿ (ಪ್ರಾಚ. ೮-೫೫). 'ಉದುಮದ' ಹೋ.

[?./ ತೆಲು. ಸದಮದ = ನಾಶ , ನಲುಗಿದುದು]

**ಸದಮದಗಜ** (ನಾ). ಅತಿಯಾಗಿ ಮದಿಸಿದ ಆನೆ ; ಮದೋನ್ಮತ್ತವಾದ ಗಜ : ಅಹಂಕಾರವೆಂಬ ಸದಮದಗಜವೇಱಿ ವಿಧಿಗೆ ಗುಱಿಯಾಗಿ ನೀವು ಹೋದಿರಲ್ಲಾ (ಬಸವ. ೬೫೯); ಗಗನ ಪವನದ ಮೇಲೆ ಉದಯಮುಖವನುಭಾವ ಸದಮದಗಜವ ನಿಲಿಸುವ ಮಾಪತಿಗ ಬಂದ (ಅವಚಂ. ೧೮೦-೮೧೦); ಜಂಬೂದ್ವೀಪದ ಹೃದಯದಲೊಂದು ಸದಮದ[ಪಾಠಾಂ. ಲ]ಗಜ ಹಯನಾಯಿತ್ತು (ಶಿವಗೀ. ೧೨೬-೭೨೬).

[ಸದಮದ + ಗಜ]

**ಸದಮಲ, ಸದಮಳ** (ಗು). ೧. ಪವಿತ್ರವಾದ; ನಿರ್ಮಲವಾದ : ಅವರು ಸದಮಲಸಾಧುಗಳು ಕೌರವರಸಾಧುಗಳು (ಕುವ್ಯಾಅ. ೧೭-೧೨); ಸದಮಲಭಕ್ತೀಲಿ ಚಿದ್ರೂಪ ಮಲ್ಲೇಶನ ತದೇಕಧ್ಯಾನದಿ ಹೊರಟಿಹರು ನೆನೆಯೂತ (ಸಿದ್ಧವು. ೫-೩೨). (ನಾ). ೨. ನಿರ್ಮಲವಾದುದು ; ಶುದ್ಧವಾದುದು : ''ಸದಮಲಮೆಂದೊಡೆ ನಿರ್ಮಲ'' (ಭಾರನಿ. ೨೪). **ಸದಮಳ** : ೧. ಸದಮಳ ಸಂಸ್ಕೃತ ಕರ್ಣಾಟದದಂತ ಪ್ರಕೃತಿಗಳ್ಗೆ ಸುಪ್ರತ್ಯಯಮಿಂತಿದಿರಾಗೆ ಯತ್ವಮನುಕೃತಿ ಪದಕಂ ಮುಂದನುಕೃತಿಸ್ವರಂ ನಿಲೆ ಯತ್ವಂ (ಶಮದ. ೫೪); ಸದಮಳಚಾರುಚರಿತ್ರ ಇದನೋದಿ ಲಾಲಿಪ ಸಜ್ಜನಜನಕೊದವಿಪನೀಶ ಸಂಪದವ (ಇಚಿಸಾಂ. ೧೭-೯೬). ೩. ನಿರ್ಮಲನಾದವನು ; ಪರಿಶುದ್ಧನಾದವನು : ಸದಮಳಂ ನಂಬಿಯಣ್ಣ ಬರುತಿರ್ದಪಂ (ನಂಬಿರ. ೯-೬೮); ಸದಮಳನ ಕೇಳೀ ಪುರಾಣದ ಹೃದಯವನು (ಶಿಭಾಗ. ೨-೪-೧೭). [ಸಂ.]

**ಸದಮಲಚರಿತ, ಸದಮಳಚರಿತ** (ನಾ). ೧. ನಿರ್ಮಲವಾದ ಚಾರಿತ್ರ್ಯ; ಪರಿಶುದ್ಧವಾದ ಚಾರಿತ್ರ್ಯ : ಸದಮಲ[ಪಾಠಾಂ. ಳ]ಚರಿತಂ ತಮ್ಮಿಂದುದಿತೋದಿತ ಮಾದುದನಿಸಿ ಸಂನ್ಯಸನದೆ ಸತ್ತುದಿತಾನುದಿತಮುನೀಶ್ವರರುದಾತ್ತರುತ್ಕೃಷ್ಟದೇವಗತಿಯಂ ಪಡೆದರ್ (ಪಂರಾಮಾ. ೮-೫೫). **ಸದಮಳಚರಿತ** : ೨. ನಿರ್ಮಲವಾದ ಚಾರಿತ್ರ್ಯವುಳ್ಳವನು : ಸದಮಳಚರಿತರನುದ್ಧೂತರೋಷರಂ ವಿಗತರೋಷರಂ . . . ಮಲಧಾರಿದೇವರಂ ದೇವರೆಂದು ಬಣ್ಣಿಪುದು ಜಗಂ (ಸುಕುಮಾ. ೧-೨೦). [ಸಂ.]

**ಸದಮಲಚಿತ್ತ** (ನಾ). ನಿರ್ಮಲವಾದ ಮನಸ್ಸಿನವನು ; ಶುದ್ಧವಾದ ಚಿತ್ತವುಳ್ಳವನು : ಸದಮಲಚಿತ್ತನುದ್ಭಟಮಹೀಪತಿ ತುಟ್ಟುವ ಕುಂಕುಮಾಂಬು ಪತ್ರಿವ ವ್ಯಗಶಾಬಕಾಂಬಕೆಯದೊರ್ವಳ ಶುಂಭದುರೋಜಯುಗ್ಮವೊಪ್ಪಿದುದು (ಉದ್ಭಟ. ೯-೧೧೧). [ಸಂ.]

**ಸದಮಲಜ್ಞಾನಿ** (ನಾ). ನಿರ್ಮಲನಾದ ಜ್ಞಾನಿ ; ಶುದ್ಧ ಜ್ಞಾನಿ : ಸದಮಲಜ್ಞಾನಿ ಯಿಂತೆಂದನಾ ನೃಪಗೆ (ಸಮ್ಯಕೌ. ೭-೪೪). [ಸಂ. ಸದಮಲಜ್ಞಾನಿನ್]

**ಸದಮಲಬೋಧ, ಸದಮಳಬೋಧ** (ನಾ). ೧. ನಿರ್ಮಲವಾದ ಉಪದೇಶ; ಶುದ್ಧವಾದ ಬೋಧನೆ. ೨. ನಿರ್ಮಲವಾದ ಉಪದೇಶವನ್ನು ಮಾಡುವವನು; ಶುದ್ಧವಾದ ಬೋಧನೆ ಮಾಡುವವನು : ಸದಮಲಬೋಧನಾ ಶಿಲೆಯನೇಱಿ ದೊಡಂಗಜನಂಜಿ ಪುತ್ತನೇಱಿದಂ (ಪುಷ್ಪವು. ೧೩-೧೧೭). **ಸದಮಳಬೋಧ** : ೧. ಸದಮಳಬೋಧದಿಂದೆಸೆವ ಸಾಧುಜನಾಶಯದಂತೆ ಪದ್ಮಷಂಡದ ವರವಾರಿ ನಿರ್ಮಲತೆ ವೆತ್ತುದು (ಕುಸುಮಾ. ೫-೪೫); ಸದಮಳಬೋಧಭಾನುವಿನ ಬಂಧುರಬಂಧು ಸುಧರ್ಮ ಸೂತ್ರಕಾಂಡದ ಕಣೆ (ಪುಷ್ಪವು. ೭-೧೭). [ಸಂ.]

**ಸದಮಲಾತ್ಮ** (ನಾ). ಪರಿಶುದ್ಧವಾದ ಆತ್ಮವನ್ನು ಉಳ್ಳವನು : ನೀವು ಶಿಕ್ಷಿಸುವುದಟಿ ನವದಿಂ ಮಲಿನವಳಿಯಿತು ಸದಮಲಾತ್ಮ ನಿಮ್ಮ ಸತ್ಕೀರ್ತಿಪ್ರಭಾವದಲಿ (ಬಸವು. ೩೬-೪೭). [ಸಂ. ಸದಮಲಾತ್ಮನ್]

**ಸದಮಲಾತ್ಮಕ** (ನಾ). = ಸದಮಲಾತ್ಮ : ಸದಮಲಾತ್ಮಕ ನಿನ್ನ ಪಿತನ ಬಲದ ಭುಜಂ ಬಿಡದೊಡನೆ ಕೆತ್ತುತಮಿದೆ (ಬಸವು. ೨೪-೪೨); ಅವ ತೆಱದಿನಾಡೊಡೆ ನಲಿದು ಸದಮಲಾತ್ಮಕ ಜಂಗಮವ ಭಜಿಸುವಂ ತಾನೆ (ರಾಘಚ. ೮-೧೦). [ಸಂ.]

**ಸದಮಳ** 'ಸದಮಲ' ನೋ.

**ಸದಮಳಚರಿತ** 'ಸದಮಲಚರಿತ' ನೋ.

**ಸದಮಳಚರಿತ್ರ** (ನಾ). = ಸದಮಲಚರಿತ ೨ : ಸದಮಳಚರಿತ್ರರಾವಾಸದವೋಲ್ ಮಧುಪಾವಳೀವಿವರ್ಜಿತಮಾಗಿರ್ದುದು ಮಧುಮಯಪ್ರಸೂನಾಸ್ಪದಮಾಗಿಯುಮೀ ನವೀನ ಚಂಪಕವೃಕ್ಷಂ (ಕುಸುಮಾ. ೯-೨೦); (ಶಾಂತೀಶ್ವ. ೧೦-೮೫ ನೋ). [ಸಂ. ಸದಮಲಚರಿತ್ರ]

**ಸದಮಳಧರ್ಮ** (ನಾ). ನಿರ್ಮಲವಾದ ಧರ್ಮ; ಶುದ್ಧವಾದ ಧರ್ಮ : ಸದಮಳಧರ್ಮಂ ದೊರಕೊಳಲದನೊಲ್ಲದೆ ಮತ್ತೆ ಬಿಡುವ ಜಡಮತಿ ಪೋಲ್ಕುಂ ಮುದದಿಂದೋಲಗದೊಳ್ಪಡೆದುದನಿಂಬಿನೊಳಿರಿಸುವಲ್ಲಿ ಕಿಡಿಸುವ ಮರುಳಂ (ಧರ್ಮಾಮೃ. ೩-೨೮೨); ಸದಮಳಧರ್ಮದ ಕಣ್ಣಿಂ ಪದಯುಗಳದಿನೆಸೆವ ಗತಿಯುಮೋಟ್ಟೆವೆಸರ್ಗೊಪ್ಪಿದರ್ (ಅನಂಪು. ೧-೧೪). [ಸಂ. ಸದಮಲಧರ್ಮ]

**ಸದಮಳಬೋಧ** 'ಸದಮಲಬೋಧ' ನೋ.

**ಸದಯ** (ಗು). ೧. ಕರುಣೆಯಿಂದ ಕೂಡಿದ; ದಯಾಶೀಲ : ಅವರು ಸದಯ ಹೃದಯರಾಗಿ ಖಾವಂದರವರೊಂದಿಗೆ ಸಾಕ್ಷಾತ್ತಾಗಿ ರಾಜಕೀಯವಿಷಯಗಳನ್ನು ಕುರಿತು ಮಾತನಾಡಿ (ಮಹಾವಂ. II. ೧೦೩). (ನಾ). ೨. ದಯೆ ; ಕರುಣೆ : ಸದಯವಿಲ್ಲದ ಚಾಗಿ ಸೂಡಬಿಲ್ಲದ ನಿವಾಸಂ . . . ಪ್ರವರ್ಧನವಹುದ ಲೋಕದೊಳು (ಬಸವು. ೩೭-೩೪). ೩. ಕರುಣೆಯಿಂದ ಕೂಡಿರುವವನು : ಸದಯಂ ತ್ರಿವಿಷ್ಟರಪ್ರಾಗ್ರದೊಳೆಸೆವ ಗಜಾರಿಪೀಠದೊಳ್ ತ್ರೈಲೋಕ್ಯಾಗ್ರದೊಳೆಸೆವೀಷತ್ಪ್ರಾಗ್ಭಾರದೊಳಿರ್ಪುದನಂದೆ ಸೂಚಿಪಂದದಿನಿರ್ದಂ (ಚಂದ್ರಪು. ೧೫-೯೯); ಸದಯರ್ ನೀವೆಲ್ಲರಾತನಂ ಬೆಸಗೊಳ್ಳಿಂ (ಹಾಲಾಸ್ಯ. ೧-೧-೫೦); ಆದರಿಂದಲೇ ಏನೋ ಭಗವಾನರು ಇವರ ವಿಚಾರದಲ್ಲಿ ಅಷ್ಟು ಸದಯರಾಗಿರುವುದು (ಮಹಾಣ. ೨೬೮). [ಸಂ.]

**ಸದರ್, ಸದರು$_1$** (ನಾ). ೧. ಉಚ್ಚತಮ ನ್ಯಾಯಾಲಯ; ಶ್ರೇಷ್ಠನ್ಯಾಯಾಲಯ: (ಶ). ೨. ಅಧಿಕಾರ ನಡೆಸಲು ಕುಳಿತುಕೊಳ್ಳುವ ಗದ್ದುಗೆ ; ಸಿಂಹಾಸನ: ಪಾತುಶಾಹಂ . . . ಸಭೆಯಂ ನೆರಹಿಸಿ ಸದರೊಳ್ ಕುಳ್ಳಿರ್ಪನಿತರೊಳಂ (ಕೆಳನೃ. ೩-೨೪). ೩. ರಾಜಸಭೆ; ದರ್ಬಾರು : (ಶ). ೪. ಮುಖ್ಯಸ್ಥ; ಯಜಮಾನ: (ಶ). ೫. (ಕಾಗದ ಪತ್ರಗಳ) ತಲೆಬರಹ ; ಶೀರ್ಷಿಕೆ: (ಶ). **ಸದರು$_1$** : ೨. ಇದಿರಿನಲ್ಲಿ ಜಂಗಮವು ಬರುವುದ ಕಂಡು ಸದರನಿಳಿದು ನಡದು ಹೋಗಿ ಚರಣಕ್ಕೆಜಿಗುವುದೆ ಉತ್ತಮಭಕ್ತಿ (ಅಖಂಡೇ. ೭೭-೨೮); ಕಲಿ ಕಾರ್ತವೀರ್ಯ ತಾ ಸದರಿಳಿದನು (ಪರಶು. ೨೦-೧೧). ೩. ಶರಣ ಹೊನ್ನಯ್ಯನನ್ನು ಸದರಿಗೆ ಕರಸಿ ಮಾತನಾಡಿಸಲು ಬಿಜ್ಜಳನು (ಶರಲೀ. ೨೮೭-೭); ಸದರಿಗೈತರಲೊಡನೆ ಚಳಕದಿಂ ದಶರಥಂ ಕಾಣುತಂದಿನಿರಿದ್ದು . . . ವಂದಿಸಿದನು (ಪರಶು. ೨-೨೦). ೪. ಸದರು ಆಗಿಹನವನ ಸದರು ಯೇರೋನವನ (ಚಿದಾವ. ೯೦-೬). ೫. ಲಿಂಗವಂತರುಯೆಂಬ ಸದರಿನ ಕೆಳಗೆ ವಿವರಿಸಿದ್ದೇವೆ (ಕಭಾಗ. ೧೦೪). ೬. ಅಧಿಕೃತವಾದುದು : ಹಲಿಗೆ ಮೇಲಣ ಸದರು ಮೊಹರು (ಎಕ. XIV. ನಂಜನ. ೨೯೩-೧೪೩: 1847). [<— ಅರ. ಸದ್ರ್; ಹಿಂ. ಮರಾ. ಸದರ್./ ತುಳು. ಸದರ್, ಸದರು]

**ಸದರ, ಸದರು$_2$** (ನಾ). ೧. ಸಲಿಗೆ ; ಸಸಾರ : ಸಾಪತ್ನ್ಯರಲಿ ಸದರವ ಕಾಣೆ ತಾನೆಂದ (ಕುಮ್ಮಾರ. ೮-೬); ಅದರ ಸದರ ನನ್ನ ಅರಿವಿಗೆ ಮಂಕನ್ನು ಕವಿಸಿತು (ಕಪವು. ೭-೯೦). ೨. ಸುಲಭ ; ಸರಾಗ ; ಸಲೀಸು : ಆಸೆ ಎಂಬುದು ಭವದ ಬೀಜ ನಿರಾಸೆಯೆಂಬುದು ನಿತ್ಯಮುಕ್ತಿ ಉರಿಪದ್ಧಿಗಳರಸನಲ್ಲಿ ಸದರವಲ್ಲ ಕಾಣಪ್ಪ (ಸರ್ವಜ್ಞ. ೧೮೫-೬೫೩); ಬಳಿಯಲಿ ಬಂದೆ ಸದರವೆಯೆನ್ನಯ ಕೈಚಳಕವನಿಂದು ತೋಱುವೆನು (ಸೂಬಸೂ. ೫-೨೮); ವೈನತೇಯನ ವಿಗಡಿಸಿದ ವಿಷವೇನು ಸದರವೊ ಹಾವಡಿಗರಿಗೆ (ಕುಮ್ಮಾರ. ೧೫-೧೦); ಸದರವಲ್ಲವೊ ನಿಜಭಕುತಿ (ಪುರಂದ. ೧-೪೭ ಪಲ್ಲವಿ). ೩. ಅಸಡ್ಡೆ; ತಿರಸ್ಕಾರ : ನಿಮ್ಮಡಿಯ ಪೂರ್ವದ ಡಿಂಗರಿಗನೆಂದು ಘನಮಾಡಿ ಬಳಿಕಿಂತು ಸದರಮಂ ಮಾಳ್ಪರೇ (ಸೌಂದಪು. ೧೪-೧೭). **ಸದರು$_2$** : ೧. ಶಾಲೆಯಲ್ಲಿಯೂ ಮಕ್ಕಳನ್ನು ಹಿಂದಿನ ಸದರಿನಿಂದ ಮುಟ್ಟಿ ಮುದ್ದಾಡಲು ಹಿಂಜರಿಯುತ್ತಿದ್ದಳು (ಮುನಿಮಾ. ೧೫೫). [ದೇ. II ತಮಿ. ಚತಿರ್; ಮಲ. ಚದಿರ್]

**ಸದರಂಗಿ** (ನಾ). ಒಂದು ಬಗೆಯ ಅಂಗಿ ; ಕುಡತಾ : ಸದರಂಗಿ ತೊಟ್ಟಹನು ಪದಕ ನವರತ್ನದ ಮದುಮಕ್ಕಳ ಅಣ್ಣ ಬಸವಣ್ಣ (ಸಿದ್ಧಪು. ೨೦-೧೧). [< ಸದರಾ + ಅಂಗಿ$_2$]

**ಸದರಗೊಡು** (ಕ್ರಿ). ಸಲಿಗೆಯನ್ನು ಕೊಡು : ಒಡಲೀಯದೆ ಸದರಗೊಡುತ ವಿಭಾಡಿಸುತ ಮೇಲಿಕ್ಕಿದರೆ ಕೈಮಾಡಿದರೆ ಶರಹತಿಗೆ ದೇಹವ ಕೊಟ್ಟು ಸೈರಿಸುತ . . . ಕಾದಿದನು (ಕುಮ್ಮಾದ್ರೋ. ೧೫-೬೨). [ಸದರ + ಕೊಡು$_1$]

**ಸದರನಿದರ** (ನಾ). ಅನುಕೂಲ ಮತ್ತು ಅನನುಕೂಲ (?) ; ಸೌಕರ್ಯ ಮತ್ತು ಅಸೌಕರ್ಯ (?) : ಅಂತು ಮೂವಳಸುವಳಸಿ ಬೀಡಂ ಬಿಟ್ಟು ಮಱುದಿವಸಂ ಲಗ್ನಯ ದೆಸೆಯ ದಿವಸ ಸದರನಿದರಮುಮಂ ಜಂತ್ರದೊಡ್ಡವಣೆಗಳುಮಂ . . . ನೋಡುತ್ತುಂ (ಅನಂಪು. ೧೧-೮೨ ವ); ವಸುಷೇಣರಾಜನು, ಕೋಟೆಯ 'ಸದರನಿದರ'ಮುಮಂ (ಅನುಕೂಲ-ಪ್ರತಿಕೂಲ ಸ್ಥಳಗಳನ್ನು) . . . ಸುತ್ತಿ ಸುತ್ತಿ ನೋಡುತ್ತ (ಕರ್ಣಾಜ. ೧೮). [?]

**ಸದರಹು** (ಗು). ಮೇಲಿನ ; ಮೇಲೆ ಹೇಳಿದ : ಈ ಕೊಡಗಿನ ದೊರೆಗಳು ಸದರಹು ಆ ಶೀಮೆ ಬಿಡದ ಹಾಕಿಕೊಂಡು ಬರುವುದರಿಂದ (ರಾಜೇಂದ್ರ. ೬); ಅಂಗಡಿಗೆ ಬದುಕು ಕಳುಹಿಸಿ ಸದರಹು ಅಂಗಡಿಯಲ್ಲಿ ರಕಮು ತಕ್ಕೊಂಡು (ಮುಂಬಮ್ಮಾ. ೫ ಪ್ರಸ್ತಾವನೆ). [<— ಮರಾ. ಸದರಹೂ]

**ಸದರಾ** (ನಾ). = ಸದರಂಗಿ : ಮೈಮೇಲೆ ಬಾದಾಮಿಬಣ್ಣದ ಒಂದು ಖಾದೀ ಸದರಾ (ಪುನರ್ಮ. ೪೭). [<— ಹಿಂ. ಸದರೀ; ಮರಾ. ಸದರಾ]

**ಸದರಿ, ಸದ್ರಿ** (ಗು). ಈ ಮೊದಲು ಹೇಳಿದ ; ಮೇಲೆ ಕಾಣಿಸಿದ : ಸದರೀ ಐದು ದೇವರ ಪೂಜೆ . . . ವಗೈರೆ ಬಗ್ಗೆ ಬತಾರೀಕು ಯಿನಾಮು (ಎಕ. VI, ಕೊಪ್ಪ. ४८-೩೫; 1811); ಸದರಿಕೆಲಸಕ್ಕೆ ಹಂಗಾಮಿಯಾಗಿಯಾದರೂ ನೇಮಿಸಿಕೊಳ್ಳಬಹುದು (ಗ್ರಾಮಾಕ. ೧೧). **ಸದ್ರಿ** : ಸದ್ರಿ ಸೇತುವೆಕೆಲಸವನ್ನು ಕಂಟ್ರಾಕ್ಟು ಪಡೆದು (ಮೈಆರಿ. ೧೯೪೬. ೩-೮; 1894). [<— ಅರ. ಮರಾ. ಸದರ./ ತುಳು. ಸದರಿ, ಸದ್ರಿ]

**ಸದರು$_1$** 'ಸದರ್' ನೋ.

**ಸದರು$_2$** 'ಸದರ' ನೋ.

**ಸದರುಕಟ್ಟೆ** (ನಾ). ಜಗುಲಿಯ ಕಟ್ಟೆ ; ಚಾವಡಿ ಕಟ್ಟೆ : ಗೌಡರ ಮನೆಯ ಪಡಸಾಲೆ ಎರಡಂಕಣದ ಸದರುಕಟ್ಟೆಯ ಮೇಲೆ . . . ಒಂದೆರಡು ಹಳೆಯ ದಿಂಬುಗಳನ್ನಿಡಲಾಗಿದ (ಸಪದಾ. I. ೨೫೯). [ಸದರು$_1$ (< ಸದರ್) + ಕಟ್ಟೆ$_1$]

**ಸದರ್ಥ** (ನಾ). ನಿಜವಾದ ಅರ್ಥ ; ಸರಿಯಾದ ಅರ್ಥ : ಸೊಗಯಿಪ ಧಾತು ಧಾತುಗಳವಟ್ಟ ಸದರ್ಥದ ಮಾತು ಮಾತಿನೊಳ್ ಮಿಗೆ ಪುದಿದಿರ್ಪ ರೀತಿ ನೆಜ ರೀತಿ ರಸಂಬಡೆಯಲ್ (ಶಾಂತೀಶ್ವ. ೨-೮೧); ಜಡಪ್ರಾಸ ಸೇರದೆ ಸದರ್ಥಕ್ಕೆ ಪೋರದೆ . . . ತಿರ್ದುಗೆ ಕೃಪೆಯೊಳು (ಮಂಗರಾ. ೧-೨). [ಸಂ.]

**ಸದರ್ಥವಾದಿತ್ವ** (ನಾ). ಸಮರ್ಥವಾಗಿ ವಾದಿಸುವುದು ; ಸರಿಯಾದ ತರ್ಕ : ಸದರ್ಥವಾದಿತ್ವಮನಿಂದ್ರನಂದಿಮುನಿಯಿಂ ಪಡೆದೊಂ (ಶಾಂತೀಶ್ವ. ೧೨-೮೦). [ಸಂ.]

**ಸದಲಂಕಾರ, ಸದಳಂಕಾರ** (ನಾ). [ಕಾವ್ಯಮೀ] ಉತ್ತಮವಾದ ಅಲಂಕಾರ ; ಒಳ್ಳೆಯ ಅಲಂಕಾರ : ಸದಲಂಕಾರೋದಾರಂ ವದನೇಂದುಸುಧಾಚ್ಛಟಾಂಬು ಪಸರಿಸ . . . ಮುನಿ ನುಡಿದಂ (ಶಾಂತಿಪು. ೬-೩); ಇತರೇತರಕಾರಕಸಂಪ್ರತಿಪತ್ತಿ ಪರಸ್ಪರಂ ಸಮೂಹದೊಳೆಸೆವೊಂದತಿಶಯಗುಣದಿಂ ನಿರ್ಧಾರಿತಮಪ್ಪುದು ಸಾರಮೆಂಬ ಸದಲಂಕಾರಂ (ಕಾವ್ಯಾವ. ೬೫೪). **ಸದಳಂಕಾರ** : ಗುಣಜಾತ್ಯಾದಿಗಳೊಳಗನುಗುಣಮಾಗಿರೆ ಪೇಱದವೞ ವಿಕಳತೆಯಂ ಸಯ್ತಣಿಸಿ ವಿಶೇಷಮನಱಿಪುವ ಗಣನೆ ವಿಶೇಷಾನುಭಾವಸದಳಂಕಾರಂ (ಕವಿರಾ. ೩-೧೨೦); ಸದಳಂಕಾರೋಕ್ತಿಯುಂ ಸೂಕ್ತಿಯುಮೆಸೆಯಲ್ಗುಪನ್ಯಾಸವಿನ್ಯಾಸಮಂ ತೋರ್ಪುದುಂ (ಸುಕುಮಾ. ೨-೭೫). [ಸಂ.]

**ಸದವಕಾಶ** (ನಾ). ಒಳ್ಳೆಯ ಸಮಯ ; ತಕ್ಕ ಸಂದರ್ಭ,—ವೇಳೆ : ತಮ್ಮ ಹೇಳಿಕೆಗಳನ್ನು ನಿರ್ಭೀತಿಯಿಂದ ಮುಂದಿರಿಸಲು ಹಗಲಿಗಿಂತ ರಾತ್ರಿಯೇ ಸದವಕಾಶ (ಕುಡಿಕೂ. ४೯). [ಸಂ.]

**ಸದವು** 'ಸದುವು' ನೋ.

**ಸದಸತ್ತು** (ನಾ). ಇರುವುದು ಮತ್ತು ಇಲ್ಲದಿರುವುದು ; ಅಸ್ತಿತ್ವದಲ್ಲಿರುವುದು ಮತ್ತು ಅಸ್ತಿತ್ವದಲ್ಲಿಲ್ಲದಿರುವುದು : ಸದಸತ್ತುಗಳ ಭೇದವನು ನೀತಿಮುಖದಿಂ ದಱಿಪುದು (ಕುಮ್ಮಾಉ. ೩-೧೨೪); ಈ ಅವ್ಯಾಕೃತವು ಸತ್ತೂ ಅಲ್ಲ ಅಸತ್ತೂ ಅಲ್ಲ ಸದಸತ್ತೂ ಅಲ್ಲ (ಉತ್ತಟೀ. ೫-೧೧). [ಸಂ. ಸದಸತ್]

**ಸದಸದ್ವಿವೇಕ** (ನಾ). ಒಳ್ಳೆಯದು ಮತ್ತು ಕೆಟ್ಟದ್ದನ್ನು ವಿಶ್ಲೇಷಿಸುವ ಅರಿವು; ವಿವೇಚನಾಶಕ್ತಿ : ಸದಸದ್ವಿವೇಕಮನ್ ನೇರಿತಾರಯ್ಯೆಯನ್ ಪಿಡಿಯಲ್ಕೆವೇಟ್ಕುಂ (ಬಿದ್ಧಪ್ರ. ೫೫-೧೨೦೩). [ಸಂ.]

**ಸದಸನ್ಮತಿ** (ನಾ). ಒಳ್ಳೆಯ ಬುದ್ಧಿಯುಳ್ಳವನು ಮತ್ತು ಕೆಟ್ಟಬುದ್ಧಿಯುಳ್ಳವನು : ಸದಸನ್ಮತಿಗಳ್ ಪಿಡಿವಂದದಿನೇಕಾನೇಕ ಪದಮುಮಂ ಸಿರಿ ಮೈಸೋಂಕಿದರಂ ಪಿಡಿವುವು ಮುಂ ಮಿಡುಕದಂತು ತಡನಡವ ವಜ್ರಲೇಪದ ಶಿಲೆಗಳ್ (ಜಗವಿ. ೧೭-೪೨). [ಸಂ.]

**ಸದಸು** 'ಸದೆಯಿಸು' ನೋ.

**ಸದಸ್ಯ** (ನಾ). ೧. ಸಂಘ, ಸಮಿತಿ ಮುಂತಾದ ಘಟಕಗಳಲ್ಲಿ ಕಾನೂನು ಬದ್ಧವಾದ ಸಂಬಂಧವನ್ನು ಹೊಂದಿರುವವನು : ಗೂಢಚಾರರು ಪ್ರತ್ಯಕ್ಷವಾಗಿಯೇ ಪಾರ್ಟಿಸದಸ್ಯರ ಹಿಂದೆ ಸುಳಿಯಲಾರಂಭಿಸಿದರು (ಆತ್ಮಾರ್ಪ. ೧೪೮); ನಮ್ಮ ತಂದೆಯೇ ರಾಜ್ಯಾಂಗಸಭೆಯ ಒಬ್ಬ ಸದಸ್ಯನಾಗಿದ್ದನು (ಮಲನಾ. ೬೮). ೨. ಯಜ್ಞ, ಯಾಗಾದಿಗಳಲ್ಲಿ ಸಹಾಯ ಮಾಡುವವನು, – ಸಹಾಯಕ. ೩. (ನ್ಯೂನಾತಿರೇಕಗಳನ್ನು ಸರಿಪಡಿಸಿ ವಿಧಿಪೂರ್ವಕವಾಗಿ) ಯಜ್ಞವನ್ನು ನಡೆಸುವವನು; ಋತ್ವಿಕ್ಕು. [ಸಂ.]

**ಸದಸ್ಯತ್ವ** (ನಾ). ಸಂಘ, ಸಮಿತಿ ಮುಂತಾದ ಘಟಕಗಳಲ್ಲಿ ಕಾನೂನು ಮೂಲಕವಾದ ಸಂಬಂಧವನ್ನು ಹೊಂದಿರುವುದು ; ಸದಸ್ಯತನ : ಸದಸ್ಯತ್ವಕ್ಕೆ ಅನರ್ಹತೆಗಳು (ಭಾಭಾಸ. ೪೯); ಸದಸ್ಯತ್ವವಷ್ಟೇ ನನಗೆ ಸಾಲದು (ಆತ್ಮಾರ್ಪ. ೬೫). 'ಆಜೀವಸದಸ್ಯತ್ವ' ಪರಾ. [ಸಂ.]

**ಸದಸ್ಯೆ** (ನಾ). ಸಂಘ, ಸಮಿತಿ ಮುಂತಾದ ಘಟಕಗಳಲ್ಲಿ ಕಾನೂನು ಬದ್ಧವಾದ ಸಂಬಂಧವನ್ನು ಹೊಂದಿರುವವಳು : ದಾಸಿಯನ್ನಿಡಲು ಸದಸ್ಯೆಯರೆಲ್ಲರಿಗೂ ಆರ್ಥಿಕಸಂಪತ್ತು ಅನುವಾಗದು (ಸಾವಿಸ. ೫೫). [ಸದಸ್ಯ + -ಎ₂]

**ಸದಸ್ಸು** (ನಾ). ಸಭೆ ; ಸಮಾವೇಶ : ಗಂಗರಾಜರು . . . ಸಭೆಗೆ ವಂದಿಸಿ, ಸದಸ್ಸನ್ನುದ್ದೇಶಿಸಿ . . . ಎಂದರು (ಶಾಂತಲಾ. ೩೭). [ಸಂ. ಸದಸ್]

**ಸದಳ** (ನಾ). ೧. (ಏಕ ಅಥವಾ ದ್ವಿ)ದಳವನ್ನು ಹೊಂದಿರುವ ಧಾನ್ಯ, – ದವಸ : ಸರಕುಗಳ ಸದಳದ ಭಂಡಿಗಳು ಭಾರಿಸಿದವಿಳೆ ಝಡಿಯೆ (ತೊರರಾ. ೧-೧೭-೧೦). 'ಸದಳಿಗ' ಪರಾ. ೨. ಪಡೆಯಿಂದ ಕೂಡಿರುವುದು ; ಸೈನ್ಯಸಹಿತವಾದುದು. ೩. ಸೈನ್ಯ; ಸೇನೆ: ಮಂತ್ರಿಯ ಮಾತ ಕೈಕೊಂಡು ಸದಳವೆಲ್ಲವ ನಿಜನಿವಾಸಕ್ಕೆ ಬೀಳ್ಕೊಟ್ಟು (ಹಚಕಾ. ೪-೧); ಬಿದುರೆಯೊಳುಪ್ಪಯಣವನೆಂಟುದಿನ ಮಾಡಿ ಸದಳವ ತೆರಳಿಸಿ ಮುಂದೆ ಕದನಲಂಪಟರೊಡನೆಯ್ದರೆ (ಕುರಾಸಾಂ. ೪೨-೪೨). [ಸಂ. ಸದಲ]

**ಸದಳಿಗ** (ನಾ). ಧಾನ್ಯವನ್ನು ಮಾರುವವನು ; ದಿನಸಿವ್ಯಾಪಾರಿ : ಸದಳಿಗರ ಸಾಧನಸಮಗ್ರಮುಂ ತರತರದೊಳಿಳಿದುವತಿಚೆಲ್ವಾಗಿ (ಚಿಬಪು. ೪೧-೫೭). [ಸದಳ + -ಇಗ]

**ಸದಾ** (ಅ). ೧. ಯಾವಾಗಲೂ ; ಸರ್ವದಾ : ಸದಾ ಸನ್ನಿಹಿತನಾಗಿ ಶರಣೆಂಬುವುದು (ಬಸವ. ೧೭೭); ಬಾ ಎಂದಾಗ ನಾನು ಸದಾ ಸಿದ್ಧ (ನಡೆದಾ. II, ೯೬೯). ೨. ಶಾಶ್ವತವಾಗಿ; ಖಾಯಂ ಆಗಿ : "ಸತತಂ ನಿತ್ಯಮನಿಶಮನವರತಮಶ್ರಾಂತಮಸ್ತೋಕಮಜಸ್ರಂ ಶಾಶ್ವತಮೆನೆ ಸದಾ ನಾಮಮಕ್ಕುಂ" (ಮಂಗರಾ. ೧೨೭-೬). [ಸಂ.]

**ಸದಾಕಾಲ** (ನಾ). ಎಲ್ಲಾ ಸಮಯ ; ಎಲ್ಲಾಕಾಲ : ಇದು ಸದಾಕಾಲದಲ್ಲಿಯೂ ಹಿಮ ಮತ್ತು ಮಂಜುಗಡ್ಡೆಯಿಂದ ಮುಚ್ಚಲ್ಪಟ್ಟಿರುವ ಇಕ್ಕಟ್ಟಾದ ಕಣಿವೆ (ನನದಿ. ೧೧). [ಸಂ.]

**ಸದಾಕಾಲಂ** (ಅ). ಎಲ್ಲಾ ಸಮಯದಲ್ಲಿಯೂ : ದುರಾತ್ಮನಾತ್ಮೀಯಭವನದೊಳ್ ಸದಾಕಾಲಂ ಮಹಾಜನಕ್ಕೆ ಸಹಸ್ರಭೋಜನಮನಿಕ್ಕುವಂ (ಸುಕುಮಾ. ೨-೬೯ ವ). [< ಸದಾಕಾಲ]

**ಸದಾಗತ** (ನಾ). ಯಾವಾಗಲೂ ಚಲಿಸುವಂತಹುದು ; ಗಾಳಿ ; ವಾಯು : ಅತಿಥಿಪರದಿಂದ ಸಂಚರಿಸಲಂಜುವನಾಶ್ರಮದಲ್ಲಿಯಾ ಸದಾಗತ (ಸನ್ನಚಾ. ೪-೧೫೨). [ಸಂ.]

**ಸದಾಗತಿ** (ನಾ). = ಸದಾಗತ : ಕಾಮನ ಬಾಣದಿರ್ಕೆವನೆಯೋ . . . ವಿಲಸತ್ ಸದಾಗತಿಪ್ರೇಮದ ಸೌರಭಂದಳೆದ ತಾಣಮೊ (ಗಿರಿಕ. ೨-೬೦) ; ಸದಾಗತಿ ಕಂಪನಾಂತು ತಾಂ ಮೆಲ್ಲನೆ ತೀಡೆ (ಹಾಲಾಸ್ಯ. ೧-೩-೨೯). [ಸಂ.]

**ಸದಾಗತಿಸಖ** (ನಾ). ವಾಯುವಿನ ಗೆಳೆಯ ; ಅಗ್ನಿ : ಸದಾಗತಿಸಖನ ಝಳವಡಗಿತೆ (ತೊರರಾ. ೬-೫೧-೭೯). [ಸಂ.]

**ಸದಾಚಾರ** (ನಾ). ೧. ಒಳ್ಳೆಯ ನಡತೆ, – ಆಚಾರ : ವಿಸ್ತಾರದ ಜೈನಧರ್ಮದ ಮೊದಲ್ ಪರಮೇಶ್ವರರೆಂಬಿನಂ ಸದಾಚಾರಸಮೇತರಾದರೆಮಗೀಗೆ ಶಿವಾಸ್ಪದ ಮುಖ್ಯ ಸೌಖ್ಯಮಂ (ಶಾಂತಿಪು. ೧-೩) ; ಸಕಳಸದಾಚಾರಪರಿಪಾಳನೈಕರಸಿಕರ್ (ಸೌಇಇ. XX. ೪೬-೧೮ ; 1072) ; ಭಕ್ತನು ಭಕ್ತನ ಕಾಣ್ಬುದು ಸದಾಚಾರ (ಬಸವ. ೨೪೬). ೨. [ವೀಶೈ] ಪಂಚಾಚಾರಗಳಲ್ಲಿ ಒಂದು ; ಸತ್ಯಶುದ್ಧ ಕಾಯಕವನ್ನು ಮಾಡುತ್ತ ಸಮಸ್ತ ಪ್ರಾಣಿಗಳಲ್ಲಿ ಪಾತ್ರಾಪಾತ್ರವನ್ನು ತಿಳಿದು ಪರಹಿತಾರ್ಥ ಮಾಡುವುದು : ಲಿಂಗ ಜಂಗಮವ ಪೂಜಿಸಿ ಭಕ್ತನಾದೆನೆಂದರೆ ಭೃತ್ಯಾಚಾರ ಸದಾಚಾರವೆ ಮೊದಲು ನೋಡಾ (ಅವಚಂ. ೨೨೫-೧೦೨೦) ; ಸಕಲ ಶರಣರ್ಗೆ ಸಂತೋಷವಹುದೇ ಸದಾಚಾರವೆನಿಸುವುದು (ವಿವೇಕ. ೧೧೧). [ಸಂ.]

**ಸದಾಚಾರವರ್ತಿನಿ** (ನಾ). ಒಳ್ಳೆಯ ನಡತೆಯುಳ್ಳವಳು : ಜನಕಂ ವಿಪ್ರಕುಳಾಂಬರ ದ್ಯುಮಣಿಚಂದ್ರಂ ತಾಯ್ಸದಾಚಾರವರ್ತ್ತಿನಿ ಚಾಮಾಂಬಿಕೆ (ಸೌಇಇ. XX. ೫೭-೩೮ : 1084). [ಸಂ. ಸದಾಚಾರವರ್ತಿನೀ]

**ಸದಾಚಾರಿ** (ನಾ). ಒಳ್ಳೆಯ ನಡತೆಯುಳ್ಳವನು : ಸಮಯೋಚಿತದಲ್ಲಿ ಲಿಂಗಾರ್ಚನೆಯ ಮಾಡುತಿಪ್ಪನಾ ಭಕ್ತನು . . . ಇಂತಪ್ಪ ಸದಾಚಾರಿಗಳನೆನಗೆ ತೋಱು (ಬಸವ. ೩೯೯) ; ಧನವಂತನಂ ಸದ್ಧರ್ಮಿಯಂ ಸದಾಚಾರಿಯಪ್ಪೆನ್ನ ಪ್ರಾಣೇಶ್ವರನಂ ಬಿಟ್ಟು ದುರ್ಬುದ್ಧಿಯಿಂದ . . . ಪಾಪಸ್ವರೂಪಂಗೆಳಸಿ ಕೆಟ್ಟೆಂ (ಸನ್ನಚಾ. ೩-೯೭ ವ). [ಸಂ. ಸದಾಚಾರಿನ್]

**ಸದಾನಂದ** (ನಾ). ೧. ಯಾವಾಗಲೂ ಇರುವ ಸಂತೋಷ ; ನಿತ್ಯಾನಂದ : ಪರಮಭಟ್ಟಾರಕ ಪರಾಪರ ಪರಮಪರ ಪರಮಸ್ವತಂತ್ರನ ಪರಿಮಿತ ಸದಾನಂದಪರ ಪರಮಾತ್ಮ ಪರಮೇಶ (ಬಸಪು. ೨-೧೭). ೨. ಯಾವಾಗಲೂ ಆನಂದದಿಂದಿರುವವನು : ಸದಾನಂದನ ಇರವು ಹೇಗಿರಬೇಕೆಂದರೆ . . . ಉಣಬಂದವರಿಗಿಕ್ಕಿ ಬೇಡಬಂದವರಿಗೆ ಕೊಟ್ಟು ಆರೂಢನಱಿವುದು (ಮೋಳಿಮಾ. ೩೭-೧೫೩). ೩. ಶಿವ; ಪರಮೇಶ್ವರ: ಜೋ ಸಗುಣ ನಿರ್ಗುಣ ಸದಾನಂದ ನಿತ್ಯ ಜೋ ಜೋ (ರಾಘಚ. ೨-೪೩). [ಸಂ.]

**ಸದಾನಂದಿ** (ನಾ). ೧. ಯಾವಾಗಲೂ ನಂದಿಯಿಂದ ಕೂಡಿರುವುದು. ೨. ಯಾವಾಗಲೂ ಸಂತೋಷದಿಂದ ಇರುವುದು : ೧, ೨ : ಬಾಹ್ಯಕರ್ಮ ಪರಿತ್ಯಾಗದಿಂ ಸದಾನಂದಿಯಾಗಿಹುದೇ ಸ್ವಯಂಲಿಂಗನೆನಿಸುವುದು (ವಿವೇಕ. ೧೧೨); ಶಿವಸಭೆಯಂತೆ ಸದಾನಂದಿಬಂಧುರಮೆನಿಸಿ (ರಾಜಶೇ. ೫-೧೯ ವ). ೩. ಯಾವಾಗಲೂ ಆನಂದದಿಂದಿರುವವನು: ತನ್ನ ಉಪೋಷಣಾದಿಗಳಿಂದ ನೋಡುವವರಿಗೂ ಸಂಕಟವನ್ನುಂಟುಮಾಡುವವನಿಗಿಂತ ಕಂಡವರೆಲ್ಲರೂ ಹಿರಿಹಿರಿಹಿಗ್ಗುವಂತೆ ಮಾಡುವ ಉಂಡಾಡುವ ಸದಾನಂದಿಯು ಲೇಸು (ವಿಚಾಮಂ. ೪೯). [ಸಂ. ಸದಾನಂದಿನ್ (ಸದಾ + ನಂದಿನ್ ; ಸದಾ + ಆನಂದಿನ್)]

**ಸದಾನಭೋಗ** (ನಾ). ೧. ಯಾವಾಗಲೂ ಆಕಾಶದಲ್ಲಿ ಚಲಿಸುವವನು ; ಚಂದ್ರ. ೨. ದಾನವನ್ನು ಮಾಡುವುದರಲ್ಲಿ ಆಸಕ್ತಿಯುಳ್ಳವನು; ಚಂದ್ರಹಾಸ. ೧, ೨ : ಮಂಜುಮಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ ಸದಾನಭೋಗಂ ಕುವಲಯಪ್ರಿಯಂ . . . ಅಮೃತಾರ್ಚಿಯಂ ಜಱಿದು ನಗುವನದಱಿಂ ಚಂದ್ರಹಾಸಂ (ಜೈಮಿಭಾ. ೨೮-೬೨). [ಸಂ. (ಸದಾ + ನಭೋಗ ; ಸದಾನ + ಭೋಗ)]

**ಸದಾನವ** (ನಾ). ೧. ಯಾವಾಗಲೂ ಹೊಸತಾದುದು ; ನವನವೀನವಾದುದು. ೨. ರಾಕ್ಷಸರಿಂದ ಕೂಡಿದುದು. ೧, ೨ : ಅಭಿಲಾಷೆಯಂತಿರ ಸದಾನವಂ ಸಿರಿಯಂತೆ ವಿಭವಾಸ್ಪದಂ ಕಲಾನಿಧಿಯಂತೆ ಮೃಗಧರಂ . . . ಆಗಿ ತಚ್ಛೈಲಮೆಸೆದಿರ್ದುದು (ಜೈಮಿಭಾ. ೧೧-೫). [ಸಂ. (ಸದಾ + ನವ ; ಸ + ದಾನವ)]

**ಸದಾನಿಕೇತನ** (ನಾ). ದಾನಿಗಳಿಂದ ಕೂಡಿದ ಮನೆ: ಸದಾನಿಕೇತನಂಗಳಿಂ ಧನದ ಭವನಮೆನಿಪ ಸಿರಿಯ ಬಚ್ಚರಾಪಣಂಗಳಿಂ (ಪಂಪಭಾ. ೧-೫೮). [ಸಂ.]

**ಸದಾನುವರ್ತಿ** (ನಾ). ೧. ಸತ್ಪರಂಪರೆಯನ್ನು ಅನುಸರಿಸುವುದು. ೨. ಯಾವಾಗಲೂ ಬೆನ್ನು ಹಿಂದೆ ಇದ್ದು ಕಾಯುವವನು. ೧, ೨ : ಪರಿಕಿ ಪೊಡತಿವೃದ್ಧಂ ನಿಷ್ಠುರವೃತ್ತಿ ಸದಾನುವರ್ತಿ ನೀತಿಯುತಂ ಭಾಸುರತೇಜಂ (ಚಂದ್ರಪ್ರ. ೩-೨೩). [ಸಂ. ಸದಾನುವರ್ತಿನ್ (ಸದ್ + ಅನುವರ್ತಿನ್ ; ಸದಾ + ಅನುವರ್ತಿನ್)]

**ಸದಾಪ, ಸದಾಬು** (ನಾ). ೧. ಒಂದು ಬಗೆಯ ಗಿಡ ; ಸಬ್ಬಸಿಗೆ ಗಿಡ : ಜಟಾಮಾಂಸಿ, ಸದಾಪ, ಅರಿಸಿನ, ದ್ರಾಕ್ಷೆ (ಸಕಪ್ಪ. ಪರಿ. ೪೩೮). **ಸದಾಬು** : ೨. ಕಟುವಾಸನೆಯುಳ್ಳ ಒಂದು ಬಗೆಯ ಗಿಡ ; ನಾಗದಾಳಿ : (೬). 'ಸದಗುಪ್ಪೆ' ಪರಾ. [← ಮರಾ. ಸತಾಪ ; ಹಿಂ. ಸದಾಬ್. / ತಮಿ. ಚತಾಪ್ಪು ; ಮಲ. ಸುದಾಬ್ ; ತುಳು. ಸದಾಪು, ಸದಾಬು; ತೆಲು. ಸದಾಪ]

**ಸದಾಪುಷ್ಪ** (ಗು). ೧. ಯಾವಾಗಲೂ ಹೂವುಗಳನ್ನು ಬಿಡುವ. (ನಾ). ೨. ಯಾವಾಗಲೂ ಹೂವುಗಳನ್ನು ಬಿಡುವ ಗಿಡ ; ಮುಚುಕುಂದ : "ಸದಾಪುಷ್ಪ ಮೆನಲು ಮುಚುಕುಂದಮಕ್ಕುಂ" (ಮಂಗರಾ. ೩೮-೨೫). ೩. ತೆಂಗಿನ ಮರ. [ಸಂ.]

**ಸದಾಬರ್ತ್** 'ಸದಾವರ್ತು' ನೋ.

**ಸದಾಬು** 'ಸದಾಪ' ನೋ.

**ಸದಾರವಿಭವೋಪೇತ** (ನಾ). ೧. ಹೆಂಡತಿಯೊಡನಿರುವ ವೈಭವದಿಂದ ಕೂಡಿದುದು. ೨. ಸದಾಕಾಲವೂ ಸೂರ್ಯನಿಂದ ಹುಟ್ಟಿದ ಯಮುನಾನದಿ ಯೊಡನೆ ಕೂಡಿದುದು. ೧, ೨ : ಆ ಜನಪದಂ ಸಮುದ್ರದಂತೆ ಸದಾರ ವಿಭವೋಪೇತ ಮುಮನಾಂತು (ರಾಜಶೇ. ೨-೨೮ ವ).

[ಸಂ. (ಸದಾರ + ವಿಭವೋಪೇತ ; ಸದಾ + ರವಿಭವೋಪೇತ]

**ಸದಾರುಣ** (ನಾ). ೧. ಯಾವಾಗಲೂ ಕೆಂಪಾಗಿರುವುದು. ೨. ಕ್ರೂರತನದಿಂದ ಕೂಡಿರುವುದು. ೧, ೨ : ಚಾರುಪ್ರವಾಳಮಣಿರುಚಿಯೊಳ್ ಸದಾರುಣಂ . . . ಉಂಟಲ್ಲದಿಲ್ಲಮಿವು ಮತ್ತಲ್ಲಿಯುಂ (ಜ್ಞಮಿಭಾ. ೨-೮).

[ಸಂ. (ಸದಾ + ಅರುಣ ; ಸ + ದಾರುಣ)]

**ಸದಾವರ್ತು, ಸದಾಬರ್ತ್** (ನಾ). ಬಡಬಗ್ಗರಿಗೆ ಆಹಾರಕ್ಕಾಗಿ ಪ್ರತಿದಿನವೂ ಕೊಡುವ ದವಸಧಾನ್ಯ : ಪ್ರತಿದಿನದಲ್ಲಿಯೂ ಸದಾವರ್ತು ಕೊಡುವಂತೆಯೂ . . . ಕಟ್ಟಳೆ ಮಾಡಿಸಿದರು (ಮಹಾಪಂ. II, ೧೭೧). **ಸದಾಬರ್ತ್**: ಫಕೀರನು ಭಿಕ್ಷುಕರಿಗೆ ಸದಾಬರ್ತ್ ಕೊಡುತ್ತಿದ್ದನು (ದೌಲತ್. ೨೯೫).

[← ಹಿಂ. ಸದಾಬರತ್, ಸದಾವರ್ತ್ ; ಮರಾ. ಸವಾವರ್ತ್]

**ಸದಾವ್ರತ** (ನಾ). ಯಾವಾಗಲೂ ಧ್ಯಾನದಲ್ಲಿ ತೊಡಗಿರುವವನು : ಸೂರದತ್ತಂ . . . ಕ್ಷಿತಿತಳದಂತೆ ರಸಾಶ್ರಯನತರ್ಕ್ಕಸುಕವೀಂದ್ರಬೃಂದದಂತೆ ವಿಶೇಷಾನ್ವಿತನಂಬರದಂತೆ ಸದಾವ್ರತಂ (ಸುಕುಮಾ. ೯-೮೨). [ಸಂ.]

**ಸದಾಶಯ** (ನಾ). ೧. ಒಳ್ಳೆಯ ಅಭಿಪ್ರಾಯ. ೨. ಒಳ್ಳೆಯ ಅಭಿಪ್ರಾಯವುಳ್ಳವನು : ಮಹಾಶಯ! ತಮ್ಮಂತಹ ಸದಾಶಯರಾದ ದೇಶಹಿತೈಷಿಗಳ ವಿಷಯದಲ್ಲಿ ಸುಳ್ಳಿನ ಸುದ್ದಿಯನ್ನು ಹರಡುವಷ್ಟು ನರಾಧಮನು ನಾನಾಗಿಲ್ಲ (ಚೆನ್ನಬೇ. ೨೧). [ಸಂ.]

**ಸದಾಶಿವ** (ನಾ). ೧. ಯಾವಾಗಲೂ ಒಳ್ಳೆಯದನ್ನು ಮಾಡುವವನು; ಪರಮಾತ್ಮ; ಪರಶಿವ: ಎಂದೆಂದೂ ಸದಾಶಿವನ ಕುಂದದೆ ನೆನೆಯಲೀಯದೆ ಕೊಂದುದಯ್ಯಾ ಈ ಮಾಯೆ (ಬಸವ. ೧೭) ; ಕಲೆಗತೀತಂ ಸದಾಶಿವನೆಂದು ಷಡ್ಗುಣದ ಬಲುಸಿರಿಯನುಳ್ಳ ನಿನ್ನಂ ಕೀರ್ತಿಸುವರು (ವೀಶೈಪು. ೩-೬-೩೬). ೨. [ಶೈವ] ಶೈವಾಗಮದ ಮೂವತ್ತಾರು ತತ್ತ್ವಗಳಲ್ಲಿ ಒಂದು : ಶಿವ ಶಕ್ತಿ ಸದಾಶಿವ ಈಶ್ವರ . . . ಜಲ ಭೂಮಿಗಳೆಂಬ ಮೂವತ್ತಾಱು ತತ್ತ್ವಂಗಳು (ವಿವೇಕ. ೧೪೫). [ಸಂ.]

**ಸದಾಶಿವತತ್ತ್ವ** (ನಾ). = ಸದಾಶಿವ ೨ : ಈಶ್ವರತತ್ತ್ವ ವಾಯುಭೇದವಾಗಿ ಸದಾಶಿವತತ್ತ್ವ ಆಕಾಶಭೇದವಾಗಿ . . . ಪೃಥ್ವಿತತ್ತ್ವವ ಕೂಡಲಾಗಿ ಉತ್ಪತ್ತಿ ಎಲ್ಲಿ ಅಡಗಿತ್ತು (ಮೋಳಿಮಾ. ೭-೨೫) ; ಶುದ್ಧಸೃಷ್ಟಿಯಲ್ಲಿ ಉತ್ತರದಿಕ್ಕಿನ ಮನೆಯ ಗೋಮುಖ ಅಲ್ಲಿ ನ್ಯಾಸವಾದ ಮಕಾರವೆ ಸದಾಶಿವತತ್ತ್ವ ಅದರ ಕೆಳಗಣ ಮನೆಗಳೆ ವರ್ತುಳದಂಡ (ಉದ್ಧವಾ. ೮-೬). [ಸಂ.]

**ಸದಾಶಿವಲೋಕ** (ನಾ). ಶಿವನ ಲೋಕ ; ಕೈಲಾಸ : ಬ್ರಹ್ಮಲೋಕವನೇಱಿ ವಿಷ್ಣುಲೋಕವ ಸಾರಿ ಗಮ್ಮನೆ ರುದ್ರರೀಶ್ವರಸೀಮೆಯ ನೆಮ್ಮಿ ಸದಾಶಿವಲೋಕದ ಮೇಲೆ ಬ್ರಹ್ಮದ ಸೀಮೆಯ ಬಯಲೊಳಗೆ (ಶಿವಗೀ. ೧೫೨-೭೭೯). [ಸಂ.]

**ಸದಿಯಣ್ಣನಾಚಾರಿ** (ನಾ). ಒಬ್ಬಾತನ ಹೆಸರು : ಸಯಾರ ಸದಿಯಣ್ಣನಾಚಾರಿ ದೇXXXವೆಗ್ಗಡೆ ಸಂಧಿವಿಗ್ರ[ಹಿ] ಐಚಯ್ಯನುಂ . . . ಕೆಱೆಯ ಕಟ್ಟಿ (ಮೈಆರಿ. ೧೯೩೩, ೧೧-೨; 889). [ಸದಿಯಣ್ಣ + < ಆಚಾರಿ]

**ಸದಿವಾಳ** (ನಾ). ಒಂದು ಸ್ಥಳದ ಹೆಸರು (?) : ಕಮ್ಮಟ ಕೇತೋಜಗ ಸದಿ (?ಟಿ)ವಾಳ ಕೆಯಿ ಮತ್ತರೆರಡು (ಎಇ. IV. ೩೫೪-೪೮ ; 975). [?]

**ಸದುಂಬು** (ನಾ). ಜವುಗುನೆಲ.

ಸದುಂಬಾಗು = (ನೆಲವು) ಒದ್ದೆಯಾಗು ; ತೇವವಾಗು : ಜಳಕೇಳೀದ್ರವದಿಂದೆ ನಾಂದ ತೆಱದಿಂದೋಲಾಡಿ ಪೂಗೊಯ್ದು ಪೂಗೊಳದಿಂದಂ ಪೊಱಮಟ್ಟು ಸಂದು ಶಬರೀಸಂದೋಹದಾವೋದಿಯಪ್ಪಳಕಾನೀಕದಿನೊಕ್ಕ ನೀರ್ವನಿಗಳಿಂ ತೀರಂ ಸದುಂ [ಪಾಠಾಂ. ಮಂ, ಡುಂ]ಬಾಗೆ ಪೊಯ್ದಳಿಜಾಳಂಗಳಿನಿಂದ್ರ ನೀಲಮಣಿಯಂ ಕಟ್ಟಿರ್ದವೋಲೊಪ್ಪುಗುಂ (ಲೀಲಾವ. ೬-೭೭).

[? / ತಮಿ. ಚತುಪ್ಪು]

**ಸದುಕ** (ನಾ). ಒಂದು ಬಗೆಯ ಕಾಳು ; ಬಾರ್ಲಿ : ಸದುಕವೆಂಬ ಕಾಳುಗಳನ್ನು ಅವರಿಗಳನ್ನು ತಿಂದು ಕಾಲಕಳೆಯುವುವು (ಮುಂಬಯಿ. ೩-೭೭).

[?. / ಮರಾ. ಸತ್ತು, ಸಾತೂ/ ಸಂ. ಸಕ್ತು]

**ಸದುಕಾರಣ** (ನಾ). ಒಳ್ಳೆಯ ಕಾರಣ, -ನಿಮಿತ್ತ : ಪುಂಡರೀಕದೇವನೆ ಪತಿಯಪ್ಪನೆಂಬ ನುಡಿಯಂ ಸದುಕಾರಣಮಾಗೆ ತಾಳ್ದು (ಕಾದಂಉ. ೫೯೭). [< ಸಂ. ಸತ್ಕಾರಣ]

**ಸದುಗತಿ** (ನಾ). ಒಳ್ಳೆಯ ಗತಿ ; ಮೋಕ್ಷ : ನಾವು ನಮ್ಮಯ ಸದುಗತಿಯ ಸಂಭಾವಿಸುವೆವು (ಪ್ರಭುಲೀ. ೬-೩೮) ; ಉದಕ ತಿಲ ಶ್ರಾದ್ಧಾದಿಕಂಗಳ ವಿದಿತವೆನೆ ನಡೆಸಿದನು ನಾಕದಿ ಸದುಗತಿಯು ಸಲುವಂತೆ (ಕಾಶಿರಾ. ೪೨-೩೪). [< ಸಂ. ಸದ್ಗತಿ]

**ಸದುಗಿರಿ** (ನಾ). ಒಳ್ಳೆಯ ಬೆಟ್ಟ ; ಪರ್ವತ : ಧರಣೇಂದ್ರಂ(ಣೇಧ್ರಂ) ಕಂಬವಂತಾ . . . ಸದುಗಿರಿವರ್ಗ್ಗಂ ಕೂಟವರ್ಗ್ಗಂ (ಕಇ. IV, ೧-೬ ; 1204).

[< ಸಂ. ಸದ್ಗಿರಿ]

**ಸದುಗುಣ** (ನಾ). ಒಳ್ಳೆಯ ಗುಣ, - ಸ್ವಭಾವ : ಈವುದಾ ಪರಿಚಯದಡೆಗೆ . . . ಸದುಗುಣಾಭರಣೆಯಂ (ಇಹರ. ದೇ ೩೪-೧೯). [< ಸಂ. ಸದ್ಗುಣ]

**ಸದುಗುಣಿ** (ನಾ). ಒಳ್ಳೆಯ ಗುಣವುಳ್ಳವನು ; ಸದ್ಗುಣಿ : ಸಮತ ಶಾಂತಿ ಸದುಗುಣಿಯಾಗಿ ಕ್ರಮವನಱಿದು (ಶಿವಗೀ. ೮೩-೪೦೪) ; ಇನ್ನು ಸುಖಿ ತಾನೆಂದ ಹರಿ ಸಂಪನ್ನ ಸದುಗುಣ ಮಾಯ ಮೂರುತಿ ನೋಡಿ ಮನದಣಿಯೆ (ಕಾಶಿರಾ. ೨೨-೬೭).

[< ಸಂ. ಸದ್ಗುಣಿನ್]

**ಸದುಗುರು** (ನಾ). ಒಳ್ಳೆಯ ಗುರು ; ಸದ್ಗುರು : ಜಂಗಮದೊಳಗಿರ್ದು ಭೋಗವ ಮಾಡುವುದೆಂದು ಸದುಗುರು [ಪಾಠಾಂ. ಸದ್ಗುರು] ಶಂಭು ಸೋಮೇಶ್ವರನ ವಚನವ ಕೇಳಿ (ಶಿವಗೀ. ೨೩-೧೦೨). [< ಸಂ. ಸದ್ಗುರು]

**ಸದುಗೋಷ್ಠಿ** (ನಾ). ಒಳ್ಳೆಯ ಸಭೆ, - ಗೋಷ್ಠಿ : ನಂಬಿಯಣ್ಣಂ ಗದುಗಾಟದ ಸದುಗೋಷ್ಠಿಯೊಳಿರೆಯಿರೆ (ನಂಬಿರ. ೧೭-೧೪೮). [< ಸಂ. ಸದ್ಗೋಷ್ಠಿ]

**ಸದುಬಕುತಿ, ಸದುಭಕ್ತಿ** (ನಾ). ನಿರ್ಮಲವಾದ ಭಕ್ತಿ; ಸದ್ಭಕ್ತಿ : ಯದುಕುಲೋತ್ತುಂಗರಂಗನ ಕೂರ್ತು ಕೃತಿವೇಳು ಸದುಬಕುತಿಯಲಿ ಕೇಳುವೆನು (ಮೋಹತ. ೩೮-೧). **ಸದುಭಕ್ತಿ** : ಘನಶಿವನ ಸದುಭಕ್ತಿಯಂ ಬೇಳ್ಪನುವಹುದೆ (ಬಸಪು. ೪೩-೬೦); ನಯದಿಂ ಗೃಹವನೊಂದುವಂ ರಚಿಸಿ ಸದುಭಕ್ತಿಯಿಂದ (ರಾಘಚ. ೬-೭).

[< ಸಂ. ಸದ್ಭಕ್ತಿ]

**ಸದುಬೀಬ್** (ಕ್ರಿ). ನೆನೆ ; ತೋಯು ; ತೇವಗೊಳ್ಳು : ಮಿಡಿಯಂ ಶುಕಾನನಂ ತಾಗೆ ತಗುಳ್ದು ಸೋರ್ವ ಸೊನೆಯಿಂ ಸದುಬೀಬೆ ಮನೋಜರಾಜಧಾರಾಗೃಹದಂತದೇನೆಸೆದುದೋ ಮಧುಮಾಸದೊಳಾಮ್ರಭೂರುಹಂ (ಲೀಲಾವ. ೧೩-೪೦).

[< ಸದುಂಬು + ಬೀಬ್]

**ಸದುಭಕ್ತ** (ನಾ). ಒಳ್ಳೆಯ ಭಕ್ತ ; ಸದ್ಭಕ್ತ : ನಿಮ್ಮ ತನುಮನಧನವನಱಿಯದಿರ್ದಡೆ ಸದುಭಕ್ತರಹರೇಂ ರಾಮನಾಥ (ದೇದಾವ. ೨೧-೩೫) ; ಚಿಕ್ಕಮಾದಯ್ಯನೆಂಬ ಸದುಭಕ್ತ ಹರನತಿಪ್ರಿಯಭಕ್ತಿಯುಕ್ತಿಯೊಳಿರಲು (ಬಸಪು. ೪೭-೪). [< ಸಂ. ಸದ್ಭಕ್ತ]

**ಸದುಭಕ್ತಿ** 'ಸದುಬಕುತಿ' ನೋ.

**ಸದುಮ** (ನಾ). ಮನೆ ; ನಿವಾಸ : ಸದ್ಮಂ, ಸದುಮಂ (ಶಬ್ದಾನು. ೧೪೭ ವ್ಯಾಖ್ಯಾ). [< ಸಂ. ಸದ್ಮನ್]

**ಸದುವಿನಯ** (ನಾ). ಒಳ್ಳೆಯ ನಮ್ರತೆ ; ಸದ್ವಿನಯ : ಸದುವಿನಯವೇ ಸದಾಶಿವನೊಲುಮೆ (ಬಸವ. ೨೪೪) ; ಸದುವಿನಯ ಸಂಪನ್ನವೆನಿಸುವ ಪದುಮನಾಭನ ಸೂಕ್ತಿ (ನಿಭಾಗ. ೩-೭-೨೦). [< ಸಂ. ಸದ್ವಿನಯ]

**ಸದುವು, ಸದವು** (ನಾ). ಅವಕಾಶ ; ಆಸ್ಪದ : ಭೂಮಿಯೊಳು ಪದ ಹೊದ್ದಿಸಲು ಸದುವೀವನಲ್ಲೆಂದಾಡಿ ತೋರಿಸುವ (ಜನಭಾ. ೬೩-೪೦). **ಸದವು** : ಇದೇನ ಅದಕ್ಕ ಸದವು ಕೊಡಲಿಲ್ಲ ನೋಡು (ಬೆಳಭಾ. ೧೬೭). [?]

**ಸದುಹೃದಯ** (ನಾ). ೧. ನಿರ್ಮಲವಾದ ಹೃದಯ, — ಮನಸ್ಸು : ಶ್ರೀಮದನಂತಚರಿತವ ಬಲ್ಲಂದದೊಳು ಸದುಹೃದಯದಿ ಸತ್ಪುರುಷರಾಲಿಸಿ (ಅನಂಚ. ೧-೪೪). ೨. ನಿರ್ಮಲವಾದ ಮನಸ್ಸುಳ್ಳವನು : ಸದುಹೃದಯನ್ಯೆತಂದನಧಿಕಮನೋನುರಾಗದಲಿ (ನಿಭಾಗ. ೨-೪-೧೭). [< ಸಂ. ಸದ್‌ಹೃದಯ]

**ಸದೃಕ್ಷ** (ನಾ). ೧. ಹೋಲುವಂತಹುದು ; ಸಮಾನವಾದುದು : ಅಕ್ಷರಬಿಂದುಚ್ಯುತ . . . ನಿಜನಾಮಸದೃಕ್ಷಂ ಲಕ್ಷಣಮದಾಗೆ ನೆಗಳ್ದುಂ ಪಲವುಂ (ಕಾವ್ಯಾವ. ೫೭೦) ; ಸುರುಚಿರಮಪ್ಪ ಮುತ್ತಿನಿಪ ದನ್ತಚಯಂಗಳದೊನ್ದು ಕಾನ್ತಿಯಿನ್ಪುರಗಸದೃಕ್ಷವಪ್ಪ ಕಚದಿಂ . . . ಒಪ್ಪೆ (ಎಕ. XII, ಚಿಕ್ನಾ. ೪೩-೧೫ : 1171). ೨. ಸರಿಸಮನಾದವನು ; ಸಮಾನನಾದವನು : ಶಂಕರಸದೃಕ್ಷನನುರು ಕೃಪಾಕಟಾಕ್ಷನನೀಕ್ಷಿಪಳ್ಕಱಿಂ ಗೃಹಮನೆಯ್ದು (ಪದ್ಮರಾ. ೩-೩೭). [ಸಂ.]

**ಸದೃಶ** (ಗು). ೧. ಒಂದಕ್ಕೊಂದು ಹೋಲಿಕೆಯಿರುವ ; ಸಮಾನವಾದ : ಪಾಂಥರ್ಗೆ ಗೋಚರಿಸಿತೊಂದು ಋಷಿವನಸದೃಶಕಾನನಂ (ಶ್ರೀರಾಮಾ. ೩೭-೨೧೩). (ನಾ). ೨. ಹೋಲಿಕೆಯುಳ್ಳುದು ; ಸಮಾನವಾದುದು : ಸ್ತುತಿನಿಂದೆಗಳಿಂ ಸವಿವಕ್ಷಿತ ಗುಣದೊಳ್ ಸದೃಶಮಾಗಿ ಪೇಳ್ವುದು ಪೆಱತಂ (ಕವಿರಾ. ೩-೯೫). ೩. ಸಮಾನನಾದವನು ; ಸಾಟಿಯಾದವನು : ಭಾಳನೇತ್ರಂಗೆ ತಾಂ ಸದೃಶನೀ ಕೌಶಿಕಂ (ಶ್ರೀರಾಮಾ. ೩೦-೭೨). [ಸಂ.]

**ಸದೃಶತೆ** (ನಾ). = ಸದೃಶ ೨ : ಲಿಂಗವಚೋವಿಹಿತವಿಭೇದಂಗಳ್ ನ್ಯೂನಾಧಿಕಂಗಳುಂ ಸದೃಶತೆಯಿಂ ಸಂಗತಮಲ್ಲದುವುಂ ದೋಷಂಗಳವುಪಮೆಗೆ ಯಥಾ ಜನೋದ್ವೇಜನದಿಂ (ಕಾವ್ಯಾವ. ೭೭೯). [ಸಂ. ಸದೃಶತಾ]

**ಸದೃಶತ್ವ** (ನಾ). = ಸದೃಶ ೨ : ಇನನುದ್ಯಾನಪಯೋವಿನೋದ ಸದೃಶತ್ವಕ್ಕಂ ಮನಂದಂದವೋಲ್ ವನಮಾಲಾಕುಲತೀರಮಪ್ಪ ಪರಪಾರಾವಾರಮಂ ಪೊರ್ದಿದಂ (ಚಂದ್ರಪು. ೮-೨). [ಸಂ.]

**ಸದೃಶಯೋಗಿತಾಲಂಕಾರ** (ನಾ). [ಕಾವ್ಯಮೀ] ಒಂದು ಬಗೆಯ ಅರ್ಥಾಲಂಕಾರ: ಸದೃಶಯೋಗಿತಾಲಂಕಾರಲಕ್ಷಣಂ. ಸ್ತುತಿನಿಂದೆಗಳಿಂ ಸವಿವಕ್ಷಿತಗುಣದೊಳ್ ಸದೃಶಮಾಗಿ ಪೇಳ್ವುದು ಪೆಱತಂ ನುತಸದೃಶಯೋಗಿತಾಲಂಕೃತಿ ಲಕ್ಷಣಮಕ್ಕುಮಿಂತು ತದುದಾಹರಣಂ (ಕಾವ್ಯಾ. ೩-೯೭). [ಸಂ.]

**ಸದೃಶವೃತ್ತಿ** (ನಾ). ಸಮಾನವಾದ ನಡವಳಿಕೆ,— ವರ್ತನೆ : ಪ್ರವಿದಿತಹೇತುವಿನೊಳ್ ಸಂದವನತಿಯೊಳ್ . . . ಸದೃಶವೃತ್ತಿಯೊಳ್ ಪ್ರತಿನಿಧಾನದೊಳಮಿಷ್ಟದೊಳಂ (ಶಮದ. ೧೩೦). [ಸಂ.]

**ಸದೃಶಾಕ್ಷರ** (ನಾ). ಹೋಲುವ ಅಕ್ಷರ ; ಸಮಾನವರ್ಣ : ಸದೃಶಾಕ್ಷರವಿನ್ಯಾಸಂ ಪದದೊಳ್ ಪಾದಂಗಳೊಳ್ ಪೊದಱ್ದೆಸೆದಿರೆ ಪೇಳ್ವುದನುಪ್ರಾಸಂ (ಕಾವ್ಯಾವ. ೫೫೫); ಸದೃಶಾಕ್ಷರಗಳಾಗಲಿ ಅಂಥ ಅಕ್ಷರಸಮೂಹಗಳಾಗಲಿ ಒಂದರ ಮಗ್ಗುಲಲ್ಲಿ ಇನ್ನೊಂದು ಇದ್ದಾಗ ಅವುಗಳಲ್ಲಿ ಒಂದು ಬರೆಯುವಾಗ ನಷ್ಟವಾಗಬಹುದು (ಕನ್ನಸಂ. ೧೧೧). [ಸಂ.]

**ಸದೆ$_1$, ತದೆ$_1$** (ಕ್ರಿ). ೧. ಕುಟ್ಟು ; ಪುಡಿಮಾಡು : "ಸದ - ಈಷಚ್ಚೂರ್ಣೇ (ಜಜ್ಜು)" (ಶಮಧಾ). ೨. ಹೊಸಕು ; ಉಜ್ಜು ; ತೀಡು : ಇಂದ್ರಾದಿ ನಿರ್ಜರ ನೊರಜುಗಳ ನೀವೆ ಸದೆಯಿ ಹೋಗೆಂದು (ಕುಮ್ಮಾಕ. ೬-೮). ೩. ಮೆಟ್ಟು ; ತುಳಿ : ಮರಗಾಲಲಟ್ಟಿ ಸದದು ನೋಡಯ್ಯಾ (ಬಸವ. ೭೨೦) ; ಮುನಿದು ಕುಱಿಗಳ ಹಿಂಡ ಹೊಕ್ಕಾ ವನಮದೋದ್ಧದಂತೆ ಸದೆವುತ (ಕೌಶಿರಾ. ೩-೧೪). ೪. ಹೊಡೆ ; ಬಡಿ : ತುಱುವಂ ಮಗುಟ್ಚಿ ಮಗುಟದ ತನಗಿದಿರೊಡ್ಡಿ ನಿಂದರಿನೃಪಬಲಮನರೆದು ಸದೆದು (ಪಂಪಭಾ. ೮-೧೦೪ವ) ; ಕಾರೆಯ ಮುಳ್ಳೆದ್ದು ಕಲಿಗಳನಟ್ಟಿ ಸದೆವಾಗ ಸೋರುಮುಡಿಯಾಕೆ ಗೊರವನ ನೆರೆದಳು (ಅವಚಂ. ೨೭-೧೧೧) ; ಕೆಲರನು ಸದೆದು ಕೊಂದನು (ಉತ್ತರಾ. ೮-೭೩). ೫. ಗಟ್ಟಿಯಾಗಿ ಶಬ್ದಮಾಡು ; ಭೋರಿಡು : ಕುದುರೆಗಳತ್ತ ಲಾಯಕೆ ಸಾರಲೊಡನಿತ್ತ ಸದೆವ ವಾದ್ಯದ ಗಲಭೆಯೊಳು ಮದದಾನೆಯೊಡ್ಡು ಸಾರ್ತರುತಿದ್ದುದು (ಭರಚ. ೨೦-೫೮). **ತದೆ$_1$**: ೧. ತೋರಮುಡಿವಿಡಿದು ಕುಡಿಯಂ ನಾರಂ ಸದೆವಂತೆ ತ[ಪಾಠಾಂ. ಸ]ದೆದು ಬೀಟಿಯ ಕಾಲಿಂ ಬಾರೇಟ್ ಬದಿಗನ್ನ ಪೆದೊಡೆ (ಯಶೋಚ. ೨-೫೦). ೪. "ತದೆ = ತಾಡನೇ" (ಶಮಧಾ); ಅಂಬು ಕೊಂಡ ಮಱಿವುಲ್ಲೆವೊಲಾಕೆ ನೆಲಕ್ಕೆ ಬಿಟ್ಟು ಬಾಯಿಂ ಬಸಿಱೆಂಬಿವಂ ತದೆ [ಪಾಠಾಂ. ಬಡಿ]ದು ಕೊಂಡು (ಅರ್ಥನೇ. ೭-೧೨) ; ಬಾಯಂ ಬಸಿಱುವ ತದೆದು ಕೊಳುತ್ತಿರ್ದಾಗಳು ಶಂಭುಕ ಸತ್ತುದ ಕಂಡು (ಕುಮುರಾ. ೮-೮). [ದೇ. || ತಮಿ. ಚಟ, ಚಟ್ಟೆ ; ಮಲ. ಚಟೆ ; ತುಳು. ಚದ, ಸದೆ ; ತೆಲು. ಚದಿಯು, ಚದುಪು, ಚದುಮು]

**ಸದೆ$_2$** 'ಸತ್ತೆ' ನೋ.

**ಸದೆಕೂಡಿಸು** 'ಸದೆಗೂಡಿಸು' ನೋ.

**ಸದೆಗ, ಸದಗ** (ನಾ). (ಆಲಂ) ಕೆಲಸಕ್ಕೆ ಬಾರದವನು ; ಅಲ್ಪ ; ತುಚ್ಛ : ಇದು ಮಹಾಧ್ವರವಿಲ್ಲಿ ನೆರೆದಿದ್ದುದು ಮಹಾಕ್ಷತ್ರಿಯರು ಗೋವರ ಸದೆಗನಿಲ್ಲಿಗೆ ಶ್ರೇಷ್ಠನೇ (ಕುಮ್ಮಾಸ. ೮-೧೪) ; ಎರ್ದೆಗಿಚ್ಚನಿಕ್ಕಿ ಪೋದಾತನಲ್ಲದೆ ಮಿಕ್ಕ ಸದೆಗರ ತಂದದೊಪ್ಪುವೆನೆ (ಮೋಹತ. ೩೦-೨೧) ; ಲೋಕವೆಮ್ಮನು ಸದೆಗರೆಂದಾಡುವುದು (ಕೋಗಯ. ೨೨-೮೮). **ಸದಗ** : ಉದರಪೋಷಣೆಗ್ಗೆದುಮುಚಿತಕರ್ಮಗಳುಳಿದು ಸದಗರಂತಾನಿರ್ದನೊಂದ ನೆನೆಯದೆ ರಾಮ ಲಾಲಿಪುದು (ವಂಕಾರಾ. ೪-೪-೪೪). [ಸದೆ$_2$ (< ಸತ್ತೆ) + - ಗ$_2$]

**ಸದೆಗುಟ್ಟು, ಸದಗುಟ್ಟು** (ಕ್ರಿ). ೧. ಪುಡಿಯಾಗುವಂತೆ ಕುಟ್ಟು ; ಪುಡಿಮಾಡು: ಪೊಸತಾದ ಹೊನ್ನಗನ್ನೆಯ ಬೇರ ಸದೆಗುಟ್ಟಿ ಹಸಿಯ ಹಾಲೊಳಗಿಕ್ಕಿ ಕಡಗೋಲಿನಿಂದ ಮರ್ದಿಸಲು ಕಡುಹಸನಾಗಿ ಬೆಣ್ಣೆ ಬಹುದು (ಸೂಪಶಾ. ೨-೪); ತೊಂಡೆಬಳ್ಳಿಯ ಸದೆಗುಟ್ಟಿ ಹನ್ನೆರಡು ಅಳಲೆಕಾಯಿ ಪುಡಿಹಾಕಿ . . . ತೆಗೆದುಕೊಳ್ಳಲು ಸನ್ನಿಪಾತ ಮುಂತಾಗಿ . . . ಮಾಣ್ಬುಂ (ಸಕವೈ. ೧೩೪). ೨. ನಾಶಮಾಡು ; ಸದೆಬಡಿ: ನೆಟ್ಟನೆ ಲಗ್ಗೆಗೇಱಿದ ಖಳರನು ಸದೆಗುಟ್ಟುವ ಪರಿಯನೇವೇಳ್ವೆ (ಕಂಸವಿ. ೧೪-೫೭). **ಸದಗುಟ್ಟು** : ೧. ನಾಲ್ಕೆರಳು ಏಲಕ್ಕಿ, ನಾಲ್ಕೆರಳು ಸಕ್ಕರೆ, ಇದಂ ಸದಗುಟ್ಟಿ ಕಾಯೊಳಗೆ ತುಂಬಿ ಆದಱ ಬಾಯಿಗೆ ಬೆಣ್ಣೆಯ ಹಚ್ಚಿ (ವಿಷ್ಣುವಿ. ೮೧). [ಸದೆ$_1$ + ಕುಟ್ಟು$_1$]

**ಸದೆಗುಪ್ಪೆ** 'ಸದಗುಪ್ಪೆ' ನೋ.

**ಸದೆಗೂಡಿಸು, ಸದೆಕೂಡಿಸು** (ಕ್ರಿ). ಕಸವನ್ನು ಕೂಡಿಸು , — ರಾಶಿಹಾಕು : ಬುಧವಾರವಾದರೆ ಸದೆಗೂಡಿಸಬಾರದೆ ? (ಗಾದೆ). **ಸದೆಕೂಡಿಸು** : ಪದೇಪದೇ ಹೇಳಿದರೂ ಸದೆಕೂಡಿಸೋದು ಬಿಡ (ಗಾದೆ). [ಸದೆ$_2$ (< ಸತ್ತೆ) + ಕೂಡಿಸು]

**ಸದೆಬಡಿ** (ಕ್ರಿ). ಚೆನ್ನಾಗಿ ಹೊಡೆ ; ಥಳಿಸು : ತನ್ನ ಹೆಂಡತಿ ಜೋಡೆಯೆಂದು . . . ಸಾಯೆ ಸದೆಬಡಿದು ನಿಡುಗಂಭದೊಳಡಸಿ ಕಟ್ಟಿ (ಪಂಚತಂ. ೭೪-೨೦); ರಾಯನೆದ್ದು ಕಯ್ಯಾಜೆ ಸದೆಬಡಿದನೆಮ್ಮಂ ನಿರಪರಾಧಿಗಳನು (ಹಚಕಾ. ೭-೨೭). [ಸದೆ$_1$ + ಬಡಿ$_1$]

**ಸದೆಬಡಿಗ** (ನಾ). ಬಲವಾಗಿ ಏಟು ತಿಂದವನು ; ಚೆನ್ನಾಗಿ ಬಡಿಸಿಕೊಂಡವನು: ಮಾಯೆ ತಾನೇ ಸುದತಿಯಾಕಾರದಲಿ ಮೋಹಿಸಿ ಸಕಲಜೀವರನು ಸದೆಬಡಿಗರನು ಮಾಡಿ ಪಾದದಲೊದೆದು ಹೇಳಿದ ತೆಱದಲೆಲ್ಲರು ಬದಿಗರಾಗಿರ ಮಾಡುತಿರ್ಪುದು ಬಂಟರಂದದಲಿ (ಅಮೃತ. ೨-೯೫). [ಸದೆಬಡಿ + - ಗ$_2$]

**ಸದೆಮೆಣಸು** (ನಾ). ಪುಡಿಮಾಡಿದ ಮೆಣಸು; ಮೆಣಸಿನ ಪುಡಿ : ಮೊಸರುಪ್ಪು ಸದೆಮೆಣಸು ನೀರುಳ್ಳಿಯೇಲಕ್ಕಿ ಹಸಿಯಲ್ಲವಿಕ್ಕಿ (ಸೂಪಶಾ. ೩-೧೫). [ಸದೆ$_1$ + ಮೆಣಸು (< ಮೆಳಸು)]

**ಸದೆಯನೂರ್** (ನಾ). ಒಂದು ಊರಿನ ಹೆಸರು : ಕೇಶಿಭಟ್ಟರು ಸದೆಯನೂರ ನದಿಗವುಣ್ಡನು ತಿರ್ಬೂರ ಮಾರಗವುಣ್ಡ (ಮೈಆರ. ೧೯೯೧, ೧೧-೧೭ ; 900). [ಸದೆಯ? + ಊರ್]

**ಸದೆಯಿಸು, ಸದಸು** (ಕ್ರಿ). ೧. ಬಲವಾಗಿ ಹೊಡೆಯಿಸು ; ಚೆನ್ನಾಗಿ ಥಳಿಸು: ಶಿವನ ಕಿಂಕರರಿಂದ ಸದೆಯಿಸಿಕೊಳುತ್ತೋಡಿ ಬರ್ಪ (ವೀಶ್ವಪು. ೨-೭-೪೨). ೨. ನಾಶಮಾಡಿಸು; ಹಾಳುಮಾಡಿಸು : ಮುದದಿಂದ ಪಟ್ಟಣವನು ಸೆಳೆಯೆಂದೊಡೆ ಸದೆಯಿಸಿದನು ನಮ್ಮ ಬಲವ (ಕಂಸವಿ. ೧೭-೫). **ಸದಸು** : ೧. ನಿನ್ನ ಕೂಟಕ್ಕೆ ಬಂದವರು ಸದಸಿಕೊಳ್ಳಲಿ (ವೀಶ್ವಪು. ೩-೨-೩೭). [ಸದೆ$_1$ + -ಇಸು$_1$]

**ಸದೇಶ** (ಗು).೧. ನಾಡನ್ನು ಹೊಂದಿರುವ. ೨. ಒಂದೇ ನಾಡಿಗೆ ಸೇರಿದ. ೩. ಹತ್ತಿರದ ; ನೆರೆಹೊರೆಯ. (ನಾ). ೪. ಸಮೀಪ ; ಹತ್ತಿರ : "ಸಮೀಪಂ . . . ಸದೇಶಂ . . . ಅಪದಾಂತರಂ – ಈ ೧೮ ಸಮೀಪಂ" (ಹಲಾಯು. ೧೧೫-೮). [ಸಂ.]

**ಸದೇಹ** (ಗು). ೧. ದೇಹಸಹಿತವಾದ. (ನಾ). ೨. ದೇಹವನ್ನು ಹೊಂದಿದುದು; ಮೂರ್ತಿವತ್ತಾದುದು: ವಿಕ್ರಮೈಕರಸನನಪರಾಜಿತಂ ಸದೇಹಮಾದ ತನ್ನ ಪರಾಕ್ರಮಮನ ಕಾಣ್ಬಂತೆ ಕಂಡು (ಶಾಂತಿಪು. ೪-೩೨ ವ). [ಸಂ.]

**ಸದೈವ$_1$** (ನಾ). ಅದೃಷ್ಟವಂತ ;ದೈವಬಲವುಳ್ಳವನು : ನಳಿನನಾಭನ ಮಂತ್ರಶಕ್ತಿಯ ಬಲುಹು ನೀವೆ ನಿರ್ದೈವರವರಗ್ಗಳ ಸದೈವರು ಕೆಟ್ಟರಿನ್ನೇನೆಂದನಾ ದ್ರೋಣ (ಕುಮಾವ್ಯಾಭೀ. ೧-೧೨). [ಸಂ.]

**ಸದೈವ$_2$** (ಅ). ಯಾವಾಗಲೂ ; ಸದಾ : ಸ್ತ್ರೀಯು ಸದೈವ ಪುರುಷನ ಅಂಕಿತದಲ್ಲಿಯೇ ಉಳಿಯಬೇಕು (ಪ್ರಬಂಧ. ೧೧೪) ; ತಾಗಿದವ ಬಾಗಿಯಾನೆಂಬ ನಾಣ್ಣುಡಿಯ 'ಧ್ವನಿ' ಯನ್ನು ಅವನ ಕೈ ಸದೈವ ನಿಮಗೆ ತಿಳಿಸುತ್ತಲೆ ಇರುವುದು (ದೇಕನ್ನ. ೬೩). [← ಮರಾ. ಸದೈವ, ಸದೇವ, ಸದೇವಾ]

**ಸದೋದಿತ$_1$** (ಗು). ಸಂತತವಾಗಿರುವ ; ಶಾಶ್ವತವಾಗಿರುವ : ಪವಿಕಾಲಭಂಜನಂ ದ್ಯೋದ್ಯಸ್ವಭಾವ ನಿರ್ಮಲ ಸದೋದಿತ ಶಾಂತ ಜಗದೇಕ ಬೀಜಾಕ್ಷಯಂ (ವಿಕೋಪು. ೨-೧). [ಸಂ.]

**ಸದೋದಿತ$_2$** (ಅ). ನಿತ್ಯವೂ ; ಸತತ : ಸದೋದಿತ ದೇವರ ಧ್ಯಾನದಲ್ಲಿ ಕಾಲ ಕಳೆಯತೊಡಗಿದಳು (ಗಂಮಾಯಿ. ೧೯೯). [< ಸದೋದಿತ$_1$/ ಮರಾ. ಸದೋದಿತ]

**ಸದೋಷ** (ಗು). ೧. ಕಳಂಕದಿಂದ ಕೂಡಿದ ; ದೋಷಯುಕ್ತವಾದ: ಅಗಣ್ಯಪುಣ್ಯಜನನಿವೇಶವಾಗಿಯುಂ ಸದೋಷಾಚಾರಪ್ರಚಾರಮಲ್ತು (ಚಂದ್ರಪು. ೧-೧೩೭ ವ). (ನಾ). ೨. ತಪ್ಪಾದುದು ; ದೋಷಯುಕ್ತವಾದುದು : ಅವರ ಅಭಿಪ್ರಾಯವು ಅನೇಕ ಎಡೆಗಳಲ್ಲಿ ಸದೋಷವಾಗಿರುತ್ತದೆಂದು ಸ್ಪಷ್ಟವಾಗುತ್ತದೆ (ಕರ್ಣಾಅ. ೧೧೫). ೩. ಕಳಂಕದಿಂದ ಕೂಡಿರುವವನು; ದೋಷಯುಕ್ತನಾದವನು : ಸಾಧಿಸಿ ವಿದ್ಯೆಯಂ ತನಗೆ ಮಾಡಿ ಸದೋಷನಿವಂ ದಲಸ್ಮದಾರಾಧನ ವಿಘ್ನಕಾರಿ ರಿಪುವೆಂದಸಿಖೇಟಕಹಸ್ತೆ ತೂಳ್ದಿದಳ್ (ಶಾಂತಿಪು. ೯-೭). [ಸಂ.]

**ಸದ್ಗಂಧಿ** (ನಾ). ಒಳ್ಳೆಯ ವಾಸನೆಯುಳ್ಳದು ; ಸುಗಂಧಿ : ವನಸಾಯಂತನ ಮಲ್ಲಿಕಾಮುಕುಳಕೋಟ್ಯಗ್ರಂಗಳೊಳ್ ಕೂಡೆ ನೂತನಸದ್ಗಂಧಿಗಳೊಳ್ ಮದಾಂಧ ಮಧುಪಂ . . . ಪಾಯ್ದು ಪಾಯ್ದು (ಶಾಂತಿಪು. ೭-೧೨೮). [ಸಂ.]

**ಸದ್ಗಂಭೀರ** (ನಾ). ಒಳ್ಳೆಯ ಗಾಂಭೀರ್ಯ : ಸದ್ಗಂಭೀರಾವೃತ ವಿಳಸದ್ಗಮಕದೆ ನಿಂದು ಶಿವನ ಮೆಲ್ಲಡಿಗಳಿಗುದ್ಯದ್ಗುಣಭೂಷಣೆ ಸುರಿದಳ್ ಗದ್ಗದಿಸುತೆ ಪುಳಕಿಸತ್ತೆ ಸರಸಿಜದಲರಂ (ಗಿರಿಕ. ೫-೮೦). [ಸಂ.]

**ಸದ್ಗತಿ** (ನಾ). ಒಳ್ಳೆಯ ಸ್ಥಿತಿ; ಮೋಕ್ಷ: ನಿರ್ಮಲಕರ್ಮವದು ಸದ್ಗತಿಗೆ ಸಾಧ್ಯ ನೋಡಾ (ಸಿದ್ಧವ. ೮೮-೫೦೭); ಗೋತ್ರಸಂಹರಣಪಾತಕವನೊರಸುವ ಮುಖವನಾ ವಿಪ್ರರೂಡವೆಯಿಂ ಮಾಡಲೆನಗಿಹಪರದೊಳು ಪ್ರಕಟಮೆನಿಪುವೆ ಕೀರ್ತಿ ಸದ್ಗತಿಗಳು (ಜೈಮಿಭಾ. ೨-೩೩); ಪತಿಯೇ ಸದ್ಗತಿಯೆಂದು ಪತಿಯ ಪಾದಾಂಬುಜದೊಳು ಭಕ್ತಿಗೈವುದು ಸತಿಯರ ಧರ್ಮದ ಸಾರ (ಪದಿಬ. ೩-೪). [ಸಂ.]

**ಸದ್ಗರುಡಿ** (ನಾ) ಒಳ್ಳೆಯ ಗರುಡಿ ; ಶ್ರೇಷ್ಠವಾದ ಮಲ್ಲಶಾಲೆ : ಸಾಧನೆಗೈವ ಸದ್ಗರುಡಿಯೊಳ್ ಭೇತಾಳನಾದಂಗೆ ನೃಪಕುಮಾರರಿಗೆ (ವೋಹತ. ೧೭-೭೮) ; ಬಿಲುವಿದ್ಯ ಸಾಧನೆಯಚಿಂತ್ಯನಹ ಶಂಕರನ ಸದ್ಗರುಡಿಯಲ್ಲೆಂದೆ (ಪರಶು. ೨೦-೨೩). [(ಸಂ.ಸತ್) + ಗರುಡಿ]

**ಸದ್ಗುಣ** (ನಾ). ಒಳ್ಳೆಯ ನಡತೆ,–ಸ್ವಭಾವ : ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ (ಬಸವ. ೬೪೯). [ಸಂ.]

**ಸದ್ಗುಣಂದಳೆ** (ಕ್ರಿ). ಒಳ್ಳೆಯ ನಡತೆಯನ್ನು ಹೊಂದು,– ತಾಳು : ಸಮಾನ ಸದ್ಗುಣಂದಳೆದ ವಧೂವರರ್ಕಳನೆ ಯೋಚಿಸು (ಶಾಕುಂತ. ೬೭-೧೧೫). [ಸದ್ಗುಣ + ತಳೆ$_1$]

**ಸದ್ಗುಣವೆಱು** (ಕ್ರಿ). = ಸದ್ಗುಣಂದಳೆ : ಸದ್ಭಕ್ತಿ ಸದ್ಗುಣವೆತ್ತನುರುತರಕೀರ್ತಿ ಭಕ್ತಿಜನೋತ್ತಮಂ ಶಿವನಾಗಮಯ್ಯಂ (ಬಸಪು. ೫೫-೨). [ಸದ್ಗುಣ + ಪೆಱು$_1$]

**ಸದ್ಗುಣಿ** (ನಾ). ಒಳ್ಳೆಯ ಗುಣವುಳ್ಳವನು: ಸದ್ಗುಣಿಯ ಪಾಪಾಸ್ಪದದ ಪೊತ್ತಾಕ್ಷಣದೊಳಗೆ ಬೆಳಗಾದವೋಲ್ (ಬಸಪು. ೪೧-೨೩) ; ಅವಳ ಕಣ್ಣಿನ ಕೊಕ್ಕೆಗೆ . . . ಸದ್ಗುಣಿಯಾದ ಚಲುವ ಸಿಕ್ಕಿಬಿಡುತ್ತಾನೆ (ಮೂಕಜ್ಜಿ. ೧೪). [ಸಂ. ಸದ್ಗುಣಿನ್]

**ಸದ್ಗುಣೈಕ್ಯ** (ನಾ). ಸದ್ಗುಣಗಳಿಂದ ಕೂಡಿದವನು ; ಶ್ರೇಷ್ಠ : ಪರಹಿತಚರಿತೋದಾತ್ತ ಕೀರ್ತಿಪ್ರಭಾವಂ ಮಿತವಾಕ್ಯಂ ಸದ್ಗುಣೈಕ್ಯಂ (ಸುಕುಮಾ. ೨-೫೧). [ಸಂ.]

**ಸದ್ಗುರು** (ನಾ). ಒಳ್ಳೆಯ ಗುರು ; ಶ್ರೇಷ್ಠ ಶಿಕ್ಷಕ : ಚಿತ್ರವೇದ್ಯವಾಗದು ಸದ್ಗುರುವಿನ ಕರಣಕ್ಕಲ್ಲದೆ (ಬಸವ. ೮೧೭) ; ಶಿವಯೋಗನಿಷ್ಠಾಸೀಮೆಯಲ್ಲಿ ಮದೀಯ ಸದ್ಗುರು ಸ್ವಾಮಿಯಿರುತಿರ್ದ (ಬಸಪು. ೩೫-೨೭). [ಸಂ.]

**ಸದ್ಗೃಹತ್ವ** (ನಾ). [ಜೈನ] ಏಳು ಬಗೆಯ ಪರಮಸ್ಥಾನಗಳಲ್ಲಿ ಒಂದು ; ಶ್ರಾವಕನು ಪ್ರಾಣಿಹಿಂಸೆ ಮಾಡದೆ ಮರಣಕಾಲದಲ್ಲಿ ದೇಹಕ್ಕೆ ಇಷ್ಟವಾದ ಆಹಾರ ಮತ್ತು ಕ್ರಿಯೆಗಳನ್ನು ತ್ಯಜಿಸಿ ಧ್ಯಾನಶುದ್ಧಿಯಿಂದ ಆತ್ಮಶುದ್ಧಿಮಾಡಿಕೊಳ್ಳುವುದು : ಸಜ್ಜಾತಿ ಸದ್ಗೃಹ [ಪಾಠಾಂ. ಹೀ]ತ್ವ ಪಾರಿವ್ರಾಜ್ಯ ಸುರೇಂದ್ರತ್ವ . . . ಎಂಬೇೞುಂ ಪರಮಸ್ಥಾನ ನಾಮಕರ್ತ್ರನ್ವಯ ಕ್ರಿಯೆಗಳಂ (ಆದಿಪು. ೧೫-೧೭ವ) ; ಸದ್ಗೃಹತ್ವಮುಂ . . . ಅರ್ಹಂತ್ಯಮುಂ ನಿರ್ವಾಣಮುಮೆಂಬ (ಪವವಿಯು [illegible]) ಸಪ್ತಪರಮಸ್ಥಾನಂಗಳ್ (ಚಾವುಂಪು. ೨೧೩). [ಸಂ.]

**ಸದ್ಗೃಹಸ್ಥ** (ನಾ). ಒಳ್ಳೆಯ ಕುಟುಂಬಸ್ಥ, – ಸಂಸಾರಿಗ : ರೋಹಿಣೀಕುಮಾರರು . . . ಬಹಳ ಒಳ್ಳೆಯ ಸದ್ಗೃಹಸ್ಥರು (ಹೇಮಂತ. ೩೧೧) ; ನೀವು ಒಬ್ಬ ಸದ್ಗೃಹಸ್ಥರ ಕೂಡ ಮಾತನಾಡುತ್ತಿದ್ದೀರೆಂಬುದನ್ನು ಮರೆಯಬೇಡಿರಿ (ಕಮನಿ. ೨೧೫). [ಸಂ.]

**ಸದ್ದ, ಸದ್ದು** (ನಾ). ಶಬ್ದ ; ಗಲಾಟೆ ; ಗದ್ದಲ : 'ಸದ್ದಂಗಿಡು' ಪರಾ. **ಸದ್ದು**: ಸದ್ದು ಮಾಡಲು ಬೇಡವೊ (ಪುರಂದ. ೩-೫೨ ಪಲ್ಲವಿ) ; ಕತ್ಥಳಂ ; ಸದ್ದು (ಶಬ್ದಾನು. ೧೦೩ ಪ್ರಯೋ); ಶಾಂತಣ್ಣ ಜನರ ಸದ್ದನ್ನು ಕೇಳಿ "ಅದೇನು ಗಲಭೆ?" ಎಂದು ಹುಬ್ಬುಗಂಟಿಕ್ಕಿಕೊಂಡು ಪ್ರಶ್ನಿಸಿದ (ಹಾಹುತ್ತ. ೪೯). [< ಪ್ರಾ. ಪಾಲಿ. ಸದ್ದ. / ಸಂ. ಶಬ್ದ]

**ಸದ್ದಂಗಿಡು, ಸದ್ದುಗಿಡು** (ಕ್ರಿ). ಕಿವಿಯು ಶಬ್ದವನ್ನು ಆಲಿಸುವ ಶಕ್ತಿಯನ್ನು ಕಳೆದುಕೊಳ್ಳು; ಕಿವುಡಾಗು : ಬದ್ದವಣದ ಪಜೆಗಳ ಕಿವಿ ಸದ್ದಂಗಿಡೆ ಮೊಱಗೆ (ಪಂಪಭಾ. ೧೨-೨೧೮). **ಸದ್ದುಗಿಡು** : ಕೋಲಾಹಲದೊಸಗೆಯ ವಾದ್ಯ ಮೊಳಗಿತು ಮೂಲೋಕ ಕಿವಿ ಸದ್ದುಗಿಡಲು (ಮೋಹತ. ೪೨-೧೯). [ಸದ್ದ + ಕಿಡು (< ಕೆಡು$_1$)]

**ಸದ್ದಡಗು** (ಕ್ರಿ). ೧. ಶಬ್ದವಿಲ್ಲದಾಗು ; ನಿಶ್ಶಬ್ದವಾಗು : ಸದ್ದಡಗಿತು ವೇಳೆ ಗಂಟೆ ಸಾರಿತು (ಪುರಂದ. ೩-೧೩೧-೩) ; ಎಲ್ಲ ಸದ್ದಡಗಿತೆಂದರೆ ಗಂಗಾಪುರದಲ್ಲಿ ನಡೆದ ನಾಟಕದ ಗದ್ದಲ ಜಲಾಲಪುರಕ್ಕೆ ಕೇಳಿಬರುವುದು (ಸ್ಮೃತಿಚಿ. ೨೭). ೨. ಮಾತಿನ ಆರ್ಭಟವು ಅಡಗು ; ಮಾತು ಕಡಮೆಯಾಗು : ಜೋರಾಗಿ ಒಂದು ಕೂಗು ಹಾಕಿದರೆ ಅವರುಗಳ ಸದ್ದಡಗುತ್ತದೆ (ರೂಢಿ). [ಸದ್ದು (< ಸದ್ದ) + ಅಡಗು$_1$ ( < ಅಡಂಗು$_1$)]

**ಸದ್ದಮುದ್ದು, ಸದ್ದುಮುದ್ದು** (ನಾ). ಏನೂ ತಿಳಿಯದುದು ; ಮುಗ್ಧವಾದುದು: ಸದ್ದಮುದ್ದಾಗಿದ್ದ ಮೋಹ ಮಮತೆಯ ಮೂರ್ತಿ (ನಾದಲೀ. ೮೩-೧). **ಸದ್ದುಮುದ್ದು**: ಸದ್ದುಮುದ್ದಾಗಿದ್ದ ನನ್ನ ರೂಪಿನ ನೆರವಿಗೆ ಬಣ್ಣ ಬರದೆ . . . ಮದುವೆಯ ಮಾರ್ಕೆಟ್ಟಿನಲ್ಲಿ ನನ್ನ ಭಾವ ತಗ್ಗಿ (ದೀಪನಿ. ೮). [?]

**ಸದ್ದಾಮುದ್ದಾ** (ಅ). ಯದ್ವಾತದ್ವಾ : ಸೌಂದರ್ಯ, ನಿಲುವು, ಈ ದೇವರುಗಳಿಗೆ ಇಲ್ಲ. ಸದ್ದಾಮುದ್ದಾ ಇವೆ (ದಿಲ್ಲಿಪ. ೩೫). [< ಸದ್ದಮುದ್ದು]

**ಸದ್ದಿಲಿ** (ಗು). ೧. ಶಬ್ದವಿಲ್ಲದ ; ಪ್ರಶಾಂತವಾದ : ಆಲಿಸು ಸದ್ದಿಲಿ ಕಣಿವೆಯ ಪೆಂಪು ಹೆಚ್ಚಲು ಹರಿವುದು ಗಾನದ ಇಂಪು (ಕೊಳಲು. ೨೨-೭). (ನಾ). ೨. ಶಬ್ದವಿಲ್ಲದಿರುವುದು; ನಿಶ್ಶಬ್ದವಾದುದು: ಹೂವಳ್ಳಿಮನೆ 'ಗಾಳ್' ಎಂದು ಸುಡುಗಾಡಿನಂತೆ ಸದ್ದಿಲಿಯಾಗಿತ್ತು (ಮಲಮ. ೭೩೧). [ಸದ್ದು (< ಸದ್ದ) + - ಇಲ್ಲಿ₃]

**ಸದ್ದಿಲಿತನ** (ನಾ). ನಿಶ್ಶಬ್ದವಾಗಿರುವ ಸ್ಥಿತಿ; ಮೌನ : ಮುಂದುಮುಂದಕೆ ಪರಿಯಲೇಕನಾದತೆಯಾಯ್ತು ಕಿವಿಗೆ ಸದ್ದಿಲಿತನಂ ಮಸಣದಾ (ಶ್ರೀರಾಮಾ ೩೭೭-೩೯೩). [ಸದ್ದಿಲಿ + - ತನ]

**ಸದ್ದಿವಾಲ, ಸದ್ದೀವಾಲ** (ನಾ).೧. ಪಟ್ಟಣದ ನ್ಯಾಯಾಧೀಶ ; ಮ್ಯಾಜಿಸ್ಟ್ರೇಟು: (೬). ೨. ಮೇಲಧಿಕಾರಿ ; ಮೇಲ್ವಿಚಾರಕ : ಕಾಮಾಟಿ ಚೆಂಗೂಲಿಗಳು ಸಹಾ ಅವರವರ ಸದ್ದಿವಾಲರ ಸಮೇತ ಸಮಯ ಬಿದ್ದ ಹಾಗೆ ಕೆಲಸಮಾಡಲು ಬರುತಿರಲಿ (ಪೇಟೆಮಾ. ೩). **ಸದ್ದೀವಾಲ** : ೨. ಮೇಲುವಿಚಾರಣೆಗೆ ಸದ್ದೀವಾಲರು ಎಂದು ನೇಮಕವಾಗಿದ್ದರು (ಮಾಮರಾ. ೧೭).
[← ಅರ. ಮರಾ. ಸಂದೀವಾಲ = ಒಂದು ಹುದ್ದೆ,-ಅಧಿಕಾರ]

**ಸದ್ದಿಸು** (ಕ್ರಿ). ಶಬ್ದಮಾಡು ; ಗಲಾಟೆಮಾಡು : ತಲ್ಲಣವೇತಕೆ ಪ್ರೇಯಸಿ ? ಝಲ್ಲನೆ ನೂಪುರ ಸದ್ದಿಸೀ ಸದ್ದಿಸೀ . . . ಇರುವೆಡೆ ಸೂಚಿಸು ರೂಪಸೀ (ನಡೆದಾ. I, ೪೨೭).
[ಸದ್ದು (< ಸದ್ದ) + - ಇಸು₃]

**ಸದ್ದೀವಾಲ** 'ಸದ್ದಿವಾಲ' ನೋ.

**ಸದ್ದು** 'ಸದ್ದ' ನೋ.

**ಸದ್ದುಗಿಡು** 'ಸದ್ದಂಗಿಡು' ನೋ.

**ಸದ್ದುಮುದ್ದು** 'ಸದ್ದಮುದ್ದು' ನೋ.

**ಸದ್ದೇಹಿ** (ನಾ). ನಿರ್ಮಲವಾದ ದೇಹವುಳ್ಳವನು : ಪ್ರಾಣಲಿಂಗ ಲಿಂಗವಾಗಬಾರದು ಲಿಂಗ ಪ್ರಾಣವಾಗಬಾರದು ಇದಟಿ ದ್ವಂದ್ವವನಳಿದ ಸದ್ದೇಹಿಗೆ ನಮೋ ನಮೋ ಎಂಬೆ (ಮೋಳಿಮಾ. ೮೪-೩೩೧). [ಸಂ. ಸದ್ದೇಹಿನ್]

**ಸದ್ಧಮ್ಮಗುರು** (ನಾ). ಒಳ್ಳೆಯ ಆಚಾರವನ್ನು ಬೋಧಿಸುವ ಗುರು : ಸದ್ಧಮ್ಮಗುರುಸಂತಾನಾನ್ ಸಂದ್ವಿಗ ಗಣತಾನಯಾನ್ (ಎಕ. II, ೨೯-೨ ; 700).
[< ಸಂ. ಸದ್ಧರ್ಮಗುರು]

**ಸದ್ಧರ್ಮ** (ನಾ). ೧. ಒಳ್ಳೆಯ ನಡವಳಿಕೆ, – ಆಚಾರ : ಸದ್ಧರ್ಮವತ್ಸಳರ್ ಮತಿಶುದ್ಧತೆ ನಿಲೆ ನಂದಗುಪ್ತರಿತ್ತೊಡೆ ಸುಖಿಸಂವೃದ್ಧಿ . . . ಸಿದ್ಧಾಚಳದೊಳ್ (ಶಾಂತಿಪು. ೪-೯೫) ; ತಿಳಿಪಿ ಭವ್ಯರ್ಗೆ ಸದ್ಧರ್ಮ ಕರ್ಮಾಶ್ರಯ ತತ್ತ್ವಾತತ್ತ್ವಭೇದಂ ಗಳನೊಡರಿಸಿ (ಚಂದ್ರಪು. ೧-೪); ಸದ್ಧರ್ಮವಾಂಛೆಯಿಂ ತನ್ನ ಬಡತನದೊಂದು ದುರ್ಧರಂ ಹಿಂಗಿ (ಸಮ್ಯಕೌ. ೧೧-೩೭). ೨. ಒಳ್ಳೆಯ ನಡವಳಿಕೆಯುಳ್ಳವನು : ಸಂಶುದ್ಧರೀ ದುಸ್ತರಸಂಸಾರಾಬ್ಧಿಯಿಂದಂ ಪೊಱಮಡಿಸುಗೆ ಸದ್ಧರ್ಮರಾಚಾರ್ಯರೆಂದುಂ (ಸುಕುಮಾ. ೧-೩) ; ಪತಿಯಂ ಸಕಲಕಲಾಸಂಯುತನಂ ಸದ್ಧರ್ಮನಂ ವಿವೇಕಿಯ ನಾನೀಗತಿಗಳದಜ್ಞನೊಳ್ ದುರ್ಮತಿಯಿಂ ಕೂಡಿದೆನೆನುತ್ತ ದುಃಖಿತೆಯಾದಳ್ (ನನ್ನಚಾ. ೭-೯೯). [ಸಂ.]

**ಸದ್ಧರ್ಮಚಾರಿಣಿ** (ನಾ). ಗಂಡನೊಂದಿಗೆ ಧಾರ್ಮಿಕವಿಧಿಗಳಲ್ಲಿ ಸಹಭಾಗಿಯಾಗುವವಳು; ಧರ್ಮಪತ್ನಿ; ಹೆಂಡತಿ: "ದಾರಂ ಕಳತ್ರಂ ಗೃಹಂ ಗೃಹಿಣಿ ಸದ್ಧರ್ಮಚಾರಿಣಿ ವಧು . . . ಕುಟುಂಬಿನಿ ಪತ್ನಿ ಮಹಿಳೆಯೆನೆ ಹೆಂಡಿತಿಗೆ ನಾಮಮಕ್ಕುಂ" (ಮಂಗರಾ. ೯೦-೬). 'ಸಧರ್ಮಚಾರಿಣಿ' ಪರಾ.
[< ಸಂ. ಸಧರ್ಮಚಾರಿಣೀ]

**ಸದ್ಧರ್ಮತೆ** (ನಾ). = ಸದ್ಧರ್ಮ ೧ : ಭರತನ ನೀತಿ ಧರ್ಮಜನ ಸದ್ಧರ್ಮತೆ ವರಮನುಗಳ ಸನ್ಮಾರ್ಗ (ಇಚಸಾಂ. ೪-೩೪). [ಸಂ. ಸದ್ಧರ್ಮತಾ]

**ಸದ್ಧಾತುಜ್ಞ** (ನಾ). ಒಳ್ಳೆಯ ಧಾತುಗಳ ಬಗ್ಗೆ ತಿಳಿದವನು : ಧಾತುಜ್ಞರ್ ಸಂತತ ತನುಧಾತುಜ್ಞರ್ ಭೂರಿಸಾರಧಾತುಜ್ಞರ್ ಸದ್ಧಾತುಜ್ಞರ್ ನೆರೆದಿರ್ದರ್ ಕೌತುಕ ಹಮ್ಮೀರವೀರರಾಜನ ಸಭೆಯೊಳ್ (ಹಮ್ಮೀ.ರ. ೨-೧೧೩). 'ತನುಧಾತುಜ್ಞ' ಪರಾ.
[ಸಂ.]

**ಸದ್ಧಾರ್ಮಿಕ** (ನಾ). ಒಳ್ಳೆಯ ಧರ್ಮದಲ್ಲಿ ನಿಷ್ಠೆಯುಳ್ಳವನು. [ಸಂ.]

**ಸದ್ಭಗೆವೆಱು** (ಕ್ರಿ). ಒಳ್ಳೆಯ ಮನಸ್ಸನ್ನು ಹೊಂದು: ನಗೆಮೊಗದಬಲೆಯರಂದೆತ್ತಿದರು ಸದ್ಭಗೆವೆತ್ತ ಮುತ್ತಿನಾರತಿಯ (ಮೋಹತ. ೨೬-೧೫). [ಸದ್ಭಗೆ + ಪೆಱು₁]

**ಸದ್ಬುದ್ಧಿ** (ನಾ). ಒಳ್ಳೆಯ ಬುದ್ಧಿ, – ಜ್ಞಾನ : ನೀಂ ಹರನ ಕೃಪೆಯಿಂದಲಖಿಲ ಸಂಪದಂಗಳ ಗಳಿಸಿ ಸದ್ಬುದ್ಧಿಯಂ ಬಯಸದೆ ಮರುಳಾದೆ (ವೆಂಕಾರಾ. ೫-೧೭-೩೦) ; ಬಹುಕಾಲಮರಮನೆಯ ಸುಖಸೋಮಪಾನಮಂಗೈದು ಪಲ್ಲಟವಾಯ್ತೆ ಸದ್ಬುದ್ಧಿ ? (ಶ್ರೀರಾಮಾ. ೬೨-೨೨೭). [ಸಂ.]

**ಸದ್ಬೋಧ** (ನಾ). ಒಳ್ಳೆಯ ತಿಳಿವಳಿಕೆ,– ಅರಿವು : ನೀಂ ಭುವನತ್ರಯತಿಳಕರಮಳ ಸದ್ಬೋಧಸುಧಾರ್ಣವಪೂರ್ಣಚಂದ್ರರವನತದಿವಿಜನರೋರಗರನನ್ಯಸಾಮಾನ್ಯಗುಣರ್ (ಯಶೋಚ. ೪-೪೮). [ಸಂ.]

**ಸದ್ಭಕ್ತ** (ನಾ). ಒಳ್ಳೆಯ ಭಕ್ತ,– ಆರಾಧಕ : ಒಡೆಯರಾಡುವ ಮಾತ ಕಡೆ ಪರಿಯಂತರ ಕೇಳಿ ಇದಿರುಹೋಗಿ ಕಿಂಕರನಾಗಿ ಬಿನ್ನಹವ ಮಾಡುವ ಸದ್ಭಕ್ತರ ತೋಱಯ್ಯಾ (ಬಸವ. ೪೪೯) ; ಅರಸನಾಕ್ಷಣದೊಳಾ ಮದನಾಂತಕನ ಸದ್ಭಕ್ತ [ಪಾಠಾಂ. ಸದುಭಕ್ತ] ನಂ ಕರೆತರಿಸಿಯಿಂತೆಂದ (ಬಸವಪು. ೫೩-೪೨). [ಸಂ.]

**ಸದ್ಭಕ್ತಿ** (ನಾ). ಪರಿಶುದ್ಧವಾದ ಭಕ್ತಿ; ನಿರ್ಮಲ ಭಕ್ತಿ: ಆನಂದದಿಂದಂ ದಿವಿಜಪರಿವೃತಂ ಬಂದು ಸದ್ಭಕ್ತಿಯಿಂದಂ ರಾಗಂ ಕೈಗಣ್ಮೆ ಪೊಣ್ಮುತ್ತಿರ್ (ಸುಕುಮಾ. ೯-೩) ; ಭಕ್ತರಂದು ತಪಂಗಳಂ ಸದ್ಭಕ್ತಿ ರತಿಯಲಿ ಮಾಡಿ (ಬಸವಪು. ೪೩-೫೪).
[ಸಂ.]

**ಸದ್ಭವ್ಯ** (ನಾ). [ಜೈನ] ಒಳ್ಳೆಯ ಶ್ರಾವಕ : ಭಾಸುರ ಸುರನರ ಸದ್ಭವ್ಯಸೇವ್ಯಂ . . . ರಕ್ಷಿಕ್ಕೆ ಶಾಂತೀಶನೆಮ್ಮಂ (ಶಾಂತಿಪು. ೧-೧) ; ಅನುಪಮ ಚಾರುಚರಿತದ ನಿವಹದನುಭವದಿಂದ ಸದ್ಭವ್ಯರಿಗೆ ಬೋಧಿಸುವನವನೆ ಆಚಾರಿಯನು (ಜಿರಾಮಾ. ೨-೭).
[ಸಂ.]

**ಸದ್ಭಾವ** (ನಾ). ೧. ಇರುವಿಕೆ ; ಅಸ್ತಿತ್ವ : ಸದ್ಭಾವ = ಅಸ್ತಿತ್ವ, ಶೋಭನತ್ವ ಮತ್ತು ಪ್ರಾಧಾನ್ಯ (ಧ್ವನ್ಯಾಲೋ. ೨೫ ಅಡಿಟ). ೨. ಒಳ್ಳೆಯ ಮನಸ್ಸು, – ಚಿತ್ತ : ಮೂವತ್ತಾಱುಂ ಗುಣಂಗಳ್ತಮಗಮರ್ದಿರೆ ಸಂದ್ಯೆದುಮಾಚಾರದೊಳ್ಸದ್ಭಾವಂ ಕೈಗಣ್ಮೆ ಶಿಷ್ಯಾಚರಣ ವಿಧಿಗಳಂ ತಿರ್ದಿ (ಆದಿಪು. ೧-೩) ; ಗುರುವಿಗಾನಂದದಿಂ ಸುವಿವೇಕನಿಂದು ಮೈಯಿಕ್ಕಿ ಸದ್ಭಾವದಿಂದೆ (ಮನೋವಿ. ೨-೨೧). ೩. ಒಳ್ಳೆಯತನ; ಸುಗುಣ : ಬಸವನಿಹ ಸ[ಪಾಠಾಂ.ತ]ದ್ಭಾವವಂ ವೀಕ್ಷಿಸುತ ನಲಿದು (ಬಸವಪು. ೩೫-೮). ೪. ಒಳ್ಳೆಯ ಅರಿವು,– ಜ್ಞಾನ : ಶ್ರೀಗುರುವೇ ಸಾಕ್ಷಾಚ್ಛಿವನೆಂಬ ವಿಶ್ವಾಸವೇ ಸದ್ಭಾವಮಕ್ಕುಂ (ವಿವೇಕ. ೧೮). ೫. ಒಳ್ಳೆಯ ಜ್ಞಾನವುಳ್ಳವನು ; ಜ್ಞಾನಿ : ಭಕ್ತಿಸ್ಥಲದ ಮರ್ಮವನು ಲೋಕಕ್ಕೆ ನಿಶ್ಚಿಂತವ ಮಾಡಿ ತೋಱಿದ ತನ್ನ ಪದದುನ್ನತವ ಐಕ್ಯಕ ಸದ್ಭಾವರಿಗಿತ್ತ ಎನ್ನ ಗುರು (ಸಿದ್ಧವ. ಕ. ೫೪-೧೭೩). [ಸಂ.]

**ಸದ್ಭಾವಂಬೆಱು** (ಕ್ರಿ). ಒಳ್ಳೆಯ ಭಾವನೆಯನ್ನು ಹೊಂದು : ಅಂತಲ್ಲದಿನ್ನಾವಂ ಪೊಲ್ಲದಿದೊಳ್ಳಿತೆಂದಱಿವನಾತಂ ಕೇಳ್ದಪಂ ನಿನ್ನ ಸದ್ಭಾವಂಬೆತ್ತುಪದೇಶಮಂ ಕೆಳೆಯ ಪೇೞೆನ್ನಂದಿಗಂ ಕೇಳ್ವನೇ (ಕಾದಂಪೂ. ೮೫೦). [ಸದ್ಭಾವ + ಪೆಱು₁]

**ಸದ್ಭಾವನ** (ನಾ). ಒಳ್ಳೆಯ ಮನಸ್ಸುಳ್ಳವನು : ಆವ ವರ್ಣದಲುದಿಸಿರಲು ಸದ್ಭಾವನನೆ ಪಾವನನು (ಗಗತಾ. ೧೪-೩೬). [ಸಂ. ಸದ್ಭಾವನಾ]

**ಸದ್ಭಾವನೆ** (ನಾ). ಒಳ್ಳೆಯ ವಿಚಾರ ; ಸದಭಿಪ್ರಾಯ : ಅವರಲ್ಲಿಯೂ ಒಮ್ಮೊಮ್ಮೆ ಸದ್ಭಾವನೆಗಳು ಮೂಡಿ ಮಿನುಗುತ್ತವೆ (ಗುರುಚ. ೪೫). [ಸಂ. ಸದ್ಭಾವನಾ]

**ಸದ್ಭಾವಪ್ರಸಾದ** (ನಾ). [ವೀಶೈ] ಹನ್ನೊಂದು ಬಗೆಯ ಪ್ರಸಾದಗಳಲ್ಲಿ ಒಂದು; ಪ್ರಸಾದವನ್ನು ಒಳ್ಳೆಯ ಭಾವನೆಯಿಂದ ಸೇವಿಸುವುದು : ಅನಾದಿಕುಳ ಸನ್ಮತವಾದ ಏಕಾದಶ ಪ್ರಸಾದದ ಕುಳವ ತಿಳಿವಡೆ . . . ನವಮದಲ್ಲಿ ಸದ್ಭಾವಪ್ರಸಾದ (ಚೆನ್ನವ. ಕ. ೩೮೭-೪೧೯); ಪ್ರಸಾದವನ್ನು ಸದ್ಭಾವದಿಂದ ಸೇವಿಸುವುದೇ ಸದ್ಭಾವಪ್ರಸಾದವು (ಶಿವಾಕೋ. ೧೧೭). [ಸಂ.]

**ಸದ್ಭೀತಿ** (ನಾ). ಅತಿಯಾದ ಅಂಜಿಕೆ : ಮಲಪರ್ಸದ್ಭೀತಿಯಿಂ ಕಣ್ಣಾವಯವದೊಳು . . . ವೇಳೆಗೊಣ್ಣರ್ (ಸೌ೩. XX, ೪೯-೨೪ ; 1076 ?). [ಸಂ.]

**ಸದ್ಭ್ರಾಂತ** (ಗು). ಚೆನ್ನಾಗಿ ಬೀಸುತ್ತಿರುವ : ಸದ್ಭ್ರಾಂತಸಮೀರಣೋತ್ಥಿತ ವಿಶಾಳವಿಳೋಳತರಂಗರೇಖೆ (ಪಂಪಭಾ. ೩-೫೭). [ಸಂ.]

**ಸದ್ಮ** (ನಾ). ೧. ಮನೆ ; ನಿವಾಸ : ಪ್ರಕಾಶಪ್ರದೀಪಸುಧಾಸದ್ಮವಿಚಿತ್ರಭಾಜನ ವಿಭೂಷಾನೀಕಮಂ ಕೊಟ್ಟು (ಪಂರಾಮಾ. ೧-೬೬) ; ಸುರಗಂಧರ್ವ . . . ಸ್ತ್ರೀಸದ್ಮದೊಳ್ . . . ಜಸಂಬಡೆದಳೋ (ಸುಕುಮಾ. ೫-೫೮). ೨. ಪೀಠ ; ಆಸನ : ಪದ್ಮಸದ್ಮಸ್ಥಿತ ಸರ್ವಗ ಸಕಲೇಶ ಪದ್ಮಾವತಿ ಪಾಲಿಸೆನ್ನ (ಶತಸಾಂ. ೬೩-೧೨). ೩. ಗುಡಿ ; ದೇಗುಲ. ೪. ನಿಲ್ದಾಣ ; ನೆಲೆ. [ಸಂ. ಸದ್ಮನ್]

**ಸದ್ಮಿ** (ನಾ). ಗೆಡ್ಡೆ ; ಗೆಣಸು : "ಕಂದಂ ಸದ್ಮಿ ಸೂರಣಮೆನಿಕ್ಕು" (ಮಂಗರಾ. ೪೧-೩೫). [ಸಂ.]

**ಸದ್ಯ** (ಅ). ೧. ಕೂಡಲೆ, ತಕ್ಷಣ ಎಂಬರ್ಥದಲ್ಲಿ ಬಳಸುವ ಒಂದು ಅವ್ಯಯ: ಘಟಿಯಿಕ್ಕುಂ ಜಲಧೀಶಮಂಡಲದ ದೋಷಂ ಸದ್ಯಮತ್ತಿಂದ್ರಮಂಡಳದೋಷಂ ದಿನಸಪ್ತಮಕ್ಕೊಗೆಗುಂ (ಲೋಕೋಪ. ೪-೮೯); ನೆಲಬೇವು ಹಿಪ್ಪಲಿ ಕಟುಕರೋಹಿಣಿ . . . ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಸದ್ಯದಲ್ಲಿ ಬರುವ ಜ್ವರಂ ಗುಣಮಕ್ಕುಂ (ಸಕವೈ. ೧೧೦). ℙ ಇದು ಕನ್ನಡದಲ್ಲಿ ನಾಮಪದದ ಅರ್ಥದಲ್ಲೂ ಬಳಕೆಯಲ್ಲಿದೆ. ೨. ಅಂತೂ ಎಂಬರ್ಥದಲ್ಲಿ ಬಳಸುವ ಸಮಾಧಾನಸೂಚಕ ಅವ್ಯಯ : ಸದ್ಯ-ದೇವರು ದೊಡ್ಡವನು ಎಂದು ತಾಯ್ತನದ ಉದ್ವೇಗದಿಂದ ಚೀಣತಾಯಿ ಬಡಬಡಿಸಿದಳು (ಆತ್ಮಾರ್ಪ. ೨೨) ; ಸದ್ಯ ಬಂದೆಯಲ್ಲ ಮಗು ಒಳ್ಳೆಯದಾಯ್ತು (ಪುನರು. ೬೪). [ಸಂ. ಸದ್ಯಸ್]

**ಸದ್ಯಃಫಲ** (ನಾ). ಕೂಡಲೆ ದೊರಕುವ ಫಲ,– ಪ್ರಯೋಜನ : "ಸಾಂದದೃಷ್ಟಿಕಂ, ಸದ್ಯಃಫಲಂ - ಈ ೨ ಆಗಳಂತೆಯಪ್ಪ ಫಲಂ" (ಹಲಾಯು. ೨೦-೧೧೭); ಕೆಲವು ಪಾಪಗಳಿಗೆ ಸದ್ಯಃಫಲವಾಗುವುದು (ಆರ್ಯಧ. ೧೧೮). [ಸಂ.]

**ಸದ್ಯಕ್ಷಾರ** 'ಸರ್ಜಕ್ಷಾರ' ನೋ.

**ಸದ್ಯಸ್ಕ** (ಗು). ೧. ಈಗಿನ ; ತಕ್ಷಣದ. ೨. ಹೊಸತಾದ ; ಇತ್ತೀಚಿನ. (ನಾ). ೩. ಹೊಸದು ; ನವೀನವಾದುದು : "ಪ್ರತ್ಯಗ್ರಂ, ಸದ್ಯಸ್ಕಂ – ಈ ೨ ಸಜ್ಜುಕಂ" (ಹಲಾಯು. ೧೨೬-೭೮). [ಸಂ.]

**ಸದ್ಯಸ್ತನ** (ಗು). = ಸದ್ಯಸ್ಕ ೧ : ಸ್ತನಸಂಗಮಿರಲ್ ಸದ್ಯಸ್ತನಸಂಗಂ ನೆಗಲ್ಲು ಮೆಮ್ಮೊಳಧಿಪತಿಗೆ . . . ಎನುತುಂ ಕಿನಿಸುವವೋಲ್ ನಿಮಿರ್ದು ಕನ್ನೆಯಂಗುಳಿಯೆಸೆಗುಂ (ಜಗವಿ. ೧೦-೨೦). [ಸಂ.]

**ಸದ್ಯಾಜಮಾನ** (ನಾ). ಉತ್ತಮನಾದ ಯಜಮಾನ ; ಶ್ರೇಷ್ಠನಾದ ಒಡೆಯ: ತದ್ಯಾಗವೊಂದುಬರಿಸಕೆ ಮುಗಿವುದನ್ನೆಗಂ ಸದ್ಯಾಜಮಾನದೀಕ್ಷೆಯನವನಿಪಂ ತಾಳ್ದನು (ಜೈಮಿಭಾ. ೮-೧೦). [ಸಂ.]

**ಸದ್ಯಾನುಭವ** (ನಾ). ಆ ಕ್ಷಣದಲ್ಲಿ ಆಗುವ ಅನುಭವ : ಕವಿ ಚಂದ್ರೋದಯವನ್ನು ನೋಡುವಾಗ ಅವನ ಅಂತರಂಗದಲ್ಲಿ ಚಂದ್ರನನ್ನು ಕುರಿತ ಅನೇಕ ಭಾವನೆಗಳು ಸದ್ಯಾನುಭವದಲ್ಲಿ ಸೇರ್ಕೆಗೊಳ್ಳಬಹುದು (ಸೌಂದಸ. ೧೩). [ಸಂ.]

**ಸದ್ಯೋಘೃತ** (ನಾ). ಆಗತಾನೆ ಕಡೆದ ಬೆಣ್ಣೆಯನ್ನು ಕಾಯಿಸಿದ ತುಪ್ಪ ; ತಾಜಾತುಪ್ಪ : ಶಾಲ್ಯಾನ್ನ ಸದ್ಯೋಘೃತ ಹಸನಾದ ದೋಸೆಯುಂಡಲಿಗೆ . . . ಅರ್ಪಿಸಿದರಂಬಿಕೆಗೆ (ಕಂಸವಿ. ೨೨-೨೯). [ಸಂ.]

**ಸದ್ಯೋಜಾತ** (ಗು). ೧. ಆಗತಾನೆ ಹುಟ್ಟಿದ ; ನವಜಾತ : ಸದ್ಯೋಜಾತಶಿಶುವಿನ ಲಲಾಟಪಟ್ಟದಂತೆ ನೀನು ನಿರ್ಮಲರಹಸ್ಯಮಯ (ಇಪ್ಪಕ. ೨೩೨). (ನಾ). ೨. ಅದೇ ತಾನೆ ಹುಟ್ಟಿದ ಕರು. ೩. ಆಗತಾನೆ ಕಡೆದ ಬೆಣ್ಣೆ; ತಾಜಾಬೆಣ್ಣೆ. ೪. ಈಶ್ವರನ ಐದುಮುಖಗಳಲ್ಲಿ ಒಂದು : ಮಣ್ಣೆಲ್ಲಾ ಮಹಾದೇವನ ಸದ್ಯೋಜಾತಮುಖ ನೋಡಾ (ಸಿದ್ಧವ. ಕ. ೯೮-೫೮೫) ; ಪರಶಿವನ ಸದ್ಯೋಜಾತಮುಖದಿಂದೆ ಪೃಥ್ವಿತತ್ವ ಹುಟ್ಟಿತ್ತು (ಅಖಂಡೇ. ೩೯-೮). ೫. ಶಿವ; ಈಶ್ವರ: ಉಪ್ಪರಗುಡಿ ನಂದಿವಾಹನ ಸದ್ಯೋಜಾತನ ಬಾಗಿಲ ಮುಂದೆ ಸಾರುತ್ತೈದಾವೆ ನೋಡಾ (ಬಸವ. ೫೩೦). ೬. ಉಪಾಸನೆಗೆ ಯೋಗ್ಯವಾದ ನಾಲ್ಕು ವಿಧವಾದ ಬ್ರಹ್ಮಮೂರ್ತಿಗಳಲ್ಲಿ ಒಂದು : ತತ್ಪುರುಷ ಅಘೋರ ವಾಮದೇವ ಸದ್ಯೋಜಾತವೆಂಬ ಚತುರ್ವಿಧ ಬ್ರಹ್ಮಮೂರ್ತ್ಯುಪಾಸಕಗಳು (ವಿವೇಕ. ೬೨). 'ವಾಮದೇವ' ಪರಾ. ೭. ಐದು ಬಗೆಯ ಬ್ರಹ್ಮಮಂತ್ರಗಳಲ್ಲಿ ಒಂದು: ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನವೆಂಬ ಪಂಚಬ್ರಹ್ಮಮಂತ್ರಂಗಳಂ (ವಿವೇಕ. ೬೫); ಆ ಮಂತ್ರಂಗಳೊಳಗೆ ಸದ್ಯೋಜಾತಾದಿ ಪಂಚಬ್ರಹ್ಮಮಂತ್ರಂಗಳಿಂ ಯಥಾಕ್ರಮದಿಂದ ಕಾಮಿಕ ಮೊದಲಾದ ೨೮ ತಂತ್ರಗಳು ಪುಟ್ಟಿದವು (ದಶಟೀ. ೩೦-೯). [ಸಂ.]

**ಸದ್ಯೋನ್ಮುಕ್ತ** (ನಾ). ಯಾವ ಬಂಧನವೂ ಇಲ್ಲದೆ ಬಿಡುಗಡೆಯಾಗಿರುವವನು; ವಿಮುಕ್ತ: ಲಿಂಗಸುಖಪ್ರಸನ್ನ ಪ್ರಸಾದವ ಸ್ವೀಕರಿಸಿದ ಶರಣನೇ ಸದ್ಯೋನ್ಮುಕ್ತನೆಂಬುದು (ಪೋಳವಾ. ೨೬೩-೮೧೫) ; ಮುಟ್ಟಿತೆಲ್ಲ ಪರುಷದ ಸೋಂಕು ಒಡನೆ ನುಡಿದವರೆಲ್ಲರೂ ಸದ್ಯೋನ್ಮುಕ್ತರು (ಅವಚಂ. ೧೬೬-೭೮೫). [ಸಂ.]

**ಸದ್ಯೋನ್ಮುಕ್ತಿ** (ನಾ). ಯಾವ ಬಂಧನವೂ ಇಲ್ಲದೆ ಬಿಡುಗಡೆಯಾಗಿರುವುದು; ವಿಮುಕ್ತಿ : ಅಮರಗಣಂಗಳು ಮುನಿದು ಎನ್ನ ಕೈಲಾಸಕ್ಕೊಯ್ದರೆ ಸದ್ಯೋನ್ಮುಕ್ತಿಯ ತೋಟಲೆಂದು ಮರ್ತ್ಯಕ್ಕೆ ಮರಳಿ ತಂದ ಸಂಗನ ಬಸವಣ್ಣನೆ ಗುರುವೆನಗೆ (ವಚಸಂ. ೫೭೬-೮) ; ಶರಣಜನ ಸುರತರುವೆ ಗುರುವೆ ಸದ್ಯೋನ್ಮುಕ್ತಿಯಿರವೆ . . . ಸಲಹು (ರಾಘಚ. ೪-೩೫). [ಸಂ.]

**ಸದ್ಯೋನ್ಮುಕ್ತೆ** (ನಾ). ಯಾವ ಬಂಧನವೂ ಇಲ್ಲದೆ ಬಿಡುಗಡೆಯಾಗಿರುವವಳು; ವಿಮುಕ್ತೆ : ಆಕೆ ಸದ್ಯೋನ್ಮುಕ್ತೆಯಾಗಿ ಹಿಂತಿರುಗಿದಳು (ಶರಚ. ೨೨೯). [ಸಂ. ಸದ್ಯೋನ್ಮುಕ್ತಾ]

**ಸದ್ಯೋಪಾಯ** (ನಾ). ಕೂಡಲೆ ಹೊಳೆಯುವ ಉಪಾಯ ; ತಕ್ಷಣದ ಉಪಾಯ: ತಂದೆ ಜಗಲಿಯಿಂದ ತನ್ನ ಹೆಸರು ಕೂಗಿದ್ದು ಕೇಳಿಸಿ, ದೇವಯ್ಯ ಸದ್ಯೋಪಾಯವೊಂದನ್ನು ನಿರ್ಣಯಿಸಿ (ಮಲಮ. ೭೮೬). [ಸಂ.]

**ಸದ್ಯೋಮುಕ್ತಿ** (ನಾ). = ಸದ್ಯೋನ್ಮುಕ್ತಿ: ಪರಮ ವೈದಿಕ ವೈದಿಕಗಳಿಂದ ವೇದಪುರುಷನಿಗೆ ಪ್ರಯೋಜನಮೇನೆನಲು ಸದ್ಯೋಮುಕ್ತಿ, ಕ್ರಮಮುಕ್ತಿಗಳೆಂದಱಿಯಬೇಕು (ಸಾತ್ವಿವಿ. ೪೮); ಅರ್ವಾಚೀನವೇದಾಂತದಲ್ಲಿ ಮೋಕ್ಷದ ಈ ಭಾವನೆಯು ಸದ್ಯೋಮುಕ್ತಿಯೆಂದೂ ಜೀವನ್ಮುಕ್ತಿಯೆಂದೂ ಎನಿಸಿತು (ತತ್ವಪ್ರಾ. ೬೩). [ಸಂ.]

**ಸದ್ಯೋವಧು** (ನಾ). ವಿವಾಹದ ಸಮಯದಲ್ಲಿ ಉಪನಯನವಿಧಿಯನ್ನು ಪಡೆದವಳು : ಸ್ತ್ರೀಯರು ಬ್ರಹ್ಮವಾದಿನಿಗಳು, ಸದ್ಯೋವಧುಗಳು ಎಂದು ಎರಡು ಬಗೆ . . . ಸದ್ಯೋವಧುಗಳಿಗೆ ವಿವಾಹಸಮಯ ಪ್ರಾಪ್ತವಾದರೆ ಯಥೋಚಿತ ಉಪನಯನಮಾತ್ರವನ್ನು ಮಾಡಬೇಕೆಂದು ವಿಧಿಸಿರುವರು (ಹಿಂದಸಾ. ೧೫೯). [ಸಂ. ಸದ್ಯೋವಧೂ]

**ಸದ್ರತಿ** (ನಾ). ಒಳ್ಳೆಯ ಪ್ರೀತಿ, – ಅನುರಾಗ : ಸಲೆ ಸದ್ರತಿಯೊಳ್ ನೆರೆದಿಂತು ನೂತನಂ ಮನಸಿಜನೆಂಬವೋಲ್ . . . ಅನುರಾಗಮನಾವಗಮುಂಟುಮಾಡುವಂ (ಚಂದ್ರಪು. ೭-೩೬). [ಸಂ.]

**ಸದ್ರಿ** 'ಸದರಿ' ನೋ.

**ಸದ್ರುಚಿ** (ನಾ). ಒಳ್ಳೆಯ ರುಚಿ : ಕುಸುಮದೊಳಿರ್ಪ ಸೌರಭದ ವೋಲ್ . . . ಶಶಿಯೊಳಗಿರ್ಪ ಚಂದ್ರಿಕೆಯವೋಲ್ ಫಲದೊಳ್ ನೆಲಸಿರ್ಪ ಸ[ಪಾಠಾಂ. ತ]ದ್ರುಚಿ ಪ್ರಸರದವೋಲ್ (ನಂಬಿರ. ೧೨ ಸೂಚನೆ). [ಸಂ.]

**ಸದ್ರುತ** (ನಾ). ವೇಗವನ್ನು ಹೊಂದಿರುವುದು ; ವೇಗಸಹಿತವಾದುದು : ರೌದ್ರವಹ್ನಿಸುರ ಪಾವಕಂ ಕ್ಷುದ್ರಮಲ್ಲದಿರೆ ನಾಮದಿಂ ಭದ್ರಕಂ ಸರಸಿಜಾನನೇ ಸದ್ರುತಂ [ಪಾಠಾಂ. ಸದ್ರಸಂ] ಲಯಪದಕ್ರಮಂ (ಛಂದೋಂಬು. ೨-೧೦೩). [ಸಂ.]

**ಸದ್ರೂಪ** (ನಾ). ೧. ಒಳ್ಳೆಯ ಆಕಾರ,– ರೂಪ : ಸುದತೀ ಸದ್ರೂಪಮಂ ತಾಳ್ದಿದ ವನಜಭವಪ್ರೇಯಸೀನಾಮಮಂ ತಾಳ್ದಿದ . . . ವಾಕ್ಸುಂದರಿ (ಸುಕುಮಾ. ೧-೭). ೨. ಒಳ್ಳೆಯ ಆಕಾರವುಳ್ಳವನು; ಸುರೂಪಿ: ಶಿವನು ಸಮಸ್ತಪ್ರಪಂಚಕ್ಕೆ ಕಾರಣನಾಗಿ ತನಗೆ ಅನ್ಯಕಾರಣವಿಲ್ಲದುದರಿಂದ ಸದ್ರೂಪನಾಗಿರುವನು (ಶಿವಾಸೂ. ೧೮ ವಿಚಾರ) ; ಆತ್ಮನು ಸದ್ರೂಪನು. ಜೀವನು ಚಿದ್ರೂಪನು (ಭಾರದ. ೨೩೬). [ಸಂ.]

**ಸದ್ವಂಶ** (ನಾ). ೧. ಒಳ್ಳೆಯ ಕುಲ,– ವಂಶ : ಸದ್ವಂಶದತ್ತಣಿಂ ಪುಟ್ಟಿದಂ (ಶಮದ. ೧೩೧ ಪ್ರಯೋ); ಸದ್ವಂಶದಲಿ ಜನಿಸಿದ ಮಹಿಮನಿರೆ ಲೋಕಾಂತರದ ಸುಖವಹುದು

(ಕುವ್ಯಾಉ. ೪-೯೦). ೨. ಒಳ್ಳೆಯ ಬಿದಿರು : ಸದ್ವಂಶದೊಳು ಬಂದ ಬಿಲ್ಲಿಗೆ ಹೇಗಿದೆ ಪರರೆದೆ ಸೀಳುವ ಗುಣವು ಸದ್ವಂಶದೊಳು ಬಂದ ಖಳನಿಗೆ ಹಾಗಿದೆ ಪರರೆದೆ ಸೀಳುವ ಗುಣವು (ಇಂಚಾಪ. ೨೧೭-೭೪). [ಸಂ.]

**ಸದ್ವನಜವನ** (ನಾ). ಒಳ್ಳೆಯ ತಾವರೆಗಳಿಂದ ಕೂಡಿದ ಕೊಳ : ಅನುಯೋಗ ಕುಸುಮಪಾದಪಮನೇಕನಯಲತಿಕಮಂಗಫಲಮಹಿಜಂ ಸದ್ವನಜವನಂ (ಆದಿಪು. ೧-೧೦). [ಸಂ.]

**ಸದ್ವಸ್ತು** (ನಾ). ಒಳ್ಳೆಯ ವಸ್ತು ,– ಪದಾರ್ಥ : ಸದ್ವಸ್ತುಭಾಜನನಪ್ಪನ್ನೊಳೆ ಮಾಳ್ಪುದಾಕೆಗೆ ವಿವಾಹೋದ್ಯೋಗಮಂ ರಾಗದಿಂ (ಚಂದ್ರಪು. ೬-೨೧). [ಸಂ.]

**ಸದ್ವಾಜಿ** (ನಾ). ಒಳ್ಳೆಯ ಜಾತಿಯ ಕುದುರೆ : ರಣಪ್ರೋದ್ಭವ ಶೌರ್ಯಾಟೋಪದಿಂದಂ ಬಗೆಯೆ ನಿಜದ ಸದ್ವಾಜಿಯಾಗಿಱ್ಪು (ಎಕ. VI. ಕಡೂರು. ೬೬-೪೨ ; 1172). [ಸಂ.ಸದ್ವಾಜಿನ್]

**ಸದ್ವಾದ** (ನಾ). [ಬೌದ್ಧ] ಒಳ್ಳೆಯ ತರ್ಕ ; ಉಚಿತವಾದ ವಾದ : ಶೂನ್ಯಂ ತತ್ತ್ವಂ ಎಂದರೆ ತತ್ತ್ವವಿಲ್ಲವೇ ಇಲ್ಲವೆಂದರ್ಥವು. ಈ ವಾದಕ್ಕೆ ಅಸದ್ವಾದವೆಂದು ಹೆಸರು. ಬಾಕಿ ದರ್ಶನಗಳಿಗೆಲ್ಲಾ ಸದ್ವಾದಗಳೆಂದು ಹೆಸರು (ಓಂದಸಾ. ೪೭). 'ಅಸದ್ವಾದ' ಪರಾ. [ಸಂ.]

**ಸದ್ವಾಸನೆ** (ನಾ). ಒಳ್ಳೆಯ ಕೆಲಸ ಮಾಡಬೇಕೆಂಬ ಆಸೆ : ಸಲ್ಲಲಿತ ಸದ್ವಾಸನೆ ಗಳನು ಮೆಲ್ಲನಭ್ಯಾಸವನು ಮಾಡುವನೊಳ್ಳಿತಹ ಮಾರ್ಗದಲಿ ನಡೆದು ಮುಮುಕ್ಷುವೆ ನಿಸುವನು (ಅಮೃತ. ೧-೨೫). [ಸಂ. ಸದ್ವಾಸನಾ]

**ಸದ್ವಿಜ** (ನಾ). ೧. ಒಳ್ಳೆಯ ಬ್ರಾಹ್ಮಣ, – ದ್ವಿಜ : ಲೋಕದೊಳ್ನಿಗಟ್ಟಿ ಪಟ್ಟಿಲ ಸದ್ವಿಜರೇಂ ಕೃತಾರ್ಥರೋ (ಸೌಇಇ. XX. ೫೭-೧೪ ; 1084) ; ಶ್ರುತಿವೆತ್ತ ಸದ್ವಿಜರೊಂದುಕೋಟಿ ಜಗತ್ತಿನಲಿ ಮಾಹೇಶ್ವರಂಗೆ ಸಮಾನವಲ್ಲ (ಬಸವು. ೫೫-೫೫). ೨. ಒಳ್ಳೆಯ ಹಲ್ಲು : 'ಸದ್ವಿಜಕುಲೋಪಶೋಭಿ' ಪರಾ. [ಸಂ.]

**ಸದ್ವಿಜಕುಲೋಪಶೋಭಿ** (ನಾ). ೧. ಒಳ್ಳೆಯ ಬ್ರಾಹ್ಮಣರ ವಂಶದಿಂದ ಶೋಭಿಸುವವನು. ೨. ಒಳ್ಳೆಯ ಹಲ್ಲುಗಳಿಂದ ಶೋಭಿಸುವವನು. ೧, ೨: ಮುಖಕಮಳದಂತೆ ಸದ್ವಿಜಕುಲೋಪಶೋಭಿಯುಂ . . . ಯಾಮ್ಯದಿಶೆಯಂತೆ ಧರ್ಮಪ್ರಭಾವವಿಭಾವಿತಮುಮೆಂಬ ಮಹನೀಯಮಹಿಮೆಯಂ ತಳೆದು (ಪುಷ್ಪಪು. ೯-೬೦ಪ). [ಸಂ. ಸದ್ವಿಜಕುಲೋಪಶೋಭಿನ್]

**ಸದ್ವಿದ್ಯೆ** (ನಾ). ಒಳ್ಳೆಯ ಅರಿವು, – ಜ್ಞಾನ : ಇದು ಮುನ್ನಂ ನಿನ್ನ ಕೆಟ್ಟಿಂಗುರುದೆಡೆಯನದಂ ಪೇಟ್ದ ಸದ್ವಿದ್ಯೆ ತಾನಿಂತಿದು ಮುನ್ನಂ (ಸುಕುಮಾ. ೪-೨) ; ನೀಡಿದನು ಕುಶಿಕತನಯಂ ರಾಮಚಂದ್ರಂಗೆ . . . ಮಂತ್ರ ಸದ್ವಿದ್ಯೆಯಂ (ಶ್ರೀರಾಮಾ. ೩೦-೯೧). [ಸಂ.]

**ಸದ್ವಿಧಿ** (ನಾ). ಒಳ್ಳೆಯ ನೇಮ , – ಕಟ್ಟುಪಾಡು : ಬಹುವಿಧ ಪದಪದಾರ್ಥಂಗಳಂ ಸದ್ವಿಧಿಯೊಳಾ ವೈಜವ್ವ . . . ಗಡಣಿಸಿ ವಿಧುಧರಾಕೃತಿಯಂ ತಪೋಧನನಿಧಿಯನರ್ಚಿಸಿ (ಬಸವು. ೫೨-೫). [ಸಂ.]

**ಸದ್ವಿನಯ** (ನಾ). ೧. ವಿನಯದಿಂದ ಕೂಡಿದ ಒಳ್ಳೆಯ ನಡವಳಿಕೆ : ಇವರ ಸದ್ವಿನಯ, ಗುಣ, ವಿದ್ವತ್ತು, ಹಿರಿಮೆಯನ್ನು . . . ವರ್ಣಿಸಿದ್ದಾನೆ (ನೊಳಂಬ. ೬೩). ೨. ಒಳ್ಳೆಯ ನಡವಳಿಕೆಯವನು ; ವಿನಯವಂತ : ಪ್ರಯುತಯುತಂ ಸದ್ವಿನಯಂ ನಯವಾಕ್ಯಸರಂ . . . ನೆಗಟ್ದಂ ಧಾತ್ರಿಯೊಳ್ ಶಾಂತಿನಾಥಂ (ಸುಕುಮಾ. ೧-೫೧) ; ಕಾಳಿಮುಯ್ಯನಾಯಕತನಯಂ ಸದ್ವಿ[ನ]ಯಂ ಧೈರ್ಯಮಹೀಭೃದ್ಧ್ವರ್ಯ (ಕಾಇಆ. ೭೪-೧೨-೮೮ ; 1170). [ಸಂ.]

**ಸದ್ವಿನಿಯೋಗ** (ನಾ). ಒಳ್ಳೆಯ ಬಳಕೆ , – ಉಪಯೋಗ : ವಿರಾಮಕಾಲವನ್ನು ಸದ್ವಿನಿಯೋಗಪಡಿಸಿಕೊಳ್ಳುವುದು (ಶಿಕ್ಷದ. ೧೫೫). [ಸಂ.]

**ಸದ್ವಿವೇಕ** (ನಾ). ಒಳ್ಳೆಯ ವಿವೇಚನೆ , – ವಿವೇಕ : ಎನ್ನ ಸದ್ವಿವೇಕವೇ ವಸ್ತ್ರ ಎನ್ನ ಸತ್ಯವೇ ದಿವ್ಯಾಭರಣ (ಅವಚು. ೨೦೭-೯೨೭) ; ಕ್ಷಾತ್ರದುಸ್ಸಾಮಸಮಡಸಿದವಂಗಕ್ಕುಮೇ ಸದ್ವಿವೇಕಂ (ಶಬರಂ. ೪-೫೫). [ಸಂ.]

**ಸದ್ವೃತ್ತ** (ನಾ). ೧. ಶ್ರೇಷ್ಠವಾದ ವೃತ್ತ, – ವರ್ತುಲ. ೨. ಒಳ್ಳೆಯ ನಡತೆ,– ಆಚಾರ : ಸದ್ವೃತ್ತಮಂ ಬಿಟ್ಟೊಡಣ್ಣನುಮಂ ಬಿಟ್ಟು ವಿಭೀಷಣಂ ತೊಲಗಿ ಪೋದಂ (ಪಂಪರಾಮಾ. ೧೨-೭೬). ೧, ೨ : ಕಳಂಕರಹಿತಂ ಸದ್ವೃತ್ತದಿಂದಂ ತಿರಸ್ಕರಿಪಂ ಚಂದ್ರನನೊಳ್ಪುವೆತ್ತ ಬುಧಚಂದ್ರಂ ಸಂತತೋತ್ಸಾಹದಿಂ (ಎಕ VII. ಶಿವಮೊ. ೪ ; 1122). ೩. ಒಳ್ಳೆಯ ನಡತೆಯುಳ್ಳವನು : ತರ್ಕನುದ್ವೃತ್ತನಪ್ಪನ ಸಂಸರ್ಗದಿನಪ್ಪ ಸಂಪದಮುಮಂ ಸದ್ವೃತ್ತರೇಗೆಯ್ವರೋ (ಪಂಪರಾಮಾ. ೧೨-೭೬). [ಸಂ.]

**ಸದ್ವೃತ್ತಿ** (ನಾ). ೧. ಒಳ್ಳೆಯ ನಡತೆ, – ಆಚಾರ : ನುತ ಜಾತಿ ನೀತಿ ಲಕ್ಷಣ ಗುಣರಸವಲಂಕೃತಿ ಸರಸೋಕ್ತಿ ಸದ್ವೃತ್ತಿ (ಇಚಸಾಂ. ೧೭-೯೫). ೨. [ಕಾವ್ಯಮೀ] (ಅಕ್ಷರಗಳ) ಒಳ್ಳೆಯ ರಚನೆ, – ಬಂಧ : ಪದ್ಯಂ ಸಮಸ್ತಜನತಾಹೃದ್ಯಂ ಪದವಿದಿತ ಪಾದನಿಯಮನಿವೇದ್ಯಂ ವಿದ್ಯಾಪಾರಪರಾಯಣಮಾದ್ಯಂ ಸದ್ವೃತ್ತಿವೃತ್ತ ಜಾತ್ಯಾಯತ್ತಂ (ಕವಿರಾ. ೧-೩೦). [ಸಂ.]

**ಸದ್ವೃಷ್ಟಿ** (ನಾ). ಒಳ್ಳೆಯ ಮಳೆ ; ಹದವಾದ ಮಳೆ : ಧರಣೀನಾಥನೆ ನಿನ್ನ ದೇಶಗಳೊಳಿಂದ್ರಂ ಮಾಳ್ಕೆ ಸದ್ವೃಷ್ಟಿಯಂ (ಶಾಕುಂತ. ೧೧೫-೧೯೭) : ಸದ್ವೃಷ್ಟಿಯನ್ನು ಕೊಡುವ ಇಂದ್ರನೇ . . . ಹತ್ತುಜನ ಪುತ್ರರನ್ನು ಕೊಡು (ಆರ್ಯಧ. ೧೩೪). [ಸಂ.]

**ಸದ್ವೇದ್ಯ** (ನಾ). [ಜೈನ] ಇಂದ್ರಿಯಸುಖವನ್ನು ಒದಗಿಸುವುದು : ಕ್ಷಮೆಯುಂ . . . ಸದ್ವೇದ್ಯದಾಸ್ರವಂ ತಾನಕ್ಕುಂ (ಸುಕುಮಾ. ೮-೧೭). [ಸಂ.]

**ಸದ್ವ್ಯಯ** (ನಾ). ಒಳ್ಳೆಯ ಕೆಲಸಗಳಿಗಾಗಿ ಹಣವನ್ನು ಖರ್ಚುಮಾಡುವುದು: ಅವರು ಸಾರ್ವಜನಿಕಹಣವನ್ನು ಸದ್ವ್ಯಯ ಮಾಡಿದರು (ರೂಢಿ). [ಸಂ.]

**ಸದ್ವ್ಯವಹಾರ** (ನಾ). ಒಳ್ಳೆಯ ವ್ಯವಹಾರ ; ಉತ್ತಮವಾದ ವ್ಯಾಪಾರ. [ಸಂ.]

**ಸದ್ವ್ಯಾಪಾರ** (ನಾ). = ಸದ್ವ್ಯವಹಾರ. [ಸಂ.]

**ಸದ್ವ್ರತಿ** (ನಾ). ಶ್ರೇಷ್ಠವ್ರತಿ : ವಿಕೃತಿವುಳಿದು ಸಂಪ್ರತಿಬಲದ ಸದ್‌ವ್ರತಿಯ ಸಮತೆಗೆ ಪುರಜನಂ ವಿಸ್ಮಯವಿದೆನುತಿಹರು (ಬಸವು. ೩೮-೩೧). [ಸಂ.ಸದ್ವ್ರತಿನ್]

**ಸದ್ವ್ರತೆ** (ನಾ). ಒಳ್ಳೆಯ ವ್ರತಗಳನ್ನು ಪಾಲಿಸುವವಳು : ಸುದತಿಯನಮಳ ಬೋಧಾನಂದಮತಿಯನೂನಧೃತಿಯನಮಂದಸಮತಿಯನಸಮಮಶ್ಮಾಚಾರ ಸದ್ವ್ರತೆ[ಪಾಠಾಂ. ತಿ]ಯ . . . ತನ್ನ ಸತಿಯಂ ಕಾಣುತ (ಬಸವು. ೧೧-೩೨).
[(ಸಂ. ಸದ್ವ್ರತ) + - ಎ$_2$]

**ಸಧರ್ಮ$_1$** (ಗು). ೧. ಧರ್ಮದಿಂದ ಕೂಡಿದ ; ಧರ್ಮಸಹಿತವಾದ. (ನಾ). ೨. ಧರ್ಮದಿಂದ ಕೂಡಿರುವುದು ; ಧರ್ಮಸಹಿತವಾದುದು.
[ಸಂ. ಸಧರ್ಮನ್]

**ಸಧರ್ಮ$_2$** (ನಾ). ೧. ಸಮಾನಗುಣ ; ಸಮಾನಧರ್ಮ : "ಸಧರ್ಮ - ವಿಧರ್ಮಗಳೆಂದರೆ ಸಮಾನಗುಣದವು ವಿರುದ್ಧಗುಣದವು, ಎಂದರ್ಥ" (ಆರ್ಯಧ. ೧೨). ೨. ಸಮಾನ ಆಚರಣೆಗಳಿಂದ ಕೂಡಿರುವ ವ್ಯಕ್ತಿ ; ಸಂಗಾತಿ : ಕಾಮುಕೀ ಕಾಮುಕರೆ ಸಧರ್ಮರಾಗೆ (ಶಾಂತಿಪು. ೭-೧೦೪) ; ವೀರಣಂದಿಸಿದ್ಧಾನ್ತಚಕ್ರವರ್ತಿಗಳ ಸಧರ್ಮ್ಮರಪ್ಪ ಬಾಹುಬಲಿಸಿದ್ಧಾನ್ತಿದೇವರ್ (ಮೈಆರಿ. ೧೯೨೯, ೧೪-೨೦ ; 1236). [ಸಂ.]

**ಸಧರ್ಮಚಾರಿಣಿ** (ನಾ). ಗಂಡನೊಂದಿಗೆ ಧಾರ್ಮಿಕವಿಧಿಗಳಲ್ಲಿ ಸಹಭಾಗಿಯಾಗುವವಳು ; ಸಹಧರ್ಮಿಣಿ ; ಹೆಂಡತಿ : "ದಾರಾಃ . . . ಸಧರ್ಮಚಾರಿಣೀ . . . ಗೃಹಾ - ಈ ೧೩ ಹೆಂಡತಿ" (ಹಲಾಯು. ೮೧-೩೪೦).
[ಸಂ.ಸಧರ್ಮಚಾರಿಣೀ]

**ಸಧರ್ಮಿ** (ನಾ). = ಸಧರ್ಮ$_2$ ೨ : ನೀನುಮಾನುಂ ಸಧರ್ಮಿಗಳ್ [ಪಾಠಾಂ. ಸದ್ಧರ್ಮಿಗಳ್, ಸಧರ್ಮರೆಂದು ] ಎಂದಱಿಯೆ (ಜೀವಸಂ. ೫೭-೧೪) ; ಪಾತಕವ್ಯೆದುಮಂ ಬಿಡು ಸಧರ್ಮಿ ಗಳಲ್ಲಿ ದಯಾಪರರ್ಕಳೊಳ್ (ನನ್ನಚಾ. ೭-೨೭೩). [ಸಂ.ಸಧರ್ಮಿನ್]

**ಸಧವೆ** (ನಾ). ಗಂಡನಿರುವವಳು ; ಮುತ್ತೈದೆ : ಗಜಮುಖನೇ ನಿನಗಂದಿಗೆ ಮದುವೆ ನಿನ್ನಿಂದಾವಪ್ಪರಸಿಯು ಸಧವೆ (ಗಣೇಶ. ೫-೧೧೭) ; ತಾನು ವಿಧವೆ : ಇಷ್ಟು ದಿನ ಬಿಳಿಯ ಬಟ್ಟೆ ಉಟ್ಟವಳು ಈಗ ಸಧವೆಯ ಸೋಗನ್ನು ಹಾಕಬೇಕಾಗಿದೆ (ಎಠಸ. ೬೯). 'ವಿಧವೆ' ಪರಾ. [ಸಂ.ಸಧವಾ]

**ಸಧಾರ** (ನಾ). ಬಲಯುತ ; ಶೂರ : ಘಡಘಡಲವೋ ಪಾರ್ಥ ರಾಯನ ತುಡುಕಲಹುದೇ ಕೂಟ ಗಿರಿಯಲಿ ಕಡಲು ಹೂಳುವುದೇ ಸಧಾರನಲಾ ಮಹಾದೇವ (ಕುವ್ಯಾಕ. ೨೪-೨೬). [?/ ಮರಾ. ಸಧರ = ಸ್ಥಿರ]

**ಸಧಾರತನ** (ನಾ). ಶೂರತನ ; ವೀರತ್ವ : ಆರು ಪೊಗಳುವರನಿಲಸುತನ ಸಧಾರತನವನು (ಕುವ್ಯಾಕ. ೨೦-೫). [ಸಧಾರ + - ತನ]

**ಸನ್** (ನಾ). ವರ್ಷ ; ಶಕ ; ಸಾಲು : ತಾರೀಖು ೩೧ನೆಯ ಮಾರ್ಚ್ ಮಾಸ ಸನ್ ೧೭೯೩ ಉ ಬರೆಸಿಕೊಟ್ಟದ್ದು (ರಾಜೇಂದ್ರ. ೫೪) ; ಶತ - ೧೮೧೬, ಸನ್ ೧೮೯೪ (ಮುಂಬವ್ಯಾ. ಮುಖಪತ್ರ). [← ಪಾರ. ಅರ. ಹಿಂ. ಮರಾ. ಸನ್]

**ಸನ** 'ಸೊನ' ನೋ.

**ಸನಂದ** (ನಾ). ೧. ಆನಂದಸಹಿತವಾದುದು; ಸಂತೋಷದಿಂದ ಕೂಡಿದುದು. ೨. ಬ್ರಹ್ಮನ ಮಾನಸಪುತ್ರರಲ್ಲಿ ಒಬ್ಬ; ಒಬ್ಬ ಋಷಿಯ ಹೆಸರು: ಸನಕ ಸನಂದಾದಿ ಮುನಿಜನಂಗಳೆಲ್ಲರೂ . . . ಸತ್ಯರೆಂಬುದು ಹುಸಿ (ಅವಚಂ. ೧೧೨-೫೦೫) ; ಏಕಾದಶೀರುದ್ರರು ಸನಂದ ಶುಕಾದಿ ಮುನಿವರರು . . . ಬಂದರು (ಬಸಪು. ೧-೪೨). [ಸಂ.]

**ಸನಂದನ** (ನಾ). ೧. ಆನಂದದಿಂದ ಕೂಡಿರುವವನು. ೨. = ಸನಂದ ೨ : ಜಮದಗ್ನಿ ಭೃಗು ಸನಂದನ ಕುತ್ಸ . . . ಮುನಿಮುಖ್ಯರಿರ್ದರು (ಹಚಕಾ. ೨-೪) ; ಸನಕ ಸನಂದನ ಸನತ್ಸುಜಾತರು ಬಂದು . . . ಓಲೈಪರು (ಪುರಂದ. ಧಾ. ೧-೧೭೩-೨); ಗಗನ ಗುರುವೆ ಸನಂದನಾಖ್ಯನು (ಗಗತಾ. ೧-೧೧). [ಸಂ.]

**ಸನಕಿಸೊಪ್ಪು** (ನಾ). ಒಂದು ಬಗೆಯ ಸಸ್ಯ : (ಮೈಔಗಿ. ೫೫-೧೦೦೧). [ಸನಕಿ$_0$ + ಸೊಪ್ಪು$_2$]

**ಸನಗು, ಸಣಗು** (ನಾ). ೧. ಸಾಮಾನು; ಸರಂಜಾಮು: ಸಾಹುಕಾರ ವಾಸಪ್ಪಯ್ಯನವರು ದಿಂಬಿಗೆ ಒರಗಿ ಕುಳಿತರೆ ಎದ್ದೇಳುವವರಲ್ಲ. ಸನಗುಗಳನ್ನು ತಂದು ತೋರಿಸಲು ಆಳುಗಳಿದ್ದಾರೆ (ಜಾರುದಾ. ೨೬). ೨. ಬಟ್ಟೆ ; ವಸ್ತ್ರ : ನಮ್ಮ ನಮ್ಮ ಮನೆಗಳಲ್ಲಿ ನೇಮ ಮಾಡುವ ಸನಗು ೧ಕ್ಕೆ ೧ ಕಾಸು ಪ್ರಕಾರ ಶ್ರೀಸ್ವಾಮಿಗಳವರಿಗೆ ಕೊಡಲುಳ್ಳವರು (ಎಕ. IX, (S) ಆನೇಕ. ೧೦೭-೬ ; 1802) ; ಸನಗು ತೀರದ ಮೇಲೆ ತಡವೇ? ಕುಯ್ದು ಕೂಡಲೆ ತಡೆವುದು (ಹಾಡುಪಾ. ೫೧-೪). ೩. ಒಡವೆ; ಆಭರಣ: ಒಬ್ಬ ಪತ್ತಾರನಿಗೆ ಒಂದು ಸನಗು ಮಾಡಿಕೊಡೆಂದು ಕೊಟ್ಟರೆ ಅವರು ಮಾಡಿಕೊಟ್ಟ ಸನಗು ತಮಗೆ ಪರಿಣಾಮವಪ್ಪಿದರೆ ಇಟ್ಟುಕೊಂಬುವರು (ವಚಸಂ. ೧೨೬-೧೦೭). **ಸಣಗು** : ೨. ಪೀತಾಂಬರ, ಶೀರೆಖಣ, ಧೋತರ ಮುಂತಾದ ಸಣಗುಗಳೂ ಹುಟ್ಟುತ್ತವೆ (ಧಾರಜಿ. ೨೦). [←ಮರಾ. ಸಣಗ, ಸಣಂಗ, ಸನಗ. ಸನಂಗ]

**ಸನತ್ಕುಮಾರ** (ನಾ). ೧. ಬ್ರಹ್ಮನ ಮಾನಸಪುತ್ರರ[illegible] ಒಬ್ಬ ; ಒಬ್ಬ ಋಷಿಯ ಹೆಸರು : ಸನತ್ಕುಮಾರ ನಳಕೂಬರ ಕಂತುನಿಭಂ ನೃ[illegible] (ಪುಷ್ಪಪು. ೪-೭೦) ; ಸನಕ ಸನಂದನ ಸನಾತನ ಸನತ್ಸುಜಾತ ಸನತ್ಕುಮಾರ (ವಿವೇಕ. ೨೭೪). ೨. [ಜೈನ] ಹದಿನಾರು ಬಗೆಯ ಸ್ವರ್ಗಗಳಲ್ಲಿ ಒಂದು : ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಅನತ ಪ್ರಾಣತಾರಣಾಚ್ಯುತಮೆಂಬ ಪದಿನಾಱುಂ ಕಲ್ಪಂಗಳು (ವಡ್ಡಾರಾ. ೯೭-೨೫). [ಸಂ.]

**ಸನತ್ಕುಮಾರಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು : ಸನತ್ಕುಮಾರಪುರಾಣ ನಾರಸಿಂಹಪುರಾಣ . . . ಭಾರ್ಗವಪುರಾಣವೆಂಬವೇ ಆಯಾಯ ನಾಮಧೇಯಮುಳ್ಳವರಿಂ ನಿರೂಪಿತಮಾದ ಹದಿನೆಂಟು ಉಪಪುರಾಣಂಗಳು (ವಿವೇಕ. ೯). [ಸಂ.]

**ಸನದಿ** (ನಾ). ಅಧಿಕಾರವನ್ನು ಹೊಂದಿರುವವನು ; ಅಧಿಕಾರಿ : ಕಲೆಕ್ಟರನ ಕೈಕೆಳಗೆ ಸನದೀ ಯೂರೋಪಿಯನ್ ಅಸಿಸ್ಟೆಂಟ್ ಕಲೆಕ್ಟರರ ಡಿಸ್ಟ್ರಿಕ್ಟ್ ಡೆಪ್ಯುಟಿ ಎಂಬ ಇಬ್ಬರು ದೇಶೀಯ ಅಧಿಕಾರಸ್ಥರೂ ಇರುವರು (ವಿಜಾಭೂ. ೫೩). [← ಮರಾ. ಸನದೀ]

**ಸನದು, ಸನ್ನದು, ಸನ್ನದ್ದು** (ನಾ). ಅಧಿಕಾರಪತ್ರ ; ರಾಯಸ ; ನಿರೂಪ : ಯಿದೇ ಪ್ರಕಾರ ಸನದು ಬರೆದು ಕೊಟ್ಟು (ಎಕ. VIII, ಸಾಗರ. ೪೬-೪೮ ; 1646 ?) ; ಈ ಬಗ್ಗೆ ಭಾಷಾಪತ್ರಿಕೆ ಬರೆಸಿ ಉಭಯ ಕಡೆಯಲ್ಲು ಸನದಾಗಿ ಮಡಗಿ ಇರುವ ಕ್ರಮ (ರಾಜೇಂದ್ರ. ೫೩). **ಸನ್ನದು:** ನಂಮ ಆಳಿದ ಮಹಾಸ್ವಾಮಿಯವರ ಬುದ್ಧಿ ಸನ್ನದು ಅಪ್ಪಣೆ ಮಾಡಿಸಿ (ಎಕ. III, ಶ್ರೀರಂಗ. ೨-೨೧ ; 1822) ; ಇನಾಂ ಭೂಮಿಗಳನ್ನೂ ಅವುಗಳಿಗೆ ಆಧಾರವಾದ ಸನ್ನದು ಮುಂತಾದ ದಾಖಲೆಗಳನ್ನೂ (ಮಹಾಪಂ. II, ೧೦೧). **ಸನ್ನದ್ದು:** ಅಸಲು ಸಂನದ್ದಂನ್ನುಯಿವರ ವಶಕೆ ಹಿಂದಕೆ ಕೊಡುವುದು (ಮೈಆರ್. ೧೯೩೮, ೧೯-೨೦ ; 1811) ; ನೊಳಂಬರು . . . ಮಧುಗಿರಿನಗರ ಮತ್ತು ಕೋಟೆಯನ್ನು ಕಟ್ಟಿದ್ದಲ್ಲದೆ, ವಿಜಯನಗರ ಅರಸರಿಂದ ಸನ್ನದ್ದನ್ನು ಪಡೆದಿದ್ದರು (ನೊಳಂಬ. ೬೧). [←ಪಾರ. ಅರ. ಹಿಂ. ಮರಾ. ಸನದ್]

**ಸನದುಪತ್ರ** (ನಾ). ಅಧಿಕಾರಪತ್ರವನ್ನು ಬರೆದಿರುವ ಕಾಗದ ; ನಿರೂಪದ ಓಲೆ: (ಮುಂಬಯಿ. ಕಿ. ೫-೨೩೨). [ಸನದು + ಪತ್ರ]

**ಸನಮಂತ** 'ಸನುಮತ' ನೋ.

**ಸನಯ** (ನಾ). ನಯದಿಂದ ಕೂಡಿರುವಿಕೆ ; ವಿನಮ್ರತೆ : "ಸಮೂಹಂ ಸನಯಂ . . . ಚಾದಿಯುಂ ಜಾತಿಯುಕ್ಕುಂ" (ನಾನಾರ. ೭೭); ಅರಿದೆನಿಪ ನಿಮ್ಮ ಮಹಾವ್ರತೋದ್ಯಾಪನವನೊಲಿದಿಂದು ಸನಯದಿಂ ಮಾಳ್ಪೆಂ (ಬಸಪು. ೨೪-೯). [ಸಂ.]

**ಸನವಡಿಯ** (ನಾ). ಒಬ್ಬಾತನ ಹೆಸರು : ತೊರೆಯರಾಳ ಪಡಿಯನುಂ ಮುಡಿಯನುಂ ಎರೆಯನುಂ ಸನವಡಿಯನುಂ (ಎಕ. III, ನಂಜನ. ೧೩೯-೧೦ ; 915?). [?]

**ಸನಾ** (ಅ). ಯಾವಾಗಲೂ; ಸದಾ : "ನಿತ್ಯದಲ್ಲಿ ಸಾದಾ ಸನಾಖ್ಯಂ" (ಮಂಗರಾ. ೧೫೬-೭೪). [ಸಂ.]

**ಸನಾಡಿಕಾಗಿಡ** (ನಾ). ಒಂದು ಬಗೆಯ ಸಸ್ಯ : (ಕಿ). [? + ಗಿಡ (< ಗಿಡು)]

**ಸನಾತನ** (ಗು). ೧. ಯಾವಾಗಲೂ ಇರುವ ; ಶಾಶ್ವತವಾದ : ಸುರತಾಸವ ಸೇವನಾಸನಾತನಸುಖದಿಂದಿರಿಪ್ಪೆನನುರಾಗದಿನೆಂಬುದಿದುತ್ತರೋತ್ತರಂ (ಕವಿರಾ. ೨-೧೦೬). ೨. ಹಳೆಯದಾದ ; ಪುರಾತನವಾದ. (ನಾ). ೩. ಬಹಳ ಕಾಲದಿಂದಲೂ ಇರುವುದು ; ಶಾಶ್ವತವಾದುದು : "ನಿತ್ಯಂ ಧ್ರುವಂ ಶಾಶ್ವತಮದು ಸನಾತನಂ" (ಮಂಗರಾ. ೮-೨೫) ; ಹಿಂದೂಧರ್ಮ ಸನಾತನವಾದ ತತ್ವಗಳ ತಳಹದಿಯ ಮೇಲೆ ನಿಂತಿದೆ (ಭಾರದ. ೩೨೪). ೪. ಹಳೆಯದಾದುದು ; ಪುರಾತನವಾದುದು : ಭಾರತೀಯ ಸಂಸ್ಕೃತಿಯು ಸನಾತನವಾದುದು (ರೂಢಿ). ೫. ಪರಮಾತ್ಮ; ನಾರಾಯಣ: "ಸನಾತನಃ . . . ಪುರುಷೋತ್ತಮಃ - ಈ ೧೧ ನಾರಾಯಣನ ಪೆಸರ್" (ಹಲಾಯು. ೬-೨೬); 'ವಾಸುದೇವ' ಎಂಬ ಪದಕ್ಕೆ ಕೊಟ್ಟಿರುವ 'ಸನಾತನ' ಎಂಬ ವಿಶೇಷಣವೂ ಈ ಅಭಿಪ್ರಾಯವನ್ನೇ ಪುಷ್ಟೀಕರಿಸುತ್ತದೆ (ಧ್ವನ್ಯಾಲೋ. ೨೪೯). ೬. ಬ್ರಹ್ಮ. [ಸಂ.]

**ಸನಾತನಧರ್ಮ** (ನಾ). ಪರಂಪರಾಗತವಾಗಿರುವ ಧರ್ಮ : ಭಾರತದ ಎಲ್ಲ ಸನಾತನಧರ್ಮಗಳ ಮಠಗಳ ಶಾಖೆಗಳೂ ಇಲ್ಲಿ ಇವೆ (ದಿಲ್ಲಿಪ. ೫೪); ಸನಾತನ ಧರ್ಮವನ್ನು ಒಪ್ಪದವರೂ ವಿರೋಧಿಸುವವರೂ ಸನಾತನಿಗಳೇ ಆದರೂ ಅಂಥಾ ವರಿಗೂ ನಿಬಹ್ಣಂಧವಿಲ್ಲ (ಆರ್ಯಧ. ೩೧). [ಸಂ.]

**ಸನಾತನಿ** (ನಾ). ಹಿಂದಿನದನ್ನು ಆಚರಿಸುವವನು ; ಸಂಪ್ರದಾಯಸ್ಥ : ಗುರುಚರಣರು ಸನಾತನಿಗಳು (ಪರಿಣೀ. ೩೦) ; ಪ್ರತಿ ಭಾರತೀಯಯುವಕನೂ ಮನೆಯಲ್ಲಿ ಸನಾತನಿ, ಮನೆಯ ಹೊರಗೆ ಕ್ರಾಂತಿಜೀವಿ (ಹೊಸಕ್ಷಿ. ೨೧೯). [ಸನಾತನ + - ಇ$_3$]

**ಸನಾಥ** (ಗು). ೧. ಒಡೆಯನನ್ನುಳ್ಳ ; ಯಜಮಾನನಿರುವ. (ನಾ). ೨. ಒಡೆಯ ಅಥವಾ ಯಜಮಾನನನ್ನು ಹೊಂದಿರುವುದು : ಮಹೋತ್ಕೃಷ್ಟಮಪ್ಪ ಮುಹೂರ್ತದಿಂ ಸನಾಥವಾದ ನಿಶಾಮಧ್ಯಸಮಯದೊಳ್ . . . ಅವತರಿಸಿರ್ದಂ (ಜಗವಿ. ೨-೯೮ ವ) ; ನೀನು ಆಯುಧಪಾಣಿಯಾಗಿ ಆಶ್ರಮವನ್ನು ಸನಾಥವನ್ನಾಗಿ ಮಾಡಬೇಕು (ಶಾಕುಂತ. ೨೮-೧). ೩. ಒಡೆತನವನ್ನು ಹೊಂದಿರುವವನು: ಜಲಧಿಯವೋಲ್ ಗಂಭೀರಂ ಬಲವೈರಿಯವೋಲ್ ಸಮಗ್ರ ವಿಭವಸನಾಥಂ . . . ಬಲಿಯಂತವೊಲಧಿಕದಾನಿ ದಾನವಿನೋದಂ (ಶಮದ. ೨೧೪ ಪ್ರಯೋ). [ಸಂ.]

**ಸನಾಥತೆ** (ನಾ). ಒಡೆಯ ಅಥವಾ ಪತಿಯನ್ನು ಪಡೆದಿರುವುದು,- ಹೊಂದಿರುವುದು : ಭಾರತಿಗನ್ನು ಸನಾಥತೋದಯಂ ಪುಟ್ಟಿದುದೆಂದೊಡಾರ್ ದೊರೆಗೆ ವರ್ಪ ನೃಪಾಳಕರಾ ನೃಪಾಳನೊಳ್ (ಎಕ. VII, ಶಿಕಾರಿ. ೧೦೦-೧೭ ; 1129). [ಸಂ.ಸನಾಥತಾ]

**ಸನಾಥತ್ವ** (ನಾ). = ಸನಾಥತೆ : ಎಲಾ ಪೂಜ್ಯಳೆ, ಭಾಗ್ಯಹೀನಳಾದ ನನಗೆ ಸನಾಥತ್ವವೆಂಬುದು ಎಂಥದು ? (ಕಗವಿ. ೧೧೪ ಉತ್ತರರಾಮಚರಿತ್ರಕಥೆ). [ಸಂ.]

**ಸನಾದಿ** 'ಸೊನಯಿ' ನೋ.

**ಸನಾಭಿ** (ಗು). ೧. ಒಂದೇ ವಂಶಕ್ಕೆ ಸೇರಿದ, — ಸಂಬಂಧಿಸಿದ : ಇಂದು ಪಯೋಜಜಂಗೆ ಕೃತಕೃತ್ಯತೆ ಸಾರ್ದುದು ಪುಷ್ಪಸಾಯಕಂಗಿಂದೊಳಸೋರ್ದು ದೇಸುವೆಸನಿಂದು ಸನಾಭಿಜನಕ್ಕೊಡರ್ಚಿತಾನಂದಪರಂಪರಾಜನನಂ (ಚಂದ್ರಪ್ರ. ೬-೭೯). (ನಾ). ೨. ಸಂಬಂಧವುಳ್ಳುದು ; ಸಮಾನವಾದುದು : ಬೊಮ್ಮಂ ಪೂರ್ವೋರ್ಕುಟಿನ ಗಂಗಾವರ್ತ ಸನಾಭಿಯೊಳ್ ಪುಟ್ಟಿಯುಂ ಸತ್ಯಲೋಕಕ್ಕೊಡೆಯನಾದಂ (ರಾಮಾಶ್ವ. ೧೪೦-೨). ೩. ರಕ್ತಸಂಬಂಧವುಳ್ಳವನು ; ನಂಟ ; ಬಂಧು : ವೃಷಭನಾಥನು ಬಿಡಿದಪತ್ಯವರ್ಗಕ್ಕೆಲ್ಲಮಿಳಾತಳವಿಭವಮಂ ಪಚ್ಚುಗೊಟ್ಟು . . . ಸನಾಭಿಗಳಂ ಬೀಟ್ಕೊಂಡು (ಆದಿಪು. ೯-೭೨); ಮತಿಶ್ರುತಾವಧಿಬೋಧಂ ತನ್ನೊಡನೆ ಪುಟ್ಟಿ ಪುಟ್ಟಿದನೇನ್ನಾಭಿಯಶಸ್ಸನಾಭಿಯೋ ಕುಲಧರದೊಳ್ (ಪಂರಾಮಾ. ೧-೯೦). [ಸಂ.]

**ಸನಾಮ** (ನಾ). ೧. ಒಂದೇ ಹೆಸರು ; ಸಮಾನವಾದ ನಾಮ : ಗಾಹುಗತಕವನುಳಿದು ಚೂಣಿಯ ಸಾಹಸಿಗರು ಸನಾಮಕೊದಗಿದರೆರಡು ಥಟ್ಟಿನಲಿ (ಕುಮ್ಮಾ. ೨-೩). ೨. ಹೆಸರುಳ್ಳವನು : ಆ ಮಹೋತ್ಸವದೊಳಗೆ ಕಂಸಸನಾಮನಾ ತಂಗಿಯನು ಮನ್ನಿಸಿ (ನಿಭಾಗ. ೧೦-೨-೭). [ಸಂ. ಸನಾಮನ್]

**ಸನಾಮಕ** (ನಾ). ೧. ಒಂದೇ ಹೆಸರನ್ನು ಹೊಂದಿರುವುದು; ಸಮಾನ ನಾಮವುಳ್ಳುದು. ೨. ಒಂದು ಬಗೆಯ ಮರ ; ನುಗ್ಗೆ ಮರ. [ಸಂ.]

**ಸನಾಮಿ** (ನಾ). ಸಮಾನ ಹೆಸರುಳ್ಳವನು; ಒಂದೇ ಹೆಸರಿನವನು : ಶಾಲೆಯಲ್ಲಿದ್ದ ನನ್ನ ಮೂವರು ಸನಾಮಿಗಳಲ್ಲದೆ ಪತ್ರಿಕೆಗಳಲ್ಲಿ ಲೇಖ ಬರೆವ ಇನ್ನೂ ಮೂವರೂ ನನ್ನ ಸಂಪೂರ್ಣ ಹೆಸರಿನಿಂದ ಅಲಂಕೃತರಾಗಿದ್ದಾರೆಂದು ಈಚೆಗೆ ನಾನು ಕಂಡಿದ್ದೇನೆ (ಗಾಳಿಪ. ೮೫). [< ಸಂ. ಸನಾಮನ್]

**ಸನಾಯಿ** 'ಸೊನಯಿ' ನೋ.

**ಸನಿ₁, ಸಣಿ** (ನಾ). ನವಗ್ರಹಗಳಲ್ಲಿ ಒಂದು; ಶನಿ : ಕನಲ್ದುದರ್ಕಳವಿಯುಮಂತುಮಿಲ್ಲ ಸನಿಯನ್ನಳೆ ಕುಂಟಣಿ (ಪಂಪಭಾ. ೪-೯೮); ಸನಿಯನ್ನ ನಾದಿನಿ ಸಾಯಲಿ (ಶಿವಗೀ. ೧೩೩-೬೭೭). **ಸಣಿ** : 'ಸಣಿವಾರ' ಪರಾ. [< ಸಂ. ಶನಿ]

**ಸನಿ₂** (ನಾ). ೧. ಪ್ರಾರ್ಥನೆ ; ಬಿನ್ನಹ. ೨. ನೀಡುವಿಕೆ ; ಕೊಡುವಿಕೆ. ೩. ಸೇವೆ; ಪೂಜೆ. [ಸಂ.]

**ಸನಿಕೆ** 'ಸಲಿಕೆ₂' ನೋ.

**ಸನಿಗೊಳ್** (ಕ್ರಿ). ಶನಿಯು ವಕ್ರಿಸು : ಗಂಡನಪ್ಪ ಷಂಡಂ ನಿಚ್ಚಂ ಮನೆ ಸನಿಗೊಂಡಿರೆ ಬರಿಸಲ್ಕೆನಗಿಂಬಿಲ್ಲ (ಪಂಚತಂ. ೨೭೧-೧೭). [ಸನಿ₁ + ಕೊಳ್₁]

**ಸನಿಯ** 'ಸನಿಹ' ನೋ.

**ಸನಿಯಂಬೋಗು** (ಕ್ರಿ). ಹತ್ತಿರಹೋಗು; ಸಮೀಪಿಸು : ಬಗೆಯಿಂ ಹಯಕೆ ಸನಿಯಂ ಬೋಪುದುಂ (ರಾಮಾಶ್ವ. ೧೫೪-೧೮). [ಸನಿಯ (< ಸನಿಹ) + ಪೋಗು₁ (< ಪೋ₁)]

**ಸನಿವಾರ, ಸಣಿವಾರ** (ನಾ). ವಾರಗಳಲ್ಲಿ ಒಂದು ; ಶನಿವಾರ : ಸನಿವಾರದನ್ನು ಸ್ವಸ್ತಿ (ಮೈಆರಿ. ೧೯೨೯, ೮೬-೩ ; 903) ; ಮಾರ್ಗ್ಗಸಿರ ಸುದ್ಧ ತೇರಸ ಸನಿವಾರದನ್ನು (ಎಕ. VIII, ಸೊರಬ. ೬೦-೧೭ ; 1032). **ಸಣಿವಾರ** : ಶನಿವಾರ-ಸಣಿವಾರ (ಶಮದ. ೨೪೯ ಪ್ರಯೋ); ಯಾವಾಗ ಬಂದರೂ ಸಣಿವಾರಕ್ಕೊಮ್ಮೆ ಬರುವರು (ಜೂಜು. ೩).

ಸನಿವಾರಸಿದ್ಧಿ, ಸಣಿವಾರಸಿದ್ಧಿ = ಶನಿವಾರವನ್ನು ಶುಭಸೂಚಕವೆಂದು ಭಾವಿಸುವವನು; ಒಂದು ಬಿರುದು : ಕಾತ್ಯಾಯನೀಲಬ್ಧವರಪ್ರಸಾದಂ ದಾನವಿನೋದಂ ಸನಿವಾರಸಿದ್ಧಿ (ಸೌಇ. XX, ೭೧-೪೭ ; 1109) ; ಸಣಿವಾರಸಿದ್ಧಿಯ ಕೋಲಲು ಗಟ್ಟಿ ಮತ್ತರು ೨ (ಕಾಇ. ೩೩-೪೭-೨೩ ; 1097). [< ಸಂ. ಶನಿವಾರ]

**ಸನಿಹ, ಸನಿಯ** (ನಾ). ಸಮೀಪ ; ಹತ್ತಿರ : "ಪೊರ್ದುಗೆ, ಪೊರೆ, ಪಕ್ಕಂ, ಸನಿಹಂ, ಕೆಲಂ – ಈ ೫ ಸಮೀಪಂ" (ಕಶಸಾ. ೭೪-೪೩೪) : ಉಗ್ರಮುನಿಗಿತ್ತವಧಿ ಸನಿಹವಾಯ್ತು (ಹಚಕಾ. ೧೦-೨೭) ; ಊರು ಸನಿಹದಲಿಲ್ಲ ನೀರೊಂದು ಗಾವುದವು (ಸರ್ವಜ್ಞ. ೧೬೧೧). **ಸನಿಯ** : ಸ್ವಾಂತದಿಂ ಬಂದೆಬಗಿ ಸನಿಯದೊಳ್ ನಿಂದು (ಕುಸುಮಾ. ೧೧-೧೮೭) ; ನೀವು ರಾಮನ ಸನಿಯವಿರೆ ಮಾಯಾವಿಗಳು ಬರಲರಿದು (ಕಾಶಿರಾ. ೩೯-೩೫).

ಸನಿಸನಿಯ (ದ್ವಿರುಕ್ತಿ) : ಹೀಗಾಗಿ ಸನಿಸನಿಯ ಒಂದು ವರ್ಷದ ಖಾಡಾ ಬಿದ್ದಿತ್ತು (ದೀಪಹ. II, ೩೫೭). [< ಪ್ರಾ. ಸಮೀವ./ ಸಂ. ಸಮೀಪ]

**ಸನೀಡ** (ನಾ). ೧. = ಸನಿಹ : "ಸಮೀಪಂ ಸನೀಡಂ, ಸಮರ್ಯಾದಂ . . . ಉಪಾಂತಂ ಅಪದಾಂತರಂ – ಈ ೧೮ ಸಮೀಪಂ" (ಹಲಾಯು. ೧೧೫-೭). ೨. ಸಮಾನವಾದ ಗೂಡನ್ನು ಹೊಂದಿರುವುದು ; ಒಂದೇ ಗೂಡಿನಲ್ಲಿ ವಾಸಿಸುವುದು. [ಸಂ.]

**ಸನೀನು** (ನಾ). (ಬಂದೂಕಿನ ತುದಿಗೆ ಸಿಕ್ಕಿಸುವ) ಅಲಗು ; ಸಣ್ಣಕತ್ತಿ : ಬಂದೂಕಿನ ಕೋವಿಗೆ ತೊಡಿಸುವ ತಿವಿಯುವ ಅಲಗು ; ಸನೀನು (Bayonet. ಇಂಕನಿ); ಬಂದೂಕಗಳೂ, ಸನೀನುಗಳೂ ನಿನ್ನ ಹೊಡೆತಕ್ಕೆ ತಾಳಲಾರದೆ ಯೋಧರ ಕೈಯಿಂದ ಸರಿದು ಬಿದ್ದುಹೋಗಿಲ್ಲ (ದೇವಿಚಾ. ೧೨೦).

[<— ಪಾರ. ಹಿಂ. ಸಂಗೀನ್; ಮರಾ. ಸನೀನ್]

**ಸನುನಯ** (ನಾ). ಒಳ್ಳೆಯ ರೀತಿ, — ಮಾರ್ಗ : ನಂದಿಯೆನಿಸುವ ಮುನಿ ಬಂದನ[illegible]ವಿನಲಿ ಸನುನಯದೊಳ್ಳೆನೂರ್ವರಿಗೆ ಸಾಧನವೆನಿಪ ಚೌಷಷ್ಠಿವಿದ್ಯೆಯನ[illegible]ವನು ಕಲಿಸಿದನು (ಜೀವಂಚ. ೫-೫೫) ; ಗುಣಿ ಸದ್ಗುಣಮಣಿ . . . ಸನುನಯ ಮಾರ್ಗಾಭಿಮಾನಿ (ಗೊಮ್ಮಚ. ೭-೧೭೭). [< ಸಂ. ಸಾನುನಯ]

**ಸನುಮಂತ** 'ಸನುಮತ' ನೋ.

**ಸನುಮಂತಗೊಳಿಸು** (ಕ್ರಿ). ಒಪ್ಪಿಸು ; ಸಮ್ಮತಿಗೊಳಿಸು : ಎಲ್ಲರನ್ನೂ ಸನುಮಂತಗೊಳಿಸುವ ಹೊಸ ಉಪಾಯವನ್ನು ಕಂಡುಹಿಡಿದು ಎಲ್ಲರನ್ನೂ ಒಂದಾಗಿಸ ಬೇಕೆಂದು ಯೋಚಿಸುತ್ತಿದ್ದಾನೆ (ಬನಸಿ. ೮೨). [ಸನುಮಂತ (<ಸನುಮತ) + ಕೊಳಿಸು]

**ಸನುಮತ, ಸನಮಂತ, ಸನುಮಂತ, ಸನ್ನುಮತ, ಸನ್ಮಂತ** (ನಾ). ಒಪ್ಪಿಗೆ ; ಸಮ್ಮತ : ಅಸಂಬಂಧ ಸಂಬಂಧವಾಯಿತ್ತು ಲಿಂಗಸಾರಾಯರ ಸನುಮತದಿಂದ (ಬಸವ. ೮೪೩) ; ಕೊಲ್ಲದಿಪ್ಪಾ ಧರ್ಮವೆಲ್ಲರಿಗೆ ಸನುಮತವು ಅಲ್ಲದನು ಮಾಡಿ ಮಾಡುವವನು ನರಕಕ್ಕೆ ನಿಲ್ಲದೇ ಹೋಹ (ಸರ್ವಜ್ಞ. ೧೦೨೦). **ಸನಮಂತ** : ಸುಮ್ಮಾಕ ಸನಮಂತ ಮಾಡಿ ಮುಗಿಸಿ ಬಿಡೂದು ಪಾಡ (ಸಡದಾ. I, ೨೯೨); ಮನಸ್ಸಿಗೆ ಸನಮಂತ ಆಗೂ ಮಾತು ಆಚಾರಪ್ಪ (ಗ್ರಾಮಾಯ. ೧೭೩). **ಸನುಮಂತ** : ಗೆಳೆತನದಿಂದ ಒಗತಾನ ಮಾಡೋ ಅದು ಅವಗ ಸನುಮಂತ (ಅರಳು. ೨೭೯). **ಸನ್ನುಮತ** : ಸೀಮೆ ಗೌಉಡಿಕಿ ಸಂನುಮತದಿಂದ ಬರಕೊಟಂತ ಭರಹು (ಎಕ. VII, ಶಿವಮೊ. ೧೦೭-೫೩ ; 1576). **ಸನ್ಮಂತ** : ನಿಮಗರೆ ಸನ್ಮಂತ ಆತು ಸಾಕು ಕಾಕಾ (ಗ್ರಾಮಾಯ ೩೨೩). [< ಸಂ. ಸನ್ಮತ]

**ಸನುಮಾನ** (ನಾ). ಗೌರವಿಸುವುದು ; ಸನ್ಮಾನ : ಸೂನಶರ ಕೊಡು ಬೆಸನನೆನೆ ಸನುಮಾನ ಬಹುಮಾನಗಳನಿತ್ತವಧಾನದಿಂ ನಡಸಿದನು ತನ್ನಯ ರಾಯಭಾರಿಯನು (ಅನಂರಾ. ೧-೧೯-೧೩). [< ಸಂ. ಸನ್ಮಾನ]

**ಸನುಮಾನಿಸು** (ಕ್ರಿ). ಗೌರವಿಸು ; ಸನ್ಮಾನ ಮಾಡು : ಅಮರಮುನಿ ಸನುಮಾನಿಸುತಲೆಲೆ ಮಗನೆ ನಿನಗೆ ಸಮಾನರಾರು (ಅನಂರಾ. ೧-೪-೯).

[ಸನುಮಾನ + - ಇಸು₃]

**ಸನುರುಚಿ** (ನಾ). ಒಳ್ಳೆಯ ಅಭಿರುಚಿ, — ಆಸಕ್ತಿ : ಘನಭಕುತಿಯ ನೇಣನೆ ಮಾಡಿ ನಿನ್ನಾ ಚರಣಕೆನ್ನ ಕೊರಳಿಗೆ ಸನುರುಚಿಯಿಂದ ಗಂಟನೆ ಹಾಕಿಕೊಂಡು ತೊನಗದೆ ಬಿಡೆನೊ ನಿನ್ನನು ಎಂದೆಂದಿಗೆ (ಮೋಕ್ಷದೀ. ೨೧-೪) ; ಸನುರುಚಿಯಾದ ಜನರ ಇದರಂತೆ ಪಾಲಿಸುವ ಅನುಮ್ಮೆಸುವದು ಹರಿಯ ಪದಭಕುತಿ ಬಲ್ಲವರಾರು (ವಿಪ್ರಸು. ೧೬-೫).

[< ಸಂ. ಸದ್ರುಚಿ]

**ಸನೆ** 'ಸೊನ್ನೆ₃' ನೋ.

**ಸನೆಗಾರ** 'ಸೊನ್ನೆಗಾರ' ನೋ.

**ಸನೆಯ** 'ಸನ್ನೆ₂' ನೋ.

**ಸನೆಯಗ್ಗೆ** 'ಸನ್ನೆಗೆಯ್' ನೋ.

**ಸನ್ನ** (ಗು). ೧. ಮುಳುಗಿದ ; ತಳಕ್ಕೆ ಹೋದ. ೨. ತಳ ಹಿಡಿದ. ೩. ನಿಂತ; ಚಲನೆಯಿಲ್ಲದ. ೪. ಮಂದಸ್ವರದ ; ಕ್ಷೀಣಧ್ವನಿಯ : ಕನ್ನೆರಾತಂಕದ ನುಡಿಯ ಕೇಳಿದರಿನ್ನೇನು ಪ್ರಿಯನ ಪ್ರಿಯಕರವಾಕ್ಯವನ್ನು ನುಡಿದಾನೆಂದು ರೋದಿಸಿ ಶಿಷ್ಟರು ಸನ್ನಗದ್ಗದನುಡಿಯಲಿಂತೆಂದರು (ಪ್ರಸಭಾ. ೩೮-೧೨). ೫. ಕುಗ್ಗಿದ; ಸಂಕುಚಿತವಾದ. ೬. ಸಣ್ಣದಾದ ; ಚಿಕ್ಕದಾದ. ೭. ಉತ್ಸಾಹವಿಲ್ಲದ; ಲವಲವಿಕೆಯಿಲ್ಲದ.

೮. ದುರ್ಬಲವಾದ ; ಸೊರಗಿದ. ೯. ಕೆಟ್ಟುಹೋದ; ಹಾಳಾದ. (ನಾ). ೧೦. ಚಿಕ್ಕದು; ಸಣ್ಣದು: "ಸನ್ನಂ, ಸಾತಂ–ಈ ೨ ಸಣ್ಣವಾದುದು" (ಹಲಾಯು. ೧೫೬-೮೨). ೧೧. ಒಂದು ಬಗೆಯ ಸಸ್ಯ : "ಸನ್ನಃ- ಪುರಾಣಿ, ನಿತ್ಯ" (ಒಷಧಿ. ೧೭೪). [ಸಂ.]

**ಸನ್ನಡತೆ** (ನಾ). ಒಳ್ಳೆಯ ನಡವಳಿಕೆ ,– ಆಚರಣೆ : ಸಾಂಪ್ರದಾಯಿಕ ಶ್ರದ್ಧಾಭಕ್ತಿಗಳಿಗೆ ತಕ್ಕಂತೆ ಕೆಲವು ಮೂಲಭೂತವಾದ ಸನ್ನಡತೆಗಳೂ ದುರ್ನಡತೆಗಳೂ ಉಕ್ತವಾಗಿವೆ (ತತ್ತ್ವಪ್ರಾ. ೮೬). 'ದುರ್ನಡತೆ' ಪರಾ. [(ಸಂ. ಸತ್) + ನಡತೆ]

**ಸನ್ನಣ** (ನಾ). ೧. ಕವಚ ; ಜೋಡು: ಪಿಡಿದುದಿರ್ದ ಬಾಳ ಕಿಡಿಗ[ಳ]ನೊಡನೊಡನರೆವೊತ್ತಿ ತೊಟ್ಟ ಸನ್ನಣವುರಿಯಲ್ಕೊಡರಿಸಿದೊಡೆ (ಪಂಪಭಾ. ೧೦-೭೯); ಬೆನ್ನೊಳೆ ಶಸ್ತ್ರಾಸ್ತ್ರ ಸನ್ನಣಂಗಳ ರುಚಿಯಿಂ ನೂರ್ಮಡಿಸೆ (ಮಹಾನೇ. ೧೧-೮೬). ೨. ಅಣಿಗೊಳಿಸುವುದು; ಸಿದ್ಧತೆ : ಪಲರುಂ ಮಂಡಳಿಕರ್ಗಂ ಕುಟುಂಬ ನಿಕರಕ್ಕಮಾಟವಿಕರ ಬಲಕ್ಕಂ ಬಟೆಯಟ್ಟಿ ಬರಿಸಿ ಸನ್ನಣಂಗಳನೋಸರಿಸಿ ನಿಜತಂತ್ರಕೆಲ್ಲಂ ಪೇಟ್ದಲ್ಲಿ ಯುದ್ಧಮಂ ಸಮಕಟ್ಟಿ (ಬಂಹರಿ. ೧೧-೫೩ ವ); ಗಾಡಿಕಾತಿಯರಿರ್ವರ ಲಾವಣ್ಯವ ನೋಡಿ ರಕ್ಷೆಯ ಬೊಟ್ಟನಿಟ್ಟು ಜೋಡಿಸಿ ಸಕಲಸನ್ನಣದಿಂದೆ ಪಯಣವ ಮಾಡಿ ಹರ್ಮ್ಯವನಿಳಿಸಿದರು (ಮೋಹತ. ೨೩-೫೫); ಸಕಲಸನ್ನಣಗಳೊಡನೆ ನಾಲ್ಕು ಫಿರಂಗಿಗಳನ್ನು . . . ಕಳಿಹಿರಿ (ಬೆಟ್ಟಅ. ೮೫-೪). [< ಸಂ. ಸನ್ನಹನ. P ಕೇಶಿರಾಜನ ಶಬ್ದಮಣಿದರ್ಪಣದಲ್ಲಿ (ಶಮದ. ೨೭೩ ಪ್ರಯೋ) ಇದನ್ನು 'ಸನ್ನಾಹ'ದ ತದ್ಭವವೆಂದು ಹೇಳಿದೆ.]

**ಸನ್ನಣಂಗೆಯ್** (ಕ್ರಿ). ಸಿದ್ಧಪಡಿಸು; ಸಜ್ಜುಗೊಳಿಸು: ಯುದ್ಧಸನ್ನದ್ಧರಾಗಿ ತಮ್ಮ ಬಲಮಂ ಸನ್ನಣಂಗೆಯ್ಯಲ್ವೇಟ್ದು (ಬಂಹರಿ. ೫-೧೮ ವ). [ಸನ್ನಣ + ಕೆಯ್,]

**ಸನ್ನಣಂಗೊಳ್** (ಕ್ರಿ). ಸಿದ್ಧವಾಗು; ಸಜ್ಜಾಗು: ಸನ್ನಣಂಗೊಂಡ ಚತುರಂಗ ಬಲದೊಡನೆ ವನಪಥದೊಳು ತೀವಿದುತ್ಸಾಹದಿಂ ನಡೆತಂದು (ಶೇಷರಾ. ೨೮-೩).
[ಸನ್ನಣ + ಕೊಳ್,]

**ಸನ್ನಣಂದುಡು** 'ಸನ್ನಣಂದೊಡು' ನೋ.

**ಸನ್ನಣಂದೊಡು, ಸನ್ನಣಂದುಡು** (ಕ್ರಿ). (ವೀರೋಚಿತವಾದ) ಕವಚವನ್ನು ಧರಿಸು , – ಜೋಡನ್ನು ತೊಡು : ಬಲ್ಲಿತ್ತಾಗಿ ಸನ್ನಣಂದೊಟ್ಟವನಂ ಕೆಯ್ದುಗಳ್ ಮುಟ್ಟದಂತೆ (ಜೀವಸಂ. ೧೬೫-೩೩ವ). **ಸನ್ನಣಂದುಡು** : ಸನ್ನಣಂದುಡುವ [ಪಾಠಾಂ. ಸನ್ನೆಗೊಂಡು] ಪಣ್ಣುವ ಬಾಟ್ಸೆಯವಂದಿರಂ (ಪಂಪಭಾ. ೧೦-೪೯).
[ಸನ್ನಣ + ತೊಡು,]

**ಸನ್ನಣಂಬೊಗು** (ಕ್ರಿ). ಸಿದ್ಧವಾಗು ; ಸಜ್ಜಾಗು : ಚಕ್ರಧಾರಿಯ ನರಪನಿಕರಮೆಕ್ಕೆಕ್ಕೆಯಿಂ ಸನ್ನಣಂಬೊಕ್ಕು (ನೇಮಿಪು. ೧೧-೧೨೪ವ); ಪಣ್ಣಿದ ದಂತಿಘಟಾಳಿ ಸನ್ನಣಂಬೊಕ್ಕ ಪದಾತಿ (ಜಗವಿ. ೯-೩೧). [ಸನ್ನಣ + ಪೊಗು]

**ಸನ್ನತ** (ನಾ). ೧. ಬಾಗುವಿಕೆ ; ವಶವಾಗುವಿಕೆ : ಸನ್ನತ[ಪಾಠಾಂ. ವೈಶಿಕ]ದಿಂ ರತಕ್ಕೆಳಸಿ ನಲ್ಲಳೊಳೋತೊಡಗೂಡಿದೆನ್ನನಿಂತನ್ನೆಯಮೆಚ್ಚುದರ್ಕೆ ಪೆಱತಿಲ್ಲದು ದಂಡಂ (ಪಂಪಭಾ. ೧-೧೧೨). ೨. ಬಾಗಿದವನು ; ನಮಸ್ಕರಿಸಿದವನು : ಸನ್ನತನಾಗಿ ದೇವರಡಿದಾವರೆಗಳ್ಗೆ ಪಲರ್ಮೆ ಭಕ್ತಿಯಿಂ ಬಿನ್ನತಿಗೆಯ್ಯೆಂ (ಚಿಕವಿ. ೫-೭೮).
[ಸಂ.]

**ಸನ್ನತಕರಣ** (ನಾ). [ನಾಟ್ಯ]ಒಂದು ಬಗೆಯ ನೃತ್ಯಭಂಗಿ ; ನೂರೆಂಟು ಕರಣಗಳಲ್ಲಿ ಒಂದು ; IP "ಹರಿಣಪ್ಲುತಚಾರಿಯನ್ನು ಮಾಡಿ ಕಾಲನ್ನು ಸ್ವಸ್ತಿಕದಂತೆ ಮುಂದಿರಿಸಿ ದೋಲಹಸ್ತವನ್ನು ಮಾಡುವುದು" (ಲಾಸ್ಯರಂ. ೩೦೦ ಗದ್ಯಾನುವಾದ): ಪ್ಲುತಚಾರಿಯನಡಿಗಳಿನೊಲ್ದತಿಶಯ[ದಿಂ] ಮಾಡಿ ಮಗುಳ್ದು ಸ್ವಸ್ತಿಕಪದದಿಂ ಗತಿವಡೆದು ಮುಂತೆ ದೋಲದ ನುತಹಸ್ತಮವೆಯ್ದೆ [ಮಾಡೆ] ಸನ್ನತಕರಣಂ (ಲಾಸ್ಯರಂ. ೪-೧೪೨). [ಸಂ.]

**ಸನ್ನತಿ** (ನಾ). ನಮಸ್ಕಾರ ; ಮಣಿಹ : ನಿಮಗಲ್ಲಗ್ಗಿದೊ ಸನ್ನತಿ (ವಸ್ತ್ರಪಂ. ೬೮೧೬).
[ಸಂ.]

**ಸನ್ನದು** 'ಸನದು' ನೋ.

**ಸನ್ನದುಕೊಡು** (ಕ್ರಿ). ಅಧಿಕಾರಪತ್ರ ಕೊಡು ; ನಿರೂಪಣೆಕೊಡು : ಮೈಸೂರಿನ ಮಹಾರಾಜರು ಅವರಿಗೆ ಸನ್ನದು ಕೊಟ್ಟು ಸನ್ಮಾನಿಸಿದರು (ರೂಢಿ).
[ಸನ್ನದು (< ಸನದು) + ಕೊಡು,]

**ಸನ್ನದ್ದು** 'ಸನದು' ನೋ.

**ಸನ್ನದ್ಧ** (ಗು). ೧. ಕಟ್ಟಿದ ; ಬಿಗಿದ. ೨. ಸಜ್ಜಾದ ; ಸಿದ್ಧವಾದ: ಸನ್ನದ್ಧತುರಂಗದ ತೆಱದಿನ್ನೆಣೆ ಮಿಱುಗುವ ಖಲೀನ ಶಾಖಾಮುಖದಿಂ ಮುನ್ನೀರವೊಲ್ ಪ್ರವಾಳಸಮನ್ವಿತದಿಂ ಶೋಭಿಸಿತ್ತು ಚೂತಕುಜಾತಂ (ಶಾಂತೀಶ್ವ. ೧೦-೧೧೫) ; ನಿಂತಿಹರು ಕಾಣಲ್ಲಿ ದೀರ್ಘಾಸಿ ಕಟಿಬದ್ಧಸನ್ನದ್ಧಯೋದ್ಧರುಂ (ಶ್ರೀರಾಮಾ. ೬೦-೧೬೦). (ನಾ). ೩. ಸಜ್ಜು ; ಸಿದ್ಧತೆ : ಪ್ರಾಣಲಿಂಗಿಯ ಪರಮಸುಖ ಅದು ಶರಣನ ಸನ್ನದ್ಧ ಅದು ಐಕ್ಯನ ಅದೃಶ್ಯ (ಮೋಳಿಮಾ. ೧೫೦-೫೭೦) ; ಪಗೆಯೆನ್ನ ಕಣ್ಣ ಮುಂದಕೆ ಸುಳಿದು ಜೀವಿಪನ ಸೇನೆ ಸನ್ನದ್ಧವಾಗಿರಲೆಂದನು (ಜೈಮಿಭಾ. ೬-೨೯). ೪. ಸಜ್ಜಾಗಿರುವವನು ; ಸಿದ್ಧನಾಗಿರುವವನು : ನಾ ತಪ್ಪಿ ನುಡಿದಡೆ ಒಪ್ಪವಿಟ್ಟುಕೊಳ್ಳಿರಣ್ಣಾ ಕಣ್ಣಿನಲ್ಲಿ ಕಸ ಹೊಕ್ಕರೆ ಕೈ ಹಗೆಯೆ ಅಯ್ಯಾ ಇದು ಬಣ್ಣಗಾಱಿಕೆಯಲ್ಲ ಸನ್ನದ್ಧರಿರವು (ಮೋಳಿಮಾ. ೩೫-೧೪೬); ಸುಪ್ರಭಾತಸಮಯದೊಳ್ ಶಿವಾರ್ಚನೆಯಂ ಮಾಡಿ ಸಂಗ್ರಾಮಕ್ಕೆ ಸನ್ನದ್ಧನಾಗಿ ನಡೆಯಲ್ (ಹಮ್ಮಿರ. ೩-೨೭ವ). ೫. ಕವಚವನ್ನು ಧರಿಸಿದವನು ; ಜೋಡನ್ನು ತೊಟ್ಟವನು : "ವರ್ಮಿತಃ, ಕವಚಿತಃ , ಸನ್ನದ್ಧಃ, ದಂಶಿತಃ – ಈ ೪ ಕವಚದೊಟ್ಟವಂ" (ಹಲಾಯು. ೭೬-೩೦೮). [ಸಂ.]

**ಸನ್ನದ್ಧತೆ** (ನಾ). = ಸನ್ನದ್ಧ ೩ : ತನಗೇಕೀ ಯುದ್ಧಸನ್ನದ್ಧತೆಯ ಗಸಣಿ (ಚಂದ್ರಪು. ೬-೨೫ ವ). [ಸಂ. ಸನ್ನದ್ಧತಾ]

**ಸನ್ನಯ** (ನಾ). ೧. ಸೈನ್ಯದ ಹಿಂದುಗಡೆ ಸಿದ್ಧವಾಗಿರುವ ಪಡೆ ; ಕುಮ್ಮಕ್ಕಾಗಿರುವ ಫೌಜು : "ಸನ್ನಯಃ–೧ ಸೈನ್ಯಕ್ಕೆ ಹಿಂದುಗಡೆ ಕುಮ್ಮಕ್ಕಾಗಿರುವ ಹಿಮ್ಮತ್ ಫೌಜು" (ಸಿದ್ಧಾಂತಿ. ೪೯೯). ೨. ಗುಂಪು ; ಸಮೂಹ. [ಸಂ.]

**ಸನ್ನಯಿಸು** (ಕ್ರಿ). ಸಿದ್ಧವಾಗು ; ಅಣಿಯಾಗು : ಎನ್ನೊಳು ಜಯಿಸಲಾಱದೆ ಮತ್ತಿತನೊಳು ಸನ್ನಯಿಸುವರೆ ಕಾಳಿಗವ (ಮೋಹತ. ೩೮-೨೩). [ಸನ್ನಯ + - ಇಸು,]

**ಸನ್ನಲಿಗೆ** 'ಸೊನ್ನಲಿಗೆ' ನೋ.

**ಸನ್ನಹ** (ನಾ). ಅಣಿಗೊಳಿಸುವುದು ; ಸಿದ್ಧತೆ : "ಸನ್ನಹಮೆಂದು ಸನ್ನಾಹಂ" (ಕಶಸಾ. ೬೪-೪೪೮) ; ಓತು ಕೂಡಿಸಿದ ಸಕಲ ಸನ್ನಹವ (ಮೋಹತ. ೧೬-೧೩) ; ರಾಘವನ ಪಟ್ಟಾಭಿಷೇಚನಕೆ ಸನ್ನಹ [ಪಾಠಾಂ. ಯ]ಮಂ . . . ಅಣಿಗೈಯುತಿರಲು (ಶ್ರೀರಾಮ. ೫-೩೦). ಮುನ್ನೀರು ಮೇರೆದಪ್ಪಿದವೊಲು ನಡೆತಂದ ಸನ್ನಹಗಳ ಪೇಳಲಳವೆ (ಕರ್ನಾಕ. ೨೦೮). 'ಸನ್ನಣ' ಪರಾ. [<ಸಂ. ಸನ್ನಾಹ]

**ಸನ್ನಹನ** (ನಾ). ೧. ಸಿದ್ಧಪಡಿಸುವುದು ; ಸಜ್ಜುಗೊಳಿಸುವುದು. ೨. ಭದ್ರವಾಗಿ ಕಟ್ಟುವುದು. [ಸಂ.]

**ಸನ್ನಹಿತ** (ಗು). ೧. ಕಟ್ಟಿದ ; ಬಂಧಿಸಿದ. ೨. ಸಮೀಪದ ; ಹತ್ತಿರದ: ಲಿಂಗಬಾಹಿರನಾದಡಾತನು ಲಿಂಗಸನ್ನಹಿತಾತ್ಮನಾದನು (ಬಸವು. ೩೮-೫೪). (ನಾ). ೩. ಅಲಂಕೃತವಾದುದು; ಸಿಂಗರಿಸಲ್ಪಟ್ಟುದು : ಸಹಜದ ಚೆಲ್ವಿನೊಳ್ ರತಿಯ ಸೋಲದ ಕೇಳಿಕೆಯೊಳ್ ಪೊದಟ್ದು ಸನ್ನಹಿತವೆನಿಪ್ಪಪೂರ್ವ ಶುಭಲಕ್ಷಣ ದೇಹದೊಳೊಳ್ಪನಾಳ್ದು (ಪಂಪಭಾ. ೧-೪). ೪. ಸಂಬಂಧ ; ಸಂಪರ್ಕ : ಬೇಱೆ ಆಯತ ಸ್ವಾಯತ ಸನ್ನಹಿತವೆಂಬುದಿಲ್ಲ ನೋಡಾ ಶಿವಶಕ್ತಿಸಂಬಂಧವೆ ದೇಹ (ಅವಚಂ. ೨೩೮-೧೦೮೨). ೫. ಸಂಪರ್ಕವುಳ್ಳವನು ; ಸಂಬಂಧವುಳ್ಳವನು : ಸದಾ ಸನ್ನಹಿತನಾಗಿ ಶರಣೆಂಬುವುದು ನಂಬುವುದು (ಬಸವ. ೧೧೭) ; ಶರಣನು ಸನ್ನಹಿತನು ಅಲ್ಲಲ್ಲಿಗೆ ನಡುಕಡೆಯಿಲ್ಲವಯ್ಯ ಅಚ್ಚ ಶರಣನು (ಶಿವಗೀ. ೧೦೭-೫೧೩). [< ಸಂ.ಸನ್ನಿಹಿತ?]

**ಸನ್ನಹಿಸು** (ಕ್ರಿ). ಸಜ್ಜಾಗು ; ಸಿದ್ಧವಾಗು : ಪಯಶರಧಿನಿವಾಸಂ ಬಲುದಯದಿಂ ಸೈನಿಕವ ಸನ್ನಹಿಸಿದಂ ನರಗಂ (ನೀಲಧ್ವ. ೯); ಮತ್ತೊಮ್ಮೆ ಹೊಸ ಸಾಹಸಗಳಿಂ ಸನ್ನಹಿಸುವಂ (ಮಂಕುಕ. ೧೨೩). [ಸನ್ನಹ + - ಇಸು,]

**ಸನ್ನಾದ** (ನಾ). ಗದ್ದಲ; ಗಲಾಟೆ : ಮೌನಮಪ್ಪುದುದಬ್ಧಿ ಶಬ್ದಮಂ, ಮೇಣ್ ಸೈನ್ಯಸನ್ನಾದಮಂ (ಶ್ರೀರಾಮಾ. ೫೪೫-೧೩೭). [ಸಂ.]

**ಸನ್ನಾಮ** (ನಾ). ೧. ಒಳ್ಳೆಯ ಹೆಸರು : ಸೋಮಧರಭಕ್ತಾಂಘ್ರಿನಿಹಿತಾರಾಮ . . . ಸನ್ನಾಮಗುಣಯೋಗನನು (ಬಸಪು. ೪೬-೬೮) ; ದಕ್ಷಿಣಾಚಾರ್ಯನೆಂದೆಂಬ ಸನ್ನಾಮವ ಲಕ್ಷಿಸಿ (ಗೂಮ್ಮಟ. ೭-೬). ೨. ಮತ್ತೊಬ್ಬರೆದುರಿನಲ್ಲಿ ತಲೆಬಾಗುವುದು ,– ನಮ್ರತೆ ತೋರುವುದು : (ಕ). [ಸಂ. ಸನ್ನಾಮನ್]

**ಸನ್ನಾಮಿ** (ನಾ). ೧. ಒಳ್ಳೆಯ ಹೆಸರನ್ನು ಹೊಂದಿದವನು; ಖ್ಯಾತಿವಂತ: ಮಂಡಗೆ ಮಾದಿರಾಜನನಲ್ಕೆ ಸನ್ನಾಮಿ (ಬಸಪು. ೨-೪೬). ೨. ಭಕ್ತ; ಆರಾಧಕ. [< ಸಂ. ಸನ್ನಾಮನ್]

**ಸನ್ನಾಯಿ** 'ಸೊನಯಿ' ನೋ.

**ಸನ್ನಾಯ್ಯ** (ನಾ). ಯಜ್ಞದಲ್ಲಿ ಅಗ್ನಿಗೆ ತುಪ್ಪದ ಜೊತೆಯಲ್ಲಿ ಅರ್ಪಿಸುವ ಪದಾರ್ಥ; ಹವಿಸ್ಸು : (ಕ). [< ಸಂ. ಸಾನ್ನಾಯ್ಯ]

**ಸನ್ನಾಹ** (ನಾ). ೧. ಕಟ್ಟಿರುವುದು; ಬಂಧನ: "ಸನ್ನಾಹಮೆನಲು ಭದ್ರಂ" (ಮಂಗರಾ. ೮೬-೩೧). ೨. (ಯುದ್ಧಕ್ಕೆ) ಅಣಿಮಾಡಿಕೊಳ್ಳುವುದು ; ಸಿದ್ಧತೆ; ಸಜ್ಜು : ಸನ್ನಾಹಮಂ ತಾಳ್ದಿ ಸೈನ್ಯಪ್ರಕರಂ ಬರ್ಕೆ (ಜಗವಿ. ೩-೧೩) ; ಸಕಲಸನ್ನಾಹದಲಿ ಯುದ್ಧೋದ್ಯುಕುತರಾದರು ಚರಿತ ಚಾಪರು ಮುಕುತ ಶಸ್ತ್ರಾವಳಿಯ ಮಳೆಗಾಲವನು ನಿರ್ಮಿಸುತ (ಕುಮ್ಮಾಭೀ. ೮-೨೪); ಪ್ರತಿರಕ್ಷೆಯ ಸನ್ನಾಹವನ್ನು ಪೂರೈಸಿ ಹಾಸಿಗೆಯನ್ನು ಆಶ್ರಯಿಸಿದನು (ಸಂಜರು. ೪೮). ೩. ಕವಚ; ಜೋಡು; ರಕ್ಷೆ: ಪರಿವಾರ ವಜ್ರಸಂನಾಹಂ (ಮೈಆರಿ. ೧೯೩೭, ೨೬-೪೩ : 1196). ೪. ಗುಂಪು; ಸಮೂಹ: ನಿನ್ನಡಿಸೋಂಕಿನೊಳಖಿಲದುರಿತಗಳ ಸನ್ನಾಹವ ಸದೆದಟ್ಟಿ (ಹದಿಬ. ೧-೩೫). ೫. ವಿಶೇಷವಾದ ಉಡಿಗೆ ತೊಡಿಗೆ ; ಹೆಚ್ಚಿನ ವೇಷಭೂಷಣ. ೬. ಸನ್ನೆ; ಸುಳಿವು; ಜಾಡು: ಕಲಿತ ಸನ್ನಾಹದಲಿ ಸಾರಥಿ ಸುಳಿಸಿದನು ಹೊಂದೇರನಭ್ರಕೆ (ಕುಮ್ಮಾಉ. ೭-೮). ೭. ಯುದ್ಧಕ್ಕೆ ಸನ್ನದ್ಧವಾದ ಸೈನ್ಯ : "ಒಡ್ಡವಣೆ ಸನ್ನಾಹಂ" (ಭಾರಸಿ. ೧೩). ೮. ವಿದ್ವಾಂಸ. ೯. ಪರಮಾತ್ಮ. "ಮೋಹರಿಸಿರ್ದ ಸೇನೆ ಬಹುಭಾವಕರುಂ ಪರಮಾತ್ಮನಿಂತು ಸನ್ನಾಹಮೆನಿಕ್ಕು" (ನಾನಾರ. ೧೦೭). [ಸಂ.]

**ಸನ್ನಾಹಗೆಯ್** (ಕ್ರಿ). ಸಿದ್ಧತೆಮಾಡು ; ಅಣಿಮಾಡು : ಭಿನ್ನವಿಲ್ಲದ ಸಂಭಾರಾನುಕೂಲತೆ ಸನ್ನಾಹಗೆಯ್ದು ದೀಪ್ತಿಗಳ ಹೊನ್ನ ಪುತ್ಥಳಿಯ ಕೈಲೆಡೆಗೊಟ್ಟು ಬೀಳ್ಕೊಂಡು ಚೆನ್ನೆಯರ್ ಪೊಱಮಟ್ಟರಾಗ (ಮೋಹತ. ೧೬-೨೯). [ಸನ್ನಾಹ + ಕೆಯ್]

**ಸನ್ನಾಹಗೊಳಿಸು** (ಕ್ರಿ). = ಸನ್ನಾಹಗೆಯ್: ಪನ್ನೀರ ಚಳೆಯ ಕತ್ತುರಿಯ ಸಾರಣೆ ಮುತ್ತಿನುನ್ನತ ರಂಗವಲ್ಲಿಗಳ ಸನ್ನಾಹಗೊಳಿಸಿ (ಕಂಪವಿ. ೨೨-೩). [ಸನ್ನಾಹ + ಕೊಳಿಸು]

**ಸನ್ನಾಹಭೇರಿ** (ನಾ). (ಯುದ್ಧಕ್ಕೆ) ಸೈನ್ಯವು ಸಿದ್ಧವಾಗಲೆಂದು ಹೊಡೆಸುವ ಭೇರಿ : ರಾವಣನೆಂದನವಂದಿರೆನಗೆ ಕಾಳೆಗದೊಳ್ ನಿಲ್ವ ಗಂಡರಲ್ಲರದರ್ಕೆ ನೀನಂಜದಿರೆಂದು ನುಡಿದು ಸನ್ನಾಹಭೇರಿಯಿಂ ಪೊಯಿಸುವುದುಂ (ಪಂರಾಮಾ. ೧೪-೧೨೪); ತ್ವರಿತದಿಂ ಸನ್ನಾಹಭೇರಿಯನರಸು ಪೊಯ್ಯಲು (ನಾಗಷ. ೧೯-೧೧೭). [ಸಂ. ಸನ್ನಾಹಭೇರೀ]

**ಸನ್ನಾಹ್ಯ** (ನಾ). ಯುದ್ಧಕ್ಕೆ ಯೋಗ್ಯವಾದ ಆನೆ , – ಗಜ : "ಸನ್ನಾಹ್ಯಃ, ಸಮರೋಚಿತಃ,– ಈ ೨ ಕಾದುವಾನೆ" (ಹಲಾಯು. ೩೮-೭೧). [ಸಂ.]

**ಸನ್ನಿ** (ನಾ). ೧. ಅತಿಶೀತದಿಂದ ಉಂಟಾಗುವ ಜ್ವರ; ಶೀತಜ್ವರ: "ಶೀತಳಮೆನಲು ಸನ್ನಿ" (ಮಂಗರಾ. ೧೧೪-೪); ವಾತವಿಕಾರ, ಸನ್ನಿ, ಧನುರ್ವಾತ ಮುಂತಾದುವುಗಳಿಗೆ ಕಲ್ಕ ಬಿಸಿ ಮೊದಲಾದುವುಗಳನ್ನು ಹಾಕಲು ಬಲ್ಲವಳಾಗಿದ್ದಳು (ಶಾಂತಲಾ. ೩೨೬); ಸನ್ನಿಯಿಲ್ಲ ಜ್ವರ ಇಲ್ಲ, ಆದರೂ ಹೀಗೆ ಸುಸ್ತು ಬಡಿದುಹೋಗಿದ್ದೀ (ಮಸೋಣಂ. ೧೫೧). ೨. ಮೂರ್ಛೆಯ ಅವಸ್ಥೆ; ಪ್ರಜ್ಞೆ ತಪ್ಪುವುದು: ನಿನ್ನಱಿವುದಕ್ಕೆ ಹೆಣ್ಣು ಹೊನ್ನು ಮಣ್ಣೆಂಬ ಸನ್ನಿಯ ತೊಱೆಯ ಹಾಯಬೇಕು (ಮಡೀವ. ೨೭೯-೩೭) ; ಸನ್ನಿಯಿಂದ ಮೈಮರೆತಿದ್ದವರಿಗೆ ಆಪಾದಮಸ್ತಕದಲ್ಲಿ ಸುಶಸ್ತ್ರದಿಂ ಹೊಯ್ದು ರಕ್ತ ಬಂದ ಠಾವಿಗೆ ಮಂಜಿಷ್ಠೆ . . . ತೇದು ಹಚ್ಚುವುದು (ವಿವೈವಿ. ೪೪). ೩. ಬಾಯಿಗೆ ಬಂದ ಹಾಗೆ ಮಾತನಾಡುವಿಕೆ ; ಮತಿಭ್ರಮೆ : ಕೊಡಗದ ಅರಸು ವೀರರಾಜೇಂದ್ರನು ಸನ್ನಿಯಾಗಿ ಕ್ರೂರತನದಿಂದ ಬಹುಜನರನ್ನು ಕೊಲ್ಲಿಸಿ (ಕಭಾಗ. ೩೭೦). ೪. ವಿಷ ; ಗರಲ : "ಕ್ಷ್ವೇಳಃ, ಗರಳಂ, ವಿಷಂ– ೩ ಸಾಮಾನ್ಯವಾಗಿ ಸಕಲವಿಷಗಳಿಗೂ ಹೆಸರುಗಳು. ಅಂದರೆ ಪ್ರಾಣಹರವಾದ ಪಿತ್ತ, ನಂಜು – ಸನ್ನಿ" (ಸಿದ್ಧಾಂತಿ. ೭೩). ೫. ಮೂರ್ಛಿತನಾದವನು; ಎಚ್ಚರವಿಲ್ಲದವನು : ವಹ್ನಿಯಿರೆ ಆಹುತಿಯ ನುಣ್ಣಿಸುತ ಬೂದಿಯಿಂದ ಹಾಕುವ ಸನ್ನಿಗಳನೇನೆಂಬೆ (ಜ್ಞಾನಸಿಂ. ೧೬-೭೦). [ಸಂ.]

**ಸನ್ನಿಕಟ** (ನಾ). ಬಹಳ ಹತ್ತಿರ ; ಅತಿಸಮೀಪ : ಇಂದು ತನ್ನ ಅಭೀಷ್ಟಸಿದ್ಧಿಯು ಅತ್ಯಂತ ಸನ್ನಿಕಟದಲ್ಲಿಯೇ ಬಂದಿದೆ (ಇಪ್ರಕ. ೩೩೯); ಸಾಕ್ಷಾತ್ಕಾರಕ್ಕೆ ಸನ್ನಿಕಟವಾಗಿಯೇ ಬಿಟ್ಟಿತೆಂಬಂತೆ ಉತ್ತರ ಕೊಟ್ಟಿದ್ದನು (ಮಲೆಮ. ೭೦೭). [< ಸಂ. ಸನ್ನಿಕೃಷ್ಟ]

**ಸನ್ನಿಕರ್ಷ** (ನಾ). ಹತ್ತಿರ; ಸಮೀಪ. [ಸಂ.]

**ಸನ್ನಿಕರ್ಷಣ** (ನಾ). ೧. ಹತ್ತಿರಕ್ಕೆ ತರುವಿಕೆ. ೨. ಹತ್ತಿರ; ಸಮೀಪ: "ಸನ್ನಿಧಿಃ, ಸನ್ನಿಕರ್ಷಣಂ–೨ ಸಮೀಪವಾಗಿರುವಿಕೆ, ಹತ್ತಿರವಾದ ಸ್ಥಳ" (ಸಿದ್ಧಾಂತಿ. ೩೭೯). [ಸಂ.]

**ಸನ್ನಿಕಾಶ** (ನಾ). ಸಮಾನ, ಹೋಲುವವನು ಎಂಬರ್ಥದಲ್ಲಿ ಸಮಾಸಗಳ ಕಡೆಗೆ ಸೇರುವ ಶಬ್ದ: ಪ್ರಕುಪಿತಮೃಗಪತಿಶಿಶುಸನ್ನಿಕಾಶರತಿವಿಕಟಭೀಷಣ ಭ್ರೂಭಂಗರ್ (ಪಂಪಭಾ. ೭-೮). [ಸಂ.]

**ಸನ್ನಿಕೃಷ್ಟ** (ಗು). ೧. ಸಮೀಪಕ್ಕೆ ಆಕರ್ಷಿಸಿದ. (ನಾ). ೨. ಹತ್ತಿರಕ್ಕೆ ಸೆಳೆದುದು; ಸಮೀಪಕ್ಕೆ ಆಕರ್ಷಿಸಿದುದು. ೩. ಹತ್ತಿರ; ಸಮೀಪ : "ಸಮೀಪಂ . . . ಸನ್ನಿಕೃಷ್ಟಂ . . . ಅಪದಾಂತರಂ – ಈ ೧೮ ಸಮೀಪಂ" (ಹಲಾಯು. ೧೧೫-೭); ಅತ್ಯಂತ ಸನ್ನಿಕೃಷ್ಟವಾದ ಸಂಬಂಧವಿರುವುದರಿಂದ ವಿಶೇಷದ ಪ್ರಾಧಾನ್ಯವೇ ಸಾಮಾನ್ಯಕ್ಕು ಬರುತ್ತದೆ (ಧ್ವನ್ಯಾಲೋ. ೩೭). [ಸಂ.]

**ಸನ್ನಿಗಿಡ** (ನಾ). ಒಂದು ಬಗೆಯ ಸಸ್ಯ : (ಮೈಆಗಿ. ೩೦-೫೮೨). [ಸನ್ನಿ ? + ಗಿಡ (< ಗಿಡು)]

**ಸನ್ನಿಘೃಷ್ಟ** (ಗು). ೧. ಚನ್ನಾಗಿ ತಿಕ್ಕಿದ; ಬಹಳವಾಗಿ ಉಜ್ಜಿದ. (ನಾ). ೨. ಚನ್ನಾಗಿ ತಿಕ್ಕುವುದು,– ಉಜ್ಜುವುದು : "ಸನ್ನಿಘೃಷ್ಟಂ ಪೆಸರಪ್ಪ ಮಾಷಗಳೊಳುರ್ದು" (ಶಬ್ದಮಂ. ೧೦೦). [ಸಂ.]

**ಸನ್ನಿತಲೆನೋವು** (ನಾ). ಸನ್ನಿಯಿಂದ ಬರುವ ತಲೆನೋವು : ಸನ್ನಿತಲೆನೋವಿಗೆ ನಸ್ಯ–ಸುಟ್ಟಬೆಲ್ಲ . . . ನಸ್ಯಮಂ ಮಾಡಲು ಮಾಣ್ಗುಂ (ವಿವೈವಿ. ೧೦೧). [ಸನ್ನಿ + ತಲೆನೋವು]

**ಸನ್ನಿದ** (ನಾ). ೧. ಹತ್ತಿರ; ಸಮೀಪ : ಬೇಱೆ ಪರಭಾಗಂಬೆತ್ತು ಲೋಕಕ್ಕೆ ಸನ್ನಿದ ಮಾಗಿರ್ದುವು ಕೌರವಧ್ವಜಿನಿಯೊಳ್ ಕಾಳಿಂದಿಯುಂ ಗಂಗೆಯುಂ (ಪಂಪಭಾ. ೧೦-೩೧); ಆ ಕನ್ನೆಯ ರೂಪೆನ್ನಿದಿರೊಳ್ ಸನ್ನಿದಮಾದಂತೆ ತೋಱುತಿರ್ದಪುದು (ಕಾದಂಊ. ೩೫೫); ಜವನ ಸನ್ನಿದಮಂ ಪೊರ್ದಿಸಲೆ ಪೇಳ್ಕುಮೆಂದು (ಮರಾಚ. ೨-೪೦). ೨. ಹತ್ತಿರದವನು; ಸಮೀಪದಲ್ಲಿರುವವನು: ಅನ್ನೆಗಮೆನಗೀ ಮನೋಹರಂ ಸನ್ನಿದನಪ್ಪಂ (ಕಾದಂಊ. ೬೩೧). [< ಸಂ. ಸನ್ನಿಧ]

**ಸನ್ನಿದೋಷ** (ನಾ). ಶೀತದಿಂದುಂಟಾಗುವ ದೋಷ : ಎರಡು ಧಾತುಗಳ ಮಧ್ಯಮಮಾಂದ್ಯಗಳ ವ್ಯತ್ಯಾಸಗಳಿಂದಲೂ ಪುಟ್ಟುವ ಸನ್ನಿದೋಷ (ಸಕವೈ. ೧೫೧). [ಸಂ.]

**ಸನ್ನಿಧಾನ** (ನಾ). ೧. ಹತ್ತಿರ ; ಸಮೀಪ : ಅಂತು ಮರಣಪ್ರಾಪ್ತನಾದ ಕುಮಾರನಂ ಸನ್ನಿಧಾನಸ್ಥಿತನಾಗಿರ್ದನ್ನುಮನಾತನ ತಂದೆ ಕಂಡು (ಪಂಚತಂ. ೩೭೯-೧೭). ೨. ಒಂದರ ಪಕ್ಕದಲ್ಲೊಂದರಂತೆ, ಒಟ್ಟಿಗೆ ಸೇರಿಸಿ ಇಡುವುದು. ೩. ಕಾರ್ಯ ವಹಿಸಿಕೊಳ್ಳುವುದು. ೪. ಎದುರು; ಸಮ್ಮುಖ : ಸಜ್ಜನರ ಸನ್ನಿಧಾನದಲ್ಲಿ ಇದ್ದವರನ್ನು ಕೆಣಕಲು ದೇವೇಂದ್ರನು ಸಮರ್ಥನಲ್ಲ (ಕೃವಾಅ. ೧೩೭). ೫. ಹಿರಿಯ ವ್ಯಕ್ತಿ ಮತ್ತು ರಾಜರನ್ನು ಸಂಬೋಧಿಸುವಾಗ ಬಳಸುವ ಪದ : ಸನ್ನಿಧಾನವು ಏನು ಬೇಕಾದರೂ ಮಾಡಬಹುದು (ಸಡದಾ. III, ೧೪೩೧). ೬. ರಾಜ್ಯಭಾರ; ಆಡಳಿತ : ಆಗ ಬಾಳಾಜಿರಾಯರು . . . ದೊರೆಗಳವರ ಸನ್ನಿಧಾನದಲ್ಲಿ ಮುಖ್ಯಾಧಿಕಾರಿಗಳಾಗಿದ್ದರು (ಮಹಾವಂ. II, ೩೯). ೭. ಉಪಾಸನೆಯಲ್ಲಿ ಒಂದು ವಿಧ; ವಿಗ್ರಹದಲ್ಲಿ ಅಥವಾ ಬೇರೆಯ ಪ್ರತೀಕದಲ್ಲಿ ಇಷ್ಟದೇವತೆಯು ನೆಲೆಗೊಳ್ಳುವಂತೆ ಮಂತ್ರಪೂರ್ವಕವಾಗಿ ಪ್ರಾರ್ಥಿಸಿ ಪೂಜಿಸುವುದು : ಶ್ರದ್ಧಾ ಭಕ್ತಿಜ್ಞಾನ ಧ್ಯಾನಸಮೇತನಾಗಿ ಶಿವನಂ ಭಜಿಸುತ ಆವಾಹನ ಸ್ಥಾಪನ ಸನ್ನಿಧಾನ ಸನ್ನಿರೋಧನ

ಸಮ್ಮುಖೀಕರಣಾದಿ ಮುಖ್ಯಕ್ರಿಯೆಗಳಿಂದೊಡಗೂಡಿ (ವಿವೇಕ. ೧೦೪). ೮. [ವ್ಯಾಕ] ಷಷ್ಠೀವಿಭಕ್ತಿಯ ವಿವಿಧ ಸಂಬಂಧಾರ್ಥಗಳಲ್ಲಿ ಒಂದು; ಸಾಮೀಪ್ಯದ ಸಂಬಂಧ: ಸಂಬಂಧದೊಳ್ ಷಷ್ಠಿಯಕ್ಕುಂ ಅದು ಸ್ವಾಮಿಸಂಬಂಧ . . . ಸನ್ನಿಧಾನಸಂಬಂಧ ಸಂಸ್ಪರ್ಶಸಂಬಂಧ ಸಂಬಂಧಸಂಬಂಧವೆಂಬಿನಿತಱೊಳಮಕ್ಕುಂ (ಶಮದ. ೧೩೨ ವೃತ್ತಿ); ಸನ್ನಿಧಾನಕ್ಕೆ- ಕೆಱೆಯ ಕೋಡಿ; ಊರಮುಂದು; ಅದಱ ಕೆಲಂ (ಶಮದ. ೧೩೨ ಪ್ರಯೋ). [ಸಂ.]

**ಸನ್ನಿಧಿ₁** (ನಾ). ೧. ಹತ್ತಿರ; ಸಮೀಪ : ಶ್ರೀಧರತಪೋನಿಧಿಯ ಸನ್ನಿಧಿಯೊಳ್ ಪರಿಹರಿಸಿ ಜಾತರೂಪೋತ್ಕರಮಂ ಮತ್ತೊಂದು ಜಾತರೂಪಮನರಸಂ ಧರಿಯಿಸಿದಂ (ಚಂದ್ರಪ್ರ. ೨-೫೭ ವ). ೨. = ಸನ್ನಿಧಾನ ೨. ೩. = ಸನ್ನಿಧಾನ ೩. ೪. ಎದುರು; ಸಮ್ಮುಖ : ಶ್ರೀಮದಘಾರಿ ವೀರಜಿನಸನ್ನಿಧಿಯೊಳ್ . . . ಪೇಳ್ವೆಂ . . . ಸುಕುಮಾರಕಥಾಪ್ರಬಂಧಮಂ (ಸುಕುಮಾ. ೧-೭೪). ೫. ರಾಜರನ್ನು ಮತ್ತು ಹಿರಿಯ ವ್ಯಕ್ತಿಗಳನ್ನು ಸಂಬೋಧಿಸುವಾಗ ಗೌರವಸೂಚಕವಾಗಿ ಬಳಸುವ ಒಂದು ಪದ: ಸನ್ನಿಧಿಯವರು ದಯಮಾಡಿಸುತಿದ್ದಾರೆ. ದಾರಿ ಬಿಡಿ (ರೂಢಿ). [ಸಂ.]

**ಸನ್ನಿಧಿ₂** (ನಾ). ಒಳ್ಳೆಯ ನೆಲೆ, — ಆಶ್ರಯಸ್ಥಾನ : ಬೇಱದೊಂದು ರೂಪಿನ ನಿಧಿ ಬೇಱದೊಂದು ಕಡುಗಾಡಿಯ ಸನ್ನಿಧಿ ಬೇಱದೊಂದು ನುಣ್ಪಿನ ಕಣಿ . . . ಎನ್ನ ನಲ್ಲಳಾ (ಶಾಂತಿಪು. ೩-೭೯). [ಸಂ.(ಸತ್ + ನಿಧಿ)]

**ಸನ್ನಿಪಾತ** (ನಾ). ೧. ಕೂಡುವುದು; ಸಂಯೋಗ : ಭೂತಚತುಷ್ಟಯ ಸನ್ನಿಪಾತಮಂ ಶರೀರಮೆಂಬುದು (ಶಾಂತಿಪು. ೮-೧೩೨ವ). ೨. ಯುದ್ಧ; ಸಮರ. ೩.= ಸನ್ನಿದೋಷ: ಜಿಹ್ವೆಯು . . . ಸನ್ನಿಪಾತದಲ್ಲಿ ಕಪ್ಪಾಗಿ ಮುಳ್ಳುಮುಳ್ಳಾಗಿ ಒಣಗಿ ದ್ರವವಿಲ್ಲದ ಇರುವುದು (ಸಕವ್ಯ. ೧೪). ೪. ವಿಪರೀತಜ್ವರದಿಂದ ಉಂಟಾಗುವ ಬುದ್ಧಿ ಭ್ರಮಣೆ : ಅರುವಾಳ :- ಈ ಬೀಜ ಮೆಣಸು ಸಹ ನಿಂಬೇಹುಳಿಯಲ್ಲಿ ತೇದು ಹಚ್ಚಲು ಸನ್ನಿಪಾತಹರ (ವಿಷ್ಣುವಿ. ೧). [ಸಂ.]

**ಸನ್ನಿಪಾತಕ** (ನಾ).= ಸನ್ನಿಪಾತ ೪ : ಬಹುಮೂತ್ರದವರಿಗೆ . . . ನಾಲ್ಕನೆಯ ಅವಸ್ಥೆಯಲ್ಲಿ ಸನ್ನಿಪಾತಕವು ತೋಱುವುದು (ವಿಷ್ಣುವಿ. ೧೫೭). [ಸಂ.]

**ಸನ್ನಿಪಾತಕಜ್ವರ** (ನಾ). ಸನ್ನಿಪಾತದಿಂದುಂಟಾಗುವ ಜ್ವರ. [ಸಂ.]

**ಸನ್ನಿಪಾತಗುಲ್ಮ** (ನಾ). ಒಂದು ಬಗೆಯ ಗುಲ್ಮರೋಗ : ಮೆಣಸು ಬೆಳ್ಳುಳ್ಳಿ . . . ಗುಳಿಗೆ ಮಾಡಿ ಏಳು ದಿನ ನುಂಗೆ . . . ಸನ್ನಿಪಾತಗುಲ್ಮ ಇವು ಎಲ್ಲಾ ಮಾಣುವುವು (ವಿಷ್ಣುವಿ. ೧೨೭). [ಸಂ.]

**ಸನ್ನಿಪಾತಜ್ವರ** (ನಾ). = ಸನ್ನಿಪಾತಕಜ್ವರ : ಸನ್ನಿಪಾತಜ್ವರಂ ದೊರೆಕೊಂಡಂತ ವಿವೇಕದಿಂದಭಿಜನಂ . . . ಅದೇಂ ಮಾರ್ಕೊಳ್ಳದಂತಿರ್ಕುಮೇ (ಪಂಪಾರಾಮಾ. ೬-೧೭೮); ತಂದ್ರ, ನಿದ್ರಾಭಂಗ, ಗಂಟಲಲಿ ಗೊರಕು, ಬಾಯಾರಿಕೆ, ಕ್ಷಣಕ್ಕೆ ಶೀತ, ಕ್ಷಣಕ್ಕೆ ಉಷ್ಣ . . . ಇವಿಷ್ಟೂ ಉಂಟಾಗಿರುವುದೇ ಸನ್ನಿಪಾತಜ್ವರಲಕ್ಷಣವೆಂದರಿವುದು (ಸಕವ್ಯ. ೯೭). [ಸಂ.]

**ಸನ್ನಿಬಂಧ** (ಗು). ೧. ಕಟ್ಟಿದ; ಬಂಧಿಸಿದ. (ನಾ). ೨. ಒಳ್ಳೆಯ ಕಾವ್ಯಬಂಧ; ಸತ್ಪ್ರಬಂಧ : ಈ ಪೇಳ್ದ ಮಾಟ್ಕೆಯಿಂ ದೋಷಾಲೇಪಂ ಪೊರ್ದದಂತಿರೆ ಸನ್ನಿಬಂಧ ವ್ಯಾಪೃತನಕ್ಕೆ ಗುಣವದರ್ಥಂ ವ್ಯಾಪಕಮಾಗೆ ಕವಿತ್ವತತ್ವದೊಳ್ (ಕಾವ್ಯಾವ. ೪೯೫). [ಸಂ.]

**ಸನ್ನಿಭ** (ಗು). ಸಮಾನವಾದ; ಸದೃಶವಾದ : ಅಮರಸನ್ನಿಭಮಣಿಕುಟ್ಟಿಮಮಪ್ಪ ಬಾವಿಯಂ ಪೊಕ್ಕು (ವಡ್ಡಾರಾ. ೨೭-೧೮); ಅಭವಸನ್ನಿಭ ವೀರನಾಗೆಂದು . . . ಹರಸಿದರು ಹರುಷದಲಿ (ಕುವ್ಯಾವಿ. ೧೦-೭೪); ಮಾರಸನ್ನಿಭ ರೂಪನ ಧೀರ ಮಲುಹಣ (ಪ್ರಾಭರಾ. ೯-೨೦). [ಸಂ.]

**ಸನ್ನಿರೋಧನ** (ನಾ). ಮೂರ್ತಿಪೂಜಾವಿಧಿಕ್ರಿಯೆಗಳಲ್ಲಿ ಒಂದು ; ಇಷ್ಟದೇವತಾ ಮೂರ್ತಿಯನ್ನು ಮಂತ್ರಪೂರ್ವಕವಾಗಿ ನೆಲೆಸುವಂತೆ ಪ್ರಾರ್ಥಿಸುವ ಒಂದು ಕ್ರಿಯೆ : ಶಿವಲಿಂಗಕ್ಕಾವಾಹನ ಸ್ಥಾಪನ ಸನ್ನಿಧಾನ ಸನ್ನಿರೋಧನ ಸಮ್ಮುಖೀಕರಣಮೆಂಬ ಕ್ರಿಯೆಗಳಂ ಮಾಡಿ (ವಿವೇಕ. ೯೪). [?]

**ಸನ್ನಿವಡು** (ಕ್ರಿ). ಸನ್ನಿಪಾತರೋಗಕ್ಕೊಳಗಾಗು : ಹರನೆಂದು ದುಗ್ಧವಾರಿಧಿ ವಿಚಾರಿಸದೆ ಶಂಕರನೆಂದು ತನ್ನ ತಿಂಗಳ ಶಿಶುವ ಕೊಡಲದಂ ಹರಿವ ನೀರ್ ಮೋಱೆವ ಹಾವುರಿವ ಕಿಚ್ಚಿನ ಹೊಱೆಯೊಳಿರಿಸಲದು ಸನ್ನಿವಟ್ಟು ಶರೀರವೆಲ್ಲಂ ಕಂದಿ ಕುಂದಿ (ಭಾವಚಂ. ೬-೧); ನೀರೊಳೊಣಗಿದುದು ಮೈನಾಕ ಸನ್ನಿವಟ್ಟುದು ಕುಳಿರ್ವೆಟ್ಟು ಚಲಿಸಿತು ಮಂದರಂ (ನಂದಿಮಾ. ೧೧-೨೭). [ಸನ್ನಿ + ಪಡು₁]

**ಸನ್ನಿವಹ** (ನಾ). ಒಳ್ಳೆಯ ಪರಿವಾರವುಳ್ಳವನು : ವ್ರತಗೋಮಂ ಸಕಳಕಳಾನ್ವಿತ ನಮೃತಮಯಂ ವಿಶುದ್ಧವೃದ್ಧಂ ಪರಿವೇಷ್ಟಿತ ಸನ್ನಿವಹಂ ಕುವಳಯಹಿತನೆನೆ ಸಂಪೂರ್ಣಂ ಚಂದ್ರನೊಳ್ದೊರೆ ಚಂದ್ರಂ (ಮದತಿ. ೧-೪೮). [ಸಂ.]

**ಸನ್ನಿವಾಸ** (ನಾ). ಒಳ್ಳೆಯ ಮನೆ, — ನಿವಾಸ : ಸೌರಾಷ್ಟ್ರಪತಿ ರತಿವೊಂದಿ ಬಿಡದಿರವೇಳ್ಕು ನಿನ್ನಯ ಸನ್ನಿವಾಸದಲಿ (ಬಸಪು. ೫೩-೧೭). [ಸಂ.]

**ಸನ್ನಿವಿಷ್ಟ** (ನಾ). ೧. ಜೊತೆಗೂಡಿ ಪ್ರವೇಶಿಸುವುದು. ೨. ಬೀಡುಬಿಡುವುದು; ನೆಲೆಗೊಳ್ಳುವುದು. ೩. ಹತ್ತಿರ; ಸಮೀಪ. [ಸಂ.]

**ಸನ್ನಿವೇಶ** (ನಾ). ೧. ಜೊತೆಗೂಡಿ ಪ್ರವೇಶಿಸುವುದು. ೨. ಸಮೂಹ; ಗುಂಪು. ೩. ಸಮ್ಮಿಲನ; ಕೂಟ. ೪. ನೆರೆಹೊರೆ; ಪರಿಸರ; ಸುತ್ತುಮುತ್ತು. ೫. ನೆಲೆ; ಸ್ಥಾನ; ಸ್ಥಳ : "ಸಂಸ್ಥಾನಂ, ಸನ್ನಿವೇಶಃ - ಈ ೨ ನಿಲವು" (ಹಲಾಯು. ೧೨೮-೯೩). ೬. ಇರವು; ಪರಿಸ್ಥಿತಿ : ಆರ್ಥಿಕದೃಷ್ಟಿಯಿಂದ ಸನ್ನಿವೇಶಗಳು ಅಷ್ಟು ಅನುಕೂಲಕರ ವಾಗಿರಲಿಲ್ಲ (ಸಸ್ಯಕ. ೯೫). ೭. ರೂಪ; ರಚನೆ. ೮. ಘಟನೆ; ಸಂದರ್ಭ : ನಾಟಕದ ಮೂಲೋದ್ದೇಶದ ನಿರೂಪಕವಾಗಿರುವಂತೆ ಈ ಸನ್ನಿವೇಶಗಳನ್ನು ನಿರ್ದೇಶಕನು ಯೋಜಿಸಿಕೊಳ್ಳಬಹುದು (ಕಮ್ಮಟ. ೭೦). [ಸಂ.]

**ಸನ್ನಿಹಿತ** (ಗು). ೧. ಹತ್ತಿರದಲ್ಲಿರುವ; ಸಮೀಪದ: ಸಹಜವಿಭೂಷಣ ಪ್ರತತಿಪಲ್ಲವಮಿಲ್ಲದ ದಿವ್ಯದೇಹಸನ್ನಿಹಿತಪಹಾಸ್ಯಮೆಂಬ ಪೆಸರಿಲ್ಲದೆಯಾಡುವ ಕೋಟೆ (ಶಾಂತಿಪು. ೯-೩೪); ನೃಪಕುಮಾರರೆ ಸತತ ಸನ್ನಿಹಿತ ಪರಿವಾರಮಾಗೆ (ಪುಷ್ಪಪು. ೪-೭ ವ). ೨. ಸಿದ್ಧವಾದ; ಸಜ್ಜಾದ. (ನಾ). ೩. ಹತ್ತಿರ; ಸಮೀಪ: ಸನ್ನಿಹಿತಮಾದೀ ವಿಪತ್ತನರಿತುಂ ಬರಿದೆ ಕುಳಿತಿಹರೆ (ಶ್ರೀರಾಮಾ. ೭೦-೨೦೨). ೪. ಹತ್ತಿರಕ್ಕೆ ಬಂದವನು; ಸಮೀಪಸ್ಥ : ತಡವಿಲ್ಲ ಸನ್ನಿಹಿತನಾದಪನಲ್ತೆ ಭವತ್ತನೂಭವಂ (ಕಾದಂಉ. ೧೦೧); ಜಂಗಮದೊಳಗೆ ಲಿಂಗಯ್ಯ ಸನ್ನಿಹಿತನಾಗಿರ್ಪ (ಬಸವ. ೧೯೭). [ಸಂ.]

**ಸನ್ನಿಹಿತೆ** (ನಾ). ಹತ್ತಿರದವಳು; ಸಮೀಪಸ್ಥೆ : ವಾಕ್ಸುಂದರಿ ಬಂದು ಸನ್ನಿಹಿತೆಯಕ್ಕೆನ್ನೀ ಮುಖಾಂಭೋಜದೊಳ್ (ಗದಾಯು. ೧-೭); ದೇವತೆ ಸನ್ನಿಹಿತೆಯಾಗಿ ಎನಗೆ ಪೊಡೆವಟ್ಟು ಪಡೆದಾ ತನೂಜನಂ . . . ಕಾವೆಂ (ಜೀವಸಂ. ೨-೨೮ ವ). [ಸಂ. ಸನ್ನಿಹಿತಾ]

**ಸನ್ನೀರು** (ನಾ). ಇರುವ ನೀರು : ಸನ್ನೀರ ಜರಿದು ಬಿಸಿಲ ದೊರೆಗೆ ಓಡಿ ಬನ್ನಬಡುವ ಭವಾಟವಿಯೊಳಗೆ (ಪ್ರಸಭಾ. ೫೭-೩೪). [? + ನೀರು₁ (< ನೀರ್)]

**ಸನ್ನೀಲಪಟ** (ನಾ). ಮನ್ಮಥನನ್ನು ಆರಾಧ್ಯದೇವತೆಯಾಗುಳ್ಳ ಒಂದು ತಾಂತ್ರಿಕ ಪಂಥದ ಹೆಸರು ಮತ್ತು ಆ ಪಂಥಕ್ಕೆ ಸೇರಿದ ವ್ಯಕ್ತಿ ; IP ಇವರನ್ನು ಕಾಶ್ಮೀರ ದಲ್ಲಿ ನೀಲಾಂಬರರೆಂದು ಕರೆಯುತ್ತಾರೆ : ಪೂರ್ವಶೈವರುಂ ಮಾಸಿದಱಿವಿನ ನಿರೀಶವಾದಿಗಳ್ ಮೀಮಾಂಸಕರು ಸನ್ನೀಲಪಟರು (ಏಕೋಪು. ೯-೩೯). [ಸಂ. ?]

**ಸನ್ನುಗ** (ನಾ). ಅನುಭಾವ: ಇನ್ನೆಲ್ಲ ಕೇಳಿ ಸಂಪನ್ನ ಸುವಿವೇಕನೆಂಬುನ್ನತಜ್ಞಾನಿ ಸಂಸಾರಕಲಸಿ ನನ್ನಿಯಿಂ ಗುರುವಿಡಿದು ತನ್ನ ನಿಜ ತಾನಾದ ಸನ್ನುಗವ ಪೇಳ್ವೆನು (ಮನೋವಿ. ೧-೬); "ಮಾರ್ಗ" (ಮನೋವಿ. ೧-೬ ಟೀಕು); ಗಗನಾಂಶ ಜೀವವಾಶುಗವೆರಸಿ ಮನವನಲನಿಗೆ ಬೆರಸಿ ಬುದ್ಧಿಜಲವೆರಸಿ ಚಿತ್ತ ಮಿಗೆ ಪೃಥ್ವಿವೆರಸಿ ಹಮ್ಮೊಗೆದುದಾ ಗಸದ ಸನ್ನುಗವೆ ಪಂಚೀಕರಣವೆಂದಱಿವುದು (ಮನೋವಿ. ೩-೧೩); "ಐದು" (ಮನೋವಿ. ೩-೧೩ ಟೀಕು); ಎನ್ನೊಳೊಳವಖಿಳಶಕ್ತಿಗಳುನ್ನತಮಾದೆನ್ನ ನಾಮಮಾಜ್ಞಾ ಸಿದ್ಧಂ ನುನ್ನಮದೆನ್ನಿಂದಾಗುವೆ ಸನ್ನುಗಮಂ ಕೇಳ್ ಮಹೀಧವಾಗ್ರಣಿ ಮುದದಿಂ (ಹಾಲಾಸ್ಯ. ೨-೫-೧೯). [ಸಂ. ?]

**ಸನ್ನುತ** (ಗು). ೧. ಚೆನ್ನಾಗಿ ಹೊಗಳಿದ; ವಿಶೇಷವಾಗಿ ಸ್ತುತಿಸಿದ. (ನಾ). ೨. ಚೆನ್ನಾಗಿ ಹೊಗಳಿದುದು; ವಿಶೇಷವಾದ ಸ್ತುತಿ : ಸನ್ನುತಮಪರಾರ್ಥಂ ಸಂಪನ್ನಶ್ಲಿಷ್ಟಾಕ್ಷರೋಪರಚಿತಮದೋಷಂ (ಕವಿರಾ. ೧-೯೭). ೩. ಚೆನ್ನಾಗಿ

ಹೊಗಳುವವನು; ವಿಶೇಷವಾಗಿ ಸ್ತುತಿಸುವವನು: "ಸನ್ನುತಂ ವಿಚಕ್ಷಣನಿನಿದ ನುಡಿವವನಕ್ಕುಂ" (ಮಂಗರಾ. ೭೦-೧೬); ಗಜಮುಖನೈತಂದನೊ ಎನ್ನುತ ನಾ ಸಂಭ್ರಮಿಸುತ ಕಂಡೆನು ಸನ್ನುತನ (ಗಣೇಶ. ೧-೨೦). [ಸಂ.]

**ಸನ್ನುತಿ** (ನಾ). ವಿಶೇಷವಾದ ಹೊಗಳಿಕೆ,– ಸ್ತುತಿ : 'ಸನ್ನುತಿಗೆಯ್' ಪರಾ. [ಸಂ.]

**ಸನ್ನುತಿಗೆಯ್** (ಕ್ರಿ). ವಿಶೇಷವಾಗಿ ಹೊಗಳು; ಸ್ತುತಿಸು : ಸನ್ನುತಿಗೆಯ್ದಾರಾಧಿಸೆ ತನ್ನಂ ಬ್ರಹ್ಮಾದಿದೇವರೊಳಗೆತ್ತಾನುಂ ಮುನ್ನುಡಿದ ದಿವ್ಯವಚನಮನೆನ್ನೊಳ್ ನುಡಿಗುಮ ನೃಕೇಟದೊಳ್ ನರಸಿಂಹಂ (ಜಗವಿ. ೫-೭೪). [ಸನ್ನುತಿ + ಕೆಯ್$_1$]

**ಸನ್ನುತಿವಡೆ** (ಕ್ರಿ). ವಿಶೇಷವಾದ ಕೀರ್ತಿಯನ್ನು ಪಡೆ, – ಹೊಂದು: ಕರ್ಣನ್ನು ಚೆಂಬೊನ್ನಾದಂತೆ ಸನ್ನುತಿವಡೆದೊಳ್ಪುವೆತ್ತು ಸಕಲಭಾಗ್ಯೋನ್ನತಿಯೊಡಗೂಡಿಹನು (ಹರಿಬ. ೧-೩೫). [ಸನ್ನುತಿ + ಪಡೆ$_1$]

**ಸನ್ನುತಿಸು** (ಕ್ರಿ). ವಿಶೇಷವಾಗಿ ಹೊಗಳು,– ಸ್ತುತಿಸು : ಇಂಗಡಲೆಡೆಯ ಪೆರ್ಬಾವಿನ ಹೆಡೆಯ ರತ್ನಂಗಳ ಮೆಯ್ಯೆಳಗಿನಲಿ ಕಂಗೊಳಿಸುವ ವಾಸುದೇವನ ಶ್ರೀಚರಣಂಗಳ ಸನ್ನುತಿಸಿದನು (ವೀರಹತ. ೫-೪); ಪತಿಯನೆ ಪರದೇವತೆಯೆಂದು ಭಜಿಸುವ ಸತಿಯರ ಸನ್ನುತಿಸುವೆನು (ಹರಿಬ. ೨-೩). [ಸನ್ನುತಿ + - ಇಸು$_3$]

**ಸನ್ನುಮತ** 'ಸನುಮತ' ನೋ.

**ಸನ್ನೆ$_1$**, **ಸೊನ್ನೆ$_1$** (ನಾ). ಭಾರವಾದ ಅಥವಾ ಹೂತಿರುವ ವಸ್ತುವನ್ನು ಮೀಟಿ ಎತ್ತುವ ಒಂದು ಸಾಧನ ; ಮೀಟುಗೋಲು; ಸನ್ನೆಗೋಲು : ಸನ್ನೆ ಸಾವಿರಕಾಲಾಳಿನ ಸತ್ವವೈ (ಸೋಮೇಶ. ೭೬); ಬೆಟ್ಟಕ್ಕೆ ಸನ್ನೆ ಹಾಕಿರುವ ಮಹದಾಶಿಗನೆ ಗಟ್ಟಿಯೇ ಸೊಟ್ಟಾಗದೇ ಸನ್ನೆಗೋಲು ರಟ್ಟೆಯೇ ಮುರಿದೀತು ಮೈಮರೆತ ಸಾಹಸದಿ ಎಷ್ಟುಚಿತವೋ ನೋಡು (ಮಂಕುತಿ. ೫೭೮). **ಸೊನ್ನೆ$_1$** : ಬಂಧಿಸಿದ ಕದವ ನೂಂಕುತ್ತ ಮಿರಲು ಅದು ಚಲಿಸದಿರೆ ಪುರದ ಜೈನರೆಲ್ಲರೂ ನೆರೆದು ಪೊಜಗಿ ಸೊನ್ನೆಗಳಿಂದ ನೂಂಕಿದೊಡೆ ಮಿಸುಕದಿರೆ (ರಾಘಚ. ೧೩-೬೫). [ದೇ. ll ತಮಿ. ಚನ್ನೈ; ತುಳು. ಸನ್ನೆ]

**ಸನ್ನೆ$_2$**, **ಸನೆಯ**, **ಸವುಜ್ಞೆ**, **ಸೊನ್ನೆ$_2$**, **ಸೌಜ್ಞೆ** (ನಾ). ಗುರುತು; ಸಂಕೇತ: ಕಾಣ್ಬರಂಕುಸನಾ ಪಾಣ್ಬೆಯರ ಗೆಯ್ಯ ಗೆಯ್ತಂಗಳುಮಂ ತೋರ್ಪ ಸನ್ನೆಗಳುಮಂ ಆಡುವ ಮಿಟ್ಟುಗೂಡ್ಗಂಗಳುಮಂ ಕಂಡು (ಪಂಪಭಾ. ೪-೮೩ ವ); ಮೌನವ್ರತಿಯೆಂದಡೆ ಸನ್ನೆಯಲ್ಲಿ ಭೇದಿಸುವೆ (ಸಮಾವ. ಕ. ೫೪೯-೩); ವೀರಸೇನಾಪತಿಯ ಸನ್ನೆಗೆ ಭೂರಿಬಲ ಹಬ್ಬಿದುದು ದಿಕ್ಕುಗಳೊರೆ ಹಿಗ್ಗಿದವಮಮ ತಗ್ಗಿದರಹಿವಕೂರುಮರು (ಕುಮಾಭೀ. ೮-೧೧); ಸನ್ನೆ ತಿಳಿಯದಿದ್ದರೆ ಮನ್ನಣೆಯೂ ತಿಳಿಯದ (ಗಾದ). **ಸನೆಯ**: 'ಸನೆಯಗೈ' ಪರಾ. **ಸವುಜ್ಞೆ** : ಈ ಮೇರೆಗೆ ಸೂರ್ಯಾದಿಯೇಳು ಗ್ರಹಗಳಿಗು ಮೂಲತ್ರಿಕೋಣದಿಂದ ಯಾ ಸವುಜ್ಞೆಯೊಳು . . . ಬಂದರೆ ಸಮ (ಭಾಸ್ಕರ. ೫೪-೭). **ಸೊನ್ನೆ$_2$** : ಹಿಂಗಾಲು ಊರಿಕೊಂಡು ತಲೆಯನ್ನು ಓರೆಮಾಡಿ, ಕೋಡಿನಿಂದ ಸೊನ್ನೆ ಕೊಡುತ್ತವೆ (ಮುಂಬಯಿ. ೩-೧೧). **ಸೌಜ್ಞೆ**: ಹಸುವಿಂಗೆ ಸೌಜ್ಞೆ ಎತ್ತಿಗೆ ಮುಟ್ಟು ಕಱುವಿಂಗೆ ಲಲ್ಲೆ ಇಂತೀ ತ್ರಿಗುಣದ ಇರವ . . . ಅಱಿತು (ತುಜುಗಾ ೩-೭). [< ಸಂ. ಸಂಜ್ಞಾ]

**ಸನ್ನೆ$_3$** (ನಾ). ಒಂದು ಬಗೆಯ ವಾದ್ಯ : ಚಿನ್ನ ತಿತ್ತಿರಿ ಬೊಗ್ಗಿನ ಹಱೆ ಕಹಳೆಗಳುನ್ನತ ಡೌಡ ನಿಸ್ಸಾಳ ಸನ್ನ ಡೋಳು ನಾಗಸರ ರಾಯ ಸನ್ನುತಮೆನಲೊದಱಿದವು (ಅಂಜಚ. ೬-೭೫); ಸನ್ನೆಯ ದುಂದುಭಿರವದಿಂದ ನೆಱೆಯುರ್ಬೆಱೆ ಸಬ್ಬಲಗ್ಗೊಳಲ್ (ಚಿಕವಿ. ೬-೧೫೩) 'ಸೊನಯಿ' ಪರಾ. [?]

**ಸನ್ನೆಗಟ್ಟಿಗೆ** (ನಾ). = ಸನ್ನೆ$_1$ : ತೋಱಿಕೆ ನಷ್ಟವಾಗಿ ನಿಂದವಂಗಲ್ಲದೆ ನಿನ್ನ ಚರಣದ ಬಾಗಿಲ ಬಾದಣವನೇಱಬಾರದು ಅದಕ್ಕೆ ಸನ್ನೆಗಟ್ಟಿಗೆಯೇ ಚೆನ್ನ (ಮದೇವ. ೨೪೯-೩೬). [ಸನ್ನೆ$_1$ + ಕಟ್ಟಿಗೆ$_1$]

**ಸನ್ನೆಗಣ್** (ನಾ). ಸಂಕೇತವನ್ನು ಸೂಚಿಸುವ ಕಣ್ಣು : ತಮ್ಮಗೊರೆದನು ಸನ್ನೆಗಣ್ಣಾಡಿ (ಶ್ರೀರಾಮಾ. ೨೫೩-೬೮೦). [ಸನ್ನೆ$_2$ + ಕಣ್]

**ಸನ್ನೆಗರೆ** (ಕ್ರಿ). ಸಂಕೇತದಿಂದ ಬರಮಾಡು; ಸಂಜ್ಞೆಮಾಡು : ಸೀತೆ ಸನ್ನೆಗರೆ ದನಲಗಾಡಿದಳವಳ್ ತಂದೆಯಂ ಕುರಿತು (ಶ್ರೀರಾಮಾ. ೮೨೪-೨೦೦). [ಸನ್ನೆ$_2$ + ಕರೆ$_1$]

**ಸನ್ನೆಗಹಳೆ**, **ಸನ್ನೆಗಾಳೆ** (ನಾ). (ಯುದ್ಧ ಮೊದಲಾದುವುಗಳ ಪ್ರಾರಂಭದಲ್ಲಿ) ಸಂಕೇತಸೂಚಕವಾಗಿ ಊದುವ ಕಹಳೆ; ಸಂಜ್ಞೆಯ ಕಹಳೆ : ತಿರುಗಿದರು ಕೌರವರು ದ್ರೋಣನ ಬೆರಳ ಸನ್ನೆಗಹಳೆ [ಪಾಠಾಂ. ಗಾಳೆ] ಗಳುರವಣಿಸಿತೆನೆ ತಂಬಟದ ನಿಸ್ಸಾಳ ರಭಸ (ಕುಮಾದ್ರೋ. ೩-೮೦). **ಸನ್ನೆಗಾಳೆ** : ಒತ್ತುವ ಸನ್ನೆಗಾಳೆಗಳಿಂ ಪೂರಿಸುವ ಶಂಖಿಂಗಳುಂ (ಕಾದಂಪೂ. ೪೭೪); ಮನೋಜರಾಜದಿಗ್ವಿಜಯಪ್ರಮಾಣದೊಳೂದುವ ಸನ್ನೆಗಾಳೆಗಳ್ (ಬಾಥಪು. ೧-೧೯ ವ); ಸನ್ನೆಗಾಳೆ ತಿತ್ತಿರಿ ಪಟಹ ಭೇರಿ ಫಿರಂಗಿಗಳು ಸೂಳಯ್ಸುವುವು (ಚೆನ್ನಬ. ೩೧-೧). [ಸನ್ನೆ$_2$ + ಕಹಳೆ]

**ಸನ್ನೆಗಾಳೆ** 'ಸನ್ನೆಗಹಳೆ' ನೋ.

**ಸನ್ನೆಗೂಗು** (ನಾ). ಸಂಕೇತ ಸೂಚಕವಾದ ಕೂಗು : ಕಂಡು ಬಟ್ಟೆಗರ ಕೊಂಬೇಱಿ ಕುಸುಮಕೋದಂಡಗೆ ಸನ್ನೆಗೂಗಿಡುವ ಗಂಡುಗೋಗಿಲೆಗಳ್ (ಕುರಾಸಾಂ. ೩-೨೧). [ಸನ್ನೆ$_2$ + ಕೂಗು$_2$]

**ಸನ್ನೆಗೆಡು** (ಕ್ರಿ). ಗುರುತು ತಪ್ಪು; ದಿಕ್ಕುತೋಚದಾಗು : ನಿನ್ನ ಹೆಂಡತಿ ಬಾವಿಯೊಳ್ ಬಿರ್ದಳೇಳ್ಳು ಬಾಯೆನ್ನುತಾರ್ತಸ್ವರದಿನೋರ್ವನೈತಂದುಸಿರೆ ಸನ್ನೆ ಗೆಟ್ಟೋಹೂ ಕೆಟ್ಟೇಂ ಕೆಟ್ಟೆನೆಂದು ಬಾಯ್ಬಿಟ್ಟು ಹೌಹಾರಿ ಭರದೆ (ಮಹಾಂತೇ. ೯-೩೩). [ಸನ್ನೆ$_2$ + ಕೆಡು$_1$]

**ಸನ್ನೆಗೆಯ್**, **ಸನೆಯಗೈ**, **ಸನ್ನೆಗೈ**, **ಸೌಜ್ಞೆಗೆಯ್** (ಕ್ರಿ). ಸಂಕೇತದ ಮೂಲಕ ಸೂಚಿಸು : ಪೆಂಪುವಡೆದಾ ಹೇಮಾಚಳೇಂದ್ರಕ್ಕೆ ಕಲ್ಪಜರಂ ಪೋಗಲೆ ಸನ್ನೆಗೆಯ್ಯೆ ಭಗವಜ್ಜನ್ಮಾಭಿಷೇಕೋತ್ಸವಧ್ವಜಮಂ ಪೋಲ್ತುದು ರತ್ನರಂಜಿತಭುಜಾದಂಡಂ ಸುರಾಧೀಶನಾ (ಆದಿಪು. ೭-೪೯); ಸಂಬಳಿಗೋಲಿಂ ಸನ್ನೆಗೆಯ್ಯೆ (ಕಾದಂಪೂ. ೩೪); ನಾಣ್ಚಿ ನಿಲುತ್ತ ಪದೆದ ನಲ್ಲನಂ ಕಣ್ಮುಚ್ಚಿ ನೆನೆದು ಮನದ ಕಣ್ಣೊಳ್ ಸನ್ನೆಗೆಯ್ದು (ಗಿರಿಕ. ೨-[illegible] ವ). **ಸನೆಯಗೈ** : ಉಭಯದಂತದೊಳಗೌಂಕೆ ಮುಂಗುರುಳಲವನಿಗೆ ನಾಟಲು ಸನಯಗೈದು (ಜನಮು. ೫-೩೬). **ಸನ್ನೆಗೈ** : ಮುದದಾಪ್ತಗೆ ಸನ್ನೆಗೈವನು (ಮಲದೇ. ೫೧-೧೦); ಬಿಡದೆ ಬೇಂಟೆಗೆ ಸನ್ನೆಗೈದು (ಇಟಸಾಂ. ೬-೫೫). **ಸೌಜ್ಞೆಗೆಯ್**: ನಿದ್ರೆ ಬರಲೊಲ್ಲದೆನುತ ಸೌಜ್ಞೆಗೆಯೆ ಜಾರನು ಬಂದು ಉಲ್ಲಾಸದಿಂದಪ್ಪಿ (ನವಮೋ. ೧೭-೨೭). [ಸನ್ನೆ$_2$ + ಕೆಯ್$_1$]

**ಸನ್ನೆಗೈ** 'ಸನ್ನೆಗೆಯ್' ನೋ.

**ಸನ್ನೆಗೋಲು**, **ಸೊನ್ನೆಕೋಲು** (ನಾ). = ಸನ್ನೆ$_1$ : ಚನ್ನಾಗಿ ತೆರೆಯ ಹಿಡಿಯಯ್ಯ ನಾರಂದ ಸನ್ನೆಗೋಲಿಕ್ಕಿ ತಡಹಿದ (ಗುಂಡುಸು. ೩-೩); ಕನ್ನಡನಾಡಿನ ಹಳಮೆಯು ಕನ್ನಡ ನಾಡಿನಲ್ಲಿ ಹೆಮ್ಮೆಯನ್ನು ಹುಟ್ಟಿಸಲು ಸನ್ನೆಗೋಲಿನಂತೆ ಆಗಿದೆ (ಪ್ರವಾಾ. I. ೧೦೬). **ಸೊನ್ನೆಕೋಲು** : (ಶಿ). [ಸನ್ನೆ$_1$ + ಕೋಲು$_1$ (< ಕೋಲ್$_1$)]

**ಸನ್ನೆದಗರ್** (ನಾ). (ಹೋರಾಟಕ್ಕೆ) ಸನ್ನೆಯನ್ನು ಸೂಚಿಸಿ ಬಿಟ್ಟ ಪಳಗಿದ ಟಗರು : ಪರಿವಡಿಯಂಕದಂತೆ ಪೊಱಮಟ್ಟದೆ ಸೂಟಿಱಿಪೊಳ್ಕಿದುಳ್ ಸಿಡಿಲ್ವರೆ ಪೊಱಸಾರ್ದು ಸನ್ನೆದ [ಪಾಠಾಂ.ಶ]ಗರಂದದೆ ತಾಗುವ ಝುಟ್ಟಿಮಲ್ಲರಂತಿರೆ . . . ಪೋರ್ದುವಾನೆಗಳ್ (ವರ್ಧಪು. ೮-೫೩). 'ಸನ್ನೆಯಾನೆ' ಪರಾ. [ಸನ್ನೆ$_2$ + ತಗರ್$_2$]

**ಸನ್ನೆದೆಗೆ** (ಕ್ರಿ). ಸನ್ನೆಕೋಲನ್ನು ತೆಗೆದುಕೊಳ್ಳು : ಮೇಕಲಾಸುರ ಕೇಳಿ ಸನ್ನೆದೆಗದು ರಜತಾದ್ರಿಯ ಹಾಯಲು ಪರ್ವತ ಗದಗದನೆ ನಡುಗಲು (ಭೈರಸೂ. I, ೧೧೨). [ಸನ್ನೆ$_1$ + ತೆಗೆ$_1$]

**ಸನ್ನೆದೋಱು** (ಕ್ರಿ). ಸಂಕೇತಕೊಡು; ಸಂಜ್ಞೆಮಾಡು : ಕೊರಲಂ ನೀಡಿ ಕಯ್ಯಂ ಪಿಡಿದು ತಲೆಯಂ ತೂಗುತ್ತುಂ ಸನ್ನೆದೋಱುತ್ತುಂ (ಧರ್ಮಾಮೃ. ೫-೧೩೬); ಕೇಕರಿಸಿ ಕೆಮ್ಮಿ ಸೀತುಂ ಪೆರರ ಕರೆದು ಮೊದಲಾಕೆಗೀ ಪರಿ ಸನ್ನೆದೋಱಿದುಪಪತಿಗೆ ನಾನಾ ಕುಶಲಮಪ್ಪ ಸಂಜ್ಞೆಗಳಿಂದಮೆರ್ದೆಗೆ ತರಹರವಿತ್ತು (ಜಿಬಪು. ೯-೧೩); ಕಂಗಳೊಳಗೆ ನುಡಿ ಕರದಭಿನಯದ ಬೆಡಂಗಿನೊಳಗೆ ಸನ್ನೆದೋಱಿ (ಕಂಸವಿ. ೬-೧೨೭). [ಸನ್ನೆ$_2$ + ತೋಱು]

**ಸನ್ನೆನೋಟ** (ನಾ). ಸಂಕೇತಸೂಚಕವಾದ ನೋಟ : ಸನ್ನೆನೋಟಗಳ ತಿರುಹು ಮುರುಹಿಂದ ವಿಟನೆದೆಗೆಱಗಿಪ ತರುಣಿಯೊರ್ವಳು ರಾಜಿಪಳು (ಕಂಸವಿ. ೨-೯೪); ಸನ್ನೆನೋಟ [ಪಾಠಾಂ. ಸನ್ನೆಯ ನೋಟ, ನೋಟವು] ಸನ್ಮಾನದ ಸವಿನೋಟ ಮನ್ಮಥ

**ಕೀಳಿಯ ನೋಟ** ಬಿನ್ನಣದ ತೇಲ್ಪ ನೋಟವ ನೋಡುತಲಾಗ ಚೆನ್ನೆಯರಿರ್ದರೊಂದೆಸೆಯ (ಶಿವ್ಯಲಿಪು. ೩-೧೦೯). [ಸನ್ನೆ$_1$ + ನೋಟ]

**ಸನ್ನೆಮಾತು** 'ಸನ್ನೆವಾತು' ನೋ.

**ಸನ್ನೆಯ** (ನಾ). ಸೈನ್ಯದ ಹಿಂದುಗಡೆ ಸಿದ್ಧವಾಗಿರುವ ಪಡೆಯವನು; ಕುಮ್ಮಕ್ಕಾಗಿರುವ ಫೌಜಿನವನು : ವೀರಾರಿಗಳುಬಿದದಟಮ್ಮರ್ನ್ನೆಯರ್ಸ್ವಂನ್ನೆಯ ಬ್ಬಾರ್ಳ್ಳಲಿಯಂ ಸರ್ವಸ್ವಮಂ ಕೊಟ್ಟಡಿಗೆಲಗಿ (ಮುಂಬರಾ. XI. ೨೪೮-೧೪ : 1121). [< ಸಂ. ಸನ್ನಯ]

**ಸನ್ನೆಯಗಾರ** (ನಾ). ಅಣಿಮಾಡುವವನು : ಪಿನ್ನಯ್ಯನು ಬಹು ಸನ್ನೆಯಗಾರನು ಗುನ್ನನ ಕೈಯೊಳಗನ್ನವ ತಾನುಂಡು ನನ್ನಿಸಿ ಬರುತಿಹನೆನ್ನುತ ಜರಿದಾ ಕನ್ನನ ಕರೆಯುತ ಹೊನ್ನನ ಬರಹೇಳೆನುತ ಶಬರರು ಮನ್ನಿಸಿ ವನದೊಳು ಬಿನ್ನಣವಾಡುತಲಿ (ಹಮಚ. ೧೭). [ಸನ್ನೆಯ + -ಗಾರ (< -ಕಾಱ)]

**ಸನ್ನೆಯಾನೆ** (ನಾ). (ಹೋರಾಟಕ್ಕೆ) ಸನ್ನೆಯನ್ನು ಸೂಚಿಸಿ ಬಿಟ್ಟ ಪಳಗಿದ ಆನೆ: ಮದವಳಿಯದ ಕೂರಾನೆಗಳೊತ್ತಿದೊಡೊದಗುವ ಸನ್ನೆಯಾನೆಗಳು (ಕುರಾಸಾಂ. ೧೧-೨೯). [ಸನ್ನೆ$_2$ + ಆನೆ$_1$]

**ಸನ್ನೆವಱೆ** (ನಾ). ಸಂಕೇತಸೂಚಕವಾಗಿ ಬಾರಿಸುವ ಹರೆ,— ತಮಟೆ: ಅನ್ನೆಗಮುತ್ತಮಲಗ್ನದ ಬರವಿನ ಸನ್ನೆವಱೆಯಿನೋಸರಿಸುವ ಜವನಿಕೆಯನ್ನೋಡುವ ಜನಜಾಲದಿನಂಗಜನೃಪವರನನುಮತದಿ . . . ಮದವಕ್ಕಳ್ಸಾಳಂದದಿನೊಪ್ಪಿದರು (ಜಯಕಾ. ೮-೩೦); ಪುರಮಂ ಮುತ್ತಿ ಬೊಬ್ಬಿಱಿದು ಸನ್ನೆವಱೆಗಳಿಂ ಕಾಳೆಗಕರಿರಾಜರಂ ಕರೆದರ್ (ರಾಮಾಶ್ವ. ೧೨೭-೧೯). [ಸನ್ನೆ$_2$ + ಪಱೆ$_1$]

**ಸನ್ನೆವಾತು, ಸನ್ನೆಮಾತು** (ನಾ). ಸಂಕೇತದ ಮೂಲಕ ಹೇಳುವ ಮಾತು: ನಗೆಯ ನಯನದ ಸನ್ನೆವಾತಿನ ಸೊಗಸಿನಬಲಾಜನದ ಕೈಗಳಲಗಿವ ಚಾಮರ ವೆಸೆದವಿದ್ದೆಸೆಯಲಿ ದಶಾನನನ (ತೊರರಾ. ೬-೧೧-೧೨). **ಸನ್ನೆಮಾತು:** ಧರ್ಮರಾಯನು . . . ತಮ್ಮವರೆಂದು ತಿಳಿಯುವುದಕ್ಕಾಗಿ ತಕ್ಕಂತಾ ಗುರುತುಗಳನ್ನು ಸನ್ನೆಮಾತುಗಳನ್ನು ಏರ್ಪಾಡುಮಾಡಿದನು (ಕೃವಾಭೀ. ೭). [ಸನ್ನೆ$_2$ + ಮಾತು$_1$]

**ಸನ್ನೆವೇಂಟೆ** (ನಾ). ಸಂಕೇತದ ಮೂಲಕ ಮಾಡುವ ಪ್ರಾಣಿಗಳ ಬೇಟೆ; ಸಂಜ್ಞೆಯಲ್ಲಿಯೇ ಸೂಚನೆ ಮಾಡಿ ಆಡುವ ಬೇಟೆ : ಪಂದಿಗೊಪ್ಪುವ ಮೊಳಕೈಯ ತೋರ್ಪರರೆಬರ್ ಬಿಯದರ್ ಸಲೆ ಸನ್ನೆ ವೇಂ [ಪಾಠಾಂ. ವೇ]ಟೆಯೊಳ್ (ರಾಜಶೇ. ೫-೮೫); ವರಾಹಯೂಥಮೇಟ್ಟರೆ ಮಣಿಕಾಲ್ಗಳಿಂ ಮಡಿದು ತೋಱಿದ ರೊಯ್ಯನೆ ಸನ್ನೆವೇಂಟೆಯೊಳ್ (ಶಬಶಂ. ೩-೪೭). [ಸನ್ನೆ$_2$ + ಬೇಂಟೆ]

**ಸನ್ನೆವೇಂಟೆಗೆಯ್** (ಕ್ರಿ). ಸಂಕೇತದ ಮೂಲಕ ಪ್ರಾಣಿಗಳನ್ನು ಬೇಟೆಯಾಡು : ಸೊಪ್ಪುಳಾಗದಂತು ಸನ್ನೆವೇಂಟೆಗೆಯ್ಯುತ್ತುಮಳವಿಗೆಟ್ಟು ಕೊಟ್ಕಿಗಂಗಳಂ ಸಂಹರಿಸಿದರ್ (ರಾಮಾಶ್ವ. ೮೪-೧೫). [ಸನ್ನೆವೇಂಟೆ + ಕೆಯ್$_1$]

**ಸನ್ನೊಸಗೆ** (ನಾ). ಮಂಗಳಕಾರ್ಯ : ವಿರಹಿಗೆತ್ತಿದ ಸಬಳ ಯೋಗಿಗಳುರದ ಶೂಲ ವಿಯೋಗಿ ಕೌಂಗಿದ ಸುರಗಿ ಸನ್ನೊಸಗೆದೆದಲ್ಲಣ ವರತಪಸ್ವಿಗಳ ಶರದಲುಡಿದತಿ ಸತಿಯರಿಗೆ ದಳ್ಳುರಿ ಸುಭೋಗಿಗಳಾಶ್ರಯವು ಶಂಬರವಿರೋಧಿಯ ಸೈನ್ಯವೆನೆ ವನವೆಸೆದುದೊಗ್ಗಿನಲಿ (ಜೀವಂಚ. ೧೭-೨೪). [(ಸಂ. ಸತ್) + ಒಸಗೆ]

**ಸನ್ಮಂತ** 'ಸನುಮತ' ನೋ.

**ಸನ್ಮಂತ್ರ** (ನಾ). ೧. ಶ್ರೇಷ್ಠವಾದ ಮಂತ್ರ. ೨. ಪಂಚಾಕ್ಷರೀ ಮಂತ್ರ ; ನಮಃ ಶಿವಾಯ : 'ಸನ್ಮಂತ್ರಲಕ್ಷ' ಪರಾ. ೩. (ಆಲಂ) ಉಚಿತವಾದ ಮಂತ್ರಾಲೋಚನೆ ; ಯೋಗ್ಯವಾದ ಗುಪ್ತಾಲೋಚನೆ : ತಂತ್ರ ನಿಯಂತ್ರಣಂ ಬಿನದವೋಲಗಮುಕ್ಕರಗೊಟ್ಟ ಕಾರ್ಯಸನ್ಮಂತ್ರಮುದಾತ್ತವೃತ್ತಿ . . . ಎಂಬಿವನಾಗಳುಂ . . . ಒಡರ್ಚುವಂ (ಶಾಂತಿಪು. ೭-೧೧೦). [ಸಂ.]

**ಸನ್ಮಂತ್ರಲಕ್ಷ** (ನಾ). ಪಂಚಾಕ್ಷರೀಮಂತ್ರದಲ್ಲಿ ಗಮನವಿರುವವನು: ಇವನೇ ಸತ್ಯೇಂದ್ರನಪ್ಪಂ ಬಗೆವೊಡಮಮ ಸತ್ಯೇಂದ್ರಚೋಳೋರ್ವಿಪಂ ಮತ್ತಿವನೇ ಸನ್ಮಂತ್ರಲಕ್ಷಂ ನಿಜದಿನರರೆ ಸನ್ಮಂತ್ರಲಕ್ಷಂ ಬಳಿಕ್ಕಿಂತಿವನೇ ನೋಳ್ಪಾಗಳಾಹಾ ಮಿತವಚನಂ (ರಾಜಶೇ. ೧೪-೧೦೩). [ಸಂ.]

**ಸನ್ಮಡದಿ** (ನಾ). ಒಳ್ಳೆಯ ಹೆಂಡತಿ ; ಉತ್ತಮಸತಿ : ಕಾರ್ತವೀರ್ಯಾರ್ಜುನನ ಸನ್ಮಡದಿ ಚಳಕದಿಂದಾಗೆನುತೆ (ಪರಶು. ೮-೧೪). [(ಸಂ. ಸತ್) + ಮಡದಿ]

**ಸನ್ಮತ** (ನಾ). ೧. ಒಳ್ಳೆಯ ಭಾವನೆ ; ಸದ್ಭಾವ. ೨. ಒಪ್ಪಿಗೆ ; ಸಮ್ಮತಿ : ಶರಣಸನ್ಮತ [ಪಾಠಾಂ. ಸನ್ನಿಹಿತ]ವಪ್ಪ ನಿಜಗುಣಭರಿತನಪ್ಪಡೆ ಸತ್ವರಜತಮಕ್ರೋಧ ಬಿಡದನ್ನಕ್ಕ ಅನುಭಾವವೆಲ್ಲಿಯದೊ (ಬಸವ. ೮೫೫) ; ನಿಮಗೆ ತರಣೇಂದುಧರನಿರೆ ಅನ್ಯದೈವದ ಸೇವೆ ಸನ್ಮತವೆ (ಬಸವು. ೩-೭೬). ೩. ಒಳ್ಳೆಯ ಅಭಿಪ್ರಾಯ; ಸದಭಿಪ್ರಾಯ: ಪೂರಾಯ ಸನ್ಮತವಾಗಿ ಮುಳುಗಿ ಕೂಡಲಸಂಗನ ಕೃಪೆಯಿಂದುಳಿದೆ (ಶಿವಗೀ. ೧೦೮-೫೩೦). [ಸಂ.]

**ಸನ್ಮತಿ** (ನಾ). ಒಳ್ಳೆಯ ಬುದ್ಧಿ,— ಜ್ಞಾನ : ಆತನೂರ್ಜಿತಭಕ್ತಿಸನ್ಮತಿಗೆ . . . ಮೆಚ್ಚಿ ತಮ್ಮೊಳು ಸಂಭ್ರಮಿಸುತಿರಲು (ಬಸವು. ೨೫-೫೦). [ಸಂ.]

**ಸನ್ಮತಿವೆಱು** (ಕ್ರಿ). ಒಳ್ಳೆಯ ಬುದ್ಧಿಯನ್ನು ಪಡೆ ,— ಹೊಂದು : ಕುವಲಯದಳನೇತ್ರ ಕೇಳು ಕೇವಲ ವೈಷ್ಣವರಾಯರುಗಳಿರ್ದೆಸೆಯ ಪವನ ಬಂದೆಱಗೆ ಸನ್ಮತಿವೆತ್ತು ಪೇಳುವೆ ಶ್ರವಣಕಾನಂದವೆನಿಸಿ (ಮೋಹತ. ೮-೨). [ಸನ್ಮತಿ + ಪೆಱು$_1$]

**ಸನ್ಮಥನ** (ನಾ). ಚೆನ್ನಾಗಿ ಕಡೆಯುವುದು: ಲೋಲಮನದೊಳು ಲಿಂಗಭಕ್ತ ಸಮ್ಮೇಳ ದೆರಡಱ ಸನ್ಮಥನದಿಂ ಬಾಳಿನಿರವುಂ ಪ್ರಾಣಪದವಾಗಿಪ್ಪುದು (ಬಸವು. ೫೦-೨೩). [ಸಂ.]

**ಸನ್ಮಹಿತ** (ನಾ). ಒಳ್ಳೆಯ ಗೌರವವನ್ನು ಹೊಂದಿರುವವನು : ಸನ್ಮಹಿತ ಮಹಿಮರೆನಿಸಿದ ತನ್ಮುನಿಪನ ಪಾರ್ಶ್ವದಲಿ ಜಿನದೀಕ್ಷೆಯನುದ್ಯನ್ಮುದದಿಂ ತಳೆದಂ ಮಹಿಭೃನ್ಮುಕುರಸ್ತಿಮಿತಸಾಗರಕ್ಷಿತಿನಾಥಂ (ಶಾಂತೀಶ್ವ. ೭-೮೮). [ಸಂ.]

**ಸನ್ಮಾನ** (ನಾ). ೧. ವಿಶೇಷವಾದ ಗೌರವ,— ಮಾನ್ಯತೆ :ಸನ್ಮಾನದಾನಾದಿಗಳೊಳ್ ಸಂತಸಂಬಡಿಸಿ (ಆದಿಪು. ೧೩-೪೧ ವ) ; ಅನಂತಕೋಟಿ ಸನ್ಮಾನವ ಮಾಡಿದರೇನು ನಿಮಿಷದುದಾಶೀನ ಕೆಡಿಸಿತ್ತು (ಬಸವ. ೩೮೨). ೨. ಪುರಸ್ಕಾರ; ಬಕ್ಷೀಸು: ನಾವು ಪಟ್ಟ ಶ್ರಮಕ್ಕಾಗಿ ತಕ್ಕ ಸನ್ಮಾನವನ್ನು ಕೊಡಿ ಎಂದು ಕೇಳಿಕೊಂಡರು (ಪ್ರತಾಪ. ೩೫). ಸನ್ಮಾನಮಾಡು = (ತುಂಬಿದ ಸಭೆಯಲ್ಲಿ) ವಿಶೇಷವಾದ ಗೌರವವನ್ನು ತೋರು,— ವ್ಯಕ್ತಪಡಿಸು: ಹಲವಾರು ಸಂಘಸಂಸ್ಥೆಗಳ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ ಅವರಿಗೆ ಸನ್ಮಾನ ಮಾಡಲಾಯಿತು (ರೂಢಿ). [ಸಂ.]

**ಸನ್ಮಾನಂಬೆಱು** (ಕ್ರಿ). ವಿಶೇಷವಾದ ಗೌರವವನ್ನು ಪಡೆ,— ಮಾನ್ಯತೆಯನ್ನು ಹೊಂದು : ನಿರ್ವಿಕಲ್ಪಂ ಶಿವಂ ಸನ್ಮಾನಂಬೆತ್ತೋವುಗೆನ್ನಂ ಪರಮಗುರು ವಿರೂಪಾಕ್ಷಲಿಂಗಂ ಸಿತಾಂಗಂ (ಉದ್ಭಟ. ೧-೧). [ಸನ್ಮಾನ + ಪೆಱು$_1$]

**ಸನ್ಮಾನಕ್ರಿಯೆ** (ನಾ). ವಿಶೇಷವಾದ ಮಾನ್ಯತೆಯನ್ನು ತೋರಿಸುವ ಕೆಲಸ: ಮೃಗರಾಜಂ ಕೈನೀಡಿ ಸಂಜೀವಕನನೇಕಪ್ರಕಾರ ಸನ್ಮಾನಕ್ರಿಯೆಗಳಿಂ ತಣಿಪಿ (ಪಂಚತಂ. ೫೭-೧೯). [ಸಂ. ಸನ್ಮಾನಕ್ರಿಯಾ]

**ಸನ್ಮಾನತೆ** (ನಾ). ವಿಶೇಷವಾದ ಮಾನ್ಯತೆಯನ್ನು ಪಡೆಯುವಿಕೆ: ಈ ವಿನುತಸಿತಕೀರ್ತಿಯಾ ಸದ್ಭಾವಶುದ್ಧತೆಯಾ ಪ್ರಸಿದ್ಧತೆಯಾ ವಿಬುಧಸನ್ಮಾನತೆಯು ನಿಮಗೀಯಹಂಕೃತಿಯೆ (ಬಸವು. ೪೭-೧೧). [ಸಂ. ಸನ್ಮಾನತಾ]

**ಸನ್ಮಾನಿ** (ನಾ). ವಿಶೇಷವಾದ ಗೌರವವನ್ನು ಪಡೆದ ವ್ಯಕ್ತಿ; ಮಾನ್ಯ ವ್ಯಕ್ತಿ: ಈ ನಗರಿಯೊಳಗೆನ್ನ ಮಗಳಿಗೆಣೆಯಿಲ್ಲ ಸುಮ್ಮಾನಿ ಸನ್ಮಾನಿಯಭಿಮಾನಿ ಕಡುನೀಱೆ ಕಮಲಾನನೆಯ ರೂಹಿಂಗೆ ಸರಿಯಪ್ಪ ವಿಟರ ನಾನಾರುವಂ ಕಂಡುದಿಲ್ಲ (ಹಚಕಾ. ೪-೨೦). [ಸಂ. ಸನ್ಮಾನಿನ್]

**ಸನ್ಮಾನಿತ** (ಗು). ೧. ವಿಶೇಷವಾಗಿ ಗೌರವಿಸಲ್ಪಟ್ಟ,— ಮಾನ್ಯತೆ ಪಡೆದ. (ನಾ). ೨. ವಿಶೇಷವಾದ ಗೌರವವನ್ನು ಪಡೆದವನು : ರಾಜಶೇಖರ ಪ್ರೇಷಿತನಲ್ಲಿಗೇಳ್ತಂದು ನಿಜವಿನಯಮಂ ಮೆಱೆದು ತನ್ನರೇಂದ್ರಸನ್ಮಾನಿತನುಚಿತ ವಚನದಿನಿಂತೆಂದಂ (ರಾಜಶೇ. ೭-೯೭ ವ). [ಸಂ.]

**ಸನ್ಮಾನಿಸು** (ಕ್ರಿ). ವಿಶೇಷವಾಗಿ ಗೌರವಿಸು,— ಮಾನ್ಯತೆ ಕೊಡು : ಉನ್ಮುಖಿಂ ಕಂಡಿದಿರ್ಗೊಂಡಗ್ರಜಾತೆಯಂ ಸನ್ಮಾನಿಸಿದಂ (ಜೈಮಿಭಾ. ೯-೨೧) ; ಜನತೆಯು ಇವರನ್ನು ಸನ್ಮಾನಿಸುತ್ತಿತ್ತು (ರಾಜವ. ೭). [ಸನ್ಮಾನ + -ಇಸು$_1$]

**ಸನ್ಮಾನ್ಯೆ** (ನಾ). ವಿಶೇಷವಾದ ಗೌರವವನ್ನು ಪಡೆದವಳು; ಮಾನ್ಯೆ: ಕೀರ್ತಿಯಂ ಮೇಣ್ ಜನಪ್ರೀತಿಯಂ ತೆತ್ತಾಕೆ ತಾಂ ಧನ್ಯೆ ದೇವಸನ್ಮಾನ್ಯೆ (ಶ್ರೀರಾಮಾ. ೧೭೦-೩೨೭). [ಸನ್ಮಾನ್ಯ + - ಎ]

**ಸನ್ಮಾರ್ಗ** (ನಾ). ೧. ಒಳ್ಳೆಯ ದಾರಿ ; ಸರಿಯಾದ ಮಾರ್ಗ. ೨. ನಕ್ಷತ್ರಗಳ ದಾರಿ; ಆಕಾಶ. ೧, ೨ : ಉತ್ಸಾಹಮಂ ಮಾಡದಿರ್ಪುದೆ ಸನ್ಮಾರ್ಗದೊಳಂ ಕ್ರಮಾಧಿತರೊಳುದ್ಯದ್ವಾನಸಂಪ್ರೀತಿಯುಂ (ಪುಷ್ಪಪು. ೧೦-೧೧) ; ಸನ್ಮಾರ್ಗದಿಂ ನಡೆದು ದೋಷಾಕರಂ ಮಲಿನನುನ್ಮಾರ್ಗನತಿಜಡಂ ಪಕ್ಷಕಂ ಗರಳಸಹಜನ್ಮನೆನಿಸಿದನಂತೆ ಗಡ ಚಂದ್ರನಂ ತನ್ನ ಕೊಂಕಿಂದಮೆಂದು ಕದಳಂ (ಉದ್ಭದೇ. ೨-೨೩). ೩. ಮೋಕ್ಷ ಸಾಧನೆಯ ಮೂರು ಮುಖ್ಯಮಾರ್ಗಗಳಲ್ಲಿ ಒಂದು ; ಅರಿವಿನಿಂದ ಮೋಕ್ಷವನ್ನು ಸಾಧಿಸುವ ಮಾರ್ಗ : ಜ್ಞಾನಮಾರ್ಗ ಅಥವಾ ಸನ್ಮಾರ್ಗ ವನ್ನನುಸರಿಸಿ ಧ್ಯಾನಪೂರ್ವಕ ಸಮಾಧಿಸ್ಥಿತಿಯನ್ನು ಹೊಂದಿ ಶಿವಸಾಯುಜ್ಯವನ್ನು ಹೊಂದುವನು (ಭಾರದ. ೨೧೭). ೪. [ಕಾವ್ಯಮಿ] ದೇಸಿಯಲ್ಲದ ಸಾಂಪ್ರದಾಯಿಕ ಮಾರ್ಗಪದ್ಧತಿ : ಸನ್ಮಾರ್ಗನಾಟಕಾರಂಭಪ್ರಸ್ತುತಪವಿತ್ರಸೂತ್ರಧಾರನೆ ಮುಂದೆ ನಿಂದು ಪುಷ್ಪಾಂಜಳಿಯಂ ಕೆದಱಿ (ಶಾಂತಿಪು. ೧೦-೬೦ ವ). [ಸಂ.]

**ಸನ್ಮಾರ್ಗಪಾಂಥ** (ನಾ). ಮೋಕ್ಷಸಾಧನೆಯ ಮಾರ್ಗದಲ್ಲಿ ನಡೆಯುವವನು : ಅನಘನೇ ಪ್ರಾಣಲಿಂಗಿಯ ಭಕ್ತನಪ್ಪನ್ನೆ ನಿನಗೆ ತಿಳಿಪಿದೆವಲಾ ಮಗನೆ ಕೇಳೆಂದು ಚಿದ್ಘನಜಾರ್ಕ ಗುರುನಾಥನೊರೆದನಂತಾ ಶರಣಯೂಥ ಸನ್ಮಾರ್ಗಪಾಂಥ (ವೀಶೈಪು. ೮-೧೪-೨೮). [ಸಂ.]

**ಸನ್ಮಾರ್ಗವರ್ತನ** (ನಾ). ಒಳ್ಳೆಯ ರೀತಿಯ ನಡವಳಿಕೆ : ನಮಿಸೆ ಲೇಸಾಗಲಿ ಎಂದು ಹರಸಲೊಲ್ಲದೆ ಸುಮ್ಮನಿಹುದಿದು . . . ಸನ್ಮಾರ್ಗವರ್ತನವೆ (ಬಸಪು. ೪೫-೧೦). [ಸಂ.]

**ಸನ್ಮಾರ್ಗವಿಡಿ** (ಕ್ರಿ). ಒಳ್ಳೆಯ ದಾರಿಯನ್ನು ಹಿಡಿ; ಉತ್ತಮಮಾರ್ಗದಲ್ಲಿ ಪ್ರವರ್ತಿಸು: ವಿರಚಿಸಿದೆನೆಲ್ಲಾ ಕವೀಶ್ವರರುದಾಹರಣ ಸನ್ಮಾರ್ಗವಿಡಿದು (ಶಬ್ದಮಂ. ೧೨೦). [ಸನ್ಮಾರ್ಗ + ಪಿಡಿ]

**ಸನ್ಮಾರ್ಗಸಾರ** (ನಾ). ಮೋಕ್ಷಸಾಧನೆಯ ಸತ್ತ್ವವನ್ನು ಅರಿತವನು: ವಿವಿಧದೇಶಂಗಳೊಳ್ ಕೂಡೆ ವಿಭ್ರಾಜಿಸಿದಂ ಸನ್ಮಾರ್ಗಸಾರಂ ಪರಮಜಿನ ಮತಾಂಭೋಜಿನೀರಾಜಹಂಸಂ (ಸುಕುಮಾ. ೮-೬೧). [ಸಂ.]

**ಸನ್ಮಾರ್ಗಿ** (ನಾ). = ಸನ್ಮಾರ್ಗಸಾರ : ವೀರಸಿರಿಯ ಕಟಾಕ್ಷವಾರಿಗೆ ಸೇರುವುದು ಸನ್ಮಾರ್ಗಿಗಲ್ಲದೆ ತೀರಿತವನಾಯುಷ್ಯ ಪರಸತಿಗಳುಪಿ ಖಳ ಕೆಟ್ಟ (ಕಾಶಿರಾ. ೨೨-೫). [ಸಂ. ಸನ್ಮಾರ್ಗಿನ್]

**ಸನ್ಮುದ** (ನಾ). ಒ[illegible]ಮ ಸಂತೋಷ ; ಮಹದಾನಂದ: ಸನ್ಮುದದಿಂ ಪೊಕ್ಕಾಗಳೆ ತನ್ಮಂದಿರದೊಳಗೆ ರೋಹಣಾಚಳಮೆನಿಪುದ್ಯನ್ಮಣಿಮಯವಿಷ್ಟರವಿಳಸನ್ಮಸ್ತಕರತ್ನ ವಾದನಾ ಖಚರೇಂದ್ರಂ (ಶಾಂತೀಶ್ವ. ೨-೫೧); ಅಕ್ಕಱಿಂ ಮೈದಡಹಿ ತಕ್ಕರಿಸಿ ತನ್ನ ಪ್ರಸಾದವನಿಕ್ಕಿ ಸನ್ಮುದವುಕ್ಕಿ ಸಂಗಮದೇವನಾ ಗೃಹವ ಹೊಕ್ಕನು (ಬಸಪು. ೪-೭೦). [ಸಂ. ಸನ್ಮುದಾ]

**ಸನ್ಮೋಹನ** (ನಾ). ಆಕರ್ಷಣೆ; ಮೋಹ: ಮನಸಿಜ ಶಶಾಂಕ ಕರ್ಕಟಕ ಚೇಳಂಗುಡುವ ತನಿಸೊಬಗುವಡೆದ ಸನ್ಮೋಹನದ ಕಣಿಯೆ ಬಾ (ಜೈಮಿಭಾ. ೬-೨೫). [< ಸಂ. ಸಮ್ಮೋಹನ]

**ಸನ್ಮೋಹನಾಸ್ತ್ರ** (ನಾ). ಮೋಹವನ್ನುಂಟುಮಾಡಿ ಮಂಕುಕವಿಸುವ ಬಾಣ : ಅನುವರದೊಳಿರ್ವರಂ ಘಾತಿಸದೆ ಸನ್ಮೋ [ಪಾಠಾಂ. ಮ್ಮೋ]ಹನಾಸ್ತ್ರದೊಳ್ಮರವೆಗೊಳಿಸಿ (ಜೈಮಿಭಾ. ೨೧-೨); ನೆರೆದ ರಾವಣ ಮೂಲಸೈನ್ಯವನೊರಸಲಾ ಸನ್ಮೋಹನಾಸ್ತ್ರವ ತಿರುವಿಗೇರಿಸಿಯೆ ಹರಿಸಲು ಆ ಬಲಿ ಮುರಿದು ನೆರೆ ನುಗ್ಗಾಯಿತು (ಗಗತಾ. ೧೯-೩೭). [< ಸಂ. ಸಮ್ಮೋಹನಾಸ್ತ್ರ]

**ಸನ್ಮೋಹಿಸು** (ಕ್ರಿ). ಮೋಹವನ್ನು ಉಂಟುಮಾಡು; ಮರುಳಾಗುವಂತೆ ಮಾಡು: ಚನ್ಮಾರ್ಗಚಕ್ರಿಯ ಸಖಿ ಬಂದವನವಧಾನ ಸನ್ಮೋಹಿಸಲ ಪರಾಕೆಂದ (ಭರಚ. ೪೭-೬೯). [ಸನ್ಮೋಹನ + - ಇಸು]

**ಸನ್ಯಂಗ, ಸನ್ಯಾಂಗ** (ನಾ). ಕಳ್ಳತನಮಾಡಿದ ವಸ್ತು ; ಕದ್ದ ಮಾಲು (?): ಅರಸನಾ ಕೃತಕ ತಪೋಧಾರಿಯ ಗುಹೆಯಂ ಶೋಧಿಸೆ ಮುನ್ನ ತನ್ನ ಪೊಟಲೊಳ್ ಪೋದ ಪಲವು ವಸ್ತುಗಳಂ ಸನ್ಯಂಗವೆರಸಿ ಕಂಡು (ಪಂಚತಂ. ೨೩೭-೨೧); ಎಳೆಳೆ ರಕ್ಕಸಿಯಾಗದಿರಳಿವಳು ನಾವಿಲ್ಲಿ ಕೊಲಬೇಡ ಸನ್ಯಂ [ಪಾಠಾಂ. ವೀಯಂ]ಗವೆರಸಿ ಕೊಂಡೊಯ್ದು ಭೂತಲಪತಿಗೆ ಕೊಡುವೆ (ಹಚಕಾ. ೧೩-೩). **ಸನ್ಯಾಂಗ** : ಚರಮಾಂಗ ಪ್ರಮ ಚಿದ್ಘನಾಕೃತಿಯೆ ಪೆರ್ಚಂ ಕಂಡು ಸನ್ಯಾಂಗದೊಳ್ ಪರಿವೆಲ್ಲಿಪ್ಪುದೆಱಿಂದಮಿಂತು ಮುಚಿತಸೌಖ್ಯಪ್ರದೇಶಪ್ರಬಂಧುರನಷ್ಟಾಷ್ಟಕಳಂಕ (ನಿರ್ವಾಮಾ. ೨೪). [?]

**ಸನ್ಯಸನ** (ನಾ). ೧. ಬಿಡುವುದು; ತೊರೆಯುವುದು. ೨. [ಜೈನ] ಆಹಾರ, ಪಾನೀಯಗಳೇನನ್ನೂ ತೆಗೆದುಕೊಳ್ಳದೆ ಉಪವಾಸ ಮಾಡುವ ವ್ರತ; ಸಲ್ಲೇಖನ ವ್ರತ: ಸ್ವಸ್ತಿಶ್ರೀ ಮಹಾವೀರ XX ಅಟ್ಟುಱ ತಮ್ಮಡಿಗಳ ಸನ್ಯಸನದಿನಿತಮ್ಮಜ್ಜಯ ನಿಸಿಧಿಗೆ (ಎಕ. II. ೧೫-೨ ; 800) ; ನಾಮಲ್ಲಿ ಧೈರ್ಯಮನೆ ಮನದೊಳವಳಂಬಿಸಿ ಚತುರ್ವಿಧಾಹಾರ ಶರೀರ ಪ್ರತ್ಯಾಖ್ಯಾನಪೂರ್ವಕಂ ಸನ್ಯಸನದಿಂ ಮುಡಿಪಿ (ಶಾಂತಿಪು. ೪-೯೭ ವ) ; ಆ ಶಾಂತಿಮತಿ ಕಡೆಯೊಳು ಸನ್ಯಸನದಿಂದ ತಾ ಶರೀರವ ಬಿಟ್ಟು (ಶಾಂತೀಚ. ೪-೫೪). [ಸಂ. ಸಂನ ಸನ]

**ಸನ್ಯಸನಂಗೆಯ್** (ಕ್ರಿ). [ಜೈನ] ಆಹಾರ, ಪಾನೀಯಗಳೇನನ್ನೂ ತೆಗೆದುಕೊಳ್ಳದಿರು ; ಸಲ್ಲೇಖನವ್ರತಮಾಡು : ಜಕ್ಕಿಯಬ್ಬೆ ಸನ್ಯಸನಂಗೆಯ್ದು ಮುಡಿಪಿದಳ್ (ಎಕ. IX. ಕೊಡಗು. ೩೦-೧೧ ; 1050). [ಸನ್ಯಸನ + ಕೆಯ್]

**ಸನ್ಯಸನವಿಧಾನ** (ನಾ). [ಜೈನ] ''ಕಷಾಯಗಳನ್ನು ಕಡಿಮೆಮಾಡಿ ಆಹಾರಾದಿಗಳನ್ನು ಕಡಿಮೆಮಾಡಿ ಪಂಚಪರಮೇಷ್ಠಿಗಳ ಧ್ಯಾನದಲ್ಲಿ ತತ್ಪರನಾಗಿ ಪ್ರಾಣತ್ಯಾಗ ಮಾಡುವುದು'' (ಜೈನಕೋ. ೨೫೯): ಆಯುರವಸಾನದೊಳ್ ಸಂಸಾರಕ್ಷಪಕನಾಗಿ ಸಮಾಧಾನಪುರಸ್ಸರಂ ಸನ್ಯಸನವಿಧಾನದಿಂ ಪರಿತ್ಯಕ್ತಜೀವಿತನಾಗಿ (ಆದಿಪು. ೨-೧೯ ವ). [ಸಂ. ಸಂನ್ಯಸನವಿಧಾನ]

**ಸನ್ಯಸನವಿಧಿ** (ನಾ). = ಸನ್ಯಸನವಿಧಾನ : ಚಂದ್ರಸೇನಾಚಾರ್ಯ್ಯರ ಶ್ರೀಪಾದಪದ್ಮ ಪಾರ್ಶ್ವದೊಳ್ ಸನ್ಯಸನವಿಧಿಯೊಳ್ ಪರಿತ್ಯಕ್ತಾಹಾರಶರೀರನೆಂ ಸಮಾಧಿವಡೆದು (ಆದಿಪು. ೩-೫೦ ವ); ಬುಧವಾರದನ್ದು ಸನ್ಯಸನವಿಧಿಯಿಂ ಶ್ರೀಮತಿ ಗನ್ತಿಯಮ್ಮುಡಿಪಿ ದೇವಲೋಕಕ್ಕೆ ಸನ್ದರ್ (ಎಕ. II. ೩೫೧-೪೦ ; 1119). [ಸಂ. ಸಂನ್ಯಸನವಿಧಿ]

**ಸನ್ಯಾಂಗ** 'ಸನ್ಯಂಗ' ನೋ.

**ಸನ್ಯಾಯ** (ನಾ). ಸರಿಯಾದುದು; ವಿಹಿತವಾದುದು: ಸುನಿರ್ಧಾರಣಂ ತದುಪಾಸನಾನುಸಂಧಾನನಿಮಿತ್ತವೆಂಬ ಸನ್ಯಾಯದಿನವಂಗಳಿಂ ಮನನೀಯವ್ಕೆ (ವೀಶೈಪು. ೫-೧೪-೭) ; ಕಣ್ಣೆವೆ ಇಕ್ಕುವುದು ಜೀವರ ಸ್ವತಂತ್ರವೆ ಸನ್ಯಾಯವಲ್ಲ ಎವೆ ಇಡದಿರಲಿ ಕಾಲ ಮಾರಿ (ವಿದಾಕ್ಯ. ೪೪-೧). [ಸಂ.]

**ಸನ್ಯಾಸ** (ನಾ). ೧. ತೊರೆಯುವಿಕೆ ; ತ್ಯಜಿಸುವಿಕೆ. ೨. ನಾಲ್ಕು ಆಶ್ರಮಗಳಲ್ಲಿ ಒಂದು; ವಿರಕ್ತಿ; ವೈರಾಗ್ಯ: ಸನ್ಯಾಸ ಎಂಬುದು ಒಂದು ಆಶ್ರಮವಿಶೇಷ. ಆಶ್ರಮವೆಂದರೆ ಶ್ರಮಪೂರ್ವಕವಾಗಿ ಹೊಂದಿದ ಯೋಗ್ಯತೆ ಎಂದರ್ಥ (ಭಾತತ್ತ್ವ. ೬೮). ೩. ಭೋಜನವನ್ನು ಬಿಡುವ ವ್ರತ ; ಅನಶನ ವ್ರತ : ''ಪ್ರಾಯಃ, ಭೋಜನತ್ಯಾಗಃ, ಸನ್ಯಾಸಃ, ಅನಶನಂ - ಈ ೪ ಕಡೆಗಾಲದ ಅನಶನಂ'' (ಹಲಾಯು. ೧೨೫-೭೫). ೪. ಒಂದು ಬಗೆಯ ರೋಗ : ರಕ್ತಧಾತುವೆಂಬ ನಾಡೀನಿರೋಧದಿಂದ ಸನ್ಯಾಸವೆಂಬ ರೋಗಂ ಸಂಜನಿಸುವುದು . . . ವಾತಾದಿದೋಷಾದಿಗಳು ವಾಕ್ಕು, ದೇಹ, ಮನಸ್ಸುಗಳಂ ನಿರೋಧಿಸಿ . . . ಪ್ರಾಣಸ್ಥಾನವಾದ ಹೃದಯವನ್ನಾಶ್ರಯಿಸಿ ಸನ್ಯಾಸವೆಂಬ ರೋಗವನ್ನುಂಟು ಮಾಡುವುದು (ಸಕವೈ. ೨೬೦). ೫. [ಸಂಗೀತ] ರಾಗದ ಲಕ್ಷಣಗಳಲ್ಲಿ ಒಂದು : ೧. ಗ್ರಹ - ರಾಗವನ್ನು ಪ್ರಾರಂಭಿಸುವ ಸ್ವರ . . . ೭. ಸನ್ಯಾಸ - ಅಂದ ಕೆಡದಂತೆ ರಾಗವನ್ನು ವಿಂಗಡಿಸಿ ಹಾಡುವುದು (ಸಂಗೀಚಂ. ೨೩). [ಸಂ. ಸಂನ್ಯಾಸ]

**ಸನ್ಯಾಸನ** (ನಾ). = ಸನ್ಯಸನ ೨: ಧನಮುಚಿತದಾನದೊಳ್ ಜವ್ವನಂ ತಪೋನಿಯಮದೊಳ್ ಸ್ವಜೀವಂ ಸನ್ಯಾಸನದೊಳ್ ಪೋದಂಗೇವೋಯ್ತೆನೆ ಸುಜನರ್ ನೃಪತಿ

ಪಾತ್ರದಾನಮನಿತ್ತಂ (ಶಾಂತಿಪು. ೬-೭೩); ಪಲಕಾಲನ್ನಪಂಗೆಯ್ದು ಸನ್ಯಾಸನ ನೋಂತು ಮುಡಿಪಿದರ್ (ಕನಿಆ. ೭೧-೩-೪:7). [ಸಂ. ಸಂನ್ಯಾಸನ]

**ಸನ್ಯಾಸನಂಗೆಯ್** (ಕ್ರಿ). = ಸನ್ಯಸನಂಗೆಯ್ : ಸನ್ಯಾಸನಂಗೆಯ್ದುರುಸತ್ವನ್ ನಂದಿಸೇನಪ್ರವರಮುನಿವರನ್ ದೇವಲೋಕಕ್ಕೆ ಸಂನ್ದಾನ್ (ಎಕ. II, ೮೮-೨; ಸು. 700). [ಸನ್ಯಾಸನ + ಕೆಯ್₁]

**ಸನ್ಯಾಸವ್ರಜನ** (ನಾ). [ಜೈನ] ನಾಲ್ಕು ಬಗೆಯ ಶಿಕ್ಷಾವ್ರತಗಳಲ್ಲಿ ಒಂದು; ಸನ್ಯಾಸದೀಕ್ಷೆಯನ್ನು ಸ್ವೀಕಾರಮಾಡುವಿಕೆ : ಶೀಲ್ರೋಪವಾಸಮುಂ ದಾನವ್ರತಮುಂ ನಿಖಿಲಸಮತೆಯುಂ ಸನ್ಯಾಸವ್ರಜನಮುಮೆಂಬಿವು ಶಿಕ್ಷಾವ್ರತಮಿದು ನಾಲ್ಕುತೆಜಿನನೂನಾಗಮದೊಳ್ (ಶಾಂತಿಪು. ೧-೯೦). [ಸಂ. ಸಂನ್ಯಾಸವ್ರಜನ]

**ಸನ್ಯಾಸಿ** (ನಾ). ಸನ್ಯಾಸದೀಕ್ಷೆಯನ್ನು ಸ್ವೀಕರಿಸಿದವನು ; ಯತಿ : ವಿವೇಕಾನಂದರು ಸನ್ಯಾಸಿಯಾದರೂ ಜೀವನವನ್ನು ತುಚ್ಛವೆಂದು ಎಣಿಸಿದವರಲ್ಲ (ಧರ್ಮಸಾ. ೫೨); ಸನ್ಯಾಸಿಗೇಕೆ ಸಂಸಾರ ? (ಗಾದ). [ಸಂ. ಸಂನ್ಯಾಸಿನ್]

**ಸಪಂತಿ** (ನಾ). ಒಂದೇ ಸಾಲಿನಲ್ಲಿರುವುದು; ಸಹಪಂಕ್ತಿ: ಲಿಂಗಾರ್ಚನಂ ಗೆಯ್ದಾರೋಗಿಸಲಿತ್ತು ಸಪಂತಿಯೊಳ್ ಪ್ರಸಾದಮಂ ಕೈಕೊಂಬಲ್ಲಿ (ಬಸರ. ೧೨-೪೪). [< ಸಹ₂ + ಪಂತಿ]

**ಸಪಕ್ಷ** (ಗು). ೧. ರೆಕ್ಕೆಗಳನ್ನು ಹೊಂದಿರುವ; ರೆಕ್ಕೆಗಳುಳ್ಳ: ಪತಂಗ (ಪಾತರಗಿತ್ತಿ) ಮುಂತಾದ ಸಪಕ್ಷಕೀಟಕಗಳ ಮೊದಲಿನ ರೂಪವು ಕಂಬಳಿಹುಳದ ಹಾಗಿರುತ್ತವೆ (ಮುಂಬಯಿ. ೫-೨೨೦). (ನಾ). ೨. ಒಂದು ಪಕ್ಷಕ್ಕೆ ಸೇರಿದವನು; ಸಹಭಾಗಿ ; ಸಹಚರಿ : ಪಕ್ಷವೆರಡೇ ಲೋಕದೊಳ್ ಪಿತೃಪಕ್ಷ ಮೇಣಾ ಮಾತೃಪಕ್ಷ ವಿಪಕ್ಷ ತಂದೆಯ ದೆಸೆ ಸಪಕ್ಷವು ತಾಯ ದೆಸೆಯವರು (ಕುಮಾ‍ಆ. ೮-೧೭). [ಸಂ.]

**ಸಪತ್ನ** (ನಾ). ಹಗೆ; ಶತ್ರು: ಕೋಪದಿನೊದೆಯಲ್ಕ ಸಾರ್ತರೆ ಸಪತ್ನ ಹಠೋರು ಕಿರೀಟಭಂಗಿತಂ (ಗದಾಯು. ೮-೩೮) ; ಅಂತು ರತ್ನಜಟಿಯ ಸಪತ್ನರಂ ಪೊಱಮಡಿಸಿ ಕಳೆದು (ಪಂರಾಮಾ. ೧೦-೬೦ ವ). [ಸಂ.]

**ಸಪತ್ನಿ** (ನಾ). ತನ್ನ ಗಂಡನ ಇನ್ನೊಬ್ಬಳು ಹೆಂಡತಿ; ಸವತಿ: ತಕ್ಕಟಿದೆನಗೆ ಸಪತ್ನಿಯರಿಕ್ಕುಂಗೂಟಿಂಗೆ ಬಯಸಿ ಪಾರ್ದಿರ್ಪ ವಿಷಾದಕ್ಕೆ ಗುಱಿಯಪ್ಪ ದುರ್ಯಶ ಮಕ್ಕುಂ (ಪಂರಾಮಾ. ೬-೯೧); ಶಶಿಕಾಂತದೊಡ್ಡುಂಗಲ್ಗೊಳ್ ತನ್ನ ಪಡಿನೆಳಲಂ ಕಂಡು ಮೆಯ್ಯಾರ್ದು ನಿಂದು ಸಪತ್ನಿಯೆಂದು ಬಗೆದು (ಶಬಶಂ. ೩-೩೫ ವ). [ಸಂ. ಸಪತ್ನೀ]

**ಸಪತ್ನೀಕ** (ನಾ). ಹೆಂಡತಿ ಸಮೇತನಾದವನು; ಪತ್ನೀಸಹಿತನಾದವನು: ಗೃಹಸ್ಥ ಸಪತ್ನೀಕನಾಗಿ . . . ಉಪವನದಲ್ಲಿ ಪರ್ಣಶಾಲೆಯನ್ನು ಕಟ್ಟಿಕೊಂಡು ಋಷಿಯಂತೆ ವಾಸಮಾಡುವುದು ಆಶ್ರಮವಾಸ ಎನಿಸಿಕೊಳ್ಳುತ್ತದೆ (ಕವಿಕೋ.II, ೯೫). [ಸಂ.]

**ಸಪತ್ನೋತ್ಕರ** (ನಾ). ಶತ್ರುಗಳ ಗುಂಪು,—ಸಮೂಹ : ಹರಿಯಂಶೋದ್ಭೂತನೀತಂ ಶುಭಗುಣನಿಧಿ ಮತ್ಪಾದಭಕ್ತಂ ಸಪತ್ನೋತ್ಕರ ಸಂಹಾರಾರ್ಥಮೆನ್ನೊಳ್ ಪಡೆಯಲೆಳಸಿ ದಿವ್ಯಾಸ್ತ್ರಮಂ ದಲ್ ತಪಸ್ಸಂಚರಣಂಬೆತ್ತಿಲ್ಲಿ ನಿಂದಂ (ಶಬಶಂ. ೪-೬೯). [ಸಂ.]

**ಸಪತ್ರಾಕರಣ** (ನಾ). ಚೂಪಾದ ಬಾಣದಿಂದ ಘಾತಿಗೊಳಿಸುವುದು,— ಹೆಚ್ಚಾದ ನೋವುಂಟುಮಾಡುವುದು : "ಪರಪೀಡನಂ ಸಪತ್ರಾಕರಣಮೆನಲು ಲೋಗರನು ಬಂಧಿಸಲು ನಾಮಂ" (ಮಂಗರಾ. ೧೩೪-೩೨). [ಸಂ.]

**ಸಪದಿ** (ಅ). ಆ ಕ್ಷಣ ; ಕೂಡಲೇ ; ತಕ್ಷಣ : ಅಂತಾ ದೇವನಾಕಾರಮಂ ಸಪದಿ ಧ್ಯಾನಿಸೆ (ವಿಮುದ. ೪-೨೬) ; ವಿಪುಲಶಸ್ತ್ರಾಸ್ತ್ರಪ್ರಯೋಗಂಗಳುಱುಬೆಯಂ ಸಪದಿ ಪ್ರಹಾರದಾಯುಧಸಮೂಹಂಗಳಂ ಕಂಡು (ಜೈಮಿಭಾ. ೨೨-೩೭). [ಸಂ.]

**ಸಪರ್ಯ** (ನಾ). ಸೇವೆ; ಪೂಜೆ: ಕಾರ್ಯಮಿವೆ ಸತತಮೆಮಗೆ ಸಪರ್ಯಮಿದೇ ಮುಕ್ತಿಪದಮನೆಯ್ದುವಿನಂ (ಸುಕುಮಾ. ೧-೨೭) ; ವಿನಯಭಾವದಲಿ ಹಿಂಗದಾಗಳು ತದ್ದುರು ಸಪರ್ಯಂಗಳಂ ಮಾಡುತ್ತ (ಬಸಪು. ೩೯-೨೭). [ಸಂ. ಸಪರ್ಯಾ]

**ಸಪರ್ಯೆ** (ನಾ). = ಸಪರ್ಯ : ನಿನ್ನ ಪುಣ್ಯದ ಫಲಮಾ ಫಲಂ ಜಿನಪದಾಂಬುಜ ವರ್ಯಸಪರ್ಯೆಯಿಂದಮಾಯ್ತದನಱಿದು (ಚಂದ್ರಪು. ೬-೧೦೦) ; ಈ ಶೈತ್ಯೋಪಚಾರ ಸಪರ್ಯೆಗೆ ಪ್ರಸನ್ನೆಯಾದಳು (ರಾಮಾಶ್ವ. ೩೫-೧೩). [ಸಂ. ಸಪರ್ಯಾ]

**ಸಪಾಟ** 'ಸಪಾಟು' ನೋ.

**ಸಪಾಟಿ** 'ಸಪಾಟು' ನೋ.

**ಸಪಾಟು, ಸಪಾಟ, ಸಪಾಟಿ** (ಗು). ೧. ಮಟ್ಟಸವಾದ ; ಚಪ್ಪಟೆಯಾದ: ಗುಡ್ಡವು ಸಪಾಟು ಬಂಡೆಗಳುಳ್ಳದ್ದಾದ್ದರಿಂದ ಕಾಲಿಡಲಿಕ್ಕೆ ಸಹ ಸ್ಥಳವಿರಲಿಲ್ಲ (ಮೇದಿಮ. ೧೨೩); ಕಡಲುಗಳ್ಳರು ತಮ್ಮ ಸಪಾಟು ತಳವುಳ್ಳ ದೊಡ್ಡದೊಡ್ಡ ದೋಣಿಗಳಲ್ಲಿ ಕುಳಿತು . . . ನಿವಾಸಿಗಳನ್ನು ಸುಲಿಯುತ್ತಿದ್ದರು (ಇಂಗ್ಲಂಡ. ೭). (ನಾ). ೨. ಸಮತಲ; ಚಪ್ಪಟೆ ; ಮಟ್ಟ : ಕೋಣೆಯೊಳಗೆ ಕಂಬಗಳೂ ಅಡ್ಡಕಮಾನುಗಳೂ ಏನೂ ಇರದೆ ಸಪಾಟಾದ ಛಾವಣಿಯನ್ನು ಕಲ್ಲಿನಿಂದ ಹಾಕಿದ್ದಾರೆ (ಕಭಾಗ. ೫೩೩); ಇದರಿಂದ ಘಟ್ಟವು ಸಮುದ್ರದ ಸಪಾಟಿಗಿಂತ ೨೦೦೦ ಫೂಟು ಎತ್ತರವಾಗಿರುತ್ತದೆಂದು ತಿಳಿಯುತ್ತದೆ (ಮುಂಬಯಿ. ೫-೮೦); ಹಿಂದೆ ಹೊರಳಿ ನೋಡಿದಾಗ ದಿನ್ನೆಯು ಸಪಾಟಾಗಿ ಗಚ್ಚಿನ ಮಾಳಿಗೆಯಂತೆ ಹೊಳೆಯುತ್ತಿತ್ತು (ಕಾಲಚ. ೧೪). **ಸಪಾಟ** : (೬). **ಸಪಾಟಿ**: ೨. ಸಮುದ್ರದ ಸಪಾಟಿಯ ಕೆಳಗೆ ದೊಡ್ಡ ದೊಡ್ಡ ಪ್ರವಾಹಗಳು ಹರಿಯುತ್ತಿರುತ್ತವೆ (ಮುಂಬಯಿ. ೬-೧೯೯). [← ಮರಾ. ಸಪಾಟ, ಸಪಾಟೀ]

**ಸಪಾಟುಗೊಳಿಸು** (ಕ್ರಿ). ಮಟ್ಟಸಮಾಡು ; ಸಮಗೊಳಿಸು : ಉಸುಕನ್ನು ಅಂಗೈಯಿಂದ ಸಪಾಟುಗೊಳಿಸಿ ಅದರ ಮೇಲೆ ಕೈಬೆರಳಿನಿಂದ ಕೈಗೆ ಬಂದ ಶಬ್ದಗಳನ್ನು ಒಂದೊಂದಾಗಿ ಗೀರುತ್ತಿದ್ದರು (ಮೂರುದಾ. ೬೬). [ಸಪಾಟು + ಕೊಳಿಸು]

**ಸಪಾಯಿ** 'ಸಫಾಯಿ' ನೋ.

**ಸಪಿಂಡ** (ಗು). ೧. ಒಂದೇ ಗೋತ್ರಕ್ಕೆ ಸೇರಿದ; ಜ್ಞಾತಿಯಾದ: ಸಪಿಂಡಸಂಬಂಧದ ಮೂಲಕವಾಗಿ ವಿವಾಹಸಂಬಂಧದ ಕ್ಷೇತ್ರ ಸೀಮಿತವಾಯ್ತು (ಕರ್ನಾಕ. ೨೦). (ನಾ). ೨. ಒಂದೇ ಗೋತ್ರಕ್ಕೆ ಸೇರಿದವನು ; ಜ್ಞಾತಿ ; ಗೋತ್ರಜ : "ಸನಾಭಿಃ, ಸಗೋತ್ರಃ, ಸಪಿಂಡಃ - ಈ ೩ ಗೋತ್ರಜರ್" (ಹಲಾಯು. ೮೪-೩೫೫). [ಸಂ.]

**ಸಪೀತಿ** (ನಾ). ಒಟ್ಟಿಗೆ ಸೇರಿ ಮದ್ಯಪಾನಮಾಡುವುದು: "ಸಪೀತಿಃ, ಸಹಪಾನಕಂ - ಈ ೨ ಗೊಟ್ಟಿಗಳ್ಗುಡಿವುದು" (ಹಲಾಯು. ೫೪-೧೭೩). [ಸಂ.]

**ಸಪುಣ್ಯ** (ನಾ). ಪುಣ್ಯವಂತ ; ಭಾಗ್ಯಶಾಲಿ : ಧನೇಶ್ವರಂ ವಿನೂತನಧನದಾನದಿಂ ನೆರದರೇಂ ಸಲೆ ಮೇಘರಥಂ ಸಪುಣ್ಯನೋ (ಶಾಂತಿಪು. ೯-೪೩). [ಸಂ.]

**ಸಪುತ** (ನಾ). ಏಳು ; ಸಪ್ತ : ಪ್ರಾತಃಕಾಲದಲ್ಲೆದ್ದು ಸಪುತ ಸಾರಿ ನಾಲಿಗೆಯಲ್ಲಿ ನುಡಿದ ಮಾನವನಿಗೆ (ವಿದಾಕ್ಯ. ೧೪-೪). [< ಸಂ. ಸಪ್ತನ್]

**ಸಪುತಮಿ** (ನಾ). ಮಾಸದ ಶುಕ್ಲ ಮತ್ತು ಕೃಷ್ಣಪಕ್ಷಗಳ ಏಳನೆಯ ದಿನ; ಸಪ್ತಮಿ: ವಿರೋಧಿಸೌವತ್ಸರದ ಚೈತ್ರ ಸು ಸಪುತಮಿ ವಡವಾರದಂದು (ಮೈಆರಿ. ೧೯೩೨, ೨೨-೫ ; 1229). [< ಸಂ. ಸಪ್ತಮೀ]

**ಸಪುರ, ಸಪೂರ** (ಗು). ೧. ತೆಳ್ಳಗಿನ ; ನವುರಾದ : ವಾಲಗದ ಸಪುರ ತುದಿಯನ್ನು ತುಟಿ ಬಿಗಿದ ಬಾಯಿಗಿಟ್ಟು ಊದುತ್ತಾ (ಮಲಿಮ. ೬೩೬). ೨. ನಯವಾದ ; ನಾಜೂಕಾದ : ಮಿಗೆ ಸಪುರಸೀರೆಯಂ ಮಲ್ಲಗಂಟಿನಿಂದುಟ್ಟು (ದಶಕು. ೪-೧೯೯); ರಮಣೀಯ ಸಪುರ ನಿಡುಗೇಸ ದೇಹಂ ಗೌರ (ಪ್ರಭುಪು. ೪-೮೪). (ನಾ). ೩. ತೆಳುವು ; ನವುರು: ತೆಂಗಿನ ಕಡ್ಡಿಯ ಸಪುರವಾದ ತುದಿಯನ್ನು ಉರುಟಾಗಿ ಹೆಣೆದು ಒಂದು ಉಂಗುರವನ್ನು ಮಾಡಿದನು (ಈಕಥ. ೫೨); ಬರೆದ ಗೆರೆಯ ದಪ್ಪ, ಸಪುರಗಳಿಂದ ವಸ್ತುಗಳ ಆಕಾರ ರೂಪಗಳನ್ನು . . . ತೋರಿಸುವುದಕ್ಕೂ ಬರುತ್ತದೆ (ಕಲದ. ೭೩). ೪. ನಯ; ನಾಜೂಕು: ಪಿರಿದುಂ ಸಪುರಮಾದ ಬೆಳುದಿಂಗಳ ಧಾವಲ್ಯಮನಿಳಿಕೆಯ್ಯುತ್ತಿರ್ದ ಪ್ರಶಸ್ತ ವಸ್ತ್ರಾಂಚಳಂ (ಬಾಧಪು. ೬-೧೫ ವ). ೫. ಸಣ್ಣಗಿರುವುದು; ಬಡಕಲು: "ಸಪುರಮೆಂದು ಸಣ್ಣಂ" (ಕಶಸಾ. ೭೧-೬೧೩); ಅಷ್ಟು ಸಪುರಾಗಿದ್ದ ಹುಡುಗ ನೀರು ಕುಡಿದು ಊದಿಬಿಟ್ಟಿದ್ದ (ದೂರಸ. ೨೬೮). ೬. ನವುರಾದ ಒಂದು ಬಗೆಯ ಬಟ್ಟೆ,—ವಸ್ತ್ರ : ಮೆಯ್ಗೆ ಮಯ್ಯಂತಪ್ಪ ಸಪುರವನುಟ್ಟು (ನಂಬಿರ. ೧೪-೨೫); ತಾವರೆಯ ನೂಲ ಸಪುರವನುಟ್ಟು (ವೀಶೈಪು. ೨-೪-೧೫); ಬಿಳಿಯ ಸಪುರವನುಟ್ಟು ಪೊಳೆವಂದುಗೆಯನಿಟ್ಟು (ರಾಜಶೇ. ೨-೧೧೭ ವ). **ಸಪೂರ** : ೫. ಈಗಿನ ಜೀವನದ ಸಂಕೇತಗಳೇನೋ ಎನ್ನಿಸುವಂತಹ ಆ ಸಪೂರ ಕಾಲುಗಳು (ಮೂರುದಾ. ೧೭೯). [← ಮರಾ. ಸಪುರ, ಸಪೂರ]

**ಸಪೂರ** 'ಸಪುರ' ನೋ.

**ಸಪೋಟ** (ನಾ). ಒಂದು ಬಗೆಯ ಮರ ಮತ್ತು ಅದರ ಸಿಹಿಯಾದ ಹಣ್ಣು : (ಮೈಔಗಿ. ೨-೨೬). [← ಇಂ. Sapodilla]

**ಸಪ್ತ** (ನಾ). ಏಳು : 'ಸಪ್ತಋಷಿ', 'ಸಪ್ತಲೋಕ' ಪರಾ. [ಸಂ. ಸಪ್ತನ್]

**ಸಪ್ತಋಷಿ** (ನಾ). ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು ಮತ್ತು ವಸಿಷ್ಠರೆಂಬ ಪ್ರಖ್ಯಾತರಾದ ಏಳುಜನ ಋಷಿಗಳು: ಸಪ್ತಋಷಿಗಳುಮೇಕಾದಶೀರುದ್ರರು ಸನಂದ ಶುಕಾದಿ ಮುನಿವರರು . . . ಬಂದರು (ಬಸವು. ೧-೪೨). [ಸಂ.]

**ಸಪ್ತಕ** (ನಾ). ೧. ಏಳರಿಂದ ಕೂಡಿದುದು ; ಏಳರ ಗುಂಪು : ಸಂಖ್ಯಾವಾಚಿಪ್ರತ್ಯಯಾಂತಕ್ಕೆ ದ್ವಿತಯ, ತ್ರಿತಯ, ಚತುಷ್ಕ, ಪಂಚಕ, ಷಟ್ಕ, ಸಪ್ತಕ (ಶಮದ. ೮೨ ಪ್ರಯೋ). ೨. ಏಳುದಿನ ; ಒಂದು ವಾರ : ಕಾಮ್ಯಾರ್ಥಿಗಳು ಅಲ್ಲಿ ಒಂದು ಸಪ್ತಕ ಸೇವಾಮಾಡುವುದರಲ್ಲಿ ತಮ್ಮ ಇಷ್ಟಾರ್ಥವನ್ನು ಪಡೆಯುತ್ತಿದ್ದಾರೆ (ಕಭವಿ. ೮೩). [ಸಂ.]

**ಸಪ್ತಕಿ** (ನಾ). ಉಡಿದಾರ ; ಕಟಿಸೂತ್ರ ; ಒಡ್ಯಾಣ : "ರಸನ ಮೇಖಲೆ ಕಾಂಚಿ ಸಪ್ತಕಿ ಕಳಾಪಿ ಸಾರಸನಮೆನಲುಡಿದಾರಮಕ್ಕು" (ಮಂಗರಾ. ೧೧೧-೩೦). [ಸಂ. ಸಪ್ತಕೀ]

**ಸಪ್ತಕುಲಶೈಲ** (ನಾ). ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷ, ವಿಂಧ್ಯ ಮತ್ತು ಪಾರಿಯಾತ್ರಗಳೆಂಬ ಏಳು ಮುಖ್ಯಪರ್ವತಗಳು, – ಕುಲಗಿರಿಗಳು : ಮಹೇಂದ್ರ ಮಲಯ . . . ಪಾರಿಯಾತ್ರವೆಂಬ ಸಪ್ತಕುಲಶೈಲಂಗಳುಂಟು (ವಿವೇಕ. ೨೪೦). [ಸಂ.]

**ಸಪ್ತಕೂಪಾರ** (ನಾ). ಲವಣ, ಇಕ್ಷು, ಸುರೆ, ಸರ್ಪಿಸ್ಸು, ದಧಿ, ಕ್ಷೀರ ಮತ್ತು ಜಲ ಎಂಬ ಏಳು ಸಮುದ್ರಗಳು : ಮೌರ್ವಿಯನ್ನು ಬಿಗಿಬಿಗಿದು ಚೇವೊಡೆಯ ಭೂಮಿ ಕಂಪಿಸೆ ಸಪ್ತಕೂಪಾರಮುರ್ಕಿವೊಂದಾಗಿ (ನವಮೋ. ೩೩-೧೨). [ಸಂ.]

**ಸಪ್ತಕೊಂಕಣ** (ನಾ). ಪಶ್ಚಿಮಸಮುದ್ರತೀರದಲ್ಲಿನ ಏಳು ಭಾಗಗಳು: ಪಶ್ಚಿಮ ಕರಾವಳಿಯನ್ನು ಸಪ್ತಕೊಂಕಣವಾಗಿ ವಿಭಾಗಿಸಿದ ದೃಷ್ಟಾಂತಕ್ಕೂ ಪಂಚಗೌಡರನ್ನು ಗೋವಾದಲ್ಲಿ ಸ್ಥಾಪಿಸಿದುದಕ್ಕೂ ಉತ್ತರ ಸಹ್ಯಾದ್ರಿಯನ್ನು ಆಧಾರಗಳಲ್ಲಿ ಒಂದಾಗಿ ಎತ್ತಿ ಹೇಳುತ್ತಾರೆ (ತುಳುನಾ. ೧೭೦). [ಸಂ.]

**ಸಪ್ತಗುಣ** (ನಾ). ಶ್ರದ್ಧೆ, ಶಕ್ತಿ, ಭಕ್ತಿ, ವಿಜ್ಞಾನ, ಅಲುಬ್ಧತೆ, ಕ್ಷಮೆ, ತ್ಯಾಗಗಳೆಂಬ ಏಳು ಗುಣಗಳು : ಶ್ರದ್ಧಾಶಕ್ತಿರಲುಬ್ಧತ್ವಂ ಭಕ್ತಿರ್ಜ್ಞಾನಂದಯಾ ಕ್ಷಮಾ ಇತಿ ಶ್ರದ್ಧಾದಯಃ ಸಪ್ತಗುಣಾಸ್ಯುರ್ಗೃಹಮೇಧಿನಾಂ ಎಂಬ ಸಪ್ತಗುಣಾನ್ವಿತನುಂ (ಚಾವುಂಪು. ೩೯); ಪ್ರತಿಗ್ರಹಾದಿ ನವವಿಧಪುಣ್ಯಪಣ್ಯನುಂ ಶ್ರದ್ಧಾದಿಸಪ್ತಗುಣಮಣಿವಿಭೂಷಣನುಮಾಗಿ (ಚಂದ್ರಪು. ೧೪-೯ ವ). [ಸಂ.]

**ಸಪ್ತಗುಪ್ತಿ** (ನಾ). (ಶತ್ರುಗಳನ್ನು ಪ್ರವೇಶಿಸದಂತೆ ತಡೆಯುವ) ಏಳು ಸುತ್ತಿನ ಕೋಟೆ : ಸೌಮಿತ್ರಿಯ ಸುತ್ತಣ ರಣಭೂಮಿಯನಿಂಬಾಗೆ ಸಮಚಿ ಕಪಿಕೇತು ಕುಲಗ್ರಾಮಣಿ ಸುಗ್ರೀವಂ ವಿದ್ಯಾಮಯಮಂ ಸಪ್ತಗುಪ್ತಿಯಂ ನಿರ್ಮಿಸಿದಂ (ಪಂರಾಮಾ. ೧೪-೭೫). [ಸಂ.]

**ಸಪ್ತಚ್ಛದ** (ನಾ). ೧. ಏಳೆಲೆಗಳುಳ್ಳ ಬಾಳೆಗಿಡ : ಕದಳೀ ಸಪ್ತಚ್ಛದ ಪುನ್ನಾಗಂ (ಸುಕುಮಾ. ೧೦-೫೬); ತೆಂಗುಂ ಕೌಂಗು ಸಪ್ತಚ್ಛದಕದಳಿ ತಮಾಲಂ ಲಸಚ್ಚಂಪಕಂ (ರಾಜಶೇ. ೨-೩೬). ೨. ಪಚ್ಚೆಕರ್ಪೂರದ ಗಿಡ : ನೆಗಳ್ದುದದರ್ಜೋಳ್ ಸಪ್ತಚ್ಛದ ಗಂಧ ಸುರಭಿ ಪದುಳಂ (ಕವಿರಾ. ೩-೧೦೪); ಮದಗಂಧಸಾರ ಸಪ್ತಚ್ಛದಂಗಳಿಂ ಪುದಿದು (ಚಂದ್ರಪು. ೫-೫೦). [ಸಂ.]

**ಸಪ್ತತಂತು** (ನಾ). ಯಜ್ಞ ; ಯಾಗ : ಅಧಿಗತಧರ್ಮಶಾಸ್ತ್ರನುಮನೇಕಸಪ್ತತಂತುಪೂತಮೂರ್ತಿಯುಂ . . . ಎನಿಸಿ (ಕಾದಂಪೂ. ೩೦೭) ; ಸಾಂಗದಿ ಸಪ್ತತಂತುವ ಮಾಡಿ (ಅಮೃತ. ೨-೯೮); ಸಪ್ತತಂತುವಿಂ ಪಂಚಪಾತಕಂಗಳುಮೊರ್ಮೊದಲೊಳ್ ಪಡಲಿಡುಗುಂ (ರಾಮಾಶ್ವ. ೧೪-೨೮). [ಸಂ.]

**ಸಪ್ತತಂತ್ರಿ** (ನಾ). ಏಳುತಂತಿಗಳನ್ನುಳ್ಳ ವಾದ್ಯ ; ವೀಣೆ : ದನಿಯ ಕೂಡಿಸಿ ಸಪ್ತತಂತ್ರಿಯ . . . ಸಪ್ತಸ್ವರವನಾಳಾಪಿಸಲು ಕ್ರಮದಿಂದ (ಕೌಶಿರಾ. ೨೪-೧೧). [ಸಂ. ಸಪ್ತತಂತ್ರೀ]

**ಸಪ್ತತತ್ತ್ವ** (ನಾ). [ಜೈನ]ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ ಮತ್ತು ಮೋಕ್ಷ ಎಂಬ ಏಳು ತತ್ತ್ವಗಳು : ಅವರ್ . . . ಪಂಚಾಸ್ತಿಕಾಯ ಷಡ್ದ್ರವ್ಯ ಸಪ್ತತತ್ತ್ವ ನವಪದಾರ್ಥಸ್ವರೂಪಮಂ ನಿರೂಪಿಸುವುದು (ಪುಷ್ಪಪು. ೯-೬ ವ); ಜೈನಸಿದ್ಧಾಂತವು ಜೀವ ಮತ್ತು ಕರ್ಮಗಳ ಸಂಬಂಧ . . . ಇವುಗಳನ್ನು ತನ್ನ ಸಪ್ತತತ್ತ್ವಗಳಲ್ಲಿ ವಿವರಿಸುತ್ತದೆ (ಭಾರದ. ೧೮೭). [ಸಂ.]

**ಸಪ್ತತಿ** (ನಾ). ಏಳು ಹತ್ತುಗಳ ಮೊತ್ತ ; ಎಪ್ಪತ್ತು : ಸಪ್ತತಿ ಲಕ್ಷಪೂರ್ವ ಪರಮಾಯುಷ್ಯನುಂ (ಜೀವಸಂ. ೧೭-೩೨ ವ). [ಸಂ.]

**ಸಪ್ತದ** (ನಾ). [ಸಂಗೀತ] ಏಳು ದೇಶೀಗಮಕಗಳಲ್ಲಿ ಒಂದು: ಕಂಪಿತ . . . ಸಪ್ತದ . . . ಅಹಿತವೆಂಬೇಳು ದೇಶೀಗಮಕಗಳೆಂದು (ವಿವೇಕ. ೧೮೭). [< ಸಂ. ಸಪ್ತಧಾ]

**ಸಪ್ತದ್ವೀಪ** (ನಾ). ೧. ಭೂಮಂಡಲದ ಜಂಬೂ, ಪ್ಲಕ್ಷ, ಶಾಲ್ಮಲೀ, ಕುಶ, ಕ್ರೌಂಚ, ಶಾಕ ಮತ್ತು ಪುಷ್ಕರಗಳೆಂಬ ಏಳು ದ್ವೀಪಗಳು : ಸಪ್ತದ್ವೀಪಂಗಳ ಆನಂದದಿಂದಿತ್ತೆಂ (ಹಚಕಾ. ೮-೪೭) ; ಕೆದಜಿ ಸಪ್ತದ್ವೀಪಪತಿಗಳ ಸದೆದು ರಚಿಸುವ ರಾಜಸೂಯದ ಹದನನಂಗೈಸುವನದಾರೀ ವರ್ತಮಾನದಲಿ (ಕುವ್ಯಾಸ. ೨-೧೫). ೨. ಏಳು ದ್ವೀಪಗಳಿಂದ ಕೂಡಿದುದು ; ಭೂಮಿ ; ಪೃಥ್ವಿ. [ಸಂ. ಸಪ್ತದ್ವೀಪಾ]

**ಸಪ್ತಧಾತು** (ನಾ). ಶರೀರದಲ್ಲಿರುವ ರಸ, ರಕ್ತ, ಮಾಂಸ, ಮೇದಸ್ಸು, ಮಜ್ಜೆ, ಅಸ್ಥಿ ಮತ್ತು ಶುಕ್ರಗಳೆಂಬ ಏಳು ಧಾತುಗಳು : ಆರಯೆ ಮೂತ್ರಪುರೀಷಾಗಾರಂ ಸಂಪ್ರಾಪ್ತಸಪ್ತಧಾತುವಿಕಾರಂ (ಅಜಿಪು. ೨-೫೦); ಪಂಚೇಂದ್ರಿಯ ಸಪ್ತಧಾತು ಹಂಚುಹಜಿಮಾಡಿ ಕಾಡಿಹುವಯ್ಯಾ (ಬಸವ. ೪೭); ಸಪ್ತಧಾತು ಸಪ್ತವ್ಯಸನಂಗಳ ಸಣ್ಣಿಸಿ (ಅಖಂಡೇ. ೧೯೩-೧೪). [ಸಂ.]

**ಸಪ್ತನಯ** (ನಾ). [ಜೈನ] ನೈಗಮ, ಸಂಗ್ರಹ, ವ್ಯವಹಾರ, ಋಜು, ಸೂತ್ರ, ಶಬ್ದ, ಸಮಭಿರೂಢ ಮತ್ತು ಏವಂಭೂತಗಳೆಂಬ ಏಳು ನಯಗಳು: ನೈಗಮ ಸಂಗ್ರಹಾದಿ ಸಪ್ತನಯಭಾವನೆಯುಂ . . . ತನ್ನೊಳುಂ ಸಚ್ಛನ್ನಮಾಗಿ (ಪುಷ್ಪಪು. ೧೪-೧೬ ವ). [ಸಂ.]

**ಸಪ್ತನಾದ** (ನಾ). [ಸಂಗೀತ] ಸರಿಗಮಪದನಿ ಎಂಬ ಏಳು ಸ್ವರಗಳು : "ಆ ಸಪ್ತನಾದಕಿಪ್ಪತ್ತೆರಡು ಶ್ರುತಿಯೆನಿಕು" (ಮಂಗರಾ. ೨೩-೫). [ಸಂ.]

**ಸಪ್ತಪದಾರ್ಥ** (ನಾ). ೧. ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಮತ್ತು ಅಭಾವಗಳೆಂಬ ಏಳು ಪದಾರ್ಥಗಳು : ಈ ಸಪ್ತಪದಾರ್ಥಗಳು ಪ್ರತ್ಯಕ್ಷ ಅನುಮಾನ, ಉಪಮಾನ ಮತ್ತು ಶಬ್ದವೆಂಬ ಪ್ರಮಾಣಗಳಿಗೆ ಗೋಚರಿಸುವುವು (ಭಾರದ. ೧೨೪). ೨. = ಸಪ್ತತತ್ತ್ವ : ಜೀವ ಸಜೀವ ನಿರ್ಜೀವ . . . ಸಪ್ತಪದಾರ್ಥಗಳಂ ಪ್ರತಿಪಾದಿಸುವುದು (ವಿವೇಕ. ೧೦). [ಸಂ.]

**ಸಪ್ತಪದಿ** (ನಾ). ವಿವಾಹಸಮಯದಲ್ಲಿ ವಧೂವರರು ಜೊತೆಯಲ್ಲಿ ಇಡುವ ಏಳುಹೆಜ್ಜೆಗಳು: ಹೋಮಸಮಾಪ್ತಿಯೊಳಾಪ್ತನಪ್ಪ ಕಮಳಜಂ ಸಪ್ತಪದಿಯಂ ಕಟ್ಟಿಳ್ಕಟಿಂ ಮೆಟ್ಟಿಸಿ (ಗಿರಿಕ. ೧೦-೯೮ ವ); ಕನ್ಯಾಸ್ವಾತಂತ್ರ್ಯವು ಪರಾಕಾಷ್ಠವನ್ನು ಮುಟ್ಟುವುದು ಸಪ್ತಪದಿಯಲ್ಲಿ (ಆರ್ಯಧ. ೧೩೭). [ಸಂ. ಸಪ್ತಪದೀ]

**ಸಪ್ತಪರಮಸ್ಥಾನ** (ನಾ). [ಜೈನ] ಮೋಕ್ಷಪದವಿಯನ್ನು ಪಡೆಯಲು ಇರುವ ಸಜ್ಜಾತಿತ್ವ, ಸದ್ಗೃಹತ್ವ, ಪಾರಿವ್ರಾಜ್ಯ, ಸುರೇಂದ್ರತ್ವ, ಸಾಮ್ರಾಜ್ಯ, ಆರ್ಹಂತ್ಯ ಮತ್ತು ನಿರ್ವಾಣಗಳೆಂಬ ಏಳು ಹಂತಗಳು : ದೂರೆವೆತ್ತ ಸಪ್ತಪರಮಸ್ಥಾನಂಗಳಂ ಪೊರ್ದುವ್ವೆ (ಆದಿಪು. ೫-೬೩); ಸಂಶೋಭಿಪಾಚಾರ್ಯರ್ ತಾಮೆಮಗೀಗೆ ಸಪ್ತಪರಮಸ್ಥಾನೋದಯೋಪಾಯಮಂ (ಚಂದ್ರಪು. ೧-೩). [ಸಂ.]

**ಸಪ್ತಪರ್ಣ** (ನಾ). = ಸಪ್ತಚ್ಛದ ೧ : "ಸಪ್ತಪರ್ಣಮೆನಲೇಟೆಲೆಯ ಬಾಟ್" (ಮಂಗರಾ. ೩೪-೯); ವನಕರಿ ಕಪೋಲಕಂಡೂಯನದಿಂದಂ ಪಾಯೆ ಮದಜಲಾಸವ ರಸವಾಸನೆಯಿಂದಿತರವನಂಗಳುಮನನುಕರಿಪುವು ಸಪ್ತಪರ್ಣಪಾದಪವನಮಂ (ಅಜಿಪು. ೯-೩೦). [ಸಂ.]

**ಸಪ್ತಪರ್ಣಿ** (ನಾ). = ಸಪ್ತಚ್ಛದ ೧ : ಎಲೆಗಳನ್ನು ನೋಡಿ : ಏಳು ಎಲೆಗಳಿಂದಾದ ಸಂಯುಕ್ತಪರ್ಣದಂತೆ ಕಾಣುತ್ತದೆ. ಸಂಸ್ಕೃತದಲ್ಲಿಯೂ ಸಪ್ತಪರ್ಣ ಎಂದೇ ಈ ಮರಕ್ಕೆ ಹೆಸರು (ಹಸುಹೂ. ೮೪). [ಸಂ. ಸಪ್ತಪರ್ಣೀ]

**ಸಪ್ತಪಾತಾಲ** (ನಾ). ಅತಳ ವಿತಳ ಸುತಳ ತಲಾತಲ ರಸಾತಲ ಮಹಾತಲ ಮತ್ತು ಪಾತಾಳಗಳೆಂಬ ಏಳು ಅಧೋಲೋಕಗಳು : ಲೋಕಾಲೋಕ ಪರ್ವತಕಥನ- ಸಪ್ತಪಾತಾಲ ಮತ್ತು ಅನಂತಗುಣವರ್ಣನ (ಭಾರದ. ೧೪೦). [ಸಂ.]

**ಸಪ್ತಪುರಿ** (ನಾ). ಅಯೋಧ್ಯೆ, ಮಧುರ, ಮಾಯಾ, ಕಾಶಿ, ಕಾಂಚಿ, ಅವಂತಿ ಮತ್ತು ದ್ವಾರಾವತಿಗಳೆಂಬ ಏಳು ಪ್ರಸಿದ್ಧ ತೀರ್ಥಕ್ಷೇತ್ರಗಳು : ನಾನು ಮುಕ್ತಿಸಾಧನವಾದಂಥಾ ಸಪ್ತಪುರಿಗಳನ್ನು ಸೇವಿಸಿದೆನು (ಕಾಶೀಮ. ೪೦-೫). [ಸಂ.]

**ಸಪ್ತಪ್ರಕೃತಿ** (ನಾ). [ಜೈನ] ಕಷಾಯಚತುಷ್ಕ ಮತ್ತು ತ್ರಿವಿಧದರ್ಶನ ಮೋಹನೀಯಗಳೆಂಬ ಏಳು ಪ್ರಕೃತಿಗಳು : ತ್ರಿಕರಣ ದಿವ್ಯಾಂಜನದಿಂ ಸಕಳ ಪ್ರತ್ಯಕ್ಷಹೇತು ಸಮನಿಸೆ ಸಪ್ತಪ್ರಕೃತಿಪಟಳ ಕ್ಷಯಂ (ಮಲ್ಲಿಪು. ೧೪-೭೮); ಅನಂತಾನುಬಂಧಿ ಕ್ರೋಧಮಾನಮಾಯಾ ಲೋಭಾಭಿಧಾನ ಕಷಾಯಚತುಷ್ಕಮುಂ ತ್ರಿವಿಧ ದರ್ಶನಮೋಹನೀಯಮುಮೆಂಬೀ ಸಪ್ತಪ್ರಕೃತಿಗಳ ಉಪಶಮದಿಂದ (ತತ್ತ್ವಪ್ರ. ೭೯). [ಸಂ.]

**ಸಪ್ತಭಂಗಿ** (ನಾ). [ಜೈನ] "ಒಂದು ಗುಣವನ್ನು ಒಂದು ಪದಾರ್ಥದಲ್ಲಿ ಆರೋಪಿಸಲು ಆ ಪದಾರ್ಥವನ್ನು ನಿರೂಪಿಸಬಹುದಾದ ಏಳು ಪ್ರಕಾರಗಳು" (ಜೈನಕೋ. ೨೮೩): ಎರಡನೆಯ ಆಗಮವೆಂಬುದು . . . ಸಪ್ತಭಂಗಿ ಸಮಾಲಿಂಗಿತಮುಂ . . . ಅಪ್ಪುದು (ಚಾವುಂಪು. ೫); ಅಪಹಿಂಸಂ ಸಪ್ತಭಂಗ್ಯನ್ವಿತ ಮಪವನರೋದೋರ್ದ್ಧತಂ (ಚಂದ್ರಪು. ೧-೧೧).

ಸಪ್ತಭಂಗೀನ್ಯಾಯ = ವಾದ ಮಾಡುವಾಗ ಎಲ್ಲ ವಾದಿಗಳನ್ನು ಸುಧಾರಿಸುವುದು : ಸಪ್ತಭಂಗೀನ್ಯಾಯವೆಂದರೆ ವಾದಕಾಲದಲ್ಲಿ ಸಕಲವಾದಿಗಳನ್ನು ಸುಧಾರಿಸುವುದೆಂದು ಅಭಿಪ್ರಾಯ (ಹಿಂದಸಾ. ೭೫). **ಸಪ್ತಭಂಗೀರಹಸ್ಯ** = ಪ್ರಮಾಣ ನಯಗಳ ಮೂಲಕ ಉತ್ತರ ಹೇಳಿ ವಾದಿಗಳಿಗೆ ವಾದಿಸಲು ಅವಕಾಶ ಕೊಡದಿರುವುದು : ಪ್ರಮಾಣನಯಗಳಿಂದ ಉತ್ತರ ಹೇಳಿದರೆ ಮುಂದೆ ಅವಕಾಶವೇ ಇಲ್ಲ . . . ಇದೇ ಸಪ್ತಭಂಗೀರಹಸ್ಯ (ಹಿಂದಸಾ. ೭೬). [ಸಂ.]

**ಸಪ್ತಭಯ** (ನಾ). ೧. [ಜೈನ] ಇಹಲೋಕಭೀತಿ, ಪರಲೋಕಭೀತಿ, ಮೃತ್ಯುಭೀತಿ, ವೇದನಾಭೀತಿ, ಅಗುಪ್ತಿಭೀತಿ, ಅರಕ್ಷಾಭೀತಿ ಮತ್ತು ಅಕಸ್ಮಾತ್‌ಭೀತಿಗಳೆಂಬ ಏಳು ಬಗೆಯ ಭೀತಿಗಳು. ೨. ಏಳು ಬಗೆಯ ಭೀತಿಗಳಿಂದ ಕೂಡಿದವನು : ಅಪಗತಸಪ್ತಭಯನುಂ ಅಷ್ಟಮದಮಪೇತನುಂ ನವವಿಧಬ್ರಹ್ಮಚರ್ಯಾರ್ಜಿತನುಂ . . . ಅಕ್ಕುಂ (ಚಾವುಂಪು. ೬). [ಸಂ.]

**ಸಪ್ತಭೂಮಿಕ** (ನಾ). ಏಳು ಅಂತಸ್ತುಗಳು : ಮಾಣಿಕ್ಯಹರ್ಮ್ಯಾವಲೀವೃತಮುದ್ಯೋತಿತ ಸಪ್ತಭೂಮಿಕಮನೇಕೋದಗ್ರಕೂಟಂ . . . ಚೆಲ್ವಾಯ್ತು ರಾಜಾಲಯಂ (ಆದಿಪು. ೬-೧೦೭). [ಸಂ.]

**ಸಪ್ತಭೂಮಿಕೆ** (ನಾ). [ಅದ್ವೈತ] ಶುಭೇಚ್ಛಾ, ವಿಚಾರಣಾ, ತನುಮಾನಸೀ, ಸತ್ತ್ವಾಪತ್ತಿ, ಅಸಂಸಕ್ತಿ, ಪದಾರ್ಥಭಾವನಾ ಮತ್ತು ತುರ್ಯಗಾ ಎಂಬ ಏಳು ಭೂಮಿಕೆಗಳು : ಸಪ್ತಭೂಮಿಕೆಗಳನು ತಿಳಿ ಪರವಸ್ತುವನ್ನು ಹೊಂದುವೊಡೆ ಮನಸ್ಸಿಗೆ ಸ್ವಸ್ಥವಹ ಸೋಪಾನವಾಗಿರ್ಪವನುಕ್ರಮದಿಂದ (ಅಮೃತ. ೬-೫); ಅವರ ಬಳಿ ನಿರಲಂಬವದು ಕೇಳದರ ಬಳಿ ಸಾಧನಚತುಷ್ಟಯವದರ ಬಳಿಯಲಿ ಸಪ್ತಭೂಮಿಕೆಯೆನಿಪ ವಿವರವನು (ಜ್ಞಾನಸಿಂ. ೨-೧೩). [ಸಂ. ಸಪ್ತಭೂಮಿಕ]

**ಸಪ್ತಮ** (ಗು). ಏಳನೆಯ : ಕಟಿದು ಸಪ್ತಮಾವನಿಗಿಟಿದೋಂ (ಶಾಂತಿಪು. ೫-೭೧). [ಸಂ.]

**ಸಪ್ತಮತಾನ** (ನಾ). ಏಳನೆಯ ಸ್ವರ; ಉಚ್ಚಸ್ವರ: ಹಾಲಹಕ್ಕಿಯು . . . ಉಚ್ಚಕಂಠದಿಂದ ಸಪ್ತಮತಾನದಲ್ಲಿ ಮಾತನಾಡಿಸುತ್ತಿದ್ದಿತು (ಕೋಟಿನೂ. ೩). [ಸಂ.]

**ಸಪ್ತಮದ** (ನಾ). ೧. ಯೌವನ, ಕುಲ, ಸ್ತ್ರೀ, ಅನ್ನ, ದಾನ, ವಿದ್ಯಾ ಮತ್ತು ಉದ್ಯೋಗವೆಂಬ ಏಳು ಮದಗಳು. ೨. [ಗಜಶಾ] ಆನೆಯ ಏಳು ಮದಾವಸ್ಥೆಗಳು ; IP "ಗಜಮದಾವಸ್ಥಾನುಗತ ಗಜನಾಮಗಳು – ೭ : (ಅ) ಕಟಪೂರ್ಣಾ (ಪೂರ್ಣಕಟತಾ), ಆರ್ದ್ರಕಪೋಲಿತಾ (ಆರ್ದ್ರಕಪೋಲತಾ), ಭೂರಿದಾನ (ಅಧೋನಿಬಂಧಾ), ಗಂಧಚರಾ, ಕ್ರೋಧನೀ, ಅತಿಕ್ರಾಂತಾ, ಹ್ಯಸನಾ (ಮಾತಂಗ. ೯-೧೨-೧೮). (ಆ) ಸಂಜಾತತಿಲಕಾ, ಆರ್ದ್ರಕಪೋಲಿಕಾ, ಅಧೋನಿಬಂಧಿನೀ (ಅಧೋನಿಬದ್ಧಾ), ಗಂಧಚಾರಿಣೀ, ಕ್ರೋಧಧೀ (ಕ್ರೋಧನೀ), ಅತಿವರ್ತಿನೀ (ಪ್ರವರ್ತಿಕಾ), ಸಂಭಿನ್ನಮದಮರ್ಯಾದಾ (ಸಂಭಿನ್ನಕಪೋಲಾ, ಸರ್ವಕಾಲಿಕಾ) (ಯಶಸ್ತಿಲಕ–ಟಿ.ಜೆ.ವಿ. I, ೮೧)" (ಶ್ರೀವತ್ಸ. ೧೩೭). ೩. ಆನೆಯ ಏಳನೆಯ ಮದ : 'ಸಪ್ತಮದಾವಸ್ಥೆ' ಪರಾ. [ಸಂ.]

**ಸಪ್ತಮದಾವಸ್ಥೆ** (ನಾ). [ಗಜಶಾ] ಆನೆಯ ಏಳನೆಯ ಮದದ ಸ್ಥಿತಿ,– ಇರವು : ಆ ಮಹಾಮದೇಭಂ . . . ಒಂದು ದಿವಸಂ ಕ್ರೋಧಿನಿಯೆಂಬ ಸಪ್ತಮದಾವಸ್ಥೆಯಿಂದಾದ ಮನದ ಮುಸಕದಿನಸವಸದೆ ನೆಲದ ನಾಲಗೆಯಂ ಕೀಟ್ಬಂತೆ ಬಾಟ್ಲಂಬಮಂ ಕಿಟ್ತು (ಚಂದ್ರಪು. ೯-೧೦೦ ವ). [ಸಂ. ಸಪ್ತಮದಾವಸ್ಥಾ]

**ಸಪ್ತಮಮದಾವಸ್ಥೆ** (ನಾ). = ಸಪ್ತಮದಾವಸ್ಥೆ : ಬಿರುದಿನ ತೊಡರ್ಝುಣಝುಣೆಸಲೆಳ್ದು ಸಪ್ತಮಮದಾವಸ್ಥೆಯಿಂ ಮುಂದುಗಾಣದೆ ಬಲ್ಲಂಬಮಂ ಮುಱಿದು . . . ಸಿಲ್ಕಿದರಂ ಸೀಳ್ದು (ರಾಜಶೇ. ೬-೧೧ ವ). [ಸಂ. ಸಪ್ತಮಮದಾವಸ್ಥಾ]

**ಸಪ್ತಮಲ** (ನಾ). [ವೀಶೈ] ಮೋಹ, ಮದ, ರಾಗ, ವಿಷಾದ, ತಾಪ, ಶೋಕ ಮತ್ತು ವೈಚಿಂತ್ಯಗಳೆಂಬ ಏಳು ಮಲಗಳು : ಮೋಹಮದರಾಗ ವಿಷಾದ ತಾಪಶೋಕ ವೈಚಿಂತ್ಯವೆಂಬ ಸಪ್ತಮಲವಾವರಿಸಿ ಮತ್ತರಾಗಿ (ಪದಗೋ. ೨೩). [ಸಂ.]

**ಸಪ್ತಮಾತೃಕೆ** (ನಾ). ೧. ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ ಮತ್ತು ಚಾಮುಂಡಾ ಎಂಬ ಏಳು ಜನ ತಾಯಿಯರು: ಅಗ್ನಿಕನ್ನಿಕೆಯರಾದ ಬ್ರಾಹ್ಮಿ . . . ಚಾಮುಂಡಿಯರೆಂಬ ಸಪ್ತಮಾತೃಕೆಯರುಂ (ವಿವೇಕ. ೨೧೩); ನಿರುತ ಚೌಷಷ್ಟಿಕಳೆಗಳು ಸಪ್ತಮಾತೃಕೆಯರು . . . ಅಗಜೆಯನು ವಾಲ್ಗೈಸಿರ್ದರು (ನವಮೋ. ೨೪-೬೯). ೨. ಒಂದು ಮಂತ್ರದ ಹೆಸರು : ಸಪ್ತಮಾತೃಕಾ . . . ಇತ್ಯಾದಿ ಮಹಾಮಂತ್ರಂಗಳಂ (ವಿವೇಕ. ೮೧). [ಸಂ. ಸಪ್ತಮಾತೃಕಾ]

**ಸಪ್ತಮಿ** (ನಾ). ೧. ಮಾಸದ ಶುಕ್ಲ ಮತ್ತು ಕೃಷ್ಣ ಪಕ್ಷಗಳ ಏಳನೆಯ ದಿನ: ಆ ಪಕ್ಷಂಗಳೊಳಗೆ . . . ರವಿಯಧಿದೇವತೆಯಾದ ಸಪ್ತಮಿ (ವಿವೇಕ. ೨೬೦). ೨. [ವ್ಯಾಕ] ಒಂದು ವಿಭಕ್ತಿಯ ಹೆಸರು ; ಏಳನೆಯ ವಿಭಕ್ತಿ : ಪ್ರಥಮೆಗಂ . . . ಸಪ್ತಮಿಗಂ ಏಟಾಗಿ ಕಾರಕವಶದಿಂ ಪತ್ತುಗುಂ (ಶಮದ. ೯೩ ವೃತ್ತಿ); ವಿಷಯಾರ್ಥದಲ್ಲಿಯೂ ಸಪ್ತಮಿ ಬರುವುದು (ಕೈಪಿಡಿ. ೫೭). [ಸಂ. ಸಪ್ತಮೀ]

**ಸಪ್ತಮೀವಿಭಕ್ತಿ** (ನಾ). = ಸಪ್ತಮಿ ೨ : ದಿಕ್ಕುಗಳನ್ನು ಹೇಳುವ ನಾಮವಾಚಕಗಳಿಗೆ ಸಪ್ತಮೀವಿಭಕ್ತಿಯಲ್ಲಿ ಏ ಎಂಬ ಪ್ರತ್ಯಯವು ಸೇರುತ್ತದೆ (ಮಧ್ಯಮ. ೬೦). [ಸಂ.]

**ಸಪ್ತಮುಖ** (ನಾ). ೧. ಏಳು ಮುಖಗಳು. ೨. ಏಳು ಕವಲುಗಳು. ೧, ೨ : ಸಪ್ತಮುಖದಿಂದೆ ವಿಷೋನ್ನತಿಯಿಂದೆ ಭೋಗದೊಳ್ ತುಱುಗಿರವಿಂದೆ ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೭೪೭ ಶೂದ್ರಕ). [ಸಂ.]

**ಸಪ್ತರಸನ** (ನಾ). ಕಾಳಿ, ಕರಾಳಿ, ಮನೋಜವೆ, ಸುಧೂಮ್ರವರ್ಣೆ, ಸುಲೋಹಿತೆ, ಉಗ್ರೆ, ಪ್ರದೀಪ್ತೆ ಎಂಬ ಬೆಂಕಿಯ ಏಳು ನಾಲಗೆಗಳಿಂದ ಕೂಡಿದವನು; ಅಗ್ನಿ : "ವಸುಸಿತೇತರಗತಿ ಸ್ವಾಹಾಪ್ರಿಯಂ ಸಪ್ತರಸನನಪ್ಪಿತ್ತಂ [ಪಾಠಾಂ. ಪ್ಪೀಕರಂ] . . . ವಿರೋಚನನೆನಿಕ್ಕುಂ" (ಮಂಗರಾ. ೧೪-೬); ಸಪ್ತರಸನಾಶಾರ್ವರೀವರ ಸಪ್ತಸಪ್ತಿ ವಿಲೋಚನಂಗಂ . . . ಅರ್ಪಿಸುವೆನಿಂದುಗ್ರಗರಳವ (ಬಸಪು. ೫೮-೪೦). [ಸಂ. ಸಪ್ತರಸನಾ]

**ಸಪ್ತರಾಶಿಕ** (ನಾ). [ಗಣಿತ] ಗಣಿತದ ಒಂದು ವಿಧಾನ ; ಏಳು ಅಂಶಗಳಿಂದ ಲೆಕ್ಕ ಮಾಡುವುದು : ರಾಜಾದಿತ್ಯನ ಗಣಿತದಲ್ಲಿ ತ್ರಯಿರಾಶಿಕ . . . ಸಪ್ತರಾಶಿಕ, ಬೆಸ್ತಸಪ್ತರಾಶಿಕ (ವ್ಯವಹಾ. ಅನುಬಂಧ. I, ೧೧). [ಸಂ.]

**ಸಪ್ತರ್ಧಿ** (ನಾ). [ಜೈನ] ಬುದ್ಧಿ, ತಪಸ್ಸು, ವಿಕ್ರಿಯೆ, ಔಷಧಿ, ರಸ, ಬಲ ಮತ್ತು ಅಕ್ಷೀಣಗಳೆಂಬ ಏಳು ಋದ್ಧಿಗಳು : ಭಾವನೆಯೊಳಾದ ಬುದ್ಧಿತಪೋ ವಿಕ್ರಿಯೌಷಧಿರಸ ಬಲಾಕ್ಷೀಣಾಭಿಧಾನ ಸಪ್ತರ್ಧಿಗಳೊಳಂ ನೆಟೆದು (ಆದಿಪು. ೬-೩೩ ವ); ಕ್ರಮದಿಂ ಸಪ್ತರ್ಧಿವೆತ್ತಶ್ರಮದಿನುಪಶಮಶ್ರೇಣಿಯಂ ಸಾರ್ದು (ಮಲ್ಲಿಪು. ೧೧-೫೭). [ಸಂ.]

**ಸಪ್ತರ್ಧಿಜ್ಞಾನ** (ನಾ). ಏಳು ಋದ್ಧಿಗಳಿಂದ ಉಂಟಾದ ಜ್ಞಾನ : ಅಂತು ದೀಕ್ಷಾಗ್ರಹಣಾನಂತರ ಸಮಯಸಮುತ್ಪನ್ನ ಸಪ್ತರ್ಧಿಜ್ಞಾನಚತುಷ್ಟಯಂ ಪ್ರಥಮಗಣ ಧರನಾದಂ (ಆದಿಪು. ೧೦-೪೮ ವ). [ಸಂ.]

**ಸಪ್ತರ್ಷಿ** (ನಾ). = ಸಪ್ತಋಷಿ : ಸಪ್ತರ್ಷಿಗಳು ಯಾರೆಂದರೆ ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ (ಜ್ಯೋತಿರ್ವಿ. ૩೪); ಸಪ್ತರ್ಷಿಗಳ ಪತ್ನಿಯರಲ್ಲಿ . . . ಆರು ಋಷಿಪತ್ನಿಯರೂ ಅಗ್ನಿದೇವನಿಗೆ ಮನಸೋತರು (ನಕ್ಷತ್ರ. ೮). [ಸಂ.]

**ಸಪ್ತರ್ಷಿಮಂಡಲ** (ನಾ). [ಜ್ಯೋತಿ] ಪ್ರಸಿದ್ಧರಾದ ಏಳುಋಷಿಗಳ ಹೆಸರಿನಲ್ಲಿ ಕರೆಯುವ ಏಳುನಕ್ಷತ್ರಗಳ ಸಮುದಾಯ : ಶಶಿತಾರೆ ಸಪ್ತರ್ಷಿಮಂಡಲಂ ಶ್ರುತಿಚಯಂ . . . ಎಲ್ಲರುಂ ರಕ್ಷಿಸಲಿ (ಶ್ರೀರಾಮಾ. ೮೫-೧೪೮). [ಸಂ.]

**ಸಪ್ತರ್ಷಿಸಮಾಜ** (ನಾ). = ಸಪ್ತರ್ಷಿಮಂಡಲ : ಮಿಳಿರ್ದು ಪೊಳೆವ ಸಪ್ತರ್ಷಿ ಸಮಾಜದಂತೆ ಸಂಚರಿಸಿ ಮಿಂಚುವಲಗುಗಳಿಂ (ಪುಷ್ಪಪು. ೫-೧೩ ವ). [ಸಂ.]

**ಸಪ್ತಲೆ, ಸಪ್ತಳೆ** (ನಾ). ೧. ಒಂದು ಬಗೆಯ ಮಲ್ಲಿಗೆ ; ಏಳು ಸುತ್ತಿನ ಮಲ್ಲಿಗೆ; ಇರುವಂತಿಗೆ: ಸಪ್ತಾಶ್ವಘನತೇಜ ಸಪ್ತ ಸೋಪಾನ ವರ ಸಪ್ತಲಾಸಿತಹಸನ ಸಪ್ತಯುಗಜಗದಧಿಪ . . . ಜಯ ಗುರುವೆ (ವೀಶೈಪು. ೪-೨೦-೨); ತರುವಿಲಾಸಿನಿಯಾದ ಸಪ್ತಲೆ ನಿರುಕಿಸುತ್ತಿಹ ಜನರ ಮನವನು ಭರದೆ ಸೆಳೆಯುತ್ತದಕೆ ಮತ್ತತೆಯುಂಟು ಮಾಡಿದುದು (ಶ್ರೀರಾಚ. ೩-೪೨). ೨. ಸೀಗೆಯ ಪೊದರು. ಸಪ್ತಳೆ : ೧. "ಸಪ್ತಳಾ, ನವಮಾಲಿಕಾ - ಈ ೨ ಇರುವಂತಿ" (ಹಲಾಯು. ೩೫-೫೪). [ಸಂ. ಸಪ್ತಲಾ]

**ಸಪ್ತಲೋಕ** (ನಾ). ಭೂಲೋಕ, ಭುವರ್ಲೋಕ, ಸ್ವರ್ಗಲೋಕ, ಮಹರ್ಲೋಕ, ಜನಲೋಕ, ತಪೋಲೋಕ ಮತ್ತು ಸತ್ಯಲೋಕವೆಂಬ ಏಳು ಊರ್ಧ್ವಲೋಕಗಳು: ಸೂರ್ಯಾದಿಗ್ರಹಗಳ ಮತ್ತು ಸಪ್ತಲೋಕಗಳ ಸಂಸ್ಥಾನ (ಭಾರದ. ೧೪೦). [ಸಂ.]

**ಸಪ್ತವಾರಿಧಿ** (ನಾ). = ಸಪ್ತಕೂಪಾರ : ಬೇಗದಲಿ ಮನವೊದಗಲಾಜಿದತಿ ನಿರ್ಗಮದ ಲಾಗಿಂಗೆ ಸಪ್ತವಾರಿಧಿ ನೆರೆಯವವ ನಿಲಿಸುವಾಗ ವಸುಧೆಯ ಮೇಲೆ ನಿಲಲೊಲ್ಲೆವೆಂಬ ಸಂದೀಪಕೊಳಗಾದ ತುರಗ (ಹಚಕಾ. ೫-೧೨). [ಸಂ.]

**ಸಪ್ತವಾರುವ** (ನಾ). ಅಮೃತಸಂಭವ, ಬಾಷ್ಪಸಂಭವ, ವಹ್ನಿಸಮುದ್ಭವ, ದೇವಸಂಭವ, ಅಂಡಸಮುದ್ಭವ, ಗರ್ಭಸಮುದ್ಭವ ಮತ್ತು ಸಾಮ್ನಾ ಎಂಬ ಏಳು ವಿಧದ ಕುದುರೆಗಳನ್ನುಳ್ಳವನು; ಸೂರ್ಯ: ಪ್ರಮಥಗಣಮುಖ ಪಂಕರುಹ ಸಪ್ತವಾರುವಂ ಪ್ರಮಥಗಣಮಾನಸಸರೋವರಸ್ಥಿತ ಹಂಸ . . . ಪ್ರಮಥಗಣರಾಪ್ತರೆಂದಾ ಪ್ರಮಥರಗಲದಿಹ ಸಿದ್ಧನಂಜೇಶ ಜಯತು (ಗುರುಚಾ. ೯-೧). [ಸಪ್ತ + ವಾರುವ]

**ಸಪ್ತವಾಸರ** (ನಾ). ಸೂರ್ಯ : ಶಾಂತ್ಯಭಿಷೇಕಪುರಸ್ಸರಂ ಪೂಜಾವಿಧಾನಮಂ ಸಪ್ತವಾಸರಾವಸಾನಂಬರಂ ಮಾಡಲ್ಪಗುಳ್ಳುದುಂ (ಶಾಂತಿಪು. ೬-೨೮ವ). [ಸಂ.]

**ಸಪ್ತವಿಭಕ್ತಿ** (ನಾ). [ವ್ಯಾಕ] ಪ್ರಥಮಾ, ದ್ವಿತೀಯಾ, ತೃತೀಯಾ, ಚತುರ್ಥೀ, ಪಂಚಮಿ, ಷಷ್ಠಿ ಮತ್ತು ಸಪ್ತಮಿಗಳೆಂಬ ಏಳು ವಿಭಕ್ತಿಗಳು: ಅವ್ಯಯಲಿಂಗಮೆಂಬುದು ಸಪ್ತವಿಭಕ್ತಿಗಂ ಪುಂಸ್ತ್ರೀನಪುಂಸಕಲಿಂಗಕ್ಕಂ ಏಕವಚನ ದ್ವಿವಚನ ಬಹುವಚನವೆಂಬ ವಚನಕ್ಕಂ ಸರಿಯಾಗಿ ಇರ್ದ ತೆಱದೆ ಅರ್ಥಮಂ ಕುಡುಗುಂ (ಶಮದ. ಸ. ೧೦೦ ವೃತ್ತಿ). [ಸಂ.]

**ಸಪ್ತವ್ಯಸನ** (ನಾ). ೧. ಸ್ತ್ರೀ, ದ್ಯೂತ, ಬೇಟೆ, ಕುಡಿತ, ವಾಕ್ಪಾರುಷ್ಯ, ದಂಡಪಾರುಷ್ಯ ಮತ್ತು ಅರ್ಥದೂಷಣ ಎಂಬ ಏಳುವ್ಯಸನಗಳು: ತಂದೆ ಪಡೆದ ಕಡವರಮಂ ಬಿಯಂಗೆಯ್ಯುತ್ತುಂ ಸಪ್ತವ್ಯಸನಾಭಿಭೂತರಾಗಿ ನೆಗಟುತ್ತಿರೆಯಿರೆ (ವಡ್ಡಾರಾ. ೨-೧೬); ಸಪ್ತವ್ಯಸನಕ್ಕೆಱಗಿರೆ ರಾಜ್ಯಾಂತವಾಗದಿರ್ಕುಮೆ ನರಕಂ (ಅಜಿಪು. ೨-೧೦೭); ಇಳೆಯೊಡೆಯ ಜೂಜೆಂಬುದೀಗ ಸಪ್ತವ್ಯಸನದೊಳಗಣದು ಮುನಿಗಳಿಗಯೋಗ್ಯವೆನೆ (ವೀಶೈಪು. ೨-೧೩-೧೬). ೨. ತನು, ಮನ, ಧನ, ರಾಜ್ಯ, ವಿಶ್ವ, ಉತ್ಸಾಹ ಮತ್ತು ಸೇವಕವೆಂಬ ಏಳು ವ್ಯಸನಗಳು : ತನುವ್ಯಸನ ಮನವ್ಯಸನ ಧನವ್ಯಸನ ರಾಜ್ಯವ್ಯಸನ ವಿಶ್ವವ್ಯಸನ ಉತ್ಸಾಹವ್ಯಸನ ಸೇವಕವ್ಯಸನ ಇಂತಿವು ಸಪ್ತವ್ಯಸನಂಗಳ ವಿವರ (ಚನ್ನವ. ಕ. ೪೧೨-೮೭); ಸಪ್ತಧಾತು ಸಪ್ತ ವ್ಯಸನಂಗಳ ಸಣ್ಣಿಸಿ (ಅಖಂಡೇ. ೧೯೩-೧೪). [ಸಂ.]

**ಸಪ್ತವ್ಯಸನಿ** (ನಾ). ಏಳು ವ್ಯಸನಗಳನ್ನುಳ್ಳವನು: ಕರಣಾದಿ ಗುಣಂಗಳ ಮಚ್ಚೆದರು . . . ಶರಣರು ಸಪ್ತವ್ಯಸನಿಗಳಲ್ಲಾಗಿ (ಬಸವ. ೮೦೯). [ಸಂ. ಸಪ್ತವ್ಯಸನಿನ್]

**ಸಪ್ತಶರಧಿ** (ನಾ). = ಸಪ್ತಕೂಪಾರ : ಸಪ್ತಶರಧಿಪರಿವೃತಧರೆಯ ಸಿರಿಯ ಸೊಬಗಜ್ಞಾತವಾಸಕ್ಕೆ ಪೋಗುತಿದೆ (ಹಚಕಾ. ೯-೧೦). [ಸಂ.]

**ಸಪ್ತಶೈವ** (ನಾ). ಅನಾದಿ, ಆದಿ, ಮಹಾ, ಅನು, ಅವಾಂತರ, ಪ್ರವರ ಮತ್ತು ಅಂತರಶೈವಗಳೆಂಬ ಏಳು ಶೈವಗಳು : ತರುಣ ಕೇಳಾ ಸಪ್ತಶೈವಪ್ರಕಾರಮಂ ಪರಿವಿಡಿಯೊಳಂದು ಬಿತ್ತರಿಸುತಿರ್ದಂ (ವೀಶೈಪು. ೭-೨-೩೫). [ಸಂ.]

**ಸಪ್ತಶ್ರುತಿ** (ನಾ). = ಸಪ್ತನಾದ : ಷಡ್ಜಾದಿ ಸಪ್ತಶ್ರುತಿಗಳಿಂಪುಗೆ ಮಂದ್ರ ಮಧ್ಯಮತಾರ ವಿಶ್ರಮದ ಅತಿ ಮಧುರ ಮೃದುಗೀತಜಾತೋನ್ನತ ರಸದೊಳೊಡಗೂಡಿ (ಬಸಪು. ೧-೪೮). [ಸಂ.]

**ಸಪ್ತಸಪ್ತಿ** (ನಾ). = ಸಪ್ತವಾರುವ ೨ : ಸಪ್ತಸಪ್ತಿಯನಿಳಾಭಾಗಕ್ಕೆ ತರ್ಪೊಂದು ತೋಳ್ವಲಮುಂ ಗರ್ವಮುಂ (ಪಂಪಭಾ. ೭-೭); ಸಪ್ತರಸನಾ ಶಾರ್ವರೀರವರ ಸಪ್ತಸಪ್ತಿವಿಲೋಚನಂಗಂ (ಬಸಪು. ೫೮-೪೦). [ಸಂ.]

**ಸಪ್ತಸಮುದ್ರ** (ನಾ). = ಸಪ್ತಕೂಪಾರ : ಸಪ್ತಸಮುದ್ರಮುದ್ರಿತ ಧರಾತಳಮಂ ಬೆಸಕೆಯ್ಸು (ಪಂಪಭಾ. ೧-೧೪೯) ; ಸಪ್ತಸಮುದ್ರ ದಾಟಿ ಹೋಗುವುದು ? (ಇಪ್ಪಕ. ೨೭೦). [ಸಂ.]

**ಸಪ್ತಸಾಗರದಾನ** (ನಾ). ಷೋಡಶಮಹಾದಾನಗಳಲ್ಲಿ ಒಂದು : ಷೋಡಶ ಮಹಾದಾನಗಳನ್ನು ಮಾಡಬೇಕೆಂದು ಸಂಕಲ್ಪಿಸಿ . . . (೧೪) ಸಪ್ತಸಾಗರದಾನ (೧೫) ರತ್ನಧೇನುದಾನ . . . ಮಾಡಿ ಸತ್ಕೀರ್ತಿಯಂ ಪಡೆದರು (ಮಹಾವಂ. I. ೧೦೧). [ಸಂ.]

**ಸಪ್ತಸಾಧಾರಣ** (ನಾ). [ಸಂಗೀತ] ರಾಗಜಾತಿಗಳಲ್ಲಿ ಒಂದು : ಶುದ್ಧ ಭಿನ್ನ ಗೌಡ ಅಪ್ಪಸಾಧಾರಣ ಸಪ್ತಸಾಧಾರಣ ಷಟ್ಸ್ವರವೆಂಬಾಯು ಜಾತಿಗಳು (ವಿವೇಕ. ೧೮೭). [ಸಂ.]

**ಸಪ್ತಸೂತ್ರ** (ನಾ). ಯಜ್ಞ ; ಯಾಗ : " ಸತ್ರಂ ಸವಂ ಯಜ್ಞಮಧ್ವರಂ ಕ್ರತು ಸಪ್ತಸೂತ್ರಂ ಮಖಂ . . . ಯಾಗಕೃತ್ಯಮೆನಿಸಿಕ್ಕು" (ಮಂಗರಾ. ೭೭-೧೩). [ಸಂ.]

**ಸಪ್ತಸೋಪಾನ** (ನಾ). [ವೀಶೈ]ಜಂಗಮರ ಸೇವೆಯ ಏಳು ಹಂತಗಳು; IP ಜಂಗಮರನ್ನು ಕಂಡೊಡನೆ ವಿನಯದಿಂದ ಎದುರುಗೊಳ್ಳುವುದು, ಸಾಷ್ಟಾಂಗನಮಸ್ಕರಿಸುವುದು, ಗದ್ದುಗೆಯಲ್ಲಿ ಕುಳ್ಳಿರಿಸಿ ಪಾದಪ್ರಕ್ಷಾಲನ ಮಾಡುವುದು, ಪಾದತೀರ್ಥವನ್ನು ತೆಗೆದುಕೊಳ್ಳುವುದು, ಅವರನ್ನು ಅನ್ನಪಾನಾದಿಗಳಿಂದ ಸತ್ಕರಿಸುವುದು, ಮಿಕ್ಕ ಪ್ರಸಾದವನ್ನು ತೆಗೆದು ಕೊಳ್ಳುವುದು, ಅವರಲ್ಲಿ ಅನುಭಾವವನ್ನು ಬೆಸಗೊಳ್ಳುವುದು: ಸಪ್ತಾಶ್ವ ಘನತೇಜ ಸಪ್ತಸೋಪಾನವರ . . . ಶಿವಾಪ್ತ ಜಯಗುರುವೇ ಪರವೇ (ವೀಶೈಪು. ೪-೨೦-೨); ಇಂತೀ ಸಪ್ತಸೋಪಾನಂಗಳ ಬಲ್ಲ ಸದ್ಭಕ್ತಂಗೆ ಕೈಲಾಸ ಕರತಳಾಮಳಕವು (ಅಖಂಡೇ. ೭೪-೪೭). [ಸಂ.]

**ಸಪ್ತಸೋಮಸಂಸ್ಥೆ** (ನಾ). ವೈದಿಕಪರಂಪರೆಯ ಸೋಮಯಜ್ಞದ ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ವಾಜಪೇಯ, ಅತಿರಾತ್ರ, ಅಪ್ತೋರ್ಯಾಮಗಳೆಂಬ ಏಳು ಅಂಗಗಳು: ದ್ವಿಜಕುಳ ತಿಳಕರ್ಸಪ್ತಸೋಮಸಂಸ್ಥಾವಭೃತಾವಗಾಹನ ಪವಿತ್ರೀಕೃತಶರೀರರ್ (ಸೌಇಇ. XX. ೫೭-೪; 1084); ಸಪ್ತಸೋಮಸಂಸ್ಥಾವಭೃತಾವಗಾಹನ ಪವಿತ್ರೋತ್ತಮಾಂಗರ್ (ಸೌಇಇ. XX. ೭೦-೮; 1108). [ಸಂ. ಸಪ್ತಸೋಮಸಂಸ್ಥಾ]

**ಸಪ್ತಸ್ವರ** (ನಾ). [ಸಂಗೀತ] ಷಡ್ಜ, ವೃಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾಧಗಳೆಂಬ ಏಳು ಸ್ವರಗಳು : ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾಧಂಗಳೆಂಬ ಸಪ್ತಸ್ವರಮುಮಂ (ಅಜಿಪು. ೪-೩೦ ವ); ದನಿಯ ಕೂಡಿಸಿ ಸಪ್ತತಂತ್ರಿಯ ಮುಗಿಪ ಮಧ್ಯಮ ಷಡ್ಜ ಪಂಚಮವನಿಪ ಸಪ್ತಸ್ವರವನಾಳಾಪಿಸಲು ಕ್ರಮದಿಂದ (ಕಾಶಿರಾ. ೨೪-೧೧). [ಸಂ.]

ಸಪ್ತಾಳೆ 'ಸಪ್ತಲೆ' ನೋ.

**ಸಪ್ತಾಂಗ** (ನಾ). [ರಾಜನೀ] ಸ್ವಾಮಿ, ಅಮಾತ್ಯ, ಸುಹೃತ್ತು, ಕೋಶ, ಬಲ, ರಾಷ್ಟ್ರ ಮತ್ತು ದುರ್ಗ ಎಂಬ ರಾಜನ ಏಳು ಬಗೆಯ ರಾಜ್ಯಾಂಗಗಳು: ಅಟ್ಟು ಕಿಡುಗುಂ ಸಪ್ತಾಂಗಂ (ಪಂಪಭಾ. ೪-೮) ; ರಕ್ಷಿಸಿದನಿನ್ನೀ ಗಂಡಭೇರುಂಡ ಸೈನ್ಯ ಬಲಂಬೆತ್ತಿರೆ ನಾರಸಿಂಹನೃಪನಾತ್ಮಾವಾಪ್ತ ಸಪ್ತಾಂಗವಂ (ಎಕ. V, ಬೇಲೂರು. ೧೯೩-೪೭ ; 1160); ಲವಲವಿಕೆ ಮಿಗಲಿತ್ತು ಸಪ್ತಾಂಗವನು ಸಲಹುತ್ತಿರಲುಬೇಹುದು (ಕುಮಾವ್ಯಾ. ೩-೧೫). [ಸಂ.]

**ಸಪ್ತಾನೀಕ** (ನಾ). ಆನೆ, ಕುದುರೆ, ರಥ, ಪದಾತಿ, ವೃಷಭ, ಗಂಧರ್ವ ಮತ್ತು ನರ್ತಕಿಯರೆಂಬ ಏಳು ಬಗೆಯ ಅಂಗಗಳಿಂದ ಕೂಡಿದ ಸೈನ್ಯ : ಹಸ್ತ್ಯಶ್ವ ರಥಪದಾತಿವೃಷಭಗಂಧರ್ವನರ್ತಕೀಪ್ರಮುಖಸಪ್ತಾನೀಕಸಮೇತನುಂ (ಆದಿಪು. ೬-೧೩ ವ); ಹಸ್ತ್ಯಶ್ವರಥ . . . ಪ್ರಭೃತಿ ಸಪ್ತಾನೀಕಸಮೇತರಾಗಿ (ಸುಕುಮಾ. ೮-೬೬ ವ). [ಸಂ.]

**ಸಪ್ತಾನೀಕಿನಿ** (ನಾ). = ಸಪ್ತಾನೀಕ : ಸಪ್ತಾನೀಕಿನಿಯಾಗಿ ಬಂದು ಬೆಸಕೆಯ್ವತ್ಯಂತ ದೈನ್ಯಂ ಮಹಾಸುಪ್ರಿಜ್ಞಾನದಿನಾದ ಮೆಯ್ಯ ಮಱುಕಂ . . . ಜ್ಯಾಯಂಗುಪಾದೇಯಮೇ (ಮಲ್ಲಿಪು. ೧೩-೧೨೩). [ಸಂ.]

**ಸಪ್ತಾನ್ನ** (ನಾ). ಏಳು ಬಗೆಯ ಅನ್ನ : ಸಪ್ತಾನ್ನಗಳ ದೈನಂದಿನ ಮರೆಯದೆ ಸದಾ ಗೋವಿಂದಗರ್ಪಿಸು ನಿರ್ಭಯದಿ ಮಹಯಜ್ಞವಿದೆಂದು (ಹಸಾರ. ೧೪-೧೫). [ಸಂ.]

**ಸಪ್ತಾಬ್ಧಿ** (ನಾ). = ಸಪ್ತಕೂಪಾರ : ಸಪ್ತಾಬ್ಧಿಗಳನೊಂದಿನಂ ದಾಂಟಿ (ಚಬಪು. ೪೭-೧೧); ಕಿರೀಟಿ ಪಿಡಿದಂ ದೇವದತ್ತಮಂ ಸಪ್ತಾಬ್ಧಿರಭಸವೊಬ್ಬುಳಿಸುವಂತೆ ಮಾಟಾಡಿಸಿತು ಭೂಮಿಯಂ (ಜೈಮಿಭಾ. ೧೩-೪೩). [ಸಂ.]

**ಸಪ್ತಾರ್ಚಿ** (ನಾ). ೧. = ಸಪ್ತರಸನ: ದಂಪತಿಗಳ್ ಸಪ್ತಾರ್ಚಿಯಂ ಮೂಱುಸೂಟ್ ಬಲವಂದು (ಪಂಪಭಾ. ೩-೭೫ವ); ಅಚ್ಚರಿಯನೇನಂಬೆನ್ಕೆ ಸಪ್ತಾರ್ಚಿಯಿತ್ತನು ವನವನಿಂದ್ರನ (ಕುವ್ಯಾಅ. ೨೦-೧೯); ಸರ್ವಶುಚಿ ಸಪ್ತಾರ್ಚಿ ಸೂಡನದೂ ಪೊತ್ತಿದಂ ಪೊಗೆ ಸೂಸಿ (ಚಿತ್ರಾಂಗ. ೮೯-೨೪೭೦). ೨. ಸಪ್ತಋಷಿಗಳನ್ನು ಪೂಜಿಸುವವನು. ೧, ೨ ; ಈ ಮಹಾಪುರುಷಂ . . . ಸಪ್ತಾರ್ಚಿಯಾಗಿಯುಂ ಹುತವಹನಲ್ತು (ಜಗವಿ. ೮-೧೦ ವ). [ಸಂ.ಸಪ್ತಾರ್ಚಿಸ್]

**ಸಪ್ತಾರ್ಚಿಲೋಚನ** (ನಾ). ಅಗ್ನಿನೇತ್ರ; ಶಿವ: ಭೇಶಾರ್ಕ ಸಪ್ತಾರ್ಚಿ ಲೋಚನಂ ಸರ್ವೇಶ (ಗುರುಚಾ. ೫-೬೧) ; ಸಪ್ತಾರ್ಚಿಲೋಚನನಂಘ್ರಿಕಮಲಗಳ ನೆನೆವುತೆ (ನವಮೋ. ೬-೩೦). [ಸಂ.]

**ಸಪ್ತಾವರಣ** (ನಾ). ಭೂಮಿ, ಜಲ, ಅಗ್ನಿ, ವಾಯು , ಆಕಾಶ, ಅಹಂಕಾರ ಮತ್ತು ಮಹತ್ತತ್ತ್ವ ಎಂಬ ಏಳು ಆವರಣಗಳು : ತನುಮನೋಬುದ್ಧಿಯ ಹಮುಚಿತ್ತವಿಜ್ಞಾತೃ ಘನಮಾಯೆಯೆಂಬವೀ ಕ್ರಮದಿಂದೆ ವನಿತೆ ಸಪ್ತಾವರಣಂ ಗಳೆನಿಪವು (ಪರಮೋ. ೫-೧೭-೨); ಎಸೆವ ಹಮ್ಮಿಂದಂ ಮಹತ್ತಿಂ ಪಸರಿಸಿದ ಸಪ್ತಾವರಣದಿಂದಾಯ್ತು ಮೂಲೋಕಂ (ಅಮೃತ. ೪-೧೫). [ಸಂ.]

**ಸಪ್ತಾವಸ್ಥೆ** (ನಾ). ೧. [ಗಜಶಾ]ಆನೆಯ ಸಂಚಿತ, ತಿಲಕಿತ, ಆರ್ದ್ರಕಪೋಲಿತ, ಅತಿವರ್ತಿತ, ಅಧೋನಿಬಂಧನಿ, ಕ್ರೋಧಿನಿ ಮತ್ತು ಗಂಧಚಾರಿಣಿಗಳೆಂಬ ಏಳು ಮದಾವಸ್ಥೆಗಳು : ಆ ಪಟ್ಟಣದ ನರಸಿಂಗಮೊನೆಯರ ಪಟ್ಟದಾನೆ ಸಂಚಿತ . . . ಗಂಧಚಾರಿಣಿಯೆಂಬ ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ (ನಂಬಿರ. ೨-೨೨). ೨. ಮಾನವನ ಕಾಮವಿಷಯಕವಾದ ದಶಾವಸ್ಥೆಗಳಲ್ಲಿ ಏಳನೆಯದು; ಲಜ್ಜಾತ್ಯಾಗ ; ನಾಚಿಕೆಯಳಿಯುವುದು : ಸಪ್ತಾವಸ್ಥೆಯಡಸಿರ್ದರಂತೆ ತಬ್ಬಿಬ್ಬ ನಾಡುತ್ತ ಮಧುಪಾನದಬಲೆಯರೆಸೆದರು (ಚೇರಮ. ೮-೫೫). [ಸಂ. ಸಪ್ತಾವಸ್ಥಾ]

**ಸಪ್ತಾಶ್ವ** (ನಾ). = ಸಪ್ತವಾರುವ : ಚೈತ್ಯಾಲಯಂ ಮತ್ತಮಿತ್ತುದು ಸಪ್ತಾಶ್ವನ ಸಪ್ತಸಪ್ತಿಗೆ ಸಮಗ್ರ ಪ್ರಗ್ರಹಾಶಂಕೆಯಂ (ಪಂರಾಮಾ. ೪-೧೨೯); ಸಪ್ತಾಶ್ವನುದಯಮಾದಡೆ ರಾಮಗಭಿಷೇಕಮಪ್ಪುದು (ವೆಂಕಾರಾ. ೨-೩-೨೮). [ಸಂ.]

**ಸಪ್ತಾಹ** (ನಾ). ಏಳುದಿನಗಳ ಅವಧಿ ; ವಾರ : ಗಾಯನಸಮಾಜದಲ್ಲಿ ಸಂಗೀತ ಸಪ್ತಾಹ ನಡೆಯುತ್ತಿದೆ (ರೂಢಿ). [ಸಂ.]

**ಸಪ್ತಾಹತ** (ನಾ). ಒಂದು ಸಂಖ್ಯೆಯನ್ನು ಏಳರಿಂದ ಗುಣಿಸಿದಾಗ ಬರುವ ಸಂಖ್ಯೆ : ಸಪ್ತಾಹತಮಂ ದ್ವಿತೀಯಾವಾಪ್ತಂಗೆಯ್ದುಟಿದುವಟೆ ದಿವಾರಾತ್ರಿಗಳಾ ಸಪ್ತಾಹ ತಮಂ ಭಾಗಿಸೆ ಸಪ್ತಾವಿಂಶತಿಯಿನಲ್ಲಿ ನಿಂದುದು ಭಗಣಂ (ಜಾತತಿ. ೨೪-೩೦). [ಸಂ.]

**ಸಪ್ತಾಹುತಿ** (ನಾ). ಯಜ್ಞಯಾಗಾದಿಗಳಲ್ಲಿ ದೇವತೆಗಳಿಗಾಗಿ ಅಗ್ನಿಯಲ್ಲಿ ಅರ್ಪಿಸುವ ಸಮಿತ್ತು, ಸಾಸುವೆ, ಅರಳು, ತುಪ್ಪ, ಹಾಲು, ಅನ್ನ ಮತ್ತು ಎಳ್ಳುಗಳೆಂಬ ಏಳು ಬಗೆಯ ಹವಿಸ್ಸು,— ದ್ರವ್ಯಗಳು : ಸಮಿತ್ತು ಸಾಸುವೆ ಅರಳು ತುಪ್ಪ ಹಾಲು ಅನ್ನ ಎಳ್ಳು ಎಂಬ ಸಪ್ತಾಹುತಿಗಳಂ (ವಿವೇಕ. ೧೩೭). [ಸಂ.]

**ಸಪ್ತಿ** (ನಾ). ಕುದುರೆ; ಅಶ್ವ : "ಅರ್ವಾ, ಗಂಧರ್ವಃ, ಅಶ್ವಃ, ಸಪ್ತಿಃ . . . ವಾಹಃ - ಈ ೧೪ ಕುದಿರೆ" (ಹಲಾಯು. ೭೨-೨೮೨). [ಸಂ.]

**ಸಪ್ತೋಪಾಯ** (ನಾ). (ಶತ್ರುಗಳನ್ನು ಜಯಿಸಲು ಅನುಸರಿಸುವ) ಸಾಮ, ದಾನ, ಭೇದ, ದಂಡ, ಮಂತ್ರ , ಔಷಧಿ , ಇಂದ್ರಜಾಲಗಳೆಂಬ ಏಳು ಉಪಾಯಗಳು. [ಸಂ.]

**ಸಪ್ತೋರ್ವಿ** (ನಾ). = ಸಪ್ತಲೋಕ : ಬಿಲ್ಲುಂ ಮೂಱುಂ ಮೊಳನರೆಗೇಣ್ ಸಪ್ತೋರ್ವೀವಳಯಂಬರಂ (ಶಾಂತಿಪು. ೭-೮೮). [ಸಂ. ಸಪ್ತೋರ್ವೀ ]

ಸಪ್ಪ$_1$ 'ಸಪ್ಪೆ' ನೋ.

ಸಪ್ಪ$_2$ 'ಸರುಪ' ನೋ.

**ಸಪ್ಪಂಗ** (ನಾ). ಒಂದು ಬಗೆಯ ಸಸ್ಯ : "ಪತಂಗ, ಸಪ್ಪಂಗ" (ಪ್ರಮಶಿ. ೧೫-೨೭೩). [?]

**ಸಪ್ಪಗೆ** (ಅ). ೧. ಉಪ್ಪು ಅಥವಾ ಕಾರವಿಲ್ಲದೆ ; ರುಚಿಯಿಲ್ಲದೆ : ಈ ದಿನ ಸಾರು ಸಪ್ಪಗಿದೆ (ರೂಢಿ). ೨. (ಅಲಂ) ಉತ್ಸಾಹವಿಲ್ಲದ : ಕಳಾಹೀನವಾಗಿ : ಅಕ್ಕ ಹೇಳಿದಳು, ನೀನೇನೋ ಸಪ್ಪಗಿದೀ ಅಂತ (ನಡೆದಾ. I, . . .); ಮುಖ ಸಪ್ಪಗೆ ಮಾಡಿಕೊಂಡು . . . ನೋಡತೊಡಗಿದ (ಹೊಸಕ್ಕ. ೧೨೨).

ಸಪ್ಪಗಾಗು = ಉತ್ಸಾಹವಿಲ್ಲವಾಗು ; ಕಳಾಹೀನವಾಗು : ರಾಜವೈದ್ಯನ ಮೋರೆ ಸಪ್ಪಗಾಯಿತು (ಮಣಿಸ. ೧೯) ; ಮದುವೆಯ ಸಾಲವೆಂದೊಡನೆ ಪದ್ಮಾವತಿಯ ಮುಖ ಸಪ್ಪಗಾಗುವುದು (ಅಶೋಕ. ೧೯). [ಸಪ್ಪ$_1$ (<ಸಪ್ಪೆ) + - ಅಗ್ಗೆ]

**ಸಪ್ಪಟೆ, ಸಪ್ಪಡಿ** (ನಾ). ರುಚಿಯಿಲ್ಲದುದು : ಸಪ್ಪಟೆಯನುಂಡರೇನೋ ಸ್ತ್ರೀಯರ ಅಪ್ಪುಗೆ ಬಿಡದನ್ನಕ್ಕರ (ವಚಶಾ. I, ೩೧೭). **ಸಪ್ಪಡಿ** : ಸಪ್ಪಡಿ ಮೆಲುವಾಗ ಉಪ್ಪಿನ ಯೋಚನೆ ಉಪ್ಪು ದೊರೆತಾಗ ಸೊಪ್ಪಿನ ಯೋಚನೆ (ಮೋಕ್ಷದೀ. ೪೯-೪). [ದೇ || ಮಲ. ಚಪ್ಪಟ್ಟ ; ತುಳು . ಚಪ್ಪಟು ; ತೆಲು. ಚಪ್ಪಿಡಿ ; ಗಡಬ. ಸಪ್ರೇಟ]

ಸಪ್ಪಡಿ 'ಸಪ್ಪಟೆ' ನೋ.

**ಸಪ್ಪದ** (ನಾ). ದುಂಬಿ ; ಭ್ರಮರ : ಸಿಪ್ಪಿಟ್ಟು ಕರೆದುಕೊಂಡುವು ಸಪ್ಪದಮು [ಪಾಠಾಂ. ಸಪ್ಪಾದು, ಉಪ್ಪಾದು] ಪುಳದಿನೊಳೆಸೆವ ನಱುವಂಡುಗಳಂ (ಲೀಲಾವ. ೯-೮೭). [< ಸಂ. ಷಟ್ಪದ]

**ಸಪ್ಪನೆ, ಸಪ್ಪಾನೆ** (ಅ). = ಸಪ್ಪಗೆ ೧: ಉಪ್ಪು ಸಪ್ಪನೆಯಕ್ಕು ಕರ್ಪೂರವು ಕರಿದಕ್ಕು . . . ಶ್ರವಣ ತಾ ತಪ್ಪಾಡಿದಂದು (ಸರ್ವಜ್ಞ. ೧೦೧೭). **ಸಪ್ಪಾನೆ** : ಉಪ್ಪಿಲ್ಲದ ಪಾರಕ್ಕಿನ ಸಪ್ಪಾನೋಗರದೊಳಾಮ್ಲವೇಱಿದ ಕಳೆಯಂ ತಪ್ಪದೆ ಕಲಸಿಕ್ಕೆ (ಪುಣ್ಯಾಸ್ರ. ೩-೯೭).

ಸಪ್ಪಸಪ್ಪನೆ (ದ್ವಿರುಕ್ತಿ) : ಸಪ್ಪಸಪ್ಪನೆ ರಸಂ (ಶಮದ. ೧೯೩ ಪ್ರಯೋ). [ಸಪ್ಪ$_1$ (< ಸಪ್ಪೆ) + - ಅನೆ$_1$]

ಸಪ್ಪಳ್ 'ಸಪ್ಪುಳ್' ನೋ.

ಸಪ್ಪಳ$_1$ 'ಸಪ್ಪುಳ್' ನೋ.

ಸಪ್ಪಳ$_2$ 'ಸಪ್ಪಳ' ನೋ.

**ಸಪ್ಪಳಿಗ** (ನಾ). ಓಲಗ ಊದಿ ಶಬ್ದವನ್ನುಂಟುಮಾಡುವವನು : ಸಪ್ಪಳಿಗರು: ಇವರು ಕಾನಡಾಜಿಲ್ಲೆಯಲ್ಲಿ ಮಾತ್ರ ಇರುತ್ತಾರೆ . . . ಇವರ ಮುಖ್ಯ ಹೋರೆಯು ಬಜಂತ್ರೀ ಊದುವುದೆ (ಕಭಾಗ. ೧೯೭); ಈ ಮೋಗೇರರು ಎಣ್ಣೆ ತೆಗೆಯುವ ವೃತ್ತಿಯಿಂದ ಗಾಣಿಗರೆಂಬುದಾಗಿಯೂ, ಸಂಗೀತದ ಕಸುಬಿನಿಂದ ಸಪ್ಪಳಿಗರೆಂಬುದಾಗಿಯೂ . . . ಕರೆಯಲ್ಪಡುತ್ತಾರೆ (ತುಳುನಾ. ೨೨೪). [ಸಪ್ಪಳು (< ಸಪ್ಪುಳ್) + - ಇಗ]

**ಸಪ್ಪಳು** 'ಸಪ್ಪುಳ್' ನೋ.

**ಸಪ್ಪಾನೆ** 'ಸಪ್ಪನೆ' ನೋ.

**ಸಪ್ಪುರಿ** (ನಾ). ಗಟ್ಟಿಯಾಗಿರದ ದಾರ ; ಸಪ್ಪೆದಾರ ; ಸಪ್ಪೆನೂಲು : ಆ ಮನೆಯ ದ್ವಾರಮಂ ಪೊಕ್ಕು . . . ಸಪ್ಪುರಿಯ ದಾರವಂ ಮುಪ್ಪುರಿಯಂ ಮಾಡಿ (ಕರಚಾ. ೨-೨೧ ವ). [< ಸಪ್ಪೆ + ಹುರಿ$_2$ (< ಪುರಿ$_3$)]

**ಸಪ್ಪುಳ್, ಸಪ್ಪಳ್, ಸಪ್ಪಳ$_1$, ಸಪ್ಪಳು, ಸಪ್ಪುಳ, ಸಪ್ಪುಳು, ಸೊಪ್ಪುಳ್, ಸೊಪ್ಪುಳ** (ನಾ). ಶಬ್ದ ; ಸದ್ದು ; ದನಿ : ನಸುಮುಚ್ಚಿದ ವಿಲೋಚನದಿನಿಳಿದು ಪೆರ್ಮೊಲೆಯ ಕೆಲದೊಳ್ಪನಿವ ಕಣ್ಬನಿಯ ಸಪ್ಪುಳ್ಗೆ ಪೆರ್ವಳಿಸಿ ಬಿಜಿದೆ ಕಂಪಿಸುವಳ್ (ವರ್ಧಪು. ೪-೫೮ ವ) ; ಬಂದನೊ ಬಭ್ರುವಾಹನಂ ಸಪ್ಪುಳಿದು ಪೊಸತೆತ್ತಣದೊ ಸೈನ್ಯಮನೆ (ಜೈಮಿಭಾ. ೨೫-೧೨). **ಸಪ್ಪಳ್** : "ಸಪ್ಪಳುಲಿಯು ಗಾವಳಿ ಮಿಗೆಯಬ್ಬರಮುಂ ಧ್ವನಿ ವಿವರರಿಂ" (ಕವಿಕಂ. ೧೧೭). **ಸಪ್ಪಳ್$_1$** : ಬೀಸುವ ಕಲ್ಲ ಸಪ್ಪಳಕ್ಕೆ ಕೈಬಳೆಗಳ ಝಣತ್ಕಾರ ಕೂಡಿಸಿ (ಕನ್ನಜಾ. ೭೫); ಅದರ ಸಪ್ಪಳ ಮಾರ್ದನಿಸುತ್ತಿತ್ತು ಸುಂದರಿಯ ಕಿವಿಯಲ್ಲಿ (ಹಳ್ಳಹಾ. ೧೧೮). **ಸಪ್ಪಳು** : 'ಸಪ್ಪಳಿಗೆ' ಪರಾ. **ಸಪ್ಪುಳ** : ಮುಂದೆ ಬರ್ಪ ವಿಕ್ರಮಾರ್ಜುನನ ಪಾದಾಭಿಘಾತದೊಳುಚ್ಚಳಿಸುವ ನೀರ ಸಪ್ಪುಳಮಂ ಕೇಳ್ದು (ಪಂಪಭಾ. ೩-೩೩ ವ); ಝಣಝಣಸಪ್ಪುಳದೊಂದಿಗೆ ಹಣವೆಲ್ಲ ಗೌಡರುಡಿಯನ್ನು ಸೇರಿತು (ಹಬ್ಬಬ. ೫೩). **ಸಪ್ಪುಳು** : ಓತು ಪದಗಳ ಸಪ್ಪುಳಾಗದ ರೀತಿಯಲಿ ನಡೆತಂದು ಕಂಡನು (ಉತ್ತಕ. ೩೩-೩೪); ಕಂಠದುಲಿ ಸಪ್ಪುಳಾಗದಂತೆ ಮಾರನುರುಬೆಯ ತೀರ್ಚಿ ಮನೆಗೆ ಕಳುಪುವುದು (ವಂಕಾರಾ. ೫-೨-೪೧). **ಸೊಪ್ಪುಳ್** : ಎನ್ನ ಪಾಪಕರ್ಮನ ಕತದಿಂದಮಿ ನಿಮಗಮಾಯಿರವಾದುದೆ ಸಿಂಧುನಂದನಾ ಎಂದು ಪಶ್ಚಾತ್ತಾಪಂಗೆಯ್ಯುತುಂ ಮುಂಬರ್ಪ ತನ್ನ ಮೊಮ್ಮನ ಕಾಲ ಸೊಪ್ಪುಳಂ ಕೇಳ್ದು (ಗದಾಯು. ೫-೪೦ ವ); ನೆಲಗಟ್ಟಿನ ಪಲಗೆಯನಪ್ಪಳಿಸಿದ ಸೊಪ್ಪುಳಂ ಕೇಳುತ್ತೆ (ಚಿಕವಂ. ೭೪-೭). **ಸೊಪ್ಪುಳ** : (೬).
[ದೇ ‖ ತೆಲು. ಚಪ್ಪುಡು.]

**ಸಪ್ಪುಳ$_1$** 'ಸಪ್ಪುಳ್' ನೋ.

**ಸಪ್ಪುಳು** 'ಸಪ್ಪುಳ್' ನೋ.

**ಸಪ್ಪೆ, ಚಪ್ಪೆ$_2$, ಸಪ್ಪ$_1$** (ನಾ). ೧. ರುಚಿಯಿಲ್ಲದುದು : ಉಪ್ಪ ಬಿಟ್ಟು ಸಪ್ಪೆಯ ನುಂಡರೆ ಅದು ಮನದ ಹೇಸಿಕೆಯಲ್ಲದೆ ದೃಢವ್ರತವಲ್ಲ (ಮಡಿಮಾ. ೧೮-೩೩); ನಿಸ್ಪೃಹದ ಸಪ್ಪೆಯೇ ಹದಿಮೂಱನೆಯ ಶೀಲವೈ (ವೀಶ್ವಪು. ೭-೧೭-೩೭) ; ಉಪ್ಪು ಸಪ್ಪೆಯಾದರೂ ಖಾರ ಬಿಡದು (ಗಾದ). ೨. (ಆಲಂ) ಉತ್ಸಾಹವಿಲ್ಲದುದು ; ನೀರಸವಾದುದು: ರಾಜಕುಮಾರಿಯು ಸಪ್ಪೆಯ ಮುಖ ಹಾಕಿಕೊಂಡು ಕುಳಿತಿದ್ದಳು (ಪಂಚಾಮ್ಯ. ೧೧೧); ಸಾತ್ವಿಕನನ್ನೂ ಉಪಶಾಂತನನ್ನೂ ಕಂಡರೆ ಅವನು 'ಸಪ್ಪೆ'ಯೆಂದು ಅವರಿಗೆ ತಿರಸ್ಕಾರ (ಬಂಕಿಮ. ೨೦೯). (ಗು). ೩. ಕಟುವಲ್ಲದ ; ತೀಕ್ಷ್ಣವಲ್ಲದ : ಸಪ್ಪೆಔಷಧವನ್ನು ಕೊಟ್ಟು (ದೇವೀಚಾ. ೫೭). ೪. (ಆಲಂ) ನೀರಸವಾದ; ಶುಷ್ಕ: ಸಪ್ಪೆಕವಿ ರಸಭರಿತ ಕವಿರಾಜನಪ್ಪನೇಂ (ಪರಶು. ೧-೧೮); ಸಪ್ಪೆ-ಬಾಳುವೆಗಿಂತ ಉಪ್ಪು ನೀರೂ ಲೇಸು (ಸಪೀಗೀ. ೧-೧೭). **ಚಪ್ಪೆ$_2$** : (೬). **ಸಪ್ಪ$_1$** : ೧. 'ಸಪ್ಪಗೆ', 'ಸಪ್ಪನೆ' ಪರಾ.

**ಸಪ್ಪೆಜೀವನ** = (ಆಲಂ) ನೀರಸವಾದ ಬಾಳು ; ಶುಷ್ಕಜೀವನ: ಏನು ದುಡಿಯದ ಸಪ್ಪೇಜೀವನ ತೀರ ವ್ಯರ್ಥದ ಜೀವನ (ವಿಜದ. ೧೭-೧). **ಸಪ್ಪೆಮುಖ** = (ಆಲಂ) ಗೆಲುವಿಲ್ಲದ ಮುಖ ; ಪೆಚ್ಚುಮುಖ : ರಮಾ ಸದಾ ಸಪ್ಪೆಮುಖವನ್ನು ಹಾಕಿಕೊಂಡಿರುವವಳಲ್ಲ (ದೂರಸ. ೪೩). **ಸಪ್ಪೆಮೋರೆ** = **ಸಪ್ಪೆಮುಖ** : ಸಂಕಪೂಜಾರಿಯೂ . . . ಮಂಗಳದಾಸನೂ ಸಪ್ಪೆಮೋರೆ ಹಾಕಿಕೊಂಡು ಜನಸಮೂಹದ ಮಧ್ಯೆ ನುಣುಚಿಕೊಂಡು ಹೋಗುತ್ತಿದ್ದರು (ಪಂಜಪಂ. ೨೨೭).
[ದೇ. ‖ ತಮಿ. ಚಪ್ಪೈ ; ಕೊಡ. ತುಳು. ಚಪ್ಪೆ; ತೆಲು. ಚಪ್ಪ ; ನಾಯ್ಕಿ, ಸಪ್ಪೆ ; ಪರ್ಜಿ. ಚಪ್ರ; ಗದಬ, ಸಪ್ಪಾ, ಸಪ್ರ]

**ಸಪ್ಪೆಗರೆ** (ಕ್ರಿ). ರುಚಿಯಿಲ್ಲದಾಗು ; ಸಪ್ಪೆಯಾಗು : ಕೈಗೆ ಕಾಫಿ ತಿಂಡಿ ಬರಲಿಲ್ಲ. ಬಾಯಿ ಸಪ್ಪೆಗರೆಯುತ್ತಿತ್ತು (ಗಂಗಾಳ. ೮). [ಸಪ್ಪೆ + ಕರೆ$_1$]

**ಸಪ್ಪೆತನ** (ನಾ). ನಿರುತ್ಸಾಹ; ಬೇಸರ: ತನಗೆ ಈ ಸಪ್ಪೆತನದ ಕಾರಣ ತಿಳಿದವನಂತೆ ಅವನೇ ಸಮಾಧಾನ ಹೇಳಲಾರಂಭಿಸಿದ (ಆಲಹೂ. ೮೨). [ಸಪ್ಪೆ + - ತನ]

**ಸಪ್ಪೆತುಪ್ಪ** 'ಸಪ್ಪೆದುಪ್ಪ' ನೋ.

**ಸಪ್ಪೆದಾರ** (ನಾ). ಹೂವು ಕಟ್ಟುವುದು ಮೊದಲಾದುವಕ್ಕೆ ಉಪಯೋಗಿಸುವ ಗಟ್ಟಿಯಾಗಿರದ ದಾರ ; ಟೊಳ್ಳುದಾರ : ಅಂಗಡಿಯಲ್ಲಿ ಒಂದು ಉಂಡೆ ಸಪ್ಪೆದಾರ ತೆಗೆದುಕೊಂಡು ಬಾ (ರೂಢಿ). [ಸಪ್ಪೆ + ದಾರ$_1$]

**ಸಪ್ಪೆದುಪ್ಪ, ಸಪ್ಪೆತುಪ್ಪ** (ನಾ). ಉಪ್ಪು, ಅರಿಸಿನ, ಮೆಂತ್ಯದ ಪುಡಿ ಇತ್ಯಾದಿ ಸಂಭಾರ ಹಾಕದೆ ಕಾಯಿಸಿದ ತುಪ್ಪ : ವಡವಾರದ ಸೂಪ್ಪು ೧ ಹಿಡಿ . . . ಸಪ್ಪದುಪ್ಪದಿಂ ಮೆಲ್ಲಲು ಹೊಟ್ಟೆರಕ್ತಂ ಮಾಣ್ಗುಂ (ಸಕವೈ. ೩೧೧). **ಸಪ್ಪೆತುಪ್ಪ**: ದೇಹಾನುಗುಣವಾಗಿ ಸಪ್ಪೆತುಪ್ಪ ತೆಗೆದುಕೊಳ್ಳೆ ಶರೀರವು ಪುಷ್ಟಿಯಹುದು (ಸಕವೈ. ೧೧೭). [ಸಪ್ಪೆ + ತುಪ್ಪ]

**ಸಪ್ಪೆನಗೆ** (ನಾ). (ಆಲಂ) ನೀರಸವಾದ ನಗೆ ; ಶುಷ್ಕನಗೆ: ನೀರ್ಗೆಂಪು ತುಟಿಯಲ್ಲಿ ಸಪ್ಪೆನಗೆ ಹರಪುತಿದೆ (ಗಂಗಾವ. ೬೧-೧೩) ; ಸವೆದು ಸಣಕಲಾಗಿ ಬಿಳಿಚಿಕೊಂಡಿದ್ದ ಸಪ್ಪೆನಗೆಯ ಮಗುವನ್ನೆತ್ತಿಕೊಂಡಿದ್ದ ಹೆಂಗಸೊಬ್ಬಳು ಮಕ್ಕಳ ಹಿಂದೆ ನಿಂತಿದ್ದಳು (ಪುನರು. ೨೮೨). [ಸಪ್ಪೆ + ನಗೆ]

**ಸಪ್ಪೆನೂಲು** (ನಾ). = **ಸಪ್ಪೆದಾರ** : ಸಪ್ಪೆನೂಲು ಮುಗಿದು ಹೋಗಿದೆ (ರೂಢಿ). [ಸಪ್ಪೆ + ನೂಲು$_2$ (< ನೂಲ್$_2$)]

**ಸಪ್ಫಳ, ಸಪ್ಪಳ$_2$** (ನಾ). ಒಳ್ಳೆಯ ಫಲ ; ಸತ್ಫಲ : ಮೇಲಣ ತತ್ವಕ್ಕೆ ಫತ್ತಂ – ಸತ್ಫಲ –ಸಪ್ಫಳ (ಶಮದ. ೨೬೫ ಪ್ರಯೋ) ; **ಸಪ್ಪಳ$_2$** : ಸಪ್ಪಳಮಾದುದು ಕೆಳೆಯೆಂದುಪ್ಪಳಮಂ ಚಂದ್ರನಬ್ಜಮಂ ರವಿಬಿಂಬಂ ಒಪ್ಪಿರೆ ಪರಾಗಪರಿಮಳವೊಪ್ಪುಗುವಾ ನಗದ ನೆತ್ತಿಯಬ್ಜಾಕರದೊಳ್ (ಲೀಲಾವ. ೭-೧೦೮); ಸತ್ಫಲ, ಸಪ್ಪಳ; ವೃಷಭ, ಬಸವ (ಶಬ್ದಾನು. ೧೬೦ ವ್ಯಾಖ್ಯಾ). [< ಸಂ. ಸತ್ಫಲ]

**ಸಪ್ರಪಂಚಂ** (ಅ). ಸವಿವರವಾಗಿ : ಖಚರಪತಿಯನೆಯ್ದೆ ತತ್ಪ್ರಪಂಚಮಂ ಸಪ್ರಪಂಚಮಱಿಪಿ (ಆದಿಪು. ೨-೪೫ ವ) ; ಕಂಡ ಕನಸುಗಳೆಲ್ಲಮಂ ಸಪ್ರಪಂಚಮಱಿಪಿ (ಚಾವುಂಪು. ೧೭). [ಸಂ.]

**ಸಪ್ರಮಾಣ** (ನಾ). ಆಧಾರಸಹಿತವಾದುದು ; ಪ್ರಮಾಣದಿಂದ ಕೂಡಿದುದು : ಇವಕ್ಕೆ ಏನು ಆಧಾರವೋ ಇವು ಎಷ್ಟು ಸಪ್ರಮಾಣವೋ ತಿಳಿಯದು (ಬಂಕಿಮ. ೧೭ ಮುನ್ನುಡಿ); ನಾನು ಪ್ರತ್ಯಕ್ಷವಾಗಿ ಕಂಡಿಲ್ಲವಾದರೂ ಹೇಗಿರಬೇಕೆಂದು ಸಪ್ರಮಾಣವಾಗಿ ಊಹಿಸಿದ್ದೇನೆ (ದೇಕನ್ನ. ೩೩). [ಸಂ.]

**ಸಪ್ರಯಾಸ** (ಅ). ೧. ಆಯಾಸದಿಂದ ಕೂಡಿ; ದಣಿವು ಹೊಂದಿ. ೨. ಪ್ರಯತ್ನಪೂರ್ವಕವಾಗಿ: ಅವಳು ಸಪ್ರಯಾಸವಾಗಿ ಕೋಪಾಶ್ರುಗಳನ್ನು ನುಂಗಿಕೊಂಡು . . . ಓಡಿಹೋದಳು (ಪುನರು. ೩೨೪). [ಸಂ.]

**ಸಪ್ರಯಾಸಂ** (ಅ). = **ಸಪ್ರಯಾಸ** ೧ : ನರರ ಮೇಲುರ್ಬಿ ಕಬ್ಬಂಗಳಂ ಬಿತ್ತರಿಸುತ್ತಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟುಪೋದರ್ (ರಾಜಶೇ. ೧-೧೯). [< ಸಪ್ರಯಾಸ]

**ಸಪ್ರವೀಚಾರ** (ನಾ). [ಜೈನ] ಇಂದ್ರಿಯಜನ್ಯವಾದ ಸೌಖ್ಯ : ಸಮಧಿಗತಮಾನ ಸಾಮ್ಯತಾಹಾರರುಂ ಸಪ್ರವೀಚಾರಾನಂತಗುಣನಿಷ್ಪ್ರವೀಚಾರಸುಖರುಂ . . . ಸುಖಮಿರ್ಪಿನಂ (ಚಾವುಂಪು. ೩೦). 'ನಿಷ್ಪ್ರವೀಚಾರ' ಪರಾ. [< ಸಂ. ಸಪ್ರವಿಚಾರ]

**ಸಪ್ರಸಾದವಚನ** (ನಾ). ಅನುಗ್ರಹಪೂರ್ವಕವಾದ ಮಾತು : ದವನಕನಂ ಸಪ್ರಸಾದವಚನಂಗಳಿಂ ಸಂತಸಂಬಡೆ ನುಡಿದು (ಪಂಚತಂ. ೫೮-೨). [ಸಂ.]

**ಸಪ್ರಾಣ** (ನಾ). ಪ್ರಾಣಸಹಿತವಾದುದು ; ಜೀವಸಮೇತವಾದುದು : ಶ್ರದ್ಧೆ ತಾಂ ಸಪ್ರಾಣವಾಗುವೋಲಮೃತತರ್ಪಣವಿತ್ತು (ಶ್ರೀರಾಮಾ. ೧೬೭-೪೨೪). [ಸಂ.]

**ಸಪ್ರಾಣಿಸು** (ಕ್ರಿ). ೧. ಜೀವೋತ್ಕರ್ಷವನ್ನು ಹೊಂದು ; ಚೈತನ್ಯವನ್ನು ಪಡೆ : ಕಂದ ಬಳಲಿದೆ ಜೀವವಿದು ನಿನ್ನಿಂದ ಸಪ್ರಾಣಿಸಿತು (ತೊರರಾ. ೫-೩-೯೫) ; ಪ್ರಾಣವ್ಯತಿಕರಲೊಡಲು ಸಲೆ ಸಪ್ರಾಣಿಸುವವೋಲ್ (ನಿಭಾಗ. ೩-೧-೩೭); ಒಂದು ಕಣೆವೂಡಿ ಕರ್ಣಪ್ರದೇಶಕೆ ತೆಗೆದವಂ ಬಿಡಲ್ಕಿವನುರವನುಗಿಯೆ ಮೈಮಱೆದು ಕೂಡೆ ಸಪ್ರಾಣಿಸುತೆ ಕೆರಳ್ದಿನ್ನು ನೋಡೀ ಸಾಯಕಪ್ರಭಾವವನೆನುತೆ . . . ಸರಳಂ ತೊಟ್ಟು ಕೆನ್ನೆಗಳೆದಾರ್ದೆಚ್ಚನಾ ನೃಪನನು (ಜೈಮಿಭಾ. ೪-೪೨). ೨. ಜೀವ ಪಡೆಯುವಂತೆ

ಮಾಡು ; ಬದುಕಿಸು : ಔಡಲದೆಣ್ಣೆಗೆ ಸಪ್ರಾಣ(ಿ)ಸ [ಪಾಠಾಂ. ಸತಾಣಿಸ]ದೊಡೆ ತುಳಸಿ ಗುಡ ಸಿತಂ ಹಿತಮಕ್ಕುಂ (ಖಮದ. ೨-೧೪೯). [ಸಪ್ರಾಣ + - ಇಸು$_3$]

**ಸಫಲ** (ಗು). ೧. ಫಲಕಾರಿಯಾದ ; ಸಾರ್ಥಕವಾದ : ದೂರದಲ್ಲಿ ನೀರಿದೆಯೆಂದು ತಿಳಿದು ಅಲ್ಲಿಗೆ ಹೋಗಿ ನೀರಿದ್ದರೆ ಸಫಲಪ್ರತಿಯೆಂದೂ . . . ತಿಳಿಯುತ್ತೇವೆ (ಹಿಂದಸಾ. ೧೩೭). (ನಾ). ೨. ಫಲವನ್ನು ಹೊಂದಿದುದು; ಸಾರ್ಥಕವಾದುದು: ಸಫಲಮೆನೆ ನೃಪನ ಲೋಚನಶಫರಕ್ಕೊದವಿಸಿದುದುತ್ಸುಕಾಮೃತಮಂ (ಲೀಲಾವ. ೧೪-೯೧) ; ಅಂಗನೆ ನಿನ್ನ ಜನ್ಮ ಸಫಲವಾಯ್ತು (ಬಸಪು. ೫-೩೫); ಕೌಸಲೆ ಕುಮಾರರ ಪಡೆದು ಹಡೆದುದೆ ಸಫಲ (ಕುವ್ಯಾಉ. ೮-೨೨). [ಸಂ.]

**ಸಫಲಗೊಳಿಸು** (ಕ್ರಿ). ಫಲಪ್ರದವಾಗುವಂತೆ ಮಾಡು ; ಫಲಕಾರಿಯಾಗಿಸು : ಜೀವನವು ದೊರೆತಿಹುದು . . . ಸಫಲಗೊಳಿಸದ ಚೆನ್ನೆ ವಿಫಲವಾಗುವ ಮುನ್ನ (ಕಲ್ಲೋಲ. ೯-೧೧). [ಸಫಲ + ಕೊಳ್$_1$ + - ಇಸು$_3$]

**ಸಫಲಿತ** (ಗು). ಫಲಕಾರಿಯಾದ ; ಸಾರ್ಥಕವಾದ : ಕುಸುಮವಿಶಿಖವಿಕಾರ ವಿದೂರನನುಭವಸುಖಿ ಸಫಲಿ[ಪಾಠಾಂ. ಲ]ತಾಮೋಘಸಮಧುರ ಸತ್ಯಸಲ್ಲಾಪಿ (ಬಸಪು. ೩೨-೨). [ಸಂ.]

**ಸಫಲೀಕೃತ** (ಗು). ಸಾರ್ಥಕಗೊಳಿಸಿದ : ಅವನತರಿಪುಸಮಾಜನುಂ ಸಫಲೀಕೃತಾರ್ಥಿನಿಚಯಾಶನುಂ ವಿಶದಯಶಃಕಬಳಿತಾಶನುಮೆನಿಸಿ (ಚಂದ್ರಪ್ರ. ೨-೬೫). [ಸಂ.]

**ಸಫಾಯಿ, ಸಪಾಯಿ** (ನಾ). ೧. ಸ್ವಚ್ಛಗೊಳಿಸುವುದು; ನೈರ್ಮಲ್ಯ ; ಅಚ್ಚುಕಟ್ಟು: ಮರಗಳನ್ನೆಲ್ಲಾ ಕಡಿದು ಸ್ವಲ್ಪ ಕಾಡು ಸಫಾಯಿ ಮಾಡಿದ್ದೇನೆ (ಬಾಳಿಗ. ೪೩) ; ಹೀಗೆ ಸಾಗಿತು ಸಫಾಯಿ ಯಜ್ಞ (ಅವಸಾ. ೧೪೪). **ಸಪಾಯಿ** : ೨. (ಆಲಂ) ತೀರಿಸುವುದು; ಮುಗಿಸುವುದು : ಇವನನ್ನು ಅಲ್ಲಿ ಕೆಲಸಕ್ಕಿಟ್ಟರೆ . . . ಒಂದೇ ಸಾರಿ ಸಾಲ ಪೂರಾ ಸಪಾಯಿ ಮಾಡಿಬಿಡಬಹುದು (ಮೊಮುಗು. ೧೫೦). [← ಅರ. ಹಿಂ. ಮರಾ. ಸಫಾಈ]

**ಸಬ್‌ರಿಜಿಸ್ಟ್ರಾರ್** (ನಾ). ನೋಂದಣಿ ಅಧಿಕಾರಿ : ಸಬ್‌ರಿಜಿಸ್ಟ್ರಾರ ಕಡೆ ಹೋಗಿಬಿಡೋಣ (ತಿರುಗು. ೫೩). [← ಇಂ. Sub-registrar]

**ಸಬ, ಶಬ, ಶ್ರವ$_2$, ಸವ$_2$** (ನಾ). ಜೀವವಿಲ್ಲದ ಶರೀರ ; ಹೆಣ ; ಶವ : ''ಸಬವೆನೆ ಕುಣಪ'' (ಶಬ್ದಮಂ. ೪೫) ; ಅದಟರ ಚೆನ್ನಪೊಂಗರ ಸಬಂಗಳ ತೊಟ್ಟುಟಿಯೊಳ್ ತೊಡಂಕಿ ನಿಲ್ಲದೆ ಪೊ[ಅವಟ್ಟು]. . . ಕರ್ಬಸುಗಳ್ ಪರಿಗೊಂಡುವಾಜಿಯೊಳ್ (ಪಂಪಭಾ. ೮-೧೦೧) ; ದುಷ್ಟದಕ್ಷನ ಸಭೆಗೆ ಬಂದ ವಾಣಿಯ ಮೂಗು ಮೊಟ್ಟಾಯ್ತು ಹರಿಯ ಸಬ ಬಿದ್ದಿತ್ತು (ರಾಘಚ. ೪-೨೦). **ಶಬ** : ಮಹಾಕಾಳ ಶ್ಮಶಾನದೊಳಗೆ . . . ನಿಷ್ಪಂದಶರೀರನಾಗಿ ಮೆಲ್ಲನಡಕಂಬೆರಸು ಪಟ್ಟಿರ್ದ ಋಷಿರೂಪಕಮಂ ಕಂಡು ಶಬಮೆಂದೆ ಸಾರ್ದು (ಸುಕುಮಾ. ೧೨-೨೪ ವ); ಯೋಗಿಯ ಶಬಂ ಬಯಲ ನೆಮ್ಮಿ ನಿಲೆ ಕಂಡು ಬೆಚಗಾಗುತ್ತ (ಸಿದ್ಧರಾ. ೪-೩೮) . **ಶ್ರವ$_2$** : ಇಡದಿರು ಮಗನು ನೊಂದಾನು ಶಿವಶಿವ ಎಂದು ಒಡನೆ ಬಿದ್ದಳು ಶ್ರವಗೂಡಿ (ಹರಿಸಾಂ. ೮೧-೫೪) ; ಶ್ರವವ ಹೊತ್ತವ ಮಸಣದೊಳು ಹಾಯ್ಕುವೊಲು . . . ಕಡೆಗಾಲದೊಳು ಬಿಸುಡುವುದೆ ಸಂತಾನಫಲವುಂ (ಶಂಕದಾ. ೧೭-೧೨). **ಸವ$_2$** : ''ಸವವೆಂದು ಶಬಂ'' (ಕಶಸಾ. ೫೪-೨೭೫). [< ಸಂ. ಶವ]

**ಸಬಕ** 'ಚಬುಕು' ನೋ.

**ಸಬಕಾರ** 'ಚಬುಕಾರ' ನೋ.

**ಸಬತಿಗೆ** (ನಾ). (ಉಕ) ನೊಗ ಮತ್ತು ಎತ್ತಿನ ಕುತ್ತಿಗೆಗೆ ಸೇರಿಸಿ ಕಟ್ಟುವ ನಾರಿನ ಅಥವಾ ಚರ್ಮದ ಹಗ್ಗ ; ಜೊತ್ತಗೆ : ಸಬತಿಗೆ ಬಿಚ್ಚಿ ನೊಗ ಇಳಿಸಿದನು (ರೂಢಿ). [?]

**ಸಬನಿ** (ನಾ). ಒಂದು ಪ್ರದೇಶದ ಹೆಸರು : ತತ್ಪಶ್ಚಿಮತಃ ಸಬನಿಯ ತಟಾಕದ ದಕ್ಷಿಣದ ಕೊಂಡಿ (ಸೌಇಇ. XX. ೬-೨೨ ; 730). [?]

**ಸಬನೀಸು, ಸಬ್ಬನಿಸ** (ನಾ). ಸೈನ್ಯದಲ್ಲಿನ ಲೆಕ್ಕಪತ್ರಾಧಿಕಾರಿ : ಕೇಳ್ದು ಸಬನೀಸು ಕೋಳಿವಾಡದ ಬೊಮ್ಮಯ್ಯ (ಕಳನ್ನ. ೯-೮೨). **ಸಬ್ಬನಿಸ** : ಬೊಮ್ಮ ಬರೆಪಮೆನೆ ಬ್ರಹ್ಮಲಿಖಿತಮೆಂದು ಸಬ್ಬನಿಸ ಬೊಮ್ಮಯ್ಯನ ಕಳ್ಳೋಲೆಯೆಂದುಮೆರಡು ಮರ್ಥಂಗಳ್ (ಅಪ್ರತಿ. ೧೨೫-೧೩). [← ಮರಾ. ಸಬನೀಸ ; ಪಾರ. ಸ್ಟನ್ವೀಸ್]

**ಸಬಬು** 'ಸಬೂಬು' ನೋ.

**ಸಬರ$_1$** (ನಾ). ಬೇಡ ; ಶಬರ : 'ಸಬರವಡೆ' ಪರಾ. [< ಸಂ. ಶಬರ]

**ಸಬರ$_2$, ಸಬರು, ಸಬರೆ** (ನಾ). ೧. ಎತ್ತು, ಕುದುರೆ ಮೊದಲಾದವುಗಳ ಬೆನ್ನಿನ ಮೇಲೆ ಹಾಕುವ ಹೊದಿಕೆ ; ಕವುದಿ : ''ಬಜುಗೋಣಿ ಕಂದಳಿಕೆ ಕವುದಿಗಳೆಯ್ದೆ ಸಬರಮಕ್ಕುಂ'' (ಮಂಗರಾ. ೧೦೨-೩); ತೋಜುವ ತೋಜಿಕೆ ಸಬರ[ಪಾಠಾಂ. ರೆ] ಮುಟ್ಟಾಗಿ . . . ಚಿತ್ರವನಜಿಯದ ಭಾವ ಎತ್ತಾಗಿ (ಸಕವ ಕ. II. ೬೫೪-೨೬); ಸಬರ ಮಾಟ್ಟದಳ ಮೋಳ ಮುಂತಾದ ವೆಚ್ಚವಿರಾಡವನು (ಸೌಇಇ. IX - ii. ೪೩೩-೫೦; 1408); ಸಾಧು ಎತ್ತಿಗೆ ಜೋಡು ಸಬರ (ಗಾದೆ). ೨. ಜೀನು; ತಡಿ; ಹಲ್ಲಣ : ಕಳಚು ತೇರ್ ತೇಜಿಗಳ ಕೊರಳ ನೊಗಗಳನೆತ್ತುಗಳ ಪೇರ್ಗಳಂ ನೂಂಕಿ ಬಿಡು ಸಬರಮಂ ಜೀವಧನಕೆ ನೀರ್ಗಳನೀಂಟಿಸು (ಜೈಬಪು.. ೪೮-೩೦). **ಸಬರು**: ೩. ಕುದುರೆಯ ಬಸಿರು,— ಗಬ್ಬ : ಕುದುರೆಯ ಸಬರು ನಿಲ್ಲುವುದಕ್ಕೆ ಬೆಳಗಾರವಂ ಹಸಿ ಹಾಲಲ್ಲೆರೆವುದು (ಅಶ್ವಟೀ. ೧೦೯-೪). **ಸಬರೆ**: ೪. ಗಬ್ಬವಾದುದು; ಬಸಿರಾದುದು: ಸಬರೆಯಾದ ಗೋಳಿಗೆಗೆ ಹಾಲ ಕುಡಿಸಲು ಲೇಸು (ಅಶ್ವಟೀ. ೪೬-೯). [← ಮರಾ. ಸಬರ, ಸಭರ./ ಸಂ. ಸಭರ ?]

**ಸಬರವಡೆ** (ನಾ). ಬೇಡರ ಸೈನ್ಯ ; ಶಬರರ ಪಡೆ : ಇಂತಪ್ಪ ಸಬರವಡೆಯ ಕಳಕಳಕ್ಕೆ ನಡುನಡುಗಿ ಕೆಲವು ಮೃಗಂಗಳ್ ತಾರುಂತಟ್ಟುವೀಟುತ್ತ (ಕುಸುಮಾ. ೧೪-೬೦ ವ). [ಸಬರ$_1$ + ಪಡೆ$_2$]

**ಸಬರಿ** (ನಾ). ಬೇಡರ ಹೆಂಗಸು ; ಬೇಡಿತಿ ; ಶಬರಿ : ಬನದೊಳಿಡೆಯಾಡುವ ಸಬರಿಯರ ನಡೆಯನೇಡಿಸುವಂತೆ (ಕಬ್ಬಿಕಾ. ೧೮). [< ಸಂ. ಶಬರೀ]

**ಸಬರು** 'ಸಬರ$_2$' ನೋ.

**ಸಬರೆ** 'ಸಬರ$_2$' ನೋ.

**ಸಬಲ** (ಗು). ೧. ಶಕ್ತಿಯಿಂದ ಕೂಡಿದ; ಬಲಶಾಲಿಯಾದ : ಸಬಲ ಕಾರಣಗಳಿಂದ . . . ಸ್ವಲ್ಪ ಹಿಂಚುಮುಂಚು ಇರಬಹುದೆಂದು ತಿಳಿಯಬಹುದು (ದ್ರಾವಿವಿ. ೫೬). ೨. ಸೈನ್ಯದಿಂದ ಕೂಡಿದ. (ನಾ). ೩. ಬಲಶಾಲಿ ; ಶಕ್ತಿವಂತ : ಸಬಲರೆಂಬ ಹೆಸರಿಗೆ ಯೋಗ್ಯರೆಂದುಕೊಂಡಿದ್ದ ಗಂಡಸರೇ . . . ಬಡಿಸುವ ಹೊರೆ ಹೊತ್ತರು (ಪುನರು. ೩೪೩); ದುರ್ಬಲವು ಸಬಲಕ್ಕೆ ಆಹಾರ (ವಚಭಾ. ೩೨೯). [ಸಂ.]

**ಸಬಲೆ$_1$** (ನಾ). ಬಲಿಷ್ಠಳಾದ ಹೆಂಗಸು; ಸಶಕ್ತಳಾದವಳು: ಹೆಂಗಸರು ದೇಹದಲ್ಲಿ ಅಬಲೆಯರಾಗಿರಬಹುದು, ಮನಸ್ಸಿನಲ್ಲಿ ಸಬಲೆಯರೇ (ಬಂಕಿಮ. ೧೨೭). [ಸಬಲ + - ಎ$_2$]

**ಸಬಲೆ$_2$** (ನಾ). ಒಂದು ಬಗೆಯ ಸಸ್ಯ : (ಮೃಔಗಿ. ೬೬-೧೩೪೯). [ಸಂ. ಸಬಲಾ]

**ಸಬಸಿ** (ನಾ). ಒಂದು ಬಗೆಯ ತರಕಾರಿ ಸೊಪ್ಪು : ಅರಿಸೀಣ ಬಳ್ಳೊಳ್ಳಿ ಸಬಸಿ ಬಿತ್ತುವ ಬಾಳಾ (ಗರತಿ. ೬೩). [< ಸಬ್ಬಸಿಗೆ]

**ಸಬಳ** (ನಾ). ೧. ಈಟಿ ; ಭರ್ಜಿ ; ಕೊಂತ : ''ಕುಂತಮೆನಲು ಸಬಳಂ'' (ಮಂಗರಾ. ೮೮-೩೭); ಸಬಳದ ತುದಿಯಲ್ಲಿ ಬಿರಿದ ಕಟ್ಟಿ ಅದರ ತಲೆವಿಡಿಯ ತೊಡಗಿದಡೆ ನಾನಲ್ಲ (ಸರ್ವವ. ೨೬-೧೧೮); ದುರಾತ್ಮಕ ಸಾಕಿದೊಡೆಯನನಿಱಿದ ಸಬಳವಲೆ (ಕುವ್ಯಾಸ. ೧೦-೧೮); ಸಾಧಿಸಿದರೆ ಸಬಳ ನುಂಗಬಹುದು (ಗಾದೆ). ೨. ಈಟಿಯ ಮುದ್ರೆಯಿರುವ ಒಂದು ಬಗೆಯ ನಾಣ್ಯ : 'ಸಬಳದೆಜೆ' ಪರಾ.

ಸಬಳತ್ರಿಣೇತ್ರ = ಶಿವನ ಮೂರನೆಯ ಕಣ್ಣಿನಂತೆ ತೀಕ್ಷ್ಣದೃಷ್ಟಿಯುಳ್ಳವನು; ಒಂದು ಬಿರುದು (?): ''ಸಬಳಸಹಸ್ರಬಾಹು ಸಬಳ ತ್ರಿಣೇತ್ರರುಮೆಂದು ಮಾಱಂಕವಂ'' (ಕಬ್ಬಿಕ್ಕೆ. ೯೬); ಸಬಳಕ್ಕೆ – ಸಬಳಗದ್ಯಾಣ, ಸಬಳತ್ರಿಣೇತ್ರ, ಸಬಳದೆಜೆ, ಸಬಳವಿನ್ನಣಿ (ಶಮದ. ೨೯೮ ಪ್ರಯೋ).

[< ಸಂ. ಸರ್ವಲಾ. / ತೆಲು. ಸಬಡಿ, ಸಬಳ]

**ಸಬಳಗದ್ಯಾಣ** (ನಾ). = ಸಬಳ ೨ : ಸಬಳಗದ್ಯಾಣ, ಸಬಳತ್ರಿಣೇತ್ರ (ಶಮದ. ೨೯೮ ಪ್ರಯೋ). [ಸಬಳ + ಗದ್ಯಾಣ]

**ಸಬಳಗದ್ಯಾಣದೆಜೆ** (ನಾ). ಸಬಳಗದ್ಯಾಣದ ತೆರಿಗೆ : ಪೂಮಾಲೆದುಱುಂಬು, ಸಬಳಗದ್ಯಾಣದೆಜೆ (ಶಮದ. ೨೯೯ ಪ್ರಯೋ). [ಸಬಳಗದ್ಯಾಣ + ತೆಜೆ$_3$]

**ಸಬಳಗೆಜ್ಜೆ** (ನಾ). ಭರ್ಜಿಗೆ ಕಟ್ಟುವ ಗೆಜ್ಜೆ (?) : ಏರುತ್ತಿರುವ ಬೊಂಬುಳಿಯ ಝುಲ್ಲಳಿಯ ಸಬಳಗೆಜ್ಜೆಗಳ, ತಳಾರಗೋಲ ಗಗ್ಗರಿಗಳ ಬಾಜಣೆ (ಮಂತ್ರಶ. ೩೦-೫).
[ಸಬಳ + ಗೆಜ್ಜೆ]

**ಸಬಳಗೋಲು** (ನಾ). ಈಟಿಯ ಕೋಲು ; ಭರ್ಜಿಯ ಕೋಲು ; ತನ್ನ ಕೆಯ್ಯ ಸಬಳಗೋಲ ತುದಿಯನ್ನೊತ್ತಿ ಆತನನ್ನು ಹಿಮ್ಮೆಟ್ಟಿಸಿ (ಬಿರುಗಂ. ೩೫-೧೬).
[ಸಬಳ + ಕೋಲು$_1$ (< ಕೋಲ್$_1$)]

**ಸಬಳದೆಜೆ** (ನಾ). = ಸಬಳಗದ್ಯಾಣದೆಜೆ : ಸಬಳದೆಜೆ, ಸಬಳವಿನ್ನಣಿ (ಶಮದ. ೨೯೮ ಪ್ರಯೋ). [ಸಬಳ + ತೆಜ್$_3$]

**ಸಬಳವಿನ್ನಣಿ** (ನಾ). ಈಟಿಯ ಪ್ರಯೋಗದಲ್ಲಿ ನಿಪುಣ : "ಸಬಳವಿನ್ನಣಿ ಸಬಳಗದ್ಯಾಣ . . . ಸಬಳತ್ರಿಣೇತ್ರರುಮೆಂದು ಮಾಱಿಂಕವಂ" (ಕಬ್ಬಿಗ. ೯೬); ಸಬಳವಿನ್ನಣಿ, ಸಬಳಸಹಸ್ರಬಾಹು (ಶಮದ. ೨೯೮ ಪ್ರಯೋ).
[ಸಬಳ + ಬಿನ್ನಣಿ (< ಬಿನ್ನಾಣಿ$_2$)]

**ಸಬಳಿಕೆ** (ನಾ). ಈಟಿಯ ಪ್ರಯೋಗದಲ್ಲಿರುವ ಕೌಶಲ, – ನೈಪುಣ್ಯ (?): ಸಬಳಿಕೆಯಿಂ ಪಾಟಿಯನೊಕ್ಕು ಬೇರನಂತಾ ಕುಬೇರನಾಯಕನತಿವಿಕ್ಲಬಚಿತ್ತಂ ತೊಟ್ಟಗೆ ತಾಗಿ ಬಾಗಿದಂತಾಗಿ ಬಾಗಿದಂ ನರನಡಿಯೊಳ್ (ಕಾವ್ಯಾವ. ೫೪೪).
[ಸಬಳ + - ಇಕೆ]

**ಸಬಳಿಗ** (ನಾ). ಈಟಿಯನ್ನು ಆಯುಧವಾಗುಳ್ಳವನು ; ಕೊಂತವನ್ನು ಹಿಡಿದು ಯುದ್ಧ ಮಾಡುವವನು : ಕೊರ್ಬಿದ ಬಿಲ್ಲಡಗೆ ಪಡಲ್ತೆರ್ಬಿದರೆಟ್ಟಿಂದು ಸಬಳಿಗರ್ಸುರರಿಪುವಂ (ಉದ್ಭಟ. ೪-೭೨); ಅವಘಟಿಸಿದರು ರಥಿಕರುರವಣಿಸಿದರು ಸಬಳಿಗರು (ಕುವ್ಯಾಕ. ೧೨-೨೨); ಜೋಡುಸೀಸಕವಾಂತ ಸಬಳಿಗರು (ಮೋಹತ. ೨೦-೫೪).
[ಸಬಳ + - ಇಗ]

**ಸಬಿಂದುಕ** (ನಾ). [ವ್ಯಾಕ] ಬಿಂದುಸಹಿತವಾದ ಶಬ್ದರೂಪ : ಕೆಲವು ಪದಂಗಳ್ ವಿಕಲ್ಪದಿಂ ಸಬಿಂದುಕಮಬಿಂದುಕಮುಮಾಗಿರ್ಪುವು (ಶಮದ. ೩೬ ವೃತ್ತಿ). 'ಅಬಿಂದುಕ' ಪರಾ. [ಸಂ.]

**ಸಬು** (ನಾ). ದೇವರು; ಭಗವಂತ : ಕೇಶವ ಸಬು ಜಗನ್ನಾಥ ಕೇಳ್ ನಿನ್ನಯ ದಾಸರ ದಾಸ ನಾನ್ಯೆಸೆ (ಮೋಹತ. ೩೬-೯); ಸ್ವಯಂಬೂ– ಸಯಂಬು; ಸ್ವಭೂ–ಸಬು (ಶಬ್ದಾನು. ೧೫೧ ಪ್ರಯೋ). [< ಸಂ. ಸ್ವಭೂ]

**ಸಬುಕಾರ** (ನಾ). ಒಂದು ಬಗೆಯ ಕ್ಷಾರ, – ಉಪ್ಪು (?): ಕ್ಷಾರತ್ರಯ ಕಟುಕತ್ರಯಮಾರಯ್ಕಲ್ ಕಿಡಿಸುಗುಂ ಮರುದ್ವ್ಯಹ್ನಿಗಳಂತೋರಂತಿರುರಿಪುಗುಂ ಸಬುಕಾರದ ಮದಮೆಂಬವನಮನಿದು ಕೇವಳಮೇ (ಖಮದ. ೨-೭೨). [?]

**ಸಬುದ, ಶಬುದ** (ನಾ). ಸದ್ದು ; ಉಲಿ ; ಶಬ್ದ : ಸುರಗಿ ಚಕ್ರಂ ಮುದ್ಗರಂಗಳಾ ಸಬುದದಿಂದೊಗೆದ ಕಿಡಿ ಗಜಗಲಿಸೆ (ಹಚಕಾ. ೫-೧೩); ಶಬ್ದ – ಸಬುದ, ಸರ್ಷಪ – ಸರುಸಪ (ಶಮದ. ೨೫೪ ಪ್ರಯೋ); ಸೋ ಅನ್ನು ಸಬುದವ ಯಾರು ಮಾಡ್ತಾರ ಗುರುವೆ (ಲೋಕಗೀ. ೧). **ಶಬುದ** : ಎನ್ನ ತನುವಪ್ಪದಿರಲಾಱದಯ್ಯ ಎನ್ನ ಶಬುದ ಹೊಗಳಿದಲ್ಲದೆ ಸ್ಮರಿಸದಯ್ಯ (ಅವಚಂ. ೨೧೭-೯೮೩) . [< ಸಂ. ಶಬ್ದ]

**ಸಬೂಬು, ಸಬಬು** (ನಾ). ಕಾರಣ ; ನೆವ ; ನೆಪ : ವೆಂಕಟಣ್ಣ ಏನೇನೊ ಸಬೂಬು ಹೇಳಿ ನುಣುಚಿಕೊಂಡಿದ್ದನು (ಮಲಮು. ೪೧೫); ಸೊಂಟನೋವು ಅಂತ ಸಬೂಬು ಹೇಳಿದ (ಚಂಗೂಲಿ. ೩೫). **ಸಬಬು** : ಮಹಂಮದುಪತ್ತಾಹುಲ್ಲಾಸಾಬರು ಪ್ಯಾದೇರ ಭರ್ತಿಮಾಡಿಯದ್ದ ಸಬಬೂ ಪತ್ತೆನಾಯಕರೆಂಬ ಹೆಸರು ವಾಡಿಕೆ ಆಯಿತು (ಹೈದರ. ೨೯); ಯಾವನೊಬ್ಬನೂ ಸರಿಯಾದ ಸಬಬು ಇಲ್ಲದೆ ಕೆಲಸ ಮಾಡುವದಕ್ಕೆ ನಿರಾಕರಿಸಿದರೆ (ಗ್ರಾಮಾಕ. ೧೮). [← ಆರ. ಹಿಂ. ಸಬಬ್ ; ಮರಾ. ಸಬಬ ]

**ಸಬ್ಜಾಗಿಡ** (ನಾ). ಒಂದು ಬಗೆಯ ಸಸ್ಯ : ಕಮಗಗ್ಗರೆ, ಕಾಮಕಸ್ತೂರಿ, ಸಬ್ಜಾಗಿಡ (ಮೈಬಿಗಿ. ೫೭-೧೧೪೫). [< ಸಬ್ಜೆ + ಗಿಡ (< ಗಿಡು)]

**ಸಬ್ಜೆ** (ನಾ). = ಸಬ್ಜಾಗಿಡ : ಅಂಗಳದಿ ಬೆಳೆಸಿದ್ದ ಬಂಗಾರಗೊಂಡೆ ಹೂ, ಸಬ್ಜೆ, ದಾಸಾಳ, ಕರಿತುಳಸಿ, ಬಿಳಿನಿತ್ಯಪುಷ್ಪ ಎಲ್ಲ ದಿಕ್ಕಾಪಾಲು (ಸಪ್ತಋ. ೫-೨೫).
[?./ ಹಿಂ. ಸಬ್ಜಾ = ತರಕಾರಿ, ಹಸಿರು ಸೊಪ್ಪು]

**ಸಬ್ಬ$_1$, ಸರ್ಬ$_1$** (ನಾ). ಶಿವ ; ಶರ್ವ : "ಏಣ್ಮಯ್ಯಂ . . . ಸಬ್ಬಂ . . . ಅಯ್ದೊಗಂ – ಈ ೩೩ ಈಶ್ವರಂಗೆ ಪೆಸರ್" (ಕಶಸಾ. ೪೭-೧); ಸಬ್ಬ ಶಬರನ ಮಂಡೆಯಲಿರಲ್ ಕುಱುಹು (ಚತುಪು. ೪-೩-೨೬); ಸಬ್ಬನಬ್ಬರಂ ಕಡಿದಾಯ್ತು (ರಾಮಾಶ್ವ. ೧೩೦-೨೭). **ಸರ್ಬ$_1$** : ಇರ್ಬರೊಂದಾಗಿ ನಲಿನಲಿದು ತಕ್ಕೆಸುತಂ ಸರ್ಬನ ಗಣಂಗಳೊಳು ಪರಮಸುಖಿವೊಂದುತಂ (ಬಸರ. ೧೧-೨೨); ಸರ್ಬಂಗೆ ಭಿಕ್ಷಾನ್ನಮಂ ನೀಡಲೆಂದು ಮತ್ತೊರ್ಬಳಾಲಸ್ಯಗಮನೆ ನಡೆದುಬರುತಿರೆ (ಭಿಕ್ಷಾಟ. ೩-೨೬). [< ಸಂ. ಶರ್ವ, ಸರ್ವ]

**ಸಬ್ಬ$_2$, ಸರುವ, ಸರ್ಬ$_2$** (ಸ). ಎಲ್ಲ ; ಸಮಸ್ತ ; ಸರ್ವ : "ಸಬ್ಬಂ ಸರ್ವಂ" (ಕರ್ಣಾನಿ. ೫೨); ಗಬ್ಬಿದಾನವನ ಪಟ್ಟಣದ ಸಬ್ಬ ಜನರು ತಬ್ಬಿಬ್ಬುಗೊಳಲು ಊರಬ್ಬರ ಪಿರಿದಾಯ್ತು (ತ್ರಿಪುಸಾಂ. ೧೬-೧೮೩); ಸಬ್ಬಲೋಕದೊಳೆ ಜಾನಿಸುವರಿಂ ನಸಿವರಿಂ ಪೇಳಲದ್ಭುತಮಾದುದು (ಚಬಪು. ೪೭-೨೦). **ಸರುವ** : ಇವಬಲೋಗರವ ಮಾಡಿ ಸರುವ ತೃಪ್ತಿಯ ಕೊಟ್ಟು ಭರಿತರಾಗಿರ್ಪರಿನ್ನಾರು ಹೇಳಾ (ಚೆನ್ನವ.ಕ. ೪೪೬-೯೪೭); ಸರುವ ಶ್ರುತಿಸ್ಮೃತಿವಾಕ್ಯಗಳ ಕ್ರೋಡಿಸಿ ಉರುತರದ ಗ್ರಂಥಗಳ ರಚಿಸಿ ಶಿಷ್ಯರಿಗೊರೆದ ಪರಮಾಂತಃಕರುಣಿಯೆ (ವಾದಿಕೀ. ೧೬-೨೭). **ಸರ್ಬ$_2$** : ಸರ್ಬಕಳಾಕುಶಲೆಯರೀ ಬರ್ಬರೆಯ ಕಿರಾತೆಯನ್ನರಾರ್ (ಶಾಂತಿಪು. ೩-೫೬); ತುಬ್ಬಿನವದಿರು ತಂದು ಬಿಸುಟರು ನಿಮ್ಮ ಪಾಳೆಯದ ಸರ್ಬವೃತ್ತಾಂತವನು (ಕುವ್ಯಾಶ. ೧-೨೮).

ಸಬ್ಬರು, ಸರುವರು, ಸರ್ಬರು = ಎಲ್ಲರೂ ; ಸಮಸ್ತಜನರೂ : ನೋಡಿ ಸಬ್ಬರಾನಂದಿಸಿದರು (ಚತುಪು. ೨-೫-೩೫); ಸಬ್ಬರಂ ಮನವಾರೆ ತಣಿಸಿದುದರಿಂದ (ಮಹಾಂತೇ. ೩೦-೨೮); ಒಂದು ವರಶಕ್ತಿ ಸರುವರಿಗನುಗ್ರಹಂ ಮಾಡುವಂತಾಗಿ ಶಿವರೂಪಮಾದುದು (ವೀಶ್ವಪು. ೬-೨-೩೨); ಹಿರಿಯರು ಬನ್ನಿ ಕಿರಿಯರು ಬನ್ನಿ ಸರುವರು ಐತನ್ನಿ (ಅಗ್ನಿಹಂ. ೨೪); ಮನದೊಳನುರಾಗಿಸಲು ಸರ್ಬರು [ಪಾಠಾಂ. ಸರ್ವರು] ಮುಂದೆ ನಲವೇಱಿ ಮುನಿವರೇಣ್ಯರು ನಡೆಯಲು (ಬಸಪು. ೩೨-೩೦); ಹಚ್ಚಿದಾ ಜ್ವಲನಕೀಲಾಳಿ ಕರ್ಕಶಳಾಗಿ ಸರ್ಬರಕ್ಕಿಗಳಿಗೆಸೆದಳ್ (ಮಲ್ಲಾರಿ. ೬-೧೭).

[< ಪ್ರಾ. ಸಬ್ಬ./ ಸಂ.ಸರ್ವ. / IP ಸಂಸ್ಕೃತದಲ್ಲಿ ವಕಾರ, ಬಕಾರಗಳ ಅಭೇದದಿಂದ 'ಸರ್ಬ' ಎಂಬ ರೂಪವನ್ನೂ ಸಂಸ್ಕೃತವೆನ್ನುವ ಸಾಧ್ಯತೆ ಇದೆ]

**ಸಬ್ಬಂಗೆಯ್** (ಕ್ರಿ). ಹಾಸ್ಯಮಾಡು ; ಅಣಕಿಸು (?) : ಭಂಗಂ ಪೋಗದವಂಗನುತ್ತ ಸಲೆ ಸಬ್ಬಂಗೆಯ್ದನಾ ತಾಣದೊಳ್ (ವೀರವಿ. ೬-೧೩೫). [< ಸಬ್ಬವ + ಕೆಯ್$_1$]

**ಸಬ್ಬಕ್ಕಿ** 'ಸಾಬುಅಕ್ಕಿ' ನೋ.

**ಸಬ್ಬಗತ** (ನಾ). ಸರ್ವವನ್ನೂ ವ್ಯಾಪಿಸಿರುವವನು ; ಸರ್ವಾಂತರ್ಯಾಮಿ : ಸಬ್ಬಗತನ್ನೆ ಶಿವಶಿವಾ . . . ಎನುತಡಿಗಡಿಗೆ ಬೆಱಗಾದ (ಕುವ್ಯಾಭೀ. ೩-೬೭).
[< ಸಂ. ಸರ್ವಗತ]

**ಸಬ್ಬನಿಸ** 'ಸಬನೀಸು' ನೋ.

**ಸಬ್ಬಮಂಗಳೆ** (ನಾ). ಪಾರ್ವತಿ ; ಶರ್ವಾಣಿ ; ಸರ್ವಮಂಗಳೆ : "ಸಬ್ಬಮಂಗಳೆ ಯೆನಲ್ಕೆ ಪೆಸರಪ್ಪುದು ಶರ್ವಾಣಿಗೆ" (ಕಶರ. ೧೧೧).

ಸಬ್ಬಮಂಗಳೆಯಣುಗ = ಸರ್ವಮಂಗಳೆಯ ಮಗ ; ಷಣ್ಮುಖ : "ಸಬ್ಬಮಂಗಳೆ ಯಣುಗನು ಸಲೆ ನವಿಲ್ದೇರನಿಂಗಳ ಮಗಂ . . . ಅಱುಮೊಗನೆನಲು ಗುಹನ ಪೆಸರಪ್ಪುದು" (ಶಬ್ಬಮಂ. ೫). [< ಸಂ. ಸರ್ವಮಂಗಲಾ]

**ಸಬ್ಬಲಗ್ಗೆ, ಸರ್ಬಲಗ್ಗೆ** (ನಾ). ೧. ಸಕಲಬಲದೊಡನೆ ಮಾಡುವ ದಾಳಿ; ಸಾಮೂಹಿಕ ಮುತ್ತಿಗೆ : ಒಬ್ಬರಿಬ್ಬರೆ ನಿನಗೇನು ಕಡಮೆಯಾಯ್ತು ಸಬ್ಬಲಗ್ಗೆಯೊಳಿದ ಹೆಣ್ಣು (ಭರಚ. ೯-೧೧೧); ಸನ್ನೆಯ ದುಂದುಭಿರವದಿಂದನ್ನೆಱೆಯುರ್ಬೇಱ ಸಬ್ಬಲಗ್ಗೆಗೊಳಲ್ಕೆಂದೆನ್ನ ಬಿಡು ತನ್ನ ಬಿಡೆನುತ್ತೇನ್ನೆರೆದುದೊ ಬೀರರೆಂಬಿನಂ ಬೆಲೆವೆಣ್ಣಳ್ (ಚಿಕವಿ. ೬-೧೫೩). **ಸರ್ಬಲಗ್ಗೆ** : ೧. ಕೌರವೇಂದ್ರನು ಸರ್ಬಲಗ್ಗೆಯ ಹರುಷದಲಿ ಹೊಱವಂಟನರಮನೆಯ (ಕುವ್ಯಾಕ. ೫-೧೧); ಚತುರ್ಬಲ ಸರ್ಬಲಗ್ಗೆ ಯೊಳೆಂಬ ಕಯ್ಸನ್ನೆಯೊಳ್ ಮನ್ನೆಯರ್ . . . ವೇಡಯ್ಸಿ ಬರಲು (ಚಬಪು. ೪೭-೩೦). ೨. ಸಕಲವಾದ್ಯಗಳ ಘೋಷ : ಬೊಬ್ಬೆಗಳ ಪಟಹದ ಮೃದಂಗದ ಸರ್ಬಲಗ್ಗೆಯ ಸೋಹಿನಲಿ ಸುಳಿವಬ್ಬರಕೆ ಹಿಂಡೊಡೆದು ಹಾಯ್ದವು (ಕುವ್ಯಾಅ. ೧೩-೨೫).
[ಸಬ್ಬ$_2$ + ಲಗ್ಗೆ]

**ಸಬ್ಬಲು** (ನಾ). ಹಾರೆ ; ಸಲಾಕಿ : ಸಬ್ಬಲುಹಾಕಿ ಮೀಟಿದ ಕುರುಹು ಕಾಣಬರುತ್ತಿತ್ತು (ಮಣ್ಣುನಂ. ೬೭) ; ಅವನ ಹಿಂದೆ ವೆಂಕಪ್ಪಯ್ಯನವರೂ ಒಂದು ಸಬ್ಬಲು ತೆಗೆದುಕೊಂಡು ಸಾಗುತ್ತಿದ್ದರು (ಪರಾವ. ೬೧). [← ತುಳು. ಸಬ್ಬಲ್]

**ಸಬ್ಬವ, ಸರ್ಬವ** (ನಾ). ೧. ಕೂಟ ; ಮೇಳ ; ಸಾಹಚರ್ಯ : ''ಸಬ್ಬವವೆಂದು ಮೇಳಂ'' (ಶಮದ. ಷರಿ. ೧) ; ತನ್ನ ಬೇಸಟಿಂ ತನ್ನ ಸಬ್ಬವದಾಕೆಗಿಂತೆಂದಳ್ (ಪಂಪಭಾ. ೪-೯೯ ವ) ; ಪರಿವೆಸದಾಳ್ಗಳ್ ದೇವಿಯರ ಮೆಚ್ಚ ನಿಚ್ಚಯ ದಾವಣೆಯೊಳಗನಿಸಿ ನೆಗಟ್ದ ಸಬ್ಬವದವರ್ಗಳ್ (ವರ್ಧಮಾ. ೬-೪೯). ೨. ಹಾಸ್ಯ; ಚೇಷ್ಟೆ: ''ಸಬ್ಬವಂ ಹಾಸ್ಯನಾಮಂ'' (ಕರ್ಣಾನಿ. ೫೨) ; ನಗೆ ಸಬ್ಬವಂ ಬಿನದಮೆಂಬಿವಱಿಂ ಲಲಿತಾಂಗನಂ ಮನಂಗೊಳಿಸುವರ್ . . . ಸಗ್ಗದ ದೇಸೆಕಾರ್ತಿಯರ್ (ಆದಿಪು. ೨-೭೧) ; ಸಬ್ಬವ ನಗೆನುಡಿಗಾಱರ ಕಳುಪುತೆ (ಉದ್ಭಟೀ. ೪-೪೫) ; ಕಬ್ಬದ ಪವಣಂತುಟವನ ಸಬ್ಬವ ನುಡಿಗಳ್ (ಚಿಕವಿ. ೬-೧೦೯). Δ **ಸರ್ಬವ** : ೨. ಆ ವಿದೂಷಕಂ ಸರ್ಬವದೊಳೆಲ್ಲರಂ ನಗಿಸುತ (ಚಿಬಪು. ೧೧-೨೫).

**ಸಬ್ಬವಕಾರ** 'ಸಬ್ಬವಗಾಱ' ನೋ

**ಸಬ್ಬವಕಾರ್ತಿ** 'ಸಬ್ಬವಗಾರ್ತಿ' ನೋ.

**ಸಬ್ಬವಕಾಱ** 'ಸಬ್ಬವಗಾಱ' ನೋ.

**ಸಬ್ಬವಗಾಱ, ಸಬ್ಬವಕಾರ, ಸಬ್ಬವಕಾಱ** (ನಾ). ಹಾಸ್ಯಗಾರ ; ವಿದೂಷಕ: ಆಸ್ಥಾನವಲ್ಲಭನ ಮನಮನಱಿದು ನಗಿಸುವ ಕುಬ್ಜ ವಾಮನ ಬಧಿರ ಮೂಕರ್ ಮೊದಲಾದ ಪಲತೆಱದ ಸಬ್ಬವಗಾ[ಪಾಠಾಂ. ಕಾ]ಱರಿಂ (ಜಗವಿ. ೨-೩೯ ವ). **ಸಬ್ಬವಕಾರ** : ''ಸಬ್ಬವಕಾರನೆಂದೆನೆ ವಿದೂಷಕನ ನಾಮ'' (ಕಶರ. ೧೦೧) ; ಅವನ ಮಗನಾದ ಸಬ್ಬವಕಾರನನ್ನು ಕರೆದುಕೊಂಡು ಬಾ (ನಗಗ. ೭೦). **ಸಬ್ಬವಕಾಱ**: ''ಸಬ್ಬವಕಾಱನೆಂದು ಪರಿಹಾಸಕಂ'' (ಕಶಸಾ. ೬೯-೩೫೯) ; ದೇವನ ಬೇಂಟೆಯುಜ್ಜುಗದ ಸಬ್ಬವಕಾಱರ ಡಿಂಡಿಮಾರವಂ ತೀವಿದುದಾ ಮಹಾಕಟಕದೊಳ್ (ಶಬಶಂ. ೩-೨) ; ನೀಂ ಕಬ್ಬಿಗನೋ, ಸಬ್ಬವಕಾಱನೋ (ರಾಮಾಶ್ವ. ೧೧೮-೨೪). [ಸಬ್ಬವ + - ಕಾಱ]

**ಸಬ್ಬವಗಾರ್ತಿ, ಸಬ್ಬವಕಾರ್ತಿ** (ನಾ). ಮೇಳದ ಹೆಂಗಸು; ಜೊತೆಯವಳು: ''ಸಬ್ಬವಗಾರ್ತಿಯನೆ ಮೇಳದಾಕೆ'' (ಶಬ್ದಕ್ಕೆ. ೨೭). **ಸಬ್ಬವಕಾರ್ತಿ** : ''ಸಬ್ಬವಕಾರ್ತಿ ಯೆಂದು ಮೇಳಗಾರ್ತಿ'' (ಕಶಸಾ. ೬೨-೩೭೮) ; ನಾಟ್ಯಮಂ ರಚಿಸೆ ಸಬ್ಬವಕಾರ್ತಿಯರ್ (ಕಮುಮಾ. ೩-೨೧) ; ಓರ್ವ ಸಬ್ಬವಕಾರ್ತಿ ತನ್ನೆಡೆ ಸಂದಿರ್ದ ಪೆಣ್ಮಣಿಗಳಂ ನೋಡಿ (ಮರಾಚ. ೫-೧೧೭). [ಸಬ್ಬವಗಾಱ + - ತಿ$_1$ (< - ಇತ್ತಿ)]

**ಸಬ್ಬಸ** 'ಸರ್ಬಸ್ವ' ನೋ.

**ಸಬ್ಬಸಗಿ** 'ಸಬ್ಬಸಿಗೆ' ನೋ.

**ಸಬ್ಬಸಗೆ** 'ಸಬ್ಬಸಿಗೆ' ನೋ.

**ಸಬ್ಬಸಿಕೆ** 'ಸಬ್ಬಸಿಗೆ' ನೋ.

**ಸಬ್ಬಸಿಗೆ, ಸಬ್ಬಸಗಿ, ಸಬ್ಬಸಗೆ, ಸಬ್ಬಸಿಕೆ, ಸಬ್ಬಸೀಗೆ** (ನಾ). ಒಂದು ಬಗೆಯ ತರಕಾರಿ ಸೊಪ್ಪು: ''ಮಂಜುಪತ್ರಿ . . . ಕಾರವಿ - ಈ ೭ ಸಬ್ಬಸಿಗೆ'' (ನಾಟಿರಾ. ೧೧೧) ; ''ಶತಪುಷ್ಪಿಯನೆ ಸಬ್ಬಸಿಗೆ'' (ಮಂಗರಾ. ೪೦-೩೭) ; ಸಬ್ಬಸಿಗೆಯನರೆದಿಕ್ಕೆ ಮರನ ಮೊದಲೊಳದಂ ಸೇಕಿಸುವುದು (ಲೋಕೋಪ. ೬-೧೪) ; ಸಬ್ಬಸಿಗೆ ಸಾಸವೆ ಮುಂತಾದ ಪ್ರತಿಹೇಱೊಂದಕ್ಕಂ (ಎಕ. V. ಬೇಲೂರು. ೭೫-೧೦೨; 1382) ; ಅರಿಸಿನ ಕಟುಕರೋಹಿಣಿ ಸಬ್ಬಸಿಗೆ . . . ಸೊಗದೆ ಇವಿಷ್ಟನೂ . . . ಚೂರ್ಣಿಸಿ (ವೃದ್ಧಸಾ. I. ೧೨೩). **ಸಬ್ಬಸಗಿ**: ಇಂಥ ತಂಪು ಎರಿಗಳಲ್ಲಿ . . . ಸಬ್ಬಸಗಿ ಸೋಪು ಗಜರಿ ಬೀಜಗಳನ್ನಾದರೂ ಬಿತ್ತಿದರೂ ಬರುತ್ತದೆ (ಕೃಷಿಪ್ರ. ೭೩) ; ಮೆಂತೆ ಸಬ್ಬಸಗಿ ಕೋತಂಬರಿ ಕರಿಬೇವ ಸಂತೆಯಲಿ ಸಿಕ್ಕಿದ ಪಲ್ಲೆಗಳ (ಸಿದ್ಧಪು. ೧೭-೪೯) . **ಸಬ್ಬಸಗೆ** : ಮೆಂಥೆಯ ಜೀರಗೆ ಸಬ್ಬಸಗೆ ಕೊತ್ತಂಬರಿ ಅರಿಸಿನ ಉಳ್ಳಿ (ಎಕ. XII. ಪಾವಗ. ೫೦-೫೫; 1248). **ಸಬ್ಬಸಿಕೆ** : ''ಶಾಲೇಯಃ . . . ಮಿಶ್ರೇಯಾ - ೬ ಸಬ್ಬಸಿಕೇ ಹೆಸರುಗಳು'' (ಸಿದ್ಧಾಂತಿ. ೧೩೬). **ಸಬ್ಬಸೀಗೆ** : ''ಅಮರ ಪುಷ್ಪಿಕ - ಸಬ್ಬಸೀಗೆ'' (ಅಕಾನಿ. ೧-೩೪) ; ಕೀರೆ ನಱುವಲು ಚಕ್ಕವತ್ತ ಸೊಲೆ ಸಬ್ಬಸೀಗೆ ಮೊದಲಾದ ಸೊಪ್ಪುಗಳ ಬೇಱ ಬೇಱುಕ್ಕರಿಸಿ (ಸೂಪಶಾ. ೪-೧೭) ; ಸಬ್ಬಸೀಗೆಬೀಜಮಂ ರುದ್ರಜಟೆಯಂ ಕೃತಾಂಜಲಿ ಎಂದು ಮುಟ್ಟಿದರೆ ಮುರುಟುವನು (ಕಾಮಶಾ. ೨೭೨). [?]

**ಸಬ್ಬಸಿಗೆಘೃತ** (ನಾ). ಒಂದು ಬಗೆಯ ಔಷಧಿದ್ರವ್ಯ : ಸಬ್ಬಸಿಗೆಘೃತ . . . ಸೇವಿಸೆ ಹಳೆಯಜ್ವರಂ ಪರಿಹಾರಮಾಗಿ ದೇಹಪುಷ್ಟಿಯಹುದು (ಸಕವೈ. ೧೨೫). [ಸಬ್ಬಸಿಗೆ + ಘೃತ]

**ಸಬ್ಬಸಿಗೆಮಾವು** (ನಾ). ಒಂದು ಬಗೆಯ ಮಾವು : (ಮುಂಬಯಿ.ಕ. ೨-೬೪). [ಸಬ್ಬಸಿಗೆ + ಮಾವು]

**ಸಬ್ಬಸೀಗೆ** 'ಸಬ್ಬಸಿಗೆ' ನೋ.

**ಸಬ್ಬಾಣಿ** (ನಾ). ಪಾರ್ವತಿ ; ಶಿವೆ; ಶರ್ವಾಣಿ : ''ಮಾಕಾಳಿ, ಮಾದೇವಿ, ಸಬ್ಬಾಣಿ . . . ಸಿಂಗದೇರಳ್ - ಈ ೫ ಪಾರ್ವತಿಯ ಪೆಸರ್'' (ಕಶಸಾ. ೪೭-೩) ; ಲೇಸಿನಲಿ ಕಡಲಣುಗೆ ಸಬ್ಬಾಣಿಯರು ಪಾಡಿಪರು (ಕುವಲ. ೧೬೬-೨).

**ಸಬ್ಬಾಣಿಯಾಣ್ಮ** = ಪಾರ್ವತಿಯ ಗಂಡ ; ಶಿವ : ನರನಲ್ಲವೆಂದು ಸಬ್ಬಾಣಿಯಾಣ್ಮನಹುದಕಟಕಟ ಕೆಟ್ಟೆ ನಾಂ . . . ಎನುತೆ (ಚತುಪು. ೪-೩-೨೬). [<ಸಂ. ಶರ್ವಾಣೀ]

**ಸಬ್ಬಿನಾಡು** (ನಾ). ಒಂದು ನಾಡಿನ ಹೆಸರು: ಭಟಾರರ ಗುಡ್ಡಂ ಜಿನವಲ್ಲಭಂ ಸಬ್ಬಿನಾಡ ನಟ್ಟ ನಡುವಣ ಧರ್ಮವುರದುತ್ತರ ದಿಗ್ಭಾಗದ ವೃಷಭಗಿರಿ (ಶಾಸಸಂ. ೯-೯; ಸು. 950). [ಸಬ್ಬಿ + ನಾಡು]

**ಸಬ್ಬು**$_1$ (ನಾ). ಸಾಬೂನು : ಬೆಳಗುವ ಸಬ್ಬಿನ ಗುಳ್ಳೆಯಂತೆಯೋ, ವಾಯುಮಂಡಲ ವನ್ನು ಬೇಗನೆ ಸೀಳಿ ದಾರಿಬಿಡಿಸಿಕೊಂಡು . . . ಒಂಟಿಯಾಗಿಯೂ ಇರುವುದು (ಜ್ಯೋತಿರ್ವಿ. ೧೮೭). [< ಸಬಕಾರ. / ತೆಲು. ಸಬ್ಬು]

**ಸಬ್ಬು**$_2$ (ನಾ). ಸ್ತಬ್ಧ ; ಪ್ರಶಾಂತ : ನಿದ್ದೆ ಬರಲೊಲ್ಲದು ಹನ್ನೆರಡು ಬಡಿದು ಹೋಯಿತು ಎಲ್ಲ ಕಡೆ ಸಬ್ಬಾಗಿದೆ (ಅಸ್ನ. ೩೦೧). [< ಸಂ. ಸ್ತಬ್ಧ?]

**ಸಬ್ಬುತಿರುಗು** (ಕ್ರಿ). (?) : ಬರೆಪದೊಳರ್ಘದೊಳಿಮ್ಮಡಿ ಪರಿವಂತಿರೆ ಪರವನೊಡನೆ ಕೈತವದಿಂದಂ ದೂರೆಕೊಂಡು ತಿಂದು ಲೆಕ್ಕಂ ಪಿರಿದಾದೊಡೆ ಸಬ್ಬುತಿರುಗೆ ತಾಂ ತೆತ್ತಪನೆ (ಮದಕಿ. ೧೦-೬೪). [ಸಬ್ಬು? + ತಿರುಗು$_1$]

**ಸಬ್ಬೆ, ಚಬ್ಬೆ, ಚೆಬ್ಬೆ** (ನಾ). ಮರದ ಸಣ್ಣಕೊಂಬೆ,– ಕಡ್ಡಿ : (ಕ). **ಚಬ್ಬೆ** : ಬರ್ಚ್ ಚಬ್ಬೆಯಿಂದ ತೀಡಿಯಾಯಿತು (ಪುನರು. ೨೬೭). **ಚೆಬ್ಬೆ**: ಬಿಟ್ಟಿ ಕುದುರೆ ಆವರ್ಕೆ ಚೆಬ್ಬೆ (ಹುಟ್ಟಹ. ೧೪೪). [?. / ತಮಿ. ಚಪ್ಪೈ = ಮರದ ಚಕ್ಕೆ, - ಚೂರು]

**ಸಬ್ಬೇಶೆಯ** (ನಾ). ಸರ್ವೇಶ ; ಶಿವ : ಸಬ್ಬEಚ್ಚೆ3ಶೆಯ ನಂಜೇಶ ಪೊರೆ ಭಕ್ತರ (ಗುರುಚಾ. ೧೭-೫೭) ; ಆಱುಮೊಗನ್ನಯ್ಯ ಸಬ್ಬೇಶೆಯ . . . ರಕ್ಷಿಸುಗೆ ಬಿಡದೆಮ್ಮನು (ರಾಘಚ. ೧-೪). [ಸಬ್ಬ$_2$ (< ಸರ್ಬ) + ಎಶೆಯ]

**ಸಭಯ** (ಗು). ಭಯಸಹಿತವಾದ ; ಹೆದರಿಕೆಯಿಂದ ಕೂಡಿದ : ಅಭಯವಂ ಬೇಡುತ್ತ ಮತ್ತಂ ಸಭಯವಮಾನಸನಾಗಿ ಭಕ್ತಿ ಪ್ರಭವಿಸಲು ತನ್ನಡಿಗಳಿಗೆ ಕೆಡೆದಿರ್ದವನನೆತ್ತಿ (ಬಸಪು. ೩೦-೩೦). [ಸಂ.]

**ಸಭರಿತ** (ಗು). ತುಂಬಿರುವ ; ಒಳಗೊಂಡಿರುವ : ನಿಮಗಭಿಮತಾರೋಗಣೆಯ ನೆಯ್ದಿಸಿ ಸಭರಿತಾರ್ಥದಿ ಮಾಡುವಂತಹ ಭಕ್ತನೇ ನಾನು (ಬಸಪು. ೮-೨೮). [ಸಂ.]

**ಸಭರ್ತೃಕೆ** (ನಾ). ಗಂಡನನ್ನುಳ್ಳವಳು ; ಸುಮಂಗಲಿ. [ಸಂ. ಸಭರ್ತೃಕಾ]

**ಸಭವ** (ನಾ). ಜನ್ಮತಳೆದವನು ; ಹುಟ್ಟಿದವನು : ಜೀವಂ ಸಭವನೀ ಶಿವನಭವನಹನು (ಬಸಪು. ೫೧-೨೮). [ಸಂ.]

**ಸಭಾಕಂಪ** (ನಾ). ಸಭೆಯ ಮುಂದೆ ನಿಂತಾಗ ಉಂಟಾಗುವ ನಡುಕ : ನನಗೆ ಸಭಾಕಂಪ ತಪ್ಪಿಸಿದವರೆಂದರೆ ಕ್ರಿಸ್ತೀಯ ಶ್ರೋತೃಗಳೆ (ಸ್ಮೃತಿಚಿ. ೨೯೧). [ಸಂ.]

**ಸಭಾಗೃಹ** (ನಾ). ೧. ಸಭೆ, ಸಮಾರಂಭಗಳು ನಡೆಯುವ ಭವನ : ನೋಡಿ ಪೃಥಾತನೂಜರ ಸಭಾಗೃಹದಂದಮನಂತುಟಪ್ಪುದಂ ಮಾಡಿಪೆನೆಂದು ಮಾಡಿಸಿ ಸಭಾಲಯಮಂ (ಪಂಪಭಾ. ೬-೬೮) ; ಖಗೇಂದ್ರ ಕನ್ನಿಕೆ ನೃಪೇಶ್ವರರಿರ್ದ ಸಭಾ ಗೃಹಂಬರಂ ಬಂದು (ಶಾಂತಿಪು. ೪-೮೦). ೨. ನಾಟಕ ಮಂದಿರದಲ್ಲಿ ಪ್ರೇಕ್ಷಕರು ಕುಳಿತುಕೊಳ್ಳುವ ಭಾಗ ; ರಂಗಮಂದಿರದ ಎದುರಿನ ಸ್ಥಳ : ರಂಗಮಂಟಪ, ಸಭಾಗೃಹ ನೇಪಥ್ಯಸಂಬಂಧವಾದ ಎಲ್ಲ ವಿಷಯಗಳಲ್ಲೂ ಆಗಿನ ದಿವಸಗಳಲ್ಲಿ ಪಕ್ವವಾದ ಅಭಿಪ್ರಾಯಗಳಿದ್ದಂತೆ ಕಾಣುವುದು (ಬಾಲಪ್ರ. III, ೧೨೮೯). [ಸಂ.]

**ಸಭಾಗೇಹ** (ನಾ). = ಸಭಾಗೃಹ ೧: ಆ ಸಭಾಗೇಹದೊಳ್ ಉತ್ತಮ ಮಹತ್ತರದೇವರೆರಡುಂ ಕೆಲದೊಳಂ . . . ಸಂದಣಿಸೆ (ಶಾಂತಿಪು. ೭-೧೭ ವ). [ಸಂ.]

**ಸಭಾಜನ** (ನಾ). ೧. ಸಭೆಯಲ್ಲಿರುವ ಜನ ; ಸಭೆಯ ಸದಸ್ಯರು : ಸಭಾಪತಿಯಾಗಿರ್ದ ಮಹಾಬಳನುಮಂ ಪ್ರಾಶ್ನಿಕರಾಗಿರ್ದ ವಿದ್ವಜ್ಜನಮುಮಂ ಸಭಾಜನಮುಮಂ ಸಿಳಿಪಿ (ಆದಿಪು. ೨-೧೦ ವ); ಚತುರವಚನರಚನಾಪ್ರಪಂಚಕಂಚುಕಿತ ರೋಮಾಂಚ ಚುಂಚು ಸಭಾಜನಶರೀರನುಮಪ್ಪ ದೂತಮುಖ್ಯನನಟ್ಟಿ (ಶಾಂತಿಪು. ೨-೫೧ ವ). ೨. ಗೆಳೆತನ ; ಸ್ನೇಹ : "ಸಖ್ಯಂ, ಸಾಪ್ತಪದೀನಂ, ಸೌಹಾರ್ದಂ, ಸೌಹೃದಂ . . . ಸಭಾಜನಂ – ಈ ೯ ಕೆಳೆ" (ಹಲಾಯು. ೧೧೭-೨೧). [ಸಂ.]

**ಸಭಾತಾಂಬೂಲ** (ನಾ). ಮದುವೆ ಮೊದಲಾದ ಸಮಾರಂಭಗಳಲ್ಲಿ ನೆರೆದಿದ್ದ ಜನರಿಗೆ ಹಂಚುವ ತಾಂಬೂಲ: ಸಭಾತಾಂಬೂಲವಾದನಂತರ ವಧೂವರರಿಗೆ ಆರತಿ ಮಾಡಿದರು (ರೂಢಿ). [ಸಂ.]

**ಸಭಾತ್ಯಾಗ** (ನಾ). (ಪ್ರತಿಭಟನೆಯನ್ನು ಸೂಚಿಸಲು) ಸಭೆಯಿಂದ ಹೊರಬರುವುದು: ಶಿಶುಪಾಲನು . . . ರಾಜರೊಡನೆ ಸಭಾತ್ಯಾಗ ಮಾಡಿ ಹೊರಟುಹೋದನು (ವಚಭಾ. ೮೨). [ಸಂ.]

**ಸಭಾಧ್ಯಕ್ಷ** (ನಾ). ಸಭೆಯ ಮುಖಂಡ ; ಸಭಾಪತಿ : ಸಭಾಧ್ಯಕ್ಷರು ಬಹುಮಾನ ವಿತರಣೆ ಮಾಡಿದರು (ರೂಢಿ). [ಸಂ.]

**ಸಭಾನಿಳಯ** (ನಾ). = ಸಭಾಗೃಹ ೧ : ಮಣಿಕನಕರಚಿತಮಂಡಿತ ಸಭಾನಿಳಯದೊಳು (ನಂಬಿರ. ೩-೭೧). [ಸಂ. ಸಭಾನಿಲಯ]

**ಸಭಾನುರಾಗ** (ನಾ). ೧. ಸಭ್ಯರ ಪ್ರೀತಿ ,– ವಿಶ್ವಾಸ ; ಸಜ್ಜನರ ಅನುರಾಗ. ೨. ಸೂರ್ಯನ ಅರುಣವರ್ಣ; ರವಿಯ ಕೆಂಪುವರ್ಣ. ೧ , ೨ : ಆ ಮಂಟಪಂ ಮಧುಸಮಯದಂತೆವೋಲ್ ಪ್ರಮದಾಳಿ ಸಮನೋಮನೋಜ್ಞಮಂ . . . ಸಂಧ್ಯಾಸಮಯದಂತೆ ಸಭಾನುರಾಗರಂಜಿತಮುಂ (ರಾಜಶೇ. ೮-೮ ವ). [ಸಂ.]

**ಸಭಾಪತಿ** (ನಾ). ೧. = ಸಭಾಧ್ಯಕ್ಷ: ಸಭಾಪತಿಯಾಗಿರ್ದ ಮಹಾಬಳನುಮಂ ಪ್ರಾಶ್ನಿಕರಾಗಿರ್ದ ವಿದ್ವಜ್ಜನಮುಮಂ . . . ತಿಳಿಪಿ (ಆದಿಪು. ೨-೧೦ ವ) ; ತತ್ಸಭಾಪತಿಯ ನರ್ಮಸಚಿವರೊಳಟಿಮಿನುಕಾರ ನೈಮಿತ್ತಿಕನಂ ಕಣ್ಣಂ ಕಿಡೆ ಜಡಿದು (ಶಾಂತಿಪು. ೭-೨೪ ವ). ೨. ವಿಧಾನಮಂಡಲದ ಅಧ್ಯಕ್ಷ ; ರಾಜ್ಯಪರಿಷತ್ತಿನ ಅಧ್ಯಕ್ಷ: ಭಾರತದ ಉಪರಾಷ್ಟ್ರಪತಿಯವರು ತಮ್ಮ ಪದನಿಮಿತ್ತ ರಾಜ್ಯಪರಿಷತ್ತಿನ ಸಭಾಪತಿಯವರಾಗಿರತಕ್ಕುದು (ಭಾಧಾನ. ೩೨). [ಸಂ.]

**ಸಭಾಪರ್ವ** (ನಾ). ೧. ಮಹಾಭಾರತದ ಹದಿನೆಂಟು ಪರ್ವಗಳಲ್ಲಿ ಎರಡನೆಯದು. ೨. (ಆಲಂ) (ಸಭೆಗೆ) ಅಭಿವೃದ್ಧಿಯ ಕಾಲ, – ಪುಣ್ಯಕಾಲ; ಆದಿರುದ್ರ ಗಣಾದಿಪರ್ವಂ ವಾದಿಗಳ ಹೃತ್‌ಶಲ್ಯಪರ್ವಂ ಮೋದಭಕ್ತಿಗೆ ಬಸವ ಸಿಂಹಾಸನ ಸಭಾಪರ್ವಂ ವೇದವಿದರುದ್ಯೋಗಪರ್ವಂ (ಬಸಪು. ೫-೨). [ಸಂ.]

**ಸಭಾಪೂಜೆ** (ನಾ). (ನಾಟಕಾರಂಭದಲ್ಲಿ) ನೆರೆದಿರುವ ಪ್ರೇಕ್ಷಕರಿಗೆ ಸಲ್ಲಿಸುವ ಗೌರವ ಪೂಜೆ : ಗಣೇಶಪ್ರಾರ್ಥನೆಯಾದ ತರುವಾಯ ಸಭಾಪೂಜೆ ನಡೆಯುತ್ತದೆ (ಭಾರದ. ೫೫೭). 'ಸಭಾವಂದನೆ' ಪರಾ. [ಸಂ. ಸಭಾಪೂಜಾ]

**ಸಭಾಭವನ** (ನಾ). = ಸಭಾಗೃಹ ೧ : ಮಂತ್ರಶಾಲೆಯಂ ಪೊಱಮಟ್ಟು ಬಂದು ಸಭಾಭವನಮಂ ಪೊಕ್ಕು (ಶಾಂತಿಪು. ೨-೭೦ ವ). [ಸಂ.]

**ಸಭಾಭೂಮಿ** (ನಾ). ಸಭೆಯು ನಡೆಯುವ ಸ್ಥಳ: ವೈಜಯಂತಿಯೆಂಬ ದಿವ್ಯಪ್ರಾಸಾದಮುಂ ದಿಕ್ಸ್ವಸ್ತಿಕಮೆಂಬ ಸಭಾಭೂಮಿಯುಂ (ಆದಿಪು. ೧೫-೩ ವ). [ಸಂ.]

**ಸಭಾಭ್ಯಂತರ** (ನಾ). ಸಭೆಯ ಅಂತರಂಗ,– ಒಳಭಾಗ: ಉರ್ವರಾಮರ ಸಭಾಭ್ಯಂತರಲೋಹಾಸನಸ್ಥಿತಂ ತದಾಸನದಿನಿೞಿದು ಮುಳಿದು (ಸುಕುಮಾ. ೫-೭ ವ). [ಸಂ.]

**ಸಭಾಮಂಟಪ** (ನಾ). = ಸಭಾಗೃಹ ೧ : ಸಭಾಮಂಟಪದೊಳ್ ಬ್ರಹ್ಮಋಷಿಯರು ಮನರಸುಮಕ್ಕಳುಮನೆಡೆಯೞಿದಿರಿಸಿ (ಪಂಪಭಾ. ೬-೩೩ ವ); ಸಭಾಮಂಟಪದಲು ಮಹಾಸಭೆಯಾಗಿ ನೆರೆದಿರ್ದು (ಸೌಇಇ. XX. ೨೧೨-೩; ?). [< ಸಂ. ಸಭಾಮಂಡಪ]

**ಸಭಾಮಂಡಲ, ಸಭಾಮಂಡಳ** (ನಾ). ಸಭೆಯಲ್ಲಿ ನೆರೆದ ಜನ ; ಸಭಾಸದರು: ನುಡಿದನು ತತ್ಸಭಾಮಂಡಲ ಮಹಾಂಬುಧಿ ನುಡಿದೆರೆಯ ತನಿಗಡಣವಡಗಿರಲು (ಕುವ್ಯಾಉ. ೮-೭೨); ರಾಜ್ಯ ಸಭಾಮಂಡಲದಲ್ಲಿ ಅಗ್ರಪದವಿಯನ್ನು ಪಡೆದನು (ಮಣಿಸ. ೪೯). **ಸಭಾಮಂಡಳ** : ವಿದ್ಯಾಧರರಾಜನ ಸಭಾಮಂಡಳಂ ಕ್ಷೋಭಕ್ಕೊಡರ್ಚಿದಾ ಪ್ರಸ್ತಾವದೊಳ್ (ಶಾಂತಿಪು. ೩-೬೬ ವ). [ಸಂ.]

**ಸಭಾಮಂಡಳ** 'ಸಭಾಮಂಡಲ' ನೋ.

**ಸಭಾಮರ್ಯಾದೆ** (ನಾ). ಸಭೆಯಲ್ಲಿ ನಡೆದುಕೊಳ್ಳಬೇಕಾದ ರೀತಿ ,– ನೀತಿ: ಯಾರೂ ಸಭಾಮರ್ಯಾದೆ ಮೀರಬಾರದು (ರೂಢಿ). [ಸಂ. ಸಭಾಮರ್ಯಾದಾ]

**ಸಭಾವಂದನೆ** (ನಾ). ಯಕ್ಷಗಾನ ಆಟದ ಆರಂಭದಲ್ಲಿ ನೆರೆದ ಪ್ರೇಕ್ಷಕರಿಗೆ ವಂದನೆ ಸಲ್ಲಿಸುವ ಒಂದು ವಿಧಿ : ಮೊದಮೊದಲಿನ ಆಟಗಳಲ್ಲಿ ಗಣಪತಿಯ ಪೂಜೆಗಿಂತ ವಿಶೇಷದ ಸಭಾವಂದನೆಯಂಥ ಪೀಠಿಕೆ ಇತ್ತೋ ಇಲ್ಲವೋ (ಯಕ್ಷಬ. ೫೧). 'ಸಭಾಪೂಜೆ' ಪರಾ. [ಸಂ. ಸಭಾವಂದನಾ]

**ಸಭಾವಿಷ್ಟ** (ನಾ). ಸಭೆಯಲ್ಲಿ ಕುಳಿತಿರುವವನು : ಆರುರ್ವೀಚಕ್ರಮನಿಂತು ಕೊಟ್ಟರನುಜಂಗೆಂದಾ ಸಭಾವಿಷ್ಟರೋರೊರ್ವರ್ ಬಣ್ಣಿಸಿದರ್ (ಪಂರಾಮಾ. ೬-೧೩೩). [ಸಂ.]

**ಸಭಾಸದ** (ನಾ). = ಸಭಾವಿಷ್ಟ : ಅತಿಶಯಧವಳನ ಸಭಾಸದರ್ಮನ್ನಿಸುವರ್ (ಕವಿರಾ. ೧-೫); ಗೆಲವಿದೆಂತುಟೊ ತನ್ನ ಸೋಲಿದು ಬಳಿಕ ಸೋತರೆ ಧರ್ಮಗತಿಯನು ತಿಳಿದು ಹೇಳಲಿ ತತ್ಸಭಾಸದರೆಂದಳೆಂದುಮುಖಿ (ಕುವ್ಯಾಸ. ೧೪-೮೦); ಪುಷ್ಪಾಂಜಲಿಯಂ ಕೆದರ್ದು ಮೊದಲೊಳ್ಮೊಱಹಿಸಿ ಸಭಾಸದರಂಗರಂಗದೊಳಪಾಂಗಪ್ರಭೆ ನರ್ತಿಸುತ್ತಿರೆ (ರಾಜಶೇ. ೫-೧೯ ವ). [ಸಂ. ಸಭಾಸದ್]

**ಸಭಾಸದನ** (ನಾ). = ಸಭಾಗೃಹ ೧ : ಸಭಾಸದನದೊಳ್ ಪಿರಿದು ಪೊೞ್ತು ಪೋಗೆಯುಂ (ಶಾಂತಿಪು. ೧೨-೨೩ ವ); ನೃಪಾತ್ಮಜಂ . . . ಸಭಾಸದನಮಂ ಪೊಕ್ಕು (ಪುಷ್ಪಪು. ೪-೭೦ ವ). [ಸಂ.]

**ಸಭಾಸದ್ಮ** (ನಾ). = ಸಭಾಗೃಹ ೧ : ತನ್ನಂಗಿ ನಿನ್ನ ಸಭಾಸದ್ಮದೊಳೇಕೆ ದಳ್ಳಿಸಿದುದಿಲ್ಲುತ್ತಾನವಂಶಸ್ಯನಂ (ಮಲ್ಲಿಪು. ೪-೯). [ಸಂ.]

**ಸಭಾಸೂರ** (ನಾ). ಸಭೆಯಲ್ಲಿ ಮಾತ್ರ ಶೌರ್ಯ ತೋರಿಸುವವನು ; ಬರೀ ಬಡಾಯಿಕೊಚ್ಚುವವನು : ವನಿತಾನೀಕದ ಮುನ್ನೆ ಪೊಟ್ಟಳಿಸಿ . . . ಸಿಂಹಧ್ವನಿಯಿನ್ನೆ ಗರ್ಜಿಸಿಪ ಸಭಾಸೂರರ್ಬರಂಗೆಯ್ದುದಯಾದಿತ್ಯಂಗೆ ಬಯಲ್ಗೆವರ್ಪ್ಪರೊಳರೇ (ಎಕ. XI, ಚಿತ್ರದು. ೩೪-೨೦ ; 1123). [< ಸಂ. ಸಭಾಶೂರ]

**ಸಭಾಸ್ತಾರ** (ನಾ). ೧. ಸಭೆಯಲ್ಲಿ ಸಹಾಯಕನಾಗಿರುವವನು. ೨. (ಆಟದಲ್ಲಿ) ಸಹಭಾಗಿಯಾಗುವವನು : ನಾನು ಆ ರಾಜನಲ್ಲಿ ಸಭಾಸ್ತಾರನಾಗಿರೋಣವೆಂದು ಮಾಡಿದ್ದೇನೆ (ವಚಭಾ. ೧೮೪). [ಸಂ.]

**ಸಭಾಸ್ಥಳ** (ನಾ). ಸಭೆಯು ಸೇರುವ ಸ್ಥಳ : ಗಂಡಸಿಯ ಶ್ರೀಮದಶೇಷಮಹಾಜನಂಗಳು ಸಭಾಸ್ಥಳದಲ್ಲಿ ಕುಳಿತು (ಎಕ. V, ಅರಸೀ, ೧೫೮-೧೧ ; 1324). [ಸಂ. ಸಭಾಸ್ಥಲ]

**ಸಭಿಕ** (ನಾ). ೧. ಜೂಜಿನ ಮನೆಯ ವ್ಯವಸ್ಥಾಪಕ : "ಸಭಿಕಃ, ದ್ಯೂತಕಾರಕಃ – ಈ ೨ ಜೂಜುಗಾಱಿಂ" (ಹಲಾಯು. ೬೪-೨೭೪). ೨. = ಸಭಾವಿಷ್ಟ: ಸಪ್ತಋಷಿಗಳೇ ಇವನ ಸಭಿಕರು (ನೀತಿಚಿಂ. IV, ೮). [ಸಂ.]

**ಸಭಿಸು** (ಕ್ರಿ). ಗುಂಪಾಗು (?) : ಜಾವಜಾವಕೆ ಗಸ್ತಿ ಸಭಿಸಿ ತಿರುಗುವಂತೆ ರಾಯಕಟ್ಟಳೆಯ ಮಾಡಿಸಿದ (ಸೌಂದಕಾ. ೭-೧೭); ಬತ್ತೀಸಾಯುಧಗಳ ಪಿಡಿದು ಸಭಿಸಿ ಕಾಯಿವ ಮೊತ್ತಮೊತ್ತದಿ ಪಟುಭಟರು (ಸೌಂದಕಾ. ೭-೨೦). [ಸಭೆ? + - ಇಸು[3]]

**ಸಭೆ** (ನಾ). (ಒಂದು ಉದ್ದೇಶ ಅಥವಾ ಕಾರ್ಯಕ್ರಮಕ್ಕಾಗಿ ಕಲೆತ) ಜನಗಳ ಸಮುದಾಯ ,– ಸಮೂಹ ; ಪರಿಷತ್ತು ; ಗೋಷ್ಠಿ : ಕಳವಳಿಸಿ ಪಾತ್ರೆ ಪಾತ್ರೇಯೆಂದು ಕರೆವುತಂ ಇರೆ ಕಂಡು ಸಭೆ ನಡುಗಿ (ತಿರುರ. ದೇ. ೧೯-೭); ಕೆಲವು ಮುದುಕರು ಹೊರತು ಸಭೆಯಲ್ಲಿ ಇನ್ನಾರೂ ಇರಲಿಲ್ಲ (ರಾಯಕ. ೬೧). ೨. ಓಲಗ; ದರ್ಬಾರು : ಸಭೆಗೀಶಾನೇಂದ್ರನೊಂದಂದದಿನಱಿಯೆನೆನಲ್ ಬಣ್ಣಿಸಲ್ (ಶಾಂತಿಪು. ೯-೯೩) ; ಸಭೆಯೆಲ್ಲಂ ಪೊನ್ನ ನೀರಿಂದರೆಬಳಿದವೊಲಿರ್ದಪ್ಪುದು

(ಅನಂಪು. ೧೦-೩೭). ೩. ನ್ಯಾಯಾಸ್ಥಾನ ; ನ್ಯಾಯಾಲಯ. ೪. ಜೂಜಿನ ಮನೆ. ೫. [ಜೈನ] ಪರಿವ್ರಾಜ್ಯ ಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರ ಪದಗಳಲ್ಲಿ ಒಂದು : ಸಭೆಯೆಂಬುದು ಪರಮಸಂಪತ್ಪಮೇತನಪ್ಪ ಜಿನನಾಥನಂ ಪೊರ್ದಿ ನಿಜೇಷ್ಟಬಂಧುಭೃತ್ಯಸಭಾಸಮುತ್ಸರ್ಜನಂಗೆಯ್ದು ತಪದೊಳ್ ನೆಗೆಲ್ದೊಡೆ (ಚಾವುಂಪು. ೨೩೦). [ಸಂ. ಸಭಾ]

**ಸಭೆಗೊಡು** (ಕ್ರಿ). ಸಭೆಯನ್ನು ಏರ್ಪಡಿಸು ; ಓಲಗ ನೀಡು : ನಿಸ್ತಾರಕರ್ಕ ಳೋಳಿಯೆ ಸಭೆಗೊಟ್ಟೋರಂತೆ ನಾಲ್ವರಿರ್ದು (ಅಜಪು. ೧-೮೭). [ಸಭೆ + ಕೊಡು]

**ಸಭೆವೆರಸು** (ಕ್ರಿ). ಗುಂಪುಕೂಡಿಸು ; ಸಭೆಯನ್ನು ನಡೆಸು : ವಾರಣಾಸಿಯೊಳು ಗದಾಧರ ದೇಗುಲದೊತ್ತಿನಲಿ ಸಭೆವೆರಸಿ ಕುಳಿತು (ಬಸಪು. ೫೩-೫೪).
[ಸಭೆ + ಬೆರಸು (< ಬೆರೆಯಿಸು]

**ಸಭೆಸೇರಿಸು** (ಕ್ರಿ). ಗುಂಪುಕೂಡಿಸು ; ಸಭೆಯನ್ನು ಏರ್ಪಡಿಸು : ಆಗಾಗ್ಗೆ ಅವಳು ತನ್ನ ಮನೆಯಲ್ಲಿ ನಿಷ್ಠಾವಂತರಾದ ಭಕ್ತರನ್ನು ಸಭೆಸೇರಿಸುತ್ತಿದ್ದಳು (ಪುನರು. ೩೨೯).
[ಸಭೆ + ಸೇರಿಸು]

**ಸಭೇಂದುಮತಿ** (ನಾ). ನಕ್ಷತ್ರಸಹಿತವಾದ ಚಂದ್ರನಿಂದ ಕೂಡಿದುದು: ಕಲ್ಯಾಣಿಯರಾಗಳಾರತಿಯ ಪೊಂಬರಿಯಣಮನಾಂತು ನಿಂದು ಮೇಣ್ಕಾಣಿಸಿದ ಸ್ರಭೇಂದುಮತಿಸಂಚೆ ಬಹುತ್ವಮನಾಂತು ನಿಂದವೋಲ್ (ರಾಜಶೇ. ೮-೭೩). [ಸಂ.]

**ಸಭೇಂದ್ರ** (ನಾ). = ಸಭಾಪತಿ : ವರಕಾರುಣ್ಯಂ ಶರಣ್ಯಂ ಬುಧಜನ ಕುಮುದಾನಂದಚಂದ್ರಂ ಸಭೇಂದ್ರಂ (ಲಾಸ್ಯರಂ. ೧-೩೩). [ಸಂ.]

**ಸಭ್ಯ** (ಗು). ೧. ಶಿಷ್ಟತೆಯಿಂದ ಕೂಡಿದ ; ಸೌಜನ್ಯವುಳ್ಳ : ನೀವಾದರೂ ಸಭ್ಯ ಗೃಹಸ್ಥರು (ಪುನರು. ೨೦೬). (ನಾ). ೨. ಶಿಷ್ಟತೆ ; ಸೌಜನ್ಯ : ಇಲ್ಲಿ ಎಲ್ಲರ ಕೂಡಾನು ಬಹಳ ಸಭ್ಯವಾಗಿ ನಡೆದುಕೊಂಡಿದ್ದೀಯೆ (ವೀರಯೋ. ೩೫). ೩. ಸಭಿಕ; ಸಭಾಸದ : ಓಲಗಶಾಲೆಯಲ್ಲಿ ನೆರಹಿದನು ಸಭ್ಯರನಾಪ್ತಮಂತ್ರಿಗಳ (ಕುವ್ಯಾಉ. ೫-೧). ೪. ಸುಸಂಸ್ಕೃತವ್ಯಕ್ತಿ ; ಶಿಷ್ಟ ; ನಾಗರಿಕ : ಏನಾದರಾಗಲಿ ಜಗದೊಳು ಸಭ್ಯರು ಕೊಟ್ಟ ಮಾತನು ನಡಸುವರು (ಇಂಚಾಪ. ೧೨೩-೫); ತಾವು ಬಹಳ ದೊಡ್ಡಮನುಷ್ಯರು, ಸಭ್ಯರು ಎಂಬುದನ್ನು ಕೇಳಿ ತಿಳಿದಿದ್ದೇನೆ (ಮಹಾಗ. ೧೮೩). [ಸಂ.]

**ಸಭ್ಯತನ** (ನಾ). ಸೌಜನ್ಯತೆ ; ಸದಾಚಾರ : ಕೋರ್ಟಿನಲ್ಲಿಯೇ ಆದೀತು ಈ ನಿಮ್ಮ ಸಭ್ಯತನದ ಪ್ರದರ್ಶನ! (ಕಮನ. ೨೦೭). [ಸಭ್ಯ + - ತನ]

**ಸಭ್ಯತೆ** (ನಾ). ೧. ಶಿಷ್ಟಾಚಾರ; ಸನ್ನಡತೆ: ಸಭ್ಯತೆಗೆ ಹತ್ತಿದೆ ತೊನ್ನು (ಅರಳು. ೬೨೭-೨) ; ಹಣ್ಣನ್ನು ಕೊಯ್ಯದೆ ಇಡೀ ಹಣ್ಣನ್ನು ತಿನ್ನುವವರ ಮುಂದಿಡುತ್ತಿದ್ದುದು ಹಿಂದಿನ ಕಾಲದ ಹಳ್ಳಿಗರ ಸಭ್ಯತೆಯಾಗಿತ್ತು (ನನ್ನೂರು. ೧೫ ಪೀಠಿಕೆ). ೨. ನಾಗರಿಕತೆ: ನದಿಗಳ ಸಮಾಗಮವಾಗುವಲ್ಲಿ ಸುಮೇರಿಯನರ ಸಭ್ಯತೆಯು ತಲೆದೋರಿತು (ಬಾಲಪ್ರ. I, ೨೨೩) ; ಪಾಶ್ಚಾತ್ಯರ ಸಭ್ಯತೆಯು ನಮ್ಮನ್ನಾಕರ್ಷಿಸಿತು (ಜೀವಾತ್ಮ. VII, ಮುನ್ನುಡಿ).
[ಸಂ. ಸಭ್ಯತಾ]

**ಸಭ್ಯತ್ವ** (ನಾ). = ಸಭ್ಯತೆ ೧. [ಸಂ.]

**ಸಭ್ಯಸ್ತ** (ನಾ). ಸುಸಂಸ್ಕೃತ; ಶಿಷ್ಟ: ಅವನು ಸಭ್ಯಸ್ತನೆಂದು ಕೇಳಿದ್ದೇನೆ (ಪುನರು. ೨೦೯). [< ಸಂ. ಸಭ್ಯಸ್ಥ]

**ಸಭ್ಯಾಂಗಭಾಷಿತ** (ನಾ). ಸುಸಂಸ್ಕೃತವಾದ ಮಾತು : ಮುರಮಥನ ಚಿತ್ತೈಸಿದೈ ತರುವರಿಯ . . . ಸಭ್ಯಾಂಗಭಾಷಿತಭಾವನಿಷ್ಠುರವ (ಕುವ್ಯಾಕ. ೨೦-೨೮). [ಸಂ.]

**ಸಮ$_1$** 'ಚಮ್ಮ' ನೋ.

**ಸಮ$_2$** (ನಾ). ವರ್ಷ ; ಸಂವತ್ಸರ : ''ಹಾಯನಃ . . . ಸಂವತ್ಸರಃ, ಸಮಃ – ಈ ೬ ವರ್ಷಂ'' (ಹಲಾಯು. ೨೦-೧೦೭) ; ಭ್ರಮವಿದೂರನು ಹಲವು ಸಾವಿರ ಸಮಗಳನು ನೂಕಿದನು (ನಿಭಾಗ. ೯-೧೧-೩೯). [ಸಂ. ಸಮಾ]

**ಸಮ$_3$** (ಗು). ೧. ಮಟ್ಟಸವಾದ ; ಚಪ್ಪಟೆಯಾದ. ೨. ಸಮಾನವಾದ; ಓರಗೆಯ. ೩. ಸದೃಶವಾದ ; ಹೋಲುವ. ೪. ನಿಶ್ಚಲವಾದ; ತಟಸ್ಥವಾದ. ೫. ನಿಷ್ಪಕ್ಷಪಾತವಾದ. ೬. ನೇರವಾದ ; ಸರಿಯಾದ. ೭. ಸದಾಚಾರ ಸಂಪನ್ನವಾದ ; ಸುಸಂಸ್ಕೃತವಾದ. ೮. ಎಲ್ಲರಿಗೂ ಇರುವ ; ಸಾರ್ವತ್ರಿಕವಾದ. ೯. ಸಂಪೂರ್ಣವಾದ ; ಸಮಸ್ತ. (ನಾ). ೧೦. ಸರಿಸಮಾನವಾದುದು; ಸದೃಶವಾದುದು : ಎನ್ನ ಕೊಟ್ಟುದನೆ ಕೊಂಡು ಮನೋಮುದದಿಂದೆ ಬಾಳ್ಬುದಂತ ವರಿವರೆಲ್ಲರುಂ ಸಮಂ (ಪಂಪಭಾ. ೪-೭); ತೊಟ್ಟಿನ ಬಳಿಯೊಳು ಬದನೆಯ ಹಸಿಯ ಕಾಯ್ಗಳಂ ಬೊಟ್ಟಿನ ಸಮದೊಳು ಛಿದ್ರಿಸಿ ತೋಡಿ (ಸೂಪಶಾ. ೪-೧೯). ೧೧. ಆರಾಮ; ಕ್ಷೇಮ : ಅದೊಂದು ಪರಿ ಗಂಟಲಂ ಮುಚಿದರಿಷ್ಟನಂ ಕೊಂದಗುರ್ವದೊಂದು ಪರಿ ಕೇಶಿಯಂ ಸಮದೆ ಸೀಳ್ದು ಕೊಂದಂದವೆಂದದೇಂ . . . ನಕ್ಕನಾ ನಾರದಂ (ಜಗವಿ. ೫-೪೭); 'ಏನಾಗಿದೆ ಮಗಾ, ಒಂದು ಥರಾ ಇದ್ದೀ' ಎಂದು ಕೇಳಿದ್ದಕ್ಕೆ – ಏನಾಗಿಲ್ಲವಮ್ಮ ಸಮ ಇದ್ದೇನೆ' ಎಂದ (ಹೊಸಕ್ಕ. ೬೨). ೧೨. [ಗಣಿತ] ಒಂದು ಸಂಖ್ಯೆ ; ಎರಡು: ''ಸಮ, ಉಭಯಂ . . . ಎರಡಱ ನಾಮಂ'' (ವ್ಯವಹಾ. ೯-೨). ೧೩. ಎರಡರಿಂದ ಭಾಗಿಸಲ್ಪಡಬಹುದಾದ ಸಂಖ್ಯೆ ; ಬೆಸವಲ್ಲದ ಸಂಖ್ಯೆ : ಆದಿ ಅನಾದಿ ಸಮ ವಿಷಮಗ್ರಹವಱಿತು (ದಶಾವ. ೨-೧೦ ವ). ೧೪. [ಕಾವ್ಯಮೀ]ಒಂದು ಕಾವ್ಯಾಲಂಕಾರದ ಹೆಸರು ; ಅನುರೂಪಪದಾರ್ಥಗಳ ಘಟನೆಯ ವರ್ಣನೆ ಹಾಗೂ ಕಾರ್ಯಕಾರಣಗಳಿಗೆ ಸಮಾನಗುಣವಿರುವ ವರ್ಣನೆ ಇರುವ ಅಲಂಕಾರ : 'ಸಮಾಲಂಕಾರ' ಪರಾ. ೧೫. ದಕ್ಷಿಣಮಾರ್ಗದ ಕಾವ್ಯದ ಹತ್ತುಗುಣಗಳಲ್ಲಿ ಒಂದು : ಸಮ ಮಧುರ ನಿಬಿಡ . . . ಗ್ರಾಮ್ಯೋಜಸ್ಕಿ ಕ್ರಮದಿಂ ದಶಭೇದಮಲ್ಲಿ ದಕ್ಷಿಣಮಾರ್ಗಂ (ಕವಿರಾ. ೨-೫೪); ಆ ವಿಷಮವಲ್ಲದುದು ಸಮಮಾ ವನದೊಳ್ ಮಲಯಪವನನಂದಿತಾವಗಂ ಅಗ್ರಾಮ್ಯತೆಯೊಳ್ ತೀವಿದ ನುಡಿ (ಉದಯಾ. ೪-೧೬). ೧೬. [ಛಂದ] ಸಮ, ಅರ್ಧಸಮ ಮತ್ತು ವಿಷಮವೆಂಬ ಮೂರು ಬಗೆಯ ವೃತ್ತಗಳಲ್ಲಿ ಒಂದು ; ನಾಲ್ಕುಪಾದಗಳಲ್ಲೂ ಸಮಾನವಾದ ವರ್ಣಗಳುಳ್ಳ ವೃತ್ತ : ಅಲ್ಲಿ ಸಮಂ ಅರ್ಧಸಮಂ ವಿಷಮಮೆಂದು ವೃತ್ತಂ ಮೂಱು ತೆಱನಕ್ಕುಂ (ಛಂದೋಂಬು. ೧-೪೬ ವ) ; ವರ್ಣವೃತ್ತವು ಸಮ, ಅರ್ಧಸಮ, ವಿಷಮ ಎಂದು ಸಾಮಾನ್ಯವಾಗಿ ಮೂರು ವಿಧವು (ಕೃಪಿಡಿ. ೭೮). ೧೭.. [ನಾಟ್ಯ] ನೃತ್ಯದಲ್ಲಿ ಕೊರಳಿನ ಒಂದು ಭಂಗಿ ; ಕೊಂಕಿಲ್ಲದೆ ನೀಟಾಗಿರುವ ಕೊರಳ ಭಂಗಿ : ಸಮ, ನಿವೃತ್ತ . . . ಉನ್ನತ – ಈ ಒಂಬತ್ತು ಕೊರಲ ಭೇದಂಗಳ್ (ಲಾಸ್ಯರಂ. ೨-೧೧೪ ವ). ೧೭. ನೃತ್ಯದಲ್ಲಿ ಮಲಗಿರುವ ಭಂಗಿ : ಸಮ . . . ನತ, ಈ ಆಱು ಮಲಗಿರ್ದ ಸ್ಥಾನಕಂಗಳ್ (ಲಾಸ್ಯರಂ. ೭-೧೨ ವ). ೧೮. ನೃತ್ಯದಲ್ಲಿ ಕಣ್ಣಿನ ಆಲಿಗಳ ಚಲನೆಯ ಒಂದು ಬಗೆ : ಕಣ್ಣು ಆಲಿಗಳ ಎಂಟು ಚಲನೆಗಳಿವೆ. ಅವು ಯಾವುವೆಂದರೆ – ೧. ಸಮ, ೨. ಸಾಚಿ . . . ೮. ಅವಲೋಕಿತ (ಆಭಾನ್ಯ. ೪೭).

ಸಮಸಮ (ದ್ವಿರುಕ್ತಿ) : ೧. ಎಲ್ಲಾರೀತಿಯಲ್ಲೂ ಸಮಾನವಾಗಿರುವುದು; ಸರಿಸಮವಾದುದು : ಸಮಸಮನಾಗಿ ಒಂಟಿಕಾಳಗಕ್ಕೆ ನಿಂತರೆ ಅವನನ್ನು ಯಾರು ಗೆಲ್ಲಬಲ್ಲರು? (ವಚಭಾ. ೩೭೨). ೨. ಹತ್ತಿರ ; ಸಮೀಪ : ಅವರೆಲ್ಲಾ . . . ಅರ್ಕಾಳಬೆಟ್ಟನ ಸಮಸಮಕ್ಕೆ ಈಗ ಮುಟ್ಟಿರಬಹುದು (ಹೊಸಕ್ಕ. ೧೯). ೩. ಸರಿಸಮನಾದ ವ್ಯಕ್ತಿ : ಮದುವೆಯೊಳ್ ಸಮಸಮರ ಕೂಟಮೇ ಒಳ್ಳಿತ್ತು (ಬದ್ಧಪ್ರ. ೪೬-೧೦೦೭).

**ಸಕ್ಕಸಮಂ** = ಸಮಸಮನಾಗಿ; ಸರಿಸಮಾನವಾಗಿ : ಸಕ್ಕದಮುಂ ಕನ್ನಡಮುಂ ಸಕ್ಕಸಮಂ ಕೇಳ್ದೊಡೆನಿಸಿ ಪೇಳ್ದುದು ಕೃತಿಯಂ (ಲೀಲಾವ. ೧-೬೩) ; ಘೋರದಾನವನ ತನು ಬಿರಿವುತಿರೆ ಖುರದಿಂ ಪ್ರಹಾರಿಸಲ್ ಸೀಳ್ದುದದು ಸಕ್ಕಸಮಮಾಗಿ (ಚಿಬಪು. ೪೪-೨೫).

**ಸಕ್ಕಸವನೆ, ಸಕ್ಕಸವನೆ** = ಸಕ್ಕಸಮಂ: ಸಿಕ್ಕಿವೊಂದೊಂದಕ್ಕೆ ತಾನಿವು ತಕ್ಕವೆಂದೊರೆದೊಂದಜೊಂದಜೊಳುಕ್ಕಿ ಸಕ್ಕಸಮನೆಯೆನಿಸಿ ಕೊನೆ ಕೊನರಿ ತವೆ ಬೆರಸಿ (ಬಸಪು. ೧೮-೮೩) ; ನೇತ್ರಕ್ಕಂ ಸೂತ್ರಕ್ಕಂ ಸಕ್ಕಸವನೆಯಾಗಿ (ಜಯಕಾ. ೩-೫). [ಸಂ.]

**ಸಮಂಗಾಣ್** (ಕ್ರಿ). ಸಮಾನವಾಗಿ ಕಾಣು ; ಒಂದೇ ರೀತಿಯಲ್ಲಿ ನೋಡು : ಪಶು ಮೃಗಪಕ್ಷಿ ಸರೀಸೃಪಂಗಳುಮಂ ಸಮಂಗಾಣ್ಬ ಧರ್ಮಂ (ಚಾವುಂಪು. ೭).
[ಸಮ$_3$ + ಕಾಣ್]

**ಸಮಂಚಿತ** (ಗು). ೧. ಕೂಡಿದ ; ಸೇರಿದ : ಉಱಿಯಲೆನಸುಂ ಲಜ್ಜಾಭಾರಂ ಸಮಂಚಿತ ಸಾಧ್ವಸಂ ಕಱಿಯಲ್ . . . ಮೇಲ್ವಾಯ್ದು ತಳ್ತಿರದಪ್ಪಿದಳ್ (ಕಾದಂಉ. ೭೮೬); ಪಳಂಚುವ ಸಮಂಚಿತ ಭ್ರೂಲತೆ ತಳ್ತೆಮೆದುಱುಗಲ ನೆಳಲೊಳ್ಮುಖಕಮಳ ಮಯೂಖಾಂಬುವೀಚಿ ಚಲಿಪವೊಲೆಸಗುಂ (ರಾಜಶೇ. ೧೨-೭೭). ೨. ಬಹುವಾಗಿ

ಗೌರವಿಸಲ್ಪಟ್ಟ : ಪಾಶಮೋಚನನಂ ಕೃಪಾಮಯ ಕಾಶಲೋಚನನಂ ಸಮಂಚಿತ ಪಾಶುಪತಸುವ್ರತನಿರತನಂ ಪುಣ್ಯಚರಿತನನು (ಬಸಪು. ೪೬-೭೨). (ನಾ). ೩. ಬಹಳವಾಗಿ ಗೌರವಿಸಲ್ಪಡುವವನು : ಪಂಚಜನಶಮನಾಂತಕನು ಸರ್ಪಭೂಷಣಸಮಂಚಿತನು ದಿವ್ಯಗಂಧಾನುಲೇಪನು ಕುಸುಮಸಂಛನ್ನದಿವ್ಯದೇಹನು (ಚತುಪು. ೧-೨-೪೩). [ಸಂ.]

**ಸಮಂಜಸ** (ಗು). ೧. ಸರಿಯಾದ; ಸೂಕ್ತವಾದ: ಸಮಂಜಸವಾದ ಉತ್ತರ ಹೇಳುವ ಹತ್ತಾರು ಪ್ರಯತ್ನಗಳು ನಡೆದಿವೆ (ದ್ರಾವಿವಿ. ೨೧). ೨. ನ್ಯಾಯವಾದ ; ಪ್ರಾಮಾಣಿಕವಾದ. ೩. ನಿಜವಾದ ; ಸತ್ಯವಾದ : ಒಂದು ಸಮಂಜಸ ಮಾತು ಹೇಳಬೇಕೆಂದು ಬಹಳ ಹವಣಿಸಿದಳು (ಇಪ್ಪಕ. ೨೭೭). ೪. ಸದ್ಗುಣೆಯಾದ ; ಸಭ್ಯವಾದ. ೫. ಆಚರಣೆಯಲ್ಲಿ ತಂದ ; ಪ್ರಯೋಗಿಸಿದ. ೬. ಅನುಭವಿಸಿದ; ಕಂಡುಕೊಂಡ: ನಾನು ಎಲ್ಲಿದ್ದರು ನಿನ್ನ ಸಮಂಜಸ ಸ್ವಭಾವವನ್ನೇ ಮಾರ್ಗದರ್ಶಿಯಾಗಿ ತಿಳಿದು ದಾಸನಂತೆ ಅನುಸರಿಸುವೆ (ಜಯಂತ. ೧೧೭). (ನಾ). ೭. ಯೋಗ್ಯವಾದುದು; ಸಮರ್ಪಕವಾದುದು: ಸನಾತನತತ್ವ ಇಂತಹ ಕಾಲದಲ್ಲಿ ಇಂತಹವರಿದಲೇ ಹೊರಪಟ್ಟಿತೆಂದು ಹೇಳುವುದು ಸಮಂಜಸವಲ್ಲ (ಶಕ್ತಿವಿ. ೭೮). ೮. ಯೋಗ್ಯವ್ಯಕ್ತಿ; ಸಭ್ಯ : ಸಂಜೀವಕಂ ಸಾಧುಸಮಂಜಸನಂ ಮಾಡಿ (ಪಂಚತಂ. ೧೨೨-೯); ಆ ಸುಯೋಧನ ನಿನ್ನ ಮಗನಲ್ಲೀ ಸಮಂಜಸ ಧರ್ಮಜನ ಹಿಡಿದೀಸುವುದು ಭವಜಲಧಿಯನೆಂದ ಮಳಮುನಿ ನುಡಿದ (ಕುವ್ಯಾಗ. ೧೧-೩೩). ೯. ಶಿವನ ಹೆಸರು : ನಿಸ್ಸೀಮ ಮೃತ್ಯುಂಜಯ ಸಮಂಜಸ ಸರ್ವತೋಭದ್ರ . . . ಕರುಣಿಸುವುದು (ಕುವ್ಯಾಅ. ೬-೯೦). [ಸಂ.]

**ಸಮಂಜಸತನ** (ನಾ). ಔಚಿತ್ಯತೆ; ಸೂಕ್ತತೆ: ಇದರ ಆಲೋಚನೆಯನ್ನು ಸಮಾಧಾನದಿಂದಲೂ ಸಮಂಜಸತನದಿಂದಲೂ . . . ನಾವು ಮಾಡಬೇಕಾಗಿದೆ (ಪ್ರಬಂಧ. ೧೯). [ಸಮಂಜಸ + - ತನ]

**ಸಮಂಜಸತ್ವ** (ನಾ). = ಸಮಂಜಸತನ : ಸಮಂಜಸತ್ವಮೆಂಬುದು ಪ್ರಜಾಪಾಲನದೊಳ್ ಸಮದರ್ಶನವಾಗಿ ನೆಗಟ್ಟುದು (ಚಾವುಂಪು. ೨೨೦). [ಸಂ.]

**ಸಮಂಜಸಿಕೆ** (ನಾ). = ಸಮಂಜಸತನ : ಕರಂ ಸಮಂಜಸಿಕೆಯನೆ ಪಾಟಿಪಂ (ಮದತಿ. ೧೦-೩೬); ಕಡುದೂರ್ತಿನಿಂ ಪಲವು ಟಕ್ಕುಗಳಿಂ ಸಮೆದನ್ನಮಂ ಸಮಂಜಸಿಕೆಯನೊಕ್ಕು ಬೇಗಮೆನಗಿಕ್ಕಿ (ಧರ್ಮಾಮೃ. ೧೧-೧೩೧). [ಸಮಂಜಸ + - ಇಕೆ]

**ಸಮಂತ** (ಗು). ೧. ಎಲ್ಲ ಕಡೆಯಲ್ಲೂ ಇರುವ. ೨. ಸಂಪೂರ್ಣವಾದ; ಸಮಗ್ರ. (ನಾ). ೩. ಸೀಮೆ ; ಎಲ್ಲೆ. [ಸಂ.]

**ಸಮಂತದುಗ್ಧೆ** (ನಾ). ಒಂದು ಬಗೆಯ ಸಸ್ಯ ; ಮುಂಡುಗಳ್ಳಿ: "ಸಿಂಹುಂಡಃ, ವಜ್ರದ್ರುಃ, ಸುಕ್, ಸ್ನುಹೀ, ಗುಡಾ, ಸಮಂತದುಗ್ಧಾ - ೬ ಕಳ್ಳಿ ಹೆಸರುಗಳು, ಬೊಂತೇಕಳ್ಳಿ" (ಸಿದ್ಧಾಂತಿ. ೧೩೬). [ಸಂ. ಸಮಂತದುಗ್ಧಾ]

**ಸಮಂತಾಗಿಸು** (ಕ್ರಿ). ಚೆಲುವುಗೊಳಿಸು ; ಸುಂದರವಾಗಿಸು : ಮಲ್ಲಿಗೆ ಮಾವು ತೆಂಬೆರಲ್ ಕೋಗಿಲೆ . . . ಸುಗ್ಗಿಯೆನಿಪ್ಪವೆಲ್ಲಮೊಂದಾಗಿಯೆ ದರ್ಪಕಂಗೆ ಸಮನಿಪ್ಪ ಜಗಜ್ಜಯದರ್ಪಮಂ ಸಮಂತಾಗಿಸಲೊಂದೆ ಸಾಲ್ಗುಂ (ಚಂದ್ರಪ್ರ. ೬-೬೩). [ಸಮಂತು₁ + ಆಗಿಸು]

**ಸಮಂತಿಡು** (ಕ್ರಿ). ಓರಣವಾಗಿಡು ; ಚೆನ್ನಾಗಿ ಇರಿಸು ; ಸಂಬಳಿಗೋಲ ಸೂರೊಳ್ ಸಮಂತಿಟ್ಟು (ಪಾಸೋಪು. ೭-೨೧). [ಸಮಂತು₂ + ಇಡು₁]

**ಸಮಂತು₁** (ನಾ). ೧. ಸೊಬಗು; ಅಂದ: ತಾನೀ ವಿಮಾನಂ ಸಮಂತಿದು ಬೃಂದಾರಕಬೃಂದಮಂಗಜಪತಾಕಾನೀಕದಂತೊಪ್ಪಿ ತೋರ್ಪುದುಂ (ಸುಕುಮಾ. ೯-೨೪). ೨. ಓರಣ; ಅಚ್ಚುಕಟ್ಟು: ಈಶಾಜ್ಞೆಯಂ ಬಲ್ಲನಾರ್ಮುಂದೆ ಸಮಂತಂತಾಗೆ ತೋರ್ಪೆಂ ವಿಪುಲ ಮಹಿಮೆಯಂ ಮುಕ್ತಿಯಂ ಸೂಱೆಗೊಂಬೆಂ (ರಾಜಶೇ. ೧೩-೨೫).

**ಸಮಂತು₂** (ಅ). ೧. ಚೆನ್ನಾಗಿ ; ಸೊಗಸಾಗಿ : ಇದಱೊಳ್ ಮೂರ್ಧಾಭಿಷೇಕಂ ತನಗೆ ಗಡ ಸಮಂತಾಯ್ತು (ಪಂಪಭಾ. ೧೩-೯೮); ಆರೊಡನೆ ಸಮಂತಾರೋಗಿಪೆಂ (ಗದಾಯು. ೫-೩೦) ; ತೆಂಕಣಲಂಕೆ ಸಮಂತು ಮೇರೆಯಾಗಿರೆ ಬನವಸೆನಾಡನೊಸೆದಾಳ್ದು (ಎಕ. VII(S), ಶಿಕಾರಿ. ೩೩೪-೧೪; ಸು.1100); ತನುವೊಳ್ ದಾರ್ಢ್ಯಂ ಸಮಂತೊಪ್ಪುವಾ ಪೂರ್ವಾರ್ಜಿತಪುಣ್ಯವ್ಯೆ (ಸೋಮೇಶ. ೩೬); ವ್ರತವ . . . ಉದ್ಯಾಪಿಸಿದೆ ನೀ ಸಮಂತು (ಗಿರಿವಿಂ. ೫೭-೨೦). ೨. ಹಾಗೆ ; ಅಂತೆ : ಬಂದರ್ತಿಯಿಂ ಸೇಸೆಗೊಣ್ಬು ಬಲಂಗೊಣ್ಬು ಸಮನ್ತು ಪೋದನೆಸವೀ ಗ್ರಾಮಾಧಿಪಂ (ಸೌಇಇ.XI-i, ೫೨-೬೫; 1077); ಅತಿಪೀಡನದಿಂ ರೇಫಾಶ್ರಿತಮಾದ ಱಕಾರಮುಂ ಸಮಂತು ಡಕಾರಾಶ್ರಿತಮಾದ ೞಟನುಂ . . . ವರ್ಣಾವೃತ್ತಿಗೆ ಸಲ್ಲುವು (ಶಮದ. ೧೮); ರಾಘವನ ಶಾಸನಂ ನಾಡಂ ಸಮಂತು ಕಾಡಂ ಕೊಱತಿಲ್ಲದಾಳ್ಗುಮಲ್ತೆ (ರಾಮಾಶ್ವ. ೩೭-೧೬). [< ಸಮಂತು₁]

**ಸಮಂದರ್** (ಕ್ರಿ). ಸರಿದೂಗಿಸು; ಸಮನಾಗಿಸು: ನಿಟಿಲಂ ಲಲಾಮದಿಂ ನಿಟಿಲದಿವಾ ಲಲಾಮಮುಮಲಂಕರಿಸಿರ್ದುವೆನುತ್ತೆ ನೋಡಿದರ್ ಘಟಕುಚೆಯರ್ ಸಮಂದರುತುಮಾಕೆಯ ಭೂಷ್ಯವಿಭೂಷಣಂಗಳಂ (ಚಂದ್ರಪ್ರ. ೬-೬೭). [ಸಮ್₃ + ತರ್]

**ಸಮಂನುಡಿ** (ಕ್ರಿ). ಸರಿಯಾಗಿ ಹೇಳು: ಸಮಂನುಡಿವೊಡವಂ ಪಿಡಿಯಂ (ಶಮದ. ೨೫೦ ಪ್ರಯೋ). [ಸಮ್₃ + ನುಡಿ₁]

**ಸಮಂಬಡೆ** (ಕ್ರಿ). ಹೋಲಿಕೆಯನ್ನು ಹೊಂದು; ಸಾದೃಶ್ಯವನ್ನು ಪಡೆ: ಚಕಿತತರಂಗ ಸಂಘಹತಿಯಿಂ ಪೊಱಪೊಣ್ಮುವ ಮುತ್ತು ದಿಗ್ವಧೂನಿಕರದ ತೊಟ್ಟ ಮುತ್ತಿನೊಳೊಡಂಬಡೆ ಸೂಸುವ ಶೀಕರಾಳಿ ತಾರಕಗಣದೊಳ್ ಸಮಂಬಡೆಯೆ (ಜಗವಿ. ೧-೪೪). [ಸಮ್₃ + ಪಡೆ₁]

**ಸಮಕಕ್ಷ** (ಗು). ೧. ಸರಿಸಮನಾದ; ಸಮತೂಕವಾದ. (ನಾ). ೨. ಸರಿಸಮ; ಸಮಾನ : ಮಸುಳೆ ನಿಜಾನ್ವಯಮಹಿಮೋನ್ನತಿ ನಾಟ್ಕಡೆವೋಗೆ ಪಾಟಿಯುಂ ಪಸುಗೆಯುಮೆನ್ನ ಮನ್ನಣೆಯನಿಂದಗಿಯೊಳ್ ಸಮಕಕ್ಷಮಾಗೆ[ಪಾಠಾಂ. ಸಮಕಕ್ಷ್ಯನಾಗೆ] ರಕ್ಷಿಸಿದುದನೇನುಮಂ ಬಗೆಗೆ ತಾರದೆ ಲಜ್ಜೆಯನೊಕ್ಕುಬಿಟ್ಟು (ಪಂರಾಮಾ. ೧೧-೧೩೬). ೩. [ಕಾವ್ಯಮೀ] ಸ್ವತಂತ್ರವಾಗಿರುವ ಎರಡು ಅಲಂಕಾರಗಳ ಸಂಯೋಗ : ಯೋಗಂ ಪಲವುಮಲಂಕೃತಿಗಾಗಿರೆ ಸಂಶ್ಲೇಷಮೆಂಬುದನ್ವರ್ಥಗತಂ ಯೋಗಮುಮಂಗಾಂಗಿ ಪ್ರವಿಭಾಗಂ ಸಮಕಕ್ಷಮೆಂದರಟ್ಟೆಱನಕ್ಕುಂ (ಕಾವ್ಯಾವ. ೭೭೦); ತೇಜಂ ಪ್ರತಾಪಮುಮಂ ಮಿಕ್ಕುದೆಂಬುದು ಕೀರ್ತಿಚಂದ್ರಿಕೆ ವಿಲಾಸಂಬೆತ್ತುದೆಂಬುದು ಸಮಕಕ್ಷಂ (ಉದಯಾ. ೧೫). [ಸಂ.]

**ಸಮಕಟ್ಟು₁, ಸವಕಟ್ಟು** (ಕ್ರಿ). ೧. ಏರ್ಪಡಿಸು ; ಸಿದ್ಧಗೊಳಿಸು : "ಸಮಕಟ್ಟು - ವಿಧಾನೇ" (ಶಮಧಾ. ನ); ವಾರಣಾವತಮನೊಂದೇ ದಿವಸದೊಳೆಯ್ದುವಂತಾಗೆ ರಥಮಂ ಸಮಕಟ್ಟಿ ನಾಲ್ಕುಲಕ್ಷಬಲಮಂ ನೆರಂಬೇಟ್ಟು ಕಳಿಪಿದನಾಗಳ್ (ಪಂಪಭಾ. ೨-೯೨ ವ); ಅರಸನೊಡನೆ ಪೋಗಲ್ವೇಟ್ಕೆನಗಿಂಧನಸಂದೋಹಮಂ ಸಮಕಟ್ಟಿಮೆಂಬುದುಂ ಸಚಿವರ್ ಸನ್ಮಾನಿಸಿ (ದಶಕು. ೨-೩೪ ವ); ಬಸಂತಂ ಪೊಲ್ದು ಸಮಕಟ್ಟಿದ ಮಲಂಗೆಂಬಂತಿರಡಿವಿಡಿದು ಮುಡಿವರೆಗಂ ಬಲ್ಪಣ್ಣಳಿಂ ತುಱುಗಿ ತೋರ್ಪ ಬಕ್ಕೆವಲಸಿಂ (ರಾಮಾಶ್ವ. ೫೩-೬). ೨. ಸಿದ್ಧವಾಗು ; ಅಣಿಯಾಗು : ನಿನ್ನ ರಾಜ್ಯಕ್ಕಾಸೆವಟ್ಟು ನಿನ್ನಂ ಕೊಂದಪನೆಂದು ಸಮಕಟ್ಟುತ್ತಿರ್ದಪನ್ (ಪಂಚತಂ. ೯೨-೧೪). ೩. ನಿಶ್ಚಯಿಸು; ನಿರ್ಧರಿಸು : ಅನಿಬರುಮೊಂದಾಗಿ ಭೀಷ್ಮರೊಳ್ ಕಾದುವಮೆಂದು ಸಮಕಟ್ಟಿ ಧರ್ಮಪುತ್ರಂ ಕದನತ್ರಿಣೇತ್ರನ ಮುಂದಿಟ್ಟು (ಪಂಪಭಾ. ೧೧-೩೬ ವ); ಪಱಕಾಱಗ್ಗಂ ಪಾತ್ರಕ್ಕಂ ದೇಸಿಗ ಛಾತ್ರ ಭೋಜನಕ್ಕಮೆಂದು ಸಮಕಟ್ಟಿ ತ್ರಿಕಾಳಭೋಗಂ ನಡೆವಂತಾಗಿ . . . ಕುಡೆ (ಸೌಇಇ. IX-i, ೮೦-೧೬; 1018); ಪುಳಿಂದಬಲಂ ಬೇಂಟೆಗೆಂದೊರ್ಬುಳಿಗೊಂಡು ಮರ್ಬು ಮಸಗಿದಂತೆ ಸಡಗರಿಸಿ ಸಮಕಟ್ಟಿ (ಗಿರಿಕ. ೧-೭೮ ವ). ೪. ನೇಮಿಸು; ವಿಧಿಸು: ಮಂತ್ರಿ ಕಜ್ಜಮಂ ಸಮಕಟ್ಟಿ (ವಡ್ಡಾರಾ. ೧೭೭-೧೬); ಬಿದಿ ಸಮಕಟ್ಟಿ ಕೊಟ್ಟೊಡೆಡೆಯೊಳ್ ಕಿಡಿಸಲ್ ಕುಡಿಸಲ್ ಸಮರ್ಥರಾರ್ (ಪಂಪಭಾ. ೧೨-೧೮೨); ನಮಗೆ ಶಿವಂ ಸಮಕಟ್ಟಿದ ಪಡಿವೊನ್ನಳಂ ಕುಡದ ದೇವಾಲಯಂಗಳಿಲ್ಲಿಯುಂಟು (ನಂಬಿರ. ೧೨-೬). ೫. ರಚಿಸು ; ನಿರ್ಮಿಸು ; ತಯಾರಿಸು : ಮಸೆಯಿಪ ಶಸ್ತ್ರಕೋಟಿ ಸಮಕಟ್ಟುವ ಸನ್ನಣಂ . . . ಎಸೆವುಗ್ರರಣಾನಕರೌದ್ರಘೋಷಮೇರ್ವಸನಮನುಂಟು ಮಾಡಿದುದು ಪಂದೆಗಮಂದಿನ ವೀರಗೋಷ್ಠಿಯೊಳ್ (ಆದಿಪು. ೧೪-೯೦); ನವತಾರಕಾ ಸಮುದ್ಗಮಮನಲರ್ಚಿ ತಮ್ಮ ನಯನಪ್ರಭೆಯಿಂ ಸಮಕಟ್ಟಿ ರುಕ್ಮಿಣೀರಮಣನ ಕೋಮಳಾಂಘ್ರಿಯುಗಳಕ್ಕೆ ನಿವೇದಿಸುವಂದದಿಂ . . . ಪೊಚ್ಚ ಪೊಸಮಾಲೆಯ ನೆತ್ತುವರಲ್ಲಿ ಬಾಲೆಯರ್ (ದಶಕು. ೧೪-೧೬); ಮನಂಬಂದ ಪದಾರ್ಥಮಂ ಮಿಗೆ ವಿದರ್ಭನೃಪಂ ಸಮಕಟ್ಟಿ ಕಲ್ಪಭೂಜಂ ದೊರೆಯೆಂಬಿನಂ . . . ಮೆಱೆದಂ ನಿರಂತರಂ (ನಳಚಂ. ೨೪೧). ೬. ಆಲೋಚಿಸು; ಚಿಂತಿಸು: ಜನಾರ್ದನನೊಡನೆ

ರಿಪುಬಳಮರ್ದನೋಪಾಯಮಂ ಸಮಕಟ್ಟುತಿರ್ಪನ್ನೆಗಂ (ಪಂಪಭಾ. ೧೧-೫೪ ವ); **ಸವಕಟ್ಟು** : ೧. ಮರುತ ಮಿತ್ರಕಾರ್ಯದ ಪರಿಕರಂಗಳಂ ಸವಕಟ್ಟುತಿರಲು ಭೂಪತಿ ಕಂಡನು (ಹಚಕಾ. ೫-೫೪). [ಸಮ್ಮು$_3$ + ಕಟ್ಟು$_1$]

**ಸಮಕಟ್ಟು$_2$** (ನಾ). ೧. ಏರ್ಪಾಡು ; ಸಿದ್ಧತೆ : ಸಮಸ್ತಬಲಂಬೆರಸು ಕಾದುವ ಸಮಕಟ್ಟಂ ದುರ್ಯೋಧನನಱಿದು (ಪಂಪಭಾ. ೧೧-೩೬ ವ); ತನ್ನನೆಂತುಂ ಕೊಂದು ಪೋದಪೆಂ ಸಮಕಟ್ಟಿನೊಳಿರ್ಪುದೆಂದು ಪೇೞ್ದು ಬನ್ನಿಂ (ಜೀವಸಂ. ೨೨೭-೧೦); ಗುಡಿಗೂಡಾರ . . . ಮಂಚಗಳ ಗಡಣವೆಯ್ದಿತು ರಾಯನ ನಿಯಮದೊಳಂದು ತಡೆವೇಂಟೆಯ ಸಮಕಟ್ಟು (ಕುರಾಸಾಂ. ೨೭-೪೬). ೨. ಔಚಿತ್ಯ ; ಯುಕ್ತತೆ: ಭಿನ್ನರಸಂಗಳ ಸಮಕಟ್ಟು ನ್ನೆಟ್ಟನೆ ಮೆಱೆಗುಮಱಿಯೆ ಶಾಂತಿಪುರಾಣಂ (ಶಾಂತಿಪು. ೧೨-೭೮). ೩. ನಿರ್ಣಯ; ನಿರ್ಧಾರ: ಪಗಲೆರ್ದೆಗೊಂಡ ತನ್ನ ಸಮಕಟ್ಟನಿರುಳ್ ಮಱೆದಂತೆಗೆಯ್ದು (ಶಾಂತಿಪು. ೮-೯೨); ದಂಡಾಧಿಪಂ ಕೋಂಟೆಯಂ ಬಲಿದು ಕಾದುವ ಸಮಕಟ್ಟಿಂದಿರ್ಪುದುಂ (ಧರ್ಮಾಮೃ. ೪-೨೪೦); ವಿವಾಹಕಲ್ಯಾಣಮನಲ್ಲಿಯೆ ಮಾಳ್ಪ ಸಮಕಟ್ಟಿಂದಟ್ಟಿದಂ (ವರ್ಧಪು. ೬-೫೭ ವ). ೪. ಹೋಲಿಕೆ ; ಸಾದೃಶ್ಯ: ಸಮಕಟ್ಟಿಂಗೊರೆಗಾರುಮಿಲ್ಲರಿಗ ಕೇಳ್ (ಪಂಪಭಾ. ೫-೭೬) ; ನಿನಗೂ ಅರ್ಜುನನಿಗೂ ಯಾವ ಸಮಕಟ್ಟು? (ಭಾಮಣಿ. ೮). ೫. ವಿಧಾನ ; ಕ್ರಮ ; ನಿಯಮ: ಭಯದೂರರನೀ ನೃಪರಂ ಸ್ವಯಂವರಕ್ಕಾರೋ ಕರೆದರಾ ಸಮಕಟ್ಟಾ ಬಿಯವ ವಿಭೂತಿಯೆಂತೆನ್ನಯ ಗೇಹದೊಳಾಯ್ತು ದಿಟದಿ ನಾನಿದನಱಿಯೆಂ (ಜಗವಿ. ೯-೭); ಇರಲ್ಪಟ್ಟರ್ ದಿಕ್ಪತಿಗಳ್ ಸಮಕಟ್ಟುಗಳಿಂ ಕೂಡಿ (ಶಬ್ದಾನು. ೪೪೩ ಪ್ರಯೋ). ೬. ಸಮಾನವಾದ ಭಾಗ : ಎಮಗಮೆಮಗಪ್ಪ ಭಾಗದ ಸಮಕಟ್ಟಂ ದೇವ ಕುಡಲೆವೇೞ್ಪುದು (ಆದಿಪು. ೯-೯೯); ಸಾಸಿರ ದೀನಾರದ ಸಮಕಟ್ಟಿನ ನಾಲ್ಕು ಪೊಟ್ಟಳಿಗೆಯನೊಂದೆಮಾಡಿ (ಸುಕುಮಾ. ೭-೮ ವ); ಪೊಸ ಸಮಕಟ್ಟಿನ ಝುಲ್ಲಿಗಳಿಂದ ರಾಜಿಸುವ ದಿವ್ಯಾಶ್ವವ್ರಜದಿದುವು (ಕಂನವಿ. ೨೩-೯೧).
[< ಸಮಕಟ್ಟು$_1$]

**ಸಮಕಟ್ಟುಗೆಡು** (ಕ್ರಿ). ವ್ಯವಸ್ಥೆ ತಪ್ಪಿಹೋಗು; ಕ್ರಮತಪ್ಪು: ಚಾತುರ್ವಲಂಗಳ್ ಮೊದಲ ಸಮಕಟ್ಟುಗೆಟ್ಟು ತಡವರಿಸಿ ತಟ್ಟುಪೊಟ್ಟೆಂದೆಚ್ಚುಂ . . . ಕಾದೆ (ಪಂಪಭಾ. ೧೦-೭೦ ವ). [ಸಮಕಟ್ಟು$_2$ + ಕೆಡು$_1$]

**ಸಮಕರಣ** (ನಾ). ಸಮಮಾಡುವಿಕೆ ; ಮಟ್ಟಗೊಳಿಸುವಿಕೆ : ಘಾತಿಕ್ಷಯಜಾತಾನಂತ ಚತುಷ್ಟಯಸ್ವರೂಪನಾಗಿ ಶೇಷಾಘಾತಿಸ್ಥಿತಿ ಸಮಕರಣಾರ್ಥಂ ಅನೀಹಿತವೃತ್ತಿಯಿಂ ಲೋಕಪೂರಣ ಸಮುದ್ಘಾತಮಂ ಮಾಳ್ಕುಂ (ತತ್ತ್ವಪ್ರ. ೨೩೪). [ಸಂ.]

**ಸಮಕಲು, ಸವಕಲು** (ಗು). ೧. ಸವೆದುಹೋದ; ನವೆದ : 'ನುಲಂಬ' ನೊಲಂಬ' ಆಗಿ ಈಗಿನ 'ನೊಣಬ' ಎನ್ನುವ ಸಮಕಲು ರೂಪವನ್ನು ಹೊಂದಿದೆ (ನೊಳಂಬ. ೩). **ಸವಕಲು** : ೧. ಸವಕಲು ಕಬ್ಬಿಣದ ಲಾಳ . . . ಇಟ್ಟುಕೊಂಡಿದ್ದನು ಚಂದ್ರ (ಮುಂಗಾಮು. ೨೭). (ನಾ). ೨. ಸವೆದುಹೋದುದು : ಮತ್ತೆ ಅದೇ ಹಳಸಲು ಸಮಕಲುಗಳೆ! (ತುಂಗಭ. ೬೦); ಭಿಕ್ಷುಕನೊಬ್ಬನಿಗೆ ಒಂದು ಪಾವಾಣೆ ಸವಕಲು ಕೊಟ್ಟಿದ್ದೆಯಲ್ಲ (ಮುಂಗಾಮು. ೩).

**ಸವಕಲಾಗು** = ೧. ಸವೆದು ಹೋಗು ; ಸಮೆ : ಕಾಲಕ್ರಮೇಣ ನಾಣ್ಯಗಳಂತೆ ಸವಕಲಾಗಿ ತಮ್ಮ ಅರ್ಥವನ್ನು ಪರಿಮಿತಗೊಳಿಸಿಕೊಳ್ಳಬಹುದು (ಸೌಂದಸ. ೪೨). ೨. ಹಳೆಯದಾಗು : ಎಷ್ಟೋ ಬಗೆಯ ಆಟಗಳು ಚಲಾವಣೆಗೆ ಬಂದು ಸವಕಲಾಗಿ ಹೋಗಿರಬಹುದು (ಕವಿಕೋ. I.೭೧೧). [ಸಮ್ಮ$_1$ + - ಕಲ್ಲು$_2$ (< - ಕಲ್$_4$)]

**ಸಮಕಾಣು** (ಕ್ರಿ). ಒಂದೇ ರೀತಿಯಾಗಿ ಕಾಣು : ಯಾರ ದುಃಖಕೊ ಯಾರೆ ಅತ್ತರು ಎಲ್ಲರಿಗೂ ಸಮಕಂಡಿದೆ (ಹಾಡುಪಾ. ೫೪-೩೫). [ಸಮ್ಮು$_3$ + ಕಾಣು (< ಕಾಣ್)]

**ಸಮಕಾಲ** (ನಾ). ಒಂದೇ ಸಮಯ ; ಏಕಕಾಲ : ಸಮಕಾಲಮಪ್ಪುವೆರಡರ್ಥಮನೊಡನೆಯೆ ಪೇೞ್ವುದದು ಸಹೋಕ್ತಿವಿತರ್ಕಕ್ರಮದಿಂದರ್ಥಾಂತರಮಂ ಸಮನಿಸುವೊಂದುಕ್ತಿಭಾವಮನೆ ಪೆಸರ್ವಡೆಗುಂ (ಕಾವ್ಯಾವ. ೬೧೩). [ಸಂ.]

**ಸಮಕಾಲಿಕ** (ಗು). ೧. ಒಂದೇ ಕಾಲದಲ್ಲಿರುವ ; ಏಕಕಾಲದಲ್ಲಿ ಇರುವ: ಸಮಕಾಲಿಕಭಾಷೆಗೆ ಪೂರ್ವವ್ಯಾಕರಣಗಳನ್ನು ಅನ್ವಯಿಸುವವರು . . . ಭಾಷಾಧರ್ಮವನ್ನು ತಿಳಿದಿರಲೇಬೇಕು (ಸಂಶೋಧ. ೮೬). (ನಾ). ೨. ಒಂದೇ ಕಾಲಕ್ಕೆ ಸೇರಿದುದು : ಈ ನಾಗರಿಕತೆಯು . . . ವೇದಗಳ ಸಮಕಾಲಿಕವೆ (ಹಸುಹೊ. ೩೭೦). ೩. ಒಂದೇ ಕಾಲಕ್ಕೆ ಸೇರಿದ ವ್ಯಕ್ತಿ ; ಸಮಕಾಲೀನ : ಆತನು ನಂಜುಂಡನ ಸಮಕಾಲಿಕನೆಂದು ತಿಳಿದುಬರುತ್ತದೆ (ರೂಢಿ). [ಸಂ.]

**ಸಮಕಾಲೀನ** (ಗು). ೧. ಒಂದೇ ಕಾಲದ ; ಏಕಕಾಲದ : ಅನುಭವಶ್ರೇಣಿಯ ನಿರ್ಮಾಣದಲ್ಲಿ ಸಮಕಾಲೀನವ್ಯಕ್ತಿಗಳ ವಯಸ್ಸಿನ ಭಿನ್ನತೆ ಬಹುವಾಗಿ ನೆರವಾಗುತ್ತದೆ (ಶಿಕ್ಷದ. ೩) ; ಸಂಸ್ಕೃತ ಪೂರ್ವ ಇಲ್ಲವೇ ಸಮಕಾಲೀನ ಭಾಷೆಗಳಿಗೆ ಸೇರಿರುವ ಪದಗಳೆಂದು ತೋರುತ್ತದೆ (ದ್ರಾವಿವಿ. ೨೬೩). (ನಾ). ೨. ಒಂದೇ ಕಾಲಕ್ಕೆ ಸೇರಿದ ವ್ಯಕ್ತಿ: ಆತನೂ ರನ್ನನ ಸಮಕಾಲೀನನೆಂದು . . . ಸ್ಪಷ್ಟವಿದೆ (ಮೂರುಉ. ೩೩); ತನ್ನ ಎಷ್ಟೋ ಸಮಕಾಲೀನರ ಈರ್ಷ್ಯೆಗೆ ಗುರಿಯಾದುದರ ಸಾಮ್ಯವನ್ನು ಇಲ್ಲಿ ನೆನೆಯಬಹುದು (ಸಂಗೀತ. ೨). [ಸಂ.]

**ಸಮಕೂಟಗೊಳಿಸು** (ಕ್ರಿ). ಸರಿಯಾಗಿ ಬೆರಸು ; ಸಮನಾಗಿ ಮಿಶ್ರಣಮಾಡು : ಕೂಟಗೈದು ಸಿಯಾತ್ಮನಾ ಶಿವನಾಟವೆಂದಜ್ಞಾನಿಗಳ ಸಮಕೂಟಗೊಳಿಸಿನ್ನಾತ್ಮ ಹಂಸನ ಕೆಡಿಸಿದೆನಲರಸು (ಬಜ್ಜಪು. ೭೩-೪೫). [ಸಮಕೂಟ$_0$ + ಕೊಳ್$_1$ + - ಇಸು$_3$]

**ಸಮಕೂಡು** (ಕ್ರಿ). ಸಮನಾಗಿ ಒದಗು ; ನೆರವೇರು ; ಕೈಗೂಡು : ಅರಸಿನ ಮನಸ್ಸಿಗೆ ಪ್ರೀತಿಯನ್ನುಂಟುಮಾಡುವವನಿಗೆ ಸಕಲಮನೋರಥಂಗಳೂ ಸಮಕೂಡುವುದರಿಂದ (ಕೃವಾವಿ. ೮). [ಸಮ್ಮು$_3$ + ಕೂಡು$_1$]

**ಸಮಕೃಷ್ಟ** (ನಾ). ಎಳೆಯಲ್ಪಟ್ಟುದು : ಸಮಕೃಷ್ಟಂ ಸಮವೇಧನಂ ಸಮಭವತ್ಸಂಧಾನಮೆಂದಿರ್ವರೇಸುಮನಾಗಳ್ ನಡೆ ನೋಡಿ (ಶಾಂತಿಪು. ೪-೪೮). [< ಸಂ. ಸಮಾಕೃಷ್ಟ]

**ಸಮಕೊಳ್** 'ಸಮಗೊಳ್' ನೋ.

**ಸಮಕೊಳಿಸು** 'ಸಮಗೊಳಿಸು' ನೋ.

**ಸಮಕ್ಷ** (ಗು). ೧. ಮುಂದುಗಡೆಯಲ್ಲಿರುವ. (ನಾ). ೨. ಕಣ್ಣೆದುರು; ಪ್ರತ್ಯಕ್ಷ; ಮುಂದುಗಡೆ : ಹುತವಹಸಮಕ್ಷದೊಳ್ ಕೆಯ್ನೀರೆಱೆದು ಪಾಣಿಗ್ರಹಣಂಗೆಯ್ಕೆ (ಪಂಪಭಾ. ೩-೭೪ ವ); ನಡೆ ರಥವನೇಱೆಂದು ಮೃಡಸಮಕ್ಷದೊಳು ಕೌಶಿಕನೆನಲು (ಹಚಕಾ. ೧೪-೧೨). [ಸಂ.]

**ಸಮಕ್ಷಮ** (ನಾ). = ಸಮಕ್ಷ ೨ : ವಹಿಲದಲಿ ಹತ್ತಿರಕೆ ನಡೆತರಲು ಸಮಕ್ಷಮದಲಿ ಕುಳ್ಳಿರಿಸಿದನು (ಜನಭಾ. ೧೨-೭); ದುರ್ಯೋಧನನ ಸಮಕ್ಷಮದಲ್ಲಿ ಹೇಳಿದನು (ಕೃವಾಉ. ೧೩೬). [< ಸಂ. ಸಮಕ್ಷ]

**ಸಮಗದ್ದುಗೆ** (ನಾ). ೧. ಸಮಾನವಾದ ಪೀಠ : ಶಿವನ ಸರಿಮಂಚದಲಿ ಸರಸಿಜಭವನ ಸಮಗದ್ದುಗೆಗಳಲಿ ವಾಸವನ ತೊಡೆಸೋಂಕಿನಲಿ ಕುಳ್ಳಿಹರೀ ಮಹೀಶ್ವರರು (ಕುವ್ಯಾಸ. ೮-೧೮). [ಸಮ್ಮು$_3$ + ಗದ್ದುಗೆ$_2$ (< ಗರ್ದುಗೆ$_2$)]

**ಸಮಗಾಣಿಸು** (ಕ್ರಿ). ಸಮಾನವಾಗಿ ಮಾಡು : ಅರಿದರಿದು ಸಮಗಾಣಿಸಬಾರದು ತ್ರಾಸಿನ ಕಟ್ಟಳೆಯಂತಿನಿತು ವೆಗ್ಗಳವಾದರೆ ಈಶ್ವರನೊಡೆಯಿಕ್ಕದೆ ಮಾಣುವನೆ (ಬಸವ. ೮೦೪). [ಸಮ್ಮು$_3$ + ಕಾಣಿಸು]

**ಸಮಗಾರ** 'ಚಮಗಾರ' ನೋ.

**ಸಮಗಿ** (ನಾ). ಧರ್ಮಾನುಯಾಯಿ (?) : ಚೋಳ ಚಪ್ಪರದ ಸಮಗಿಗಳು ಬಲು ವಾದ್ಯ ತಾಳ ಜಾಗಟೆಯ ಮೇಳದಲಿ ತೂಳುವ ಹರುಷದೆ ವರಗಜೇಂದ್ರನ ತಿರುನಾಳ ನಿಟ್ಟಿಸ ಬಂದರಾಗ (ಕಂನವಿ. ೨೩-೪೦). [?/ತಮಿ. ಚಮಯಕ್ಕಾರನ್./ಸಂ. ಸಮಯಿನ್]

**ಸಮಗೈ$_1$** (ಕ್ರಿ). ಸಮಗೊಳಿಸು : ಸುಮುಸುಶರನರಸಿಮುವನ ನಿಶ್ಚಲದ ಸದ್ಭಾಷೆಯನ್ನರೆ ಕೇಳಿ ತಿಳಿದು ತನ್ನಂ ಪಡೆದ ವಟಿಯ ಸಮಗೈದುವಲಿದು (ನವಮೋ. ೮-೫೪). [ಸಮ್ಮು$_3$ + ಕೈ$_1$ (< ಕೆಯ್$_1$)]

**ಸಮಗೈ$_2$** (ನಾ). ಸರಿಜೋಡಿ ; ಸಾಟಿ : ಮುರಹರನ ಸಮಜೋಳಿ ನೀವಾ ನರನ ಸಮಗೈ (ಕುವ್ಯಾಕ. ೫-೩೨); ತರಣಿಬಿಂಬವ ತುಡುಕಲಬ್ಬರಿಕೆ ಚರಿಸಿದನು ಸಮಗೈಯಲನುಜನ (ತೊರರಾ. ೪-೧೧-೧೮). [ಸಮ್ಮು$_3$ + ಕೈ$_2$ (< ಕೆಯ್$_2$)]

**ಸಮಗೊಳ್, ಸಮಕೊಳ್** (ಕ್ರಿ). ೧. ಉಂಟಾಗು ; ಒದಗು: ಸಮಗೊಂಡರ್ಥಪದಾವೃತ್ತಿ ಮತ್ತದಾವೃತ್ತಿಯೆಂಬ ಪೆಸರಂ ಪಡೆಗುಂ (ಕಾವ್ಯಾವ. ೬೫೨). ೨. ಸಮವೆಂದು ಭಾವಿಸು ; ಸಮಾನವಾಗಿ ಕಾಣು : ನೀಚರನು ನಿನ್ನ

ಸಮಗೊಂಡು ಕುಳ್ಳಿರಿಸಿದ್ಯೆ (ಬಿಜ್ಜಪು. ೭೧-೩೭). **ಸಮಕೊಳ್:** ೧. ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲದೊಡಾಳ್ದನಾಳ್ ಸರೋಗನರೋಗಂ . . . ಎಂಬೀ ಲೋಕಯಾತ್ರೆ ಕಿಡದೆ (ಶಾಂತಿಪು. ೮-೧೪೦). [ಸಮ್ಮು$_3$ + ಕೊಳ್$_1$]

**ಸಮಗೊಳಿಸು, ಸಮಕೊಳಿಸು** (ಕ್ರಿ). ೧. ಏರ್ಪಡಿಸು ; ಸಜ್ಜುಗೊಳಿಸು: ಸಾಮಂತಚೂಡಾಮಣಿಯ ಪಟ್ಟಬಂಧನ ಮಹೋತ್ಸವಮಂ ಸಮಗೊ[ಪಾಠಾಂ. ಕೊ]ಳಿಸಿ (ಪಂಪಭಾ. ೧೪-೧೭ ವ); ಎಮಗಿನ್ನುಮೊಡಂಬಡು ಕಂದ ಸಂಧಿಯಂ ಸಮಗೊಳಿಸಲ್ಕೆ ಸಂಜಯನನಟ್ಟುವೆ (ಗದಾಯು. ೩-೮೫). **ಸಮಕೊಳಿಸು:** ೧. ಕುರುಪಿತಾಮಹಂ ಸಂಜಯನಂ ಧೃತರಾಷ್ಟ್ರನಲ್ಲಿಗೆ ಸಂಧಾನವಾರ್ತೆಯಂ ಸಮಕೊಳಿಸುವಂತೆ . . . ಅಟ್ಟೆ (ಪಂಪಭಾ. ೧೩-೭೦ ವ); ಅಮೃತವತಿಯೆಂಬಳಾರೋಗಣೆಯ ಬೋನಮಂ ಕ್ರಮದೆ ಸಮಕೊಳಿಸಿಯುಂ (ಶಾಂತೀಶ್ವ. ೧೩-೨೨೯ ವ). ೨. ತಿದ್ದು ; ಸರಿಪಡಿಸು : ಸೂರಿಯನ ಸುತ ಮರಳೆ ಮರಳಿದು ಸ್ಯೆರಣೆಯ ಸಮಕೊಳಿಸಿ ಪದಿನೆಣ್ಬಾರಿ ಭೀಮನ ತಾಗಿದನು (ಕುವ್ಯಾದ್ರೋ. ೬ರಿ೯. ೧೩-೫೯ ಅಡಿಟ). ೩. ಸರಿಗಟ್ಟು; ಹೋಲು: ಮಂದಾರ ಮಾಲಿಕಾಮ್ಲಾನತೆಯುಂ ಸಮಕೊಳಿಸಲಾರ್ತುದಿಲ್ಲ ದಲಮರೇಂದ್ರನದೊಂದು ಮುಖಪರಿಮ್ಲಾನತೆಯಂ (ಆದಿಪು. ೬-೧೯). [ಸಮಕೊಳ್ + - ಇಸು$_3$]

**ಸಮಗೋಷ್ಠಿ** (ನಾ). ಜೊತೆಗೂಡಿ ಮಾತಾಡುವುದು ; ಸರಸಸಲ್ಲಾಪ: ಮಂತ್ರಿಯ ಹಗೆ ನೃಪನ ಕಾಂತೆಯ ಸಮಗೋಷ್ಠಿ . . . ಇವು ತನ್ನ ಅಂತ್ಯಕಾಲಕ್ಕೆ (ಸರ್ವಜ್ಞ. ೭೩೯). [ಸಂ.]

**ಸಮಗ್ರ** (ಗು). ೧. ಸಕಲ ; ಎಲ್ಲ : ಆಯತ ಸಮಗ್ರೋರಸ್ಥಳಂ ದೀರ್ಘಬಾಹಾಲಂಬಂ ಭುಜವೀರ್ಯ ವಿಕ್ರಮಯುತಂ ಗಂಗಾತ್ಮಜನ್ಮಂ (ಪಂಪಭಾ. ೧-೭೮); ಬಲವೈರಿಯ ವೋಲ್ ಸಮಗ್ರವಿಭವ ಸನಾಥಂ (ಶಮದ. ೨೧೪ ಪ್ರಯೋ.). (ನಾ). ೨. ಸಂಪೂರ್ಣವಾದುದು; ಪರಿಪೂರ್ಣವಾದುದು: ಇಂತು ಸಮಗ್ರಂ ಪೇಟತಾವುದು (ಜಾತತಿ. ೨೪-೪೧); ಉಗ್ರವಾವುದು ದೈವದೊಳಗೆ ಸಮಗ್ರವಾವುದು ಧರ್ಮದೊಳಗೆ (ಕುವ್ಯಾಉ. ೪-೩೯). ೩. ಪರಿಪೂರ್ಣನಾದವನು : ವಿಜ್ಞಾನವಿದ್ಯಾವಿಶೇಷಕಳಾಳಾಪದೊಳಾಂ ಸಮಗ್ರಂ (ಸುಕುಮಾ. ೩-೨೧). [ಸಂ.]

**ಸಮಗ್ರತೆ** (ನಾ). ಸಂಪೂರ್ಣತೆ; ಪರಿಪೂರ್ಣತೆ: ಅವರ ಶಿವತತ್ವಾನುಭವಸಂಭವ ಮಹತ್ವಸಮಗ್ರತೆಯುಮಂ ಶಿವಗಣಂಗಳು ನುತಿಸುತಿರಲು (ಬಸಪು. ೧೯-೨೧); ಜೀವನದ ಸಮಗ್ರತೆಯನ್ನು ಚಿತ್ರಿಸುವ ಚಿರಂತನಕಾವ್ಯಗಳಲ್ಲಿ ಶೃಂಗಾರವೇ ಸರ್ವಸ್ವವಾಗಲಾರದು (ಸಾಹಿಸ. ೯). [ಸಂ. ಸಮಗ್ರತಾ]

**ಸಮಗ್ರಾಹಕ** (ನಾ). ಹಿರಿದು , ಕಿರಿದೆಂಬ ಭೇದಭಾವವಿಲ್ಲದವನು ; ಸಮದರ್ಶಿ: ವೀರಧೀರ ಸಮಗ್ರಾಹಕನಾಗಿ ನಿಮಗಾನಂಜೆ (ಬಸವ. ೭೨೯); ಒಡೆಯರ ಸಮಪಂತಿಯಲ್ಲಿ . . . ಸಮಗ್ರಾಹಕ ನಾನಲ್ಲಯ್ಯ (ಪದಗೋ. ೧೮೦-೧). [ಸಂ.]

**ಸಮಚಡಿಸು** (ಕ್ರಿ). ಎದುರಾಳಿಯೊಡನೆ ಸಮಸಮವಾಗಿಯೇ ಸೆಟೆದು ನಿಲ್ಲು : ತುಡುಕಲೀಯದೆ ತಿರುಗಿದರು ಗಡಬಡಿಸಿ ದಂಡೆಯೊಳೊತ್ತಿದರು ಸಮಚಡಿಸಿ [ಪಾಠಾಂ. ಸಂಗಡಿಸಿ] ನಿಂದರು (ಕುವ್ಯಾಸ. ೨-೯೫). [ಸಮ್ಮು$_3$ + ಚಡಿಸು$_0$]

**ಸಮಚತುರಸ್ರ** (ನಾ). ನಾಲ್ಕು ಸಮಕೋನಗಳನ್ನುಳ್ಳುದು; ಚಚ್ಚೌಕ: ದಿಶಾಭಾಗದೊಳ್ ಸಮಚತುರಸ್ರಮಾಗೆ ನೆಲನನಳೆದು (ಪಂಪಭಾ. ೨-೬೫ ವ). [ಸಂ.]

**ಸಮಚತುರಸ್ರಸಂಸ್ಥಾನ** (ನಾ). ೧. [ಜೈನ] "ಇದು ಒಂದು ಶರೀರಾಕೃತಿ ವಿಶೇಷ ; ನಾಮಕರ್ಮಪ್ರಕೃತಿಗಳಲ್ಲೊಂದು; ಈ ಕರ್ಮದ ಉದಯದಿಂದ ಮೇಲೆ ಕೆಳಗೆ ಹಾಗೂ ಮಗ್ಗುಲುಗಳಲ್ಲಿ ದೇಹದ ಆಕಾರ ಸಮಾನವಾಗಿರುವುದು" (ಜೈನಧ. ೩೭೩). ೨. ದೇಹದ ಆಕಾರದಲ್ಲಿ ಏರುಪೇರಿಲ್ಲದೆ ಸಮವಾಗಿ ಇರುವವನು : ಅಹಮಿಂದ್ರನಾಗಿ ಪುಟ್ಟಿ ಸಮಚತುರಸ್ರಸಂಸ್ಥಾನನುಂ . . . ಸುಖಾನುಭವನಿರತನುಮಾಗಿ (ಅಜಿಪು. ೩-೨ ವ). [ಸಂ.]

**ಸಮಚತುರ್ಭುಜ** (ನಾ). [ರೇಖಾಗ] ನಾಲ್ಕು ಕೋಣ ಮತ್ತು ನಾಲ್ಕು ಬಾಹುಗಳು ಸಮನಾಗಿರುವ ಚತುರ್ಭುಜ : ಸಮಚತುರ್ಭುಜವೆಂದರೆ? ನಾಲ್ಕುಕೋಣಗಳು ಸಮನಾಗಿಯೂ ನಾಲ್ಕುಭುಜಗಳು ಸಮವಾಗಿಯೂ ಉಳ್ಳದ್ದು. ವರ್ಗಕ್ಷೇತ್ರ ಅಥವಾ ಚಚ್ಚೌಕವೆಂದು ಹೇಳಲ್ಪಡುವುದು (ಭೂಮಿಅ. ೧೦). [ಸಂ.]

**ಸಮಚಿತ್ತ** (ನಾ). ೧. ಸಮಸ್ಥಿತಿಯಲ್ಲಿರುವ ಮನಸ್ಸು ; ವಿಕಾರವಿಲ್ಲದ ಚಿತ್ತ: ಸಮಚಿತ್ತವೆಂಬ ನೇಮದ ಹಲಗೆಯ ಹಿಡಿದು . . . ಶರಣಾರ್ಥಿಯೆಂಬ ಶ್ರವವ ಕಲಿತರೆ ಆಳುತನಕ್ಕೆ ದೇಸಿಯಪ್ಪೆ (ಬಸವ. ೭೨೫); ನಾನುಸಿರಾಡುತಲಿಹುದೆ ಪವಾಡವು ಸಮಚಿತ್ತ ದೈವದ ಬಲವು (ಇಂಚಾಪ. ೨೪೨-೯೭). ೨. ಒಂದೇ ವಸ್ತುವಿನ ಬಗ್ಗೆ ಮಾಡುವ ಚಿಂತನೆ : (ಕ). [ಸಂ.]

**ಸಮಚ್ಛಾಯೆ** (ನಾ). (ಆಲಂ) ಏಕಾಭಿಪ್ರಾಯ : ಅಯಿವತೊಕ್ಕಲುಂ ಸಮಚ್ಛಾಯೆಯೊಳಿರ್ದ್ದು ದೇವರ ದೀವಿಗೆಗೆ ಸೊಟಿಗೆ ಎಣ್ಣೆಯಂ ಬಿಟ್ಟರು (ಎಇ. XVII, ೧೮೭-೫೩; 1097). [ಸಂ. ಸಮಚ್ಛಾಯಾ]

**ಸಮಚ್ಛೆದುರ** (ಗು). ಸಮವಾಗಿ ಭಾಗವಾದ; ಸಮಭಾಗವಾಗಿರುವ: ಮೃದುತಾಂಬೂಲ ಲತಾಪಿನದ್ಧವಿಲಸತ್ಪೂಗದ್ರುಮೌಘಂ ಸಮಚ್ಛೆದುರೇಲಾವ್ರತತೀಪರೀತ ವಿಪುಲ ಶ್ರೀಖಂಡಭೂಜಂ . . . ಮಳಯಕ್ರೀಡಾಚಳಂ (ಶಾಂತಿಪು. ೫-೧೪೨). [< ಸಂ. ಸಮಚ್ಛೆದ್ರ]

**ಸಮಜ** (ನಾ). ಪ್ರಾಣಿಗಳ ಗುಂಪು ; ಪಶುಪಕ್ಷಿಗಳ ಸಮೂಹ : "ಪಶುಗಳ ಸಮೂಹವು ಸಮಜಯೆನಿಸುಗುಂ" (ನಾಚಿರಾ. ೧೧೫). [ಸಂ.]

**ಸಮಜಾತಿ** (ಗು). ಒಂದೇ ತರದ; ಒಂದೇ ಜಾತಿಗೆ ಸೇರಿದ. [ಸಂ.]

**ಸಮಜಾಯಿಷಿ** (ನಾ). ಸಮರ್ಪಕವಾದ ಉತ್ತರ, – ವಿವರಣೆ : ಕ್ರಮವಾದ ಸಮಜಾಯಿಷಿ ತೋರಿಸದೆ ಇರುವ . . . ಡಿಕ್ರಿಯ ವಿಷಯದಲ್ಲಿ ಜವಾಬ್ದಾರನಾಗುವುದಿಲ್ಲ (ಗ್ರಾಮಾಕ. ४೧); ಖಾವಂದರು ನ್ಯಾಯಾಧಿಪತಿಗಳಿಂದ ಸಮಜಾಯಿಷಿ ಕೇಳುತ್ತಿದ್ದರು (ಮಹಾವಂ. II, ४೭); ಅಲ್ಲಿ ಆತನು ಯಾವ ಅಧಿಕಾರಿಗಳಿಗೆ ಏನು ಸಮಜಾಯಿಷಿ ಹೇಳಬೇಕಾಯಿತೊ (ನಂಟರು. ೧೧೩).

[← ಮರಾ. ಸಮಜಾವಶೀ, ಸಮಜಾವಿಶೀ, ಸಮಜಾವೀಸ]

**ಸಮಜಾಯಿಸು** (ಕ್ರಿ). ಸಮಾಧಾನಪಡಿಸು; ಸಾಂತ್ವನಗೊಳಿಸು: ನನ್ನ ದುಃಖವನ್ನು ಸಮಜಾಯಿಸುವವರು ಯಾರು? (ಮಸಕೂ. ೩೧); ಜೊತೆಯಲ್ಲಿದ್ದ ಮುಂದರಿಯು ಅವಳನ್ನು ಸಮಜಾಯಿಸಿದಳು (ಝಾರಾಣಿ. ४೦೦).

[< ಸಮಜಾಯಿಷಿ + - ಇಸು$_3$]

**ಸಮಜೀವಿ** (ನಾ). ಗಂಡನ ಇನ್ನೊಬ್ಬ ಹೆಂಡತಿ; ಸವತಿ: "ಸವತಿ ಸಮಜೀವಿಯಕ್ಕುಂ" (ಮಂಗರಾ. ೯೨-೧೨). [ಸಂ. ಸಮಜೀವಿನ್]

**ಸಮಜೂತಿ** 'ಸಮಜೂತು' ನೋ.

**ಸಮಜೂತು, ಸಮಜೂತಿ** (ನಾ). (ಉಕ) ೧. ತಿಳಿವಳಿಕೆ ; ಅರಿವು ; ಗ್ರಹಿಕೆ: ನನ್ನದು ತಪ್ಪು 'ಸಮಜೂತು' ಆಗಿತ್ತು (ರಾಯಚಾ. ೧४೯) ; ಇದನ್ನೆಲ್ಲ ಸಮಜೂತು ಮಾಡಿಕೊಳ್ಳಾಕ ಬ್ಯಾಡ (ನಡೆದಾ. I, ೨೭೮). ೨. ಸಮಾಧಾನ ; ಸಾಂತ್ವನ : ಏನೋ ಸಮಜೂತು ಹೇಳಿ ಅಣ್ಣನನ್ನು ತೃಪ್ತಿಪಡಿಸುವುದಕ್ಕಾಗಿ ಎನ್ನುವಂತೆ ಹೇಳಿದ (ಬನಸಿ. ೨೭). **ಸಮಜೂತಿ** : ೧. ಸಮಜೂತೀಲೆ ಮಾಡಿದರೆ ಕೆಲಸ ಆದೀತ (ನಡೆದಾ. I, ೨೮೯). ೨. ಏನಾದರೂ ಸಮಜೂತಿ ಮಾಡಿ ಕಳಿಸಿಕೊಡಬೇಕಲ್ಲ (ಅಶೋಕ. ೧೯).

[← ಮರಾ. ಸಮಜೂತ್; ಹಿಂ. ಸಮಝೌತಿ]

**ಸಮಜೋಡಿ** (ನಾ). ಸರಿಯಾದ ಜೊತೆ ; ಸರಿಸಮಾನ : ಅಂಬುಜದ ಸಖಿಸೂನು ನೋಡೆ ತ್ರಿಯಂಬಕನ ಸಮಜೋಡಿಯಲ್ಲಾ ಬಾಹುವಿಕ್ರಮದಿ (ಸಂಭಪ. ೧೯-४೦); ಅದಕ್ಕೆ ಸಮಜೋಡಿಯಾಗಿ ಪಕ್ಕದಲ್ಲೊಂದು ಕಪಾಟವನ್ನಿಟ್ಟಿತ್ತು (ಪುನರು. ೧೫).

[ಸಮ್ಮು$_3$ + ಜೋಡಿ$_1$]

**ಸಮಜೋಡಿಸು** (ಕ್ರಿ). ಜೊತೆಯಾಗು; ಸಾಟಿಯಾಗು: ನಿಟಿಲನೇತ್ರನ ನಯನಶಿಖಿಯುಬ್ಬಟೆಗೆ ಸಮಜೋಡಿಸಿತು ಕರ್ಣನ ಚಟುಳವಿಕ್ರಮಪವನಪರಿಗತ ಬಾಣಶಿಖಿನಿಕರ (ಕುವ್ಯಾಕ. ೧೩-೩೯). [ಸಮ್ಮು$_3$ + ಜೋಡಿಸು$_1$]

**ಸಮಜೋಳಿ** (ನಾ). = ಸಮಜೋಡಿ : ಗೂಳಿಗೆ ವರ್ತಕವೇ ಸಮಜೋಳಿಯೆನಗ ಮರತತಿಯೊಳೆಣೆಯಗಾಣೆಂ (ಉದ್ಭಟ. ४-೮೮); ಮುರಹರನ ಸಮಜೋಳಿ ನೀನಾ ನರನ ಸಮಗೈ ಕರ್ಣಂ (ಕುವ್ಯಾಕ. ೫-೩೨); ಸಮಜೋಳಿ ಜೋಕಿಯಿಂ ಕಾದಿದರ್ ಬಿಲ್ಲ ಬಿನ್ನಾಣಿಗಳ್ (ಚೆಬಪು. ೩೯-೧೦). [ಸಮ್ಮು$_3$ + ಜೋಳಿ$_1$]

**ಸಮಜ್ವರ** (ನಾ). ಏರಿಳಿತವಿಲ್ಲದ ಜ್ವರ; ಏಕರೀತಿಯಾಗಿರುವ ಜ್ವರ: ಪ್ರತಾಪ ಲಂಕೇಶ್ವರ . . . ಗುಳಿಗೆಯಂ ಮಾಡಿ ಸಮಜ್ವರಕ್ಕೆ ಜೀರಿಗೆ ಸಕ್ಕರೆಯಲ್ಲಿ ಕೊಡುವುದು (ವಿಷ್ವವಿ. ೩೯). [ಸಂ.]

**ಸಮಟಿಗೆ** 'ಚಮ್ಮವಟ್ಟಿಗೆ' ನೋ.

**ಸಮಡೇರಾ** (ನಾ). ಒಂದು ಬಗೆಯ ಹೂವಿನ ಗಿಡ : ಸಮಡೇರಾ, ನೀಪಾ (ಮೃಚಿಗಿ. ೬೭-೧೩೮೦). [? + ಡೇರ್ರಾ₂ (< ಡೇಲಿಯಾ)]

**ಸಮಣ** 'ಸವಣ₂' ನೋ.

**ಸಮಣ್ಪಾಟ್** (ನಾ). ಸವಣನಿಗೆ ದಾನವಾಗಿ ಕೊಟ್ಟ ಭೂಮಿ : ವೆಲ್ಲಸಮ್ಮಜ್ಜ್ಗೆ ಕೊಟ್ಟೋದು ಕಣ್ಣುಗದಯ್ಯುಳ ಕಳನಿಯುಂ ಚನ್ನಕಳನಿವೆಲೆತೋಟ್ಟಪಟ್ಟು ಸವಣ್ಪಾಟಿನ್ಮೇಲ ಎಣ್ಕಣ್ಣುಗಂ ಅಪೂರ್ವ್ವಪರಿಹಾರವಾಗೆ ಕೊಟ್ಟೋದು (ಎಕ. X,ಮುಳಬಾ. ೮೦-೭ ; 767). [< ಸಮಣ + ಪಾಟ್]

**ಸಮತಟ್ಟು** (ನಾ). ತಗ್ಗುದಿಣ್ಣೆಗಳಿಲ್ಲದಿರುವುದು; ಸಮತಳವಾದುದು: ಉತ್ತರಕ್ಕೆ ಬರಬರುತ್ತ ಭೂಮಿಯು ಸಮತಟ್ಟಾಗುತ್ತ ಬರುವುದು (ಬಾಲಪ್ರ. II, ೧೧೫) ; ಗುಡ್ಡದ ಕಡಿಪು ಕಡಿಮೆಯಾಗತೊಡಗಿ, ಕಡೆಗೆ ಸಮತಟ್ಟಾಗುತ್ತಾ ಬಂದಿತು (ಮಲಮ. ೨೫೧). [ಸಮ್ಮ₃ + ತಟ್ಟು₃ (< ತಟ್ಟೆ)]

**ಸಮತಲ, ಸಮತಳ** (ಗು). ೧. ತಗ್ಗು, ದಿಣ್ಣೆಗಳಿಲ್ಲದ ; ಮಟ್ಟಸವಾದ: ಖುರವಂ ಸೋದಿಸುವುದು . . . ಸಮತಲನೆಲದೊಳ್ ಪೊರಳಿಸುವುದು (ಅಶ್ವಶಾ. ೭-೯) ; ಭಾವಲೋಕವೂ ಸಮತಲಪ್ರಾಂತ್ಯವಲ್ಲ ; ಅದೊಂದು ಶ್ರೇಣಿ (ಸೌಂದಸ. ೧೯). **ಸಮತಳ**: (ನಾ). ೨. ಮಟ್ಟಸವಾದ ಪ್ರದೇಶ ; ಸಮತಟ್ಟಾದ ಭೂಮಿ : ಸಮತಳ ಸಮತೇಜಮಯಂ . . . ಸಿದ್ಧಕ್ಷೇತ್ರಂ (ಚಂದ್ರಪ್ರ. ೧೬-೬೩ ಅಡಿಪದ್ಯ). [ಸಂ.]

**ಸಮತಳ** 'ಸಮತಲ' ನೋ.

**ಸಮತಳಗಾಣ್** (ಕ್ರಿ). ಮಟ್ಟಸವಾದ ಭೂಮಿಯನ್ನು ಕಾಣು ; ಸಮತಟ್ಟಾದ ಜಾಗವನ್ನು ನೋಡು : ಬೆಂಬಿಡದೆ ಪೋಗಿ ಸಮತಳಗಂಡು ಕುಟಿಗಳ ಮೇಗಣೆಂದಿಳಿದೊಂದು ತಣ್ಪಿಂಬಾಗಲಲ್ಲಿಯೆ ಚಾರುದತ್ತನು ಮೆಲ್ಲನೊಱಗಿದನು (ಸಾಳ್ವಭಾ. ೧೭-೮೦). [ಸಮತಳ ( = ಸಮತಲ) + ಕಾಣ್]

**ಸಮತಳಿಸು** (ಕ್ರಿ). ೧. ಸರಿಸಮವಾಗಿರು ; ಸಮತೋಲವಾಗಿರು : ತಮದೊಳು ಪಾಪಬೀಜಾ ಪುಣ್ಯ ತರುವಾಯಾ ಸಮತಳಿಸಿ ಇಪ್ಪದು ಪುಣ್ಯಬೀಜ ಪಾಪಾ (ವಿಪ್ರಸು. ೨೭-೩). ೨. ಸಮವಾಗಿಡು : ರೂಢಿಯಲಿ ಸಮತಳಿಸಿದಂಘ್ರಿಯ [ಪಾಠಾಂ. ಸಮತಳದಲಂಘ್ರಿಯ] ಜೋಡಿಗಳ ಮೆಲುದಳವದೊಪ್ಪಿರೆ ನೋಡುತಿರ್ದನು (ನಿಭಾಗ. ೪-೧೩-೪೦). ೩. ಒಗ್ಗೂಡು; ಸೇರು: ಧರ್ಮಜನನೀ ಕಂಟಕಕೆ ಕೈವರ್ತಿಸಿದರೇ ಪಾತಕರು ಪಾಂಡವರೆನುತ ಕುರುಬಲವೆಲ್ಲ ಸಮತಳಿಸೆ(ಕುವ್ಯಾಶ. ೩-೫೯); ಸಮತಳಿಸಿ ಫಲುಗುಣನ ಸೇನೆ ಬಹುದಂ ಕಂಡು ಸಮರಕಭಿಮುಖನಾಗಿ . . . ಚಂದ್ರಹಾಸನ್ನೆ ತರಲು (ಜೈಮಿಭಾ. ೩೨-೮). ೪. ಒದಗು; ಸಂಘಟಿಸು: ಇಬ್ಬರಿಗೆ ಸಮಬಲವಾಗಿ ಸಮತಳಿಸಿತ್ತು ರಣಕೇಳಿ (ಕುವ್ಯಾವಿ. ೮-೪೪); ವೀರಮಣಿಗಂ ಶತ್ರುಹಂಗಂ ತುಮುಲ ಯುದ್ಧಂ ಸಮತಳಿಸಲೊಡಂ . . . ಮಸಗಿ ಪೋಣರುತುಮಿರ್ದರ್ (ರಾಮಾಶ್ವ. ೧೩೨-೨೭). ೫. ತೊಲಗಿಸು ; ನಿವಾರಿಸು : ನಿಖಿಲರಾಕ್ಷಸರಾಯರುಗಳೆಚ್ಚವರ ಶಿಲೀಮುಖ ಬರೆ ಕಂಡು ಖಾತಿಯಲಿ ವಿಕಸಿತ ಕೆಂಡಸಂಪಿಗೆಯ ಸುವರ್ಣಸಾಯಕದಿಂದೆ ಸಮತಳಿಸಿದನು (ಮೋಹತ. ೩೫-೨೦). ೬. ಅಣಿಗೊಳಿಸು ; ಸಿದ್ಧಮಾಡು: ಉೞಿದ ಚತುರಂಗಬಲಮಂ ಗಱಿಲನೆ ಸಮತಳಿಸಿಕೊಂಡು ದಮಿತಾರಿಸುತರ್ ಮುಳಿದೆತ್ತಿ ಬಂದು ಮುತ್ತಿದರ್ . . . ಪ್ರಭಂಕರೀಪುರವರಮಂ (ಶಾಂತೀಶ್ವ. ೮-೧೩೭); ಮೇಲು ಮುತ್ತಿನ ಸೂಸಕದ ನೇಪಾಳ ಚಮರಿಯ ದಾಳಿಗಳ ಸಮ್ಮೇಳದಲಿ ಸಮತಳಿಸಿದರು ವ್ಯವಾಹಮಂಟಪವ (ಕುವ್ಯಾಆ. ೧೨-೧೩). ೭. (ಆಲಂ) ಸಮಾಧಾನಗೊಳಿಸು; ಸಾಂತ್ವನಗೊಳಿಸು : ಅಮಿತಕರುಣಾಸಿಂಧು ಬ್ರಾಹ್ಮರ ಸಮತಳಿಸಿ ಮಗುಳವನಿ ಯೆಲ್ಲವ ಕ್ರಮಕೆ ಸಾಧನಮಾಡಿ ನೀಡಿದನವರಿಗತಿ ಮುದವ (ಸಂಭಪ. ೨೭-೯೧). [ಸಮತಳ (= ಸಮತಲ) + - ಇಸು₃]

**ಸಮತಾಭಾವ** (ನಾ). ೧. ಸಮಾನತೆಯ ಭಾವನೆ. ೨. ಯೋಗಿಯ ಮನಸ್ಥಿತಿ: ಸಮತಾಭಾವದಿಂ ಸರ್ವಸಂಗತ್ಯಾಗಕ್ಕುದ್ಯುಕ್ತನಾದಂ (ಸುಕುಮಾ. ೮-೩೫); ಸಮತಾಭಾವ ತುಳಾತುಳೀಕೃತಮನಂ (ಅನಂಪು. ೯-೮೩). [ಸಂ.]

**ಸಮತಾಭಾವನೆ** (ನಾ). = ಸಮತಾಭಾವ ೨ : ಸಮತಾಭಾವನೆ ವರ್ಧಮಾನ ಮುಚಿತಧ್ಯಾನಕ್ರಮಂ ವರ್ಧಮಾನಮೆ (ಸುಕುಮಾ. ೧-೨೫); ಸಮತಾಭಾವನೆ ತನ್ನೊಳೊಪ್ಪೆ ಪರಮಧ್ಯಾನಾರ್ಥಿಯಷ್ಟೋಪವಾಸಮುಮಂ . . . ಮಾಡಿಯುಂ (ಪಾರ್ಶ್ವಪು. ೧-೪೦). [ಸಂ. ಸಮತಾಭಾವನಾ]

**ಸಮತಾವಾದ** (ನಾ). ಎಲ್ಲರೂ, ಎಲ್ಲವೂ ಸಮಾನ ಎಂಬ ವಾದ; ಸಮಾನತೆಯನ್ನು ಎತ್ತಿ ಹಿಡಿಯುವ ವಾದ : ಸಮತಾವಾದದ ಬುಲ್‌ಡೋಜರಿನಡಿ ಅಳಿದಿವೆ ಆಶಾಂಕುರ ನೂರು (ನೆಲಮು. ೪೬-೫) ; ಕಮ್ಯೂನಿಸ್ಟ್ ಪಕ್ಷವು . . . ಸಮತಾವಾದದ ಮೂಲತತ್ತ್ವಗಳಿಗನುಸಾರವಾಗಿ ಅವುಗಳನ್ನು ರೂಪಿಸುತ್ತಲಿದೆ (ರಾಜಪ. ೫೯). [ಸಂ.]

**ಸಮತಿ** (ನಾ). ಹಬ್ಬ ; ಪರ್ವ : ಶಿಷ್ಯಪೂರ್ವದೋಷಂಗಳಂ ಶಮನಮಂ ಮಾಡಬೇಕೆಂದು ಗಣಪರ್ವದೊಳು ಸಮತಿಗಳ ಮಾಡಿಸುವ (ವೀಶೃಪು. ೪-೨೨-೨); ಸಂಕರಾತರಿ ಸಮತಿ ದಿನಾ ನಂದಿಕೋಲಾ ಮೆರೆವ ದಿನಾ (ಮಲ್ಲಿಗೆ. ೪). [?]

**ಸಮತಿಕ್ರಾಂತ** (ಗು). ದಾಟಿದ ; ಮೀರಿದ : ಅಲ್ಲಿ ಪ್ರವಯಸ್ಕನೆಂಬೊಂ . . . ಸಮತಿಕ್ರಾಂತದಶವರ್ಷನುಮನತಿಕ್ರಾಂತಸಪ್ತತಿಸಂವತ್ಸರನುಮಕ್ಕುಂ (ಚಾವುಂಪು. ೫). [ಸಂ.]

**ಸಮತೂಕ** (ನಾ). ಏರುಪೇರಿಲ್ಲದ ತೂಕ; ಸಮಾನಪ್ರಮಾಣ: ನಿತ್ಯ ಉಪಯೋಗಿಸುವ ಆಹಾರದಲ್ಲಿರುವ ವಿವಿಧಆಹಾರಾಂಶಗಳ ಪ್ರಮಾಣಗಳು ಸಮತೂಕವಾಗಿರಬೇಕು (ಆಡುಸಾ. ೭೦). [ಸಮ್ಮ₃ + ತೂಕ]

**ಸಮತೆ** (ನಾ). ೧. ಏರುಪೇರಿಲ್ಲದುದು; ಸಮತಟ್ಟು . ೨. ಏಕರೀತಿಯಲ್ಲಿರುವುದು; ವೈವಿಧ್ಯವಿಲ್ಲದಿರುವುದು. ೩. ಹೋಲಿಕೆ ; ಸಾದೃಶ್ಯ . ೪. ಸಮಾನವಾದುದು; ಸರಿಸಮವಾದುದು. ೫. ಯುಕ್ತವಾದುದು; ಸರಿಯಾದುದು : ಆರೇನೆಂದಡೂ ಓರಂತಿಪ್ಪುದೆ ಸಮತೆ (ಸಿದ್ಧವ. ಕ. ೩೦-೯೦); ಸಾವುದಲ್ಲದೆ ತನಗೆ ಬೇಱಿನ್ನಾವ ಪರಿಯಲಿ ಸಮತೆ ಸೇರದು (ಕುವ್ಯಾಸ. ೧೨-೧೭). ೬. ಭೇದಭಾವವಿಲ್ಲದಿರುವಿಕೆ ; ನಿಷ್ಪಕ್ಷಪಾತ : ಮೆಟ್ಟಿಪ್ಪುದಾಸೆಯನು . . . ತೊಟ್ಟಿಪ್ಪುದುಳ್ಳ ಸಮತೆಯನು ಶಿವಪದವು ಮುಟ್ಟಿಪ್ಪುದಯ್ಯ (ಸರ್ವಜ್ಞ. ೩೦೬). ೭. ಚಿತ್ತಸ್ವಾಸ್ಥ್ಯ ; ನೆಮ್ಮದಿ : ಸುಭಕ್ತಿಯ ಸಮತೆಯಲ್ಲಿಹುದಲ್ಲಿ ತಾನಿಹನು (ಬಸಪು. ೧೦-೧೫); ಶೌರಿ ಸಮೀರಸುತನಲಿ ಸಮತೆಯನು ಸೇರಿಸಿದನಂದು ಸಮಗ್ರ ಸೂಕ್ತಿಯಲಿ (ಕುವ್ಯಾಉ. ೬ ಸೂಚನ). ೮. = ಸಮತಾಭಾವ ೧ : ಸಮತೆ ಸಮಸ್ತ ಭೂತದೊಳೊಡಂಬಡೆ . . . ಕಿಱಿಪಿದಂ ಕುಟಿಲಾಳಕಜಾಳಕಂಗಳಂ (ಅನಂಪು. ೯-೭೨). ೯. [ಕಾವ್ಯಮೀ] ಹತ್ತುಬಗೆಯ ಶಬ್ದಗುಣಗಳಲ್ಲಿ ಒಂದು; "ಸಮತೆ – ಮೊದಲಿನಿಂದ ಕೊನೆಯವರೆಗೆ ಒಂದೇ 'ರೀತಿ'ಯನ್ನು ಅನುಸರಿಸಿರುವುದು" (ಕೃಪಿಡಿ. ೨೩೩): ಶ್ಲೇಷ, ಪ್ರಸಾದ, ಸಮತೆ . . . ಕಾಂತಿ, ಸಮಾಧಿ – ಈ ಹತ್ತುಗುಣಗಳೇ ವೈದರ್ಭಮಾರ್ಗದ ಪ್ರಾಣ ( ಭಾರಮೀ. ೨೯). [ಸಂ. ಸಮತಾ]

**ಸಮತೆಗಟ್ಟು** (ಕ್ರಿ). ಒಂದಾಗು; ಒಂದುಗೂಡು: ನಾನಾಪ್ರಮಥನಿಚಯ ಪುರಾತನಾರ್ಯಪ್ರಮುಖರೆಲ್ಲರು ಮಾಚಿದೇವನು ಹೊಯ್ದು ನಾದಕ್ಕೆ ಸುಮುಖರಾಗುತ್ತಾಗಳೊಂದೆಸೆ ಸಮತೆಗಟ್ಟಿ . . . ನುಡಿದರು (ಬಸಪು. ೩೭-೪೫). [ಸಮತೆ + ಕಟ್ಟು₁]

**ಸಮತೆಗೆಡು** (ಕ್ರಿ). ಸಮತೋಲನವಿಲ್ಲದಾಗು ; ಏರುಪೇರಾಗು : ಕರಗಿತೆರ್ದೆ ಸ್ವರಣೆ ಸಮತೆಗೆಟ್ಟುದು (ಜೈಮಿಭಾ. ೧೯-೧೪). [ಸಮತೆ + ಕೆಡು₁]

**ಸಮತೆವೆಱು** (ಕ್ರಿ). ತಕ್ಕುದಾಗಿರು ; ಸರಿಯಾಗಿರು : ಸತ್ಯವಿತೆಯುಂ ಯುವತಿಯುಂ ಚರಣಗತಿ ಸಮತೆವೆ[ಪಾಠಾಂ. ವೊ]ತ್ತಿರಡೊಡೆ . . . ಉನ್ನತಿಯಪ್ಪ[illegible] (ಜೈಮಿಭಾ. ೫-೫೩). [ಸಮತೆ + ಪೆಱು₁]

**ಸಮತೋಲ** (ಗು). ೧. ಏರಿಳಿತವಿಲ್ಲದ; ಸಮತೂಕದ: ಸತ್ಯವನ್ನು [illegible] ಕೊಳ್ಳುವ ಸಮತೋಲಬುದ್ಧಿ ಶ್ರೀಪತಿಯಲ್ಲಿ ಇಲ್ಲವಾಗಿತ್ತು (ಭಾರಥಿ. ೮). ([illegible]). ೨. ಸಮನಾದ ಪ್ರಮಾಣ, – ತೂಕ : ಅದು ಯಾವ ಸ್ಥಳದಲ್ಲಿ ಸಮತೋಲ[illegible]

ನಿಲ್ಲುವುದೋ ಅಲ್ಲಿ ಗುರುತುಮಾಡಿ (ಮುಂಬಯಿ. ೫-೫೨). ೩. ಸಮಚಿತ್ತ ; ಸಮತೆ : ಸಮತೋಲವನ್ನು ಕಾಯ್ದುಕೊಂಡು ಸ್ಥಿರತೆಯನ್ನು ಕಳೆದುಕೊಳ್ಳದೆ ಇರುವುದು ಧೀರರ ಸತ್ವದ ಲಕ್ಷಣವಾಗಿದೆ (ಪ್ರಬಂಧ. ೨೧). [ಸಂ.]

**ಸಮತೋಲನ** (ಗು). = ಸಮತೋಲ ೧ : ಈ ಸೃಷ್ಟಿಯ ಸಮತೋಲನವ್ಯಾಪಾರದಲ್ಲಿ . . . ಹಲವು ಸ್ವಭಾವಸಿದ್ಧವಾದ ಗುಣಗಳು ರೂಪುಗೊಂಡಿವೆ (ಸೌಂದಸ. ೨). [ಸಂ.]

**ಸಮತೋಲನೆ** (ನಾ). = ಸಮತೋಲ ೩ : ಜನಾಂಗದ ದೈಹಿಕಯೋಗ್ಯತೆ, ಮಾನಸಿಕ ಶಕ್ತಿ ಹಾಗೂ ಪಾರಮಾರ್ಥಿಕ ಸಮತೋಲನೆಯು ಇದೇ ಹೆಣ್ಣುಮಕ್ಕಳ ಆರೋಗ್ಯ ಮತ್ತು ಸುಖಸಂತೋಷಗಳನ್ನು ಹೊಂದಿಕೊಂಡಿದೆ (ಅಡುಸಾ. ೨೧). [ಸಂ. ಸಮತೋಲನ]

**ಸಮತ್ತು** (ಗು). ಎಲ್ಲಾ; ಸಮಸ್ತ: ರಾಮಯರಸಮ್ ನೆಕುನ್ನಿ ಆಳಿ ಮಹಾರಜರಾ ಸಮತ್ತವಲವುಂ ನೆರೆದು ವನ್ನು ಊರಟಿಎಟಿದಲ್ಲಿ (ಎಕ. X (S), ಚಿಂತಾಮ. ೧೬೯-೪ ; ಸ. 800). [< ಸಮಸ್ತ]

**ಸಮತ್ವ** (ನಾ). = ಸಮತಾಭಾವ ೨ : ಅಂತಾ ಸಮತ್ವಮುಂ ವರ್ತಿಸುಗುಂ . . . ತಮಮಂ ರಾಗಮುಮನಲೆದು ತೊಲಗಿಸೆ ಮನದಿಂ (ಕಾವ್ಯಾವ. ೮೨೮); ತೊಡೆದು ಪರಿಗ್ರಹಮಂ ಸಲೆ ನಿಱಿಸೆ ಸಮತ್ವಪ್ರಭಾವಮಂ [ಪಾಠಾಂ. ತ್ವಭಾವಮುಮಂ] (ಜೀವಸಂ. ೧೬೮-೫). [ಸಂ.]

**ಸಮತ್ವೀಭಾವ** (ನಾ). = ಸಮತಾಭಾವ ೧: ಅನುಪ್ರೇಕ್ಷೆಗೆಯ್ಯುತ್ತುಮಾರ್ತಣ್ಮ ಸಮತ್ವೀಭಾವದಿಂದಂ ಬಿಡುವುದೊಡಲನವ್ಯಾಕುಲಂ ಭವ್ಯಜೀವಂ (ಸುಕುಮಾ. ೬-೩೮). [< ಸಂ. ಸಮತ್ವಭಾವ]

**ಸಮತ್ಸರತ್ವ** (ನಾ). ದ್ವೇಷ ಅಥವಾ ಹೊಟ್ಟೆಕಿಚ್ಚಿನಿಂದ ಕೂಡಿರುವುದು : ಕ್ರಮದೆ ಪರವ್ಯಪದೇಶಂ ಸಮತ್ಸರತ್ವಂ . . . ಅತಿಕ್ರಮಮಕ್ಕುಂ ಪಾತ್ರದಾನಮಂ ಕುಡುವೆಡೆಯೊಳ್ (ಸುಕುಮಾ. ೬-೨೨). [ಸಂ.]

**ಸಮತ್ಸರಮಾನಿಸ** (ನಾ). ಮತ್ಸರವುಳ್ಳ ಮನುಷ್ಯ ; ಹೊಟ್ಟೆಕಿಚ್ಚಿನ ವ್ಯಕ್ತಿ : ಆ ನಿರೂಢಿಯ ದೊರೆಗಳಿವನ ಸಮಾನರೇ ಗುಣದಲಿ ಸಮತ್ಸರಮಾನಿಸನ ನಿಸ್ಸಾಣೆ (ಕುವ್ಯಾಕ. ೨೨-೩೮). [ಸಮತ್ಸರ$_2$ + ಮಾನಿಸ$_1$ (< ಮಾನುಸ)]

**ಸಮದ** (ಗು). ೧. ಸೊಕ್ಕಿನಿಂದ ಕೂಡಿದ ; ಮತ್ತೇರಿದ : ಸಮದಗಜಗಮನೆಯರ್ . . . ನಡೆಯಲಾಱದೆ ಸುಟಿದರ್ (ಪಂಪಭಾ. ೬-೮೪); ಕಿರಾತವರ್ಗರಸು ಬೇಂಟೆ ವೋಗಲೆಂದು ಸಮದ ಸಮುತ್ಸುಕಚಿತ್ತನಾಗಿ . . . ಬಂದಂ ಪುಳಿಂದಂ (ರಾಜಶೇ. ೫-೫೧ ವ). ೨. ಸಂತೋಷಗೊಂಡ. (ನಾ). ೩. ಮತ್ತಿನಿಂದ ಕೂಡಿದವನು; ಸೊಕ್ಕೇರಿದವನು: ಸಮದಂ ಚಾಪಧರಂ ತನ್ನಮಿತಬಲಂಬೆರಸು . . . ನೆಱೆದಿರ್ದಂ (ಪಂಗಾಮಾ. ೧೪-೬೯). ೪. ಸಮಾನವಾಗಿ ಕೊಡುವವನು; ಪಕ್ಷಪಾತವಿಲ್ಲದೆ ದಾನಮಾಡುವವನು : ಆ ನೃಪಂ . . . ಸಮದನಾಗಿಯುಂ ಸಮದನಲ್ತು (ಪುಷ್ಪಪು. ೯-೩೯ ವ). [ಸಂ. (ಸ + ಮದ; ಸಮ + ದ)]

**ಸಮದಂಡಿ$_1$** (ನಾ). ೧. ಸಮಾನವಾದ ಶಕ್ತಿ, – ಬಲ : 'ಸಮದಂಡಿಗೆಯ್' ಪರಾ. ೨. ಸರಿಸಮಾನ; ಸರಿಜೋಡಿ: ಶಿಶುಪಾಲ ಪೌಂಡ್ರಕರೆಂಬರಿಗೆ ಸಮದಂಡಿಯವ್ಮೊಡನೆ (ಕುವ್ಯಾಸ. ೨-೧೭); ಲಂಡತನದಿ ಹೋರುವ ತನುಜನ ಸಮದಂಡಿಯೊಳಿರ್ದನಾ ರಾಮ (ಕುರಾಸಾಂ. ೩೩-೧೭); ಈ ತೆಱದ ಸಮದಂಡಿಯ ಯುದ್ಧಂಗೆಯ್ದು ಸಾಯಕಂಗಳೆಲ್ಲಂ ಸಮೆಯೆ (ಅದ್ಭುತ. ೪೫-೨೧). [ಸಮ್ಮ$_3$ + ದಂಡಿ$_1$]

**ಸಮದಂಡಿ$_2$** (ನಾ). ತಕ್ಕಡಿಯ ಕೋಲು ; ತುಲಾದಂಡ : "ಸಮದಂಡಿ ತೂಗುವ ಕೋಲು" (ಮಂಗರಾ. ೧೧೫-೧೪). [ಸಮ್ಮ$_3$ + ದಂಡ್ರಿ$_3$]

**ಸಮದಂಡಿಗೆ** (ನಾ). = ಸಮದಂಡಿ$_2$ : ತೂಗುವದು ಮನದ ತಕ್ಕಡಿಪರಡಿ . . . ಸಮದಂಡಿಗೆಯ ತೂಕ ಬರೆ ತೆರಬೇಕು ತಕ್ಕ ಬೆಲೆ (ಸಲಮು. ೬೬-೩). [ಸಮ್ಮ$_3$ + ದಂಡಿಗೆ]

**ಸಮದಂಡಿಗೆಯ್** (ಕ್ರಿ). ಸಮಾನವಾದ ಶಕ್ತಿಯನ್ನು ತೋರಿಸು: ಸಮದಂಡಿ ಗೆಯ್ದುನಿವನೆಂದು ಸಮುನ್ನತರೋಷದಿಂದೆ ತಿವಿದಂ (ಶಬಶಂ. ೪-೪೧). [ಸಮದಂಡಿ$_1$ + ಕೆಯ್$_1$]

**ಸಮದತ್ತಿ** (ನಾ). [ಜೈನ] ತನ್ನ ಸಮಾನನಾದವನಿಗೆ ಕೊಡುವ ದಾನ: ಆತ್ಮಸಮಾನಶ್ರಾವಕಾಗ್ರಣಿಗಳ್ಗೆ ಕನ್ಯಾಭೂಮಿಸುವರ್ಣಹಸ್ತ್ಯಾಶ್ವರಥರತ್ನಾದಿಗಳಂ ಕುಡುವ ಸಮದತ್ತಿಯುಂ (ಆದಿಪು. ೧೫-೧೩ ವ) ; ತನ್ನ ಸಮಾನಮಪ್ಪ ಕುಲಶೀಲಂಗಳ ವ್ರತಸಂಪನ್ನರ್ಗೆ ಕರಿತುರಗಮಣಿಭೂಷಣಹಿರಣ್ಯಭೂಮಿಕನ್ಯಾದಿವಸ್ತುಗಳಂ ಕುಡುವ ಸಮದತ್ತಿಯುಂ (ಸುಕುಮಾ. ೬-೨೫ ವ). [ಸಂ.]

**ಸಮದರ್ಶನ** (ನಾ). ಎಲ್ಲರನ್ನು ಹಾಗೂ ಎಲ್ಲವನ್ನು ಒಂದೇ ರೀತಿಯಾಗಿ ಕಾಣುವುದು ; ಸಮಭಾವದಿಂದ ನೋಡುವುದು : ಸಮಂಜಸತ್ವಮೆಂಬುದು ಪ್ರಜಾಪಾಲನದೊಳ್ ಸಮದರ್ಶನವಾಗಿ ನೆಗಟ್ದುದು (ಚಾವುಂಪು. ೨೩೦); ಸರ್ವ ಪ್ರಜಾಮತಕೆ ತಾನು ಪ್ರತಿನಿಧಿಯೆಂಬ ಮೇಣವರ ಹಿತಕೆ ಹೊಣೆಯೆಂದೆಂಬ ಬುಧರೊಲಿದ ಸಮದರ್ಶನವನೊಪ್ಪಿ (ಶ್ರೀರಾಮಾ. ೭-೧೮೭). [ಸಂ.]

**ಸಮದರ್ಶಿ** (ನಾ). ಸಮಾನವಾದ ದೃಷ್ಟಿಯುಳ್ಳವನು ; ನಿಷ್ಪಕ್ಷಪಾತ ನಾಗಿರುವವನು: ಸೆಣಸಿನಲಿ ಸಮದರ್ಶಿಗಳು ಧಾರುಣಿಯ ಪತಿಗಳು (ಕುವ್ಯಾಭೀ. ೭-೧೦); ರಾಜರ್ಷಿಯಾ ದೀರ್ಘದರ್ಶಿಯಾ ಸಮದರ್ಶಿ ತಾಂ . . . ಪಾಲಿಸಿರ್ದನು ತನ್ನ ರಾಜ್ಯಮಂ (ಶ್ರೀರಾಮಾ. ೭-೧೭೯). [ಸಂ. ಸಮದರ್ಶಿನ್]

**ಸಮದರ್ಶಿತ್ವ** (ನಾ). ೧. ಸರಿಯಾಗಿ ನೋಡುವ ದೃಷ್ಟಿ ; ಸರಿಯಾದ ನೋಟ: ಸಮದರ್ಶಿತ್ವವುಳ್ಳ ಕಣ್ಣು ೨೦ ಅಡಿ ಅಥವಾ ಹೆಚ್ಚುದೂರದಲ್ಲಿರುವ ವಸ್ತುಗಳನ್ನು ಸ್ಪಷ್ಟವಾಗಿ ನೋಡಬಲ್ಲದು (ನಿಮ್ಮದೃ. ೬೪). ೨. ಸಮವೆಂದು ಭಾವಿಸುವಿಕೆ; ನಿಷ್ಪಕ್ಷಪಾತದೃಷ್ಟಿ : ಭಯಂಕರವಾದ ಆಪತ್ಕಾಲದಲ್ಲೂ ಧೃತಿಯಿಂದ ಪಾಲಿಸ ಬೇಕಾದ ಸಮಚಿತ್ತತೆಯನ್ನೂ ಸಮದರ್ಶಿತ್ವವನ್ನೂ ವ್ಯಾಸರು ಗೀತೆಯ ಮೂಲಕ ತಿಳಿಸಿದರು (ಕುಸ್ವಾರ. ೧೨೪ ಪೀಠಿಕೆ). [ಸಂ.]

**ಸಮದವಿರೋಧಿ** (ನಾ). ಮದೋನ್ಮತ್ತನಾದ ಶತ್ರು : ಸಮದವಿರೋಧಿ ಹತ್ಯದೊಳೆ . . . ಅತಿರೌದ್ರಮಾಯ್ತು . . . ಸಮರಂ ಕುಮರಂಕರಾಮನಾ (ಗದಾಯು. ೧೦-೩). [ಸಂ. ಸಮದವಿರೋಧಿನ್]

**ಸಮದಿಟ್ಟಿ** (ನಾ). ಒಂದಕ್ಕೊಂದು ಸಮಾನವಾದ ನೋಟ ; ಸಮದೃಷ್ಟಿ : ಅನ್ಯೋನ್ಯಮೊಲ್ದು ನೋಡುತ್ತಿರ್ಪನ್ನೆಗಮೊರ್ಮೆ ದಲಿರ್ವರ ದಿಟ್ಟಿಗಳುಂ ಸಮದಿಟ್ಟಿ ಯಾದುವಂತಾ ಕ್ಷಣದೊಳ್ (ಕಾದಂಊ. ೩೩). [ಸಮ್ಮ$_3$ + ದಿಟ್ಟಿ]

**ಸಮದೂಗು** (ಕ್ರಿ). ಸಮವಾಗಿರು ; ಹೊಂದಿಕೆಯಾಗು : ಇಂದಿನ ಕಾಲದ ರಾಜ್ಯಾ ಡಳಿತ ಸಮದೂಗುವಂಥದು (ತತ್ತ್ವಪ್ರಾ. ೧೧೭). [ಸಮ್ಮ$_3$ + ತೂಗು$_1$ (< ತೂಂಕು$_1$)]

**ಸಮದೃಷ್ಟಿ** (ನಾ). ೧. ನೆಟ್ಟ ದೃಷ್ಟಿ ; ನೇರವಾದ ನೋಟ : ಸದ್ಧರ್ಮಮೆ ಮೂರ್ತಿವೆತ್ತು ಸಮದೃಷ್ಟಿಯೊಳ್ ನಿಂದ ವೃಷೇಂದ್ರನಿಂ . . . ಸಭೆ ಕಣ್ಗೊಳಿಸಿರ್ದುದು (ಶಬಶಂ. ೧-೬೯ ವ). ೨. ಒಂದಕ್ಕೊಂದು ಸಮಾನವಾದ ನೋಟ ; ಸಮಾನ ದೃಷ್ಟಿ: ಸಂಭ್ರಮದಿಂ ಸಮದೃಷ್ಟಿಯಾಗಿ ಸಿಲ್ಕಿದುವೆಮೆಯಿಕ್ಕಲ್ಕಱಿದುವವಳ ಧವಳಕಟಾಕ್ಷಂ (ಶಮದ. ೨೨೫ ಪ್ರಯೋ). ೩. ಸಮಭಾವದಿಂದ ಕಾಣುವಿಕೆ ; ನಿಷ್ಪಕ್ಷಪಾತದೃಷ್ಟಿ : ಸರ್ವಮನುಜರಿಗಾಗಿ ಸೃಷ್ಟಿ ಎಂಬ ಸಮದೃಷ್ಟಿ (ಕೋಗಿಲೆ. ೧-೧೨). [ಸಂ.]

**ಸಮದೇಭ** (ನಾ). ಮದದಿಂದ ಕೂಡಿದ ಆನೆ ; ಮದಗಜ : ಸಮದೇಭಕುಂಭ ಭೇದನಸಮಯೋಗ್ರನಖಂಗೆ ಹರಿಗೆ ಮೃಗರಿಪುವೆಸರುತ್ತಮಿಕೆಯೆ (ಗದಾಯು. ೨-೨); ಸಮದೇಭಾಳಿಗೆ ತೋರ್ಪ ತನ್ನ ಮುಳಿಸಂ ಬಾಳೇಭಸಂಘಕ್ಕೆ ತೋರ್ಕುಮೆ ಸಿಂಹಂ (ಶೃಂಗಾರ. ೧-೭೫). [ಸಂ.]

**ಸಮದೋಷಿ** (ನಾ). ತ್ರಿದೋಷಗಳು ಸಮಪ್ರಮಾಣದಲ್ಲಿರುವ ವ್ಯಕ್ತಿ: ವೈದ್ಯಶಾಸ್ತ್ರಸಾಮಗ್ರಿಯುಂ ಸಮದೋಷಿಯುಂ ಸಮಧಾತುವಪ್ಪ ನೀರೋಗನುಂ ಕ್ರಮುಕರ್ತವ್ಯದಿಂ ನಯಮುಮನಾಪ್ರವರ್ತಿಯುಮನಾಸೆವಡುವರಲ್ಲರ್ (ಶಾಂತಿಪು. ೨-೩೫ ವ). [ಸಂ. ಸಮದೋಷಿನ್]

**ಸಮಧಾತು** (ನಾ). ಧಾತುಗಳ ಸಮಸ್ಥಿತಿ : ಸಮದೋಷಿಯುಂ ಸಮಧಾತುವಪ್ಪ ನೀರೋಗನುಂ ಕ್ರಮುಕರ್ತವ್ಯದಿಂ ನಯಮುಮನಾಪ್ರವರ್ತಿಯುಮನಾಸೆವಡುವರಲ್ಲರ್ (ಶಾಂತಿಪು. ೨-೩೫ ವ); ನಾಸಿಕವೇಕೆ ವಾಸಿಸಬೇಡ ಎಂದದೆ ಮಾಣವು . . . ಈ ಭೇದವನಱಿದು ನುಡಿಸಲು ಸಮಧಾತುವಾಯಿತ್ತು (ಅವಚಂ. ೨೪-೯೮). [ಸಂ.]

**ಸಮಧಿಕ** (ಗು). ೧. ಹೆಚ್ಚಾದ; ಅತ್ಯಧಿಕವಾದ : ಸಮಧಿಕವಿದ್ಯಾಬಳನಶ್ರಮದಿಂ . . . ಕಾಡುತ್ತಿರೆ (ನೇಮಿಪು. ೧೨-೨೦೦); ಸಮಧಿಕಚಿಂತೆಯಿಂ ನುಡಿಯಲುಂ . . . ಒಲ್ಲದೆ (ಜಗವಿ. ೧೧-೧೧). (ನಾ). ೨. ಬಹಳ ಹೆಚ್ಚು; ಅತ್ಯಧಿಕ : ಆ ಇಬ್ಬರು ಪೋಲೀಸಿನವರಿಗೆ ಸಮಧಿಕವಾಗಿ ಅನುಭವಕ್ಕೆ ಬರುತ್ತಿತ್ತು (ಮಲೆಮ. ೫೩೫). ೩. ಶ್ರೇಷ್ಠನಾದವನು; ಮಿಗಿಲಾದವನು : ಸಮಧಿಕರಾರ್ ಜಗತ್ತ್ರಯದೊಳಿನ್ನನಗೆ (ಪಂರಾಮಾ. ೧೪-೧೦೭). [ಸಂ.]

**ಸಮಧಿಕೃತ** (ನಾ). ಅಧಿಕಾರ ಹೊಂದಿದವನು; ನಿಯುಕ್ತನಾದವನು: ತೂರ್ಯ ತ್ರಯಸಮಧಿಕೃತಂ ತಾನೆ ನಾನಾಪ್ರಕಾರಸ್ತುತಿಕಾರಂ ತಾನೆ (ಚಂದ್ರಪು. ೧೫-೧೨೨). [ಸಂ.]

**ಸಮಧಿಗತ** (ಗು). ಪಡೆದ; ಹೊಂದಿದ: ಸ್ವಸ್ತಿಸಮಧಿಗತ ಪಞ್ಚಮಹಾಸಬ್ದ ಮಹಾಸಾಮನ್ತಅಗ್ರಗಣ್ಯ (ಎಕ. II,೫೭-೧ ; ಸು. 1100). [ಸಂ.]

**ಸಮಧ್ಯಾಸಿತ** (ಗು). ಒಟ್ಟಿಗೆ ಕುಳಿತುಕೊಂಡ; ಜೊತೆಯಾಗಿ ಕುಳಿತ: ಪತ್ರಲೇಖಾ ಸಮಧ್ಯಾಸಿತಾಂತರಾಸನೆಯುಂ ಪ್ರಸ್ಥಾನೋಚಿತಮಂಗಳಾಲಂಕಾರೆಯುಮಪ್ಪ ಪಿಡಿಯಂ ಚಂದ್ರಾಪೀಡನೇಱಿದಾಗಳ್ (ಕಾದಂಪು. ೫೯೦). [ಸಂ.]

**ಸಮನಂತರ** (ನಾ). ಆಮೇಲಿನ ಕಾಲ; ತರುವಾಯ: ವೀರಕುಂತೀತನುಜರು . . . ಬಕಾಸುರಮರಣಸಮನಂತರದೊಳಾ ಪುರವರದೊಳಿರ್ದರು (ಕುವ್ಯಾಅ. ೧೧-೧); ಪಿಂತೆ ಕೌರವಜಯಂ ತಮಗೆ ಕೈಸಾರ್ದ ಸಮನಂತರದೊಳಾದ ಸಾಮ್ರಾಜ್ಯದೊಳ್ಪಾಂಡವರ ದೆಂತಿಳಿಯನೋವಿದರು (ಜೈಮಿಭಾ. ೨-೩). [ಸಂ.]

**ಸಮನಂತರಂ** (ಅ). ಬಳಿಕ ; ಆಮೇಲೆ : ಅಂತು ವಿಶ್ರುತಶ್ರವಣ ಶ್ರೀಸಮಾಶ್ರಯಣನಾಗಿ ಸಮನಂತರಂ (ಚಂದ್ರಪು. ೧೧-೨ ವ). [ಸಂ.]

**ಸಮನಖಕರಣ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು; ಉಗುರುಗಳನ್ನು ಸಮನಾಗಿರಿಸುವಿಕೆ : ತನುವಂ ಸಾಜದೆ ನಿಂದಿರ್ದನುನಯದಿಂ ಪಾದಮೊಂದೆ ನಖಪೋರಣದಿಂ ವಿನುತಲತಾಕರದುಗುರ್ಗಳ್ ವನಿತೇ ಸಮನಾಗಿ ನಿಲ್ಲೆ ಸಮನಖಕರಣಂ (ಲಾಸ್ಯರಂ. ೪-೫೬). [ಸಂ.]

**ಸಮನಸ್ಕ** (ನಾ). [ಜೈನ] ಮನಸ್ಸುಳ್ಳ ಜೀವಿ: ತನ್ಮನಃಸಂಪ್ರಯುಕ್ತರ್ ಸಮನಸ್ಕರ್ (ತತ್ತ್ವಪ್ರ. ೯೨) ; ಸಂಜ್ಞಿಗಳಿಗೆ ಉಪಯೋಗಮಾಡಲಿಕ್ಕೆ ಬರುವ ಮನಸ್ಸು ಇರುತ್ತದೆ. ಅಸಂಜ್ಞಿಗಳಿಗೆ ಮನಸ್ಸಿಲ್ಲ . . . ಇವುಗಳಿಗೇ ಸಮನಸ್ಕ – ಅಮನಸ್ಕಗಳೆಂದೂ ಹೆಸರು (ಜೈನಪ. ೩೦೦). 'ಅಮನಸ್ಕ' ಪರಾ. [ಸಂ.]

**ಸಮನಾಹ** (ಗು). (?): ಸುಸ್ನಿಗ್ಧಸಮಪೂರ್ವವೃತ್ತಸಮನಾಹಪರಿಪೂರ್ಣಸಿತವೃತ್ತದಂತ ಪರಿವೇಷಿತನುಂ . . . ಅಪ್ಪ ವಿಜಯಪರ್ವತಗಜೇಂದ್ರಂ ಬಂದು ಮುಂದೆ ನಿಲ್ವುದುಂ (ಆದಿಪು. ೧೨-೫೬ ವ). [?]

**ಸಮನಿ** (ನಾ). [ಯೋಗ] ಯೋಗದ ಮೂರು ಅವಸ್ಥೆಗಳಲ್ಲಿ ಒಂದು: ಸಮನಿಯೊಳು ವಿಷ್ಣು ಮತ್ತುನ್ಮನಿಯೊಳುಂ ನೀನೆ ವಿಮಲನಿರಂಜನಂ (ವೆಂಕಾರಾ. ೬-೫೯-೨೬). 'ಉನ್ಮನಿ' ಪರಾ. [ಸಂ. ಸಮನೀ]

**ಸಮನಿಕೆ** (ನಾ). ಕೂಡಿರುವಂಥದು; ಹೊಂದಿರುವಂಥದು: ಪಂಚಮಹಾಸರಿತ್ತುಗಳ ಸಮನಿಕೆಯ ಸೌರಾಷ್ಟ್ರಗುರ್ಜರವಿಮಲಕಾಶ್ಮೀರಾಂಧ್ರಗೌಳಪ್ರಮುಖದೇಶಂಗಳಲಿ ನೋಡುತ ತಿರುಗಿತು ಸೇನೆ (ತೊರರಾ. ೪-೧೦-೨) ; ಕ್ರಮದಿಂದಂ ಪ್ರಾತಸ್ಸಂಗಮ ಮಧ್ಯಾಹ್ನಾಪರಾಹ್ಣ ಸಾಯಾಹ್ನಂಗಳ್ ತ್ರಿಮುಹೂರ್ತ ತ್ರಿಮೂರ್ತದ ಸಮನಿಕೆಯಿಂದ್ಯೆದಿವಕ್ಕುಮೊಂದೇ ತೆಱದಿಂ (ವಿಷ್ಣುಪು. ೨-೨-೯೧). [< ಸಮನಿಸು + - ಕೆ]

**ಸಮನಿಸು, ಸಮ್ಮನಿಸು$_2$, ಸವಣಿಸು, ಸವನಿಸು** (ಕ್ರಿ). ೧. ಘಟಿಸು ; ಒದಗು; ಸಂಭವಿಸು : "ಸಮನಿಸು-ಪ್ರಾಪ್ತೌ" (ಶಮಧಾ); ದೊರೆಕೊಂಡ ಮಾಘಮಾಸಂ ಬರೆ ಕೃಷ್ಣಚತುರ್ದಶೀದಿನಂ ಸಮನಿಸೆ (ಆದಿಪು. ೧೬-೫೧). ೨. ದೊರಕು; ಸಿಕ್ಕು: ಒಂದು ಮಿಗಮಪ್ಪೊಡಂ ಬೇಂಟೆ ಸಮನಿಸದೆ ಪೊಟಲ್ಗೆವೋದರ್ (ವಜ್ಞಾರಾ. ೯೫-೨೩); ಧರಣೀನಾಥಪ್ರಸಾದಂ ಸಮನಿಸಿರೆ ಮಹಾಯಜ್ಞಮುಂ ಮಾಡಿ (ಎಕ. XIII, ೩೩೦-೧೭; ೯೨೨); ಕಾಲಗತಿಯಿಂದವುಗೆ ಕಾನನದಾಲಯವು ಸಮನಿಸಿತು (ತೊರರಾ. ೪-೧-೧೧). ೩. ಒದಗಿಸು; ಉಂಟುಮಾಡು; ಆಗಿಸು : ಸಮುದಾಯಾರ್ಥಮನಾರಯ ಸಮನಿಸುವರ್ಥಪ್ರತೀತಿ ತೋಱದೊಡೆಲ್ಲಂ ಕ್ರಮಮಕ್ಕುಮರ್ಥಶೂನ್ಯಂ (ಕವಿರಾ. ೧-೭೮); ಇವೆಲ್ಲಮೊಂದಾಗಿಯೆ ದರ್ಪಣಂಗೆ ಸಮನಿಪ್ಪ ಜಗಚ್ಛಾಯದರ್ಪಮಂ ಸಮಂತಾಗಿಸಲೊಂದೆ ಸಾಲ್ಗುಮನಿಸಿತ್ತು ಕುಮಾರಕೃತ ಪ್ರಸಾಧನಂ (ಚಂದ್ರಪು. ೬-೬೩) ; ಎಲ್ಲವ ಸಾನಂದದೊಳು ಸಮನಿಪುದು (ಹದಿಬ. ೪-೧೯). ೪. ಪಡೆ; ಹೊಂದು: ಸಮನಿಪ ಧರ್ಮಕ್ಕವಿರುದ್ಧಮರ್ಥಮರ್ಥಕ್ಕೆ ಕಾಮಮವಿರುದ್ಧಂ (ಅಜಿಪು. ೨-೪೭) ; ಸಮನಿಸುಗುಮಾ ವಿಭಕ್ತಿಗಳ ಮೊದಲೊಳಾದಂ ಗಳಾಗಮಂ (ಶಮದ. ೯೫).. ೫. ಸೇರು; ಕೂಡು: ರಮಣಿಯೊಡನೇಕಾಂತವರಸನ ಸಮನಿಸಿಹುದು (ಸಂಭಪ. ೩೬-೪); ತಿಮಿರ ತರಣಿಗಳೇಕದೇಶದಿ ಸಮನಿಸಿಪ್ಪವೆ ಎಂದಿಗಾದರು (ಜಗದಾ. ೩೩೧). ೬. ಹೊಂದಿಕೆಯಾಗು; ಅಳವಡು; ಒಪ್ಪು : ಭಾವಂ ಸಮನಿಸಿದಂತಿರ್ದುದು ನೃಪಸಮಿತಿ ಜಗತ್ತ್ರಿತಯತಿಲಕನಾಸ್ಥಾಯಿಕೆಯೊಳ್ (ಅಜಿಪು. ೫-೩೭); ಲಿಂಗಾಂಗಿಗಳಲ್ಲದವರ ಶರಣರ ಸಂಗವಿಲ್ಲದವರ ಕಂಡರೆ ನಾಚುವೆ ಅವರ ನುಡಿಯೆನಗೆ ಸಮನಿಸದಯ್ಯ (ಬಸವ. ೪೫೩). ೭. ಬಳಿ; ಸವರು; ಲೇಪಿಸು : ಕಲ್ಪದ್ರುಮಶಾಖಾನ್ವಿತಗೆ ಹರಿದ್ರಾಪರಿಮಳಮನಂಗದೊಳ್ ಸಮನಿಸಿದರ್ (ಗಿರಿಕ. ೧೦-೩೦). ೮. ರಚಿಸು; ನಿರ್ಮಿಸು : ಹಿಮಕರಬಿಂಬದಿಂ ಕಡೆದುದೋ . . . ಮೌಕ್ತಿಕಂಗಳಿಂ ಸಮನಿಸಿದತ್ತೊ (ಪಂರಾಮಾ. ೩-೧೫೨). ೯. ಸಿದ್ಧಪಡಿಸು ; ಅಣಿಮಾಡು : (ಆ). ಸಮ್ಮನಿಸು$_2$ : ೧. ಒಗೆದಂ ಲೋಕದ ಸಯ್ಯು ಸಮ್ಮನಿಸೆ ಸರ್ವೋರ್ವೀತಳಾಳಂಕರಿಷ್ಣುಗೆ (ಎಕ. V, ಅರಸೀ., ೧೨೭-೧೩ ; 1185); ತತ್ತರುಣೀಗಾತ್ರದ ಸೋಂಕು ಸಮ್ಮನಿಸೆ ಮೂರ್ಛಾಪನ್ನನಾದಂ ಖಳಂ (ಅನಂಪು. ೧೨-೭); ಜಿನುಂಗುವುದು ಸುಯ್ಯುದು ಜಾಡ್ಯಂ ಮೊಳೆವುದೆಂಬ ಬಗೆಗಳ್ ಸಮ್ಮನಿಸವು ಬಸವನಲ್ಲಿ ಶೈಶವದಸೆಯೊಳ್ (ವೃಷಮಿ. ೩-೨೮). ಸವಣಿಸು: ೩. ಅನ್ಯಾರ್ಥಮಂ ಸವಣಿಸುವ ಶಬ್ದಾದಿಕವೆ ಲಾಕ್ಷಣಿಕವೆನಿಪುವಸ್ತ್ರಮಯಕಾಲದಲ್ಲಿ (ಪಾಸೋಪು. ೧೦-೧೭೫). ಸವನಿಸು : ೧. [ಸವನಿ]ಸೆ ವೈಶಾಖಂ ಕೂಡೆ ವಳಕ್ಷರದಶಮಿ ಹಸ್ತಋಕ್ಷಮದುಂ ತಾಂ ಸವನಿಸಿರೆ (ವರ್ಧಮಾ. ೧೩-೩೪); ಅಂತರಾಯಂ ಸವನಿಸುಗುಂ ಪುಣ್ಯಹೀನನಪ್ಪಂಗೆಂತುಂ (ಸಮಪ. ೪-೪೧); ಪೊಸಜವ್ವನಂ ಸವನಿಸಲು ಮಂದರಾದ್ರಿಯೊಳುಗ್ರತಪವನೊಡರಿಚಿ (ಸೌಂದಪು. ೧೫-೬೨). ೨. ಅವಳ ಮೊಗದಂತೆ ಮೆಯ್ಸಿರಿ ಸವನಿಸದೆನಗೆಂದು ಕಂದನೆರ್ದೆಯೊಳ್ ತಾಳ್ದಂ ಹಿಮಗದಿರಂ (ಕಬ್ಬಿಕಾ. ೧೨೨); ಇವರಿರ್ವರೊಳೇಳ್ಗೆವಡೆದವರಿಂದ ಸವನಿಪುದಿಹಪರಸೌಖ್ಯ (ಹದಿಬ. ೫-೮). ೩. ನೆವಮೊಂದುಮಿಲ್ಲದೆ ನಿಮ್ಮೊಳು ವೈರವ ಸವನಿಸಿ (ಕರ್ಣಾವ. ೩-೧೦). ೪. ಬೇಗಂ ದುಃಖಂ ಸವನಿಸ ಸಲ್ಲಂ ಈಗಳ್ ಮಾವಯ್ಯನ ನಗರಕ್ಕಂ ಸಾಗಲ್ವೇಳ್ಕುಂ (ಹಾಲಾಸ್ಯ. ೪-೧೭-೬); ತನ್ನ ಅಡಕೆಯನ್ನೆಲ್ಲ ಸವನಿಸಿಕೊಂಡು ಕರ್ಮಿನ್ ಸಾಬರು ಹಿಂತಿರುಗಿಸಿದ್ದ ಖಾಲಿಚೀಲವನ್ನೆ ! (ಮಲೆಮ. ೪೭೯). ೮. ನಗರದೊಳೊಂದು ಮಂದಿರವ ಸವನಿಸಿಯೆ ಸಿಂಗರಿಸಿ ಬೇಗದೊಳವರ ಬಿಜಯಂಗೈಸಿ ತಂದು (ಶಂಕದಾ. ೯-೩೩). ೧೦. ಮಾಡು; ನೆರವೇರಿಸು : ಯುವತಿ ಮಿತ್ರಾವಳಿಯನೆಮ್ಮಾ ಕುವರನೊಳು ಪಾಣಿಗ್ರಹಣವನು ಸವನಿಸಲೆಬೇಕೆಂದು ಸುಮುಹೂರ್ತದಲಿ ಪೇಳಿದನು (ಸಾಳ್ವಭಾ. ೧೭-೨೪). ೧೧. ನೀಡು; ಒಪ್ಪಿಸು: ನವವಯಮಯ್ದೆ ಲಜ್ಜೆ ನವಕಾಮಮಿವುಂ ಸುಸಿಲಲ್ಲಿ ವಕ್ತ್ರಮಂ ಸವನಿಸದಾಕೆ ಮುಗ್ಧೆ (ರಸರ. ೩-೧೩೭).

[? + - ಇಸು$_3$ ./ ತೆಲು. ಸವರಿಂಚು]

**ಸಮನ್ಸು** (ನಾ). ಪ್ರತಿವಾದಿಯು ಹಾಜರಾಗಬೇಕೆಂದು ನ್ಯಾಯಾಲಯದಿಂದ ಕಳಿಸುವ ಆದೇಶ : ಸಮನ್ಸು ಆಗಲೇ ಹುಟ್ಟಿದೆ (ದಿನಾಂ. ೧೦೦). [← ಇಂ. Summon]

**ಸಮನ್ವಯ** (ನಾ). ೧. ಹೊಂದಿಕೆ ; ಹೊಂದಾಣಿಕೆ : ಕರ್ಮಯೋಗದಲ್ಲಿ ಜ್ಞಾನ, ಭಕ್ತಿ, ಕರ್ಮಗಳ ಸುಮಧುರಸಮನ್ವಯವಿದೆ (ಧರ್ಮಸಾ. ೧೩೯) ; 'ಒಳ್ಳೆಯ ದೇಹದಲ್ಲಿ ಒಳ್ಳೆಯ ಮನಸ್ಸು' ಎನ್ನುವಂತೆ ಅವೆರಡೂ ಸಮನ್ವಯವಾಗಿಯೇ ಬೆಳೆಯಬೇಕು (ಶಿಕ್ಷದ. ೩೮೭). ೨. ಕುಲ ; ವಂಶ : ನೊಸಲೊಳ್ಮಿಸುಗುವ ಮಿಸುನಿಯ ಪೊಸಗನ್ನಡಿ ಕಣ್ಗೆವಂದುದಿನಬಿಂಬಂ ಬಂದೆಸೆವಂತೆ ನಿಜಸಮನ್ವಯವಸುಧೇಶ್ವರವಿಹರಣೇಕ್ಷಣಾಪೇಕ್ಷತೆಯಿಂ (ರಾಜಶೇ. ೧೩-೬೩). [ಸಂ.]

**ಸಮನ್ವಯಗೊಳಿಸು** (ಕ್ರಿ). ಹೊಂದಿಸು; ಅಳವಡಿಸು : ಸಮಾಜದ ಅವಶ್ಯಕತೆಯನ್ನು ಸಮನ್ವಯಗೊಳಿಸಿಕೊಂಡು (ಶಿಲ್ಪಪ. ೧೨೬) ; ಪ್ರಸ್ಥಾನತ್ರಯಿಗೆ ಆಚಾರ್ಯರು ಭಾಷ್ಯ ಬರೆದು ಹದಿಮೂರನೆಯ ಶತಮಾನದ ಹೊಸದನ್ನೂ ವೇದೋಪನಿಷತ್ತುಗಳ

ಪುರಾಣಜ್ಞಾನವನ್ನೂ ಸಮನ್ವಯಗೊಳಿಸಿದರು (ಕರ್ನಾಕ. ೩೭).
[ಸಮನ್ವಯ + ಕೊಳ್₁ + - ಇಸು₃]

**ಸಮನ್ವಿತ** (ಗು). ೧. ಕೂಡಿಕೊಂಡ ; ಬೆರೆತ : ಅಮಳಚಾರಿತ್ರಸಮನ್ವಿತಗುಪ್ತಿಗುಪ್ತರ್ . . . ಕೊಂಡಕುಂದಾಚಾರ್ಯರ್ (ಸುಕುಮಾ. ೧-೧೫); ಅತಿಬಲಸಮನ್ವಿತಕುಮಾರನಂ ಸೇನೆಯೊಳ್ಕಾಣದೆ ಕೆರಳ್ದಂ ಮರಾಳಕೇತು (ಜೈಮಿಭಾ. ೧೧-೩೭). (ನಾ). ೨. ಕೂಡಿಕೊಂಡುದು; ಸೇರಿದುದು : "ಯುತಮನ್ವಿತಂ ಸಂಹಿತಂ ಸಮನ್ವಿತಂ . . . ಸಹಿತಮೆನಲು ಕೂಡಲ್ಕೆ ನಾಮಂ" (ಮಂಗರಾ. ೧೩೦-೧೮). ೩. ಕೂಡಿರುವವನು; ಸಹಿತವಾಗಿರುವವನು : ನಾನೆ ಬಹಸತಿಬಲಸಮನ್ವಿತಂ ನಿರ್ವಿಘ್ನಮೆಸಗೆ (ಶ್ರೀರಾಮಾ. ೨೯-೪೩). [ಸಂ.]

**ಸಮನ್ವೀತ** (ಗು). ಕೂಡಿಕೊಂಡ : ಮಯ್ಯೊಳ್ ಮಿಡುಕುಳ್ಳ ತಾಣಮಣಮಿಲ್ಲೆಂಬಂತು ನಿಷ್ಪಂದನಾಗಿ ಸಮನ್ವೀತಮನಂ [ಪಾಠಾಂ. ಗುಣಂ] ಗುಣಂಗೊಳಿಸಿದಂ ಯೋಗೀಂದ್ರ ವೃಂದಂಗಳಂ (ಆದಿಪು. ೬-೩೪). [< ಸಮನ್ವಿತ]

**ಸಮಪಾತಳಿ** (ನಾ). ಏರುಪೇರಿಲ್ಲದುದು; ಸಮನಾದ ಮಟ್ಟ : ನೀರಿನ ಸಮಪಾತಳಿಯ ಸಹಾಯದಿಂದ ಪದಾರ್ಥಗಳ ಎತ್ತರವನ್ನು ಅಳೆಯಬಹುದು (ಮುಂಬಯಿ. ೫-೫೯); ನೀಲನು . . . ರಾತ್ರಿಯಾದ ಕೂಡಲೆ ಸಮಪಾತಳಿಯ ನೆಲ ನೋಡಿ ಅಲ್ಲಿ ಬಿಡಾರಮಾಡುತ್ತಿದ್ದನು (ಬಂಗಾಪ. ೫೫). [ಸಮ್₃ + ಪಾತಳಿ]

**ಸಮಪಾದ** (ನಾ). ೧. ಒಟ್ಟಿಗೆ ಸೇರಿಸಿರುವ ಕಾಲು; ಒಂದೇ ಸಮವಾಗಿಟ್ಟ ಕಾಲು : ಗೋಪಾಲರೊಡನೆ ಗೆಡೆಯಾಗಿ ಲಘುಕ್ರಮದೆ ಸಮಪಾದದಿಂ ಲಂಘಿಸಿ ಗೆಲ್ಲಂಗೊಂಡು (ಜಗವಿ. ೪-೫೨ ವ); ಸಮಪಾದಂ ಕಟಿಪಾರ್ಶ್ವದಲ್ಲಿ ನಿಲೆ ಬೆನ್ನಂ ಮೋದೆ ಕೇಶಾಳಿ (ಕಾವ್ಯಸಾ. ೬೫೭); ಸರಸ್ವತಿಯನ್ನು ಸೋಮವದನೆಯಾಗಿಯೂ ಸಮಪಾದಗಳಿಂದ ನಿಂತಿರುವಂತೆಯೂ ಚಿತ್ರಿಸಬೇಕು (ಭಾರದ. ೫೧೨ ಅಡಿಟ). ೨. ಬಿಲ್ಲು, ಗದೆ ಮುಂತಾದುವುಗಳನ್ನು ಹಿಡಿದು ಯುದ್ಧಮಾಡುವಾಗ ನಿಲ್ಲುವ ಐದು ಭಂಗಿಗಳಲ್ಲಿ ಒಂದು; ಸಮಾನಾಂತರದಲ್ಲಿ ಪಾದಗಳನ್ನಿಡುವುದು : ವಿಕ್ರಮಾರ್ಜುನನಶ್ವತ್ಥಾಮನೊಳ್ ಪೆಣೆದು . . . ಆಲೀಢ ಪ್ರತ್ಯಾಲೀಢ ಸಮಪಾದಂಗಳೆಂಬಾಸನಂಗಳೊಳಂ . . . ಕಾದಿದರ್ (ಪಂಪಭಾ. ೧೩-೩೮ ವ); ಆಲೀಢ ಪ್ರತ್ಯಾಲೀಢ ಸಮಪಾದ ವೈಷ್ಣವ ಮಂಡಲಾಗ್ರಮುಮೆಂಬ ಪಂಚವಿಧಸ್ಥಾನಕೃತಂಗಳೊಳಂ . . . ನಿಂದು (ಗದಾಯು. ೮-೧ ವ). ೩. [ಛಂದ] ಸಮಸಂಖ್ಯೆಯ ಪಂಕ್ತಿ,— ಸಾಲು: ಪ್ರತಿಪಾದದ ಮೊದಲನೆಯಕ್ಷರದ ಮುಂದೆ ನಗಣ ಸಗಣಗಳು ಬರಕೂಡದು. ಸಮಪಾದಗಳಲ್ಲಿ ಐಳನೆಯಕ್ಷರವು ಲಘುವಾಗಿರಬೇಕು (ಕೃಪಿಡಿ. ೧೦೩). 'ವಿಷಮಪಾದ' ನೋ. ೪. [ನಾಟ್ಯ] ಇಪ್ಪತ್ತುಮೂರು ದೇಶೀಯ ಸ್ಥಾನಕಗಳಲ್ಲಿ ಒಂದು; ಪಾದಗಳ ನಡುವೆ ಒಂದು ಗೇಣು ಅಂತರ ವಿರುವಂತೆ ನಿಂತುಕೊಳ್ಳುವುದು : ಒದವಿರ್ದ ಸ್ವಸ್ತಿಕಂ . . . ಸಮಪಾದಂ . . . ವೃಷಭಂ ಸುಲಲಿತಮಿಪ್ಪತ್ತಮೂಱು ದೇಶೀಸ್ಥಾನಂ (ಲಾಸ್ಯರಂ. ೭-೮). [ಸಂ.]

**ಸಮಪಾದಚಾರಿ** (ನಾ). = ಸಮಪಾದ ೪ : ನಚ್ಚಣಿ . . . ಸಮಪಾದಚಾರಿಯಂ ತಳೆದಸೆದಳ್ (ರಾಜಶೇ. ೧೨-೭೨). [ಸಂ. ಸಮಪಾದಚಾರೀ]

**ಸಮಪಾಳಿ** 'ಸಮಪಾಟಿ' ನೋ.

**ಸಮಪಾಟಿ, ಸಮಪಾಳಿ** (ನಾ). ೧. ಸರಿಸಮಾನ ; ಸಾಟಿ : "ಸಮಪಾಟಿಯೆನಲ್ ಸದೃಶಮೆಂಬುದು" (ಚತುನಿ. ೧೫೮). **ಸಮಪಾಳಿ :** ೧. ಕಾದಿದನು ಸಮಪಾಳಿಯಲಿ ಹದಿನೈದುದಿನ ಪರಿಯಂತ (ತೊರರಾ. ೧-೮-೩೯); ಸುನಂದನೆಗೆ ಸಮಪಾಳಿ ನೀನು (ನಳಚ. ೭-೩೨). ೨. ಕ್ರಮ ; ಓರಣ : ಸಾಲ ಝಲ್ಲರಿ ಮುಸುಕಿದವು ಸಮಪಾಳಿಯಲಿ (ಕುಮ್ಮಾಅ. ೧೩-೨೯); ಪೇಳುತಲಿ ಶ್ರುತಿಮಂತ್ರಗಳ ಸಮಪಾಳಿಯಲಿ ನಡೆತಂದರಾಗ (ಉತ್ತರಕ. ೩-೨೧). [ಸಮ್₃ + ಪಾಟಿ₂]

**ಸಮಬಂಧ** (ನಾ). [ಕಾವ್ಯಮೀ] ಕಾವ್ಯರಚನೆಯ ಒಂದು ಪ್ರಕಾರ ; ಕೇಳುವುದಕ್ಕೆ ಅಹಿತವಾಗದಂಥ ಪದಬಂಧವುಳ್ಳುದು : ಸಮಬಂಧಮೆಂಬುದಕ್ಕುಂ ಸಮನಿಸಿ ಕಿವಿಗೆಡಱಿ ಬಾರ[ದಂದಂಬಟ್ಟಂ] ಸಮದ ಪದದಾ ವಿಭೇದಕ್ರಮಮೆರಡಕ್ಕುಂ ಮೃದುಸ್ಫುಟೋಕ್ತಿಯಿನದಱಿಂ (ಕವಿರಾ. ೨-೫೭). [ಸಂ.]

**ಸಮಬಂಧು** (ನಾ). ೧. ಸರಿಸಮಾನನಾದ ನಂಟ,— ಬಂಧು : (ಕ). ೨. ಸಮವಯಸ್ಕ ; ಓರಗೆಯವನು : ಸಮಬಂಧುಗಳನಪ್ಪಿ ಸಂದರ್ಶನೋತ್ಸವದೊಳನ್ಯೋನ್ಯಸಂಭಾಷಣೆಗಳಿಂದ ಮುದಿತರಾಗಿ ವಂದಿಸಿದರೆಲ್ಲರುಂ ಬಕದಾಲ್ಭ್ಯಮುನಿಗೆ (ಜೈಮಿಭಾ. ೩೩-೨೫). [ಸಂ.]

**ಸಮಭರವಿಭಾಗ** (ನಾ). ಸಂಧಿವಿಭಜನೆ (?) : ನಿಯತಸ್ಥಾನಂ ಪದವಿಶ್ರುತಿಯೊಳಾದ ವಿರಾಮಮಱಿಗೆ ಯತಿಯಕ್ಕುಮದರ್ಕಯಥಾಗತಿ ಯತಿಭಂಗಂ ಪ್ರಯುಕ್ತಸಮಭರ ವಿಭಾಗದೊಳ್ ನಿರ್ದೋಷಂ (ಕಾವ್ಯಾವ. ೪೭೯). [ಸಂ.]

**ಸಮಭಾಗ** (ನಾ). ಸಮಾನವಾದ ಭಾಗ,— ಪಾಲು : "ಪಂಪಮೆನಲ್ ಸಮಭಾಗಂ" (ಚತುನಿ. ೯); ಸಿಂಗತಲೆವಣ್ಣಾರನ್ನೆ ಕಾಸಂಪಳ್ಳಿಯಾ ಸಮಭಾಗಮಾನ್ . . . ಕೊಟ್ಟರ್ (ಎಇ. XXI, ೧೭೮-೯ ; ಸು. ೩ನೆಯ ಶತ). [ಸಂ.]

**ಸಮಭಾಜಕ** (ಗು). ಅರ್ಧಕ್ಕೆ ಸರಿಯಾಗಿ ಭಾಗಮಾಡುವ : ಭೂಮಿಯ ಸಮಭಾಜಕವೃತ್ತತಲವನ್ನು ವೃದ್ಧಿಸಿದರೆ ಖಗೋಳವನ್ನು . . . ಸಂಧಿಸುವ ವೃತ್ತವೇ ಈ ಖಗೋಳೀಯ ವಿಷುವದ್ವೃತ್ತ (ನಕ್ಷತ್ರ. ೩೪). [ಸಂ.]

**ಸಮಭಾಜಕರೇಖೆ** (ನಾ). ಭೂಗೋಳವನ್ನು ಎರಡು ಸಮಭಾಗಗಳಾಗುವಂತೆ ಕಲ್ಪಿಸಲಾದ ರೇಖೆ ; ಭೂಮಧ್ಯರೇಖೆ : ಭೂಮಧ್ಯರೇಖೆ, ನಿರಕ್ಷ ರೇಖೆ, ಸಮಭಾಜಕರೇಖೆ (ಭೂಗೋಳ. ೫). [ಸಂ. ಸಮಭಾಜಕರೇಖಾ]

**ಸಮಭಾಜಕವೃತ್ತ** (ನಾ). "ಭೂಮಿಯ ಎರಡುಧ್ರುವಗಳಿಗೂ ಸಮಾನ ದೂರದಲ್ಲಿರುವ ಭೂಮಿಯ ದೊಡ್ಡವೃತ್ತ : ವಿಷುವದ್ವೃತ್ತ ; ನಿರಕ್ಷ ರೇಖೆ ; ಭೂಮಧ್ಯರೇಖೆ" (Equator. ೧೦೫೧). [ಸಂ.]

**ಸಮಭಾವ** (ನಾ). ಒಂದೇ ಬಗೆಯಾಗಿರುವಿಕೆ ; ಸಮತೆ : ಸಮಭಾವಪ್ರಭವಂ ಶಾಂತಮಕ್ಕುಮಂತಾ ಸಮತ್ವಮುಂ ವರ್ತಿಸುಗುಂ (ಕಾವ್ಯಾವ. ೮೨೮). [ಸಂ.]

**ಸಮಭಿಮತ** (ಗು). ಚೆನ್ನಾಗಿ ಒಪ್ಪಲ್ಪಟ್ಟ,— ಮನ್ನಿಸಲ್ಪಟ್ಟ : ಸುಕುಮಾರೋಜಸ್ಸಮಭಿಮತೋದಾರಾಹ್ವಯಸಮಾಧಿಗಳ್ ಕೃತಿಗುಣಂಗಳೀರಯ್ದಕ್ಕುಂ (ಕಾವ್ಯಾವ. ೫೦೦). [ಸಂ.]

**ಸಮಭ್ಯರ್ಥಿಸು** (ಕ್ರಿ). ಸಮರ್ಥಿಸು ; ಅನುಮೋದಿಸು : ಎನ್ನೆಂಬುದನಿಂಬು ಕೆಯ್ಯುದಂದ ಧೃತರಾಷ್ಟ್ರನ ನುಡಿಯಂ ಗಾಂಧಾರಿ ಸಮಭ್ಯರ್ಥಿಸಿ ತಾನುಂ ಪ್ರಾರ್ಥಿಸಿ (ಗದಾಯು. ೪-೧ ವ). [ಸಮಭ್ಯರ್ಥನ್ + - ಇಸು₃]

**ಸಮಯ₁** (ನಾ). ೧. ಕಾಲ ; ವೇಳೆ : ಜಿನಪತಿಮುನಿಪತಿಗುಣವರ್ಣನಸಮಯಾನಂತರಂ ಕವೀಶ್ವರಗುಣವರ್ಣನಮುಚಿತಂ (ಮಲ್ಲಿಪು. ೧-೨೨); ಹರನಾಣೆಯಂ ತಾಳ್ದು ಬಾಳ್ದಪ್ಪ ಸಮಯದೊಳು (ತಿರುರ. ದೇ. ೧೦-೬). ೨. ಸರಿಯಾದ ಕಾಲ ; ಸಕಾಲ: ಸಮಯದೊಳೆ ಬಿತ್ತಿ ಬೀಜವನಮಿತಫಲಂಗುಡುವ ಪೊಲನನುಳಿಯುವ ತೆರದಿಂದ (ಶಾಕುಂತ. ೯೪-೧೫೫); ಸಮಯಕ್ಕಾಗದ ಅರ್ಥ ಸಹಸ್ರವಿದ್ದರೂ ವ್ಯರ್ಥ (ಗಾದೆ). ೩. ಆಸ್ಪದ; ಅವಕಾಶ : ಕುಡು ಸಮಯಮಂ (ಅನಂಪು. ೨-೩೦); ತನಗಾದ ಅಪಮಾನಕ್ಕೆ ಪ್ರತೀಕಾರವನ್ನು ಮಾಡಬೇಕೆಂದು . . . ಸಮಯವನ್ನು ಹೊಂಚಲು ಮೊದಲಿಟ್ಟನು (ಒಡಕ. ೧೫). ೪. ಒಡಂಬಡಿಕೆ ; ಒಪ್ಪಂದ : ಶ್ರೀಲಕ್ಷ್ಮೀನರಸಿಂಹಪುರ ದಶೇಷಮಹಾ(ಸ)ಜನಂಗಳು ಹಿರಿಯಮಕ್ಕೆಯ್ಯಲ್ಲಿ ಮಹಾಸಭೆಯಾಗಿ ನೆರದು ಮಾಡಿದ ಸಮಯವೆಂತೆಂದಡೆ (ಮೈಆರ್. ೧೯೩೧, ೫೯-೨; 1226). ೫. ಸಂಪ್ರದಾಯ ; ಪದ್ಧತಿ; ರೂಢಿ : ಬಹುಶಃ ಆ ಕಾಲದ ವರ್ಣಕಕವಿಗಳದಿದೊಂದು ಸಮಯವಾಗಿರಬೇಕು (ಕರ್ನಾಜ. ೭೨); 'ಧರ್ಮಿ' ಎಂದರೆ ನಟರು ಆಚರಣೆಯಲ್ಲಿಟ್ಟುಕೊಂಡಿರತಕ್ಕ "ಸಮಯ" ಅಥವಾ ಸಂಪ್ರದಾಯ (ಸಂನಾಟ. ೧೩). ೬. ಧರ್ಮ; ಮತ: ಸಮಯಸಮುದ್ಧರಣಂ ವಿಕ್ರಮತುಂಗಂ ನಾಚಿಸೆಟ್ಟಿ (ಕೊಲ್ಹಾಶಾ. ೮-೫೯; 1147); ಗುರುದೀಕ್ಷೆಯಿಲ್ಲದ ನರನು ಶರಣರ ಸಮಯಕ್ಕೆ ಸಲ್ಲ (ಅಬಂಡೇ. ೨೭೦-೧೩). ೭. ಕುಲ ; ಸಮಾಜ : ಸಮಸ್ತಸೆಟ್ಟಿಕಾಱರ ಸಮಯದ ಸಮಿಪದಲು . . . ದೇವರಿಗೆ ಧಾರಾಪೂರ್ವ್ವಕಂ ಮಾಡಿ (ಕಇಅ. ೩೬-೪೯-೧೨ ; 1134); ವಿರೋಧಿಸಂವತ್ಸರದಲ್ಲಿ ಆರುದರುಶನ ಹದಿನೆಂಟುಸಮಯಕ್ಕೆ ವಿರೋಧ ಹುಟ್ಟೀತು (ಕಾಲಸಂ. ೪೨); ಹದಿನೆಣ್ಟುಸಮಯವು ಅಱುವತಮೂವರು ಬಣಜು ಭಕುತಿಭೇದವಿಲ್ಲ

(ಎಇ., XXI, ೧೪-೭೮; 1260). ೮. ಸಂಕೇತ ; ಸಂಜ್ಞೆ : "ಕಾಲದಲಿ ಸಿದ್ಧಾಂತದಲಿ ವಿಶೇಷದಲಿ ಸಂಕೇತದಲಿ ಸಮಯಾಖ್ಯವೆನಿಸಿರ್ಕು" (ಮಂಗರಾ. ೧೫೪-೭೬). ೯. [ಕಾವ್ಯಮೀ] ಕವಿಯ ಸಂಪ್ರದಾಯ ; ಕಾವ್ಯಭಾಷೆ: ಶಬ್ದವತ್ತಿಯು ಮುಖ್ಯ ಮತ್ತು ಅಮುಖ್ಯ ಎಂದು ಎರಡುವಿಧ . . . ಅರ್ಥವನ್ನು ಸ್ಮರಣಕ್ಕೆ ತರಲು ಅನುಕೂಲವಾದ ಪದಾರ್ಥದ ಸಂಬಂಧಕ್ಕೆ ಶಕ್ತಿ ಎಂದು ಹೆಸರು. ಇದಕ್ಕೆ ಸಮಯ, ಸಂಗತಿ, ಸಂಕೇತ, ವಾಚಕತ್ವ ಎಂಬೀ ಮುಂತಾಗಿ ನಾಮಾಂತರಗಳು (ಭಾತತ್ತ್ವ. ೮೪೭). 'ಕವಿಸಮಯ' ಪರಾ. ೧೦.[ತರ್ಕಶಾ] ವಾದವಿವಾದಗಳ ನಿರ್ಣಯ; ಸಿದ್ಧಾಂತ : ಆ ಕಪಿಲ ಸುಗತ ಕಣಚರ ಲೋಕಾಯತಿಕಾದಿ ಮಾರ್ಗಭೇದಂ ಸಮಯಂ (ಕವಿರಾ. ೧-೧೦೫). ೧೧. [ಜೈನ] ಪರಮಾಣುವು ಲೋಕಾಕಾಶದಲ್ಲಿ ಒಂದು ಪ್ರದೇಶದಿಂದ ಅದಕ್ಕೆ ಹೊಂದಿದ ಇನ್ನೊಂದು ಪ್ರದೇಶಕ್ಕೆ ಮಂದಗತಿಯಿಂದ ಹೋಗುವಷ್ಟು ಕಾಲಾವಧಿ : ಅಣುವನಣು ದಾಂಟುವ ಪೊಟ್ತಂ ಸಮಯಮೆಂದು ಪೇಟ್ಟವನಾವಂ (ಪಂರಾಮಾ. ೧-೪೮). [ಸಂ.]

**ಸಮಯ್ಯ₂** 'ಸಮಯಿ₂' ನೋ.

**ಸಮಯಂದಪ್ಪು** (ಕ್ರಿ). ವೇಳೆ ಮೀರು; ಅವಧಿ ಮೀರು: ಅಂಗಳಂಗಳ ಕಸವಂ ಸಮಯಂದಪ್ಪದೆ ತೊಡೆವುವು ಚಮರೀಮೃಗವಾತ್ಮವಾಳಸಮ್ಮಾರ್ಜನಿಯಿಂ (ಜಗವಿ. ೧೬-೪೭). [ಸಮಯ₁ + ತಪ್ಪು₁]

**ಸಮಯಚತುರ** (ಗು). ೧. ಸಂದರ್ಭಕ್ಕೆ ತಕ್ಕಂತೆ ವ್ಯವಹರಿಸುವ ಚಾತುರ್ಯವುಳ್ಳ : ಜೋನ್ಸ್‌ಳಂಥ ಶಕ್ತಿಸಂಪನ್ನ, ಸಮಯಚತುರ, ಕ್ರೂರಸ್ತ್ರೀಯನ್ನು ಅವನು ಇದುವರೆಗೆಂದೂ ನೋಡಿರಲಿಲ್ಲ (ಅಂಬಿಕ. ೯೫). (ನಾ). ೨. ಸಂದರ್ಭಕ್ಕೆ ತಕ್ಕಂತೆ ವ್ಯವಹರಿಸುವವನು : ಅವನಂಥ ಸಮಯಚತುರನನ್ನು ನಾನು ನೋಡಿಯೇ ಇರಲಿಲ್ಲ (ರೂಢಿ). [ಸಂ.]

**ಸಮಯತಿ** (ನಾ). [ಸಂಗೀತ] ಆರುಬಗೆಯ ಯತಿಗಳಲ್ಲಿ ಒಂದು: ಯತಿಯಲ್ಲಿ ಆರುವಿಧ. ಕ್ರಮವಾಗಿ ಅವು - (೧) ಸಮಯತಿ, (೨)ಗೋಪುಚ್ಛಯತಿ . . . (೬) ವಿಷಮಯತಿ (ಸಂಗೀಚಂ. ೫೭). [ಸಂ.]

**ಸಮಯಬಾಹ್ಯ** (ನಾ). ಜಾತಿಯಿಂದ ಹೊರತಾದವನು : ಇದಂ ಮಹಾಜನಂಗಳ್ ಕಂಡರಪ್ಪೊಡೆ ಸಭಾಜನಕ್ಕಂ ಸಹಪಂಕ್ತಿಗಂ ಪೊಱಗೆಂದು ಸಮಯಬಾಹ್ಯನಂ ಮಾಟ್ಪರ್ (ಪಂಚತಂ. ಅ. ೧೧೦-೯). [ಸಂ.]

**ಸಮಯಸಾಧಕ** (ನಾ). ಕಾಲಕ್ಕೆ ತಕ್ಕ ರೀತಿಯನ್ನನುಸರಿಸಿ ಲಾಭ ಪಡೆಯುವವನು : ಆತ ಒಳ್ಳೆ ಸಮಯಸಾಧಕ. ಯಾವ ಅಧಿಕಾರಿ ಬಂದರೂ ಆಪ್ತನಾಗಿ ಬಿಡುತ್ತಾನೆ (ರೂಢಿ). [ಸಂ.]

**ಸಮಯಸ್ಫೂರ್ತಿ** (ನಾ). ಸಂದರ್ಭಕ್ಕೆ ತಕ್ಕ ಹಾಗೆ ಆಗಿಂದಾಗಲೇ ಹೊಳೆಯುವ ವಿಚಾರ : ಕಲಾವಿದನ ಸಮಯಸ್ಫೂರ್ತಿ ಮತ್ತು ಕಲ್ಪನಾ ಸ್ವಾತಂತ್ರ್ಯಗಳು ಕುಂಠಿತವಾಗಿ ಸಂಗೀತವು ಒಂದು ಮೂರು ಕಾಲಿನ ಓಟದಂತೆ . . . ಆಗಿದೆ (ಭಾರದ. ೫೬೭); ಅಲ್ಲಿಯೇ ಸಮಯಸ್ಫೂರ್ತಿಯಿಂದ ಸಂಗೀತಗಾರನು ರಚಿಸುವ ಸಂಗೀತವನ್ನು ಕೇಳುತ್ತೇವೆ (ಸಂಗೀತ. ೧). [ಸಂ.]

**ಸಮಯಾಚಾರ** (ನಾ). ೧. (ಒಂದು ಧರ್ಮಕ್ಕೆ ಅಥವಾ ಮತಕ್ಕೆ ತಕ್ಕ) ಸಂಪ್ರದಾಯ ; ಪದ್ಧತಿ : ಎನಗೆಯೂ ನಿನಗೆಯೂ ಸಮಯಾಚಾರ ಸರಿ (ಬಸವ. ೯೦೪); ಎನ್ನ ಸಮಯಾಚಾರಕ್ಕೆ ಶ್ಮಶಾನಮಂಟಪದಲ್ಲಿ ಗುರುವ ತಡೆದೆ (ಘನವ. ೭೮-೫೫). ೨. ಒಂದು ಬಗೆಯ ತೆರಿಗೆ : (೧) ಮನೆದೆಂಗೆ . . . (೫) ಸಮಯಾಚಾರ . . . (೧೯) ಕೌದಿಯ ತೆರಿಗೆ - ಈ ಮೇರೆಗೆ ಹತ್ತೊಂಬತ್ತು ಬಾಬುಗಳನ್ನು ರೈತರಿಗೆ ನಿಷ್ಕರ್ಷೆ ಮಾಡಿಸಿ (ಮಹಾವಂ. I, ೧೨೪); ಈ ವೃತ್ತಿಗೆ ಸಲ್ಲುವ . . . ಸುಂಕ ಪೊಮ್ಮು ಜಾತೀಕೂಟ ಸಮಯಾಚಾರ ಹುಲ್ಲುಹಣ ಚಿರಾದಾಯ (ಹುಟ್ಟಿಹ. ೬). [ಸಂ.]

**ಸಮಯಾಚಾರತ್ವ** (ನಾ). ಆರು ವಿಧವಾದ ಸದ್ಗುಣಗಳಲ್ಲಿ ಒಂದು : ದಾಸತ್ವ ವೀರದಾಸತ್ವ ಭೃತ್ಯತ್ವ ವೀರಭೃತ್ಯತ್ವ ಸಮಯಾಚಾರತ್ವ ಸಕಲಾವಸ್ಥಾತ್ವಂಗಳೆಂಬ ಷಡ್ವಿಧಸಜ್ಜನತ್ವಯುಕ್ತನಾಗಿ (ವಿವೇಕ. ೯೭). [ಸಂ.]

**ಸಮಯಾಚಾರಿ** (ನಾ). "ಒಂದು ಧರ್ಮದ ಆಚಾರ ಮುಂತಾದ ಕಟ್ಟುಗಳನ್ನು ವಿಧಿಸುವವ; ಆಚಾರ್ಯಪುರುಷ" (ಬಸವ. ಕೋಶ): ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದನಿತಿಲ್ಲ ಎನ್ನ ಭಕ್ತನೆಂಬರು ಎನ್ನ ಸಮಯಾಚಾರಿಯೆಂಬರು (ಬಸವ. ೩೮೫) ; ಜಂಗಮುದ್ದಲ್ಲಿ ಸಮಯಾಚಾರಿಯಾಗಿಪ್ಪನ್ನಕ್ಕರ ಮಾಡುವ ಭಕ್ತಿಗೆ ಭಿನ್ನವಧೆ (ಅವಚಂ. ೨೩೪-೧೦೫೯). [ಸಂ. ಸಮಯಾಚಾರಿನ್]

**ಸಮಯಾಚಾರ್ಯ** (ನಾ). = ಸಮಯಾಚಾರಿ : ಮಹಿಳೇಶ್ವರಿಯು . . . ಸಮಯಾಚಾರ್ಯರಾದ ಶ್ರೀಜ್ಞಾನಸಂಬಂಧಮೂರ್ತಿಗಳವರ ಕೃಪೆಯಿಂದ . . . ಪತಿಯನ್ನು ಶೈವಮತದಲ್ಲಿ ಪ್ರವರ್ತಿಸುವಂತೆ ಮಾಡಿ (ಪುರಾವಿ. ೨೩೧). [ಸಂ.]

**ಸಮಯಿ₁** (ನಾ). ಒಂದು ಮತ ಅಥವಾ ಸಿದ್ಧಾಂತಕ್ಕೆ ಸೇರಿದ ವ್ಯಕ್ತಿ: ಸಮಯಿಗಳೊಳ್ . . . ಅವರ ಸಿದ್ಧಾಂತಮುಮವರ ಚರಿತ್ರಮುಂ ಸ್ವವಚನವಿರೋಧಂ (ಶಾಂತಿಪು. ೮-೧೪೭); ಆತನ ಮಹೋನ್ನತಿವಡೆದ ಪೆಂಪಂ ನೋಡಲಾಱದೆ ಜಡಮತಿಗಳಾಗಿತರಸಮಯಿಗಳತಿಕುಟಿಲದಿಂದ . . . ಇದನಱಿಯಬೇಕೆನುತ (ಬಸಪು. ೩೨-೪೯). [ಸಂ. ಸಮಯಿನ್]

**ಸಮಯಿ₂, ಸಮಯ್ಯ₂, ಸಮೆ₃** (ನಾ). ದೀಪವಾಲೆಯ ಕಂಬ; ದೀಪಾಲೆಕಂಬ : ತೇರದಾಳದ ತಾಮ್ರದ ಪಾತ್ರೆಗಳೂ ಸಮಯಿಗಳೂ ಪ್ರಸಿದ್ಧ (ಕಭಾಗೆ. ೬೩೨). **ಸಮಯ್ಯ₂** : ಪುರುಷಪ್ರಮಾಣ ಎತ್ತರವಾಗಿರುವ ಬೆಳ್ಳಿಯ ಸಮಯಗಳಲ್ಲಿ ಸುಗಂಧದೆಣ್ಣೆಗಳ ದೀಪಗಳನ್ನು ಹಚ್ಚಿದ್ದರು (ಮಂಜುಕ. ೭೦). **ಸಮೆ₃**: ಸುಶೀಲೆಯು ಏನೋ ಆಲೋಚಿಸುತ್ತ ಸಮೆಯೆದುರು ಕುಳಿತುಬಿಟ್ಟಳು (ಅನಂತ. ೮); ದೇವರೆದುರು ಸಮೆಯಲ್ಲಿ ದೀಪವಿತ್ತು (ಸ್ಮೃತಿಚಿ. ೨೫೯).

[← ಅರ. ಶಮೂಅ ; ಮರಾ. ಸಮಈ, ಸಮಯ]

**ಸಮಯಿಸು₁** 'ಸಮೆಯಿಸು₁' ನೋ.

**ಸಮಯಿಸು₂** 'ಸಮೆಯಿಸು₂' ನೋ.

**ಸಮಯೋಗ** (ನಾ). ಅನೇಕವರ್ಣ್ಯಗಳಿಗೆ ಏಕಧರ್ಮವನ್ನು ಹೇಳುವ ಒಂದು ಬಗೆಯ ಅಲಂಕಾರ : ಸಮಗುಣಗಣನದೆ ಪೇಟ್ಟುದು ಸಮಯೋಗಂ (ಉದಯಾ. ೧೨-೫೭); ಅನೇಕವರ್ಣ್ಯಗಳಿಗೆ (ಅಥವಾ ಅವರ್ಣ್ಯಗಳಿಗೆ) ಹೇಳಿರುವ ಧರ್ಮೈಕ್ಯವು ಸಮಯೋಗಾಲಂಕಾರವೆನ್ನಿಸಿಕೊಳ್ಳುವುದು (ಕೃಚಿಂ. ೨೬೧). [ಸಂ.]

**ಸಮಯೋಚಿತ** (ಗು). ೧. ಆಯಾಕಾಲಕ್ಕೆ ತಕ್ಕುದಾದ : ತತ್ಸಮಯೋಚಿತ ಶಾಂತಿಯನುತ್ಸವದಿಂ ಮಾಡಿ (ಜಗವಿ. ೩-೨೭). (ನಾ). ೨. ಆಯಾ ಸಂದರ್ಭಕ್ಕೆ ತಕ್ಕುದು : ಇಂಥ ಕಡೆಗಳಲ್ಲಿ ಬೇರೆ ಬೇರೆ ಕ್ರಿಯಾಪದಗಳನ್ನು ಸಮಯೋಚಿತವಾಗಿ ಅಧ್ಯಾಹಾರ ಮಾಡಬೇಕು (ಮಧ್ಯಮ. ೧೯೦). ೩. ಧರ್ಮಕ್ಕೆ ಉಚಿತವಾದುದು,- ತಕ್ಕುದು : ಬಂದ ಸಮಯೋಚಿತವನಱಿಯದಿದ್ದರೆ ನಿಂದಿರಲೊಲ್ಲ ಕೂಡಲ ಸಂಗಮದೇವ (ಬಸವ. ೧೯೦); ಸದ್ಭಕ್ತಂಗೆ ಸಮಯೋಚಿತವ ಮಾಡುವವನ ಸದ್ಭಕ್ತರಿಗೆ ನೀಡಿ ತನ್ನ ಹಸಿವ ಮಱೆದಿಪ್ಪವನ . . . ಅಱಿಸಿ ಕಾಣೆನು (ಸಮಾವ. ೬-೨೦). [ಸಂ.]

**ಸಮರ** (ನಾ). ಕಾಳಗ ; ಯುದ್ಧ : ಸಮರರಸಪ್ರಿಯರೊಳ್ ಸತ್ತ್ವಮುಮಿಳೆಯೊಳ್ ರಜಮುಮೊದವೆ ರಣಗಟ್ಟಲೆಯೊಳ್ ತಮಮುಮಂ ಮಿಗೆ (ಪಂಪಭಾ. ೧೦-೬೯); ಸಾವೆವು ನಿಮ್ಮ ಸಮರದಲಿ (ಕುಮ್ಮಾಅ. ೨೦-೬೫).

**ಸಮರೈಕಭೈರವ** = ಯುದ್ಧದಲ್ಲಿ ಒಬ್ಬನೇ ಪ್ರಳಯಕಾಲದ ಶಿವ ನಂತಿರುವವನು ; ಒಂದು ಬಿರುದು : [ಅರಿತಟ್ಟಕ]ನ್ನೇರವಂ ಸಮರೈಕಭೈರವಂ (ಸೌಇಇ. XX,೩೯-೧೮; 1064). **ಸಮರೈಕವೀರ** = ಯುದ್ಧದಲ್ಲಿ ಹೋರಾಡುವ ಏಕಾಂಗಶೂರ : ಸುಭಟಶಿರಶ್ಶೇಖರಂ ಸಮರೈಕವೀರಂ ವೀರಚೂಡಾಮಣಿ (ಸೌಇಇ. XX , ೨೦-೪೫ ; 1019). [ಸಂ.]

**ಸಮರಂಗ** (ನಾ). ಕಾಳಗದ ಕಣ ; ಯುದ್ಧಭೂಮಿ : ಕಾಲನ ಲೀಲೆಯಾದುದು ವಿಷಮ ಸಮರಂಗ (ಕುಮ್ಮಾದ್ರೋ. ೫-೪). [< ಸಂ. ಸಮರರಂಗ. / ಮರಾ. ಸಮರಂಗ]

**ಸಮರಂಗಾಟಿ** (ನಾ). ಕಲಿ; ವೀರ : ತುಮುಲಯುದ್ಧದೊಳ್ ಪಟುಭಟರಂ ನೂಂಕುವ ಸಮರಂಗಾಟಿನ ಮಾಂಕರಣೆಯ ಗಂಡುತನದ ತಿರುಳೆನವೇಟ್ಕುಂ (ಶಬ್ದಾನು. ೩೮೪ ಪ್ರಯೋ). [ಸಮರ + -ಕಾಟಿ]

**ಸಮರಕರ** (ನಾ). ಯುದ್ಧಮಾಡುವವನು : ಅಮರೇಶ್ವಾಂಶದೊಳೆರೆ ಚಂದ್ರಮ ನರ್ಕಾದಿಗಳೆ ವೀಕ್ಷಿಪಂದದಿಕಬಲಂ ಸಮರಕರಂ . . . ಎನಿಕ್ಕುಂ (ಜಾತಿ. ೨೦-೨೦). [ಸಂ.]

**ಸಮರಕರಾಳ** (ಗು). ಯುದ್ಧಮಾಡುವುದರಲ್ಲಿ ಭಯಂಕರನಾದ: ಸಮರಕರಾಳ ಧೃಷ್ಟದ್ಯುಮ್ನ ಕೀರ್ತಿವಿಶಾಲ ಧೀರಶಿಖಂಡಿಸಹಿತಾ ದ್ರುಪದನೈತಂದ (ಕುವ್ಯಾವಿ. ೧೧-೪೫). [ಸಂ. ಸಮರಕರಾಲ]

**ಸಮರಜಯ** (ನಾ). ಯುದ್ಧದ ಗೆಲವು ; ಕಾಳಗದ ವಿಜಯ : ಸಮರಜಯಂ ದೈವಾಯತ್ತಮದಱಿನಾ ಪುರುಷಾಕಾರಮಮಗಾಯ್ತಾಗಳ್ (ಗದಾಯು. ೩-೪೭).

**ಸಮರಜಯಘಂಟಾರವಂ** = ಯುದ್ಧದಲ್ಲಿ ಗೆಲವು ಹೊಂದಿದ ಬಗ್ಗೆ ಜಯ ಘೋಷವನ್ನು ಪಡೆದವನು ; ಒಂದು ಬಿರುದು : ಮಾರ್ಕೋಲ ಭೈರವಂ ಸಮರಜಯಘಂಟಾರವಂ (ಶಾಸ. XX,೪೧-೧೦ ; 1068). [< ಸಂ. ಸಮರಂಜಯ]

**ಸಮರತ** (ಗು). [ಕಾಮಶಾ] ಸಮಾನವಾದ ರತಿಯುಳ್ಳ: ಚೆಲ್ವುವೆತ್ತೂಪ್ಪುವ ಶಯ್ಯೋದ್ದೇಶದೊಳ್ ಪರ್ಚಿದ ಸಮರತಲೀಲಾವಿನೋದಂಗಳಿಂದುತ್ಸವಮಂ ತಾಳ್ದುತ್ತುಂ (ಚಂದ್ರಪ್ರ. ೩-೬೭). [ಸಂ.]

**ಸಮರತಸೌಖ್ಯ** (ನಾ). [ಕಾಮಶಾ] ಸಮಾನವಾದ ರತಿಯಿಂದ ಉಂಟಾದ ಸುಖ: ಸಮರತಸೌಖ್ಯದೊಳ್ ಸತಿ ದಿಗಂಬರವೇಷಮನಾಂತು . . . ಯೋಗಿನಿಯಂತಿರೊಪ್ಪಿದಳ್ (ಕಾವ್ಯಸಾ. ೬೬೫). [ಸಂ.]

**ಸಮರತಿ** (ನಾ). ೧. [ವೀಶೈ] ಐಕ್ಯಸ್ಥಲದ ಅನುಭವ: ಸಮರತಿ ಸಮಕಳೆ ಸಮಸುಖಿ ಸ್ವಾನುಭಾವ ಹಿರಿದು (ಬಸವ. ೯೨೭); ಮತ್ ಕರದಿಷ್ಟಲಿಂಗವೆಂದನವರತ ಸರಸಸಂಯೋಗಸಮರತಿಯಿಂದಮಿರ್ಪುದೈಕ್ಯಂಗೆ ಧರ್ಮಾಚಾರವು (ಮೈಲಾರ. ೩-೭). ೨. [ಕಾಮಶಾ] ಸಮಸುಖದ ರತಿ : ಮಾನಿನಿಗೆ ಮದನಕಲೆಗಳಂ ತೋಱಿಸಿದ ನವನಂದು ಸಮರತಿಯೊಳು (ಜೈಮಿಭಾ. ೧೧-೨೨); ಸಮರತಿ ಸೊಗಸಿನಿಂದಲುಪರತಿಯು ಮೊದಲಾದ ಚೌಷಷ್ಟಿಬಂಧಂಗಳಿಂ ಕಳೆಯ ನೆಲೆಯರಿದು (ನವಮೋ. ೧೦-೭). [ಸಂ.]

**ಸಮರಥ** (ನಾ). ಮಹಾವೀರ; ಶ್ರೇಷ್ಠಯೋಧ: ಮಡಿದರಂದತಿರಥಸಮರಥರಾ ಮಹಾರಥಾರ್ಧರಥರ್ಕಳ್ (ಶಾಂತಿಪು. ೪-೧೨); ಮಾದ್ರೇಯ ರವಿಸುತರೊಡಲೊಳಂಬನು ಹೂಳಿದನು ಸೀಳಿದನು ಸಮರಥರ (ಕುವ್ಯಾದ್ರೋ. ೬-೧೬) . [ಸಂ. / ತೆಲು. ಸಮರಥುಂಡು = ಒಬ್ಬ ಬಿಲ್ಲುಗಾರನೊಂದಿಗೆ ಸಮವಾಗಿ ನಿಂತು ಹೋರಾಡುವ ಯೋಧ]

**ಸಮರದ್ವಿರದ** (ನಾ). ಯುದ್ಧಕ್ಕಾಗಿ ಪಳಗಿಸಿದ ಆನೆ : ತುರಗ ಹಲ್ಲಣಿಸಿದವು ಸಮರದ್ವಿರದ ಸನ್ನಂಬಡೆದವು (ಕುವ್ಯಾದ್ರೋ. ೪-೨೨). [ಸಂ.]

**ಸಮರಮಂಡಲ** (ನಾ). = ಸಮರಂಗ : ಆಳುಗಳ ಬಲ್ಲಹರು ಹೊಕ್ಕರು ಸಮರ ಮಂಡಲವ (ಕೌಶಿರಾ. ೩೨-೧೮). [ಸಂ.]

**ಸಮರರಂಗ** (ನಾ). = ಸಮರಂಗ : ತಾಂ ತರಹರಿಸಿ ಸಮರರಂಗದೊಳ್ ನಿಲಲಾಱದಧಿಕಪ್ರಯಾಸದಿಂದೆ ಚಿಂತಿಸಿ ಬಳಲ್ದನಮರಾಧೀಶಂ (ಚಿಬಪು. ೭-೨೨). [ಸಂ.]

**ಸಮರಸ** (ನಾ). ೧. ಸಮಾನವಾದ ಭಾವನೆ : ಹರುಷ ವಿಷಾದದಲಿ ಮುಳುಗುತ್ತಿರದೆ ಸಮರಸದೊಳಿಹುದು (ಕುವ್ಯಾಉ. ೪-೫); ಸಮರಸದ ಭಾವವಮೇಂ ರಂಜಿಸಿತೋ (ಶಬಶಂ. ೨-೧೦೪). ೨. ಹೊಂದಾಣಿಕೆ; ಸಾಮರಸ್ಯ : ರಸವ ಜನನ ವಿರಸ ಮರಣ ಸಮರಸವೇ ಜೀವನ (ಗರಿ. ೧೧೪-೭). ೩. [ವೀಶೈ] ಆರು ವಿಧವಾದ ಭಕ್ತಿಗಳಲ್ಲಿ ಒಂದು : ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ, ಸಮರಸ (ಇವು ಆರು ಷಡ್ವಿಧಭಕ್ತಿಗಳು) (ಶಿವಾಸೂ. ೨ ಅಡಿಟಿ). [ಸಂ.]

**ಸಮರಸಚಿತ್ತ** (ನಾ). ೧. ಸಾಮರಸ್ಯದಿಂದ ಕೂಡಿದ ಮನಸ್ಸು. ೨. ಹೊಂದಾಣಿಕೆಯುಳ್ಳ ಮನಸ್ಸುಳ್ಳವನು ; ಸಮಾಧಾನಿ : ಶಿವಭಕ್ತಸಂಗಸಮರಸಚಿತ್ತಂ ಸಂಗಪ್ರಸಾದಹೃದಯಕಾಯ ಸಂತುಷ್ಟನಾಗಿರುತ್ತಮಿರೆ (ಬಸರ. ೧೦-೧೨೪). [ಸಂ.]

**ಸಮರಸನಾಡಿ** (ನಾ). ಶರೀರದಲ್ಲಿರುವ ನಾಡಿಗಳಲ್ಲಿ ಒಂದು: ಮಯೂರನಾಡಿ ಮಂಡೂಕನಾಡಿ . . . ದೌಷ್ಟನಾಡಿ ಕರ್ಕೋಟಕನಾಡಿ ಸಮರಸನಾಡಿ ಸಂತೋಷನಾಡಿ ಇಂತೀ ಪ್ರಥಮನಾಡಿಯೊಳಗಾದ ಶರೀರದಲ್ಲಿ (ಸಕವ. ೪. III, ೨೮೮-೫೧೩). [ಸಂ.]

**ಸಮರಸನ್ನದ್ಧ** (ಗು). ಯುದ್ಧಕ್ಕೆ ಸಿದ್ಧವಾಗಿರುವ: ಆ ರಾಜಚಂದ್ರ ಸಮರಸನ್ನರ್ದ ನೃಪರ ನಡುವೆಸೆದನು (ಕುರಾಸಾಂ. ೧೧-೭೨). [< ಸಂ. ಸಮರಸನ್ನದ್ಧ]

**ಸಮರಸನ್ನಾಹ** (ಗು). ೧. ಯುದ್ಧಸಿದ್ಧತೆಯನ್ನು ಸೂಚಿಸುವ : ಸಮರಸನ್ನಾಹ ಭೇರಿಯಂ ಪೊಂಗುಡುಪಂ ಪಿಡಿದಡಸಿ ಪೊಡೆಯಲ್ (ರಾಜಶೇ. ೬-೩೦ ವ). (ನಾ). ೨. ಯುದ್ಧದ ಏರ್ಪಾಡು,– ಸಿದ್ಧತೆ: ಬಿಗುಹಾಯ್ತು ದ್ರೋಣನ ಸಮರಸನ್ನಾಹ (ಕುವ್ಯಾದ್ರೋ. ೧೫-೨೨). [ಸಂ.]

**ಸಮರಸರ್ವಜ್ಞ** (ನಾ). ಯುದ್ಧಮಾಡುವುದರಲ್ಲಿ ನಿಷ್ಣಾತನಾದವನು : ರಥವ ನಿಳಿದನು ದಾನವಾರಾತಿ ಸಮರಸರ್ವಜ್ಞರುಗಳಂಘ್ರಿಗೆ ನಮಿಸಿದರು (ಕುವ್ಯಾಉ. ೮-೫೮). [ಸಂ.]

**ಸಮರಾಂಕಣ** (ನಾ). = ಸಮರಂಗ : ತೆಂಕ ಮುಂತಾಗಿ ನಡೆದನವನಿಪ ಸಮರಾಂ ಕಣಕಂದು ಲೀಲೆಯೊಳು (ಕುರಾಸಾಂ. ೧೧-೮೧). [ಸಮರ + ಅಂಕಣ]

**ಸಮರಾಂಗಣ** (ನಾ). = ಸಮರಂಗ : ಮಿಂಚಿನೊಳ್ ಮುಸುಕಿದ ಮಾಲ್ಕೆಯಾಯ್ತು ಸಮರಾಂಗಣಮುಳ್ಕುವ ಬಾಳ್ಗಳುಳ್ಕದಿಂ (ಪಂಪಭಾ. ೧೦-೭೭); ಜಯಮಮಂ ಪಡೆ ನೀಂ ಕಂದ ಸಮರಾಂಗಣದೊಳ್ (ಶಬಶಂ. ೫-೫೨). [ಸಮರ + ಅಂಗಣ]

**ಸಮರಾಕರ** (ನಾ). = ಸಮರಂಗ : ಸಮರಾಕರಮಂ ಬಿಸುಟ್ಟು ಕಮಲಾಕರಮಂ ಪೊಕ್ಕೆಲವೊ ಮರುಳೆ ಬರ್ದುಕಲ್ ಬಗೆವಾ (ಗದಾಯು. ೭-೧೨). [ಸಂ.]

**ಸಮರಾನಕ** (ನಾ). ಯುದ್ಧದಲ್ಲಿ ಬಾರಿಸುವ ನಗಾರಿ : ಎಸೆವ ಸಮರಾನಕಂ ಸೊಗಯಿಸುವುತ್ಸವತೂರ್ಯಮೊಗೆಯೆ (ಶಾಂತಿಪು. ೪-೭೩). [ಸಂ.]

**ಸಮರಾಭೀಳ** (ನಾ). ಯುದ್ಧದಲ್ಲಿ ಭಯಂಕರನಾದವನು : ಸಮರಾಭೀಳ ಗದೆಯನು ತಿರುಹಿದನು ಪಯಪಾಡನಾರ್ಭೆದು (ಕುವ್ಯಾಗ. ೫-೪೨). [ಸಂ. ಸಮರಾಭೀಲ]

**ಸಮರಾಯತ** (ನಾ). ಅತಿಶಯವಾದ ಯುದ್ಧ,– ಕಾಳಗ : ಬಾಯ ಬಡುಕನದೆಂದಿರದೆ ಸಮರಾಯತದಿ ನೋಡೆನ್ನ ಭುಜಬಲದಾಯತದ ರಣಕೌಶಲವ (ಕೊಗಯು. ೧೮-೨೦). [ಸಂ.]

**ಸಮರು, ಸವರು**[2] (ನಾ). ೧. ಅಲಂಕಾರ ; ಶೃಂಗಾರ : ಪದಪಿನಿಂ ಬಿದ್ದಿನರ್ ಹಂದರದ ಬಳಿಗೆ ಒದಗುವರ್ ಪರಿಪಟ್ಟು ಉಡುಗೆತೊಡುಗೆಗಳಿಂದ ಪುದಿದು ಸಮರಿಂ ಚೆಲ್ವು ಬಪ್ಪುದೆನೆ ಮನೆಗೆ (ಕಾಲೂರ. ೧೪೭-೩೧೯) ; ಸಮರು ಮಿಾರಿದ ಹೆಣ್ಣು, ಸಂಭಾರ ಮಿಾರಿದ ಮೇಲೋಗರ (ಗಾದೆ). **ಸವರು**[2] : ೨. ಕೊಲೆ ; ವಧೆ : 'ತಲೆಸವರು[2]' ಪರಾ. [< ಸಮಱು./ ತೆಲು. ಸವರು = ಅಂದ]

**ಸಮರೋಚಿತ** (ಗು). ೧. ಯುದ್ಧಕ್ಕೆ ತಕ್ಕುದಾದ: ಸಮರೋಚಿತಪ್ರಸಂಗ ಪ್ರವೋದದಿಂದಿರ್ದನಂತರಂ ನಿಜನಿಲಯಕ್ಕಮಲಯಶೋಧಿಪರೆಟ್ಟರ್ (ಶಾಂತೀಶ್ವ. ೮-೪೫). (ನಾ). ೨. ಕಾದಾಡಲು ತಕ್ಕುದಾದ ಆನೆ ; ಯುದ್ಧದ ಆನೆ : "ಸನ್ನಾಹ್ಯ:, ಸಮರೋಚಿತ: – ಈ ೨ ಕಾದುವಾನೆ '' (ಹಲಾಯು. ೩೮-೭೧). [ಸಂ.]

**ಸಮರೋದ್ಧಾರ** (ನಾ). ಯುದ್ಧದಲ್ಲಿ ಗೆಲವನ್ನು ತರುವವನು: ವೈರಿಭಟ ಸಂವರ್ತನೂತನಭೈರವನು ಕಲಿಪಾರ್ಥ ಸಮರೋದ್ಧಾರ ಸಾರಥಿಯಾದನಂದು ವಿರಾಟನಂದನಗೆ (ಕುವ್ಯಾವಿ. ೫ ಸೂಚನೆ). [ಸಂ.]

**ಸಮರೋದ್ಯೋಗ** (ನಾ). ಯುದ್ಧದ ಸಿದ್ಧತೆ ,– ಸನ್ನಾಹ : ಕಡುಗೋಪದಲಿ ಕೌರವರಾಯ ಸಮರೋದ್ಯೋಗಪರನಾದ (ಕುವ್ಯಾದ್ರೋ. ೧೦-೪೦). [ಸಂ.]

**ಸಮರೋದ್ಯೋಗಂಗೆಯ್** (ಕ್ರಿ). ಯುದ್ಧಕ್ಕೆ ಸಿದ್ಧವಾಗು; ಕಾದಲು ಮುನ್ನುಗ್ಗು : ದುರ್ಯೋಧನಂ . . . ಸಮರೋದ್ಯೋಗಂಗೆಯ್ಯೆ ಸಂಜಯನಂಜದೆ ಮಾರ್ಕೊಂಡು (ಗದಾಯು. ೩-೪೪ ವ). [ಸಮರೋದ್ಯೋಗ + ಕೆಯ್[1]]

**ಸಮರ್ಕೆ** (ನಾ). ಸೊಗಸು; ಚೆನ್ನು : ಕೋಟಿಚಂದ್ರಾರ್ಕಪ್ರಕಾಶವುಜ್ವಳಿಸೆ ಅರ್ಕಕೀರ್ತ್ಯಾದಿಜಿನರು ಶಿಲೆಯಿಂದ ಸಮರ್ಕೆಯೊಳ್ಪೆಗೆದರಂಬರಕೆ (ಭರತ. ೮೦-೪೭). [< ಸಮಱು + - ಕೆ]

**ಸಮರ್ಚನ** (ನಾ). ಪೂಜೆ ; ಆರಾಧನೆ : ಮೃಡಸಮರ್ಚನಫಲವಲಾ ಕೈಯೊಡನೆ ತೋಱಿತ್ತು (ಬಸಪು. ೨೯-೨೮); ಶುದ್ಧಭಕ್ತನ ಧ್ಯಾನ ನೋಟ ಸಮರ್ಚನ ಸ್ತುತಿ ಗಾವಗಂ ಸಿದ್ಧವಾಗಿ (ಮೈಲಾರ. ೧೮೭-೭). [ಸಂ.]

**ಸಮರ್ಚನೆ** (ನಾ). = ಸಮರ್ಚನ : ನಿಜಶಿವಸಮರ್ಚನೆವೇಳೆಯೊಳು ತನ್ನಂ ಮಱೆದು (ಬಸಪು. ೩೪-೩); ನಿರಘೇಂದ್ರಿಯಾಕಾರವಾಗಿ ತೋಱುವ ತಾನು ನೆರೆದ ವಿಷಯಾಕಾರದಿಂ ತೋರ್ಪ ತನ್ನೊಳಾಚರಿಪುದೆಲ್ಲಂ ಸಮರ್ಚನೆಯೆಂದ ದೇಶಿಕನ ಚರಣಾಂಬುಜಕ್ಕೆ ಶರಣು (ಲಶಿಚಂ. ೫೪-೩೯). [ಸಂ. ಸಮರ್ಚನ]

**ಸಮರ್ಚನೆಗೈ** (ಕ್ರಿ). ಪೂಜೆಮಾಡು; ಆರಾಧಿಸು: ಶಿವಭಕ್ತ ಸಮರ್ಚನೆಗೈವ . . . ಶೈವವರ್ಯರವರಿಂ ಮೆಱೆದತ್ತು ಪುರಂ (ರಾಜಶೇ. ೨-೯೩). [ಸಮರ್ಚನೆ + ಕೈ$_1$ (< ಕೆಯ್$_1$)]

**ಸಮರ್ಚಿಸು** (ಕ್ರಿ). = ಸಮರ್ಚನೆಗೈ : ಮುರಾರಿ ಪುರಾರಿಪದಾರವಿಂದಮಂ . . . ಸಮರ್ಚಿಪ ವೇಳೆಯೊಳ್ (ರಾಜಶೇ. ೩-೧೦೪). [ಸಮರ್ಚನ + - ಇಸು$_3$]

**ಸಮರ್ಥ** (ಗು). ೧. ಶಕ್ತಿಯಿಂದ ಕೂಡಿದ. ೨. ದಕ್ಷತೆಯಿಂದ ಕೂಡಿದ; ಸಾಮರ್ಥ್ಯವುಳ್ಳ. ೩. ಒಂದೇ ಬಗೆಯ ಅರ್ಥವಿರುವ. ೪. ಯೋಗ್ಯವಾದ; ತಕ್ಕ. (ನಾ). ೫. ಬಲಶಾಲಿ; ಗಟ್ಟಿಗ: ನೋಂತೆನಾಂ . . . ಕಂಸನ ವಿಜೃಂಭಣಮಂ ಜಯಿಸಲ್ ಸಮರ್ಥನಂ . . . ಸುತನಂ ಪಡೆವೊಂದು ನೋಂಪಿಯಂ (ಜಗವಿ. ೨-೮೮). ೬. ಸಾಮರ್ಥ್ಯವಿರುವವನು ; ಶಕ್ತ : ಪುಟ್ಟಿಸುವಂ ಬಿದಿ . . . ಬಿದಿ ಸಮಕಟ್ಟಿ ಕೊಟ್ಟೊಡೆಡೆಯೊಳ್ ಕಿಡಿಸಲ್ ಸಮರ್ಥರಾರ್ (ಪಂಪಭಾ. ೧೨-೧೮೨); ಭಕ್ತರೆ ಸಮರ್ಥರು ಅಸಮರ್ಥರೆನಲುಂಟೆ (ಬಸವ. ೬೮೨). ೭. ಐಶ್ವರ್ಯವಂತ; ಶ್ರೀಮಂತ: "ಸಿರಿವಂತನಾಢ್ಯನಿನನಿಭ್ಯಂ ಸಮರ್ಥ ನೈಶ್ವರಿಯಮುಳ್ಳವನಕ್ಕು" (ಮಂಗರಾ. ೬೯-೧೨). ೮. ಶಕ್ತಿಶಾಲಿಯಾದುದು; ಸಾಮರ್ಥ್ಯವುಳ್ಳುದು : ಪನ್ನಗಂ ಪುಗೆ ಪುತ್ತಂ ಪುಗಲೀಯವೆಂದೊಡಿಲಿಗಳ್ ಕಾಯಲ್ ಸಮರ್ಥಂಗಳೇ (ಕಾವ್ಯಸಾ. ೪೩೬). ೯. [ವ್ಯಾಕ] ಒಂದೇ ಬಗೆಯ ಅರ್ಥವುಳ್ಳುದು : ತೃತೀಯೋಕ್ತಾರ್ಥದೊಳಾ ಸಪ್ತಮಿಯ ಸಮರ್ಥಂ ಪಂಚಮಿಯೊಳಂ ತೃತೀಯೆ ಸಮರ್ಥಂ (ಶಮದ. ೧೩೫). [ಸಂ.]

**ಸಮರ್ಥಕ** (ನಾ). ಸಾಮರ್ಥ್ಯವಿರುವವನು ; ಶಕ್ತ : ಕಣ್ಣ ಕಸಮಂ ಸೈರಿಸದಂತೆ ತಾನೊಂದುಪಚಾರಧರನಾಗಿಯುಮಸ್ಮದ್ಗುಣಚ್ಛೇದಕಸಮರ್ಥಕನಾಗಿ ಬಂದು (ಶಾಂತಿಪು. ೯-೯೧ ವ). [ಸಂ.]

**ಸಮರ್ಥತೆ** (ನಾ). ೧. ಶಕ್ತಿ; ಸಾಮರ್ಥ್ಯ: ಆವನಾವ ತತ್ತ್ವದೊಳೇನಂ ಬೆಸಗೊಂಡೊಡಮಾಗಳೆ ನಿರವಿಸುವ ಸಮರ್ಥತೆಯನಾಂತನಾ ಮುನಿಮುಖ್ಯಂ (ಚಂದ್ರಪು. ೧೪-೩೧); ಪೊರೆವ ಸಮರ್ಥತೆಯದಾರ್ಗುಂಟು (ಬಸಪು. ೪೭-೭೮). ೨. ಅರ್ಥದ ಏಕರೂಪತೆ. [ಸಂ. ಸಮರ್ಥತಾ]

**ಸಮರ್ಥನ** (ನಾ). ೧. ಯೋಗ್ಯವೆಂದು ನಿಶ್ಚಯಿಸುವುದು. ೨. ದೃಢನಿರ್ಧಾರ; ಖಚಿತವಾದ ತೀರ್ಮಾನ. ೩. ವಿವಾದ ಅಥವಾ ಅಭಿಪ್ರಾಯಭೇದಗಳನ್ನು ಬಗೆಹರಿಸುವುದು. [ಸಂ.]

**ಸಮರ್ಥನೆ** (ನಾ). ೧. ಪ್ರಮಾಣ; ಸಾಕ್ಷಿ; ರುಜುವಾತು : ಸರಿಯಾದ ಸಮರ್ಥನೆಗಳಿಂದ ಮೊದಲು ಉಂಟಾಗಿದ್ದ ತಪ್ಪು ಅಭಿಪ್ರಾಯವು ಇಲ್ಲವಾಯಿತು (ರೂಢಿ). ೨. (ತನ್ನ ಕಾರ್ಯ ಅಥವಾ ಮಾತು) ಸರಿಯೆಂದು ವಾದಿಸುವುದು: ಸತ್ತವರನ್ನು ಹೊಗಳುವದು . . . ಲೋಕದ ಸಹಜಗುಣವೇ ಅದು-ಎಂದು ಸಮರ್ಥನೆ ಮಾಡಿಕೊಂಡಳು (ಕರ್ನಾಕ. ೬೨). [ಸಂ. ಸಮರ್ಥನ]

**ಸಮರ್ಥಿಕೆ** (ನಾ). ಸಾಮರ್ಥ್ಯ ; ಶಕ್ತಿ : ಅಪ್ಪಷಷ್ಟಿತೀರ್ಥತತಿಯಂ ಮಾಡಿಲಾಪ ಸಮರ್ಥಿಕೆಯನುಳ್ಳಷ್ಟಷಷ್ಟಾವೃಕ್ಷಸಂತತಿಯ (ಬಸಪು. ೧೯-೫೬); ಕರಣಚರಣಂಗಳು ಮೂಡಿರ್ದ ಕೈಲಾಸವರ ನೀಲಗಿರಿಯ ಕಿಳ್ತಡಿಸಿ ದೊರೆ ಸಮರ್ಥಿಕೆಯೊಳಿರ್ವರು ಬಂದು ತಲೆವಟ್ಟು ಹರ ಮುರಧ್ವಂಸಿ ಕಾದಿದರು (ಮೋಹತ. ೩೯-೨೪). [ಸಮರ್ಥ + - ಇಕೆ]

**ಸಮರ್ಥಿಸು** (ಕ್ರಿ). ೧. ಪುಷ್ಟಿಕೊಡು; ಬೆಂಬಲಿಸು; ಅನುಮೋದಿಸು: ನಾಡಾಡಿಯಲ್ಲದ ತೀರ್ಥಸಾಮರ್ಥ್ಯಮಂ ಸಮರ್ಥಿಸುತುಂ (ಲೀಲಾವ. ೮-೬೨ ವ); ಈ ವಚನಗಳು . . . ಹರಿಹರನ ಕಥೆಯನ್ನು ಸಮರ್ಥಿಸುತ್ತವೆ (ಶೂನ್ಯಕು. ೮೧). ೨. ದೃಢಪಡಿಸು; ಖಚಿತಗೊಳಿಸು: ರೋಗ ಜೀವಾಣುಗಳಿಂದ ಸಂಭವಿಸುವುವೆಂಬ ತತ್ತ್ವವನ್ನು ಸಮರ್ಥಿಸಿತು (ವಿಕಾಸ. ೪೬); ಯಶೋದೆಯ ಮಾತನ್ನು ಆಕೆಯ ಪ್ರತಿಯೊಂದು ಕೆಲಸವೂ ಸಮರ್ಥಿಸುವಂತಿತ್ತು (ವಾತ್ಸಲ್ಯ. ೨೪೧).

**ಸಮರ್ಥಿಸಿಕೊಳ್ಳು** = ತನ್ನ ನಿಲುವು ಸರಿಯೆಂದು ಸಾಧಿಸು : ಅನುಭವ ಮಂಟಪದಲ್ಲಿ ನ್ಯಾಯಾಲಯದ ಮುಂದೆ ನಿರಪರಾಧಿ ನಿಂತಂತೆ ನಿಂತಳು. ತನ್ನನ್ನು ತಾನು ಸಮರ್ಥಿಸಿಕೊಂಡಳು (ಶೂನ್ಯಕು. ೧೨೩). [ಸಮರ್ಥನ + - ಇಸು$_3$]

**ಸಮರ್ಪಕ** (ಗು). ೧. ಸೂಕ್ತವಾದ ; ಸರಿಯಾದ : ಇದಕ್ಕೆ ಕೇಶಿರಾಜನಲ್ಲಿ ಸಮರ್ಪಕ ವಿವರಣೆ ಇಲ್ಲ (ದ್ರಾವಿವಿ. ೨೧೩). (ನಾ). ೨. ಸರಿಯಾದ ರೀತಿ,- ಕ್ರಮ : ಕೆಲಸವು ಸಮರ್ಪಕವಾಗಿ ನಡೆಯಬೇಕಾದರೆ . . . ಉಕ್ಕಿನ ನೇಗಿಲುಗಳನ್ನು ಉಪಯೋಗಿಸಬೇಕು (ವ್ಯವಮ. ೧೯); ಸಮಂಜಸವಾದ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರಗಳು (ಶೂನ್ಯಕು. ೧೧೩). [ಸಂ.]

**ಸಮರ್ಪಕತೆ** (ನಾ). ಯೋಗ್ಯತೆ ; ಅರ್ಹತೆ : ಒಂದು ಕ್ಷೇತ್ರದ ಕಾರ್ಯವನ್ನು ಅಳೆದು ಅದರ ಸಮರ್ಪಕತೆಯ ಮಟ್ಟವನ್ನು ನಿಷ್ಕರ್ಷಿಸು (ಶಿಕ್ಷದ. ೩೨೬). [ಸಂ. ಸಮರ್ಪಕತಾ]

**ಸಮರ್ಪಣ** (ನಾ). ೧. ನೀಡುವಿಕೆ ; ಅರ್ಪಿಸುವಿಕೆ : ವರಗಂಧ ಪುಷ್ಪ ಮೊದಲಾದ ಸದ್ವಸ್ತುಗಳ ಪರಿಮಳಗ್ರಹಣವೇಯರ್ಚನೆಯೆನಿಪುದು ತತ್ಪರಿಯಾಯದೊಳು ಷಡ್ರಸ ದ್ರವ್ಯದಾಸ್ವಾದನವೆ ಸಮರ್ಪಣವೆನಿಪುದು (ಲಶಿಚಂ. ೫೪-೩೯). ೨. [ಕಾವ್ಯಮೀ] ನಾಟಕದ ಏಳು ಅಂಗಗಳಲ್ಲಿ ಒಂದು : ಭಾಣಿಕಾ - ಇದರಲ್ಲಿಯೂ ಒಂದೇ ಅಂಕ . . . ಉಪನ್ಯಾಸ, ವಿನ್ಯಾಸ, ವಿಬೋಧ, ಸಾಧ್ವಸ, ಸಮರ್ಪಣ, ನಿವೃತ್ತಿ, ಸಂಹಾರ ಎಂಬ ಏಳು ಅಂಗಗಳು (ಸಂನಾಟ. ೩೬). [ಸಂ.]

**ಸಮರ್ಪಣಂಗೆಯ್** (ಕ್ರಿ). ಒಪ್ಪಿಸು ; ಅರ್ಪಣೆಮಾಡು : ಅಗ್ನಿಭೂತಿ ಸಂಯತಂಗೆ ಸಮರ್ಪಣಂಗೆಯ್ದು (ಸುಕುಮಾ. ೮-೫೮ ವ); ಖಂಡಪರಶುಗೆ ನಿಸಿತವಿಷವನಖಂಡಸದ್ಭಕ್ತಿಯೊಳಲರ್ದು ಸಮರ್ಪಣಂಗೆಯ್ದು (ಬಸಪು. ೫೮-೬೭). [ಸಮರ್ಪಣ + ಕೆಯ್$_1$]

**ಸಮರ್ಪಣಭಾವ** (ನಾ). ಅರ್ಪಿಸುವ ಮನೋಭಾವ ; ತ್ಯಾಗಬುದ್ಧಿ : ಅವಳ ಮುಖದಲ್ಲಿ ಆ ಸಮರ್ಪಣಭಾವ ತುಂಬಿಕೊಂಡಿದೆ (ಕುಸುಸಂ. ೨೨೬). [ಸಂ.]

**ಸಮರ್ಪಣೆ** (ನಾ). = ಸಮರ್ಪಣ ೧ : ದೇವರಿಗೆ ನೈವೇದ್ಯ ಸಮರ್ಪಣೆಯಾಗಿ . . . ಉಳಿದಿರುವ ಭಕ್ಷ್ಯಗಳನ್ನು ಇತರರಿಗೆ ಕೊಡುತ್ತಿದ್ದರು (ಶಾಸಗಿ. ೫೯) ; ಅನೇಕ ರಜತಪಾತ್ರೆಗಳ ಸಮರ್ಪಣೆಯೂ ಆಯಿತು (ಸಸ್ಕಕ. ೪೧). [ಸಂ. ಸಮರ್ಪಣ]

**ಸಮರ್ಪಿತ** (ಗು). ೧. ಒಪ್ಪಿಸಿದ ; ನೀಡಿದ : ಮೃಡಸಮರ್ಪಿತ ಕುಸುಮವಿಸರಕೆ ಮಡಗಿಯರ್ಧವನು ಜೆಡೆಗಳಂ ನಾಂ ತಳೆದೆ (ಬಸಪು. ೧೨-೧೮). (ನಾ). ೨. = ಸಮರ್ಪಣ ೧ : ವಿದಿತಸುರಾಧಿರಾಜಮಕುಟಾಗ್ರಸಮರ್ಪಿತದೊಳ್ ಮುನೀಂದ್ರನಾ ಪದಯುಗದೊಳ್ ಮನೋಮುದದೆ ಬಾಗುವೆಂ (ಕವಿರಾ. ೨-೧೦೯). [ಸಂ.]

**ಸಮರ್ಪಿಸು** (ಕ್ರಿ). ನೀಡು ; ಅರ್ಪಿಸು : ಸಮಸ್ತಭಾರಮೆಲ್ಲಮಂ ಕೂಸಿಂಗೆ ಸಮರ್ಪಿಸಿ (ವಡ್ಡಾರಾ. ೪೪-೨೪); ವಿಕ್ರಮಾರ್ಜುನನಂ ಕುಬೇರನಿಂ ಕಪ್ಪಂಗೊಳಲ್ ಸಮರ್ಪಿಸುವಂತೆ . . . ಪೇಟ್ಟಾಗಳ್ (ಪಂಪಭಾ. ೬-೨೮ ವ); ತನ್ನ ಬಲಗಣ್ಣನಂದತುಳ ಲಿಂಗಕೆ ಸಮರ್ಪಿಸೆ (ಚೆಬಪು. ೨೭-೭). [ಸಮರ್ಪಣ + - ಇಸು$_3$]

**ಸಮವಕಾರ** (ನಾ). [ಕಾವ್ಯಮೀ] ಹತ್ತು ಬಗೆಯ ರೂಪಕಗಳಲ್ಲಿ ಒಂದು; ಮೂರು ಅಂಕಗಳಿಂದ ಕೂಡಿರುವ ಇದರಲ್ಲಿ ದೇವಾಸುರರಿಗೆ ಸಂಬಂಧಪಟ್ಟ ವಸ್ತುವಿರುತ್ತದೆ : ಭಗವಜ್ಜನ್ಮಾಭಿಷೇಕಸಂಬಂಧಿಯಾಗೆ ತನ್ನ ಪೊಸತೆ ಸಮೆದ ಸಮವಕಾರರೂಪಕಮುಮಂ . . . ಸುರಾಸುರಸಭೆಗಂ ಮೆಱೆಯಲೆಂದು (ಆದಿಪು. ೭-೧೧೫ ವ); ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ - ಎಂದು ರೂಪಕಗಳು ಹತ್ತು ವಿಧ (ಸಂನಾಟ. ೨೯). [ಸಂ.]

**ಸಮವತೀರ್ಣ** (ಗು). ತಲೆದೋರಿದ ; ಕಾಣಿಸಿಕೊಂಡ : ಆ ತ್ರಿಲೋಕತಿಲಕನ ಜನ್ಮೋತ್ಸವದೊಳೇಕಸಮಯಸಮವತೀರ್ಣಸರ್ವರ್ತುಕನಂದನವಿಕಸದಶೋಕ . . . ವಿಕಸಿತ ಸಿಂಧುವಾರ ಪ್ರಬುದ್ಧ ಲೋಧ್ರಂಗಳಿಂ (ಆದಿಪು. ೭-೩೭ ವ). [ಸಂ.]

**ಸಮವಯ** (ನಾ). ಸಮಾನವಯಸ್ಸು ; ಓರಗೆ : ಅಂತು ನಿರ್ವರ್ತಿತತ್ರಿಭುವನಪತಿಭವೋತ್ಸವನಾಗಿ ಸಮವಯಾದಿ ವಿಜಯವಯಸ್ಕರುಮನಮರಧಾತ್ರೀಜನಮುಮಂ . . ನಿಯೋಜಿಸಿ (ಶಾಂತಿಪು. ೧೦-೮೦ ವ). [ಸಂ. ಸಮವಯಸ್]

**ಸಮವಯಸ** (ಗು). ೧. ಸಮಾನವಯಸ್ಸಿನ ; ಓರಗೆಯ : ಸಮವಯಸದಿವಿಜಖೇಟಕನವಪೇಟಕನಿಕರಮಗಲದಿರಲ್ (ಶಾಂತಿಪು. ೧೦-೮೧). (ನಾ). ೨. ಸಮಾನ ವಯಸ್ಸಿನವನು ; ಓರಗೆಯವನು : ಸಮವಯಸರ್ ಕೆಲದೊಳ್ ಮುನಿಕುಮಾರರಿರ್ವರ್ ಬರುತಮಿರೆ (ಕಾದಂಪೂ. ೨೦೧). [ಸಂ. ಸಮವಯಸ್]

**ಸಮವಯಸ್ಕ** (ನಾ). = ಸಮವಯಸ ೨ : ರಾಜಕುಮಾರನು ಆ ರಾಜ್ಯವನ್ನು ಸೇರಲು, ಸಮವಯಸ್ಕರು ಅವನ ಸುತ್ತ ನೆರೆದು ಅವನ ವೃತ್ತಾಂತವನ್ನು ಕೇಳಿದರು (ಮಣಿಸ. ೪೬). [ಸಂ.]

**ಸಮವರ್ತಿ** (ನಾ). ೧. ಎಲ್ಲರಲ್ಲೂ ಸಮಾನವಾಗಿರುವವನು ; ತಾರತಮ್ಯಭಾವವಿಲ್ಲದವನು ; ಸಮದರ್ಶಿ : ಭುವಿಯ ಪರಿಣಾಮದಲಿ ಸಿರಿ ಬಡತನಗಳೊಂದೆ ಜವರಾಯ ಸಮವರ್ತಿ (ಮಂಕುತ. ೬೩೨). ೨. ಯಮ : ಸಮವರ್ತಿಮರ್ದನಪುಣ್ಯಮೂರ್ತಿ . . . ಎಂದಿರದೆ ಪೊಗಳಿದ (ಭೈರವೇ. ೩-೧೦೫) ; ಪಾತಕರಿವರೆಂದೊಸೆದು ಮುನಿಪತಿಗೆ ತೋಱಿದನೆಸೆವಾ ಸಮವರ್ತಿಯಂದು (ಸಪ್ಪಾ. ೫-೧೪೩). ೧,೨ : ಈ ಮಹಾಪುರುಷಂ . . . ಸಮವರ್ತಿಯಾಗಿಯುಂ ದಕ್ಷಿಣದಿಕ್ಪಾಲಕನಲ್ತು (ಜಗಪಿ. ೮-೧೦ ವ). [ಸಂ. ಸಮವರ್ತಿನ್]

**ಸಮವಸರಣ** (ನಾ). [ಜೈನ] ಕೇವಲಜ್ಞಾನಿಯಾದ ನಂತರ, ತೀರ್ಥಂಕರನ ಉಪದೇಶಕ್ಕಾಗಿ ಇಂದ್ರನ ಅಪ್ಪಣೆಯಂತೆ ಕುಬೇರನಿಂದ ರಚಿತವಾದ ಮಂಟಪ : ಅಂತು ಸೌಧರ್ಮೇಂದ್ರಂ ಬಂದು ತನ್ನ ಬೆಸದೊಳ್ ಮುನ್ನಮೆ ಧನದವಿನಿರ್ಮಿತಮಾಗಿರ್ದ ಸಮವಸರಣಮಂ ಕಂಡಂ (ಆದಿಪು. ೧೦-೨೨ ವ) ; ಸಮವಸರಣವಧಿನಾಥನೆ ಜಯಜಯ (ನಾಗಕು. ೧೯-೩೪). [ಸಂ.]

**ಸಮವಸರಣಭೂಮಿ** (ನಾ). [ಜೈನ] ಸಮವಸರಣವಿರುವ ಪ್ರದೇಶ : ವಜ್ರಾಯುಧಂ ಪೋಗಿ ಸಮವಸರಣಭೂಮಿಯನೆಯ್ದಿ ಪಟ್ಟವರ್ಧನದಿಂದಮಿೞಿಯೆ (ಶಾಂತಿಪು. ೮-೧೫೫ ವ) ; ಅಂತಪಗತಕಲುಷರಿರ್ವರುಂ ಭಗವದಜಿತಭಟ್ಟಾರಕರ ಸಮವಸರಣಭೂಮಿಯಂ ಪೊಕ್ಕು (ಪಂರಾಮಾ. ೧೦-೯೨ ವ). [ಸಂ.]

**ಸಮವಸೃತಿ** (ನಾ). = ಸಮವಸರಣ : ಕೈಳಾಸಗಿರೀಂದ್ರಸ್ಥಿತಸಮವಸೃತಿಯಂ ಸಂಸೃತಿಲತಾವಿಚ್ಛೇದಿಯಂ ಪೊಕ್ಕು (ಆದಿಪು. ೧೫-೨೧ ವ) ; ಸೌಧರ್ಮೇಂದ್ರಂ . . . ಧನದಂಗೆ ಸಮವಸೃತಿಯಂ ನಿರ್ಮಿಸಲ್ವೇೞ್ದು (ಪುಷ್ಪಪು. ೧೪-೪೮). [ಸಂ.]

**ಸಮವಸ್ತ್ರ** (ನಾ). ಶಾಲೆಯ ವಿದ್ಯಾರ್ಥಿಗಳೂ ಕಾರ್ಖಾನೆ ಮುಂತಾದುವುಗಳ ನೌಕರರೂ (ಕಡ್ಡಾಯವಾಗಿ) ಹಾಕಿಕೊಳ್ಳಬೇಕಾದ ಏಕರೂಪದ ಉಡುಪು : ಸಮವಸ್ತ್ರವೇತಕೆ ಶಸ್ತ್ರಾಸ್ತ್ರವೇತಕೆ . . . ಯುದ್ಧವಿಲ್ಲದೆ ಗೆಲುವೆ ಧೀರ (ಇಂಚಾಪ. ೮೯-೩೧) ; ಅವರು ಸಮವಸ್ತ್ರ ಧರಿಸದೆ ಮಫ್ತಿಯಾಗಿ ಇದ್ದುಕೊಂಡು, ಒಂದೆರಡು ದಿನ ಹಳ್ಳಿಯಲ್ಲಿ ಬಿಡಾರ ಮಾಡಿದರು (ಊರುಕ. ೧೫೩). [ಸಂ.]

**ಸಮವಸ್ತ್ರಧಾರಿ** (ನಾ). ಒಂದೇ ತರದ ಉಡುಪನ್ನು ಹಾಕಿಕೊಂಡಿರುವವನು : ವಿದ್ಯಾರ್ಥಿ ವಿದ್ಯಾರ್ಥಿನಿಯರು ಸಮವಸ್ತ್ರಧಾರಿಗಳಾಗಿ ನಿಂತಿದ್ದಾರೆ (ಚಿತಸ. ೧೩೨). [ಸಂ. ಸಮವಸ್ತ್ರಧಾರಿನ್]

**ಸಮವಾಕ್ಯ** (ನಾ). ಏಕಾಭಿಪ್ರಾಯ : "ಸಮವಾಕ್ಯಮುಂ ಸರ್ವಸತ್ಯವಿಶ್ವತೆಯನು ಕ್ರಮದಿಂದ ಸರ್ವಥಾ ಶಬ್ದದೊಳು ಸಲ್ಲು" (ಮಂಗರಾ. ೧೫೫-೭೦). [ಸಂ.]

**ಸಮವಾಯ** (ನಾ). ೧. (ಅನೇಕವಸ್ತುಗಳು) ಕೂಡಿರುವುದು ; ಸೇರಿಕೆ : ಸಮವಾಯಮಪ್ಪುದಲ್ತೆಂದು ಮನಂ ಬಸಮಾಡಿ (ಆದಿಪು. ೫-೫೪) ; ಪದದೊಳೆರಡೆಂಬ ಸಂಖ್ಯೆಯೊಳಾಜಿಜ್‌ಒಳಜಗಣಂ ಸಮವಾಯಮಪ್ಪೊಡಕ್ಕುಂ . . . ಪಿರಿಯಕ್ಕರಂ (ಛಂದೋಂಬು. ೪-೨೫೨). ೨. ಬೇರ್ಪಡಿಸಲಾಗದ ಸಂಬಂಧ ; ಅವಿನಾಸಂಬಂಧ : ಸಮವಾಯಮುಳ್ಳೊಡೆಲ್ಲಂ ಸಮನಿಸುಗುಂ (ಕವಿರಾ. ೩-೬೫). ೩. ಗುಂಪು ; ಸಮೂಹ : ವಪುಘೋಷಸೂನುಬಳದುರ್ದಮಘೋಷಮದತ್ತದನ್ನ ನಡೆವಂ ಮುನ್ನಂ ಸಮವಾಯವೆತ್ತಿ ಬರೆ ರಿಪುಸಮವಾಯವದಲ್ಲವಾಯವಾತನೊಳಧಿಕಂ (ಜಗಪಿ. ೧೫-೫೪) ; ಕಾದಿದರು ಸಮವಾಯದಲಿ (ಉತ್ತರಾ. ೭-೪೩). ೪. [ತತ್ತ್ವಶಾ] ಸಪ್ತಪದಾರ್ಥಗಳಲ್ಲಿ ಒಂದು : ದ್ರವ್ಯ ಗುಣ ಕರ್ಮ ಸಾಮಾನ್ಯ ವಿಶೇಷ ಸಮವಾಯ ಅಭಾವ ಎಂಬ ಪದಾರ್ಥಸಪ್ತಕಮಂ ಪ್ರತಿಪಾದಿಸುವುದಱಿಂದ ಪ್ರಪಂಚಸ್ವರೂಪಮಂ ವಿವರಿಸಿ ವಿಭಾಗಿಸುತಿಕ್ಕುಂ (ವಿವೇಕ. ೧೦) ; ವೈಶೇಷಿಕದರ್ಶನದಲ್ಲಿ ಸಾಮಾನ್ಯವಾಗಿ ಪ್ರಪಂಚವನ್ನು ದ್ರವ್ಯ ಗುಣ ಕರ್ಮ ಸಾಮಾನ್ಯ ವಿಶೇಷ ಸಮವಾಯ ಮತ್ತು ಅಭಾವವೆಂದು ಏಳು ಪದಾರ್ಥಗಳಾಗಿ ವಿಭಾಗಮಾಡಿರುವರು (ಒಂದಸಾ. ೧೧೨). ೫. [ಜೈನ] ಜೈನಶಾಸ್ತ್ರದ ಹನ್ನೆರಡು ಅಂಗಗಳಲ್ಲಿ ಒಂದು ; "ದ್ರವ್ಯ ಮತ್ತು ಗುಣ ಜೊತೆಜೊತೆಯಾಗಿ ಬಾಳುವುದು" (ಜೈನಕೋ. ೬೨) : ಜೈನಶಾಸ್ತ್ರವು ೧೨ ಅಂಗ, ೧೪ ಪೂರ್ವಗಳೆಂದು ಎರಡು ವಿಧ . . . ಸ್ಥಾನ, ಸಮವಾಯ . . . ದೃಷ್ಟಿವಾದ ಎಂಬುವು ಹನ್ನೆರಡು ಅಂಗಗಳು (ಭಾತತ್ತ್ವ. ೨೨೮). [ಸಂ.]

**ಸಮವಾಯಿಕಾರಣ** (ನಾ). [ತತ್ತ್ವಶಾ] ಒಂದನ್ನೊಂದು ಅಗಲದೆ ಇರುವುದು ; ಅವಿನಾಭಾವ : ಕಾರ್ಯವು ಯಾವ ವಸ್ತುವಿನಿಂದ ಸಮವಾಯ ಎಂಬ ಸಂಬಂಧವನ್ನು ಹೊಂದಿ ಹುಟ್ಟುವುದೋ ಆ ವಸ್ತುವಿಗೆ ಸಮವಾಯಿಕಾರಣ ಎಂದು ಹೆಸರು (ಭಾತತ್ತ್ವ. ೨೮೫). [ಸಂ.]

**ಸಮವಿಡು** (ಕ್ರಿ). (ಮನಸ್ಸನ್ನು) ಸಮವಾಗಿಟ್ಟುಕೊಳ್ಳು ; ಸ್ತಿಮಿತದಲ್ಲಿಟ್ಟುಕೊಳ್ಳು : ಎರಡುಚಿಂತೆಯನುಗಿದು ಸಮವಿಟ್ಟೆರಡುಕೈತೂಕದಲಿ ತೂಗಿದು ಗುರುಲಘುವನಱಿದಿದುವೆ ಬಲವತ್ತರವಲಾ (ತೊರರಾ. ೩-೯-೧೪). [ಸಮ್ಮ + ಇಡು]

**ಸಮವೃತ್ತ** (ನಾ). ೧. ಸಮವೂ ವೃತ್ತಾಕಾರವೂ ಆಗಿರುವುದು : ಅದು ಭೂಭಾಗದಿಂದಮೈಸಾಸಿರದಂಡಂ ಮೇಗೆ ನೆಗೆದಲ್ಲಿ ಪನ್ನೆರಡುಯೋಜನ ಸಮವೃತ್ತಮುಂ . . . ಆಗಿ (ಆದಿಪು. ೧೦-೨೨ ವ) ; ಸಮವೃತ್ತೋದರಕೋಶಂ . . . ಸಮನಿಸೆ ತಾಂ ತುರಗಿ ನೋಡಲುತ್ತಮಮಕ್ಕುಂ (ಅಶ್ವಶಾ. ೧-೩೯). ೨. [ಛಂದ] ನಾಲ್ಕುಪಾದಗಳಲ್ಲೂ ಅಕ್ಷರ ಸಂಖ್ಯೆಗಳು ಮತ್ತು ಗಣವಿನ್ಯಾಸಗಳು ಒಂದೇ ರೀತಿಯಲ್ಲಿರುವ ಅಕ್ಷರವೃತ್ತ : ಸಮವೃತ್ತಮುಮಂ ವ್ಯಕ್ತತರಮಾಗೆ ಮೃದುಮಧುರೋಕ್ತಿಗಳಿಂ ತಿಳಿಯೆ ಪೇೞ್ದಂ (ಛಂದೋಂಬು. ೨-೨೦೦) ; ಕಂದಕ್ಕಿಂತ ಕಠಿಣವೆನಿಸುವ ರಚನೆ ಸಮವೃತ್ತದ ಪದ್ಯಗಳದು (ಸಂಶೋಧ. ೧೩೫). ೧, ೨ : ಸಮವೃತ್ತ [ಶಾತಾಂ. ತ್ರಿ]ಸಂಧಿಲಕ್ಷಣ ಸಮನ್ವಿತಂ ಜಾತ್ಯಲಂಕೃತಿಭ್ರಾಜಿತಮುತ್ತಮಕಾವ್ಯ ಬಂಧದಂತಾ ದಮಿತಾರಿಗೆ ಸಾಜಮೊಪ್ಪುಗುಂ ಕಿಱುದೊಡೆಗಳ್ (ಶಾಂತಿಪು. ೩-೪೬). [ಸಂ.]

**ಸಮವೃತ್ತಿ** (ನಾ). ಸಮಾನವಾಗಿ ಕಾಣುವುದು ; ತರತಮಭಾವವಿಲ್ಲದಿರುವಿಕೆ : ಗುಣಮಿದುದೋಷಮಿದೆಂಬೀ ಗಣಿದಪ್ಪುನೆತ್ತಳಿಗುಮಶ್ರುತಪ್ರಕೃತಿಜನಂ ತೃಣಸಸ್ಯಘಾಸವಿಷಯಪ್ರಣಯಂ ಸಮವೃತ್ತಿಯಪ್ಪವೋಲ್ ಮೃಗಗಣದೊಳ್ (ಕವಿರಾ. ೧-೮). [ಸಂ.]

**ಸಮವೆಱು** (ಕ್ರಿ). ಸಮಾನವಾಗು ; ಸಮತೆಯನ್ನು ಪಡೆ : "ಹೊತ್ತು ಕ್ರಿಯಾ ಪ್ರಮಾಣಂ ತಾಳಮೆನಿಕ್ಕು ಸಮವೆತ್ತಲ್ಲಿ ಲಯಮೆನಿಕ್ಕು" (ಮಂಗರಾ. ೨೪-೬). [ಸಮ್ಮ + ಪೆಱು]

**ಸಮವೇತ** (ಗು). ೧. ಜೊತೆಗೂಡಿರುವ ; ಒಟ್ಟಾಗಿ ಸೇರಿದ. ೨. ನಿಕಟವಾಗಿರುವ. [ಸಂ.]

**ಸಮವೇದನೆ** (ನಾ). ಸಮಾನವಾದ ಅರಿವು,— ತಿಳಿವಳಿಕೆ : ಅವರ ನಡುವೆ ಸಮವೇದನೆ ಇಲ್ಲ (ಬಂಕಿಮ. ೪೭೮). [ಸಂ. ಸಮವೇದನ]

**ಸಮವೇದಿಸು** (ಕ್ರಿ). ಸಮರಸವಾಗು ; ಐಕ್ಯಗೊಳ್ಳು : ಜೀವ ಜೀವಾತ್ಮ ಸರಿಯೆಂದು ಕಂಡರೆ ಸಮವೇದಿಸದಿಪ್ಪನೆ ಶಿವನು (ಬಸವ. ೮೦೪) ; ತೆಱನಱಿದಱಿವೆಂಬ ದಿವ್ಯ ಭಾಜನದಲ್ಲಿ ಪರಮಾನಂದಪದಾರ್ಥವನು ಸಲಿಸಿ ಕೂಡಲಚೆನ್ನಸಂಗನಲ್ಲಿ ಸಮವೇದಿಸಿ ಎರಡಱಿಯದಿಪ್ಪ ಲಿಂಗಸಂಗಿ (ಶಿವಗೀ. ೬೧-೨೯೧). [ಸಮ್ಮ + ವೇದಿಸು]

**ಸಮವೇಧನ** (ನಾ). ಸಮಾನವಾಗಿ ಇರಿಯುವಿಕೆ,— ಚುಚ್ಚುವಿಕೆ : ಸಮಕೃಷ್ಟಂ ಸಮವೇಧನಂ ಸಮಭವತ್ಸಂಧಾನಮೆಂದಿರ್ವರೇಸುಮನಾಗಳ್ ನಡೆ ನೋಡಿ ನೋಡಿ ವಿಭು . . . ಕೆಮ್ಮಗಿರ್ಪುದುಂ (ಶಾಂತಿಪು. ೪-೪೮). [ಸಂ.]

**ಸಮಶೀತೋಷ್ಣ** (ಗು). ಶೀತ ಮತ್ತು ಉಷ್ಣವು ಸರಿಸಮವಾಗಿರುವ: ಅಯನವೃತ್ತಗಳಿಂದ ಧ್ರುವವೃತ್ತಗಳವರೆಗೆ ಶಕೆಯೂ ಚಳಿಯೂ ಸಾಧಾರಣವಾಗಿ ಸಮಾನವಿರುವ ಕಾರಣ ಅವೆರಡು ಪಟ್ಟಿಗಳಿಗೆ ಸಮಶೀತೋಷ್ಣ ಕಟಿಬಂಧಗಳೆನ್ನುವರು (ಮುಂಬಯಿ. ೬-೬೫); ಕರ್ಕಾಟಕ ಸಂಕ್ರಾಂತಿವೃತ್ತಕ್ಕೂ ಉತ್ತರಮೇರುವೃತ್ತಕ್ಕೂ ನಡುವೆ ಇರುವ ಭಾಗವು ಉತ್ತರಸಮಶೀತೋಷ್ಣವಲಯ (ಭೂವಿವ. ೧೯). [ಸಂ.]

**ಸಮಷ್ಟಿ** (ನಾ). ೧. ಸಂಪೂರ್ಣವಾದುದು ; ಸಮಗ್ರವಾದುದು : ಗುಣವ ಝಾಡಿಸಿದರೆ ಸಮಷ್ಟಿಯ ಹಣೆತದಲಿ ಮುರಿದಿದಿರನಗಲಕೆ ಕುಣಿವ ಚೌಪಟ ಬೊಮ್ಮಗಜವಿದನಱಿವರಾರೆಂದ (ಕುವ್ಯಾಸ. ೯-೧೫). ೨. ಒಟ್ಟುಗೂಡಿರುವಂಥದು; ಒಟ್ಟಾದುದು : ಆ ಶಕ್ತಿ ಮೂರ್ತಿಗೊಳೆ ನಾಮದನ್ನವತಾರಮೆಂದು ಪೂಜಿಪೆವಲ್ತೆ ಪೇಳ್ ವ್ಯಷ್ಟಿರೂಪದಿನಿಳಿವ ಸೃಷ್ಟಿಯ ಸಮಷ್ಟಿಯಂ? (ಶ್ರೀರಾಮಾ. ೧೧-೨೯೬); ವ್ಯಷ್ಟಿಯಲ್ಲಿ ಸಮಷ್ಟಿ, ಸಮಷ್ಟಿಯಲ್ಲಿ ವ್ಯಷ್ಟಿ ಕಂಡುಬಂದಂತೆ ಅಕ್ಕನ ಜೀವನದಲ್ಲಿ ಹತ್ತಾರು ಮುಖಗಳನ್ನೂ ಕಾಣಬಹುದು (ಕರ್ನಾಕ. ೭೪). 'ವ್ಯಷ್ಟಿ' ಪರಾ. [ಸಂ.]

**ಸಮಷ್ಟಿಪ್ರಜ್ಞೆ** (ನಾ). ಸಾಮಾಜಿಕ ಅರಿವು : ಜ್ಞಾನವಾಹಿನಿ ನಾಡಿನ ಮೂಲೆ ಮೂಲೆಗಲ್ಲ ಹರಿದು ಸಮಷ್ಟಿಪ್ರಜ್ಞೆ ವಿಕಾಸಗೊಳ್ಳಲನುಕೂಲವಾಗುತ್ತದೆ (ಪರಜೀ. IV. ಮುನ್ನುಡಿ). [ಸಂ. ಸಮಷ್ಟಿಪ್ರಜ್ಞಾ]

**ಸಮಷ್ಟಿಹಿತ** (ನಾ). ಸಮುದಾಯದ ರಕ್ಷಣೆ ,— ಕ್ಷೇಮ : ಸಮಷ್ಟಿಹಿತದಲ್ಲಿ ವ್ಯಷ್ಟಿಹಿತವನ್ನು ಕಾಣುವ ಆಧ್ಯಾತ್ಮಕಪ್ರವೃತ್ತಿಯೊಂದು . . . ಮೃಗೀಯಪ್ರವೃತ್ತಿ ಮತ್ತೊಂದು (ಪುನರು. ೬೭). [ಸಂ.]

**ಸಮಸಂಸ್ಕೃತ** (ನಾ). ಅಲ್ಪ ವ್ಯತ್ಯಾಸದೊಂದಿಗೆ ಅಥವಾ ಯಾವ ವ್ಯತ್ಯಾಸವೂ ಇಲ್ಲದೆ, ಕನ್ನಡದಲ್ಲಿ ಬಳಕೆಯಾಗುವ ಸಂಸ್ಕೃತಶಬ್ದ : ಸಮಸಂಸ್ಕೃತಂಗಳೊಳ್ ಸಯ್ತುಮರ್ದಿರೆ ಕನ್ನಡಮನಱಿದು ಪೇೞ್ಗೆಂಬುದಿದಾಗಮಕೋವಿದನಿಗದಿತ ಮಾರ್ಗಂ (ಕವಿರಾ. ೧-೫೧); ಬೆರಸಿ ಸಮಸಂಸ್ಕೃತಂಗಳ್ ಬರೆ ಕನ್ನಡದೊಳಗೆ ಸಮತೆಯಿಂದಂ ಸಲ್ಗುಂ (ಕಾವ್ಯಾವ. ೨೮೨) ; ನಾಮಪದೋತ್ತಮವರ್ಣಪ್ರಕೃತಿಗಳಂ ಸಮಸಂಸ್ಕೃತವೆಸರನಿಟ್ಟು ಲಿಂಗಂ ಮಾಳ್ಪರ್ (ಶಮದ. ೮೦). [ಸಂ.]

**ಸಮಸತ್ತ್ವ** (ನಾ). ಸರಿಸಮಾನವಾದ ಸಾಮರ್ಥ್ಯ : 'ಸಮಸತ್ತ್ವಂಬಡು' ಪರಾ. [ಸಂ.]

**ಸಮಸತ್ತ್ವಂಬಡು** (ಕ್ರಿ). ಸಮಾನವಾದ ಸಾಮರ್ಥ್ಯವನ್ನು ಹೊಂದು: ಸಂಭೋಗನೀಪ್ರಾಂತದೊಳ್ ಸಮಸತ್ತ್ವಂಬಡುವಂತಿರಾಯ್ತು ಸುರತಪ್ರಾರಂಭಕೋಳಾಹಳಂ (ಕಾವ್ಯಸಾ. ೬೫೭). 'ಸಮಹಸ್ತಂಬಿಡಿ' ಪರಾ. [ಸಮಸತ್ತ್ವ + ಪಡು$_1$]

**ಸಮಸತ್ವ** (ನಾ). ೧. = ಸಮಸತ್ತ್ವ : ಸಮವಂಶದೆ . . . ಸಮಸತ್ವಮನದೆ ಸಮಾನುರಾಗದೆ ಸಮಸಂದತ್ತವರ್ಗೆ ಸಮವಯೋಯೋಗಸುಖಂ (ಕಾದಂಪೂ. ೭೧೬). ೨. ಸಮಾನವಾದ ಶಕ್ತಿಯುಳ್ಳವನು; ಸರಿಸಮನಾದವನು: ಸೆಣಸರು ನೀಚರೊಳಧಿಕಸಮರ್ಥರು ಸಮಸತ್ವರೊಳು ಸೆಣಸುವರು (ಇಂಚಾಪ. ೧೩೯-೮೨). [ಸಂ.]

**ಸಮಸಪ್ತಕ** 'ಸಂಸಪ್ತಕ' ನೋ.

**ಸಮಸಮಾಯೋಗ** (ನಾ). ವಯಸ್ಸು, ಸ್ವಭಾವ ಮುಂತಾದುವುಗಳಲ್ಲಿರುವ ಹೊಂದಾಣಿಕೆ : ಸದೃಶಾಕಾರರನಿವರಂ ಕೂಡಿ ಪಯೋರುಹಜಂಗಕ್ಕೆ ಸಮಸಮಾಯೋಗಯಶಂ (ಆದಿಪು. ೪-೨೯); ಆ ಕಂದರ್ಪಕಲ್ಪಲತೆಯ ಸಮಸಮಾಯೋಗ ಸಮುಪಕ್ರಮಿತ ಕಾಲಧಾತುವಯೋನುರೂಪಕರಣ ಪರಿರಂಭಚುಂಬನಕಳಾ ಸಾಮಗ್ರಿಯಿಂ . . . ಕಾಲಮಂ ಸಲಿಸುತ್ತುಮಿರೆ (ಚಂದ್ರಪು. ೨-೧೭). [ಸಂ.]

**ಸಮಸಲ್** (ಕ್ರಿ.) ೧. ಸರಿಸಮವಾಗಿರು ; ಸಮಾನವಾಗಿ ಸೇರು : ಬೇಡ ವಿರೋಧಮೆಂತುಮರಿಕೇಸರಿಯೊಳ್ ಸಮಸಂದು ಸಂಧಿಯಂ ಮಾಡು (ಪಂಪಭಾ. ೧೩-೫೪); ತತ್ತ್ವಮುಂ ಕವಿತ್ವಮುಮೆತ್ತಂ ಸಮಸಂದಿರೆ ಪೇೞ್ಗೋಜೆಗೆ ಧನಂಜಯಂಗೆ ಕವಿತಾಗಮಿಕರ್ (ಸುಕುಮಾ. ೧-೬೭). ೨. ಉಂಟಾಗು; ಪ್ರಕಟವಾಗು : ಸಮಾನುರಾಗದೆ ಸಮಸಂದತ್ತವರ್ಗೆ ಸಮವಯೋಯೋಗಸುಖಂ (ಕಾದಂಪೂ. ೭೧೬); ಎನ್ನ ಸರಿದೊರೆಯನೊಡನೆ ಸಮಸಲ್ಲ ಮದುವೆಯೆನೆ ಸಲ್ಲದಂಜಿಕೆಪಟ್ಟು ಸಡೆಯೆ ನಾನ್ (ಬಿಧ್ವಪ್ರ. ೪೭-೧೦೩೨). [ಸಮ್$_3$ + ಸಲ್$_1$]

**ಸಮಸಾಮಯಿಕ** (ಗು). ೧. ಒಂದೇ ಕಾಲಕ್ಕೆ ಸೇರಿದ ; ಸಮಕಾಲೀನವಾದ: ನಿನ್ನೆಗಳು ಇಂದಿನಲ್ಲಿ ಮಾರ್ಪಡುತ್ತ ಬಂದುದನ್ನು ಸಮಸಾಮಯಿಕ ಕಾರ್ಯಕಾರಣಸಂಬಂಧದಲ್ಲಿ ವಿವರಿಸುವುದು ಇತಿಹಾಸದ ಕಾರ್ಯ (ಕರ್ನಾಟ. XIV. ಮುನ್ನುಡಿ); ನಿರ್ಧಾರಕ ಸಮಸಾಮಯಿಕ ಪ್ರಮಾಣಗಳು ಸಿಕ್ಕುವವರೆಗೆ ಸಮಂಜಸವಾಗುವುದಿಲ್ಲ (ಕರ್ನಾಅ. ೧೦೮). (ನಾ). ೨. ಒಂದೇ ಕಾಲಕ್ಕೆ ಸಂಬಂಧಿಸಿದುದು; ಸಮಕಾಲೀನವಾದುದು : ಸಮಸಾಮಯಿಕವಾದ ಸಾಹಿತ್ಯಸಮೀಕ್ಷೆ ಸುಲಭವಲ್ಲ (ಚಿತ್ರಸ್ಯ. ೩); ಆ ಸಾಹಿತ್ಯವೂ ಅವನ ಸಮಸಾಮಯಿಕವಾಗಿರದೆ, ಅವನ ಐತಿಹಾಸಿಕತೆಯನ್ನು ಕುರಿತು . . . ಬಸವರಾಜದೇವರ ರಗಳೆಯಿಂದಲೂ ಈ ಕೆಲವು ಶಾಸನಗಳಿಂದಲೂ ಆ ತೊಡಕು ಸಾಕಲ್ಯವಾಗಿ ನೀಗುತ್ತದೆ (ಮೂರುಉ. ೫೯). ೩. ಒಂದೇ ಕಾಲದಲ್ಲಿದ್ದವನು; ಸಮಕಾಲೀನ ವ್ಯಕ್ತಿ : ಅಲ್ಲಮ ಗೋರಕ್ಷಕರು ಸಮಸಾಮಯಿಕರೆಂದ ಮೇಲೆ ಅವರ ಗುರುಗಳು . . . ಒಬ್ಬರೇ ಆಗಿರುವ ಸಂಭವವಿದೆ (ಸಾಹಿಸಂ. ೧೪೭); ಪುರಂದರದಾಸರೂ ಕನಕದಾಸರೂ ಸಮಸಾಮಯಿಕರೂ ಸಮವಯಸ್ಕರೂ ಇದ್ದಿರಬಹುದು (ಕರ್ನಾಜ. ೮೧). [ಸಂ.]

**ಸಮಸೀಳು** (ನಾ). ಸಮಾನವಾಗಿ ಕತ್ತರಿಸಿದ ಭಾಗ ,— ಪಾಲು : ಗದೆಗೊಂಡು ತಿರುಗಿ ಹೊಯ್ವನು . . . ಕರಿಯೊಡಲು ಸಮಸೀಳ ಸೀಳಲು (ಕುವ್ಯಾಕ. ೧೦-೭); ನಿಳಿನಿಳಿಲುನಿಟಿಲೆಂದು ಬದಿಯೆಲು ಕಳಚೆ ಸಮಸೀಳಾಗಿ ಸೀಳಿದು (ತೊರರಾ. ೫-೧-೨೧). [ಸಮ್$_3$ + ಸೀಳು$_2$ (< ಸೀಳ್$_2$)]

**ಸಮಸು** 'ಸಮೆಯಿಸು$_2$' ನೋ.

**ಸಮಸೂಚಿ** (ನಾ). [ನಾಟ್ಯ] ಇಪ್ಪತ್ತುಮೂರು ದೇಶೀಯಸ್ಥಾನಕಗಳಲ್ಲಿ ಒಂದು ; IP ಹಿಮ್ಮಡಿ, ಕಣಕಾಲು ಮತ್ತು ತೊಡೆ — ಈ ಮೂರೂ ನೆಲಕ್ಕೆ ತಾಗುವಂತೆ ಎರಡುಕಾಲುಗಳನ್ನೂ ಅಡ್ಡಲಾಗಿ ಚಾಚುವುದು : ಸ್ವಸ್ತಿಕ . . . ಸಮಸೂಚೀ . . . ವೃಷಭಾಸನ – ಈ ಇಪ್ಪತ್ತಮೂಱು ದೇಶೀಯಸ್ಥಾನಕಂಗಳ್ (ಲಾಸ್ಯರಂ. ೭-೧೨ ವ). [ಸಂ.]

**ಸಮಸ್ಕಂಧ** (ನಾ). ಸರಿಸಮಾನನಾದ ವ್ಯಕ್ತಿ ; ಸರಿಜೋಡಿಯಾದವನು: ರಾಮಲಕ್ಷ್ಮಣರ್ ಬಾಂಧವರಪ್ಪುದಂ ಬಗೆವುದೇಳಿಸುವಂತವರ್ಗಾರುಮೇಂ ಸಮಸ್ಕಂಧರೆ ಯುದ್ಧದೊಳ್ (ಪಂರಾಮಾ. ೧೨-೭೦); ಸಂಗ್ರಾಮದೊಳು ನಿರ್ಜ್ಜಿತಮದನನೆನಿಪಂ . . . ಸಮಸ್ಕಂಧನೇ ಮಾಯಿದೇವ (ಎಕ. VII, ಶಿಕಾರಿ. ೧೦೪-೨೭ ; 1156). [ಸಂ.]

**ಸಮಸ್ಖಲಿತ** (ನಾ). [ನಾಟ್ಯ] ದೇಶೀಯ ಭೌಮಚಾರಿಗಳಲ್ಲಿ ಒಂದು: ಪಿಂತಣ್ಗಂ ಮುಂತಣ್ಗಂ ಕಾಂತೇ ಕೇಳಡ್ಡಮಾಗುತೆರಡುಂ ಪಾದಂ ಸಂತತಮಗಲದೆ ಸಮದಿಂದಂ ತವೆ ಚರಿಸಲ್ಕೆ ಮೇ[ಣ್] ಸಮಸ್ಖಲಿತಾಖ್ಯಂ (ಲಾಸ್ಯರಂ. ೬-೪೯). [ಸಂ.]

**ಸಮಸ್ತ** (ಗು). ೧. ಸಕಲ ; ಸಂಪೂರ್ಣ ; ಎಲ್ಲ : ಶ್ರೀಗಂ ವಿಜಯಕ್ಕಂ ಮೊತ್ತಮೊದಲಿಗನಾಗಿಯೆ ಸಮಸ್ತರಾಜಿಕಮನೆಱಗಿಸಿ (ಶಾಂತಿಪು. ೫-೭೩ ವ). ೨. ಒಟ್ಟುಗೂಡಿದ ; ಸಂಯುಕ್ತ. (ನಾ). ೩. ಒಟ್ಟಾದುದು ; ಸೇರಿದುದು : ಯುದ್ಧದಲ್ಲಿ ಮಡಿದು ಪೋದ ಸಮಸ್ತವಾದ ಪುತ್ರಮಿತ್ರಜ್ಞಾತಿಬಂಧುವರ್ಗಂಗಳ್ಗೆ ತಿಲೋದಕ ಪಿಂಡಬಲಿಪ್ರದಾನಂಗಳನೆಸಗಿ (ಭಾರಶಾಂ. ೧). ೪. [ವ್ಯಾಕ] ಅನೇಕ ಪದಗಳನ್ನು ಸೇರಿಸಿ ಮಾಡಿರುವ ಪದ ; ಸಮಾಸ : ಸಮಸ್ತಾಶ್ರಿತಂ ಸಮಸ್ತಂ ಸಮಸ್ತರೂಪಕಮಕ್ಕುಂ (ಕವಿರಾ. ೩-೧೩).

ಸಮಸ್ತಭುವನಾಶ್ರಯ = ಸಕಲಲೋಕಕ್ಕೇ ಆಶ್ರಯನಾದವನು ; ಒಂದು ಬಿರುದು : ಸ್ವಸ್ತಿಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭಮಹಾರಾಜಾಧಿರಾಜ ಪರಮೇಶ್ವರಪರಮಭಟಾರಕಂ (ಸೌಇಇ. XX, ೪೬-೩; 1072). **ಸಮಸ್ತರು** = ಮುಖ್ಯಸ್ಥರು ; ಮುಖಂಡರು : ಹಾಱುನಾಡುಸಮಸ್ತರ ವೊಪ ಬೆಲತೂರ ಜಂಗಿನಿಗಳ ವೊಪ (ಸೌಇಇ. IX-ii, ೪೭೯-೧೫; 1510); ಸಾಯಂಕಾಲ ಚಾವಡಿಯಲ್ಲಿ ಹಳ್ಳಿಯ ಸಮಸ್ತರೆಲ್ಲ ಕೂಡಿದರು (ಬವರಿ. ೮೪). [ಸಂ.]

**ಸಮಸ್ತಪದ** (ನಾ). [ವ್ಯಾಕ] ಬೇರೆ ಮಾಡಲಾಗದ ಪದಪುಂಜ; ಸಮಾಸಪದ: ಬಾಹುಶಾಖೆ (ತೋಳ್‌ಗವಲು), ಕಾಂತಾಲತೆ (ಪೆಣ್‌ಬಳ್ಳಿ)– ಇವೆಲ್ಲ ಸಮಸ್ತಪದಘಟಿತ ರೂಪಕಗಳು (ಕವಿರಾ. ೩-೧೩ ಟಿಪ್ಪಣಿ). [ಸಂ.]

**ಸಮಸ್ತಭಾರತ** (ನಾ). ೧. ಸಮಗ್ರವಾದ ಭಾರತದ ಕಥೆ. ೨. ಐತಿಹಾಸಿಕ, ಪೌರಾಣಿಕ ಹಾಗೂ ಸಮಕಾಲಿಕ ಸಂಗತಿಗಳನ್ನು ಸಂಕ್ಷೇಪಿಸಿ ಒಂದು ಚೌಕಟ್ಟಿನೊಳಗೆ ಸಮಾವೇಶಗೊಳಿಸಿರುವ ಕಾವ್ಯ : ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾರತಮನಪೂರ್ವಮಾಗೆ ಸಲೆ ಪೇೞ್ದ [ಕವೀಶ್ವರರಿ]ಲ್ಲ . . . ಪೇೞ್ವೊಡೆ ಪಂಪನೆ ಪೇೞ್ಗುಂ (ಪಂಪಭಾ. ೧-೧೧); ಸಮಸ್ತಭಾರತಕಥಾಸಂಬಂಧಮಂ ಬಾಜಿಸಲ್ . . . ಅಕ್ಕುಂ . . . ಭದ್ರಂ ಶುಭಂ ಮಂಗಳಂ (ಪಂಪಭಾ. ೧೪-೬೫). [ಸಂ.]

**ಸಮಸ್ತರೂಪಕ** (ನಾ). [ಕಾವ್ಯಮೀ] ರೂಪಕಾಲಂಕಾರದ ಒಂದು ಪ್ರಭೇದ; ಸಮಾಸಪದಘಟಿತವಾದ ರೂಪಕ : ಬಾಹುಶಾಖಂ ಕಾಂತಾಲತೆಯೆಂದಿಂತು ಸಮಸ್ತಾಶ್ರಿತಂ ಸಮಸ್ತಂ ಸಮಸ್ತರೂಪಕಮಕ್ಕುಂ (ಕವಿರಾ. ೩-೧೩). [ಸಂ.]

**ಸಮಸ್ಪರ್ಧಿ** (ನಾ). ಸರಿಸಮನಾದ ಎದುರಾಳಿ : ಸ್ಕೂಸ್ಗೆ ಸಮಸ್ಪರ್ಧಿಯಾಗಿ ಸೆಟೆದು ನಿಲ್ಲುವ ಧೀರ ಅವನು (ಬದ್ಧಪ್ರ. XXX, ನಾಟಕದ ಸಮಸ್ಯೆ). [ಸಂ. ಸಮಸ್ಪರ್ಧಿನ್]

**ಸಮಸ್ಯ** (ಗು). ೧. ಜೊತೆಗೂಡಿಸಬೇಕಾದ ; ಸೇರಿಸಬೇಕಾದ. ೨. ಪೂರ್ಣಗೊಳಿಸಬೇಕಾದ. (ನಾ). ೩.= ಸಮಸ್ಯೆ ೨ : ಸಲೆ ಸಮಸ್ಯದನಂತಪದ್ಯವ ಘಳಿಲನನ್ನೆಸುವ . . . ಕವಿಗಳೊಪ್ಪಿದರು (ಕುಮ್ವಾಉ. ೮-೩೭). [ಸಂ.]

**ಸಮಸ್ಯಾತ್ಮಕ** (ನಾ). ಸಮಸ್ಯೆಗಳಿಂದ ಕೂಡಿದುದು ; ಬಗೆಹರಿಸಲಾಗದುದು: ಅವರ ಚಲನವಲನಗಳು ಅನೇಕರಿಗೆ ಸಮಸ್ಯಾತ್ಮಕವಾಗುತ್ತಿದ್ದುವು (ಭೃಮಾನ. ೬೭). [ಸಂ.]

**ಸಮಸ್ಯೆ** (ನಾ). ೧. ಅಪೂರ್ಣವಾದುದನ್ನು ಪೂರ್ಣಗೊಳಿಸುವುದು ,– ಪೂರ್ತಿಮಾಡುವುದು. ೨. [ಕಾವ್ಯಮೀ] ಪದ್ಯದ ಒಂದು ಪಾದ ಅಥವಾ ಶ್ಲೋಕದ ಅರ್ಧಭಾಗವನ್ನು ಬರೆದು, ಉಳಿದ ಭಾಗವನ್ನು ಪೂರ್ತಿ ಮಾಡಲು ಇತರರಿಗೆ ಕೊಡುವುದು; ಕವಿಶಕ್ತಿಪರಿಜ್ಞಾನಾರ್ಥವಾಗಿ ಪೂರೈಸುವುದಕ್ಕೆ ಕೊಡುವ ಪದ್ಯದ ಕೆಲವು ಭಾಗ : ಲಲಿತಮಾನಸಸಮಸ್ಯೆಯ ಪೇಳುವಖಿಳಗವಿಗಳ ಬೆನ್ನ ಚಮ್ಮಟಿಗೆ ವಿಷಮದ ಸಮಸ್ಯೆಯಿತ್ತಳುಕಿಸುವೆನೆಂಬ ಕವಿಯ ತಲೆಗೆಱಪ ಬಱಸಿಡಿಲು (ರಾಘಚ. ೧೪-೬೯); ಸಮವಿಷಮಂಗಳೆಂಬಿನ ಮರಟ್ಟೆಱದಿಂ ಪಲವುಂ ಸಮಸ್ಯೆಯಂ ಸಮನಿಸುತೆ ಬಿನದಿಕುಂ ಚಿಕದೇವಂ (ಚಿಕವಿ. ೫-೧೫೯); 'ಕಂತಿ – ಪಂಪರ ಸಮಸ್ಯೆಗಳು' ಎಂದು ಪ್ರಕಟವಾದ ಪದ್ಯಗಳ ಶೈಲಿಯನ್ನು ನೋಡಿದರೆ, ಅದು ನಾಗಚಂದ್ರನ ಕಾಲದ ಹಳೆಗನ್ನಡದಂತೆ ತೋರದು (ಕರ್ನಾಕ. ೬೩). ೩. (ಅಲಂ) ತೊಡಕು; ತೊಂದರೆ : ಅರ್ಥಸಂಪತ್ತು ಜೀವನದ ಇತರ ಸಮಸ್ಯೆಗಳನ್ನು ದೂರಮಾಡಿತು (ಬುಕ್ಕಾರ. ೧೯೯ ಪೀಠಿಕೆ); ಇದು ಗಂಭೀರವಾದ ಸಮಸ್ಯೆಗಳಿಗೆ ಮುನ್ನುಡಿಯಾಗುವುದರಲ್ಲಿ ಸಂಶಯವಿಲ್ಲ (ದೇಕನ್ನ. ೩೯). [ಸಂ. ಸಮಸ್ಯಾ]

**ಸಮಹಸ್ತ** (ನಾ). [ಸಂಗೀತ] (ನರ್ತನದ ಲಯಕ್ಕನುಗುಣವಾದ) ವಾದ್ಯವಾದನದ ಒಂದು ಪ್ರಕಾರ : ವಿತತಘನಾವನದ್ಧಸುಷಿರಂಗಳನೂರ್ಮೆಯೆ ಕೂಡೆ ಕೂಡಿಕೊಂಡತಿದ್ರುತವಾದಕರ್ತಗುಳ್ ಬಾಜಿಸೆ . . . ನರ್ತನಪೂರ್ವರಂಗಸಂಗತ ಸಮಹಸ್ತವಿಸ್ತೃತರವಂ ಪುದಿದತ್ತು ನಭೋವಿಭಾಗಮಂ (ಮಲ್ಲಿಪು. ೮-೨೭). [ಸಂ.]

**ಸಮಹಸ್ತಂಬಿಡಿ** (ಕ್ರಿ). ಸಮಾನವಾಗಿರು (?) : ಸಮಸಂದಟ್ಟಿಱಲಂಪನೀಯೆ . . . ತಚ್ಛಯ್ಯೆಯೊಳ್ ಸಮಹಸ್ತಂಬಿಡಿವಂತುಟಾಯ್ತು ಸುರತಪ್ರಾರಂಭಕೋಳಾಹಳಂ (ಪಂಪಭಾ. ೪-೧೦೯); ಸಮಹಸ್ತಂಬಿಡಿವಂತುಟಾಯ್ತು = ಸಮಾನಪ್ರಮಾಣ ವುಳ್ಳದ್ದಾಯಿತು (?) (ಪಂಪದೀ. ೧೭೭). 'ಸಮಸತ್ತ್ವಂಬಡು' ಪಠಾ. [ಸಮಹಸ್ತ$_1$ + ಪಿಡಿ$_1$]

**ಸಮಹುದ್ದರಿ** (ನಾ). ೧. ಸರಿಯಾದ ಜೋಡಿ : ಸಮಹುದ್ದರಿಯ ಕುಸ್ತಿಯೇ ಜನರು ಮೆಚ್ಚುವಂತಹ ಕುಸ್ತಿಯಲ್ಲವೆ? (ಮಾಧವ. ೩೦೭) . ೨. ಸರಿಸಮನಾದ ಎದುರಾಳಿ: ಇಬ್ಬರೂ ಸಮಹುದ್ದರಿಗಳಾದುದರಿಂದ . . . ಯಾರ ಸೀಮೆಯನ್ನೂ ಯಾರೂ ಅತಿಕ್ರಮಿಸದಂತೆ ಮಾಡಿತ್ತು (ಮಾತನಾ. ೬೬). [ಸಮ್ಮ$_1$ + ಹುದ್ದರಿ]

**ಸಮಳ್ಗಡೆ** 'ಸವಳದೆ' ನೋ.

**ಸಮಱಿಸು, ಸವರಿಸು$_1$, ಸವಱಿಸು** (ಕ್ರಿ). ೧. ಓರಣಗೊಳಿಸು ; ಸ್ವಚ್ಛಮಾಡು: ಕಂಸಂ . . . ಈ ಮಲ್ಲಯುದ್ಧಭೂಮಿಯಂ ಸಮಱಿಸಲ್ (ನೇಮಿಪು. ೬-೧೩೧ ವ). **ಸವರಿಸು$_1$** : ೨. ಮರಗಿಡಗಳ ಕೊಂಬೆಯ ಕವಲುಗಳನ್ನು ಕತ್ತರಿಸುವಂತೆ ಮಾಡು : ಅಲ್ಲಿ ಹುಟ್ಟಿದ ಗಿಡ, ಬಳ್ಳಿಗಳನ್ನು ಸವರಿಸಿ, ಚೊಕ್ಕಟ ಮಾಡಿಸಿದ್ದ (ಮೂಕಜ್ಜ. ೧೪೯). **ಸವಱಿಸು** : ೩ . ನಾಶಮಾಡು; ನಿರ್ಮೂಲಗೊಳಿಸು: ದಶಾನನಂಗೆ ದಾಯಮಂ ಪೇಳ್ದವನ ವಂಶಮಂ ಸವಱಿಸಿದ ಮಾಯಕಾರ್ತಿ (ಜೈಮಿಭಾ. ೯-೨೨). [ಸಮಱು + –ಇಸು$_1$./ತೆಲು. ಸವರಣಿಂಚು, ಸವರಿಂಚು, ಸವರುಚು]

**ಸಮಱು, ಸವರು$_1$, ಸವಱು** (ಕ್ರಿ). ೧. (ಗುಡಿಸಿ) ಸ್ವಚ್ಛಮಾಡು; ಓರಣಗೊಳಿಸು : ಮರುತ್ತೂನು ಸಮಱಿದಂ ಕೊಳುಗುಳಮಂ (ಪಂಪಭಾ. ೧೩-೯೨); ಸಮೆಱಿ ಕಸಗಳೆದ ತೆಱದಿಂದಮೆ ಸತ್ತರ್ ಮತ್ತೆ ತಂದೆಯುಂ ತಾಯುಮನಾಯಮರಕ್ಕಂ ನುಂಗಿದನೆನೆ (ನೇಮಿಪು. ೧೪-೧೨೭); ಪರ್ಣಶಾಲೆಯೊಳ್ ಪರೆದ ಪುಷ್ಪರಜಮಂ ಸಮಱಿ ತೊಡೆವ ಚಮರೀಮೃಗಂಗಳಿಂ (ದಶಕು. ೪-೭೧ ವ). ೨. ತಿದ್ದು; ಸರಿಪ ಇದಱಿಂ ಛಂದೋಭಂಗಂ ಪದನಱಿದದನಿಂತು ಸಮಱಿ ಪೇೞ್ವೊಡೆ ಚೆಲ್ವಂ (ಛಂದೋ. ೧-೯೪). ೩. ಅಂದಗೊಳಿಸು ; ಅಲಂಕರಿಸು : "ಸಮಱು – ಚಾರುಕರಣೇ (ನಯಮಾಡು)" (ಶಮಧಾ); ಸುಲಿಪಲ್ಲ ಪೊಳಪೆಂಬ ತನ್ನ ಬಾಳ ಪೊಳಪನೆ ಮೆಱೆದು ನಱೆದು ಸಮಱಿದ ಮದನನೊಡ್ಡಣದಂತೆ ಸಮಱಿದ ಪುರ್ವುಂ . . . ಎಸೆಯೆ (ಆದಿಪು. ೪-೧೧ ವ); ಕರ್ವುವಿಲ್ಲಂ ಗೊಲೆಗೊತ್ತುವಂತೆ ನಿಡುಪುರ್ವುಂ ಕುಡುಪುರ್ವಾಗೆ ಸಮಱಿಯುಂ (ಚಂದ್ರಪ್ರ. ೬-೬೩ ವ). ೪. ಅಂದವಾಗು; ಶೋಭಿಸು: ನವರಸ ರೀತಿವಡೆದ ಸಕ್ಕದದೊಳು ಕನ್ನಡವಾತಂ ಸಮಱಿ ಬೆರಸಿ . . . ಉಸಿರ್ದಂ (ಜಯಕಾ. ೧-೨೩). ೫. ಬಾಚು ; ಹಿಕ್ಕು : ಜಿನಜನನಿಯರೊಳ್ಗುರುಳಂ ಸಮಱುವ ಕನ್ನಿಕೆ ಕರಮೆಸೆದಳ್ ತಳಿರೊಳಳಿಗಳಂ ಮುಚ್ಚುವವೋಲ್ (ಆದಿಪು. ೭-೮); ಪರಿದ ಕುರುಳ್ಗಳೊಳ್ ತಳೆದ ಕತ್ತುರಿಗಾಡುವ ಚಂಚರೀಕಮೋಸರಿಸೆ ನಖಾಗ್ರದಿಂ ಸಮಱಿ ತಿರ್ದಿ (ಅನಂಪು. ೩-೮೩). ೬. ನಾಲಗೆಯ ತುದಿಯಿಂದ ನೇವರಿಸು ; ನೆಕ್ಕು : ಪುಲಿ ಸಮಱಿದುವು ಕಟವಾಯ ಸವಿಗಳಂ (ಅನಂಪು. ೯-೧೭ ರಗಳೆ). ೭. ತಿದ್ದಿಕೊಳ್ಳು; ಸರಿಪಡಿಸಿಕೊಳ್ಳು : ಮಿಥ್ಯಾದೃಷ್ಟಿಗಳುಮಭವ್ಯರುಂ ತಮ್ಮನೆನಿತು ಸಮಱಿದೊಡಂ ನಡೆದೊಡಂ ಪ್ರಸಿದ್ಧರಾದೊಡಂ ನಿರಂತರಂ ಸುಖಪ್ರಾಪ್ತರಲ್ಲ (ಧರ್ಮಾಮೃ. ೫-೧೭೨). ೮. ಕಡಿ; ಕತ್ತರಿಸು: ಭುಜಾದಂಡ ಕೃಪಾಣದಿಂ ಸಮಱಿ ಕಂಟಕವಂ (ಪಂರಾಮಾ. ೩-೧೪). ೯. ನಾಶಗೊಳಿಸು ; ಧ್ವಂಸಮಾಡು : ಇದಾನಱಿಪ್ಪೊನ್ಸ್ವಾ ಮಹಾಪಾತಕನನ್ ಒಕ್ಕಲ್ಕುಲನಾ ಸಮಱುವೊನ್ (ಎಕ. XIV,ತಿರುಮ. ೨೫೨-೭; 750?); ನಿನಗರಸ ಬಹಿರ್ಮಂಡಲಮನೆ ಸಮಱಲ್ಕಿನಿತು ಬರಿಸಮುಂ ಪೋದುವು (ಆದಿಪು. ೧೪-೧೫); ನೀಂ ಸಹಜಬುದ್ಧಿಯ್ಕೆ ನಿನ್ನಂ ಸಮಱುವೆನೆಂಬನಾವನ್ (ಲೀಲಾವ. ೪-೩೪). **ಸವರು$_1$** : ೯. ದುಂದುಭಿ ಶಂಬರಾಸುರಾದಿಯಾದ ನಿಶಾಚರರ ಸವರಿದನು (ಅನಂರಾ. ೧-೧೧-೧೯); ನನ್ನ ಮಕ್ಕಳನ್ನೆಲ್ಲಾ ಕೊಲೆಮಾಡಿ ನನ್ನ ಸಂತಾನ ಸವರಿದ್ದು ನಿನಗ ಒಪ್ಪಿಗೆ ಇದ್ದರೆ ನಿನ್ನ ಸಂಗಡ ನನ್ನ ಮಾತು ಇಲ್ಲ (ಮನಬಿ. ೨೩). ೧೦. ನೇವರಿಸು ; ತಡವು : ಕರಿಯ ಅಜ್ಜನ ಹಸ್ತವನ್ನು ತೊಡೆಯ ಮೇಲಿರಿಸಿಕೊಂಡು ಸವ್ವರುತ್ತಿದ್ದ (ಕುಡಿಕೂ. ೧೨೧); ನನ್ನ ಕೈಗಳು ನಿನ್ನ ಮೃದುವಾದ ಕೇಶಪಾಶವನ್ನು ಸವರುವುದಕ್ಕಾಗಿ ತವಕಿಸುತ್ತಿವೆ (ಸೀತಾರ. ೧). ೧೧. ಬಳಿ; ಲೇಪಿಸು; ಹಚ್ಚು: ಮಂಚದ ಸಂದುಗಳಿಗೆ ಸೀಮೆಯೆಣ್ಣೆಯನ್ನು ಸವರಬೇಕು (ಗೃಹವಿ. ೧೮೭); ಕಾವಲಿಯನ್ನು ಒಲೆಯ ಮೇಲಿರಿಸಿ, ಒಂದು ಚಾ ಚಮಚದಷ್ಟು ತುಪ್ಪ . . . ಸವರುವುದು (ಅಡುಸಾ. ೯೪). **ಸವಱು** : ೧. ಕುರುಕ್ಷೇತ್ರದೊಳ್ . . . ಶವಶತದಿಂ ತೆಕ್ಕನೆ ತೀವೆ ರಣೋತ್ಸವದಿಂದನಿಲಸುತಂ ತಾನೆ ಸವ[ಪಾಠಾಂ. ಮ]ಱಿದಂ ಕೊಳ್ಗುಳವಂ (ಗದಾಯು. ೭-೬೫); ಬ್ರಹ್ಮಪಾಶವೆಂಬ ಕಳನನೆ ಸವಱಿ . . . ಎನ್ನೊಡೆಯ ಚೆನ್ನಮಲ್ಲಿಕಾರ್ಜುನಯ್ಯ ತಲೆದೂಗಲಿಕಾಡುವೆ ನಾನು (ಮಹಾದೇ. ಬ. ೯-೧); ಹಾದಿಯನು ಸವಱಿದರು ಯಮಪುರದತ್ತ ಪಯಣಕ್ಕೆ (ಕಾಶಿರಾ. ೨೧-೧೭). ೬. ಆಗುಳಿಸುತ ಬಾಯ ಸವಱಿಯೊಗ್ಗಿಸುತ . . . ಚತುಷ್ಪದಿ ವೇಗದಿ ನಡೆದು ವಾಕ್ಷಣದಿ (ಮೋಹತ. ೧೯-೧೩); ದಳ್ಳುರಿ ಕೃಷ್ಣರಾಯನ ಬಲವ ನಾಲಗೆಯಿಂದ

ಸವಜುತಾಹವದಿ (ಷೋಡಶ. ೩೭-೫೬). ೮. ಹೆಮ್ಮರನ ಹೆಗ್ಗೊಂಬ ಮುಜಿದನು ಸವಜಿದನು ಶಾಖೋಪಶಾಖೆಗಳ (ಕುವ್ಯಾಅ. ೧-೩೦). ೯. ಅತಿಕೌತುಕವೆನೆ ಸವಜುತೊಡಗಿದಂ ತದ್ಬಲಮಂ (ಉದ್ಭಟ. ೪-೭೬); ವಿಗಡನಕ್ರನ ಚಕ್ರದಿ ಸವಜಿದ ಹಗರಣದಾಟವನೆಲ್ಲಿ ಕಲಿತೆಯ್ಯ (ಪುರಂದ. ೧-೯೬-೭). ೧೦. ಸೈರಿಸುವುದೆನುತವೆ ಸವಜಿದನು ತಲೆಯ (ನಿಭಾಗ. ೬-೧೬-೨೮). ೧೧. ಎಳೆಯ ಮನಕೆ ಸವಜುವೆ ಪೊಲೆಯಾ (ಅನಂಪು. ೧೧-೪೮).

ಸಮಜಿಕೊಳ್, ಸವರಿಕೊಳ್ಳು = ೧. ನಯವಾಗು; ನಾಜೂಕಾಗು: ಇದೇನ್ನುಡಿಗಳೊ ಸಮಜಿಕೊಂಡ ನುಡಿಗಳೊ ನಿನ್ನಾ (ಆದಿಪು. ೧೪-೬೪). ೨. ನೀವಿಕೊಳ್ಳು; ನೇವರಿಸಿಕೊಳ್ಳು: ತನ್ನ ಬಿಳುಪಾದ ಗಡ್ಡವನ್ನು ಸ್ವಲ್ಪ ಸವರಿಕೊಳ್ಳುತ್ತಾ . . . ಧೂಮಪಾನಾಸಕ್ತನಾದನು (ದೌಲತ್. ೭).

[ದೇ. ‖ ತೆಲು. ಚಮುರು, ಚೆಮರು, ಜವರು; ಕೋತ. ಚವ್]

**ಸಮಜುಗೆ** (ನಾ). ಅಲಂಕಾರ ; ಶೃಂಗಾರ : ಸಮಜುಗೆಯಿಲ್ಲದ [ಮುಜ]ಕಮುಮರ್ದಿರೆ ಕೆಯ್ಗೆಯ್ಯದೊಪ್ಪುವಂದಮುಂ . . . ಸೊಗಯಿಸುಗುಂ (ಕವಿರಾ. ೩-೧೬೯).

[ಸಮಜು + - ಗೆ]

**ಸಮಾಂತರ** (ನಾ). ಸಮವಾಗಿರುವ ದೂರ,– ಅಂತರ : ವಿಷುವದ್ವೃತ್ತದ ಸಮತಳಕ್ಕೆ ಸಮಾಂತರವಾಗಿ ಸುತ್ತುವಂತೆ ಅಳವಡಿಸಿರುವ ದೂರದರ್ಶಿಗಳು (ಶಿಲ್ಪನಾ. ೧೦೦); ಹಲಗೆಗಳೆರಡೂ ಎಲ್ಲ ಕಡೆಯಲ್ಲಿಯೂ ಸಮಾಂತರದಲ್ಲಿರಬೇಕು (ಹಸುಹೊ. ೩೨೮). [ಸಂ.]

**ಸಮಾಂಸಮೀನೆ** (ನಾ). ಪ್ರತಿವರ್ಷವೂ ಕರುಹಾಕುವ ಹಸು; ವರ್ಷಗಂದಿ: "ಅನುವರ್ಷಂ ತಪ್ಪದೆ [ತಾಂ] ತನೆಯಪ್ಪುದೆ ದಲ್ ಸಮಾಂಸಮೀನೆಯೆನಿಕ್ಕುಂ" (ವಸ್ತುಕೋ. ೯೦-೮). [ಸಂ. ಸಮಾಂಸಮೀನಾ]

**ಸಮಾಕರ್ಣಿತ** (ಗು). ಚೆನ್ನಾಗಿ ಕೇಳಿದ : ಭರತೇಶ್ವರಂ ತಾನುಂ ಮುನ್ನೆ ಭಟ್ಟಾರಕರ ಸಮಕ್ಷದೊಳ್ ಸಮಾಕರ್ಣಿತೋಪಾಸಕಾಧ್ಯಯನನಪ್ಪುದಱಿಂದಂ (ಆದಿಪು. ೧೫-೧೩ ವ). [ಸಂ.]

**ಸಮಾಕಲಿತ** (ಗು). ೧. ಬಂಧಿಸಿದ ; ಕಟ್ಟಿದ: ಶಿವಶರಣಯುಗಸಮಾಕಲಿತಾಂತರಂಗಂ (ಕಬ್ಬಿಕ್ಕ. ೨). (ನಾ). ೨. ಆಕ್ರಮಿಸಲ್ಪಟ್ಟುದು; ಆಕ್ರಮಣಗೊಂಡುದು: ಲಲಿತಲಾವಣ್ಯದುರಗಾಂಗನೆಯರಿಂ ಸಮಾಕ [ಪಾಠಾಂ. ಕು]ಲಿತಮಾಗಿಹ ಭೋಗವತಿಯ ನದಿಯಿಂದೆ . . . ಪಾತಾಳಕ್ಕೆ ಪುಂಡರೀಕಂ ಬಂದನು (ಜೈಮಿಭಾ. ೨೪-೧೩). [ಸಂ.]

**ಸಮಾಕಾರ** (ನಾ). ಒಂದೇ ಹೋಲಿಕೆಯುಳ್ಳ ರೂಪ; ಸಮಾನವಾದ ಆಕಾರ: ಆ ಕನ್ನೆಯಂ ಮಾಡಿದನೀಗಳ್ ಸ್ವೇಚ್ಛೆಯಿಂದಿರ್ದವನಿಪತಿಗಳೊಳ್ ಕಾಮಸಂತಾಪಮಂ ಕೂಡಿದನಾದಂ ತತ್ಪಿತೃದ್ವಂದ್ವದ ಮನಕೆ ಸಮಾಕಾರಸಂಪದ್ವರಾಲಾಭದುರಂತೋದ್ವೇಗಮಂ ನೀಡಿದಂ . . . ಪದ್ಮಸದ್ಮಂ (ಚಂದ್ರಪ್ರ. ೫-೯೭).

[ಸಂ.]

**ಸಮಾಕೀರ್ಣ** (ನಾ). ತುಂಬಿದುದು; ಹರಡಿದುದು : ಈ ಉತ್ಸವಕಾಲದಲ್ಲಿ ವಾರಣಾವತವು ವಿವಿಧರತ್ನಗಳಿಂದ ಸಮಾಕೀರ್ಣವಾಗಿ . . . ಮೆರೆಯುತ್ತಿರುವುದು (ಭೀಷ್ಮಚ. ೭೧). [ಸಂ.]

**ಸಮಾಕೃಷ್ಟ** (ಗು). ಎಳೆಯಲ್ಪಟ್ಟ ; ಆಕರ್ಷಿಸಿದ : ನಿಜವದನತನುಸಹಜಸೌರಭ್ಯ ಸಮಾಕೃಷ್ಟ ಮದವದಳಿಪರಿಸರಣಕರಣಚರಣಚರಕರಪರಿವೀಜ್ಯಮಾನಧವಳ ಚಾಮರ ಜನಿತ ಪವನ (ರಾಜಶೇ. ೧೦-೧೫ ವ). [ಸಂ.]

**ಸಮಾಖ್ಯೆ** (ನಾ). ೧. ಹೆಸರು; ಅಭಿಧಾನ : ಮನ್ಮಥಂ ಸ್ತುತಿಯಿಸಿ ಮಾಮರಕ್ಕೆ ಕುಜರಾಜ ಸಮಾಖ್ಯೆಯನಿತ್ತನಟ್ಟಿಯಿಂ (ಚಂದ್ರಪ್ರ. ೭-೪೬); ಮಧುಮಿತ್ರತೆ ವಚನದೊಳಿರೆ ಕಾಂತಾತತಿ ಪಡೆಯದೆ ಕಾಮಿನೀಸಮಾಖ್ಯೆಯನಿಳೆಯೊಳ್ (ರಾಜಶೇ. ೧೨-೫೪). ೨. ಕೀರ್ತಿ ; ಯಶಸ್ಸು. [ಸಂ. ಸಮಾಖ್ಯಾ]

**ಸಮಾಗತ** (ಗು). ೧. ಒಟ್ಟಾಗಿ ಬಂದ,– ಸೇರಿದ. ೨. ಉಂಟಾದ; ಪ್ರಾಪ್ತವಾದ: ನಿಪುನಿವುಗೆ ಮುಂಕೊಂಡು ವಂಶಕ್ರಮಸಮಾಗತಕೀರ್ತಿಸತಿಯಲಿ ಮಮತೆಗಳ ನೆಱೆ ಮಾಡಿ (ಕುವ್ಯಾದ್ರೋ. ೧೫-೩೫). [ಸಂ.]

**ಸಮಾಗಮ** (ನಾ). ೧. ಸೇರಿಕೆ; ಸಂಯೋಗ : ವ್ಯಾಸಮುನಿಪ್ರಣೂತಕೃತಿಯಂ ಸಲೆ ಪೇೞ್ದು ಪೊದ[ಟ್ದಿ] ಸತ್ಕವಿವ್ಯಾಸಸಮಾಗಮಾನ್ವಿತಮನಾದಿಪುರಾಣಮನೆಯ್ದೆ ಪೇೞ್ದು ವಾಕ್ಶ್ರೀಸುಭಗಂ (ಪಂಪಭಾ. ೧೪-೬೨); ಆವ ಭವದಲಿ ನಿಮ್ಮ ರಾಜ್ಯವದಾವ ಭವದಲಿ ಪುತ್ರಮಿತ್ರರದಾವ ಜನ್ಮಂಗಳ ಸಮಾಗಮ ನಿಮ್ಮ ರಾಣಿಯರು (ಕುವ್ಯಾಗ. , ೧-೨೨). ೨. ಒಬ್ಬರನ್ನೊಬ್ಬರು ಸಂಧಿಸುವುದು; ಭೇಟಿ ; ಮಿಲನ: ಅವರಿಬ್ಬರ ಸಮಾಗಮವಾಗಿ ಎಷ್ಟೋ ವರ್ಷಗಳಾಗಿವೆ (ರೂಢಿ). ೩. [ಕಾಮಶಾ] ಕೂಟ; ಸಂಭೋಗ : ಅಂತು ಬಂದ ಮೞೆಗಾಲಮಂ ಬಗೆಯದೆ . . . ಕಾದಂಬರೀಸಮಾಗಮೌತ್ಸುಕ್ಯದೊಳಮೆಲ್ಲಿಯುಂ ತಡೆಯದೆ . . . ಬರ್ಪಿನಂ (ಕಾದಂಉ . ೫೩೫); ಬಗೆಯೊಳ್ ಪೊಣ್ಮುವಲಂಪು ಕಾತರತೆಯಂ ತಂದೀಯೆ . . . ನೆರೆದರ್ ಮನಂ ತಣಿವಿನಂ ನಾನಾರತಪ್ರೌಢಿಯಿಂ - ಇದು ಮಧ್ಯ ಸಮಾಗಮಂ (ಕಾವ್ಯಾವ. ೮೦೧). ೪. [ಜ್ಯೋತಿ] ಗ್ರಹಗಳು ಒಂದೆಡೆ ಸೇರುವುದು; ಗ್ರಹಕೂಟ. [ಸಂ.]

**ಸಮಾಗಮನ** (ನಾ). = ಸಮಾಗಮ ೩: ಮದೀಯ ಸಮಾಹಿತಮುಂ ಕಾದಂಬರಿಯ ಮನಃಪ್ರಿಯಸಮಾಗಮನನಿರ್ವೃತ್ತಿಯುಂ ಸಮನಿಸಿತಿಲ್ಲೆಂದು ಮನಂನೊಂದು (ಕಾದಂಉ. ೫೪೬). [ಸಂ.]

**ಸಮಾಗ್ನಿ** (ನಾ). ಜಠರಾಗ್ನಿಯ ನಾಲ್ಕು ಸ್ಥಿತಿಗಳಲ್ಲಿ ಒಂದು; ವಾತ, ಪಿತ್ತ, ಶ್ಲೇಷ್ಮಗಳಿಂದ ಉಂಟಾಗುವ ದೋಷ,– ವಿಕಾರ: ದೇಹದಲ್ಲಿ ಜಠರಾಗ್ನಿಯು ನಾಲ್ಕುತೆರನಾಗಿರುವುದೆಂತೆಂದೊಡೆ - ಮಂದಾಗ್ನಿ, ತೀಕ್ಷ್ಣಾಗ್ನಿ, ವಿಷಮಾಗ್ನಿ, ಸಮಾಗ್ನಿಯೆಂಬ ನಾಲ್ಕುವಿಧವಾದ ಅಗ್ನಿಗಳಲ್ಲಿ . . . ವಾತಪಿತ್ತಶ್ಲೇಷ್ಮಗಳಿಂದ ಸಮಾಗ್ನಿಯು ಉಂಟಾಗಿರುವುದು (ಸಕಷ್ಟು ೧೬). [ಸಂ.]

**ಸಮಾಘಾತ** (ನಾ). ೧. ಕೊಲ್ಲುವುದು ; ವಧಿಸುವುದು. ೨. ಯುದ್ಧ; ಕದನ: "ಸಂಗ್ರಾಮಃ . . . ಸಮಾಘಾತಃ . . . ವಿಗ್ರಹಃ - ಈ ೩೫ ರಾಳೆಗಂ" (ಹಲಾಯು. ೭೫-೩೦೦). [ಸಂ.]

**ಸಮಾಚರಣ** (ನಾ). ಅನುಸರಿಸುವಿಕೆ; ಆಚರಣೆ : ಭವಿಜನಸಮಾಚರಣ ಸಂಭಾಷಣಸದಾಸಂಸರ್ಗದೂರಕರು (ಬಸಪು. ೬-೧೬). [ಸಂ.]

**ಸಮಾಚರಿಸು** (ಕ್ರಿ). ಚೆನ್ನಾಗಿ ಆಚರಿಸು: ಇಂತಭ್ಯಂತರತಪದೊಳಂತರಂಗ ಸಂಶುದ್ಧನಾಗಿ ಸಮಾಚರಿಸಿ (ಸುಕುಮಾ. ೪-೨೦ ವ). [ಸಮಾಚರಣ + - ಇಸು₃]

**ಸಮಾಚಾರ** (ನಾ). ೧. ವಿಷಯ; ಸಂಗತಿ; ಸುದ್ದಿ : ಈ ನಾಯಿಯ ಸಮಾಚಾರವನ್ನೆಲ್ಲಾ ಮುಂದಿನ ಬೇಸಿಗೆಗೆ ಇಟ್ಟುಕೊಳ್ಳೋಣ (ಶಾಲಮ. ೨೦೦); ಮಹಾದೇವಯ್ಯನವರು ಬೇನೆಯಿಂದ ಪೀಡಿತರಾಗಿ ಹಾಸಿಗೆಹಿಡಿದಿರುವರೆಂಬ ಸಮಾಚಾರವನ್ನು ಕೇಳಿದ ಬಳಿಕಂತೂ ಅನೇಕ ವಿದ್ಯಾರ್ಥಿಗಳು ದುಗುಡ ತುಂಬಿದರು (ರಂಗರೋ. ೧೬೬). ೨. ಸರಿಯಾದ ನಡವಳಿಕೆ ; ಸದ್ವರ್ತನೆ.

[ಸಂ. (ಸಂ + ಆಚಾರ; ಸಮ + ಆಚಾರ)]

**ಸಮಾಜ** (ನಾ). ೧. ಗುಂಪು ; ಸಮೂಹ : ಪರಿಮಿತಾಮರೇಂದ್ರಸಮಾಜಂಬೆರಸು ರಾಜಭವನಮಂ ಪೊಕ್ಕು (ಆದಿಪು. ೭-೧೦೯ ವ). ೨. ರಾಶಿ; ಒಟ್ಟಿಲು : ಪುಣ್ಯಶೈಲಪುಣ್ಯಹ್ರದಸಮಾಜವಿಭ್ರಾಜಿತಮುಂ . . . ಎನಿಸಿದ ಭರತಕ್ಷೇತ್ರದ ಮಧ್ಯದೊಳ್ ಮಧ್ಯದೇಶಮುಂಟು (ಜಗವಿ. ೨-೧ ವ); ಸಮುಲ್ಲಸಿತ ನವಾಂಕುರವ್ರಜಮೊ ಚಂಚುಸಮಾಜಮೊ ಪೇೞ್ (ಕುಸುಮಾ. ೯-೫೭). ೩. ಸಭೆ; ಗೋಷ್ಠಿ. ೪. ಸಂಘ; ಸಂಸ್ಥೆ : ಪ್ರಾರಂಭೋತ್ಸವದ ದಿನ ಸಮಾಜದ ಎಲ್ಲ ಸದಸ್ಯರಿಗೆ ಒಂದೊಂದು ಪ್ಲೇಟು ಆಯಿಸ್ಕ್ರೀಮು ಪುಕ್ಕಟೆಯಾಗಿ ದೊರೆಯಬೇಕೆಂದು ಗೊತ್ತಾಗಿದ್ದಿತು (ಸಮಜೀ. ೭೬೩). ೫. ಕೂಡಿ ಬಾಳುವುದು; ಸಾಂಘಿಕಜೀವನ : ಸಮಾಜಬಲವೇ ಬಲವಲ್ಲದೆ ಧರ್ಮಬಲವೆಲ್ಲಿಯದು! (ಭಕ್ತಿಬ. ೪೮); ಮನುಷ್ಯಸಮಾಜವು ಎಲ್ಲಿಯೋ ಒಂದಲ್ಲ ಒಂದು ಕಡೆ ತಪ್ಪು ಮಾಡಿರಲೇಬೇಕೆಂದು ಅನಿಸುತ್ತದೆ (ಬಾಣಅ. ೨೭). [ಸಂ.]

**ಸಮಾಜಕಂಟಕ** (ನಾ). ೧. ಸಮಾಜಕ್ಕೆ ಅಹಿತವಾದುದು; ಸಮಾಜಕ್ಕೆ ಕೇಡುಂಟುಮಾಡುವಂಥದು: ಸಮಾಜಕಂಟಕವಾದ ಇಂಥ ಅಪರಾಧಗಳ ಅಪಾಯವನ್ನು ನೀವೀಗ ಗ್ರಹಿಸಬೇಕಾಗಿದೆ (ಪುನರು. ೯೪). ೨. ಸಮಾಜಕ್ಕೆ ಕೇಡು

ಬಗೆಯುವವನು : ಸಮಾಜಕಂಟಕರಿಂದ ದೇಶದ ಪರಿಸ್ಥಿತಿ ಹದಗೆಡುತ್ತಿದೆ (ರೂಢಿ). [ಸಂ.]

**ಸಮಾಜಕಲ್ಯಾಣ** (ನಾ). ಸಮೂಹಜೀವನದ ಏಳಿಗೆ, — ಅಭಿವೃದ್ಧಿ: ಸಮಾಜಕಲ್ಯಾಣವು ಅರ್ಥಶಾಸ್ತ್ರಕ್ಕೆ ಮುಖ್ಯಲಕ್ಷ್ಯವೇ ಹೊರತು ಅರ್ಥಕಲ್ಪನೆಯಲ್ಲ (ಭಾರದ. ೩೫೧). [ಸಂ.]

**ಸಮಾಜಘಾತುಕ** (ನಾ). = ಸಮಾಜಕಂಟಕ ೨ : ಸಮಾಜಘಾತುಕರಿಗೆ ತಕ್ಕ ಶಿಕ್ಷೆಯಾಗಲೇಬೇಕು (ರೂಢಿ). [ಸಂ.]

**ಸಮಾಜಜೀವಿ** (ನಾ). ಸಮಾಜದಲ್ಲಿ ವಾಸಮಾಡುವವನು; ಸಾಮಾಜಿಕ: ವಯೋಧರ್ಮಕ್ಕನುಗುಣವಾಗಿ ನಡೆಯುವುದು ಪ್ರತಿಯೊಬ್ಬ ಸಮಾಜಜೀವಿಯ ಆದ್ಯಕರ್ತವ್ಯ (ಪುನರು. ೬೧). [ಸಂ. ಸಮಾಜಜೀವಿನ್]

**ಸಮಾಜದ್ರೋಹಿ** (ನಾ). ಸಮಾಜವನ್ನು ವಂಚಿಸುವ ವ್ಯಕ್ತಿ: ಅವನು ವಿಶ್ವಾಸ ಘಾತಕಿ. ಸಮಾಜದ್ರೋಹಿಯಾದಂತಾಯಿತು (ನವನೀ. ೯೯). [ಸಂ. ಸಮಾಜದ್ರೋಹಿನ್]

**ಸಮಾಜವಾದ** (ನಾ). ಒಂದು ಬಗೆಯ ರಾಜಕೀಯಸಿದ್ಧಾಂತ; ವ್ಯಕ್ತಿಸ್ವಾತಂತ್ರ್ಯವು ಸಮಾಜಹಿತಕ್ಕೆ ಸಂಪೂರ್ಣವಾಗಿ ಅಧೀನವಾಗಿರಬೇಕೆಂಬ ವಾದ : ಅಲ್ಲಿ ಕೆಲವೆಡೆ ಪ್ರಜಾಪ್ರಭುತ್ವದ ಗರ್ಭವನ್ನು ಸೀಳಿ ಸಮಾಜವಾದವು ತಲೆಯೆತ್ತಿದೆ (ನವ್ಯಕಾ. ೧೮). [ಸಂ.]

**ಸಮಾಜವಾದಿ** (ನಾ). ಸಮಾಜವಾದದಲ್ಲಿ ನಂಬಿಕೆಯಿರುವವನು : ನೆಕ್ಲುದೋವ್ ಸಮಾಜವಾದಿಯೆಂಬ . . . ಸಂಗತಿ ಆ ಹೊತ್ತಿಗಾಗಲೆ ಅವನಿಗೆ ಮನವರಿಕೆಯಾಗಿತ್ತು (ಪುನರು. ೪೨೫). [ಸಂ. ಸಮಾಜವಾದಿನ್]

**ಸಮಾಜವೀಳ್ಯ** (ನಾ). ಸಮೂಹಕ್ಕೆ ಕೊಡುವ ತಾಂಬೂಲ : ಭೋಜನಾನಂತರದ ಕೈತೊಳೆದು ಕರ್ಪೂರದ ಸಮಾಜವೀಳ್ಯವನಿತ್ತು . . . ಅವರ ಬೀಳ್ಕೊಟ್ಟಾಗ ಸಜ್ಜೆಯ ರಾಜಮಂದಿರಕ್ಕೆತಂದ (ಕಂನವಿ. ೮-೯೩). [ಸಮಾಜ + ವೀಳ್ಯ (< ವೀಳೆಯ)]

**ಸಮಾಜಶಾಸ್ತ್ರ** (ನಾ). ಮನುಷ್ಯಸಮಾಜದ ಬೆಳವಣಿಗೆ ಹಾಗೂ ರೀತಿನೀತಿಗಳನ್ನು ತಿಳಿಸುವ ಶಾಸ್ತ್ರ : ಅರ್ಥಶಾಸ್ತ್ರಕ್ಕೆ ರಾಷ್ಟ್ರಶಾಸ್ತ್ರವೂ ಅಂಗವಾಗುವುವು (ಭಾರದ. ೩೫೧). [ಸಂ.]

**ಸಮಾಜಸುಧಾರಕ** (ನಾ). ಸುತ್ತಲ ಪರಿಸರ ಹಾಗೂ ಅದರ ರೀತಿನೀತಿಗಳನ್ನು ಸುಧಾರಿಸುವವನು : ರಾಜಾರಾಮಮೋಹನರಾಯ, ದಯಾನಂದಸರಸ್ವತಿಯಂಥ ಸಮಾಜಸುಧಾರಕರು . . . ಭಗವದ್ಗೀತೆಯಿಂದ ಸ್ಫೂರ್ತಿ ಪಡೆದಿದ್ದಾರೆ (ಧರ್ಮಸಾ. ೧೨೭). [ಸಂ.]

**ಸಮಾಜಸುಧಾರಣೆ** (ನಾ). ಸುತ್ತಲ ಪರಿಸರ ಹಾಗೂ ಅದರ ರೀತಿನೀತಿಗಳನ್ನು ಸುಧಾರಿಸುವುದು : ರಾಮಾನುಜರು ಹಾಗೂ ಏಕನಾಥರು ಸಮಾಜಸುಧಾರಣೆಯನ್ನು ಕೈಕೊಂಡರು (ಧರ್ಮಸಾ. ೧೫೧). [ಸಂ. ಸಮಾಜಸುಧಾರಣ]

**ಸಮಾಧಾನ** (ನಾ). ೧. ಮನಸ್ಸಿನ ಶಾಂತಿ; ನೆಮ್ಮದಿ : ಕಾಮಕ್ರೋಧಾದಿ ಕಲುಷವಾಗದೆ ಸಾತ್ವಿಕವಾದ ಚಿತ್ತಸ್ಥೈರ್ಯವೇ ಸಮಾಧಾನವಾಗಿರುವುದು (ವಿವೇಕ. ೧೫); ತಿಂಗಳಾರಕೆ ಬಹನೆಂಬ ಭಾಷೆಯಂ ಭಾವಿಸುತೆ ಭಾಮಿನಿ ಸಮಾಧಾನಬುದ್ಧಿಯಿಂ ಮೇಲೇಳುತಲ್ಲಿಂ ನಡೆದು (ಚಿತ್ರಾಂಗ. ೫೭-೧೫೩೪). ೨. ತೃಪ್ತಿ; ತಣಿವು : ಸತ್ಯವಿದೆ ಸಮಾಧಾನವಿದೆ ಮನಕ್ಕೆ ಬಾರದಿದೇನಯ್ಯಾ (ಬಸವ. ೯೧೩); ವರಸಮಾಧಾನದಲಿ ಕೈತೊಳೆದುರವಣಿಪ ತೇಗಿನ ತರಂಗದ ಪರಬಲಾಂತಕನೆದ್ದು ನಿಂದನು ಸಿಂಹನಾದದಲಿ (ಕುವ್ಯಾಅ. ೧೦-೩೪). ೩. ತಾಳ್ಮೆ; ಸಹನೆ : ಈ ಪ್ರಾಣಿಗೆ ಸಮಾಧಾನವೆಂಬುದೇ ಇರಲಿಲ್ಲ (ದೀಪಹ. II, ೧೧೭). ೪. ಯಾವುದಾದರೂ ಒಂದೇ ವಿಷಯದ ಬಗ್ಗೆ ಮನಸ್ಸನ್ನು ಕೇಂದ್ರೀಕರಿಸುವುದು; ಚಿತ್ತೈಕಾಗ್ರತೆ; ಸಮಾಧಿಸ್ಥಿತಿ : ಸಮಾಧಾನವೆಂದರೆ ವೇದಾಂತಶ್ರವಣದಲ್ಲಿಯೆ ಮನಸ್ಸು ನಿಲ್ಲಿಸೋಣ (ಈಶ್ವಸ್ವ. ೯-೧೦). 'ಯೋಗಸಮಾಧಾನ' ಪರಾ. ೫. (ಆಕ್ಷೇಪಣೆಗೆ ಕೊಡುವ) ಉತ್ತರ ; ವಿವರಣೆ.

**ಸಮಾಧಾನ ಕೇಳು** = ವಿವರಣೆಯನ್ನು ಕೇಳು : ಅವನಿಂದಾಗಿರುವ ತಪ್ಪಿಗೆ ಸಮಾಧಾನ ಕೇಳಬೇಕು (ರೂಢಿ). **ಸಮಾಧಾನ ಹೇಳು** = ೧. ದುಃಖ, ಕೋಪ ಮುಂತಾದುವುಗಳನ್ನು ಉಪಶಮನಮಾಡು : ಅವರ ದುಃಖಕ್ಕೆ ಸಮಾಧಾನ ಹೇಳುವುದಕ್ಕೂ ತೋರುತ್ತಿಲ್ಲ (ರೂಢಿ). ೨. ವಿವರಣೆ ನೀಡು ; ಸ್ಪಷ್ಟೀಕರಿಸು: ನೀನು ಮಾಡಿರುವ ತಪ್ಪಿಗೆ ಒಂದು ವಾರದೊಳಗೆ ಸಮಾಧಾನ ಹೇಳಬೇಕು (ರೂಢಿ). [ಸಂ.]

**ಸಮಾಧಾನಕರ** (ಗು). ತೃಪ್ತಿಯನ್ನುಂಟುಮಾಡುವ: ಕೆಲವೊಮ್ಮೆ ನಿಮಗೆ ಸಮಾಧಾನಕರ ಫಲಿತಾಂಶ ದೊರೆಕದಿರಬಹುದು (ಆಡುಸಾ. ೯೧). [ಸಂ.]

**ಸಮಾಧಾನಿ** (ನಾ). ಶಾಂತಮನಸ್ಸುಳ್ಳವನು: ಸ್ತುತಿ ನಿಂದೆಗಳು ಬಂದರೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು (ಮಹಾದೇ. ಬ. ೪೫-೧೦೬). [ಸಂ. ಸಮಾಧಾನಿನ್]

**ಸಮಾಧಾನಿಸು** (ಕ್ರಿ). ಸಂತೈಸು : ಸುಂದರಿಯನ್ನು ಸಮಾಧಾನಿಸಲು ಪ್ರಯತ್ನಿಸಿದರು (ಹಳ್ಳಿಹಾ. ೯೪); 'ಮುಂದೆ ಭಗವಂತನ ಅನುಗ್ರಹದಿಂದ ಎಲ್ಲವೂ ಸುಗಮವಾಗುತ್ತದೆ' ಎಂದು ತಂತ್ರಿಯವರು ಗಣಪತಿಯನ್ನು ಸಮಾಧಾನಿಸಿದರು (ಪದ್ಮ.ಸ. ೧೩೮). [ಸಮಾಧಾನ + - ಇಸು]

**ಸಮಾಧಿ** (ನಾ). ೧. ಯಾವುದಾದರೊಂದು ವಿಷಯವನ್ನು ಕುರಿತಂತೆ ಇರುವ ತನ್ಮಯತೆ; ಏಕಾಗ್ರತೆ : ಕೂಡಲಸಂಗಮದೇವನ ಬಸಿಱ ಮಧ್ಯದ ಬಯಲ ಸಮಾಧಿಯಲಿಕ್ಕದೆ ಕೆಟ್ಟರು (ಬಸವ. ೯೧೯); ನೋಡಿದನು ಕಣ್ಣೆವೆಯಾಡದೆ ಸೌಂದರ್ಯಸುಖದಿಂ ಸಮಾಧಿ ದೊರೆಕೊಂಡನೋಲ್! (ಶ್ರೀರಾಮಾ. ೫೫-೩೯). ೨. ತಪಸ್ಸು. ೩. ಹೆಣವನ್ನು ಹೂಳುವ ಸ್ಥಳ ಮತ್ತು ಆ ಸ್ಥಳದ ಮೇಲೆ ಕಟ್ಟುವ ಸ್ಮಾರಕ : ರಣಪಾರರಾ ಮಣಲೆಯರಸರಾ ಸಮಾಧಿಯ ಸಮಾಧಿ (ಎಕ. XIV. ತಿರುಮ. ೨೫೩-೪; ಸು. 800); ನನ್ನ ಸಮಾಧಿ ವೀರನಂದಿಯ ಪಕ್ಕದಲ್ಲಿಯೇ ಆಗಬೇಕು (ಚಲುಮ. ೨೮೪). ೪. ಕೆಲವು ಯತಿಗಳನ್ನು, ಜೀವಂತವಿರುವಾಗಲೇ ಕುಳಿತಿರುವ ಭಂಗಿಯಲ್ಲಿರುವಂತೆ ಹೂಳುವ ಒಂದು ಸಂಸ್ಕಾರ ಮತ್ತು ಹಾಗೆ ಹೂಳಿದ ನಂತರ ಆ ಸ್ಥಳದಲ್ಲಿ ಕಟ್ಟುವ ಬೃಂದಾವನ : ಅವರೋ ಸಮಾಧಿಯಲ್ಲಿರುವ ಯತಿಗಳು? (ಕಥವಿ. ೩೬೩). ೫. [ಕಾವ್ಯಮೀ] ಹತ್ತುಬಗೆಯ ಕಾವ್ಯಗುಣಗಳಲ್ಲಿ ಒಂದು; ಒಂದರ ಧರ್ಮವನ್ನು ಇನ್ನೊಂದರಲ್ಲಿ ಆರೋಪಿಸಿಕೊಂಡು ಹೇಳುವುದು: ಪೆಱವಱ ಧರ್ಮಂಗಳನೆತ್ತಱದಿಂದಂ ತಂದು ಪೆಱವಱೊಳ್ ಪತ್ತಿಸಿ ಕಣ್ದೆಱೆಯೆ ಚತುರೋಕ್ತಿ ಕೃತಿಯೊಳ್ ನೆಱೆದಿರೆ ಪೇಳ್ವುದು ಸಮಾಧಿಯೆನೆ ಪೆಸರ್ವಡೆಗುಂ (ಕಾವ್ಯಾವ. ೫೯೧); ಒಂದಱ ಧರ್ಮ ಮನೊಂದಕ್ಕಂದಂಬಡಿಪುದೆ ಸಮಾಧಿ (ಉದಯಾ. ೫); ಶ್ಲೇಷ . . . ಓಜಸ್ಸು, ಕಾಂತಿ, ಸಮಾಧಿ - ಈ ಹತ್ತುಗುಣಗಳೇ ವೈದರ್ಭಮಾರ್ಗದ ''ಪ್ರಾಣ'' (ಭಾರಮೀ. ೨೯). ೬. [ಯೋಗ] ಯೋಗದ ಎಂಟನೆಯ ಹಾಗೂ ಕಡೆಯ ಅವಸ್ಥೆ ; ಮನಸ್ಸನ್ನು ಪರಬ್ರಹ್ಮದಲ್ಲಿ ಐಕ್ಯಗೊಳಿಸುವುದು: ಸಮುಪಾತ್ತಸತ್ತಪೋವಿಘ್ನಸಂರೋಧಿಯಪ್ಪ ಸಮಾಧಿಯುಂ (ಚಂದ್ರಪು. ೧೧-೨೨ ವ); ಶ್ರುತಿಗಳ ಸರಾಗದ ಬಳಕೆಯಿವು ಮುನಿಗಳ ಸಮಾಧಿಗಳಾದಿಯಿವು . . . ಶಿವಯೆನುತ ಪದನಳಿನಯುಗಳದಲೊಡಲ ನೀಡಾಡಿದನು (ಕುವ್ಯಾಉ. ೮-೧೦). ೭. [ಜೈನ] ಷೋಡಶಭಾವನೆಗಳಲ್ಲಿ ಒಂದು; ಸಲ್ಲೇಖನವಿಧಿಯಿಂದ ಶರೀರತ್ಯಾಗಮಾಡುವುದು: ಸಮಾಧಿ ವೈಯಾವೃತ್ಯಕರಣಂ . . . ಪ್ರವಚನವತ್ಸಳತ್ವಮೆಂಬ ಷೋಡಶಭಾವನೆಗಳೊಳ್ (ಚಾವುಂಪು. ೨೪೧); ಜಕ್ಕಲೆ ಮಹಾಸತಿ ಚಿತ್ತಮನಾಪ್ತತತ್ವದೊಳ್ ನಿಱಿಸಿ ಸಮಾಧಿಯಿಂ ನೆಱೆಯೆ ಸಾಧಿಸಿದಳ್ ಸುರಲೋಕಸೌಖ್ಯಮಂ (ಎಕ. VII, ಶಿಕಾರಿ. ೧೯೬-೮ ; 1212). [ಸಂ.]

**ಸಮಾಧಿಧ್ಯಾನ** (ನಾ). ಏಕಾಗ್ರಚಿತ್ತದಿಂದ ಮಾಡುವ ಧ್ಯಾನ : ಜಪಾನುಷ್ಠಾನ ಬಿಡೆ ಬೆವರಿತು ಸಮಾಧಿಧ್ಯಾನ ಸೀಕರಿಯಾಯ್ತು ಸಾರವಿಚಾರಶಮಸಹಿತ (ಕುವ್ಯಾಅ. ೫-೧೨). [ಸಂ.]

**ಸಮಾಧಿನಿಷ್ಠ** (ನಾ). [ಯೋಗ] ಮನಸ್ಸನ್ನು ಪರಬ್ರಹ್ಮದಲ್ಲಿ ಐಕ್ಯಗೊಳಿಸಿದವನು : ಬ್ರಹ್ಮಸ್ವರೂಪವ ತಿಳಿದಂಥಾವನು ಸಮಾಧಿನಿಷ್ಠ (ಉತ್ತಟೀ. ೯-೧೩). [ಸಂ.]

**ಸಮಾಧಿಮರಣ** (ನಾ). [ಜೈನ] ಮನಶ್ಶಾಂತಿಯಿಂದ ಶರೀರತ್ಯಾಗ ಮಾಡುವುದು: ಸಮಾಧಿಮರಣದಿಂದೀಶಾನಕಲ್ಪದೊಳ್ ಕನಕಪ್ರಭನೆಂಬೊಂ ದೇವನಾಗಿ ಬಂದಿಲ್ಲಿ ಪುಟ್ಟಿ (ಶಾಂತಿಪು. ೯-೧೪ ವ); ದೊರೆಕೊಳೆ ಸಮಾಧಿಮರಣಂ ಚರಣಾಯುಧಯುಗಳಮಟಿದು (ಯಶೋಚ. ೪-೩೯). [ಸಂ.]

**ಸಮಾಧಿಯೋಗ** (ನಾ). ಇಹಲೋಕದ ವ್ಯಾಪಾರವನ್ನು ತ್ಯಜಿಸಿ ಮೋಕ್ಷ ಮಾರ್ಗವನ್ನು ಪಡೆಯುವುದು : ಈ ದುರಾಗ್ರಹ ನಿಲಲಿ ಹಾಯಿಕು ಕೈದುವನು ಸುಸಮಾಧಿಯೋಗದಲ್ಲೆದು ನಿಜವನು (ಕುಮಾವ್ಯಾ. ೧೮-೫೮). [ಸಂ.]

**ಸಮಾಧಿವಿಧಿ** (ನಾ). = ಸಮಾಧಿಮರಣ : ಏಂ ಸಮಾಧಿವಿಧಿಯಂ ನೆಟೆ ತಾಳ್ದಿದನೋ ಮಹಾಬಲಂ (ಆದಿಪು. ೨-೬೦); ತಪಶ್ಚರಣನಿರತರಾಗಿ ಸಮಾಧಿವಿಧಿಯಿಂ ವಿಗ್ರಹಮನುಟಿದು (ಪಂರಾಮಾ. ೬-೫೭ ವ). [ಸಂ.]

**ಸಮಾಧಿಸ್ಥ** (ಗು). ೧. ಧ್ಯಾನದಲ್ಲಿ ನಿರತವಾದ. (ನಾ). ೨. ಧ್ಯಾನದಲ್ಲಿ ನಿರತನಾಗಿರುವವನು : ಒಬ್ಬಯ್ಯಂ . . . ಶ್ರೀಶೈಲವಿಪಿನೋದಾತ್ತಭೂಮಿಯೊಳ ವಿರಳಸಮಾಧಿಸ್ಥನಾಗಿರಲು (ಬಸವು. ೩೪-೪). ೩. ಬೃಂದಾವನಪ್ರವೇಶ ಮಾಡಿದ ಯತಿ : ಶ್ವಾಸಗತಿಯನ್ನು ನಿರೋಧಿಸಿ, ಅರೆದೆರೆದ ಕಣ್ಣುಳ್ಳವರಾಗಿ, ಶ್ರೀರಾಘವೇಂದ್ರ ತೀರ್ಥಶ್ರೀಪಾದಂಗಳವರು ಸಮಾಧಿಸ್ಥರಾದರು (ಕಭವಿ. ೩೬೦). [ಸಂ.]

**ಸಮಾಧಿಸ್ಥಿತಿ** (ನಾ). ಚಿತ್ತೈಕಾಗ್ರತೆ ; ತನ್ಮಯಸ್ಥಿತಿ : ಸಾಧಕನು . . . ಜ್ಞಾನಮಾರ್ಗ ಅಥವಾ ಸನ್ಮಾರ್ಗವನ್ನನುಸರಿಸಿ ಧ್ಯಾನಪೂರ್ವಕ ಸಮಾಧಿಸ್ಥಿತಿಯನ್ನು ಹೊಂದಿ ಶಿವಸಾಯುಜ್ಯವನ್ನು ಹೊಂದುವನು (ಭಾರದ. ೨೧೭); ಪರಮಾತ್ಮನ ಅರಿವಾದ ಬಳಿಕ ಎಲ್ಲೆಲ್ಲಿ ಮನಸ್ಸು ಹರಿದರೆ ಅಲ್ಲಲ್ಲಿ ಸಮಾಧಿಸ್ಥಿತಿಯೊದಗುತ್ತದೆ (ಭಾವಗೀ. ೧೫). [ಸಂ.]

**ಸಮಾನ** (ಗು). ೧. ಯೋಗ್ಯ ; ತಕ್ಕ. ೨. ಒಂದೇ ಬಗೆಯ ; ಒಂದೇ ರೀತಿಯ: ಅಲ್ಲಿ ಮೊದಲ ಪತ್ತಕ್ಕರಂ ಸಮಾನಸಂಜ್ಞೆಯಂ ಪಡೆಗುಂ (ಶಮದ. ೬ ವೃತ್ತಿ). ೩. ಎಲ್ಲರಿಗೂ ಅನ್ವಯಿಸತಕ್ಕ; ಸಮವಾದ : ಕಚೇರಿಯಲ್ಲಿ ಸಮಾನ ನಿಯಮಗಳನ್ನು ಪಾಲಿಸಬೇಕು (ರೂಢಿ). (ನಾ). ೪. ಎಣೆ; ಸಾಟಿ; ಸಮ: ಜಯ ಜಯ ದೇವದೇವ ಪುರಶಾಸನಶಾಸನಶಾಸನೈಕಚಿನ್ಮಯಮಯನುತ್ಕಸಂಪದಸಮಾನ ಸಮಾನಸಮಾನತಾಂಘ್ರಿ ಸನ್ಮಯ (ರಾಜಶೇ. ೧೩-೫೨); ಎನ್ನ ನುಡಿಸೆ ನಿನಗಿಲ್ಲ ಸಮಾನ (ಗಣೇಶ. ೬-೧೪೪). ೫. ಎಲ್ಲರನ್ನೂ ಎಲ್ಲವನ್ನೂ ಒಂದೇ ಭಾವದಿಂದ ಕಾಣುವಿಕೆ ; ಸಮಭಾವ : ಸಮಾನಮೆಂಬುದು ಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರ ಪಶುಮೃಗಪಕ್ಷಿಸರೀಸೃಪಗಳುಮಂ ಸಮಂಗಾಣ್ಬ ಧರ್ಮಂ (ಚಾವುಂಪು. ೭). ೬. ಶರೀರದ ಪಂಚಪ್ರಾಣವಾಯುಗಳಲ್ಲಿ ಒಂದು; ನಾಭಿಪ್ರದೇಶ ದಲ್ಲಿರುವ ಪ್ರಾಣವಾಯು : ಸಮಾನವಾಯುವು ನಾಭಿಸ್ಥಾನದಲ್ಲಿರ್ದು ಉಂಡುದಂ ನಮ್ಮ ಸ್ವಾಂಗಗಳಿಗೆ ಹಂಚುತ್ತಿಹುದು (ವಿವೇಕ. ೩೨); ಪಂಚಭೂತಗಳಿಂದ ಹಸ್ತಾದಿ ಪಂಚಕರ್ಮೇಂದ್ರಿಯಗಳು ಸಮುದಾಯದಿಂದ ಪ್ರಾಣಾಪಾನ ವ್ಯಾನೋದಾನ ಸಮಾನಗಳೆಂಬ ಪಂಚಪ್ರಾಣಗಳು ಹುಟ್ಟುವುವು (ಓಂದಸಾ. ೧೯೬). [ಸಂ.]

**ಸಮಾನತಳ** (ನಾ). [ಚಿತ್ರಶಾ] ಚಿತ್ರವನ್ನು ಬರೆಯತಕ್ಕ ಸಮತಳವಾದ ಪ್ರದೇಶ : ಕೃಶಕೋಮಳ ನಿಮ್ನಘನೋನ್ನತಪ್ರದೇಶಂಗಳನಾ ಸಮಾನತಳದಲ್ಲಿಯೆ ಚಿತ್ರಕನೆಯ್ದೆ ತೋರ್ಪವೋಲ್ (ಪಂಪಭಾ. ೧೩-೨೧). [ಸಂ. ಸಮಾನತಲ]

**ಸಮಾನತೆ** (ನಾ). ಸರಿಸಮವಾಗಿರುವಿಕೆ : ಲಿಂಗಾಕೃತಿಯಿಂ ಸಮಾನತೆಯದಾಗಲ್ ಸ್ವೇಷ್ಟಲಿಂಗಕ್ಕೆ ಪಾಮರಲಿಂಗಂಗಳನಾಹ ಕಾಣ್ಬನೆ ಸಮಭಕ್ತಂ (ಶತಕ. ೬೨-೩೧). [ಸಂ. ಸಮಾನತಾ]

**ಸಮಾನತ್ವ** (ನಾ). = ಸಮಾನತೆ : ಸಮಾಜದಲ್ಲಿ ಹೆಣ್ಣಿಗೂ ಸಮಾನತ್ವವಿರಬೇಕು (ರೂಢಿ). [ಸಂ.]

**ಸಮಾನವಾಯು** (ನಾ). = ಸಮಾನ ೬ : ಸಮಧಾತುಗಳನಟಿತು ಅನ್ನಪಾನಾದಿಗಳ ಪರಿಹರಿಸುವದೊಂದು ಸಮಾನವಾಯು (ಚನ್ನವ. ೬೬-೧೩); ಸಮಾನವಾಯುವೆಂದರೆ ನಾಭಿಪ್ರದೇಶದಲ್ಲಿ ಇದ್ದುಕೊಂಡು ಅನ್ನಪಾನಾದಿಗಳನು ಶರೀರ ಎಲ್ಲಕ್ಕೂ ಸಮನಾಗಿ ವ್ಯಾಪಿಸುವ ಹಾಗೆ ಮಾಡುವ ವಾಯುವು (ಈಶ್ವಸ್ಯ. ೧೪-೧೪). [ಸಂ.]

**ಸಮಾನಸ್ಕಂಧ** (ನಾ). ಸರಿಸಮಾನವಾದ ವ್ಯಕ್ತಿ : ಅಧಿಕಾರಿಗಳೊಡನೆಯಾಗಲಿ ಅಥವಾ ತನ್ನ ಸಮಾನಸ್ಕಂಧರೊಡನೆಯಾಗಲಿ ಅವನಿಗೆ ಹೆಚ್ಚು ಬಳಕೆ ಇರಲಿಲ್ಲ (ಮಲನಾ. ೧೨೭). [ಸಂ.]

**ಸಮಾನಸ್ಥ** (ನಾ). ಸರಿಸಮಾನವಾದವನು; ಸರೀಕ : ಸಮಾನಸ್ಥರಲ್ಲಿ ವೈಮನಸ್ಯ ವಿರಬಾರದು (ರೂಢಿ). [ಸಂ.]

**ಸಮಾನಾಂತರ** (ನಾ). ಒಂದೇ ಸಮವಾಗಿರುವ ದೂರ,– ಅಂತರ: ಪ್ರತಿಯೊಂದು ಹಜಾರವನ್ನೂ ಮೂರು ಸಮಾನಾಂತರವುಳ್ಳ ಗೋಡೆಗಳಿಂದ ನಾಲ್ಕು ಸಣ್ಣಭಾಗಗಳನ್ನಾಗಿ ವಿಂಗಡಿಸಲಾಗಿದೆ (ಭಾರದ. ೪೯೩). [ಸಂ.]

**ಸಮಾನಾಧಿಕರಣ** (ನಾ). [ವ್ಯಾಕ] ಒಂದೇ ವಿಭಕ್ತಿಯಲ್ಲಿ ಪದಗಳು ಇರುವಿಕೆ; ಲಿಂಗ, ವಚನ, ವಿಭಕ್ತಿ ಮೊದಲಾದುವುಗಳಲ್ಲಿ ಪದಗಳಿಗೆ ಇರುವ ಹೊಂದಿಕೆ. [ಸಂ.]

**ಸಮಾನೋದರ್ಯ** (ನಾ). ಒಡಹುಟ್ಟಿದವನು ; ಸಹೋದರ : "ಸಮಾನೋದರ್ಯ:, ಸೋದರ್ಯ:, ಸಗರ್ಭ್ಯ:, ಸೋದರ: – ಈ ೪ ಒಡಹುಟ್ಟಿದಂ" (ಹಲಾಯು. ೮೪-೩೫೪). [ಸಂ.]

**ಸಮಾಪದಿಸು** (ಕ್ರಿ). [ಬೌದ್ಧ] ಸಿದ್ಧಿಯನ್ನು ಪಡೆ : ಸಂಜ್ಞಾನಿರೋಧವ ಸಮಾಪದಿಸಲಾನಂದನನುರುದ್ಧನೊಡನಿದೊ ಭದಂತ, ಪರಿನಿರ್ವಾಣವಯ್ದಿದಂ (ವೃಶಾಪು. ೮೮-೬೬೪). [ಸಮಾಪದ್ + - ಇಸು]

**ಸಮಾಪನ** (ನಾ). ೧. ಮುಕ್ತಾಯಗೊಳಿಸುವುದು. ೨. ಗ್ರಂಥದ ಒಂದು ಭಾಗ ; ಅಧ್ಯಾಯ. [ಸಂ.]

**ಸಮಾಪ್ತ** (ಗು). ೧. ಕೊನೆಗೊಂಡ ; ಮುಕ್ತಾಯವಾದ. ೨. ಪೂರ್ಣಗೊಂಡ; ಭರ್ತಿಯಾದ. ೩. ಮುಗಿಸಿದ ; ತೀರಿಸಿದ.

ಸಮಾಪ್ತವಾಗು = ಕೊನೆಗೊಳ್ಳು ; ತೀರು : ಎನ್ನ ಒಡಲು ಸಮಾಪ್ತವಾಗದ ಮುನ್ನ ಸವೆದಡೆ . . . ಪ್ರಮಥರುಗಳಾಣೆ (ಬಸವು. ೪೪-೨೯). [ಸಂ.]

**ಸಮಾಪ್ತಿ** (ನಾ). ೧. ಕೊನೆ ; ಮುಕ್ತಾಯ : ವೃಷಭೇಂದ್ರಾವತಾರದ ಬಸವಚರಿತ ಸಮಾಪ್ತಿಯಾ[ಪಾಠಾಂ. ಪ್ತವಾ]ಯಿತ್ತು (ಬಸವು. ೬೧-೯೨). ೨. ಕೊನೆಗೊಂಡುದು ; ಮುಗಿದುದು : ವರುಷವೊಂದು ಸಮಾಪ್ತಿ ಬಳಿಕಿನೊಳರಸನಂಘ್ರಿಪಿಲೋಕನಾ ವಿಸ್ಮರಣವಹುದು (ಕುಮಾಭಿ. ೧೯-೨೨). ೩. ಗ್ರಂಥದ ಕೊನೆಯ ಭಾಗ : ರುದ್ರ ನಾಟಕವು ಮುಂದೆ ಹೇಳುವ ಭಾಗಗಳಿಂದ ಕೂಡಿದೆ – ಪ್ರಸ್ತಾವನೆ (Prologue), ಪ್ರಸಂಗ (Episode), ಸಮಾಪ್ತಿ (Exode) (ಅರಿಕಾ. ೯೦). [ಸಂ.]

**ಸಮಾಪ್ತಿವಾಕ್ಯ** (ನಾ). (ಪ್ರಾಚೀನ) ಗ್ರಂಥದ ಮುಕ್ತಾಯದ ಸಾಲು: ಸಮಾಪ್ತಿವಾಕ್ಯಂಗಳ್ (ಶಮದ. ಪುಟ. ೨೯೫); ಗ್ರಂಥಾಂತ್ಯದ ಸಮಾಪ್ತಿವಾಕ್ಯವು ಒಮ್ಮೊಮ್ಮೆ ಸಂಗ್ರಹವಾಗಿರುವುದುಂಟು (ಕುಮಾಸಾಂ. ೩೨). [ಸಂ.]

**ಸಮಾಪ್ತಿಸು** (ಕ್ರಿ). ಮುಗಿಸು ; ಕೊನೆಗಾಣಿಸು : ಅವನನ್ನು ೩೦ರಿಂದ ೪೦ರೊಳಗ ತಮ್ಮ ಅವತಾರವನ್ನು ಸಮಾಪ್ತಿಸಿದ ಶಂಕರಾಚಾರ್ಯ, ಯೇಸುಕ್ರಿಸ್ತ ಮೊದಲಾದ ಅಲ್ಪಸಂಖ್ಯಕರಾದ ಮಹಾಪುರುಷರೊಂದಿಗೆ ಸೇರಿಸಬಹುದು (ಮೂರುಉ. ೯೨). [ಸಮಾಪ್ತ + - ಇಸು]

**ಸಮಾಮ್ನಾಯ** (ನಾ). ೧. ಸಂಪ್ರದಾಯ; ಪದ್ಧತಿ. ೨. ಕಂಠಪಾಠ; ಉರು; ಸಂತೆಹೇಳುವುದು : ಈಶ್ವರಪ್ರಣೀತಗಳೂ ಸಮಾನಾರ್ಥಕಬೋಧಕಗಳೂ ಆದ ವೇದಾಗಮಗಳು ಸಮಾಮ್ನಾಯರೂಪವಾದ ಶ್ರುತಿಗಳೆಂಬ ಹೆಸರಿನಿಂದ ಸ್ವತಃ ಪ್ರಮಾಣಗಳಾಗಿರುವುವು (ಭಾರದ. ೭೧). ೩. ಒಟ್ಟು ; ಮೊತ್ತ : ಅಕ್ಷರಸಮಾಮ್ನಾಯ ವೆಂದರೆ ವರ್ಣಸಮಾಮ್ನಾಯವೆಂದೇ ಅರ್ಥ (ದ್ರಾವಿ. ೯೩). [ಸಂ.]

**ಸಮಾಯೋಗ** (ನಾ). ೧. ಸೇರಿಕೆ ; ಸಂಯೋಗ. ೨. ಸಿದ್ಧತೆ; ಸಜ್ಜು. ೩. ಧನುಸ್ಸಿಗೆ ಬಾಣವನ್ನು ಹೂಡುವಿಕೆ. ೪. ಆಭರಣಗಳನ್ನು ಧರಿಸಿದವನು; ಸಾಲಂಕೃತನಾದವನು : ಸಕಲರಾಜಲೋಕಮಂ ಬೀಡುದಾಣಂಗಳ್ಗೆ ಪೋಗಲ್ವೇಟ್ಟು ಪನೀತಸಮಾಯೋಗನಾಗಿ ಶಯ್ಯಾತಳದೊಳ್ ಮೆಯ್ಯನೀಡಾಡಿ (ಕಾದಂಉ. ೪೫೪). [ಸಂ.]

**ಸಮಾರಂಭ** (ನಾ). ೧. ಮೊದಲುಮಾಡುವಿಕೆ; ಉಪಕ್ರಮ; ಆರಂಭ. ೨. ಏರ್ಪಾಡು ; ವ್ಯವಸ್ಥೆ. ೩. ಉತ್ಸಾಹ ; ಸಂಭ್ರಮ: ಆ ರತ್ನದ ಮಟೆ . . . ಭೋರ್‌ಭೋರೆನೆ ಪಂಚಾಶ್ಚರ್ಯ ಸಮಾರಂಭಯುತಂ ತಗುಳ್ದು ಕಱೆದುದು ನಭದಿಂ (ಶಾಂತಿಪು. ೯-೧೭೩). ೪. ಹಬ್ಬ; ಪರ್ವದಿನ : (೬). ೫. ಧಾರ್ಮಿಕ, ಸಾಂಸ್ಕೃತಿಕ ಅಥವಾ ಸಾಹಿತ್ಯಕ ಸಂಬಂಧವಾದ ಕಾರ್ಯಕ್ರಮ ; ಸಮಾವೇಶ: ಇವನಿಲ್ಲದೆಯೆ ಯಾವ ಸಭೆ ಸಮಾರಂಭಕ್ಕು ಶೋಭೆಯಿಲ್ಲ (ನಲಮು. ೨೯-೨); ಕೊನೆಯಲ್ಲಿ ಅಲ್ಪೋಪಹಾರವೂ ಇದ್ದುದರಿಂದ ಸಮಾರಂಭಕ್ಕೆ ಜನರು ಕಲೆಯುವುದರಲ್ಲಿ ಸಂಶಯವಿರಲಿಲ್ಲ (ಹೇಮಂತ. ೩೯೩). ೬. ನಿವಾರಿಸುವುದು; ತ್ಯಜಿಸುವುದು : ಕೊಲೆಗೆ ಕಾರಣಮಪ್ಪ ಕೈದುಗಳಂ ಸಂಹರಿಸುವುದು ಸಮಾರಂಭಮೆಂಬುದು (ಶ್ರಾವಕಾ. ೮೧-೧೩). [ಸಂ.]

**ಸಮಾರಾಧನೆ** (ನಾ). ೧. ತೃಪ್ತಿಗೊಳಿಸುವ ಸಾಧನೆ. ೨. ಸೇವೆ ; ಶುಶ್ರೂಷೆ: ಪದುಳದಿಂ ಕಂಬಳಿಯನಿಕ್ಕಿಸಿ ಅದಱ ಮೇಲೀಶ್ವರಸಮಾರಾಧನೆಗೆ ಕುಳ್ಳಿರ್ದು (ಬಸವು. ೧೨-೧೭). ೩. ದೇವರು, ಪಿತೃಗಳು ಮುಂತಾದವರ ಪ್ರೀತ್ಯರ್ಥವಾಗಿ ಮಾಡುವ ಒಂದು ಧಾರ್ಮಿಕವಿಧಿ ಮತ್ತು ಅದರ ಅಂಗವಾಗಿ ಮಾಡುವ ಅನ್ನಸಂತರ್ಪಣೆ : ಕಾಶೀಯಾತ್ರೆ ಮಾಡಿ ಬಂದ ನಂತರ ಸಮಾರಾಧನೆ ಮಾಡುವುದು ಸಂಪ್ರದಾಯ (ರೂಢಿ). ೪. (ಆಲಂ) ಸ್ವಾರ್ಥಸಾಧನೆ: ಸಂಧಿಯಲ್ಲಿ ಸಮಾರಾಧನೆ ಮಾಡಿದ ಹಾಗೆ (ಗಾದೆ). ೫. ಪುಷ್ಕಳವಾದ ಭೋಜನ : ಶಿವು . . . ಲಾಡುಸಮಾರಾಧನೆಗೆ ಒಂದು ದಿನವಾದರೂ ತಪ್ಪಿಸಿಕೊಳ್ಳುವ ಮನುಷ್ಯನಲ್ಲ (ರಾಮಾನೆ. ೧೧೫). [ಸಂ. ಸಮಾರಾಧನ]

**ಸಮಾರೂಢ** (ಗು). ೧. ಏರಿದ; ಹತ್ತಿದ. (ನಾ). ೨. ಏರಿದವನು; ಹತ್ತಿದವನು : ಹಯವರಸಮಾರೂಢನಾಗಿ . . . ಕುಂತಳಪುರದ ಬಾಹ್ಯೋಪವನಕೆ ಬರಲು (ಜೈಮಿಭಾ. ೨೯-೪೪). [ಸಂ.]

**ಸಮಾರೋಪ** (ನಾ). ಮುಕ್ತಾಯ; ಕೊನೆ : ಕಾರ್ಯಕ್ರಮದ ಸಮಾರೋಪ ಚೆನ್ನಾಗಿ ನಡೆಯಿತು (ರೂಢಿ). [ಸಂ.]

**ಸಮಾರೋಪಭಾಷಣ** (ನಾ). ಯಾವುದಾದರೊಂದು ಕಾರ್ಯಕ್ರಮದ ಕೊನೆಯಲ್ಲಿ ಮಾಡುವ ಉಪನ್ಯಾಸ: ಮುಖ್ಯಾಧ್ಯಾಪಕರು ಸಮಾರೋಪಭಾಷಣ ಮಾಡಿ ಎಳ್ಳುಬೆಲ್ಲವನ್ನು ಹಂಚಲು ಆಸ್ಪದಮಾಡಿಕೊಟ್ಟರು (ರಂಗರೋ. ೧೧೪). [ಸಂ.]

**ಸಮಾರೋಪಿತ** (ಗು). ಎತ್ತಿ ಹಿಡಿದ ; ಏರಿಸಿದ : ಆ ಪೊಬಲನಾಳ್ದನಖಿಳಮಹೀಪತಿ ಮದದಂತಿದಂತಖಂಡನನೆಗೆ ಸಮಾರೋಪಿತಕೃಪಾಣಧಾರಾವ್ಯಾಪಾರಂ ಸ್ತಿಮಿತಸಾಗರಂ ಮಂಡಳಿಕಂ (ಶಾಂತಿಪು. ೧-೬೭). [ಸಂ.]

**ಸಮಾರೋಹ** (ನಾ). ಹಬ್ಬ ; ಪರ್ವ : ಇಷ್ಟು ವಾದ್ಯ ಓಲಗ ಬಾಜಿಸಿ, ಇಷ್ಟು ದೊಡ್ಡ ಸಮಾರೋಹ ಮಾಡಿ ಯಾವ ನಷ್ಟಗ್ರಹ ಯಾಕೆ ತೊಡೆದುಬಿಟ್ಟಿತೋ ಕಾಣೆ (ಇಪ್ಪಕ. ೪೫೫). [ಸಂ.]

**ಸಮಾರ್ಚನ** (ನಾ). ಪೂಜೆಮಾಡಿದವನು ; ವಿರಚಿತದೇವವಿಪ್ರಾನಳಸಮಾರ್ಚನನು ಕನಕಕವಚವ ತೊಟ್ಟು . . . ರಥವೇಱಿದನು (ಕುಮಾರವ್ಯಾ. ೯-೧೪). [ಸಂ.]

**ಸಮಾಲಂಕಾರ** (ನಾ). [ಕಾವ್ಯಮೀ] ಒಂದು ಅಲಂಕಾರದ ಹೆಸರು; ಅನುರೂಪಪದಾರ್ಥಗಳ ಘಟನೆಯ ವರ್ಣನೆ ಮಾಡುವ ಒಂದು ಬಗೆಯ ಅಲಂಕಾರ: ಆವ ವಸ್ತುವಿಗೆ ತನ್ನ ರೂಪಕ್ಕೆ ತಕ್ಕಂತಹುದರಲ್ಲಿ ತಾನಿರಲು ಇವೆರಡರ ಸಂಬಂಧವಂ ವರ್ಣಿಸಲ್ಕೆ ಸಮಾಲಂಕಾರವೆನಿಪುದು (ಕುವಲ. ೮೦); ಅನುರೂಪ ಪದಾರ್ಥಗಳ ಘಟನೆಯ ವರ್ಣನೆ ಸಮಾಲಂಕಾರವೆನ್ನಿಸಿಕೊಳ್ಳುವುದು (ಕೃಪಿಠಿ. ೨೮೦). [ಸಂ.]

**ಸಮಾಲಂಭ** (ನಾ). ಶರೀರಕ್ಕೆ ಸುಗಂಧಲೇಪನವನ್ನು ಬಳಿದುಕೊಳ್ಳುವುದು. [ಸಂ.]

**ಸಮಾಲಂಭನ** (ನಾ). = ಸಮಾಲಂಭ : "ಸಮಾಲಂಭನಂ, ಚರ್ಚಾ, ಮಾರ್ಷ್ಟಿ: – ಈ ೩ ಚರ್ಚೆ" (ಹಲಾಯು. ೬೯-೬೮೬). [ಸಂ.]

**ಸಮಾಲಕ್ಷಿತ** (ಗು). ಸರಿಯಾಗಿ ಲಕ್ಷಿಸಲ್ಪಟ್ಟ ,– ಗ್ರಹಿಸಿದ : ಕಾಳಸ್ವಭಾವದೇಶಸಮಾಲಕ್ಷಿತವಸ್ತುರೂಪವಿಪರೀತಮದಂತಾಲೋಕವಿರುದ್ಧಂ ಗುಣದೋಳಿಗೆ ಪಂದಿರ್ಕು ಮರಮು ಕವಿಕೌಶಲದಿಂ (ಕಾವ್ಯಾವ. ೯೬೧). [ಸಂ.]

**ಸಮಾಲಿಂಗಿತ** (ಗು). ೧. ದೃಢವಾಗಿ ಬೆರೆತ ,– ಸೇರಿದ : ಸುಮಿತ್ರಂ . . . ರಾಜ್ಯಲಕ್ಷ್ಮೀಸಮಾಲಿಂಗಿತವ್ಯಾ[ಹ]ತದಕ್ಷಲಕ್ಷಣಶಕ್ತಿತ್ರಯಪ್ರಭಾವನಾಗಿ . . . ಅರಸುಗೆಯ್ಯುತ್ತಮಿರೆಯಿರೆ (ವರ್ಧಮಾ. ೮-೧ ವ). (ನಾ). ೨. ದೃಢವಾಗಿ ಸೇರಿದುದು ,– ಬೆರೆತುದು : ಎರಡನೆಯಾಗಮಮೆಂಬುದು ಆಪ್ತಮುಖವಿನಿರ್ಗತಮುಂ ಪೂರ್ವಾಪರವಿರೋಧರಹಿತಮುಂ ಸಪ್ತಭಂಗಿಸಮಾಲಿಂಗಿತಮುಂ . . . ಅಪ್ಪುದು (ಚಾವುಂಪು. ೫). [ಸಂ.]

**ಸಮಾಲೋಕ** (ನಾ). ನೋಟ; ದೃಷ್ಟಿ: ಶೂನ್ಯಸಮಾಲೋಕಂ ತನುತ್ಕಂಬಡೆದ ತನು ವೃಥಾನಲ್ಪಸಂಕಲ್ಪಚಿತ್ತಂ . . . ನೆಗಳ್ದರೆ ವಿರಹಾಕ್ರಾಂತೆ ತತ್ಕಾಂತೆಯಿರ್ದಳ್ (ರಾಜಶೇ. ೭-೭೭). [ಸಂ.]

**ಸಮಾಲೋಚಕ** (ಗು). ೧. ಸರಿಯಾಗಿ ಪರಿಶೀಲಿಸುವ ,– ವಿಮರ್ಶಿಸುವ: ಅಂದಿನ ಸಮಾಲೋಚಕಸಮಿತಿಯಲ್ಲಿ ಒಂದೆರಡು ಮುಖ್ಯವಿಷಯಗಳು ತೀರ್ಮಾನವಾದುವು (ರೂಢಿ). (ನಾ). ೨. ಪರಿಶೀಲಿಸುವವನು; ವಿಮರ್ಶಕ: ಮನ್ಮಥದತ್ತನ ಲೇಖನಪದ್ಧತಿಗೆ ಸಮಾಲೋಚಕನು ತೀಕ್ಷ್ಣಉಪಹಾಸ ವ್ಯಕ್ತಪಡಿಸಿದ್ದಾನೆ (ಇಪ್ಪಕ. ೨೫೩). [ಸಂ.]

**ಸಮಾಲೋಚನೆ** (ನಾ). ಆಲೋಚನೆ; ಪರಾಮರ್ಶೆ: ಸಚಿವಶಾಖೆ ಸೆನೆಟ್ ಒಡನೆ ಸಮಾಲೋಚನೆ ನಡೆಸುತ್ತದೆ (ಪುನರು. ೪೨೩). [ಸಂ. ಸಮಾಲೋಚನ]

**ಸಮಾಲೋಚಿಸು, ಸಮಾಳೋಚಿಸು** (ಕ್ರಿ). ಆಲೋಚಿಸು ; ಪರಾಮರ್ಶಿಸು: ರಾಜ್ಯದ ಅಧಿಕಾರೀವರ್ಗದವರೂ ಸೇರಿ ಸಮಾಲೋಚಿಸಿ ಮಹಾರಾಜರೆಡೆಗೆ ಹೋದರು (ಕುಂಕುಮ. ೩೮). **ಸಮಾಳೋಚಿಸು** : ಈ ಸ್ವಯಂಪ್ರಭೆಗೆ ಪಾಟಿಯನಿಪ್ಪನನಿಂ[ತಿದಂ] ಸಮಾಳೋಚಿಸಿ ಪೇೞ್ವುದು (ವರ್ಧಮಾ. ೩-೪೮). [ಸಮಾಲೋಚನೆ + – ಇಸು]

**ಸಮಾವರ್ತನ** (ನಾ). ೧. ಹಿಂದಿರುಗುವಿಕೆ ; ವಾಪಸ್ಸಾಗುವಿಕೆ. ೨. ಷೋಡಶ ಸಂಸ್ಕಾರಗಳಲ್ಲಿ ಒಂದು; ಬ್ರಹ್ಮಚಾರಿಯು ವೇದಾಧ್ಯಯನವನ್ನು ಮುಗಿಸಿ ಗುರುಕುಲದಿಂದ ಹಿಂದಿರುಗಿದಾಗ ಮಾಡುವ ಒಂದು ವಿಧಿ: ಉಪನಯನವೆಂದರೆ ಗುರುಕುಲಕ್ಕೆ ಹೋಗುವುದು, ಸಮಾವರ್ತನವೆಂದರೆ ಅಲ್ಲಿಂದ ಹಿಂತಿರುಗುವುದು (ಆರ್ಯಧ. ೧೨೭). [ಸಂ.]

**ಸಮಾವರ್ತನೆ** (ನಾ). = ಸಮಾವರ್ತನ ೨ : ಮದುವೆ ನಾಲ್ಕು ದಿನಗಳದ್ದಿದ್ದು, ಮುಂಚೊಂದುದಿನ ಸಮಾವರ್ತನೆ ಅಥವಾ ನಾಂಗಿ (ಜಾನಗೀ. ೭೮). [ಸಂ. ಸಮಾವರ್ತನ]

**ಸಮಾವಾಸ** (ನಾ). ಬೀಡು ; ಪಾಳೆಯ : ಆ ವಿಜಿಗೀಷುವ ಸೈನ್ಯಸಮಾವಾಸದಿನಧಿಕ ಮೊಪ್ಪಿ ತೋಱಿದುದು . . . ಮಲಯಪರ್ವತಕಟಕಂ (ಶಾಂತಿಪು. ೧೧-೧೧). [ಸಂ.]

**ಸಮಾವಿಷ್ಟ** (ಗು). ೧. ಒಳಸೇರಿದ; ಒಳಗೆ ಪ್ರವೇಶಿಸಿದ. (ನಾ). ೨. ಸೇರಿದುದು; ಕೂಡಿದುದು : ನೊಳಂಬರಾಜ್ಯವು ೧೧ನೆಯ ಶತಮಾನದ ಅಂತ್ಯದಲ್ಲಿ ಚಾಳುಕ್ಯ ಚೋಳರಾಜ್ಯಗಳಲ್ಲಿ ಸಮಾವಿಷ್ಟವಾಗಿ ತನ್ನ ಸ್ವತಂತ್ರ ಅಸ್ತಿತ್ವವನ್ನು ಕಳೆದುಕೊಂಡಿತ್ತು (ಕರ್ನಾಇ. ೨೨೨). [ಸಂ.]

**ಸಮಾವೇಶ** (ನಾ). ೧. ಸೇರಿಕೆ ; ಕೂಡಿಕೆ : ಯಾವ ತೂಕದಲ್ಲಿ ಎಷ್ಟು ಜಿನಸುಗಳು ಸಮಾವೇಶವಾಗುತ್ತವೆ? (ಮುಂಬವ್ಯಾ. ೧೯ ಪ್ರಸ್ತಾವನೆ). ೨. ಸೇರ್ಪಡೆ ; ವಿಲೀನ : ಆಗಿನ ಶಿವನಸಮುದ್ರದ ಸೀಮೆಯಲ್ಲಿ ಈಗಿನ ಬೆಂಗಳೂರುಜಿಲ್ಲೆಯ ಬಹುಭಾಗವು ಸಮಾವೇಶಗೊಂಡಿತ್ತು (ಕೃದೇವ. ೨೦). ೩. ಕೂಟ ; ಸಮಾಗಮ : ಲೋಕದೃಷ್ಟಿಯಿಂದ ದಂಪತಿಗಳ ಸಮಾವೇಶದಿಂದ ಸಂತಾನವು ಬೆಳೆಯುವ ಹಾಗೆ . . . ಶಿವಶಕ್ತಿಸಂಯೋಗದಿಂದ . . . ಈ ಸಮಸ್ತವಿಶ್ವದ ಉತ್ಪತ್ತಿಯಾಗುತ್ತದೆ (ಭಾರದ. ೨೨೪). ೪. ಬೃಹತ್‌ಗಾತ್ರದಲ್ಲಿ ನಡೆಯುವ ಸಾಮಾಜಿಕ, ರಾಜಕೀಯ ಅಥವಾ ಸಾಂಸ್ಕೃತಿಕ ಸಭೆ : ನಾಳಿನ ಸಮಾವೇಶಕ್ಕೆ ಅಗತ್ಯವಾದ ಏರ್ಪಾಡುಗಳೆಲ್ಲವೂ ಆಗಿವೆ (ರೂಢಿ). [ಸಂ.]

**ಸಮಾಶ್ರಿತ** (ಗು). ಸಂಪೂರ್ಣವಾಗಿ ರಕ್ಷಿಸಲ್ಪಟ್ಟ ,– ಆಶ್ರಯ ನೀಡಿದ : ಸಮಾಶ್ರಿತ ಜನಕಲ್ಪವೃಕ್ಷನ್ನಾಗವಾದಿ ಸಮಸ್ತಪ್ರಶಸ್ತಿಸಹಿತಂ (ಶಾಇ. XX, ೪೬-೧೮; 1072); ಆ ಸೈನ್ಯಂ . . . ಅಯೋಧ್ಯಾನಗರದಂತೆ ಸಮಾಶ್ರಿತ ಮಹಾದಶರಥ ಸಮಂಚಿತಮುಂ . . . ಎನಿಸಿ (ರಾಜಶೇ. ೬-೧೩ ವ). [ಸಂ.]

**ಸಮಾಶ್ವಾಸಿಸು** (ಕ್ರಿ). ಸಮಾಧಾನಪಡಿಸು; ಸಂತೈಸು: ತಿಳಿಯವೇೞ್ದು ಮಹಾಶ್ವೇತೆಯಂ ಸಮಾಶ್ವಾಸಿಸಿದ ಕಪಿಂಜಲನಂ . . . ಕಾದಂಬರಿಯಿಂತೆಂದಳ್ (ಕಾದಂಬ. ೭೨೫). [ಸಂ. ಸಮಾಶ್ವಾಸನ + - ಇಸು₃]

**ಸಮಾಸ** (ನಾ). ೧. ಒಟ್ಟುಗೂಡಿಸುವುದು ; ಒಂದಾಗಿ ಸೇರಿಸುವುದು. ೨. ಸಮುದಾಯ ; ಸಮೂಹ. ೩. ಸಂಕ್ಷೇಪಗೊಳಿಸುವುದು : "ಸಮಾಸಃ, ಸಮಾಹಾರಃ, ಸಂಕ್ಷೇಪಃ, ಸಂಗ್ರಹಃ - ಈ ೪ ಕಿಱಿದು ಮಾಡುಹ" (ಹಲಾಯು. ೧೨೬-೮೧); ಆ ಸಮರವೃತ್ತಾಂತ ನಿನಗೆ ಸಮಾಸವಿಸ್ತಾರವಾಗಿರಲಿ ಭೂಮಿಾಶತಿಲಕಂ ಗಱುಹುವುದು ನೀನು (ಕುಮಾರಭಾ. ೧-೫೫). ೪. ಒಟ್ಟು; ಮೊತ್ತ. ೫. [ವ್ಯಾಕ] ಎರಡು ಅಥವಾ ಹಲವು ಪದಗಳು ಕೂಡಿ ಏಕಪದವಾಗಿ ಪರಿವರ್ತನೆಗೊಳ್ಳುವ ಕ್ರಿಯೆ ಮತ್ತು ಹಾಗೆ ಪರಿವರ್ತನೆಗೊಂಡ ಪದಸಮೂಹ: ಸಂಗತಿಯಿಂದಂ ನಾಮಪದಂಗಳವೇಕಾರ್ಥಗತಿಯೊಳಾಗೆ ಸಮಾಸಂ ಸಂಗಳಿಸುಗುಂ ವಿಭಕ್ತಿಗಣಂ ಗಳ್ಗಂತರದೊಳಲ್ಲಿ ಲೋಪಮದಕ್ಕುಂ (ಕಾವ್ಯಾವ. ೧೯೯); ನಾಮಪದಮದರ್ಥಾನುಗಮಾಗೆಚಿಗೆ ಸಮಾಸಂ ನೆಗೞ್ಗುಂ (ಶಮದ. ೧೬೨); ಎರಡು ಅಥವಾ ಹಲವು ಪದಗಳು ಒಟ್ಟುಗೂಡಿ ಒಂದು ಶಬ್ದವಾಗುವುದಕ್ಕೆ ಸಮಾಸವೆಂದು ಹೆಸರು (ಮಧ್ಯಮ. ೧೨೨). ೬. [ಕಾವ್ಯಮಿಾ] ಒಂದು ಅಲಂಕಾರದ ಹೆಸರು ; ಮನಸ್ಸಿನಲ್ಲಿ ಒಂದು ವಸ್ತುವನ್ನು ನಿಶ್ಚಯಿಸಿಕೊಂಡು, ಅದನ್ನೇ ಹೋಲುವ ಮತ್ತೊಂದು ವಸ್ತುವನ್ನು ಕುರುಹುಗಳ ಮುಖಾಂತರ ತಿಳಿಸುವುದು ; ಸಮಾಸೋಕ್ತಿ: ಶ್ಲೇಷೋತ್ಪ್ರೇಕ್ಷಾ ಸೂಕ್ಷ್ಮವಿಶೇಷಸಮಾಹಿತಸಮಾಸಪರ್ಯಾಯೋಕ್ತ್ಯಾನ್ಯೇಷವಿರೋಧಾ ಪ್ರಸ್ತುತಶೇಷನಿದರ್ಶನಸಹೋಕ್ತಿಸಂಕೀರ್ಣಂಗಳ್ (ಕವಿರಾ. ೩-೩). [ಸಂ.]

**ಸಮಾಸಲಿಂಗ** (ನಾ). [ವ್ಯಾಕ] ಸಮಾಸಪದವಾಗಲು ವಿಭಕ್ತಿಸ್ವೀಕಾರಕ್ಕೆ ಸಿದ್ಧವಾದ ರೂಪ : ಆ ಲಿಂಗಂ . . . ಕೃಲ್ಲಿಂಗಮೆಂಬ, ತದ್ಧಿತಲಿಂಗಮೆಂಬ, ಸಮಾಸಲಿಂಗಮೆಂಬ, ನಾಮಲಿಂಗಮೆಂಬ ಸ್ಥಿತಿಯಿಂ . . . ಚತುರ್ಭೇದಂ (ಶಮದ. ೭೨ ಟೀಕೆ). [ಸಂ.]

**ಸಮಾಸಾದಿತ** (ಗು). ೧. ಹತ್ತಿರಕ್ಕೆ ಬಂದ ; ಸಮಿಾಪಿಸಿದ. ೨. ಹೊಂದಿದ ; ಪಡೆದ : ಆ ಶಾಂತಿನಾಥಂ ಆ ಸಮ್ಮೇದಗಿರೀಂದ್ರದ ಭಾಸುರಮಣಿಕನಕರಜತ ಸಿಕತಿಳತಳದೊಳ್ ಮಾಸಾವಧಿಯೆನೆ ಯೋಗಸಮಾಸಾದಿತವಿಧಿಯಿನಮರೆ ಕಾಯೋತ್ಸರ್ಗಂ (ಶಾಂತಿಪು. ೧೨-೩೧) ; ಮೇದಿನಿಯಂ . . . ಸಾಧಿಸಿ ಬಾಹುಪರಾಕ್ರಮಂ ಸಮಾಸಾದಿತ ಚಕ್ರಪ್ರವೃತ್ತಿಮಮನಾದಮೆ ಪೆರ್ಚಿಸೆ (ಚಂದ್ರಪ್ರ. ೭-೨೮). ೩. ಪೂರೈಸಿದ ; ಮುಗಿಸಿದ. [ಸಂ.]

**ಸಮಾಸಿಸು** (ಕ್ರಿ). [ವ್ಯಾಕ] ಸಮಾಸಕ್ರಿಯೆಯು ನಡೆಯುವಂತೆ ಮಾಡು ; ಸಮಾಸ ಮಾಡು : ಇದಱೊಡನೆ ಕನ್ನಡದ ದೇಶೀಯಪದಮಂ ಸಮಾಸಿಸಲಪ್ಪುದು (ಶಮದ. ೨೯೯ ವೃತ್ತಿ). [ಸಮಾಸ + - ಇಸು₃]

**ಸಮಾಸೋಕ್ತಿ** (ನಾ). = ಸಮಾಸ ೬ : ತಱಿಸಂದು ಮನದೊಳೊಂದಂ ಪೆಱತಂ ಮತ್ತದನೆ ಪೋಲ್ಪುದಂ ಕುಱಿಪುಗಳಂ ಕುಱಿ ಮಾಡಿ ಮಾಡಿ ಪೇೞ್ವುದು ನೆಱೆಯೆ ಸಮಾಸೋಕ್ತಿಯೆಂಬುದು (ಕವಿರಾ. ೩-೧೨೬); ಉಪಮಾನಕಥನಮೊಂದಱಿನುಪಮೇಯ ಮನಱಿವುದದು ಸಮಾಸೋಕ್ತಿ (ಕಾವ್ಯಾವ. ೬೯೭). [ಸಂ.]

**ಸಮಾಹಾರ** (ನಾ). ೧. ಗುಂಪು; ಸಮೂಹ. ೨. ಸಂಗ್ರಹ ; ಸಂಕ್ಷೇಪ : "ಸಮಾಸಃ, ಸಮಾಹಾರಃ, ಸಂಕ್ಷೇಪಃ, ಸಂಗ್ರಹಃ - ಈ ೪ ಕಿಱಿದು ಮಾಡುಹ" (ಹಲಾಯು. ೧೨೬-೮೧). ೩. ಸಮುಚ್ಚಯಾವ್ಯಯಗಳಿಂದ ಕೂಡಿದ ಪದಗಳ ಗುಂಪು. [ಸಂ.]

**ಸಮಾಹಿತ** (ಗು). ೧. ಒಟ್ಟುಗೂಡಿಸಿದ ; ಕಲೆಹಾಕಿದ : ಲವಣಾಂತಕಂ . . . ಕಾಣ್ಕೆಯಂ ಕೈಕೊಂಡು ಸಸ್ನೆಹ್ನಂ ಸಮಾಹಿತಸರ್ವವೈಭವಂ ಪೊಱಮಟ್ಟಂ (ರಾಮಾಶ್ವ. ೧೦೯-೬). ೨. ಕ್ರಮವಾಗಿ ಇರಿಸಿದ ; ವ್ಯವಸ್ಥೆಗೊಳಿಸಿದ. ೩. ಸಂಕ್ಷಿಪ್ತಗೊಳಿಸಿದ ; ಸಂಗ್ರಹ ಮಾಡಿದ. ೪. ಪೂರ್ತಿಮಾಡಿದ ; ನೆರವೇರಿಸಿದ. ೫. ತಣಿದ ; ಪ್ರಸನ್ನವಾದ ; ಸಮಾಧಾನಗೊಂಡ : ಅಂತು ರಾಮಲಕ್ಷ್ಮಣರಾ ಯಕ್ಷನ ವಿನಯೋಪಚಾರದಿಂ ಸಮಾಹಿತಮನಸ್ಕರಲ್ಲಿರ್ಪುದುಂ (ಪಂರಾಮಾ. ೭-೧೩೮ ವ). ೬. ಇರಿಸಿದ ; ಇಡಲ್ಪಟ್ಟ : ಜಿತಶತ್ರು ಪ್ರಕರಸಮಾಹಿತ ಹಿತೋದ್ಯೋಗಂ (ರಾಜಶೇ. ೪-೧೨೬). ೭. ಅಚಲವಾದ ; ದೃಢವಾದ. (ನಾ). ೮. ಶ್ರದ್ಧೆ ; ತೀವ್ರಾಸಕ್ತಿ. ೯. ಸಮಾಧಾನ ; ಪ್ರಸನ್ನಚಿತ್ತ : ಮೊದಲ ಶುಕ್ಲಧ್ಯಾನದೊಳ್ ಸಮಾಹಿತನುಪಶಾಂತಗುಣಸ್ಥಾನದೊಳ್ ಪ್ರಾಣಪರಿತ್ಯಾಗಂಗೆಯ್ದು (ಆದಿಪು. ೬-೩೪ ವ); ಇದು ಸಮಾಹಿತವಿದು ಶುಭೋದಯ (ಕುಮಾರಭಾ. ೩-೭೨). ೧೦. [ಕಾವ್ಯಮಿಾ] ಒಂದು ಅಲಂಕಾರದ ಹೆಸರು ; ಒಂದು ವಸ್ತುವಿನ ಧರ್ಮವನ್ನು ಇನ್ನೊಂದರಲ್ಲಿ ಆರೋಪಿಸಿ ಹೊಂದುವಂತೆ ಹೇಳುವುದು : ಒಂದಱ ಮಾತುಗಳಂ ಪೆಱತೊಂದಱೊಳಱಿದಿಟ್ಟು ಕೂಡೆ ಪೇೞ್ದೊಡದಕ್ಕುಂ ಸುಂದರತರಂ ಸಮಾಹಿತಂ (ಕವಿರಾ. ೨-೭೩); ಸಮನಿಸಿ ಬಿದಿವಸದಿಂದಂ ಸಮಿಾಹಿತಂ ಬರ್ಪೊಡದು ಸಮಾಹಿತ ಮೆನಿಕುಂ (ಕಾವ್ಯಾವ. ೬೫೨) ; ತೊಡಗಿದ ಕಾರ್ಯಂ ದೈವದ ಗಡಣಿಸಲದು ತಾಂ ಸಮಾಹಿತಂ (ಉದಯಾ. ೫೧). [ಸಂ.]

**ಸಮಾಹಿತಚಿತ್ತ** (ನಾ). ಪ್ರಸನ್ನನಾದವನು ; ಸಮಾಧಾನ ಹೊಂದಿದವನು : ದುಃಖೋಪಶಮನಂಮಾಡಿದೊಡೆ ಸಮಾಹಿತಚಿತ್ತರಾಗಿ ಕೊಳುಗುಳನಂ ವಿಧಿವಿಧಾನದಿಂ ಬಳಸಿ (ಪಂಪಭಾ. ೧೪-೧೦ ವ) ; ರಾಜಸರ್ವಜ್ಞಂ ಶುಚಿರ್ಭೂತನುಮತಿ ಸಮಾಹಿತಚಿತ್ತನುಮಾಗಿ . . . ಜೈನಗೃಹಮಂ ಪೊಕ್ಕಂ (ಮಲ್ಲಿಪು. ೭-೧೦೭). [ಸಂ.]

**ಸಮಾಹಿತವೃತ್ತಿ** (ನಾ). ನೆಮ್ಮದಿ ; ಸುಸ್ಥಿತಿ : ಪರಿಜನಜೀವನಂ ಸಕಲದೇಶ ಸಮಾಹಿತವೃತ್ತಿ ಭೂತಳೇಶ್ವರಧನವೃದ್ಧಿ . . . ಸಲ್ಬುದೆಂಬಿನಂ (ಅನಂಪು. ೨-೨೪). [ಸಂ.]

**ಸಮಾಹಿತಾಂತಃಕರಣ** (ನಾ). = ಸಮಾಹಿತಚಿತ್ತ : ವಿಪ್ರಲಾಪಮನುಪಸಂಹರಿಪುದೆನೆ ಸಮಾಹಿತಾಂತಃಕರಣರುಮಾಗಿ (ಗದಾಯು. ೩-೮೩ ವ). [ಸಂ.]

**ಸಮಾಹೃತ** (ಗು). ೧. ಒಗ್ಗೂಡಿಸಿದ ; ಕಲೆಹಾಕಿದ ; ಸೇರಿಸಿದ. ೨. ಅಪಾರವಾದ; ಅಧಿಕವಾದ. ೩. ಸಂಕುಚಿತಗೊಳಿಸಿದ; ಸಂಕ್ಷೇಪಿಸಿದ. ೪. ಸ್ವೀಕರಿಸಿದ ; ಪಡೆದುಕೊಂಡ : ಯಾನಸೌಮ್ಯದೊಲವಿಂ ನೆಲನುಗ್ಗಡಿಪಂತೆ ಮುಂದೆ ಸಂಧಿಸಿದುದು ನೂಪುರಸ್ವನಸಮಾಹೃತಗೇಹಮರಾಳಮಂಡಲಂ (ಚಂದ್ರಪ್ರ. ೧೦-೯). [ಸಂ.]

**ಸಮಾಹೃತಿ** (ನಾ). ಸೇರಿಕೆ ; ಸಂಯೋಗ : ಆ ವ್ರತಿಪತಿ ಶಶಿಸೂರ್ಯಸಮಾಹೃತಿಯಿಂ ನಿಷ್ಪನ್ನನಾದ ತೆಱದಿಂದಿರ್ದಂ (ಚಂದ್ರಪ್ರ. ೨-೧೩). [ಸಂ.]

**ಸಮಾಹ್ವಯ** (ನಾ). ೧. ಯುದ್ಧಕ್ಕೆ ಕರೆಯುವುದು,– ಆಹ್ವಾನಿಸುವುದು. ೨. ಕಾಳಗ; ಯುದ್ಧ. ೩. ಕೋಳಿ, ಟಗರು ಮೊದಲಾದುವುಗಳ ಕಾಳಗವನ್ನು ನಡೆಸುವುದು. ೪. ಹೆಸರು ; ಅಭಿಧಾನ : ಸುರಪುರಸಮಾಹ್ವಯಂ ಪುರಮೆಸಗುಂ (ಚಂದ್ರಪ್ರ. ೩-೧೩); ಬಲವಿರೋಧಿ ಸಮಾಹ್ವಯಮಾಂತನಾಗನೇ (ರಾಜಶೇ. ೬-೪೨). [ಸಂ.]

**ಸಮಾಳಿಸು** 'ಸಂಬಾಳಿಸು₁' ನೋ.

**ಸಮಾಳೋಚನ** (ನಾ). ಆಲೋಚನೆ ; ಪರಾಮರ್ಶೆ : 'ಸಮಾಳೋಚನಂಗೆಯ್' ಪರಾ. [ಸಂ. ಸಮಾಲೋಚನ]

**ಸಮಾಳೋಚನಂಗೆಯ್** (ಕ್ರಿ). ಆಲೋಚಿಸು ; ಪರಾಮರ್ಶಿಸು : ಸಚಿವರೊಳ್ ಸಮಾಳೋಚನಂಗೆಯ್ದು (ಜಗವಿ. ೩-೨೦ ವ). [ಸಮಾಳೋಚನ + ಕೆಯ್₁]

**ಸಮಾಳೋಚಿಸು** 'ಸಮಾಲೋಚಿಸು' ನೋ.

**ಸಮಿಂಧನ** (ನಾ). ೧. ಉರಿ ಹೊತ್ತಿಸುವಿಕೆ. ೨. ಉರುವಲು ; ಸೌದೆ. [ಸಂ.]

**ಸಮಿತಿ** (ನಾ). ೧. ಸಂಘ ; ಮಂಡಲಿ : "ಸಂಗತಿಃ, ಸಭಾ - ಈ ೨ ಸಮಿತಿಯೆಂಬುದು" (ಹಲಾಯು. ೧೩೭-೩೫). ೨. ಗುಂಪು ; ಸಮೂಹ : ಧರ್ಮನಂಶದೊಳೀತಂ ಪುಟ್ಟಿದನೆಂದಾ ಶಿಶುಗೊಸೆದಿಟ್ಟುದು ಮುನಿಸಮಿತಿ ಧರ್ಮಸುತನೆನೆ ಪೆಸರಂ (ಪಂಪಭಾ. ೧-೧೨೨) ; ಅಂತು ಸಮುಚಿತಾಮರೇಂದ್ರಸಮಿತಿವೆರಸು ಬಂದು (ಪುಷ್ಪಪು. ೧೦-೧೪ ವ). ೩. ಒಂದು ನಿರ್ದಿಷ್ಟಕಾರ್ಯಕ್ಕಾಗಿ ರಚಿತವಾದ, ಸದಸ್ಯರನ್ನೊಳಗೊಂಡಿರುವ ಮಂಡಲಿ : ನೇಮಕವಾಗಿದ್ದ ಸಮಿತಿಯವರು ಪರಿಶೀಲಿಸಿ ಸಮ್ಮತಿಸಿದ ತರುವಾಯ ಈ ಪುಸ್ತಕವು

ಮುದ್ರಿತವಾಗಿದೆ (ಭೌಧಾನ. ೭೬೦೬). ೪. ಕಾಳಗ; ಯುದ್ಧ : "ಸಂಗ್ರಾಮಃ, ಸಮಿತಿಃ . . . ವಿಗ್ರಹಃ- ಈ ೩೫ ಕಾಳೆಗಂ" (ಹಲಾಯು. ೭೫-೩೦೦). ೫. [ಜೈನ] "ಮುನಿಗಳು ಆಚರಿಸಬೇಕಾದ ವ್ರತರೂಪದ ಪ್ರತಿಜ್ಞೆ" (ಜೈನಕೋ. ೨೬೩) : ಸಮಿತಿಯಂ ಗುಪ್ತಿಗಳಂ ಪಾಲಿಸಿ . . . ಎಸೆದಂ (ಪಂರಾಮಾ. ೧೬-೫೦) ; ಸಮಿತಿತ್ರಿಗುಪ್ತಿಯನುಪ್ರೇಕ್ಷೆಗಳ ಸಂಯಮಚಾರಿತ್ರಾದಿಗಳ ಕ್ರಮದಪ್ಪದಾಚರಿಸಲು (ನಾಗಕು. ೩೨-೯೫). [ಸಂ.]

**ಸಮಿತೆ** 'ಸಮಿತ್ತು' ನೋ.

**ಸಮಿತ್ತು, ಸಮಿತೆ** (ನಾ). ಹೋಮಕ್ಕೆ ಉಪಯೋಗಿಸುವ ಅತ್ತಿ, ಅರಳಿ ಮೊದಲಾದ ಮರಗಳ ಸಣ್ಣ ಕಡ್ಡಿ, – ಪುರಳೆ : ಮಿದುಳೆ ಚರು ಸಮಿತ್ತೀ ಬೆರಳಾಜ್ಯ ರಕ್ತವೆಂದು ಬೇಳಿದಂ ಒಡಲ ಪೂರ್ಣಾಹುತಿಗೆ (ತುರಂಗ. ೭೬-೪೧); ಪ್ರಭುಗಳ ಕೈಯಿಂದ ಯಜ್ಞೇಶ್ವರನಿಗೆ ಸಮಿತ್ತು, ಹವಿಸ್ಸು, ಆಜ್ಯಾಹುತಿಗಳನ್ನು ಮಾಡಿಸಿ (ಶಾಂತಲಾ. ೧೦೭). **ಸಮಿತೆ** : ಎಲುಗಳಂ ತಱಿತಱಿದು ಮಿಕ್ಕಡೆ ಸಮಿತೆ[ಪಾಠಾಂ. ವಿಧ]ಯಂ ಮಾಡಿ ಹರವಷ್ನಿಗೆ ಹವಿಯನೀವೆ (ಬಸವು. ೩೯-೩೩). 'ಸವುದೆ' ಪರಾ. [< ಸಂ. ಸಮಿಧ್]

**ಸಮಿದೆ** (ನಾ). ಹುರಿದ ಹಿಟ್ಟು: "ತರ್ಪಣಃ - ಸಮಿದೆ, ಹುರಿಹಿಟ್ಟು" (ಓಷಧಿ. ೬೫). [< ಸಂ. ಸಮಿತಾ]

**ಸಮಿಧೆ** (ನಾ). = ಸಮಿತ್ತು : ಅವನಿಪತಿ ತುಪ್ಪದಿಂ ಸಾಸಿವೆಯಿಂ ಪಾಲ್ಮರನ ಸಮಿಧೆಯಿಂ ಹುತವಹಮಂತ್ರವಿಧಾನದೆ ಬೇಳಿಸಿ (ಲೋಕೋಪ. ೪-೪೭); ಸೆರೆನರದ ದರ್ಭೆಗಳ ಮಿದುಳಿನ ಚರುವಿನೆಲುವಿನ ಸಮಿಧೆಗಳ . . . ವೈರಿಪಶುಬಂಧುರದ ಸಂಗರಯಜ್ಞದೀಕ್ಷೆಯ ಮಱೆದಿರಕಟ (ಕುವ್ಯಾಗ. ೧-೨೦) ; ಸಮಿಧೆಗಳನಾಂತು ಪೊಣ್ಮುವ ಹವ್ಯಾಮೋದದಿನಘ ಪರಿಹಾರಕಮಾದೀ ವೈತಾನವಹ್ನಿ ಸಲಹುಗೆ ನಿನ್ನಂ (ಶಾಕುಂತ. ೫೨-೮೬). [ಸಂ.ಸಮಿಧ]

**ಸಮೀಕ** (ನಾ). ಕದನ ; ಯುದ್ಧ ; ಕಾಳಗ : "ಸಂಗರಂ ಸಮೀಕಂ . . . ಕಾಳೆಗಕೆ ನಾಮಮಕ್ಕುಂ" (ಮಂಗರಾ. ೮೫-೨೮) ; ಇವರಂ ಕೊಲ್ವ ಸಮೀಕದೊಳ್ . . . ಭೂಮಿ ಭಾರವನಮೋಘಂ ಪಿಂಗಿಸಲ್ವೇೞ್ಪುದು (ಜಗವಿ. ೧-೭೪) ; ಅಳಿಬಲರು ನರರೆಂದು ಸಮ್ಮುಖದಲಿ ಸಮೀಕವನೆಸಗಿದರು (ವೆಂಕಾರಾ. ೩-೧೨-೨೩). [ಸಂ.]

**ಸಮೀಕರಣ** (ನಾ). ೧. ಸಮಗೊಳಿಸುವುದು ; ಮಟ್ಟಮಾಡುವುದು. ೨. ಒಂದುಗೂಡುವುದು ; ಸಮಾಗಮ: ಸೌಂದರ್ಯವೆಂದರೆ ಅಹಂ - ತತ್ ಇವೆರಡರ ಸಂಪೂರ್ಣಸಮೀಕರಣ (ಸೌಂದಸ. ೧೬). ೩. [ಗಣಿತ] '=' ಎಂಬ ಗುರುತಿನಿಂದ ಕೂಡಿದ ಎರಡು ರಾಶಿಗಳನ್ನು ಸಮವೆಂದು ದೃಢೀಕರಿಸುವ ಸೂತ್ರ : ಬೀಜಗಣಿತದ ಸಮೀಕರಣವನ್ನು ತಿಳಿಸಿಕೊಡಲು ಕೂಡ ಎಂಥದೋ ಒಂದು ಕಥೆ (ಕಥಕ. ೧೧). [ಸಂ.]

**ಸಮೀಕರಿಸು** (ಕ್ರಿ). ೧. ಸೇರಿಸು; ಒಟ್ಟುಗೂಡಿಸು: ಅರಿಷಡ್ವರ್ಗಮನದಿರ್ಪಿಯುಂ ತ್ರಿವರ್ಗಮಂ ಸಮೀಕರಿಸಿಯುಂ (ಚಂದ್ರಪ್ರ. ೨-೬೧). ೨. ಸಮವೆಂದು ಭಾವಿಸು, – ಎಣಿಸು : ಈ ಬಿಜ್ಜಣನನ್ನು . . . ಸಿಂದಬಿಜ್ಜಳನೊಂದಿಗೆ ಸಮೀಕರಿಸಬಹುದು ಎನಿಸುತ್ತದೆ (ಮೂರುಉ. ೭೮). [ಸಮೀಕರಣ + - ಇಸು]

**ಸಮೀಕೃತ** (ಗು). ೧. ಸಮಗೊಳಿಸಿದ ; ಮಟ್ಟಮಾಡಿದ. ೨. ಒಂದೇ ರೀತಿಯಾಗಿ ಮಾಡಿದ ; ಅನುಕರಿಸಲ್ಪಟ್ಟ. ೩. ಸೇರಿಸಿದ ; ಕೂಡಿಸಿದ : ಸಮೀಕೃತತ್ರಿವರ್ಗನುಂ ದೃಢೀಕೃತತಳವರ್ಗನುಂ . . . ಆಗಿ . . . ಅರಸುಗೆಯುತ್ತುಮಿರೆ (ಚಂದ್ರಪ್ರ. ೪-೨೮ ವ). [ಸಂ.]

**ಸಮೀಕ್ಷಕ** (ನಾ). ಸೂಕ್ಷ್ಮವಾಗಿ ಪರಿಶೀಲಿಸುವವನು : ಆ ಕಚೇರಿಯ ಮೇಲ್ವಿಚಾರಣೆಗಾಗಿ ಸರ್ಕಾರವು ಸಮೀಕ್ಷಕರೊಬ್ಬರನ್ನು ನೇಮಿಸಿದೆ (ರೂಢಿ). [ಸಂ.]

**ಸಮೀಕ್ಷಣ** (ಗು). ಸೂಕ್ಷ್ಮವಾಗಿ ಪರಿಶೀಲಿಸುವ : ಇದನ್ನು ಓದಿದ ತರುವಾಯ ಕವಿ ಒಳ್ಳೆ ಸಮೀಕ್ಷಣಚತುರ ಎನ್ನುತ್ತೇವೆ (ಕಾವ್ಯಕು. ೭೮). [ಸಂ.]

**ಸಮೀಕ್ಷಣೆ** (ನಾ). ಸೂಕ್ಷ್ಮವಾದ ಪರಿಶೀಲನೆ : ಅನೇಕರು ಖಗೋಳಶಾಸ್ತ್ರ ಸಂಬಂಧವುಳ್ಳ ಸಮೀಕ್ಷಣೆಗಳನ್ನು ಮಾಡಿದ್ದರು (ವಿಜ್ಞಾಕ. ೪೭). [ಸಂ. ಸಮೀಕ್ಷಣ]

**ಸಮೀಕ್ಷಿಸು** (ಕ್ರಿ). ಸೂಕ್ಷ್ಮವಾಗಿ ನೋಡು ; ಪರೀಕ್ಷಿಸು : ಕದ್ದು ಕದ್ದು ನೋಡುತ್ತಿದ್ದನು . . . ಏನಾದರೂ ಸಾಕ್ಷಿ ದೊರೆಯುತ್ತದೆಯೋ ಎಂದು ಸಮೀಕ್ಷಿಸುವಂತೆ (ಮಲಮ. ೪೭೪). [ಸಮೀಕ್ಷಣ + - ಇಸು]

**ಸಮೀಕ್ಷೆ** (ನಾ). ಸೂಕ್ಷ್ಮವಾದ ಪರಿಶೀಲನೆ, – ಅವಲೋಕನ : ಈವರೆಗೆ ಕನ್ನಡಸಾಹಿತ್ಯದ ಚಾರಿತ್ರಿಕಸಮೀಕ್ಷೆಯನ್ನು ಮಾಡಿದ್ದಾಯಿತು (ಕಸಾಚ. ೩೮೫) ; ಇಲ್ಲಿಗೆ ದಕ್ಷಿಣಾಕಾಶದ ನಮ್ಮ ಸಮೀಕ್ಷೆ ಮುಗಿಯಿತು (ನಕ್ಷತ್ರ. ೨೩). [ಸಂ. ಸಮೀಕ್ಷಾ]

**ಸಮೀಚೀನ** (ಗು). ೧. ಅರ್ಹವಾದ ; ತಕ್ಕ ; ಯೋಗ್ಯವಾದ : ಅಚ್ಯುತೇಂದ್ರಂ ಮೂನೂಱಯ್ವತ್ತು ಸಮೀಚೀನವಿಮಾನಂಗಳುಂ . . . ತನಗೆ ಪ್ರಸಿದ್ಧಮಾಗೆ (ಶಾಂತಿಪು. ೪-೧೧೧ ವ) ; ಉಚ್ಛ್ರಿತ ಸಮೀಚೀನಚೀನಧ್ವಜವಿತಾನವಿರಾಜಿತಮುಂ . . . ಅಪ್ಪ ನಗರಿಯಂ ಪುಗುವಾಗಳ್ (ಚಂದ್ರಪ್ರ. ೬-೯೪ ವ). (ನಾ). ೨. ತಕ್ಕುದು ; ಯೋಗ್ಯವಾದುದು: ಕುಮಾರರಿಗೆ ಸಮೀಚೀನವಾಗಿ ಶಿಕ್ಷೆಯಾಗಿದೆ ಎಂಬುದಕ್ಕೆ ಸಂದೇಹವಿಲ್ಲ (ಭೀಷ್ಮಚ. ೫೯). [ಸಂ.]

**ಸಮೀಚೀನತೆ** (ನಾ). ಯೋಗ್ಯತೆ; ಅರ್ಹತೆ: ದೃಷ್ಟಾಂತ - ನಿದರ್ಶನಗಳ ಸಮೀಚೀನತೆಯಿಂದ . . . ಕೀರ್ತಿಯುಳ್ಳ ಲೇಖಕರೆಂದರೆ ಶಿವರಾಮಮಹಾದೇವ ಪರಾಂಜಪೇಯವರು (ಮಸಾಹಿ. ೩೭). [ಸಂ. ಸಮೀಚೀನತಾ]

**ಸಮೀಚೀನತ್ವ** (ನಾ). = ಸಮೀಚೀನತೆ : ಈ ಸುಗುಣಗಣವೀ ನಿರಂತರ ದಾಸ ಭಾವನೆಯಾ ವಿಶದಯಶಮಾ ಸಮೀಚೀನತ್ವವೀ [ಪಾಠಾಂ. ಸಮುಚಿತತ್ವಂಗಳೀ] ಸುಚರಿತ್ರವೀ ಘನತೆ ಆರಿಗುಂಟು (ಬಸವು. ೨-೩೧). [ಸಂ.]

**ಸಮೀನೆ** (ನಾ). ವರ್ಷಕ್ಕೊಮ್ಮೆ ಈಯುವ ಹಸು: "ಬಱಿವಿಡಿದು ವರ್ಷಕೀನುವುದು ಸಮೀನಯೆನಿಕ್ಕುಂ" (ಮಂಗರಾ. ೫೪-೪). [ಸಂ. ಸಮೀನಾ]

**ಸಮೀಪ** (ಗು). ೧. ಹತ್ತಿರದ ; ಬಳಿಯ ; ಸನಿಹದ. (ನಾ). ೨. ಹತ್ತಿರ ; ಸನಿಹ: "ಸನಿಹಂ ಕೆಲಂ ಪಕ್ಕಮುಂ ಪೊರೆಯು ಪೊರ್ದುಗೆಯುಮೆನೆ ಸಮೀಪಕೆ ಪೆಸರ್" (ಕಬ್ಬಿಕೈ. ೩೨) ; ಸಮೀಪಕ್ಕೆ - ಇದೆ ಇದೆ ಸಾರ್ಕೆ ಸಾರ್ಕೆ ಗಣಕಾವಳಿ ಪೇೞ್ದ ಮುಹೂರ್ತಂ (ಶಮದ. ೧೯೫ ಪ್ರಯೋ) ; ಸುತ್ತೆಲ್ಲ ಕತ್ತಲಾ ಒಳಗ ಬೆಳಗತದ ದೀಪಾ ಬಾ ಸಮೀಪಾ (ನಾದಲೀ. ೪೭-೯). [ಸಂ.]

**ಸಮೀಪಗ** (ನಾ). ಹತ್ತಿರದಲ್ಲಿರುವವನು; ಬಳಿಯಲ್ಲಿರುವವನು : "ಆಸನ್ನಃ- ಸಮೀಪಗಂ" (ಕಾಶಕ್ಯ. ೧೪೯). [ಸಂ.]

**ಸಮೀಪಗತ** (ನಾ). ೧. ಹತ್ತಿರವಾದುದು; ಸಮೀಪದಲ್ಲಿರುವಂಥದು. ೨. [ಛಂದ] ಆರುಬಗೆಯ ಪ್ರಾಸಗಳಲ್ಲಿ ಒಂದು ; ಉಚ್ಚಾರಣೆಯಲ್ಲಿ ಸಾಮೀಪ್ಯವಿರುವ ಶ, ಷ, ಸ ಎಂಬ ಮೂರುವರ್ಣಗಳು ಕ್ರಮವಾಗಿ ಪ್ರಾಸಸ್ಥಾನದಲ್ಲಿರುವುದು: ವಿನುತಪ್ರಾಸಂ . . . ಸಮೀಪಗತಂ . . . ಅಂತಗತಂ ಸಂಜನಿತ ವಿಭೇದೋಕ್ತಿಯಿಂದಮಿಂತಾಱುತೆಱಂ (ಕವಿರಾ. ೨-೩೧) ; ವಿನುತಪ್ರಾಸಂ ಶಾಂತೋಪನತಂ ವರ್ಗೋದಿತಂ ಸಮೀಪಗತಂ ಮತ್ತನುಗತಮಂತಗತಂ ಸಂಜನಿತಂ ವಿಭವೋಕ್ತಿಯಿಂದಿವಂತಾಱುತೆಱಂ (ಛಂದೋಂಬು. ೧-೪೭ ಅಧಿಕಪದ್ಯ ೬). [ಸಂ.]

**ಸಮೀಪಪ್ರಾಸ** (ನಾ). = ಸಮೀಪಗತ ೨: ಶಷಸವರ್ಣತ್ರಯಮಂ ವಿದಿತ ಪ್ರಾಸವಿನ್ಯಾಸ್ಪದದೊಳ್ ನಿಲೆ ಪೇೞ್ದೊಡದು ಸಮೀಪಪ್ರಾಸಂ (ಕವಿರಾ. ೨-೩೯). [ಸಂ.]

**ಸಮೀಪವರ್ತಿ** (ಗು). ೧. ಹತ್ತಿರದಲ್ಲಿರುವ ; ನಿಕಟವರ್ತಿಯಾದ : ವನಧಿದ್ವೀಪ ಸಮೀಪವರ್ತಿ ವಸುಧಾಂತರ್ವರ್ತಿಯಾಗಿರ್ದರಾತಿನಿಕಾಯಕ್ಕಿದು ಯಾಮಿನೀಸಮುದಿತಂ ದೇವೇಂದ್ರಚಾಪಂ (ಆದಿಪು. ೧೪-೯೯). (ನಾ). ೨. ಹತ್ತಿರ; ಸನಿಹ : ಬಿಹಾರ ಪ್ರಾಂತ್ಯವು ಮಾನವಶಾಸ್ತ್ರದ ರೀತ್ಯ ಮತ್ತು ಸಾಂಸ್ಕೃತಿಕವಾಗಿಯೂ ಈ ಎರಡು ಪ್ರಾಂತ್ಯಗಳಿಗೆ ಅತ್ಯಂತ ಸಮೀಪವರ್ತಿಯಾಗಿ ನಿಲ್ಲುತ್ತದೆ (ಭಾರಜಾ. ೭೪). [ಸಂ. ಸಮೀಪವರ್ತಿನ್]

**ಸಮೀಪಸ್ಥ** (ನಾ). ೧. ಹತ್ತಿರದಲ್ಲಿರುವಂಥದು; ಸನಿಹದಲ್ಲಿರುವಂಥದು : ಈ ಭೂಮಿಯ ಸಮೀಪಸ್ಥವಾದ ಬೇರೆ ಭೂಮಿಯಿಂದಾದರೂ ಲಾಂಬಿ ಕಟ್ಟಿಕೊಳ್ಳಬಹುದು (ಭೂಮಿಅ. ೧೭). ೨. ಹತ್ತಿರದಲ್ಲಿರುವ ವ್ಯಕ್ತಿ : ಕಷ್ಟಸುಖಗಳಲ್ಲಿ ಸಮೀಪಸ್ಥರಲ್ಲದೆ ಯಾರು ಸಹಾಯ ಮಾಡುತ್ತಾರೆ? (ರೂಢಿ). [ಸಂ.]

**ಸಮೀಪಸ್ಥಿತ** (ಗು). ಹತ್ತಿರದಲ್ಲಿರುವ ; ಸನಿಹದ : ತತ್ಸಮೀಪಸ್ಥಿತ ರಕ್ತಾಶೋಕ ಮಹೀರುಹತಳವಿಶಾಳಶಿಳಾಪಟ್ಟಕದೊಳ್ ಉತ್ತರಾಭಿಮುಖನಾಗಿ ಕುಳ್ಳಿರ್ದು (ಶಾಂತಿಪು. ೮-೧೨೨ ವ). [ಸಂ.]

**ಸಮೀಪಿಸು** (ಕ್ರಿ). ಹತ್ತಿರ ಬರು ; ಬಳಿಸಾರು : ವಾಹಿನಿ ಸಮುದ್ರಲಗ್ನಕೆ ಸಮೀಪಿಸುವಂತೆ (ಚಿತ್ರಾಂಗ. ೫೬-೧೫೪೫); ಮಳೆಗಾಲ ಸಮೀಪಿಸಿತು (ಮುಂಗಾಮು. ೬೧). [ಸಮೀಪ + -ಇಸು$_3$]

**ಸಮೀರ** (ನಾ). ೧. ಗಾಳಿ ; ವಾಯು : ಪೆಣ್ದುಂಬಿಗಳ ಸರಮನೆತ್ತಿ ತಱುಂಬುತ್ತುಂ ಬಂದುದಾ ಪ್ರಭಾತಸಮೀರಂ (ಪಂಪಭಾ. ೧೨-೧೦೫) ; ಆ ಕುಮಾರವಿಯೋಗ ವಹ್ನಿಗೆಯಾಕೆಯಳಲು ಸಮೀರನಾಯ್ತು (ಕುಮಾದ್ರೋ. ೭-೧೮). ೨. ಗಾಳಿಯ ಅಧಿದೇವತೆ : 'ಸಮೀರಕುಮಾರ' ಪರಾ. ೩. ಶಮೀವೃಕ್ಷ. [ಸಂ.]

**ಸಮೀರಕುಮಾರ** (ನಾ). ೧. ವಾಯುವಿನ ಮಗ ; ಭೀಮ : ಎಲೆ ಸಮೀರಕುಮಾರ ಸಂಪ್ರತಿಗೆಳಸಿದ್ಯೆ ಕಲಿತನವ ನೀರೊಳು ಕಲಕಿದ್ಯೆ (ಕುಮಾಉ. ೬-೧೯). ೨. ಹನುಮಂತ: ಆ ಸಮೀರಕುಮಾರ ಬಳಿಕಿಂತೆಂದನರಸಂಗೆ (ತೊರರಾ. ೪-೧-೧೭). [ಸಂ.]

**ಸಮೀರಜ** (ನಾ). = ಸಮೀರಕುಮಾರ ೧: ಎಲೆ ಸಮೀರಜನನುಜ ರಿಪುಬಲ ವಿಲಯ ಮೇಘನಿಕಾಯವಿದೆ ಭುಜಬಲವ ತೋಱ್ಕೆ (ಕುಮಾಭೀ. ೩-೨೫). [ಸಂ.]

**ಸಮೀರಣ** (ನಾ). ೧. = ಸಮೀರ ೧ : ರಾಜಸುತೆಯಂ ನಯದಿಂದವಳುಯ್ದಳ್ . . . ಸಮೀರಣೋತ್ಥಿತವಿಶಾಳವಿಳೋಳತರಂಗರೇಖೆ ಪದ್ಮಾಂತರದಿಂದಮಿಂಬಱಿದು ಮಾನಸಹಂಸಿಯನುಯ್ಯಮಾರ್ಗದಿಂ (ಪಂಪಭಾ. ೩-೫೭); ಭೂ ತೋಯ ಪಾವಕ ಸಮೀರಣ ಅಂಬರಾದಿಗಳೆಲ್ಲ ಆದಿಯಾಧಾರದ ಪರಮಾತ್ಮಲಿಂಗದಲ್ಲಿ (ಬಸವ. ೯೪೯). ೨. ಒಂದು ಬಗೆಯ ಸಸ್ಯ ; ಮರುಗ : "ಸಮೀರಣಃ, ಮರುವಕಃ . . . ಜಂಬೀರಃ - ಈ ೫ ಅಜ್ಜಿಗೆ, ಕೆಲಂಬರು ಮರುಗವೆಂಬರು" (ನಾಚಿರಾ. ೧೦೯). ೩. [ಛಂದ] ಒಂದು ಗಣದ ಹೆಸರು; ಸಗಣ (UU –): ಸುರರ ಪಡೆ ನೆರೆದಿರಲು ಕರಿಗಳೆನಿತನಿತಱೊಳೆ ಖರಕರಸಮೀರಣಪದಾಂತಂ ಪುರಮಥನನಿದೆ ಬೞಿಕ ನೆರೆದು ಯತಿ ದಶಮದೊಳೆ ತರತರದಿನೊಪ್ಪಿ ನಿಲೆ (ಛಂದೋಂಬು. ೩-೨೦೫). [ಸಂ.]

**ಸಮೀರಭವ** (ನಾ) = ಸಮೀರಕುಮಾರ ೨ : ಸೇನೆಯೆಲ್ಲವನೊರಸಿ ಕಮಲಜಶಕ್ತಿಗೊಳಗಾದನು ಸಮೀರಭವ (ಕೌಶಿರಾ. ೧೧ ಸೂಚನೆ). [ಸಂ.]

**ಸಮೀರಭುಗ್ವರ** (ನಾ). ಹಾವುಗಳಲ್ಲಿ ಶ್ರೇಷ್ಠವಾದುದು ; ಆದಿಶೇಷ : ಸಮೀರಭುಗ್ವರೋದ್ಗಾರಯಶಂ ವಿರಾಜಿಸಿದುದೆಣ್ದೆಸೆಯೊಳ್ (ರಾಜಶೇ. ೧-೬೬). [ಸಂ.]

**ಸಮೀರಸುತ** (ನಾ). = ಸಮೀರಕುಮಾರ ೧ : ಸಮರದನುಸಂಧಾನದಲಿ ಸಂಭ್ರಮಿಸಿ ಶೌರಿ ಸಮೀರಸುತನಲಿ ಸಮತೆಯನು ಸೇರಿಸಿದನಂದು ಸಮಗ್ರಸೂಕ್ತಿಯಲಿ (ಕುಮಾಉ. ೬ ಸೂಚನೆ). [ಸಂ.]

**ಸಮೀರಾತ್ಮಜ** (ನಾ). = ಸಮೀರಕುಮಾರ ೨ : ಸಮೀರಾತ್ಮಜಂ ತಾನುಮಂತೆಯೆ ನೋಡುತಿರ್ದನ್ ಸಮುದ್ರಸಮಗಂಭೀರನಂ . . . ರಾಮಚಂದ್ರನಂ! (ಶ್ರೀರಾಮಾ. ೨೮೯-೧೨೬). [ಸಂ.]

**ಸಮೀರಿತ** (ಗು). ೧. ಅಲುಗಾಡಿಸಲ್ಪಟ್ಟ; ಅಲ್ಲಾಡಿದ. (ನಾ). ೨. ಅಲುಗಾಡಿಸಲ್ಪಟ್ಟುದು; ಅಲ್ಲಾಡಿದುದು : ಮುಯ್ಪಿನೊಳ್ ಪುದಿದ ಕುರುಳ್ ಸಮೀರಣಸಮೀರಿತವುಳ್ಕೆಯ ಪೂತ ಕಿಂಕಿರಾತದೊಳೆಱಗುತ್ತುಮಿರ್ಪಳಿಯ ಗಾವಳಿಯಂದದಿನೊಪ್ಪಿ ತೋಱುಗುಂ (ಶಾಂತಿಪು. ೧೧-೧೦೯). [ಸಂ.]

**ಸಮೀಹಿತ** (ನಾ). ಅಪೇಕ್ಷೆ ; ಬಯಕೆ ; ಇಚ್ಛೆ : ಮದಿರಾದೇವಿಯ ಮನೋಭಿಲಷಿತಮುಂ ಮದೀಯ ಸಮೀಹಿತಮುಂ . . . ಸಮನಿಸಿತಿಲ್ಲೆಂದು ಮನಂ ನೊಂದು (ಕಾದಂಉ. ೫೪೬) ; ಸಯ್ಪಿನಿಂ ಸಮನಿಸ್ಕುಮಲ್ತೆ ಸಮೀಹಿತಂ (ಕಾವ್ಯಾವ. ೯೫). [ಸಂ.]

**ಸಮುಖ$_1$** (ನಾ). ೧. ಎದುರು; ಅಭಿಮುಖ : ಪೌರಜನರು ಆ ಮಹಾರಾಯನ ಸಮುಖಕ್ಕೆ ಬಂದು (ಕೃವಾಆ. ೧೩೩). ೨. ಸನ್ನಿಧಾನ; ಸನ್ನಿಧಿ : ಇಂತಹ ಗಿಣಿಯು ದೇವರ ಸಮುಖಕ್ಕೆ ಸಲುವುದು (ವಚಕಾ. ೧). [< ಸಂ. ಸಮ್ಮುಖ]

**ಸಮುಖ$_2$** (ಗು). ೧. ಹೆಚ್ಚು ಮಾತನಾಡುವ; ವಾಚಾಳತನವುಳ್ಳ. ೨. ಒಳ್ಳೆಯ ಮಾತುಗಾರಿಕೆಯಿಂದ ಕೂಡಿದ ; ವಾಕ್ಪಟುತ್ವವುಳ್ಳ. [ಸಂ.]

**ಸಮುಖಾದೇಶ** (ನಾ). ನೇರವಾದ ಆಜ್ಞೆ, – ನಿರೂಪ : ದಂಡನಾಯಕಂ ಅಡವದ ಬಂಮ್ಮಣಯ್ಯನ ಸಮುಖಾದೇಶದಿಂ ಕಾರುಣ್ಯಂಗೆಯ್ದು (ಕಇಆ. ೧೮-೧-೬೮ ; 1127). [< ಸಂ. ಸಮುಖಾದೇಶ]

**ಸಮುಚಿತ** (ಗು). ೧. ಉಚಿತವಾದ ; ತಕ್ಕ : ಸಮುಚಿತನೃಪತುಂಗದೇವಮಾರ್ಗಕ್ರಮಗಮನಾಭಿಮುಖರ್ಕಳಪ್ಪ ಧೀರರ್ . . . ಕಾವ್ಯಾಶ್ರಮಪದಮಂ ನಿರಪಾಯಮೆಯ್ದಲಾರ್ಪರ್ (ಕಷರಾ. ೧-೧೪೭) ; ಜಾತಕರ್ಮನಾಮಕರಣಾನ್ನಪ್ರಾಶನಚೌಲೋಪನಯನಾದಿ ಸಮುಚಿತಕ್ರಿಯೆಗಳಿಂ ಕ್ರಿಯೆಪಡೆದು (ಸುಕುಮಾ. ೫-೫೦ ವ). (ನಾ). ೨. ಯೋಗ್ಯವಾದುದು; ತಕ್ಕುದು: ಅಮಳಲಿಂಗಾರ್ಚನಸಮಯದಲಿ ಸಮುಚಿತದ ನೈವೇದ್ಯವೇಳೆಯೊಳ್ (ಬಸಪು. ೩೩-೧೦). [ಸಂ.]

**ಸಮುಚಿತಾಸನ** (ನಾ). ಉಚಿತವಾದ ಪೀಠ, – ಗದ್ದುಗೆ : ದವನಕಂ ಸಮುಚಿತಾಸನದೊಳ್ ಕುಳ್ಳಿರ್ದು (ಪಂಚತಂ. ೪೫-೧೩ ವ) ; ಸಮುಚಿತಾಸನದೊಳ್ ಕುಳ್ಳಿರ್ದ ತನಯನಾನನಮನವನೀವಲ್ಲಭಂ . . . ನೋಡಿ (ಚಂದ್ರಪ್ರ. ೪-೧೪ ವ). [ಸಂ.]

**ಸಮುಚ್ಚಯ** (ನಾ). ೧. ಗುಂಪು; ಸಮೂಹ : ಠಾಕೂರರ ಪ್ರೇಮಗೀತೆಗಳ ಸಮುಚ್ಚಯ 'ತೋಟಗಾರ' (ಧರ್ಮಸಾ. ೫೯) ; ಭಾಷೆ ಮೊದಲಲ್ಲಿ . . . ಮೂಲಭಾವಗಳನ್ನು ವ್ಯಕ್ತಿಪಡಿಸುವ ಕೆಲವೇ ಸಂಖ್ಯೆಯ ಸ್ವರಗಳ ಸಮುಚ್ಚಯ ಆಗಿದ್ದಿರಬೇಕು (ನಮ್ಮನು. ೨೯). ೨. ರಾಶಿ ; ಒಟ್ಟಿಲು : ನಾನಾ ಸಮಸ್ತಾಭರಣನವವಸ್ತ್ರಸಮುಚ್ಚಯವಂ ಸಮರ್ಪಿಸಿ (ಬಸಪು. ೫೯-೫೭). ೩. ಜೋಡಣೆ ; ಸೇರಿಕೆ. ೪. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ; ಸುಖಕರವಾದ ಅಥವಾ ದುಃಖಕರವಾದ ಫಲವನ್ನುಂಟುಮಾಡುವ ಅನೇಕ ಗುಣ ಕ್ರಿಯೆ ಮುಂತಾದುವು ಒಂದೇ ಕಡೆಯಲ್ಲಿರುವುದು: ಬಹುಸಂಕಥನಂ ಜಾತಿದ್ರವ್ಯಾದಿಕಂ ಸಮುಚ್ಚಯಮಕ್ಕುಂ (ಕಾವ್ಯಾವ. ೬೨೫). ೫. [ವ್ಯಾಕ] (ಸಮೂಹದ ಅರ್ಥವ್ಯಾಪ್ತಿಗಾಗಿ) ವಿಭಕ್ತಿ ಪ್ರತ್ಯಯಗಳ ಪದಾಂತದಲ್ಲಿಯೂ ಸಂಬಂಧಸೂಚಕವಾಗಿ ವಾಕ್ಯಗಳ ನಡುವೆಯೂ ಬಳಸುವ 'ಅಂ', 'ಉಂ', 'ಮತ್ತು', 'ಅಥವಾ' ಮುಂತಾದ ಅವ್ಯಯ : ಲಘೂಚ್ಚಾರಿತ ಶಬ್ದದೋಷ ಮುಮದಂತೆ ಸಮುಚ್ಚಯಜಾತದೋಷಮುಂ . . . ವಿಶಂಕಾರಚಿತೋರುದೋಷಮುಮನೀ ತೆಱದಿಂ ತಱಿಸಲ್ಕೆ ಪಂಡಿತರ್ (ಕವಿರಾ. ೧-೧೧೩) ; ಷಷ್ಠಿಯೊಳ್ ಸಮುಚ್ಚಯಂ ಪತ್ತದು (ಶಮದ. ೧೨೨ ವೃತ್ತಿ). [ಸಂ.]

**ಸಮುಚ್ಚಯವಚನ** (ನಾ). ೧. ಸಮುಚ್ಚಯಸಹಿತವಾದ ಮಾತು. ೨. ಕರ್ಮ ಮತ್ತು ಜ್ಞಾನವು ಸೇರಿ ಮೋಕ್ಷಕ್ಕೆ ಸಾಧನವಾಗುವುದೆಂಬ ವಾದ : ಮುಕ್ತಜೀವನಪ್ಪೊಡೇಕಪ್ರಕಾರನುಂ . . . ಅಪುನರ್ಜಾತನುಮಕ್ಷಯನುಮಕ್ಕುಮೆಂದು ಜೀವತತ್ತ್ವಮಂ ಸಮುಚ್ಚಯವಚನದಿಂ ಸವಿಸ್ತರಂ ಬೆಸಸಿ (ಸುಕುಮಾ. ೮-೧೪ ವ). [ಸಂ.]

**ಸಮುಚ್ಚಯಾಲಂಕಾರ** (ನಾ). [ಕಾವ್ಯಮೀ] ಒಂದು ಅರ್ಥಾಲಂಕಾರದ ಹೆಸರು; "ಏಕಕಾಲಿಕವಾದ ಅನೇಕಕ್ರಿಯೆಗಳ ವರ್ಣನೆ ಸಮುಚ್ಚಯಾಲಂಕಾರ" (ಕೈಪಿಡಿ. ೨೮೪). [ಸಂ.]

**ಸಮುಚ್ಚಳಿತ** (ಗು). ಮೇಲೆದ್ದ; ಹಾರಿದ; ಚಿಮ್ಮಿದ: ಧನಂಜಯರಥ ಚಟುಳ ಚಕ್ರನೇಮಿಧಾರಾಪರಿವೃತ ಸಂಘಟ್ಟನಸಮುಚ್ಚಳಿತಪಾಂಸು ಪಟಳಾಂಧಕಾರ ದುರ್ಲಕ್ಷ್ಯಾಂತರಿಕ್ಷಕ್ಷಿತಿದಿಗಂತರಾಳಾಂತರಮುಂ (ಪಂಪಭಾ. ೧೩-೫೧ ವ); ಅನಂತ ಸಂತೋಷಪೀಯೂಷಾಂಬರಶಿಲೆಯೊಳಾ ಸಮುಚ್ಚಳಿತೋದಾರಪೂರಪ್ಲವಮಾನ ಮಾನಸನಾಗಿ . . . ಅರ್ಚಿಸಿದಂ (ವರ್ಧಮಾ. ೬-೪೩ ವ). [ಸಂ.ಸಮುಚ್ಚಲಿತ]

**ಸಮುಚ್ಚಾಮರ** (ನಾ). ೧. ಶ್ರೇಷ್ಠನಾದ ದೇವತೆ. ೨. ಮೇಲಕ್ಕೆ ಬೀಸಲ್ಪಟ್ಟ ಚಾಮರ. ೧ , ೨ : ಆ ಸೈನ್ಯಂ . . . ನಭಸ್ಥಳದಂತೆ ಸಮುಚ್ಚಾಮರಸಮಂಚಿತಮುಂ ಪೃಥುಳಪುರದಂತೆ ಮಿಳಿತ ಘಂಟಾಧ್ವನಿಕೇತನಾಲಂಬಿತಮುಂ . . . ಎನಿಸಿ (ರಾಜಶೇ. ೬-೧೭ ವ). [ಸಂ.(ಸಮುಚ್ಚ + ಅಮರ ; ಸಮುತ್ + ಚಾಮರ)]

**ಸಮುಚ್ಛಿನ್ನ** (ಗು). ಸಂಪೂರ್ಣವಾಗಿ ನಾಶವಾದ : ಸಮುಚ್ಛಿನ್ನಕ್ರಿಯಾನಿವೃತ್ತಿಧ್ಯಾನ ಪರಿಣತೆಯಿನಘಾತಿಚತುಷ್ಕಶುಷ್ಕೇಂಧನಪಾವಕನಾಗಲೊಡಂ (ಸುಕುಮಾ. ೯-೧ ವ); ಸಮುಚ್ಛಿನ್ನಪ್ರಾಣಾಪಾನಪ್ರಚಾರಂ ಸಮುಚ್ಛಿನ್ನಕ್ರಿಯಾವೃತ್ತಿಧ್ಯಾನಪ್ರವರ್ತನಾಪರನಾಗಿ (ಪಂರಾಮಾ. ೧೬-೭೯ ವ). [ಸಂ.]

**ಸಮುಚ್ಛ್ರಯ** (ನಾ). ೧. ಎತ್ತರ ; ಔನ್ನತ್ಯ. ೨. ಉದ್ದ ; ನೀಳ : ಆರೋಹಃ, ಸಮುಚ್ಛ್ರಯಃ - ಈ ೨ ಮರದ ಉದ್ದಂ" (ಹಲಾಯು. ೩೦-೨೭). ೩. ವಿರೋಧ ; ಹಗೆತನ. [ಸಂ.]

**ಸಮುಚ್ಛ್ರಿತ** (ಗು). ಎತ್ತರವಾದ; ಉನ್ನತವಾದ : ಪಂಚಾಶದುಪೇತಧನುಃ ಪಂಚಶತ ಸಮುಚ್ಛ್ರಿತದೇಹಂ (ಆದಿಪು. ೬-೬೪) ; ಸಮುಚ್ಛ್ರಿತಾನೇಕಮೇಘಡಂಬರ ಚಾರುತಾವಳಂಬಿಯಾಗಿಯುಂ ಪ್ರಕಟೀಕೃತರಾಜಲೀಲೋದಯಮಲ್ತು (ಚಂದ್ರಪು. ೪-೧೨ ವ). [ಸಂ.]

**ಸಮುಜ್ಜ್ವಲ, ಸಮುಜ್ಜ್ವಳ** (ಗು). ೧. ಹೊಳೆಯುವ; ಪ್ರಕಾಶಮಾನವಾದ. ೨. ಶ್ರೇಷ್ಠವಾದ; ಅತಿಶಯವಾದ : ಅಕ್ಕುಂ ನಿಷ್ಠುರವಾಕ್ಪಾಷಾಣಪರಿಸ್ಫುರಿತಂ ಕೃತಿರತ್ನದೊಳ್ ಸಮುಜ್ಜ್ವಲಭಾವಂ (ಚಂದ್ರಪು. ೧-೪೪). **ಸಮುಜ್ಜ್ವಳ:** ೩. ಶುಭ್ರವಾದ: ಸಮುಜ್ಜ್ವಳಶಯ್ಯೆಯಿಂದಮೆಟ್ಟರಸಿ ಬಟ್ಟಿಕ್ಕಲಂಕರಿಸಿದಳ್ ನವಹಾಟಕಪೀಠಿಕಾಗ್ರಮಂ (ಚಂದ್ರಪು. ೭-೭೯). [ಸಂ.]

**ಸಮುಜ್ಜ್ವಳ** 'ಸಮುಜ್ಜ್ವಲ' ನೋ.

**ಸಮುಜ್ಝಿತ** (ಗು). ೧. ಬಿಟ್ಟ ; ವರ್ಜಿಸಿದ ; ಪರಿತ್ಯಜಿಸಿದ. ೨. ಉಳಿದ ; ಮಿಕ್ಕ : ಸಮುಜ್ಝಿತ ಧನರಾಶಿ ಶಕ್ತಿ ಜನಿತಂ (ಜಾತತಿ. ೧೩-೧೮). [ಸಂ.]

**ಸಮುಜ್ವಲ, ಸಮುಜ್ವಳ** (ಗು). ಹೊಳೆಯುವ; ಕಾಂತಿಯುತವಾದ: ಅಳಿಯಾಸೆಯಲಿ ನೆನೆವಂ ಸಮುಜ್ವಲದಂತಪಂತಿಯನು ಆ ಸತಿಯ ನವಕಂಬುಕಂಠದ ಭಾಸವಂ ನೆನೆವಂ (ಬಸಪು. ೪೨-೨೬) ; ಶಂಕರಾಭರಣಸಮುಜ್ವಲವೇಣಿರಾಗರಂಜಿತೆ (ರಾಜಶೇ. ೧೧-೮೮). **ಸಮುಜ್ವಳ** : 'ಸಮುಜ್ವಳಿಸು' ಪರಾ. [ಸಂ.]

**ಸಮುಜ್ವಳ** 'ಸಮುಜ್ವಲ' ನೋ.

**ಸಮುಜ್ವಳಿಸು** (ಕ್ರಿ). ಹೊಳೆ; ಮಿರುಗು: ಕರ್ಣದ್ವಯಾಪೂರ್ಣಾಕಲಿತ ಸೌವರ್ಣಪತ್ರಂಗಳು ಸಮುಜ್ವಳಿಸೆ (ಬಸಪು. ೪-೩೮).
[ಸಮುಜ್ವಳ (= ಸಮುಜ್ವಲ) + - ಇಸು₃]

**ಸಮುತ್ಕಂಟಕ** (ಗು). ದೊಡ್ಡ ದೊಡ್ಡ ಮುಳ್ಳುಗಳಿಂದ ಕೂಡಿದ: ಸಮುತ್ಕಂಟಕ ವಿಟಪಿಲತಾ ವೀರುದತ್ಯಂತವೃತ್ಯುತ್ಕರದುರ್ವೇಶಂ ಮನಕ್ಕದ್ಭುತರಸದೊದವಂ ತಂದುದಂದೊಂದಗೇಂದ್ರಂ (ಚಂದ್ರಪು. ೫-೬೬). [ಸಂ.]

**ಸಮುತ್ಕಟ** (ಗು). ೧. ಅತಿಶಯವಾದ: ಪಟಹನಿಸ್ಸಾಣತಮ್ಮಟಭೇರಿಗಳ ಸಮುತ್ಕಟನಾದಂ . . . ಪಟುಭಟರ ಬೊಬ್ಬೆಯಾರ್ಭಟೆಗಳೊಂದಾಗಿ ಸಂಘಟಿಸಿತು (ಜೈಮಿಭಾ. ೪-೧೮). (ನಾ). ೨. ಅತಿಶಯವಾದುದು; ಅಧಿಕವಾದುದು: ವ್ಯೋಮಮನೆಯ್ದಿದತ್ತು ಪಟಹಸ್ಫುಟಪಾಟರವಂ ಸಮುತ್ಕಟಂ (ಚಂದ್ರಪು. ೭-೭೯). [ಸಂ.]

**ಸಮುತ್ಕೀರ್ಣ** (ಗು). ಮೇಲೆ ಏರಿದ ; ಎತ್ತರಕ್ಕೆ ನೆಗೆದ : ಸಮುತ್ಕೀರ್ಣರುಚಕಾರ್ಣ [ವಂ ಸೌ]ವರ್ಣಾಂಡಂಗಳಿನಗುರ್ವಿ[ಸಿಯೆ] ಪದುಳಿಸಿದಂ (ವರ್ಧಮಾ. ೧೨-೩೮); ಆ ಸೈನ್ಯಂ . . . ಸಾಮ್ರಾಜ್ಯದಂತೆ ಸಮುತ್ಕೀರ್ಣಧರಾಪರಾಗಮುಂ ಶರಧಿತಟದಂತೆ ಮಹಾಪ್ರಭಾವನೀಪಾಲಂಕೃತಮುಮೆನಿಸಿ (ರಾಜಶೇ. ೬-೧೭ ವ). [ಸಂ.]

**ಸಮುತ್ಖಾತ** (ಗು). ಬುಡಸಮೇತ ಕಿತ್ತ: ಪ್ರಳಯಕಾಲದಂತೆ ಮಹಾವರಾಹ ಸಮುತ್ಖಾತಧರಣೀಮಂಡಲಮುಂ . . . ಆಗಿಯುಂ (ಕಾದಂಪೂ. ೧೦೦). [ಸಂ.]

**ಸಮುತ್ತರಣ** (ನಾ). ನದಿ ಮುಂತಾದುವನ್ನು ದಾಟುವಿಕೆ: ಅಂತವರಂ ಶಾಸನೋಪವನತವರ್ಮಾಡಿ ಕಾವೇರೀ ಸ್ರವಂತೀ ಸಮುತ್ತರಣಾನಂತರಂ ಬರೆವರೆ (ಶಾಂತಿಪು. ೧೧-೩ ವ). [ಸಂ.]

**ಸಮುತ್ತಾನಿತ** (ನಾ). ಅಗಲವಾಗಿ ತೆರೆದಿರುವಂಥದು : ಜನಪಂ ಪಾಯಸಮಂ . . . ಇಕ್ಕಿದನಾ ಮುನಿಪತಿಯ ಸಮುತ್ತಾನಿತಮೆನಿಸಿರ್ದ ವಿಶಾಳಪಾಣಿಪಲ್ಲವ ಪುಟದೊಳ್ (ಮಲ್ಲಿಪು. ೧೪-೯). [ಸಂ.]

**ಸಮುತ್ತಾರಕ** (ನಾ). ದಾಟಿಸುವವನು ; ಪಾರುಮಾಡುವವನು : ಪುರಹರ ಸಮಯ ವಿಸ್ತಾರಕರು ನತನರವಿಪಜ್ಜಲನಿಧಿಸಮುತ್ತಾರಕನೆನಲು ಮೆಱೆದು (ಬಸಪು. ೫೮-೫೨). [ಸಂ.]

**ಸಮುತ್ತಾರಿಸು** (ಕ್ರಿ). ದಾಟಿಸು ; ಪಾರುಮಾಡು: ಎನ್ನಂ ಸಮುತ್ತಾರಿಸಲ್ ಲೀಲಾಲೋಕನಮಾತ್ರದಿಂದೆ ನೆಱೆಗುಂ (ವಸ್ತುವಂ. ೧-೧೨).
[< ಸಮುತ್ತರಣ + - ಇಸು₃]

**ಸಮುತ್ತಾಳ** (ನಾ). ಶೀಘ್ರ; ತ್ವರೆ: ಅರೆಬರ್ ನವರತ್ನರಥಂಗಳಂ ಸಮುತ್ತಾಳದೊಳೇಱಿ ಶೀಘ್ರಗತಿಯಿಂ ಪೆಸರ್ವೆತ್ತ ವಿದರ್ಭದೇಶಭೂಪಾಳಿಯೆನಿಪ್ಪ ಕುಂಡಿನ ಪುರಾಂತರದೊಳ್ ನೆಲಸಿರ್ದರುರ್ವಿಪರ್ (ನಳಚಂ. ೨೪೩). [ಸಂ. ಸಮುತ್ತಾಲ]

**ಸಮುತ್ತುಂಗ** (ಗು). ೧. ಎತ್ತರವಾದ; ಉನ್ನತವಾದ : ಸಮುತ್ತುಂಗಾಸನದೊಳಿರಿಸಿ ಧರ್ಮಮಂ ಬೆಸಗೊಳೆ (ಶಾಂತಿಪು. ೭-೨ ವ) ; ಸೊಗಯಿಸುವುದು ಪೌದನಪುರಂ ಸಮುತ್ತುಂಗರಮ್ಯಹರ್ಮ್ಯಪ್ರಕರಂ (ವರ್ಧಮಾ. ೩-೨). ೨. ಅತಿಶಯವಾದ : ಅವಿರತಸಮುತ್ತುಂಗವಿಳಸದಗಣ್ಯಪುಣ್ಯ ಸಮುದಯಕರವಾಗಿ (ಬಸಪು. ೩೮-೪೪). [ಸಂ.]

**ಸಮುತ್ಥಾಂಶು** (ನಾ). ಸೂಸಿದ ಕಿರಣ ; ಹೊಮ್ಮಿದ ಕಿರಣ : ಶಿರದೊಳ್ ರತ್ನಾವಳೀಶೇಖರಶಿಖರಸಮುತ್ಥಾಂಶುಗಳ್ ಮೊತ್ತಮಂ ಬಿತ್ತರಿಪನ್ನಂ (ಚಂದ್ರಪು. ೬-೭೦). [ಸಂ.]

**ಸಮುತ್ಥಾನ** (ನಾ). ೧. ಮೇಲಕ್ಕೆ ಏಳುವುದು , — ಮೂಡುವುದು : ರತ್ನದ ಮೇಳಾಪಕದಿಂದ ವೀಕ್ಷಣಸಮುತ್ಥಾನೇಕಸಮ್ಮರ್ದಸಮ್ಮದಕೋಲಾಹಲದಿಂದಮಾ ನಗರಿ . . . ಏನೊಪ್ಪಿತೋ (ಕಾದಂಪೂ. ೪೭೬). ೨. ರೋಗದಿಂದ ಚೇತರಿಸಿಕೊಳ್ಳುವಿಕೆ. ೩. ಹೆಚ್ಚಳ ; ಆಧಿಕ್ಯ. [ಸಂ.]

**ಸಮುತ್ಥಾಪಿತ** (ನಾ). ಎತ್ತರದಲ್ಲಿ ಸ್ಥಾಪಿಸಿದುದು : ಆಗಳ್ ನಿರಂತರ ಸಮುತ್ಥಾಪಿತಂಗಳುಂ . . . ಅಪ್ಪ ತೋರಣಂಗಳನೆ ನುಗುಳುತ್ತುಂ (ಆದಿಪು. ೪-೫೮ ವ). [ಸಂ.]

**ಸಮುತ್ಥಿತ** (ಗು). ೧. ಮೇಲೆದ್ದ; ಮೇಲೇರಿದ : ತುರಂಗಖರಖುರ ಸಮುತ್ಥಿತ ಧರಾರಜಂ ನೆಗೆದು ತೀವೆ (ರಾಜಶೇ. ೧೩-೮೦). ೨. ರೋಗದಿಂದ ಚೇತರಿಸಿಕೊಂಡ. ೩. ಒದಗಿದ; ಉಂಟಾದ. (ನಾ). ೪. ಮೇಲೇರಿದುದು; ಮೇಲಕ್ಕೆ ಎದ್ದುದು: ಅಮಿತ ಚತುರಂಗಸೇನಾಗಮನದೊಳುತ್ತುಂಗಜಂಗಮ ಪ್ರಾಕಾರ ಭ್ರಮಮಂ ಪಡೆದುದು ತತ್ಪದಸಮುತ್ಥಿತಂ ಬಳಸಿ ಬಹುಳ ಧೂಳೀಪಟಲಂ (ಚಂದ್ರಪು. ೧೦-೨೬). ೫. ಎದ್ದು ನಿಂತವನು: ''ಊರ್ಧ್ವಜಾನುಃ, ಸಮುತ್ಥಿತಃ - ಈ ೨ ನಿಂದಿರ್ದವಂ'' (ಹಲಾಯು. ೬೪-೨೩೧). [ಸಂ.]

**ಸಮುತ್ಪತ್ತಿ** (ನಾ). ಹುಟ್ಟುವಿಕೆ ; ಜನನ : ಸೌಧರ್ಮಕಲ್ಪಸಮುತ್ಪತ್ತಿವರಮಲ್ಲಿಂದತ್ತಣ ಭವಪ್ರಾದುರ್ಭಾವಮುಮಂ . . . ಬೆಸಸಿದಂ (ಶಾಂತಿಪು. ೬-೮೫ ವ). [ಸಂ.]

**ಸಮುತ್ಪನ್ನ** (ಗು). ೧. ಹುಟ್ಟಿದ ; ಮೂಡಿದ : ಅನ್ನೆಗಮದಱೊಳಗೆ ಸಮುತ್ಪನ್ನ ಪ್ರಾಧಾನ್ಯಮನ್ಯಮರ್ಥಾಧಾರಂ ಮುನ್ನಂ ಶಬ್ದಾಳಂಕಾರಂ ನಿಶ್ಚಿತಮಕ್ಕೆ ಪೇೞ್ವ ಮಾೞ್ಕೆಯೊಳೆನ್ನಾ (ಕವಿರಾ. ೨-೩) ; ದಶಾನನಂ . . . ತನ್ನಂ ತಾನೆ ಪಱಿದುಱಿದು ಕರ್ಮಾಧೀನಸಮುತ್ಪನ್ನದುರಘದುಷ್ಪರಿಣತಿಯಂ (ಪಂಪಾಮಾ. ೧೪-೧೧೧). (ನಾ). ೨. ಹುಟ್ಟಿದುದು; ಉಂಟಾದುದು: ನಿನ್ನ ನೀನಱಿಯದೆ ಮದಸಮುತ್ಪನ್ನದಿಂ . . . ಬಯಸಿ (ಬಸಪು. ೨೪-೮೧). ೩. ಹುಟ್ಟಿದವನು; ಜನಿಸಿದವನು: ಭರತಾನ್ವಯಸಮುತ್ಪನ್ನರಾಗಿ ಫಲವೇನು (ಜೈಮಿಭಾ. ೨-೫೬). [ಸಂ.]

**ಸಮುತ್ಪಾಟನ** (ನಾ). ಬುಡಸಹಿತ ಕೀಳುವುದು : ಆತಂ . . . ವಿದ್ವಿಷದಿಭರದನಸ್ತಂಭಲೀಲಾಸಮುತ್ಪಾಟನಕಾಂಕ್ಷಾದುರ್ಮದಂ (ಆದಿಪು. ೧೪-೧೯). [ಸಂ.]

**ಸಮುತ್ಪಾದಿಸು** (ಕ್ರಿ). ದೊರಕಿಸಿ ಕೊಡು ; ಒದಗಿಸು : ಪುಷ್ಪದಂತ ಶ್ರೀಪಾದಂಗಳ್ ಸಮುತ್ಪಾದಿಸುಗೆಮಗೆ ಹೃದಿಂದೀವರಾನಂದದೊಳ್ಪಂ (ಪುಷ್ಪಪು. ೧-೧).
[ಸಂ. ಸಮುತ್ಪಾದನ + - ಇಸು₁]

**ಸಮುತ್ಪ್ಲುತ** (ನಾ). ನೆಗೆತ; ಹಾರಿಕೆ : ಒದವಿದ ಬೆಟ್ಟುಬೇಸಗೆಯ ಕೂರ್ವಿಸಿಲರ್ವಿಸೆ ಬೆರ್ಚಿ ವಾಯುವೇಱಿದ ಹರಿಣಂ ಸಮುತ್ಪ್ಲುತದಿನಿಂದುವ ಬಿಂಬವ ನೋಡಿ ಪೊಕ್ಕು . . . ನೆಲಸಿರ್ದುದು (ಚಂದ್ರಪು. ೯-೭೮). [ಸಂ.]

**ಸಮುತ್ಫುಲ್ಲ** (ಗು). ಚೆನ್ನಾಗಿ ಅರಳಿದ ; ಪೂರ್ಣವಿಕಾಸವಾದ : ಮಲ್ಲಪಯ್ಯನುದಗ್ರಬೋಧಸಮಗ್ರನಗ್ರಜನುಂ ಸಮುತ್ಫುಲ್ಲಪಂಕಜಲೋಚನಂ ಗುಣಿ (ಶಾಂತಿಪು. ೧-೪೦) ; ತಳ್ತಗಲವೆಂದುಂ . . . ಸಮುತ್ಫುಲ್ಲ ಮಲ್ಲೀಪುನ್ನಾಗಯುಗಂ (ಚಂದ್ರಪು. ೧೧-೫೩). [ಸಂ.]

**ಸಮುತ್ಸಾರಿತ** (ನಾ). ಹೊರಡಿಸಿದುದು ; ಹೊರದೂಡಿದುದು : ಪರಸ್ಪರ ಸಮರರಭಸ [ಸಮುತ್ಸಾ]ರಿತಮುಂ ಸಕಲಸಾಮಂತಮಕುಟಬದ್ಧಮೌಳಿಮಾಳಾವಿಗಳಿತ ಮಕುಟಕೋಟಿಸಂಘಟ್ಟನೋಚ್ಚಳಿತಮಣಿಶಲಾಕಾಸಂಕುಳಮುಂ (ಪಂಪಭಾ. ೧೩-೫೧ ವ). [ಸಂ.]

**ಸಮುತ್ಸುಕ** (ಗು). ೧. ಉತ್ಸಾಹದಿಂದ ಕೂಡಿದ : ಸಮುತ್ಸುಕಭಾವದಿಂದಮೆಯ್ದುಂದು ನೃಪೇಶ್ವರಪ್ರಿಯತನೂಭವನಂ ಪೆಱತೊರ್ವಳ್ . . . ನೋಡಿದಳ್ (ವರ್ಧಮಾ. ೩-೭೮); ಕಾಲಮೇಘಂ . . . ಕಿರಾತರ್ವೆರಸು ಬೇಂಟೆವೋಗಲೆಂದು ಸಮದ ಸಮುತ್ಸುಕಚಿತ್ತನಾಗಿ (ರಾಜಶೇ. ೫-೫೦ ವ). ೨. ಚಿಂತೆಯಿಂದ ಕೂಡಿದ. (ನಾ). ೩. ಚಿಂತೆಯಿಂದ ಕೂಡಿದವನು ; ದುಃಖಿ : ಅದಱಿಂ ಭೂಭುಜಂ ಸಮುತ್ಸುಕನಾಗಲಾಗದು (ಪಂಚತಂ. ೨೧೮-೯). [ಸಂ.]

**ಸಮುತ್ಸುಕತೆ** (ನಾ). ತೀವ್ರವಾದ ಬಯಕೆ ; ಉತ್ಕಟವಾದ ಹಂಬಲ : ಸತ್ಕೃತಿ ಚಂದ್ರಿಕೆ . . . ಸಕಳರಸಜ್ಞಹೃತ್ಕುಮುದಸಮ್ಮುದಮಂ ನೆಗಳ್ದಿರ್ಪಿನಂ ಸಮುತ್ಸುಕತೆಯ ನೇಕೆ ತಾಳ್ದುಮದಟೊಳ್ ಖಳಚಕ್ರಚಯಂ (ಶಬಶಂ. ೧-೧೧). [ಸಂ. ಸಮುತ್ಸುಕತಾ]

**ಸಮುದಗ್ರ** (ನಾ). ಬಹಳ ಎತ್ತರದಲ್ಲಿರುವ, – ಮೇಲಿರುವ : ದಿವಿಜರ್ ಮೊಗೆದೀವಮೃತಜಲಭರಿತಕಾಂಚನಸಮುದಗ್ರಘಟಾಳಿಯಸೆದುವಿಂದ್ರನ ತೋಳೊಳ್ (ಅಜಿಪು. ೪-೪೮). [ಸಂ.]

**ಸಮುದಯ** (ನಾ). ೧. (ಸೂರ್ಯನು) ಮೇಲೆ ಬರುವಿಕೆ ; ಮೇಲಕ್ಕೇರುವುದು. ೨. ಜೊತೆಗೂಡುವುದು ; ಸೇರುವುದು. ೩. ಗುಂಪು ; ಸಮೂಹ : ಒರ್ವರೆ ವಿಹರಿಪುದಂ ಬಿಸುಟಂಬರಾಂಬರರ್ ತಮ್ಮ ಸಮುದಯಂ ಬೆರಸಿರ್ಪರ್ (ಆದಿಪು. ೧೫-೩೨); ಯಕ್ಷಸಮುದಯಂ ಕಿನ್ನರವ್ಯೂಹಮುಂ ಗಂಧರ್ವಸಮಿತಿ . . . ಮಾನವಚಯಂ ರಾಗದಿಂದೀಶನೋಲಗಕೆ ಬರುತಿರ್ದುದು (ಚಬಪು. ೨-೧೭); ಗುಬ್ಬಳಿಸಿ ಪಟಪಟನೆ ಹಾರಿ ಬಹ ಹೊರಸುಗಳ ಸಮುದಯಂ (ಚತ್ರಾಂಗ. ೫೩-೧೪೪೭). ೪. ಒಟ್ಟು ; ಮೊತ್ತ. ೫. ಪ್ರಯತ್ನ ; ಪರಿಶ್ರಮ. ೬. ಸಂಯೋಗ ; ಮಿಶ್ರಣ. ೭. ಕಲಹ; ಯುದ್ಧ: ''ಸಂಗ್ರಾಮಃ . . . ಸಮುದಯಃ . . . ವಿಗ್ರಹಃ – ಈ ೩೫ ಕಾಳೆಗಂ'' (ಹಲಾಯು. ೭೫-೨೯೯). ೮. ಸೈನ್ಯದ ಹಿಂಭಾಗ. ೯. [ಬೌದ್ಧ] ನಾಲ್ಕು ಬಗೆಯ ಧರ್ಮಸಾಧನೆಯ ತತ್ತ್ವಗಳಲ್ಲಿ ಒಂದು : 'ದುಃಖ, ಸಮುದಯ, ನಿರೋಧ, ಮಾರ್ಗ' ಎಂಬ ಧರ್ಮದೇಶನವನ್ನು ಭಗವಂತನು ಪ್ರಕಾಶಪಡಿಸಿದನು (ಬುದ್ಧಪ. ೧೧೧). [ಸಂ.]

**ಸಮುದಾಚಾರ** (ನಾ). ೧. ಸರಿಯಾದ ರೀತಿನೀತಿ ; ಶಿಷ್ಟಾಚಾರ : ಸುದರ್ಶನ, ರೋಷದಿಂದ ಸಮುದಾಚಾರವನ್ನು ನೋಡಲಿಲ್ಲ (ಭಾಸನಾ. ೪೯). ೨. ಉದ್ದೇಶ ; ಸಂಕಲ್ಪ. [ಸಂ.]

**ಸಮುದಾಯ** (ನಾ). ೧. ಗುಂಪು ; ಸಮೂಹ : ಶ್ರಾವಕಸಮುದಾಯದ ತೇಜವನೇನ ಪೇಳುವೆನು (ಧನ್ಯಚ. ೨೩); ಪುರುಳೆಗಳ ಪೆರ್ಮಂದೆ ; ಬರ್ಹಿಗಳ ರಮಣೀಯ ಸಮುದಾಯಮಿತ್ಯಾದಿ ನಾನಾಶಕುಂತವ್ರಜಂ (ಚತ್ರಾಂಗ. ೫೩-೧೪೪೭). ೨. ಒಟ್ಟು ; ಮೊತ್ತ : ಸಮುದಾಯಾರ್ಥಮನಾರಯ ಸಮನಿಸುವರ್ಥಪ್ರತೀತಿ ತೋಱದೊಡೆಲ್ಲಂ ಕ್ರಮಮಕ್ಕುಮರ್ಥಶೂನ್ಯಂ (ಕವಿರಾ. ೧-೭೮). ೩. (ಅಲಂ) ಸಂಪೂರ್ಣವಾದ ಸೊಗಸು; ಒಟ್ಟಂದ : ಸಮುದಾಯಂ ಮೆಱೆಯಲ್ಕೆವೇಟ್ಟುದು ಕಥಾವಿಸ್ತಾರದೊಳ್ (ಅನಂಪು. ೧-೩೭). [ಸಂ.]

**ಸಮುದಾಯವಾಸಿ** (ನಾ). ಗುಂಪಿನ ಮಧ್ಯೆ ಬದುಕುವವನು ; ಗುಂಪಿನಲ್ಲಿ ವಾಸಿಸುವವನು : ಏಕವಿಹಾರಮಂ ಪತ್ತುವಿಟ್ಟು ಮುನಿಗಳ್ ಸಮುದಾಯವಾಸಿ ಗಳಪ್ಪರ್ (ಚಾವುಂಪು. ೫೩). [ಸಂ. ಸಮುದಾಯವಾಸಿನ್]

**ಸಮುದಾಯಶೋಭೆ** (ನಾ). ಸಮಗ್ರ ಆಕೃತಿಯ ಚೆಲುವು ; ಒಟ್ಟಂದ : ಅವರ . . . ಅವಯವದ ಶೋಭೆಗೆ ಬೆಂಬಲಮಾದ ಸಮುದಾಯಶೋಭೆಗಂ . . . ಬೆಕ್ಕಸಂ ಬಟ್ಟು (ಶಾಂತಿಪು. ೩-೫೩ ವ). [ಸಂ. ಸಮುದಾಯಶೋಭಾ]

**ಸಮುದಿತ** (ಗು). ೧. ಒಟ್ಟುಗೂಡಿದ ; ಒಟ್ಟಿಗೆ ಸೇರಿದ. ೨. ಮೇಲಕ್ಕೆ ಬಂದಿರುವ, – ಮೂಡಿರುವ : ಸ್ವಸಮಯಸಮುದಿತಸರಶ್ಚಂದ್ರಚಂದ್ರಿಕಾಚಕೋರರುಂ (ಸೌಇಇ. V, ೮೪೮-೨೭ ; 1097). ೩. ಮೇಲೆತ್ತಿ ಹಿಡಿದಿರುವ : ಸಮುದಿತಧವಳಾತ ಪತ್ರನುಮಾಗಿ . . . ನಡೆತಂದು (ನಂಬಿರ. ೧೭-೧೨೭). ೪. ಉಂಟಾದ ; ಉತ್ಪತ್ತಿಯಾದ : ಸಮುದಿತಕುಸುಮಾವೋದೋದಯೋದ್ಯಾನಲೀಲಾಕ್ರಮ ವಿಹಿತಜಲಕ್ರೀಡಾವಿನೋದಾದಿನೀತಂ (ಕವಿರಾ. ೩-೨೦೧) ; ಇದುವಲಾ ನಿಜಪದವಿ ಗಳಿಗಾಸ್ಪದವೆನುತ್ತಂ ತತ್‌ಪ್ರಸಾದಸಮುದಿತಭೋಗಿತನಾಗಿ (ಬಸಪು. ೩೦-೧೨). (ನಾ). ೫. ಒಟ್ಟುಗೂಡಿದುದು ; ಸೇರಿದುದು : ಎರಡುಬಲಮುಂ ಘೋರೆಂಬಾರ್ದಾರ್ದು ಖೇಚರಭೂಮಿಗೋಚರಸಮುದಿತಂ ಬಾನೊಳ್ ಭೂಭಾಗದೊಳ್ ಕಿಡಿಗುಟ್ಟಿದಂತಿರೆ (ಶಾಂತಿಪು. ೫-೫೩). [ಸಂ.]

**ಸಮುದ್ಗ** (ನಾ). ೧. ಮುಚ್ಚುಳವಿರುವ ಸಂಪುಟ, – ಕರಡಿಗೆ : ''ಸಮುದ್ಗಃ, ಸಂಪುಟಃ – ಈ ೨ ಕರಂಡಗೆ'' (ಹಲಾಯು. ೧೨೭-೭೯). ೨. [ಛಂದ] ಯಮಕಾಲಂಕಾರದ ಒಂದು ಪ್ರಭೇದ ; ನಾಲ್ಕು ಪಾದಗಳಲ್ಲಿ ಯಾವುದೇ ಎರಡು ಪಾದಗಳು ಪುನರಾವೃತ್ತಿಯಾಗುವುದು : ಪರಿವೃತ್ತಂ . . . ಸಮುದ್ಗಮೆಂಬಿವು ಮೊದಲಾಗಿರೆ ಯಮಕಭೇದಂ (ಕಾವ್ಯಾವ. ೫೪೭). ೩. [ನಾಟ್ಯ] ತುಟಿಯ ಒಂದು ಭಂಗಿ ; ತೆರೆದಿರುವ ಎರಡುತುಟಿಗಳನ್ನು ಸೇರಿಸಿ ಉಬ್ಬಿಸುವುದು : ಪೊಳೆವೆರಡಧರಂ ಮಿಗೆ ಸಂಗೊಳಿಸಲ್ ಪೂರಿಸುವ ತೆಱದಿನೊಂದೆ ಸಮುದ್ಗಂ (ಲಾಸ್ಯರಂ. ೩-೮೪). [ಸಂ.]

**ಸಮುದ್ಗಕ** (ನಾ). ೧. ಸಂಪುಟ ; ಭರಣಿ. ೨. [ಕಾಮಶಾ] ಒಂದು ಬಗೆಯ ರತಿಬಂಧ : ಮಗ್ಗುಲಾಗೆ ಮಲಗಿದವಳ ತೊಡೆಯ ನಡುವೆ ನಲಿದು ತನ್ನ ತೊಡೆಯನಿಟ್ಟು ಕೂರ್ತು ಚುಂಬಿಸಿ . . . ಒಲಿದು ನೆರೆವ ಪುರುಷನಿಂದದೇ ಸಮು[ದ್ಗ]ಕ (ಜನವ. ೯-೪೦). [ಸಂ.]

**ಸಮುದ್ಗತ** (ಗು). ೧. ಮೇಲೆದ್ದ ; ಮೇಲೇರಿದ : ಮೆಯ್ಯೊಳ್ ಸಮುದ್ಗತರೋಮಂ . . . ಎಸೆಯುತ್ತಿರ್ಪನ್ನಂ (ಜಗಏ. ೩-೫). ೨. ಉಂಟಾದ ; ಹುಟ್ಟಿದ : ಜನಿತಗದ್ಗದಗಳ ಸಮುದ್ಗತನಿನದ ಸಂಕಲಿತಾತ್ಮನಾಗುತ . . . ಬಿಗಿಯಪ್ಪಿ (ಬಸಪು. ೨೫-೪೯). [ಸಂ.]

**ಸಮುದ್ಘೋಷಣ** (ನಾ). ಗಟ್ಟಿಯಾದ ಧ್ವನಿ, – ಕೂಗು : ತುರಂಗಸಂಘಹೇಷಾ ಸಮುದ್ಘೋಷಣಂಬೆರಸಿ ನಭೋಮಂಡಳಮನಳ್ಳಿಱಿದಳುರ್ಕೆಗೊಳೆ (ರಾಜಶೇ. ೬-೧೧ ವ). [ಸಂ.]

**ಸಮುದ್ದಂಡ** (ನಾ). ಅತ್ಯಂತಸಮರ್ಥನಾದವನು; ಮಹಾಶಕ್ತಿಶಾಲಿ : ಖಂಡಿತ ಮದನಕೋದಂಡನಂ ದಂಡಿತಯಮಸಮುದ್ದಂಡನಂ ನೋಡಿ (ಬಸಪು. ೩೯-೫೭). [ಸಂ.]

**ಸಮುದ್ಧತ** (ಗು). ೧. ಚೆನ್ನಾಗಿ ಮೇಲೇರಿಸಿದ. ೨. ಕೊಬ್ಬಿದ ; ಸೊಕ್ಕಿದ. ೩. ಶಿಷ್ಟಾಚಾರವಿಲ್ಲದ. (ನಾ). ೪. ಕೊಬ್ಬಿದವನು; ದುರಹಂಕಾರಿ: ''ಗರ್ವದಿಂ ಮಲೆದವಂ ಸಮುದ್ಧತನಕ್ಕು'' (ಮಂಗರಾ. ೭೨-೨೧). [ಸಂ.]

**ಸಮುದ್ಧರಣ** (ಗು). ೧. ಮೇಲಕ್ಕೆ ಎತ್ತುವ ; ಉದ್ಧರಿಸುವ : ಸಿದ್ಧರಾಮಂ ಸರ್ವಲೋಕಸಮುದ್ಧರಣಗುಣಸಾರ್ವಭೌಮಂ (ಬಸಪು. ೧೦-೧೧). (ನಾ). ೨. ಎತ್ತಿ ಹಿಡಿಯುವಿಕೆ ; ಮೇಲೆತ್ತುವಿಕೆ. ೩. ಹೊರತೆಗೆಯುವಿಕೆ. ೪. ತೊಂದರೆಯಿಂದ ಬಿಡುಗಡೆ ಮಾಡುವಿಕೆ ; ಉದ್ಧರಿಸುವಿಕೆ. ೫. ಉದ್ಧಾರಮಾಡುವವನು : ಶರಣಾಗತವ್ರಜಪಂಜ[ರರುಂ ಚ]ತುಸ್ಸಮಯಸಮುದ್ಧರಣರುಂ (ಸೌಇಇ. V, ೮೪೯-೩೦ ; 1044) ; ಸಮಯಸಮುದ್ಧರಣನಖಿಣ್ಣತಪ್ರತಾಪ (ಎಕ. VIII, ಸೊರಬ. ೨೭೭-೧೧ ; 1070). [ಸಂ.]

**ಸಮುದ್ಧರಿಸು** (ಕ್ರಿ). ಉದ್ಧಾರಮಾಡು ; ರಕ್ಷಿಸು : ಕಂಚರಸರ್ಸ್ವೆಗೊಟ್ಟಗಂಗನಿಂ ಬಂದ ಧರ್ಮ್ಮಮಂ ಸಮುದ್ಧರಿಸಿದಂ (ಇಆ. XVIII, ೩೧೨-೨೭; 11ನೆಯ ಶತ) ; ಒಳಗಿರ್ದ ಬದ್ಧಜಲಮಂ ಚಲ್ಲಿಚಲ್ಲಿ ತದುದ್ಧರಾಗ್ನಿಯನಂತು ಕೆಡಿಸಿ ಸಮುದ್ಧರಿಸಿ (ಬಸಪು. ೩-೫). [ಸಮುದ್ಧರಣ + - ಇಸು$_3$]

**ಸಮುದ್ಧೃತ** (ಗು). ಮೇಲಕ್ಕೆ ಎತ್ತಿದ, – ಚಾಚಿದ : ಉರ್ವರೆಯೊಳೆ ತಳ್ತ ಕಾಲ್ದುದಿ ಸಮುದ್ಧೃತ ಬಾಹುಗೆ ಬದ್ಧಚಾಪ ಭಾಸುರತರಖಡ್ಗಂ . . . ಒಪ್ಪೆ ಪೊಸವೇಷದ ತಾಪಸನೊಪ್ಪ ತೋಱಿದಂ (ಶಬಶಂ. ೨-೭೯). [ಸಂ.]

**ಸಮುದ್ಭಟ** (ಗು). ಉತ್ಕೃಷ್ಟವಾದ ; ಶ್ರೇಷ್ಠವಾದ : ಸಾಹಸೋತ್ಕೀರ್ಣ ಮಹಾಹವಾರ್ಣವ ಪ್ರವೀರಪ್ರಾರಬ್ಧಾರಭಟೀಸಮುದ್ಭಟಕಥೆಗಳನೆ ಕೇಳಲುಂ (ಆದಿಪು. ೮-೩೨ ವ). [ಸಂ.]

**ಸಮುದ್ಭವ** (ನಾ). ೧. ಹುಟ್ಟು ; ಉತ್ಪತ್ತಿ : ರೂಪದ ಸತ್ವರಜಸ್ತಮೋಗುಣಾಧಾರತೆಯಿಂ ಜಗತ್ಸ್ಥಿತಿ ಸಮುದ್ಭವಸಂಹೃತಿಹೇತುವದ ನೀರೇರುಹನಾಭ ನೀರಜ ಸಮುದ್ಭವ ಶಂಕರರೀಗಭೀಷ್ಟಮಂ (ಕಾಇ. ೧-೨-೩ ; 1058). ೨. ಹುಟ್ಟಿರುವಂಥದು; ಉತ್ಪನ್ನವಾದುದು: ಶಿವನಲ್ಲಿಯದುಕಾರಣಂ ಜಂಗಮದ ರೂಪೊಳವಿರತಂ ಲಿಂಗರೂಪಂ ಸಮುದ್ಭವವಲಾ (ವೀಶೈಪು. ೧-೪-೩೪). [ಸಂ.]

**ಸಮುದ್ಭವಿಸು** (ಕ್ರಿ). ಹುಟ್ಟು; ಉಂಟಾಗು : ಮುಂದೆ ಜನಿಸಲೊಡನೆ ಮದೀಯಾನಂದಭಕ್ತಿ ಸಮುದ್ಭವಿಸಿತೊಲವಿಂದ ಜನಿಸಿದ ಮುನ್ನವೇ ಜನಿಸಿತ್ತು ಮಚ್ಚಿಂತೆ (ಬಸವು. ೨-೧೦). [ಸಮುದ್ಭವ + - ಇಸು]

**ಸಮುದ್ಭೂತ** (ಗು). ಉಂಟಾದ ; ಒದಗಿದ : ಪೂರ್ಣಿಮೆತ್ತಲ್ಲಿ ಮಧ್ಯಂದಿನಸಮಯ ಸಮುದ್ಭೂತ ಶಂಖಪ್ರಣಾದಂ (ಕಾದಂಪೂ. ೬೬) ; ಕಂಡನಮಿತದಲಪದದಲನಮಂ ಸಮುದ್ಭೂತರೇಣುಪ್ರವಾಹಮಂ (ಶ್ರೀರಾಮಾ. ೧೫೭-೧೫೧). [ಸಂ.]

**ಸಮುದ್ಯೋಗ** (ನಾ). ಕಾರ್ಯಾಚರಣೆ ; ಚಟುವಟಿಕೆ : ತದ್ಗಣಾಡಂಬರ ಸಮುದ್ಯೋಗಪ್ರಕಾರವು ಕಾಣಬರುತಿರಲು (ಬಸವು. ೫೮-೬೩). [ಸಂ.]

**ಸಮುದ್ರ** (ಗು). ೧. ಮುದ್ರೆಯಿಂದ ಕೂಡಿದ ; ಅಂಕಿತವುಳ್ಳ. (ನಾ). ೨. ಕಡಲು ; ಸಾಗರ : "ರತ್ನಾಕರಃ . . . ಸಾಗರಃ, ಸಮುದ್ರಃ - ಈ ೧೨ ಸಮುದ್ರಂ" (ಹಲಾಯು. ೧೧೭-೩೦); ಪಾಂಡವರೇಲಕ್ಕೋಹಿಣೀಬಲಂಬೆರಸೇಟುಂ ಸಮುದ್ರಂಗಳುಂ ಮೇರೆದಪ್ಪಿ ಬರ್ಪಂತಿರೆ ಬಂದು (ಪಂಪಭಾ. ೯-೧೦೪ ವ) ; ಬೆಟ್ಟದ ನೆಲ್ಲಿಯಕಾಯಿ ಸಮುದ್ರದೊಳಗಣ ಉಪ್ಪು ಎತ್ತಣಿಂದೆತ್ತ ಸಂಬಂಧವಯ್ಯ (ಅವಚಂ. ೧೫-೫೯) ; ಆ ಮಹಾರ್ಣವಂ ಸಮುದ್ರಮಾಗಿಯುಂ ಅಪಾರವಿಸ್ತಾರಿಯುಂ . . . ಎನಿಸಿದುದು (ಜಗವಿ. ೧-೪೧ ವ) ; ಪಾಪಿ ಸಮುದ್ರ ಹೊಕ್ಕರೂ ಮೊಣಕಾಲುದ್ದದ ನೀರು (ಗಾದೆ). ೩. ಕೆಲವು ಊರುಗಳ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ : 'ದೋರಸಮುದ್ರ' ಪರಾ. ೪. ಒಂದು ಬಹುದೊಡ್ಡ ಸಂಖ್ಯೆ : 'ಸಮುದ್ರಾಯುಷ್ಯ' ಪರಾ. ೫. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ: ಸಮುದ್ರ . . . ಎಂದು ನಾಲ್ಕರ ನಾಮಂ (ವ್ಯವಹಾ. ೯-೪). ೬. [ಜ್ಯೋತಿ] ಆಕೃತಿಯೋಗಗಳಲ್ಲಿ ಒಂದು; ಲಗ್ನದಿಂದ ಎರಡು, ನಾಲ್ಕು, ಆರು, ಎಂಟು, ಹತ್ತು ಮತ್ತು ಹನ್ನೆರಡನೆಯ ಸ್ಥಾನಗಳಲ್ಲಿ ಏಳುಗ್ರಹಗಳೂ ಇರುವುದು : ವಿತ್ತಂ ಮೊದಲಾಗೇಕಾಂತರ ಮೊಂದಿದೊಡಾ ಗ್ರಹಮೇೞು ಸಮುದ್ರಮೆಂದೀ ಯೋಗಂ (ಜಾತತಿ. ೧೩-೪).

ಸಮುದ್ರದ ಕಿಚ್ಚು = ಕಡಲಿನಲ್ಲಿರುವುದೆಂದು ನಂಬಲಾಗುವ ಬೆಂಕಿ ; ಬಡಬಾನಲ: "ಔರ್ವಃ, ಸಮುದ್ರವಹ್ನಿಃ, ಬಾಡಬಃ, ಬಡಬಾಮುಖಃ - ಈ ೪ ಸಮುದ್ರದ ಕಿಚ್ಚು" (ಹಲಾಯು. ೧೩-೭೦). ಸಮುದ್ರದ ನೊರೆ = (ಔಷಧಿಯಂತೆ ಬಳಸುವ, ಸಮುದ್ರಜನ್ಯವಾದ ಒಂದು ವಸ್ತು ; ಕಡಲ ನಾಲಗೆ : ಲಾಮಂಚ, ಸಮುದ್ರದ ನೊರೆ, ಕಟುಕರೋಹಿಣಿ, ಮುಢಿವಾಳ ಇವುಗಳನ್ನು . . . ಚೂರ್ಣಿಸಿ (ಸಕವೈ. ೭೦): ಶುಚಿಮಾಡುವ ಪದಾರ್ಥಗಳು: ಹುಣಿಸೆಹಣ್ಣು, ಬೂದಿ . . . ಸಮುದ್ರದ ನೊರೆ (ಗೃಹವಿ. ೧೭೧). [ಸಂ.]

**ಸಮುದ್ರಕಳ್ಳ** (ನಾ). ಸಾಗರದ ಮೇಲೆಯೇ ಅಲೆಯುತ್ತಿದ್ದು, ಹಡಗುಗಳನ್ನು ಕೊಳ್ಳೆ ಹೊಡೆಯುವವನು ; ಕಡಲುಗಳ್ಳ : ಪೋರ್ಚುಗೀಸ ಸಮುದ್ರಕಳ್ಳರು ಅವಳನ್ನು ಕದ್ದುಕೊಂಡುಹೋಗಿ . . . ಸಮುದ್ರತೀರದಲ್ಲಿ ಬಿಟ್ಟುಹೋಗಲು, ಕಾಪಾಲಿಕನು ಕರೆದುಕೊಂಡುಬಂದು ಸಾಕಿದನಂತೆ (ಬಂಕಿಮ. ೧೬೫). [ಸಮುದ್ರ + ಕಳ್ಳ$_1$]

**ಸಮುದ್ರಕಾಂತೆ** (ನಾ). ನದಿ; ಹೊಳೆ: "ಸಿಂಧುಃ, ಸ್ರವಂತೀ . . . ಸಮುದ್ರಕಾಂತಾ . . . ರೋಧೋವಕ್ರಾ - ಈ ೨೧ ತೊಱೆ" (ಹಲಾಯು. ೧೧೦-೪೩). [ಸಂ. ಸಮುದ್ರಕಾಂತಾ]

**ಸಮುದ್ರಘೋಷ** (ನಾ). ಒಂದು ಬಗೆಯ ವಾದ್ಯ : ನಂದಿಪೋತವರ್ಮನನ್ನು ಹೊಡೆದಟ್ಟ, ಕಟುಮುಖವಾದಿತ್ರ, ಸಮುದ್ರಘೋಷ ಮೊದಲಾದ ವಾದ್ಯವಿಶೇಷಗಳನ್ನೂ . . . ಸ್ವಾಧೀನಪಡಿಸಿಕೊಂಡನು (ಕರ್ಣಾಅ. ೯೦). [ಸಂ.]

**ಸಮುದ್ರಜ** (ನಾ). ೧. ಕಡಲಿನಲ್ಲಿ ಹುಟ್ಟಿದುದು. ೨. ಉಪ್ಪು : "ಲವಣಂ ಸಮುದ್ರಜಂ ಕಲ್ಲುಪ್ಪೆನಿಕ್ಕು" (ಮಂಗರಾ. ೪೩-೪೧). [ಸಂ.]

**ಸಮುದ್ರಪಾಲ, ಸಮುದ್ರಪಾಳ** (ನಾ). ಒಂದು ಬಗೆಯ ಔಷಧೀಸಸ್ಯ : ನಂಜಿನ ಕೊರಡು, ಸಮುದ್ರಪಾಲ, ಕಾಚಿ, ಬದನೆ (ನಮ್ಮನು. ೨೩೮). **ಸಮುದ್ರಪಾಳ** : ಸಮುದ್ರಪಾಳದ ಬೀಜ, ಹಿಪ್ಪಲಿ ಈ ಎರಡನ್ನೂ ಅಂಬಿಲದಲ್ಲಿ ಅರೆದು ಕಲಸಿ . . . ಇಕ್ಕಲು ಎಂತಪ್ಪ ಶೂಲೆ ಗುಣ (ವಿಪ್ರವಿ. ೧೦೬). [ಸಂ.]

**ಸಮುದ್ರಪಾಳ** 'ಸಮುದ್ರಪಾಲ' ನೋ.

**ಸಮುದ್ರಫಲ** (ನಾ). ೧. ಗುಲಾಬಿಬಣ್ಣದ ಹೂವುಗಳನ್ನು ಬಿಡುವ, ಸದಾ ಹಸುರಾಗಿರುವ ಒಂದು ಬಗೆಯ ಮರ : (ಮೈಔಗಿ. ೧೨-೨೦೨). ೨. ಒಂದು ಬಗೆಯ ಔಷಧ. [ಸಂ.]

**ಸಮುದ್ರಫೇನ** (ನಾ). (ಒಣಗಿ ಗಟ್ಟಿಯಾದನಂತರ ಔಷಧೀವಸ್ತುವಿನಂತೆ ಬಳಸುವ) ಸಮುದ್ರದ ನೊರೆ, – ಬುರುಗು : ಜೀನಸುಗಳು . . . ಸಮುದ್ರ ಬುರುಗು (ಸಮುದ್ರಫೇನ) (ಮುಂಬವ್ಯಾ. ೧೨೮). [ಸಂ.]

**ಸಮುದ್ರಬಳ್ಳಿ** (ನಾ). ವಿಸ್ತಾರವಾಗಿ ಹಬ್ಬುವ ಒಂದು ಬಗೆಯ ಹೊದರು : ಸಮುದ್ರಬಳ್ಳಿ , ಸಮುದ್ರಹಾಲೆ, ಚಂದ್ರಪಾದ (ಮೈಔಗಿ. ೯-೧೪೫). [ಸಮುದ್ರ + ಬಳ್ಳಿ]

**ಸಮುದ್ರಬಾಳೆ** (ನಾ). ಒಂದು ಬಗೆಯ ಮೀನು: (ಕ). [ಸಮುದ್ರ + ಬಾಳೆ$_2$]

**ಸಮುದ್ರಮಥನ** (ನಾ). (ಹಿಂದೆ ದೇವಾಸುರರು ಅಮೃತವನ್ನು ಪಡೆಯುವುದಕ್ಕಾಗಿ ಮೇರುಗಿರಿಯನ್ನು ಕಡೆಗೋಲಿನಂತೆ ಮಾಡಿ) ಕ್ಷೀರಸಮುದ್ರವನ್ನು ಕಡೆದುದು : ಸಮುದ್ರಮಥನಕಥಾನಕದಲ್ಲಿ ಮಂದರಗಿರಿಯನ್ನು ಹೊತ್ತುನಿಂತ ಪುರಾಣಕೂರ್ಮನ ವರ್ಣನೆಯಿದೆ (ಭಾರದ. ೧೪೪). [ಸಂ.]

**ಸಮುದ್ರಯಾನ** (ನಾ). ದೇಶಾಂತರಗಳಿಗೆ ಹೋಗಲು ಕಡಲಿನ ಮೂಲಕ ಮಾಡುವ ಪ್ರಯಾಣ : ಸ್ಮೃತಿಗಳ ಕಾಲದಲ್ಲಿ ಸಮುದ್ರಯಾನವು ನಿಷಿದ್ಧವಾಗಿದೆ (ಭಾರದ. ೫೭). [ಸಂ.]

**ಸಮುದ್ರಯೋಗ** (ನಾ). [ಜ್ಯೋತಿ] ಆಕೃತಿಯೋಗಗಳಲ್ಲಿ ಒಂದು; ಜನನಲಗ್ನದ ದ್ವಿತೀಯಸ್ಥಾನದಿಂದ ಮೊದಲು ಮಾಡಿ, ಒಂದು ಬಿಟ್ಟು ಒಂದು ರಾಶಿಯಲ್ಲಿ ಏಳುಗ್ರಹಗಳೂ ಇರುವುದು: ೨, ೪, ೬, ೮, ೧೦, ೧೨ - ಈ ಆರು ಸ್ಥಾನಗಳಲ್ಲಿ ಏಳು ಗ್ರಹಗಳೂ ಇದ್ದರೆ ಸಮುದ್ರಯೋಗ (ಜಾತತಿ. ೧೩-೪ ಅಟಿ). 'ಚಕ್ರಯೋಗ' ಪರಾ. [ಸಂ.]

**ಸಮುದ್ರಲವಣ** (ನಾ). ಒಂದು ಬಗೆಯ ರಾಸಾಯನಿಕಪದಾರ್ಥ; ಸೈಂಧವ ಲವಣ : "ಲವಣೋದ್ಧಿಜಂ - ಸಮುದ್ರಲವಣ" (ಓಷಧಿ. ೧೪೨); ಕಾಚುಲವಣ, ಸಮುದ್ರಲವಣ . . . ಗಂಧಕ ಇವಂ . . . ಮರ್ದಿಸಿ . . . ಕಲ್ಕದಿಂದನುಪಾನವಿಕ್ಕಿ ಕೊಡಲು ಜಿಹ್ವಕಸನ್ನಿ ಗುಣಮಹುದು (ಸಕವೈ. ೧೬೭). [ಸಂ.]

**ಸಮುದ್ರವಹ್ನಿ** (ನಾ). ಸಾಗರದ ತಳದಲ್ಲಿ ಹುಟ್ಟುವುದೆಂದು ನಂಬಲಾದ ಬೆಂಕಿ; ಕಡಲ್ಗಿಚ್ಚು ; ಬಡಬಾಗ್ನಿ : "ಔರ್ವಃ, ಸಮುದ್ರವಹ್ನಿಃ, ಬಾಡಬಃ, ಬಡಬಾಮುಖಃ - ಈ ೪ ಸಮುದ್ರದ ಕಿಚ್ಚು" (ಹಲಾಯು. ೧೩-೭೦). [ಸಂ.]

**ಸಮುದ್ರಶೋಕೆ** 'ಸಮುದ್ರಸೋಗೆ' ನೋ.

**ಸಮುದ್ರಸೋಗೆ, ಸಮುದ್ರಶೋಕೆ** (ನಾ). ಒಂದು ಬಗೆಯ ಔಷಧೀಸಸ್ಯ : "ಅರ್ಧಚಂದ್ರಾ-ಹಿಡಿಹಿಡಿಕೆ, ಕರಿಯ ತಿಗಡೆ, ಸಮುದ್ರಸೋಗೆ, ಕಟ್ಟವತ್ತಿಗೆ, ಬಾವುಜಿಗೆ" (ಓಷಧಿ. ೫) ; ಚಾಕಾಯಿ, ಹಿಪ್ಪಲಿ . . . ಸಮುದ್ರಸೋಗೆಯ ಬೀಜ ಇವಂ ಸಮಭಾಗವಾಗಿ ಭಂಗಿಸೊಪ್ಪಿನ ರಸದಿಂ ಒಂದುಚಾವ ಮರ್ದಿಸಿ (ಸಕವೈ. ೩೩೦). **ಸಮುದ್ರಶೋಕೆ** : ಜಾಯಿಕಾಯಿ . . . ಏಲಕ್ಕಿ, ಸಮುದ್ರಶೋಕೆಬೀಜ, ಇಷ್ಟನೂ ಸಮಾಂಶವಾಗಿ ಭಂಗಿಸೊಪ್ಪಿನ ರಸದಲ್ಲಿ ಒಂದು ಜಾವ ಮರ್ದಿಸಿ (ವೈದ್ಯಸಾ. I, ೨೧೫). [← ಮರಾ. ಸಮುದ್ರಸೋಕ್, ಸಮುದ್ರಸೋಖ್, ಸಮುದ್ರಶೋಕ್./ ಸಂ. ಸಮುದ್ರಶೋಷ]

**ಸಮುದ್ರಸೌತೆ** (ನಾ). ಸಮುದ್ರದಲ್ಲಿ ವಾಸಿಸುವ ಕಂಟಕಚರ್ಮವರ್ಗಕ್ಕೆ ಸೇರಿದ ಒಂದು ಬಗೆಯ ಪ್ರಾಣಿ : ಸಮುದ್ರಸೌತೆಗಳಲ್ಲಿ ಇತರ ಕಂಟಕಚರ್ಮಿಗಳಲ್ಲಿ ರೂಪುಗೊಂಡಿರುವ ಸುಣ್ಣದ ತಟ್ಟೆಗಳಿರುವುದಿಲ್ಲ (ಪ್ರಾಣಿಶಾ. ೨೬೮). [ಸಮುದ್ರ + ಸೌತೆ$_1$]

**ಸಮುದ್ರಹಾಲೆ** (ನಾ). ಒಂದು ಬಗೆಯ ಸಸ್ಯ : ಸಮುದ್ರಬಳ್ಳಿ, ಸಮುದ್ರಹಾಲೆ, ಚಂದ್ರಪಾದ (ಮೈಔಗಿ. ೯-೧೪೫). [ಸಮುದ್ರ + ಹಾಲೆ$_2$ (< ಪಾಲೆ$_2$)]

**ಸಮುದ್ರಾಂತ** (ಗು). ೧. ಕಡಲೇ ಅಂತ್ಯವಾಗುಳ್ಳ ; ಸಾಗರಪರ್ಯಂತವಾದ: ಸಮುದ್ರಾಂತಧರಿತ್ರೀಕಾಂತ . . . ವಿಧಿವಶದೆ ನಿನಗಮಿಾ ಪರಿಯಾಯ್ತೇ (ಗದಾಯು. ೯-೨೨). (ನಾ). ೨. ಜಾಯಿಕಾಯಿ. [ಸಂ.]

**ಸಮುದ್ರಾಂತೆ** (ನಾ). ೧. ಸಮುದ್ರದಿಂದ ಸುತ್ತುವರಿಯಲ್ಪಟ್ಟುದು ; ಭೂಮಿ. ೨. ಹತ್ತಿಯ ಗಿಡ : "ತುಂಡಿಕೇರೀ. ಸಮುದ್ರಾಂತಾ, ಕಾರ್ಪಾಸೀ, ಬದರಾ - ೪ ಹತ್ತೀಗಿಡದ ಹೆಸರು" (ಸಿದ್ಧಾಂತಿ. ೧೩೪). [ಸಂ. ಸಮುದ್ರಾಂತಾ]

**ಸಮುದ್ರಾತ್ಮಜೆ** (ನಾ). ಸಾಗರದಲ್ಲಿ ಹುಟ್ಟಿದವಳು; ಲಕ್ಷ್ಮಿ : ವಿಲಸತ್ಸಮುದ್ರಾತ್ಮಜೆ ಸರಾಗದಿಂದಲ್ಲಿ ಸುಸ್ಥಿರೆಯಾಗಿ ನೆಲಸಿರ್ಪಳು (ಭೈಮಿಭಾ. ೫-೬೫). [ಸಂ. ಸಮುದ್ರಾತ್ಮಜಾ]

**ಸಮುದ್ರಾಯುಷ್ಯ** (ನಾ). ಒಂದು ಅತ್ಯಧಿಕವಾದ ಸಂಖ್ಯೆಯಷ್ಟು ವರ್ಷಗಳ ಆಯಸ್ಸು : ಮುನಿರಾಜಂ . . . ದಶಸಾಗರೋಪಮಸಮುದ್ರಾಯುಷ್ಯಮಂ ತಾಳ್ದಿದಂ (ಶಾಂತಿಪು. ೯-೮೪). [ಸಂ.]

**ಸಮುದ್ರೋಪಕಂಠ** (ನಾ). ಸಮುದ್ರತೀರ : ಬಳದ ವೇಳಾವನಸ್ಥೂಳಶಾಳಂಗಳೊಳಾದಿಬ್ರಹ್ಮಪುತ್ರಂ ನಿಜವಿಜಯಗಜೇಂದ್ರಂಗಳಂ ಕಟ್ಟೆ ನೀಲಾಚಳಸಂಘಾತಂಗಳಂ ಸುತ್ತಿಱಿದವೊಲೆಸೆದತ್ತಾ ಸಮುದ್ರೋಪಕಂಠಂ (ಆದಿಪು. ೧೪-೫೩). [ಸಂ.]

**ಸಮುದ್ವರ್ತನ** (ನಾ). ಚಿಮ್ಮಿ ಬೀಳುವಿಕೆ ; ಎಗರಿ ಬೀಳುವಿಕೆ : ತೋಳ್ತರೆಗಳಾಗಕ್ಷಿವಿಭ್ರಮಂ ಮೀನವೃಂದಸಮುದ್ವರ್ತನಮಾಗೆ ನಿರ್ಝರರತೋದೀರ್ಣಾರ್ಣವಂ ಘೂರ್ಣಿಸಲ್ (ಶಾಂತಿಪು. ೮-೧೦೨). [ಸಂ.]

**ಸಮುದ್ವೃತ್ತ** (ನಾ). [ನಾಟ್ಯ] ಕಣ್ಣುಗುಡ್ಡೆಯ ಚಲನೆಗಳಲ್ಲಿ ಒಂದು ಬಗೆ : ಭ್ರಮಣಂ . . . ಸಮುದ್ವೃತ್ತಂ ನಿಷ್ಕ್ರಾಮಂ ಅಮಿತಪ್ರಾಕೃತಗಳಾಲಿಯೊಂಬತ್ತಕ್ಕುಂ (ಲಾಸ್ಯರಂ. ೩-೫೪). [ಸಂ.]

**ಸಮುನ್ನತ** (ಗು). ೧. ಬಹು ಎತ್ತರವಾದ ; ಅತ್ಯುನ್ನತವಾದ : ಸಮುನ್ನತಾಕ್ಷಯ ಪದಪ್ರಾಸಾದ ನಿಶ್ರೇಣಿ (ಚಂದ್ರಪು. ೧-೧೨). ೨. ಮೇಲಕ್ಕೆ ಎತ್ತಿದ; ಎತ್ತರಿಸಿದ. ೩. ಅತಿಶಯವಾದ ; ಶ್ರೇಷ್ಠವಾದ : ಕನ್ನೆಯನೀಯದ ಪೃಥುವಂ ಬನ್ನಮನೆಯ್ದಿಸಲೊಡರ್ಚೆ ಮುನಿಸನುವಿಸೆ ತೋರ್ಪಂ ನಮ್ಮ ಕೂರ್ಪನೆಂದು ಸಮುನ್ನತವೀರ್ಯರ್ ಲವಾಂಕುಶರ್ ತಱಿಸಂದರ್ (ಪಂಪರಾಮಾ. ೧೭-೫) :ಸನ್ನುತಾಗಮ ನಿಗಮವೆನುತ ಸಮುನ್ನತ ಪ್ರಮಥೇಂದ್ರಪದವಿಗೆ ಚೆನ್ನಪಟ್ಟಂಗಟ್ಟಿ ಸರ್ವಜ್ಞತ್ವಮಂ ಕುಡಲು (ಬಸವಪು. ೨-೨೫). [ಸಂ.]

**ಸಮುನ್ನತಿ** (ನಾ). ೧. ಎತ್ತರ ; ಔನ್ನತ್ಯ. ೨. ಹಿರಿಮೆ ; ಶ್ರೇಷ್ಠತೆ : ಹನ್ನೆರಡುಗಾವುದದಳತೆಯ ಸಮುನ್ನತಿಯ ಕಲ್ಯಾಣಪುರವಂ ಮುನ್ನವೇ ಸಿಂಗರಿಸವೇಳ್ಪುದು (ಬಸವಪು. ೫-೧೩). ೩. ಗೌರವ ; ಅಭಿಮಾನ. [ಸಂ.]

**ಸಮುನ್ನತಿಕೆ** (ನಾ). = ಸಮುನ್ನತಿ ೨ : ಇಂತಹ ವೀರಭಕ್ತಿಸಮುನ್ನತಿಕೆ ಇಂತಹ ಮಹತ್ವಮದುಂಟೆ ಲೋಕದೊಳು (ಬಸವಪು. ೧೮-೮೦). [ಸಮುನ್ನತ + - ಇಕೆ]

**ಸಮುನ್ನದ್ಧ** (ಗು). ೧. ಮೇಲೇರಿದ ; ಮೇಲಕ್ಕೆ ಬಂದ. ೨. ಕಟ್ಟಲ್ಪಟ್ಟ. ೩. ಉಬ್ಬಿದ ; ಊದಿದ. ೪. ತುಂಬಿದ ; ಪೂರ್ಣವಾದ. ೫. ಅಹಂಕಾರದ; ಸೊಕ್ಕಿನಿಂದ ಕೂಡಿದ. ೬. ಶ್ರೇಷ್ಠವಾದ ; ಘನವಾದ. ೭. ಉತ್ಪನ್ನವಾದ ; ಹುಟ್ಟಿದ. (ನಾ). ೮. ಗರ್ವವುಳ್ಳವನು ; ಅಹಂಕಾರಿ : "ಸಮುನ್ನದ್ಧಃ, ಅತಿಗರ್ವಿತಃ - ಈ ೨ ಗರ್ವವನ್ನುಳ್ಳವಂ" (ಹಲಾಯು. ೬೩-೨೨೮). [ಸಂ.]

**ಸಮುನ್ಮಿಲಿತ** (ಗು). ಚೆನ್ನಾಗಿ ಬೆರೆತ ; ಸರಿಯಾಗಿ ಕೂಡಿಕೊಂಡ : ಪರಿವೃತಮಾದ ತದ್ವನಧಿವಾರಿ ಸಮುನ್ಮಿಲಿ[ಪಾಠಾಂ. ಳಿ]ತಾಲವಾಲದಂತಿರೆ (ಶಬಶಂ. ೧-೩೫). [ಸಂ.]

**ಸಮುಪಚಿತ** (ನಾ). ಚೆನ್ನಾಗಿ ರಾಶಿಯಾದುದು , — ಒಟ್ಟಾದುದು : ಕಂಡರಿಸಿ ಪಳುಕಿನಿಂದಮಖಂಡಿತಶೌಚಗುಣ ಸುರನದೀಸಮುಪಚಿತಂ ಡಿಂಡೀರಪಿಂಡಮೆನಿಸಿ ಕಮಂಡಲು ಸೊಗಯಿಪುದು ಬಾಲಚಂದ್ರವ್ರತಿಯ (ಮಲ್ಲಿಪು. ೧೦-೧೩೭). [ಸಂ.]

**ಸಮುಪಜನಿತ** (ಗು). ಪೂರ್ಣವಾಗಿ ಸಂಭವಿಸಿದ , — ಉಂಟಾದ : ಆಗಳ್ ಸುತಮುಖನಿರೀಕ್ಷಣಸಮಯಸಮುಪಜನಿತಪುಲಕಕಲಿಕಾಕಲಿತಕಲ್ಪವೃಕ್ಷನಪ್ಪ ನಾಭಿರಾಜಮಹೀಜಂ . . . ನಿಜತನೂಜವದನವನಜಮನಟ್ಟಿರ್ತು ನೋಡಿ (ಆದಿಪು. ೭-೧೧೦ ವ). [ಸಂ.]

**ಸಮುಪಜಾತ** (ಗು). ಹುಟ್ಟಿದ ; ಜನಿಸಿದ : ಧರ್ಮಮಂ ಕೇಳ್ದು ಸಮುಪಜಾತ ನಿರ್ವೇಗಪರಂ ಪರಮೇಶ್ವರದೀಕ್ಷೆಯಂ ಸ್ತಿಮಿತಸಾಗರಂ ಕೆಯ್ಕೊಂಡು (ಶಾಂತಿಪು. ೧-೮೫ ವ). [ಸಂ.]

**ಸಮುಪಸ್ಥಿತ** (ಗು). ಹತ್ತಿರವಿರುವ ; ಸಮೀಪದ : ಅಮಳಿನ ಗುಣವ್ಯಕ್ತಿಗಳಂ ಸಮುಪಸ್ಥಿತ ಸಕಳಜನಗತೋಚಿತಗುಣಮಂ ಸಮನಾಗಿಸುವರ್ (ಕವಿರಾ. ೩-೧೪೬). [ಸಂ.]

**ಸಮುಪಹಿತ** (ಗು). ಒಡಗೂಡಿರುವ ; ಸಹಿತವಾದ : ದೇವತೂರ್ಯಾನುಗದೇವೀಗೀತಜ್ಞನಸ್ತವ ಸಮುಪಹಿತಾತ್ಮೀಯಚಿತ್ರಂ . . . ಬಂದಂ (ಆದಿಪು. ೭-೪೩). [ಸಂ.]

**ಸಮುಪಾತ್ತ** (ಗು). ೧. ಸ್ವೀಕರಿಸಿದ; ಒಳಗೊಂಡ : ಜಿತಕರ್ಮಂ ಸಮುಪಾತ್ತ ತತ್ತ್ವಚಯಮರ್ಮಂ ಶುದ್ಧರತ್ನತ್ರಯಾಧ್ಯತಭರ್ಮಂ (ಚಂದ್ರಪು. ೧-೮). ೨. ಅಪಹರಿಸಿದ. ೩. ಸಂಗ್ರಹಿಸಿದ; ಕಲೆಹಾಕಿದ. [ಸಂ.]

**ಸಮುಪಾತ್ತಕ್ರಿಯೆ** (ನಾ). ನಡೆದ ಕ್ರಿಯೆ : ಸಮುಪಾತ್ತಕ್ರಿಯೆಯುಂ ವಾಕ್ಯಮಾಲೆಯುಂ ಸುಕವಿರಚಿತನಾಮಮದಾದಂದಮರ್ಗುಂ ಲಿಂಗಂ (ಶಮದ. ೭೫). [ಸಂ. ಸಮುಪಾತ್ತಕ್ರಿಯಾ]

**ಸಮುಪಾಹೃತ** (ಗು). ತ್ಯಜಿಸಿದ; ಅಗಲಿದ: ಮಹಾಶ್ವೇತೆಯುಂ ಸಮುಪಾಹೃತಾನುಬಂಧೆಯಾಗಿಯುಂ ನಿನ್ನ ಕೆಯ್ಯೊಳೇನುಮಂ ಪೇೞ್ಪಟ್ಟಿದಳಿಲ್ಲ (ಕಾದಂಜು. ೩೭೦). [ಸಂ.]

**ಸಮುಪೇತ** (ಗು). ೧. ಜೊತೆಗೂಡಿ ಬಂದ ; ಒಟ್ಟಾಗಿ ಬಂದ. ೨. ಕೂಡಿದ ; ಹೊಂದಿದ : ರಾಗಾರ್ತಿರೋಗಸಂತಾಪದೂರ ಸಮುಪೇತನಿಖಿಳಸದ್ವಿಚಾರ (ವರ್ಧಮಾ. ೧೪-೬). (ನಾ). ೩. ಹೊಂದಿದುದು ; ಕೂಡಿದುದು: ದ್ವಿತ್ರಿಪದರಚಿತ ವೃತ್ತಿವಿಚಿತ್ರೌಪಮ್ಯಾದ್ಯಲಂಕ್ರಿಯಾಸಮುಪೇತಂ (ಕಾವ್ಯಾವ. ೭೮೪). [ಸಂ.]

**ಸಮುಲ್ಬಣಾಂಬು** (ನಾ). ಬಗ್ಗಡವಾದ ನೀರು ; ಕದಡಿದ ನೀರು: ಒಕ್ಕಮಳಮಳಯಜಾಂಬುವನಕ್ಕಟ ಪಲ್ವಲಸಮುಲ್ಬಣಾಂಬುವನೀಂಟಲ್ಕಕ್ಕುಮೆ (ಚಂದ್ರಪು. ೪-೫೫). [ಸಂ.]

**ಸಮುಲ್ಲಸಿತ** (ಗು). ಸೊಗಸಾದ : ಸಮುಲ್ಲಸಿತವಲ್ಲರೀ ಶಾಖಾಸದೃಶಬಾಹುಲತಿಕೆ ಸಲ್ಲಲಿತ ಲತಾಭವನಂಗಳಂ . . . ನೋಡುತ್ತ (ಸುಕುಮಾ. ೯-೧೦೭ ವ). [ಸಂ.]

**ಸಮುಲ್ಲಾಸ** (ನಾ). ೧. ಅತಿಯಾದ ಆನಂದ ; ಅಧಿಕವಾದ ಸಂತೋಷ : ಜಾನಕಿ ವಿರಾಜಿಸಿದಳ್ಸಮುಲ್ಲಾಸದಿಂ ಪುಷ್ಪವತಿಯಾಗಿ ವಿಕಸಿತವಸಂತಲಕ್ಷ್ಮಿಯ ತೆಱದೊಳು (ಭೈಮಿಭಾ. ೧೮-೨೪) ; ಸುಮಿತ್ರಾದೇವಿ ಕಂಗೊಳಿಸಿದಳ್ ಸಮುಲ್ಲಾಸದಿಂ (ಶ್ರೀರಾಮಾ. ೧೫-೩೮೭). ೨. ಅತಿಯಾಗಿ ಸಂತೋಷಗೊಂಡವನು : ಮಂದಮಾರುತಾಂದೋಳಿತ ಲುಳಿತಾಳಕವಲ್ಲರೀಸಮುಲ್ಲಾಸನುಂ . . . ವಿಜಯಶ್ರಮಮನಾಱಿಸುತ್ತುಮಿರೆ (ಶಾಂತಿಪು. ೪-೧೭ ವ). [ಸಂ.]

**ಸಮುಲ್ಲಾಸಿತ** (ನಾ). ೧. = ಸಮುಲ್ಲಾಸ ೧ : ಅನುಪ [ಮಪವ]ಮಾನವಶಲುಳಿತ ಕೇತುಮಾಲಾಸಮುಲ್ಲಾಸಿತದೊಳ್ . . . ಪೊರೆದು (ಸುಕುಮಾ. ೯-೧೭ ವ). ೨. [ಸಂಗೀತ] ಗಮಕದ ಒಂದು ಪ್ರಕಾರ : ಸಮುಲ್ಲಾಸಿತ . . . ಕೋಮಲವೆಂಬಯಿಪ್ಪತ್ತೆರಡೆ ಶ್ರುತಿ ಗಮಕಗಳೆಂತಲುಂ (ವಿವೇಕ. ೨೩೨). [ಸಂ.]

**ಸಮೂಲ** (ನಾ). ಬೇರುಸಹಿತವಾದುದು : ಆದಿತ್ಯಭಕ್ತ: ಈ ಸಮೂಲವನ್ನು ಅಕ್ಕಿಗಚ್ಚಿನಲ್ಲಿ ಕುಡಿಯಲು ಹೊಟ್ಟೆಗಟ್ಟು ಮಾಣ್ಗುಂ (ವಿಷ್ವವಿ. ೧). [ಸಂ.]

**ಸಮೂಹ** (ನಾ). ೧. ಗುಂಪು ; ಸಮುದಾಯ : "ನಿಕರಃ . . . ಸ್ತೋಮಃ - ಈ ೩೯ ಸಮೂಹಂ" (ಹಲಾಯು. ೧೧೪-೨) ; ಸತ್ಯದ ಅನ್ವೇಷಣೆಯಲ್ಲಿ ನಿರತರಾದ ವಿದ್ವಾಂಸರ ಸಮೂಹ ಸಾಲಾಗಿ ನಿಲ್ಲುತ್ತದೆ (ದ್ರಾವಿವಿ. ೧೫). ೨. ರಾಶಿ ; ಒಟ್ಟಿಲು : ಅವಳ ಮೆಯ್ಯನುಚ್ಛ್ವಸಿತಹರ್ಷೋರ್ಮಿಮಾಲಾಸಮೂಹದಿಂದವ್ವಳಿಸಿ ಮುಚ್ಚಿ (ಶ್ರೀರಾಮಾ. ೨೭-೭೦೭). [ಸಂ.]

**ಸಮೂಹಮಾಧ್ಯಮ** (ನಾ). ಯಾವುದಾದರೊಂದು ವಿಷಯವನ್ನು ಸಮುದಾಯಕ್ಕೆ ತಿಳಿಸಲು ಸಹಾಯಕವಾದ (ಬಾನುಲಿ, ದೂರದರ್ಶನ, ವೃತ್ತಪತ್ರಿಕೆ ಮುಂತಾದ) ಸಾಧನ : ಈಚೆಗೆ ಸಮೂಹಮಾಧ್ಯಮಗಳ ಮೂಲಕ ಜಾಹಿರಾತು ಕೊಡುವುದರಲ್ಲಿ ಪೈಪೋಟಿಯೇ ನಡೆಯುತ್ತಿದೆ (ರೂಢಿ). [ಸಂ.]

**ಸಮೂಹಸನ್ನಿ** (ನಾ). ಸಮುದಾಯದ ಮನೋಭಾವ ; ಸಾಮೂಹಿಕವಾದ ಮನೋವೃತ್ತಿ : ಇಂದಿನ ರಾಜಕೀಯಪಕ್ಷಗಳ ಚುನಾವಣೆಯ ಸಮಯದಲ್ಲಿ ಸಮೂಹಸನ್ನಿ ಯಾವ ಕಡೆ ತಿರುಗುತ್ತದೆ ಎಂಬುದನ್ನು ಊಹಿಸಲು ಸಾಧ್ಯವಿಲ್ಲ (ರೂಢಿ). [ಸಮೂಹ + ಸನ್ನಿ]

**ಸಮೂಹ್ಯ** (ಗು). ೧. ಒಟ್ಟಿಗೆ ತಂದ ; ಸೇರಿಸಿದ. (ನಾ). ೨. ಒಂದು ಬಗೆಯ ಯಾಗಾಗ್ನಿ. [ಸಂ.].

**ಸಮೃದ್ಧ** (ಗು). ೧. ವೃದ್ಧಿಹೊಂದಿದ ; ಏಳಿಗೆ ಪಡೆದ. ೨. ಹುಲುಸಾಗಿ ಬೆಳೆದ. ೩. ಅಧಿಕವಾದ ; ಹೆಚ್ಚಾದ. (ನಾ). ೪. ಯಥೇಚ್ಛ ; ಆಧಿಕ್ಯ : ಸದಾಕಾಲದಲ್ಲಿಯೂ ಸಮೃದ್ಧವಾದ ನೀರಿನಿಂದ ವಿಶಾಲವಾಗಿ ಹರಿಯುವ ಉತ್ತರದ ನದಿಗಳು (ನನದಿ. ೧೭) : ಪೊನ್ನನ ಕಾಲವು . . . ಸಂಸ್ಕೃತ ಹಾಗೂ ಪ್ರಾಕೃತಸಾಹಿತ್ಯಗಳ ದೃಷ್ಟಿಯಿಂದ ಸಮೃದ್ಧವಾಗಿದೆ (ಸಾಹಿಸ. ೨೫). ೫. ಶ್ರೀಮಂತ ; ಧನಿಕ : ವಚನರಚನಾಪ್ರಳಾಪ ಮನವ್ಯಗ್ರಕುಶಾಗ್ರೀಯಬುದ್ಧಿಸಮೃದ್ಧಂ ಸ್ವಯಂಬುದ್ಧನವಧಾರಿಸಿ (ಆದಿಪು. ೨-೯ ವ). [ಸಂ.]

**ಸಮೃದ್ಧಿ** (ನಾ). ೧. ಅಭಿವೃದ್ಧಿ ; ಏಳಿಗೆ ; ಉತ್ಕರ್ಷ. ೨. ಐಶ್ವರ್ಯ ; ಸಂಪತ್ತು : ಮಹಿಯಲ್ಲಿ ಸಮೃದ್ಧಿ ಸ್ಥಿರವಾಗಲಿ (ಕವಿಪು. ೧೭-೧). ೩. ವಿಪುಲತೆ ; ಆಧಿಕ್ಯ : ಮಧುಮಾಸಕುಸುಮಸಮೃದ್ಧಿಯಂತೆ ವಿಜಾತಿಯುಂ . . . ಎನಿಸಿ ದೇಱುಂಜವ್ವನೆಯ ರೂಪಾತಿಶಯಮನೆವೆಯಿಕ್ಕದೆ ನೋಡುತ್ತಂ (ಕಾದಂಪೂ. ೪೯). [ಸಂ.]

**ಸಮೆ₁, ಸವೆ₁** (ಕ್ರಿ). ೧. ಕಟ್ಟು ; ನಿರ್ಮಿಸು ; ಮಾಡು : "ಸಮ - ನಿರ್ವಹಣೇ, ನಿಶ್ಶೇಷೇ ಚ (ಸಮೆದುಹೋಗು)" (ಶಮಧಾ); ಅಱುದಿಂಗಳೊಳಾ ಅಯ್ನೂಱುರಥಮಂ ಸಮೆದು (ವಡ್ಡಾರಾ. ೧೪೭-೮) ; ತಿರ್ದಿ ಪೇೞ್ವುದು ಪೂಮಾಲೆಯನಿಂಬಿನಿಂ ಸಮೆವವೊಲ್ ಸತ್ಕಾವ್ಯಮಂ ಕಬ್ಬಿಗಂ (ಕಾವ್ಯಾವ. ೪೯೮); ಗುರುಗಂಜಿಯಿಂ ಸಮೆದ ದಂಡೆ ಮಂಡೆಯೊಳೊಪ್ಪೆ (ಬಸರ. ೯-೯೯). ೨. ಸಜ್ಜುಮಾಡು ; ಅಣಿಗೊಳಿಸು : ಅಯ್ವರುಮಂ . . . ಪೊಱಲಂ ಪುಗಿಸಿ ಮುನ್ನಮೆ ಸಮೆದ ಬೀಡುಗಳೊಳ್ ಬೀಡಂ ಬಿಡಿಸಿ (ಪಂಪಭಾ. ೪-೫ ವ); ಸಮೆದ ಮಖಮಂ ಸುಡುವ ವೀರಭದ್ರನ ತೆಱದೆ . . . ಉರವಣಿಸಿ ನಡೆದು (೯ಹರ ದೇ. ೪೦-೨೧); ಹಂದರವೆತ್ತಿ ಕೊಟ್ಟಾರಮಂ ಸಮೆದು ವೇದಿಯಂ ಸಮಕಟ್ಟಿ (ರಾಮಾಶ್ವ. ೧೭-೫). ೩. ಕೆತ್ತು ; ಕಂಡರಿಸು : ಇ(ಈ) ಕಲ್ಲಂ ದುರ್ಗದ[ದಾ]ಸಂ ಸಮೆದೊ(೦) (ಎಇ. VII, ೨೧೩-೧೯ ; 874). ೪. ರಚಿತವಾಗು ; ನಿರ್ಮಾಣವಾಗು : ಜಗಮಿದು ಮೌಕ್ತಿಕದಿಂದಂ ತೆಗೆದುದೊ ದಂತದೊಳೆ ಸಮೆದುದೊ (ಕಾದಂಉ. ೧೪೫) ; ಚಂದ್ರನಿಂದಂ ಸಮೆದುದೆನಿಸಿದಂತಿರ್ಪ ದಿಕ್‌ಸಂಕುಳಂ (ರಕ್ಷಾಶ. ೯೪); ನಿಂತು ನೋಡುವಳ್ . . . ಬಯಲ ನಡು ನಿಡು ಪರಿದು ಸಮೆದ ಕಾಲ್ದಾರಿಕೀಳ್ಪಟ್ಟೆಯಂ (ಶ್ರೀರಾಮಾ. ೨೭೮-೧೪೫). ೫. ಬರೆ ; ರಚಿಸು : ಪುರಾಣಕವಿಪ್ರಭುಪ್ರಯೋಗಾವಿಳಸದ್ಗುಣೋದಯ ಮನಾಯ್ದು ವಱಿಂ ಸಮೆದೊಂದು ಕಾವ್ಯದಿಂ . . . ಮುದಮಂ ತನಗಾಗಿಸಿದೊಂ ಕವೀಶ್ವರಂ (ಕವಿರಾ. ೨-೧೫೫). ೬. ಅಡುಗೆ ಮಾಡು ; ಪಾಕ ಮಾಡು : ಮುನಿಸಂಸ್ತುತೆಗೆ ಬೋನಮಂ ಸಮೆದು ಕೆಲಕೆಲರ್ (ವರ್ಧಪು. ೧೩-೫೨). **ಸವೆ₁** : ೧. ಪಚ್ಚೆಯಿಂ ಸವೆದ ಕಂಬದ ಪದ್ಮರಾಗವಳವಟ್ಟ ಮಣೆಯ ಘನಮಹಿಮೆವಡೆದುಯ್ಯಲಂ ಹರುಷದಿಂದ ಜವ್ವನೆಯರೇಱಿದರ್ (ಹಚಕಾ. ೪-೧೪) ; ಮಿಗೆ ಗಿರಿದುರ್ಗದ ನೆಲಗೋಂಟೆಗೆ ಸವೆಯೆ ಬಳಿಕ್ಕೆ ಸುರಂಗಂಗಳನೆರಡಂ (ಹಮ್ಮಿರ. ೩-೨೭). ೨. ವಹ್ನಿಕುಂಡಮಂ ಸವೆ ಬೇಗಂ (ದಶಕು. ೧೧-೯೩) ; ಕಾಕುಜ್ಜನರ ಕೊಲ್ಲ ಪದದೊಳವದಿರಿಗೆ ಶೂಲಂಗಳಂ ಸವೆದಿರಿಸಿದ (ಭಾವಚಂ. ೧-೪೪). ೪. ಹೊನ್ನಿಂ ವಿವಾಹವೇದಿಕೆ ಸವೆದುದಂತಲ್ಲಿ (ಮಾನರ. ದೇ. ೧೭೪-೧೯) ; ವಿಪ್ರರಿಗೆ ಮಣಿಮಯದಾಲ್ಯಯಂಗಳು ಸವದವ್ಯಗಾವುದದಱಳತೆಯಲಿ (ತೊರರಾ. ೧-೧೩-೧). ೬. ಬಸವಣ್ಣನಲ್ಲಿ ತಮ್ಮರಸಿಯರ ನೋಡುತಂ ಬೋನಮಂ ಸವೆವುದೊಡೆಯರ್ಗೆಂದು ಪೇಳುತಿರೆ (ಬಸರ. ೭-೫) ; ಎತ್ತಿದಳು ಮಗನ ಚಂಗಳೆ ಒತ್ತಿದಳ ಲಗಿಂದ ಕೊರಳ ಚೀಲಾಳ್ವನನಂದುತ್ತರಿಸಿ ಬೋನಮಂ ಸವೆದು (ನನ್ನಚಾ. ೭-೧೨೫). ೭. ಹಾಕು ; ಇಕ್ಕು : ಕನ್ನವ ಸವೆದ ಕತ್ತಿ ಕಳಬಲ್ಲುದೆ (ಸರ್ವವ. ೭೯-೪೪೨) ; ನವರಂಧ್ರ ಮೆಂಬ ಕನ್ನಂ ಸವೆದಿರಲೊಡಲೆಂಬ ಮನೆಯನೊಯ್ಯನೆ ಪೊಕ್ಕು (ಧರ್ಮನಾ. ೫-೮೭). ೮. ಉಂಟಾಗು ; ಒದಗು : ಸ್ವಾನುಭವದಿಂ ಸವೆದ ನಿಜತತ್ವದ ಗಂಧವನಿತ್ತು . . . ಅಷ್ಟವಿಧಾರ್ಚನೆಯಿಂದರ್ಚಿಸಿ (ಆದವ. ೨೮-೮೪) ; ಪಡೆಯ ಪದಹತಧೂಳಿ ಸವೆಯಲು ಪೊಡವಿಪಾತಾಳದ ಫಣಿವ್ರಜವಡರಿದವೊ ರವಿಬಿಂಬಕೆನಲು (ಕುವ್ಯಾಭೀ. ೪-೪೧). [ದೇ. ॥ ತಮಿ. ಚಮ್ಮೆ ; ಮಲ. ಚಮ]

**ಸಮೆ₂, ಸವೆ₂** (ಕ್ರಿ). ೧. ತೀರು ; ಮುಗಿ : ತೀವಿ ಬಡ್ಡಿಸಿದೊಡೆ . . . ನೀಡುಂ ಬೇಗಮುಂಡು ಸಮೆದ ಬಟ್ಟಿಕ್ಕೆ ತಳಿಗೆಯನೆತ್ತಿದೊಡೆ (ವಡ್ಡಾರಾ. ೬೪-೨೩) ; ಮತ್ಸ್ಯಮಾಂಸಂ ಸಮೆದತ್ತಿನ್ನೇನಂ ತಿಂಬೆಂ (ಪಂಚತಂ. ೮೪-೨೧) ; ಶೀತಳಜಲಮಲ್ಲಮುಂ ಸಮೆಯೆ (ದಶಕು. ೬-೭). ೨. ಅಳಿ ; ನಾಶವಾಗು : "ಸಮ - ನಿರ್ವಹಣೇ, ನಿಶ್ಶೇಷೇ ಚ (ಸಮೆದುಹೋಗು)" (ಶಮಧಾ) ; ಸುಡುಸುಡು ನಾರಕರ ನಮೆವ ಸಮೆಯದ ನಾವಂ (ಅನಂಪು. ೯-೩೯) ; ಕಮಲನಾಭನ ಕರುಣಕವಚವು ಸಮೆದರಾರೇಗುವರು (ನಳಚ. ೪-೩೪); ಬಕಾನುಜನಾದ ಹಲಾಯುಧನು ಘಟೋತ್ಕಚನಿಂದ ಸಮೆದನು (ಕೃವಾಕ. ೭). ೩. ಹೆಚ್ಚುಬಳಕೆಯಿಂದ ತೇದು ಹೋಗು, - ಉಜ್ಜಿಹೋಗು : ಕ್ಷುದ್ರಜನರುಗಳ ಸಂಚಾರದಿಂದ ಸಮೆ[ಶಾಶಾಂ. ವೆ]ದ ದಾರಿಯಿದು (ವಚಕಾ. ೨೦) ; ಅದು ಎಂಬುದರ ಸಮೆದ ರೂಪವೇ 'ಅ' ಎಂಬ ಷಷ್ಠಿಯ ರೂಪವಾಗಿದೆ (ದ್ರಾವಿ. ೨೫೦). 'ಸಮೆಗಲ್ಲು' ಪರಾ. ೪. ಶಕ್ತಿಗುಂದು ; ಬಲಹೀನವಾಗು : ಕೃತವಿದ್ಯರ ಭೀಕರಶರತತಿ ಮೊಳೆ ತೀವಂತೆ ಸಮೆದು ಬಿಟೆ ಸಂಗರದೊಳ್ (ಗದಾಯು. ೪-೩೩). ೫. ಕಳೆ ; ನೀಗು : ಪಾರಣೆಯ ದಿವಸಮಲ್ಲದಱುವತ್ತುಮೂಱುದಿವಸದಿಂದುಪವಾಸದಿಂ ಸಮೆಯೆ (ಆದಿಪು. ೩-೧೦೮). ೬. ಸೊರಗು ; ಬಡವಾಗು : (೩). **ಸವೆ₂** : ೧. ಭಂಡಾರಂ ಸವೆದೊಡೆ ಪ್ರಜೆ ಕೆಟ್ಟಡೆ ಹಗೆ ಸಮೀಪವಾದೆಡೆಯಲ್ಲಿರಲಾಗದು (ಪಂಚತಂ. ೩೯-೨೨) ; ಫಳಮ್ಯಗಾವಳಿ ಸವೆದುದಿನ್ನೀ ಹಳುವು ಸಾಕು (ಕುವ್ಯಾಅ. ೪-೨). ೨. ನೆರೆದ ಸಾಮಂತಾದಿ ಭಟಪರಿಕರನಿಕರವುದ್ಭ್ರಮಿಸಿ ಸವೆದರು ಕಾದಿ ತಮ್ಮೊಳಗೆ (ಬಸಪು. ೬೧-೩೯) ; ಸವೆಱಿದರು ಕುರುವಂಶವನು ಪಾಂಡವರು ಸಕಲಮಹಾರಥರು ಸಲೆ ಸವೆದುದಿಲ್ಲಿ ನದೀಸುತ ದ್ರೋಣಾದಿಗಳು ಸಹಿತ (ಕುವ್ಯಾದ್ರೋ. ೫-೨೭). ೩. ಸುರಗಿ ಸವೆದುವು ಶೂಲ ಮುಱಿದುವು (ಕೌಶಿರಾ. ೩೨-೨೭) ; ತಗೆಬಗೆಯೊಳೋಡಾಡಿ ಕೆರವೊಂದು ಸವೆಯದಿರೆ (ಕಾಲೂರ. ೭೩-೧೩೨). ೪. ಸರಳ ಸರಳಿ ಕಡಿದು ಸವೆಯದೆ ಸರಿಮಿಗಿಲ ಕಾದಿದರೆ ಶಲ್ಯನ ಧರಧುರದ ದೆಖ್ಖಾಳತನವನು ಕಂಡು ಖಾತಿಯಲಿ . . . ಬಾಣದೊಳುರವ ತೋಡಿದನು (ಕುವ್ಯಾದ್ರೋ. ೫-೩೨). ೫. ಭಾವವಳಿದು ಬಯಕೆ ಸವೆದು ಮಹಾದೇವನಾದ ಶರಣರ ಜಗದ ಮಾನವರೆತ್ತ ಬಲ್ಲರು (ಲಿಂಗವ. ೩. ೪೯-೧೯) ; ವಿವಿಧರತ್ನಾಭರಣಕಿರಣದ ಲಲಿತಲಹರಿಯಲಿ ಸವೆದುದಗ್ಗದ ತಿಮಿರ (ಕುವ್ಯಾಅ. ೧೧-೨೯). ೬. ಮಾಡಿ ತನು ಸವೆಯದನ್ನಕ್ಕ . . . ಅಪ್ಪುದೆ ಭಕ್ತಿ (ಬಸವ. ೨೧೦); ತನಗಾಗಿಯೇ ಸವೆದು ಸುಣ್ಣವಾಗಿ ತಿರುಗಿದ ತಾಯಿಯನ್ನು . . . ಅಳಿಸಹತ್ತಿದುದು ಮಹಾಪರಾಧ (ಜಯಂತ. ೯). ೭. ಕುಗ್ಗು ; ಕಡಮೆಯಾಗು : ನಿತ್ಯನಿಯತವ್ರತನೇಮಂಗಳ ಸವೆಯಲೀಯದೆ ಪೂರವಿಸಿ (ಶಿವಗೀ. ೨೦-೭೯); ಸವೆಯದ ತವರಾಜಂ ಜೇನ ಸೋನೆ ತಾನೆಂಬಿನಂ . . . ಸುಕಂಠೆ ಕೇಳಿಸುತಿರ್ದಳ್ (ಕುಸುಮಾ. ೧-೩೮); ಪೂತುರೇ ಕುರುಸೈನಿಕವಸಂಖ್ಯಾತವೆಂದಿಗೆ ಸವೆವುದೋ (ಕುವ್ಯಾದ್ರೋ. ೧೭-೭). ೮. ಬಳಕೆಯಾಗು ; ವಿನಿಯೋಗವಾಗು : ಧನ ದಾಸೋಹಕ್ಕೆ ಸವೆದು . . . ಪರಿಣಾಮಿಸುವಂತೆ ಮಾಡು (ಬಸವ. ೪೫೮). ೯. ಕೊರಗು ; ಪರಿತಪಿಸು : ನವೆದೆಂ ರೋಗಂಗಳಿಂದಂ ಸೆಡೆದೆನು ದಿನಂ ಸೇವೆಯಿಂದಂ ನಿರರ್ಥಂ ಸವೆದೆಂ ಕಾಮಂಗಳಿಂದಂ (ರಕ್ಷಾಶ. ೨೪) ; ಭವಭವಂಗಳೊಳಗೆ ಬಂದು ಸವೆದೆನಯ್ಯ ಹಂಪೆಯರಸ (ಹಂಪೆರ. ೮-೭). ೧೦. ಇಲ್ಲವಾಗಿಸು ; ನಾಶಮಾಡು : ಕಾವೇರಿ . . . ಮಜ್ಜನವ ಮಾಳ್ಪ ಜನರ ಸಂತತಿಯ ಪಾಪಂಗಳನು ಸವೆದು ಸರ್ವಾಭೀಷ್ಟಮಂ ಸಲಿಸಿ ಸಲಹುತ್ತಲಿರುವಳ್ (ಅರ್ಕಾವಿ. ೧-೭). [ದೇ. ॥ ತಮಿ. ಚಮ್ಮೆ ; ತುಳು. ಸವಿ ; ತೆಲು. ಸಮಯು]

**ಸಮೆ₃** 'ಸಮಯಿ₂' ನೋ.

**ಸಮೆಗಲ್ಲು** (ನಾ). ತೇದುಹೋಗಿ ನಯವಾದ ಕಲ್ಲು : ಒಂದು ಮುಷ್ಟಿಯಷ್ಟು ಗಾತ್ರದ ಕಲ್ಲದು. ನನಗೂ ವಿಶೇಷ ಏನೂ ಕಾಣಿಸಿರಲಿಲ್ಲ. ನಮ್ಮ ಊರಿನ ಹೊಳೆ ತೋಡುಗಳಲ್ಲಿ ಸಿಗಬಹುದಾದ ಸಮೆಗಲ್ಲು (ಮೂಕಜ್ಜಿ. ೧೦೩). [ಸಮೆ₂ + ಕಲ್ಲು (< ಕಲ್₂)]

**ಸಮೆಗೋಲು**, ಸವೆಗೋಲು (ನಾ). ಗಡಾರಿ ; ಹಾರೆ : ಬೈರನೊಂದು ಕಡೆ ಸಿದ್ದನಿನ್ನೊಂದು ಕಡೆ ಸಮೆಗೋಲು (ಹಾರೆ)ಗಳಿಂದ ಅಗೆಯುತ್ತಿದ್ದರು (ಕಾನೂರು. ೩೮೦). **ಸವೆಗೋಲು** : ದೇವಯ್ಯ ತುಳಸಿಕಟ್ಟೆಯನ್ನು ಮಿಾಟಿ ತೆಗೆಯಲು ಸವೆಗೋಲು ತೆಗೆದುಕೊಂಡು ಅಂಗಳಕ್ಕಿಳಿದಾಗ (ಮಲೆಮ. ४०೨). [ಸಮ್ + ಕೋಲು (< ಕೋಲ್)]

**ಸಮೆತ**, ಸವೆತ (ನಾ). ತೇದುಹೋಗುವಿಕೆ : ಸಮತ ; ತೇಯ್ತ ; ಘರ್ಷಣಕ್ಷಯ (Friction. ೪೦೩). **ಸವೆತ** : ಪ್ರವಾಹದಿಂದ ಒದಗಬಹುದಾದ ಭೂಮಿಯ ಸವೆತವನ್ನು ತಡೆಗಟ್ಟಲು ಒಡ್ಡುಗಳನ್ನು ಹಾಕುವರು (ರೂಢಿ). [ಸಮ್ + - ತ]

**ಸಮೆತರ್** (ಕ್ರಿ). ತೀರು; ಮುಗಿ: ಸಮೆತಂದುಪುದು ಸಮುದ್ರೋಪಮಮೆನೆ ಮಂದಾರಮಾಲಿಕಾಮ್ಲಾನತೆಯುಂ ಸಮಕೊಳಿಸಲಾರ್ತುದಿಲ್ಲ ದಲಮರೇಂದ್ರನದೊಂದು ಮುಖಪರಿಮ್ಲಾನತೆಯಂ (ಆದಿಪು. ೬-೧೯). [ಸಮ್ + ತರ್]

**ಸಮೆಯ**, ಸಮೆಹ (ನಾ). ೧. ಕಟ್ಟಳೆ: ಕೇರಿಯ ಮಹಾಜನಕ್ಕೆ ಮಾಡಿದ್ದ ಸಮೆಯಮೆನ್ನನೆ (ಸೌಇಇ. XI-i, ೭೪-೩೩ ; 1028). **೨. ಯಾವುದೇ ಪಂಥಗಳ ಸಂಘ**: ಸೌಧರೆ ಕೂಚಿಯನಾಯಕನುಂ ಅಶೇಷನಕರಂಗಳುಂ ಸಮೆಯಂಗಳುಂ ಪಂಚಮಠಸ್ಥಾನಂಗಳುಂ ಇನ್ತೀ ಧರ್ಮ್ಮಮಂ ಪ್ರತಿಪಾಳಿಸುವರು (ಕಇಅ. ४೩-೭೦-೧೯ ; 11ನೆಯ ಶತ). **ಸಮೆಹ** : ೨. ವಾಣರಾಸಿಯಲಿ ತಮ್ಮ ತಂದೆಯ ಕೊಂದ ಪಾಪಕೆ ಹೋಹರು ಸುಂಕದವರು ಸಮೆಹದವರು ಆರೊಬ್ಬರು ಯಿ ಧರ್ಮಕೆ ತಪ್ಪಿದರೆ (ಎಕ. XIV, ಹಗ್ಗಡ. ೧೪೨-೧೯ ; ಸು. 1497). [IP ಇದು 'ಸಮಯ' ಎಂಬುದರ ಅಪಲಿಖಿತ]

**ಸಮೆಯಿಸು**₁, ಸಮಯಿಸು₁, ಸವಸು₁, ಸವೆಯಿಸು₁, ಸವೆಸು₁ (ಕ್ರಿ). ೧. ಕಟ್ಟಿಸು; ನಿರ್ಮಿಸು : ಲಾಕ್ಷಾದ್ರವಾದಿಕಾರಿತಮಾಯಾರುಣಜಲಪರಿಪೂರ್ಣವಾಪಿಯಂ ಸಮೆಯಿಸಿದೊಡೆ (ಆದಿಪು. ೨-೧೪ವ); ಚಂದ್ರಕಾಂತದ ಚಂದ್ರಶಾಲೆಯೊಳಮೊಪ್ಪುವ ವಿವಾಹಗೇಹಮಂ ಸಮೆಯಿಸಿ (ಪಂಪಭಾ. ೩-೭४ವ). **೨. ಅಣಿಗೊಳಿಸು; ಸಿದ್ಧಪಡಿಸು**: ನಿಂದು ವಸುದೇವನನುಚರರಿಂದಂ ಸಮೆಯಿಸಿ ಸಮಂತು ಕೊಂಡಮಂ (ನೇಮಿಪು. ೩-೧೫೮); ನಡೆಪೂವಿನ ಪಂದರುಮಂ ವಿವಾಹವೇದಿಕೆಯುಮಂ ಸಮೆಯಿಸಿ (ಅರ್ಧನೇ. ೩-೧೦ವ). **೩. ಕೆತ್ತಿಸು ; ಕಂಡರಿಸುವಂತೆ ಮಾಡು** : ಮೂಢಭಕ್ತಿಯ ಕೆಲಜನರ ಹೇಳಿಕೆಯಂತೆ ಅವನು ಖಾಜಾಅಹರಾರನೆಂಬ ಸಾವಿನ ಸ್ತುತಿಪರಶ್ಲೋಕಗಳನ್ನು ಸಮೆಯಿಸಿದನು (ಮೋಚಾದ. ೩೧). **ಸಮಯಿಸು**₁ : ೧. ಲಿಙ್ಗಶಿವಜೀಯರ್ಬ್ಬಿಗ್ಗಾವೃತ್ತಿಯಿನ್ದಂ ಕಲ್ಲ ದೇಗುಲಮುಂ ದೇಗುಲಂಗಳುಮಂ ಸಮಯಿಸಿ ಕೊಣ್ಣಂಗಳುಮಂ ಕಟ್ಟಿಸಿದರ್ (ಎಕ. XI, ಮೊಳಕಾ. ೨೭-४ ; 962) ; ಸಮಯಕ್ಕೆ ಪಂಚಶತವಧಿಕಮಾಗೆ ಸಮಯಿಸಿ ಸಹಸ್ರಕೂಟಸಹಸ್ರಾಸ್ರಮುಮಂ ಸಮಯಿಸಲಾರ್ಗಂ ಸಮಯಿಸಿದಲ್ ಸಮನೆ ದಾನಚಿಂತಾಮಣಿಯೊಳ್ (ಅಜಿಪು. ೧-४೯) ; ಆ ಕಂಸಂ ಮಲ್ಲಯುದ್ಧರಂಗಮಂ ತುಂಗತರಂಗಳಪ್ಪ ಚೌಪಳಿಗೆಗಳಂ ಸಮಯಿಸೆ (ನೇಮಿಪು. ೬-೧೩೨ ವ). **ಸವಸು**₁ : ೧. ಕೆಱೆಯಂ ಕಟ್ಟಿಸು ಭಾವಿಯಂ ಸವಸು (ಸೌಇಇ. IV, ೨೬೭-४४ ; 1380?); ವಿರಹಿಜನದ ಮೇಲಿರದೆ ಮಾರನು . . . ಸವಸಿದ ಸಬಳಗಳೆನೆ ವರ ಮೊಲ್ಲೆಯ ನನೆಯಿಹವು (ಅಂಜಚ. ೨-೮೯). **४. ಪಾಕಮಾಡು ; ಬೇಯಿಸು** : ಹದ್ದು ಕಾಗೆಗೆ ನಿನ್ನವರು ಸಾಲಿದ್ದು ಬೋನವ ಸವಸಿದರು (ಕುವ್ಯಾಕ. ೩-೫). **ಸವೆಯಿಸು**₁ : ೧. ವ್ಯಾಳವನಗಜದ ಪೋರ್ತದ ಕೇಳಿಗೆ ವಿಜಯಾರ್ಧಶೈಲಪತಿ ಸವೆಯಿಸಿ ತಂದೋಳಿಯೆ ನಿಱಿಸಿದ ಬೆಳ್ಳಿಯ ಲಾಳವಿಂಡಿಗೆವೊಲಿರ್ಪುವಿದಱ ಮಡಲ್ಗಳ್ (ಶಾಂತಿಪು. ೨-೧೦४) ; ಬಾಲಕಿಗೆ . . . ನವರತ್ನಖಚಿತ ವಿಶಾಲಸೂತಿಗೃಹವ ಸವೆಯಿಸಿ ಕರೆಸಿಯಿರಿಸಿದನು (ಸಾಳ್ವಭಾ. ೨೧-೧). **ಸವೆಸು**₁ : ೧. ವಿದುರನಟ್ಟಿದ ಖನಕ ಬಂದನುಯಿವರ ಸಜ್ಜೆಯ ಮನೆಯಲತಿಗುಪ್ತದಲಿ ನೆಲದೊಳು ಸವೆಸಿದನು ಪಥವ (ಕುವ್ಯಾಆ. ೮-೮೭); ಜಿನಭವನವನು ರುಂದ್ರತರದೆ ಸವೆಸಿದ ವಾದಿವಿದ್ಯಾನಂದಯೋಗಿಗೆ ನಮಿಸುವೆನು (ಅಂಜಚ. ೧-೫೦). [ಸಮ್ + - ಇಸು]

**ಸಮೆಯಿಸು**₂, ಸಮಯಿಸು₂, ಸಮಸು, ಸಮೆಸು, ಸವಸು₂, ಸವೆಯಿಸು₂, ಸವೆಸು₂ (ಕ್ರಿ). ೧. ಮುಗಿಸು; ತೀರಿಸು : ಮಹಾಮಹಿಮೆಯಭಿಷೇಕಮುಮಂ ಮಾಡಿ ಸಮೆಯಿಸಿದ ಬಟಿಕ್ಕೆ (ವಡ್ಡಾರಾ. ೧೦೭-೮) ; ತನ್ನನೊರ್ವನಂ ತಾಗಿದೊಡನಿಬರುಮಂ ವಿರಥರ್ಮಾಡಿ ಭಾರತಮನಿಂದೆ ಸಮೆಯಿಸುವೆನೆಂದು ಕೋದಂಡಮಂ ಬಿಸುಟು ಗದಾದಂಡಮಂ ಭುಜಾದಂಡದೊಳಳವಡಿಸಿಕೊಂಡು (ಪಂಪಭಾ . ೧೧-೧೦೦ ವ) ; **೨. ನೀಗಿಸು ; ಹೋಗಲಾಡಿಸು** : [ಕರ್ಣನ ವ]ಕ್ಷಮನೆಚ್ಚು ಗರ್ವಮಂ ಸಮೆಯಿಸಿ (ಪಂಪಭಾ. ೮-೧೦೭). **ಸಮಯಿಸು**₂ : ೩. ನಾಶಮಾಡು ; ''ಕೊಲ್ಲು'' (ಗಂಗಾಮ. ೬). **ಸಮಸು** : ४. ಕುಗ್ಗಿಸು ; ಕಡಮೆಮಾಡು : ಕ್ರಮವಿವರವೇನಿರಲಿ ಸೃಷ್ಟಿಯ ವಿಧಾನದಲಿ ಸಮಸದದು ಸತ್ತ್ವವನು (ಮಂಕುತ. ೧೧೫). **ಸಮೆಸು** : ೫. ನವೆಯುವಂತೆ ಮಾಡು ; ಸೊರಗಿಸು : ಯಾವ ಕಗ್ಗಲ್ಲ ಮೂರ್ತಿಯನ್ನು ಪ್ರಸನ್ನಗೊಳಿಸಲು ನಿನ್ನ ಜೀವನವನ್ನೇ ಸಮೆಸಿದೆಯೋ ಅದಿನ್ನೂ ಕಗ್ಗಲ್ಲಾಗಿಯೇ ಉಳಿದಿದೆ (ಬಾಣಾಅ. ४೦೦); ನಿನ್ನ ದೊರೆತನಕಾಗಿ ಜೀವವನೆ ಸಮೆಸಿದೆನು (ಚಂದ್ರಸ. ೯೦-೮). **ಸವಸು**₂ : **೬. ಖರ್ಚುಮಾಡು** ; ವಿನಿಯೋಗಿಸು : ಧನವನರಿಸದಿರಾ ಇರಿಸಿದರೆ ಭವ ಬಪ್ಪುದು ತಪ್ಪದು ಕೂಡಲಸಂಗನ ಶರಣರಿಗೆ ಸವ[ಪಾಠಾಂ. ವಿ]ಸಲೆಬೇಕು (ಬಸವ. ೧೯೯); ಪರಹಿತಾರ್ಥದಿ ತಮ್ಮ ತನುಧನಹರಣ ವಸ್ತುಗಳಂ ಸವ[ಪಾಠಾಂ. ವೆ]ಸಿ ಸುರುಚಿರಯಶೋಧಿಕರಾದರಲ್ಲದೆ ದಿವ್ಯಲಿಂಗಕ್ಕೆ ಪರಮಭಾಜನರಾಗರು (ಬಸಪು. ೧೮-೨೦). **ಸವೆಯಿಸು**₂ : ೫. ನಾನು ನನ್ನ ದೇಹವನ್ನಿಡೀ ನಿಮ್ಮ ಸೇವೆಗಾಗಿ ಸವೆಯಿಸಿದರೂ ಹೆಚ್ಚಾಗಲಾರದು (ದೇಶಧು. ೨). **೭. ತೇದುಹೋಗುವಂತೆ ಮಾಡು**: ರೋಗಾಣುಗಳು . . . ಶ್ವಾಸನಾಳವನ್ನು ಸವೆಯಿಸಿ (Erosion), ಶ್ವಾಸನಾಳದ ಒಳಗಡೆ ರೋಗವನ್ನು ಹರಡಬಹುದು (ಕಲರೋ. ೮೯). **ಸವೆಸು**₂ : ೧. ವಿವರಗಳ ಜೋಡಿಸುವ ಯಜಮಾನ ಬೇರಿಹನು ಸವೆಸು ನೀಂ ಜನುಮವನು (ಮಂಕುತ. ೭೮೨); ೫. ತ್ಯಾಗ ಸೇವೆಗಳಲ್ಲಿ ಇಡೀ ಜೀವನವನ್ನು ಸವೆಸಿ ಅಧಿಕಾರಕ್ಕಾಗಿ ನಾನು ಬಂದೆ (ಹುಚ್ಚುಹು. ४೦). ೭. ಆಯುಷ್ಯವು ತೀರಿ ಪ್ರಳಯವು ಬಂದರೆ ಅರ್ಥವನುಂಬವರಿಲ್ಲಾ . . . ಕೂಡಲಸಂಗನ ಶರಣರಿಗೊಡನೆ ಸವೆಸುವುದು (ಬಸವ. ೨೦೦). ೭. ಆಳು ಹಂಗೇ ಗಟ್ಟಿಯಾಗಿದ್ದರು, ವರ್ಷಕ್ಕೊಂದು ಗುದ್ದಲಿ ಸವೆಸೋರು (ನನ್ನೂರು. ೩೧೭). [ಸಮ್ + - ಇಸು]

**ಸಮಸು** 'ಸಮೆಯಿಸು₂' ನೋ.

**ಸಮೆಹ** 'ಸಮೆಯ' ನೋ.

**ಸಮೇತ**₁ (ಗು). ೧. ಒಟ್ಟುಗೂಡಿರುವ ; ಸಹಿತವಾದ ; ಸೇರಿದ : ಜಾತಿಗೋತ್ರಾತೀತಸದ್ಗುರುಜಾತನಂ ಬಹುಜಾತಿಗೋತ್ರಸಮೇತ ದುಃಕ್ರಿಯದಾಶ್ರಯನ ನೀನೆಂದು ಮಾಡಿದಪ್ಪೆ (ಬಸಪು. ೩-೫೦). ೨. ಪ್ರಾಪ್ತವಾದ ; ಪಡೆದ. (ನಾ). **೩. ಸಹಿತವಾದುದು ; ಕೂಡಿರುವಂಥದು** : ತೋಳ್ಗಾಲ್ಗುಂ ಕರಮಸೆದಿರ್ಕುಂ ಪದ್ಮೋದರಂಗೆ ಚಕ್ರಾಸಿ ಶಂಖ ಶಾರ್ಙ್ಗಸಮೇತಂ (ಕಾವ್ಯಾವ. ೧४). ४. **ಕೂಡಿಕೊಂಡಿರುವ ವ್ಯಕ್ತಿ ; ಸಹಿತನಾದವನು** : ಅನುಜಸಮೇತನೊಳಂತಕತನಯನೊಳನುಜವ್ಯಪೇತನೀಗಳ್ ದುರ್ಯೋಧನನಳುಪಿ ಸಂಧಿಗೆಯ್ದೊಡೆ (ಗದಾಯು. ೫-४೮) ; ಹೊಂಗಿ ಶಸ್ತ್ರಸಮೇತನಾಗಿ . . . ನಡೆವುತ್ತ (ಬಸಪು. ೨೧-೯). [ಸಂ.]

**ಸಮೇತ**₂ (ಅ). ಸಂಗಡ ; ಜೊತೆಯಲ್ಲಿ ; ಸಹಿತವಾಗಿ : ಎಲ್ಲಾ ಸಾಮಾನು ಸಮೇತ ನೀನು ಮೊದಲು ಹೋಗು (ರೂಢಿ). [< ಸಮೇತ₁]

**ಸಮೇಲ**, ಸಮೇಳ (ನಾ). ೧. ಜೊತೆಯಾಗಿರುವಂಥದು ; ಬೆರೆತುಕೊಂಡುದು. **೨. ಬೆರೆತುಕೊಂಡಿರುವ ವ್ಯಕ್ತಿ** : ತನುಮನಂ ಧನವೆಂಬವಂ ವಂಚನೆಗಳಿಲ್ಲದೆ ಕೊಟ್ಟು ರಸಿಕದಿ ಮನಸು ಕರಗಿ ಸಮೇಲರಾಗಿ (ಬಸಪು. ೧೨-೩೦). **ಸಮೇಳ** : ೩. **ಹೊಂದಾಣಿಕೆ ; ಹೊಂದಿಕೆ** : ಲೋಲಲೋಚನವಱುಹುಱುಹು ಸಮೇಳವಾಗಿಹ ಗಿರಿಜೆ ಮೆಱೆದಳು ಶಂಕರಾಂಕದಲಿ (ಪ್ರಭುಲೀ. ೨-೧೧). ४. ಸಾನ್ನಿಧ್ಯ ; ಸಖ್ಯ : ಪ್ರೇಮ ಪ್ರಭುವನಾ ಶಿವಗಣಶ್ರೇಣಿ . . . ಲಾಲಿತನ್ಯೋನ್ಯಪ್ರಿಯವಿನಯಲೋಲನಾಲಿಂಗನ ಸಮೇಳಕ್ರಿಯೆಗಳಿಂ ತಣಿಸಿ (ಬಸಪು. ४೭-೭೫). ೫. ಖಡ್ಗಯುದ್ಧದ ಒಂದು ವರಸೆ: ಒಬ್ಬನು ಮತ್ತೊಬ್ಬನ ಪೆಟ್ಟನ್ನು ಮಾಡುವನು. ಈ ಪ್ರಕಾರದಲ್ಲಿಯೇ ಅನ್ಯೋನ್ಯವಾಗಿ ಆವದು ಮಾಡಲ್ಪಡುವದು ಅದು ಸಮೇಳಾಯೆಂದು ನುಡಿಯಲ್ಪಡುವದು (ಖಡ್ಗಟೀ. ೫-೭೩). [ಸಂ.]

**ಸಮೇಳ** 'ಸಮೇಲ' ನೋ.

**ಸಮೋತ್ಸರಿತ** (ನಾ). [ನಾಟ್ಯ] ಹತ್ತು ಭೌಮಮಂಡಲಗಳಲ್ಲಿ ಒಂದು : ಭ್ರಮರ . . . ಸಮೋಸಱತ್ಸರಿತ [ಮತ್ತಲ್ಲಿ] . . . ಚಾಷಗತಿ – ಈ ಹತ್ತು ಭೌಮಮಂಡಲಂಗಳ್ (ಲಾಸ್ಯರು. ೮-४ ವ). [ಸಂ.]

**ಸಮೌರ್ವಿ (ನಾ).** ಹೆದೆಯೇರಿಸಿದವನು : ಸಮೌರ್ವಿಯಾದಿವನ ಬಿಲ್ಲೊಳಮಿಂದ್ರನ ವಜ್ರದಲ್ಲಿಯುಂ . . . ಅಭಿಕಾಂಕ್ಷಿಸುವರ್ ಜಯಮಂ (ಶಾಕುಂತ. ೨೭-೧೫). [ಸಂ. ಸಮೌರ್ವೀ]

**ಸಮ್ಮ$_1$, ಶಮ್ಮ (ನಾ).** ೧. ರಕ್ಷಣೆ ; ಆಶ್ರಯ : 'ಸಮ್ಮಂಗೊಡು' ಪರಾ. ೨. ಶುಭ ; ಮಂಗಳ : ಈ ಅಷ್ಟಾಕ್ಷರಕನಂತಾನಂತ ಸಮ್ಮಂಗಳೊಳವು (ಕಮಮಾ. ೧೫-೮೪ ವ). **ಶಮ್ಮ** : ೩. ಸಂತೋಷ : ಶಮ್ಮದಿಂದಾತನುಂ ನನ್ನ ನಿಮಗಿತ್ತ ಗಡ (ಪ್ರಭಪು. ೩-೧೧೫). [< ಸಂ.ಶರ್ಮನ್]

**ಸಮ್ಮ$_2$** 'ಚಮ್ಮ' ನೋ.

**ಸಮ್ಮಂಗುಂದು (ಕ್ರಿ).** (ಮುಪ್ಪಿನಿಂದ) ಚರ್ಮವು ಸುಕ್ಕಾಗು, – ನೆರಿಗೆಗಟ್ಟು : ಎಲೆಲೆ ಸಮ್ಮಂಗುಂದಿದ ಪುಚ್ಚಟಿಯ ಬಾಟ್ಸಬಮೆ! (ರಾಮಾಶ್ವ. ೧೧೨-೧೧೫). [ಸಮ್ಮ$_2$ (< ಚಮ್ಮ) + ಕುಂದು$_1$]

**ಸಮ್ಮಂಗೊಡು (ಕ್ರಿ).** ಆಶ್ರಯ ನೀಡು; ರಕ್ಷಣೆ ಕೊಡು : ಹೆಸರೆಸಕದ ಹೆಮ್ಮೆಯ ದೇವರು ಬಂದೊಸೆದು ತುಳಿಲ್ವೆವಡಿದಾವರೆಯುಂ ಸಸಿವಚ್ಚಂ ಸಮ್ಮಂಗೊಟ್ಟುಮ್ಮಹದಿಂದೆಮ್ಮಂ ಪೊರೆಗೆ (ಉದ್ಭದೇ. ೧-೨). [ಸಮ್ಮ$_1$ + ಕೊಡು$_1$]

**ಸಮ್ಮಂದ** 'ಸಮ್ಮದ$_1$' ನೋ.

**ಸಮ್ಮಂದಿಸು (ಕ್ರಿ).** ೧. ಸಂಬಂಧಿಸಿದಂತಿರು : ಆತ್ಮಂ . . . ಸಮ್ಮಂದಿಸಿಹನು ಪ್ರಾಣಗಳಾ (ಭರಚ. ೬೭-೯೩). ೨. ಸಂಬಂಧವನ್ನು ಕಲ್ಪಿಸು; ಹೊಂದಾಣಿಕೆ ಮಾಡು: ನಿಮ್ಮಯ ಲಕ್ಷಣದಿರವಂ ಸಮ್ಮಂದಿಸಿ ನೋಡಲೆಂದು ಕಳುಪಿದನೆನ್ನಂ (ಬೀಳವಂ. ೨-೪೪). [ಸಮ್ಮಂದ (< ಸಮ್ಮದ$_1$) + - ಇಸು$_3$]

**ಸಮ್ಮಂಧ$_1$** 'ಸಮ್ಮದ$_1$' ನೋ.

**ಸಮ್ಮಂಧ$_2$ (ಅ).** ಸಲುವಾಗಿ ; ನಿಮಿತ್ತವಾಗಿ : ತೋಟವನಿಕ್ಕುವ ಸಂಮಂಧ ಎಂಟುಹೊಂನು (ಎಕ. VII, ಶಿವಮೊ. ೭೧-೫೨ ; 1431). [< ಸಮ್ಮಂಧ$_1$]

**ಸಮ್ಮಂಧಿ (ನಾ).** ೧. ಸೇರಿದುದು; ಸಂಬಂಧಿಸಿದುದು : ಜಚಾಹುತಿ ಶ್ರೀಶಾಂತಿನಾಥಸಮ್ಮನ್ಧಿಯಪ್ಪ ಬಳಕಾಱಗಣದ ಮೇಷನನ್ದಿಭಟ್ಟಾರಕರ ಶಿಷ್ಯರಪ್ಪ ಕೇಶವನನ್ದಿ . . . ಕೊಟ್ಟ ಗಟ್ಟೆ (ಇಆ. IV. ೧೮೦-೧೩ ; 1048). ೨. ಬಂಧು ; ನಂಟ : ನಿಮ್ಮ ದಾಸರು ಅವರ ಸಮ್ಮಂಧಿಗಳ ಪಾದ ನೆಮ್ಮಿಕೊಂಡಿಪ್ಪಂಥ ಧಮ್ಮನು ನಾ (ವಿದಾಶ್ವ. ೭೩-೩). [< ಸಂ. ಸಂಬಂಧಿನ್]

**ಸಮ್ಮಂಧಿಗ (ನಾ).** = ಸಮ್ಮಂಧಿ ೨ : ಕರುಳ ಸಮ್ಮಂಧಿಗನಯ್ಯ ವರನರಕೇಸರಿಕಾಯ . . . ಕಾಯೊ ಮುರಾರಿ (ಮೋಕ್ಷದೀ. ೭೯-೧). [ಸಮ್ಮಂಧ$_1$ (< ಸಮ್ಮದ$_1$) + - ಇಗ]

**ಸಮ್ಮಕಂಕರಿ (ನಾ).** ಚರ್ಮದ ಚಾಟಿ ; ಬಾರುಕೋಲು : ಈತಂ ಪಗಲ್ಗಳ್ಳನೀತನಂ ಸಮ್ಮಕಂಕರಿಯಿಂ ಬಡಿವರ್ (ರಾಮಾಶ್ವ. ೧೦೬-೨೯). [ಸಮ್ಮ$_2$ (< ಚಮ್ಮ) + ಕಂಕರಿ$_2$]

**ಸಮ್ಮಕಾರ** 'ಚಮಗಾರ' ನೋ.

**ಸಮ್ಮಗಾತಿ (ನಾ).** ಚಮ್ಮಾರ ಜಾತಿಯ ಹೆಂಗಸು : (ಕ). [ಸಮ್ಮ$_2$ (< ಚಮ್ಮ) + - ಗಾತಿ$_5$]

**ಸಮ್ಮಗಾತಿಯಗಿಡು (ನಾ).** ಒಂದು ಬಗೆಯ ಸಸ್ಯ : "ಸಮ್ಮಗಾತಿಯ ಗಿಡು – ಸಪ್ತಲೆ, ವಿಮಲೆ, ಸಾತಲೆ, ಭೂರಿಫೇನ, ಚರ್ಮಕಷೆ" (ನಾಚಿರಾ. ಕ). [ಸಮ್ಮಗಾತಿ$_7$ + ಗಿಡು]

**ಸಮ್ಮಗಾಱ** 'ಚಮಗಾರ' ನೋ.

**ಸಮ್ಮಟಿಗೆ** 'ಚಮ್ಮವಟ್ಟಿಗೆ' ನೋ.

**ಸಮ್ಮಣ** 'ಸಮ್ಮನ' ನೋ.

**ಸಮ್ಮಣಂಬಡೆ (ಕ್ರಿ).** ಸನ್ಮಾನವನ್ನು ಹೊಂದು ; ಗೌರವಕ್ಕೆ ಪಾತ್ರವಾಗು : ಆ ನಾರದಂ . . . ತ್ರಿಲೋಕದೊಳಂ ತ್ರಿಮೂರ್ತಿಗಳೊಳಂ ಸಮ್ಮಣಂಬಡೆದಿರ್ಪಂ (ಅದ್ಭುತ. ೨೮-೧೮). [ಸಮ್ಮಣ (< ಸಮ್ಮನ) + ಪಡೆ$_1$]

**ಸಮ್ಮತ (ಗು).** ೧. ಅಂಗೀಕಾರಾರ್ಹವಾದ ; ಒಪ್ಪಬಹುದಾದ : ಇಂತಾಚಾರ್ಯರ ಅನುಮತಿ ಇಲ್ಲದೆ ಸಮ್ಮತ ವಿಶ್ವಕ್ಸೇನರನೊಲ್ಲದೆ ಚೌತಿಯ ದಿನದೊಳು ಬೆನಕನ ಭಾವಿಸೆ (ಗಣೇಶ. ೧-೧೭). **(ನಾ).** ೨. ಅಂಗೀಕೃತವಾದುದು ; ಒಪ್ಪಿಗೆಯಾದುದು : ಪ್ರಕಟತರಂ ಶಬ್ದಂ ಶಾಬ್ದಿಕಸಮ್ಮತಮರ್ಥಂ (ಚಂದ್ರಪ್ರ. ೧-೫೮) ; ಸಮ್ಮತಮಿದಹು ದೆಂದರಲ್ಲರುಂ ಭೂವರಂ ಸುಮ್ಮನಿರೆ (ಜೈಮಿಭಾ. ೨೬-೫೭) ; ಹಿತವಿದು ಶಾಸ್ತ್ರವಿಹಿತವಿದು ಮನಕೆ ಸಮ್ಮತವಿದೆಂದೆಂಬ ಮರ್ಮವನು ಮತಿಯೊಳೆಣಿಸಿ (ಹದಿಬ. ೩-೧೯). ೩. ಹೊಂದಾಣಿಕೆ ; ಅನ್ಯೋನ್ಯ : ಇನ್ನು ನಾವಿಬ್ಬರೂ ಒಮ್ಮತ ಸಮ್ಮತವಾಗಿರೋಣ (ಆರ್ಯಕ. ೪). ೪. ಅಭಿಪ್ರಾಯ ; ವಿಚಾರ : ನಿಮ್ಮ ದಯೆಯಿಂದಮನುಪಮ ಸಮ್ಮತಮಂ ಹಿತಮನಖಿಳಶಾಸ್ತ್ರಾಗಮಮಂ ನಿಮ್ಮಿಂದಮಱಿದೆವು (ಸುಕುಮಾ. ೨-೫೮).

ಸಮ್ಮತಹೊಡೆ = ಒಪ್ಪಿಕೊಳ್ಳು; ತಲೆಬಾಗು; ಶರಣಾಗು : ಉಳಿದ ಜನ ವೇಪರಿಗಾಗಿ ಚಾತಕಪಕ್ಷಿಯಂತೆ ಕಾದು ಸುಸ್ತಾಗಿ ಸಮ್ಮತಹೊಡೆದು, ನಿಟ್ಟುಸಿರುಬಿಟ್ಟು ಹೋಗುತ್ತಾರೆ (ನಾಡಿಗೇ. ೭೫) ; ಸಮ್ಮತಹೊಡೆದು ಬಿಟ್ಟಾನು ನಿನಗೆ (ಏಳಜೀ. ೮೩). [ಸಂ.]

**ಸಮ್ಮತಿ (ನಾ).** ೧. ಒಪ್ಪಿಗೆ; ಅನುಮೋದನೆ : ಪತಿದೇವನಂ ಬಿಡುವ ಮನಸಿಲ್ಲದೆಯೆ ಬಿಡಲ್ ಸಮ್ಮತಿಯಿತ್ತಳಾಕೆ (ಚಿತ್ರಾಂಗ. ೪೯-೧೩೫೨) ; ಗೋವಿಂದಲಾಲನೂ ತಮ್ಮ ಸಮ್ಮತಿಯನ್ನು ಹಾಕಿದರು (ಬಂಕಿಮ. ೭೧). ೨. ಘನತೆ ; ಗೌರವ. ೩. ಪ್ರೀತಿ ; ಒಲವು. ೪. ಆಜ್ಞೆ ; ಅಪ್ಪಣೆ. [ಸಂ.]

**ಸಮ್ಮತಿಸು (ಕ್ರಿ).** ಒಪ್ಪು; ಒಡಂಬಡು : ಸತತಮುಂ ನಿಮ್ಮಲ್ಲಿರಲು ಸಮ್ಮತಿಸಿ ಕರುಣಿಸು (ಬಸವು. ೬೧-೫೯) ; ಮಾಡಿಕೊಳ್ಳುವವರು ಒಪ್ಪಿಕೊಂಡರೂ ಹೆಣ್ಣೊಂದು ಸಮ್ಮತಿಸಬೇಕಲ್ಲ? (ತೇಮೋಡ. ೧೦೩). [ಸಮ್ಮತ + - ಇಸು$_3$]

**ಸಮ್ಮಥಿಸು (ಕ್ರಿ).** ಕಡೆ; ಮಥನಮಾಡು : ಲಂಕಾಜನದ ಮನದ ವಾರ್ಧಿಯಂ ಸಮ್ಮಥಿಸುತ್ತೈತಂದುದಾ ಬೂತು ಮಯನಂದನೆಯ ದೇವಮಂದಿರಕೆ (ಶ್ರೀರಾಮಾ. ೩.೨೬-೧೯೯). [ಸಂ. (ಸಮ್ಮಥನ) + - ಇಸು$_3$]

**ಸಮ್ಮದ$_1$, ಸಮ್ಮಂದ, ಸಮ್ಮಂಧ$_1$ (ನಾ).** ೧. ನಂಟು ; ಬಾಂಧವ್ಯ : ಸ್ವಯಂಬುದ್ಧನೆಂಬುದನಾನೆಂದೆನದಲ್ಲದಂದೆನಗಮಿಾ ಲೋಕಕ್ಕಮೇಂ ಸಮ್ಮದಂ (ಆದಿಪು. ೨-೬೭) ; ನಾಡ ನಂದನವನಂ ಸಗ್ಗಕ್ಕೆ ಪೋದಂತೆ ಕಣ್ಗೊಳಿಕುಂ ನಂದನಮಲ್ಲದಂದು ಬನಕಂ ಸಗ್ಗಕ್ಕಮೇಂ ಸಮ್ಮದಂ (ಅರ್ಧನೇ. ೧೧-೬೭) . ೨. ಕಾರಣ ; ನಿಮಿತ್ತ : ಭೂವಗವುಣ್ಡ ಹೊಲದ ಬಿದೆರ ಸಂಮ್ಮದದಿ ಕೊನ್ದಡೆ ಬಾಸಗವುಣ್ಡ ಬೂವೆಗವುಣ್ಡನ ಕೊನ್ದ (ಮೈಆರಿ. ೧೯೩೨, ೨೧-೧೧ ; 1012?) ; ಅಂಚೆಗಳ್ ಮೃದುಯಾನಕ್ಕೆ ಪಿಕಂ ರವಕ್ಕೆಳಸೆ ತಂತಮ್ಮ ಸ್ವಜಾತೀಯ ಸಮ್ಮದದಿಂ ಪಾಮರಿಯರ್ . . . ಇರ್ಪರ್ ಕಾದು ಕೇದಾರಮಂ (ಮಲ್ಲಿಪು. ೨-೨೦). **ಸಮ್ಮಂದ** : ೩. ಮದುವೆಯಿಂದುಂಟಾಗುವ ನಂಟಸ್ತಿಕೆ ; ವೈವಾಹಿಕ ಸಂಬಂಧ : ನಮ್ಮ ಪುತ್ರರ ನಮ್ಮ ಕೇಳದೆ ಕೊಂಡೊಯ್ದು ನಿಮ್ಮ ಪುತ್ರಿಯರ ನೀವವರ್ಗೆ ಸಂಬಂಧಮಾಳ್ಪಾಗ ಬಡವರೆ (ಭರಚ. ೫೮-೬೭). **ಸಮ್ಮಂಧ$_1$** : ೩. ಗಣಪತಿಯಂಥವನಿಗೆ ಸರಿಯಾದ ಸಮ್ಮಂಧ ಮತ್ತೆ ಯಾವುದು? (ಹೊಸಕ್ಕಿ. ೪೨). [< ಸಂ. ಸಂಬಂಧ]

**ಸಮ್ಮದ$_2$ (ನಾ).** ೧. ಅಧಿಕವಾದ ಸಂತೋಷ : ಆನುಮಂತೆಯ್ದ ಸಮ್ಮದ ಸಂದೋಹಮನಾನೆ ಪೆತ್ತನಿದನೆಂಬಂತೆ . . . ಆದೆಂ (ಕಾದಂಪೂ. ೮೬೪) ; ಎಲ್ಲರ ಸುಖ ದುಃಖದ ಹದನಂ ಪರಿಕಿಸಿದೊಡೆ ಸಮ್ಮದಂ ಧರಿತ್ರೀತಳದೊಳ್ (ದಶಕು. ೬-೧೧೫). ೨. ಉತ್ಸಾಹ ; ಸಂಭ್ರಮ : ಅಚ್ಯುತಂ ಯುದ್ಧಸಮ್ಮದದಿಂ ಪೂರಿಸೆ ಪಾಂಚಜನ್ಯಮಂ (ಜಗವಿ. ೧೮-೭). ೩. ಅತಿಶಯವಾದ ಮದ : ನವಾಮ್ರಕೋಮಲ ಕಳಿಕಾರಸಪ್ರಸರಸೇವೆಯ ಸಮ್ಮದದಿಂ ಕುಕಿಲ್ವ ಕೋಕಿಲಕುಳಮಾ ಪುರೋಪವನದೊಳ್ ಪರಿದೊಪ್ಪುವುದು (ಕುಸುಮಾ. ೨-೭೦). [ಸಂ.]

**ಸಮ್ಮದಿಸು (ಕ್ರಿ).** ಅತಿಯಾಗಿ ಸಂತೋಷಿಸು : ಜಲಂ ಮುರಿದು ವಿತಳಕ್ಕಿಳಿಯಿತನೆ . . . ತಾಯ್ಮಳಲುಗಾಣಿಸಲು ಘಮ್ಮನಲು ನೀರ್ನಡುವೆ ಹೊಯ್ದಡೆ ಸಮ್ಮದಿಸಲೆಂದಾಗ ದೆಂಬರ ಪೆರ್ಮೆಯಂ ಮಾಣಿಸಿದನಲ್ಲಾ (ಬಸವು. ೩೨-೨೭). [ಸಮ್ಮದ$_2$ + - ಇಸು$_3$]

**ಸಮ್ಮನ, ಸಮ್ಮಣ (ನಾ).** ಸನ್ಮಾನ ; ಗೌರವ : ಭೂಮಿಪರು ಸುಖಮುಖರಾದರು ನಮಿರಾಜ ತವಗೆ ಸಮುಖವೆತ್ತು ಮಾಳ್ಪ ಸಮ್ಮನಕೆ (ಭರಚ. ೩೮-೫೯). **ಸಮ್ಮಣ** : ನಾನು ಮಹಾಸನ್ನಿಧಾನಕ್ಕೆ ದಕ್ಷಿಣಭುಜದಂಡನಾಗಿರುವೆನೆಂಬ ಒಳ್ಪಿನ ಸಮ್ಮಣದ ತೇಜಸ್ವಿತೆಯ ಬಿರುದು ಆದಿಯಿಂದ ನನ್ನ ಪರಮಸೌಭಾಗ್ಯವದಾಗಿದೆ (ಮಂತ್ರಶ. ೧೭೫-೨೪). [< ಸಂ. ಸಮ್ಮಾನ]

**ಸಮ್ಮನಿಸು$_1$** (ಕ್ರಿ). ೧. ಆದರಿಸು; ಗೌರವಿಸು : ಎನಿತು ಗುಣಮುಳ್ಳೊಡಂ ಸಮ್ಮನಿಸದಣಂ ತಜ್ಞನಂ ಕೃತಘ್ನನನೆಂದುಂ (ಚಂದ್ರಪ್ರ. ೪-೨೩) : ಪೆತ್ತ ಮಗಂ ಸಮ್ಮನಿಸಿ ಕೊಳುತ್ತಿರೆ ಪೊಸತಲ್ತೆ ತಂದೆ ಮಕ್ಕಳ ಮೋಹಂ (ಅನಂಪು. ೩-೮೯) : ಇನಿವರಿದು ಪಡೆಗರಣ್ಮಕಂ ಕೂಟ್ಟೇರಿತ್ತು ಸಮ್ಮನಿಸಿದನೆ? (ರಾಮಾಶ್ವ. ೧೧೫-೨೪). ೨. ಸೈರಿಸು ; ಸಹಿಸು : ತಾಮ್ಮುನ್ನಮ ಮುಗ್ಧೆಯದಟ ಮೇಗುದಯಿಸೆ ಕೋಪಮ್ಮಿಗೆ ತನ್ನ ನೆಟಲ್ಗಂ ಸಮ್ಮನಿಸಳೆ ಕೂರ್ತು ಕಣ್ಣ ಕಾಣ್ಬವರೊಳರೆ (ಲೀಲಾವ. ೧೪-೩೧). [ಸಮ್ಮನ + - ಇಸು$_1$]

**ಸಮ್ಮನಿಸು$_2$** 'ಸಮನಿಸು' ನೋ.

**ಸಮ್ಮರ್ದ** (ನಾ). ೧. ತಿಕ್ಕಾಟ ; ಘರ್ಷಣೆ : ಸಂದೇಶವಾಹಕಮಾರ್ಗದಲ್ಲಿ ಹೆಚ್ಚಿನ ಸಮ್ಮರ್ದ ಹುಟ್ಟಿಸಿ ಸಂದೇಶಗಳು ಸಾಗದಂತೆ ಅಡಚಣೆಯುಂಟುಮಾಡುತ್ತವೆ (ಶಿಕ್ಷದ. ೪೮೩). ೨. ಒತ್ತಡ ; ಒತ್ತರ : ಒಂದರ ಮೇಲೆ ಇನ್ನೊಂದು ವಸ್ತು ಉಂಟು ಮಾಡುವ ಬಲದ ಹೆಸರು ಸಮ್ಮರ್ದ (ಪ್ರೆಷರ್) (ಕವಿಕೋ. I. ೨೮೦). ೩. ಸಂದಣಿ ; ದಟ್ಟಣೆ : ಮಾಹೇಶ್ವರಾರಾಧನೆಯ ಸಮ್ಮರ್ದದಲ್ಲಿ . . . ಮತಾಚಾರಗಳನ್ನು ಗುಟ್ಟಾಗಿ ಹಾಳೇರಿಸಿದ ಸೇನಾಪತಿ ಬಸವಲಿಂಗಣ್ಣನೂ ಉಂಟು (ಬೆಟ್ಟಅ. ೪೮-೧೮). ೪. ಸುಗಂಧದ್ರವ್ಯವನ್ನು ತೀಡುವುದು : "ಸಮ್ಮರ್ದವೆನೆ ಪರಿಮಳವೆನಲು ಮಿದಿವುದಕ್ಕು" (ಮಂಗರಾ. ೧೩೪-೩೪). [ಸಂ.]

**ಸಮ್ಮರ್ದನ** (ಗು). ತುಳಿದಿಕ್ಕಿದ ; ಮೆಟ್ಟಿದ : ಅದನಾಳ್ವಂ . . . ಅನೇಕಸಮರ ಸಮ್ಮರ್ದನ ನಿರ್ಜಿತೋರ್ಜಿತಾರಾತಿಬಲನತಿಬಲನೆಂಬಂ (ಆದಿಪು. ೧-೭೧ ವ). [ಸಂ.]

**ಸಮ್ಮವಾವುಗೆ** 'ಚಮ್ಮವಾವುಗೆ' ನೋ.

**ಸಮ್ಮಾನ** (ನಾ). ೧. ಸನ್ಮಾನ ; ಮನ್ನಣೆ : ಭೀಷ್ಮದ್ರೋಣಕೃಪಾದಿಗಳೂ . . . ಕೃಷ್ಣನ ಸಮ್ಮಾನಾರ್ಥವಾಗಿ ಅಲಂಕರಿಸಿದ್ದ ನಗರಕ್ಕೆ ಬಿಜಯಮಾಡಿಸಿದರು (ಭೀಷ್ಮಚ. ೧೭೭); ನಿನಗೆ ಸಮ್ಮಾನ ಮಾಡಲೆಂದು ಕೊಬ್ಬಿದ ಕೋಳಿಯನ್ನು ಕೊಂದು ಕೋಳಿಕರಿ, ರೊಟ್ಟಿಗಳನ್ನು ತಯಾರಿಸಿದೆವು (ನಡೆದಾ. II. ೧೧೩೧). ೨. ಸುಖ ; ಸಂತೋಷ : ಮುದಿ ತುಂಬುರಂಗೆ ಸಮ್ಮಾನಮಪ್ಪೆಡೆಯೊಳೆನಗೆ ದುಮ್ಮಾನಮಾದುದು ಗಡ! (ಅದ್ಭುತ ೨೦-೫೮). ೩. ಒಂದು ಬಗೆಯ ಅಳತೆ. ೪. ಹೋಲಿಕೆ; ತುಲನೆ. [ಸಂ.]

**ಸಮ್ಮಾನಗೆಯ್** (ಕ್ರಿ). ಆದರಿಸು; ಪುರಸ್ಕರಿಸು: ಅಮ್ಮ ನೀನೊಸಗ ಮಾಡಿದೆ ನಮ್ಮೆಲ್ಲರ್ಗೆ ಸಮ್ಮಾನಗೆಯ್ದೆ (ಭರಚ. ೩೫-೯೧). [ಸಮ್ಮಾನ + ಕೆಯ್$_1$]

**ಸಮ್ಮಾನಿಸು** (ಕ್ರಿ). = ಸಮ್ಮಾನಗೆಯ್ : ಆನುಂ ಕತೆಯಂ ಕೇಳ್ದು ಸೊಗಸಾಗ ಬಲ್ಲಂತೆ ಸಮ್ಮಾನಿಸುವೆಂ (ರಾಮಾಶ್ವ. ೫-೨೫). [ಸಮ್ಮಾನ + - ಇಸು$_3$]

**ಸಮ್ಮಾರ್ಜನ** (ಗು). ೧. ಗುಡಿಸುವ ; ಉಡುಗುವ : ಪ್ರಾತಃಕಾಲದಲ್ಲಿ ಎದ್ದು ಸನ್ನಿಧಿಯ ಸಮ್ಮಾರ್ಜನಕೈಂಕರ್ಯಕ್ಕೆ ಪೋಗುವಾಗ್ಯೆ (ಪುರಾವಿ. ೧೧೪). (ನಾ). ೨. ಗುಡಿಸುವುದು. ೩. ತೊಳೆಯುವುದು ; ಶುದ್ಧಿಮಾಡುವುದು. ೪. ಶುದ್ಧಿ; ಸ್ವಚ್ಛ ; ಚೊಕ್ಕಟ : ನಗೆವ ತೆರೆಯಿಂದ ಸಮ್ಮಾರ್ಜನೆಯ ಮಾಡಿ ಮಲ್ಲಿಗೆಯ ಪೂವಲಿಯ ಕೆದಱೆ (ಪಚಕಾ. ೩-೮೧). ೫. ಉಜ್ಜುವುದು; ತಿಕ್ಕುವುದು. ೬. ಸಾರಿಸುವುದು; ಸಾರಣೆ. ೭. ಪ್ರತಿಮೆ ಮೊದಲಾದುವುಗಳಿಗೆ ಬಣ್ಣ ಬಳಿಯುವುದು. [ಸಂ.]

**ಸಮ್ಮಾರ್ಜನಂಗೆಯ್ಯು** 'ಸಮ್ಮಾರ್ಜನಂಗೈ' ನೋ.

**ಸಮ್ಮಾರ್ಜನಂಗೈ, ಸಮ್ಮಾರ್ಜನಂಗೆಯ್ಯು** (ಕ್ರಿ). ೧. ಸಾರಿಸು; ಸಾರಣೆಮಾಡು: ರಜಮನಾ ತಾಣದೊಳ್ ಹಸ್ತಿ ಕೈನೀರಿಡುತಂ ಸಮ್ಮಾರ್ಜನಂಗೈವು [ಪಾಠಾಂ. ಗೆಯ್ಯು]ದು (ರಾಜಶೇ. ೧-೧೨೭). **ಸಮ್ಮಾರ್ಜನಂಗೆಯ್ಯು** : ೨. ತಿಕ್ಕು; ಉಜ್ಜು : ತಿರಸ್ಕೃತಿಯ ಕೈದುವಂ ಸಮ್ಮಾರ್ಜನಂಗೆಯ್ಯುತಿರ್ದೊಡಂ ನಡನಡನೆ ನಡುಗುತಿರ್ದಾ ಬೆರ್ಚು ಗಣ್ಣಬಲೆಯುಂ ಹುಬ್ಬುಗಂಟಿಕ್ಕಿ ನೋಡಿದನ್ . . . ನಿಶಾಚರೇಂದ್ರಂ (ಶ್ರೀರಾಮಾ. ೨೪೭-೪೮೮). [ಸಮ್ಮಾರ್ಜನ + ಕೈ$_1$ (< ಕೆಯ್$_1$)]

**ಸಮ್ಮಾರ್ಜನಿ** (ನಾ). ಪೊರಕೆ ; ಕಸಬರಿಗೆ : "ಸಮ್ಮಾರ್ಜನಿ ಪರಿಶೋಧಿನಿಯೆನಲ್ ಕಸಕಿಲೆನಿಸಿಕ್ಕು" (ಮಂಗರಾ. ೬೦-೧೫); ಲೋಕಪಾಲಕರ ನೊಸಲಕ್ಕರಮಂ ತೊಡೆವ ಸಮ್ಮಾರ್ಜನಿಯಿದೆಂಬಂತೆ ದೆಸೆದೆಸೆಗೆ ಬೀಸುವುದ್ದಂಡಬಾಳದಂಡಮುಂ (ಜಗವಿ. ೪-೪೦ ವ): ಇರುಳವೆಣ್ ಕೈಲಾಂತು ನಿಡುನೀಳ್ದ ಕೆಂಗೆಂಡದುರಿಯ ಸಮ್ಮಾರ್ಜನಿಯೊ (ಶ್ರೀರಾಮಾ. ೫೭-೬೯). [ಸಂ. ಸಮ್ಮಾರ್ಜನೀ]

**ಸಮ್ಮಾರ್ಜನೆ** (ನಾ). ೧. = ಸಮ್ಮಾರ್ಜನ ೩ : ಹವ್ಯಕವ್ಯಗಳಲ್ಲ ಗೋವಿಂದ ಪಶುಗವ್ಯಸಮ್ಮಾರ್ಜನೆ ಗೋವಿಂದ (ಪುಲಾಲ. ೧೪೨-೨). ೨. = ಸಮ್ಮಾರ್ಜನ ೬ : ಹೋಮಶಾಲೆಯ ಹೊಸಲು ಹೊಸದಾಗಿ ಮಾಡಿರುವ ಸಮ್ಮಾರ್ಜನೆಯಿಂದ ಶೋಭಿಸುತ್ತಿರುವುದು (ಶಾಕುಂತ. ೭೩-೧೭). [ಸಂ. ಸಮ್ಮಾರ್ಜನ]

**ಸಮ್ಮಾರ್ಜನೆಗೆಯ್** (ಕ್ರಿ). = ಸಮ್ಮಾರ್ಜನಂಗೈ ೧ : ಕತ್ತುರಿಯಿಂದ ಸಮ್ಮಾರ್ಜನೆಗೆಯ್ದು . . . ರಂಗವಾಲಿಯ ಬಿತ್ತರಿಸಿದರು (ಮೋಹತ. ೨೧-೫). [ಸಮ್ಮಾರ್ಜನೆ + ಕೆಯ್$_1$]

**ಸಮ್ಮಾರ್ಜಿತ** (ಗು). ೧. ಗುಡಿಸಿದ ; ಉಡುಗಿದ : ಮರುತ್ಕುಮಾರ ಸಮ್ಮಾರ್ಜಿತ ಯೋಜನಾಂತರಿತ ರಮ್ಯಭೂಮಿಭಾಗನುಂ . . . ಆಗಿ (ಅನಂಪು. ೧೦-೭೭ ವ). ೨. ತೊಳೆದ : ಸಮ್ಮಾರ್ಜಿತೋಜ್ವಲದಶನನಿಚಯ ತಾಂಬೂಲಚರ್ವಣಭರಿತಕಪೋಲರುಂ . . . ಆಗಿ (ಜಗವಿ. ೪-೮೦ ವ). [ಸಂ.]

**ಸಮ್ಮಾರ್ಜಿಸು** (ಕ್ರಿ). = ಸಮ್ಮಾರ್ಜನಂಗೈ ೧ : ಎಸೆವ ಲಿಂಗಾಂಗಣಕೆ ಸಮ್ಮಾರ್ಜಿಸುವ . . . ರಂಗವಾಲಿಯನಿಕ್ಕಿ ನಡೆತಪ್ಪ (ಬಸವು. ೧೯-೬೯). [ಸಮ್ಮಾರ್ಜನ + - ಇಸು$_3$]

**ಸಮ್ಮಾವಣೆ** (ನಾ). (?) : ಸುಘೋಷೆಯೆಂಬ ವೀಣೆಯಂ ಕೊಂಡು ಕಳೆಯನಳವಡಿಸಿ . . . ಸಮವಿಹಮಪ್ರಹರಣಂಗಳ ಸಮ್ಮಾವಣೆಯಱಿದು ತಾಳಾನುಗತವಾಗೆ (ಮಹಾನೇ. ೫-೧೪ ವ). [?]

**ಸಮ್ಮಾವುಗೆ** 'ಚಮ್ಮವಾವುಗೆ' ನೋ.

**ಸಮ್ಮಾಳಿಗೆ** (ನಾ). ಹಿಂದಿನ ಕಾಲದಲ್ಲಿ ರೂಢಿಯಲ್ಲಿದ್ದ ಒಂದು ಬಗೆಯ ಉಗ್ರ ಶಿಕ್ಷೆ (?) : ಕಸ್ತೂರಿ ರಂಗಪ್ಪನಾಯಕನು ಈ ಕೋಟೆಯನ್ನು ಲಗ್ಗೆಮಾಡಿ ತಗೆದುಕೊಂಡು, ನೀಲಯ್ಯನನ್ನು ಹಿಡತರಿಸಿ ಅವನ ಹಲ್ಲನ್ನು ಕೀಳಿಸಿ ತಲೆಯನ್ನು ಒಡೆಯಿಸಿ ಸಮ್ಮಾಳಿಗೆಗ ಹಾಕಿಸಿ, ಆ ಪೂರಿಗೆ ಠಾಣ್ಯ ಇಟ್ಟು ದುರ್ಗಕ್ಕೆ ಬಂದನು (ಚಿತ್ರಸಾ. ೨೦). [?]

**ಸಮ್ಮಿತ** (ಗು). ೧. ಅಳತೆಮಾಡಿದ. ೨. ಒಂದೇ ಅಳತೆಯ ; ಸಮತೂಕದ. (ನಾ). ೩. ಸಮಾನವಾದುದು : 'ಕಾಂತಾಸಮ್ಮಿತ', 'ಪ್ರಭುಸಮ್ಮಿತ' ಪರಾ. ೪. [ಸಂಗೀತ] ತಾಳಭೇದಗಳಲ್ಲಿ ಒಂದು: ಧ್ರುವ . . . ಸಮ್ಮಿತ . . . ಜಯಾಳವೆಂಬವೇ ಮೊದಲಾದ ನೂಱೊಂದು ತಾಳಂಗಳ್ (ವಿವೇಕ. ೧೯೨). [ಸಂ.]

**ಸಮ್ಮಿಲನ, ಸಮ್ಮಿಳನ** (ನಾ). ಒಂದುಗೂಡುವಿಕೆ; ಒಟ್ಟಾಗುವಿಕೆ: ಕೃಷ್ಣಾರ್ಜುನರ ಸಖ್ಯವೂ ಸಾಂಖ್ಯಯೋಗಗಳ ಸಮ್ಮಿಲನವೂ ಭಕ್ತಿಯ ಬಹಿರಂಗಗಳು (ಧರ್ಮಸಾ. ೧೦೮). **ಸಮ್ಮಿಳನ**: ಎರಡು ರಾಷ್ಟ್ರಗಳ ಸಮ್ಮಿಳನದಿಂದ ಅನೇಕ ಸಮಸ್ಯೆಗಳು ಪರಿಹಾರವಾಗುತ್ತವೆ (ರೂಢಿ). [ಸಂ.]

**ಸಮ್ಮಿಲಿತ, ಸಮ್ಮಿಳಿತ** (ಗು). ೧. ಒಟ್ಟುಗೂಡಿದ ; ಕಲೆತ : ಬೌದ್ಧವಿಹಾರಗಳಲ್ಲಿ ಕಂಡುಬಂದ ಸಮ್ಮಿಲಿತವಾತಾವರಣವು ಇಂದ್ರಿಯನಿಗ್ರಹಕ್ಕೆ ಪೋಷಕವಾಗಲಿಲ್ಲ (ಕರ್ನಾಕ. ೧೨). (ನಾ). ೨. ಚೆನ್ನಾಗಿ ಕೂಡಿಸಿದುದು; ಮಿಶ್ರಣ : ಈ ಎಣ್ಣೆ ತುಪ್ಪಗಳ ಕಾಸಿ . . . ಚೂರ್ಣವಂ ಹಾಕಿ ಚೆನ್ನಾಗಿ ಕಾಸಿ ಎಲ್ಲವನ್ನೂ ಸಮ್ಮಿಲಿತವಂ ಮಾಡಿ (ವಿಷ್ಣುವಿ. ೭೮). **ಸಮ್ಮಿಳಿತ** : ೧. ಭೂರಿತರಪಂಚಭೂತಸಮ್ಮಿಳಿತಕಾಯಂಗಳೊಳು ತರಣಿಯಂದದಿ ತನ್ನ ತಾನೆಯಾಕ್ಷಿಪನೊಡನೆ (ತತ್ತ್ವಪ. ೭೪-೪). ೨. ತನುವಿನೊಳಗಂ ಕೋಟಕೋಟಿಯ ಗಣನೆಯಿಂ ಸಮ್ಮಿಳಿತವಾಗಿಹವನುದಿನಂ (ಕಾವೇಮ. ೭-೨೪). [ಸಂ.]

**ಸಮ್ಮಿಶ್ರ** (ಗು). ೧. ಬೆರೆತ ; ಮಿಶ್ರವಾದ : ಅತಿಸುರಭಿಸಹಕಾರಕಸ್ತೂರಿಕರ್ಪೂರಪಾಲಿ ಸಮ್ಮಿಶ್ರ ತಾಂಬೂಲರಾಗರಕ್ತಾಧರಪ್ರವಾಲಪ್ರಭಾಪ್ರಕಟಪೂರ್ವಸಂಧ್ಯಾರಾಗನುಂ . . . ಆಗಿ (ಆದಿಪು. ೩-೯೦ ವ). (ನಾ). ೨. ಬೆರಕೆ ; ಮಿಶ್ರಣ : ಭಕ್ತಹಸ್ತಾರ್ಪಿತ ಭಸಿತಮಂ ಭಕ್ತ ತತ್ಪಾದೋದಕದಿ ಸಮ್ಮಿಶ್ರಮಂ ಮಾಡಿ (ಬಸವು. ೪೭-೬೧). ೩. [ಗಣಿತ] ಕೂಡುವುದು; ಸಂಕಲನ : ಯುತಂ, ಯುಕ್ತಂ, ಮಿಶ್ರಂ, ಸಮ್ಮಿಶ್ರಂ . . . ಬತಂ - ಇಂತಿನಿತುಂ ಕೂಡೂದಕ್ಕೆ ಹೆಸರು (ವ್ಯವಹಾ. ೧೧-೧೯). [ಸಂ.]

**ಸಮ್ಮಿಶ್ರಣ** (ನಾ). ೧. ಸರಿಯಾದ ಬೆರಕೆ,— ಮಿಶ್ರಣ : ಹಾಲು - ಜೇನುಗಳ ಸಮ್ಮಿಶ್ರಣದಿಂದ ಮಧುರವಾದ ಪೇಯ ಸಿದ್ಧವಾಗುತ್ತದೆ (ರೂಢಿ). ೨. ಮಿಲನ ; ಸಮಾಗಮ : ಹಿಂದೂ ಮತ್ತು ಕ್ರಿಶ್ಚಿಯನರ ಸಮ್ಮಿಶ್ರಣದಿಂದ ಜನಿಸಿದ ಆ ಮಗುವಿನ ಗತಿಯೇನು? (ಕಾವೇರಿ. ೧೭೭). [ಸಂ.]

**ಸಮ್ಮಿಳನ** 'ಸಮ್ಮಿಲನ' ನೋ.

**ಸಮ್ಮಿಳಿತ** 'ಸಮ್ಮಿಲಿತ' ನೋ.

**ಸಮ್ಮು** (ನಾ). ಸುಳಿವು ; ಸೂಚನೆ : ಒಂದು ಕಾಲಕ್ಕೆ ಭತ್ತ ಕೊಳೆತುಹೋಗುವಷ್ಟು ಮಳೆಯಾಗುತ್ತಿದ್ದರೂ ಈಗ ರೋಹಿಣಿ ಪ್ರವೇಶವಾಗಿ ಐದಾರು ದಿನಗಳಾಗಿದ್ದರೂ ಮಳೆಯ ಸಮ್ಮು ಇರಲಿಲ್ಲ (ರಕ್ತಧ್ವ. ೧೫೧). [?]

**ಸಮ್ಮುಖ** (ನಾ). ೧. ಎದುರುಗಡೆ ; ಮುಂಭಾಗ : ಹರಲಿಖಿತವಪ್ಪೋಲೆಯೊಂದು . . . ಭೂವರನ ಸಮ್ಮುಖದಲ್ಲಿ ಬೀಳಲು (ಬಸಪು. ೫-೩೨) ; ನಿರ್ಮಲವಾಜಿಯಂ ಸುವೇಗಂ ತಂದು ನಿಲಿಸಿದಂ ಧರ್ಮಜನ ಸಮ್ಮುಖದೊಳು (ಜೈಮಿಭಾ. ೫-೧೧). ೨. ಎದುರು; ಅಭಿಮುಖ ; ಮುಖಾಮುಖಿ : ಸಮ್ಮುಖಸಮರನೀತಿಯಿಂದಾತನಂ ಜಯಿಸೆ ಶತಮಾನಗಳೆ ವೇಳ್ಕುಮಯ್ (ಶ್ರೀರಾಮಾ. ೨೯೭-೩೦೮). ೩. ದೇವರು ಮತ್ತು ರಾಜ, ರಾಣಿ, ಗುರುಹಿರಿಯರು ಮುಂತಾದವರ ಸನ್ನಿಧಿ,— ಸನ್ನಿಧಾನ : ದ್ವಾರಪಾಲಕನು ಶೀಘ್ರವಾಗಿ ಸಮ್ಮುಖಕ್ಕೆ ಬಂದು ಸಂಜಯನು ಬಾಗಿಲಲ್ಲಿ ಬಂದಿರುವನೆಂದು ಬಿನ್ನವಿಸಿದನು (ಕೃವಾಉ. ೮೫) ; ದೇವನ ಸಮ್ಮುಖದಲ್ಲಿ ಭಕ್ತಿಯ ಆವೇಶದಲ್ಲಿ ಶಾಂತಲೆ ಆನಂದ ನೃತ್ಯವನ್ನು ಮಾಡುತ್ತಿದ್ದಾಳೆ. (ಶಾಂತಲಾ. ೧೩೧). ೪. [ನಾಟ್ಯ] ಕರಭೇದಗಳಲ್ಲಿ ಒಂದು ಪ್ರಕಾರ: ಉತ್ತಾನಂ . . . ಸಮ್ಮುಖ . . . ಸಮ್ಮುಖಾಗತಂ ಪದಿನೈದುಂ ಬಗೆಯಿಂದಂ ನೃತ್ಯದೊಳಂಮಿಗೆ ರಂಜಿಸಿ ತೋರ್ಪುವಿಂತು ಕರಭೇದಂಗಳ್ (ಲಾಸ್ಯರಂ. ೪-೪).

**ಸಮ್ಮುಖದಾಕೆ** = ರಾಜ, ರಾಣಿಯರ ಖಾಸಾ ಸೇವಕಿ : ಗುರುಗಳು ಹಸನ್ಮುಖಿಗಳಾಗಿ "ರಾಣಿಯ ಸಮ್ಮುಖದಾಕೆ ಅಲ್ಲವೇನವ್ವ?" ಎಂದರು (ಸವತಿ. ೧೩). [ಸಂ.]

**ಸಮ್ಮುಖಂಗೆಯ್** (ಕ್ರಿ). ಎದುರಿಗೆ ನಿಲ್ಲಿಸು; ಅಭಿಮುಖವಾಗಿಸು : ಬೆಸನಂ ಸಾರ್ದು ನಿಂದ ಯೋಗಿನಿಯುರಿಂ ಕರೆಕರೆದು ಸಮ್ಮುಖಂಗೆಯ್ಯು ಮಂತ್ರಶಕ್ತಿಯರಿಂ . . . ಪರಮನ ಸಭೆ ಕಣ್ಗೊಳಿಸಿರ್ದುದು (ಶಬಶಂ. ೧-೭೯ ವ). [ಸಮ್ಮುಖ + ಕೆಯ್$_1$]

**ಸಮ್ಮುಖಗೊಳಿಸು** (ಕ್ರಿ). (ದೇವರನ್ನು) ಆವಾಹನೆ ಮಾಡು; ಬರಮಾಡು : ಜಿನವರರ ಪೂಜಕರಿಂ ಕರೆದು ಕುಂಭಕದ ಪೀಠದೊಳು ಇರಿಸಿ ಸಮ್ಮುಖಗೊಳಿಸಿ ನೀರಸದುರುವಿಮಲತರುರಸದಿ . . . ಅಭಿಷೇಕಗಳ ಮುಂ ಮಾಡಿಸಿದ ಬಳಿಕ (ಸಾಳ್ವಭಾ. ೩-೨೫). [ಸಮ್ಮುಖ + ಕೊಳ್$_1$ + - ಇಸು$_3$]

**ಸಮ್ಮುಖವೆಱು** (ಕ್ರಿ). ಎದುರಿಗಿರು : ಭೂಮಿಪರು ಸುಖಿಮುಖರಾದರು ನಮಿರಾಜ ತವಗೆ ಸಮ್ಮುಖವೆತ್ತು ಮಾಳ್ಪ ಸಮ್ಮನಕೆ (ಭರಚ. ೩೮-೫೯). [ಸಮ್ಮುಖ + ಪೆಱು$_1$]

**ಸಮ್ಮುಖಾಗತ** (ನಾ). [ನಾಟ್ಯ] ಕರತಳಭೇದಗಳಲ್ಲಿ ಒಂದು : ಉತ್ತಾನಂ . . . ಸಮ್ಮುಖಾಗತಂ ಪದಿನೈದುಂ . . . ಕರಭೇದಂಗಳ್ (ಲಾಸ್ಯರಂ. ೪-೪). [ಸಂ.]

**ಸಮ್ಮುಖೀಕರಣ** (ನಾ). ಸನ್ನಿಧಿಯಲ್ಲಿರುವಂತೆ ಮಾಡುವುದು; ಸಾನ್ನಿಧ್ಯವನ್ನು ಹೊಂದುವಂತೆ ಮಾಡುವುದು : ಶ್ರದ್ಧಾಭಕ್ತಿ ಧ್ಯಾನಜ್ಞಾನಸಮೇತನಾಗಿ ಶಿವನಂ ಭಜಿಸುತ ಆವಾಹನ ಸ್ಥಾಪನ . . . ಸಮ್ಮುಖೀಕರಣಾದಿ ಮುಖ್ಯಕ್ರಿಯೆಗಳಿಂದೊಡಗೂಡಿ (ವಿವೇಕ. ೧೦೪). [ಸಂ.]

**ಸಮ್ಮುದ** (ನಾ). ಅತಿಯಾದ ಆನಂದ ; ಅತಿಶಯವಾದ ಸಂತೋಷ : ಒಪ್ಪಿದುದಲ್ಲಿಗಲ್ಲಿಗುರು ಸಮ್ಮುದದಿಂ ಕುಲಟಾಂಗನಾಜನಂ (ಉದ್ಭಟ. ೧೦-೧೧೨). [ಸಂ. ಸಮ್ಮುದಾ]

**ಸಮ್ಮುದವೆಱು** (ಕ್ರಿ). ಅತಿಯಾದ ಆನಂದವನ್ನು ಹೊಂದು : ಬಸವಣ್ಣ ಇತ್ತ ಶಿವಗಣಸಹಿತ ಸಮ್ಮುದವೆತ್ತು ತಾನ್ಯೆತಂದು (ಬಸಪು. ೫-೭೦). [ಸಮ್ಮುದ + ಪೆಱು$_1$]

**ಸಮ್ಮುದಿತ** (ಗು). ಅತಿಯಾಗಿ ಆನಂದಗೊಂಡ : ಸಮ್ಮುದಿತ ಸದುಭಕ್ತಿಯುಕ್ತರು ಹಮ್ಮಿನಿಂದಿರುತಿಹರು (ಬಸಪು. ೧-೫೮). [ಸಂ.]

**ಸಮ್ಮೂಢ** (ಗು). ೧. ಮೂರ್ಛಿತನದಿಂದ ಕೂಡಿದ . ೨. ಸಂಪೂರ್ಣವಾಗಿ ಮೈಮರೆಯುವಂಥ : ಸ್ಫೂರ್ತಿಸಮ್ಮೂಢ ಬೀಡವನಡಕಿ ಬಾಯಲ್ಲಿ ಚಿಟಿಕೆಯಲಿ ಮದ್ರಾಸುನಶ್ಯ ಮಿಡಿದು (ನಡಬಂ. ೭೪-೧೨). ೩. ದಿಗ್ಭ್ರಮೆಗೊಂಡ ; ತಬ್ಬಿಬ್ಬಾದ. ೪. ಗುಂಪಾದ ; ರಾಶಿಯಾದ. [ಸಂ.]

**ಸಮ್ಮೂರ್ಚ್ಛನೆ** (ನಾ). [ಜೈನ] ಶರೀರಕ್ಕೆ ತಕ್ಕ ಪುದ್ಗಲಗಳನ್ನು ತೆಗೆದುಕೊಳ್ಳುವುದು : ಶೀತೋಷ್ಣವಿವೃತಸಂವೃತಜೇತಾಚೇತಪ್ರಮಿಶ್ರಭೇದದೆ ನವ ಸಂಖ್ಯಾತಂ ತದ್ಯೋನಿ ಸಮುದ್ಭೂತಂ ಗರ್ಭೋಪಪಾದಸಮ್ಮೂರ್ಚ್ಛನೆಗಳ್ (ಸುಕುಮಾ. ೮-೮). [ಸಂ. ಸಮ್ಮೂರ್ಚ್ಛನ]

**ಸಮ್ಮೂರ್ಛನ** (ನಾ). = ಸಮ್ಮೂರ್ಚ್ಛನೆ : ಮೂಱುಲೋಕದೊಳ್ ಊರ್ಧ್ವಾಧಸ್ತಿರ್ಯಗ್ಭಾಗದಿಂ ಶರೀರಕ್ಕೆ ತಕ್ಕ ಪುದ್ಗಲಂಗಳಂ ಕೊಳ್ವುದು ಸಮ್ಮೂರ್ಛನಂ (ತತ್ತ್ವಪ್ರ. ೧೦೨). [ಸಂ.]

**ಸಮ್ಮೇಲನ, ಸಮ್ಮೇಳನ** (ನಾ). ೧. ಸಮಾಗಮ ; ಮಿಲನ : ವಸಂತಕಾಲದಲ್ಲಿ ಎರಡು ಭಿನ್ನ ಪ್ರಕಾರದ ಸ್ತ್ರೀಪುರುಷಪ್ರಕೃತಿಗಳ ಸಮ್ಮೇಲನವನ್ನು ಹೊಂದಿಸಲು ಕಾಮನು ಉದ್ಯುಕ್ತನಾಗಿದ್ದನು (ಸಾಹಿಸ. ೧೫೮). ೨. ಗೋಷ್ಠಿ; ಚರ್ಚೆ: ಅನೇಕ ಸಭೆ ಸಮ್ಮೇಲನಗಳಲ್ಲಿ ಭಾಗವಹಿಸಿ (ಹಕ್ಕಿನೋ ೪೩). **ಸಮ್ಮೇಳನ:** ೩. ಗುಂಪು ; ಸಮೂಹ: ಮುನಿಪನಿದ್ದನು . . . ಸಮ್ಮೇಳನದ ಪುಣ್ಯಮೃಗಾವಳಿಯ ಸೋಂಕಿನಲಿ (ತೊರರಾ. ೧-೫-೪೭). ೪. ರಾಜಕೀಯ, ಸಾಂಸ್ಕೃತಿಕ, ಸಾಹಿತ್ಯಿಕ ಮುಂತಾದ ಉದ್ದೇಶಗಳಿಗಾಗಿ, ದೊಡ್ಡ ಪ್ರಮಾಣದಲ್ಲಿ ಸೇರುವ ಸಭೆ ; ಸಮಾವೇಶ : ಮೊಟ್ಟಮೊದಲನೆಯ ರಾಷ್ಟ್ರೀಯ ಶಿಕ್ಷಣಸಮ್ಮೇಳನವು ವರ್ಧಾದಲ್ಲಿ ೧೯೩೭ನೆಯ ಇಸವಿಯಲ್ಲಿ ನಡೆಯಿತು (ಕ್ರಿಯಾಶಿ. ೧೫೫); ಅವರು ಮುಂದಿನ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ (ರೂಢಿ). ೫. ಬೆರಕೆ; ಮಿಶ್ರಣ: ಶ್ರೀಗಂಧ, ಅಗರು, ಪನ್ನೀರು . . . ಇವುಗಳ ಪರಸ್ಪರ ಸಮ್ಮೇಳನದಿಂದ ತಯಾರಾಗುವ 'ಕದಂಬ'ಗಳನ್ನು ಹಲವು ತೆರವಾಗಿ ಉಪಯೋಗಿಸುತ್ತಿದ್ದರು (ಸಾಹಿಜೀ. ೫೨). [ಸಂ.]

**ಸಮ್ಮೇಲನಂಬೆಱು** (ಕ್ರಿ). ಸೇರು; ಕೂಡು : ಒಸರ್ವ ಪೊಸರಸಾಸಾರಮಂ ದೂರದಿಂ ಭೋಂಕೆನೆ ಕಂಡ್ಕತಂದು ಕಂಠಂ ನಿಮಿರ್ದಮರ್ದಿರೆ ಪಕ್ಷದ್ವಯಂ ಜೋಲೆ ಕಣ್ಮೀಲನದೊಳ್ ಸಮ್ಮೇಲ[ಪಾಠಾಂ. ಳ]ನಂಬೆತ್ತಿರೆ ತಣಿವಿನೆಗಂ ಪೀರ್ದು (ಚಂದ್ರಪು. ೭-೮೮). [ಸಮ್ಮೇಲನ + ಪೆಱು$_1$]

**ಸಮ್ಮೇಳ** (ನಾ). ಸಹವಾಸ; ಸಖ್ಯ : ದಿವೌಕಸರ ಸಮ್ಮೇಳವೇ ಪುರುಷಾರ್ಥ ತನಗೆ (ಕುಮ್ಯಾದ್ರೋ. ೭-೧೮); ಸಾಗರಸುತೆ ಸಮ್ಮೇಳದಿಂದಲಿ ಅತಿಭೋಗವ ಪಡುತ ಓಲಾಡುತಿರು (ಪುರಂದ. ೩-೧೩೧-೨). [ಸಂ. ಸಮ್ಮೇಲ]

**ಸಮ್ಮೇಳನ** 'ಸಮ್ಮೇಲನ' ನೋ.

**ಸಮ್ಮೇಳವ** (ನಾ). ಸಂದಣಿ ; ಸಮೂಹ : ಕವಿದುದು ಕೂಡೆ ಯಕ್ಷೇಶ್ವರನ ಪರಿವಾರ ಶೂಲ ಮುದ್ಗರ ಖಡುಗ ಚಾಪ ಶರಾಳಿ ಸಮ್ಮೇಳವದಲೆತ್ತಿದ ತೋಳುಗಳ ಬಲುತೋಟಿಗಾಱಿರು ತೊಡಗಿದರು ರಣವ (ನಿಭಾಗ. ೪-೯-೧೨). [< ಸಮ್ಮೇಲನ]

**ಸಮ್ಮೇಳವಿಸು** (ಕ್ರಿ). ಕೂಡು ; ಸೇರು : ನಾಲುವರು ನಂದನರಿಗವನೀಪಾಲತೇಜೋರಾಶಿ ಮಿಗೆ ಸಮ್ಮೇಳವಿಸಿದುದು ಮೆಱೆದುದವರಭ್ಯುದಯ ದಿನದಿನಕೆ (ತೊರರಾ. ೧-೮-೮೨). 'ಮೇಳವಿಸು' ಪರಾ. [ಸಮ್ಮೇಳವ + - ಇಸು$_3$]

**ಸಮ್ಮೇಳಿಸು** (ಕ್ರಿ). ನೆರೆ; ಕೂಡು : ಚುಂಬಿಸುವೆನಿಂತು ಸಮ್ಮೇಳಿ [ಪಾಠಾಂ. ಲಿ] ಸುವೆನಿಂತು ಪೊಯ್ದಪೆನಿಂತು ಬಯ್ದಪೆಂ ಮುನಿಸಿದೊಡೆ ತಿಳಿಪಿ . . . ನೆರೆದಪೆನವನೊಳ್ (ಚಿಬಪು. ೧೯-೪೧). 'ಸಮ್ಮೇಳವಿಸು' ಪರಾ. [ಸಮ್ಮೇಳ + - ಇಸು$_3$]

**ಸಮ್ಮೊಗ** (ನಾ). ೧. = ಸಮ್ಮುಖ ೨ : ಹರಿಗೆ ಸಮ್ಮೊಗವಾಗಿ ಅಟ್ಟಹಾಸದಿ ನಿಂದಿರದೆ ನಿಂದಲ್ಲಿ ನಾಟ್ಯವಾಡಿದ ಚರಣ (ವಿದಾಕ್ಯ. ೧೨೭-೩). ೨. = ಸಮ್ಮುಖ ೩ : 'ಏಪೊಟ್ಟು ಮಿವಂ ರಾಯರ ಸಮ್ಮೊಗಮಿರ್ದವಿನೇಯರನನುಗೆಡಿಪ ಗಬ್ಬಿ ಸಬ್ಬವಕಾಱಂ (ಚಿಕವಿ. ೬-೧೨೬). [< ಸಂ. ಸಮ್ಮುಖ]

**ಸಮ್ಮೋದ** (ನಾ). = ಸಮ್ಮುದ : ನಿನಗೆ ಸಮ್ಮೋದದಿಂ ಹೇಳಿದವು (ಬಸಪು. ೩-೨೦); "ಶ್ರೀ"ಯವರು ಸಮ್ಮೋದದಿಂದ ಕಂಡ ಸವಿಗನಸುಗಳು . . . ನೆನಸಾಗಬಲ್ಲ ಅಭಿಮತಗಳು (ಕಬಸಾ. vii, ಪೀಠಿಕೆ). [ಸಂ.]

**ಸಮ್ಮೋದಗೊಳ್** (ಕ್ರಿ). ಆನಂದಪಡು; ಸಂತೋಷಿಸು : ಕಂದಗಳಿಗೂ ವೃತ್ತಗಳಿಗೂ ಪ್ರಸ್ತಾರಹಾಕಿ ಪಾದಪಾದಗಳನ್ನು ಬಿಡಿಸಿ ಓದಿ ಸಮ್ಮೋದಗೊಂಡಿದ್ದೇನೆ (ಸವತಿ. IV, ಪ್ರಸ್ತಾವನೆ). [ಸಮ್ಮೋದ + ಕೊಳ್$_1$]

**ಸಮ್ಮೋಹ** (ನಾ). ೧. ಅತಿಶಯವಾದ ಮೋಹ,– ಆಕರ್ಷಣೆ : ನಲಿದಾಡಿ ನರ್ತಿಪ ನವಿಲ್ ಬಂಡುಂಬ ಪೆಣ್ದುಂಬಿ ಸುಸ್ವರದಿಂದೋದುವ ಕೀರಮಾರ ಬಗೆಗಂ ಸಮ್ಮೋಹಮಂ ಮಾಡವೇ (ಸುಕುಮಾ. ೧-೭೩) ; ಕರಂ ಕಾಂತೌಘಸಮ್ಮೋಹಮನೊದವಿ ಓಮಸಮಯ ಮಹಾಸಿದ್ಧನೊಪ್ಪಿರ್ದನಾಗಳ್ (ರಾಜಶೇ. ೯-೮). ೨. [ಜೈನ] ಪಿಶಾಚಿಗಳಲ್ಲಿಯ ಒಂದುವರ್ಗ ಮತ್ತು ಆ ವರ್ಗಕ್ಕೆ ಸೇರಿದವನು : ರಾಕ್ಷಸರುಂ ಯಕ್ಷರುಂ ಸಮ್ಮೋಹರುಂ . . . ಪವನರುಂ ಎಂದು ಪಿಶಾಚರ್ ಚತುರ್ದಶವಿಧಂ (ತತ್ತ್ವಪ್ರ. ೧೯೩). [ಸಂ.]

**ಸಮ್ಮೋಹಕ** (ನಾ). ಮನಸೆಳೆಯುವಂಥದು ; ಆಕರ್ಷಕವಾದುದು : ಸೌಂದರ್ಯವನ್ನು ಕುರಿತ ವಿಚಾರ ಅತ್ಯಂತ ಸಮ್ಮೋಹಕವಾದುದು (ಸೌಂದಸ. i. ಮೊದಲ ಮಾತು). [ಸಂ.]

**ಸಮ್ಮೋಹನ** (ನಾ). ೧. ಮರುಳು; ಮೈಮರೆವು : ಎಮಗಂ ಸಮ್ಮೋಹನ ಮಾದುದಕ್ಕುಮಂದಣ್ಣನ ಸೂನೃತವಚನಮೆಂಬ ಮಂತ್ರಾಕ್ಷರದಿಂ (ಗದಾಯು. ೧-೬೨). ೨. ಆಕರ್ಷಣೆ ; ಮೋಹ ; ಸೆಳೆತ : ಆ ಸುಧನ್ವಂ . . . ಕಾಂತೆಯ ಕೂಡೆ ರಮಿಸಿದಂ ಪ್ರೀತಿಯಿಂದುಗುರೊತ್ತು ಸರಸ ಚುಂಬನ ಲಲ್ಲೆವಾತುಗಳ ರವ ನೇಮಗಲೆ ತಾಡನಪ್ರೌಢಿ ಬಂಧ ಸಮ್ಮೋಹನದೊಳು (ಜೈಮಿಭಾ. ೧೧-೨೧). ೩. ಮೋಹವನ್ನುಂಟುಮಾಡಿ ಮಂಕುಕವಿಸುವ ಅಸ್ತ್ರ ; ಸಮ್ಮೋಹನಾಸ್ತ್ರ : ತೊಟ್ಟಂ ಸಮ್ಮೋಹನ ಮನ ಭಯಂ ಪಾಂಡವಂ (ಶಮದ. ೨೪೧ ಪ್ರಯೋ). ೪. ಮನ್ಮಥನ ಪಂಚಬಾಣಗಳಲ್ಲಿ ಒಂದು : ಘನಸಮ್ಮೋಹನ ಸಂತಾಪನ ಸಂದೀಪನವಶೀವ ಸಂಶೋಷಣಸಂಜನಿತ ದ್ರಾವಣಮೆನೆ ಕಾಮನ ಸಮ್ಯಙ್ಮಂತ್ರ ಪಂಚಬಾಣಾಖ್ಯಂಗಳ್ (ಮನ್ಮವಿ. ೩-೭). [ಸಂ.]

**ಸಮ್ಮೋಹನವಿಡಿ** (ಕ್ರಿ). ಪರವಶಗೊಳ್ಳು ; ಸೆಳೆತಕ್ಕೊಳಗಾಗು : ಒಡನೈತಂದ ರೋಲಗಕೆ ಸಮ್ಮೋಹನವಿಡಿದ ಗಾಯಕರು ಕವಿಗಳು (ಕಂವಿ. ೮-೨೫). [ಸಮ್ಮೋಹನ + ಪಿಡಿ₁]

**ಸಮ್ಮೋಹನವಿದ್ಯೆ** (ನಾ). ತನ್ನ ಶಕ್ತಿಯಿಂದ ಬೇರೆಯವರ ಬುದ್ಧಿಯ ಮೇಲೆ ಪ್ರಭಾವ ಬೀರಿ ಮರುಳುಮಾಡುವುದು; ಕಣ್ಕಟ್ಟುಮಾಡುವುದು ಮುಂತಾದ ಕೌಶಲ : ಅವರ ಸಮ್ಮೋಹನವಿದ್ಯೆಗೆ ಒಳಗಾದ ರೋಗಿಯು ತನ್ನ ಮನಸ್ಸಿನಲ್ಲಿದ್ದ ವಿಷಯವನ್ನೆಲ್ಲಾ ಹೊರಗೆಡಹಿದನು (ರೂಢಿ). [ಸಂ. ಸಮ್ಮೋಹನವಿದ್ಯಾ]

**ಸಮ್ಮೋಹನಾಸ್ತ್ರ** (ನಾ). ೧. ಮೋಹವನ್ನುಂಟುಮಾಡಿ ಮಂಕು ಕವಿಸುವ ಬಾಣ : ಇನಸುತ ಗಾಂಡಿವಿ ಸಮ್ಮೋಹನಾಸ್ತ್ರದಿಂದೆಚ್ಚು ನಿದ್ರೆಯಂ ಮಾಡಿದನಂದಿನ ಗೋಗ್ರಹಣದೊಳ್ (ಗದಾಯು. ೫-೨೧) ; ಬಲುಸಮ್ಮೋಹನಾಸ್ತ್ರವನೊಲಿದು ಕೊಟ್ಟಳು . . . ದೇವಿ (ಕೌಶಿರಾ. ೨೮-೨೯). ೨. ಮನಸ್ಸನ್ನು ಸೆಳೆಯುವ ಅಸ್ತ್ರ : ಮೋಹಕವಾಗಿದ್ದ ಅವರ ವಿಶಾಲನಯನಗಳಿಗೆ ಕಪ್ಪನ್ನಿಟ್ಟು, ಅದನ್ನು ಸಮ್ಮೋಹನಾಸ್ತ್ರವನ್ನಾಗಿ ಮಾಡಿದರು (ಶಾಂತಲಾ. ೧೦೪). [ಸಂ.]

**ಸಮ್ಮೋಹಿನಿ** (ನಾ). ಪ್ರಜ್ಞೆಯನ್ನು ತಪ್ಪಿಸುವ ವಸ್ತು,– ದ್ರವ್ಯ : ಶಸ್ತ್ರ ಚಿಕಿತ್ಸೆಯ ಕಾಲದಲ್ಲಿ ರೋಗಿಯ ಪ್ರಜ್ಞೆಯನ್ನು ತಪ್ಪಿಸಲು ಪ್ರಯೋಗಿಸುತ್ತಿದ್ದ ಸಮ್ಮೋಹಿನಿಯೆಂಬುದು ಇಂದಿನ ಕ್ಲೋರೋಫಾರಂಗಿಂತ ಉತ್ತಮವಾಗಿದ್ದಿತು (ಭಾರದ. ೩೮೭). [ಸಂ. ಸಮ್ಮೋಹಿನೀ]

**ಸಮ್ಮೋಹಿಸು** (ಕ್ರಿ). ೧. ಅತಿಶಯವಾದ ಮೋಹವನ್ನು ಹೊಂದು ; ಮರುಳಾಗು : ಹೇಯಮಿದೆಂದಱಿಯದಾತ್ಮವಸ್ತುಗಳೊಳ್ ಸಮ್ಮೋಹಿಸುವುದು ಹೇಯೋಪಾದೇಯಂಗಳ್ ಪಾಪಧರ್ಮವಲ್ಲದೆ ಪೆಱತೇಂ (ಅಜಿಪು. ೨-೬೫). ೨. ಮೋಹಗೊಳಿಸು; ಮರುಳುಮಾಡು : ಐಹಿಕಾಮುಷ್ಮಿಕದ ಗತಿ ಸಮ್ಮೋಹಿಸುವುದು ಶರೀರದಲಿ (ಕುವ್ಯಾಉ. ೪-೪೨) ; ಅಂಬುಜದಳನೇತ್ರೆಯ ಮಧ್ಯಂ ಇನಿವಿರಿದುಂ ತಾಂ ಪಳಿ ಯುತ್ತಿರ್ಪುದತನುವಾಗಿಯೆ ಜನಮಂ ಸಮ್ಮೋಹಿಪ ಮನಸಿಜನಂ (ಜಯಕಾ. ೩-೩೨). [ಸಮ್ಮೋಹನ + - ಇಸು₁]

**ಸಮ್ಯಕ್ಕರುಣ** (ನಾ). ಯೋಗ್ಯವಾದ ದಯೆ : ಅಕ್ಕಱಿಂ ಬಂದೆನ್ನ ದೇವನ ಮಿಕ್ಕ ತನುವಂ ತೂಪಿಱಿದು ಸಮ್ಯಕ್ಕರುಣದಿಂ ಮಾಣಿಸನುತ (ಬಸವಪು. ೧೩-೨೪). [ಸಂ.]

**ಸಮ್ಯಕ್ಕು** (ನಾ). ಯೋಗ್ಯವಾದುದು : ಮಹದಾದಿಗಣಕ್ಕೆ ನಪುಂಸಕಲಿಂಗದಲ್ಲಿ ಪ್ರಥಮೈಕವಚನದ ಮೇಲೆ ದ್ವಿತ್ವದಿಂ ಉತ್ವಮಕ್ಕುಂ . . . ಅವಾಕ್ಕು, ಸಮ್ಯಕ್ಕು – ಎಂಬಂತೆ (ಶಮದ. ೮೭ ವಿಚಾರಂ). [ಸಂ. ಸಮ್ಯಕ್]

**ಸಮ್ಯಕ್ಚರಿತ್ರ** (ನಾ). [ಜೈನ] ರತ್ನತ್ರಯಗಳಲ್ಲಿ ಒಂದು ; ಒಳ್ಳೆಯ ನಡತೆ; ಸದಾಚಾರ : ಅದುವೆ ಸಮ್ಯಗ್ಜ್ಞಾನಕ್ಕವಕಾಶಮಕ್ಕುಮಂತದು ಕವಲ್ತು ಸಮ್ಯಕ್ಚರಿತ್ರಮಂ ಪ್ರಕಟಿಸುಗುಂ (ಆದಿಪು. ೫-೫೯) ; ಆ ಬೋಧದಿಂ ಸತ್ವಂಗಳ್ಗಿಡದಂತುಟೋವಿ ನಡೆಯಲ್ ಸಮ್ಯಕ್ಚರಿತ್ರಂ (ರತ್ನಾಕ. ೨). [ಸಂ.]

**ಸಮ್ಯಕ್ಚಾರಿತ್ರ** (ನಾ). = ಸಮ್ಯಕ್ಚರಿತ್ರ : ಸಮ್ಯಗ್ಜ್ಞಾನೋಪೇತಭವ್ಯಜೀವನ ಬಾಹ್ಯಾಭ್ಯಂತರಕ್ರಿಯಾನಿವೃತ್ತಿ ಸಮ್ಯಕ್ಚಾರಿತ್ರಮೆಂಬುದು (ಆದಿಪು. ೧೦-೬೩ ವ) ; ಸಂಸಾರಕಾರಣಂಗಳ ನಿವೃತ್ತಿಯೊಳುದ್ಯೋಗಮನುಳ್ಳ ಜ್ಞಾನಿಯ ಕರ್ಮಾಸ್ರವಕ್ಕೆ ಕಾರಣಮಪ್ಪ ಹಿಂಸಾದಿಗಳ ನಿವೃತ್ತಿ ಸಮ್ಯಕ್ಚಾರಿತ್ರ (ತಸೂವ್ಯ. ೨). [ಸಂ.]

**ಸಮ್ಯಕ್ಶೀಲತೆ** (ನಾ). = ಸಮ್ಯಕ್ಚರಿತ್ರ : ಸಮ್ಯಕ್ತ್ವಶುದ್ಧಿ ವಿನಯತೆ ಸಮ್ಯಕ್ಶೀಲತೆ (ಶಾಂತಿಪು. ೯-೧೧೫). [ಸಂ. ಸಮ್ಯಕ್ಶೀಲತಾ]

**ಸಮ್ಯಕ್ತ್ವ** (ನಾ). ೧. ಸಮಗ್ರತೆ ; ಸಂಪೂರ್ಣತೆ. ೨. [ಜೈನ] ಜಿನಮತದ ಬಗೆಗಿರುವ ಸಂಪೂರ್ಣವಿಶ್ವಾಸ ; ಸಮ್ಯಗ್ದರ್ಶನ : ಇಂತು ಇಪ್ಪತ್ತೈದುಂ ದೋಷಂಗಳಿಂದಗಲ್ದ ಸಮ್ಯಕ್ತ್ವಮನೊಡೆಯನಾಗಿ (ವಡ್ಡಾರಾ. ೬-೨೩) ; ನಿನಗೆ . . . ಮನದೊಳ್ ಸಮ್ಯಕ್ತ್ವದ ದೆಸೆಯಿನಿತಿಲ್ಲ ದಲಮ್ಮ ಕೈಕೊಳಲ್ಕಿದು ಕಾಲಂ (ಆದಿಪು. ೫-೫೧); ಜೀವದಯೆ ಧರ್ಮಮೆಂಬೀ ಭಾವನೆಯಂ ನೆಱೆಯೆ ನಂಬುವುದು ಸಮ್ಯಕ್ತ್ವಂ (ಯಶೋಚ. ೪-೩೦).

**ಸಮ್ಯಕ್ತ್ವರತ್ನಾಕರ** = ಸಮುದ್ರದಂತೆ ಗಾಂಭೀರ್ಯವುಳ್ಳವನು ; ಒಂದು ಬಿರುದು: ಇಂತೆನಿಸಿ ನೆಗಳ್ದ ಸಮ್ಯಕ್ತ್ವರತ್ನಾಕರಂ ಶ್ರೀಮಚ್ಚಾವುಂಡರಾಜಂ (ಚಾವುಂಪು. ೫): ಮನುಮಾರ್ಗ್ಗಂ ಸುಜನಯ್ಯಮಿತ್ರನನಘಂ ಸಮ್ಯಕ್ತ್ವರತ್ನಾಕರಂ (ಸೌಇಇ. XX, ೫೫-೩೯ ; 1082). **ಸಮ್ಯಕ್ತ್ವವಾರಾಶಿ** = ಸಮ್ಯಕ್ತ್ವರತ್ನಾಕರ : ವಿಶದಯಶೋನಿದಾನಂ ಸಮ್ಯಕ್ತ್ವವಾರಾಶಿಯುಮಪ್ಪ ಶ್ರೀಮತ್ಪಟ್ಟಣಸ್ವಾಮಿ ನೊಕ್ಕಯ್ಯಸೆಟ್ಟಿಯರ್ (ಎಕ. VIII, ನಗರ. ೫೭-೨೯ ; 1077). [ಸಂ.]

**ಸಮ್ಯಕ್ತ್ವಪ್ರಕೃತಿ** (ನಾ). [ಜೈನ] ದರ್ಶನಮೋಹನೀಯಕರ್ಮದ ಮೂರು ಭೇದಗಳಲ್ಲಿ ಒಂದು : ಮಿಥ್ಯಾತ್ವಸಮ್ಯಙ್ಮಿಥ್ಯಾತ್ವ ಸಮ್ಯಕ್ತ್ವಪ್ರಕೃತಿಯೆಂಬ ದರ್ಶನಮೋಹನೀಯತ್ರಿಕದ ನಿರ್ಮೂಲನದಿಂ ಕ್ಷಾಯಿಕಸಮ್ಯಗ್ದೃಷ್ಟಿಯಾಗಿ (ಆದಿಪು. ೧೦-೧೪ ವ). [ಸಂ.]

**ಸಮ್ಯಕ್ತ್ವಶುದ್ಧಿ** (ನಾ). [ಜೈನ] ಸಮ್ಯಗ್ದರ್ಶನದ ಸಾಧನೆಯಲ್ಲಿ ಇರಬೇಕಾದ ತ್ರಿಕರಣಶುದ್ಧಿ : ಸಮ್ಯಕ್ತ್ವಶುದ್ಧಿ ವಿನಯತೆ ಸಮ್ಯಕ್ಶೀಲತೆ ನಿರಂತರಧ್ಯಾಯ ಮನಃಸಮ್ಯಧಿಗಮ್ಯತೆ ಪತಿಗತಗಮ್ಯವಜೇಯತ್ವಮಮಲಜಿನಪತಿಮತದೊಳ್ (ಶಾಂತಿಪು. ೯-೧೧೫). [ಸಂ.]

**ಸಮ್ಯಗ್ಜ್ಞಾನ** (ನಾ). ೧. ಸರಿಯಾದ ತಿಳುವಳಿಕೆ ; ಸಮರ್ಪಕವಾದ ಜ್ಞಾನ: ನಿನ್ನ ಲೀಲೆ ಕಾರಣವಾಗಿ ಸಂದೇಹಿಗಳಿಗೆ ಸಂಕಲ್ಪಿಯಾಗಿ . . . ಸಮ್ಯಗ್ಜ್ಞಾನವಮುಕುರದಂತೆ ಸಂಬಂಧಿಸಿದೆಯಲ್ಲಾ (ಪೋಲೀವಾ. ೧೩೩-೫೧೪); ವಿಮಳಕ್ರಿಯಾವಿಶ್ರಾಂತಿಯೆನಿಪುದೇ ಸಲ್ಲಲಿತವಾದ ಸಮ್ಯಗ್ಜ್ಞಾನ (ಲಶಿಚಂ. ೫೪-೨) ; ಮನಸ್ಸಿನೊಳಗಿನ ತಮವನ್ನೂ ರಾಗವನ್ನೂ ಸಮ್ಯಗ್ಜ್ಞಾನದಿಂದ ತೊಲಗಿಸಿದ ಮೇಲೆ ಆ ಸಮಭಾವವು ವರ್ತಿಸುವುದು (ಸಾಹಿಸ. ೯೫). ೨. [ಜೈನ] ಸಮ್ಯಗ್ಜ್ಞಾನ, ಸಮ್ಯಕ್ ಚಾರಿತ್ರ ಮತ್ತು ಸಮ್ಯಕ್‌ದರ್ಶನ ಎಂಬ ರತ್ನತ್ರಯಗಳಲ್ಲಿ ಒಂದು; ''ಸಮ್ಯಗ್ದರ್ಶನದಿಂದ ಕಂಡು ಗ್ರಹಿಸಿದ್ದನ್ನು ಸ್ವಲ್ಪವೂ ಸಂಶಯ ಉಳಿಯದಂತೆ ಬುದ್ಧಿಯಿಂದ ಚೆನ್ನಾಗಿ ತಿಳಿದು ಜೀವಾದಿಪದಾರ್ಥಗಳ ಸ್ವರೂಪವನ್ನು ಯಥಾವತ್ತಾಗಿ ಅರಿತುಕೊಳ್ಳುವುದು'' (ಜೈನಕೋ. ೨೬೪): ಇವಱಿಂ ಸಮ್ಯಗ್ದರ್ಶನಮವಶ್ಯ ಮುಜ್ವಳಿಕುಮದುವೆ ಸಮ್ಯಗ್ಜ್ಞಾನಕ್ಕವಕಾಶಮಕ್ಕುಂ (ಆದಿಪು. ೫-೫೯). ☞ ಸಾಮಾನ್ಯವಾಗಿ ಈ ಶಬ್ದವನ್ನು 'ಸಮ್ಯಕ್‌ಜ್ಞಾನ', 'ಸಮ್ಯಗ್‌ಜ್ಞಾನ' ಎಂದೂ ಬರೆಯುವುದುಂಟು. [ಸಂ.]

**ಸಮ್ಯಗ್ಜ್ಞಾನಿ** (ನಾ). ಸರಿಯಾದ ತಿಳಿವಳಿಕೆಯುಳ್ಳವನು : ಅನುಪಮ ಶಿವೈಕ ಸಮ್ಯಗ್ಜ್ಞಾನಿ ಕಡುಮಾನಿ (ಬಸರ. ೫-೧೦). [ಸಂ. ಸಮ್ಯಗ್ಜ್ಞಾನಿನ್]

**ಸಮ್ಯಗ್ದರ್ಶನ** (ನಾ). ೧. = ಸಮ್ಯಕ್ತ್ವ ೧: ಬುದ್ಧಿಗಿಂತಲೂ ಅತೀತವಾದ ಆತ್ಮಸಿದ್ಧಿಯ ದ್ರಷ್ಟಾರಶಕ್ತಿ ಆ ಧರ್ಮದ ಸಮ್ಯಗ್ದರ್ಶನಕ್ಕೆ ಅಗತ್ಯ (ಭಾರದ. ೧೧೦). ೨. [ಜೈನ] ರತ್ನತ್ರಯಗಳಲ್ಲಿ ಒಂದು; ಜೈನಧರ್ಮದಲ್ಲಿ ಶ್ರದ್ಧೆ ಹಾಗೂ ಅದರ ತತ್ತ್ವಗಳಲ್ಲಿ ನಂಬಿಕೆ ಇರುವುದು: ಇವಱಿಂ ಸಮ್ಯಗ್ದರ್ಶನಮವಶ್ಯ ಮುಜ್ಜ್ವಲಿಕುಂ (ಆದಿಪು. ೫-೫೯) ; ಅಸದೃಶಸಮ್ಯಗ್ದರ್ಶನಮೆಸೆಯೆ ಮನೋವಚನ ಕಾಯಶುದ್ಧಿಯಿನಾ ಆರಾಧಿಸುವೆಂ ನೆಗಟ್ದರ್ಹತ್ಸಿದ್ಧಸಾಧುಧರ್ಮಂಗಳಂ (ಅಜಿಪು. ೧-೮). [ಸಂ.]

**ಸಮ್ಯಗ್ದೃಷ್ಟಿ** (ನಾ). ೧. = ಸಮ್ಯಕ್ತ್ವ ೨ : ದರ್ಶನಮೋಹನೀಯತ್ರಿಕದ ನಿರ್ಮೂಲನದಿಂ ಕ್ಷಾಯಿಕಸಮ್ಯಗ್ದೃಷ್ಟಿಯಾಗಿ (ಆದಿಪು. ೧೦-೧೪ ವ). ೨. ಜೈನಮತದಲ್ಲಿ ಸಂಪೂರ್ಣ ವಿಶ್ವಾಸವುಳ್ಳವನು : ನೀಂ ಸೆಱೆಗೆಯ್ದ ಸಮ್ಯಗ್ದೃಷ್ಟಿಯಪ್ಪ ಸಹಸ್ರಬಾಹುವಂ ಬಿಡುವುದು (ಪಂರಾಮಾ. ೧೦-೧೮೧ ವ). [ಸಂ.]

**ಸಮ್ಯಗ್ಭಕ್ತಿ** (ನಾ). ಅತಿಶಯವಾದ ಭಕ್ತಿ; ಶ್ರೇಷ್ಠವಾದಭಕ್ತಿ : ಪೂಗೊಂಚಲಂ ತಂದು ಸೂಡಿದನಾ ಲಿಂಗದ ಮಸ್ತಕಾಗ್ರದೊಳೆ ಸಮ್ಯಗ್ಭಕ್ತಿಯಿಂದೆ (ಶಬಶಂ. ೪-೧೦೯). [ಸಂ.]

**ಸಮ್ಯಗ್ಭವನ** (ನಾ). ಉತ್ತಮವಾದ ಮನೆ; ಶ್ರೇಷ್ಠವಾದ ಗೃಹ : ಸಮ್ಯಗ್ಭವನರುಚಿರಮುತ್ತರ ದಿಗ್ಭಾಗದೊಳುಂಟು ಮಧುರೆಯೆಂಬುದು ನಗರಂ (ಪಂಚತಂ. ೨೪೩-೧). [ಸಂ.]

**ಸಮ್ಯಙ್ಮಂತ್ರ** (ನಾ). ಶ್ರೇಷ್ಠವಾದ ಮಂತ್ರ : ನಿಯತಂ ಸಮ್ಯಙ್ಮಂತ್ರಪ್ರಯೋಗ ಪಟುವೆನಿಪ ಭೂತಳಾಧೀಶ್ವರನ ಪ್ರಿಯರಂ ಮರ್ದಿಸಿ (ಪಂಚತಂ. ೩೧೩-೧೫). [ಸಂ.]

**ಸಮ್ಯಙ್ಮಿಥ್ಯಾತ್ವ** (ನಾ). [ಜೈನ] ದರ್ಶನಮೋಹನೀಯಗಳಲ್ಲಿ ಒಂದು; ರತ್ನತ್ರಯಸಾಧನೆಗೆ ಉಂಟಾಗುವ ಅಡ್ಡಿ : ಅನುಕ್ರಮದಿಂ ಮಿಥ್ಯಾತ್ವ ಸಮ್ಯಙ್ಮಿಥ್ಯಾತ್ವ ಸಮ್ಯಕ್ತ್ವಪ್ರಕೃತಿಯೆಂಬ ದರ್ಶನಮೋಹನೀಯತ್ರಿಕದ ನಿರ್ಮೂಲನದಿಂ ಕ್ಷಾಯಿಕ ಸಮ್ಯಗ್ದೃಷ್ಟಿಯಾಗಿ (ಆದಿಪು. ೧೦-೧೪ ವ) ; ಮಿಥ್ಯಾತ್ವ ಸಮ್ಯಕ್ಪ್ರಕೃತಿ ಸಮ್ಯಙ್ಮಿಥ್ಯಾತ್ವಮೆಂದು ತ್ರಿವಿಧಮಪ್ಪ ದರ್ಶನಮೋಹನೀಯಮಂ ನಿರ್ಮೂಲಿಸಿ (ಶಾಂತಿಪು. ೧೧-೧೧೧ ವ). [ಸಂ.]

**ಸಮ್ಯಧಿಗಮ್ಯತೆ** (ನಾ). ಪರಿಪೂರ್ಣಜ್ಞಾನವನ್ನು ಹೊಂದಿರುವಿಕೆ : ಸಮ್ಯಕ್ತ್ವ ಶುದ್ಧಿ ವಿನಯತೆ ಸಮ್ಯಕ್ಶೀಲತೆ ನಿರಂತರಧ್ಯಾಯಮನಃಸಮ್ಯಧಿಗಮ್ಯತೆ ಪತಿಗತಗಮ್ಯ ಮಚೇಯತ್ವಮಮಲಜಿನಪತಿಮತದೊಳ್ (ಶಾಂತಿಪು. ೯-೧೧೫). [ಸಂ. ಸಮ್ಯಧಿಗಮ್ಯತಾ]

**ಸಮ್ರಾಜ** (ನಾ). ೧. ಚಕ್ರವರ್ತಿ ; ಸಮ್ರಾಟ : ಒಂದಾನೊಂದು ದಿನ ಸಮ್ರಾಜನಾದ ಅಕಬರನು ಮಂತ್ರಿಗಳೊಡನೆ ಮಾತನಾಡುತ್ತಿದ್ದ (ಕೋಹಿನೂ. ೫) ; ನೀವು . . . ಸಮ್ರಾಜನಿಂದ ಸೇವಕನ ವರೆಗೆ ಪೂಜ್ಯಳು (ಸವತಿ. ೩೩). ೨. ವಿಶೇಷವಾಗಿ ರಂಜಿಸುವವನು; ತೇಜಸ್ವಿ : ಪೂಜ್ಯಪಾದನ ಪೂಜ್ಯಪಾದುಕಾಕೋಟೀರತೇಜದಿಂ ಸಮ್ರಾಜನಾಗಿ (ಶ್ರೀರಾಮಾ. ೧೭೪-೫೨). [ಸಂ. ಸಮ್ರಾಜ್]

**ಸಮ್ರಾಟ** (ನಾ). ಅಧಿರಾಜ; ಚಕ್ರವರ್ತಿ : ನಾನೀಗ ರಾಜ! ಸಮ್ರಾಟ! (ರಾಜಯೋ. ೧೩೪) : ಸಣ್ಣಕತೆಗಳ ಸಮ್ರಾಟನೆನಿಸಿದ 'ಮೊಪಾಸಾ' ಶ್ರೇಷ್ಠತರಗತಿಯ ಕತೆಗಳನ್ನು ಬರೆದಿದ್ದಾನೆ (ಧರ್ಮಸಾ. ೮೦). [< ಸಂ. ಸಮ್ರಾಜ್]

**ಸಯ್**$_1$ 'ಸಾ' ನೋ.

**ಸಯ್**$_2$, ಚೆಯ್$_2$, ಸಯಿ, ಸೈ$_1$ (ಗು). ೧. ನೇರವಾದ; ನೆಟ್ಟಗಿರುವ: 'ಸಯ್ಗೋಡು' ಪರಾ. ೨. ಸರಿಯಾದ ; ತಕ್ಕ; ಒಳ್ಳೆಯ : 'ಸಯ್ವಳಿ$_1$' ಪರಾ. (ನಾ). ೩. ನೇರವಾದುದು ; ನೆಟ್ಟಗಿರುವುದು : (೬). ೪. ಸರಿಯಾದುದು ; ತಕ್ಕುದು. ೫. ಪ್ರಾಮಾಣಿಕತೆ ; ಋಜುಸ್ವಭಾವ : (೬). ೬. ಔಚಿತ್ಯ ; ಉಚಿತತೆ: (೬). ೭. ಚೆಲುವು ; ಸೊಬಗು : (೬). **ಚೆಯ್**$_2$ : (೬). **ಸಯಿ** : ೧. 'ಸಯಿಗೋಲ್' ಪರಾ. **ಸೈ**$_1$ : ೧. 'ಸೈಗೋಡು' ಪರಾ. ೨. 'ಸೈದಾರಿ' ಪರಾ. ೪. ನಾನು ಸೈ ಅಂತ ಒಂದು ಕೈ ನೋಡುತಾ ಇದ್ದೆ (ಮುನಿಮಾ. ೧೦೮) ; ಮನೆಯ ದೇವರನು ಬಿಟ್ಟು, ಒಯ್ಯಾರದಿಂದನ್ಯದೇವರಂ ಪೂಜಿಪುದು ಸೈಯೆ (ಮಲ್ಲಚ. ೭-೧೭).

**ಸಯ್ವಂ**$_1$, **ಸಯ್ವವಂ** = ಋಜುವಾದ ನಡತೆಯುಳ್ಳವನು; ಪ್ರಾಮಾಣಿಕ : ಏಂ ಸಯ್ವನೊ ಸತ್ಯದೊಳ್ ಶರದೊಳಾ ಪಾಪೇಭಕಂಠೀರವಂ (ಶಾಂತಿಪು. ೪-೨೧) ; ನಿನ್ನೊಳೇಂ ಸಯ್ವವನಲ್ಲನೆ ಧರ್ಮತನೂಜಂ (ಪಂಪಭಾ. ೧೩-೮೭). **ಸಯ್ವರ್, ಸಯ್ಯದವರ್, ಸೈದರ್** (ಬಹುವ) = ೧. ಋಜುಸ್ವಭಾವದವರು; ಪ್ರಾಮಾಣಿಕರು : ಪುಸಿಯೆನೆ ಸಾಮಮಂ ನುಡಿದು ಭೇದಮನುಂಟೊಡತಾಗೆ ಮಾಡಿ . . . ಬಂಚಿಸಿ ಪೊಱಗಣ್ಗೆ ಸಯ್ವರನೆ ತಾವೊಳಗಂ ತವೆ ತೋಡಿ ತಿಂದು ರಕ್ಕಸಿಯರ ಕಂಡ ಕುಂಬಳದ ಮಾಟ್ಕೆವೊಲಾಗಿರೆ ಮಾಡದಿರ್ಪರೇ (ಪಂಪಭಾ. ೯-೪೮) ; "ಸೈದರೆಂದುಂ ಗಮ್ಮನೆ ನೇರಿದರೆನಲ್ಕೆ ಪಿರಿಯರ್" (ಕವಿಕಂ. ೧೫೪) ; ಆ ಪಾಂಡುನಂದನರುಂ ಸೈದರೆ ನಿನ್ನೊಳ್ (ಪಂಪಭಾ. ೧೩-೯). ೨. ಬ್ರಾಹ್ಮಣರು : "ಇಳೆಯ ಪಿರಿಯರ್ ನೇರಿದರ್ ದಿಮ್ಮಿದರ್ ಗನಹರುಜೆ ಸೈದರೆನಿಸಿಕೊಳ್ಗುಂ" (ಕಬ್ಬಿಕೈ. ೩೩). ೩. ಸುಮ್ಮನಿರುವವರು; ತಟಸ್ಥರು: ಅಯ್ಯೋ ಶಿವನೇ ಭವನೇ ಮೆಯ್ಯಱಿಯದೆ ಜನನಮರಣಝುರಿಯೊಳು ಬಿದ್ದಂ ಸಯ್ಯದವರಂತಿರದೆ ತೆಗೆಯಯ್ಯಾ (ಶಂಕಕಂ. ೧೦-೩೮). **ಸೈ ಮಾಡು** = ಸರಿಮಾಡು; ತಿದ್ದು : ನೋಡಿಯುಚಿತಾಯುಚಿತಗಳ ಸೈಮಾಡುವನೆ ಶಾಸ್ತ್ರಜ್ಞ (ಬಿಜ್ಜಪು. ೭೨-೪೧). **ಸೈಯಿಕ್ಕು** = ಒಪ್ಪು; ಸರಿಯೆನ್ನು : ಕಾವ್ಯಸೃಷ್ಟಿಯ ಅದ್ಭುತಚಮತ್ಕಾರವು ಸತ್ಯವೆಂದು ಸೈಯಿಕ್ಕದಿರಲಾರದು (ಚಿತ್ರಸ. ೩೩ ಮುನ್ನುಡಿ). **ಸೈಯೆನ್ನು** = ಸಮರ್ಪಕ ವೆಂದು ಹೇಳು; ಸರಿಎನ್ನು : ಹೇಳಿದನೀ ಮಾತನೊಬ್ಬ ಕಂಡಕ್ಟರೆ ಸೈಯೆಂದರಾಗ ಬಸ್ಸಿನವರು (ಇಂಚಾಪ. ೮೯-೩೨).

[ದೇ. ॥ ತಮಿ. ಚೆಮ್ಮೈ, ಚೆವ್ವು, ಚೆವ್ವೈ; ಮಲ. ಚೆಮ್ಮು, ಚೆವ್ವ, ಚೆವ್ವು ; ತುಳು; ಸೈ, ಸಹಿ./ ಅರ.ಪಾರ. ಸಹೀಹ್; ಹಿಂ. ಸಹೀ ; ಮರಾ. ಸಈ]

**ಸಯ್**$_3$, **ಸೈ**$_3$ (ಅ). ೧. ನೇರವಾಗಿ ; ನೆಟ್ಟಗೆ : 'ಸಯ್ವರಿ' ಪರಾ. ೨. ಸರಿಯಾಗಿ; ತಕ್ಕುದಾಗಿ : 'ಸಯ್ಗಱೆ' ಪರಾ. **ಸೈ**$_3$ : ೧. 'ಸೈನಡೆ', 'ಸೈನಿಮಿರು' ಪರಾ. ೨. 'ಸೈನೆಗಳ್' ಪರಾ. ೩. ಮೆಚ್ಚುಗೆಯನ್ನು ಸೂಚಿಸುವ ಒಂದು ಪದ : ಕಪೀ ಕುಣಿಯುತ್ತದೆ ಸೈ ಅನ್ನಿ, ಮೇಲೆ ಬೀಳುತ್ತದೆ ಛೆ ಅನ್ನಿ (ಹುಟ್ಟಿಹ. ೧೩೦).

**ಸೈಯೆನಿಸಿಕೊಳ್ಳು** = ಮೆಚ್ಚುಗೆಯನ್ನು ಪಡೆ ; ಹೊಗಳಿಸಿಕೊಳ್ಳು : ಪ್ರತಿಪಕ್ಷದವರು . . . ಊರವರಿಂದಲೂ ನೆರೆಹಳ್ಳಿಯವರಿಂದಲೂ ಸೈಯೆನಿಸಿಕೊಂಡರು (ಬಟ್ಟಸೂ. ೫).

**ಸಯ**$_1$, **ಸೊಯ** (ನಾ). ೧. ವಶ; ಅಧೀನ : ಸತ್ಯಸಂಬಂಧಸಯವಾದ ಭೃತ್ಯಾಚಾರವೆನಗಿಲ್ಲವಯ್ಯಾ (ಬಸವ. ೨೮೮) : ನೆಳಲ ರೂಹಿಂಗೆ ಬಯಲು ಸಯವ (ಅಪಚಂ. ೭೭-೩೩೭). ೨. ಯೋಗ್ಯ; ಅರ್ಹ : ಎನ್ನ ವಿವಾಹವ ಮಾಡಿದಿರಿ ಸಯವಪ್ಪ ಗಂಡಂಗೆ ಕೊಟ್ಟಿರಿ (ಮಹಾದೇ. ಜ. ೫೯-೧೪೮) : ತನ್ನ ಪಾದಸ್ಪರುಶನಕೆ ಸಯವಾದ ಸಚರಾಚರರನೆಲ್ಲರ ಪಾವನವ ಮಾಡುತೆ (ಪ್ರಭುಲೀ. ೧೪-೭). ೩. ಐಕ್ಯ ; ಲೀನ : ಎಲ್ಲವು ನಿಮ್ಮಲ್ಲಿ ಸಯವಾದ ಬಳಿಕ ಗಜಭುಕ್ತಕಪಿತ್ಥನಂತಿರ್ದೆನಯ್ಯಾ (ಅವಿಂದೇ. ೩೩೩-೩೩). ೪. ಸ್ಥಿರವಾದುದು ; ಶಾಶ್ವತ : ಬಿಡಿ ದೇಹದಭಿಮಾನ ಪಿಡಿಯದಿರು ಸಯವೆಂದು (ವಿಸಾಸು. ೫೧-೧). ೫. ತನಗೆ ಸೇರಿದುದು; ಸ್ವಂತ : ಈ ಸಕಲದೊಳಗೆ ಒಂದು ಸಯವಿಲ್ಲದೆ ನಾವು ಹಿರಿಯರು ನಾವು ಲಿಂಗವಂತರೆಂಬರು (ಸರ್ವವ. ೭೧-೩೯೧) ; ಬಯಲ ಮಾತಿಗೆ ಮತ್ತೊಬ್ಬನ ಪಿಂತೆ ಪೋದಳೆನೆ ಸತಿ ಸಯಮೆ [ಪಾಠಾಂ. ಶಾಶ್ವತಮೇ] (ನನ್ನಚಾ. ೫-೪೩). ೬. ನಿಜವಾದುದು ; ಸತ್ಯ : ಸಯವಲ್ಲವಂತು ಸಂಶಯರೂಪ ಮನವೆಂದು ನಯವಿದರ್ ಪೇಳ್ವರ್ (ಮನೋವಿ. ೪-೫). **ಸೊಯ** : ೩. ಭವವಳ್ದು ಬಸವನು ಸಂಗಮೇಶನೊಳೆಯ್ದಿ ಸೊ[ಪಾಠಾಂ.ಸ]ಯವಾದ (ಬಸಪು. ೭೧ ಸೂಚನೆ). 'ಸೊಯಂದಪ್ಪು' ಪರಾ. [< ಪ್ರಾ. ಸಯ./ ಸಂ. ಸ್ವಯಂ]

**ಸಯ**$_2$ (ನಾ). ಶ್ರೇಯಸ್ಸು : ಶ್ರೇಯ - ಸಯ (ಶಬ್ದಾನು. ೧೬೦ ಪ್ರಯೋ). [< ಸಂ. ಶ್ರೇಯಸ್]

**ಸಯಂಬರ** 'ಸೊಯಂಬರ' ನೋ.

**ಸಯಂಬರಸಾಲೆ** 'ಸೊಯಂಬರಸಾಲೆ' ನೋ.

**ಸಯಂಬು** (ನಾ). ಬ್ರಹ್ಮ; ವಿಧಾತ : ಸ್ವಯಂಭು - ಸಯಂಬು (ಶಮದ. ೨೮೧ ಪ್ರಯೋ). [< ಸಂ. ಸ್ವಯಂಭೂ]

**ಸಯದಾನ**, ಸಯಧಾನ, ಸಯಿದಾನ, ಸಯಿಧಾನ, ಸೈದಾನ$_2$, ಸೈಧನ, ಸೈಧಾನ (ನಾ). [ವೀಶೈ] ಗುರು, ಲಿಂಗ, ಜಂಗಮರಿಗೆ ಅರ್ಪಿಸುವ ನೈವೇದ್ಯ; ಅಕ್ಕಿ, ಬೇಳೆ, ತುಪ್ಪ, ಬೆಲ್ಲ, ಸಕ್ಕರೆ, ಕಾಯಿ, ಸೊಪ್ಪು ಮುಂತಾದ ಹದಿನೆಂಟು ಬಗೆಯ ದ್ರವ್ಯಗಳನ್ನು ದಾನಮಾಡುವಿಕೆ : ಸಕಲಭುವನಾದಿ ಭುವನಂಗಳ ಸಯದಾನ (ಅವಚಂ. ೮೩-೩೭೪). **ಸಯಧಾನ** : ಎನ್ನಭಿಮಾನದ ಕರ್ತೃ ನಿರಾಳದಲ್ಲಿ ನಿಂದ ಬಳಿಕ ಸಯಧಾನ ಸುಯಿಧಾನವಾಯಿತ್ತಯ್ಯಾ ಸಂಗಯ್ಯಾ (ವಚಸಂ. ೫೧೯-೫೭). **ಸಯಿದಾನ** : ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು ವರ್ಮವನರಿಯದ ಮಾಟ ಸಯಿದಾನದ ಕೇಡು (ಬಸವ. ೧೯೦). **ಸಯಿಧಾನ** : ಸಯಿಧಾನವನರ್ಪಿಸಿ ಪ್ರಸಾದದ ಫಲವ ಬೇಡುವರಯ್ಯಾ (ಅವಚಂ. ೨೮-೧೧೯); ಆರೋಗಣೆಯ ಸಯಿಧಾನಕ್ಕೆ ಸಮರ್ಪಿಸಿಕೊಟ್ಟಂಥ ಭೂಮಿಯ ಸಿಂಹಾಸನದ ವಿವರ (ಮೈಆರಿ. ೧೯೪೬. ೨೫-೫ ; 1495). **ಸೈದಾನ$_2$** : ಒದಗಿದ ಸೈದಾನಮ ಸಾಲ್ಲದಡೊಳ್ ಸದ್ಭಕ್ತಿ ಮುಖಮನಸಹಿತಂ ಸನ್ಮುದದಿಂ ಮಾಳ್ಪುದು ತತ್ಕಾಲದಲುದ್ಯಾಪನೆಯ ಸೋಮವಾರದ ವ್ರತಮಂ (ನನ್ನಚಾ. ೬-೨೪೮); ಏನ ಹೇಳುವೆ ವಕ್ತ್ರಪದ ಸೈದಾನಮಂ ಶರಣರ ಮನೆಯಲ್ಲಿ ಮಾನದಿಂ ಮಿಗಿಲಾಗದಂದದಿ ನಿಚ್ಚ ತರುತಿಹನು (ಶಂಕರದಾ. ೬-೧೯). **ಸೈಧನ** : ಭಾಳಾಕ್ಷ ಗಣಪರ್ವಕೀಗ ಹೇರಿಸು ಹೇರಳ ಸೈಧನಗಳನು ಬೇಗ (ಶರಲೀ. ೫೬-೧). **ಸೈಧಾನ** : ಪ್ರಭುದೇವರು ಅಸಂಖ್ಯಾತಂಗೆ ಮಾಡಿದ ಸೈಧಾನವನು ಗುಹೇಶ್ವರ ಶರಣನಾರೋಗಿಸಿ ಕೊಟ್ಟಡೆ (ಸಿಂಗಿರಾ. ೪-೩೪ ವ). [?]

**ಸಯಧಾನ** 'ಸಯದಾನ' ನೋ.

**ಸಯಸಂಭ್ರಮ** (ನಾ). ಆತ್ಮಸಂತೋಷ : ಗಗನದ ಮೇಲೊಂದಭಿನವ ಗಿಳಿ ಹುಟ್ಟಿ ಸಯಸಂಭ್ರಮದಲ್ಲಿ ಮನೆಯ ಮಾಡಿತ್ತು (ಅವಚಂ. ೫-೧೫). [ಸಯ್$_1$ + ಸಂಭ್ರಮ]

**ಸಯಿ** 'ಸಯ್$_2$' ನೋ.

**ಸಯಿಗೊಟ್ಟ** 'ಸೈಗೊಟ್ಟ' ನೋ.

**ಸಯಿಗೋಲ್**, ಸೈಗೋಲ್ (ನಾ). ಗುರಿತಪ್ಪದ ಬಾಣ ; ನೇರವಾದ ಬಾಣ. **ಸೈಗೋಲ್** : ಎಸುವರಾದಿತ್ಯರುಂ ಸೈಗೋಲ . . . ವಿದ್ದ ಸಹಿತ (ಎಕ. VIII, ಸೊರಬ. ೫೮೯-೬೨ ; 1201).

**ಸಯಿಗೋಲಪಾರ್ಥ** = ಒಂದು ಬಿರುದು : ಕಣ್ಣಂಬಿನಾತಯೆಸುವರಾದಿತ್ಯ ಸಯಿಗೋಲ ಪಾರ್ತ್ಥ ಹರಿಯರಸಂಗಂ (ಎಕ. XI, ಹೊಳಲ್ಕೆ. ೫೬-೭೧; 1220).

[ಸಯಿ (< ಸಯ್$_2$) + ಕೋಲ್$_1$]

**ಸಯಿತ** (ನಾ). ಕೂಡಿಕೊಂಡುದು ; ಸಹಿತವಾದುದು : ಅಷ್ಟಭೋಗ ತೇಜಸ್ವಮ್ಯ ಸಯಿತವಾಗಿ . . . ಧಾರೆಯನೆರೆದು (ಸೌಇಇ. IX-ii, ೬೦೫-೭ ; 1543). 'ಸೈತ' ಪರಾ. [< ಸಂ. ಸಹಿತ]

**ಸಯಿದಾನ** 'ಸಯದಾನ' ನೋ.

**ಸಯಿಧಾನ** 'ಸಯದಾನ' ನೋ.

**ಸಯಿಸು**, ಸೈಸು (ಕ್ರಿ). ತಾಳು; ಸೈರಿಸು: ಕವಿ ಲೋಕದಿಂದಪೇಕ್ಷಿಪ ಕೊಳ್ಳ ಭೋಗಿಪಲ್ಲವುಮ ಲಾಭಂ ಜಸಂ ಪೂಜೆಯಾ ಪಗರಣದ ಪವಣ ಪೆರ್ಮೆಸರ್ಗಳಿಂ ಮೆರೆದಪುದಿದಂ ಸಯಿಸಿ ತನಗೆ ತಾನಾತನೊಪ್ಪಿ . . . ತಣಿದು ನಲಿವಂ (ಸಂಸಪ. ೧೧-೨೬). **ಸೈಸು**: ಖಳರ ಬಾಧೆಗಳನು ಭರದಿ ಸೈಸಲಾರೆವಯ್ಯ (ಯಗಿಕ. ೨೪); ನಿಮ್ಮಾ ಮಂಡೆ ತುಂಬಿದ ಬಳಗವನು ತಾಂ ಕಂಡು ಸೈಸದೆ ಕಿಚ್ಚನಿಕ್ಕಿದಳಿಂದು ಪಾತಕಿನಿ (ರಾಮಾಸಂ. ೨-೨-೩೫); ಬಳಲಿದೆನೆನಿತೊ ಸೈಸೆನಿನ್ನು (ವಿಸೀಗೀ. ೨೭-೨೦). [< ಸಹಿಸು]

**ಸಯುಕ್ತಿಕ** (ನಾ). ಸರಿಯಾದುದು ; ಸೂಕ್ತವಾದುದು : ಸದ್ಗುರುರಹಸ್ಯಕಾರನ ವರ್ಚಸ್ಸು ಕರಿಬಸವನ ಮೇಲೆ ಬಿದ್ದಿದೆ ಎಂದು ಹೇಳುವುದು ಸಯುಕ್ತಿಕವಾಗುವುದು (ಕಸಂಸ್ಕೃ. ೧೭೩). [ಸಂ.]

**ಸಯೋಗಿಕೇವಲಿ** (ನಾ). [ಜೈನ] ಕೇವಲಜ್ಞಾನದಿಂದ ಕೂಡಿ, ಹದಿಮೂರನೆಯ ಗುಣಸ್ಥಾನವನ್ನು ಮುಟ್ಟಿದವನು : ಸಯೋಗಿಕೇವಲಿಗಳ್ ಸಂಖ್ಯೆಯಪ್ರಮಾಣಂ ಅಯೋಗಿಕೇವಲಿಗಳ್ ಸಾಮಾನ್ಯೋಕ್ತಿಪ್ರಮಾಣಂ (ತತ್ತ್ವಪ್ರ. ೨೫) ; ಸಕಲವಿಮಲಕೇವಲ ಜ್ಞಾನದರ್ಶನಂಗಳಿಂ . . . ಭುವನತ್ರಯಸ್ವಾಮಿಯಾಗಿರ್ಪ ಪರಮಜಿನೇಶ್ವರಂ ಪದಿಮೂಱನೆಯ ಗುಣಸ್ಥಾನವರ್ತಿ ಸಯೋಗಿಕೇವಲಿ (ಶ್ರಾವಕಾ. ೭೦-೩). 'ಅಯೋಗಿಕೇವಲಿ' ಪರಾ. [ಸಂ. ಸಯೋಗಿಕೇವಲಿನ್]

**ಸಯ್ಕ**, ಸೈಕ (ನಾ). ೧. ನೇರವಾದುದು ; ಋಜುವಾದುದು : 'ಸಯ್ಕನೆ' ಪರಾ. **ಸೈಕ** : ೨. ಹದ ; ಹಾಳತ : ಹಿಟ್ಟನ್ನು ಸೈಕವಾಗಿ ಮಾಡಿ ತೊಳೆಸುವ ಅಭ್ಯಾಸವೂ . . . ಶ್ರಮವಾಗಿ ಇವಳಿಗೆ ಕಾಣಲಿಲ್ಲ (ಪೇಟಿಮಾ. ೧೭).

[ಸಯ್$_2$ + - ಕ$_3$ ./ತೆಲು. ಸಯಿಕ, ಸೈಕ = ಸೂಕ್ಷ್ಮತ್ವ]

**ಸಯ್ಕನೆ**, ಸೈಕನೆ (ಅ). ನೆಟ್ಟಗೆ ; ನೇರವಾಗಿ : ಕೋಡೆಯಾಲಿ ಬೆಳಗೆ ಸಯ್ಕನೆ ಬನ್ನು ಪೊಲಪುಣುಸೆ ಎವಕಿಲ ಅನ್ತೆ ಪೋಯಿವಿ . . . ಅನ್ತೆ ಸಯ್ಕನೆ ಪೋಗಿ (ಎಕ. XII, ಗುಬ್ಬಿ. ೬೧-೯೦ ; 812). **ಸೈಕನೆ**: ಬಾಗದೆ ತೂಗದೋರೆಪುಗದೊಯ್ಯನೆ ಸೈಕನೆ ಕುಳ್ಳಿತಕ್ಕೆ ನಿಂದಾಗಲೆ ದೇಹ ಮೂಷೆಯನುಪಾಯದೊಳಾಂತು (ಅಪಶ. ೮೩).

[ಸಯ್ಕ + - ಅನೆ$_1$]

**ಸಯ್ಗಱೆ**, ಸೈಗರೆ, ಸೈಗಱೆ (ಕ್ರಿ). ೧. ಸತತವಾಗಿ ಸುರಿ ; ಎಡೆಬಿಡದೆ ವರ್ಷಿಸು: ನಭದೊಳಸಹಾಯಶೂರನ ಮಾರ್ಗಮಂ ಕಟ್ಟಿ . . . ಸಯ್ಗ [ಪಾಠಾಂ. ಸೈಗ] ಱೆದರಂಬಿನ ಮಳೆಯನು (ಜೈಮಿಭಾ. ೪-೨೪). ೨. ಎಡೆಬಿಡದೆ ಸೂಸು, — ಹೊಮ್ಮಿಸು : ಕಯ್ಗೆಯ್ದ ಬನದುರ್ಗದೊಳಗೊಮ್ಮೆಯುಂ ಸೊಗಸ ಸಯ್ಗಱೆವ ತಂಬೆಲರ ಮೊಂದಳಿರ . . . ಬಣ್ಣಿಸುತೆ ಚದುರರೆಯ್ತರೆ ಪಂಡಿರೆಲ್ಲಂದರು (ಉದ್ಭದೇ. ೫-೨೩). **ಸೈಗರೆ** : ೨. ಇದೆ ಬೆತೆ ದಳ್ಳುರಿಯನು ತವಿಸುವ ಸರಿ ಎನ್ನುತಲೆದೆ ಸೈಗರೆಯುವುದು! (ಕವಿಕಾ. ೪೧-೬). **ಸೈಗಱೆ**: ೧. ಅರಲಂಬಿನ ಸೋನೆ ಸುತ್ತಲುಂ ಭೋರೆನುತೊರ್ಮೆ ಸೈಗಱೆಯೆ (ಕಬ್ಬಿಕಾ. ೨೭೬) ; ಸೈಗಱೆವುದ್ಮೆ ಕಾರುಣ್ಯವರುಷವನೆನ್ನ ಮೇಲೆ (ಕುಮಾಭೀ. ೩-೮೩).

[ಸಯ್$_3$ + ಕಱೆ$_1$]

**ಸಯ್ಗೆ**, ಸೈಗೆ (ನಾ). ಸೂಚನೆ ; ಸಂಕೇತ ; ಸನ್ನೆ : 'ಕಣ್ಣಯ್ಗೆ' ಪರಾ. **ಸೈಗೆ** : ದಿಟ್ಟಿಸಲು ಸೇವಾತರುಣಿಯರು ಸೈಗೆಯನು ತಿಳಿದೆಚ್ಚರಿಕೆಯಿಂದುರುವಜ್ರಪಾದುಕೆಗಳನು ಮುಂದಿಡಲು (ಆಸಂರಾ. ೬-೭-೬) ; ಮೊಗದ ಸೈಗೆಯಿಂದ ಬೆದರಿಸಿ (ಸೌಗಂಧಿ. ೧೬೭-೩).

[< ಸಂ. ಸಂಜ್ಞಾ]

**ಸಯ್ಗೆಡಪು**, ಸಯ್ಗೆಡಹು, ಸೈಗೆಡಪು, ಸೈಗೆಡಹು (ಕ್ರಿ). ಪೂರ್ತಿಯಾಗಿ ಕೆಳಕ್ಕೆ ಬೀಳಿಸು ; ಕೆಳಗುರುಳಿಸು (ಹ). **ಸಯ್ಗೆಡಹು** : (ಹ). **ಸೈಗೆಡಪು** : ಎಳವೆಣ್ಣಳಸದಿರ್ದಗ್ಕೃಗಣೆಗಳಿಸುಗೆಗಳುಕದ ಯೋಗಿನಿಕರಮಂ ಸೈಗೆಡಪಲೆಂದಂಗಜಂ ಪೂಜೆಗೈವ ಸಮ್ಮೋಹನಾಸ್ತ್ರಂಗಳೆನಲು (ಜೈಮಿಭಾ. ೬-೩೨). **ಸೈಗೆಡಹು** : ಕರ್ಣಶರ ಸೈಗೆಡಹಿದವು ಕಿಂಪುರುಷಗುಹ್ಯಕಯಕ್ಷರಾಕ್ಷಸರ (ಕುಮಾಅ. ೧೯-೨೨).

[ಸಯ್$_3$ + ಕೆಡಪು]

**ಸಯ್ಗೆಡಹು** 'ಸಯ್ಗೆಡಪು' ನೋ.

**ಸಯ್ಗೆಡೆ**, ಸೈಗೆಡೆ (ಕ್ರಿ). (ಭಕ್ತಿ, ಗೌರವಪೂರ್ವಕವಾಗಿ) ಅಡ್ಡಬೀಳು ; ನಮಸ್ಕರಿಸು : ಇನಿತು ಬೇಗಂ ತಡೆವರೇಯೆಂದು ಸಯ್ಗೆಡೆದು . . . ಕೂಗಿಡುವ ನಂಬಿಯಂ ಸಂತವಿಡುತಿರಲು (ಮಹೇರ.ದೇ. ೭೫-೧೧). **ಸೈಗೆಡೆ** : ಅಭವನಂಘ್ರಿಯಲಿ ಸೈಗೆಡೆದನು (ಹಚಾ. ೧೪-೫) ; ಅಡಿಗಡಿಗೆ ತಾನೆಱಗುವಂ ಸೈಗೆಡೆದು ಗದ್ಗದವೆರಸಿ ಯೇಳ್ವನು (ಬಸಪು. ೪೭-೪೬) ; ಉರುತರದ ಭಕ್ತಿಯಲಂದು ಸೈಗೆಡೆದಿರ್ದನಾ ಪಾರ್ಥ (ಕುಮಾಅ. ೬-೯೩). [ಸಯ್$_3$ + ಕೆಡೆ$_1$]

**ಸಯ್ಗೋಡು**, ಸೈಗೋಡು (ನಾ). ನೇರವಾದ ಕೊಂಬು ; ನೆಟ್ಟಗಿರುವ ಕೋಡು: ಕಾಟ್ಟುಱುಗಳಿಂ ಸಮೆಱಿದಡವಿಯಡಿಯೆತ್ತಿದಂತೆಯುಂ ಸಯ್ಗೋಡುಗಳಿಂ ಲೋಯಿಸರದ ಕಾಡಂ ಕಾಲೆತ್ತಿದಂತೆಯುಂ . . . ಬರ್ಪ ಗೋಕುಲಮಂ ಮನಂಗೊಂಡು (ಲೀಲಾವ. ೫-೮೫ ವ). **ಸೈಗೋಡು** : ಒಂದೀಂದ ಪಸು ತನ್ನು ನಿಪತಿಯನಿಱೆವುದುಮದಱ ಬಸಿದು ಪೊಸಯಿಸಿದನ್ನವಪ್ಪ ಸೈಗೋಡುಗಳುರ್ಚೆ (ಶಾಂತಿಪು. ೭-೫೯ ವ). [ಸಯ್$_2$ + ಕೋಡು$_5$]

**ಸಯ್ತನೆ**, ಸೈತನೆ (ಅ). ನೇರವಾಗಿ ; ನೆಟ್ಟನೆ : ಬರೆದೆಯ್ದುಱ ಲೆಕ್ಕಮನಾದರದಿಂ ಗುರುಲಘುವಿಭೇದಮಂ ಭಾವಿಸು ನೀಂ ಗುರು ಮುಂತೆ ಕೊಂಕಿ ತೋಱುವ ಬರೆ ಪಿಂತಣ ಸಯ್ತು [ಪಾಠಾಂ. ಸೈತ]ನಪ್ಪ ಬರೆ ಲಘು (ಛಂದೋಂಬು. ೧-೩೩). **ಸೈತನೆ** : ಸೈತನೆ ಚೆಂಬೊನ್ನ ರಥಂ ಜವಂ ಮಿಗುವಿನಂ ಪೋಗುತ್ತಿರಲ್ (ನಳಚಂ. ೬೮೮). [ಸಯ್ತು$_1$ + - ಅನೆ$_1$]

**ಸಯ್ತಿಡು, ಸೈತಿಡು** (ಕ್ರಿ). ೧. ಓರಣವಾಗಿ ಇರಿಸು ; ಒಪ್ಪವಾಗಿ ಇಡು : ಅಡಕಿಲ ಮಡಕೆಗಳಂ ಸಯ್ತಿಡಲಱಿವುವೆ ನಾಯ್ಗಳೊಡೆವುವು (ಧರ್ಮಾಮೃ. ೧-೪೮) ; ಪೀನಪಯೋಧರೆಯರ್ ಶೈಳತನೂಜೆಗೆ ವರರತ್ನದ ದಂಡೆದೊಂಡಿಲಂ ಸಯ್ತಿಟ್ಟರ್ (ಗಿರಿಕ. ೧೧-೪೪). ೨. ಸಮಾಧಾನಗೊಳಿಸು; ಸಂತೈಸು : ಕಾಯಕವ ಚರಿಸುತ್ತ ಮಾನಸವ ಸಯ್ತಿಡುತ . . . ಆಯುವನು ಸಾಗಿಸೆಲೊ (ಮಂಕುತ. ೭೩೭). **ಸೈತಿಡು** : ೧. ಅಂತು ಸಂಕ್ರಂದನಂ . . . ಸ್ವಕೀಯ ಪಾಣಿಪಲ್ಲವಂಗಳನೆತ್ತಿ ನೆತ್ತಿಯೊಳ್ ಸೈತಿಟ್ಟು ಕೊಂಡು (ವರ್ಧಮಾ. ೧೨-೧೧ ವ) ; ಪರಸ್ಥಲದ ಲಿಂಗಮಂ ಕರಸ್ಥಲದೊಳು ಸೈತಿಟ್ಟು (ಶೂನ್ಯಸಂ. ೨೨-೧೨). ೨. ಕಂಪಿಸುವ ಭಕ್ತನಂ ಸೈತಿಡುತೆ (ಸೇದಿರ. ದೇ. ೬೫-೧); ಅನುವಱಿತು ನಾಮೆರ್ದೆಯ ಸೈತಿಟ್ಟೊಡಕ್ಕುಂ (ಬದ್ಧಪ್ರ. ೨೦-೪೩೫). ೩. **ಅಂಕೆಯಲ್ಲಿಡು**; ನಿಗ್ರಹಿಸು: ಮನಸಂ ಸೈತಿಟ್ಟು ಬಾಟ್ಟುಸೆಯಿಂ ಬಂದಂಬಿಟ್ಟು ವಿಮೋಹಮಂ ಬಿಸುಟು (ಧರ್ಮಾಮೃ. ೪-೮೨); ನಿದ್ರೆತಿಳಿದೆದ್ದು ಸಾಲ್ದೊಂಡ ಪುಳಕಂಗಳಂ ಸಂತೈಸಿಕೊಂಡಾನಂದಾಶ್ರುಗಳಂ ಮುಂದುಗೊಳಿಸಿ ಸಂತಸಮಂ ಸೈತಿಟ್ಟು ಪರಿಕಿಸಿ ನೋಡಿ (ಬಸರ. ೪-೫೯). [ಸಯ್ತು₂ + ಇಡು₁]

**ಸಯ್ತಿರ್, ಸೈತಿರ್, ಸೈತಿರು** (ಕ್ರಿ). ೧. ಸುಮ್ಮನಿರು ; ಮೌನವಾಗಿರು : (೩). ೨. ನೆಮ್ಮದಿಯಿಂದಿರು; ಸಮಾಧಾನವಾಗಿರು : ನರರರೆಬರ್ ವೈರಾಗ್ಯಂ ದೊರೆಕೊಂಡೊಡೆ ತೊಱೆವೆವೆಂಬರನ್ನೆವರಂ ಸಯ್ತಿರಲೀಯದಂತಕಂ ಗೋಣ್ಮುರಿಗೊಂಡೆಟಿದೊಯ್ವೊಡದ್ದಬರ್ಪರುವೊಳರೆ (ಅಜಪು. ೨-೮೫) ; ಇನನೆನ್ನಾಸೆಯ ನೊಲ್ಲದೀಗಳ್ . . . ಎನ್ನ ಪಕ್ಕದೊಳಗಿರ್ದುಂ ಸಯ್ತಿರಂ (ಪುಷ್ಪಪು. ೮-೯೯). **ಸೈತಿರ್** : ೧. ಆ ದುಶ್ಶಾಸನೋರಸ್ಥಳೋಷ್ಣಸೃತಾಸೃಗ್ಜಲಪಾನಮಂ ಬಯಸಿ ಬಾಯ್ ತೇರ್ದೆಸೆ ಸೈತಿರ್ಪೆ[ಪಾಠಾಂ. ರಿಪ್ಪೆ]ನೇ (ಪಂಪಭಾ. ೭-೫೮) ; ನೀಂ ಪುರಮಂ ಬೇಗಂ ಪುಗಲ್ ಪೋದೊಡೆ ತಲೆ ಪೋಱೆಯೇ ನಿನ್ನ ಮೆಯ್ಗಕ್ಕಟಾ ಸೈತಿರು ನೀನಾರ್ಗೆ (ಚಂದ್ರಪ್ರ. ೫-೧೧೭); ಬಂದೊಡೆ ನೋಡೆ ಬಾರದೊಡೆ ದೂದವಿಯಟ್ಟುವೆ . . . ಸೈತಿರೆ ಸುರ್ಕಿ ಸುಯ್ದು (ರಾಜಶೇ. ೧೧-೧೨೫). ೨. ಪರಮಾಚಾರ್ಯರವೋಲ್ ಸೈತಿರಲಱಿಯರ್ ಕನ್ನಡಕ್ಕೆ ನಾಡವರೋಜರ್ (ಕವಿರಾ. ೧-೪೨) ; ಪುರಜನಮುಮಾಪ್ತಜನಮುಂ . . . ಅಗಲದೊಂದೆಡೆಯೊಳ್ ಸೈತಿರಲಕ್ಕುಂ (ಪಂರಾಮಾ. ೧೨-೬೨) ; ತಪದುಬ್ಬೆಗದುದ್‌ಭ್ರಮೆ ನೆತ್ತಿವತ್ತೆ ಸೈತಿರದೆ ಮರುಳ್ತನಂದಳೆದಿರ್ದಿದೆಂ (ಶಬಶಂ. ೪-೧೧೧). **ಸೈತಿರು** : ೧. ಸೈತಿರು ಕಿವಿಗಳ್ಗೆ ಕರ್ಣಪೂರಮನಿಡುವೆಂ (ಶಮದ. ೧೧೩ ಪ್ರಯೋ) ; ಕಿನ್ನರಯ್ಯನು ಭಾಳನೇತ್ರಪ್ರತಿಮನಾತನು ಬಾಲಕನೆ ಸೈತಿರ್ದವನನಂತೆಯ್ದಿ ಕೊಲುವುದಕೆ (ಬಸವಪು. ೨೮-೩೫). [ಸಯ್ತು₂ + ಇರ್₁]

**ಸಯ್ತಿರಿಸು, ಸೈತಿರಿಸು** (ಕ್ರಿ). ೧. ಸಂತೋಷಪಡಿಸು ; ಹರ್ಷಗೊಳಿಸು : ಬರಿಸಿ ಕ್ಷಿತಿಪತಿಯಂ ಸಯ್ತಿರಿಸಿ ಪ್ರಿಯಕುಶಲವಾರ್ತೆಯಂ ಬೆಸಗೊಂಡು (ಕವಿರಾ. ೨-೭). ೨. ಸಂತೈಸು ; ಸಮಾಧಾನಗೊಳಿಸು : ಅವರ ಸಯ್ತಿರಿಸೆ ದೊಡ್ಡನೇ ಮಾತಾಡೆ ಸತ್ತು ಬದುಕಿದರವರ್ ಮಗನಿರವ ನೋಡಿ (ಕಾಲೂರ. ೧೦೩-೨೦೮). **ಸೈತಿರಿಸು** : ೧. ಸಂದ ಪನ್ನಿಚ್ಛಾಸಿರೊಡೆಯರಂ ಸೈತಿರಿಸಿ ನಡುವೆ ಸಂಗಮದೇವರರ್ಚನೆಗೆ ತಾನಿರ್ದು (ಬಸರ. ೯-೧೮೮). ೩. ನೇರ್ಪಡಿಸು; ತಿದ್ದು : ಕರುಳ್ಗಳಂ ಸರಿಸು ಸ್ವೇದಮನೊರಸು ಹಾರಮಂ ಸೈತಿರಿಸು (ಚೆಬಪು. ೧೧-೩೦). ೪. ಒಪ್ಪವಾಗಿಡು ; ಓರಣವಾಗಿಡು : ಸಂಪಗೆಯ ಕುಸುಮಮಂ ತಂದು ಸೈತಿರಿಸೆಂಬ ಕಂಪುಳ್ಳ ಸೇವಂತಿಯಂ ತಂದು ತುಱುಗೆಂಬ (ಬಸರ. ೭-೩೯) ; ಬೂದಿಯನೊಂದುಪಾತ್ರೆಯೊಳು ಸೈತಿರಿಸಿ (ವೀಶೈಪು. ೩-೧೧-೨೦) ; ಕಾಟಕೋಟನನಿಪೂರ್ವಂ ಗೊಲ್ಲನೇಳ್ತಂದು ಸಾದರವೆಂದಾಡಿನ ಪಿಳ್ಳೆಯಂ ಮಿಸುಪ ಲಿಂಗಂ ತಾನಿದಿಂತೆಂದು ಸೈತಿರಿಸುತ್ತಂ . . . ಕೂರ್ತೊಪ್ಪುತಿರ್ಪನ್ನೆಗಂ (ವೃಷಪು. ೬-೧೫). ೫. ನಿಗ್ರಹಿಸು; ಅಂಕೆಗೆ ತರು : ವರಮೂರ್ತಿಯಂ ಕಂಡು ಹಿಗ್ಗಿ ಹಾರೈಸಿ ಸೈತಿರಿಸಲಱಿಯದೆ ಕುಣಿದು ಕುಕಿಲಿಱಿದು ಕುಂಬಿಕ್ಕಿ ಚರಣದಲಿ ಬಿದ್ದ ಬಾಲಕನ ತೊದಳಂತುವಂ . . . ಕಂಡು ಬೆಱಗಾದರಾ ಪುಣ್ಯದಂಪತಿಗಳು (ಸಿದ್ಧರಾ. ೨-೭೦). ೬. ವ್ಯವಸ್ಥೆಗೊಳಿಸು ; ಅಣಿಮಾಡು : ಬಲವ ಸೈತಿರಿಸಿದನು ತನ್ನಯ ಕೆಲಬಲದಲಿಹ ಮದನ ಸಾತ್ಯಕಿ ಹಲನ . . . ಜಲರುಹಾಕ್ಷನು ನಿಲಿಸಿ (ಕೋಗಯು. ೨೨-೩).

[ಸಯ್ತಿರ್ + - ಇಸು₃]

**ಸಯ್ತು₁, ಸಯ್ತೆ, ಸೈತು₁** (ನಾ). ೧. ವಕ್ರತೆಯಿಲ್ಲದುದು ; ನೇರವಾದುದು : ಒರ್ವಂ ಕುಂಟವೆರಲಾತಂ ತನ್ನ ಬೆರಲುಂ ಸಯ್ತಾದೊಡೆ ಕೃತಾಂಜಲಿಯಾದಂ (ಚಾವುಂಪು. ೭೭). ೨. ದಿಟ ; ನಿಜ ; ಸತ್ಯ : ಸಯ್ತಾಯ್ತಜ್ಜನ ಮಾತು (ಪಂಪಭಾ. ೧೧-೫೨). ೩. ಸುಲಭ ; ಸರಾಗ : ನಿಲ್ದೋಳಂ ಬರ್ಪುದು ಸಯ್ತಲ್ತೂರುಂ ದೂರಮೋಡಲಾಱಿರ್ (ಕವಿರಾ. ೧-೬೩) ; ಬಲ್ಲಾಳ್ಗೆ ಬಟ್ಟೆ ಸಯ್ತೆಂದಲ್ಲಿಲ್ಲದಸಿತ ಮತಂಗಳಂ ಪುಸಿವುದಿದಂ ಸಲ್ಲೆಮ್ಮೊಳೆಂದು ಬಾರಿಸಬಲ್ಲರೆ ಪೇಟ್ ಜೈನದ ವರ್ಗಳಲ್ಲದದೆಂತುಂ (ಸಮಪ. ೧೧-೧೫೩). ೪. ಲೇಸು ; ಒಳ್ಳಿತು : ಸೈತಾಗಿ ಒಪ್ಪುವ ಕುಮಾರಂಗೆ ಮಂಗಳಾರತಿಯೆತ್ತಿ (ಸಂಬರ. ೩-೪೦) ; ಸಯ್ತಾಗಲೆಡೆಮಾಡಿ ಬೋನಂಗಳಂ (ತಿರುರ. ದೇ. ೭-೧೩). ೫. ಸಮಾಧಾನ ; ತಾಳ್ಮೆ : 'ಸಯ್ತಿಡು' ಪರಾ. ಸಯ್ತು : ೫. 'ಸಯ್ತೆಗಿಡು' ಪರಾ. **ಸೈತು₁** : ೧. "ಸೈತನೆ ನೇರ್ಪುಂ" (ಶಬ್ದಮ. ೧೭೭). ೨. ವಿಲಸತ್ ಸ್ವಪ್ನಾದಿಗಳ್ ಸೈತಕ್ಕು (ಕಮಮಾ. ೬-೧೦). ೬. ಸರಿ ; ಸಮರ್ಪಕ : ಆ ಕ್ರಿಯೆ ಸಾರ್ದಿರೆ ಪತ್ತಿ ಮುಂದೆ ಸೈತ[ಪಾಠಾಂ. ಸಯ]ಕ್ಕು (ಕವಿರಾ. ೧-೧೧೭); ನರೇಂದ್ರನ ಚಿತ್ರವೃತ್ತಿಗದು ಸೈತಲ್ಲ (ಕುಸುಮಾ. ೮-೧೦೩).

**ಸಯ್ತುಮಾಡು, ಸೈತುಮಾಡು** = ಸರಿಪಡಿಸು; ನೇರ್ಪುಗೊಳಿಸು: ಚಿನ್ನಪೂಗಳನವಯವದೊಳೆ ಸಯ್ತುಮಾಡುವ ಕೆಯ್ತುಮುಮಂ (ಆದಿಪು. ೪-೯ ವ) ; ಸಡಿಲ್ದುಡುಗೆಯ ಸೈತುಮಾಡಿ (ಚೆಬಪು. ೯-೧೭). [< ಸಯ್₁]

**ಸಯ್ತು₂, ಸೈತು₂** (ಅ). ೧. ನೇರವಾಗಿ ; ಸೀದಾ ; ನೆಟ್ಟಗೆ : ತದ್ಗಿರೀಂದ್ರಮಧ್ಯಮ ಕೂಟದಿಂದಂ ಸಯ್ತು ತೆಂಕಮೊಗದೆ ಬಂದು (ಆದಿಪು. ೧೩-೭೯ ವ) ; ಕಪ್ಪೆಯಿಂ ಸಯ್ತು ಬಡಗ ಲಕ್ಷ್ಮೆಯಸ ಕಟ್ಟೆ (ಮೈಆರಿ. ೧೯೩೫, ೪೯-೯೮ ; 10ನೆಯ ಶತ) ; ಮನಂ ಭ್ರೂಮಧ್ಯದೊಳ್ ಸಯ್ತು ತಳ್ತಿರೆ (ಪುಷ್ಪಪು. ೧೪-೩೦). ೨. ಸರಿಯಾಗಿ; ಸಮರ್ಪಕವಾಗಿ: ಅರ್ಧಗಪ್ಪಡಮಂ ಬಿಸುಟ್ಟು ಪಯಂ ಸಯ್ತುಟ್ಟುಕೊಂಡಿರಿಂ (ವಡ್ಡಾರಾ. ೯೩-೧೭) ; ಪುರುಷಸ್ತ್ರೀವಾಚಕಮಾಗಿರೆಯುಂ ಮತ್ತಲ್ಲಿ ಸರ್ವನಾಮಂ ಸಯ್ತೊಂದಿರೆಯುಮಿರರ್ ದಿರ್ ವಿರ್ ಕಳ್ ದೊರೆಕೊಂಡನುಸರಿಸುಗುಂ (ಕಾವ್ಯಾವ. ೯೨). ೩. ಚೆನ್ನಾಗಿ; ಲೇಸಾಗಿ : ಮಾತಿನೊಳುದಾರತೆವೆತ್ತಿರೆ ಸಯ್ತು ಪೇಟ್ದುದಿಂಪೆನಿಸೆ ಕವೀಶ್ವರಂ (ಪುಷ್ಪಪು. ೧-೩೯) ; ಕೆಯ್ಮುಂಬಿದಪರಂಜಿಪೂಗಳನಡಿಗಳ್ಗೆ ಸಯ್ತು ಪುಷ್ಪಾಂಜಲಿಮಾಡಿ (ಭರಚ. ೭೭-೪೨). ೪. ಸುಮ್ಮನೆ ; ಮೌನವಾಗಿ : ಈ ಪೊಸಪೊಟ್ಟೆಱೋಳಾದ ಕಿರ್ಚು ಕೌರವರ್ಗಿದು ನಾಡೆಯುಂ ತಿಱುಕನಾಗಿಸದೇಗಳ ಸಯ್ತು ಪೋಕುಮೇ (ಪಂಪಭಾ. ೨-೮೭); ಪೊಱಮಾಱದೆ ಸಯ್ತು ಪೋಕುಮಾ ಪರಸೈನ್ಯಂ (ಶಮದ. ೨೪೩ ಪ್ರಯೋ). **ಸೈತು₂** : ೧. ಉರಗನ ಪುತ್ತುವರಂ ಸೈತಿರೆ ಸಾಲಿಟ್ಟಂತೆ ಮಾಂಸಖಂಡಮನಿಡೆ ಮುಂಗುರಿಗಳ್ . . . ಉರಗನುಮಂ ತಿಂಗುಂ (ಪಂಚತಂ. ಅ. ೧೨೮-೨೪೯) ; ಆ ವೀರಾಂಬಿಕೆಗಿಂದ್ರನ ದೇವಿಯುಮೆರ್ದೆಯೞಿಕದಿಂದಮೆಱಗಿದಳೆಂತರ್ಭಾವಿತನಿಧಿಗವನೀವಧುಗಾ ವಿಸ್ಮೃತ ದೀಪವರ್ತಿ ಸೈತೆಱಗುವವೋಲ್ (ವರ್ಧಮಾ. ೧೧-೬೦). ೨. ಉರ್ವರೇಶನಂ ಮೆಲ್ಲನೆ ಸೈತು ಕುಳ್ಳಿರಿಸಿ (ದಶಕು. ೬-೧೧೭); ನೃಪನಂ ಭೋಂಕನೆ ಕಂಡು ಕಾಂತೆ ಕುಚದೊಳ್ ಸಂವ್ಯಾನಮಂ ಸೈತು ಸಾರ್ಚೆ (ನಳಚಂ. ೨೭೩). ೩. ಸೋರ್ಮುಡಿಯಂ ಸೈತೊತ್ತುತ್ತುಂ . . . ಮೆಲ್ಲಡಿಗೆಂಪಿಂ ಧಾತ್ರಿಯಂ ಚಿತ್ರಿಸುತುಮಸತಿಯರ್ ಪೋದರ್ (ಕುಸುಮಾ. ೪-೩೪); ಎಲ್ಲಾ ಕಾರ್ಯವಂ ಸೈತೆಸಗಿದನವಂ (ದಶಕು. ೮-೨೪೦). ೪. ಜಾನಪದಾಂಗನಾಜನದ ಗಾಡಿಗೆ ಸೋಲ್ತಳೀನಿ ನಿನಾದಮಂ ಜಾನಿಸಿ ಕೇಳ್ದು . . . ಪಥಿಕರ್ ಮಱೆದಿಲ್ಲೆನಲ್ ಪರಿಮ್ಲಾನತೆ ಸೈತು ಬಟ್ಟೆನಡೆಯಲ್ಪಡೆಯರ್ ವಿಷಯಾಂತರಾಳದೊಳ್ (ಮಲ್ಲಿಪು. ೨-೨೮); ರಾಗರಸ ಮಿಗಲು ಸಭೆ ತಲೆದೂಗಲು ತಾ ನುಡಿಯಬಲ್ಲೊಡದ ನುಡಿಯನಿಸೊಂದಾಗದಿರೆ ಸೈತು ಮಾಗಿಯ ಕೋಗಿಲೆಯಂತಿಹುದು ನೋಡು (ನೀತಿಸಾ. ೧೨೫). [< ಸಯ್ತು₁]

**ಸಯ್ತುನುಡಿ** (ನಾ). ನೇರವಾದ ಮಾತು ; ಸಹಜವಾದ ಮಾತು : ಸಯ್ತುನುಡಿಯು ವಕ್ರವಾದರೆ, ಕೊಂಕಾದರೆ ಸೌಂದರ್ಯ ಹೆಚ್ಚಾಗುವುದು (ಸಾಹಿವಿ. ೭೮).

[ಸಯ್ತು + ನುಡಿ₂]

**ಸಯ್ತುವರಿಯಿಸು** (ಕ್ರಿ). ನೇರವಾಗಿ ಓಡಿಸು, — ಹರಿಯಿಸು : ರಥಮಂ ನಳನ ವರೂಥಕ್ಕೆ ಸಯ್ತು [ಪಾಠಾಂ. ಸೈತು] ವರಿಯಿಸಿ (ಪಂರಾಮಾ. ೧೩-೮೫).

[ಸಯ್ತು₂ + ಪರಿಯಿಸು]

**ಸಯ್ತಿ** 'ಸಯ್ತು₁' ನೋ.

**ಸಯ್ತಿಗಿಡು** (ಕ್ರಿ). ಸಮಾಧಾನವಿಲ್ಲದಿರು; ತಾಳ್ಮೆಗೆಡು: ಅವರ ಕುಟಿಲೋಪಾಯಗಳ ವಕ್ರನೀತಿಯ ಅವಸರವು, ಸಯ್ತಿಗಿಡದ ತಡವರಿಯದ ಸನ್ದರ್ಶ್ಯೋಪಾಸನವು . . . ಓರೊರ್ಮೆ ನನಗೇ ಅಳರನುಂಟುಮಾಡಿ ಕಲುಂಬಿತು (ಬಟ್ಟಅ. ೨೧೨-೨೧). [ಸಯ್ತಿ (< ಸಯ್ತು₁) + ಕಿಡು (< ಕೆಡು₁)]

**ಸಯ್ತಿಣಿಸು** (ಕ್ರಿ). ಚೆನ್ನಾಗಿ ಗಮನಿಸು : ಗುಣಜಾತ್ಯಾದಿಗಳೊಳಗನುಗುಣಮಾಗಿರೆ ಪೇೞದವೞ ವಿಕಳತೆಯಂ ಸಯ್ತಿಣಿಸಿ ವಿಶೇಷಮನಱಿಪುವ ಗಣನೆ ವಿಶೇಷಾನುಭಾವ ಸದಳಂಕಾರಂ (ಕವಿರಾ. ೩-೧೨೦). [ಸಯ್ತು₂ + ಎಣಿಸು]

**ಸಯ್ದಂ₁** 'ಸಯ್₂' ಪರಾ.

**ಸಯ್ದಂ₂** (ಅ). ೧. ಸರಿಯಾಗಿ : ಸಯ್ದಮೆ ಮೂವತ್ತಿರ್ಪತ್ತಯ್ದುಂ ಪದಿನಯ್ದು ಪತ್ತು ಮೂಱಿಲ್ಲಿಂತ್ತಯ್ದೂನಮೊಂದು ಲಕ್ಕೆಯಮೆಯ್ದೆ ಬೞಿಕ್ಕೆಣೆಪೊಡವೞ ನರಕ ಬಿಲಂಗಳ್ (ಪಾರ್ಶ್ವಪು. ೬-೭೩). ೨. ಚೆನ್ನಾಗಿ ; ಸುಖವಾಗಿ : ಪೆಂಡಿರ್ಕಳೊಳೆಲ್ಲಮೆನ್ನ ಮೆಚ್ಚಿದಂತೆ ಸಯ್ದುಂ ಬಾೞ್ವೆಂ (ವಡ್ಡಾರಾ. ೧೬೬-೬). [< ಸಯ್ತು₂]

**ಸಯ್ದವಂ** 'ಸಯ್₂' ಪರಾ.

**ಸಯ್ಪು, ಸೈಪು** (ನಾ). ೧. ಪುಣ್ಯ ; ಸುಕೃತ : ತೋಳಂ ಸಡಿಲಿಸದಾ ಪ್ರಾಣವಲ್ಲಭ [ರ್] ಪ್ರಾಣಮನಂದೊಡಗಳೆದರೋಪರೋಪರೊಳೊಡಸಾಯಲ್ ಪಡೆದರಿನ್ನವುಂ ಸಯ್ಪೊಳವೇ (ಪಂಪಭಾ. ೫-೯೩) ; ಇಂದು ಪಿಂಗಿದುವೆಮ್ಮ ಪೀಡೆಗಳಿಂದು ಸಾರ್ದುವು ಸಯ್ಪು (ಕಾವ್ಯಾವ. ೩೬೫). ೨. ಅದೃಷ್ಟ ; ಸೌಭಾಗ್ಯ : ಮುಂ ಸರಸ್ವತಿಯಂ ಸಾಧಿಸೆ ಸಂದ ಸಯ್ಪು ಸವಣಂಗಕ್ಕುಂ ಪೆಱಂಗಕ್ಕುಮೇ (ಶಾಂತಿಪು. ೧-೮). ೩. ಒಳ್ಳೆಯದು ; ಲೇಸು : ಸಯ್ಪಾದುದೀ ಕಾರ್ಯವೇಂ ಬಗೆಯಲ್ ಬೇಡಿದಕಾಡೊಳಾಯ್ತು ಮಱೆ (ನೇಮಿಪು. ೧೧-೬೩) ; ಸಯ್ಪು ನೀನ್ ಬಂದುದು (ಅಶ್ವತ್ಥಾ. ೫-೭೯). ೪. ಹಿತವಾದುದು; ಶ್ರೇಯಸ್ಕರವಾದುದು : ಅಭಯರುಚಿಕುಮಾರಂ ಮಾರಿದತ್ತಂಗೆ ಹಿಂಸಾರಭಸಮತಿಗೆ ಸಯ್ಪಂ [ಪಾಠಾಂ. ಸೈಪಂ] ಪೇೞ್ದು ಧರ್ಮಕ್ಕೆ ತಂದು (ಯಶೋಚ. ೧-೭೨). ೫. ಒಳ್ಳೆಯ ಕೆಲಸ ; ಸತ್ಕಾರ್ಯ : ಆಶಿಸದೆ ಸಂಕಲ್ಪಯತ್ನಗಳನಿನಿತುಮಂ ಸಾಜವಾಗಲಿ ಸಯ್ಪು (ಮಂಕುಕ. ೭೧೨). ೬. ಸಮೃದ್ಧಿಯ ನೆಲೆ,– ಆವಾಸಸ್ಥಾನ : ಜಸದ ಸಯ್ಪು ನೆಗಳ್ತೆಯ ಲೋಕದೇಳ್ಗೆಯೌನ್ನತ್ಯದ ಗೊತ್ತೆನುತ್ತೆ ಧರೆ ಬಣ್ಣಿಪುದೀ ಕಲಿದೇವಸೆಟ್ಟಿಯಂ (ಸೌಇಇ. IX-i, ೨೯೬-೩೮; 1176). **ಸೈಪು** : ೧. ಆನೆರೆಯೆ ಕೇಳ್ದನಿಳಾಧರ ನೀನದರ್ಕೆ ಮಾತೆರಡಣಮಾಡಲಾಗದಿದು ಸೈಪಿನೊಳಲ್ಲದೆ ಕೂಡಿ ಬರ್ಕುಮೇ (ಪಂಪಭಾ. ೫-೭೩); ದೊರೆಗಳೆಲ್ಲರ ತೋಱಿದೊಬ್ಬನೊತ್ತಿಲಿ ನಿಂದಳರರೆ ನೋಡವನ ಸೈಪೆಂತೊ (ಭರಚ. ೫೫-೯೮). ೨. ಸುಯೋಧನಂಗೆ ಸೈಪು ಬರ್ಪಂತೆಯುಂ . . . ಸಂಕರ್ಷಣಂ ಜಂಗಮಹಿಮಾಚಲಮೆ ಬರ್ಪಂತೆಯುಂ ಬಂದು (ಗದಾಯು. ೭-೫೬ ವ) ; ಪ್ರತ್ಯುಪಕಾರಮಂ ನಿಮಗೆ ಮಾಡುವ ಸೈಪೆನಗಿಲ್ಲ (ಪುಷ್ಪಪು. ೬-೩೩) ; ಚಂಡಭಂಡನಕೆಂದರಿರಾಜರೊಳೆತ್ತಿ ನಡೆವ ಗಂಡುಗಲಿಯಂ ಕುಳ್ಳಿರಿಸಿ ಕೊಂಡುಯ್ವ ಸೈಪುಳ್ಳಂಗೆ ನಿನಗಿಂದು ಪೆಣ್ಣಂ ಪೆಣ್ಗೊಲೆಗೆಂತಂತು ವನಕೆ ಕೊಂಡುಯ್ವುದಾಯ್ತೇ? (ರಾಮಾಶ್ವ. ೨೯-೧). ೭. ಆಧಿಕ್ಯ ; ಅತಿಶಯ : ಕವಿವ ಕುರುಳ ಕಟ್ಟು ಸಡಿಲಿದ ಚೊಲ್ಲೆಹದೆವೆಯಿಕ್ಕದೆಸಳುಕಣ್ಣುಗಳ ಸವೆಯದ ನೆನಹಿನ ಸೈಪಿಂದ ಕೆಳದಿಗೆ ಸವನಿಸುವಳು ಸಂಕಟವನು (ಹದಿಬ. ೭-೧೮). ೮. ಸುಖ ; ಸಂತೋಷ : ಮದ್ವಲ್ಲಭೆಯ ಸುಸಿಲ ಸೈಪಿಂ ಕೃತಾರ್ಥಾತ್ಮನಪ್ಪೆಂ (ಕಾದಂಉ. ೨೪೫) ; ಭೋಂಕೆನೆ ಕೈಗೂಡಿಸವಕ್ಕೆ ಸೈಪನೆಲೆ ಕಂದರ್ಪಕ್ಷಮಾವಲ್ಲಭಾ (ಕುಸುಮಾ. ೮-೪); ಬಾಲಂಗೆ ಮೋಹದಿಂದೆ . . . ತೊಟ್ಟಿಲೊಳಿಟ್ಟು ಸಾಲ್ದ ಸೈಪಿಂದೆ ಜೋಗುಳವಾಡಿ ತೂಗುವಳದೇಂ ಸುಕೃತಿಯೋ (ಜೈಮಿಭಾ. ೧೮-೨೧). ೯. ವೈಭವ ; ಸಂಪತ್ತು : ಧರ್ಮಮೆ ದೇಹಿಗಾಶ್ರಯಂ ಧರ್ಮಮೆ ಸೈಪು ಧರ್ಮಮೆ ಮಹಾಮಣಿ (ವರ್ಧಮಾ. ೬-೬) ; ಈ ಶಶಿಮುಖಿ ದಿಟದಿಂ ವ್ಯಾಘ್ರಾಸುರಹರ ನರಸಿಯೆಂಬುದರ್ಕಿದೆ ಕುಱುಪೆಂಬಾ ಸೈಪನಱಿಪುವಂತಿರೆ ಭಾಸುರಮಾಯ್ತುರರೆ ಪುಲಿಯುಗುರ್ ನಗಸುತೆಯೊಳ್ (ಗಿರಿಕ. ೩-೮೭) ; ವರಮುನಿಯ ಸಭೆಯಂತೆ ತದ್‌ಬ್ರಾಹ್ಮಸಭೆಯಂತೆ ಸುರಪತಿಯ ಸಭೆಯಂತೆ ಮೆಱೆದುದಾ ರಾಯನೊಡ್ಡೋಲಗಂ ಸೈಪಿನಿಂದೆ (ಭಾವಚಿಂ. ೭-೫). [ಸಯ್₂ + - ಪು₂. / ತಮಿ. ಚೆಪ್ಪಮ್]

**ಸಯ್ಯಡಿ** 'ಸೈಯಡಿ' ನೋ.

**ಸಯ್ಯನೆ** (ಅ). ಸರಿಯಾಗಿ ; ಸಮರ್ಪಕವಾಗಿ : ಮೈಯ ಸುಖಕೆ ಮರುಳಾಗಿ ತವಮ್ಮಾತ್ಮನ ಸಯ್ಯನಱಿಯದೆ ಭೋಗಿಪುದು ಉಯ್ಯ ಕೈವಿಡಿದು ತಂಡುಲವ ಬಿಸುಟ ಮರುಳಯ್ಯರ ಮಾರ್ಗವೇನಲ್ತೆ (ಭರಚ. ೫-೮೧). [ಸಯ್₂ + - ಅನೆ₁]

**ಸಯ್ಯಮಿ** (ನಾ). ಇಂದ್ರಿಯಗಳ ವಿಷಯದಲ್ಲಿ ಸಂಯಮವುಳ್ಳವನು ; ಮುನಿ: ಬೋಧಿ ಕೂಡಿದಾ ಸಯ್ಯಮಿಗೆಲ್ಲಿ ಕಾಂಕ್ಷೆ (ಅಪಶ. ೯೭) ; ಸಯ್ಯಮಿ ತಾನೆ ಸಾಹಸಿ ತಾನೆ ಧ್ಯಾನದಿ ಕೊಯ್ಯನೆ ಕರ್ಮದ ಬೇರ (ಭರಚ. ೬೦-೬೫). [< ಸಂ. ಸಂಯಮಿನ್]

**ಸಯ್ಯಱಿ** (ಕ್ರಿ). ಸಮರ್ಪಕವಾಗಿ ತಿಳಿ ; ಸರಿಯಾಗಿ ಗ್ರಹಿಸು : ಸಯ್ಯಱಿದುತ್ತಮರೋದಿಕೊಳಲು ತಪ್ಪ ಕೈಯೊಳುದಯರಾಗದೊಡನೆ ಮೆಯ್ಯೊಳಿದ್ದಾತ್ಮಕಲೆಯ ಹಾಡುತಿರೆ ಕೇಳುತೊಯ್ಯನೆಯ್ದಿದನಾತ್ಮರಸಿಕ (ಭರಚ. ೨೩-೬). [ಸಯ್₃ + ಅಱಿ]

**ಸಯ್ಯುಗ** (ನಾ). ಕಾಳಗ ; ಯುದ್ಧ : ವಾನರರು ತನತನಗೆ ಮರಮರಡಿಗಳ ಪಿಡಿದು ಸಯ್ಯುಗಕ್ಕನುವಾಗಿ ಬಿನ್ನಪಂಗೈದರ್ (ವಂಕಾರಾ. ೬-೫-೩). [< ಸಂ. ಸಂಯುಗ]

**ಸಯ್ವರಿ, ಸೈವರಿ** (ಕ್ರಿ). ನೇರವಾಗಿ ಸಾಗು ; ಮುಂದಕ್ಕೆ ಹೋಗು : ಸರಳಸುವೇಣ ನೋಡುವ ಮೊಲಂ . . . ಪಾಱಿ ಸಯ್ವರಿವ ಖಗಾಳಿಯೊಪ್ಪೆ ಪಿರಿದಾದುದು ಬೇಂಟೆಯ ವಾದ್ಯದಬ್ಬರಂ (ಶಬಶಂ. ೩-೪೮). **ಸೈವರಿ** : ಹರಿಣವನಿಕ್ಕಿದರು ನಾರಾಚದಲಿ ಸೈವರಿದು ಸೈರಿಭನ ಸೊಕ್ಕಿದರು ಸುರಗಿಯಲಿ (ಕುವ್ಯಾಅ. ೧೩-೨೬) ; ಅಟವೀಸಂಗದಲಿ ಸೈವರಿದು ಸೈರಣೆಗುಂದಿದನು ರಾಮ (ತೊರರಾ. ೩-೮-೬೮) ; ಮೇಘನಾದನ ವಿಭಾಡಿಸಿ ಚತುರ್ಬಲಂ ಕವಿಯೆ ಲೆಕ್ಕಿಸದವಂ ಸೈವರಿದನಾಗಸದೊಳು (ಜೈಮಿಭಾ. ೪-೧೪). [ಸಯ್₃ + ಪರಿ₂]

**ಸಯ್ವಳಿ, ಸೈವಳಿ** (ನಾ). ೧. ಒಳ್ಳೆಯ ದಾರಿ ; ಸನ್ಮಾರ್ಗ : ಬಲ್ಲಾಳಂ ಸಯ್ವಳಿಯ ನಡದು ಲೋಗರ ಬಾಯ್ವಾಯೊಳು ಬರ್ಪ್ಪ ಕೀರ್ತ್ತಿವನಿತೆಗೆ ಕೂರ್ಪ್ಪಂ (ಎಕ. XI, ಚಿತ್ರದು. ೭೯-೨೦ ; 1214 ?). **ಸೈವಳಿ** : ೨. ನೇರವಾದ ಮಾರ್ಗ, – ಹಾದಿ : ಹಿಮವದ್ಗಿರಿಯ ದಕ್ಷಿಣವಿಜಯಾರ್ಧಶಿಖರಿಶೈಲದುತ್ತರವಿಜಯಾರ್ಧದಿಗ್ಸೈಸೆಯ ಸೈವಳಿಯೊಳ್ (ತತ್ತ್ವಪ್ರ. ೧೪೮) ; ಕಳನೊಳುದಕದ ಸೈವಳಿ Eಳಿತೆ ಯ ಸೆಲೆಯಱಿದು ಚೌಕಕೆ ಸೀಳಿದನು ನೆಲನ (ಕುವ್ಯಾದ್ರೋ. ೧೦-೨೮) ; ಸಮರದ ಸೈವಳಿಯಲೇ ಸಾವುದೇ ಕರ್ತವ್ಯ (ತೊರರಾ. ೬-೨೬-೧೨). [ಸಯ್₂ + ಬಳಿ₂ (< ಬೞಿ₃)]

**ಸಯ್ವೆರಗು** 'ಸಯ್ವೆಱಗು' ನೋ.

**ಸಯ್ವೆಱಗು, ಸಯ್ವೆರಗು, ಸೈವೆರಗು, ಸೈವೆಱಗು** (ನಾ). ೧. ಅತಿಯಾದ ನಿಶ್ಚಲತೆ, – ಸ್ಥಿರತೆ : ಕಣ್ದೆಱೆಯದ ನಿದ್ರಿಸದ ಬೆರೆಯದಗಲದ ಕಣ್ಣಂ ಪೊಱಸೂಸದೊಳಗಿರದ ಸಯ್ವೆಱಗಿನ ಸಮರಸದ ಭಾವಮೇಂ ರಂಜಿಸಿತೋ (ಶಬಶಂ. ೨-೧೦೪). **ಸಯ್ವೆರಗು** : ೨. ಅಧಿಕವಾದ ಹೆದರಿಕೆ, – ಗಾಬರಿ : ಸಯ್ವೆರಗಿನಿಂ ಬೋಳನೆಳೆದು ಕಯ್‌ಸುಗಿದಂ (ಕಾಲೂರ ೧೩೦-೨೭೮). **ಸೈವೆರಗು**: ೩. ಅತಿಯಾದ ತಳಮಳ : ವಿರಹದಲಿ ಕಂಗೆಟ್ಟು ಸೈವೆರಗಾಗಿ ನಿಂದು (ಸೌಂದಕಾ. ೩-೯೬). **ಸೈವೆಱಗು** : ೩. ಶೈವ ಸೈವೆಱಗಾದ ಪಾಶುಪತಿ ಪಥವಱಿಯ (ಚನ್ನವ. ಕ. ೨೫೧-೫೪೫) ; ನೊಂದಳಕಟಾ ಸತಿಯೆನುತ ಮನನೊಂದು ಸೈವೆಱಗಾಗಿ ಖತಿಯಲಿ ಕಂದಿ . . . ಮೆಲ್ಲನೆ ಬಾಗಿ ನೋಡಿದನಂದು ರಾಜಾಲಯದ ಮುಂದಣ ಮರನನಾ ಭೀಮ (ಕುವ್ಯಾವಿ. ೩-೨೧). ೪. ಅತ್ಯಾಶ್ಚರ್ಯ : ಫಲುಗುಣನ ವಾಜಿ ಪೊಱಮಟ್ಟು ಬಂದಾಗಳದು ಪೆಣ್ಣುದುರೆಯಾಗಿರ್ದುದೇವೇಳ್ವೆನು ಸೋಜಿಗಮಿದೆಂದು ಸೈವೆಱಗಾಗುತಿರ್ದುದೆಲ್ಲಾ ಜನಂ (ಜೈಮಿಭಾ. ೧೫-೨೯). [ಸಯ್₂ + ಬೆಱಗು]

**ಸರ್₁** 'ಸಱ್' ನೋ.

**ಸರ್₂, ಸಾರ್₃** (ನಾ). ೧. ಅಧಿಕಾರಿಗಳು, ಹಿರಿಯರು ಮುಂತಾದವರನ್ನು ಸಂಬೋಧಿಸುವಾಗ ಬಳಸುವ ಒಂದು ಗೌರವಸೂಚಕ ಶಬ್ದ : ಸರ್, ಧರ್ಮಸಮ್ಮೇಳನಕ್ಕಾಗಿ ಬಂದ ಪ್ರತಿನಿಧಿಗಳೇನು ತಾವು? (ಧರ್ಮಸಾ. ೪೯). ೨. ಬ್ರಿಟಿಷರ ಕಾಲದಲ್ಲಿ ಗಣ್ಯವ್ಯಕ್ತಿಗಳಿಗೆ ನೀಡುತ್ತಿದ್ದ ಒಂದು ಬಿರುದು : ಸರ್ ಎಂ. ವಿಶ್ವೇಶ್ವರಯ್ಯನವರು ೧೮೬೧ನೆಯ ಇಸವಿ ಸೆಪ್ಟೆಂಬರ್ ಹದಿನೈದನೆಯ ದಿನಾಂಕ . . . ಜನಿಸಿದರು (ಕಪಪು. ೬-೧೨೦). ೩. ಉಪಾಧ್ಯಾಯ ; ಮಾಸ್ತರು : ಒಳಗೆ ಬರಲೆ ಸರ್? (ರೂಢಿ). **ಸಾರ್₃** : ೧. ಏನು ಕೊಡಲಿ ಸಾರ್, ಜಾಮೂನ್, ಜಿಲೇಬಿ (ಮಹಾಲ. ೪೬). 'ಸ್ವಾಮಿ' ನೋ. [← ಇಂ. Sir]

**ಸರ್‌ಖಾಜಿ** (ನಾ). ಮುಖ್ಯನ್ಯಾಯಾಧೀಶ : ಆಯಾ ಮ[illegible]ಗಳಲ್ಲಿ ಸರ್‌ಖಾಜಿಗಳಿದ್ದರು (ಮಹಾವಂ. II, ೨೬). [← ಮರಾ. ಸರ್‌ಖಾಜಿ

**ಸರ್‌ದೇಶಪಾಂಡೆ** (ನಾ). ದೇಶಪಾಂಡೆಯರಲ್ಲಿ ಪ್ರಮು[illegible]ನು : ದೇಶಕ್ಕಿಂತಲೂ ದೊಡ್ಡದಾದ ಪ್ರದೇಶಕ್ಕೆ ಮುಖಂಡನಾದವನಿಗೆ [illegible]ಮುಖ ಎಂತಲೂ ಆ ಸ್ಥಳಕ್ಕೆ ಕರಣೀಕನಾದವನಿಗೆ ಸರ್‌ದೇಶಪಾಂಡ[illegible] ಹೆಸರು (ಪಾಳೆಗಾ. ೧೧). [← ಮರಾ. ಸರ್‌ದೇಶಪಾಂಡೆ]

**ಸರ್‌ದೇಶಮುಖ** (ನಾ). ದೇಶಮುಖರಲ್ಲಿ ಪ್ರಮುಖನಾದವನು ; ಮೊಗಲರ ಆಳ್ವಿಕೆಯಲ್ಲಿದ್ದ ಪ್ರಾಂತಗಳ ಮೇಲೆ ಉತ್ಪನ್ನದ ದಶಾಂಶ ಅಥವಾ ನೂರಕ್ಕೆ ಹನ್ನೆರಡೂವರೆ ಪ್ರಮಾಣದಲ್ಲಿ ಮರಾಠರು ಹೇರುತ್ತಿದ್ದ 'ಸರ್‌ದೇಶಮುಖಿ' ಎಂಬ ಕರವನ್ನು ಪಡೆಯುವ ಹಕ್ಕುಳ್ಳವನು: ದೇಶಕ್ಕಿಂತಲೂ ದೊಡ್ಡದಾದ ಪ್ರದೇಶಕ್ಕೆ ಮುಖಂಡನಾದವನಿಗೆ ಸರ್‌ದೇಶಮುಖ ಎಂತಲೂ . . . ಹೆಸರು (ಪಾಳೆಗಾ. ೧೧). [← ಮರಾ. ಸರ್‌ದೇಶಮುಖ]

**ಸರ್‌ಭಕ್ಷಗಿರಿ** (ನಾ). ಮುಖ್ಯಕೋಶಾಧ್ಯಕ್ಷನ ಪದವಿ : ಅನೇಕಕಾರಣಗಳಿಂದ ಮರಾಟೆ ಜನರು ಮೈಸೂರ ಸೀಮೆಯಲ್ಲಿ ಜವಾನಿ ಮತ್ತು ಸಿಪಾಯಿಕೆಲಸದಿಂದ ದಿವಾನಗಿರಿ ದಂಡಿನ ಸರ್‌ಭಕ್ಷಗಿರಿ ಪದವಿಯವರೆಗೂ ವ್ಯಾಪಿಸಿದರು (ಮುಸುಗ. ೧೫). [← ಮರಾ. ಸರ್‌ಬಖಶೀಗಿರೀ]

**ಸರ್‌ಸುಭ** (ನಾ). ೧. ಸುಬೇದಾರರ ಮುಖ್ಯಸ್ಥ. ೨. ಮುಖ್ಯವಾದ ಪ್ರದೇಶ : ಒಂದು ದೊಡ್ಡ ಪ್ರದೇಶಕ್ಕೆ ಸರ್‌ಸುಭ ಎಂದು ಹೆಸರು. ಅಂಥಾ ಕಡೆ ಸರ್ವಾಧಿಕಾರ ಮಾಡತಕ್ಕ ಅಧಿಕಾರಿಯೇ ಸುಭದಾರ್ (ಪಾಳೆಗಾ. ೧೨). [← ಮರಾ. ಸರ್‌ಸುಭಾ]

**ಸರ$_1$** (ನಾ). ೧. ಉಲಿ ; ಧ್ವನಿ : "ಗಾವರಂ, ದನಿ, ಸೊಪ್ಪುಳ್, ಅಬ್ಬರಂ, ಸರಂ, ಉಲಿ, ಗಾವಳಿ - ಈ ೭ ಧ್ವನಿ" (ಕಶಸಾ. ೫೭-೨೩೫) ; ಮಿಗೆ ನುಣ್ಣನಪ್ಪ ಕೇಕಿಗಳ ಸರಂಗಳುಂ ಪೊಳೆವ ಮಿಂಚುಗಳುಂ . . . ಅಂಜಿಸುವಂತಿರೆ (ಕವಿರಾ. ೧-೧೨೪) ; ಪಳಯಿಸುವ ಮಾದ್ರಿಯ ಸರಮಂ ಕುಂತಿ ಕೇಳ್ದು ಭೋಂಕನೆರ್ದೆದೆಜೆದು (ಪಂಪಭಾ. ೨-೨೨ ವ) ; ತಿರುನೀಲಕಂಠಾ ಎಂದ ಸ[ಪಾಠಾಂ. ಸ್ವ]ರವನೊಳಗಿರ್ದ ನಾಯಕಿ ಕೇಳಿ (ತಿರುರ. ದೇ. ೬-೧೪). ೨. (ಆಲಂ) ಉಸಿರು : ಕಾಲೇ ಕಂಭಗಳಾದವೆನ್ನ ದೇಹವೇ ದೇಗುಲವಾಯಿತ್ತಯ್ಯ . . . ಸ[ಪಾಠಾಂ. ಸ್ವ]ರವೆ ಲಿಂಗಕ್ಕೆ ಸಿಂಹಾಸನವಾಗಿದ್ದಿತ್ತಯ್ಯ (ಅವಚಂ. ೪೬-೧೯೫); ಸರವು ಬಂದು ಸುಸರವಾಗಿ ಎನ್ನಿರವು ಲಿಂಗದೊಳಗೆ ಲೀಯವಾಗಿ (ಶಿವಗೀ. ೬೯-೩೩೪). [< ಪ್ರಾ. ಸರ. /ಸಂ. ಸ್ವರ]

**ಸರ$_2$** (ನಾ). ೧. ಅಂಬು; ಬಾಣ: ನೆರೆದಿನಿಬರುಮಿಾ ಲಕ್ಷ್ಮಮನಿರದಕ್ಕಟ ಸರದೆ ತೆಗೆಯಲಾರ್ತಿರುಮಿಲ್ಲಾ (ಪಂಪಭಾ. ೨-೫೨) : ಕೆಂಗಣಿಯಂ ಸರಂಗಳೊಳ್ ಮೇಳಿಸಿ (ಕುಸುಮಾ. ೧೦-೧೪೬). ೨. ಕೊಳ ; ಸರೋವರ : ಕಿಸಲಯಂ ಮಿಳಿಮಿಳಿರುತ್ತಿರೆ ಸರದೊಳ್ತೋಟಲ್ಕೇಂ ಕರವವೊಲಾಯ್ತನಿಲಜಂಗೆ ದುರ್ಯೋಧನನಂ (ಗದಾಯು. ೬-೪೩); ದಳಿತಾಬ್ಜಪ್ರಸರಂ ಸರಂ ಕುಸುಮಮಾಳಾರಾಮಮಾರಾಮಮಂ (ಜಗವಿ. ೨-೨). ೩. ಹಾರ; ಮಾಲೆ : ಎರಡೋಳಿಯ ಮಣಿದೀಪದ ಸರಮೊಪ್ಪಿದುದುದಂದು ಪಾದಪೀಠದ ಮೊದಲೊಳ್ (ಅಜಿಪು. ೬-೫) ; ಅಂಜುತಂಜುತ ಬಾಲೆ ಬಂದೊರ್ವಳರಸಗೆ ಕೆಂಜಾಜಿಸರಗೊಡುವಾಗ (ಭರತೇ. ೫-೩೭). ೪. ಸಾಲು ; ಶ್ರೇಣಿ : 'ಸರಂಗೊಳ್', 'ಸರಗತೆ' ಪರಾ. [ಸಂ.]

**ಸರ$_3$** (ನಾ). ಮೇಲ್ಛಾವಣಿಗೆ ಆಧಾರವಾಗಿ ಹಾಕುವ ಉದ್ದನೆಯ ಮರದ ದಿಮ್ಮಿ : ಅರುಣಮಣಿಯ ಕೆಲಸದ ಬೋದಿಗೆ ಹೊಸಹಳದಿಯ ಮಾಣಿಕದ ಸರಮುಜ್ವಲವಜ್ರದ ಪಡಿವಟ್ಟಿಗೆ (ಜಯಕಾ. ೮-೩) ; ಚದುರ ಚೌಕಟ್ಟುಗಳ ಮೇಣಾ ಕದಗಳುಂ ತೊಲೆ ಸರಂಗಳುಂ ಬಲುಪದಪಿನಿಂ ಮರಕತಗಳಿಂ ಕೆತ್ತಿರ್ಪವೊಲ್ಮೆರೆಗುಂ (ಅರ್ಜಾಪಿ. ೨೮-೧೪). [?]

**ಸರಂಗ** (ನಾ). (?) : ನಂಜಿನ ಭೂಮಿಯ ಮೇಲೆ ಸಂದೇಹದ ಕವರ ನೆಟ್ಟು ಮಂಜುಳದ ಮೂಜಂಗದ ಮುಂಡಿಗೆಯ ನೆಟ್ಟು ಸರಂಗದ ಸುಮನದ ಡೊಂಕಜಿತ ಬೆಮ್ಮರನಹಾಕಿ . . . ಏಜೆಸಿದಗಳು ಚಿತ್ರಶುದ್ಧವೆಂಬ ಮೂಗುತಿ ಕೋಲಿನಲ್ಲಿ ನಿಂದಿತ್ತು (ಸಕವ.ಕ.I,೧೩೬-೧೧೯). [?]

**ಸರಂಗುಡು**, ಸರಗೊಡು (ಕ್ರಿ). ಧ್ವನಿಮಾಡು ; ಉಲಿ : ನಯದಿಂದಂ ಸಾರ್ದು ಸರಂಗುಡೆ ಶಾಂತದೊಳ್ ಮಾಗೆ ಗೊಂಕಜುಕಪ್ಪೆ ಪಸುಂಬಂ ತತ್ಕ್ರಮದಿಂದಮೆ ದೀಪ್ತದಿಗ್ಭಾಗದೊಳ್ ದನಿಗೆಯ್ಯೆ ಮನಸ್ಸಿದ್ಧಿಯನಾಗಳೆ ಉಂಟುಮಾಡುಗುಂ (ಲೋಕೋಪ. ೧೨-೧೫). **ಸರಗೊಡು** : ಇಕ್ಕುಧನ್ವಗಳು ಒಡೆಯಗೆ ಕೊಡುವ ಹುಯ್ಯಲರಸಗೂಗೆನೆ ಸರಗೊಡುವಿಕ್ಷುಯಂತ್ರಮೊಪ್ಪಿದುದು (ಶ್ರೀಪಾಲ. ೧-೬೦). [ಸರ$_1$ + ಕುಡು$_1$ (< ಕೊಡು$_1$)]

**ಸರಂಗೆಯ್**, ಸರಗೆಯ್ಯು, ಸರಗೈ (ಕ್ರಿ). ೧. ಧ್ವನಿಮಾಡು; ಕೂಗು: ದಿವಿಜಾಶ್ವತ್ಥಾಮದೋಳೀ ಭುವನಂಗಳ್ ನಡುಗೆ ಶಿಶು ಸರಂಗೆಯ್ಯೊಡೆ ನಕ್ಕವಯವದೆ ಕುಂಭಸಂಭವನಿವನಶ್ವತ್ಥಾಮನೆಂದು ಪೆಸರಿಡೆ ನೆಗೞ್ದಂ (ಪಂಪಭಾ. ೨-೪೪); ಅಸುವಿಯೋಗ ಸಂಕಟದಿಂ ಸರಂಗೆಯ್ಯೆ ಜಟಾಯುವಂ ಕಂಡು (ಪಂರಾಮಾ. ೯-೧೧೭ ವ) ; ಕಂದರ್ಪನಂ ಪುಗಲ್ಪುಗಲೆಂಬಂದದಿಂ ಸರಂಗೆಯ್ದು ಗಂಡುಗೋಗಿಲೆದನಿಗಳುಂ (ಚಂದ್ರಪ್ರ. ೨-೧೧೪ ವ). **ಸರಗೆಯ್ಯು** : ೧. ಸರಗೆಯ್ಯುತಿದೆ ಕೋಗಿಲೆ (ಹಚಕಾ. ಪರಿ. ೪-೮). **ಸರಗೈ** : ೨. [ಸಂಗೀತ] ವಾದ್ಯವನ್ನು ಶ್ರುತಿಮಾಡು : ಸರಗೈದು ಪೇರುರದೊಳಿಟ್ಟು ತರುಣಾಂಗುಳಿಗಳುರುಚಲನೆಯಿಂದ . . . ವಲ್ಲಕಿಯ ಬಾಜಿಸುವ ಮೋಹನ ಕಣೆಯಳೊರ್ವಳೀಕ್ಷಿಸಿದನು (ವಂಕಾರಾ. ೫-೬-೪೧). [ಸರ$_1$ + ಕೆಯ್$_1$]

**ಸರಂಗೇಳ್** (ಕ್ರಿ). ಧ್ವನಿಯನ್ನು ಕೇಳು : ಎನ್ನ ಸರಂಗೇಳ್ದಲ್ಲದೀ ಬೂತು ಪೊಱಮಡುವನಲ್ಲಂ (ಪಂಪಭಾ. ೧೩-೭೭ ವ) ; ಈ ಬೂತೆನ್ನ ಸರಂಗೇಳ್ದೊಡಲ್ಲದೆ ಪೊಱಮಡುವನಲ್ಲ ನಿವಂಗಾನೆ ಸಾಲ್ವೆಂ (ಗದಾಯು. ೭-೯ ವ). [ಸರ$_1$ + ಕೇಳ್]

**ಸರಂಗೊಳ್**, ಸರಗೊಳು (ಕ್ರಿ). ೧. ಹಾರವನ್ನಾಗಿ ಮಾಡು ; ಮಾಲೆಗಟ್ಟು : ಉರುಳಿ ಮಾಡಿ ಸರಂಗೊಳೆ ತಾರಹಾರವಪ್ಪ . . . ಕಟಲ್ಚಿ ಕೂಡೆ ಕಪ್ಪುರವಳುಕಪ್ಪುಗುರ್ವ ಸೊಳಕೊಂಡುದು ಚಂದ್ರಿಕೆ ಸಾಂದ್ರಭಾವದಿಂ (ಜಗವಿ. ೧೬-೧೧೯). **ಸರಗೊಳು** : ೨. ಸಾಲುಗಟ್ಟು ; ಸಾಲಾಗು : ಪರಮನ ದರುಶನಕೆ ಸುರಮುನಿ ಶಿವಗಣ ಭರದಿಂದ ಬಕುತಿಲಿ ಸರಗೊಂಡು ಬರುವಾಗ (ಸಿದ್ಧಪ್ರ. ೧-೨೩). [ಸರ$_2$ + ಕೊಳ್$_1$]

**ಸರಂಗೊಳಿಸು**, ಸರಗೊಳಿಸು (ಕ್ರಿ). [illegible] ಮಾಲೆಗಟ್ಟು ; ಹಾರವನ್ನಾಗಿ ಮಾಡು: ಮುನ್ನುಳ್ಳ ಮಣಿಪುಂಜಮಂ ರಂಜ[illegible] . . . ಸರಂಗೊಳಿಸಿ ನವೀನಕಂಠಾಭರಣ ಮೆನಿಸುವಂತೆ (ವಿವೇಕ. ೧) ; ಧನುವಂ ಕೊಂಡು ಸಿಡಿಲಂ ಸರಂಗೊಳಿಸಿದಂತೆ ತಿಬ್ಬಿನಬ್ಬರಂ . . . ದಿಗಂತಮಂ ನೀಡಿರಿವುತ್ತಿರೆ (ಸಕವ್ಯ. ೨). **ಸರಗೊಳಿಸು** : ೧. ಮಳೆವನಿಯೊಳಿಪ್ಪ ಹುರಮಂಜಿ ಮುತ್ತುಗಳಂ ಸರಗೊಳಿಸಿ ಕೊರಳೊಳು ಧರಿಸಬಹುದೇ (ವಚರ. ೮೮-೩೮೧); ಸರಗೊಳಿಸಿ ಬಳಿಕೀತನಾತನ ಸರಳ ಸಾರದಲಿ . . . ಎಚ್ಚಾಡಿದರು ಸರಿಸದಲಿ (ತೊರರಾ. ೬-೪೪-೧೬) ; ಪರೀಕ್ಷಿಸಿ ರಂಧ್ರಂಗೈದು ಸರಗೊಳಿಸುತ್ತಲವನು ಬೆಲೆವಡಿಸರ (ನವಮೋ. ೧-೧೬). ೨. ಹೆಣೆ; ಪೋಣಿಸು : ಕಲ್ಲಿಬಲೆಗಳಂ ಸರಗೊಳಿಸುತುಂ ಹಾಸಮಂ ಹಸಂಗೆಯ್ಯುತುಂ . . . ಎಸೆವ ಲುಬ್ಧಾಶ್ರಯದೆ ವನಮೆಸೆದುದು (ಚೆಬಪು. ೫೩-೨೧). [ಸರಂಗೊಳ್ + - ಇಸು$_3$]

**ಸರಂಜಾನಿಸು** (ಕ್ರಿ). ಸರಂಜಾಮು ಸಹಿತವಾಗಿರು; ಸರಕುಗಳಿಂದ ಕೂಡಿರು: ಸವಣೂರ ಹಾಕಿಂಖಾನ, ರಾಯದುರ್ಗದವರು . . . ಬಾಣ ವಗೈರೆ ಭಾರಿ ಸರಂಜಾನಿಸಿ ಬಂದು ಇಳಿದಿದಾರೆ (ಚಿತ್ರಪಾ. ೬೩). [< ಸರಂಜಾಮು + - ಇಸು$_3$]

**ಸರಂಜಾಮ** 'ಸರಂಜಾಮು' ನೋ.

**ಸರಂಜಾಮದಾರ** (ನಾ). ಸೈನ್ಯದ ಸರಂಜಾಮಿಗಾಗಿ ಜಹಗೀರು ಪಡೆದವನು: ಆಶ್ರಿತರಿಗೆ ವ್ಯಾಸಲ್ಲರು ಅಥವಾ ಸರಂಜಾಮದಾರರೆಂತಲೂ ಈ ಮೇರೆಗೆ ಭೂಮಿಯನ್ನು ಹಂಚಿ ಕೊಟ್ಟ ಒಡೆಯನಿಗೆ ಲಾರ್ಡನೆಂತಲೂ ಹೆಸರುಗಳುಂಟಾದವು (ಇಂಗ್ಲಂಡ. ೨೫). [← ಮರಾ. ಸರಂಜಾಮದಾರ್]

**ಸರಂಜಾಮಿಪದ್ಧತಿ** (ನಾ). ೧. ಸೈನ್ಯಾಧಿಕಾರಿಗಳಿಗೆ ಸಂಬಳ ಮುಂತಾದುವನ್ನು ಕೊಡದೆ, ಸೈನ್ಯದ ವೆಚ್ಚಕ್ಕಾಗಿ ಜಹಗೀರನ್ನು ಕೊಡುವ ಪದ್ಧತಿ. ೨. ಹಿಂದೆ ಬ್ರಿಟಿಷ್ ಸರಕಾರದವರು ಆಳುತ್ತಿದ್ದಾಗ ದೇಶೀಯರಾಜರಿಗೆ ಕೆಲವೊಂದು ಪ್ರದೇಶದ ಆಡಳಿತವನ್ನು ಬಿಟ್ಟುಕೊಟ್ಟು, ಅಗತ್ಯಬಿದ್ದಾಗ ಸೈನ್ಯವನ್ನು

ಪೂರೈಸಬೇಕೆಂದು ವಿಧಿಸಿದ್ದ ಪದ್ಧತಿ ; ಊಳಿಗಮಾನ್ಯಪದ್ಧತಿ : ಸರಂಜಾಮಿ ಪದ್ಧತಿಯನ್ನು ಆಧರಿಸಿ ನಿಂತ ಸಮಾಜದ ಅದರ ಪರಮಾಉತ್ಸ್ವಾರ್ಥವೆನಿಸಿದ ಸಾಮ್ರಾಜ್ಯಶಾಹಿಯ ಸುಗ್ಗಿಯ ಕಾಲವಾದ ಹತ್ತೊಂಬತ್ತನೆಯ ಶತಮಾನ ಗತಿಸಿ ಹೊಸ ಶತಮಾನ ಇನ್ನೇನು ಹೊಸಪ್ಪೇಯಗಳನ್ನು ತೋರುವುದೋ (ಗ್ರಾಮಾಯ. ೧).

[← ಮರಾ. ಸರಂಜಾಮಿಪದ್ಧತಿ]

**ಸರಂಜಾಮು,** ಸರಂಜಾಮ (ನಾ). ಸಾಮಗ್ರಿ ; ಪರಿಕರ ; ಸಲಕರಣೆ : ಜನರು ತಮಗೆ . . . ಅರಬಿಕುದುರೆ ಖಿಲ್ಲತ ವಗೈರೆ ಬಾಹಳ ಸರಂಜಾಮು ಪತ್ರ ಹಾಕಿದ್ದು XXX ತಮ್ಮ ಸನ್ನಿಧಾನಕ್ಕೆ ಬಂದು ಇಧಾರೆ (ಮದಚ. ೩-೧೨) ; ನಮಗೆ ಬೇಕಾದ ಸಾಮಾನು ಸರಂಜಾಮುಗಳನ್ನು ಸ್ಥಳದ ಜನರು ಒದಗಿಸಿದರು (ಪ್ರವಾಇ. II, ೨೦). **ಸರಂಜಾಮ :** ಚನ್ನ ಸರಂಜಾಮ ಸಹಿತ ಹೊರಟಾನು (ಬಾಬಲ. ೩೫) : ನೀಲಾಸಾನಿ ತನ್ನ ಸರಂಜಾಮದೊಂದಿಗೆ . . . ಸಂಗೀತ ನೃತ್ಯವನ್ನೆಸುಗುತ್ತಿದ್ದುದೇ ಮುಖ್ಯಕಾರಣವಾಗಿತ್ತು (ಮಣ್ಣಮ. ೧೩). [← ಪಾರ. ಹಿಂ. ಮರಾ. ಸರಂಜಾಮ್./ ತುಳು. ಸರಂಜಾಮ್]

**ಸರಂದೆಗೆ** (ಕ್ರಿ). ಧ್ವನಿ ಹೊರಡಿಸು; ಕೂಗು : ಬರೆ ಮಧುವುಂ ಸರಂದೆಗೆಯದಿರ್ಪುವು ಕೋಗಿಲೆಗಳ್ (ಶಾಕುಂತ. ೮೧-೧೩೫). [ಸರ$_1$ + ತೆಗೆ$_1$]

**ಸರಂದೋಱು,** ಸರದೋಱು (ಕ್ರಿ). ಧ್ವನಿಮಾಡು : ನೀಂ ಮೆಲ್ಲಮೆಲ್ಲನೆ ಮಂದಾನಿಳ ತೀಡು ಕೋಗಿಲೆ ಸರಂದೋಱು (ಆದಿಪು. ೧೨-೪೩) ; ಕರೆದೊಡಂ ಮೊದಲಾಗಿ ಸರಂದೋಱಿನಪೆಯಿಲ್ಲ (ಪಂಚತಂ. ೩೮-೧೧). **ಸರದೋಱು :** ಮಗುಳ್ಬಂದಮೆಂತೊ ಮೇಣ್ಮಾಱೆದುವರಣ್ಯದೊಳ್ ಸುಱಿವನಿಲ್ಲ ನರಂ ಸರದೋಱುವನ್ನನೇತೆಱದೊಳಮೆಂತು ಪ್ರೋಪೆನೊ (ಕಾದಂಪೂ. ೭೨೭) ; ಕುಮಾರನಾ ಮದದಾನೆಯನು ಬೆಂಬರಿದು ಮಿಗೆ ಸರದೋಱೆ (ಸಾಳ್ವಭಾ. ೧೭-೧೩). [ಸರ$_1$ + ತೋಱು]

**ಸರಕ್** 'ಸಟಿಕ್' ನೋ.

**ಸರಕ** (ನಾ). ೧. ಅವಿಚ್ಛಿನ್ನವಾದ ಮಾರ್ಗ. ೨. ಸಂಚಾರ ; ಚಲವೆ. ೩. ಕೊಳ; ಸರೋವರ. ೪. ಮದ್ಯ ; ಹೆಂಡ. ೫. ಮದ್ಯಪಾನ. ೬. ಮದ್ಯದ ಬಟ್ಟಲು; ಚಷಕ : "ಗರ್ಗರೀ, ಅನುತರ್ಷ:, ಚಷಕ:, ಸರಕ: - ಈ ೪ ತಿಳಿವಟ್ಟಲ್" (ಹಲಾಯು. ೫೪-೧೭೨). ೭. ಮದ್ಯವನ್ನು ಹಂಚುವುದು. ೮. ಸ್ವರ್ಗ. [ಸಂ.]

**ಸರಕಂಗಟ್ಟು** 'ಸರಕುಗಟ್ಟು' ನೋ.

**ಸರಕಟಿಸು** (ಕ್ರಿ). ರಭಸವಾಗಿ ಮುನ್ನುಗ್ಗು, — ದಾಳಿಯಿಡು : ರಾವುತ ಕಕ್ಕಲದೇವನುಂ ಸರಕಟಿಸಿ ಏಱಿದನ್ (ಎಕ. VIII, ನಗರ. ೧೯-೧೨ ; 1320) ; ಬಹುವಿಧದ ವಾದ್ಯವಿಡಾಯಿ ರಭಸದಲಿ ಸರಕಟಿಸಿ ನೂಕಿತು ಚತುರ್ಬಲ (ಕುಮಾರವ್ಯಾ.ದ್ರೋ. ೧೮-೧೩) ; ಸಮರವಿಲಾಸಿಗಳು ಸರಕಟಿಸಿ ಕಾದಿದರಳುಕೆ ಭುವನಚಯ (ತೊರರಾ. ೬-೧೧-೨೦).

[ಸರಕಟ್ಟ$_0$ (IP←ಮರಾ. ಸರಕಟಣೇ) + - ಇಸು$_3$]

**ಸರಕರಣ** (ನಾ). ಸ್ವರ ಹೊರಡಿಸುವುದು ; ಧ್ವನಿ ಮಾಡುವುದು : ಸ್ವರಕರಣ - ಸರಕರಣ (ಶಮದ. ೨೮೯ ಪ್ರಯೋ). [< ಸಂ.ಸ್ವರಕರಣ]

**ಸರಕಲು** (ನಾ). (ಮಣ್ಣು ಸರಿದುಹೋಗಿ ಉಂಟಾದ) ತಗ್ಗು ; ಗುಂಡಿ : ಹಳ್ಳದ ಸರಕಲನ್ನು ಮಣ್ಣಿನಿಂದ ತುಂಬುವದಕ್ಕೆ . . . ಹರಗಿದ ಹಾಗೆ ಮಣ್ಣು ಏಳಿಸಿ ಹಳ್ಳಗಳನ್ನು ತುಂಬಿಕೊಳ್ಳಬೇಕು (ಕೃಷಿಪ್ರ. ೩೯). 'ಕೊರಕಲು' ಪರಾ.

[ಸರಕು$_1$ + - ಅಲು (< - ಅಲ್$_2$)]

**ಸರಕಾರ** 'ಸರ್ಕಾರ' ನೋ.

**ಸರಕಾರಿ** 'ಸರ್ಕಾರಿ' ನೋ.

**ಸರಕಾರಿನೌಕರಿ** 'ಸರ್ಕಾರಿನೌಕರಿ' ನೋ.

**ಸರಕಿಸು,** ಸರಿಕಿಸು, ಸರುಕಿಸು (ಕ್ರಿ). ತಳ್ಳು ; ಜರುಗುವಂತೆ ಮಾಡು : (೩). **ಸರಿಕಿಸು :** ಪರಿಕಿಸಿ ನೋಡುತ ಮುರಿಕಿಸಿ ನುಡಿಯುತ ಸರಿಕಿಸಿ ತಡೆಯುತ . . . ಬರಲು ಮಾಯದ ಮೃಗವದು (ಹಮಚ. ೨೨). **ಸರುಕಿಸು :** (೩).

[ಸರಕು$_1$ + - ಇಸು$_3$ / ಮರಾ. ಸರಕಣೇಂ]

**ಸರಕು$_1$** ಸರಗು, ಸರುಕು$_1$ (ಕ್ರಿ). ೧. ಪಕ್ಕಕ್ಕೆ ಸರಿ; ಜರುಗು: ಇನ್ನೊಬ್ಬ ಮುದುಕ ಬಂದು ಮೊದಲು ಕುಳಿತವನಿಗೆ "ಸ್ವಲ್ಪ ಸರಕೋ" ಎಂದು ಹೇಳಿ ತಾನೂ ಕುಂಡೆಯೂರಿದನು (ಮೂರುದಾ. ೧೭೭). **ಸರಗು:** ೧. ಕೊಂಚ ಸರಗು, ನನಗೂ ಜಾಗ ವಾಗುತ್ತದೆ (ರೂಢಿ). ೨. (ಸಾಮಾನ್ಯವಾಗಿ ಎಮ್ಮೆಗಳು ತೊಂಡುಮೇಯಲು) ಅತ್ತಿತ್ತ ಓಡಾಡು; ತಿರುಗಾಡು : ಮನೆಯಿಂದ ಸರಗಾಡಲು ಬಿಟ್ಟ ಎಮ್ಮೆ ತನ್ನ ಮಣಕದೊಂದಿಗೆ ಸಾಹೇಬರ ಹತ್ತಿರವೇ ಬಂದಿತು (ಗ್ರಾಮಾಯ. ೧೧೯). **ಸರುಕು :** (೩). 'ಜರುಗು' ಪರಾ. [< ಸರಿ$_1$]

**ಸರಕು$_2$,** ಸರುಕು$_2$ (ನಾ). ೧. (ವ್ಯಾಪಾರದ) ಸಾಮಾನು; ಸಾಮಗ್ರಿ; ಪದಾರ್ಥ: ದಾರಿಯಲ್ಲಿ ಸರಕು ಮಱೆಯಲ್ಲದೆ ಮಾಱುವಲ್ಲಿ ಮಱೆ ಉಂಟೆ (ಸಕವ.ಕ. I, ೩೯೪-೬೫) ; ಉಱಿಯ ಪೇಟೆಗಳಲಿ ಪತಂಗದ ಸರಕು ಮಾಱದೆ ಮರುಳುವುದೆ (ಕುಮಾರವ್ಯಾ.ಕ. ೧೦-೨೮) ; ಒಟ್ಟೆಗಳ ವೇಸರದ ಪೊಱೆಯಾಳ ಕಂಬಿಗಳ ಕೊಟ್ಟಿಗೆಯ ಕೊಲ್ಲೂರ ಬಂಡಿಗಳ ಮೇಲೆ ಸರಕಿಟ್ಟಣೆಸಿ (ಜೈಮಿಭಾ. ೭-೫) ; ನೂರಾರು ಸರಕುಗಳು ಜೀವಿತದ ಸಂತೆಯಲಿ . . . ಬೇರೆ ಬೇರೆ ಪುರುಳ್ಗಿ ಬೇರೆ ನೆಲೆ, ಬೇರೆ ಬೆಲೆ (ಮಂಕುಕ. ೭೭೭). ೨. (ಆಲಂ) ಲಕ್ಷ್ಯ; ಗಮನ: 'ಸರಕುಗೊಳ್' ಪರಾ. **ಸರುಕು$_2$ :** ೧. ಉರಿದವರರೇ ತೇರುಗಳು ಕಾಲ್ಮಂದಿಗಳ್ಬೆಂದು ಧರೆಯೊಳ್ಬೇಗುದಿಗೊಂಡು ಬದ್ದುವು ಸರುಕುಗಳು ಭಸ್ಮಂಗಳಾದುವು (ಅರ್ಜುವಿ. ೧೦-೧೯).

ಸರಕುಮಾಡು = (ಆಲಂ) ಲೆಕ್ಕಿಸು; ಗಣನೆಗೆ ತರು: ಬೊಮ್ಮರಂ ಬೆಳ್ಮಾಡುವರೆಂದಡೆ ಸ್ವಾಮಿಗಳಂ ಸರಕುಮಾಡುವರಾರು (ಬಸರ. ೮-೯೪); ಸಿರಿಯನುಳ್ಳವನೇ ಸುಶೀಲನು ಸಿರಿರಹಿತ ಶಿವನಾದೊಡಾಗಲಿ ಸರಕುಮಾಡದು ಲೋಕವು (ಕುಮಾರವ್ಯಾ.ಉ. ೩-೩೮); ಭಕುತಿಸುಖಕೆಱಗಿದವರು . . . ಮುಕುತಿಸುಖವನು ಸರಕುಮಾಡರು (ನಿಭಾಗ. ೩-೭-೪೫).

[ದೇ. II ತಮಿ. ಮಲ. ಚರಕ್ಕು; ತುಳು. ಸರಕ್, ಚರಕ್, ಚರಕು ; ತೆಲು. ಸರಕು]

**ಸರಕುಗಟ್ಟು,** ಸರಕಂಗಟ್ಟು (ಕ್ರಿ). (ಆಲಂ) ಸ್ಥಳ ಬಿಟ್ಟು ಹೋಗಲು ಅಣಿಯಾಗು; ಪಲಾಯನ ಮಾಡು : ಪುಣ್ಯದ ಫಲಂ ಪೆರ್ಗೊನೆಗಟ್ಟೆ ಪರಸಮಯಂ ಸರಕುಗಟ್ಟೆ ಪುರಮಂ ಪೊಱಮಟ್ಟು ಕಿಱಿದಂತರಂ ನಡೆತಂದು (ನಂಬಿರ. ೮-೫೯) ; ಪೋಯ್ತು ಪೋಯ್ತು ದುರ್ಗಮಿನ್ನೇನೆಂದೊಳಗೆಲ್ಲಮೆಯ್ದೆ ಸರಕುಗಟ್ಟೆ ಪೊಱಗೆಲ್ಲಮೆಯ್ದೆ ಗುಡಿಗಟ್ಟೆ ಸೀರೆಯಂ ಬೀಸಿ ಬೊಬ್ಬೆಱೆದಾಟೆ (ಅನಂಪು. ೧೧-೮೩ ವ). **ಸರಕಂಗಟ್ಟು :** ಪುಟ್ಟಲ್ ಮೆಲ್ಲರ ಕೇಳ್ವರ ಕಿವಿಯಂ ಮುಟ್ಟಲ್ಕಿದು ಕಿನ್ನರಿಯರ್ ಸರಕಂಗಟ್ಟಲ್ಲೇಯಂಗೆಯ್ವರ್ ಗಾಯಕಿ ಯರ್ಗಧಿನಾಯಕಿಯರ್ (ಉದ್ಭಟದೇ. ೭-೯). [ಸರಕು$_2$ + ಕಟ್ಟು$_1$]

**ಸರಕುಗೊಳ್,** ಸರಕುಗೊಳ್ಳು (ಕ್ರಿ). ಲೆಕ್ಕಿಸು; ಗಮನಿಸು : ಪೊರೆವ ತಾಯಿಗಳಿಲ್ಲದವರಂ ಸರಕುಗೊಂಬರೆ ತಾಯಿಯುಳ್ಳಡೆ ದುರುಳ ಗರಳವನೇಕೆ ಸುತನಂ ಕುಡಿಯಲೀಸುವಳು (ಬಸಪು. ೧೩-೮). **ಸರಕುಗೊಳ್ಳು:** ಭರದ ಗುಡುಗು ಮಿಂಚು ಉರವಣೆ ಇರಲವ ಸರಕುಗೊಳ್ಳದೆ ಭೈರವಾಂಕ ಗುರುಪಾದಸ್ಮರಣೆಯಿಂ ಬರುತಿರೆ (ಭೈರವೇ. ೩-೧೭೫) ; ಪಿಂಗದ್ಮೆಸಿರಿಯೊಳಾರಂ ಸರಕುಗೊಳ್ಳಂ (ಕೊಟ್ಟೂಬ. ೫-೭೭).

[ಸರಕು$_2$ + ಕೊಳ್$_1$]

**ಸರಕುಗೊಳ್ಳು** 'ಸರಕುಗೊಳ್' ನೋ.

**ಸರಕುಟವಕ್ಕಿ** 'ಸರಕೂಟವಕ್ಕಿ' ನೋ.

**ಸರಕುದೆಗಸು** (ಕ್ರಿ). (ಆಲಂ) ಜಾಗ ಬಿಡಿಸಿ ಓಡಿಸು; ಗುಳೆಯೆತ್ತಿಸು: ಗಿರಿಗಿರಿಯ ಹೋರಟೆಯೊಳುಬ್ಬಿದ ಹೊರಳಿಗಿಡ ಹೊದಱಿದ್ದು ದಿಕ್ಪಾಲರ ಪುರಂಗಳ ಸರಕುದೆಗಸಿದವೇನನುಸುರುವೆನು (ತೊರರಾ. ೪-೪-೧೯).

[ಸರಕು$_2$ + ತೆಗಸು (< ತೆಗೆಯಿಸು)]

**ಸರಕುದೆಗೆ** (ಕ್ರಿ). (ಆಲಂ) ಜಾಗ ಬಿಟ್ಟು ಹೋಗು ; ಗುಳೆಯೆತ್ತು : ಯಮನ ಪಟ್ಟಣ ಸರಕುದೆಗೆಯಿತು ಮೃತ್ಯು ಮಱೆಹೊಕ್ಕಳು ಮಹೇಶ್ವರನ (ಕುಮಾರವ್ಯಾ.ದ್ರೋ. ೮-೧೧); ನಿರ್ಜರಪುರಂ ಸರಕುದೆಗೆದುಳಿದ ಲೋಕತತಿ ವರ್ಜಿತಸಮಸ್ತಜನಮಾಯ್ತು (ಚೆಬಪು. ೨೮-೧೧). [ಸರಕು$_2$ + ತೆಗೆ$_1$]

**ಸರಕೂಟವಕ್ಕಿ,** ಸರಕುಟವಕ್ಕಿ (ನಾ). ಒಂದು ಬಗೆಯ ಹಕ್ಕಿ : "ಆಟಿ:, ಶರಾರಿ:, ಆತಿ: - ಈ ೩ ಸರಕೂಟವಕ್ಕಿ" (ಹಲಾಯು. ೬೨-೯೭). **ಸರಕುಟವಕ್ಕಿ :** "ಶರಾರಿ:, ಆಟಿ, ಆತಿ: - ಈ ೩ ಸರಕುಟವಕ್ಕಿ" (ನಾಚಿರಾ. ೧೧೪). [ಸರಕೂಟ$_0$ + ಪಕ್ಕಿ]

**ಸರಕ್ಕನೆ** 'ಸಟಕನೆ' ನೋ.

**ಸರಕ್ತ** (ಗು). ಕೆಂಪಾದ; ರಕ್ತವರ್ಣವುಳ್ಳ: ರಣಕ್ರೀಡಾಸಕ್ತಂ ಸರಕ್ತಲೋಚನಂ . . . ಚಕ್ರಮನಿಟ್ಟಂ (ಪಂರಾಮಾ. ೧೬-೧೫). [ಸಂ.]

**ಸರಕ್ಷ** (ಗು). ವಿಭೂತಿಯನ್ನು ಲೇಪಿಸಿಕೊಂಡ; ಭಸ್ಮಸಹಿತವಾದ: ವಳಕ್ಷ ಸರಕ್ಷದೇಹ ಮೋಹಕ್ಷಯ ದಕ್ಷ ರಕ್ಷಿಪುದು (ರಾಜಶೇ. ೧-೧೦). [ಸಂ.]

**ಸರಗಂಟು** (ನಾ). ಒಂದಾದ ಮೇಲೊಂದರಂತೆ ಬರುವ ತೊಡಕು ; ಸಾಲುಸಾಲಾಗಿ ಬರುವ ತೊಂದರೆ : ಇಂಥಾ ಸರಗಂಟ ಅದು? (ಹೊಸಂಸಾ. ೧೬೭). [ಸರ್₂ + ಗಂಟು]

**ಸರಗಂಟೆ** (ನಾ). (ಸಾಮಾನ್ಯವಾಗಿ ಆನೆ, ಎತ್ತು ಮುಂತಾದವುಗಳ ಕೊರಳಿಗೆ) ಸಾಲಾಗಿರುವಂತೆ ಕಟ್ಟುವ ಗಂಟೆ ; ಗಂಟೆಗಳ ಸರ : ಕೊರಳ ಹೊರಜ ಕುಂಭಸ್ಥಳ ಕೋಹಾಳೆ ಸರಗಂಟೆ ಪಕ್ಕಗಂಟೆಗಳು ಬಿರುದಿನ ಪಟ ಪಲ್ಲವಸತ್ತಿಗೆ ಮದಕರಿಯ ಮೇಲೊಡನೆ ಮೆಚ್ಚಿದುವು (ಕಂನವಿ. ೨೩-೧೦೨). [ಸರ್₂ + ಗಂಟೆ₂]

**ಸರಗಟ್ಟು** (ಕ್ರಿ). ೧. ಮಾಲೆಗಟ್ಟು ; ಹಾರವನ್ನಾಗಿ ಮಾಡು: ಮೊರವಳಿಯ ಸರಗಟ್ಟು ಮರುಗ ಮಲ್ಲಿಗೆಯ ಸೋಹರಗಿಳಿಯ ತುಱುಬು ಸುರಗಿಗೆ ಕುಟುಕನಿಕ್ಕು (ಹಚಕಾ. ೪-೫೦) : ಪರಿಮಳವೆರೆದಿಂಪಿನ ದಿವ್ಯಪುಷ್ಪವ ಪರಿಕೊಂಡತಿಹರುಷದಲಿ ಸರಗಟ್ಟಿ ಬೆಲೆಗೆ ಮಾಱುವ ಮಾಲೆಗಾತಿಯರಿರವ ನಾನೇನ ಬಣ್ಣಿಪೆನು (ಕಂನವಿ. ೨-೮೩) ; ಅರವಿಂದಪತ್ರದೊಳ್ ಜಲಬಿಂದು ಸನ್ಮಣಿವೊಲಿರೆ ಕಂಡು ಸರಿಗಟ್ಟದಪೆನೆಂದು ತೆಗೆಯಲೆಲೆ ಮುರುಟಿ ಬೀಳಲ್ಕಕಟ ಮುತ್ತುದುರ್ದುವೆಂದೊಡನೆ ಕೈಯಿಕ್ಕೆ (ನಂದಿಮಾ. ೬-೩೩). ೨. ಸಾಲಾಗಿ ಕಟ್ಟು: ಉರವಣಿಸುವ ತುರುಕರನು ಮುರಿಯಲಿಱಿದು ಮೂಗರಿದು ತಂದಾಕ್ಷಣ ಸರಗಟ್ಟಿ ಮೆಚ್ಚಿಸಿದರಾಗ (ಕಂನವಿ. ೧೫-೩೯). [ಸರ್₂ + ಕಟ್ಟು₁]

**ಸರಗಡಲು** (ನಾ). ದೀರ್ಘವಾದ ಸಮುದ್ರ; ವಿಶಾಲವಾದ ಸಾಗರ: ಮಡದಿಗಾಗಿ ಸರಗಡಲನೆ ಕಟ್ಟಿ ಹಿಡಿದು ರಾವಣನ ಕೊಂದ (ಪುರಂದ. ೩-೨೪-೭). [ಸರ್₂ + ಕಡಲು (< ಕಡಲ್₂]

**ಸರಗತೆ** (ನಾ). ಒಂದಾದ ಮೇಲೊಂದರಂತೆ ಹೇಳುವ ಕತೆ : ಬೇಸರ ಪರಿಹಾರಕ್ಕಾಗಿ ಯಾರಾದರೊಬ್ಬರು ಸರದಿಯ ಮೇಲೆ ಹೇಳುತ್ತಿದ್ದ ಸರಗತೆಯನ್ನು ತಾನು ಕೇಳಿದ್ದು (ಮಲೆಮ. ೬೭೭). [ಸರ್₂ + ಕತೆ]

**ಸರಗರಂ** 'ಸರಗರಮು' ನೋ.

**ಸರಗರಮು, ಸರಗರಂ** (ನಾ). ಆಸಕ್ತಿ : ಬಹಳ ಸರಗರಮಿನಿಂದಾ ಮಾಡಿದ್ದು ಯಾವತ್ತು ನಾವು ಕೇಳಿ . . . ಸುಖದಿಂದಾ ಇರಬೇಕು ಎಂತಾ ಬೇಡಿಕೊಳ್ಳುತ್ತಾ ಇದ್ದೇವೆ (ರಾಜೇಂದ್ರ. ೧೨೬). **ಸರಗರಂ** : ೨. ನಿರತನಾದವನು ; ಆಸಕ್ತ : ಸರಹದ್ದಿನಲ್ಲಿ ಕಲ್ಲುಗಳ ನೆಡುವ ಚಾಕ್ರಿ ಮೇಲೆ ಸರಗರಂ ಆಗಿ ಇದ್ದಾನು (ರಾಜೇಂದ್ರ. ೧೩೯). [← ಪಾರ. ಮರಾ. ಸರಗರಮ್]

**ಸರಗಸ್ತು** (ನಾ). ರಾತ್ರಿಯಲ್ಲಿ ಮಾಡುವ ಮದುವೆ ಮುಂತಾದುವುಗಳ ಮೆರವಣಿಗೆ: (*). [← ಪಾರ. ಮರಾ. ಸರಗಶ್ತ್]

**ಸರಗಾಣ್** (ಕ್ರಿ). ಧ್ವನಿಯನ್ನು ಪರೀಕ್ಷಿಸು : ವೀಣೆಯನರಸಿ ತೆಗೆಕೊಂಡಾ ಶ್ರುತಿಯ ಕಿಱುವೆರಳಿನಲಿ ಮಿಡಿದೊಡನೆ ಚೇಪಿಯನೆತ್ತಿ ಸರಗಂಡು ಹೊರೆಯ ಮಧುರದ ಷಡ್ಜಪಂಚಮದೆರಡುತಂತಿಯನಾರಯಿದು . . . ಬಾಜಿಸಿದಳಾ ಚದುರೆ (ಸಾಳ್ವಭಾ. ೧೮-೭). [ಸರ₁ + ಕಾಣ್]

**ಸರಗು** 'ಸರಕು₁' ನೋ.

**ಸರಗುಣಿಕೆ** (ನಾ). ಎಳೆದರೆ ಬಿಗಿದುಕೊಳ್ಳುವಂಥ ಗಂಟು ; ಜೀರುಗುಣಿಕೆ : ಬಳಿಯ ಕನ್ನಡಕ . . . ದಾರಕಟ್ಟಿ ಹಿಂದೆ ಸರಗುಣಿಕೆ ಹಾಕುವಂಥದು (ನಾಡಿಗೇ. ೧೦೬) ; ಮೊದಲನೆಯ ಮುದುಕನು ಉದ್ದವಾಗಿ ಹಗ್ಗವನ್ನು ಹೊಸೆಯುತ್ತ ಅದರ ಸರಗುಣಿಕೆಯನ್ನು ಹೊಸಬನ ಕೊರಳಿಗೆ ಸಿಕ್ಕಿಸಿದನು (ಮಗಜ. ೩). [ಸರ್₂ + ಕುಣಿಕೆ₂ (< ಕುಳಿಕೆ₁)]

**ಸರಗುದ್ದು** (ನಾ). ಉದ್ದವಾಗಿ ಇರುವ ಬಿಲ : ಗುದ್ದುಗಳಲ್ಲಿ ಕೆಲವು ಬಹಳ ಉದ್ದವಾಗಿರುತ್ತವೆ. ಅವುಗಳನ್ನು ಸರಗುದ್ದು ಎಂದು ಕರೆಯುತ್ತಾರೆ (ಕಾನೂರು. ೩೯೦). [ಸರ್₂ + ಗುದ್ದು₃]

**ಸರಗೆಯ್** (ನಾ). ಹಾರದಂತೆ ಮಾಡು ; ಮಾಲೆಗಟ್ಟು : ಬಲಿದ ಬಾಳೆಯ ಕಾಯ . . . ಚಿಕ್ಕಡಕೆಯಂದದೊಳು ಕತ್ತರಿಸಿ ಬಲಿಯಿಸಿದ ಹಾಲಂ ಮತ್ತದಱ ತೆಱಿದಿ ಕುಯ್ದು ಬಾಳೆಯ ಕಾಯನು ಬೆರಸಿ ಸರ [ಪಾಠಾಂ. ರಿ]ಗೆಯ್ದು ತುಪ್ಪದೊಳದ್ದಿ (ಸೂಪಶಾ. ೪-೮೪). [ಸರ್₂ + ಕೆಯ್₁]

**ಸರಗೆಯ್ಯು** 'ಸರಂಗೆಯ್' ನೋ.

**ಸರಗೈ** 'ಸರಂಗೆಯ್' ನೋ.

**ಸರಗೊಡು** 'ಸರಂಗುಡು' ನೋ.

**ಸರಗೊಳಿಸು** 'ಸರಂಗೊಳಿಸು' ನೋ.

**ಸರಗೊಳು** 'ಸರಂಗೊಳ್' ನೋ.

**ಸರಗೋಲು** (ನಾ). (?). ಎಷ್ಟು ತಿಂದು ಕುಡಿದಿದ್ದನೆಂದರೆ, ಕಡುಬು ತುಂಡು ಕಳ್ಳು ಹೆಂಡ ತುಂಬಿದ ಸರಗೋಲಾಗಿ ಹೋಗಿದ್ದನು ! (ಮಲೆಮ. ೨೪). [?]

**ಸರಗೋವಿ** (ನಾ). ನಿಡಿದಾದ ಕೋವಿ, — ಬಂದೂಕು : ಆನೆಗಳ ನೀಡುಗೋಡುಗಳಿಂ ಕಂಭಂಗಳಿಂ ಗಂಡುಗಲಿಗಳ ಗುಂಡುಗೋವಿ ಸರಗೋವಿಗಳಿಂ ಬೋದಿಗೆ ತೊಲೆಗಳಂ . . . ಅಳವಡಿಸಿ (ಚಕವಂ. ೫೪-೧೪). [ಸರ್₂ + ಕೋವಿ₁]

**ಸರಜಂಗು** (ನಾ). (ಎತ್ತು, ಕುದುರೆಗಳ ಕಾಲಿಗೆ ಕಟ್ಟುವ) ಸಣ್ಣಗೆಜ್ಜೆ: ಬಸವಣ್ಣ ಬೋರಂಗಿ ಪಕ್ಕ ಸರಜಂಗು ಕಟಗೊಂಡು ಏರಿ ಮೇದಾನೊ ಎಳೆಹುಲ್ಲೊ (ಜನಗೀ. ೧೬) ; ಕರಿಯೆತ್ತಿಗೆ ಕ್ರಮಳದ್ದೂ ಬಿಳಿಯೆತ್ತಿಗೆ ಗೆಜ್ಜೆಸರ ಸಾರಂಗೆಂಬುಯೆತ್ತಿಗೆ ಸರಜಂಗ ಕಟ್ಟಿತ್ರ (ಲೋಕಗೀ. ೧೬೭). [ಸರ್₂ + ಜಂಗು₂]

**ಸರಜ್ಯಾ** (ನಾ). ಕರವಸೂಲಿ ಮಾಡುವ ಮುಖ್ಯಾಧಿಕಾರಿ; ಜಕಾತಿದಾರ : ನಿಚ್ಚಮ ದವಣಿಗ ಹನುಮಪ್ಪನಾಯಕರ ಪುತ್ರರಾದ ಸರಜ್ಯಾಹನುಮಪ್ಪನಾಯಕರು (ಎಕ. VI, ತರೀಕೆ. ೨೧-೧೩ ; 1655). 'ಸರ್ಜ಼₂' ಪರಾ. [IP ಇದು 'ಸರ್ಜಾ' ಎಂಬುದರ ಅಪಲಿಖಿತ]

**ಸರಟ** (ನಾ). ೧. ಓತಿಕೇತ ; ಊಸರವಳ್ಳಿ : "ಸರಟಃ, ಕೃಕಲಾಸಃ - ಈ ೨ ವೊತಿ" (ಹಲಾಯು. ೩೯-೬೧) ; ನರಿ ಶಶಕಂ ವೃಕಂ ಸರಟನೆಯ್ಮಿಗಂ ಮರೆವಿಂದು ಬೆಕ್ಕು (ಗಿಂಕ. ೧-೭೩) ; ಹರಿಣ ಭಾರದ್ವಾಜನುಡಿಕೆಯ ಸರಟ ನಕುಲನ . . . ಶಕುನವನು ಕೈಕೊಳುತ ನಡೆತಂದ (ಕುವ್ಯಾಅ. ೪-೩೩). ೨. ಗಾಳಿ. ೩. (ಆಲಂ) ಅನಿಶ್ಚಯಬುದ್ಧಿಯವನು: ಸರಟನ ಮುಂದೆ ಸತ್ಯವಿದ್ದಡೆ ನಿಶ್ಚಯಿಸಲಱಿಯ (ವೋಲಿಮಾ. ೨೫-೧೦೦). [ಸಂ.]

**ಸರಟಪುರ** 'ಸರಟವುರ' ನೋ.

**ಸರಟವುರ, ಸರಟಪುರ** (ನಾ). ಒಂದು ಊರಿನ ಹೆಸರು : IP ಧಾರವಾಡಜಿಲ್ಲೆಯಲ್ಲಿರುವ ಈಗಿನ ಗದಗತಾಲ್ಲೂಕಿನ ಸೊರಟೂರು : ಪುರಿಗೆಱೆನಾಡ ಸರಟವುರದಾ(ದ)ಯ್ಯದಿಮ್ಬರುಮಿಟ್ಟು ನಾಡಯಿಸೆ ಮಾನಸಿಗರ ಚಿದಾ(ದ)ಣ್ಣ(೦) ಗೋಸಾಸಮಿಟ್ಟೊ(೦) (ಎಇ. XXI. ೨೦೮-೫ ; 883); ಸರಟವುರಮನಂಗರಕಂ ಶ್ರೀರುದ್ದಪಯ್ಯನಾಳುತ್ತಿರೆ (ಇಆ. XII. ೨೫೭-೩ ;951). **ಸರಟಪುರ:** ಸರಟಪುರದ ಅಯ್ಯದಿಮ್ಬರ್ಗ್ಗಾ X ಯಾನುಪುರ್ಬ್ಬದಿನ್ದ ತುಪ್ಪದೆ[ಱ]ನುಱಿದೋನ್ (ಸೌಇಇ. XI-i. ೧೨-೧೨; 867). [? + ಪುರ₂]

**ಸರಡ** 'ಸರಾಡ₁' ನೋ.

**ಸರಡು₁** (ನಾ). ಮೋಸ; ಕಪಟ : ಬರೆದಾತನ ಸಾಕ್ಷಿಗಳಳಿದರು ಗಡ ನೆರವಿ ನೀವಪ್ಪುದೆಂಬಿರಿ ಗಡ ಸರಡಿನೋಲೆಯ ತೋಱಿ ನಮ್ಮನಾಳ್ದಪ ಗಡ ದುರುಳ ಹಾರುವ ಲೇಸುಲೇಸೆಂದ (ತ್ರಿಭುತಿ. ೧೦-೧೬) ; ಸರಡುಂ ಬರಡುಂ ನುಡಿಗಳ ಪರಿಹರಿಸಿ ನಿಜಾತ್ಮಗುಣ ಪೆರ್ಚಿಸುವಂತಾಯರಡೆರಡುಂ ಮಾತಿನಿಂದಲಿ ನಿರಂತರಂ ತತ್ವದಲ್ಲಿಯಭ್ಯಾಸಿಸು ನೀಂ (ಭವ್ಯಾಮೃ. ೧೪). [← ತಮಿ. ಚರಟು = ಯುಕ್ತಿ]

**ಸರಡು₂** (ನಾ). ಎಳೆಯದಾದ ಹಣ್ಣು : ಪರಡಿಗವಿಲಿಯ ಪಾಯಸಂಗಳ ಬಡಿಸುತಂ ಸರಡುಸವಿಗಳ ಪಳಿವ ತಿಳಿದುಪ್ಪಮಂ ನೆಱಿದು (ಲಿಂಗಪು. ೧೪-೩೬). [< ಪ್ರಾ. ಸರಡು. / ಸಂ. ಶಾಲಾಟು]

**ಸರಡು₃** (ನಾ). ಒಂದು ಬಗೆಯ ಜರತಾರಿಬಟ್ಟೆ : ಸಾವಳಿ ಸರಡು . . . ಚಂದ್ರಾಭರಣ ಮೊದಲಾದ ನಾನಾವಸ್ತ್ರಗಳಂ ಕುಡುವ ಪದ್ಮನಿಧಿಯುಂ (ಶಾಸ್ತ್ರಟೀ. ೧೯-೬). [?/ ತಮಿ. ಚರಟು]

**ಸರಡುವೀಟ್** (ಕ್ರಿ). ಒಣಗು ; ಬಾಡು (?) : ಬೇಸಗೆಯ ಬಿಸಿಲ ಸೋಂಕಿಂ ವಾಸಂತೀವಲ್ಲಿ ಸರಡುವಿರ್ದಂತಿರೆ ನಿನ್ನೀ ಸುಕುಮಾರಲತಾತಿವಿಳಾಸಮಿದೇಕಾರಣಂ ನಯಂಗುಂದಿದುದೋ (ಮಲ್ಲಿಪು. ೪-೭). [ಸರಡು$_1$ + ಬೀಟ್$_1$]

**ಸರಡೆ** 'ಸಱಡು' ನೋ.

**ಸರಣ್** 'ಶರಣ್' ನೋ.

**ಸರಣ$_1$** (ನಾ). ೧. ಚಲನೆ ; ಗತಿ. ೨. ಪ್ರವಾಹ. ೩. ಕಬ್ಬಿಣದ ತುಕ್ಕು,– ಜಂಗು. [ಸಂ.]

**ಸರಣ$_2$** (ನಾ). ಚಿತೆ : ಒಂದ ಸರಣದಾಗ ನಾಲ್ಕ ನಾಲ್ಕ ಹೆಣ (ನಿಸರ್ಗ. ೧೫೪) ; ಸರಣದಾಗ ಹಾಕಿದರೂ ಅವ ತನ್ನ ಗುಣ ಬಿಡುವುದಿಲ್ಲ (ಸುವರ್ಣ. ೩೭೭). [← ಮರಾ. ಸರಣ]

**ಸರಣವೃತ್ತಿ** (ನಾ). ಶರಣರ ಭೋಜನಕ್ಕಾಗಿ ಬಿಟ್ಟ ದತ್ತಿ : ಅಳ್ಳಿಯನ ಮಗಂ ನಾದಯ್ಯನ ಬಮ್ಮಂ ದಳಱಿಂ ಕೊ[ಣ್ಡು] ಬಿಟ್ಟ ಸರಣವೃತ್ತಿ (ಮೈಆರಿ. ೧೯೩೦, ೭೫-೨೯ ; 1082). [< ಸಂ. ಶರಣವೃತ್ತಿ]

**ಸರಣಾಗತ** (ನಾ). ಮೊರೆಹೊಕ್ಕವನು ; ಶರಣಾದವನು : ಸಾಹಸೋತ್ತುಂಗಂ ಸರಣಾಗತವಜ್ರಪಂಜರಂ ವೈರಿಮದಭಂಜನಂ (ಸೌಇಇ. XI, ೪೦-೧೨ : 1068). [< ಸಂ. ಶರಣಾಗತ]

**ಸರಣಿ** (ನಾ). ೧. ದಾರಿ; ಹಾದಿ; ಮಾರ್ಗ: ಗುರುವೆ ನಿಮ್ಮಲಿ ನಾವು ವೀರರ ಸರಣಿಯನು ಬೆಸಸುವುದು ತನಗೆ (ಕಾಶಿರಾ. ೯-೬೩) ; ಉಪಾಯಮಂ ಸಾಧಿಸುವ ಸರಣಿಯನೊರೆಯಬೇಕು (ಗಗತಾ. ೧೩-೧೧). ೨. ಕ್ರಮ ; ರೀತಿ ; ವಿಧಾನ : ಲೋಹಕ್ಕೆ ಪರುಷದ ಸರಣಿಯಿಂ ಗತಪೂರ್ವವರ್ಣಾಂತಪ್ರಯುತಮಾಗಿ (ಬಸವು. ೩೮-೪೫) ; ಮುನಿಪತಿಯರಣಿಯನು ಕೊಂಡೊಯ್ದ ಹುಲುಮೃಗಸರಣಿಯಲಿ ಸ್ವೈರಿದರಂದಾಕರ್ಣ ಮಾರ್ಗಣರು (ಕುವ್ಯಾಅ. ೨೩-೯) ; ನಾನು ಬರೆಯುತ್ತಿರುವ ವಾಕ್ಯಗಳಲ್ಲಿ ಸರಣಿಯಿಲ್ಲ (ಹೊಸಕ್ಕ. ೩). ೩. ಶೈಲಿ ; ಧಾಟಿ ; ಗತಿ : ಸರಳತೆಗೆ ಮನವೊಲಿದಿದ್ದ ವೀರಶೈವಕವಿಗಳ ರಚನೆಗೆ ಸಾಂಗತ್ಯದ ಸರಣಿ ತುಂಬ ಅನುಕೂಲವಾಯಿತು (ಕುಮಾಸಾಂ. ೪) ; ಅವಳ ಮಾತಿನ ಸರಣಿ ತನ್ನ ಸರಳಮನಸ್ಸಿಗೆ ಸಮನಾದ ಅರ್ಥ ಕೊಡದೆ ಹೋಯಿತು (ಮೂಕಜ್ಜ. ೩೪). ೪. ನೇರವಾದ ಸಾಲು ; ಅವಿಚ್ಛಿನ್ನವಾದ ಶ್ರೇಣಿ. ೫. ಒಂದು ಬಗೆಯ ಗಂಟಲುಬೇನೆ. [ಸಂ. ಸರಣಿ, ಸರಣೀ]

**ಸರಣಿಗೆಡು** (ಕ್ರಿ). ಹಾದಿತಪ್ಪು ; ದಾರಿತಪ್ಪು : ಕಲಕಲುಂ ಸಕಲಸಿಂಧುಗಳ್ ತರಣಿಶಶಿಗಳ್ ಸರಣಿಗೆಡೆ ಜಗದೊಳಂಧಕಾಸುರನ ಭೇರೀರವಂ ಪೊಣ್ಮಿದುದು (ಚೆಬುಪು. ೪೭-೩೧). [ಸರಣಿ + ಕೆಡು$_1$]

**ಸರಣಿದೋಱು** (ಕ್ರಿ). ಮಾರ್ಗವನ್ನು ಕಾಣಿಸು ; ಹಾದಿಯನ್ನು ತೋರು : ತೊಱೆವೆಣ್ಣೆಬ್ಬಗೆಯಾಗಿ ಸರಣಿದೋಱಲು ವರಗುರುಶಿಷ್ಯರೊಂದಾಗಿ ನಡೆಯೆ (ಕರಚಾ. ೪-೪೦). [ಸರಣಿ + ತೋಱು]

**ಸರಣು** 'ಶರಣ್' ನೋ.

**ಸರಣ್ಬುಗು** 'ಶರಣ್ಬೊಗು' ನೋ.

**ಸರಣ್ಬೊಗು** 'ಶರಣ್ಬೊಗು' ನೋ.

**ಸರತಪ್ಪು** 'ಸರದಪ್ಪು' ನೋ.

**ಸರತಾತಿ** (ನಾ). ತೋಳಿಗೆ ಧರಿಸುವ ಒಂದು ಬಗೆಯ ಆಭರಣ : ತೋಳೊಳೊಪ್ಪುವ ಸರತಾತಿ ಹೊಂಬಳೆಗಳ ಬಾಲೆವೆಣ್ಣುಗಳೈದಿದರು (ಕಂನವಿ. ೨೧-೧೬). 'ಸರದಾಳಿ$_1$' ಪರಾ. [ಸರ$_2$ + ತಾತಿ$_2$ (< ತಾಯಿತಿ)]

**ಸರತಿ$_1$** 'ಸರದಿ$_3$' ನೋ.

**ಸರತಿ$_2$** 'ಸರದಿ$_4$' ನೋ.

**ಸರತ್ನಿ** (ನಾ). ಮೊಳಕೈಯಿಂದ ಮುಷ್ಟಿಯ ತುದಿವರೆಗಿನ ಅಳತೆ ; ಒಂದು ಗುದ್ದುಮೊಳ : "ಸರತ್ನಿ – ಹಿಡಿಕೆಯ ಹಿಡಿದು ಅಳೆದ ಮೊಱಂ" (ನಾಚಿರಾ. ೬). [ಸಂ.]

**ಸರಥ** (ಗು). ೧. ರಥಸಹಿತವಾದ ; ರಥವನ್ನುಳ್ಳ. ೨. ಒಂದೇ ರಥದಲ್ಲಿ ಏರಿರುವ. (ನಾ). ೩. ರಥದಲ್ಲಿದ್ದುಕೊಂಡು ಯುದ್ಧಮಾಡುವವನು; ರಥಿಕ : ಸರಥನದೊರ್ವಂ ದೂರದೆ ಬರುತಿರ್ದಪನವನೊಳಱಿವೆನಾಹವ ವಾರ್ತಾಂತರಮಂ (ಕುಸುಮಾ. ೧೧-೧೬). [ಸಂ.]

**ಸರದ** (ನಾ). ಶರತ್ಕಾಲ ; ಶರದೃತು : ಸರದದ ಮುಗಿಲನೆ ಬಿಡದನುಕರಿಸುವ ಧವಳಾಶ್ವದಿಂದಮೆಸೆದೊಪ್ಪುವ ಲೋಹರಥಂ (ಪಂಪಭಾ. ೧೧-೫೭) ; ಸರದದ ಮುಗಿಲ್ಗಳೆಣಿಗಿದ ತರಳಸ್ಫಟಿಕಾದ್ರಿನಿಕರಮೆನೆ . . . ಪರ್ದೆರೆವಿಂಡುಗಳೆಸೆವುವಾ ಮಹಾವಾಹಿನಿಯೊಳ್ (ಚಂದ್ರಪ್ರ. ೧೧-೫೦) ; ಸರದದ ನವಚಂದ್ರಿಕೆಯಂ ಪೊರೆಯೆತ್ತಿದ ತೆಱದೆ ಮಿಱುಪ ಬೆಳ್ಪಿಂ ತಳ್ಪಿಂ ಪಿರಿದೆಸೆವ ಮಂಡಕಾಪರಿಕರಮಂ ಬಡ್ಡಿಸಿದರಸದಳಂ ಸುರಸತಿಯರ್ (ಶಾಂತೀಶ್ವ. ೧೫-೬೦). [< ಪ್ರಾ. ಸರದ. /ಸಂ. ಶರದ್]

**ಸರದಪ್ಪು**, ಸರತಪ್ಪು (ನಾ). ಒಂದಾದ ಮೇಲೊಂದರಂತೆ ಆಗುವ ತಪ್ಪು; ತಪ್ಪುಗಳ ಸರಣಿ : ಸಾಕ್ಷಾತ್ ವಿರೂಪಾಕ್ಷನ ಸನ್ನಿಧಿಯಲ್ಲಿ ಹೇಳಿಸುವುದು ನಾಲ್ಕನೆಯ ಸರದಪ್ಪು (ತುಂಗಭ. ೯೭). **ಸರತಪ್ಪು** : ಬರೆದ ಉತ್ತರದಲ್ಲೆಲ್ಲಾ ಸರತಪ್ಪುಗಳೇ ತುಂಬಿವೆ (ರೂಢಿ). [ಸರ$_2$ + ತಪ್ಪು$_2$]

**ಸರದಾಗಮ** (ನಾ). ಶರತ್ಕಾಲದ ಆಗಮನ,– ಪ್ರಾರಂಭ : ಸರದಾಶಯಕ್ಕೆ ವಿಶದತೆ ಸರದಾಗಮದಿಂದಮಪ್ಪ ತೆಱದಿಂದೆ ಮುನೀಶ್ವರರಾಗಮದಿಂದವನೀಶ್ವರಾಶಯ ಕ್ಕಾದುದತಿಶಯಂ ವಿಶದತ್ವಂ (ಪಾರ್ಶ್ವಪು. ೧೨-೩೪). [< ಸಂ. ಶರದಾಗಮ]

**ಸರದಾರ**, ಸರ್ದಾರ್, ಸರ್ದಾರ (ನಾ). ೧. ದೊಡ್ಡ ಅಧಿಕಾರಸ್ಥ; ಮುಖ್ಯ ಅಧಿಕಾರಿ : (ಕ). ೨. ದಕ್ಷ ; ಸಮರ್ಥ : "ಸರದಾರನೆನಲ್ ಸಲೆ ಸಮರ್ಥನೆಂದಱಿಗೆ ಬುಧರ್" (ಭಾರನಿ. ೩೪) ; ದಾರಿಯಿಂದ ಹೋಗುವ ಕಳ್ಳನು ಸಹ ಇಂಥಾ ಶೂರ ಸರದಾರನಿಗೆ ಇಷ್ಟು ಕಮ್ಮತ್ತು ನಗುನಗುತ್ತಾ ಕೊಟ್ಟಾನು ! (ಮೋಹಿನೀ. ೭೭). ೩. ಒಡೆಯ; ಯಜಮಾನ : ಸರದಾರ ಬರುವಾಗ ಸುರಿದಾವ ಮಲ್ಲೀಗಿ ದೊರೆ ನನ್ನ ತಮ್ಮ ಬರುವಾಗ ಯಾಲಕ್ಕಿಗೊನಿ ಬಾಗಿ ಹಾಲ ಸುರಿದಾವ (ಗರತಿ. ೫೮) ; ಸರದಾರ ನಿಮ್ಮಿಂದ ಸರುವೆಲ್ಲ ಮರತೇನ ಸರದಾಗ ಇರುವ ಗುಳದಾಳಿ ನಿಮ್ಮಿಂದ ಸರುವಬಗೆಲ್ಲ ಮರತೇನ (ಕನ್ನಜಾ. ೧೯೯). ೪. ಸೇನಾಧಿಕಾರಿ ; ಪಡೆವಳ : ಕೊಡಗಿನ ಮಂದಿಯು . . . ಅವರ ಕಡೆಯ ಸುಮಾರು ೧೫೦೦ ಜನ ಪರಿಯಂತರ ಮೃತವಾಗಿ, ೭೭ ಅಂದಳದ ಸರದಾರರ ಸಹ ಕಡಿದು ಹಾಕಿದರು (ರಾಜೇಂದ್ರ. ೫) ; ಸಾಹಸವ ತೋರ್ಪೆವೆಂದಾವರಿಸಿ ಜರ್ನಲ್ಲು ಕರ್ನಲ್ಲು ಮೊದಲಾದ ಸರದಾರರೈತಂದರು (ವರ್ಷವ. ೩-೫೪) ; ಸಾವಿರಕುದುರೆ ಸರದಾರ ಮನೆಹೆಂಡತಿಗೆ ಕಾಸ್ತಾರ (ಗಾದ). **ಸರ್ದಾರ್** : ೧. (ಲೈಸ್‌ಗ. II, ೫೭೧). **ಸರ್ದಾರ** : ೧. ನೌಕರರಿಗೆಲ್ಲ ಅವನೇ ಸರ್ದಾರ (ಸಾಹೇಬ್. ೧೩) ; ಬೀದಿಪೋಲಿಯಾಗಿ ತಿರ್ಗಾಡ್ತಿದ್ದ ಆ ಭುಜಂಗ ದೊಡ್ಡ ಸರ್ದಾರ ಆಗಿ ಸೂಟುಬೂಟು ಹಾಕಾಕೆ ಸುರುಮಾಡ್ದ ! (ದೇಶಥು. ೭೫). [← ಫಾರ. ಹಿಂ. ಮರಾ. ಸರ್ದಾರ್]

**ಸರದಾಲಿ**, ಸರದಾಳಿ$_2$ (ನಾ). ಒಂದು ಬಗೆಯ ಔಷಧೀಸಸ್ಯ : "ಕಾಡಿಲ್ಕ:- ಕಂಬಳಿಹುಳ, ತುಂಬಿ, ಸರದಾಲಿ" (ಓಷಧಿ. ೪೨) ; ಗುಹಾ = ಸರದಾಲೀ (ವಿಷ್ಣುವಿ. ೬೦). **ಸರದಾಳಿ$_2$** : ಬಹುಮೂತ್ರಕ್ಕೆ – ಸರದಾಳಿಯ ಸಮೂಲವಂ ತಂದು ನಿಂಬೆಹುಳಿಯಲ್ಲಿ ಕೊಳ್ಳಲು ಗುಣ (ವಿಷ್ಣುವಿ. ೧೨೧). [?]

**ಸರದಾವಣಿ** (ನಾ). ದನಗಳನ್ನು ಸಾಲಾಗಿ ಕಟ್ಟುವ ಹಗ್ಗ, – ಹಂತಿ ಕಟ್ಟುವ ಹಗ್ಗ : ಸರದಾವಣಿಗೆ ದನವನು ಮಾಡಿ ಕಟ್ಟಿಯೆ ಹರುಷದಿಂಬಾಳುತಾಳಿಹಳು (ದೇವಾಂಪು. ೨-೨೫೨). [ಸರ$_2$ + ದಾವಣಿ$_1$]

**ಸರದಾಳಿ$_1$** (ನಾ). ಒಂದು ಬಗೆಯ ಕಂಠಾಭರಣ : ಕೊರಳಿನಲ್ಲಿ ಗಟ್ಟಿಮುಟ್ಟಿಯಾದ ಐವತ್ತು ಪುತ್ಥಳಿಗಳ ಸರವೊಂದು, ಗೆಜ್ಜೆಟೀಕೆ, ಸರಿಗೆ, ಸರದಾಳಿ ಸಾಮಾನೊಂದಚ್ಚೇರಿನದು (ಹೂಬಟ್ಟ. ೭೨). [ಸರ$_2$ + ತಾಳಿ$_1$ (< ತಾಲಿ$_1$). /ತಮಿ. ಚರಟ್ಟುತ್ತಾಲಿ]

**ಸರದಾಳಿ$_2$** 'ಸರದಾಲಿ' ನೋ.

**ಸರದಿ$_1$** (ನಾ). ಕಡಲು ; ಸಮುದ್ರ : ಸೊರೆಯೊಳಗೆ ತೀವಿ ಮಣ್ಣಿಂ ಸರದಿಯೊಳಿಕ್ಕಿದೊಡೆ ನೆಗೆಯಲಾರ್ಪುದೆ (ಧರ್ಮಾಮೃ. ೯-೧೨೧). [< ಸಂ. ಶರಧಿ]

**ಸರದಿ$_2$**, ಸರ್ದಿ (ಗು). ೧. ತಂಪಾದ ; ಶೀತಲವಾದ. (ನಾ). ೨. ತಂಪು ; ಶೈತ್ಯ : (ಕ). ೩. ನೆಗಡಿ : (ಕ). **ಸರ್ದಿ** : ೧. ಮಳೆಗಾಲದಲ್ಲಿ ಉಪ್ಪಿನ (ಉತಾರ) ಅಳತೆ ಮತ್ತು ತೂಕ ಬಹಳೇ ಕಡಿಮೆ ಬರುತ್ತದೆ . . . ಸರ್ದಿಹವೆಯಿಂದ ಹಶಿಆಗಿ ಉಚಾರನಕಾ ಬಹಳೇ

ಕಡಿಮೆ ಬರುತ್ತದೆ (ಮುಂಬವ್ವಾ . ೨೬೬). ೩. ಮಳೆಯಲ್ಲಿ ನೆನೆದು ಮಗುವಿಗೆ ಸರ್ದಿ ಆಗಿದೆ (ರೂಢಿ). 'ಶಲದಿ₂' ಪರಾ.

[← ಪಾರ. ಹಿಂ. ಸರ್ದೀ ; ಮರಾ. ಸರದೀ, ಸರ್ದೀ]

**ಸರದಿ₄, ಸರತಿ₁, ಸರ್ತಿ, ಸರ್ತು** (ನಾ). ೧. ಪಾಳಿ ; ಅನುಕ್ರಮ : ಶ್ರೀಕಳಶನಾಥ ದೇವರಿಗೆ ಸಲುದು ಗ ೨ ಒಸಗೆ ಹೋರಿನಾಡ ಸೀಮೆಗೆ ಸಲಗೆಗೆ ಒಂದು ಹಣವಿನ ಸರದಿ ಬಂದಾಗ ಯಾ ಗ್ರಾಮಕ್ಕೆ ತೆತ್ತು ಬಹುದು (ಮೈಆರಿ. ೧೯೫೦, ೨೮-೨೯ ; 1507) ; ಈ ಸರದೀ ಪ್ರಕಾರ ಒಂದು ದಿನ ಒಬ್ಬ ಬ್ರಾಹ್ಮಣನು ತನ್ನ ಮಗನನ್ನು ಅಸುರನಿಗೆ ಆಹುತಿ ಕೊಡಬೇಕಾಗಿತ್ತು (ನೀತಿಚಂ. XIII. ೧೯); ನಾವು ಪರದೆಯ ಹಿಂದಕ್ಕೆ ಹೋಗಿ ನಮ್ಮ ಸರದಿಯನ್ನು ಕಾಯುತ್ತಿದ್ದೆವು (ಶಾಲಮ. ೨೦೪). **ಸರತಿ₁** : ೧. ನೋಡ ಬನ್ನಿರೆ . . . ಪರಿಪರಿ ವಿನಿಯೋಗದವರೆಲ್ಲ ತಾವ್ ತಮ್ಮ ಸರತಿ ತಪ್ಪದೆ ಬಂದು ಇರುತಿಪ್ಪ ಸೊಬಗನು (ಪುರಂದ. ೨-೪೨-೨) ;ಇಂದಿನಿಂದಲೇ ಸರತಿಯಿಂದ ರೋಗಿಯ ಶುಶ್ರೂಷೆ ಆರಂಭವಾಗಬೇಕು (ಏಡಸ. ೨೦). ೨. ಸಲ; ಬಾರಿ: ಆಡುಗಳು ಸರತಿಗೆ ಎರಡು ಮೂರು ಮರಿಗಳನ್ನು ಈಯುತ್ತವೆ (ಮುಂಬಯಿ. ೩-೧೧) ; ತಲೆಗೊಂದು ಬುದ್ಧಿ, ಸರತಿಗೊಂದು ಮಾತು (ಸಾಹಿವಿ. ೩). **ಸರ್ತಿ:** ೨. ಉಳಿಕೆ ಅಕ್ಕಿ ಸಾಗಿಸಿಕೊಂಡು ಹೋಗುವ ಬಗ್ಗೆ ಯೆರಡನೆ ಸರ್ತಿ ಬರುತ್ತೇವೆ (ರಾಜೇಂದ್ರ. ೪೨); ಇಪ್ಪತ್ತುದಿನ ಹಾಕಿಬಿಟ್ರು ಸರ್ಕೀಟು ಈ ಸರ್ತಿ (ನಡದಾ. I. ೫೩೩); ಬೇಳಿಗೆ ಪಾರುಪತ್ಯ ಕೊಟ್ಟರೆ ಜಾವಕ್ಕೊಂದು ಸರ್ತಿ ಮುಟ್ಟಿಸಿತು (ಗಾದೆ). **ಸರ್ತು** : ೧. ಲಕ್ಷ್ಮೀದೇವರ ಸೇವೆ ಮಾಡಿ ಬಾನ ವಗ್ಗೈರೆಯರಡು ಯಿಸೆ ಪ್ರಕಾರ ದೇವತಾಸೇವೆಗಳು ನಡಶಿಕೊಂಡು ೧೦೦ ಮನೆಯ ಸರ್ತಿನ ಮ್ಯಾಲೆ ಯರಡು ಯಿಸೆ ಪ್ರಕಾರ ವರುಷವರುಷೆ ನಡಶಿಕೊಂಡು (ಮೈಆರಿ. ೧೯೨೯, ೯೭-೨೫ ; 1593?).

ಸರತಿಯ ಮೇಲೆ = ಒಬ್ಬರಾದ ಮೇಲೆ ಒಬ್ಬರಂತೆ ಅಥವಾ ಒಂದಾದ ಮೇಲೆ ಒಂದರಂತೆ : ನಾವು ಸರತಿಯ ಮೇಲೆ ಆ ಕೆಲಸವನ್ನು ಮಾಡಿ ಮುಗಿಸುವುದಾಗಿ ಒಪ್ಪಿಕೊಂಡೆವು (ರೂಢಿ). **ಸರತಿಯ ಸಾಲು** = ಪಾಳಿಗಾಗಿ ಕಾದು ನಿಂತಿರುವವರ ಸಾಲು; ಕ್ಯೂ: ಶಂಕರನ ತಂದೆ ಸರತಿಯ ಸಾಲಿನಲ್ಲಿ ಟಿಕೆಟ್ಟು ಕೊಂಡನು (ಕಪಪು. ೨-೧೮). [? / ತುಳು. ಸರ್ತಿ]

**ಸರದಿ₅, ಸರತಿ₂, ಸರದೆ** (ನಾ). ೧. ಒಂದು ಬಗೆಯ ತೆರಿಗೆ (?) : ಗ್ರಾಮಸರದಿಯಲೂ ಸಿಂಗೆರಿಯ (ಸೌಇಎ. ೧೯೩೭. ಉಡುಪಿ. ೨೪೩-೨೫ ; 1328?) **ಸರತಿ₂** : ೧. ಅರಮನೆಗೆ ತೆಱುವ ಸಮ್ಮುಳ ಸರತಿ ಕುಡಿಕೆ ಬೆಟೆಗೆ . . . ಎಲ್ಲವನು ಬಿಟ್ಟೆವೂ (ಎಕ. III. ಮಳವ. ೬೭-೫ ; 1550?). ೨. (?) : XXX ಬೆಳ್ಳಿಯ ದೇವರ ಸರತಿಯ ಮಠಂ (ಸೌಇ. XI-i. ೯೭-೪೧ ; 1062). **ಸರದೆ** : ೧. ನೀವು ಕೊಡುವ ಕಾಣಿಕೆ ಹಡಪಗಾಣಿಕೆ ಬಿಟ್ಟಿ ಬಿಡಾರ ಸೊಲ್ಲಗೆ ನಾಡ ಸರದೆಯ ಮಳವೆಯ ವರ್ತ್ತನೆ ಉಡುಗೊಱೆ ವುಲುಪೆ ಮುನ್ತಾಗಿ ಎಲ್ಲವನೂ ಸರ್ವ್ವಮಾನ್ಯವಾಗಿ ನಿಮಗೆ ಮಾಡಿದೆ (ಎಕ. VIII. ತೀರ್ಥಹ. ೧೯-೮೨ ; 1404). [?]

**ಸರದಿಪಟ್ಟಿ** (ನಾ). ಕೆಲಸಗಾರರ ಕೆಲಸದ ಪಾಳಿಯನ್ನು ತಿಳಿಸುವ ಪಟ್ಟಿ : (ಮು. ಸೈನ್ಯದಲ್ಲಿ) ವ್ಯಕ್ತಿಗಳ ಅಥವಾ ದಳಗಳ ಕೆಲಸದ ಸರದಿಯನ್ನು ತೋರಿಸುವ ಪಟ್ಟಿ; ಸರದಿಪಟ್ಟಿ (Roster. ಇಂಕನ). [ಸರದಿ₃ + ಪಟ್ಟಿ₂]

**ಸರದೀನಿ** (ನಾ). ನೀರಿನಲ್ಲಿಯೇ ಆಹಾರವನ್ನು ತಿಂದು ಬದುಕುವ ಜಲಚರ : ಸರಧೊಳ್(ದೊಳ್) ಸರದೀನಿಗಳಂಬರದೊಳ್ ನಕ್ಷತ್ರಪಂಕ್ತಿಗಳ್ ಪೂರ್ಣ್ನಕಳಾಧರ ನೊಳ್ ಕಳೆಗಳ್ ಬೆಳಪನ್ತಿರ ಬೆಳಗಿದವಖಿಳವಿದ್ವೆಗಳ್ ತ್ರ್ಯಂ(ತ್ರ್ಯಂ)ಬಕನೊಳ್ (ಇಇ. X. ೧೨೯-೪೯ ; 1074). [ಸರ₂ + ತೀನ್ನಿ₀ (< – ತಿನ್ನಿ₂)]

**ಸರದೀಪ** (ನಾ). ಸಾಲುದೀಪ : ಗುಡ್ಡದ ಮಲ್ಲಯ್ಯ ಗರುಡಗಂಬದ ಮೇಲೆ ಯಾರ ಹಚ್ಯಾರ ಸರದೀಪ ನಮ್ಮನೆಯ ಬಾಲ ಹಚ್ಯಾನ ನಿಜದೀಪ (ಕನ್ನಜಾ. ೮). [ಸಂ.]

**ಸರದುಂಬಿ** (ನಾ). ಒಂದು ಬಗೆಯ ತುಂಬೆಗಿಡ ; ಬಿಳಿತುಂಬೆ : (೬).

[ಸರ₄ + ತುಂಬಿ₂ (< ತುಂಬೆ₂)]

**ಸರದೂಳಿ** (ನಾ). ಹೆಣ್ಣು ಹುಲಿ : ಅಡವ್ಯಾಗ ಇರುವಂಥ ಸಾರಂಗ ಸರದೂಳಿ ಹೆಬ್ಬುಲಿ ಹುಲಿ ಕರಡಿ ಎಡಬಲ ಹಾಂವು ತೇಲೋ ದೇವಾ (ಮಲ್ಲಿಗೆ. ೨೦).

[< ಸಂ. ಶಾರ್ದೂಲೀ]

**ಸರದೆ** 'ಸರದಿ₄' ನೋ.

**ಸರದೇಶಮುಖಿ, ಸರ್ದೇಶಮುಖಿ** (ನಾ). ಮೊಗಲರ ಆಳ್ವಿಕೆಯಲ್ಲಿದ್ದ ಪ್ರಾಂತಗಳ ಮೇಲೆ ಮರಾಠರು ಹೇರುತ್ತಿದ್ದ ಒಂದು ಬಗೆಯ ಕರ : ಬಾಳಾಜಿಯು . . . ಮೊಗಲರ ರಾಜ್ಯದೊಳಗೆ ಚೌಥಾಯಿ (ವಸೂಲಿನ ನಾಲ್ಕನೇ ಪಾಲು), ಸರದೇಶಮುಖಿ (ವಸೂಲಿನ ಹತ್ತನೇ ಪಾಲು) ಎಂಬ ಬಾಬುಗಳನ್ನು ಇವನು ಶಾಹೂ ರಾಜನಿಗೆ ಸಂಪಾದಿಸಿಕೊಟ್ಟನು (ಕರ್ನಾಇ. ೬೭). **ಸರ್ದೇಶಮುಖಿ** : ಶಿವಾಜಿ ತನ್ನ ಮಗನಿಗಾಗಿ ಬಿಜಾಪುರ ಸಂಸ್ಥಾನದಿಂದ ಚೌತ್ಥಾಯಿಯನ್ನೂ ಸರ್ದೇಶಮುಖಿಯನೂ ಸಂಗ್ರಹಿಸಲಧಿಕಾರಿಯಾದನು (ಛತ್ರಶಿ. ೪೧). 'ಸರ್‌ದೇಶಮುಖಿ' ಪರಾ.

[← ಮರಾ. ಸರ್‌ದೇಶಮುಖೀ]

**ಸರದೋಱು** 'ಸರಂದೋಱು' ನೋ.

**ಸರನಿಧಿ** (ನಾ). ಕಡಲು ; ಸಮುದ್ರ : ಶರಣಾಗತಪ್ರತತಿಗಾ ಹರಿನಂದನನಿಂದ್ರನಂದನಂ ಸರನಿಧಿಯೆಂದು ಬಣ್ಣಿಪುದು ಸಜ್ಜನಸಂತತಿ . . . ಕಾಮಿಸೆಟ್ಟಿಯನ್ (ಕಇ. IV. ೧-೫೦ ; 1204) ; ಸೋರೆಯಿಂದಂ ದಾಂಟಲೇನಕ್ಕುಮೇ ಸರನಿಧಿಯಂ (ಪಾಪ್ರಾಶ. ೪೧). [ಸಂ.]

**ಸರನೇಜ** 'ಸರನೇಜೆ' ನೋ.

**ಸರನೇಜೆ, ಸರನೇಜ** (ನಾ). ೧. ಒಂದು ಬಗೆಯ ಈಟಿ : ಅರಿರಾಯ ಲಪನದಿ ತಿವಿದು ಸರನೇಜೆಯ ಹೆಡತಲೆಯೊಳು ತೆಗೆದನೊ (ಜ್ಞಾನಚ. ೧೯-೯೫). **ಸರನೇಜ:** ೨. ಬಿರುದು ಬಾವಲಿಗಳನ್ನು ಸೂಚಿಸುವ ಒಂದು ಬಗೆಯ ಸಾಧನ : ಅರಿದಲ ಸುಶಂಖಚಕ್ರಂ ಕರಮೊಪ್ಪುವ ಕನಕಚಾರಿ ಸೀಗುರಿ . . . ಚಮರಂ ಸರನೇಜಮೆನಿಪ್ಪ ಬಿರುದುಗಳನೊಸೆದಿತ್ತಂ (ಕೆಳನೃ. ೧-೧೧೧). [ಸರ₄ + ನೇಜೆ (< ನೇಜಯ)]

**ಸರಪಂಚ** (ನಾ). ಪಂಚರಲ್ಲಿ ಪ್ರಮುಖನಾದವನು ; ಪಂಚಾಯತಿಯ ಅಧ್ಯಕ್ಷ : ದೇವಾಲಯಗಳಲ್ಲಿ . . . ಪೂಜಾ ನೈವೇದ್ಯ ಮೊದಲಾದ ಕೆಲಸಗಳು ನಡಿಯುವಂತೆ ಸರಪಂಚರನ್ನು ನೇಮಿಸಿ ತಾನೂ ಮೇಲಿಂದ ಮೇಲೆ ಹೋಗಿ ವಿಚಾರ ಮಾಡುತ್ತಿರುತ್ತಾನೆ (ಮಂಜುಕ. ೧೩) ; ಅಲಗುಬಾಬುಗಳು ಸರಪಂಚರಾದರು (ಗೃಹದಾ. ೩೧).

[← ಹಿಂ. ಸರಪಂಚ ; ಮರಾ. ಸರಪಂತ]

**ಸರಪಣಿ** 'ಸರಪಳಿ' ನೋ.

**ಸರಪರಾಜು** 'ಸರಬರಾಜು' ನೋ.

**ಸರಪಳಿ, ಸರಪಣಿ, ಸರ್ಪಣಿ, ಸರ್ಪಳಿ** (ನಾ). ೧. ಲೋಹದ ಬಳೆಗಳನ್ನು ಜೋಡಿಸಿ ಮಾಡಿದ ಹಗ್ಗದಂತಹ ಸಾಧನ; ಶೃಂಖಲೆ : ಅರಸು ಪವಡಿಪ ತೂಗುಮಂಚದ ಸರಪಳಿಯ ಬಳಿವಿಡಿದು ಪಟುಭೀಕರವಿಷೋರಗವಾಗಲೊಂದುರವಣಿಸಿ ಹರಿತಂದು (ಬಸವು. ೪೬-೨೧) ; ತೊಟ್ಟಿಲ ಪೂಜಿಸಿ . . . ಮೇಲ್ವಲಗೆಯ ಕೊಂಡಿಗೆ ಸರಪಳಿಯನು ತೊಡಚಿದರು (ಮೋಹತ. ೧೭-೪೯). ೨. ಶೃಂಖಲೆಯಾಕಾರದಲ್ಲಿ ಮಾಡಿದ ಒಂದು ಬಗೆಯ ಆಭರಣ : ವಜ್ರಧಾರೆಯ ಚೆನ್ನಸರಪಳಿಯುಮಂ . . . ನವರತ್ನದುಂಗುರಗಳುಮಂ ಮಾಡಿಸಿಕೊಂಡು (ಪಂಚತಂ. ೧೮೬-೧೩) ; ಬಿಲ್ಲ ಹೊರೆಗೈದಿದನು ಚೌಪಟಮಲ್ಲ . . . ಮೇಲ್ದಿರುಹಿದನು ಮುಂಗೈಯ ಸರಪಳಿ[ಪಾಠಾಂ. ಣಿ]ಯ (ಕುಮ್ಮಾಳ. ೧೪-೯) ; ವರನಾರಾಯಣನ ರಾಣಿಯರ ಪಾದದ ಹೊನ್ನ ಸರಪಳಿಯೆಳೆಯುತ್ತ ಬರಲು ವರನೀಲದ ನೆಲಗಟ್ಟಿನಲ್ಲಿ ಪೊಂಬಳ್ಳಿವರೆದಂತೆ ರೇಖೆದೋಱಿದುವು (ಮೋಹತ. ೧೪-೨೬). **ಸರಪಣಿ** : ೧. ನೊಸಲ ಸೀಸಕ ನುಗ್ಗುನುಸಿ ಬಂಧಿಸಿದ ಸರಪಣಿ ಹಿಳಿದವು (ಕುಮ್ಮಾದ್ರೋ. ೧೧-೩) ; ಮಾವುತರು ಅತಿಪ್ರಯಾಸದಿಂದ ಆನೆಯನ್ನು ಹಿಡಿದು ತಂದು ಸರಪಣಿಗಳಿಂದ ಬಂಧಿಸಿದ್ದರು (ಶ್ರೀರಾಯ. ೨೧). ೨. ಖಿಡೆಯ ಸರಪಣಿ ತೋಳ ಬಂದಿಗೆ ಪಡೆವಣಿಯ ಮಱಿವಾವುಗಳನಳವಡಿಸಿದನು (ಕುಮ್ಮಾಕ. ೭-೧೨) ; ಗಂಟೆ ಸರಪಣಿ ಸುರಹಾಹೆದೊಡರು ವಾಣಿಕ್ಕದಿನೆಸೆವ ಕಡೆಯ ಪೆಂಡೆಯವಿಟ್ಟು ಕಾದುವ ರಣಧರೆಯೆಡೆಗೈತಂದು (ಮೋಹತ. ೧೨-೪೭). ೩. ನೂರುಕೊಂಡಿಗಳುಳ್ಳ ಹಾಗೂ ಸಾಮಾನ್ಯವಾಗಿ ಅರುವತ್ತಾರು ಅಡಿಗಳಷ್ಟು ಉದ್ದವಾದ ಒಂದು ಅಳತೆಯ ಪರಿಮಾಣ : ಸರಪಣಿಯು ೩೩, ೬೬, ೯೯ ಅಡಿಗಳು ಇರುತ್ತವೆ (ಭೂಮಿಅ. ೪) ; ಸರಪಣಿಯಿಂದ ಸರಪಣಿಯನ್ನು ಗುಣಿಸಿದರೆ ಯೆಲ್ಲವೂ ಸರಪಣಿಯೇ ಆಗುವುದು (ಭೂಮಿಅ. ೬೭). ೪. (ಆಲಂ) ಸಂಕೋಲೆ ; ಬಂಧನ : ಜನನಮರಣಗಳ ಸರಪಣಿ ಯಿಂದ ಮುಕ್ತನಾಗುವುದು ಆವಶ್ಯಕವೆಂದು ಎಲ್ಲಿಯೂ ಹೇಳುವುದಿಲ್ಲ (ತತ್ವಪ್ರಾ. ೭೧).

**ಸರ್ಪಣೆ:** ೧. ಒಂದು ಕಬ್ಬಿಣದ್ದಾಗಲಿ, ಹಿತ್ತಾಳೆಯದಾಗಲಿ ಸರ್ಪಣೆಯನ್ನು ಜೋಡಿಸಿ ನೆಲದ ಮೇಲೆ ಚಲ್ಲಿರುತ್ತಾರೆ (ಮುಂಬಯಿ. ೫-೨೦೬). ೩. ಎರಡೂ ಬದಿಗಳಲ್ಲಿ ಒಂದು ಸರ್ಪಣೆ, ಅಂದರೆ ೩೩ ಘೂಟು ಹುಲ್ಲು ಕೊಯ್ದು (ಮುಂಬಯಿ. ೫-೪). **ಸರ್ಪಳಿ** : ೧. ಅವನು ಅದನ್ನು ಅಡವಿಗೆ ಒಯ್ದು ಬಿಡಬೇಕೆಂದು ನಿಶ್ಚಯಿಸಿ ಅದರ ಸರ್ಪಳೀ ಬಿಚ್ಚಹೋದನು (ಮುಂಬಯಿ. ೨-೨೦).

[ದೇ. ‖ ತಮಿ. ಚಿಗಪ್ಪಳಿ, ಚಿರಪ್ಪಣೆ ; ಮಲ. ಸರಪ್ಪಳಿ; **ತುಳು.** ಸರಪಳಿ, ಸರಪಣಿ, ಸರಪ್ಪೊಳಿ, ಸರ್ಪಳಿ ; **ತೆಲು.** ಸರಪಣಿ, ಸರಪಿಣಿ, ಸರಪೆಣ, ಸರಫಣಿ]

**ಸರಫರಾಜ** 'ಸರಫರಾಜು' ನೋ.

**ಸರಫರಾಜಿ** (ನಾ). ಉತ್ತೇಜನ ; ಪ್ರೋತ್ಸಾಹ : ಒಳ್ಳೇ ಕಾಲದಲ್ಲಿ ತಾವು ಸರಫರಾಜಿ ಮಾಡಿ ಶ್ರೀರಂಗಪಟ್ಟಣದ ಅರಸಿಗೆ ವಿವಾಹ ಮಾಡಿಸಿದ್ದು, ಆ ಖುಷಿವರ್ತಮಾನ ಈ ಯಾವತ್ತು ದುನಿಯಾದ ಜನರು ಕೇಳಿ ಇದ್ದಾರೆ (ರಾಜೇಂದ್ರ. ೨೧೨).

[← ಪಾರ. ಹಿಂ. ಮರಾ. ಸರಫರಾಜೀ]

**ಸರಫರಾಜು, ಸರಫರಾಜ, ಸರ್ಫರಾಜು** (ನಾ). ಪ್ರಶಂಸೆ ; ಶ್ಲಾಘನೆ : ಈ ದೌಲತ್ತು ಕೊಡುವಂಥಾದ್ದು ಸರಫರಾಜು ಮಾಡುವಂಥಾದ್ದು ಯಾವತ್ತು ತಮ್ಮ ಪರವರ್ಷ ಮೆಹರ್ಬಾನಗಿಯಿಂದಾ ಎಂಬುದು ನಮಗೆ ನಿಶ್ಚಯವಿದೆ (ರಾಜೇಂದ್ರ. ೨೩೫); ಹೈದರಲ್ಲಿಖಾನರ ಕೈಯಿಂದಾ ಬಂದೂಖಿನ ಗುರಿ ತಗಲಿದ ಕಾರಣ ಅರಶಿನವರು ಬಹಳ ಸಂತೋಷಪಟ್ಟು ಪಸಂದು ಮಾಡಿ ಸರಫರಾಜು ಮಾಡಿದರು (ಹೈದರ. ೨೩). **ಸರಫರಾಜ** : ಅವರ ಕೈಫಿಯತ್ತಿನಿಂದ ಬಹಳ ಸಂತೋಷ ಸರಫರಾಜ ಹಾಸಲಾಯಿತು (ರಾಜೇಂದ್ರ. ೨೩೭). **ಸರ್ಫರಾಜು:** ಆವಾಗ್ಯೆ ನಿನಗೆ ಸರ್ಫರಾಜು ಮಾಡಿಯೇವು (ರಾಜೇಂದ್ರ. ೫೪).

[← ಪಾರ. ಹಿಂ. ಮರಾ. ಸರಫರಾಜ್]

**ಸರಬ$_1$** (ನಾ). ಒಂದು ಬಗೆಯ ಪ್ರಾಣಿ ; ಶರಭ : ಸಿಂಗದ ಜಂಗುಳಿ ಸರಬದ ಸಂಗಡಮಾ ನೃಪನ ತೇಜಮಂ ಮಱಿವೊಕ್ಕಂತೇಂ ಗಡಣಿಸಿ ಮೆಱೆವುವೊ ಚೆಂಬೊಂಗಳ ಮಂದಿರದ ತೇಜವಾಜಿಸಮಾಜಂ (ಅನಂಪು. ೧-೧೯). [< ಸಂ. ಶರಭ]

**ಸರಬ$_2$** 'ಸರಬು' ನೋ.

**ಸರಬರ** (ನಾ). ಒಂದು ಅನುಕರಣಪದ : ಆಕೆಯ ಸೀರೆಯ ಸರಬರ ಸದ್ದಿಗೆ ಕೃಷ್ಣಪ್ಪನ ಮೈ ಪುಲಕಿತಗೊಂಡಿತು (ಚಿಂದುಟ. ೬೧).

**ಸರಬರಾಜು, ಸರಪರಾಜು** (ನಾ). (ಅಗತ್ಯ ವಸ್ತುಗಳನ್ನು) ಒದಗಿಸುವಿಕೆ ; ಪೂರೈಸುವಿಕೆ : ತೃಪ್ತಿಕರವಾದ ಸರಬರಾಜು ನಮ್ಮ ಫೌಜದಾರರದು (ನಾಪೋಲೀ. ೧೬೨); ಅವರು ರಾಯನಿಗೆ ಕುದುರೆಗಳನ್ನು ಸರಬರಾಜು ಮಾಡುವುದಾಗಿ ಒಪ್ಪಿಕೊಂಡರು (ಕೃನೇವ. ೧೯). **ಸರಪರಾಜು** : ತಂಜಾವೂರುಮಹಾರಾಜರಿಗೆ ಯಾವ ರೀತಿ ನಡಸಿಕೊಂಡು ಬರುತ್ತಾರೋ ಅದೇ ಮೇರೆಗೆ ಇಂಗ್ಲಿಷ್‌ಜನಗಳ ಸರಪರಾಜು ಮಾಡುವುದಕ್ಕೆ ಬದ್ಧರಾಗಬೇಕು (ಚಾಮವಂ. ೨೧೩); ಈ ಬಾರಿ ರಾಣಿಯವರು ಸ್ವಲ್ಪ ಹಣವನ್ನು ಸರಪರಾಜು ಮಾಡಿದ್ದಾರೆ (ದೌಲತ್. ೩೧೪).

[← ಪಾರ. ಹಿಂ. ಸರಬರಾಹ್ ; ಮರಾ. ಸರಬರಾ, ಸರಭರಾ]

**ಸರಬರಾಯ** 'ಸರಬರಾಯಿ' ನೋ.

**ಸರಬರಾಯಿ, ಸರಬರಾಯ, ಸರ್ಪರಾಯಿ** (ನಾ). ೧. (ಅಗತ್ಯವಸ್ತುಗಳನ್ನು) ಒದಗಿಸುವಿಕೆ ; ಪೂರೈಸುವಿಕೆ : ಬಳ್ಳಾರಿಲಷ್ಕರಸರಬರಾಯಿಯಂ ತುಸ ಪುಕಾರಿಲ್ಲದಂತೆ ಸಗಪೇಳು (ಅರ್ಜಾವಿ. ೩೧-೩೯) ; ಶುದ್ಧವಾದ ನೀರಿನ ಸರಬರಾಯಿಯು ಅತ್ಯಂತ ಮುಖ್ಯ (ಅಡುಸಾ. ೮೪). ೨. ಅತಿಥಿಸತ್ಕಾರ ; ಆತಿಥ್ಯ : ಅತಿಥಿಗಳಿಗೆ ಒಳ್ಳೆಯ ಪರಿಮಳದ 'ಸರಬರಾಯಿ' ಆಯಿತು (ಮುಂಗಾಪು. ೨೭); ಯಾರು ಯಾರಲ್ಲಿಗೇ ಹೋಗಲಿ . . . ಸಾಮಾನ್ಯವಾಗಿ ಎಳನೀರು, ಬಾಳೆಹಣ್ಣು, ಸಕ್ಕರೆಯ ಸರಬರಾಯಿ ಆಗುತ್ತಿತ್ತು (ಕಂಬಹು. ೨). **ಸರಬರಾಯ** : ೨. ಉಡುಪಿಪರ್ಯಾಯದಲ್ಲಿ ಮಾಡುವಂಥ ಸರಬರಾಯವೂ ಬೇಕಾದೀತು. ಗಾಡಿಗಟ್ಟಲೆ ಹಸುರುವಾಣಿ, ದೋಣಿಗಟ್ಟಲೆ ಸಾರು, ಹುಳಿ, ಗುಡ್ಡೆ ಗುಡ್ಡೆ ಅನ್ನ ! (ಸ್ವಪ್ನಹೊ. ೫೮). **ಸರ್ಪರಾಯಿ:** ೨. ನಂಮ ಸ್ಥಳದಲಿ ನಿಮಗೆ ಸರ್ಪರಾಯಿ ಮಾಡಿ ಮುಂದಕೆ ರವಾನೆ ಮಾಡಿ ಕಳುಹಿಸಿಕೊಡಲುಳವರು (ಮೈಆರಿ. ೧೯೩೦, ೧೯-೨೭; 1704). [← ಹಿಂ. ಸರಬರಾಹ್, ಸರಬರಾಹೀ; ಮರಾ. ಸರಬರಾಈ]

**ಸರಬಲು** (ನಾ). ಒಣಗಿದ ಎಲೆ ; ತರಗು : ಏನೂ ಇಲ್ಲಯ್ಯಾ, ಬಾಳೆ ಸರಬಲಿಗೆ ಬಂದಿದ್ದೆ (ಕಾನೂರು. ೧೯೮). [ಸರಬು + - ಅಲು (< - ಅಲ್$_2$)]

**ಸರಬಿ** 'ಸರವಿ$_1$' ನೋ.

**ಸರಬು, ಸರಬ$_2$** (ನಾ). ೧. ಕಟ್ಟು ; ಹೊರೆ : ನಾ ಹೊತ್ತ ಕಟ್ಟಿಗೆಯ ಸರಬು ಮತ್ತೆ **ಸುವರ್ಣದಂಡವಾಹಾಗ ಆದಾರ ನಿಶ್ಚಯದ ವಿಶ್ವಾಸ** (ಬೋಳವಮ. ೫೮-೨೪೨). ೨. ಒಣಗಿದ ಎಲೆ ; ತರಗು : 'ಸರಬಲು' ಪರಾ. **ಸರಬ$_2$** : ೧. ತಾವು ತಂದ ಕಟ್ಟಿಗೆಯ ಸರಬ[ಪಾಠಾಂ. ಬು]ಗಳ ಮೇಲೆ ಪಾದಾರ್ಚನೆಯುದಕಮಂ ತಳೆದು ಸುವರ್ಣದಂಡಂಗಳಂ ಮಾಡಿ (ಶೂನ್ಯಸಂ. ೨೩೭-೬). [?]

**ಸರಬೊಂಬೆ** (ನಾ). ಸಾಲಾಗಿರುವ ಗೊಂಬೆಗಳಿಂದ ಕೂಡಿದ ಒಂದು ಬಗೆಯ ಆಭರಣ : ಪರವೆಣ್ಣ ಪರಮಗುರುವಿನಂಗನೆಯೆನ್ನದಿರದೆ ಮನದೊಳಾಸೆಗೆಯ್ವ ನರಪತಿಗಳ ಗಂಡನೆಂದೆಂಬ ಬಿರಿದಿನ ಸ[ಪಾಠಾಂ. ಶ]ರಬೊಂಬೆ ಮೆಱೆದುದವನಿಗೆ (ಕುರಾಸಾಂ. ೧೯-೩೫). [ಸರ$_2$ + ಬೊಂಬೆ]

**ಸರಭರ** (ನಾ). ಒಂದು ಅನುಕರಣಶಬ್ದ : 'ಸರಭರಾಟ' ಪರಾ.

**ಸರಭರಾಟ** (ನಾ). ಸರಭರ ಎನ್ನುವ ಕ್ರಿಯೆ : ಮಳೆಯ ಸರಭರಾಟ ಗಾಳಿಯ ಭೋರಾಟ (ನಿರಾಭ. ೧೦ ಮುನ್ನುಡಿ). [ಸರಭರ + ಆಟ]

**ಸರಭಸ** (ಗು). ೧. ವೇಗಗೊಂಡ ; ತ್ವರಿತವಾದ : ಆಗಳ್ ಸರಭಸಪ್ರಚಾರಿತ ಪರಿಜನಪದಕ್ಷೋಭವಿಚಲಿತಮಹೀತಳಮುಂ . . . ಆಗಿ (ಆದಿಪು. ೮-೩೫ ವ). (ನಾ). ೨. ವೇಗ; ತ್ವರೆ: ಸರಭಸದೆ . . . ಅಖಿಲಾಸುರಚಕ್ರಂ ನಿನ್ನ ವಿಭಾಸುರಚಕ್ರದ ಬಾಯ್ಗೆ ಬಾರದಿರದು ಮುರಾರೀ (ಕಾವ್ಯಾವ. ೫೩೦); ಸರಭಸದೆ ನರ್ತಿಪಾ ಹರಕಿರೀಟ ಗಂಗಾಂಬುಶೀಕರಂ ಸೂಸೆ ನಭೋಂತರಮಂ ತಳ್ತುದು (ಕುಸುಮಾ. ೧೧-೧೨೯). [ಸಂ.]

**ಸರಭಸಂ** (ಅ). ವೇಗವಾಗಿ ; ತ್ವರೆಯಿಂದ ಕೂಡಿ : ಅಬ್ಬರಿಸಿ ಬೊಬ್ಬೆಗೊಟ್ಟೇಱಿ ಸರಭಸಂ ಪರಿಯಿಪಾಗಳ್ (ರಾಜಶೇ. ೬-೧೧ ವ). [ಸಂ.]

**ಸರಮ$_1$** 'ಸವ$_3$' ನೋ.

**ಸರಮ$_2$** (ನಾ). ಹೆಣ್ಣುನಾಯಿ : ಗೋವಂ ಕಱೆದು ಸರಮೆಗೆಱೆವಂತೆ (ಷಡಿಲ. ೧೩-೩೦). [ಸಂ. ಸರಮಾ]

**ಸರಮಂಡಲ** (ನಾ). ಒಂದು ಬಗೆಯ ತಂತೀವಾದ್ಯ : ದಂಡಿಗೆ ವೇಣು ವೀಣಾ ಕಿನ್ನರಿ ಸರಮಂಡಲ ಜಂತ್ರತಾಳಗಳನು ಮಂಡೆಗಡೆಯೊಳಿಟ್ಟು ಮಱೆದೊಱಗಿದರನು ಕಂಡೆನಿಕ್ಕಲದಾಳಿಯರೊಳು (ಸೊಬಸೋ. ೨೩-೨೮) ; ಮುರುಳಿ ಸರಮಂಡಲದ ಕಿನ್ನರಿ (ಯಾದವ. ೧೧-೪೪). [< ಸಂ. ಸ್ವರಮಂಡಲ. / ಹಿಂ. ಸರಮಂಡಲ್]

**ಸರಮನೆ** (ನಾ). ತಿಳ್ಳಿಯಾಟದಲ್ಲಿ ಪ್ರತಿಪಕ್ಷದವರನ್ನು ಅಡ್ಡಗಟ್ಟುವ ಒಂದು ಘಟ್ಟ (?) : ರಾಮನು ನಡುವಿನಿಂದ ಹಾಯ್ದು ಹೋಗಬೇಕೆಂದು ಹವಣಿಸುತ್ತಿರಲು ಸರಮನೆಯನ್ನು ಕಟ್ಟುತ್ತಿರುವ ಶೀನನು ತನ್ನ ಉದ್ದಕೈಗಳಿಂದ ಅವನಿಗೆ ಹೊಡೆದು . . . ಎಂದು ಕುಣಿದಾಡಹತ್ತಿದನು (ನಿರಾಭ. ೯೭). [ಸರ$_2$ + ಮನೆ]

**ಸರಮಾಲೆ** (ನಾ). ೧. ದೊಡ್ಡ ಹಾರ : ಇಱಿದು ಬಲ್ಲಹದಿಂದ ಖಾನರ ಕರುಳ್ಗಳ ಸರಮಾಲೆಗಳ ಬೇಗ ತೆಗೆದು . . . ಭೂತಗಳ ಕೊರಳೊಳಗಿಕ್ಕಿ (ಕಂನವಿ. ೧೪-೬೧). ೨. ಉದ್ದವಾದ ಸಾಲು ; ನಿರಂತರವಾದ ಸರಣಿ : ಎರಡಂಬತ್ತುಕೋಟಿ ಪ್ರಮಥಗಣಂಗಳು . . . ನಂದಿವಾಹನರುದ್ರರು ಇವರೆಲ್ಲರು ಮಾಯೆಯ ಕಾಲಗಾಹಿನ ಸರಮಾಲೆ ಕಾಣಾ (ಅವಚಂ. ೭-೨೩) ; ಸಂಸಾರವೆಂದರೆ ಕಷ್ಟಗಳ ಸರಮಾಲೆ (ಶನಿಸಂ. ೫೫). [ಸಂ. ಸರಮಾಲಾ]

**ಸರಮಾನ** (ನಾ). ಉಪನ್ಯಾಯಾಧೀಶ : ಅಲ್ಲಿ ಕಂದಾಚಾರದವರೂ ಸರಮಾನ ಮೊದಲಾದ ಅಧಿಕಾರಿಗಳೆಲ್ಲಾ ಇದ್ದರು (ಮುಸುಗ. ೧೦೫). [← ಮರಾ. ಸರಮಾನ್]

**ಸರಮುತ್ತು** (ನಾ). ಮುತ್ತಿನ ಹಾರ : ಹಾಲೂ ಅನ್ನ ಉಣ್ಣು ಸರಮುತ್ತ ನೀ ಕಟ್ಟು ಸಾಲುಮಾಳಿಗೆಯಲ್ಲಿ ಇರುವಂಥ ಗಿರಿಜೇ (ಹುಟ್ಟಹ. ೫೪). [ಸರ$_2$ + ಮುತ್ತು]

**ಸರಮೆ** (ನಾ). ೧. ಹೆಣ್ಣುನಾಯಿ : "ಶುನಕೀ, ಸರಮಾ - ಈ ೨ ಪೆಣ್ನಾಯ್ (ಹೆಣ್ಣುನಾಯಿ)" (ಹಲಾಯು. ೪೭-೧೨೭). ೨. ದೇವಲೋಕದ ನಾಯಿ. ೩. ವಿಭೀಷಣನ ಹೆಂಡತಿಯ ಹೆಸರು. [ಸಂ. ಸರಮಾ]

**ಸರಮೊಖ್ತೇಸರ** (ನಾ). ಮುಖ್ಯಾಧಿಕಾರಿ : ದಾಸಪ್ಪಾಜಿಯು ಅರಮನೆಯಲ್ಲಿ ಸರಮೊಖ್ತೇಸರನಾಗಿದ್ದನು (ಕುರಾಚಿ. ೪೨).
[← ಹಿಂ. ಸರಮೊಖ್ತೇಸರ್ ; ಮರಾ. ಸರಮೋಖ್ತಸರ್]

**ಸರರಾಸು** (ಅ). ನಿರಾತಂಕವಾಗಿ : ಅಡಿಸಡಿಗಳ ಮಾಡವಂತೆ . . . ಪ್ರಕಾರಕ್ಕೆ ಸರರಾಸು ನಡ್ಡಿಕೊಂಡು ಬರುವದು (ಮೈಅರಿ. ೧೯೩೦, ೪೩-೨೮ ; 1812).
[← ಮರಾ. ಸರರಾಸ್, ಸರಿರಾಸ್]

**ಸರರುಹ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ : ಸರರುಹ ಕೊಳದೊಳು ಧುಮುಕುವ ನದಿತಟದೊಳು ಶಶಿಶಿಲೆಯೊಳಗೆ . . . ಘನಲಿಂಗಕೆ ಹರುಷದಿ ಪೂಜೆಯ ಮಾಡುವ ಶಿವಸುಖವೆಂದಿಗೆ ದೊರಕುವದು (ಸುಸಾರ. ೧೦೪-೨). [< ಸಂ. ಸರೋರುಹ]

**ಸರಲ್₁, ಸರಲು₁, ಸರಳ್, ಸರಳು₁** (ನಾ). ೧. ಕಣೆ; ಅಂಬು ; ಬಾಣ : ಸುರಿವ ಸರಲ್ ನರಲ್ವ ಭಟರೆತ್ತಮುರುಳ್ವ ದಟಂ (ಪಂಪಭಾ. ೯-೫೭) ; ಅರಲ ಸರಲ್ಗೆದೆಂಬರ್ ಕಾಮಂಗೆ ಲೋಕದ ಮಾನಿಸರ್ (ಧರ್ಮಾಮೃ. ೩-೩೩). **ಸರಲು₁** : ೧. ಅರಲಂಬಗರಸ ನಿಮ್ಮಡಿ ಚೆಲ್ವನವನ್ನೆದು ಸರಲನಾಂತೊಡೆ ಹತ್ತುಸರಲಾ ದೊರೆ ಪಿಡಿವುದು ಮೋಡಿ (ಭರತೇ. ೬-೫೮). **ಸರಳ್** : ೧. ಸರಳ ಪೊದಲ್ವ ಬಲ್ಸರಿಯ ಕೋಲ್ಗೆರಲಾಜಿದ ಬಿಲ್ ತೆರಳ್ವ ದುರ್ಧರ [ಹಯ] ಮಟ್ಟೆ . . . ತಳರ್ದತ್ತರಾತಿಬಲಂ (ಪಂಪಭಾ. ೩-೭೦) ; ಎರಡೆರಡೆ ಸರಳಿನುಡಿದೆರಡೆರಲೆಗಳನೆ ಕೊಲ್ವ ತೆಱದಿನಿರ್ವರುಮಂ ಕೊಂದು (ಶಾಂತಿಪು. ೪-೭೧). IP ಈ ಎರಡುಪ್ರಯೋಗಗಳಲ್ಲಿ 'ಸರಲ್' ಎಂದಿರಬೇಕಾದುದು ಹೆಚ್ಚು ಸಂಭವನೀಯ. ಸರಳಂ ಮಿಱುತೆ ಹರಿಣಂ ಸರಳಿಸಿತು (ಗಿರಿಕ. ೧-೯೧) ; ಕರ್ಣಜಂ ಕಣೆಗಳಂ ಕಱೆಯುತಿರೆ ನಡುವೆ ಖಂಡಿಸಿದಂ ಸುಧನ್ವನಾತನ ಸರಳ್ಗಳ (ಜೈಮಿಭಾ. ೧೨-೨೦). **ಸರಳು₁** : ೧. ಭರದೊಳೆಸುವಾ ಬೇಂಟೆಕಾಱದ ಸರಳುಗಳಿಗುಲ್ಲಂಘಿಸುತ ರಭಸದೊಳಗೆಯ್ತರಲು (ಬಸವು. ೩೪-೨೪) ; ಶರಮಯವು ಸರ್ವಾಂಗವಿನ್ನೀ ಸರಳು ನೆಡಲೆಂಬಿಲ್ಲ (ಕುಮ್ಮಾದ್ರೋ. ೬-೫೩) ; ಸರಳು ತುಂಬಿದ ತರಕಸ ಸಿಂಗಾಡಿಗಳಿರದೆ ಸಾಸಿರಬಂಡಿಗಳಲಿ ಪರಿಪೂರ್ಣದಲಿ ಬರುತಿರ್ದುವು (ಕಂಸವ. ೧೧-೩೬). ೨. ಕಬ್ಬಿಣ ಮೊದಲಾದ ಲೋಹದ ಕಂಬಿ ; ಸಲಾಕೆ : ಒಂದು ಕೋಣೆ ತುಂಬ ಸರಳು, ಒಂದರ ತುಂಬ ತಗಡು (ಚಂಗೂಲಿ. ೧೨೨). ೩. ಉದ್ದನೆಯ ಪಟ್ಟಿ, — ತುಂಡು : ಭಿಕ್ಷುಕರು ಅಡಿಗೆ ಮಾಡಲು ಕಿಟಕಿಯ ಮರದ ಸರಳುಗಳನ್ನೇ ಮುರಿದು ಉಪಯೋಗಿಸುತ್ತಾರೆ (ರೂಪಸಂ. ೬೧). [ದೇ. ‖ ತುಳು. ಸರಲ್, ಸರಳ್ ; ತೆಲು. ಸರುಡು]

**ಸರಲ್₂, ಸರಲು₂** (ನಾ). ಮುಂಗೈಯಲ್ಲಿ ಧರಿಸುವ ಸರಪಳಿಯಾಕಾರದ ಒಂದು ಬಗೆಯ ಆಭರಣ : 'ಮುಂಗೆಯ್ಸರಲ್' ಪರಾ. **ಸರಲು₂** : (೬).
[← ಮರಾ. ಸರಳ್]

**ಸರಲ, ಸರಳ** (ಗು). ೧. ಸಹಜವಾದ ; ನೇರವಾದ : ಸರಲಲತಾಂಗಭಂಗಿ ನೆಱೆ ಕಣ್ಗೊಳಿಸುತ್ತಿರೆ ನಿಂದು . . . ಮನಸಿಜಾತನ ಶಾರಿಕೆಯಾಧಿದೇವತಾಪರಿಕರದಂತಿರಿರ್ದರಲ ಮಾಲೆಯನೆತ್ತಿದ ಮಾಲೆಗಾರ್ತಿಯರ್ (ಶಾಂತೀಶ್ವ. ೧-೧೨೬). ೨. ಪ್ರಾಮಾಣಿಕವಾದ; ನಿಷ್ಕಪಟವಾದ. ೩. ಆಡಂಬರವಿಲ್ಲದ ; ನಿರಾಡಂಬರವಾದ. ೪. ಸುಲಭವಾದ; ಸಲೀಸಾದ. (ನಾ). ೫. ಒಂದು ಬಗೆಯ ಮರ ; ಧೂಪದ ಮರ : ಸರಲಾಸಕ್ತಮದೇಭಸ್ಫುರಿತಗೈಪಾವಲ್ಗರುಚಿಗಳ್ ಧರಣೀಶ್ವರ ಗಜನಿಷಾದಿಗಳನನು ಕರಿಸಿದುವೋಷಧಿಗಳೆಣ್ಣೆಯಿಲ್ಲದ ಸೊಡರಂ (ಶಾಂತಿಪು. ೧೧-೭೭); ಸರಲತಮಾಲತಾಲಕದಲೀ ಸಹಕಾರಮಹೀರುಹಂಗಳಂ . . . ಕಿಬ್ಬನಾ ಸುರಗಿರಿಯಂ ಕಿಟಲ್ವೆಱೆವ ಮಾರುತಸೂನುಗಿದಾವ ಸಾಹಸಂ (ಪಂರಾಮಾ. ೧೧-೧೨೩). ೬. ಚಮರೀಮೃಗ. ೭. ರೋಗ : "ಸರೋಗಂ ಚಮರೀಮೃಗಂ ಸರಿಸ ಭೂಜಮಿವು ಸರಲಾ [ಪಾಠಾಂ. ಳಾ] ಖ್ಯಂ ಸಂತತಂ" (ನಾನಾರ. ೬೪). ೮. ಒಂದು ಬಗೆಯ ಪಕ್ಷಿ. ೯. ಋಜುತ್ವ ; ಸರಳತೆ. ೧೦. ಸೋಗಿಲ್ಲದಿರುವಿಕೆ ; ಸಹಜತೆ : ಅರಳೆಯಲಿ ರಸವಿಲ್ಲ ಕರುಳಿಗೆ ನಾಣ್ಬಿಲ್ಲ . . . ಸೂಳೆಯಲಿ ಸರಲವೆಯಿಲ್ಲ (ಸರ್ವಜ್ಞ. ೧೮೭೭); ಬಿಂದುವಿಸರಗಳನುವು, ವಂಕು ಸರಲಗಳನುವು . . . ದ್ವಂದ್ವದನುವುಗಳಂದ (ಮಂಕುಕ. ೪೪೮). ೧೧. ಅಗ್ನಿ. ೧೨. [ಛಂದ] ವರ್ಣಛಂದಸ್ಸಿನ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಏಳನೆಯದಾದ ಉಷ್ಣಿಕ್ ಎಂಬ ಛಂದಸ್ಸಿನ ಒಂದು ವೃತ್ತ : ಮರುತಂ ಜಾತವೇದಂ ಹರನಂ ಕೂಡಿ ಬಂದಂದರವಿಂದಾಯತಾಕ್ಷೀ ಸರಲಂ [ಪಾಠಾಂ. ಳಂ] ವೃತ್ತನಾಮಂ (ಛಂದೋಂಬು. ೨-೮೮).
**ಸರಳ** : ೫. ಸರಳತಮಾಲತಾಳಹರಿಚಂದನನಂದನಭೂಜರಾಜಿಯಿಂ ಸುರಿವಲರೊಳಿ ತದ್ವನಲತಾಂಗಿಯ ಸೂಸುವ ಸೇಸೆಯಾಯ್ತು (ಪಂಪಭಾ. ೫-೫೨) ; ವರನೇಱಿಲಂಬಟೆ ಸರಳು ತೇಱೆ ತಾಱೆಯತ್ತಿ ಮುತ್ತಿ ಬೆಸ್ತಂ (ಮುಕಾನೇ. ೪-..) ೧೩. ವಕ್ರವಿಲ್ಲದುದು; ನೇರವಾದುದು : ಸರಳಂ ವಕ್ರಂ ತರಳಂ ಸ್ಥಿರಮುಚ್ಚಂ ನೀಚಮಿಕ್ಷಣಕ್ಕೊದವೆ ತಮಂ ಸರಿಯಾದುವು (ಚಂದ್ರಪ್ರ. ೮-೨೧) ; ಭರದಿಂದ ಶ್ಯಾನನ ಬಾಲವ ತಿದ್ದಲು ಸರಳವಾಗಬಲ್ಲುದೇ (ಪುರಂದ. ೧-೧೫೬-೨). ೧೪. ಸುಲಭವಾದುದು; ಸರಾಗ : ಸಮಸ್ಯೆಯ ಪರಿಹಾರ ಸರಳವಲ್ಲ (ಶಿಕ್ಷದ. ೩೦೯). ೧೫. [ನಾಟ್ಯ] ತೋಳುಗಳನ್ನು ಬಾಗಿಸದೆ ನೀಳವಾಗಿರಿಸುವ ಒಂದು ಭಂಗಿ : ತೋಳದು . . . ನೇರಿತ್ತಾಗಲ್ ವನಜಾನನೆ ಸರಳಮೆಂಬ ತೋಳೆನಿಸಿರ್ಕುಂ (ಲಾಸ್ಯರಂ. ೨-೧೨೯). [ಸಂ.]

**ಸರಲತೆ, ಸರಳತೆ** (ನಾ). ೧. ಕೊಂಕಿಲ್ಲದಿರುವಿಕೆ ; ಸಹಜತೆ : ಮಾರ್ದವವುದು ಕಣ್ಣ ಸರಲತೆ ಸಾರ್ದಪುದು ನವೀನಯೌವನೋದಯಮಿವಳಂ (ಚಂದ್ರಪ್ರ. ೮-೫೦). **ಸರಳತೆ** : ೧. ಸರಳತೆಯುಂ ಬಡತನಮುಮಬಳಾಮಧ್ಯದೊಳ್ (ಎಇ. XIII, ೩೩೨-೪೨; 929). ೨. ಪ್ರಾಮಾಣಿಕತೆ ; ನಿಷ್ಕಪಟತೆ : ಸರಳತೆ ಬೆಳಗುವುದು ಇತರರಲ್ಲೂ ಸರಳತೆಯಿದ್ದಾಗ (ನಿಶಲು. ೧೨೦). ೩. ಸುಲಭ ; ಸರಾಗ : ನಾವು ಹಿಡಿದ ಮಾರ್ಗ ಒಂದು ವೇಳೆ ಸರಿಯಾದರೂ ಅದು ಫಲಾಕಾಂಕ್ಷೆಯಿಂದ ಕೂಡಿದ್ದಾದರೆ ನಮ್ಮ ದಾರಿಯ ಸರಳತೆಯಲ್ಲಿ ಅಡ್ಡಿ ಆತಂಕಗಳನ್ನು ತಂದೊಡ್ಡುತ್ತದೆ (ಧರ್ಮಸಾ. ೧೧೬). [ಸಂ. ಸರಲತಾ]

**ಸರಲತ್ವ** (ನಾ).= ಸರಲತೆ. [ಸಂ.]

**ಸರಲಷ್ಕರ** (ನಾ). ಸೈನ್ಯವನ್ನು ನೋಡಿಕೊಳ್ಳುವವನು ; ಸೇನಾಪತಿ : ಮಹಾರಾಜನು . . . ತನ್ನ ಸರಲಷ್ಕರನಾದ ನಿಂಬಾಳಕರ ಹಯಪತರಾಯನನ್ನು ಚಂದ್ರಸೇನರಾಯ ನಿಗಿದುರಾಗಲಿಕ್ಕೆ ಕಳುಹಿದನು (ಚಂಸಂ. ೬೫). [← ಮರಾ. ಸರಲಷ್ಕರ್]

**ಸರಲು₁** 'ಸರಲ್₁' ನೋ.

**ಸರಲು₂** 'ಸರಲ್₂' ನೋ.

**ಸರಲು₃, ಸರಳು₂** (ನಾ). ೧. ತಗ್ಗುಪ್ರದೇಶ ; ಹಳ್ಳ : ದಾರಿಯಲ್ಲಿ ಅಡ್ಡಲಾಗಿದ್ದ ಕಾಡಿನ ಒಂದು ಸರಲಿನಲ್ಲಿ ತಾನು ಒಡ್ಡಿದ್ದ ಉರುಳನ್ನು ನೋಡಿಕೊಂಡು ಬರುವ ಸಲುವಾಗಿಯೆ ಮುಕುಂದಯ್ಯ ಗುಡ್ಡ ಹತ್ತಿದ್ದನು (ಮಲೆಮ. ೧೪೬). **ಸರಳು₂** : ೨. ನೀರಿನ ಸಣ್ಣ ಸೀಳು ; ಝರಿ : ಈ ನಾಲ್ಕೂ ಸರಳುಗಳು ಬೀಳುವ ತಗ್ಗಿನಲ್ಲಿ ದೊಡ್ಡದೊಂದು ಮಡುವಾಗಿದೆ (ಕಭಾಗೆ. ೧೫); ಹೊಳೆಯ ಸರಳುಗಳು ಕೂಡುವ ಸ್ಥಳದಲ್ಲಿ ಬಹುತರವಾಗಿ ಉಸುಬಿನ ರಾಶಿಯು ಜಮೆಯಾಗುತ್ತದೆ (ಮುಂಬಯಿ. ೬-೨೦೫). [?]

**ಸರಲೆ** (ನಾ). ೧. ಒಂದು ಬಗೆಯ ಮರ ; ಪೀತದಾರು : ಸರಲೆಯಿಂ ಹೊರಲೆಯಿಂ ಹಾಲೆಯಿಂ ಹೀಲೆಯಿಂ . . . ನುಗ್ಗಿಯಿಂ ಕೊಗ್ಗಿಯಿಂತೊಗ್ಗಿನಿಂ ಕಾಡಸೆದುದು (ನಂದಿಮಾ. ೧೩-೧೨). ೨. ಒಂದು ಬಗೆಯ ಪಕ್ಷಿ : ಸಿಲುಕಿದವು ಪಿಕ್ಕಳಿಗ . . . ಲಾವುಗೆ ಸರಲೆ ಬುಬುಲೆಗಳೆಚ್ಚ ಮಿಂಟೆಯಲಿ (ತೊರರಾ. ೩-೩-೧೮) ; ಶುಕ ಪಿಕ ಸರಲೆ ಕಬ್ಬಕ್ಕಿ ಕಳವಿಂಕ ಪಿಂಗಳಿಕ ಸಾಳ್ವನರಳಿಗನಸಗವಕ್ಕಿಗಳ ಸಂಘಮೊಪ್ಪಿರ್ದುವಲ್ಲಿ (ರುಕ್ಮಾಂಗ. ೧೦-೫). [ಸಂ. ಸರಲ]

**ಸರಲೆಕ್ಕ** (ನಾ). ದೀರ್ಘವಾದ ಲೆಕ್ಕ ; ಜಟಿಲವಾದ ಲೆಕ್ಕ : ಜಲದೊಳಗಳ ಮತ್ಸ್ಯದ ನೆಲೆಯ ಮುಗಿಲೊಳಗಳ ಮಿಂಚಿನ ನೆಲೆಯ ವಾರಿಯ ಸರಲೆಕ್ಕವ ಭೇದಿಸಬಹುದೆ (ಸಕವ. ೫ I. ೧೬೪-೨೨೮). [ಸರ₂ + ಲೆಕ್ಕ]

**ಸರವಂದ** (ನಾ). ಬಾಣಗಳನ್ನು ಕಟ್ಟುವುದು : "ಶರಬಂಧ - ಸರವಂದ" (ಶಮದ. ೨೯೨ ಪ್ರಯೋ.). [< ಸಂ. ಶರಬಂಧ]

**ಸರವಂದಿಗ** (ನಾ). ಬಾಣಗಳನ್ನು ಕಟ್ಟುವವನು : ಸರವಂದಿಗಂ, ಪಟ್ಟಸಾಲಿಗಂ, ಚಿಪ್ಪಿಗಂ (ಬಾಷಾಭೂ. ೧೬೬ ಉದಾ); ಸರವ ತಿದ್ದಿಡುವ ಸರವಂದಿಗರ ಗಂದಿಗರ ಪಿರಿದು ತೈಲವ ತೆಗೆವ ಗಾಣಿಗರ ಶ್ರೇಣಿಗರ . . . ಪಸರಮೆಸೆಗುಂ (ಗುರುಚಾ. ೧-೩೪).
[ಸರವಂದ + - ಇಗ]

**ಸರವಂದಿಗಿತಿ** (ನಾ). ಬಾಣಗಳನ್ನು ಕಟ್ಟುವವಳು : ಸರವಂದಿಗಿತಿ, ಪಟ್ಟಸಾಲಿಗಿತಿ (ಶಬ್ದಾನು. ೧೯೨ ಪ್ರಯೋ.). [ಸರವಂದಿಗ + - ಇತಿ₁ (< - ಇತ್ತಿ)]

**ಸರವಕ್ಕಿ** (ನಾ). ಇಂಪಾದ ಸ್ವರವುಳ್ಳ ಹಕ್ಕಿ ; ಕೋಗಿಲೆ : ಸರವಕ್ಕಿಯೊಡನೆ ಸೊಗಸೂಡಿ ನಲಿದಾಡಿ ಪಾಡಿ . . . ಸಱಿಮಿಂಡಿಯರ್ ಮಿಂಡೆಳ್ವು ವನದೊಳ್ . . . ವಿಹರಿಸಿದರು (ನಂದಿಮಾ. ೪-೨೨). [ಸರ$_1$ + ಪಕ್ಕಿ]

**ಸರವಟ್ಟೆ** (ನಾ). ಬಾಣದ ಕೋಲು, - ದಂಡ : ಆ ಸುಕೋಮಳಾಂಗಮೆ ಸರವಟ್ಟೆ ತೊಟ್ಟಲರ ಪಚ್ಚಮ ಬೆಳ್ಗಱಿಯಾಗೆ ಕಾಮಿನೀಸಮಿತಿ ವಿರಾಜಿಸಿರ್ದುದು . . . ಮೋಹನಬಾಣದ ಮೊತ್ತಮೆಂಬಿನಂ (ಶಾಂತೀಶ್ವ. ೧೦-೧೪೯). [ಸರ$_2$ + ಪಟ್ಟೆ$_2$]

**ಸರವಣ**, ಸರವಣೆ (ನಾ). ಜೊಂಡಿನ ಮೆಳೆ, — ಪೊದರು : ಭಾರತವರುಷ ವೆಂಬುದಱೊಳಗೊಪ್ಪುವಂಬುಜ ಹರಿಯಂಚೆ ತುಂಬಿದ ಸರವಣವಿಹುದು (ಭೈರವೇ. ೧-೩೫); ಈಶ್ವರನ ವೀರ್ಯವೆ ಸರವಣದೊಲೆಸೆವ ಷಣ್ಮುಖನಾಗುತ ಇರದೆ ಪೊಱಮಡುವಂತೆ ಕೊಳದಿಂ ಪೊಱಂಟು (ಚೇರಮ. ೬-೨೬). **ಸರವಣೆ** : ನೀವು ಬಿಸದ ಸರವಣೆಯುಂಟುವಸಮಾನವೀ ಮಹಾಹಿಮಗಿರಿಯೊಳಿಹುದೆನಲು (ಪ್ರಭುಪು. ೮-೧೦೬).
[< ಸಂ. ಶರವಣ]

**ಸರವಣೆ** 'ಸರವಣ' ನೋ.

**ಸರವಣಿಗ** (ನಾ). ಇಂಪಾದ ಸ್ವರಮಾಡುವಂತಹುದು ; ಕೋಗಿಲೆ : ಸರವಣಿಗನುಱೆ ಕರ್ದುಂಕದ ತಳಿರದೆಲರ್ದಿನಿಗನುರವಣಿಸಿ ಪಿಡಿಯದಿಹ ಜೊನ್ನೊಡಲ್ (ಚೇರಮ. ೫-೬). [ಸರ$_1$ + - ವಣಿಗ]

**ಸರವತಿ** 'ಸರವತ್ತಿಗೆ' ನೋ.

**ಸರವತಿಗೆ** 'ಸರವತ್ತಿಗೆ' ನೋ.

**ಸರವತ್ತಿಗೆ**, ಸರವತಿ, ಸರವತಿಗೆ, ಸರವತ್ತು, ಸರಾತಿ (ನಾ). ೧. ಡೇರೆಯ ಹೊರಆವರಣದಲ್ಲಿ ಕಟ್ಟುವ ಬಟ್ಟೆ ; ಗುಡಾರದ ಸುತ್ತಲೂ ಇಳಿಬಿಡುವ ಬಟ್ಟೆ : ಗುಡಿ ಸರವತ್ತಿಗೆ ಹುರುಳಿ ಹುಲ್ಲ ಕಂಪಣ ಕಡಲೆ ಕವಳ ಹಕ್ಕರಿಕೆಯ ಹಿಡಿದ ಹೇಱಿನ ಕೊಟ್ಟಿಗೆಯೆತ್ತುಗಳೆಡೆವಿಡದೆ ನಡೆದವಂದಲ್ಲಿ (ಶ್ರೀಪಾಲ. ೧೩-೪೯) ; ದೊರೆ ದೊರೆಗಳಿಗೆ . . . ಸರವತ್ತಿಗೆಯು ಚಪ್ಪರಗಳು ಇರದನುಮಾಡಿಸಿ (ಅಮುಸಾಂ. ೨-೪೨). ೨. ಸುತ್ತುಬೇಲಿ ; ಆವರಣ : ಹೊಲದ ಸುತ್ತ ಸರವತ್ತಿಗೆ ಬಿಡಿಸಿ ಮಂಚಿಕೆಯ ಕೀಲಿಸಿ ಶೋಧಿಸಲಾಗಿ (ಬತ್ತೀಸ. ೯). **ಸರವತಿ** : ೧. ಗುಡಿಯಂ ಪೊಯ್ಯಾನೆಯ ಪಂದೊವಲಿಂ ದುಡಿದ ಪತಾಕಾಪಟಸಂತತಿಯಿಂದೆಡೆವಱಿಯದ ಸರವತಿಯಂ ಬಿಟ್ಟು (ಜಯಕಾ. ೬-೨೪). **ಸರವತಿಗೆ** : ೧. ಅರುಣಜಲವೆಡೆಬಿಡದೆ ಪೊರೆಯೆ . . . ತನ್ನರಮನೆಗೆ ಬಳಸಿ ಕೆಂಬಣ್ಣದಪರಸ್ಥಲದ ಪರಿರಂಜಿಸುವ ಚಿತ್ರಪಟದ ಸರವತಿಗೆಯಂ ಬಿಟ್ಟಂತಿರೊಪ್ಪಿತಾಗ (ಸಮ್ಯಕ್. ೮-೩೪);ಗುಡಿ ಗೂಡಾರ ನೀಟಿನ ಸರವತಿಗೆಗಳೆಡೆವಿಡದಾ ದಂಡಿನೊಳಗೆ ಕಡುಗಲಿ ಖಾನಖಾನರಿಗೆ ರಾಜಿಸಿದುವು (ಕಂನವಿ. ೧೯-೨೦). **ಸರವತ್ತು** : ೩. ಒಂದು ಬಗೆಯ ಗುಡಾರ : ತಂಬು ಗುಡಾರ ಗುಮ್ಮಟಿ ಡೇರ್ಯ ಸರವತ್ತು . . . ರಂಬಾಣದೋರಿ ಮೆರೆದರು (ಸೌಂದಕಾ. ೫-೨೪). **ಸರಾತಿ** : ೧. ಗುಡಿಗೂಡಾರ ಸರಾ [ಪಾಠಾಂ. ರ]ತಿ ಪೆಟ್ಟಿಗೆ ಲಾಯದೊಡಕಿನ ಕುದುರೆ ಕರಿಗಳ ಗಡಣ ಸಿಕ್ಕಿತು (ಕುರಾಸಾಂ. ೨೦-೬೬) ; ಗುಡಿಗೂಡಾರ ಸರಾ [ಪಾಠಾಂ. ರು]ತಿ ಪೆಟ್ಟಿಗೆ ಬೋನಗುಡಿಕೆ ನೂತನವಸ್ತ್ರಗಳ ತಡಗಗಳಾದಿ ನಾನಾಹೊಱೆ ಕಾಱಿರ ಗಡಣವೆಸೆದುದು (ರಾಮವಿ. ೬-೧೩). [?/ತೆಲು. ಸರಾತಿ. / ಹಿಂ. ಸರವಾನ = ಗುಡಾರ]

**ಸರವತ್ತು** 'ಸರವತ್ತಿಗೆ' ನೋ.

**ಸರವರ** (ನಾ). ಕೊಳ ; ಸರೋವರ : ಶರದಂಬರಮುಂ ಮತ್ತೀ ಸರವರಮುಂ ವಿಳಸದತನುಧವಳಚ್ಛವಿಗಳ್ (ಕವಿರಾ. ೩-೪೬) ; ಸರವರದೊಳಗಾಡುವ ಹಂಸೆಗಳಿರಾ ನೀವು ಕಾಣಿರೇ (ಮಹಾದೇ. ಬ. ೩೩-೭೩). [< ಸಂ. ಸರೋವರ]

**ಸರವಲೆ** (ನಾ). ಸರಗುಣಿಕೆಯುಳ್ಳ ಬಲೆ : ಸರವಲೆ ಹಾಸುವಲೆಗಳಿಂದ ಬೇಡನು ತರುಗಳ ಮರೆಯಲ್ಲಿ ಬರುತ (ಕಪೋತ. ೨೩). [ಸರ$_2$ + ಬಲೆ$_1$]

**ಸರವಳಿಗೆ**, ಸರಳಿಗೆ$_1$ (ನಾ). ಗೋದಿಹಿಟ್ಟು ಅಥವಾ ರವೆಯನ್ನು ಕಲಸಿ ಮಾಡಿದ ಉರುಳೆ ಮತ್ತು ಅದರಿಂದ ಮಾಡಿದ ಪಾಯಸ : ಹಾಲೋಗರೊಡೆ ಸಣ್ಣಸೇವಗೆಗಳಲ್ಲಲ್ಲಿ ಸರವಳಿಗೆ ಸಣ್ಣಸರವಳಿಗೆ ಮಣಿಸರವಳಿಗೆ ವರಮಧುರ ಪೂಸಣಂಬಂ ಸಮೆದವಂತೊಳಗೆ (ಬಸರ. ೬-೧೩) ; ಪರಡಿ ಕಿಱುಗೋದಿಸೇವಗೆ ಸರವಳಿಗೆ ಸುಗಂಧಕಟವೆಯಕ್ಕಿಯ ಪಾಕಂ ಪರಿವಡೆಯಲಣ್ಣೆವಾಲಿಂ ಬೆರಸಿದ ಸಕ್ಕರೆಯ ತುಯ್ಯಲಿಕ್ಕಿದರ್ (ನಳಚಂ. ೪೪೧) ; ಎಣ್ಣೆಯೂರಿಗೆಯಿಡ್ಡಲಿಗೆ ಕಡುಸಣ್ಣಸೇವಗೆ ಸರವಳಿಗೆ ಮಿಗೆ ಕಣ್ಣಗಾರಿಗೆಯೊಟ್ಟುತಿರ್ದುವು ದೇವನಿದಿರಿನಲಿ (ಪ್ರಭುಲೀ. ೨೩-೧೭). 'ಮಣಿಸರವಳಿಗೆ' ಪರಾ. **ಸರಳಿಗೆ$_1$** : ಸರಳಿಗೆಪಾಯಸ ಸಜ್ಜಿಗೆ ಪಾಯಸ ಪರಿಪರಿ ಪಾಯಸ (ಶರಲೀ. ೮೭-೧೮). [?]

**ಸರವಾದಿ** (ನಾ). ಸ್ವರಗಳನ್ನು ಹಾಡುವವನು ; ಗಾಯಕ ; ಸಂಗೀತಗಾರ : ಸ್ವರವಾದಿ-ಸರವಾದಿ (ಶಮದ. ೨೪೯ ಪ್ರಯೋ) ; ಅಹಿಯ ಶರಮಾನದ ಸುತಾಳಗ್ರಹಮುಖದ ಸರವಾದಿಗಳು ಸರವಹಿಯ ನಾಯಕವಾಡಿಗಳೆ (ಕುವ್ಯಾಕ. ೨೩-೬). [< ಸಂ. ಸ್ವರವಾದಿನ್]

**ಸರವಿ$_1$**, ಸರಬಿ, ಸರವೆ$_2$ (ನಾ). (ಸಾಮಾನ್ಯವಾಗಿ ಹುಲ್ಲನ್ನು ಹೊಸೆದು ಮಾಡಿದ) ಹಗ್ಗ ; ಹುರಿ : ಕಟ್ಟದ ಪಟ್ಟಮ ಸರವಿಗೆ ನೆಟ್ಟನೆ ದೊರೆ (ಪಂಪಭಾ. ೧೦-೧೭) ; ಮಳಲ ಹೊಸೆದರೆ ಹೊಸೆದಂತಲ್ಲದೆ ಸರವಿಯ ಹಡೆಯಲು ಬಾರದು (ಬಸವ. ೫೫೪) ; ಪರಿವ ಭಂಡಿಯಂ ಕಾಲಿಂ ಕೋವರು ಮಣಲಂ ಸರವಿ ಪೊಸೆವರು (ಸೌಇ. IX-1, ೨೮೭-೧೮ ; 12ನೆಯ ಶತ) ; ಉರಗನಿಕ್ಕಡಿಗಾಱ ಹುಲ್ಲಿನ ಸರವಿಗಂಜುವುದುಂಟೆ (ಕುವ್ಯಾದ್ರೋ. ೫-೭೮). **ಸರಬಿ** : ಮಣಲ ಸರಬಿಯ ಹೊಸೆವರುಂ ಬಹ ಮಾರಿಯ ಮುದ್ದಾಡುವರುಂ (ಎಕ. VIII, ಸೊರಬ. ೫೮೬-೫೭ ; 1201) ; ರಾಮಣ್ಣನ ಎತ್ತು ಸರಬಿ ಕಿತ್ತು ಮೆರಿಸುವ ಸಂದರ್ಭ ಏನು ಬಂದಿತ್ತು? (ಮನಜಿ. ೧೯). **ಸರವೆ$_2$** : ಉರಗನ ಹರಣವ ತೆಗೆವವನಿಗೆ ಹುತ್ತದರಗಿನ ಹುಲ್ಲ ಸರವೆಯ ಪರಿಹರಿಸುವುದರಿದಲ್ಲ (ರಾಮವಿ. ೧೮-೩೪); ಅನುಭಾವಿಯಾದಡೆ ಸುಟ್ಟ ಸರವೆಯಂತಿರಬೇಕು (ಅಖಂಡೇ. ೧೯೨-೧೨). [?]

**ಸರವಿ$_2$** 'ಸರುವು$_2$' ನೋ.

**ಸರವಿಡು$_1$** (ಕ್ರಿ). ಧ್ವನಿಮಾಡು ; ಕೂಗು : ಬೃಂಹಿತದಬ್ಬರಕ್ಕೆ ದಿಙ್ಮದಕರಿ ಭೀತಿಯಿಂದೆ ಸರವಿ [ಪಾಠಾಂ. ಸೆರಗಿ]ಟ್ಟುವು (ಸೂಕ್ತಿಸು. ೧-೪) ; ಸರವಿಡಲು ಕಲಿಸಿದಳಾಕೆ ತನ್ನರಮನೆಯ ಕೋಗಿಲಕೆ (ಪ್ರಭುಲೀ. ೩-೩೨). [ಸರ$_1$ + ಇಡು$_1$]

**ಸರವಿಡು$_2$** (ಕ್ರಿ). ಮಾಲೆಯನ್ನು ಹಾಕಿಕೊಳ್ಳು ; ಹಾರವನ್ನು ಧರಿಸು : ಮರುಳುಗಳು ಕರುಳ ಮಾಲೆಯ ಕೊರಳೊಳು ಸರವಿಟ್ಟು ರುಧಿರತಿಳಕಮನಿಟ್ಟುಂ ಹರಸುತಿದ್ದರು (ಎಕ. VIII, ನಗರ. ೧೯-೧೫ ; 1320). [ಸರ$_2$ + ಇಡು$_1$]

**ಸರವಿವೋಗು** (ಕ್ರಿ). (ಬೇಟೆಗಾಗಿ) ಪ್ರಾಣಿಗಳ ಜಾಡಿನಲ್ಲಿ ಹೋಗು : ಬಳಗಂಬೆರಸೀ ಅಂಜನಗಿರಿಯೆಡೆಯ ಕಿಬ್ಬರಿಯ ಪೞುವೊಳ್ ಸರವಿವೋಪುದುಂ (ರಾಮಾಶ್ವ. ೭೭-೨೪).
[ಸರವಿ$_2$ (< ಸರುವು$_2$) + ಪೋಗು$_1$ (< ಪೋ$_1$)]

**ಸರವು** 'ಸರಿವು' ನೋ.

**ಸರವುಗಟ್ಟು**, ಸರುವುಗಟ್ಟು (ಕ್ರಿ). ೧. ಧಾರಾಕಾರವಾಗು ; ಧಾರೆಯಾಗಿ ಸುರಿ : ಮಾಸ್ತರರು . . . ಮತ್ತೊಂದು ಸುದ್ದಿಯನ್ನು ತಿಳಿಸಿದರು - ಬೆಳಗುಮುಂಜಾನೆ ಸರವುಗಟ್ಟಿ ಹೊಡೆದ ಮಳೆಯ ಹೊಡೆತಕ್ಕೆ ಅವರ ಮನೆಯ ಗೋಡೆಯೊಂದು ಬಿದ್ದಿರುವದಾಗಿ (ಗಂಗಾಸಾ. ೯೯). **ಸರುವುಗಟ್ಟು** : ೧. ಸರುವುಗಟ್ಟಿ ಮಳೆಯು ಬೀಳುತ್ತಿದೆ (ಅಂಬಿಕೆ. ೪೧). ೨. (ಆಲಂ) ಮೇಲಿಂದ ಮೇಲೆ ಬರು ; ಓತಪ್ರೋತವಾಗು : ಎಲ್ಲರಿಗೂ ನಗೆಯು ಸರುವುಗಟ್ಟಿ ಬಂದಿತು (ಗಂಗಾಸಾ. ೩೧). [ಸರವು (< ಸರಿವು) + ಕಟ್ಟು$_1$]

**ಸರವೆ$_1$** 'ಶ್ರಾವೆ' ನೋ.

**ಸರವೆ$_2$** 'ಸರವಿ$_1$' ನೋ.

**ಸರವೆತ್ತು** (ಕ್ರಿ). ಧ್ವನಿಯನ್ನು ಏರಿಸು : ಅಡಿಯಿಡುವ ಕಾಂತೆಯರಂದುಗೆಯ ನಿನಾದಂ ಸರವೆತ್ತಿ ಪಾಡುವ್ಮೆದೆಯರ ಗಾನಂ ದಿಗೀಶ್ವರರ ಕಿವಿಗಾನಂದಮಂ ಕಱೆಯೆ (ಚೆಬಪು. ೬-೫೪). [ಸರ$_1$ + ಎತ್ತು$_1$]

**ಸರವೇಱಿಸು** (ಕ್ರಿ). ೧. ಮಾಲೆಕಟ್ಟು ; ಸರವನ್ನಾಗಿ ಮಾಡು : ಚರಿತಪುರಾಣ ದೊಳ್ಮಣಿಗಳಂ ಸರ[ಪಾಠಾಂ. ರಸ]ವೇಱಿಪವೋಲ್ ಭವಾವಳೀಸ್ಮರಣಕಥಾ ಭವಂಗಳನದಾರ್ ಬರೆವರ್ (ಅರ್ಧನೇ. ೧-೩೯) ; ವಿನೂತನಾಕ್ಷಮಣಿಯಂ ಸರವೇಱಿಪ ನಾರ ಸೀರೆಯಂ ಪಸರಿಪ . . . ಮುನಿಮುಖ್ಯಕುಮಾರಸಮೂಹಮೊಪ್ಪುಗುಂ (ಗಿರಿಕ. ೧-೭೪). ೨. ಒಂದಾದ ಮೇಲೊಂದರಂತಿರು ; ಅನುಸ್ಯೂತವಾಗಿರು : ಸರವೇಱಿಪಂದದಿಂ ಸಿರಿಗಳನೀ ಮಹಾಕಥೆಗಳಂ ಪ್ರಥಿತಂಗಳನೊಂದೆ ಕಾವ್ಯದೊಳ್ ಬರೆದನಿದೇಂ ಕವೀಶ್ವರರೊಳ್ ಕವಿರಾಜಕುಂಜರಂ (ಅರ್ಧನೇ. ೧-೩೯). [ಸರ$_2$ + ಏಱಿಸು]

**ಸರಸ** (ಗು). ೧. (ಹಣ್ಣು ಮುಂತಾದುವುಗಳಂತೆ) ರಸದಿಂದ ತುಂಬಿದ ; ರಸಭರಿತವಾದ : ತಾಮರೆಯರಲೊಳ್ ಸರಸನಿಜಾಮೋದದೊಳೊಂದಿ ನಲಿದು . . . ಸುಟಿವುದಳಿ ಕೆಲಕೆಲದೊಳ್ (ಕವಿರಾ. ೩-೧೨೭) ; ಸ[ಪಾಠಾಂ. ಸು]ರಸ ಪಲಾಶಪುಷ್ಪಚಯದೊಳ್ ವನಲಕ್ಷ್ಮಿಯ ರತ್ನನೂಪುರಸ್ವನಮೆನೆ . . . ಪೊಣ್ಮಿದತ್ತು ಮಧುರಂ ಮಧುಮತ್ತಮಧುವ್ರತಸ್ವನಂ (ಜಗಪಿ. ೧೪-೪೦). ೨. ಅಚ್ಚ ಹೊಸದಾದ ; ನವನವೀನವಾದ : ಉನ್ಮುಖವಾಗಿರ್ದುವು ನೀಳ್ದ ಸರಸಬಿಸವಲ್ಲರಿಗಳ್ (ಮಲ್ಲಿಪು. ೭-೧೦೨). ೩. ರುಚಿಕರವಾದ ; ಸವಿಯಾದ : ಸರಸಾನ್ನಪಾನ . . . ಅತುಳಪಾತ್ರಮಿವುವು ನಿರಂತರಂ ದಶವಿಧಂಗಳಮರಕುಜಂಗಳ್ (ಶಾಂತೀಶ್ವ. ೭-೮೬) ; ವಿಪ್ರರಾದರೆ ಸರಸನವಭೋಜನದ ಕಥೆ ಮೇಣ್ ನಿರತಿಶಯವೇದಾಂಗವೇದ ತದರ್ಥ ತರ್ಕಗಳು (ಕುವ್ಯಾಆ. ೧೭-೨೩). ೪. ಪ್ರೀತಿಯಿಂದ ಕೂಡಿದ : ಸರಸ ಹಾಸ್ಯದ ಹಾಸಕದ ವಹಣಿಗಳ ವೈಸಿಕದ . . ನವಶಾಬರಿಯರ್ಮೆದಿದರು (ತೊರರಾ. ೧-೫-೪೦) ; ಆವಗಂ ಸರಸಕರುಣಾಮೃತದ ಕಳೆಗಳಿಂ ತೀವಿದೆಳನಗೆಯ ಬೆಳ್ದಿಂಗಳಂ ಪಸರಿಸುವ ದೇವಪುರ ಲಕ್ಷ್ಮೀರಮಣನಾಸ್ಯಚಂದ್ರನಾನಂದಮಂ ನಮಗೀಯಲಿ (ಜೈಮಿಭಾ. ೧-೧). ೫. ಸೊಗಸಾದ ; ಚೆಲುವಾದ : ಸರಸರವದಿಂ ಸಾರ್ದು ಸಂಕೀರ್ತನಂಗೆಯ್ವ ಶ್ರುತಿಸತಿಯರಿಂ (ಶಬಶಂ. ೧-೭೯ ವ) ; ಸರಸಸಂಗೀತದ ಕುರುಹುಗಳರಿಯದೆ ಬರಿದೆ ಬಾರಿಸದಿರು ತಂಬೂರಿ (ಶಂಕ್ಷ. ೨೭-೩). ೬. (ಬೆವರಿನಿಂದ) ಒದ್ದೆಯಾದ ; ತೊಯ್ದ. ೭. ಅಗ್ಗವಾದ ; ಸೋವಿಯಾದ : (ಹ). ೮. [ಕಾವ್ಯಮಿ] (ಶೃಂಗಾರ ಮುಂತಾದ) ಕಾವ್ಯರಸಗಳಿಂದ ಕೂಡಿದ : ಸರಸಕವಿಕಾವ್ಯಮಧುಮತ್ತ ರಾಗದೊಳ್ ಪೊರದು . . . ನುಣ್ಣನಿಯಿಂದೋದುವ ಸುರವಾಚಕಿ ಸತಿಗೆ ಪುಳಕಮಂ ಪುಟ್ಟಿಸಿದಳ್ (ಚಂದ್ರಪ್ರ. ೧೧-೧೪೪) ; ಅರಸಿಯರನಿಬರುಮಾದರದಿಂದೆನ್ನ ಸರಸಕಾವ್ಯವ ಸವಿವಂತೆ ಪರಮಪತಿವ್ರತೆಯರ ನಡತೆಯನಿಲ್ಲಿ ಮರುಳುಗೊಳಿಸಿ ಪೊಗಳುವೆನು (ಹದಿಬ. ೧-೪೭). (ನಾ). ೯. ಚೆಲ್ಲಾಟ ; ವಿನೋದ : ಅರಸರೊಳೆಲೆ ನೀಂ ಸರಸಮ ನರಸಿಯವೋಲಾಡುತಿರ್ಪ ನಿನಗಿದು ಗುಣಮೇ ಅರಸರ್ ಸರಸಮನಱಿವರೆ ಸರಸಮನಾಡರಸರಲ್ಲದವರೊಳ್ ಮಗಳೇ (ಕವಿರಾ. ೩-೨೩೩) ; ಎಳೆಯ ಬಾಳೆಯ ಸುಳಿಗೆ ಸೀಗೆಯ ಮೆಳೆಯೊಡನೆ ಸರಸವೆ (ಕುವ್ಯಾದ್ರೋ. ೧೨-೨೯). ೧೦. ಚೆಲುವು ; ಸೊಬಗು: 'ಸರಸಂಬೆಱು' ಪರಾ. ೧೧. ಶೃಂಗಾರವಿಷಯದಲ್ಲಿರುವ ಆಸಕ್ತಿ ; ರಸಿಕತೆ: 'ಸರಸಗಾಱ', 'ಸರಸಾಶ್ರಯ' ಪರಾ. ೧೨. ಸರಾಗ ; ಸುಲಭತೆ : ಅರಸ ಫಡ ಹೋಗದಿರು ಸಾಮದ ಸರಸಕೊಳ್ಳದು ಬಿಲ್ಲ ಹಿಡಿ ಹಿಡಿ (ಕುವ್ಯಾದ್ರೋ. ೧-೬೧) ; ಸನ್ಮಿತ್ರನಾದ ನಿನ್ನ ದೆಸೆಯಿಂದ ನನ್ನ ಮನೋರಥವು ಸರಸವಾಗಿ ಸಫಲವಾಯಿತು (ಶಾಕುಂತ. ೧೧೧-೧೨). ೧೩. ಸದರ ; ಸಲಿಗೆ : ಹುಲುಕಪಿಗಳೆಮ್ಮೊಡನೆ ಕಾದಲು ಸರಸ ವಿರಸವಲ (ತೊರರಾ. ೩೪-೨೦) ; ಅದರೊಡನೆ ನೀನು ಎಷ್ಟು ಸರಸವಾಗಿ, ಎಷ್ಟು ಆಂತರ್ಯಕವಾಗಿ ಮುಗುಳುನಗೆಯಿಂದ ಮಾತನಾಡುತ್ತಿದ್ದೆ (ಹೊಸಕ್ಷ. ೮). ೧೪. ಸ್ವಚ್ಛ; ನಿರ್ಮಲ : ಸರಸವಾಯಿತು ಗಗನತಳ ತಾವರೆಯ ಸಖ ನಿಜರಥವ ನೂಕಿದನುದಯ ಪರ್ವತಕೆ (ಕುವ್ಯಾದ್ರೋ. ೪-೧೨). ೧೫. ರಸಿಕ : ಸರಸನೆನಿಸಿರ್ದ ಸಖ ನಾಗರಿಕಂ . . . ಅವನಿಪಂಗಿಂತೆಂದಂ (ಗಿರಿಕ. ೪-೧೦೩).

ಸರಸವಾಡು = ೧. ಚಿನ್ನಾಟವಾಡು ; ಚೆಲ್ಲಾಟವಾಡು : ಗಿರಿಯ ಮಕ್ಕಳು ನೆರೆದು ವಜ್ರವ ಸರಸವಾಡುವ ಕಾಲವಾಯಿತೆ (ಕುವ್ಯಾದ್ರೋ. ೨-೫೫). ೨. ಚೆಕ್ಕಂದವಾಡು; ಲಲ್ಲೆಹೊಡೆ : ಚಂದ್ರಿಗೆ ತಾನು ಗೋವಿಂದನೊಡನೆ ಸರಸವಾಡುತ್ತಿದ್ದುದೆಲ್ಲ ಜ್ಞಾಪಕಕ್ಕೆ ಬಂತು (ನಿಶಉ. ೪೫). ೩. ಅಪಹಾಸ್ಯ ಮಾಡು ; ಗೇಲಿಮಾಡು : ಬಿರುದ ಬಟ್ಟೋಡಿತ್ತು ರಾವುತನೆರವಿ ಬಱಗುದುರೆಗಳ ಕಂಡಾ ತರುಚರಂಗಳು ಸರಸವಾಡಿತ್ತು (ತೊರರಾ. ೨೦-೨೫). [ಸಂ.]

**ಸರಸಂಬೆಱು** (ಕ್ರಿ). ೧. ನಾವೀನ್ಯವನ್ನು ಹೊಂದು : ಸರಸಂಬೆತ್ತ ಬಹುಪ್ರಕಾರದ ಕಳಾಪ್ರಾಗಲ್ಭ್ಯದಿಂ ಭೂವರಸ್ಮರನಂ ಮೋಹಿಪೆವೆಂದು ಸಾರ್ದು ಸಮಯಂಬಾರುತ್ತುಂ . . . ಇರ್ದುದು ರತ್ನಮಾಲೆವೆರಸಂತಾ ವಾರನಾರೀಜನಂ (ಕುಸುಮಾ. ೧೦-೧೦೧). ೨. ಚೆಲುವನ್ನು ಪಡೆ ; ಮನೋಹರವಾಗು : ಸರಸಂಬೆತ್ತೆಳಗೊಂಬು ಸಾರ್ದ ಪದವಿಲ್ಲುನ್ಮತ್ತಭೃಂಗವ್ರಜಂ ತಿರಿ ತಳ್ತೊಪ್ಪುವ ನುಣ್ಣಳಿರ್ದೋಣೆ ಲಸತ್ಪುಷ್ಪಾಳಿ ಬಾಣಂಗಳಾಗೆ ರತೀಶಂ ಪರಿಪಂಥಿರೂಪನಿಸುತಿರ್ಪಂ . . . ಪಾಂಥರಂ (ಕುಸುಮಾ. ೨-೫೨). [ಸರಸ + ಪೆಱು]

**ಸರಸಗಾತಿ** (ನಾ). ಸರಸವಾಡುವ ಸ್ವಭಾವದವಳು ; ರಸಿಕಳಾದ ಹೆಣ್ಣು : (ಹ). [ಸರಸ + - ಕಾತಿ]

**ಸರಸಗಾಱ** (ನಾ). ಸರಸ ಸ್ವಭಾವದವನು ; ರಸಿಕ : ಅರಸಿಯರಸನ ಮದುವೆ ಯಾಗಲದನೆಲ್ಲರರಮನೆಯೊಳು ಕಾಣಲರಿದು ಕಲಿಗಳ ಮದುವೆಯು ಕಣ್ಣಾರ ಕಂಡರೇಂ ಸರಸಗಾಱನೊ ಸಾರ್ವಭೌಮ (ಭರಚ. ೪೦-೧೦೫).
[ಸರಸ + - ಗಾಱ (< - ಕಾಱ)]

**ಸರಸತಿ** (ನಾ). ವಾಗ್ದೇವತೆ ; ಶಾರದೆ : ಸರಸತಿ ಸಿರಿ ತನ್ನಾನನದೊಳುರದೊಳಿರೆ ಚತುರಾನನನುಂ ಕೃಷ್ಣನೆನಿಪನಿಱವಬೆಡಂಗಂ (ಗದಾಯು. ೨-೪೫) : ಸಿರಿ ವರವಕ್ಷದೊಳ್ ನೆಲಸಿ ಸದ್ವಿಭವಕ್ಕೆ ನಿವಾಸವಾದಳಂಬುರುಹಮುಖಪ್ರದೇಶದೊಳನಾರತವಿಟ್ಟು ವಿವೇಕಿಯಾದಳಾ ಸರಸತಿ (ಎಕ. VI. ಕಡೂರು. ೬೬-೪೯ ; 1172) ; ನೆರವಾಗು ಗಾನ ಕೇಳೇಳೆಂದು ಮಲಗಿದ್ದ ಸರಸತಿಯನು ಜಾಣೆ ತನ್ನ ಬೆರಳಿಂದೆ ಮಿಡಿವಂತೆ ಭಾರಿದಂಡಿಗೆಗೊರ್ವ ತರಳಾಕ್ಷಿ ಮಿಡಿದಳಂಗುಲಿಯ (ಭರಚ. ೫-೬೭).

ಸರಸತಿಯೆಱೆಯ = ಸರಸ್ವತಿಯ ಗಂಡ ; ಬ್ರಹ್ಮ : ಸಿರಿಯರಸಂ ಮಾದೇವಂ ಸರಸತಿಯೆಱೆಯರ್ಕಳಡಿಗಳೆಂಬೀ ಕೆಂದಾವರೆಗಳ್ ಪೊರೆಗೆಮ್ಮಂ (ಕಬ್ಬಿಕಾ. ೨).
[< ಸಂ. ಸರಸ್ವತೀ]

**ಸರಸತಿವರ** (ನಾ). ಸರಸ್ವತಿಯ ಗಂಡ ; ಬ್ರಹ್ಮ : ಬಂದಿರ್ದಂ ಸರಸತಿವರಂ (ಕಬ್ಬಿಕಾ. ೨೯೩). [< ಸಂ. ಸರಸ್ವತೀವರ]

**ಸರಸತೆ** (ನಾ). ೧. ಆನಂದ ; ಸಂತೋಷ : ಗ್ರಂಥವಾಚನದಿಂದ ಮಾನಸಿಕವಾದ ಸರಸತೆಯಂತೆ ಆಯಾಫಲಗಳು . . . ದೊರೆವವೆಂಬುದಕ್ಕೆ ಅನುಮಾನವಿಲ್ಲ (ಕಾಲೂರ. ೮ ಹರಕೆ). ೨. ಹೊಂದಾಣಿಕೆ ; ಸಾಹಚರ್ಯ: ಈ ಸಂಗೀತ-ಭಾವಗೀತೆಗಳು ಅಪೂರ್ವವಾದ ಸರಸತೆಯಿಂದ ವಿಜೃಂಭಿಸಿದ ದಿನಗಳಿಂದ . . . ದೂರ ಸರಿಯುತ್ತಾ ಹೋದುವು (ಭಾವಗೀ. ೨೦). [ಸಂ. ಸರಸತಾ]

**ಸರಸನ್ನೆ** (ನಾ). ಧ್ವನಿಯ ಮೂಲಕ ಕೊಡುವ ಸೂಚನೆ : ಲಾಗುಬೇಗಂಗಳ ಸಘಾಟಿಕೆಗಳ ಸರಸನ್ನೆ [ಪಾಠಾಂ. ನ್ನ] ತೊಡೆಮಡಂ ಕಸೆ ಕಬ್ಬಿ ಕಡಿಯಾಣ ಸರಸಮಂ ಸೈರಿಸದ ಚಳಬಳಕೆಗಳ ಚಾರು ತುರಗಕುಲವನುವಾಗಿ ನಿಂದವು (ಸೋಮಚ. ೫-೨೮).
[< ಸಂ. ಸ್ವರಸಂಜ್ಞಾ]

**ಸರಸಫಲ,** ಸರಸಫಳ (ನಾ). ರಸ ತುಂಬಿದ ಹಣ್ಣು : ಸರಸಫಲ ಸ್ಫುರಿತೌದುಂಬರಮಂ . . . ಮುದದೆ ಕಪೀಂದ್ರಂ ಕಂಡಂ (ಪಂಚತಂ. ೨೭೬-೧೨). **ಸರಸಫಳ**: ಸರಸಫಳಾಳಿಭಾರಂ . . . ಮನೋಹರಮನಿಕುಂ ವಿಶಾಲಸಹಕಾರ ಮಹೀರುಹಂ (ವರ್ಧಪು. ೧-೫೫). [ಸಂ.]

**ಸರಸಫಲಂದೋಱು** (ಕ್ರಿ). ರಸತುಂಬಿದ ಹಣ್ಣು ಬಿಡು : ಸತಿ ಸೌಂದರಿ ಮಾತಾಡುವ ವಕ್ರತೆಯುಂ ಕೇಳ್ದು ಭರದಿಂದಲರೇಱಿದ ಮಾಕಂದಂ ಸರಸಫಲಂದೋಱಿಪ್ಪುದು (ಜಯಕಾ. ೨-೩೨). [ಸರಸಫಲ + ತೋಱು]

**ಸರಸಫಳ** 'ಸರಸಫಲ' ನೋ.

**ಸರಸರ** 'ಸಱಸಱ' ನೋ.

**ಸರಸರನೆ** 'ಸಱಸಱನೆ' ನೋ.

**ಸರಸರಿಸು** 'ಸಱಸಱಿಸು' ನೋ.

**ಸರಸವತಿ** (ನಾ). = ಸರಸಗಾತಿ : ''ಸರಸವತಿ ಚಲ್ಲಗಾರ್ತಿಯು'' (ಕವಿಕಂ. ೧೭೪).
[ಸಂ. ಸರಸವತೀ]

**ಸರಸಸಲ್ಲಾಪ** (ನಾ). ಸಂತೋಷವಾದ ಮಾತುಕಥೆ ; ಸುಖಸಂಕಥಾಲಾಪ : ಪ್ರಿಯ ಪ್ರೇಯಸಿಯರು . . . ಬೆಳುದಿಂಗಳಲ್ಲಿ ಸರಸಸಲ್ಲಾಪದಲ್ಲಿ ತೊಡಗಿದ್ದಾರ (ಭಾರದ. ೫೩೦) ; ಖೇಚರದಂಪತಿಗಳ ಸರಸಸಲ್ಲಾಪ ಇವನ ಕಿವಿಗೆ ಕೇಳುತ್ತಾ ಇದೆ (ದಾನಚಿಂ. ೧೩). [< ಸಂ. ಸರಸಸಂಲಾಪ]

**ಸರಸಸಾಹಿತ್ಯ** (ನಾ). ರಸಮಯವಾದ ಸಾಹಿತ್ಯ : ಈ ಹೊನ್ನಿ ಸರಸಸಾಹಿತ್ಯದ ವರದೇವತೆ (ಹದಿಬ. ೧-೨೩). [ಸಂ.]

**ಸರಸಾತಲಡಿ** (ನಾ). ಏಳುವಳಿಗಳ (ಮುತ್ತಿನ) ಹಾರ : ಮಕರಕಂಠಿ, ನಾಗಾಭರಣ ಸಹಿತವಾದ ಜಡೆ, ಸರಸಾತಲಡಿ, ಅನೇಕಪದಕಗಳಿಂದ ಯುಕ್ತವಾದ ಬಗೆಬಗೆಯಾದ ಮುಕ್ತಾಹಾರಗಳು (ಮಹಾವಂ. II, ೧೨೭).

[ಸರ$_2$ + ಸಾತ್ತ$_0$ (IP ← ಮರಾ. ಸಾತ್) + ಲಡಿ]

**ಸರಸಾತ್ಮ** (ನಾ). ಪ್ರೇಮಮಯನಾದವನು: ಭೃಶೋತ್ಕಳಿಕೆಯರೆಂತು ಸ್ವೈರಿಸುವರೋ ಸರಸಾತ್ಮನಿನಾದಗಲ್ಕೆಯಂ (ಪುಷ್ಪಪು. ೪-೮೯). [ಸಂ. ಸರಸಾತ್ಮನ್]

**ಸರಸಾಲಂಕೃತಿ** (ನಾ). [ಕಾವ್ಯಮಿ] ಶೃಂಗಾರಾದಿ ನವರಸಗಳಿಂದ ಕೂಡಿದ ಉಪಮಾದಿ ಅಲಂಕಾರ : ಸರಸಾಲಂಕೃತಿ ಜಾತಿ ರೀತಿ ಗಮಕಂ ಸೊಂಪಿಂಪು ನುಣ್ಪೊಳ್ಪು ಭಾಸುರಭಾವಂ ನೆಲೆಗೊಂಡು ತೋಱೆ ರಸಗಾನಂಬೋಲ್ ಮನಂಗೊಳ್ವ ವಿಸ್ಫುರದಸ್ಮತ್ಕೃತಿಯಂ . . . ಖಳಭುಜಂಗಂ ಕೇಳದೇಂ ಪೋಕುಮೇ (ರಾಜಶೇ. ೧೪-೧೭೭). [ಸಂ.]

**ಸರಸಾಲಾಪ** (ನಾ). ಸರಸವಾದ ಮಾತು ; ವಿನೋದವಾದ ಸಲ್ಲಾಪ : ಜಗದೊಳು ಚಾರುಸರಸಾಲಾಪಚತುರರು ಕವಿವರರಿರುವುದು ವಿರಳ (ಇಂಚಾಪ. ೮೧-೯೨). [ಸಂ.]

**ಸರಸಾಲೋಕನ** (ನಾ). ಪ್ರೇಮಮಯವಾದ ದೃಷ್ಟಿ, — ನೋಟ : ಸರಸಾಲೋಕನದಿಂ ವಚನರಚನೆಯಿಂ ಹಸ್ತಕಮಳಸಂಸ್ಪರ್ಶನದಿನಂಬುರುಹೇಕ್ಷಣಂ ಪ್ರಸನ್ನಾಚರಿತೆಯರಪ್ಪಂತು ಮಾಡಿದಂ ಗೋಪಿಯರಂ (ಜಗವಿ. ೫-೩೩) ; ಅತಿಶಯ ಪ್ರಮೋದದಿನಾ ಕುವರಿಯನಾ ಯುವರಾಜನ ಕೆಲದೊಳ್ಕುಳ್ಳಿರಿಸಿ ಸರಸಾಲೋಕನದಿಂದವಲೋಕಿಸಿ (ರಾಜಶೇ. ೮-೮೨ ವ). [ಸಂ.]

**ಸರಸಾಶ್ರಯ** (ನಾ). ರಸಿಕತೆಗೆ ನೆಲೆಯಾದವನು ; ರಸಿಕ : ಸರಸಾಶ್ರಯ ಪ್ರವರಮೂರ್ತಿ . . . ಗುಣೋದಯನಕಾರಣಧುರ್ಯಮಿತ್ರಂ (ಕವಿರಾ. ೩-೨೨೮). [ಸಂ.]

**ಸರಸಿ$_1$** (ನಾ). ಸರಸವಾಗಿರುವ ವ್ಯಕ್ತಿ : ಸೀತಾರಾಮರಾಯನಂಥಾ ಸರಸಿಯಲ್ಲದ ಮನುಷ್ಯನಿಗೆ ಅಸುಖ, ಅತೃಪ್ತಿ, ಅಸಮಾಧಾನ ತುಂಬಿಕೊಳ್ಳುತ್ತವೆ (ಮಹಾಗ. ೨೦); ಪಕ್ಕದ ಮನೆಯಲ್ಲಿ ಸರಸಿಯಾದ ತರುಣವ್ಯಾಪಾರಿಯೊಬ್ಬ ವಾಸಿಸುತ್ತಿದ್ದನು (ಪುನರು. ೧೦).

[ಸರಸ + - ಇ$_3$]

**ಸರಸಿ$_2$** (ನಾ). ಕೊಳ ; ಸರೋವರ : ಸರಸಿಯ ನೀರಜಂಗಳ ರಜಂಗಳ ಪೊಂಪುಳಿವೆತ್ತು . . . ಸಂಚರಿಸಿದುದೊಪ್ಪುವಂತುಪವನಂ ಪವನಂ (ಜಗವಿ. ೧೪-೯೦) ; ಜಲನಿಧಿಗೆ ಸರಿಸರಸಿ ಯಾವುದು (ಕುವ್ಯಾಅ. ೨೩-೩೮). [ಸಂ. ಸರಸೀ]

**ಸರಸಿಜ** (ನಾ). ಸರೋವರದಲ್ಲಿ ಹುಟ್ಟಿದುದು ; ತಾವರೆ : ಸರಸಿಜದಿಂ ಮಕರಂದಸ್ಫುರಿತಂ ಪುದಿದೊದವಿದಪ್ಪುದೆಂಬಿನಂ . . . ದರಹಸಿತಂ ನೆಗಟ್ಟಿನಂ ತೊದಳ್ನುಡಿ ನುಡಿದಂ (ಆದಿಪು. ೮-೩); ಸರಸಿಜದ ಸಿರಿಯನಾನನಪಹರಿಸೆಂ ಮನ್ಮುಖದಿನದುವೆ ನಿಜಂ (ಚಂದ್ರಪು. ೭-೧೩೭).

ಸರಸಿಜಾಮೋದ = ತಾವರೆಗೆ ಆಮೋದವನ್ನುಂಟು ಮಾಡುವವನು ; ಸೂರ್ಯ; ಒಂದು ಬಿರುದು : ಸರಸಿಜಾಮೋದಂ ಮಾರ್ಕೊಲ ಭೈರವಂ ಸಮರಜಯಘಂಟಾರವಂ . . . ಮೂವಡಿಗಣ್ಡರ ಜಾಜು ನಾಮಾದಿ ಸಮಸ್ತಪ್ರಸಸ್ತಿಸಹಿತಂ (ಸೌಇಇ. XX, ೪೧-೯ ; 1068). [ಸಂ.]

**ಸರಸಿಜಗರ್ಭ** (ನಾ). ತಾವರೆಯಲ್ಲಿ ಹುಟ್ಟಿದವನು ; ಬ್ರಹ್ಮ : ಸರಸಿಜಗರ್ಭಂ ಗಡಮಿಾ ಪುರಕ್ಕೆ ಬಂದಿರ್ದನೆಂದೊಡಿನ್ನಮೆಮ್ಮಿಂದಂ ಪಿರಿಯರ್ ಪೆಱರಾರ್ (ಧರ್ಮಾಮೃ. ೫-೨೦೦).

ಸರಸಿಜಗರ್ಭತನೂಜ = ಬ್ರಹ್ಮನ ಮಗ ; ನಾರದ : ಸರಸಿಜಗರ್ಭತನೂಜಂ ಸರಸಿಜನಾಭಂಗೆ ನುಡಿದಂ (ನೇಮಿಪು. ೭-೨೦೦). [ಸಂ.]

**ಸರಸಿಜನಾಭ** (ನಾ). ಹೊಕ್ಕುಳಲ್ಲಿ ಕಮಲವುಳ್ಳವನು ; ವಿಷ್ಣು : ಸರಸಿಜನಾಭನಾ ಭುವನಮಾನ್ಯೆಯನಿಪ್ಪಳನಂದು ಕನ್ಯೆಯಂ ತರಲನುರಾಗದಿಂ ಪೊಱಮಡಲ್ (ನೇಮಿಪು. ೭-೪೦) ; ಸರಸಿಜನಾಭನಂ ಸಿರಿ ಮನೋಭವನಂ ರತಿಯಿಂದುಮೌಳಿಯಂ ಗಿರಿಜೆ ಪಾರ್ಶ್ವದೊಳಿಟ್ಟು ಕಾವರಾ ಪುರದ ವಿಳಾಸಿನೀಜನದ ಗಾಡಿಗೆ ಮೆಚ್ಚ ತ್ತ್ವನಾಥರಂ (ಸೂಕ್ತಿಸು. ೪-೧೩೪). [ಸಂ.]

**ಸರಸಿಜನೇತ್ರ** (ನಾ). ತಾವರೆಯಂತೆ ಕಣ್ಣುಗಳುಳ್ಳವನು ; ವಿಷ್ಣು : ಸರಸಿಜನೇತ್ರನಿಂದ್ರನಜನಷ್ಟದಿಶಾಧಿಪರಾದಿಯಾದ ದೇವರ ಗಡಣಕ್ಕೆ ಭೀತಿಯನೊಡರ್ಚುವ ದುರ್ದಮಕಾಳಕೂಟಮಂ ಕರಕಮಳಂಗಳಿಂ ಪೊಸೆದು (ದಶಕು. ೯-೧೧೯). [ಸಂ.]

**ಸರಸಿಜಬಂಧ** (ನಾ). ತಾವರೆಯಾಕಾರದ ರಚನೆ : ಸರಸಿಜಬಂಧಂ ಕಮಲಾಕರಬಂಧಂ . . . ವರಬಂಧಂ ಲಿಂಗಬಂಧಮುಂ ವಿರಚಿಸಿದಳ್ (ಗಿರಿಕ. ೫-೭೩). [ಸಂ.]

**ಸರಸಿಜಬಾಂಧವ** (ನಾ). ತಾವರೆಯ ಗೆಳೆಯ ; ಸೂರ್ಯ : ಸರಸಿಜ ಬಾಂಧವನಸ್ತಾಂತರಗತನಾಗಿರೆ ಸರೋಜಿನೀವನಮಾದಂ ಕೊರಗುತ್ತೆ ಮುಗಿಗುಂ (ಕವಿರಾ. ೩-೩೦). [ಸಂ.]

**ಸರಸಿಜಭವ** (ನಾ). ೧. = ಸರಸಿಜಗರ್ಭ : ಸರಸಿಜಭವ ಸಾರಥಿಯಾದ ಧರೆಯೆಂಬ ವರರಥವನು ಮೇಘ ತಾಗಿ ಸರಿಸವ ಮಾಡಿ ತ್ರಿಪುರವನು ಸುಟ್ಟ ಪರಿಯನದಾರು ಮೆಚ್ಚುವರು (ತ್ರಿಪುಸಾಂ. ೩-೨೮). ೨. [ಛಂದ] ಅಂಶಗಣಗಳಲ್ಲಿ ಒಂದು ; ಬ್ರಹ್ಮಗಣ: ಎರಡುಂ ಮೂಱುಂ ನಾಲ್ಕುಂ ಗುರುವಿಂ ಪ್ರಸ್ತರಿಸಲಂಬುನಿಧಿಗಜ ಧರಣೀಶ್ವರಗಣ ಮೊಗೆಗುಮವರ್ಕಂ ಸರಸಿಜಭವವಿಷ್ಣುರುದ್ರಸಂಜ್ಞೆಗಳಕ್ಕುಂ (ಛಂದೋಂಬು. ೫-೨೪೦). [ಸಂ.]

**ಸರಸಿಜಮಿತ್ರ** (ನಾ). = ಸರಸಿಜಬಾಂಧವ : ಸರಸಿಜಮಿತ್ರನಂತೆ ತಮ ಶೋಭಿಸೆ . . . ಅಂತರಿಕ್ಷದೊಳಗುರ್ವಿಸಿ ಪೋಪರನೊಳ್ಪಿತಾಗೆ ಭಾಸುರಗುಣ ತೋಱೆ (ಧರ್ಮಾಮೃ. ೧೧-೧೭೮) ; ಸರಸಿಜಮಿತ್ರ ಕೂ ತಮವಿದಾರಣ ಕೂ . . . ಎನುತ ಕೂಗುತಲಿರ್ದುದು ತಾಮ್ರಚೂಡನುಂ (ಸೂಕ್ತಿಸು. ೯-೨೯). [ಸಂ.]

**ಸರಸಿಜಯೋನಿ** (ನಾ). = ಸರಸಿಜಗರ್ಭ : ಪಿರಿದು ಸಮಸ್ತವಿಷ್ಟಪವದಂ ಪಡೆದಂ ಪಿರಿಯಂ ವಿರಿಂಚನಾ ಸರಸಿಜಯೋನಿಯಂ ಜಠರಹೇಮಪಯೋರುಹದಲ್ಲಿ ಪುಟ್ಟಿಪಂಬುರುಹವಿಲೋಚನಂ ಪಿರಿಯಂ (ಜಗವಿ. ೨-೯೭). [ಸಂ.]

**ಸರಸಿಜವಾಸ** (ನಾ). ತಾವರೆಯಲ್ಲಿ ನೆಲಸಿದವನು ; ಬ್ರಹ್ಮ : "ಸರಸಿಜವಾಸ ಪಂಚಪರಮೇಷ್ಠಿಗಳು ಪರಮೇಷ್ಠಿಯೆಂದೆನಿಕ್ಕು" (ನಾನಾರ. ೧೫೧). [ಸಂ.]

**ಸರಸಿಜವಿರೋಧಿ** (ನಾ). ತಾವರೆಯ ಶತ್ರು ; ಚಂದ್ರ : ಸರಸಿಜವಿರೋಧಿ ಕಾಂತ್ಯಾಕರಮಮೃತಮಯಂ ತ್ವದೀಯಮುಖಶಶಿಯುಂಟಾಗಿರೆ ಶಶಿಯದೇವುದು (ಕವಿರಾ. ೩-೧೦೨). [ಸಂ. ಸರಸಿಜವಿರೋಧಿನ್]

**ಸರಸಿಜಸಂಭವ** (ನಾ). = ಸರಸಿಜಗರ್ಭ : ಸರಸಿಜಸಂಭವಂ ಕುಸುಮಸಾಯಕನಾಗಿ . . . ಆತ್ಮಮನಃಸುಕುಮಾರಹಸ್ತದಿಂ ವಿರಚಿಸಿದಂ ನಿಜೇಶಮುಖಸೌರಭಭೃಂಗಿಯನಾ ಲತಾಂಗಿಯಂ (ಅರ್ಧನೇ. ೭-೭೯). [ಸಂ.]

**ಸರಸಿಜಸಖ** (ನಾ). ೧. = ಸರಸಿಜಬಾಂಧವ : ಸರಸಿಜಸಖನಾ ನರಪತಿಯರಿಗಳ ಸೌಧಾಗ್ರದಲ್ಲಿ ಮೊಳೆತೆಳೆವುಲ್ಗಾತುರಿಪ ತುರಂಗಮನರುಣಂ ಬರಸೆಳೆದು ಮರಳ್ಚಿ ನಡವನೆಡದೊಳ್ ಬಲದೊಳ್ (ರಾಜಶೇ. ೫-೧೧). ೨. [ಛಂದ] ಮೂರು ಲಘುಗಳ ಗಣ : ಪುರುಹೂತಗಣಂಗಳಾಱುಂ ಸರಸಿಜಸಖಗಣಗಳೆರಡು ಸಂಧಿಸಿ ಬರ್ಕುಂ ಚರಣಕ್ಕೆ (ಛಂದೋಂಬು. ೩-೨೨೨ ಆಡಿಪದ್ಯ). [ಸಂ.]

**ಸರಸಿಜಾಂಬಕ** (ನಾ). = ಸರಸಿಜನೇತ್ರ : ಸರಸಿಜಾಂಬಕಪದ್ಮಭವರಾಖಿರಥ ಗುಹರಷ್ಟವಸುಗಳು . . . ನೆರೆದು ಭಜಿಸಲು (ಬಸವು. ೧೦-೩೧). [ಸಂ.]

**ಸರಸಿಜಾಕ್ಷ** (ನಾ). = ಸರಸಿಜನೇತ್ರ : ಸರಸಿಜಾಕ್ಷನ ವಿಷ್ಣುನಾಮಸ್ಮರಣೆಯಲಿ . . . ಭೂತಕ್ಕೆ ಹಿತವಹ ನಡವಳಿಯನಱಿದು (ಕುವ್ಯಾಉ. ೪-೯೯). [ಸಂ.]

**ಸರಸಿಜಾಕ್ಷಿ** (ನಾ). ತಾವರೆಯಂತಹ ಕಣ್ಣುಗಳುಳ್ಳವಳು ; ಚೆಲುವೆ : ಸರಸಿಜಾಕ್ಷಿ ವಿಶಾಖೆ ಗಂಡನ ಮಾತನೇಳಿಸಲಾಗದೆಂದು . . . ಲಡ್ಡುಗೆಯಲ್ಲಿ ಶೀಪ್ರದ ನಂಜ ನೋಸರಿಸದಿಕ್ಕಿ (ಧರ್ಮಾಮೃ. ೧೦-೧೯೮); ತರುಣಿಯರು ಕಂಡಂಜಿ ಹೊಕ್ಕರು ಸರಸಿಜಾಕ್ಷಿಯ ಮಱೆಯನು (ಕುವ್ಯಾಸ. ೧೪-೭೨). [ಸಂ. ಸರಸಿಜಾಕ್ಷೀ]

**ಸರಸಿಜಾತ** (ನಾ). = ಸರಸಿಜ : ಸಪ್ತರಸನಾ ಶಾರ್ವರೀವರ ಸಪ್ತಸಪ್ತಿವಿಲೋಚನಂಗಂ ಸಪ್ತಲಾಸಿತ ಸಸ್ಮಿತಾನನಸರಸಿಜಾತಂಗೆ . . . ಅರ್ಪಿಸುವೆನಿಂದುಗ್ರಗರಳವನು (ಬಸವು. ೫೮-೪೦). [ಸಂ.]

**ಸರಸಿಜಾತೋದ್ಭವ** (ನಾ). = ಸರಸಿಜಗರ್ಭ : ಸರಸಿಜಾತೋದ್ಭವನ ನಾಲ್ಕುಂ ಗಿರಿಜೆಯಾತ್ಮಜನಾಱು ದಶಕಂಧರನ ಹತ್ತಹಿಪಪತಿಯ ಸಾವಿರತಲೆಗಳೆಣಿಸಲ್ಕೆ ಸರಿಯೆ ನಿನ್ನಯ ತಲೆಯೊಡನೆ (ಬಸವು. ೩೮-೬೩). [ಸಂ.]

**ಸರಸಿಜಾರಿ** (ನಾ). = ಸರಸಿಜವಿರೋಧಿ : ಸರಸಿಜಾರಿಯ ಕಿರಣದೋಳಿಯ ವಿರಚಿಸಿದ ಸಿಂಧೂರಭಾಳದಿ ಕುಣಿವ ಕುಂತಳದ . . . ಗಣಪತಿ ಮಾಡೆಮಗೆ ನಿರ್ವಿಘ್ನದಾಯಕವ (ಕುವ್ಯಾಅ. ೧-೩). [ಸಂ.]

**ಸರಸಿಜಾಲಯೆ** (ನಾ). ಕಮಲವನ್ನೇ ಮನೆಯಾಗುಳ್ಳವಳು ; ಲಕ್ಷ್ಮಿ : "ಶ್ರೀ ಕಮಳೆಯಮಳೆ ರಮೆ ಸರಸಿಜಾಲಯೆ ಲೋಕಮಾತೆ ಮನ್ಮಥಮಾತೆಯೆನಲು ಸಿರಿಗಕ್ಕು ನಾಮಂ" (ಮಂಗರಾ. ೬-೧೮). [ಸಂ. ಸರಸಿಜಾಲಯಾ]

**ಸರಸಿಜಾಸನ** (ನಾ). ಕಮಲವೇ ಪೀಠವಾಗಿರುವವನು ; ಬ್ರಹ್ಮ : ಹರಿಯ ಮದವಂ ಹರಿಸುವಂ ಗಡ ಸರಸಿಜಾಸನಮುಖ್ಯದೇವರನೊರಸುವಂ ಗಡ (ಬಸವು. ೨೩-೨೨) ; ಸರಸಿಜಾಸನ ಕೊಟ್ಟ ಶಾಪದಿಯರಸಿಯಾದಳು ಗಂಗೆ (ಕುವ್ಯಾಅ. ೨-೨೧). [ಸಂ.]

**ಸರಸಿಜೋದರ** (ನಾ). ೧. = ಸರಸಿಜನಾಭ. ೨. [ಛಂದ] ಅಂಶಗಣಗಳಲ್ಲಿ ಒಂದು ; ವಿಷ್ಣುಗಣ : ಸರಸಿಜೋದರಗಣಮೆರಡಜನುಮಲ್ಲಿ ನೆರೆದಿರ್ಕೆ ಮತ್ತಂ ಸರಸಿಜೋದರಗಣಮುಮೆರಡಜನಕ್ಕೆ ಗಣಮುಮಾಱಕ್ಕುಂ (ಛಂದೋಂಬು. ೫-೨೪೩). [ಸಂ.]

**ಸರಸಿಜೋದ್ಭವ** (ನಾ). = ಸರಸಿಜಗರ್ಭ : ಸರಸಿಜೋದ್ಭವಯಮ ಮುನಿವಿಕೃತಿಯಿಂ ದ್ವಿಜರ್ಗೆ . . . ಎಂಟುತಿಂಗಳೊಳಗಮಪಾಯಮುಮಕ್ಕುಗುಂ (ಲೋಕೋಪ. ೪-೬); ಸರಸಿಜೋದ್ಭವ ಸೃಜಿಸದಿರ್ದರೆ ಧರಿಸಲಾಪುದೆ ಧರಣಿಯೆನೆ ಕುರುಧರೆಗೆ ಬಂದುದು ಸೇನೆ ಪಯಣದ ಮೇಲೆ ಪಯಣದಲಿ (ಕುವ್ಯಾಭೀ. ೧-೫೦). [ಸಂ.]

**ಸರಸಿರುಹ** (ನಾ). ೧. = ಸರಸಿಜ : ಸರಸಿರುಹದ ಮೇಗಾಡುವ ಸುರಸುದತಿಯರಾಟ ದಂದಮೆಂತೆನೆ ಸಿರಿಯಂ ಪರಿಭವಿಸಿ ತಂದು ಪೊಸಯಿಪ ಸಿರಿವಂತಿಕೆಯಿಂದೆ ಕಾಲೊಳೊದೆದಪರೆನಿಕುಂ (ಶಾಂತಿಪು. ೧೦-೧೭) ; ಸರಸಿರುಹಂ ದ್ವಿರೇಫತತಿಯಂ ವಿಪಿನಂ ಮದದಂತಿಯೂಥಮಂ ಸ್ಮರಿಯಿಸವು (ನೇಮಿಪು. ೪-೯೫). ೨. [ಛಂದ] ವರ್ಣಛಂದಸ್ಸಿನ ಇಪ್ಪತ್ತಾರು ಛಂದಸ್ಸುಗಳಲ್ಲಿ, ಪಾದದಲ್ಲಿ ಐದು ಅಕ್ಷರಗಳುಳ್ಳ ಸುಪ್ರತಿಷ್ಠೆಯೆಂಬ ಛಂದಸ್ಸಿನ ಒಂದು ವೃತ್ತ : ಸುರಗಣಮುಂ ಹರಿಹರರುಂ ಬರೆ ಕೆಳದೀ ಸರಸಿರುಹಂ (ಛಂದೋಂಬು. ೨-೨೩). [ಸಂ.]

**ಸರಸಿರುಹಸಂಭವ** (ನಾ). = ಸರಸಿಜಗರ್ಭ : ಸರಸಿರುಹಸಂಭವಕೃತದುರಾಕ್ಷರ ವಿನಿಯತನಿರಾಸಕಮಹಾನಿರುಪಮಿತಮಹಿಮಾಢ್ಯನಂ . . . ಭವದೂರನಂ ಕೊಂಡಾಡಿ (ಬಸವು. ೪೬-೭೧) ; ನಾರದಾದ್ಯರು ಸರಸಿರುಹಸಂಭವನ ಸಭೆಯೊಳು ವರಮಹಾಭಾರತವ ಕೊಂಡಾಡಿದರು ಭಕ್ತಿಯಲಿ (ಕುವ್ಯಾಅ. ೨-೧೨). [ಸಂ.]

**ಸರಸಿರುಹಾಕರ** (ನಾ). ತಾವರೆಗಳಿಂದ ತುಂಬಿರುವ ಕೊಳ : ಸರಸಿರುಹಾಕರದಿಂ ಸಚ್ಛರಿತಾಕರಂ . . . ನಂದನನಕ್ಕುಂ (ಚಂದ್ರಪು. ೧೨-೧೯). [ಸಂ.]

**ಸರಸೀಜ** (ನಾ). = ಸರಸಿಜ : ಸರಸೀಜಂ ಸರಜ ಶಶಧರಬಿಂಬಮದತಿಕಳಂಕಿತಂ ನಿನ್ನ ಮೊಗಂ ನಿರುಪಮಮಾಗಿಯುಮವಚೊಳ್ ದೊರೆ (ಕವಿರಾ. ೩-೭೩). [ಸಂ.]

**ಸರಸೀಜಜಾತ** (ನಾ). = ಸರಸಿಜಗರ್ಭ : ಗುಣಗಣಾಗ್ರಣಿಗಳ್ಸರಸಿ [ೀ] ಜಜಾತನೊಳ್ಪೊರೆಯೆನೆ ಲೋಕದೊಳ್ಳೆಗಟ್ಟ ಪಟ್ಟಲ ಸದ್ವಿಜರೇಂ ಕೃತಾರ್ಥರೋ (ಸೌಇ. XX, ೫೭-೧೪ ; 1084). [ಸಂ.]

**ಸರಸೀಜಾಕರ** (ನಾ). = ಸರಸಿರುಹಾಕರ : ಸರಸೀಜಾಕರಮೆಯ್ದೆ ಕೊಂಡಮುರು ಪಂಕೇಜವ್ರಜಂ ಕೆಂಡದುತ್ಕರಂ . . . ಎನಲಾ ಕಾಮಪ್ರತಾಪಾಗ್ನಿಯೆಟ್ಟುರಿವಂತಿರ್ದುದು ನೋಟ್ಟ ಕಾಮುಕಜನಕ್ಕಾ ವಾರಿಕೇಳೀಹ್ರದಂ (ನೇಮಿಪು. ೧೩-೩೩). [ಸಂ.]

**ಸರಸೀಜಾಕ್ಷ** (ನಾ). = ಸರಸಿಜನೇತ್ರ : ಸರಸೀಜಾಕ್ಷನೊಳಿತ್ತುದಾ ಸತಿಯ ಸಂಭೋಗಂ . . . ಸೌಖ್ಯಸಂಪತ್ತಿಯಂ (ಜಗವಿ. ೧೧-೫೯). [ಸಂ.]

**ಸರಸೀಜಾತ** (ನಾ). = ಸರಸಿಜ : ಪುನೀತಶರಣನ ಚರಣಸರಸೀಜಾತಕಭಿವಂದಿಸುತ ಸಮ್ಮುದವೆತ್ತು ಕೀರ್ತಿಸುತ (ಬಸವು. ೩೪-೨೫). [ಸಂ.]

**ಸರಸೀಜಾತಭವ** (ನಾ). = ಸರಸಿಜಗರ್ಭ : ಸರಸೀಜಾತಭವಾದ್ಯಮರ್ತ್ಯಮುನಿಪ ಧ್ಯಾನಪ್ರಭಾವಕ್ಕಗೋಚರಮಪ್ಪ . . . ವಿಭು ವಿಶ್ವನಾಥನಸೆವಂ ತದ್ದೇವತಾವಾಸದೊಳ್ (ಕುಸುಮಾ. ೧-೧೦೯). [ಸಂ.]

**ಸರಸೀಜಾತೋದ್ಭವ** (ನಾ). = ಸರಸಿಜಗರ್ಭ : ಸರಸೀಜಾತೋದ್ಭವಂ ಕಂಡರಿಸಿ ಕಡೆದು ತಂದಿಟ್ಟನೋ ರೋಹಣೋರ್ವೀಧರಮಂ ತಾಂ (ಶಾಂತೀಶ್ವ. ೧೦-೧೦). [ಸಂ.]

**ಸರಸೀಜೋದರ** (ನಾ). = ಸರಸಿಜನಾಭ : ಸರಸೀಜೋದರ ಕೇಳೀ ಗಿರಿನಗರದ ರಾಷ್ಟ್ರವರ್ಧನಂಗಂ ಜ್ಯೇಷ್ಠಾವರತತ್ಕಾಂತೆಗಮೊಗೆದಳ್ . . . ಸುಸೀಮೆ (ನೇಮಿಪು. ೭-೯೯). [ಸಂ.]

**ಸರಸೀಜೋದ್ಭವ** (ನಾ). = ಸರಸಿಜಗರ್ಭ : ಸರಸೀಜೋದ್ಭವ . . . ಮನಸ್ಸಂಜಾತ ನಾರಾಯಣಾಮರಸಿಂಹಾದಿಗಳಿಂ ನೆಗಳ್ತೆವಡೆದೀ ಶೃಂಗಾರಮಿಗಾಳ್ಕರಂ ದೊರೆವೆತ್ತತ್ತನೆ ಬೇಱೆ ವಿಸ್ತರಿಸಿದಂ ಶೃಂಗಾರರತ್ನಾಕರಂ (ಶೃಂಗಾರ. ೧-೧೫). [ಸಂ.]

**ಸರಸೀಜೋದ್ಭೂತ** (ನಾ). = ಸರಸಿಜಗರ್ಭ : ಸರಸೀಜೋದ್ಭೂತನಂ ತನ್ನಯ ನಿಖಿಳಕಳಾಪ್ರೌಢಿಯಿಂ . . . ಗೆಲ್ದು ಶೌರ್ಯಾಕರನಿರ್ದಂ ತತ್ಕುಮಾರಂ (ನೇಮಿಪು. ೧-೧೩೮). [ಸಂ.]

**ಸರಸೀರುಹ** (ನಾ). = ಸರಸಿಜ : ಸರಸೀರುಹನಾಳಮನಾವರಿಸಿದ ಶೈವಾಲಮೆನೆ ಹರಿದ್ರತ್ನಮಯಸ್ಫುರಿತಕಟಕಂ ಪ್ರಕೋಷ್ಠದೊಳರುಣಾಧರೆ ತೊಳಗಿ ಬೆಳಗದಿರ್ಪುದಿದೇನೋ (ಚಂದ್ರಪು. ೩-೫೮) ; ಸರಸೀರುಹಂಗಳಿಂದಿಟ್ಟಿವ ಮತ್ತಮರಾಳಿಗಳಂತೆ . . . ತೇರ್ಗಳಿಂ ಕರಿಣಿಗಳಿಂದಮಂದಣದಿನೇನಿಟ್ಟಿತಂದರೊ ವಾರನಾರಿಯರ್. (ಅನಂಪು. ೭-೩). [ಸಂ.]

**ಸರಸೀಸಂಜಾತ** (ನಾ). = ಸರಸಿಜ : ಸರಸೀಸಂಜಾತಜಾತೋನ್ನಿಶಿತನಿಶಿತಸೌರಂಭ ಸಂಪಾದನಾದಂ . . . ಪರೆದತ್ತಾದಂ ಪ್ರಮೋದಂ ಶಿವನಿಳಯಕುಳೋತ್ಪಾದಮಾ ಶಂಖನಾದಂ (ಗಿರಿಕ. ೫-೨). [ಸಂ.]

**ಸರಸು** (ನಾ). ೧. ಸೊಗಸು ; ಅಂದ : ಸಿರಿಸಲದ ಮರದರಳುಗಳ ಸರಸಾದ ಹಾರಗಳು ಹರಿದು ನೀರೊಳು ಹರಿಯೆ (ರಘುವಂ. ೧೯೨-೬೧) ; ಆಗಟಂಬರಿನಿಂದ ದಶಂಬರಿನ ವರೆಗೆ ಈ ತಡಸಲು ಬಹು ಸರಸಾಗಿ ಕಾಣಿಸುತ್ತದೆ (ಕಭಾಗ. ೧೯). ೨. ಸುಲಭ ; ಸಲೀಸು : ಈ ಬಗೆಯ ರೂಪಾಂತರಗಳು ರಾಸಾಯನಶಾಸ್ತ್ರದ ಅಭ್ಯಾಸದಿಂದ ಸರಸಾಗಿ ತಿಳಿಯುತ್ತವೆ (ಮುಂಬಯಿ. ೫-೩೬) ; ಹಿಂದೀ ಆಡಲಿಕ್ಕೆ ಬಲು ಸರಸು (ಸಾಹಿಸಂ. ೧೭೨). [< ಸಂ. ಸರಸ]

**ಸರಸೋಕ್ತಿ** (ನಾ). ರಸಯುಕ್ತವಾದ ಮಾತು ; ಇಂಪಾದ ನುಡಿ : ಸರಸೋಕ್ತಿ ಪ್ರೌಢಿಯಿಂದಂ ನಿಲಿಸಿ ಪಡಿಯಱಂ ಬಂದು . . . ಉಘೇ ಬಿನ್ನಪಂ ದೇವ ದೇವೇಶ್ವರ ನೆಟ್ಟಂದಿರ್ದಪಂ ಬಾಗಿಲೊಳೆನೆ (ಜಗವಿ. ೧೧-೬೮); ಶೃಂಗಾರಸರಸೋಕ್ತಿಗಳ ವಿನುತಾಷ್ಟ ಮಹಿಷಿಯರ್ ಚಾರುಚಾಮರತಾಲವೃಂತಮಂ ಪಿಡಿದಿರ್ದರಚ್ಯುತನ ಕೆಲಬಲದೊಳು (ಜೈಮಿಭಾ. ೬-೪೭). [ಸಂ.]

**ಸರಸ್ವತಿ** (ನಾ). ೧. ವಿದ್ಯೆಯ ಅಧಿದೇವತೆಯೂ ಬ್ರಹ್ಮನ ಹೆಂಡತಿಯೂ ಆಗಿರುವವಳು; ವಾಗ್ದೇವತೆ ; ಶಾರದೆ : ಪರಮಜಿನೇಂದ್ರವಾಣಿಯೆ ಸರಸ್ವತಿ ಬೇಱದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು . . . ಅನದರ್ಕೆರೆದಪೆನಾ ಸರಸ್ವತಿಯೆ ಮಾಟ್ಕೆಮಗಿಲ್ಲಿಯೆ ವಾಗ್ವಿಳಾಸಮಂ (ಆದಿಪು. ೧-೯). ೨. ಪ್ರಯಾಗದಲ್ಲಿ, ಗಂಗಾನದಿಯೊಡನೆ ಸೇರುವ ಒಂದು ಗುಪ್ತನದಿ ; ಗಂಗಾಯಮುನಾ ನದಿಗಳೊಂದಿಗೆ ತ್ರಿವೇಣೀಸಂಗಮದಲ್ಲಿರುವ ಒಂದು ಗುಪ್ತನದಿ. ೩. ಹೊಳೆ; ನದಿ : "ನದಿ ತರಂಗಿಣಿ . . . ಸರಸ್ವತಿ ದ್ವೀಪವತಿಯಾಪಗೆಯೆನೆ ತೊಱೆಗೆ ನಾಮಂ" (ಮಂಗರಾ. ೧೨೨-೧೦). ೧, ೩ : ಕಮಲಸಂಭವನಂತೆವೋಲ್ ಸರಸ್ವತಿಯರಸನೆಂಬ ಪೆಸರಂ ಪಡೆದು . . . ಅರ್ಣವಂ ಕಣ್ಗೊಳಿಪುದು (ಶ್ರೀರಾಪ. ೩-೨೭). ೪. ಶರೀರದ ನಾಡಿಗಳಲ್ಲಿ ಒಂದು : ತರಳ ತಿಳಿ ನಾಡಿಗಳ ಚೌದಶಗಳಿಗೆ ನಾಮಗಳ ಯುರು ಸುಷುಮ್ನೆಯು ಪಿಂಗಳೆಯು ಯಿಡಾಸರಸ್ವತಿ (ಗಗತಾ. ೯-೧೧). ೫. ಭಾಷೆ ; ಮಾತು. ೬. ಹಸು. ೭. ಶ್ರೇಷ್ಠಳಾದ ಹೆಂಗಸು. ೮. ದುರ್ಗೆಯ ಹೆಸರುಗಳಲ್ಲಿ ಒಂದು. ೯. ಒಂದು ಬಗೆಯ ಬಳ್ಳಿ ; ಸೋಮಲತೆ. ೧೦. ಒಂದು ಬಗೆಯ ಸಸ್ಯ ; ಜ್ಯೋತಿಷ್ಮತಿ. ೧೧. ಕೆಲವು ಯತಿಗಳ ಹೆಸರಿನ ಕಡೆಯಲ್ಲಿ ಸೇರುವ ಪದ.

೧೨. [ಬೌದ್ಧ] ಒಬ್ಬ ದೇವತೆಯ ಹೆಸರು. ೧೩. [ಜೈನ] ಮುನಿಗಳ ಸಂಘಗಳಲ್ಲಿ ಒಂದು : ಗಚ್ಛಗಳು: ಪೊಗರಿ, ಪುಸ್ತಕ, ತಗರಿಗಲ್, ಸರಸ್ವತಿ . . . ಮೇಘಪಾಷಾಣ (ಕಶಾಅ. ೮೬). [ಸಂ. ಸರಸ್ವತೀ]

**ಸರಸ್ವತೀಗಣ** (ನಾ). [ಜೈನ] ಜೈನಮುನಿಗಳ ಗುಂಪಿನ ಒಂದು ಹೆಸರು: ಪುಲಿಕರನಗರದ ಬಳ್ಮಂ ಸರಸ್ವತೀಗಣದ ದಾಸಿ ಕ[ಣ್ಣ] XXX ನಿರುತಯತಿ [ಸಟಂ] ಖಿಣ್ಣರಿಸಿದಂ (ಸೌಇಇ. XI-i, ೯೭-೪೮ ; 1062). [ಸಂ.]

**ಸರಸ್ವತೀದ್ರೋಹ** (ನಾ). ಸರಸ್ವತಿಗೆ ಕೇಡು ಬಗೆಯುವವನು ; ಭಾಷಾದ್ರೋಹಿ: ಸರಸತಿಯನಬಲೆಯಂ ಗೋಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವ ನಕ್ಕರಿಗನೆ ಪಾತಕನಾತನೆ ಸರಸ್ವತೀದ್ರೋಹನವನನಾರ್ ಮುಟ್ಟುವರೋ (ಅಜಪು. ೧-೪೯). [ಸಂ.]

**ಸರಸ್ವತೀಪತಿ** (ನಾ). ೧. ಸರಸ್ವತಿಯ ಗಂಡ ; ಬ್ರಹ್ಮ. ೨. ನದಿಗಳ ಒಡೆಯ ; ಸಮುದ್ರ. ೧ , ೨ : ಆ ಮಹಾರ್ಣವಂ . . . ಚತುರ್ಮುಖನಂತೆ ಸರಸ್ವತೀಪತಿಯು ಮೆನಿಸಿದುದು (ಜಗವಿ. ೧-೪೪ ವ). [ಸಂ.]

**ಸರಸ್ವತೀಪೂಜೆ** (ನಾ). ೧. ಸಾಮಾನ್ಯವಾಗಿ ಶಿಕ್ಷಣದ ಆರಂಭದಲ್ಲಿ ಅಥವಾ ಪರೀಕ್ಷೆಗೆ ಮುಂಚೆ ಮಾಡುವ ಶಾರದಾಪೂಜೆ : ಪರೀಕ್ಷೆ ಹತ್ತಿರ ಬಂದಿರುವುದರಿಂದ ಸರಸ್ವತೀಪೂಜೆ ಮಾಡಿದ್ದರು ಹುಡುಗರು (ನಿಂದನ. ೧೨೩). ೨. ನವರಾತ್ರಿಯ ಒಂಬತ್ತನೆಯ ದಿನದಂದು ಸರಸ್ವತಿಯ ಸಂಕೇತವೆಂದು ಭಾವಿಸಲಾದ ಪುಸ್ತಕಗಳನ್ನೂ ವಾದ್ಯಗಳನ್ನೂ ಇಟ್ಟು ಮಾಡುವ ಪೂಜೆ : ಮೂಲಾನಕ್ಷತ್ರದಲ್ಲಿ ಸರಸ್ವತೀಪೂಜೆಯಂ ಮಾಡಿ (ಮಹಾವಂ. I, ೫೫೬). [ಸಂ. ಸರಸ್ವತೀಪೂಜಾ]

**ಸರಸ್ವತೀಭಂಡಾರ** (ನಾ). ವಿದ್ಯೆಯನ್ನು ಅಭ್ಯಸಿಸುವ ಸ್ಥಳ ; ಗ್ರಂಥಾಲಯ : ತಂಜಾವೂರಿನ ಸರಸ್ವತೀಭಂಡಾರದ ಇತಿಹಾಸಗ್ರಂಥಗಳ ಅವಲೋಕನದಿಂದ . . . ವಿಷಯಗಳನ್ನು ಸಂಗ್ರಹಿಸಿಕೊಂಡು (ಶಾಂತಲಾ. ೪ ಅಂಕೆ). [< ಸಂ. ಸರಸ್ವತೀಭಾಂಡಾರ]

**ಸರಸ್ವತೀಭಂಡಾರಿಗ** (ನಾ). ಗ್ರಂಥಾಲಯದ ಮೇಲ್ವಿಚಾರಕ : ವೇದಮನೋದಿಸುವು ಪಾಧ್ಯಾಯಮ್ರ್ಮಾವರ್ಗ್ಗಂ ಶಾಲೆಯ ಸರಸ್ವತೀಭಣ್ಡಾರಿಗರಾವ್ರ್ಗ್ಗಂ . . . ಕೊಟ್ಟ ಕೆಯ್ (ಕಇಅ. ೬-೨-೧೯೫ ; 1058). [ಸರಸ್ವತೀಭಂಡಾರ + - ಇಗ]

**ಸರಸ್ವತೀಸೊಪ್ಪು** (ನಾ). ಒಂದು ಬಗೆಯ ಸಸ್ಯ : ಒಂದೆಲಗ, ಇಲಿಕಿವಿಗಿಡ, ಸರಸ್ವತೀಸೊಪ್ಪು, ಬ್ರಾಹ್ಮೀಸೊಪ್ಪು, ಗದ್ದೆವರಗ (ಮೈಔಗಿ. ೨೦-೩೫೬).

[ಸರಸ್ವತಿ + ಸೊಪ್ಪು$_2$]

**ಸರಹದಿ** 'ಸರಹದ್ದು' ನೋ.

**ಸರಹದ್ದು**, ಸರಹದಿ (ನಾ). ಮೇರೆ ; ಗಡಿ : ಅಸಮಸಾಹಸಿ ಖಾನ ಸರಹದ್ದಲಿರುವಾಗ ಮುಸುಕಿ ಬಾಗೂರ ಸೆಳೆದರೆ ಪಸರಿಸುವುದು ಬಲುಕೀರ್ತಿ ನಮಗೆ (ಕಂನವಿ. ೧೬-೫೯) ; ಕೊಡಗಿನ ಶೀಮೇ ಸರಹದ್ದು ಮೈಸೂರುಶೀಮೇ ಸರಹದ್ದು ಕೂಡಿದ ಪೆರಿಯಾಪಟ್ಟಣದ ತಾಲೂಕು (ರಾಜೇಂದ್ರ. ೨) ; ನಮ್ಮೂರು ಮಲೆನಾಡಿನ ಸರಹದ್ದಿಗೆ ಸೇರಿದ್ದು (ಚಿಂಗಾಳ್ಯ. ೨೨). ಸರಹದಿ : ಬಿಡದೆಲ್ಲರು ನಿಮ್ಮಯ ಸರಹದಿಗಳ ಗಡಿಗಳನುದುರಿಪುದು (ಇಚಸಾಂ. ೧೨-೬೯). [← ಪಾರ. ಓಂ. ಸರಹದ್ ; ಮರಾ. ಸರದ್, ಸರಹದ್]

**ಸರಹಸ್ಯ** (ಗು). ೧. ಗೌಪ್ಯವಾದ ; ರಹಸ್ಯದಿಂದ ಕೂಡಿದ : ಕಲಿತರು ನಿಮ್ಮ ಪೂರ್ವನೃಪಾಲಕರು ಸರಹಸ್ಯಸಾಂಗೋಪಾಂಗವಿದ್ಯೆಗಳ (ಕುವ್ಯಾಅ. ೭-೧). (ನಾ). ೨. ಗುಟ್ಟು ; ಗೌಪ್ಯ : ಅಖಿಳಸಚಿವರ ಕರಸಿದನು ಸರಹಸ್ಯವನು ವಿಸ್ತರಿಸಿದನು (ಕುವ್ಯಾಗ. ೪-೧೦). [ಸಂ.]

**ಸರಹು** 'ಸರಿವು' ನೋ.

**ಸರಲ್** 'ಸರಲ್$_1$' ನೋ.

**ಸರಳ** 'ಸರಲ' ನೋ.

**ಸರಳಂಬು** (ನಾ). ಒಂದು ಬಗೆಯ ಬಾಣ : ಆತನ ಆಯುಧಗಳ ಗಣನೆ ಎಷ್ಟೆಂತೆಂದಡೆ . . . ಸರಳಂ[ಪಾಠಾಂ. ಕವಲಂ]ಬು ಹನ್ನೆರಡುಸಾವಿರ ಮೊನೆಯಂಬುಗಳು ಬೋಳಂಬುಗಳು ನಾಲ್ಕುಸಾವಿರ (ಭೈರಸೂ. I, ೮೫) ; ಅಣ್ಣಯ್ಯ ಹಿಡಿವ ಸರಳಂಬು ತಕ್ಕೊಂಡು ಶರಣ ಶರಣೇರು ನಯನೇರೂನೂ ಬನ್ನಿರೆ (ಲೋಕಗೀ. ೪೨).

[ಸರಳು$_1$ (< ಸರಲ್$_1$) + ಅಂಬು$_2$]

**ಸರಳತೆ** 'ಸರಲತೆ' ನೋ.

**ಸರಳದಾರು** (ನಾ). ಧೂಪದ ಮರ : "ಪೂತಿದಾರುಃ - ಸರಳದಾರು" (ಓಷಧಿ. ೧೦೨).

[ಸಂ. ಸರಲದಾರು]

**ಸರಳದೇವದಾರು** (ನಾ). = ಸರಳದಾರು : "ಪೂತಿಕಾಷ್ಠಃ - ಸರಳದೇವದಾರು" (ಓಷಧಿ. ೧೦೧) ; ದೇವದಾರು, ಭೂಜಪತ್ರ, ರಾಸ್ನೆ, ಸರಳದೇವದಾರು, ಕಳ್ಳಂಗಡಲೆ ಇವುಗಳ ಕಷಾಯವನಿಕ್ಕಿ ತೆಗೆದುಕೊಳ್ಳಲು ವಾತಜ್ವರಂ ಕೆಡುಗುಂ (ಸಕವೈ. ೬೫).

[ಸಂ. ಸರಲದೇವದಾರು]

**ಸರಳಬಡ್ಡಿ** (ನಾ). ಸಾಲದ ಹಣದ ಮೊತ್ತದ ಮೇಲೆ ಮಾತ್ರ ಹಾಕುವ (ಕಡಮೆದರದ) ಬಡ್ಡಿ : ಸರಳಬಡ್ಡಿ, ಚಕ್ರಬಡ್ಡಿಗಳನ್ನು ತೆರುವುದರಲ್ಲೇ ಅವರ ಹಣ ಬಿದ್ದುಹೋಗಿತ್ತು (ಹೇಮಕೂ. ೩೪) ; ಒಂದು ಬಗೆಯ ಲೆಕ್ಕಗಳಿಗೆ 'ಸರಳಬಡ್ಡಿ' ಎಂಬ ಹೆಸರು ಏಕೆ ಬಂತೊ ನನಗೆ ತಿಳಿಯದಾಗಿದೆ (ಗಾಳಿಪ. ೧೮೬).

[ಸರಳ (= ಸರಲ) + ಬಡ್ಡಿ$_1$]

**ಸರಳರಗಳೆ** (ನಾ). [ಛಂದ] ಸಾಮಾನ್ಯವಾಗಿ ಐದುಮಾತ್ರೆಗಳ ನಾಲ್ಕು ಗಣಗಳಿರುವ ಪ್ರಾಸರಹಿತವಾದ ರಗಳೆ : ಈಗಿನ ಕಾಲದವರು ಇಂಗ್ಲೀಷಿನ ಬ್ಲ್ಯಾಂಕ್‌ವರ್ಸನ್ನು ಅನುಕರಣಮಾಡಿ ಸರಳರಗಳೆಯೆಂದು ಕರೆಯುವ ರಗಳೆಗೆ ಹರೀಶ್ವರನೇ . . . ಮಾರ್ಗದರ್ಶಕ (ಕೃಪಿಡಿ. ೧೪೧) ; ಆದಿ ಮತ್ತು ಅಂತ್ಯಪ್ರಾಸರಹಿತವಾದ 'ಸರಳರಗಳೆ' ಮಾತ್ರ ಆಧುನಿಕ ಕಥನಕವನಗಳಲ್ಲಿ ಮತ್ತು ಗೀತರೂಪಕ, ಗೀತನಾಟಕಗಳಲ್ಲಿ ಸಾಕಷ್ಟು ಪ್ರಯೋಗವಾಗಿದೆ (ಛಂದೋವಿ. ೨೮೦). [ಸರಳ (= ಸರಲ) + ರಗಳೆ]

**ಸರಳರೇಖೆ** (ನಾ). ವಕ್ರವಲ್ಲದ ಗೀಟು ; ನೇರವಾದ ಗೆರೆ : ವಕ್ರವಿಲ್ಲದ ದೀರ್ಘವಾದ ವೊಂದು ರೇಖೆಯನ್ನು ಸರಳರೇಖೆಯೆಂದೂ ಋಜುರೇಖೆಯೆಂದೂ ಹೇಳಲ್ಪಡುವುದು (ಭೂಮಿಅ. ೮). [ಸಂ. ಸರಲರೇಖಾ]

**ಸರಳಸ್ವಭಾವ** (ನಾ). ನಿರಾಡಂಬರವಾದ ಗುಣ : ಸರಳಸ್ವಭಾವನಂದಿತ ದುರಾಗ್ರಹಗ್ರಾಹ ಸೂಕ್ತಿಮಣಿಮಯಕರ್ಣಾಭರಣ ಭವದೀಯಬುದ್ಧಿಗೆ ಬರಲಱಿಗುಮೆ ಮಾನದುರ್ವು ಮಾನಿತಸುಜನಾ (ಲೀಲಾವ. ೪-೪೧). [ಸಂ. ಸರಲಸ್ವಭಾವ]

**ಸರಳಾಂಗ** (ನಾ). ನೆಟ್ಟನೆಯ ದೇಹ ; ನೀಳಶರೀರ : ಸರಳಾಂಗಂ ಮಿಗೆ ಕುಂದಿ ತೋಱೆ ಕಿವಿಗಳ್ ತಣ್ಪೇಱೆ . . . ಮಂ(ಕುಂ)ದಾಯ್ತು (ಲೋಕೋಪ. ೯-೨೦೨) ; ಸರಳಾಂಗಾವಯವಂಗಳಿಂದೊಗೆವ ಲಾವಣ್ಯಾಂಶುವಂ ಮಿಕ್ಕು ಮುಂಬರಿವನ್ನಂ . . . ಕಣ್ಗೊಳ್ಪ ವಿಳಾಸಿನೀನಿವಹದಿಂ ಚೆಲ್ವಾದುದೊಡ್ಡೋಲಗಂ (ಶಾಂತೀಶ್ವ. ೨-೮೨).

[ಸಂ. ಸರಲಾಂಗ]

**ಸರಳಾಂಗುಲಿ** (ನಾ). ಸರಾಗವಾಗಿ ಚಲಿಸುವ ಬೆರಳು : ಸರಳಾಂಗುಳಿಗಳ ಸಾರಣೆ ಸುರಾಗಸುವ್ಯಕ್ತಿಯಂ ಕುಡುತ್ತಿರೆ. . . ದಿವಿಜವಧು ಜಿನವರಜನನಿಯ ಮುಂದೆ ಬೀಣೆಯಂ ಬಾಜಿಸಿದಳ್ (ಶಾಂತೀಶ್ವ. ೧೩-೨೨೪). [ಸಂ. ಸರಲಾಂಗುಲಿ]

**ಸರಳಾನುವಾದ** (ನಾ). ಮೂಲಗ್ರಂಥಗಳು ಸುಲಭವಾಗಿ ಅರ್ಥವಾಗುವ ರೀತಿಯಲ್ಲಿ ಮಾಡಿದ ಅನುವಾದ : ಅವರಾಡುತ್ತಿದ್ದ ಆಶುಭಾಷಣ ಭಾಗವತನು ಹಾಡುವ ಪದ್ಯಗಳ ಸರಳಾನುವಾದವಾಗಿತ್ತು (ಯಕ್ಷಬ. ೧೦). [ಸಂ. ಸರಲಾನುವಾದ]

**ಸರಳಾರ** (ನಾ). ಒಂದು ಬಗೆಯ ಹಾಡು : ಸರಳಾರ - ಹೆಂಗುಸರು ಹಾಡುವ ಶೋಭಾನೆಗಳ ಮಟ್ಟನಲ್ಲಿರುವ ಹಾಡಿದು. ಇದು ವಿಷ್ಣುಗಣಗಳಿಂದ ಆಗುತ್ತದೆ (ಸಂಶೋಧ. ೧೩೨). 'ಧವಳಾರ$_2$' ಪರಾ. [?]

**ಸರಳಾಳಾಪ** (ನಾ). ಸಹಜವಾದ ಮಾತು ; ನಿರಾಡಂಬರವಾದ ನುಡಿ : ಸರಳಾಳಾಪಂಗಳಿಂ ಜತ್ತಿಸುವ ಬಗೆ ಗೆಲಲ್ಕೆಂದು ಕೂರ್ತಿಚ್ಚೆ ಬೆಚ್ಚಂತಿರೆ ಮಚ್ಚಂ ಮೆಚ್ಚಿದಂದದೊಳೆ ಸಲಿಪ ನಾನಾವಿನೋದಂಗಳಂ . . . ಮೆಱೆವ ಕೂಟಂಗಳಿಂ ಕೂಡಿ ಲಾವಣ್ಯರಸಂ ತಳ್ಪಂಕುಗುಟ್ಟುತ್ತಿರೆ ಕರಮೆಸೆಗುಂ ವಾರನಾರೀಕದಂಬಂ (ಸುಕುಮಾ. ೯-೬೩). [ಸಂ. ಸರಲಾಲಾಪ]

**ಸರಳಿ$_1$** 'ಸರಳೆ$_1$' ನೋ.

**ಸರಳಿ$_2$** 'ಸರಲಿ' ನೋ.

**ಸರಳಿಗೆ$_1$** 'ಸರವಳಿಗೆ' ನೋ.

**ಸರಳಿಗೆ$_2$** (ನಾ). (?) : ಪಡವಿನೆಡೆಯೊಳ್ ಕೊರಲಿಗಳುಂ ನಾಂದುವ ಬೇವಿನ ಸರಳಿಗೆ [ಪಾಠಾಂ. ಪಲಗೆ, ಸಲಿಗೆ]ಗಳುಂ ಕೂಲೊಳ್ ಪಾಂಗುನೂಲಂ ಸುತ್ತುವ ಕುಡುಗೋಲ್ಗಳುಂ . . . ಎಸೆಯೆ (ಲೀಲಾವ. ೭-೬೮ ವ). [?]

**ಸರಳಿವರಸೆ** 'ಸರಳೆವರಸೆ' ನೋ.

**ಸರಳಿಸು** (ಕ್ರಿ). ೧. ಜಿಗಿ ; ಲಂಘಿಸು ; ಹಾರು : ಬೆಳ್ವಯಲೊಳ್ ಸರಳಿಸಿದುವು ಮರುಮರೀಚಿಕಾವಾಹಂಗಳ್ (ಪಂಪಾಮ. ೭-೮೭) ; ಎರಳೆ ಸರಳಿಸಿ ಹೋದುದಿಲ್ಲಿ ಹಿಂಗಾಲೊದೆದು ತೆರಳ್ದ ಮಣ್ಣಿದೆ (ಹಚಕಾ. ೫-೨೬). ೨. ಮುನ್ನುಗ್ಗು ; ಎರಿಹೋಗು : ಸಮರಥವಿಷಮರಾವ್ತರು ನೋಡುತಿರಿ ಸರಳಿಸಲಿ ನಿಮ್ಮಯ ದೊರೆಗಳು (ಕುಮ್ಮಾಕ. ೧೯-೧೦). ೩. ಜಗ್ಗು ; ಎಳೆ : ತುರಗವ ಕೆಣಕಿ ಸರಳಿಸಿ ಹಿಡಿವ ತೇರಿನ ಸೂತರೋಜೆಗಳ . . . ಭಟರೊಡ್ಡಣೆ ಸಘಾಡಿಸಿತೆರಡುಬಲದಲಿ (ಕುಮ್ಮಾಭೀ. ೨-೫). ೪. ಚಿಮ್ಮಿಸು : ನಭಮಿದುದೆನೆ ಸರಳ್ಗಳಂ ಸರಳಿಸುತ್ತಿಂತೆಂದನು (ಘೋರಾಸು. ೨೭-೫೫).

[ಸರಳ್? (IP ← ಮರಾ. ಸರಳಣೆ) + - ಇಸು$_3$]

**ಸರಳು$_1$** 'ಸರಲ್$_1$' ನೋ.

**ಸರಳು$_2$** 'ಸರಲು$_3$' ನೋ.

**ಸರಳೆ$_1$, ಸರಳಿ$_1$** (ನಾ). [ಸಂಗೀತ] ಸಂಗೀತಾಭ್ಯಾಸದ ಪ್ರಾರಂಭದಲ್ಲಿ ಕಲಿಯುವ, ಸುಲಭಗ್ರಾಹ್ಯವಾದ, ಸಪ್ತಸ್ವರಗಳಿಂದಾದ ಒಂದು ಗೀತಪ್ರಕಾರ: ದಾಸರಾಯರು . . . ಅವ್ಯವಸ್ಥಿತರೀತಿಯಲ್ಲಿದ್ದ ಸಂಗೀತಾಭ್ಯಾಸಕ್ರಮವನ್ನು ಪುನರುದ್ಧಾರ ಮಾಡಲು, ಸರಳೆ, ಸ್ವರಾವಳಿ, ಜಂಟಿವರಸೆಗಳು . . . ಅಲಂಕಾರಗಳು ಇವನ್ನು ರಚಿಸಿ, ಸಂಗೀತಾಭ್ಯಾಸಕ್ರಮವನ್ನು ಸುವ್ಯವಸ್ಥೆಗೊಳಿಸಿದರು (ಸಂಗೀಚಂ. ೨೧೭) : ಕೊರೆಯುವ ನೀರಿನಲ್ಲಿ ಮುಳುಗಿ ಇವರು ಹೇಳಿಕೊಡುವ ಸರಳೆಯನ್ನು ಕಿರಿಚುವುದು (ರಾಮಾನ. ೯೩). **ಸರಳಿ$_1$**: 'ಸರಳಿವರಸೆ' ಪರಾ.

[ದೇ. ‖ ತಮಿ. ಚರಳಿ ; ಮಲ. ತೆಲು. ಸರಳಿ. / ಸಂ. ಸ್ವರಾವಳಿ]

**ಸರಳೆ$_2$** (ನಾ). ಋಜುಸ್ವಭಾವದವಳು ; ಮುಗ್ಧೆ : ಮೊದಲು ಅಷ್ಟು ಸರಳೆಯೂ, ಸ್ನೇಹಮಯಿಯೂ ಆಗಿದ್ದ ಕೈಕೆಗೆ ಮಂಥರೆಯ ದುರ್ಬೋಧನೆಯಿಂದ ಹೆಬ್ಬಯಕೆ ಹುಟ್ಟಿ ಎಂಥ ಅನರ್ಥದಲ್ಲಿ ಫಲಿಸಿತು? (ಕಾವ್ಯಸ. ೩). [ಸಂ. ಸರಲಾ]

**ಸರಳೆವರಸೆ, ಸರಳಿವರಸೆ** (ನಾ). = ಸರಳೆ$_1$ : ಸರಳೆವರಸೆ, ಜಂಟಿವರಸೆ, ಅಲಂಕಾರ ಇವು ಸಂಗೀತಾಭ್ಯಾಸದಲ್ಲಿ ಹೇಳಿಕೊಡುವ ಪ್ರಾರಂಭದ ಪಾಠಗಳು (ರೂಢಿ). **ಸರಳಿವರಸೆ:** ವಾರಕ್ಕೆ ಒಂದೆರಡು ಗಂಟೆಯ ಕಾಲ ವಿದ್ಯಾರ್ಥಿಗಳಿಗೆ ಸರಳಿವರಸೆಯನ್ನು ಹೇಳುವುದರಿಂದ ಅವರಿಗೆ ಲಭಿಸುವುದೇನು? (ಗಾನಕ. ೧೯). [ಸರಳೆ$_1$ + ವರಸೆ (< ವರಿಸೆ)]

**ಸರಳೆಸುಗೆ** (ನಾ). ಬಾಣ ಬಿಡುವಿಕೆ ; ಬಾಣಪ್ರಯೋಗ : ನೂಕಿದನು ಕೈಯೊಡನೆ ರಥವ ಸಮೀಕಸಾಹಸಮಲ್ಲನಾ ನರಲೋಕನಾಥನ ಸರಿಸದಲಿ ಸರಳೆಸುಗೆಯಲಿ ತ್ರಿಶಿರ (ತೊರರಾ. ೩-೬-೨೦). [ಸರಳು$_1$ (< ಸರಲ್$_1$) + ಎಸುಗೆ]

**ಸರಳೇಱು** (ನಾ). ಬಾಣಪ್ರಹಾರದಿಂದಾದ ಗಾಯ : ತೆತ್ತಿಸಿದ ಸರಳೇ [ಪಾಠಾಂ. ಶರದೇ]ಱ ಸುರಿಗರುಳೊತ್ತುಗ್ಗೆಗಳ ತಾಳಿಗೆಯ ತಲೆಹೊತ್ತು ರಕ್ತದ ರಪಿಯಲೋಡಿತು ಸೇನೆ ಸುರಪುರಕೆ (ಕುಮ್ಮಾಆ. ೧೯-೫).

[ಸರಳು$_1$ (< ಸರಲ್$_1$) + ಏಱು$_4$ (< ಏಱ್$_4$)]

**ಸರಳ್ಗಱೆ** (ಕ್ರಿ). (ಮಳೆಯಂತೆ) ಬಾಣಗಳನ್ನು ಸುರಿಸು,– ಸೂಸು : ಸುವರ್ಣಪುಂಖದ ಸರಳ್ಗಱೆದನನುಸಾಲ್ವನು (ಜೈಮಿಭಾ. ೭-೬೧).

[ಸರಳ್ (< ಸರಲ್$_1$) + ಕಱೆ$_1$]

**ಸರಳ್ಮಳೆ** (ನಾ). ಬಾಣದ ಮಳೆ ; ಶರವೃಷ್ಟಿ : ದಿವಿಜರಿಟ್ಟಣಿಸಿ ನೂಕಿಬರ್ . . . ವಜ್ರನಾಭನಿದಿರೊಳ್ ನಿಂದು ಸರಳ್ಮಳೆಗಳಂ ಕಱೆವುತೆ (ಚೆಬಪು. ೩೯-೩).

[ಸರಳ್ (< ಸರಲ್$_1$) + ಮಳೆ (< ಮಱ್)]

**ಸರಳ್ಮಳೆಗಱೆ** (ಕ್ರಿ). ಮಳೆಯಂತೆ ಒಂದೇಸಮನೆ ಬಾಣಗಳನ್ನು ಬಿಡು : ಇದಿರಾಗಿ ಸರಳ್ಮಳೆಗಱೆವ ಬೇಡರ ಗಂಡೆದೆವಿಡಿದಾಲಿ ಬೊಬ್ಬಿಱಿದು ಕುದುರೆಯನೇಱಿ ರಾವುತರೊಳಪೊಕ್ಕು ತಿವಿದು ಕಂಗೆಡಿಸಿದರವರ (ಜೀವಂಸಾ. ೮-೩೭).[ಸರಳ್ಮಳೆ + ಕಱೆ$_1$]

**ಸರಳ್ವೆಜ್ಜ** (ನಾ). ಬಾಣ ನಾಟುವುದರಿಂದಾದ ತೂತು : ನಿರ್ಜರಗಣಪತಿಯಮಲ ಮಸ್ತಕ ಸರಳ್ವೆಜ್ಜದೊಳರುಣಾಂಬು ಸುರಿಯೆ ಮಜ್ಜನಗೆಯ್ದ ಕುಂಕುಮರಸಧಾರೆಯಿಂ ತೊಜ್ಜಲಾದುದು ನಿಂದೆಡೆಯ (ಮೋಹತ. ೩೮-೫೭). [ಸರಳ್ (< ಸರಲ್$_1$) + ವೆಜ್ಜ]

**ಸರಾಗ$_1$** (ಗು). ೧. ಅಡ್ಡಿಯಿಲ್ಲದ ; ಅನಿರ್ಬಂಧವಾದ : "ಸರಾಗ - ಸರಕ = ನಿರಾತಂಕ ; ಸುಗಮ" (ತದ್ಭಕೋ. ೪೩). ೨. ಸುಲಭವಾದ ; ಸಲೀಸಾದ : (ಕ). (ನಾ). ೩. ಸುಲಭ ; ಸಲೀಸು : ಆಗುಹೋಗುಗಳು ನೆಟ್ ರಾಗಭೋಗಗಳು ಸರಾಗವಾಗಿಕ್ಕು ಶಿವನೊಲಿದಡೆ (ಸರ್ವಜ್ಞ. ೨೪೭). ೪. ಅನುಕೂಲ ; ಸೌಕರ್ಯ : ಇನ್ನು ಮೇಲೆ ರೈತರಿಗೆ ಸರಾಗಮಾಡಿಕೊಟ್ಟರೆ ಅರಮನೆಯ ಕೆಲಸ ಕೆಟ್ಟುಹೋಗುವುದು (ಮಹಾವಂ. I, ೧೨೪).

**ಸರಾಗವಾಗಿ** = ನಿರಾತಂಕವಾಗಿ ; ಸುಸೂತ್ರವಾಗಿ : ಸ್ಥಳದಲ್ಲಿ ಬದುಕುಮಾಡುವವನಿಗೆ ತಾಕೀತಿಯಂನ್ನು ಬರೆಸಿಕೊಟ್ಟು ಸರಾಗವಾಗಿ ನಡಸಿಕೊಣ್ಡು ಬರುವದು (ಮೈಆರಿ. ೧೯೨೪, ೧೭-೨೦ ; 1762) ; ಮಕ್ಕಳು ಸರಾಗವಾಗಿ ಶಿಕ್ಷಣಾಭಿವೃದ್ಧಿಯಲ್ಲಿ ಮುಂದುವರಿಯುವರೆಂದು ಆಶಿಸಲಾಗಿತ್ತು (ಶಿಕ್ಷದ. ೩೬೩).

[ದೇ. ‖ ತಮಿ. ಚರಾಕ, ಚರಾಕ್ಕಮ್ ; ತುಳು. ಸರಾಗ್, ಸರಾಗ ; ತೆಲು. ಸರಾಗಮು]

**ಸರಾಗ$_2$** (ಗು). ೧. ಬಣ್ಣದಿಂದ ಕೂಡಿದ. ೨. ಕೆಂಪಾದ ; ಕೆಂಪುಬಣ್ಣವುಳ್ಳ. ೩. ರಾಗಸಹಿತವಾದ ; ಪ್ರೀತಿಯುಳ್ಳ. (ನಾ). ೪. ಪ್ರೇಮ ; ಅನುರಾಗ : ಸುರನಾರಿಯರು ನಗುತವನ ಕೊಂಡೊಯ್ದರು ಸರಾಗ[ಪಾಠಾಂ. ವಿಮಾನ]ದಲಿ (ತೊರರಾ. ೬-೧೭-೨೫). ೫. ಪ್ರೀತಿಯಿಂದ ಕೂಡಿದುದು : ಬಾ ಭೃಂಗವೆ . . . ಕಂಪಿನ ಕರೆಯಿದು ಸರಾಗವಾಗಿರೆ ಬೇರೆಯ ಕರೆ ಬೇಕೆ? (ಸವೀಗೀ. ೭೫-೩). ೬. ಸಂತೋಷ : 'ಸರಾಗಿಸು' ಪರಾ. [ಸಂ.]

**ಸರಾಗಿಸು** (ಕ್ರಿ). ಸಂತೋಷಪಡು ; ಹಿಗ್ಗು : ಸರಾಗಿಸುತ ವನಭರಿತಮಾಗಿಹವಲ್ಲಿ ಖಗನಿವಹ (ನಾಗಷ. ೨-೨೭). [ಸರಾಗ$_2$ + - ಇಸು$_3$]

**ಸರಾಜಾನ** (ನಾ). ಒಂದು ಬಗೆಯ ಉತ್ತಮವಾದ ಭತ್ತ (?) : ಬೆಳಸಲ್ಲವಲ್ಲವರಿಸನ ಮೆಣಸು ಸರಾಜಾನವಿಕ್ಕುವ್ರಿಕ್ಷಮವೆಲ್ಲಂ ಹಲಸಿಳೆ ಮಾಮರಂ (ಸೌಇಇ. XV, ೫೭೦-೩ ; ಸು. 12ನೆಯ ಶತ). 'ರಾಜಾನ್ನ' ಪರಾ.

[IP ಇದು 'ಸರಾಜಾನ್ನ' ಎಂಬುದರ ಅಪಲಿಖಿತವಿರಬಹುದು]

**ಸರಾಡ$_1$, ಸರಡ, ಸಾರಡೆ** (ನಾ). ಒಂದು ಬಗೆಯ ತೆರಿಗೆ : ಬಿರಾ[ಡ] ಸರಾಡಗಳು ಯಿಲ್ಲ ಸೀಮೆಯಲು (ಸೌಇಇ. IX-ii, ೫೫೪-೩೪; 1533). **ಸರಡ** : ವರಡ ಸರಡ ಸರ್ವಬಾಧಾಪರಿಹಾರವಾಗಿ . . . ಧರ್ಮ್ಮವನು ಮಾಡಿ (ಕಇ. III-i, ೯-೬೨ ; 1538) ; ತುಳುವ ಶಾಸನಗಳಲ್ಲಿ ಬರುವ ತೆರುವಣಗಳು:– ತೆರು . . . ವರಡ, ಸರಡ (ತುಳುನಾ. ೨೬೧). **ಸಾರಡೆ :** ಕುಳವಡೆ ಸಾರಡೆ ದುಳಿರವಟ ಕಟಳೆವಟ ಏರಿ ಮೀನ ಬೆಲೆ ಸಂತೆ ಉಂಟಾದ ಹಲಉಪಾಧಿಗಳೂ ಸಹ ಸೇರ್ಸಿ ಕೊಟ್ಟೆವಾಗಿ (ಸೌಇಇ. IX-ii, ೪೬೩-೮ ; 1470). [?]

**ಸರಾಡ$_2$** (ನಾ). ಸ್ಥಳ ; ಪ್ರದೇಶ : ಎರಡೂ ಊರಿನ ಬೇಟೆಯ ಪಡೆಯವರು, ಊರ ಸೀಮೆ-ಸರಾಡ ವಿಚಾರಿಸದೆ ಬೇಕಾದಲ್ಲಿ ಅಡ್ಡಾಡಿ ಬೇಟೆಯಾಡಬಾರದೇಕೆಂಬ ವಿಷಯವನ್ನು ಚರ್ಚಿಸತೊಡಗಿದರು (ಗ್ರಾಮಾಯ. ೨೪೯). [?]

**ಸರಾತಿ** 'ಸರವತ್ತಿಗೆ' ನೋ.

**ಸರಾಪ** 'ಸರಾಫ' ನೋ.

**ಸರಾಫ, ಶರಾಫ, ಸರಾಪ** (ನಾ). ೧. ಚಿನ್ನ, ಬೆಳ್ಳಿ ಮುಂತಾದವುಗಳ ವ್ಯಾಪಾರ, ಲೇವಾದೇವಿ ಮುಂತಾದುವನ್ನು ಮಾಡುವವನು ; ಚಿನಿವಾರ : ಮಗಲಯಿ ಸರಾಫಗೆ ಗ ‖ ೧೧೦೦೦ (ಎಕ. VIII. ಸೊರಬ. ೨೬೭-೨೩ ; 1629) ; ವೇಶ್ಯೆಯ ಕೈಯಲ್ಲಿದ್ದ ಆ ಒಂದೇ ಕಂಕಣವನ್ನು ನೋಡಿ ದೇವಸ್ಥಾನದ ಸರಾಫನಿಗೆ ಅನುಮಾನ ಹುಟ್ಟಿತು (ಕಥಾವಿ. ೨೧೭). ೨. ಸರ್ಕಾರದ ಖಜಾನೆಯ ಹಣಕಾಸಿನ ವ್ಯವಹಾರವನ್ನು ನೋಡಿಕೊಳ್ಳುವವನು : ಖಜಾನೆಗೆ ಇರ್ಸಾಲಾಗಿ ಬಂದ ಹಣವನ್ನೆಲ್ಲಾ ಖಜಾನೆಯ ಸರಾಫನು ಝಡ್ತಿ ಮಾಡಿ ನೋಡಿ ಚೀಲಗಳಿಗೆ ತುಂಬಿ ತನ್ನ ಮೊಹರುಮಾಡುತ್ತಿದ್ದನು. ಖೋಟಾನಾಣ್ಯವೇನಾದರೂ ಕಂಡುಬಂದರೆ ಅದಕ್ಕೆ ಸರಾಫನು ಜವಾಬ್ದಾರನಾಗಿದ್ದನು (ಮಹಾವಂ. II. ೩೨) ; ಗುಮಾಸ್ತನು ಸರಾಫನು ಕೂಡುವ ಸ್ಥಳದ ಮಗ್ಗುಲಿಗಿದ್ದ ಬಾಗಿಲಿಂದ ಹೊರಬಿದ್ದನು (ತೊಳಮು. ೧೪೪). **ಶರಾಫ:** ೨. ಜನಗಳಿಂದ ಸರ್ಕಾರಕ್ಕೆ

ತೆಗೆದುಕೊಳ್ಳುವ ಶರಾಫನಂತೆ ಸುಬ್ಬು ಆ ಹಣವನ್ನು ತೆಗೆದುಕೊಂಡನು (ಅವತಂ. ೧೧೬).
**ಸರಾಪ :** ೨. ಖಾಸ್‌ಬೊಕ್ಕಸದ ಸರಾಪ ಚಂಗಶೆಟ್ಟಿ ರಾಮಶೆಟ್ಟಿ ಸಹ ಮಾಡಿಶಿ ವಪ್ಪಿಶಿದ ಹಿತ್ತಾಳೆ ಚೌಕಟ್ಟು (ಎಕ. XIV, ಚಾಮರಾ. ೨೪೪-೩ ; ಸು 1668).

[← ಅರ. ಸರ್ರಾಫ್; ಹಿಂ. ಸರಾಫ್, ಸರ್ರಾಫ್ ; ಮರಾ. ಸರಾಫ್]

**ಸರಾಫಗಟ್ಟೆ, ಸರಾಫುಕಟ್ಟೆ** (ನಾ). ಅಂಗಡಿಯಲ್ಲಿ ಸರಾಫನು ಕುಳಿತುಕೊಳ್ಳುವ ಜಾಗ ; ಗಲ್ಲೆ : ಸರಾಫಗಟ್ಟೆಯಲ್ಲಿ ಅವನನ್ನು ಯಾರೂ ಕಂಡಿರಲಿಲ್ಲ (ರಕ್ತಧ್ವ. ೮೪).
**ಸರಾಫುಕಟ್ಟೆ :** ಬಲಗಡೆಯ ಕೋಣೆಯ ಸರಾಫುಕಟ್ಟೆ (ಸಾಹೇಬ್. ೧೭೬).

[← ಮರಾ. ಸರಾಫಕಟ್ಟಾ , ಸರಾಫಕಾಟಾ]

**ಸರಾಫಿ** (ಗು). ಸರಾಫವೃತ್ತಿಗೆ ಸಂಬಂಧಿಸಿದ : ಇನ್ನೊಬ್ಬ ಸರಾಫಿ ಅಂಗಡಿಯ ವರ ಸಿಕ್ಕಾಗ ರಾಘಪ್ಪ ತನ್ನನ್ನು ಗ್ರಹಿಸಿಯಾನೆ? (ಗಂಮಾಯಿ. ೨೬೮) ; ಪುರಂದರದಾಸರು . . . ಸರಾಫಿ ಧಂದೆ ಮಾಡುವ ನಾಯಕಮನೆತನದವರಾಗಿದ್ದರು (ಕರ್ನಾಸಂ. ೨೮೫). (ನಾ). ೨. ಚಿನಿವಾಲನ ಕಸಬು ; ಸರಾಫವೃತ್ತಿ.

[← ಹಿಂ. ಸರ್ರಾಫಾ, ಸರ್ರಾಫೀ ; ಮರಾ. ಸರಾಫೀ]

**ಸರಾಫುಕಟ್ಟೆ** 'ಸರಾಫಗಟ್ಟೆ' ನೋ.
**ಸರಾಯ** 'ಸಾರಾಯ$_1$' ನೋ.
**ಸರಾಯಿ** 'ಸಾರಾಯ$_1$' ನೋ.
**ಸರಾಯಿಗಾರ** (ನಾ). ಮದ್ಯವನ್ನು ತಯಾರಿಸುವವನು : ಅಂಥ ರಾಡಿಬೆಲ್ಲವನ್ನು ಹರಿವೆಗಳಲ್ಲಿ ಗಡಿಗೆಗಳಲ್ಲಿ ತುಂಬಿಟ್ಟು ಸರಾಯಿಗಾರರಿಗೆ ಬೇಡಿದ ಹಾಗೆ ಕೊಡಬೇಕಾಗುತ್ತದೆ (ಕೃಷಿಪ್ರ. ೧೮೫).

[ಸರಾಯಿ (< ಸಾರಾಯ$_1$) + - ಕಾರ$_1$ (<- ಕಾಱ)]

**ಸರಾಯಿಾ** 'ಸಾರಾಯ$_1$' ನೋ.
**ಸರಾವೆ** (ನಾ). ಮಣ್ಣಿನ ಹಣತೆ ; ಪ್ರಣತಿ : ತಲೆಯ ಮೇಲೆ ಎಣ್ಣೆಯನ್ನೂ ದೊಡ್ಡದಾಗಿ ಬತ್ತಿಯನ್ನೂ ಹಾಕಿ ದೀಪಾ ಹತ್ತಿಸಿರುವ ಸರಾವೆಯನ್ನು ಹೊತ್ತುಕೊಂಡು (ಮುಸುಗ. ೮೨). [ಸಂ. ಸರಾವ]
**ಸರಾಸರಿ** (ನಾ). ೧. ಅಂದಾಜು ; ಸುಮಾರು : ಚಂದ್ರನು ನಕ್ಷತ್ರಮಂಡಲಕ್ಕೆ ಸಾಪೇಕ್ಷವಾಗಿ ಒಂದುದಿನದಲ್ಲಿ ಚಲಿಸುವ ಸರಾಸರಿ ದೂರವು ೧೩ $^{1}/_{3}$ ಅಡಿಗಳು (ನಕ್ಷತ್ರ. ೧೭) ; ಸ್ಥೂಲವಾಗಿ ಹಣದ ಬೆಲೆ ಸರಾಸರಿ ಇಷ್ಟು ಎಂದು ಗೊತ್ತುಮಾಡ ಬೇಕಾಗುತ್ತದೆ (ಹಣಪ್ರ. ೪೨). ೨. ಅನೇಕ ಸಜಾತೀಯ ಮೊತ್ತಗಳನ್ನು ಕೂಡಿಸಿ, ಅದಕ್ಕೆ ಆ ಮೊತ್ತಗಳ ಸಂಖ್ಯೆಯಿಂದ ಭಾಗಿಸಿದರೆ ಬರುವ ಸಂಖ್ಯೆ ; ತಲಾ ಇಷ್ಟು ಎಂಬ ಲೆಕ್ಕ : ತರಗತಿಯ ಸರಾಸರಿಯನ್ನು ಒಳಗೊಂಡ ಫಲಿತಾಂಶದ ಪಟ್ಟಿ (ಶಿಕ್ಷದ. ೩೫೦). [← ಪಾರ. ಹಿಂ. ಸರಾಸರೀ ; ಮರಾ. ಸರಾಸರೀ, ಸರಾನ್‌ಸರೀ./ ತಮಿ. ಚರಾಚರಿ; ತುಳು. ತೆಲು. ಸರಾಸರಿ]
**ಸರಿ$_1$, ಜರಿ$_1$, ಜರೆ$_2$** (ಕ್ರಿ). ೧. ಹೋಗು ; ಗಮಿಸು : ಗೊರವನೆಲ್ಲಿಗೆ ಸರಿದನೋ ಆಕರಿಸಿಕೊಳ್ಳದೆ ತೋಱು (ಬಸವು. ೫೨-೭) ; ಮುತ್ತಯನ ಬೀಳ್ಕೊಂಡು ಕೌರವರಿತ್ತ ಸರಿದರು (ಕುವ್ಯಾದ್ರೋ. ೧-೧೧). ೨. ಓಡಿಹೋಗು ; ಪಲಾಯನ ಮಾಡು : "ಸರಿ - ಪಲಾಯನೇ, ಸಾಮ್ಯೇ ಚ" (ಶಮಧಾ) ; ರಣದೊಳಿದಿರ್ಚಿ ಗಣ್ಡಳಿದು . . . ಸರಿದ ಚೋಳನ ಪೇಳನೆ ಬೀರದೇಳ್ಗೆಯಂ (ಕಇಆ. ೨-೨-೩೩ ; 1058) ; ಪಟುಭಟರಟ್ಟಿದರರಸಂ ನಿಟಿಲದ ಗಾಯಕ್ಕೆ ತೇಂಕಿ ಮೈಮಱೆದಂ ದುರ್ಘಟಮುಱಿವುದೆಂಬವೋಲ್ ಸಂಕಟದಿಂ ರತ್ನಾಚಲಕ್ಕೆ ಸರಿದರ್ ಸಚಿವರ್ (ದಶಕು. ೨-೩೦) ; ರುದ್ರಗಣಾಖ್ಯನು ಸರಿದನು ರಣ ಭೀತಿಯಲಿ (ಕಂನವಿ. ೩-೮೮). ೩. ಕಳೆದುಹೋಗು ; ನಷ್ಟವಾಗು : ಧುರಕೆ ಹೆಚಿತೆಗೆದೆಮ್ಮ ನಾಲ್ವರ ಸರಿದುಹೋದಭಿಮಾನವನು ಕಾಯ್ದುರವಣಿಸಿ ಮಗನೇಱಿದನು ವಾಸವನ ಗದ್ದುಗೆಯ (ಕುವ್ಯಾದ್ರೋ. ೮-೨೩) ; ತೆರಳುತಿದೆ ಮಜ್ಜೀವರತ್ನಾಭರಣವೆನ್ನ ಮನೋರಥದ ಸಿರಿ ಸರಿವುತಿದೆ (ತೊರರಾ. ೨-೩-೫೪) ; ಸೆಜೆಛಿದ್ರ ಕುಂಭದುದಕದಂತಾಯುಷ್ಯ ಸರಿವುದು ಎಚ್ಚಱಿಕೆ (ಪುರಂದ. ೨-೪೫-೨೫). ೪. ಪಕ್ಕಕ್ಕೆ ಹೋಗು ; ಜರುಗು : ಜನನಮರಣಂಗಳೆಂಬ ತೆರೆಯರ್ ಪಿಡಿದ ಸಂಸಾರದ ತೆರೆ ಸರಿಯೆ (ಬಸರ. ೪-೧೦೨) ; ಮುಸುಕು ಸರಿ[ಪಾಠಾಂ. ತೆಗೆ]ಯಲು ಮೋಡವೋಡಿದಿನಬಿಂಬದಂತೆಸೆವ ಮೆಯ್ಯೆಳಗೆದ್ದು ಬೀದಿವರಿದೊಳಗೆ ಧವಳಿಸೆ (ಸಿದ್ಧರಾ. ೨-೩). ೫. ಜಗುಳು ; ಜಾರು : ಜೋಡನೊಡೆಹಾಯ್ದಂಬು ಧರಣಿಯೊಳಾಡಿದವು ಗುಳ ಸರಿದ ಕರಿಗಳ ತೋಡಿ ನೆಟ್ಟವು (ಕುವ್ಯಾಭೀ. ೮-೪೭) ; ಉಟ್ಟುದು ಸರಿದು ಮದನಜಲ ನೆಱೆ ಪೊಱಮಟ್ಟುದು ನಾಣೆಡೆಯಿಂದ (ಕಂನವಿ. ೯-೧೯೬). ೬. ಸಡಿಲಿಸು ; ಬಿಚ್ಚು : ಕಳಚ ನೊಗನನು ತೆಗೆದು ಕಬ್ಬಿಯನಿಳುಹಿ ಪಡಿವಾಘೆಗಳ ಸರಿದನುಕೊಳಿಸಿ ಪಿಡಿಯಲು ಪಾಡಿಗೈದವು ಮರಳಿದೆಡಬಲಕೆ (ಕುವ್ಯಾದ್ರೋ. ೧೦-೩೩). ೭. ಬಿಗಿಗೊಳಿಸು : "ಬಲೆಯಂ ಸರಿವ ಕುಣಿಕೆ ಗೊಣಸೆನಿಸಿಕ್ಕು" (ಮಂಗರಾ. ೧೧೨-೫) : ಹಗ್ಗದ ಕುಣಿಕೆಗಳ ಸರಿದೆರಡುಮ್ಮೆಗಳಲುಬ್ಬಿ ಬೊಬ್ಬಿಱಿದು ಕುಣಿಸಿ . . . ಅನಿಲಜನ ತಂದರು ರಾಜಬೀದಿಯಲಿ (ತೊರರಾ. ೫-೮-೩೦). ೮. ಸೆಕ್ಕಿಸು ; ತೂರಿಸು : ಎರಡುಕರಗಳನೊಡ್ಡಿ ಬೇಡಿಕೊಂಬುವೆ ನಿನ್ನಾ . . . ಬಾಯೊಳಗಲಗ ಸರಿವ ಕರಗಸದಿಂ ಕೊಱೆವ . . . ಯಮಗೊಲೆಗಳುಕಿ ಸಾಯಲಾಱದಲೆ (ಕೈಕವ. ೧-೧೯-೪); ಬೆಟ್ಟಕ್ಕೆ ಹೋಗುವವನ ಸೊಂಟದಲ್ಲಿ ಕೊಡ್ಲೆಯನ್ನು ಸರಿದ ಹಾಗೆ (ಗಾದೆ). ೯. ಅಳವಡಿಸು; ಹೊಂದಿಸು : ಕರ್ಣಪತ್ರವನಮರ್ಚುತೆ ಹಾರಮಂ ಸರಿಯುತೆ ಕಟಿಗೆ ನಿಱಿಯಂ ಸೇರಿಸುತೆ . . . ಜಾರೆಯರ್ಕೈದಿ ಬರುತಿರ್ದರು (ಜೈಮಿಭಾ. ೨೬-೧೨). ೧೦. ತೀರು ; ಮುಗಿ; ವ್ಯತೀತವಾಗು : ಅವನಿಜಾಸುತ ಕೇಳು ಸರಿದುವು ದಿವಸ ನಾಲುಕು (ತೊರರಾ. ೬-೪-೨೮) ; ಜುಲೈತಿಂಗಳು ಸರಿದುಹೋಯಿತು (ಹೊಸಕ್ನ. ೭). ೧೧. (ಆಲಂ) ಸಾಯು; ಗತಿಸು : ಭಾನುಸನ್ನಿಭ ಸರಿದನೇ ತಪ್ಪೇನು ಪಾರ್ಥನ ಬಸುಜಿಲೆನ್ನ ನಿಧಾನವಿದ್ದುದು ತೆಗೆವನ್ನೆಸಲೆ (ಕುವ್ಯಾಶ. ೧-೧೨). **ಜರಿ$_1$** : ೨. ಜರಿದುದತಿರಥರಾಜಿ . . . ಸಮೀರಕುಮಾರನುರವಣೆಗೆ (ಕುವ್ಯಾದ್ರೋ. ೧೩-೧೯). ೫. "ಜರಿ–ತೀರ ಪತನೇ (ಜಾಱು)" (ಶಮಧಾ); ಮಳಲೇರಿಯಂತೆ ಜಬ್ಬನೆ ಜರಿದು (ಧರ್ಮಾಮೃ. ೧-೧೫೬) ; ಅಖಿಲಕುಲಗಿರಿ ಜರಿದು ಬೀಳುವಡಾನಲಾಪೆನು ನಖದ ಕೊನೆಗಳಲಿ (ಕುವ್ಯಾಭೀ. ೧೦-೭) ; ಜಗದಡಕಿಲು ಜರಿದು ಗಿರಿ ಕೆಡೆದುರುಳಿದುವು (ಸಾಳ್ವಭಾ. ೧೮-೬೯). ೧೨. ಅಳುಕು ; ಹಿಂಜರಿ : ತೊದಳಿಲ್ಲದೆರಡುಗೇಳದೆ ಮನದೊಳ್ ಜರಿಯದೆ ಕೊಂಡೊಡೆ (ಧರ್ಮಾಮೃ. ೧೩-೭೨). ೧೩. ಪತನವಾಗು ; ಬೀಳು : ರಟ್ಟನ್ರ(ನೃ)ಪ ಪ್ರಘಟ್ಟದಿಂ ಜರಿದ ಚಳುಕ್ಯರಾಜ್ಯಮಂ . . . ಉದ್ಧರಿಸಿದಂ (ಎಇ. V, ೧೬-೧೪ ; 1142). ೧೪. ಜೋಲುಬೀಳು ; ಇಳಿಬೀಳು : ನೀ ಮಕ್ಕಳ ಪಡೆದ ಮಾತ್ರದಲಿ ಕಕ್ಕಸಮೊಲೆ ಜರಿದಪುದು (ಮೋಹತ. ४-२२). ೧೫. ಉದುರಿಬೀಳು; ಕಳಚಿಬೀಳು : ಔದುಂಬರಕುಷ್ಠಮಾಗಿ ಸರ್ವಾಂಗೋಪಾಂಗಾವಯವ ಪ್ರದೇಶಂಗಳೆಲ್ಲಂ ರೂಪಱಿಯಲಾಗದಂತು ಜರ್ಜರಮಾಗಿ ಜರಿಯೆ (ಸುಕುಮಾ. ೫-೧೧ ವ). **ಜರೆ$_2$** : ೫. ನಡುಮನೆಯ ಜಂತಿ ಜರೆದ್ಹಾಂಗ ಜರದೇನ (ಕನ್ನಜಾ. ೧೧೦); ಸಾವಕಾಶ ಬಾರಮ್ಮ. ಕಲ್ಲು ಹಾವಸೆಗಟ್ಟಿರುತ್ತದೆ. ಕಾಲು ಜರೆದೀತು (ಹೊಸಕ್ನ. ೯೧೦).

[ದೇ. II ತಮಿ. ಮಲ. ಚರಿ; ತುಳು. ಜರಿ]

**ಸರಿ$_2$** (ನಾ). ೧. ಓಡಿಹೋಗುವಿಕೆ ; ಪಲಾಯನ : (ಚತುನಿ. ಕಿ. I, ೪೮). ೨. ಜಾರುವಿಕೆ ; ಜಗುಳುವಿಕೆ : (ಕಿ). ೩. ಕಳೆದುಹೋಗುವಿಕೆ ; ಮುಗಿದುಹೋಗುವಿಕೆ : (ಕಿ). [< ಸರಿ$_1$./ ತುಳು. ಸರಿ]
**ಸರಿ$_3$** 'ಸಱಿ$_1$' ನೋ.
**ಸರಿ$_4$** 'ಸಱಿ$_2$' ನೋ.
**ಸರಿ$_5$** (ಗು). ೧. ಸಮಾನವಾದ ; ಸಾಟಿಯಾದ : ಜಲನಿಧಿಗೆ ಸರಿಸರಸಿ ಯಾವುದು (ಕುವ್ಯಾಆ. ೨೬-೪೫). ೨. ಯೋಗ್ಯವಾದ ; ತಕ್ಕ : (ಕಿ). (ನಾ). ೩. ಸಮಾನ ; ಸದೃಶ ; ಸಾಟಿ : "ಸರಿ ದೊರೆ . . . ಸಂಗಡಂ – ಈ ೧೮ ಸಮಾನಕೆ ಪೆಸರ್" (ಕಶಸಾ. ೫೯-೨೯೧) ; ಸರಿ ಸತ್ಯಭಾವೆ . . . ದೊರೆ ಸಂದರುನ್ನತಿ ಪೆರ್ಚ್ಚೊರೆಯೇ ಗುಣದಂಕಕಾರ್ತ್ತಿಯೊಳ್ (ಸೌಇ. XI-i, ೫೨-೨೯ ; 1007) ; ಪರರ ವಸ್ತುವ ತೃಣಕೆ ಸರಿಯೆಂಬ ಭಾಷೆಯದು (ಹಚಕಾ. ೧-೧೬). ೪. ಯೋಗ್ಯವಾದುದು ; ತಕ್ಕುದು : ನೀ ಮುನ್ನಳುಕಿ ಕೈದುವ ಹಾಯ್ಕಿದ್ದೆ ಸರಿಯಲ್ಲ ನಿನಗೆ (ಕುವ್ಯಾಭೀ. ೩-೩೫) ; ನಾನು ಕೂಡ ನೀನು ಹೇಳುವುದನ್ನೆಲ್ಲಾ ಸರಿಯೆಂದು ತಿಳಿದುಕೊಳ್ಳುತ್ತೇನೆ (ಆರ್ಯಕ. ೭೮). ೫. ತಪ್ಪಲ್ಲದುದು; ದೋಷಪೂರ್ಣವಾಗಿಲ್ಲದಿರುವುದು : ಈ ಎರಡರಲ್ಲಿ ಯಾವುದು ಸರಿ, ಯಾವುದು ತಪ್ಪು ? (ರೂಢಿ). ೬. ಸಮಭಾಗ ; ಸರಿಪಾಲು : ನೀವಖಿಳರಾಜ್ಯದಲಿ ಸರಿಯ ಕೊಂಬುದು ನೇರುವಡೆ ಗಜಪುರದೊಳಿಹುದಲ್ಲದೊಡೆ

ನಿಮ್ಮಯ ಪುರದಲಿರಿ (ಕುವ್ಯಾಆ. ೧೭-೨೭) ; ಪೂರ್ವದಲಿ ಪಿಂಡವ ಸರಿಯನಿತ್ತನು . . . ಆ ಪ್ರಕಾರದಲೂರ್ವಿಯೊಡೆತನಕೆ ಸರಿಕುಮಾರಕರಿಬ್ಬರು (ತೊರರಾ. ೨-೧-೩೪) ; ಸರಿನೀರು ಸರಿಮೊಸರು ಶುಂಠಿ ನೀರುಳ್ಳಿಗಳ ತುರುವಲೇಲಕ್ಕಿ ತದುಕಿನ ಚಿಗುರ ಕಿಚುಗಟ್ಟುವೆರಸಿ ನೀರೋಗರವ ಹಾಕಲದು ತ್ರೈಲೋಕ್ಯಪೂಜ್ಯ ತಕ್ರೋದನ (ಸೂಪಶಾ. ೩-೨೭). ೭. ಎರಡರಿಂದ ಭಾಗವಾಗುವ ಸಂಖ್ಯೆ ; ಸಮಸಂಖ್ಯೆ : ಒಂದೆಂದಡೆ ಬೆಸ ಎರಡೆಂದಡೆ ಸರಿ (ಸಕವ. ಕ. II. ೫೧೦-೭೯). ೮. ಒಪ್ಪಿಗೆ, ಸಾಕು ಎಂಬುದನ್ನು ಸೂಚಿಸಲು ಬಳಸುವ ಒಂದು ಶಬ್ದ : ನೀವಾದರೇನು? ನಾವಾದರೇನು? ಬಾವೀಲಿ ನೀರು ಬಂದರೆ ಸರಿ (ಗಾದ). ೯. ದಿಟ ; ನಿಜ : ಜೀನನ ಮನಸ್ಸು ಹೀನವೇ ಸರಿ (ಗಾದ); ಮಳೆ ಬಂದದ್ದೇನೋ ಸರಿ ಆದರೆ ಸಕಾಲಕ್ಕೆ ಬರಲಿಲ್ಲ (ರೂಢಿ).

ಸರಿಸರಿ = (ದ್ವಿರುಕ್ತಿ) : ನೆರೆದು ನಿಮ್ಮೊಳು ನೀವು ಸೆಣಸುತ ಸರಿಸರಿಗೆ ಹೊಯ್ದಾಡುವುದು ನೃಪನೀತಿ (ಕೋಗಯ. ೧೭-೧೦);ಇವರ್ಗವರ್ಗೆ ಸರಿಸರಿ ಜುದ್ಧಮಾಗಲ್ (ಅದ್ಭುತ. ೪೫-೧೩). ಸಕ್ಕಸರಿ = ಸರಿಸಮಾನವಾದುದು : ಉಚಿದ ಘಾತಿಗಳು ಸ್ಥಿತಿಕರ್ಮಕ್ಕೆ ಸಕ್ಕಸರಿ ಮಾಡಿ (ಅನಂಪು. ೧೪-೫೧ ವ). ಸಕ್ಕಟಸರಿ = ಸಕ್ಕಸರಿ: ಅರಲಸರಿ ಸುರಿದೊಡಂ ಪೊಸಸರಳ್ಗಳ ಸರಿ ಸುರಿದೊಡಂ ಹಿತಾಹಿತಜನದಿಂ ಸರಿಗಳಿವೆರಡುಂ ಸಕ್ಕಟಸರಿಯೆನಿಸಿದ ಮುನಿವರಂಗೆ ಸರಿಗಿರಿಯಲ್ತೇ (ಉಸಾರ. ೨೫೭). ಸರಿಗೆವರ್ = ಸಾಟಿಯಾಗಿರು ; ಎಣೆಯಾಗಿರು : ಸರಿಗೆಗೆ ಕೊರಲ್ ಕೊರಲ್ಗಂ ಸರಿಗೆಯಲಂಕರಿಸೆ ಸರಿಗೆ ವಂದುದು ಮುಯ್ಯುಟ್ಟೆರಡಱ ಬೆಡಂಗುಮೆಂಬಂತಿರೆ ಕರವೊಪ್ಪಿದುದು ಕೊರಲಗೇಂದ್ರಾತ್ಮಜೆಯಾ (ಕಾವ್ಯಾವ. ೬೯೯) ; ಪೊಳೆವ ಮುತ್ತಿನ ಬೆಳ್ದಿಂಗಳ ಸಿರಿಗೆ ಸರಿಗೆ ವರ್ಪುವು ಪಳಚನೆ ಕವಿಭಾಳನೇತ್ರನಿಡುವ ಪದಂಗಳ್ (ಅನಂಪು. ೧-೫೦). ಸರಿಗೆ ಸಲ್ = ಸರಿಗೆ ವರ್ : ಹರಿಮಹೇಶ್ವರರಾಳುತನಕಿಬ್ಬೆರಳು ಮಿಗಿಲರ್ಜುನನ ಬಲುಹೀ ಧರೆಯಚಿಯಲೀ ಹೊತ್ತಿನಲಿ ನಿನ್ನಾತನಗ್ಗಳಿಕೆ ಸರಿಗೆ ಸಂದುದೆ ಸಾಕು ತೂಗಿದಡರಸ ರವೆ ಕುಂದದು (ಕುವ್ಯಾಕ. ೨೨-೩೯). ಸರಿಗೇಱು = ೧. (ಆಲಂ) ಮುತ್ತು ; ಲಗ್ಗೆಯಿಡು: ಸಂಕೆಯ ಸಾಹಣಿ . . . ಕುಂದುಗೊಳದ ಕೋಟೆಯನು ಸೆರಗುಬೆರಗಿಲ್ಲದೆ ಸರಿಗೇಱಿ ಕಾದಿ ಸುರಲೋಕಪ್ರಾಪ್ತನಾದಂ (ಸೌಇ. XX, ೧೨೬-೧೭ ; 1186) ; ತೋಳ್ಗಡಿಯರಿಱಿಯೆ ಬಿಡೆ ಬಿಲ್ಲಾಳ್ಗಳ್ ಸರಿಗೇಱಿ ಮಟ್ಟಿದರ್ ಕಡುಪಿಂದಂ (ಪಾರ್ಶ್ವಪು. ೩-೧೪೬). ೨. ಧಾವಿಸು ; ನುಗ್ಗು : ಉರಿಯ ಸರಿಗೇಱಿದ [ಪಾಠಾಂ. ಸಿರಿಗೆಱಿಗಿದ] ಪತಂಗಕೆ ಮರಳುದಲೆಯೇ ಮತ್ತೆ (ಕುವ್ಯಾಕ. ೨೦-೩೯). ಸರಿಮಾಡು = ೧. ಸಮಾನವೆಂದು ಎಣಿಸು ; ಸರಿಜೋಡಿಯೆಂದು ಪರಿಗಣಿಸು : ಭವಿಯೊಡನೆ ಸುಬ್ರತಶ್ಶಿವನಂ ಸರಿಮಾಡುವುದು ದುರ್ಭಾವ (ಬಸಪು. ೫೩-೪೫) ; ಖೂಳನನು ಹಿಡಿತಂದು ಧರಣೀಪಾಲರಲಿ ಸರಿಮಾಡಿ ರಾಜ್ಯದ ಮೇಲೆ ನಿಲಿಸಿದೆ (ಕುವ್ಯಾಕ. ೫-೨೩). ೨. ಸರಿಯಾದ ರೂಪವನ್ನು ಕೊಡು ; ಸರಿ ಹೊಂದಿಸು ; ಅನ್ವಯಿಸು : ಸಂಖ್ಯಾವ್ಯಯಂಗಳಂ ಕಳೆದುಳಿದ ನಿಘಂಟುವಿನ ಸುಲಲಿತಾಕ್ಷರಂಗಳಪ್ಪ ನಾಮಪ್ರಕೃತಿಗಳಂ ಕನ್ನಡಕ್ಕೆ ಸರಿಮಾಡಿ ಸಮಸಂಸ್ಕೃತಮೆಂಬ ಪೆಸರನಿಟ್ಟು ಶಬ್ದಜ್ಞರ್ ಲಿಂಗಮಂ ಮಾಳ್ಪರ್ (ಶಮದ. ೮೦ ವೃತ್ತಿ). ೩. ಸಮಗೊಳಿಸು ; ಮಟ್ಟಮಾಡು : ಕೊಱಡುಗಳನೊಟ್ಟಿದರ್ ಕಲ್‌ಗುಂಡುಮಣ್ಗಳಂ ಸುರಿದು ನೆಲ ಸರಿಮಾಡಿದರ್ ಖಳರ್ (ಚಬಪು. ೪೨-೩೦). ಸರಿಯಾಗಿ = ೧. ಸಮಾನವಾಗಿ ; ಸರಿಸಾಟಿಯಾಗಿ : ಸಂಸ್ಕೃತಶಬ್ದನಿಯುಕ್ತ ಲಕಾರದ ನೆಲೆಗೆ ನಿಂದು ಸರಿಯಾಗಿ ಸಲ್ವುದಂ ಕ್ಷಳನೆಂಬರ್ (ಶಮದ. ೧೬) ; ವೃಷಕೇತು ಬರಲಾತನೊಳ್ ಸರಿಯಾಗಿ ಕಾದುತಿರಲು (ಜೈಮಿಭಾ. ೮-೩೭). ೨. ಹೆಚ್ಚುಕಡಮೆಯಾಗದೆ ; ತಪ್ಪಿಲ್ಲದಂತೆ : ಲೆಕ್ಕವನ್ನು ಸರಿಯಾಗಿ ಮಾಡು (ರೂಢಿ). ೩. ತಕ್ಕ ರೀತಿಯಲ್ಲಿ ; ಚೆನ್ನಾಗಿ : ಪದ್ಯವನ್ನು ಸರಿಯಾಗಿ ಪದವಿಭಾಗ ಮಾಡು, ಅರ್ಥವಾಗುತ್ತದೆ (ರೂಢಿ). ಸರಿಸಮಾನ = ಸರಿಜೋಡಿ ; ಸಾಟಿ: ನಾನೊಬ್ಬನಿರೆ ಕರಗುತಿದ್ದನಾಗಲೆ ಸರಿಸಮಾನವಿಲ್ಲದ ಹಿಮಾಲಯವಾಗುವಂತೆ (ಕಪಪು. ೫೩). ಸರಿಸಮಾನೆ = ಸರಿಜೋಡಿಯಾದವಳು ; ಸಾಟಿಯಾದವಳು : ಕಾಮನ ರತಿಯಲು ತಾನೆನೆತೊಣೆ ಸರಿಸಮಾನೆ ಶಾಂತಲದೇವಿ (ಎಕ. II, ೧೪೩-೭೫ ; 1131). ಸರಿಸುಮಾರು = ಹೆಚ್ಚುಕಡಮೆ; ಅಜಮಾಸು: ಸರಿಸಮಾರು ಒಬ್ಬ ಮನುಷ್ಯನಿಗೆ ೪ ಔನ್ಸುಗಳಷ್ಟು ತರಕಾರಿ ನಿತ್ಯದ ಊಟದಲ್ಲಿರಬೇಕು (ಗೃಹವಿ. ೪೫).

[< ಪ್ರಾ. ಸರಿ./ಸಂ. ಸದೃಶ. /ತಮಿ. ಚರಿ ; ತುಳು. ತೆಲು. ಸರಿ]

ಸರಿ$_6$ (ನಾ). ಒಟ್ಟಿಲು ; ರಾಶಿ : ಒಪ್ಪುವ ಸುಲಲಿತಶಂಖದ ಸರಿಗಳಲ್ಲದಿವು ಬೆಳ್ದೊರೆಗಳೊಟ್ಟಿಲಿಲ್ಲ (ಜೈಮಿಭಾ. ೬-೬) ; ತಾಂಬೂಲಪ್ರಸಾದಮಂ ಕುಡಲು . . . ಭರದಿ ಹೊಱದೆಸಗೆಯ್ದಸಹ್ಯಭಾವದಿ ಕಲ್ಲ ಸರಿಯಲ್ಲಿ ಬೈಚಿಟ್ಟು (ಗುರುಚಾ. ೧೪-೭೫).

[?. /ತಮಿ. ಚರಿ]

ಸರಿ$_7$ (ನಾ). ಮಳೆ ; ವೃಷ್ಟಿ : ''ಸರಿಯೆಂದೆನೆ ಮಟೆಯಕ್ಕುಂ'' (ಕವಿಕಂ. ೯೨) ; ಚಿತ್ತೆಯ ಸರಿಯಂತೆಱಗಿ ಪೋದುದಮರಸಮಾಜಂ (ಆದಿಪು. ೧೪-೧೪೭) ; ಅರಳಿದೆಂಬುಜವನಕೆ ಮಂಜಿನ ಸರಿಯು ಸುರಿವಂದದಲಿ . . . ಚರನ ಬಿನ್ನಹಕರಸಿ ಮೊದಲಾಗಿರೆ ಸಮಸ್ತಸಖೀಜನದ ಮುಖಸರಸಿರುಹ ಬಾಡಿದವು (ಕುವ್ಯಾಸ. ೧೪-೫೧). 'ಸರಿವೆಟ್', 'ಸರಿಸೋನೆ' ಪರಾ. [?]

ಸರಿಕ, ಸರೀಕ (ನಾ). ೧. ಸಮಾನದರ್ಜೆಯವನು ; ಸಮಾನ ಯೋಗ್ಯತೆಯುಳ್ಳವನು : ನಾನು ನನ್ನ ಸರಿಕರೊಡನೆ ಬೆರೆಯುವೆ (ರಕ್ತಧ್ವ. ೨೪೯) ; ಕೊನೆಯ ಪಕ್ಷ ನಮ್ಮ ಹಳ್ಳಿಯಲ್ಲಾದರೂ ಇದ್ದಿದ್ದರೆ ಸರಿಕರಲ್ಲಿ ನಗೆಗೀಡಾಗುವುದು ತಪ್ಪುತ್ತಿತ್ತಲ್ಲ (ಕಾಗಕ. ೫೪). ೨. ಓರಗೆಯವನು ; ಸಮಪ್ರಾಯದವನು : ಸರಿಕರೊಡನೆ ಆಟ ವಿನೋದಗಳಿಲ್ಲ. ಏನೋ ಯೋಚನೆ ಕಟ್ಟಿಕೊಂಡ ಹಾಗಿದೆ (ಹಾಹುತ್ತ. ೮೫); ವಯಸ್ಸಿನಿಂದ ಈ ನಾಲ್ಕು ಜನರು ಕಾಮಿಯ ''ಸರಿಕ''ರೆಂದು ಹೇಳಬಹುದು (ವೃದ್ಧರಾ. ೪೫). ಸರೀಕ : ೧. ತಮ್ಮ ಸರೀಕರ ಕೂಡಲೂ ತಮಗಿಂತ ಹೆಚ್ಚಿನ ಯೋಗ್ಯತೆಯವರ ಕೂಡಲೂ ವಿನಯದಿಂದ ನಡೆಯಬೇಕೆಂಬುದಂತೂ ಸಹಜವೇ (ಮುಂಬಯಿ. ೪-೭೩) ; ಸತ್ಯಸಂಗತಿ ಹೊರಬಿದ್ದರೆ ತಮ್ಮ ಘನತೆ ಸರೀಕರ ಎದುರಿನಲ್ಲಿ ಹೋಗುವುದೆಂದು ಹೆದರಿದ ತಿಮ್ಮೇಗೌಡ (ಊರುಕ. ೯೮). ೨. ಚೇಷ್ಟೆ ಮಾಡುವುದಿದ್ದರೆ ಸರೀಕರೊಡನೆ ಮಾಡಬೇಕು (ಸ್ಮೃತಿಚ. ೩೮೪) ; ನಿನ್ನ ಸರೀಕರು ಹೀಯಾಳಿಸುವುದನ್ನಾದರೂ ನೋಡಬಾರದೆ? (ಮಲ್ಲಮ್ಮ. ೧೮).

[ಸರಿ$_5$ + -ಕ$_3$. /ಪ್ರಾ. ಸರಿಕ$_2$. / ಸಂ. ಸದೃಕ್ಷ./ಹಿಂ. ಸರೀಖಾ ; ಮರಾ. ಸರೀಕ್]

ಸರಿಕತನ, ಸರೀಕತನ (ನಾ). ಸರಿಸಮಾನತೆ : ಈ ಜಗತ್ತಿನಲ್ಲಿ ತಮಗಿಂತ ಬಲಿಷ್ಠರಾದವರ ಕೂಡ ಸರಿಕತನದ ಸಂಬಂಧಮಾಡುವ ಭರಕ್ಕೆ ಯಾರೂ ಬೀಳಬಾರದು (ಮುಂಬಯಿ. ಕ. ೪-೧೨). ಸರೀಕತನ : ಸರೀಕತನದಲ್ಲಿ ಅವರಿಬ್ಬರೂ ಸಮವಾಗಿದ್ದಾರೆ (ರೂಢಿ). [ಸರಿಕ + -ತನ]

ಸರಿಕಾಣು 'ಸರಿಗಾಣ್' ನೋ.

ಸರಿಕಿಸು 'ಸರಕಿಸು' ನೋ.

ಸರಿಕೆ (ನಾ). ೧. ಸರಿಯುವಿಕೆ ; ಚಲನೆ : ಮಿದುನೆಲದ ಮಮತೆಯನ್ನು ಪದಕೆರೆವ ಗರಿಕೆ ಬಗೆಯನುಲ್ಲಸಗೊಳಿಪ ಕಮ್ಮಲರ ಸರಿಕೆ (ಹಂಸದ. ೨೦). ೨. [ನಾಟ್ಯಶಾ] ಮೂವತ್ತೈದು ದೇಶೀಯಭೌಮಚಾರಿಗಳಲ್ಲಿ ಒಂದು ; ಒಂದು ಕಾಲನ್ನು ಮುಂದಕ್ಕೆ ಚಾಚುವುದು : ಇರದೊಂದುಪದಂ ಮುಂದಕೆ ಚರಿಸಲೆ ಸರಿಕಾಖ್ಯಂ (ಲಾಸ್ಯರಂ. ೬-೮೬). [ಸಂ. ಸರಿಕಾ./ ತಮಿ. ಚರಿಕ್ಕೈ]

ಸರಿಗ (ನಾ). = ಸರಿಕ ೧ : ನನ್ನ ಹಣವನ್ನೂ ನನ್ನನ್ನೂ ಸರಿಗರ ಮುಂದೆ ನಿಂದಿಸುತ್ತಿರುವನು (ಕವಿಕ. ೩). [< ಸರಿಕ]

ಸರಿಗಂಜಿ (ನಾ). ಕಂಬಳಿಯನ್ನು ನೇಯುವಾಗ ಅದಕ್ಕೆ ಲೇಪಿಸುವ ಅಂಟುದ್ರವ: ಕುರುಬರಿಗೆ ಕೊಡಲೇನೆ ಗೌರಮ್ಮ ನಿನ್ನ ಕುರುಬರ ಕುರಿಬಣ್ಣ ನಾನುಡಲಾರೆ ಕಂಬ್ಳಿಗೆ ಸರಿಗಂಜಿ ನಾ ಕಾಸಲಾರೆ (ನಾಪದ. ೧೧೧). [ಸರಿ$_4$ (< ಸಱಿ$_2$) + ಗಂಜಿ$_1$]

ಸರಿಗಟ್ಟಿಸು (ಕ್ರಿ). ಸರಿದೂಗಿಸು ; ಸರಿಸಮವಾಗುವಂತೆ ಮಾಡು : ಬಡದೊರೆಯ ಮಗಳು ಬಲುದೊರೆಯ ಕೈಹಿಡಿದರೆ . . . ಸರಿಯಾಗಿ ನಡೆಸಬೇಕು. ಹುಟ್ಟಿದ ಮನೆ, ಹೊಕ್ಕ ಮನೆ ಎರಡನ್ನೂ ಸರಿಗಟ್ಟಿಸಬೇಕು (ಮಾಮಲ್ಲಿ. ೪೫).

[ಸರಿಗಟ್ಟು + -ಇಸು$_3$]

ಸರಿಗಟ್ಟು (ಕ್ರಿ). ೧. ಸಮಾನವಾಗು ; ಎಣೆಯಾಗು : ಇಟ್ಟಣಿಸಿಕೊಂಡೆನ್ನೊಡನೆ ಸರಿಗಟ್ಟಿ ಕಾದಿದ ರವಿಸುತನ ಹುಡಿಗುಟ್ಟಿದೆನು (ಕುವ್ಯಾಕ. ೧೭-೨೯) ; ಈಜುವುದರಲ್ಲಿ ಇವರನ್ನು ಸರಿಗಟ್ಟುವುದು ಅಸಾಧ್ಯ (ಮೇದಿಮ. ೧೧೧). ೨. ಸಮಾನಗೊಳಿಸು ; ಭೇದವಿಲ್ಲದಂತೆ ಮಾಡು : ಹುಟ್ಟಿ ಬ್ರಾಹ್ಮಣಜಾತಿಯನೆ ಕಡೆಗಟ್ಟಿ ಚಾತುರ್ವರ್ಣ

ಗಳ ಸರಿಗಟ್ಟಿದಿನ್ನೀ ಜಾತಿ ಯಾವುದು ಲಿಂಗಧಾರಿಗಳೇ (ಬಜ್ಜಪು. ೬೧-೫೦). ೩. ಸಮಾನವೆಂದು ಭಾವಿಸು : ಇಂತಪ್ಪ ಪಾಪಕರ್ಮರೊಳೆಂತುಂ ಸರಿಗಟ್ಟಲಕ್ಕುಮೇ ಶಿವದೀಕ್ಷಾವಂತರೆನಿಸಿರ್ದ ಸುಚರಿತವಂತರಂ (ವೃಷವಿ. ೩೮-೧೯). [ಸರಿ$_5$ + ಕಟ್ಟು$_1$]

**ಸರಿಗಣೆ** (ನಾ). ಮಳೆಯಂತೆ ಸುರಿಯುವ ಬಾಣ ; ಧಾರಾಕಾರವಾಗಿ ಬರುವ ಬಾಣ : ಸರಲುಗಿಯಲು ಸರಿಗಣೆಯಂ ಮುಱಿಯುತ ಮರಳಿಮರಳಿಯಾಳಾಳೊಳೊಡರ್ಚುತ್ತುರವಣೆಯಿಂ ಪಡಲಿಟ್ಟಂದದಿನುರುಳ್ದುದು ಭಟತತಿ ಭರದಿಂ (ಜಯಕಾ. ೬-೩೨). [ಸರಿ$_7$ + ಕಣೆ$_1$]

**ಸರಿಗದ್ದುಗೆ** (ನಾ). ಸರಿಸಮನಾದ ಗದ್ದುಗೆ ; ಸಮಾನದರ್ಜೆಯ ಪೀಠ : ಒಡೆಯನ ನಿರೀಕ್ಷಣದಲ್ಲಿ ಸರಿಗದ್ದುಗೆಯನೊಲ್ಲದೆ ಒಡೆಯಂಗೆ ಮನೋಹರವಾಗಿ ಸಡಗರಿಸಿ ಸಮರ್ಪಿಸಿದ ಮತ್ತೆ ತನ್ನೊಳಗಿಪ್ಪ ಆತ್ಮಂಗೆ ತೃಪ್ತಿ ಕೂರ್ಮಶಿಶುವಿನ ಸ್ನೇಹದಂತೆ (ಮೋಳಿಮಾ. ೨೧-೮೪) ; ಪುರಂದರನ ಸರಿ[ಪಾಠಾಂ. ಮ]ಗದ್ದುಗೆಗೆ ಮನಸಂದವರು ಹೊಗಿರಣವನು (ಕುವ್ಯಾಕ. ೮-೩೧). [ಸರಿ$_5$ + ಗದ್ದುಗೆ$_2$ (< ಗರ್ದುಗೆ$_2$)]

**ಸರಿಗಳೆ** (ಕ್ರಿ). ೧. ಗುರುತಿಸು (?) : ಬರೆದು ಕುಂಡಲಿಚಕ್ರಮಂ . . . ಪೇಟ್ದೆಡೆಗಳಂ ಬಿಂದಿಸಿ ಪೇಟದೆಡೆ ತರದಿ ರೇಖೆಯನಂತವು ಸರಿಯಾಗಿ ಸರಿಗಳೆವುದು (ಜಾತತಿ. ೧೦-೨). ೨. (ಆಲಂ) ಸಂಪೂರ್ಣವಾಗಿ ಅಳಿದುಹೋಗು (?) : ನೀನಿಂದಿಱಿದು ಮೆಱೆವವಸರವಲಾ ಜವ್ವನದ ಧುರಭರವು ಸರಿಗಳೆಯದಪಕೀರ್ತಿ ರವಿಶಶಿ ಮುರಿದುಬೀಳ್ವನ್ನಬರ (ಕುವ್ಯಾವಿ. ೬-೨೧). [ಸರಿ$_5$ + ಕಳೆ$_1$]

**ಸರಿಗಾಣ್**, ಸರಿಕಾಣು (ಕ್ರಿ). ೧. ಸಮವೆಂದು ಭಾವಿಸು ; ಸಮಾನವೆಂದು ಪರಿಗಣಿಸು : ಮಱುವಕ್ಕದ ನಾಯಕರನಾಜಿಯೊಳ್ಕಂಡು . . . ಬೆಳ್ವಕ್ಕಿಯ ಪಿಂಡಿಂಗವಂದಿರಂ ಸರಿಗಂಡಂ (ಪಂರಾಮಾ. ೯-೫೮) ; ಫಡಫಡೆಲವೋ ಭೀಮ ಬಣಗುಗಳೊಡನೆ ಸರಿಗಂಡೆನ್ನ ಬಗೆಯದೆ ಕಡುಗುವ್ಯೆ (ಕುವ್ಯಾದ್ರೋ. ೧೨-೧೬) ; ಪೆಂಡಿರೊಳ್ ಸರಿಗಂಡೀಕೆಯ ನೀಂ ಬರ್ದುಂಕಿಪುದು (ಶಾಕುಂತ. ೬೫-೯೫). ೨. ಸದೃಶವಾದುದನ್ನು ಕಾಣು ; ಸರಿಸಾಟಿಯಾದುದನ್ನು ಕಾಣು : ನಿನ್ನ ರೂಪಿಗೆ ಸಲುವುದೌ ನಳನುನ್ನತದ ಸೌಂದರ್ಯ ಜಗದೊಳಗಿನ್ನು ನಾ ಸರಿಗಾಣೆ (ನಳಚ. ೨-೩೬) ; ಭಳಿರೇ ಪುಳಿಂದಂಗೆ ಸರಿಗಾಣೆಂ (ಚೆಬಪು. ೫೩-೪೪) ; ನೆಱೆ ತನ್ನ ಶುಭ್ರಕೆ ಸರಿಗಾಣೆನೆಂದಾಗ ಪರಿದಾಡುತಿಹಳು ಕಾವೇರಿ (ಕಂನವಿ. ೫-೪೨). ೩. ದೃಷ್ಟಿ ಸರಿಯಾಗಿರು : ತನ್ನ ತಾನಱಿದ ಎಚ್ಚಱಿಕೆಯಲ್ಲಿ ಅಹುದು ಅಲ್ಲವೆಂಬುದ ಕುಱುಹುದೋಱಿ ದಿವರಾತ್ರಿಯಲ್ಲಿ ಉಭಯಕ್ಕೂ ದೃಕ್ಕು ಸರಿಗಾಬುದಾಗಿ ಲಕ್ಷವ ಬಿಟ್ಟು ನಿರ್ಲಕ್ಷವ ಕಂಡು ನಿಶ್ಚಯವಾಯಿತ್ತು (ಮೋಳಿಮಾ. ೧೮೮-೭೧೧). ೪. ಯೋಗ್ಯವೆಂದು ತೋರು ; ಸರಿಯೆನಿಸು : ನಿನಗೆ ಸರಿಗಾಣ್ಬಂತೆ, ನೀನ್ ನಿನ್ನ ಒಳ್ಪಿತ್ತನಾರಯ್ (ಬದ್ಧಪ್ರ. ೨೦-೪೩೦). ೫. ಒರೆ ಹಚ್ಚಿನೋಡು; ಪರೀಕ್ಷಿಸು : ನಾರದಮುನೀಶ್ವರನ ವಾಕ್ಯಕ್ಕೆ ಸರಿಗಾಣ್ಬೆನೆಂದೋರ್ವ ಚರನ ಕರೆದಂ ರತಿಯು ಪರಿಪಾಲಿಸುವ ಪುಟ್ಟನನ್ನು ಕರತರ್ಪುದೆಂದಟ್ಟೆ (ನವಮೋ. ೧೨-೩೧). **ಸರಿಕಾಣು:** ೪. ತನ್ನಾತನಿಗೆ ಸರಿಕಂಡದ್ದು ತನಗೂ ಸರಿ (ತೇಮೋಡ. ೭೦). [ಸರಿ$_5$ + ಕಾಣ್]

**ಸರಿಗಾದು** (ಕ್ರಿ). ಸರಿಸಮನಾಗಿ ಹೋರಾಡು : ಗೆಲ್ದರ್ ಸರಿಗಾದಿದರ್ ಪಗೆವರೆಂಬೀ ವಾರ್ತೆಯಂ ಕೇಳಲಾಗದು (ಪಂರಾಮಾ. ೧೦-೨೨೬). [ಸರಿ$_5$ + ಕಾದು$_1$]

**ಸರಿಗಾಳೆಗ** (ನಾ). ಸರಿಸಮವಾದ ಯುದ್ಧ : ಏಱಿದ ಕರಿಯನನ್ಯನ ಹಸ್ತಿ ಕೊಲೆ ಕೋಪವೇಱಿಯಾ ಗಜದ ಮಸ್ತಕಕೆ ಪಾಱಿ ನಿಂದಲ್ಲಿಯವನ ಕೊಂದು ಮಾವಟಿ ತೋಱಿದ ಸರಿಗಾಳೆಗವ (ವರ್ಧಚ. ೬-೧೧೨). [ಸರಿ$_5$ + ಕಾಳೆಗ]

**ಸರಿಗೂಡು** (ಕ್ರಿ). ೧. ಚೆನ್ನಾಗಿ ಬೆರೆ, — ಹೊಂದಿಕೊಳ್ಳು : ಕೊನೆವನಿ ಸೂಸೆ ಸಣ್ಣವನಿ ಕೆಂದಳದೊಳ್ ಸರಿಗೂಡೆ . . . ಸುಟ್ಟುಸುಟ್ಟನೆ ಪಥಿಕಾಳಿ ಪೀರ್ದು ಪಡೆಗುಂ ಪರಿತೃಪ್ತಿಗಳಂ ನಿರಂತರಂ (ಸೂಕ್ತಿಸು. ೪-೮೨). ೨. ಚೆನ್ನಾಗಿ ಬೆರಸು, — ಕಲಸು : ಬಿಳಿಯ ಸೊಜ್ಜಿಗೆಯ ಹುಡಿ ಬೀಸಿದಕ್ಕಿಯ ಹಿಟ್ಟುಗಳನು ಸೋದಿಸಿಯವಂ ಸರಿಗೂ[ಪಾಠಾಂ. ಮಾ]ಡಿ ಬಿಸಿಯುದಕದೊಳು ಕದಡಿ (ಸೂಪಶಾ. ೧-೪೨). [ಸರಿ$_5$ + ಕೂಡು$_1$]

**ಸರಿಗೆ** (ನಾ). ೧. ಚಿನ್ನ, ಬೆಳ್ಳಿ ಮುಂತಾದ ಲೋಹಗಳಿಂದ ಮಾಡಿದ ತೆಳುವಾದ ತಂತಿ ; ಕಂಬಿ : ಸರಿಗೆಯೊಳ್ ಸಮೆದಕ್ಷಮಾಲಿಕೆ ಪೊನ್ನ ಮುಂಜಿ . . . ಕರಮೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ (ಪಂಪಭಾ. ೬-೮) ; ಒಂದು ತಂಬೂರಿಯಲ್ಲಿ ಎಳೆದು ಕಟ್ಟಿರುವ ಸರಿಗೆಯನ್ನು ಮೀಟಿದೊಡನೆ ಸ್ವರ ಉಂಟಾಗುವುದಿಲ್ಲವೆ? (ವಿಜ್ಞಾವಿ. ೨). ೨. ಚಿನ್ನ ಅಥವಾ ಬೆಳ್ಳಿಯ ದಾರ ; ಜರಿ ; ಜರತಾರಿ : ಸರಿಗೆಯ ಪಟ್ಟೆಯ ಮಡಿಯನುಟ್ಟು (ಸೌಗಂಧಿ. ೧೯೯-೧೬) ; ಸರಿಗೆಪಂಚೆಯನುಟ್ಟು ಬೆರಳಿಗುಂಗುರವಿಟ್ಟು ಸರಿಯವರ ಕೂಡೆ ಬರುವಾಗ (ಹಮಪ. ೨೩). ೩. ಸೂಲು ; ಎಳೆ ; ದಾರ : ಕರಗಿರ್ದಪುವೋ ತರದಿಂದರಗಿನ ಸರಿಗೆಗಳಿವಲ್ಲವಾನೆಯ ನೆತ್ತರ್ ಪೊರೆದಿರ್ಪುವೊ ಸಿಂಹದ ಕೇಸರಂಗಳೆನಲೊಗೆದವರುಣತರಣಿಕರಂಗಳ್ (ಕಾದಂಪೂ. ೧೪೦); ಉಂಕಿಯ ನಿಗುಚಿ ಸರಿಗೆಯ ಸಮಗೊಳಿಸಿ ಸಮಗಾಲನಿಕ್ಕಿ ಅಣಿಯೊಳು ಏಳ ಮೆಟ್ಟದೆ (ದೇದಾವ. ೭೦-೧೪೭). ೪. ಒಂದು ಬಗೆಯ ಕಂಠಾಭರಣ : ಕೊಪ್ಪು ಸರಿಗೆ ದುಸರಂ ಮಣಿಮುದ್ರಿಕೆ ತಿಸರಮೆಂಬ ಭೂಷಾನಿಕರಮನಾ ಭೂಷಣಾಂಗತರು ಕುಡುತಿರ್ಕುಂ (ಆದಿಪು. ೫-೩೩); ವಾಗ್ದೇವಿಗೆ ಬಿತ್ತರದಿಂದೆ ಸಮೆದ ಮುತ್ತಿನ ಸರಿಗೆಯನನುಕರಿಪುವಲ್ತೆ ಬಲ್ಲಿಯ ಲಿಖಿತಂ (ಕಇ. V, ೮-೩೧ ; 1072) ; ಸರಿಗೆಗೆ ಕೊರಲ್ ಕೊರಲ್ಗಂ ಸರಿಗೆಯಲಂಕರಿಸೆ ಸರಿಗೆವಂದುದು (ಕಾವ್ಯಾವ. ೬೫೯). ೫. ತೋಳಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ ; ತೋಳುಬಂದಿ : ಬಳೆ ತುಡಿಗೆಯಾಗಿಯುಂ ಸರಿಗೆಯಲ್ಲದಂತೆ (ಧರ್ಮಾಮೃ. ೧೧-೧೮೬); ನಳಿತೋಳ್ಗಳ್ ಮುತ್ತಿನ ಸರಿಗೆಯನಾಂತೆಸೆಯೆ ಕಾಂತೆ ಬಿಂಕಮನಾಂತಳ್ (ಜಗವಿ. ೧೦-೧೧೬). ೬. ಕಾಲಿನಲ್ಲಿ ಹಾಕಿಕೊಳ್ಳುವ ಒಂದು ಬಗೆಯ ಆಭರಣ : ಬಲಕಾಲಿನಲ್ಲಿ ಚಿನ್ನದ ಸರಿಗೆಯಿದ್ದಿತು (ಶ್ರೀರಾಯ. ೨೩೨); ಕಿವಿಯಲ್ಲಿಯೂ ಒಂಟಿ ಹೊಳೆಯುತ್ತಿದ್ದವು. ಒಂದು ಕಾಲಿನಲ್ಲಿ ಬೆಳ್ಳಿಯ ಸರಿಗೆಯೂ ಇತ್ತು (ಮಲಮ. ೧೩೮). [ದೇ. ‖ ತಮಿ. ಚರಿಕ್ಕೈ; ತುಳು. ಸರಿಗೆ, ಸರಿಯ. ./ ತೆಲು. ಸರಿಕ, ಸರಿಗ, ಸರಿಗೆ./ ಮರಾ. ಸರೀ]

**ಸರಿಗೆಗಂಕಣ** (ನಾ). (ಚಿನ್ನದ) ತಂತಿಯಿಂದ ಮಾಡಿದ ಮುಂಗೈಕಡಗ : ಮೃಣಾಳನಾಳದೊಳ್ ಸಮೆದ ಸರಿಗೆಗಂಕಣಂಗಳುಮಂ (ಪಂಪಭಾ. ೫-೬ ವ). [ಸರಿಗೆ + ಕಂಕಣ]

**ಸರಿಗೆದೆಗೆ** (ಕ್ರಿ). ಎಳೆಯನ್ನು ತೆಗೆ ; ನೂಲುತೆಗೆ : ಮನದೊಳಗೆ ಕಾಂತಿಯಂ ಸರಿಗೆದೆಗೆವಂದದಿಂ ಕೊನೆಮಿಂಚಿನೋಳ್ಕಾಂತಿಲತೆ ಹುಟ್ಟಿದಂದದಿಂ (ವೀರರ. ಹ. ೪೮೩-೨೨) ; ಹದಂಬೆತ್ತ ಕತ್ತುರಿಯನೆ ಸರಿಗೆದೆಗೆದಂತೆಸೆವ ಕೇಶಪಾಶದ ಪರಿಮಳದಿನವಂ ಪೊರೆದಪನೆಂಬಂತೆ . . . ತೋರದುಱುಂಬಿನೊಳ್ ತುಱುಂಬಿ (ಪಾರ್ಶ್ವಪು. ೧೨-೬ ವ); ಮಂಜುಲನೇತ್ರವಟ್ಟೆಯ ಸೀಳಿದಂತಪರಂಜಿ ಸರಿಗೆದೆಗೆದಂತೆ ಕಂಜದ ಕಂಪನುಂಡೇಳ್ವ ತುಂಬಿಯ ಗಾನರಂಜನೆಯೆನೆ ರಾಗಿಸಿದರು (ಭರಚ. ೧೩-೨೭). [ಸರಿಗೆ + ತೆಗೆ$_1$]

**ಸರಿಗೆಯ್** (ಕ್ರಿ). ಸರಿಗೊಳಿಸು ; ಸರಿಪಡಿಸು : ತಂದು ಕೋವಿಯ ತುಂಬಿ ಸರಿಗೆಯ್ದನೆಲ್ಲಂ (ಕಾಲೂರ. ೮೪-೧೭೦). [ಸರಿ$_5$ + ಕೆಯ್$_1$]

**ಸರಿಗೆವಳ್ಳ** (ನಾ). (?) : ಪೃಥುವಿಯೇ ಕಳನಾಗೆ ಸಮುದ್ರಮೇ ನೀರ್ಗಾಡಿಗೆಯಾಗೆ ಜವಗೆ ಸರಿಗೆವಳ್ಳನಾಗೆ ಆದಿತ್ಯದ ಬಲಮೇ ಮಾಬಲಮಾಗೆ (ಎಕ. X, ಕೋಲಾರ. ೧೭೦-೧೩; 1180). [?]

**ಸರಿಗೆವಾಳ** (ನಾ). ಸುವರ್ಣಸೂತ್ರವುಳ್ಳವನು (?) : ವಿಚಿತ್ರಚೈತ್ರರಥದುನ್ನತಿಯಂ ಸಮಕಟ್ಟಿಕೊಂಡು ಸಾಧಿಸುವತಿದಕ್ಕಣಂ ಸರಿಗೆವಾಳಮೆನಿಪ್ಪ ನೆಗರ್ತೆ ಕೂಡೆ ಮಾಡಿಸಿದನದೊಂದ್ಮನಂದನಮನಾ ನೃಪನಂದನನೊಂದಿದಟ್ಕಱಿಂ (ವರ್ಧಮಾ. ೨-೧೩). [ಸರಿಗೆ + - ವಾಳ$_3$ (< - ವಳ)]

**ಸರಿಗೆಳತಿ** (ನಾ). ಸಮಪ್ರಾಯದ ಗೆಳತಿ ; ಓರಗೆಯವಳು : ಹರೆಯದ ಗಂಡನು ಸರದಾರನಾಗಿ ಹೋಗುತ್ತಿರುವ ಠೀವಿಯನ್ನು ನೋಡಿ ತನ್ನ ಸರಿಗೆಳತಿಯರಿಗೆ ಅವನನ್ನು ತೋರಿಸಿ ಹೆಮ್ಮೆಪಡುತ್ತ ನಡುಯೌವನದ ಮಡದಿಯರು ನಿಂತಿದ್ದರು (ಚದೇವ. ೧೭೩). [ಸರಿ$_5$ + ಗೆಳತಿ]

**ಸರಿಗೊಳ್** (ಕ್ರಿ). ಅಳವಡು ; ಹೊಂದಿಕೆಯಾಗು : ಪಾವಿನ ಪೆಡೆಯಂತೆ ಸರಿಗೊಂಡ ಜಡೆಯುಂ . . . ಕೆಂದಾವರೆಯಂತೆ ಬಣ್ಣವೊಂದಿದಡಿಯುಂ ಒಂದಱಮೇಲೊಂದಱ್ಕಜಮಂ ಪುಟ್ಟಿಪುವು (ಅದ್ಭುತ. ೮-೧೩). [ಸರಿ$_5$ + ಕೊಳ್$_1$]

**ಸರಿಗೊಳಿಸು** (ಕ್ರಿ). ೧. ಸರಿಪಡಿಸು ; ನೇರ್ಪಡಿಸು : ರಕ್ತದಲ್ಲಿ ಕಬ್ಬಿಣದ ಧಾತು ಕಡಿಮೆಯಾದರೆ ಅದನ್ನು ಸರಿಗೊಳಿಸಲು ಜರದಾಲುಹಣ್ಣು ಉತ್ತಮ (ಆಡುಸಾ. ೭೦).

೨. ಅಣಿಗೊಳಿಸು ; ಸಂವರಿಸು : ಸಾಯಕವ ಸರಿಗೊಳಿಸಿದರು ವಜ್ರಾಯುಧನ ಮೊಮ್ಮನ ರಥವ ನಿರ್ದಾಯದಲಿ ಮುತ್ತಿದರು ಕುರುಸೇನಾಮಹಾರಥರು (ಕುವ್ಯಾದ್ರೋ. ೫-೨೪). [ಸರಿಗೊಳ್ + - ಇಸು$_3$]

**ಸರಿಜೀರು** (ನಾ). [ಸಂಗೀತ] ಶುದ್ಧವಾದ ಶ್ರುತಿ : ತಂತಂತಿಯಾಗಿ ಸರಿಜೀರು ಹಿಡಿದಿಹುದು ನಿಮ್ಮ ಜೀವತಂತು (ಹೃದಸ. ೭೩-೧೫). [ಸರಿ$_5$ + ಜೀರು$_4$]

**ಸರಿಜೋಡಿ** (ನಾ). ಸರಿಸಮಾನ : ತಮ್ಮಸಂಜೋಡಿ ಕೂಡುವ ಯೋಗ್ಯತೆ ಇಲ್ಲದವನು (ಮನಬೆ. ೧೦೪). [ಸರಿ$_5$ + ಜೊಡಿ$_1$]

**ಸರಿತ$_1$** (ನಾ). ೧. ಸಮತಳ ; ಸಮತಟ್ಟು : ಅರಳಿಯ ಅಣೆಯೆಮ್ಮುದು ಅನಾದಿಕಾಲ ತೊಡಗಿ ಒಡದು ನೆಲಸರಿತವಾಗಿ ಹಾಳಾಗಿಯಿದ ಸಮ್ಮನ್ದ . . . ಕೆಱೆಯಾಗಿ ಕಟಿಸಿ (ಎಕ. X. ಮುಳಬಾ. ೭-೫ ; 1417) ; ಧೂಳ್ಗೋಂಟೆಯಂ ಕೊಂಡು ನೆಲಸರಿತಮಂ ಮಾಡುತಿರಲು (ಚಬಪು. ೪೮-೮). ೨. ಸನಿಹ ; ಸಮೀಪ : ಸರಿತದಲು ದಾರಿಯಲು ನಟ್ಟ ಕಲ್ಲು (ಎಕ. VIII. ತೀರ್ಥಹ. ೧೭೭-೨೭ ; 1415) ; ದೇವಾಲ್ಯದ ಮೂಡಲ ಬಾಗಿಲ ಸರಿತಕ್ಕೆ . . . [ತೆಂ]ಕಣ ಮಡಿಲ ಸರಿತದಿಂದ ಬಡಗಣ ಆಗಳನೂ ಪಡುವ ಕೇರ್ರಿ ಹಲರು ತುಂಬಿಸಿಕೊಡುವರು (ಸೌಇಇ. IX-ii, ೪೫೭-೩೭ ; 1455) ; ಸರಿತದೊಳಿದ್ದ ಕಟಕದತ್ತ ನೋಡುತೆಲ್ಲರು ನುಡಿವುತ ಬರುತಿಹರು (ಭರಚ. ೪೫-೪೩). ೩. ನೀಳ ; ನೇರ: ಗುರುಹಂಸನಾಥಾಯ ಸ್ವಾಹಾಯೆಂದನು ಕೂಡೆ ಸರಿತವಾಗಿದ್ದುದಾ ಬೆರಳು (ಭರಚ. ೪೯-೧೨೮). [ಸರಿ$_5$ + - ತ$_2$./ತುಳು. ಸರುತ, ಸರೂತ = ನೇರವಾದ]

**ಸರಿತ$_2$** (ನಾ). ಚುರುಕು ; ವೇಗ : ಸರಿತ ಮಾಡಿದನು ತಾನೇಱಿದ ಮರುತಮಾವೆರಳೆಯ ನಗುತ ಸಾಗಿದುದು (ಭರಚ. ೪೯-೨೪) ; ಅವನೀಶ ನೂಂಕಿದ ಸರಿತದೊಳಲ್ಪದೂರವ ಸಾಗಿ ನಿಂದಿತಾ ಚಕ್ರ (ಭರಚ. ೫೧-೧೧೪). [< ಪ್ರಾ. ಸರತ್ತಿ]

**ಸರಿತರ್** (ಕ್ರಿ). ಸರಿಯೆಂದು ಒಪ್ಪಿಕೊಳ್ಳು, – ಸ್ವೀಕರಿಸು : ಈ ಕಾರ್ಯಾರ್ಥದಿರವ ಬಿನ್ನವಿಸಿದೆಂ ಚಿತ್ತಕ್ಕೆ ಸರಿತಂದುಕೊಳ್ಳಿಂ (ಚಬಪು. ೭-೨೩). [ಸರಿ$_5$ + ತರ್]

**ಸರಿತುಪತಿ** (ನಾ). ನದಿಗಳ ಒಡೆಯ ; ಸಮುದ್ರ : ಆ ಹರಿಯ ಮೈದುನ . . . ಸರಿತುಪತಿತಡಿವಿಡಿದು ಗೋವೆಯ ಪರಿಹರಿಸಿ ಬರಲಾಯ್ತು ಮೇಘದ ವರಸಮೂಹದ ಮೇಳವನು ನೋಡುತ್ತ ನಡೆತಂದ (ಸಂಭಪ. ೩೭-೪೦). [< ಸಂ. ಸರಿತ್ಪತಿ]

**ಸರಿತೂಕ** 'ಸರಿದೂಕ' ನೋ.

**ಸರಿತೂಗಿಸು** 'ಸರಿದೂಗಿಸು' ನೋ.

**ಸರಿತೂಗು** 'ಸರಿದೂಗು' ನೋ.

**ಸರಿತ್ಕುಲ** (ನಾ). ನದಿಗಳ ಸಮೂಹ : ಅಚ್ಚು ಮಹಾಸಮುದ್ರವೆ ಆಯ್ತು ಗಾಳಿಗೆ ಬೇಱ ತರಲೇಕೆ ಆ ಸಸಿಯ ಸೂರಿಯನ ಮಂಡಲವ್ವೆಸಲೇ ಗಂಗಾದಿ ಸಕಲ ಮಹಾಸರಿತ್ಕುಲವಾಯ್ತು ಚಮರಗ್ರಾಹಿಣಿಯರಲ್ಲಿ (ಕುವ್ಯಾಕ. ೭-೩). [ಸಂ.]

**ಸರಿತ್ಪತಿ** (ನಾ). ನದಿಗಳ ಒಡೆಯ ; ಕಡಲು ; ಸಮುದ್ರ : ಆಯತ್ತಸರಿತ್ಪತಿ ಮಹಿಮೆಗಂ ಏಕೀಕೃತಧರಾಧಿಪಾಭಿರಾಮತೆಗಂ . . . ತಾನೊರ್ವನೆ ನಿರುಪಮ ಜನ್ಮಭೂಮಿಯಾಗಿ (ಶಾಂತಿಪು. ೩-೪೯ ವ) ; ಶ್ರೀಪತಿಗೆ ಸೊಬಗಂ . . . ಸರಿತ್ಪ [ಪಾಠಾಂ. ಸರಸ್ಸ, ಶರಧಿಪ]ತಿಗೆ ಗಂಭೀರತೆಯನು ಸ್ವಾಹಾಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ ಪಂಪಾಪತಿ ವಿರೂಪಾಕ್ಷನೆಮಗಿಷ್ಟಸಿದ್ಧಿಯಂ ಮಾಳ್ಕೆ (ಹಚಕಾ. ೧-೧). [ಸಂ.]

**ಸರಿತ್ಸುತ** (ನಾ). ಗಂಗೆಯ ಮಗ ; ಭೀಷ್ಮ : ಬಂಡಣದೊಳೆನ್ನನೋಡಿಸಿಕೊಂಡುಯ್ದಂ ನಿನ್ನನಾ ಸರಿತ್ಸುತಂ (ಪಂಪಭಾ. ೧-೭೭). [ಸಂ.]

**ಸರಿದಟ್ಟ** (ನಾ). ಸಮಾನವಾದ ದಪ್ಪ, – ಮಂದ : ಆ ನುಣ್ಣನೆಯ ಹಿಟ್ಟನಂಗಯ್ಯ ಸರಿದಟ್ಟದೊಳು ತಣ್ಣಱಿದು ಮಡಗಿಯೆಮ್ಮೆಯ ಬೆಣ್ಣೆಯಂ ಕಾಸಿ ಬೇಯಿಸೆ ಸಮುದ್ರ ಫೇನ (ಸೂಪಶಾ. ೧-೨೩). [ಸರಿ$_5$ + ದಟ್ಟ$_1$]

**ಸರಿದಧಿಪತಿ** (ನಾ). = ಸರಿತ್ಪತಿ : ಸರಿದಧಿಪತಿಯಂ ದೋಷಾಕರನಂತರ್ಮಲಿನ ನಾಗಿಯುಂ ಪೆರ್ಚಿಸುಗುಂ (ಕವಿರಾ. ೩-೩೫) ; ಸರಿದಧಿಪತಿ ಮೊಟಕಾಲ್ಕುರಮುರಂಬರಂ ಮೇರು ಮುಯ್ಯುವರೆಗಮಜಾಂಡಂ ಬರೆ ತಲೆಯ ನೆಲೆಗೆ ಲೋಕಾಂತರಮೆಡೆಯಿಲ್ಲೆನಿಸೆ ಪೆರ್ಚಿದಂ ದನುತನಯಂ (ಪಂಪಭಾ. ೧೨-೧೧). [ಸಂ.]

**ಸರಿದಲೆ** (ನಾ). ತಲೆಗೆ ಸರಿಯಾಗಿ ಹೊಂದಿಕೊಳ್ಳುವಂತಹುದು : ಅರದಲೆಯು ಮೂಡಲೊಳು ಹೊಱದಲೆಯು ಬಡಗಲೊಳು ಸರಿದಲೆಯುದ್ದ ಪಡುವಲೊಳು ತೆಂಕಲಲಿ ಬಱದಲೆಯಲಿಹರು (ಸರ್ವಜ್ಞ. ೧೬೧೭). [ಸರಿ$_5$ + ತಲೆ$_1$]

**ಸರಿದೂಕ, ಸರಿತೂಕ** (ನಾ). ೧. ಸಮದರ್ಜೆ ; ಸಮಾನವಾದ ಯೋಗ್ಯತೆ : ಅವರು ಅರಿಕೇಸರಿಯ ಸರಿದೂಕದವರಲ್ಲವೆಂಬುದು ತಾನಾಗಿ ತಿಳಿದುಬರುತ್ತಿದೆ (ನಾಡೋಜ. ೩೫). **ಸರಿತೂಕ :** ೧. ತ್ರಿದಶರಿಗೆ ಸರಿತೂಕ ಸಾಮರ್ಥ್ಯದಲಿ (ಕುವ್ಯಾಸ. ೮-೧೫) ; ಹುಡುಗ . . . ಈಗಲೇ ಪ್ರಸಿದ್ಧ ಅರ್ಥಧಾರಿಗಳಾದ ನಾರಾಯಣ ಶಾಸ್ತ್ರಿಗಳ ಸರಿತೂಕಕ್ಕೆ ಬರುತ್ತಾ ಇದ್ದಾನೆ (ತ್ಯಾಗಮ. ೫). ೨. ಸಮವಾದ ತೂಕ, – ಭಾರ : ಶ್ರೀಕೃಷ್ಣನ ಸರಿತೂಕ ಬಂಗಾರ ಕೊಡುವುದಾಗಿ ಹೇಳಿ (ಕರ್ನಾಕ. ೨೮೮). [ಸರಿ$_5$ + ತೂಕ]

**ಸರಿದೂಗಿಸು, ಸರಿತೂಗಿಸು** (ಕ್ರಿ). ೧. ಸಮತೋಲವಾಗಿಡು ; ಸಮತೂಕವಾಗಿಡು : ಕೀಟಗಳು . . . ಮೂರುಕಾಲುಗಳ ಮೇಲೆ ಶರೀರವನ್ನು ಸರಿದೂಗಿಸಿ ನಡೆಯುತ್ತವೆ (ಕೀಟಜ. ೧೭). ೨. ಕಡಮೆಯಾದುದನ್ನು ಭರ್ತಿಮಾಡು; ಸಮಗೊಳಿಸು : ಕೊನೆಯ ಅಕ್ಷರಗಳನ್ನು ಎಳೆದು ಹೇಳುವುದಕ್ಕಿಂತ ಅವುಗಳ ಮುಂದ ಸ್ವಲ್ಪ ಮೌನವನ್ನು ತಂದು ಈ ಮಾತ್ರೆಯ ಕಾಲಕ್ಕೆ ಸರಿದೂಗಿಸುವುದೇ ಉತ್ತಮ (ಸಮಾಲೋ. ೨೦೪). **ಸರಿತೂಗಿಸು :** ೩. ಸರಿಯಾಗಿ ಹೊಂದಿಸು ; ನಿಭಾಯಿಸು : ಆ ವೆಚ್ಚವನ್ನು ಸರಿತೂಗಿಸುವಷ್ಟು ಆಸ್ತಿ ಅವಳ ಬಳಿ ಇಲ್ಲದಿದ್ದ ಪಕ್ಷಕ್ಕೆ, ಅದನ್ನೆಲ್ಲ ಸರಕಾರದ ಲೆಕ್ಕಕ್ಕೆ ವರ್ಗಾಯಿಸತಕ್ಕದ್ದು (ಪುನರು. ೧೧೧). [ಸರಿದೂಗು + - ಇಸು$_3$]

**ಸರಿದೂಗು, ಸರಿತೂಗು** (ಕ್ರಿ). ೧. ಸಮಾನವೆಂದು ಭಾವಿಸು : ಎಲವೊ ಕರ್ಣದುರಾತ್ಮ ನಿನ್ನೊಡನೆ ನರನ ಸರಿದೂಗುವರೆ (ಕುವ್ಯಾಕ. ೯-೨೫). ೨. ಸರಿಯಾಗಿ ಹೊಂದು ; ಅಳವಡು : ನಮ್ಮ ನಮ್ಮ ಜಮ-ಖರ್ಚಿನ ಪುಸ್ತಕದಲ್ಲಿ ಲೆಕ್ಕಾಚಾರ ಸರಿದೂಗಿರುತ್ತದೆ! (ವೀರಯೋ. ೫೭). **ಸರಿತೂಗು :** ೩. ಸಮಾನವಾಗು ; ಸಾಟಿಯಾಗು : ಏನು ಮಾಡಿದರೂ ಅವರು ಭೀಮಸೇನನೊಡನೆ ಸರಿತೂಗಲಾರದೆ ಹೋದರು (ವಚಭಾ. ೧೭) ; ದಟ್ಟವಾದ ಕಾಡಾದರೂ . . . ನಾವು ಹಿಂದಿನ ದಿನ ಹೊಕ್ಕಿದ್ದ ಕಾಡಿಗೆ ಸರಿತೂಗುವುದಲ್ಲ (ಹಸುಹೊ. ೧೯೮). [ಸರಿ$_5$ + ತೂಗು$_1$ (< ತೂಂಕು$_1$)]

**ಸರಿದೆ** (ನಾ). ಪ್ರವಾಹ (?) : ಕೊಟಗೆ ನೀರುಸರಿದೆಯಲೂ (ಸೌಇಎ. ೧೯೩೪, ಪುಂಗನೂರು. ೧೫೭-೧೮ ; 1419). [< ಸಂ. ಸರಿತ್?]

**ಸರಿದೊರೆ** (ನಾ). ೧. ಸರಿಜೋಡಿ ; ಸರಿಸಮಾನ : ಅರಿಕೇಸರಿಯನೆ ನೆಗೞ್ದುಮರಾತಿಯ ಸರಿದೊರೆಗಂ ಬಂದೆನಪ್ಪೊಡಾಗಳ್ ನಗಿರೆ (ಪಂಪಭಾ. ೧೨-೧೩೨) ; ಭೂವಳಯದೊಳದಟರೊಳರೆ ಸರಿದೊರೆಗೆ ವರಲ್ (ನೇಮಿಪು. ೧೧-೧೯) ; ಅದಾವ ಋಷಿ ಧರ್ಮಜಗೆ ಸರಿದೊರೆ (ಕುವ್ಯಾಅ. ೬೧೪. ೩-೧೪). ೨. ಸಮಾನವಾದ ವ್ಯಕ್ತಿ ; ಸರಿಕ: ಧರೆಯೊಳಾತನ ಮಾತೇಕೆಂದು ನಮ್ಮನು ಸರಿದೊರೆ ನಗುವಂತಾಯ್ತು (ಕಂಪವಿ. ೧೭-೬೭). [ಸರಿ$_5$ + ದೊರೆ$_2$]

**ಸರಿದೊರೆಯ** (ನಾ). = ಸರಿದೊರೆ ೨ : ಎನ್ನ ಸರಿದೊರೆಯನೊಡನೆ ಸಮಸಲ್ಲ ಮದುವೆಯೆನೆ ಸಲ್ಲದಂಜಿಕೆಪಟ್ಟು ಸೆಡೆಯೆ ನಾನೆ (ಬಧ್ವಪ್ರ. ೪೭-೧೦೩೨). [ಸರಿ$_5$ + ದೊರೆಯ]

**ಸರಿದೋರು** (ಕ್ರಿ). ಸರಿಯೆನಿಸು ; ಯೋಗ್ಯವೆಂದು ತೋರು : ಜಾನಕಮ್ಮನಿಗೆ ತಂದೆ ಮಗನ ಅಪೇಕ್ಷೆ ಸರಿದೋರಲಿಲ್ಲ (ದೂಟಟ್ಟ. ೨೪). [ಸರಿ$_5$ + ತೋರು (< ತೋಱು)]

**ಸರಿದ್ವರ** (ನಾ). = ಸರಿತ್ಪತಿ : ಸರಿದ್ವರನಂತೆ ರತ್ನಾಕರಂ ದಿವಾಕರನಂತೆ ನಿರ್ದೋಷಂ . . . ಎಂದು ಧರ್ಮಜನ ಧರೆ ಪೊಗಳುತಿರೆ (ಜೈಮಿಭಾ. ೨-೧೩). [ಸಂ. ಸರಿದ್ವರಾ]

**ಸರಿನೂಲು** (ನಾ). ಚಿನ್ನದ ಸೂತ್ರ, – ಎಳೆ : ದೃಢಭಾವವೇ ತಕ್ಕವೆಡೆಗುಡದೆ ಬಲಿತವನ ನಡೆನುಡಿಯ ಬಗೆದ ಸರಿನೂಲಿನಂತೆ ಮೃಡನೊಳು ತೊಡಂಕಿ ಬಿಡದಡರ್ದುದು (ಸಾನಂಚ. ೧-೬೯). [ಸರಿ$_5$ + ನೂಲು$_2$ (< ನೂಲ್$_2$)]

**ಸರಿನೇಣು** (ನಾ). (ಎಳೆದರೆ ಬಿಗಿದುಕೊಳ್ಳುವ) ಸರಗಂಟಿರುವ ಹಗ್ಗ ; ಸರಿಗುಣಿಕೆಯ ಹಗ್ಗ : ಉಗಿವ ಸರಿನೇಣುಗಳ ಕೈಗುಂಡುಗಳ ಕವಣೆಯ ಲಾಡಿ

ಕರವಾಳುಗಳ ಜೋಡಿಸಿ ಜೋದರಡರಿದರಂದು ಬೊಬ್ಬಿಱಿದು (ಕುಮ್ಮಾದ್ರೋ. ೩-೫).

[ಸರಿ$_1$ + ನೇಱು (< ನೇಱ್$_1$)]

**ಸರಿನೋಡು** (ಕ್ರಿ). ೧. ಪರೀಕ್ಷಿಸಿ ನೋಡು ; ಒರೆಹಚ್ಚಿ ನೋಡು : ಅಮರ್ದಿನಿದನಿದಱಿನಿದನೆಲೆಯಮರರೆ ಸರಿನೋಳ್ಪುದು (ರಾಜಶೇ. ೨-೪೮). ೨. ಮೇಲ್ವಿಚಾರಣೆ ಮಾಡು ; ಪರಿಶೀಲಿಸು : (೬). [ಸರಿ$_5$ + ನೋಡು]

**ಸರಿನ್ನಾಥ** (ನಾ). ೧. = ಸರಿತ್ಪತಿ : ಅಕೃತ್ರಿಮಚೈತ್ಯಾಲಯಂಗಳನಖಿಲಜಗತ್ಪಾವನ ಸರಸ್ಸರಸೀಸರಿನ್ನಾಥತೀರ್ಥಜಲಂಗಳಿಂದಂ . . . ಅರ್ಚಿಸಿ (ಆದಿಪು. ೨-೩೨ ವ). ೨. ವರುಣ: ಅಮರನಾಥ ಮಹಿಷನಾಥ ಸರಿನ್ನಾಥ ಧನನಾಥಸನಾಥಮಪ್ಪ ದಿಕ್ಪಾಲರ ಕೇಳೀಪ್ರಾಸಾದಂಗಳಿಂದಂ (ಅಜಿಪು. ೭-೨೦ ವ). [ಸಂ.]

**ಸರಿಪಡಿಸು** (ಕ್ರಿ). ತಿದ್ದು ; ನೇರ್ಪಡಿಸು : ಈ ನ್ಯೂನತೆಯನ್ನು ಸರಿಪಡಿಸಲು ಊಟಮಾಡುವವರೇ ಇಕ್ಕಿಕೊಳ್ಳುವುದು ಒಳ್ಳೆಯ ದಾರಿ (ಆಡುಸಾ. ೧೨೦) ; ತಪ್ಪನ್ನು ಸರಿಪಡಿಸುವುದಕ್ಕಾಗಿ ನಾನು ಹಿಂದಿನದೆಲ್ಲ ನೆನಸಿಕೊಳ್ಳುತ್ತಿದ್ದೇನೆ (ಪುನರು. ೧೯೭).

[ಸರಿ$_5$ + ಪಡು$_1$ + - ಇಸು$_3$]

**ಸರಿಪಾಲು** (ನಾ). ಸಮವಾದ ಭಾಗ : ಅಱಿತಂಗೆ ಅಱುವತ್ತು ಮಱಿತಂಗ ಮೂವತ್ತು ಬರೆವಂಗೆ ರಾಜ್ಯ ಸರಿಪಾಲು (ಸರ್ವಜ್ಞ. ೯೮೫) ; ಇಬ್ಬರಿಗೂ ತನೆಯಲ್ಲಿ ಸರಿಪಾಲು ಬರಬೇಕಲ್ಲವೆ? (ಕಪವು. ೨-೫೪). [ಸರಿ$_5$ + ಪಾಲು$_2$ (< ಪಾಲ್$_2$)]

**ಸರಿಬರ್** 'ಸರಿವರ್' ನೋ.

**ಸರಿಬರಿ, ಸರಿವರಿ** (ನಾ). ಸಮಾನ ; ಸರಿಜೋಡಿ : ಮಹಾಹವವೀಗ ಸರಿಬರಿಯಾಯ್ತು ಬಂದುದು ವಾಸಿಯೆಂದಿರಲೆ (ಕುಮ್ಮಾಕ. ೨೨-೪೨) ; ಒಂದೆರಡಾಟವ ರಾಯಗೆಲಿದ ಮತ್ತೊಂದಾಟ ಸರಿಬರಿಯಾಯ್ತು (ನಾಗಕು. ೯-೧೦೮) ; ತಗುಳುಮಗುಳಾಗಿ ತಾಗುವರೊಮ್ಮೆ ಸರಿಬರಿಯೊಳು ತಿದ್ದಿ ತುಡುಕುವರೊಮ್ಮೆ (ಜೈಮಿಭಾ. ೨೨-೨೯). **ಸರಿವರಿ** : ಹರಿಣಾಕ್ಷಿ ಕೇಳಾ ಮಗಳ ಯೋಗಕ್ಷೇಮವು ಸರಿವರಿಯಾಗಿಹುದು (ಜನರಾ. ೮-೯೭).

[< ಪ್ರಾ. ಸರಿಭರೀ]

**ಸರಿಬರು** 'ಸರಿವರ್' ನೋ.

**ಸರಿಬಿತ್ತರಿ** (ನಾ). ಮಲ್ಲಯುದ್ಧದ ಒಂದು ಪಟ್ಟು, – ವರಸೆ : ಭುಜದಂಡಗಳಿಂದ ಒಬ್ಬರಿಗೊಬ್ಬರು ಸುತ್ತಿಕೊಂಡು ಸರಿಬಿತ್ತರಿಗಳಿಗೆ ಹೊಕ್ಕು ಮತ್ಸರದಿಂದ ಭೂಮಿಯಲ್ಲಿ ಕೆಡಹಿಸಿ (ಕೃವಾಸ. ೩೯). [← ತೆಲು. ಸರಿಬಿತ್ತರಮು]

**ಸರಿಬೀಳು** (ಕ್ರಿ). ೧. ಯೋಗ್ಯವಾಗು ; ಉಚಿತವಾಗು : (೬). ೨. ಏಕಕಾಲದಲ್ಲಿ ನಡೆ, – ಸಂಭವಿಸು : (೬). ೩. ಒಪ್ಪಿಗೆಯಾಗು ; ಸರಿಯೆಂದು ತೋರು : ಅವರ ಕಾಲದ ನಡತೆಗಳೆಲ್ಲ ಈಗ ನಮಗೆ ಸರಿಬೀಳವು (ಮುಂಬಯಿ. ೪-೧೯೧); ಪದ್ದಕ್ಕನನ್ನು . . . ಕೋಣೆಯಲ್ಲೆ ಇರುವಂತೆ ಒತ್ತಾಯಿಸಿದೆ. ಆಕೆಗದು ಸರಿಬೀಳಲಿಲ್ಲ (ದೇವಹಂ. ೮೭).

[ಸರಿ$_5$ + ಬೀಳು$_1$ (< ಬೀೞ್$_1$)]

**ಸರಿಬೆಸ$_1$** (ನಾ). ಸಮಸಂಖ್ಯೆಯ ಹಾಗೂ ಅಸಮಸಂಖ್ಯೆಯ ಹುಣಸೆಬೀಜ, ಅಡಿಕೆ ಅಥವಾ ಹಣವನ್ನು ಇಟ್ಟುಕೊಂಡು ಆಡುವ ಒಂದು ಬಗೆಯ ಜೂಜಾಟ : ಲೆತ್ತ ಪಗಡೆ ರಾಯಬೊಗರಿ ಸೊಲ್ಲೆಹ ಬಾರುಗುತ್ತದೊಪ್ಪಿಯ ಸರಿಬೆಸದಿ ವಿತ್ತನಾಶವ ಮಾಡುವ ಜೂಜುಗಾಱರ ಮೊತ್ತವಿರ್ದುದು ಮನೆಮನೆಗೆ (ಮೋಹತ. ೨೦-೨೫) ; ಸರಿಬೆಸದಾಟಮನೇಂ ಕೇಸರಿಯೊಡನಾಡಿದರುಮೊಳದೆ (ವೃಷವಿ. ೧೩-೩೪); ಜೀವರತ್ನಗಳಿಂದ ಸರಿಬೆಸಗಳಾಡುವರು (ಮಲ್ಲಾರಿ. ೪-೧೩).

[ಸರಿ$_5$ + ಬೆಸ$_2$. / ತೆಲು. ಸರಿಬೇಸುಲು = ಒಂದು ಬಗೆಯ ಮಕ್ಕಳ ಆಟ]

**ಸರಿಬೆಸ$_2$** (ನಾ). (?) : ತುರಗದುರವಣೆಯ . . . ಹರಿದು ಸರಿಬೆಸನಾಗಿ ಖಂಡಿಸುತ (ಇಹರ. ದೇ. ೪೨-೧೭) ; ಕೂರಸಿಯಿಂ ತಲೆ ಪಾಱೆ ಬೀಳ್ವಿನಂ ಸರಿಬೆಸನಾಗಿ ಪೊಯ್ಯೆ (ಗಿರಿಕ. ೭-೭೧) ; ಕಮ್ಮಕಮ್ಮಗೆ ಕಂಪು ಸರಿಬೆಸನಾಗಿ ತೆಗೆದ ಕಂಗಳ ಸುರರಾಲಿಸಿದರೆ ದೃಷ್ಟಿ ಮುಗುಳ್ವಂತೆ ರಾಗದೋಱಿದರು (ಭರಚ. ೧೩-೩೨). [?]

**ಸರಿಭಾಗ** (ನಾ). = ಸರಿಪಾಲ್ : ಆ ಗಿರೀಂದ್ರನಿವಾಸಿಗಳ ಸರಿಭಾಗಧನವನು ಕೊಂಡು ಬಳಿಕ ಮಹಾಗಜಾಶ್ವನ ಸೂಱೆಗೊಂಡನು (ಕುಮ್ಮಾಸ. ೩-೨೪) ; ಆಯಗಳ ತಿದ್ದಿ ರಾಯರಿಗೆ ಸರಿಭಾಗ ಗೂಡೆಯಿಂದಳೆದಿತ್ತು (ನವಮೋ. ೨-೪೨). [ಸರಿ$_5$ + ಭಾಗ]

**ಸರಿಮಳೆ** 'ಸರಿವಱೆ' ನೋ.

**ಸರಿಮಳೆಗಱೆ** 'ಸರಿವಳೆಗಱೆ' ನೋ.

**ಸರಿಮಾತು** (ನಾ). ನೇರವಾದ ಮಾತು : ಅಱಿಯದೂರೊಳಗೆ ಇರ ಹೊಲ್ಲ ದೊರೆಗಳಿಗೆ ಸರಿಮಾತು ಹೊಲ್ಲ (ಸರ್ವಜ್ಞ. ೭೨೩). [ಸರಿ$_5$ + ಮಾತು$_1$]

**ಸರಿಮಿಗಿಲ್, ಸರಿಮಿಗಿಲು** (ನಾ). ೧. ಒಂದು ವಸ್ತುವಿಗಿಂತ ಮತ್ತೊಂದು ವಸ್ತು ಅಥವಾ ಒಬ್ಬ ವ್ಯಕ್ತಿಗಿಂತ ಮತ್ತೊಬ್ಬನು ಮೇಲಾಗಿರುವುದು : ನಾನಾವಿಧಾನದಲೊದಗಿ ಸರಿಮಿಗಿಲೆನಿಸಿದನು ಭೀಷ್ಮ (ಕುಮ್ಮಾಭೀ. ೯-೪೫) ; ಆರು ಹೀಣೋತ್ತಮರು ಸರಿಮಿಗಿಲಾರು ಸತ್ವದೊಳು (ತೊರರಾ. ೧-೧೩-೧೪) ; ಚಳಚಳಿಕೆಯಿಂದೆ ಸಲೆಸಂದು ಕಾದಿದರೊಮ್ಮೆ ಸಾತ್ಯಕಿ ಸುಧನ್ವರೋರೊರ್ವರ್ಗೆ ಸರಿಮಿಗಿಲೆನೆ (ಜೈಮಿಭಾ. ೧೨-೪೮). **ಸರಿಮಿಗಿಲು** : ೧. ಜಗದೊಳಪಾಂಸುಲೆಯರ ಚರಿತಕೆ ಸರಿಮಿಗಿಲಿಲ್ಲ ಮಿಕ್ಕ ಧರ್ಮದೊಳು (ಹದಿಬ. ೨-೨೦). ೨. ಅತಿಶಯ ; ಹೆಚ್ಚುಗಾರಿಕೆ : ರತಿಗಲಗಣಸು ರಂಭೆಗೆ ಸರಿಮಿಗಿಲು ಭಾರತಿಗೆಕ್ಕೆತಕ್ಕೆ ಸುರಪನ ಸತಿಗೆ ಹೊಯ್ಕುಯ್ಯೆನಲಾ ಸುರುತಾಳನ ಸುತೆ ಮೆಱೆದಳು ಚೆಲ್ವಿನಿಂದ (ಕುರಾನಾ. ೧೭-೩೭). [ಸರಿ$_5$ + ಮಿಗಿಲ್]

**ಸರಿಮಿಗಿಲು** 'ಸರಿಮಿಗಿಲ್' ನೋ.

**ಸರಿಯಾಳು** (ನಾ). ಸಮಾನಯೋಗ್ಯತೆಯುಳ್ಳ ವೀರ ; ಸರಿಬಂಟ : ಆಳುತನದ ದೊರಾರತನ ಸರಿಯಾಳಿನಲಿ ಸೆಣಸಾಡೊಡೊಳ್ಳಿತು (ಕುಮ್ಮಾದ್ರೋ. ೧-೨೭).

[ಸರಿ$_5$ + ಆಳು$_3$ (< ಆಳ್$_3$)]

**ಸರಿಯಿಕ್ಕು** (ಕ್ರಿ). ಸಮಾನವೆಂದು ಪರಿಗಣಿಸು ; ಸರಿಗಟ್ಟು : ಲೆಕ್ಕಿಸಲು ಗಂಗಾಂಬಿಕೆಯ ವಸ್ತ್ರಕ್ಕೆ ಮೇಣಾವಂಬರಂ ಸರಿಯಿಕ್ಕಬಾರದು ಮೂಜಗದೊಳು (ಬಸವು. ೧೧-೨೨).

[ಸರಿ$_5$ + ಇಕ್ಕು]

**ಸರಿಯಿಡು** (ಕ್ರಿ). = ಸರಿಯಿಕ್ಕು : ಧರೆಯೊಳಿಂತಪನ್ನದಾತರ ಸರಿಯಿಡುವರಾರಯ್ಯ (ಬಸವು. ೨೪-೨೭). [ಸರಿ$_5$ + ಇಡು$_1$]

**ಸರಿಯಿದಿರು** (ನಾ). ಸಮಾನವಾದ ಪ್ರತಿಶಕ್ತಿ ; ಸರಿಜೋಡಿಯಾದ ವಿರೋಧಿ: ಹೊಗೆಯ ಹೊಯ್ಲಿನ ಚಂಡತರದೈನಕ್ಕೆ ಸರಿಯಿದಿರಿಲ್ಲವೆಂದೆನಲು . . . ಉದ್ದಂಡ ಭೂತ ವಿಪಿನಕೆ ಸಡೆದುದು ಪಾಂಡವಾಶ್ರಮಕ (ಕುಮ್ಮಾಅ. ಓರಿ. ೨೫-೧೯).

[ಸರಿ$_5$ + ಇದಿರು (< ಇದಿರ್)]

**ಸರಿಯಿಸು, ಜರಿಯಿಸು, ಜರಿಸು, ಸರಿಸು** (ಕ್ರಿ). ೧. ಜರುಗಿಸು ; ಸರಿಯುವಂತೆ ಮಾಡು ; ಕದಲಿಸು : ಹಿಂಭಾಗಕ್ಕೆ ಕೋಲನ್ನು ಸರಿಯಿಸಿದರೆ ಭೂತಕಾಲದೆಡೆಗೆ ತೆರಳುವುದು (ಕಾಲಯಾ. ೧೧). **ಜರಿಯಿಸು** : ೨. ಕುಸಿಯುವಂತೆ ಮಾಡು ; ಕೆಡಹು: ನೆಲಗನ್ನದಿಂ ಸಲವಕ್ಕೆ ಲಕ್ಕೆತಱಿದಿಂ ಕಾದುವರೆರ್ದೆ ಬಿಕ್ಕನೆ ಬಿರಿಯೆ ಕೋಂಟೆಯಂ ಜರಿಯಿಸಿಯುಂ (ಪಾರ್ಶ್ವಪು. ೩-೧೪೧ ವ). **ಜರಿಸು** : ೨. ಆನೆಯ ಹಿಂಡು . . . ಕುಣಿಯ ಮಗ್ಗುಲಿನ ಮಣ್ಣನ್ನು ತುಳಿದು, ಜರಿಸಿ, ಬಿದ್ದ ಆನೆಗೆ ಸೊಂಡಿಲು ಕೊಟ್ಟು, ಎಳೆದು, ಪಾರುಮಾಡಿಯೂ ಹೋಗಿದ್ದುವು (ಕುಡಿಹೂ. ೧೧೭). ೩. ಹೀಯಾಳಿಸು; ನಿಂದಿಸು : ಹೆತ್ತ ಮಾತಾಪಿತೃಗಳನು ಜರಿಸದಿರಿ (ಜನರಾ. ೧೧-೨೮). **ಸರಿಸು** : ೧. ಲಕ್ಷ್ಮಣ ತೆರ ಸರಿಸುತ್ತಲಿದ್ದಾನೆ (ಸ್ವದರ್ಶಿ. ೩೩) ; ಸುರೇಶ . . . ಕಿಡಕಿಯ ಪರದೆಯನ್ನು ಸರಿಸಿ ಹೊರಗೆ ನೋಡಿದ (ಆಳೋಲೀ. ೮೭). ೪. ತಳ್ಳು ; ನೂಕು : ಕುರುಳ್ಗಳಂ ಸರಿಸು ಸ್ವೇದಮನೊರಸು (ಚೆಬಪು. ೧೧-೬೦). ೫. ಸೆಕ್ಕಿಸು ; ಅಳವಡಿಸು : ದಂತಿಗಳ ಹೆಗಲಲಿ ನಿಡುನೊಗನ ಕಟ್ಟಿಪರು ಕಿವಿಯಲಿ ಕೀಲುಗಳ ಸರಿಸಿ ಜಡಿವ ಗುಳನನು ಹಾಯ್ಕಿ ಬೀಸಿದರು (ಕುಮ್ಮಾದ್ರೋ. ೮-೪೫). [ಸರಿ$_1$ + - ಇಸು$_3$]

**ಸರಿರ** 'ಶರಿರ' ನೋ.

**ಸರಿರಾಜ್ಯ** (ನಾ). ಸಮಪಾಲು ರಾಜ್ಯ : ಅಱಿಯದವರೊಡನಾಡಿ ಸರಿರಾಜ್ಯವಾಳ್ವದಕಿಂದ [ಪಾಠಾಂ. ಸರಿಯಾಳುವದಕಿಂದ] ಅಱಿಕೆಯುಳ್ಳವರ ಒಡನಾಡಿ ಆಗಲು ಸೆಱೆಯಿಹುದೆ ಲೇಸು (ಸರ್ವಜ್ಞ. ೮೦೪). [ಸರಿ$_5$ + ರಾಜ್ಯ]

**ಸರಿರಾತ್ರಿ** (ನಾ). ನಟ್ಟಿರುಳು ; ಮಧ್ಯರಾತ್ರಿ : ಸರಿರಾತ್ರಿಯಾಗಿದ್ದರೂ . . . ಒಂದು ಪತ್ರವನ್ನು ಬರೆದಳು (ಹೂಬಿಸಿ. ೧೩) ; ಭಟ್ಟರು . . . ಮನೆ ತಲುಪಿದಾಗ ಸರಿರಾತ್ರಿಯಾಗಿ ಹೋಗಿತ್ತು (ಜೀವರಂ. ೪೦). [ಸರಿ$_5$ + ರಾತ್ರಿ]

**ಸರಿಲ್** (ನಾ). ಒಂದು ಬಗೆಯ ಮೀನು : ಕೆಂಕಲ ಸರಿಲ್ [ಪಾಠಾಂ. ತ್]ಕೊಱವಂ . . . ಬಣ್ಣಮೀನೆನಿಪಿವೆಲ್ಲಂ ಬೀಳ್ವುವಾ ತಾಣದೊಳ್ (ರಾಜಶೇ. ೫-೧೧೫). 'ನಿಱಿಲು$_2$' ಪರಾ. [?]

**ಸರಿಲ** (ನಾ). ನೀರು ; ಸಲಿಲ : ಗಂಗಾಸರಿಲಶೀಕರದಿಂದ ಕೂಡಿರ್ದಂಥ ಮಾರುತನು . . . ಬೆಮರ್ಗಿನ ಪರಿಕರವ ಪರಿಹರಿಸಿ (ರಘುವಂ. ೧೩-೨೦). [ಸಂ.]

**ಸರಿಲಸುಕರಿತನ** (ನಾ). ಸೇನಾಧಿಪತ್ಯ : ಪಿರಿದು ಸಂತೋಷದೆ ಪಾತ್ಸ್ಯಾವು ಖಾನಗೆ ಸರಿಲಸುಕರಿತನವಿತ್ತು ತುರಗದಳವ ಕೂಡಿ ಕೊಟ್ಟು ಕರ್ಣಾಟವನಿರದೆ ಸಾಧಿಸು ಹೋಗೆಂದ (ಕಂನಪಿ. ೧೧-೮). [< ಸರಲಷ್ಕರ + - ತನ]

**ಸರಿವದ್ದಿ** (ನಾ). ಒಂದು ಬಗೆಯ ಆಟ : ಸರಿವದ್ದೀ ಚಣಿ ಚಂಡುಗಳಾಡುವ (ಶ್ರೀಕೃಪಾ. ೫೯). [?]

**ಸರಿವರ್, ಸರಿಬರ್, ಸರಿಬರು** (ಕ್ರಿ). ೧. ಸಮಾನವಾಗು ; ಸರಿಜೋಡಿಯಾಗು : ಯುವರಾಜಂ ಕಣ್ಗೊಳಿಸಿದನಿಂದ್ರನೊಳುಪೇಂದ್ರನೊಳ್ ಸರಿವರುತುಂ (ಚಂದ್ರಪ್ರ. ೪-೮೧) ; ಆಳಿಗಬ್ಬಿಗನೊರ್ವಂ ಮಂಜುಳಯುಕ್ತಿಯನೊಂದನೊಂದಿ ಸರಿವರ್ಪನೆಯರ್ಗಳ ಕವಿಗೆ ರನ್ನಮೊಂದಂ ತಳೆದಹಿ ರತ್ನಾಕರಕ್ಕೆ ಸರಿವಂದಪುದೇ (ರಾಜಶೇ. ೧-೨೪). **ಸರಿಬರ್** : ೧. ಭೂಗಗನಪಾತಾಳದರಮನೆಗಳಿದಱೊಡನೆ ತೂಗೆ ಸರಿಬಾರವು (ಚೆಬಪು. ೫-೫೨) ; ಕಂಡು ಬಲ್ಲೆವು ಕಾವನರಸಿಗೆ ಸರಿಬಪ್ಪ ಪುಂಡರೀಕಾಕ್ಷಿಯರುಗಳ (ಕಂನಪಿ. ೧೦-೧೫) ; ಕಱುತ್ತೆ ಬಿಗಿದ ವಜ್ರಿಯ ವಜ್ರದ ಬಿಱುಪೊಯ್ಲ ರವಕ್ಕೆ ಬಱಸಿಡಿಲ್ ಸರಿಬರ್ಕುಂ (ರಾಜಶೇ. ೮-೧೧೫). ೨. ಒಪ್ಪಿಗೆಯಾಗು ; ಸರಿಬೀಳು : ಸರಿಬಂದವನ ಕಂಡೊಡೆ . . . ನೆಱೆಯಂತ ರಂಗವಿಡಿದು ಕೂಡಿದಲ್ಲದೆ ಪಿರಿದು ಸ್ಮರಿಸರು (ಕಂನಪಿ. ೧೦-೨೮). **ಸರಿಬರು** : ೨. ನಿನಗೆ ಸರಿಬಂದದ್ದು ಮಾಡು (ಮುಂಬಯಿ. ೪-೨೦೦) ; ಇವನ ನಡೆಯು ಸತ್ಯಕೀರ್ತಿಯೆಂಬ ಒಬ್ಬ ವರ್ತಕನಿಗೆ ಸ್ವಲ್ಪವೂ ಸರಿಬಾರದಿದ್ದಿತು (ಕವಿಕ. ೧). ೩. (ಲೆಕ್ಕ ಮುಂತಾದವುಗಳಂತೆ) ತಪ್ಪಿಲ್ಲದಿರು ; ಸರಿಯಾಗು : ಈ ಲೆಕ್ಕ ಸರಿಬರುವವರೆಗೂ ಮಾಡು (ರೂಢಿ).

[ಸರಿ$_5$ + ಬರ್ (< ವರ್)]

**ಸರಿವರಯ** 'ಸರಿವರೆಯ' ನೋ.

**ಸರಿವರಿ** 'ಸರಿಬರಿ' ನೋ.

**ಸರಿವರೆಯ, ಸರಿವರಯ, ಸರಿಹರೆಯ** (ನಾ). ೧. ಸಮವಾದ ಪ್ರಾಯ ; ಓರಗೆ : ತನ್ನೊಡವೆರಸಿ ಧೂಳಾಟಗಳನಾಡುವ ಸರಿವರೆಯದಾ ಗೋಪಕುವರರ ಕೂಡಿಕೊಂಡು (ಸಾಳ್ವಭಾ. ೨೧-೪೭). ೨. ಪ್ರೌಢವಯಸ್ಸು : ಓದುಗರ ಇನ್ನೊಂದು ವರ್ಗ ಸರಿವರೆಯದವರದು ಹಾಗೂ ಕಿರಿಯರದು (ಸಂಶೋಧ. V, ಅಂಕೆ). **ಸರಿವರಯ** : ೧. ಸ್ವಲ್ಪ ಗುಣ ಕಡಿಮೆ ಬಿದ್ದು ನಪಾಸಾಗಬೇಕು . . . ಸರಿವರಯದವರಲ್ಲಿ ನಾಚಿಕೆಗೇಡು (ಭೂಮಿತಾ. ೧೦). **ಸರಿಹರೆಯ** : ೧. ನನ್ನ ಸರಿಹರೆಯದ ರಮಣಿಯರು . . . ಚೆನ್ನ ಕನ್ನಡಿಯೆನಿಪ ಮಕ್ಕಳ ನೋಡಿ ಪಾಡುವರು (ಸಾಳ್ವಭಾ. ೩-೧೧).

[ಸರಿ$_5$ + ಪರೆಯ$_2$ (< ಪರಯ)]

**ಸರಿವಳೆ** 'ಸರಿವೞೆ' ನೋ.

**ಸರಿವಳೆಗಱೆ, ಸರಿಮಳೆಗಱೆ** (ಕ್ರಿ). ಧಾರಾಕಾರವಾದ ಮಳೆಯನ್ನು ಸುರಿಸು : ವರಮಹಾರಥರಿರದೆ ತಾಗಿದರ್ ಕೂಗಿದರ್ ಸರಳ ಸರಿವಳೆಗಱೆವುತೆ (ಚೆಬಪು. ४೦-೨೨). **ಸರಿಮಳೆಗಱೆ** : ಸುರದುಂದುಭಿಯ ಮೊಳಪಲರಲ ಸರಿಮಳೆಗಱೆಯಲುಜ್ಜುಗಿಸು ವಮರರಿಂ (ಭಾವಚಿಂ. ೯-೨೯). [ಸರಿವಳೆ (< ಸರಿವೞೆ) + ಕಱೆ$_1$]

**ಸರಿವೞೆ, ಸರಿಮಳೆ, ಸರಿವಳೆ** (ನಾ). ಧಾರಾಕಾರವಾದ ಮಳೆ ; ಎಡೆಬಿಡದ ಮಳೆ : ಎಡೆಯುಡುಗದೆ ಖಚರರ ಬಿಲ್ವಡೆ ಕಡುಕೆಯ್ದುಸುವ ಕಣೆಗಳರ್ಕನ ತೇಜಂ ಕಿಡೆ ಹರಿಯ ಮೇಲೆ ಸುರಿದುವು ಬಡಬಾಗ್ನಿಯ ಮೇಲೆ ಸುರಿವ ಸರಿವೞೆಗಳವೊಲ್ (ಪಂರಾಮಾ. ೯-೬೧) ; ಪಯೋಧಾರಾರುತಿಯಿಂ ಪೊದಟ್ದು ಬೀಸುವ ಜಂಝಾಮಾರುತ ರುಚಿಯಿಂ ಭುವನಮದೋರಂತಿರೆ ಕಿವುಡುವಟ್ಟುದಾ ಸರಿವೞೆಯೊಳ್ (ಕುಸುಮಾ. ೬-೨೯) ; ಬೇಱೆವೇಱೆ ಭಾವರಸದ ಸಿರಿಯ ಸರಿವೞೆಯ ಕುಡಿಮಿಂಚಿನ ಕುಡಿಗಳಂತೆ ನರ್ತಿಸುವ ಮೂವತ್ತಿರ್ಬರ್ದೇವನರ್ತಕಿಯರೊಳು (ಅನಂಪು. ೧೦-೨೩ ವ). **ಸರಿಮಳೆ** : 'ಸರಿಮಳೆಗಱೆ' ಪರಾ. **ಸರಿವಳೆ** : ಮಳೆಗಾಲದೊಳಾಗಳುಮಳೆಯದು ಬೆಟ್ಟದ ಸರಿವಳೆ (ಎಕ. VIII, ಸಾಗರ. ೧೯೯-೪೯ ; 1042) ; ಇದೆ ಸಮಯವೆಂದನಂಗನರಲ ಸರಲ ಸರಿವಳೆಯಂ ಕಱೆಯೆ (ನಂಬಿರ. ೧೨-೫೫) ; ಸಾಯಕದ ಸರಿವಳೆಯ ಸುರಿದನು ಭಾನುಸುತ ಮುಳಿದು (ಕುವ್ಯಾಕ. ೧೧-೫). [ಸರಿ$_7$ + ಮೞೆ]

**ಸರಿವು, ಸರವು, ಸರಹು, ಸರು$_1$, ಸರುವು$_1$, ಸರುಹು$_1$** (ನಾ). ೧. (ಮಳೆಯ) ಧಾರೆ ; ಸುರಿತ : ಸುರಿವ ರಕುತದ ಸರಿವಿನಲಿ ನೆಱೆ ನನೆದು ಭೂರಿಶ್ರವನು . . . ಪಾರ್ಥನ ನೋಡಿ (ಕುವ್ಯಾದ್ರೋ. ೧೪-೧೪). ೨. ಹಳ್ಳ ಮೊದಲಾದುವುಗಳ ಪ್ರವಾಹವು ಹರಿದು ಉಂಟಾದ ಕೊರಕಲುಜಾಡು,– ದಾರಿ : ಆ ಕಟ್ಟಿನ ಸರಿವು ಮೊದಲಾಗಿ (ಎಕ. VIII, ಸೊರಬ. ೧೪೦-೮೮ ; 1198) ; ಶ್ವೇತಪರ್ವತದ ಪಾದತಟದ ಸರಿವು ದರಿವಿನ ಹಾಲೊಱತೆ ಸುರಿತಪ್ಪಂತೆ ಹಾಲ ಹಳ್ಳವೋಲಗದ ನಡುವೆ ಮಡುಗಟ್ಟಿ ಪರಿದು ಪೊಱಸೂಸೆ (ಬಸರ. ೧೦-೭೨). **ಸರವು** : ೨. 'ಸರವುಗಟ್ಟು' ಪರಾ. ೩. ನೀರಿನ ಹರಿವು, – ಪ್ರವಾಹ : ಮಳೆನೀರಿನ ಸಣ್ಣ ಸಣ್ಣ ಸರವುಗಳಲ್ಲಿ ಸಹ ಸೂಸುಮಣ್ಣು ಬೆರೆತು ಆ ನೀರು ರಾಡಿಯಾಗಿರುತ್ತದೆ (ಮುಂಬಯಿ. ೬-೧೭೮) ; ಕೊಳ್ಳಗಳ ಸರವುಗಳ ದಾಟಿ ಗಿರಿಯೇರಿ (ಕನ್ನಚಾ. ೩೩೦). **ಸರಹು** : ೨. ಆ ಮಧ್ಯದಲ್ಲಿ ಹಳ್ಳ ಸರಹು (ಎಕ. XII. ತಿಪಟೂ. ೯-೭೧ ; 1388). **ಸರು$_1$** : ೧. ಒಂದು ದೊಡ್ಡ ಸರುವೇ ಬಂದದ್ದರಿಂದ 'ಪ್ಯಾಶೆಂಜರ' ಜನರೆಲ್ಲ ಸಿಕ್ಕತ್ತ ಚದರಿಬಿಟ್ಟರು (ಮುಗಿಮ. ೩) ; ಮಂಜಲ್ಲ ಮಳೆಯ ಸರುವಂದೆ (ಕನ್ನಚಾ. ೬). ೨. ತರತರದಿಂದೆ ತೋರ್ಪ ಸರುವಿಂ [ಪಾಠಾಂ. ಸರಿಯಿಂ] ದರುವಿಂ ಪರಿವೊಜ್ಜರಂಗಳಿಂ (ಗಿರಿಕ. ೧-೭೦); ಸರು[ಪಾಠಾಂ. ರಿ]ಗಳಿಂ ದರಿಗಳಿಂ ಹಳ್ಳದಿಂ ಕೊಳ್ಳದಿಂ (ಚೆಬಪು. ೫೬-೨೩) ; ನಾನು ಒಂದು ಸರು(ಸಣ್ಣಕಣಿವೆ)ವನ್ನು ಇಳಿದು ಮತ್ತೊಂದು ದಿಬ್ಬವನ್ನು ಏರಿದೆನು (ಮಲೆಚಿ. ೭). **ಸರುವು$_1$** : ೧. ಇಂಥಾ ಮಳೆ ಯಿಂದೇನಾಗುವದು? ಬಂದರ ಒಂದು ಸರುವು ಮಾತ್ರ ಬಂದೀತು (ಮುಂಬಯಿ. ೫-೫೦); ಇನ್ನೊಂದು ಸರುವು ಚಲೋ ಮಳೆಯಾಗದೆ ಇರದು (ಅಂಬಿಕೆ. ೧೪). ೨. ತೆಂಕಣ ಸರುವಿನೊಳಗೆ ೨೧ ಮಾರು ಗಳೆಯಲ್ಲಿ ಕಂಬ ೨೫ನು ಬ್ರಂಮ್ಮಪುರಿಯಾಗಿ ಧಾರಾಪೂರ್ವ್ವಕವಾಗಿ ಕೊಟರು (ಎಕ. VII(S), ಶಿಕಾರಿ. ೩೭೦-೫ ; ಸು. 1300) ; ಬೇಡಂ ತುಟ್ಟಿಸಿ ನೀರಂ ನೆಳಲಂ ಬೆಟ್ಟದ ಸರುವಿನೊಳು ನೋಡುತಿರಲೆಲ್ಲೆಡೆಯೊಳ್ (ನನ್ನಚಾ. ೫-೯೮). ೩. ಭೀಮೆಗೆ ಕೂಡುವ ಸರುವುಗಳು, ಹನ್ನೆರಡು ತಿಂಗಳೂ ಹರಿಯುತ್ತವೆ (ಕಭಾಗ. ४೩೫); ಮಳೆಯಿಂದುಂಟಾದ ಸರುವುಗಳು ಹರಿಯುವ ಸಪ್ಪಳ ಮಾತ್ರ ಈಗ ಕೇಳತೊಡಗಿತು (ಗ್ರಾಮಾಯ. ೨೮೮). **ಸರುಹು$_1$** : ೨. ವಿಠಪಂಗಳಿಗೆ ನಿಂಮ ವೂರ ಮದಿಕಕೆ ಸಲುವ ಹರಯದ ಹಂದಿಮುನಿಯ ಸರುಹಿನ ಭೂಮಿಯನು ಸರ್ವಮಾನ್ಯವಾಗಿ ಧಾರೆಯನ್ನೆಱೆದು ಕೊಂಡ ವುಡುಗೊಱೆ ಗ ೨ ಎರಡುಹೊನ್ನು (ಮೈಆರಿ. ೧೯೩೧, ೬४-೧೧ ; 1396). ४. ಮೊರಡಿ : ಕಲು ಸರುಹ ಸಹ ಬಿಟ್ಟರು (ಎಕ. VII, ಶಿಕಾರಿ. ೧೧४-೩೦; 950?) ; ಪಡುವಲು ಕರಿಯ ಕಲ್ಲ ಸರುಹಿನೊಳಗಣ ದೀಪಮಾಲೆಕಂಭ (ಎಕ. XI, ಹೊಳಲ್ಕೆ. ೯४-೧೦४ ; 1511).

[ದೇ. ‖ ತಮಿ. ಚರಿವು, ಚರುವು ; ಮಲ. ಚರಿವು ; ತೆಲು. ಚಱಿ, ಚಱಿಯ]

**ಸರಿವೊಗು** (ಕ್ರಿ). ಸರಿಸಮವಾಗು : ಇಕ್ಕಿದರು ಗಳಹತ್ತದಲಿ ಸಲೆ ಮಿಕ್ಕು ಸತ್ರಾಣದಲಿ ಮಿಗೆ ಸರಿವೊಕ್ಕು ಹಿಡಿದರು ಬಿನ್ನಣದ ಚೊಕ್ಕೆಯದ ಜೋಡಿಯಲಿ (ಕುವ್ಯಾಸ. ೨-೯೬).

[ಸರಿ$_5$ + ಪೊಗು]

**ಸರಿವೋಗು, ಸರಿಹೋಗು** (ಕ್ರಿ). ೧. ಸರಿಜೋಡಿಯಾಗು ; ಸಮವಾಗು : ಕದನ ಕ್ಷೇತ್ರದೊಳ್ . . . ತಳ್ತು ಕಾದಿದನಾದಂ ಸರಿವೋದನೆಂಬ ನುಡಿ ತಾನಿಲ್ಲೆಂದೊಡೆ (ಪುಷ್ಪಪು. ೩-೧೮). **ಸರಿಹೋಗು** : ೨. ಹೊಂದಿಕೆಯಾಗು ; ಸರಿದೂಗು : ಬಣ್ಣಗಳು ಒಂದಕ್ಕೊಂದು ಸರಿಹೋಗುವುದಿಲ್ಲ (ರೂಢಿ). ೩. ಒಪ್ಪಿಗೆಯಾಗು ; ಮನಸ್ಸಿಗೆ ಬರು : ಮುಷ್ಕರದ ಪ್ರಸ್ತಾಪ ಅವಳಿಗೆ ಸರಿಹೋಗಲಿಲ್ಲ (ರೂಢಿ).

[ಸರಿ$_5$ + ಪೋಗು$_1$ (< ಪೋ$_1$)]

**ಸರಿಸ$_1$** (ನಾ). ೧. ಅಂಕುಡೊಂಕಿಲ್ಲದುದು ; ನೇರವಾದುದು : (೬). ೨. ತಪ್ಪಿಲ್ಲದುದು ; ಸರಿಯಾದುದು : (೬). ೩. ಸರಳತೆ ; ನೇರ ; ಋಜು : ಆಕಾರ ಇರವಿನ ತೆಱನ ಪರಿಹರಿಸಿ ತಾ ಸರಿಸವಾಗಿ ನಿರುತಿಗಳ ನಿಜವನಱಿದು . . . ಇಪ್ಪಾತ ತ್ರಿವಿಧದವನಲ್ಲ (ಸರ್ವವ. ೧೨೨-೬४). ४. ಮುಂಭಾಗ ; ಸಮ್ಮುಖ: ಪಾರ್ಥನ ಸರಿಸದಲಿ ನಿಲುವೆದೆಯ ಬಲುಹುಳ್ಳರನು ದೇವಾಸುರರೊಳಱಿಯೆನು

ಮನುಜರೇನಹರು (ಕುವ್ಯಾಭೀ. ೯-೨) ; ಇಳಿದನು ನಾಕದಿಂ ನಾರದನು ತನ್ನ ನಿವರನ ಸರಿಸದಲಿ (ತೊರರಾ. ೧-೨-೧೭) ; ಆ ಚಕ್ರಮಂ ರುದ್ರನು ಕರದೊಳಗೆ ಪಿಡಿದಾ ಜಲಂಧರನ ಕಂಧರದ ಸರಿಸಕಿಡಲರಿದುದು (ಚಬಪು. ೨೭-೪೦). ೫. ಹತ್ತಿರ ; ಸಮೀಪ : ಆಸುರದ ಗಿರಿಜೆಯುಗ್ರವಿಭಾಸುರತಪಕಂಜಿ ನಭದ ತಪನಂ ನಡೆಯುತ್ತಾ ಸರಿಸಮಂ ಕರಂ ಬಿಟ್ಟೋಸರಿಸಿಯೆ ನಡೆವಂ (ಗಿರಿಕ. ೯-೧೫) ; ದನಿಕರ್ಣಕ್ಕೆಯ್ದಲದಟ ಸರಿಸಕೆ ನಡೆದಂ (ದಶಕು. ೧೩-೬) ; ಸಾವು ಸರಿಸಕೆ ಬಂದ ಮನುಜರಿಗಾವುದೈ ಕರ್ತವ್ಯ (ನಿಭಾಗ. ೨-೧-೨). ೬. ಸಮ ; ಸಾಟಿ ; ಸಮಾನತೆ : "ಜೋಡು, ಸರಿಸ, ತೋಡು, ಓರಗೆ . . . ಸಂಗಡಂ – ಈ ೧೮ ಸಮಾನಕ್ಕೆ ಪೆಸರ್" (ಕಶಸಾ. ೫೯-೨೯೧) ; ಪರ್ವತದ ವಜ್ರದ ಸರಿಸ ಹೋರಟೆ ಕಾಣಲಾದುದು (ಕುವ್ಯಾಕ. ೧೦-೧೫) ; ಹೊಗಳಲೆಣೆಗಾಣೆನು ಪುರಾತನಯುಗದ ವೀರರೊಳಿವರ ಸರಿಸಕೆ (ತೊರರಾ. ೬-೨೫-೧೮). ೭. ಸಮವ . . . ಸರಿಜೋಡಿಯಾದುದು : ಧಾರಿಣಿ ಸರಿಸಮೆನಲು ಬಪ್ಪುದೇ ಬಿಣ್ಪಿನ್ಸಿ (ಎಕ. VII, ಶಿಕಾಂ. ೧೧೪-೨೩ ; 1096) ; ಮಂತ್ರಾಸ್ತ್ರದಲಿ ಮೋಹಿಸಿದ ಸರಿಸಕೆ ಸರಿಸ ವಿಷಮಕೆ ವಿಷಮಗತಿ ಶರಸಾರ ಸಾಳಂಗದಲಿ ರಂಜಿಸಿದ (ಕುವ್ಯಾಕ. ೨೦-೩೪). ೮. ಸಮಾನನಾದವನು; ಸರಿಜೋಡಿಯಾದವನು : ನಿಮ್ಮೊಡನೆ ಸಂಗರಕೆ ಸರಿಸರೆ ನಾವು (ಕುವ್ಯಾಕ. ೪-೩೨) ; ಸರಿಸದವರಿಲ್ಲೆಂದು ಈ ತನಕ ನಾಂ ಭಟರನರಸಿದೆನು ಸಮರಕಂ (ತುರಂಗ. ೬೬-೨೬). ೯. ಯೋಗ್ಯವಾದುದು ; ಉಚಿತವಾದುದು: ಅರಿದೆನಿಸದತಿಬಲನ ಧರ್ಮೋತ್ಕರುಷ ದುರ್ಬಲಯುತನ ಸ್ವೈರಣೆ ಸರಿಸವೆನಿಸದು (ಕುವ್ಯಾಉ. ೩-೨೧). ೧೦. ಓರಣ ; ಅಚ್ಚುಕಟ್ಟು : ಗರುಡನಾಕಾರದಲಿ ಬಲವನು ಸರಿಸ ಮಿಗೆ ಪೋಹಿದನು (ಕುವ್ಯಾದ್ರೋ. ೨-೨೧). ೧೧. ಲಗುಬಗೆ ; ವೇಗ ; ರಭಸ : ಜಣೆದು ಸರಿಸದಲೇಟಿದರೆ ಸಿಡಿಲುಬಿದಂತಾಯಿತ್ತು (ಕುವ್ಯಾಭೀ. ೪-೬೦) ; ಬಿಡೆ ಸರಿಸದಿಂದೋಡಿ ಚಾರಿವರಿದಾಡಿಸುತೆ ಹರಿಣವಾಯುಗಳ . . . ಪೊಡವಿಪಾಲಕನಣುಗರೇಱುತ್ತೆ ವೈಹಾಳಿಯುತ್ಸಾಹಮಂ ತಳೆದರಾಗ (ಭಾವಚಂ. ೮-೧೩). ೧೨. ನಿಯಮ ; ಕಟ್ಟುಪಾಡು : ತಾಳಮಾನ ಸರಿಸವನಱಿಯೆ ಓಜೆಬಜಾವಣೆಯ ಲೆಕ್ಕವನಱಿಯೆ (ಬಸವ. ೪೯೪). ೧೩. ಸಾಲು ; ಶ್ರೇಣಿ : ಸರಲ ಸಂಗಡಿಸಿ ತಿರುವಿಗೆ ಸರಿಸದೊಳೆರ್ದ ಕೊಪ್ಪುರಿಗೆಗಳೆಳನಂದಿರದೆ ನೋಡಿದನು ಬಾದುರನು (ಕುರಾಸಾಂ. ೧೮-೮೪). ೧೪. ಸದರ ; ಸಲುಗೆ : ಸರಿಸದ ಮೇಲೆ ಹಿಡಿಯಹೋದರೆ ಚದುರಂಗದ ಮೇಲೆ ಮಸಿಯ ತೋಱಿದ ಕೂಡಲಸಂಗಮದೇವ (ಬಸವ. ೭೨೪) ; ಕರೆದಪಳೆಂದೊಡಾ ಸುಟಿದಳೆಂದೊಡೆ ಮಾಲೆಯನಿತ್ತಳೆಂದೊಡಾ ಸರಿಸದೆ ಬಾಯ ತಂಬುಲಮನಟ್ಟಿದಳೆಂದೊಡೆ ಮೆಲ್ಲ ಬಾಯ್ಗಳ್ . . . ಅಲಿಪ ಕರ್ಣದೊಳ್ತಗುಳ್ದುರಿಪುವಯಶ್ಕಲಾಕೆಯನೆ ತೆತ್ತಿಸುವರ್ ಪರವೆಣ್ಗೆ ಕೂರ್ಪರಂ (ಅನಂಪು. ೯-೩೭). [< ಪ್ರಾ. ಸರಿಸ./ ಸಂ. ಸದೃಶ./ ಮರಾ. ಸರಸಾ, ಸರಿಸಾ]

**ಸರಿಸ$_2$** (ನಾ). ಗೋಂದು ; ಅಂಟು ; ಸರಿ : (೬).

[← ಪಾರ. ಸರೇಶ್ ; ಹಿಂ. ಸರೇಸ್ ; ಮರಾ. ಸರಸ]

**ಸರಿಸ$_3$** 'ಸರಿಸಂ' ನೋ.

**ಸರಿಸಂ, ಸರಿಸ$_3$** (ಅ). ೧. ಚೆನ್ನಾಗಿ ; ಅಂದವಾಗಿ : ಸರಿಸಂ ಪಸರಿಸುಗುಮಲ್ತೆ ತನುರೋಮಂಗಳ್ (ಅಶ್ವಶಾ. ೫-೧೭). **ಸರಿಸ$_3$** : ೨. ನೇರವಾಗಿ ; ಸರಳವಾಗಿ : ಕಳೆ ತಪ್ಪದೆ ನಿಂದಿರಾದಡೆ ಬಟ್ಟೆ ಸರಿಸ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿಗೆ ಹೋಯಿತ್ತು (ಸಕವ.ಕ. III, ೩.೨೧-೫೯೨). [< ಸರಿಸ$_1$]

**ಸರಿಸಂಗಾತಿ** (ನಾ). ಸಮವಯಸ್ಸಿನ ಸ್ನೇಹಿತ ; ಓರಗೆಯವನು : "ಸ್ನಿಗ್ಧಃ, ವಯಸ್ಯಃ ; ಸವಯಾಃ – ೩ ಸಮಾನವಯಸ್ಸುಳ್ಳ ಸ್ನೇಹಿತನ ಹೆಸರುಗಳು, ಸರಿಸಂಗಾತಿ" (ಸಿದ್ಧಾಂತಿ. ೨೩೮). [ಸರಿ$_5$ + ಸಂಗಾತಿ$_1$]

**ಸರಿಸಂಗೊಳ್** (ಕ್ರಿ). ವೇಗದಿಂದ ಕೂಡಿರು ; ಲಗುಬಗೆಯಿಂದಿರು : ವಾಘೆಯೊಳ್ಸರಿಸಂಗೊಂಡೊಂದೆ ಮೆಯ್ಯೊಳ್ ಸೂಳಱಿದೇಱುವ . . . ಘೋಳಾಯಿಲರ್ (ರಾಜಶೇ. ೬-೧೧ ವ). [ಸರಿ$_1$ + ಕೊಳ್$_1$]

**ಸರಿಸಂಬರಿ** (ಕ್ರಿ). ಚೆನ್ನಾಗಿ ಹರಿ, – ಸೂಸು : ಸರಿಸಂಬರಿದುದು ಜೀರಿಗೆ ಬೆಲ್ಲದ ಪರಿಯಿಂ ಮುಳಿದಿಟ್ಟ ಭಸಿತಮದೆ ಮದುವೆಯವೋಲ್ (ಗಿರಿಕ. ೯-೧೨೦).

[ಸರಿಸಂ + ಪರಿ$_2$]

**ಸರಿಸಪ** 'ಸರುಸಪ' ನೋ.

**ಸರಿಸಮ** (ನಾ). ೧. ಸಮಾನತೆ ; ಸಮತೆ : ಪೊಣರ್ವರ್ . . . ಸರಿಸಮುದೊಳಾ [ಪಾಠಾಂ. ಓರ್ವರಿರ್ದಾರ್] ಕಲಿಗಳು (ಜೈಮಿಭಾ. ೨೩-೨೩). ೨. ಸಮಾನನಾದವನು: ಆಕೆಯ ಕಾಣದ ಕಂಡವರಿಬ್ಬರು ಭಾವಿಸೆ ಸರಿಸಮರಹರು (ಇಂಚಾಪ. ೧೫೦-೩೮).

[ಸರಿ$_5$ + ಸಮ$_3$]

**ಸರಿಸಾಟಿ** (ನಾ). ಸರಿಸಮಾನ ; ಸರಿಜೋಡಿ : ಪರಾಕ್ರಮದಲ್ಲಿ ಇವರಿಗೆ ಸರಿಸಾಟಿಯಿಲ್ಲ (ಮಹಾವಂ. I, ೮೬) ; ಈ ಮೂವರೂ ನಿಮಗೆ ಸರಿಸಾಟಿಯಿಲ್ಲದಿರಬಹುದು (ಬಿರುಗಂ. ೧೮-೨). [ಸರಿ$_5$ + ಸಾಟಿ$_1$]

**ಸರಿಸು** 'ಸರಿಯಿಸು' ನೋ.

**ಸರಿಸೃಪ** (ನಾ). ಹಾವು ಮುಂತಾದ ಹರಿದಾಡುವ ಪ್ರಾಣಿ : ಕುಪಿತಮತಿ ಸಂಜ್ಞಿಯುಂ ಸರಿಸೃಪಮುಂ ವಿಹಗಮುಂ . . . ಪುರುಷನುಂ ನೆಲಸನುಕ್ರಮಕ್ರಮದಿಂದಂ (ಶಾಂತಿಪು. ೬-೧೦೦). [< ಸಂ. ಸರೀಸೃಪ]

**ಸರಿಸೋಣೆ** (ನಾ). = ಸರಿವಟ್ಟೆ : ಸರಳ ಸರಿಸೋಣೆಯನು ಪವನಜಗಿಂಗೆ ಕಱೆದುದು ಕರ್ಣಮೇಘದ ಹೊರಳಿ (ಕುವ್ಯಾದ್ರೋ. ೧೩-೪೩). [ಸರಿ$_7$ + ಸೋಣೆ$_1$]

**ಸರಿಸೋಲ** (ನಾ). ಸಮವಾದ ಅನುರಾಗ, – ಪ್ರೇಮ : ಗಂಡರೊಳು ಸರಿಸೋಲ ಲೇಸು ಪೆಂಡಿರಿಗೆ (ಸೌಮಿಸಂ. ೧೧-೬೦). [ಸರಿ$_5$ + ಸೋಲ]

**ಸರಿಹರೆಯ** 'ಸರಿವರೆಯ' ನೋ.

**ಸರಿಹಸುಗೆ** (ನಾ). ಸಮವಾದ ಭಾಗ : ಪುಷ್ಕರದ ಸರಿಹಸುಗೆಯಲಿ ಮಾನಸೋತ್ತರ ಗಿರಿಯಿಹುದು (ನಿಭಾಗ. ೫-೧೧-೨) ; ಧರೆಯ ಸರಿಹಸುಗೆಯನ್ನಪಹರಿಸಿ ವಿಪಿನದೊಳ್ ನೂಕುವುದಿದಾವ ಧರ್ಮ (ತುರಂಗ. ೭೭-೩೫). [ಸರಿ$_5$ + ಹಸುಗೆ (< ಪಸುಗೆ)]

**ಸರಿಹುದುಗು** (ನಾ). ಸರಿಯಾದ ಹೊಂದಿಕೆ, – ಹೊಂದಾಣಿಕೆ : ಕಾಯವು ಆ ಜೀವನಿಗೂ ನಿನಗೂ ಸರಿಹುದುಗು (ಮೋಳಿಮಾ. ೬೦-೨೪೮) ; ನಿನ್ನ ಅಱಿವು ಎನ್ನ ಆತ್ಮದಲ್ಲಿ ನಿಂದು ಅಱಿವಹನ್ನಕ್ಕ ನನಗೂ ನಿನಗೂ ತತ್ತುಗೊತ್ತು ಗೋರಕ್ಷಪಾಲಕ ಮಹಾಪ್ರಭುಸಿದ್ಧ ಸೋಮನಾಥಲಿಂಗವು ಸರಿಹುದುಗು (ಸಕವ. ಕ. III, ೧೧೯-೨೧೦).

[ಸರಿ$_5$ + ಹುದುಗು$_2$ (< ಪುದುಗು$_2$)]

**ಸರಿಹೊಂದು** (ಕ್ರಿ). ೧. ಯೋಗ್ಯವಾಗು ; ತಕ್ಕುದಾಗು : ನಿನಗೆ ಸರಿಹೊಂದದ ಕೆಲಸವನ್ನು ಮಾಡಲು ಪ್ರಯತ್ನಿಸಬೇಡ (ರೂಢಿ). ೨. ಸಮವಾಗು ; ಸಮಾನವಾಗು: ವಧೂವರರ ಮನೆತನಗಳು ಸರಿಹೊಂದಿದ ನಂತರ ಮದುವೆ ನಿಶ್ಚಯವಾಯಿತು (ರೂಢಿ).

[ಸರಿ$_5$ + ಹೊಂದು$_1$ (< ಪೊರ್ದು)]

**ಸರಿಹೊತ್ತು** (ನಾ). ಅಪರಾತ್ರಿ : ಒಂದುದಿನ ರಾತ್ರಿ ಸರಿಹೊತ್ತಿನಲ್ಲಿ ವಾರಿ ಎಂಬ ಆಳು ಓಡಿಬಂದು . . . ಹೇಳಿದನು (ನೀತಿಚಂ. XV, ೫). [ಸರಿ$_5$ + ಹೊತ್ತು$_1$ (< ಪೊಱ್ತು)]

**ಸರಿಹೋಗು** 'ಸರಿವೋಗು' ನೋ.

**ಸರಿಹೋಲಿಸು** (ಕ್ರಿ). ಸಮಾನವೆಂದು ಭಾವಿಸು : ಹೊಜಿಗ ಮೆಚ್ಚಿದ ಕುಱುಬರಿಗೆ ಕುಱುಬರ ತಂದುಜೆ ಸರಿಹೋಲಿಸಬಹುದು ಅಱಿದೊಳಗಾತ್ಮತತ್ವವ ಮೆಚ್ಚಿ ಸುಖಿಸುವೆಮ್ಮೊಜೆಯಗಾರೆಣೆಯೆನಬಹುದು (ಭರತೇ. ೯-೯೪).

[ಸರಿ$_5$ + ಹೋಲಿಸು (< ಪೋಲಿಸು)]

**ಸರೀಕ** 'ಸರಿಕ' ನೋ.

**ಸರೀಕತನ** 'ಸರಿಕತನ' ನೋ.

**ಸರೀಸೃಪ** (ನಾ). ಹಾವು ಮುಂತಾದ ಹರಿದಾಡುವ ಪ್ರಾಣಿ : ಆ ಸರೀಸೃಪಮುಂ ವಿಹಗಮುಂ . . . ಪುರುಷನುಮುದಯಿಸುಗುಮೇಱುನರಕಂಗಳೊಳಂ (ಸುಕುಮಾ. ೧೧-೫೦) ; ದನುಜನೋ ಗಂಧರ್ವನೋ ಯಕ್ಷನೊ ಸರೀಸೃಪರೂಪ ದಿವಿಜೇಂದ್ರನೊ ನಿಧಾನಿಸಲಱಿಯೆ ನೀನಾರು (ಕುವ್ಯಾಅ. ೧೩-೪೨). [ಸಂ.]

**ಸರು$_1$** 'ಸರಿವು' ನೋ.

**ಸರು$_2$** (ಗು). ೧. ತೆಳುವಾದ ; ಸೂಕ್ಷ್ಮವಾದ. (ನಾ). ೨. ಕತ್ತಿಯ ಹಿಡಿಕೆ. ೩. ಬಾಣ. [ಸಂ.]

**ಸರು$_3$** 'ಸರುವು$_2$' ನೋ.

**ಸರುಕಿಸು** 'ಸರಕಿಸು' ನೋ.

**ಸರುಕು$_1$** 'ಸರಕು$_1$' ನೋ.

**ಸರುಕು$_2$** 'ಸರಕು$_2$' ನೋ.

**ಸರುಗ** 'ಚರುಗ' ನೋ.

**ಸರುಗು** 'ಚರುಗ' ನೋ.

**ಸರುಜ** (ಗು). ೧. ರೋಗವನ್ನು ಹೊಂದಿರುವ. (ನಾ). ೨. ರೋಗವುಳ್ಳವನು; ರೋಗಿ : ಪಾಪರತಂ ಸ್ವಭೃತ್ಯಕಲಹಂ ಸರುಜಂ ಹೃದ್ರೋಗಿ ದಿನಪನವರೋಹಿಣಿಯೊಳ್ (ಜಾತತಿ. ೯-೧೮); ಅರುಚಿಯದಟಲ್ಲಿ ಸಮನಿಸೆ ಸರುಜಂಗೌಷಧವಿರಕ್ತಿಯಾದಂತಕ್ಕುಂ (ಚಂದ್ರಪ್ರ. ೨-೩೯). [ಸಂ.]

**ಸರುಪ, ಸಪ್ಪ$_2$, ಸರ್ಪು** (ನಾ). ಹಾವು ; ಸರ್ಪ : ಸರುಪ ಸುತ್ತಿದರ ಸರ್ವೋತ್ತಮನೆ ನೀ ಕಾಯೊ (ಪುರಂದ. ಧಾ. ೨-೬೬-೨) ; ಹೆಣ್ಣುಮಕ್ಕಳ ದುಃಖ ಹೆತ್ತವ್ವ ಬಲ್ಲಳು ಹುತ್ತದ ಒಳಗಿರೋ ಸರುಪನ ಬೇಗೆಯ ನೆತ್ತೀ ಮೇಲಿರುವೊ ಶಿವ ಬಲ್ಲ (ನಾಪದ. ೭೦). **ಸಪ್ಪ$_2$** : ಸಪ್ಪಂಬೊಲೊಲ್ಡಾಲಿಸಿ ಕೋಪಾಟೋಪದಿಂದಂ ಮೊಜೆಯುತೆ ಪೊಣರ್ದರ್ ಪೊಂಗಿ ವೀರಾಗ್ರಗಣ್ಯರ್ (ಉದ್ಭಟ. ೪-೧೦೪). **ಸರ್ಪು** : ಅದನ್ನು ತಿಂದರೆ ಸರ್ಪಿನ ವಿಷದಂತೆ ಅಮಲಾಗುತ್ತದೆ (ಕೃಷಿಪ್ರ. ೧೯೭). [< ಸಂ. ಸರ್ಪ]

**ಸರುವ** 'ಸಬ್ಬ$_2$' ನೋ.

**ಸರುವದಾ** (ಅ). ಯಾವಾಗಲೂ ; ಸತತವಾಗಿ : ಸರುವದಾ ಒದಙುವರು ಅರಣ್ಯವಾಸಿಗಳು ಮರದಡಿಗೆ ಬಿದ್ದ ಎಲೆಗಳ ತಿನ್ನುತ (ಪುರಂದ. ೪-೮೦-೩).

[< ಸಂ. ಸರ್ವದಾ]

**ಸರುವಿಗೋಸಾಸಿಗ** (ನಾ). ಒಬ್ಬಾತನ ಹೆಸರು : ಮುತ್ತವುರೆರ ಸರುವಿಗೋಸಾಸಿಗ ಕೊಡಲಸೆಟ್ಟಿಯರಾ ಮದಾಮ್ಮನ್ (ಎಇ. IX, ೨೩-೧೧ ; ಸು. 800). 'ಗೋಸಾಸಿಗ' ಪರಾ. [?]

**ಸರುವಿಡಿ** (ಕ್ರಿ). (ಬೇಟೆಯಲ್ಲಿ) ಮೃಗವು ಹೋದ ಜಾಡನ್ನು ಅನುಸರಿಸು : ಬಿಯದರ್ ಬೇಂಟೆಯಾಡಲೆಂದು ಸಂಭ್ರಮಂ ಮಿಗೆ ಸರುವಿಡಿದು ಪಣೆಯಿರ್ಪೆಡೆಗೆಯ್ತಂದು ನಿಂದು (ಶಬಶಂ. ೩-೧೪ ವ). [ಸರು$_3$ (< ಸರುವು$_2$) + ಪಿಡಿ$_1$]

**ಸರುವು$_1$** 'ಸರಿವು' ನೋ.

**ಸರವು$_2$, ಸರವಿ$_2$, ಸರು$_3$, ಸರುಹು$_2$** (ನಾ). ೧. (ಬೇಟೆಯ ಸಮಯದಲ್ಲಿ) ಕಾಡುಮೃಗಗಳು ಓಡಾಡುವ ಹಾದಿ, — ಜಾಡು : "ಸರುವೆಂದು ಮಿಗವಟ್ಟೆ" (ಶಶಸಾ. ೫೧-೮೪) ; ಪುಲ್ಲಾ ನೊಳಾ ಪೋಪ ಪೇರುಡುವಂ ಸೋವುವಡಂಗಿಯೆಯ್ದು ಸರುವಂ ಕಟ್ಟಿಟ್ಟು ಸಾರಂಗಮಂ (ಸೂಕ್ತಿಸು. ೩-೧೧೫). ೨. ಸುಳಿಯುವಿಕೆ ; ಸುಳಿದಾಟ ; ಹಸುಬನ ಸರುವು ಪಾಮದಿ ಗರ್ದಭನ ಬಲ ಕರಿಯ ಹಕ್ಕಿಯ ತಡೆಯ ಮನ್ನಿಸದ್ದಿದಿದನು ಭೂಪ (ಕುಮ್ಮಾಅ. ೧೭-೩೩). **ಸರವಿ$_2$** : ೧. 'ಸರವಿವೋಗು' ಪರಾ. **ಸರು$_3$** : ೧. ಸರುವ ಕಟ್ಟಿಸಿ ಬರಿಸಿ ಮಿಗವ ಬೆಂಬಿಡದೆ ಮುಂಬರಿ ನೂಂಕು ನಡೆ (ರುಕ್ಮಾಂಗ. ೧೦-೨೧) ; ಸರುವೊಳ್ ಹುದುಗಿಯುಂ ನೀರ್ದಾಣದೊಳ್ ಕತ್ತರಿಗಂಡಿಯನೆತ್ತಿಯುಂ (ರಾಮಾಶ್ವ. ೮೪-೫). **ಸರುಹು$_2$** : ೧. ಕಾಡಾನೆಗಳ ತದಿಕಿನಡವಿಯ ತೊವಲ ತಿನಹೋದ ಸರುಹುಗಳೊಳಂ . . . ನಡೆದು (ಸಮ್ಯಕೌ. ೧೧-೪೧). [?]

**ಸರುವುಗಟ್ಟು** 'ಸರವುಗಟ್ಟು' ನೋ.

**ಸರುಷಪ** 'ಸರುಸಪ' ನೋ.

**ಸರುಸಪ, ಸರಿಸಪ, ಸರುಷಪ** (ನಾ). ಸಾಸವೆ : ಸೇಸೆಯಿಕ್ಕಿದ ಸರುಸಪಂ [ಪಾಠಾಂ. ಸರ್ಷಪಂ]ಗಳೊತ್ತೆ ಸ್ಫುರಿಸಲಾಜಿಂ (ವಡ್ಡಾರಾ. ೨-೫) ; ಸರ್ಷಪ – ಸರುಸಪ (ಶಮದ. ೨೫೪ ಪ್ರಯೋ) . **ಸರಿಸಪ** : ವರ್ಷಂ, ವರಿಸಂ; ಸರ್ಷಪಂ, ಸರಿಸಪಂ (ಭಾಷಾಭೂ. ೧೨೪ ಪ್ರಯೋ) ; ಸರ್ಷಪಂ– ಸರಿಸಪಂ, ಸರ್ಸುಸಪಂ (ಶಬ್ದಾನು. ೧೪೭ ವ್ಯಾಖ್ಯಾ). **ಸರುಷಪ**: ಸರುಷಪಮಂ ಘೃತಮಂ . . . ತ್ರಿಫಲಾರಸದೊಳ್ ನಿರೂಹಣಕ್ರಿಯೆಗೆ ಯೋಜಿಪುದು ಧುರದೆಡೆಯೊಳ್ (ಅಶ್ವಶಾ. ೧೧-೧೭).

[< ಪ್ರಾ. ಪರಿಸವ./ಸಂ. ಸರಿಷಪ, ಸರ್ಷಪ]

**ಸರುಹು$_1$** 'ಸರಿವು' ನೋ.

**ಸರುಹು$_2$** 'ಸರುವು$_2$' ನೋ.

**ಸರೂಪ$_1$, ಸೊರೂಪ** (ನಾ). ಆಕೃತಿ ; ಸ್ವರೂಪ : "ಸ್ವರೂಪ-ಸರೂಪ" (ಶಮದ. ೨೮೧ ಪ್ರಯೋ). **ಸೊರೂಪ** : ಬಾವಜಿಯರ ಸೊರೂಪ (ಮೈಆರಿ. ೧೯೬೩, ೪೬-೧೧; 1122). [< ಸಂ. ಸ್ವರೂಪ]

**ಸರೂಪ$_2$** (ಗು). ೧. ಸಮಾನವಾದ ರೂಪವುಳ್ಳ ; ಸದೃಶವಾದ. (ನಾ). ೨. ರೂಪಸಹಿತವಾದುದು ; ಸಾಕಾರವಾದುದು : ಆ ಮೋಡಗಳು . . . ನೀರೂಪವನ್ನು ಸರೂಪವಾಗಿ ಮಾಡುತ್ತವೆ (ರಾಮಾನ. ೧೧೭). [ಸಂ.]

**ಸರೇಫ** (ಗು). ೧. ರೇಫದಿಂದ ಕೂಡಿದ ; ರಕಾರಸಹಿತವಾದ : ಉರ್ದುಂ ಬಿರ್ದುಂ . . . ಗುರ್ದೆಯುಂ ಸರೇಫಪದಂಗಳ್ (ಶಮದ. ೩೭). (ನಾ). ೨. ರೇಫಸಹಿತವಾದ ಅಕ್ಷರ : ಅತ್ಯಂತಂ ಸರೇಫಸಂಯೋಗಾಂತರಮಮರ್ದೋದವೆ ಮಧುರೆಯೆಂಬುದದಕ್ಕುಂ (ಕಾವ್ಯಾವ. ೫೬೨). [ಸಂ.]

**ಸರೋಂಬು** (ನಾ). ಸರೋವರದ ನೀರು : ಬಿರಯಿಗಳನೆಚ್ಚು ರಕ್ತಂಬೊರೆದರಲಂಬಂ ಸರೋಂಬುವೋಲ್ತೊಳೆಯಲ್ಕೆಂದರಲಂಬನಿಳಿಪಿದಂತಿರೆ ತರುಣಿಯರ ಸರಕ್ತಕೇಕರಂ ಮಾರ್ಪೊಳೆಗುಂ (ರಾಜಶೇ. ೧೦-೬೭). [ಸಂ.]

**ಸರೋಗ** (ನಾ). ೧. ಬೇನೆ ; ರೋಗ : "ಸರೋಗಂ ಚಮರೀಮೃಗಂ ಸರಿಸ ಭೂಜಮಿವು ಸರಳಾಖ್ಯ" (ನಾನಾರ. ೭೪). ೨. ರೋಗವುಳ್ಳವನು; ರೋಗಿ : ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲದಾದೊಡಾಳ್ದನಾಳ್ ಸರೋಗನರೋಗಂ . . . ಎಂಬೀ ಲೋಕಯಾತ್ರೆ ಕಿಡದೆ (ಶಾಂತಿಪು. ೮-೧೪೧) ; ಶಕಟಭವಂ . . . ಸರೋಗಂ (ಜಾತತಿ ೧೩-೧೩). [ಸಂ.]

**ಸರೋಚಕ** (ನಾ). ಮನೋಹರವಾದುದು : ಮೂವತ್ತೆರಡಂಗಹಾರಮೆಸೆದುವು ಸರೋಚಕಂಗಳ್ ಸುಚಾರಿಗಳ್ ಸುರಪತಿಯಾ (ಆದಿಪು. ೫-೮). [ಸಂ.]

**ಸರೋಜ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ : ಗಂಧರ್ವಲೋಕದ ಸರೋಜಂಗಳಿವೆ ದೇವ (ನಂಬಿರ. ೯-೫೫). [ಸಂ.]

**ಸರೋಜನಿಲಯ** (ನಾ). ತಾವರೆಯೇ ನೆಲೆಯಾಗಿರುವವನು ; ಬ್ರಹ್ಮ : ಕುಳಗಿರಿಯಂ ಸರೋಜನಿಲಯಂ ಮನುಜಾಕೃತಿಯಾಗಿ ಮಾಡಿದಂತೊಳವೆನಿಪಂತುಟಪ್ಪ ಪೊಸ ಬಣ್ಣದೊಳೊಂದಿದ ಪಾರಿಜಾತಮಗ್ಗಳಮೆಸೆದೊಪ್ಪುವಂತೆ . . . ಕರಮೊಪ್ಪಿದಂ ದಶಸಹಸ್ರಮದೇಭಬಳಂ ವೃಕೋದರಂ (ಪಂಪಭಾ. ೨-೩೮). [ಸಂ.]

**ಸರೋಜಪ್ರಭವ** (ನಾ). ತಾವರೆಯಲ್ಲಿ ಹುಟ್ಟಿದವನು ; ಬ್ರಹ್ಮ : ಬ್ರಹ್ಮ ವಿಷ್ಣು ಜಿನ ಪ್ರಮುಖರಾದ ವಿಭುಗಳಾರಾರಿಂಗೆ ನಿಜಪದವಿಭವಮಂ ಕೊಟ್ಟರು ಸರೋಜಪ್ರಭವಹರಿಮುಖ್ಯಾಮರಾಸುರನರಮುನೀಂದ್ರರಿಗೆ (ಬಸವು. ೫೪-೬೬). [ಸಂ.]

**ಸರೋಜಮಿತ್ರ** (ನಾ). ತಾವರೆಯ ಗೆಳೆಯ ; ಸೂರ್ಯ : ನಿಳಿಂಪವಧೂವಕ್ತ್ರಸರೋಜಮಿತ್ರನನೆ . . . ಅದೇಂ ನಲಿದನೋ ಕಲ್ಪಾಮರಂ ಕಲ್ಪದೊಳ್ (ಸುಕುಮಾ. ೯೯-೩೫). [ಸಂ.]

**ಸರೋಜರಿಪು** (ನಾ). ೧. ತಾವರೆಯ ವೈರಿ ; ಚಂದ್ರ : ಸರೋಜಸಖನಿಲ್ಲದಂಬರ ಮನಾದಮುದ್ಯೋತಿಸಲ್ ಸರೋಜರಿಪು . . . ನೆಣಗುಂ (ಚಂದ್ರಪ್ರ. ೩-೬೩). ೨. [ಛಂದ] ಒಂದು ಅಕ್ಷರಗಣದ ಹೆಸರು ; ಭಗಣ : ಒಂದಿರೆ ಸರೋಜರಿಪು ಭಾನು [ಪಾಠಾಂ. ಶಶಾಂಕದಿವಸೇಶ] ಮರುದಿಂದ್ರಲ್ . . . ಕೇಳ್ ಪೆಸರಿಂ ವನಮಯೂರಂ (ಛಂದೋಂಬು. ೨-೧೪೯). [ಸಂ.]

**ಸರೋಜಷಂಡ** (ನಾ). ತಾವರೆಗಳ ಸಮೂಹದಿಂದ ಕೂಡಿದುದು; ಕಮಲ ಸರೋವರ : ಕಾಣ್ಬರಾ ಬಳಯುತನಂ ಪುರೋಪವನಷಂಡಸಮೀಪ ಸರೋಜಷಂಡದೊಳ್ (ವಂರಾನಾಮ. ೭-೧೧೧). [ಸಂ.]

**ಸರೋಜಸಂಭವ** (ನಾ). = ಸರೋಜಪ್ರಭವ : ಲೋಕಮನೆಯ್ದೆ ಸರೋಜಸಂಭವಂ ಪೊದಿಸಿದ ಪಾಂಡುಕಂಬಳಮಿದೆಂಬವೊಲಾದುದು ಮಂಜಿನುರ್ವರಂ (ಪುಷ್ಪಪು. ೬-೩೮).

[ಸಂ.]

**ಸರೋಜಸಖ** (ನಾ). = ಸರೋಜಮಿತ್ರ : ಸರೋಜಸಖನೊಯ್ಯನೆ ಪೊರ್ದಿದನಸ್ತಶೈಲಮಂ (ಕಾದಂಪೂ. ೨೭೧) ; ಸರೋಜಸಖನಿಲ್ಲದಂಬರಮನಾದಮುದ್ಯೋತಿಸಲ್ ಸರೋಜರಿಪು . . . ನೆಣಗುಂ (ಚಂದ್ರಪ್ರ. ೩-೬೩). [ಸಂ.]

**ಸರೋಜಾಂಬಕ** (ನಾ). ತಾವರೆಯಂಥ ಕಣ್ಣುಗಳುಳ್ಳವನು ; ಕಮಲಾಕ್ಷ ; ವಿಷ್ಣು : ಬೌದ್ಧಾಕೃತಿಯಿಂದೆ ಯೋಗದೊಳ್ ಕೂಡಿರ್ದ್ದ ಸರೋಜಾಂಬಕಾ (ಜಗವಿ. ೧-೬೩). [ಸಂ.]

**ಸರೋಜಾಕರ** (ನಾ). = ಸರೋಜಷಂಡ : ತತ್ಸರೋಜಾಕರಹೇಮಾಂಭೋಜಿನೀ ಕುಟ್ಮಲವಿಲಸದಳಂಕಾರಮಾಗಿರ್ದುದಂ . . . ನೋಡಿ ಕಂಡೆಂ (ಸುಕುಮಾ. ೩-೧೯). [ಸಂ.]

**ಸರೋಜಾತ** (ನಾ). = ಸರೋಜ : ಸರೋಜಾತಾದಿ ನಿಸ್ಸಾರವಸ್ತುಗಳೊಳ್ ಪ್ರೋಗಿಸುವಾತುಸೇಲ ಮದುಳಸೇ [illegible] (ಆದಿಪು. ೬-[illegible]) ; [illegible] ಶ್ರೀಜೈನಭಾಸ್ವತ್ಪ್ರಮಯುಗಲಸರೋಜಾತಭೃಂಗಂ (ಸುಕುಮಾ. ೧-೫೫). [ಸಂ.]

**ಸರೋಜಾತಜಾಂಡ** (ನಾ). ಬ್ರಹ್ಮಾಂಡ : ಬಳಸುತ್ತಂ ಕೀರ್ತಿಸುತ್ತುಂ ಸುಳಿದು ಸುಳಿದು ತರ್ಕೈಸಿರಲ್ ಕೂಡೆ ಶೇಷೋಜ್ಜ್ವಳಕಾಯಂ ತೀವಿದಾ ಪೇಳಿಗೆವೊಲಿರೆ ಸರೋಜಾತಜಾಂಡಂ (ಎಕ. V, ಹಾಸನ. ೫೩-೧೭ ; 1170). [ಸಂ.]

**ಸರೋಜಾಸನ** (ನಾ). ಕಮಲವೇ ಪೀಠವಾಗಿರುವವನು ; ಬ್ರಹ್ಮ : ಗತಿಮಾರ್ಗಂ . . . ಛಂದಮಾಣತಿ ಶಾರೀರಮನಿಪ್ಪ ಗೀತದೆಡೆಯೊಳ್ ರೇಚಂ ಸರೋಜಾಸನಂ (ಮದತಿ. ೧-೨೪) ; ನರಕನಾತಂ ಲೋಕಸಂಹಾರಮೂರ್ತಿ ದಶಾಸ್ಯಾದಿಗಳಿಂ ಬಲಾಧಿಕನದಂ ಬಲ್ಲಂ ಸರೋಜಾಸನಾ (ಜಗವಿ. ೧-೬೯). [ಸಂ.]

**ಸರೋಜಿನಿ** (ನಾ). ೧. ಕಮಲದ ಬಳ್ಳಿ. ೨. ಕಮಲಗಳ ಸಮೂಹ. ೩. ಕಮಲಗಳಿಂದ ತುಂಬಿದ ಸರೋವರ : ಇದು ಸಕಳಸುಕವಿಜನಮನಸ್ಸರೋಜಿನೀ ರಾಜಹಂಸಾಯಮಾನಾನೂನಕವಿತಾಗುಣೋದಯಂ (ಕಾವ್ಯಾವ. ೪೯೭ ಗದ್ಯ). ೪. ಕಮಲ.

[ಸಂ. ಸರೋಜಿನೀ]

**ಸರೋಜಿನೀಪತಿ** (ನಾ). ಕಮಲಗಳ ಒಡೆಯ ; ಸೂರ್ಯ. [ಸಂ.]

**ಸರೋಜಿನೀವನ** (ನಾ). ಕಮಲಗಳ ಗುಂಪು : ಸರಸಿಜಬಾಂಧವನಸ್ತಾಂತರಗತನಾಗಿರೆ ಸರೋಜಿನೀವನಮಾದಂ ಕೊರಗುತ್ತ ಮುಗಿಗುಂ (ಕವಿರಾ. ೩-೬೦). [ಸಂ.]

**ಸರೋಜೇಕ್ಷಣ** (ನಾ). = ಸರೋಜಾಂಬಕ : ಸರೋಜೇಕ್ಷಣನತ್ತಲೊಂದೆಡೆಯೊಳಾ ಯಿರ್ದಪ್ಪನೆಮ್ಮಗ್ರಜಂ (ಜಗವಿ. ೩-೧೪). [ಸಂ.]

**ಸರೋದ್** (ನಾ). ಒಂದು ಬಗೆಯ ತಂತೀವಾದ್ಯ : ಅವರು ಹೆಸರಾಂತ ಸರೋದ್ ವಾದಕರು (ರೂಢಿ). [← ಹಿಂ. ಸರೋದ್ ; ಮರಾ. ಸರೋದ್, ಸರೋದಾ]

**ಸರೋಧಿ** (ನಾ). ಕಡಲು ; ಸಮುದ್ರ : ಬೆಳಗು ಹಳಪಳನೆ ಮೊಳೆತುದು . . . ಅಳಿಯ ಸೆಟೆಬಿಟ್ಟುದು ಧರಾಜನದ ಕಣ್ಣ ಬಿಟಿ ತಿಳಿದುವು ಸರೋಧಿ [ಪಾಠಾಂ. ಸರೋಜ, ಸಿರೋಡಿ] ಮೈದೆಗದುದು (ಸಿದ್ಧರಾ. ೭-೪೫) ; ವಿತತಚತುರಂಗಬಳಸಂಯುತನತಿಸಾಹಸಿ ಸರೋಧಿಮಧ್ಯಸ್ಥಿತನುದ್ಧತನಾ ಸಿಂಹಳಂ (ರಾಜಶೇ. ೫-೧೩೧). [ಸಂ.]

**ಸರೋನಿಧಿ** (ನಾ). = ಸರೋಧಿ : ಎಮಗಿಲ್ಲ ಭೇದಮಿನ್ನೆನ್ನ ಮಗಂಗೆ ಕಾಯದಿರನುತ್ತ ಸರೋನಿಧಿ ಬಂದ ಭಾನುವಂ ಮನ್ನಿಸುತಿತ್ತ ಪೀತವಸನಂ ನಿಜಮೆಂದೆನೆ ಸಂಜೆ ರಂಜಿಕುಂ (ರಾಜಶೇ. ೧೧-೯). [ಸಂ.]

**ಸರೋಭವ** (ನಾ). = ಸರೋಜ : ಶಿವಲಿಂಗಾಂಘ್ರಿಯನೊಲ್ದು ಪೂಜಿಸಿದಂ . . . ಸರೋಭವಮುಖ್ಯಪ್ರಸವಾತಿಶೋಭಿತಸುಗಂಧಾಢ್ಯಾಕೃತ . . . ಗೀತವಾದ್ಯರವದಿಂ ಭೂಭಾಮಿನೀಭೂಷಣಂ (ರಾಜಶೇ. ೧೦-೫೮). [ಸಂ.]

**ಸರೋರುಹ** (ಗು). ೧. ಸರೋವರದಲ್ಲಿರುವ : ಅತಿಥಿಗೆಯಿಂದ ಸಕಲಸರೋರುಹಾಂಬುವನೂಂದ ಶ್ವಾಸದಲೀಂಟಿದೆನು ಶಂಕಿಸದು ಕೋಪಾಗ್ನಿ (ಕುಮಾರ. ೧೯-೯೧). (ನಾ). ೨. = ಸರೋಜ : ಕವಿಚಿತ್ತ ಸರೋರುಹಾಕರಾವಸ್ಥಿತಹಂಸನೆಂಬುದು ಸಮಸ್ತಮಹೀಜನಮಿನ್ನರಾಜನಂ (ಎಕ. II, ೧೩೩-೪೨ ; 982) ; ನೀರ ತಾರ್ಮೈ ಹೋಗು ನಕುಲ ಸರೋರುಹದ ಪತ್ರದಲಿ (ಕುಮಾ.ಅ. ೨೩-೨). [ಸಂ.]

**ಸರೋರುಹಾಕರ** (ನಾ). = ಸರೋಜಷಂಡ : ನೀಮಾ ಸರೋರುಹಾಕರದೊಳ್ ಮಿಂದಾದಿತ್ಯಂಗರ್ಘ್ಯಮನೆತ್ತುವಾಗಳ್ ಬೆರಲಿಂ ಸಡಿಲ್ದು ಬೀಟ್ಟು ತತ್ಸರೋರುಹಾಕರದೊಳಗಣ ಸರೋಜಕುಟ್ಮಲದೊಳ್ ಸಿಲ್ಕಿರ್ದುದು (ಸುಕುಮಾ. ೩-೧೪ ವ). [ಸಂ.]

**ಸರೋರುಹಿಣೀವನ** (ನಾ). = ಸರೋಜಿನೀವನ : ಸರೋರುಹಿಣೀವನಂಗಳೊಳ್ ವಲಿ ತಲೆದೋಱದಂತು . . . ಎಲರೊಲವುಣ್ಮೆ ತೀಡಿದುದು (ಚಂದ್ರಪ್ರ. ೨-೧೧೧). [ಸಂ.]

**ಸರೋವನ** (ನಾ). ಸರೋವರದ ನೀರು : ತೋಡಿದನ್ ತನ್ನೆದೆಯ ಭಾವಾಭಿಲಾಷೆಯು ಸರೋವನಂ ಕೋಡಿವರಿಯಲ್ಕೆ (ಶ್ರೀರಾಮಾ. ೧೭೯-೪೬೫). [ಸಂ.]

**ಸರೋವರ** (ನಾ). ಕೊಳ ; ಸರಸ್ಸು : ದೀನಜನತಾಕಲ್ಪಾಂಘ್ರಿಪಂ ವನಕರಿ ಕದಡೆ ತಿಳಿದ ಸರೋವರದಂತೆ ಪ್ರಸನ್ನಾಂತರಂಗನಾಗಿರ್ಪನ್ನೆಗಂ (ಶಾಂತಿಪು. ೫-೧೪೮ ವ) ; ನೀರೆಸೆವಂತಗುಬಿಸುವುದು ಕೂಪ ಸರೋವರ ದೀರ್ಘಿಕಾ ತಟಾಕಂಗಳುಮಂ (ಲೋಕೋಪ. ೫-೩). [ಸಂ.]

**ಸರೋವಾರಿ** (ನಾ). = ಸರೋವನ : ನಿಯಮದಲಿ ಕಾಮಿನಿ ಸರೋವಾರಿಗಳಿ ಮಿಂದಳು (ಕುಮಾ.ಅ. ೪-೭೭). [ಸಂ.]

**ಸರೋಷ** (ಗು). ೧. ಕೋಪದಿಂದ ಕೂಡಿದ ; ಕುಪಿತಗೊಂಡ : 'ಸರೋಷಮತಿ' ಪರಾ. (ನಾ). ೨. ಕೋಪ ; ರೋಷ : ತೆಗೆದಚ್ಚನು ಸರೋಷದಲಿ (ಕೃಕರ್ಣಾ. ೧೧-೬೪). [ಸಂ.]

**ಸರೋಷಮತಿ** (ನಾ). ಕುಪಿತನಾದವನು : ಇಡೆ ಪಣೆಯನಡಸಿ ಕಂದಮ ನೊಡೆದುಚ್ಚಳಿಸಿರೆ ಸರೋಷಮತಿ ಮಗುಳ್ದಿದಿರಂ ನಡೆದದಜಿಣಸಿನ ಮೊನೆಯಿಂದೊಡ ನಿಕ್ಕಿತು ಪಾಯ್ದು ಪಂದಿಯವನಂ (ರಾಜಶೇ. ೫-೯೧). [ಸಂ.]

**ಸರ್ಕರೆ** 'ಸಕ್ಕರೆ' ನೋ.

**ಸರ್ಕಸ್** 'ಸರ್ಕಸ್ಸು' ನೋ.

**ಸರ್ಕಸ್ಸು, ಸರ್ಕಸ್** (ನಾ). ಮನುಷ್ಯರ ನಾನಾಬಗೆಯ ಕಸರತ್ತುಗಳ ಹಾಗೂ ತರಬೇತು ನೀಡಿದ ಪ್ರಾಣಿಗಳ ವಿವಿಧಬಗೆಯ ಆಟಗಳ ಪ್ರದರ್ಶನ ಮತ್ತು ಅವುಗಳನ್ನು ಪ್ರದರ್ಶಿಸುವ ಸ್ಥಳ : ನಾಟಕದವರು, ಸರ್ಕಸ್ಸಿನವರು, ಚಿತ್ರದರ್ಶಕರು, ಮತಬೋಧಕರು ಇತ್ಯಾದಿಗಳಿಗೊಂದು ಸುಗ್ಗಿಯ ಕಾಲ (ಹುಟ್ಟಿಹ. ೭೪) ; ಈ ಹೆಣ್ಣಿನೊಡನಾಟ ನನಗೆ ಭಯಂಕರ, ನಾನು ಸರ್ಕಸ್ಸಿನ ಮೇಕೆ (ಇಂಚಾಪ. ೧೯೭-೭೦). **ಸರ್ಕಸ್** : ಸಿಂಹ ಸರ್ಕಸ್‌ನಲ್ಲಿ ಕಸರತ್ತನ್ನು ಮಾಡಬಲ್ಲುದು (ಜೀವಾತ್ಮ. ೨೦೯) ; ಮಳೆಯ ಪಂಜರದಲ್ಲಿ ಸೆರೆಯಾಗಿಹವು ಸರ್ಕಸ್ ಹುಲಿಗಳು (ನಲಮು. ೧೨-೨೦). [← ಇಂ. Circus]

**ಸರ್ಕಾರ, ಸರಕಾರ** (ನಾ). ೧. ಒಂದು ದೇಶ ಅಥವಾ ರಾಜ್ಯದ ಆಡಳಿತವನ್ನು ನಡೆಸುವ ಸಂಸ್ಥೆ : ನಮ್ಮೂರಿನ ವ್ಯಾಜ್ಯಗಳು ಸರ್ಕಾರದವರೆಗೆ ಹೋದದ್ದೇ ಅಪರೂಪ (ಹುಟ್ಟಿಹ. ೧೪) ; ಜಗದೀಶನಿಗೇನೋ . . . ಸರ್ಕಾರದಲ್ಲಿ ಉಚ್ಚ ಅಧಿಕಾರಿಯಾಗ ಬೇಕೆಂಬ ಹಂಬಲ (ಸಸ್ಯಕ. ೯೫). **ಸರಕಾರ** : ೧. ತಳ್ಳಿ ತಗಾದಿ ಮಾಡಿ ಸರಕಾರಕ್ಕೆ ಹೊನ್ನ ಕೊಟ್ಟವರು (ವಚಶಾ. ೩೬೧-೧೦) ; ಭೂಮಿಯಂನ್ನು ಅನುಭವಿಸಿಕೊಂಡು ಸರಕಾರದ ಹಣವಂನ್ನು ತೆತ್ತುಕೊಂಡುಬಹುದು (ಎಕ. VIII, ಸಾಗರ. ೪೭-೨೮ ; 1646) ; ದೇಶದಲ್ಲಿ ಎಲ್ಲರನ್ನೂ ಆಳುವ ಮತ್ತು ಕಾಪಾಡುವ ಏರ್ಪಾಟೇ ಸರಕಾರ (ರಾಜ್ಯಶಾ. ೭೩). ೨. ಒಡೆಯ; ಮುಖ್ಯಸ್ಥ; ಪ್ರಭು : ಸರಕಾರ, ಈಗ ನನ್ನಲ್ಲಿ ಕಸರಾದರೂ ಏನು ಉಳಿದಿದೆ? (ಜಮೀನ್ದಾ. ೧೩೫).

[← ಪಾರ. ಸರಕಾರ್, ಸರ್ಕಾರ್ ; ಹಿಂ. ಮರಾ. ಸರಕಾರ್]

**ಸರ್ಕಾರಿ, ಸರಕಾರಿ** (ಗು). ಸರಕಾರಕ್ಕೆ ಸಂಬಂಧಪಟ್ಟ ; ಸರ್ಕಾರದ ವ್ಯವಸ್ಥೆಗೆ ಒಳಪಟ್ಟ : ಸರ್ಕಾರಿ ಕೆಲಸದಲ್ಲಿದ್ದಾಗ ಉದ್ದಕ್ಕೂ ನನ್ನ ಮೇಲಿನ ಅಧಿಕಾರಿಗಳು ಸ್ವಲ್ಪ ಜನರ ಸಂಗಡ ಭಿನ್ನಾಭಿಪ್ರಾಯಕ್ಕೋಸ್ಕರ ಮನೋವಿಕಾಸಕ್ಕೊಳಗಾದೆ (ಚಂಗಾಳ್ಯ ii, ಮುನ್ನುಡಿ). **ಸರಕಾರಿ** : ಸದಾಶಿವರಾಯರು . . . ಸರಕಾರಿ ಶಾಲೆಯ ಶಿಕ್ಷಕರಾದರು (ಇಂಚಾಪ. ೭-೧೯) ; ಆ ಊರಿಗೆ ಒಬ್ಬ ಹೊಸ ಸರಕಾರಿ ಡಾಕ್ಟರರು ಆಗಮಿಸಿದ್ದರು (ಫಲಸಂ. ೩೩). [← ಪಾರ. ಸರಕಾರೀ, ಸರ್ಕಾರೀ ; ಹಿಂ. ಮರಾ. ಸರಕಾರೀ]

**ಸರ್ಕಾರಿನೌಕರಿ, ಸರಕಾರಿನೌಕರಿ** (ನಾ). ಸರಕಾರದ ಉದ್ಯೋಗ , – ಕೆಲಸ : ಅವರು ಇದುವರೆಗೂ ಸರ್ಕಾರಿನೌಕರಿಯಲ್ಲಿದ್ದು ನಿವೃತ್ತರಾದವರು (ರೂಢಿ). **ಸರಕಾರಿನೌಕರಿ** : ಆದರೂ ಎಲ್ಲಾರ ಸರಕಾರಿನೌಕರಿ ನೋಡಿದ್ದರ ಆಗತಿತ್ತು (ವ್ಯನಿ. ೧೩). [ಸರ್ಕಾರಿ + ನೌಕರಿ. / ಮರಾ. ಸರಕಾರೀನೋಕರೀ]

**ಸರ್ಕಿಟ್** 'ಸರ್ಕೀಟು' ನೋ.

**ಸರ್ಕೀಟು, ಸರ್ಕಿಟ್, ಸರ್ಕ್ಯೂಟ್** (ನಾ). ಆಡಳಿತ ನಿಮಿತ್ತವಾಗಿ ಅಧಿಕಾರಿಗಳು ಕೈಗೊಳ್ಳುವ ಸಂಚಾರ : ಅಮಲ್ದಾರರು ಸರ್ಕೀಟನಿಂದ ಹಿಂದಕ್ಕೆ ಬಂದ ಮೇಲೆ ನಿಮ್ಮ

ಅರ್ಜಿಯನ್ನು ನೋಡುತ್ತಾರೆ (ಮಧ್ಯಮ. ೧೬೫) ; ಸಾಹೇಬರ ಸರ್ಕೀಟು ಜೂನ್ ತಿಂಗಳಲ್ಲಿ (ಮಗಮಾಂ. ೬೨). **ಸರ್ಕಿಟ್ :** ಅಮಲ್ದಾರರಿಗೆ ತಿಂಗಳಿಗೆ ಒಂದು ಬಾರಿ ಸರ್ಕಿಟ್ ತಿರುಗುವ ಸಂಪ್ರದಾಯವಿತ್ತು (ಪಂಜನ. ೧೦೪). **ಸರ್ಕ್ಯೂಟ್ :** ರಾಜಾರಾಯರು ಜಮಾಬಂದಿ ಕೆಲಸಕ್ಕೋಸ್ಕರ ಸರ್ಕ್ಯೂಟ್ ಹೋಗಿದ್ದಾರೆ (ಇಬದು. ೨೩). [← ಇಂ. Circuit]

**ಸರ್ಕ್ಯೂಟ್** 'ಸರ್ಕೀಟು' ನೋ.

**ಸರ್ಗ$_1$** 'ಸಗ್ಗ' ನೋ.

**ಸರ್ಗ$_2$** (ನಾ). ೧. ಬಿಡುವಿಕೆ ; ತ್ಯಾಗ. ೨. (ಮಲಮೂತ್ರಗಳ) ವಿಸರ್ಜನೆ. ೩. ಸೃಷ್ಟಿ ; ನಿರ್ಮಾಣ. ೪. ಜಗತ್ತಿನ ಸೃಷ್ಟಿ, – ಉತ್ಪತ್ತಿ; ☞ ಇದರ ವರ್ಣನೆ ಪುರಾಣದ ಪಂಚಲಕ್ಷಣಗಳಲ್ಲಿ ಒಂದು: 'ಪ್ರತಿಸರ್ಗ' ಪರಾ. ೫. ವಿಶ್ವ ; ಬ್ರಹ್ಮಾಂಡ. ೬. ಸ್ವಭಾವ ; ನೈಸರ್ಗಿಕಗುಣ, – ಪ್ರವೃತ್ತಿ. ೭. ಮುನ್ನುಗ್ಗುವಿಕೆ; ದಾಳಿ ; ಆಕ್ರಮಣ. ೮. ನಿರ್ಧಾರ ; ನಿಶ್ಚಯ. ೯. ಒಪ್ಪಿಗೆ ; ಸಮ್ಮತಿ. ೧೦. ಗುಂಪು ; ಸಮೂಹ : ಶಲ್ಯ ಪಾರ್ಥರ . . . ನಿರುಪಮಾಸ್ತ್ರಪ್ರೌಢಿಯನು ದುರ್ಧರ ಶಿಳೀಮುಖ ಸರ್ಗಬಂಧಸ್ಫುರಣವನು ಹಿಂದೀಸುದಿನ ಕಾಣೆನು ರಣಾಗ್ರದಲಿ (ಕುವ್ಯಾಶ. ೨-೪೮). ೧೧. ಬಾಣ. ೧೨. ಕಾವ್ಯ ಮೊದಲಾದುವುಗಳ ಒಂದು ಭಾಗ ; ಅಧ್ಯಾಯ ; ಪ್ರಕರಣ : ಒಂದು ಸರ್ಗಮನೊಂದು ಪದ್ಯಮನಲ್ಲದೊಡೊಂದು ಪಾದವನೋದಿದೊಡೆ ಅಂದಂದಿನೊಳೆಸಗಿದ ಪಾಪಂಗಳಂದಂದಿಗೆ ಪರಿಹರಿಸುವುವು (ಹದಿಬ. ೯-೪೨). ೧೩. ಶಿವನ ಒಂದು ಹೆಸರು. ೧೪. ಮೂರ್ಛೆ; ಮೋಹ. [ಸಂ.]

**ಸರ್ಗಬಂಧ** (ನಾ). [ಕಾವ್ಯಮೀ] ಎಂಟಕ್ಕಿಂತಲೂ ಹೆಚ್ಚು ಸರ್ಗಗಳನ್ನುಳ್ಳ, ಮಹಾಕಾವ್ಯಲಕ್ಷಣಗಳಿಂದ ಕೂಡಿದ ಕಾವ್ಯ ; ಮಹಾಕಾವ್ಯ: ದೊರೆವೆತ್ತ ಪದ್ಯದಿಂದಂ ವಿರಚಿಸಿದುದು ಸರ್ಗಬಂಧಮಕ್ಕುಂ ಕಾವ್ಯಂ (ಕಾವ್ಯಾವ. ೯೫೦). 'ಮಹಾಕಾವ್ಯ' ಪರಾ. [ಸಂ.]

**ಸರ್ಗಸ್ತ** 'ಸಗ್ಗಸ್ತ' ನೋ.

**ಸರ್ಜ$_1$** (ನಾ). ೧. ಒಂದು ಬಗೆಯ ಮರ ; ರಾಳದ ಮರ ; ಸಾಲವೃಕ್ಷ: "ಶಾ(ಸಾ)ಲಃ, ಸರ್ಜಃ – ಈ ೨ ಸಾಲವೃಕ್ಷಂ" (ಹಲಾಯು. ೩೨-೪೨). ೨. ರಾಳ. [ಸಂ.]

**ಸರ್ಜ$_2$, ಶರಜಾ** (ನಾ). ೧. ಸಿಂಹ : 'ಸರ್ಜಪಾರ್ಕೆ' ಪರಾ. **ಶರಜಾ:** ೨. ಒಂದು ಪದವಿ, – ಹುದ್ದೆ.

**ಶರಜಾರಾಯ** = ಒಂದು ನಿರ್ದಿಷ್ಟಪದವಿಯನ್ನು ಹೊಂದಿದವನು, – ಬಿರುದನ್ನು ಪಡೆದವನು : ರಾಯಸದ ಶಂಕರನಾರಣಯ್ಯಂಗೆ ಶರಜಾರಾಯನೆಂದು ಪೆಸರಿತ್ತುಚಿತಮಾದುದುಗೊರೆ ವೀಳ್ಯಂಗಳನಿತ್ತು . . . ಕಳುಪಲ್ (ಕೆಳನೃ. ೬-೨೯).

[← ಪಾರ. ಸರಜಾ, ಶರ್ಝಾ ; ಹಿಂ. ಸರಜಾ ; ಮರಾ. ಸರಜಾ, ಸರ್ಜಾ ; ಸರ್ಜಾರಾವ್, ಸರ್ಜೇರಾವ್ = ಒಂದು ಪದವಿ]

**ಸರ್ಜಕ** (ನಾ). = ಸರ್ಜ$_1$ ೧. [ಸಂ.]

**ಸರ್ಜಕ್ಷಾರ, ಸದ್ಯಕ್ಷಾರ** (ನಾ). (ಅಶುದ್ಧವಾದ) ಸೋಡಿಯಂ ಕಾರ್ಬೊನೇಟು ಎಂಬ ಖನಿಜದ್ರವ್ಯ ; **ಸರ್ಜಿಕಾಕ್ಷಾರ :** ಯವಕ್ಷಾರ, ಸರ್ಜಕ್ಷಾರ, ಜಟಾಮಾಂಸಿ ಇವನ್ನು ಬಗೆಯೊಂದಕ್ಕೆ ೧ ಪಲದಂತೆ ಹಾಕಿ (ಸಕವ್ಯ. ೪೪೧ ಪರಿ). **ಸದ್ಯಕ್ಷಾರ :** "ದ್ವಿಕ್ಷಾರ,– ಸದ್ಯಕ್ಷಾರ, ಯವಕ್ಷಾರ" (ಓಷಧಿ. ೭೫) ; ಸದ್ಯಕ್ಷಾರ, ಯವಕ್ಷಾರ, ಲೋಳಿಸರ . . . ಓಮ ಇವೆಲ್ಲವನ್ನು ಪ್ರತ್ಯೇಕ ಒಂದೊಂದು ಚೂರ್ಣಮಾಡಿ (ವಿಷವಿ. ೫೦) ; ಶುಂಠಿ, ಹಿಪ್ಪಲಿ, ಮೆಣಸು . . . ಸದ್ಯಕ್ಷಾರ ಸಹ ಸಮಾನಚೂರ್ಣಂ ಮಾಡಿ (ಸಕವ್ಯ. ೧೮೦). 'ಸಜ್ಜೀಕಾರ' ಪರಾ. [< ಸಂ. ಸರ್ಜಿಕ್ಷಾರ]

**ಸರ್ಜನ** (ನಾ). ಸೃಷ್ಟಿಸುವಿಕೆ ; ಸೃಜನ : ಋಷಿಯ ವರ್ಣನೆಯಂತೆ ಜಡಪ್ರಾಣಕ್ಕೆ ಈ ವಿಶ್ವಬ್ರಹ್ಮಾಂಡದ ಸರ್ಜನ ಧಾರಣಶಕ್ತಿಯಿಲ್ಲ (ಭಾರದ. ೪೩). [ಸಂ.]

**ಸರ್ಜಪಾರ್ಕೆ** (ನಾ). ಸಿಂಹದ ವೇಗ, – ಗತಿ : ತುರಂಗವೇಗದಿಂದಮಾ ತುರಂಗ ಸರ್ಜಪಾರ್ಕೆಯಂ ತುರಂಗದಂತೆ ನಿಲ್ಲಲಾ ಕರೀಂದ್ರ ಪೊದ್ದ ವಸ್ತ್ರದಾ ಸೆರಂಗನೌಕೆ ರಾವುತರ್ಕರಂಗಳೆತ್ತಿ ಭಾಪೆನಲ್ ವರಾಂಗನಾಕ್ಷಣಕ್ಕೆ ಪಿಂತಿರುಂಗಿಸಿರ್ದನಶ್ವಮಂ (ಬೀಳವಂ. ೧-೧೪೯). [ಸರ್ಜ$_2$ + ಪಾರ್ಕೆ]

**ಸರ್ಜರಸ** (ನಾ). ಸಾಲವೃಕ್ಷದ ಅಂಟು ; ಸಜ್ಜರಸ ; ಲೋಬಾನ : ಸರ್ಜರಸ ಕರ್ಪೂರವೆಂಬ ದಶಾಂಗಗಳಂ (ವಿವೇಕ. ೧೦೫). [ಸಂ.]

**ಸರ್ಜಾಂಗ** (ನಾ). ಸಿದ್ಧವಾದ ಅಂಗ ; ಸಜ್ಜಾದ ದೇಹ (?) : ಈಟಿಯ ಸುರಗಿಯ ಕುಂತದ ಕಟ್ಟಿದ ಕೈಗಳೊಳಗೆ ನಂಕಿಸಿದಸಿದರಿ ಸಬಳಂ ತೊಟ್ಟಾ ಸರ್ಜಾಂಗದಿಂದಂ ಕಟ್ಟಾಳುಗಳೈದೆವಂದರತಿಭರದಿಂದಂ (ಬೀಳವಂ. ೧-೩೦). [< ಸಜ್ಜು + ಅಂಗ$_2$]

**ಸರ್ಜಿಕಾಕ್ಷಾರ** (ನಾ). = ಸರ್ಜಕ್ಷಾರ. [ಸಂ.]

**ಸರ್ಜಿಕೆ** (ನಾ). = ಸರ್ಜಕ್ಷಾರ. [ಸಂ. ಸರ್ಜಿಕಾ]

**ಸರ್ಟಿಫಿಕೇಟ್** 'ಸರ್ಟಿಫಿಕೇಟು' ನೋ.

**ಸರ್ಟಿಫಿಕೇಟು, ಸರ್ಟಿಫಿಕೇಟ್** (ನಾ). ಅರ್ಹತಾಪತ್ರ ; ಪ್ರಮಾಣಪತ್ರ : ಇವನು ಪಾಸಾಗಿದ್ದಾನೆ ಒಳ್ಳೆಯ ಹುಡುಗ ಎಂದು . . . ಸರ್ಟಿಫಿಕೇಟನ್ನೂ ಕೊಡಬೇಕು (ಮುಂಗಾಮು. ೩೪). **ಸರ್ಟಿಫಿಕೇಟ್ :** ತೇರ್ಗಡೆಯಾಗಿ ಸರ್ಟಿಫಿಕೇಟ್ ಕೈಗೆ ಬಂದರೆ ಸಾಕಪ್ಪ (ಜೀವಾತ್ಮ. ೨೧೬). [← ಇಂ. Certificate]

**ಸರ್ತಿ** 'ಸರದಿ$_3$' ನೋ.

**ಸರ್ತು** 'ಸರದಿ$_3$' ನೋ.

**ಸರ್ದಾರ್** 'ಸರದಾರ' ನೋ.

**ಸರ್ದಾರ** 'ಸರದಾರ' ನೋ.

**ಸರ್ದಿ** 'ಸರದಿ$_2$' ನೋ.

**ಸರ್ದೇಶಮುಖಿ** 'ಸರದೇಶಮುಖಿ' ನೋ.

**ಸರ್ಪ** (ನಾ). ೧. ಹಾವಿನಂತೆ ಅಂಕುಡೊಂಕಾಗಿ ಚಲಿಸುವಿಕೆ ; ವಕ್ರಗಮನ. ೨. ಹರಿಯುವಿಕೆ ; ಚಲನೆ. ೩. ಹಾವು ; ಫಣಿ : "ಉರಗಂ ಭೋಗಿ ಸರೀಸೃಪಂ . . . ವಿಷಧರಂ ಸರ್ಪಂ ದ್ವಿಜಿಹ್ವಾಹ್ವಯಂ" (ವಸ್ತುಕೋ. ೧೯-೭) ; ಶ್ರೀ ಬಾಳಾ ಮೇಲ್ ಸಿಖಿ ಮೇಲೆ ಸರ್ಪದ ಮಹಾದನ್ನಾಗ್ರದುಳ್ ಸಲ್ಲವೋಲ್ ಸಾಮಾಮ್ನಾಲ ತಪೋಗ್ರದಿನ್ನು ನಡೆದೊಂ ನೂಱೆಂಟು ಸಂವತ್ಸರಂ . . . ಕಳನ್ನೂರನಂ ಬಾಲೇ ಪೆರ್ಗ್ಗೊರವಂ ಸಮಾಧಿ ನೆಱೆದೊನ್ (ಎಕ. II. ೨೨-೧ ; 700) ; ಹುತ್ತಕ್ಕೆ ಐಸು ಬಾಯಾದರೇನು ಸರ್ಪನಿರ್ಪುದು ಒಂದೇ ಸ್ಥಾನ (ಬಸವ. ೯೫೧) ; ಶಪಿಸದನಂದಗಸ್ತ್ಯಮುನಿ ಸರ್ಪಗತಿ ಸರ್ಪತ್ವವೆನೆ ಘಡ ಸರ್ಪ ನೀನಾಗೆಂದರು (ಕುವ್ಯಾಅ. ೧೩-೬೮) ; ಸರ್ಪನ ಕೂಡ ಸರಸವೇ? (ಗಾದೆ). 'ಕಾಲಸರ್ಪ', 'ಸರ್ಪದಷ್ಟ' ಪರಾ. ೪. ನಾಗಕೇಸರ ವೃಕ್ಷ. ೫. ಐದು ಮಂತ್ರಿನರಕಗಳಲ್ಲಿ ಒಂದು : ಸರ್ಪ ಕೂರ್ಮ ವಾಯಸ ಗೃಧ್ರ ಉಲೂಕವೆಂಬೈದು ಮಂತ್ರಿನರಕಂಗಳಿಂ ಸಂಯೋಜಿಸಿ ಪದ್ಮವೆಂಬರಸುನರಕವಿಹುದು (ವಿವೇಕ. ೧೮೦). ೬. [ಜ್ಯೋತಿ] ಆಶ್ಲೇಷಾನಕ್ಷತ್ರ : 'ಸರ್ಪನಕ್ಷತ್ರ' ಪರಾ. [ಸಂ.]

**ಸರ್ಪಕಂಕಣ** (ನಾ). ಹಾವನ್ನು ಕೈಕಡಗವಾಗಿ ಧರಿಸಿಕೊಂಡವನು ; ಶಿವ : ಬೊಮ್ಮಿದೇವನು ಸರ್ಪಕಂಕಣ [ಪಾಠಾಂ. ಕಟಕನ] ಭಕ್ತಿಯುಕ್ತನು (ಬಸಪು. ೩೦-೧). [ಸಂ.]

**ಸರ್ಪಕಾವಲು** 'ಸರ್ಪಗಾವಲು' ನೋ.

**ಸರ್ಪಗಂಧಿ** (ನಾ). ಒಂದು ಬಗೆಯ ಸಸ್ಯ : ಸೂತ್ರನಾಭಿ, ಸರ್ಪಗಂಧಿ, ಪಾತಾಳಗಂಧಿ, ಶಿವನಾಭಿವಳ್ಳಿ (ಮೈಔಗಿ. ೬೬-೧೩೪೧) ; ಇಲ್ಲಿ ಸರ್ಪಗಂಧಿ . . . ಎಂಬ ಗಿಡ ಬೆಳೆಯುತ್ತದೆ (ಹಸುಹೊ. ೧೬೪). [< ಸಂ. ಸರ್ಪಗಂಧಾ]

**ಸರ್ಪಗಮನ** (ನಾ). ಹಾವಿನಂತೆ ಅಂಕುಡೊಂಕಾದ ಗತಿ : ಎಲ್ಲೆಲ್ಲಿಂದಲೋ ಸರ್ಪಗಮನದಿಂದ ಕಣ್ಣು ಕೋರೈಸುವಂತೆ ಹೊಳೆದು ಬಂದು ಅದರ ಪ್ರವಾಹಕ್ಕೆ ಸೇರುತ್ತಿದ್ದ ಝರಿಗಳ ದಡಗಳನ್ನೂ . . . ಗರಿಕೆಯ ಹಾಸು ಅಲಂಕರಿಸಿತ್ತು (ಯೋಧವು. ೪೩). [ಸಂ.]

**ಸರ್ಪಗಾವಲು, ಸರ್ಪಕಾವಲು** (ನಾ). (ಆಲಂ) (ಸರ್ಪವು ಕಾಯುವಂತೆ) ಬಿಗಿಯಾದ ಕಾವಲು ; ವಿಶೇಷವಾದ ಕಾವಲು : ನನ್ನ ಮೇಲೆ ಸರ್ಪಗಾವಲಿಡುತ್ತಾಳೆ (ಹೂಹಣ್ಣು. ೬೬). **ಸರ್ಪಕಾವಲು :** ಸುಂದರಿ ಮಾತ್ರ ಅವಳನ್ನು ಗೋದಿಯ ಹಿಂದೆ ಸರ್ಪಕಾವಲಾಗಿ ಇರುವಂತೆ ಕೇಳಿಕೊಂಡಿದ್ದಳು (ಹಳ್ಳಿಹಾ. ೯೯). [ಸರ್ಪ + ಕಾವಲು (< ಕಾವಲ್$_1$)]

**ಸರ್ಪಣ** (ನಾ). ೧. ತೆವಳುವಿಕೆ ; ಜಾರುವಿಕೆ. ೨. ಅಂಕುಡೊಂಕಾದ ಚಲನೆ ; ವಕ್ರಗಮನ : "ಸರ್ಪಣ - ಡೊಂಕುನಡೆ" (ಕಾಶಕ್ಕ. ೭೬). ೩. ನೆಲಕ್ಕೆ ಸಮಾನಾಂತರವಾಗಿ ಹೋಗುವ ಬಾಣದ ಗತಿ. [ಸಂ.]

**ಸರ್ಪಣಿ** 'ಸರಪಳಿ' ನೋ.

**ಸರ್ಪತನ** (ನಾ). ಸರ್ಪವಾಗಿರುವಿಕೆ ; ಹಾವಾಗಿರುವುದು : ಸರ್ಪತನದನುಭವಕೆ ಕಡೆಯೆಂದಪ್ಪುದೆನೆ ಧರ್ಮಜನ ವರವಾಗ್ವರ್ಪಣದಲಹುದೆಂದನು (ಕುವ್ಯಾಅ. ೧೩-೭೮). [ಸರ್ಪ + - ತನ]

**ಸರ್ಪತುಂಡಿಕ** (ನಾ). ಹಾವಾಡಿಗ : "ಸರ್ಪತುಂಡಿಕನೆನಲು ಹಾವಾಡಿಗನೆನಿಸಿಕ್ಕು" (ಮಂಗರಾ. ೧೧೫-೫೮). 'ಅಹಿತುಂಡಿಕ' ಹೋ. [ಸಂ.]

**ಸರ್ಪದಷ್ಟ** (ನಾ). ೧. ಹಾವು ಕಚ್ಚುವಿಕೆ ; ಹಾವಿನ ಕಡಿತ : ವಸುಮಿತ್ರನಂಬೊಂಗೆ ಸರ್ಪದಷ್ಟಮಾದೊಡೆ (ವಡ್ಡಾರಾ. ೧೯-೨೨) ; ಹುತ್ತದ ಮೇಲಣ ರಜ್ಜು ಮುಟ್ಟಿದರೆಯೂ ಸಾವರು ಶಂಕಿತರಾದವರು ಸರ್ಪದಷ್ಟವಾದರೆಯೂ ಸಾಯರು ನಿಶ್ಶಂಕಿತರಾದವರು (ಬಸವ. ೭೭೧) ; ತಂದೆಗೆ ಸರ್ಪದಷ್ಟಮಿದಾದುದು (ಕಬಿಕಂ. ೨೮). ೨. ಹಾವಿನಿಂದ ಕಚ್ಚಿಸಿಕೊಂಡವನು : ಮಾಡದಿಂದಿಳಿದು ಬರುತ್ತುಂ ಸರ್ಪದಷ್ಟನಾಗಿ ಸತ್ತು (ಪಂರಾಮಾ. ೧೫-೯೨ ವ). ೩. [ಕಾಮಶಾ] ಉಪರತಿಯ ಪ್ರಕಾರಗಳಲ್ಲಿ ಒಂದು: ಸ್ತ್ರೀ ತನ್ನ ತಿಗಮಂ ತಿರುಪುತ್ತಾ ಉಪರತಿಯ ಮಾಡುವುದು ಮದನಯುದ್ಧಂ . . . ಅಚೇತನಮಪ್ಪ ತರುವಾಯದೊಳು ಸುವರ್ಣಸಲಾಕೆಯನೊತ್ತುವಂತೆ ಮಾಡುವುದು ಇದು ಸರ್ಪದಷ್ಟ (ಕಾಮಶಾ. ೨೩೯). [ಸಂ.]

**ಸರ್ಪದಷ್ಟೆ** (ನಾ). ಹಾವಿನಿಂದ ಕಚ್ಚಿಸಿಕೊಂಡವಳು : ಈ ಬಂಬೋಷ್ಟೆಯಂ ಸರ್ಪದಷ್ಟೆಯನೆನಗೆ ಮದುವೆ ಮಾಡ್ಪಿರಪ್ಪೊಡೆ ನಾಳೆ ನೇಸರ್ಮೂಡದ ಮುನ್ನಮೆ ವಿಷಾಪಹಾರಂ ಮಾಡಿದಪ್ಪೆಂ (ಸುಕುಮಾ. ೭-೮ ವ). [ಸಂ. ಸರ್ಪದಷ್ಟಾ]

**ಸರ್ಪನಕ್ಷತ್ರ** (ನಾ). [ಜ್ಯೋತಿ] ಆಶ್ಲೇಷಾನಕ್ಷತ್ರ : ಸರ್ಪನಕ್ಷತ್ರಸಂಯುತದ ಗುರುವಾರಮಾಗಿರ್ಪುದಿಂದು (ಜೈಮಿಭಾ. ೩೪-೨೧). [ಸಂ.]

**ಸರ್ಪಪರ್ಯಂಕ** (ನಾ). ಹಾವಿನ ಹಾಸಿಗೆ : "ಸರ್ಪಪರ್ಯಂಕಮೆನೆ ಹೇಳಿಗೆ" (ಮಂಗರಾ. ೧೧೫-೮). [ಸಂ.]

**ಸರ್ಪಪ್ರಸವನರ** (ನಾ). [ಜ್ಯೋತಿ] ಸರ್ಪಯೋಗದಲ್ಲಿ ಹುಟ್ಟಿದವನು : ಅಸುಖಿಯೆನಿಕ್ಕುಂ ಸರ್ಪಪ್ರಸವನರಂ (ಜಾತಕ. ೧೩-೧೯). [ಸಂ.]

**ಸರ್ಪಬಾಣ** (ನಾ). ಸರ್ಪಗಳನ್ನು ಉತ್ಪತ್ತಿ ಮಾಡುವ ಮಂತ್ರಾಸ್ತ್ರ; ಸರ್ಪಾಸ್ತ್ರ: ಕಲಿ ರಾಧೇಯನೆಚ್ಚನು ರೌದ್ರದರ್ಪದ ಸರ್ಪಬಾಣದಲಿ (ಕುವ್ಯಾಕ. ೨೫ ಸೂಚನೆ). [ಸಂ.]

**ಸರ್ಪಭುಕ್ಕು** (ನಾ). ೧. ಹಾವನ್ನು ತಿನ್ನುವ ದೊಡ್ಡ ಹಾವು ; ರಾಜಸರ್ಪ : "ರಾಜಸರ್ಪಃ, ಸರ್ಪಭುಕ್ - ಈ ೨ ಅರವಾ(ಹಾ)ವು" (ಹಲಾಯು. ೧೧೬-೨೧). ೨. ನವಿಲು. [ಸಂ. ಸರ್ಪಭುಜ್]

**ಸರ್ಪಭೂಷಣ** (ನಾ). ಹಾವುಗಳನ್ನು ಅಲಂಕಾರವಾಗಿ ಉಳ್ಳವನು ; ನಾಗಭೂಷಣ; ಶಿವ : ಸರ್ಪಭೂಷಣನೊಪ್ಪದಿಂದೊಪ್ಪಿ ಕುಳ್ಳಿರಲು (ಬಸರ. ೧-೪). [ಸಂ.]

**ಸರ್ಪಮತ್ಸರ** (ನಾ). ೧. ಹಾವಿನ ದ್ವೇಷ ; ಹಾವಿನ ಹಗೆ. ೨. (ಆಲಂ) ತಪ್ಪದೇ ಸಾಧಿಸುವ ದ್ವೇಷ : ಅಧಿಕಾರಶಾಹಿಯ ಸರ್ಪಮತ್ಸರದ ನೀತಿ ಇದು (ಆತ್ಮಾರ್ಪ. ೧೩೦). [ಸಂ.]

**ಸರ್ಪಯಜ್ಞ** (ನಾ). ಹಾವುಗಳನ್ನು ಬಲಿಕೊಡುವ ಯಾಗ ; ಮಹಾಭಾರತದಲ್ಲಿ ತನ್ನ ತಂದೆಯಾದ ಪರೀಕ್ಷಿತರಾಜನನ್ನು ಹಾವು ಕಚ್ಚಿ ಕೊಂದುದಕ್ಕೆ ಪ್ರತಿಯಾಗಿ ಅವುಗಳ ವಂಶವನ್ನು ನಾಶಮಾಡಲೆಂದು ಜನಮೇಜಯನು ಕೈಕೊಂಡ ಯಜ್ಞ: ಸರ್ಪಯಜ್ಞದಲಾದ ದುರಿತದರ್ಪವನು ಕೆಡೆಬೀಳಲೊಡೆಯಲು ತರ್ಪಣಾದಿ ಕ್ರಿಯೆಗಳಲಿ ಸಾಮರ್ಥ್ಯವಿಲ್ಲ (ಕುವ್ಯಾಅ. ೨-೭). [ಸಂ.]

**ಸರ್ಪಯೋಗ** (ನಾ). [ಜ್ಯೋತಿ] ಮೂರು ಪಾಪಗ್ರಹಗಳು ಮೂರು ಕೇಂದ್ರ ಸ್ಥಾನದಲ್ಲಿರುವ ಯೋಗ : ಕ್ರೂರತ್ರಯಮಿರೆ ಕೇಂದ್ರಾಗಾರತ್ರಿತಯದೊಳೆ ಸರ್ಪಯೋಗಂ (ಜಾತಕ. ೧೩-೯). [ಸಂ.]

**ಸರ್ಪರಾಜ** (ನಾ). ಹಾವುಗಳ ಒಡೆಯ ; ಆದಿಶೇಷ ; ವಾಸುಕಿ : "ವಾಸುಕಿಃ, ಸರ್ಪರಾಜಃ - ೨ ವಾಸುಕಿ ಎಂಬ ದೊಡ್ಡಹಾವಿನ ಹೆಸರು" (ಸಿದ್ಧಾಂತಿ. ೭೨).* [ಸಂ.]

**ಸರ್ಪರಾಯಿ** 'ಸರಬರಾಯಿ' ನೋ.

**ಸರ್ಪರೋಗ** (ನಾ). ಹಾವಿನ ಆಕಾರದಲ್ಲಿ ಚರ್ಮದ ಮೇಲೆ ಕಾಣಿಸಿಕೊಳ್ಳುವ, ಚರ್ಮ ಮತ್ತು ನರಮಂಡಲಗಳಿಗೆ ಸಂಬಂಧಿಸಿದ ಒಂದು ಬಗೆಯ ರೋಗ; ಸರ್ಪಸುತ್ತು ; ವಿಸರ್ಪಿ ; ಹರ್ಪಿಸ್ : ಅವರು ಸರ್ಪರೋಗದಿಂದ ನರಳುತ್ತಿದ್ದಾರೆ (ರೂಢಿ). [ಸಂ.]

**ಸರ್ಪರೋಗಿ** (ನಾ). ಚರ್ಮ ಮತ್ತು ನರಮಂಡಲಗಳಿಗೆ ಸಂಬಂಧಿಸಿದ ವಿಸರ್ಪಿ ಎಂಬ ರೋಗವುಳ್ಳವನು ; ಸರ್ಪಸುತ್ತುಳ್ಳವನು : ನಡೆನಾರಾಚದ ನೋವಿನ ನಡುಕಂ ಪಿರಿದಾಯ್ತು ಸರ್ಪರೋಗಿ [ಪಾಠಾಂ. ಸರ್ಪಯೋನಿ, ಸರ್ಪಯೋಗಿ, ಸರ್ಪರೋಗಿ]ಯ ಸೆರೆಯಂ ಬಿಡಿಸಿದವೊಲೆಚ್ಚು ಪಾಯ್ದುತ್ತೊಡನೊಡನೆ ಕದುಷ್ಣಕೃಷ್ಣರುಧಿರಜಲೌಘಂ (ಪಂಪಭಾ. ೧೨-೭). [ಸಂ. ಸರ್ಪರೋಗಿನ್]

**ಸರ್ಪಶರ** (ನಾ). = ಸರ್ಪಬಾಣ : ಆಗಳಳಿದುದು ಸರ್ಪಶರ (ಕುವ್ಯಾಕ. ೨೬-೩). [ಸಂ.]

**ಸರ್ಪಶೀರ್ಷ** (ನಾ). [ನಾಟ್ಯ] ಅಸಂಯುತ ಹಸ್ತಗಳಲ್ಲಿ ಒಂದು: ಅಸಂಯುತ ಹಸ್ತಗಳು ಯಾವುದೆಂದರೆ -೧. ಪತಾಕ, ೨. ತ್ರಿಪತಾಕ . . . ೧೩. ಸರ್ಪಶೀರ್ಷ . . . ೨೪. ತಾಮ್ರಚೂಡ (ಅಭಾಸ್ವ. ೪೮). [ಸಂ.]

**ಸರ್ಪಸುತ್ತು** (ನಾ). = ಸರ್ಪರೋಗ : ಸರ್ಪಸುತ್ತು ಬಂದವರು ತಿಂಗಳುಗಟ್ಟಲೆ ಬಾಧೆಯನ್ನು ಅನುಭವಿಸಬೇಕಾಗುತ್ತದೆ (ರೂಢಿ). [ಸರ್ಪ + ಸುತ್ತು]

**ಸರ್ಪಸೂರಣ** (ನಾ). ಒಂದು ಬಗೆಯ ಸಸ್ಯ : "ಛತ್ರಿ-ಸರ್ಪಸೂರಣ" (ಓಷಧಿ. ೫೮). [ಸಂ.]

**ಸರ್ಪಳಿ** 'ಸರಪಳಿ' ನೋ.

**ಸರ್ಪಾಕ್ಷಿ** (ನಾ). ಹಾವುಕಣ್ಣಿನ ಗಿಡ ; ನಂಜಾರೆಗಿಡ ; ಈಶ್ವರಿಹಂಬು : "ನಾಕುಲೀ, ಸುರಸಾ . . . ಛತ್ರಾಕೀ, ಸುವಹಾ - ೮ ಸರ್ಪಾಕ್ಷಿಗಿಡದ ಹೆಸರುಗಳು" (ಸಿದ್ಧಾಂತಿ. ೧೩೮). [ಸಂ.ಸರ್ಪಾಕ್ಷೀ]

**ಸರ್ಪಾಧ್ವರ** (ನಾ) = ಸರ್ಪಯಜ್ಞ : ಹೇಳಿದನು ಮುನಿಗಳಿಗೆ ಸರ್ಪಾಧ್ವರದ ಸಂಗತಿಯ (ಕುವ್ಯಾಆ. ೨-೧೩). [ಸಂ.]

**ಸರ್ಪಾಭರಣ** (ನಾ). ಹಾವಿನ ಆಭರಣ : ಪೇರುರದೊಳೊಪ್ಪುವ ಹೀರಾವಳಿಯ ಪದಕಪ್ರಕರಂ ಸರ್ಪಾಭರಣದಂತೆ ತೋಱುತ್ತಿರ್ದಪುದು (ನಂಬಿರ. ೪-೩೫). [ಸಂ.]

**ಸರ್ಪಾರಿ** (ನಾ). ೧. ಹಾವಿನ ವೈರಿ - ಶತ್ರು. ೨. ಮುಂಗುಸಿ. ೩. ನವಿಲು. ೪. ಗರುಡ. ೫. ಒಂದು ಬಗೆಯ ಸಸ್ಯ : "ಮುಂಗುಸಿಗಿಡ, ಪಾತಾಳಗರುಡ, ಸರ್ಪಾರಿ" (ವೃಕ್ಷಗಿ. ೫೮-೧೧೫). [ಸಂ.]

**ಸರ್ಪಾಶನ** (ನಾ). ೧. ಹಾವನ್ನು ತಿನ್ನುವಂತಹುದು. ೨. ನವಿಲು : "ಕೇಕೀ, ಶಿಖೀ . . . ಸರ್ಪಾಶನಃ , ಮಯೂರಃ, ಶಿಖಾವಳಃ, ಶ್ಯಾಮಕಂಠ(ಃ) - ಈ ೧೦ ನವಿಲ್" (ಹಲಾಯು. ೪೦-೮೮). [ಸಂ.]

**ಸರ್ಪಾಸ್ತ್ರ** (ನಾ). = ಸರ್ಪಬಾಣ : ಬಲವೈರಿಜಿತು ಘನಘೋರಸರ್ಪಾಸ್ತ್ರದಲಿ ಗೆಲಿದನು ಸಕಲ ಕಪಿಬಲವ (ತೊರರಾ. ೭-೧೫ ಸೂಚನೆ) ; ಆಗ ಕರ್ಣನು ಅರ್ಜುನನಿಗೋಸ್ಕರವೇ ಬಹುದಿನದಿಂದ ಕಾದಿಟ್ಟಿದ್ದ ಸರ್ಪಾಸ್ತ್ರವನ್ನು ತೆಗೆದು ಬಿಲ್ಲಿನಲ್ಲಿ ಹೂಡಿದನು (ವಚಭಾ. ೨೯೮). [ಸಂ.]

**ಸರ್ಪಿ** (ನಾ). ತುಪ್ಪ ; ಘೃತ: "ತುಪ್ಪಮಾಜ್ಯಂ ಘೃತಂ ಸರ್ಪಿಯಕ್ಕು" (ಮಂಗರಾ. ೫೪-೭) ; ಸುರಾಶರಧಿಯಾ ಪ್ರಮಾಣಮದೆಂಟುಲಕ್ಷಂ ಕುಶದ್ವೀಪಮಂತೆಸೆವ ಸರ್ಪಿ ಮಿಗೆ ಲಕ್ಷಮಿಾರೆಂಟು ಕ್ರೌಂಚದ್ವೀಪಮಾ ಗಣನೆ ದಧಿಶರಧಿ (ಚಬವು. ೧೫-೧೧). [< ಸಂ. ಸರ್ಪಿಸ್]

**ಸರ್ಪಿಣಿ** (ನಾ). ಹೆಣ್ಣುಹಾವು ; ನಾಗಿಣಿ : "ಪನ್ನಗೀ - ಸರ್ಪಿಣಿ" (ಓಷಧಿ. ೯೦) ; ಮುಳಿದೊಲ್ಮೆಯವಮಾನದಿಂದ ಕಣ್ಬನಿ ಚಿಮ್ಮಿ ನಿಲ್ಲದಲ್ಲಿಂ ನಡೆದಳಯ್ ಭರತನಂ ಬಗಿದಪ್ಪಿ ತುಳಿದ ಸರ್ಪಿಣಿಯಂತೆ ಮುಳಿಸಿನುರಿಯಿಂ ಪೊಗೆದು, ಸುಯ್ದು, ಹೆಡೆಯೆತ್ತಿ (ಶ್ರೀರಾಮಾ. ೨೨-೫೭೧). [ಸಂ. ಸರ್ಪಿಣೀ]

**ಸರ್ಪಿತ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು: ಸ್ಥಿರಹಸ್ತ, ಪರ್ಯಸ್ತ . . . ಸರ್ಪಿತ . . . ಸ್ವಸ್ತಿಕರೇಚಿತ - ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಲಾಸ್ಯರಂ. ೫-೭ ವ). [ಸಂ.]

**ಸರ್ಪಿತಕರಣ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : ಅಂಚಿತ ಪದಮಂ ಪಸರಿಸಿ ಕುಂಚಿತಶಿರಮಾಗಿ ಹಸ್ತಮಾ ತಡೆಯಿಂದಂ ಮಿಂಚುತ ರೇಚಿತಮಾಗಲ್ ವಂಚಿಸದಿಮ್ಮೆಯ್ಯೊಳಿಸಗೆ ಸರ್ಪಿತಕರಣಂ (ಲಾಸ್ಯರಂ. ೪-೧೪೩). [ಸಂ.]

**ಸರ್ಪು** 'ಸರುಪ' ನೋ.

**ಸರ್ಪೋಪಜೀವಿ** (ನಾ). ಹಾವಿನಿಂದ ಉಪಜೀವನ ನಡೆಸುವವನು; ಹಾವಾಡಿಗ: ಸರ್ಪೋಪಜೀವಿಯುಂದದಿ ಕೌಶಿಕಾಧಿಷ್ಠಿತಂ . . . ಅರಿದನಿಸಿತತಿ ಭೀಕರಾಕಾರದಿಂದ ಘೋರಾರಣ್ಯವು (ಪಚಿಕಾ. ೫-೧೯). [ಸಂ. ಸರ್ಪೋಪಜೀವಿನ್]

**ಸರ್ಫರಾಜು** 'ಸರಫರಾಜು' ನೋ.

**ಸರ್ಬ$_1$** 'ಸಬ್ಬ$_1$' ನೋ.

**ಸರ್ಬ$_2$** 'ಸಬ್ಬ$_2$' ನೋ.

**ಸರ್ಬಕೊಡಗಿ** 'ಸರ್ಬಗೊಡಗೆ' ನೋ.

**ಸರ್ಬಗೊಡಗೆ, ಸರ್ಬಕೊಡಗಿ** (ನಾ). ಸರ್ವಮಾನ್ಯವಾದ ದತ್ತಿ : ಹೊನ್ನಪ್ಪನವರು ಸರ್ಬಗೊಡಗ ಆಗಿ ಕೊಟ್ಟ ಯಿ ಕೊಡಗಿ (ಎಕ. IX, ಬೆಂಗಳೂ. ೯೭-೧೨ ; 1347). **ಸರ್ಬಕೊಡಗಿ** : ನಾಗಗವುಡಂಗೆ ಕೆಂಡನ ಕೆಱೆಯ ಚತುಸೀಮೆವೊಳಗಾಗಿ ಕೊಟ್ಟ ಸರ್ಬ್ಬಕೊಡಗಿ (ಎಕ. XI, ಹಿರಿಯೂ. ೧೮-೧೧ ; 1208).

[ಸರ್ಬ್ಬ$_2$ + ಕೊಡಗೆ (< ಕೊಡಂಗೆಯ್$_2$)]

**ಸರ್ಬಜ್ಞ** (ನಾ). ಎಲ್ಲವನ್ನೂ ತಿಳಿದವನು; ಸರ್ವಜ್ಞ : ಕಾವ್ಯಜ್ಞಂ ದೈವಜ್ಞಂ ಸರ್ಬ್ಬಜ್ಞಂ ಶ್ರೀರಾಜಗುರು ಕಳೇಶ್ವರದೇವಂ (ಶಾಸಪ. ೯೨). [ಸಂ.]

ಸರ್ಬಜ್ಞಚೂಡಾಮಣಿ = ಶ್ರೇಷ್ಠನಾದ ಜ್ಞಾನಿ; ಒಂದು ಬಿರುದು: ಯಾದವ ಕುಳಾಂಬರದ್ಯುಮಣಿ ಸರ್ಬಜ್ಞಚೂಡಾಮಣಿ ಮಲೆರಾಜರಾಜಂ (ಎಕ. XI, ದಾವಣ. ೫೫-೪೪ ; 1224) ; ಯಾದವಕುಲಾಂಬರದ್ಯುಮಣಿ ಸರ್ಬ್ಬಜ್ಞಚೂಡಾಮಣಿ ಮಲೆರಾಜರಾಜ . . . ಹೊಯ್ಸಳ ಭುಜಬಳ ಶ್ರೀ ವೀರಬಲ್ಲಾಳದೇವರಸರು (ಎಕ. VI, ಕಡೂರು. ೪೯-೩ ; 1291). [< ಸಂ. ಸರ್ವಜ್ಞ]

**ಸರ್ಬಣಂದಿ** (ನಾ). ಒಬ್ಬ ಜೈನಮುನಿಯ ಹೆಸರು : ಶ್ರೀ ಚಿಕುರಾ ಪರವಿಯ ಗುರವರ ಶಿಷ್ಯರ್ ಸರ್ಬಣನ್ದಿ (ಎಕ. II, ೩೭-೧ ; ಸು 750). [< ಸಂ. ಸರ್ವನಂದಿನ್]

**ಸರ್ಬಧಾರಿ** (ನಾ). ಅರವತ್ತು ಸಂವತ್ಸರಗಳಲ್ಲಿ ಇಪ್ಪತ್ತೆರಡನೆಯ ಸಂವತ್ಸರದ ಹೆಸರು; ಸರ್ವಧಾರಿ ಸಂವತ್ಸರ : ಅಲ್ಲಿಂ ಬಳಿಕ ಸರ್ಬ್ಬಧಾರಿ ಸಂವತ್ಸರದ ಮಾಘ ಬ ೩ ಬು ವೀರಯ್ಯಗೆ ಬರೆದಿದ್ದಲ್ಲಿ (ಎಕ. VI, ಕಡೂರು. ೪೯-೧೦ ; 1291).

[< ಸಂ. ಸರ್ವಧಾರಿನ್]

**ಸರ್ಬನಮಸ್ಯ** (ನಾ). ತೆರಿಗೆಗಳಿಂದ ಮುಕ್ತಗೊಳಿಸಿ, ಸರ್ವಮಾನ್ಯವಾದುದು; ಸರ್ವಬಾಧಾರಹಿತವಾದುದು : ಧಾರಾಪೂರ್ವ್ವಕಂ ಸರ್ಬ್ಬನಮಸ್ಯಮಾಗ ಬಿಟ್ಟ ಬನವಸೆನಾಡ ಕಂಪಣಂ ಮುಗುನ್ದ ಪನ್ನೆರಡಱ ಬಳಿಯ ಬಾಡ ಕುನ್ದವಿಗೆ ೧ (ಇಆ. IV, ೭೦೯-೩೩ ; 1075). [< ಸಂ. ಸರ್ವನಮಸ್ಯ]

**ಸರ್ಬಮಾನ್ಯ** (ನಾ). = ಸರ್ಬನಮಸ್ಯ : ಪೊಡವ ತಲೆವೊಕ್ಕ ಬರಣ ಹಾದರ XX ದಣ್ಣವುಣ್ಣಗೆ ಮುನ್ನಾಗಿ ಆವುದೂ ಇಲ್ಲದ ಸರ್ಬಮಾನ್ಯವಾಗಿ . . . ನಟ್ಟು ಕೊಟ್ಟ ಶಿಲಾಶಾಸನ (ಎಕ. IX, ಚನ್ನಪ. ೭೩-೩೯ ; 1318). [< ಸಂ. ಸರ್ವಮಾನ್ಯ]

**ಸರ್ಬರಸ** (ನಾ). ಒಬ್ಬಾತನ ಹೆಸರು ; IP ಇದು ಅಮೋಘವರ್ಷ ನೃಪತುಂಗನ ಹೆಸರಿರಬಹುದು : ಕನ್ನವಾಡ ಗಜ್ಜವಾಡ . . . ಸಾಮಿ ಸರ್ಬರಸ ಕೊಟೋರ್ (ಮೈಆರಿ. ೧೯೨೯, ೧೧೮-೨ ; ಸು. 820). [ಸರ್ಬ$_1$ + ಅರಸ$_1$]

**ಸರ್ಬಲಗ್ಗೆ** 'ಸಬ್ಬಲಗ್ಗೆ' ನೋ.

**ಸರ್ಬವ** 'ಸಬ್ಬವ' ನೋ.

**ಸರ್ಬವಿದ** (ನಾ). = ಸರ್ಬಜ್ಞ: ಕೇಳುವೆನು ನೀ ಸರ್ಬವಿದನೆಂದರಸ (ನಿಭಾಗ. ೧೧-೧೩-೧೦). [< ಸಂ. ಸರ್ವವಿದ್]

**ಸರ್ಬಸ್ವ, ಸಬ್ಬಸ** (ನಾ). ಎಲ್ಲ ಸ್ವತ್ತು ; ಸಮಸ್ತ ಆಸ್ತಿ ; ಸರ್ವಸ್ವ : ಬಗೆದೂಂ ಪೇಳದೊಡೇನೊ ವೈರಿನೃಪಸರ್ಬಸ್ವಂಗಳಂ ತಂದು ಚಕ್ರಿಗೆಗೊಟ್ಟಂಕದ ನಾಗವರ್ಮನಳವಂ . . . ಗನ್ಧಸಿಂಧೂರಘಟಾನೀಕಂಗಳೇಂ ಪೇಳವೇ (ನಾಂದೇಡ್. ೩-೧೭ ; 1047). **ಸಬ್ಬಸ** : ಚಲಮಂ ಬಿಡು ನೀನವನೊಳಗೆ . . . ಪಲರಾಯರ ಸಬ್ಬಸಮಂ ಕವರ್ದುರ್ಜ್ಜಿಸುವವರ ತಲೆವಣಿಯಂ ಮಣಿಯಿಸಿದಲಘುಭುಜಂ ವಿಕ್ರಮಕೌರವ ಜಯರಾಜಶಶಾಂಕನೊಳು (ಜಯಕಾ. ೬-೫). [< ಸಂ. ಸರ್ವಸ್ವ]

**ಸರ್ಬಾಂಗ** (ನಾ). ಪೂರ್ಣದೇಹ; ಸಮಸ್ತಶರೀರ : ಕರ್ಬೊನ್ನಿಂದಂ ವಿಧಾತ್ರಂ ಸಮೆದನಿವನನೆಂಬೊಂದು ಕಾರ್ಕಶ್ಯದಿಂದಂ ಸರ್ಬಾಂಗಂ ಕಣ್ಣಗುರ್ವಂ ಪಡೆಯಲ್ . . . ಒರ್ಬಂ ಬಂದಂ (ಕಾದಂಪೂ. ೧೭೭). [< ಸಂ. ಸರ್ವಾಂಗ]

**ಸರ್ಬಾಪದ** (ನಾ). ತೆರಿಗೆ ಮುಂತಾದ ಎಲ್ಲ ಬಗೆಯ ನಿರ್ಬಂಧ; ಸರ್ವಬಾಧೆ: ತಿರುಪೆರಿಭಟ್ಟರ್ಗ್ಗೆ ಸೆಟ್ಟಿ ಕೊಟ್ಟ ಸರ್ಬ್ಬಾಪದ ಪರಿಹಾರ (ಎಕ. IX (s), ಬಾಗೇಪ. ೧೦೨-೧; 10ನೆಯ ಶತ). [ಸರ್ಬ$_2$ + ಆಪದ. /ಸಂ. ಸರ್ವಾಪದ್]

**ಸರ್ಬಾಯ** (ನಾ). ಎಲ್ಲ ಬಗೆಯ ಆದಾಯ; ಸಮಸ್ತ ಉತ್ಪತ್ತಿ: ಸರ್ಬಾಯಸಹಿತವಾಗಿ ಕೊಟ್ಟ ಕೊಡಗಿ (ಎಕ. IX, ಬೆಂಗಳೂ. ೯೭-೧೫; 1347).

[< ಸಂ. ಸರ್ವಾಯ]

**ಸರ್ರನೆ** 'ಸಟ್ಟನೆ' ನೋ.

**ಸರ್ಲೆ, ಸಲ್ಲೆ, ಸಳ್ಳೆ** (ನಾ). ೧. ಒಂದು ಬಗೆಯ ಹಕ್ಕಿ : 'ದೊಡ್ಡಸರ್ಲೆಹಕ್ಕಿ' ಪರಾ. **ಸಲ್ಲೆ** : ೨. ಒಂದು ಬಗೆಯ ಸಸ್ಯ : ಸಲ್ಲೆ, ಸರಲಿ (ಮೈಶಿಗಿ. ೮-೧೩೫). **ಸಳ್ಳೆ** : ೨. "ಸಲ್ಲೆ, ಸಳ್ಳೇಗಿಡ, ಸರಳ" (ಸಸ್ಯನಿ. ೧೩). [< ಸಂ. ಸರಲ]

**ಸರ್ವ$_1$** (ನಾ). ಶಿವ; ಶರ್ವ : ಸತ್ಯಂಗಳುಕ್ಕಡಂ ಸರ್ವನರಮನೆಯೊಳಗೆ (ತಿರುರ. ದೇ. ೩-೬) ; ಮೂಡೆಯನಿಳುಪುತೆ ಸರ್ವನ ಬೆಸದಿಂ ಕೈವಿಡಿದೊಡಗೊಂಡೊಲವಿಂ ಬಂದಂ ಐಪಡಿಸುಖದಿಂ ಭಕ್ತಂ ನಿಂದಂ (ತಿರುನಾ. ದೇ. ೨೨೮-೪). [ಸಂ.]

**ಸರ್ವ$_2$** (ಸ). ಎಲ್ಲ; ಸಕಲ; ಸಮಸ್ತ: [ವಿ]ಶ್ವಾಮಿತ್ರಗೋತ್ರದವಂಗೆ ಸರ್ವ ಕೆ[ಲ]ಸದಲು ಸ್ವಥ(ತ)ಂತ್ರನಾಗಿ ಗಾವಕಾರಿಕೆ ಬಿಜೋರ ಮರ್ಯಾದೆ . . . ಆ ರಾಜರು ಕೊಟ್ಟರು (ಎಇ. XXVII, ೧೬೨-೮೨ ; 1256) ; ಸರ್ವಂ ಬ್ರಹ್ಮ ಶ್ರುತಿಮತದಿ (ಗಗತಾ. ೧೭-೨೩).

ಸರ್ವರು = ಎಲ್ಲರೂ; ಸಮಸ್ತಜನ : ಸರ್ವರೊಳೊಂದೊಂದು ನುಡಿಗಲಿತು ವಿದ್ಯದ ಪರ್ವತವೆ ಆದ ಸರ್ವಜ್ಞ (ಸರ್ವಜ್ಞ. ೨೫). **ಸರ್ವಸದಸ್ಯರ ಸಭೆ** = ಒಂದು ಸಂಘ ಅಥವಾ ಸಂಸ್ಥೆಯ ಎಲ್ಲ ಸದಸ್ಯರನ್ನೂ ಒಳಗೊಂಡ ಸಭೆ; ಮಹಾಧಿವೇಶನ : ಎಲ್ಲ ಸಂಘಸಂಸ್ಥೆಗಳವರೂ ಆಗಾಗ ಸರ್ವಸದಸ್ಯರ ಸಭೆಯನ್ನು ನಡೆಸಿ ಪರಸ್ಪರ ಅಭಿಪ್ರಾಯಗಳನ್ನು ವಿನಿಮಯಮಾಡಿಕೊಳ್ಳುವುದು ಒಳ್ಳೆಯದು (ರೂಢಿ). [ಸಂ.]

**ಸರ್ವಂಕಷ** (ಗು). ಎಲ್ಲವನ್ನೂ ಒಳಗೊಳ್ಳುವ; ಸರ್ವಶಕ್ತವಾದ: ತಾರಸಪ್ತಕದಲ್ಲಿ ರೌದ್ರಆಕ್ರಂದನವನ್ನು ಮಾಡಿದ ಕವಿ ಮರುಕ್ಷಣದಲ್ಲಿಯೆ ಕೆಳಗಿನ ಸಪ್ತಕಕ್ಕೆ ಸರ್ರನೆ ಇಳಿದು ಪುರಜನದ ಸರಳಶೋಕವನ್ನು ಹಾಡಿದ ಬಗೆ ಅವನ ಸರ್ವಂಕಷಪ್ರತಿಭೆಗೆ ನಿದರ್ಶನವಾಗಿದೆ (ಕಸಾಚ. ೯೭). [ಸಂ.]

**ಸರ್ವಂಗೋಡು** 'ಸರ್ವಾಂಗೋಡು' ನೋ.

**ಸರ್ವಂಸಹೆ** (ನಾ). ಎಲ್ಲವನ್ನೂ ಸಹಿಸುವವಳು; ಭೂದೇವಿ; ಭೂಮಿ: ಒರ್ವರೊರ್ವರನೊಡಬಡದೊಡಬಡಿಸದ ಗರ್ವಿತದಂಪತಿಗಳನು ಇರ್ವರನಿಳೆ ನುಂಗದೆ ಪೊಱುವುದಱಿಂದ ಸರ್ವಂಸಹೆಯೆನಿಸುವುದು (ಹದಿಬ. ೬-೧೦) ; ತನುಮುವದೀ ಸರ್ವಂಸಹೆಯ ಶಾಂತಿ ನೋಡ! (ಗೀವಿಂ. ೧೧೯-೨). [ಸಂ. ಸರ್ವಂಸಹಾ]

**ಸರ್ವಕರ್ತೃತ್ವ** (ನಾ). ಎಲ್ಲವನ್ನೂ ನಿರ್ಮಿಸುವ ಶಕ್ತಿ ; ಸರ್ವನಿರ್ಮಾಣಶಕ್ತಿ: ಶಿವನ ಸರ್ವಕರ್ತೃತ್ವ, ಸರ್ವಜ್ಞತ್ವ, ಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವ ಎಂಬ ಶಕ್ತಿಗಳು ಕ್ರಮೇಣ ಪಂಚಕಂಚುಕಗಳಾಗುತ್ತವೆ (ಭಾರದ. ೨೧೪). [ಸಂ.]

**ಸರ್ವಕುಷ್ಠ** (ನಾ). ಒಂದು ಬಗೆಯ ಕುಷ್ಠರೋಗ : ಅಳಲೆ, ಎಳ್ಳು, ಗೇರು . . . ಭಾವನೆಯಂ ಕೊಟ್ಟು ಜೇನುತುಪ್ಪದಿ ಮೆಲ್ಲಲು ಸರ್ವಕುಷ್ಠ ಮಾಣ್ಗುಂ (ವಿಷವಿ. ೮೭).

[ಸಂ.]

**ಸರ್ವಕ್ಷಾರ** (ನಾ). ೧. = ಸರ್ಜಕ್ಷಾರ. ೨. ಯವಕ್ಷಾರ ; ಪೆಟ್ಲುಪ್ಪು : ''ಯವಕ್ಷಾರಃ - ಸರ್ವಕ್ಷಾರ'' (ಓಷಧಿ. ೧೩೧). [ಸಂ.]

**ಸರ್ವಗ** (ನಾ). ೧. ಎಲ್ಲ ಕಡೆಯಲ್ಲಿಯೂ ಸಂಚರಿಸುವವನು; ಸರ್ವಾಂತರ್ಯಾಮಿ; ಪರಮಾತ್ಮ : ಸರ್ವೇಶ್ವರ ಸರ್ವಗ ದೇವದೇವ ಸರ್ವಜ್ಞ ನಮಸ್ತೇ (ಪಂಚತಂ. ೧೬೩-೧). ೨. ಶಿವ : ಸರ್ವಜ್ಞ ಸರ್ವಗ ಸರ್ವಸರ್ವೇಶ . . . ಶಿವ ಅವಧಾರು (ಬಸಪು. ೧-೬೬). ೩. ಬ್ರಹ್ಮ : ತನ್ನ ವರ್ಮವಚಿವೆನೆ ಮಿತ್ರನು ರಂಗ ನಿನ್ನಯ ಕೂರ್ಮೆವೆತ್ತವನೆ ಸರ್ವಗನು (ಶತಸಾಂ. ೪೫-೨೫). ೪. ವಿಷ್ಣು. [ಸಂ.]

**ಸರ್ವಗತ** (ನಾ). = ಸರ್ವಗ ೧ : ಉಮಾವಲ್ಲಭಂ ಗುರು ರಾಮನಾಥನು ಸರ್ವಗತನು (ಬಸಪು. ೫೧-೩೪) ; ಹರಿ ಸರ್ವಗತನಹುದು (ಕುಪ್ಪಾಗ. ೪-೫೬). [ಸಂ.]

**ಸರ್ವಗವತೆ** (ನಾ). ಎಲ್ಲವನ್ನೂ ಕಿತ್ತುಕೊಳ್ಳುವುದು; ಸರ್ವಸ್ವವನ್ನೂ ಅಪಹರಿಸುವುದು : ಮೂಡಲು ಹರಿದು ಮುಚಿದು ಸಮುದ್ರಸೇನನ ಸರ್ವಗವತೆಯಲಿ ತೆರಳಿಯಲ್ಲಿಂದ (ಕುಪ್ಪಾಸ. ೯-೯) ; ಎಲ್ಲಿಹವೊ, ಕಾಲ, ನೀನೆಲ್ಲಿಗವನವಿತೆ? ಇಂತಿಳಿಯ ಬದುಕಿನೇತರ ಸರ್ವಗವತೆ? (ಗಿಳಿವಿಂ. ೧೧೨-೨). [ಸರ್ವ$_2$ + ಕವತೆ$_1$ (< ಕವರ್ತೆ$_1$) ]

**ಸರ್ವಗ್ರಹಣ** (ನಾ). ಒಂದು ಬಗೆಯ ಅತಿಸಾರರೋಗ : ಅಜಾಮೋದ ಎಲವದ ಹಗಿನು . . . ಚೂರ್ಣವ ಮಾಡಿ ಮೊಸರಿಂ ಕಲಸಿಕೊಡಲು ಜ್ವರಾತಿಸಾರ ಸರ್ವ ಗ್ರಹಿಣಿಹತೆಣೆ ಸರ್ವಾತಿಸಾರ ಸಹ ಪರಿಹರಮಕ್ಕುಂ (ಸಕವ್ಯ. ೩೦೭). [ಸಂ.]

**ಸರ್ವಗ್ರಾಸ** (ಗು). ೧. ಸಂಪೂರ್ಣವಾಗಿ ನುಂಗುವ ; ಸಮಗ್ರವಾಗಿ ಆವರಿಸುವ: ಭಾದ್ರಪದ ಪೌರ್ಣಮೆ ಸರ್ವಗ್ರಾಸ ಚಂದ್ರಗ್ರಹಣಸಮಯದಲ್ಲಿ (ಕರ್ಣಾಅ. ೮೮). (ನಾ). ೨. ಎಲ್ಲವನ್ನೂ ನುಂಗುವಿಕೆ ; ಸಂಪೂರ್ಣವಾಗಿ ಆವರಿಸುವಿಕೆ. ೩. [ಜ್ಯೋತಿ] ಸೂರ್ಯ ಅಥವಾ ಚಂದ್ರನ ಪೂರ್ಣಗ್ರಹಣ: 'ಸರ್ವಗ್ರಾಸಂಗೊಳ್' ಪರಾ. [ಸಂ.]

**ಸರ್ವಗ್ರಾಸಂಗೊಳ್** (ಕ್ರಿ). ೧. ಸಂಪೂರ್ಣವಾಗಿ ನುಂಗು,— ಆಕ್ರಮಿಸು. ೨. ಪೂರ್ಣಗ್ರಹಣವಾಗುವಂತೆ ಮಾಡು. ೧, ೨ : ಕಂಚೆಂ ಗ್ರಹಣಮನದ ನಾಖಂಡಲದಿಙ್ಮುಖದೆ ಬಂದು ಸರ್ವಗ್ರಾಸಂಗೊಂಡತ್ತಪರಾದಿತ್ಯನ ಮಂಡಲಮಂ ಬಾಹುರಾಹು ಸತ್ಯಾಶ್ರಯನಾ (ಗದಾಯು. ೧-೨೬). [ಸರ್ವಗ್ರಾಸ + ಕೊಳ್$_1$]

**ಸರ್ವಗ್ರಾಸಿ** (ಗು). ೧. = ಸರ್ವಗ್ರಾಸ ೧ : ಧರ್ಮಪೋತಚ್ಯುತರ್ . . . ಸರ್ವಗ್ರಾಸಿ ಭೀಮಾಂತಕವದನಮಹಾಗರ್ತದೊಳ್ ಮಗ್ನರಾದರ್ (ಆದಿಪು. ೯-೫೮) ; ಆಷಾಢದಮವಾಸೆ ಸೋಮವಾರದಂದಿನ ಸರ್ವ್ವಗ್ರಾಸಿಸೂರ್ಯ್ಯಗ್ರಹಣದುತ್ತಮ ತಿಥಿಯೊಳ್ (ಸೌಇ. XX, ೨೪೮-೬೫ ; 1228). (ನಾ). ೨. ಎಲ್ಲವನ್ನೂ ನುಂಗುವಂತಹುದು,— ಕಬಳಿಸುವಂತಹುದು : ಚಂದ್ರಮನಂತೆ ಕಳೆ ಸಮನಿಸಿತ್ತನಗೆ ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯಾ (ಬಸವ. ೯). [ಸಂ. ಸರ್ವಗ್ರಾಸಿನ್]

**ಸರ್ವಜಯ** (ನಾ). ಒಂದು ಬಗೆಯ ಸಸ್ಯ : ಕ್ಯಾನ್ನಾಗಿಡ, ಚರೆಗುಂಡಿನ ಗಿಡ, ಸರ್ವಜಯ, ಹೂದಿಂಗಣ (ಪ್ರಜಿಗಿ. ೧೭-೨೯೯). [ಸಂ. ಸರ್ವಜಯಾ]

**ಸರ್ವಜಿತ** (ನಾ). ಎಲ್ಲವನ್ನೂ ಗೆದ್ದವನು : ವಿಶ್ವಜಿತನು ಧನುಜಿತನು ಸರ್ವಜಿತನು . . . ಕೂಡಲಸಂಗಯ್ಯನು (ಬಸವ. ೯೫೪). [ಸಂ. ಸರ್ವಜಿತ್]

**ಸರ್ವಜಿತು** (ಗು). ೧. ಎಲ್ಲವನ್ನೂ ಗೆದ್ದ; ಸಕಲವಿಜಯಿಯಾದ. ೨. ಅಸಮಾನವಾದ; ಅತ್ಯಂತ ಶ್ರೇಷ್ಠವಾದ. (ನಾ). ೩. ಅರವತ್ತು ಸಂವತ್ಸರಗಳಲ್ಲಿ ಇಪ್ಪತ್ತೊಂದನೆಯ ಸಂವತ್ಸರದ ಹೆಸರು : ಆ ವರುಷವೇ ಪ್ರಭವ . . . ಸರ್ವಜಿತು . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೧). [ಸಂ. ಸರ್ವಜಿತ್]

**ಸರ್ವಜ್ಞ** (ನಾ). ೧. ಎಲ್ಲವನ್ನೂ ಬಲ್ಲವನು; ಸರ್ವಜ್ಞಾನಿ : ಅಜ್ಞರವದಿರು ನೀವು ನೆಱೆ ಸರ್ವಜ್ಞರು (ಕುಪ್ಪಾಸ. ೧೧-೩೨); ಸರ್ವಮಯ ಸರ್ವಜ್ಞ ಸರ್ವನಿಯಾಮಕಾಚ್ಯುತನು (ಗಗತಾ. ೧೨-೭೭). ೨. ಪರಮಾತ್ಮ; ಪರಬ್ರಹ್ಮ : ಮೂಲಾವಿದ್ಯೆಗೆ ಗೋಚರವಾಗಿಯೂ ಆಶ್ರಯವಾಗಿಯೂ ಇರುವ ಶುದ್ಧಚೈತನ್ಯವೇ ಈಶ್ವರನು, ಸರ್ವಜ್ಞನು, ಸರ್ವೇಶ್ವರನು . . . ಎಂದು ಹೇಳಲ್ಪಡುವನು (ಹಿಂದಸಾ. ೨೦೦). ೩. ಶಿವ ; ಈಶ್ವರ : ''ಈಶಾನಃ . . . ಹರಃ, ಸರ್ವಜ್ಞಃ, ನೀಲಲೋಹಿತಃ - ಈ ೪೫ ಮಹಾದೇವರ ಪೆಸರ್'' (ಹಲಾಯು. ೩-೧೧); ಸರ್ವಜ್ಞನೆಂಬುವನು ಓರ್ವನೇ ಜಗಕೆಲ್ಲ (ಸರ್ವಜ್ಞ. ೨೩). ೪. ಬುದ್ಧ : ''ಸರ್ವಜ್ಞಃ, ಸುಗತಃ . . . ಮುನಿಃ - ೧೮ ಬುದ್ಧದೇವರ ಹೆಸರುಗಳು'' (ಸಿದ್ಧಾಂತಿ. ೧೬). ೫. ಜಿನ; ಅರ್ಹಂತ: ''ಆ ನಿರ್ವಾಣನಾಥನರುಹಂ ಶೌದ್ಧಂ ತ್ರಿಕಾಲವಿದ್ವೀತರಾಗಂ ಜ್ಞಾನವರ್ಧನಂ ಸರ್ವಜ್ಞನೆನೆ ಜಿನೇಂದ್ರಂ'' (ಮಂಗರಾ. ೭-೨೩) ; ಪ್ರಥಮದ್ವಿತೀಯಕಲ್ಪಾಮರೇಂದ್ರರಿರ್ವರುಂ ಸರ್ವಜ್ಞನುಭಯಪಾರ್ಶ್ವದೊಳುತ್ತರದಕ್ಷಿಣಾಭಿಮುಖರಾಗಿ . . . ಮಜ್ಜನಕುಜ್ಞುಗಂ ಗೆಯ್ದು (ಪುಷ್ಪಪು. ೧೧-೧ ವ). ೬. ಹದಿನೇಳನೆಯ ಶತಮಾನದ ಕನ್ನಡದ ಒಬ್ಬ ಪ್ರಸಿದ್ಧ ಕವಿಯ ಹೆಸರು ಮತ್ತು ಅವನ ಕಾವ್ಯದ ಅಂಕಿತ : ಸರ್ವಜ್ಞನೆಂಬವನು ಗರ್ವದಿಂದಾದವನೆ ಸರ್ವರೊಳೊಂದೊಂದು ನುಡಿಗಲಿತು ವಿದ್ಯದ ಪರ್ವತವೆ ಆದ ಸರ್ವಜ್ಞ (ಸರ್ವಜ್ಞ. ೨೬) ; ಸರ್ವಜ್ಞನ ತ್ರಿಪದಿಗಳಲ್ಲಿ ಕಥೆಯಿಲ್ಲ, ವರ್ಣನೆಯಿಲ್ಲ. ಆದರೆ ಸಮಗ್ರಜೀವನಕಥೆ ಇಲ್ಲವೆ ಜೀವನಧರ್ಮ ಅವುಗಳಲ್ಲಿ ರೂಪಗೊಂಡಿದೆ (ಕಸಾಚ. ೩೪೫).

**ಸರ್ವಜ್ಞಚೂಡಾಮಣಿ** = ಶ್ರೇಷ್ಠನಾದ ಜ್ಞಾನಿ; ಒಂದು ಬಿರುದು: ಸರ್ವಜ್ಞಚೂಡಾಮಣಿ ಮಲೆರಾಜರಾಜ ಮಲಪರೊಳು ಗಣ್ಡ ಗಣ್ಡಭೇರುಣ್ಡ (ಎಕ. XI, ಹೊಳಲ್ಕೆ. ೧೩೬-೨೧ ; 1307). [ಸಂ.]

**ಸರ್ವಜ್ಞತೆ** (ನಾ). ಎಲ್ಲವನ್ನೂ ತಿಳಿದಿರುವಿಕೆ; ಸರ್ವಜ್ಞತ್ವ : ಹರನ ಘನ ಶೌರ್ಯತೆಯು ನಂದೀಶ್ವರನ ಸರ್ವಜ್ಞತೆಯು ಭೃಂಗೀಶ್ವರನ ಶಿವಲಿಂಗೈಕಭಾವನೆ (ಬಸಪು. ೫೩-೫) ; ದೇವ ಕೇಳ್ನಿನ್ನ ಸರ್ವಜ್ಞತೆಯನೆನಗೆ ತೋಱಿಸಿದೆ ಲೇಸಾಯ್ತು ನಿನ್ನ ಕೃಪೆ (ಜೈಮಿಭಾ. ೧೩-೨೯). [ಸಂ. ಸರ್ವಜ್ಞತಾ]

**ಸರ್ವಜ್ಞತ್ವ** (ನಾ). = ಸರ್ವಜ್ಞತೆ : ಸರ್ವಜ್ಞತ್ವ ಸರ್ವತೃಪ್ತತ್ವ . . . ಅಲುಪ್ತಶಕ್ತಿತ್ವ ಎಂಬ ಚಿದಂಗ ಷಟ್‌ಸ್ಥಲವ (ಉದ್ಧವಾ. ೪-೧೨) ; ತಾರತಮ್ಯ ವಿಶ್ರಾಂತಿಯೇ ಪರ್ಯವಸಾನವೇ ಸರ್ವಜ್ಞತ್ವ (ಹಿಂದಸಾ. ೮೭). [ಸಂ.]

**ಸರ್ವಜ್ಞಭಟ್ಟಾರಕ** (ನಾ). ಒಬ್ಬ ಜೈನಮುನಿಯ ಹೆಸರು : ವೇಗೂರಾ ಪರಮಪ್ರಭವರಿಷಿಯರ್ಸರ್ವಜ್ಞಭಟ್ಟಾರಕರ್ (ಎಕ. II, ೧೩-೨ ; 700). [ಸಂ.]

**ಸರ್ವತಂತ್ರಸ್ವತಂತ್ರ** (ನಾ). ಸಮಸ್ತಶಾಸ್ತ್ರಗಳಲ್ಲಿ ನಿಷ್ಣಾತನಾದವನು ; ಒಂದು ಬಿರುದು : ಈತನಿಗೆ ಕವಿತಾರ್ಕಿಕಸಿಂಹ, ಸರ್ವತಂತ್ರಸ್ವತಂತ್ರ, ವೇದಾಂತಾಚಾರ್ಯ ಎಂಬ ಬಿರುದುಗಳಿವೆ (ಭಾರದ. ೩೧೦). [ಸಂ.]

**ಸರ್ವತಃಶ್ರೋತ್ರ** (ನಾ). ಎಲ್ಲವನ್ನೂ ಕೇಳಬಲ್ಲವನು; ಸಮಸ್ತವನ್ನೂ ಆಲಿಸುವವನು : ನಾನಿಹೆನು ಇಹನೆಂಬ ನಿರ್ವಿಷಯದರಿವಿನೊಳು ಏಕನಾಗಿ ಸರ್ವತಶ್ಚಕ್ಷುವೆನೆ ಸರ್ವತಃಶ್ರೋತ್ರನೆನೆ ಮೂಕನಾಗಿ (ಮಲದೇ. ೫೨-೧೧). [ಸಂ.]

**ಸರ್ವತಶ್ಚಕ್ಷು** (ನಾ). ಎಲ್ಲ ಕಡೆಗೂ ದೃಷ್ಟಿಯುಳ್ಳವನು; ಸಮಸ್ತವನ್ನೂ ನೋಡಬಲ್ಲವನು : ನಾನಿಹೆನು ಇಹನೆಂಬ ನಿರ್ವಿಷಯದರಿವಿನೊಳು ಏಕನಾಗಿ ಸರ್ವತಶ್ಚಕ್ಷುವೆನೆ ಸರ್ವತಃಶ್ರೋತ್ರನೆನೆ ಮೂಕನಾಗಿ (ಮಲದೇ. ೫೨-೧೧). [ಸಂ. ಸರ್ವತಶ್ಚಕ್ಷುಸ್]

**ಸರ್ವತೋಭದ್ರ** (ನಾ). ೧. ಎಲ್ಲ ಕಡೆಯಲ್ಲಿಯೂ ಎಲ್ಲ ದೃಷ್ಟಿಯಿಂದಲೂ ಪ್ರಶಸ್ತವಾದುದು, — ಮಂಗಳಕರವಾದುದು : ಈ ವರ್ಧಮಾನಂ ನಯನಾನಂದವರ್ಧಮಾನಮಾದುದೀ ಸರ್ವತೋಭದ್ರಂ ಸರ್ವತೋಭದ್ರಮೆಂಬ ವಾಕ್ಯಾರ್ಥಮನನ್ವರ್ಥಂ ಮಾಡಿದುದು (ಮಲ್ಲಿಪು. ೫-೬೨). ೨. ಸರ್ವಮಂಗಳ ಮಯನಾದವನು; ಶಿವ: ಮೃತ್ಯುಂಜಯ ಸಮಂಜಸ ಸರ್ವತೋಭದ್ರ ಭೀಮ ಭರ್ಗ ಕಪರ್ದಿ . . . ಕರುಣಿಸುವುದು (ಕುಪ್ಪಾಅ. ೬-೯೦). ೩. ಬೇವಿನ ಮರ; ನಿಂಬವೃಕ್ಷ. ೪. ಒಂದು ಬಗೆಯ ಸೇನಾವ್ಯೂಹ : ಅವನು ಮರುದಿನ ಕೌರವಸೇನೆಯನ್ನು ಸರ್ವತೋಭದ್ರವ್ಯೂಹವಾಗಿ ರಚಿಸಿ ತಾನು ಅದರ ಮುಖದಲ್ಲಿ ನಿಂತನು (ವಚಭಾ. ೩೦೨). ೫. ಐದು ಬಗೆಯ ವಾಸ್ತುರಚನೆಗಳಲ್ಲಿ ಒಂದು; ನಾಲ್ಕುದಿಕ್ಕಿಗೂ ಒಂದೊಂದು ಬಾಗಿಲುಳ್ಳ ಚಚ್ಚೌಕವಾದ ಅರಮನೆ, ದೇವಾಲಯ ಮುಂತಾದುದು : ಸುತ್ರಾಮನ ಸೂತ್ರಧಾರನಾಗಿಯುಂ ಕಲ್ಪಜರೆ ಶಿಲ್ಪಿಗಳಾಗಿಯುಂ ಸಮೆದ ಚೆಲ್ವಿಂಗೆ ಸರ್ವತೋಭದ್ರಮೆನಿಸಿದ ಸರ್ವತೋಭದ್ರಂಗಳೊಳಂ (ಆದಿಪು. ೬-೧೦೬ ವ); ಈ ಸರ್ವತೋಭದ್ರಂ ಸರ್ವತೋಭದ್ರಮೆಂಬ ವಾಕ್ಯಾರ್ಥಮನನ್ವರ್ಥಂ

ಮಾಡಿದುದನುತ್ತುಂ (ಮಲ್ಲಿಪು. ೫-೮೨). ೬. ಎಂಟು ಬಗೆಯ ಚಿತ್ರರಚನೆಗಳಲ್ಲಿ ಒಂದು; ಚಚ್ಚೌಕವಾದ ಚಿತ್ರಪತ್ರ : ಶಿಶು ಸಕಲಂ ಸ್ವಸ್ತಿಕಂ ವರ್ಧಮಾನಂ ಸರ್ವತೋಭದ್ರಂ ಕಾಂತ್ರಂ ಮಹಾಕಾಂತಂ ಚಿತ್ರೋತ್ಸವಮೆಂಬೆಂಟುಂ ಪತ್ರಂಗಳೊಳಂ . . . ಅಪೂರ್ವಭಿತ್ತಿಯಂ ತಳೆದು (ಚಂದ್ರಪ್ರ. ೧೫-೭೦). ೭. [ಕಾವ್ಯಮೀ] ಚಿತ್ರಕಾವ್ಯದ ಗತಿಚಿತ್ರಗಳ ಪ್ರಭೇದಗಳಲ್ಲಿ ಒಂದು; ಎಡದಿಂದ ಬಲಕ್ಕೆ, ಬಲದಿಂದ ಎಡಕ್ಕೆ, ಮೇಲಿನಿಂದ ಕೆಳಕ್ಕೆ, ಕೆಳಗಿನಿಂದ ಮೇಲಕ್ಕೆ ಹೀಗೆ ಯಾವ ರೀತಿಯಿಂದ ಓದಿದರೂ ಒಂದೇ ತೆರನಾದ ಪಾಠವನ್ನು ಹೊಂದಿರುವ ಒಂದು ಗತಿಚಿತ್ರ; IP ಇದು ಚೌಕಾಕಾರದ ರಚನೆಯಾಗಿದ್ದು ಅಡ್ಡಲಾಗಿ ಎಂಟು ಮನೆ ಮತ್ತು ಮೇಲಿನಿಂದ ಕೆಳಕ್ಕೆ ಎಂಟು ಮನೆಗಳಿರುತ್ತವೆ. ಒಂದು ಮನೆಗೆ ಒಂದು ಅಕ್ಷರದಂತೆ ಬರೆದಿರುತ್ತದೆ : ಶರಶೂಲಚಾಪ . . . ಮುರಜಂ ಗೋಮೂತ್ರಿಕೆ ಪುಷ್ಕರಮರ್ಧಭ್ರಮಣ ಸರ್ವತೋಭದ್ರಂಗಳ್ . . . ನೆಗಳ್ದುಂ ಪಲವುಂ (ಕಾವ್ಯಾವ. ೧೯೪). ೮. ಸರ್ವತೋಭದ್ರ ಎಂಬ ಚಿತ್ರಕಾವ್ಯದ ಗತಿಚಿತ್ರದ ರೀತಿಯ ಚೆಂಡಿನಾಟ: ನೆಗಟ್ದ ಮಣ್ಣಳಮಾಳೆ . . . ಬಗೆವೊಡರಿದಪ್ಪ ಸರ್ವತೋಭದ್ರಮುದ್ಭವಟಿಂ ಚಕ್ರವ್ಯೂಹಂ ಬಲ್ಮೆಗಳಂ ಪೊಗಟೆ ಸಲ್ಪಕ್ಕ ಪೆಱವು ದುಷ್ಕರದೆಟೆಪಂಗಳನಶ್ರಮದಿನೆಟೆಯೊಳ್ ಜಗದೊಳೆಟೆವಬೆಡಂಗನೊರ್ವನೆ ಬಲ್ಲ XXX (ಎಕ. II(R), ೧೬೩-೧೧೨ ; 982). ೯. [ನಾಟ್ಯ] ಹತ್ತು ಬಗೆಯ ನೃತ್ಯಬಂಧಗಳಲ್ಲಿ ಒಂದು : ತಾಂಡವ ನಾಂಟ್ಯ ನೃತ್ಯ ಲಾಸ್ಯ ಗುಂಡಿಲ ಪೆಕ್ಕಣ ಲಚ್ಚಣ ಅಪರಿಪಾತ್ರ ಸುಪಾತ್ರ ಸರ್ವತೋಭದ್ರಯೆಂಬ ದಶಪಾತ್ರಂಗಳ ತೋಱಿ (ಪುರಪು. ೧-೭೦ ವ). ೧೦. [ಜೈನ] ಮಕುಟಬದ್ಧರಾದ ರಾಜರು ಜಿನನಿಗೆ ಮಾಡುವ ಮಹಾಪೂಜೆ; ಚತುರ್ಮುಖಪೂಜೆ : ಸಮಸ್ತಧಾರ್ಮಿಕಜನಂಗಳಂ ಬರಿಸಿ ಸರ್ವತೋಭದ್ರಮೆಂಬ ಮಹಾಮಹಿಮೆಯಂ ಮಹೋತ್ಸವದಿಂದೆಂಟುದಿವಸಂಬರಂ ಮಾಡಿ (ಆದಿಪು. ೧೬-೬೨ ವ). ೧೧. ಒಂದು ಬಗೆಯ ಉಪವಾಸವ್ರತ: ಸರ್ವತೋಭದ್ರ ಸಿಂಹವಿಕ್ರೀಡಿತಂಗಳೆಂಬ ತಪದೊಳ್ ನೆಗಟ್ದು (ಆದಿಪು. ೩-೫೭ ವ). [ಸಂ.]

**ಸರ್ವತೋಭದ್ರಾಸನ** (ನಾ). ೧. ಸರ್ವಮಂಗಳಮಯವಾದ ಪೀಠ: ಪುರೋಹಿತನು ಧರ್ಮರಾಜನನ್ನೂ ದ್ರೌಪದಿಯನ್ನೂ ಹುಲಿಯ ಚರ್ಮ ಹಾಸಿದ್ದ ಸರ್ವತೋಭದ್ರಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಕ್ಕೆ ಮುಂಚೆ ಮಾಡಬೇಕಾದ ಕರ್ಮಗಳನ್ನು ನೆರವೇರಿಸಿದನು (ವಚಭಾ. ೩೩೧). ೨. [ಯೋಗ] ಒಂದು ಬಗೆಯ ಆಸನ: ಯೋಗಯೋಗ್ಯಾಸನಗಳಲ್ಲಿ ಸರ್ವತೋಭದ್ರಾಸನ . . . ಅರ್ಧಾಸನಾದಿ ಯೆಂಭತ್ತಾಲ್ಕಾಸನಭೇದಗಳಂ (ವಿವೇಕ. ೧೯೪). [ಸಂ.]

**ಸರ್ವತೋಭದ್ರೆ** (ನಾ). ೧. ಮಧುಪರ್ಣಿಕೆ; ಶಿವನೀಮರ : "ಗಂಭಾರೀ, ಸರ್ವತೋಭದ್ರಾ . . . ಕಾಶ್ಮರ್ಯ: — ೭ ಶೀವನಿಯ ಮರದ ಹೆಸರು" (ಸಿದ್ಧಾಂತಿ. ೧೨೦). ೨. ನಟಿ ; ನರ್ತಕಿ. [ಸಂ. ಸರ್ವತೋಭದ್ರಾ]

**ಸರ್ವತೋಮುಖ** (ಗು). ೧. ಎಲ್ಲ ಬಗೆಯ; ಸಮಗ್ರವಾದ : ಮಡದಿಯ ರೊಳೆಣಿಸ ಪತಿಗೊಡಬಡುವುದು ಗಡ ಸರ್ವತೋಮುಖಸ್ವಾತಂತ್ರ್ಯಂ (ಶಾಕುಂತ. ೭೨-೧೨೭). (ನಾ). ೨. ಎಲ್ಲಕಡೆ; ಎಲ್ಲ ಮಗ್ಗುಲು,—ಪಾರ್ಶ್ವ : ತುರಗದೆಡಬಲ ಗಜದ ಸಮ್ಮುಖ ತರುಣಿಯರುಗಳ ಸರ್ವತೋಮುಖ ಹಿರಿದು ದುರ್ಜನನಿದ್ದ ದೇಶವದೆಯ್ದೆ ವ್ಯಾಘ್ರಮುಖ . . . ಅಲ್ಲಿಹುದುಚಿತವಲ್ಲ (ಕುವ್ಯಾಉ. ೩-೬೭). ೩. ಸಮಗ್ರವಾದುದು; ಸಂಪೂರ್ಣವಾದುದು : ಸರ್ವತೋಮುಖವಾಗಿ ಈ ದೇಶದ ಪ್ರಗತಿಯನ್ನು ಸಾಧಿಸಿದ ಕೀರ್ತಿ ಈ ಸಂಸ್ಥೆಗೆ ಸೇರತಕ್ಕದ್ದು (ಪಂಚಪಂ. ೧೬೨). ೪. ಎಲ್ಲ ಕಡೆಗೂ ಮುಖಗಳುಳ್ಳವನು; ಸರ್ವವ್ಯಾಪಿಯಾದವನು; ಪರಮಾತ್ಮ : ಸರ್ವತೋಮುಖ ಸರ್ವಪೂಜಿತ ಸರ್ವಸಾಧಕ ಸರ್ವಗುಣನಿಲಯ . . . ಸರ್ವದುಃಖಾ ಪಹ ಮಹೇಶ್ವರ ಕರುಣಿಸುವುದು (ಕುವ್ಯಾಅ. ೬-೮೪). ೫. ನೀರು. ೬. ಬ್ರಹ್ಮ. ೭. ಶಿವ. ೮. ಆತ್ಮ. ೯. ಅಗ್ನಿ. ೧೦. ಸ್ವರ್ಗ. ೧೧. ಆಕಾಶ. [ಸಂ.]

**ಸರ್ವತ್ರ** (ಅ). ೧. ಎಲ್ಲ ಕಡೆಯಲ್ಲಿಯೂ; ಎಲ್ಲ ಸ್ಥಳಗಳಲ್ಲಿಯೂ : ಮೌನಂ ಸರ್ವತ್ರಸಾಧನಂ (ಗಾದ). ೨. ಯಾವಾಗಲೂ; ಎಲ್ಲ ಕಾಲದಲ್ಲಿಯೂ. [ಸಂ.]

**ಸರ್ವತ್ರಗಾಮಿ** (ನಾ). ಎಲ್ಲ ಕಡೆಗೂ ಹೋಗುವಂತಹುದು; ಸರ್ವವ್ಯಾಪಿ ಯಾದುದು : ಮುಖದ ಕಾಂತಿಯಲ್ಲಿ ಎರಡು ಭಾವಗಳು ಅನಿರ್ವಚನೀಯವಾಗಿ ಶೋಭಿಸುತ್ತಿದ್ದುವು. ಮೊದಲನೆಯದು, ಸರ್ವತ್ರಗಾಮಿಯಾದ ಬುದ್ಧಿಯ ಪ್ರಭಾವ; ಎರಡನೆಯದು ಅತ್ಯಂತವಾದ ಆತ್ಮಗರಿವೆ (ಕಪಾಕುಂ. ೪೫). [ಸಂ. ಸರ್ವತ್ರಗಾಮಿನ್]

**ಸರ್ವಥಾ** (ಅ). ೧. ಎಲ್ಲ ರೀತಿಯಿಂದಲೂ; ಸಂಪೂರ್ಣವಾಗಿ; ಸಮಗ್ರವಾಗಿ: ಪ್ರಭುಗಳು ಆಗ ಕುಶಾಲಿಗೆಂದ ಮಾತು ಸರ್ವಥಾ ನಿಜವಾಯಿತು (ಶಾಂತಲಾ. ೧೨೩). ೨. ಎಲ್ಲ ಕಾಲದಲ್ಲಿಯೂ; ಯಾವಾಗಲೂ. ೩. ಎಷ್ಟುಮಾತ್ರಕ್ಕೂ; ಸ್ವಲ್ಪವಾದರೂ ಕೂಡ; ಕಿಂಚಿತ್ತೂ : ಅಲ್ಲಾಡೋಣವು ಆಕಾಶದೊಳಗಿನ ಚಂದ್ರನಿಗೆ ಸರ್ವಥಾ ಇರುವುದಿಲ್ಲ (ಭಾಸ್ಕೃತ. ೬೨). ೪. ಖಂಡಿತವಾಗಿಯೂ, ನಿಶ್ಚಯ ವಾಗಿಯೂ : ದೇವರನ್ನು ಯಾರೂ ನೋಡಿಲ್ಲ ; ಆದರೆ ಇಷ್ಟರ ಮೇಲಿಂದಲೇ ಆತನು ಇಲ್ಲ ಎಂದು ಸರ್ವಥಾ ಊಹಿಸಲಾಗದು (ಮುಂಬಯಿ. ೪-೫೮). "ಸಮವಾಕ್ಯಮುಂ ಸರ್ವಸತ್ಯ ವಿಶ್ವತೆಯನುಕ್ರಮದಿಂದ ಸರ್ವಥಾ ಶಬ್ದದೊಳು ಸಲ್ಗು" (ಮಂಗರಾ. ೧೫೫-೭೦). [ಸಂ.]

**ಸರ್ವದ** (ನಾ). ಎಲ್ಲವನ್ನೂ ಕೊಡುವವನು; ಪರಮಾತ್ಮ : ಆಮೆಲ್ಲರುಂ ಪಾಲ್ಗಡಲ ತಡಿಗೆ ಪೋಗೀಗಳಾ ವಿಷ್ಣುವಂ ಸರ್ವದನಂ ಪೆಂಪಿಂದಮಾರಾಧಿಸಿ ಧರಣಿಯ ವೃತ್ತಾಂತಮಂ ಬಿನ್ನವಿಪ್ಪಂ (ವಿಷ್ಣುಪು. ೫-೧-೩೭). [ಸಂ.]

**ಸರ್ವದಮನ** (ನಾ). ೧. ಎಲ್ಲವನ್ನೂ ನಿಗ್ರಹಿಸುವವನು. ೨. ಶಕುಂತಲೆ ಮತ್ತು ದುಷ್ಯಂತರ ಮಗನಾದ ಭರತಚಕ್ರವರ್ತಿಗೆ ಬಾಲ್ಯದಲ್ಲಿದ್ದ ಹೆಸರು: ನಿನಗೆ ಋಷಿಗಳು ಸರ್ವದಮನನೆಂದು ಹೆಸರಿಟ್ಟದ್ದು ಯುಕ್ತವಾದದ್ದೇ (ಶಾಕುಂತ.೧೦೪-೧೮). [ಸಂ.]

**ಸರ್ವದಾ** (ಅ). ಯಾವಾಗಲೂ; ಸದಾಕಾಲದಲ್ಲಿಯೂ : ನೀನು ಸರ್ವದಾ ಇದೇ ಯೋಚನೆಯಲ್ಲಿದ್ದರೆ ಯಾವ ಕೆಲಸವೂ ಆಗುವುದಿಲ್ಲ (ರೂಢಿ). [ಸಂ.]

**ಸರ್ವಧಾರಿ** (ನಾ). ೧. ಅರುವತ್ತುಸಂವತ್ಸರಗಳಲ್ಲಿ ಇಪ್ಪತ್ತೆರಡನೆಯದು: ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೨೩ನೇ ಸರ್ವ್ವಧಾರಿಸಂವತ್ಸರದ ಆಶ್ವೀಜ ಬಹುಳ[ಳ] ಆದಿವಾರದಂದು . . . ಬಿಟ ಕರಿಯ ಕೆಯಿ (ಸೌಇಇ. VIII, ೩೭೨-೧೦ ; 1099). ೨. ಶಿವ. [ಸಂ. ಸರ್ವಧಾರಿನ್]

**ಸರ್ವನಮಶ್ಯ** (ನಾ). ಸರ್ವಮಾನ್ಯವಾದುದು; ಎಲ್ಲ ತೆರಿಗೆಗಳಿಂದ ಮುಕ್ತವಾದುದು : ಶ್ರೀಮದಗ್ರಹಾರ ಪಟ್ಟಲ ನಾಲ್ನೂಱಿರ್ಪ್ಪದಿಂಬರ ಕೈಯ್ಯೊಳ್ ಸ್ನಾನಶಕ್ತಿಪಣ್ಡಿತರ್ ದ್ರವ್ಯಪೂರ್ವ್ವಕದಿಂ ಸರ್ವ್ವನಮಶ್ಯಮಾಗೆ . . . ಪಾಳಕೆಯ್ಯಂ ಕೊಣ್ಡು ಗವಱೇಶ್ವರದೇವರ್ಗ್ಗೆ ಬಿಟ್ಟ ಮತ್ತ ೫ ಅಯ್ದು (ಸೌಇಇ. XX, ೯೭-೨೭; 1084); ಪುಲಿಗೆಱೆಯ ರಾಮೇಸ್ವರದೇವರ್ಗ್ಗಾ ಪುರದ [ಸಾ]ದದೆ[ಱೆ] ಹಂದರುವಣವೆಂಬಿವಂ ಸರ್ವನಮಶ್ಯವಾಗಿ ಬಿಡೆಂದು ಬೇXವುದುಂ (ಸೌಇಇ. XX, ೭೮-೧೪; 1118). [IP ಇದು 'ಸರ್ವನಮಸ್ಯ' ಎಂಬುದರ ಅಪಲಿಖಿತ]

**ಸರ್ವನಮಸ್ಯ** (ನಾ). = ಸರ್ವನಮಶ್ಯ : ನರಯಂಗಲ್ಲನ್ನೆರಡಱೊಳಗಣ ಉಮ್ಮಚಿ[ಗೆ]ಯಂ ಸರ್ವ್ವಾಭ್ಯಂತರಸಿದ್ಧಿಯಾಗಿ ಸರ್ವ್ವನಮಸ್ಯದಗ್ರಹಾರಂ ಮಾಡಿ (ಎಇ. XX, ೬೭-೧೨; 1012); ಪುರಂಗಳುಮಂ ಭೂಸುರಪುರವರ್ಯಂಗಳಪ್ಪ ಸರ್ವನಮಸ್ಯಂಗಳುಮಂ . . . ನೋಡುತ್ತುಂ (ಲೀಲಾವ. ೫-೧೯ ವ). [ಸಂ.]

**ಸರ್ವನಾಮ** (ನಾ). [ವ್ಯಾಕ] "ಒಂದು ನಾಮಪದದ ಸ್ಥಾನದಲ್ಲಿ ಬರುವ ಶಬ್ದಕ್ಕೂ ಒಂದು ವಸ್ತುವಿನ (ಅಥವಾ ವಿಷಯದ) ಹೆಸರು ಹೇಳದೆಯೇ ಅದನ್ನು ಸೂಚಿಸುವ ಶಬ್ದಕ್ಕೂ ಸರ್ವನಾಮವೆಂದು ಹೆಸರು. ಸರ್ವನಾಮವು ನಾಮಪದದಲ್ಲೇ ಒಂದು ಬಗೆ" (ಮಧ್ಯಮ. ೨೯): ಸ್ವವಿಭಕ್ತ್ಯಾದ್ಯಕ್ಷರಮಾಗಿ ವರ್ತಿಕುಂ ಸರ್ವನಾಮದೊಳ್ ಮತ್ತದುವುಂ (ಕಾವ್ಯಾವ. ೧೧೧) ; ಅದುವಿದುವುದುವಾವುದು ವೆಲ್ಲದು ಪೆಱತೇನ್ನೆಱಿದೆನಿಪ್ಪ ಶಬ್ದಂಗಳ್ ತಪ್ಪದೆ ಸರ್ವನಾಮಮಕ್ಕುಂ (ಶಮದ. ೭೮). [ಸಂ. ಸರ್ವನಾಮನ್]

**ಸರ್ವನಾಶ** (ನಾ). ೧. ಸಂಪೂರ್ಣವಾದ ನಾಶ ; ಎಲ್ಲ ಹಾಳಾಗಿ ಹೋಗುವಿಕೆ: ತನ್ನ ಸರ್ವನಾಶವಾದರೂ ವಚನಭ್ರಷ್ಟನಾಗಬಾರದು (ಭಾರದ. ೧೧೩). ೨. ಎಲ್ಲವನ್ನೂ ಹಾಳುಮಾಡುವ ವ್ಯಕ್ತಿ; ಮೃತ್ಯುಸ್ವರೂಪಿ : ಕೈಕೆ, ನಿನ್ನಂ ನೆಯ್ದನಾ ಪುಲಿದರಿ ಗಳೆರಡುಮಂ ಕೂಡಿಸಿ ವಿಧಾತಂ! ನೀನೆನ್ನ ಸರ್ವನಾಶಂ! (ಶ್ರೀ ರಾಮಾ. ೭೨-೪೯೯). [ಸಂ.]

**ಸರ್ವನಿಯಾಮಕ** (ನಾ). ಎಲ್ಲವನ್ನೂ ನಿಯಂತ್ರಿಸುವವನು; ಪರಮಾತ್ಮ: ಸರ್ವಮಯ ಸರ್ವಜ್ಞ ಸರ್ವನಿಯಾಮಕಾಚ್ಯುತನು (ಗಗತಾ. ೧೨–೭೭) ; ದೇವರು ಸರ್ವಶಕ್ತನು ಸರ್ವನಿಯಾಮಕನು (ಮುಂಬಯಿ. ೪-೧೪೧). [ಸಂ.]

**ಸರ್ವನಿರ್ವಾಣಿ** (ನಾ). ಸಂಪೂರ್ಣನಿರ್ವಾಣವನ್ನು ಪಡೆದವನು : ಭಕ್ತಂಗೆ ಸೊಪ್ಪಡಗಿ ವಿರಕ್ತಂಗೆ ಹೆಚ್ಚು ಕುಂದೆಂಬ ಉಭಯ ನಿಶ್ಚಯವಾದಲ್ಲಿ ಆತ ನಿಃಕಳಂಕನಿರತ ಸರ್ವನಿರ್ವಾಣಿ ನಿಃಕಳಂಕಮಲ್ಲಿಕಾರ್ಜುನಾ (ಮೋಳಿಮಾ. ೪೭-೧೯೫).

[ಸಂ. ಸರ್ವನಿರ್ವಾಣಿನ್]

**ಸರ್ವನಿವಾಸಿ** (ನಾ). ಎಲ್ಲ ಕಡೆಯಲ್ಲಿಯೂ ಇರುವವನು; ಸರ್ವವ್ಯಾಪಿಯಾದವನು : ಭವದಲ್ಲಿ ವ್ರತಗೆಟ್ಟುದಾಗಿ ಆ ಭಾವದಲ್ಲಿ ಜೀವಸಂಹಾರಿ ಕೂಡಲಸಂಗಮದೇವ ಸರ್ವನಿವಾಸಿಯಾಗಿ (ಬಸವ. ೯೪೫). [ಸಂ. ಸರ್ವನಿವಾಸಿನ್]

**ಸರ್ವನಿವೇದಕ** (ನಾ). ಒಂದು ಬಗೆಯ ಯಜ್ಞ: ಸರ್ವನಿವೇದಕಮೆಂಬ ಯಜ್ಞದೊಳ್ ಕ್ಷಿತಿ ಪೊಗೞ್ವಿನಮಿತ್ತು (ಪಂಪಭಾ. ೨-೪೫). [ಸಂ.]

**ಸರ್ವಪೃಷ್ಠ** (ನಾ). ಒಂದು ಬಗೆಯ ಯಾಗ : ಅಗ್ನಿಷ್ಟೋಮ . . . ಸರ್ವಪೃಷ್ಠ . . . ಅಶ್ವಮೇಧಾದಿ ಕ್ರತುಗಳಿಂ ಪುನೀತರಾಗಿ (ವಿವೇಕ. ೨೭೩). [ಸಂ. ಸರ್ವಪೃಷ್ಠಾ]

**ಸರ್ವಭಾಷಾಸಾಮಾನ್ಯ** (ನಾ). ಎಲ್ಲ ಭಾಷೆಗಳಿಗೂ ಸಮಾನವಾದುದು; ಎಲ್ಲ ಭಾಷೆಯವರಿಗೂ ಏಕಕಾಲದಲ್ಲಿ ಅವರವರ ಭಾಷೆಯಲ್ಲಿ ಅರ್ಥವಾಗುವಂತಹುದು : ಶ್ರೀಮತ್ತೀರ್ಥಾಧಿಪನ ವದನಾಂಭೋಜದಿಂ ಸರ್ವಭಾಷಾಸಾಮಾನ್ಯಂ ಶ್ರೀವಚನಮೊಗೆದತ್ತು (ಯಶೋಚ. ೧-೭೧). [ಸಂ.]

**ಸರ್ವಮಂಗಲೆ, ಸರ್ವಮಂಗಳೆ** (ನಾ). ಎಲ್ಲರಿಗೂ ಶುಭವನ್ನುಂಟು ಮಾಡುವವಳು; ಪಾರ್ವತಿ; ಭವಾನಿ: "ಉಮಾ, ಕಾತ್ಯಾಯನೀ . . . ಸರ್ವಮಂಗಳಾ . . . ಅಂಬಿಕಾ —೧೭ ಶಿವಪತ್ನಿಯಾದ ಪಾರ್ವತೀದೇವಿಯ ಹೆಸರುಗಳು" (ಸಿದ್ಧಾಂತಿ. ೨೦). **ಸರ್ವಮಂಗಳೆ** : 'ಸರ್ವಮಂಗಳಾತ್ರಯ' ಪರಾ.

[ಸಂ. ಸರ್ವಮಂಗಲಾ]

**ಸರ್ವಮಂಗಳಾಶ್ರಯ** (ನಾ). ೧. ಎಲ್ಲ ಬಗೆಯ ಶುಭಗಳಿಗೆ ಆಶ್ರಯವಾಗಿರುವಂತಹುದು. ೨. ಪಾರ್ವತಿಯ ನಿವಾಸ. ೧, ೨ : ಆತನಾಳ್ವ ನಾಡು ಕೈಲಾಸಮಲ್ಲದೊಡಂ ಸರ್ವಮಂಗಳಾಶ್ರಯಂ ವೈಕುಂಠಮಲ್ಲದೊಡಂ ಲಕ್ಷ್ಮೀಮನೋಹರಂ (ರಾಮಾಶ್ವ. ೭-೨೦).

[ಸಂ. ಸರ್ವಮಂಗಲಾಶ್ರಯ (ಸರ್ವಮಂಗಲ+ಆಶ್ರಯ; ಸರ್ವಮಂಗಲಾ+ಆಶ್ರಯ)]

**ಸರ್ವಮಂಗಳೆ** 'ಸರ್ವಮಂಗಲೆ' ನೋ.

**ಸರ್ವಮಾನ್ಯ** (ನಾ). ೧. ಎಲ್ಲರಿಗೂ ಒಪ್ಪಿಗೆಯಾದುದು; ಸರ್ವಸಮ್ಮತವಾದುದು : ಕ್ರಮೇಣ ಗೇಯ್ ಎಂಬ ರೂಪವೇ ಎಲ್ಲೆಡೆಯಲ್ಲೂ ಸರ್ವಮಾನ್ಯವಾಯಿತು (ದ್ರಾವಿ. ೨೭೧). ೨. ಎಲ್ಲ ವಿಧವಾದ ತೆರಿಗೆಗಳಿಂದ ಮುಕ್ತವಾದ ಭೂಮಿ; ಸರ್ವನಮಸ್ಯವಾದ ಭೂಮಿ : ಸರ್ವ್ವಮಾನ್ಯವಾಗಿ ಯಾ ದೇವರಿಗೆ ಕೊಟ್ಟ ಧರ್ಮ್ಮ (ಎಕ. VII. ಶಿಕಾರಿ. ೧೯-೧೭; 1309) ; ಅವನಿತು ಹೊಲವಿತ್ತಡೀವೆನು ಸರ್ವಮಾನ್ಯವನು (ಬಸಪು. ೨೭-೫೩). [ಸಂ.]

**ಸರ್ವಮ್ಮ** (ನಾ). ಒಬ್ಬಾತನ ಹೆಸರು : ಸರ್ವಮ್ಮನ ಮಗ ಅಕ್ಕ XXX ಅಗ್ಗಸಂಗೋಸಾಸಮಿಟ್ಟು (ಎಕ. VIII, ಸೊರಬ. ೭೭-೬; 940). [ಸರ್ವ₁ + ಅಮ್ಮ₁]

**ಸರ್ವರತ್ನ** (ನಾ). ೧. ಎಲ್ಲ ಬಗೆಯ ರತ್ನ ಮೊದಲಾದ ಶ್ರೇಷ್ಠವಾದ ಸಂಪತ್ತು, — ಐಶ್ವರ್ಯ : ಕಾಲಕಾಲಕ್ಕೆ ಮಳೆಬೆಳೆಗಳಾಗುತ್ತಿದ್ದುವು. ದೇಶವು ಸರ್ವರತ್ನಸಮೃದ್ಧವಾಗಿತ್ತು (ವಚಭಾ. ೩೯೩). ೨. [ಜೈನ] ನವನಿಧಿಗಳಲ್ಲಿ ಒಂದು: ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಆದಿಪು. ೧೫-೩ ವ). [ಸಂ.]

**ಸರ್ವರಸ** (ನಾ). ೧. ಎಲ್ಲ ಬಗೆಯ ರಸದ್ರವ್ಯಗಳು : ನಾಲ್ಕನೆಯ ಸರ್ವರಸವರ್ಜನಾವ್ಯವಹಾರರೂಪರಸ ಪರಿತ್ಯಾಗತಪದೊಳಂ . . . ನೆಱೆಯೆ ನೆಗೞ್ದು (ಶಾಂತಿಪು. ೯-೧೦೫ ವ). ೨. ಉಪ್ಪು; ಲವಣ. ೩. ಸಜ್ಜರಸ : "ಯಕ್ಷಧೂಪಃ . . . ಸರ್ವರಸಃ, ಬಹುರೂಪಃ — ೫ ಸಜ್ಜರಸದ ಹೆಸರುಗಳು" (ಸಿದ್ಧಾಂತಿ. ೨೦೭). [ಸಂ.]

**ಸರ್ವರ್ತುಕ** (ಗು). ಎಲ್ಲ ಋತುಗಳಲ್ಲಿಯೂ ಚಿಗುರು, ಹೂವು, ಹಣ್ಣುಗಳನ್ನು ಬಿಡುವ; ಎಲ್ಲ ಋತುಗಳ ಪ್ರಭಾವವನ್ನೂ ಏಕಕಾಲದಲ್ಲಿ ಹೊಂದಿರುವ: ಸರ್ವರ್ತುಕಮೆ ಬನಂ ನೆಲನುರ್ವರೆಯೆ ಕೊಳಂ ಸಮಂತು ಪೂಗೊಳನೆ ಬಟಿಕ್ಕೂರ್ವೀಧ್ರಂ ರೋಹಣಮೆ ಗಡಾರ್ವರ್ಣಿಸಲಱಿವರಣ್ಣ ತಜ್ಜಗಿಪದಮಂ (ಚಂದ್ರ ಪು. ೩-೧೦). [ಸಂ.]

**ಸರ್ವರ್ತುಕನಂದನ** (ನಾ). ಎಲ್ಲ ಋತುಗಳಲ್ಲಿಯೂ ಹೂವು ಹಣ್ಣುಗಳಿಂದ ಸಮೃದ್ಧವಾಗಿರುವ ತೋಟ : ತ್ರಿಲೋಕತಿಲಕನ ಜನ್ಮೋತ್ಸವದೊಳೇಕಸಮಯಸಮವತೀರ್ಣ ಸರ್ವರ್ತುಕನಂದನ ವಿಕಸದಶೋಕ ವಿಕಚ ಮಲ್ಲಿಕಾಬದ್ಧ ಕುಟ್ಮಳಾಡಂಬರ . . . ಲೋಧ್ರುಂಗಳಿಂ ರಾಗಮಂ ಬೀಱುವಂತೆ . . . ಮಹೀಕಾಂತ ಸೊಗಯಿಸೆ (ಆದಿಪು. ೭-೩೭ ವ). [ಸಂ.]

**ಸರ್ವರ್ತುಕೋದ್ಯಾನ** (ನಾ). = ಸರ್ವರ್ತುಕನಂದನ: ಉದಗ್ರದೇವನಿವಾಸಾವಳಿಯಿನುದ್ಧ ಶಾಳಿವನದಿಂ ಸರ್ವರ್ತುಕೋದ್ಯಾನನಂದನದಿಂ . . . ತನಗನ್ವರ್ಥಮೆನಿಪ್ಪುದಾ ಪುರವರಂ ಶೋಭಾವತೀನಾಮದಿಂ (ಪಂಚತಂ. ೧೮೪-೨) ; ಸರ್ವರ್ತುಕೋದ್ಯಾನವೆನಿಸಿದ ಬನಂಗಳಿಂ (ತಿರುಶ. ದೇ. ೨-೮). [ಸಂ.]

**ಸರ್ವಲಗ್ಗೆ** (ನಾ). = ಸಬ್ಬಲಗ್ಗೆ ೧ : ಸರಕಟಿಸಿ ದಳ ಸರ್ವಲಗ್ಗೆಯಲುರವಣಿಸೆಯಮಸೂನು ಕಂಡನು ನರನ (ಕುವ್ಯಾಕ. ೪-೨೮); ಬಲವೆಲ್ಲ ಸರ್ವಲಗ್ಗೆಯೊಳೇಱಿದೊಡೆ ರಾಮನಳವುಗೆಟ್ಟನೆ ಮನದೊಳಗ ತಳೆದನೆ ಚಿಂತೆಯ ಕುಲಗಿರಿಯಂತೆ ನಿಶ್ಚಳನಾಗಿರ್ದನಾಜಿಯೊಳು (ತೊರಾಸಾಂ. ೨೦-೨೯). [ಸರ್ವ₂ + ಲಗ್ಗೆ]

**ಸರ್ವಲೆ** (ನಾ). ೧. ಕಬ್ಬಿಣದ ದೊಣ್ಣೆ. ೨. ಒಂದು ಬಗೆಯ ಆಯುಧ ; ಈಟಿ ; ಸಬಳ. [ಸಂ. ಸರ್ವಲಾ]

**ಸರ್ವವಿತ್ತು** (ನಾ). ಎಲ್ಲವನ್ನೂ ಬಲ್ಲವನು; ಸರ್ವಜ್ಞ : ಭಗವಾನೆನಿಪ ಸರ್ವವಿತ್ತು ನೀಂ ಮೋದದಿಂದೆನ್ನ ಸಂಶಯವನಪಹರಿಸು (ಪದ್ಮರಾ. ೧೦-೮).

[< ಸಂ. ಸರ್ವವಿದ್]

**ಸರ್ವವಿದ** (ನಾ). = ಸರ್ವವಿತ್ತು : ನೀಂ ಚಿರ ಪೇೞೆಂತು ಸರ್ವವಿದನ್ನ (ಜಿನಾಶಿ. ೧೮). [ಸಂ. ಸರ್ವವಿದ್]

**ಸರ್ವವೇದ** (ನಾ). 'ವಿಶ್ವಜಿತ್' ಎಂಬ ಯಾಗವನ್ನು ಮಾಡಿ ತನ್ನ ಸರ್ವಸ್ವವನ್ನೂ ದಾನಮಾಡಿದವನು : "ಸರ್ವಸ್ವಮಂ ಕೊಟ್ಟವಂ ಸರ್ವವೇದನಕ್ಕುಂ" (ಮಂಗರಾ. ೭೭-೧೪). [ಸಂ. ಸರ್ವವೇದಸ್]

**ಸರ್ವವೇದ್ಯ** (ನಾ). ಎಲ್ಲರಿಗೂ ತಿಳಿದಿರುವಂತಹುದು ; ಸರ್ವವಿದಿತವಾದುದು: ಒಂದು ಗುರಿಯನ್ನು ಸಾಧಿಸಬೇಕಾದರೆ ಪ್ರಾಮಾಣಿಕತೆಯಿಂದ ದುಡಿಯಬೇಕೆಂಬುದು ಸರ್ವವೇದ್ಯವಾದ ವಿಚಾರ (ರೂಢಿ). [ಸಂ.]

**ಸರ್ವವ್ಯಾಪಕ** (ಗು). ೧. ಎಲ್ಲ ಕಡೆಯಲ್ಲಿಯೂ ವ್ಯಾಪಿಸಿರುವ ; ಎಲ್ಲವನ್ನೂ ಆವರಿಸಿರುವ : ಇಂದ್ರನ ಸರ್ವವ್ಯಾಪಕಶಕ್ತಿಯನ್ನು . . . ಪೃಥಿವ್ಯಂತರಿಕ್ಷಗಳೆರಡೂ ಹೊಂದಲಸಮರ್ಥವಾದವು (ಋಕ್ಸಾರ. ೬೯). (ನಾ). ೨. ಎಲ್ಲ ಕಡೆಯಲ್ಲಿಯೂ ವ್ಯಾಪಿಸಿರುವವನು : ಪರಮಾತ್ಮನು ಸರ್ವಜ್ಞನೂ ಸರ್ವಶಕ್ತನೂ ಸರ್ವವ್ಯಾಪಕನೂ ಆಗಿದ್ದರೆ, ಜೀವಾತ್ಮನು ಅಲ್ಪಜ್ಞನೂ ಅಲ್ಪಶಕ್ತನೂ ಅಲ್ಪವ್ಯಾಪಕನೂ ಆಗಿರುವನು (ಶಕ್ತಿವಿ. ೭). [ಸಂ.]

**ಸರ್ವಶಕ್ತ** (ನಾ). ಎಲ್ಲ ಶಕ್ತಿಗಳನ್ನೂ ಹೊಂದಿದವನು : "ಸರ್ವಶಕ್ತನಲ್ಲಿಯುಂ ಸರ್ವಸನ್ನಾಹಮೆಂಬುದು" (ಹಲಾಯು. ೧೩೩-೧೫) ; ಪರಮಾತ್ಮನು ಸರ್ವಜ್ಞನೂ ಸರ್ವಶಕ್ತನೂ ಸರ್ವವ್ಯಾಪಕನೂ ಆಗಿದ್ದರೆ, ಜೀವಾತ್ಮನು ಅಲ್ಪಜ್ಞನೂ ಅಲ್ಪಶಕ್ತನೂ ಅಲ್ಪವ್ಯಾಪಕನೂ ಆಗಿರುವನು (ಶಕ್ತಿವಿ. ೭). [ಸಂ.]

**ಸರ್ವಶ್ರೀ** (ನಾ). ಅನೇಕ ಹೆಸರುಗಳನ್ನು ಹೇಳುವಾಗ, ಪ್ರತಿಯೊಂದರ ಆರಂಭದಲ್ಲೂ 'ಶ್ರೀ' ಕಾರವನ್ನು ಸೇರಿಸುವುದಕ್ಕೆ ಬದಲಾಗಿ ಎಲ್ಲ ಹೆಸರುಗಳಿಗೂ ಅನ್ವಯಿಸುವಂತೆ ಆರಂಭದಲ್ಲಿ ಸೇರಿಸುವ ಅದೇ ಅರ್ಥದ ಪದ : ಇಂದಿನ ಸಭೆಗೆ ಸಂಘದ ಸದಸ್ಯರುಗಳಾದ ಸರ್ವಶ್ರೀ ರಾಮಣ್ಣ, ಭೀಮಯ್ಯ, ಪುಟ್ಟಪ್ಪ ಎಲ್ಲರೂ ಆಗಮಿಸಿದ್ದರು (ರೂಢಿ). [ಸಂ.]

**ಸರ್ವಸನ್ನಾಹ** (ನಾ). ೧. ಸಕಲ ಸೇನಾಬಲವು ಸಜ್ಜಾಗಿರುವಿಕೆ : "ವೀರಬಲಮಂ ಸರ್ವಸನ್ನಾಹಯೆಂಬುದು" (ಮಂಗರಾ. ೧೪೦-೮). ೨. ಎಲ್ಲರಲ್ಲಿಯೂ ಇರುವವನು; ಸರ್ವಾತ್ಮಕ; ಪರಮಾತ್ಮ: "ಸರ್ವಶಕ್ತನಲ್ಲಿಯುಂ ಸರ್ವಸನ್ನಾಹಮೆಂಬುದು" (ಹಲಾಯು ೧೩೭-೧೫). [ಸಂ.]

**ಸರ್ವಸಮ್ಮತ** (ನಾ). ಎಲ್ಲರಿಗೂ ಒಪ್ಪಿಗೆಯಾದುದು: ಬುದ್ಧನು . . . ತನ್ನ ಬುದ್ಧಿವಾದವನ್ನೇ ಸರ್ವಸಮ್ಮತವಾಗುವಂತೆ ಮಂಡಿಸತೊಡಗಿದನು (ಭಾರದ. ೧೨೦). [ಸಂ.]

**ಸರ್ವಸಾಕ್ಷಿ** (ನಾ). ೧. ಎಲ್ಲ ಘಟನೆಗಳಿಗೂ ಸಾಕ್ಷಿಯಾದವನು; ಎಲ್ಲವನ್ನೂ ಪ್ರತ್ಯಕ್ಷವಾಗಿ ಕಂಡವನು; ಪರಮಾತ್ಮ: ತಾ ಸರ್ವಸಾಕ್ಷಿಪ್ರಮಾಣಕ್ಕೆವೊಂದಿನಿತು ಬೇಸರಾಗದೆ ಬಾಳ್ವುದೆಂದು . . . ಪರಸುತ್ತ (ನವಮೋ. ೧೩-೫೭); ಸರ್ವಸಾಕ್ಷಿಯಾದ ಭಗವಂತನೊಬ್ಬನಿದ್ದಾನೆ (ನಿಶಉ. ೧೨೦). ೨. ವಾಯು. ೩. ಅಗ್ನಿ. [ಸಂ. ಸರ್ವಸಾಕ್ಷಿನ್]

**ಸರ್ವಸಾಧನಿ** (ನಾ). [ವ್ಯಾಕ] ಭೂತ, ವರ್ತಮಾನ, ಭವಿಷ್ಯತ್ ಮತ್ತು ಸರ್ವಸಾಧನಿ ಎಂಬ ಆಖ್ಯಾತವಿಭಕ್ತಿಯ ನಾಲ್ಕು ಬಗೆಗಳಲ್ಲಿ ಒಂದು; ವಿಧ್ಯರ್ಥದಲ್ಲಿ ಹತ್ತುವ ಆಖ್ಯಾತವಿಭಕ್ತಿ: ಭೂತವತಿ ವರ್ತಮಾನಂ ಖ್ಯಾತ ಭವಿಷ್ಯಂತಿ ಸರ್ವಸಾಧನಿಯೆಂಬಾಖ್ಯಾತವಿಭಕ್ತಿಗಳಕ್ಕುಮತೀತಭವದ್ಭಾವಿಕಾಲ ವಿಧ್ಯಾದಿಗಳೊಳ್ (ಕಾವ್ಯಾವ. ೩೭೪). [ಸಂ. ಸರ್ವಸಾಧನೀ]

**ಸರ್ವಸಾಧು** (ನಾ). [ಜೈನ] ಮೂಲಗುಣಾದಿಕ ತಪಶ್ಚರಣವನ್ನು ಆತ್ಮೀಕರಿಸಿಕೊಂಡು ಸರ್ವಜೀವಗಳಲ್ಲಿ ಸಮಭಾವವನ್ನು ಹೊಂದಿರುವ ಸಾಧು: ಉದ್ಧರಿಸುಗೆ ತಾತ್ಪರ್ಯದಿನರ್ಹತ್ಸಿದ್ಧಾಚಾರ್ಯೋಪಾಧ್ಯಾಯ ಸರ್ವಸಾಧುಗಳೆಮ್ಮಂ (ಆದಿಪು. ೧-೬). [ಸಂ.]

**ಸರ್ವಸಾಮಾನ್ಯ** (ನಾ). ೧. ತೀರ ಸಾಮಾನ್ಯವಾದುದು ; ವಾಡಿಕೆಯಾದುದು: ಒಬ್ಬರಿಗೆ ತಿನ್ನಲು ಸಾಧ್ಯವಿರುವುದಕ್ಕಿಂತ ಹೆಚ್ಚು ಒತ್ತಾಯದಿಂದ ಬಡಿಸುವುದು ನಮ್ಮಲ್ಲಿ ಸರ್ವಸಾಮಾನ್ಯವಾಗಿ ಒಂದು ಪದ್ಧತಿಯೇ ಆಗಿಹೋಗಿದೆ (ಆಡುಸಾ. ೮೬). ೨. ಎಲ್ಲರಿಗೂ ಸಮಾನವಾದುದು ,— ಅನ್ವಯಿಸುವಂತಹುದು: ಇದು ಸರ್ವಸಾಮಾನ್ಯವಾದ ಸಮಸ್ಯೆಯಾದುದರಿಂದ ಎಲ್ಲರೂ ಇದರ ಬಗ್ಗೆ ಗಮನ ಹರಿಸಬೇಕು (ರೂಢಿ). ೩. ಸಾಧಾರಣಜನ; ಜನಸಾಮಾನ್ಯ: ಕಾವ್ಯವು ಜನ್ಮಾಂತರೀಯ ಪುಣ್ಯದಿಂದ ಪ್ರತಿಭಾವಂತರಾದ ಕವಿಗಳಿಗೆ ಮಾತ್ರ ಗೋಚರವಾಗುವುದೇ ಹೊರತು ಸರ್ವಸಾಮಾನ್ಯರಿಗಲ್ಲ (ಭಾರದ. ೪೪೪). [ಸಂ.]

**ಸರ್ವಸಿದ್ಧಿ** (ನಾ). ೧. ಎಲ್ಲದರಲ್ಲೂ ಸಫಲತೆಯನ್ನು ಹೊಂದುವಿಕೆ,— ಸಿದ್ಧಿಯನ್ನು ಪಡೆಯುವಿಕೆ. ೨. ಎಲ್ಲ ಬಗೆಯ ಸಿದ್ಧಿಗಳನ್ನು ದೊರಕಿಸಿಕೊಡುವಂತಹುದು: ಅಯ್ಯಾ ಎನಗೆ ರುದ್ರಾಕ್ಷಿಯೇ ಸರ್ವಸಿದ್ಧಿ (ಬಸವ. ೯೫೯). ೩. ಬಿಲ್ವವೃಕ್ಷ. [ಸಂ.]

**ಸರ್ವಸಿದ್ಧಿಆಚಾರ್ಯ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಶಿಲೇಮುದ್ದರ ಮರ್ವ್ಮಾನ್ ಸರ್ವ್ವಸಿದ್ಧಿಆಚಾರ್ಯ(ರ್ಯ್ಯ)ರ ಚಟ್ಟರ ರೇವಡಿ ಒವಜ್ಜರ್ ತೆಜ್ಜಣದಿಶೆ ಮಾಡಿದೊರ್ (ಇಆ. X, ೧೭೦-೨; 8 ನೆಯ ಶತ). [ಸಂ.]

**ಸರ್ವಸ್ವ** (ನಾ). ೧. ಸಮಸ್ತ ಸ್ವತ್ತು ; ಸಕಲೈಶ್ವರ್ಯ : ಆ ಮ್ಲೇಚ್ಛರಾಜರಂ ಕಾಣಿಸಿಯುಮಾಳ್ತನಮಂ ಪೂಣಿಸಿಯುಂ ಚಕ್ರವರ್ತಿಗೆ ಸರ್ವಸ್ವಮಂ ಕುಡಿಸಿಯುಂ (ಶಾಂತಿಪು. ೧೧-೬೭ ವ); ಪ್ರಾಣೇಶ, ಸೂರೆಗೊಳ್ಳೆನ್ನ ಸರ್ವಸ್ವವಂ (ಚಿತ್ರಾಂಗ. ೪೧-೧೧೧೧). ೨. ಅತ್ಯಂತಮಹತ್ವದಿಂದ ಕೂಡಿದುದು; ಸಾರಭೂತವಾದುದು: ಅವಲರುಂ ಪಣ್ಣುಂ ಬೀತೋವವು ಗಡ ಬೀಯವಲ್ಲಿ ಮಲ್ಲಿಗೆಗಳುಮಿಮ್ಮಾವುಗಳುಮೆಂದೊಡಿನ್ ಪೆಱತಾವುದು ಸಂಸಾರಸಾರಸರ್ವಸ್ವಫಲಂ (ಪಂಪಭಾ. ೧-೫೫). [ಸಂ.]

**ಸರ್ವಸ್ವತಂತ್ರ** (ನಾ). ಎಲ್ಲ ರೀತಿಯಿಂದಲೂ ಸ್ವತಂತ್ರನಾದವನು ; ತನ್ನ ಇಚ್ಛೆಯಂತೆ ಎಲ್ಲವನ್ನೂ ನೆರವೇರಿಸಲು ಸಮರ್ಥನಾದವನು : ಲಕ್ಷ್ಮೀಲೋಲ ಜೀಯ ಸರ್ವಸ್ವತಂತ್ರನೆ ಬಿಡಿಸು ಸಂಸಾರಪಾಶದಿಂದೆನ್ನನು (ಜೈಮಿಭಾ. ೧೩-೨೮). [ಸಂ.]

**ಸರ್ವಸ್ವಹರಣ** (ನಾ). ಸರ್ವೈಶ್ವರ್ಯವನ್ನೂ ಕಿತ್ತುಕೊಳ್ಳುವಿಕೆ; ಎಲ್ಲ ಸಂಪತ್ತನ್ನೂ ಅಪಹರಿಸುವಿಕೆ : ಅಹಿತರ್ ಸಂಧಿಯುಮಂ ವಿಗ್ರಹಮುಮನಾತನೊಳೊಡರ್ಚರೇಕೆನೆ ಸರ್ವಸ್ವಹರಣಮಂ ಸಂಧಿ ಶಿರಃಪ್ರಕರಣಮಂ ತಮಗೆ ವಿಗ್ರಹಂ ಮಾಳ್ಪುದಱಿಂ (ಶಾಂತಿಪು. ೧೦-೧೧೪). [ಸಂ.]

**ಸರ್ವಸ್ವಾಪಹರಣ** (ನಾ). = ಸರ್ವಸ್ವಹರಣ : ಮುಳಿದು ಸರ್ವಸ್ವಾಪಹರಣಮಂ ಮಾಳ್ಪ ಕಡುಗಲಿತನವಿದಾವ ಪುಣ್ಯವ ಪಡೆವ ಶಿಷ್ಯತನದೊಳಗು (ಪಚಆ. ೮-೬). [ಸಂ.]

**ಸರ್ವಸ್ವಾಪಹಾರ** (ನಾ). = ಸರ್ವಸ್ವಹರಣ : ಕಾಪಥವನಾಶ್ರಯಿಸಿ ಕೋಪಾಟೋಪದಿಂದುತ್ತಮರ ಸರ್ವಸ್ವಾಪಹಾರವ ಮಾಡಿ ಬದುಕುವುದಾವ ಗುಣ (ಕುವ್ಯಾಉ. ೩-೧೦). [ಸಂ.]

**ಸರ್ವಸ್ವಾಮ್ಯ** (ನಾ). ಸಂಪೂರ್ಣ ಒಡೆತನದ ಹಕ್ಕು: ಪ್ರಭುತ್ವಾಧಿಕಾರದ ಸರ್ವಸ್ವಾಮ್ಯ ಪಕ್ಷಕ್ಕೆ ಸೇರಿದ್ದು (ರಾಜಪ. ೬೧). [ಸಂ.]

**ಸರ್ವಾಂಗ** (ನಾ). ಎಲ್ಲ ಅವಯವಗಳು; ಸಮಸ್ತ ಅಂಗಗಳು; ಇಡಿಯ ದೇಹ : ಇಳಿದ ಬೆಳುಗಡ್ಡದಿಂ ನಡುಗುವ ನರೆದಲೆಯಿಂ ನರೆತು ಸಡಿಲ್ದ ಸರ್ವಾಂಗದಿಂ . . . ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ನಂಬಿರ. ೬-೨೬); ಶರಮಯವು ಸರ್ವಾಂಗವಿನ್ನೀ ಸರಳು ನೆಡಲಿಂಬಿಲ್ಲ (ಕುಮ್ಮಾದ್ರೋ. ೬-೫೩). [ಸಂ.]

**ಸರ್ವಾಂಗಜ್ವರ** (ನಾ). ಎಲ್ಲ ರೀತಿಯ ಜ್ವರ : ನಾಭಿಯನ್ನು ಕಿರುಕುಸಾಲೆಯ ರಸದಲ್ಲಿ ಮರ್ದಿಸಿ ಸಹದೇವಿ ಮೊಲೆಹಾಲಲ್ಲಿ ನಸ್ಯವಂ ಮಾಡಲು ಒಂದು ಭಾಗ ಜ್ವರ, ನಾಸಾರಂಧ್ರವುಳ್ಳೆಡೆಗೆ ನಸ್ಯವಂ ಮಾಡಲು ಸರ್ವಾಂಗಜ್ವರ ಹರ (ವಿಷ್ಣುವಿ. ೧೯೩); ಜ್ವರಕ್ಕೆ . . . ನೆಳಲಲ್ಲಾರಿಸಿ ಹಾಲುಬೆಲ್ಲದಲ್ಲನುಪಾನದಿಂದ ಕೊಡಲು ಒಂದು ಬಗೆಯ ಜ್ವರ ಹರ. ಬಿಸಿನೀರಿಂ ಸರ್ವಾಂಗಜ್ವರಹರ (ವಿಷ್ಣುವಿ. ೧೯೯). [ಸಂ.]

**ಸರ್ವಾಂಗಪಾವಡೆ** (ನಾ). [ವೀಶೈ] ಭವಿಗಳಿಗೆ ಕಾಣಬಾರದೆಂದು ಶಾಕಪಾಕಗಳಿಗೆ ಸಂಪೂರ್ಣವಾಗಿ ಹೊದಿಸುವ ವಸ್ತ್ರ : ಸರ್ವಾಂಗಪಾವಡೆಯಾದಲ್ಲಿ ಹೊಳೆ ತಟಾಕ ಮಿಕ್ಕಾದ ಬಹುಜಲಂಗಳ ಮೆಟ್ಟಲಾಗದು (ವಲೀಶ್ಚ. ೫೮); ಪಾಕಶುದ್ಧಿಗಳನ್ನು ಸರ್ವಾಂಗಪಾವಡಯ ಕಟ್ಟುವುದು ಭವಿ ನೋಡಲು ಸೋಕೆ ಭಾಂಡದೊಳಿರ್ದ ತೈಲಾದಿಗಳ ಬಿಡುವುದೈ ಕಂದ ಬಿಡದಿರ್ದವಂ ವ್ರತಭ್ರಷ್ಟನು (ವೀಶೈಪು. ೬-೧೫-೧೦). [ಸರ್ವಾಂಗ + ಪಾವಡೆ (< ಪಾವುಡ)]

**ಸರ್ವಾಂಗಪ್ರಣತ** (ನಾ). ಸಾಷ್ಟಾಂಗನಮಸ್ಕಾರ ಮಾಡಿದವನು : ಗಂಧಕುಟಿಯಂ ತ್ರಿಃಪ್ರದಕ್ಷಿಣಂಗೆಯ್ದು ಸರ್ವಾಂಗಪ್ರಣತನಾಗಿ (ಆದಿಪು. ೧೦-೪೫ ವ). [ಸಂ.]

**ಸರ್ವಾಂಗಮಲಧಾರಿ** (ನಾ). [ಜೈನ] ಸ್ನಾನಶೌಚವರ್ಜನದಿಂದಾಗಿ ಮೈಯೆಲ್ಲ ಕೊಳೆ ತುಂಬಿದ ಸಂನ್ಯಾಸಿ : ಸರ್ವಾಂಗಮಲಧಾರಿಗಳೊಂದು ಶಿಲಾತಳದ ಮೇಗಿರ್ದಾಗಮಮಂ ಪರಿವಿಡಿಗೆಯ್ಯುತ್ತುಮರ್ಥಮಂ ಭಾವಿಸುತ್ತುಂ ಸ್ವಾಧ್ಯಾಯದೊಳ್ ತಗುಳ್ದಿರ್ದೊರಂ . . . ಲಲಿತಘಟೆ ಕಂಡು (ವಡ್ಡಾರಾ. ೯೬-೨). [ಸಂ. ಸರ್ವಾಂಗಮಲಧಾರಿನ್]

**ಸರ್ವಾಂಗಯಜ್ಞ** (ನಾ). ದೇಹಸಹಿತವಾಗಿ ಸಮಸ್ತವನ್ನೂ ಬಲಿಕೊಡುವ ಯಜ್ಞ; ಸರ್ವಾಹುತಿಯ ಯಾಗ: ಪಿನಾಕಿಯ ಪದವ ಹಿಡಿದೋಲೈಸುವೆನು ಸರ್ವಾಂಗಯಜ್ಞದಲಿ (ಕುವ್ಯಾಗ. ೯-೨೧). [ಸಂ.]

**ಸರ್ವಾಂಗರೋಮ** (ನಾ). ಮೈಯಲ್ಲಿ ಪೂರ್ತಿಯಾಗಿ ಕೂದಲಿರುವ ಪ್ರಾಣಿ; ಕರಡಿ: ಕೊಂಗ ಹಂಗ ಸರ್ವಾಂಗರೋಮ ತುಂಗಶರಭ . . . ತುಂಬಿರೆ (ವಿದಾಕ್ಕ. ೪೩-೪). [ಸಂ. ಸರ್ವಾಂಗರೋಮನ್]

**ಸರ್ವಾಂಗಸುಂದರ** (ನಾ). ೧. ಎಲ್ಲ ರೀತಿಯಿಂದಲೂ ಚೆಲುವಾದುದು; ಸಮಗ್ರಸೌಂದರ್ಯವುಳ್ಳುದು : ಪ್ರಾಂತೀಯಭಾಷೆಗಳ ಉತ್ಕೃಷ್ಟಗ್ರಂಥಗಳ ಭಾಷಾಂತರದಿಂದ ಹಿಂದಿ ಪರಿಪುಷ್ಟವಾಗಿ, ಸರ್ವಾಂಗಸುಂದರವಾಗಿ ಬೆಳೆಯುತ್ತಿದೆ (ಭಾರದ. ೪೭೪). ೨. ಎಲ್ಲ ರೀತಿಯಿಂದಲೂ ಚೆಲುವಾದವನು; ಪೂರ್ಣ ಸೌಂದರ್ಯವನ್ನುಳ್ಳ ವ್ಯಕ್ತಿ: ಆ ಸರ್ವಾಂಗಸುಂದರನಾದ ಬಾಲಕನನ್ನು ಕಂಡು ಮನಸ್ಸಿಗೆ ಹರ್ಷವಾಯಿತು (ರೂಢಿ). [ಸಂ.]

**ಸರ್ವಾಂಗಸುಂದರಿ** (ನಾ). ಪೂರ್ಣಸೌಂದರ್ಯವುಳ್ಳವಳು: ಈ ಹುಡುಗಿ ಸರ್ವಾಂಗಸುಂದರಿಯಾಗಿದ್ದಳು (ಪುನರು. ೨೩೭). [ಸಂ. ಸರ್ವಾಂಗಸುಂದರೀ]

**ಸರ್ವಾಂಗಾಸನ** (ನಾ). [ಯೋಗ] ಆಸನಗಳಲ್ಲಿ ಒಂದು : ಸರ್ವಾಂಗಾಸನದ ಪ್ರಭೇದವೇ "ವಿಪರೀತಕರಣಿ" ಎಂದು ಪ್ರಸಿದ್ಧವಾಗಿದೆ (ಭಾರದ. ೧೫೭). [ಸಂ.]

**ಸರ್ವಾಂಗೀಣ** (ಗು). ೧. ಎಲ್ಲ ಅವಯವಗಳಿಗೂ ವ್ಯಾಪಿಸಿದ ; ಸರ್ವಾಂಗಕ್ಕೂ ಆವರಿಸಿದ : ಮರುದೇವಿಮಹಾದೇವಿ . . . ಸರ್ವಾಂಗೀಣಮೌಕ್ತಿಕಾಭರಣಕಿರಣಾಕೀರ್ಣ ಸುವರ್ಣದುರ್ಲಕ್ಷ್ಯಹರಿಚಂದನಾಂಗರಾಗೆಯುಂ . . ಆಗಿ (ಆದಿಪು. ೭-೨೭ ವ). ೨. ಸಮಸ್ತ; ಸಮಗ್ರವಾದ : ಅನಂತವೀರ್ಯಕುಮಾರಂಗೆ ಚಕ್ರವರ್ತಿಸುತಾ ಪರಂಪರೆಯೊಳೊರ್ವಳನಪೂರ್ವಸರ್ವಾಂಗೀಣವಸ್ತುತ್ವಭಾಜನೆಯಂ ಕುಡಿಸುವುದುಂ (ಶಾಂತಿಪು. ೨-೭೭ ವ). (ನಾ). ೩. ಸಮಗ್ರವಾದುದು ; ಸಂಪೂರ್ಣವಾದುದು : ಕತೆ ಸರ್ವಾಂಗೀಣವಾದ ಬೆಳವಣಿಗೆಯನ್ನು ಪಡೆದುಕೊಂಡಿದೆ (ಹೊಸಕ್ರಿ. ೨೯೫). [ಸಂ.]

**ಸರ್ವಾಂಗೋಡು**, ಸರ್ವಂಗೋಡು (ನಾ). ಎಲ್ಲವನ್ನೂ ಒಳಗೊಂಡುದು (?): ಆ ಗಡಿಯಿಂದೊಳಗುಳ ಮನೆ ಮನೆತಾಣ ಅಂಗೋಡು ಅಂಗ ಸಸಿ ನೆಲ ಹೊಲ ಮರ ಫಲ ಬೆ[ಣ] ಬಿಳಿರು ಬಿಟಿ ಬಿಟ ಮುಂತ್ತಾಗಿ ಸರ್ವಾಂಗೋಡು ಸಹಿತವಾದಯಿಂತಿವೆಲಉ (ಕ಼. III- i, ೭-೨೦ ; 1527) ; ಕಿರುಕುಳ ಸುವರ್ಣಾದಾಯ ಸರ್ವಾಂಗೋಡು ಸಹವಾದ ಭೂಮಿ ಮನೆಯನ್ನು ಗೈಸಿ ರೂಪ ಮಾಡಿಕ್ಕೊಣ್ಣು (ಎಕ. VIII, ತೀರ್ಥಹ. ೯೮-೭೨; 1668). **ಸರ್ವಂಗೋಡು** : ಬೇಣ ಬಿಳಿರು ಬೆಟು ಚಿಟಿ ನಿಧಿ ನಿಕ್ಷೇಪ ಜಲ ಪಾಷಾಣ . . . ಅಷ್ಟಭೋಗ ಸರ್ವಂಗೋಡು ಸಹವಾದ ಸಮಸ್ತಉತ್ರಿತ್ತಿ (ಕ಼. III- i, ೯- ೫೫ ; 1538). 'ಅಂಗೋಡು' ಪರಾ. [ಸರ್ವ$_2$ + ಅಂಗ$_2$ + ಕೋಡು$_1$]

**ಸರ್ವಾಂಗೋಪನತ** (ನಾ). = ಸರ್ವಾಂಗಪ್ರಣತ : ಭಗವತ್‌ಪಾದಪೀಠೋಪ ಕಂಠದೊಳ್ ಸರ್ವಾಂಗೋಪನತನಾಗಿ ನಿಂದಾಗಳ್ (ಆದಿಪು. ೧೪-೧೩೭ ವ). [ಸಂ.]

**ಸರ್ವಾಂತರ್ಯಾಮಿ** (ನಾ). ಯಾವಾಗಲೂ ಎಲ್ಲೆಲ್ಲಿಯೂ ಎಲ್ಲರಲ್ಲಿಯೂ ಇರುವವನು ; ಪರಮಾತ್ಮ : ಸರ್ವಾಂತರ್ಯಾಮಿ ನೀನೆ ಅಯ್ಯಾ (ಅಖಂಡೇ. ೧೯೭- ೧೭) ; ಸರ್ವಾಂತರ್ಯಾಮಿ ಒರ್ವನೆಂಬುವ ತತ್ವ ನಿರ್ದಿಷ್ಟವಾಗಿ ಇರುತಿರಲು ಮೋಕ್ಷವದು ಸರ್ವರಿಗೆ ಸುಲಭ (ಸರ್ವಜ್ಞ. ೩೩೭). [ಸಂ. ಸರ್ವಾಂತರ್ಯಾಮಿನ್]

**ಸರ್ವಾತಿಸಾರ** (ನಾ). ಅತಿಸಾರರೋಗದಲ್ಲಿ ಒಂದು ಬಗೆ : ಅಜಾಮೋದ . . . ಶುಂಠಿ ಇವಂ ಕ್ರಮದಿಂ ವೃದ್ಧಿಯಾಗಿ ಹೆಚ್ಚಿಸಿ ಚೂರ್ಣವ ಮಾಡಿ ಮೊಸರಿಂ ಕಲಸಿ ಕೊಡಲು ಜ್ವರಾತಿಸಾರ, ಸರ್ವಗ್ರಹಣಿ, ಸರ್ವಾತಿಸಾರ ಸಹ ಪರಿಹಾರಮಕ್ಕುಂ (ಸಕವೈ. ೩೦೭). [ಸಂ.]

**ಸರ್ವಾತೀತ** (ನಾ). ಎಲ್ಲವನ್ನೂ ದಾಟಿ ಆಚೆಗೆ ಇರುವವನು ; ಎಲ್ಲವನ್ನೂ ಮೀರಿದವನು ; ಪರಮಾತ್ಮ : ಸರ್ವಾತೀತನಾದಾರೂಢಮೂರ್ತಿಯ ಭೂತಭೌತಿಕ ಜಾತಪ್ರಾಣಿಗಳೆಂತರಿವರು (ಗಗತಾ. ೧೮-೧). [ಸಂ.]

**ಸರ್ವಾತ್ಮ** (ನಾ). ೧. ಸರ್ವರಲ್ಲಿಯೂ ಇರುವವನು ; ಪರಮಾತ್ಮ. ೨. ಶಿವ : ಸರ್ವಾತ್ಮನಂ ಭಕ್ತಾತ್ಮನಂ ಮಾಡಿ ಸೂಕ್ತಿ ಹೊಗಳಲು (ಬಸಪು. ೬೯-೧೨) ; ಘನ ಜಗನ್ಮಯನಾಗಿ ಸರ್ವಾತ್ಮನು ಮಹೇಶ್ವರನೆನಿಪನೀತನ ನೆನಹನೀತನ ನಿಜವನರಿವ ಮಹಾತ್ಮರಾರು (ಕುವ್ಯಾಸ. ೯-೩). [ಸಂ. ಸರ್ವಾತ್ಮನ್]

**ಸರ್ವಾಧಿಕಾರ** (ನಾ). ೧. ಎಲ್ಲ ಬಗೆಯ ಅಧಿಕಾರ ; ಪರಮೋಚ್ಚವಾದ ಅಧಿಕಾರ. ೨. ಎಲ್ಲ ಒಡೆತನವೂ ಒಬ್ಬನಿಗೇ ಮೀಸಲಾಗಿರುವುದು ; ಏಕಸ್ವಾಮಿತ್ವ : ಪ್ರಜಾಪ್ರಭುತ್ವದಲ್ಲಿ ಎಷ್ಟೇ ಲೋಪದೋಷಗಳಿದ್ದರೂ ಅದು ಸರ್ವಾಧಿಕಾರಪ್ರಭುತ್ವಕ್ಕಿಂತ ಸಾವಿರಪಾಲು ಮೇಲು (ಪಂಜಪಂ. ೧೮೫). [ಸಂ.]

**ಸರ್ವಾಧಿಕಾರತ್ವ** (ನಾ). = ಸರ್ವಾಧಿಕಾರ ೨ : ಆಚರಣೆಯಲ್ಲಿ ಪಕ್ಷವು ಕಾರ್ಯದರ್ಶಿಗಳ ಸರ್ವಾಧಿಕಾರತ್ವವನ್ನು ಒಪ್ಪಿ ನಡೆಯುತ್ತದೆ (ರಾಜಪ. ೬೫). [ಸಂ.]

**ಸರ್ವಾಧಿಕಾರಿ** (ನಾ). ೧. ಅರಸನ ಕೈಕೆಳಗಿರುವ ಒಂದು ಪ್ರದೇಶದಲ್ಲಿ ಪರಮಾಧಿಕಾರವುಳ್ಳ ಹುದ್ದೆದಾರ : ಸರ್ವಾಧಿಕಾರಿ ಕಮ್ಮಟದ ಶ್ರೀಮಲ್ಲಯ್ಯಂಗಳು . . . ಹರಿಹರೇಶ್ವರದೇವರ ಧರ್ಮ್ಮಪ್ರಸಂಗವಂ ಬಿಂನಪಂಗೆಯ್ದು (ಕ಼. IV, ೧-೯೯ ; 1204) ; ನಂಜರಾಜಯ್ಯನು ಇಮ್ಮಡಿಕೃಷ್ಣರಾಜನ ಕಾಲದಲ್ಲಿ . . . ಸರ್ವಾಧಿಕಾರಿಯಾಗಿದ್ದನು (ಸಕವೈ. vi, ಪ್ರಸ್ತಾವನೆ). ೨. ಮಠಗಳಲ್ಲಿ ಸ್ವಾಮಿಗಳ ಕೈಕೆಳಗಿರುವ ಸರ್ವೋಚ್ಚ ಅಧಿಕಾರಿ : ದೊಡ್ಡ ಮಠಗಳಲ್ಲಿ ಸಾಮಾನ್ಯವಾಗಿ ಒಬ್ಬ ಸರ್ವಾಧಿಕಾರಿ ಇರುತ್ತಾನೆ (ರೂಢಿ). ೩. ದೇಶದ ಸಮಸ್ತಅಧಿಕಾರವನ್ನು ತನ್ನ ಕೈಯಲ್ಲಿಯೇ ಇಟ್ಟುಕೊಂಡವನು ; ನಿರಂಕುಶಪ್ರಭು : "ಯಾವ ಕ್ಷೇತ್ರದಲ್ಲಿಯೆ ಆಗಲಿ ನಿರಂಕುಶಾಧಿಕಾರ ಪಡೆದಿರುವವನು ; ಸರ್ವಾಧಿಕಾರಿ" (ಇಂಕನ Dictator). [ಸಂ. ಸರ್ವಾಧಿಕಾರಿನ್]

**ಸರ್ವಾನುಮತ** (ನಾ). ಎಲ್ಲರ ಒಪ್ಪಿಗೆ ; ಸರ್ವರಿಂದಲೂ ಅಂಗೀಕಾರ : ಸರ್ವಾನಮತದಿಂದ ನಾನು ಹೋಗುವುದು ನಿಶ್ಚಯವಾಯಿತು (ಸ್ವತಿಚಿ. ೨೪೪). [ಸಂ.]

**ಸರ್ವಾನುಮತಿ** (ನಾ). = ಸರ್ವಾನುಮತ : ಅಂತು ಇಂತು ಮೂರನೆಯ ದಿನ ಸರ್ವಾನುಮತಿ ದೊರೆಯಿತು (ಪುನರು. ೩೦೭). [ಸಂ.]

**ಸರ್ವಾಪರಾಧ** (ನಾ). ಎಲ್ಲ ಬಗೆಯ ತಪ್ಪು; ಸಂಪೂರ್ಣ ಅಪರಾಧ : ಸರ್ವಾಪರಾಧವ ಕ್ಷಮಿಸಯ್ಯ ಎನ್ನ (ಪುರಂದ. ೨-೯ ಪಲ್ಲವಿ). [ಸಂ.]

**ಸರ್ವಾಪರಾಧಿ** (ನಾ). ಎಲ್ಲ ಬಗೆಯ ಅಪರಾಧಗಳನ್ನೂ ಮಾಡಿದವನು; ಎಲ್ಲ ದೃಷ್ಟಿಯಿಂದಲೂ ಅಪರಾಧಿಯಾದವನು : ಸರ್ವಾಪರಾಧಿಯಾನು ಎನ್ನ ಮನದ ಕೊನೆಯ ಸೂತಕ ಹಿಂಗದು (ಬಸವ. ೩.೨೬) ; ನಾವು ನೆಜೆ ಸರ್ವಾಪರಾಧಿಗಳಾವ ಗುಣದೋಷವನು ನಮ್ಮಲ್ಲಿ ಭಾವಿಸುವೆ (ಕುವ್ಯಾಕ. ೧೭-೨೪). [ಸಂ. ಸರ್ವಾಪರಾಧಿನ್]

**ಸರ್ವಾಪಹಾರ** (ನಾ). ಎಲ್ಲವನ್ನೂ ಅಪಹರಿಸುವಿಕೆ ; ಎಲ್ಲ ವಸ್ತುಗಳನ್ನೂ ಕದಿಯುವಿಕೆ : ವಿಸ್ತರಿಸಿದನು ಸರ್ವಾಪಹಾರವ ನೃಪಪಲಾಯನವ (ಕುವ್ಯಾಗ. ೪-೧೦). [ಸಂ.]

**ಸರ್ವಾಭ್ಯಂತರ** (ನಾ). ಭೂಮಿಯ ಉತ್ಪನ್ನವನ್ನೂ ಗ್ರಾಮಕ್ಕೆ ಸಲ್ಲುವ ಕರ ಕಂದಾಯ ಮೊದಲಾದ ಎಲ್ಲ ಬಗೆಯ ಆದಾಯಗಳನ್ನೂ ಅನುಭೋಗಿಸುವ ಹಕ್ಕು : ಶ್ರೀಮದನಂತಕೋಟನಾಥಂಗೆಯಾ ಪುರವಂ ಸ್ಥಳವೃತ್ತಿಯುಮಂ ಸರ್ವ್ವಾಭ್ಯಂತರವಾಗಿ . . . ಆದಿತ್ಯದಂಡನಾಯ್ಕನು ಕೊಟ್ಟ (ಎಕ. VIII (S), ಸೊರಬ. ೨೭೬-೨೮ ; 1070). [ಸಂ.]

**ಸರ್ವಾಭ್ಯಂತರಸಿದ್ಧಿ** (ನಾ). = ಸರ್ವಾಭ್ಯಂತರ : ನರೆಯಂಗಲ್ ಪನ್ನೆರಡಜೊಳಗಣ ಉಮ್ಮಚಿ[ಗೆ]ಯಂ ಸರ್ವ್ವಾಭ್ಯಂತರಸಿದ್ಧಿಯಾಗಿ ಸರ್ವ್ವನಮಸ್ಯವಗ್ರಹಾರಂ ಮಾಡಿ (ಎಇ. XX, ೬೭-೧೨; 1012) ; ಉಭಯಸಾಮ್ಯಮುಮಂ ಸರ್ವ್ವಾಭ್ಯನ್ತರಸಿದ್ಧಿಯಿಂ ಕೊಟ್ಟ ೩೬ಬಾಡದ ಬಳಿಯ ಮಾರಸಿಂಗನ ಪಳ್ಳಿ (ಸೌಇಇ. XX, ೪೦-೨೭ ; 1066). [ಸಂ.]

**ಸರ್ವಾರ್ಥ** (ನಾ). ೧. ಎಲ್ಲ ಬಗೆಯ ವಸ್ತು, ವಿಷಯ, ಉದ್ದೇಶ, ಐಶ್ವರ್ಯ ಮುಂತಾದುವು : ಎನ್ನೊಳ್ ಪುಟ್ಟಿದ ವಸ್ತುವಿಂದೆ ಪಡೆದಂ ಸರ್ವಾರ್ಥಮಂ ಜಿಷ್ಣು (ರಾಜಶೇ. ೧-೧೦೦). ೨. ಎಲ್ಲಕ್ಕಿಂತ ಮುಖ್ಯವಾದುದು ; ಸಾರಸರ್ವಸ್ವ : ಎಮಗೆ ಸಂಪ್ರತಿಗಿಲ್ಲ ಮನ ಘನಸಮರವೇ ಸರ್ವಾರ್ಥ (ಕುವ್ಯಾಉ. ೬-೨೯). [ಸಂ.]

**ಸರ್ವಾರ್ಥಸಾಧಕ** (ನಾ). ಎಲ್ಲ ಬಗೆಯ ಪುರುಷಾರ್ಥಗಳನ್ನೂ ಸಾಧಿಸಿದವನು : ಸರ್ವಾರ್ಥಸಾಧಕಂ ತುಂಗಮಹಿಮಾಧಿಕಂ ಸಕಲದೇಶಿಕನಿಕರಪುಂಗವಂ ಬಿತ್ತರಿಸಿದಂ ತತ್‌ಪ್ರಸಂಗಮಂ (ವೀಕ್ಷ್ಯಪು. ೬-೧-೫). [ಸಂ.]

**ಸರ್ವಾರ್ಥಸಿದ್ಧ** (ನಾ). ೧. ಎಲ್ಲವನ್ನೂ ಸಾಧಿಸಿಕೊಂಡವನು ; ಸರ್ವಸಿದ್ಧಿಗಳನ್ನೂ ಪಡೆದವನು. ೨. ಶಾಕ್ಯಮುನಿ ; ಬುದ್ಧ. [ಸಂ.]

**ಸರ್ವಾರ್ಥಸಿದ್ಧಿ** (ನಾ). ೧. ಎಲ್ಲ ಬಗೆಯ ಇಷ್ಟಗಳು ಸಿದ್ಧಿಸುವುದು , – ಪೂರ್ಣಗೊಳ್ಳುವುದು. ೨. [ಜೈನ] ಐದು ಅಣುತ್ತರಗಳೆಂಬ ವಿಮಾನಗಳಲ್ಲಿ , ಮಧ್ಯದಲ್ಲಿರುವ ಶ್ರೇಷ್ಠವಾದ ವಿಮಾನ ; ☞ ಇದು ಪುಣ್ಯವಂತರ ವಾಸಸ್ಥಾನ : ಶುಕ್ಲಧ್ಯಾನದೊಳ್ ಸಮಾಹಿತಂ . . . ಸರ್ವಾರ್ಥಸಿದ್ಧಿಯೊಳ ಹಮಿಂದ್ರನಾದಂ (ಆದಿಪು. ೬-೩೪ ವ). [ಸಂ.]

**ಸರ್ವಾರ್ಪಿತ** (ನಾ). ಎಲ್ಲವನ್ನೂ (ದೇವರಿಗೆ) ಒಪ್ಪಿಸಿರುವುದು : ನೀನಿರಿಸಿದ ತನುವಿನಲ್ಲಿ ಸಾನಂಜೆನಯ್ಯಾ ತನುವು ಸರ್ವಾರ್ಪಿತದಲ್ಲಿ ನಿಯತಪ್ರಸಾದಭೋಗಿಯಾಗಿ (ಬಸವ. ೭೯). [ಸಂ.]

**ಸರ್ವಾವಧಿ** (ನಾ). [ಜೈನ] ಪರಮಾವಧಿ, ದೇಶಾವಧಿ ಮತ್ತು ಸರ್ವಾವಧಿ ಎಂಬ ಮೂರು ಬಗೆಯ ಅವಧಿಜ್ಞಾನಗಳಲ್ಲಿ ಒಂದು; ಕೇವಲಜ್ಞಾನ:

ಕೇವಲಬೋಧೋದಯಮೆಂಬೀ ವಿಭವಂಬೆತ್ತು ಸಕಲರೂಪವ್ಯಾಪಾರಾವಗಮಸಂಪದಂ ಸರ್ವಾವಧಿ ಪುಟ್ಟಿತ್ತು ರಾಘವಪ್ರತಿಪತಿಯೊಳ್ (ಪಂರಾಮಾ. ೧೭-೬೨). [ಸಂ.]

**ಸರ್ವಾವಧಿಜ್ಞಾನ** (ನಾ). = ಸರ್ವಾವಧಿ : ದೇಶಾವಧಿಜ್ಞಾನಿಯಪ್ಪ ಸೂರ್ಯಮಿತ್ರಮುನಿನಾಥನತಿವಿಶುದ್ಧಪರಿಣಾಮದಿಂ ಸರ್ವಾವಧಿಜ್ಞಾನಲೋಚನನಾಗಿ (ಸುಕುಮಾ. ೪-೫೪ ವ). [ಸಂ.]

**ಸರ್ವಾವಧಿಬೋಧ** (ನಾ). [ಜೈನ] ಸರ್ವಾವಧಿಜ್ಞಾನವನ್ನು ಹೊಂದಿದವನು; ಕೇವಲಜ್ಞಾನಿ : ನಿರುಪಮದೇಹಪ್ರಭಾದಿವ್ಯಸರ್ವಾವಧಿಬೋಧಂ ತುಷ್ಟನಾದಂ (ಸುಕುಮಾ. ೩-೪೮). [ಸಂ.]

**ಸರ್ವೆ** (ನಾ). ಪ್ರದೇಶ, ಜಮೀನು ಮುಂತಾದುವುಗಳ ಆಕಾರ, ವಿಸ್ತಾರ, ಪರಿಮಿತಿ ಮೊದಲಾದುವುಗಳನ್ನು ನಿರ್ಧರಿಸಲು ಮಾಡುವ ಅಳತೆ ಮತ್ತು ಅದರ ನಕ್ಷೆ ; ಮೋಜಣಿ : ನೆಲವನ್ನು ವಾಸ್ತವವಾಗಿ ಅಳತೆಮಾಡಿ ವಿವರವಾದ ನಕ್ಷೆ ಬರೆಯುವುದನ್ನು ಸರ್ವೆ ಎನ್ನುತ್ತಾರೆ (ಅಳೆಯುವಿಕೆ ಅಥವಾ ಕ್ಷೇತ್ರಮಾಪನ) (ಭೂವಿವ. ೩೧); ಅದನ್ನು ಸರ್ವೆ ಮಾಡಿಸಿಯಾದರೂ ಕ್ರಮಪಡಿಸೋಣ (ಬೈಸರ್ವ. ೯೩). [<— ಇಂ. Survey]

**ಸರ್ವೆಮರ** (ನಾ). (ಭೂಮಿಯನ್ನು ಅಳತೆ ಮಾಡಲು ಬಳಸುತ್ತಿದ್ದ)ನೇರವಾಗಿ ಎತ್ತರಕ್ಕೆ ಬೆಳೆಯುವ ಒಂದು ಬಗೆಯ ಮರ : ಸರ್ವೆಮರ, ಕ್ಯಾಸುರಿನ (ಮೈಜಿ. ೧೯-೩೪೪). [ಸರ್ವೆ + ಮರ$_1$]

**ಸರ್ವೇಂದ್ರಿಯ** (ನಾ). ಎಲ್ಲ ಇಂದ್ರಿಯಗಳು : ಇಂತು ಸರ್ವೇಂದ್ರಿಯಂ ಸಂದಣಿಸಿ ಕಣ್ಣೆಡೆಯ (ನಂಬಿರ. ೩-೧೫) ; ಸರ್ವೇಂದ್ರಿಯಕೆ ಮೋಹದ ಶಿಶುವದೊಂದೆ ಮುದ್ದಿನ ವಿಷಯಮಾಯ್ತು (ಶ್ರೀರಾಮಾ. ೧೭-೪೪೩). [ಸಂ.]

**ಸರ್ವೇಶ** (ನಾ). ಸಕಲಕ್ಕೂ ಒಡೆಯನಾದವನು; ಪರಮಾತ್ಮ : ಸರ್ವಜ್ಞ ಸರ್ವಗ ಸರ್ವ ಸರ್ವೇಶ . . . ಶಿವ ಅವಧಾರು (ಬಸಪು. ೧-೬೬); ಪರಮವಿಲಾಸ ಹರಿ ಸರ್ವೇಶ ದೇವೇಶ . . . ರಕ್ಷಿಸು ನಮ್ಮನನವರತ (ಹರಿಸಾ. ೧೧). [ಸಂ.]

**ಸರ್ವೇಸಾಧಾರಣ** (ನಾ). ಎಲ್ಲಕ್ಕೂ ಎಲ್ಲರಿಗೂ ಸಮಾನವಾಗಿರುವುದು; ಹೆಚ್ಚುಗಾರಿಕೆಯಿಲ್ಲದಿರುವುದು : ಯಾವ ವಿಷಯದಲ್ಲೂ ಅವನು ಪ್ರಚಂಡನಲ್ಲ, ಸರ್ವೇಸಾಧಾರಣವಾಗಿದ್ದ (ಸ್ವಾಮಿಸ್ಮೃ. ೧೦). [< ಸರ್ವ$_2$ + ಸಾಧಾರಣ]

**ಸರ್ವೇಸಾಮಾನ್ಯ** (ನಾ). ತೀರ ಸಾಮಾನ್ಯವಾದುದು; ತುಂಬ ಸಹಜವಾದುದು: ಹೊಗೆಸೊಪ್ಪಿನ ರೂಢಿ ಇದ್ದವರಿಗೆ ಈ ಬಗೆಯ ವೈಚಿತ್ರ್ಯ ಸರ್ವೇಸಾಮಾನ್ಯವಾಗಿತ್ತು (ಏಳಜೀ. ೯೧). [< ಸಂ. ಸರ್ವಸಾಮಾನ್ಯ]

**ಸರ್ವೈಕವಾಕ್ಯ** (ನಾ). ಸರ್ವಸಮ್ಮತವಾದ ಮಾತು; ಒಮ್ಮತದ ನುಡಿ: ಸಾಸಿರ್ವ್ವರುಂ ಗೊಸಣೆಮೂಲ ನೆರದು ಸರ್ವೈಕವಾಕ್ಯದಿನೊಡಂಬಟ್ಟು . . . ಬಿಟ್ಟ ಧರ್ಮಾ (ಕಇ. IV, ೩೨-೧೯: 1088). [ಸಂ.]

**ಸರ್ವೋಚ್ಚ** (ಗು). ೧. ಎಲ್ಲಕ್ಕೂ ಮೇಲಿನ ; ಅತ್ಯುನ್ನತ ಸ್ಥಾನದಲ್ಲಿರುವ; ಶ್ರೇಷ್ಠವಾದ : ಪರಮಗೌರವಮೂರ್ತಿ, ಸರ್ವೋಚ್ಚಸೇನಾನಿ . . . ನೀಲಂಗೆ ಬೆಸಸಿದನ್ ಭಾಸ್ಕರಭವಂ (ಶ್ರೀರಾಮಾ. ೩೪೭-೨೦೫). (ನಾ). ೨. ಶ್ರೇಷ್ಠವಾದುದು; ಅತ್ಯುತ್ತಮವಾದುದು : ಸರ್ವೋಚ್ಚವೆನಿಪಲಂಕಾರ ಕ್ಷಯಿಸಿ ಹೋದರೆ ಮತ್ತೆ ವೃದ್ಧಿಯ ಪಡೆಯದ ಯೌವನಕಿರಲಿ ಧಿಕ್ಕಾರ (ಇಂಚಾಪ. ೧೯೫-೬೨). [ಸಂ.]

**ಸರ್ವೋಚ್ಚನ್ಯಾಯಾಲಯ** (ನಾ). ದೇಶದ ಉಚ್ಚತಮನ್ಯಾಯಾಲಯ; ಸುಪ್ರೀಂಕೋರ್ಟು : ನಮ್ಮ ದೇಶದ ಸರ್ವೋಚ್ಚನ್ಯಾಯಾಲಯವು ರಾಜಧಾನಿಯಾದ ದೆಹಲಿಯಲ್ಲಿದೆ (ರೂಢಿ). [ಸಂ.]

**ಸರ್ವೋತ್ತಮ** (ಗು). ೧. ಅತ್ಯುತ್ತಮವಾದ; ಸರ್ವಶ್ರೇಷ್ಠವಾದ. (ನಾ). ೨. ಸರ್ವಶ್ರೇಷ್ಠನಾದವನು; ಪರಮಗುರು: ದಂದುಗವೆಂದುಂ ತಮಗಾಗದಂತೆಸಗುವರ್ ಸರ್ವೋತ್ತಮರ್ ಸರ್ವಸಾಧುಗಳ್ (ಆದಿಪು. ೧-೫). [ಸಂ.]

**ಸರ್ಷಪ** (ನಾ). ೧. ಒಂದು ಬಗೆಯ ಧಾನ್ಯ; ಸಾಸಿವೆ: ಅಂತು ಕೊಂಡ ಪದವಟಿಗೆಗಳೊಳ್ ಕಳಮಷಷ್ಟಿಕಾವ್ರೀಹಿ . . . ಕುಸುಂಭ ಕಾರ್ಪಾಸ ಸರ್ಷಪ ಜೀರಕ ಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ (ಆದಿಪು. ೬-೬೨ ವ); ಅತಿಸಿತಸರ್ಷಪ ಶೇಷಾಕ್ಷತಂಗಳಂ ಮಂಗಳಾರ್ಥದಿಂ ಪೆರ್ವೆಂಡಿರ್ ಸತತೋತ್ಸವದಿಂದಂ ಪರಸಿ ತಳಿದರ್ (ಸುಕುಮಾ. ೧೧-೬). ೨. ಒಂದು ಸಾಸಿವೆಕಾಳಿನಷ್ಟು ಪ್ರಮಾಣ: ಹೊಡಕರಿಸಿ ಸತ್ತ್ವಾತಿಶಯವಿಮ್ಮಡಿಸೆ ಸರ್ಷಪಮಾತ್ರ ತಿರುವನು ತೊಡಿಸಲಟಿಯದೆ ಹಿಂಗಿ ಮೌನದೊಳಿರ್ದನಾ ಕರ್ಣ (ಕುವ್ಯಾಆ. ೧೪-೨೪). ೩. (ಮುತ್ತುರತ್ನಗಳನ್ನು ತೂಗುವ) ಒಂದು ಸಣ್ಣ ತೂಕದ ಪ್ರಮಾಣ: ಇನ್ನು ಪೇಳುವೆನವರ ತೂಕ ಪ್ರಮಾಣಮಂ ಭಿನ್ನಿಸದೆ ಪೇಳ್ವೆನದಕೆಂಟುಸರ್ಷಪಗೂಡಲನ್ನಿಯಿಂ ತಂಡುಲಮದಕ್ಕು (ರತ್ನಶಾ. ೪-೧೫). [ಸಂ.]

**ಸಲ್, ಚಲ್$_1$ ಸಲು, ಸಲ್ಲು** (ಕ್ರಿ). ಸಂದ (ಭೂತಕೃ), ಸಂದು$_1$ (ಭೂತನ್ಯೂ), ಸಲ್ವ (ಭವಿಕೃ). ೧. ಒಳಹೊಗು; ಪ್ರವೇಶಿಸು : "ಸಲ್-ಸ್ಥಾನಪ್ರವೇಶೇ, ಸಮಾಖ್ಯಾತೌಚ (ಪ್ರಸಿದ್ಧಿಪಡೆ)" (ಶಮಧಾ) ; ಸನ್ಯಾಸನಂಗೆಯ್ದುರುಸತ್ವನ್ ನನ್ನಿಸೇನಪ್ರವರಮುನಿವರನ್ ದೇವಲೋಕಕ್ಕೆ ಸನ್ದಾನ್ (ಎಕ. II, ೮೮-೪; ಸು. 700); ಯಮಭಟ್ಟಾರಕನಂತರ್ಧಾನಕ್ಕೆ ಸಂದಂ (ಪಂಪಭಾ. ೧-೧೯ ವ). ೨. ಹೋಗು; ಸೇರು: ಸಂದನಜಪುರಿಗತ್ತಲಾ ಮುನಿ (ತೊರರಾ. ೧-೨-೧೮). ೩. ಚಲಿಸು; ಸರಿ: ಕಣ್ಮಂತೆ ಸಂದಪ್ಪುದೊಂದನೆ ಕೇಳ್ದೋಪಳೆ ಕೂರ್ವೆಗೆಟ್ಟೆನಗೆ ನೀನೇನಾನುಮೊಂದೇವಮಂ ಮನದೊಳ್ ಮಾಡಿದೊಡಂದೆ ದೀವಳಿಗೆಯಂ ಮಾನಾಮಿಯಂ ಮಾಡನೇ (ಪಂಪಭಾ. ೪-೯೩). ೪. ಕ್ರಮಿಸು; ಗಮಿಸು; ಮುನ್ನಡೆ : ಶ್ರೀಬಾಳಾ ಮೇಲ್ ಶಿಖಿ ಮೇಲೆ ಸರ್ಪ್ಪದ ಮಹಾದನ್ತಾಗ್ರದುಳ್ ಸಲ್ವವೋಲ್ ಸಾಲಾಮ್ನಾಲ ತಪೋಗ್ರದಿನ್ತು ನಡದೊಂ ನೂಱೆನ್ನುಸಂವತ್ಸರಂ (ಎಕ. II,೨೨-೧ ; ಸು. 700). ೫. ಬರು; ಆಗಮಿಸು: ಧವಳಾತಪತ್ರಮಡ್ಡಂ ದಿವಸಕೆ ಸಲಲೀಯದಂತಿರ್ಪುದು (ಗದಾಯು. ೯-೧೧); ಹೊಯ್ದು ಮುಗ್ಗಿತು ಭಟರು ವೆಗ್ಗಳ ಕೈದುಕಾಱರು ತಲೆಗೆ ಸಂದರು ಮೈದೆಗೆಯದೊಡವೆರಸಿ ಹೊಕ್ಕರು ಬೇಹಬೇಹವರು (ಕುವ್ಯಾಕ. ೨-೪); ನಿನ್ನಾಣತಿಗೇಳಿ ನಿನ್ನ ಬಳಿಗೆ ಸಂದು . . . ನಿನ್ನೆಡವಿಡದಿರ್ಪೆನು (ಹದಿಬ. ೧-೩೭). 'ಬಟೆಸಲ್' ಪರಾ. ೬. (ಕಾಲದಂತೆ) ಕಳೆ; ಮುಗಿ; ತೀರು: ಇಂತು ದಿವಸಂಗಳ್ ಸಲೆ (ವಡ್ಡಾರಾ. ೭೭-೯); ಅನೇಕ ಸಂವತ್ಸರಂಗಳ್ ಸಲ್ವಿನೆಗಂ (ಆದಿಪು. ೫-೨೨ ವ); ಅಷ್ಟೋಪವಾಸದಿಂ . . . ನೆಗಳ್ದ ತಿಂಗಳ್ ಸನ್ದಡೆ ಪಾರಿಸಿ ಚತುರ್ಮುಖಾಖ್ಯೆಯನಾಳ್ದರು (ಎಕ. II, ೬೯-೧೭ ; ಸು. 1100); ಸಂದವೈ ಹದಿನೇಳು ರಾತ್ರಿಗಳು (ಕುವ್ಯಾಶ. ೧-೩೪). ೭. (ಘಟನೆಯಂತೆ) ಆಗಿಹೋಗು; ಘಟಿಸು; ಜರುಗು: ಅದು ಪಿರಿದುಂ ಪ್ರಮಾದಮದುವುಂ ಕುರುರಾಜನಿನಾಯ್ತು ಪೋಯ್ತು ಸಂದುದು ಮಱೆಯಲ್ಕೆವೇೞ್ಪುದದಂ (ಪಂಪಭಾ. ೪-೪); ಸಂದುದಂ ನಿಂದುದಂ ಪೊಳ್ತು ಹೊಸೆಯುವುದು (ಕಾಲೂರ. ೧೧೫-೨೫೧). ೮. ಮಡಿ; ಅಳಿ; ಸಾಯು: ಭೀಷ್ಮರು ಸಂದ ಬಳಿಕೆಮಗಾಪ್ತ ನೀನೇ ತಂದೆ ನೀನೇ (ಕುವ್ಯಾದ್ರೋ. ೮-೫೫); ಕಂದರ್ಪನ ದೇಹ ಹತವಾಗೆ ಮರುತ ಸುಗಂಧವಾಸನೆಯ ಕಂಡಱದು ಸಂದುದು ನಿಶ್ಚಯವಹುದೆಂದು ರತಿ ದುಃಖದಿಂದೆ ಪ್ರಳಾಪಿಸುತಿರಲು (ಮೋಹತ. ೮-೩). ೯. ಪ್ರಯೋಜನಕ್ಕೆ ಬರು; ಕೆಲಸಕ್ಕೆ ಒದಗು: ಓದದೋದಱಯದ ವಿದ್ದೆ ಸಲ್ಲದ ಚದುರ್ ನೆಱೆ ಕಲ್ಲದ ಕಲ್ಪಿ . . . ತಮ್ಮ ಬಱುವಾತುಗಳೊಳ್ ಪುದಿದೆಗ್ಗರೆಯ್ದೆ ಕಣ್ದೆಱೆವಿನಮಾರ್ ಪಱೆಯದೇನೆಳೆಯಂ ಕಿಡಿಸಲ್ಕೆ ಬಲ್ಲರೋ (ಪಂಪಭಾ. ೪-೯೫). ೧೦. ಸಾಧ್ಯವಾಗು; ಶಕ್ತವಾಗು: ಮದನಮದೇಭಂ ಕಡಿಕೆಯ್ದದನ್ನೆಗಂ ಸಲ್ಲುಮಾರ ಬೀರಂಗಳುಂ (ಅಜಿಪು. ೨-೮೭) ; ಅಲ್ಲಿಯ ಸಾರಮಪ್ಪ ಬೆಳಸಂ ಸಲೆ ಕೊಯ್ದುಱೆ ತೀರ್ಚಲಾಱರ್ . . . ಒಕ್ಕಿ ಸುರಾಶಿಗಳಂ ವಿನಿರ್ಮಿಸಲ್ ಸಲ್ಲರುಂ (ಬಾಧಪು. ೪-೧೮); ರತಿಯಂ ಬಣ್ಣಿಸಲ್ಕೆ ಸಲ್ಲದ ನೀನೆತಟ ಕಾಮದೇವಂ! (ರಾಮಾಶ್ವ. ೮೭-೨೦). ೧೧. (ಮಾತು, ಪಂಥ, ಆಜ್ಞೆ ಮೊದಲಾದುವು) ನೆರವೇರು; ಈಡೇರು: ಎನ್ನ ಛಲವಿಂದು ಸಂದತ್ತೆನ್ನ ಮನೋರಥಫಲಂ ಕರಂ ಸಾರ್ದುದು (ದಶಕು. ೫-೮೭); ನುಡಿದ ನುಡಿವಳಿ ಸಂದುದೇ (ಕುವ್ಯಾದ್ರೋ. ೧೩-೬೨). ೧೨. ತಕ್ಕುದಾಗಿರು; ಯೋಗ್ಯವಾಗಿರು; ಅರ್ಹವಾಗು: ಹಿರಿಯಣ್ಣನೇಂ ಜನಕನೇನೆಂಬೊಂದು ಕೊಂಡಾಟದಿಂ ವಿನಯಂ ಸಲ್ಬುದು (ಆದಿಪು. ೧೪-೩೧); ಇವು ಸುಜ್ಞಾನದ ಸಲ್ವ ಬಟ್ಟೆಗಳ್ (ಅಜಿಪು. ೧-೪) ; ಮೋಕ್ಷಮಾರ್ಗದ ಮಾತಂ ನಿರುತಂ ಮಾರಲ್ ಸಲ್ಲದು (ಸಮಪ. ೩-೪೧). ೧೩. ಚಲಾವಣೆಯಲ್ಲಿರು; ಜಾರಿಯಲ್ಲಿರು: ಶತ್ರಕ್ಕಂ ಮೂವತ್ತು ಗದ್ಯಾಣ ಪೊನ್ನಂ ಕೊಟ್ಟಂ ಇದು ಎಲ್ಲಾ

ಕಾಲಮುಂ ಸಲ್ಲು (ಪ್ಯಲರಿ. ೧೯೩೫, ೧೫-೯ ; 9ನೆಯ ಶತ). ೧೪. ಒಪ್ಪಿಗೆಯಾಗು ; ಸಮ್ಮತವಾಗು : ಎಮ್ಮೊಳು ಸಲ್ಲದೀ ನುಡಿಯೇತಕಿದು ಶಬಿವಲ್ಲಭನ ಮಾತೇನು ಸಾಕಂತಿರಲಿ (ನಳಚ. ೩-೩೮) ; ನಾರಾಯಣನೆ ಕುಡು ಸುಮತಿಯ ಸಜ್ಜನರ ಸನ್ಮತಿಗೆ ಕೃತಿ ಸಲ್ಲಂದದಿ (ಸಂದಿಮಾ. ೧-೪). ೧೫. ಒಪ್ಪು; ಶೋಭಿಸು: ಕವಡಿಕೆಯುಂ ಕಾಜುಂ ಸಲ್ಗುಮೆ ಹೊನ್ನವೊಲೆಲ್ಲಿಯಾದೊಡಂ (ಸಮಪ. ೩-೧೨); ಪೊನ್ನೆಲ್ಲಿಗಮೆಸೆವಂತಿರೆ ತಾಂ ನೆಜೆ ಸಂದಪುದೆ ಮದ್ದುಗುಣಿಕೆಯುಮಿಳೆಯೊಳ್ (ಧರ್ಮಾಮೃ. ೧-೧೯೧); ಆಕೆವಾಳರು ಹೊಱಗೆಯುಳ್ಳ ವಿವೇಕಿಗಳು ನಿಮ್ಮಲ್ಲಿ ಸಲ್ಲರು (ಕುವ್ಯಾದ್ರೋ. ೧-೫). ೧೬. ವಶವಾಗು; ಅಧೀನವಾಗು : ಅಮಿತಮತಿ ಗುಣದಿನತಿವಿಕ್ರಮುಗುಣದಿಂ ಶಾಸ್ತ್ರಪಾರಮುಂ ರಿಪುಬಳಪಾರಮುಮೊಡನೆ ಸಂದುವೆನಿಸಿದನಮೇಯಬಲಶಾಲಿ ಮನುಜ ಮಾರ್ತಾಂಡನೃಪಂ (ಪಂಪಭಾ. ೧-೪೫) ; ಕೊಲ್ಲದ ಪುಸಿಯದ ಕಳವಿನಿಸಿಲ್ಲದ ಪರವನಿತೆಯರ್ಗೆ ಪದಪಿಂ ಚಿತ್ತಂ ಸಲ್ಲದ ಪರಿಗ್ರಹಕ್ಕಳಿಪಿಲ್ಲದ ಸುವ್ರತಮಿಪ್ಪೆಂದುಮಲ್ಲವೆ ರತ್ನಂ (ಧರ್ಮಾಮೃ. ೧-೮೧). ೧೭. ಈಡಾಗು; ಗುರಿಯಾಗು; ಪಕ್ಕಾಗು: ಕೊಲ್ವೋರುಂ ಕೊಣ್ಬು ಉಣ್ಬೋರುಂ ಪಞ್ಚಮಹಾಪಾತಕಸಂಯುಕ್ತನಾಗಿ ಪೂತಿ ಎನ್ಬ ನರಗಕ್ಕೆ ಸಲ್ಗೆ (ಎಕ. VI, ಕೊಪ್ಪ. ೩೭-೮ ; ಸು. 675?) ; ಈ ಕುಮಾರಿಕೆ . . . ಆವನಂ ಕಂಡು ಮೂರ್ಛೆಗೆ ಸಲ್ಲುವಾತನೆ ವರನಕ್ಕುಂ (ನೇಮಿಪು. ೫-೩೮ ವ) ; ಬಸವಳಿದಿ ರನುಗೆಟ್ಟಿರಬಿಳಾಯಸಕೆ ಸಂದಿರಿ (ತೊರರಾ. ೧-೮-೭೪). ೧೮. ಉಂಟಾಗು ; ಒದಗು; ಸಂಭವಿಸು : ಇವರ್ಗಾತ್ಮೋಚಿತಮಾಗಿ ಮುನ್ನಮೆ ವಿವಾಹಂ ಸಂದುದು (ಕಾದಂಉ. ೮೦೫); ತೊದಳಿಂದ ನುಡಿವುತಂ ಸಂದ ಗದುಗದಿಕೆಯಿಂದಾನಂದವೇಱುತಂ (ಬಸರ. ೩-೧೦೨) ; ಕೊಳುಗುಳಕೆ ಕಂದನ ಕಳುಹಿದವರಿಗೆ ಸಂದುದೇ ಪರಿಣಾಮ (ಕುವ್ಯಾದ್ರೋ. ೭-೧೩). ೧೯. ಹೆಸರಾಗು ; ಪ್ರಸಿದ್ಧವಾಗು ; ಪ್ರಖ್ಯಾತವಾಗು : ಎನ್ನ ನನ್ನಿಯ ಪೆಂಪು ನಿನ್ನ ಮಹತ್ತ್ವದಿಂದಮೆ ಸಂದುದು (ಪಂಪಭಾ. ೯-೧೭) ; ಸಂದಿರ್ದದಟರೊಳಿಱಿ ದಱಿಯಂ ತಪ್ಪದೆ ಕಮ್ಮಱಿಯೋಜನೆನಿಸಿದಂ ಬಿಲ್ಲೋಜಂ (ಗದಾಯು. ೨-೧೩); ನಿಮ್ಮೆಲ್ಲರುಂ ಪೋಗಿ ಮರ್ತ್ಯದೊಳ್ ಸಲೆ ಸಂದು ಸಕಲಭೋಗಂಗಳಂ ಸವಿಗಂಡು ಬರ್ಪುದೆನೆ (ಸಂಬರ. ೧-೫೨). ೨೦. ನಡೆಸು; ಆಚರಿಸು ; ಪಾಲಿಸು: ಇದಾನ್ಯಾದು ಸಲ್ವೊನ್ನರಮುಕಲ್ಯಾಣಭಾಗಿಗಳಾಪ್ಪೋರ್ (ಎಕ. VII, ಶಿಕಾರಿ. ೧೫೪-೧೭; 685). ೨೧. ಸರಿಹೊಂದು ; ಅನ್ವಯಿಸು : ಸತ್ಕೃತಿಗೇಳ್ದು ದುರ್ಜನಂ ಪಱಿದು ವೃಥೋಕ್ತಿ ಸಲ್ಲದೊಡೆ ಸಾಯದೆ (ಅನಂಪು. ೧-೪೦). ೨೨. ಮುಳುಗು; ಲೀನವಾಗು; ಮಗ್ನವಾಗು: ವ್ಯಸನದೊಳ್ ಸಂದಿರ್ದನೋ ರಾಗಮಿರ್ದನೋ ಪೇೞ್ (ಕಾದಂಪೂ. ೭೮೫). ೨೩. ಸೇರು; ಕೂಡು: ಕುಂದದಲಸದೆ ಬಿಟ್ಟಿಗೆಲಸಕೆ ಸಂದು ಮಾಡುತಿರ್ದಡದು ನಿನಗಂದವಲ್ಲಾ ದೇವ (ಬಸಪು. ೬೧-೫೭); ಭಾನು ಸಂದನು ಪಡುಗಡಲೊಳಗೆ (ವೋಹತ. ೪-೭೨). ೨೪. ಸಿಕ್ಕು; ದೊರಕು; ಲಭಿಸು: ಕಷ್ಟಮತಿಗಳ್ ದುಃಖಂಗಳನನುಭವಿಸುತ್ತಿರ್ಪರ್ ತಳವಱರ ವಶಕ್ಕೆ ಸಂದ ಕಳ್ಳರ ತೆಱದಿಂ (ಬಾಧಪು. ೫-೪೧) ; ಧರಣಿಯಮರರ ದಕ್ಷಿಣೆಯ ವಿಸ್ತರಣದೊಡೆತನ ಸಂದುದಧ್ವರದಲಿ ಸುಮಂತ್ರಂಗೆ (ತೊರರಾ. ೧-೭-೨೪). ೨೫. ನಡೆದು ಬರು; ಮುಂದುವರಿ; ಪ್ರವರ್ತಿಸು: ಪರಮಭಟ್ಟೇರಕೋ ರಾಜ್ಯಾಭಿ[ವೃ]ದ್ಧಿಯುತ್ತರೋತ್ತರಂ ಸಲುತ್ತಿರೆ (ಸೌಇಇ. XI-i, ೭-೧೧ ; 837) ; ಈ ಶಾಸನಮಾಚನ್ದ್ರಾರ್ಕತಾರಂಬರಂ ಸಲ್ಗೆ (ಎಕ. XI, ಚಿತ್ರದು. ೭೭-೩೭ ; 937) ; ಆಕೆಗಮಾತಂಗಂ ಅತಿಸ್ನೇಹಂ ಸಲುತ್ತಿರಲ್ . . . ಉದಯಿಸಿದಂ ತನಯನವಳ್ಗೆ (ದಶಕು. ೫-೫೪ ವ). ೨೬. ಹೊಂದಿಕೆಯಾಗು; ಅಳವಡು; ಸಂಗತವಾಗು: ಕೈಗಂಗುಲಿಯೆಂತುಟಂತುಟೆ ಲಸದ್ದೀಪಕ್ಕೆ ಸಂದೆಣ್ಣೆಯೆಂತುಟು ತಾನಂತುಟೆ ದರ್ಶನಂ ಸಕಲಧರ್ಮಕ್ಕಂ ಧರಾಚಕ್ರದೊಳ್ (ಧರ್ಮಾಮೃ. ೧-೭೨) ; ಜೇನುತುಪ್ಪಕ್ಕೆ ಸಕ್ಕರೆ ಸಲ್ಲುದು (ಶಮದ. ೧೫೦ ಪ್ರಯೋ); ಅತಿಪೀಡನದಿಂ ರೇಫಾಶ್ರಿತಮಾದ ಱಕಾರಮುಂ ಸಮಂತು ಡಕಾರಾಶ್ರಿತಮಾದ ಱಟಮುಮಂಗೀಕೃತಪದಲತ್ವಕ್ಕೆ ಸಮನೆ ಸಲ್ಲದ ಕುಳನುಂ (ಶಬ್ದಾನು. ೧೪೦ ವ್ಯಾಖ್ಯಾ). ೨೭. (ಹಕ್ಕು, ಅಧಿಕಾರ, ಕ್ರಮ, ಯೋಗ್ಯತೆ ಮೊದಲಾದುವುಗಳ ಮೇರೆಗೆ ಮುಟ್ಟಬೇಕಾದುದು) ಬಂದು ತಲಪು ; ಸೇರು; ಸಂದಾಯವಾಗು : ಧರಿತ್ರೀ ಜೀಯ ಬೆಸನೇನೆನೆ ಸನ್ನಿವು ಸನ್ನವಲ್ಲೆವಿನ್ನರಸು ದಲೆನ್ನು ಪಾಂಬಬೆಗಳನ್ನು ತಪೋನಿಯಮಸ್ಥರಾದೊರಾರ್ (ಎಕ. VI, ಕಡೂರು. ೧-೨೭ ; 971). ೨೮. ಯುಕ್ತವಾಗು; ಸಹಜವಾಗಿರು: ನುಡಿಗೆಲ್ಲಂ ಸಲ್ಲದ ಕನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀಗಡಿನ ನೆಗಟ್ತೆಯ ಕಬ್ಬದೊಳೊಡಂಬಡಂ ಮಾಡಿದರ್ ಪುರಾತನಕವಿಗಳ್ (ಕವಿರಾ. ೧-೩೩). **ಚೆಲ್**[1] : ೨೫. ಚಿಕೊಡೆಯರ ಕಾಲ ತೊಡಗಿಉ ಆ ದೇವರ ಕಾಣಿಕೆ ಆ ದೇವರಿಗೆ ಚಂದುಬಹುದು (ಸೌಇಇ. IX- ii, ೪೨೯-೨೩ ; 1405).

**ಸಲು** : ೧೦. ಸಲುವೆನೆಂದಂತಃಪುರಕೆ ಸಂಚಲಿಸುವವನು . . . ಇಳೆಯೊಳಗೆ ಮೂಢಾತ್ಮನ್ಯೆ (ಕುವ್ಯಾಉ. ೩-೫೨). ೧೧. ಆನು ಮಾಡಿದುದಲ್ಲದೆ ಬಯಸಿದ ಬಯಕೆ ಸಲುವುದೆ (ಬಸವ. ೭೨೨) ; ಒಳಗೊಳಗೆ ತನ್ನಾಣೆ ಘೋಷಣೆ ಸಲುವುದಲ್ಲದೆ ಸೊಡರು ಬೀದಿಗೆ ಸುಳಿಯಲೆಲ್ಲಿಯ ಬೆಳಗು (ಕುವ್ಯಾದ್ರೋ. ೧೩-೪೭). ೧೨. ಅವಯವಹೀನನು ರಾಯಪಟ್ಟಕ್ಕೆ ಸಲುವನೆ (ಶೂನ್ಯಸಂ. ೨೬೧-೪೭). ೧೩. ವ್ಯಾಧನೊಂದು ಮೊಲವ ತಂದರೆ ಸಲುವ ಹಾಗಕ್ಕೆ ಬಿಲಿವರಯ್ಯಾ (ಬಸವ. ೧೫೮). ೧೫. ಪೂತು ಫಲುಗುಣ ನಿನ್ನ ಕುಲಕಭಿಜಾತಶೌರ್ಯಕೆ ಗರುವಿಕೆಗೆ ಸರಿಮಾತನಾಡಿದೆ ಸಲುವುದ್ಯೆ ನಿನಗೆ (ಕುವ್ಯಾಸ. ೩-೧೨). ೨೫. ಸಲುವುದಷ್ಟಾದಶವಿವರ ವರ್ಣಂಗಳಾದಿಯಲಿ (ಬಸಪು. ೫೫-೧೨). ೨೬. ಪಲವಗೆಯ ಪಕ್ಷಿಗಳ ತರಿಸೀಯ್ಯಲವ ಕೊರೆದು ಸಲುವ ಸಂಬಾರದೊಡನವನು ಪಾಕಂಗೈದು (ನವಮೋ. ೯-೭). ೨೭. ಈ ನಗರದಧಿಪತಿ ದಶರಥನ ದಾಯಿಗನು ಧರೆಯಿದು ನಿಮಗೆ ಸಲುವುದು (ತೊರರಾ. ೧-೧೨-೧೫).

**ಸಲ್ಲು** : ೬. ಪ್ರಶ್ನೆ ಕೇಳಿದವಳು ಪ್ರಾಯ ಸಂದ ಮುದುಕಿ (ನಡೆದಾ. II, ೯೭೩) ; ವರ್ಷಗಳು ಸಂದುವು (ಮಣಿಸ. ೪೨). ೮. ಆ ಶಾಖೆಯ ಬೆಂಬಳಿಗೊಂಡು ಆಡುವರಲ್ಲ ಮುಂದುಗಾಣದೆ ಸಂದು ಹೋದರು (ಲಿಂಗವ. ಕ. ೮೩-೯೫). ೧೧. ಆಸೆಯೆನಗೀ ರಾಜ್ಯದಲಿ ಮೇಣೀ ಶರೀರದಲಿಲ್ಲ ಪಾರ್ಥನ ಭಾಷೆ ಸಂದರೆ ಸಾಕು (ಕುವ್ಯಾಕ. ೧೭-೧೦) ; ಸಲ್ಲಿದವು ಕಾಮನೆಗಳೆಂದುರೆ ಬಲ್ಲ ಮುನಿಗಳು ಬಂದು ತ್ವರೆಯಲಿ ಫುಲ್ಲಲೋಚನನೆಡೆಗೆ ಪರಮಾನಂದದಿಂ ಕೂಡಿ ಸಲ್ಲಲಿತನುಡಿಯಿಂದ ತುತಿಸಲು (ರಘುವಂ. ೧೬೯). ೧೨. ಅಸಮಾನರಲಿ ಸಂಗ್ರಾಮ ಸಲ್ಲದು (ತೊರರಾ. ೧-೧೭-೯) ; ಸಲ್ಲದ ಮಾತನಾಡಿದನೆಂದು ಕೋಪಿಸಿ ಕಲ್ಲ ಗಾಣದೊಳಿಕ್ಕಿಸೆನ್ನ (ಮೋಹತ. ೩೭-೨೧). ೧೩. ಕಳ್ಳನಾಣ್ಯ ಸಲಿಕೆಗೆ ಸಲ್ಲದು ಕಳ್ಳನಾಣ್ಯವ ಸಲ್ಲಲೀಯರಯ್ಯಾ (ಬಸವ. ೧೯೮). ೧೪. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ (ಬಸವ. ೧೫೫) ; ಬಲ್ಲವರು ಬಲ್ಲಂತೆ ಯುಕ್ತಿಗಳಲ್ಲಿ ಪೇಳಲು ಸಲ್ಲುವುದೆ (ಗಗತಾ. ೧೮-೨೦). ೧೫. ಆದಿಕಾವ್ಯವೆಂಬ ಹೆಸರು ರಾಮಾಯಣಕ್ಕೆ ಸಲ್ಲುತ್ತದೆ (ಭಾರದ. ೮೩). ೧೯. ಎಲೆ ಕೌಂತೇಯ ನೀ . . . ಸಂದ ಭರತ ಭಗೀರಥಾದಿಗಳಿಂದ ಮಿಗಿಲು (ಕುವ್ಯಾಕ. ೧೫-೧೦). ೨೧. ಆಯಿತಿದು ಸಮರದಲಿ ಗುರು ಗಾಂಗೇಯ ಕರ್ಣ ದ್ರೌಣಿಗಳ ತಱುವಾಯ ಲೆಕ್ಕಕೆ ಸಂದನ್ಯೆ . . . ಚಿಗಿದಂಬು ಕಡಿದುದು ಕರ್ಣನಂದನನ (ಕುವ್ಯಾಕ. ೨೦-೩೫) ; ಶಾ. ೧೪೦೨ಕ್ಕೆ ಸಲ್ಲುವ ಶಾರ್ವರೀ ಸಂವತ್ಸರದಲ್ಲಿ ಒಬ್ಬ ಮಗನ ಜನನವಾಯಿತು (ಜಗದಾ. ೯೭). ೨೨. ಸಲ್ಲುಗೆ ಮನ ನಿಮ್ಮಲ್ಲಿ ಸೋಲುಗೆ ಮನ ನಿಮ್ಮಲ್ಲಿ (ಮಹಾದೇ. ಬ. ೬೭-೩೧). ೨೬. ಚಿನ್ನದ ಜೊತೆಯೊಳು ತೂಗುವೊಂದನಿತಕೆ ಗುಲಗಂಜಿ ಬಿಗುಮಾನವೇಕೆ, ಅದು ಸಲ್ಲುವುದು ಮುಂದೆ ರಾಜನ ಮಕುಟಕೆ (ಇಂಚಾಪ. ೧೫೯-೮೫). ೨೭. ಹಳಗನ್ನಡಸಾಹಿತ್ಯದೊಳಗಿನ ದುರಂತವಸ್ತುವಿನ್ಯಾಸದ ವಿಲಾಸವನ್ನು ಎತ್ತಿ ತೋರಿಸಿದ ಶ್ರೇಯಸ್ಸು ದಿವಂಗತ ಶ್ರೀಮಾನ್ ಶ್ರೀಕಂಠಯ್ಯನವರಿಗೆ ಸಲ್ಲುವುದು (ಸಾಹಿಸ. ೧೦೭) ; ಚಕ್ರಾಧೀಶರಿಗೆ ಸಲ್ಲತಕ್ಕದ್ದು ಸಲ್ಲಲೇಬೇಕು (ಶ್ರೀರಾಯ. ೧೪೯). ೨೯. (ಆಲಂ) ನಿಭಾಯಿಸು; ನಿರ್ವಹಿಸು: ಹಿಂದಣ ಹಳ್ಳ ಮುಂದಣ ತೊಱೆ ಸಲ್ಲುವ ಪರಿಯೆಂತು ಹೇಳಾ (ಮಹಾದೇ. ಬ. ೧೭-೨೩).

**ಸಂತು**[1] = ೧. ದೊರಕಿತು; ಲಭಿಸಿತು: ಉನ್ನತಿಕೆಯು ಸಂತು ಎನಗೆ (ಬಿಜ್ಜರಾ. ೨-೭). ೨. ಕಳೆಯಿತು; ಮುಗಿಯಿತು: ಪೋದಿರುಳು ಯುಗವಾಗಿ ಸಂತು (ತುರಂಗ. ೩೫-೪೭). ೩. ನೆರವೇರಿತು: ನಿನ್ನಯ ಪಂಥ ಸಂತೇ ? (ಸಾರಂಗ. ೨೯).

**ಸಲ್ಲ** = ಯೋಗ್ಯವಲ್ಲ; ಸರಿಯಲ್ಲ; ಕೂಡದು: ಶಿವಗುಪ್ತಭಟ್ಟಾರಕರ್ಗ್ಗಾಂ ಪಾರಣೆಯಂ ಮಾಡುವೆಂ ಪೆಱರಾರುಂ ನಿಱಿಸಲ್ ಸಲ್ಲ (ವಡ್ಡಾರಾ. ೭೮-೪) ; ಮಿಡುಕಲ್ ಸಲ್ಲಿಲ್ಲಿಂದೊಂದಡಿಯಂ ನಿನಗೆಂದು ಲವಣವಾರಾಶಿಯೆ ಬಿಲ್ಲಿಡಿವಿಡಿದಂತೆ ವರೂಥಂ ಮಿಡುಕದೆ ನಿಂದತ್ತು (ಆದಿಪು. ೧೨-೮೫) ; ಈ ಸ್ಥಿತಿಯನಾರು ತಪ್ಪಲ್ಸಲ್ಲ (ಎಕ. IV, ಚಾಮರಾ. ೪೮-೧೪ ; 965); ಮುತ್ತಿನ ಹಾರ ಕಪಿಗೆ ಹಾಕಸಲ್ಲ (ಪುರಂದ. ೨-೫೮-೮); ಇದ್ದೂರ ಹಗೆ

ಸಲ್ಲ. ಕದ್ದುಕೊಂಬವರ ನೆರೆ ಸಲ್ಲ (ಗಾದೆ). **ಸಲ್ಲಗಳೆ** = ಸಲ್ಲದು ಎಂದು ತಿರಸ್ಕರಿಸು; ಕೂಡದು ಎಂದು ತ್ಯಜಿಸು ,- **ಬಿಡು** : ಪಲ್ಲ ಕೆಂಪಳಿವಂತೆ ಸುಲಿದಿದ್ದವನು ಮೊಗ್ಗೆ ಮಲ್ಲಿಗೆಯಂತಿದ್ದುವಾಗ ಸಲ್ಲಗಳೆದನು ವೀಳೆಯವ ಸಂಯಮಿತನ ಪಲ್ಲವಿಸುತ ಪಚ್ಚೆಯಿಟ್ಟ (ಭರತ. ೧೬-೧೪). **ಸಲ್ಲವಿಡು , ಸಲ್ಲಿಡು** = ಸಲ್ಲಗಳೆ: ನೀನಿನ್ನಲ್ಲಿಗಲ್ಲಿಗೆ ಹೋಹ ಬುದ್ಧಿಯ ಸಲ್ಲವಿಡು ಸುಖದಿಂದವೆಮ್ಮೊಡತಿಯ ಸಮೀಪದಲಿ . . . ಮನಬಂದಲ್ಲಿ ನೀನಿಹುದು (ಪ್ರಭುಲೀ. ೫-೧೪) ; ಅಲ್ಲಿಗಲ್ಲಿಗೆ ಹರಿವ ಬುದ್ಧಿಯ ಸಲ್ಲವಿಡು ನೀ ನಿತ್ಯ ಪೂಜಿಸು ಇಲ್ಲಿರುವ ಷಡಕ್ಷರಿಯ (ಸುಸಾರ. ೯೦-೧೧) ; ಇಲ್ಲದೀ ಮನ ತಿಳಿಯಲಲ್ಲಿಯೇ ಬಯಲಪ್ಪುದಲ್ಲದೀ ಬರಿಯ ಬೊಬ್ಬಾಟದಿಂದೆ ಸಲ್ಲಿಟ್ಟು ಪೋಗದಿದು (ಮನೋವಿ. ೧-೪೩). **ಸಲ್ಲಿದ** =. ಒಪ್ಪಿತವಾದ; ಸಮ್ಮತವಾದ; ಪ್ರಿಯವಾದ: ಕಲ್ಲಾಗಬೇಕು ಹರಿಗೆ ಸಲ್ಲದ ಮಾನವರಿಗೆ ಬಿಲ್ಲಾಗಬೇಕು ಹರಿಗೆ ಸಲ್ಲಿದ ಸುಜನರಿಗೆ ಬೆಲ್ಲದಂತಿರಬೇಕು ಸಲ್ಲುವ ಬಾಂಧವರಿಗೆ (ವಿಸಾಸು. ೭೪-೧). **ಸಲ್ಲಿದವರು** = ಒಪ್ಪಿಗೆಯಾದವರು; ಪ್ರಿಯರಾದವರು: ಎಲ್ಲ ಭಕ್ತರು ನಿನಗೆ ಸಲ್ಲಿದವರಾದರು ಸಲ್ಲದವ ನಾನಾದೆ ಸರಸಿಜನಾಭನೆ (ಮೋಕ್ಷದೀ. ೩೭-೩). IP 'ಬರ್' ಎಂಬುದಕ್ಕೆ 'ಬನ್ನಿ' ಎಂಬ ವಿಧ್ಯರ್ಥರೂಪವಿರುವಂತೆ (ಹೋಗು ಎಂಬರ್ಥದಲ್ಲಿ) 'ಸಲ್' ಎಂಬುದಕ್ಕೆ 'ಸನ್ನಿ' ಎಂಬ ವಿಧ್ಯರ್ಥರೂಪವು ಬಳಕೆಯಾಗಿರುವುದುಂಟು : ಬಡಭಕ್ತರು ಬಂದರೆ ಎಡೆಯಿಲ್ಲ ಅತ್ತ ಸನ್ನಿ ಎಂಬರು (ಬಸವ. ೪೧೩); ಇನ್ನು ಬರ್ಪರ್ಗಿಂಬುಗೊಟ್ಟರಿ ಸನ್ನಿ ಸನ್ನಿ ಕೆಲಕ್ಕೆ ಭಕ್ತರು ತನ್ನಿ ತನ್ನಿ ವಿಭೂತಿಯಂ ವೀಳೆಯವನಳವಡಿಸಿ (ಬಸಪು. ೪-೪); ಸನ್ನಿ ತೆಱಪುಗೊಡಿ ಸಾಗಿ ಮೆಲ್ಲಗೆಯೆಂದು ಚೆನ್ನಚೆನ್ನನೆ ಸೊಲ್ಲಿಸಿದರು (ಭರತ. ೮-೯೫). **[ದೇ. ‖ ತಮಿ. ಮಲ. ಚೆಲ್ ; ಕೋತ. ಚಲ್ ; ತೊದ. ಸಲ್ ; ತುಳು. ಸಲ್ಲು ; ತೆಲು. ಚೆಲ್ಲು]**

**ಸಲ₁ (ನಾ).** ಬಾರಿ; ಸರದಿ; ಪಾಳಿ: ಒಂದು ಸಲ ಪೇಟೆಯನ್ನು ಸುತ್ತಿ ಬರಬೇಕು (ಭಾರತಿ. ೧೧); ಎಷ್ಟೋ ಸಲ ಶಾಲೆಗೆ ಹೋಗುವಾಗ . . . ಕುದುರೆಸವಾರಿ ಮಾಡುತ್ತಿದ್ದುದುಂಟು (ಸಸ್ಯಕ. ೯೪).

ಸಲಸಲ (ದ್ವಿರುಕ್ತಿ) : ಬಹು ಸಾವಕಾಶವು ದೈವಸಹಾಯವು ಪರಿಕಿಪುದದು ಸಲಸಲವು (ಇಂಚಾಪ. ೧೯೮-೭೬).

**ಸಲ₂** 'ಸಲವು' ನೋ.

**ಸಲ₃ (ನಾ).** ಒಂದು ಬಗೆಯ ಅಳತೆ (?) : ಹಿರಿಯ ಕೆಱೆಯ ಕೆಳಗೆ ಸಲ ೩ ಬೆದ್ದಲೆ (ಎಕ. VI, ಕಡೂರು. ೧೬-೩೬ ; 1171). [?]

**ಸಲಂಗೊಳ್ (ಕ್ರಿ).** ಆಕ್ರಮಿಸಿಕೊಳ್ಳು; ಆವರಿಸು: "ಸಲಂಗೊಂಡುದೆನಲ್ಕೆಯಾಕ್ರಮಿಸಿಕೊಂಡುದಕ್ಕುಂ" (ಕಬ್ಬಿಗ. ೮೭). [ಸಲ₂ (< ಸಲವು) + ಕೊಳ್]

**ಸಲಂಡುಗೊಳ್ (ಕ್ರಿ).** = ಸಲಂಗೊಳ್ : "ಸಲಂಡುಗೊಂಡುದೆಂದು ಆಕ್ರಮಿಸಿಕೊಂಡುದು" (ಶಮದ. ಪ. ೨೮೩ ಪ್ರಯೋಗಸಾರ). [ಸಲಂಡು + ಕೊಳ್]

**ಸಲಕಡೆ (ನಾ).** ಗಂಡಸರು ಮುಂಗೈಯಲ್ಲಿ ಧರಿಸುವ ಚಿನ್ನದ ಒಂದು ಬಗೆಯ ಕಡಗ,— ಕಡೆಯ: ಎಡಗೈಯಾಗಿನ ಬಂಗಾರದ ಸಲಕಡೆ . . . ಇವನ್ನೆಲ್ಲಾ ಬರಗಾಲದ ಬಡಜನರು ಬೆರಗಾಗೇ ನೋಡುತ್ತಿದ್ದರು (ಜನಪೀ. ೧೨). [<— ಮರಾ. ಸಲಕಡೇ]

**ಸಲಕರಣೆ (ನಾ).** ೧. ಉಪಕರಣ; ಸಾಧನಸಾಮಗ್ರಿ: ಅಂದು ಉಪಯೋಗದಲ್ಲಿದ್ದ ಸಲಕರಣೆಗಳೇ ಹೆಚ್ಚಾದ ಮಾರ್ಪಾಡುಗಳೇನೂ ಇಲ್ಲದೆ ಇಂದೂ ಬಳಕೆಯಲ್ಲಿವೆ (ಶಾಸಗಿ. ೨ ಮುನ್ನುಡಿ) ; ಉಪಯೋಗಕ್ಕೆ ಆವಶ್ಯವಾದ ಪಾತ್ರೆಗಳ ಮತ್ತು ಇತರ ಸಲಕರಣೆಗಳ ಕಡೆಗೆ ಗಮನ ಹರಿಯಿಸಬೇಕು (ಅಡುಸಾ. ೩೨). ೨. ತಯಾರಿ; ಸಿದ್ಧತೆ: ದಾನಕ್ಕೆ ಸಲಕರಣೆ ಮಾಡುವ ಕೆಲಸವನ್ನು ವಹಿಸಿಕೊಂಡು ನಡುಕಟ್ಟಿ ನಿಂತರು (ಚೆಂಗಾಳ್ವ. ೧೩೦). [?. / ತಮಿ. ಚಲಕ್ಕರಣೈ]

**ಸಲಕು** 'ಸಲಗೆ₂' ನೋ.

**ಸಲಕ್ಷಣ (ಗು).** ೧. ಉತ್ತಮವಾದ ಲಕ್ಷಣಗಳುಳ್ಳ; ಒಳ್ಳೆಯ ಚಿಹ್ನೆಗಳುಳ್ಳ. ೨. ಸಮಾನವಾದ ಲಕ್ಷಣಗಳುಳ್ಳ; ಒಂದೇ ರೀತಿಯ ಚಿಹ್ನೆಗಳುಳ್ಳ. (ನಾ). ೩. ಒಳ್ಳೆಯ ಲಕ್ಷಣ; ಶುಭಚಿಹ್ನೆ: ಆಜಾನುಬಾಹುಗಳೆರಡುಮೊಪ್ಪಿದವತಿ ಸಲಕ್ಷಣವಂತಮಾಗುತ್ತ (ಬಸಪು. ೩೮-೪೨). [ಸಂ.]

**ಸಲಗ (ನಾ).** ೧. ಬಲಿಷ್ಠವಾದ ಗಂಡಾನೆ; ಪುದ್ದಾನೆ: ಎಲೆಲೆ ಸಲಗಂ ನೋಡಿದೆಲೆಲೆ ಶಲ್ಯಾಂಕವಿದೆಯೆಲೆಲೆ ಸಿಂಹಾಖ್ಯಂ (ಸಾನಂಚ. ೫-೪೮) ; ಮುಳ್ಳಿನ ಮರವಾದರೇನಂತೆ ಹತ್ತನೆ ಸಲಗವೆ ಬೆನ್ನಟ್ಟಿ ಬರಲು (ಇಂಚಾಪ. ೨೧೯-೮೨). ೨. ಬಲಿಷ್ಠವಾದ ಹೋರಿ; ಗೂಳಿ: "ಸಲಗನೆ ತಾಂ ಗೂಳಿ" (ಭಾರಸಿ. ೩೩); ಬಲುಸಲಗ ನೀಡಿಱಿದಾಡುತಿರ್ದುದು ಹಿಂಡುಹಿಂಡಿನಲಿ (ಕುಪ್ವಾವಿ. ೭-೫೧) ; ಬಸಿದ ಕೋಡಿನ ಸಲಗನೆಸೆವ ಕೋಣಂಗಳಿಂ ಮಸಗಿ ವಿಸಟಂಬರಿದು ಕರ್ಬುವುಷ್ಟಂಗಳಿಂ (ಸಾನಂಚ. ೪-೧೩೯).

**[ದೇ. ‖ ತೆಲು. ಸಲುಗು = ಹಂದಿ]**

**ಸಲಗು** 'ಸಲಗೆ₂' ನೋ.

**ಸಲಗೆ₁** 'ಸೊಲ್ಲಗೆ₁' ನೋ.

**ಸಲಗೆ₂, ಸಲಕು, ಸಲುಗು, ಸಲಾಕಿ, ಸಲಾಕೆ, ಸಲಾಖೆ, ಸಲಿಗ್ಗೆ, ಸೆಳಕಿ, ಸೆಳಕೆ, ಸೆಳಿಕೆ (ನಾ).** ೧. ಚೂಪಾಗಿಯೂ ಉದ್ದವಾಗಿಯೂ ಇರುವ ಒಂದು ಬಗೆಯ ಆಯುಧ; ಈಟಿ; ಭಲ್ಲೆ: ಕಿವಿಯಂ ಕೀಲ್ ಕೊಳ್ಳಿನಂ ಕರ್ಬುನದ ಸಲಗೆಯೊಳ್ ಚಿಟ್ಟಿ . . . ಕೊಲ್ವುದಂ ಕಣ್ಣೆ ಕಂಡಳ್ (ಸುಕುಮಾ. ೭-೩೫); ಶಲಾಕಾ - ಸಲಗೆ, ಶ್ಮಶಾನ- ಮಸಣ (ಶಮದ. ೨೭೩ ಪ್ರಯೋ). ೨. ಲೋಹ, ಮರ, ಬಿದಿರು ಮುಂತಾದುವುಗಳ ಉದ್ದವಾದ ತೆಳುಕಂಬಿ, — ಸರಳು,— ಪಟ್ಟಿ: ಬಂಡಿಯನು ಚಾವಡಿಯ ಮುಂದಿರಿಸಿ ಬೀಯಗದ ಕೊಂಡಿಯಂ ಕಳಚಿ ಸಲಗೆಯ ತೆಗೆದು . . . ಮುಚ್ಚಳ ತೆಗೆದು ನೋಡಲು (ಸಿದ್ಧರಾ. ೯-೧೪); ಕಲ್ಮದೊಳಗಾ ಕಾಯನು ಅಗುಳಿಸಿದ ಬಳಿಕ ಕರ್ಬೊನ್ನ ಸಲ[ಪಾಠಾಂ. ವರಿ, ಪಲ]ಗೆಯೊಳು ಕೆಂಪೊಗೆವಂತೆ ಕೆಂಡದೊಳು ತಿರಿತಿರಿಹಿ ಕಾಸಿ (ಸೂಪಶಾ. ೪-೮೭). ೩. ಸಣ್ಣಕಡ್ಡಿ, — ಕೋಲು : ಮುತ್ತಿನ ಸಲ[ಪಾಠಾಂ. ತ್ರಿ]ಗೆಯಂತೆ ನವಮಾಳಿಕೆಯ ನನೆಗಳಂತೆ ನಿಡಿಯವುಂ ಕಮ್ಮಿದುವುಮಪ್ಪ ಕಳಮಾಕ್ಷತಂಗಳುಮಂ ತುಱುಬಿ ತಿಳಕಮಿಕ್ಕಿ (ಅರ್ಥನೇ. ೩-೧೮ ವ); ಇದಿರೊಳ್ ನಿಂದಿರ್ದೊಡಂಗಕ್ಕಡರೆ ತೊಡೆದ ಬಾವನ್ನದಂತಾವಗಂ ನೋಡಿದ ಕಣ್ಣಳ್ಗಿಟ್ಟ ತೆಳ್ಪುರದ ಸಲಗೆಯಂತೆ . . . ನೀರ್ಪಟ್ಟ ನಿನ್ನಗ್ಗದ ದೇಹಚ್ಛಾಯೆಯಿಂ ತಣ್ಣನೆ ತಣಿಯದೆ ಲೋಕತ್ರಯಂ ಚಂದ್ರನಾಥಾ (ಕಾವ್ಯಸಾ. ೯). **ಸಲಕು:** ೨. ವಾಟೆ ಬಿದಿರು ಬೆತ್ತ ಇವುಗಳ ಸಲಕು ಕೆತ್ತುವುದು . . . ಎತ್ತು ದನ ಕಟ್ಟುವ ದಾವಣಿ ತಿರುಪುವುದು ಇತ್ಯಾದಿ (ಮಲೆಮ. ೭೦) ; ಹುಲ್ಲೆಲೆಗಳಂ ಹೊದಿಸಿ, ಹೆಡಗವಳ್ಳಿಯ ಸೀಳಿ ಸಲಕಂ ಬಿಗಿದು ಕಟ್ಟಿ . . . ವಿರಚಿಸಿದರಾಶ್ರಮವನು (ಶ್ರೀರಾಮಾ. ೧೯೬-೭೧). **ಸಲುಗು :** ೨. ಒಂದು ಪೊನ್ನ ಸಲಗಿರ್ಪವೊಲಿರ್ದುದು ಮೆಯ್ ಸುಭದ್ರೆಯಾ (ಪಂಪಭಾ. ೫-೮). ೪. ಮೊನಚಾದುದು; ಚೂಪಾದುದು: ಮನ್ಮಥಂ ಬಿರಯಿಗಳಂ ತೀವಿ ತೆಗೆನೆಱೆದ ಕೇದಗೆವೂವಿನ ಕೊನೆಗೆಱೆಯ ಸಲಗಿನಂಬಿನೊಳಿಸುವಂ (ಪಂರಾಮಾ. ೭-೧೬೨). **ಸಲಾಕಿ :** ೨. ಬಾಳೆಗಿಡದ ಬೇರಿನಲ್ಲಿ ಕಬ್ಬಿಣದ ಸಲಾಕಿಯನ್ನಡ್ಡಲಾಗಿ ಶಿಕ್ಕಿ (ಸೌಗಂಧಿ. ೪೩೭-೨೦) ; ಗಿಡಗನನ್ನು ಪಂಜರದಲ್ಲಿ ಕೂಡಿದರೆ . . . ಸಲಾಕಿಗಳನ್ನು ಕಡಿಯದೆ ಬಿಟ್ಟೀತೆ ? (ಆರ್ಯಕ. ೪೧). **ಸಲಾಕೆ :** ೧. ಎದೆಯಲ್ಲಿ ಕಾದ ಕಬ್ಬಿಣದ ಸಲಾಕೆಯನ್ನು ನೆಟ್ಟಂತಾಗಿ . . . ಚೀರಿದಳು (ಕಾವೇರಿ. ೧೭೪) ; ಬಿಳಿಯ ತೆಂಗುಗರಿ ಸಲಾಕೆ ಹೋಳಿವುದು, ಇರಿವುದು ನನ್ನೆದೆಯ (ನಡಬಂ. ೨೮-೯). ೨. ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು (ಬಸವ. ೮೦೨); ರೇಣು ಹತ್ತಿದ ರವಿಯ ಮಸೆಯಲು ಸಾಣೆಗಿಕ್ಕಿತೊ ಭಗಣರತ್ನವ ಸಾಣೆಗಳೆಯಲು ಕಮಲಭವ ಸೃಜಿಸಿದ ಸಲಾಕೆಗಳೊ ಕಾಣೆನಭ್ರವನಮಮ ದಿಕ್ಕುಗಳೇಣು ಮುಱಿಯಲು ಹೊಕ್ಕಿಸುವ ಬಿಲುಜಾಣಗುರವಣೆ ಲಜ್ಜಿಸಿತು ಲೋಕದ ಧನುರ್ಧರರ (ಕುವ್ಯಾಭೀ. ೪-೧೭); ಆ ಸೆರೆಮನೆಯು ಭದ್ರವಾದ ಕಬ್ಬಿಣದ ಬಾಗಿಲುಗಳಿಂದಲೂ ಸಲಾಕೆಗಳಿಂದಲೂ ಮುಚ್ಚಿತ್ತು (ನಿರ್ಲೋಪಿ. ೩). ೫. ಉಕ್ಕಿನ ಉದ್ದನೆಯ ಲೇಖನಿ: ಕಂಟಕಕ್ಕೆ ಸಲಾಕೆ (ಶಲಾಕಾ) ಎಂದು ಮತ್ತೊಂದು ಹೆಸರು (ಕನ್ನಸಂ. ೪೫). ೬. ಸರಿಗೆ ; ಎಳೆ ; ತಂತಿ : ಕಾಕೇಂದ್ರಿಯ ಶಬ್ದಗಳಲ್ಲ ಗರುಡಪತಾಕೇಶ್ವರನ ಸತ್ಕೃತಿಯ ನೀ ಕೇಳಲುಸಿರುವೆ ಸ್ವರ್ಣಕಂಬಿಯೊಳು ಸಲಾಕೆಯು ತೆಗೆದಂತೆ (ಮೋಹತ. ೨೭-೨). **ಸಲಾಖೆ :** ೭. ದಪ್ಪವಾದ ಕೋಲು; ದಂಡ: 'ಸಲಾಖೆವಿಡಿ' ಪರಾ. **ಸಲಿಗ್ಗೆ :** ೨. ನೀಲದ ಸಲಿಗೆಯ ನಿಲುವೆನಿಪುದು ರೋಮರಾಜ ರಾಜಾಂಗನೆಯಾ (ಧರ್ಮನಾ. ೩-೭೦) ; ನೀಲದ ಸಲಿಗೆ[ಪಾಠಾಂ. ಲಕೆ]ಯಂತೆಸೆದುದಾ ಲಲನೆಯಂಗದ ರೋಮರಾಜಿ (ರಾಮವಿ. ೧೨-೩೮) ; ಕಡುಹಿನ ಸಿಡಿಲ್ಕುಡುಹಿನ ಸಲಿಗೆಗಳಾಗಳೊಡ

ನಂಬರಕೇಳ್ವಂತೆ ಬಿಡದೆ ಸುಭಟರೆಚ್ಚ ಸಿಂಗಾಡಿಯಂಬುಗಳಾ ನಿಡುರಭಸದೊಳ್ಕಿದಿದುವು (ಕಂನಪಿ. ೧೨-೨೨). **ಸೆಳಕಿ :** ೨. ಬಳಲಿ ಮಿಡುಕುತಲೆತ್ತಲೆಬಿಗಿದರುಳುಹಿಕೊಳ್ಳೆಯೆನಲು ಸಿದ್ಧನು ಸೆಳಕಿಯಲಿ ಹೊಡೆದೆಬ್ಬಿಸಿದರದು ಯದ್ದು ನಡೆಗೊಂಡು (ರೇವಕಾ. ೨-೨೪). **ಸೆಳಕೆ:** ೨. ಕಯ್ಯಲ್ಲಿ ಬೆತ್ತದ ಸೆಳಕೆಯನ್ನು ತಿರುವುತ್ತಾ . . . ಯುದ್ಧವ್ಯಾಪಾರಗಳನ್ನು ನಿಲ್ಲಿಸಿರೆನ್ನುತ್ತಾ ಈ ಕುಮಾರರಿಬ್ಬರ ನಡುವೆ ವಿಮಾನವನ್ನು ಇಳಿಸುತ್ತಲಿದ್ದಾರೆ (ಉರಾಚ. ೧೫೧). **ಸೆಳಿಕೆ :** ೨. ಸಣ್ಣ ಹುಡುಗರನ್ನು ಸೆಳಿಕೆಯಿಂದ ಹೊಡೆಯುವದು (ಮುಂಬಯಿ. ೫-೪೫); ಬೆತ್ತದ ಸೆಳಿಕೆಯನು ನೆಲಕ್ಕೆ ಅಪ್ಪಳಿಸಿದಳು (ಮುಂಬಯಿ. ೫-೨೦೦). **'ಸೆಳೆ$_4$' ಪರಾ.**

[< ಸಂ. ಶಲಾಕಾ. / ತುಳು. ಸಲಕೆ, ತಲಕೆ ; ತೆಲು. ಸಲಗ]

**ಸಲಗೆವಳೆ** (ನಾ). ಲೋಹದ ಕಂಬಿಗೆ ಅಳವಡಿಸಿರುವ ಬಳೆ : ಕಂದೆರೆಯನ್ನು ಸಲಗೆವಳೆಗಳ ಬಿರುಗಾವರದಿಂದ ಒರ್ಕಲಕ್ಕೆಳೆದೋಸರಿಸಿ (ಮಂತ್ರಶ. ೧೦೯-೬).

[ಸಲಗೆ$_2$ + ಬಳೆ$_2$]

**ಸಲತರಿಸಲ** (ನಾ). ಅವಕಾಶ ಮತ್ತು ನಿರ್ಧಾರ : ತಮ್ಮ ಶ್ರೀವಂಶದಲ್ಲಿ ಪರಂಪರಾಗತವಾಗಿರುವುದರಿಂದ ಮಾತ್ರವೇ ತಮಗೆ ಬಂದಿರುವ ಏನಾವುದನ್ನೂ ಕಾರಣಪ್ರಮಾಣಗಳ ಸಲತರಿಸಲಗಳಿಲ್ಲದೆ ಹಾಗೆ ಬೀಳ್ಗುಡುವ ಅಧಿಕಾರವು ತಮಗಿಲ್ಲ (ಮಂತ್ರಶ. ೧೬೯-೧೬). [ಸಲ$_2$ (< ಸಲವು) + ತರಿಸಲ (< ತಱಿಸಲ)]

**ಸಲಪು, ಸಲಹು$_1$, ಸಲುವು$_1$** (ಕ್ರಿ). ೧. ಕಾಪಾಡು; ಕಾಯು; ರಕ್ಷಿಸು: "ಸಲಪು – ರಕ್ಷಣೇ" (ಶಮಧಾ); ಒಲವೊಳಗಾಗೆ ದೈವದಿನದಂ ಬಡವಂ ನಿಧಿಗಂಡ ಮಾಟ್ಕೆಯಿಂ ಸಲಪಲುಮೋವಲುಂ ಸುಖಮನಾರ್ಜಿಸಲುಂ ಬಗೆದು (ಚಂದ್ರಪ್ರ. ೮-೮೦); ಇವನ ತಪ್ಪಂ ಮನದೊಳ್ ತಾರದೆ ಪೆಱಸಾರದೆ ಮನವಾಱ ದಯಾಸಾರದಿಂದೆ ಸಲಪಲ್ವೇಱ್ಕುಂ (ಚಕವಿ. ೨-೧೧೯). ೨. ಬೆಳಸು; ಸಾಕು; ಪೋಷಿಸು : ಭೂದೇವತೆ ಷಡೃತುಗಳಸಾದರದಿಂ ಸಲಪುವಂತೆ ವಸುಮತಿ ಚಿತ್ತಾವೋದದಿನಱುವರ್ ಕುವರರನೋದಿಸುತುಂ ಸಲಪುತಿರ್ದಳ್ (ದಶಕು. ೨-೮೮); ಜಲದ ಜಲದಕ್ಕೆ ಜಲವತ್ಫಲಮಿಾವುದು ತೆಂಗಿದರ್ಕೆ ಕುಡದಾಯ್ತೇನಂ ಸಲಪಿದಿಳೆಗೆಂದೆಱಗಿ ನವಫಲಂಗಳೀವಂತೆ ಬಾಗಿ ಬಾಳೆಗಳೆಸೆಗುಂ (ರಾಜಶೇ. ೨-೫೦); ಸಲೆ ಪೆತ್ತು ಪೊತ್ತು ಸಂತಸದಿಂದೆ ತನ್ನನು ಸಲಪಿದ ಭೂಮಾತೆಗೊಲಿದು (ಇಚಸಾಂ. ೨-೩೯). **ಸಲಹು$_1$ :** ೧. ಎಲ್ಲ ಬಯಕೆಯಱತ ಬಟ್ಟೆಯ ತೋಱಯ್ಯ ಸಹಜಸಮ್ಯಕ್ತ್ವವನಿತ್ತು ಸಲಹಯ್ಯ (ಆದವ. ೧೩-೨೭); ಅಂಜದಿರಂಜದಿರ್ ಮಗನೆ ಭವದ ಮಾಲೆಯಂ ಹೊದ್ದಲೀಯದೆ ಸಲಹಿದಪೆಂ (ಬಸರ. ೨-೬೧); ಪೀತಾಂಬರಾವರಣ ವರ ಕೌಸ್ತುಭಾಭರಣ ಸಲಹು (ಜೈಮಿಭಾ. ೨-೫೦). ೨. ಲೋಗರ ಕೈಯಲ್ಲಿ ಕೊಂಡು ಸಲಹಿದ ಬೆಕ್ಕು ಹಿತಂ ಮಾಡುವ ಕಾರಣದಿಂ ರಕ್ಷಿಸಿಕೊಳಲ್ಪಟ್ಟುದು (ಪಂಚತಂ. ೧೦೭-೧೪); ಅಱಿಯನೇನುವನೆಂದು ಸಲಹಲು ಮಱೆವ... ಬಾಲಕನ ತಾಯ್ (ಕುವ್ಯಾಭೀ. ೭-೧೯); ಚಿತ್ರವಾಹನಗಾಕೆಯೊಬ್ಬಳೆ ಕುವರಿಯಾಗಿ ಜನಿಸ, ಮಗಳಂ ಮಗನೆಯೆಂದೊಲಿದು ಸಲಹಿದನು (ಚಿತ್ರಾಂಗ. ೭೩-೧೯೯೩). **ಸಲುವು$_1$ :** ೨. ಮಕ್ಕಳಿಗೆ ನುಚ್ಚಂಬಲಿ ಮಾಡಿ ಸಲುವೇನ (ಗರತಿ. ೧೨೬); ಅತ್ತಿಯ ಮನಿಯಾಗ ಅರವತ್ತುಗಂಗಾಳ ಬೆಳಗೂತಿನಿ ಅತ್ತೆ ಬೈಬ್ಯಾಡ ನಮ್ಮವರು ಸರಮುತ್ತು ಮಾಡಿ ಸಲುವ್ಯಾರ (ಕಜಾಗೀ. ೧). [ದೇ. ‖ ತುಳು. ಸಲಗು]

**ಸಲವಿಡು** (ಕ್ರಿ). ವಿನಿಯೋಗಿಸು : ವಿಶ್ವನಾಥಪುರದ ಮಹಾಜನಂಗಳಿಗೆ ಉಡುಂಬಳಿ ಉತಾರ ಬಂದಿದ್ದ ಬಗೆಲು ವಿರೋಧಿಸಂವತ್ಸರದಲು ಸಲವಿಟ್ಟು ಸಿಸ್ತಿಗೆ ಕೂಡಿದಲ್ಲಿ (ಎಕ. VIII, ತೀರ್ಥಹ. ೭-೧೮೯ ; 1665). [ಸಲವು + ಇಡು$_1$]

**ಸಲವು, ಚಲವು, ಶಲವು, ಸಲ$_2$, ಸಲುವು$_2$, ಸೆಲವು$_1$** (ನಾ). ೧. ಒಳಹೊಗುವಿಕೆ; ಪ್ರವೇಶ : ಸೂರ್ಯಕಿರಣಾನೀಕಕ್ಕಮೆಂದಪ್ಪೊಡಂ ಸಲವಿಲ್ಲುದ್ಧತಸಿದ್ಧಖೇಚರರ ತಾಮಾಳ್ವೇಲಿಯಾಗಿಂತು ನಿಚ್ಚಲುಮೋರಂತಿರೆ ಕಾವರೀ ದೊರೆತು ಕಾಪೀ ನಂದನಕ್ಕಿಂದ್ರನಾ (ಪಂಪಭಾ. ೫-೮೧); ಮನುಷ್ಯಕ್ಷೇತ್ರದಿಂದತ್ತಲ್ ತನಗೆ ಸಲವಿಲ್ಲದೊಡದುವೆ ವೈರಾಗ್ಯಕಾರಣಮಾಗೆ (ಪಂರಾಮಾ. ೧೦-೧೧೬ ವ); ಸತಿಯರೊಳೆ ಯೌವನಕ್ಕಾಶ್ರಿತಬುಧರೊಳೆ ನೆರಪಿದೊಡಮೆಗೆಂತಾಯ್ತು ಯಥೋಚಿತಮಂತೀ ತನುಗಮಣುವ್ರತದೊಳ್ ಸಲವಾಗೆ ಸಫಳಮಾದಪುದೆಸಕಂ (ವರ್ಧಪು. ೯-೧೦). ೨. ಗತಿ; ಅವಸ್ಥೆ; ಸ್ಥಿತಿ: ಗತಿ: – ಜೀವಪುದ್ಗಲಂಗಳ್ಗೆ ಕಾಲದೇಶನಿಯಮದಿಂ ಸಲವಕ್ಕುಂ (ತಸೂವ್ಯ. ೪೪); ಮುನೀಂದ್ರನನಶನತಪದೊಳ್ ತಱಿಸಂದ ಸಲವದೊಂದಾಶ್ಚರ್ಯಂ (ಸುಕುಮಾ. ೪... ೩. ತರ್ಕ ಕಾರಣ; ಸಮಂಜಸವಾದ ಕಾರಣ: (?). **ಚಲವು :** ೪. ಅಗ... ಅವಶ್ಯಕತೆ: ನಾಡಮಲೆ ರೈತರ ಆರಂಬದ ಬಗ್ಗೆಯೂ ತಮ್ಮ ತಮ್ಮ ಚಲವಿಗೆ ಗಟ್ಟ... ಕೆಳಗೆ ಹೋಗಿ, ಉಪ್ಪು ಮುಂತಾದ್ದು ತಂದುಕೊಳ್ಳುವ ಬಗ್ಗೆಯೂ (ರಾಜೇಂದ್ರ. ೧...). ೫. ಬದುಕು; ಸಂಸಾರನಿರ್ವಹಣೆ: ಅಲ್ಲಿ ಚಲವಿಗೆ ಚೂಕರವಾದ್ದರಿಂದ ಕೆ... ಕುಟುಂಬ, ತಮ್ಮ ಅಣ್ಣನ ಮಗನ ಸಹಾ . . . ಇಟ್ಟು ಇರುತ್ತಿದ್ದರು (ರಾಜೇಂದ್ರ. ...). **ಶಲವು :** ೬. ಖರ್ಚು; ವೆಚ್ಚ: ಆ ತೆಱಂಗೆ ಶಲವಾಗಿ ಮಾಕಬ... (ಸೌಇಎ. ೧೯೩೨, ಉಡುಪಿ. ೩೧೮-೧೮ ; 1293). ೭. ಅಗತ್ಯವಸ್ತುವಿನ ಪೂರೈಕೆ : ನರಸಿಂಹದೇವರಿಗೆ . . . ಶಲವಾಗಿ ಒಸ್ನು ಎಲೆಯ ಹೇರು ಮಾನ್ಯ ಆಚನ್ದ್ರಾರ್ಕ... ಸ್ಥಾಯಿಯಾಗಿ ಮಾಡಿದ ಧರ್ಮ್ಮ (ಎಕ. VI, ಕೊಪ್ಪ. ೧೧-೨೦; 1327) ; ಭತ್ತ... ಶಲವಾಗಿ ತಿಪ್ಪಗಂಡಿಕೋಡೂರಿಂದ ಛತ್ರದ ಕೊಳಗದಲಿ ನೂಱಿಪ್ಪತ್ತ ಒಂದು ಸ... (ಎಕ. VIII, ತೀರ್ಥಹ. ೩೩-೪೫ ; ಸು. 1430); ಛತ್ರಕ್ಕೆ ಶಲವಾಗಿ ಜನಾರ್ಧನದೇವರ ಸನ್ನಿಧಿಯ... ಧಾರೆಯನೆಱದು ಬಿಟ್ಟೆವಾಗಿ (ಎಕ. XIV, ಶ್ರೀರಂಗ. ೧೯೮-೨೧ ; 1598). **ಸಲ$_2$ :** ೧. "ಸ... = ಪ್ರವೇಶಂ" (ಶಮದ. ಪಂ. ೨) ; "ಪ್ರವೇಶಂ ಸಲಂ" (ಕರ್ಣಾನಿ. ೬೨). ೮. ಆಕ್ರಮಣ : 'ಸಲಂಗೊಳ್' ಪರಾ. **ಸಲುವು$_2$:** ೯. ಉದ್ದೇಶ ; ಕಾರಣ : ದುಡ್ಡುಕಾಸನ... ಸನ್ನ ಸಲುವೇ ಕೂಡಿಹಾಕಲು ಹೋದನು (ಇಂಗೀತ. ೫೨-೮). **ಸೆಲವು$_1$ :** ೬. ಆ ಗವುಡುಗ... ತಾವು ಕೆಱೆಯ ಬಣ್ಣಗೆ ತೆಱುವ ಹೊನ್ನಿಂಗೆ ಸೆಲವಾಗಿ . . . ಕೊಣ್ಣ ಗದ್ಯಾ... (ಎಕ. VI, ಕಡೂರು. ೧೨-೫೮ ; 1233); ಉಂಬಳಿತಕೆ ಸೆಲವಾಗಿ ಪಾಲಿಸಿದ ಹ... ಚತುಸೀಮೆಯ ವಿವರ (ಎಕ. XIV, ಎಳಂದೂ. ೧೮೭-೧೦ ; 1530). ೧೦. ಪ್ರಯೋಜ... ಸಾರ್ಥಕ್ಯ: ಕುಲಮಂ ವಿಚಾರಿಪಡೆ ಸೆಲವಿಲ್ಲ ಫಲವಿಲ್ಲ (ದೀಕ್ಷಾಪೋ. ೪೨-೮...). ೧೧. (ಬೀಳ್ಕೊಳ್ಳಲು ಪಡೆಯುವ) ಅಪ್ಪಣೆ ; ಅನುಮತಿ : ಮಾಧವ ನ... ವಾಕ್ಯವ ಕೇಳ್ದು ಜೀಯ ಹಸಾದವೆಂದವನೀಶ್ವರರು ಆದಡೆ ತಮಗಿಂದು ಸೆಲ... ಬೀಳ್ಕೊಂಡು ಹೋದರು ಮುಂದೆ ಚೂಣಿಯಲಿ (ಮೋಹತ. ೩೭-೪). ೧೨. ಕಾ... ಸಿದುದು; ಮಿಾಸಲು: ಈತಗಳನೆಲ್ಲರಂ ತೆಗಸೆನಗೆ ಸೆಲವಿಂದಿನಾಹ... (ಜೈಮಿಭಾ. ೧೨-೧೪).

**ಸಲವಾಗಿ, ಸಲುವಾಗಿ** = ಕಾರಣಕ್ಕಾಗಿ; ಉದ್ದೇಶಕ್ಕಾಗಿ: ಇದರ ಸಲ...ಗಿ (ಮುಂಬಯಿ. ೬. ೫-೧೦೭) ; ಕೊತವಾಲನು . . . ಕಳ್ಳರನ್ನು ಗೊತ್ತುಹಚ್ಚುವ ಸಲು...ಗಿ ವಿಶ್ವಪ್ರಯತ್ನ ಮಾಡಿದಾಗ್ಯೂ ಅವರು ಸಿಗಲಿಲ್ಲ (ಮುಂಬಯಿ. ೪-೨೦) ; ನನ್ನ ಸಲು... ನೀನೇನು ಚಿಂತಿಸುವುದು ಬೇಡ (ಹಳ್ಳಹಾ. ೧೦೦).

[ < ಸಲ್ + - ವು /ತಮಿ. ಚೆಲವು ; ಮಲ. ತೆಲು. ಸೆಲವು]

**ಸಲಹಾ** 'ಸಲಹೆ' ನೋ.

**ಸಲಹಾಕಾರ** 'ಸಲಹೆಗಾರ' ನೋ.

**ಸಲಹಾಸಮಿತಿ** (ನಾ). ಯಾವುದಾದರೊಂದು ಕಾರ್ಯಾಚರಣೆಗೆ ತಕ್ಕ ಸೂಕ್ತವಾದ ಸಲಹೆ, ಸೂಚನೆಗಳನ್ನು ನೀಡುವ (ತಜ್ಞರ) ಗುಂಪು, ಮಂಡಲಿ: ಇಂದಿನ ಶಿಕ್ಷಣಕ್ರಮವನ್ನು ಉತ್ತಮಗೊಳಿಸಲು ತಜ್ಞರ ಒಂದು ಸಲಹಾಸಮಿತಿಯನ್ನು ರಚಿಸುವುದು ಒಳ್ಳೆಯದು (ರೂಢಿ).

[ಸಲಹಾ (< ಸಲಹೆ) + ಸಮಿತಿ]

**ಸಲಹಿಸು$_1$** (ಕ್ರಿ). ಕಾಪಾಡುವಂತೆ ಮಾಡು; ರಕ್ಷಿಸುವಂತೆ ಮಾಡು : ಐಸಲೇ ಮುನಿನಾಥ ರಾಮನದೈಸರವನತ್ತುಂಬ ಹರೆಯದ ಶೈಶವನ ಕೈಯಿಂದ ಸಲಹಿಸಿಕೊಂಬುದೇ ಯಜನ (ತೊರರಾ. ೧-೯-೨೯).

[ಸಲಹು$_1$ (< ಸಲಪು) + - ಇಸು$_3$]

**ಸಲಹಿಸು$_2$** (ಕ್ರಿ). ಅಭಿಪ್ರಾಯಪಡು; ಸೂಚನೆಕೊಡು; ಸಲಹೆಮಾಡು: "ಆದರೆ ಅವಳಿಗೆ ಕ್ಷಮಾಭಿಕ್ಷೆ ನೀಡಬೇಕೆಂದು ಶಿಫಾರಸ್ ಮಾಡಬೇಕು" ಎಂದು ವರ್ತಕ ಸಲಹಿಸಿದನು (ಪುನರು. ೧೦೫). [ಸಲಹೆ + -ಇಸು$_3$]

**ಸಲಹು$_1$** 'ಸಲಪು' ನೋ.

**ಸಲಹು$_2$** (ನಾ). ರಕ್ಷಣೆ ; ಕಾಪು : ಕೋಟೆಯ ಕಾವಲ್ಗೆ , ಸಲಹಿಗೆ , ಅಗಳನ್ನು ...

ನಮ್ಮ ಸೈನ್ಯಗಳನ್ನೆಲ್ಲ – ಫಿರಂಗಿಗಳನ್ನೂ ಅನ್ವಯಿಸಿಕೊಂಡು ಸನ್ನದ್ಧವಾಗಿರಬೇಕು (ಬೆಟ್ಟಅ. ೪೫-೨೨). [< ಸಲವು]

**ಸಲಹೆ , ಸಲಹಾ , ಸಲಾಹ , ಸಲ್ಲಾ , ಸಲ್ಲೆ** (ನಾ). ೧. ಸೂಚನೆ; ಅಭಿಪ್ರಾಯ : ರಾಜ್ಯದ ವರಮಾನಕ್ಕಿಂತ ಖರ್ಚು ಹೆಚ್ಚಾಗುತ್ತಿದ್ದುದರಿಂದ ಪ್ರಜೆಗಳಿಂದ ಹೆಚ್ಚು ತೆರಿಗೆ ವಸೂಲುಮಾಡಬೇಕೆಂಬುದು ನನ್ನ ಸಲಹೆ (ಪ್ರತಾಪ. ೯೧); ಹೊಲ ಧರ್ಮಪ್ಪನಿಗೆ ದಕ್ಕದಂತೆ ಮಾಡಲು ಏನು ಮಾಡಬೇಕೆಂದು ವಕೀಲರ ಸಲಹೆ ಕೇಳಿದ್ದಾಯಿತು (ಮನೆಜ. ೭). ೨. ತಿಳಿವಳಿಕೆ ನೀಡುವಿಕೆ : ಈ ಊರು ಬಿಟ್ಟು ಒಳ್ಳೇ ಹವೆಯುಳ್ಳ ಊರಿಗೆ ಅವರನ್ನು ಕಳುಹಿಸಬೇಕೆಂದು ಡಾಕ್ಟರ್ ಸಲಹೆಯನ್ನಿತ್ತಿದ್ದಾರೆ (ಪರಿಣೀ. ೪೦); ಆ ವಿಷಯದಲ್ಲಿ ನಿನ್ನ ಸಲಹೆ ನನಗೆ ಬೇಕಾಗಿಲ್ಲ (ಹಾಹುತ್ತ. ೬೨). **ಸಲಹಾ:** ೨. 'ಸಲಹಾಕಾರ' ಪರಾ. **ಸಲಾಹ :** ೩. ಶಾಂತಿ ; ಸಮಾಧಾನ. **ಸಲ್ಲಾ :** ೧. ನನ್ನ ಸಲ್ಲಾ ಬೇಕಾಗೇದ ಅಂತ ಕರಿಸ್ಯಾರ ನನ್ನ (ಕುಮಾರಾ. ೧೫೦). ೨. ನೀವು ಅವ್ವನ ಜೋಡಿ ಮಾತಾಡತೇನಿ, ಅಕ್ಕನ ಸಲ್ಲಾ ತೊಗೋತೇನಿ . . . ಅಂತ ಕೂತರ ಬಂದ ಕೆಲಸ ಅಲ್ಲೇ ಉಳೀತದ (ಗಂಮಾಯಿ. ೨೩೩). ೪. ಸಂಧಿ ; ರಾಜಿ ; ಕೌಲು : ನವಾಬ ಹೈದರಲ್ಲಿಖಾನರು ತ್ರಿಯಂಬಕಮಾಮನ ಸಂಗಡ ಸಲ್ಲಾದ ಸವಾಲು ಜವಾಬು ಮಾಡಿಕೊಂಡು (ರಾಜೇಂದ್ರ. ೨೨). **ಸಲ್ಲೆ :** ೧. ಪ್ರಿವ್ಹಿಕೌನ್ಸಿಲದವರ ಸಲ್ಲೆಯ ಮೇರೆಗೆ ರಾಜ್ಯಭಾರ ಮಾಡುತ್ತಿದ್ದುದರಿಂದ ಅರಸನಿಗೆ ಕೊಟ್ಟ ಸಲ್ಲೆಯ ದೆಸೆಯಿಂದ ಇವರನ್ನು ಜವಾಬದಾರರೆಂದು ಕರೆಯತಕ್ಕದ್ದು (ಇಂಗ್ಲಇ. ೧೮೫).

**ಸಲಹೆಕೊಡು , ಸಲ್ಲೆಕೊಡು = ಅಭಿಪ್ರಾಯವನ್ನು ಸೂಚಿಸು ; ಸೂಚನೆಕೊಡು:** ಎಲ್ಲ ಕಾರ್ಯಗಳಲ್ಲಿಯೂ ವಿದ್ಯಾರಣ್ಯರು ಸಲಹೆಕೊಡುತ್ತಿದ್ದರು (ಶ್ರೀವಿದ್ಯಾ. ೧೪೮); ಮಾಸ್ಸಿರೇಟ ಪಾದರಿಯಾದರೂ ಮಿರ್ಜಾಹಕೀಮನನ್ನು ಪೂರ್ಣವಾಗಿ ನಾಶಮಾಡ ಕೂಡದೆಂದು ಸಲ್ಲೆಕೊಟ್ಟನು (ಅಕ್ಬರ. ೬೫). **ಸಲಹೆಮಾಡು , ಸಲ್ಲಾಮಾಡು = ೧. ಅಭಿಪ್ರಾಯವನ್ನು ಸೂಚಿಸು ; ಸೂಚನೆಕೊಡು :** ಅವರು, ತಮ್ಮ ಮನೆಗೆ ಬಂದು ಹೋಗಬೇಕೆಂದು ನನಗೆ ಸಲಹೆಮಾಡಿದರು (ರೂಢಿ). ೨. **ತಿಳಿವಳಿಕೆಯನ್ನು ನೀಡು:** ಅವರಿಗೆ ವೈದ್ಯರು ಒಂದು ತಿಂಗಳು ವಿಶ್ರಾಂತಿಯಲ್ಲಿರಬೇಕೆಂದು ಸಲಹೆ ಮಾಡಿದ್ದಾರೆ (ರೂಢಿ). ೩. **ರಾಜಿಮಾಡಿಕೊಳ್ಳು; ಒಪ್ಪಂದಕ್ಕೆ ಬರು:** ಈ ಲಡಾಯದಲ್ಲಿ . . . ದಂಡಿನ ಖರ್ಚು ಬಹಳ ಮುಟ್ಟಿಯಿದೆ. ಆದ್ದರಿಂದ ನಾವು ಸಲ್ಲಾಮಾಡಿ ಅವರ ಸೀಮೆ ಬಿಟ್ಟುಕೊಡಲಿಕ್ಕೆ ಇಲ್ಲ (ರಾಜೇಂದ್ರ. ೧೦). **ಸಲಾಹವಾಗು, ಸಲ್ಲಾಆಗು, ಸಲ್ಲಾಗು = ೧. ಸಮಾಧಾನಗೊಳ್ಳು ; ಶಾಂತವಾಗು :** ಪಾದಶಾಹರು ಬರಲಾಕ್ಷಣಕ್ಕವರ ದರ್ಶನದಿಂದ ಸಲಾಹವಾಗುತೀ ಧರೆಯನು ಪಾಲಿಸುತ್ತ ಸುಖಿ ಮಿರ್ದನು ಮೌನಸುಫಂಟೆಭೂವರಂ (ಬೀಳವಂ. ೫-೧೩೯). ೨. **ರಾಜಿಯಾಗು; ಒಪ್ಪಂದವಾಗು :** ಮೆದಕೆರೆನಾಯಕನ ಜೊತೆಯಲ್ಲಿ ಚಂದಾಸಾಬರ ಹಿರೀಮಗನು ಹತವಾಗಿ ಅವರವರಿಗೆಲ್ಲಾ ಸಲ್ಲಾ ಆಗಿ ಕಸ್ತೂರಿರಂಗಪ್ಪನಾಯಕರಿಗೆ ಚಿತ್ರಕಲ್ಲು ದೊರೆತನವಾದ ಬಳಿಕ (ಹೈದರ. ೫). ೩. **ಬಾಗು ; ಮಣಿ :** ಸೊಲ್ಲಿದ್ದರೂ ನುಡಿಯ ಸೊಗಸು ಸಿಗದೆಂದಿಗೂ ಬಲ್ಲಿದ್ದರೂ ಬಲ್ಲತನಕೆ ಸಲ್ಲಾಗುವದು (ಸವೀಗೀ. ೬೨-೧೦). **ಸಲ್ಲಾಚುಕಾಯಿಸು = ಕರಾರಿನಂತೆ ಕೊಡಬೇಕಾದುದನ್ನು ಸಲ್ಲಿಸು:** ೫೬,೦೦,೦೦೦ ರೂಪಾಯಿ ಮೇಲೆ ಸಲಾಬತ್ತು ಜಂಗರಿಗೆ ಸಲ್ಲಾ ಚುಕಾಯಿಸಿ (ಹೈದರ. ೩೪). [← ಅರ. ಸಲಾಹ್; ಹಿಂ. ಸಲಾಹ್, ಸಲ್ಲಾಹ್; ಮರಾ. ಸಲಹ್, ಸಲಾಹ್, ಸಲಾ, ಸಲ್ಲಾ]

**ಸಲಹೆಗಾರ , ಸಲಹಾಕಾರ , ಸಲ್ಲಾಗಾರ** (ನಾ). ೧. ಅಭಿಪ್ರಾಯವನ್ನು ತಿಳಿಸುವವನು; ಸೂಚನೆಯನ್ನು ಕೊಡುವವನು. ೨. ಬುದ್ಧಿವಾದವನ್ನು ಹೇಳುವವನು; ಸೂಕ್ತ ತಿಳಿವಳಿಕೆಯನ್ನು ಕೊಡುವವನು : "ಸಲಹೆಗಾರ ; ಮಂತ್ರಿ" (Adviser. ೨೦೮೧). **ಸಲಹಾಕಾರ :** ೨. ಸಲಹಾಕಾರರನ್ನು ಕರೆಯಿಸಲಾಯ್ತು . . . ಈತ ಊರಿನ ಮಂತ್ರಣದಾತ ಸಲಹಾಕಾರ (ಇಪ್ಪಕ. ೩೩೭). **ಸಲ್ಲಾಗಾರ :** ೨. ಅವರ ಮೊಕದ್ದಮೆಯ ಸಲ್ಲಾಗಾರರು ಲಂಚದ ನೆವ ಹೇಳಿಹೇಳಿ . . .ಧನ ದೋಚಹತ್ತಿದರು (ಇಪ್ಪಕ. ೪೧೧); ಕುಲಕರ್ಣಿ ರಾಮಾಚಾರಿ ಅವನಿಗೆ ಸಲ್ಲಾಗಾರ (ಪ್ರಭಾ. ೬೫). ೩. ಜಾನ್ ಮಾರ್ಟಿನ್ ರಿಚಾರ್ಡಫಾಕ್ಸ್ ಇವರನ್ನು ತನಗೆ ರಾಜ್ಯಭಾರದಲ್ಲಿ ಸಲ್ಲಾಗಾರನ್ನಾಗಿ ನಿಯಮಿಸಿಕೊಂಡನು (ಇಂಗ್ಲಇ. ೧೦). [ಸಲಹೆ + -ಗಾರ (< -ಕಾಱ)./ ಮರಾ. ಸಲಹಕಾರ್, ಸಲಹಗಾರ್, ಸಲಾಕಾರ್, ಸಲಾಗಾರ್, ಸಲ್ಲಾಕಾರ್, ಸಲ್ಲಾಗಾರ್]

**ಸಲಾಂ** 'ಸಲಾಮು' ನೋ.

**ಸಲಾಕಿ** 'ಸಲಗೆ$_2$' ನೋ.

**ಸಲಾಕೆ** 'ಸಲಗೆ$_2$' ನೋ.

**ಸಲಾಖಿ** (ನಾ). ಗುಂಡುಹಾರಿಸುವುದು : ರೈಫಲ್, ಜಂಜಾಲು ,ಘುತಾರ್‌ನಲ್, ಹತ್ಯಾರದಲ್, ಬಂದೂಖ್ ವಗೈರೆ ಸಲಾಖಿ ಒಂದೇ ಆವರ್ತಿ ಆಯಿತು (ಚಿತ್ರಸಾ. ೬೪). [← ಪಾರ. ಶಲ್ಕ್; ಮರಾ. ಸಲಖ್, ಸಲಕ್]

**ಸಲಾಖೆ** 'ಸಲಗೆ$_2$' ನೋ.

**ಸಲಾಖೆವಿಡಿ** (ಕ್ರಿ). ಯೋಗದಂಡವನ್ನು ಹಿಡಿ (?) : ಯೋಗಾದಿಸಂಪನ್ನ ಖಿಳೆಯಗಳೆಲ್ಲವಂ ಸಂಪಾದಿಸಿ ಯೋಗರಮಣಿಯ ಕ್ಷೇತ್ರಮನೆ ತಳವಿಟ್ಟು ಸಲಾಖೆವಿಡಿದು ಅಭಿನವಶ್ರೀಶೈಳವನೆ ಮಾಡಿ ಕಪಿಲಸಿದ್ಧಮಲ್ಲೇಶ್ವರದೇವನೆ ನೆಲಸಿ ನಿಂದು (ಸೌಇಇ. XX, ೧೭೭-೬; 1190). [ಸಲಾಖೆ (< ಸಲಗೆ$_2$) + ಪಿಡಿ$_1$]

**ಸಲಾದಿಸೊಪ್ಪು** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಎಲೆ: ಸಲಾದಿಸೊಪ್ಪು , ಲೆಟ್ಯೂಸು (ಮೈಟಿಗಿ. ೪೯-೯೭೧). [ಸಲಾದ್ಧಿ + ಸೊಪ್ಪು$_1$]

**ಸಲಾಮ್** 'ಸಲಾಮು' ನೋ.

**ಸಲಾಮತು** 'ಸಲಾಮತ್ತು' ನೋ.

**ಸಲಾಮತ್ತು , ಸಲಾಮತು** (ನಾ). ಸುರಕ್ಷಿತ ; ಕ್ಷೇಮ ; ಸೌಖ್ಯ : ಮಹಾದೇವನ ಕಟಾಕ್ಷದಿಂದ ತಾವು ಆ ದುಷ್ಟ್ಯಾನರ ಕೈಯಿಂದ ಸಲಾಮತ್ತು ಆಗಿ ಇದ್ದೀರಿ (ರಾಜೇಂದ್ರ. ೧೧೦). **ಸಲಾಮತು :** ಹೋಯಿತು ಒಂದು ಮಲಾಮತು , ಇದ್ದವರು ಸಲಾಮತು (ವಿಧಿವ್ಯ. ೧೫೮). [← ಅರ. ಹಿಂ. ಮರಾ. ಸಲಾಮತ್]

**ಸಲಾಮಿ** 'ಸಲಾಮು' ನೋ.

**ಸಲಾಮು , ಸಲಾಂ, ಸಲಾಮ್ , ಸಲಾಮಿ , ಸಲ್ಲಾಮ್ , ಸಲ್ಲಾಮು** (ನಾ). ೧. ಮುಸಲ್ಮಾನರಲ್ಲಿ (ಪರಸ್ಪರ) ಗೌರವಪೂರ್ವಕವಾಗಿ ಕೈಯನ್ನು ಹಣೆಗೆ ತಾಗಿಸಿ ಮಾಡುವ ನಮಸ್ಕಾರ ಮತ್ತು ಆಗ ಹೇಳುವ ಶಬ್ದ : ಸುರುತಾಳಂಗೆ ಸಲಾಮನೊಲಿದು ಮಾಡಿ ಶಿರದೊಳಾಂತವನಾಜ್ಞೆಯನು . . . ಪೊಱಮಟ್ಟಳು (ಕುರಾಸಾಂ. ೪೧-೫೫); ಸಚ್ಚಿದಾನಂದಭಾರತಿಸ್ವಾಮಿಶ್ರೀಪಾದಂಗಳಿಗೆ ರಣದುಲ್ಲಾಖಾನರ ಸಲಾಮು (ಮೈಆರಿ. ೧೯೩೪; ೩೩-೩; 1640); ಕಂಕುಳಲ್ಲಿ ದೊಣ್ಣೆ, ಕೈಯಲ್ಲಿ ಸಲಾಮು (ಗಾದೆ). ೨. **ಗೌರವಸೂಚನೆಯಾಗಿ ವಂದನೆಯನ್ನು ಸಲ್ಲಿಸುವಿಕೆ:** ನಾವು ಆ ಧೊರೆಯಂ ಕಾಣಿಸಿಕೊಳ್ಳುವುದಕ್ಕೆ ಇಲ್ಲದೆ, ನಮ್ಮ ಕಡೆಯವರಂ ಸಲಾಮಿಗೆ ಕಳುಹಿಸಿ . . . ನಾವು ಹೋಗದೇ ಇರಲು ; ಚಾಣಕ್ಯನು . . . ಇನ್ನೂ ಸಲಾಮಿಗೆ ಬಾರದೆ ಇರುವದಕ್ಕೆ ಕಾರಣವೇನು? ಎಂದು ದೂತರಂ ಕೇಳಲು (ಮುದ್ರಾಮಂ. ೨೮೧). **ಸಲಾಂ :** ೧. ಸಲಾಂ, ಸೆಟ್ಟರೇ ! (ಮುಂಬಯಿ. ೩. ೪-೧೭೮). **ಸಲಾಮ್ :** ೧. ಹಲ್ಲ ಕಿರಿದು ಸಲಾಮೆಂದು ಬಾಯ ಬಿಡುವ ಹಂದೆಗಳಿರ (ಕಂನವಿ. ೧೫-೩೪); 'ಸಲಾಮ್ ಹುಜೂರ್' ಎನ್ನುತ್ತಾ ಪಕ್ಕಕ್ಕೆ ಸರಿದು ನಿಂತ ಬೈಜೂ (ಸಾಹೇಬ್. ೧೪). **ಸಲಾಮಿ :** ೩. (ಅಲಂ) ಕಾಣಿಕೆ; **ಉಡುಗೊರೆ:** ವಿಶ್ವಾ-ಸುರ್ಯಾರ ನಿಶ್ಚತವಾದಂತಿದ್ದ ಸಂಬಂಧಗಳನ್ನೇ ಬುಡಮೂಲ ಕಿತ್ತೆಸೆಯುತ್ತೇನೆ ಎಂದು ಪಣ ಪುಕಾರಿಸಿ ಹೊರಬಿದ್ದ. ಆ ಪಣದ ಪ್ರಥಮ ಸಲಾಮಿಯೆಂದು ಶಂಕರಕಾಕಾ ಅವರಿಗೆ ಸ್ವದಸ್ತೂರ ಖುದ್ದ ಕಾಗದ ಬರೆದಿದ್ದ (ದೀಪಹ. II, ೩೬೮). ೪. [ನಾಟ್ಯ] **ನಮಸ್ಕಾರ ಮಾಡುವ ಒಂದು ಭಂಗಿ :** ಮೊದಲು ನೃತ್ಯಗಾರನು ನಮಸ್ಕಾರದಂತಿರುವ 'ಸಲಾಮಿ' ಅಥವಾ 'ಶುರುಕೆ ಅಹಮದ್' ಎಂಬುದನ್ನು ಮಾಡಿ ಕೈಗಳನ್ನು ಎದೆಯ ಹತ್ತಿರ ಅಚಲವಾಗಿ ಹಿಡಿದಿರುತ್ತಾನೆ (ಆಭಾನೃ. ೪೯). **ಸಲ್ಲಾಮ್:** ೧. ಕ್ರಮದಿಂ ಪರಾಕು ಸಲ್ಲಾಮೆನಲ್ಕಂಚುಕಿಗಳಮರೇಶ ನಂತೆ ಪುಷ್ಪಕದಿ ಮಂಡಿಸಲು (ವೆಂಕಾರಾ. ೧-೭-೧೭). **ಸಲ್ಲಾಮು :** ೧. ಬಲಸಹಿತಾ ಗಂಭೀರದೊರೆಗಳು ತೊಟ್ಟ ಭೂಷಣದೊಳು ನಿಂದು ಸಲ್ಲಾಮು ಕೊಡುವರು (ಸೌಂದಕಾ. ೫-೪೮); ತೆಕ್ಕೊ ಸಲ್ಲಾಮು ಬಿರ್‍ರನೆ ಕುರುರಾಯಭೂಪಾ ತೆಕ್ಕೊ ಸಲ್ಲಾಮು ಬಿರ್‍ರನೆ (ಕರ್ಣಾಕಾ. ೧೭).

ಸಲಾಮಿ ಕೊಡು, ಸಲಾಮು ಕೊಡು = ನಮಸ್ಕಾರಮಾಡು; ವಂದಿಸು: ದಾದಾ . . . ಕುಸ್ತಿಯ ಸಂಪ್ರದಾಯದಂತೆ, ಲಾಮಾನ ಕೈ ಜಗ್ಗಿ, ಜೋಲಿ ಹೊಡೆದು ಸಲಾಮಿ ಕೊಟ್ಟನು (ಗ್ರಾಮಾಯ. ೫೨); 'ಸಲಾಮು ಕೊಡು' ಎಂದು ಕೋತಿಯಾಡಿಸುವವನು ಕೋತಿಗೆ ಹೇಳುತ್ತಿದ್ದನು (ರೂಢಿ). ಸಲಾಮುಹಾಕು = ಸಲಾಮಿಕೊಡು: ನ್ಯಾಯಾಧೀಶನಿಗೆ ಸಲಾಮು ಹಾಕಿ . . . ಎಂದನು (ಕಮಕ. ೧೭೦). ಸಲಾಮುಹೊಡೆ = ೧. ಸಲಾಮಿಕೊಡು : ನನ್ನನ್ನು ಯಾರೂ ಗುರುತು ಹಿಡಿಯಬಾರದು, ನನಗೆ ಸಲಾಮು ಹೊಡೆಯಬಾರದು (ನಾಪೂಲೀ. ೧೬೩). ೨. (ಆಲಂ) ಬಗ್ಗಿ ನಡೆ; ಅನುಸರಿಸು: ಇಂಥದನ್ನು ಕಲಿತು ಕನ್ನಡದ ವಿದ್ಯಾರ್ಥಿಗಳು ಅಧಿಕಾರಿಗಳಿಗೆ ಸಲಾಮುಹೊಡೆಯುವುದಕ್ಕೆ ಸಿದ್ಧರಾಗುತ್ತಿದ್ದರು (ಸುವರ್ಣ. ೩೦೧). [← ಅರ. ಹಿಂ. ಮರಾ. ಸಲಾಮ್, ಸಲಾಮಿ]

**ಸಲಾಮುಫಿರಂಗಿ** (ನಾ). (ಅಧಿಕಾರಿ ಅಥವಾ ಗೌರವಾನ್ವಿತವ್ಯಕ್ತಿಯ ಸಲುವಾಗಿ) ತೋಪು ಹಾರಿಸುವುದರ ಮೂಲಕ ತೋರಿಸುವ ಗೌರವ; ಫಿರಂಗಿಮರ್ಯಾದೆ : ಈ ಸರದಾರರನ್ನು ಮಹಾಉತ್ಸಾಹದಿಂದ ಇದುರುಗೊಂಡು . . . ಸಲಾಮುಫಿರಂಗಿಗಳ ಹಾರಿಸಿ (ರಾಜೇಂದ್ರ. ೧೧೯). [ಸಲಾಮು + ಫಿರಂಗಿ]

**ಸಲಾಯಿಸು** 'ಸಲಿಸು' ನೋ.

**ಸಲಾಹ** 'ಸಲಹೆ' ನೋ.

**ಸಲಿಂಗ** (ಗು). ೧. ಒಂದೇ ಬಗೆಯ ಚಿಹ್ನೆ ಅಥವಾ ಲಿಂಗದಿಂದ ಕೂಡಿದ. (ನಾ). ೨. [ದ್ವೈತ] "ಸಲಿಂಗರೆಂದರೆ ಲಿಂಗದೇಹದಿಂದ ಸಹಿತರಾಗಿ ಇರುವರು" (ಹಸಾರ. ೧೪-೨೩ ತಾತ್ಪರ್ಯ): ಎರಡುವಿಧದಲಿ ಲೋಕದೊಳು ಜೀವರುಗಳಿಪ್ಪರು ಸಂತತ ಕ್ಷರಾಕ್ಷರ ವಿಲಿಂಗ ಸಲಿಂಗ ಸೃಜ್ಯಾಸೃಜ್ಯಭೇದದಲಿ (ಹಸಾರ. ೧೪-೨೩). [ಸಂ.]

**ಸಲಿಂಗರತಿ** (ನಾ). ಸಮಾನಲಿಂಗದವರೊಂದಿಗೆ ನಡೆಸುವ ರತಿಕೇಳಿ : ಈಚಿನ ದಿನಗಳಲ್ಲಿ ಸಲಿಂಗರತಿಯಲ್ಲಿ ಆಸಕ್ತರಾದವರು ಅನೇಕರಿದ್ದಾರೆ (ರೂಢಿ). [ಸಂ.]

**ಸಲಿಕ್ಕೆ$_1$, ಸಲ್ಲಿಕೆ** (ನಾ). ೧. (ಹಣ ಮುಂತಾದುವನ್ನು) ಸಲ್ಲಿಸುವಿಕೆ; ಸಂದಾಯ; ಪಾವತಿ: ಕೊಟದು ವರದಪಯನ XX ಅಯಿಗುಳಿ ದೇವನಾಯ್ಕರ ಸಲಿಕೆ ಮಾಡಿ ಕೊಳಗಗದೆ ಗುಡಿ ಸೇನಬೋವ ತಿಂಮರಸಗೆ ಧಾರೆನೆಱದು (ಎಕ. X (S), ಮಾಲೂರು. ೨೧೯-೬; 1530). ೨. ಹಣ, ವಸ್ತು ಮುಂತಾದುವುಗಳನ್ನು ಸಲ್ಲಿಸಿದಾಗ ಅವುಗಳನ್ನು ಪಡೆದವರು ಕೊಡುವ ಪತ್ರ; ಪಾವತಿಪತ್ರ; ರಶೀತಿ: ವಿನಿಮಯ ಪತ್ರಗಳು, ಚೆಕ್ಕುಗಳು . . . ಸಲಿಕೆಗಳು – ಇವುಗಳ ವಿಷಯದಲ್ಲಿ ಮುದ್ರಾಂಕಶುಲ್ಕದ ದರಗಳು (ಭಾಧಾನ. ೨೮೬). ೩. ಸಮರ್ಪಿಸುವುದು; ಅರ್ಪಣೆ: ಪಟ್ನಾವಳಿಗಳೆಮ್ಮ ಬಸವಿದೇವನ ಮುಂದೆ ಪಟ್ಟಣಂಗಳ ಸಲಿಕೆ ಬಸವಿದೇವನ ಮುಂದೆ (ಬಸರ. ೫-೧೨೨). ೪. ಕೊಡುಗೆ; ದತ್ತಿ: ಬನ್ನುದತ್ತನು ಸೆಟ್ಟಿತ್ತಿದೆವಿಯಬ್ಬೆಯು ನಿಱಿಸಿ XXX ಕಾಲುರ ಭತ್ತ ಸಲಿಕೆ ಪತ್ತು ಗದ್ಯಾಣ (ಎಕ. VI, ಮೂಡಿಗೆ. ೧೯-೧೧; ಸು. 1025?); ಸುಪಾರ್ಶ್ವದೇವರ ಬಸದಿಗೆ ಆ ಗಳೆಯೊಳ್ ಮತ್ತರ ಸಲಿಕೆ ಆರುವಣದ ಲೆಕ್ಕದ ಬಿಟ್ಟ ನೆಲಂ ಮತ್ತ[ರ್] ೩೫೫ (ಇಆ. XIX, ೨೭೩-೪೨; 1054). ೫. ಈಡೇರಿಕೆ; ನೆರವೇರಿಕೆ: ಗಿರಿಯ ಗಿರಿಯ ದರಿಯ ದರಿಯ ಹಗುರಡಿಯೊಳು ಹಾರುತ ದಣಿವ ಗಣಿಸದೆನ್ನಾಸೆಯ ಸಲಿಕೆಯನ್ನೇ ಕೋರುತ (ಹಂಸಪ. ೬೬). ೬. ಚಲಾವಣೆ; ಬಳಕೆ: ಕಳ್ಳನಾಣ್ಯ ಸಲಿಕೆ [ಪಾಠಾಂ. ಸಲುಗೆ]ಗೆ ಸಲ್ಲದು ಕಳ್ಳನಾಣ್ಯವ ಸಲ್ಲಲೀಯರಯ್ಯಾ (ಬಸವ. ೧೯೮). ಸಲ್ಲಿಕೆ : ೧. ಸಲ್ಲದ ನಾಣ್ಯ ಸಲ್ಲಿಕೆ ಮಾಡಿದರೆ ಅಲ್ಲಿಗೇ ಹೋಯಿತು (ಗಾದೆ). ೨. ಅವರ ಕಚೇರಿಗೆ ಈ ಪತ್ರವನ್ನು ತಲುಪಿಸಿ ಸಲ್ಲಿಕೆಯನ್ನು ತೆಗೆದುಕೊಂಡು ಬಾ (ರೂಢಿ). [ಸಲ್ + -ಇಕೆ]

**ಸಲಿಕ್ಕೆ$_2$, ಸನಿಕೆ** (ನಾ). ಅಗಲವಾದ ಹಲ್ಲೆಯುಳ್ಳ ಒಂದು ಬಗೆಯ ಗುದ್ದಲಿ; ಎಲೆಗುದ್ದಲಿ: ಹಾರೆ ಗುದ್ದಲಿ ಸಲಿಕೆಯ ಸಂತಸದಿ ಕೊಟ್ಟು (ಸಿದ್ಧಕಾ. ೧೪-೬); ಮಣ್ಣನ್ನು . . . ಸಲಿಕೆಯಿಂದ ಪುಟ್ಟಿಯಲ್ಲಿ ತುಂಬಿ ತಲೆಯ ಮೇಲೆ ಹೊತ್ತುಹಾಕಬೇಕು (ಕೃಷಿಪ್ರ. ೩೩); ವಿಮಲೆಯ ತಂದೆ ಮಡಿಗಳಿಗೆ ಸಲಿಕೆಯಿಂದ ನೀರು ಹಾಯಿಸುತ್ತಿದ್ದನು (ಕಪಪು. ೩-೧೫). ಸನಿಕೆ : ಬಟ್ಟೆಬರೆಗಳನ್ನೂ ಸನಿಕೆಗಳನ್ನೂ ತೋಟಗಾರರಿಗೆ ವಿನಿಮಯಮಾಡಿದ ಸಂಗತಿ ಶಾಸನೋಕ್ತವಾಗಿದೆ (ಶಾಸಗಿ. ೩೬). [ದೇ. ॥ ತೆಲು. ಸಲಗ]

**ಸಲಿಕೆವಲ್** (ನಾ). (ಆಲಂ) ಅಗಲವಾಗಿರುವ ಹಲ್ಲು : ಕಿರಸವಾಯಿಂ ನೇಲ್ವ ದೊಂಡೆಗರುಳುಗಳ ನೆತ್ತರ ಜೋರ್ಗಳಿಂ ನಾಂದದ ಮೈ ಸಲಿಕೆವಲ್ಲ ಗುದ್ದಲಿವಲ್ಲ ಭೂತ ನಮಿಸಿದವಕ್ಕಗೆ (ಮದೇಪು. ೩೩-೧೧). [ಸಲಿಕ್ಕೆ$_2$ + ಪಲ್]

**ಸಲಿಗೆ$_1$** 'ಸಲ್ಗೆ' ನೋ.

**ಸಲಿಗೆ$_2$** 'ಸೊಲ್ಲಗೆ$_1$' ನೋ.

**ಸಲಿಗೆ$_3$** 'ಸಲಗೆ$_2$' ನೋ.

**ಸಲಿಗೆಯೊಪ್ಪಿಸು** (ಕ್ರಿ). ಸಂದಾಯಮಾಡಬೇಕಾದುದನ್ನು ಕೊಡು, – ಸಲ್ಲಿಸು: ಶ್ರೀನಂಜುಂಡೇಶ್ವರಸ್ವಾಮಿಯವರ ಮಹಾಸನ್ನಿಧಾನಕ್ಕೆ . . . ವರ್ಷವರ್ಷವೂ ಸಲಿಗೆಯೊಪ್ಪಿಸುವ ದೇವದಾಯದ ಕಾಣ್ಕೆ (ಬಿರುಗಂ. ೨೬-೯).

[ಸಲಿಗೆ$_1$ (< ಸಲ್ಗೆ) + ಒಪ್ಪಿಸು]

**ಸಲಿಗೆವಂತ** 'ಸಲ್ಗೆವಂತ' ನೋ.

**ಸಲಿಗೆವಾಳ** 'ಸಲುಗೆವಾಳ' ನೋ.

**ಸಲಿಗೆವಾಳತ್ವ** (ನಾ). ಸಲುಗೆ; ಸದರ: ಸಲಿಗೆವಾಳತ್ವದಿಂ ನಸುನಗುತಲಿಂತೆಂದು (ನವಮೋ. ೨೬-೩೧). [ಸಲಿಗೆವಾಳ (< ಸಲುಗೆವಾಳ) + -ತ್ವ]

**ಸಲಿಪು** (ಕ್ರಿ). ಸಲ್ಲುವಂತೆ ಮಾಡು; ತೊಡಗಿಸು; ವಿನಿಯೋಗಿಸು: ಪಶುಗಳನೋವಿಯೊಲ್ಲು ಕೃಷಿಯೊಳ್ ವ್ಯವಹಾರಮನೊಲ್ಲು ಮಾಡಿಯಾರ್ಜಿಸುವುದು ವಿತ್ತಮಂ ಪಡೆದು ಸದ್ವ್ಯಯದೊಳ್ ಸಲಿಪಿಟ್ಟು ಕೂರ್ತು ಸಾಧಿಸುವುದು ಧರ್ಮಮಂ (ದಶಕು. ೮-೪೯); ಮಲಮೂತ್ರವಿಲ್ಲದ ಮೈಗೆ ಕಮಂಡಲಜಲವೇಕೆ ಜೀವರಕ್ಷಾರ್ಥ ಸಲಿಪಿ ಪೀಲಿಯನಾತ್ಮಸಾರಪುಸ್ತಕವ ಸಂಗಲಿಸಿದರದುಹನಾಜ್ಞೆಯೊಳು (ಭರಚ. ೫೯-೪೭).

[< ಸಲಿಸು]

**ಸಲಿಲ, ಸಳಿಳ** (ನಾ). ೧. ನೀರು; ಉದಕ; ಜಲ: ಸೂಕ್ತಿದಾನಗಳ ಸಿಂದುರಂಬೊರೆದ ಸಲಿಲಂಗಳೊಳಮಿಂಚರದಂಚೆವಿಂಡುಗಳಿಂ ಸೊಗಯಿಸುವಿರ್ತಡಿಗಳೊಳಮೊಪ್ಪಂಬೆತ್ತ ವೇತ್ರವತಿ (ಕಾದಂಪೂ. ೧೬); ಎನಗುತ್ತರವ ರಚಿಸಿ ಬಳಿಕ ಸಲಿಲವನೀಂಟು (ಕುಮ್ಯಾಅ. ೨೩-೧೮); ತರಣಿ ಕಿರಣದ ನಂಟು ಗಗನ ಸಲಿಲದ ನಂಟು (ಮಂಕುಕ. ೭೦). ೨. [ಛಂದ] ಎಂಟು ಬಗೆಯ ಗಣಗಳಲ್ಲಿ ಒಂದು; ಯಗಣ (U - -) : ತ್ರಿದಶಮರುದಿಂದ್ರಪುರ ಚಂದ್ರ ಸಲಿಲಂಗಳ್ ತುದಿಯೊಳಿರೆ ತಳ್ಪುಹರರಲ್ಲಿ ಯತಿ ನಿಲ್ಕುಂ (ಛಂದೋಂಬು. ೨-೧೫೮). ಸಳಿಳ : ೧. ಸಳಿಳದೊಳೆ ನಾಂದ ವಲ್ಕಂದಳೆದು (ಶಾಕುಂತ. ೧೭-೩೨). [ಸಂ.]

**ಸಲಿಲಕ್ರೀಡೆ** (ನಾ). ನೀರಿನಲ್ಲಿ ಕ್ರೀಡಿಸುವುದು; ನೀರಾಟ; ಜಲಕೇಳಿ : ಸಲಿಲಕ್ರೀಡಾಭವೋದ್ಯಜ್ಜಲಕಣನಿಕರಾಕಾರಮತ್ತದ್ವಿಪೇಂದ್ರಾವಲಿತಹಸ್ತಾಗ್ರೋಚ್ಚಲಚ್ಚೀಕರ ಸಮುದಯಂ (ಆದಿಪು. ೧೩-೮); ವಿನೋದಕೆ ಬಂದಿರ್ದೆ ನಾರಾಚ ಸಲಿಲಕ್ರೀಡೆಯಿದೆಯೆನುತ ಮುಱಿಯೆಸುತ ಗಂಧರ್ವಬಲ ಮುಕ್ಕುಱಿಕಿ ಕೌರವಬಲವ ತತ್ತಱಿದಱಿದು ತರಹರವಿಲ್ಲೆನಿಸಿ ಹೊಗಿಸಿದರು ಪಾಳಯವ (ಕುಮ್ಯಾಅ. ೧೮-೩೪); ಸಲಿಲಕ್ರೀಡೆಯೊಳೆಯ್ದೆ ನಾಂದು ದುಗುಲಂ ನೈತಂಬಮಂ ಪತ್ತೆ (ತ್ರಿಪುವಿ. ೨೪-೯೯). [ಸಂ. ಸಲಿಲಕ್ರೀಡಾ]

**ಸಲಿಲಖಾತಿ** (ನಾ). ನೀರಿನಿಂದ ತುಂಬಿರುವ ತೋಡು, – ಅಗಳು, – ಕಂದಕ: ನಗರವನು ಸುತ್ತಾಗಿ ಶೋಭಿಪ ಸಲಿಲಖಾತಿಯು ಮುಟ್ಟುತಿಹುದಡಿಯಾ (ಬಿಜ್ಜಪು. ೨-೧೯). [< ಸಂ. ಸಲಿಲಖಾತ]

**ಸಲಿಲಜ** (ನಾ). ೧. ನೀರಿನಲ್ಲಿ ಹುಟ್ಟಿದುದು; ತಾವರೆ; ಕಮಲ: 'ಸಲಿಲಜಸಖ' ಪರಾ. ೨. ನೀರಿನಲ್ಲಿ ಹುಟ್ಟಿದುದು; ಜಲಚರಪ್ರಾಣಿ.

[ಸಂ.]

**ಸಲಿಲಜಸಖ** (ನಾ). ಕಮಲದ ಸ್ನೇಹಿತ; ಸೂರ್ಯ: ವಿಲಸಿತಪದಾಂಬುವಂ ಪಡೆದು ಕುಷ್ಠಂ ನೀಗಿ ನಲಿದು ಮುನ್ನಿನ ತೇಜದಿಂ ವಿರಾಜಿಸುತಿರ್ದ ಸಲಿಲಜಸಖಂ ನೋಡಿಮೆಂದು ತತ್ಪಂಡಿತೇಂದ್ರಂ ಮತ್ತಮಿಂತೆಂದನು (ಆರಾಚ. ೧-೬-೮). [ಸಂ.]

**ಸಲಿಲಪೂರ** (ನಾ). ನೀರಿನ ಪ್ರವಾಹ; ಜಲಪ್ರವಾಹ : ಏಂ ಕಡೆದುದೊ ಪೆರ್ಮಟೆ ಜಗಮೆಲ್ಲಂ ಸಲಿಲಪೂರದಿಂ ತೇಂಕುವಿನಂ (ಜಗವಿ. ೩-೮). [ಸಂ.]

**ಸಲಿಲಪ್ರವೇಶ** (ನಾ). ನೀರನ್ನು ಹೊಗುವುದು; ಜಲಪ್ರವೇಶ: ಸಲಿಲ

ಪ್ರವೇಶಮಂ ಪತ್ರಲೇಖೆಯುಂ ನೀವುಮಲ್ತೆ ಮಾಡಿದಿರಂತಾ ಲಲನೆಯದೇನಾದಳ್ (ಕಾದಂಉ. ೬೨೭); ಧೃಷ್ಟದ್ಯುಮ್ನ ಸೃಂಜಯ ಸೋಮಕಾದಿಗಳು ಅನುಚಿತವು ಸಲಿಲಪ್ರವೇಶವು . . . ಎಂದುಲಿದುದು (ಕುವ್ಯಾಗ. ೫-೩೧). [ಸಂ.]

**ಸಲಿಲಬಾಣ** (ನಾ). ನೀರನ್ನು ಸುರಿಸುವ ಬಾಣ; ವರುಣಾಸ್ತ್ರ: ಸಲಿಲವ ಬೀಱು ಬೇಗದಿನೆನಲು ಬಿಲುಗೊಂಡೆದ್ದನಾ ಪಾರ್ಥ ಸಲಿಲಬಾಣದಲಮಲಗಂಗಾಜಲವ ತೆಗೆದನು (ಕುವ್ಯಾಭೀ. ೧೦-೨೭). [ಸಂ.]

**ಸಲಿಲವಾಸ** (ನಾ). ನೀರಿನಲ್ಲಿರುವುದು; ಜಲವಾಸ: ತಪ್ಪಿದುದನೀ ಸಲಿಲವಾಸದೊಳೊಪ್ಪವಿಡುವೆನು (ಕುವ್ಯಾಗ. ೪-೩೫). [ಸಂ.]

**ಸಲಿಲವಿನೋದ** (ನಾ). = ಸಲಿಲಕ್ರೀಡೆ : ಸಲಿಲವಿನೋದದೊಳ್ ಹರಿ ತುಳುಂಕಿದ ಕುಂಕುಮವಾಃಕಣೋತ್ಕರಂ . . . ಪೋಗದೆ ನಿಂದುವೆನಲ್ ವರಾಂಗನಾವಲಿಗೆಸೆದತ್ತು ಮಾಣಿಕದ ಮುತ್ತಿನ ನೀಲದನರ್ಘ್ಯಮಂಡನಂ (ಜಗವಿ. ೧೪-೧೧೪). [ಸಂ.]

**ಸಲಿಲವ್ಯಾಳ** (ನಾ). ನೀರುಹಾವು; ಒಳ್ಳೆ: ಏಳು ಕೌರವರಾಯ ಸಲಿಲವ್ಯಾಳನೇ ನೀನಕಟ ಜಲದೊಳಗಾಳುವರೆ (ಕುವ್ಯಾಗ. ೫-೧೪). [ಸಂ. ಸಲಿಲವ್ಯಾಲ]

**ಸಲಿಲಸ್ತಂಭ** (ನಾ). ೧. ನೀರನ್ನು ತಡೆಯುವುದು. ೨. ನೀರಿನಲ್ಲಿದ್ದೂ ನೀರಿನ ಬಾಧೆ ತಟ್ಟದಂತೆ ತಡೆಯುವ ಮಂತ್ರವಿದ್ಯೆ; ಜಲಸ್ತಂಭ: ವಿನುತ ಸಲಿಲಸ್ತಂಭವಿದ್ಯೆಯೊಳೆಸಗಿರವು ಪಾತಾಳದಲಿ (ಕುವ್ಯಾಗ. ೪-೫೮). [ಸಂ.]

**ಸಲಿಲಸ್ತಂಭನ** (ನಾ). ೧. = ಸಲಿಲಸ್ತಂಭ ೧. ೨. = ಸಲಿಲಸ್ತಂಭ ೨ : ಸಲಿಲಸ್ತಂಭನವಿದ್ಯಾಬಲಮನಪೇಕ್ಷಿಸಿದನೆನ್ನದುರಗಪತಾಕಂ ಬಲಹಾನಿಯಾಗೆ ಕೊಳದೊಳ್ ಮುೞುಗಿರ್ದಪನೆಂದು ನಗರೆ ಕೂರದರೆನ್ನಂ (ಗದಾಯು. ೭-೨೩); ವರುಣಮಂತ್ರಾಕ್ಷರದ ಜಪಪರಿಕರಣದಲಿ ನಿರ್ಣಿಕ್ತಚೇತಃಸ್ಫುರಣ ಸಲಿಲಸ್ತಂಭನ ವನವನೀಶ ಮಂತ್ರಿಸಿದ (ಕುವ್ಯಾಗ. ೩-೪೨). [ಸಂ.]

**ಸಲಿಲಾಂಜಲಿ** (ನಾ). ೧. ಬೊಗಸೆಯಲ್ಲಿ ತುಂಬಿದ ನೀರು. ೨. ಸತ್ತವರ ಸದ್ಗತಿಗಾಗಿ ಅವರ ಹೆಸರಿನಲ್ಲಿ ಮಂತ್ರಪೂರ್ವಕವಾಗಿ ಬೊಗಸೆಯಲ್ಲಿ ನೀರು ಬಿಡುವುದು ; ಜಲತರ್ಪಣ : ಆತ್ಮಜರನಿಲ್ಲಿಂ ಮೇಲೆ ಸಲಿಲಾಂಜಲಿಗಳನು ವೈದಿಕವಿಧಾನದಲಿ ಪಾಲಿಸುವುದು (ಕುವ್ಯಾಗ. ೧೧-೧೩). [ಸಂ.]

**ಸಲಿಲಾಂಜುಳಿ** (ನಾ). = ಸಲಿಲಾಂಜಲಿ ೧ : ಮೃಡನ ಚರಣಕ್ಕೆ ಸಲಿಲಾಂಜುಳಿಯ ನಿಡುವಂತೆ . . . ಜಲವನಭಿಮಂತ್ರಿಸುತ್ತಿಟ್ಟನಾತನ ಮೇಲೆ (ರುದ್ರಾ. ದೇ. ೨೧೧-೧೭). [ಸಲಿಲ + ಅಂಜುಳಿ (< ಅಂಜುಲಿ)]

**ಸಲಿಲಾಶಯ** (ನಾ). ನೀರು ಶೇಖರವಾಗುವ ಕೊಳ, ಕೆರೆ, ಕಟ್ಟೆ ಮುಂತಾದುವು : ಸಲಿಲಾಶಯಂ ಪಯಃಪೂರಮನಾಂತುದೋ ದಿಟಕೆ ತಾನೆನಿಸಿತ್ತಮೃತಾಂಶುರಶ್ಮಿಯಿಂ (ಚಂದ್ರಪ್ರ. ೮-೩೯). [ಸಂ.]

**ಸಲಿಲಾಶ್ರಯ** (ನಾ). ನೀರಿನ ಆಶ್ರಯ, — ಆಸರೆ : ಸುಹವಿಷ್ಯದಿಂ ಸೇವ್ಯನಾಗದ ವಹ್ನಿಯಂತೆ ಸಲಿಲಾಶ್ರಯವನಾಶ್ರಯಿಸದ ಕೃಷ್ಣದಂತಖಿಳಬಾಂಧವರೊಡನೆ ಬದುಕದ ಮನುಷ್ಯಸಂಸಾರದಿಂದೇನು (ಜೈಮಿಭಾ. ೨-೧೮). [ಸಂ.]

**ಸಲಿಲಾಸ್ತ್ರ** (ನಾ). ನೀರನ್ನು ಸುರಿಸುವ ಅಸ್ತ್ರ; ಜಲಾಸ್ತ್ರ: ಸಲಿಲಾಸ್ತ್ರಂ ಜ್ವಲನಾಸ್ತ್ರಮಂ ಗೆಲೆ . . . ಗೆಲ್ವಾಸೆಯಿನಂದು ಕೇಶವ ನಿಕುಂಭರ್ ತಮ್ಮೊಳೆಚ್ಚಾಡಿದರ್ (ಜಗವಿ. ೧೫-೩೦). [ಸಂ.]

**ಸಲಿಸು, ಸಲಾಯಿಸು, ಸಲ್ಲಿಸು, ಸಲ್ಸು** (ಕ್ರಿ). ೧. ಹೊಗಿಸು; ಪ್ರವೇಶಿಸುವಂತೆ ಮಾಡು: ಅತಿನಿಶಿತದರ್ಭಸೂಚೀಹತಿಗಳ್ಕಿದ ತೆಱದಿನುಗ್ರಕರನತುಳವನಸ್ಪತಿ ಸಂಕೀರ್ಣವೆನಿಪ್ಪೀ ವಿತತಾಟವಿಯಲ್ಲಿ ಸಲಿಸನೆಂದುಂ ಕರಮಂ (ಚಂದ್ರಪ್ರ. ೫-೫೧). ೨. ಸೇರುವಂತೆ ಮಾಡು; ಕೂಡುವಂತೆ ಮಾಡು: ಬಸವಾದ್ಯಸಂಖ್ಯಾತರಂ ವಿನುತಮುಕ್ತಿಗೆ ಸಲಿಸಿ (ಪದ್ಮರಾ. ೨-೨೭). ೩. ಕೊಡು; ನೀಡು: ಗಜ್ಜರ ನೊಟವ್ಯಾಬರಾ ಒಕ್ಕಲಾಚನ್ದ್ರತಾರಕಮಸುರ್ಗೆಯ್ಯನ್ನೆಗಮೀ ದತ್ತಿಯುವ್ವೊಪ್ಪಲ್ಲ ವೆಜ್ಜದರ ಒಕ್ಕಲ್ಗೆ ಸಲಿಪೋ ಸತ್ಯಮನ್ತ ಇದನಟಿವೋ ಬಾರಣಾಸಿ ಅೞಿದ ಪಞ್ಚಮಹಾಪಾತಕನಕ್ಕುಂ (ಎಕ. X, ಕೋಲಾರ. ೭೯-೧೭; ಸು. 880). ೪. ಸಂದಾಯ ಮಾಡು; ಪಾವತಿಮಾಡು: ಇಂದು ನಾಳೆನ್ನದೆ ದಿನಂಪ್ರತಿಯಿಂದೆ ಧನವಂ ಸಲಿಸಲು (ಬಸವು. ೨೭-೧೦). ೫. ಅರ್ಪಿಸು; ಒಪ್ಪಿಸು : ಅಱಿದು ಸಲಿಸುವೊಡಿದನು ತನ್ನಯ ವರಕುಮಾರಿಗೆ ರಾಜ್ಯವಿತ್ತಿದ ನಿರುತ ಮಾಡುವುದಾದರಾಕೆಯು ನಿನಗೆ ತಾಯಹಳು (ಸಂಭವ. ೧೩-೨೫); ಮಲೆಯ ಕಡವಳ ಬಂದು ಹುಲಿಯಾಗಿ ಕಾಡುವಂ ಸಲಿಸದಿರೆ ಕೋಲವಂ (ಕಾಲೂರ. ೭೯-೧೪೮). ೬. ಉಂಟುಮಾಡು; ಒದಗಿಸು : ಪಣ್ ಫಲಾದಿಗಳನಿತ್ತು ಬಳಸಿದ ಬಳಲ್ಕೆಯಂ ತೆವಱ ಪರಿಣಾಮಮಂ ಸಲಿಸಿ [ಪಾಠಾಂ. ಬೆಳೆಸಿ] ಸುಖವಿರಿಸಿ (ಸೋಮಚ. ೨-೮೭). ೭. ಮಾಡು; ನಡೆಸು: ತಾಂ ಚೆಲ್ವಿಂ ಜಲಕೇಳಿಯಂ ಸಲಿಪ ಕಾಂತಾಕೇಶಮಂ ಮೇಘಮೆಂದು . . . ನೋಡಿ ಶಿಖಿಗಳ್ ನರ್ತಿಪ್ಪುವು (ಉದ್ಭಟ. ೯-೧೨೩); ಲಲನೆಯಿಾಪರಿಯಿಂದ ನೃತ್ಯವ ಸಲಿಸೆ ಶಿವಲಿಂಗಾರ್ಚನೆಯನೊಲವುಣ್ಮೆ ಮಾಡುತಿರೆ (ಬಸವು. ೧೨-೪೫). ೮. ಪಾಲಿಸು; ಆಚರಿಸು : ಪಲಕಾಲಂ ಸಂಯಮಮೆಂಬ ಬ್ರತಮಂ ಸಲಿ[ಪಾಠಾಂ. ಸಾದಿ]ಸುತ್ತಮಿರ್ಪನ್ನೆಗಂ (ವಡ್ಡಾರಾ. ೧೫೭-೨೫); ನೋಂಪಿಗಳೊಳ್ ನಿಯಮಕ್ರಮಂಗಳಂ ಸಲಿಸಿದರಂತು ನೋನದೆ ಗುಣಾರ್ಣವನಂ ಪಡೆಯಲ್ಕೆ ತೀರ್ಗುಮೇ (ಪಂಪಭಾ. ೧-೧೩೭); ಆಳವಱಿಯದೆ ನುಡಿದೆನು ಕಡೆಮುಟ್ಟ ಸಲಿಸದಿದ್ದರೆ ತಲೆದಂಡ (ಬಸವ. ೭೮೫). ೯. ಜಾರಿಗೆ ತರು; ಅನುಸರಿಸು: ಒಡೆಯನಾಜ್ಞೆಯ ಸಲಿಸಿ ಪೊಡವಿಪಂ ನಡೆಯುತ್ತ . . . ದಿನವ ಕಳಿಯುತ್ತಿರ್ದನು (ಹಚರಾ. ೧೨-೧). ೧೦. ಈಡೇರಿಸು; ಆಗುಮಾಡು; ಪೂರ್ತಿಗೊಳಿಸು : ಬಗೆದಾಗಳೆ ವಾಹನ ದೇವರುಯ್ವರಚ್ಚರಸಿಯರಿಚ್ಚೆಯಂ ಸಲಿಪರೊಲ್ದು (ಆದಿಪು. ೩-೨); ಒಲುಮೆಯೊಡಹುಟ್ಟಿದರ ಬಯಕೆಯ ಸಲಿಸುವರೆ ಸಾಪಲ್ಲವೇ (ಕುವ್ಯಾದ್ರೋ. ೧೩-೩೯); ಇನಿತೊಂದೆನ್ನೀ ಕಡೆಗಾಲದೆ ಪುಟ್ಟಿದ ಬಯಕೆಯಂ ಸಲಿಸ (ರಾಮಾಶ್ವ. ೩೮-೨೭). ೧೧. ನಡೆಸು; ಸಾಗಿಸಿಕೊಂಡು ಹೋಗು; ಮುಂದುವರಿಸು : ಇದಾನಾರಾರ್ ಸಲಿಪ್ಪೊರ[ವ]ರ್ತ್ತೀ ಧರ್ಮ್ಮಂ (ಇಆ. XI, ೭೦-೧೯; 567); ಕ್ಷತ್ರಿಯರ್ಗೆ ಪೂರ್ವಕ್ರಮಾಗತಂ ಕಿಡಿಸದೆ ಸಲಿಪುದೆ ಧರ್ಮಂ (ವಡ್ಡಾರಾ. ೧೮೫-೨೩); ಯಿೀ ಧರ್ಮ್ಮವನಿವರ ಮಕ್ಕಳ ಮ(ಂ)ಮ್ಮಕ್ಕಳುಥನಕವಾಚಂದ್ರಾರ್ಕ್ಕತಾರಂಬರಂ ಸಲಿಸುವರು (ಸೌಇಇ. IX-i, ೨೭೭-೫೨; 1183). ೧೨. ಅನುಗ್ರಹಿಸು; ದಯಪಾಲಿಸು : ಸತ್ಯದಿಂದ ನಡೆವಂಗೆ ನಿತ್ಯನೇಮವಾಗಿ ಸಲಿಸುವನಲ್ಲದೆ ಹುಸಿವಂಗೆ ಮಡಿಲ ಕಿಚ್ಚಾಗಿ ಸುಡುವ (ಬಸವ. ೬೪೯); ಅಗ್ಗಳೆಯ ಮುನಿಪತಿ ದಿವ್ಯದೃಷ್ಟಿಯ ಸಲಿಸದಡೆ ನೋಡಿದನು ದ್ರುಪದನು ಪಾಂಡುನಂದನರ (ಕುವ್ಯಾಆ. ೧೭-೬೦); ಪರಮಗೌತಮನ ಸ್ಥಿತಿಗೆ ಮೆಚ್ಚಿ ಮುನ್ನಿತ್ತ ವರವ ಸಲಿಪೆನು (ಕಂನವಿ. ೫-೩೦). ೧೩. ಅರ್ಹವಾಗಿಸು; ಯೋಗ್ಯವಾಗುವಂತೆ ಮಾಡು: ಶಿವತತ್ತ್ವಷಟ್ಸ್ಥಲವನು ಅಳ್ಕಱಿಂದುಪದೇಶವಿತ್ತು ಮುಕ್ತಿಗೆ ಸಲಿಸ ವೇಳ್ಕುಮೆನಲು (ಚಿಬಪು. ೩-೪). ೧೪. ಅರ್ಹತೆಯನ್ನು ಹೊಂದು; ಯೋಗ್ಯವಾಗಿರು: ಒಲಿಸಿವೊಲ್ಲದಿರ್ಪರುಂಟೆ ಸಲಿಸಿ ಸಲ್ಲದಿರ್ಪರುಂಟೆ (ಹಂಪರ. ೮-೬). ೧೫. ಎಡೆಮಾಡು; ಬಡಿಸು: ತೆಱನಱಿದಱಿವೆಂಬ ದಿವ್ಯಭಾಜನದಲ್ಲಿ ಪರಮಾನಂದಪದಾರ್ಥವನು ಸಲಿಸಿ (ಶಿವಗೀ. ೬೧-೨೯೧); ಕಾಮಾಕ್ಷಿ ಚಾಮುಂಡಿಗಳಿಗೆಱಗಿ ಮಾಸಲಂ ಸಲಿಸಿ ಚೌಕದ ಭೂತವೇತಾಳರುಂಡರೇವಣ್ಣಿಸುವೆನು (ಸೋಮಚ. ೫-೫೫). ೧೬. ತಿನ್ನು; ಊಟಮಾಡು: ನಾನು ಕರಪಾತ್ರೆಯಲ್ಲಿ ಸಂದೇಹವಿಲ್ಲದೆ ಸಲಿಸುತಿಪ್ಪೆನು ಆ ಸಮಯದಲ್ಲಿ ಕೊಂಡುದೇ ಪ್ರಸಾದ ಒಕ್ಕುದೇ ಪದಾರ್ಥ (ಘನವ. ೧೯-೧೭); ಪರಿಪರಿಯ ಪರಿಕರಂಗಳನಿರದೆ ತರಿಸಿ ಕೂಡೆ ಉಱ್ಕುವತಿ ಹರುಷದಿಂ ನೀಡಿಸುವನನಿತುಮಂ ಮುಕ್ಕಣ್ಣನಪರಾವತಾರನಲ್ಲಮನಾಗ ಲೆಕ್ಕಿಸದೆ ಸಲಿಸುವಂ ಗಗನವೇ ಬಾಯ್ದೆಱೆದೊಲ್ (ಚಿಬಪು. ೬೨-೧೧). ೧೭. ಅನುಭವಿಸು; ಭೋಗಿಸು: ದೊರೆವೆತ್ತನ್ಯೋನ್ಯಸಂಪ್ರೀತಿಯುಂ ರತಿಯುಂ ಕಾಮನುಮೆಂಬಿನಂ ಸಲಿಸಿದರ್ ನಾನಾವಿನೋದಂಗಳಂ (ಮಲ್ಲಿಪು. ೩-೮೯); ಇರ್ವರುಂ . . . ಪರದೇಶಂಗಳೊಳ್ ಕಳ್ದು ತಂದು ವಿಷಯಸುಖಂಗಳಂ ಸಲಿಸುತ್ತುಮಿರ್ದು (ಧರ್ಮಾಮೃ. ೨-೧೭೭). ೧೮. ಒಪ್ಪು; ಸಮ್ಮತಿಸು: ನಗಪತಿಯೆಂದುದಂ ಸಲಿಸಿ ನಾರದನಾತನ ಕೂಡೆ ರುದ್ರನಂ ಮೃಗಧರಚೂಡನಂ ಶಿವನನರ್ಚಿಸಿ (ಗಿರಿಕ. ೪-೬೪); ಅಂಜಲಿಸು ನಾ ಸಲಿಸುವೆನು . . . ಎನೆ ಭೀಮ ನಗುತ ಧನಂಜಯನ ಟೆಕ್ಕೆಯಕೆ ಬಿಜಯಂಗೈಯಬೇಕೆಂದ ಐಸೆ ಸಲಿಸಿದೆನೆನುತಲಾ ಕಪಿಯಾ ಸಮಯದಲದೃಶ್ಯವಾಗೆ

(ಕುವ್ಯಾಅ. ೧೦-೪೧). ೧೯. ತೋರಿಸು; ಪ್ರಕಟಿಸು . ಸದ್ಗುಣಂಗಳಂ ಸಲಿಸುವುದೀ ಮನುಷ್ಯಭವಮಂ ಪಡೆದುಂ (ಕವಿಚ. I, ೨೪೭). ೨೦. ಪ್ರಸಿದ್ಧವಾಗು; ಹೆಸರುವಾಸಿಯಾಗು: ಪುಲಿಕರನಗರಿ . . . ಸೌರಾಷ್ಟ್ರಪುರದ ಕೂಡೆ ಸರಿದೊರೆ ಶ್ರೀ ವಿರೂಪಾಕ್ಷನೋಪಾದಿಯಾಗಿರೆ ಸಲಿಸಿ ಮೇದಿನಿಯೊಳತುಳಕೈಲಾಸವಾಗಿರುತಿಹಂ (ಸೋಮಚ. ೧-೫೫). ತಾಳು; ಸೈರಿಸು : ನಿನ್ನಯ ತಾಯ್ . . . ಈ ಕಿಱಿಯವನಱಿಯದೆ ಕೆಡೆನುಡಿದನಪ್ಪೊಡಂ ನೂಱುವರಂ ನೆಱೆ ಸಲಿಸುವುದೆಂದುದನಾಂ ಮಱೆವೆನೆ ಬಯ್ ಬಯ್ಯೆ ಸಲಿಸುವೆಂ ನೂಱುವರಂ (ಪಂಪಭಾ. ೭-೬೧); ವಾಗ್ಬಲದ ಪೊಡಪ್ವರ್ ವೇಡ ಗಡ ಚಾರ್ವ್ವಾಕ ಚಾರ್ವ್ವಾಕ ನಿಮ್ಮ ದರ್ಪ್ಪಮಂ ಸಲಿಪನೆ ಗೋಪಣನ್ದಿಮುನಿಪುಂಗವನ್ (ಎಕ. II, ೭೯-೪೦; ಸು. 1100). ೨೨. (ಆಸರೆಯನ್ನಾಗಿ) ಇಡು; ಇರಿಸು: ನೆಲೆಮೊಲೆಯೆರಡಱ ಸಂದಂ ಸಲೆ ಭೇದಿಪೆನೆಂದು ಮದನನತಿ ಸಾಹಸದಿಂ ಸಲಿಸಿದ ನೀಲದ ಸಲಿಗೆಯ ನಿಲುವೆನಿಪುದು ರೋಮರಾಜಿ ರಾಜಾಂಗನೆಯಾ (ಧರ್ಮನಾ. ೩-೭೦); ಭರದ ಬವರದಲಚ್ಚು ನೆಗ್ಗಲು ಕರವ ಸಲಿಸಿಯೆ ತೇರ ನಡೆಸಿದಳರಸಿ (ಕೌಶಿರಾ. ೧-೨೭). ೨೩. ಬಳಸು; ಉಪಯೋಗಿಸು: ಪಿರಿಯರ್ ಸಲಿಪರ್ ದಡ್ಡಕ್ಕರದ ಱಟಕ್ಕೆದೆ ರೇಫೆವೆರಸಿದ ದಡ್ಡಕ್ಕರಮಂ (ಶಮದ. ೨೪).

**ಸಲಾಯಿಸು** : ೪. ಈ ಸಂಸ್ಥಾನದಿಂದ ಆ ಬಾಕಿ ದ್ರವ್ಯವನ್ನು ಸಲಾಯಿಸಿ ಕೊಟ್ಟಲ್ಲಿ (ರಾಜೇಂದ್ರ. ೧೧೮); ಅಸಲಿಗಿಂತಲೂ ಎಷ್ಟೋ ಹೆಚ್ಚು ಬಡ್ಡಿ ಸಂದಾಯವಾಗಿ ಹೋಗಿದ್ದರಿಂದ ಕೇಶವರಾಯರ ಋಣಭಾರ ಚಿಕ್ಕಾಸೂ ಸಲಾಯಿಸದೆ ತೀರಿಹೋಯಿತು (ಕುರುಕಾ. ೧೩೭). **ಸಲ್ಲಿಸು** : ೩. ಎಲ್ಲಿ ನಾಡೀಜಾಲವುಂಟಲ್ಲಲ್ಲಿ ಸಮನಾಗನ್ನರಸವಂ ಸಲ್ಲಿಪುದು ಗುಣವಿದು ಸಮಾನಂಗೆ (ಗಗತಾ. ೯-೭೯). ೫. ದೇಶಪಾಂಡೆ ಕೇಶವರಾಯ ಮೊದಲಾದವರು ಭಟ್ಟರಿಗೆ ಕೊನೆಯ ಪ್ರಣಾಮವನ್ನು ಸಲ್ಲಿಸಿದರು (ಹಬ್ಬಬ. ೩). ೭. ಅವರನ್ನೇ ಧನಿಗಳು ಎಂದು ಒಪ್ಪಿ, ಸಲ್ಲಿಸುವ ಸೇವೆ ಸಲ್ಲಿಸಿ . . . ಬದುಕಿ ಬಂದವರು ಅವರು (ಕುಡಿಕೂ. ೧೩೭); ದ್ರಾವಿಡಭಾಷೆಗಳಿಗೆ . . . ಪಾಶ್ಚಾತ್ಯ ಪಂಡಿತಪಂಕ್ತಿಯೊಂದು ನಿರ್ವ್ಯಾಜಸೇವೆಯನ್ನು ಸಲ್ಲಿಸಿತು (ದ್ರಾವಿವಿ. ೧೭ ಹಿನ್ನಲೆ). ೧೦. ಕುಱಿಯಲ್ಲನೆ ಕಣ್ಣ ಸೋಲಮಂ ಸಲ್ಲಿಸುವಂ (ಧರ್ಮಾವ್ಯ. ೫-೨೨).

**ಸಲ್ಲು** : ೩. ಸೆಕ್ಕುನ್ನಿನಾಡ ಊರಾಳಿಯ ದೇವಭೋಗ XXX ಎಲ್ಲ ಸಲ್ಲುದು (ಎಕ. IX, ಹೊಸಕೋ. ೩೭-೧೭; ಸು. 950); ಮೂನೂರು ಹೊನ್ನನು ಸಾಕಲ್ಯವಾಗಿ ಸಲ್ಲಿಕೊಂಡು (ಎಕ. VIII, ತೀರ್ಥಹ. ೧೩೪-೮; 1404).

[ಸಲ್ + - ಇಸು$_3$./ ತುಳು. ಸಲಾಯಿಸು, ಸಲೈಸು]

**ಸಲೀಲ$_1$, ಸಳೀಲ** (ಗು). ೧. ಸರಸದ; ವಿನೋದದಿಂದ ಕೂಡಿದ. ೨. ಸ್ವೇಚ್ಛೆಯಿಂದ ಕೂಡಿದ; ಸ್ವೈರವೃತ್ತಿಯ. (ನಾ). ೩. ವಿನೋದದಿಂದ ಕೂಡಿದುದು; ಸಲೀಸು; ಲೀಲಾಜಾಲ: ಉಗಿಯಂತ್ರದಂತೆ ಬಟ್ಟೆಯ ಈ ತುದಿಯಿಂದ ಆ ತುದಿಯವರೆಗೆ ಅದು ಸಲೀಲವಾಗಿ ಈಸಾಡೇನು ಎನ್ನುತ್ತಿದ್ದರೆ (ದೇಕಸ್ಕೆ. ೩೨). **ಸಳೀಲ** : ೪. ಚೆಲುವಾದ; ಸೊಗಸಾದ: ಸಳೀಲವಿಶದೋದಬಿಂದುನವಹಾರಮಂ ತಮ್ಮುರಸ್ಥಳಂಗಳೊಳುದಗ್ರಲೀಲೆ ಪೊಸಮುತ್ತಿನೆಕ್ಕಾವಳೀವಿಳಾಸಮಂ . . . ಪೋಲ್ತಿರ್ಪಿನಂ (ಶಾಂತಿಪು. ೮-೩೨). [ಸಂ.]

**ಸಲೀಲ$_2$** (ಅ). ಲೀಲಾಜಾಲವಾಗಿ; ಸರಾಗವಾಗಿ: ಸುಸಿಲಾಡುವವು ಹೂವು ಹೊಳೆನೀರ ಬಳಿಗೆ : ಪಡಿನೆಳಲನೆದೆಯೊಳಗಿರಿಸಿ ಮಧುರಸಲಿಲ ಸಲೀಲ ನಲಿದಾಡುವದು (ಉಯ್ಯಾಲೆ. ೯-೩). [ಸಂ. ಸಲೀಲಂ]

**ಸಲೀಸು$_1$** (ಗು). ೧. ಸರಾಗವಾದ; ನೇರವಾದ; ನಿರಾತಂಕವಾದ: ಆಮದು – ರಫ್ತು ವ್ಯಾಪಾರ ಆಡಳಿತಕ್ಕೆ ಸಂಬಂಧಿಸಿದ ಕಾನೂನುಗಳೂ ಅನೇಕವೇಳೆ ಸಲೀಸುವ್ಯಾಪಾರಕ್ಕೆ ಅಡ್ಡಿ ಆತಂಕಗಳನ್ನು ಒಡ್ಡಬಹುದು (ಅಂತಸಂ. ೧೭೭). (ನಾ). ೨. ಸುಲಭ; ಸರಾಗ; ನಿರಾತಂಕ: ಕುಡಿದ ತತ್‌ಕ್ಷಣ ಆನಾಮತ್ತು ಮಲಗಿದ ಧ್ಯಾನಯೋಗದಲ್ಲಿ ಈಗ ಎಲ್ಲ ಸಲೀಸು (ಚಂಡಮ. ೩೫-೪). ೩. ಸುಖವಾದುದು; ಸೌಕರ್ಯದಿಂದ ಕೂಡಿದುದು: ಬೆಟ್ಟ ಅಂದರೆ ಅವರಿಗೆ ಊರಿಗಿಂತ ಸಲೀಸು (ಹಂಗೀತ. ೧೯).

**ಸಲೀಸಾಗಿ** = ಸರಾಗವಾಗಿ; ಸುಲಭವಾಗಿ; ನಿರಾತಂಕವಾಗಿ: ಬಾಡಿಗೆಯ ಹಣಕ್ಕೆ ತಾವು ಜವಾಬ್ದಾರರೆಂದು ಹೇಳಿದ ಮೇಲೆ . . . ಬಾಡಿಗೆ ಸಲೀಸಾಗಿ ಬರುತ್ತಿತ್ತು (ಮಹಾಗ. ೧೯೨); ಕುಕ್ಕೆಯನ್ನು ಸಲೀಸಾಗಿ ಮೇಲೆತ್ತಿ ಮಂಡೆಯಲ್ಲಿಟ್ಟುಕೊಳ್ಳುವುದು ಇಂದು ಸಾಧ್ಯವಿರಲಿಲ್ಲ (ಹೊಸಕ್ಕ. ೫೧). [← ಅರ. ಓಂ. ಮರಾ. ಸಲೀಸ್]

**ಸಲೀಸು$_2$** (ಅ). ಸರಾಗವಾಗಿ; ಕಷ್ಟವಿಲ್ಲದೆ; ಸುಲಭವಾಗಿ: ಎಮ್ಮೆಗಳ ಜೊತೆಯಲ್ಲಿ ರಾಡಿನೀರೊಳು ಸಲೀಸು ಈಜಾಡಬಲ್ಲ (ನೆಲಮು. ೨೮-೧೭).

[< ಸಲೀಸು$_1$]

**ಸಲು** 'ಸಲ್' ನೋ.

**ಸಲುಕೆ** 'ಸೊಲ್ಲಗೆ$_1$' ನೋ.

**ಸಲುಗೆ** 'ಸಲ್ಗೆ' ನೋ.

**ಸಲುಗೆದೊತ್ತು** (ನಾ). ಆಪ್ತಳಾದ ಸಖಿ: ಸಲುಗೆದೊತ್ತೊರ್ವಳೀ ನೆಲ್ಲನೊಂದೇ ದಿನಕೆಯಲಸಿಕಿಲ್ಲದೆ ಮಸಣೆಕವ್ವೆ ಕುಟ್ಟಲಿಯೆಂದೆನಲು (ಸಿದ್ಧೇಪು. ೭-೬೦).

[ಸಲುಗೆ (< ಸಲ್ಗೆ) + ತೊತ್ತು (< ತೊಱ್ತು)]

**ಸಲುಗೆಯಾಳ್** (ನಾ). ತೀರ ಹತ್ತಿರದವನು; ಆಪ್ತನಾಗಿರುವವನು: ರಾಜಪುತ್ರರ ಸಾವಂತರ ಸಲುಗೆಯಾಳ್ಗಳ ರಾಯನಾಯಕರ ಸಂದಣಿಯೊಳ್ . . . ನಡೆತಂದು (ನಂಬಿರ. ೨-೪೫). [ಸಲುಗೆ (< ಸಲ್ಗೆ) + ಆಳ್$_3$]

**ಸಲುಗೆವಂತ** 'ಸಲ್ಗೆವಂತ' ನೋ.

**ಸಲುಗೆವಡೆ** 'ಸಲ್ಗೆವಡೆ' ನೋ.

**ಸಲುಗೆವಾಳ , ಸಲಿಗೆವಾಳ** (ನಾ). = ಸಲುಗೆಯಾಳ್: ಪೇಳು ಶಿವನೋಲಗದ ವಿಸ್ತರವನಾರಾರಿಹರು ಸಲುಗೆವಾಳರಾರಿಹರವರ ಪೆಸರೇನು (ಲಶಿಚಂ. ೨೭-೨೧); ಚಂಗಳೆಯ ಒಳಬಾಗಿಲನು ಕಾಯ್ವ ಸಲುಗೆವಾಳರು ನವಗೆ ಸರಿಯದಾರು (ಸುಸಾರ. ೩೫-೧೧). **ಸಲಿಗೆವಾಳ** : 'ಸಲಿಗೆವಾಳತ್ವ' ಪರಾ.

[ಸಲುಗೆ (< ಸಲ್ಗೆ) + - ವಾಳ$_3$ (< - ವಳ)]

**ಸಲುಗೆವೆಗ್ಗಡತಿ** (ನಾ). ಅತಿ ಸ್ನೇಹವುಳ್ಳ ಹೆಗ್ಗಡಿತಿ: ಸಂತಸವಡೆದೊರ್ವ ಸಲುಗೆವೆಗ್ಗಡತಿ ಕಾರ್ಗುಂತಳೆಯರಿಗೆ ಪೇಳಿದಳು (ಮೋಹತ. ೪-೭೪).

[ಸಲುಗೆ (< ಸಲ್ಗೆ) + ಪೆಗ್ಗಡತಿ$_0$ (< ಪೆರ್ಗಡಿತಿ)]

**ಸಲುಫ** (ನಾ). ಒಂದು ಬಗೆಯ ಸೊಪ್ಪು ; ಸಬ್ಬಸಿಗೆ : (ಶ). [?]

**ಸಲುವಳಿ** 'ಸಲ್ವಳಿ' ನೋ.

**ಸಲುವಳಿಕೆ** (ನಾ). ಸಾಫಲ್ಯ ; ಸಿದ್ಧಿ : ಎಲ್ಲಿಹುದು ತಿಳಿವಳಿಕೆ ಜೀವನದ ಸಲುವಳಿಕೆ (ನಾದಲೀ. ೬೩-೭). [ಸಲುವಳಿ (< ಸಲ್ವಳಿ) + - ಕೆ]

**ಸಲುವಳಿಗಾರ** (ನಾ). ಸಂದಾಯವನ್ನು ಪಡೆಯುವವನು : ಯಿಾ ಗ್ರಾಮದ ಸಲುವಳಿಗಾರರಿಗೆ ಸಲುವ ಚತುಸ್ಸೀಮೆಯ ಭೂಮಿಯನು ಆಗುಮಾಡಿಕೊಣ್ಡು ಸುಖದಲಿ ನಿನ್ನ ಸನ್ತಾನಪರಮ್ಪರೆಯಾಗಿ ಭೋಗಿಸಿ ಬಹೆಯೆನ್ದು ಕೊಟ್ಟ ಉಮ್ಬಳಿಗ್ರಾಮಶಾಸನ (ಎಕ. VI, ಚಿಕ್ಕಮ. ೫೭-೮; 1514). [ಸಲುವಳಿ (< ಸಲ್ವಳಿ) + - ಗಾರ (< - ಕಾಱ)]

**ಸಲುವು$_1$** 'ಸಲಪು' ನೋ.

**ಸಲುವು$_2$** 'ಸಲವು' ನೋ.

**ಸಲೆ$_1$** (ನಾ). ೧. ಹಣ ಮುಂತಾದುವನ್ನು ಸಲ್ಲಿಸಿದುದು; ಸಂದಾಯ ಮಾಡಿದುದು; ಪಾವತಿ: (ಶ). ೨. ಎರಡು ಅಥವಾ ಹೆಚ್ಚು ಸಂಖ್ಯೆಗಳನ್ನು ಗುಣಿಸುವುದರಿಂದ ಬರುವ ಮೊತ್ತ ; ಗುಣಲಬ್ಧ : (ಶ). ೩. ಆಯ; ವಿಸ್ತೀರ್ಣ; ಕ್ಷೇತ್ರಫಲ : ಒಂದು ಪದಾರ್ಥದ ಮೇಲ್ಮೈಯ ಅಳತೆಯನ್ನು ಅದರ ಸಲೆ ಅಥವಾ ಕ್ಷೇತ್ರಫಲ ಎನ್ನುತ್ತೇವೆ (ಕವಿಕೋ. I, ೫); ಆ ದೊಡ್ಡ ಸ್ನಾನದ ಕೊಳವನ್ನು ೧೮೦" X ೧೦೮" ಚದರಡಿ ಸಲೆಯುಳ್ಳ ಕಟ್ಟಡವೊಂದು ಒಳಗೊಂಡಿದೆ (ಭಾರದ. ೪೯೩).

[ದೇ. ‖ ತಮಿ. ಚೆಲ್; ತೆಲು. ಚೆಲ್ಲು]

**ಸಲೆ$_2$** (ಅ). ೧. ಒಂದೇ ಸಮನೆ; ಏಕಪ್ರಕಾರವಾಗಿ: ಸುಟಿಪುಳಿದೆಳಸೆ ಭಯಂ ಬಟಿವಟಿಯನಣಂ ಬಿಡದೆ ಯೂಥಮಂ ಸಲೆ ಕಾದುಂ ಕಟಿಪಿಯುಮಿಭರಿಪುವಂ ತಕ್ಕಟಿವಿನೆಗಂ ನೊಂದು ನಿಂದು ಕೊಂದುದಿಭೇಂದ್ರಂ (ಶಾಂತಿಪು. ೨-೧೦೭); ಸಮಸಪ್ತಕರು ಸಲೆ ಮುಟ್ಟಿ ಬಂದರು ಕೌರವೇಶ್ವರ ಸಕಲಬಲಸಹಿತ (ಕುವ್ಯಾಕ. ೧೪-೨೨). ೨. ಸದಾ;

ಯಾವಾಗಲೂ; ನಿರಂತರವಾಗಿ: ಸಲೆ ತೀವುತಿರ್ದೊಡಂ ಪೇಟ್ಟ್ ವಿಲಲರಿಗುಮ ಭಿನ್ನಭಾಂಡದೊಳ್ ನೀರಿನಿತುಂ (ಕಾದಂಪೂ. ೫೪೩); ಆಯೆಡೆಯೊಳ್ ಸಂಗತಿಯಿಂ ಶ್ರೀಯೊಡೆಯರ್ ಸಲೆಯಿರ್ಪರ್ (ಭಾಷಾಭೂ. ೨೨ ಉದಾ); ಸಲೆಯೆಂಬುದು ನಿತ್ಯಾರ್ಥಾವಲಂಬಿ (ಶಮದ. ೩೧೩). ೩. **ಅತಿಶಯವಾಗಿ; ಚೆನ್ನಾಗಿ; ವಿಶೇಷವಾಗಿ:** ಗಬ್ಬಿಯಿಸಿದರ್ಥಂ ಸಲೆ ಪಾಂಗಬ್ಬಿಯುದೆಯುಂ ಶಬ್ದಮೊಂದದಿರ್ದೊಡೆ ಮುತ್ತುಂ ಮೆಟಸುಂ ಕೋದಂತಿರ್ಕುಂ (ಕವಿರಾ. ೨-೫); ಮಕ್ಕಳ್ಗಂ ಕೂಡೆ ಪೆಸರಿಟ್ಟು ಸಲೆ ಕೊಂಡಾಡಿದವರ್ ವ್ಯಂತರರ್ಕಳಂ ಜಡಮತಿಗಳ್ (ಆದಿಪು. ೧೫-೬೯); ಕಳವೆಯ ಮಡಿಯ ಸಾಲುಗಳು ಸಲೆ ಮೆಟೆದುವು (ಭಾವಚಿಂ. ೨-೮). ೪. **ಉತ್ತಮವಾಗಿ; ಯೋಗ್ಯವಾಗಿ:** ಎನಗೀಗಳೊಂದಿ ಚಂದ್ರನ ಬಲಮೊಳ್ಳಿತಾಗಿ ಸಲೆಯಿಲ್ಲದೊಡಾವುದು ಮೊಳ್ಳಿತೆಯ್ದುಮೇ (ಪಂಪಭಾ. ೪-೬೮). ೫. **ಸರಿಯಾಗಿ; ತಕ್ಕಂತೆ:** ಪವಮಾನಂ ದಹನಂ ವಾಸವ ತೋಯಾಧೀಶರೆಂಬಿವರ್ ಸಲೆ ರಾತ್ರಿಂದಿವಗಳೊಳೊಂದೊಂ (ದರೆ?)ದುಂ ಜಾವವನಾಳ್ವರ್ (ಲೋಕೋಪ. ೪-೭೮); ಈ ವಿಶೇಷವ್ಯವಹರಣೆ ಲೋಕಾವಳಿಯ ಸುಜನರನು ಸಲೆ ಸಂಭಾವನೋಚಿತದಿಂದ ಸಲಹಲಿಕಾಯ್ತುಲೇ (ತೊರರಾ. ೧-೮-೧೩). ೬. **ಸಂಪೂರ್ಣವಾಗಿ; ಪೂರ್ತಿಯಾಗಿ:** ಸೌಗತಸಾಂಖ್ಯಶಿವಾಗಮಂಗಳಂ ನ್ಯಾಯ ನಯ ಪ್ರಮಾಣಸುವಚಃಕ್ರಮದಿಂ ಸಲೆ ಸೋಲೆ ಗೆಲ್ದುಪಾಧ್ಯಾಯರಜೇಯರ್ (ಶಾಂತಿಪು. ೧-೪); ಮೊಲನಿಂದ ಕರಕಷ್ಟ ನರನ ಬಾಳುವೆ ಸಲೆ ನಂಬೋ ನಮ್ಮ ಕೂಡಲಸಂಗಮದೇವನ (ಬಸವ. ೧೫೮). ೭. **ಅತಿಯಾಗಿ; ಬಹಳವಾಗಿ:** ಉಜ್ಜ್ವಲಜಿನೇಂದ್ರಪದದ್ವಯಭಕ್ತನಪ್ಪುದಿನ್ನಾರುಮನುರ್ಕಿ ಸೊರ್ಕಿ ಸಲೆ ನೋಯಿಸದಿರ್ಪುದು (ಧರ್ಮಾಮೃ. ೫-೪೧); ಅವನಿಪತಿ . . . ಹೊರಳಿದನು ಹುಡಿಯೊಳಗೆ ಸಲೆ ಕಾತರಿಸಿದನು (ಕುಮಾರವ್ಯಾ.ದ್ರೋ. ೭-೯); ಪಲವು ಸುಕೃತಮಿಂತು ಪರಿಣತಿವೆತ್ತುದೊ . . . ಸಲೆ ಪರಿಶುದ್ಧಿ ಸಾಕಾರಮಾದುದೊ (ಹದಿಬ. ೨-೧೮). ೮. **ನಿಜವಾಗಿ ; ನಿಶ್ಚಯವಾಗಿ:** ನಿನ್ನ ಮುಂದೀಗಳಾನುಸಿರ್ದಪ್ಪೆಂ ಸಲೆ ಮೆಲ್ಪು ಬಲ್ಪನಟಿಗುಂ (ಪಂಪಭಾ. ೯-೧೯); ಸಲೆಯಿವಳು ಮೂಜಗವ ಮೋಹಿಪ ತಿಲಕವೋ (ಕುವ್ಯಾವಿ. ೨-೮). ೯. **ಮೆಚ್ಚುಗೆ, ಕೊಂಡಾಟ ಮುಂತಾದುವುಗಳನ್ನು ಸೂಚಿಸುವ ಒಂದು ಮಾತು:** "ಅರರ ಧಣಿ ಭಾಪು . . . ಸಲೆ ಸುಂಪುರೆಯೆನೆ ಕೊಂಡಾಟದ ನುಡಿ" (ಭಾರನಿ. ೪೬). ೧೦. **ಪಾದಪೂರಣಾರ್ಥವಾಗಿ ಬಳಸುವ ಒಂದು ಅವ್ಯಯ:** "ನೆಜ ಸಲೆ ತವೆ ಮಿಗೆ ಯೊಗುಮಿಗೆಯುಜೆಯೆಂಬಿವು ಪಾದಪೂರಣಾರ್ಥಂ" (ಚತುನಿ. ೩೪); ತರುಣಂ ಸಲೆ ವೃದ್ಧನೆಂದು ಬಗೆಯದೆ ನೆಲಸುವೆ ನಿನ್ನಂ ನಿಶ್ಚಪ್ಪರೆಂಬರುಮೊಳರೇ (ಗದಾಯು. ೯-೬); ತನ್ನೊಡನಿರ್ದ ಧೂರ್ತಜನಾಳಿಯುಂ ಸಲೆ ತಾನುಮೊಪ್ಪಿರೆ (ಧರ್ಮಾಮೃ. ೨-೨೪). 'ಸಲ್' ಪರಾ.

**ಸಲೆಅಡಿ** 'ಸಲೆಯಡಿ' ನೋ.

**ಸಲೆಗದ್ದೆ** (ನಾ). (?) : xxx ಕೊಟ್ಟ ಸಲೆಗದ್ದೆ ಕೊನೆವಾಳೆ ಸೇವ xxx (ಎಕ. VI, ಕಡೂರು. ೪-೬೯; 1173). [ಸಲೆ$_1$ + ಗದ್ದೆ (< ಗಟ್ದೆ)]

**ಸಲೆಗೂಟ?** (?). (?) : ಆ ನಾಲ್ಕುಖಂಡು(ಗ) ಗದ್ದೆಯಲ್ಲಿ ಜೀಪೆಪ್ರಕಾರ ಹುಟ್ಟುವದು ಹಳತು ಐದುವರಹಕ್ಕೆ ಸಲೆಗೂಟಯೇಳುವಜ್ ವರಹಕ್ಕೆ ವಿವರ (ಎಕ. V, ಬೇಲೂರು. ೨೯-೧೩; 1717). [?]

**ಸಲೆಗೆ** 'ಸೊಲ್ಲಗೆ$_1$' ನೋ.

**ಸಲೆದೊಳ್ತು** (ನಾ). ನಿರಂತರವಾಗಿ ಸೇವೆಮಾಡುವವನು; ಪೂರ್ಣವಾಗಿ ಎಲ್ಲ ರೀತಿಯಿಂದಲೂ ಸೇವೆ ಮಾಡುವವನು.

ಸಲೆದೊಳ್ತರ್ (ಬಹುವ): ನಾವೆಲ್ಲರುಂ ನೆಲೆದೊಳ್ತರ್ ಬಳಿದೊಳ್ತರ್ ಸಲೆದೊಳ್ತರ್ ನಿಮಗೆ (ಗಿರಿಕ. ೧೦-೯೫). [ಸಲ್ಲೆ$_1$ + ತೊಳ್ತು (< ತೊಟ್ತು)]

ಸಲಯಡಿ, **ಸಲೆಅಡಿ** (ನಾ). ಒಂದು ಅಡಿ ಉದ್ದ ಮತ್ತು ಒಂದು ಅಡಿ ಅಗಲವಿರುವ ಕ್ಷೇತ್ರ; ಚದರಡಿ: (೩). **ಸಲೆಅಡಿ** : ಸಿರೂರಿನ ಸರೋವರದ ವರೆಗೂ ೧೧೯೨ ಸಲೆಅಡಿಗಳನ್ನು ಸೆಕೆಂಡಿಗೆ ಸಾಗಿಸುವ ನಾಲೆಯ ಅಗಲ ೧೩ ಅಡಿ (ಶಿಲ್ಪನಾ. ೨೪೬); ನಾವು ಏರ್ಪಾಡು ಮಾಡಿರುವಂತೆ ಕಟ್ಟಿದರೆ ಸಲೆಅಡಿ ಒಂದಕ್ಕೆ ೫೦ ಸೆಂಟು ಖರ್ಚಾಗುತ್ತೆ (ಯೋಧಪು. ೨೮). [ಸಲೆ$_1$ + ಅಡಿ$_1$]

**ಸಲೆವುಗೆ** (ನಾ). ಒಂದು ಸ್ಥಳದ ಹೆಸರು: ಬಸನ್ನಕುಮರಯೆಡೆವೊಟಲನಾದ ಸಲೆವುಗೆಯ ಕೊಟ್ಟ ಶಾಸನಮು ಪಡೆದು ಶನ್ನಪನ ಮಗ ದೇವೆಜೆಯಗೆ ನಷ್ಟಪ್ಪಗೊಣ್ಣು ಕೊಟ್ಟನ್ (ಎಕ. VIII, ಸೊರಬ. ೫೭-೨೮; 692). [?]

**ಸಲ್ಗತಿ** (ನಾ). **ಸಲ್ಲುವ ಗತಿ; ಸೇರುವ ನೆಲೆ:** ಪೊನ್ನಾನ್ಕೊಳ್ವೆನೆನ್ನೋನುಂ ಕೊಳ್ಗೆನ್ನೊಡೆ ಕೋಳ್ವೋನುಂ ವಾರಣಸಿಯ ಸಾಸಿರಕವಿಲೆಯುಂ ಸಾಸಿರ್ವ್ವಪಾರ್ವ್ವ[ರು] ಮನ್ಕೊನ್ಲೋನ್ ಸಲ್ಗತಿಗೆ ಸಲ್ವೋನಕ್ಕೆ (ಮೈಆರಿ. ೧೯೩೩, ೫೯-೫; ಸು. ೮ನೆಯ ಶತ). [ಸಲ್ + ಗತಿ]

**ಸಲ್ಗೆ, ಸಲಿಗೆ$_1$, ಸಲುಗೆ** (ನಾ). ೧. **ನಿಕಟಸಂಪರ್ಕದಿಂದ ಉಂಟಾಗುವ ಅತಿ ಪರಿಚಯ; ಸದರ; ಹೊಕ್ಕುಬಳಕೆ :** ಸೋಮದತ್ತೆಯೆಂಬೊಳ್ ತನ್ನೊಂದು ಸಲ್ಗೆ[ಪಾಠಾಂ. ಲುಗೆ]ಯಿಂದಮುಟಲಿಂದಂ ವಾಯುಭೂತಿಯನಿಂತೆಂದಳ್ (ವಡ್ಡಾರಾ. ೮-೮); ಕನಲ್ಕೆಯುಂ ಕೊನರಲೀಯದೆ ಸಲ್ಗೆಯುಂ ಸೊಪ್ಪಾಗಲೀಯದೆ (ಲೀಲಾವ. ೧೪-೯೬ ವ); ಊಟಿಗಕ್ಕೆ ನಡೆವಾತಂ ಸಲ್ಗೆಯುಂ ಪೇಟಂ (ಸೂಕ್ತಿಸು. ೮-೩೬೯). ೨. **ಸ್ನೇಹ; ಗೆಳೆತನ:** ಸಲ್ಗೆಯೊಳಲ್ಲಿಯ ಕೋಡುಂಗಲ್ಗಳ ಪೇಚರತೆವಡೆದು ಪಾಜುವ ತೆಜದಿಂ ಮಲ್ಲಾಳಿಯಲೆಯೆ ಬಿಳಿಯ ಮುಗಿಲ್ಗಳ್ ಪಾಜುವುವು ಖಚರಗಿರಿವನತಟದೊಳ್ (ಅರ್ಧನೇ. ೨-೭೩). ೩. **ಪ್ರೀತಿ; ಮೆಚ್ಚುಗೆ:** ಸ್ಮರಚಕ್ರೇಶನ ಸಲ್ಗೆಯ ಮದವತ್ಕ್ಸಾಯಿತೆಯೆಯ್ದಿದಳು (ಜಯಸಾ. ೫-೫೧); ಕಟ್ಟಕಡೆಯೊಳ್ ಸಲ್ಗೆಯ ಸುರಭಿ ರಾಯನ ಭಕ್ತಿಗೊಲ್ದು . . . ಪರಸಿ (ರಾಮಾಶ್ವ. ೧೦೭-೨೭). ೪. **ನಡವಳಿಕೆ; ವರ್ತನೆ:** ತನ್ನ ತಮ್ಮನ ಸ್ಮೆರಣೆಯ ಸಲ್ಗೆಯುಂ ಜವಲೆಯೊಲವಿನ ಗುಣಂಗಳಂ ನೆನೆನೆನೆದು (ವರ್ಧಪು. ೯-೬೬ ವ). **ಸಲಿಗೆ$_1$** : ೧. ಬಲ್ಲಿದನಾದನು ಬಾದುರ ನಮಗಿನ್ನಿಲ್ಲ ಸಲಿಗೆ ರಾಯನೊಳು (ಕುರಾಸಾಂ. ೧೮-೧೦೩); ದೇವಯಾನಿಯು ಆ ಬಾಲಕರಿಗೆ ಅರಸನಲ್ಲಿರುವ ಸಲಿಗೆಯನ್ನು ಕಂಡು ಅವರು ಆತನ ಮಕ್ಕಳೇ ಎಂದು ನಿಶ್ಚೈಸಿದಳು (ಕೃವಾಳ. ೧೩೦); ಸಲಿಗೆ ಕೊಟ್ಟ ನಾಯಿ ಸಟ್ಟುಗ ನೆಕ್ಕಿತು (ಗಾದೆ). ೨. ಅವನು ದೇವರೊಡನೆ ಸಲಿಗೆ ಸಲ್ಲಾಪಗಳನ್ನೂ ಆಡುವನು (ಕನ್ನಜಾ. ೫). ೩. ಸಲಿ[ಪಾಠಾಂ. ಲು]ಗೆಯಿಂ ಪಾರ್ಶ್ವೇಶ್ವರಂ ಬಂದಂ' (ಪಾರ್ಶ್ವಪು. ೧೬-೧೬೬); ವಠಾರದ ಎಲ್ಲ ಮಕ್ಕಳಿಗೂ ರಾಯರ ಮೇಲೆ ಅಪಾರ ಸಲಿಗೆ (ಕಂಬಹು. ೧೨೧). ೪. ಹರನ ಸಾಹಸಕ್ಕಂಜದೆ ಪಲವಗಲು ಮುಪ್ಪುರ ಪಡಿಬರಿಸಿ ಪೊರಿದುದು ಪುರದೊಳಗಿರ್ಪ ಪುಣ್ಯಾಂಗನೆಯರ ಸಚ್ಚರಿತದ ಸಲಿಗೆಯಿಂದೈಸೆ (ಹದಿಬ. ೨-೪೮). ೫. **ಅತಿಸ್ನೇಹದಿಂದುಂಟಾಗುವ ಧಾರ್ಷ್ಟ್ಯ, — ದಿಟ್ಟತನ:** ಖಿಲ್ಲನಾಗಿಂತ ನವಸರವಾದಲ್ಲಿ ಗುಡಿಯೊಳು ಹೊಗುವ ಸಲಿಗೆಯದೆಲ್ಲಿಯದು (ಬಸವಪು. ೪೩-೪೦); ಅಂಜನಾಸುತ ತನ್ನ ಸಲಿ[ಪಾಠಾಂ. ಲು]ಗೆಯ ಮಾತ ಸಲಿಸುವೊಡೆ ಅಂಜದೆಂಬೆನು (ಕುವ್ಯಾಅ. ೧೦-೩೧). ೬. **ಯೋಗ್ಯತೆ; ಅರ್ಹತೆ:** ಅವರವರ ಸಲಿಗೆ ಸಾಮಿಪ್ಯವನಜಿತವರವರ ತಾರತಮ್ಯವನಜಿದುತ್ಸವದಿಂ ಬೀಳ್ಕೊಟ್ಟಂ ದಿವಿಜಾದಿಗಳಂ ಬಳಿಕ್ಕೆ ಗುರುವಿಶ್ಲೇಶಂ (ವೀರವಿ. ೯-೮೭). ೭. **ಬೇಡಿಕೆ; ಕೋರಿಕೆ; ಅಪೇಕ್ಷೆ:** ಛಲವನಿಳಿಯದ ಭಾಷೆ ಭಕ್ತರ ಸಲಿಗೆಯಂ ಸಲಿಸುವುದು ಭಾಷೆ . . . ಭಕ್ತರುಗಳಿಗೆ ಗೆಲವಂ ಕೊಟ್ಟು ತಾ ಶರಣೆಂಬುದದು ಭಾಷೆ (ಬಸಪು. ೬-೩); ಸಲಿಗೆಯೊಂದನು ಸಲಿಸಬೇಕೆಂದಲಘು ಭುಜಬಲ ಭೀಮಸೇನಂಗೊಲಿದು ವರವನು ಕೊಟ್ಟರಿ (ಕೋಗಯ. ೧೮-೩೩). **ಸಲುಗೆ** : ೧. ಸೇವಕಂ ಮೊದಲೊಳರಸಂಗಂ ತದನಂತರಂ ಪ್ರಧಾನರ್ಗಂ ಅರಸಿನ ಮಿತ್ರರ್ಗಂ ಸಲುಗೆಯನುಳ್ಳವರ್ಗಂ ಧೂರ್ತಜನಕ್ಕಂ ಭೀತನಾಗಿರಲ್ವೇೞ್ಕುಂ (ಪಂಚತಂ. ೫೨-೧೭); ಸುರೇಂದ್ರನ ಸಜಗು ಸೋಂಕುವ ಸಲುಗೆಯುಂಟೇ ಮರ್ತ್ಯಜಾತಿಯಲಿ (ಕುವ್ಯಾಅ. ೧೧-೧೭); ನನಗೆ ಇವನ ಪರಿಚಯವಿದ್ದಿತಾದ್ದರಿಂದ ಸಲುಗೆಯೊಂದಿಗೆ ಮಾತುಕತೆ ಆರಂಭವಾಯಿತು (ಹಸುಹೂ. ೨೨೫). ೨. ಗಾಡಿಕಾತಿಯರಾಗಿ ವಿಟಲಕ್ಷಣಂ ಮನದ ಪಾಡಜಿಯ ಲೆಂದೆವದಜಿಂ ಸಲುಗೆ ಶಂಕಿಸದೆ ನೀಡಿದೊಡೆ ಕೀರ್ತಿ (ಹಚಸಾ. ೭-೧೨); ಕುಬೇರಪ್ರಿಯನಾ ಪ್ರಭುಶಕ್ತಿಯುಮನರಸನೊಳಾದ ಸಲುಗೆಯುಮಂ ಕಂಡು ಮತ್ಸರಂ ಪುಟ್ಟಿ (ಪುಣ್ಯಾಸ್ರ. ೭-೮ ವ); ಪರರ ಒಳಗುಹೊಜಗನಜಿದೊಯ್ಯನೆ ಕೆಲಬರು ಸಲುಗೆವುಳ್ಳವರು ನುಡಿವರು (ಭರಚ. ೧-೬೨). ೩. ಸಲುಗೆಗೆ ಸಾಮ್ಯಕ್ಕೆಕ್ಕೆಗೆ

ಪಲರಕ್ಕೆಮ ಸತಿಯರ್ (ಎಕ. VIII, ನಗರ. ೪೭-೮೩; 1062); ಆ ಜಂಗಮವೆ ದಿಟಕ್ಕೆನ್ನ ಮನೆಗೆ ಬಂದಡೆ ಕೂಡಲಸಂಗಮದೇವರಲ್ಲಿ ಸಲುಗೆಯ ವರವ ಹಡೆವೆನು ಕಾಣಾ (ಶೂನ್ಯಸಂ. ೮೨-೩೨); ಎನ್ನ ದೇಹದಲಿ ಒಲಿದು ನೀನಿರೆ ನಿನ್ನ ಸಲುಗೆಯ ಬಲುಮೆಯಲಿ ಬರಸೆಳೆವೆ ಮುಕುತಿಯ ಲಲನೆಯನು (ಹರಿಸಾ. ೫೯). ೪. ಗಳಹದಿರು ರಾಧೇಯ ನಿನ್ನಯ ಕುಲವ ನೋಡದೆ ಮೀರೆದಪ್ಪುವ ಸಲುಗೆಯಿದಲೇ (ಕುಮಾಭೀ. ೧-೩೯). ೫. ಸಲುಗೆಯೊಳಿಂದೆನ್ನಸೆ ಬೞಿದಿಲ್ಲದುದೆಲ್ಲಮನುಂಟುಮಾಡಿ ನೀಂ ಸುಲಭತೆಯಿಂ ತೊದಲ್ನುಡಿಯನಾಲಿಸುವಲ್ಲಿ ವಿನೋದಶೀಲನೆಂದಲಸದೆ (ಶತಕ. ೧೬೪-೩೨). ೬. ಅವರವರ ಸ್ವಸ್ಥಾನಂಗಳ ಸಲುಗೆಯನೞಿದು ಬಿಡುತ್ತಿದ್ದೆ ಕೂಡಲಸಂಗಮದೇವರಲ್ಲಿ ಬಸವಣ್ಣನ ಕಾಲ ವೇಳೆಯನೞಿದು (ಸರ್ವವ. ೮೧-೪೫೩). ೭. ಸಲಿಸಿದವನೋ ಮುನ್ನ ನೀನೆನ್ನವರ ಸಲು[ಪಾಠಾಂ. ಲಿ]ಗೆಗಳ (ಬಸಪು. ೪೦-೪೦); ಕೊಂದನಿಬ್ಬರ ಸೌಬಲರ ನೃಪನಂದನರ ಗಾಂಧಾರರೊಂದೆರಡೆಂದು ಸಲುಗೆಗೆ ಸಲಿಸಿ ಬಂದೈನೂಱ ಬೞಿಕ್ಕೆದು (ಕುಮಾದ್ರೋ. ೩-೭೮). ೮. ಚಲನೆ; ಗತಿ: ಕಲಿಯ ರಾಜ್ಯದಲೊಂದು ಪಾದದ ಸಲುಗೆ ಧರ್ಮಕ್ಕಹುದು (ಕುಮಾಆ. ೧೪-೩೮).

**ಸಲುಗೆಗಳ ಸಾವಂತ** = ಅತಿಯಾದ ಹೊಕ್ಕುಬಳಕೆಯ ವ್ಯಕ್ತಿ; ಅತಿಶಯವಾದ ಸಲಿಗೆಯ ಮನುಷ್ಯ; ''ನಾರದಋಷಿ'' (ಪ್ರಭಣ್ಣ) : ಸಮಯಾ ಸಮಯ ನಟ್ಟಿರುಳು ಹಗಲೆಂಬ ನೇಮವಿಲ್ಲದೆ ಭವನ ಕಟ್ಟಿದಿರೊಳ್ಕೆತಂದು ನಿಂದನಪ್ರತಿಮಮುನಿ ಸಲು[ಪಾಠಾಂ. ಲಿ]ಗೆಗಳ ಸಾವಂತನು (ಸೋಮಚ. ೧-೩೪).

[ಸಲ್ + -ಗೆ./ ತಮಿ. ಚಲಿಕ್ಕೈ; ತುಳು. ಸಲಿಗೆ./ ಮರಾ. ಸಲಗೀ]

**ಸಲ್ಗೆದೋಱು** (ಕ್ರಿ). ಪ್ರೀತಿಯನ್ನು ತೋರಿಸು ; ವಿಶ್ವಾಸವನ್ನು ಪ್ರಕಟಿಸು: ಈಕೆಯುಮನಗೆರಡೞಿಯದ ನಲ್ಲಮನಂದೋಱುವುದು ಸಲ್ಗೆದೋಱುವುದುಮಾವುದು ದೋಸಂ (ಪಂಪಭಾ. ೫-೧೭ ವ). [ಸಲ್ಗೆ + ತೋಱು]

**ಸಲ್ಗೆನುಡಿ** (ಕ್ರಿ). ಸದರದಿಂದ ಮಾತನ್ನಾಡು; ಸಲಿಗೆಯಿಂದ ಹೇಳು: ಸಲ್ಗೆ[ಪಾಠಾಂ. ಲ್ಕೆ]ನುಡಿಯಲ್ವೇೞ್ಪುತ್ತಿದಂ ವಿಶ್ವಲೋಕದಯಾವಲ್ಲಭ ಕೇಳ್ದು ಮನ್ನಿಸು ಮದೀಯಸ್ವಾಂತಿಕೋದಂತಮಂ (ಅನಂಪು. ೬-೩೨). [ಸಲ್ಗೆ + ನುಡಿ$_1$]

**ಸಲ್ಗೆವಂತ**, ಸಲಿಗೆವಂತ, ಸಲುಗೆವಂತ (ನಾ). ಹೊಕ್ಕುಬಳಕೆಯ ವ್ಯಕ್ತಿ; ಸಲಿಗೆಯುಳ್ಳವನು: ತಂದೆತಾಯಿಗಳರಸಿಗತಿಸಲ್ಗೆ[ಪಾಠಾಂ. ಲಿಗೆ]ವಂತರೆಂಬೊಂದು ದಲ್ಲಾಳಿತನದಿಂ . . . ಎಮ್ಮ ತಲೆಗೆ ಹಱಲೆಯ ತರ್ಪುದುಚಿತವೇ (ಸಮ್ಯಕೌ. ೧೦-೩). **ಸಲಿಗೆವಂತ** : ಲಿಂಗಾರ್ಚನೆಯ ಮಾಡುವ ಮಹಿಮರೆಲ್ಲರೂ ಸಲಿಗೆವಂತರಾಗಿ ಒಳಗೆ ಐದಾರೆ ಏಕಾಂತಸಂಬಂಧರು ಹೋಗಿ (ಬಸವ. ೯೩೩); ಬಹುಜನರುಗಳೆಲ್ಲಾ ಓಲಗವಿಲ್ಲ ಹೋಗಿ ಸಲಿಗೆವಂತರೆಲ್ಲಿಲ್ಲಿ ನಿಲ್ಲಿ (ಸರ್ವವ. ೮೧-೪೫೩). **ಸಲುಗೆವಂತ** : ಹೊಗುವಡನಿಲಜ ಸಲುಗೆವಂತನು ಮಗನೆ ಸೇರುವುದವನ ಹೊಗಳದು (ಕೌಶಿರಾ. ೧೪-೪೦); ನಿನಗೆಯರ್ಹದ್ದಾಸ ಕಡುಸಲುಗೆವಂತನದೞಿಂದವಳನಿಂತು ಮೊಗಗೆಡಿಸುವುದು ಮತವಲ್ಲ (ಸಮ್ಯಕೌ. ೧೨-೧೨). [ಸಲ್ಗೆ + -ವಂತ]

**ಸಲ್ಗೆವಡೆ**, ಸಲುಗೆವಡೆ (ಕ್ರಿ). ೧. ಸಲಿಗೆಯನ್ನು ಹೊಂದು; ಸದರವನ್ನು ಪಡೆ: ಕರ್ಪೂರ . . . ಕ್ಷೋಣಿಭಮೆಂಬಿವಱಿಂ ಭೂಭುಜನೊಪ್ಪಿದಂ ಮೞಿವ ಪೌರಶ್ರೀಯನಿಂತೆಂದು ಬಿನ್ನವಿಸಲ್ ಚಂದ್ರಿಕೆ ಬಂದು ಸಲ್ಗೆವಡೆದೊಲ್ದಾಲಿಂಗನಂ ಗೈದವೋಲ್ (ಅನಂಪು. ೭-೯೦). **ಸಲುಗೆವಡೆ** : ೨. ದಯೆಯಿಂದ ಕೂಡು; ಕರುಣೆಯನ್ನು ಹೊಂದು: ಇಳಿದುದವನಿಯ ಭಾರವು . . . ದೇವರು ಸಲುಗೆವಡೆದಿಚ್ಛಾಕೃತಿಯಲವತರಿಸಿದುದೞಿಂದ (ನಿಭಾಗ. ೧೦-೩-೨೪). [ಸಲ್ಗೆ + ಪಡೆ$_1$]

**ಸಲ್ಗೆವೆರಸು$_1$** (ಕ್ರಿ). ಸಲಿಗೆಯಿಂದ ಕೂಡಿರು; ಸ್ನೇಹದಿಂದ ಕೂಡಿರು: ಸಲ್ಗೆವೆರಸಿದ ತನ್ನ ನಣ್ಪಿನೊಟ್ಟಜೆಯಂ ತೋಱೆ ವಜ್ರದಂತಚಕ್ರವರ್ತಿ ವಜ್ರಬಾಹು ಮಹೀಪತಿಯಂ ಕರೆದು (ಆದಿಪು. ೪-೫೨ ವ).

[ಸಲ್ಗೆ + ಬೆರಸು$_1$ (< ಬೆರೆಯಿಸು)]

**ಸಲ್ಗೆವೆರಸು$_2$** (ಅ). ಸಲಿಗೆಯಿಂದ ಕೂಡಿ; ಸ್ನೇಹದೊಡನೆ : ವಿನಯದಿನಮಿ ಭುವನೈಕನಾಥನಂ ಸಲ್ಗೆ[ಪಾಠಾಂ. ಲುಗೆ]ವೆರಸು ಬೇಡುತ್ತಿರೆ (ಆದಿಪು. ೯-೧೦೬).

[ಸಲ್ಗೆ + ಬೆರಸು$_1$]

**ಸಲ್ಮೆ** (ನಾ). ಸಂದಾಯ; ಸಲ್ಲುವುದು; ಸಲ್ಲಿಕೆ: ಜೊನ್ನದ ಸೊದೆಯನು ಕರೆಯಲಿ ಪೆರೆಯು ಇಂದು ಮಹೇಂದ್ರಂಗಪ್ಪ ನಲ್ಮೆಗೆ ಜಗಮೆ ನಗಲಿ ನನಗಪ್ಪ ಸಲ್ಮೆಗೆ! (ಅಹಲ್ಯ. ೩೯-೨೩). [ಸಲ್ + -ಮೆ$_1$]

**ಸಲ್ಲ** 'ಸಲ್' ಪರಾ.

**ಸಲ್ಲಕಿ** (ನಾ). ಒಂದು ಬಗೆಯ ಮರ; ತದಕು; ಆನೆಬೇಲ: ಸೈನ್ಯದಂತಿ ಕರೋಚ್ಚಾಟಿತ ಸಲ್ಲಕೀಕಿಸಲಯಂ (ಆದಿಪು. ೧೩-೫೫); ತವೆ ಮುಂ ತಿಂದು ನಿದಾಘಸಲ್ಲಕಿಯಂ . . . ಗರ್ಜಿಸಿದತ್ತಗಲ್ದಿನಿಯರಂ ಕಾರೆಂಬ ಮಾರದ್ವಿಪಂ (ಜಗವಿ. ೪-೨೨). [ಸಂ. ಸಲ್ಲಕಿ, ಸಲ್ಲಕೀ]

**ಸಲ್ಲಕ್ಷಣ** (ನಾ). ಒಳ್ಳೆಯ ಲಕ್ಷಣ: ಸಲ್ಲಕ್ಷಣಗುಣನಿಧಿಗಳ್ ಪಲ್ಲಣಂಗಟ್ಟಿ ಬಂದಿರ್ದುವು (ಪುಷ್ಪಪು. ೫-೧೦). [ಸಂ.]

**ಸಲ್ಲಗಳೆ** 'ಸಲ್' ಪರಾ.

**ಸಲ್ಲಗೆ** 'ಸೊಲ್ಲಗೆ$_1$' ನೋ.

**ಸಲ್ಲಗೆಡ್ಡೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಗಡ್ಡೆ: (ಮೈಶಿಗಿ. ೧೦-೧೭೭). [< ಸಲ್ಲ$_1$? + ಗಡ್ಡೆ (< ಗಡ್ಡೆ)]

**ಸಲ್ಲಣೆ** (ನಾ). (?) : ಕಾಂಚನಾEನಾಂEಬರನೆಂದ ಸರ್ವಮೋಹಿನಿಮಾರ ಪಂಜೆ ಸಲ್ಲಣೆಗಳ ಪ್ರಯೋಗಮಂ ಗೈದೊಡೆ (ನವಮೋ. ೪-೧೬). [?]

**ಸಲ್ಲಪನ** (ನಾ). ೧. ಸರಸವಾದ ಮಾತುಕತೆ; ಸಲ್ಲಾಪ: 'ಸಲ್ಲಪಿಸು' ಪರಾ. ೨. (?) : ಚಿತ್ತದಿಂದಾದ ವಿಷಯವನು ಸಲ್ಲಪನನೇ ಕೂಡಿತಂದು ನಿಜತೇಜಸ್ಸಹಸ್ರಪದಿಯೇ ಬ್ರಹ್ಮಾಗ್ನಿಯಲ್ಲಿಕ್ಕುವುದು (ವೀಶೈಪು. ೫-೧೮-೧೯). [< ಸಂ. ಸಂಲಪನ]

**ಸಲ್ಲಪಿಸು** (ಕ್ರಿ). ಸರಸವಾಗಿ ಮಾತುಕತೆಯಾಡು; ಸರಸಸಂಭಾಷಣೆ ನಡೆಸು: ನೀವೆಲ್ಲ ಮೆಲ್ಲುತ್ತ ಸಲ್ಲಪಿಸುವಿರಾದರೆ ನಮಗದೇ ನೆಮ್ಮದಿ (ಸವತಿ. ೨೯೦).

[ಸಲ್ಲಪನ + -ಇಸು$_3$]

**ಸಲ್ಲಲಿತ** (ಗು). ೧. ಚೆಲುವಾದ; ಸುಂದರವಾದ: ಎಲ್ಲಿತ್ತೊ ಗೀತವಾದ್ಯ ಸಲ್ಲಲಿತವಧೂಜನಪ್ರವೃತ್ತಂ ನೃತ್ತಂ (ಗದಾಯು. ೫-೪೩). ೨. ಹಿತವಾದ; ಇಂಪಾದ: ಕುಸುಮಗಂಧಿ ಸಲ್ಲಲಿತಕೋಕಿಲಾಲಾಪೆ (ಜೈಮಿಭಾ. ೧೮-೨೪). ೩. ಶ್ರೇಷ್ಠವಾದ; ಒಳ್ಳೆಯ : ಪದವಿಡುವೆಡೆಯೊಳ್ ಪಲ್ಲವದೊಳ್ ಪದದೊಳುಭಯಗಣ ಸಮನಾಗಲ್ ಸಲ್ಲಲಿತಕೀರ್ತಿಯಾದಪುದು (ಛಂದೋಂಬು. ೧-೪೭ ಅಡಿವದ್ಯ); ಬಸವಂ ಸಲ್ಲಲಿತ ಕಾಮಿತಫಲಂಗಳನಿತ್ತು (ಬಸಪು. ೯-೧೯). (ನಾ). ೪. ಅಂದ; ಚೆಲುವು: ಶಿವತತ್ವಾದಿಗುಣನಿಚಯಸಲ್ಲಲಿತವಾದವಯವಂಗಳವಿಲ್ಲದಿರವಂ ಮಾಡಿ (ಬಸಪು. ೩೯-೧೩); ತಲ್ಲಕ್ಷಣಂಗಳಿಂ ಸಲ್ಲಲಿತಮಾದ ಹಯಮಿಲ್ಲಿ ವಿಧಿವಶದಿಂದಮಿಲ್ಲದಿರ್ದೊಡೆ ಧರಾವಲ್ಲಭನ ರಂಜಿಸುವ ಮೆಲ್ಲಡಿಗಳಂ ಕಾಣಬಲ್ಲೆನೆ (ಜೈಮಿಭಾ. ೪-೫).

[< ಸಂ. ಸಂಲಲಿತ]

**ಸಲ್ಲಲಿತಾಂಗ** (ನಾ). ಚೆಲುವಾದ ಅವಯವ; ಸುಂದರವಾದ ಅಂಗ: ಮಲ್ಲಿಗೆಯಂ ನಗೆಯಿಂ . . . ತೋರ್ಪರ್ ಸಲ್ಲಲಿತಾಂಗದ ಲತಾಂಗಿಯರ್ ಮಾನಿನಿಯರ್ (ಜಗವಿ. ೨-೨೮). [ಸಲ್ಲಲಿತ + ಅಂಗ$_2$]

**ಸಲ್ಲಲಿತಾಂಗಿ** (ನಾ). ಚೆಲುವಾದ ಅಂಗಗಳನ್ನುಳ್ಳವಳು; ಸುಂದರಿ: ಸಲ್ಲಲಿತಾಂಗಿಯ . . . ತಳ್ಪಿಲ್ಲದೆ ನೋೞ್ಪೊಡೆ ಚೋದ್ಯಂ ಚೆಲ್ವಂ ಬೀಱುವ ಪೊಲಿರ್ದುವವಯವವನಿತುಂ (ಧರ್ಮಾಮೃ. ೧೩-೧೧೨); ಸಲ್ಲಲಿತಾಂಗಿ ಭೂಷಣಮಣಿ ದ್ಯುತಿಯಿಂ . . . ನಡೆತಂದಳ್ (ಜಗವಿ. ೧೦-೮೩). [ಸಲ್ಲಲಿತಾಂಗ + -ಇ$_2$]

**ಸಲ್ಲವಿಡು** 'ಸಲ್' ಪರಾ.

**ಸಲ್ಲಾ** 'ಸಲಹೆ' ನೋ.

**ಸಲ್ಲಾಗಾರ** 'ಸಲಹೆಗಾರ' ನೋ.

**ಸಲ್ಲಾಪ** (ನಾ). ಪರಸ್ಪರ ಸರಸವಾಗಿ ಆಡುವ ಮಾತುಕತೆ; ಸರಸಸಂಭಾಷಣೆ: ''ಪರಸ್ಪರಾಲಾಪಮಕ್ಕುಮದು ಸಲ್ಲಾಪಂ'' (ವಸ್ತುಕೋ. ೭೯-೨೯); ಶಶಿವದನೆಯೊರೆವುತ್ತಿಪ್ಪ ಸಲ್ಲಾಪಂಗಳಾತಂಗೆ ಉರಿಯೊಳಾಜ್ಯವನೆಱೆದೊಡಂತುಬ್ಬರಿಸಿ (ಬಸಪು. ೪೫-೧); ಹೆಂಡತಿಯೊಡನೆ ಸರಸವಿಲ್ಲ; ಸಲ್ಲಾಪವಿಲ್ಲ (ಬೆಟ್ಟಹೂ. ೧೧೩). [< ಸಂ. ಸಂಲಾಪ]

**ಸಲ್ಲಾಪಿಸು** (ಕ್ರಿ). ಸ್ನೇಹದಿಂದ ಮಾತುಕತೆಯಾಡು, — ಸಂಭಾಷಿಸು: ಮಾಚಿಕಬ್ಬೆ . . . ಒಂದುದಿನ ಮಗಳೊಡನೆ ಸಂತೋಷದಿಂದ ಸಲ್ಲಾಪಿಸುತ್ತ 'ನೀನ್ಯಾರನ್ನು ಮದುವೆಯಾಗಲಿಚ್ಛಿಸುವೆ ?' ಎಂದು ಕೇಳಿದರು (ಶಾಂತಲಾ. ೧೧). [ಸಲ್ಲಾಪ + -ಇಸು$_3$]

**ಸಲ್ಲಾಮ್** 'ಸಲಾಮು' ನೋ.

**ಸಲ್ಲಾಮು** 'ಸಲಾಮು' ನೋ.

**ಸಲ್ಲಾಮುಗ್ಗೆ** (ಕ್ರಿ). ನಮಸ್ಕರಿಸು; ಸಲಾಮುಮಾಡು: ಸುರತಾಳನೋಲಗ ಶಾಲೆಗೈತಂದರು ದೊರೆಗಳು ಸಲ್ಲಾಮುಗ್ಗೈದು (ಕರ್ನಾಕ. ೨೨೮). [ಸಲ್ಲಾಮು (< ಸಲಾಮು) + ಕ್ಕೆ$_1$ (< ಕೆಯ್$_1$)]

**ಸಲ್ಲಿಕೆ** 'ಸಲಿಕೆ$_1$' ನೋ.

**ಸಲ್ಲಿಕೆಚೀಟಿ** (ನಾ). ಪಾವತಿಪತ್ರ; ರಶೀದಿ : ಅವರಿಗೆ ಹಣವನ್ನು ಕೊಟ್ಟು ಸಲ್ಲಿಕೆಚೀಟಿಯನ್ನು ತೆಗೆದುಕೊ (ರೂಢಿ). [ಸಲ್ಲಿಕೆ (< ಸಲಿಕೆ$_1$) + ಚೀಟಿ$_2$ (< ಚೀಟು$_2$)]

**ಸಲ್ಲಿಡು** 'ಸಲ್' ಪರಾ.

**ಸಲ್ಲಿಸು** 'ಸಲಿಸು' ನೋ.

**ಸಲ್ಲೀಲೆ** (ನಾ). ೧. ಸರಸ; ವಿನೋದ : ಅಲ್ಲಿ ಮುನ್ನವೆ ಪುಗದೆ ಎಲ್ಲ ಭೋಗಂಗಳಂ ಸಲ್ಲೀಲೆಯಿಂ ತೀರ್ಚಿ ಸುಖದ ಸಂದಣಿಗಳಂ ಬಳಿಕ ಬಂದಲ್ಲಿ ಪುಗೆ (ಸಂಬರ. ೧-೮೪); ಪ್ರೌಢವತಿ ಸಲ್ಲೀಲೆಯಿಂ ಗುರುಭಕ್ತಿಯಾಂಡಾರಿಯನಹಗೆ ನೋಡಿ (ಬಸಪು. ೪೦-೮೭). ೨. ಸಂತೋಷ ; ಹಿಗ್ಗು; ಆನಂದ : ಶಿಶುವಿರೆ ನೋಡಿಕೊಂಡು ಸಲ್ಲೀಲೆಯಿಂದಾ ಖಳಂಗೀವೆನೆನುತಗಜೆಯಂ ಕೂಡಿ ನಡೆತರುತಿರ್ದನು (ಚಬಪು. ೪೭-೨); ಇಳಾಧಿನಾಯಕಂ . . . ಮೃಗೇಂದ್ರವಿಷ್ಟರೋಪವಿಷ್ಟನಾಗಿ ಸಲ್ಲೀಲೆಯಿಂ ಮೆಲ್ಲನೆ ಕುಳ್ಳಿರ್ದು (ರಾಜಶೇ. ೧೨-೪೧ ವ). ೩. ಸೊಗಸು; ಚೆಲುವು : ನಲ್ಲಂಬಿಂದಿಸೆ ಪುಷ್ಪಬಾಣನೆರ್ದೆಯಂ ಬೆಂಬಿಟ್ಟು ಬೆಳ್ಳಾಗಿ ತಕ್ಕಲ್ಲಂ ಕೆಟ್ಟೆರ್ದೆಗಟ್ಟು ಜಂಗಮಲತಾಸಲ್ಲೀಲೆಯರ್ ಬಾಲೆಯರ್ ಚೆಲ್ಲಂ ಬೇಂಟದ ತೋಟಿಯೊಳ್ ತೊಡರೆ (ಕಾವ್ಯಸಾ. ೫೫೧ ಶೂದ್ರಕ). [< ಸಂ. ಸಂಲೀಲಾ]

**ಸಲ್ಲು** 'ಸಲ್' ನೋ.

**ಸಲ್ಲುವಳಿ** 'ಸಲ್ವಳಿ' ನೋ.

**ಸಲ್ಲೆ$_1$** 'ಶಲ್ಯ$_1$' ನೋ.

**ಸಲ್ಲೆ$_2$** 'ಸರ್ಲೆ' ನೋ.

**ಸಲ್ಲೆ$_3$** 'ಸಲಹೆ' ನೋ.

**ಸಲ್ಲೆಯ** 'ಸೆಲ್ಲಹ' ನೋ.

**ಸಲ್ಲೆವಿಕ್ಕು** (ಕ್ರಿ). (ಯುದ್ಧಕ್ಕೆ ಹೊರಡುವ ಸೂಚನೆಯಾಗಿ) ವಸ್ತ್ರವನ್ನು ಬೀಸಿ ಬೀಳ್ಕೊಡು : ಸಲ್ಲೆವಿಕ್ಕಿ ಬಿರುದಿನ ಭಟರ್ಕೆನೂರ್ವರ ಬೀಳ್ಕೊಟ್ಟ ತ್ವರಿತದೊಳಾ ನಾಗತನಯ (ನಾಗಕು. ೧೮-೯೭). [ಸಲ್ಲೆ$_1$ (< ಶಲ್ಯ$_1$) + ಇಕ್ಕು]

**ಸಲ್ಲೆಹ** 'ಸೆಲ್ಲಹ' ನೋ.

**ಸಲ್ಲೇಖ** (ನಾ). [ಜೈನ] ಸಾಯುವವರೆಗೆ ಉಪವಾಸವನ್ನು ಕೈಗೊಳ್ಳುವ ಒಂದು ಬಗೆಯ ವ್ರತ; ಅನಶನವ್ರತದಿಂದ ದೇಹತ್ಯಾಗ ಮಾಡುವ ಒಂದು ವಿಧಿ : ಧರ್ಮದ ಚಾರುಮಹಿಮೆಯ ಪೇಳ್ದ ಮುನಿಗಳ ಕಾರುಣದಿ ಕೈಕೊಂಡು ದೀಕ್ಷೆಯ ಗೈದು ಸಲ್ಲೇಖ (ಬಿಜ್ಜಪು. ೯೦-೬೪). [ಸಂ. ಸಲ್ಲೇಖಾ./ ಪ್ರಾ. ಸಂಲೇಹಾ]

**ಸಲ್ಲೇಖನ** (ನಾ). = ಸಲ್ಲೇಖ : ಗಂಗರಾಜರು ಸಲ್ಲೇಖನವನ್ನು ಕೈಗೊಂಡು . . . ಪಂಚಪದಗಳನ್ನು ಧ್ಯಾನಿಸುತ್ತ ಇಹವನ್ನು ಮರೆತರು (ಶಾಂತಲಾ. ೧೮೮); ಸಲ್ಲೇಖನವೆಂದರೆ ಸಾಯುವವರೆಗೆ ನಿರಶನವ್ರತವನ್ನು ಕೈಕೊಳ್ಳುವುದು (ಭಾರದ. ೧೮೫). [ಸಂ./ ಪ್ರಾ. ಸಂಲೇಹಣಾ]

**ಸಲ್ಲೇಖನವಿಧಿ** (ನಾ). [ಜೈನ] ಸಲ್ಲೇಖನವೆಂಬ ವ್ರತ, — ಕಟ್ಟಳೆ : ಸಲ್ಲೇಖನ ವಿಧಿಯಿಂ ಸಮಾಧಿಯ ಪಡೆದು ಸ್ವರ್ಗಪ್ರಾಪ್ತೆಯಾದಳು (ಎಕ. II, ೩೮೯-೧೬; 1213); ಸಲ್ಲೇಖನವಿಧಿಯಿಂದ ಮುಡಿಪಿದವರ ಸ್ಮಾರಕಗಳಿಗೆ ನಿಸಿದಿಗಲ್ಲುಗಳೆನ್ನುವರು (ಸಾಹಿಸ. ೧೨). [ಸಂ.]

**ಸಲ್ಲೇಖನವ್ರತ** (ನಾ). = ಸಲ್ಲೇಖನವಿಧಿ : ಅತ್ತೆಯವರು ಶ್ರವಣಬೆಳುಗೊಳಕ್ಕೆ ಹೋದನಂತರ ಸಲ್ಲೇಖನವ್ರತವನ್ನು ಆರಂಭಿಸಿದುದೂ . . . ತಿಳಿಯಿತು (ಶಾಂತಲಾ. ೩೮೩). [ಸಂ.]

**ಸಲ್ಲೇಖನೆ** (ನಾ). = ಸಲ್ಲೇಖ : ಕೃತಮಿತ್ರಪ್ರಣಯಂ ಜೀವಿತಮರಣಾಶಂಸೆ ವಿಭವಸೌಖ್ಯನಿದಾನಂ ವ್ಯತಿಪಾತಮಕ್ಕುಮತ್ಯೂರ್ಜಿತಮಾಗುತ್ತಿರ್ದ ಚರಮಸಲ್ಲೇಖನೆಯೊಳ್ (ಸುಕುಮಾ. ೬-೩೯); ಸಲ್ಲೇಖನಾಸಮ್ಪದದಿನ್ದಂ ದೇವಿ ಪೋಚಾಮ್ಬಿಕೆ ಸುರಪದಮಂ ಲೀಲೆಯಿಂ ಸೂಱೆಗೊಂಡಳ್ (ಎಕ. II, ೧೧೮-೩೨; 1120); ಸರ್ವಾವಸಾನದೊಳ್ ಉಪವಾಸಮಂ ಮಾಡಿ . . . ಶರೀರತ್ಯಾಗಂಗೆಯ್ವುದು ಸಲ್ಲೇಖನೆಯೆಂಬುದು (ತತ್ತ್ವಪ್ರ. ೨೭೯). [ಸಂ. ಸಲ್ಲೇಖನ]

**ಸಲ್ವ** 'ಸಲ್' ಪರಾ.

**ಸಲ್ವಳಿ, ಸಲುವಳಿ, ಸಲ್ಲುವಳಿ** (ನಾ). ೧. ಸಲ್ಲುವುದು; ಸಂದಾಯ: ನಡೆವಳಿ, ನುಡಿವಳಿ, ಸಲ್ವಳಿ (ಶಮದ. ೨೧೫ ಪ್ರಯೋ). ೨. ಹೊಂದಿಕೆ; ಸೇರಿಕೆ: ಸೇನಬೋವ ಆಚಯಸಿವಯನ್ಗಳು ಹಿಱಿಯ ಕೆಱೆಯ ಕಲ್ಲ ತುಮ್ಬನಿಕ್ಕಿದರು ಅದಕೆ ಸಲ್ವಳಿಯಾಗಿ . . . ಬಿಟ್ಟ ಗದ್ದೆ ಸಲಗೆವೊನ್ದು (ಎಕ. XVI, ಚಿಕ್ಕನಾ. ೭೦-೧೬; 1235). **ಸಲುವಳಿ:** ೧. ತೆರದ ರೂಪದಲ್ಲಿ ಸಂಬಳ, ಕಂದಾಯ, ಬಡ್ಡಿ ಮುಂತಾದ ಸಲುವಳಿಗಳ ರೂಪದಲ್ಲಿ ಹಣವು ಬಳಕೆಯಲ್ಲಿ ಬರುವುದು (ಮಾವಾದ. ೧೧೭). ೨. ಒಂಟಿಯಾಗಿದ್ದರೂ ಇರುವ ತನಕ ತನ್ನ ಸುತ್ತಿನೊಡನೆ ಸಲುವಳಿಯಾಗಿ ನಡೆದುಕೊಳ್ಳಬೇಕು (ಬಂಕಿವು. ೨೯೯). ೩. ಅನ್ವಯಿಸುವಂತಹುದು; ಅನ್ವಯ : ಸಾಮಾನ್ಯರಿಗೆ ಸಾಮಾನ್ಯವಾಗಿ ಸಲ್ಲುವ ಈ ಸತ್ಯವು ಮಹಾಜನರಿಗೆ ವಿಶೇಷವಾಗಿ ಸಲುವಳಿಯಾಗುವುದು (ಕಮಿಂಚಿ. ೪೧); ವೇದಾದಿಗಳಲ್ಲುಕ್ತವಾದುದು; ವಿಶೇಷವಾದ ಕೆಲವು ಪಂಗಡಕ್ಕೆ ಮಾತ್ರವೆ ಸಲುವಳಿಯಾಗುವುದು (ನಾಡೋಜ. ೩೫೭). ೪. ಅರ್ಪಿತವಾಗುವುದು; ಅರ್ಪಣೆ : ಆ ಪ್ರಸನ್ನಪ್ರಸಾದವನೊಳಕೊಂಡು ಉತ್ತಮೋತ್ತಮವಾಗಿ ನಿಮಗೆ ಸಲುವಳಿಯಾದುದನು ಆರು ಬಲ್ಲರಯ್ಯ (ಸಿದ್ಧೇವ. ೧೦೩-೨೦); ಮಹಾಬೆಳಗಾದ ನಿರಾಳಲಿಂಗವನ್ನು ಈ ಪೂಜೆ ಮುಟ್ಟಲಾರದು ಅದಕ್ಕೆ ಸಲುವಳಿಯಾಗುವುದು ನಿಷ್ಕಳದ ಪೂಜೆ (ಮೋಳಿಮಾ. ೧೦೬ ಪ್ರಸ್ತಾವನ). ೫. ಬಳಕೆ; ಚಲಾವಣೆ; ರೂಢಿ : ಶ್ರೀಭಂಡಾರದ ಸಲುವಳಿಯ ಪಡಿಯ ಕೊಳಗದಲೂ ದಿನ ೧ ಕಂ ತಳಿಗೆ ನಾಲ್ಕಕೆ ಅಮೃತಪಡಿ (ಎಕ. XIV, ಶ್ರೀರಂಗ. ೨೬೭-೮; 1534); ಇವು ಸಲುವಳಿಯ ಭಾಷೆಯ ಸಾಮಾನ್ಯ ನಿಯಮಗಳಿಂದ ಸಿದ್ಧಿಸುವುದಿಲ್ಲ (ಕಬಸಾ. ೧೨೨); ಪಂಡಿತರಲ್ಲಿ ಸಂಸ್ಕೃತ – ಪ್ರಾಕೃತ ಎರಡನ್ನೂ ಬಲ್ಲವರ ಸಂಖ್ಯೆ ಹೆಚ್ಚಾಗುತ್ತಿರಬೇಕು. ಅಂತೇ ಎರಡೂ ಭಾಷೆಗಳಲ್ಲಿ ಶಾಸನಗಳನ್ನು ಬರೆಯುವ ಸಲುವಳಿ ಉಂಟಾಗಿರಬೇಕು (ಕಸಾಚ. ೩೧). ೬. ಅನುಷ್ಠಾನ; ಆಚರಣೆ: ಸಲ್ಲದುದುEದ3 ಸಲುವಳಿಯ ನಡೆಸಿದರಿಲ್ಲಿ ಬಿಡೆವು (ಕೃಷ್ಣಾಕಾ. ೧೦-೫೦); ಆ ವಿಧಿಯು . . . ಯಾವ ನ್ಯಾಯಾಲಯದಲ್ಲಿಯೂ ಅದರ ಸಲುವಳಿಯ ವಿಷಯದಲ್ಲಿ ಯಾವ ಬಗೆಯ ಸಂದೇಹದ ಪ್ರಶ್ನೆಗೂ ಅವಕಾಶವಿರತಕ್ಕುದಲ್ಲ (ಭಾಧಾನ. ೧೮). ೭. ತಕ್ಕುದು; ಉಚಿತವಾದುದು: ಕೇತಕಿಯು ಶಿವಗೆ ಸಲುವಳಿಯಿಲ್ಲ (ಗುರುಚಾ. ೮-೩೧); ಪುರುಷನಡವಳಿ ನ್ಯಾಯವಾಗಲಿ ವಿವರಿಸಲು ಅನ್ಯಾಯವಾಗಲಿ ಸಲವುದದು ಸತಿಯರಿಗೆ ಸಲುವಳಿಯ (ಉತ್ತಕ. ೫೩-೨೯); ಅವನು ನಮ್ಮಲ್ಲಿ ಸಲುವಳಿಯಿಂದ ನಡೆದುಕೊಳ್ಳುತ್ತಾನೆ ಎಂದು ನಾನೇನೂ ತಿಳಿದುಕೊಂಡಿಲ್ಲ (ವಚಭಾ. ೨೪೪). ೮. ಪರಂಪರಾಗತವಾದುದು; ರೂಢಿಯಿಂದ ಬಂದುದು: ಎಸೆವ ವೇತಂಡ ಕರ್ಣರು . . . ಒಸಗೆಯಿಂದಾಸನಸ್ಥಿತರಾಗಿ ಪಂಚಾರ್ಣದೆಸಕದಿಂ ಸಲುವಳಿಯ ವೇದಮಂತ್ರಗಳಿಂ ದೇಶಿಕನುಭಯಭಾಗದಿ ಪರಮಸುಜ್ಞಾನಸಂತೋಷದಿಂ ಮಿಗೆ ಕುಳಿತು (ವಿಕೋಪು. ೮-೩೯); ಓಲೆ ಚಿನ್ನದ ನೀತಿಯಿಂದವೆ ಮೇಲೆ ಜನಿಸುವ ಭಾಗ ಭೇದಕೆ ಕಾಲಹರನೊಳಭೇದವನು ಪೇಳುವುದು ಸಲುವಳಿಯ (ಪಂಚಾಶೀ. ೫-೧೧); ಮಾರಿ ನಿಮ್ಮಾಜ್ಞೆಗಳ ನಡೆದರೆ ಧಾರುಣೀಶರ ಕಯ್ಯ ಕಪ್ಪವ ಶೌರಿಯದಿ ತಂದೊಡನೆ ಸವನನ ಮಾಡೆ ಸಲುವಳಿಯ (ಉತ್ತಕ. ೫೧-೭). **ಸಲ್ಲುವಳಿ :** ೨. ಸಲ್ಲುವಳಿ ವಧುವರರ್ ಸರಿಯಾದರೆಂದು . . . ನಲಿದರು (ನಂದಿಮಾ. ೨೦-೪). [ಸಲ್ + -ವಳಿ$_3$]

**ಸಲ್ಪು** 'ಸಲಿಸು' ನೋ.

**ಸವ₁ (ಗು).** ೧. ಜೊತೆಯ; ಜೋಡಿಯ: 'ಸವಗಾಣ', 'ಸವಗಾಣಿಕೆ' ಪರಾ. (ನಾ). ೨. ಎಣೆ; ಸಮ; ಸಮಾನ: ಮಿಾಯದಿರ್ದಹಿತಸಂ ಕಡಿದಾಗಳೆ ಮಿಂದನಾ ಚಲಂ ಸಂದುದಱಿಂ ಸವಂ ಪರಶುರಾಮನಿನಾ ಕುವರರಂಕರಾಮನಿಂ (ಗದಾಯು. ೧-೧೯); ಸವನೆನಗದಾರೆನುತಲತ್ಯುತ್ಕಟವದಿ ನರಸಯ ಕೃಷ್ಣರಾಯನ ಧವಳ ಕೀರ್ತಿಸುಧಾಂಶು ಗರ್ವಿಸುತಿರ್ಪುದಸಪರತ (ತಿಮ್ಮಶಾಂ. ೧-೨೦ ಪೀಠಿಕಾಸಂಧಿ); ಸವನಿಲ್ಲ ಮುಲ್ಲೋಕದಲ್ಲಗಜೆ ಶ್ರೀರಾಮನಾಮ ಸರ್ವೋತ್ಕೃಷ್ಟವು (ವೆಂಕಾಗ. ೨-೨೨-೬). ೩. ಒಂದೇ ಬಗೆಯಾದುದು; ಸಮಾನರೀತಿಯದು : ಹಸಿವು ತೃಷೆ ನಿದ್ರೆಗಳು . . . ಪಶು ಪಕ್ಷಿ ನರಗೆ ಸವನಿರಲು ಕುಲವೆಂಬ ಘಸಣೆಯೆತ್ತಣದು (ಸರ್ವಜ್ಞ. ೯೭೦).

**ಸವಸವ (ದ್ವಿರುಕ್ತಿ)** : ಜವಮುಟಿದೊಂದು ಸೋಗೆನವಿಲೊಯ್ಯನೆ ಕರ್ಕಡೆಗಾಸಿಯಾಗಿ ಪಾಱುವುದುಮಿದೆನ್ನ ನಲ್ಲಳ ರತಿಶ್ರಮವಿಶ್ಲಥಕೇಶಪಾಶದೊಳ್ ಸವಸವನಾಗಿ ತೋಱಿದಪುದೆಂಬುದೆ ಕಾರಣದಿಂದದಂ ಗುಣಾರ್ಣವನಿಡಲ್ಲೊಲ್ಲನಿಲ್ಲ (ಪಂಪಭಾ.೫-೫೦). **ಸವಬೆಸ₂** = ಸರಿ ಮತ್ತು ಬೆಸ; ಸಮ ಮತ್ತು ಅಸಮ : ಎವಗೆ ತವಗೆಂದೀ ಹವಿರ್ಭಾಗವನು ಮುತ್ತಿತು ದೇವತತಿ . . . ದಿವಿಜರೊಳಹುಸುಗೆಗಳ ಲೆಕ್ಕದ ಸವಬೆಸನ [ಪಾಠಾಂ. ಸವರಣೆಯ] ಸವಿವಾಯ ತುತ್ತಿನ ತವಕಿಗರು ಹೊಯ್ದಾಡಿದರು ಸಭೆಯಲಿ ಸುರೇಶ್ವರನ (ಕುಮಾವ್ಯಾಸ. ೭-೩೯). **ಸವಸೋದರರ್** = ಒಡಹುಟ್ಟಿದವರಿಗೆ ಸಮಾನರಾದವರು; ಸಹೋದರ ಸಮಾನರು : ಕಿವಿಸವಿ ದನಿ ಕಣ್ಸವಿ ರೂಪವ ಧರಿಸೆಲೆ ಗಜವೆಡಂಗ ನೀನುಱಿದೊಡೆ ಸಾವವಳೆನಗೆ ಮಿಕ್ಕ ಗಂಡರ್ ಸವಸೋದರರೆಂದು ತಿಳಿಪಿದಳ್ ನಂಬುಗೆಯಂ (ಯಶೋಚ. ೨-೫೨). [< ಸಂ. ಸಮ]

**ಸವ₂** 'ಸಬ' ನೋ.

**ಸವ₃, ಶ್ರವ₁, ಸರಮ₁, ಸ್ರಮ (ನಾ).** ೧. ದಣಿವು ; ಆಯಾಸ; ಶ್ರಮ: ಮಕಾರಕ್ಕೆ ವಕಾರಂ . . . ರೋಮ - ರೋವ ; ಶ್ರಮ - ಸವ (ಶಮದ. ೨೬೩ ಪ್ರಯೋ). **ಶ್ರವ₁** : ೧. ಅಭಿಮಾನಿ ಸಜ್ಜನರು ಆವವಸ್ಥೆಯನ್ನೆದಲದು ನಿನ್ನ ತಾಗುವುದು ಸಾವನ್ನ ಶ್ರವ[ಪಾಠಾಂ. ಮೃಡ]ಬೇಡ ನಿಜರೂಪ ತೋಱು (ಸಿದ್ಧರಾ. ೨-೬೦). ೨. ಶಸ್ತ್ರಾಭ್ಯಾಸ: ಶ್ರವವ ಮಾಡಬಹುದಲ್ಲದೆ ಕಳನೇಱಿ ಕಾದುವುದರಿದು ನೋಡಾ (ಬಸವ. ೨೧೫); ಮುನ್ನೂರಾ ಅರವತ್ತುದಿನ ಶ್ರವವ ಮಾಡಿ ದಿನ ಒಂದು ಕಳನೇರಿ ಕೈಮರೆದಂತೆ ಆಯ್ತು (ಸಿದ್ಧಪು. ೩೦-೨೮). **ಸರಮ₁** : ೧. ಶ್ರಮ — ಸರಮ (ಶಬ್ದಾನು. ೧೪೭ ಪ್ರಯೋ). **ಸ್ರಮ** : ೧. ಮುತ್ತುವೋಲ್ ಬೀಳುತಿರ್ದಾ ಸ್ರಮದುದಕವನೊತ್ತಿ ಬೇಗದೆ ಸೆಱಗಿಂದ (ಕಂನವಿ. ೧೦-೫೦). [< ಸಂ. ಶ್ರಮ]

**ಸವ₄ (ನಾ).** ೧. ಸೋಮಲತೆಯಿಂದ ರಸವನ್ನು ತೆಗೆಯುವುದು; ಸೋಮರಸವನ್ನು ಹೊರಹೊಮ್ಮಿಸುವಿಕೆ. ೨. ಹೂವಿನ ರಸ; ಮಕರಂದ. ೩. ದೇವರಿಗೆ ಸೋಮರಸವನ್ನು ಅರ್ಪಿಸುವುದು; ಯಜ್ಞ; ಯಾಗ: "ಯಾಗಃ, ಯಜ್ಞಃ . . . ಸವಃ, ಸತ್ರಂ — ಈ ೧೨ ಯಾಗಂ" (ಹಲಾಯು. ೬೮-೨೭೦). ೪. ಸಂತಾನ; ಸಂತತಿ. ೫. ತಂದೆ ; ಜನಕ. [ಸಂ.]

**ಸವಂಗ, ಸವಗ₁ (ನಾ).** ೧. ಮೈಗೆ ತೊಡುವ ಒಳಅಂಗಿ : ನವನಖಪದರೇಖೆಗಳಂ ಸವತಿಯರಿದಿರೊಳ್ ವಿಲಾಸವತಿಯರ್ ಮೆಱೆಯಲ್ ಅವಯವದಿಂ ಕುಪ್ಪಸಮಂ ಸವಂಗಮಂ ಕಳೆದು ಕಳೆದರಲ್ಲಿಂದವರಂ (ಆದಿಪು. ೧೧-೭೩); ಚೆನ್ನದ ಸವಂಗಮಪೂರ್ವದ ಮೊಚ್ಚೆಯಂ ಪವಣ್ಗಿಡದ ಸುವರ್ಣಪಾರಿವದ ಕುಪ್ಪಸಮೊಪ್ಪೆ ಬೆಡಂಗನಾಳ್ದು ಕಣ್ಗೆಡಱದೆ ಪೆಂಡವಾಸದ ವಿಳಾಸದ ಸೂಳೆಯರೊಪ್ಪಿ ತೋಱಿದರ್ (ಪಂಪಭಾ. ೯-೧೦೩); ಒಂದು ಬಗೆಯ ಆಭರಣ (ಕಿ); "ಕವಚ" (ಪಂಪದೀ. ೧೪೦); "ತೊಟ್ಟುಕೊಳ್ಳುವ ಸಾಮಗ್ರಿ" (ಪಂಪಭಾ. ಕೋಶ); ತಳಿರ ಸವಂಗ [ಪಾಠಾಂ. ತರಂಗ] ಪೂತ ಸೆಳೆಗೊಂಬಿನ ಬಿಲ್ . . . ಒಪ್ಪೆ ತನು ನೀಲಶಲಾಕೆವೊಲಾಗೆ ಕಾಮನಂತಳವಡೆ ಬಂದಳಂದು ಮೊಲೆ ಬಾರದ ಬಾಲೆ ಪುಳಿಂದಲೀಲೆಯಿಂ (ಲೀಲಾವ. ೮-೨೮). ೨. ಯುದ್ಧದ ಸಮಯದಲ್ಲಿ ಶರೀರದ ರಕ್ಷಣೆಗಾಗಿ ತೊಟ್ಟುಕೊಳ್ಳುವ ಸಾಮಗ್ರಿ; ಕವಚ : ಕರ್ಮರಾಜನೆಂಬ ವ್ಯಾಧರಾಜಂ . . . ಲೋಭಮೆಂಬ ಸವಂಗಮಂ ತೊಟ್ಟು . . . ಖುಷಿದೂಷಣಮೆಂಬ ಬಡಿಗಳಂ ಕೆಡೆಯಮೋದುತ್ತುಂ (ಧರ್ಮಾಮೃ. ೧೦-೮೭); ಗುಡಿ ನೇಣ್ . . . ದಂಡಿಗೆ ಸವಂಗಂ ಮೊಚ್ಚೆಯಂ . . . ತಾಮ್ರಸಭಾಂಡಮೆಂಬಿವಿನಿತುಂ ದಂಡಿಂಗೆ ಸಾಮಗ್ರಿಗಳ್ (ಸೂಕ್ತಿಸು. ೧೮-೨೩). **ಸವಗ₁** : ೨. "ಸವಗಮೆಂದು ಕವಚಂ" (ಕಶಸಾ. ೫೮-೨೭೧); ತೊಡೆಗಳೊಳಮರ್ಚಿದ ಸೌವರ್ಣದ ಸವಗಂಗಳ ಸುಚ್ಛವಿಯ ಮೊಚ್ಚೆಯಂಗಳಪ್ಪ ಪ್ರಭೆಗಳ್ ಪಲವುಂ ಬಣ್ಣದ ಪರಿವೇಷಮಂ ಪಡೆಯೆ (ಮಹಾನೇ. ೧೨-೩೨ ವ); ಹೋಳಾದ ಕವಚವ ಹೊಲಿಸಿದರು ಬಾಹುರಕೆ ಸವಗದ ಬಿರುಕ ಬೆಸಸಿದರು (ಕುಮಾಭೀ. ೫-೩೭); ತೆಗೆದು ತೇಜಿಗಳ ಹಲ್ಲಣಿಸಿ ಹಕ್ಕರಿಕೆಯ ಪುಗಿಸಿ ಸವಗ ಜೋಡುಗಳನು ಬಿಗಿದು ಬಿರಿದನಿಕ್ಕಿ ಪೊಱಮಟ್ಟರೊಸೆದು ಕಾಳೆಗಕಾ ರಾಯರಾವುತರು (ಕುರಾಸಾಂ. ೧೧-೧೬). ೩. ಬಟ್ಟೆ; ವಸ್ತ್ರ : ಬಣ್ಣದ ಸವಗವನುಟ್ಟಿರೆ ಕಣ್ಣುಟ್ಟಿಪ ಮಿಂಚುಸೊಡರ ಕೋಲಂ ಪಿಡಿದುಂ ಪಣ್ಣನೆ ನೆಗೆವ ಕುದುರೆಗಳ ಪಣ್ಣಿಸಿ ಘೋಟಾಯ್ತರೇಱಿ ಮೆಱೆಯುವರೊಳ್ಗಿಂ (ಮೈಸೂಮು. ೫-೮೨).

[?./ ಸಂ. ಕವಚ, ಯಮಕ]

**ಸವಂಗಂಬುಗು (ಕ್ರಿ).** ಕವಚವನ್ನು ತೊಡು : ತೆಗೆ ವಾರುವಮಂ ಹಾರುವ ಬಗೆಯಂ ತನಗಿರುಳ ಬವರಮೆನುತ ಸವಂಗಂಬುಗುವ ಕಟಕಿಗರನಳಿಱಿಂ ಪುಗಿಸಿದುದು ಭುಜಾಸಿ ಗಂಗದಣ್ಣಾಧಿಪನ (ಎಕ. II, ೭೩-೨೩; 1118). [ಸವಂಗ + ಪುಗು (< ಪೊಗು)]

**ಸವಕಟ್ಟು** 'ಸಮಕಟ್ಟು₁' ನೋ.

**ಸವಕರಿಸು (ಕ್ರಿ).** ಕೂಡಿಸು ; ಹೊಂದಿಸು : ಕುಳಿತವನ ಕಿವಿಹಿಂಡಿ ಮೇಲಕೆಚ್ಚರಿಸಿ ಲೆಕ್ಕ ಕೇಳುವಿ ಪೈಗೆ ಪೈಯ ಸವಕರಿಸಿ (ಸವ್ಯಧ್ವ. ೮-೨). [< ಸವ₁ + -ಇಸು₃]

**ಸವಕಲು** 'ಸಮಕಲು' ನೋ.

**ಸವಕಲುಕಾಸು (ನಾ).** ತೇದುಹೋದ ಕಾಸು; ಸವೆದು ಚಲಾವಣೆಯಾಗದ ನಾಣ್ಯ : ಬಿಟ್ಟೀ ಬಾಡಿನ ಊಟಕ್ಕೆ ಬಂದ ಸಾಹುಕಾರ್ ಆಸ್ತಿಗೌಡರು ಮಾತ್ರ ಮೂರುಕಾಸಿಗಿಂತ ಹೆಚ್ಚಾಗಿ ಹಾಕುವುದಿಲ್ಲ. ಆದೂ ಹಳೆಯ ಸವಕಲುಕಾಸು (ನನ್ನೂರು. ೬೫). [ಸವಕಲು (< ಸಮಕಲು) + ಕಾಸು₂]

**ಸವಕಲುನಾಣ್ಯ (ನಾ).** = ಸವಕಲುಕಾಸು : ಅದರಲ್ಲಿ ಹತ್ತೊಂಬತ್ತುರೂಪಾಯಿ ಚಲಾವಣೆಯಾಗದ ಸವಕಲುನಾಣ್ಯ ಮತ್ತು ಹರಿದ ನೋಟು (ಚತಸ. ೧೨೬).

[ಸವಕಲು (< ಸಮಕಲು) + ನಾಣ್ಯ (< ನಾಣಯ)]

**ಸವಕಳಿ (ನಾ).** ೧. ತೇದು ಹೋದುದು ; ಸವೆದುದು ; ಸವಕಲು : ಸವಕಳಿಯ ದುಡ್ಡು ದೆವ್ವಂ ಸೇರಿದ ಸದನಂಗಳಂ ದಾನಮೆನೆ ಕೊಟ್ಟು (ಮಹಾಂತೇ. ೨೯-೧೩); ಹಳೆ ಇಮಾರತುಗಳಲ್ಲಿ ಈ ಪ್ರಕಾರದ ಸವಕಳಿಯ ಕುರುಹುಗಳು ಇರಲಿಕ್ಕೇ ಬೇಕು (ಮುಂಬಯಿ. ೬-೧೭೧). ೨. ಅರಕೆ; ಕೊರತೆ; ನಮೆತ : ಮೈಕ್ಕೆ ಕಡೆಗೆ ನೋಡಿದರೆ ಸವಕಳಿಯಲ್ಲದೇ ಮತ್ತೇನೂ ಕಾಣದು (ಇಪ್ಪಕ. ೪೦೮); ದುಡಿಮೆಯಿಂದುಂಟಾದ ದಿನದ ಸವಕಳಿಯನ್ನು ತುಂಬಿಕೊಳ್ಳಲಿಕ್ಕೂ ಅನ್ನವೇ ಮುಖ್ಯ (ಗೋಗ್ರಾಸ. ೩೩). 'ಸಮಕಲು' ಪರಾ. [< ಸವ₁ (< ಸಮ₁) + ಕಳೆ₁ (< ಕಟೆ₁)]

**ಸವಕಳಿನಾಣ್ಯ (ನಾ).** = ಸವಕಲುಕಾಸು : ಆ ಸವಕಳಿನಾಣ್ಯಗಳಂತೆಯೇ ಅವನ ಗ್ರಾಮೊಫೋನ್ ರೆಕಾರ್ಡುಗಳು! (ಮುಂಗಾರು. ೫೫); ಸವಕಳಿನಾಣ್ಯಕ್ಕಿಂತಲೂ ಸ್ವಾಮಿನಿಷ್ಠವಾಗಿ ಅವು ನನ್ನಲ್ಲಿ ಉಳಿದಿವೆ (ದೇಕನ್ನ. ೧೯೯). 'ಸವಕಲುನಾಣ್ಯ' ಪರಾ.

[ಸವಕಳಿ + ನಾಣ್ಯ (< ನಾಣಯ)]

**ಸವಕಳಿರೂಪ (ನಾ).** ಸವೆದುಹೋದ ರೂಪ ; (ಒಂದು ಪದದಲ್ಲಿ ಕೆಲವು ಅಕ್ಷರಗಳು) ಲೋಪವಾಗಿ ಉಳಿಯುವ ರೂಪ : ಷಷ್ಠಿಯ 'ಅ' ಪ್ರತ್ಯಯವು ಕೂಡ 'ಅದು' - ಎಂಬುದರ ಸವಕಳಿರೂಪವೆಂದು ಹೇಳುತ್ತಾರೆ (ಭಾಷಾಶಾ. ೩೫).

[ಸವಕಳಿ + ರೂಪ]

**ಸವಖಂಡ (ನಾ).** ಸಮವಾದ ಭಾಗ : ಸವಖಂಡಂ ಬಿಟ್ಟ ತಂತಮ್ಮನಿಯರನಮಿತಂ ಗೆಲ್ದ ಸಂಗ್ರಾಮದೊಳ್ ವೈರಿವಧೂಸಂತಾನಮೋಱಂತಱುವುದು ಪತತ್ಕುಂಡಳಾಂದೋಳಿತೈಕಶ್ರವಣಂ . . . ಗದ್ಗದೋತ್ಕಂಠಕಂಠಂ (ಎಕ. V, ಚನ್ನರಾ. ೧೯೭; 1223; ಶಾಪಮು. ೧೨೭೨ ನೋ). [ಸವ₁ + ಖಂಡ]

**ಸವಗ₁** 'ಸವಂಗ' ನೋ.

**ಸವಗ₂ (ನಾ).** ಚರ್ಮದ ಕೆಲಸ ಮಾಡುವವನು; ಮೋಚಿ; ಚಮಗಾರ :

ಸವಗರ್ ಪೊಲೆಯರ್ ಕೀಲಿಗರವಂದಿರೊಳಗಾಗಿ ತಾಯೊಳನುಭವಿಸುವ ಚಿತ್ತವಿಕಾರ ಮನಾನರನೆಲ್ಕೆ ವಿವೇಕವಿದರ್ಕಳಾಂಪರೇ ಪಾತಕಮಂ (ಮಹಾನೀ. ೬-೧೧೯).

[< ಸಮಗಾರ?]

**ಸವಗ₃** (ನಾ). ಒಂದು ಬಗೆಯ ಮರ : ಸವಗ (ಸಾರ್ಜಾ) – ಕಟ್ಟಿಗೆ ಕೆಲಸಕ್ಕೆ ಬಾರದ್ದು (ಕಭಾಗ. ೪೮). [?]

**ಸವಗಡೆ** (ನಾ). (?) : ಮುಡಿವಕ್ಕಿಯೊಳ್ ಮುಡಿಯ ಮುಚುಕಮಂ ಮಾಡಿ ಸವಗ[ಪಾಠಾಂ. ಗ]ಡೆಯ ಸಟಿಮಿಂಡಿಯರ್ ಮಿಂಡಳ್ದು . . . ವಿಹರಿಸಿದರು (ನಂದಿಮಾ. ೪-೨೨). [?]

**ಸವಗಸನ್ನಣ** (ನಾ). ಕವಚ ಮತ್ತು ಅಂಗಿ : ಸಮೋಘಸನ್ನಾಹ – ಸವಗಸನ್ನಣ (ಶಮದ. ೨೪೯ ಪ್ರಯೋ). [ಸವಗ₁ (< ಸವಂಗ) + ಸನ್ನಣ]

**ಸವಗಾಣ** (ನಾ). ಜೊತೆಯಲ್ಲಿ ಹಾಡುವವನು; ಸಹಗಾಯಕ : ಸವಗಾಣಂ ಗಾಯಕಿಯರ್ಗೆ ವೀಣೆ ಸಮವಾದಕಂ ಸುವಾದಕರ್ಗೆ ಮನೋಭವಚಾಪಜ್ಯಾರವಮೆನೆ ವಿವೇಕಿಗಳ್ ಗೀತವಾದ್ಯಮೊಗೆವುವು ಹೃದ್ಯಂ (ಪಾರ್ಶ್ವಪು. ೧೬-೬೨). [ಸವ₁ + ಗಾಣ₃]

**ಸವಗಾಣಿಕೆ** (ನಾ). ಜೊತೆಗಾತಿಯಾದ ವೇಶ್ಯೆ; ಸಹವೇಶ್ಯೆ (?): ಮಂಜುಘೋಷೆಯೆಂಬಚ್ಚರಸೆಯೊಂರ್ಮೆ . . . ತಂನ ಸವಗಾಣಿಕೆಯರ ಸಾರಂಙ್ಕೆ ವೋಪ ತವಕದಿನಾ ಶೃಂಗಿಯಂ ಶ್ರಿಂಗಿಯಂ ಸೋಂಕುವಂತೆ ಸೋಂಕಿ ಪೋಪಾಗಳ್ (ಕೊಲ್ಹಾಶಾ. ೧೫-೨೩; 1186). [ಸವ₁ + < ಗಣಿಕೆ₃?]

**ಸವಟು₁** (ಕ್ರಿ). ೧. ನಾಶಮಾಡು; ಹತಗೊಳಿಸು : ಇದಿರಾದ ರಾಜಕುಮಾರರ ಸವಟುತ ಕದನಲಂಪಟ ಕೋಪದಿಂದ (ಜ್ಞಾನಚ. ೩೦-೫೦); ಧರೆಗಧಿಪ ನರಹುಳವ ಸವಟುವದರಿಂದ (ಆದಿಪ. ೬೦-೬). ೨. ಹೊಸಕು ; ತುಳಿ : ಶರಭನು ಸಂಪ್ರಹೃತಮಾಗಿ ನೆಲದಲ್ಲಿ ಸವಟಿಯಿರುವದಂ ನೋಡಿ (ಸೌಗಂಧಿ. ೨೪೪-೧೬); ಐರಾವತವು ಆ ಮಾಲೆಯನ್ನು ಸೊಂಡಿಲಿನಿಂದ ಎಳೆದುಕೊಂಡು ಕಿತ್ತು ಕೆಳಗೆ ಹಾಕಿ ಕಾಲಿನಲ್ಲಿ ಸವಟಿತು (ನೀತಿಚಿಂ. ೪-೯). [ದ್ರಾ. II ತಮಿ. ಚಮಟ್ಟು, ಚವಟ್ಟು; ಮಲ. ಚವಿಟ್ಟು]

**ಸವಟು₂** 'ಸೌಟು' ನೋ.

**ಸವಟೆಗಾರ** (ನಾ). (?) : ಮುದ್ದಗೌಡ ಸವಟೆಗಾರ ನೀಲಕಂಠ . . . ಮುಖ್ಯರಾದ ಸಮಸ್ತಗೌಡುಪ್ರಜೆಗಳು . . . ಕೊಟ್ಟ ಭೂದಾನ (ಎಕ. VIII,ತೀರ್ಥಹ. ೧೨೬-೧೦; 1405). [ಸವಟೆ, + -ಗಾರ (< -ಕಾಱ)]

**ಸವಟೆವಾಯ** (ನಾ). ಸೊಟ್ಟಗಿರುವ ಬಾಯುಳ್ಳವನು (?) : ಅರ್ಥಾನು ರೂಪಾನ್ವರ್ಥಕ್ಕೆ – ಹೆಟೆಗಾಲಂ . . . ಸವಟೆವಾಯಂ ಗುಳ್ಳಿಗಣ್ಣಂ (ಶಮದ. ೬೬ ಪ್ರಯೋ). [ಸವಟ್ಟೆ (< ಸೊಟ್ಟು) + ಬಾಯ್ + -ಅ₇]

**ಸವಡಿ₁, ಸವಡು₂, ಸವಳಿ** (ನಾ). ೧. ಜೊತೆ; ಜೋಡಿ; ಅವಳಿ ಜವಳಿ : ಅವಯವದ ಕುಣಿದು ಮೆಟ್ಟುವ ಸವಡಿಯ ಬಿಜ್ಜಣಿಗೆ ಪಿಡಿದ ಸತ್ತಿಗೆಯ ವಿಳಾಸವೆಮುಮುರ್ದ ಲೀಲೆಯಿಂ ಪೆಂಡವಾಸದೊಳ್ ಪೆಂಡಿರೊಯ್ಯನೊಯ್ಯನೆ ನಡೆದರ್ (ಆದಿಪು. ೧೧-೪೧); ಸವಡಿಮಂದರದಂತೆ ಕೀಚಕ ಪವನಸುತರೊಪ್ಪಿದರು (ಕುಮ್ಮಾವಿ. ೩-೪೮); ಮೋಹನದ ಬಲ್ಮೊನಲ ಸವಡಿಯೋ ಸೂಗಸಿನವಳಿಯ ಫಲವೊ . . . ಎನಲ್ಕುಕಲವರ್ಕುಶಲದಿಂ ಕಣ್ಸೆಸೆದರಾಶ್ರಮದೊಳು (ಜೈಮಿಭಾ. ೧೯-೪೯). 'ಮುಚ್ಚವಡಿ' ಪರಾ. ೨. ಪದರ; ಮಡಿಕೆ : "ಪೊರೆ ಸವಡಿ" (ಕರ್ಣಾನಿ. ೮೧-೩೨); ಮೂಱು ಸವಡಿಯ ಹಸುಬೆಯ ಚೀಲದವೊಲು ಮೂಱು ಘಾಳಿಗಳಿಹುವಲ್ಲಿ (ಭರಚ. ೧೭-೩೪). 'ಇರ್ಚವಡಿ' ಪರಾ. ೩. ಸೇರುವ ಸ್ಥಳ; ಸಂಗಮ : ಶಿವನು ತನ್ನಯ ನಿರೀಕ್ಷಾಮಾತ್ರದಿಂ ತ್ರಿಪುರದವಗಡದ ಚಕ್ರದಿರುಪಡಗಲದೞೊಳಗೆಸಲು ಸವಡಿ ಹಱಿದವು ಮೂಱು ಪುರವನುರುಪಿದನಮಲಚರಣಾಂಬುಜಕ್ಕೆ ಶರಣು (ಲಶಿಚಂ. ೧೭-೨೦). ೪. ಭಿನ್ನಾಭಿಪ್ರಾಯ; ದ್ವಂದ್ವ: ಪೊಲ್ಲಮೆವೊಲೊಳ್ಳಿತೊಳ ಸೋರ್ದಳಿದು ಪೋ! ತನ್ನುಳ್ಳುವನಿತುಂ ಸವಡಿಗಳ್ ಕಳಿದು – ಲೋಕಂ ಒಲ್ಲ ಪರಿಶುದ್ಧಪರಮಸ್ಥಿತಿಯ ಸೌನ್ದರ್ಯೋಲ್ಲಸನವುದ್ಯಯಿತವಾಗೆ ಕವಿ ಮಾಳ್ಪಂ (ಸಂಸಪ. ೪೧-೭೨). 'ಜಮಳ', 'ಜವತ್ಸವಡಿ', 'ಜೋಡಿ₁' ಪರಾ. **ಸವಡು₂** : ೨. ತಿಳಿ ಮೂಱು ಸವಡಿನ ಚೀಲದೊಳಿಹ ಮೂಱು ನೆಲೆಯ ಕರಂಡಕದಂತೆ ಬಳಸಿ ಹೊಱಗೆ ಮೂಱು ಗಾಳಿಗಳಿಹುವು (ಭರಚ. ೬೬-೭೪). ೫. (ಆಲಂ) ಎರಡು ಮಾತು; ಸುಳ್ಳು; ಸಟೆ: ಇಮ್ಮಡಿಚಿಕ್ಕಭೂಮಿಪನಣುಗನ ನಾಲಗೆಯೊಳು ಸವಡುಂಟೆ (ಇಚಿಸಾಂ. ೪-೬೭). **ಸವಳಿ** : ೧. 'ಜವಳಿ₃', 'ಸವಳಿಕೆಯ್' ಪರಾ.

[?./ ಪ್ರಾ. ಜಮಲ./ ಸಂ. ಯಮಲ]

**ಸವಡಿ₂** (ನಾ). ಹೆಣ್ಣಾನೆ: "ಪಿಡಿ ಸವಡಿಯೆನಲ್ ಪೆಣ್ಣಾಜ" (ಭಾರನಿ. ೬೬).

[IP 'ಸವಡಿಯಾನೆ' ಶಬ್ದದಿಂದ ಈ ಅರ್ಥವನ್ನು ತಪ್ಪಾಗಿ ಗ್ರಹಿಸಿದಂತಿದೆ]

**ಸವಡಿ₃** 'ಸೌಡಿ' ನೋ.

**ಸವಡಿಗಕ್ಕಡ** (ನಾ). ಕಕ್ಕಡವೆಂಬ ಎರಡು ಆಯುಧ; ಜೋಡಿಕರ್ಕಡೆ: ಎಲ್ಲ ವೀರರುಂ ಸಾಟಿಸಿ ಬೊಬ್ಬಿಡಲ್ಸವಡಿಗಕ್ಕಡಯೆಂದಿಱಿದೆಚ್ಚಿ ತಾಱುವರ್ (ಎಕ. VII, ಶಿಕಾ. ೨೪೮-೧೫; 1224). [ಸವಡಿ₁ + ಕಕ್ಕಡ₁ (< ಕರ್ಕಡೆ)]

**ಸವಡಿಗಟ್ಟು** (ಕ್ರಿ). ಜೋಡಿಸಿ ಕಟ್ಟು; ಒಟ್ಟುಮಾಡು: ಪಂಚವಟ್ಯಾರಣ್ಯದೊಳ್ ಸಂಗ್ರಹಂಗೈದಿರ್ದ ಪುಲಿಯ ಪಲ್ಲಂ . . . ವಿಪಿನಜೀವನವಿಶೇಷಂಗಳಂ, ಮೂವರುಂ, ತಂತಮಗೆ ಸವಡಿಗಟ್ಟಿದರರ್ಥಿಯಿಂ ತನಗೆ ಬೇಳ್ಪನಿತುಮಂ (ಶ್ರೀರಾಮಾ. ೨೨೯-೪೦).

[ಸವಡಿ₁ + ಕಟ್ಟು₁]

**ಸವಡಿಗತ್ತಲೆ** (ನಾ). (ಆಲಂ) ದಟ್ಟವಾದ ಕತ್ತಲು; ಗಾಢಾಂಧಕಾರ: ಇವರು ಬಂದರು ದಕ್ಷಿಣದ ದೆಸೆಗವರ ಪಾಳೆಯಕಾಗಿ ಸುತ್ತಲು ಸವಡಿಗತ್ತಲೆಯಾಯ್ತು (ಕುಮ್ಮಾಗ. ೮-೬೪). [ಸವಡಿ₁ + ಕತ್ತಲೆ₁ (< ಕಟ್ತಲೆ)]

**ಸವಡಿಗರ** (ನಾ). ಎರಡು ಕೈ; ಉಭಯಹಸ್ತ: ಸವಡಿಗರವಂ ಮುಗಿದು ಸಾಷ್ಟಾಂಗವೆಱಗುತಂ ಶಿವನ ಸಮವೆನಿಪ ಸದ್ಭಕ್ತ ನೀವೆಯ್ತಂದು ಭವಭವಂಗಳ ಪುಣ್ಯಮ್ಯದೋಱಿತಱಿವವರ ಚರಣಾಂಬುಜಕ್ಕೆ ಶರಣು (ಲಶಿಚಂ. ೪೦-೨೯).

[ಸವಡಿ₁ + ಕರ₃]

**ಸವಡಿಗಾಲ್** (ನಾ). ಜೊತೆಯಾದ ಎರಡು ಕಾಲು; ಜೋಡಿ ಕಾಲು: ಬಂಡಿಯ ಸವಡಿ[ಪಾಠಾಂ. ಜವಳಿ]ಗಾಲಲಿ ಮುರಿದನ್ಯ ಮಾಮಾ ಸಮರ್ಥನಲೆ (ಕುಮ್ಮಾಸ. ೧೦-೧೩).

[ಸವಡಿ₁ + ಕಾಲ್₁]

**ಸವಡಿಗೆಯ್, ಸವಡಿಗ್ಗೆ, ಸವಳಿಕೆಯ್** (ನಾ). ೧. = ಸವಡಿಗರ: ಕೌರವನ ಹೊರಗೈತಂದು ನಿಂದನು ಸವಡಿಗೆಯ್[ಪಾಠಾಂ. ಗ್ಗೆ] ಗದೆಯಣಸುಗಲ್ಲದ ಗಾಢ ಗರ್ವದಲಿ ಪವನಸುತ (ಕುಮ್ಮಾಗ. ೮-೭); ಸವಡಿಗೆಯ್ಯಿಂದೆಱಗಿದನು ಗದೆಗೊಂಡು ಖಾತಿಯಲಿ (ಉತ್ತರಾ. ೫-೩೨). **ಸವಡಿಗ್ಗೆ** : ೧. ಸವಡಿಗ್ಗೆಗಳ ನಂಬುಗೆಯ ಮನಮನದ ಬೆಸುಗೆಗಳ ಅವಸರದ ಮೈತ್ರಿಗಳ ಮಂತ್ರಿಪ್ರವರವಚನೋಪೇಕ್ಷೆಗಳ ರಣದವಕದಲಿ ಕಳವಳಿಸುತಿರ್ದುದು ಕೂಡೆ ನೃಪಕಟಕ (ಕುಮ್ಮಾಸ. ೧೦-೨). ೨. (ನಮಸ್ಕರಿಸಲು) ಜೋಡಿಸಿದ ಕೈ; ಮುಗಿದ ಕೈ: ಅವಸಿಜೆಯ ಸಂದರುಶನವು ಸಂಭವಿಸಲಮರರು ಭಕ್ತಿಭಾವದ ಸವಡಿಗ್ಗೆಗಳಲಿರ್ದರಾನತರಾಗಿ ಗಗನದಲಿ (ತೊರರಾ. ೧-೧೪-೨೮). **ಸವಳಿಕೆಯ್** : ೧. ಅನುರಕ್ತೆ ನಚ್ಚಿನಸಿಯವಳನುಪಮ ವಿಗ್ರಹವಿಳಾಸೆ ತೋಳ್ಪತ್ತುಗೆಯಂದನೆಗೆ ಸವಳಿಕೆಯ್ಯಿಂದದಿಪನೀಯೆ ಜಯರಾಮ ವೆಸರನಾ ಸತಿ ತಳೆದಳ್ (ಪುಷ್ಪಪು. ೯-೪೨). [ಸವಡಿ₁ + ಕೆಯ್₂]

**ಸವಡಿಗ್ಗೆ** 'ಸವಡಿಗೆಯ್' ನೋ.

**ಸವಡಿಗೊಡೆ** (ನಾ). ಜೋಡಿ ಕೊಡೆ; ಎರಡು ಛತ್ರಿ: ಮಧುಮಹೀಪಾಲನ ವಕುಲಮುಕುಲದ ಕಂಠಿಕೆಯುಮೆತ್ತಿದ ಪೊಂಗೇದಗೆಯ ಸವಡಿಗೊಡೆಯುಮತುಚ್ಚ ಪರಿಚ್ಛದಮಾಧವೀಲಕ್ಷ್ಮಿಯುಂ ತನಗಮೞೆ (ಶಾಂತಿಪು. ೮-೨೩ ವ); ಬಿದಿ ಪಚ್ಚೆಯ ಕಾವಿನ ನೀಲದ ಕಳಸದ ಸವಡಿಗೊಡೆಯನಾ ವನಿತೆಯ ಗರ್ಭದ ಬಾಲಂಗೆತ್ತಿದ ನೆನಿಸಿದುದು ಸರೋಮಾಳಿ ಕುಚಯುಗಂ ಕೃಷ್ಣಮುಖಂ (ಅರ್ಧನೇ. ೨-೨೪).

[ಸವಡಿ₁ + ಕೊಡೆ₂]

**ಸವಡಿಗೊನೆ** (ನಾ). ಎರಡು ಗೊನೆ; ಜೋಡಿಗೊನೆ: ಸವಡಿಗೊನೆಗಳ ಕದಳಿ ಖರ್ಜೂರಾದಿ ಪಣ್ಣಲವ . . . ಕೊಂಡೈದಿದರು ಶ್ರೀಹರಿಗೆ (ಕೋಗಯ. ೩-೫೦).

[ಸವಡಿ₁ + ಗೊನೆ₃ (< ಗೊಲೆ₂)]

**ಸವಡಿಗೋಲ್** (ನಾ). ಎರಡು ಬಾಣ; ಜೋಡುಬಾಣ: ಯುವತಿಯನು

ಕಂಡರು ಕಟಾಕ್ಷದ ಸವಡಿಗೋಲಿಂದೊಡೆದುದೆದೆ (ಕುವ್ಯಾಅ. ೧೮-೨೯); ಕಿವಿವರಂ ಬರಸೆಳೆದು ಮುಳಿದಿಸುವ ಕಂತುವಿನ ಸವಡಿಗೋಲ್ಗಳೊ (ಸೌಂದಪು. ೬-೩೩); ಸವಡಿಗೋಲ್ಗಳ ಸುರಿದು ಗಜಸ್ಕಂಧವ ಪದಾತಿಯ ತಂಡತಂಡವ ಜವನ ಮನೆಗಟ್ಟಿದನು ನಿಮಿಷಾರ್ಧದಲಿ ರಘುನಾಥ (ಆನಂರಾ. ೩-೪-೮). [ಸವಡಿ$_1$ + ಕೋಲ್$_1$]

**ಸವಡಿಚೀಲ** (ನಾ). ಎರಡು ಪದರಗಳುಳ್ಳ ಚೀಲ: ಆನಂದಮಯಕೋಶ ಮಿಂತಲ್ಲಿಯ್ಯೆದಂ ಸವಡಿಚೀಲದೊಳಗಿರ್ದ ರತ್ನದ ತೆಱದೆ ರಾಜಿಸಿರ್ಪ . . . ಸರ್ವತೋಬ್ರಹ್ಮ ವಾಕ್ಕಿಂಗಗೋಚರವು (ವೀಶ್ವಪು. ೫-೧೦-೨೫). [ಸವಡಿ$_1$ + ಚೀಲ]

**ಸವಡಿಡು** (ಕ್ರಿ). ಒಟ್ಟಿಗೆ ಇಡು; ಜೊತೆಯಾಗಿಡು: ಇಕಾರಕ್ಕೆ – ದಾಟಿಟ್ಟಂ, ಹಂದಿಟ್ಟಂ, ಸವಡಿಟ್ಟಂ (ಶಮದ. ೫೨ ಪ್ರಯೋ.). [ಸವಡಿ$_1$ + ಇಡು$_1$]

**ಸವಡಿದಾರ** (ನಾ). ಎರಡು ಎಳೆ; ಜೋಡುದಾರ: ಕಿವಿಯೊಳೊಪ್ಪುವ ನಾಗರಪಣೆ ಹೊಸಹೊನ್ನ ಸವಡಿದಾರದ ಕೊರಳುಗಳ ನವರತ್ನಭೂಷಣದಾಳ್ಗಳ ಮೇಳದೆ ಭುವನೇಶ್ವರನೈತಂದ (ಕಂನವಿ. ೧೨-೩೫). [ಸವಡಿ$_1$ + ದಾರ$_1$]

**ಸವಡಿನುಡಿ** (ನಾ). ೧. ಎರಡು ಮಾತು; ಎರಡು ಶಬ್ದ. ೨. (ಆಲಂ) ಇಬ್ಬಗೆಯಾದ ಮಾತು; ಮೊದಲು ಆಡಿದುದಕ್ಕೆ ವಿರುದ್ಧವಾಗಿ ಆಡುವ ಮಾತು; ಸುಳ್ಳು: ಸವಡಿನುಡಿಯುಂಟೇ ಚತುರ್ದಶಭುವನದಾಹವದಕ್ಷವೀ ಬಾಣವನು ಕೊಟ್ಟೆನು ಮಗನೆ ಬೊಮ್ಮ ಶಿರೋಮಹಾಶರವ (ಕುವ್ಯಾಅ. ೬-೪೮); ಅವನಿಪತಿ ಕೇಳ್ನಿಮ್ಮ ಪದಕಮಲವನು ಭಜಿಸುವೆ ಜೀಯ ಚಿತ್ತದಿ ಸವಡಿನುಡಿ ತನಗಿಲ್ಲ (ನಳಚ. ೬-೩). [ಸವಡಿ$_1$ + ನುಡಿ$_2$]

**ಸವಡಿಮರ** (ನಾ). ಜೋಡಿ ಮರ : ಸವಡಿಮರ ನೆಗ್ಗಿದವು ಗಡ ಮೈಯವುಚಿದರೆ ಬಲುಗತ್ತೆ ಗೂಳಿಯನಿವ ವಿಭಾಡಿಸಿದನೆ (ಕುವ್ಯಾಸ. ೧೦-೧೩). [ಸವಡಿ$_1$ + ಮರ$_1$]

**ಸವಡಿಯಾನೆ** (ನಾ). ಜೋಡಿ ಆನೆ : ಸವಡಿಯಾನೆಯ ಮೇಲೆ ಗಣಿಕಾನಿವಹ ದಂಡಿಗೆಗಳಲಿ ಕೆಲಬರು . . . ಕವಿದುದಗಲದಲಿ (ಕುವ್ಯಾಅ. ೧೬-೩೦).

[ಸವಡಿ$_1$ + ಆನೆ$_1$]

**ಸವಡಿರಥ** (ನಾ). ಎರಡು ತೇರು; ಜೋಡುರಥ: ಸಹದೇವ ನಕುಲರ ಸವಡಿರಥ ಸಮ್ಮುಖಕೆ ಬಿಟ್ಟವು ಮಾದ್ರಭೂಪತಿಯ (ಕುವ್ಯಾಶ. ೨-೨೧).

[ಸವಡಿ$_1$ + ರಥ]

**ಸವಡಿವಲೆ** (ನಾ). ಜೋಡಿಯಾಗಿ ಹೆಣೆದ ಒಂದು ಬಗೆಯ ಬಲೆ; ಜೋಡುವಲೆ (?) : ಬೀಸುವಲೆ ಸವಡಿವಲೆ ತೊಡರುವಲೆ ಹಾಸುವಲೆ (ಚತುಪು. ೨-೧-೧೮). [ಸವಡಿ$_1$ + ಬಲೆ$_1$]

**ಸವಡಿವೆರಳು** (ನಾ). ಜೊತೆಗೂಡಿದ ಬೆರಳು; ಜೋಡಿ ಬೆರಳು : ಸವಡಿವೆರಳಲಿ ಸೇದುವಂಬಿನ ತವಕಿಗರು ತಱುಬಿದರು (ಕುವ್ಯಾಗ. ೧-೬); ಸೇದಿ ತಾಂ ಸವಡಿವೆರಳಿ ನೊಳಂಬ ಕರ್ಣಾಂತಕ್ಕೆದಿಸಿ ನುಡಿದಂ (ಚಬಪು. ೧೬-೨೫).

[ಸವಡಿ$_1$ + ಬೆರಳು (< ಬೆರಲ್)]

**ಸವಡಿಸತಿ** (ನಾ). ಸರಿಸಮಾನಳಾದ ಸ್ತ್ರೀ; ಎಣೆಯಾದ ಸತಿ : ನವದಶೈಕಾದಶದ ಸಂಖ್ಯೆಯ ಧವರ ನೆಱೆ ವರಿಸಿರ್ದ ವಾಙ್ಮಾಶಿವೆಯರೆಣೆಯೇ ನಾಗಮಾಂಬಾ ಸತ್ಪತಿವ್ರತೆಗೆ ಸವಡಿಸತಿಯರ ಕಾಣೆವು (ತಿಮ್ಮಸ್ತ್ರೀ. ಪೀಠಿಕಾ ಸಂಧಿ. ೧೨). [ಸವಡಿ$_1$ + ಸತಿ$_1$]

**ಸವಡಿಸರ** (ನಾ). ಜೋಡೆಳೆ ಹಾರ; ಎರಡೆಳೆ ಸರ : ಕಡೆದ ಪವಳದ ಸವಡಿಸರಗಳನು ಕಟ್ಟಿ . . . ಸಿಂಗರಿಸಿ ಕಳಿಪುವೆನು (ಗೀತಗೋ. ೮-೫).

[ಸವಡಿ$_1$ + ಸರ$_3$]

**ಸವಡಿಸೀರೆ** (ನಾ). ಒಂದರ ಜೊತೆಯ ಮತ್ತೊಂದು ಸೀರೆ; ಜೊತೆಜೊತೆಯಾದ ಸೀರೆ : ಅವಳ ದೈವೋದಯವದ್ಯೆಸಲೆ ಸವಡಿಸೀರೆಯ ಸುತ್ತು ಸಡಿಲದು ನಿವಗದಾಗಳೆ ಮಱೆದು ಹಿಂಗಿದುದೆಂದನಾ ಕರ್ಣ (ಕುವ್ಯಾಸ. ೧೬-೫).

[ಸವಡಿ$_1$ + ಸೀರೆ$_2$]

**ಸವಡಿಸು** (ಕ್ರಿ). ೧. ಎರಡರಷ್ಟಾಗು ; ದ್ವಿಗುಣಗೊಳ್ಳು : ಪಾರ್ಶ್ವಂಗಳಿಂ ನೂಲ್ದೆಗೆದತ್ತಂಬಂತೆ ಪಾ[ಶ್ಚಾತ್ಯದೆ] ಸವಡಿಸಿತೆಂಬಂತಿರೆ . . . ಬಂದುದಿಂದ್ರಾಯುಧಾಶ್ವಂ (ಕಾದಂಪೂ. ೪೫೬). ೨. ಜೊತೆಗೂಡು; ಒಂದೆಡೆ ಸೇರು: ದಾದಿಯರಿಕ್ಕೆಲಂಗಳೊಳ್ ಸವಡಿಸಿ ಸಾರ್ಚೆ ದಟ್ಟಡಿಯೊಳೆಟ್ಟಿರುತಿರ್ದನನಾರ ಬೊಪ್ಪನೀ ಕವಡೆಯ ಬೊಪ್ಪನೆಂದು ನಡೆ ನೋಡಿದರ್ (ಸೂಕ್ತಿಸು. ೬-೬೬). ೩. ಕೂಡಿಸು; ಸೇರಿಸು; ಜೋಡಿಸು : ಬಲುವಿಡಿಯ ಬಿಲು ವಾಮದಲಿ ಬೆರಳೊಳಗೆ ಸವಡಿಸಿ ತೆಗೆವ ತಿರುವಿನ ಹಿಳುಕು ನಿಮಿರಿದ ತೋಳ ತೋಱಿಕೆ ಬಲದ ಭಾಗದಲಿ (ಕುವ್ಯಾಕ. ೨೬-೨೩); ಪೂವಿನ ಬಿಲ್ಗೆ ಸವಡಿಸಿದ ತುಂಬಿ ಮುಡಿವಾಳಗಳ ಸಿಂಜಿನಿಯ ಮಂಜುಳಾಂಗಂ ಮೆಱೆದನು (ಚಬಪು. ೩೫-೫); ಸವಡಿಸಿ ಬಿಡು ಬಲೆಗಳನಾಗವಿಯೊಳಗಿಹ ಚಿತ್ರಕಾಯಗಂ ಸೂಕರಗಂ (ನನ್ನಚಾ. ೪-೨೬). ೪. ಹೊಂದಾಣಿಕೆ ಮಾಡು; ಸಮನ್ವಯಗೊಳಿಸು : ಹಾಲು ಕಾಸಲಿಕ್ಕೂ ಹುರುಳಿ ಹುರಿಯಲಿಕ್ಕೂ ಸರಿಯಾಗದೆ, ಅವನ್ನು ಸವಡಿಸಲಿಕ್ಕೆ ಯತ್ನಿಸುವಲ್ಲಿ ಒಂದು ಒರೆಯಲ್ಲಿ ಎರಡು ಕತ್ತಿಗಳನ್ನು ಸಿಕ್ಕಿಸಿಡಲಿಕ್ಕೆ ಪೇಚಾಡುತ್ತೇನೆ (ಕಂನಾಸಾ. ೧೨). ೫. (ಧ್ವನಿಯನ್ನು) ಎರಡೆರಡು ಸಲ ಮಾಡು : ಛಿಅನೆ ತೆಂಗಿನ ಪತ್ರದಂದದಿಂ ಸವಡಿಸಿ ಚಚ್ಚಲಚ್ಚಲಲ ಚಚ್ಚಲ ಚಚ್ಚಲಲೆಂದು ಬೈದು ಪಾಟವದೊಳೆ ಪಕ್ಕಿ ಸೋದು ಬೆಳೆಗಾಯ್ವುದು ಪಾಮರಕಾಮಿನೀಜನಂ (ಸೂಕ್ತಿಸು. ೪-೬೩). 'ಜವಳಿಸು' ಪರಾ.

[ಸವಡಿ$_1$ + -ಇಸು$_3$]

**ಸವಡು$_1$** 'ಸೊವಡು' ನೋ.

**ಸವಡು$_2$** 'ಸವಡಿ$_1$' ನೋ.

**ಸವಡು$_3$**, ಸವಣು, ಸವುಡು, ಸೌಡು (ನಾ). ೧. ಪುರಸತ್ತು; ಬಿಡುವು : ಸಾಹೇಬರಿಗೆ ಗೃಹಕೃತ್ಯದ ವಿಷಯದಲ್ಲಿ ತಲೆ ಖರ್ಚು ಮಾಡಲು ಸವಡಿರಲಿಲ್ಲ (ದೀಪಹ. II, ೩೬೪); ನನಗಾದರೂ ಸವಡು ಎಲ್ಲದೆ ಹೇಳಿರಿ (ಭಾರತಿ. ೧೧೯). ೨. ಅವಕಾಶ; ಸಂಧಿ : ಆಗ ನಾಲ್ವರನ್ನೂ ಒಂದೇ ಗುಡಿಸಲಲ್ಲಿ ಹಾಕಿದ್ದರಿಂದ ನಮಗೆ ಮಾತನಾಡಲಿಕ್ಕೆ ಸವಡು ದೊರೆಯಿತು (ಮೇದಿಮು. ೧೧೫); ನಾಳೆ ಗೀಳೆ ಸವಡು ನೋಡಿಕೊಂಡು ನಿಮ್ಮ ಮನೇಕಡೇನೂ ಬರತಿದ್ದೆ! (ವ್ಯನಿ. ೧೪೨). ೩. ಸೂಚನೆ; ತಿಳಿವಳಿಕೆ : ವರ್ಣನ ಬರಿಯುವದಕ್ಕೆ ಅಡಚಣೆ ಇದ್ದ ಪಕ್ಷದಲ್ಲಿ ಅಮೂಕಥಾಪಿನ ಅಥವಾ ಅಂಥಾದರದ್ದು ಹೀಗೆ ಸವಡು ನಮಗೆ ಕೊಟ್ಟ ಪಕ್ಷದಲ್ಲಿ ಫಾಯಿದೆಯಾಗಿ ಸೊಯಿ ಉಳಿಯುವುದು (ಮುಂಬವ್ಯಾ. ೬೪). **ಸವಣು** : ೪. ಖಾಲಿ ; ತೆರವು: ಕದವನು ತೆಗೆಯಲು ಕೈಯೊಂದು ಸವಣಿಲ್ಲ ಈರಯ್ಯ ಮಗ ತೊಡೇ ಮೇಲೆ ಮಲಗವ್ನೇ (ನಾಪದ. ೧೦೩). ೫. ಸಾಧನ ; ಮಾರ್ಗ : ಆದನ್ನು ತಪ್ಪಿಸಲೂ ಚಿಕಿತ್ಸೆಮಾಡಲೂ ರೋಗಿಯನ್ನು ಚೆನ್ನಾಗಿ ಚೇತರಿಸುವ ಸವಣುಗಳಿವೆ (ಕವಿಕೋ. I, ೪೬೫). **ಸವುಡು** : ೧. ಬಾನುಲಿ ಅಧಿಉಪಅಧಿಕಾರಿಗಳಿಗೆ ಮಾತಿಗೊಮ್ಮೆ ಕೈಮುಗಿದು ನಗಲು ಸಹ ಸವುಡಿಲ್ಲವಾಯಿತು (ಹುಚ್ಚುಹು. ೧೯); ನಿನಗೂ ಸವುಡಿಲ್ಲ ಶಾಂತಿಗೂ ಸವುಡಿಲ್ಲ (ಜನಿವಾ. ೧೮). **ಸೌಡು** : ೩. ಮುನಿಸಿಪಾಲ್ಟಿಯ ಕೆಲಸಗಳಾದರೂ ಚೌಡಪ್ಪನವರ ಸೌಡಿಗೆ ಸರಿಯಾಗಿ ನಡೆಯುತ್ತಿದ್ದವು (ಹಳ್ಳಹಾ. ೧೬). [← ಮರಾ. ಸವಡ, ಸಂವಡ]

**ಸವಡುಮರ** (ನಾ). ಒಂದು ಬಗೆಯ ಮರ : "ಮಹಾಶರಃ – ಸವಡುಮರ" (ಓಷಧಿ. ೧೧೬). [ಸವಡು$_7$ + ಮರ$_1$]

**ಸವಡುಮ್ಮತ್ತ**, ಸವುಡುಮ್ಮತ್ತ (ನಾ). ಒಂದು ಬಗೆಯ ದತ್ತೂರ: "ರಾಜದುತ್ತೂರಃ – ಸವಡುಮ್ಮತ್ತ" (ಓಷಧಿ. ೧೩೮). **ಸವುಡುಮ್ಮತ್ತ** : "ರಾಜಸ್ವರ್ಣಃ – ಸವುಡುಮ್ಮತ್ತ" (ಓಷಧಿ. ೧೩೬). [ಸವಡು$_7$ + ಉಮ್ಮತ್ತ]

**ಸವಡುರೊಟ್ಟಿ** (ನಾ). ಪದರಗಳನ್ನುಳ್ಳ ಒಂದು ಬಗೆಯ ಭಕ್ಷ್ಯ : ನವನೀತಮಂ ಕೆನೆಯುಮಂ ಕಣಕಮಂ ಸವೆವಂತೆ ಕುಟ್ಟಿ . . . ಸಕ್ಕರೆದುಪ್ಪಮಿಕ್ಕಲವು ತಾಂ ಸವಡುರೊಟ್ಟಿ ಪೆಸರಂ ಪಡೆದವು (ಸೂಪಶಾ. ೧-೧೨).

[ಸವಡು$_2$ (< ಸವಡಿ$_1$) + ರೊಟ್ಟಿ]

**ಸವಡೋಲು** (ನಾ). ಆನೆಯ ಮೇಲೆ ಕುಳಿತುಕೊಳ್ಳಲು ಹಾಕುವ ಅಂಬಾರಿ; ಹೌದಾ: ರಾಜಭೂವರರು ಖಾಸಾಆನೆಗಳಿಗೆ ಶಿಲೆಬಖ್ತರ ಅಂಬಾರಿಗಳು ಸವಡೋಲು ಹಾಕಿಸಿ, ತರಕಷಿ ಕಮಾನುಗಳನ್ನು ಆ ಸವಡೋಲಿನಲ್ಲಿಡಿಸಿ . . . ಪೇಷಖಾನೆಯನ್ನು ಹೊರಗೆ ಹಾಕಿಸಿದರು (ಬಖ್ಖರು. ೧೩).

[?./ ತಮಿ. ಚವುಟೋಲ್; ತೆಲು. ಚವುಡೋಲು, ಚೌಡೋಲು]

**ಸವಣ₁** 'ಶ್ರವಣ₁' ನೋ.

**ಸವಣ₂, ಸಮಣ** (ನಾ). ೧. ಸಂನ್ಯಾಸಿ; ಮುನಿ; ಯತಿ. ೨. ಜೈನಸಂನ್ಯಾಸಿ; ಕ್ಷಪಣಕ : ಅರಸಿಯೊರ್ವ ಸ[ಪಾಠಾಂ. ಶ್ರ]ವಣಂ ಬಂದೊಡಾತನಂ ಕಂಡು ಕರುಮಾಡದಿಂದಿೞಿದು ಪರಿದು ಬೞಿಯಂ ತಗುಳ್ದು . . . ಪೋರುತ್ತಿರ್ಪೊಳ್ (ವಡ್ಡಾರಾ. ೧೧೭-೨೨); ನಾಲ್ವರ್ ಸವಣ [ಪಾಠಾಂ. ದಿಗಂಬರ]ರ್ ಸೈತೆ ತನ್ನ ಮನೆಗಾಗಿ ಬರ್ಪುದಂ ಕಂಡು (ಪಂಚತಂ. ೧೯೧-೧೨); ನಮೋಸ್ತುಗಳೆಂದು ಸವಣರ್ಗೆ ಪೆಸರಾಯ್ತು (ಶಮದ. ೭೫ ಪ್ರಯೋ.). ೩. ಬೌದ್ಧಸಂನ್ಯಾಸಿ; ಬೌದ್ಧಭಿಕ್ಷು: ಮನೆಯತ್ತಲ್ ಪಾರುವುದರ್ಕೆ ಕಡಂಗಿದನಂ ಚಿತ್ತದೆ ತಿಳಿದಂ ಸವಣನದೊರ್ವಂ (ಸೌನಂದ. ೮-೧). ೪. ಜೈನಮತಕ್ಕೆ ಸೇರಿದವನು; ಜೈನ: ಸವಣರಾ ಪೇಟೆಯೊಳು ದಿವಸ ಸಂತೆಯ ಶಬ್ದನಿವಹ ಪೂರೈಸಿದೇಕಾಂತದೊಳಗೆನ್ನನವಧರಿಸು ಗುರುವೆ (ಮೈಲಾರ. ೪೭-೭೭).
**ಸಮಣ** : ೨. ತಿಪ್ಪೆಯೂರೊಳ್ಸಮಣರ ಕಯ್ಯೊಳಿಗ್ಗೆXX (ಎಕ. III, ಸಂಜನ. ೧೩೯-೨೮; 915?).

**ಸವಣಗೆಯ್, ಸವಣನ ಕೆಯ್** = ಜೈನಸಂನ್ಯಾಸಿಗಳಿಗೆ ದಾನವಾಗಿ ಕೊಟ್ಟ ಭೂಮಿ ; ಸಂನ್ಯಾಸಿಹೊಲ (?) : ಬಡಗಣ ಸೀಮೆ ಪಿರಿಯ ವಟ್ಟ ಪಡುವಣಸೀಮೆ XXXಸವಣಗೆಯ್ಯ ಮೇಲೆ (ಸೌಇಇ. XX, ೨೪೭-೪೪; 1087); ತೆಂಕಲಾದಿಯ ಬಟ್ಟೆಯ ಮೇರೆ ಪಡುವ ಸವಣನ ಕೆಯ್ಯ ಮೇರೆ (ಎಕ. VII, ಶಿಕಾರಿ. ೩೦-೨೯; 1031).
**ಸವಣನ ಕೆಱೆ, ಸವಣುಗೆಱೆ, ಸವಣ್ಗೆಱೆ** = ಜೈನಸಂನ್ಯಾಸಿಗಳಿಗಾಗಿ ನಿರ್ಮಿಸಿದ ಕೆರೆ (?) : ಊರಿನ್ದಂ ಮೂಡಣದೆಸೆಯಿಂ ಸವಣನ ಕೆಱೆಯ ಕೆಳಗೆ ಗಳ್ದೆ ಗಳೆಯಲು ಮತ್ತರು ೨ (ಎಕ. VII, ಶಿಕಾರಿ. ೫೭-೬೬; 1115); ಬಸದಿಗೆ ಬಿಟ್ಟ ಸವಣುಗೆಱೆಯ ಸೀಮಾಸಮ್ಮಂಧವೆನ್ತೆನ್ಡೊಡೆ (ಎಕ. XII, ಚಿಕ್ಕನಾ. ೨೧-೬೫; 1160); ನಡುಮುಗುನ್ದದ ವಾಯವ್ಯದ ಮೊದಲ ಸವಣ್ಗೆಱೆಯುಮದಱ ಬಡಗಣ ಗದ್ದೆಯುಮವರ್ಕ್ಕೆ ಸೀಮೆ (ಸೌಇಇ. XI-i, ೭೮-೪೯; 1045). **ಸವಣನ ಬಿಲಿಲ್** = ಸವಣಗೆಯ್ : ಸವಣನ ಬಿಳಿಲೊಳ್ ಬಿಟ್ಟಳ್ ಭುವನಸ್ತುತೆ ಮತ್ತಮೊಪ್ಪೆ ಸಲೆ ಪನ್ನೆರಡಂ (ಎಕ. VIII, ಸೊರಬ. ೨೩೩-೩೪; 1139); ಸುಗ್ಗಿಯಬ್ಬೆ ಎಂಬ ರಾಣಿಯು 'ಸವಣನ ಬಿಳಿಲಲ್ಲಿ' (ಬಿಳಿಲು – ಬೀಳಿಲು = ಗೋಮಾಳ) ಹನ್ನೆರಡುಮತ್ತರನ್ನು ಬಿಟ್ಟುಕೊಟ್ಟಿರುವುದು ಮೇಲಿನ ಅಭಿಪ್ರಾಯಕ್ಕೆ ಪೋಷಕವಾಗಿದೆ (ಕಶಾಅ. ೩೬೭). **ಸವಣ್ಬಲ್ಲರ ದೇವ** = ಶ್ರೇಷ್ಠನಾದ ಜೈನಮುನಿ : ಭೂವಿನುತಂ ರೂವಾರಕಳಾವಿದ ಜಿನ್ನೋಜನಗ್ರಪುತ್ರಂ ಚಾವಂ ಕೇವಳಮೆ ಸವಣ್ಬಲ್ಲರ ದೇವಂ ರಾಜೋಜನಿವರ್ಗಳೆಸೆದರ್ದ್ದರೆಯೊಳ್ (ಎಇ. XVI, ೪೦-೭೦; 1153).

[< ಪ್ರಾ. ಸವಣ, ಸಮಣ./ ಸಂ. ಶ್ರವಣ, ಶ್ರಮಣ]

**ಸವಣ₃** (ನಾ). ೧. ಕೇಳುವುದು ; ಶ್ರವಣ : "ಶ್ರವಣಂ ಸವಣಂ" (ಕರ್ಣಾನಿ. ೭೧); "ಸವಣ – ೧ ಶ್ರವಣ (= ಕ್ಷಪಣ)" (ತದ್ಭಕೋ. ೪೩). ೨. "ಕಿವಿ" (ಪ್ರಭಣ್ಣ): ಅದವರ ತಪ್ಪಲ್ತು . . . ಸವಣದೊಳೀಳ್ದ ಪೊಸಮಿಸುನಿಯ ಸಲಿಗೆಯಂತೆಯುಂ . . . ಆದ್ಯಂತ ದೋಳೀಕನಾದಮೆನಿಸುವ ತಾನದ ಸವಿಯ ಬಲ್ಪಿನ ತಪ್ಪೆಂದು ತಿಳಿಯವೇಳ್ಪುದು (ಚಿಕವಂ. ೧೭೯-೧೭). [< ಪ್ರಾ. ಸವಣ./ ಸಂ. ಶ್ರವಣ]

**ಸವಣಱೆ** (ನಾ). ಒಂದು ಸ್ಥಳದ ಹೆಸರು (?) : ತಸ್ಯ ಸೀಮಾನ್ತರಂ . . . ಪಡುವಾಯ್ಸವಣಱೆಯುಂ ಪುಲ್ಪದಿಯುಂ ಬಡಗಾಯ್ಸಾಮೆ ತೆಂಕಾಕೆಱೆಯ ಕಡೆಗೋಡು ಕಿಱುವಡಿಯೂರ ಪಾಲನೂರ ಪೇರೊಟ್ಟೆ (ಎಕ. IX, ನೆಲಮಂ. ೬೧-೭೧; 802). [?]

**ಸವಣಿ** (ನಾ). (ಜೈನ ಅಥವಾ ಬೌದ್ಧ) ಸಂನ್ಯಾಸಿನಿ ; ವಿರಕ್ತೆ : ಸವಣಂಗೆ ಸವಣಿಯಾಯಿತ್ತು ಮಾಯೆ (ಮಹಾದೇ. ಬ. ೧೮-೨೭).

[ಸವಣ₂ + - ಇ₂./ ಪ್ರಾ. ಸಮಣೀ./ ಸಂ. ಶ್ರಮಣೀ]

**ಸವಣಿಸು** 'ಸಮನಿಸು' ನೋ.

**ಸವಣು** 'ಸವಡು₃' ನೋ.

**ಸವಣೂರಿ** (ನಾ). ಒಂದು ಬಗೆಯ ನಾಣ್ಯ ; ಹದಿನೆಂಟು ಬಗೆಯ ವರಹಗಳಲ್ಲೊಂದು : ಬ್ರಿಟಿಷ ಸರಕಾರದ ಅಮಲಿನ ಆರಂಭದಲ್ಲಿ . . . ೧೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡೆಯುತ್ತಿದ್ದುವು. ಅವುಗಳ ವಿವರ - ೧ ಗಜಪತಿ . . . ೧೮ ಸವಣೂರಿ, ರೂ-೩ (ಕಭಾಗ. ೨೮೦). [?]

**ಸವಣ್ತಿ** (ನಾ). ಜೈನಸಂನ್ಯಾಸಿನಿ ; ಕಂತಿ : ನೋಡ ವಿಧಾತ್ರನ ಗೊಡ್ಡಮನಾಡಿದುದಂ ಮುದುಸವಣ್ತಿ[ಪಾಠಾಂ. ಮುದುಕಿಸವಣಿ, ಮುದುಪಸವಣಿ]ಯೊಳ್ ಕಿತ್ತಯ್ಯಂ ಕೂಡಿದನೆಳಯಬ್ಬೆಯೊಳಂ ಕೂಡಿದನಾ ಮುತ್ತಸವಣನುಂ ತಾನೆನುತುಂ ಅಂತಾ ಮೂವರುಮೇಡಿಸಿ ನಗುತ್ತುಂ ಪೋಗೆ (ಜೀವಸಂ. ೯೧-೩೭).

[< ಸವಣ₂ + - ತಿ₁ (< -ಇತ್ತಿ)]

**ಸವಣ್ಬಟ್ಟ** (ನಾ). [ಜೈನ] ಸಂನ್ಯಾಸಿಗಳಿಗೆ ಮಾಡುವ ಉಚಿತಸೇವೆ; ಶ್ರವಣರಿಗಾಗಿ ಮಾಡುವ ಬಿಟ್ಟಿಕೆಲಸ : ದೇವಶಾಸ್ತ್ರವನಂಗಳ್ಗೆ ಮೂವತ್ತೆರಡು ದೋಷಂಗಳಕ್ಕುಮೆಂತೆನೆ ಅರ್ಥಿಯಿಲ್ಲದುದುಂ . . . ಸವಣ್ಬಟ್ಟೆಯಂ ಕಳಿಪುವೆನೆಂದು ಮಾಳ್ಪುದುಂ . . . ಹಾಡುತ್ತಂ ಮಾಳ್ಪುದುಮೆಂದಿವು ಮೂವತ್ತೆರಡು ದೋಷಂಗಳಪ್ಪುವು (ಪಸಾರ. ೩೪೦). [< ಸವಣ₂ + ಬಿಟ್ಟ₁]

**ಸವಣ್ಮನೆ** (ನಾ). ಜೈನದೇವಾಲಯ ; ಚೈತ್ಯಾಲಯ; ಬಸದಿ: "ಸವಣ್ಮನೆ ಬಸದಿಯೆನಿಕ್ಕುಂ" (ಚತುನಿ. ೯೯); ಅರಮನೆಗಲ್ತು ಸೂಳೆಮನೆಗಲ್ತು ಸವಣ್ಮನೆಗಲ್ತು ಕೂಡೆ ಬಲ್ಲರ ಬಗೆಗಲ್ತು ವಸ್ತುಕೃತಿಯಂ ಸಲೆ ಪೇೞ್ವುದು ಕಲ್ತು ಪೇೞದಂದರ ಮನೆಗಲ್ತು ಸವಣ್ಮನೆಗಲ್ತು ಕೂಡೆ ಬಲ್ಲರ ಬಗೆಗಲ್ತದಾವೆಡೆಗಮಲ್ತದು ಕಲ್ಪಿ ವಲಂ ಕವೀಂದ್ರರಾ (ಕಾವ್ಯಾವ. ೨೦೫). [< ಸವಣ₂ + ಮನೆ]

**ಸವತಳಿಸು** 'ಸವದಳಿಸು' ನೋ.

**ಸವತಿ, ಸೌತಿ** (ನಾ). ೧. ತನ್ನ ಗಂಡನ ಇನ್ನೊಬ್ಬಳು ಹೆಂಡತಿ; ಸಪತ್ನಿ : "ಕೃತ ಸಾಪತ್ನಿಕಾ ಅಧ್ಯೂಢಾ ಅಧಿವಿನ್ನಾ – ಈ ೩ ಸವತಿ" (ನಾಚಿರಾ. ೧೧೭); ನಿನ್ನ ರತ್ನಕಂಬಳಮಂ ಪೊದೆದು ಮನೆಗೆ ವಂದೊಡೆ ಸವತಿಯೊಳಪ್ಪ ಶಂಕೆಯಿಂದೆನ್ನ ಭಾರ್ಯೆ ಕುಬೇರಶ್ರೀ ಮಾಡದ ಮೇಗಣಿಂದಂ ತನ್ನಂ ನೆಲಕ್ಕಿಕ್ಕಿ ಬಿಟ್ಟು ಸತ್ತಳ್ (ವಡ್ಡಾರಾ. ೩೯-೧೭); ಶ್ರೀವನಿತೆಗೆ ನಿಜವಿಜಯಶ್ರೀವನಿತೆಯೆ ಸವತಿಯಾಗೆ (ಗದಾಯು. ೪-೧); ಎನ್ನ ಆಪತ್ತು ಸುಖದುಃಖವನಿನ್ನಾರಿಗೆ ಹೇಳುವೆ ಶರಣಸ್ಥಳದವರೆಗೆ ಹೇಳಿದರೆ ಮಚ್ಚರ ಸವತಿ ಸಕ್ಕರೆ ಬೇವು ಬೆಲ್ಲ ಉಂಟೆ ಇನ್ನಾರಿಗೆ ಹೇಳುವೆ (ಬಸವ. ೩೮೪). ೨. (ಅಲಂ) ವಿರೋಧಿಯಾದವಳು; ಹಗೆ : ಅಂಗನೆಯರ್ಕಳ ಸವತಿ ಜರಾಂಗನೆ ತಾನವಳ ಸವತಿ ಸಂದಿರ್ದ ನಿಯತ್ಯಂಗನೆಯಾ ಸವತಿಯುಮಂ ಪಿಂಗಿಸಿ ಪುದುವಾೞ್ವೆನಕ್ಕೆ ಮುಕ್ತ್ಯಂಗನೆಯೊಳ್ (ಅಜಿಪು. ೨-೭೫); ಬವರ ಮುಱಿದುದು ವಿಜಯಲಕ್ಷ್ಮಿಯ ಸವತಿ ಸೇರಿತು ಸುಭಟರಿಗೆ (ಕುಮ್ಮಾಕ. ೧೧-೪೧). **ಸೌತಿ.**

**ಸವತಿಕಣ್ಣು** = (ಅಲಂ) ಮತ್ಸರದ ನೋಟ ; ಮಾತ್ಸರ್ಯದ ದೃಷ್ಟಿ : ಅದರ ಮೇಲೂ ಸರ್ಕಾರದ ಸವತಿಕಣ್ಣು (ಕನ್ನನು. ೧-೨೬, ೧೯೩೮-೩೯). **ಸವತಿಕೈ** = (ಅಲಂ) ಬೇರೆಯ ಬೀಗದ ಕೈ ; ಮತ್ತೊಂದು ಬೀಗದ ಕೈ : ಒಟ್ಟಿಗೆ ನಿಮ್ಮ ಮನೆಯ ಎಲ್ಲ ಕೀಲಿಗಳ ಸವತಿಕೈಗಳು ನನ್ನ ಬಳಿಯಲ್ಲಿವೆ (ಕಳ್ಳಕಾ. ೬೧). **ಸವತಿಗಂಧವಾರಣಜಿನಾಲಯ** = ಹೊಯ್ಸಳವಿಷ್ಣುವರ್ಧನನ ಮಹಾರಾಣಿ ಶಾಂತಲೆಯು ಶ್ರವಣ ಬೆಳುಗೊಳದ ಚಿಕ್ಕಬೆಟ್ಟದಲ್ಲಿ ಶಾಂತಿಜಿನನಿಗಾಗಿ ಕಟ್ಟಿಸಿದ, ಆಕೆಯ ಬಿರುದುಸೂಚಿತವಾಗಿರುವ ಒಂದು ಬಸದಿ ,- ಚೈತ್ಯಾಲಯ : ಶಾಂತಲಾದೇವಿ . . . ಶ್ರೀ ಬೆಳ್ಗೊಳದ ತೀರ್ಥದೊಳ್ ಸವತಿಗಂಧವಾರಣಜಿನಾಲಯಮಂ ಮಾಡಿಸಿ . . . ಬಿಟ್ಟ ದತ್ತಿ (ಎಕ. II, ೧೩೨-೪೩; 1123). **ಸವತಿಗಂಧವಾರಣದ ಬಸದಿ** = ಸವತಿಗಂಧವಾರಣಜಿನಾಲಯ : ಶಾಂತಲಾದೇವಿಯರು ತಾವು ಮಾಡಿಸಿದ ಸವತಿಗನ್ಧವಾರಣದ ಬಸದಿಗೆ . . . ಬಿಟ್ಟ ದತ್ತಿ (ಎಕ. II, ೧೩೨-೫೦; 1123). **ಸವತಿಗಂಧವಾರಣೆ** = ಸವತಿಯರ ಅಹಂಕಾರವನ್ನು ಆನೆಯ ಹಾಗೆ ನಿಯಂತ್ರಿಸುವವಳು,— ಹೋಗಲಾಡಿಸುವವಳು ; ಹೊಯ್ಸಳ ವಿಷ್ಣುವರ್ಧನನ ಹೆಂಡತಿ ಶಾಂತಲೆಯ ಒಂದು ಬಿರುದು : ಸಮ್ಯಕ್ತ್ವಚೂಡಾಮಣಿಯುಂ ಉದ್ವೃತ್ತ ಸವತಿಗಂಧವಾರಣೆಯುಂ . . . ಅಪ್ಪ . . . ಪಟ್ಟಮಹಾದೇವಿ ಶಾಂತಲಾದೇವಿ (ಎಕ. II, ೧೩೨-೩೯; 1123); ಹೊಯ್ಸಳ ಪಟ್ಟದರಸಿ ಶಾಂತಲಾದೇವಿ ಉದ್ವೃತ್ತ ಸವತಿಗಂಧವಾರಣೆಯಂತೆ (ಸವತಿ. ೨೨೬). **ಸವತಿಗಂಧಹಸ್ತಿಬಸದಿ** = ಸವತಿ ಗಂಧವಾರಣಜಿನಾಲಯ : ಏಳಸನ ಕಟ್ಟವ ಕೆಱೆಯಾಗಿ ಕಟ್ಟಿಸಿ ಸವತಿಗಂಧಹಸ್ತಿ ಬಸದಿಗೆ ಸರುಗಿಗೆ ದೇವಿಯರು ಜಿನಾಲಯಕ್ಕೆ ಬಿಟ್ಟರು (ಎಕ. II, ೧೩೨-೪೯; 1123).

**ಸವತಿಮದಭಂಜನಿ** = ಸವತಿಯ ಗರ್ವವನ್ನು ಭಂಗಿಸುವವಳು ; ಸವತಿಯ ಸೊಕ್ಕನ್ನು ಮುರಿಯುವವಳು ; ಒಂದು ಬಿರುದು : ದ್ವಿತೀಯಲಕ್ಷ್ಮೀವಿಳಾಸ ವಿದ್ಯಾಧರಿ ದಾನಚಿನ್ತಾಮಣಿ ಸವತಿಮದಭಂಜಿನಿ . . . ಶ್ರೀಮತ್ಪಿರಿಯರರಸಿ ಮೈಳಲಮಹಾದೇವಿಯ[ರು]ಮಂ (ಸೌಇಇ. XI-i, ೧೦೩-೧೬; ಸು. 1070). **ಸವತಿಯ ತನಯ** = ಗಂಡನ ಬೇರೆ ಹೆಂಡತಿಯ ಮಗ ; ಬಲಮಗ : "ಸವತಿಯ ತನಯಂ ಸಾಪತ್ನ್ಯನಂತವಂ ದಾಯಾದ್ಯಂ" (ವಸ್ತುಕೋ. ೫೫-೧೯). **ಸವತಿಯ ಮಗ, ಸವತಿಮಗ** = ಸವತಿಯ ತನಯ : ಸವತಿಯ ಮಗನಂ ಬೇಡಿಕೊಳ್ವಂತೆ (ಧರ್ಮಾಮೃ. ೭-೯೭); ಗಾಂಗೇಯಂ ಜ್ಯೇಷ್ಠನುಂ ಸಮರ್ಥನುಮಾಗಿಯುನ್ನತನಾಗೆ ರಾಜ್ಯಮನೊಪ್ಪಿಸಿ ದುಪಕಾರಕ್ಕಂ ಸವತಿಯ ಮಗನಾಗಿಯುಂ ಸ್ತ್ರೀಸಂಪರ್ಕವಿದೂರನಾಗಿ ಭವಮಂ ಕಳೆವುದಕ್ಕಂ ಕೊಕ್ಕರಿಸಿ (ಬಂಹರಿ. ೧೧-೭ ವ); ವೈರಿ ಬೇರುಂಟೆ ಲೋಕದಿ ಸವತಿಮಗನಿಗಿಂ? (ಶ್ರೀರಾಮಾ. ೬೨-೫೫೦); ಸಾವು ತನಕ ಬಿಡದು ಸವತಿಮಕ್ಕಳ ಜಗಳ (ಜನಗೀ. ೬೩).

**ಸವತೀಮದಭಂಜನೆ** = ಸವತಿಮದಭಂಜಿನಿ : ರಾಯಜಗದಳಮ[ನೋಜ][ರತಿ] ಮಚ್ಚರಿಪ ಸವತೀಮದಭಂಜನೆ (ಎಇ. XXVIII. ೩೫-೩೮; 1082). **ಸೌತಿಭಂಗಾರ** = ಉಪ್ಪಾರರ ಮತ್ತು ಕುರುಬರ ಕುಲಗಳಲ್ಲಿ ವಿಧುರನಾದವನು ಮರುಮದುವೆ ಮಾಡಿಕೊಳ್ಳುವಾಗ ಕೊಡಬೇಕಾದ ಹಣ (ಎಸಮ್ಮ. XXI, ೬). **ಸೌತಿಹೊನ್ನು** = ಸೌತಿಭಂಗಾರ: (ಎಸಮ್ಮ. I, ೧೫). [< ಸಂ. ಸಪತ್ನೀ./ ಪ್ರಾ. ಸವತ್ತೀ./ ತಮಿ. ಚವತ್ತಿ; ತುಳು. ಸವತಿ; ತೆಲು. ಸವತಿ, ಸವತಾಲು./ ಹಿಂ. ಸವತ್, ಸೌತ್; ಮರಾ. ಸವತ್, ಸವತೀ]

**ಸವತಿಮಚ್ಚರ** (ನಾ). ಸಪತ್ನಿಯರಲ್ಲಿ ಪರಸ್ಪರವಿರುವ ಮಾತ್ಸರ್ಯ ,— ಹೊಟ್ಟೆಕಿಚ್ಚು : ಸವತಿಮಚ್ಚರದಿಂ ತನಗಾತ್ಮಜಾತರಿಲ್ಲದ ಘನಕೋಪದಿಂ . . . ಕಾಳಿ ನೂಂಕಿದಲೊಡಸಂದು ಬಂದ ತೋಜೆಯೊಳ್ ಮಗನಂ ಪಗೆಯೆಂಬ ಮಾಲ್ಕೆಯಿಂ (ದಶಕು. ೫-೫೯); ಸವತಿಮಚ್ಚರ ಸಖಿಯು ಬಾಧೆಯ ಪವನನುರುವಣೆಯಿಂದ ಪೆರ್ಚೆಯು (ನಾಗಪ. ೪-೧೯). [ಸವತಿ + ಮಚ್ಚರ]

**ಸವತಿಮತ್ಸರ** (ನಾ). = ಸವತಿಮಚ್ಚರ : ಸವತಿಮತ್ಸರ ಎಂತಹ ಕೆಳೆತನವನ್ನಾದರೂ ಮುರಿದೀತು (ಶಾಂತಲಾ. ೪೮); ಸಣ್ಣ ಸೀರೆಯೋಳೆ ಸವತಿಮತ್ಸರದೋಳೆ . . . ನನ ಕಂಡರ್ಯಾಕೆ ಮುಖಮುನಿಸು (ಪಳ್ಳಿಯ. ೧೦೫). [ಸವತಿ + ಮತ್ಸರ]

**ಸವತಿಮಾತ್ಸರ್ಯ** (ನಾ). = ಸವತಿಮಚ್ಚರ : ಚಂಪಕೆಯು ತನ್ನ ಸವತಿಮಾತ್ಸರ್ಯದಿಂದ ಮಾತಂಗಿನಿಯನ್ನು ಹೊರದೂಡಬೇಕೆಂದು ಗಂಡನಲ್ಲಿ ಹಟಮಾಡಿದಳು (ಬಂಕಿಮ. ೪೦). [ಸವತಿ + ಮಾತ್ಸರ್ಯ]

**ಸವತಿವಾೞ್** (ನಾ) ಸಪತ್ನಿಯರ ಜೊತೆಯಲ್ಲಿ ನಡೆಸುವ ಸಹಜೀವನ ; ಸವತಿಯರ ಜೊತೆಯ ಸಹಬಾಳ್ವೆ: ಚದುರೊಳ್ ಜವ್ವನದೊಳ್ ವಿಳಾಸ ದೆಡೆಯೊಳ್ ಮತ್ತೊರ್ವಳೆನ್ನಲ್ಲಿಲ್ಲದಲೇನಿಂದ್ರನೊಳಾದ ಬಾೞ್ ಸವತಿವಾೞೇ ಪೊಲ್ಲದಾನೊಲ್ಲೆ (ಬಂಹರಿ. ೩-೩೪). [ಸವತಿ + ಬಾೞ್$_3$]

**ಸವತುರಂಗಮ** (ನಾ). ಯಜ್ಞದ ಕುದುರೆ ; ಯಾಗದ ಅಶ್ವ : ಸವತುರಂಗಮ ದೊಡನೆ ನೀನೇ ಬಂದೆಯಾಯೆಡೆಗೆ (ತಿಮ್ಮಕ. ೭-೧೧೬). [ಸಂ.]

**ಸವತೆ$_1$** 'ಸವುಂತೆ' ನೋ.

**ಸವತೆ$_2$** (ನಾ). ಸಮ ; ಮಟ್ಟಸ : ಅಟ್ಟಿ ನೋಡಿಸು ಮನುಜರ ನಮ್ಮ ದೊರೆ ಬಂದ ಬಟ್ಟೆಯು ಕಾನನಂಗಳನು ಕುಟ್ಟಿಸಿ ಬಂದನೆ ಸವತ ಮಾಡದೆ ನುಗ್ಗುಗುಟ್ಟಿ ಬಂದನೊಯೆಂಬುದನು (ನಾಗಕು. ೧೮-೪೫). [ಸವ$_1$ + -ತೆ$_3$]

**ಸವತೆಕಾಯಿ** 'ಸವುತೆಕಾಯಿ' ನೋ.

**ಸವತ್ಸ** (ಗು). ೧. ಕರುವಿನಿಂದ ಕೂಡಿದ : 'ಸವತ್ಸಸುರಭಿ' ಪರಾ. (ನಾ). ೨. ಕರುಗಳೊಡಗೂಡಿದವನು ; ಕೃಷ್ಣ : ಭವದೀಯಮನೋಹರಬಾಲ್ಯ ವಿನೋದಾಮೃತದೊಳೆಯ್ದೆ ತೀವಿದ ಮತ್ಸ್ವಾಂತವನಿಂತೀ ವಿಷದಿಂ ತೀವುವುದೇ ಶ್ರೀವತ್ಸ ವತ್ಸ ವತ್ಸ ಸವತ್ಸಾ (ಜಗಪಿ. ೩-೯೩). [ಸಂ.]

**ಸವತ್ಸನಿವಹ** (ನಾ). ೧. ಕರುಗಳ ಗುಂಪು , — ಸಂದಣಿ. ೨ . ಕರುಗಳೊಡ ಗೂಡಿದವನು; ಕೃಷ್ಣ: ಪೊಕ್ಕಂ ವ್ರಜಮಂ ಸವತ್ಸನಿವಹಂ ವಿಕ್ರಾಂತಚಕ್ರಾಯುಧಂ (ಜಗಪಿ. ೩-೧೧೫). [ಸಂ.]

**ಸವತ್ಸಸುರಭಿ** (ನಾ). ಕರುವಿನಿಂದ ಕೂಡಿದ ಹಸು : ಅಗಳಂಗರಾಜಂ ತನ್ನಂ ಪರಿಚ್ಛೇದಿಸಿ ನೇಸಱ್ ಮೂಡೆಯಾಜ್ಞಾಪೇಕ್ಷಣಂಗೆಯ್ದು ಸವತ್ಸಸುರಭಿಯನಭಿವಂದಿಸಿ (ಪಂಪಭಾ. ೧೨-೧೧೮ ವ). [ಸಂ.]

**ಸವದಳಿಸು, ಸವತಳಿಸು** (ಕ್ರಿ). ಸವರು ; ತೀಡು (?) : ಮರುತನಲವಿರಳತ್ವವನೇನ ಹೇಳುವೆ ಸವದಳಿಸಿ ಮದ್ದಳೆಯ ಲೆಕ್ಕದೆ ಕೊರಳಗಿಕ್ಕಿಹುದು (ಸಂಭಪ. ೫-೧೦). **ಸವತಳಿಸು:** ಸವತಳಿಸಿ ಮಾರ್ತಿರುವಿನಲ್ಲಿ ಸಂತವಿಸಿಕೊಂಡರ್ಜುನನು ದ್ರೋಣನ ನವನಿಶಿತಬಾಣೌಘದಲಿ ಹೂಳಿದನು ನಿಮಿಷದಲಿ (ಕುಮ್ಮಾದ್ರೋ. ೯-೪೭). [< ಸಮತಳಿಸು]

**ಸವದೆ$_1$** 'ಸೌದೆ$_1$' ನೋ.

**ಸವದೆ$_2$** 'ಸೌದೆ$_2$' ನೋ.

**ಸವನ$_1$** (ನಾ). ಯಮ; ಪಿತೃಪತಿ : "ಸವನ — ಶಮನ = ಯಮ (೨ ಸ್ನಪನ)" (ತದ್ಭಕೋ. ೪೩). [< ಸಂ. ಶಮನ]

**ಸವನ$_2$** (ನಾ). ೧. ಸೋಮಲತೆಯಿಂದ ರಸವನ್ನು ತೆಗೆಯುವಿಕೆ : "ಸುತ್ಯಾ, ಅಭಿಷವಃ, ಸವನಂ — ೩ ಸ್ನಾನಕ್ಕೂ ಸೋಮಲತೆಯನ್ನು ಕುಟ್ಟಿ ರಸ ಹಿಂಡುವದಕ್ಕೂ ಹೆಸರು" (ಸಿದ್ಧಾಂತಿ. ೨೪೯). ೨. ಯಜ್ಞ ; ಯಾಗ : ಅಂಗಜಮರ್ದನಾರ್ಚನೋತ್ಸವ ಸವನಪ್ರದೀಕ್ಷಿತನಂ . . . ಈಗಳೆನ್ನ ಬಗೆಯುಂ ಬಯಸಿರ್ದಪುದು (ರಾಜಶೇ. ೩-೭೦). ೩. ಹವಿಸ್ಸು ; ಆಹುತಿ : 'ಪ್ರಾತಃಸವನ' ಪರಾ. ೪. ಸ್ನಾನ ; ಮಜ್ಜನ : ಸವನಂ ಸವನಂ ಕೃತಕಂಜವನಂ ಜವನಂತೆ ವನಿತೆಗಾಯ್ತು (ಲೀಲಾವ. ೯-೧೩೩); ಸವನದಿನಂಗರಾಗ ಮುಮಲಕ್ತಕರಾಗಮುಮೆಯ್ದೆ ಪೋಗಲ್ (ಜಗಪಿ. ೧೪-೧೧೦). ೫. ಹೋಮದ ಅಗ್ನಿ : ಸವನಂ ಸವನಂ ಕೃತಕಂಜವನಂ ಜವನಂತೆ ವನಿತೆಗಾಯ್ತು (ಲೀಲಾವ. ೯-೧೩೩). ೬. ಮಂಗಳಕರವಾದ ಜಲ, ಹಾಲು ಮುಂತಾದ ದ್ರವವನ್ನು ದೇವರಿಗೆ ಎರೆಯುವುದು ; ಅಭಿಷೇಕ : ಘೃತಕ್ಷೀರದಧಿ ನಾಳಿಕೇರತೋಯಾಮ್ರರಸೇಕ್ಷುರಸ ಗಂಧೋದಕಾದಿಗಳಿಂ ಮಾಡುವ ಸವನಮುಂ (ಆದಿಪು. ೧೫-೧೩ ವ); ತ್ರಿದಶಪತಿ ಪಾರಿಜಾತಪ್ರದನಾಗದೊಡಾಧಿಪತ್ಯಸವನಮದಿನ್ನಾಗದು ತನ್ನಗಾರಿಗಾಗಿಪ್ಪುದು ಧಾರಾಖಡ್ಗಸವನಮಂ ಮತ್ಪಡ್ಗಂ (ಜಗಪಿ. ೧೩-೩೦); ಸವನಗಂಧಾಂಬುಪ್ರವಾಹದಿ ದಿವಿಜಗಜ ನೀರಾಟವಾಡಿಯೆ ದಿವಿಜರಙಿಕೆಯ ಗಂಧಸಿಂಧುರವೆನಿಸಿದುದು (ಸಾಳ್ವಭಾ. ೩೩-೭೦). ೭. ಅಭಿಷೇಕ : 'ಸವನೋದಕ' ಪರಾ. [ಸಂ.]

**ಸವನಕರ್ತೃ** (ನಾ). ಯಾಗವನ್ನು ನಡೆಸುವವನು ; ಯಾಗದ ಮುಖಂಡ : ಶಿವಶಿವಾ ತಪ್ಪಾಯ್ತು ಮಿಗಿಲಾ ಸವನಕರ್ತೃವಿಗಿಂತ ನಿಜನಾಮವನು ಕೀರ್ತಿಸುವಾ ಶ್ವಪಚನತ್ಯುತ್ತಮೋತ್ತಮನು (ನಿಭಾಗ. ೩-೧೫-೨೪). [< ಸಂ. ಸವನಕರ್ತೃ]

**ಸವನಸಾಪೇಕ್ಷ** (ನಾ). ಯಜ್ಞಕಾಲದಲ್ಲಿ ಹೋಮಕ್ಕೆ ಉಪಯೋಗಿಸುವ ವಸ್ತು : ಇವೆ ಮಹಾಮಂತ್ರಾಸ್ತ್ರಸಂತತಿಯಿವೆ ಮಹಾಧನುರಾಜ್ಯಸತ್ಕೃತಿಸವನ ಸಾಪೇಕ್ಷಂಗಳಿವೆ (ಕುಮ್ಮಾಗ. ೪-೩೭). [ಸಂ.]

**ಸವನಸ್ಥಾನ** (ನಾ). [ಜೈನ] ಜನ್ಮಾಭಿಷೇಕದ ಸ್ಥಳ : ಭಾರತಾಪರವಿದೇಹೈರಾವತ ಪ್ರಾಗ್ವಿದೇಹಲಸದ್ಭೂತಜಿನವ್ರಜಕ್ಕೆ ಸವನಸ್ಥಾನಂಗಳೀ ಶೈಳದೊಳ್ (ಪುಷ್ಪಪು. ೧೦-೫೮). [ಸಂ.]

**ಸವನಿಸು** 'ಸಮನಿಸು' ನೋ.

**ಸವನೆಲ** (ನಾ). ಸಮತಟ್ಟಾಗಿರುವ ಭೂಮಿ ; ಸಪಾಟಾದ ನೆಲ ,— ಪ್ರದೇಶ : ಭೂಮಿಯು ಸವನೆಲವುಳ್ಳದ್ದು, ಇಲ್ಲವೆ ತೆರೆಗಳ ಹಾಗೆ ಏರಿಳಿತಗಳುಳ್ಳದ್ದು (ಕಭಾಗ. ೬). [ಸವ$_1$ + ನೆಲ]

**ಸವನೋತ್ಸವ** (ನಾ). ೧. [ಜೈನ] (ಮದುವೆ ಮುಂತಾದ ಸಂದರ್ಭಗಳಲ್ಲಿ ಮಾಡಿಸುವ) ಮಂಗಳಸ್ನಾನದ ಸಮಾರಂಭ : ಮೃಗನೇತ್ರ ಮನಂಗೊಂಡಳ್ ಮಲಯಜಜಮುಕರ್ದಮಕಲಿತಸಲಿಲಸವನೋತ್ಸವದೊಳ್ (ಪಂರಾಮಾ. ೫-೪೦). ೨. ಮಂಗಳಕರವಾದ ಜಲ, ಹಾಲು ಮುಂತಾದುವುಗಳನ್ನು ದೇವರಿಗೆ ಎರೆಯುವ ಸಮಾರಂಭ ; ಅಭಿಷೇಕ ಮಾಡುವ ಉತ್ಸವ : ಅರಮನೆಯೊಳಗಣ ಜಿನಮಂದಿರಕ್ಕೆ ನಡೆತಂದು . . . ಶಾಂತೀಶ್ವರಂಗೆ ಪದಪೂದವೆ ಮಾಡಿ ಸವನೋತ್ಸವಮಂ (ಪಂರಾಮಾ. ೧೪-೮೩); ಎಸೆವ ಜಿನೇಂದ್ರಬಿಂಬಮನಳುಂಬಮಿದೆಂಬಿನಮುಣ್ಮೆಯಿಂ ಪ್ರತಿಷ್ಠಿಸಿ

ಮನವಾರೆ ಮಾಡಿ ಸವನೋತ್ಸವಮಂ (ಚಂದ್ರಪ್ರ. ೪-೬೯). ೩. (ಜಿನಶಿಶುವಿನ) ಜನ್ಮಾಭಿಷೇಕದ ಸಮಾರಂಭ ; ಜನ್ಮಸವನ : ಪಾಲ್ಗಡಲ ನೀರ ಪರಿವ ಪೊನಲ್ಗಳ್ . . . ಎಱಗಿದುವಾ ಜಿನೇಂದ್ರಸವನೋತ್ಸವದೊಳ್ (ಶಾಂತಿಪು. ೧೧-೫೧); ಗಂಧರ್ವದೇವದೇವೀಬಂಧುರಸಂಗೀತತುಂಗಮಂಗಳರವಸಂಬಂಧಂ ತೀವಿರ್ದುದು ದಿಕ್ಸಂಧಿಗಳೊಳ್ ಜಿನನ ಜನನಸವನೋತ್ಸವದೊಳ್ (ಬಾಹುಪು. ೮-೧೧೩). [ಸಂ.]

**ಸವನೋದಕ** (ನಾ). (ಜಿನನ) ಅಭಿಷೇಕದ ಜಲ,— ನೀರು : ಭುವನಂ ಪವಿತ್ರಮಾದುದು ಸವನೋದಕದಿಂ ದ್ವಿತೀಯತೀರ್ಥೇಶ್ವರನಾ (ಅಜಿಪು. ೪-೭೫); ಇದು ಭುವನಾಧಿಪತ್ಯ ಸವನೋದಕದಿಂ ಗಡ ಪೂತಮಾದುದು (ಗದಾಯು. ೮-೩೮). [ಸಂ.]

**ಸವಬೆಸ$_1$** (ನಾ). ಸಮಾನವಾದ ಕಾರ್ಯ : ಎವಗೆ ತವಗೆಂದೀ ಹವಿರ್ಭಾಗವನು ಮುತ್ತಿತು ದೇವತತಿ . . . ದಿವಿಜರೊಳಹಸುಗೆಗಳ ಲೆಕ್ಕದ ಸವಬೆಸನ ಸವಿವಾಯ ತುತ್ತಿನ ತವಕಿಗರು ಹೊಯ್ದಾಡಿದರು ಸಭೆಯಲಿ ಸುರೇಶ್ವರನ (ಕುವ್ಯಾಸ. ೭-೬೯). [ಸವ$_1$ + ಬೆಸ$_1$]

**ಸವಬೆಸ$_2$** 'ಸವ$_1$' ಪರಾ.

**ಸವರಣೆ** 'ಸಂವರಣೆ$_1$' ನೋ.

**ಸವರನ್** 'ಸವರನ್ನು' ನೋ.

**ಸವರನ್ನು, ಸವರನ್** (ನಾ). ೧. "ಇಂಗ್ಲೆಂಡಿನ ಒಂದು ಪೌಂಡು ಚಿನ್ನದ ನಾಣ್ಯ ; ಸವರನ್ನು" (Sovereign. ೫೦೫೧). ೨. ಸುಮಾರು ಎಂಟು ಗ್ರಾಂಗಳಷ್ಟು ಚಿನ್ನದ ಒಂದು ತೂಕ ಮತ್ತು ಆ ತೂಕದ ಚಿನ್ನದ ಬಿಲ್ಲೆ; ಪವನು: ಒಂದು ಬೊಗಸೆ ಸವರನ್ನಾದರೂ ನಿಮ್ಮ ಕೈಯಿಗೆ ಬೀಳೋ ಹಾಗೆ ಮಾಡುತ್ತೀನೆ (ಉಮಾಶಿ. ೩). **ಸವರನ್** : ೨. ಸವರನ್ ಬೆಲೆ ಹೇಗಿದೆ ವಿಚಾರಿಸಿ ಬರೆಯಿರಿ (ಕೊಸಪ್ಪ. ೧೭); ಈ ಕಾಸಿನಿಂದಲೇ ಬಂಗಾರದ ಸವರನ್ ಬೇಕಾದರೂ ಮಾಡಬಹುದು (ಸ್ವಾಮಿಸ್ಟೀ. ೭೯). [<— ಇಂ. Sovereign]

**ಸವರಿಸು$_1$** 'ಸಮಱಿಸು' ನೋ.

**ಸವರಿಸು$_2$** 'ಸಂವರಿಸು$_1$' ನೋ.

**ಸವರು$_1$** 'ಸಮಱು' ನೋ.

**ಸವರು$_2$** 'ಸಮರು' ನೋ.

**ಸವರ್ಣ** (ಗು). ೧. ಒಂದೇ ಬಣ್ಣದ ; ಸಮಾನವರ್ಣದ. ೨. ಒಂದೇ ಜಾತಿ ಅಥವಾ ವರ್ಗಕ್ಕೆ ಸೇರಿದ. (ನಾ). ೩. 'ಸ' ಎಂಬ ಅಕ್ಷರ. ೪. ಹೋಲಿಕೆ ; ಸಾದೃಶ್ಯ. ೫. ಸಮರೂಪವುಳ್ಳದ್ದು ; ಏಕರೂಪತೆಯನ್ನು ಹೊಂದಿರುವುದು. ೬. [ವ್ಯಾಕ] ಒಂದೇ ಗುಂಪಿಗೆ ಸೇರಿದ ಸ್ವರ : ತರದಿನಕಾರಂ ಮೊದಲಾಗಿರೆ ಪದಿನಾಲ್ಕುಂ ಸ್ವರಂಗಳಾದಿಯ ಪತ್ರಕ್ಕರಮುಂ ಸಮಾನಮೆನಿಸುಗುಮೆರಡೆರಡವಱೊಳ್ ಸವರ್ಣಮೆಂತೋದಿದೊಡಂ (ಶಮದ. ೬). [ಸಂ.]

**ಸವರ್ಣದೀರ್ಘಸಂಧಿ** (ನಾ). [ವ್ಯಾಕ] "ಸವರ್ಣಸ್ವರಗಳಿಗೆ ಸಂಧಿಯಾದಾಗ ಎರಡಕ್ಕೂ ಒಂದೇ ದೀರ್ಘಸ್ವರವು ಆದೇಶವಾಗುತ್ತದೆ. ಇದಕ್ಕೆ ಸವರ್ಣ ದೀರ್ಘಸಂಧಿಯೆಂದು ಹೆಸರು" (ಮಧ್ಯಮ. ೧೭೧). [ಸಂ.]

**ಸವರ್ಣವಿಧಾನ** (ನಾ). [ವ್ಯಾಕ] ಸಂಧಿಯಾಗುವಾಗ ಘಟಿಸುವ ಸವರ್ಣ ಸಂಜ್ಞೆಯ ಕ್ರಮ : ಕ್ರಮದಿಂ ಹ್ರಸ್ವಕ್ಕಂ ಹ್ರಸ್ವಮೊದವೆ ದೀರ್ಘಕ್ಕೆ ದೀರ್ಘಮೊದವೆ ತಗುಳ್ಗುಂ ಸಮಸಂದಾ ಯುಗಳಂಗಳೊಳಮಱಿಸಮಾಗೆಲ್ಲಿಯುಂ ಸವರ್ಣವಿಧಾನಂ (ಶಮದ. ೭). [ಸಂ.]

**ಸವರ್ಣಸಂಜ್ಞೆ** (ನಾ). [ವ್ಯಾಕ] ಸವರ್ಣ ಎಂಬ ಹೆಸರು : ಆ ಪತ್ರಕ್ಕರಂಗಳ್ ಅನುಲೋಮದೊಳಿರ್ದೊಡಂ ಸವರ್ಣಸಂಜ್ಞೆಯಂ ಪಡೆಗುಂ (ಶಮದ. ೬ ವೃತ್ತಿ). [ಸಂ. ಸವರ್ಣಸಂಜ್ಞಾ]

**ಸವರ್ಣಸ್ವರ** (ನಾ). [ವ್ಯಾಕ] ಒಂದೇ ಗುಂಪಿಗೆ ಸೇರಿದ ಸ್ವರ : ಅಕಾರಕ್ಕೆ ಅಕಾರವಾಗಲಿ ಆಕಾರವಾಗಲಿ ಸವರ್ಣಸ್ವರ ; ಆಕಾರಕ್ಕೂ ಹಾಗೆಯೇ. ಇದರಂತೆಯೇ ಇ ಈ ಉ ಊ ಋ ೠ ಇವು ಸವರ್ಣಸ್ವರಗಳ ಜೋಡಿಗಳು (ಮಧ್ಯಮ. ೧೭೧ ಅಡಿ.). [ಸಂ.]

**ಸವರ್ಣೀಯ** (ನಾ). ೧. ಬಿಳಿಯನಲ್ಲದ (ಮುಖ್ಯವಾಗಿ) ನೀಗ್ರೋಜನಾಂಗಕ್ಕೆ ಸೇರಿದ ವ್ಯಕ್ತಿ ; ಕಪ್ಪುಜನಾಂಗಕ್ಕೆ ಸೇರಿದವನು : ದಾರಿಗಳ ಮೇಲೆ ಸಿಕ್ಕುವ ಬಿಳಿಯರಂತೂ ತಾನೊಬ್ಬ ಸವರ್ಣೀಯನೆಂದು ಅನುಮಾನದ, ಅಸಡ್ಡೆಯ ದೃಷ್ಟಿಯಿಂದ ಕಾಣುವರು (ಹೊಸಕ. ೨೨೮). ೨. (ಭಾರತೀಯಸಂದರ್ಭದಲ್ಲಿ) ಚತುರ್ವರ್ಣ ಗಳಲ್ಲಿ ಯಾವುದಾದರೂ ಒಂದು ವರ್ಣಕ್ಕೆ ಸೇರಿದ ವ್ಯಕ್ತಿ. ೩. ಒಂದೇ ವರ್ಣಕ್ಕೆ ಸೇರಿದ ವ್ಯಕ್ತಿ; ಸಮಾನವರ್ಗಕ್ಕೆ ಸೇರಿದವನು: ಅವರಿಬ್ಬರೂ ಸವರ್ಣೀಯರು (ರೂಢಿ). [ಸಂ.]

**ಸವಲಕ್ಕಿ** 'ಸೋಗಿಲಕ್ಕಿ' ನೋ.

**ಸವಲಕ್ಕೆ** 'ಸವಾಲಕ್ಷ' ನೋ.

**ಸವಲತ್ತು, ಸೌಲತ್ತು** (ನಾ). ೧. ಸೌಕರ್ಯ ; ಅನುಕೂಲತೆ : ಜಮೀನ್ದಾರರ ಮಕ್ಕಳಿಗಿರುವ ವಿಶೇಷ ಸವಲತ್ತು ತಮಗೆ ಯಾಕಿಲ್ಲ? (ಚಿರಸ್ಮ. ೧೦೮); ಭಾರತೀಯ ಹಾಗೂ ಐರೋಪ್ಯ ಖೈದಿಗಳ ಸವಲತ್ತುಗಳಲ್ಲಿ ಅಜಗಜಾಂತರ ಇತ್ತು (ಆತ್ಮಾಪ. ೧೨೭). ೨. ಅವಕಾಶ; ಆಸ್ಪದ: ಸಮೀಪದ ಸ್ಥಳಗಳಿಗೆ ಕಾವಲಿನೊಡನೆ ಹೋಗುವ ಸವಲತ್ತು ಇತ್ತು (ಮೀದಿಮ. ೧೭೪). ೩. ರಿಯಾಯಿತಿ : ಯುದ್ಧ ಮುಗಿದ ನಂತರ ಸರಕಾರೀನೌಕರರಿಗಾಗಿ ಈ ಸವಲತ್ತನ್ನು ಕೊಡಮಾಡಿದೆ (ಸಮುಸಾ. ೧೨೪). **ಸೌಲತ್ತು** : ೧. ಏನೋ ಅವರಿದ್ದಾರಂತ ನಮ್ಮ ಜನಕ್ಕೆ ಸ್ವಲ್ಪಿಲ್ಲ ಸ್ವಲ್ಪ ಸೌಲತ್ತು ಸಿಕ್ಕಾವೆ (ನೀನಮು. ೧೯೧); ಬೀಬೀರಾಣಿಯು . . . ತನ್ನ ರಾಜ್ಯದಲ್ಲಿ ಸೇಟರ ವ್ಯಾಪಾರಕ್ಕೆ ಏನಾದರೂ ಸೌಲತ್ತುಗಳು ಬೇಕಾದಲ್ಲಿ ಒದಗಿಸುವುದಾಗಿ ವಚನವಿತ್ತಳು (ದೌಲತ್. ೨೦೯). [<— ಅರ. ಸುಹಲತ್; ಪಾರ. ಸೋಹಲತ್; ಮರಾ. ಸವಲತ್, ಸೋಹಲತ್, ಸೋಹೋಲತ್, ಸೌಲತ್]

**ಸವಲತ್ತುಕೊಡು** (ಕ್ರಿ). ೧. ಅನುಕೂಲ ಮಾಡಿಕೊಡು : ಇಂಥಾ ಪುಂಡರಿಗೆಲ್ಲಾ ಅವರು ಸವಲತ್ತು ಕೊಡುತ್ತಿರೂದು ಇನ್ನಾತಕ್ಕಂತ ತಿಳಿದೀ? (ಮಣ್ಣುಹ. ೬೬). ೨. ಅವಕಾಶಕೊಡು ; ಆಸ್ಪದ ನೀಡು : ಭಟ್ಟರು ಗಂಗೊಳ್ಳಿಯವರಿಗೆ ಪ್ರತಿಯೊಂದು ಮಾತಿನಲ್ಲಿ ಇಷ್ಟು ಸವಲತ್ತು ಕೊಟ್ಟದ್ದೇ ಆಶ್ಚರ್ಯ (ಆಚೋಲೀ. ೧೪೮); ನನಗೆ ಬಿದ್ದುಪಾದಾಗ ನೀರು ತಂದು ಹಾಕುವುದಕ್ಕೆ ಮಾತ್ರ ನೀವು ಸವಲತ್ತು ಕೊಡಬೇಕು (ಸ್ಮೃತಿಚಿ. ೩೦೩). ೩. ರಿಯಾಯಿತಿ ತೋರಿಸು : ನನಗ ಏನು ಸವಲತ್ತ ಕೊಟ್ಟಾಂಗ ಆತು ನೀನು (ರಕ್ತಧ್ವ. ೨೧೭). [ಸವಲತ್ತು + ಕೊಡು$_1$]

**ಸವಲೆಕ್ಕ** (ನಾ). ಒಂದೂಕಾಲುಲಕ್ಷ ; ಸವಾಲಕ್ಷ : ರಕ್ಕಸವೊಯ್ಸುಳನೆಮ್ಮಾಱಿಕ್ಕಿರವಂ ಬರೆದು ಪಟವನೆತ್ತಿದಡಿದಿರೊಳ್ ಲಕ್ಕದ ಸವಲೆಕ್ಕದ ಮುಱುವಕ್ಕಂ ನಿನ್ನವುವೆ ಸಮರಸಂಘಟ್ಟನದೊಳ್ (ಎಕ. VI, ಮೂಡಗೆ. ೧೩-೩೬; 1063). [IP ಇದು 'ಸವಲಕ್ಕ' ಎಂಬುದರ ಅಪಲಿಖಿತವಿರಬಹುದು]

**ಸವವಯಸ** (ಗು). ಒಂದೇ ಪ್ರಾಯದ : ಸವವಯಸ ದಿವಿಜಖೇಟಕ ನವಖೇಟಕನಿಕರಮಗಲದಿರಲಬ್ಧಿಯ ಮೇರುವ ಕೆಲದ ಗಿರಿಕದಂಬಕದವಕ್ಷ್ಯಂ ಪೋಲ್ತುದಾ ಕುಮಾರನ ಕೆಲದೊಳ್ (ಶಾಂತಿಪು. ೧೧-೮೧). [ಸವ$_1$ + ವಯಸ$_1$]

**ಸವಸಮಾಪ್ತಿ** (ನಾ). ಯಜ್ಞದ ಕೊನೆ ; ಯಾಗದ ಮುಕ್ತಾಯ: ಸವಸಮಾಪ್ತಿ ಯೊಳಖಿಳಸಂಯಮಿನಿವಹಕರ್ಚನ ಮಾಡಿ ಕಲಶೋದ್ಭವನು ಕಳುಹಿದರವರು ಹಿಂಸಾರಹಿತಯಜ್ಞದಲಿ (ತಿಮ್ಮ. ೮. ೯-೬೦). [ಸಂ.]

**ಸವಸರಿ** (ನಾ). ಸರಿಸಮವಾದುದು; ಸಮಾನವಾದುದು: ಹವಣಿಸಿದ ವಾಘೆಗಳ ರಾಘೆಯ ಸವಸರಿಯ ಭಾರಾಂಕಲವುಡಿಯ ಗವಿಯ ಗರುವರು ನೂಕಿದರು ತೇಜಿಗಳ ನೋಜೆಯಲಿ (ಕುವ್ಯಾಭೀ. ೪-೫೦). [ಸವ$_1$ + ಸರಿ$_5$]

**ಸವಸಲ್** (ಕ್ರಿ). ಚೆನ್ನಾಗಿ ಪ್ರಸಿದ್ಧವಾಗು; ವಿಶೇಷವಾಗಿ ಪ್ರಚಾರದಲ್ಲಿರು: ಸವಸಂದಾಯದೊಡಂ ಸಂಭವಮಾದುದು ಬಾಗಂ (ಎಕ. IV, ಹೆಗ್ಗಡ. ೧೮-೭; 1057); ಸವಸಂದ ಮುಖಂ ಪ್ರತಿಮುಖಮವಮರ್ಶಂ ಗರ್ಭಮಂತೆ ನಿರ್ವಹಣಮೆನಿಪ್ಪುವವೆಯ್ದೆ ಸಂಧಿಯಕ್ಕುಂ (ಕಾವ್ಯಾವ. ೯೫೭); ಸವಸಂದ ಕಾಲವಾಚಕಮಿವು ನಾಡಿದು ನಾಳೆ ನಿನ್ನೆ ಮೊನ್ನೆಗಳ್ (ಶಮದ. ೩೨೨). [< ಸಮಸಲ್]

**ಸವಸಿ** (ನಾ). ಒಂದು ಸ್ಥಳದ ಹೆಸರು : ಸವಸಿ ಗುಡಿಗೆಱೆಯುಮನಣುಂಗ XXX ಳಿತಮಾಳುತ್ತಿರೆ (ಎಕ. VII,ಶಿಕಾರಿ. ೧೭೮-೯; 997). [?]

**ಸವಸು₁** 'ಸಮೆಯಿಸು₁' ನೋ.

**ಸವಸು₂** 'ಸಮೆಯಿಸು₂' ನೋ.

**ಸವಸುತಿ** (ನಾ). ಒಂದೇ ಸ್ವರಸ್ಥಾಯಿ ; ಸಮಶ್ರುತಿ : ಗಾಣರ್ ಸವಸುತಿಯಿಂ ರತಿ ವೀಣೆಯನೆಟ್ಟಱಿಸಿದಂತೆ ಪಾಡಿದರಾಗಳ್ (ಪಾರ್ಶ್ವಪು. ೧೨-೨೩). [< ಸಂ. ಸಮಶ್ರುತಿ]

**ಸವಹರೆಯ** (ನಾ). ಸಮಪ್ರಾಯ ; ಒಂದೇ ವಯಸ್ಸು : ವೀರಸೇನಾನಿವಹದೊಳು ಸಹದೇವನಾತನ ಸವಹರೆಯ ನಕುಲಾಂಕನಿವರಾಹವಧುರಂಧರರು (ಕುವ್ಯಾಭೀ. ೨-೧೫).
[ಸವ₁ + ಹರೆಯ (< ಪರಯ)]

**ಸವಳ** 'ಸಬಳ₂' ನೋ.

**ಸವಳದೆ, ಸಮಳ್ತಡೆ, ಸವಳ್ತಡ, ಸವಳ್ತಡೆ** (ನಾ). ಪ್ರಾತಃಕಾಲ; ಪ್ರಭಾತ: "ಉದಯಮನುಸಿರ್ವುವು ತಿಳಿ ಸವಳದೆ ಪೊಟ್ಟಡೆನೆ ಸವಳ್ತಡೆಯೆನೆಯುಂ" (ಶಮದ. ೩.೨೧); ಸವಳದೆ ದುಗ್ಧಾಮಯ ರುಧಿರವಸಾನ್ವಿತಮಾಗಿ ಪಂಚಪಲ್ಲವಜಲಮಂ ಪವಣಱಿದೆಱೆದೊಡೆ . . . ಕುಸುಮಿಸುಗುಂ (ಲೋಕೋಪ. ೬-೪೪); ಮೃಗಸೇನನ ಪೆಣನಂ ತೊಟ್ಟಗೆ ಸವಳದೆ ಘಂಟೆ ಕಂಡು ದುಃಖಿಸಿ (ಧರ್ಮಾಮೃ. ೧೦-೨೭೯); ಅರುವರುಂ ಪಾಳಿಯಿಂದೋರೊರ್ವರೆಯ್ತಂದು ತಂತಮ್ಮ ಸೂಳಾಳ್ಕೆಗಮರ್ದ ಸವಳದೆ ಪಗಲ್ ಬಯ್ಸು ಚೆಂದವಂ . . . ತೋರ್ಕೊಳಿಸುತ್ತೆ ಋತುಹೃದಯವುಂ ತಾಂ ಗಳುಪದೇಶಮಿತ್ತಿತ್ತು (ಸಂಸಪ. ೨೮-೧೫). **ಸಮಳ್ತಡೆ** : "ಕಾಲ್ಯಂ, ಉಷಃ . . . ಪ್ರಾತಃ, ವ್ಯಷ್ಟಂ — ಈ ೧೦ ಸಮಳ್(ಡೆ)ಱೆ" (ಹಲಾಯು. ೧೯-೧೧೧). **ಸವಳ್ತಡ**: ಹೇಮಂತನೃಪನ ಬೆಳ್ಪಸದವೋಲಾಗಳ್ಸವಳ್ತಡಂ ಮಂಜು ದೆಸೆದೆಸೆಯನಾವರಿಸಿರ್ದುದು (ಶೇಷರಾ. ೨೫-೧೦); ಪೊಟ್ಟಡಂ, ಸವಳ್ತಡಂ (ಶಬ್ದಾನು. ೨೦ ಪ್ರಯೋ). **ಸವಳ್ತಡೆ** : ಸವಳ್ತಡಿಂಗೆ, ಪೊಟ್ಟಡಿಂಗೆ, ಸವಳ್ತಡಿನ, ಪೊಟ್ಟಡಿನ (ಶಮದ. ೩.೨೧ ವೃತ್ತಿ). 'ಪೊಟ್ಟಱು' ಪರಾ. [ದೇ. ॥ ?./ ಮರಾ. ಸವಳ; ಹಿಂ. ಸವೇರಾ]

**ಸವಳಿ** 'ಸವಡಿ₁' ನೋ.

**ಸವಳಿಕೆಯ್** 'ಸವಡಿಗೆಯ್' ನೋ.

**ಸವಳು** 'ಸವುಳು₁' ನೋ.

**ಸವಳುನೀರು** 'ಸವುಳುನೀರು' ನೋ.

**ಸವಳ್ತಡ** 'ಸವಳದೆ' ನೋ.

**ಸವಳ್ತಡೆ** 'ಸವಳದೆ' ನೋ.

**ಸವಱಿಸು** 'ಸಮಱಿಸು' ನೋ.

**ಸವಱು** 'ಸಮಱು' ನೋ.

**ಸವಾ, ಸವ್ವಾ** (ನಾ). ಒಂದು ನಿರ್ದಿಷ್ಟವಾದ ಪ್ರಮಾಣ ; ಒಂದೂಕಾಲು: 'ಸವಾಸೇರು' ಪರಾ. **ಸವ್ವಾ** : ಎಂಟು ಆಣಿ ಹಿಡದು ಸವ್ವಾ ಇಂಚದವರಿಗೆ ಎರಡು ಆಣಿಯ ಅಂತರವಿರುವುದು (ಮುಂಬವ್ಯಾ. ೧೦೩). 'ಸವ್ವಾಸೇರು' ಪರಾ. [<— ಹಿಂ. ಸವಾ; ಮರಾ. ಸವಾ, ಸವಾವ್, ಸವ್ವಾ./ ಪ್ರಾ. ಸವಾಯ./ ಸಂ. ಸಪಾದ]

**ಸವಾಯಿ** (ಗು). (ಆಲಂ) ಶ್ರೇಷ್ಠವಾದ ಹುದ್ದೆಯ : ಸ್ವಾದಸಂಸ್ಥಾನದ ಸವಾಯಿ ಬಸವಲಿಂಗರಾಜರು ಕೊಡಗಿನ ಸಂಸ್ಥಾನದ ವೀರರಾಜೇಂದ್ರ ಒಡೆಯರವರ ಕ್ಷೇಮಕುಶಲವನ್ನು ಕೇಳಿದರಿಂದ (ರಾಜೇಂದ್ರ ೨೦೮).
[<— ಹಿಂ. ಸವಾಈ, ಸವಾಯ; ಮರಾ. ಸವಾಈ, ಸವಾಯ್, ಸವಾಯಿ]

**ಸವಾರ್‌ಕಚೇರಿ** 'ಸವಾರಕಚೇರಿ' ನೋ.

**ಸವಾರ, ಸುವಾರ್₂, ಸ್ವಾರ** (ನಾ). ೧. ಕುದುರೆಯ ಮೇಲೆ ಕುಳಿತು ಪ್ರಯಾಣ ಮಾಡುವವನು ; ಅಶ್ವಾರೋಹಿ : ಗುಂಡಪ್ಪ ಸವಾರನನ್ನು ಕೆಡವಿದ ಕುದುರೆಯಂತೆ ತಾನೂ ತನ್ನ ಮನೆಯ ಒಳಭಾಗಕ್ಕೆ ಹೋದ (ಕೊನಭೇ. ೪೧); ನಿಜವಾಗಿ ಆ ಕುದುರೆಯ ಮೇಲೆ ಮತ್ತೊಬ್ಬ ಸವಾರನಿದ್ದನು (ಕಳಹು. ೨). ೨. ಕುದುರೆಯ ಮೇಲೆ ಕುಳಿತು ಯುದ್ಧಮಾಡುವ ಸೈನಿಕ ; ರಾವುತ ; ಅಶ್ವಾರೋಹಿಯಾದ ಸೈನಿಕ : ಕುದುರೆಗಳ ಬೇಗದಿಂದೇರಿರುವ ತುರುಪಿನ ಸವಾರರಂ . . . ನೀ ನೋಡು (ಅರ್ಜಾವಿ. ೨೪-೪೮); ಇವನು ಮುದುಕನಾದರೂ ಒಳ್ಳೆ ಸವಾರ (ಪ್ರವಾಸ. II, ೨೭೯). ೩. ಪ್ರಾಣಿ, ವಾಹನ ಮುಂತಾದುವನ್ನು ಏರಿದವನು ; ಆರೋಹಿ : ಇಲ್ಲಿರುವ ನಾಲ್ಕು ಶಿಲ್ಪದಲ್ಲಿ ವಿವಿಧ ಪ್ರಾಣಿಗಳಲ್ಲದೆ ಅವುಗಳ ಮೇಲೆ ಸವಾರರ ಚಿತ್ರಗಳನ್ನು ಸಹ ನಾವು ಕಾಣಬಹುದು (ನೊಳಂಬ. ೧೨೩); ಸೈಕಲ್ ಸವಾರನ ಮುಖ ನೋಡಿದೆ (ನಾಪೂಲೀ. ೯೨). **ಸುವಾರ್₂** : ೨. ಹಡಪಿಗರು ಚಾಮರಿಗರೆಡೆಯಾಡುವವರು ಹೂವಾಡಿಗರು ಸುವಾರರರಸಾಳುಗಳು ಹಾವುಗೆಯ ಹಿಡಿದವರು . . . ಸೊಗಯಿಸಿದರಾ ಸೌಂದರೇಂದ್ರನಿಂಪಡರಿದೊಡ್ಡೋಲಗದೊಳು (ಸೌಂದಪು. ೬-೫೯). **ಸ್ವಾರ** : ೧. ಇದು ಅಲ್ಲಿಯ ಕುದುರೆ ಮತ್ತು ಸ್ವಾರನಿಗೂ ತಿಳಿದ ಮಾತು (ಬಂಗಾಹ. ೨). ೨. ಸರದಾರ, ಸ್ವಾರ, ಶಿಬಂದೀಜನರಿಗೆ ಹೊತ್ತುಹೊತ್ತಿಗೆ ವೇತನವು ದೊರೆಯುತ್ತಿದ್ದು . . . ಪರಚಕ್ರದ ಭಯವಿಲ್ಲದೆ ನಿರಂಕುಶಪ್ರಭುತ್ವವನ್ನು ನಡೆಯಿಸುತ್ತಾನೆ (ಮಂಜುಕ. ೧೩).
[<— ಫಾರ. ಸವಾರ್, ಸುವಾರ್; ಹಿಂ. ಸವಾರ್; ಮರಾ. ಸವಾರ್, ಸ್ವಾರ್]

**ಸವಾರಕಚೇರಿ, ಸವಾರ್‌ಕಚೇರಿ, ಸ್ವಾರಕಚೇರಿ** (ನಾ). ಅಶ್ವದಳಕ್ಕೆ ಸಂಬಂಧಪಟ್ಟ ಕಾರ್ಯಾಲಯ : ಕಂದಾಚಾರ ಸವಾರಕಚೇರಿ ಭಕ್ಷಿ ದೇವರಾಜ್ಯೆಅರಸಿನವರು ಶ್ರೀಗೋಮಟೇಶ್ವರಸ್ವಾಮಿಯವರ ಮಸ್ತಕಾಭಿಷೇಕಪೂಜೋತ್ಸವದಿವಸ ಸ್ವರ್ಗಸ್ಥರಾದ್ದಕ್ಕೆ (ಎಕ. II(R), ೩೨೪-೧೪; 1827). **ಸವಾರ್‌ಕಚೇರಿ** : ಕಛೇರಿಗಳು. ೧ ದಿವಾನ್‌ಕಚೇರಿ . . . ೬ ಸವಾರ್‌ಕಚೇರಿ. ೭ ತೋಷೇಖಾನೆ (ಮಹಾವಂ. II, ೩೮). **ಸ್ವಾರಕಚೇರಿ**: ಸ್ವಾರಕಚೇರಿ ಬಕ್ಷಿ ಭೀಮರಾಯರಿಗೆ ದಯಪಾಲ್ಸಿ ಯಿನಾಮು ಕೊಡಿಗೆ ಹತ್ತವಾಲು ಗ್ರಾಮ XXX (ಮೈಲಿ. ೧೯೪೦, ೪೯-೪; 1818). [ಸವಾರ + ಕಚೇರಿ]

**ಸವಾರಿ, ಸಾರ್ಿ₆, ಸ್ವಾರಿ** (ನಾ). ೧. ಪ್ರಾಣಿ, ವಾಹನ ಇತ್ಯಾದಿಗಳ ಮೇಲೆ ಕುಳಿತು ಸಂಚರಿಸುವುದು : ಊರ ಒಳಗೆ ಅವಳು ಕುದುರೆ ಹತ್ತುತ್ತಿರಲಿಲ್ಲ. ಸವಾರಿ ಯಾವಾಗಲೂ ಊರ ಹೊರಗೆ (ಪುಟ್ಟರ. ೨೯); ಚೆನ್ನಾಗಿ ಸವಾರಿಯನ್ನು ಬಲ್ಲವನು ಸೊಗಸಾದ ಕುದುರೆಯನ್ನು ನೋಡಿ ಇದನ್ನೇರಿ ವಿಹರಿಸದಿದ್ದರೆ ನಾನು ಸವಾರಿಯನ್ನು ಕಲಿತೇನು ಫಲ? ಎಂಬಂತೆ (ನಡದಾ. II, ೧೪೯೫). ೨. ಸಂಚಾರ; ತಿರುಗಾಟ; ವಿಹಾರ: ಭೂಪಕುಲದೀಪ ಕೃಷ್ಣೇಂದ್ರನ ಸವಾರಿಯೊಳ್ ಆ ಫಣಿಪನಾ ದಿನಪನಾ ಸುರಪನುಂ . . . ಕಾಪುರುಷರಂತೆ ತಲೆ ಕುಗ್ಗಿ ಕಾಣಿಸದೆಯುಂ (ಅರ್ಜಾವಿ. ೨೪-೫೭); ವಿದೂಷಕನಿಲ್ಲದೆ ರಾಜಾಧಿರಾಜನ ಸವಾರಿ ಹೇಗೆ ಪ್ರವಾಸರತವಾಗಬೇಕು? (ದೀಪಹ. II, ೨೩೪). ೩. ರಾಜರು ಮುಂತಾದ ಹಿರಿಯ ವ್ಯಕ್ತಿಗಳನ್ನು ಉದ್ದೇಶಿಸುವಾಗ ಬಳಸುವ ಮಾತು; ಗಣ್ಯವ್ಯಕ್ತಿಗಳನ್ನು ಗೌರವಾರ್ಥವಾಗಿ ಸಂಬೋಧಿಸುವಾಗ ಬಳಸುವ ನುಡಿ : ಪರಸ್ಥಳದ ವಿದ್ವಾಂಸರುಗಳ ಪರಿಚಯವನ್ನು ಸವಾರಿಗೆ ಮಾಡಿಕೊಡಲಾಯಿತು (ನಾಕಲಾ. ೧೦). ೪. ರಾಜರು ಮುಂತಾದ ಹಿರಿಯ ವ್ಯಕ್ತಿಗಳ ಆಗಮನವನ್ನು ಸೂಚಿಸಲು ಬಳಸುವ ಮಾತು : ಮಹಾರಾಣಿಯವರ ಸವಾರಿ ಬೇರೆ ದಯಮಾಡಿಸಿತ್ತು (ಚಕ್ರದೇ. ೧೪೯). ೫. ಮೆರವಣಿಗೆ: 'ಜಂಬೂಸವಾರಿ' ಪರಾ. ೬. ಗಾಡಿಗೆ ಕಟ್ಟುವ ಕಮಾನಿನಾಕಾರದ ಬಿದಿರಿನ ರಚನೆ : ಬಂಡಿಗೆ ಸವಾರೀ ಕಟ್ಟಿದ್ದರು. ಸವಾರಿಯ ಮೇಲೆ ಕೆಂಪುಪಟ್ಟೆಯ ಒಂದು ತೆಳುವಾದ ಗುಡಾರವನ್ನು ಬಿಗಿದಿದ್ದರು (ರಕ್ತಧ್ವ. ೧೨). **ಸಾರ್ಿ₆** : ೨. "ಸಾರಿಯೆನಲು ವಿಹಾರದೊಳ್" (ಕಶರ. ೧೦೬); ನೋಟಕಜನ . . . ಇಳೆಯಾಣ್ಮನ ಸಾರಿಯತುಲ ಸಂಭ್ರಮವ ನೋಡಳವಟ್ಟು ಸಂದಣಿಸಿದರು (ಕಂಶವಿ. ೨೨-೬೬); ಪರಮನಿತ್ತಲಪಾರ ಮೋದದೆ ವೇದವಾಜಿಯ ಸಾರಿಯಂ ಭರದೆ ಮಾಡಲ್ (ಹಾಲಾಸ್ಯ. ೪-೧೧-೬೨). **ಸ್ವಾರಿ** : ೨. ರಾಜನು ಸ್ವಾರಿಯ ಹೋಗಿಬರುವಾಗ (ಭೈರಸೂ. I, ೪೯); ದಾರಿಡಿನೊಳು ನೀಲಗಳ ಚಕ್ರವರ್ತಿ ಪಟ್ಟದ ಆನೆ ಮೇಲೆ ಕುಳಿತು ವಿನೋದದಲಿ ಸ್ವಾರಿ ಹೊರಟರಲು (ಕೂಲ್ಲಿಮಾ. ೫೩-೩); ಭೇರಿ ನೌಬತ್ತು ನಗಾರಿವಾದ್ಯವು ಭಾರಿವೈಭವದಿಂದ ಕಂಸನ ಸ್ವಾರಿ ತೆರಳಿತು (ಕರ್ನಾಕ. ೩೩೫). ೩. ಅಲ್ಲಮಪ್ರಭು ಪ್ರಾಣ ಅತಿಸುಪ್ರವೀಣ ಉಲ್ಲಾಸದಿಂ ಸ್ವಾರಿ ಅಲ್ಲಾಡುತಿರ್ದ (ಶರಲೀ. ೧೦೦-೧೮). ೪. ಬಹುದಿವಸದಿಂದ ಸ್ವಾಮಿಯವರು ಮೃಗಯಾವಿಹಾರಕ್ಕೆ ಸ್ವಾರಿಯಂ ಬೆಳೆಯಿಸಲಿಲ್ಲ (ಸೌಗಂಧಿ. ೪೭-೧೧); ಭೂಪರೊಡನೆ ಸಾರಿದರು ಚಾರಕರು ಮಿತಪರಿವಾರದೊಡವಾದ್ವಾರದಲಿ ನೃಪವೀರನೆನಿಪ ಪಲಾಂಡರಾಯನ ಸ್ವಾರಿ ನಿಂದಿಹುದೆನ್ನುತ (ಪಲಾಂಡು. ೧೦).

**ಸವಾರಿಮಾಡು** = ೧. ಪ್ರಾಣಿ, ವಾಹನ ಮುಂತಾದುವುಗಳ ಮೇಲೆ ಕುಳಿತು ಸಂಚರಿಸು : ಓಡುವ ಕುದುರೆಯನ್ನು ಕಂಡಾಗ ನಾನೂ ಸವಾರಿ ಮಾಡಬೇಕೆಂಬ ಚಪಲ ಮನಸ್ಸಿಗೆ (ಹುಚ್ಚುಹು. ೧೭); ಕುದುರೆ ಹಿಡಿದು ಸವಾರಿ ಮಾಡಲಾಗದೆ ರಾಜಾಧಿರಾಜರೆಲ್ಲ ಸತ್ತುಹೋದರು (ಕಜಕಾ. ೨೮೭). ೨. (ಆಲಂ) ಅಧಿಕಾರವನ್ನು ಚಲಾಯಿಸು ; ದಬ್ಬಾಳಿಕೆ ನಡೆಸು : ಅವನು ತನಗೆ ಖುಷಿ ಬಂದಂತೆ ನಮ್ಮ ಮೇಲೆ ಸವಾರಿ ಮಾಡುತ್ತಿದ್ದಾನೆ (ಪುನರು. ೩೯೧). **ಸ್ವಾರಿಮಾರ್ಗ** = ಸಂಚಾರದ ಮಾರ್ಗ ; ವಿಹಾರದ ದಾರಿ : ಆ ಅರಣ್ಯದಲ್ಲಿ ಅನಿಮಿಷಯ್ಯಗಳೆಂಬ ಅರಸು ಸ್ವಾರಿಮಾರ್ಗವಾಗಿ ಬರಲು (ಶರಲೀ. ೧೦೦-೧೮ ವ). [<— ಪಾರ. ಸವಾರೀ, ಸುವಾರೀ; ಹಿಂ. ಸವಾರೀ, ಸ್ವಾರೀ; ಮರಾ. ಸವಾರೀ , ಸುವಾರೀ , ಸ್ವಾರೀ./ ತಮಿ . ಚಾರಿ]

**ಸವಾರಿಗಾಡಿ** (ನಾ). ೧. ಊರಿಂದ ಊರಿಗೆ ಪ್ರಯಾಣಕ್ಕಾಗಿ ಉಪಯೋಗಿಸುವ ಗಾಡಿ ; ಕಮಾನುಗಾಡಿ : ತಿಪಟೂರು ಕುಣಿಗಲ್ಲುಗಳಿಗೆ ಈಗ ಸವಾರಿಗಾಡಿಗಳು ಹೋಗುತ್ತಿಲ್ಲ. ಸವಾರಿಗಾಡಿಗಳೇ ಊರಲ್ಲಿಲ್ಲ (ನನ್ನೂರು. ೩೧೩). ೨. ಒಂದು ಕುದುರೆಯ ಅಥವಾ ಒಂಟೆತ್ತಿನ ಗಾಡಿ; ಎಕ್ಕ: ಆ ಜಮೀನಿನಿಂದ ಬಂದ ಫಸಲನ್ನು ಮಾಲೀಕರು ದೂರದೇಶಗಳಲ್ಲಿ ಮಾರಿ ತಮಗೆ ಬೇಕಾದ ಟೋಪಿ, ನಡಗೋಲು, ಸವಾರಿಗಾಡಿ, ಕಂಚಿನ ಪ್ರತಿಮೆ ಮೊದಲಾದ ವಸ್ತುಗಳನ್ನು ಕೊಳ್ಳುತ್ತಿದ್ದರು (ಪುನರು. ೨೮೯). [ಸವಾರಿ + ಗಾಡಿ]

**ಸವಾರಿಲಾಖೆ** (ನಾ). = ಸವಾರಕಚೇರಿ : ಬ್ರಿಟಿಷ್ ಸರ್ಕಾರಕ್ಕೆ ಸಲ್ಲುವ ಪೊಗದಿ, ಕ್ಯಾವಲ್ರಿ ಎಂದರೆ ಸವಾರಿಲಾಖೆ, ಈ ಬಾಬುಗಳ ಖರ್ಚು ಹೊರತು . . . ೩°/₃ ಲಕ್ಷ ರೂಪಾಯಿ ಸಹ ಸಂದಾಯವಾಗಬೇಕೆಂದು ತೀರ್ಮಾನವಾಯಿತು (ಮಹಾವಂ. II, ೯೮).

[ಸವಾರಿ + ಇಲಾಖೆ]

**ಸವಾರುಜನ** (ನಾ). ಅಶ್ವಾರೋಹಿಗಳಾದ ಸೈನಿಕರ ಸಮೂಹ ; ರಾವುತರ ಗುಂಪು : ಹೈದರಲ್ಲಿಖಾನರಿಗೆ . . . ಸವಾರುಜನ ೫೦ ಅಹಷಾಂ ಪ್ಯಾದಿ ಜನ ೨೦೦ ಸಹಾ ನೇಮಕವಾಗಿ ಪ್ರಾಬಲ್ಯಕ್ಕೆ ಪ್ರಾರಂಭವಾಯಿತು (ಹೈದರ. ೨೩).

[< ಸವಾರ + ಜನ]

**ಸವಾಲ್** 'ಸವಾಲು' ನೋ.

**ಸವಾಲ್‌ಲಾವಣಿ** 'ಸವಾಲುಲಾವಣಿ' ನೋ.

**ಸವಾಲ್‌ಹಾಕು** 'ಸವಾಲು' ಪರಾ.

**ಸವಾಲಕ್ಷ, ಸವಲಕ್ಕೆ, ಸವಲಕ್ಷ** (ನಾ). ೧. ಒಂದು ಲಕ್ಷ ಮತ್ತು ಇಪ್ಪತ್ತೈದು ಸಾವಿರ ; ಒಂದೂಕಾಲು ಲಕ್ಷ : ಆಕೆಯೆಂದಂತೆ ಧಾರಾಪುರವೆಂಬ ಹೆಸರ ಕರೆದು ನಡಸುತ್ತ, ಆಕೆಗೆ ಸವಾಲಕ್ಷದ್ರವ್ಯವಂ ಕೊಟ್ಟು ಸುಖದಲ್ಲಿರುತ್ತ (ಭೈರಸೂ. I, ೮೯). ೨. (ಆಲಂ) ಅಪಾರವಾದ ಧನ ,— ಸಂಪತ್ತು : ಈ ಪ್ರಬಂಧಮಂ ತಿದ್ದಿ ಮುದ್ದಿಸಿ ಕೇಳ್ವರದು ಸವಾಲಕ್ಷಮೆನಗೆ (ನಂದಿಮಾ. ೧-೧೮). ೩. ಒಂದು ಲಕ್ಷ ಇಪ್ಪತ್ತೈದು ಸಾವಿರ ಗ್ರಾಮಗಳಿಂದ ಕೂಡಿರುವ ಪ್ರದೇಶ : ಸವಾಲಕ್ಷದಲ್ಲಿ ಹುಟ್ಟಿ ಸಕಲಕ್ರಮಂಗಳಲ್ಲಿದ್ದು ಭೋಗಿಸಿ . . . ವೃಥಾ ವೈಭವಕ್ಕೆ ಕೆಡುತ್ತಿದ್ದೆಯಲ್ಲಾ (ಮದೇವ. ೨೮೫-೬೦); ಹಿಮಗಿರಿಯ ದಾಂಟಿ ತಾಂ ತಿರುಗಿ ಬರುವಂ ಸವಾಲಕ್ಷ ಪರ್ವತದಲ್ಲಿ ಪರಮಮುನಿಗಳ ನೋಡಿ ತತ್ತ್ವಮಂ ಪೇಳ್ವ ಮುಕ್ತಿಯನೊಲಿದು ಕೊಟ್ಟು ಬಳಿಕ (ಚಬಪು. ೬೨-೭). **ಸವಲಕ್ಕೆ** : ೩. ನಾಗವರ್ಮವಿಭು ಸಾಧಿಸಿದಂ ಸವಲಕ್ಕೆವಿಂಧ್ಯಮಂ (ನಾಂದೇಡ್. ೩-೧೪; 1047). **ಸವಲಕ್ಷ** : ೨. ಆಸೆಯನು ಅಜಿದಿತ್ತ ವೀಸವದು ಸವಲಕ್ಷ ಆಸೆ ತಾ ತೀರ್ದ ಬಳಿಕಿತ್ತ ಲಕ್ಷವದು ವೀಸದಿಂ ಕಷ್ಟ (ಸರ್ವಜ್ಞ. ೬೪೧). [< ಸಂ. ಸಪಾದಲಕ್ಷ]

**ಸವಾಲಕ್ಷದೇಶ** (ನಾ). = ಸವಾಲಕ್ಷ೩ : ಕ್ಷೋಣಿಪ ಸವಾಲಕ್ಷದೇಶಪತಿ ಮಹಾದೇವ ರಾಣಿಯರು ಬಸವಂಗೆ ಮುಳಿದಿರದು ಬಂದು ಕಲ್ಯಾಣದೊಳು ಕಟ್ಟಿಗೆಯ ಹೊತ್ತು ಶರಣರ ಸೇವೆಯಂ ಮಾಡುತಿರೆ (ವೀಶೈಪು. ೮-೨-೬೧).

[< ಸಂ. ಸಪಾದಲಕ್ಷದೇಶ]

**ಸವಾಲು, ಸವಾಲ್** (ನಾ). ೧. ಕೇಳುವಿಕೆ ; ಪ್ರಶ್ನೆ ; ವಿಚಾರಣೆ : ಓಂದಿನ ಮನೆ ರಿಂದಮ್ಮ ಆಚೆಮನೆ ಅಕ್ಕಮ್ಮ ಎಲ್ಲರೂ ಮಾಡೋಲ್ಲವೇ ಅಂತಾ ತಾನೆ ನಿಮ್ಮ ಸವಾಲು? (ಹಸ್ನೊಂದ. ೫೮); ಹೀಗೆ ಸವಾಲು ಮುಗಿದುಹೋಗಿತ್ತು. ಅವಳಿಂದ ನಿಟ್ಟುಸಿರನ್ನು ತಂದಿತ್ತು — ತುಂಬಿದ ಬಲೂನಿನಿಂದ ಗಾಳಿ ಹೋದಂತೆ (ರಂಗನಾ. ೨೧೦). ೨. ಹೇಳಿಕೆ; ನಿರೂಪಣೆ: ಬರವಣಿಗೆಯ ಮೂಲಕ ಸವಾಲುಗಳನ್ನು ತಯಾರಿಸಿಕೊಡಬೇಕೆಂದು ಕೋರ್ಟಿನವರು ಆಜ್ಞಾಪಿಸಬಹುದು (ಗ್ರಾಮಾಕ. ೩೦). ೩. ಸ್ಪರ್ಧೆ, ವಿವಾದಗಳಿಗೆ ನೀಡಿದ ಕರೆ ,— ಆಹ್ವಾನ : ಇದು ನಿನ್ನ ಮನಃಶಕ್ತಿಗೆ ಹಾಕಿದ ಸವಾಲು ಅಂತ ತಿಳಿದುಕೊಂಡು ಅದನ್ನು ಕಾರ್ಯತತ್ಪರತೆಯಿಂದ ಎದುರಿಸಬೇಕು (ದೂರಸ. ೨೪೮); ಈ ಸಮಸ್ಯೆ ಅವನ ನಿಲವಿಗೊಂದು ಸವಾಲಾಗಿತ್ತೆಂಬ ವಿಷಯ ಸುಸ್ಪಷ್ಟವಾಗಿತ್ತು (ಪುನರು. ೪೨೬). ೪. ಸಾಧ್ಯ; ಶಕ್ಯ: ನೋಡಲಿಕೆ ಯಂತ್ರವಿದೆ. ಮನುಜನೆದೆ ತಳವಾಯ ಭಾವಶುದ್ಧಿಯನಳೆಯಲಾವ ಮಂತ್ರ-ಸವಾಲು? (ನೆಲಮು. ೬೭-೧೧). ೫. (ಹರಾಜಿನಲ್ಲಿ ಏಲಾಟದ) ಬೇಡಿಕೆ; ಮನವಿ: 'ಸವಾಲುದಾರ' ಪರಾ. ೬. "ಕೊಡಲು ಒಪ್ಪಿ ಹೇಳಿದ ಬೆಲೆ, ಸವಾಲು" (offer. ಪತ್ರಿನಿ. ೫೮). **ಸವಾಲ್**: ೩. ಸವಾಲ್‌ಗೆ ಛಡಸವಾಲ್ ಹಾಕೋಕೆ ತಕ್ಕ ಗೈರತ್ ಇಲ್ದೆ ಹಾಕ್ತಾರಾ (ಭೀಮುಕಾ. ೨).

**ಸವಾಲುಮಾಡು, ಸವಾಲ್‌ಮಾಡು** = ೧. "ಆಕ್ಷೇಪವೆತ್ತು, ವಿವಾದಕ್ಕೆ ಕರೆ, ಸವಾಲು ಮಾಡು ; ಆಹ್ವಾನಿಸು (ಉಕ)" (challenge. ಪತ್ರಿನಿ. ೧೪). ೨. ಹರಾಜಿನಲ್ಲಿ ಏಲಾಟದ ಬೇಡಿಕೆಮಾಡು : "ಇಷ್ಟು ಬೆಲೆ ಕೊಡುವೆನೆಂದು ಹೇಳು; ಸವಾಲುಮಾಡು ; (ಹರಾಜಿನಲ್ಲಿ) ಬೆಲೆ ಕೂಗು" (Bid. ೧೦೮೫); ಈ ದಿನ ಮಧ್ಯಾಹ್ನ ಪಂಚಾಯ್ತರ ಇದ್ರು ಬಹಿರಂಗ ಹರಾಜು ಮಾಡ್ತವ್ರೆ. ಯಾರ್ಯೇನಾದ್ರೂ ಸವಾಲ್ ಮಾಡಬೈದು (ಅನ್ನಾವ. ೧೨). **ಸವಾಲುಹಾಕು, ಸವಾಲ್‌ಹಾಕು** = ೧. ಪ್ರಶ್ನೆಮಾಡು ; ವಿಚಾರಿಸು; ಕೇಳು: ದಿನದ ಬದುಕೇ ಭಾರವಾದ ಜನಕ್ಕೆ ಇದೆಲ್ಲಾ ಏಕೆ ಬೇಕು ಎಂದು ಮತ್ತೊಂದು ಧ್ವನಿ ನನ್ನೊಳಗೇ ಸವಾಲು ಹಾಕಿತು (ಹಂಸಗೀ. ೧೭); ಯಾವನೋ ರಾಜಂ ವಿಷಯ ಮಾತಾಡೋವನು? ಎಂದು ಸವಾಲ್ ಹಾಕಿದ (ಸ್ವಾಮಿಸ್ಟೇ. ೪೮). ೨. ಸ್ಪರ್ಧೆ, ವಿವಾದಗಳಿಗೆ ಕರೆ ,— ಆಹ್ವಾನಿಸು : ಶಿವನಿಗೂ ಸವಾಲು ಹಾಕುವ ಸತ್ಕೋತ್ಕರ್ಷ ಉರಿಲಿಂಗಪೆದ್ದಿಯದು (ಶರಚ. ೫೦೦); ಆಗಾಗ್ಗೆ ಒಂದು ಗರಡಿಯವರು ಮತ್ತೊಂದು ಗರಡಿಯವರ ಮೇಲೆ . . . ಸವಾಲ್‌ಹಾಕುವುದು ಇವೆಲ್ಲ ಸರ್ವೇಸಾಮಾನ್ಯವಾಗಿತ್ತು (ಭೀಮುಕಾ. ೮). **ಸವಾಲಿಸೆ** = ಸವಾಲುಹಾಕು೧: ಖಾಯಿಲೆಯ ಖೈದಿಯೊಬ್ಬ ಸವಾಲಿಸೆದನು (ಪುನರು. ೫೮೪). [<— ಅರ. ಸವಾಲ್, ಸುಆಲ್; ಪಾರ. ಸುವಾಲ್, ಸುಆಲ್; ಹಿಂ. ಸವಾಲ್, ಸುವಾಲ್; ಮರಾ. ಸವಾಲ್]

**ಸವಾಲುಜವಾಬು** (ನಾ). ೧. ಪ್ರಶ್ನೆ ಮತ್ತು ಉತ್ತರ ; ವಾದವಿವಾದ : ಇಬ್ಬರೂ ಕೂಡಿದಾಗ ಸವಾಲು-ಜವಾಬಿನ ಏರಾಟ ನಡೆದು ಮಜಲು ಬಹಳೇ ರಂಗಾಗುವುದು (ದಾಸಹು. ೫೨). 'ಜವಾಬ್‌ಸವಾಲ್' ಪರಾ. ೨. ಲಾವಣಿಯ ಒಂದು ಪ್ರಭೇದ; ಪ್ರಶ್ನೋತ್ತರಗಳನ್ನೊಳಗೊಂಡ ಒಂದು ಬಗೆಯ ಹಾಡು: 'ಸವಾಲು ಪದ', 'ಸವಾಲುಲಾವಣಿ' ಪರಾ. [ಸವಾಲು + ಜವಾಬು./ ಅರ. ಹಿಂ. ಸವಾಲ್‌ಜವಾಬ್; ಪಾರ. ಸುಆಲ್‌ಜವಾಬ್, ಸುವಾಲ್‌ಜವಾಬ್]

**ಸವಾಲುದಾರ** (ನಾ). ಹರಾಜಿನಲ್ಲಿ ಬೆಲೆ ಏರಿಸಿ ಕೂಗುವ ವ್ಯಕ್ತಿ: ಮಾದಕದ್ರವ್ಯಗಳನ್ನು ಮಾರಾಟ ಮಾಡುವ ವಿಷಯದಲ್ಲಿ ಅತ್ಯಂತ ಹೆಚ್ಚಿನ 'ಸವಾಲು'ದಾರರುಗಳಿಗೆ 'ಲೈಸೆನ್ಸು'ಗಳನ್ನು ಕೊಡುವುದು ಒಂದು ಪಾಪವೆಂದು ಭಾವಿಸಿದ್ದರು (ಭಾಗ್ಯಶಿ. ೮೮). [ಸವಾಲು + -ದಾರ₄]

**ಸವಾಲುಪದ** (ನಾ). ಪ್ರಶ್ನೆಹಾಕುವ ಹಾಡು; ಸವಾಲು ಜವಾಬಿನ ಪದ ,— ಹಾಡು: ಅವರು ಹಾಡುತ್ತಿದ್ದ ಸವಾಲುಪದಗಳಿಗೆ ಇವನೂ ದನಿಗೂಡಿಸುವನು (ಬಳುಮು. ೩). 'ಸವಾಲುಜವಾಬು', 'ಸವಾಲುಲಾವಣಿ' ಪರಾ.

[ಸವಾಲು + ಪದ₂]

**ಸವಾಲುಲಾವಣಿ, ಸವಾಲ್‌ಲಾವಣಿ** (ನಾ). = ಸವಾಲುಜವಾಬು ೨: ಸವಾಲುಲಾವಣಿಗಳಲ್ಲಿ ಅಲ್ಲಲ್ಲಿ ವೀರವಾದಗಳು ಮುಂದುವರಿದು ಆಣೆಗಳನ್ನು ಇಡುವುದೂ ಉಂಟು (ಕರ್ನಾಸಂ. ೩೩). **ಸವಾಲ್‌ಲಾವಣಿ** : ಮೂರನೆಯದು ಸವಾಲ್‌ಲಾವಣಿಗಳು — ಪ್ರಶ್ನೋತ್ತರರೂಪವಾದವು (ಕರ್ನಾಸಂ. ೩೦).

[ಸವಾಲು + ಲಾವಣಿ₁]

**ಸವಾಸೇರು, ಸವ್ವಾಸೇರು** (ನಾ). ೧. ಒಂದು ನಿರ್ದಿಷ್ಟ ಪ್ರಮಾಣದ ಅಳತೆ; ಒಂದೂಕಾಲು ಸೇರು: ಮುಂದೆ ಸವಾಸೇರು ಮೂವತ್ತೆರಡು ಚತುಃಷಷ್ಟಿಯರ್ಧ ಸೇರರ್ಧಪಾವು ಸಂಧಿಸಿದ ಸೇರು ನಾಲ್ವತ್ತು ಗದ್ಯಾಣಮಂ ಬಾದಿಹದು (ಭಾಸ್ಕರ. ೭೫-೮); ಶೆಟ್ಟಿ ಸವಾಸೇರು; ಲಿಂಗ ಅಡಿಸೇರು (ಗಾದೆ). **ಸವ್ವಾಸೇರು** : ೧. ಯಾಚಕಸಮುದಾಯಕ್ಕೆ ಪ್ರತಿದಿನ ಸವ್ವಾಸೇರು ಅಕ್ಕಿ ಬೇಳೆ ಹಿಟ್ಟು ಮೊದಲಾದ ಪಾಕನಿಷ್ಪತ್ತಿಗೆ ಬೇಕಾಗುವ ಸಾಮಾನುಗಳು ಸಿಗುವಂತೆ ವ್ಯವಸ್ಥೆ ಮಾಡಿದ್ದಾನೆ (ಮಂಜುಕ. ೧೩). ೨. (ಆಲಂ) ದಾಕ್ಷಿಣ್ಯಕಸ್ವಭಾವದ ವ್ಯಕ್ತಿ (?) : ನೀ ಸೇರ ಆದರೆ ಆಕೀ ಸವ್ವಾಸೇರು (...ಪಹ. II, ೨೨೪). [ಸವಾ + ಸೇರು$_3$]

**ಸವಿ$_1$** (ಕ್ರಿ). ೧. ರುಚಿಯನ್ನು ನೋಡು, — ಪರೀಕ್ಷಿಸು; ಆಸ್ವಾದಿಸು: "ಸವಿ – ಖಾದನಪರೀಕ್ಷಾಯಾಂ" (ಶಮಧಾ); ತುತ್ತು ತುತ್ತಿಗೆ ಸವಿದು ತಣಿಯದೆ ಕಾರಿಕಾಲಮ್ಮ ಮುತ್ತ ಮಾವಿನ ಹಣ್ಣನೀಯಲು (ಬಸಪು. ೧೫-೨೫). ೨. ತಿನ್ನು; ಉಣ್ಣು ; ಮೆಲ್ಲು : ದರಿದ್ರತಾದ್ರುಮದ ಪಣ್ಪಲಮಂ ಪಲಕಾಲಂ ಪಲರೊಳಂ ಸವಿದು (ಶಾಂತಿಪು. ೪-೭೭ ವ); ರಸಂದೆಗೆವ ದನಿ ನಿಮಿರೆ ನಾಲಿಗೆ ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ (ಗಿರಿಕ. ೨-೩೯); ಕ್ಷುಧೆ ಇಲ್ಲದ ಮನುಜ ಅಮೃತಾನ್ನ ಸವಿದಪನೆ (ಪುರಂದ. ೨-೪೪-೨). ೩. (ರುಚಿಕರವಾದ ರಸವನ್ನು) ಕುಡಿ ; ಪಾನಮಾಡು; ಈಂಟು : ಸವಿವೊಡೆ ಮಧುರರಸಂಬೋಲ್ ಕಿವಿಗಿನಿದಾಗಿರ್ಪ ವಚನವಿರಚನೆ ಮಧುರಂ (ಕವಿರಾ. ೨-೭೦); ಒಂದೆ ಪಣ್ಣ ರಸಮಂ ಸವಿದಾಱದೆ ಚಂಚುವಂ ಕೆಲಕ್ಕುಯ್ಯುದುಂ (ಶಾಂತಿಪು. ೧-೭೩); ನಂಬಿ ಗುರುದೈವವನಗಸ್ತ್ಯಮುನಿಯು ತಾನಂಬುಧಿಯ ಸವಿದ (ಸರ್ವಜ್ಞ. ೪೭). ೪. (ಸುಖ, ಸಂತೋಷ ಮುಂತಾದುವನ್ನು) ಅನುಭವಿಸು ; ಭೋಗಿಸು: ನೆನಹು ನಿಲುಕದ ಸುಖದ ಸುಗ್ಗಿಯಂ ಸವಿದನೀಶನ ಕುಮಾರಂ (ಸಿದ್ಧರಾ. ೨-೧೭); ಪ್ರಿಯನ ಪರಿಹಾಸಕ್ಕೆ ಈ ಮುಗ್ಧೆ ಯಾವ ಉತ್ತರವನ್ನೂ ಕೊಡದೆ, ಅದರ ಸೊಗಸನ್ನು ಮೌನವಾಗಿ ಸವಿದಿದ್ದಳು (ಕಾವ್ಯಸ. ೪೯); ಇಂತಹ ಸುಂದರವಾದ ದೃಶ್ಯವನ್ನು ಸವಿಯಬೇಕಾದರೆ ಕವಿಹೃದಯ ಇರಬೇಕು (ಆಲಹೂ. ೯೩). ೫. ಸೇವಿಸು; ಸೇವನೆಮಾಡು; ಸ್ವೀಕರಿಸು: ಭಕ್ತಿಹೀನನ ದಾಸೋಹವ ಸದ್ಭಕ್ತರು ಸವಿಯರು (ಬಸವ. ೭೦೯); ನಿಜಜಂಗಮಪ್ರತತಿ ಸವಿದು ಮಿಕ್ಕಮಿತಪ್ರಸಾದವ ಸವಿದು ಸವಿದೋಲಾಡುತಿಪ್ಪಾ ಸವಿ ದೊರಕಿದಡೆ ಸಾಕು (ಬಸಪು. ೧೦-೪೯). ೬. ಸಂತೋಷ ಪಡು; ನಲಿ: ಸವಿದು ನೋಡುತ್ತಿರಲು ಕಣ್ಗೆ ಪೊಣ್ಮುವ ಪುಳಕ ಬೆವರೊಗಲುವುಕ್ಕುವಾನಂದಾಶ್ರು ತಂಬೆಲರು ಕವಿವ ಪರಿಣಾಮವಂ ಕಂಡು (ಹಚಕಾ. ೫-೫೯).

**ಸವಿಸವಿ$_1$** (ದ್ವಿರುಕ್ತಿ) : ಸವಿಸವಿದು ಬಿಕ್ಕಬಿಕ್ಕನೆ ಸವಿನೋಡೆನ್ನಾಣೆಯೆಂದು ರಕ್ಕಸಿಗಮದಂ ಸವಿದೋಱಿ (ಪಂಪಭಾ. ೧೨-೧೫೭); ಗುರುವಿಂಗೆ ಕೊಡುವುದು ಅರ್ಪಿತವೆ ಸವಿಸವಿದು ಕೊಡಬೇಕಲ್ಲದೆ (ಬಸವ. ೭೭೭); ಮಱಿವೆಯ ಮಬ್ಬು ಕವಿದುದು ಕರ್ಣನಾಡಿದ ಮಾತ ಸವಿಸವಿದು (ಕುಮಾರ. ೫-೧೧). [ದೇ. ‖ತಮಿ. ಚುವೈ; ಮಲ. ಚುವೆ; ತುಳು. ಸವಿಪು]

**ಸವಿ$_2$** (ನಾ). ೧. ರುಚಿ ; ಸ್ವಾದ : ಪಗೆ ಪೊಲ್ಲ ಪಾಂಡುನಂದನರೊಳಹೀಂದ್ರಕೇತನನ ಜೂದಿನ ಗೆಲ್ಲಮದೆಂತುಟೆನ್ನ ನಂಜಿನ ಸವಿಯೆಂತುಟೆಂದೊಡಿನಿಸಂತದೊಳಂತಕನಲ್ಲಿಗಟ್ಟುಗುಂ (ಪಂಪಭಾ. ೬-೭೫); ಓಡೆತ್ತ ಬಲ್ಲುದು ಅಪಲಕ್ಕಿಯ ಸವಿಯ (ಬಸವ. ೯೮). ೨. (ಸಂಗೀತ, ಸಾಹಿತ್ಯ ಇತ್ಯಾದಿಗಳ) ಮಾಧುರ್ಯ; ಮಧುರತೆ; ಇಂಪು: ಸವಿಗಿಂಪಾಗಿ ರತರಾಗದುರುಳಿವೊಲಾಗೆ ಕರಂ ಬೀಗಿ ಬಾಯ್ಗಳಂ ಚುಂಬಿಸಿದರ್ (ಕಾವ್ಯಸಾ. ೭೭೭ ಶೂದ್ರಕ); ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನಂ (ಕವಿರಾ. ೨-೧೪೭); ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆನ್ನ ಬಾಳುವೆ (ಬಸವ. ೩೫). ೩. ಸಿಹಿ; ಸ್ವಾದು : "ಮಧುರಮೆನೆ ಸವಿಯಕ್ಕು" (ಮಂಗರಾ. ೭೫-೫); ಬೆಲ್ಲದ ಸವಿಯ ಸಿಂಹದ ಕೇಸರದ . . . ಕೂಟದಂತೆ ಮಹಾಪುರುಷರ ಸಮ್ಯಕ್ತ್ವದೊಳಾದ ಕೂಟಮುಮತಿಶಯಂ (ಧರ್ಮಾಮೃ. ೫-೧೯೯); ಸಂದುಸಂದನು ಕಡಿದು ತಂದು ಗಾಣದಲಿಕ್ಕಿ ಅರೆದಡೆ ಬೆಂದು ಪಾಕಗೂಳ ಸಕ್ಕರೆಯಾಗಿ ನೊಂದೆನೆಂದು ಸವಿಯ ಬಿಟ್ಟಿತ್ತೆ (ಮಹಾದೇ. ಬ. ೨೮-೫೮); ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ ಸವಿಯು ಸಕ್ಕರೆ ಎರಡು ಜಿಹ್ವೆಯೊಳಗೊ (ಕನಕ. ೭೮-೨); ಕಬ್ಬು ಡೊಂಕಾದರೆ ಸವಿ ಡೊಂಕೇ? (ಗಾದೆ). ೪. ಮಧುರವಾದುದು ; ಇನಿದಾದುದು ; ರಸವತ್ತಾದುದು : ಅಗಲೆವೋದ ಹಂಸನನಱಸಲ್ ಪದೆದೆಳಸುವ ಪೆಣ್ಣಂಚೆಯ ಪದ ಕೊರಲಿಂಚರದ ಸರಮೆ ಸವಿ ಕಿವಿಗಿದಱೊಳ್ (ಪಂಪಭಾ. ೫-೫೭); ನುಡಿ ಸವಿ ನೋಟವೊಂದು ಸವಿ ಸೋಂಕು ದಿಟಂ ಸವಿ (ಚಂದ್ರಪು. ೮-೫೫); ಕಿವಿಸವಿ ದನಿ ಕಣ್ಸವಿ ರೂಪವಧರಿಸೆಲೆ ಗಜವೆಡಂಗ (ಯಶೋಚ. ೨-೫೨); ಹಣ್ಣು ಸವಿ ಎಂದಡೆ ವೃಕ್ಷದ ಶಾಖೆಯ ಸಂಗದಿಂದಲ್ಲದೆ ಬೆಳೆಯದು (ಶೂನ್ಯಸಂ. ೨೭೦-೪೪); ತಾಯಿಗಿಂತ ಹಿತವರಿಲ್ಲ ಸಕ್ಕರೆಗಿಂತ ಸವಿ ಇಲ್ಲ (ಗಾದೆ). ೫. ಹಿತವಾದುದು ; ಪ್ರಿಯವಾದುದು ; ಆಪ್ಯಾಯಮಾನವಾದುದು : ವಿವಿಧ ಮೋಕ್ಷಾನುಭವಸುಖದಿಂ ಸವಿಯೆನಗೆ ಖಗಮೃಗಭುಜಗಮುಖಭವಭವಂಗಳೊಳಾದೊಡಂ (ಬಸಪು. ೧೦-೪೯); ಎರಡನೆಯವರ ನಾಶದ ತಳಹದಿಯ ಮೇಲೆಯೇ ನನ್ನ ಅಸ್ತಿತ್ವದ ನೆಲೆಯಿದ್ದರೆ, ಅದಕ್ಕಿಂತ ಸಾವೇ ಸವಿಯೆಂದು ನಾನು ತಿಳಿಯುವೆ (ಪ್ರವಾತೋ. ೧೨೮). ೬. ಮಧುರವಾದ ಪದಾರ್ಥ ; ಇನಿದಾದ ಪದಾರ್ಥ : ಕುಮಾರನಂ ಕಣ್ತೀವಿ ನೋಡಿ ತೆಗೆದಪ್ಪಿ ಮುಂಡಾಡಿ ಕೊಂಡಾಡಿ ಸವಿಗಳನೂಡಿ ಸುಕುಮಾರತೆಯನುಡಿಸಿ (ನಂಬಿರ. ೨-೧೦೦). ೭. ಸಾರ; ಸತ್ತ್ವ: ಬಿರಿಯಲ್ ಪೊಂಗಿದ ಪಣ್ಗಳ ಸಿರೆಯರಿದಲ್ಲಿರಿಸಿ ಚಂಚುಪುಟದಿಂ ಸವಿಯಂ ಬರೆತೆಗೆದು ತಣಿದು ತವಕಮನರಳ್ಚುತ್ತಿರೆ ಮೆಱೆದುದಾಮ್ರದೊಳ್ ಶುಕನಿಕರಂ (ಗಿರಿಕ. ೨-೩೮); ನಮಗಿಂತ ಹೇಳಲಾಗದಷ್ಟು, ತಾಳಲಾಗದಷ್ಟು ಹೆಚ್ಚು ಸವಿಯನ್ನು ಹೀರುತ್ತಿರುವಿರಿ ನೀವು ನಿಂತ ನೆಲದಿಂದ! (ಕಲ್ಲೋಲ. ೭೨-೬). ೮. ಹಾಲು; ಕ್ಷೀರ : 'ಸವಿಗಡಲ್' ಪರಾ. ೯. ಸೊಗಸು ; ಸೊಬಗು : ಇರ್ವರುಂ ಸಮಸುಖಸರೋನಿಧಿಯೊಳೊಪ್ಪಿರಲು ಶರ್ವನಂ ಸುಖದ ಸವಿ ಹತ್ತಸಾರುತ್ತಿರಲು (ನಂಬಿರ. ೧೧-೧೩೮); ನಾನು ಪಾರ್ವತಿಯನ್ನೂ ಮದುವೆ ಮಾಡಿಕೊಳ್ಳಕೂಡದೇಕೆ? ಮಾಡಿಕೊಂಡು ಜೀವನದ ಸವಿಯನ್ನು ಕಾಣಕೂಡದೇಕೆ? (ನಿರಾತ. ೪೧). ೧೦. ಸೊಗಸಾದುದು ; ಸೊಬಗಿನಿಂದ ಕೂಡಿದುದು : ಅಸಿಯ ಜವ್ವನೆಯರ ಸಂಗಸುಖ ಬಹುಸವಿಯೆಂದು ತಲೆದೂಗುತಿಪ್ಪುವು ನೋಡಾ ಸಕಲ ಪ್ರಾಣಿಗಳು (ಅಖಂಡೇ. ೭-೫). ೧೧. ಆಸೆ ; ಚಪಲ ; ಬಯಕೆ : ಗಾಂಗೇಯನಿರ್ದಂತೆ ನೋಡ ಮರುಳ್ ಶಂತನು ತನ್ನದೊಂದು ಸವಿಗಂ ಸೋಲಕ್ಕಮಿತ್ತಂ ನಿಜಕ್ರಮಮಂ ತನ್ನಯ ಬೇಟದಾಕೆಯ ಮಗಂಗೆಂಬೊಂದಪಖ್ಯಾತಿ ಲೋಕಮನಾವರ್ತಿಸೆ ಬೞ್ದೊಡೆನ್ನ ಕುಲಮುಂ ತಕ್ಕೂರ್ಮೆಯುಂ ಮಾಸದೇ (ಪಂಪಭಾ. ೧-೭೧); ಒಡಲ ಕಳವಳಕ್ಕೆ ಬಾಯ ಸವಿಗೆ ಬಯಸಿ ಉಂಡೆನಾದರೆ ನಿಮ್ಮ ತೊತ್ತಿನ ಮಗನಲ್ಲಾ (ಬಸವ. ೭೮೪); ಸವಿಗಳಿಂ ದೃಪ್ತವಾಗದವಂ ಸವಿಗಳಂ ಬಿಟ್ಟಡೊಲಿವವನು (ಬಸಪು. ೫೧-೪೯). ೧೨. ಆನಂದ ; ನಲಿವು : ನಿಜಜಂಗಮಪ್ರತತಿ ಸವಿದು ಮಿಕ್ಕಮಿತಪ್ರಸಾದವ ಸವಿದು ಸವಿದೋಲಾಡುತಿಪ್ಪಾ ಸವಿ ದೊರಕಿದಡೆ ಸಾಕು (ಬಸಪು. ೧೦-೪೯). ೧೩. ಪ್ರಿಯನಾದ ವ್ಯಕ್ತಿ; ಹಿತಕರನಾದವನು : ಸವಿಯೆ ಸುಖವೆ ಕಣ್ಣೆ ಗತಿಯೆ ಮತಿಯೆ ಕರುಣಿಸೆಂದೆನುತ್ತ ತವರೆ ತಾಯೆ ತಂದೆ ಬಂಧು ಕುಲವೆ ಕರುಣಿಸೆಂದೆನುತ್ತ (ನವುರ. ದೇ. ೧೯೯-೯). ೧೪. (ಆಲಂ) ಆಯುಧ ಮುಂತಾದುವುಗಳ ಹೊಡೆತದ ಪ್ರಭಾವ, — ಪರಿಣಾಮ : ಕೊಳನಂ ಪೊಱಮಡು ತೋಱಿದಪೆನೆನ್ನ ಕೊಂತದ ಸವಿಯಂ (ಗದಾಯು. ೭-೩); ಸಾಱು ನೀ ಬರಹೇಳು ಕೀಚಕವೈರಿಯನು ಪಡಿಸಣವ ನೋಡಲಿ ಭೂರಿಬಾಣದ ಸವಿಯನು (ಕುಮಾರ. ದ್ರೋ. ೧೦-೫೨).

**ಸವಿಸವಿ$_2$** (ದ್ವಿರುಕ್ತಿ): ಸವಿಷಮಿದೆಂಬುದನಱಿಯದೆ ಸವಿಸವಿಯೆಂದನುಭವಿಪ್ಪ ಜೀವಕ್ಕಿಂತೀ ಭವಸುಖಮಸುಖಮೆ ನಿಖಿಳಮನವಟಯ್ಸುಗುಮಲ್ತೆ ಬಳವದಘವಿಳಸಿತಮಂ (ವರ್ಧಪು. ೧೪-೮೯); ತಾನು ಹಸಿದು ಬರುವೆನೆಂದು ತಿಳಿದು ಸವಿಸವಿಯಾದ ಅಡುಗೆ ಮಾಡಿಕೊಂಡು . . . ಕುಳಿತದ್ದು ಶ್ಯಾಮರಾಯನನ್ನು ಮೂಕವಿಸ್ಮಿತನನ್ನಾಗಿ ಮಾಡಿದವು (ದೀಪಹ. II, ೧೩೭). **ಸವಿತಕ್ಕೊಳ್ಳು** = ಸ್ವಾದವನ್ನು ಪಡೆ; ರುಚಿಯನ್ನು ಹೊಂದು: ಬಾಯೊಳಗೆ ತಿನ್ನುವ ವಸ್ತು ಇರುವಾಗ ನಾಲಿಗೆಯೂ ಅಂಗಳೂ ಅದರ ಸವಿ ತಕ್ಕೊಳ್ಳುತ್ತವೆ (ಮುಂಬಯಿ. ೪-೮೫). **ಸವಿಮಾಡು** = ೧. ರುಚಿಕರವಾಗುವಂತೆ ಮಾಡು; ರಸವತ್ತಾಗುವಂತೆ ಮಾಡು: ವರಕುಮಾರನ ಶಿರವನರಿದಟ್ಟು ಸವಿಮಾಡಿ ಹರನಿಗುಣಲಿತ್ತು (ಅಱುತ್ರಿ. ೧೪). ೨. ಹಿತವಾಗುವಂತೆ ಮಾಡು ; ಆಪ್ಯಾಯಮಾನಗೊಳಿಸು : ಸವಿಮಾಡಿ ತಂದೆಯ ಕೂಡದ ನುಡಿವರು ತವಗಯ್ಯ ಹೇಳೆ ಲಾಲಿಪರು (ಭರಚ. ೪೫-೩೭). **ಸವಿಯಾಗು** = ೧. ರಸಭರಿತವಾಗು; ರುಚಿಕಟ್ಟಾಗು:

ಸವಿಯಾದಡುಗೆಗಳಿಂತಿವೆ ಸವಿಯಾದವೆನುತ್ತಮುಣ್ಬರಿತರ ಬ್ರತಿಗಳ್ (ಸಮಪ. ೭-೧೪); ಶಲ್ಯನ ಬಲದಡಗು ಸವಿಯಾಯ್ತು ಜಂಬುಕ ಕಾಕಸಂತತಿಗೆ (ಕುಮಾದ್ರೋ. ೬-೫); ಕಂಡದ್ದು ಕನಸಾಗಿ ಉಂಡದ್ದು ಸವಿಯಾಗಿ . . . ಕಂದಯ್ಯ ಮಾಡೊ ನಿದ್ದೀಯ (ಹಳ್ಳಿಯ. ೭೮). ೨. ಇಂಪಾಗು ; ಇನಿದಾಗು : ಆಗ ಧರೆ ಕಾಣೀತು ಬಲು ಚಿಕ್ಕದಾಗಿ ಆ ಗಲಭೆ ಗುಲ್ಲು ಕೇಳಿಸಿತು ಸವಿಯಾಗಿ (ಕವಿಪು. ೯-೩). ೩. ಪ್ರಿಯವಾಗು; ಹಿತವಾಗು: ಬಲ್ಮೆಗಂ ಬಸನಕ್ಕಂ ಸವಿಯಪ್ಪ ಕಿಱುವೇಂಟೆಯುಂ ಪೆರ್ವೇಂಟೆಯುಮಲ್ಲದುಟಿದ ಬೇಂಟೆಯಂ ಬೇಂಟೆಯೆನ್ನಂ (ಪಂಪಭಾ. ೫-೪೬ ವ); ಬೆಳಗು ಬಿದ್ದ ಸ್ವಪ್ನದ ಮಧುರ ಸ್ಮೃತಿಯಂತೆ ಎಲ್ಲವೂ ಸವಿಯಾಗಿ ತೋರಿತು (ನಿರಾಭ. ೫೫). **ಸವಿಹತ್ತು** = ೧. ರುಚಿಕರವಾಗು; ಸ್ವಾದುವಾಗು: ಅದು ಗೋದಿರೊಟ್ಟಿಯ ಹಾಗೆ ಸವಿಹತ್ತುತ್ತದೆ (ಮುಂಬಯಿ. ಕಿ. ೩-೭೮). ೨. ರುಚಿಹತ್ತು ; ಅತ್ಯಾಸಕ್ತಿಯುಂಟಾಗು : ಒಮ್ಮೆ ತುಡುಗುದಕ್ಕಿದರೆ ಮುಂದೆ ಅದರ ಸವಿಹತ್ತುತ್ತದೆ (ಮುಂಬಯಿ. ಕಿ. ೩-೩೭೮). **ಸವಿಹೀರು** = ಸಾರವನ್ನು ಹೀರು ; ಸತ್ತ್ವವನ್ನು ಆಸ್ವಾದಿಸು : ನಿಮಗೆ ಸವಿಹೀರಲು ಬೇಡವೆಂದವರಾರು? ಮುಳ್ಳುಬಳ್ಳಿಗಳೆ, ನೀವು ನಮಗಿಂತ ಹೆಚ್ಚಾಗಿಯೇ ಸವಿಹೀರಿರಿ (ಕಲ್ಲೋಲ. ೬೨-೧೫). [< ಸವಿ$_1$./ ತಮಿ. ಚುವೈ; ಮಲ. ಚುವ; ತುಳು. ಸವಿ, ಸಬಿ, ತಬಿ; ತೆಲು. ಚೆವಿ; ಕೋತ. ಚಯ್ವ್; ಕೋಲಾ. ಸವ್ವಿ; ನಾಯ್ಕಿ. ಸವದ್]

**ಸವಿಕಲ್ಪ** (ನಾ). [ಯೋಗ] ಸಮಾಧಿಯ ಎರಡು ಬಗೆಗಳಲ್ಲಿ ಒಂದು : ಸವಿಕಲ್ಪವೆರಡು ಮತ್ತವಿಕಲ್ಪಮೊಂದಿಂತು ತ್ರಿವಿಧರೂಪಾಗಿ ವಿರಾಜಿಪಾ ಪ್ರವಿಮಲಮಾದ ಸಮಾಧಿ ಷಡ್ವಿಧಮಾದ ವಿವರವನರಿಯಬ್ಬಲೋಚನೇ (ವೇದಾಂಪ. ೩-೧೭-೫); ಸಮಾಧಿಯೆಂಬ ಯೋಗವು ಸಂಪ್ರಜ್ಞಾತ, ಅಸಂಪ್ರಜ್ಞಾತ . . . ಅಥವಾ ಸವಿಕಲ್ಪ ನಿರ್ವಿಕಲ್ಪವೆಂದು ಎರಡು ಪ್ರಕಾರವು (ಹಿಂದಸಾ. ೧೦೭). [ಸಂ.]

**ಸವಿಕಲ್ಪಕ** (ನಾ). = ಸವಿಕಲ್ಪ : ಧ್ಯಾನನಿಶ್ಚಲವೇ ಸಮಾಧಿಯದೇ ನಿದಾನಿಸಲಾಱು ಭೇದವು ಮಾನನಿಧಿ ಸವಿಕಲ್ಪಕವು ತಿಳಿ ನಿರ್ವಿಕಲ್ಪಕವು (ಅಮೃತ. ೬-೫೫); ಪ್ರತ್ಯಕ್ಷಜ್ಞಾನವು ನಿರ್ವಿಕಲ್ಪಕ, ಸವಿಕಲ್ಪಕವೆಂದು ಎರಡು ಪ್ರಕಾರವಾಗಿರುವುದು . . . ವಿಶೇಷ್ಯವಿದು, ವಿಶೇಷಣವಿದು, ಸಂಬಂಧವಿದು ಎಂದು ತಿಳಿಯುವ ಜ್ಞಾನ ಸವಿಕಲ್ಪಕ (ಹಿಂದಸಾ. ೧೩೮). [ಸಂ.]

**ಸವಿಕಲ್ಪಸಮಾಧಿ** (ನಾ). = ಸವಿಕಲ್ಪ : ಸವಿಕಲ್ಪಸಮಾಧಿಯೆಂದರೆ ಜ್ಞಾತೃ ಜ್ಞಾನ ಜ್ಞೇಯಯೆಂಬ ತ್ರಿಪುಟಿಯಲ್ಲಿ ಕೂಡಿಕ್ಕೊಂಡುಯಿರುವಹುದು (ಈಶ್ವಸ್ವ. ೨೧-೧೩). 'ನಿರ್ವಿಕಲ್ಪಸಮಾಧಿ' ಪರಾ. [ಸಂ.]

**ಸವಿಕೂಟ** 'ಸವಿಗೂಟ' ನೋ.

**ಸವಿಗಂಪು** (ನಾ). ಸುವಾಸನೆ ; ಪರಿಮಳ : ಪೂಮಾಲೆಯ ಪರಿಮಳದ ಸುಯ್ಯ ಸವಿಗಂಪನೊಡಗಲಿಸಿ ಮಧುಕರಂಗಳಂ ಮರುಳ್ಗೊಳಿಸಿಯುಂ (ಕುಸುಮಾ. ೪-೨೯ ವ); ಪರವೆಯರ ನಱುಸುಯ್ಯ ಸವಿಗಂಪುಮಂ ಎಮ್ಮ ಪ್ರಸಾದದ ಪರಿಮಳಮುಮಂ ಕೊಂಡುಬಂದು (ನಂಬಿರ. ೧೪-೬೨). [ಸವಿ$_2$ + ಕಂಪು]

**ಸವಿಗಡಲ್**, ಸವಿಗಡಲು (ನಾ). ಹಾಲಿನ ಸಮುದ್ರ ; ಕ್ಷೀರಸಾಗರ: "ಸವಿಗಡಲೆನಲ್ ಕ್ಷೀರಸಾಗರಂ" (ಕಶಬ್ದ. ೧೦೪). **ಸವಿಗಡಲು** : ನಾಲ್ವಱದ ದಿವಿಜರ ಜಾತ್ರೆಯೆಲ್ಲವು ಮುದದಿಂ ಪೋಗಿ ಸವಿಗಡಲೊಳು ಬಿಟ್ಟುದಾಗ (ಶ್ರೀಪಾಲ. ೧೪-೧೦೦); ಚಂದ್ರನಿದು ಸವಿಗಡಲಿದು ಹಾರ ಇದು ಹಿಮವೆಂದು ತಿಳಿಯಬಾರದಾ ರಾಯನುದಿತಕೀರ್ತಿಯ ಬೆಳ್ಪಿನಿಂದ (ಕುರಾಸಾಂ. ೫-೧೮).

ಸವಿಗಡಲ ಕುವರ = ಕ್ಷೀರಸಮುದ್ರದಲ್ಲಿ ಉದಯಿಸಿದವನು; ಚಂದ್ರ: "ಚಂದಿರಂ . . . ಸವಿಗಡಲ ಕುವರ ಮಿಗಲಚ್ಛಣನೆಂದಿಂದುವಿಗಭಿಧಾನಂಗಳ್" (ಕವಿಕಂ. ೪೪). **ಸವಿಗಡಲ ಕುವರಿ** = ಕ್ಷೀರಸಮುದ್ರದಲ್ಲಿ ಉದಯಿಸಿದವಳು; ಲಕ್ಷ್ಮೀ: ಅಂಬುರುಹೋದರನಂ ಸವಿಗಡಲ ಕುವರಿಯಂಗಜನಂ ರತಿ . . . ಕಯ್ಪಿಡಿದಂದದಿ ನೃಪತಿಯ ತೋಳ್ಬಾಳಂ ಪಿಡಿದಾ ಪಿಡಿನಡುವಿನ ಸೌಂದರಿ ಸುಖಿಮಿರೆ (ಜಯಕಾ. ೨-೧೧). **ಸವಿಗಡಲಣುಗ** = ಸವಿಗಡಲ ಕುವರ : "ಜೊನ್ನೊಡಲಂ ಸವಿಗಡಲಣುಗಂ . . . ತಿಂಗಳ್ – ಈ ೨೦ ಚಂದ್ರನ ಪೆಸರ್" (ಕಶಸಾ. ೪೮-೨೩). **ಸವಿಗಡಲಣುಗಿ** = "ಲಕ್ಷ್ಮಿ" (ಪ್ರಭಣ್ಣ). [ಸವಿ$_2$ + ಕಡಲ್$_2$]

**ಸವಿಗಡಲು** 'ಸವಿಗಡಲ್' ನೋ.

**ಸವಿಗತೆ** (ನಾ). ಪ್ರಿಯವಾದ ಕತೆ; ಆಪ್ಯಾಯಮಾನವಾದ ಕತೆ: ಅವನ ನೇಹಿಗರೊಡನನುಗೆಳೆವಳೆಯಿಸಿ ಸವಿಗತೆ ಸಂದಣಿಯಲ್ಲಿ ಅವನಂದಚೆಂದವನವನ ಚಾತುರ್ಯವನವರ ಮೊಗದೊಳಾಲಿಪುದು (ಚಿಕವಿ. ೬-೧೫೭ ಸಾಂಗತ್ಯ ೫). [ಸವಿ$_2$ + ಕತೆ]

**ಸವಿಗದಿರ್** (ನಾ). ಅಮೃತಮಯವಾದ ಕಿರಣ ; ಇನಿದಾದ ಕಿರಣ : ಮುಸುಕುವ ಮುಂದಿಂಗಳ ಸವಿಗದಿರ್ಗಂಡೊಸರ್ವಿಂದೂಪಲದಂತೆ ರಸಿಕರೆನ್ನಯ ಸತ್ಕೃತಿಯನೆ ಕೇಳಿ ಸಂತಸವನೆದೆಗೆ ತಾರದಿಹರೆ (ಶ್ರೀಪಾಲ. ೧-೨೩). [ಸವಿ$_2$ + ಕದಿರ್$_2$]

**ಸವಿಗನಸು** (ನಾ). ಮನಸ್ಸಿಗೆ ಸುಖ ಸಂತೋಷಗಳನ್ನು ಕೊಡುವ ಕನಸು, —ಸ್ವಪ್ನ : ಸ್ಥೂಲತೆಯನುಳಿದ ಬಿಳಿದಂತದಿಂ ಕಯ್ಗುಯ್ದು ಸವಿಗನಸೆ ಸಂಚರಿಸಲೆಳಸಿದುದೊ (ಚಿತ್ರಾಂಗ. ೩೨-೮೬೪); ಆತನ ಸವಿಗನಸು . . . ನನಸಾದಂತೆ ಕಂಡಿತು (ಸಸ್ಯಕ. ೧೩೦). [ಸವಿ$_2$ + ಕನಸು]

**ಸವಿಗಪ್ಪುರ** (ನಾ). ಸೊಗಸಾದ ಕರ್ಪೂರ : ಲಿಂಗ ಭೋಗೋಪಭೋಗಿಗಳಾಗಿ ಸವಿಗಪ್ಪುರಗೂಡಿ ಮಱೆವ ತಾಂಬೂಲಮಂ ಗ್ರಹಿಸಿ (ಪದ್ಮರಾ. ೫-೫೭). [ಸವಿ$_2$ + ಕಪ್ಪುರ]

**ಸವಿಗಬ್ಬ** (ನಾ). ರಸಭರಿತವಾದ ಕಾವ್ಯ : ಚೇರಮಭೂಪನ ಸವಿಗಬ್ಬದೊಳಗಕ್ಕರವೊಂದ ಭುವನದೊಳಾರೋದಿದರವರಿಗೆ ಕಾಮ್ಯಾರ್ಥವನೀವ ಶಾಂತಮಲ್ಲಿಕಾರ್ಜುನ (ತ್ರಿಭುತಿ. ೨೭-೬೩); ಅಕ್ಕರಿಂ ಕೇಳೆನ್ನ ಸವಿಗಬ್ಬ (ನವಮೋ. ೩-೪). [ಸವಿ$_2$ + ಕಬ್ಬ$_1$]

**ಸವಿಗರೆ** (ಕ್ರಿ). ೧. ಹಿತವನ್ನುಂಟು ಮಾಡು ; ಪ್ರೀತಿಯನ್ನು ಸೂಸು : ಪಾವನದ ಮುತ್ತೈದೆ ಸವಿಗರೆದು ನುಡಿದಳಾ ಮೈಸೂರ ಸಿರಿಯ (ಹೂಂಗಳು. ೧೩-೨). ೨. ಇಂಪನ್ನು ಹೊರಹೊಮ್ಮಿಸು : ಸಚ್ಛಾದ ಮತ್ತಿನವರ್ಗೆ ಸನ್ನೆದೂಗಿ, ಬಣ್ಣವಾಡಿನ ರಸಗೇಯದ ರಾಗಮಾಲಿಕೆಯನ್ನು ಸವಿಗರೆಯುವಳು (ಮಂತ್ರಶ. ೫೭-೧೫). [ಸವಿ$_2$ + ಕರೆ$_2$ (< ಕಱೆ$_1$)]

**ಸವಿಗರ್ಚು** (ಕ್ರಿ). ಹಿತವಾಗಿ ಕಚ್ಚು, — ಕಡಿ : ಸೋರ್ವ ತೆಂಗಿನ ಪೆರ್ಗಾಯೆಳನೀರ ಧಾರೆಗಳನಂಭೋಜಾತನಾಳಂಗಳೆಂದು ನಿತಾಂತಂ ಸವಿಗರ್ಚಲುಜ್ಜುಗಿಪ ಹಂಸಾನೀಕಮುದ್ಯಾನದೊಳ್ (ಕುಸುಮಾ. ೨-೬೭). [ಸವಿ$_2$ + ಕರ್ಚು$_1$]

**ಸವಿಗಲೆ$_1$** (ನಾ). ಮೋಹಕವಾದ ಗುರುತು, — ಚಿಹ್ನೆ : ಆನು ನಿಮ್ಮ ನೆನೆದು . . . ಎನ್ನ ಭಾವ ತುಂಬಿ ಮತ್ತಿಲ್ಲದೆ ನಿನ್ನ ಕೂಟದ ಸವಿಗಲೆಯನೆಂತು ಕಾಣುವೆನಯ್ಯ (ಮಹಾದೇ. ಬ. ೧೨೧-೨೮೦); ಕೂಡೆ ಕದಪು ತುಟಿ ನಿಟಿಲವ ಚುಂಬಿಸಿ ಮೂಡು ಮೋಹದ ಸವಿಗಲೆಯ (ಕಂಸವ. ೯-೧೯೨). [ಸವಿ$_2$ + ಕಲೆ$_2$]

**ಸವಿಗಲೆ$_2$** (ನಾ). ಶೃಂಗಾರಕಲೆ : ಒಂದರಲ್ಲೊಂದು ನಾಲ್ಕೈದಾಱವಸ್ಥೆಗಳೊಂದೊಂದಾಗಿ ಬಂದವಳ ಬಂದಿವಿಡಿದು ಬೆದೆ ಬೇಟಗೊಳಿಸಿ ಬಗೆಗೊಂದಿಸಿದವು ಸವಿಗಲೆಯ (ಕುರಾಸಾಂ. ೩೨ ೯೦); ಲಲ್ಲೆಯೊಳ್ಳೊಂಕು ಬಗೆಯೊಳ್ಕೆಳಂಕು ಸವಿಗಲೆಗಳೊಳ್ಸಲೆ ವಂಚನೆ . . . ನೆಲೆಗೊಂಡ ಗಣಿಕೆಯರ ತಂಡಮಿಾ ತೆಱದೆ ಚೆಲ್ವಂ ಪಡೆದುದು (ಜೈಮಿಭಾ. ೬-೩೪). [ಸವಿ$_2$ + ಕಲೆ$_3$]

**ಸವಿಗಳ್ಳು** (ನಾ). ಮಧುರವಾದ ರುಚಿಯಿಂದ ಕೂಡಿದ ಮಧು ; ರುಚಿಕಟ್ಟಾದ ಮದ್ಯ : ಜೇನಿನ ಹುಳುಗಳು ಜೋಲಿಯ ಹೊಡೆಯಲಿ ಕುಡಿಯುತ ಹೂವಿನ ಸವಿಗಳ್ಳ! (ಕರುಶ್ರಾ. ೬೫-೪). [ಸವಿ$_2$ + ಕಳ್ಳು (< ಕಳ್$_3$)]

**ಸವಿಗಾಣ್**, ಸವಿಗಾಣು (ಕ್ರಿ). ೧. ರುಚಿಯನ್ನು ನೋಡು ; ಸ್ವಾದವನ್ನು ಅನುಭವಿಸು : ಕುಮಾರಿಯ ಕಣ್ ಮಱೆದುಂಬಿಯಾಗಿ ಸೊರ್ಕಿಂಗೆ ಸರೋಜದೊಂದು ಸವಿಗಂಡುವು (ಅರ್ಧನೇ. ೨-೩೫). ೨. ಆಸ್ವಾದನೆ ಮಾಡು ; ಮಾಧುರ್ಯವನ್ನು ಕಾಣು : ಪ್ರಸಾದಮಂ ಕೈಕೊಂಡು ಹಾರೈಸಿ ಪಕ್ವಾನ್ನದೊಳು ನಲಿದು ಸವಿಗಂಡು (ಇಹರ. ದೇ. ೩೦-೧೧); ನೋಡಯ್ಯ ನಂದೀಶ ಎನ್ನ ಸದುಭಕ್ತನಂ . . . ಹರವರಿಯ ಭಕ್ತಿಯಂ ಸವಿಗಂಡ ಭಕ್ತನಂ (ಒಲರ. ದೇ. ೧೯೩-೧೧). ೩. (ಸುಖಸಂತೋಷಗಳನ್ನು) ಅನುಭವಿಸು ; ಭೋಗಿಸು : ಸಕಲಭೋಗಂಗಳಂ ಸವಿಗಂಡು ಬರ್ಪುದೆನೆ (ನಂಬಿರ. ೧-೫೩); ಶಿವರಾತ್ರಿಯ ಸುಖಮಂ ಸವಿಗಂಡಂ (ಬಸರ. ೬-೫೧). ೪. ಸಂತೋಷವನ್ನು

ಹೊಂದು; ಆನಂದವನ್ನು ಪಡೆ : ಮುನ್ನ ಬೇಟದ ಸವಿಗಂಡನಲ್ಲದಱಿಯಂ ಶ್ರಮಮಂ ಕಡುವೇಟಕಾಱರಾ (ಆದಿಪು. ೧೨-೨೨). ೫. ಆಯುಧ ಮುಂತಾದುವುಗಳ ಹೊಡೆತದ ಪ್ರಭಾವವನ್ನು ಅನುಭವಿಸು : ದ್ರೋಣಾಸ್ತ್ರವನು ಸವಿಗಂಡನೋ ಸಾತ್ಯಕಿಯೆನುತ ಗರ್ಜಿಸಿದನಾ ಭೀಮ (ಕುಮ್ಮಾದ್ರೋ. ೧೮-೨೩). **ಸವಿಗಾಣು : ೪.** ಬೀಗಿ ಬೆಳೆದು ನಭಕಡರ್ದೊಡೆ ದೇವರ್ಕಳಾರೋಗಿಪ ಸವಿಗಾಣರ್ ಪೋಗಿ ಮಾಡುವುದೇನೆನುತ ಲಜ್ಜಿಸಿ ತಲೆವಾಗಿದಂತಿಹುದು ರಾಜಾನ್ನ (ಮೋಹತ. ೨-೪೧); ಆ ಚಿನಿವಾರನು ಮೊದಲು ಒಮ್ಮೆ ಒಂದಕ್ಕೆ ಹತ್ತು ಪಾತ್ರೆಗಳನ್ನು ತಕ್ಕೊಂಡು ಸವಿಗಂಡದ್ದರಿಂದ ಈ ಸಾರಿಯಾದರೂ ಅದರಂತೆ ಲಾಭವಾಗುವುದೆಂದು ತಿಳಿದನು (ಮುಂಬಯಿ. ४-೫೩). [ಸವಿ$_2$ + ಕಾಣ್]

**ಸವಿಗಾಣಿಸು** (ಕ್ರಿ). ೧. ರುಚಿಯನ್ನು ತೋರಿಸು ; ಆಸ್ವಾದಿಸುವಂತೆ ಮಾಡು : (೬). ೨. ಆಮೋದಗೊಳಿಸು ; ಹಿತವಾದುದನ್ನು ಅನುಭವಿಸುವಂತೆ ಮಾಡು : ಕ್ಷೋಣೀಶನ ಕಿವಿಯಂ ಸವಿಗಾಣಿಸಿದುದು ಬಾಲರೋದನೋದಿತನಾದಂ (ಚಂದ್ರಪು. ೩-೧೧೧). ೩. ಆಯುಧ ಮುಂತಾದುವುಗಳ ಹೊಡೆತದ ಪ್ರಭಾವವನ್ನು ತೋರಿಸು : ಬದುಕಿ ಬಂದರೆ ಭೀಮ ನಿಮ್ಮನು ಗದೆಯ ಸವಿಗಾಣಿಸನಲಾ (ಕುಮ್ಮಾಗ. ४-೩೧). [ಸವಿಗಾಣ್ + -ಇಸು$_3$]

**ಸವಿಗಾಣು** 'ಸವಿಗಾಣ್' ನೋ.

**ಸವಿಗಾರ** 'ಸವಿಗಾಱ' ನೋ.

**ಸವಿಗಾರಿಕೆ** (ನಾ). ರಸಿಕತನ ; ಸೊಗಸುಗಾರಿಕೆ : ರಾಘಪ್ಪನ ಈ ಎಲ್ಲ ಸವಿಗಾರಿಕೆಗೆ ಇದೀಗ ಇನ್ನೊಂದು ಆಂತರಿಕಪ್ರೇರಣೆ ಕಾರಣವಾಯಿತು (ಗಂಪಾಯಿ. ೨೧४); ಆಟಕ್ಕೂ ನಗೆಗೂ ಒಂದು ಹುಟ್ಟುಸಂಬಂಧವಿದೆ. ಎರಡೂ ಸವಿಗಾರಿಕೆಯ ಉತ್ಸಾಹದ ಫಲಗಳು (ಸಾಹಿ. ೧೧೮). [ಸವಿಗಾರ (< ಸವಿಗಾಱ) + -ಇಕೆ]

**ಸವಿಗಾರ್ತಿ** (ನಾ). ರಸಿಕತನವುಳ್ಳವಳು ; ಸೊಗಸುಗಾತಿ : ಸೊಬಗನಂ ಕಣ್ಣಱದು ನೋಡೆಂದು ಸವಿಗಾರ್ತಿ ಸವಿಗುಸಿರ್ದಳು (ಚಬಪು. ೧೯-४೦).

[ಸವಿಗಾಱ + -ತಿ$_1$ (< -ಇತ್ತಿ)]

**ಸವಿಗಾಱ,** ಸವಿಗಾರ (ನಾ). ರಸಿಕ; ಸೊಗಸುಗಾರ : ಸೊಗಸುವ ಬವರಿಯ ಸವಿಗಾಱನಿವನಾರು (ಕಂಸವಿ. ೯-೧೧४). **ಸವಿಗಾರ** : ನೀನು . . . ಹಾವಿನೊಡ್ಡಾಣದ ಸುನ್ದರನಾ ಸವಿಗಾರನ ತಂದೆಗೆ ಇಪ್ಪತ್ತೊಂದನೆಯ ಹೆಂಡತಿ (ಮಂತ್ರಶ. ೫೫-೯); ಬಲು ಸವಿಗಾರ! ಇರಲಿ ಅಪ್ಪನಿಗೆ ಹೇಳಿದರೆ ಆಕೆ ಎಲ್ಲಾ ಮಾಡುವಳು (ನಿರಾಭ. ೪೩).

[ಸವಿ$_2$ + -ಕಾಱ]

**ಸವಿಗುಂಬಳ** (ನಾ). ಒಂದು ಬಗೆಯ ಕುಂಬಳಕಾಯಿ ; ಸಿಹಿಗುಂಬಳ : ಬದನೆ ಪಡವಲ ಮಣಿಹಾಗಲ ಸವಿಗುಂಬಳ (ಸೌಗಂಧಿ. ೩೭-೧೮). [ಸವಿ$_2$ + ಕುಂಬಳ]

**ಸವಿಗುಟಕು** 'ಸವಿಗುಟುಕು' ನೋ.

**ಸವಿಗುಟುಕು,** ಸವಿಗುಟಕು (ನಾ). ಇನಿದಾದ ತುತ್ತು : ಸವಿಗುಟುಕಾಂತು ದನಿಯ ನಾಲಿಸುತೆ . . . ಇನಿಯನೆಂದು ಪೆಣ್ಣಳಿಯಱಿದುದು (ಚಬಪು. ४೭-೯). **ಸವಿಗುಟಕು** : ಬೆಕ್ಕಿದೆ ನೇಹಂ ನೋಡುತ್ತಕ್ಕಾ ಪೂಂಗೊಲವಿಯ ಸವಿಗುಟಕಂ ನೀಂ ತಂದಿಕ್ಕೆಂದುಲಿವಾ ಕನ್ನಡ ವಕ್ಕಿಯನೋದಿಸುತಲೆಸದಳೆಳವೆಣ್ವೋವರ್ಳ್ (ಉದ್ಭಟ. ೧೧-೫೧). [ಸವಿ$_2$ + ಕುಟುಕು$_2$]

**ಸವಿಗೂಟ,** ಸವಿಕೂಟ (ನಾ). ಮಧುರವಾದ ಸಂಗಮ ; ಮನೋಹರವಾದ ಕೂಟ, — ಸಂಭೋಗ : ಸವಿಗೂಟಕೆಡನಂ ಕಾಣದೆ ಕೊಂಡೆಯ್ದುವ ಹವಣನೆಣಿಸಿ ಮುಟ್ಟುವಂದ (ಶ್ರೀಪಾಲ. ೫-೭೨); ಅವನ ಸವಿಗೂಟವ ನಿನಗಾನು ಕಾಣಿಸದೊಡೆ ಯುವತಿ ನಾ ಹೊತ್ತವು ಪೊಲೆಯೆ (ಕುರಾಸಾಂ. ೨೫-४೭); ಸವಿಗೂಟದಾನಂದ ತಲೆಗೇಱದಂತೆ ಕಣ್ಗಾವಿದು ನಿದ್ರೆಗೆ ಸಂದರವರು (ಭರಚ. ೩೧-೧೩೭). **ಸವಿಕೂಟ** : ಕುವರನ ಸವಿಕೂಟಕೆಱಗಿದ ಮನದ ದೀಪವವ ನೆಱೆಯಾತನ ಸುರತದ ತೃಪ್ತಿಪಡಿ ಸಂದೆಱಗಿದಳವಳಡಿಗಳಿಗೆ (ಕಂಸವಿ. ೯-೧೨೭). [ಸವಿ$_2$ + ಕೂಟ$_1$]

**ಸವಿಗೂಡು** (ಕ್ರಿ). ಆನಂದವನ್ನು ಹೊಂದು ; ನಲಿವನ್ನು ಪಡೆ (?) : ಹಾಡಿ ನಡೆನೋಡಿ ಮುಂಡಾಡಿ ಕೊಂಡಾಡುತುಂ ಬೇಡಿ ಕೊಱಚಾಡಿ ಮಿಗೆ ಕಾಡಿ ಸವಿಗೂಡುತುಂ (ಸಂಬಿರ. ೯-೧೩४). [ಸವಿ$_2$ + ಕೂಡು$_1$]

**ಸವಿಗೆಡು** (ಕ್ರಿ). ೧. ರುಚಿಯು ಕೆಟ್ಟುಹೋಗು : ಬೈವಾಕೆ ತಾಂ ಪಕ್ಷಿಯೇ ಸವಿಗೆಟ್ಟನ್ನವದೂಟವೇ (ಸೋಮೇಶ. ೨೨). ೨. ಅರುಚಿಯುಂಟಾಗು : ವಳಿ ಕಿಡುವಂತೆ ತಂಬುಲದ ಬಾಯ್ಸವಿಗೆಟ್ಟುದು (ಅನಂಪು. ೧೨-೭೭). [ಸವಿ$_2$ + ಕೆಡು$_1$]

**ಸವಿಗೆಯ್** (ಕ್ರಿ). ಸ್ವಾದವನ್ನು ಹೊಂದುವಂತೆ ಮಾಡು ; ರುಚಿ ಮಾಡಿಕೊಳ್ಳು : ತಮ್ಮ ಸವಿನಾಲಗೆಯಂ ಸವಿಗೆಯ್ಯಲಾಱರೇ (ಸಮಪ. ೯-೧೧೨). [ಸವಿ$_2$ + ಕೆಯ್$_1$]

**ಸವಿಗೆಯ್ತ** (ನಾ). ಹಿತವಾದ ಕೆಲಸ : ಸವಿಗೆಯ್ತಂಗಳನೊಲ್ಲು ಸಾಣೆವಿಡಿ ದೊಪ್ಪಂಗೆಯ್ಯು ಮಲ್ಲಾತಿನಿಂ ಪವಣಂದಂಗೊಳೆ ಕೋದು (ಚಕವಿ. ೬-೬೮).

[ಸವಿ$_1$ + ಕೆಯ್ತ$_1$]

**ಸವಿಗೆಯ್ಮೆ** (ನಾ). ಹಿತವಾದ ಲೀಲೆ , — ಕ್ರೀಡೆ : ಈಗಳೀಗಳೆ ಪಾಡುವ ಶೃಂಗಾರದ ದಶಪದಿಗಳಂ ಬಿಡಲಾಱದೆ ತೊಡರ್ದೆಮ್ಮ ಬಗೆಯಂತೀ ಸವಿಗೆಯ್ಮೆಯ ದಶಪದಿಯಂ ಮೇಲ್ಗೆಯ್ಮೆಯ ದಶಪದಿಯಂ ತೊಡಂಕಿದುದು (ಚಕವಿ. ೬-೧೫೭ ವ, ಪುಟ ೧೮೦).

[ಸವಿ$_2$ + ಗೆಯ್ಮೆ (< ಕೈಮ್$_1$)]

**ಸವಿಗೆಯ್ಮೆವಾಡು** (ನಾ). ಹಿತವಾದ ಕ್ರೀಡೆಯನ್ನು ಕುರಿತ ಹಾಡು ; ಮನೋಹರವಾದ ಲೀಲೆಗೆ ಸಂಬಂಧಿಸಿದ ಪದ : ಈ ಪೊಱಗೆಯ್ಮೆವಾಡು ಪೊಸತಾದುದು, ಬಱಿಯಿಂ ಸವಿಗೆಯ್ಮೆವಾಡಂ ಸವಿವಮೆಂಬಿನಂ (ಚಕವಿ. ೬-೧೫೭ ವ, ಪುಟ ೧೭೯).

[ಸವಿಗೆಯ್ಮೆ + ಪಾಡು$_2$]

**ಸವಿಗೇಳ್** (ಕ್ರಿ). (ಮಾತಿನ) ಇಂಪನ್ನು ಆಲಿಸು ; ಮಧುರತೆಯನ್ನು ಕೇಳು : ನಡೆದಡೆ ನಡೆದ ಹೆಜ್ಜೆಯಂ ಸೋಂಕಿ ಹಿಗ್ಗುತ್ತ ನುಡಿಯಲಾ ಸವಿಗೇಳ್ದ ಕಿವಿಗೆ ಮಾಱುಗುತ್ತ (ಇಪರ. ದೇ. ೩೩-೧४). [ಸವಿ$_2$ + ಕೇಳ್]

**ಸವಿಗೊಡು** (ಕ್ರಿ). ೧. ಮಾಧುರ್ಯವನ್ನು ಕೊಡು ; ಇಂಪನ್ನು ನೀಡು : ಗೇಯದ ಸವಿಗೆ ಸವಿಗೊಡೆ ವಾದ್ಯ . . . ಸಭೆಯು ಬೆಱಗಾಗೆ ನರ್ತಿಸಿದ (ಸಾಳ್ವಭಾ. ೩೩-೯೯); ಕೇಳಿಲೆ ರೂಪಜಯಂತ ನಿನ್ನಯ ಮೋಹದೇಳಿಗೆಗುಱಿ ಸವಿಗೊಡುವ ಬಾಲಕಿಯೊರ್ವಳು ಮದನಮೋಹಿನಿಯೆಂಬ ನೀಲಕುಂತಳೆಯೊಪ್ಪುತಿಹಳು (ಕಂಸವಿ. ೧೧-೧೧). ೨. ಇಷ್ಟಪಟ್ಟು ನೀಡು ; ಮನಸಾರೆ ಕೊಡು : ಅವನಸೀಕ್ಷಿಸಿ ಪೂಗಣೆಗೆ ಚಿತ್ತವನೆ ಸವಿಗೊಟ್ಟರಲು (ಸಾಳ್ವಭಾ. ೨೯-೩). [ಸವಿ$_2$ + ಕೊಡು$_1$]

**ಸವಿಗೊರಳು** (ನಾ). ಇಂಪಾದ ಧ್ವನಿ ; ಮಧುರವಾದ ಕಂಠ : ಇನಿದನಿ: ಹಿಂದಿನ ಸವಿಗೊರಳು ಕುದುರಿದ ಕೋಗಿಲೆಯದು ಚದುರೇರಿ ಹಾಡತೊಡಗಿದುದು (ನಾಡೋಜ. ೧೭४). [ಸವಿ$_2$ + ಕೊರಳು (< ಕೊರಲ್)]

**ಸವಿಗೊಳ್,** ಸವಿಗೊಳು (ಕ್ರಿ). ೧. ರುಚಿಕರವಾಗು ; ರಸವತ್ತಾಗು: 'ಸವಿಗೊಳಿಸು' ಪರಾ. **ಸವಿಗೊಳು** : ೨. ರುಚಿನೋಡು ; ಆಸ್ವಾದಿಸು: ಮೃದುತರವೆನಿಪ ಪರಿಮಳಿಪ ಹೊಸಖಿಂಡಂಗಳಂ ಸವಿಗೊಳುತ (ಬಸಪು. ೧೮-೨೯).

[ಸವಿ$_2$ + ಕೊಳ್$_1$]

**ಸವಿಗೊಳಿಸು** (ಕ್ರಿ). ೧. ರುಚಿಕಟ್ಟಾಗುವಂತೆ ಮಾಡು ; ರಸವತ್ತಾಗಿಸು : ಪಾಕದಿ ಸವಿಗೊಳಿಪ ವರವಿದ್ಯೆ ತನಗುಂಟು (ನಳಚ. ೭-೩). ೨. ತೃಪ್ತಿಗೊಳಿಸು; ತುಷ್ಟಿಯಾಗುವಂತೆ ಮಾಡು : ಆ ಮುನಿವರನ ನಾನಾಫಲಸುಭೋಜನಭಕ್ಷ್ಯದಲಿ ಸವಿಗೊಳಿಸಿದರು (ತೊರರಾ. ೧-೫-೫೩); ಜನನಿಯರುಣಿಸನಿಕ್ಕಿ ಸವಿಗೊಳಿಸೆ ಚಮರ ವ್ಯಜನಮಂ ಪಿಡಿದು ರಾಣಿಯರ್ಕಲರ್ದೊಲಿರೆ (ಜೈಮಿಭಾ. ೬-४೩). ೩. ಅನುಭವಿಸುವಂತೆ ಮಾಡು : ಚರಣಸೇವಾಮೃತವನನಿಶವು ನಮಗೆ ಸವಿಗೊಳಿಸಿ ಇರದೆ ಬಿಜಯಂಗೈವುದುಚಿತವೇ (ತಿಮ್ಮಅ. ೩-೧೭). [ಸವಿಗೊಳ್ + -ಇಸು$_3$]

**ಸವಿಗೊಳು** 'ಸವಿಗೊಳ್' ನೋ.

**ಸವಿಗೋಲ್** (ನಾ). ೧. ಕಬ್ಬು ; ಇಂಗೋಲು : 'ಸವಿಗೋಲ್ಬಿಲ್' ಪರಾ. ೨. ಕಬ್ಬಿನ ಬಿಲ್ಲು ; ಮನ್ಮಥನ ಚಾಪ : 'ಸವಿಗೋಲ' ಪರಾ.

[ಸವಿ$_2$ + ಕೋಲ್$_1$]

**ಸವಿಗೋಲ** (ನಾ). ಕಬ್ಬಿನ ಬಿಲ್ಲನ್ನು ಉಳ್ಳವನು ; ಮನ್ಮಥ : ಸಿಂಹಾಸನಾಗ್ರದಿ ಸಮಗ್ರಶುಭದಿ ಸವಿಗೋಲ ರತಿಸಹಿತ ಸನ್ಮೂರ್ತಿಗೊಂಡಿರಲು (ನವಮೋ. ४-೩೭).

[ಸವಿಗೋಲ್ + -ಅ$_7$]

**ಸವಿಗೋಲ್ಬಿಲ್** (ನಾ). = ಸವಿಗೋಲ್ ೨ : ನವಲತಿಕಾದೇಹದ ನಳಿನಾಂಘ್ರಿಯ

ಸವಿಗೋಲ್ವಿಲ್ಲ ಸಮರದ ಕುಡುವುರ್ವಿನ ಯುವತೀರೂಪದ ಚಿತ್ರಮನಾ ಸುಕುಮಾರಂ ನೋಡಿದನು (ಜಯಕಾ. ೩-೧೦). [ಸವಿಗೋಲ್ + ಬಿಲ್$_2$]

**ಸವಿಜೇನು** (ನಾ). ಸಿಹಿಯಾದ ಜೇನುತುಪ್ಪ: ಜೇಂಗೊಡದ ಸವಿಜೇನಿನಾಸ್ವಾದ ಬಯಸುವೊಡೆ ಜೇನುಹುಳುಗಳ ಕಡಿತಕಂಜಬೇಡ (ಕರ್ಣ್ಣೀಲ. ೪೩-೫). [ಸವಿ$_2$ + ಜೇನು$_1$ (< ಜೇನ್$_1$)]

**ಸವಿಜೇವಣ** (ನಾ). ರುಚಿಕರವಾದ ಭೋಜನ ; ರಸವತ್ತಾದ ಊಟ : ಸವಿಜೇವಣಂಗಳನೆ ಆಯ್ಕುಳಿಗೊಂಡು ಕೊರ್ವಿ ಪೇಳಾರ್ಗಿರ್ಪೆ? (ಸಂಸಪ. ೨೨-೩೧). [ಸವಿ$_2$ + ಜೇವಣ]

**ಸವಿತ$_1$** (ನಾ). "ಊಟ" (ಮೋಳಿಮಾ. ಕೋಶ): ನಾನೊಡೆಯ ಇವನಡಿಗನೆಂದು ಪುಡಿಪುಚ್ಚವ ಮಾಡುವನ್ನಕ್ಕ ಅದು ತುಡುಗುಣಿಯ ಸವಿತ (ಮೋಳಿಮಾ. ೧೮-೬೮). [ಸವಿ$_1$ + -ತ$_2$]

**ಸವಿತ$_2$** (ನಾ). ಸೂರ್ಯ ; ಭಾನು : "ಆದಿತ್ಯಃ, ಸವಿತಾ . . . ತ್ರಯಿಾತನುಃ — ಈ ೪೭ ಆದಿತ್ಯನ ಪೆಸರ್" (ಹಲಾಯು. ೭-೩೫); ಅಯ್ಯಾ ನಿಶೆಯ ಮೊತ್ತ ಸವಿತನ ಕಣ್ಗೆ ತಮವನೀಯಬಲ್ಲುದೆ (ಸಕವ. ೫. II, ೧೦೫-೧೬೨). [< ಸಂ. ಸವಿತೃ]

**ಸವಿತಾರ** (ನಾ). ಸೂರ್ಯ ; ಭಾನು : "ರವಿ ಮಾರ್ತಂಡಂ . . . ಸವಿತಾರಂ ಸೂರನರ್ಕಂ ದ್ಯುಮಣಿ ತರಣಿ ಸಪ್ತಾಶ್ವನಾದಿತ್ಯನಕ್ಕುಂ" (ವಸ್ತುಕೋ. ೧೧-೬೪); ಸುವರ್ಣರಥಾರೂಢನಾದ ಸವಿತಾರ (ಸೌಂದಸ. ೯೯). [< ಸಂ. ಸವಿತೃ]

**ಸವಿತಿನಸು** (ನಾ). ಸಿಹಿತಿಂಡಿ ; ರುಚಿಕರವಾದ ಖಾದ್ಯ : ತರತರದ ಸವಿತಿನಸುಗಳನ್ನು ನನಗೆ ತಂದುಕೊಟ್ಟರು (ಅನ್ನ. ೮೪). [ಸವಿ$_2$ + ತಿನಸು (< ತಿನಿಸು$_2$)]

**ಸವಿತೃ** (ನಾ). ೧. ಉತ್ಪತ್ತಿ ಮಾಡುವುದು ; ಹುಟ್ಟಿಸುವುದು. ೨. ಸೂರ್ಯ ; ಭಾನು : ಆತನನ್ನು . . . ಸವಿತೃವೆಂದು ಆರ್ಯರು ಪೂಜಿಸಿದರು (ಮಹಾನ. ೩೦೪); ನದಿಯ ಜಲ ವೃಕ್ಷದೇವತೆಗಳು ಸವಿತೃವಿಗೆ ಅರ್ಪಿಸಿದ ಪುಷ್ಪಾರ್ಘ್ಯವನ್ನು ಹೊತ್ತು . . . ಹರಿಯುತ್ತಿದೆ (ಚಿತಂಬಾ. ೧). [ಸಂ.]

**ಸವಿತೃಮಂಡಲ** (ನಾ). ಸೂರ್ಯಮಂಡಲ ; ಸೂರ್ಯಬಿಂಬ : ಆ ಸಮಯದೊಳ್ ಸವಿತೃಮಂಡಲಮುದಯಾಚಲಶಿಖಂಡಮಾಣಿಕ್ಯಮಂಡನಮೆನಿಸೆ (ಪಂರಾಮಾ. ೯-೧೯೦ ವ). [ಸಂ.]

**ಸವಿತ್ರಿ** (ನಾ). ೧. ತಾಯಿ ; ಜನನಿ : ಎಣ್ಬರುಮಂ ನಾಕನಾಯಕಂ ತ್ರಿಲೋಕಗುರು ಸವಿತ್ರಿಗೆ ಸೀಯನಪ್ಪ ಗೇಯದಿಂ ಪೊಬ್ಬುಗಳೆಯಲ್ ನಿಯಮಿಸಿದಂ (ಶಾಂತಿಪು. ೯-೧೬೮ ವ); ಧರೆಯೊಳು ಪುಟ್ಟುತಂ ನಿಜಸವಿತ್ರಿಗೆ ಮೋಕ್ಷಮನಿತ್ತು ಮಾಯೆಯಂ ಹರಿಯಿಸಿ ತನ್ನ ತಂದೆಗಱಿವಂ ದಯೆಗೆಯ್ದು (ತ್ರಿಪುವಿ. ೩೨-೨೨). ೨. ಆಕಳು ; ಗೋವು. [ಸಂ. ಸವಿತ್ರೀ]

**ಸವಿದಂಟು** (ನಾ). ಇನಿದಾದ ಕಾಂಡ ; ದೇಟು ; ಸಿಹಿಯಾದ ದಂಟು, — ನಾಳ : ಹೊಡೆಯನೆರಳೆಗಳು ಸವಿದಂಟುಗಳನು ಮರಗಳಂ ತೆನೆಗಳಂ ಗಿಳಿ ನವಿಲು ಕೊಂಚೆ ಮೊದಲಾದ ಖಗತತಿಗಳು . . . ತಿಂದು ತಳಪಟಂಮಾಡಿ ನಾಡೆಲ್ಲಮಂ ಗೋಳಿಡಿಸುತಿರ್ದುವು (ಪಚಕಾ. ೩-೬೩). [ಸವಿ$_2$ + ದಂಟು]

**ಸವಿದಂಬುಲ** (ನಾ). ರುಚಿಕರವಾದ ತಾಂಬೂಲ : ಸವಿದಂಬುಲವೇನ ಮಾಡುವುದು ಕೆಂಬಲ್ಲ ಕಿಡಿಯೇನ ಸುಡುವುದು ಮನಕೆಲ್ಲಿ ನಂಬುಗೆಯೆಂದು ಪಾಡಿದಳು (ಭರಚ. ೧೧-೨೮). [ಸವಿ$_2$ + ತಂಬುಲ]

**ಸವಿದಕ್ಕೆ** (ನಾ). ಆಪ್ಯಾಯಮಾನವಾದ ಅಪ್ಪುಗೆ ; ಹಿತಕರವಾದ ತೆಕ್ಕೆ: ಸವಿದಕ್ಕೆಯ ಸಡಿಲದ ನೇಹಗಳಿಂದಲವರಿರ್ವರೊಪ್ಪಿದರಂದು (ಕಂನವಿ. ೧೦-೪೬). [ಸವಿ$_3$ + ತಕ್ಕೆ$_1$ (< ತಬ್ಕೆ)]

**ಸವಿದಳೆ** (ನಾ). ಮಾಧುರ್ಯವನ್ನು ತಳೆ ; ಮಧುರತೆಯನ್ನು ಹೊಂದು: ಸವಿಗಳೆದು ತಣ್ಪುಗಳ್ಮಿಗೆ ಸವನಿಸಿ ರಸಭರಿತಮೆನಿಪ ಕವಿಮಾನಸದೊಳ್ (ಚಕವಿ. ೧-೧೯). [ಸವಿ$_2$ + ತಳೆ$_1$]

**ಸವಿದುಟಿ** (ನಾ). ಇನಿದಾದ ಅಧರ ; ಮಾಧುರ್ಯ ತುಂಬಿದ ತುಟಿ : ನೀಱನ ಚೆಲ್ವೊರೆದ ಸವಿದುಟಿಯನೊಲವಿಂ ಬರೆಪೀರ್ದುವು ನೋಡುವಿಚ್ಚೆಗಾರ್ತಿಯ ಕಣ್ಗಳ್ (ಕಬ್ಬಿಕಾ. ೩೨೯); ಸವಿದುಟಿಯೊಳ್ ಸಲೆ ಶೋಣಿ ಹೃದಯದೊಳಗವಿರತ ನರ್ಮದೆ ನೆಲಸಿರ್ಪುದಱಿಂ ಯುವತಿ ನಿರೀಕ್ಷಿಸುವರ ಕಣ್ಗರದೆ ಕೃತಾರ್ಥತೆ ಮಾಡುವಳು (ಜಯಕಾ. ೩-೫೬). [ಸವಿ$_2$ + ತುಟಿ]

**ಸವಿದುತ್ತು** (ನಾ). ರುಚಿಕರವಾದ ಕಬಳ; ರಸವತ್ತಾದ ಆಹಾರ: ಈ ಪರಿಯಲುರಗಂಗೆ ಸವಿದುತ್ತಾಗಿ ಹೋಹರೇ ಸುಕುಮಾರ (ಹಚಕಾ. ೧೨-೧೯); ವನದ ಚಕೋರಿಯ ಸವಿದುತ್ತಿದಾವುದು ಹರಿಣವಿಲ್ಲದ ಶೀತಕಿರಣ (ಇಂಚಾಪ. ೧೬೯-೩೧). [ಸವಿ$_2$ + ತುತ್ತು$_2$]

**ಸವಿದೆ** 'ಸೌದೆ$_1$' ನೋ.

**ಸವಿದೋಱಿಸು** (ಕ್ರಿ). ಇಂಪನ್ನು ಉಂಟುಮಾಡು; ಮಾಧುರ್ಯವನ್ನು ಗ್ರಹಿಸುವಂತೆ ಮಾಡು: ತುಂಬುರವಿಡಿದು ಗಾನಾಮೃತವನು ಕಿವಿಗಿಂಬಾಗಿ ಸವಿದೋಱಿಸುತ ಮುಂಬರಿದೆಸೆವ ಗಾಯಕರು ಪಾಡುವ ಸಂರಂಭವನೇನ ಬಣ್ಣಿಪೆನು (ಕಂನವಿ. ೮-೩೩). [ಸವಿದೋಱು + -ಇಸು$_3$]

**ಸವಿದೋಱು** (ಕ್ರಿ). ೧. ರುಚಿಕರವಾಗಿ ಕಾಣು; ಇನಿದಾಗು : ಕೊಂಡವಗೆ ಸವಿದೋಱಿತು ಇಂತಪ್ಪ ಕಾಯಿ (ಚಿಡಗುಚಾಪದಿ. ೬). ೨. ರುಚಿಯನ್ನು ತೋರಿಸು; ಸ್ವಾದವನ್ನು ಗ್ರಹಿಸುವಂತೆ ಮಾಡು : ಸವಿಸವಿದು ಬಿಕ್ಕಬಿಕ್ಕನೆ ಸವಿನೋಡೆನ್ನಾಣೆ ಯೆಂದು ರಕ್ಕಸಿಗಮದಂ ಸವಿದೋಱಿ (ಪಂಪಭಾ. ೧೨-೧೫೮); ತೆಳುದೊಗಲ ಚಕ್ಕಳದ ಕೈಚಪ್ಪಳೆಯವರು ಹಂತಿಯಲಿ ಕುಡಿದರು ಕೆಳೆಯರಿಗೆ ಸವಿದೋಱಿ (ಕುಮ್ಮಾಭೀ. ೫-೩೧). ೩. (ಆಲಂ) ಆಯುಧಗಳ ಹೊಡೆತ ಮುಂತಾದುವುಗಳ ಪ್ರಭಾವ, ಪರಿಣಾಮಗಳನ್ನು ಅನುಭವಿಸುವಂತೆ ಮಾಡು : ದಳದ ನಾಯಕರೆಲ್ಲರಿಗೆ ಸವಿದೋಱಿದನು ಬಲುಗದೆಯ ಹೊಯ್ಲುಗಳ (ಕುಮ್ಮಾಕ. ೧೫-೩೪). [ಸವಿ$_2$ + ತೋಱು]

**ಸವಿಧ** (ಗು). ೧. ಒಂದೇ ಬಗೆಯ ; ಒಂದೇ ರೀತಿಯ. (ನಾ). ೨. ಹತ್ತಿರ ; ಸಮೀಪ ; ನಿಕಟ : ಸವಿಧಂ ದೂರಂ ಪ್ರತ್ಯಂತವಿದೆನ್ನದೆ . . . ನೆಗಟ್ದತ್ತಗಾಧಬೋಧಂ ಜಿನನೊಳ್ (ಪುಷ್ಪಪು. ೧೪-೪೦); ಮುನಿ ತನ್ನೃಪಾಲನ ಸವಿಧವನು ತಾನೈದಿ ತದ್ವಾಕ್ಯವನು ಹೇಳಿದನು (ತಿಮ್ಮಅ. ೩-೯೧); ರವಿ ಬಿಸುಗದಿರಂ ಕಱೆಯಂ ದವಾಗ್ನಿ ಸವಿಧಸ್ಥಳಂಗಳೊಳ್ ಮೆಯ್ವೋಱಂ ಪವನಂ ಬಿಱುಬಿಂ ಬೀಸಂ ಜವನವರೆಡೆಯಾಡಲಣ್ಮರಾ ಮುನಿವನದೊಳ್ (ಶಬಶಂ. ೨-೬೬). [ಸಂ.]

**ಸವಿಧೆ** 'ಸೌದೆ$_1$' ನೋ.

**ಸವಿನಗೆ** (ನಾ). ಮೋಹಕವಾದ ನಗು ; ಮನೋಹರವಾದ ನಗೆ : ಸವಿನಗೆಯಿಂದೆ ಮೆಲ್ನುಡಿಯ ಬಿನ್ನಣದಿಂ . . . ಬಗೆಗೆ ಸೋಲಮನುರ್ವಿಸಿ (ವೃಷವಿ. ೨೯-೧೪); ಸವಿನಗೆಯೆಂಬಪುರ್ದಿನ ಸೊನೆ ಕವಿತರ್ಪವೊಲಾಗೆ ಸುರಿವ ಲಾಲಾಜಳಂ (ರಾಜಶೇ. ೪-೬೮). [ಸವಿ$_2$ + ನಗೆ]

**ಸವಿನಯ** (ಗು). ೧. ವಿನಯದಿಂದ ಕೂಡಿದ; ಸೌಜನ್ಯಪೂರಿತವಾದ: ಸವಿನಯಹಾಸಿಯರ್ . . . ನವನವಕೌತುಕಾಹವಮನೋಹರಶೀಲೆಯರಲ್ತೆ ಸೂಳೆಯರ್ (ಚಿಕವಿ. ೬-೬೯); ಸವಿನಯರಾಜಶೇಖರತನೂಭವ ನೀನುಱೆಯರ್ಧರಾತ್ರಿಯೊಳ್ ತವೆ ನಗರೀವಿಶೋಧನನಿಮಿತ್ತದೆ . . . ಸಂಚರಿಸು (ಹಾಲಾಸ್ಯ. ೨-೯-೩೦). (ನಾ). ೨. ಸೌಜನ್ಯ; ಒಳ್ಳೆಯತನ : ಸವಿನಯದೊಳಂದು ಸಾಮ್ರಾಜ್ಯವನೆನ್ನಯ ಜನಕನಂಘ್ರಿಗೊಪ್ಪಿಸಿ ತತ್ಪಾದವನೋಲಗಿಸುತ್ತುಂ ನಾಂ ದಿವಸಂಗಳ್ ಕೆಲವುಮಂ ಸುಖಂ ಮಿಗೆ ಕಳಿದೆಂ (ದಶಕು. ೧೦-೧೨೯); ನಂದನನವರ ಪಶುಗಳನಾರಯಿದು ಕಾಯ್ತಪ್ಪ ನನುದಿನವು ಸವಿನಯದೊಳು (ಬಸವು. ೨೪-೨). [ಸಂ.]

**ಸವಿನಯಸ್ಥ** (ನಾ). ವಿನಯಶೀಲನಾದವನು; ಸೌಜನ್ಯದಿಂದ ಕೂಡಿದ ವ್ಯಕ್ತಿ: ಲವವಿನಿತುವುಂ ಕೋಪವಿಲ್ಲದ ಸವಿನಯಸ್ಥರು (ಬಸವು. ೩೮-೬). [ಸಂ.]

**ಸವಿನೀತ** (ನಾ). = ಸವಿನಯಸ್ಥ : ಅವರಿರ್ವ್ವರ್ಗ್ಗಂ ಪುಟ್ಟಿದಂ . . . ಭುವನೋಂನತಧವಳಯಶಂ ಸವಿನೀತಂ ಪ್ರಿಥ್ವಿಸೆಟ್ಟಿಯೆನ್ಸಿ(ನಿಸಿ)ದ ಬೊಂಮನು (ಕಇ. IV, ೧-೬೫; 1204). [ಸಂ.]

**ಸವಿನೀರು** (ನಾ). ಸಿಹಿಯಾದ ನೀರು : ನಂಜಮ್ಮನ ಒಡನಾಟ ಮರುಭೂಮಿಯಲ್ಲಿ ಅಲೆಯುತ್ತಿದ್ದ ಯಾತ್ರಿಕನಿಗೆ ದೊರೆತ ಸವಿನೀರ ಚಿಲುಮೆಯಂತೆ ರಾಣಿಗೆ

ಆಪ್ಯಾಯಮಾನವಾಗಿದ್ದಿತು (ಹಾಹುತ್ರ. ೩೮); ಅಲ್ಲಿ ಭಾವಿ ಅಗಿಯಲು ಸವಿನೀರಿನ ಸೆಲೆ ಚಿಮ್ಮಿತು (ಶರಚ. ೭೯೫). [ಸವಿ$_{2}$ + ನೀರು$_{1}$ (< ನೀರ್)]

**ಸವಿನುಡಿ$_{1}$** (ಕ್ರಿ). ಮಧುರವಾಗಿ ಹೇಳು ,— ನುಡಿ : ತಾನೇ ರಚಿಸಿದ ಹೆಸರು ಅವನ ಕಿವಿಯಲ್ಲಿ ಸವಿನುಡಿಯುತ್ತಿತ್ತು (ಗಂಮಾಯಿ. ೧೩). [ಸವಿ$_{2}$ + ನುಡಿ$_{1}$]

**ಸವಿನುಡಿ$_{2}$** (ನಾ). ಮಧುರವಾದ ಮಾತು; ಇಂಪಾದ ನುಡಿ : ಸುರತ ಸಮಯದೊಳಿನಿಯನಾಡಿದ ಸವಿನುಡಿಗಳನುಸಿರ್ದು (ಗಿರಿಕ. ೨-೧೦೫ ವ); ಕಾರುಣ್ಯದೇಳ್ಗೆಯಿಂ ಸವಿನುಡಿಯೊಳಿಂತೆಂಬನು (ಭಾವಚಿಂ. ೯-೪೭); ಗಿಳಿ ಸವಿನುಡಿ ಸ್ವರಗೂಗಿಲೆ ತನುವಲ್ಲಿ . . . ನೆಲೆಮೂಲ ಚಕ್ರ ಕಾವನ ಬೆಳೆ ವನವನೆ ಹೆಂಗಳೆಹರು (ಕಂಸವಿ. ೬-೯೭).

[ಸವಿ$_{2}$ + ನುಡಿ$_{2}$]

**ಸವಿನುಡಿಗಾತಿ** (ನಾ). ಮಧುರವಾದ ಮಾತನ್ನಾಡುವವಳು : ಸಕ್ಕರೆದುಟಿಯಳ ಸವಿನುಡಿಗಾತಿಯ . . . ತಕ್ಕೆಯದೆಂದು ಘಟಿಪುದೊ (ಶತಸಾಂ. ೨೭-೩೦).

[ಸವಿನುಡಿ$_{2}$ + -ಗಾತಿ$_{5}$]

**ಸವಿನೆನಪು, ಸವಿನೆನಹು** (ನಾ). ಹಿತಕರವಾದ ಸ್ಮರಣೆ ; ಪ್ರಿಯವಾದ ನೆನಪು : ಎರಡು ವಾರದಲ್ಲಿ ಆ ಸವಿನೆನಪು ಮರೆತುಹೋಗುವಂತಹ ರುದ್ರವಾತಾವರಣ ನಡೆದಿದೆ (ಪದ್ಮಸ. ೨೦೮); ಕೆಲವರು ಪರಿಚಯವನ್ನು ಹೇಳಿಕೊಂಡರೂ ಅರೆಮರೆತ ಹಿಂದಿನ ಜೀವನದ ಸವಿನೆನಪುಗಳ ತಂತಿಯನ್ನು ಮಿಡಿಯಲಾರದೆ ಹೋದರು (ನಿರಾತ. ೫೫). **ಸವಿನೆನಹು** : ಆಗವಳೆದುರಿಗೆ ಗೆಳತಿಯರ ಸವಿನೆನಹುಗಳ ಚಿತ್ರಗಳೇ ಚಿತ್ರಗಳು (ಕನ್ನಜಾ. ೧೪೭). [ಸವಿ$_{2}$ + ನೆನಪು]

**ಸವಿನೆನಹು** 'ಸವಿನೆನಪು' ನೋ.

**ಸವಿನೋಟ** (ನಾ). ೧. ಮಧುರವಾದ ದೃಷ್ಟಿ ; ಮೋಹಕವಾದ ನೋಟ : ಸವಿನೋಟದೊಳ್ಸಂಚು ನಗೆಯೊಳ್ಪ್ರಪಂಚು (ಜೈಮಿಭಾ. ೬-೩೪); ಸವಿನೋಟಂ ಪೊಸವೇಟಮಂ ನಗೆಯನಂಗಾವೇಶಮಂ . . . ಪುಟ್ಟಿಸದಿರ್ದೊಡೇಕೆ ನೆರೆವಾಯಾಸಂ ವಿಟಂಗಂಗನೇ (ವೃಷವಿ. ೨೮-೩೦); ತವಕವಾಡುವ ತತ್ತರಿಪ ತಲ್ಲಣಿಸುವ . . . ಸವಿನೋಟಗಳ ಸಮನಿಪುದು (ಚಿಕವಿ. ೬-೧೫೭ ಸಾಂಗತ್ಯ). ೨. ಹಿತಕರವಾದ ದೃಶ್ಯ ; ಆಪ್ಯಾಯಮಾನವಾದ ನೋಟ : ತಕ್ಕು ಕಡಂಗಿದಚ್ಚ ಸವಿನೋಟಕೆ ಸಿಲ್ಕಿದ ದಿಟ್ಟ . . . ಒಪ್ಪೆ ಶಿವೆಯಂ ನಲಿದರ್ಚಿಸುತೊಪ್ಪಿದಂ ನೃಪಂ (ಉದ್ಧಟ. ೪-೩); ಎವೆಹೊತ್ತಿನಾ ನೋಟ, ಸವಿನೋಟ, ಸವೆಯದೆದೆಚಿಮ್ಮುತಿಹುದಿನ್ನೂ ! ನಾಲ್ಮಡಿ ಕೃಷ್ಣನ ಸವಿಸೊಲ್ಲು (ಹೂಂಗಳು. ೧೭-೨೪). [ಸವಿ$_{2}$ + ನೋಟ]

**ಸವಿನೋಡು** (ಕ್ರಿ). ೧. ರುಚಿಯನ್ನು ನೋಡು ; ಆಸ್ವಾದಿಸು : ಸವಿಸವಿದು ಬಿಕ್ಕಬಿಕ್ಕನೆ ಸವಿನೋಡೆನ್ನಾಣೆಯೆಂದು ರಕ್ಕಸಿಗಮದಂ ಸವಿದೋಳ್ (ಪಂಪಭಾ. ೧೨-೧೫೮). ೨. ತಿನ್ನು ; ಮೆಲ್ಲು : ಇವಱಿಂದವು ಸವಿಯೆನುತುಂ ಸವಿನೋಟ್ಪ್ಯೆ ಪಲವುತೆಱದ ಮೃಗದಡಗಂ (ವರ್ಧಪು. ೧೧-೨೦). ೩. (ಅಲಂ) ಆಯುಧದ ಪ್ರಯೋಗ ಮುಂತಾದುವುಗಳ ಪ್ರಭಾವ, ಪರಿಣಾಮಗಳನ್ನು ಅನುಭವಿಸು : ಎನ್ನ ಬಾಳ ಸವಿಯಂ ಸವಿನೋಡಿ ಬಟಿಕ ನೀರ ಸವಿಯಂ ನೋಡಾ (ಗದಾಯು. ೭-೫); ಪರಶುಧರಸಾಯಕದ ಸವಿನೋಡಾದಡೆನುತೆಚ್ಚನು ಮಹೀಪತಿಯ (ಕುಮ್ಮಾಕ. ೧೧-೪೯). ೪. ಕೊಲ್ಲು ; ಮುಗಿಸು : ಅವರುಮನಂತಕನೊಯ್ಯನೆ ಸವಿನೋಟ್ಪುದುಮಾನುಮೆನ್ನ ಪಾಪದ ಫಲಮಂ ಸವಿನೋಡೆ ಪೊಕ್ಕೆನೊಡನೊಗೆದ ವಿಚಾರಣಚರಿತಮೆಂಬ ಗಹನಾಂತರಮಂ (ಆದಿಪು. ೩-೩೫); ಸವಿನೋಟ್ಪಿಂ ಸಾಗರಾಂತಕ್ಕಸುರರ ನೆರೆಗೊಳ್ಪಿಂ ತ್ರಿಪಲ್ಯಕ್ಕೆ ನಾಗಾನ್ವಯಮಂ ಸಾರ್ಧದ್ವಿಪಲ್ಯಕ್ಕಳವಳಲುಱೆ ಮಾಟ್ಪಿಂ . . . ಕೃತಾಂತಂ (ಮಲ್ಲಿಪು. ೧೩-೧೦೩). [ಸವಿ$_{2}$ + ನೋಡು]

**ಸವಿಪಾಕ** (ನಾ). [ಜೈನ] ನಿರ್ಜರೆಯ ಅವಿಪಾಕ ಮತ್ತು ಸವಿಪಾಕಗಳೆಂಬ ಎರಡು ಪ್ರಕಾರಗಳಲ್ಲಿ ಒಂದು ; IP ''ಕರ್ಮವು ಫಲೋನ್ಮುಖವಾಗಿ ಸುಖದುಃಖಗಳನ್ನು ಕೊಟ್ಟು ತುಸುತುಸು ಉದುರಿ ಹೋಗುತ್ತಿರುವ ಸ್ಥಿತಿ'' (ಆದಿಪು. ಜೈನಪಾರಿಭಾಷಿಕಶಬ್ದಕೋಶ ೯೯): ಯಥಾಕಾಲಾನುಭವನ ತಪೋನಿಮಿತ್ತಮಾಗಿ ಸವಿಪಾಕಾವಿಪಾಕರೂಪದಿಂ ಪೂರ್ವಾರ್ಜಿತಕರ್ಮನಿರ್ಜರಣಂ ನಿರ್ಜರೆಯೆಂಬುದು (ಆದಿಪು. ೧೦-೬೩ ವ). [ಸಂ.]

**ಸವಿಪಾಕನಿರ್ಜರೆ** (ನಾ). ''ನಿರ್ದಿಷ್ಟಫಲಭೋಗಾನಂತರದಲ್ಲಿ ಕರ್ಮದ ಸ್ವಾಭಾವಿಕ ಕ್ಷಯವಾಗುವುದು ಸವಿಪಾಕನಿರ್ಜರೆಯು'' (ಜೈನಧ. ೩): ಅಂತೆತ್ತಾನುಂ ಸ[ಪಾಠಾಂ. ಸಂ]ವಿಪಾಕನಿರ್ಜರೆಯಿಂ ದುಷ್ಕರ್ಮಫಲಮುಂ ತವಿಸಿ (ಪಂರಾಮಾ. ೬-೫೭ ವ); ಅವಿಪಾಕನಿರ್ಜರೆ ಸವಿಪಾಕನಿರ್ಜರೆಯೆಂಬೆರಡುಂ ತೆಱದ ನಿರ್ಜರೋಪಾಯಮಮಂ ಪೇಳ್ದು (ಜೀವಸಂ. ೧೦-೨೬ ವ); ತಾನಾಗಿ ಫಲವನ್ನು ಕೊಟ್ಟು ಅಳಿದುಹೋಗುವ ಕರ್ಮಕ್ರಮಕ್ಕೆ ಸವಿಪಾಕನಿರ್ಜರೆ ಎನ್ನುತ್ತಾರೆ (ಭಾರದ. ೧೪೭). 'ಅವಿಪಾಕನಿರ್ಜರೆ' ಪರಾ. [ಸಂ. ಸವಿಪಾಕನಿರ್ಜರಾ]

**ಸವಿಭವಂ** (ಅ). ವೈಭವವನ್ನು ಹೊಂದಿ; ಆಡಂಬರದಿಂದ ಕೂಡಿ : ಪುರುಹೂತಂ ಪ್ರೀತಿಯಿಂ ನಂದನವನಕೆ . . . ಬರ್ಪವೋಲ್ ತದ್ಧರಣೀಚಕ್ರೇಶನಂತಾ ಬನಕೆ ಸವಿಭವಂ ಬಂದು ಯೋಗೀಂದ್ರಪೂಜಾತುರಚಿತ್ತಂ ಪೊಕ್ಕನುದ್ಯತ್ಪುಳಕತನುಲತಂ ಕಾವ್ಯನೌಕರ್ಣಧಾರಂ (ಚಂದ್ರಪ್ರ. ೨-೧೧೬). [ಸಂ.]

**ಸವಿಮಾತು** 'ಸವಿವಾತು' ನೋ.

**ಸವಿಮಾವು** (ನಾ). ಸಿಹಿಯಾದ ಮಾವು ; ಇಮ್ಮಾವು : ಸವಿಮಾವು ಪೂವು ಬಕುಳಂ ಮುಕುಳಮೊಪ್ಪುವ ಕೊಳಂ . . . ಸೊಂಪು ಪೆಂಪಿಂದೀ ಪುರೋಪವನಮಸೆದಿರ್ದುದು (ಚಿಬಸು. ೧೧-೨೧). [ಸವಿ$_{2}$ + ಮಾವು]

**ಸವಿಮುತ್ತು** (ನಾ). ಮಧುರವಾದ ಚುಂಬನ : ಸವಿಮುತ್ತನಿವಗೀವ ಪುಣ್ಯವ ಪಡೆವುದೆಂದಿಗೆ ನಾನಬಲೆ (ಕಂಸವಿ. ೯-೧೨೫). [ಸವಿ$_{2}$ + ಮುತ್ತು$_{3}$ (< ಮುದ್ದು)]

**ಸವಿಮುನಿಸು** (ನಾ). ಪ್ರಣಯಕೋಪ; ಹುಸಿಮುನಿಸು: ಎಳೆನಗೆ ಸವಿ ಮುನಿಸು ನೋಟ ಬೇಟವು ನೆಱೆಸೊಬಗಿಯಾ ಸೂಳವಿನ್ನಣದೊಳ್ ಸಿಲುಕಿದನು (ಸಾಳ್ವಭಾ. ೧೭-೨೭). [ಸವಿ$_{2}$ + ಮುನಿಸು$_{2}$]

**ಸವಿಯಿಸು, ಸವಿಸು** (ಕ್ರಿ). ೧. ಆಸ್ವಾದಿಸುವಂತೆ ಮಾಡು ; ಉಣಿಸು : ಕವಿತೆಯ ರಸವನು ಕರ್ಣಾಟದ ಭಾಷೆಯೊಳುಱೆ ಮೊಗೆಮೊಗೆದು ಕವಿರಸಿಕರ ಕರ್ಣಾಸ್ಯದೊಳೆಱೆದಾಂ ಸವಿಯಿಸಿ ಸಂತೋಷದಿ ತೇಗಿಸುವೆನು (ಮುಡಿಕ್ಕಾ. V, ೧೧೯೨-೮೭೦-೧೭). **ಸವಿಸು** : ೧. ಸಕ್ಕರೆ ತುಪ್ಪವ ಸವಿಸೋದು ರೊಕ್ಕ (ಪುರಂದ. ೨-೪೮-೧); ಶೋಭಿಸುವ ಪಣ್ಪಡಿದು ತಂದೆ ಸವಿಸದೊಡೆ ತಾನೇ ಭುಂಜಿಪನೆ ಪಸುಳೆ (ಜೈಮಿಭಾ. ೭-೪೨); ಅಮೃತಫಲಗಳನು ಬಾಯಿಗಿನಿದಪ್ಪಂತೆ ಸವಿಸುತಲಾಯಸವ ನೀಗುತ್ತ ಪಥಿಕರ ಕಾಯಜರಪ್ರಪೆಯಂತೆ ಶೋಭಿಪವಲ್ಲಿ ಮಾವಮರಗಳ್ (ಅರ್ಜಾವಿ. ೧೩-೧೧). ೨. ಆಸ್ವಾದಿಸು ; ಸೇವಿಸು : ತುದಿಮೊದಲ್ವನಕ ಹೇಱಿದ ನವ್ಯಫಳರಸಂಗಳನು ಸವಿಸುವುದು ಲೋಕದ ಶಿವಪದಾರ್ಥಕರು ಮಾನಿಗಳು (ಹಚಿಕಾ. ೧-೧೮); ತಾವೆಲ್ಲರುಂ ಸವಿಸಿ ಬಳಿಕಾಗಲಾ ಬಾಲಲಿಂಗಣ್ಣನಂ ಕರೆಯೆನಲ್ (ಚಿಬಸು. ೬೩-೨೯).

[ಸವಿ$_{1}$ + -ಇಸು$_{3}$]

**ಸವಿಯೂಟ** (ನಾ). ರುಚಿಕರವಾದ ಆಹಾರ ; ರಸಕವಳ : ಆಟವೇ ಮೃಗಗಣದೊಡನೆ ಸವಿಯೂ[ಪಾಠಾಂ. ದೂ]ಟವೇ ವನಕಂದಫಲ (ತೊರರಾ. ೧-೫-೪೪); ದಿನರಾತ್ರಿಯೆನ್ನದೆ ವಿಷಯಲಂಪಟನಾಗಿ ಸವಿಯೂಟಗಳನುಂಡು ಭ್ರಮಿಸಬೇಡ (ಪುರಂದ. ೨-೬೦-೧). [ಸವಿ$_{2}$ + ಊಟ]

**ಸವಿಯೇಱು** (ಕ್ರಿ). ಸೊಗಸು ಹೆಚ್ಚಾಗು ; ಚೆಲುವು ಅಧಿಕವಾಗು : ಸೌಕುಮಾರ್ಯಕ್ಕೆ ಸವಿಯೇಱಿದಂತೆ ಆಲಿಂಗನಕ್ಕೆ ಅವಯವಂ ಬಂದಂತೆ (ಗಿರಿಕ. ೨-೧೦೫ ವ); ಕಠಿನತೆಯಂ ಕಳೆದು ಮಿಸುಪ ಮಾಣಿಕ್ಯಂ ಕೆಂಪಂ ತಳೆದಮೃತಂ ಸವಿಯೇಱಿದ ಹೊಸಹವಳಂ . . . ಎನೆಯಿನಿದುಟಿ ಸೊಗಯಿಸಿತಾ ನೃಪಸುತೆಗೆ (ಜಯಕಾ. ೩-೪೧).

[ಸವಿ$_{2}$ + ಏಱು$_{1}$ (< ಏಱ್$_{1}$)]

**ಸವಿರಾಗ** (ನಾ). ೧. ಒಳ್ಳೆಯ ಅನುರಾಗ ,— ಪ್ರೀತಿ : ಸವಿರಾಗ ಬೆರಸಿದ ಉಸಿರು ಇದಕ ಯಾ ಹೆಸರು (ನಾವಲೀ. ೬೭-೨೧). ೨. ಒಳ್ಳೆಯ ಅನುರಾಗವುಳ್ಳುದು. ೩. ವೈರಾಗ್ಯದಿಂದ ಕೂಡಿದವನು ; ವಿರಕ್ತ. ೨, ೩ : ಸವಿರಾಗಂ ಸುಮನೋವೈಭವಂ ಸನಿರ್ಮಳದಿಗಂಬರಂ ಸಫಳಭವಂ ಭುವನೋತ್ತಮಂ ವಸಂತೋತ್ಸವಸದೃಶಂ ಪ್ರೋಷ್ಠಿಲಂ ಮುನೀಂದ್ರಶ್ರೇಷ್ಠಂ (ವರ್ಧಪು. ೧೩-೧೧).

[ಸವಿ$_{2}$ + ರಾಗ$_{2}$; ಸಂ. ( ಸ + ವಿರಾಗ)]

**ಸವಿಲಾಸಂ** (ಅ). ಉಲ್ಲಾಸದಿಂದ ಕೂಡಿ ; ವಿಲಾಸದಿಂದ ತುಂಬಿ : ಸವಿಲಾಸಂ ಮೆಱೆದತ್ತು ಬಾಜಿಸುವ ಮಾಂಗಲ್ಯಾನಕಂ (ಅನಂಪು. ೬-೬೩). [ಸಂ.]

**ಸವಿವಕ್ಷಿತ** (ಗು). ಮಾತಿನಲ್ಲಿ ಹೇಳಲು ಇಚ್ಛಿಸುವ ; ಪ್ರಕಟಗೊಳಿಸುವ ಬಯಕೆಯುಳ್ಳ : ಸ್ತುತಿನಿಂದೆಗಳಿಂ ಸವಿವಕ್ಷಿತಗುಣದೊಳ್ ಸದೃಶಮಾಗಿ ಪೇೞ್ವುದು (ಕವಿರಾ. ೩-೯೫). [ಸಂ.]

**ಸವಿವಡೆ** (ಕ್ರಿ). ಮಾಧುರ್ಯವನ್ನು ಹೊಂದು ; ಇಂಪನ್ನು ಪಡೆ : ಎಡೆವಿಡದೆ ಸನ್ನುತಿಗಳಿಂದಾತ್ಮಸುಖಿಕೆಂಬಿರದಿ ಸವಿವಡೆದು ಪಾಡುವ ಗಾನ (ಚಿಬಪು. ೧-೨೫); ಸವಿವಡೆವ ಶೃಂಗಾರರಸವರ್ಣವು ಮನೋಜನ ದೇಹಕಾಂತಿಯೊಳವಗಹಿಸಿ . . . ನರ್ತಿಪುದೊ (ಸಾಳ್ವಭಾ. ೧೮-೪೧). [ಸವಿ$_2$ + ಪಡೆ$_1$]

**ಸವಿವಣ್** (ನಾ). ರುಚಿಕರವಾದ ಹಣ್ಣು ; ರಸಭರಿತವಾದ ಫಲ : ಸವಿವಣ್ಣಲ್ಲಿನಿ ಮಾವು ಸರ್ವರಸದೊಳ್ ಶೃಂಗಾರ (ಸೋಮೇಶ. ೧೩). [ಸವಿ$_2$ + ಪಣ್$_3$]

**ಸವಿವಾಡು** (ನಾ). ಮಧುರವಾದ ಗಾನ ; ಇಂಪಾದ ಹಾಡು : ಸರಸಪಿಕಾಲಾಪಿಯ ಸವಿವಾಡುಗೇಳ್ದರಲೇಱಿದುದು ನವಮೇರು (ಶ್ರೀಪಾಲ. ೫-೪೬). [ಸವಿ$_2$ + ಪಾಡು$_2$]

**ಸವಿವಾತು, ಸವಿಮಾತು** (ನಾ). = ಸವಿನುಡಿ$_2$ : ಪೊಸಲತೆಯಕ್ಕುಮಲ್ಲಲತೆಗೆತ್ತಣದೀ ಸವಿವಾತು . . . ಎಂದೊಸೆದು ಸಖೀಜನಂ ಪೊಗೞ್ವುದಾ ಸತಿಯಂ ನಡೆನೋಡಿ ರಾಗದಿಂ (ಉದ್ಭಟ. ೮-೪೧); ಸವಿವಾತುಗಳ ಸೋನೆಯ ಸೊಗಸುಕಾಱರು ನಿಂದ ನಿಲವನು ಕರ್ಣ ನೋಡು (ಕುವ್ಯಾದ್ರೋ. ೧೬-೨೪); ಕಟ್ಟುಬೀಳದ ಸಕ್ಕರೆಯಿಂದೆ ಸವಿವಾತ ನೆಟ್ಟನೆ ಪೇಳ್ವುದೆನ್ನೊಡನೆ (ಮೋಹತ. ೨೩-೧). **ಸವಿಮಾತು** : ಸವಿಮಾತಿನರಗಿಣಿಗೆ ಹಸುರು ಬರೆದವರಾರು (ಪುರಂದ. ೨-೪೬-೨); ಸವಿಮಾತುಗಳ ವಿಸ್ತರಿಸುವೆ ಕೇಳ್ವರ ಕಿವಿಗೆ ಭೂಷಣವಪ್ಪ ತೆಱದಿ (ಮೋಹತ. ೧-೧೮); ಶೀನಪ್ಪನಿಗೆ ಅದ್ದತಿದ್ದ ಸವಿಮಾತುಗಳಲ್ಲಿ ರುಚಿಯಿರಲಿಲ್ಲ (ಗಂಮೂಂಬ. ೯೬). [ಸವಿ$_2$ + ಮಾತು$_1$]

**ಸವಿವಾಯ್** (ನಾ). ರುಚಿಯನ್ನು ಬಯಸುವ ಬಾಯಿ : ಮಾರಿಮೃತ್ಯುಗಳ ಸವಿವಾಯ ಬಱಿವನಾಱಿಸಿ ಭೂತವೇತಾಳಗಂ ಕುಣಿಸಿ ರಣಧೀರರೆಂಬ ಹೆಸರ ಹೊಱುವೆವು (ಸೋಮಚ. ೫-೧೬); ಎವಗೆ ತವಗೆಂದೀ ಹವಿರ್ಭಾಗವನು ಮುತ್ತಿತ್ತು ದೇವತತಿ . . . ದಿವಿಜರೊಳಹಸುಗೆಗಳ ಲೆಕ್ಕದ ಸವಬೆಸನ ಸವಿವಾಯ ತುತ್ತಿನ ತವಕಿಗರು ಹೊಯ್ದಾಡಿದರು ಸಭೆಯಲಿ ಸುರೇಶ್ವರನ (ಕುವ್ಯಾಸ. ೭-೩೯). [ಸವಿ$_2$ + ಬಾಯ್]

**ಸವಿವಾಯ** (ನಾ). ಒಂದು ಬಗೆಯ ಬಾಣ (?) : ಬಿಸುಗದಿರು ಸವಿವಾಯನೆಂಬ ನಾನಾಸರಳನು ಸೆಳೆದು ನೀಡಡಿಯಿಟ್ಟು . . . ನಿಂದರು (ಸೋಮಚ. ೫-೨೬). [?]

**ಸವಿವಿಲ್** (ನಾ). ಕಬ್ಬಿನ ಬಿಲ್ಲು : 'ಸವಿವಿಲ್ಲ' ಪರಾ. [ಸವಿ$_2$ + ಬಿಲ್$_2$]

**ಸವಿವಿಲ್ಲ** (ನಾ). ೧. ಕಬ್ಬಿನ ಬಿಲ್ಲನ್ನು ಹೊಂದಿದವನು ; ಮನ್ಮಥ. ೨. [ಜೈನ] ಬಾಹುಬಲಿ : ಸವಿವಿಲ್ಲನಣ್ಣ ಮನ್ನಣೆಯಿತ್ತನೆಂದವ ಸವಿಸವಿಯಾಗಿ ನುಡಿದನು (ಭರಚ. ೪೬-೯೬); ರವಿಶಶಿಕೋಟಿಪ್ರಕಾಶದ ಕಾಯನೆ ಸವಿವಿಲ್ಲನ ಜಯಿಸಿದನೆ (ಜಿನರಾ. ೫-೮೬). [ಸವಿವಿಲ್ + -ಅ$_7$]

**ಸವಿವೆರಸು** (ಕ್ರಿ). ರುಚಿಯಿಂದ ಕೂಡಿರು ; ರುಚಿಯಾಗಿರು : ಪರಿಪರಿಯುಪ್ಪಿನ ಕಾಯಿ ಹಪ್ಪಳ ಸವಿವೆರಸಿದ ಶುಭ್ರಭಾಳಕವ . . . ತರುಣಿಯರೆಡೆಮಾಡಿದರು (ಕಂನವಿ. ೮-೮೪). [ಸವಿ$_2$ + ಬೆರಸು$_1$ (< ಬೆರೆಯಿಸು)]

**ಸವಿವೇಟ** (ನಾ). ಇನಿದಾದ ಕಾಮಲಾಲಸೆ ,– ಕಾಮಾತುರತೆ : ಕೇಳಿದ ಕಿವಿವೇಟ ನೋಡಿದ ಕಣ್ಬೇಟ ಸೂಳುನುಡಿಯ ಸವಿವೇಟ ಪೇಳಲೇನವಳೆರ್ದೆಗೊಳಲವಳೆದೆಗೋಂಟೆ ಕೋಳುವೋದುದು ಕಾಮುಬಲಕೆ (ಕುರಾಸಾಂ. ೩೨-೮೩); ಲಲಿತಾಂಗಿಯರ್ಚೆಲ್ವೆಗಂಗಳ ನೋಟವುಂ ಬೀಱೆ ಸವಿವೇಟಮಂ ತೋಱೆ . . . ಪುಲ್ಲಶರ ಕೇಳಿಯೊಳ್ಮದವೇಱೆಸುವರ್ (ಜೈಮಿಭಾ. ೧೫-೪೩). [ಸವಿ$_2$ + ಬೇಟ (< ಬೇಂಟ)]

**ಸವಿವೊನಲು** (ನಾ). ಸಿಹಿಯಾದ ಧಾರೆ ,– ರಸಪ್ರವಾಹ : ರಸತುಂಬಿ ಬಿರಿಯುತಿಹ ಕರಿಯ ಕಬ್ಬನು ಬರಿದೆ ಬೇಡಿದೊಡೆ ತನ್ನೆದೆಯ ಸವಿವೊನಲ ನೀಡುವುದೇ? ಹಿಂಡಿದರೆ ತಾನೆ ದೊರಕುವುದು ರಸ? (ಚಂದ್ರಸ. ೭೪-೧೫). [ಸವಿ$_2$ + ಪೊನಲು (< ಪೊನಲ್)]

**ಸವಿಶೇಷ** (ಗು). ವಿಶಿಷ್ಟತೆಯಿಂದ ಕೂಡಿದ ; ವಿಶೇಷವಾದ : ತಿರಿತರ್ಕಮಮಳ ಜಳನಿಧಿಪರಿಪಾವೃತಭೂಮಿಭಾಗಮಂಬರದೆ ಜಲಾಕರವಿಕ್ಷೇಪಕಕಕುದಂತರಮಂ ಸವಿಶೇಷರುಚಿರಸಂಭವವಿಧಿಯಂ (ಕವಿರಾ. ೩-೫೫); ಸವಿಶೇಷಾಗಮವಾಕ್ಸುಧೌಷಧಮನೀಂಟಲ್ (ಎಕ. V, ಬೇಲೂರು. ೧೩೩-೩೩; 1279). [ಸಂ.]

**ಸವಿಶೇಷಂ** (ಅ). ವಿಶೇಷವಾಗಿ : ಭವದೀಯವದನಮಾಲೋಲವಿಲೋಚನಮುದಿತರಾಗಮಣಿವಿಳಸಿತಮಂ ಪ್ರವಿಕಸಿತಾಂಬುಜವನಮಂ ಸವಿಶೇಷಂ ಪೋಲ್ತುಮೆನ್ಗೆ ವಾಕ್ಯೋಪಮಯಂ (ಕವಿರಾ. ೩-೮೨). [ಸಂ.]

**ಸವಿಶೇಷಗುಣ** (ನಾ). ವಿಶಿಷ್ಟವಾದ ಗುಣ : ಅವಱ ವಿಪರ್ಯಯವೃತ್ತಿಪ್ರವಿಭಕ್ತವಕಲ್ಪಮಕ್ಕುಮುತ್ತರಮಾರ್ಗಂ ಸವಿಶೇಷಗುಣಮನತಿಶಯಭವಳೋಕ್ತಿಕ್ರಮದಿನಱಿಪುವೆಂ ತದ್ಭವದೊಳ್ (ಕವಿರಾ. ೨-೫೫). [ಸಂ.]

**ಸವಿಶೇಷವಿವರ್ತಿ** (ನಾ). ವಿಶಿಷ್ಟರೀತಿಯ ಪ್ರಯೋಗ : ಇವು ದುಷ್ಕರಕಾವ್ಯಂಗಳ್ ಸವಿಶೇಷವಿವರ್ತಿಗಳ್ ಸುವಿಚಾರಿತಮಾ ತೋರ್ಪ[ನಿ]ವಱಾ ಲಕ್ಷ್ಯಭೇದಮಂ (ಕವಿರಾ. ೨-೧೧೩). IP ಡಾ. ಕೆ. ಕೃಷ್ಣಮೂರ್ತಿಯವರ ಸಂಪಾದಿತ 'ಕವಿರಾಜಮಾರ್ಗ' ಕೃತಿಯಲ್ಲಿ 'ಸವಿಶೇಷವರ್ತಿ' ಎಂಬಲ್ಲಿ ಶ್ಲೋಕಾಕ್ಷರ ಒಂದು ಕಡಿಮೆಯಾಗುವುದರಿಂದ 'ಸವಿಶೇಷವಿವರ್ತಿ' ಎಂದು ತಿದ್ದಿಕೊಳ್ಳಲಾಗಿದೆ.

[ಸಂ. ಸವಿಶೇಷವಿವರ್ತಿನ್]

**ಸವಿಷ** (ನಾ). ವಿಷದಿಂದ ಕೂಡಿದುದು : ಸವಿಷಮಿದೆಂಬುದನಱಿಯದೆ ಸವಿಸವಿಯೆಂದನುಭವಿಪ್ಪ ಜೀವಕ್ಕಿಂತೀ ಭವಸುಖಮಸುಖಮೆ ನಿಖಿಳಮನವಟಯ್ಸುಗುಮಲ್ತೆ ಬಳವದಘವಿಳಸಿತಮಂ (ವರ್ಧಪು. ೧೪-೮೯). [ಸಂ.]

**ಸವಿಸವಿ$_1$** 'ಸವಿ$_1$' ಪರಾ.

**ಸವಿಸವಿ$_2$** 'ಸವಿ$_2$' ಪರಾ.

**ಸವಿಸು** 'ಸವಿಯಿಸು' ನೋ.

**ಸವಿಸ್ತರ** (ನಾ). ವ್ಯಾಪ್ತವಾದುದು ; ವಿವರಣಾತ್ಮಕವಾದುದು : ಸವಿಸ್ತರದೊಳೆ ವರ್ಧಮಾನಜಿನಸನ್ನಿಧಿಯೊಳ್ ವಿಪುಳಾದ್ರಿಯೊಳ್ ನಿಜಾದರದೊಳ್ ಗೌತಮರ್ ಮಗಧನಾಯಕನುಂ ತಿಳಿವಂತು ಪೇೞ್ದುದಂ . . . ವಿರಚಿಸುವೆಂ (ಆದಿಪು. ೧-೪೧). [ಸಂ.]

**ಸವಿಸ್ತರಂ** (ಅ). ವ್ಯಾಪ್ತವಾಗಿ ; ವಿಸ್ತಾರವಾಗಿ ; ವಿವರವಾಗಿ : ಸವಿಸ್ತರಂ ನಿರವಿಸಿದನಲ್ತೆ (ರಾಮಾಶ್ವ. ೯೯-೧೬). [ಸಂ.]

**ಸವಿಸ್ತಾರ** (ಗು). ೧. ವಿಸ್ತಾರವಾದ ; ವ್ಯಾಪ್ತಿಯಿಂದ ಕೂಡಿದ. (ನಾ). ೨. = ಸವಿಸ್ತರ : ಅವರ ಕಡೆಯಿಂದಾ ಸವಿಸ್ತಾರವಾಗಿ ತಮಗೆ ತಿಳಿಯಬಂದೀತು (ರಾಜೇಂದ್ರ. ೨೧೯); ಮೋತೀಬಾಯಿಯು ಆದಿಯಿಂದ ಅಂತ್ಯದವರೆಗೆ ಸವಿಸ್ತಾರವಾಗಿ ನಡೆದ ಸಂಗತಿಯನ್ನೆಲ್ಲಾ ವಿವರಿಸಿದಳು (ಝಾರಾಣಿ. ೧೯೪). [ಸಂ.]

**ಸವಿಹ** (ನಾ). ರುಚಿನೋಡುವಿಕೆ : ಕಾಣಬಹುದು, ಕೇಳುಹ, ಪರಿಮಳಿಸುಹ, ನಾಲಿಗೆಯಲ್ಲಿ ಸವಿಹ, ಮುಟ್ಟುಹ ಎಂಬಿವು ವಿಷಯಂಗಳು – ರೂಪ ಶಬ್ದ ಗಂಧ ರಸ ಸ್ಪರ್ಶ (ನಾಟರಾ. ೬). [ಸವಿ$_2$ + -ಹ$_2$ (< -ಪ$_2$)]

**ಸವೀಕ** (ನಾ). ಅಗ್ಗ ; ಸೋವಿ : ರೂಪಾಯಿಗೆ ಹದಿನಾರು ಸೇರು ರಾಗಿ . . . ಒಳ್ಳೇ ಸವೀಕದ ಕಾಲ ಅದು (ಬಂಗೂಲಿ. ೩೯). 'ಚೌಕ$_1$' ಪರಾ.

[ದೇ. ॥ ತಮಿ. ಚವುಕ್ಕ್ಯ ; ತೆಲು. ಚವುಕ, ಚೌಕ]

**ಸವೀರಪಾಷಾಣ, ಸವ್ವೀರಪಾಷಾಣ** (ನಾ). ಒಂದು ಬಗೆಯ ವಿಷ : ಸವೀರಪಾಷಾಣವನ್ನು ತಿನ್ನುತ್ತಾನೆ (ಕಾಂಪೂಚ. ೨೫). **ಸವ್ವೀರಪಾಷಾಣ** : ನಮ್ಮ ದೇಶದಲ್ಲಿ ಸಾಮಾನ್ಯವಾಗಿ ಸಿಕ್ಕುವ ಪಾಷಾಣಗಳು ಯಾವುವೆಂದರೆ :– ಇಲಿಪಾಷಾಣ, ಸವ್ವೀರಪಾಷಾಣ, ಮೈಲುತುತ್ತ (ಗ್ರಾಮಾಕ. ೧೫೪). [< ಸಂ. ಸೌವೀರಪಾಷಾಣ]

**ಸವುಂತೆ, ಸವತೆ$_1$, ಸವುತೆ, ಸೌಂತೆ, ಸೌತೆ** (ನಾ). ಒಂದು ಬಗೆಯ ಬಳ್ಳಿ ಮತ್ತು ತರಕಾರಿಯಾಗಿ ಉಪಯೋಗಿಸುವ ಅದರ ಕಾಯಿ : "ವಾಳುಕೀ , ಕರ್ಕಟೀ – ಈ ೨ ಸವುಂ[ಪಾಠಾಂ. ಸೌಂ]ತೆ" (ಹಲಾಯು. ೩೫-೫೬); ಅಳೆಯೊಳರೆದು . . . ಕುಂಬಳದ ಸವುಂ[ಪಾಠಾಂ. ಸೌಂ]ತೆಯನಿತರ ಬೀಜಂಗಳೊಳೊಂದಱ ಬಿತ್ತಂ ಕುಡಿಗಳುಂಬಮಾಗಿರ್ದ ಮೂತ್ರಕೃಚ್ಛ್ರಂ ಕಿಡುಗುಂ (ಲೋಕೋಪ. ೯-೧೩೪). **ಸವತೆ$_1$** : ನೆಲ್ಲವರೆ ಸವತೆ ಗೋವರ್ಧನ . . . ಮೊದಲಾದ ವ್ಯಂಜನ (ಸೌಗಂಧಿ. ೩೭-೧೮); ಒಂದೇ ಸವತೆಯ ಬಳ್ಳಿಗೆ ಸೀಕಾಯಿ ಬಿಡುವಂತೆ , ಕಹಿ ಖಿಡಗಾಯಿಯೂ ಬಿಡುತ್ತವೆ

(ದೀಪಪ. II, ೩೭೦). **ಸವುತೆ:** "ಉರ್ವಾರುಃ, ಕರ್ಕಟೀ — ಈ ೨ ಸವು[ಪಾಠಾಂ. ಸೌ]ತೆ" (ನಾಚಿರಾ. ೧೧೨); ಸವುತೆ ಕುಂಬಳ ತೊಂಡೆ . . . ಮೊದಲಾದ ಕಾಯ್ . . . ಬಾಳೆ ಮೊದಲಾದ ಪೂಗಳನು ಉಕ್ಕರಿಸಿ (ಸೂಪಶಾ. ೪-೩೩). **ಸೌಂತೆ :** ತವರ್ಮನೆಯಿರವಿನಂತೆ ಸೌಂತೆಯ ತೋಂಟದಂತೆ ಕಡೆಯೊಳ್ ಪೇಸುವಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೭-೧೨೨). **ಸೌತೆ :** "ವಾಳುಕಮೆನಲ್ ಸೌತೆ" (ಮಂಗರಾ. ೪೪-೪೬); ಸೌ[ಪಾಠಾಂ. ಸೋ]ತೆಯೊಳ್ಪಣ್ಣವೊಲುಬ್ಬರಂ ಬಿರಿಯೆ ರತ್ನಶಿಳಾಳಿ ನೆಟಲ್ಕೆ ಪಾಯ್ಕು ಪೆರ್ಪುರ್ಗೞ್ಗೂಡೆಯುತ್ತುಮಿರ್ಪ ಪಣೆಯದ್ಭುತವಾದುದುರಭ್ರಯುಗ್ಮದಾ (ಅರ್ಧನೇ. ೪-೧೯೯); ನೀರೊಳಗಿರವುದು ಸೌ[ಪಾಠಾಂ. ಸವು]ತೆಯ ಬೇರಂ (ಅಶ್ವಶಾ. ೧೧-೨೬); ಕಳೆದ ವರ್ಷ ಸೌತೆ ನಟ್ಟಲ್ಲಿ ಈ ವರ್ಷ ಬತ್ತ ಹಾಕುವ (ಮರಮ. ೫೧).

[ದೇ. ‖ ತುಳು. ತವುತೆ, ತೌತೆ, ಸವುತೆ, ಸೌತೆ; ಕೊಡ. ಚೌತೆ]

**ಸವುಚ** 'ಸೌಚ' ನೋ.

**ಸವುಚಿಗೆ** (ನಾ). ಒಂದು ಬಗೆಯ ಭೂಮಿ (?): ನಖರ ಮುಂಮುರಿದಂಡ ಮುಖ್ಯಬಣಂಜಿಗರುಂ ಕೊಟದು ಸವುಚಿಗೆ ಯಂಭತ್ತು (ಸೌಇಇ. IX-i, ೩೮೦-೨೯; 1282).

[?]

**ಸವುಜ್ಞೆ** 'ಸನ್ನೆ$_2$' ನೋ.

**ಸವುಟು** 'ಸೌಟು' ನೋ.

**ಸವುಡಿದೊತ್ತು** (ನಾ). ಅಪ್ರಯೋಜಕಳಾದ ದಾಸಿ, — ಸೇವಕಿ (?): ಏಳೆಳಗ ಸವುಡಿದೊತ್ತ ಮನೆಯ ಕೆಲಸಕ್ಕೆ ನಡೆ (ಹಚಕಾ. ೧೧-೧೦).

[ಸವುಡ್ಡಿ$_0$ + ತೊತ್ತು (< ತೊಟ್ಟು)./ ತಮಿ. ಚವಟನ್ = ನಿಷ್ಪ್ರಯೋಜಕನಾದವನು]

**ಸವುಡು** 'ಸವಡು$_3$' ನೋ.

**ಸವುಡುಮ್ಮತ್ತ** 'ಸವಡುಮ್ಮತ್ತ' ನೋ.

**ಸವುತೆ** 'ಸವುಂತೆ' ನೋ.

**ಸವುತೆಕಾಯಿ, ಸವತೆಕಾಯಿ, ಸೌತೆಕಾಯಿ** (ನಾ). (ಬಳ್ಳಿಯಲ್ಲಿ ಬಿಡುವ) ತರಕಾರಿಯಾಗಿ ಉಪಯೋಗಿಸುವ ಒಂದು ಬಗೆಯ ಕಾಯಿ; ವಾಳುಕ: (೬). **ಸವತೆಕಾಯಿ :** ನಾಗಣ್ಣನ ಹೊಲದಲ್ಲಿ ಸವತೇಕಾಯಿ ಏನು ಶವಿಯದಾವಂದಿ! (ಮೇದಿಮ. ೫); ಸವತೇಕಾಯಿ ಕಹಿಯಾದರೆ ಸವತಿ ಏನು ಮಾಡುವಳು? (ಗಾದ). **ಸೌತೆಕಾಯಿ :** ಚಿಕ್ಕ ಚಿಕ್ಕ ಸೌತೇಕಾಯ ಚಿಕ್ಕ ಮೂಟೇ ಕಟ್ಟಿ ಚಿಕ್ಕೇರೀ ಮೇಲೆ ಬರುವೋರೆ (ನಾಪದ. ೫೩); ಈ ಹುರುಳಿಸಾರು, ಹಲಸಿನಬೇಳೆ, ಸೌತೆಕಾಯಿ ಹುಳಿ — ತಿಂದು ಹೀಕರಣೆ ಬಂದಿತು (ಮರಮ. ೧೨೪).

[ಸವುತೆ (< ಸವುಂತೆ) + ಕಾಯಿ$_1$ (< ಕಾಯ್$_1$)]

**ಸವುದೆ** 'ಸೌದೆ$_1$' ನೋ.

**ಸವುಭಾಗ್ಯ** 'ಸೌವಾಗ್ಯ' ನೋ.

**ಸವುಮ್ಯಸಂವತ್ಸರ** (ನಾ). ಅರುವತ್ತುಸಂವತ್ಸರಗಳಲ್ಲಿ ಒಂದು ; ಸೌಮ್ಯ ಸಂವತ್ಸರ: ಸಖಿವರುಷ ೧೨೯೨ನೆಯ ಸವುಮ್ಯಸಂವತ್ಸರದ (ಎಕ. IX (S), ಕನಕ. ೧೨೬-೮; 1370). [< ಸಂ. ಸೌಮ್ಯಸಂವತ್ಸರ]

**ಸವುರಣೆ** 'ಸಂವರಣೆ$_1$' ನೋ.

**ಸವುರಿಸು** 'ಸಂವರಿಸು$_1$' ನೋ.

**ಸವುಸವ** 'ಸೌಸವ' ನೋ.

**ಸವುಳಂಗ** (ನಾ). ಒಂದು ಊರಿನ ಹೆಸರು : ಬಾಗೆಯೂರ ಕಮ್ಮಾಱಗಾವುಣ್ಣನು ಸವುಳಙ್ಗದ ಮೆಣ್ಣೆಗಾವುಣ್ಣನು (ಎಕ. V, ಚನ್ನರಾ. ೨೫೧-೧೩; ಸು. 925). 'ಸಟ್ಟಿಂಗ' ಹೋ.

[?]

**ಸವುಳು$_1$, ಚವುಳು, ಚೌಳು, ಸವಳು, ಸೌಳು** (ನಾ). ೧. ಉಪ್ಪಿನ ರುಚಿಯಿಂದ ಕೂಡಿದುದು; ಉಪ್ಪುಪ್ಪಾಗಿರುವುದು : (೬). ೨. ಉಪ್ಪು ; ಲವಣ ; ಕ್ಷಾರ: "ಸವುಳು, ಉಪ್ಪು" (ಕಂನುಹು. ೯೧). ೩. ಉಪ್ಪಿನ ಅಂಶದಿಂದ ಕೂಡಿರುವ ನೆಲ ; ಕ್ಷಾರಭೂಮಿ : ತಿಳಿದು ನೋಡಲು ಮಿತ್ರದತ್ತವು ಸಲೆ ಸವುಳನೊಳಗಿಟ್ಟ ಬೀಜಂಗಳಿಗೆ ಭಸ್ಮಾಹುತಿಗೆ ಸರಿಯೆನಿಸುವುದು ಸತ್ಯವಿದು (ತಿಮ್ಮ.ಅ. ೭-೫೪). **ಚವುಳು :** ೩. "ಊಷರಃ — ಚವುಳು" (ಕಾಶಕ್ಯ. ೫೭). 'ಚವುಳಪ್ರಪ್ತ' ಪರಾ. **ಚೌಳು :** ೧. ಅತಿಚೌಳಾದ ಭಾವಿಗಳ ನೀರಿನೊಳೆ ಸವಿಯಾದ ಸಕ್ಕರೆಯ ಸೇರಿಸಲು (ಅರ್ಜಾವಿ. ಪೀಠಿಕಾಸಂಧಿ. ೯). ೪. ಉಪ್ಪಾಗಿರುವ ನೆಲದ ಮಣ್ಣು ; ಲವಣಭೂಮಿಯ ಮಣ್ಣು : ಸೋಪನ್ನು ಅವರಿನ್ನೂ ಉಪಯೋಗಿಸುತ್ತಿರಲೇ ಇಲ್ಲ. ಅವರಿಗೆ 'ಚೌಳೇ' ಗತಿ (ನನ್ನೂರು. ೨೮೨). **ಸವಳು :** ೨. "ಕಷಾಯ - ಕಾಡೆ ೨. ಚಂದನ. ೩. ಅಷ್ಟಗಂಧ . . . ಸವಳು" (ಗಂಗಾಮ. ೭೬). ೫. ಉಪ್ಪಿನ ರುಚಿಯನ್ನು ಹೊಂದಿರುವ ನೀರು; ಉಪ್ಪುನೀರು : ಅವರ ಬಾವಿಗೆ ಮೊದಲು ಸವಳು ನೆಲೆಹತ್ತಿತು (ಪಶ್ಚಿನೋ. ೧೬). **ಸೌಳು:** ೨. ಸೌಳಪ್ಪ ಭೂಮಿಯನುತ್ತು . . . ಪಿರಿದುಂ ಪ್ರಯತ್ನಮಂ ಮಾಡಿದೊಡಂ ಕರಿಯ ಭೂಮಿಯ ಬೆಳಸಿನಂತಕ್ಕುಮೆ (ಧರ್ಮಾಮೃ. ೭-೭೫); ಈರಿಣಮೂಷರಂ ಸೌಳನುಳ್ಳ ನೆಲನಕ್ಕು (ಮಂಗರಾ. ೨೮-೨). ೩. ಮೋಪೂರ ಭೈರವನಿಂ ತೆಂಕ ಸೌಳು ಪು ೨ (ಸೌಇಇ. IV, ೭೯೮-೫೫; 1208). ೫. ಶ್ರೀಸಿದ್ದೇಶ್ವರದೇವರ ನಿವೇದ್ಯಕಂ ತ್ರಿಕಾಲದ ಪೂಜೆಗಂ ಸೌಳ ಹಳ್ಳದಿಂ ಬಡಗ ಸರ್ಬ್ಬನಮಸ್ಯವಾಗಿ ಬಿಟ್ಟ ಗದ್ದೆಯ ಕಮ್ಮ ಮೂವತ್ತು (ಕಇಇ. ೧೩-೪-೧೨೦; 1093).

**ಸವುಳಕಾರ, ಸೌಳಕಾರ** = ಒಂದು ಬಗೆಯ ಉಪ್ಪು, — ಕ್ಷಾರ ; ಸಸ್ಯಕ್ಷಾರ: (೬); ಗುಳಾಪು ಮಾಡುವ ಕಾಚಿನಲ್ಲಿ . . . "ಪೊಟಾಶ್" ಅಂದರ ಸೌಳಕಾರ ಎಂಬ ಕ್ಷಾರವನ್ನು ಹಾಕುತ್ತಾರೆ (ಮುಂಬಯಿ. ೪-೨೨೧). **ಸೌಳ ಹವೆ** = (ಉಪ್ಪುನೀರಿನ ಸಂಪರ್ಕದಿಂದುಂಟಾದ) ಉಪ್ಪಿನ ಅಂಶದಿಂದ ಕೂಡಿರುವ ಹವಾಗುಣ, — ವಾತಾವರಣ : ಸೌಳ ಹವೆಯು ಇಂಥಾ ಜೀನಸುಗಳಿಗೆ ವಿಶೇಷ ಬಾಧಕವಾದದ್ದು (ಮುಂಬವ್ಯಾ. ೨೭೨). [ದೇ. ‖ ತಮಿ. ಚವಟು, ಚವರ್; ಮಲ. ಚವರ್; ತುಳು. ಚವುಳ್, ಚವುಳು, ಚೌಳು, ಸೌಳು; ತೆಲು. ಚವುಡು, ಚೌಡು./ ಮರಾ. ಸಊಳ್]

**ಸವುಳು$_2$** (ನಾ). ಜೊತೆ ; ಜೋಡಿ ; ಎರಡು : ಪಚ್ಚೆಕಡಗಮನೊಲವಿಂ ಸವುಳು ಜಾಗಟೆ[ಯ] ಸಹಿತಂ ಭುವನೇಶ್ವರ ಘಂಟೆನೃಪತಿಗಂದೊಲಿದಿತ್ತರ್ (ಬೀಳವಂ. ೧-೧೧೭).

[< ಜಮಳ]

**ಸವುಳುನೀರು, ಚೌಳುನೀರು, ಸವಳುನೀರು, ಸೌಳುನೀರು** (ನಾ). ಉಪ್ಪು ನೀರು ; ಕ್ಷಾರದ ಗುಣವುಳ್ಳ ನೀರು : (೬). **ಚೌಳುನೀರು :** ಕಪಿಲವರ್ಣವಾದ ಭೂಮಿಯಲ್ಲಿ ಚೌಳುನೀರು ಬೀಳುವದು (ಸೌಗಂಧಿ. ೪೩೩-೪). **ಸವಳುನೀರು :** ಸವಳುನೀರಿನ ಭಾವಿಗಳಾದರೇನು ಊರೊಳಗಿನವೆಲ್ಲ ಬಡಬಗ್ಗರಿಗೆ ಉಪಯೋಗ (ನಿರಾಭ. ೧೪೩). **ಸೌಳುನೀರು :** ಕೆಲವು ಕಡೆಗೆ ಸೌಳುನೀರಿನ ಸರೋವರಗಳಲ್ಲಿಯೂ . . . ಉಪ್ಪು ಹುಟ್ಟುತ್ತದೆ (ಮುಂಬಯಿ. ೪-೧೯೮). [ಸವುಳು$_1$ + ನೀರು$_1$ (< ನೀರ್)]

**ಸವುಳುನೆಲ, ಚೌಳುನೆಲ, ಸೌಳುನೆಲ, ಸೌಳ್ನೆಲ** (ನಾ). ಉಪ್ಪಿನ ಅಂಶವಿರುವ ಭೂಮಿ ; ಕ್ಷಾರಭೂಮಿ : ಸವುಳುನೆಲದಲ್ಲಿ ಅಮೃತದ ಮಟೆಗಜೆದಂತೆ ಆಯಿತು (ವಚಕಾ. ೮೮). **ಚೌಳುನೆಲ :** "ಊಷರಾ — ಚೌಳುನೆಲಂ" (ಕಾಶಕ್ಯ. ೬೧); ಚೌಳು ನೆಲದಲ್ಲಿ ಉಪ್ಪು ತಯಾರಿಸುವರು (ಕಳಹು. ೯೩). **ಸೌಳುನೆಲ :** ಊಷರೇ — ಸೌಳು ನೆಲದೊಳು (ನೀತಿವಾ. ೧೦-೪೬); ಸೌಳುನೆಲದಲ್ಲಿ ಹುಲ್ಲು ಕೂಡ ಹುಟ್ಟದಾಯಿತು (ತುಳಸೀ. ೨೫೪). **ಸೌಳ್ನೆಲ :** ಸೌಳ್ನೆಲದೊಳು ಬಿತ್ತಿಕ್ಕುವಂತೆಯುಂ ಕಲಕಬ್ಬುನದ ದೋಣಿಯಿಂ ಜಲಧಿಯಂ ದಾಂಟುವಂತೆ ನಿಷ್ಫಲಕ್ಲೇಶಮಲ್ಲದೆ ಪುಣ್ಯಮಿಲ್ಲ (ಪಸಾರ. ೩೨೧).

[ಸವುಳು$_1$ + ನೆಲ./ ತಮಿ. ಚವಟ್ಟುನಿಲಮ್]

**ಸವುಳುಪ್ಪು, ಚವುಳುಪ್ಪು, ಚೌಳುಪ್ಪು, ಸೌಳುಪ್ಪು** (ನಾ). ಒಂದು ಬಗೆಯ ಉಪ್ಪು; ಸವುಳಕಾರ : (೬). **ಚವುಳುಪ್ಪು :** (೬). **ಚೌಳುಪ್ಪು :** ಬೆಂಕಿಯೊಳ್ ಪುರಿದು ಚೌಳುಪ್ಪಿನೊಳ್ ಪೊರಳಿಪ ನರಕಂ ಲವಣಮೆನಿಕ್ಕುಂ (ಚಿಕಬ. ೩೭). **ಸೌಳುಪ್ಪು :** "ಷಂಡದ — ಸೌಳುಪ್ಪು" (ಓಷಧಿ. ೧೭೩). [ಸವುಳು$_1$ + ಉಪ್ಪು$_1$./ ತಮಿ. ಚವಟ್ಟುಪ್ಪು; ತುಳು. ಚವುಳುಪ್ಪು; ತೆಲು. ಚವುಟುಪ್ಪು, ಚೌಟುಪ್ಪು]

**ಸವುಳುಭೂಮಿ, ಚವುಳುಭೂಮಿ, ಚೌಳುಭೂಮಿ** (ನಾ). = ಸವುಳುನೆಲ : ಅಲ್ಲಿ ಸುತ್ತಲೂ ಸವುಳುಭೂಮಿ (ಶರಚ. ೭೯೫). **ಚವುಳುಭೂಮಿ :** ಮಾನ್ಯ ಕೊಟದು ಪೂರು ಮುಂದಣ ಚವುಳುಭೂಮಿ (ಎಕ. XII, ಪಾವಗ. ೭೦-೭; 1705?). **ಚೌಳುಭೂಮಿ :** "ಊಷರಕ್ಷೇತ್ರ" ಅಂದರೆ ಚೌಳುಭೂಮಿ (ಭೂಗೋಳ. ೧೧). [ಸವುಳು$_1$ + ಭೂಮಿ]

**ಸವುಳುಮಣ್ಣು , ಚವುಳುಮಣ್ಣು , ಚೌಳುಮಣ್ಣು , ಸೌಳುಮಣ್ಣು , ಸೌಳುವಣ್ಣು** (ನಾ). ಉಪ್ಪುಮಣ್ಣು ; ಕ್ಷಾರಮೃತ್ತಿಕೆ : ಸವುಳುಮಣ್ಣುಳ್ಳ ಠಾವು – ಊಷ, ಕ್ಷಾರಮೃತ್ತಿಕೆ (ನಾಚಿರಾ. ೬). **ಚವುಳುಮಣ್ಣು** : (೬). **ಚೌಳುಮಣ್ಣು** : "ಊಷಃ, ಕ್ಷಾರಮೃತ್ತಿಕಾ – ಈ ೨ ಚೌಳುಮಣ್ಣಿನ ಪೆಸರು" (ನಾಚಿರಾ. ೧೦೨); ಇವನಿಗೆ ಮಾಡುವ ಸಹಾಯ ಚೌಳುಮಣ್ಣಿಗೆ ನೀರು ಹಾಕಿದ ಹಾಗೆ (ಮುನಿಮಾ. ೯೮). **ಸೌಳುಮಣ್ಣು** : "ಈರಿಣಂ , ಊಷರಃ – ಈ ೨ ಸೌಳುಮಣ್ಣು(ಳ್ಳ ಭೂಮಿ)ಯೆಂಬುದು" (ಹಲಾಯು. ೨೬-೩); ಒಬ್ಬ ಆಗಸರವನು ಸೌಳುಮಣ್ಣನ್ನು ಹೊತ್ತುಕೊಂಡು ಬರುತ್ತಿದ್ದನು (ಶುರಾವಿ. ೨೦೪). **ಸೌಳುವಣ್ಣು** : ಸೌಳುವಣ್ಣಿನಲ್ಲಿ ಮಟೆ ಬರುಹವುಂ ಕುರುಡಂಗೆ ಕನ್ನಡಿಯಂ ತೋಱುಹವುಂ (ಪಂಚತಂ. ೧೩೬-೧೦). [ಸವುಳು₁ + ಮಣ್ಣು (< ಮಣ್)]

**ಸವುಳುಮಾಳೆ** (ನಾ). ಚೌಳುಮಣ್ಣಿನ ದಿಬ್ಬ : ಸವುಳುಮಾಳೆಗಳಂತಹ ಎದೆಗಳು (ಶ್ರೀರಾಪ. ೭೭). [ಸವುಳು₁ + ಮಾಳೆ₁ (< ಮಾಳ್₂)]

**ಸವೂವರಣೆ** (ನಾ). ಒಂದು ಬಗೆಯ ತೆರಿಗೆ (?) : ಆ ಮಾದೆಯನಾಯ್ಕನ ಸವೂವರಣೆಯ ಕಂದಾಯಕೆ ಕುಪ್ಪನಾಡೊಳಗೆ ಕೋಟೆಯ ಕುಪ್ಪೆ (ಎಕ. IV (R). ಪಿರಿಯಾ. ೧೧೮-೬; 1174). [?]

**ಸವೆ₁** 'ಸಮೆ₁' ನೋ.

**ಸವೆ₂** 'ಸಮೆ₂' ನೋ.

**ಸವೆಗ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀಕೊಳತ್ತೂರ ತೊಱುಗೊಳೆ ಸವೆಗ ಮುದದ ತೊಱುವ ಇಕ್ಕಿಸಿ ಸತ್ತನ್ (ಎಕ. X, ಚಿಂತಾಮ. ೧೧೯-೨; ಸು. 800). [?]

**ಸವೆಗಳೆ** (ಕ್ರಿ). ಅಲ್ಲಗಳೆ ; ತಿರಸ್ಕರಿಸು : ಕವಿತಾದಿ ಲಕ್ಷಣಂ ಶಬ್ದಭೇದಮನೆಣಿಸಿ ಸವೆಗಳೆಯಬ್ಬಾಡಿ (ನವಮೋ. ೧-೧೬). [ಸವೆ₂ + ಕಳೆ₁]

**ಸವೆಗೋಲು** 'ಸಮೆಗೋಲು' ನೋ.

**ಸವೆತ** 'ಸಮೆತ' ನೋ.

**ಸವೆಯಿಸು₁** 'ಸಮೆಯಿಸು₁' ನೋ.

**ಸವೆಯಿಸು₂** 'ಸಮೆಯಿಸು₂' ನೋ.

**ಸವೆಸು₁** 'ಸಮೆಯಿಸು₁' ನೋ.

**ಸವೆಸು₂** 'ಸಮೆಯಿಸು₂' ನೋ.

**ಸವೇಶ** (ಗು). ೧. ಅಲಂಕಾರಗೊಂಡ ; ಸಾಲಂಕೃತವಾದ. (ನಾ). ೨. ಹತ್ತಿರ; ಸಮೀಪ : "ಸಮೀಪಂ, ಸನೀಡಂ, ಸಮರ್ಯಾದಂ, ಆರಾತ್, ಸದೇಶಂ, ಸವೇಶಂ, ಸವೇದಃ . . . ಉಪಾಂತಂ, ಅಪದಾಂತರಂ – ಈ ೧೮ ಸಮೀಪಂ" (ಹಲಾಯು. ೧೧೫-೬). [ಸಂ.]

**ಸವ್ಯ** (ಗು). ೧. ಎಡಗಡೆಯ ; ಎಡಪಕ್ಕದ : ನಿಡುಗರುಳ ಸವ್ಯಪವಿತ್ರಸೂತ್ರದ . . . ಅಭಿಜಾರಾಧ್ವರದ ದೀಕ್ಷಿತತನವ ಕೈಕೊಂಡನು ದಶಗ್ರೀವ (ತೊರರಾ. ೬-೪೮-೧೩); ಸವ್ಯಪಾರ್ಶ್ವಗ ಸರ್ವಮಂಗಳಾಪಾಂಗಸಂಗತನುಂ . . . ಆಗಿ ನಡೆತರ್ಪಾಗಳ್ (ರಾಜಶೇ. ೧೦-೧೫ ವ). ೨. ದಕ್ಷಿಣಭಾಗದ ; ತೆಂಕಣಕಡೆಯ. ೩. ವಿರುದ್ಧವಾದ ; ಪ್ರತಿಕೂಲವಾದ. ೪. ಬಲಗಡೆಯ ; ಬಲಪಾರ್ಶ್ವದ : ನರ್ಮಸಚಿವಪ್ರಕೋಷ್ಠ ನಿವೇಶಿತಸವ್ಯಪಾಣಿಪಲ್ಲವನುಂ (ಚಂದ್ರಪ್ರ. ೬-೮೩ ವ). (ನಾ). ೫. ಎಡಭಾಗ ; ವಾಮಪಾರ್ಶ್ವ : "ವಾಮಂ, ಸವ್ಯಂ – ಈ ೨ ಎಡಂ" (ಹಲಾಯು. ೧೨೪-೬೧); ವೈನತೇಯಂ ಸವ್ಯದಿಂದ ಬಲಕ್ಕೆದುತಿರಲ್ (ವಂಕಾಶಾ. ೬-೧-೩೩). ೬. ಎಡಗಡೆಯ ಶರೀರ ; ವಾಮಾಂಗ : "ಸವ್ಯಂ ವಾಮಶರೀರಂ" (ವಸ್ತುಕೋ. ೧೧೩-೧೫). ೭. ಬಲಗಡೆ ; ಬಲಪಾರ್ಶ್ವ. ೮. ದಕ್ಷಿಣಭಾಗ ; ತೆಂಕಣದಿಕ್ಕು : "ಸವ್ಯಂ ತಾಂ ದಕ್ಷಿಣದೊಳ್" (ವಸ್ತುಕೋ. ೧೩೮-೧೨೩). ೯. (ಕಾಳಗದಲ್ಲಿ) ಒಂದು ಬಗೆಯ ಸಂಚಾರಕ್ರಮ : ವಿಲಸದಪಸವ್ಯದಲಿ ರಿಪು ಮಂಡಳಿಸಿ ಹೊಯ್ದನು ಸವ್ಯಮಂಡಲವಲಯದಿಂದಾ ಭೀಮಸೇನನ ಹೊಯ್ಲ ಹೊಱಬೀಸಿ (ಕುವ್ಯಾಗ. ೬-೩೧). 'ಅಪಸವ್ಯ' ಪರಾ. [ಸಂ.]

**ಸವ್ಯಪೇಕ್ಷ** (ನಾ). ಒಂದನ್ನೊಂದು ಬಯಸುವಂತಹುದು ; ಪರಸ್ಪರಾವಲಂಬಿಯಾದುದು : ಸ್ವಪರಮನೋವ್ಯಾಪಾರಂ ಸವ್ಯಪೇಕ್ಷಮಪ್ಪುದಱಿಂ ಮನಃಪರ್ಯಯಜ್ಞಾನಂ ಮತಿಜ್ಞಾನಮನೆಯ್ದುಗುಮೆನವೇಡ (ತತ್ತ್ವಪ್ರ. ೫೪); ನವ್ಯಸಂಪದವಾರ್ಷಸಂಪದುದ್ಧೃತವಿಂತು ಸವ್ಯಪೇಕ್ಷಂಗಳುಭಯ (ಮಂಕುಕ. ೮೭೧). [ಸಂ.]

**ಸವ್ಯಸಾಚಿ** (ನಾ). ೧. ಎರಡು ಕೈಗಳಿಂದಲೂ ಬಾಣವನ್ನು ಬಿಡಲು ಶಕ್ತನಾದವನು ; ಅರ್ಜುನನ ಒಂದು ಹೆಸರು : ತಾಂ ಸವ್ಯಸಾಚಿಯೊಳ ತೊಡರ್ದಿಱಿಯಿರ್ (ಶಮದ. ೨೨೪ ಪ್ರಯೋ.); ಸವ್ಯಸಾಚಿಯ ಮಿತ್ರಸಿದ್ಧಿಲ್ಲಿ (ಪ್ರಭುಲಿ. ೨-೩೧). ೨. (ಆಲಂ) (ಎರಡು ಕೆಲಸವನ್ನು ಒಟ್ಟಿಗೆ ನಿರ್ವಹಿಸಬಲ್ಲ) ಸಮರ್ಥ ; ನಿಪುಣ ; ಚತುರ : ಈ ಸಮಯದಲ್ಲಿ ಸವ್ಯಸಾಚಿಯಾದ ಬಂಕಿಮನು ಒಂದು ಕೈಯನ್ನು ರಚನೆಗೂ ಇನ್ನೊಂದು ಕೈಯನ್ನು ನಿವಾರಣೆಗೂ ಉಪಯೋಗಿಸಿದನು (ಬಂಕಿಮ. XXI, ಬಿನ್ನಹ); ತಾನಾಗಿ ಹೇಳಿದ ತನ್ನ ಚರಿತ್ರೆಯಿಂದ ಪಂಪನು . . . ಸಮನ್ವಯಶೀಲನೂ ಸವ್ಯಸಾಚಿಯೂ ಆದ ವ್ಯಕ್ತಿಯಾಗಿದ್ದನೆಂದು ತಿಳಿಯುತ್ತದೆ (ಕಸಾಚ. ೮೭). ೩. ಬಹಳ ಶೂರ; ಕಡುಗಲಿ: ಪೊಗಳ್ವುದು ಜನಂ ಸುಭಟಭೀಕರವಿಕ್ರಮಸವ್ಯಸಾಚಿಯಂ (ಎಕ. II, ೧೨೬-೩೦; 1113). [ಸಂ. ಸವ್ಯಸಾಚಿನ್]

**ಸವ್ಯಸಾಚಿಸು** (ಕ್ರಿ). ೧. ಎರಡು ಕೈಗಳಿಂದಲೂ ಬಾಣಪ್ರಯೋಗ ಮಾಡು ; ಸವ್ಯಸಾಚಿತ್ವವನ್ನು ತೋರು : ಕೆಯ್ಯೆರಡರಿಂದೆಸೆದು ಸವ್ಯಸಾಚಿಪನವಂ (ಹಬ್ಬರ. ೧೭-೨೩). ೨. (ಆಲಂ) ಎರಡು ಕೆಲಸಗಳನ್ನು ಒಟ್ಟಿಗೆ ನಿರ್ವಹಿಸು: ಕವಿತಾಮಾರ್ಗ ಬೇರೆ, ಸಂಶೋಧನಮಾರ್ಗ ಬೇರೆ . . . ಅವೆರಡನ್ನೂ ಕೆಯ್ಗೊಂಡು ಹೊತ್ತನ್ನು ಹಿಡಿತದಿಂದ ಬಳಸಿದರೆ ಸವ್ಯಸಾಚಿಸಬಹುದಾದರೂ ನನ್ನ ಬಗೆಗಾದರೂ ಅವು ಮುಳುವಾಗಿವೆ (ಕಂಸಾಸಾ. ೧೨). [ಸವ್ಯಸಾಚಿ + – ಇಸು₁]

**ಸವ್ಯಾಕುಲ** (ನಾ). ವಿಹ್ವಲಗೊಂಡವನು ; ವ್ಯಾಕುಲಗೊಂಡವನು : ತೋಕಿದವು ನಾರಾಚ ದೆಸೆದೆಸೆಯೋಕರಿಸಿದವೊ ಸರಳನೆನೆ ಸವ್ಯಾಕುಲ[ಪಾಠಾಂ. ಳ]ರ ಹಿಂದಿಕ್ಕಿ ಹಿಂಡಿದವಸುವನತಿಬಲರ (ಕುವ್ಯಾಅ. ೧೯-೧೩). [ಸಂ.]

**ಸವ್ಯಾಪ ?** (ನಾ). (?) : ಗೋಪಿತಾರ್ಥವ ಕೊಟ್ಟು ಜನ ಸವ್ಯಾಪರಾಹೋಲ್ ರಚಿಸುವದಕುಪಮಾಪದವ ಕೊಡು ಚಂದ್ರನಾಥನೆ ಕೋಮಲಾಕೃತಿಯಾ (ಬಿಜ್ಜಪು. ೪-೧೫). [?]

**ಸವ್ಯಾಪಸವ್ಯ** (ನಾ). ೧. (ಚಲನೆಯ ಕ್ರಮ, ಬಾಣಪ್ರಯೋಗ ಇತ್ಯಾದಿಗಳಿಗೆ ಸಂಬಂಧಿಸಿದಂತೆ) ಎಡಭಾಗ ಮತ್ತು ಬಲಭಾಗ : ಆಗಳ್ ಸವ್ಯಾಪಸವ್ಯ ಭ್ರಾಂತೋದ್ಭ್ರಾಂತಂಗಳೆಂಬ ರಥಕಲ್ಪ ವಿಶೇಷವಿನ್ಯಾಸಂಗಳನಱಿದು ಸಾರಥಿಗಳ್ ಚೋದಿಸುವಾಗಳ್ (ಪಂಪಭಾ. ೧೨-೭೫ ವ); ನೀಡಿ ನಿಜಸವ್ಯಾಪಸವ್ಯದ [ಪಾಠಾಂ. ಸರ್ವಾಂಗಸತ್ತ್ವದ] ಮೋಡಿಯಲಿ ಬಿಡದೆಱಗುತಿರಲೀಸಾಡಿತವನಸಿಯಮಮ ಪ್ರಭುವಿನ ಬಯಲ ದೇಹದಲಿ (ಪ್ರಭುಲೀ. ೧೯-೩೪). ೨. ಎಡಭಾಗವು ಬಲಭಾಗದಂತೆಯೂ ಬಲಭಾಗವು ಎಡಭಾಗದಂತೆಯೂ ಕಾಣುವಿಕೆ ; ಎಡ ಮತ್ತು ಬಲ ವ್ಯತ್ಯಾಸವಾಗಿ ತೋರುವಿಕೆ ; ತಿರುವುಮುರುವು : ಕನ್ನಡಿಯ ಕೈವಿಡಿದು ನೋಡಲು ತನ್ನಿರವು ಸವ್ಯಾಪಸವ್ಯದಿ ಕಣ್ಣಿಗೊಪ್ಪುವ ತೆಱದಲನಿರುದ್ಧನಿಗೆ ಈ ಜಗವು ಭಿನ್ನಭಿನ್ನವೆ ತೋಱುತಿಪ್ಪುದು (ಹಸಾರ. ೫-೩೪). ೩. ಬಲಭಾಗದಿಂದ ಎಡಭಾಗಕ್ಕೆ ಚಲಿಸುವುದು : ವೇದಂ ಬಿಡದೆ ಸವ್ಯಾಪಸವ್ಯದಿಂ ಬಲವಂದು ಪೊಗಳುತಿರ್ಪುದ ನಱಿಯೆಯಾ (ವೀಶ್ವಪು. ೩-೬-೬); ಉರಿವ ಜ್ಯೋತಿಯ ಮಂಗಳಾರತಿಯ . . . ಪಿಡಿದು ಸವ್ಯಾಪಸವ್ಯದಿಂ ಬೆಳಗಲೊಡನೆ (ನವಮೋ. ೨೧-೨೮). ೪. ನೇರವಾದುದು ಮತ್ತು ವ್ಯತಿರಿಕ್ತವಾದುದು. ೫. ಶ್ರಾದ್ಧದ ಸಮಯದಲ್ಲಿ ಜನಿವಾರವನ್ನು ಎಡಗಡೆಯಿಂದ ಬಲಗಡೆಗೆ ಬದಲಾಯಿಸುವುದು : ಜನಿವರವ ಸವ್ಯಾಪಸವ್ಯಗಳನೆಯ ಹಾಕುತ ಪಿತರುಯಿಂದೇ ದಿನದಿ ಸತ್ತವರುಂಬರ್ಕ್ಕೆ ಬಂದೀಗಯೆಂತೆಂದು . . . ತಾವುಂಡು ಪಿತರೇ ದಣಿದರೆಂಬರು (ಜ್ಞಾನಸಿಂ. ೨೨-೧೪). ೬. ತಪ್ಪು ಮತ್ತು ಸರಿ. ೭. (ಆಲಂ) ಉಪದ್ವ್ಯಾಪ ; ಅಧಿಕಪ್ರಸಂಗಿತನ : ಈ ಪುಕಟ ಫೌಜದಾರನ ಕೆಲಸ ನಮಗ್ಯಾಕ? ಯಿಲ್ಲದ ಸವ್ಯಾಪಸವ್ಯ (ಹೊಸಂಸಾ. ೧೦). [ಸಂ.]

**ಸವ್ಯಾಶಿ** 'ಸಾವಾಸಿ' ನೋ.

**ಸವ್ಯಾಸನ** (ನಾ). [ಯೋಗ] ಒಂದು ಬಗೆಯ ಆಸನ : ಸ್ವಸ್ತಿಕಾಸನ, ಸವ್ಯಾಸನ . . . ಅರ್ಧಾಸನಾದಿ ಎಂಭತ್ತುನಾಲ್ಕು ಆಸನಭೇದಂಗಳು (ವಿವೇಕ. ೧೩೦). [ಸಂ.]

**ಸವ್ವಡಿ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ : ನುತಚೌಪಟಂ ಗೋಮುಖಂ . . . ದುಸ್ಸರ ಸ[ಪಾಠಾಂ. ಚ, ಚೊ]ವ್ವಡಿ . . . ಚಟಿಯೆಂಬ ಚತುರತಾಣದ ತರಹರದೊಳು ಹಲಗೆಯ ಮಗ್ಗುಲೊಳು ಖಡ್ಗವಂ ಜಡಿದರು (ಸೋಮಚ. ೫-೧೪). 'ಚೌವಟ್ಟಿ' ಪರಾ. [?./ ತೆಲು. ಸವಡಿ = ಒಂದು ಬಗೆಯ ಆಯುಧ]

**ಸವ್ವರಣೆ** 'ಸಂವರಣೆ₁' ನೋ.

**ಸವ್ವರಿಸು** 'ಸಂವರಿಸು₁' ನೋ.

**ಸವ್ವಳಿ** (ನಾ). ೧. ಮಾರ್ಗ ; ಜಾಡು : 'ಸವ್ವಳಿವಿಡಿ' ಪರಾ. ೨. ತುದಿ ; ಕೊನೆ : ವ್ಯಡಲೋಚನಂಗಳಿಂದೊಗೆದ ಪರುಷಾಶ್ರುಜಲವೊಡನೆ ಗಿರಿಜೆಯ ಕುಡಿತೆಯೊಳ್ ತುಂಬಿ ಬರಲದಂ ಕೊಡಹಲ್ ದಶಾಂಗುಲಿಯ ಸವ್ವಳಿಯೊಳಿಳಿದ ನೀರ್ ದಶನದಿಗಳಾಗಿ ಪರಿದು (ಚೆಬಪು. ೪೬-೨೮); ಸುಳಿಸುಳಿಯ ಸವ್ವಳಿಯ ಬೊಬ್ಬುಳಿಯ ಕಡುಲುಳಿಯ ಜಳಚರದ ತರತರದ ಸೀಕರದ ಭೀಕರದತುಳಗಂಗೆ . . . ಕಣ್ಗೆಸೆದಳು (ಜೈಮಿಭಾ. ೯-೨೪). [ದೇ. ‖ ತೆಲು. ಸವ್ವಡಿ, ಸವಡಿ]

**ಸವ್ವಳಿವಿಡಿ** (ಕ್ರಿ). ಮಾರ್ಗವನ್ನು ಹಿಡಿ ; ಜಾಡು ಹಿಡಿ : ಇಂತಖಿಳೇಂದ್ರಿಯಂಗಳ್ಗಾನಂದಮಂ ಮಾಳ್ಪುತುಳಪರಿಮಳಪರಿಕಲಿತತರಳಪವನನುರುತರಮಾದಿಂಪು ಗುಂಪಿನ ಸವ್ವಳಿವಿಡಿದಾಂ ಬರವರೆ (ಉದ್ಭಟ. ೫-೧೬ ವ). [ಸವ್ವಳಿ + ಪಿಡಿ₁]

**ಸವ್ವಾ** 'ಸವಾ' ನೋ.

**ಸವ್ವಾರಿ** (ನಾ). ಗಡುವು ; ಅವಧಿ : ಸುಗ್ಗಿಯ ತಲೆಯ ಮೇಲೆ ಸವ್ವಾರಿ ಹಾಕಿ ಕಾಳು ಮರಳಿ ಕೊಡುವದಾಗಿ ಜಾಮಿನು ಕೊಟ್ಟು ಒಯ್ಯಬೇಕಾಗಿತ್ತು (ಗ್ರಾಮಾಯ. ೧೦೪). [?]

**ಸವ್ವಾಶೆ** 'ಸಾವಾಸಿ' ನೋ.

**ಸವ್ವಾಸೇರು** 'ಸವಾಸೇರು' ನೋ.

**ಸವ್ವೀರಪಾಷಾಣ** 'ಸವೀರಪಾಷಾಣ' ನೋ.

**ಸಶಂಕ** (ಗು). ೧. ಶಂಕೆಯಿಂದ ಕೂಡಿದ ; ಅನುಮಾನಾಸ್ಪದವಾದ. ೨. ಅಂಜಿಕೆಯಿಂದ ಕೂಡಿದ ; ಭಯದಿಂದ ತುಂಬಿದ. [ಸಂ. ಸಶಂಕಾ]

**ಸಶಂಕಿತ** (ಗು). ೧. ಅನುಮಾನ ಪಟ್ಟ. (ನಾ). ೨. ಹೆದರಿಕೊಂಡ ವ್ಯಕ್ತಿ ; ಅಂಜುಕುಳಿ : ಅಸತಿಯರಳ್ಕುತಂ ನಡೆದರಂತೆ ಸಶಂಕಿತರಲ್ತೆ ದೋಷಿಗಳ್ (ಪಾರ್ಶ್ವಪು. ೧೦-೧೯). [ಸಂ.]

**ಸಶರೀರ** (ಗು). ೧. ದೇಹದಿಂದ ಕೂಡಿದ ; ಶರೀರಸಹಿತವಾದ. (ನಾ). ೨. ದೇಹದಿಂದ ಕೂಡಿರುವುದು ; ಶರೀರಸಮೇತವಾಗಿರುವುದು : ಸಶರೀರವಾಗಿ ಸ್ವರ್ಗಕ್ಕೆ ಕಳುಹಿಸಬಲ್ಲ ಮಹಾತಪಸ್ವಿಯು ನನ್ನ ಚಾಂಡಾಲ್ಯವನ್ನು ನಿರ್ಮೂಲ ಮಾಡಲಾರನೇ (ಮಹಾಣ. ೮೭). ೩. ಶರೀರಸಮೇತನಾಗಿರುವವನು ; ದೇಹದಿಂದ ಕೂಡಿರುವವನು : ನಾನು ಸಶರೀರನಾಗಿ ಸ್ವರ್ಗಕ್ಕೆ ಹೋಗಬೇಕು (ಮಹಾಣ. ೮೭); ನೀನು ಪಾಪರಹಿತನಾದುದರಿಂದ ಸಶರೀರನಾಗಿ ಸ್ವರ್ಗಕ್ಕೆ ಬಾ (ಭಾರದ. ೧೧೩). [ಸಂ.]

**ಸಶಾಸ್ತ್ರೀಯ** (ಗು). ಶಾಸ್ತ್ರಬದ್ಧವಾದ ; ನಿಯಮಕ್ಕೊಳಪಟ್ಟ : ಸಪ್ಪಣ್ಣನು . . . ಸಶಾಸ್ತ್ರೀಯಸಂಗೀತಕಲೆಯಲ್ಲೂ ಉದ್ದಾಮಪಂಡಿತನಾದನು (ಸಂಗೀಚಂ. ೨೫೪). [ಸಂ.]

**ಸಶಿವ** (ನಾ). ಶಿವಸ್ವರೂಪನಾದವನು : ಅಸಮಸಾರೂಪ್ಯದ ಪದದಿ ವರ್ತಿಸ ಬಹುದು ಸಾಯುಜ್ಯದಿಂದೆ ಬೆರಸಿ ಸುಖದೊಳಿರಲಪ್ಪುದಲ್ಲದೆ ಸಶಿವನೆಂದೆನಿಪ ಬಸವನಾಗಲುಬಹುದೆ (ಬಸಪು. ೧-೩೦). [ಸಂ.]

**ಸಶೋಕ** (ಗು). ೧. ದುಃಖದಿಂದ ಕೂಡಿರುವ : ಅಶೋಕವೃಕ್ಷದ ನೆರಳಿನಲಿ ಸಶೋಕ ಸೀತೆಯ ಕಂಡಿದ್ದೆ (ಮುಕ್ತಕಂ. ೩೯-೨). (ನಾ). ೨. ದುಃಖದಿಂದ ಕೂಡಿರುವವನು ; ವ್ಯಥೆಯಿಂದ ತುಂಬಿರುವವನು : ನಮ್ಮಿಬ್ಬರಾ ಸಾಮ್ಯವಿಹುದೆಲ್ಲ ವಿಷಯದೊಳು ನೋಡಶೋಕನೆ ವಿಧಿಯ - ನಾ ಸಶೋಕ ! (ಧ್ವನ್ಯಾಲೋ. ೮೪). [ಸಂ.]

**ಸಶ್ರೀಕ** (ನಾ). ೧. ಬಹಳ ಸೊಗಸನ್ನು ಹೊಂದಿದುದು; ಚೆಲುವಾದುದು: ಅವನ ಅರಮನೆ "ಕೈಲಾಸಶಿಖರಸಶ್ರೀಕ"ವಾಗಿ ಗಂಗಾನದಿಯಲ್ಲಿ ಪ್ರತಿಬಿಂಬಿಸುತ್ತ ತನ್ನನ್ನು ತಾನು ಕನ್ನಡಿಯಲ್ಲಿ ನೋಡಿಕೊಳ್ಳುವಂತಿದೆ (ಸಂನಾಟ. ೧೪೫). ೨. ಬಹಳ ಅಭ್ಯುದಯವನ್ನು ಹೊಂದಿದವನು ; ಅದೃಷ್ಟಶಾಲಿ : ಅನುಪಮ ಸಶ್ರೀಕಂ ಮತ್ಸ್ಯನೆಂಬ ಪರದಂಗೆ ಜೈನೆಯೆಂಬಳ್ ಕುಲಮಾನಿನಿ (ಸುಕುಮಾ. ೭-೩೦). [ಸಂ.]

**ಸಶ್ರುತ** (ನಾ). ವೇದಕ್ಕೆ ಸಂಬಂಧಪಟ್ಟುದು : ಧರ್ಮಂ ವಿಶ್ರುತಸಶ್ರುತಾತಿಶಯಮಂ . . . ಧರ್ಮಂ ಧಾರ್ಮಿಕನಪ್ಪವಂಗೆ ಕುಡುಗುಂ ನಿರ್ವಾಣಕಲ್ಯಾಣಮಂ (ಸುಕುಮಾ. ೭-೪೨). [ಸಂ.]

**ಸಸಂಭ್ರಮ** (ಗು). ೧. ಗಲಿಬಿಲಿಯಾದ ; ಗೊಂದಲಗೊಂಡ. ೨. ಉತ್ಸಾಹದಿಂದ ಕೂಡಿದ; ಸಂಭ್ರಮಪಟ್ಟ. (ನಾ). ೩. ಸಡಗರದಿಂದ ಕೂಡಿರುವಿಕೆ: ಪಂಡಿತೆಯುಂ . . . ಸಸಂಭ್ರಮದಿಂ ವಿಭ್ರಮವಿಲಾಸವತಿಯಂ ಶ್ರೀಮತಿಯಂ ಕಂಡು (ಆದಿಪು. ೩-೮೪ ವ). [ಸಂ.]

**ಸಸಂಭ್ರಮಂ** (ಅ). ಸಡಗರದಿಂದ ಕೂಡಿ; ಸಂಭ್ರಮವನ್ನು ಹೊಂದಿ: ಅಂತೆಸೆದು ಬಂದಾ ಸಗರ್ವಂ ಗಂಧರ್ವಗಳಂ ಸಸಂಭ್ರಮಂ ನಿರೀಕ್ಷಿಸಿ ಸಂತಸಂಬಟ್ಟು (ರಾಜಶೇ. ೧೩-೭೪ ವ). [ಸಂ.]

**ಸಸಾರ** (ನಾ). ೧. ಸುಲಭ ; ಸಲೀಸು : ಅಪಾರಸಂಸಾರದಾಗ ಸಸಾರ ಅಲ್ಲೊ ತಮ್ಮ ಅಂತಪಾರ ! (ಅರಳು. ೨೮೧-೧೨); ಆದರೆ ಇದರೊಳಗಿನ ಪ್ರತಿಯೊಂದು ಉಲ್ಲೇಖಪತ್ರವನ್ನು ಸಸಾರವಾಗಿ ತೆಗೆಯಲು ಬರುತ್ತದೆ (ಗ್ರಂಥಾಲ. ೪೪). ೨. ಸಲಿಗೆ ; ಸದರ : ಅಜ್ಜಿ, ಸುಮ್ಮನಿರ್ತಾರಂತ ನಿನಗೆ ಭಾರೀ ಸಸಾರ ಆಗಿದೆ ಅಲ್ಲವಾ? (ಹೊಸಕ್ಕ. ೧೧೬); ಇನ್ನೊಬ್ಬ ಯುವಕ ಲಲಿತಳನ್ನು ಅಷ್ಟು ಸಸಾರವಾಗಿ ಕೂಗಬೇಕಾದರೆ . . . ಪ್ರಣಯಸಂಬಂಧ ಬೆಳೆದಿರಬೇಕು (ಬಾಳಿವೃ. ೨೨೩). ೩. ಅಲಕ್ಷ್ಯ ; ತಿರಸ್ಕಾರ : ಕೈ ಹಿಡಿದ ಹೆಂಡತಿಯೆಂದರೆ ತನ್ನ ವಸ್ತುವಿದು ಎಂದು ಸಸಾರ (ಪ್ರಶ್ನೆ. ೧೩೭). [<— ತುಳು. ಸಸಾರ]

**ಸಸಾರಜನಕ** (ಗು). ೧. [ವಿಜ್ಞಾ] ಸಾರಜನಕವೆಂಬ ಅನಿಲಕ್ಕೆ ಸಂಬಂಧಪಟ್ಟ. ೨. ಜೀವಿಗಳ ಅಂಗ ಮತ್ತು ಅಂಗರಚನಾಸಾಮಗ್ರಿಯಲ್ಲಿರುವ ಜೈವಿಕಸಂಯುಕ್ತಪದಾರ್ಥಕ್ಕೆ ಸಂಬಂಧಪಟ್ಟ : ಈ ಗಟ್ಟಿಚೌಕಟ್ಟನಲ್ಲಿ ನೀರಿನಲ್ಲಿ ಕರಗುವ ಸಸಾರಜನಕ ಆರ್ಥ್ರೊಪೋಡಿನ್ (Arthropodin) ಲೀನವಾಗಿದೆ (ಕೀಟಜೀ. ೯). (ನಾ). ೩. ಜೀವಿಗಳ ಅಂಗಗಳಲ್ಲಿಯೂ ಅಂಗರಚನಾಸಾಮಗ್ರಿಯಲ್ಲಿಯೂ ಹೆಚ್ಚುಭಾಗವಾಗಿರುವ ಜೈವಿಕಸಂಯುಕ್ತಪದಾರ್ಥ : ಸಸಾರಜನಕ ಮತ್ತು ಕೊಬ್ಬುಗಳೂ ಶಕ್ತಿಯುತ್ಪಾದಕಗಳು (ಆಡುಸಾ. ೫೭); ಪ್ರೋಟೀನುಗಳು ಸಸಾರಜನಕ ಯುಕ್ತವಾದ ಸಾವಯವಆಹಾರಾಂಶಗಳು (ಗೃಹವಿ. ೯). [ಸಂ.]

**ಸಸಿ₁** (ಕ್ರಿ). ೧. ಕೀಳು ; ಉತ್ಪಾಟಿಸು : "ಸಸಿ — ಸಸ್ಯಾದ್ಯುತ್ಪಾಟನೇ, ಸಸ್ಯೇ ಚ (ಸೊಪ್ಪು ಮೊದಲಾದುವನ್ನು ಕೀಳು)" (ಶಮಧಾ). ೨. ಕತ್ತರಿಸು ; ಕಡಿ : ನಡುಬೆನ್ನ ಮೂಳೆಯಂ ಸಸಿದು ಕಡಿಕಡಿದಗಿದು ಕರುಳ ಹಿಣಿಲಂ ಹಿಕ್ಕಿ ತಿಂದು (ಹಚಚಾ. ೬-೧೬); ಹೊಸ ಹಣಗಳ ಹೊಳ್ಗಳ ನೆಜ್ ತೀವಿದ ಬಿಸಿರಕುತದ ತಲೆಯೋಡ್ಗಳ ಸಸಿದ ಸುಂಟಗೆಯ ವಕ್ಕಲೆ ತುಂಬಿದ ಮಧುರಸವಾಂತ ಮರುಳ್ಗಳೆಯಿತಂದವು (ಸೂಬಸೂೞ. ೯-೭೫); ಸಲೆ ಸಸಿದ ತಲೆಗಳಲ[ಪಾಠಾಂ. ರಳೆಯಂತೆ, ರಳೆಯಿಂದ] ಡಗಿತಬ್ರಹ್ಮೋತಮಂಡಲವ (ತೊರರಾ. ೧-೧೧-೧೪). ೩. (ಅರಳೆಯಲ್ಲಿರುವ ಬೀಜ, ಕಸ, ಕಡ್ಡಿಗಳನ್ನು) ತೆಗೆ,— ಸೋಸು ; (ಹತ್ತಿಯನ್ನು) ಹಿಂಜು ; ಎಕ್ಕು: ಸಸಿದಂದೊಂದೆಡೆಯೊಳಗೊಟ್ಟಿರ್ದರಳೆಯನೊಡನಳುರ್ವಂತಳುರ್ದನನಲನರಗಿನ ಮನೆಯಂ (ಪಂಪಭಾ. ೩-೫). ೪. ಬಿದ್ದುಹೋಗು ; ಕಳಚಿಕೊಳ್ಳು : ಸಸಿದ ಹಲುಗಳ ಕೆತ್ತ ಕಿವಿಗಳ ಮುಸುಳಿದಂಗದ ಮುಪ್ಪಿನಲಿ ಲಂಬಿಸಿದ ಶಬರಿಯ ಸುಪ್ರಸಿದ್ಧಿಯ ಸಾರ್ದರೊಲವಿನಲಿ (ತೊರರಾ. ೩-೧೨-೨೯). ೫. ಚೆದುರು ; ಚೆಲ್ಲಾಪಿಲ್ಲಿಯಾಗು : ಸ[ಪಾಠಾಂ. ನ]ಸಿದು ಕೊಬ್ಬಿದ ಮಿದುಳ ರಾಸಿಗೂಳೆಸೆಯೆ . . . ಭೂತ ಭೇತಾಳ ರಾಡಿದರು (ಹಚಚಾ. ೧೨-೩೩); ಕೊಡಹಿದ ಚೀಲದವೊಲೆಲು ಸಸಿದು ಬಿದ್ದವು (ತೊರರಾ. ೬-೨೪-೩೦); ಹಸಿದ ಹೆಬ್ಬುಲಿ ರೋಷ ಮಸಗಿ ಪಾಯಲು ಕೆಟ್ಟು ಪಶುಸಂಕುಲ ಪೋಪಂತೆ ಸಸಿದು ಪೋಪುದು ಪರಬಲವು (ರಾಮವಿ. ೧೮-೭೭). ೬. ಜಿಗುಟು; ಚಿವುಟು : ಸುರವಿರೋಧಿಯ ಬಸಿರ ಬಿಗಿದೆಳೆಗರುಳನುಗುರಲಿ ಸ[ಪಾಠಾಂ. ನ]ಸಿದು ಕೊರಳಳಿ ಹಾಯ್ಕಿದನು (ತೊರರಾ. ೬-೨-೩೦). 'ನಸಿ₁' ಪರಾ.

ಸಸಿದರಳೆ = (ಕಸಕಡ್ಡಿ ಬೀಜಗಳನ್ನು ತೆಗೆದು) ಶುದ್ಧಿಮಾಡಿದ ಹತ್ತಿ ;

ಹಿಂಜಿದ ಅರಳೆ : ಗಿರಿಗಳ ಜಂಗಮವಪುಗಳ್ ಸಿರದೊಳ್ ಸಸಿದರಳೆ[ಪಾಠಾಂ. ಲೆ] ಯಂತೆ ಮುಸುಕಿದ ಮಂಜಿಂ ನರೆಯಂ ಪೊತ್ತವೊಲಿರ್ದುವು (ಲೀಲಾವ. ೯-೨೪; ಸೂಕ್ತಿಸು. ೩-೨೨ ನೋ); ಸಸಿದರಳೆ ಸಿಡಿಲೆಜಗಿದರೆ ಜೀವಿಸುವುದೇ (ಕುಮ್ಮಾಭೀ. ೩-೮೪).

[ದೇ. II / ಸಂ. ಶಸ್ = ಕತ್ತರಿಸು, ಕೊಲ್ಲು, ನಾಶಮಾಡು]

**ಸಸಿ$_2$** (ನಾ). ೧. ಚಂದ್ರ : "ಎರಳೆಗುಱುಪಂ . . . ಸಸಿ ಬಿದುವೆನಲ್ ಚಂದ್ರನಾಮವು" (ಶಬ್ದಮಂ. ೧೭); ತನ್ನೊಳಾದ ಬೇಟದೊಳ್ ಬಡವಟ್ಟುಮೇಟ್ಗೆವಾಡಿವದ ಸಸಿಯಂತೆ ಸೊಗಯಿಸುವಸಿಯಳಂ ಕಂಡು (ಪಂಪಭಾ. ೫-೧೫ ವ); ಸಸಿ[ಪಾಠಾಂ. ಶಶಿ]ಯೊಳಗಣ ರಸದ ರುಚಿಯಂತಿದ್ದಿತು (ಬಸವ. ೧); ವಿರಹದೋಳಿಕೆಗೆ ಬೆಳ್ದಿಂಗಳ್ ಬಳಿಯ ಕಿರ್ಚು ಸಸಿ ಬಿಸಿ (ಗಿರಿಕ. ೪-೧೧೭). ೨. ಕರ್ಪೂರ : ಬಿಸರುಹದ ಕಿಂಜಲ್ಕಪುಂಜದಿ ಸಸಿಯ ಪುಡಿಯುಂEಯಿಂತೆ ಅರ್ಚಿಸಿದಳರುಹನನು (ಸಾಳ್ವಭಾ. ೩-೨೭).

**ಸಸಿಯಂ ಸೂಡಿದಂ** = ಚಂದ್ರನನ್ನು ಧರಿಸಿದವನು ; ಶಿವ : ಇಸೆ ಬಂದು ವಶೀಕರಣಂ ಸಸಿಯಂ ಸೂಡಿದನ ಕಮಲವಿಮಲಜ್ಯಾನಾವಸಥಪರಂಜ್ಯೋತಿಯ ಕಾಲ್ದೆಸೆಯಂ ಕಾಣದೆ ಮರಳ್ದು ಬರೆ ಬೆಱಗಾದಂ (ಗಿರಿಕ. ೮-೩೪). **ಸಸಿಯ ಬಟ್ಟು** = ಚಂದ್ರಮಂಡಲ ; ಚಂದ್ರಬಿಂಬ : ಹುಣ್ಣಿಮೆಯ ಸಸಿಯ ಬಟ್ಟೊಸರ್ದು ಪರಿತರ್ಪ ದಿವ್ಯಾಮೃತದ ತೊಱೆಯೊ (ಪದ್ಮರಾ. ೧-೩೦). **ಸಸಿಯ ಬಿಂಬ = ಸಸಿಯ ಬಟ್ಟು**: ಸಸಿಯ ಬಿಂಬವ ಬಗೆಯದೆಸೆವ ಸುಮ್ಮಾನತೆಯ ಪಸರಿಸಿತು ಕಮಲ (ಹಚಕಾ. ಪರಿ. ೨೯೧); ಸಸಿಯ ಬಿಂಬವ ಬಗೆಯದದಟನ ಮುಸುಡು ಕಂದದು ಮೆಯ್ಯ ದೀಧಿತಿ ಮಸುಳಿಸದು (ಕುಮ್ಮಾದ್ರೋ. ಓರಿಇ. ೬-೬೧ ಅಡಿಪದ್ಯ). [< ಪ್ರಾ. ಸಸಿ./ ಸಂ. ಶಶಿನ್]

**ಸಸಿ$_3$** (ನಾ). ೧. ಎಳೆಯ ಗಿಡ ; ಸಸ್ಯ, ಧಾನ್ಯ ಮುಂತಾದುವುಗಳ ಪಯಿರು : "ಲತೆಯೊಳಾ ಮೃಗಾಂಕನೊಳು ಕಾರ್ಪಾಸಶೋಧನದೊಳಂ ಭೂಮಿ ಯಱಿಯಲ್ಕ ಸಸಿ" (ಶಬ್ದಮಂ. ೧೧೨); ಶರೀರದೊಳಱಿವಂ ಸಸಿಯೊಳ್ ಬೆಳಸಂ ಕೊಳ್ವವೊಲಸಾರದೊಳ್ ಸಾರವಾಂ ಮಹೀಪತಿ ಕೊಂಡಂ (ಶಾಂತಿಪು. ೮-೧೨೫); ವಸಂತ ರಾಜನ ಕಯ್ಯೊಳು ಕಲ್ಪತರುವಿನ ಸಸಿಯಂ ಕೈಲೆಡೆಗೊಡುವಂತೆ ನರಸಿಂಗಮೊನೆಯರ ಕಯ್ಯೊಳು ನಂಬಿಯಣ್ಣನಂ ಕೊಡಲೊಡಂ (ನಂಬಿರ. ೨-೮೩); ತಳಿತ ಚೂತದ ಸಸಿಗಳವನಿಗೆ ಮಲಗುವಂತಿರೆ ರಾಜಪುತ್ರರು . . . ಎಸೆದರು ಸಾಲಶಯನದಲಿ (ಕುಮ್ಮಾದ್ರೋ. ೫-೭೯). ೨. (ಆಲಂ) ಅಂಕುರ ; ಮೊಳಕೆ : ನರ್ಮಗೋಷ್ಠೀಪ್ರಸಂಗಾ ನಂದದಿಂ ಪೊಣ್ಮುವಾ ಪುಳಕಂಗಳೇ ಸಸಿಗಳಾಗೆ ರತಿಸುಖಮೆಂಬ ಫಲಮಂ ವಿಲಾಸಿ ಯುವಜನಕಿತ್ತು . . . ಕಳಮವನಪಾಲಿಕೆಯರೊಪ್ಪುಗುಂ (ಪದ್ಮರಾ. ೮-೧೭); ಸಲ್ಪ ಕುಲದೇಳ್ಗೆಯ ಸಸಿಯ ಕೋಡೊ . . . ಎನಲ್ ಕುಶಲವರ್ಕುಶಲದಿಂ ಕಣ್ಗೆಸೆದರ್ (ಜೈಮಿಭಾ. ೧೯-೪೯). [< ಸಂ. ಸಸ್ಯ./ ತುಳು. ತೆಲು. ಸಸಿ]

**ಸಸಿಕಲೆ** 'ಸಸಿಗಲೆ' ನೋ.

**ಸಸಿಕು, ಸಸಿಕ್ಕು** (ನಾ). ಮಲ್ಲಯುದ್ಧದ ಒಂದು ವರಸೆ : ಕಮ್ಮರಿ ಕತ್ತರಿ ಖೋಡ ವಂಕುಶಂ ಸಸಿಕುವೆನಿಪ್ಪ ಜೆಟ್ಟಿಗನ ನಟ್ಟನ ಬಿನ್ನಣಮೊಪ್ಪೆ ಕಾದಿದರ್ (ಚಂದ್ರಪು. ೫-೭೮). **ಸಸಿಕ್ಕು** : ಸಸಿಕ್ಕು ಮುಹಪೋಪುಡ ಚಲ್ಲಣವಟ್ಟ ಪಟ್ಟಕತ್ತರೆಗಳೆನಿಪ್ಪ ಜಟ್ಟಿಗರ ಬಿನ್ನಣ ಮೊಪ್ಪೆ ಕಡಂಗಿ ಕಾದಿದರ್ (ತ್ರಿಪುವಿ. ೨೭-೧೮). [?]

**ಸಸಿಕುಪ್ಪಿ, ಸಸಿಗುಪ್ಪೆ** (ನಾ). ಒಂದು ಬಗೆಯ ಸಸ್ಯ : ಸಸಿಕುಪ್ಪಿ [ಪಾಠಾಂ. ತುಪ್ಪೆ] . . . ನಱುವಲು ಹಱುಹ ಮೊದಲಾದ ಹಸುರುಸೊಪ್ಪ ಕರಮಸವ ಬಾಳೆ ಮೊದಲಾದ ಪೂಗಳನು ಉಕ್ಕರಿಸಿ (ಸೂಪಶಾ. ೪-೩೩). **ಸಸಿಗುಪ್ಪೆ** : ಹೆತ್ತ ತುಪ್ಪವ . . . ಕಾಸಿ ಹಂಬಿನ ತುಱುಚನಾ ಬೇರು ಸಸಿಗುಪ್ಪೆ [ಪಾಠಾಂ. ಸಿಗುಪ್ಪೆ, ಗುದಪ್ಪು] ಕೊತ್ತಂಬರಿಯ ಬೀಜ ವೊಣಕಾರಗೆಣಸರಿಸಿಸಂ ಹತ್ತಿ ಹರಳ ರಸಮಂ ಪೂರೈಸಿ ಕಾಸಿ (ಸೂಪಶಾ. ೨-೧೯). 'ಗುಪ್ಪೆ$_2$' ಪರಾ. [ಸಸಿ$_3$ + ಕುಪ್ಪಿ$_3$]

**ಸಸಿಕ್ಕು** 'ಸಸಿಕು' ನೋ.

**ಸಸಿಗದಿರ್** (ನಾ). ಚಂದ್ರನ ಕಿರಣ : ಸಸಿಗದಿರ್ಸಕಲಾಚಲಂಗಳೊಳುರ್ವಿ ಪರ್ವಿ ಭರಾಟ್ಟಿಲಾವಿಸರಮಂ ಸಲೆ ತುಳ್ಕುವಂತೆ (ಉದ್ಭಟ. ೩-೧೧೭); ಸಸಿಗದಿರಂ ಬಳಲ್ಚಿ ಶಶಿಕಾಂತದ ಕಾಂತಿಯನೀಳ್ದುಕೊಂಡು . . . ಬೊಮ್ಮನೊಲ್ದೆಸಗಿದ ಶೈಲಮೋಯೆನಿಸಿ ಪಜ್ಜಳಿಸಿರ್ದುದು ತಾರಭೂಧರಂ (ವೃಷವಿ. ೧-೭೨). [ಸಸಿ$_2$ + ಕದಿರ್$_2$]

**ಸಸಿಗಲ್** (ನಾ). ಚಂದ್ರನ ಪ್ರಕಾಶದಿಂದ ದ್ರವಿಸುವುದೆಂದು ಭಾವಿಸಲಾದ ಒಂದು ಬಗೆಯ ಬಿಳಿಯ ಕಲ್ಲು ; ಚಂದ್ರಕಾಂತಶಿಲೆ : "ಸಸಿಗಲ್, ತಣ್ಗಲ್— ಈ ೨ ಚಂದ್ರಕಾಂತಂ" (ಕಶಸಾ. ೫೦-೫೩); ಸಸಿಗಲ್ಲಟ್ಟಳೆಗಳನಾಗಸದೊರೆಯಂ ಚುಂಬಿಪವಿಳಕೇತನದಿಂ . . . ಎಸೆದುದು ಪೊಸಲಂಪಿನಿಂಪಿನಿಂದಾ ನಗರಂ (ಉದ್ಭಟ. ೧-೪೮); ಬೞಿಯ ಸಸಿಗಲ್ಲ ತೋರ ಕರಗವನಣಕದಿಂದೆ ತಂದಿತ್ತು ನೋಡುತಿರೆ ತನ್ನ ಮುಖೇಂದುವಾಸಾರಕದು ಕಟ್ಟನೆ ಕರಗೆ (ಪದ್ಮರಾ. ೮-೧೦). [ಸಸಿ$_2$ + ಕಲ್$_3$]

**ಸಸಿಗಲೆ, ಸಸಿಕಲೆ** (ನಾ). ಚಂದ್ರನ ಹದಿನಾರುಕಲೆ ; ಚಂದ್ರಕಲೆ: ಸಸಿಗಲೆಯಕ್ಕುಮಲ್ಲ ಕಲೆಗೆತ್ತಣದೀ ಪರಿಪೂರ್ಣಶೋಭೆ (ಉದ್ಭಟ. ೮-೪೧); ತಲೆಯ ಸಸಿಗಲೆಯಾ ಮೆರೆವ ಪದ್ಮಾಸನದಿ ರಾಜಿಪ . . . ಭಾರತಿ ಪರಮವಿದ್ಯಾಶರಧಿ ನೆಲಸಿಹುದೆನ್ನ ಜಿಹ್ವೆಯಲಿ (ಆನಂರಾ. ೧-೧-೫). **ಸಸಿಕಲೆ** : ಸಸಿಕಲೆಗಳ ಖಂಡಗಳೊ . . . ಎನಲೆಸೆದವು ಕರ್ಪೂರವಸರಗಳಾ ಪುರದೊಳಗೆ (ಕುರಾಸಾಂ. ೩-೮೨). [ಸಸಿ$_2$ + ಕಲೆ$_2$]

**ಸಸಿಗಾಣೆ** (ನಾ). ಒಂದು ಬಗೆಯ ನಾಣ್ಯ : ಟೆಂಕೆಗೆ ಷೋಡಶದುಡ್ಡಂ ಬಿಂಕದಿ ಸಸಿಗಾಣೆ ನಾಲ್ಕು ಪೈಸಗಳೆಂಟಂ ಪಂಕಜಮಿತ್ರನ ಗಣನೆಗೆ ಭೋಂಕನೆ ತಾಂ ಒರಗಾಣೆ ದುಗ್ಗಾಣೆರಡಂ (ಭಾಸ್ಕರ. ೭೭-೯). [ಸಸಿ$_2$ + ಕಾಣ್$_1$./ ತೆಲು. ಸಸ್ಗಾನಿ./ ಮರಾ. ಸಸಗಣೇ, ಸಸಗಾಣೇ, ಸಜಗಣೇ, ಸಜಗಾಣೇ]

**ಸಸಿಗುಪ್ಪೆ** 'ಸಸಿಕುಪ್ಪಿ' ನೋ.

**ಸಸಿಗೆಱೆ** (ನಾ). ಬಾಲಚಂದ್ರನ ಬಾಗುಗೆರೆ ; ಅರ್ಧಚಂದ್ರಾಕೃತಿ : ಮೊಗವೆಂಬ ಪೂರ್ಣಚಂದ್ರನೊಳೊಗೆದಳೆಕಾರ್ಧೇಂದು ಪೆತ್ತುದೆನೆ ಸಸಿಗೆಱೆಯಂ ಮಿಗೆ ಮೆಱೆವ ಭಸಿತತಿಲಕಮನುಗುರ್ಗೊನೆಯಿಂ ತಿರ್ದಿ ರಚಿಸಿದಳ್ (ರಾಜಶೇ. ೮-೩೨). [ಸಸಿ$_2$ + ಗೆಱೆ]

**ಸಸಿಗೆಱೆದುಟಿ** (ನಾ). ಅರ್ಧಚಂದ್ರಾಕೃತಿಯಲ್ಲಿರುವ ತುಟಿ ; ಸುಂದರವಾದ ತುಟಿ : ಪೊಳೆವ ಸಸಿಗೆಱೆದುಟಿಯ . . . ಪೊಸ ಪವಳದುಟಿಯೊಳುರನ್ನದುಟಿ ರಂಗುದುಟಿಗಳವರು . . . ಬರುತಿರ್ದರು (ಚಿಬಪು. ೩೭-೪೫). [ಸಸಿಗೆಱೆ + ತುಟಿ]

**ಸಸಿತಪಕ್ಷ** (ನಾ). ೧. ಬಿಳಿಯ ಗರಿಗಳನ್ನು ಹೊಂದಿರುವುದು; ಹಂಸ. ೨. ಶುಕ್ಲಪಕ್ಷದಿಂದ ಕೂಡಿರುವವನು; ಚಂದ್ರ. ೧, ೨ : ದ್ವಿಜರಾಜಾಭಿದ ಯೊಪ್ಪದೇ ಸಸಿತಪಕ್ಷಂಗೆ (ರಾಜಶೇ. ೧೧-೭೪). [ಸಂ.]

**ಸಸಿದರ** (ನಾ). ಚಂದ್ರನನ್ನು (ತಲೆಯಲ್ಲಿ) ಧರಿಸಿದವನು; ಶಿವ: "ಶೂಲಿಯೊಳೆ ಸಸಿದರಂ" (ಕರ್ಣಾನಿ. ೮೭). [< ಸಂ. ಶಶಿಧರ]

**ಸಸಿದಲೆಯ** (ನಾ). = ಸಸಿದರ : "ಎಣ್ಮಯ್ಯಂ . . . ಸಸಿದಲೆಯಂ, ಗನಹಂ, ಅಯ್ಮೊಗಂ - ಈ ೩೩ ಈಶ್ವರಂಗೆ ಪೆಸರ್" (ಕಶಸಾ. ೪೭-೧); ಸಸಿದಲೆಯಂಗೆ ತೆತ್ತು ಧನವಂ ಮನವಂ ತನುವಂ . . . ನಾಡೆ ರಂಜಿಸುವ ಚಿದಂಬುರಾಶಿ ಬಸವೇಶ್ವರ ಮುಖ್ಯಮಹೇಶಪೂಜಕಪ್ರಸರಪದಂಗಳೆನ್ನ ಬಗೆದಾವರೆಯೊಳ್ನೆಲಸಿರ್ಕೆ ಸಂತತಂ (ಉದ್ಭಟ. ೧-೮); ಸಸಿದಲೆಯನಣುಗನೆಂಬುದ ತೋಱುವಂತೆ ರಾಜಿಸಲುರದೊಳೆ ಳವೆಱೆಯ ಮಾಳ್ಕೆಯಿಂ ಪುಲಿಯುಗುರ್ ಬಾಲಕಂ ಕಣ್ಗೆಸೆದನು (ಚಿಬಪು. ೫-೩೭).

[ಸಸಿ$_2$ + ತಲೆ$_1$ + -ಅ$_7$]

**ಸಸಿನ** 'ಸಸಿನ್ನೆ$_1$' ನೋ.

**ಸಸಿನಂ** 'ಸಸಿನ್ನೆ$_2$' ನೋ.

**ಸಸಿನಂಗೆಯ್** 'ಸಸಿನೆಗೆಯ್' ನೋ.

**ಸಸಿನಂಬಡು** (ಕ್ರಿ). ಬಡವಾಗು (?) : ಅಸಿದೊಡಲ ಬಾಲೆ! ನೀಂ ಪಸಿದು ಸಸಿನಂಬಡದಂತಾರಯ್ವುದಾರ್! (ರಾಮಾಶ್ವ. ೭೭-೨೧). [ಸಸಿನ್ನ$_2$ + ಪಡು$_1$]

**ಸಸಿನೆಗೆಯ್** 'ಸಸಿನೆಗೆಯ್' ನೋ.

**ಸಸಿನಿಡು** (ಕ್ರಿ). ೧. ಸರಿಯಾಗಿಡು ; ಸರಿಯಾಗಿರಿಸು : ಕಡುಪಿಂ ತೀಕ್ಷ್ಣಮಪ್ಪ ತನ್ನ ಕುಡುಗೋಲಂ ಕೊಂಡು ಕಂಠಾಗ್ರಮಂ ಪೊಡೆಯಲ್ ಜೋಲ್ವರಿವಾಳತಾಂಡ ಶಿರಮಂ ಕೈಯಾಂತು ಕಾರುಣ್ಯದಿಂ ಪಿಡಿದಾಗಳ್ ಸಸಿ[ಪಾಠಾಂ. ಸೆ]ನಿಟ್ಟು (ತ್ರಿಪುವಿ. ೧೪-೨೭). ೨. ಚೆನ್ನಾಗಿರಿಸು ; ಶೋಭಿಸುವಂತೆ ಇಡು : ಮಿಸುನಿಯ ಕೋಂಟೆ ಕೊತ್ತಳ ದಿವ್ಯರತ್ನ ತೆತ್ತಿಸಿದ ಹೊಂಗಳಸವ ತನಗೆ ಸಸಿನಿಟ್ಟ ಹಣತೆ ಜ್ಯೋತಿಶ್ಚಕ್ರದಂತೆ ರಂಜಿಸಿತು ರಕ್ಕಸನ ಕಣ್ಮನಕೆ (ಮೋಹತ. ೧೧-೧೯). [ಸಸಿನ್ನೆ$_2$ + ಇಡು$_1$]

ಸಸಿನಿರಿಸು (ಕ್ರಿ). ಸರಿಯಾಗಿರಿಸು ; ನೆಟ್ಟಗಿರಿಸು : ಬಡಗಲೊಲೆದಿರ್ದ ಶಿವಲಿಂಗಮಂ ಸಿನಿರಿಸೆ ಕೊಡುವೆವೀ ಹೊನ್ನನೆಂದಲ್ಲಲ್ಲಿ ಡಂಗುರಿಸೆ (ಕೊಂಗುರ. ದೇ. ೧೫೫-೯); ರೂಢಿ ಯನು ಸಸಿನಿರಿಸಿ ನಿಂದನು ನೋಡಿದನು ಕಾರುಣ್ಯದೃಷ್ಟಿಯಲೋಡುಕುಳಿಗಳನು (ನಿಭಾಗ. ೩-೮-೪೭). [ಸಸಿನ್$_2$ + ಇರಿಸು]

ಸಸಿನಿರು (ಕ್ರಿ) ಸುಮ್ಮನಿರು; ತೆಪ್ಪಗಿರು : ಸಸಿನಿರು ಮಹಾತ್ಮರು ನಿನ್ನೊಡನೆ ಉತ್ತರವ ಕೊಡುವರೆ (ಕುವ್ಯಾವಿ. ೭-೧೮); ಒಕ್ಕಮದವುಂಬ ತುಂಬಿಯನಕ್ಕಟ ಸಸಿನಿರದೆ ಪಿಡಿಯೆ ಪುಷ್ಕರದೊಳಗದು ಪೊಕ್ಕು ಮೊಜೆಯಲ್ಕೆ ಗನ್ನಗದಕ್ಕಾಡುವ ಕಳಭವಿಭಕದೇಂ ಸಂತಸವೋ (ಮಲ್ಲಕಾ. ೩-೧೮೮); ಹಸಿದ ಮುನಿಪತಿ ಬರಲದೇತಕೆ ಸಸಿನಿರದೆ ನಾನಾ ಮಹಾವ್ರತಿಗಳ ಕೆಣಕಲೇಕೆ (ಸಾಳ್ವಭಾ. ೨೦-೧೩).

[ಸಸಿನ್$_2$ + ಇರು$_1$ (< ಇರ್$_1$)]

ಸಸಿನ್$_1$, ಸಸಿನ (ನಾ). ೧. ಸೊಗಸಾಗಿರುವುದು : ಮುಪ್ಪಿನ ಷಡಕ್ಷರಿಯ ಅನುಭಾವದಲೆಯೊಂದು ಜಂಗಮನ ತಂಬೂರಿಯಲ್ಲಿ ಸಸಿನೆ (ಭಾವಜೀ. ೮-೧೫೨). ೨. ನೇರವಾದುದು ; ಓರೆಯಾಗಿಲ್ಲದಿರುವುದು : 'ಸಸಿನೆಗೆಯ್' ಪರಾ. ೩. ದೃಢತೆ ; ನಿಶ್ಚಲತೆ : ಮಿಸುಪ ಸಗುಣಾನಂದವಹಶೇಷಲಿಂಗವನು ಸಸಿನೆ ಯಿಂದನವರತ ಮುಖಸಜ್ಜೆಯೊಳ್ ಧರಿಸುತಿರ್ಪ ಕ್ರಮವೆಂತೆಂದೊಡೆ (ಮೈಲಾರ. ೨-೬). ೪. ನಿಶ್ಚಲಬಾದುದು; ಸ್ತಬ್ಧವಾದುದು : (೬). ಸಸಿನ : ೨. ಉರಿವ ಅನಲಂಗೆ ಶತಡೊಂಕು ಸಸಿನವೆಂಬುದುಂಟೆ (ಅವಚಂ. ೨೬೩-೧೨೦೨); ಕರ್ಕಂಡು ಮರಕ್ಕನಿತು ಮುಳ್ಳೆಂಬುದು ಡೊಂಕನೋ ಸಸಿನಮೋ ಎಂಬಂದಮೆಂದು ನಂದಶ್ರೀಯವಱಭಿಪ್ರಾಯ ಮಂ ತಮ್ಮ ತಂದೆಗೆ ತಿಳಿಯ ಪೇೞೆ (ಪುಣ್ಯಾಸ್ರ. ೩-೧೪ ವ). ೫. ಎದುರು ; ಅಭಿಮುಖ; ನೇರ: ನಮ್ಮೂರ ಮುಂದಣ ವಿಪುಲಗಿರಿಯ ಶಿಖರದ ಸಸಿನಕಾ ಮಹಾವೀರಜಿನವರನ ರಂಜಿಪ ಸಮವಸರಣಂ . . . ಬರಲು (ಸಮ್ಯಕೌ. ೧-೧೩); ಭರದಿಂದ ಬಡಗಣ ದಿಗಧೀಶನಾ ನೃಪವರನು ನಡೆವ ಸಸಿನದೊಳು ಮರುತಮಾರ್ಗದೊಳೊಂದು ಸಮವಸರಣವನು ಕರಮೆಸೆವಂದದಿ ರಚಿಸಿ (ನೇಮಿಸಂ. ೨-೧೯). ೬. ಸರಿಯಾದುದು ; ನೇರ್ಪಾದುದು: ಪೊಡವಿಗತಿಶಯವೀ ಮುನಿಸು ನಿಮ್ಮಡಿಗಳಿಂದವೆ ಸಸಿನವಾದಪುದೊಡೆಯ ಬಿಜಯಂ ಗೆಯ್ದು ಪೊರೆ (ಬಸವು. ೪೭-೪೫); ದಕ್ಷನಸುವನು ಕರುಣಿಸಮರರುಪಕ್ಷಯದ ತನು ಸಸಿನವಾಗಲಿ (ನಿಭಾಗ. ೪-೩-೫೩). ೭. ಸುಮ್ಮಗಿರುವುದು ; ತೆಪ್ಪಗಿರುವುದು: ''ಸಸಿನಂ ಸೈತೆಂದು'' (ಕರ್ಣಾನಿ. ೨೩). ೮. ಯುಕ್ತವಾದುದು ; ಉಚಿತವಾದುದು: ಹಾವಿನ ಡೊಂಕು ಹುತ್ತಕ್ಕೆ ಸಸಿನ ನದಿಯ ಡೊಂಕು ಸಮುದ್ರಕ್ಕೆ ಸಸಿನ ನಮ್ಮ ಕೂಡಲ ಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ (ಬಸವ. ೧೪೪); ಕುಸುಮಫಲತಾಂಬೂಲ . . . ಅನಿತುವನೊಬ್ಬನೇ ಭೋಗಿಸುವಡವನೀಪಾಲರಿಗೆ ತಾ ಸಸಿನವೆನಿಸದು (ಕುವ್ಯಾಉ. ೩-೫೪). ೯. ಸರಿಯಾದ ನಡತೆ ; ಋಜುತನ : ಸಸಿನಮಾದುದು – ಋಜು, ಅಜಿಹ್ಮ, ಪ್ರಗುಣ (ನಾಚಿರಾ. ೬). ೧೦. ಶೋಭೆ ; ರಂಜನೆ : ಬಸವ ಮೊದಲಾಗೆಲ್ಲರೆದ್ದೊಂದಿಸುವ ಸಮಯದೊಳರಸುಪೀಠದಿ ಸಸಿನವಾದಿನನಾದಿಗಿರಿ ಏರಿದನೊ ಎಂಬಂತೆ ಮಸಗಲು (ಬಿಜ್ಜಪು. ೮೦-೨೦). ೧೧. ಕ್ಷೇಮ ; ಸೌಖ್ಯ : ವಿಷಯದ ಬೇರನ್ನು ಬಿಸಿಮಾಡಿ ಕುಡಿದಾತ ಪಶುಪತಿಯಕ್ಕು ಸಸಿನಕ್ಕು (ಸರ್ವಜ್ಞ. ೩೦೯). ೧೨. ನಿಜ ; ದಿಟ ; ಸತ್ಯ : ಮುಸುಕಿದಾ ಕರ್ಮದ ಫಲವೊ ಬಂಧಿಸಿಕೊಳುವನೋ ತಾನೆ ಕರ್ತನು ಸಸಿನವಿದಕಿಂತಾಗಿ ದಂಡಿಪ ಕರ್ತನುಂಟೊರ್ಬ (ಬಸವು. ೫೪-೧೫); ಸಸಿನ ಕೇಳ್ಕೆ ವೀರಭೋಜ್ಯಾ ವಸುಧೆಯೆಂಬುದು (ಸಾಳ್ವಭಾ. ೪೨-೨೫). ೧೩. ಸಿದ್ಧತೆ ; ಸಜ್ಜು : ಬಲಿದು ಸಸಿನವ ಮಾಡಿ ಖಾತಿಯ ತಳೆದು ಕೂರಂಬಿನಲಿ ಹೂಳಿದನಳವಿಯಲಿ ರಿಪುಗಜವನಾ ಭಗದತ್ತನವಯವವ (ಕುವ್ಯಾದ್ರೋ. ೩-೫೧). ೧೪. ಸುಲಭ ; ಸಲೀಸು : ಎನ್ನಂತಿರುತ್ತಮಮಪ್ಪಾ ಮನುಜಂಗೆ ಮುಕ್ತಿ ಸಸಿನಂ ತಾನಕ್ಕುಂ (ಬಾಧಪು. ೧-೬೮). ೧೫. ಲಘು ; ಹಗುರ: ಹಸಿಯದಿರೆ ಕಡುಗಾಯ್ದ ಬಿಸಿನೀರ ಕುಡಿಯುವದು . . . ಸಸಿನವಾಗಿಹುದು (ಸರ್ವಜ್ಞ. ೨೦೧೦). ೧೬. ಒಂದು ಬಗೆಯ ಸಸ್ಯ ; ಭದ್ರಮುಸ್ತೆ : ''ಸಸಿನ – ಮುಸ್ತೆ'' (ಓಷಧಿ. ೧೭೪).

ಸಸಿನ್$_2$, ಸಸಿನಂ (ಅ). ೧. ನೇರವಾಗಿ ; ಸೀದಾ ; ನೆಟ್ಟಗೆ : ಸಸಿನೆ ತನ್ನಾಶ್ರಮಕೆ ಕೊಂಬೊಯ್ದುಸಮಲಿಂಗಾವಸರಮಂ ಮಾಡಿಸಿ ನಯದಿ ತನ್ನ ಪ್ರಸಾದವನಿಕ್ಕಿ (ಬಸವು. ೨೦-೭); ಇದಿರಾಗುವರು ಬೆನ್ನು ಬೆನ್ನುಗಾಣಿಸಿ ತೇಲ್ವರದ ಬಿಟ್ಟು ಸಸಿನೆ ಹರಿವರು (ಭರಚ. ೧೨-೮೮). 'ಸಸಿನೆವರಿ' ಪರಾ. ೨. ಚೆನ್ನಾಗಿ ; ಸೊಗಸಾಗಿ : ಇಂದು ಗುಹೇಶ್ವರನ ಸಮವರ್ತಿ ಬಸವಣ್ಣ ನಿಂದಿರಿಸಿ ಸಸಿನೆ ಮಾತನಾಡಿಸಿದನು (ಅವಚಂ. ೩೦೨-೧೯೧೯); ಬಿದ್ದ ಪೆರ್ಮೊಲೆಗಳಿಗೆ ಱವಕೆಯಂ ಸಸಿನೆ ಬಿಗಿದೆವೆಯುದಿರ್ದ ಕಣ್ಣ ಕಾಡಿಗೆಯಚ್ಚ . . . ಮುದುಪಾಱಿರ್ದಳೊಂದೆಸೆಯೊಳು (ಹಚಉ. ೪-೨೭). ೩. ಸರಿಯಾಗಿ ; ತಕ್ಕುದಾಗಿ : ಕಾವ್ಯದೊಳು ತಪ್ಪುಳ್ಳಡಿದಱೊಳಗೆ ಪರರು ಕೈಯಿಕ್ಕದಂತೆ ಸಸಿನೆ ಮಾಡುವುದು (ಹಚಕಾ. ೧-೨೦); ಎಸೆವ ಮುತ್ತಿನ ಹಾರಗಳನೊಂದಿಸುತ ಪದಕವನೊಱಗದಂದದಿ ಸಸಿನೆ ಮಾಡುತ (ಜೀವಂಚ. ೮-೫೧); ಕಳೆದುಡುಗೆಗಳನೋಸರಿಸಿ ಸಸಿನೆ ಮಾಡುತ್ತೈದಿ ಬರಲ್ (ಕಾಶಿರಾ. ೧೦-೪). ೪. ದೃಢವಾಗಿ; ನಿಶ್ಚಲವಾಗಿ : ಪಸರಿಸಿದಾಜ್ಞೆಯೆಂಬ ಮೊಲೆವಾಲೞದುತ್ತಮಧರ್ಮಮಾರ್ಗದೊಳ್ ಸಸಿನಡಿಯಿಕ್ಕುವಂತೆಸಗಿ ತೋಳ್ಗಳ ತೊಟ್ಟಿಲೊಳಿಟ್ಟು ಮೇದಿನೀಶಿಶುವಂ . . . ಕೂರ್ತು ಪಾಲಿಸಲ್ (ನಳಚಂ. ೩೪); ಕಡುಪಿನುರಿ ನದಿಯಡ್ಡ ಬಿದ್ದಡೆ ಅಡಗಿಸುತ್ತಂ ಸಸಿನೆ ಪಥದೊಳು ನಡೆವ ಭಾಷೆ (ಬಸವು. ೩೨-೪); ಅಸಮಪಂಚಾಕ್ಷರಿಯ ಉಸಿರ ಕೊನೆಯಲ್ಲಿರಿಸಿ ಸಸಿನೆ ಕುಳ್ಳಿರ್ದು ಜಪಿಸದಾ ಶಿವಯೋಗಿ ಕಿಸವಾಯಿಯಕ್ಕು (ಸರ್ವಜ್ಞ. ೫೬೬). ೫. ಸುಮ್ಮನೆ ; ತೆಪ್ಪಗೆ ; ಮೌನವಾಗಿ : ಸಸಿನೆ ಬಟ್ಟೆಯ ಹೋಗಿ ವಸ್ತ್ರದ ಗಸಣಿ ನಿಮಗೇಕೆ (ಸಾಳ್ವಭಾ. ೨೨-೬೧); ಸೋದರರು ಸಸಿನೆನ್ನ ಮಾತ ಕೇಳ್ವರೆ (ಭರಚ. ೪೫-೧೧೬); ಸಸಿನೆ ಕುಳ್ಳಿರು ಸಖಿಯೆ (ಸುದಾಮ. ೯೬-೨೮). ೬. ದಿಟವಾಗಿ ; ನಿಜವಾಗಿ: ಸಸಿನೆ ಸಗ್ಗದ ಸೌಧಮುಕ್ತಾಕಲಶಮಿದುವೊ . . . ಎನಲ್ಮೆರೆದುದ್ಯೆಂದವಬಿಂಬವು (ವಂಕಾರಾ. ೫-೬-೧೪). ೭. ಸಂಪೂರ್ಣವಾಗಿ : ಪಶುತನಂ ಪತಿತನಂ ಮಾಯಾ ವಿಮೋಹಿತಂ ಸಸಿನೆಯದು ಪ್ರಳಯಮಾಗಲ್ಕೆ ಪಶುವುಂ ಪತಿಯುಮೊಸೆದು ನೋಡಲ್ಕಿಲ್ಲ ವಾಗಲಿದುಮ್ಮೈಕ್ಯಸ್ಥಲಂ (ಮಹಾವಿ. ೧೦-೯೧). ಸಸಿನಂ : ೧. ಮುಸುಕಿನೊಳಗಿರ್ದ ಪಾವಂ ಸಸಿನಂ ಮತ್ಪಿತನ ಮೇಲೆ ಬಿಸುಡಲ್ . . . ಕಾಳೋರಗಂ ಕರ್ಚಲ್ (ದಶಕು. ೯-೯೮).

[< ಸಸಿನ್$_1$./ ತೆಲು. ಸಸಿಗಾ]

ಸಸಿನೆಕೂಟ (ನಾ). [ಕಾಮಶಾ] ಒಂದು ಬಗೆಯ ರತಿಬಂಧ : ಸಸಿನೆಕೂಟಮೆಂದು ಮರ್ಕಟಕರಣಂ (ಕಾಮಶಾ. ೨೩೬). [ಸಸಿನ್$_?$ + ಕೂಟ$_1$]

ಸಸಿನೆಗೆಯ್, ಸಸಿನಂಗೆಯ್, ಸಸಿನಗೆಯ್, ಸಸಿನೆಗೈ (ಕ್ರಿ). ೧. ನೇರ ಗೊಳ್ಳುವಂತೆ ಮಾಡಿಸು ; ನೇರಗೊಳಿಸು : ಭಕ್ತರೆ ಸಮರ್ಥರವರ್ಗಳ ಕೈಗಳಿಂದಮಿ ವರಶಿವಲಿಂಗಮಂ ಸಸಿನೆಗೆಯ್ಯುವೆನೆಂದೆನುತಿರ್ದನಾ ನೃಪಂ (ತ್ರಿಪುವಿ. ೨೦-೧೩); ತಾಂಡವಮೂರ್ತಿಯ ತನುವಂ ಸಸಿನೆ[ಪಾಠಾಂ. ಪ]ಗೆಯ್ದವಂ ಗೊಲವಿತ್ತಂ (ವೃಷವಿ. ೧೦-೩೨). ೨. ಸರಿಪಡಿಸು ; ಓರಣಗೊಳಿಸು ; ಸರಿಮಾಡು : ಕುರುಳಂ ನುಣ್ಣಿಪ ವೇಣಿಯಂ ಸಸಿನೆಗೆಯ್ವ . . . ಉಡ್ಗುಗದೊಳಾಂ ಮಯ್ದೋಱಿ ತತ್ಕಾಮಿನೀಕರುಣಾಲೋಕನಸಿದ್ಧಿಯಂ ಪಡೆದು (ದಶಕು. ೮-೨೬೨); ಬಟಲ್ಕೆಯಂ ತಳೆದ ಹಂಸೆಯ ಹೆಚ್ಚಿದ ಹೊನ್ನ ಪಕ್ಕವಂ ಮಿಸುಪ ಕರಾಗ್ರದಿಂ ಸಸಿನೆಗೆಯ್ದು (ನಳಚಂ. ೧೦೧). ೩. ಉಜ್ಜ್ವಲಗೊಳಿಸು ; ಹೆಚ್ಚು ಪ್ರಕಟಗೊಳ್ಳುವಂತೆ ಮಾಡು : ಅವಯವ ಶೋಭೆಯಂ ಸಸಿನೆಗೆಯ್ವ . . . ಬಲ್ಪುಗೆ ಸೂಳೆಯರಬ್ಬೆಗೊಪ್ಪುಗುಂ (ದಶಕು. ೮-೧೬). ಸಸಿನಂಗೆಯ್ : ೨. ಮಿಸುನಿಯ ಕಡಗದ ಕೀಲಂ ಸಸಿನಂಗೆಯ್ವಂತೆ . . . ಹಸ್ತಮಂ ಪಿಡಿದು ಸಮೀಪಕ್ಕೊಲ್ದು ಕರೆದನಬಲೆಯನರಸಂ (ದಶಕು. ೧-೬೩); ಹಸ್ತಾಗ್ರದಿಂ ಮೇಲುದಂ ಸಸಿನಂಗೆಯ್ಯುತಂ ಸತಿಯೆಯ್ತಂದಳ್ (ನಳಚಂ. ೩೨೬). ಸಸಿನಗೆಯ್: ೨. ಮದ್ವ್ಯಾಕುಳಚಿತ್ತಮಂ ಸಸಿನಗೆಯ್ಯೆ ಗುಣಪ್ರಕರಕ್ಕೆ ತಕ್ಕುದೇ (ನಳಚಂ. ೨೦೨). ಸಸಿನೆಗೈ : ೨. ಜಗುಳ್ದ ಕಚಾಗ್ರಮಂ ಸಸಿನೆಗೈದು . . . ಚಿತಾಗ್ನಿಯಂ ಪುಗುವಳಂ ಮಿಗೆ ಕಂಡೆಂ (ದಶಕು. ೪-೫೧). [ಸಸಿನ್$_1$ + ಕೆಯ್$_1$]

ಸಸಿನೆಗೈ 'ಸಸಿನೆಗೆಯ್' ನೋ.

ಸಸಿನೆವರಿ (ಕ್ರಿ). ನೇರವಾಗಿ ಹೋಗು ; ಎದುರಿಗೆ ಚಲಿಸು : ತಾನುಂ ಹಿಡಿಂಬೆಯುಂ . . . ಸಸಿನೆ[ಪಾಠಾಂ. ಪಸಿಗೆ]ವರಿದುಂ ಬವಳಿವರಿದುಂ ಬಾನಂಗುೞಿಗೆವರಿದುಂ ಸೂಟ್ಟಿರಿದುಮಾಡುವಾಗಳುಭಯಬಲಂಗಳ್ ಬೆಕ್ಕಸಂಬಟ್ಟು ನೋಡಿ (ಪಂಪಭಾ. ೧೨-೧೫೮ ವ).

[ಸಸಿನ್$_2$ + ಪರಿ$_2$]

**ಸಸಿನೆಳಲು** (ನಾ). ಚಂದ್ರನ ಛಾಯೆ ; ಬೆಳುದಿಂಗಳು : ಬಿಸಿಲ ಛಡಾಳದಿ ಬೆಂದರ್ಗೆ ಮಡುನೀರು ಸಸಿನೆಳಲಿದಿರ್ವಂದಂತೆ ಅಸಿಯಳ ಮದನನುತಾಪಕೆ ಬಂದು ಸಂಧಿಸಿತೀಶ್ವರಿಯ ನಿರೂಪ (ಮೋಹತ. ೨೭-೧೭). [ಸಸಿ₂ + ನೆಳಲು₁ (< ನೆೞಲ್₁)]

**ಸಸಿಬಟ್ಟು** 'ಸಸಿವಟ್ಟು' ನೋ.

**ಸಸಿಮಣಿ** 'ಸಸಿವಣೆ' ನೋ.

**ಸಸಿಮತಿ** (ನಾ). ಒಬ್ಬಾಕೆಯ ಹೆಸರು : ಸಸಿಮತಿಶ್ರೀಗನ್ತಿಯರ್ . . . ಸ್ವರ್ಗ್ಗಾಲಯ ಕ್ಕೇಱಿದಾರ್ (ಎಕ. I, ೭೭-೨; ಸು. ೯೧೦). [< ಸಂ. ಶಶಿಮತಿ]

**ಸಸಿಮೊಗ** (ನಾ). ಚಂದ್ರನಂತಿರುವ ಮುಖ ; ಚಂದ್ರವದನ : ಸಸಿಮೊಗದೊಳ್ ನಕ್ಷತ್ರಂ ಮಿಸುಪುದು ಮರ್ಯಾದೆಯೆಂದು ಸಕಲಜನಂ ಭಾವಿಸುತಿರೆ ನುಣ್ಪೆಳಗಿಂ ರಂಜಿಸುಗುಂ ನಾಸಾಗ್ರದಲ್ಲಿ ಮೂಕುತಿಯವಳಾ (ದಶಕು. ೬-೭೧); ಹುಣ್ಣಿಮೆಯ ಸಸಿಮೊಗದೊಳುದಿಸೆ ಬೆಮರ್ವನಿ (ಚೆಬಪು. ೧೯-೨೬); ಸಸಿಮೊಗದ ಕಿಸುವಾಯ ಪುಸಿನಡುವಿನರಸಿ (ರಾಮಾಶ್ವ. ೮೭-೨೩). [ಸಸಿ₂ + ಮೊಗ]

**ಸಸಿಯೊಡಲ್** (ನಾ). ಚಂದ್ರಬಿಂಬ ; ಚಂದ್ರಮಂಡಲ.

**ಸಸಿಯೊಡಲಡಗು** = (ಚಂದ್ರನಲ್ಲಿರುವುದೆಂದು ಭಾವಿಸಲಾದ) ಸುಧೆ; ಅಮೃತ : ಸಸಿಯೊಡಲಡಗ ಭಕ್ಷಿಪರಿಂಗೆ ಲೇಸ ಸೂಚಿಸೆ ಬೃಹಸ್ಪತಿ (ಮೋಹತ. ೬-೩). [ಸಸಿ₂ + ಒಡಲ್]

**ಸಸಿಲ್** 'ಸಿಸಿಲ್' ನೋ.

**ಸಸಿವಚ್ಚ** (ನಾ). ಚಂದ್ರನನ್ನು ಆಭರಣವಾಗಿ ಧರಿಸಿದವನು ; ಶಿವ : ನಾಡೆ ರಂಜಿಸಿದಂ . . . ಸಸಿವಚ್ಚಂ ಕರುಣಾಕರಂ ನಿರುಪಮಂ ಸರ್ವಾಂತಕಂ ಶಂಕರಂ (ಉದ್ಭಟ. ೧೨-೧೪೧); ಸಸಿವಚ್ಚಂ ಸಮ್ಮಂಗೊಟ್ಟ ಮಹಾದೇವಮ್ಮಂ ಪೊರೆಗೆ (ಉದ್ಭದೇ. ೧-೨). [ಸಸಿ₂ + ಪಚ್ಚ₂]

**ಸಸಿವಟ್ಟು, ಸಸಿಬಟ್ಟು** (ನಾ). ಚಂದ್ರಬಿಂಬ ; ಶಶಿಮಂಡಲ : ಸಸಿವಟ್ಟಂ ಕೋಟಿಯಂ ಕೀಲ್ಪಡಿಸುವಮಳಿನಾಂಗಪ್ರಭಾಸಂಚಯಂ ಚುಂಬಿಸೆ ಸರ್ವಾಶಾಂತಮಂ . . . ತೋಱಿದಂ ವಿಶ್ವರೂಪಂ (ಉದ್ಭಟ. ೧೧-೧೨೮). **ಸಸಿಬಟ್ಟು** : ಸಸಿಬಟ್ಟುಗಾಗಜ ದೊಳತನು ಕತ್ತುರಿಮಸಿಯೊಳೊಸೆದು ಬರೆದಿರ್ದ ಮೋಹಾಗಮೋಂಕಾರಮೋ . . . ಎನಲ್ ಪೊಸತಾಯ್ತು ವಿಧುಬಿಂಬಮಧ್ಯದಂಕಂ ಪಳಿಕುವಸೆಯಿರ್ದ ಕಾಳಿಯಂತೆ (ಚೆಬಪು. ೯-೨೫). [ಸಸಿ₂ + ಬಟ್ಟು]

**ಸಸಿವಣೆ, ಸಸಿಮಣಿ** (ನಾ). = ಸಸಿಗಲ್ : ಮತ್ತಮೆಂತಪ್ಪ ದುರ್ದಾಂತರಾದೊಡಂ ದುರುಳರಾದೊಡಮವರ ಕಲ್ಲೆರ್ದೆಗಳುಂ ಸಸಿಯಂ ಕಂಡ ಸಸಿವಣೆಯಂತೆ ತಣ್ಣೇಱಿ ಕಱಂಗುಗುಂ (ಚಿಕವಂ. ೭೪-೧೯). **ಸಸಿಮಣಿ** : "ಸಸಿಮಣಿಯೊಸರ್ಗಲ್" (ಚತುನಿ. ೧೧೪); ಸಸಿಮಣಿವೇದಿಕೆಗಳ ಕಡುಸೊಂಪಿಂ ಮಾಣಿಕ್ಯದ ಸೋಪಾನಾವಳಿಯಿಂ . . . ಕಣ್ಣತಿಮಂಗಳಮಂ ಮಾಡುತ್ತುಂ (ಉದ್ಭಟ. ೫-೧೮). [ಸಸಿ₂ + ಮಣಿ₃]

**ಸಸಿವದನ** (ನಾ). = ಸಸಿಮೊಗ : ಮೊಳೆವೊಲೆಯೊಳಸೆವ ಸಸಿವದನದೊಳ್ಕುಡಿ ನೋಟದೊಳ್ . . . ಸಲೆ ರಾಜಿಸುವ ತನುಲತೆಯೊಳೊಪ್ಪಿರ್ದರೆಳವೆಣ್ಗಳಚ್ಚ ಪೊಸಜವ್ವನದೊಳಾವಗಂ ವಿಟಪೀವರಾಶ್ರಯದೊಳು (ಜೈಮಿಭಾ. ೬-೨೭). [ಸಸಿ₂ + ವದನ]

**ಸಸಿವದನೆ** (ನಾ). ಚಂದ್ರನನ್ನು ಹೋಲುವ ಮುಖವುಳ್ಳವಳು ; ಸುಂದರಿ: ಸಸಿವದನೆಯು ತೆಳ್ವಸಿಗ್ರಾ ಸರಸಿಜಗರ್ಭನೀಯೆ ತವ್ಮೊಳ್ಪುಮನಿಂ ಬೇಸತ್ತು ಪುಯ್ಯಲಿಡುವುವು ದೇಸಿಗರಂತೇಗಳುಂ ಸುರಂಭಾದಳಗಳ್ (ಧರ್ಮಾಮೃ. ३-೧೫೦); ಸಸಿವದನೆಯಂ ನೋಡದಿಂತು ಮಾಡಿದರುಂಟೆ (ಮಾನರ. ದೇ. ೧೭೦-೨). [ಸಸಿವದನ + – ಎ₂]

**ಸಸಿವಾರ** (ನಾ). ಒಂದು ಬಗೆಯ ಮರ : ಮುಳ್ಳುಗ ಸಸಿವಾರೊಡವಾರ ಕಂಚಿ . . . ಹುಲಗಿಲ್ಲೂರವಿ (ಹಮ್ಮೀರ. ೪-೬೮). [?]

**ಸಸಿವೆಳಗು** (ನಾ). ಚಂದ್ರನ ಕಾಂತಿ ; ತಿಂಗಳ ಬೆಳಕು ; ಬೆಳುದಿಂಗಳು : ಸಸಿ [ಪಾಠಾಂ. ಶಶಿ]ವೆಳಗೊಸೆದು ಪಸರಿಪಂತೆ ಕಾಂತಿಯೊಳೆಸೆವ ಧವಳಪುಣ್ಯಕಾಯ . . . ಸಲಹಿಳೆಯ (ಮೋಳಪು. ೧-೨). [ಸಸಿ₂ + ಬೆಳಗು₂]

**ಸಸಿವೆಱ್** (ನಾ). ಚಂದ್ರಬಿಂಬ ; ಚಂದ್ರಮಂಡಲ : ಸಸಿವೆಱ್ [ಪಾಠಾಂ. ಶಶಿವೆಱ್, ಸಸಿಗೆರೆ] ಬಂದು ಬೆಳ್ಳುಗಿಲೊಳಪೊಗುವಂತೆ ಬಿಸಜವದನೆ ಬಿಂಕದೊಳು ಒಸದೆಯ್ತಂದೆಳ ಪೊಕ್ಕಳು ಮಿಸುನಿಯ ಕುಸುರಿವೆಸದ ಸಜ್ಜವನೆಯ (ಕುರಾಸಾಂ. ೮-೪). [ಸಸಿ₂ + ಪೆಱ್]

**ಸಸಿಸೂಡಿ** (ನಾ). ತಲೆಯಲ್ಲಿ ಚಂದ್ರನನ್ನು ಧರಿಸಿದವನು; **ಶಶಿಚೂಡ**; ಶಿವ : ಪತಿಯಾದ ಸಸಿಸೂಡಿಯೆಂತು ಪಶುಪಪ್ಪನಾಶ್ಚರ್ಯಂ (ಪಾಸೋಪು. ೯-೫೦). [ಸಸಿ₂ + ಸೂಡು₁ + – ಇ₃]

**ಸಸಿಸೇಖರ** (ನಾ). = ಸಸಿಸೂಡಿ: ಕುಱುವಂಶವಂಶದೊಳ್ ಜನಿಯಿಸಿದಂ ಪಯೋನಿಧಿಯೊಳುಜ್ವಳ ರತ್ನವಿನಂಗೆ ತೇಜವಾರ್ಪ್ಪಿನ ಸಸಿಸೇಖರನಿಟಳಾಂಬಕದಂತೆನೆ . . . ಪೊಗಳದಿರ್ಪ್ಪವರಾರು ಕುಮಾರಮೇರುವಂ (ಎಕ. VII (R), ನಾಗಮಂ. ೮೧-೪೫; 1224). [< ಸಂ. ಶಶಿಶೇಖರ]

**ಸಸುನ** (ನಾ). ರತ್ನದ ಒಂದು ಬಗೆಯ ದೋಷ (?) : ಅಕ್ಕರಿಂ ಧರಿಸಿದವರಿಗೆ ಫಲವಂ ಪೇಳುವೆಂ ಕರ್ಕರಕೆ ಭಿನ್ನವೆಂದೊಡದು ಹುಟ್ಟಿಹುದೆಂದು ಅಕ್ಕಜದ ಮೊರಟು ಲುಳಿಯಾಣ ಸಸುನಗಳೆಂದು ಪುಟದೋಷಮೆಂದಿರ್ಪುದು (ರತ್ನಶಾ. ೯-೫). [?]

**ಸಸೇಮಿರ** 'ಸಸೇಮಿರಾ' ನೋ.

**ಸಸೇಮಿರಾ** 'ಸಸೇಮಿರ' ನೋ.

**ಸಸೇಮಿರ, ಸಸೇಮಿರ, ಸಸೇಮಿರಾ** (ನಾ). ಹುಚ್ಚುತನ, ದಡ್ಡತನ, ಮೊಂಡುತನ ಮುಂತಾದುವನ್ನು ಮತ್ತು ಅವುಗಳನ್ನು ಹೊಂದಿರುವ ವ್ಯಕ್ತಿಯನ್ನು ಸೂಚಿಸುವ ಒಂದು ಪದ : ಜಗತ್ತನ್ನೇ ನಿರ್ಲಕ್ಷಿಸಿ ಸಸೇಮಿರನಂತೆ ವರ್ತಿಸು (ಕಾಮಿಶಾಂ. ೧೩). **ಸಸೇಮಿರ** : ನಾ ಕಾಣೆ, ನಾನರಿಯೆ ಎಂಬ ಸಸೇಮಿರವನ್ನು ನುಡಿಯುತ್ತಲೇ ಬಂದರು (ಮಾಮರಾ. ೧೭೧). **ಸಸೇಮಿರಾ** : ನರಸಿಂಹಯ್ಯನವರು ಸಸೇಮಿರಾ. ಅವರು ಮತ್ತಷ್ಟು ರೇಗಿ . . . ಎಂದರು (ತುರಾಯಿ. ೩೧). [<— ಮರಾ. ಸಸೇಮಿರಾ./ ತೆಲು. ಸಸೇಮಿರಾ]

**ಸಸ್ತನಿ** (ನಾ). ಸ್ತನವುಳ್ಳ ಪ್ರಾಣಿ : ಆಳಿಲು : ಸಾಮಾನ್ಯವಾಗಿ ಗಿಡಮರಗಳಲ್ಲಿ ವಾಸಿಸುವ ಸಸ್ತನಿ (ಕವಿಕೋ. I, ೬೩೪). [IP 'ಸ್ತನಿ' ಎಂಬುದು ಸಂಸ್ಕೃತದಲ್ಲಿ ಸರಿಯಾದ ರೂಪ. ಆದರೆ ಅದಕ್ಕೆ 'ಸ' ಸೇರಿದ ಈ ತಪ್ಪುರೂಪ ಬಳಕೆಯಲ್ಲಿ ಬಂದಿದೆ]

**ಸಸ್ತಾ, ಸಸ್ತು** (ನಾ). ಅಗ್ಗ ; ಕಡಿಮೆದರ : ನೀಟಾಗಿರಬೇಕು . . . ಸಸ್ತಾ ದಲ್ಲಿರಬೇಕು (ರುದ್ರಿಮ. ೮೩). **ಸಸ್ತು** : ಇದಲ್ಲದ ನಿನಗ ಮಾಲು ಸಸ್ತು ಸಿಗಬೇಕು (ರಕ್ತಧ್ವ. ೨೨೦). [<— ಹಿಂ. ಸಸ್ತಾ, ಸಸ್ತೀ; ಮರಾ. ಸಸ್ತ, ಸಸ್ತಾ]

**ಸಸ್ತು** 'ಸಸ್ತಾ' ನೋ.

**ಸಸ್ನೇಹ** (ಗು). ೧. ಗೆಳೆತನದಿಂದ ಕೂಡಿದ; ಮೈತ್ರಿಯಿಂದ ಕೂಡಿದ: ನೂರಾರು ಜನರ ಆ ಸಸ್ನೇಹಪರಿಚಯದಿಂದಲಂದಾಮೋದಗೊಂಡೆ (ಇಂಚಾಪ. ೩೩-೫೨). (ನಾ). ೨. ಸ್ನೇಹಪೂರಿತವಾಗಿರುವಿಕೆ; ಗೆಳೆತನದಿಂದ ಕೂಡಿರುವಿಕೆ: ಗಂಗರಾಜನು ಸಸ್ನೇಹದಿಂದ ಭರಮಹೆಗ್ಗಡೆಯ ಎರಡೂ ಕೈಗಳನ್ನು ಹಿಡಿದು . . . ಆದರದಿಂದ ವಿಚಾರಿಸಿದನು (ಸವತಿ. ೬೫). [ಸಂ.]

**ಸಸ್ಪೃಹ** (ಗು). ಆಸೆಯಿಂದ ಕೂಡಿದ; ಬಯಕೆಯಿಂದ ತುಂಬಿದ: ಸಸ್ಪೃಹ ಸಾನಂದಸಲೀಲಸಸ್ಮಿತಮುಖವ್ಯಾಭಾಸಿ ನೋಡಿಂತು ಸನ್ನಿಹಿತಂ ಸೌಂದರರೂಪಮಿನ್ನು ಮೆರ್ದೆಯೊಳ್ ಮಜ್ಜೀವಿತಾಧೀಶನಾ (ಆದಿಪು. ೩-೪೨). [ಸಂ.]

**ಸಸ್ಪೃಹತೆ** (ನಾ). ಬಯಕೆಯಿಂದ ಕೂಡಿರುವುದು ; ಆಸೆಯಿಂದ ತುಂಬಿರುವುದು : ನೀವು ನಿಮ್ಮತುಳಿತ ದಯಾದೃಷ್ಟಿಗಳನೆನ್ನಲ್ಲಿ ತೀವಿ ಪಸರಿಸಲೆನ್ನ ಸಸ್ಪೃಹತಾವಲೋಕನವಿಂತು ನಿಮ್ಮ ಸದಾವಿಲೋಕನದೊಳು ನಿಲಿಸಿ ಪೊರೆ ಮಿಕ್ಕಿನವ ನೊಲ್ಲೆ (ಬಸಪು. ೧೮-೧೦೨). [ಸಂ. ಸಸ್ಪೃಹತಾ]

**ಸಸ್ಫುಟ** (ಗು). ಸ್ಪಷ್ಟತೆಯಿಂದ ಕೂಡಿದ ; ಸ್ಫುಟವಾದ : 'ಸಸ್ಫುಟವೃತ್ತಿ' ಪರಾ. [< ಸಂ. ಸ್ಫುಟ]

**ಸಸ್ಫುಟತೆ** (ನಾ). ಸ್ಪಷ್ಟವಾಗಿರುವಿಕೆ; ಸ್ಫುಟತೆಯಿಂದ ಕೂಡಿರುವಿಕೆ: ದನಿ ಕುಗ್ಗಿದುದು ನಾಲಗೆಗೆ ಸವನಿಸದು ಸಸ್ಫುಟತೆ (ತಿಮ್ಮಶಾಂ. ೧-೪೫). [ಸಸ್ಫುಟ + – ತೆ₃]

**ಸಸ್ಫುಟವೃತ್ತಿ** (ನಾ). ಸ್ಫುಟವಾದ ರೀತಿ ; ಸ್ಪಷ್ಟವಾದ ಮಾರ್ಗ : ಸಸ್ಫುಟವೃತ್ತಿ ಜಿಹ್ವೆಗೆ ಜನಿಯಿಸಲಿ ಸಂತಾಪವಡಗಲಿ (ತಿಮ್ಮಶಾಂ. ೧-೪೬). [ಸಸ್ಫುಟ + ವೃತ್ತಿ]

**ಸಸ್ಮಿತ** (ಗು). ೧. ಮುಗುಳುನಗೆಯಿಂದ ಕೂಡಿದ; ಮಂದಹಾಸದಿಂದ ಕೂಡಿದ: ಸಸ್ಪೃಹಸಾನಂದ ಸಲೀಲಸಸ್ಮಿತಮುಖವ್ಯಾಭಾಸಿ ನೋಡಿಂತು ಸನ್ನಿಹಿತಂ ಸೌಂದರರೂಪಮಿನ್ನುಮೆರ್ದೆಯೊಳ್ ಮಜ್ಜೀವಿತೇಶನಾ (ಆದಿಪು. ೩-೪೨); ಮಹಿತ ಮಹೋದಯಂ ಕಮಲಬಂಧುರಸಸ್ಮಿತವಕ್ತ್ರಭಾಸುರಂ (ರಾಜಶೇ. ೧-೮). ೨. ಚೆನ್ನಾಗಿ ಅರಳಿದ ; ವಿಕಸಿತವಾದ : ಸಸ್ಮಿತಚಂಪಕಮಳಿಯನಪಸ್ಮಾರಿಯನತುಳವಾದ್ಯ ರುತಿಯಳಲಿಪುದೇಂ ವಿಸ್ಮಯಮೆ (ವೃಷವಿ. ೧-೪೮). [ಸಂ.]

**ಸಸ್ಯ** (ನಾ). ೧. ಧಾನ್ಯ ; ಕಾಳು. ೨. ಗಿಡ, ಮರ ಮುಂತಾದುವುಗಳಿಂದ ಉತ್ಪತ್ತಿಯಾಗುವ ಕಾಯಿ, ಹಣ್ಣು ಇತ್ಯಾದಿ ; ಫಸಲು : "ಸಸ್ಯಂ, ವೃಕ್ಷಾದೀನಾಂ ಫಲಂ, ಮರಗಳು ಮೊದಲಾದವುಗಳ ಫಲಕ್ಕೆ ಹೆಸರು. ಅಂದರೆ ಫಸಲು, ಹಣ್ಣು ಕಾಯಿ ಧಾನ್ಯ ಮುಂತಾದ ಫಲ" (ಸಿದ್ಧಾಂತಿ. ೧೧೪). ೩. ಗಿಡ, ಬಳ್ಳಿ ಮುಂತಾದುವು : ಆ ನಾಡೂರೂರ್ದಪ್ಪದದೇನೆಸೆವುವೊ ಕೌದ್ರವೀಣದ . . . ವಿೌದ್ಧೀನದ ಬಹುಸಾರಸಸ್ಯಸಕಳಫಳಂಗಳ್ (ಪುಷ್ಪಪು. ೨-೧೨); ಸಸ್ಯಗಳನ್ನು ಸಂಗ್ರಹಿಸುವುದಕ್ಕೂ ಅವುಗಳನ್ನು ಒಣಗಿಸಿ ಒಪ್ಪಗೊಳಿಸುವುದಕ್ಕೂ ಕ್ರಮಗಳಿವೆ (ಹಸುಹೂ. ೧೨೨). ೪. ಉತ್ತಮದರ್ಜೆ ; ಶ್ರೇಷ್ಠವರ್ಗ. ೫. ಒಂದು ಬಗೆಯ ಉತ್ತಮದರ್ಜೆಯ ರತ್ನ : ಪುಷ್ಯರಾಗ ಸಸ್ಯ ಕರ್ಕೇತನ ಇಂದ್ರನೀಲಂ ಮೊದಲಾಗೊಡೆಯ ಅನರ್ಘ್ಯಮಪ್ಪ ಮಾಣಿಕದಿಂ ಸಮೆದ ಪಲವುಂ ನಾನಾಪ್ರಕಾರದ ಕಂಕಣಂಗಳುಮಂ ತೊಟ್ಟ ಮುಂಗೆಯ್ಯುಂ (ವಡ್ಡಾರಾ. ೧೪೮-೧೪). 'ಶಸ್ಯ' ಪರಾ. [ಸಂ.]

**ಸಸ್ಯಜನ್ಯ** (ನಾ). ಗಿಡ, ಮರಗಳಿಂದ ಉತ್ಪತ್ತಿಯಾಗುವ ಪದಾರ್ಥ: ತೆಂಗಿನೆಣ್ಣೆ, ಎಳ್ಳೆಣ್ಣೆ, ನೆಲಗಡಲೆ ಎಣ್ಣೆ, ಆಲಿವ್‌ಬೀಜದ ಎಣ್ಣೆ ಇತ್ಯಾದಿಗಳು ಸಸ್ಯಜನ್ಯಗಳು (ಅಡುಸೌ. ೫೮). [ಸಂ.]

**ಸಸ್ಯಜಾತಿ** (ನಾ). ಗಿಡ, ಮರ, ಬಳ್ಳಿಗಳ ಗುಂಪು, — ವರ್ಗ: ಇಂಥ ತುಣುಕು ಸಂಗತಿಗಳನ್ನು ಮೊತ್ತವಾಗಿ ತೂಕಮಾಡಿ ನೋಡಿದರೆ ಎರಡು ಬಗೆಯ ಸಸ್ಯಜಾತಿಗಳನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದರೆಂದು ಹೇಳಬಹುದು (ಹಸುಹೂ. ೩೭೪); ಈ ಸಸ್ಯಜಾತಿ . . . ದಕ್ಷಿಣಭಾರತಕ್ಕೆ ಬಹುಕಾಲದಿಂದ ಪರಿಚಿತವಾಗಿದೆ (ಶಾಸಗಿ. ೧೮). [ಸಂ.]

**ಸಸ್ಯನಿಧಿ** (ನಾ). ಗಿಡ, ಬಳ್ಳಿ ಇತ್ಯಾದಿಗಳಿಗೆ ಆಶ್ರಯಸ್ಥಾನವಾದುದು; ಸಸ್ಯಸಮೃದ್ಧಿಯಿಂದ ಕೂಡಿದುದು : ಸಸ್ಯನಿಧಿ ನಿಖಿಳಧರೆಯಂ ಯಸ್ಯಾಶ್ವಾಸ್ತಸ್ಯ ಮೇದಿನೀಯೆಂಬುದನಬ್ಭಾಸ್ಯಂ ದಿಟಮೆನಿಸಲನಾಲಸ್ಯನನೂನಾಶ್ವನಾಳ್ದನಶ್ವಪುರೇಶಂ (ಪಾರ್ಶ್ವಪು. ೭-೫೦). [ಸಂ.]

**ಸಸ್ಯಮಂಜರಿ** (ನಾ). ಧಾನ್ಯದ ತೆನೆ : "ನಿಮಿರ್ದ ಸಸ್ಯಮಂಜರಿ ಕಣಿಶಂ" (ವಸ್ತುಕೋ. ೬೫-೨೦); "ಕಣಿಶಂ, ಸಸ್ಯಮಂಜರೀ — ೨ ನೆಲ್ಲು ಮುಂತಾದ ಧಾನ್ಯದ ತೆನೆಗಳ ಹೆಸರುಗಳು" (ಸಿದ್ಧಾಂತಿ. ೨೮). [ಸಂ. ಸಸ್ಯಮಂಜರೀ]

**ಸಸ್ಯಮೂಲಿಕೆ** (ನಾ). ಔಷಧಿಗೆ ಉಪಯುಕ್ತವಾದ ಮೂಲಿಕೆ ; ಗಿಡಮೂಲಿಕೆ: ಆಗ ನಮ್ಮ ವೈದ್ಯ ಒಬ್ಬ, ಬೆಟ್ಟಗಳಿಂದ ಬಂದು ಗುಣಪಡಿಸಿದ. ಇವರಿಗೆ ಸಸ್ಯಮೂಲಿಕೆ ತಿಳಿಯಿತ್ತೆ (ಮಲನಾ. ೨೧೨). [ಸಂ. ಸಸ್ಯಮೂಲಿಕಾ]

**ಸಸ್ಯರಸ** (ನಾ). ಗಿಡ, ಬಳ್ಳಿಗಳಲ್ಲಿ ಉತ್ಪತ್ತಿಯಾಗುವ ದ್ರವಪದಾರ್ಥ: ಜೀವರಸದ ಮಧ್ಯದಲ್ಲಿ ಕುಹರವಿದೆ. ಈ ಸೂಕ್ಷ್ಮಕುಹರದಲ್ಲಿ ಸಸ್ಯರಸ ತುಂಬಿದೆ (ಸಸ್ಯಶಾ. ೮೬); ನಾಳ — ಎಂದರೆ ಸಸ್ಯರಸವನ್ನು ಗಿಡಮರಗಳ ಬೇರಿನಿಂದ ಎಲೆತುದಿಯ ವರೆಗೂ ಕೊಂಡೊಯ್ಯುವುದಕ್ಕಾಗಿಯೇ ಸೇರ್ಪಟ್ಟಿರುವ ಕಣಸಮೂಹ (ಹಸುಹೂ. ೨೧೦). [ಸಂ.]

**ಸಸ್ಯವಿಜ್ಞಾನ** (ನಾ). ಗಿಡ, ಮರ, ಬಳ್ಳಿಗಳಿಗೆ ಸಂಬಂಧಪಟ್ಟ ವಿಷಯವನ್ನು ವೈಜ್ಞಾನಿಕವಾಗಿ ತಿಳಿಸುವ ಶಾಸ್ತ್ರ : ಬರಬರುತ್ತ ಸಸ್ಯವಿಜ್ಞಾನವೇ ನನ್ನ ಜೀವನದ ಹಂಬಲವಾಯಿತು (ಸಸ್ಯಕ. ೨). [ಸಂ.]

**ಸಸ್ಯವಿಜ್ಞಾನಿ** (ನಾ). ಗಿಡ, ಮರ, ಬಳ್ಳಿಗಳಿಗೆ ಸಂಬಂಧಪಟ್ಟ ವಿಷಯವನ್ನು ವೈಜ್ಞಾನಿಕವಾಗಿ ಅಭ್ಯಾಸಮಾಡಿದವನು ; ಸಸ್ಯವಿಜ್ಞಾನದಲ್ಲಿ ತಜ್ಞನಾದವನು : ಸಸ್ಯವಿಜ್ಞಾನಿಗಳ ಜೀವನಚರಿತ್ರೆ ಮತ್ತು ಸಂಶೋಧನಾಫಲಗಳನ್ನು . . . ವಿವರಿಸಲು ಪ್ರಯತ್ನಿಸಲಾಗಿದೆ (ಸಸ್ಯಕ. vii, ಅರಿಕೆ). [ಸಂ. ಸಸ್ಯವಿಜ್ಞಾನಿನ್]

**ಸಸ್ಯಶಾಸ್ತ್ರ** (ನಾ). = ಸಸ್ಯವಿಜ್ಞಾನ : ಸಸ್ಯಶಾಸ್ತ್ರದಲ್ಲಿ ಮೇಲಿಂದ ಮೇಲೆ ಸಂಶೋಧನೆಗಳು ನಡೆಯುತ್ತಿರುವುದರಿಂದ ಇದಕ್ಕೆ ಸಂಬಂಧಿಸಿದ ವಿಷಯಗಳು ಬಹುವಾಗಿ ಶೇಖರಿಸಲ್ಪಟ್ಟಿರುವುವು (ಸಸ್ಯಶಾ. ೧); ಪ್ರಕೃತಿಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ ಮುಂತಾದ ಇಂದಿನ ವಿಜ್ಞಾನದ ವಿವಿಧಭಾಗಗಳಿಗೆ . . . ಅಡಿಗಲ್ಲನ್ನು ಹಾಕಿದ ಕೀರ್ತಿ ರೇಗೆ ಸಲ್ಲುತ್ತದೆ (ಸಸ್ಯಕ. ೫). [ಸಂ.]

**ಸಸ್ಯಶಾಸ್ತ್ರಜ್ಞ** (ನಾ). = ಸಸ್ಯವಿಜ್ಞಾನಿ : ವಾಲಿಚ್ ಎಂಬ ಸಸ್ಯಶಾಸ್ತ್ರಜ್ಞ ಈ ಮರಕ್ಕೆ ಶಾಸ್ತ್ರೀಯವಾಗಿ ನಾಮಕರಣ ಮಾಡಿದಾಗ (ಹಸುಹೂ. ೩೦); ನನಗೂ ಒಬ್ಬ ಸಸ್ಯ ಶಾಸ್ತ್ರಜ್ಞನ ಸಹಾಯ ಮತ್ತು ಸಹಕಾರ ಅವಶ್ಯವಾಗಿ ಬೇಕಾಗಿದೆ (ಸಸ್ಯಕ. ೩೫). [ಸಂ.]

**ಸಸ್ಯಶೂಕ** (ನಾ). ಧಾನ್ಯದ ಮೇಲಿರುವ ಊಬು : "ಶಿಂಶಾರುಃ, ಸಸ್ಯಶೂಕಂ — ೨ ಧಾನ್ಯದ ಸುಂಕು, ಧಾನ್ಯದ ಮುಳ್ಳು, ಭತ್ತದ ಊಗು" (ಸಿದ್ಧಾಂತಿ. ೨೮೦). [ಸಂ.]

**ಸಸ್ಯಹೇನು** (ನಾ). ಗಿಡ, ಬಳ್ಳಿ ಇತ್ಯಾದಿಗಳಲ್ಲಿ ಸೇರಿ ಅವುಗಳನ್ನು ನಾಶಗೊಳಿಸುವ ಒಂದು ಬಗೆಯ ಹುಳು ; ಗಿಡಹೇನು : ಚಿಕ್ಕಟ, ಹೇನು, ಇರುವೆ ಮತ್ತು ಸಸ್ಯಹೇನುಗಳು ತಮ್ಮ ಹಿಂದಿನ ಪೂರ್ವಜಗಳಿಗೆ ರೆಕ್ಕೆಗಳಿದ್ದು, ಅವು ಭೂಮಿಯೊಳಗೆ, ಪ್ರಾಣಿಗಳ ಮೇಲೆ ನಿಶ್ಚಲಜೀವನಕ್ಕೆ ಹೊಂದಿಕೊಂಡಾಗ ರೆಕ್ಕೆಗಳು ಕಳೆದು ಅವನತಿ ಹೊಂದಿವೆ (ಕೀಟಜೀ. ೧೮). [ಸಸ್ಯ + ಹೇನು (< ಪೇನ್)]

**ಸಸ್ಯಾಹಾರ** (ನಾ). ೧. ತರಕಾರಿ, ಸೊಪ್ಪು, ಧಾನ್ಯ ಮುಂತಾದ ಸಸ್ಯೋತ್ಪನ್ನಗಳನ್ನೊಳಗೊಂಡ ಆಹಾರ ; ಶಾಕಾಹಾರ : ಇನ್ನು ಊಟದ ವಿಷಯ. ಸಸ್ಯಾಹಾರವೊ? ಮಾಂಸಾಹಾರವೋ? (ಸಮಜೀ. ೬೧೬); ಮಾಂಸಾಹಾರ ವರ್ಜ್ಯವಾದ್ದರಿಂದ ಸಸ್ಯಾಹಾರತಯಾರಿಕೆಯನ್ನು ಅರಿತ ನಳನನ್ನು ಹುಡುಕಬೇಕಾಯಿತು (ಹಸುಹೂ. ೨೩೩). ೨. ಸಸ್ಯಗಳ ಬೆಳವಣಿಗೆಗೆ ಬೇಕಾಗುವ ಆಹಾರ : ಸಾಕಾದಷ್ಟು ಸಸ್ಯಾಹಾರಗಳು ಭೂಮಿಯಲ್ಲಿದ್ದರೆ ಮಾತ್ರ ಸಸ್ಯಗಳು ಚೆನ್ನಾಗಿ ಬೆಳೆಯುತ್ತವೆ (ವ್ಯವಮ. ೨೬). [ಸಂ.]

**ಸಸ್ಯಾಹಾರಿ** (ನಾ). ಶಾಕಾಹಾರವನ್ನು ಮಾತ್ರ ಸೇವಿಸುವವನು : ಜೀವನ ಪರ್ಯಂತ ಸಂಪೂರ್ಣವಾಗಿ ಸಸ್ಯಾಹಾರಿಯಾಗಿರಬೇಕು (ಜೋರಿದೇ. ೧೪); ಅವನು ಕೆಲವೆಡೆ ಮಾಂಸಾಹಾರಿಯಾಗಿದ್ದರೂ ಅವನ ಹಲ್ಲುಸಾಲು ಪ್ರಥಮತಃ ಸಸ್ಯಾಹಾರಿಯದೇ ಆಗಿದೆ (ಶಾಸಗಿ. ೧ ಮುನ್ನುಡಿ). [ಸಂ. ಸಸ್ಯಾಹಾರಿನ್]

**ಸಸ್ಯೋರ್ವಿ** (ನಾ). ಸಸ್ಯಸಮೃದ್ಧಿಯನ್ನು ಪಡೆದ ನೆಲ ; ಫಲವತ್ತಾದ ಭೂಮಿ : "ಸಸ್ಯೋರ್ವಿಯೊಳಂ ಕೇವಳಮಪ್ಪುರ್ವಿಯೊಳಂ ಸಲೆ ನೆಗಳ್ಗುಮುರ್ವರಾಶಬ್ದಂ ತಾಂ" (ವಸ್ತುಕೋ. ೧೪೦-೧೩೧). [ಸಂ. ಸಸ್ಯೋರ್ವೀ]

**ಸಸ್ರೀ** (ನಾ). ಶಾರದೆ ; ಸರಸ್ವತಿ : ಜಲಧಿಯೊಳಂಜನಗಿರಿಯಂ ಕಲಸಿ ಧರಾಪಟದೊಳಭವರೂಪವ ಸಸ್ರೀ ಸಲೆಯಿನ್ನೂ ಬರದಪಳೆನ್ನಳವೇ ನುತಿಸಲ್ (ಶಂಕಕಂ. ೭೭). [< ಸಂ. ಸರಸ್ವತೀ]

**ಸಸ್ಲೆ** 'ಸಿಸಿಲ್' ನೋ.

**ಸಸ್ವ** (ನಾ). ಧನವನ್ನು ಹೊಂದಿದವನು ; ಭಾಗ್ಯಶಾಲಿ : ರವಿಜಂ . . . ಶನಿಗೇಹದೊಳ್ ನಿಲೆ ಮಳಿಷ್ಠಂ ಭೋಕ್ತ್ರ ಸಸ್ವಂ ಧನಂ (ಜಾತತಿ. ೧೭-೩೩). [ಸಂ.]

**ಸಹ$_1$** (ನಾ). ೧. ಸಹನೆಯಿಂದ ತಾಳಿಕೊಳ್ಳುವುದು, — ಅನುಭವಿಸುವುದು. ೨. ಶಕ್ತಿ ; ಬಲ : "ಪ್ರಾಣಃ . . . ತರಃ, ಸಹಃ — ಈ ೮ ಬಲ್ಪು (ಬಲುಹು)" (ಹಲಾಯು. ೧೨೦-೩೮). ೩. ಒಂದು ಮಾಸದ ಹೆಸರು; ಮಾರ್ಗಶಿರ: "ಕ್ರಮದೊಳೊಂದಿರೆ ಮಧುಮಾಧವಂ . . . ಸಹಃ ಸಹಸ್ಯಂಗಳ್ ತಪಮುಂ ತಪಸ್ಯಮೆಂದಿಂತು ಸಮನಿಕ್ಕುಂ ಚೈತ್ರಾದಿ ನಾಮಂಗಳ್" (ವಸ್ತುಕೋ. ೧೭-೧೨). [ಸಂ.]

**ಸಹ$_2$** (ಅ). ೧. ಜೊತೆಯಲ್ಲಿ ; ಸಮೇತವಾಗಿ : ಬಿಸಿಯ ಹಾಲನು ಬೆಣ್ಣೆ ಸಹವೀಂಟಿದನು (ಸಾಳ್ವಭಾ. ೨೧-೪೯). ೨. ಕೂಡೆ ; ಸಹಾ : "ಸಾರ್ಧಂ, ಸಾಕಂ, ಸತ್ರಾ, ಸಮಂ, ಸಹ — ೫ ಕೂಡೆ" (ಸಿದ್ಧಾಂತಿ. ೪೩೩); ಕಾಯಕ ಮಾಡುವಾಗ ಅಹಂಕಾರದ ಸುದ್ದಿ ಸಹ ಇರಕೂಡದು (ವಚರ. ೭೪); ನೇಕಾರರ ಮಕ್ಕಳಿಗೂ, ಅಕ್ಕಸಾಲಿಗ ಮೊದಲಾದವರ ಮಕ್ಕಳಿಗೂ ಅಷ್ಟು ಸಹ ಬೇಕಾಗುತ್ತಿರಲಿಲ್ಲ (ಚಿಟ್ಟಿಹೂ. ೩).

**ಸಹವಾಗಿ** = ಸಮೇತವಾಗಿ : ನಿಜಕಾಂತೆವೆರಸಿದ ಪೆಂಡವಾಸದ ತಂಡ ಸಹವಾಗಿ . . . ತ್ರಿಭುವನತಿಲಕವೆಂಬಾ ಪಸದಿಗೇಳ್ತಂದ (ಸಾಳ್ವಭಾ. ೪-೨೬); ನಿಂಮ ಸಬಿರು **ಸಹವಾಗಿ ಹೊರಡಿಸಿಕೊಂಡು** (ಎಕ. VII, ಶಿಕಾ. ೧೦೬-೨೪; 1576). [ಸಂ.]

**ಸಹಂಪತಿ** (ನಾ). [ಬೌದ್ಧ] ಬ್ರಹ್ಮನ ಒಂದು ಹೆಸರು : ಬ್ರಹ್ಮಂ ಸಹಂಪತಿಯಾಗಳಿಂತು ಗಾಥೆಯನೊರೆದ (ನೃಶಾಖಿ. ೮೮-೬೮೬). [< ಸಂ. ಸಹಾಂಪತಿ]

**ಸಹಕರಿಸು** (ಕ್ರಿ). (ಒಂದು ಕಾರ್ಯ ಅಥವಾ ಉದ್ದೇಶಕ್ಕಾಗಿ ಪರಸ್ಪರ) ಒಂದುಗೂಡಿ ಕೆಲಸಮಾಡು ; ಒತ್ತಾಸೆನೀಡು : ಆ ಪ್ರಕರಣದಲ್ಲಿ ರಾಜೇಂದ್ರ ಪ್ರಸಾದರು ಕೊನೆಯವರೆಗೆ ಗಾಂಧೀಜಿಯವರನ್ನು ಅನುಸರಿಸಿ ಕಾರ್ಯಕ್ರಮವನ್ನು ಮುಂದುವರಿಸಿ ಸಹಕರಿಸಿದರು (ರಾಜವ. ೮); ಬೇಗನೆ ಬಂದು ಹಲಸಿನ ಕಾಯಿ ಸೀಳಲು ಅವ್ವನಿಗೆ ಸಹಕರಿಸಬೇಕು (ಮಸಕೂ. ೧೫). [(ಸಂ. ಸಹಕರಣ) + – ಇಸು₃]

**ಸಹಕಾರ** (ನಾ). ೧. ಪರಸ್ಪರ ಸಹಾಯ ; ನೆರವು ; ಒತ್ತಾಸೆ : ಗೃಹಿಣಿಯರ ಸಹಕಾರವಿಲ್ಲದೆ ನಾವು ಉಪಯೋಗಿಸುವ ಆಹಾರವನ್ನು ಉತ್ತಮಗೊಳಿಸುವುದು ಸಾಧ್ಯವಿಲ್ಲ (ಅಡುಸಾ. ೬೨); ವಿದ್ಯಾರ್ಥಿಗಳಲ್ಲಿ ಸಹಕಾರಸಂಬಂಧವಿದ್ದು ಕಲಿವಿಗೆ ಪೋಷಕವಾದ ಮಾನವೀಯಸನ್ನಿವೇಶ ನೆಲಸಿರಬೇಕು (ಶಿಕ್ಷದ. ೩೦೮). ೨. ಮಾವು; ಚೂತ : ಇದಂ ಪುಗಲಿಂ ಗಡಿಮೆಂದು ಬೇಟಕಾಱರನಿರದೂಱ್ ಸಾಱ್ ಜಡಿವಂತೆಸೆಗುಂ ಸಹಕಾರಕೋಮಳಾಂಕುರ ಪರಿತುಷ್ಟಪುಷ್ಟಪರಪುಷ್ಟಗಳಧ್ವನಿ ನಂದನಂಗಳೊಳ್ (ಪಂಪಭಾ. ೨-೧೩); ಮಂದಮಾರುತನೊಡಗೂಡಿ ಬಂದ ಸಹಕಾರಪರಾಗದೊಳಾಡಿದಂತೆ . . . ಮೋಹಿಸದೆ ಪೇೞ್ ಗುಣವರ್ಮನ ಸೂಕ್ತಿಸಂಚಯಂ (ಪುಷ್ಪಪು. ೧-೬೬). [ಸಂ.]

**ಸಹಕಾರನಂದನ** (ನಾ). ಮಾವಿನ ಮರಗಳಿಂದ ತುಂಬಿರುವ ತೋಟ; ಮಾವಿನ ತೋಪು : ಸೋರ್ವ ಸಹಕಾರದೆ ತೀವಿದ ಬಾವಿ ಕಾಮದೇವನ ರಸಕೂಪದಂತೆ . . . ಎಸೆಯೆ ಕಣ್ಗೆಸೆಗುಂ ಸಹಕಾರನಂದನಂ (ಅಜಿಪು. ೨-೧೩). [ಸಂ.]

**ಸಹಕಾರಲತೆ** (ನಾ). ಎಳೆಯ ಮಾವು ; ಚೂತಲತೆ : ಯುವತಿಯ ಮುಖಾಬ್ಜಮಂ ಮುಸುಱುವ ಕುಂತಳಮಧುಕರಂಗಳಂ ಕರತಳಪಲ್ಲವದಿಂದೋಸರಿಸುವ ಪುಣ್ಯವನಿತೆ ಸಹಕಾರಲತೆಯನೇಂ ಮಱಸಿದಳೋ (ಸುಕುಮಾ. ೧೦-೧೫). [ಸಂ. ಸಹಕಾರಲತಾ]

**ಸಹಕಾರಸಂಘ** (ನಾ). (ಗ್ರಾಹಕ ಮತ್ತು ಮಾರಾಟಗಾರರಿಬ್ಬರಿಗೂ ನೆರವಾಗುವಂತೆ) ಪರಸ್ಪರ ಸಹಾಯಕತೆಯ ದೃಷ್ಟಿಯಿಂದ ರಚಿತವಾದ ಸಂಘ : ಸಹಕಾರಸಂಘಗಳಿಂದ ಜನರು ಹೆಚ್ಚಿನ ಅನುಕೂಲವನ್ನು ಪಡೆಯಬಹುದು (ರೂಢಿ). [ಸಂ.]

**ಸಹಕಾರಿ** (ಗು). ೧. ನೆರವಾಗುವ ; ಸಹಕರಿಸುವ. (ನಾ). ೨. ಒತ್ತಾಸೆ ನೀಡುವುದು ; ನೆರವು ನೀಡುವುದು. ೩. ನೆರವಿಗೆ ಬರುವವನು ; ಸಹಕರಿಸುವವನು; ಸಹಾಯಕ : ಸಹಕಾರಿಗಳಂ ಭಟರಂ ಸುಹಿತದೆ ಧನವಾಹಕರ್ಕಳಂ ಕರೆಯಿಸುತಂ ವಹಿಲದೆ ಪರಿಜನರಂ ಸಖರಹ ಲೋಕರನೆಯ್ದೆ ಬರಿಸಿ ನುಡಿದಂ ಸಚಿವಂ (ಹಾಲಾಸ್ಯ. ೪-೧೦-೩೫). ೪. ಸಹಾಯಕವಾದುದು; ನೆರವಾಗುವಂತಹುದು: ಈ ಜಾಲಂಧ್ರಗಳು . . . ದೇವಾಲಯದ ಒಳಭಾಗಕ್ಕೆ ಹಿತಮಿತವಾದ ಬೆಳಕನ್ನು ನೀಡಲು ಬಹಳ ಸಹಕಾರಿಯಾಗಿವೆ (ನೊಳಂಬ. ೧೧೦); ಅವಳ ದುರಭಿಮಾನವೇ ತನಗೆ ಸಹಕಾರಿಯಾಗುವುದೆಂದು ಸಂತೋಷಪಟ್ಟ (ನಿರಾತ. ೮೬). [ಸಂ. ಸಹಕಾರಿನ್]

**ಸಹಕಾರಿಕಾರಣ** (ನಾ). [ತತ್ತ್ವಶಾ] ಸಹಾಯಕವಾದ ನಿಮಿತ್ತ ; ಪೂರಕವಾದ ಹೇತು : ಶರೀರವೃದ್ಧಿಯೊಳ್ ಚೈತನ್ಯವೃದ್ಧಿಯೆಂಬುದುದಕವೃದ್ಧಿಯೊಳಂಕುರವೃದ್ಧಿಯಂತಂತೆ ಸಹಕಾರಿಕಾರಣಮೆಂದನೇಕಯುಕ್ತ್ಯೋಕ್ತಿಗಳಿಂ ಭೂತವಾದಿಯಪ್ಪ ಮಹಾಮತಿಯಂ ನಿರಾಕರಿಸಿ (ಆದಿಪು. ೨-೧೦ ವ); ಸ್ವರ್ಣಮಯಮಾದ ಕಟಕಮಕುಟಾದಿ ಕಾರ್ಯಕ್ಕೆ ಸ್ವರ್ಣಮುಪಾದಾನಕಾರಣಂ ಸ್ವರ್ಣಕಾರಂ ನಿಮಿತ್ತಕಾರಣಂ ಸುತ್ತಿಗೆ ಅಡಿಗಲ್ಲಿರ್ಕುಳ ಬೆಂಕಿ ನೀರ್ಮೊದಲಾದುವು ಸಹಕಾರಿಕಾರಣಂ (ಚಿಕಬಿ. ೨೨-೧). [ಸಂ.]

**ಸಹಕಾರಿಸಂಘ** (ನಾ). = ಸಹಕಾರಸಂಘ : ಸಹಕಾರಿಸಂಘಗಳು ಈಚಿನ ದಿನಗಳಲ್ಲಿ ಹೆಚ್ಚು ಜನಪ್ರಿಯವಾಗುತ್ತಿವೆ (ರೂಢಿ). [ಸಂ.]

**ಸಹಕೃತಿ** (ನಾ). ಒಟ್ಟಿಗೆ ಕೆಲಸಮಾಡುವಿಕೆ ; ಸಹಕಾರ : ಕಣ್ಣಿರದೆ ರವಿಯೆನ್ಸು ರವಿಯಿರದೆ ಕಣ್ಣೇನು? ಅನ್ಯೋನ್ಯಸಹಕೃತಿಯಿನುಭಯಸಾರ್ಥಕತೆ (ಮಂಕುಕ. ೪೮೯). [ಸಂ.]

**ಸಹಗಮನ** (ನಾ). ೧. ಜೊತೆಯಲ್ಲಿ ಹೋಗುವುದು ; ಸಂಗಡ ತೆರಳುವುದು. ೨. ಪತಿಯ ಶವದ ಜೊತೆಯಲ್ಲಿಯೇ ಪತ್ನಿಯು ಸ್ವಇಚ್ಛೆಯಿಂದ ಚಿತೆಯೇರುವುದು ; ಸತಿಹೋಗುವುದು : ನಿಜಪತಿಯ ಸಹಗಮನದಲಿ ತನುವ ಮಾಱಿದಬಲೆಯರುಗಳ ದೆಸೆಯಿಂದಾಱುಮಡಿ ಸ್ವರ್ಗಾದಿಭೋಗವ ಸೂಱೆಗೊಂಬುದು ತಪ್ಪದು (ಕುವ್ಯಾಉ. ೩-೧೧೧); ತನಗೆ ಸಹಗಮನಕ್ಕೆ ನೇಮುವ ದನುಜನಗ್ಗದ ರಾಣಿಯಳಲುತ ವನಜನಾಭನ ಬೇಡುತಿರಲು (ಕಾಶಿರಾ. ೪೨-೩೨). ೩. ಸಂಕಲ್ಪದಂತೆ ವೀರನು ಪ್ರಭುವಿನೊಂದಿಗೆ ಪ್ರಾಣವನ್ನು ಒಪ್ಪಿಸುವಿಕೆ, — ಆತ್ಮಾರ್ಪಣೆ ಮಾಡಿಕೊಳ್ಳುವಿಕೆ : ಪೊಡೆವ ವೀರವಱೆಯ ಸಿಡಿವ ಬಿರುದಿನ ಕಾಳೆಯ ಸುತ್ತಿಱಿದ ಮುತ್ತಿನ ತಳೆಯ ತಲೆಗೆ ಮುಂದಲೆಯಾಗಿ ಲೆಂಕರ್ಕೂಡುವ ಸಿಡಿದಲೆಯ ಸಹಗಮನ ಸಮುತ್ಸುಕತೆಯಿಂ ಕೈವಿಡಿಸೆ (ಅನಂಪು. ೧೧-೬೪ ವ).

**ಸಹಗಮನ ಮಾಡು** = ಪತಿಯ ಶವದ ಜೊತೆಯಲ್ಲಿ ಚಿತೆಯನ್ನೇರು; ಸತಿಹೋಗು : ಮಾದ್ರಿಯು ಅವನೊಡನೆ ಸಹಗಮನ ಮಾಡಿದಳು (ವಚಭಾ. ೧೫); ಪತಿಯ ಸಾವನ್ನು ಕೇಳಿ ಹಲವರು ಸ್ತ್ರೀಯರು 'ಸಹಗಮನ' ಮಾಡುತ್ತಿದ್ದರು (ಕಶಾಅ. ೨೫೦). [ಸಂ.]

**ಸಹಗಮಿಸು** (ಕ್ರಿ). ಸತಿಹೋಗು ; ಸಹಗಮನ ಮಾಡು : ನಾನು ಸಹಗಮಿಸುವವಳು. ನನಗೆ ಇನ್ನು ಇಲ್ಲಿ ಏನು ಕೆಲಸ? (ಶಾಂತಲಾ. ೧೮); ಈ ಬಾಲಕನ ತಾಯಿ ಸಹಗಮಿಸಿದಳು (ಚಂದ್ರಸ. ೧೬). [ಸಹಗಮನ + -ಇಸು₃]

**ಸಹಚರ** (ಗು). ೧. ಒಡನಾಡಿಯಾದ ; ಸಂಗಾತಿಯಾದ : ಸಹಚರಬಾಳಕಜಾಳಕಮಹೀನನಾಗಿರ್ದ ಹೀನನಂ ಕಂಡು (ವರ್ಧಪು. ೧೪-೬೯). (ನಾ). ೨. ಜೊತೆಯಲ್ಲಿ ಹೋಗುವುದು. ೩. ಒಡನಾಡಿ ; ಸಂಗಾತಿ. ೪. ಗಂಡ ; ಪತಿ. ೫. ಅನುಚರ ; ಸೇವಕ : ಸಹಚರರೆಲ್ಲರುಂ ನಿಜಪದಾಂಬುರುಹದ್ವಯಮಂ ನಿರಂತರಂ ಮಹಿಯೊಳ ಲಂಪಿನಿಂದಱಸಲೆಣ್ದೆಸೆಗೆಯ್ದಿದೊಡೆ (ದಶಕು. ೯-೨). [ಸಂ.]

**ಸಹಚರಿ** (ನಾ). ೧. ಒಡನಾಡಿಯಾದುದು ; ಸಂಗಾತಿಯಾದುದು : ಭಾವಗೀತೆ ಮೊದಲು ಜನ್ಮತಳೆದಾಗ ಸಂಗೀತದ ಸಹಚರಿಯಾಗಿಯೇ ಮೂಡಿತು (ಭಾವಗೀ. ೧೮). ೨. ಒಡನಾಡಿಯಾದ ಹೆಂಗಸು; ಗೆಳತಿ: ಅಂತಾ ಕಾಂತೆ ಪರಿಮಿತ ಪರಿವಾರವನಿತಾಪರೀತೆ ಸೇವಾಚತುರಸಹಚರೀಸುಭಾಷಿತಮನಾಲಿಸುತ್ತುಮಿರ್ಪಿನಂ (ಮಲ್ಲಿಪು. ೩-೧೦೧). ೩. ಹೆಂಡತಿ ; ಪತ್ನಿ : "ದಾರಾಃ . . . ಸಹಚರೀ . . . ಗೃಹಿಣೀ, ಗೃಹಾಃ — ಈ ೧೩ ಹೆಂಡತಿ" (ಹಲಾಯು. ೮೧-೩೪೦). ೪. ಸೇವಕಿ ; ದಾಸಿ : ಅವನು ಅವಳನ್ನು ತನ್ನ ರಾಣಿಯ ಸಹಚರಿಯನ್ನಾಗಿ ಗೊತ್ತುಮಾಡಿದನು (ಬಂಕಿಪು. ೧೬೧). ೫. (ಹಳದಿಬಣ್ಣದ ಹೂವುಗಳನ್ನು ಬಿಡುವ) ಒಂದು ಬಗೆಯ ಸಸ್ಯ; ಮುಳ್ಳುಗೋರಂಟೆ : "ಪೀತಾ, ಸಹಚರೀ — ಈ ೨ ಹೊಂಬಣ್ಣದ ಗೋರಂಟೆ" (ಹಲಾಯು. ೩೪-೫೨); ಸಹಚರಿ (ಮುಳ್ಳುಗೊರಟೆ), ಸಬ್ಬಸಿಗೆ, ಕಳ್ಳನ ಗಿಡ ಇವನ್ನು ಹಸಿಯದಾಗಿರುವಾಗಲೇ ಉಪಯೋಗಿಸಬೇಕು (ಸಕವ್ಯ. XII, ಪ್ರಸ್ತಾವನೆ). [ಸಂ. ಸಹಚರೀ]

**ಸಹಚಾರಿ** (ನಾ). ೧. ಸಂಗಡ ಚಲಿಸುವಂಥದು; ಸಹಚರವಾದುದು: ಸೌರವ್ಯೂಹಕ್ಕೆ ಸೇರಿ, ತನ್ನ ಸಹಚಾರಿಗಳಾದ ಬುಧ, ಶುಕ್ರ . . . ನೆಪ್ಚ್ಯೂನುಗಳಂತೆ, ಭೂಮಿಯೂ ಒಂದು ಗ್ರಹ (ಜ್ಯೋತಿರ್ವಿ. ೯). ೨. ಗಂಡ ; ಪತಿ. [ಸಂ. ಸಹಚಾರಿನ್]

**ಸಹಛದ್ಮ** (ನಾ). ಕಪಟ ; ಮೋಸ ; ವಂಚನೆ : "ಕಪಟಂ, ನಿಭಂ . . . ಸಹಛದ್ಮಮುಂ ಮಿಷಂ ಕೂಟಮುಂ ವ್ಯಪದೇಶಮನೆ ವ್ಯಾಜಮಕ್ಕುಂ" (ಮಂಗರಾ. ೧೨೮-೧೦). [ಸಂ. ಸಹಛದ್ಮನ್]

**ಸಹಜ₁** (ಗು). ೧. ನೈಜವಾದ ; ಸ್ವಭಾವಸಿದ್ಧವಾದ : ಚೂತನೊಲ್ದು ಪೊರೆಗುಂ ಗಿಳಿಯಂ . . . ಸಹಜವಕ್ರವಚಸ್ವಿಯನನ್ಯಪುಷ್ಟನಂ (ಮಲ್ಲಿಪು. ೬-೨೫); ಸ[ಪಾಠಾಂ. ಸಾ]ಹಜ ಸಜ್ಜನಿಕೆ ತಪ್ಪಿದರೆ ಕೂಡಲಸಂಗಯ್ಯ ಮೂಗ ಹಲುದೋಱಿ ಕೊಯ್ವ (ಬಸವ. ೬೬೩); ಶತ್ರುವೆಂಬವನು ವಿವರಿಸೆ ಸಹಜ ಕೃತ್ರಿಮ ಭೇದಗಳಿಂದ ದ್ವಿವಿಧಮುಂಟು

(ಚಂಪ್ರಸಾಂ. ೨೦-೮೨). ೨. ಹುಟ್ಟಿನಿಂದ ಬಂದ; ಜೊತೆಯಲ್ಲಿ ಹುಟ್ಟಿದ: ಸಹಜಮಣಿಭೂಷಣಂಗಳ ಬಹಳೋದ್ಯದ್ದೀಪ್ತಿಯಿಂದೆ ಚಂದ್ರಾದಿತ್ಯಗ್ರಹತಾರಾನಕ್ಷತ್ರ ದಿನಹರ್ನಿಶಂ ಬೆಳಗುವಮರಗಿರಿಯನೆ ಪೋಲ್ತಂ (ಆದಿಪು. ೬-೬೮); ಸಹಜಮ[ನ] ವಿಭೂಷಾನೀಕದಿವ್ಯಾಂಬರಸ್ರಕ್ಸಹಿತಮಭಿನವೋದ್ಯದ್ಯೌವನಶ್ರೀವಿಳಾಸಂ (ವರ್ಧಮಾ. ೧೦-೮). ೩. ಸರಿಯಾದ ; ಯಥಾವತ್ತಾದ. (ನಾ). ೪. ಸ್ವಾಭಾವಿಕವಾದುದು; ನೈಜವಾದುದು : ಸಹಜದ ಚೆಲ್ವಿನೊಳ್ . . . ಮನೋಜನುಮಂ ಗೆಲೆವಂದಂ (ಪಂಪಭಾ. ೧-೪); ಕಪಿಗೆ ಚಪಲತೆ ಸಹಜಂ (ಗದಾಯು. ೩-೪೧); ಜ್ಞಾನದ ಗಮನದ ಸಹಜದ ಉದಯದಲ್ಲಿ ಏನೆಂದಱಿಯೆನು (ಬಸವ. ೮೫೦). ೫. (ಸ್ವಾಭಾವಿಕವಾದ) ಪ್ರವೃತ್ತಿ ; ಮನೋಧರ್ಮ ; ಸ್ವಭಾವ : "ಧರ್ಮಮಾತ್ಮಸ್ವಭಾವಂ ಸಹಜಮೆನಿಸಿಕ್ಕು" (ಮಂಗರಾ. ೧೩೭-೪೨); ಎನಗೆ ಸತ್ಯವೂ ಇಲ್ಲ ಅಸತ್ಯವೂ ಇಲ್ಲ ಆವ ಸಹಜವೂ ಇಲ್ಲದ ಲಿಂಗೈಕ್ಯ ಕಾಣಾ (ಬಸವ. ೯೩೪); ಸಹಜಂ ಸತ್ಯವುದಾರಮನ್ವಯಗುಣಂ ಸ್ವಾಭಾವಿಕಂ ಸದ್ಗುಣಗ್ರಹಣಂ (ಎೞ. XVIII, ೨೦೯-೨೦; 1162). ೬. ಒಡಹುಟ್ಟಿದವನು ; ಸೋದರ : "ಸಮಾನೋದರ್ಯಃ, ಸೋದರ್ಯಃ, ಸಗರ್ಭ್ಯಃ, ಸಹಜಃ – ೪ ವಂದು ತಾಯಿ ಮಕ್ಕಳ ಹೆಸರು, ವಡಹುಟ್ಟಿದವನು" (ಸಿದ್ಧಾಂತಿ. ೧೭೬). ೭. ಸರಳಸ್ವಭಾವದವನು; ನಿಷ್ಕಪಟಿಯಾದವನು : ಸಹಜನಲ್ಲಯ್ಯಾ ಆನು ಸಮ್ಯಕ್ಕನಲ್ಲಯ್ಯಾ (ಬಸವ. ೩೮೧); ಸಹಜನೆಂದು ಹಿರಿಯನೆಂದು ಪರಮನೆಂದು ದೇವನೆಂದು ಕಹಳೆಕೊಂಬು ಇಡಿಸಿಕೊಂಬೆ (ಕವಿಸೋ. ೩೬-೧). ೮. ನಿಜ; ದಿಟ; ಸತ್ಯ: ಸಹಜವ ನುಡಿದರೆ ಸೇರುವರಿಲ್ಲ ಕಾಣಿರಣ್ಣ ಅಸಹಜಕ್ಕಲ್ಲದೆ ಲೋಕ ಭಜಿಸದು (ಅವಚಂ. ೨೧೩-೯೬೩); ಸಹಜವೀ ನುಡಿ ಕರ್ಣನಾಡಿದನಹುದು ಪಾಂಡವರೆಂಬವರು ಕಡುಸಹಸಿಗಳು (ಕುವ್ಯಾಅ. ೮-೧೧). ೯. [ದ್ವೈತ] ಭಗವಂತನ ಹತ್ತು ಬಗೆಯ ವಿಭೂತಿರೂಪಗಳಲ್ಲಿ ಒಂದು; ಬ್ರಹ್ಮ ಮುಂತಾದ ದೇವತೆಗಳಲ್ಲಿ ವ್ಯಾಪಿಸಿಕೊಂಡಿರುವ ಭಗವದ್ರೂಪ: ನೀತ ಸಾಧಾರಣ ವಿಶೇಷ ಸಜಾತಿ ನೈಜಾಹಿತವು ಸಹಜ ವಿಜಾತಿ ಖಂಡಾಖಂಡ ಬಗೆಗಳನಱಿತು ಬುಧರಿಂದ (ಹಸಾರ. ೫-೧). 'ನೀತವಿಭೂತಿ' ಪರಾ. ೧೦. [ವ್ಯಾಕ] ಸ್ವಾಭಾವಿಕವಾದ ಕ್ರಿಯಾಪದದ ಮೂಲರೂಪ ; ಸಹಜಧಾತು : ಧಾತುಗಳಲ್ಲಿ ಸಹಜ, ಪ್ರತ್ಯಯಾಂತ (ವ್ಯುತ್ಪನ್ನ), ಸಂಯುಕ್ತ (ಸಮಗ್ರ) ಎಂದು ಮೂರು ವಿಧಗಳಿವೆ. ಉದಾ:- ಸಹಜ – ಮಿಾ, ತಿನ್, ನುಡಿ, ಬೆಳಗು ಇತ್ಯಾದಿ (ಕೈಪಿಡಿ. ೪೨). ೧೧. [ನಾಟ್ಯ] ಹುಬ್ಬಿನ ಏಳುಬಗೆಯ ವಿನ್ಯಾಸಗಳಲ್ಲಿ ಒಂದು; ಸಹಜವಾದ ಭಾವವನ್ನು ತೋರ್ಪಡಿಸುವಾಗ ಹುಬ್ಬನ್ನು ಸ್ವಾಭಾವಿಕರೀತಿಯಲ್ಲಿರಿಸುವುದು: ಸಹಜ . . . ಚತುರ – ಈ ಏಳು ಹುಬ್ಬಿನ ಭೇದಂಗಳ್, ಕುಟಿಲಮದೆಳ್ಳನಿತುಂ ಸಂಘಟಿಸದೆ ನಿಜದಿಂದಮಿರ್ದೊಡದುವೇ ಸಾಜಂ (ಲಾಸ್ಯರಂ. ೩-೪೩ ವ). ೧೨. [ಕಾವ್ಯಮಿಾ] ನೈಸರ್ಗಿಕವಾದ ಪ್ರತಿಭೆ : ಶಾಸ್ತ್ರದ ಬಲದಿಂದಳಿಪಿಂ ಪೇೞ್ವೊಡಮದು ಕೋಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ (ಧರ್ಮಾಮೃ. ೧-೪೯); ಸಹಜ, ಔಪಾಧಿಕ ಎಂದು ಪ್ರತಿಭೆಯನ್ನು ಎರಡು ಬಗೆಯಾಗಿ ವಿಂಗಡಿಸತಕ್ಕವರೂ ಉಂಟು (ಭಾರಮಿಾ. ೧೭೬). ೧೩. [ಯೋಗ] ಸಹಜಾವಸ್ಥೆ; ಸಮಾಧಿ: ಈ ರಾಜಯೋಗಕ್ಕೆ ಉನ್ಮನಿ, ಮನೋನ್ಮನಿ, ಸಹಜ, ಅಮನಸ್ಕ ಮುಂತಾದ ಪರ್ಯಾಯನಾಮಗಳಿಂದೂ ಹೇಳಲಾಗಿದೆ (ಕರ್ನಾಸಂ. ೧೪೨).

**ಸಹಜಕೀರ್ತಿಧ್ವಜ** = ಒಂದು ಬಿರುದು : ಸಹಜಕೀರ್ತಿಧ್ವಜ ಸಂಗ್ರಾಮವಿಜಯ ಧ್ವಜ (ಎಕ. II (R), ೧೭೬-೨೮; 1123). **ಸಹಜಮಕರಧ್ವಜ** = ನಿಜವಾದ ಮನ್ಮಥ ನಂತಿರುವವನು ; ಚೆಲುವ ; ಒಂದು ಬಿರುದು : ಸುವರ್ಣಗರುಡಧ್ವಜಂ ಸಹಜಮಕರಧ್ವಜಂ ನಾಮಾದಿಸಮಸ್ತಪ್ರಸಸ್ತಿಸಹಿತಂ (ಸೌಇಇ. XX, ೬೨-೫; 1098?); ಸುವರ್ಣಗರುಡಧ್ವಜಂ ಸಹಜಮಕರಧ್ವಜಂ . . . ಬಪ್ಪನ ಸಿಂಗಂ (ಕೊಲ್ಹಾಶಾ. ೨೩-೧೨; ?). **ಸಹಜಮನೋಜ** = ಸಹಜಮಕರಧ್ವಜ : ಮನೋಜನುಮಂ ಗೆಲೆವಂದನಾಗಳುಂ ಸಹಜಮನೋಜನೋಜನೆಮಗೀಗೆ ವಿಚಿತ್ರರತೋತ್ಸವಂಗಳಂ (ಪಂಪಭಾ. ೧-೪); ಕ್ಷತ್ರಿಯಪವಿತ್ರಂ ಮತ್ತಗಜಾಂಗರಾಜಂ ಸಹಜಮನೋಜಂ (ಎಕ. VII, ಶಿಕಾರಿ. ೨೯೭-೧೫; 1080). **ಸಹಜಮುರಾರಿ** = ಒಂದು ಬಿರುದು: ಅರಿಘಟಕೇಸರಿ ಸಹಜಮುರಾರಿ ಚಾಳುಕ್ಯರಾಜ್ಯಸಮುದ್ಧರಣಂ (ಕಇಅ. ೧-೧-೩; 1092).

**ಸಹಜವಿಳಾಸ** = ನೈಸರ್ಗಿಕವಾಗಿ ಲಾವಣ್ಯವನ್ನು ಹೊಂದಿದವನು ; ಚೆಲುವ ; ಒಂದು ಬಿರುದು: ನಿನ್ನ ಪದಪಂಕರುಹಕ್ಕೊಡನೆಱಗಿದಮರಸಮಿತಿಯ ಬೆಡಂಗುವೆತ್ತಳಕಪಂಕ್ತಿ ಸಹಜವಿಳಾಸಾ (ಜಿನಾಲ. ೩೩-೩೩). **ಸಹಜಸರಸ್ವತಿ** = ಸಾಕ್ಷಾತ್‌ಸರಸ್ವತಿ ; ಬುದ್ಧಿವಂತೆ ; ಒಂದು ಬಿರುದು : ಸಹಜಸರಸ್ವತಿ . . . ಜಕ್ಕಿಸುನ್ದರಿಯಮ್ಮಾಡಿಸಿದ ಬಸದಿ (ಎಕ. XI, ಚಿತ್ರದು. ೭೪-೧೬; 968). **ಸಹಜಾಸಹಜೀ** = ತಾನೇತಾನಾಗಿ ; ಸಲೀಸಾಗಿ ; ಸುಲಭವಾಗಿ : ಆ ರಂಗಪ್ಪನೂ ಏನು ಸಹಜಾಸಹಜೀ ಎಲ್ಲ ಹೇಳಲಿಲ್ಲ (ಮೂರುದಾ. ೩೦೯). [ಸಂ.]

**ಸಹಜ₂** (ಅ). (ಉಕ) ವಿಶೇಷಕಾರಣವಿಲ್ಲದೆ ; ಸುಮ್ಮನೆ : ಅಹುದು, ನಿಜವೇ. ಸಹಜ ಬಂದಿದ್ದ. ಆ ರಾತ್ರಿ ಇದ್ದು ಹೋದ (ಪ್ರತಿಸ. ೧೦). [< ಸಹಜ₁]

**ಸಹಜಕವಿ** (ನಾ). ನೈಸರ್ಗಿಕವಾಗಿಯೇ ಕವಿತಾಶಕ್ತಿಯನ್ನು ಹೊಂದಿದವನು; ಸ್ವಭಾವದಿಂದಲೇ ಕವಿಯಾದವನು : ಸಹಜಕವಿ ನಾಗವರ್ಮನ ಸಹಜಂ ಕವಿ ಗಮಕಿ ವಾದಿ ವಾಗ್ಮಿತ್ವಗುಣಂ ಸಹಜಂ ತನಗದು ಪರಮ[ಂ] ಸಹಜನತಾಪರ್ಯನೆನಿಸಿದಂ ನಾಕಾರ್ಯಂ (ವರ್ಧಮಾ. ೧-೨೪); ಸಹಜಕವಿ ಚತುರಕವಿ . . . ನುತಮಹಾಕವೀಂದ್ರಂ ಸರಸ್ವತೀಮುಖಮುಕುರಂ (ಸುಕುಮಾ. ೧-೫೨). [ಸಂ.]

**ಸಹಜಗುಣ** (ನಾ). ಸ್ವಾಭಾವಿಕವಾದ ಪ್ರವೃತ್ತಿ , – ಮನೋಧರ್ಮ : ಲೌಕಿಕರ ಕಂಡು ಆಡುವೆ ಹಾಡುವೆ ತಾರ್ಕಿಕರ ಕಂಡು ಆಡುವೆ ಹಾಡುವೆ ಸಹಜಗುಣ ವೆನ್ನಲ್ಲಿಲ್ಲಯ್ಯಾ (ಬಸವ. ೨೮೬). [ಸಂ.]

**ಸಹಜಜ್ಞಾನ** (ನಾ). ಅಂತರ್ಗತವಾದ ಜ್ಞಾನ ; ಅಂತರ್ದೃಷ್ಟಿ : ಸಹಜಜ್ಞಾನ ಮನೋಹರಂ ಚರಮದೇಹಂ ಮೋಕ್ಷಲಕ್ಷ್ಮೀಕೃತಸ್ಪೃಹಂ (ಚಂದ್ರಪು. ೧೩-೨೬). [ಸಂ.]

**ಸಹಜತೆ** (ನಾ). ಸ್ವಾಭಾವಿಕವಾದುದು; ನೈಸರ್ಗಿಕವಾದುದು: ಸಹಜತೆ ನಿರಕ್ಷರತೆ, ವಿದ್ಯೆ ತಾಂ ಕೃತಕವಲ (ಮಂಕುಕ. ೨೧೪). [ಸಂ. ಸಹಜತಾ]

**ಸಹಜದೀಕ್ಷೆ** (ನಾ). [ವೀಶೈ] ಸ್ವಭಾವಸಿದ್ಧವಾದ ಸಂಸ್ಕಾರ : ಈ ಪ್ರಕಾರದುಪದೇಶ ಕೂಡಲಚನ್ನಸಂಗಯ್ಯನಲ್ಲಿ ಸಹಜದೀಕ್ಷೆ (ಚನ್ನವ. ಕ. ೪೩೦-೯೧೧). [ಸಂ.ಸಹಜದೀಕ್ಷಾ]

**ಸಹಜಧಾತು** (ನಾ). [ವ್ಯಾಕ] ಸ್ವಾಭಾವಿಕವಾದ ಕ್ರಿಯಾಪದದ ಮೂಲರೂಪ: ಸಹಜಧಾತುವುಂ ಭಾವಮಕ್ಕುಂ (ಶಮದ. ೨೧೩ ವೃತ್ತಿ); ಸಹಜಧಾತುಗಳಿಗೆ ಪ್ರೇರಣಾರ್ಥದಲ್ಲಿ ಇಸು ಮೊದಲಾದ ಪ್ರತ್ಯಯಗಳು ಸೇರಿ ಪ್ರತ್ಯಯಾಂತ ಧಾತುಗಳಾಗುತ್ತವೆ (ಕೈಪಿಡಿ. ೪೨). [ಸಂ.]

**ಸಹಜನ್ಮ** (ನಾ). ಒಡಹುಟ್ಟಿದವನು ; ಸಹೋದರ : ಸಹಜನ್ಮನುತ್ತರಂಗೇಳ್ದು ಹಸ್ತಿನಾಪಾದಯುದ್ಧಮದು ಬಳವದ್ವಿಗ್ರಹಮೆಂಬವೊಲಸಮರಣಾಗ್ರಹಣಕೆ ಬೆಱಗಾದ ತಾತನಂ ಬಗೆಗೊಳಿ ಲ್ (ಅನಂಪು. ೧೩-೫೪). [ಸಂ. ಸಹಜನ್ಮನ್]

**ಸಹಜಪ್ರಜ್ಞ** (ನಾ). ಸ್ವಾಭಾವಿಕವಾಗಿಯೇ ಜ್ಞಾನಿಯಾದವನು ; ಸಹಜ ಪಂಡಿತ : ಸಹಜಪ್ರಜ್ಞಂ . . . ಉದ್ಯದ್ಗುಣರತ್ನಸಂಗ್ರಹನೆನಿಪ್ಪಂಗಾ ಮಹಾಸಂಧಿವಿಗ್ರಹಿಗಾಳೋಚಿಸಿದಂದದಿಂದೆಸಗು ನೀನೆಂದಂ ಧರಾಧೀಶ್ವರಂ (ಪಾರ್ಶ್ವಪು. ೨-೪೭). [ಸಂ.]

**ಸಹಜಪ್ರೀತಿ** (ನಾ). ನೈಸರ್ಗಿಕವಾದ ಒಲುಮೆ : ಸಹಜಪ್ರೀತಿ ಮನೋಪರಾಧರಮಣಿಪ್ರೋಚ್ಚುಂಬನಂ . . . ಮುಹುರ್ಮುಹುರಾಲಿಂಗನಮಂತದೇಂ ಮೆಱೆದುದೋ ಸಂಭೋಗಕೋಳಾಹಳಂ (ದಶಕು. ೧೦-೮೧). [ಸಂ.]

**ಸಹಜಮಿತ್ರ** (ನಾ). (ಅಕ್ಕತಂಗಿಯರ ಮಕ್ಕಳು, ಸೋದರತ್ತೆಯ ಮಕ್ಕಳು ಮುಂತಾಗಿ ನಂಟುತನದ ಮೂಲಕ ಉಂಟಾದ) ಸ್ವಾಭಾವಿಕವಾದ ಮೈತ್ರಿಯನ್ನು ತಳೆದವನು : ಕ್ಷಿತಿಯೊಳು ಹಿರಿಯಮ್ಮ ಸೋದರತ್ತೆಯ ಸುತರು ಸಹಜಮಿತ್ರರಹರು (ಚಂಪ್ರಸಾಂ. ೨೦-೮೪). [ಸಂ.]

**ಸಹಜರೋಗ** (ನಾ). ನೈಸರ್ಗಿಕವಾಗಿ ಉಂಟಾಗುವ ಬಾಧೆ : ಹಸಿವು, ತೃಷೆ, ಜರೆ ಮೊದಲಾದ ರೋಗಗಳು ಸಹಜರೋಗಗಳೆನಿಸಿಕೊಂಬುವುವು (ಸಕವೈ. ೨೪). [ಸಂ.]

**ಸಹಜವಿಭೂಷಣ** (ನಾ). ಹುಟ್ಟಿನಿಂದ ಬಂದಿರುವ ಆಭರಣ ; ನೈಸರ್ಗಿಕವಾದ ಅಲಂಕಾರ: ಸಹಜವಿಭೂಷಣದಂತಿರೆ ಮಹನೀಯಕ್ಷುಣ್ಣಲಕ್ಷಣಂ ಮಿಸುಗೆ ಶುಭಾವಹನೆನಿಸಿದನಂ ಕಂಡಂ ಮಹಾತ್ಮನಂ ಸುತನನಟ್ಟಿಱಿಂದಾ ಮಹಿಪಂ (ಕಾದಂಪೂ. ೪೧೬); ಸಹಜವಿಭೂಷಣಾಂಬರವಿಲೇಪನಕೇಸರದಾಮಗಂಧಸಸ್ಪೃಹಮಧುಪಾಳಿ ಮಂಡಳಿಸಿ

ಸೀಗುರಿಯಂತಿರೆ ಚಾಮರಂಗಳಿಂ ಬಹುವಿಧಮಿಕ್ಕುವರ್ ದಿವಿಜನೋಲಗದೊಳ್ . . . ವಾರನಾರಿಯರ್ (ಅನಂಪು. ೪-೫೧). [ಸಂ.]

**ಸಹಜವೈರ** (ನಾ). ಹುಟ್ಟಿನಿಂದ ಬಂದ ವೈರ ; ನೈಸರ್ಗಿಕವಾದ ಶತ್ರುತ್ವ : ಹಾವು ಮತ್ತು ಮುಂಗುಸಿಗೆ ಸಹಜವೈರವಿರುತ್ತದೆ (ರೂಢಿ). [ಸಂ.]

**ಸಹಜವ್ಯಂಜನ** (ನಾ). [ವ್ಯಾಕ] ಸ್ವಾಭಾವಿಕವಾದ ವ್ಯಂಜನಯುಕ್ತರೂಪ: ಮೇಣೆಂಬುದರಿಂ ಸಹಜವ್ಯಂಜನಮಾಗಿಯೆ ಕೆಲವಿರ್ಪುವು – ವಾಕ್, ಗೀರ್ (ಶಮದ. ೮೭ ಪ್ರಯೋ). [ಸಂ.]

**ಸಹಜಶತ್ರು** (ನಾ). ಹುಟ್ಟಿನಿಂದ ಬೆಳೆಸಿಕೊಂಡು ಬಂದ ವೈರವುಳ್ಳವನು; ನೈಸರ್ಗಿಕವಾಗಿ ಶತ್ರುತ್ವವನ್ನು ಹೊಂದಿದವನು : ಇಳೆಯೊಳಗನುಜರು ದಾಯಾದ್ಯರ ಮಕ್ಕಳು ಸಲೆ ಸಹಜಶತ್ರುಗಳು (ಚಂಪ್ರಸಾಂ. ೨೦-೮೩). [ಸಂ.]

**ಸಹಜಸಂಗಿ** (ನಾ). ಸ್ವಾಭಾವಿಕವಾದ ಒಡನಾಟದವನು : ರೂಹಿಸುವಲ್ಲಿ ರೂಪಾಧಿಕ ನೋಡುವಲ್ಲಿ ನೋಟ ಘನ ಇಂತಪ್ಪ ಸಹಜಸಂಗಿಯ ನಿಲವಿನ ಪರಿ ಉದಕದೊಳಗಣ ಬಿಂದು ಉದಯರತ್ನದಂತೆ (ಬಸವ. ೯೧೭). [ಸಂ. ಸಹಜಸಂಗಿನ್]

**ಸಹಜಸಮಾಧಿ** (ನಾ). [ಯೋಗ] ಸಮಾಧಿಗಳಲ್ಲಿ ಒಂದು ಬಗೆ ; ಸಹಜವಾದ ಆನಂದವನ್ನು ಹೊಂದಿದ ಸ್ಥಿತಿ: ನಾರುಬೇರಿನ ಕುಟಿಲ ಕಪಟದ ಯೋಗವಲ್ಲಿದು ನಿಲ್ಲಿ ಭೋ . . . ಜೀವಸಮಾಧಿಯೆಂಬುದಲ್ಲ ನಿಜ ಸಹಜಸಮಾಧಿ ಗುಹೇಶ್ವರ (ಅವಚಂ. ೧೩೯-೭೪೦). [ಸಂ.]

**ಸಹಜಸ್ವರ** (ನಾ). [ವ್ಯಾಕ] ಸ್ವಾಭಾವಿಕವಾದ ಸ್ವರ ; ಶುದ್ಧಸ್ವರ : ಐ, ಔ ಎಂಬುವು ಕನ್ನಡದ ಸಹಜಸ್ವರಗಳಲ್ಲ (ಕೈಪಿಡಿ. ೫). [ಸಂ.]

**ಸಹಜಾತ** (ಗು). ೧. ಜೊತೆಯಲ್ಲಿ ಹುಟ್ಟಿದ ; ಆಜನ್ಮವಾದ : ಸಹಜಾತಾಂಬರ ದಿವ್ಯಭೂಷಣದಲನ್ಮಂದಾರಮಾಲಾವಿಲಾಸಿ (ಆದಿಪು. ೩-೪೨); ಸಹಜಾತಮಣಿ ವಿಭೂಷಣ ಬಹುವಿಧನವಕುಸುಮದಾಮದಿವ್ಯಾಂಬರಸನ್ನಿಹಿಮಂ (ಸುಕುಮಾ. ೧೨-೪೪). ೨. ಸ್ವಾಭಾವಿಕವಾದ ; ನೈಸರ್ಗಿಕವಾದ: ಸಹಜಾತ ತ್ರಿಜ್ಞಾನದ ಮಹಿಮೆಯಿನಾ ನಿಖಿಳವಿದ್ಯೆಗಳ್ ತನ್ನೊಳ್ ಸನ್ನಿಹಿತಮೆನಿಸಿದುವು (ನೇಮಿಪು. ೯-೫). (ನಾ). ೩. ಹುಟ್ಟಿನಿಂದ ಬಂದುದು ; ಜೊತೆಯಲ್ಲಿ ಹುಟ್ಟಿದುದು ; ಆಜನ್ಮವಾದುದು : ಮಣಿಮಯಮಂ ವಿಭೂಷಣಸಮುಚ್ಚಯಮಂ ಸಹಜಾತಮಂ ವಪುಃಕಿಣಕರಮಂ . . . ಪೊತ್ತೆಂ (ಚಂದ್ರಪು. ೪-೮೨). ೪. ಸ್ವಾಭಾವಿಕವಾದುದು : ಮಳಯಜಗಂಧಮೆಂತು ಹರಿಪೌರುಷಮೆಂತು . . . ನಿಜಂ ತನಗಂತು ಸದ್ಗುಣಾವಳಿ ಸಹಜಾತಮಾತನೊರೆಗಂ ದೊರೆಗಂ ಬರಲಾರ್ ನೃಪೋತ್ತಮರ್ (ಶಾಂತಿಪು. ೭-೧೧೯); ಸಹಜಾತಂ ರೂಪಮೊಂದೆಂಬಿನಿತೆ ಬಗೆವೊಡರ್ಹತ್ಪದಾಂಭೋಜಪೂಜಾಸ್ಪೃಹೆಯುಂ . . . ಭೂವಿಹಿತಪ್ರಖ್ಯಾತಿಯುಂ ನಿಟ್ಟಿಸೆ ನಿಜಮೆನೆ ವಜ್ರಾಯುಧಂ ರಾಜಿಸಿರ್ದಂ (ಶಾಂತೀಶ್ವ. ೯-೧೫೦). ೫. ಒಡಹುಟ್ಟಿದವನು; ಸಹೋದರ : "ಸಹಜಾತಂ ಸಹೋದರಂ ಸೋದರಂ ಭ್ರಾತೃವೆನಲೊಡಹುಟ್ಟಿದಂ" (ಮಂಗರಾ. ೯೨-೧೧); ಜನಪತಿಸೇವೆಯಿಂ . . . ನಿಜಸಹಜಾತನಿನುರ್ವರೆಯಿನದಕ್ಕುಂ ಕನಕಂ ಕನಕಾಭಿಧಾನನಾರೋಹಿಣಿಯೊಳ್ (ಜಾತತಿ. ೯-೨೦); ತಾತ ಕೇಳ್ಸಹಜಾತರಾದ ನಿಮ್ಮೈವರೊಳ್ ತಾ ತಳ್ವಿರದೆ ವಿರೋಧಿಸಿದನೆಮ್ಮಯ್ಯನಂತಾತನಪರಾಧಮಂ ಪರಿಹರಿಸದಿರ್ದೊಡಾನಿದ್ದು ಫಲವೇನು (ಜೈಮಿಭಾ. ೨-೩೯). [ಸಂ.]

**ಸಹಜಾತೆ** (ನಾ). ಒಡಹುಟ್ಟಿದವಳು ; ಸಹೋದರಿ : "ಪೆಣ್ಣೊಸಾದಂದು ಸ್ವಸೃ ಸಹಜೆ ಸಹೋದರಿ ಸಹಜಾತೆ ಭಗಿನಿಯೆನೆ ಪೆಸ[ರಕ್ಕುಂ]" (ವಸ್ತುಕೋ. ೫೫-೧೮). [ಸಂ. ಸಹಜಾತಾ]

**ಸಹಜಾಮೋದ** (ನಾ). ಸ್ವಾಭಾವಿಕವಾಗಿಯೇ ಉಲ್ಲಾಸದಿಂದಿರುವವನು: ಕಾತ್ಯಾಯನೀಲಬ್ಧವರಪ್ರಸಾದಂ ಸಹಜಾಮೋದಂ (ಕೊಲ್ಹಾಶಾ. ೯-೪೯; 1170). [ಸಂ.]

**ಸಹಜಾಮೋದೆ** (ನಾ). ನೈಸರ್ಗಿಕವಾಗಿ ದೇಹದಲ್ಲಿ ಸುಗಂಧವನ್ನು ಹೊಂದಿದವಳು : ಸಹಜಾಮೋದೆ ಸುಗಂಧಾಮಹಮೆನಿಸಿದ ಮರುಗದಲ್ಲಿ ಪರಿಮಳದಲೆಯಂ ಬಹುಗುಣಭೂಷಣೆ ಭಕ್ತಿಯೊಳಹಿನಿವಹಾಭರಣನರ್ಚನೆಗೆ ನೆಜೆ ತಿಟಿದಿಳ್ (ಗಿರಿಕ. ೫-೭೪). [ಸಂ. ಸಹಜಾಮೋದಾ]

**ಸಹಜಾವ್ಯಯ** (ನಾ). [ವ್ಯಾಕ] ಸ್ವಾಭಾವಿಕವಾಗಿ ಅವ್ಯಯವಾಗಿರುವ ರೂಪದಲ್ಲಿರುವುದು : ಅಂತರ್ . . . ಪೃಥಕ್ – ಇವು ಮೊದಲಾದ ಸಹಜಾವ್ಯಯಂಗಳ ನಿಱಿಸಿ ವಿಭಕ್ತಿಯಂ ಪತ್ತಿಸಲಾಗದು (ಶಮದ. ೮೧ ಪ್ರಯೋ). [ಸಂ.]

**ಸಹಜಿ** (ನಾ). ಸ್ವಾಭಾವಿಕವಾದ ನಡವಳಿಕೆಯುಳ್ಳವನು ; ಪ್ರಾಮಾಣಿಕ : ತಪಗೆಡಿಸಿ ತವಸಿಗಳನು . . . ಸಹಜಿ[ಪಾಠಾಂ. ಸಹಸಿ]ಗಳನು ಅಪವಾದಕಿಕ್ಕಿ ಮನ ಕಪಿಚೇಷ್ಟೆಯಂ ಮಾಡಿ ವಿಪರೀತವೃತ್ತಿಯಿಂ ಕಾಡುತಿಹುದು (ಮನೋವಿ. ೧-೧೮); ಹತ್ತುಮಾನುಷ್ಯರೊಳಗನ್ನರೊಂಭತ್ತೆಣಿಸಿಯಾ ಹತ್ತನೇಯಾ ಸಹಜಿ ತನ್ನ ಮಱೆದಿರೆ (ವೀಶೈಪು. ೫-೪-೭). [ಸಹಜ$_1$ + -ಇ$_3$]

**ಸಹಜೀಕ** (ಅ). (ಉಕ) ಸ್ವಾಭಾವಿಕವಾಗಿ ; ಸಹಜವಾಗಿ : ಆದರೆ ತನಗಿಂತ ಸಣ್ಣವನಾದ ದಾದಲ್ಯಾ, ಸಹಜೀಕ – ತನಗಿಂತಲೂ 'ಢ' ಇರಬೇಕೆಂದು ಅವನ ಕಾಯಾಸ (ದೀಪಹ. II, ೧೬೦). [< ಸಹಜ$_2$]

**ಸಹಜೀವನ** (ನಾ). ಒಟ್ಟಿಗೆ ಜೀವಿಸುವುದು ; ಸಹಕಾರದ ಬದುಕು : ಸಹಜೀವನ, ಸಹಾನುಭೂತಿಯ ಜೀವನ . . . ಎಲ್ಲೆಡೆಗಳಲ್ಲೂ ಸಾಧ್ಯವಾಗಬಹುದು (ಭಾರದ. ೩೩೪). [ಸಂ.]

**ಸಹಜೀವಿತೆ** (ನಾ). ಗೆಳತಿ ; ಸ್ನೇಹಿತೆ : "ಸಾರಜ್ಞೆ ಮಿತ್ರೆ ಸಖಿಯಾಳಿ ಸಹಜೀವಿತೆ [ಪಾಠಾಂ. ಸಹಜೀವಕೆ] ವಯಸ್ಯೆಯೆನೆ ಕೆಳದಿಯಕ್ಕುಂ" (ಮಂಗರಾ. ೯೦-೫). [ಸಂ. ಸಹಜೀವಿತಾ]

**ಸಹಜೆ** (ನಾ). ೧. = ಸಹಜಾತೆ : "ಪೆಣ್ಣೊಸಾದಂದು ಸ್ವಸೃ ಸಹಜೆ ಸಹೋದರಿ ಸಹಜಾತೆ ಭಗಿನಿಯೆನೆ ಪೆಸ [ರಕ್ಕುಂ]" (ವಸ್ತುಕೋ. ೫೫-೧೮). ೨. [ಯೋಗ] ಯೋಗದ ಮೂರು ಬಗೆಯ ಅವಸ್ಥೆಗಳಲ್ಲಿ ಒಂದು : ಉನ್ಮನೀ ಮನೋನ್ಮನೀ ಸಹಜಾದ್ಯವಸ್ಥಾಕ್ರಮಂಗಳುಂ . . . ಯೋಗಪಾದದಲ್ಲಿ ಪ್ರತಿಪಾದ್ಯಂಗಳಕ್ಕುಂ (ವಿವೇಕ. ೧೩೫). [ಸಂ. ಸಹಜಾ]

**ಸಹಣ** 'ಸಾಹಣ' ನೋ.

**ಸಹಣಿ** 'ಸಾಹಣಿ' ನೋ.

**ಸಹಣೆ** (ನಾ). (?) : ಗಂಗೆಯ ಸಹಣೆಯ ಮೇಲೆ ಹೊಯಿಸಣ ಗಂಡಭೇರುಂಡ ಗುಂಮ (ಎಕ. VIII, ಸಾಗರ. ೧೧೧-೫; 1303). [?]

**ಸಹತಾಪ** (ನಾ). ಸಮಾನವಾದ ವೇದನೆ : ನೀನು . . . ನನ್ನ ಸರಿ ಸಹ ತಾಪದಲಿ ಪರಿಪಾಕ ಹೊಂದಿದ ಬುದ್ಧನು (ಹಾಡುಪಾ. ೪೯-೧೮). [ಸಂ.]

**ಸಹದೇವ** (ನಾ). ೧. ಒಬ್ಬಾತನ ಹೆಸರು : ಸಹದೇವ ಮಾಣಿ (ಎಕ. II (R), ೮೮; ೮ನೆಯ ಶತ). ೨. ಪಂಚಪಾಂಡವರಲ್ಲಿ ಕೊನೆಯವನು : "ಕೌಂತೇಯನೆನಲು ಸಹದೇವನಕ್ಕುಂ" (ಮಂಗರಾ. ೭೮-೩); ಆಗಳಾ ಪಾಂಡುರಾಜನಾ ಕೂಸುಗಳ್ಗೆ . . . ನಕುಲ ಸಹದೇವರೆಂದವರ್ಗಮಳ್ಪೆಸರನಿಟ್ಟು (ಪಂಪಭಾ. ೨-೩ ವ). [ಸಂ.]

**ಸಹದೇವಿ** (ನಾ). ಒಂದು ಬಗೆಯ ಸಸ್ಯ ; ಸರ್ಪಾಕ್ಷಿ : "ದಂಡೋತ್ಪಳಃ, ಸಹದೇ(ವಾ)ವಃ – ಈ ೨ ಸಹದೇವಿ" (ಹಲಾಯು. ೩೩-೪೫); ವಿಷ್ಣುಕ್ರಾಂತಿ ಸಹದೇವಿಯ ಬೇರು ಇವಂ . . . ಮಂತ್ರಿಸಿ ಮುಖಮಂ ಪೂಸೆ ಲೋಕವಶ್ಯ (ವಿವ್ಯವಿ. ೨); ಕತ್ತೆಗಿವಿ ಸಹದೇವಿ ಮತ್ತೆತ್ತುನಾಲಗೆಯು ಉತ್ತರಣೆವೆರಸಿ ತಿಲಕವಿಡೆ ಲೋಕ ತನ್ನತ್ತ ಸಾರುವದು (ಸರ್ವಜ್ಞ. ೧೯೮೦). [ಸಂ. ಸಹದೇವೀ]

**ಸಹದೇವಿಘೃತ** (ನಾ). ಸಹದೇವಿ ಮುಂತಾದ ಔಷಧಿಮೂಲಿಕೆಗಳನ್ನು ತುಪದಲ್ಲಿ ಪಾಕಮಾಡಿ ತಯಾರಿಸಿದ ಒಂದು ಬಗೆಯ ಔಷಧ : ಸಹದೇವಿಘೃತ – ಒಂದು ಕೊಳಗ ಸಹದೇವಿಸಮೂಲವನ್ನೂ . . . ಕಾಯಿಸಿ ಪಾಕದಲ್ಲಿಳುಹಿಕೊಂಡು ಪ್ರತಿನಿತ್ಯವೂ ಎರಡುವರಹ ತೂಕವನ್ನು ಸೇವಿಸಲು , ಪಿತ್ತಜ್ವರ . . . ಸನ್ನಿಪಾತಜ್ವರ ಸಹ ಗುಣಮಕ್ಕುಂ (ಸಕವೈ. ೮೫). [ಸಂ. ಸಹದೇವೀಘೃತ]

**ಸಹದೇವೀತೈಲ** (ನಾ). ಸಹದೇವಿ ಎಂಬ ಔಷಧಿಮೂಲಿಕೆಯಿಂದ ತಯಾರಿಸಿದ ಒಂದು ಬಗೆಯ ಎಣ್ಣೆ : ಸಹದೇವೀತೈಲ – ಸಹದೇವಿಸೊಪ್ಪಿನ ರಸ ಒಂದು ಬಳ್ಳ , ಅಂಬಿಲ ಒಂದು ಬಳ್ಳ . . . ಕಾಯಿಸಿ ಹದದಲ್ಲಿಳುಹಿ , ದೇಹಲೇಪವಂ ಮಾಡಲು , ಶೀತಜ್ವರ , ಗರ್ಭಿಣಿಜ್ವರ ಸಹ ಮಾಣ್ಗುಂ (ಸಕವೈ. ೭೦). [ಸಂ.]

**ಸಹಧರ್ಮಚಾರಿಣಿ** (ನಾ). ವಿಧಿಪೂರ್ವಕವಾಗಿ ಮದುವೆಯಾದ ಹೆಂಡತಿ; ಧರ್ಮಪತ್ನಿ : ಸಹಧರ್ಮಚಾರಿಣಿಯೊಬ್ಬಳು ಬಂದಳು ಕೊರತೆ ನನಗಾವುದಿನ್ನೀಗ (೧ಂಚಾಪ. ೩೭-೬೯); ಪತ್ನಿಯು ಪತಿಯ ಕೇವಲ ಸಹಚಾರಿಣಿಯಲ್ಲ ಸಹಧರ್ಮಚಾರಿಣಿಯಾಗಿರುವಳು (ಪ್ರಬಂಧ. ೧೧೫). [ಸಂ. ಸಹಧರ್ಮಚಾರಿಣೀ]

**ಸಹಧರ್ಮಿ** (ನಾ). ೧. ಸಮಾನವಾದ ಮತವನ್ನು ಅನುಸರಿಸುವುದು ; ಒಂದೇ ಸಂಪ್ರದಾಯವನ್ನು ಪಾಲಿಸುವುದು. ೨. ತನಗೆ ಸಮಾನವಾದ ಮತವನ್ನು ಅನುಸರಿಸುವವನು ; ಒಂದೇ ಮತವನ್ನು ಅನುಸರಿಸುವವನು: ಎನ್ನಂತನ್ನ ಸಹಧರ್ಮಿಯಪ್ಪಂತು ಧರ್ಮೋಪದೇಶಂಗೆಯ್ದನಪ್ಪುದಱಿಂ ಗುರುಸ್ಥಾನನುಂ ಶರಣಾಗತನಪ್ಪುದಱಿಂ ಪುತ್ರಸ್ಥಾನನುಮಾಗಿರ್ಪಂ (ಪಂಚತಂ. ೧೦೨-೨೨); ಸಹಜಾತ, ಸಹಧರ್ಮಿ, ಸಹಭಾಗಿ [illegible] ಪ್ರಪೋ). [ಸಂ. ಸಹಧರ್ಮಿನ್]

**ಸಹಧರ್ಮಿಣಿ** (ನಾ). = ಸಹಧರ್ಮಚಾರಿಣಿ : ನಿಮ್ಮಯ್ಯಂಗವರಜೆ [illegible]ಪುತ್ರಸಹಧರ್ಮಿಣಿ . . . ಸುವೇದಿ ನಿಮ್ಮತ್ತೆ ವಿನಯದಿಂ ಬೆಸಕೆಯ್ಯಿಂ ([illegible]). [ಸಂ. ಸಹಧರ್ಮಿಣೀ]

**ಸಹನ** (ನಾ). ೧. ಸಹನೆ ; ತಾಳ್ಮೆ ; ಸೈರಣೆ : "ಸಹನಂ , ಸಹನೀಯಂ , ಈ ೨ ತಾಳ್ಕೆ" (ಕಾಶಕ್ಯ. ೧೪೯); ದೊಡ್ಡಸಂಸಾರ ನಡಿಸತಕ್ಕವರಿಗೆ ಸಹನವೇ ಮುಖ್ಯವಾದುದ್ದು (ನೀತಿಚಿಂ. XV. ೧೭); ಮನೆಯಲ್ಲಿ ಅತ್ತೆಯ ಕಾಟವಿದ್ದರೂ ಹೆಣ್ಣು ಸಹನ ಮಾಡಿಕೊಂಡು ಹೋಗುವದು (ಕನ್ನಜಾ. ೧೨೩). ೨. ಸ್ವಾಭಾವಿಕವಾಗಿಯೇ ತಾಳ್ಮೆಯನ್ನು ಹೊಂದಿದವನು ; ಸಹನಶೀಲ : "ಸಹಿಷ್ಣುಃ, ಸಹನಃ, ಕ್ಷಂತಾ, ತಿತಿಕ್ಷುಃ, ಕ್ಷಮಿತಾ, ಕ್ಷಮಿ - ೬ ಸ್ವಭಾವದಿಂದ ಸೈರಣೆಯುಳ್ಳವನು" (ಸಿದ್ಧಾಂತಿ. ೩೩೧). [ಸಂ.]

**ಸಹನಶಕ್ತಿ** (ನಾ). ಸಹಿಸಿಕೊಳ್ಳುವ ಸಾಮರ್ಥ್ಯ ; ಸಹನೆ : ಭೂಮಿಯಲ್ಲಿ ಸಹನಶಕ್ತಿ . . . ಜೀವಾತ್ಮನಲ್ಲಿ ಬುದ್ಧಿಶಕ್ತಿ ಈ ರೀತಿಯಲ್ಲಿ ಎಲ್ಲೆಲ್ಲೂ ಶಕ್ತಿವೈಶಿಷ್ಟ್ಯವನ್ನು ನಾವು ಕಾಣುತ್ತೇವೆ (ಶಕ್ತಿವಿ. ೩೩). [ಸಂ.]

**ಸಹನಶೀಲ** (ಗು). ತಾಳ್ಮೆಯ ಗುಣವುಳ್ಳ : ಅವರು ತುಂಬ ಸಹನಶೀಲವ್ಯಕ್ತಿ (ರೂಢಿ). [ಸಂ.]

**ಸಹನಶೀಲತೆ** (ನಾ). ತಾಳ್ಮೆ; ಸೈರಣೆ; ಸಹಿಷ್ಣುತೆ: ಸಹನಶೀಲತೆಯ ಪರಮಾವಧಿಯದು (ಹಳ್ಳಿಹಾ. ೧೧೭). [ಸಂ. ಸಹನಶೀಲತಾ]

**ಸಹನಾ** (ನಾ). [ಸಂಗೀತ] ಒಂದು ರಾಗದ ಹೆಸರು : ಸಹನಾರಾಗವು (೧೮) (ಸಂ)ಪೂರ್ಣ ; ಷಡ್ಜಗ್ರಹವನ್ನು ಕೂಡಿದೆ (ಚತುಪ್ರ. ೧೩೮). [< ಸಂ. ಶಹನಾ]

**ಸಹನಾತೀತ** (ಗು). ತಾಳಿಕೊಳ್ಳಲು ಅಸಾಧ್ಯವಾದ ; ಅಸಹನೀಯವಾದ: ಸಹನಾತೀತ ಅವಮಾನದಿಂದ ಏನು ಮಾಡಿಕೊಳ್ಳುವಳೋ ಎಂಬ ಸಂಶಯಪಿಶಾಚಿಯು ಬಾಧಿಸಹತ್ತಿತ್ತು (ಸಂಜೀವಿ. ೧೫೪). [ಸಂ.]

**ಸಹನೆ** (ನಾ). = ಸಹನ ೧ : ನಿಜಕ್ಕೂ ಸತ್ಯ, ಪ್ರೇಮ, ತ್ಯಾಗ, ಅಹಿಂಸೆ, ಸಹನೆ, ಸಮತೆ, ಸಹಾನುಭೂತಿ . . . ಇವೇ ಮಾನವಧರ್ಮದ ಮೂಲತತ್ತ್ವಗಳು (ಧರ್ಮಸಾ. ೩). [ಸಂ. ಸಹನ]

**ಸಹಪಂಕ್ತಿ** (ನಾ). ಸಮಾನವಾದ ಪಂಕ್ತಿ ; ಒಂದೇ ಸಾಲು : ಅವನ ಸಹಪಂಕ್ತಿಯಲ್ಲಿ ಕುಳ್ಳಿರಿಸದಿರಯ್ಯಾ (ಬಸವ. ೪೪೯); ಅರಿಕೇಸರಿಯೂ ತಾನೂ ಸಹಪಂಕ್ತಿಯಲ್ಲಿ ಕುಳಿತಾಗ ಮಹಾರಾಣಿಯೇ ಬಂದು ಬಡಿಸುತ್ತಿದ್ದ ದಿವ್ಯದೃಶ್ಯ ಕಣ್ಣಿದಿರು ಬಂದಂತಾಯಿತು (ದಾನಚಿಂ. ೪೦). 'ಅಡ್ಡಪಂಕ್ತಿ' ಪರಾ. [ಸಂ.]

**ಸಹಪಂಕ್ತಿಭೋಜನ** (ನಾ). ೧. ಸಮಾನವಾದ ಪಂಕ್ತಿಯಲ್ಲಿ ಕುಳಿತು ಮಾಡುವ ಊಟ ; ಒಂದೇ ಸಾಲಿನಲ್ಲಿ ಕುಳಿತು ಮಾಡುವ ಭೋಜನ : ನಿಮ್ಮ ಸಹಪಂಕ್ತಿಭೋಜನವು ಲಭಿಸದುದರಿಂದ ನನಗೆ ಬಹು ವಿಷಾದವಾಗಿರುವುದು (ಕವಿಕ. ೩೦). ೨. ಬೇರೆ ಬೇರೆ ವರ್ಣದ ಜನ ಒಂದೇ ಪಂಕ್ತಿಯಲ್ಲಿ ಕುಳಿತು ಊಟ ಮಾಡುವುದು. ೩. ಗುರು, ಯಜಮಾನ ಅಥವಾ ಗಣ್ಯರ ಜೊತೆಯಲ್ಲಿ ಉಳಿದವರು ಕುಳಿತು ಭೋಜನಮಾಡುವುದು. [ಸಂ.]

**ಸಹಪಂತಿ** (ನಾ). = ಸಹಪಂಕ್ತಿ : ಸಹಪಂತಿಯಲ್ಲಿ ತನ್ನ ಗುರುವೆಂದು ವಿಶೇಷವ ಮಾಡಲಾಗದು (ಸಕವ. ಕ. I, ೧೧೮-೯೫೦); ಸಹಪಂತಿಯಲ್ಲಿ ಮೃಡಶರಣನ ಪ್ರಸಾದವ ಕೊಳಲೊಲ್ಲದೆ ತುಡುಗುಣಿನಾಯಂತೆ ತೊಗಲ ಗಡಿಗೆಯ ತುಂಬುವ ಗುರುಪಾತಕರಿಗೆಲ್ಲಿಯದೊ ಒಡೆಯರ ಕಟ್ಟಳೆ (ಮೋಳಿಮಾ. ೨೧-೮೪). [< ಸಂ. ಸಹಪಂಕ್ತಿ]

**ಸಹಪತ್ನಿ** (ನಾ). ಗಂಡನ ಜೊತೆಯಲ್ಲಿರುವವಳು ; ಪತಿಸಮೇತಳಾಗಿರುವವಳು : ಆರು ಸುತ ಸಹಪತ್ನಿ ಮೇಣ್ ನೀನ್ಯಾರು ನಾನ್ಯಾರು (ಬಿಜ್ಜಪು. ೪೯-೬೦). [ಸಂ. ಸಹಪತ್ನೀ]

**ಸಹಪಾಂಶುಕ್ರೀಡಿತ** (ನಾ). (ಆಲಂ) ಧೂಳಾಟದಲ್ಲಿ ಜೊತೆಗೂಡಿದವನು; ಬಾಲ್ಯದ ಒಡನಾಡಿ : ಸಹಪಾಂಶು[ಪಾಠಾಂ. ಸು]ಕ್ರೀಡಿತರಪ್ಪ ಪಲಂಬರರಸುಗಳ್ವೆರಸು ಪುರಮಂ ಪೊಱಮಟ್ಟು ಪೋಗಿ (ಚಂದ್ರಪು. ೮-೨೪ ವ). [ಸಂ.]

**ಸಹಪಾಂಸುಕೇಳಿ** (ನಾ). ಜೊತೆಯಾಗಿ ಧೂಳಿನಲ್ಲಿ ಆಡುವ ಆಟ ; ಬಾಲ್ಯದ ಒಡನಾಟ : ಅಮರಕುಮಾರರಂ ಜಿನಕುಮಾರಕನಂ ಸಹಪಾಂಸುಕೇಳಿಯೊಳ್ ಸಮವಯಸಂ ಮನಂಗೊಳಿಸೆ ಮೇಳಿಸಲುಂ . . . ಬೆಸವೇಟ್ಟು (ಮಲ್ಲಿಪು. ೧೩-೫೨). [ಸಂ. ಸಹಪಾಂಸುಕೇಲಿ]

**ಸಹಪಾಂಸುಕ್ರೀಡಿತ** (ನಾ). = ಸಹಪಾಂಶುಕ್ರೀಡಿತ : ದುರ್ಯೋಧನಪ್ರಭೃತಿಗಳ್ ನೂರ್ವರುಂ ಧರ್ಮಪುತ್ರಾದಿಗಳಯ್ವರುಂ ಸಹಪಾಂಸುಕ್ರೀಡಿತರಾಗಿ (ಪಂಪಭಾ. ೨-೩೯ ವ); ನಾಮತ್ತ ಪೋಗಲಾಗದೆಂದು ಸಹಪಾಂಸುಕ್ರೀಡಿತರಪ್ಪ ಗೋಪಾಲಕರ್ ಪೇೞೆ (ಜಗವಿ. ೩-೮೧ ವ). [ಸಂ.]

**ಸಹಪಾಂಸುಕ್ರೀಡೆ** (ನಾ). = ಸಹಪಾಂಸುಕೇಳಿ : ಸಹಪಾಂಸುಕ್ರೀಡಾನೇಕವಿಕ್ರಮಕ್ರೀಡಾರಸೋದಾರರಾಜದಾರಕಪರಿವೃತನಾಗಿ (ಆದಿಪು. ೮-೪೧ ವ); ಓರಗೆಗಳಪ್ಪ ಬಹುವೃಂದಾರಕದಾರಕರನಂದು ಸಹಪಾಂಸುಕ್ರೀಡಾರಸದೊಳ್ . . . ನಿರವಿಸೆ (ಪುಷ್ಪಪು. ೧೨-೫೫). [ಸಂ. ಸಹಪಾಂಸುಕ್ರೀಡಾ]

**ಸಹಪಾಠಿ** (ನಾ). ಜೊತೆಯಲ್ಲಿ ವಿದ್ಯಾಭ್ಯಾಸ ಮಾಡುವ ವ್ಯಕ್ತಿ ; ಒಡನೋದಿ : ತನ್ನ ಸಹಪಾಠಿಗಳನ್ನು ಕಾರಣವಾಗಿ ಒಡ್ಡಿದ (ಹಸುಹೂ. ೨೩೨); ನನಗೆ ಚೇತನ ಬಂದಾಗ ನನ್ನ ಸಹಪಾಠಿಗಳಲ್ಲಿ ಒಬ್ಬಳು ನಿಂತುಕೊಂಡು ನನ್ನನ್ನು ಮಾತಾಡಿಸುತ್ತಿದ್ದಳು (ಹೇಮಂತ. ೯೩). [ಸಂ. ಸಹಪಾಠಿನ್]

**ಸಹಪಾನ** (ನಾ). (ಮದ್ಯವನ್ನು) ಒಟ್ಟಿಗೆ ಕುಡಿಯುವುದು ; ಜೊತೆಯಾಗಿ ಪಾನಮಾಡುವುದು : "ಸಾರೆ ಕೆಲಬರ್ ಕೂಡಿ ಕುಡಿಯೆ ಸಹಪಾನಮದು" (ಮಂಗರಾ. ೬೭-೮). [ಸಂ.]

**ಸಹಬಾಳ್ವೆ** (ನಾ). ಜೊತೆಗೂಡಿದ ಬದುಕು ; ಒಟ್ಟುಗೂಡಿ ನಡೆಸುವ ಬಾಳು : ಇನ್ನು ರಾಯಚೂರು ಉರ್ದು — ಕನ್ನಡ ಸಹಬಾಳ್ವೆ ನಡಸುವ ಊರು (ದ್ರಾವಿವಿ. ೩೯೨). [ಸಹ + ಬಾಳ್ವೆ (< ಬಾಟ್ಕೆ)]

**ಸಹಭವ** (ಗು). ೧. ಜೊತೆಯಲ್ಲಿ ಹುಟ್ಟಿದ; ಒಡಹುಟ್ಟಿದ. (ನಾ). ೨. ಒಡಹುಟ್ಟಿದವನು; ಸೋದರ : ಶಿವಭಕ್ತರ ಸಹಭವ ಗುರು ತಂದೆಗಳೆನಗೆ (ಮಹಾದೇ. ಬ. ೧೫೭-೩೪೯); ಇವಳಿಗೋಸುಗವಳಿದನೇ ಸಹಭವನು (ಕುಮಾವಿ. ೩-೯೭). ೩. ಜೊತೆಯಲ್ಲಿ ಹುಟ್ಟಿದುದು; ಒಡಹುಟ್ಟಿದುದು : ಸುರೆಯಿಂ ಸೊರ್ಕಂ . . . ದುಶ್ಯ್ರವನನ ಹಯದಿಂ ವೇಗಮಂ ತಾಳ್ದಿ ನೀರಾಕರದಿಂದೆಟ್ಟಿಂದಳಂತಾ ಸಿರಿ ಸಹಭವರಂ ಪೋಲ್ಕುದೇಂ ಚೋದ್ಯಮಾಯ್ತೆ (ಕಾದಂಪೂ. ೫೪೭). ೪. ಪ್ರೀತಿ; ಒಲುಮೆ : "ಸಹಭವಂ [ಪಾಠಾಂ. ಭಟಂ, ಭುಜಂ] ಸಂಗತಂ ಪ್ರೀತಿ ಸಖ್ಯಂ ಸ್ನೇಹಮೆನಲು ಮೈತ್ರಕ್ಕೆ ನಾಮಂ" (ಮಂಗರಾ. ೧೨೮-೮). [ಸಂ.]

**ಸಹಭವೆ** (ನಾ). ಒಡಹುಟ್ಟಿದವಳು; ಸಹೋದರಿ : "ಸಹಭವೆಯುಂ ಪತಿವ್ರತೆಯುಮೆಂಬಿವು ಜಾಮಿಯನಿಕ್ಕು" (ನಾನಾರ. ೧೧೦). [ಸಂ. ಸಹಭವಾ]

**ಸಹಭಾಗಿ** (ನಾ). ೧. ಒಡನಾಡಿ; ಜೊತೆಯ ವ್ಯಕ್ತಿ : ಕಾಮಾಭಿಲಾಷೆ ಕೆಟ್ಟದ್ದೆಂದು ನಿಸ್ಸಂಶಯವಾಗಿ ನಿರ್ಧರಿಸಬಹುದು, ಅದರೆ ಅದನ್ನು ಸಹಭಾಗಿಯ ಉನ್ನತಿಗಾಗಿ ಪ್ರಯತ್ನಿಸುವೆನೆಂಬ ಒಂದು ಒಳ್ಳೆಯ ಭಾಷೆಯೊಡನೆ ಜತೆಗೂಡಿಸಿರುವುದರಿಂದ ಆ ಸಂಬಂಧದ ಕೆಟ್ಟತನದ ಅಂಶ ಕಡಿಮೆಯಾಗುತ್ತದೆ (ನಿಶಲು. ೨೩೮). ೨. ಸಮಾನಜವಾಬ್ದಾರಿಯನ್ನು ಹೊಂದಿದ ವ್ಯಕ್ತಿ ;

ಪಾಲುದಾರ : ಈ ಕಾರ್ಯದಲ್ಲಿ ಅವರಿಬ್ಬರೂ ಸಹಭಾಗಿಗಳಾಗಿದ್ದಾರೆ (ರೂಢಿ). [ಸಂ. ಸಹಭಾಗಿನ್]

**ಸಹಭೋಗಿನಿ** (ನಾ). (ರಾಜನ) ಉಪಪತ್ನಿ : ಪಟ್ಟದ ರಾಣಿ ಸಹಭೋಗಿನಿಯರೆಲ್ಲರ ಬರಹೇಳಿ (ಇಜಿಸಾಂ. ೮-೧೮). [ಸಂ. ಸಹಭೋಗಿನೀ]

**ಸಹಭೋಜನ** (ನಾ). ೧. (ಸ್ನೇಹಿತರು ಮೊದಲಾದವರೊಡನೆ) ಒಟ್ಟಿಗೆ ಊಟಮಾಡುವುದು ; ಜೊತೆಗೂಡಿ ಊಟಮಾಡುವುದು : ಘನಶೀಲರುಗಳು ದೇವಾರ್ಚನೆ ಸಹಭೋಜನ ತಾಂಬೂಲ ಸುಗಂಧ ಮನಗೊಂಬ ನಿಖಿಳ ವೈಭೋಗದಿಂದಿರ್ಪರು ದಿನಗಳೆದರು ಬಹುಸುಖದಿ (ಮೋಹತ. ೩೩-೩). ೨. = ಸಹಪಂಕ್ತಿಭೋಜನ ೧ : ಧನವನಿತ್ತಾದೊಡೆಯು ಸಹಭೋಜನವನುಂಡಾದೊಡೆಯು . . . ರಿಪುಜನಪತಿಯ ವಶಮಾಳ್ಪುದು (ಕುವ್ಯಾಕ. ೮-೪೫); ನಿಮ್ಮ ರಾಜರುಗಳು ರಾಯಭಾರಿಯನ್ನು ಕರೆದು ಅವನೊಡನೆ ಸಹಭೋಜನ ಮಾಡುತ್ತಾರೆ (ಪ್ರವಾಸ. II. ೧೭೨). ೩. [ವೀಶೈ] ''ಮುಂದಿಟ್ಟ ಪದಾರ್ಥಗಳನ್ನೆಲ್ಲ ಲಿಂಗಕ್ಕೆ ಮೊದಲು ಕೊಟ್ಟು ಭೋಜ್ಯಭೋಜ್ಯಕ್ಕೆ ಕೊಟ್ಟುಕೊಂಬುದು ಸಹಭೋಜನವು'' (ಶಿವಾಕೋ. ೧೧೨) : ಸಹಭಾ[ಪಾಠಾಂ. ಭೋ]ಜನ ಸಹಭೋಜನವೆಂದೆಂಬರು ಭಾಜನವಾವುದು ಭೋಜನವಾವುದೆಂದಱಿಯರು ಭಾಜನವೆ ಅಂಗ ಭೋಜನವೆ ಲಿಂಗ (ಅವಚಂ. ೨೮೦-೧೨೮೩); ಸಹಭೋಜನವ ಮಾಡುವನ ಇರವು ಹೇಗೆಂದಡೆ ದಗ್ಧಪಟದಂತೆ . . . ಒಡಲಿನ ಆತ್ಮನ ಭೇದದಂತಿರಬೇಕು (ಸಕವ. ಕ. I. ೧೨೫-೪೭೭). [ಸಂ.]

**ಸಹಭೋಜನಿಗ** (ನಾ). ಜೊತೆಯಲ್ಲಿ ಊಟಮಾಡುವವನು: ಹನುಮ ನೀನೆಮ್ಮೊಡನೆ ಸಹಭೋಜನಿಗನೆಂದಿದಿರದ್ದು . . . ಅಮಲವಿಷ್ಟರದ ಕೊನೆಯಲಾತನ ನಿಲಿಸಿದನು (ತೊರರಾ. ೬-೫೫-೪೭). [ಸಹಭೋಜನ + -ಇಗ]

**ಸಹಭೋಜಿ** (ನಾ). = ಸಹಭೋಜನಿಗ : ಸಹಜಾತ, ಸಹಧರ್ಮಿ, ಸಹಭೋಜಿ (ಶಮದ. ೨೯೧ ಪ್ರಯೋ). [ಸಂ. ಸಹಭೋಜಿನ್]

**ಸಹಮತ** (ನಾ). ಒಮ್ಮತ; ಏಕಾಭಿಪ್ರಾಯ : ಈ ಗುರುಶಿಷ್ಯರ ಸಹಮತದಿಂದ ಟಿಳಕರು ವಣೆಯಲ್ಲೇ ಇರುವದೆಂದಾಯಿತು (ಸ್ಮೃತಿಚಿ. ೯೨). [ಸಂ.]

**ಸಹಮತಿ** (ನಾ). ೧. ಐಕಮತ್ಯ; ಒಗ್ಗಟ್ಟು : ಹಣವಿಲ್ಲ; ಹಣವಿಲ್ಲದೆಯೂ ದೊಡ್ಡ ದೊಡ್ಡ ಕಾರ್ಯಗಳನ್ನು ಸಾಧಿಸಬಹುದಾದ ಸಹಮತಿಯಿಲ್ಲ (ಪ್ರೇಮಸೂತ್ರ. ೯೫). ೨. ಒಪ್ಪಿಗೆ; ಅಂಗೀಕಾರ : ಮೇಲೆ ಹೇಳಿದ ಸೂಚಿಗಳಲ್ಲಿನ ಇತರ ಯಾವ ವಿಷಯಗಳನ್ನು ಆ ರಾಜ್ಯದ ಸರ್ಕಾರದ ಸಹಮತಿಯೊಡನೆ ರಾಷ್ಟ್ರಪತಿಯವರು ಆದೇಶದ ಮೂಲಕ ಉಲ್ಲೇಖಿಸಬಹುದೋ ಅಂಥವುಗಳ ಮಟ್ಟಿಗೂ ಪರಿಮಿತವಾಗತಕ್ಕುದು (ಭಾಧಾನ. ೨೨೭). [ಸಂ.]

**ಸಹಮೂಲ** (ಗು). ೧. ಬೇರುಸಹಿತವಾದ; ಬೇರಿನಿಂದ ಕೂಡಿದ. (ನಾ). ೨. ಒಂದು ಬಗೆಯ ಔಷಧೀಮೂಲಿಕೆ : ಮುಳ್ಳುಸುಂಡೆ ಸಹಮೂಲದ ಚೂರ್ಣ ಸಮಸಕ್ಕರೆ ಬೆರಸಿ ಎರಡುವರಹಾ ತೂಕ ನಿತ್ಯ ಸೇವಿಸೆ ವೀರ್ಯವೃದ್ಧಿಯಹುದು (ಸಾಮಶಾ. ೨೬೪); ಜಾತರಾಸಿ ಸಹಮೂಲ ದ್ರಾಕ್ಷಿಹಣ್ಣು . . . ಕಷಾಯವನಿಕ್ಕಿ ತೆಗೆದುಕೊಳ್ಳಲು ಶೀತಜ್ವರ ಪರಿಹಾರವಾಗುವುದು (ಸಕವ್ಯ. ೬೫). [ಸಂ.]

**ಸಹಯಿಗ** (ನಾ). ನೆರವಿಗೆ ಬರುವವನು; ಸಹಾಯಕ : ಚರಾಚರಂಗಳಲಿರ್ಪ ಜನಜಾಲ ಹರಿಗೆ ಸಹಯಿಗರಾಗಿ ಬರಲು (ಕೋಗಯ. ೧೮-೬೯). 'ಸಹಾಯಿಗ' ಪರಾ. [< ಸಹಾಯಕ]

**ಸಹಯೋಗ** (ನಾ). ಸಹಕಾರ; ನೆರವು : ಈ ಕನ್ನಡರೂಪವನ್ನು ಆಡುವ ಸಮರ್ಥ ನಟರೊಬ್ಬರ ಸಹಯೋಗ ದೊರಕುವುದಾದರೆ — ಇದನ್ನು ಇನ್ನಷ್ಟು ಉತ್ತಮಪಡಿಸುವ ಅಭಿಲಾಷೆಯುಳ್ಳವರಾಗಿದ್ದಾರೆ (ವೀರಯೋ. Vii ಪೀಠಿಕೆ). [ಸಂ.]

**ಸಹಯೋಗಿ** (ನಾ). ೧. ಜೋಡಿ; ಜೊತೆ : ಪಾಶ್ಚಾತ್ಯರಲ್ಲಿ ಕಾವ್ಯಮೀಮಾಂಸೆ ಬೆಳೆಯುತ್ತಾ ಹೋದಂತೆ ಅದರ ಪ್ರಾಯೋಗಿಕರೂಪವಾದ ಸಾಹಿತ್ಯವಿಮರ್ಶೆಯೂ ಸಹಯೋಗಿಯಾಗಿಯೆ ಬೆಳೆದು ಬಂದಿದೆ (ಬಂಕಿಮ. ೯ ಮುನ್ನುಡಿ). ೨. ಸಹಚರ; ಸಂಗಡಿಗ : ಡಾರ್ವಿನ್ನನ ಸಹಯೋಗಿ . . . ಈ ರೀತಿ ಸ್ಪಷ್ಟವಾಗಿ ಬರೆದಿರುತ್ತಾನೆ (ಜೀವಾತ್ಮ. ೨೩೭). [ಸಂ. ಸಹಯೋಗಿನ್]

**ಸಹವರ್ತಿ** (ನಾ). ೧. ಅನುವರ್ತಿ; ಸಂಗಡಿಗ : ತನುಜ ಕೇಳೆನ್ನೊಡನೆ ಸಹವರ್ತಿಯಾಗಿ ನೀಂ ಬಿನದದಿಂದೆನನೊಡರಿಚಿದೆಯದು ಪೂಜೆಯಾಗನುಕರಿಪೆನು (ಸೌಂದಪು. ೬-೫೧); ಎಂಥೆಂಥ ಕುತ್ತುಗಳಲ್ಲಿ ಸಹವರ್ತಿಗಳಾಗಿ . . . ಈ ಗಂಡಾಂತರದಲ್ಲಿ ಒಂಟಿಗನಾಗಿ ಉಳಿಯಬೇಕಾಯಿತೇ? (ಮೋದಿವು. ೧೬೪). ೨. ಅನುವರ್ತಿಯಾದುದು; ಸಂಗಡವಿರುವುದು : ಈ ಮೊದಲನೆಯ ಗುಂಪಿನ ಇಬ್ಬರು ವಿಮರ್ಶಕರು ಇದು ಕಾವ್ಯದೃಷ್ಟಿಗೆ ಪ್ರೇರಕವಾಗುವ ಭಾವದ ಸಹವರ್ತಿ ಎನ್ನುತ್ತಾರೆ (ಭಾವಗೀ. ೨೮). [ಸಂ. ಸಹವರ್ತಿನ್]

**ಸಹವಾಸ** (ನಾ). ೧. ಒಟ್ಟಿಗೆ ವಾಸಿಸುವುದು; ಜೊತೆಯಲ್ಲಿ ಬದುಕುವುದು. ೨. ಒಡನಾಟ; ಸ್ನೇಹ : ಹರಿಯ ಸಹವಾಸಮೇ ಸಾಲ್ಗು ಜಗದೊಳ್ಸತ್ಧರ್ಮಮಂ ಪಡಿಸದವರಾರು (ಜೈಮಿಭಾ. ೮-೪೪): ದುರ್ಜನನ ಸಹವಾಸದಿಂದ ಸಜ್ಜನ ಕೆಡುವನು (ಗಾದೆ). ೩. ಸಂಭೋಗ; ಕೂಟ : ಅವನು ವೇಶ್ಯೆಯ ಸಹವಾಸದಿಂದ ಆರೋಗ್ಯವನ್ನು ಕೆಡಿಸಿಕೊಂಡ (ರೂಢಿ). [ಸಂ.]

**ಸಹವಾಸದೋಷ** (ನಾ). ಒಡನಾಟದಿಂದ ಉಂಟಾಗುವ ದೋಷ, - ಕಳಂಕ : ಎಲ್ಲ ಸ್ಥಳದೋಷ, ಸಹವಾಸದೋಷ, ಸ್ವಭಾವದೋಷವಲ್ಲ (ರಂಗನಾ. ೬). [ಸಂ.]

**ಸಹವಾಸಿ** (ಗು). ೧. ಒಟ್ಟಿಗಿರುವ; ಜೊತೆಗಿರುವ. (ನಾ). ೨. ಒಟ್ಟಿಗೆ ವಾಸಿಸುವುದು. ೩. ಒಟ್ಟಿಗೆ ವಾಸಿಸುವವನು; ಜೊತೆಗಿರುವವನು : ಸಹವಾಸಿ — ಸಾವಾಸಿ (ಶಮದ. ೨೯೧ ಪ್ರಯೋ); ಸೆಂಟ್ರಲ್‌ಕಾಲೇಜಿನ ಹಾಸ್ಟೆಲಿನಲ್ಲಿ ಒಂದೇ ಕೊಠಡಿಯಲ್ಲಿದ್ದ ಸಹವಾಸಿಗಳು (ಮಹಾಗ. ೩). ೪. ಒಂದು ಪಂಗಡದ ಹೆಸರು : ಘನತರದ ಸಹವಾಸಿವಂಶದೊಳನುಪಮನು ಮಹಲಿಂಗದೇವನ ತನಯನಪ ಶ್ರೀರಂಗ (ಅಮೃತ. ೧-೩). 'ಸಾವಾಸಿ' ಪರಾ. [ಸಂ. ಸಹವಾಸಿನ್]

**ಸಹಶಿಕ್ಷಣ** (ನಾ). ಶಾಲಾಕಾಲೇಜುಗಳಲ್ಲಿ ಹುಡುಗರು ಮತ್ತು ಹುಡುಗಿಯರು ಒಟ್ಟಿಗೆ ವಿದ್ಯಾಭ್ಯಾಸಮಾಡುವುದು : ಸಹಶಿಕ್ಷಣದಿಂದ ವಿದ್ಯಾರ್ಥಿ, ವಿದ್ಯಾರ್ಥಿನಿಯರಲ್ಲಿ ಸಮಾನಮನೋಭಾವನೆ ಬೆಳೆಯಲು ಅವಕಾಶವಾಗುತ್ತದೆ (ರೂಢಿ). [ಸಂ.]

**ಸಹಸ** (ಗು). ೧. ಸಾಹಸವುಳ್ಳ; ಕಸುವಿನಿಂದ ಕೂಡಿದ : ಕಾಯ್ದುಬಿಟ್ಟರು ಸಕುಲ ಸಾತ್ಯಕಿಯ ಸಹಸ ದ್ರುಪದ ವಿರಾಟರುಗಳುಮ್ಮಹವ ಸೆಳೆದರು (ಕುವ್ಯಾದ್ರೋ. ೪-೧೨). (ನಾ). ೨. ಕಸುವು; ಸಾಮರ್ಥ್ಯ; ಸಾಹಸ : ''ಸಹಸಮೆಂದೊಡೆ ಸತ್ತ್ವಂ'' (ಭಾರನಿ. ೨೧); ಬಹಳಬಲ ನುಗ್ಗಾಯ್ತು ಶಿಶುವಿನ ಸಹಸ ಕುಂದದು (ಕುವ್ಯಾದ್ರೋ. ೫-೫೧); ಸಹಸದಿಂ ಕಲಿಕಾಮನಂ ಗೆಲ್ಲುದರಿದಿನ್ನು (ಸೌಂದಪು. ೧೭-೪೫). ೩. ಪರಾಕ್ರಮಶಾಲಿ ; ಸಾಹಸಿ : ಭೀಮ ಬಾ ಸಹಸ ಬಳಲಿದೆಯಲಾ ಎಂದು . . . ಕರೆಯಲ್ (ತುರಂಗ. ೭೭-೨೨). ೪. ಚಾಂದ್ರಮಾನವರ್ಷದ ಒಂಬತ್ತನೆಯ ತಿಂಗಳು; ಮಾರ್ಗಶಿರಮಾಸ : ಬಹಿರುದ್ಯಾನಾಂತರದೊಳ್ ಸಹಸೋದಿತ ಮತ್ತಕೋಕಿಲೋಚ್ಚೈರ್ಧ್ವಾನಂ ಮುಹುರಾಕರ್ಣಿಸೆ (ಕವಿರಾ.೧-೫೭). [ಸಂ. ಸಹಸ್]

**ಸಹಸಂಚಾರಿಕೆ** (ನಾ). [ಕಾವ್ಯಮೀ] ನಾಯಿಕೆಯ ನಾಲ್ಕು ಬಗೆಯ ಪರಿಚಾರಿಕೆಯರಲ್ಲಿ ಒಬ್ಬಳು; ಸಹಚರಿ : ಅಭಿಸಾರಿಕೆ ಚತುರಿಕೆ ಸಹಸಂಚಾರಿಕೆ ದೂತಿಕೆಯರೆಂಬ ಚತುರ್ವಿಧಸಖಿಯರಿಂ (ವಿವೇಕ ೧೮೩). [ಸಂ. ಸಹಸಂಚಾರಿಕಾ]

**ಸಹಸಂಭವ** (ನಾ). ಒಡಹುಟ್ಟಿದವನು; ಸಹೋದರ : ಪತಿಯ ಸಹಸಂಭವನ ಮರಣವ್ಯತಿಕರವ ನೋಡಿದಡೆ ದುಷ್ಕೀರಿತಿಯ ಮೊಳೆ ಹೊಮ್ಮುವವಲೇ ರವಿಸುತನೆ ಕೇಳೆಂದ (ಕುವ್ಯಾಕ. ೧೯-೬೧). [ಸಂ.]

**ಸಹಸಂಭೂತ** (ಗು). ೧. ಜೊತೆಯಲ್ಲಿ ಹುಟ್ಟಿದ : ಸಹಸಂಭೂತವಿನೂತಭೂಷಣಗಭಸ್ತಿಸ್ತೋಮಮುದ್ದಾಮ ತದ್ಗೃಹ ತದ್ದೇಹಮರೀಚಿಯೊಳ್ ಸೆಣಸೆ (ನೇಮಿಪು. ೨-೭೭). (ನಾ). ೨. = ಸಹಸಂಭವ : ಸಹಸಂಭೂತನೆನೆಂದಿಳಾವಳಯದೊಳ್ ಸದ್ವಸ್ತುಸಂದೋಹಮಂ ಸ್ಪೃಹೆಯಿಂ ಕೊಂಡನೆ (ನೇಮಿಪು. ೩-೧೫೦). [ಸಂ.]

**ಸಹಸಾ** (ಅ). ೧. ವೇಗವಾಗಿ; ರಭಸದಿಂದ. ೨. ಏಕಾಏಕಿಯಾಗಿ; ಇದ್ದಕ್ಕಿದ್ದಂತೆ : ''ಸಹಸಾ ಶಬ್ದಂ ವರ್ತಿಕುಮಹೇತುತತ್ಕಾಲಮೆಂಬಿವರರ್ಥದೊಳಂ'' (ವಸ್ತುಕೋ. ೧೩೭-೧೧೧); ಆ ಸಮಯದಲ್ಲಿ ಒಂದು ಹಸಿದ ನರಿ ಸಹಸಾ ಆ ಸಿಂಹವನ್ನು ಕಂಡು, ಓಡಲಾರದೆ ಅದರ ಮುಂದೆ ಅಡ್ಡಬಿದ್ದಿತು (ಬುದ್ಧಜಾ. ೧೪೭). ೩. ಸಾಮಾನ್ಯವಾಗಿ :

ದಿನಾಲು ನಿಯಮದಿಂದ ವ್ಯಾಯಾಮ ಮಾಡಿದರೆ ಸಹಸಾ ಅಜೀರ್ಣವಿಕಾರವಾಗದು (ಮುಂಬಯಿ. ೪-೧); ಸುಶಿಕ್ಷಿತಮಹಿಳೆಯರೂ ಕೂಡ ಇಂಥ ಪ್ರವಾಸವನ್ನು ಸಹಸಾ ಸ್ವತಂತ್ರವಾಗಿ ಕೈಕೊಂಡಾರೆಂದು ನಮಗನಿಸುವುದಿಲ್ಲ (ಸಮಜೀ.೮೧೨).
[ಸಂ./ ಹಿಂ. ಮರಾ. ಸಹಸಾ]

**ಸಹಸಿ** (ಗು). ೧. ಪರಾಕ್ರಮಶಾಲಿಯಾದ; ಸಾಹಸವುಳ್ಳ. (ನಾ). ೨. ಪರಾಕ್ರಮಶಾಲಿ; ಸಾಹಸಿ : ಅಹುದಹುದು ಕಲಿಭೀಮ ಸಮರದ ಸಹಸಿಗಳ ಲೆಕ್ಕಿಸನು ನೀನತಿಸಹಸಿಗಸುವನು ತೆಜುವೆಯೆಂಬುದನಜಿಯಲಾ ಕೇಳ್ಳ (ಕುವ್ಯಾದ್ರೋ. ಓಗಿ. ಪಂ. ೨೯೪-೨); ನಿನ್ನ ಮಗನತಿಸಹಸಿ ಕೇಳು (ಉತ್ತರಾ. ೭-೭೫). [ಸಂ. ಸಹಸಿನ್]

**ಸಹಸಿಗ** (ನಾ). = ಸಹಸಿ ೨ : ಸಹಸಿಗನ ಹಾವುಗೆಯ ಹಜ್ಜೆಯಿವೆ (ಸಿದ್ಧರಾ. ೨-೩೫); ಸಾರಥಿ ಸಹಸಿಗನ ಸಂತೈಸಿ ತಂದನು ರಾಜಮಂದಿರಕೆ (ಕುವ್ಯಾಕ. ೩-೨೭); ನಿನ್ನವೊಲು ಬಲುಬಾಹು ಸಹಸಿಗ[ಪಾಠಾಂ. ಸಾಹಸ]ರಿನ್ನು ಜನಿಸರು ಜಗದೊಳು (ತೊರರಾ. ೩-೬-೫೩). [ಸಹಸ + -ಇಗ]

**ಸಹಸಿತನ** (ನಾ). ಶೌರ್ಯ; ಪರಾಕ್ರಮ; ಕಲಿತನ : ಕೆಡೆಪಿ ಪಿಡಿದೆತ್ತಿಯೊತ್ತಿ ಕುಸುಬಿ ಕುಸುಕಿಜಿದು ಪೊಸೆದು ಪೂಳ್ಳ ಸ[ಪಾಠಾಂ. ಸಾ]ಹಸಿತನಕೆ ಬೆರಸಿದ ಮಲ್ಲನನೊರಸಿ (ಗಿರಿಕ. ೨-೧೧೫ ವ). [ಸಹಸಿ + - ತನ]

**ಸಹಸಿಸು** (ಕ್ರಿ). ಸಾಹಸ ಮಾಡು; ಪ್ರಯತ್ನಿಸು : ಇಹುದಕಿಂತೊಳಿತಿಹುದು; ಒಳಿತ ಗಳಿಸಲ್ಬಹುದು ಸಹಸಿಸುವೆನದಕೆನುವ ಮತಿಯಿನೇ ಪ್ರಗತಿ (ಮಂಕುಕ. ೨೧೫). [ಸಹಸ + - ಇಸು]

**ಸಹಸ್ತ** (ನಾ). ೧. ಕೈಗಳನ್ನು ಹೊಂದಿರುವುದು. ೨. ಆಯುಧಗಳನ್ನು ಪ್ರಯೋಗಿಸುವುದರಲ್ಲಿ ನೈಪುಣ್ಯ ಪಡೆದಿರುವವನು, — ಕುಶಲನಾದವನು : "ಕೃತಶಿಕ್ಷಾಸ್ತ್ರಂ ಸಹಸ್ತಂ" (ವಸ್ತುಕೋ. ೯೯-೬). [ಸಂ.]

**ಸಹಸ್ಯ** (ನಾ). ಚಾಂದ್ರಮಾನದ ಒಂದು ತಿಂಗಳಿನ ಹೆಸರು; ಪುಷ್ಯಮಾಸ : "ಪುಷ್ಯಮಾಸಮಂ ಸಹಸ್ಯಮೆಂಬುದು" (ಹಲಾಯು. ೧೯-೧೧೪). [ಸಂ.]

**ಸಹಸ್ರ** (ನಾ). ೧. ಒಂದು ಸಂಖ್ಯೆ; ಹತ್ತುನೂರು; ಸಾವಿರ : ಸಹಸ್ರಕಾಷ್ಠದ ಭಾರ ಸದ್ಯೋಘೃತ ಕುಂಭ ನೂಱು (ಪುರಂದ. ಧಾ. ೫-೫೭-೧); ಸಹಸ್ರಭೇದಯುಕ್ತಮಾದ ಸಾಮವೇದಂ . . . ಪ್ರಸಿದ್ಧಸದ್ಮದೊಳ್ ಭವಂ (ಹಾಲಾಸ್ಯ. ೧-೧೭-೩೪). ೨. ಅನೇಕ; ಬಹಳ : ಅತಿರಥಸಹಸ್ರಮಿರಲಪ್ರತಿರಥನೊರ್ವನೆ ಮುಕುಂದನಿಸೆ (ಜಗವಿ. ೧೨-೨೨); ಕಟ್ಟಿದರಜಸ್ರಂ ಸಹಸ್ರಶಿಲ್ಪಿಗಳಲ್ಲಿ ಸ್ಮಾರಕನಿಕೇತನಸ್ತೂಪಮಂ (ಚಿತ್ರಾಂಗ. ೯೦-೨೪೯೨); ಸಮಯಕ್ಕಾಗದ ಅರ್ಥ ಸಹಸ್ರವಿದ್ದರೂ ವ್ಯರ್ಥ (ಗಾದೆ). ೩. [ಗಣಿತ] ಹಲವು ಅಂಕಿಗಳಿರುವ ಸಂಖ್ಯೆಯಲ್ಲಿ ಬಲಗಡೆಯಿಂದ ಎಡಗಡೆಗೆ ಎಣಿಸುವಾಗ ನಾಲ್ಕನೆಯ ಸ್ಥಾನ : ಏಕಂ ದಹಂ ಶತಂ ಸಹಸ್ರಂ . . . ಇಂತು ಚಪ್ಪೀಸತಾಣವರೆ ಸಂಖ್ಯೆಯಕ್ಕುಂ (ಮಂಗರಾ.೧೧೫-೧೨).

ಸಹಸ್ರಾರು = ಅಮಿತವಾದ; ಅಸಂಖ್ಯಾತವಾದ: ಅಸ್ರಾಗ್ನಿ ಪೊತ್ತಿದ ಸಹಸ್ರಾರು ದೀವಿಗೆ ಸೊಡರ್ಮಾಲೆಗಳ್ ನರ್ತಿಸುವ ತಿಮಿರಕಾಳಿಯ ರಸನೆಗಳ ಹೋಲಿ ರಂಜಿಸಿದುವಲ್ಲಿ (ಚಿತ್ರಾಂಗ. ೮೫-೨೩೪೭); ಸುತ್ತಲೂ ನಾನಾಪಕ್ಷಿಗಳ ಸಹಸ್ರಾರು ಕಂಠಧ್ವನಿಗಳು ಕೇಳಿಸುತ್ತವೆ (ಮಲೆಚಿ. ೨). [ಸಂ.]

**ಸಹಸ್ರಕ** (ನಾ). ೧. ಸಾವಿರ; ಸಹಸ್ರ. ೨. = ಸಹಸ್ರ ೩ : ಏಕಂ ತು ಪ್ರಥಮಂ ಸ್ಥಾನಂ ದ್ವಿತೀಯಂ ದಶಸಂಜ್ಞಿಕಂ . . . ಚತುರ್ಥಂ ತು ಸಹಸ್ರಕಂ (ವ್ಯವಹಾ. ೮). [ಸಂ.]

**ಸಹಸ್ರಕರ** (ನಾ). ೧. ಅಸಂಖ್ಯಾತವಾದ ಕಿರಣಗಳು : ಮತ್ತಮತಿಮೈತ್ರಿಯುಂ ಸಹಸ್ರಕರಜ್ಯೋತಿಯುಂ . . . ಕರಮೊಪ್ಪೆ (ಶಾಂತಿಪು. ೧೨-೧೯ ವ). ೨. ಅಸಂಖ್ಯಾತವಾದ ಕಿರಣಗಳುಳ್ಳವನು; ಸೂರ್ಯ : ದಿವಮಂ ಧವಳಿಸಲಿರ್ದ ಸಹಸ್ರಕರ [ಪಾಠಾಂ. ಕಿರಣ]ನಂತೆ ಇರ್ದಪಂ (ನಂಬರ. ೪-೧೮). ೩. ಸಾವಿರಹಸ್ತಗಳನ್ನುಳ್ಳವನು : ಸಹಸ್ರನೇತ್ರನಾಗಳ್ ಸಹಸ್ರಕರನಾದಂ . . . ಎನೆ ವಿರಾಜಿಸಿತು ಹಸ್ತಪದವಿನ್ಯಾಸಂ (ಅಜಿಪು. ೫-೧೯). [ಸಂ.]

**ಸಹಸ್ರಕಿರಣ** (ನಾ). ೧. = ಸಹಸ್ರಕರ ೧ : ಸೂರ್ಯಕೋಟಿಪ್ರಭೆಯ ಬೆಳಗಿನ ಸಹಸ್ರ ಕಿರಣದ ಅಗ್ರಪಟಲದ ಬೆಳಗು ಕೂಡಲಸಂಗಯ್ಯನು (ಬಸವ. ೮೫೪). ೨. = ಸಹಸ್ರಕರ ೨ : ಅನಂತರಂ[ಸಂಪಾದಿತ] ಪಿತೃತರ್ಪಣನುಮಭಿವಂದಿತ ಸಹಸ್ರಕಿರಣನುಂ . . . ಆಗಿ ಕತಿಪಯಪದಂಗಳಂ ನಡೆದು (ಕಾದಂಪೂ. ೬೯). [ಸಂ.]

**ಸಹಸ್ರಕೂಟ** (ನಾ). ಅಸಂಖ್ಯವಾದ ಶಿಖರ : ಸಪ್ತತಳಪ್ರಾಸಾದದ ಮೇಗಿರ್ದರುಂ ದಿಶಾವಳೋಕನಂಗೆಯ್ಯುತ್ತಿರ್ಪನ್ನೆಗಂ ಸಹಸ್ರಕೂಟಾಕಾರಮಪ್ಪುದೊಂದು ಮುಗಿಲಂ ಕಂಡು (ವಡ್ಡಾರಾ. ೧೧೯-೪); ಸಮಯಕ್ಕೆ ಪಂಚಶತವಧಿಕಮಾಗೆ ಸಮಯಿಸಿ ಸಹಸ್ರಕೂಟ ಸಹಸ್ರಾಸ್ರಮುಮಂ ಸಮಯಿಸಲಾರ್ಗಂ ಸಮಯಿಸಿದಳ್ ಸಮನೆ ದಾನಚಿಂತಾ ಮಣಿಯೊಳ್ (ಅಜಿಪು. ೧-೫೯). [ಸಂ.]

**ಸಹಸ್ರಗುಣ** (ನಾ). ಸಾವಿರಪಾಲು ; ಸಾವಿರದಷ್ಟು : ಪಾಯ್ಯುವಿಷುಪ್ರತತಿಗಳಧಿಕಂ ತಚ್ಛರತತಿಯಿಂ ಗಣನೆಗೆ ಸಹಸ್ರಗುಣಮೆಂಬಿನೆಗಂ (ಜಗವಿ. ೧೨-೨೨). [ಸಂ.]

**ಸಹಸ್ರಘ್ನಿ** (ನಾ). ಒಂದು ಬಗೆಯ ಆಯುಧ : ಸಹಸ್ರಘ್ನಿ . . . ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿಸಾಧನವಿಶೇಷಂಗಳಿಂದಲುಂ (ವಿವೇಕ. ೨೬೩). [ಸಂ.]

**ಸಹಸ್ರಜಿಹ್ವ** (ನಾ). ಸಾವಿರ ನಾಲಿಗೆಯುಳ್ಳವನು : ವಜ್ರಾಯುಧಮಹೀಪಾಲನೊಳ್ ಸಹಸ್ರಜಿಹ್ವನಪ್ಪ ನಾಗರಾಜನನೆ ಪೋಲ್ತು ನುಡಿಯೆ (ಶಾಂತಿಪು. ೮-೧೨೬ ವ). [ಸಂ.]

**ಸಹಸ್ರದಂಡ** (ನಾ). ದಂಡನೆಯ ರೂಪದ ತೆರಿಗೆಯಿಂದ ಬರುವ ಆದಾಯ : ನಿಧಿನಿಧಾನನಿಕ್ಷೇಪ ಸಹಸ್ರದಣ್ಡಂ ಮೊದಲಾಗಿ ದುಷ್ಟನಿಗ್ರಹ ವಿಶಿಷ್ಟಪ್ರತಿಪಾಳನಂಗೆಯ್ದು ಸುಖದಿನಾಳುತ್ತಿರೆ (ಎಕ. XI, ಚಿತ್ರದು. ೪೯-೧೯; 947). [ಸಂ.]

**ಸಹಸ್ರದಂಷ್ಟ್ರ** (ನಾ). (ಸಾವಿರ ಹಲ್ಲುಗಳನ್ನು ಹೊಂದಿರುವ) ಒಂದುಬಗೆಯ ಮೀನು; ಪಾಠೀನ: "ವೈಸಾರಿಣಃ . . . ಸಹಸದಂಷ್ಟ್ರಃ, ಪಾಠೀನಃ- ಈ ೧೩ ಮೀನ್" (ಹಲಾಯು. ೧೧೮-೩೬). [ಸಂ.]

**ಸಹಸ್ರದಲ, ಸಹಸ್ರದಳ** (ನಾ). ೧. ಸಾವಿರದಳಗಳನ್ನೊಳಗೊಂಡುದು ; ತಾವರೆ : ಪೊಡವಿಯೊಳಗೆಂದುಂ ಪ್ರಭವಿಸದ ಗಿಡುವಿನೊಳು ಛವಿವಡೆದು ನವಕಂಬಡೆದ ನವ್ಯ ಸಹಸ್ರದಲ [ಪಾಠಾಂ. ಳ] ಶತದಳಮನರ್ಪಿಸುತ (ಬಸವು. ೩೫-೧೩). **ಸಹಸ್ರದಳ:** ೨. [ಯೋಗ] ಶಿರಸ್ಸಿನ ಅಗ್ರಭಾಗದಲ್ಲಿರುವುದೆಂದು ಭಾವಿಸಲಾದ, ಮಗುಚಿಟ್ಟ ತಾವರೆಯನ್ನು ಹೋಲುವ, ಆತ್ಮದ ಪೀಠಸ್ಥಾನವೆಂದು ಹೇಳಲಾಗುವ ಒಂದು ಬಗೆಯ ಕುಹರ; ಶಿರಸ್ಸಿನಲ್ಲಿ ಅಧೋಮುಖವಾಗಿರುವುದೆಂದು ಹೇಳಲಾದ ಸಹಸ್ರದಳಕಮಲ : ಸಹಸ್ರದಳ ತ್ರಿದಳ ಏಕದಳ ಪದ್ಮತ್ರಯಂಗಳು (ವಿವೇಕ.೧೩೪). 'ಸಹಸ್ರದಳಕಮಲ' ಪರಾ. [ಸಂ.]

**ಸಹಸ್ರದಳ** 'ಸಹಸ್ರದಲ' ನೋ.

**ಸಹಸ್ರದಳಕಮಲ** (ನಾ). = ಸಹಸ್ರದಲ ೨ : ಸಂತತಂ ಬ್ರಹ್ಮರಂಧ್ರದ ಸಹಸ್ರದಳಕಮಲಮಂತದರ ಕರ್ಣಿಕಾಮಧ್ಯ ಬಹ ಶಶಿಸೂರ್ಯಕಾಂತಿ ಪ್ರಜ್ವಲಿಪ ತದಾತ್ಮ ಜ್ಯೋತಿರ್ಲಿಂಗಮನುವಾ ಮನೋದೃಷ್ಟಿಯಾ ವೊಂದುಗೂಳಿಸುತ್ತ (ಸವಮೋ.೧೮-೩೦). [ಸಂ.ಸಹಸ್ರದಲಕಮಲ]

**ಸಹಸ್ರದೃಕ್ಕು** (ನಾ). ಸಾವಿರ ಕಣ್ಣುಗಳನ್ನುಳ್ಳವನು; ಇಂದ್ರ : " ಪುರುಹೂತಂ . . . ಸಹಸ್ರದೃಗ್ವೃದ್ಧಶ್ರವಂ . . . ಶಚಿಪಾಲನೆಂದರೆ ಶಕ್ರನಕ್ಕುಂ" (ಮಂಗರಾ. ೧೨-೧). [ಸಂ. ಸಹಸ್ರದೃಶ್]

**ಸಹಸ್ರನಯನ** (ನಾ). = ಸಹಸ್ರದೃಕ್ಕು : ಅಂತು ಸಹಸ್ರನಯನಂ ಸುಖರಸನಿಮೀಲಿತ ನಯನನಾಗೆ (ಅಜಿಪು. ೪-೧೭ ವ). [ಸಂ.]

**ಸಹಸ್ರನಾಮ** (ನಾ). ೧. (ಯಾವುದಾದರೂ ದೇವತೆಯ) ಸಾವಿರ ಹೆಸರುಗಳು : ಲಲಿತಾಸಹಸ್ರನಾಮದಲ್ಲಿ ಏನು ಹೇಳಿದೆ, ಅಪ್ಪಯ್ಯ? (ಮನೋನಂ. ೧೫೪). ೨. ಸಹಸ್ರನಾಮಪೂಜೆ : ಅಮ್ಮನವರಿಗೆ ಕುಂಕುಮಾರ್ಚನೆ, ಸಹಸ್ರನಾಮ, ಅಷ್ಟೋತ್ತರಪೂಜೆ ಎಲ್ಲವನ್ನೂ ಕ್ರಮವಾಗಿ ಮಾಡಿ . . . ಹಾಡಲಾರಂಭಿಸಿದರು (ಹಂಗೀತ. ೧೯೮). ೩. (ಆಲಂ) ಬಯ್ಗುಳು; ನಿಂದೆ : ಸದ್ಯ ಅಷ್ಟಕ್ಕೆ ಏಟು ಹಾಕುವುದನ್ನು ನಿಲ್ಲಿಸಿ 'ಸಹಸ್ರನಾಮ' ಷುರುವು ಮಾಡಿದರು (ಸುವಸಂ. ೨೦). [ಸಂ. ಸಹಸ್ರನಾಮನ್]

**ಸಹಸ್ರನಾಮಪೂಜೆ** (ನಾ). ಒಂದು ನಿರ್ದಿಷ್ಟವಾದ ದೇವತೆಯ ಸಾವಿರ ಹೆಸರುಗಳನ್ನು ಉಚ್ಚರಿಸುತ್ತಾ (ಬಿಲ್ವ, ತುಳಸಿ, ಮಂಗಳದ್ರವ್ಯ ಅಥವಾ

ಯಾವುದಾದರೂ) ಸಾವಿರ ಹೂವುಗಳನ್ನು ಒಂದೊಂದು ಹೆಸರು ಹೇಳುವಾಗಲೂ ಅರ್ಪಿಸುತ್ತ ಮಾಡುವ ಪೂಜೆ, — ಅರ್ಚನೆ : ಬಳಿಕ ಶ್ರೀಕಂಠಶಾಸ್ತ್ರಿಗಳು . . . ಸಹಸ್ರನಾಮಪೂಜೆ ಮಾಡಿ, ಮಂಗಳಾರತಿ ಮಾಡಿ, ತೀರ್ಥ, ಪ್ರಸಾದ ಕೊಟ್ಟರು (ಹಂಗೀತ. ೨೦೭). [ಸಂ. ಸಹಸ್ರನಾಮಪೂಜಾ]

**ಸಹಸ್ರನಾಮಾರ್ಚನೆ** (ನಾ). = ಸಹಸ್ರನಾಮಪೂಜೆ : ದೇವಸ್ಥಾನಕ್ಕೆ ಹೋಗಿ ದೇವರಿಗೆ ಸಹಸ್ರನಾಮಾರ್ಚನೆ ಮಾಡಿಸಿಕೊಂಡು ಬಾ (ರೂಢಿ). [ಸಂ. ಸಹಸ್ರನಾಮಾರ್ಚನಾ]

**ಸಹಸ್ರನಾಮಾವಳಿ** (ನಾ). ೧. (ದೇವರ) ಸಾವಿರ ಹೆಸರುಗಳ ಸಮೂಹ : ಆ ವೃದ್ಧರು ದೇವರ ಸಹಸ್ರನಾಮಾವಳಿಯನ್ನು ಭಕ್ತಿಯಿಂದ ಹೇಳುತ್ತಿದ್ದಾರೆ (ರೂಢಿ). ೨. (ಆಲಂ) ನಿಂದೆಯ ಮೊತ್ತ : ಒಬ್ಬೊಬ್ಬನಿಗೂ ಸಹಸ್ರನಾಮಾವಳಿಯನ್ನು ಹಚ್ಚಿದರು (ಹಸುಹೂ. ೩೮೧). [ಸಂ. ಸಹಸ್ರನಾಮಾವಲಿ]

**ಸಹಸ್ರಪತ್ರ** (ನಾ). ಸಾವಿರದಳಗಳನ್ನುಳ್ಳುದು; ತಾವರೆ : "ಸಹಸ್ರಪತ್ರಂ, ಶತಪತ್ರಂ . . . ಪಂಕಜಂ — ಈ ೧೭ ತಾವರೆ" (ಹಲಾಯು. ೧೧೨-೫೭). [ಸಂ.]

**ಸಹಸ್ರಪದಿ** (ನಾ). ಸಾವಿರಕಾಲುಗಳಿರುವುದೆಂದು ಭಾವಿಸಲಾದ ಒಂದು ಬಗೆಯ ಕೀಟ; ಒನಕೆಬಂಡೆ ಹುಳು : ಸಹಸ್ರಪದಿಗಳಿಗೆ ಪ್ರತಿಭಾಗಕ್ಕೂ ಎರಡು ಜೊತೆ ಒಟ್ಟು ಸುಮಾರು ೨೧೩ ಜೊತೆ ಕಾಲುಗಳುಂಟು (ಕೀಟಬ. ೧೫). [ಸಂ. ಸಹಸ್ರಪದೀ]

**ಸಹಸ್ರಪಾದ** (ನಾ). ೧. ಸಾವಿರ ಪಾದಗಳನ್ನು ಹೊಂದಿದವನು; ವಿಷ್ಣು. ೨. ಸಾವಿರಕಿರಣಗಳನ್ನು ಹೊಂದಿದವನು; ಸೂರ್ಯ. [ಸಂ.]

**ಸಹಸ್ರಫಣ** (ನಾ). ಸಾವಿರ ಹೆಡೆಗಳನ್ನು ಹೊಂದಿರುವುದು; ವಾಸುಕಿ : ನಡೆಗಲ್ಲಂದುಂ ಬಣ್ಣಂ ಕೊಡೆ ನೆಗೆದಪುದುರ್ವಿಯೆಂದು ವಾಸುಗಿ ಪಲವುಂ ಪೆಡೆಯಂ ಶಿಶು ನಡೆವೆಡೆಯೊಳ್ ಪಡೆದಾಂತು ಸಹಸ್ರಫಣನೆನಲ್ ಪೆಸರ್ವಡೆದಂ (ಪಂರಾಮಾ. ೩-೧೨೯). [ಸಂ.]

**ಸಹಸ್ರಫಳ** (ನಾ). ಅಮಿತವಾದ ಫಲ,— ಫಲಿತಾಂಶ : ಪರಮಕಲ್ಯಾಣಾಭ್ಯುದಯಸಹಸ್ರಫಳಭೋಗಭಾಗಿನೀದ್ವಿತೀಯಲಕ್ಷ್ಮೀಸಮಾನೆಯರಪ್ಪ . . . ಮೈಲಳದೇವಿಯರು (ಎಕ. VI (R), ಪಾಂಡವ. ೪೨-೧೦; ?). [ಸಂ. ಸಹಸ್ರಫಲ]

**ಸಹಸ್ರಬಾಹು** (ನಾ). ೧. ಸಾವಿರ ತೋಳುಗಳನ್ನು ಹೊಂದಿದವನು ; ಸಾವಿರ ಬಾಹುಗಳುಳ್ಳವನು. ೨. ಶಿವ. ೩. ಕಾರ್ತವೀರ್ಯ. ೪. ಬಲಿಯ ಮಗ ; ಬಾಣಾಸುರ. ೫. ವಿಷ್ಣು. [ಸಂ.]

**ಸಹಸ್ರಭುಜ** (ನಾ). ಸಾವಿರತೋಳುಗಳನ್ನು ಹೊಂದಿದವನು; ಕಾರ್ತವೀರ್ಯ : ತಟಿದ್ದೈ ಸಹಸ್ರಭುಜನಂ . . . ಪರಶುರಾಮಾಕಾರದಿಂದಚ್ಯುತಾ (ಜಗವಿ.೧-೬೦). [ಸಂ.]

**ಸಹಸ್ರಮಡಿ** (ನಾ). ೧. ಸಾವಿರಪಟ್ಟು ; ಸಾವಿರಪಾಲು : ಸುರರಾಜನ ಸತಿಗೆ . . . ಸಹಸ್ರಮಡಿ ಮಿಗಿಲೆನಿಪಳ್ (ಧರ್ಮಾಮೃ. ೧೦-೧೧). ೨. ಸಾವಿರಪಾಲು ಮಿಗಿಲಾದುದು: ಅದಂ ಬಗೆವೊಡವರಿಂ ನೀವೆಮಗೆ ಸಹಸ್ರಮಡಿಯಪ್ಪುದಱಿಂ ನಿಮಗೆ ಮಾಡಿದ ದಾನಮುಂ ಪಾಲುಕ್ಕಿಮ್ಮಡಿಸುವಂತಿಮ್ಮಡಿಯಕ್ಕುಂ (ಧರ್ಮಾಮೃ. ೧-೧೨೬). [ಸಹಸ್ರ + ಮಡಿ$_2$]

**ಸಹಸ್ರಮೌಳಿ** (ನಾ). ಸಾವಿರತಲೆಗಳನ್ನುಳ್ಳವನು ; ವಿಷ್ಣು. [ಸಂ.]

**ಸಹಸ್ರಲೋಚನ** (ನಾ). ೧. ಸಾವಿರಕಣ್ಣುಗಳನ್ನು ಹೊಂದಿದವನು : ಪರಮನ ನಿರತಿಶಯಾಂಗಸ್ವರೂಪಮಂ ನೆಱೆಯೆ ನೋಡಲ್ . . . ಸುರೇಂದ್ರನುಂ ಗಡ ಸಹಸ್ರಲೋಚನನಾದಂ (ಆದಿಪು. ೭-೧೦೭). ೨. = ಸಹಸ್ರದೃಕ್ಕು : ಅನ್ನೆಗಂ ದ್ವಿತೀಯತೀರ್ಥಕರದಿನಕರೋದಯನಿವೇದಕಮಪ್ಪ ನಿಜಾಸನಕಂಪದಿಂ ಸಮುತ್ಪನ್ನಾವಧಿಬೋಧವಿಲೋಚನಂ ಸಹಸ್ರಲೋಚನನಱಿದು (ಅಜಿಪು. ೪-೭ ವ) ; ಅಂತು ಸಹಸ್ರಲೋಚನಂ . . . ಸಹಸ್ರಪತ್ರಾಯತನೇತ್ರನಂ ನೋಡಿ (ಜಗವಿ. ೪-೧೦೧ ವ). [ಸಂ.]

**ಸಹಸ್ರವೀರ್ಯೆ** (ನಾ). ಒಂದು ಬಗೆಯ ಹುಲ್ಲು; ಗರಿಕೆ : "ದೂರ್ವಾ, ಶತಪರ್ವಿಕಾ, ಸಹಸ್ರವೀರ್ಯಾ . . . ಅನಂತಾ – ೬ ಗರಿಕೆಹುಲ್ಲಿನ ಹೆಸರುಗಳು" (ಸಿದ್ಧಾಂತಿ. ೧೪೯). [ಸಂ. ಸಹಸ್ರವೀರ್ಯಾ]

**ಸಹಸ್ರವೇದಿನಿ** (ನಾ). ಒಂದು ಬಗೆಯ ಔಷಧಿದ್ರವ್ಯ : ಈ ಘುಟಿಕೆ ಭಾವಿಸಲನರ್ಘ್ಯಮಕ್ಕುಂ ವಿನುತಂ ಸಹಸ್ರವೇದಿನಿಯೆಂದು ಭಕ್ತಿಯಿಂದನಘವೇಮಯ್ಯಂಗೆ ನಲಿಯುತಾ ಸಿದ್ಧನತಿವಿನಯದಿಂದಿತ್ತನಾ ಘುಟಿಕೆಯಂ (ಆರಾಚ. ೨-೧೩-೧೧). [ಸಂ. ಸಹಸ್ರವೇದಿನೀ]

**ಸಹಸ್ರವೇಧಿ** (ನಾ). ೧. ಒಂದು ಬಗೆಯ ಸಸ್ಯ; ಪುಲ್ಲಂಪುರುಚೆ : "ಸಹಸ್ರವೇಧೀ, ಚುಕ್ರಃ, ಅಮ್ಲವೇತಸಃ, ಶತವೇಧೀ – ೪ ಹುಳಿಹಚ್ಚೆ ಹೆಸರು, ಬಚ್ಚಲು ಹುಣಸೆ" (ಸಿದ್ಧಾಂತಿ. ೧೪೪). ೨. ಇಂಗು; ಹಿಂಗು : "ಸಹಸ್ರವೇಧಿ, ಜತುಕಂ . . . ರಾಮಠಂ – ೫ ಹಿಂಗು, ಇಂಗಿನ ಪೆಸರುಗಳು" (ಸಿದ್ಧಾಂತಿ. ೨೮೫); ಯಷ್ಟಿಮಧುಕ, ಏಲಕ್ಕಿ, ತವಕ್ಷೀರ, ಸಹಸ್ರವೇದಿEಧಿ∃ . . . ತುರುಚನ ಬೇರಿನ ತಿಗುಡು ಇವುಗಳನ್ನು ಸಮತೂಕದಲ್ಲಿ ಚೂರ್ಣಿಸಿ (ಸಕವೈ. ೮೭). ೩. ಒಂದು ಬಗೆಯ ಬೆತ್ತ ; ನೀರುಹಬ್ಬೆ. [ಸಂ. ಸಹಸ್ರವೇಧಿನ್]

**ಸಹಸ್ರಶೀರ್ಷ** (ನಾ). ಸಾವಿರತಲೆಗಳನ್ನು ಹೊಂದಿದವನು; ಪರಮಾತ್ಮ : ಸಹಸ್ರಶೀರ್ಷನಾದಿಪುರುಷನು ವೇದಪುರುಷನೊಬ್ಬ ಪುರುಷನು (ಬಸವ. ೯೫೫); ವಿನುತಿಸುತ್ತ ಸಹಸ್ರಶೀರ್ಷಾ ಎನಲು ಸಾವಿರತಲೆಗಳೆಸೆವಾತನ ತಲೆಯ ತಾ ನಿನ್ನ ತಲೆಯದು (ಬಸಪು. ೩೮-೬೦). [ಸಂ.]

**ಸಹಸ್ರಾಂತಿಕ** (ಗು). ಸಾವಿರವರ್ಷಗಳ ನಂತರದ : ಭಾಸ್ಕರನನ್ವಿಪಣ್ಣಿತಪತಿಗಳುಂ ಸಹಸ್ರಾಂತಿಕಶಕಕಾಳಯುಕ್ತಾಬ್ದಮಧುಮಾಸಾವಸಾನದೊಳು . . . ಇನ್ನಪುರಾತಿಥಿಗಳಾದರು (ಸೌಇಇ. XX, ೫೨-೩೯; 1077). [ಸಂ.]

**ಸಹಸ್ರಾಂಬಕ** (ನಾ). ಸಾವಿರಕಣ್ಣುಗಳನ್ನುಳ್ಳವನು; ಇಂದ್ರ : ಸಹಸ್ರಾಂಬಕಸೇವಿತ ಮುಕ್ತಿವಧುವನೆಂದುಂ ಕೂಡಂ (ಜನಾಲ. ೧೩-೧೩). [ಸಂ.]

**ಸಹಸ್ರಾಂಬಕಸೂನು** (ನಾ). ಇಂದ್ರನ ಮಗ; ಅರ್ಜುನ : ಸಹಸ್ರಾಂಬಕಸೂನುಗಾದುದು ಮನೋರಥಸಿದ್ಧಿಭವಂ ಮಹೋತ್ಸವಂ (ಶಬಶಂ. ೫-೫೩). [ಸಂ.]

**ಸಹಸ್ರಾಂಶು** (ನಾ). ೧. = ಸಹಸ್ರಕರ ೨ : "ರವಿ ಮಾರ್ತಂಡಂ . . . ಸಹಸ್ರಾಂಶು . . . ತರಣಿ ಸಪ್ತಾಶ್ವನಾದಿತ್ಯನಕ್ಕುಂ" (ವಸ್ತುಕೋ. ೧೧-೬೪). ೨. ಒಂದು ಬಗೆಯ ಮರ: "ಪಿಲು ಸಹಸ್ರಾಂಶು[ಪಾಠಾಂ. ಸಹಸ್ರಾಂಗಿ, ಸಹಸ್ರಾಂಶಿ]ವೆನಲುಗುನಿ" (ಮಂಗರಾ. ೪೪-೪೪). [ಸಂ.]

**ಸಹಸ್ರಾಕ್ಷ** (ನಾ). ೧. ಸಾವಿರಕಣ್ಣುಗಳನ್ನುಳ್ಳವನು : ಸಹಸ್ರಾಕ್ಷನಾದ ಇಂದ್ರನು ಗೌತಮಶಾಪವನ್ನು ಆ ಕಾಲದಲ್ಲಿ ಹಿತಕರವೆಂದು ಭಾವಿಸಿದನು (ತುಳಸೀ. ೯೫). ೨. = ಸಹಸ್ರಾಂಬಕ : ಆಗಳ್ ಸಹಸ್ರಾಕ್ಷಂ . . . ದುಗ್ಧಾರ್ಣವಸಾರಕ್ಷೀರದಿಂದಂ ಮಿಸಿಸೆ ಭವದವಜ್ವಾಳನಂ ಬಾಳನಂ (ಅಜಿಪು. ೪-೫೩ ವ); ವೀರಭದ್ರಾದಿ ಗಣನಿಕರಮಂ ದೈತ್ಯಾರಿ ಸಾರಸೋದ್ಭವ ಸಹಸ್ರಾಕ್ಷಾದಿ ನಿರ್ಜರರುಮಾರಯಲ್ . . . ಹಾರೈಸಿಕೊಳುತಿರ್ಪರ್ (ಆರಾಚ. ೧-೫-೭೯). ೩. ಪರಮಾತ್ಮ; ದೇವರು : ನಿಂದುದಯ್ ವಿಶ್ವಧರ್ಮಸಹಸ್ರಾಕ್ಷಸಾಕ್ಷಿಯೆಂಬಂತೆವೋಲ್ ನಾಕಚುಂಬಿತಋಕ್ಷ ಮೂಕದ ಮೂಕರಾತ್ರಿ! (ಶ್ರೀರಾಮಾ. ೩೦೦-೪೧೫). [ಸಂ.]

**ಸಹಸ್ರಾಗಮ** (ನಾ). ಇಪ್ಪತ್ತೆಂಟು ಬಗೆಯ ಶೈವಾಗಮಗಳಲ್ಲಿ ಒಂದು : ಮತ್ತಮಾ ಸಿದ್ಧಾಂತಭೇದಂಗಳಾವವೆಂದೊಡೆ ಕಾಮಿಕಾಗಮ ಯೋಗಜಾಗಮ . . . ಸಹಸ್ರಾಗಮ . . . ವಾತೂಲಾಗಮವೆಂಬವೇ ಇಪ್ಪತ್ತೆಂಟು ದಿವ್ಯಾಗಮಂಗಳಕ್ಕುಂ (ವಿವೇಕ. ೬೨). 'ದೀಪ್ತ' ಪಠಾ. [ಸಂ.]

**ಸಹಸ್ರಾರ** (ಗು). ೧. (ಚಕ್ರಾಯುಧದಲ್ಲಿ) ಸಾವಿರಮೊನೆಗಳನ್ನುಳ್ಳ; ಸಾವಿರ ಮೊನಗಳನ್ನು ಹೊಂದಿದ : ಸಹಸ್ರದಿನಕರಕರಸ್ಪರ್ಧಿ ಸಹಸ್ರಾರಧರ್ಮಚಕ್ರರತ್ನಪುರಸ್ಸರನುಮಾಗಿ (ಆದಿಪು. ೧೦-೭೭ ವ). (ನಾ). ೨. ಸಾವಿರಮೊನೆಗಳನ್ನು ಹೊಂದಿರುವುದು : ದಿವಮೆಂತಂತೆ ಶತಾರಮಗ್ರಿಮಸಹಸ್ರಾರಂ ಸಹಸ್ರಾರಮುಪ್ರವಿಲಕ್ಷ್ಯಂ . . . ಬಂದುದಿಂದು ವಿಯಚ್ಚಕ್ರದಿನಸ್ತಶಾಲೆಗೆ ಮಹಾಚಕ್ರಂ (ಶಾಂತಿಪು. ೧೦-೧೧೫). ೩. = ಸಹಸ್ರದಲ ೨ : ಪ್ರಾಣಾಯಾಮವಿಧಿಗೆ . . . ಸಹಸ್ರಾರಸಮ್ಮಿತವಾಗಿಪ್ಪ ಪಿಂಡಾಂಡದೊಳು (ವಿವೇಕ. ೧೫೧); ಷಟ್ಚಕ್ರದಗ್ರದ ಸಹಸ್ರಾರವೋ? (ಅನಿಕೇ. ೯-೧೭). ೪. [ಜೈನ] ಹದಿನಾರು ಬಗೆಯ ಸ್ವರ್ಗಗಳಲ್ಲಿ

ಒಂದು; ಷೋಡಶಕಲ್ಪಗಳಲ್ಲಿ ಒಂದು : ಸೌಧರ್ಮ . . . ಸಹಸ್ರಾರ ಆನತ ಪ್ರಾಣತಾರಣಾಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ . . . ಪುಟ್ಟಿ (ವಡ್ಡಾರಾ. ೯೭-೨೭). [ಸಂ.]

**ಸಹಸ್ರಾರಕಲ್ಪ** (ನಾ). = ಸಹಸ್ರಾರ ೪ : ತಾನುಂ ಪದ್ಮಾವತಿಕಂತಿಯರ ಸಾರ ಆಚಾಮ್ಲವರ್ಧನಮಂ ನೋಂತು ಸಹಸ್ರಾರಕಲ್ಪದೊಳ್ದೇವಿಯಾಗಿ (ಚಾವುಂಪು. ೩೫೭); ಓರಂತೆ ತೊಳಗಿ ಪೊಳೆವ ಶತಾರ ಸಹಸ್ರಾರಕಲ್ಪಯುಗಂಗಳ್ ಶೋಭಾರಮಣೀಯಂಗಳ್ (ಸುಕುಮಾ. ೧೧-೬೬). [ಸಂ.]

**ಸಹಸ್ರಿ** (ನಾ). ೧. ಸಾವಿರವನ್ನು ಹೊಂದಿರುವುದು; ಸಾವಿರದಿಂದ ಕೂಡಿರುವುದು. ೨. ಸಾವಿರ ಜನರ ಗುಂಪು. ೩. ಸಾವಿರಮಂದಿಯಿಂದ ಕೂಡಿದ ಪಡೆಯ ಅಧಿಪತಿ : "ಸಾಹಸ್ರಃ, ಸಹಸ್ರಿ - ೨ . . . ಯಾರು ಸಾವಿರದ ಲೆಕ್ಕವುಳ್ಳ ಸೈನ್ಯದಿಂದ ಬಲವುಳ್ಳವರೋ ಅಂತವರ ಹೆಸರುಗಳು" (ಸಿದ್ಧಾಂತಿ. ೨೫೫). [ಸಂ. ಸಹಸ್ರಿನ್]

**ಸಹಸ್ರೋಸ್ರ** (ನಾ). ಅಸಂಖ್ಯಾತವಾದ ಕಿರಣಗಳುಳ್ಳವನು; ಸೂರ್ಯ : ಆಗಸದಿಂದುಗ್ರತ್ವಮಂ ಬಿಟ್ಟವನಿಪತಿಯನಾಶ್ವಾಸಿಸಲ್ ಬಂದಪಂ ತಾನೆ ಸಹಸ್ರೋಸ್ರಂ (ಚಂದ್ರಪು. ೫-೨೦). [ಸಂ.]

**ಸಹಹೇತುಕ** (ನಾ). ಕಾರಣದಿಂದ ಕೂಡಿದುದು; ಕಾರಣಸಹಿತವಾದುದು : ಹೇತುಮದಾಖ್ಯಾನಂ ಸಹಹೇತುಕಮದು ಹೇತುವೆಂಬಲಂಕೃತಿಯಕ್ಕುಂ (ಕಾವ್ಯಾವ. ೬೨೫). [ಸಂ.]

**ಸಹಾ** (ಅ). ಕೂಡ; ಕೂಡೆ; ಸಹ : ಯಿದಕೆ ಸಹಾ ಕೊಡಬೇಕೆಂದು (ಎಕ. VI, ತರೀಕೆ. ೨೨-೨೨; 1681); ಕುದುರೆ ೫೦೦ ಪ್ಯಾದೆ ೬೫೦ ಸಹಾ ಭರ್ತಿಮಾಡಿ (ಹೈದರ. ೨೧); ಇಂಥವರು ಸಹಾ ನಮಗೆ ಪತ್ರದ್ವಾರ ತಿಳಿಸಿದ್ದಲ್ಲಿ (ಮುಂಬಯ್ಯಾ. ೨ ಅಡಿಟ). [< ಸಹ$_2$]

**ಸಹಾಧ್ಯಾಯಿ** (ನಾ). = ಸಹಪಾಠಿ : " ಸಹಪಾಠಿ, ಸಹಾಧ್ಯಾಯಿ " (Classmate. ಪತ್ರಿಸಿ. ೧೭). [ಸಂ. ಸಹಾಧ್ಯಾಯಿನ್]

**ಸಹಾನುಭೂತಿ** (ನಾ). ಅನುಕಂಪೆ; ದಯೆ : ನಿಮಗೆ ಹೆಂಗಸರ ವಿಷಯದಲ್ಲಿ ಒಂದಿಷ್ಟಾದರೂ ಸಹಾನುಭೂತಿಯಿಲ್ಲ ! (ಹಸುಹೂ. ೧೮); ಅವನನ್ನು ಸಹಾನುಭೂತಿಯಿಂದ ನೀವು ನೋಡುತ್ತಿಲ್ಲವೆಂದು ನನ್ನ ಗ್ರಹಿಕೆಯಾಗಿದೆ (ರಂಗರೋ. ೧೨೭). [ಸಂ.]

**ಸಹಾಯ** (ನಾ). ೧. ಸಹಚರ; ಸಂಗಡಿಗ; ಸ್ನೇಹಿತ : ಪಾಲಿಸವೇಟ್ಟುಮನ್ನಯ ಸಹಾಯನ ಜೀವಮಂ (ಕಾದಂಪೂ. ೬೨೦). ೨. ಅನುಯಾಯಿ; ಅನುಚರ; ಸಹಾಯಕ : ದಮಿತಾರಿ ನಿರ್ಗುಣನಪ್ಪ ಸಹಾಯನಂ ಬಿಸುಟ್ಟಂತೆ ಬಿಲ್ಲಂ ಬಿಸುಟು (ಶಾಂತಿಪು. ೪-೪೮ವ). ೩. ಸಮಯದಲ್ಲಿ ಒದಗುವಿಕೆ; ನೆರವು; ಒತ್ತಾಸೆ : "ಸಹಾಯಕೆ ಪೆಸರು ಕೆಲಚು" (ಶಬ್ದಮಂ. ೫೮); ಯಜಮಾನನು ತನ್ನ ಕೆಲಸಕ್ಕೆ ಇತರರ ಸಹಾಯವನ್ನು ಕೇಳುವ ತನಕ ನಮಗೆ ಕೇಡು ಇರಲಿಲ್ಲ (ನೀತಿಚಿಂ. VIII, ೭). [ಸಂ.]

**ಸಹಾಯಕ** (ಗು). ೧. ನೆರವಾಗುವ; ಪೂರಕವಾಗುವ : "ಜಿಲ್ಲಾನ್ಯಾಯಾಧೀಶರು" ಎಂಬ ಪದಗಳ ಅರ್ಥದಲ್ಲಿ . . . ಸಹಾಯಕಸತ್ರನ್ಯಾಯಾಧೀಶರೂ ಸೇರಿರುತ್ತಾರೆ (ಭಾಧಾನ. ೧೭೯). (ನಾ). ೨. ನೆರವು ನೀಡುವ ವ್ಯಕ್ತಿ; ಒತ್ತಾಸೆ ಕೊಡುವ ವ್ಯಕ್ತಿ : ಇರಿವನೊಳಂಬದಿಲೀಪನು ಕಡೆಯವರೆಗೂ ರಾಷ್ಟ್ರಕೂಟಕೃಷ್ಣನ ಸಹಾಯಕನಾಗಿದ್ದನು (ನೊಳಂಬ. ೪೨). ೩. ನೆರವು ನೀಡುವಂಥದು; ಪೂರಕವಾದುದು : ಕೀಟಗಳ ಬೆಳವಣಿಗೆಗೆ ನೀರಿನಲ್ಲಿ ಕರಗುವ ಅನ್ನಾಂಗಗಳು ಬೇಕು ; ಅವು ಜೀವದ್ರವ್ಯದ ಪರಿಣಾಮಕ್ಕೆ ಸಹಾಯಕ (ಕೀಟಬೆ. ೩೦). [ಸಂ.]

**ಸಹಾಯದ್ರವ್ಯ** (ನಾ). ಜನೋಪಯುಕ್ತವಾದ ಉದ್ಯಮ, ಸಂಸ್ಥೆ ಇತ್ಯಾದಿಗಳ ವೆಚ್ಚಕ್ಕಾಗಿ ಖಾಸಗಿ ವ್ಯಕ್ತಿ, ಸಂಸ್ಥೆ ಅಥವಾ ಸರ್ಕಾರವು ಕೊಡುವ ಹಣ : ವರ್ಷಂಪ್ರತಿ ಇಷ್ಟು ಸಹಾಯದ್ರವ್ಯವನ್ನು (Grant-in-aid) ಕೊಡುತ್ತೇವೆಂದು ವಾಗ್ದಾನ ಮಾಡಿ ಅಲ್ಲಿನ ಕಾರ್ಯಗಳಿಗೆ ಸಹಾಯಮಾಡಬಹುದು (ಹಣಪ್ರ. ೨೩೭). [ಸಂ.]

**ಸಹಾಯಧನ** (ನಾ). = ಸಹಾಯದ್ರವ್ಯ : ಸಹಾಯಧನವನ್ನು ಯಾವುದಾದರೂ ರೂಪದಲ್ಲಿ ಒಂದು ರಾಷ್ಟ್ರವು ಕೊಡುತ್ತಿದ್ದರೆ . . . ತಿಳಿಸಬೇಕು (ಅಂತಸಂ. ೧೬೬). [ಸಂ.]

**ಸಹಾಯಾರ್ಥ** (ನಾ). ಬಡಬಗ್ಗರಿಗೆ , ದೀನರಿಗೆ ನೆರವು ನೀಡುವ ಉದ್ದೇಶವನ್ನು ಹೊಂದಿರುವುದು : ಕೈಯಿಂದ ಕೊಡುವುದಲ್ಲದ 'ಸಹಾಯಾರ್ಥ' ನಾಟಕಗಳನ್ನಾಡಿ . . . ಎಂಬತ್ತುತೊಂಬತ್ತುಸಾವಿರರೂಪಾಯಿಗಳನ್ನು ಒದಗಿಸುತ್ತಿದ್ದಳು (ರಂಗನಾ. ೧೮೭); 'ಸಹಾಯಾರ್ಥ', ' ಧರ್ಮಾರ್ಥ' - ಇವೆಲ್ಲಾ 'ಭಿಕ್ಷೆ' ಎನ್ನುವುದಕ್ಕೆ ಪರ್ಯಾಯಪದಗಳೇನೋ (ಹೇಮಕೂ. ೧೩). 'ಧರ್ಮಾರ್ಥ' ಪರಾ. [ಸಂ. ಸಹಾಯಾರ್ಥಂ]

**ಸಹಾಯಿ** (ನಾ). ೧. ಸಹಾಯ ಮಾಡುವವನು; ನೆರವು ನೀಡುವವನು : ದಯದಿಂದ ಬಿಟ್ಟು ಧರ್ಮವಿಲ್ಲ ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ (ಸಮಾಪ. ೧-೨); ಭಕ್ತಸಹಾಯಿಯುಂ ಶಿವಧರ್ಮಕೀರ್ತಿವಿಧೇಯನಂ ತನ್ನಿ (ಬಸವಪು. ೫೯-೬೯). ೨. ಮೈತ್ರಿಯ ಭಾವವನ್ನು ಹೊಂದಿದವನು; ಸ್ನೇಹಿತ : ಜಗದೇವಶರಣನ ಮನೆಗೆ ಬಸವಂ ಭಕ್ತಲೋಕದೊಡನೆ ಸಹಾಯಿಗಳಾಗೆ ನಡೆತಂದು (ಬಸವಪು. ೬೦-೬೨). [ಸಂ. ಸಹಾಯಿನ್]

**ಸಹಾಯಿಗ** (ನಾ). = ಸಹಾಯಿ ೧ : ಸಂತತಾಘಸಹಾಯಿಗನನಶ್ರಾಂತದುರಹಂಕಾರಯುತನಂ . . . ಎನ್ನಂ ಸಲಹು (ಬಸವಪು. ೨೨-೫೦). [ಸಹಾಯ + -ಇಗ]

**ಸಹಿ, ಸೈ** (ನಾ). ೧. (ಒಪ್ಪಿಗೆಯ ಸೂಚಕವಾದ) ಸ್ವಹಸ್ತಾಕ್ಷರ; (ಅಂಗೀಕಾರಸೂಚಕವಾದ) ರುಜು,— ದಸ್ಕತ್ತು : ಶಂಕರನಾರಾಯಣಯ್ಯ ಎಂದು ಇಂಗ್ಲೀಷಿನಲ್ಲಿ ಸಹಿಯಾಯಿತು (ರಂಗವ. ೬೫); ಮಾಟಂಗಿನ ವಿನಂತಿಪತ್ರ ನೋಡಿದ ಬಗ್ಗೆ ಸಹಿ ಕೂಡ ಮಾಡಲಿಲ್ಲವಂತೆ (ಬದುಜ. ೧೫೪). ೨. ಯಥಾರ್ಥವಾದುದು; ನಿಜವಾದುದು : ಅವನು ವಹಿಸಿರ್ಪ ಮೂಜೀವರೆಹಗಾದರೆಂಬಿರವ ಸಹಿಯೆಂಬ ಮಾಳ್ಕೆಯಿಂದೊಚ್ಪುದೆನಲು (ಮನೋವಿ. ೬-೧೨); ಬಹುದಿನದಲಿ ಇದ್ದ ಭವರೋಗ ಹಿಂಗಿತು ಸಹಿ ವಿಷ್ಣು ವಿಜಯವಿಠ್ಠಲವೈದ್ಯನಿಂದಲಿ (ಮೋಕ್ಷದೀ. ೮-೪). **ಸೈ$_2$** : ೧. ರಾಜರು ತಮ್ಮ ಸಂಸ್ಥಾನದ ರಾಜಮೋಹರವನ್ನೂ ಒತ್ತಿ ತಮ್ಮ ಹೆಸರ ಸೈಹಾಕಿ (ರಾಜೇಂದ್ರ. ೧೯).

**ಸಹಿ ಮಾಡು** = ೧. ರುಜು ಹಾಕು; ಸ್ವಹಸ್ತಾಕ್ಷರವನ್ನು ಹಾಕು; ದಸ್ಕತ್ತು ಹಾಕು : ಇದರ ಮೇಲೆ ಪುಸ್ತಕದ ಹೆಸರು ಬರೆದು ತಮ್ಮ ಸಹಿ ಮಾಡಿರಿ (ಆಪೋಲೀ. ೧೫೦). ೨. ನಿಜಮಾಡು; ದಿಟವಾಗಿಸು : ನೀವಿಂತಿಂತು ಸಹಿ ಮಾಡಿ ತೋರ್ಪ ಸಂಬಂಧದಿಂದೆ ಮಹದ ವಿಸ್ತರವು ಸನ್ನಿಹಿತವೆಂದಱಿದೆ (ಮನೋವಿ. ೨-೩೪).

[← ಅರ. ಪಾರ. ಸಹೀಹ್; ಹಿಂ. ಸಹೀ; ಮರಾ. ಸಹೀ, ಸಈ]

**ಸಹಿತ$_1$** (ಗು). ೧. ಸೇರಿದ; ಕೂಡಿದ. (ನಾ). ೨. ಹಿತದಿಂದ ಕೂಡಿದುದು; ಒಳಿತಾದುದು : ಸಹ್ಯವಲ್ಲದುದನ್ನೂ, ಸಹಿತವಲ್ಲದುದನ್ನೂ, ಸಾಹಿತ್ಯವೆಂದು ಕರೆಯುವುದಾದರೂ ಹೇಗೆ ? (ಸಪತಿ. iii . ಪ್ರಸ್ತಾವನೆ). ೩. ಸಮೇತವಾದುದು; ಕೂಡಿದುದು : ಅಂಗಲಿಂಗಸಹಿತ [ಪಾಠಾಂ. ಸನ್ನಿಹಿತ] ವಾಗಿ ಬಂದರೆ ಸಂಗ ನೀನೆಂದು ಮತ್ತೆ ಮನದಲ್ಲಿ ಸಂದೇಹ ಹೊಳೆದರೆ ಬೆಂದೆನಲ್ಲಾ ನಾನು(ಬಸವ. ೪೦೩).೪. [ಗಣಿತ] ಕೂಡುವುದು; ಸಂಕಲನ : "ಯುತಮನ್ವಿತಂ . . . ಸಹಿತಮೆನಲು ಕೂಡಲ್ಕೆ ನಾಮಂ" (ಮಂಗರಾ. ೧೩೦-೧೮); ಯುತಂ . . . ಸಹಿತಂ, ಕೂಡು, ಬತಂ ಇಂತಿನಿತುಂ ಕೂಡೂದಕ್ಕೆ ಹೆಸರು (ವ್ಯವಹಾ. ೧೧). [ಸಂ.]

**ಸಹಿತ$_2$** (ಅ). ಸಮೇತವಾಗಿ; ಒಡನೆ : ದೇವಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡರೆ ನಿಮ್ಮಾಣೆ (ಬಸವ. ೪೫೨); ರಾಯರಾಜಶಿರೋಮಣಿಯ ಕಟಕಾಯ ಬಿಟ್ಟುದು ಬಳಿಕ ಕೊಟ್ಟಿಗೆ ಲಾಯ ಗುಡಿ ಗೂಡಾರ ಸಹಿತ ಪುರೋಪಕಂಠದಲಿ (ತೊರರಾ. ೧-೬-೧೨). [< ಸಹಿತ$_1$]

**ಸಹಿತಂ** (ಅ). = ಸಹಿತ$_2$ : ಸಾಸಿರ್ವರುಂ ಅಱುನೂರ್ವರುಂ ಸಹಿತಂ . . . ಕಾಸಂಪಳ್ಳಿಯಾ ಸಮಭಾಗಮಾನ್ . . . ಕೊಟ್ಟರ್ (ಎಇ. XXI, ೧೭೮-೬; ಸು. ೧೧ನಯ ಶತ); ಮಹಿಳಾಸಹಿತಂ ವಾಹನಸಹಿತಂ ಸಂಗೀತಸಹಿತಮತಿಶುದ್ಧಮನಸ್ಸಹಿತಂ ನಿಜವಿವಿಧಾಯುಧಸಹಿತಂ ನಿಲವೇಟ್ಟಿ ನೆಲೆಯೊಳಿರೆ ದಿಗಧೀಶರ್ (ಶಾಂತಿಪು. ೧೦-೬೨). [ಸಂ.]

**ಸಹಿರಣ್ಯ** (ನಾ). ಚಿನ್ನದ ಸಮೇತವಾದುದು; ಬಂಗಾರದ ಸಹಿತವಾದುದು : ಬ್ರಹ್ಮಪುರಿವೃತಿಗಳನು ಸಹಿರಣ್ಯವಾಗಿ ಧಾರಾಪೂರ್ವಕಂ ಕೊಟ್ಟ ಕ್ರಮ (ಸೌಇಇ. XV, ೧೮೭-೧೦; 1248). [ಸಂ.]

**ಸಹಿಷ್ಣು** (ನಾ). ತಾಳ್ಮೆಯುಳ್ಳವನು; ಸೈರಣೆಯನ್ನು ಹೊಂದಿದವನು : ನೀವುಂ ಸಹಿಷ್ಣುವಾಗಿ ಪಗೆಯಂ ಬಗೆಯೊಳ ಕಾದಿ ಕೊಲ್ವುದು (ಪಂಚತಂ. ೨೦೯-೨೩); ಸೈರಿಸನ್ನಯ ಘಾಯವನು ಘೋರಪ್ರಹಾರಸಹಿಷ್ಣು ಗಡ ನೀನು (ಕುಮ್ಮಾಗ. ೭-೨೩). [ಸಂ.]

**ಸಹಿಷ್ಣುತೆ** (ನಾ). ತಾಳ್ಮೆ; ಸೈರಣೆ : "ಮರ್ಷಃ . . . ಕ್ಷಾಂತಿಃ, ಸಹಿಷ್ಣುತಾ — ಈ ೫ ಸೈರಣೆ" (ಹಲಾಯು. ೧೨೦-೪೦); ನಿಜಕ್ಕೂ ಸತ್ಯ, ಪ್ರೇಮ . . . ಸಹಿಷ್ಣುತೆ, ದಯೆ, ಮಮತೆ - ಇವೇ ಮಾನವಧರ್ಮದ ಮೂಲತತ್ತ್ವಗಳು (ಧರ್ಮಸಾ. ೩). [ಸಂ. ಸಹಿಷ್ಣುತಾ]

**ಸಹಿಸು** (ಕ್ರಿ). ಸೈರಿಸು; ತಾಳು : ಸಹಿಸಲಸಹ್ಯಮಪ್ಪ ಮದನಜ್ವರವೇಗದೆ . . . ಕೆಡೆದು ಪೊಂದಿದನಾ ಯಿಳಿಯಲ್ಲಚೇತನಂ (ಕಾದಂಬ. ೫೭೫); ನೀರು ನೆಳಲಿಲ್ಲ ತನುತಾಪಮಿಂಬಾದುದಿದ ಸಹಿಸಲಳವಲ್ಲ (ವಂಕಾರಾ. ೫-೨-೧೭). [ಸಹನ + - ಇಸು₃]

**ಸಹೃದಯ** (ಗು). ೧. ಒಳ್ಳೆಯ ಮನಸ್ಸಿನ; ಸಹಾನುಭೂತಿಯುಳ್ಳ; ಅಂತಃಕರಣವುಳ್ಳ. ೨. ಹೃತ್ಪೂರ್ವಕವಾದ; ಮನಃಪೂರ್ವಕವಾದ. ೩. ಬುದ್ಧಿವಂತಿಕೆಯುಳ್ಳ; ಪ್ರಾಜ್ಞತೆಯನ್ನು ಹೊಂದಿದ. (ನಾ). ೪. ಸಹಾನುಭೂತಿಯುಳ್ಳವನು : ನಿನ್ನ ಮನಸ್ಸಿಗೆ ನೋವನ್ನುಂಟುಮಾಡುವ ವಿಷಯ ನನಗೂ ಒಂದಲ್ಲ ಒಂದು ವಿಧವಾಗಿ ನೋವನ್ನುಂಟುಮಾಡಿಯೆ ಮಾಡುವುದು . . . ಪತಿಯು ಸಹೃದಯನಲ್ಲವೆ? (ಶಾಂತಲಾ. ೨೮೫). ೫. ಶುದ್ಧಹೃದಯವುಳ್ಳವನು; ಪ್ರಾಮಾಣಿಕ : "ಚಿದ್ರೂಪಃ, ಸಹೃದಯಃ — ಈ ೨ ಲೇಸಪ್ಪ ಮನದವಂ" (ಹಲಾಯು. ೬೧-೨೧೮). ೬. ಪ್ರಾಜ್ಞ; ವಿದ್ವಾಂಸ. ೭. [ಕಾವ್ಯಮೀ] ರಸಗ್ರಾಹಿಯಾದ ಓದುಗ; ಕಾವ್ಯರಸಜ್ಞ; "(ಕವಿಹೃದಯಕ್ಕೆ) ಸಮಾನವಾದ ಹೃದಯವುಳ್ಳವನೇ ಸಹೃದಯ" (ಭಾರಮೀ. ೨೨೦): ನಿರಂತರವಾಗಿ ಕಾವ್ಯದ ಅನುಶೀಲನೆಯಿಂದ ಮಾನಸದರ್ಪಣವು ನಿರ್ಮಲವಾಗಿರಬೇಕು; ವರ್ಣನೀಯವಿಷಯದಲ್ಲಿ ತನ್ಮಯೀಭಾವ ಆಗುವಂತಹ ಯೋಗ್ಯತೆಯಿರಬೇಕು , ಹೃದಯಸಂವಾದ ಸಹಜವಾಗಿರಬೇಕು — ಹೀಗೆ ಯಾರಿರುವರೋ ಅವರೇ ಸಹೃದಯರು (ಧ್ವನ್ಯಾಲೋ. ೧೦ ಅಡಿಟ); ಭಗವಂತನೆ ಕವಿ, ಸಹೃದಯ ನಾಂ! (ಅನಿಕೇ. ೩೦-೨). [ಸಂ.]

**ಸಹೃದಯತೆ** (ನಾ). ೧. ಅಂತಃಕರಣ; ಸಹಾನುಭೂತಿ : ಸಹೃದಯತೆಯೂ ಅವಶ್ಯಕವೆಂಬುದನ್ನು ನೆನಪಿನಲ್ಲಿಡಬೇಕು (ಶಿಕ್ಷದ. ೩೯). ೨. ರಸಗ್ರಾಹಿತ್ವ. [ಸಂ. ಸಹೃದಯತಾ]

**ಸಹೃದಯೆ** (ನಾ). ಒಳ್ಳೆಯ ಮನಸ್ಸನ್ನು ಹೊಂದಿದವಳು : ಅಂತಃಕರಣಜೀವಿಯೂ ಸಹೃದಯೆಯೂ ಆದ ಶಾಂತಲೆಗೆ, ಲಕ್ಷ್ಮಿ ಆಗ ಅಂದ ಮಾತು ಶಾಶ್ವತವಾಗಿ ಎದೆಯಲ್ಲಿ ನೆಟ್ಟುಹೋಯಿತು (ಶಾಂತಲಾ. ೧೨). [ಸಂ. ಸಹೃದಯಾ]

**ಸಹೆ** (ನಾ). ೧. ಭೂಮಿ; ಧರೆ. ೨. ಒಂದು ಮಾಸದ ಹೆಸರು; ಮಾರ್ಗಶಿರ : "ಮಾರ್ಗಶೀರ್ಷಃ, ಸಹಾಃ, ಮಾರ್ಗಃ, ಆಗ್ರಹಾಯಣಿಕಃ - ೪ ಮಾರ್ಗಶೀರ್ಷಮಾಸದ ಹೆಸರುಗಳು" (ಸಿದ್ಧಾಂತಿ. ೩೯). ೩. ಗೋರಂಟಿಯಲ್ಲಿ ಒಂದು ಬಗೆ; ಸಣ್ಣಗೋರಂಟಿ: "ಸಹಾ, ಕುಮಾರೀ, ತರಣಿಃ — ೩ ಸಣ್ಣಗೋರಂಟಿ ಪೆಸರುಗಳು" (ಸಿದ್ಧಾಂತಿ. ೧೨೯). ೪. ಒಂದು ಬಗೆಯ ಹೆಸರುಕಾಳು; ಕಾಡುಹೆಸರು : "ಕಾಡ ಹೆಸಱು— ಮುದ್ಗಪರ್ಣಿ, ಕಾಕಮುದ್ಗ, ಸಹೆ" (ನಾಚಿರಾ. ೬). [ಸಂ. ಸಹಾ]

**ಸಹೇತುಕ** (ನಾ). ಕಾರಣದಿಂದ ಕೂಡಿರುವುದು; ಉದ್ದೇಶಪೂರ್ವಕವಾದುದು : ನಿಜವಾದ ಭಕ್ತಿ ಸಹೇತುಕವಾಗಿರಲಾರದು! (ಕರ್ನಾಕ. ೧೮೧). [ಸಂ.]

**ಸಹೋಕ್ತಿ** (ನಾ). ೧. ಏಕಕಾಲದಲ್ಲಿ ಮಾತನಾಡುವಿಕೆ; ಒಟ್ಟಿಗೆ ಮಾತನಾಡುವಿಕೆ. ೨. [ಕಾವ್ಯಮೀ] ಅರ್ಥಾಲಂಕಾರದ ಒಂದು ಭೇದ; ಒಂದು ವಸ್ತುವಿನೊಡನೆ ಮತ್ತೊಂದರ ಸಹಭಾವವನ್ನು ಸಹೃದಯರು ಮೆಚ್ಚುವಂತೆ ವರ್ಣಿಸುವುದು : ಗುಣಜಾತ್ಯಾದಿಗಳಿಂ ದೊರೆಯೆಣಿಸುವುದು ಸಹೋಕ್ತಿಯೆಂಬುದಕ್ಕುಂ . . . ಅತಿಧವಳಮಾಯ್ತು ಗುಣಸಂತತಿಯೊಡನೆ ಯಶೋವಿತಾನಮಾಶಾಧೀನಂ ಸತತಂ ಪೆರ್ಚಿತ್ತು ನಿಜಾಯತಿಯೊಡನೆ ಮಹಾವಿಭೂತಿ ಪರಮೋದಯನಾ (ಕವಿರಾ. ೩-೧೫೪); ಸಮಕಾಲಮಪ್ಪವೆರಡರ್ಥಮನೊಡನೆಯೆ ಪೇೞ್ವುದದು ಸಹೋಕ್ತಿ . . . ಅಲರ್ದುವೊಡನೊಡನೆ ಕುವಲಯಕುಲಮುಂ ಕುಲಟಾಮುಖಂಗಳುಂ ಮುಗಿದುವು ನಿಶ್ಚಲಯೋಗನಿರತ ಸಂಧ್ಯಾಂಜಲಿಯುಂ ಸರಸಿರುಹವನಮುಮೊಡನೊಡನಾಗಳ್ (ಕಾವ್ಯಾವ. ೬೧೩). [ಸಂ.]

**ಸಹೋಕ್ತ್ಯಲಂಕಾರ** (ನಾ). = ಸಹೋಕ್ತಿ ೨ : ಸಹೃದಯರಂಜಕವಾದ ಸಹಭಾವವಿದ್ದಲ್ಲಿ ಎಂದರೆ ಎರಡುವಸ್ತುಗಳು ಒಟ್ಟಿಗೆ ಇದ್ದುವು ಅಥವಾ ಒಟ್ಟಿಗೆ ಹೋದುವು ಎಂದು ಮುಂತಾಗಿ ವರ್ಣಿಸಿದರೆ - ಸಹೋಕ್ತ್ಯಲಂಕಾರವಾಗುವುದು (ಕೈಪಿಡಿ. ೨೭೪). [ಸಂ.]

**ಸಹೋಢ** (ನಾ). ಮದುವೆಗೆ ಮೊದಲೇ ಗರ್ಭಿಣಿಯಾಗಿದ್ದವಳ ಮಗ : ಕನ್ಯೆಯಲ್ಲಿ ಹುಟ್ಟಿದ ಕಾನೀನ, ಸಹೋಢ ಎಂಬ ಪುತ್ರರು ಆಮೇಲೆ ಅವಳನ್ನು ಮದುವೆಯಾದವನಿಗೂ ಶಾಸ್ತ್ರೀಯವಾಗಿ ಮಕ್ಕಳೇ ಎಂಬುದನ್ನು ನೀನು ಬಲ್ಲೆ (ವಚಭಾ. ೨೫೮). [ಸಂ.]

**ಸಹೋತ್ಥಾಯಿ** (ನಾ). (ಅಭ್ಯುದಯದ) ಒಳಸಂಚಿನಲ್ಲಿ ಸಹಾಯಕನಾದವನು : ಮಹಾರಾಜರ ಅಭ್ಯುದಯವನ್ನೇ ಅವಲಂಬಿಸಿ ಅವರೊಂದಿಗೆ ಸಹೋತ್ಥಾಯಿಗಳಾಗಿ ನಿಂತ ಗಜಾಧ್ಯಕ್ಷ ಭದ್ರಭಟ . . . ಬರೆದುಕೊಟ್ಟಿರುವ ಪ್ರಮಾಣಲೇಖ್ಯಪತ್ರವಿದು (ರಾಕ್ಷಮು. ೧೯). [ಸಂ. ಸಹೋತ್ಥಾಯಿನ್]

**ಸಹೋತ್ಪನ್ನ** (ನಾ). ಒಡಹುಟ್ಟಿದವನು; ಸೋದರ : ತನ್ನಿಱಿದು ಗೆಲ್ದಕೊಳುಗುಳವನ್ನೋಡಲ್ ಚಕ್ರಪಾಣಿಯುಂ ತನ್ನ ಸಹೋತ್ಪನ್ನರುಮೊಡವರೆ (ಪಂಪಭಾ. ೧೪-೨). [ಸಂ.]

**ಸಹೋದರ** (ನಾ). = ಸಹೋತ್ಪನ್ನ : "ಸಹಜಾತಂ ಸಹೋದರಂ ಸೋದರಂ ಭ್ರಾತೃವೆನಲೊಡಹುಟ್ಟಿದಂ" (ಮಂಗರಾ. ೯೨-೧೧); ಸಹೋದರರರೆವೆಂದೊಸೆದಾಳ್ವುದು ಭೃತ್ಯವಿತಾನಮುಂ (ಶಮದ. ೨೨೦ ಪ್ರಯೋ); ಬಾರ್ಕೆ ವರಸಹೋದರ ಕಲ್ಪತರುವೇ (ಕೌಶಿರಾ. ೩೭-೮೦). [ಸಂ.]

**ಸಹೋದರಿ** (ನಾ). ಒಡಹುಟ್ಟಿದವಳು; ಸೋದರಿ : "ಸಹಜೆ ಸಹೋದರಿ ಸಹಜಾತೆ ಭಗಿನಿಯೆನೆ ಪೆಸ[ರಕ್ಕುಂ]" (ವಸ್ತುಕೋ. ೫೫-೧೮); ಬಸವಂ ನಿಜಸಹೋದರಿಯೆನಿಪ ನಾಗಾಂಬಿಕೆಯು ತಾನು ತನಗೆಯಲ್ಲಿರಲಾಗದೆನುತೆಯ್ತಂದು ಮಹಮನೆಯ ಮನೆಗೆ ಬರುತಿರೆ (ಬಸವು. ೩-೮೪); ಅಯೋಧ್ಯಾ ನಗರಿ ಕಿಷ್ಕಿಂಧೆಗಕ್ಕಪು ಸಹೋದರಿ! (ಶ್ರೀರಾಮಾ. ೨೯೩-೨೧೫). [ಸಂ. ಸಹೋದರೀ]

**ಸಹೋದ್ಯೋಗಿ** (ನಾ). ಜೊತೆಯಲ್ಲಿ ಕೆಲಸ ಮಾಡುವ ವ್ಯಕ್ತಿ; ಸಂಗಡ ಉದ್ಯೋಗ ಮಾಡುವ ವ್ಯಕ್ತಿ : ಆಕೆ ಸಹೋದ್ಯೋಗಿಯ ಬೇಡಿಕೆಯನ್ನು ನಿರಾಕರಿಸಲಿಲ್ಲ (ವಾತ್ಸಲ್ಯ. ೨೧೦); ಸಹೋದ್ಯೋಗಿಗಳೂ ಒಲವಿನವರು (ಮನೋನಂ. ೭೬). [ಸಂ. ಸಹೋದ್ಯೋಗಿನ್]

**ಸಹ್ಯ** (ಗು). ೧. ಸೈರಿಸಬಹುದಾದ; ಸಹಿಸಲು ಸಾಧ್ಯವಾದ. ೨. ತಕ್ಕುದಾದ; ಅನುರೂಪವಾದ. ೩. ಬಲವಾದ; ಶಕ್ತಿಯುತವಾದ. ೪. ಇನಿದಾದ; ಹಿತವಾದ : 'ಶ್ರುತಿಸಹ್ಯ' ಪರಾ. (ನಾ). ೫. ಸೈರಿಸಬಹುದಾದುದು; ಸಹಿಸಲು ಸಾಧ್ಯವಾದುದು : ಅವನ ಸೊಕ್ಕಿನ ಮಾತು ಎಲ್ಲರಿಗೂ ಸಹ್ಯವಾಗುವುದಿಲ್ಲ (ರೂಢಿ). ೬. ಹಿತವಾದುದು; ಇನಿದಾಗಿರುವುದು : ಪಠ್ಯಪುಸ್ತಕ ದೋಷರಹಿತವಾಗಿದ್ದರೇನೋ ಅದರ ಪರಿಣಾಮ ಸಹ್ಯವೆನ್ನಬಹುದು (ಶಿಕ್ಷದ. ೨೬೬). ೭. ಆರೋಗ್ಯ; ರೋಗವಿಲ್ಲದಿರುವಿಕೆ. ೮. ಸಹಕಾರ; ನೆರವು. ೯. ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷ, ವಿಂಧ್ಯ ಮತ್ತು ಪಾರಿಯಾತ್ರ ಎಂಬ ಏಳು ಕುಲಗಿರಿಗಳಲ್ಲಿ ಒಂದು : "ಅರುಜಾದ್ರಿ ಮನೋಹರ ಸಹ್ಯವಾಚಕಂ" (ನಾನಾರ. ೧೦೨). ೧೦. (ಗೋದಾವರೀನದಿಯು ಹುಟ್ಟುವ) ದಕ್ಷಿಣದ ವಾಯವ್ಯಪ್ರದೇಶದ ಘಟ್ಟದ ಸಾಲು ಮತ್ತು ಘಟ್ಟದ ಜಿಲ್ಲೆ; ಮಲೆನಾಡು : ಎಲ್ಲಿಯು ಎಲ್ಲವು ಮಹತ್ತೆ ಇಲ್ಲಿ ಈ ಸಹ್ಯ ಮಹಾಬೃಹತ್ತಿನಲ್ಲಿ! (ಪಕ್ಷಿಕಾ. ೮೨-೨೨). [ಸಂ.]

**ಸಹ್ಯತೆ** (ನಾ). ೧. ಸೈರಿಸಿಕೊಳ್ಳುವ ಬಲ; ಸಹನಶಕ್ತಿ. ೨. ಶಕ್ತಿ; ಬಲ; ಕಸುವು : ಅವನ ಬದುಕಿಗೆ ಆ ಮಾತು ಕೊಟ್ಟ ಸಹ್ಯತೆ ಊಹಿಸುವುದಕ್ಕೂ ಅಸಾಧ್ಯ (ಹೊಸಕ್ಷಿ. ೩೯). [ಸಂ. ಸಹ್ಯತಾ]

**ಸಹ್ಯಾದ್ರಿ** (ನಾ). ೧. = ಸಹ್ಯ ೧೦ : ಸಹ್ಯಾದ್ರಿಯ ಪ್ರದೇಶ ಅಥವಾ ಮಲ್ನಾಡ.— ಕಾನಡಾಜಿಲ್ಲೆಯ ಮಧ್ಯಭಾಗದಲ್ಲಿ ಅಂದರೆ ಕೊಂಕಣಪಟ್ಟಿಯ ಪೂರ್ವನೆರೆಯಲ್ಲಿ ಸಹ್ಯಾದ್ರಿಯ ಸಾಲು ದಕ್ಷಿಣೋತ್ತರವಾಗಿ ಇರುತ್ತದೆ. ಇದಕ್ಕೆ ಪಶ್ಚಿಮಘಟ್ಟವೆಂತಲೂ ಅನ್ನುವರು (ಕಭಾಗ. ೫); ಉದಯಿಸುತಿಹನದೊ ಅಭಿನವದಿನಮಣಿ ಸಹ್ಯಾದ್ರಿಯ ಶೃಂಗಾಳಿಯ ಮೇಲೆ (ಕಾನೂರು. ೬೩೭). ೨. ಸ್ಕಂದಪುರಾಣದ ಪ್ರಕ್ಷಿಪ್ತವಾದ ಒಂದು ಭಾಗ; ತುಳುವದೇಶದ ಗ್ರಾಮಪದ್ಧತಿಯನ್ನು ವಿವರಿಸುವ

ಅಧ್ಯಾಯ : ವೇದವ್ಯಾಸಕೃತ ಸ್ಕಂದಪುರಾಣದಲ್ಲಿ ಈ ಸಹ್ಯಾದ್ರಿಖಂಡವಿರುವುದಿಲ್ಲ . . . ಸಹ್ಯಾದ್ರಿ ಎಂಬುದು ನವೀನಕಲ್ಪನಾಗ್ರಂಥವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ (ತುಳುನಾ. ೯೯). [ಸಂ.]

**ಸಳಕ**, ಸಳಗ (ನಾ). ಒಂದು ವಂಶದ ಹೆಸರು : ಸಳಕಗೊರವಂಗೆ ಕರಿಯ ನೆಲಂ (ಕಇಉ. ೪೯-೫-೪೫; 973). **ಸಳಗ** : ಸಳಗ ತಿರಮಣ್ಣಗವುಣ್ಣರ ಮುದ್ದಯಂ ಕಾದಿ ಸ್ವರ್ಗಸ್ತನಾದ (ಎಕ. X, ಮುಳಬಾ. ೨೬೬-೪; ಸು. 900 ?). [?]

**ಸಳಗ** 'ಸಳಕ' ನೋ.

**ಸಳಮಳನೆ** (ಅ). 'ಸಳಮಳ' ಎಂಬ ಶಬ್ದದೊಡನೆ : ನೀಲವ್ವ ಇನ್ನೂ ಸಳಮಳನೆ ಕುದಿಯುತ್ತಿರುವ ಆ ಅನ್ನವನ್ನೆ ನೋಡುತ್ತಲಿದ್ದಳು (ಬರಹಾ. ೧೫೨).

[ಸಳಮಳ$_9$ + - ಅನ್$_1$]

**ಸಳವ** 'ಸಾಳುವ$_1$' ನೋ.

**ಸಳಸಳನೆ** (ಅ). ವೇಗವಾಗಿ; ತ್ವರೆಯಿಂದ : ಅಕಸ್ಮಾತ್ತಾಗಿ ಎಂದೂ ಇಲ್ಲದ ನಾಚುಗೆಯ ಹೂಗಳು ಸಳಸಳನೆ ನನ್ನ ಮೇಲೆ ಸುರಿದ ಹಾಗಾಯಿತು (ಪತಿ. ೫); ಆ ರತ್ನವನ್ನು ಮತ್ತೆ ತನ್ನ ಹೆಡೆಯಲ್ಲಿ ಅಡಗಿಸಿಟ್ಟುಕೊಂಡು ಸಳಸಳನೆ ಹರಿದು ಅದೃಶ್ಯ ವಾಯಿತು (ಕವಿಕೋ. I, ೨೦೦). [ಸಳಸಳ$_9$ + - ಅನ್$_1$]

**ಸಳಿ$_1$** 'ಚಳಿ$_1$' ನೋ.

**ಸಳಿ$_2$** 'ಚಳಿ$_2$' ನೋ.

**ಸಳಿ$_3$** (ನಾ). (ಕಬ್ಬಿಣದ) ಕಂಬಿ; ಸರಳು; ಸಲಾಕೆ : ತಲೆಯು ಹಿಂದೆ ಸೀಟಿನ ಸಳಿಗೆ ಜಜ್ಜಿತ್ತು (ಹೊಸಕ್ಷ. ೧೮೧); ಕಬ್ಬಿಣದ ಸಳಿಯಿಂದ ಅರೆದು, ಹೊಟ್ಟೆಯೊಳಗಿನ ಕರಿಯ ಕಾಳುಗಳನ್ನು ಬೇರೆ ಮಾಡಿದರು (ಕವಪು. ४-೫೬) ; ಕಿಡಕಿಯ ಸಳಿಗಳೊಳಗಿಂದ ನೇಸರ ಕಿರಣಗಳು ಒಳನುಗ್ಗಿದ್ದವು (ಚಿಂದುಟ. ೮೦).

[<— ಮರಾ. ಸಳಈ, ಸಳೀ./ ಸಂ. ಶಲಾಕಾ]

**ಸಳಿಗದಿರ** 'ಚಳಿಗದಿರ' ನೋ.

**ಸಳಿಗೆ** (ನಾ). (ಕರಾ) ದನದ ಕೊಟ್ಟಿಗೆಯ ಬಾಗಿಲಲ್ಲಿ ಆಚೆಯಿಾಚೆ ಸರಿಸಲು ಬರುವಂತಿರುವ ಗೂಟಗಳುಳ್ಳ ಕದ; ಅಡಂಬೆ : ಕಳ್ಳದನಕ್ಕೆ ಸಳಿಗೆ ತಾಡೆ? (ಗಾದೆ).

[ದೇ. ‖ ತುಳು. ಸಲಕೆ, ತಲಕೆ]

**ಸಳಿಯಸಟ್ಟುಗ** (ನಾ). ಒಂದು ಬಗೆಯ ಔಷಧೀಮೂಲಿಕೆ : ಸಳಿಯಸಟ್ಟುಗದ ಬೇರ ನೀರಲ್ಲಿ ಅರದು ಕುಡಿಯಲು ವಿಷಹರ (ವಿಷಚಿ. ೧೧-೫). [?]

**ಸಳಿಳ** 'ಸಲಿಲ' ನೋ.

**ಸಳೀಲ** 'ಸಲೀಲ$_1$' ನೋ.

**ಸಳುಕಿ** 'ಚಳುಕ್ಯ' ನೋ.

**ಸಳುಗ** (ನಾ). ಬಲಿಷ್ಠವಾದ ಗಂಡಾನೆ; ಸಲಗ (?) : ಕೂಚರಸನು . . . ಸೂಜೆಗೊಣ್ಣು ಹೋಹಲ್ಲಿ ಹಡಪದ ಮಲಯ್ಯನು ಒದೆನಿಸಳ ಕುದುರೆ ಸಿನ್ದ ಸಳುಗವ ಹಿಡಿವಲ್ಲಿ ಕಣ್ವಾದ ಸೆಟಿಯ ಮಗ ಕಟ್ಟಪ್ಪನು ಆ ದಳಕೆ ಎದಿರಾಗಿ ಹೊದ್ದು ಹೋಗಿ . . . ಕವಿಳಾಸಕೆ ಸನ್ದನು (ಎಕ. XII, ಪಾವುಗ. ೪೮-೩; ಸು. 1285?).

[IP ಇದು 'ಸಲಗ' ಎಂಬುದರ ಅಪಲಿಖಿತವಿರಬಹುದೆ?]

**ಸಳ್ಳ** 'ಸಲ್ಲೆಹ' ನೋ.

**ಸಳ್ಳಕ** (ನಾ). ೧. ಅಳ್ಳಕ; ಸಡಿಲು : ಅವಳ ತಲೆಯ ಉದ್ದವಾದ ಗುಂಗುರುಕೂದಲು . . . ಸಳ್ಳಕ ಬಿದ್ದು ಎರಡು ಕಿವಿಯನ್ನೂ ಅರೆಅರೆಯಾಗಿ ಮುಚ್ಚಿಕೊಂಡಿರಲಾಗಿ (ಪೇಟಮಾ. ೨೨). ೨. ಸಲಿಗೆ ; ಸದರ : ಸಾಹುಕಾರ ಧರ್ಮದಾಸನು . . . ಸ್ವಕೀಯ ವಿಚಾರದಲ್ಲಿ ಅಷ್ಟು ಸಳ್ಳಕವನ್ನು ಕೊಟ್ಟಿರಲಿಲ್ಲ (ಅದೂಟ. ೭೪); ಅದೆಲ್ಲ ಸರಿ ಅಮ್ಮ, ಆದರೂ ನಾ ತೀರಾ ಸಳ್ಳಕ ಆಗಬಾರದು (ಸಣ್ಣಕ. ೯-೪೧).

[ದೇ. ‖ ತಮಿ. ಚಟುಕ್ಕಮ್; ತೆಲು. ಸಲಿಕ = ಕಂಪನ]

**ಸಳ್ಳಿ** (ನಾ). ೧. (ಸೌತೆಕಾಯಿಯಿಂದ ತಯಾರಿಸುವ) ಒಂದು ಬಗೆಯ ಉಪ್ಪಿನಕಾಯಿ : ಸಪುತೆಯ ಸಳ್ಳಿ ಬಾಳೆಯ ಹಣ್ಣಿನ ಸೀಕರಣೆಯನು ಪುಲ್ಲಾಕ್ಷಿಯ ರಿಕ್ಕಿದರು (ಜ್ಞಾನಚ. ೩೯-೧೧೪). ೨. ಒಂದು ಬಗೆಯ ಮೇಲೋಗರ :'ಮೇಲೋಗರ' ಗಳಲ್ಲಿನ ಕೆಲವು ಹೆಸರುಗಳು . . . 'ಮುದ್ದೆಹುಳಿ', 'ಸಳ್ಳಿ', 'ಪಳದ್ಯ', 'ಕೊಚ್ಚಿಸಳ್ಳಿ' ಇತ್ಯಾದಿ (ಕಸಂಸ್ಕೃ. ೨೯೫). [<— ತುಳು. ತಲ್ಲಿ, ಸಳ್ಳಿ , ತಳ್ಳಿ]

**ಸಳ್ಳುಗುರು** 'ಸೆಳ್ಳುಗುರ್' ನೋ.

**ಸಳ್ಳಿ** ' ಸರ್ಲೆ' ನೋ.

**ಸಱ್**, ಸರ್$_1$ (ನಾ). ವೇಗವನ್ನು ಸೂಚಿಸುವ ಒಂದು ಅನುಕರಣಶಬ್ದ: ಸಱ್ೞಂಬ ಘರಿಲೆಂಬ . . . ಭೋರೆಂಬ ಕೂರಸಿಗಳುರವಣೆಯ ದನಿಯಡಸುತಂ ಪುಟ್ಟೆ (ಇಪರ. ದೇ. ೪೧-೨೬). **ಸರ್$_1$** : ಬೆಕ್ಕು ಸರ್ ಎಂದು ಕಿಟಕಿಯ ಕಡೆಗೆ ಓಡಿತು (ರೂಢಿ).

**ಸಱಕನೆ**, ಸರಕ್ಕನೆ, ಸಱಕ್ಕನೆ (ಅ). ತ್ವರಿತವಾಗಿ; ವೇಗವಾಗಿ : ಸಱಕನೆ ಸೀತಡೆ ಪಱಿರಂ ಜಱದಡೆ ಕೆಮ್ಮಿದಡೆ . . . ಕುಱುಪಿಂಗೆ ಪಾಱ್ಪರೆಸೆವರ್ ತಮ್ಮೊಳ್ (ಸೂಕ್ತಿಸು. ೮-೧೨೪); ಇರದೊಮ್ಮೆ ನಡೆಯುತ್ತ ಸಱಕನೇ ಸೀತಿಹರೆ ಅಱಿದರಡಿಯಿಡದೆ ನಿಲ್ಲುವರು (ಸರ್ವಜ್ಞ. ೧೫೯೮). **ಸರಕ್ಕನೆ** : ಗೌಡರು ಸರಕ್ಕನೆ ಹಿಂತಿರುಗಿ ಹೋಗಿ ಸ್ನಾನಮಾಡಿದರು (ಕಾನೂರು. ೩೭೬); ಸರಕ್ಕನೆ ಅದನ್ನು ಅಳಿಸಿದರು (ಮೂರುದಾ. ೬೬). **ಸಱಕ್ಕನೆ** : ತುಱುಕರು ಬಂದರೆ ಸಱಕ್ಕನೆ ಏಳಬೇಕು (ಪುರಂದ. ೧-೧೭೯-೨).

[ಸಱಕ್$_9$ + - ಅನ್$_1$]

**ಸಱಕ್ಕನೆ** 'ಸಱಕನೆ' ನೋ.

**ಸಱಡು**, ಸರಡೆ (ನಾ). ಸಾಲು ; ಪಂಕ್ತಿ : 'ಕಲ್ಸಱಡು' ಪರಾ. **ಸರಡೆ** : ಆ ಪುರದ ನೈಋತ್ಯದ ಸರಡೆಯ ಕೋಣ ಬಯಲ ಗದ್ದೆ ಕತ್ತವಿಯ ಘಳೆಯೊಳು ಮತ್ತರು ಪನ್ನೆರ ಡುಮಂ (ಎಕ. VII, ಶಿಕಾರಿ. ೧೨೫-೨೮; 1019); ಚಂಚರಿವಳ್ಳದ ತಿ(ತೀ)ರಮೆ ಸನ್ನಾ ಬೆಳ್ಗಲ್ಲ ಸರಡೆ (ಇಆ. VIII , ೨೧೩-೨೭; 10ನೆಯ ಶತ). [?]

**ಸಱನಾತಿ** (ನಾ). ವಂದನೆ; ನಮಸ್ಕಾರ; ಶರಣು : ಮಿಱುಪ ಭಕ್ತರ ಕಂಡೊಡವರಡಿಗೆ ಸಂತಸದೆ ಸಱನಾತಿ ಸಱನಾತಿ ಸಱನಾತಿ ಎಂದು ಸಲೆ ತಱಿಸಂದು ವಂದಿಸುತ್ತ . . . ಕಱಿಗೊರಲನಂತ್ಯಜನ ವೇಷದಿಂ ಬಂದನು (ಅರಾಚ. ೧-೭-೧೧).

[IP ಇದು 'ಶರಣಾರ್ಥಿ' ಎಂಬುದರ ಅಪಲಿಖಿತ]

**ಸಱಸಱ**, ಸರಸರ (ನಾ). (ವೇಗವನ್ನು ಸೂಚಿಸುವ) ಒಂದು ಅನುಕರಣಶಬ್ದ : 'ಸಱಸಱನೆ' ಪರಾ. **ಸರಸರ** : 'ಸರಸರನೆ' ಪರಾ.

**ಸಱಸಱನೆ**, ಸರಸರನೆ (ಅ). ವೇಗವಾಗಿ; ಶೀಘ್ರವಾಗಿ : ಸಱಸಱನೆ ನಡದು ಬಂದಂ (ಏಕಾರ. ದೇ. ೧೧೬-೨೫); ನರರು ತವತವಗಲ್ಲಿಗಲ್ಲಿಗೆ ಸಱಸಱನೆ ತತ್ಪಥವನಿತ್ತೋ ಸರಿಸಲರಿದರಿದೆನುತ ಲೋಕಂ ಹೊಗಳುತಿರಲು (ಬಸಪು. ೮-೮). **ಸರಸರನೆ** : ಕೆಂಪಿ ಸರಸರನೆ ಹೊರಟೇಹೋದಳು (ಕುಡಿಕೂ. ೧೪೩). [ಸಱಸಱ + - ಅನ್$_1$]

**ಸಱಸಱಿಕೆ** (ನಾ). ತ್ವರೆ; ಆತುರ : ವರುಷಾಱು ತಿಂಗಳೊಳಗೆ ಮದುವೆಗೆ ಸಲ್ವ ಹರೆಯದ ಕೋಮಲಾಂಗಿಯರು ಸಱಸಱಿಕೆಯೊಳೆಯ್ದುತಿದ್ದರು ಜಾತಿಸಿಂಗರಗೂಡಿ (ಭರಚ. ೪೩-೩೦). [ಸಱಸಱ + - ಇಕೆ]

**ಸಱಸಱಿಸು**, ಸರಸರಿಸು (ಕ್ರಿ). ತ್ವರೆಯಿಂದ ಬರು; ಲಗುಬಗೆಯಿಂದ ಬರು : ದಿಙ್ಮೂಢರಾಗಿ ನಿಲಲುಂ ಸಱಸಱಿಸಿ ಪೋಗಲುಮಱಿಯದೆ ಕುಱುಕುಱು ಮೆಟ್ಟುತ್ತುಮಿರ್ಪಿನಂ (ಅರ್ಧನೇ. ೭-೪೪ ವ); ಸಱಸಱಿಸಿ ಬಳಿಕಾ ಮುನೀಂದ್ರರು ಸರಸಿಜಾಕ್ಷನ ಸಂದರುಶನಕೆ ಬರಲು (ತೊರರಾ. ೧-೧೮-೧೯). **ಸರಸರಿಸು** : ಆ ಸಭೆಗೆ ಸರಸರಿಸಿ ಜ್ಞಾನನಿಧಿ ನಾರದಮಹಾಮೌನಿಯೈತಂದನು (ವೆಂಕಾರಾ. ೨-೨೧-೨೬). [ಸಱಸಱ + - ಇಸು$_1$]

**ಸಱಿ$_1$**, ಜರಿ$_3$,ಜಱಿ$_2$, ಸರಿ$_3$ (ನಾ). ೧. ಬೆಟ್ಟದ ಇಳಿಜಾರು ಪ್ರದೇಶ; ಕೊಳ್ಳ; ಪ್ರಪಾತ : "ಅಱೆಯಟ್ಟು ಕಮ್ಮರಿಗಳೊಳ್ ಸಱಿ" (ಶಬ್ದಮಂ. ೧೧೮); ತಳತಳಿಸಿ ತೊಳಗಿ ಬೆಳಗುವ ಪಳಿಕಿನ ಸಱಿಯೊಂದು ಮಱೆಯೊಳಿರ್ದರಲೆ ಮಹೋಜ್ವಳತುಹಿನಕಿರಣ ಮಂಡಲದೊಳಗಣ ಹರಿಣಂಬೊಲೊಪ್ಪಿ ತೋಱಿತ್ತಾಗಳ್ (ಕಾವ್ಯಸಾ. ೧೦೫೦ ಶೂದ್ರಕ); ಪರಿವುರಿದಟ್ಟು ಕಟ್ಟು ಸಱಿಯಂ ಹೊದಱಂ ಪುಗಿಸು . . . ಎನುತಿರ್ಪ ಬೇಡರಬ್ಬರಕಿರದೊಂದನೊಂದೆಡಹುತಾಕುಳಮಾಯ್ತು ಮೃಗೀಮೃಗವ್ರಜಂ (ಮಹಾಸೇ. ೨-೧೫). ೨. (ಕಮ್ಮರಿಯ ನೆತ್ತಿಯಲ್ಲಿರುವ) ಕೋಡುಗಲ್ಲು; (ಕೊಳ್ಳದ ತುದಿಯಲ್ಲಿರುವ) ಕೋಡುಗಲ್ಲು : ಸಱಿಯನೇಱಿ ನೆಲಕ್ಕೆ ಬೀಟ್ಟು . . . ಸುಣ್ಣಮಂ ಬಱೆದೆ ತಿಂಬೆಗ್ಗನಂ ಪೋಲ್ಕುಂ (ಧರ್ಮಾಮೃ. ೧೩-೧೩೪); ಹಿರಿಯ

ಸೞಿಯಲ್ಲಿ ನಿಂದೂರ್ಧ್ವಬಾಹುವಾಗಿಯೆ ಬಾಯ ತೆಱೆದು ವಾಯುವ ಭಕ್ಷ್ಯವಾದಂದು ತಲೆಯಿಟ್ಟು ಬಿಱುವಿಸಿಲನಾಂತಿರಲು ಕಂಡು (ಸಿದ್ಧರಾ. ೨-೭೭). ೩. ಬಂಡೆ; ಶಿಲೆ ; ದೊಡ್ಡ ಹಾಸುಗಲ್ಲು : ವಿಕಸಿತಸರಸಿಜಮಂ ಸೞಿಯೊಳಱಸುವಂತಾಗಿರ್ಕುಂ (ಆದಿಪು. ೯-೧೦೩); ವಾಯುವ್ಯದೊಳ್ ಪಾಪಿಯ ಸೞಿಯುಂ ಬಡಗಲು ವೇಲಿವಿದಿರುಂ . . . ಸೀಮೆ (ಸೌಇಇ. IX - i, ೧೨೧-೪೯; 1057); ಕೆಱೆಗಳಲಿ ಧುಮ್ಮಿಕ್ಕಿ ಮುಳುಗುತ ಸೞಿಗಳಂ ತಾವಡರುತಂ. . . ಅಖಿಳಜ್ಞನರು ಹೊರಳುತಿರಲು (ಬಸಪು. ೫೨-೧೫). ೪. ಬ್ಬಾಂದು ಕಲ್ಲು; ಗಡಿಕಲ್ಲು : ದಿನರಾತ್ರಿಗಳನಳಿದು ಹೊಲಮೇರೆಯಲಿ ನೆಡಲೆಂದು ವರುಣ ನಿಲಿಸಿದ ಹವಳದೊಂದು ಸೞಿಯೊ . . . ಎನಿಸಿ ಕಡೆವಗಲ ರವಿ ಕಣ್ಗೆ ಸೊಗಸಿರ್ದನು (ಹಚಕಾ. ೩-೭೩). ೫. (ಆಲಂ) ಕಾಠಿಣ್ಯ; ಕರ್ಕಶತೆ : 'ಸೞಿಮೊಲೆ' ಪರಾ. ೬. ಹಿರಿದು; ದೊಡ್ಡದು : 'ಸೞಿಗಲ್' ಪರಾ. ೭. ಶಕ್ತಿ; ಕಸುವು : 'ಸೞಿದಲೆ' ಪರಾ. ಜರಿ$_3$ : ೧. "ದರಾ, ದರೀ- ಈ ೨ ಜರಿ" (ಶಾಶಕ್ಯ. ೧೪೧). ಜೞಿ$_2$ : ೧. ಕುರುಡನಿಗೆ ದಾರಿಯ ತೋಱಿದಾತಗೆ ಮುನಿದು ಜಱಿಗೆ ನೂಕಿದಡವನು ಏನು ಮಾಡುವನು (ಕನಕ.೧೪೧-೩); ಸ್ಯೆಗಡೆದುದೊ ಭದ್ರೇಭ ಜಱಿಯೊಳಗೆನುತ ಕೂಗಿದರು (ಉತ್ತರಾ. ೨೨-೩೯). ಸರಿ$_3$: ೧. ಗುಲ್ಮ ಸರಿ ಡೊಣೆ (ರುಕ್ಮಾಂಗ. ೯-೩೫).

[ದೇ. || ತಮಿ. ಚರಿ, ಚರಿವು; ಮಲ. ಚರಿವು; ತುಳು. ಜರಿ; ತೆಲು. ಚಱಿ, ಚಱಿಯ]

**ಸೞಿ$_2$, ಚರಿ$_2$, ಸರಿ$_4$** (ನಾ). ೧. ಸೋಕಿದ ಸ್ಥಳಕ್ಕೆ ಮೆತ್ತಿಕೊಳ್ಳುವ ಗುಣಧರ್ಮವಿರುವ ಪದಾರ್ಥ,— ಜಿಗುಟಾದ ವಸ್ತು; ಅಂಟು :"ಸೞಿ ಪರಿಸನಗಳೊಳಗಂಟು" (ಶಬ್ದಮಂ. ೯೧); ಚಿನ್ನ ಲೋಹಾದಿಗಳು ಕರಗಿ ಒಂದುಗೂಡುವುದಲ್ಲದೆ ಮಣ್ಣು ಬೆಂದು ಹಿಂಗಿವೋದಾದುದು ಸೞಿಯಿಂದ ಒಂದುಗೂಡುವುದ (ಸಕವ. I, ೫. ೪೩೧-೨೬); ಮೊಲೆ ಗಲ್ಲ ತೋಳ್ ಕೊರಲಲ್ಲಿ ತೀವಿ ಸೞಿಯಿಂ ಬರೆದ ಪಂಸೆ ಲತೆಗಳು ಪತ್ರವಲ್ಲಿ ಮಕರಿಕೆಯೆನಿಕ್ಕುಂ (ಮಂಗರಾ. ೧೦೦-೨೫). ೨. ಮುದ್ದೆ; ಮಿದ್ದೆ : ಹೊತ್ತುವುದು ಸೞಿಯಹುದು . . . ವೊಣಗಿಹುದು ದೋಷವಶನಕ್ಕೆಂಟು ತೆಱನಪ್ಪುದು (ಸೂಪಶಾ. ೩-೧). ೩. ದೋಸೆ, ಕಡುಬು ಮುಂತಾದುವು ಮೆದುವಾಗಲು ಅಕ್ಕಿಯೊಡನೆ ಸೇರಿಸುವ ಉದ್ದು, ಮೆಂತ್ಯ ಮುಂತಾದುವು; ಹುದುಗು : ಉದ್ದಿನ ಸೞಿಯನಿಕ್ಕಿ ತುಪ್ಪವಂ ಮತ್ತದಕೆ ಬಿಟ್ಟು ಕೆಂಪಾಗುವಂದದಿ ಹಸನ ಮಾಡಿ ಪಾಕವ ಮಾಳ್ಪುದು (ಸೂಪಶಾ. ೪-೪೯). ೪. ರಸ; ದ್ರವ : ಸೞಿಯನಿಟ್ಟಳವಱಿಕೆ ರೇಖೆಯ ನಿಱಿಗೆ ಬಣ್ಣದ ಜಾತಿ ಭಾವದ ನೆಱವಣಿಗೆಯಿಂ ಬಲಿದ ನಿಪುಣತೆ ಕಣ್ಗೆ ಸೊಗಯಿಸಲು . . . ಮಣಿಭಿತ್ತಿಗಳೊಳದು ಪ್ರಜ್ವಳಿಸೆ ನೋಡಿದನು (ಕುಮಾರಾ. ೩-೫೧). ೫. ಅಂಬಲಿ; ಗಂಜಿ : ಎತ್ತಿದ ಪತಾಕೆಯೊಳಂ ಸುತ್ತಿದ ಬೇವಿನ ದಂಡೆಯೊಳಂ ಸೆಱೆಗೆಯ್ದು ಸೞಿ[ಪಾಠಾಂ. ಸೞೆಗೆ]ಯೊಳಂ . . . ಕೈಗ್ಗೆದು.(ಅನಂಪು. ೧೧-೬೨ ವ). ೬. (ಆಲಂ) ಬೆಸುಗೆ; ಸಂಬಂಧ : ಸೞಿ ಬಿಡದಪ್ಪು ರಸವನೊಸರ್ವಿಂದುಟಿ ಕುಱುಪನಿಡುವ ಕೂರುಗುರಳಿದಲಸಿಕೆ ನೆಱೆ ಸೊಗಯಿಸಿದುವು ನವಸುರತಕ್ರೀಡೆಯೊಳಾ ದಂಪತಿಗೆ (ಜಯಕಾ. ೮-೫೫). ಚರಿ$_2$ : ೧. ಹತ್ತಿಯ ಬಟ್ಟೆಗೆ ಹುಣಸೆಬೀಜದ ಚರಿಯನ್ನು ಸಮತಲವಾಗಿ ಮೆತ್ತಿ . . . ಕಡಿತಗಳನ್ನು ಸಿದ್ಧಪಡಿಸುತ್ತಿದ್ದರು (ಕನ್ನಸಂ. ४೦); ಇದಕ್ಕೆ ಹುಣಸೆಬೀಜದ ಚರಿಯನ್ನು ಲೇಪಿಸಿ ಬಳಿಕ ಇದ್ದಲಿನ ಪುಡಿ ಬಳಿದು ಕಪ್ಪುಬಣ್ಣಕ್ಕೆ ತಿರುಗಿಸಿರುತ್ತಾರೆ (ಭಾರಪ. ೧೩ ಪೀಠಿಕೆ). ಸರಿ$_4$: ೫. ನಮ್ಮ ದೇಶದವರು ಜೋಳ ಕುದಿಸಿ ಸರಿ ಮಾಡಿ (ಮುಂಬಯಿ. ೧-೩೪).

[ದೇ. || ತೆಲು. ಚರಿ, ಚರಿಯ, ಸರಿ]

**ಸೞಿಕಲ್** 'ಸೞಿಗಲ್' ನೋ.

**ಸೞಿಕು** (ನಾ). ಸಂಪರ್ಕ; ಸಂಬಂಧ : ನಾನು ನೀನೆಂಬುಭಯದ ಸೞಿಕಿನಿಂ ಮನವೆಂಬುದು (ಮನೋವಿ. ४-೩). [< ಸೞಿ$_2$]

**ಸೞಿಗ** (ನಾ). ಬಲಶಾಲಿ; ಬಲಿಷ್ಠ : ಸೞಿಗರೆದ್ದುದು ಮೂಱುಕೋಟಿಯ ಸುರರು (ಕುಮಾಅ. ೧೨-೩೯); ಮುಱಿದು ಬಾಗಿಲುಗಳನು ಸಂಧಿಸಿ ಸೞಿಗ ರಕ್ಕಸ ಕಿಂಕರರು ನೆಲನಱಿಚೆ ಹೂಣಿಸಿ ಹೊತ್ತರು . . . ರಕ್ಕಸನ (ತೊರರಾ. ೫-೮-४೦).

[ಸೞಿ$_1$ + -ಗ$_2$]

**ಸೞಿಗಲ್, ಸೞಿಕಲ್** (ನಾ). (ಆಲಂ) ದೊಡ್ಡ ಬಂಡೆ ; ಹೆಬ್ಬಂಡೆ : ಸೞಿಗಲ್ಲಂ ದಬ್ಬುಕದಿಂದಿಱಿದೊಡೆ ಕಿಡಿ ಪಾಱುವಂತೆ (ಅರ್ಧನೇ. ೩-೧೮). ಸೞಿಕಲ್ : ಬೆಟ್ಟಗಳಾಗಿ ಸೞಿಕಲ್ಲಳಾಗಿ ಗುಂಡುಗಳಾಗಿ . . .ಮಾಯೆಯೊಳುಱುಬಿ ರಕ್ಕಸರ್ ಕೊಲುತಿರ್ದರು (ಚೆಬಪು. ೩೨-೩೭). [ಸೞಿ$_1$ + ಕಲ್$_3$]

**ಸೞಿಗುಂಡು** (ನಾ). = ಸೞಿಗಲ್ : "ಗಿರಿಯ ಶಿರದಿಂದುರುಳ್ವ ಸೞಿಗುಂಡುಗಳ್ ಗಂಡಶೈಲಂಗಳೆಂದೆನಿಕ್ಕುಂ"(ಮಂಗರಾ. ೨೯-೧). [ಸೞಿ$_1$ + ಗುಂಡು]

**ಸೞಿಗೊಳ್$_1$** (ಕ್ರಿ). (ಆಲಂ) ಬೊಜ್ಜುಬರು ; ಡೊಳ್ಳಾಗು : ಬಿಟ್ಟು ನಿಱಿಗೊಂಡ ಕುಚಂ ಸೞಿಗೊಂಡ ಪೆರ್ಬಸಿಱ್ ಬಿಟ್ಟಪುಗೆಟ್ಟ ತೋಳ್ ತೊಡೆ (ಸೂಕ್ತಿಸು. ೮-೩೬೪).

[ಸೞಿ$_1$ + ಕೊಳ್$_1$]

**ಸೞಿಗೊಳ್$_2$** (ಕ್ರಿ). ಅಂಟಿಕೊಳ್ಳು ; ಹತ್ತಿಕೊಳ್ಳು; ತಗುಲಿಕೊಳ್ಳು: "ಜಿಗಿಲ್ತುದೆಂದು ಸೞಿಗೊಂಡುದು" (ಕಶಸಾ. ೫४-೧೮೮); "ಜಗಿಲ್ತುದು ಸೞಿಗೊಂಡುದು" (ಕವಿಕಂ. ೭೭). [ಸೞಿ$_2$ + ಕೊಳ್$_1$ ]

**ಸೞಿದಲೆ** (ನಾ). (ಆಲಂ) ಬಲಿಷ್ಠವಾದ ತಲೆ : ಅಱಗುಲಿಯಂ ಮುನ್ನೆಮ್ಮಗೞಿಗಳಂ ತಱಿದಿಂದ್ರನನಾ ಸಗ್ಗಮನನ್ನೀ ಸೞಿದಲೆಯಿಂ ಪೊತ್ತಂಬುಜಜನ್ಮಾಂಡದ ಪೊಱಗಡೆಗಾಗಿ ನುಱಿಯುಪ್ಪದಂದದಿ ಹಾಕದೊಡನಗೇತಱ ದೊಡ್ಡಿತ್ತು (ಜಯಕಾ. ೧-೩೩). [ಸೞಿ$_1$ + ತಲೆ$_1$ ]

**ಸೞಿದೊಡಕು** (ನಾ). ಕಠಿಣವಾದ ಸಮಸ್ಯೆ : ಮಾತಿನಂತುಟಲ್ಲ ಶಿವಾಚಾರದ ಸೞಿ [ಪಾಠಾಂ. ಪರಿ, ಶರಿ, ಸಿರಿ] ದೊಡಕು ಕಾಣಿರಣ್ಣಾ (ಅವಚಂ. ೧೧೦-೫೦೦); ಎನ್ನ ಅಜಗಣ್ಣನಿಕ್ಕಿದ ಸೞಿದೊಡಕಿಂಗೆ ಬೆಱಗಾದೆನು (ಶೂನ್ಯಸಂ. ೨೮-೨೧).

[ಸೞಿ$_1$ + ತೊಡಕು$_3$ (< ತೊಡಂಕು$_3$)]

**ಸೞಿಮಿಂಡಿ** (ನಾ). ೧. ಪ್ರಾಯಕ್ಕೆ ಬರಲಿರುವ ಹೆಣ್ಣು; ಯೌವನಾವಸ್ಥೆಗೆ ಕಾಲಿಡುತ್ತಿರುವ ಹೆಣ್ಣು: "ಸೞಿಮಿಂಡಿಯೆಂದು ಪ್ರಥಮಋತುವಾಗದಾಕೆ" (ಕಶಸಾ. ೬೨-೩೭೧). ೨. ಏರುಯೌವನವನ್ನು ಹೊಂದಿದವಳು; ನವಯುವತಿ: "ಸೞಿಮಿಂಡಿಯೆನಲ್ ಪ್ರಾಯದಿಂದ ಸೊರ್ಕುವಬಲೆಯ " (ಚತುನಿ. ೧೨೮); ತೀಱಿದರ್ . . . ಸೞಿಮಿಂಡಿಯರ್ಮನಂಗೊಳಿಪ ಪುಷ್ಪಂಗಳಂ (ಉದ್ಯಟ. ೯-೫೭); ಆವಗಮೋಲಗಿಪ್ಪ ಸೞಿಮಿಂಡಿಯರೊಪ್ಪಿದರತ್ತ ನೋಟ್ಪೊಡಂ (ಕಬ್ಬಿಕಾ. ೧೩೩) ; ಚಂಡವೇಗದಿನೊರ್ವ ಪಾಂಥ'ನೆಯ್ತರುತೆ ಸೞಿಮಿಂಡಿಯಾಗಿಸವ ಗೋಪಿಯನಿಕ್ಕುವಾಟಿಯೊಳ್ ಕಂಡು . . . ಅಲ್ಲಿಗೆಯ್ದು ನೆರೆದು ಗಂಡಗಾಡಿಯನಾಚರಿಸಿ ಪೋಗೆ (ಪದ್ಮರಾ. ೮-೧೯). 'ತುಱುಮಿಂಡಿ'ಪರಾ. [ಸೞಿ$_1$ + ಮಿಂಡಿ$_1$]

**ಸೞಿಮಿಂಡಿವೆಣ್** (ನಾ). = ಸೞಿಮಿಂಡಿ ೨ : ಸೞಿಮಿಂಡಿವೆಣ್ಗಳ ಕೊರಲ ಹಾರದ ಮುತ್ತು ಪಱಿದುದಿರುವ ಮಣಿನಿಚಯ . . . ತುಱುಗಿರ್ದುದುಯ್ಯಲೆಯಡಿಯ (ಮೋಹತ. ೧४-೯೦); ಇವನ ನಿಱಿಗುರುಳಂ ಪೞಿನೊಸಲಂ . . . ಕಂಡು ಮರುಳ್ದೊಂಡು ಮೇರೆ ಮಿಾಱೆ ಮೆಯ್ಮಱೆದೆಕ್ಕಟಿಯೊಳ್ ಸೊರ್ಕಿ ಮೇಲಿಕ್ಕುವ ಸೞಿಮಿಂಡಿವೆಣ್ಗಳಂ ಸದೆದು (ಚಿಕವಂ. ೬೩-೮). [ಸೞಿಮಿಂಡಿ + ಪೆಣ್]

**ಸೞಿಮೊಲೆ** (ನಾ). "ಬಿಗಿದ ಮೊಲೆ; ಕಠಿಣಕುಚ" (ಪ್ರಭಣ್ಣ) : ತೆಳ್ಪಸಿಱಾಗೆ ಪಾಟ್ಟಸಿಱ್ ಸೞಿಮೊಲೆಯಾಗೆ ಬಿರ್ದ ಮೊಲೆ ಪೂತನಿ ಗೋಪಿವೊಲಾಗೆ ಬೇಗದಿಂ (ಅರ್ಧನೇ. ೭-೭೦). [ಸೞಿ$_1$ + ಮೊಲೆ$_1$]

**ಸೞಿಯೂದು** (ನಾ). ಸಾಂಬ್ರಾಣಿ, ಹಾಲುಮಡ್ಡಿ, ಲೋಬಾನ ಇತ್ಯಾದಿ (ಅಂಟನ್ನು ಹೊಂದಿರುವ)ಸುಗಂಧಪದಾರ್ಥ : ಮದನಮಹೀರಮಣನ ನಯನೋತ್ಸವಕ್ಕೆ ಕಟ್ಟಿದಿರೊಳ್ ಸೞಿಯೂದಿನ ಬಿಱಿಸುಗಟ್ಟಿ ರಚಿಸಿದ ಕುರುಜೆಂಬಂತಿರಲ್ . . . ಸೊಂಪುಗಱೆವ ಚಂಪಕಪ್ರತಾನಮಂ (ಶಬಶಂ. ೨-४೨ ವ).

[ಸೞಿ$_2$ + ಊದು$_3$]

**ಸೞಿಹೃದಯ** (ನಾ). (ಕಲ್ಲಿನಂತೆ) ಕಠಿಣವಾದ ಮನಸ್ಸನ್ನುಳ್ಳವನು ; ಕಲ್ಲುಹೃದಯದವನು : ಸೞಿಹೃದಯ ನೀ ನಿನ್ನೊಡನೆ ಸರಿಗೊಱಲಾಱೆನು ಭೀಮ ಪಾರ್ಥರನೊಱಲಿಸುವೆನೀ ಬಾಣದಲಿ (ಕುಮಾಕ. ೯-೨೯); ಸೞಿಹೃದಯರೀಗ ಬಳಲುತ್ತಲೈದರೆ ಮಹಾಪುರುಷನಿಂ ಕರುಣದಿಂ ನೋಡಿದಡೆ ಬಹುಜನ್ಮಪಾಪಗಳು ಪಿಂಗಿ ಮುಕ್ತಿ ದೊರಕೊಂಬುದು (ಷತಿಲ. ೧೦-೩೩). [ಸೞಿ$_1$ + ಹೃದಯ]

**ಸೞುಸ್ಯೆತನೆ** (ಅ). ೧. ನೇರವಾಗಿ; ನೆಟ್ಟಗೆ : ಮುಗಿಲಂ ಸೞುಸ್ಯೆತ[ಪಾಠಾಂ. ಕ]ನೆ

ಬೆಳೆವೊಡುದ್ವಮಯ್ಸುತೆಂಬಂತೆಯುಂ. . . . ಮಾಣಿಕದಿಂ ಸಮೆದ ಮರದಂತ ಸೊಗಯಿಸಿದುದು (ಲೀಲಾವ. ೮-೧೧೨); ಎಮೆ ಮಱೆಯಾಗೆ ನೋಡುವೆಡೆಯೊಳ್ ಸಱುಸ್ಸೈತ[ಪಾಠಾಂ. ಸಱುಸ್ಸೈಕ, ಸಱುಸುಯ್ಕ]ನೆ ನಿನ್ನ ಮೆಯ್ಯವಿರ್ ನಿಮಿರ್ದೆಡೆಯಾಡೆ (ಲೀಲಾವ. ೧೪-೬೦). ೨. ಚೆನ್ನಾಗಿ : ಕೋಕನದವದನೆ ಸಲೆ ಸಱುಸ್ಸೈಕEತತೆನೆಯೊರ್ಮಗ್ಗುಲಾಗಿರಲ್ (ದಶಕು. ೧೧-೧೮); ಮಱೆಮಾಡಿ ಮೆಯ್ಯ ಬಂದೀ ನಿನ್ನ ನಿಜರೂಪ ಸಱುಸ್ಸ [ಪಾಠಾಂ. ಱುಸೀ, ರಸ್ಸೈ]ಕEತತೆನೆ ನೋಡಿ ಪೋಗಿ ಎಱೆದರವಳ ಕಿವಿಗಿನಿನುಡಿ ರಸವನು (ವರ್ಧಚ. ೫-೮). [ಸಱು + ಸ್ಸೈತನೆ (< ಸಯ್ತನೆ)]

**ಸಱುಸ್ಸೈತು** (ಅ). ೧. ಸುಮ್ಮನೆ : 'ಸಱುಸ್ಸೈತುವೋಗು' ಪರಾ. ೨. ವಿಶೇಷವಾಗಿ : ಕಿವಿಯಿಂ ಬಗೆವುಗುವೊಡೆ ಕೊಂಕುವತ್ತ ಪೊಸನುಡಿಯೆ ಪುಗುಗುಮುಳಿದುದು ಸಱುಸ್ಸೈತವಚಱನೆ ಮಾಡಿ ಸಱುಸ್ಸೈತುವೋಕುಮೇಂ ಬಗೆಯ ಬಟ್ಟೆಯಂ ಮುಟ್ಟುಗುಮೇ (ಆದಿಪು. ೧-೧೮). [ಸಱು + ಸ್ಸೈತು (< ಸಯ್ತು)]

**ಸಱುಸ್ಸೈತುವೊಗು** (ಕ್ರಿ). ಸುಮ್ಮನೆ ಹೋಗು; ವ್ಯರ್ಥವಾಗು : ಕಿವಿಯಿಂ ಬಗೆವುಗುವೊಡೆ ಕೊಂಕುವತ್ತ ಪೊಸನುಡಿಯೆ ಪುಗುಗುಮುಳಿದುದು ಸಱುಸ್ಸೈತವಚಱನೆ ಮಾಡಿ ಸಱುಸ್ಸೈತುವೋಕುಮೇಂ ಬಗೆಯ ಬಟ್ಟೆಯಂ ಮುಟ್ಟುಗುಮೇ (ಆದಿಪು. ೧-೧೮). [ಸಱುಸ್ಸೈತು + ಪೋಗು (< ಪೋ)]

**ಸಱ್ಬನೆ, ಸರ್ರನೆ** (ಅ). ತಟ್ಟನೆ; ವೇಗವಾಗಿ : ಬಂಡಿಯಂ ಬಲವಂದು ಕಾಲ್ಗೆಱಗಿ ಮೇಲ್ಗುಡಿಗಟ್ಟಿ ಹೆಱಮೆಟ್ಟಿ ಸಱ್ಬನೆ ತಿರುಗಲು (ನಂಬಿರ. ೨-೩೦); ಸಱ್ಬನೆ ಕೀಳ್ತಲಗಿಂ ಕಡಂಗಿ ಕಾಯ್ದುಱಿದನೊರ್ವ ಲುಬ್ಧಕನಗುರ್ವಿನ ಪೆರ್ಬುಲಿಯಂ ವನಾಂತದೊಳ್ (ಗಿರಿಕ. ೧-೯೮). **ಸರ್ರನೆ** : ಬೇಗ ತಿರ್ರನೆ ತಿರುಗಿ ಸರ್ರನೆ ಲಾಗಹಾಕಿದ ದೊಂಬನು (ಕವಪು. ೩೮-೬); ಅಲ್ಲಿ ಬಹಳ ಹೊತ್ತು ನಿಲ್ಲಲಿಲ್ಲ. ಸರ್ರನೆ ಹೊರಗ ಬಂದಳು (ಹಳ್ಳಹಾ. ೧೧೫).

**ಸಱ್ಬಸಱ್ಬನೆ** (ದ್ವಿರುಕ್ತಿ) : ಕರ್ಕಶಕ್ಷಾರವಾರಿಯಂ ತಂದು ಸಱ್ಬಸಱ್ಬನೆ ಪೂಸುವುದುಂ (ಸುಕುಮಾ. ೧೧-೪೭ ವ). [ಸಱ್ + - ಅನೆ]

**ಸಱ್ಬನೆಸರಿ** (ಕ್ರಿ). ತಟ್ಟನೆ ಚಲಿಸು; ವೇಗವಾಗಿ ಚಾಲನೆಹೊಂದು : ತಿಱ್ಬನೆ ತಿರುಗುವ ಸುಟ್ಟುರೆಗಾಳಿಯಂದದಿಂ ಸಱ್ಬನೆ ಸರಿದುದು ಹಿಂದಕೆ ರಥಂ (ಜೈಮಿಭಾ. ೧೩-೩೫). [ಸಱ್ಬನೆ + ಸರಿ]

**ಸಱ್ಬನೆಸೀಳ್, ಸಱ್ಬನೆಸೀಳು** (ಕ್ರಿ). ಥಟ್ಟನೆ ಸಿಗಿದುಹಾಕು : ನಡುಬೆನ್ನಂ ಸಱ್ಬನೆಸೀಳೆಯುಂ ತೊಡೆಯನುಡಿಯೆಯುಂ (ಅಜಿಪು. ೧೧-೧೦ ವ); ಕೋಪಿಸುತೆದ್ದು ಸೆಳೆದು ಸಱ್ಬನೆ[ಪಾಠಾಂ. ಸಿ ಸೆಳೆದುಕೊಂಡು ಪತ್ರವ]ಸೀಳೆ ಸಂದಣಿಸಿ ಶತಚೂರ್ಣವಾಗಿ ನೆಲದೊಳು ಬೀಳೆ (ನಂಬಿರ. ೭-೮೫). **ಸಱ್ಬನೆಸೀಳು** : ಮೆಟ್ಟಿ ಸಱ್ಬನೆಸೀಳಿ ನೆಲಕಱೆಯಟ್ಟಿ ಹೊಯ್ದನು (ಕುವ್ಯಾವಿ. ಓಲಿ೩. ೪-೭೯); ಸಾಯ್ಗಳ ಗಡಣವನು ನೆಱೆ ಪೊಡೆದುದೌಂಕಿದು ದಡಸಿ ಸಿಕ್ಕಿದುದೊತ್ತಿ ಸಱ್ಬನೆಸೀಳಿತು (ಸಾಳ್ವಭಾ. ೫-೩೪). [ಸಱ್ಬನೆ + ಸೀಳ್]

**ಸಱ್ಬನೆಸೀಳು** 'ಸಱ್ಬನೆಸೀಳ್' ನೋ.

**ಸಟ್ಲೆ** (ನಾ). ಒಂದು ಸ್ಥಳದ ಹೆಸರು : ಗಂಗವಾಸನ ಮಗಂ ಗೋವಿನ್ದರಂ ಸಟ್ಲೆಮೂನೂಱುಂ ಕುಣಿಂಗಿಲಯ್ನೂಱುಮಂ ಪ್ರತಿಪಾಲಿಸುತ್ತಿರೆ (ಎಕ. IX, ದೇವನ. ೪೨-೨; ಸು. 900 ?). [?]

**ಸಟ್ಬಂಗ** (ನಾ). ಒಂದು ಸ್ಥಳದ ಹೆಸರು (?); P ಈ ಶಬ್ದದ ಬಗ್ಗೆ ಅನೇಕ ವಿದ್ವಾಂಸರು ಚರ್ಚೆ ನಡೆಸಿದ್ದಾರೆ. ಕೆಲವು ಅಭಿಪ್ರಾಯಗಳು ಹೀಗಿವೆ; ಇದು 'ಷಡ್ಭಾಗ'ದ ತದ್ಭವವಿರಬೇಕು, 'ಷಡ್ವಾಂಗ' (ವಾಂಗ = ತೆರಿಗೆ)ದಿಂದ ಬಂದಿರಬಹುದು, ಪರ್ಷಿಯನ್ ಪದ 'ಸರ್ಹ್ಂಗ್'(= ದಳಪತಿ) ಶಬ್ದದಿಂದ ಬಂದಿರಬಹುದು, ಷಡ್ಬಂಗ, ಷಡ್ಭಾಗ್ಯ, ಷಡ್ವಾಪ್ಯ, ಷಡ್ಭಗ ಎಂಬ ಪದಗಳಿಂದ ಬಂದಿರಬಹುದು : ಇರ್ವ್ವರುಂ ಸಟ್ಬಂಙ್ಗದರ್ ವಿಜಾರಸರುಂ ಪಲ್ಮಡಿಗ ಕುಱುಮ್ಮಿಡಿವಿಟ್ಟಾರ್ (ಮೈಆರಿ. ೧೯೩೭, ೧೬-೧೪ ; 450 ? ). [?]

**ಸಾ, ಸಯ್, ಸಾಯ್, ಸಾಯಿ, ಸಾಯು, ಸಾಹು** (ಕ್ರಿ). ಸತ್ತ (ಭೂತಕೃ), ಸತ್ತು (ಭೂತನ್ಯೂ), ಸಾವ (ಭವಿಕೃ). ೧. ಮರಣ ಹೊಂದು ; ಪ್ರಾಣಬಿಡು : ಕೊಙ್ಗುಣಿಅರಸರ ಆಳು ಎಱಿದು ಸತ್ತೊನ್ (ಮೈಆರಿ. ೧೯೩೯, ೨೨-೫; ಸು. 790); ದೇವಿಲಂ ಮೊದಲಾಗೊಡೆಯ ಪಲಂಬರ್ ಪರದರ್ ಸತ್ತರ್ (ವಡ್ಡಾರಾ. ೭೬-೧೪); ಅತ್ತಲೋಪನುಮಿದನಿಂತೆ ಕೇಳ್ದೊಡೆ ನಿರಾಶೆಯೊಳಕ್ಕಟ ಸಾಗುಂ (ಕಾದಂಪೂ. ೮೭೬). ೨. (ಆಲಂ) ಸತ್ತ್ವಗುಂದು ; ನಿಷ್ಕ್ರಿಯವಾಗು : ಅಂಗುಳಂಗುಳ ಸಂದಿಗಳ ಕಳೆಯಿಂಗಿ ನೆತ್ತರು ಸತ್ತ ತೊಗಲ ನರಂಗಳು (ಬಸಪು. ೪೬-೫೮). **ಸಯ್** : ೧. ನರೆದು ಬಂದಪರವರ್ ಸಯಲಾ ಬಲಮಲ್ಲಮಟ್ಟರದ ಕೊಂದಪನಿವಂದಿರನೀಗಳೆ ನಿಕ್ಕುವಂ (ಕವಿರಾ. ೧-೧೩೦); ಬಿಡೆ ನಾಂ ನೀಂ ಸಯೆ ಸಾವನಲ್ಲದುಬೆಯಿಂ (ಅನಂಪು. ೧೧-೯೫). ೩. ತಡೆ; ನಿಲ್ಲು : ಎನ್ನೊಳಾ ಅಱ್ಱುಡುಗಿದಂದು ನಾನ್ ಸಯ್ತಪೆನ್ (ಅಂತಿಗೂ. ೫-೭೬). **ಸಾಯ್** : ೧. ಆತಂ ದೇಶಸಕಲಸಂಯಮಂಗಳಂ ಕೊಳ್ಳಂ ಆಯುಷ್ಯಮಂ ಕಟ್ಟಂ ಸಮ್ಯಕ್ತ್ವಮಿಥ್ಯಾತ್ವಂಗಳೊಳ್ ಎಲ್ಲಿ ಮುನ್ನಾಯುಷ್ಯಂ ಬದ್ಧಮಾದುದಲ್ಲಿಗೆ ಸಂದು ಸಾಯ್ಗುಂ (ತತ್ತ್ವಪ್ರ. ೧೫); ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ ಅಯ್ಯಾ (ಬಸವ. ೧೧೭); ಸಾಯ್ವರ ಶಾಪದಲಿ, ಬೀಳ್ವರ ತಾಪದಲಿ . . . ಕೆನೆಯುವ ಹಯಗಳ ಹೇಷಾರವದಲಿ, ಕಿವಿ ಬಿರಿಯುವುದು ! (ಕನ್ನಬಾ. ೧೨೫-೨೦). **ಸಾಯಿ** : ೧. ಸಾಯಿ ಫಡಿಫಡ ಕೆಡೆಯೆನುತ ತಮ್ಮೊಬ್ಬರೊಬ್ಬರ ಜಡಿಯಲಬ್ಬರವಾದುದಾರೋಹಕರ ಕೇರಿಯಲಿ (ಕುವ್ಯಾಕ. ೮-೧೧); ನೀನು ಸಾಯಿ. ನಾನಿನ್ನು ಮಾತಾಡಲಾರೆ (ಗಾಳಿಪ. ೧೯). 'ಸಾಯಿಗುತ್ತ' ಪರಾ. **ಸಾಯು** : ೧. ದಿನಾ ಸಾಯುವವರಿಗೆ ಅಳುವವರು ಯಾರು? (ಗಾದ). ೪. (ಆಲಂ) ಒದ್ದಾಡು ; ಕಷ್ಟಪಡು : ಅವನು ಕೆಲಸ ಮಾಡಲು ಸಾಯುತ್ತಾನೆ (ರೂಢಿ). **ಸಾಹು** : ೧. ಅಜ್ಞಾನವೆಂಬ ಹಾವಸೆ ಅವಗ್ರಹಿಸಿಕೊಂಡಲ್ಲಿ ಜೀವಭಾವ ಭ್ರಾಂತಿಯ ಸಂದೇಹದಲ್ಲಿ ಸಾಹುತ್ತಿಹರು (ಪ್ರೋಳಮಾ. ೨೩೮-೭೮೯); ತಲೆಯ ಕಡಿದರೆ ಸಾಹನಲ್ಲದ ಗತಿಯ ಕಾಣೆನು (ನಿಭಾಗ. ೧-೧೨-೨೬).

**ಸತ್ತು ಸತ್ತು ಉಳಿ** = ಮರಣಾಸನ್ನವಾದ ಖಾಯಿಲೆಯಿಂದ ಗುಣಹೊರಿದು, — ಉಳಿದುಕೊಳ್ಳು; ಪ್ರಾಣಾಪಾಯಕಾರಿಯಾದ ಖಾಯಿಲೆಯಿಂದ ಬದುಕಿಕೊಳ್ಳು: ಆ ವೃದ್ಧರು ಕ್ಷಯರೋಗದಿಂದ ಸತ್ತುಸತ್ತು ಉಳಿದರು (ರೂಢಿ). **ಸತ್ತುಸತ್ತು ಬದುಕು** = ಸತ್ತುಸತ್ತು ಉಳಿ : ಅವರ ಮಗು ಮೊನ್ನೆ ಮೆದುಳುಜ್ವರದಿಂದ ಸತ್ತುಸತ್ತು ಬದುಕಿತು (ರೂಢಿ). **ಸತ್ತುಸುಣ್ಣವಾಗು** = ವಿಪರೀತವಾಗಿ ಬವಣೆಪಡು ; ಬಹಳ ತೊಂದರೆಪಡು : ಅವನು ಸಾಲಕ್ಕಾಗಿ ಊರೂರು ತಿರುಗಿ ಸತ್ತು ಸುಣ್ಣವಾಗಿದ್ದಾನೆ (ರೂಢಿ). **ಸಾಯ ಬಡಿ** = ಸಾಯುವಂತೆ ಹೊಡೆ : ಹಣ್ಣುಗಾಯಿ ನೀರುಗಾಯಿ ಮಾಡು : ಮುಳಿದು ಸಾಯ [ಪಾಠಾಂ. ಯೆ] ಬಡಿದು ಮನೆಯಿಂ ಪೆಂಡತಿಯನಟ್ಟಿ ಕಳೆದೊಡೆ (ವಡ್ಡಾರಾ. ೭೬-೧೫); [ಪಸಿದ ಕೋಪದಿಂ ತನ್ನ] ಭಾರ್ಯೆಯಂ ಸಾಯಬಡಿವುದುಂ (ಧರ್ಮಾಮೃ. ೧೪-೧೨೯); ವಂಗಭೂಪನ ಬಾಯೊಳಗೆ ಬೆಟ್ಟದನು ಗದೆಯನು ಮಿಕ್ಕ ನಾಲ್ವರನು ಸಾಯಬಡಿದನು (ಕುವ್ಯಾದ್ರೋ. ೨-೮೨). **ಸಾಯಬಡು** = ಸಾಯು; ಮರಣವನ್ನು ಹೊಂದು : ನ್ಯಾಯವಿಲ್ಲದೆ ತಿಲೋತ್ತಮಿಯಗೋಸುಗವಾಗಿ ಸಾಯಬಟ್ಟರು ಒಡಹುಟ್ಟಿದವರು (ವಿಸಾಸು. ೫೫-೩). **ಸಾಯಲಾಗು** = ಸಾಯುವಂತಾಗು; ಮರಣ ಹೊಂದುವ ಸ್ಥಿತಿ ಮುಟ್ಟು : ಸಾಯಲಾದನು ದೃಷ್ಟಕೇತು ವಿಡಾಯಿಗೆಟ್ಟನು ಭೋಜನು (ಕುವ್ಯಾದ್ರೋ. ೨-೫೯). **ಸಾಯಹಾರು** = ಸಾವನ್ನು ನಿರೀಕ್ಷಿಸು : ಉಳುಹಿಕೊಳಲೆಳಸಿಯುವುರರನು ಹರಿಯಜರನ್ನ ಕಳವರವನೀಗ ಹೇಳಿದರ . . . ಅದು ನಿಮಿತ್ತಂ ಸಾಯ ಹಾರಿದರುಯೆಂದು ಮರುಗಿ (ನವಮೋ. ೫-೧೨). **ಸಾಯೆ ಪೊಯ್** = ಸಾಯ ಬಡಿ: ಅಬ್ಬೆಯೊಡವುಟ್ಟಿದ ಮಾವನಶೇಷಶಾಸ್ತ್ರಪಾರಗನತಿಧನ್ಯನೆಂದು ಪರಿಭಾವಿಸಿ ಬಂದೊಡವಱ್ಗೆಗಯ್ದು . . . ತೊಟ್ಟಗೆ ವಿಭು ಸಾಯೆ ಪೊಯ್ದು ಕಿವಿಯಂ ಪಿಡಿದೊಡಲೊಡರ್ಚೆ ಬಂದನೇ (ಸುಕುಮಾ. ೨-೬೨). **ಸಾಯೆ ಬಡಿಸು** = ಸಾಯುವಂತೆ ಹೊಡೆಯಿಸು; ಹಣ್ಣುಗಾಯಿ ನೀರುಗಾಯಿ ಮಾಡಿಸು : ಸೊಕ್ಕಿರ್ದರ ಮದಮಿಂತಲ್ಲದುಡುಗದೆಂದು ಸಾಯೆ ಬಡಿಸುವಂ (ಧರ್ಮಾಮೃ. ೨-೬೭). **ಸಾಯೆ ಸರಸಂ ನುಡಿ** = ಮರ್ಮಾಘಾತವಾಗುವಂತೆ ಗೇಲಿಮಾಡು : ಎಮ್ಮಂ ಪಿಡಿದೆಟೆವಂದಿನ ನಿಮ್ಮದಟುಗಳೀಗಳೆತ್ತವೋದುವೋ . . . ನಿವುಗವಿಾಗಳೀಯೆಡರಾಯ್ತೋ ಎಂದು ಸಾಯೆ ಸರಸಂ ನುಡಿದು (ಪಂಪಭಾ. ೭-೩೯ವ). [ದೇ. ॥ತಮಿ. ಚಾ, ಚಾಯ್; ಮಲ. ಚಾ; ಕೊಡ. ಚತ್; ತೊದ. ಸೊಯ್; ತುಳು ಸಯಿ, ಸೈ; ತೆಲು. ಚಚ್ಚು, ಸಚ್ಚು ; ಪರ್ಜಿ. ಚಯ್; ಕುಇ. ಸಾವ]

**ಸಾಂಕರ್ಯ** (ನಾ). (ವಿಭಿನ್ನವಾದುವು) ಕೂಡುವಿಕೆ; ಸಂಕರವಾಗುವಿಕೆ : ನಿರುಪಾಧಿಕಾಂತರ್ಜ್ವಲತ್ಸರ್ವಸಾಕ್ಷಿಕಸ್ಫುರಣರುದ್ರಂಗೀ ಗುಣೋಪಾಧಿ ಭಿನ್ನ ರಜಹರಿಗಳೆಣೆಯೆಂದದಾರದ್ವೈತವಿಭ್ರಮದೆ ನುಡಿವರವರನ್ವಯಕ್ಕೆ ನಿರುತಮಿದು ಸಾಂಕರ್ಯಮುಂಟಂತೆ ನುಡಿಯದರ್ ಪರವಂಶಜರ್ (ಪದ್ಮರಾ. ೧೧-೮); ಈ ಧರ್ಮಶಾಸ್ತ್ರ ಕಾರರು ವಿದೇಶೀಯರ ಆಕ್ರಮಣದಿಂದುಂಟಾದ ಸಂಸ್ಕೃತಿಸಾಂಕರ್ಯ ಹೊಂದಿದ ಜನತೆಯನ್ನು ಉದ್ಧರಿಸಲು . . . ವ್ಯತ್ಯಾಸಗಳನ್ನು ಮಾಡಿದರು (ಭಾರದ. ೬೧). [ಸಂ.]

**ಸಾಂಕೇತಿಕ** (ಗು). ೧. ಗುರುತುಗಳಿಂದ ಕೂಡಿದ ; ಸಂಜ್ಞೆಗಳುಳ್ಳ : ಬೀಜಗಣಿತ ಸಾಂಕೇತಿಕರೂಪದ್ದಾದ್ದರಿಂದ ಈ ಶಾಲೆಯಲ್ಲಿ ಅದನ್ನು ಸೇರಿಸಬೇಕಾಗಿಲ್ಲ (ಶಿಕ್ಷದ. ೧೫೨). ೨. (ಯಾವುದಾದರೂ ವಸ್ತು, ವಿಚಾರ ಮುಂತಾದುವುಗಳಿಗೆ) ಪ್ರತೀಕವಾದ; ನಿದರ್ಶನವಾದ : ಪಾರಿಭಾಷಿಕಶಬ್ದಗಳ ಅರ್ಥವನ್ನೂ ಸಾಂಕೇತಿಕಸನ್ನಿವೇಶಗಳ ಅನ್ವಯವನ್ನೂ ಕೇವಲ ಚಾರಿತ್ರಿಕದೃಷ್ಟಿಯಿಂದ ನಿರ್ಣಯಿಸುವುದು ಕಷ್ಟ (ಭಾರದ. ೧೯೮); ಕಾದಂಬರಿಯಲ್ಲಿ ಸಾಂಕೇತಿಕಪಾತ್ರ ಹಾಗು ಸನ್ನಿವೇಶಗಳು ಕೆಲವಿವೆ (ಸಮಜೀ. ೩೧ ಪೀಠಿಕೆ). ೩. ಸೂಚಿಸುವ; ಮುಂದಾಗಿ ತಿಳಿಸುವ : ಮುಖದ ಮೇಲೆ ಈ ಕಾಯಿಲೆಯ ಸಾಂಕೇತಿಕ ಬೊಕ್ಕೆಗಳು ಕಾಣಿಸಿಕೊಳ್ಳುತ್ತವೆ (ಕೆಲರೋ. ೫೭). (ನಾ). ೪. (ಯಾವುದೇ ವಸ್ತು, ವಿಚಾರ ಮುಂತಾದುವನ್ನು) ಸೂಚಿಸುವಂತಹುದು; ಪ್ರತಿಬಿಂಬಿಸುವಂತಹುದು; ನಿದರ್ಶನರೂಪವಾದುದು : ನಮ್ಮ ಹಬ್ಬಗಳೆಲ್ಲ ಸಾಂಕೇತಿಕವಾಗಿವೆ (ರಂಗರೂ. ೧೧೨); 'ಅಂಚೆಮನೆ' ಎಂಬುದೊಂದು ಚಿಕ್ಕನಾಟಕ . . . ಈ ನಾಟಕವು ಸಾಂಕೇತಿಕವೆಂದು ಕೆಲವು ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ (ಧರ್ಮಸಾ. ೬೪). [ಸಂ.]

**ಸಾಂಕೇತಿಕಮುಷ್ಕರ** (ನಾ). ಸಂಕೇತರೂಪದ ಚಳುವಳಿ; ಮುನ್ಸೂಚನೆಯ ಪ್ರತೀಕವಾದ ಮುಷ್ಕರ : ಆ ಗಿರಣಿಯ ಕಾರ್ಮಿಕರು ಇಂದು ಸಾಂಕೇತಿಕಮುಷ್ಕರ ನಡೆಸುತ್ತಿದ್ದಾರೆ (ರೂಢಿ). [ಸಾಂಕೇತಿಕ + ಮುಷ್ಕರ$_1$]

**ಸಾಂಕ್ರಾಮಿಕ** (ಗು). ೧. ಒಬ್ಬರಿಂದೊಬ್ಬರಿಗೆ ಅಥವಾ ಒಂದರಿಂದ ಮತ್ತೊಂದಕ್ಕೆ ಹರಡುವ,— ವ್ಯಾಪಿಸುವ,— ಸೋಂಕುವ : ಯುದ್ಧ ಮೊದಲಾದ ಒಂದು ತಿಂಗಳೊಳಗ, ವಿಷ್ಣುವರ್ಧನಪ್ರಭುವಿನ ಸೈನ್ಯಶಿಬಿರಗಳಲ್ಲಿ ಸಾಂಕ್ರಾಮಿಕ ಉಪಟಳ ಒಂದು ಕಾಣಿಸಿಕೊಂಡಿತು (ಶಾಂತಲಾ. ೪೦೦). (ನಾ). ೨. (ರೋಗ ಮುಂತಾದುವು) ಒಬ್ಬರಿಂದ ಒಬ್ಬರಿಗೆ ಅಥವಾ ಒಂದರಿಂದ ಮತ್ತೊಂದಕ್ಕೆ ಹರಡುವಿಕೆ,— ವ್ಯಾಪಿಸುವಿಕೆ: ಡಿಫ್ತೀರಿಯಾ . . . ಕೆಲವು ಕಡೆ ಸಾಂಕ್ರಾಮಿಕ (Epidermic) ವಾಗಿ ಹರಡಿದರೆ ಕೆಲವು ಕಡೆ ಸ್ಥಾನಿಕ (Endermic) ರೋಗವಾಗಿರುತ್ತದೆ (ಕೆಲರೋ. ೧೪). [ಸಂ.]

**ಸಾಂಕ್ರಾಮಿಕರೋಗ** (ನಾ). ಒಬ್ಬರಿಂದ ಅನೇಕರಿಗೆ ಅಥವಾ ಒಂದರಿಂದ ಅನೇಕಕ್ಕೆ ಹರಡುವ ಕಾಯಿಲೆ; ಸೋಂಕುರೋಗ; ಅಂಟುಜಾಡ್ಯ : ಸೊಳ್ಳೆ, ನೊಣ ಮೊದಲಾದವು ಸಾಮೂಹಿಕಜಂತುಗಳು. ಸಾಂಕ್ರಾಮಿಕರೋಗಗಳಂತೆ ಅವುಗಳ ಚಲನವಲನ (ನಂಟರು. ೪೪); ನಾನು ಅಲ್ಲಿಗೆ ಹೋದಾಗ ಅಲ್ಲಿ ಒಂದು ಸಾಂಕ್ರಾಮಿಕರೋಗ ಹರಡಿತ್ತು (ಪ್ರವಾ೯. II, ೧೧೮). [ಸಂ.]

**ಸಾಂಖ್ಯ** (ಗು). ೧. ಸಂಖ್ಯೆಗೆ ಅಥವಾ ಲೆಕ್ಕಾಚಾರಕ್ಕೆ ಸಂಬಂಧಿಸಿದ . (ನಾ). ೨. ಸಂಖ್ಯೆಗೆ ಅಥವಾ ಲೆಕ್ಕಾಚಾರಕ್ಕೆ ಸಂಬಂಧಿಸಿದುದು : ಸಾಂಖ್ಯವೆಂಬ ಶಬ್ದವು, ಸಂಖ್ಯಾಶಬ್ದದಿಂದ ಸಿದ್ಧಿಸುತ್ತದೆ. ಸಂಖ್ಯೆಯೆಂದರೆ ಚರ್ಚೆಯೆಂದೂ, ವಿಚಾರಣೆಯೆಂದೂ ಎಣಿಕೆಯೆಂದೂ ಅರ್ಥ (ಭಾರದ. ೧೨೫). ೩. ಚರ್ಚೆ ಮಾಡುವಿಕೆ. ೪. ವಿಶೇಷವಾದ ತಿಳಿವಳಿಕೆ; ಜ್ಞಾನ : ಸಾಂಖ್ಯ ಎಂದರೆ ಜ್ಞಾನ. ಯೋಗ ಎಂದರೆ ಭಗವದರ್ಪಣಬುದ್ಧಿಯಿಂದ ವಿಹಿತಕರ್ಮಾನುಷ್ಠಾನ (ಭಾತತ್ತ್ವ. ೧೯೯). ೫. ಶಿವ; ಈಶ್ವರ. ೬. [ತತ್ತ್ವಶಾ] ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸೆ ಮತ್ತು ಉತ್ತರಮೀಮಾಂಸೆ (ವೇದ ಮತ್ತು ವೇದಾಂತ) ಎಂಬ ಆರು ಬಗೆಯ ದರ್ಶನಗಳಲ್ಲಿ ಒಂದು; ಷಡ್ದರ್ಶನಗಳಲ್ಲಿ ಒಂದು : ಸಾಂಖ್ಯ ಪಾತಂಜಲ ವೇದಾಂತಗಳೆಂಬ ಆತ್ಮಜ್ಞಾನಫಲವಾಗುಳ್ಳವೇ ಅಧ್ಯಾತ್ಮಶಾಸ್ತ್ರತ್ರಯಂಗಳು (ವಿವೇಕ. ೧೨); ವೈಶೇಷಿಕ, ನ್ಯಾಯ, ವೇದಾಂತ, ಸಾಂಖ್ಯ, ಯೋಗ, ವೇದ ಎಂದು ಆರು ದರ್ಶನಗಳು (ಹಿಂದಸಾ. ೯). ೭. ಸಾಂಖ್ಯತತ್ತ್ವಗಳನ್ನು ಒಪ್ಪಿ ಅನುಸರಿಸುವವನು; ಸಾಂಖ್ಯದರ್ಶನದ ಅನುಯಾಯಿ : ಷಡಭಿಜ್ಞಂ ಕ್ಷಣಿಕಂ . . . ನಡೆವಂ ಕಾಪಿಳ ವೃತ್ತಿಯಂ ಬಿಡದೆ ಸಾಂಖ್ಯಂ (ಚಂದ್ರಪ್ರ. ೧-೫೫); ವಸ್ತುಗಳನ್ನು ಸಂಖ್ಯೆಮಾಡಿ ತತ್ತ್ವಗಳು ಇಪ್ಪತ್ತೈದು, ಪದಾರ್ಥಗಳು ಅರುವತ್ತು ಎಂದು ನಿರ್ಣಯಮಾಡಿರುವುದರಿಂದ ಇವರಿಗೆ ಮೊದಲು ಸಾಂಖ್ಯರೆಂದು ಹೆಸರು ಬಂದಿತು (ಹಿಂದಸಾ. ೪೮). [ಸಂ.]

**ಸಾಂಖ್ಯದರ್ಶನ** (ನಾ). = ಸಾಂಖ್ಯ ೬ : ಸಾಂಖ್ಯದರ್ಶನವನ್ನು ನಿರೀಶ್ವರವಾದವೆಂದೂ . . . ವೇದಾಂತದಾರ್ಶನಿಕರು ದೂರ ತಳ್ಳಿದ್ದಾರೆ (ಭಾರದ. ೧೧೩). [ಸಂ.]

**ಸಾಂಖ್ಯಮತ** (ನಾ). = ಸಾಂಖ್ಯ ೬ : ಪ್ರಕಟಮಾಡಿ ಸಾಂಖ್ಯಮತಮಂ ನಿರ್ಮೂಳನಂಗೆಯ್ದು (ಶಾಸಪ. ೫೨-೪೯; 1138); ಚಾರ್ವಾಕಮತವನ್ನೂ ಬೌದ್ಧಮತವನ್ನೂ ಸೇರಿಸಿದರೆ ಸಾಂಖ್ಯಮತವಾಗುತ್ತದೆ (ಹಿಂದಸಾ. ೬೯). [ಸಂ.]

**ಸಾಂಖ್ಯಯೋಗ** (ನಾ). = ಸಾಂಖ್ಯ ೬ : ಇಂತೀ ಪಂಚವಿಂಶತಿತತ್ತ್ವಂಗಳು ನಾನಲ್ಲ ಅವು ನನ್ನವಲ್ಲವೆಂದು ವಿಭಾಗಿಸಿ ಕಳೆದು ಪರಾತ್ಪರವಾದ ಪರಶಿವಬ್ರಹ್ಮವೆ ನಾನೆಂದು ತಿಳಿವುದೇ ಸಾಂಖ್ಯಯೋಗ ನೋಡಾ (ಅಖಂಡೇ. ೨೨೨-೬೪). [ಸಂ.]

**ಸಾಂಖ್ಯಾಗಮ** (ನಾ). = ಸಾಂಖ್ಯ ೬ : ಮಿಥ್ಯಾತಮತಿರಸ್ಕರಿಣೀತಿರಸ್ಕೃತಮನಸ್ಕಂ ತತ್ತ್ವಾಭಾಸಮಂ ಸಾಂಖ್ಯಾಗಮಮಂ ಮಾಡಿ ಕಪಿಳಾಗಮಮಂ ಮಾಡಿ ಕಪಿಳಾದಿಗಳಪ್ಪ ಶಿಷ್ಯವರ್ಗಕ್ಕೆ ತಿಳಿಪುತ್ತಂ (ವರ್ಧಮಾ. ೬-೧೨ ವ). [ಸಂ.]

**ಸಾಂಗ$_1$** (ಗು). ೧. ಅಂಗಗಳಿಂದ ಕೂಡಿದ; ಅವಯವಗಳಿಂದ ಕೂಡಿದ. ೨. ಅಂಗಗಳಿಗೆ ಸಂಬಂಧಿಸಿದ; ಆಂಗಿಕವಾದ : ಅಂಗದಿಂದಂ ಗಾಡಿ ಸಂಚಾರಿಗಳನುಚಿತಸಾಂಗಭಾವಂಗಳಿಂ ಶಿವನ ಲೀಲೆಯೊಳ್ಮೆದು ಪಿಂಗೆ ವಿಂಶತಿಯ ಭ್ರಂಗಿರಿಟಿ ನರ್ತಿಸೆ ಗಣಂಗಳ್ ಭಾಪೆನುತ್ತಿರ್ದರು (ಭಾವಚಿಂ. ೧-೩೭). ೩. ಪೂರ್ಣವಾದ; ಸಮಗ್ರವಾದ : ಲಿಂಗಶರಣನ ನಿತ್ಯ ಜಗವುನಿತ್ಯವುದೆಂಬ ಸಾಂಗನಿತ್ಯಾನಿತ್ಯವಿವರಸುಜ್ಞಾನಮದು ಹಿಂಗದದ ತಿಳಿದಾಚರಿಸುವಾತನೆ ಸ್ವಾನುಭಾವಿ (ಷಡಿಲ. ೫-೨೪). ೪. (ವೇದದ ವಿಷಯದಲ್ಲಿ) ಷಡಂಗಗಳಿಂದ ಕೂಡಿದ : 'ಸಾಂಗವೇದ' ಪರಾ. (ನಾ). ೫. ಪೂರ್ಣವಾದುದು; ಸಮಗ್ರವಾದುದು : ಸಾಂಗವಾಗಿದೆ ಗೃಹವೆನುತ ರೋಪಾಂಗ ಮನವಿಡಿವೈದು ಬರೆ (ಕೃಷ್ಣಾಕಾ. ೧೧-೫). ೬. ಪರಿಪೂರ್ಣತೆ; ಸಮಗ್ರತೆ : ಜಂಗಮವ ನಾನೆಂದೆ ನೋಡಿರು ಸಾಂಗದಿಂ ತ್ರಿವಿಧಪ್ರಸಾದಾಸಂಗದೊಳು ಪರಿಣಾಮಿಸುತಮಿರು (ಬಸವು. ೪-೭೭); ಮೋಹನಾಂಗಿಗೀ ಸಿಂಗರದ ಹಂಗುಂಟೆ ಮಂಗಲದ ಸಾಂಗಕ್ಕೆ ಸಿಂಗರಿಪೆವು (ಪದ್ಮರಾ. ೩-೪೨). ೭. ಯೋಗ್ಯವಾದುದು; ಸರಿಯಾದುದು : ಧರೆಯೊಳಿಂತಪ್ಪನ್ನದಾತರ ಸರಿಯಿಡುವರಾರಯ್ಯ ನಿನಗತಿಸಾಂಗವಾಯಿತ್ತು ನಿರುತವೆಲ್ಲಡೆಯೊಳು ಸಮಾನವನೊರೆಯಲಿಲ್ಲದಭೀಷ್ಟದಾನವನರರೆ ಎಮಗಿಕ್ಕಿದೆ (ಬಸವು. ೨೪-೨೭).

**ಸಾಂಗಮಾಗು, ಸಾಂಗವಾಗು** = ೧. ಪರಿಪೂರ್ಣವಾಗು; ಸಮಗ್ರವಾಗು; ಸಂಪೂರ್ಣವಾಗು : ಅತಿಮಂಗಳದ ದಿನವಿಂದು ನಿಜಮಂದಿರದೊಳೆಂದೆನುತ ಸಾಂಗಮಾಗಲು ವೇದ್ಯಶೃಂಗಾರಂಗಳಿಂದವಲಂಕರಿಸಿ (ಬಸವು. ೨೪-೧೭); ನಿರ್ವಿಘ್ನದಲಿ ಮುನಿತಿಲಕನಧ್ವರ ಸಾಂಗವಾದುದು (ತೊರರಾ. ೧-೧೧-೨೨); ನೃಪಾಲಕತಿಲಕನಧ್ವರ ಸಾಂಗವಾದುದು (ತಿಮ್ಮಕೃ. ೧-೧೧೨). ೨. ಸರಿಯಾಗು; ಯೋಗ್ಯವಾಗು : ಉಪಕರಣತತಿಯ ಸಾಂಗಮಾಗಲು ಬೆಳಗೆಯೋ ಶಿವಲಿಂಗಮಜ್ಜನಸಾಲೆಗಳ ಮಲಿನಂಗಳಂ ತೊಳೆಯೆಯೊ (ಬಸವು. ೪೭-೧೩). ೩. ದೊರಕು; ಲಭ್ಯವಾಗು : ಮಂಗಳಪ್ರದ ಸತ್ಕ್ರಿಯೆಗಳೊಳಿಹಂಗೆ ಗರ್ವಿಸಿ ನುಡಿದವಂಗಂ ಸಾಂಗವಹುದೇ ಭಕ್ತಿಪರಿಣತಿ ಬಸವಸುಕುಮಾರ (ಬಸವು. ೨೪-೮೯). [ಸಂ.]

**ಸಾಂಗ$_2$** (ನಾ). (ಭರ್ಜಿಯಂತಹ) ಒಂದು ಬಗೆಯ ಆಯುಧ : ಸಾಂಗಭಲ್ಲೆಯ . . . ಚಕ್ರಾಯುಧದ ಅಂಗವಣೆಯ ಕಲಿತರು ಬೇಗದಲಿ ಶ್ರೀರಂಗಭಕ್ತರು ಮುದದಿಂದ (ಕಂಸವಿ. ೪-೮೬); ಊರಿ ಸಮ್ಮಿಶ್ರಕೈಬಾಕು ಸಾಂಗಿಟ್ಟ ಕೈಚೂರಿಗಳಲಿರಿದಾಡಿದೀರ್ವಲದ ತಲೆವೆಲೆಯ ಕ್ರೂರರದ್ಭುತಗರೆದರು (ಜೈಮು. ೧೦-೨೦). [<— ಹಿಂ. ಮರಾ. ಸಾಂಗ್]

**ಸಾಂಗಗೊಳಿಸು** (ಕ್ರಿ). ಕ್ರಮಬದ್ಧವಾಗಿ ಮುಗಿಸು, — ಪೂರ್ಣಗೊಳಿಸು : ಈ ಪರಿಯಾಗಿ ನಿತ್ಯವೂ ಕರ್ತವ್ಯಕರ್ಮಗಳನ್ನು ಸಾಂಗಗೊಳಿಸಿ . . . ಚಾರು ತನ್ನ ದಿನವನ್ನು ಸಮಾಪ್ತಗೊಳಿಸುವಳು (ಇಪ್ಪಕ. ೨೮೫). [ಸಾಂಗ$_1$ + ಕೊಳ್$_1$ + - ಇಸು$_3$]

**ಸಾಂಗಡ**, ಸಂಗಟ್ಟಿ$_2$, ಸಂಗಡಿ$_3$, ಸಾಂಗಡೆ, ಸಾಗಡ, ಸಾಗಡೆ$_1$, ಸಿಂಗಡಿ$_2$ (ನಾ). ೧. (ಹಲಗೆಗಳನ್ನು ಜೋಡಿಸಿ ರಚಿಸುವ) ಒಂದು ಬಗೆಯ ಜೋಡುತೆಪ್ಪ; ಜೋಡುದೋಣಿ : (ಮೈಗಜ. IV, ೭೮೪); (ರೈಸ್‌ಗ. II, ೫೬೦). **ಸಂಗಟ್ಟಿ$_2$** : ೨. ಈಸುಗಾಯಿ; ಈಜುಬುರುಡೆ : ಚಟುಲಲೋಚನೆಯಂತೆ ಕುಟಿಲಕುಂತಳೆಯಂತೆ ವಿಟಹಣ್ಣನಂತ ಹಗಲಲ್ಲಿ ಇರುಳು ಸಂಗಟನ ಕಾಯಂತೆ (ಸರ್ವಜ್ಞ. ೨೦೭೨). **ಸಂಗಡಿ$_3$** : ೧. ಹೊಳೆಯ ದಾಟುವಗೆ ಸಂಗಡಿಯು ದೊರೆದಂದದಿಂ (ಮಹಾಂತೇ. ೨೨-೧೭); ಜ್ಞಾನವೇ ಸಂಸಾರಿಗನ ಸಂಗಡಿ. ಅದೇ ಸಂಸಾರಸಾಗರದ ಈಸುಗುಂಬಳ (ಬಾಳಬ. ೨೯). ೨. ಒಬ್ಬ ಸಾಲೇಹುಡುಗನು ಈಸುಗುಂಬಳಕಾಯಿಯ ಸಂಗಡಿಯನ್ನು ನಡುವಿಗೆ ಕಟ್ಟಿಕೊಂಡು . . . ಹೊಳೆಯಲ್ಲಿ ಈಸುಗಲಿತ ಮೇಲೆ . . . ಸಂಗಡಿಯನ್ನು ಹೊಳೆಯ ದಡದಲ್ಲಿ ಬಿಟ್ಟು ಹಾಗೇ ನೀರೊಳಗೆ ಬಿದ್ದನು (ಮುಂಬಯಿ. ೪-೬೭). ೩. ಚಟ್ಟ; ಸಿದಿಗೆ : ಪೆಣದ ಸಜ್ಜಡಿ ಕಟ್ಟುವೋನ್ (ಕಇ. I,೫-೪; ೮ನೆಯ ಶತ). **ಸಾಂಗಡೆ** : (೩). **ಸಾಗಡ** : ೧. ಬಸ್ತರು ಒಳ್ಳೇ ಸಾಹಸಿಗಳಾಗಿ ಸಾಗಡಕ್ಕೆ ಒಂದೊಂದು ಸಲಕ್ಕೆ ಎರಡು ಭರ್ತಿ ಗಾಡಿ ತುಂಬುತ್ತಿದ್ದರು (ಬಸ್ತಕ. ೫೪). **ಸಾಗಡೆ$_1$** : ೧. ಒಂದೊಂದು ಸಲ ಸಾಗಡೆ ನಡೆಸುತ್ತಿದ್ದ ಬಸ್ತರ ಎತ್ತುಗಳ ಮೇಲೆ ಪೈಪೋಟಿಯುಂಟಾಗಿ ಅವರು ಅವುಗಳ ಜತೆಗೆ ಸಾಗಡ ಬಿಡಲು ಪ್ರಯತ್ನಿಸುತ್ತಿದ್ದರು (ಬಸ್ತಕ. ೫೫). **ಸಿಂಗಡಿ$_2$** : ೧. ಹೊತ್ತು ಮುಳುಗೋದರಾಗ ದಾಟಿದರಾತೂ ಅಂತ ಸಿಂಗಡಿ ಹತ್ತಿ ಬಿದ್ವಿ (ಧರ್ಮಸ. ೭೭). ೨. ''ಸಿಂಗಡಿ — ತೇಲಿಸುವ ಕುಂಬಳಕಾಯಿ'' (ಜಾನಕೋ. ೪೯). 'ಜಂಗಾಲ್$_1$' ಹೋ. [<— ಮರಾ. ಸಾಂಗಡ, ಸಾಂಗಡೀ ./ ತಮಿ. ಚಙ್ಙಟಮ್]

**ಸಾಂಗಡೆ** 'ಸಾಂಗಡ' ನೋ.

**ಸಾಂಗಡೆಗಡಿ** (ಕ್ರಿ). ಒಟ್ಟಾಗಿ ಕತ್ತರಿಸು (?) : ಸಿಗಿಯಲೆರಗುವ ಕೊಂತ ಕೈಕಾಲ್ದೆಗವ ಕೈಚಕ್ರಂಗವನು ಚುಚ್ಚೊಗುವ ಸಾಂಗಡೆಗಡಿವ ಪರಶುಗಳು (ಜಿರಾಮಾ. ೪೫೮-೬೯). 'ಸಂಗಡ$_2$' ಹೋ. [ಸಾಂಗಡೆ, + ಕಡಿ$_2$]

**ಸಾಂಗತೆ** (ನಾ). ಸಮರ್ಪಕವಾಗಿ ಪೂರ್ಣಗೊಳ್ಳುವಿಕೆ ; ಸಾಂಗವಾಗಿ ಮುಕ್ತಾಯಗೊಳ್ಳುವಿಕೆ, — ನೆರವೇರುವಿಕೆ : ಹೀಗೆ ಜಾತಕರ್ಮದ ಸಾಂಗತೆಯಾದ ಬಳಿಕ ನಂದನು ಯಾವತ್ತೂ ಗೋಪಿಕಾಸ್ತ್ರೀಯರನ್ನು ವಸ್ತ್ರಾಲಂಕಾರಗಳಿಂದ ಸತ್ಕರಿಸಿದನು (ಭಾಮೃತ. ೩೦೩). [ಸಂ. ಸಾಂಗತಾ]

**ಸಾಂಗತ್ಯ** (ನಾ). ೧. ಹೊಂದಾಣಿಕೆ ; ಸಾಮರಸ್ಯ : ಸಾಂಗತ್ಯವಿಲ್ಲದ ಸಂಸಾರವೇತಕೆ ಬರಿಯ ಸಾಹಿತ್ಯವೆ ಸಾಕೆ (ಇಂಚಾಪ. ೧೭೮-೭೯). ೨. ಕೂಟ; ಜೊತೆ : ಅದು ಸಂಸಾರಾಬ್ಧಿಯಂ ದಾಂಟಿಸುವುದು . . . ಬಳಿಕ್ಕಂತದು ಲಿಂಗಾರೂಢನಂ ಮಾಡುವುದು ಶರಣಸಾಂಗತ್ಯವು (ರಜ್ಞಾಶ. ೫೭). ೩. ಸಂಗತಿ; ವಿಚಾರ : ಚಿತ್ತವಿಸು ತನ್ನಾಯೆ ಜನಿಸಿದಳೇನು ಕಾರಣವು ಎತ್ತಣದು ಸಾಂಗತ್ಯ ನಮಗೀ ಬಿತ್ತರವನಜುಪು (ಪ್ರಭುಲೀ. ೩-೧೯). ೪. [ಛಂದ] ಪದ್ಯದಲ್ಲಿ ನಾಲ್ಕುಪಾದಗಳುಳ್ಳ, ಗೇಯ ಗುಣವನ್ನು ಹೊಂದಿರುವ ಅಂಶಗಣಯುಕ್ತವಾದ ಒಂದು ಅಚ್ಚಗನ್ನಡ ಛಂದಸ್ಸು : ಸಾಂಗತ್ಯ:— ಇದರ ಒಂದು ಮೂರನೆಯ ಪಾದಗಳಲ್ಲಿ ನಾಲ್ಕು ವಿಷ್ಣುಗಣಗಳೂ, ಎರಡು ನಾಲ್ಕನೆಯ ಪಾದಗಳಲ್ಲಿ ಎರಡು ವಿಷ್ಣುಗಣಗಳೂ, ಕೊನೆಯಲ್ಲಿ ಒಂದು ಬ್ರಹ್ಮಗಣವೂ ಇರಬೇಕು. ವಿಷ್ಣುಗಳಿಗೆ ಪ್ರತಿಯಾಗಿ ಅಲ್ಲಲ್ಲಿ ಬ್ರಹ್ಮಗಣವೂ ಬರಬಹುದು (ಕೈಪಿಡಿ. ೧೦೩). [ಸಂ.]

**ಸಾಂಗವೇದ** (ನಾ). ಷಡಂಗಗಳಿಂದ ಕೂಡಿದ ವೇದ; ಸಂಪೂರ್ಣವಾದ ವೇದ : ಸಾಂಗವೇದವನೋದಿ ಸಕಲಧರ್ಮದ ತತ್ವಂಗಳನಱಿತಾಚರಿಸಿ . . . ಮುನಿಪುಂಗವನೊರ್ವನೆಸೆದನು (ಹದಿಬ. ೨-೩೦); ಸಾಂಗವೇದವನ್ನು ಅಧ್ಯಯನ ಮಾಡಿ ವಿಚಾರಪೂರ್ವಕ ವೇದಾರ್ಥವನ್ನು ತಿಳಿದುಕೊಂಡು ಅದರಂತೆ ಅನುಷ್ಠಾನಮಾಡಿ ಸಕಲಶ್ರೇಯಸ್ಸುಗಳನ್ನು ಹೊಂದಬೇಕೆಂಬ ಅಭಿಪ್ರಾಯ ಸರ್ವಸಮ್ಮತ (ಹಿಂದಸಾ. ೧೬೨). [ಸಂ.]

**ಸಾಂಗಿಕ** (ನಾ). ಕ್ರಮಬದ್ಧವಾದುದು; ವಿಧಿವತ್ತಾದುದು; ಸಮರ್ಪಕ ವಾದುದು : ಸತ್ಯನುಡಿಯೇ ನಿರ್ವಾಣವೆಂಬರ್ಥದಿಂ ಸಲೆ ಸತ್ಯವ್ರತನೆಂಬ ನಾಮ ತನಗಂ ಸಾಂಗಿಕಮಾಗಿರ್ದು ನಿರ್ಮಲನಿಂತಿರ್ದಡೆ (ನನ್ನಚಾ. ೬-೧೨೮).

**ಸಾಂಗಿಕವಾಗಿ ಮಾಡು** = ವಿಧಿವತ್ತಾಗಿ ದಾನ ಮಾಡು : ಇನ್ನೀ ಧರ್ಮ್ಮವಂ ಪ್ರತಿಪಾಳ್ಸಿದವರ್ಗ್ಗೆ ವಾರಣಾಸಿ ಕುರುಕ್ಷೇತ್ರದಲ್ಲಿ ಗೋವುಸಹಸ್ರವಂ ಸಾಂಗಿಕವಾಗಿ ಮಾಡಿದ ಫಲವ ಪಡೆವರು (ಕಇ. IV, ೧-೧೦೪; 1204). [ಸಂ.]

**ಸಾಂಗೋಪಾಂಗ** (ಗು). ೧. ಎಲ್ಲ ಭಾಗಗಳಿಂದ ಕೂಡಿದ ; ಪೂರ್ಣವಾದ : ಕಲಿತರು ಎಮ್ಮ ಪೂರ್ವನೃಪಾಲಕರು ಸರಸಸ್ಯಸಾಂಗೋಪಾಂಗವಿದ್ಯೆಗಳ (ಕುಮ್ಮಾಲ. ೭-೧). (ನಾ). ೨. (ವೇದದ ವಿಚಾರದಲ್ಲಿ) ಅಂಗ, ಉಪಾಂಗಗಳಿಂದ ಕೂಡಿದುದು; ಪೂರ್ಣವೇದ. ೩. ಎಲ್ಲ ಭಾಗಗಳಿಂದ ಕೂಡಿದುದು; ಪೂರ್ಣವಾದುದು : ತನ್ನೊಡಲ ಖಂಡಂಗಳಂ ಕೊಯಿಕೊಯಿದು ಸಾಂಗೋಪಾಂಗಮಾಗಿರಲೊಪ್ಪಲೊಪ್ಪಲವಂ ತ್ರಿಸಂಧ್ಯೆಯಲಿ ಲಿಂಗಕನುರಾಗದಿ ಸಮರ್ಪಿಸುವಂಗದಲಿ (ಬಸವು. ೪೪-೨೫); ಸರ್ವಕರ್ಮದ ವಿಧಿಯನಖಿಳನಿಗಮದ ಕಡೆಯನು . . . ಸಾಂಗೋಪಾಂಗವಾಗಿ ಬರಿಸಿ (ಜೈಮಿಭಾ. ೧೯-೫೪). ೪. ವಿಧಿವತ್ತಾದುದು; ಶಾಸ್ತ್ರೋಕ್ತವಾದುದು: ಮಂಗಳಾಗಮಮಂತ್ರಪೂತಜಲಂಗಳಂ ತಳಿದೊಳಗೆ ಸಾಂಗೋಪಾಂಗದಿಂ ಪಂಚಾಮೃತಸ್ನಪನಂಗಳಂ ಮಾಡಿ ಲಿಂಗವಂ ಪೂಜಿಸಿ (ಬಸವು. ೧೮-೩೫); ಕೃಷ್ಣವೇಣಿಗೂ ರಾಜನಿಗೂ ಸಾಂಗೋಪಾಂಗವಾಗಿ ವಿವಾಹವು ನೆರವೇರಿತು (ಸಾವಿತ್ರಿ. ೧೫೭). [ಸಂ.]

**ಸಾಂಗ್ಯ** (ನಾ). ಸಂಪ್ರದಾಯಬದ್ಧವಾದ ಆಚರಣೆ; ವಿಧಿವತ್ತಾದ ಆಚಾರ : ಕೋಣ ಊರೊಳಗೆ ಮೆರವಣಿಗೆ ಹೊರಟು ಎಲ್ಲ ಕೇರಿಯಲ್ಲೂ ಎಲ್ಲ ಮನೆಗಳ ಮುಂದೆಯೂ ಆರತಿಯನ್ನೆತ್ತಿಸಿಕೊಂಡು ಸಾಂಗ್ಯವೆಲ್ಲ ಮುಗಿಸಿಕೊಂಡು ಮತ್ತೆ ಚಾವಡಿಯ ಬಳಿ ಸೇರುವ ಹೊತ್ತಿಗೆ ಮಧ್ಯಾಹ್ನ ನಡುಬಿಸಿಲಾಗುವುದು ವಾಡಿಕೆ (ಸಣ್ಣಕ. VI, ೭೫); ಮನೆಯಾಕೆ ಅದಕೆ ಕರುವಿಗೆ ಕುಂಕುಮವನಿಕ್ಕಿ . . . ಏತರದೊ ಸಾಂಗ್ಯವ ಮಾಡಿದರು (ನವರಾ. V, ೮೧). [< ಸಂ. ಸಾಂಗ./ ತಮಿ. ಚಾಙ್ಕಿಯಮ್]

**ಸಾಂಗ್ರಾಣಿ** 'ಸಂಗ್ರಾಣಿ$_2$' ನೋ.

**ಸಾಂಗ್ರಾಮಿಕ** (ಗು). ಯುದ್ಧಕ್ಕೆ ಸಂಬಂಧಿಸಿದ : ದೇಶಾಂತರಂಗಳನೊರ್ವನೆ ತೊಳಲ್ದು ಸಾಂಗ್ರಾಮಿಕೋದ್ದೇಶಂಗಳಂ ಕಲ್ವಂತೆ ಕಲ್ತು (ಜೀವಸಂ. ೪೯-೨೦ ವ). [ಸಂ.]

**ಸಾಂಘಿಕ** (ಗು). ೧. ಸಾಮೂಹಿಕವಾದ; ಸಮುದಾಯಕ್ಕೆ ಸಂಬಂಧಿಸಿದ : ವಿರಾಮಕಾಲಗಳಲ್ಲಿ ಏನಾದರೂ ಸಾಂಘಿಕಕಾರ್ಯಕ್ರಮಗಳನ್ನು ಅನುಸರಿಸಬಹುದು (ಶಿಕ್ಷದ. ೭೭೫). ೨. ಸಂಘಕ್ಕೆ ಸಂಬಂಧಿಸಿದ; ಸಂಸ್ಥೆಗೆ ಸೇರಿದ : ಸಾಂಘಿಕ ಸರ್ವಾಧಿಕಾರಸಮಾಜದಲ್ಲಿ ವ್ಯಕ್ತಿಸ್ವಾತಂತ್ರ್ಯ ಬರಿ ನಾಲಗೆಯ ತುದಿಮಾತಾಗಿ ಉಳಿಯುತ್ತದೆ (ನವ್ಯಕಾ. ೧೮). (ನಾ). ೩. ಸಮುದಾಯಕ್ಕೆ ಸಂಬಂಧಿಸಿದುದು; ಸಾಮೂಹಿಕ ವಾದುದು : ಇಲ್ಲಿ ನಾಯಕ ಪ್ರತಿನಾಯಕನ ಸ್ಥಾನವು ಸಾಂಘಿಕವಾಗಿದೆ (ಕೈಲಾಕ. ೧. ಮುನ್ನುಡಿ). [ಸಂ.]

**ಸಾಂಘಿಕಜೀವನ** (ನಾ). ಸಾಮೂಹಿಕವಾದ ಬದುಕು; ಸಮಾಜಜೀವನ : ಅಭಿಪ್ರಾಯ ಕ್ರತುಶಕ್ತಿಗಳ ವಿವಿಧತೆಯೇ ಸಾಂಘಿಕಜೀವನಕ್ಕೆ ಜೀವಕಳೆಯನ್ನು ತಂದು ಕೊಡುತ್ತದೆ (ನವ್ಯಕಾ. ೧೮). [ಸಂ.]

**ಸಾಂಡಣಿ**, ಸಂಡಣಿ (ನಾ). ವೇಗವಾಗಿ ಚಲಿಸುವ ಒಂಟೆ; ಸವಾರಿಯ ಒಂಟೆ. **ಸಂಡಣಿ** .

**ಸಾಂಡಣಿಯ ಸವಾರ, ಸಂಡಣಿಸವಾರ** = ವೇಗವಾಗಿ ಚಲಿಸುವ ಒಂಟೆಯ ಮೇಲೆ ಸುದ್ದಿಸಮಾಚಾರಗಳನ್ನು ಒಯ್ಯುವವನು; ಒಂಟೆಯ ಸವಾರ : ರಾಜಾ ಜಯಸಿಂಗನು . . . ಪತ್ರವನ್ನು ಬಾದಷಹನಿಗೆ ಬರೆದು ಅದನ್ನು ಸಾಂಡಣಿಯ ಸವಾರನ ಸಂಗಡ ದಿಲ್ಲಿಗೆ ಅದೇ ಕಳಿಸಿ ಸಮಾಧಾನ ಹೊಂದಿದ್ದನು (ಧಾರ್ಮಿತೀ. ೧೮೦); ಖಂಡಣಿ ಹಣವನ್ನು ಕಳುಹಿಸಬೇಕೆಂದು ಸಂಡಣಿಸವಾರರನ್ನು ದುರ್ಗಕ್ಕೆ ಕಳುಹಿಸಿದನು (ಚಿತ್ರಪಾ. ೭೨). [<— ಮರಾ. ಸಾಂಡಣೀ ; ಹಿಂ. ಸಾಂಡನೀ]

**ಸಾಂತ$_1$** (ನಾ). ೧. ಶಾಂತವಾದುದು; ನಿರುದ್ವಿಗ್ನವಾದುದು: ''ಸಾಂತ್ವನಂ, ಸಾಂತ್ವನೀಯಂ, ಈ ೨ ಸಾಂತಂ'' (ಕಾಶಕ್ಕ. ೨೬೨). ೨. ಶಾಂತಸ್ವಭಾವದವನು ; ಸಮಾಧಾನಚಿತ್ತನಾದವನು : ''ಸಾಂತ-ಶಾಂತ=ಸಮಾಧಾನಿ, ಶಿವ'' (ತದ್ಭಕೋ. ೪೪). ೩. ಶಿವ; ಈಶ್ವರ : ''ಪೆಱದಲೆಯಂ . . . ಸಾಂತಂ ಬಾಂದೊಱದಲೆಯಂ ಪಗೆ ಗಣ್ಣಂ ತಱಸಂದುಮೆಯಾಣ್ಮಂ'' (ಚತುನಿ. ೬); ಜಗದಱಿಕೆಯ ಸಾಂತನರೆವೆಣ್ಣಾಗನೆ! (ರಾಮಾಶ್ವ. ೫೬-೯). [< ಸಂ. ಶಾಂತ]

**ಸಾಂತ$_2$** (ಗು). ೧. ಕೊನೆಯುಳ್ಳ; ಅಂತ್ಯವನ್ನುಳ್ಳ. ೨. ಪರಿಮಿತವಾದ; ಸೀಮಿತವಾದ : ಭ್ರಾಂತಿಯೋ ಸಂಪೂರ್ಣಸುಖದಾಶೆ ಬಾಹ್ಯದಲಿ ಸಾಂತಲೋಕದ ಸೌಖ್ಯ ಖಂಡಖಂಡವದು (ಮಂಕುತಿ. ೮೮೯). (ನಾ). ೩. ಕೊನೆಯನ್ನುಳ್ಳದು; ಅಂತ್ಯವನ್ನುಳ್ಳದು : ಆದರೆ ವಿಜ್ಞಾನ ಸಾಂತವಾದುದು, ಅನಂತವಲ್ಲ (ಈಚಿಸೆ. ೧೨೪); ಅನಂತಮಂ ಸಾಂತದಲ್ಪಕ್ಕೆಳೆವ ಸಾಹಸಂ ಸಾಲ್ಗುಮಿನ್ (ಶ್ರೀರಾಮಾ. ೧೭೨-೫೧). ೪. ಸಕಾರವನ್ನು ಕೊನೆಯಲ್ಲಿ ಉಳ್ಳ ಪದ; ಸಕಾರಾಂತವಾದ ಶಬ್ದ : ನೆಗಟ್ದಿರ್ದ ರೇಫ ಟಟ ನಾಂತ ಗಾಂತ ಸಾಂತೋತ್ಕದಿದಿರ ವತ್ವಂ ಪತ್ವಂ ಪುಗುಗುಂ ದ್ವಿತ್ವಂ ಮೇಣ್ . . . ಸಾಂತಕ್ಕೆ - ತರಿಪಂ, ಬರಿಪಂ, ಇರಿಪಂ (ಶಮದ. ೨೩೨ ಪ್ರಯೋ). [ಸಂ.]

**ಸಾಂತಕಾಮಪ** (ನಾ). ಒಬ್ಬಾತನ ಹೆಸರು : ಎಱೆಯ ಪೆರ್ಮ್ಮಾಡಿಯ ಸಾನ್ತಕಾಮಪನ ಮಗಮ್ ಬಿನಯಿತಮ್ (ಎಕ. VII, ಶಿಕಾರಿ. ೨೮೪-೨ ; 902). [ಸಾಂತ$_1$ + ಕಾಮ + ಅಪ (< ಅಪ್ಪ$_1$)]

**ಸಾಂತಣ್ಣ** (ನಾ). ಒಬ್ಬಾತನ ಹೆಸರು: ಕೊಳ್ಳಿಯಣ್ಣನ ಮಗಂ ಸಾನ್ತಣ್ಣಂ ಕಲ್ಲ ನಿಱಿಸಿದಂ (ಎಕ. III (R), ಗುಂಡ್ಲುಪೇ. ೫೦-೧೨; 10ನೆಯ ಶತ). [ಸಾಂತ$_1$ + ಅಣ್ಣ$_1$]

**ಸಾಂತತೆ** (ನಾ). ಕೊನೆಯನ್ನು ಹೊಂದಿರುವಿಕೆ; ಅಂತ್ಯವನ್ನು ಪಡೆದಿರುವಿಕೆ : ಇಂದ್ರಿಯಧೂಳೀದೂಸರದಿಂದ ಮಸುಳಾದ ಸಾಂತತೆಯ ಪರಿಣಾಮವೇ ವಿಕೃತಿ (ಸೌಂದಸ. ೩೭೩). [ಸಂ. ಸಾಂತತಾ]

**ಸಾಂತರ** (ನಾ). ಒಂದು ವಂಶ ಮತ್ತು ಆ ವಂಶದ ರಾಜನ ಹೆಸರು : ಶ್ರೀಮತ್ ವಿಕ್ರಮಾದಿತ್ಯ ಸಾಂತರನರಸುಗೆಯ್ಯುತ್ತುಮಿರೆ . . . ಸಾಂತರನ ಶ್ರಿಯಾಚಳವಿ ಶ್ರೀಮತ್ ಚನ್ನಿಗಮ್ . . . ಕಟ್ಟಮರಕ್ಕೆಱೆಯುಮಂ ಕಟ್ಟಿಸಿ (ಎಕ. VII . ಶಿಕಾರಿ. ೨೮೪-೪; 902); ಸಾನ್ತರಕುಳಕುಮುದಿನೀಶಶಾಂಕಮಯೂಖಾಂಕುರಂ . . . ಶ್ರೀಮನ್ಮಹಾಮಂಡಳೇಶ್ವರಂ ನಂನಿಸಾನ್ತರದೇವ (ಎಕ. VIII, ನಗರ. ೩೫-೪; 1077).

**ಸಾಂತರಾದಿತ್ಯ** = ಸಾಂತರವಂಶಕ್ಕೆ ಸೂರ್ಯನಂತಿರುವವನು; ಒಂದು ಬಿರುದು : ಸುಭಟಸಂಸ್ತುತ್ಯಂ ಸಾನ್ತರಾದಿತ್ಯಂ . . . ಕೃತಪ್ರತಿಜ್ಞಂ ಬಿರುದ ಸರ್ವಜ್ಞಂ ನಾಮಾದ್ಯನೇಕಾಂಕಮಾಳಾಸಮಳಂಕೃತರ್ ಶ್ರೀಮತ್‌ವೀರಸಾನ್ತರದೇವರ್ (ಮೈಆರಿ. ೧೯೩೧, ೭೪-೧೨; 1053 ? ); ಸಾನ್ತರಾದಿತ್ಯಂ ಸಕಳಜನಸ್ತುತ್ಯಂ ನೀತಿಶಾಸ್ತ್ರಜ್ಞಂ ಬಿರುದ ಸರ್ಬ್ಬಜ್ಞಂ ಶ್ರೀಮನ್ಮಹಾಮಂಡಳೇಶ್ವರಂ ನಂನಿಸಾನ್ತರದೇವ (ಎಕ. VIII, ನಗರ. ೩೫-೫; 1077). [?]

**ಸಾಂತರಶ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಸಾನ್ತರಶರ್ ರಾಜ್ಯಂಗೆಯ್ಯೆ ವೂಜ್ಜಿಳನ್ ಗವೂದದ ಮಹಾಜನಕ್ಕೆ ಶಾಲೆ ಕೊಟ್ಟದು ಆಚನ್ದ್ರತಾಂಕಂ (ಎಕ. VII, ಶಿಕಾರಿ. ೪೫(ಬಿ)-೩೫; ಸು. 890 ?). [ಸಾಂತ$_1$ + ಅರಶ (< ಅರಸ$_1$)]

**ಸಾಂತಳಿ** 'ಸಾಂತಳ್ಗೆ' ನೋ.

**ಸಾಂತಳಿಗೆ** 'ಸಾಂತಳ್ಗೆ' ನೋ.

**ಸಾಂತಳೆಗೆ** 'ಸಾಂತಳ್ಗೆ' ನೋ.

**ಸಾಂತಳ್ಗೆ, ಸಾಂತಳಿ, ಸಾಂತಳಿಗೆ, ಸಾಂತಳೆಗೆ, ಸಾಂತಲಿಗೆ, ಸಾತ್ತಲಿಗೆ** (ನಾ). ಒಂದು ನಾಡಿನ ಹೆಸರು; P ಈಗಿನ ಕಳಸ, ಹುಂಚ ಇತ್ಯಾದಿ ಸ್ಥಳಗಳಿರುವ ಪ್ರದೇಶ : ಶ್ರೀಜಗೇಸಿ ಚಾನ್ತರಾಜಕುಲತಿಲಕ ಸಾನ್ತಳ್ಗೆಯ ಸಮಸ್ತಮುಮನಾಳೆ (ಎಕ. VII, ಶಿಕಾರಿ. ೨೮೩-೪; ಸು. 830). **ಸಾಂತಳಿ :** ಶ್ರೀಮನ್ಮಹಾಮಂಡಳೇಶ್ವರಂ ಕುಂದ ಮರಸರು ಬನವಾಸಿಪನ್ನಿರ್ಚ್ಛಾಸಿರಮುಮಂ ಸಾನ್ತಳಿಸಾಸಿರಮುಮಂ . . . ಸುಖಸಂಕಥಾ ವಿನೋದದಿಂ ಬಲಿಪುರದ ನೆಲೆವೀಡಿನೊಳು ರಾಜ್ಯಂಗೆಯ್ಯುತ್ತಮಿರ್ದ್ದು (ಎಕ. VII, ಶಿಕಾರಿ. ೧೨೫-೨೪; 1019). **ಸಾಂತಳಿಗೆ :** ಶ್ರೀಮತ್ಕುನ್ದರಾಜಂ ಬನವಾಸಿಪನ್ನಿರ್ಚ್ಛಾಸಿರಮುಂ ಸಾನ್ತಳಿಗೆಸಾಯಿರಮುಮನಾಳುತ್ತಿರೆ (ಮೈಆರಿ. ೧೯೨೯, ೫೩-೩; 1019); ಅರಸಿಮಯ್ಯನ ಮಗಂ . . . ಧಾರಾಪೂರ್ಬ್ಬಕದಿಂ ಸಾಂತಳಿಗೆಸಾಸಿರದ ಬಳಿಯ ಕೊಡನಾಡು ಮೂವತ್ತರೊಳಗಣ ಕುಡಿಗೆರಿಯ ಮನ್ನಿಯವೊಳಗಾಗಿ ಸರ್ಬ್ಬಾಭ್ಯಂತರಸಿದ್ಧಿಯಿಂದ ಕೊಟ್ಟಂ (ಎಕ. VII, ಶಿಕಾರಿ. ೫೩-೨೫; 1027). **ಸಾಂತಳೆಗೆ :** ಬದ್ದುಗ ಬನವಸಿ XXX ತ್ರಯ್ಯ ಸಾನ್ತಳೆಗರಸುಗೆಯೆ (ಮೈಆರಿ. ೧೯೨೩, ೮೧-೫; 933). **ಸಾಂತಲಿಗೆ :** ನೆಗಟ್ದ ಗೋನರಸಂ ಸಾಂತಲಿಗೆಸಾಸಿರಮುಮಂ ದುಷ್ಟನಿಗ್ರಹ ಸಿಷ್ಟಪ್ರತಿಪಾಲನದಿಂ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರ್ದ್ದ ಪಿರಿಯಿಂಗುಣದ ಕುಮಾರಸ್ವಾಮಿ ಭಟ್ಟಸೋಮಯಾಜಿಗಳ್ಗೆ . . . ಮಾಡಿಕೊಟ್ಟಲ್ಲಿ (ಎಕ. VIII, ಸಾಗರ. ೧೦೮-೨೯; 1042). **ಸಾತ್ತಲಿಗೆ :** ವಾ[ಪಣರ]ಸಯ್ಯಂ ಸಾತ್ತಲಿಗೆ ಎಳ್ಪತ್ತುಮನಾ XXX ಣಮನಾಳುತ್ತಮಿರೆ (ಸೌಇಇ. XX, ೨೦-೧೧; 1015). [?]

**ಸಾಂತಲಿಗೆ** 'ಸಾಂತಳ್ಗೆ' ನೋ.

**ಸಾಂತಿ** (ನಾ). ಶಾಂತಿ; ನಿರುದ್ವಿಗ್ನತೆ : ಶಾಲೆ-ಸಾಲ, ಶಾಂತಿ-ಸಾಂತಿ (ಶಮದ. ೨೫೩ ಪ್ರಯೋ). 'ಸಾಂತಿದಿಟ್ಟಿ' ಪರಾ. [< ಸಂ. ಶಾಂತಿ]

**ಸಾಂತಿಗ** 'ಸ್ಥಾನೀಕ' ನೋ.

**ಸಾಂತಿದಿಟ್ಟಿ** (ನಾ). ಶಾಂತಿಯಿಂದ ಕೂಡಿದ ದೃಷ್ಟಿ; ಸಮಾಧಾನದ ನೋಟ: ತಣ್ಣದಿರಂದದ ಸಾಂತಿದಿಟ್ಟಿಯಿಂ ಪೊಂಗುತುಮೊರ್ಮೆ ನಿಟ್ಟಿಸುತುಂ . . . ನಿಂದಪಳ್ (ಚಿಕವಿ. ೬-೨೪೨). [ಸಾಂತಿ + ದಿಟ್ಟಿ$_1$]

**ಸಾಂತ್ವ** (ನಾ). ೧. ಸಮಾಧಾನ ಮಾಡುವುದು ; ಉಪಶಮನಗೊಳಿಸುವುದು. ೨. ಹಿತವಾದ ಮಾತು; ಮೃದುವಚನ: "ಬುಧ್ಧEಲ್ಲ3ೆಯಿಸುವ(?) ನುಡಿಯಂ ಸಾಂತ್ವವೆಂಬುದು" (ಹಲಾಯು. ೨೩-೧೪೦). [ಸಂ.]

**ಸಾಂತ್ವನ** (ನಾ). ೧. ಸಮಾಧಾನಪಡಿಸುವುದು; ಸಂತೈಸುವಿಕೆ : "ಪ್ರಣೀತಿಃ, ಅನುನಯಃ, ಪ್ರಣಿಪಾತಃ, ಸಾಂತ್ವನಂ — ಈ ೪ ಸಂತೈಸುಹ" (ಹಲಾಯು. ೧೨೩-೭೪). ೨. ಸಮಾಧಾನಪಡಿಸುವ ಮಾತು; ಸಂತೈಕೆಯ ನುಡಿ : ತನ್ನ ನೋವನ್ನು ತಿಳಿಸಿ ಹೇಳಿ ಸಾಂತ್ವನವನ್ನು ಪಡೆಯಲು ತಾಯಿಯಿಲ್ಲದೆ, ನರಹರಿಯು ಜರ್ಜರಿತನಾಗಿದ್ದ (ಸಮಜೀ. ೨೫೪). ೩. ಸಮಾಧಾನ; ಉಪಶಮನ : ಅವಳ ಆ ಅಳುವಿಕೆಯಲ್ಲಿ ಒಂದು ಬಗೆಯ ಸಾಂತ್ವನವಿತ್ತು (ಇಪ್ಪತ. ೪೪೩). [ಸಂ.]

**ಸಾಂತ್ವನಗುಟ್ಟು** (ಕ್ರಿ). ಸಮಾಧಾನದ ಮಾತುಗಳನ್ನಾಡು; ಸಂತೈಕೆಯ ಮಾತುಗಳನ್ನಾಡು : ಎಲ್ಲರೂ ತಮ್ಮ ತಮ್ಮ ಪಂಗಡಗಳೊಳಗೆ ಸಾನ್ತ್ವನಗುಟ್ಟಿ ಕೊಳ್ಳುತ್ತಿರುವರು (ಬೆಟ್ಟಿಅ. ೮೩-೧೨). [ಸಾಂತ್ವನ + ಕುಟ್ಟು$_1$]

**ಸಾಂತ್ವನವಚನ** (ನಾ). ಸಮಾಧಾನದ ಮಾತು; ಸಂತೈಸುವ ನುಡಿ : ಜನನೀಜನಕರ್ ಬಾಂಧವಜನಸಹಿತತ್ತಱುತೆ ಬಂದು ನಾನಾವಿಧಸಾಂತ್ವನವಚನ ಸಹಿತಮುಸಿರ್ದರ್ ಮನೆಗೊಡಗೊಂಡೊಯ್ಯಲೆಂಬ ಬಗೆಯಿಂದೆನ್ನಂ (ಕಾದಂಪೂ. ೯೫೪); ವಿವಿಧ ರೀತಿಯಿಂದ ಸಾಂತ್ವನವಚನಗಳನ್ನಾಡಿದಳು (ಅಶೋಕ. ೨೩೧). [ಸಂ.]

**ಸಾಂತ್ವವಚನ** (ನಾ). = ಸಾಂತ್ವನವಚನ : ಅನಿಂದ್ಯಮಪ್ಪ ನಿಜಚರಿತಮಂ ನಿಂದಿಸಲಾಗದೆಂದನೇಕಪುರಾಣಕಥಾಪ್ರಕಥನದೊಳಂ ಬಹುಪ್ರಕಾರಸಾಂತ್ವವಚನ ದೊಳಮೆಂತಾನುಮರಸಂ ಸಂತೈಸಿ (ಕಾದಂಪೂ. ೯೬೫). [ಸಂ.]

**ಸಾಂದರ್ಭಿಕ** (ಗು). ಸಂದರ್ಭಕ್ಕೆ ಸಂಬಂಧಿಸಿದ; ಪ್ರಾಸಂಗಿಕವಾದ : ಅಂತೇ ಸಾಂದರ್ಭಿಕ ಅಡೆ-ತಡೆಗಳೊಡನೆ ಇದನ್ನು ಕೆಲಕಾಲದ ತನಕ ಮುಂದುವರಿಸಿದೆನು (ಚಂಜನ್. ೧೪೩). [ಸಂ.]

**ಸಾಂದರ್ಭಿಕರಜ, ಸಾಂದರ್ಭಿಕರಜೆ** (ನಾ). (ಕಚೇರಿ ಮುಂತಾದ ಕಡೆಗಳಲ್ಲಿ) ಅಗತ್ಯವಾದಾಗ ಪೂರ್ವಭಾವಿಯಾದ ಸೂಚನೆಯಿಲ್ಲದೆ ತೆಗೆದುಕೊಳ್ಳ ಬಹುದಾದ ರಜ : ಅವರು ಇಂದು ಸಾಂದರ್ಭಿಕರಜ ತೆಗೆದುಕೊಂಡಿದ್ದಾರೆ (ರೂಢಿ). **ಸಾಂದರ್ಭಿಕರಜೆ :** ನಮ್ಮ ಅಧಿಕಾರಿಗಳು ಎರಡು ದಿನಗಳಿಂದ ಸಾಂದರ್ಭಿಕರಜೆಯಲ್ಲಿದ್ದಾರೆ (ರೂಢಿ). [ಸಾಂದರ್ಭಿಕ + ರಜ$_2$ (< ರಜಾ)]

**ಸಾಂದರ್ಭಿಕರಜೆ** 'ಸಾಂದರ್ಭಿಕರಜ' ನೋ.

**ಸಾಂದು, ಸಾದು$_1$** (ನಾ). ೧. (ಚಳೆಯ, ಸಾರಣೆ ಇತ್ಯಾದಿಗಳಿಗಾಗಿ ಉಪಯೋಗಿಸುವ) ಕಸ್ತೂರಿ, ಕರ್ಪೂರ ಮೊದಲಾದ ಪರಿಮಳದ್ರವ್ಯಗಳ ಮಿಶ್ರಣ,— ಒಂದು ಬಗೆಯ ಗಂಧದ್ರವ್ಯ : ಮುತ್ತಿನ ಪಚ್ಚೆ ಮಾಣಿಕದ ವಜ್ರದ ಕೇಱಿಯೊಳೊಂದಿ ಸಾಂದಿನೊಳ್ ಕತ್ತುರಿಯೊಂದು ಕೋಳ್ಗೆಸಜೊಳೋಕುಳಿ ಚಂದನ ಗಂಧವಾರಿಯೊಳ್ (ಪಂಪಭಾ. ೧೪-೨೦); ಸಾ[ಂ]ದಿನೊಳಾದ ಸಾರವಣೆ ಮುತ್ತಿನೊಳಿಕ್ಕಿದ ರಂಗವಲ್ಲಿ (ವರ್ಧಮಾ. ೧-೬೦). ೨. ಚಂದನ, ಕಸ್ತೂರಿ, ಕೇಸರಿ ಇತ್ಯಾದಿಗಳಿಂದ

ಅಥವಾ ಅಕ್ಕಿ, ರಾಗಿ ಮುಂತಾದುವುಗಳ ಕರಿಕಿನಿಂದ ತಯಾರಿಸುವ, ಹಣೆಯಲ್ಲಿ ಬೊಟ್ಟು ಅಥವಾ ತಿಲಕವಿಟ್ಟುಕೊಳ್ಳಲು ಬಳಸುವ (ಕಪ್ಪುಬಣ್ಣದ) ಪರಿಮಳದ್ರವ್ಯ : ನೆರೆವದಳದರೆವ ಸಾಂದಿನ ಮೊರೆವಳಿಗಳ ಪರೆವ ಕಂಪನೆರೆವನಿಳನ ಮುಯ್ಯೊರೆವ ವಿಟಭೋಗಿಗಳ ವಿಸ್ತರದಿಂ ಸೊಗಯಿಪುವು ಘಟ್ಟಿವಳರಂಗಡಿಗಳ್ (ಪುಷ್ಪಪು. ೨-೮೩). 'ಈಳೆಸಾಂದು' ಪರಾ. ಸಾದು$_1$ : ೧. ಓರಣದ ಬೀದಿಯಲಿ ತಳಿತುವು ತೋರಣಂಗಳು ಹಲವು ಪರಿಯಲಿ ಸಾಜಿಸಿತು ಮುಗಿಲುಗಳು ಸಾದು ಜವ್ವಾದಿಕೆಸಱಿನಲಿ (ಸಂಭಪ. ೨೦-೯೯); ಹೊನ್ನ ಬಾಗಿಲುಗಳ ರನ್ನದೋರಣಗಳ ಪನ್ನೀರು ಸಾದಿನಿಂದೆಸೆವಾ ಕನ್ನಡಿನೆಲದರಮನೆಯೊಳು ಹೊಕ್ಕು ನಿರ್ಭಿನ್ನಾಂತರಂಗರೈದಿದರು (ಭರಚ. ೩-೬೬). ೨. ವನಜಂ ಕೋಷ್ಠಂ . . . ಗಜಕ್ಷೌದ್ರಮಿವಂ ದಿನಷಷ್ಟಿವರಂ ಜತುಭಾಜನದೊಳ್ ಪೊಯ್ದಿರಿಸೆ ಸಾದಿನಾಸವಮಕ್ಕುಂ (ಲೋಕೋಪ. ೭-೫೦); ಮೃಗಮದಮನಲಂಪಿಕ್ಕಿ ಸಾದಿನ ಕಂಪಂ ಕಕ್ಷಪುಟದೊಳು ಕೈಕೊಳಿಸಿ (ಬಸರ. ೮-೬); ದುರ್ದಮ ಕಾಳಕೂಟಮಂ ಕರಕಮಳಂಗಳಿಂ ಪೊಸೆದು ಸಾದಿನ ಮಾಟ್ಕೆಯೊಳೊಲ್ದು ಕಂಠದೊಳ್ ಧರಿಸಿದ ನೀಲಕಂಠನ ನಿಜಾಕೃತಿಯಂ ನೆನೆದಂ ನೃಪಾಲಕಾ (ದಶಕು. ೯-೧೦೯); ವರಜವಾಜಿಯ ಶೃಂಗಗಳ . . . ಸಾದಿನ ಭರಣಿಗಳ ಮೃಗನಾಭಿಗಳನಡಕಿದರು ಬಂಡಿಯಲಿ (ಕುವ್ಯಾಅ. ೧೨-೧೬).

**ಸಾಂದಿನ ಬೊಟ್ಟು, ಸಾದಿನ ಬಟ್ಟು, ಸಾದಿನ ಬೊಟ್ಟು** = (ಕಪ್ಪುಬಣ್ಣದ) ಗಂಧದ್ರವ್ಯದಿಂದ ಹಣೆಯಲ್ಲಿ ಇಟ್ಟುಕೊಳ್ಳುವ ದುಂಡಾದ ಗುರುತು, — ತಿಲಕ; ಸಾದಿನಿಂದ ಇಟ್ಟುಕೊಳ್ಳುವ ಬೊಟ್ಟು : ಸಾಂ[ಪಾಠಾಂ. ಸಾ]ದಿನ ಬೊಟ್ಟು ಚೆಲ್ವಿನಗ್ಗಳಿಕೆಯನೀಯೆ ಕಣ್ಗೆಸೆವ ಯಕ್ಷಿಯನಬ್ಜದಳಾಯತಾಕ್ಷಿಯಂ ಅಂತು ಕವಿತಾವಿಲಾಸಂ ಕಂಡು (ಲೀಲಾವ. ೮-೫೭); ಗಗನಲಕ್ಷ್ಮಿಯ ಮೊಗದಂತಿರುವ ಯಿಂದುಮಂಡಲದಲ್ಲಿ ಸೊಗಸಿನಿಂದಿಟ್ಟ ಸಾದಿನ ಬಟ್ಟಿದೆನ್ನುವರು (ಸೌಗಂಧಿ. ೧೮೮-೧೯); ಮಿಸುಪ ಸಾದಿನ ಬೊಟ್ಟು ಪೊದಟ್ದ ಗಲ್ಲದೊಳ್ ತೊಲಗುವ ದಿಟ್ಟಿಗರ್ಪು . . . ಮನಂಗೊಳೆ (ಚಕವಿ. ೩-೫೨).

[ದೇ. ‖ ತಮಿ. ಚಾನ್ತು; ಮಲ. ಚಾಂದು; ಕೊಡ. ಚಾಂದ್; ತೆಲು. ಚಾದು]

**ಸಾಂದ್ರ** (ಗು). ೧. ದಟ್ಟವಾದ; ನಿಬಿಡವಾದ : ಪರೆದಿರೆ ರಾಗಂ ತನ್ನೊಳ್ ನಿರಂತರಂ ಗಗನವಿವರಮೊಪ್ಪಿತ್ತಾದಂ ವರಪಾರಿಜಾತಕುಸುಮೋತ್ಕರಸಾಂದ್ರಪರಾಗವಿಸರ ಪಿಂಜರಿತಂಬೊಲ್ (ಕವಿರಾ. ೧-೧೦೨); ಅನುಚರಿವೊಲ್ ಸಂಜೆ ಸಂಜಾತರಕ್ತಾಂಬರದಿಂದಂ ಬಾಸಣಿಪ್ಪಂತೆಸೆದುದಸದಳಂ ಸಾಂದ್ರಶೋಣಾಂಶುಜಾಲಂ (ಕಾದಂಉ. ೮೧೬). ೨. ಗುಂಪಾದ; ಒತ್ತಾದ : ಅರವಿಂದಾಕರಸಾಂದ್ರಪದ್ಮವನಮಧ್ಯೋದ್ದೇಶದೊಳ್ ಲಕ್ಷ್ಮಿ . . . ಪ್ರತ್ಯಕ್ಷಮಿರ್ಪಳ್ ನಿರಂತರಂ (ಕಾದಂಪೂ. ೭೬೩). ೩. ಬಲವಾದ; ದೃಢವಾದ. ೪. ಅಧಿಕವಾದ; ಹೆಚ್ಚಾದ : ಸಿಂಹಳೇಂದ್ರಂ ಸಾಂದ್ರಹರ್ಷಮನಾಂತು ನಡೆದಿದಿರ್ಗೊಂಡು ರಾಜಶೇಖರರಾಜೇಂದ್ರನಂ . . .ತರ್ಪಾಗಳ್ (ರಾಜಶೇ. ೬-೧೩೭ ವ). ೫. ಮೃದುವಾದ; ನಯವಾದ : ಪಿಂಗಿತು ತಮಂ ಸಾಂದ್ರಚಂದ್ರಾತಪಂ ಪಸರಿಸಿತು ಕಣ್ಗೆ ಮಂಗಳವಾಗಲು (ಹಚಕಾ. ೩-೮೬); ತುಂಡದಲೀಡಿರಿದು ಕುಡಿಕುಡಿದು ಬೊಬ್ಬಿಟ್ಟಾಡುತಿರ್ದವು ಸಾಂದ್ರಚಂದ್ರಿಕೆಯಲಿ ಚಕೋರಿಗಳು (ಕುವ್ಯಾದ್ರೋ. ೧೭-೧೪). ೬. ಅಂಟಂಟಾದ ; ಜಿಗುಟಾದ. ೭. ಹಿತವಾದ. (ನಾ). ೮. ದಟ್ಟವಾದುದು; ನಿಬಿಡವಾದುದು : "ನಿರಂತರಂ, ಘನಂ, ಸಾಂದ್ರಂ, ಬಹುಳಂ, ವಿರಳೇತರಂ-ಈ ೫ ಮಂದಂ" (ಹಲಾಯು. ೧೧೯-೩೨). ೯. ತೀವ್ರವಾದುದು; ಉತ್ಕಟವಾದುದು : ಸಾಂದ್ರವಾಗಿ ಹರಗಣಭಕ್ತಿಯ ಮಾಳ್ಪನೆಂತೋ ಮಾದಲಾಂಬಿಕಾನಂದನನು ಸಾಂದ್ರವಾಗಿ ಬಿಜ್ಜಳನರಮನೆಯ ನ್ಯಾಯಮಾಳ್ಪನೆಂತೋ ಮಾದರಸನ ಮೋಹದ ಮಗನು (ಸರ್ವವ. ೧೯೪-೮); ಸಾಂದ್ರಮೆನಲ್ಕೆ ಸಂಕುವಿಡೆ ತದ್ರುಚಿ ರಾಜಿಸೆ ಮೌಕ್ತಿಕಾವಳೀರುಂದ್ರವರತ್ರೆ ಬಿತ್ತರಿಸೆ ಜೊಂಚೆಯಿನಂಚಿತಮಾಗೆ ಪಟ್ಟದಂತೀಂದ್ರನುಮಿಂತು ಪಣ್ಣ ಮಿಗೆ ಕಂಗೊಳಿಸುತ್ತಮೆ ಬಂದುದು (ಶಾಂತೀಶ್ವ. ೧೦-೬೧). ೧೦. ಕಾಡು; ಅರಣ್ಯ. [ಸಂ.]

**ಸಾಂದ್ರತೆ** (ನಾ). ೧. ದಟ್ಟವಾಗಿರುವಿಕೆ; ನಿಬಿಡತೆ : 'ಜನಸಾಂದ್ರತೆ' ಪರಾ. ೨. [ಭೌತವಿ] "ಏಕಮಾನದ ಗಾತ್ರದಲ್ಲಿರುವ ದ್ರವ್ಯದ ಮೊತ್ತ : ಒಂದು ವಸ್ತುವಿನ ದ್ರವ್ಯಪರಿಮಾಣಕ್ಕೂ ಘನಪರಿಮಾಣಕ್ಕೂ ಇರುವ ಪ್ರಮಾಣದಿಂದ ಅಳೆದ ಸಾಂದ್ರತೆ. ಗುಂಪುಗೂಡಿದ ಸ್ಥಿತಿ; ನಿಬಿಡತೆ ; ಸಂದಣಿ" (Density. ಇಂಕನ): ಪೂರ್ವಕಾಲದಲ್ಲಿ ಬೆಳೆಯುತ್ತಿದ್ದ ಗಿಡಮರಗಳೇ ಇಂದಿಗೂ ನಮ್ಮ ನೆಲದ ಮೇಲೆ ಬೆಳೆಯುತ್ತಿವೆಯಾದರೂ ಅವುಗಳ ಹರವು-ನಕಾಸೆಯೂ ಸಾಂದ್ರತೆಯೂ ಹಾಗೆಯೇ ಉಳಿದುಕೊಂಡು ಬಂದಿದೆಯೆಂದು ಭಾವಿಸುವುದು ಸರಿಯಲ್ಲ (ಶಾಸಗಿ. ೧೦).

[ಸಂ. ಸಾಂದ್ರತಾ]

**ಸಾಂದ್ರಪದ** (ನಾ). [ಛಂದ] ವರ್ಣ ಛಂದಸ್ಸಿನ ಇಪ್ಪತ್ತಾರು ಛಂದಸ್ಸುಗಳಲ್ಲಿ ಹನ್ನೊಂದನೆಯ, ಪಾದದಲ್ಲಿ ಹನ್ನೊಂದು ಅಕ್ಷರಗಳನ್ನುಳ್ಳ, ತ್ರಿಷ್ಟುಪ್ಪೆಂಬ ಛಂದಸ್ಸಿನ ಒಂದು ಸಮವೃತ್ತ : ಚಂದ್ರನಿನಭ್ರಂ ಸುರಪುರಮಿಾಶರ್ ರುಂದ್ರಪದಂ ತಾಂ ರಸಯತಿಯಿಂದಂ ಸಾಂದ್ರಪದಂ ಕೇಳ್ ಧರೆಯೊಳಿದಕ್ಕುಂ (ಛಂದೋಂಬು. ೨-೧೨೩). [ಸಂ.]

**ಸಾಂದ್ರಾಣಿ** 'ಸಂಗ್ರಾಣಿ$_2$' ನೋ.

**ಸಾಂದ್ರಾಣಿಕಲ್ಲು** (ನಾ). ವ್ಯಾಯಾಮ ಮಾಡುವಾಗ ಬಳಸುವ, ಮಧ್ಯೆ ರಂಧ್ರವಿರುವ ವೃತ್ತಾಕಾರವಾದ ಕಲ್ಲು : ಉಳಿದ ಸ್ಥಳದಲ್ಲಿ ಕಸರತ್ತಿನ ಸಾಮಗ್ರಿಗಳು-ಕರೇಲ, ಸರಪಳಿ, ಸಾಂದ್ರಾಣಿಕಲ್ಲು ಮೊದಲಾದವು (ಕೆಲನೆ. ೨೭೪).

[ಸಾಂದ್ರಾಣಿ (< ಸಂಗ್ರಾಣಿ$_2$) + ಕಲ್ಲು (< ಕಲ್$_3$)]

**ಸಾಂದ್ರಿಸು** (ಕ್ರಿ). ಅಧಿಕವಾಗು; ಅತಿಶಯವಾಗು : ಚಂದ್ರಾರ್ಕಕೋಟಿಗೆ ಸಾಟಿ ಮಿಾಟೆನೆ ಕಾಂತಿ ಸಾಂದ್ರಿಸೆ ಬರುತಿರ್ದಳಾಕೆ (ಭರಚ. ೭೮-೧೨೦). [ಸಾಂದ್ರ + -ಇಸು$_3$]

**ಸಾಂಧಾರ** (ನಾ). [ವಾಸ್ತು] (?) : ಚಾಳುಕ್ಯಶಿಲ್ಪದಲ್ಲಿ ದ್ರಾವಿಡದಲ್ಲಿದ್ದಂತೆ ಸಾಂಧಾರಪ್ರದಕ್ಷಿಣಮಾರ್ಗ ಗರ್ಭಗುಡಿಯ ಸುತ್ತಲೂ ಇರುವುದಿಲ್ಲ (ಹೊಯ್ಸವಾ. ೯); ಗದಗಿನ ಸರಸ್ವತಿದೇವಾಲಯದಲ್ಲಿ ಪ್ರದಕ್ಷಿಣಮಾರ್ಗ ಮುಚ್ಚಲ್ಪಟ್ಟಿದೆ. ಚಾಳುಕ್ಯ ಹೊಯ್ಸಳಶಿಲ್ಪದಲ್ಲಿ ಇದೊಂದೇ ಸಾಂಧಾರಪ್ರದಕ್ಷಿಣವಾಗಿದೆ (ಹೊಯ್ಸವಾ. ೧೧). [?]

**ಸಾಂಧ್ಯ** (ಗು). ಸಾಯಂಕಾಲಕ್ಕೆ ಸಂಬಂಧಿಸಿದ; ಸಂಧ್ಯಾಕಾಲದ : ಆಶೀವಿಷೋಗ್ರಾಸ್ತ್ರಮಂ ಖಗರಾಜಾಸ್ತ್ರನಿಪಾತದಿಂ ಕಿಡಿಸಿ ದಿವ್ಯಾಸ್ತ್ರಂಗಳಿಂ ಗೆಲ್ವನಿಂದಗಿಯಂ ಸಂಹೃತಿಕಾಲಸಾಂಧ್ಯಜಲದಾರಕ್ತೇಕ್ಷಣಂ ಲಕ್ಷ್ಮಣಂ (ಪಂಪಾರಾಮಾ. ೧೪-೨೦). [ಸಂ.]

**ಸಾಂಪದ** (ನಾ). ಉಪಕರಣ ; ಸಲಕರಣೆ : ಆಗಳಮರರಾಜಂ . . . ಯಾಗಪ್ರಸ್ತಾವನಾಪ್ರಣವ ಪ್ರಣ[ತಿ]ಪೂರ್ವಕಂ ಸಾಂಪದಮ[ಂ] ನೋಡಿ ಪದ್ಮಾದಿಸರೋವರಪ್ರಯಾತ ಪುರಾಂಬುವಿಂದೀಕ್ಷಣಂಗೆಯ್ದು ಭೂಮಿಶೋಧನಂ ಮಾಡಿ (ವರ್ಧಮಾ. ೧೨-೨೩ ವ) [ಸಂ.]

**ಸಾಂಪರಾಯ** (ಗು). ೧. ಯುದ್ಧಕ್ಕೆ ಸಂಬಂಧಿಸಿದ. (ನಾ). ೨. ಯುದ್ಧ; ಕದನ : "ಸಂಗ್ರಾಮಃ, ಸಮಿತಿಃ . . . ಸಂಗರಃ, ಸಾಂಪರಾಯಃ, ಸಮಾಘಾತಃ, ಪ್ರಘಾತಃ . . . ವಿಗ್ರಹಃ- ಈ ೩೫ ಕಾಳೆಗಂ" (ಹಲಾಯು. ೭೫-೩೦೦); ಈ ಸಾಂಪರಾಯದಿಂ ಪಲಾಯನಮೆ ಲೇಸೆಂದು ವಾಸವನತಿಜವಾಶ್ರವಮೆನಿಸಿದುಚ್ಚೈಶ್ರವಮನೇಱಿ ಮನೋವೇಗದಿಂ ಪೋಗೆ (ಜಗವಿ. ೪-೩೯ ವ). ೩. ಮುಂದಿನ ಬದುಕು; ಭವಿಷ್ಯದ ಜೀವನ ; ಭವಿಷ್ಯ. ೪. ಆಪತ್ತು; ಕೇಡು : "ಸಾಂಪರಾಯಃ- ೧ ಆಪತ್ತು, ಯುದ್ಧ, ಭವಿಷ್ಯತ್ಕಾಲ,೩"(ಸಿದ್ಧಾಂತಿ. ೪೧೯). ೫. ತನಿಖೆ; ತಪಾಸಣೆ. ೬ ಅನಿರ್ದಿಷ್ಟತೆ; ಅಸ್ಪಷ್ಟತೆ. ೭. ಸಹಾಯಕ; ಸೇವಕ. ೮. [ಜೈನ] ಲೌಕಿಕಜೀವನ; ಗೃಹಸ್ಥಜೀವನ : ಸಾಂಪರಾಯಮೆಂಬುದು ಸಂಸಾರಂ ಅದಂ ಪ್ರಯೋಜನಮಾಗುಳ್ಳ ಕರ್ಮಂ ಸಾಂಪರಾಯಿಕಂ (ತತ್ತ್ವಪ್ರ. ೨೫೫). [ಸಂ.]

**ಸಾಂಪರಾಯಿಕ** (ಗು).೧. ಯುದ್ಧಕ್ಕೆ ಸಂಬಂಧಿಸಿದ; ಯುದ್ಧತಂತ್ರದ ; ಯುದ್ಧೋಪಾಯದ. ೨. ವಿಪತ್ತಿನ; ತೊಂದರೆಯ. (ನಾ). ೩. ಯುದ್ಧ; ಕದನ : "ಯುದ್ಧಂ, ಅಯೋಧನಂ, ಜನ್ಯಂ, ಪ್ರಧನಂ . . . ಸಾಂ[ಪಾಠಾಂ. ಸಂ]ಪರಾಯಿಕಂ, ಸಮಯಃ . . . ಆಜಿಃ, ಸಮಿತ್, ಯುತ್- ೩೦ ಯುದ್ಧಕ್ಕೆ ಹೆಸರುಗಳು" (ಸಿದ್ಧಾಂತಿ. ೨೭೯); ಪಳಂಚುವ ಚಕ್ರತೋಮರಶಕ್ತಿ ಮುಖ್ಯ ಸಮಸ್ತಶಸ್ತ್ರಂ ಪೊಗರ್ಗಳ ನೀಲಿಮಾಯುಧಜಾಲಮಂ ತಳೆದುಲ್ಲಸತ್ಸಾಂಪರಾಯಿಕಮಂ ನೆಗಟ್ಟಿದರಂದು ಸಂದ ಪರಾಕ್ರಮರ್ (ಉದ್ಭಟ. ೪-೧೦೬). ೪. ಯುದ್ಧದಲ್ಲಿ ಬಳಸುವ ರಥ; ಯುದ್ಧರಥ : "ಕಾಳೆಗದ ರಥಮಂ ಸಾಂಪರಾಯEಯಿ3ಕಮೆಂಬುದು" (ಹಲಾಯು. ೭೩-೨೯೨). ೫. [ಜೈನ] ಸಂಸಾರಕ್ಕೆ ಕಾರಣಭೂತವಾಗಿರುವ ಕರ್ಮಾಸ್ರವ :

ಸಕಷಾಯಾಕಷಾಯರಪ್ಪ ಪ್ರಾಣಿಗಳ್ಗೆ ಸಾಮಾನ್ಯದಿಂ ಸಾಂಪರಾಯಿಕೇರ್ಯಾಪಥ ಕರ್ಮಾಸ್ರವಂಗಳಕ್ಕುಮೆಂದು ನಿಶ್ಚಯಿಸುವುದು (ವರ್ಧಮಾ. ೧೪-೪೩ ವ). [ಸಂ.]

**ಸಾಂಪು** (ನಾ). ಒಂದು ಬಗೆಯ ಅಳತೆ : ಇತ್ತ ಧರ್ಮ್ಮ ನಾಲ್ವತ್ತು ಸಾಮ್ಬಿನೊಳೊನ್ದು ಮೂವತ್ತರ ಕೆಙಗುಂ ಇನ್ನೂಱ ಮೇಲುಂ ಅರೆ ಸಾಮ್ಬು (ಎಇ. VI, ೧೬೬-೭; 793). [?]

**ಸಾಂಪ್ರತ$_1$** (ಗು). ೧. ತಕ್ಕುದಾದ ; ಯೋಗ್ಯವಾದ. ೨. ಈಗಿನ; ವರ್ತಮಾನದ : 'ಸಾಂಪ್ರತಕಾಲ' ಪರಾ. (ನಾ). ೩. ಉಚಿತವಾದುದು; ತಕ್ಕುದು : "ಸಾಂಪ್ರತಂ, ಸ್ಥಾನೇ-೨ ಯುಕ್ತೇ, ಉಚಿತವು" (ಸಿದ್ಧಾಂತಿ. ೪೩೪). ೪. ಈಗಿನ ಕಾಲ ; ವರ್ತಮಾನ ಕಾಲ: ಹಿಂದುಸ್ತಾನದಲ್ಲಿ ಸಾಂಪ್ರತಕ್ಕೆ ಅದರ ಪ್ರಚಾರ ವಿಶೇಷ ಇಲ್ಲ (ಮುಂಬಯಿ. ೪-೨೧೦); ಎರಡು ತೆರ ಮೌಲ್ಯಂಗಳೆಲ್ಲಕಂ ಲೋಕದಲಿ ಪರಮಾರ್ಥಕೊಂದು, ಸಾಂಪ್ರತದರ್ಥಕೊಂದು (ಮಂಹುಕ. ೬೬೩). [ಸಂ.]

**ಸಾಂಪ್ರತ$_2$** (ಅ). ಈಗ; ತತ್ಕಾಲದಲ್ಲಿ; ಪ್ರಕೃತದಲ್ಲಿ : ಅಪರಿಚಿತರನ್ನು ನೋಡಿ ಕೊಂಚ ನಾಚಿಕೆಯಿಂದ ಆವೃತನಾಗಿದ್ದ. ಸಾಂಪ್ರತ ತಂದೆಯ ಪ್ರೇಮಮಯನುಡಿಗಳಿಂದ ಧೈರ್ಯ ಬಂದಂತಾಯಿತು (ಬೆಂದಜೀ. ೩೮). 'ಉಭಯ' ಹೋ. [ಸಂ. ಸಾಂಪ್ರತಂ]

**ಸಾಂಪ್ರತಕಾಲ** (ನಾ). ವರ್ತಮಾನಸಮಯ ; ಪ್ರಸ್ತುತಕಾಲ : ಸಾಂಪ್ರತಕಾಲದಲ್ಲಿ . . . ಫ್ರಾನ್ಸ್ ಮುಂತಾದ ದೇಶಗಳಲ್ಲಿ ಕಬ್ಬಿಣದ ಗಣಿಗಳು ಬಹಳ (ಮುಂಬಯಿ. ೪-೧೪೪). [ಸಂ.]

**ಸಾಂಪ್ರದಾಯ** (ನಾ). ೧. ಪದ್ಧತಿ; ರೂಢಿ; ವಾಡಿಕೆ : ಭೂರಿಯೆನಿಸಿದ ಸೊನ್ನಲಿಗೆಪುರ ಚಾರುಭೋಗದವರು ನಟಿಸುತಿಹ ಪೇರಣೆಯ ಸೌರಾಷ್ಟ್ರನಾಥನ ಸಾಂಪ್ರದಾಯದಲಿ ಸೇರಿಸಿದ ಚಿಂದುಗಳ ಜತಿಗಳ ಹಾರವಿಪ ಸುಗತಿಗಳೊಳಾಡುವ ಪೂರಿಸುವ ವೀಣಾದಿ ವಾದ್ಯಧ್ವನಿಗೆ ಕುಣಿವವರ . . . ಅತ್ತಲೊತ್ತರಿಸಿ (ಬಸವು. ೫-೧೨); ಗಿರಿಜಾತಾಸಾಂಪ್ರದಾಯಾಗತನವಶಿವಚಿಹ್ನಂ ದಲಿಂತೆಲ್ಲಮೆಂದಾದರದಿಂ ತದ್ಭೇಶ್ಯೆ ಪೇಳ್ದಳ್ (ವೃಷವಿ. ೯-೩೨). ೨. ಒಂದು ನಿರ್ದಿಷ್ಟಸಂಪ್ರದಾಯಕ್ಕೆ ಸೇರಿದವನು,— ಪರಂಪರೆಗೆ ಸೇರಿದವನು : ನಳಿನಾಕ್ಷಿ ನೋಡಿ ಸಂತಸಪಟ್ಟು ಯಾತನಾ ವಲಿಮಪುತ್ರನೋ ಮೇಣು ಪೌತ್ರನೋ ತತ್ಸಾಂಪ್ರದಾಯನಹುದಾತನಲ್ಲಾಯನಲು (ನವಮೋ. ೨೬-೩೫). [< ಸಂ. ಸಂಪ್ರದಾಯ]

**ಸಾಂಪ್ರದಾಯಿಕ** (ಗು). ೧. ರೂಢಿಯಿಂದ ಬಂದ; ಪರಂಪರಾನುಗತವಾದ : ಈ ಗ್ರಂಥದ ವಿಚಾರವಾಗಿ ಸಾಂಪ್ರದಾಯಿಕಮಾರ್ಗದವರ ಅಭಿಪ್ರಾಯಕ್ಕೂ ಆಧುನಿಕ ಸಂಶೋಧಕರ ಅಭಿಪ್ರಾಯಕ್ಕೂ ಭೇದವಿದೆ (ಭಾರದ. ೮೩). (ನಾ). ೨. ಹಿಂದಿನಿಂದ ರೂಢಿಯಾಗಿ ಬಂದುದು; ಪರಂಪರಾನುಗತವಾಗಿ ಬಂದುದು : ಆಸನಾಭ್ಯಾಸ ಮಾಡುವುದರಲ್ಲಿ ಸಾಂಪ್ರದಾಯಿಕವಾಗಿ ಕೆಲವು ನಿಯಮಗಳೂ ಇವೆ (ಭಾರದ. ೧೫೭); ಈ ಸಂಗ್ರಹದಲ್ಲಿಯ ಮೊದಲಿನ ನಾಲ್ಕು ಕತೆಗಳಲ್ಲಿಯ ಕಥನಕ್ರಮ ಒಳ್ಳೆಯ ಅರ್ಥದಲ್ಲಿ ಸಾಂಪ್ರದಾಯಿಕವಾಗಿದೆ (ಹೊಸಕ್ಕ. ೨೮೦). [ಸಂ.]

**ಸಾಂಬ$_1$** 'ಸೋಂಬ' ನೋ.

**ಸಾಂಬ$_2$** (ನಾ). ೧. ಅಂಬೆಯೊಡನಿರುವವನು; ಶಿವ : ನಂಬಿ ಕೆಳೆ ಬಲ್ಲಳನೆ ಕುಂಠಣಿ ಸಾಂಬ ನಿಮ್ಮಂ ನಗಿಸುವಂ ಕಲಿಯೆಂಬನಾರ್ಪಾಠಕನು ತಾ ವಾಗೀಶನ್ಯೆನಾರು (ಬಸವು. ೯-೪೧). ೨. ಮಹಾಭಾರತದ ಕೃಷ್ಣ ಮತ್ತು ಜಾಂಬವತಿಯರ ಮಗನ ಹೆಸರು : ಕಲಿ ಸಾಂಬನೀತನು ಚಾರುದೀಪಕನೀತನಮಲಾಕ್ರೂರ ಸತ್ಯಕನೀತ (ಕುವ್ಯಾಅ. ೧೩-೬೩). ೩. ಹದಿನೆಂಟು ಉಪಪುರಾಣಗಳಲ್ಲಿ ಒಂದು : ಸುಪ್ರಸಿದ್ಧವಾಗಿರುವ ಅಷ್ಟಾದಶಪುರಾಣಗಳೇ ಅಲ್ಲದೆ ಅನೇಕ ಉಪಪುರಾಣಗಳೂ ಇವೆ . . . ಅವು ಸನತ್ಕುಮಾರ . . . ಸಾಂಬ, ಸೌರ (ಭಾರದ. ೧೪೮). [ಸಂ.]

**ಸಾಂಬಾರ್** 'ಸಂಬಾರ' ನೋ.

**ಸಾಂಬಾರ** 'ಸಂಬಾರ' ನೋ.

**ಸಾಂಬಾರಜಿನಸು** (ನಾ). ಮಸಾಲೆಯ ಪದಾರ್ಥ : ಮೆಣಸಿನಕಾಯಿ ಭಾರತಕ್ಕೆ ಬಂದು, ನಮ್ಮ ನಾಲಗೆಯನ್ನು ಗೆಲ್ಲುವುದಕ್ಕೆ ಮುಂಚೆ ಮೆಣಸೂ ಶುಂಠಿಯೂ ಖಾರವನ್ನೀಯುವ ಸಾಂಬಾರಜಿನಸುಗಳಾಗಿದ್ದವು (ಹಸುಹೊ. ೨೯೭).

[ಸಾಂಬಾರ (< ಸಂಬಾರ) + ಜಿನಸು]

**ಸಾಂಬಾರು** 'ಸಂಬಾರ' ನೋ.

**ಸಾಂಬಾಳ** 'ಸಂಬಾಳ' ನೋ.

**ಸಾಂಬು** (ಗು). ನೀರಿನಿಂದ ಕೂಡಿದ : ಆ ಶ್ರೇಯೋವಚನಂ ಬಗೆಯನಲರ್ಚೆ ಭವ್ಯನೃಪನಿಕರಮದೇನೆಂಬುತ್ಸಾಹದೆ ನಲಿದುದೂ ಸಾಂಬುಪಯೋಧರರವಕ್ಕೆ ಶಿಖಿನಿಕರದವೋಲ್ (ಆದಿಪು. ೧೦-೧೨). [ಸಂ.]

**ಸಾಂಬೆ** (ನಾ). ಒಂದು ಬಗೆಯ ಔಷಧೀಮೂಲಿಕೆ : ಶುದ್ಧರಸ, ಬಿಳುಗಾರ, ಗಂಧಕ, ಸೂದ, ಸಾಂಬೆ . . . ಕೊಡಲು ಸರ್ವರೋಗಹರ (ವಿಷ್ವವಿ. ೯೬). [?]

**ಸಾಂಬ್ರಾಜ್ಯ** (ನಾ). ಚಕ್ರಾಧಿಪತ್ಯ; ಸಾಮ್ರಾಜ್ಯ : ಚಿನ್ಮನಗಿರಿದುರ್ಗದ ಸಿಂಹಾಸನವನ್ನು ಸ್ಥಿರಸಾಮ್ಬ್ರಾಜ್ಯವಾಗಿ ಆಳುವನ್ನ ಶ್ರೀಮನ್ಮಹಾನಾಯಿಕಾಚಾರ್ಯ ಕಾಮಗೆತ್ತಿ ಕಸ್ತೂರ್ರಿಮದಕೆರ್ರಿನಾಯಕರ ಬರಮಣನಾಯಕರು (ಎಕ. XI, ದಾವಣ. ೧೬೪-೧೩; 1698). [< ಸಂ. ಸಾಮ್ರಾಜ್ಯ]

**ಸಾಂಬ್ರಾಜ್ಯಂಗೆಯ್** (ಕ್ರಿ). ಚಕ್ರಾಧಿಪತ್ಯವನ್ನು ನಡೆಸು; ಸಾಮ್ರಾಜ್ಯವನ್ನಾಳು : ಶ್ರೀವೀರಪ್ರತಾಪದೇವಮಹಾರಾಯರು ವಿಜಯನಗರಿಯ ಸಾಂಬ್ರಾಜ್ಯಂಗೆಯುತ್ತಿರಲು (ಮ್ಮಆರಿ. ೧೯೩೪, ೫೭-೬; 1417). [ಸಾಂಬ್ರಾಜ್ಯ + ಕೆಯ್$_1$]

**ಸಾಂಬ್ರಾಣಿ** (ನಾ). ೧. ಒಂದು ಬಗೆಯ ಮರದಿಂದ ತೆಗೆಯುವ ಪರಿಮಳದ್ರವ್ಯ,— ಧೂಪದ್ರವ್ಯ; ಸಾಮ್ರಾಣಿ : ಅಗಿಲು ಸಾಂಬ್ರಾಣಿಯ ಧೂಪ ವಾಸನೆ ನೆಙ ನಿಗುರಿತು ಗಗನಮಂಡಲಕೆ (ಕಂನವಿ. ೨೦-೧೮); ಕಟ್ಟಾಣಿ ಮೌಕ್ತಿಕದಾರತಿಯ ಸಾಂಬ್ರಾಣಿಯಹ ಪೊಸಪವಳವಲ್ಲರಿಯ ಆರತಿಯ . . . ಧೂಪಾರತಿಯನೆತ್ತಿದರು ಶಂಕರಗೆ (ಶಂಕದಾ. ೨-೫೪). ೨. ಒಂದು ದೇಶದ ಹೆಸರು ಮತ್ತು ಶ್ರೇಷ್ಠವಾದುದೆಂದು ಪ್ರಸಿದ್ಧವಾದ ಅಲ್ಲಿಯ ಕುದುರೆ : "ಆ ಸಮುದ್ರಾಂತದೊಳು ಮಾಪಾರಿ ಹುರುಮಂಜಿಯಾಸುಸಾಂಬ್ರಾಣಿ ಕಲಹತಿ ಚೇರಮಾನಿಯೆಂಬೀಸಜೊಳು ಪುಟ್ಟಲಾ ದೇಶವೆಸರಿಂದಲಾ ಕುದುರೆಗಭಿಧಾನಮಕ್ಕುಂ" (ಮಂಗರಾ. ೮೩-೨೧); ಜನ್ನ ಜಿನ್ನಾರ . . ಕಂಕರಿಗಂ ಸನ್ನುತ ಸಾಂಬ್ರಾಣಿಯನೇಙ ನೃಪಕುಲರನ್ನರಿಗಂದು ತೋಙದರು (ಅಂಜಚ. ೬-೮೩); ಸೊಕ್ಕಾನೆಯಿನ್ನೂಱೆಪ್ಪತ್ತುಸಾವಿರ ಪಕ್ಕರಿಕೆಯ ಸಾಂಬ್ರಾಣಿ ಲಕ್ಕವೆರಡು ಕಾಲಾಳೆಸೆದಿರೆ (ಕುರಾಸಾಂ. ೧೪-೯೧). ೩. ತಿಳಿಗೇಡಿ; ದಡ್ಡ : 'ಮಡ್ಡಿಸಾಂಬ್ರಾಣಿ' ಪರಾ. [< ಸಂ. ಸಾಮ್ರಾಣಿ./ ತಮಿ. ಚಾಮ್ಬಿರಾಣಿ; ಮಲ. ತುಳು . ತೆಲು. ಸಾಂಬ್ರಾಣಿ]

**ಸಾಂಬ್ರಾಣಿತೇಜಿ** (ನಾ). ಸಾಂಬ್ರಾಣಿದೇಶದ ಒಂದು ಜಾತಿಯ ಶ್ರೇಷ್ಠವಾದ ಕುದುರೆ : ಅಟ್ಟಿ ಹೊಯ್ದನು ದಂತಿಗಳ ಹುಡಿಗುಟ್ಟಿದನು ಸಾಂಬ್ರಾಣಿತೇಜಿಯ [ಪಾಠಾಂ. ವಾಜಿಗಳ ತೇರಿನ] ಥಟ್ಟುಗಳ ಸೀಳಿದನು (ಕುವ್ಯಾದ್ರೋ. ೬-೪೫); ಕತ್ತೆಗಳು ಸಾಂಬ್ರಾಣಿತೇಜಿಯ ಗತಿಯ ಜಙವಂತೆ . . . ಶ್ರೀಪುರುಷೋತ್ತಮನ ದಾಸರನು ನಿಂದಿಸುವರು ದುರಾತ್ಮಕರು (ನಿಭಾಗ. ೧೧-೯-೯). [ಸಾಂಬ್ರಾಣಿ + ತೇಜಿ$_1$]

**ಸಾಂಬ್ರಾಣಿತೈಲ** (ನಾ). ಸಾಮ್ರಾಣಿಮರದಿಂದ ತೆಗೆಯುವ ಸುಗಂಧತೈಲ : (ಕ).

[ಸಾಂಬ್ರಾಣಿ + ತೈಲ$_1$]

**ಸಾಂಬ್ರಾಣಿಧೂಪ** (ನಾ). ಸಾಮ್ರಾಣಿ ಎಂಬ ಪರಿಮಳದ್ರವ್ಯವನ್ನು ಕೆಂಡಕ್ಕೆ ಹಾಕಿದಾಗ ಹೊರಡುವ ಸುಗಂಧಮಿಶ್ರಿತವಾದ ಹೊಗೆ,—ಧೂಪ : ದೇವಸ್ಥಾನದಲ್ಲಿ ಸಾಂಬ್ರಾಣಿಧೂಪದ ಪರಿಮಳ ಹರಡಿತ್ತು (ರೂಢಿ).

[ಸಾಂಬ್ರಾಣಿ + ಧೂಪ]

**ಸಾಂಬ್ರಾಣಿಮರ** (ನಾ). ಸಾಮ್ರಾಣಿಧೂಪದ ದ್ರವ್ಯವನ್ನು ತೆಗೆಯಲಾಗುವ ಒಂದು ಬಗೆಯ ಮರ : ಸಾಂಬ್ರಾಣಿಮರ, ಜಾವಾಬಾದಾಮಿ, ಕಗ್ಗಲಿ (ಮೈಙಗಿ. ೧೬-೨೯೫). [ಸಾಂಬ್ರಾಣಿ + ಮರ$_1$]

**ಸಾಂಯಾತ್ರಿಕ** (ನಾ). ಸಮುದ್ರದ ಮೇಲೆ ಹೋಗಿ ವ್ಯಾಪಾರ ಮಾಡುವವನು; ಸಮುದ್ರವ್ಯಾಪಾರಿ : ವಾರಾಶಿಯ ಮಣಿಗಣಮಂ ಕ್ರೂರಕುಳೀರಕ್ಕೆ ಸುಗಿದು ಸಾಂಯಾತ್ರಿಕನೇಂ ತಾರನೆ (ಪಂರಾಮಾ. ೧-೩೦). [ಸಂ.]

**ಸಾಂವತ್ಸರ** (ಗು). ೧. ಸಂವತ್ಸರಕ್ಕೆ ಸಂಬಂಧಿಸಿದ; ವಾರ್ಷಿಕ. (ನಾ). ೨. ಜ್ಯೋತಿಷಿ; ಜೋಯಿಸ : "ಸಾಂವತ್ಸರಃ, ಜ್ಯೋತಿಷಿಕಃ, ಜ್ಞಾನೀ . . . ಗಣಕಃ - ಈ ೮ ಜೋಯಿಸಿಗಂ" (ಹಲಾಯು. ೬೭-೨೪೯). [ಸಂ.]

**ಸಾಂವತ್ಸರಿಕ** (ಗು). ೧. = ಸಾಂವತ್ಸರ ೧. (ನಾ). ೨. = ಸಾಂವತ್ಸರ ೨: ತರುಣಿಯರ ಶುಭಗೀತ ಧರಣೀಸುರರ ಸೂಕ್ತಸಾಂವತ್ಸರಿಕರಾಯುತರವ ವೆಸೆದುದುದ್ವಾಹಗೇಹದಲಿ (ತೊರರಾ. ೧-೧೭-೪೦). ೩. ವರ್ಷದ ಶ್ರಾದ್ಧ. [ಸಂ.]

**ಸಾಂಸರ್ಗಿಕ** (ಗು). (ರೋಗದಂತೆ) ಸಂಸರ್ಗದಿಂದ ಉಂಟಾಗುವ; ಸೋಂಕಿನಿಂದ ಬರುವ : ಸಾಂಸರ್ಗಿಕರೋಗಗಳು ಜನತೆಯ ಮೇಲೆ ಭೀಕರಪರಿಣಾಮವನ್ನುಂಟುಮಾಡುತ್ತವೆ (ರೂಢಿ). [ಸಂ.]

**ಸಾಂಸಾರಿಕ** (ಗು).೧. ಸಂಸಾರಕ್ಕೆ ಸಂಬಂಧಿಸಿದ; ಕುಟುಂಬಕ್ಕೆ ಸೇರಿದ: ಅನಂತರಮಾ ಮಹಾತ್ಮನ ಆತ್ಮೀಯಸಾಂಸಾರಿಕಮನೋರಥಂಗಳೊಡನೆ ರಥಾಂಗಂಗಳ್ ವಿಘಟಿಸೆಯುಂ (ಚಂದ್ರಪ್ರ. ೨-೪೭ ವ). ೨. ಲೌಕಿಕವಾದ; ಪ್ರಾಪಂಚಿಕ: ಮರ್ತ್ಯಾಚರಣೆಗಳ ನಾಟಕವೊ ಮೇಣ್ ಸಾಂಸಾರಿಕಬ್ರಮೆಯೊ (ಕುವ್ಯಾಕ. ೨೨-೧೩). [ಸಂ.]

**ಸಾಂಸಿದ್ಧಿಕ** (ಗು). ಸಹಜವಾದ ; ಸ್ವಾಭಾವಿಕವಾದ : ಸಾಂಸಿದ್ಧಿಕಧರ್ಮಗಳು:- ಯಾವತ್ತು ಸೃಷ್ಟಪದಾರ್ಥಗಳಲ್ಲಿ ಕೆಲವು ಸ್ವಾಭಾವಿಕಧರ್ಮಗಳುಂಟು (ಮುಂಬಯಿ. ೫-೩೪). [ಸಂ.]

**ಸಾಂಸ್ಕೃತಿಕ** (ಗು). ೧. ಸಂಸ್ಕೃತಿಗೆ ಸಂಬಂಧಿಸಿದ; ನಾಗರಿಕತೆ, ಬುದ್ಧಿವಿಕಾಸಗಳಿಗೆ ಸಂಬಂಧಪಟ್ಟ: ಹಾಗೆ ಮಾಡಿದಾಗ ಮಾತ್ರ ನಮ್ಮ ಸಾಮಾನ್ಯಜನತೆಯ . . . ಸಾಂಸ್ಕೃತಿಕ ವಿಕಾಸ ಸಾಧ್ಯವಾಗುತ್ತದೆ (ಗೃಹವಿ. iii, ಮುನ್ನುಡಿ). (ನಾ). ೨. ಸಂಸ್ಕೃತಿಗೆ ಸಂಬಂಧಿಸಿದುದು; ಬುದ್ಧಿ ಮತ್ತು ಮನೋವಿಕಾಸಗಳಿಗೆ ಸೇರಿದುದು: ಬ್ರಿಟಿಷರ ಅಧೀನಕ್ಕೆ ಸಿಕ್ಕಿ ನಮ್ಮ ದೇಶಕ್ಕೆ ನಾಲ್ಕುಪಟ್ಟಿನ ನಷ್ಟ ಸಂಭವಿಸಿದೆ . . . ಮೂರನೆಯದು ಸಾಂಸ್ಕೃತಿಕವಾದ ನಷ್ಟ (ರಾಮರಾ. ೩೭). [ಸಂ.]

**ಸಾಂಸ್ಕೃತಿಕಕಾರ್ಯಕ್ರಮ** (ನಾ). (ನೃತ್ಯ, ಸಾಹಿತ್ಯ, ಸಂಗೀತ ಇತ್ಯಾದಿ) ಕಲೆಗಳಿಗೆ ಸಂಬಂಧಪಟ್ಟ ಸಮಾರಂಭ : ವಿದ್ಯಾರ್ಥಿಗಳು ನಡಸಿಕೊಟ್ಟ ಸಾಂಸ್ಕೃತಿಕ ಕಾರ್ಯಕ್ರಮ ತುಂಬ ಚೆನ್ನಾಗಿತ್ತು (ರೂಢಿ). [ಸಂ.]

**ಸಾಕ** (ನಾ). ಒಂದು ಬಗೆಯ ಮರ; ತೇಗ: ''ತೇಗಿನ ಮರನದೆ ಸಾಕಂ'' (ವಸ್ತುಕೋ. ೩೫-೧೭). 'ಸಾಗವಾನಿ' ಪರಾ. [< ಪ್ರಾ. ಸಾಗ./ ಸಂ. ಶಾಕ]

**ಸಾಕಂ** (ಅ).೧. ಜೊತೆಯಲ್ಲಿ; ಒಟ್ಟಿಗೆ: ''ಸಾಕಂ ಸಮಂ ಸಾರ್ಧಮಂ ಸತ್ರಮೆಂದೆಂಬುದಾ ಕೂಟದಲ್ಲಿ ವರ್ತಿಸುವವು'' (ಮಂಗರಾ. ೧೫೫-೭೧). ೨. ಏಕಕಾಲದಲ್ಲಿ; ಒಂದೇ ಸಮಯದಲ್ಲಿ. [ಸಂ.]

**ಸಾಕಣೆ** (ನಾ). ಸಾಕುವಿಕೆ; ಪಾಲಿಸುವಿಕೆ : ಈತನೆನ್ನಣ್ಣನ ಮಗಂ . . . ಬಾಲನೀತನ ಸಾಕಣೆಯುಮೆನಗೆ ಬಂತಂದಿನಿಂ (ಪಬ್ಬರ. ೬-೯೫); ನಾಯಿಗಳ ಸಾಕಣೆಯು ಒಂದು ಕಲೆಯೇ ಆಗಿದೆ (ಬಾಲಪ್ರ. III, ೧೪೪೩). [ಸಾಕು$_1$ + - ಅಣೆ$_4$]

**ಸಾಕಲ್ಯ** (ನಾ). ಸಂಪೂರ್ಣತೆ; ಸಮಗ್ರತೆ: ಮುನಿ ಮನದೊಳಗೆ ಮಹದಾನಂದಪುಳಕಿತದಿಂದ ಶಿವಪದಕಂದು ಮೌಳಿಯ ಮಣಿದು ಸಾಖEಕತೆಲ್ಯದೊಳು ನುತಿಸುತಿರೆ (ಅಂಬಿಕಾ.೨-೨೨); ಲೋಕದಲಿ ಜಾತಿಯಲಿ ವ್ಯಕ್ತಿಯಲಿ ಸಂಸ್ಥೆಯಲಿ ಸಾಕಲ್ಯದರಿವಿರಲಿ (ಮಂಕುಕ. ೧೩೪).

**ಸಾಕಲ್ಯವಾಗಿ** = ಸಂಪೂರ್ಣವಾಗಿ; ಪೂರ್ತಿಯಾಗಿ: ಕ್ರಯದ್ರವ್ಯ ವರಹನಂಗ XXX ೩೦೦ ಅಕ್ಷರದಲೂ ಮೂನೂಱು ಹೊನ್ನನು ಸಾಕಲ್ಯವಾಗಿ ಸಲಿಸಿಕೊಂಡು (ಎಕ. VIII, ತೀರ್ಥಹ. ೧೩೪-೮; 1404); ಸಾವಿರದ ಐನೂರು ವರಹಾವನ್ನು ವೆಂಕಟರಾಯನ ಮುಖಾಂತರಾ ಬೊಕ್ಕಸಕ್ಕೆ ಸಾಕಲ್ಯವಾಗಿ ವಪ್ಪಿಶಿದ್ದರಿನ್ನಾ (ಎಕ. IX, ನೆಲಮಂ. ೫೧-೧೯; 1763). [ಸಂ.]

**ಸಾಕಲ್ಯವಚನ** (ನಾ). ಸಮಗ್ರವಾಗಿ ಓದುವಿಕೆ ; ಆಮೂಲಾಗ್ರವಾಗಿ ವಾಚನ ಮಾಡುವಿಕೆ : ''ಸಾಕಲ್ಯವಚನಂ, ಪಾರಾಯಣಂ- ಈ ೨ ಕಡೆಮುಟ್ಟಲೋದುವುದು'' (ಹಲಾಯು. ೬೬-೨೪೭). [ಸಂ.]

**ಸಾಕಲ್ಯಸಂಜ್ಞೆ** (ನಾ). [ವ್ಯಾಕ] ಎಲ್ಲ ಪ್ರಕಾರದ ಪಾರಿಭಾಷಿಕ ಶಬ್ದ, — ಪರಿಭಾಷೆ; ಸಮಸ್ತ ಸಂಜ್ಞೆ: ಇದು ಪೂರ್ವಪ್ರಕರಣಮಿಂತಿದಜೊಳ್ ಸಾಕಲ್ಯಸಂಜ್ಞೆ ಪೇಟಿವೆನಲ್ವೇಡ (ಶಮದ. ೫೧). [ಸಂ. ಸಾಕಲ್ಯಸಂಜ್ಞಾ]

**ಸಾಕಳಿ** (ನಾ). ೧. ಸರಪಳಿ; ಸಂಕಲೆ. ೨. ಒಂದು ಉದ್ದದ ಅಳತೆ: ಈ ಅನುವರಿತು ಮೂರು ಮಾರು ಅಂತರವಾಗಿ ಹಾಕತಕ್ಕ ಗಿಡಗಳು ಯಾವತ್ತು ಸಾಕಳಿ ಅಳತಿ (ಒಂದು ಸಾಕಳಿ ಅಂದರೆ ೪೧ ಮೊಳ)ಯಿಂದ ಒಂದು ಸಾಕಳಿ ಅಗಲ ಹಾಗು ಹತ್ತು ಸಾಕಳಿ ಉದ್ದ ಅಳೆದರೆ ಈಗಿನ ಪೈಮೂಸಿ ಪ್ರಕಾರ ಒಂದು ಎಕರೆ ಆಗುವದು (ಕೃಷಿಪ್ರ. ೧೫೯). [<— ಮರಾ. ಸಾಖಳೀ, ಸಾಂಖಳೀ./ ಸಂ. ಶೃಂಖಲಾ]

**ಸಾಕಳ್ಳ** (ನಾ). ಜೊತೆಯಲ್ಲಿರುವ ಕಳ್ಳ; ಜೊತೆಗಳ್ಳ : ಸಾಕಳ್ಳನವನಾವನವನಂ ತಂದು ಕೊಡು ಕೊಡದೆ ಮೂರ್ಖತೆಯ ಹಾವಳಿಯ ಹಣ್ಣದಡೆ ಹದುಳವಲ್ಲಿದು ನಿನ್ನ ಸಾವಿಂಗೆ ಸಂಚಕಾರ (ಸಿಂಗಿರಾ. ೧೭-೧೬). [< ಸಹ$_2$ + ಕಳ್ಳ$_1$]

**ಸಾಕಾಣಿಕೆ** (ನಾ). ಸಾಕುವಿಕೆ; ಪೋಷಿಸುವಿಕೆ : ಕೋಳಿಸಾಕಾಣಿಕೆ ಒಂದು ಲಾಭದಾಯಕವಾದ ಉದ್ಯಮವಾಗಿ ಬೆಳೆದಿದೆ (ರೂಢಿ). [< ಸಾಕಣೆ + - ಇಕೆ]

**ಸಾಕಾರ** (ಗು). ೧. ಆಕೃತಿಯುಳ್ಳ; ಆಕಾರಸಹಿತವಾದ : ಸಾಕಾರ ಪರಮಾತ್ಮನು ದಿವ್ಯಮಂಗಳವಿಗ್ರಹನಾಗಿ ಶಿವನೆನಿಸಿ ಮಹಾಕೈಲಾಸದಲ್ಲಿ ನೆಲಸಿರುವನು (ಶಕ್ತಿವಿ. ೨೫). ೨. ಸುಂದರವಾದ; ಮನೋಹರವಾದ : ನಿಗಮದಡೆಕೆಯ ತನ್ನ ಸಾಕಾರ ಮೂರ್ತಿಯಂ ತೋಱಿಸಿದನು (ಜೈಮಿಭಾ. ೨೭-೬೭). (ನಾ). ೩. ಆಕಾರವನ್ನು ಹೊಂದಿರುವಿಕೆ; ಆಕೃತಿಸಹಿತವಾಗಿರುವಿಕೆ : ನಿರಾಕಾರವ ಮಾಱುವ ಸಾಕಾರವುಂಟೆ ಗೊಹೇಶ್ವರಲಿಂಗವ ಮಾಱುವ ಒಡೆತನ ಉಂಟೆ (ಅವಚಂ. ೨೭೦-೧೨೪೦); ಸಾಕಾರವಲ್ಲದ ನಿರಾಕಾರವೆಡೆಗೊಂ [ಡಿನ್ನು] ತೆಱಪುಗೊಡು ತಂದೆ (ಬಸರ. ೧೩-೭೨). ೪. ಆಕಾರವುಳ್ಳವನು; ಸ್ವರೂಪವುಳ್ಳವನು : ಜಗಮೆಲ್ಲಮಂ ಸೃಷ್ಟಿಪೆಡೆಯೊಳಾ ಶಿವನೆಯ್ದೆ ನೆಗಳ್ದನಾಕಾರನೊ ನಿರಾಕಾರನೋ ಮತ್ತೆ ಬಗೆದು ನೋಡಲ್ . . . ಸಾಕಾರನಾದೊಡೆ ನಿತ್ಯನೋ ಬಳಿಕ್ಕೊಗೆದನಿತ್ಯನೊ ನೋಡು (ಆರಾಚ. ೩-೨-೩೩). ೫. [ಜೈನ] ಒಂದು ಬಗೆಯ ಅನಶನವ್ರತ; ಒಂದು ನಿರ್ದಿಷ್ಟಕಾಲದವರೆಗೆ ಆಹಾರವನ್ನು ತೆಗೆದುಕೊಳ್ಳುವುದಿಲ್ಲವೆಂದು ಆಹಾರತ್ಯಾಗ ಮಾಡುವುದು : ಸಾಕಾರ ನಿರಾಕಾರಗತಮಪ್ಪನಶನಮೆಂಬ ಮೊದಲ ತಪದೊಳಂ . . . ನೆಱೆದು (ಆದಿಪು. ೬-೩೦ ವ); ಸಾಕಾರ ನಿರಾಕಾರಮೆನಿಪ್ಪೆರಡು ಭೇದದಶನಮಂ . . . ಅಂತಂ ಮುನಿಪಂ (ಚಂದ್ರಪ್ರ. ೧೧-೮). 'ನಿರಾಕಾರ' ಪರಾ. [ಸಂ.]

**ಸಾಕಾರಮುಕ್ತ** (ನಾ). ಆಕಾರವನ್ನು ಪಡೆಯುವ ಜನ್ಮಪರಂಪರೆಯಿಂದ ಕಳಚಿಕೊಂಡವನು; ಹುಟ್ಟುಸಾವುಗಳಿಲ್ಲದವನು : ಸತ್ಯಮಾನಾಕಾರತೆಯುಮಪ್ಪ ಸಾಯುಜ್ಯವೆಯ್ದುತ್ತ ಸಾಕಾರಮುಕ್ತರುಮೆನಿಸಿಯಾಯಾ ಸುದೇವತೆಯ ಸಾರಿ (ವೀಶೈಪು. ೫-೨೦-೧೦). [ಸಂ.]

**ಸಾಕು$_1$** (ಕ್ರಿ). ೧. ಬೆಳೆಸು; ಪೋಷಿಸು; ಪಾಲನೆಮಾಡು : ತುಡುಗುಣಿನಾಯನು ಹಿಡಿತಂದು ಸಾಕಿದರೆ ತನ್ನೊಡೆಯಂಗೆ ಬಗುಳುವಂತೆ ಕಾಣಾ (ಬಸವ. ೫೬೬); ಎಂತು ಮಱೆವೆನೊ ಬೆಣ್ಣೆಯಿಕ್ಕಿ . . . ಸಾಕಿ ಲೋಕದ ಬಾಲರಂತಿರ್ದು ಕಳೆಯ ಸ್ಮರಿಸುವೆನೆನಲು (ಸಿದ್ಧರಾ. ೨-೫೦). ೨. ಕಾಪಾಡು; ರಕ್ಷಿಸು : ''ಸಾಕು - ರಕ್ಷಣೇ'' (ಶಮಧಾ); ಅಂಬಿಕಾಪತಿ ಲೋಕಮಂ ಸಾಕಲೊಗೆದಂ (ಸಿದ್ಧರಾ. ೨-೮); ಸಾಕಿದ ಪತಿಗೆ ತಪ್ಪಿದನ . . . ವಿಪ್ರರ ಜಡಿದು ನುಡಿದ ಗತಿಗಳಾಗಲಿ ರಣದೊಳೋಡಿದರೆ (ಕುವ್ಯಾದ್ರೋ. ೨-೮).

**ಸಾಕಿಕೊಳ್ಳು** = ೧. (ಮಕ್ಕಳಿಲ್ಲದಾಗ) ಬೇರೆಯವರ ಮಗುವನ್ನು ಸ್ವೀಕಾರ ಮಾಡಿ ಬೆಳೆಸು : ಆ ದಂಪತಿಗಳು ಒಂದು ತಬ್ಬಲಿಮಗುವನ್ನು ಸಾಕಿಕೊಂಡಿದ್ದಾರೆ (ರೂಢಿ). ೨. ಕಾಪಾಡು; ರಕ್ಷಿಸು : ಸಾಕಿಕೊಳ್ಳೆಲೆ ದೇವ ಸ್ತುತಿಗಳ ಸಾಕಿಕೊಳ್ಳೈ ಸ್ವಾಮಿ ಪತಿಗಳ ಸಾಕಿಕೊಳ್ಳೈ ಮುಂದೆ ಸೌಭದ್ರೆಯಳನೆನ್ನುವನು ಸಾಕಿಕೊಳ್ಳೆಂದೆನ್ನ ಮಾನವ ಸಾಕಿದಂತಿಂದಿನಲಿ ಕರುಣ ವಿವೇಕಿ ಸಲಹೆಂದೆನುತ ಬಿದ್ದಳು ಹರಿಯ ಚರಣದಲಿ (ಕೃಷ್ಣಾಕಾ. ೨೬-೫೦). **ಸಾಕಿ ಸಲಹು** = ಪ್ರೀತಿಯಿಂದ ಬೆಳೆಸಿ ಕಾಪಾಡು; ಅಕ್ಕರೆಯಿಂದ ಪೋಷಿಸಿ ರಕ್ಷಿಸು : ನೀವು ಇಷ್ಟುದಿನದವರೆಗೂ ನನ್ನ ಮಗನನ್ನು ಸಾಕಿ ಸಲಹಿದ್ದಕ್ಕಾಗಿ ನಾನು ನಿಮಗೆ ಏನು ಪ್ರತ್ಯುಪಕಾರ ತಾನೇ ಮಾಡಿಯೇನು? (ಪ್ರತಾಪ. ೧೭); ಬಹುದಿವಸದಿಂದಲೂ ತಾನು ಸಾಕಿ ಸಲಹಿದ ಪ್ರಾಣಿಯಂತೆ ಅದರೊಡನೆ ಪ್ರೇಮದಿಂದ ಮಾತನಾಡಿದನು (ಬಂಗಾಪ. ೨೩).

[ದೇ. ‖ ಕೋತ. ಚಕ್; ಕೊಡ. ಚಾಕ್; ತೊದ. ಸೊಕ್; ತುಳು. ಸಾಂಕು; ತೆಲು. ಸಾಕು]

**ಸಾಕು$_2$** (ನಾ). ೧. ಅಗತ್ಯವಿರುವಷ್ಟು; ಸಾಕಷ್ಟು : (ಶಿ). ೨. (ಆಲಂ) ಕೊನೆ; ಅಂತ್ಯ : ನೋಡಿದಷ್ಟೂ ನೋಡಬೇಕು ಎಂಬ ಆಶೆಗಿಲ್ಲ ಸಾಕು ! (ಅನಿಕೇ. ೪೦-೪).

**ಸಾಕಾಗು** = ೧. ಸಾಲು; ಅಗತ್ಯವಿದ್ದಷ್ಟಾಗು; ಬೇಕಾದಷ್ಟಾಗು : ಇಂಥ ದೊಡ್ಡಮನುಷ್ಯನಿಗೆ ಒಂದೇ ಹೆಸರು ಸಾಕಾಗುತ್ತದೆಯೇ? (ಭಾರತಿ. ೨೬); ಓದು, ಬರಹ, ಬಾಯಿಲೆಕ್ಕ ಆದರೆ ಸಾಕಾಗಿಬಿಡುವದು (ಬೆಟ್ಟಹೂ. ೨). ೨. (ಆಲಂ) ಆಯಾಸವಾಗು; ದಣಿವಾಗು : ಇವರನ್ನು ಕೊಂದು ಕೊಂದು ರಾಮನಿಗೆ ಸಾಕಾಯಿತು (ನೀತಿಚಿಂ. XII, ೯); ನಾರಾಯಣನನ್ನು ಹುಡುಕಿ ಹುಡುಕಿ ರಾಯರಿಗೆ ಸಾಕಾಗಿತ್ತು (ಕಂಬಹು. ೧೩೧). **ಸಾಕುಬೇಕಾಗು** = (ಆಲಂ) ಬಹಳ ಪ್ರಯಾಸವಾಗು; ತುಂಬ ಕಷ್ಟವಾಗು : ಪ್ರಳಯರುದ್ರನಂತೆ ಕಾಣುವ ಅಶ್ವತ್ಥಾಮನಿಗೆ ತಿಳಿಯದಂತೆ ಪಶ್ಚಿಮದ್ವಾರದಿಂದ ಹೊರಟು ತಮ್ಮ ಬಳಿಗೆ ಬರಲು ಸಾಕುಬೇಕಾಯಿತು (ಪ್ರಪೂರ್ತಿ. ೭೦). **ಸಾಕುಬೇಕಾದಷ್ಟು** = ಬಹಳಷ್ಟು; ಹೆಚ್ಚು; ವಿಪರೀತ : ವಾಗದ್ವೈತದ ಭಾವಿಗಳ ಸಾಕುಬೇಕಾದಷ್ಟು ಕಂಡೆ (ಸಕವ. II, ಕ. ೪೩೬-೯೪). **ಸಾಕುಮಾಡು** = ೧. ನಿಲ್ಲಿಸು; ಮುಗಿಸು : ಸಾಕು ಮಾಡೈ ತಂದೆ ಲೋಕದಾಟವನಿನ್ನು (ಬಸರ. ೧೩-೭೧); ಸಾಕು ಮಾಡಿತೆ ವಿಧಿ ದುರಾಪದವೇಕೆ ಸಿದ್ಧಿಸಿತೇನ ಮಾಡಿದೆ ನೀ (ಅನಂರಾ. ೨-೩-೯). ೨. ಸಾಲುವಂತೆ ಮಾಡು; ಅಗತ್ಯವನ್ನು ಪೂರೈಸುವಂತೆ ಮಾಡು : (ಶಿ). ೩. ಆಯಾಸಪಡಿಸು; ಇನ್ನು ಸಾಧ್ಯವಿಲ್ಲ ಎನ್ನುವಂತೆ ಮಾಡು : ಈ ಓಡಾಟ ನನ್ನನ್ನು ಸಾಕು ಮಾಡಿಬಿಟ್ಟಿದೆ (ರೂಢಿ). **ಸಾಕುಸಾಕಾಗು, ಸಾಕೋಸಾಕಾಗು** = ತುಂಬ ಆಯಾಸವಾಗು; ಬಹಳ ಪ್ರಯಾಸವಾಗು : ಈ ಕೆಲಸ ಮುಗಿಸುವ ಹೊತ್ತಿಗೆ ಸಾಕುಸಾಕಾಗಿ ಹೋಯಿತು (ರೂಢಿ); ನೂಕುನುಗ್ಗಲಿನ ರೈಲುಪ್ರಯಾಣ ಸಾಕೋಸಾಕಾಯಿತು (ರೂಢಿ).

[< ಸಾಕ್ಕು$_3$ ./ **ಕೋತ. ಚಕೊ ; ತೊದ. ಸೊಕ್**]

**ಸಾಕು$_3$** (ಅ). ೧. ಇಷ್ಟಾದರೆ ಅಗತ್ಯ ಪೂರೈಕೆಯಾಗುತ್ತದೆ, ಸಾಲುತ್ತದೆ, ಇಷ್ಟೇ ಇರಲಿ, ಹೆಚ್ಚಿಗೆ ಬೇಡ ಎಂಬರ್ಥವನ್ನು ಕೊಡುವ ಒಂದು ಕ್ರಿಯಾರ್ಥಕಾವ್ಯಯ : ಒಂದೆ ನುಡಿ ಸಾಕು ಹುಸಿಯಿಲ್ಲ ವೃದ್ಧರೊಳು (ಸಿದ್ಧರಾ. ೧-೪೫); ಪುಷ್ಪಮಾಲಾಸಮುದಾಯಮಂ ಮುಡಿಗೆ ಭಾರಮಿದೆಂದು . . . ಸಾಕೆನುತಿರ್ಪಳಾವಗಂ (ಬಾಧಪು. ೨-೫೮); ಸೂತತನವೇ ಸಾಕು ತನಗೆನುತಾ ತತುಕ್ಷಣ ಧನುವ ಬಿಸುಟು ವಿಧೂತರಿಪುಬಲಪಾರ್ಥನಿದ್ದನು ಹೊತ್ತ ದುಗುಡದಲಿ (ಕುವ್ಯಾದ್ರೋ. ೩-೬೨); ಈಕೆಯ ಮೊಗಂ ಶಶಿಯಿಾ ಜಗಮಂ ಗೆಲಲ್ಕೆ ಸಾಕೀಕೆಯ ರೂಪಂ (ರಸರ. ೧-೧೩). ೨. (ಇನ್ನು ಬೇಡ, ನಿಲ್ಲಿಸು, ನಿವಾರಿಸು ಎಂಬರ್ಥವನ್ನು ಕೊಡುವ) ಒಂದು ಕ್ರಿಯಾರ್ಥಕಾವ್ಯಯ : ಸಾಕು ಸೈರಿಸಲಾಜೆ ನಾನಿನ್ನು (ಬಸಪು. ೪೯-೨೩); ಸಾಕು ನಮ್ಮಯ ಮಾತು ರಾತ್ರಿಯ ನಾಕುಜಾವದೊಳೆರಡು ಸಂದವು (ಸಂಭಪ. ೩೨-೨೩). ೩. (ತಿರಸ್ಕಾರ, ಧಿಕ್ಕಾರಗಳಿಂದ) ಅಗತ್ಯವಿಲ್ಲ, ಬಿಡು, ತೆಗೆ, ನಿಲ್ಲಿಸು ಎಂಬರ್ಥಗಳನ್ನು ಸೂಚಿಸುವ ಅವ್ಯಯ : ''ರಕ್ಷಣ ತಿರಸ್ಕಾರದೊಳ್ ಸಾಕೆಂಬುದಕ್ಕು''(ಶಬ್ದಮಂ. ೭೯); ಸಾಕು ನಿನ್ನಂ ನೀನಱಿಯದಿರಲೇಕೆ ನೀನಱಿಯದ ವಿಷಯವುಂಟೇ (ಬಸಪು. ೪೦-೬೨); ಬಣಗುಕವಿಗಳ ಲೆಕ್ಕಿಪನೆ ಸಾಕೆಣಿಸದಿರು ಶುಕರೂಪನಲ್ಲವೆ ಕುಣಿಸಿ ನಗನೇ ಕವಿ ಕುಮಾರವ್ಯಾಸನುಳಿದವರ (ಕುವ್ಯಾಆ. ೧-೧೭); ನಿನಗಂತಕನ ಭಯವಿಲ್ಲ ಸಾಕಾ ಮಾತದಂತಿರಲಿ (ತೊರರಾ. ೧-೪-೧೧). ೪. (ಕರಾ) ಆಗಬಹುದು, ಬರಬಹುದು, ಒದಗಬಹುದು ಎಂದು ಮುಂತಾಗಿ ಸಂಭಾವ್ಯತೆಯನ್ನು ಸೂಚಿಸುವ ಅವ್ಯಯ : ಬಹುಶಃ ನನ್ನಂತಹವರು ಇದಕ್ಕೆ ಕೈಹಾಕಿಯಾರೆಂಬ ಅನುಮಾನ ಅವರಿಗೆ ಬಂದಿರಲು ಸಾಕು (ದೇಶನ್ನ. ೩೮); ಇಂದು ಮಳೆ ಬರಲಿಕ್ಕೆ ಸಾಕು (ರೂಢಿ).

**ಸಾಕುಸಾಕು** (ದ್ವಿರುಕ್ತಿ) : ವಿಟನು ತನಗೆ ಬಸವಾ ಸಾಕು ಸಾಕೆನ್ನೆನುತವನಿಯಲಿ ಗುಡಿಸಿ ದೀಪಿಸುವನಿತು ದಿವ್ಯಾಂಬರವಿತಾನಮನೊಯ್ದು ಬಳೆಗಿತ್ತ (ಬಸಪು. ೧೧-೩೯); ಸಾಕುಸಾಕಿನ್ನು ಸಂಸಾರಸುಖವು (ಪುರಂದ. ೧-೧೫೨ ಪಲ್ಲವಿ). **ಸಾಕಷ್ಟು** = ೧. ಬೇಕಾಗಿರುವಷ್ಟು; ಅಗತ್ಯವಿರುವಷ್ಟು; ತಕ್ಕಷ್ಟು : ಭಾರತೀಯರಾದ ನಮ್ಮದು ಮೊದಲೇ ಸಾಕಷ್ಟುಪುಷ್ಟಿಕರವಾದ ಆಹಾರಾಂಶಗಳೆಲ್ಲಾ ಇಲ್ಲದಿರುವ ಜನಾಂಗ (ತರಬಿ. ೬೫); 'ಎ' ಜೀವಾತು ಸಾಕಷ್ಟುಪ್ರಮಾಣದಲ್ಲಿ ಇಲ್ಲವಾದರೆ ಚರ್ಮ ಮತ್ತು ಕಣ್ಣುಗಳ ಮೇಲೆ ದುಷ್ಪರಿಣಾಮಗಳಾಗಬಹುದು (ಅಡುಸಾ. ೬೦). ೨. ಕಡಮೆಯಲ್ಲದಷ್ಟು; ಬಹಳ; ತುಂಬ : ದ್ರಾವಿಡಭಾಷೆಗಳಲ್ಲಿ ಪಕಾರ ಸಾಕಷ್ಟು ಪ್ರಾಚೀನವಾದ ಧ್ವನಿ (ದ್ರಾವಿವಿ. ೩೩೩); ಇವರುಗಳ ಪ್ರಭಾವವೂ ಜನರ ಮೇಲೆ ಸಾಕಷ್ಟು ಆಗಿದ್ದಿತು (ಜಗದಾ. ೧೪೪). **ಸಾಕೆನಿಸು** = ೧. ಅಗತ್ಯ ಪೂರೈಸಿತೆನಿಸು; ತಣಿಸು : ಗೋಕುಲವನು ನೆಱೆ ಕಾದ ಕೋಕನದಾಕ್ಷನ ಬಲಗೊಂಡು ಕೃತಿವೇಳು ಸಾಕೆನಿಸದುಾಯೆನ್ನ ಕಿವಿಗೆ (ಮೋಪತ. ೩೬-೧). ೨. (ಕಷ್ಟ, ಆಯಾಸ, ಬೇಸರಗಳಿಂದ) ಇನ್ನು ಬೇಡ ಎನಿಸು; ನಿಭಾಯಿಸಲು ಸಾಧ್ಯವಿಲ್ಲವೆನಿಸು : ಇಂದಿನ ರಣದೊಳಗ ಸಾಕೆನಿಸುವನು ಸಂಸಾರತರಸುಖವ (ತೊರರಾ. ೪-೩-೪). ℙ ಇದು 'ಸಾಲ್' ಎಂಬ ಕ್ರಿಯಾಪದದ ಪ್ರಥಮಪುರುಷ ವರ್ತಮಾನ-ಭವಿಷ್ಯದ್ರೂಪವಾದ 'ಸಾಲ್ಗುಂ' ಎಂಬುದರ ಮುಂದುವರಿದ ರೂಪವಾಗಿದ್ದು, ವಿಶೇಷವಾಗಿ ಕ್ರಿಯಾರ್ಥಕಾವ್ಯಯದಲ್ಲಿ ಸ್ವತಂತ್ರವಾಗಿ ಬಳಕೆಯಾಗುತ್ತದೆ. [< ಸಾಲ್$_1$]

**ಸಾಕುತಂದೆ** (ನಾ). ಬೇರೆಯವರ ಮಗುವನ್ನು ದತ್ತು ತೆಗೆದುಕೊಂಡು ಬೆಳೆಸಿದ ತಂದೆ; ದತ್ತುತಂದೆ : ದೇವರ ದಯೆಯಿಂದ ನನ್ನ ಸಾಕುತಂದೆಯಾದ ಶಾಂತಲಿಂಗಂಪಿಳ್ಳೆಯವರು ಗುಣಹೊಂದಿದರು (ಪ್ರತಾಪ. ೧೫). [ಸಾಕು$_1$ + ತಂದೆ]

**ಸಾಕುತಾಯಿ** (ನಾ). ಬೇರೆಯವರ ಮಗುವನ್ನು ದತ್ತು ತೆಗೆದುಕೊಂಡು ಸಾಕಿದ ತಾಯಿ; ದತ್ತುತಾಯಿ : ಸುಂದರಿತ್ತಿಣಿಯೂ ಆಕೆಯ ಪತಿಯೂ ನಿನ್ನನ್ನೂ. ನಿನ್ನ ಸಾಕುತಾಯಿಯನ್ನೂ ಕೈಬಿಟ್ಟರು (ಪ್ರತಾಪ. ೧೫). [ಸಾಕು$_1$ + ತಾಯಿ (< ತಾಯ್)]

**ಸಾಕುಪ್ರಾಣಿ** (ನಾ). ಸಾಕಿದ ಪ್ರಾಣಿ; ಮನೆಯಲ್ಲಿ ಬೆಳೆಸಿ, ಪಳಗಿಸಿದ ಬೆಕ್ಕು ನಾಯಿ ಮೊದಲಾದ ಪ್ರಾಣಿ : ಸಾಕುಪ್ರಾಣಿಗಳು ತಮ್ಮ ಮನೆ, ಯಜಮಾನರನ್ನು ಸ್ಪಷ್ಟವಾಗಿ ಗುರುತಿಸುತ್ತವೆ (ರೂಢಿ). [ಸಾಕು$_1$ + ಪ್ರಾಣಿ]

**ಸಾಕುಮಗ** (ನಾ). ಬೇರೆಯವರಿಂದ ದತ್ತುಸ್ವೀಕಾರ ಮಾಡಿ ಬೆಳಸಿದ ಮಗ ; ದತ್ತುಪುತ್ರ : ಇಮ್ಮಡಿಮದಕರಿನಾಯಕನ ಸಾಕುಮಗ ಓಬಣ್ಣನಿಗೆ ಪಟ್ಟಕಟ್ಟಿದರು (ಚಿತ್ರಪಾ. ೨೬). [ಸಾಕು$_1$ + ಮಗ]

**ಸಾಕುಮಗಳು** (ನಾ). ಬೇರೆಯವರಿಂದ ಸ್ವೀಕಾರಮಾಡಿ ಬೆಳೆಸಿದ ಮಗಳು ; ದತ್ತುಪುತ್ರಿ : ಆಗ ಗುಣವಂತನು ತನ್ನ ತಂತ್ರಬಲದಿಂದ ನನ್ನ ಸಾಕುಮಗಳು ಪ್ರತಾಪಕುಮಾರಿಯನ್ನು ಅಪಹರಿಸಿಕೊಂಡು ಹೋದನು (ಆರ್ಯಕ. ೫).

[ಸಾಕು$_1$ + ಮಗಳು (< ಮಗಳ್)]

**ಸಾಕುಮಗು** (ನಾ). ಬೇರೆಯವರಿಂದ ಸ್ವೀಕಾರಮಾಡಿ ಬೆಳೆಸಿದ ಮಗು,— ಸಾಕಿದ ಮಗು : (Foster-Child . ಇಂಕನಿ).

**ಸಾಕುಮಕ್ಕಳು** (ಬಹುವ) = ಬೇರೆಯವರಿಂದ ಸ್ವೀಕರಿಸಿ ಬೆಳೆಸಿದ ಮಕ್ಕಳು : ಸಾಕುಮಕ್ಕಳಾದ ಶ್ರೀ ಮೋಹನದಾಸರೂ, ಕಲ್ಲೂರಿನಲ್ಲಿ ಶ್ರೀಸುಬ್ಬಣ್ಣದಾಸರೂ . . . ಪ್ರಖ್ಯಾತಹರಿದಾಸರೆನ್ನಿಸಿಕೊಂಡಿದ್ದರು (ಜಗದಾ. ೧೪೪). [ಸಾಕು$_1$ + ಮಗು]

**ಸಾಕೂತ** (ಗು). ೧. ಉದ್ದೇಶಪೂರ್ವಕವಾದ; ಇಂಗಿತವುಳ್ಳ : ಒಂದು ಸಾಕೂತ ಪ್ರಯತ್ನದ ಮೂಲಕ ಮಾಡಿಕೊಂಡ ಮಾರ್ಪಾಡು ಇಲ್ಲವೆ ಬೆಳವಣಿಗೆಗಳು (ಭಾಷಾಶಾ. ೧೨೬). (ನಾ). ೨. ಉದ್ದೇಶಪೂರ್ವಕವಾದುದು; ಸಾಭಿಪ್ರಾಯವುಳ್ಳದು; ಅರ್ಥಗರ್ಭಿತವಾದುದು : ಬ್ರಹ್ಮ- (ಸಾಕೂತವಾಗಿ) ಆದರೂ ಮಹಾಲಕ್ಷ್ಮಿಯು ಈ ತನಕ ಸುಖವಾಗಿರುವಳಷ್ಟೆ? (ಕೈಲಾಕ. ೫೧). [ಸಂ.]

**ಸಾಕೇತ** (ನಾ). ೧. ಮನೆಗಳಿಂದ ಕೂಡಿದುದು; ಗೃಹಗಳಿಂದ ಕೂಡಿದುದು. ೨. ಕೋಸಲದೇಶದ ರಾಜಧಾನಿಯಾಗಿದ್ದ ಅಯೋಧ್ಯೆಯ ಹೆಸರು : ಕುರು ನೇಪಾಳ ನಿಷಧ ವಿದರ್ಭಧರಣೀಪಾಲತತಿ ಸಂದಣಿಸಿದುದು ಸಾಕೇತನಗರಿಯಲಿ (ತೊರರಾ. ೧-೭-೧೮); ಆಕಾಶಕೆದ್ದ ಪತಾಕೆಗಳಿರೆ ನೋಡಿ ಸಾಕೇತಪುರವೆಂಬರದನು (ಭರಚ. ೨೦-೧೮). ೧, ೨ : ಅಂತು ಸಮೆದ ಪುರವರಕ್ಕರಾತಿನಿಕರಕ್ಕಯೋಧ್ಯಮಪ್ಪುದಱಿಂದಯೋಧ್ಯೆಯುಮನೇಕನಿಕೇತನಸಮನ್ವಿತಮಪ್ಪುದಱಿಂ ಸಾಕೇತಮುಂ . . . ಎಂಬ ಪೆಸರ್ಗಳನಿಟ್ಟು (ಆದಿಪು. ೬-೧೦೭ ವ). [ಸಂ.]

**ಸಾಕ್ಕಿ** 'ಸಕ್ಕಿ' ನೋ.

**ಸಾಕ್ರಿ** (ನಾ). (ಕರಾ). (ಹುಲ್ಲಿನ) ಕಟ್ಟು; ಕಂತೆ : ಹೋದ ವರ್ಷ ಸಾಕ್ರಿ ಕಟ್ಟುವಾಗ ಉದುರಿದ ಭತ್ತ ಈ ವರ್ಷ ಕುತ್ತರಿ ಬಡಿದರೆ ಆಗಲಿಕ್ಕಿಲ್ಲ (ರೂಢಿ). [?]

**ಸಾಕ್ಷರ** (ಗು). ೧. ಅಕ್ಷರಗಳಿಂದ ಕೂಡಿದ; ವರ್ಣಸಹಿತವಾದ .(ನಾ). ೨. ಅಕ್ಷರಗಳನ್ನು ಬಲ್ಲವನು; ಓದುಬರಹ ಬಲ್ಲವನು; ಅಕ್ಷರಸ್ಥ : ಇಂಡೋನೇಶಿಯದ ಪ್ರಜಾಕೋಟಿಯಲ್ಲಿ ನೂರಕ್ಕೆ ೭.೨ರಷ್ಟು ಸಾಕ್ಷರರು (ಎಆಗ್ನೇ. ೨೫). ೩. ವಿದ್ಯಾವಂತ; ಪಂಡಿತ : ಭಾಷಾವಳಿ ಲಿಪಿಜ್ಞನ ಸಾಕ್ಷರನ . . . ಸುಕರ ದುಷ್ಕರ ತಿಳಿವ ಹೃದಯನ ಸಂಧಿವಿಗ್ರಹರೆನಿಸಬೇಕೆಂದ (ಕುವ್ಯಾಉ. ೩-೮೯).

**ಸಾಕ್ಷರನಿಳಯ** = ವಿದ್ವತ್ತಿಗೆ ಆಶ್ರಯನಾದವನು; ಒಂದು ಬಿರುದು : ನಿರತಿಶಯೋನ್ನತಮತಿ ಭಾಸ್ಕರ ಸರಸಕವೀಂದ್ರರಚಿತಶಾಸನಮಂ ಬಿತ್ತರದಿಂ ಪ್ರತಿಕಂಟಂ ಸಾಕ್ಷರನಿಳಯಂ ತಿರ್ದಿ ಭಾಸ್ಕರಯ್ಯಂ ಬರೆದಂ (ಕಆಇ. ೧೯-೯-೯೨; 1127). [ಸಂ.]

**ಸಾಕ್ಷರಜನ** (ನಾ). ಪಂಡಿತವರ್ಗ; ವಿದ್ವಾಂಸರ ಸಮುದಾಯ : ಸಮಸ್ತಸಾಕ್ಷರಜನಕಂ ಜಗಜ್ಜನಕನೊಲ್ದುದನಿತ್ತಭಿರಕ್ಷಿಪಟ್ಟಿಯಿಂ . . . ಜಗಜ್ಜನಕನೆಂಬುದು ಮೇದಿನಿ ಶಾಂತಿವರ್ಮನಂ (ಪುಷ್ಪಪು. ೧-೭೫). [ಸಂ.]

**ಸಾಕ್ಷರಜನಕ** (ನಾ). ವಿದ್ವಾಂಸರಿಗೆ ಆಶ್ರಯದಾತನಾದವನು ; ವಿದ್ವಜ್ಜನರ ಪೋಷಕನಾದವನು : ಕವೀಂದ್ರಜನಕಂ ಗುಣವಜ್ಜನಕಂ ಸಮಸ್ತಸಾಕ್ಷರಜನಕಂ ಜಗಜ್ಜನಕನೆಂಬುದು ಮೇದಿನಿ ಶಾಂತಿವರ್ಮನಂ (ಪುಷ್ಪಪು. ೧-೭೫). [ಸಂ.]

**ಸಾಕ್ಷರತಾಆಂದೋಲನ** (ನಾ). ಜನಸಮುದಾಯವನ್ನು ಅಕ್ಷರಸ್ಥರನ್ನಾಗಿ ಮಾಡಲು ತೊಡಗಿರುವ ಕ್ರಾಂತಿ; ಜನತೆಗೆ ಓದುಬರಹಗಳನ್ನು ಕಲಿಸಲು ತೊಡಗಿರುವ ಆಂದೋಳನ : ಸಾಕ್ಷರತಾಆಂದೋಲನದ ಯೋಜನೆಗಳಿಗೆ ಸರ್ಕಾರವು ಅಪಾರಹಣ ವೆಚ್ಚಮಾಡುತ್ತಿದೆ (ರೂಢಿ). [ಸಂ.]

**ಸಾಕ್ಷರತೆ** (ನಾ). ಓದುಬರಹಗಳನ್ನು ತಿಳಿದಿರುವಿಕೆ ; ಅಕ್ಷರಜ್ಞಾನವನ್ನು ಹೊಂದಿರುವಿಕೆ : ಮುಂದುವರಿಯುತ್ತಿರುವ ದೇಶಗಳಲ್ಲಿ ತಮ್ಮ ದೇಶ ಸಾಕ್ಷರತೆಯ ಮಟ್ಟವನ್ನು ಹೆಚ್ಚಿಸಲು ಪ್ರಯತ್ನಮಾಡುತ್ತಿವೆ (ಕವಿಕೋ. I. ೧೬೨). [ಸಂ. ಸಾಕ್ಷರತಾ]

**ಸಾಕ್ಷರಿಕ** (ಗು). ೧. ವಿದ್ಯೆಯನ್ನುಳ್ಳ; ಪಾಂಡಿತ್ಯವನ್ನುಳ್ಳ : ಸಾಕ್ಷರಿಕಜನಸಮುಧರಣ ನಾಮಾದಿಸಮಸ್ತಪ್ರಸಸ್ತಿಸಹಿತಂ ಶ್ರೀಮದ್ದಣ್ಣನಾಯಕಂ ಶ್ರೀರಿದರಯ್ಯಂಗಳುಂ (ಸೌಇಇ. XX, ೬೦-೭; 1088). (ನಾ). ೨. ವಿದ್ವಾಂಸ; ಜ್ಞಾನಿ : ಇವರ್ ನಮ್ಮನತ್ಯಾಗ್ರಹದಿಂ ಶಿಕ್ಷಿಸಿ ಸಾಕ್ಷರಿಕರಂ ಮಾಟ್ಪೊಡೆ (ಸುಕುಮಾ. ೨-೫೫ ವ); ಪೋಗಿ ಋಷಿಯರಂ ಸಾರ್ದು ಸಾಕ್ಷರಿಕನಾಗಿ ಮಗುಟ್ದು ಬಂದು (ಪಂರಾಮಾ. ೧೫-೪೭ ವ). [ಸಂ.]

**ಸಾಕ್ಷಾತ** 'ಸಾಕ್ಷಾತು' ನೋ.

**ಸಾಕ್ಷಾತು, ಸಾಕ್ಷಾತ** (ಅ). ಪ್ರತ್ಯಕ್ಷ; ಸ್ವತಃ : ರುದ್ರನಕ್ಷಿಯ ಮಣಿಯ ಭದ್ರದಲಿ ಧರಿಸಿದಗೆ ಹೊದ್ದಿರ್ದ ಪಾಪ ಹೋಗಲವ ಸಾಕ್ಷಾತು ರುದ್ರನೇ ಅಕ್ಕು (ಸರ್ವಜ್ಞ. ೩೧೨). **ಸಾಕ್ಷಾತ:** ತಂತುಹಾರುವನಲ್ಲ ಸಾಕ್ಷಾತಬೊಮ್ಮನಪ್ಪನು ಆಗಿ ಬುಧರೊಳು ದಿಮ್ಮಿತಪ್ಪಖಿಳಾಗಮಜ್ಞನು (ಬಸಪು. ೫೫-೩೩). [< ಸಂ. ಸಾಕ್ಷಾತ್]

**ಸಾಕ್ಷಾತ್ಕರಣಪೆರು** (ಕ್ರಿ). ಸಾಕ್ಷಾತ್ಕಾರವನ್ನು ಹೊಂದು; ಪ್ರತ್ಯಕ್ಷವಾಗು : ಯತಿವೇಷದಿಂದನ್ನಾಸೆಯರ್ಜುನನೆ, ಪ್ರೇಮದ ತಪಸ್ಸೆ ಸಾಕ್ಷಾತ್ಕರಣಪೆತ್ತಂತೆ, ಇಲ್ಲಿಗೈ ತಂದುದನ್ ಕೇಳ್ವೊಡೆ (ಚತ್ರಾಂಗ. ೨೪-೬೪೭).

[ಸಾಕ್ಷಾತ್ಕರಣ$_0$ + ಪೆರು$_1$(< ಪೆಱು$_1$)]

**ಸಾಕ್ಷಾತ್ಕರಿಸು** (ಕ್ರಿ). ೧. ಪ್ರತ್ಯಕ್ಷವಾಗುವಂತೆ ಮಾಡು; ಎದುರಿಗೆ ಗೋಚರವಾಗುವಂತೆ ಮಾಡು : ಜ್ಞಾನಾಗ್ನಿಯಲ್ಲಿ ಕರ್ಮಫಲವೆಂಬ ಹವಿಸ್ಸನ್ನು ಹಾಕಿ ಯಜ್ಞನಾರಾಯಣನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು (ಭಾರದ. ೧೧೬); ಇವರು ಮಾತ್ರವೆ ದೈವವನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲವರು (ಶಾಂತಲಾ. ೩೭೧). ೨. ಮನಸ್ಸಿಗೆ ಸ್ಫುಟವಾಗಿ ಗೋಚರಿಸುವಂತೆ ಮಾಡು,— ಸ್ಪಷ್ಟಗೊಳಿಸು : (೬). ೩. ಪ್ರತ್ಯಕ್ಷವಾಗಿ ನೋಡು ; ಸ್ವತಃ ನೋಡು ; ಖುದ್ದಾಗಿ ಕಾಣು : (೬).

[ಸಾಕ್ಷಾತ್ಕರಣ$_0$ + -ಇಸು$_3$]

**ಸಾಕ್ಷಾತ್ಕಾರ** (ನಾ). ೧. ಕಣ್ಣಿಗೆ ಕಾಣಿಸುವುದು,— ಗೋಚರಿಸುವುದು; ಪ್ರತ್ಯಕ್ಷವಾಗುವುದು : ನಾವಲೇ ಕೃತಕೃತ್ಯರಿಂದೀ ದೇವಸಾಕ್ಷಾತ್ಕಾರದರ್ಶನ ಭಾವವೋಯಿದು ನವಾಗನುತ ಹೊಗಳಿದನು ಸಹದೇವ (ಕುವ್ಯಾಉ. ೬-೩೯). ೨. (ಅಧ್ಯಾತ್ಮಿಕವಾದ) ಜ್ಞಾನದ ಅನುಭವ,— ಅರಿವು : ಶ್ರೀಗುರುಕಟಾಕ್ಷದಿಂದಲ್ಲದೆ ತಾರಕಬ್ರಹ್ಮವು ಆರಾರಿಗೂ ಸಾಕ್ಷಾತ್ಕಾರವಾಗದಯ್ಯಾ (ಅಖಂಡೇ. ೨೨೩-೬೫), ಅಧ್ಯಾತ್ಮಿಕಕಲ್ಪನೆಯು ಸಂಪೂರ್ಣವಾಗಿ ಅಧ್ಯಾತ್ಮದ ಸಾಕ್ಷಾತ್ಕಾರದೊಳಗ ಪರಿಣತವಾಗಬೇಕಾಗುವುದು (ಪ್ರಬಂಧ. ೧೩೭); ಸಾಕ್ಷಾತ್ಕಾರವು ಕರ್ಮಯೋಗಕ್ಕಿಂತ ಶ್ರೇಷ್ಠವೆನ್ನುವ ಟಿಳಕರ ಮಾತನ್ನಷ್ಟು ಗಮನಿಸೋಣ (ಧರ್ಮಸಾ. ೧೫೧). [ಸಂ.]

**ಸಾಕ್ಷಾತ್ತು** (ನಾ). ಸ್ವಂತ; ಸ್ವಕೀಯ : ರಾಮನಿಗೆ ಪ್ರಿಯಮಹಿಷಿಯಾದ ಅವಳನ್ನು ತ್ವಷ್ಟೃವು (ಬ್ರಹ್ಮನು) ತಾನೇ ಸಾಕ್ಷಾತ್ತಾಗಿ ಸೃಷ್ಟಿಮಾಡಿದ್ದನು (ವಚಭಾ. ೪೦೩).

[ಸಂ. ಸಾಕ್ಷಾತ್./ IP ಸಂಸ್ಕೃತದಲ್ಲಿ ಇದು ಒಂದು ಅವ್ಯಯ]

**ಸಾಕ್ಷಾದ್ವಚನ** (ನಾ). ಪ್ರತ್ಯಕ್ಷವಾದ ಮಾತು :"ಸಾಕ್ಷಾದ್ವಚನಂ ಬಗೆಯೆ ಸದ್ಯಕ್ಷ ಪ್ರತ್ಯಕ್ಷವಾಚಕಂ ತಾನಕ್ಕುಂ" (ವಸ್ತುಕೋ. ೧೩೫-೧೦೬). [ಸಂ.]

**ಸಾಕ್ಷಿ** (ನಾ). ೧. ನೋಡುವಿಕೆ ; ಕಾಣುವಿಕೆ. ೨. ಗಮನಿಸುವಿಕೆ; ಲಕ್ಷಿಸುವಿಕೆ. ೩. ಪುರಾವೆಯನ್ನು ಒದಗಿಸುವಿಕೆ; ರುಜುವಾತು ಮಾಡುವಿಕೆ : ಹಿಂದೆ ತಾನು ನೋಡಿ ತಿಳಿದು ಅನುಭವ ಮಾಡಿಕೊಂಡ ಅಂಶವನ್ನು ಪುನಃ ಜ್ಞಾಪಿಸಿಕೊಂಡು ಹೇಳುವುದೇ ಸಾಕ್ಷಿ (ಜೀವಾತ್ಮ. ೭೬); ಸಾಹೇಬಜನರಿಗೆ ಸಾಕ್ಷಿ ಬೇಕಾಗುವುದಿಲ್ಲ (ಭಾರತಿ. ೧೧). ೪. ಪುರಾವೆ; ರುಜುವಾತು : ವಸುಮತಿ ಸಾಕ್ಷಿ ಧೀರತೆಗೆ ವಾಕ್ಸತಿ ಸಾಕ್ಷಿ ನೃತಕ್ಕೆ ದಿಗ್ವಧೂಪ್ರಸರಮ ಸಾಕ್ಷಿ ಕೀರ್ತಿಗೆ ರಿಪುಬ್ರಜೆಮಂಡಳಮಯ್ದೆ ಸಾಕ್ಷಿ ಸಾಹಸಕೆ ನಿಜಾಸಿ ಸಾಕ್ಷಿ ಗಳ ವೀರಗುಣಕ್ಕೆನೆ . . . ಬಿತ್ತರಿಪರಾಗ್ಗಳ ಭಾಸ್ಕರದಣ್ಣನಾಥನಂ (ಸೌಇಇ. XX, ೪೬-೩೧; 1072); ನಿಮಿಷದಲಿ ಸ್ಥೂಲವನಮಾಲಿಪ್ರತುಮೆ ನೆಜ್ ಹೋಳಿದಿಬ್ಬಗಿಯಾಗಿ ನೆಲದಲಿ ಧೂಳಿಪಟವಾಯ್ತದಕಿದಟ ಶೂನ್ಯಾಲಯವೆ ಸಾಕ್ಷಿ (ಬಸಪು. ೫೩-೭೧); ಬೇವು ತಾ ಪರಿಪಕ್ವವಾದರೆ ಹಾವುಮಕ್ಕಗೆ ಸಾಕ್ಷಿ ಗಡ (ಕುವ್ಯಾಆ. ೧೭-೧೫); ಹಾಗಲಕಾಯಿಗೆ ಬೇವಿನಕಾಯಿ ಸಾಕ್ಷಿ (ಗಾದೆ). ೫. ಯಾವುದಾದರೊಂದು ನಡೆದ ಘಟನೆಯನ್ನು ನೇರವಾಗಿ ನೋಡಿದವನು; ರುಜುವಾತುಮಾಡುವವನು; ಪುರಾವೆದಾರ : ನನ್ನಿಕಾಡನಾ ಎಜನಾಗನಾ ವ್ಯವಹಾರದನ್ತರಂ ಸಾಲಮ್ ಇಲ್ಲಾಮ್ ಎಕ್ಕೆ ಸಾಕ್ಷಿ ಲೋಕಾದಿತ್ಯ ಎಳಅರಸಮ್ಮಗನ್ದಿರ್ (ಎಕ. X, ಕೋಲಾರ. ೭-೪; 760); ಇವರಿಬ್ಬರಿಗೆ ಹುಟ್ಟಿದ ಮಗ ನಾನು ಕೂಡಲಸಂಗಮದೇವ ಸಾಕ್ಷಿಯಾಗಿ (ಬಸವ. ೩೪೫); ಪ್ರಾಣಲಿಂಗಕೆ ತದ್ಗುರುಸ್ವಾಮಿ ಪ್ರಾಣವಾ ಗುರು ತಾನೆನಿಪ್ಪ ಧುರೀಣಜಂಗಮಲಿಂಗವೇ ಮತ್ಪ್ರಾಣಲಿಂಗಮಿದಕ್ಕೆ ಸಂಗಮದೇವನೇ ಸಾಕ್ಷಿ (ಬಸಪು. ೩೫-೫೦). ೬. [ವೇದಾಂತ] ನಾನು ಎಂಬ ಭಾವ; ಅಹಂಭಾವ: ಪ್ರತ್ಯಕ್ಷವು (೧) ಕಣ್ಣು, (೨) ಮೂಗು, (೩)ನಾಲಿಗೆ, (೪) ಚರ್ಮ, (೫) ಕಿವಿ, (೬) ಮನಸ್ಸು, (೭) ನಾನು ಎಂಬ ಸಾಕ್ಷಿ ಏಳು ಬಗೆಯಾಗಿದೆ-ಈ ಸಿದ್ಧಾಂತದಲ್ಲಿ ಸಾಕ್ಷಿಪ್ರತ್ಯಕ್ಷವು ಸಪ್ರಮಾಣವಾಗಿ ನಿರೂಪಿತವಾಗಿದೆ (ಭಾರದ. ೨೭೮). ೭. ಪರಮಾತ್ಮ; ಪರತತ್ತ್ವ : ಪುರುಷನು ಚೈತನ್ಯರೂಪನು, ಇವನು ಜ್ಞಾನಕ್ಕೆ ವಿಷಯನಾಗುವುದಿಲ್ಲ. ಆದುದರಿಂದಲೇ ಇವನಿಗೆ 'ಸಾಕ್ಷೀ' ಎಂದು ಹೆಸರು (ಭಾತತ್ತ್ವ. ೩೨೧).

**ಸಾಕ್ಷಿಮಾಡು** = ಸಾಕ್ಷಿಗಾರನನ್ನಾಗಿ ಇಟ್ಟುಕೊಳ್ಳು ,— ಗೊತ್ತುಮಾಡು : ಮತ್ತೊಂದು ದಿವಸಂ ಗಿಳಿಯಂ ಸಾಕ್ಷಿಮಾಡಿ ಇರ್ವರುಂ ಚದುರಂಗಮಾಡುತ್ತಿರೆ (ಪದ್ಮಾರಾ. ೧೦೮-೨೫). **ಸಾಕ್ಷಿಹೇಳು** = ಕಂಡದ್ದನ್ನು ರುಜುವಾತು ಮಾಡು,- ಪ್ರಮಾಣೀಕರಿಸು : ಈಗ ನೀನು ಖಾನರಿಗೆ ಅನುಕೂಲವಾಗಿ ಸಾಕ್ಷಿ ಹೇಳಿದರೆ, ಇಗೋ, ಕಾರಾಗೃಹವಾಸವು ತಪ್ಪುವುದು (ರಾವಿಜ. ೧೨೭); ನ್ಯಾಯಾಲಯಗಳಲ್ಲಿ ಸಾಕ್ಷಿ ಹೇಳುವ ಪದ್ಧತಿಯೊಂದಿದೆ (ಜೀವಾತ್ಮ. ೭೬). [ಸಂ. ಸಾಕ್ಷಿನ್]

**ಸಾಕ್ಷಿಕ** (ನಾ). ಸಾಕ್ಷಿಯಾಗಿರುವವನು; ಪ್ರಮಾಣವಾಗಿರುವವನು : ತತ್ಸಾಕ್ಷಿಕ ಸಾಕ್ಷಾದ್ಬ್ರಹ್ಮಮುಂ ಸರ್ವಮುಮೆಲೆ ಪೆಜಿರಾರ್ ನೀನೆ ವಿಶ್ವಾಧಿನಾಥಾ (ಶಬಶಂ. ೫-೩೫); ಎಲೆಮುನಿಪಯಾ ಕಾರ್ಯ ನಿನ್ನನುಳಿದಾದುದೇ ಮತ್ತೆ ಪೇಳ್ವ ಸಾಕ್ಷಿಕನಂದದೀ (ನವಮೋ. ೧೩-೧೯). [ಸಂ.]

**ಸಾಕ್ಷಿಕಟ್ಟೆ** (ನಾ). ನ್ಯಾಯಾಲಯಗಳಲ್ಲಿ ಸಾಕ್ಷಿಗಾರನು ಪುರಾವೆಗಳನ್ನೊದಗಿಸಲು ನಿಲ್ಲುವ ಕಟಕಟೆ, — ಚೌಕಟ್ಟು : ಮನೆಯ ಹಣ್ಣನ್ನು ನ್ಯಾಯಸ್ಥಾನದ ಸಾಕ್ಷಿಕಟ್ಟೆಯಲ್ಲಿ ನಿಲ್ಲಿಸಿ ಅಡ್ಡಪ್ರಶ್ನೆಗಳನ್ನು ಹಾಕಿದಂತಾಗುತ್ತದೆ (ನಿಬಂಧ. II, ೩೬೬). [ಸಾಕ್ಷಿ + ಕಟ್ಟೆ$_1$]

**ಸಾಕ್ಷಿಕಲ್ಲು** (ನಾ). ಪುರಾವೆಗಳನ್ನೊದಗಿಸಲು ಸಾಕ್ಷಿಗಾರನು ನಿಲ್ಲುವ ಕಲ್ಲು: ಅಗ್ನಿಯ ಬೇಡಿ ದಂತಿಗಮನೆ ಆಗಸ್ಕಂತಾದಿ ಸಾಕ್ಷಿಕಲ್ಲಿನ ಮ್ಯಾಲ ನಿಂತು . . .ಭರದಿಂದ ತಾ ನೆಗದು ಆ ವುರಿಯೊಳು ಬೀಳೆ (ಯನಳ. ೧೫೦). [ಸಾಕ್ಷಿ + ಕಲ್ಲು (< ಕಲ್$_3$)]

**ಸಾಕ್ಷಿಗಾರ** (ನಾ). (ಯಾವುದಾದರೂ ಮೊಕದ್ದಮೆಯ ಸಂದರ್ಭದಲ್ಲಿ ಅದಕ್ಕೆ ಸಂಬಂಧಿಸಿ, ಕಂಡ ವಿಚಾರವನ್ನು ನ್ಯಾಯಾಲಯದಲ್ಲಿ ಹೇಳಿ) ರುಜುವಾತು ಪಡಿಸುವವನು : ಸಾಕ್ಷಿಗಾರನು ಭೂತಕಾಲದಲ್ಲಿದ್ದು ಈಗಿಲ್ಲದಿದ್ದರೆ ಸಾಕ್ಷ್ಯ ನಡೆಯಲಾರದು (ಜೀವಾತ್ಮ. ೬೭). [ಸಾಕ್ಷಿ + -ಗಾರ (< - ಕಾಱ)]

**ಸಾಕ್ಷಿಗೊಳಿಸು** (ಕ್ರಿ). ರುಜುವಾತುಗೊಳಿಸು; ಪ್ರಮಾಣೀಕರಿಸು : ಗುರುಹಿರಿಯ ಕುಂಭಕುಂಭಮ ಸಾಕ್ಷಿಗೊಳಿಸಿಯಿರ್ವರನು ಸ್ಥಿರದಂಪತಿಗಳೆನಿಸಿ (ನವಮೋ. ೩೪-೨೦). [ಸಾಕ್ಷಿಗೊಳು + -ಇಸು$_1$]

**ಸಾಕ್ಷಿಗೊಳು** (ಕ್ರಿ). ರುಜುವಾತಾಗಿ ಹೊಂದು ; ಪ್ರಮಾಣವಾಗಿ ಪಡೆ : ಮುರನ ತಲೆ ಹಾಱಿದುದು ನಭದೊಳು ನೋಡುವಮರರ ಸಾಕ್ಷಿಗೊಳುವಂತೆ (ಸಾಳ್ವಭಾ. ೨೩-೩). [ಸಾಕ್ಷಿ + ಕೊಳು (< ಕೊಳ್$_1$)]

**ಸಾಕ್ಷಿದಾರ** (ನಾ). = ಸಾಕ್ಷಿಗಾರ : ನಾನು ಸರಕಾರಿ ಸಾಕ್ಷಿದಾರನಾಗಲು ಸಿದ್ಧನಿದ್ದೇನೆ (ಕೊತಕಾ. ೨೩). [ಸಾಕ್ಷಿ + -ದಾರ$_1$]

**ಸಾಕ್ಷಿಪ್ರಜ್ಞೆ** (ನಾ). [ಕಾವ್ಯಮೀ] ಎಲ್ಲವನ್ನೂ ಸಾಕ್ಷಿಯಾಗಿ ನೋಡುವ ನಿಲುವು. [ಸಂ. ಸಾಕ್ಷಿಪ್ರಜ್ಞಾ]

**ಸಾಕ್ಷೀಭೂತ** (ನಾ). ೧. ಸಾಕ್ಷ್ಯ, ಪ್ರಮಾಣಗಳಿಂದ ನೆಲೆಗೊಳಿಸಲ್ಪಟ್ಟವನು : ಖ್ಯಾತದೃಷ್ಟಾದೃಷ್ಟಸಾಕ್ಷೀಭೂತಲೋಕಪ್ರತ್ಯಯಾದಿಪುನೀತ ಜಂಗಮಮೂರ್ತಿ ಶಾಪಾನುಗ್ರಹಸಮರ್ಥ (ಬಸವು. ೩೨-೩). ೨. ಸಾಕ್ಷಿಗಾರನಾಗಿರುವಿಕೆ; ಸಾಕ್ಷಿಸ್ವರೂಪವಾಗಿರುವಿಕೆ : (೩). [ಸಂ.]

**ಸಾಕ್ಷ್ಯ** (ನಾ). ೧. ಸಾಕ್ಷಿ; ರುಜುವಾತು; ಪುರಾವೆ : ಆ ಸಂವಾದದಲ್ಲಿ ನಮ್ಮ ಪ್ರಭುಗಳ ಪಕ್ಷವಾಗಿ ಈತನು ಸಾಕ್ಷ್ಯವನ್ನು ಕೊಡಬೇಕಾಗಿದೆ (ರಾವಿಜ. ೧೨೫); ಸಾಕ್ಷಿಗಾರನು ಭೂತಕಾಲದಲ್ಲಿದ್ದು ಈಗಿಲ್ಲದಿದ್ದರೆ ಸಾಕ್ಷ್ಯ ನಡೆಯಲಾರದು (ಜೀವಾತ್ಮ. ೬೭). ೨. ಪುರಾವೆ ನೀಡಿದುದು; ಸಾಕ್ಷಿ ನೀಡಿದುದು : ಆ ಕೆಲಸ . . . ನ್ಯಾಯಾಲಯಕ್ಕೆ ಬರಲಾರದವರ ಸಾಕ್ಷ್ಯವನ್ನು ದಾಖಲೆಮಾಡಿಕೊಂಡು ಬರುವುದಾಗಿರಬಹುದು (ಕವಿಕೋ. I, ೭೦೯). [ಸಂ.]

**ಸಾಖಾಚರ** (ನಾ). ಕೋತಿ; ಕಪಿ.

ಸಾಖಾಚರೇಂದ್ರಧ್ವಜ = ೧. (ಹಾನುಗಲ್ಲಿನ ಕದಂಬಕುಲದವರ ಲಾಂಛನವಾಗಿದ್ದ) ಕಪಿಧ್ವಜ. ೨. ಕಪಿಧ್ವಜವನ್ನುಳ್ಳವನು; ಒಂದು ಬಿರುದು: ಬನವಾಸಿಪುರವರೇಶ್ವರಂ ಸಾಖಾಚರೇಂದ್ರಧ್ವಜಂ . . . ಶ್ರೀಮನ್ಮಹಾಮಣ್ಡಳೇಶ್ವರಂ ಕೀರ್ತ್ತಿವರ್ಮದೇವರ್ (ಸೌಇಇ. XX, ೪೧-೭; 1068). [< ಸಂ. ಶಾಖಾಚರ]

**ಸಾಖ್ಯ** (ನಾ). ಒಂದು ಅಳತೆ; ನಾಲ್ಕುಬಳ್ಳಗಳ ಪರಿಮಾಣ; ಕೊಳಗ : "ಸಾ[ಪಾಠಾಂ. ಶಾ]ಖ್ಯಂ ಶಿವಂ ಕೊಳಗಮಕ್ಕುಂ" (ಮಂಗರಾ. ೭೧-೧೯). [?]

**ಸಾಗಡ** 'ಸಾಂಗಡ' ನೋ.

**ಸಾಗಡೆ$_1$** 'ಸಾಂಗಡ' ನೋ.

**ಸಾಗಡೆ$_2$**, ಸಾಗಾಡೆ (ನಾ). ಒಂದು ಬಗೆಯ ಮರ : ಸುಜ್ಜಿಲರಳಿ ಸಾಗಡೆ . . . ಗರಿಕೆ ಸಸಿ ನೇಸಱವೆಳಗಿಗೆ ವೆಜ್ಜಗೊಡದೆ ಬೆಳೆದಿರಾಲ ಬಿಂಜಂ ಭೀಕರತರಮಾಯ್ತು (ಜಯಕಾ. ೧೫-೨೪); ಮರಗಳು . . . ಹೊನ್ನೆ, ಸಾಗಡೆ, ಚೆಂದಲ, ಕಡಗ (ನಮ್ಮನು. ೨೩೬). ಸಾಗಾಡೆ : ಸಾಗಾಡೆ (ಕಸಂಬ).- ದೊಡ್ಡಮರ, ಶೋಭೆಯುಳ್ಳದ್ದು, ಬಹುಸಾಧಾರಣ (ಕಭಾಗಿ. ೪೮). [?]

**ಸಾಗಣೆ**, ಸಾಗವಣೆ (ನಾ). ಕಳುಹಿಸುವಿಕೆ; ರವಾನಿಸುವಿಕೆ : ಕೀಟಗಳಲ್ಲಿ ರಕ್ತಪರಿಚಲನೆ. . .ಶ್ವಾಸೋಚ್ಛ್ವಾಸಅನಿಲಗಳ ಸಾಗಣೆ (ಕೀಟಜೀ. ೩೧); ಜನರ ಪ್ರಯಾಣ, ಸಾಮಾನುಸಾಗಣೆ ಎಲ್ಲಕ್ಕೂ ಎತ್ತಿನ ಬಂಡಿಯೇ ಆಧಾರವಾಗಿತ್ತು (ನಾಪದ. ೧೩೨). ಸಾಗವಣೆ : ಉಪ್ಪಿನ ಸಾಗವಣೆಗಾಗಿ ಅಸಂಖ್ಯಾತಮಾರ್ಗಗಳು ಇದ್ದಿರಬೇಕೆಂದು ಇಂದು ಸಹಜವಾಗಿ ಊಹಿಸಬಹುದಾಗಿದೆ (ಸುತ್ತುಮು. ೧೯). [ಸಾಗು$_1$ + - ಅಣೆ$_4$]

**ಸಾಗಮನ** (ನಾ). ಗಂಡ ಸತ್ತಾಗ ಹೆಂಡತಿಯು ಜೊತೆಯಲ್ಲಿ ಅಗ್ನಿಪ್ರವೇಶ ಮಾಡುವುದು; ಸಹಗಮನ : ಪಶ್ಚಿಮಾಂಬುಧಿಯೊಳು ಜೀವವ ತೊಱೆದ ಚಂದ್ರಮನು ಪೋಗಲಾಣ್ಮನ ಕೂಡೆ ನಕ್ಷತ್ರ ನಿಶಿವೆಣ್ಣು ಸಾಗಮನವನೆ ಮಾಡಿದುವು (ಮೋಹತ. ೧೪-೧೦೭). [< ಸಂ. ಸಹಗಮನ]

**ಸಾಗರ** (ನಾ). ೧. ಕಡಲು; ಸಮುದ್ರ : ಸಾಗರದೊಳಗಿರ್ದಂಕದ ಮಾಗಧನಂ ಕಟ್ಟದಲ್ಲದಿರನರಸನೆನುತ್ತೋಗಡಿಸದೆ ನಡೆದುದು ಬಲಸಾಗರಮಾ ಸಾಗರಂಬರಂ ತರತರದಿಂ (ಆದಿಪು. ೧೨-೬೪). ೨. ಸಮುದ್ರದೇವತೆ : ಲಕುಮಿಯ ಮಗಳೆನಲಳಿಯನು ಹರಿಯು . . . ಏನು ಕುಟಂಬವೊ ಸಾಗರಗೆ (ಧ್ವನ್ಯಾಲೋ. ೨೧೧). ೩. ಕೆರೆ; ಜಲಾಶಯ: ಆ ದಣಾಯಕಪುರದಿಂ ಮೂಡಲು ಅಕ್ಕತಂಗೆಯ ಕಟ್ಟೆಯ ಒಳಗೆರೆಯೊಳಗಣ ಹಳ್ಳದ ಸಾಗರ ಮೇರೆಯಾಗಿ (ಎಕ. VII , ಶಿವಮೊ. ೭೧-೩೬;1431). ೪. ಕೆಲವು ಊರುಗಳ ಹೆಸರುಗಳ ಕೊನೆಯಲ್ಲಿ ಸೇರುವ ಶಬ್ದ ; ಉದಾಹರಣೆಗೆ 'ಕೃಷ್ಣರಾಜಸಾಗರ', 'ಬುಕ್ಕಸಾಗರ' ಇತ್ಯಾದಿ : ಭರಮಸಾಗರದ ಕೆರೆ, ಅಬ್ಬನಾಯಕನ ಹಳ್ಳಿ ಕೆರೆ . . . ಇವೇ ಮೊದಲಾದ ಹಲವು ದೊಡ್ಡಕೆಲಸಗಳನ್ನು ಮಾಡಿಸಿದರು (ಚಿತ್ರಪಾ. ೪೭). ೫. ಶಿವಮೊಗ್ಗ ಜಿಲ್ಲೆಯ ಒಂದು ತಾಲ್ಲೂಕಿನ ಹೆಸರು. ೬. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ. ೭. ಏಳು ಎಂಬ ಸಂಖ್ಯೆಯ ಸಂಕೇತ : ಸ್ವರ ಸಾಗರ ಪರ್ವತಾದ್ರಿಯೇೞಱ ನಾಮಂ (ವ್ಯವಹಾ. ೯-೭). ೮. ಸಂಖ್ಯೆಯ ಸ್ಥಾನಗಳಲ್ಲಿ ಮೂವತ್ತೇಳನೆಯ ಸ್ಥಾನ ಮತ್ತು ಮೂವತ್ತೇಳು ಅಂಕೆಗಳಿಂದ ಕೂಡಿದ ಒಂದು ದೊಡ್ಡ ಸಂಖ್ಯೆ : ಏಕ್ಕಂ ದಾಹಂ ಶತಂ ಸಾವಿರ . . . ಸಾಗರ ಮಹಾಸಾಗರ ಪರಿಮಿತ ಮಹಾಪರಿಮಿತ ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೮-೧೯); ಪ್ರಥಮಸ್ಥಾನ ದ್ವಿತೀಯಸ್ಥಾನ . . . ಪಂಚಮಸ್ಥಾನವೆಂದಿಂತು ಮೂವತ್ತಾಱುಸ್ಥಾನಪರ್ಯಂತರಂ ಕ್ರಮದಿಂದವಕ್ಕೆ ಏಕ್ಕಂ ದಹಂ ಶತಂ . . . ಮಹಾನಿಧಿ ಸಾಗರ ಮಹಾಸಾಗರ . . . ಕ್ರತುವೆಂಬಿವ ಉಗ್ಗಡಣೆಗಳು (ವಿವೇಕ. ೭). ೯. [ಜೈನ] ಅಸಂಖ್ಯಾತಕೋಟಿವರ್ಷಗಳ ಒಂದು ದೀರ್ಘಕಾಲಮಾನ; ಹತ್ತುಕೋಟಾಕೋಟಿಪಲ್ಯೋಪಮ ಪರಿಮಿತಕಾಲ : ಹಿಮರುಚಿ ಕುಂದೆ ಕುಂದೆ ನೆಱೆದೊಪ್ಪುವ ಚಂದ್ರಿಕೆ ಕುಂದುವಂತೆ ಬಂಹಿಮುವದಪಾರಸಾಗರಮಿತಾಯುವ ಲೆಕ್ಕದ ಕುಂದೆ ಕುಂದೆ (ಶಾಂತಿಪು. ೭-೭೮); ತನ್ನ ಸಮಂಕಟ್ಟಿದಾಯುಷ್ಯದ ಸಾಗರವಿರ್ಪತ್ತೆರಡಱ ಭಾಗದನಿತ ಮಾಸಮಾಗೆ ಸುಯ್ಯಂ ನೆನೆವೂಂ ಭೋಗೇಚ್ಛೆ ಪುಟ್ಟಿದೊಡೆ ತತ್ಸಾಗರಸಮ್ಮಿತ ಸಹಸ್ರಮಾಸಕ್ಕುಣಸಂ (ಚಂದ್ರಪು. ೯-೪೮). [ಸಂ.]

**ಸಾಗರದಾನ** (ನಾ). ಒಂದು ಬಗೆಯ ಡೇರೆ ,— ಗುಡಾರ (?) : ಮುತ್ತಿನ ಗುಡಿ ಹೊಯ್ಯವು ಸಾಗರದಾನವೆತ್ತಿತು ಜೀನಗೆಲಸದ ಮೊತ್ತದ ಗುಡಿಗಳು ನೆಗೆದವವಳಿಗೆ ವಿಯತ್ತಳವನು ಚುಂಬಿಸುತ (ಕುರಾಸಾಂ. ೪೨-೫೪); ನೆಗಳ್ದುವಲ್ಲಲ್ಲಿ ಮಯನಿರ್ಮಿತ ದೊಳಾಗ ಬಗೆಬಗೆಯ ಗುಡಿ ಗುಮುತಿ ಗೂಡಾರ ಸಾಗರದಾನಂ (ಚಿಬಪು. ೪೭-೩೩). [?]

**ಸಾಗರನಾಥ** (ನಾ). ಸಮುದ್ರದ ಅಧಿಪತಿ ; ವರುಣ : ಗೋಸಂಬಂಧವ ತೋಟಿಯಲಾ ಸಾಗರನಾಥನಿತ್ತ ಶಾಪದಿನವರ್ಗಾದಾ ಸುತರುಂ ಗೋಪಾಲವ್ಯಾಸಂಗರ್ ಕೆಲವುಕಾಲಮಿರ್ಕುಂ ವ್ರಜದೊಳ್ (ಜಗವಿ. ೧-೭೬). [ಸಂ.]

**ಸಾಗರಬೀಳು** (ಕ್ರಿ). ೧. (ಉಕ) ಆತುರದಲ್ಲಿ ಮೈಚಾಚಿ ಮುಂದೆ ಬೀಳು; ಇದ್ದಕ್ಕಿದ್ದ ಹಾಗೆ ಮುಗಿಬೀಳು : ಗಿಯಾಸಲು ಸಾಗರಬಿದ್ದು ತನ್ನ ಕಂದಮ್ಮನನ್ನು ಎತ್ತಿಕೊಂಡು ಎದೆಹಾಲನುಣಿಸಿದಳು (ನೂರಜ. ೭); ಎಲ್ಲವ್ವ ಸಾಗರಬಿದ್ದು ತನ್ನ ಮೊಮ್ಮಗನನ್ನು ಕೈಗೆತ್ತಿಕೊಂಡಳು (ಬಸಸಿ. ೫೦). ೨. ಅಂಗಲಾಚು; ದುಂಬಾಲು ಬೀಳು : ಅವರು ತಮ್ಮಲ್ಲಿಗೆ ಒಮ್ಮೆಯಾದರೂ ಬಂದು ಹೋಗಬೇಕೆಂದು ನನಗೆ ಸಾಗರ ಬಿದ್ದಿದ್ದರು (ರೂಢಿ). [? + ಬೀಳು$_1$ (< ಬೀೞ್$_1$)]

**ಸಾಗರಮರಿಯಾದೆ** (ನಾ). ೧. ಸಮುದ್ರದ ಅಂಚು ,— ತೀರ. ೨. ಕೆರೆಯ ದಡ; ಜಲಾಶಯದ ತೀರ : ಆ ಹಳ್ಳವ ದಾಟಿ ವಾಯಾವ್ಯಕ್ಕೆ ನಡದು ರಾಘವಪುರದ ಲಕ್ಷ್ಮಣಸಮುದ್ರದ ನೀರೊತ್ತು ಸಾಗರಮರಿಯಾದೆ (ಎಕ. III(R), ಗುಂಡ್ಲುಪೇ. ೪೦-೫೩; 1320). [ಸಾಗರ + ಮರಿಯಾದೆ]

**ಸಾಗರವರಿ$_1$** (ಕ್ರಿ). ಸಮುದ್ರವು ಹರಿ,— ಪ್ರವಹಿಸು : ಸಾಸಿವೆಯ ಮೇಲೆ

ಸಾಗರವರಿದಂತಾಯಿತ್ತಯ್ಯಾ . . . ಕೂಡಲಸಂಗನ ಶರಣರು ಬಂದರೆ ಉಬ್ಬಿ ಕೊಬ್ಬಿ ಹರುಷದಲೋಲಾಡುವೆ (ಬಸವ. ೩೭೭). [ಸಾಗರ + ಪರಿ₂]

**ಸಾಗರವರಿ₂** (ಕ್ರಿ). = ಸಾಗರಬೀಳು ೧ : ಕಮಲಾಬಾಯರ ಕೈಗೆ ಪುಟಿಗೆ ಕೊಟ್ಟು ಉಷೆಯು ಸುಶೀಲೆಯೆಡೆಗೆ ಸಾಗರವರಿದಳು (ಸಮಜೀ. ೬೨೪). [? + ಪರಿ₂]

**ಸಾಗರವಾಣಿ** (ನಾ). (?) : ಚಕ್ರವರ್ತಿಯಲ್ಲಿ ಪಡೆದ ಸಾಗರವಾಣ ಮ[ತ್ರ] ರಿಗೆಯುಂ (ಇಎ. ೧೧೪೭, ಕರೀಂನಗರ, ೧೬೨-೫೫; 955). [?]

**ಸಾಗರಶಾಯಿ** (ನಾ). (ಕ್ಷೀರ) ಸಮುದ್ರದಲ್ಲಿ ಮಲಗಿರುವವನು ; ವಿಷ್ಣು : ಸಾಗರಶಾಯಿಯೊಳ್ಳೀಗುತ್ತಿಹುದೆ ನಿರ್ವಿಷಯವೆಸರ ಸಮಾಧಿ (ಗಗತಾ. ೧೬-೨೨). [ಸಂ. ಸಾಗರಶಾಯಿನ್]

**ಸಾಗರಾಂತ** (ಗು). ೧. ಸಾಗರದಿಂದ ಸುತ್ತುವರಿಯಲ್ಪಟ್ಟ ; ಸಮುದ್ರವನ್ನೆ ಎಲ್ಲೆಯಾಗಿ ಉಳ್ಳ : ಸುವಿಧನರಾಧಿಪನಚ್ಯುತೇಂದ್ರಂ ಸಾಗರಾಂತಂ ನೆಲನನಿತುಮಂ ಚಕ್ರದಿಂ ಬೆಸಕೈಸಿದ ವಜ್ರನಾಭಿಯಾಗಿ ಸರ್ವಾರ್ಥಸಿದ್ಧಿಯೊಳೆ ಪುಟ್ಟಿ ಬಂದಿಲ್ಲಿ ತಾನಾದಿದೇವನಾದಂ (ಆದಿಪು. ೧೬-೫೮). (ನಾ). ೨. [ಜೈನ] ಅಸಂಖ್ಯಾತ ಕೋಟಿವರ್ಷಗಳ ಒಂದು ಕಾಲಮಾನದ ಕೊನೆ,— ಅಂತ್ಯ : ಸವಿ ನೋಲ್ಪಂ ಸಾಗರಾಂತಕ್ಕಸುರರ ನೆರೆಗೊಳ್ಳಂ ತ್ರಿಪಲ್ಯಕ್ಕೆ . . . ಇದೇಂ ನಿರ್ದಯನೋ ಸಾರ್ಥೈಕಪಲ್ಯಕ್ಕುಟಿದಜುವರುಮಂ ನಂದೆವೊಯ್ಯಂ ಕೃತಾಂತಂ (ಮಲ್ಲಿಪು. ೧೩-೧೦೩). [ಸಂ.]

**ಸಾಗರೋತ್ತರ** (ಗು). ಸಮುದ್ರದಾಚೆಯ; ಕಡಲಿನಿಂದಾಚೆಗೆ ಸೇರಿದ : ಸಾಗರೋತ್ತರದೇಶಗಳು ಈ ಹೊಸದಾಗಿರುವ ಹಾಗು ವಿಸ್ತಾರವಾಗಿ ವ್ಯಾಪಿಸುತ್ತಲಿರುವ ಭಾಷೆಯ ಆಧ್ಯಾತ್ಮಿಕಅಂತಃಸಾಮರ್ಥ್ಯವನ್ನು ವೃದ್ಧಿಂಗತಗೊಳಿಸಲು ಬೃಹದಾಕಾರದ ಹೊಸಮೂಲಾಂಶಗಳನ್ನು ತರಲಿರುವುವು (ಪ್ರಬಂಧ. ೧೩೬). [ಸಂ.]

**ಸಾಗರೋಪಮ** (ಗು). ೧. ಸಮುದ್ರಕ್ಕೆ ಸದೃಶವಾದ. (ನಾ). ೨. = ಸಾಗರ ೬ : ಇಂತಾಯಿರ್ವರುಂ ಇರ್ಪತ್ತೆರಡುಸಾಗರೋಪಮಾಯುಷ್ಯಮನೊಡೆಯೊರಾಗಿ ದೇವರಾಗಿ ಪುಟ್ಟಿದರ್ (ವಡ್ಡಾರಾ. ೨೪-೨೩); ಅದೊಂದು ಪತ್ತುಕೋಟಿಕೋಟಿಸಾಗರೋಪಮ ಸಂಖ್ಯೆಯಂ ತಾಳ್ದಿ . . . ಒಂದೊಂದು ಷಡ್ಭೇದಭಿನ್ನಮಾದುದು (ಆದಿಪು. ೬-೪೮ ವ). ೩. (ಅಲಂ) ಅಪಾರವಾದುದು : ಅಂದಿನ ಸಭೆಗೆ ಸೇರಿದ್ದ ಜನಸಮೂಹ ಸಾಗರೋಪಮವಾಗಿತ್ತು (ರೂಢಿ). [ಸಂ.]

**ಸಾಗವಣೆ** 'ಸಾಗಣೆ' ನೋ.

**ಸಾಗವಾನಿ, ಸಾಗುವಾನಿ₂** (ನಾ). (ಚೌಬೀನೆ ಕೆಲಸಗಳಿಗಾಗಿ ಉಪಯೋಗಿಸುವ) ಬೆಲೆಬಾಳುವ ಒಂದು ಬಗೆಯ ಗಟ್ಟಿಯಾದ ಮರ; ತೇಗ : ಹೆಬ್ಬಲಸಿನ, ಬೋವಿನ, ಸಾಗವಾನಿಯ ಮತ್ತು ಅನೇಕ ತರಹದ ಮರಗಳು ದೈತ್ಯಾಕಾರವಾಗಿ ಬೆಳದು ನಿಂತು ಭೂಮಿ-ಆಕಾಶಗಳನ್ನು ಮುಟ್ಟಿದ್ದವು (ಗಂಗಾವ. ೩೩); ಸಾಗವಾನಿಯ ಮರದ ಹಲಗೆಯೆಂಬುದೂ ನನಗೆ ಗೊತ್ತಾಯಿತು (ಕಂಬಹು. ೭೭). **ಸಾಗುವಾನಿ₂** : ''ತೇಗ, ತ್ಯಾಗ, ತೇಗು, ಸಾಗುವಾನಿ, ತೇಗದ ಮರ'' (ಸಸ್ಯನಿ. ೧೨೬); ಮರಗಳಲ್ಲೆಲ್ಲಾ ಸಾಗುವಾನಿಗೆ (Teak) ತುಂಬಾ ಬೆಲೆಯಿದೆ (ಬಾಲಪ್ರ. II, ೬೫೯). 'ಸಾಕ' ಹೋ. [<— ಮರಾ. ಸಾಗವಾನ್, ಸಾಗವಾನೀ]

**ಸಾಗಾಡೆ** 'ಸಾಗಡೆ₂' ನೋ.

**ಸಾಗಾಣಿಕೆ** (ನಾ). ೧. ರವಾನಿಸುವಿಕೆ; ಸಾಗಿಸುವಿಕೆ : ಅನೇಕಜನ ಹೆಣ್ಣುಮಕ್ಕಳ ಸಾಗಾಣಿಕೆಯೇ ಅವಳ ಮುಖ್ಯಕಸಬು (ಕೊನಭೇ. ೨೪೫); ಬಡಇಂಡಿಯಾದಲ್ಲಿ ಅಧಿಕಾರಿಗಳ ದುಂದಿನಿಂದ ಸಾಗಾಣಿಕೆಯ ಗತಿ ತೀವ್ರವಾಯಿತು (ದಾದಾನ. ೫೨). ೨. ನಿರ್ವಹಿಸುವಿಕೆ; ನಿರ್ವಹಣೆ : ಮನೆಮಾಲಿಕರ ಅಟ್ಟಹಾಸದ ಭವ್ಯಜೀವನದ ಮುಂದೆ ನಮ್ಮ ಸಂಸಾರ ಸಾಗಾಣಿಕೆ — ಸಂಸಾರ ಎಂಬುದಕ್ಕೆ ಕೇವಲ ಒಂದು ಅಪವಾದವಾಗಿದ್ದಿತು (ನಾಡಿಗೇ. ೧೯೦). [< ಸಾಗಣೆ + -ಇಕೆ]

**ಸಾಗಾರ** (ನಾ). [ಜೈನ] ೧. ಶ್ರಾವಕನ ಧರ್ಮ; ಗೃಹಸ್ಥಧರ್ಮ : ಸಾಗಾರಮಣಗಾರಮೆಂದು ಧರ್ಮಮೆರಡು ತೆಜನಕ್ಕುಂ ಅಲ್ಲಿ ಸಾಗಾರಮೆಂಬುದು ದರ್ಶನವ್ರತ ಸಾಮಾಯಿಕ ಪ್ರೋಷ ಧೋಪವಾಸಾದಿಭೇದದಿನೇಕಾದಶವಿಧಮಕ್ಕುಂ (ಚಾವುಂಪು. ೪೨೬). ೨. ಗೃಹಸ್ಥಾ ಶ್ರಮದಲ್ಲಿರುವವನು; ಗೃಹಸ್ಥ; ಶ್ರಾವಕ : ಇದರಲ್ಲಿ ಸಾಗಾರರು ಅಥವಾ ಗೃಹಸ್ಥರು ಆಚರಿಸಬೇಕಾದ ಸಮ್ಯಗ್ದರ್ಶನ ಮತ್ತು. . . ಮಹಾಪುರುಷರ ಕಥೆಗಳು ಒಂದೊಂದು ಅಧ್ಯಾಯದಲ್ಲಿ ಹೇಳಲಾಗಿವೆ (ತವನ. ೮೫). [ಸಂ.]

**ಸಾಗಾರಧರ್ಮ** (ನಾ). = ಸಾಗಾರ ೧ : ಸಾಗಾರಧರ್ಮಮಣುಬ್ರತ ಗುಣಬ್ರತ ಶಿಕ್ಷಾಬ್ರತ ವಿಕಲ್ಪದಿಂ ಮೂಱು ಪ್ರಕಾರಂ (ವರ್ಧಮಾ. ೭-೩ ವ); ಸಾಗಾರಧರ್ಮ ನಿರೂಪಣಾರ್ಥಂ ಏಕವಿಂಶತಿಸೂತ್ರಚಯಂ ಸಂದುದು (ತತ್ತ್ವಪ್ರ. ೨೮೮). [ಸಂ.]

**ಸಾಗಾರವ್ರತ** (ನಾ). = ಸಾಗಾರ ೧ : ದಾನಕ್ಕುತ್ತಮಪಾತ್ರಸಂತತಿ ಮಹಾಪೂಜಾವಿಧಾನಕ್ಕೆ ಚೈತ್ಯಾನೀಕಂ ನಿಜಶೀಲವರ್ತನೆಗೆ ಸಾಗಾರವ್ರತವ್ರಾತಂ . . . ತಾನೆಯ್ದುತ್ತಮಿಲ್ಲದೇಂ ನಿರತರೋ ಭೂಕಾಂತನುಂ ಕಾಂತೆಯುಂ (ಚಂದ್ರಪ್ರ. ೬-೮೨). [ಸಂ.]

**ಸಾಗಿಸು₁** (ಕ್ರಿ). ೧. ಹೋಗುವಂತೆ ಮಾಡು; ಕಳುಹಿಸು : ನವಮಂತ್ರಿದೇವನಂತಾಗಡಪಾರಭೂಪತಿಗಳಂ ಬರವೇಳ್ದು ಧುರಕ್ಕೆ ಸೇನೆಯಂ ಸಾಗಿಸಿದಂ (ಹಮ್ಮೀರ. ೨-೧೫೩); ಬಾಗಿಲ ತಿವಿದು ನೂಂಕುವ ದಂತಿಶಿರವ ವಿಭಾಗಿಸಿ ಕೊರ್ಗಣೆಯಿಂದೆ ತಾಗಿಸಿ ಜೋದರ ತಲೆಯನಾಗಸಕಾಗಿ ಸಾಗಿಸಿದನು (ದೋಹಚ. ೩೪-೭); ಗಂಧದ ಮರಗಳನ್ನು ಕೊಡಗಿಗೆ ಗುಟ್ಟಿನಲ್ಲಿ ಸಾಗಿಸುತ್ತಿದ್ದನಂತೆ (ಚಂಗಾಳ್ವ. ೨೩೬). ೨. ನಿರ್ವಹಿಸು; ನಿಭಾಯಿಸು : ಸೊಪ್ಪಾಗದ ಕರಘಾತಮಗಲದಿರ್ಪನುಭವದೊಳ್ ಸಾಗಿಸುವ ಸರಭಸಂ ಮಿಗೆ ರಾಗಿಸುವ ಮನಂ ಮನೋಹರಂ ಜಾರೆಯರೊಳ್ (ಗಿರಿಕ. ೪-೮೩); ಎನ್ನ ಪರಿಚರ್ಯೆಗನುಕೂಲೆಯಾಗಿರ್ದು ಮನೆವಾಳ್ತೆಯಂ ಸಾಗಿಪುದು ನೀನೆಂದೊಡೆ (ಜೈಮಿಭಾ. ೧೦-೨೩). ೩. ಪೋಷಿಸು; ಸಾಕು : ಭಕ್ತಿಯ ಮಱಿಯಂ ಸಲಹುವಂತೆ ನಿಷ್ಠೆಯ ಶಿಶುವಂ ಸಾಗಿಪಂತೆ ಮೋಹದಿಂದೋವುತ್ತಿರಲು (ಬಸವ. ೧೧-೧೧೩); ತನಯನಕಟಾ ಕಡುಬಳಲಿದನು ಜನನಿ ಸಾಗಿಸಿ ಸಲಹಬೇಡಾ ಮನದೊಳಿನಿತಾದಡೆ ಕರುಣವಿಲ್ಲವ್ವ ಇಂತಿಹರೇ (ಬಸಪು. ೨೪-೬೧); ಮಡದಿ ಮಗ ಮೊಮ್ಮಂದಿರಂ ಸಾಗಿಸುವೆನೆಂತೊ . . . ತಾನೆಂದು ಬಾಳುವೆಗೆ ಬಿಡದೆ ಚಿಂತಿಸಿ ತಾಪಕೊಳಗಾಗಿ (ಜೈಮಿಭಾ. ೩೨-೨೯). ೪. ರಕ್ಷಿಸು; ಜೋಪಾನಮಾಡು : ಶಂಕರನ ಸುವಿಮು ಸಾಗಿಪಂತೆ . . . ಸುಂದರವೆನಿಸಿ ತಾನೆ ಬಿತ್ತಿದ ಪುಷ್ಪವಾಟಿಗಾದರದೊಳಾಪಕವೆತ್ತಿ ಹೂರೆದು (ಸಿದ್ಧರಾ. ೪-೩೫); ಅತಿವೃದ್ಧರಾದೆಮ್ಮನಾರೈದು ಸಾಗಿಸಬೇಹುದು (ಸೌಂದಪು. ೪-೬೨); ಆ ಗ್ರಾಮವನೂ ಸಾಗಿಸಿ ಈ ಧರ್ಮವನೂ ನಡಸುವನ ಸಂಬಳ ಗ ೬ ವರಹ (ಎಕ. XIV, ಶ್ರೀರಂಗ. ೨೬೦-೬; 1551). ೫. (ಮಗುವನ್ನು) ಎತ್ತಿಕೊಳ್ಳು : ಅಪ್ಪಿದರುರದೊಪ್ಪಂ ಸಾಗಿಸುವರ ಸೋಗಿಲ ಧನಂ ಕೈಕೊಂಬರ ಕಡವರವೆನಿಸಿ (ನಂಬಿರ. ೨-೩); ಸಾಗಿಸುವ ಸಾವಿತ್ರಿಯ ಸೋಗಿಲೊಳಂ ಎತ್ತುವನಸೂಯೆಯ ಹಸ್ತದೊಳಂ . . . ಸಕಲಜಗನ್ಮಾತೆಯಪ್ಪ ಗಿರಿಜಾತೆ ಶೈಶವಲೀಲೆಯ ಕೊಂಡು ತೊಳತೊಳಗಿ ಬೆಳಬೆಳಗಿ ನಳನಳಿಸಿ ಬಳೆಯುತಿರ್ದಳ್ (ಗಿರಿಕ. ೩-೭೯ ವ). ೬. ಒಪ್ಪಿಸು; ವಹಿಸಿಕೊಡು : ಬಾಗಿಲು ಬಾಗಿಲುಗಳನು ಮನ್ನೆಯರಿಗೆ ಸಾಗಿಸಿದನು ಬಗೆಯಱಿದು ಬೀಗಗಳಿಗೆ ತನ್ನ ಸಜ್ಜನರನು ಮಂತ್ರಿಯಾಗಳಿಕ್ಕಿದನು ಬೇಗದಲಿ (ಕುರಾಸಾಂ. ೩೮-೮೪). ೭. ವೃದ್ಧಿಗೊಳಿಸು; ಹೆಚ್ಚಿಸು : ಅತಿಶಯದ ಲಿಂಗಮಂ ಸನ್ಮುತಕರದೊಳಗಿರಿಸಿ ಪರಮಭಕ್ತಿಯ ಸಾಗಿಪ ಮತವಿದೆಂದಱುಪಿ (ದೀಕ್ಷಾಬೋ. ೫. ೧೧೭-೨೮). ೮. ಪ್ರಾರಂಭಿಸು; ತೊಡಗು : ಮನೋಮುದದಿಂದ ಕಾವ್ಯಪದ್ಧತಿಯೊಳಾನಭಿವಂದನಂಗೈದು ಮುಂದೆ ಪದಸಂದರ್ಭಮಂ ಸಾಗಿಪೆಂ (ನಂದಿಮಾ. ೧-೧೫). ೯. ವ್ಯವಸಾಯಮಾಡು; ಕೃಷಿಮಾಡು : ತಾನು ಇಟ್ಟುಕೊಂಡ ಕೂಲಿಯವರಿಂದ ಚೆಲೋಭೂಮಿಯನ್ನು ಸಾಗಿಸಿ (ಮುಂಬಯಿ. ೬ ೫-೮೫). ೧೦. ಲಲ್ಲೆಯಿಸು; ಓಲೈಸು : ಬಂದ ವಿಟರ್ಗುನ್ನತಾಸನಮನಿತ್ತು ಮನ್ನಿಸಿ ಮಣಿದು ಸಜ್ಜೆವನೆಗುಯ್ದು ಸಜ್ಜನಸ್ನೇಹದಿಂ ಸಾಗಿಸಿ ನೋಡಿ ಭೋಗದೊಳ್ ಬೋಳಯಿಸಿ (ಗಿರಿಕ. ೨-೧೦೫ ವ). [ಸಾಗು₁ + - ಇಸು₁]

**ಸಾಗಿಸು₂** 'ಸಾವಗಿಸು' ನೋ.

**ಸಾಗು₁** (ಕ್ರಿ). ೧. ಮುಂದೆ ಹೋಗು; ಮುಂದಕ್ಕೆ ತೆರಳು; ಚಲಿಸು : ಲೋಕಜ್ಞಾನವಱಿದು ಭಾವಭ್ರಮೆಯಲ್ಲಿ ಚರಿಸಿದಡೆ ಅಱಿಯಬಾರದು ನೋಡಾ ಅಱಿದಲ್ಲಿ ಸಾಗುವನೊಡಲು ತಪ್ಪದ ಮೇಲಿಪ್ಪ ಒಪ್ಪದ ಓಲಿಂದೆ (ದೋಣಿಮಾ. ೧೮೨-೬೪೪); ಯೋಗವನು ಮನ ಮುಟ್ಟಿ ಭೋಗವನು ತೊಱೆದಿಹರೆ ಮಾಗಿಯ ಮಳೆಯು ಸುರಿದಂತೆ

ಆ ಯೋಗ ಸಾಗುತ್ತಲಿಹುದು (ಸರ್ವಜ್ಞ. ೪೬೮); ದೋಣಿ ಸಾಗಲಿ ಮುಂದೆ ಹೋಗಲಿ ದೂರತೀರವ ಸೇರಲಿ (ಭಾವಗೀ. ೫೦೯). ೨. ನೆರವೇರು; ಜರುಗು : ಅವನೊಡನೆ ಬಂದ ವೃಶ್ಯಪ್ರತತಿ ತವತವಗೆ ಪೋದ ಬೆವಹಾರಮಲ್ಲಂ ಸಾಗಲಾ ಕುರಿತ ಮೂಱಬ್ಬಕ್ಕೆ ಆ ಪಳಾಶಗ್ರಾಮಕೆಯ್ದಲು (ಸಮ್ಯಕ್ತ್ವ. ೧೧-೧೮); ಹದಿನೈದನೆಯ ಶತಮಾನದಲ್ಲಿ ಸಾಗಿದ ಕೃಷಿ ಒಂದುನೂರುವರ್ಷಗಳ ವೇಳೆಗೆ ಉತ್ತಮವಾದ ಕೃತಿಗಳನ್ನು ನೀಡುವುದು ಸೂಕ್ತವಾಗಿದೆ (ಕುಮಾಸಾಂ. ೪); ಒಬ್ಬ ಬ್ರಾಹ್ಮಣನ ನಿಮಿತ್ತವಾಗಿ ಯಾಗಕ್ಕೆ ವಿಘ್ನ ಬರುವುದೇ ಹೊರ್ತಾಗಿ ಕಡೆಗೂ ಸಾಗಲಾರದು (ಕೃವಾಲಿ. ೭೬). ೩. ಆಗು; ಸಾಧ್ಯವಾಗು : ತನ್ನ ಕಯ್ಯೊಳ್ಸಾಗದಂಜುವೆಂ ಸಂವರ್ತನತಿತಪೋಬಲನಿಳಿಯೊಳು . . . ಸಾಕೆಂದು ಶಿಖಿ ತೊಲಗೆ (ಜೈಮಿಭಾ. ೫-೪೧); ಪಾಪಂಗಳ ಕೇಳಲಾರೆವು ತಾಯೆ ಸಾಗದನ್ಯಾಯಮಂ ಹೇಳಲಾರೆವು (ತುರಂಗ. ೩-೨೪); ಕೈಯಲ್ಲಿ ಯಾವ ಕೆಲಸವೂ ಸಾಗದಿದ್ದರೂ ಅವನು ಗುರುಸೇವೆಯನ್ನು ಬಿಡಲಿಲ್ಲ (ನೀತಿಚಿಂ. IV.೧೭). ೪. (ಕಾಲ, ಹಾದಿ ಮುಂತಾದುವು) ಕಳೆ; ವ್ಯತೀತವಾಗು : ಕುದುರೆಯ ಮೇಲೆಯೇ ಹೋಗಿ ಬಿಡುವ, ಬೇಗ ಸಾಗುವುದು ಹಾದಿ (ಸಿಡಿಲು. ೯೬). ೫. ಕಳೆದುಹೋಗು; ಇಲ್ಲವಾಗು : ಬೇಗೆ ಕುಂತಳತಮಂ ಸಾಗೆ ಚೆಂದುಟಿಗೆಂಪು ಮೇಗೆ ಸೌಖ್ಯೋದಯದ ಬೆಳಗ ಪಸರಿಸಿ ನಿತ್ಯನಾಗಸವ ಪಂಪಾವಿರೂಪಾಕ್ಷ ಸೂರ್ಯನಾನಂದಮಂ ನಮಗೀಯಲಿ (ಚೆಬಪು. ೧-೨). ೬. ನಡೆ; ಪರಿಣಾಮಬೀರು : ನೀವೆಲ್ಲರು . . . ಕೂಡಿ ಇದ್ದರೆ ನಿಮ್ಮ ಮೇಲೆ ಯಾರ ಕಾಟವೂ ಸಾಗದು (ಮುಂಬಯಿ. ೨-೩೦). ೭. ಹರಿ; ಪ್ರವಹಿಸು : ಆಗಲಂಧನೃಪಾಲ ಕಣ್ಣೊಳು ಸಾಗೆ ಜಲಧಾರೆಗಳು ಪಾಂಡುವು ನೀಗೆ . . . ನಾಗನಗರಿಯ ಸೇರುವೆಯ ಸಿರಿಭೋಗ ತನ್ನಯ ಸುತರಿಗೆಂದನು (ತಿಮ್ಮಸ್ಮೀ. ೧-೭೯). ೮. ವ್ಯವಸಾಯಮಾಡು; ಕೃಷಿಮಾಡು: ಯಾ ಕೆಱೆಯಲೂ ಸಾಗಿದ ಗದೆಗೆ (ಸೌಇಂ. ೧೯೩೪, ಪುಂಗನೂರು. ೧೫೬-೧೫; 1419). ೯. (ಕಾಸಿದ ಕಬ್ಬಿಣವು ಸುತ್ತಿಗೆಯಿಂದ ಹೊಡೆದಾಗ ಆಗುವಂತೆ) ಹಿಗ್ಗು ; ವಿಸ್ತಾರಗೊಳ್ಳು : ಈ ಪ್ರಕಾರ ತೆಗೆದ ಕಬ್ಬಿಣವು ಮಿದುವಿರುತ್ತದೆ. ಅದನ್ನು ಸಾಗಬಡಿದು ತಂತಿ ತಗಡು ಮುಂತಾದವುಗಳನ್ನು ಮಾಡಬಹುದು (ಮುಂಬಯಿ. ೬-೧೮). ೧೦. ನೀಡು; ಚಾಚು : ಮುಂದುಗಡೆಯಲ್ಲಿ ಪಾದಗಳನ್ನು ಬೇರೆ ಚಾಚಿ ಶರೀರವನ್ನು ಬಗ್ಗಿಸಿಕೊಂಡು ಕೈಗಳ ಸಾಗಿ ಬೀಸುವದು ಯಾವುದು ಅದು ಸಾಗಿ ಬೀಸುವುದು (ಖಿದ್ದಟೀ. ೪-೩೭); ತಲೆ ಯೆತ್ತಿ ನೋಡಿದರೂ ಮುಗಿಯದಂತೆ ಮುಗಿಲಿಲ್ಲಿ ಸಾಗಿದ ತೆಂಗಿನ ಮರಗಳು ತುದಿಯಲ್ಲಿ ಪಚ್ಚೆಯಂತಹ ಎಳೆದೆಂಗುಗಳ ಆಭರಣಗಳನ್ನು ಇಟ್ಟುಕೊಂಡಿದ್ದವು (ಸಮಜೀ. ೮೮).

**ಸಾಗಗೊಳಿಸು** = ಪ್ರಯಾಣ ಹೊರಟವರನ್ನು ಸ್ವಲ್ಪದೂರ ಜೊತೆಯಲ್ಲಿ ಹೋಗಿ ಕಳುಹಿಸಿಕೊಡು; ಬೀಳ್ಕೊಡು : ಸಾಗಗೊಳಿಸಲು ಶಾಮರಾಯರೂ ಜಾನಕಮ್ಮನವರೂ ಊರಹೊರಗಿನ ದಾರಿಯ ಮಾವಿನಮರದವರೆಗೂ ಹೋಗಿದ್ದರು (ಮೂಲಾನ. ೧೬). **ಸಾಗಹಾಕು** = ೧. ಹೋಗುವಂತೆ ಮಾಡು; ಅಟ್ಟು : ಅದೇ ದಿನ ನನ್ನನ್ನು ಮುಂಬಯಿಗೆ ಸಾಗಹಾಕಿದರು (ಸ್ಮೃತಿಚಿ. ೭೪). ೨. ಮುಂದುವರಿಸು ; ನಡೆಸು : (ಕಿ). **ಸಾಗುಕಳಿಸು** = ಸಾಗಗೊಳಿಸು : ನಾವು ಅವನನ್ನು ಹಿಂಬಾಲಿಸಿ ಸ್ವಲ್ಪ ದೂರ ಸಾಗುಕಳಿಸಿ ಬರಬೇಕು (ದೌಲತ್.೧೬೦). **ಸಾಗುಕಳುಹಿಸು, ಸಾಗಕಳುಹಿಸು** = ಸಾಗಗೊಳಿಸು: ಬೇರುಸಹಿತವಾಗಿ ಕಿತ್ತುಕೊಂಡು ಬರುತ್ತಿರುವ ಮಹಾವೃಕ್ಷಗಳು ಸಾಗುಕಳುಹಿಸುವದಕ್ಕೆ ಬಂದ ಬಂಧುಜನಗಳ ಹಾಗೆ ಕಾಣಿಸುತ್ತಿರುವುವು (ಕೃವಾಲಿ. ೧೮೧); ಶ್ರೀಕೃಷ್ಣನು ಒಪ್ಪಲು ದ್ರುಪದನು ಅವರನ್ನು ಸಾಗಕಳುಹಿಸಿಕೊಟ್ಟನು (ವಚಭಾ.೭೭).

[ದೇ. II ತಮಿ. ಚಾಯ್; ತುಳು. ಸಾಗು; ತೆಲು. ಸಾಗು, ಚಾಗು]

**ಸಾಗು₂** (ನಾ). ೧. ಮುಂದುವರಿಯುವಿಕೆ; ಪ್ರಗತಿ : (ಕಿ). ೨. ನಡವಳಿಕೆ; ನಡತೆ : ತ್ಯಾಗದೊಳಗನುವಾದ ಭೋಗಸರಾಗದೊಳಗವನೀಶರಾಳ್ವನುರಾಗ ದೊಳಗುತ್ಸತ್ಕತೇಜದಿ ಕೀರ್ತಿ ಸಜ್ಜನರ ಸಾಗು ಸತ್ಯಗಳಾಗಿ ಸಹಜಗಳಾಗಿ ನಡತೆಗಳಲ್ಲಿ ಬಿಜ್ಜಣನಾಗಿ ಸರಿ ಈ ಕಾಲಕಿನ್ನಿಲ್ಲನ್ನರೆನಿಸಿದನು (ಬಿಜ್ಜಪು. ೮೨-೨೮). ೩. ವ್ಯವಸಾಯ ; ಕೃಷಿ : (ಕಿ). ೪. ವ್ಯವಸಾಯದ ಭೂಮಿ; ಸಾಗುವಳಿಯ ನೆಲ : ಶ್ರೀಮತು ಆದಿಯಪ್ಪನಾಯಕರು . . . ಕೊಟ್ಟ ಸಾಗಿನ ಧರ್ಮಶಾಶನದ ಕ್ರಮವೆನ್ನೆನ್ದರೆ (ಎಕ. XI, ದಾವಣ. ೧೧೬-೮; 1528); ಕಂಮಾರದೇಉಹೊಲ ಕುಪ್ಪಗೆ ಕಟ್ಟಿದ ಸಾಗಿನ ಬಗೆಲ್ಲು ಮು ೧ ರ ಗ ೧ ಸಾಲ್ಕು ವೊಕ್ಕಲಿಗೆ ಕಟ್ಟಿದ ಬಗೇಲು ಕೇಶವಉಡುಪನ ಸಾಗು (ಎಕ.VIII, ತೀರ್ಥಹ. ೧೪೦-೪೦; 1687). ೫. [ಸಂಗೀತ] ಹಾಡು ಅಥವಾ ಸಂಗೀತದ ಗತಿ, — ಗಮನ; ಗಮಕ: ಕಳ್ಳೆ ಚಕ್ಕಣಮೆನಿಪ್ಪುದು ಸಾ[ಪಾಠಾಂ. ಸೋ]ಗೆನಿಸಲ್ಕೆ ಸಾಲ್ವ ಸಗ್ಗದ ಪೊಸ ದೇಸಿಯೋಳಿಗಳನೊರ್ವಳೊಜಲ್ಲು ನೆಜಲ್ಲು ಪಾಡಿದಳ್ (ಪಂಪಭಾ. ೭-೯೦). 'ನೋಗು' ಪರಾ.

**ಸಾಗುಬೀಳು** = (ಭೂಮಿಯು) ವ್ಯವಸಾಯವಿಲ್ಲದೆ ಪಾಳುಬೀಳು: ಸಾಗುಬಿದ್ದ ಹೊಲ ಹಾಗಕ್ಕೂ ಬೇಡ (ಗಾದೆ). **ಸಾಗುಮಾಡು** = ವ್ಯವಸಾಯಮಾಡು; ಕೃಷಿಯನ್ನು ನಡೆಸು : ತಾನೂ ಇಲ್ಲಿಗೆ ಬಂದು ಅವಳ ಹೊಲ ಸಾಗುಮಾಡಲಿಕ್ಕೆ ಸಹಾಯ ಮಾಡುತ್ತಾ ಕಾಲಕಳೆದನು (ಮೇದಿಮ. ೯೮); ಈಗಿರುವ ಎಲೆಬಳ್ಳಿಗಳು ಒಣಗಿಹೋದ ಮೇಲೆ ಇಲ್ಲಿ ಸಾಗುಮಾಡುತ್ತಾರೆ (ಸಮಜೀ. ೮೮). [< ಸಾಗು₁ ./ ತುಳು. ತೆಲು. ಸಾಗು]

**ಸಾಗು₃** (ನಾ). ಅನೇಕ ಬಗೆಯ ತರಕಾರಿಗಳನ್ನು ಸೇರಿಸಿ ಮಾಡುವ ಒಂದು ಬಗೆಯ ಮೇಲೋಗರ : ಇಂದು ಪೂರಿಯ ಜೊತೆಗೆ ಮಾಡಿದ ಸಾಗು ತುಂಬ ರುಚಿಯಾಗಿತ್ತು (ರೂಢಿ). [< ಹಿಂ. ಸಾಗ್]

**ಸಾಗುಅಕ್ಕಿ** (ನಾ). ಸಬ್ಬಕ್ಕಿ; ಸೀಮೆಅಕ್ಕಿ : "ಸಬ್ಬಕ್ಕಿ, ಸಾಗುಅಕ್ಕಿ, ಸೀಮೆಅಕ್ಕಿ" (Sago. ೧೦೫೩). 'ಸಾಬುಅಕ್ಕಿ' ಪರಾ.

[ಸಾಗು₀ (IP ← ಹಿಂ. ಮರಾ. ಸಾಗೂ) + ಅಕ್ಕಿ₁]

**ಸಾಗುಚೀಟು** (ನಾ). ಸಾಗುವಳಿಯ ಜಮಾನನ್ನು ನಿಯಮಿತಕಾಲದ ಮೇಲೆ ಹಿಂದಕ್ಕೆ ಬಿಟ್ಟುಕೊಡಬೇಕೆಂದು ಸೂಚಿಸುವ ಗೇಣಿಚೀಟಿ, — ಗುತ್ತಿಗೆ ಕಾಗದ, — ಭೋಗ್ಯಪತ್ರ : (ಕಿಸಂಗ್ರಾ. ೯೭). [ಸಾಗು₂ + ಚೀಟು₂]

**ಸಾಗುಣ್ಯ** (ನಾ). ಅತಿಶಯವಾದ ಗುಣಗಳಿಂದ ಕೂಡಿರುವಿಕೆ; ಗುಣಾತಿಶಯ : "ನಿತ್ಯದಲ್ಲಿ ಸಾದಾಸನಾಖ್ಯಂ ಸಾಗುಣ್ಯವಕ್ಕು" (ಮಂಗರಾ. ೧೫೭-೭೪). [ಸಂ.]

**ಸಾಗುದುರೆ, ಸಾಯ್ಗುದುರೆ** (ನಾ). ಕೊನೆಯುಸಿರೆಳೆಯುತ್ತಿರುವ ಕುದುರೆ; ಸಾಯುತ್ತಿರುವ ಕುದುರೆ : ಲೋಗರ ಮಗನನಿಕ್ಕಿ ನೆಲೆಯ ನೋಡಿದನಕಟ ಸಾಗುದುರೆಗಡಕಿದನು ಹುಲ್ಲ (ಹಚಕಾ. ೧೨-೫೨); ಸಾಗುದುರೆಗೆ ಪುಲ್ಲನಡಕಿ ಕೆಡುವನೆ ಚದುರಂ (ಯಶೋಚ. ೩-೧೫). **ಸಾಯ್ಗುದುರೆ** : ಸಾವಿಗೆ ಹುಟ್ಟಿ ಬೆಳೆದು ಜವ್ವನವಾಂತೀವೊಡಲನು ನಿತ್ಯಮೆಂದು ಓವುವವನು ಸಾಯ್ಗುದುರೆಗೆ ಹುಲ್ಲೀವ ಗಾಪಿಲನಂದವಡೆವನು (ಶ್ರೀಪಾಲ. ೧೪-೪೨). [ಸಾ + ಕುದುರೆ]

**ಸಾಗುಬಳಿ** 'ಸಾಗುವಳಿ' ನೋ.

**ಸಾಗುವಳಿ, ಸಾಗುಬಳಿ** (ನಾ). ೧. ಕೃಷಿ ; ಒಕ್ಕಲುತನ ; ಬೇಸಾಯ : ಗ್ರಾಮದಲು ಸಾಗುವಳಿ ಕಲಪಟೆಯಾಗಿ ತಲೆದು ಗ ೪೦ ಅಕ್ಷರದಲು ನಲವತ್ತುವರಹಂನ್ನು ತೆಱುತಲಿ ಕಾಣಿಕೆ ಬೇಡಿಗೆಯಿಲ್ಲ (ಮೈಆರಿ. ೧೯೩೦, ೨೦-೧೩; 1546); ಕ್ರಮವರಿತ ಸಾಗುವಳಿಯಿಂದ . . . ಯಾವ ಜಮೀನನ್ನಾದರೂ ತರಕಾರಿಬೆಳೆಗೆ ಅನುಗೊಳಿಸಬಹುದು (ತರಚೆ. ೨). **ಸಾಗುಬಳಿ** : ೨. ಒಕ್ಕಲು; ಕೋರಿ : ಎಂದೆಂದಿಗೂ ನಿಮ್ಮ ಸಾಗುಬಳಿಯಾಗಿ ನಡಸಿ ಬಹೆವು (ಸೌಇಂ. ೧೯೩೪, ಪುಂಗನೂರು ೧೫೬-೧೬; 1419).

**ಸಾಗುಬಳಿಯ ವೋಲೆ** = ಸಾಗುವಳಿಚೀಟಿ; ಗುತ್ತಿಗೆಪತ್ರ : ಸ್ಥಾನಿಕರು . . . ಕುಪ್ಪಯಗಳೂ ರಾಮಸಮುದ್ರದ ಕದರೀನಾರಸಿಂಹದೇವಗಳಿಗೆ ಕೊಟ ಸಾಗುಬಳಿಯ ವೋಲೆಯ ಕ್ರಮವೆನ್ತೆನ್ದರೆ (ಎಕ. X, ಮುಳಬಾ. ೧೭೩-೩; 1503). **ಸಾಗುವಳಿಮಾಡು** = ವ್ಯವಸಾಯಮಾಡು ; ಕೃಷಿಮಾಡು : ಬಂಜರ ಜಮೀನು ಸಾಗುವಳಿ ಮಾಡಿಕೊಳ ತಕದು (ಎಕ. VI, ಕೊಪ್ಪ. ೪೮-೪೪; 1811); **ಸಾಗುವಳಿಯಾಗು** = ವ್ಯವಸಾಯವಾಗು ; ಉಳುಮೆಯಾಗು : ಕಬ್ಬಿಣದ ಸಹಾಯದಿಂದ ಭೂಮಿಯ ಸಾಗುವಳಿಯಾಗುತ್ತದ (ಮುಂಬಯಿ. ೪-೧೪೩). [ಸಾಗು₁ + - ವಳಿ₃ ./ತಮಿ. ಚಾಕುಪಟಿ; ತುಳು. ಸಾಗುವಳಿ, ಸಾಗೋಳಿ, ಸಾಗ್ಗಳಿ; ತೆಲು. ಸಾಗುಬಡಿ]

**ಸಾಗುವಳಿಗಾರ** (ನಾ). ವ್ಯವಸಾಯಮಾಡುವವನು ; ರೈತ : ಸಾಗುವಳಿಗಾರನಿಗೆ ನಿತ್ಯಸಂಕಟ (ಹಸುಹೊ. ೩೩೬). [ಸಾಗುವಳಿ + - ಗಾರ (< - ಕಾಱ)]

**ಸಾಗುವಳಿಚೀಟು** (ನಾ). "ವ್ಯವಸಾಯ ಮಾಡಲು ಬಯಸಿದ ರೈತನಿಗೆ ಅದಕ್ಕೆ ಒಪ್ಪಿಗೆಯಿತ್ತು ಬರೆದುಕೊಡುವ ಅನುಮತಿಪತ್ರ" (ಕಿಸಂಗ್ರಾ. ೧೯೯).

[ಸಾಗುವಳಿ + ಚೀಟು₂]

**ಸಾಗುವಾಡ** (ನಾ). ಸಾಗಿಸುವಿಕೆ ; ರವಾನಿಸುವಿಕೆ : ಈ ಕೆಲಸಕ್ಕೆ ಅವಶ್ಯವಿರುವ ಬ್ಯಾಂಕುಗಳು, ಪಾಲುವಿಕ್ರಯಮಾಡುವವರು, ವ್ಯಾಪಾರಿಗಳು, ಸಾಗುವಾಡ (Transit) ಗಳು --ಎಲ್ಲವೂ ಅಷ್ಟು ವ್ಯವಸ್ಥಿತವಾಗಿರಬೇಕು (ಬಾಲಪ್ರ. I, ೧೮೦).
[< ಸಾಗು / ತೆಲು. ಸಾಗುಪಾಟು]

**ಸಾಗುವಾನಿ₁** (ನಾ). = ಸಾಗುವಾಡ : ವ್ಯಾಪಾರವಹಿವಾಟನಲ್ಲಿ ಬ್ರಿಟಿಷರ ಕೈವಾಡ ಬೆಳೆಯುತ್ತಲೇ ಇತ್ತು, ಸಾಗುವಾನಿ ಉದ್ಯಮವಲ್ಲ ಬ್ರಿಟಿಷರ ಗುತ್ತಿಗೆಯಾಗಿತ್ತು (ಏಶಿಸು. ೧೮). [< ಸಾಗು₁]

**ಸಾಗುವಾನಿ₂** 'ಸಾಗವಾನಿ' ನೋ.

**ಸಾಗುಸಂತು** (ನಾ). ಬಿತ್ತನೆಯಾದ ಬೀಜದ ವರ್ಗ ಮತ್ತು ಪರಿಮಾಣ ; ಸಾಗುವಳಿಯ ಜಮೀನಿನ ವಿವರ ಮತ್ತು ಕೃಷಿಯಾಗದಿರುವ ಜಮೀನಿನ ವಿವರಗಳ ಲೆಕ್ಕ (ಕಸಂಗ್ರಾ. ೧೪೯): ಸಾಗುಸಂತು ಮಾಡುವ ಬಗ್ಗೆ ತಾಲೂಕು ಜಿರಾಯತ ಮಾಡಬೇಕೆಂದು, ದೂರದೇಶಕ್ಕೆ ಹೋಗಿ ಇದ್ದಂಥಾ ರೈತರನ್ನು ಕರಸಿ, ಜಮಾ ಮಾಡಿದಲ್ಲಿ (ರಾಜೇಂದ್ರ. ೯೧); ಅರಮನೆ ಕೆಲಸ, ಸ್ಥಳಮನೇ ಸಾಗುಸಂತು, ಎತ್ತುವಳಿ ಮೊದಲಾದ ಕೆಲಸಗಳನ್ನು ಮಾಡುತಾ, ಆ ಸೇನುಭೋಗರ ಸಮ್ಮತಿಯಿಂದ ನಡೆದುಕೊಳ್ಳುವುದು (ಚಿತ್ರಪಾ. ೪). [ಸಾಗು₂ + ಸಂತು?]

**ಸಾಗೆರೆ** (ನಾ). ಒಂದು ಊರಿನ ಹೆಸರು : ದಣ್ಣಾಧೀಶಪರಾದಂ ಸಾಗರಗ್ರಾಮದೆಳ ಈಶಾಣ ಚದುರಂ ಇದನಳಿಪಿ XXX ಉಳ್ಳೊತ್ತಿ ಮಕ್ಕಳ್ಪಟ್ಟದೆ ಕೆಟ್ಟು ಪಞ್ಚಮಹಾಪಾತಕ ನಪ್ಪರ್ (ಎಕ. III (R). ನಂಜನ. ೧೪೨-೧; ಸು ೬ನೆಯ ಶತ). [? + ಕೆರೆ₂ (< ಕೆಱೆ)]

**ಸಾಚ** 'ಸಾಚಾ' ನೋ.

**ಸಾಚಾ, ಸಾಚ** (ಗು). ೧. ನಿಜವಾದ; ದಿಟವಾದ : "ಸರಿಯಾದ, ಸಾಚಾ" (True. ೧೦೫೩). ೨. ಕೃತ್ರಿಮವಲ್ಲದ; ಸೀದಾ; ನಿಷ್ಕಪಟವಾದ : ಸಾಚಾ ಇಸಮು ಅನ್ನಿಸಿ ಶಾಭಾಸ್‌ಗಿರಿ ಪಡೆದಿದ್ದೆ (ಚಂಗೂಲಿ. ೮೩); ಸಾಚಾವ್ಯಾಪಾರ ಮಾಡಿ, ರೊಕ್ಕ ಕೊಟ್ಟು ಜಮೀನು ತಗಂಡವರ (ಚಂದತೋ. ೧೪೦). (ನಾ). ೩. ನಿಜವಾದುದು; ದಿಟವಾದುದು: ಅದೇನು ಸಾಚಾನೇ ಖೋಟಾನೇ ಎಂದು ಎರಡು ಮೂರು ಬಾರಿ ನೋಡಿದನು, ಎಲ್ಲವೂ ಸಾಚಾ (ರಂಗಕ. ೯). ೪. ಪ್ರಾಮಾಣಿಕತೆಯುಳ್ಳ ವ್ಯಕ್ತಿ; ನಂಬಿಕೆಗೆ ಅರ್ಹನಾದ ವ್ಯಕ್ತಿ : ಈಚೀಚಿನ ವರೆಗೂ ಏನೋ ಸಾಚಾ ಇದ್ದ ಹಾಗಿದ್ದ (ಮುನಿಮಾ. ೪೮); ಪಂಡಿತರು, ಸ್ವಾಮಿಗಳು, ಸಂನ್ಯಾಸಿಗಳು ಇವರಲ್ಲಿ ಖೋಟಾ ಸಾಚಾ ಇಬ್ಬರೂ ಇದ್ದರು (ಬಂಕಿಮ. ೧೫೪). **ಸಾಚ** : ೫. ಸಹಜವಾದುದು; ಸ್ವಾಭಾವಿಕವಾದುದು : ನೀಚಹೊಲೆಯಗೆ ದಾಸನಾಗಲು ನಾಚಿಪರ ಜನರೇನ ಪೇಳ್ವೆ ಮಾಚಿ ಮಾರಲು ಯನ್ನ ಈ ಪರಿ ಸಾಚವೇ ನಿನಗೆ (ಹಮಚ. ೧೨೦).
[<— ಹಿಂ. ಸಚ್ಚಾ, ಸಾಂಚ್; ಮರಾ. ಸಚ್ಚಾ, ಸಾಚ್]

**ಸಾಚಾಮನುಷ್ಯ** (ನಾ). ಸತ್ಯವಂತನಾದ ಮನುಷ್ಯ; ಪ್ರಾಮಾಣಿಕನಾದ ವ್ಯಕ್ತಿ : ಬಹಳ ಸಾಚಾಮನುಷ್ಯ ಅಂತ ಕಾಣುತ್ತೆ (ಮುನಿಮಾ. ೧೧೫). [ಸಾಚಾ + ಮನುಷ್ಯ]

**ಸಾಚಿ₁** (ನಾ). ೧. ಮಗ್ಗುಲಿನಿಂದ ಕಾಣುವ ನೋಟ,— ಆಕೃತಿ; ಪಾರ್ಶ್ವದೃಶ್ಯ,— ಭಂಗಿ : ಕೆಲರಾಗಳ್ ಋಜುವಿಂದಮರ್ಧಋಜುವಿಂದಂ ಸಾಚಿಯಿಂದಂ ಕೆಲರ್ ಪಲವುಂ ಭಂಗಿಯಿನಿರ್ದು ಜಾನಕಿಯ ರೂಪಾಶ್ಚರ್ಯಮಂ ನೋಡಿ . . . ನಿಷ್ಪಂದರಾಗಿರ್ಪುದುಂ (ಪಂರಾಮಾ. ೫-೬೫); ಸ್ತನಲಕ್ಷ್ಮ್ಯಾಲೋಕನಂ ಸಿಂಪಿಸೆ ಮುರರಿಪು ತನ್ನಂಗಿ ತಾರುಣ್ಯಭಾರಾತಿನಿರೋಧಾಲಸ್ಯದಿಂ ಮೆಯ್ಮುಱಿದಳೆನೆ ಪೆಱಲ್ ಸಾಚಿಯಿಂ ನಿಂದು . . . ಶೋಭೆವೆತ್ತಳ್ (ಜಗವಿ. ೧೪-೧೧೫). ೨. [ಚಿತ್ರಶಾ] ಒಂಭತ್ತು ಬಗೆಯ ಸ್ಥಾನಕಗಳಲ್ಲಿ ಒಂದು; ಮಗ್ಗುಲಿನಿಂದ ಕಾಣುವ (ಮುಖದ) ದೃಶ್ಯ ; ಪಾರ್ಶ್ವಚಿತ್ರ : ಋಜು ಋಜುಪರಾವೃತ್ತಿ ಅರ್ಧಋಜು ಅರ್ಧಋಜುಪರಾವೃತ್ತಿ ಸಾಚಿ ಸಾಚಿಪರಾವೃತ್ತಿ ದ್ವ್ಯರ್ಧಾಕ್ಷಂ ತತ್ಪರಾವೃತ್ತಿ ಪಾರ್ಶ್ವಗತಮೆಂಬ ನವಸ್ಥಾನಕಂಗಳೊಳಂ (ಚಂದ್ರಪು. ೧೫-೭೦ ವ). ೩. [ನಾಟ್ಯ] "ರೆಪ್ಪೆಯೊಳಕ್ಕೆ ಆಲಿಯನ್ನು ಸೇರಿಸಿ ವಕ್ರವಾಗಿ ನೋಡುವುದು" (ಲಾಸ್ಯರಂ. ೨೮೫ ಗದ್ಯಾನುವಾದ): ಸಮ ಸಾಚಿ ಅನುವೃತ್ತ ಅವಲೋಕಿತ ವಿಲೋಕಿತ ಉಲ್ಲೋಕಿತ ಆಲೋಕಿತ ಪ್ರವಿಲೋಕಿತ—ಈ ಎಂಟು ವಿಷಯಾಭಿಮುಖ ಆಲಿಯ ಭೇದಂಗಳ್ . . . ಸೊಗಯಿಸುವವೆಗುಡ್ಡೆಯೊಳೊಟ್ಟಗೆ ಪುದಿದಾ ತಾರ ನೋಡೆ ಸಾಚಿಯೆನಿಕ್ಕುಂ (ಲಾಸ್ಯರಂ. ೩-೬೩ ವ).
[IP ಸಂಸ್ಕೃತದಲ್ಲಿ ಇದು ಒಂದು ಅವ್ಯಯ]

**ಸಾಚಿ₂** (ಅ). ವಕ್ರವಾಗಿ. [ಸಂ.]

**ಸಾಚೀಕೃತ** (ಗು). ೧. ವಕ್ರಗೊಳಿಸಿದ; ಡೊಂಕುಗೊಳಿಸಿದ. ೨. ತಿರುಚಿದ ; ವಿರೂಪಗೊಳಿಸಿದ. ೩. ತಪ್ಪಾಗಿ ನಿರೂಪಿಸಿದ; ಅಪಾರ್ಥಮಾಡಿದ. ೪. ಪಕ್ಕಕ್ಕೆ ತಿರುಗಿದ; ಪಾರ್ಶ್ವಕ್ಕೆ ಹೊರಳಿದ : ಹಾರದ ಲಂಬಣಮಂ ಕೇಯೂರಶಿಖಾಕೋಟಿಯೊಳ್ ತಗುಳ್ಚುದನಿಭಹಸ್ತೋರುಭುಜಂ ಸಾಚೀಕೃತಚಾರು ವದನನೂರ್ವನಿರದುರಕ್ಷದನುಯ್ದಂ (ಶಾಂತಿಪು. ೫-೧೦೪). (ನಾ). ೫. ಪೂರ್ವಕಲ್ಪಿತ ಅಭಿಪ್ರಾಯ; ಪೂರ್ವಗ್ರಹ. [ಸಂ.]

**ಸಾಜ** (ಗು). ೧. ಸಹಜವಾದ; ಸ್ವಾಭಾವಿಕವಾದ : ಸಾಜಗುಣಮಲ್ಲದೞಿಯದ ಮುಗ್ಧೆಯರ್ ಬಳಿಕ್ಕೀ ಚೇಟೆಗಾಱನಂ ಕಂಡು ಮರುಳಪ್ಪುದಿದು ಸೋಜಿಗಮೆ (ಚಬಪು. ೨೦-೨೧); ಸಾಜಗುಣವೆಂದುಪೇಕ್ಷಿಪೆಯ ನಿನ್ನವಗುಣವ? ಸಾಜವನು ಬಿಟ್ಟಲುಗದಿಹುದು ಮೃಗಕೀಟ (ಮಂಕುಕ. ೨೧೩). ೨. ನಿಜವಾದ; ದಿಟವಾದ : ಸಂದೆಗಮೆ ಸಾಜ ನಿರ್ಗುಣವೆಸರು ನಾಲ್ಕುವೆಱೊಳೊಂದಱೊಳಗಣಮನೆರದವರ್ಗುಸಿಕ ನೀಯೆ ನಿನ್ನಂದಗಂಡರ್ ಬೞಿಗುವಟ್ಟು ಮನವಿಟ್ಟೊಳಗೆ ನೂಱೆಂಟನುಸುರದಿಹರೆ (ಉದ್ಭಟ. ೧-೩೦). (ನಾ). ೩. ಸಹಜವಾದುದು; ಸ್ವಾಭಾವಿಕವಾದುದು : ಮುಳ್ಳೆ ಚೂರ್ಮೊನೆ ಭವಚ್ಛತ್ರಕ್ಕೆ ತತ್ಸಜ್ಜತಾವಿಭವಂ ಸಾಜಂ (ಶಾಂತಿಪು. ೧೧-೯೪); ಉದಯದೋಳೀಶಂ ಮಧ್ಯಾಹ್ನದೊಳಗಧರನಸ್ತಸಮಯದೊಳ್ಕಮಳಜನಪ್ಪುದು ಸಾಜಂ ಸೂರ್ಯಂಗೆಂದಿದನುಳ್ಳರ್ಪಲರುಮಿನ್ನವಘಟಿತಮೊಳವೇ (ಸಮಪ. ೮-೧೬೭). ೪. ದಿಟ; ನಿಜ : "ನನ್ನಿ, ನಿಕ್ಕುವಂ, ನಿಸದಂ, ಸಾಜಂ, ನನಸು, ದಿಟಂ – ಈ ೬ ಸತ್ಯಂ" (ಕಶಸಾ. ೫೭-೨೫೪); ಕ್ಷಮೆ ಮೆಯ್ ಮಾರ್ದವವೋಜೆ ಸಾಜಮಳವಟ್ಟಿರ್ದಾರ್ಜವಂ ಸ್ವಪು . . . ವರ್ಧಮಾನಮುನಿಗಕ್ಕುಂ ಪೆಱರ್ಗಕ್ಕುಮೇ (ಸುಕುಮಾ. ೧-೨೭); ನೆರ ನೆಪ್ಪು ನೇವಣ ಬನ್ನಣೆ ಬೇಡ ಸಾಜವ ಹೇಳೆಂದನಾ ನೃಪತಿ (ಭರಚ. ೧೪-೨೦). ೫. ಸರಳವಾದುದು ; ನಿರಾಡಂಬರವಾದುದು : ರಾಜ[ದ್ರಾ]ಜಕಮೆನಿಸಿದ ಸಾಜದ ಪುಲಿಗೆಱೆಯ ತಿರುಳ ಕನ್ನಡದೊಳ್ ನಿರ್ವ್ಯಾಜದೆಸಕದೊಳೆ ಪುದಿದೊಂದೋಜೆಯ ಬಲದಿನಿಯ ಕವಿತೆ ಪಂಪನ ಕವಿತೇ (ಪಂಪಭಾ. ೧೪-೫೮); ಅನಂತರಮಾ ಕಾಂತೆಯರ್ . . . ನಿಚ್ಚದಲ್ಲದ ರನ್ನವಚ್ಚವುಂ ತೆಗೆದಿಟ್ಟು ಮಿಱುಮಿಱುಗುವ ಪಟ್ಟುಡೆಯಂ ಸಡಿಲ್ಚಿ ಸಾಜದ ರಂಗುಸೀರೆಯನುಟ್ಟು ಜಲಕೇಳಿಗೆ ಮೇಳವಿಸಿದರ್ (ರಾಮಾಶ್ವ. ೧೨೩-೧೧). ೬. ಸತ್ಯವಂತನಾದವನು; ಪ್ರಾಮಾಣಿಕ : ಥಳಕುಪಳಕುಗಳೇನೆ ಇರಲಿ ಯಾರು ಸಾಜ, ಅವನೆ ರಾಜ (ಇಂಗೀತ. ೩೭-೧೫). [< ಸಂ. ಸಹಜ]

**ಸಾಜಂ** (ಅ). ಸಹಜವಾಗಿ; ಸ್ವಾಭಾವಿಕವಾಗಿ : ಸಮವೃತ್ತಸಂಧಿಲಕ್ಷಣಸಮನ್ವಿತಂ ಜಾತ್ಯಲಂಕೃತಿಭ್ರಾಜಿತಮುತ್ತಮಕಾವ್ಯಬಂಧದಂತಾ ದಮಿತಾರಿಗೆ ಸಾಜಮೊಪ್ಪುಗುಂ ಕಿಱುದೊಡೆಗಳ್ (ಶಾಂತಿಪು. ೩-೪೭). [< ಸಾಜ]

**ಸಾಜಗಾರ** (ನಾ). ಸಹಜತೆಯುಳ್ಳವನು; ಪ್ರಾಮಾಣಿಕ : ಅರಸ ಕರಸಿ, ಬಿರುದ ಹೊರಿಸಿ, ಮೆರಸಬಲ್ಲ, ಏನೆ ಇರಲಿ, ಸಾಜಗಾರ ಎನಿಸಲಾರ (ಇಂಗೀತ. ೩೮-೩).
[ಸಾಜ + - ಗಾರ (< - ಕಾಱ)]

**ಸಾಜತೆ** (ನಾ). ಸ್ವಾಭಾವಿಕತೆ; ನೈಜತೆ: ಬಚ್ಚಿಟ್ಟುಕೊಂಡಿಹುದ ಸತ್ಯ ಮಿಥ್ಯೆಯ ಹಿಂದೆ . . . ಬ್ರಹ್ಮಸೃಷ್ಟಿಗಳೇಕೊ ಮುಚ್ಚಿಹವು ಸಾಜತೆಯ (ಮಂಕುಕ.೩೧).
[ಸಾಜ + - ತೆ₁]

**ಸಾಜಿಂದಿ** (ನಾ). (ಸಾಮಾನ್ಯವಾಗಿ ವೇಶ್ಯೆಯರ ನರ್ತನಕ್ಕೆ) ಪಕ್ಕವಾದ್ಯ ನುಡಿಸುವವನು; ಪಕ್ಕವಾದ್ಯಗಾರ : ಪಾತರದವರ ಗಂಡುಮಕ್ಕಳು ಸಾರಂಗ, ಮೃದಂಗಗಳನ್ನು ಬಾರಿಸಲಿಕ್ಕೆ ಕಲಿತು ಸಾಜಿಂದಿಗಳಾಗುತ್ತಾರೆ (ಕಭಾಗ. ೧೯೫).
[<— ಫಾರ. ಸಾಝುಂದ; ಹಿಂ. ಮರಾ. ಸಾಜಿಂದಾ]

**ಸಾಜು₁** (ನಾ). (ನೃತ್ಯಕ್ಕೆ ಬೇಕಾದ) ಪರಿಕರ,— ಸಲಕರಣೆ.
**ಸಾಜಿನವರು** = ನೃತ್ಯಕ್ಕೆ ಹಿಮ್ಮೇಳವನ್ನೊದಗಿಸುವವರು; ನೃತ್ಯದ ಪಕ್ಕವಾದ್ಯಗಾರರು: ನಿನ್ನ ಸಾಜಿನವರು ಖಡ್ಗವನ್ನು ಹಿಡಿಯಲಾರಂಭಿಸಿದರ,

ನಾವಿನ್ನು ತಂತಿಯನ್ನು ಬಾರಿಸಬೇಕಾಯಿತಲ್ಲ (ಯದುರಾ.೭೨).

[ ← ಫಾರ. ಸಾರ್ಝ್; ಹಿಂ. ಮರಾ. ಸಾಜ್./ ಸಂ. ಸಜ್ಜಾ]

**ಸಾಜು₂** (ನಾ). (?): ನೈವೇದ್ಯಕ್ಕೆ ನಮ್ಮ ಮೂಲದ ಸಾಜಿನ ಭೂಮಿಯ ಮೇಲೇ ಪ್ರತಿದಿನದಲು ಕಟೆಯಲು ನಡಸುವ ಅಕ್ಕಿ ಸೇ ೧ ಉಭಯಂ . . . ಸ ೧/೨ ಸಾಜಿನಲೂ ಸ ೭ ೧/೨ ಉಭಯಂ ಭತ ಸ ೧೫ (ಎಕ. VI, ಮೂಡಗೆ. ೩೯–೧೭; 1518?). [?]

**ಸಾಜ್ಯ** (ಗು). ತುಪ್ಪದಿಂದ ಕೂಡಿದ; ಆಜ್ಯಸಹಿತವಾದ : ರಚಿತರುಚಿನಿಚಿತಶುಚಿ ಸಾಜ್ಯ ಭೋಜ್ಯಾಳಿಯಿಂ ನವನಾರಿಕೇಳಕದಳೀಫಳಪ್ರಸರದಿಂ . . . ರಾಜಿತಜಿನಾಧಿಪಂ ರಾಜಿಸುತ ನಲ್ಮೆಯಿಂ ಪೂಜಿಸಿದನೊಲ್ಮೆಯಿಂ (ರಾಜಚೇ. ೧೩–೫೧ ರಗಳೆ). [ಸಂ.]

**ಸಾಟಿ₁, ಚಾಟು₃** (ನಾ). ೧. ಎಣೆ; ಸರಿ; ಸಮಾನ: "ಸದ್ವಕ್ಷದೊಳ್ ಪಾಟ ಪೋಲ್ವೆ ಪಡಿ ತೋಡು ಸಂಗಡಂ ಸಾಟಿ ಪಾಸಟಿಯೆನಲ್ಕೆ ಪತ್ತುಗುಂ" (ಕರ್ಣಾಸ. ೧೪); ಗಣದದೊಳೇಂ ಕರುಮಾಡಂ ಪೊಣರ್ಚುವೊಡೆ ನೆಗಬ್ದ ದಿವಿಜರಾಜವಿಮಾನಕ್ಕೆಣೆ ಪೋಲ್ವೆ ಸಮಂ ಸದೃಶಂ ತೊಣೆ ತೋಡನುಸಾರಿ ಸಾಟಿ ಪಾಸಟಿಯೆನಿಕುಂ (ಸುಕುಮಾ. ೧೦–೫೧). ೨. ಹೋಲಿಕೆ; ತುಲನೆ: ನಿಮ್ಮ ಭಾಗ್ಯ ದೊಡ್ಡದೊ ನಮ್ಮ ಭಾಗ್ಯ ದೊಡ್ಡದೊ ಸಮ್ಮತಿಂದ ನಾವು ನೀವು ಸಾಟಿ ಮಾಡಿ ನೋಡುವ ಬನ್ನಿ (ಪುರಂದ. ೨–೬೧ ಅನುಪಲ್ಲವಿ). **ಚಾಟು₃**: ೧. ದೊರೆಯುತ್ತಿದ್ದ ಸ್ವಲ್ಪ ಕೂಲಿಗೂ ಹೊಟ್ಟೆಗೂ ಚಾಟು (ಪವಸ.೧). [ದೇ. ॥ ತೆಲು. ಸಾಟಿ./ ಮರಾ. ಸಾಟೀ, ಸಾರೀ]

**ಸಾಟಿ₂, ಚಾಟಿ₂, ಶಾಠಿ** (ನಾ). ೧. (ಸಂನ್ಯಾಸಿಗಳು ಧರಿಸುವ ಕಾವಿಬಣ್ಣದ) ಬಟ್ಟೆ; ವಸ್ತ್ರ: ಪಾಟ ಇಲ್ಲದವನು ಸಾಟ ಒಗೆದಾನೇ? (ಗಾದೆ). ೨. ಗೌರವಾರ್ಥವಾಗಿ ಕೊಡುವ ವಸ್ತ್ರ: (ಹ). **ಚಾಟಿ₂**: ೧."ಸಾಟ (ಚಾಟ) ಶಾಟೀ = ಯತಿಗಳ ಮೈಬಟ್ಟೆ" (ತಧ್ವಕೋ. ೪೪). **ಶಾಠಿ**: ೧. ಜ್ವಾಲೆಯು ಸಿಂಹಾಸನದ ಸಮೀಪಕ್ಕೆ ಬರಲು ವ್ಯಾಸರಾಯರು ತಮ್ಮ ಕಾವೀಶಾಠಿಯನ್ನು ತೆಗೆದೊಗೆದರು. ದಳ್ಳುರಿಯಿಂದ ಶಾಠಿಯು ದಗ್ಧವಾಗಿ ಜ್ವಾಲೆಯು ಶಾಂತವಾಯಿತು (ಕಥವಿ. ೯೮).

**ಶಾಠಿ ಅಪ್ಪಳಿಸು** = (ಅಲಂ) ವಿನಾಕಾರಣ ಕೋಪಮಾಡಿಕೊಳ್ಳು : ಪಂಡಿತರಿಗೆ ಕೋಪಬಂದು ಶಾಠಿಅಪ್ಪಳಿಸಿ ಸಭೆಯಿಂದ ಹೊರಟೇ ಬಿಟ್ಟರು (ರೂಢಿ).

[< ಪ್ರಾ. ಸಾಡೀ ./ಸಂ ಶಾಟೀ]

**ಸಾಟಿ₃, ಸಾಟೆ₁** (ನಾ). (ವ್ಯಾಪಾರದಲ್ಲಿ) ವಸ್ತುವಿನಿಮಯ; ಅದಲು ಬದಲು ಮಾಡಿಕೊಳ್ಳುವಿಕೆ: ಗೋಪಾಲ ಕೃಷಿ ವಾಣಿಜ್ಯ ವೈಶ್ಯಧರ್ಮಂಗಳು ವಾರಣಾಸಿಯಲ್ಲಿ ಸಾಟಿಬೇಹಾರಧರ್ಮ ತಪ್ಪದೆ ಬೇಹಾರವ ಮಾಡಿ (ಎಕ. IX, ಬೆಂಗಳೂ. ೯೭–೬೯; 1402?); ಅದೇನು ಎಮ್ಮೆ ದನ ಸಾಟಿ ಮಾಡಿದ ಹಾಗಲ್ಲ (ಸರಸ .೮೫); ಪರದೇಶದಿಂದ ಬರುವ ಚಿನ್ನ ಬೆಳ್ಳಿಯ ನಾಣ್ಯಗಳನ್ನು ದೇಶೀಯನಾಣ್ಯಗಳಿಗೆ ಸಾಟಮಾಡಿ ವರ್ತಕರು ಅದರಿಂದ ಲಾಭ ಸಂಪಾದಿಸುತ್ತಾರೆ (ಪ್ರವಾ. I, ೯೫). **ಸಾಟೆ₁**.

**ಸಾಟಿವ್ಯಾಪಾರ** = ಪರಸ್ಪರವಸ್ತು ವಿನಿಮಯ ಮಾಡಿಕೊಳ್ಳುವ ವ್ಯಾಪಾರ; ಯಾವುದೇ ಪದಾರ್ಥ ಅಥವಾ ಪ್ರಾಣಿ ಮುಂತಾದುವನ್ನು ಕೊಟ್ಟು ಪ್ರತಿಯಾಗಿ ಮತ್ತೊಂದನ್ನು ಪಡೆಯುವ ವ್ಯವಹಾರ : (ಹ). **ಸಾಟಿಮದುವೆ** = ಮನೆಯ ಹೆಣ್ಣುಗಂಡುಗಳನ್ನು ಪರಸ್ಪರರಿಗೆ ಕೊಟ್ಟು ತಂದು ಮಾಡುವ ಮದುವೆ: ವಾಗ್ದೇವಿಯಮ್ಮನ ಮನಸ್ಸಿನಲ್ಲಿ 'ಸಾಟಿ ಮದುವೆಯಾದರೆ ಆದೀತು' ಎಂಬ ಯೋಚನೆಯಿತ್ತೊ ಏನೋ (ಸ್ವಪ್ನಹೂ. ೧೧೯).

[< ಪ್ರಾ. ಸಟ್ಟ ./ ಮರಾ. ಸಾಟಾ, ಸಾಟೀ, ಸಾಠೀ./ ತುಳು. ಸಾಟಿ, ಸಾಟ್; ತೆಲು. ಸಾಟ, ಸಾಟಾ ]

**ಸಾಟಿ₄** (ನಾ). ಅರವತ್ತುವರ್ಷ: ಶುಚಿಯಾಗಿ ದಿಟಯೋಗಿಯ ಹುಟ್ಟಿನ ನೆಲವಾಗಿ ನಿಂತಾಳ ಸಾಟಿ ದಾಟೀದ ಸುಗ್ಗಲವ್ವೆ (ಸಿದ್ಧಕಾ. ೧–೯೯).

[< ಪ್ರಾ. ಸಟ್ಠಿ ./ ಹಿಂ. ಸಾಠ್; ಮರಾ. ಸಾಠ್, ಸಾಠೀ ./ ಸಂ. ಷಷ್ಟಿ]

**ಸಾಟಿ₅** (ನಾ). ಚಿರೋಟಿ, ಚಪಾತಿ ಮುಂತಾದುವುಗಳ ಹಾಳೆಗಳ ನಡುವೆ ಜಿಡ್ಡನ್ನು ಸವರಿ ಮತ್ತೆ ಲಟ್ಟಿಸಿ ಪದರಗಳು ಬರುವಂತೆ ಮಾಡುವಿಕೆ: ಸಾಟ ಇಲ್ಲದ ಮಾಡಿದ ಚಪಾತಿ ಒರಟಾಗಿರುತ್ತದೆ (ರೂಢಿ).

**ಸಾಟ ಹಾಕು** = ಚಿರೋಟಿ, ಚಪಾತಿ ಮುಂತಾದುವುಗಳ ಹಾಳೆಗಳ ನಡುವೆ ಜಿಡ್ಡು ಸವರಿ ಮತ್ತೆ ಲಟ್ಟಿಸಿ ಪದರಗಳು ಬರುವಂತೆ ಮಾಡು: ಸಾಟ ಹಾಕಿ ಮಾಡಿದ ಚಪಾತಿ ತುಂಬ ರುಚಿಯಾಗಿರುತ್ತದೆ (ರೂಢಿ). **ಸಾಟಹಿಟ್ಟು** = ಕಣಕದ ಹಿಟ್ಟು: ಹೋಳಿಗೆ ಮೃದುವಾಗಲು ಸಾಟಹಿಟ್ಟು ಬನಿಯಾಗಿರಬೇಕು (ರೂಢಿ).

[← ಮರಾ. ಸಾಟಾ]

**ಸಾಟಿಗಾಣು** (ಕ್ರಿ). ಹೋಲಿಕೆಯನ್ನೊಳಗೊಂಡಿರು : ಸಾಟಿಗಾಣದ ಲಕ್ಷ್ಮಿ ಉರಸ್ಥಳವಾಗಿರೆ ಲೋಷ್ಟಕಾಸು ಎಂತು ಕಾಣಿಕೆ ನೀಡಲೊ (ಪುರಂದ. ೨–೬೭–೩); ಕೋಟಿ ಮಾರ್ತಾಂಡಸಂಕಾಶಕಿರೀಟಕ್ಕೆ ಅಸಮಪ್ರಕಾಶ ಎಲ್ಲು ಸಾಟಿಗಾಣೆನು ಲವಲೇಶ (ವಿದಾಕ್ಕ. ೫೩–೨೨). [ಸಾಟಿ₁ + ಕಾಣು (< ಕಾಣ್)]

**ಸಾಟಿಗೈ** (ಕ್ರಿ). ಹೋಲಿಕೆಮಾಡು; ತುಲನೆಮಾಡು: ಶೈವಕವಿವೃಂದಮಂ ಭರದಿಂದೆ ಕೊಂಡಾಡಿ ಕೃತಿ ಪೇಳ್ವೆನುಳಿದರಂ ಕರದಿಂದೆ ಸಾಟಿಗೆಯ್ಯೆಂ (ಮಹಾವಿ. ೧–೨೦).

[ಸಾಟಿ₁ + ಗೈ (< ಕೆಯ್₁)]

**ಸಾಟಿನ್, ಸಾಟೀನ್** (ನಾ). ೧. (ಒಂದು ನಿರ್ದಿಷ್ಟವಾದ ನೇಯ್ಗೆಯ ಕ್ರಮದಿಂದ ತಯಾರಿಸಲಾಗುವ) ನುಣುಪು ಮತ್ತು ಹೊಳಪುಗಳಿಂದ ಕೂಡಿದ ಮೇಲ್ಮೈಯುಳ್ಳ ಒಂದು ಬಗೆಯ ರೇಷ್ಮೆಬಟ್ಟೆ: ಆ ಅಂಗಡಿಯಲ್ಲಿ ಸಾಟಿನ್ ಬಟ್ಟೆಯಲ್ಲಿ ಸಿದ್ಧಪಡಿಸಿದ ಉಡುಪುಗಳು ಚೆನ್ನಾಗಿವೆ (ರೂಢಿ). **ಸಾಟೀನ್** : ೧. ಕೆಂಪುಬಣ್ಣದ ಸಾಟೀನ್ ಅಂಗಿ ಆ ಮಗುವಿಗೆ ಚೆನ್ನಾಗಿ ಒಪ್ಪುತ್ತದೆ (ರೂಢಿ). ೨. ಒಂದು ಬಗೆಯ ದಪ್ಪನಾದ ಒರಟು ಹತ್ತಿಬಟ್ಟೆ: (ಹ). [← ಇಂ. Sateen]

**ಸಾಟಿಸು** (ಕ್ರಿ). ಘೋಷಣೆಮಾಡು; ಸಾರು; ಪ್ರಕಟಿಸು: ತಾಟಿಸಿ ಪಟ್ಟಿಯಡ್ಡಣದ ಬಿನ್ನಣಮಂ ಮೆಱೆದಲ್ಲಿ ವೀರರುಂ ಸಾಟಿಸಿ ಬೊಬ್ಬಿಡಲ್ (ಎಕ. VII, ಶಿಕಾ. ೨೪೮–೧೫; 1224). 'ಚಾಟಿಸು₂' ಪರಾ. [? + - ಇಸು₃ ./ ತೆಲು. ಸಾಟಿಂಚು]

**ಸಾಟೀನ್** 'ಸಾಟಿನ್' ನೋ.

**ಸಾಟೆ₁** 'ಸಾಟಿ₃' ನೋ.

**ಸಾಟೆ₂** 'ಸಟ್ಟಾ' ನೋ.

**ಸಾಟೆವ್ಯಾಪಾರ** 'ಸಟ್ಟಾವ್ಯಾಪಾರ' ನೋ.

**ಸಾಟೋಪ** (ಗು). ಆಟೋಪದಿಂದ ಕೂಡಿದ; ಅಬ್ಬರ, ಆಡಂಬರಗಳಿಂದ ಕೂಡಿದ: ಸಾಟೋಪಭೂಪಚಾಪಜ್ಯಾಟಂಕಾರಕ್ಕೆ ಸುಗಿದು ಸಮದೇಭಕರೋನ್ನೋಟಿತ ಮಹೀಜಮಂ ವಿಂಧ್ಯಾಟವಿಯಿಂ ಪೊಕ್ಕುದಾ ಮಹೋಗ್ರವರಾಹಂ (ಲೀಲಾವ. ೬–೧೭).

[ಸಂ.]

**ಸಾಠಾ** (ನಾ). ಸಂಗ್ರಹ; ಶೇಖರಣೆ: ಅವನು ನಾಲಾಯಖನಿರುವನೆಂದು ಸಿದ್ಧಪಡಿಸಲಿಕ್ಕೆ ನನ್ನಲ್ಲಿ ಸಾಕ್ಷಿಪುರಾವೆಯ ಸಾಠಾ ಇತ್ತು (ದೀಪಹ. II, ೩೭೦). 'ಸಾಠೈಸು' ಪರಾ. 'ಸಟ್ಟಾ' ಹೋ. [← ಮರಾ. ಸಾಂಠಾ, ಸ್ಸಾಂಠ್, ಸಠ್]

**ಸಾಠೈಸು** (ಕ್ರಿ). ಸಂಗ್ರಹವಾಗು; ಶೇಖರವಾಗು: ಸಚಿವಾಲಯ ಕೋಠಿಯ ವ್ಯೂಹದಲಿ ಸಾಠೈಸಿದ ದ್ವೈತ. ಅದನಾವರಿಸಿದ ವಾಸ್ತುಶಿಲ್ಪದಲಿ ಮಾಯೆಯ ಅದ್ವೈತ! (ಚಿಂತನ. ೬೩–೧೫). [< ಸಾಠಾ + - ಇಸು₃]

**ಸಾಡ** (ನಾ). ಸಾಲು; ಪಂಕ್ತಿ: ಬಳಿಕಮಾ ಸಮಯದಿಂದಾತ್ಮಪ್ರದೇಶದಿ ತಳೆದ ವಿಸರ್ಪಣಗಳನು ತಳುವದೇಯುಪಸಂಹರಿಪರಂತಿರಲದ ತಿಳಿವುದಾಗಮ ಸಾಡದಲ್ಲಿ (ಪೂಜ್ಯಚ. ೯–೧೨೭). [?]

**ಸಾಡೆ** (ನಾ). ೧. ಮದುವೆಯಾದ ಬಳಿಕ ನಾಲ್ಕನೆಯ ದಿವಸ ಐರಣೀಪೂಜೆಯ ಸಮಯದಲ್ಲಿ ವಧೂವರರಿಗೆ ವಸ್ತ್ರಗಳನ್ನು ನೀಡುವ ಒಂದು ವಿಧಿ : ಸಾಡೆಯ ದಿವಸ ಕೂಸನ್ನೊಪ್ಪಿಸುವಾಗ ಮಾಲತಿಯನ್ನು ಶಿವಪ್ಪನಾಯಕನ ತೊಡೆಯ ಮೇಲೆ ಕೂಡಿಸಿದಾಗ ಅವನು ಆನಂದಾಶ್ರುಭರಿತನಾಗಿದ್ದನು (ಗುರುಪ್ರ. ೫೮). ೨. ಮದುವೆಯ ರಾತ್ರಿಯ ಮೆರವಣಿಗೆ: ಮರುದಿನ ರಾತ್ರಿ ಸಾಡೇದ ಮೆರವಣಿಗೆ ಅದ್ಭುತವಾದ ವಿಜೃಂಭಣೆಯಿಂದ ಸುಮಾರು ಬೆಳತನಕ ಸಾಗಿತು (ಅನ್ನ. ೨೪೯).

[← ಮರಾ. ಸಾಡೇ./ತೆಲು. ಸಾರೆ = ಗಂಡನ ಮನೆಗೆ ಕಳುಹಿಸುವಾಗ ಮಗಳಿಗೆ ಕೊಡುವ ಬಳುವಳಿ]

**ಸಾಡೇಸಾತ್**, ಸಾಡೇಸಾತ, ಸಾಡೇಸಾತಿ (ನಾ). ೧. ಒಂದು ಸಂಖ್ಯೆ; ಏಳೂವರೆ;

ಏಳರ ಮೇಲೆ ಅರ್ಧ. **ಸಾಡೇಸಾತ:** ೨.(ಆಲಂ) ಏಳೂವರೆವರ್ಷಗಳ ಕಾಲ ಕಾಡುವ ಶನಿ, — ಅನಿಷ್ಟ; ಏಳರಾಟ: ನಮಗೆ ಪಂಚಮಶನಿ ಸಾಡೇಸಾತ ಮೊದಲಾದ ಕ್ರೂರಗ್ರಹಗಳ ಪೀಡೆಯುಂಟು (ಕೃಷಿಪ್ರ. ೨೨೦). ೩. ಅನಿಷ್ಟವ್ಯಕ್ತಿ; ಕೆಟ್ಟವ್ಯಕ್ತಿ: ಗಂಡ ಅಂಬೊ ಅಭಿಮಾನಾನಾದರೂ ಆ ಸಾಡೇಸಾತಕ್ಕೆ ಐತಾ? (ಬಂಗಬ. ೧೭೭). **ಸಾಡೇಸಾತಿ:** ೩. ಏನಾದರೂ ಕೈಯಾಗ ಇಟ್ಟಾಂಗೆ ಮಾಡಿ ಅವನ್ನ ಅಟ್ಟಿಬಿಡು ಹೋಗಲಿ ಸಾಡೇಸಾತಿ (ಕೃಲಾಜಿ. ೨೬). ೪. ಅನಿಷ್ಟಸೂಚಕವಾದುದು; ಅಶುಭಸೂಚಕವಾದುದು: ಥತ್ ಈ ಸಾಡೇಸಾತಿಗೆ ಬಂದ ರೋಗವೆ . . . ಆ ಕಾಗೆಯನ್ನು ಸ್ವಲ್ಪ ಓಡಿಸಿರೋ (ಮೂರುದಾ. ೯೫).

**ಸಾಡೇಸಾತ್‌ಶನಿ** = ಏಳೂವರೆವರ್ಷಗಳ ಕಾಲ ಕಾಡುವ ಶನಿ; ಏಳರಾಟ; **P** ಜ್ಯೋತಿಷ್ಯಶಾಸ್ತ್ರದ ಪ್ರಕಾರ ಜನ್ಮರಾಶಿಯಿಂದ ಮುಂದೆ ಮೂರು ಮನೆಗಳಲ್ಲಿ ಒಟ್ಟು ಏಳೂವರೆ ವರ್ಷಗಳಿರುವ ಶನಿ ಅನಿಷ್ಟಫಲದಾಯಕ: ಒಟ್ಟಾರೆ ಮೇಲೆ ನಸಗಿದು "ಸಾಡೇಸಾತ್‌ಶನಿ" ಹಿಡಿದ ಕಾಲವೆಂದು ಕಾಣುತ್ತದೆ (ರೂಪಸಂ. ೩೩). [<— ಹಿಂ. ಸಾಢೇಸಾತೀ; ಮರಾ. ಸಾಡೇಸಾತೀ]

**ಸಾಡೇಸಾತ** 'ಸಾಡೇಸಾತ್' ನೋ.

**ಸಾಡೇಸಾತಿ** 'ಸಾಡೇಸಾತ್' ನೋ.

**ಸಾಣ₁** 'ಸಾವಣ' ನೋ.

**ಸಾಣ₂, ಸಾಣು, ಸಾಣೆ₄** (ನಾ). ೧. ಒಂದು ಬಗೆಯ ಕತ್ತಿ: 'ಸಾಣಕತ್ತಿ' ಪರಾ. ೨. ಗರಡಿಮನೆಯಲ್ಲಿ ಅಂಗಸಾಧನೆ ಮಾಡಲು ಬಳಸುವ ಒಂದು ಬಗೆಯ ಸಾಧನ: ಸಾಣವನುದ್ವಕಿಟ್ಟಾನನೆ ವೃಕ್ಷವ ಹೂಣಿ ಕಿತ್ತಿಟ್ಟಾನುತಿಹರು (ಭರಚ. ೬೩-೬೬); ಸಾಣಮಂ ಜಡಿವುತ್ತಂ ಮಲ್ಲರ್ನಲಿನಲಿದೈತರೆ (ಬೀಳವಂ. ೧-೩೦). 'ನಿಡುಸಾಣ' ಪರಾ. **ಸಾಣು:** ೧. 'ಸಾಣುಕತ್ತಿ' ಪರಾ. **ಸಾಣೆ₄:** ೧. ರನ್ನದ ಚಿಲ್ಕಿನ ಹತ್ತಕಡಕು ರಾಜಿಸಲು ಒತ್ತಿಲಿರ್ದನು ಸಾಣೆಯನೂಱ ಭೂಭುಜನತ್ತ ನೋಡುತ ಗಾಡಿಕಾಱ (ನಾಗಕು. ೬-೫೦). [?]

**ಸಾಣಂಗ, ಸಾಣಂಗಿ** (ನಾ). ಒಂದು ಬಗೆಯ ಧಾನ್ಯ; ಕಡಲೆ: ಬಸಲೆ ಸೊಪ್ಪು, ಸಾಣಂಗಬೇಳೆ, ಅಮರದವಳ್ಳಿ . . . ಅಭ್ಯಂಗನಸ್ನಾನ ಇವೆಲ್ಲಂ ಪಥ್ಯಂಗಳು (ಸಕವ್ಯ. ೪೦೧). **ಸಾಣಂಗಿ :** "ಮಸೂರವಿದಲದ-ಸಾಣಂಗಿಬೇಳೆಯ" (ಬಾಹಟೀ. ೨-೫-೧೧೪ ವ); ಬಿಳಿಯ ಸಣ್ಣಕ್ಕಿ ಸಾಣಂಗಿಯನೆರೆದ ಬೇಳೆ (ವಿವೇಭ. ೧೧-೨೩). 'ಚಣಗೆ', 'ಚಾಣಂಗಿ' ಪರಾ. [< ಸಂ. ಚಣಕ]

**ಸಾಣಂಗಿ** 'ಸಾಣಂಗ' ನೋ.

**ಸಾಣಕತ್ತಿ, ಸಾಣಾಕತ್ತಿ, ಸಾಣಾಗತ್ತಿ, ಸಾಣುಕತ್ತಿ, ಸಾಣೆಗತ್ತಿ** (ನಾ). ಒಂದು ಬಗೆಯ ಕತ್ತಿ : ಕೃಷ್ಣಾಜಿನ ಒರೆಯಲ್ಲಿರುವ ಸಾಣಕತ್ತಿಯೂ ಸಹ ಸಹದೇವನ ಆಯುಧಗಳು (ಕೃವಾವಿ. ೬೨). **ಸಾಣಾಕತ್ತಿ :** ಸಾಣಾಕತ್ತಿ, ಫಿರಂಗಿಕತ್ತಿ . . . ಮೊದಲಾದ ಆಯುಧಗಳನ್ನು (ಕಾಣಿಕೆಯಾಗಿ) ತಂದು . . . ಸಮಯವನ್ನು ಕಾಯುತ್ತಿದ್ದರು (ಕೃವಾಸ. ೧೧೮); ಝಡಿದು ಸಾಣಾಕತ್ತಿಗಳ ಹೆಚ್ಚೆಪಾಡಿನಿಂ ಪಿಡಿದು (ಕೃಷ್ಣವಿ. ೨-೮). **ಸಾಣಾಗತ್ತಿ :** ಸಾಣಾಗತ್ತಿ ಧರಿಸುವ ಚಕ್ರಬಾಹುರಿಯೂ ಹರಿಗತ್ತಿ ಸಿರಿಗತ್ತಿ . . . ಧರಿಸಿ ವಾಲಗದಿ ನಿಂದಿಹರು (ಸೌಂದಕಾ. ೩-೧೧೧). **ಸಾಣುಕತ್ತಿ :** ಆ ಸಾಧನೆಯಷ್ಟೂ ಆ ತರುವಾಯದಲ್ಲಿ ಗರುಡಿಯಲ್ಲಿ ಕ್ಷತ್ರಿಯನಾಗಿ ಯಿದ್ದಂಥಾ ಗುರುವಿನಿಂದ ಸಾಣುಕತ್ತಿ ಯಿಂದ ಮಾಡಲು ತಕ್ಕಂಥಾದು (ಖಡ್ಗಟೀ. ೫-೭೭). **ಸಾಣೆಗತ್ತಿ :** ಸಾಣೆಗತ್ತಿಯನ್ನೂಱ ಕೊಂಡು ಜಾಣಶಿರೋಮಣಿ ನಿಂದಿರ್ದನು ಪಂಚಬಾಣ ಬಿಲ್ಲೂಱ ನಿಂದಂತೆ (ನಾಗಕು. ೬-೪೭). [ಸಾಣ₂ + ಕತ್ತಿ]

**ಸಾಣವ** (ನಾ). ಒಂದು ಸಂಖ್ಯೆ; ತೊಂಬತ್ತಾರು : ಬಾರಹಕೋಟ ಸಾವಂತರು ಗಳೊಗ್ಗಿನಿಂ ಸಾಣವ [ಪಾಠಾಂ. ಸಾರ್ವ, ನಡವ] ಲಕ್ಷ ತೊಂಭತ್ತಾಱುಜಾತ್ಯಶ್ವಯೆಡಬಲದಿ ಉಕ್ಕಿ ಕವಿದುದು (ಸಿಂಗಿರಾ. ೩೦-೬). [<— ಮರಾ. ಶಾಣ್ಣವ, ಶಾಣ್ಣೌ]

**ಸಾಣಾಕತ್ತಿ** 'ಸಾಣಕತ್ತಿ' ನೋ.

**ಸಾಣಾಗತ್ತಿ** 'ಸಾಣಕತ್ತಿ' ನೋ.

**ಸಾಣಿ** 'ಸಾಹಣಿ' ನೋ.

**ಸಾಣಿಗ₁** 'ಸಾಹಣಿಗ' ನೋ.

**ಸಾಣಿಗ₂** (ನಾ). ಆಯುಧಗಳನ್ನು ಸಾಣೆ ಹಿಡಿಯುವವನು, — ಮಸೆದು ಹರಿತಗೊಳಿಸುವವನು : ಲಾಳಕರ್ ಸಾಣಿಗರ್ ಕೆಲಸಿಗರ್ . . . ಜೂಜುಗಾಱರ ಮುಖ್ಯರೊದಗಿ ಬರುತಿರ್ದರೇಂ ವಣ್ಣಿಸುವೆನು (ಚಿಬಪು. ೪೭-೪೧).

[ಸಾಣೆ₁ + - ಇಗ]

**ಸಾಣಿಗಾಱ** (ನಾ). ಕುದುರೆಯನ್ನು ಪಳಗಿಸುವವನು; ಕುದುರೆಸವಾರ : ತೇಜಿಯ ತಿದ್ದುವ ಸಾಣಿಗಾಱರ ಕೇರಿ ರಾಜಿಸಿತಖಿಳವೈಭವದಿ (ಅಬ್ಬಲೂ. ೩-೧೧೯).

[ಸಾಣಿ (< ಸಾಹಣಿ) + - ಕಾಱ]

**ಸಾಣಿಗೆ₁** (ನಾ). ಸಾಣೆಯ ಕಲ್ಲು; ಗಂಧ ತೇಯುವ ಕಲ್ಲು : ಪಡುವಟ್ಟನಡೆಯೊಳೊಪ್ಪುವ ಕಡಲೊಡೆಯನ ಮಡದಿ ತೇದ ಸಿಂದೂರದ ಕೆಂಪಿಡಿದೆಸೆವ ಸಾಣಿಗೆಯಿದೆನೆ ಬೆಡಂಗುವಡೆದಿರ್ದುದಸ್ತಭಾಸ್ಕರಬಿಂಬಂ (ರಾಜಶೇ. ೧೧-೩). [< ಸಣ್ಣಿಗೆ]

**ಸಾಣಿಗೆ₂** 'ಸಾರಣಿಗೆ' ನೋ.

**ಸಾಣಿಬಳೆ, ಸಾಣೆಬಳೆ** (ನಾ). ನಕ್ಕಿ, ನಕಾಸೆಗಳಿಲ್ಲದ ಸಣ್ಣಗಾತ್ರದ ಗಾಜಿನ ಸಾದಾಬಳೆ : ಸಾಣಿಬಳೆಗಳು ಕಿವಿಗೆ ಇಂಪುಮಾಡುವಂತೆ ಝುಣಗುಡುತ್ತಿದ್ದುವು (ವಂಶವೃ. ೧೦೬). **ಸಾಣೆಬಳೆ :** ಸಾಣಿಬಳೆ, ರೇಷ್ಮೆಬಳೆ, ಮುತ್ತೈದೆಬಳೇ! ನಾನಾ ಬಣ್ಣದ ಬಳೇ! (ದಾನಚಿಂ. ೭೯). [ಸಾಣಿ₁ + ಬಳೆ₂]

**ಸಾಣಿಸು** (ಕ್ರಿ). ೧. ಒಂದರಿಯಾಡು ; ಜರಡಿಯಿಂದ ಶೋಧಿಸು : ಒರಳಲ್ಲಿಯ ಒಬ್ಬೆಯನ್ನು ಮಗುಚುವುದಕ್ಕೂ ಅವಲಕ್ಕಿಯನ್ನು ಸಾಣಿಸುವುದಕ್ಕೂ ಒಂದು ಹೆಣ್ಣಾಳನ್ನು ಇಟ್ಟಿದ್ದರು (ಬಳಕ. ೨); ನಾವು ಕಣಕವನ್ನು ಸಾಣಿಸಿ ತವಡು ಚಲ್ಲಿಬಿಡುತ್ತೇವೆ (ಭಾರಸಂ. ೨೫೯). ೨. (ಆಲಂ) ಶುದ್ಧಾಶುದ್ಧಗಳನ್ನು ಪ್ರತ್ಯೇಕಿಸು, — ಬೇರ್ಪಡಿಸು: ಲಿಂಗ ಕಟ್ಟಿಕೊಳ್ಳಬೇಕು; ಜನಿವಾರ ಧರಿಸಬೇಕು; ಗಡ್ಡ ಇರಬೇಕು . . . ಇಂತಹ ಕಾಲಿಕಸಂಗತಿಗಳನ್ನು ಸಾಣಿಸಿ, ಸಣ್ಣಿಸಿ ಸಾರ್ವಕಾಲಿಕವಾಗಿ ನಿಲ್ಲುವ ವಿಚಾರಗಳಷ್ಟೇ ಸ್ವೀಕರಿಸತಕ್ಕದ್ದು (ಯಕ್ಷಪ್ರ. ೧೭೫). [< ಸಾರಣೆ₄ + - ಇಸು₃]

**ಸಾಣು** 'ಸಾಣ₂' ನೋ.

**ಸಾಣುಕತ್ತಿ** 'ಸಾಣಕತ್ತಿ' ನೋ.

**ಸಾಣೆ₁** (ನಾ). ಗಂಧವನ್ನು ತೇಯುವ ಕಲ್ಲು; ಗಂಧದ ಕಲ್ಲು : "ಸ್ಫುರಣಯೆನೆ ಸಾಣೆ" (ಮಂಗರಾ. ೮೮-೩೮); ಸಾಣೆಯ ಮೇಲೆ ಶ್ರೀಗಂಧವ ತೇಯುವರಲ್ಲದೆ ಇಟ್ಟಿಗೆಯ ಮೇಲೆ ತೇವರೆ (ಪ್ರಭುವ. ೧೫೮); ಪಳುಕಿನೊಳೆಸವ ಸಾಣೆಯೊಳು ಗಂಧವನೊರ್ವ ತೊಳಪಗಣ್ಣಾವಳರವುತಿರೆ ಇಳೆಯೊಳವಳ ನೋಡಿಯಳುಕದ ತಾಪಸಬಳಗವನಾ ಕಂಡಱಿಯೆಂ (ಅಂಜಚ. ೩-೭೦). 'ಸಾಣಿಗೆ₁' ಪರಾ. [< ಸಣ್ಣ]

**ಸಾಣೆ₂** (ನಾ). ೧. ಆಯುಧ ಮೊದಲಾದುವನ್ನು ಹರಿತಗೊಳಿಸಲು ಮಸೆಯುವ ಕಲ್ಲು, — ಉಜ್ಜುವ ಕಲ್ಲು : ಪೊಳೆವ ಸಂಜೆಯ ಕೆಂಪದು ಸಾಣೆಗೊಡ್ಡಿದಿಟ್ಟಗೆಯ ರಜಂಬೊಲೆಂಬಿನೆಗಮಸ್ತಮಯಕ್ಕೆಳಿದಂ ದಿವಾಕರಂ (ಪಂಪಭಾ. ೧೦-೩೫); ಮಸೆವ ಸಾಣೆಯಂತೆ ವೈಹಾಳಿಯ ಕುದುರೆಯಂತೆ (ಧರ್ಮಾಮೃ. ೯-೨೩); ಶಿವನ ಕಾರುಣ್ಯಾಯುಧವೆ ಮಸೆದುದು ಸುರೇಂದ್ರಸ್ನೇಹಸಾಣೆಯಲಿ (ಕುಮ್ಮಾಅ. ೧೧-೨೮). 'ಕರಸಾಣೆ' ಪರಾ. ೨. (ಚಿನ್ನ, ಬೆಳ್ಳಿ, ವಜ್ರ ಮುಂತಾದುವುಗಳಿಗೆ) ಹೊಳಪನ್ನು ಕೊಡಲು ತಿಕ್ಕುವ ಕಲ್ಲು; ಮೆರುಗನ್ನು ಕೊಡಲು ಉಜ್ಜುವ ಕಲ್ಲು : ಸಾಣೆಯಲ್ಲಾ ಭಕ್ತ ಗುಣಮಣಿ ಜಾಣನಲ್ಲಾ ಪರಮತತ್ವದೊಳೇಣೆಯಲ್ಲಾ ಮುಕ್ತಿಗೇಱುವ ನಿಮ್ಮ ಬಸವಣ್ಣ (ಬಸಪು. ೩೭-೪೯); ಸಾಣೆಯ ಮೇಲೆ ರನ್ನಗಳಿಟ್ಟು ಮಸೆದೊಪ್ಪಗಾಣಿಸಿ ಕುಡುವ ತೇಟಗರು . . . ವಾಣಿಜರಿರ್ದರಿಕ್ಕೆಲದಿ (ಮೋಹತ. ೩-೨೬). ೩. (ಚಿನ್ನ, ಬೆಳ್ಳಿ ಮುಂತಾದುವನ್ನು) ಪರೀಕ್ಷಿಸುವ ಕಲ್ಲು; ಒರೆಗಲ್ಲು : "ಶಾಣಃ, ನಿಕಷಃ, ಕಷಃ - ೩ ವರೆಗಲ್ಲಿನ ಪೆಸರು, ಸಾಣೆಯು" (ಸಿದ್ಧಾಂತಿ. ೩೦೭). ೪. (ಮಸೆಗಲ್ಲಿನ ಮೇಲೆ) ಮಸೆಯುವಿಕೆ; ಸಾಣೆಹಿಡಿಯುವಿಕೆ : ಶೋಕವಿಮ್ಮಡಿಸಿತ್ತು ಚಿತ್ತವ್ಯಾಕುಳತೆಯಾ ಸತಿಯ ನುಡಿಗಳನೇಕ ಸಾಣೆಯ ಸರಳು ಮುಱಿದವು ನೃಪನ ಹೃದಯದಲಿ (ಕುಮ್ಮಾದ್ರೋ. ೭-೧೮); ಚಿಪ್ಪಿಗರು ಸಾಣೆಯಂ ಹಿಡಿಯುವವರು . . . ಮೊದಲಾದ ನಾನಾಜಾತಿಯವರಿಗೆ ಬೇರ್ಬೇರೆ ಬೀದಿಗಳಂ ಹಂಚಿ (ಸೌಗಂಧಿ. ೧೩೫-೭).

**ಸಾಣೆನಾಲಗೆ** = ಹರಿತವಾದ ನಾಲಗೆ : ಸಿದ್ಧಣ್ಣನಂಥಾ ಸಾಣೆನಾಲಗೆಯ, ದೊರೆಗಳ ಬಣ್ಣದ ವ್ಯಕ್ತಿಯ ಮೇಲೆ ಜನರು ಸ್ವಾಭಾವಿಕವಾಗಿಯೇ ಅಭಿಮಾನ ತಾಳಿದರು (ಒಡ್ಡಿಉ. ೧೩೨). **ಸಾಣೆಯಲುಗು** = ೧. ಸಾಣೆ ಹಿಡಿದು ಹರಿತಗೊಳಿಸಿದ ಆಯುಧದ ಅಂಚು : ಮಾಣದಸುರರ್ ಗಾಯನಡೆದುರುಳೆ ಮುಪ್ಪುರಕೆ ಸಾಣೆಯಲಗಿನ ಸರಳ್ ಸುರಿದುವು (ಚಿಬಪು. ೪೩-೨೧); ಪೊಸಸಾಣೆಯಲಗಿನ ಸರಳ್ಗಳನಟ್ಟು ಕರ್ಣಜಂ ಪೋರ್ಗಳನವನ ಮೈಯೊಳು ಕಾಣಿಸ (ಜೈಮಿಭಾ. ೧೨-೨೧). ೨. ಮಸೆಗಲ್ಲಿನ ಮೇಲೆ ಉಜ್ಜಿ ಮೊನಚುಗೊಳಿಸಿದ ಬಾಣ; ಹರಿತವಾದ ಬಾಣ : ಸಾಣೆಯಲಗಿನ ಸರಿಯ ಸೋನೆಯ ಜಾಣತನವೋ ಜಯದ ಸುಭಟರ ಕಾಣೆನ್ನ (ಕುವ್ಯಾಕ. ೨೦-೪೦). [< ಸಂ. ಶಾಣ]

**ಸಾಣೆ₃** 'ಸಾವಣ' ನೋ.

**ಸಾಣೆ₄** 'ಸಾಣ₂' ನೋ.

**ಸಾಣೆ₅** (ನಾ). [ಸಂಗೀತ] (?) : ನಾದಕಟ್ಟುಗಳಿಂ ತಂತ್ರಿಗಳಂ ಸಾಣೆ ವರಕು ಮಾಟುಗಳಿಂ ಹದಗೊಳಿಸಿ ಆಯಾ ರಾಗಾನುಗುಣಮಾಗಿ ಮೇಳೈಸಿ (ವಿವೇಕ. ೨೩.೭). 'ವರಕು₂' ಪರಾ. [?]

**ಸಾಣೆಕಲ್** 'ಸಾಣೆಗಲ್ಲು' ನೋ.

**ಸಾಣೆಕಲ್ಲು₁** 'ಸಾಣೆಗಲ್ಲು' ನೋ.

**ಸಾಣೆಕಲ್ಲು₂** (ನಾ). ಒರೆಗಲ್ಲು; ನಿಕಷ: ಸಾಣೆಕಲ್ಲಿನಲ್ಲಿ ಒರೆ ಹಚ್ಚದ ನವರತ್ನಗಳು ಪ್ರಕಾಶಿಸುವುವೇ? (ಪ್ರತಾಪ. ೩). [ಸಾಣೆ₂ + ಕಲ್ಲು (< ಕಲ್₃)]

**ಸಾಣೆಖಂಡೆಯ** (ನಾ). ಒಂದು ಬಗೆಯ ಕತ್ತಿ,— ಖಡ್ಗ : ಕಟ್ಟಿದ ಬಾಕು ಕಲಕಿದ ಬೊಟ್ಟಸದಿರೆ ಸಾಣೆಖಂಡೆಯ ಪೊಳೆಯಲಾ ದಿಟ್ಟ ಕೈಮುಗಿದ ರಾಯನಿಗೆ (ನಾಗಕು. ೬-೪೮). [ಸಾಣೆ₄ (< ಸಾಣ₂) + ಖಂಡೆಯ₁]

**ಸಾಣೆಗಟ್ಟು** (ಕ್ರಿ). ೧. ಆಯುಧಗಳನ್ನು ಮಸೆದು ಹರಿತಗೊಳಿಸು : (೬). ೨. ಸಾಣೆಯ ಕಲ್ಲನ್ನು ಕಟ್ಟು : ಅಂತಪೂರ್ವಂಗಳಾಗಿ ತೊಳಗುವ ಕಿಱುದೊಡೆಗಳುಡುವಡರ್ದನ್ನಮಾರೂಢಸರ್ವಜ್ಞನ ದೂಡ್ಡ ಮಾರ್ಗಂಗಳೆಳವಾಟೆಯ ದಿಂಡಿನೊಳ್ ಸಾಣೆಗಟ್ಟಿದಂತಾದುವು (ಪಂಪಭಾ. ೨-೩೯ ವ). [ಸಾಣೆ₂ + ಕಟ್ಟು₁]

**ಸಾಣೆಗತ್ತಿ** 'ಸಾಣಕತ್ತಿ' ನೋ.

**ಸಾಣೆಗಲ್ಲು, ಸಾಣೆಕಲ್, ಸಾಣೆಕಲ್ಲು₁** (ನಾ). ಗಂಧವನ್ನು ತೇಯುವ ಕಲ್ಲು; ಗಂಧದ ಕಲ್ಲು : ಮುದದಿಂದ ತೊಳೆದನಾ ಸಾಣೆಗ[ಪಾಠಾಂ. ಕ]ಲ್ಲಂ ಕರಂ ದೇವನಂ ನೋಡುತಂ ಮೊಳಕಯ್ಯುಮಂ ತೊಳೆದು... ತೇದನೊಲವಿಂದೆ ಮೊಳಕಯ್ಯನಾನಂದದಿಂ (ಒಲರ. ದೇ. ೧೯೧-೧೮); ತನ್ನಯ ಬಲದ ಮೊಳಕೈ ಸಾಣೆಗ[ಪಾಠಾಂ. ಕ]ಲ್ಲಲಿ ನಿಲಿಸಿ ತವೆ ತೇದುತ್ತಮಶ್ರೀಗಂಧಮಂ ಪಡೆದು ಮಲಹರಂಗರ್ಪಿಸಿ (ಬಸಪು. ೨೭-೬). **ಸಾಣೆಕಲ್** : ಮಟ್ಟೆ ಶ್ರೀಗಂಧವನು ಇಟ್ಟು ತಾ ನೊಸಲೊಳಗೆ ನೆಟ್ಟನೆಯೆ ಸ್ವರ್ಗ ಪಡೆವಡೆ ಸಾಣೆಕಲ್ ಕೆಟ್ಟ ಕೇಡೇನು (ಸರ್ವಜ್ಞ. ೯೨೪). **ಸಾಣೆಕಲ್ಲು₁** : ಸಾಣೆಕಲ್ಲೊಳು ಗಂಧ ಮಾಣದಲೆಎಸವಂತೆ ಜಾಣಸದ್ಗುರುವಿನುಪದೇಶದಿಂ ಮುಕ್ತಿ ಕಾಣಿಸುತ್ತಿಹುದು (ಸರ್ವಜ್ಞ. ೬೭); ಸಾಣೆಕಲ್ಲನ್ನು ತರಿಸಿಕೊಂಡು, ತಾವು ಸಂಗಡ ತಂದಿದ್ದ ಮಾತ್ರೆಯನ್ನು ಜೇನುತುಪ್ಪದಲ್ಲಿ ಒಂದೂವರೆ ಸುತ್ತು ತೇಯ್ದು . . . ಮಗುವಿನ ಬಾಯಿಗೆ ಇಟ್ಟರು (ವಂಶವೃ. ೫೩). [ಸಾಣೆ₁ + ಕಲ್ಲು (< ಕಲ್₃)]

**ಸಾಣೆಗಾಣಿಸು** (ಕ್ರಿ). ಸಾಣೆಯನ್ನು ಹೊಂದು; ಸಾಣೆಹಿಡಿಯಲ್ಪಡು : ಮದನಾಸ್ತ್ರಂ [ಕ]ರ ಸಾಣೆಗಾಣಿಸಿದುದೆಂಬಂತಾಗೆ ನಿನ್ನೊಂದು ಕಂದಿದ ಮಯ್ಯೆನ್ನಯ ಶೋಳೊಳೊಂದೆ ಸಿರಿಯಂ ನೀನುಯ್ದು ತೊಟ್ಟು[ಳ್ಳು] ರಾಗದಿನೆನ್ನೊಳ್ ಸುಕಮಿರ್ಪುದು (ಪಂಪಭಾ. ೮-೬೭). [ಸಾಣೆ₂ + ಕಾಣಿಸು]

**ಸಾಣೆಗಾಣು** (ಕ್ರಿ). (ಆಯುಧವು) ಮಸೆಗಲ್ಲಿನ ಮೇಲೆ ಮಸೆದು, ಹರಿತಗೊಳ್ಳು,— ತೀಕ್ಷ್ಣಗೊಳ್ಳು : ಸಾಣೆಗಂಡಲಗಿವನು ಸಮರಕೆ ಹೂಣಿಗನು ರಿಪುಬಲದ ಹಾಣಾಹಾಣಿಕಾಱನು (ಕುವ್ಯಾಕ. ೧೭-೨೦). [ಸಾಣೆ₂ + ಕಾಣು (< ಕಾಣ್)]

**ಸಾಣೆಗಾರ** 'ಸಾಣೆಗಾಱ' ನೋ.

**ಸಾಣೆಗಾಱ, ಸಾಣೆಗಾರ** (ನಾ). ಆಯುಧಗಳನ್ನು ಮಸೆಗಲ್ಲಿನ ಮೇಲೆ ಮಸೆದು ಹರಿತಗೊಳಿಸುವವನು; ಸಾಣೆಹಿಡಿಯುವವನು : ಕತ್ತಿ ಮುಸಲ ಮುದ್ಗರ ತೋಮರಗಳ ಮಸೆವಸಿಕಲಿಗೆಯ್ಯ ಸಾಣೆ[ಪಾಠಾಂ. ಣಿ]ಗಾಱ ಕಣ್ಗೆಸೆದರಾ ಕುಮ್ಮಟದೊಳಗೆ (ಕುರಾಸಾಂ. ೩೭-೬೧). **ಸಾಣೆಗಾರ** : ದಡಿ, ರಸಿ, ಕವಣೆ . . . ಹೊಡೆಗಣೆ - ಇನ್ನೂ ಮೊದಲಾದ ಅಸಂಖ್ಯಾತವಸ್ತುಗಳನ್ನು ಕಮ್ಮಾರರೂ, ಕಲ್ಕುಟಿಗರೂ, ಬಡಗಿಗಳೂ, ಸಾಣೆಗಾರರೂ ಸೇರಿ ಜೋಡಿಸುತ್ತಾರೆ (ನಂಜುಂಡ. ೯೬). [ಸಾಣೆ₂ + - ಕಾಱ]

**ಸಾಣೆಚಕ್ರ** (ನಾ). ಆಯುಧಗಳಿಗೆ ಸಾಣೆ ಹಿಡಿಯುವ ಚಕ್ರ : ಮನ್ಮಥನ ಬಾಣಂಗಳಂ ಮೊನೆಮಾಡುವ ಸಾಣೆಚಕ್ರವೊ (ಸೌಗಂಧಿ. ೫೭೦-೯). [ಸಾಣೆ₂ + ಚಕ್ರ₁]

**ಸಾಣೆಬಳೆ** 'ಸಾಣೆಬಳೆ' ನೋ.

**ಸಾಣೆಯಿಕ್ಕು** (ಕ್ರಿ). ೧. ಮಸೆಗಲ್ಲಿನ ಮೇಲೆ ಉಜ್ಜಿ ಆಯುಧವನ್ನು ಹರಿತಗೊಳಿಸು; ಸಾಣೆಹಿಡಿ: ಬಿಂಬಾಧರೆಯರ್ ಬಂದಲರಂಬಂ ಕತ್ತುರಿಯ ಸಾಣೆಯಿಕ್ಕುವ ತೆಱದಿಂದಂಬುಜದಳಸದೃಶಾಂಬಕದಂಬಿಕೆಗಂಜನಮನೆಚ್ಚಿದರ್ ಸಂತಸದಿಂ (ಗಿರಿಕ. ೧೦-೪೦); ಹೂಣೆ ಹೊಗೆವವರೊಡನೆ ಸೆಣಸಿನ ಸಾಣೆಯಿಕ್ಕವು ಮಸೆವ ಕದನವ ಕಾಣೆವಮ್ಮಱಿಕೆಯಲಿ (ಕುವ್ಯಾಆ. ೧೭-೨೩). ೨. ಮಸೆಗಲ್ಲಿನ ಮೇಲೆ ಉಜ್ಜಿ ನಯಗೊಳಿಸು : ಮುನ್ನಿನ ಪ್ರತಿಮಾಗ್ರದಲ್ಲಿಯ ಕಲ್ಲ ಗಂಟಂ ಕಂಡು ಇದಱಿಂದೀ ಪ್ರತಿಮೆಯ ಚೆಲುವದುಮೊಪ್ಪಂಗಟ್ಟುದೆಂದು ಕಲುಗುಟಿಗನ ತಂದದ ಸಾಣೆಯಿಕ್ಕಬೇಕೆನೆ (ಪುಣ್ಯಾಸ್ರ. ೨-೬೭). [ಸಾಣೆ₂ + ಇಕ್ಕು]

**ಸಾಣೆವಿಡಿ, ಸಾಣೆಹಿಡಿ** (ಕ್ರಿ). ೧. = ಸಾಣೆಯಿಕ್ಕು ೧ : ರೋಷವಹ್ನಿಗೆ ಸಾಣೆವಿಡಿದ ವೊಲಾಯ್ತು ಕಣ್ಣುಗುಳಿದುವು ಕೇಸುರಿಯ (ಕುವ್ಯಾಗ. ೭-೪೮), ಸಾಣೆವಿಡಿದಿರ್ದ ಕರ ಪತ್ರಮಂ ಕೊಡಿಸಿದಂ ಪ್ರಾಣನಾಥೆಯ ಕೈಯೊಳು (ಜೈಮಿಭಾ. ೨೭-೭೦). ೨. ಬೆಳ್ಳಿ, ಬಂಗಾರ ಮುಂತಾದುವನ್ನು ಒರೆಗಲ್ಲಿನ ಮೇಲೆ ಉಜ್ಜಿ ಹೊಳಪನ್ನು ಕೊಡು : ಕಣೆಯೊಳಗಾಯ್ತು ಸಾಣೆವಿಡಿದೊಳ್ಪಣಿಯಂತಿರ ಮಾತಿನೋಜೆ (ಚಿಕವಿ. ೧-೧೦). **ಸಾಣೆಹಿಡಿ**: ೧. ಸಂಸಾರವು ಒಂದು ರಣರಂಗವಾಗಿ ಇದೆ. ಅದಕ್ಕೆ ಅವಯವಗಳೇ ಆಯುಧಗಳು. ಬಲಪಡಿಸೋಣವೇ ಸಾಣೆಹಿಡಿಯೋಣವು (ಅನಂಶ. ೨೭ ಟೀಕೆ). [ಸಾಣೆ₂ + ಪಿಡಿ₁]

**ಸಾಣೆವೊಯ್** (ಕ್ರಿ). ಸಾಣೆಗೆ ಒಡ್ಡು; ಸಾಣೆಹಿಡಿ: ಬಱಿಸಿಡಿಲೆ ಬಂದುದೆಂಬಂತಱ ವಳವೊಯ್ದಾಂತ ಗದೆಯೊಳಾಗಳ್ ಭಾಗ[ೊ] ಮುಱಿಯುತ ಜೀಱಿರ್ದೋಗೆದಾ ಮುಱಿ ಪಾಱಿತು ಸಾಣೆವೊಯ್ದುಗುಣೆವಲ್ಲಭದೊಳ್ (ಬಂಹರಿ. ೧೨-೫೧). [ಸಾಣೆ₂ + ಪೊಯ್₂]

**ಸಾಣೆಹಿಡಿ** 'ಸಾಣೆವಿಡಿ' ನೋ.

**ಸಾಣೆಹಿಡಿಸು** (ಕ್ರಿ). ಮಸೆಗಲ್ಲಿನ ಮೇಲೆ ಉಜ್ಜಿಸಿ ಆಯುಧಗಳನ್ನು ಹರಿತಗೊಳಿಸು : ದಿನನಿತ್ಯ ಬಳಸುವ ಚಾಕು, ಕತ್ತರಿ ಮುಂತಾದುವನ್ನು ಆಗಾಗ ಸಾಣೆಹಿಡಿಸುತ್ತಿರಬೇಕು (ರೂಢಿ). [ಸಾಣೆಹಿಡಿ (< ಸಾಣೆವಿಡಿ) + - ಇಸು₃]

**ಸಾತತ್ಯ** (ನಾ). ನಿರಂತರವಾಗಿರುವುದು; ಎಡೆಬಿಡದೆ ಇರುವುದು : ಪ್ರಾಣದ ಅನ್ನಮಯತೆ, ಪಶುವಿನ ಮನೋಮಯತೆ, ಮನುಷ್ಯನ ವಿಜ್ಞಾನಮಯತೆ ಇವೆಲ್ಲವು ಗಳಲ್ಲಿಯೂ ಜೀವನದ ಅಖಂಡತೆ — ಸಾತತ್ಯಗಳು ಅನುಸ್ಯೂತವಾಗಿವೆ (ವಿಜಾವಾ. ೫೭). [ಸಂ.]

**ಸಾತಲೆ** (ನಾ). ೧. ಒಂದು ಬಗೆಯ ಸಸ್ಯ : "ಸಪ್ತಲಾ, ವಿಮಲಾ, ಸಾತಲಾ, ಭೂರಿಫೇನಾ, ಚರ್ಮಕಷಾ — ಈ ಸಮ್ಮಗಾರಯೆಂಬುವುದು, ಸಂಬರೇಣಿ" (ಸಿದ್ಧಾಂತಿ. ೧೪೫). ೨. ಸೀಗೆಕಾಯಿಗಿಡ : (೬). [ಸಂ. ಸಾತಲಾ]

**ಸಾತವೇದನೀಯ** (ನಾ). [ಜೈನ] ಸಾತವೇದನೀಯ ಮತ್ತು ಅಸಾತವೇದನೀಯ ಎಂಬ ಎರಡು ಬಗೆಯ ವೇದನೀಯಕರ್ಮಗಳಲ್ಲಿ ಒಂದು; ಇಂದ್ರಿಯಜನ್ಯವಾದ ಸುಖವನ್ನುಂಟುಮಾಡುವ ಕರ್ಮ : ಇಂದ್ರಿಯಸುಖಕಾರಣವಸ್ತು ಪ್ರಾಪಣಕಾರಿಯಪ್ಪ ಸಾತವೇದನೀಯಮುಂ (ತತ್ತ್ವಪ್ರ. ೨೯೩); ವೇದನೀಯಂ ದ್ವಿವಿಧಮಕ್ಕುಂ ಸಾತವೇದನೀಯಮುಮಸಾತವೇದನೀಯಮುಮೆಂದಿಂತು ಅಲ್ಲಿ ರತಿಮೋಹನೀಯ ಕರ್ಮೋದಯಬಲದಿಂದಂ ಜೀವಕ್ಕೆ ಸುಖಕಾರಣೇಂದ್ರಿಯವಿಷಯಾನುಭವಮಂ ಮಾಡಿಸುಗುಂ ಸಾತವೇದನೀಯಂ (ಗೊಮ್ಮಸಾ. ೩-೮). [ಸಂ.]

**ಸಾತಾನಿ, ಚಾತಾಣಿ, ಚಾತಾಲ, ಚಾತಾಳ, ಚಾತಾಳಿ** (ನಾ). ವಿಷ್ಣುವಿನ ದೇವ

ಸ್ಥಾನದಲ್ಲಿ ಪರಿಚರ್ಯೆ ಮಾಡುವ ಬ್ರಾಹ್ಮಣರಲ್ಲದ ಒಂದು ಪಂಗಡ ಮತ್ತು ಆ ವರ್ಗಕ್ಕೆ ಸೇರಿದ ವ್ಯಕ್ತಿ : ಸೋಮಯ್ಯ ಸಾತಾನಿ. ಸೋಮಯ್ಯನಿಗೆ ತನ್ನನ್ನು ಸಾತಾನಿ ಎಂದು ಕರೆದರೆ ಬಹಳ ಸಿಟ್ಟು ಬರುತ್ತದೆ (ಗರುನಾ. ೧೨೫); ದೇವಸ್ಥಾನದ ಸೇವಕರು . . . ಪೂದುವಾಳ, ಸಾತಾನಿ, ಸ್ಥಾನಿಕ, ವಾರಿಯನ್ (ತುಳುನಾ. ೧೬೨). ಚಾತಾಣಿ : (೬).ಚಾತಾಲ: (ಕೃಸಗ. II, ೫೪೫). ಚಾತಾಳ : ಔಷಧವನ್ನು ಒಪ್ಪಿಸುವುದಕ್ಕೆ ವೃದ್ಧನಾಗಿ ಹಳಬನಾದ ತಿರುವೆಂಗಡಯ್ಯನೆಂಬ ಚಾತಾಳದ ಪಂಡಿತನನ್ನೂ ನೇಮಕಮಾಡಿ (ಮಹಾವಂ. I. ೫೪). ಚಾತಾಳಿ : ವೃದ್ಧನಾಗಿಯೂ ಹಳಬನಾಗಿಯೂ ಇರುವ ತಿರುವೆಂಗಳಯ್ಯನೆಂಬ ಒಬ್ಬ ಚಾತಾಳಿ ಪಂಡಿತನನ್ನು ನೇಮಕಮಾಡಿ (ಚಾಮವಂ. ೫೪).

[ದೇ. ‖ ತಮಿ. ಚಾತ್ತಾಣಿ; ತೆಲು. ಸಾತಾನಿ, ಸಾತನಿ]

**ಸಾತಾರಿ** (ನಾ). ಮಹಾರಾಷ್ಟ್ರದ ಸಾತಾರ ಎಂಬ ಪ್ರದೇಶದ ಟಂಕಸಾಲೆಯಲ್ಲಿ ಮುದ್ರಿತವಾದ, ಮೂರು ರೂಪಾಯಿ ನಾಲ್ಕು ಆಣೆ ಬೆಲೆಯನ್ನು ಹೊಂದಿದ್ದ ಒಂದು ನಾಣ್ಯ : ಬ್ರಿಟಿಶಸರಕಾರದ ಅಮಲಿನ ಆರಂಭದಲ್ಲಿ . . . ೧೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡಿಯುತ್ತಿದ್ದವು. ಅವುಗಳ ವಿವರ . . . ೧೫ ಸಾತಾರಿ (ಕಭಾಗ. ೨೮೦). [?]

**ಸಾತಾವೇದನೀಯ** (ನಾ). = ಸಾತವೇದನೀಯ : ವೇದನೀಯಮುಂ ಸಾತಾವೇದನೀಯಮುಮಸಾತಾವೇದನೀಯಮುಮೆಂದಿರ್ತೆಱನಕ್ಕುಂ (ಶಾಂತಿಪು. ೧೨-೧೧ ವ) [ಸಂ.]

**ಸಾತಾಳಿಸು** (ಕ್ರಿ). ಎಣ್ಣೆ ಅಥವಾ ತುಪ್ಪದಲ್ಲಿ ಚೆನ್ನಾಗಿ ಬಾಡಿಸು : ಅಱುವತ್ತುದಿನಸಿನ ಪರಿಪರಿಶಾಕಗಳು ಕರಿದು ಸಾತಾಳಿಸಿದ ಬಗೆಬಗೆ ಲವಣಶಾಕಗಳು ಈ ಪರಿಯಿಂದಲಿ ಎಡೆಗಳನೆ ಮಾಡಿ ತಂದು ನೈವೇದ್ಯಿಟ್ಟು ಶ್ರೀಹರಿಗೆ ಅರ್ಪಿಸುತ್ತಿದ್ದ (ಪುರಂದ. ೫-೬೬-೧೪). 'ತಾಳಿಸು$_2$' ಪರಾ. [? + - ಇಸ್ಸು ./ ಮರಾ. ಸಾತಳಣೇ]

**ಸಾತಿ$_1$** (ನಾ). ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿನೈದನೆಯದಾದ ಸ್ವಾತಿನಕ್ಷತ್ರ: ವತ್ಸಲೋಪಕ್ಕೆ — ಈಶ್ವರ — ಈಸರ . . . ಸ್ವಾತಿ — ಸಾತಿ, ಸ್ವಾಮಿ — ಸಾಮಿ (ಶಮದ. ೨೮೧ ಪ್ರಯೋ); ಕಾಲರಜಕಂ ಮಲಿನದಿವಸಾಂಬರವನಾ ವಿಶಾಲ ಸಾತಿಯ ಮಟಯೊಳೊಗೆದು ದಕ್ಷಂಗೀಯಲು (ಭಾವಚಿಂ. ೬-೧೨). [< ಸಂ. ಸ್ವಾತಿ]

**ಸಾತಿ$_2$** (ನಾ). ೧. ಕೊಡುಗೆ ; ದಾನ : (೬). ೨. ಗಳಿಸುವಿಕೆ; ಪಡೆಯುವಿಕೆ: (೬). ೩. ಸಹಾಯ; ಸಹಕಾರ. ೪. ವಿನಾಶ; ಧ್ವಂಸ. ೫. ಕೊನೆ; ಮುಕ್ತಾಯ: "ಸಾತಿಯದವಸಾನಾರ್ಥಂ" (ವಸ್ತುಕೋ. ೧೧೪-೨೨). ೬. ತೀಕ್ಷ್ಣವಾದ ನೋವು ; ಅತೀವವಾದ ವೇದನೆ. ೭. ಐಶ್ವರ್ಯ; ಸಂಪತ್ತು. [ಸಂ.]

**ಸಾತಿರೇಕ** (ಗು). ಅತಿರೇಕದಿಂದ ಕೂಡಿದ; ಮಿಗಿಲಾದ : ತುರಗರತ್ನಮನೇಱಿ ಪಶ್ಚಿಮಾಭಿಮುಖನಾಗಿ ನಿಂದು ಭರತೇಶ್ವರಚಕ್ರವರ್ತಿ ಗಲ್ಗೆಂದು ಸಾತಿರೇಕ [ಪಾಠಾಂ. ಕಂ] ದ್ವಾದಶಯೋಜನವಿಸ್ತಾರಾಷ್ಟಯೋಜನೋತ್ಸೇಧವಜ್ರಕವಾಟಪುಟಂಗಳಂ ಭರದಿಂದಂ ದಂಡದೊಳ್ ತಾಟಿಸಿದೊಡೆ (ಆದಿಪು. ೧೩-೩೫ ವ). [ಸಂ.]

**ಸಾತಿವಳೆ** (ನಾ). ಸ್ವಾತಿನಕ್ಷತ್ರದಲ್ಲಿ ಬರುವ ಮಳೆ : ಜಂಗಮದೇವನೊರ್ವನೆಲ್ಲಂದು . . . ಮುತ್ತಿನ ರಂಗವಲ್ಲಿ ಬೇಕೆನೆ ತದಾಗಮನವೇ ಭಾವಿಸಲ್ಕೆ ಮಿಗೆ ಸಾತಿವಳೆ [ಪಾಠಾಂ. ಸಾರಿವಳೆ, ಸ್ವಾತಿಮಳೆ]ಯಾಗೆ (ಆರಾಚ. ೧-೧೩-೧೭).

[ಸಾತಿ$_1$ + ಮಳೆ < ಮೞೆ)]

**ಸಾತಿಶಯ** (ಗು). ೧. ಅತಿಶಯದಿಂದ ಕೂಡಿದ; ವಿಶೇಷವಾದ : ಸಾತಿಶಯ ಬೋಧ ಸಸ್ಯವಿಘಾತೀತಿಪರಿಗ್ರಹೇಚ್ಛೆಯಂ ಯತಿಪತಪಃಸ್ವಾತಿ ಬೆದಱಿಸೈ ಬಳೆದುದು ಭೂತಳಪತಿ ಚಿತ್ತದಲ್ಲಿ ತತ್ತ್ವವಿವೇಕಂ (ಪಾರ್ಶ್ವಪು. ೧೨-೩೫). (ನಾ). ೨. ಅತಿಶಯತೆ; ಅಸಾಧಾರಣತೆ: ಸಾತಿಶಯದಿಂ ಬಹಿಃಕ್ಕಿಪ್ರಮೆಂಬುದು ನೋಡೆ ಭೂತಬಲಿಯಕ್ಕುಂ (ಆರಾಚ. ೧-೫-೧೪); ಜ್ಯೋತಿ ಬೆಳಗುತಿದೆ . . . ಮಾತು ಮನಂಗಳಿಂದತ್ತತ್ತ ಮಿಾಱಿದ ಸಾತಿಶಯದ ನಿರುಪಾಧಿಕ ನಿರ್ಮಲ (ಕೈವಲ್ಯ. ೫೯ ಪಲ್ಲವಿ). [ಸಂ.]

**ಸಾತಿಶಯಾರ್ಥ** (ನಾ). ಅತಿಶಯವಾದ ಅರ್ಥ; ವಿಶೇಷವಾದ ಅರ್ಥ : ಸಾತಿಶಯಾರ್ಥಮುಮಂ ನಲ್ವಾತುಮನೊಪ್ಪಿಸಿದರೊಸೆದು ತಮಗಿಲ್ಲದುದಂ ಖ್ಯಾತಂಗೆ ಸುಕವಿನೇಮಿಗೆ ಭೂತಭವದ್ಭಾವಿಕಕವಿಗಳೇನೊಳ್ಳಿದರೋ (ಲೀಲಾವ. ೧-೭೮). [ಸಂ.]

**ಸಾತಿಶಯೋಕ್ತಿ** (ನಾ). ಅತಿಶಯದಿಂದ ಕೂಡಿದ ಮಾತು; ವಿಶೇಷವಾದ ಮಾತು : ರುದ್ರರ ಸಂಖ್ಯೆಯೊಳಾಗೆ ವಿಶ್ರಮಂ ಸಾತಿಶಯೋಕ್ತಿಯಿಂತಿದು ವಿರಾಜಿಸುಗುಂ ಕವಿರಾಜಹಂಸನಿಂ ಭೂತಲದೊಳ್ಳಿಗಟ್ಟೆವಡೆದುತ್ಪಲಮಾಲೆ (ಛಂದೋಂಬು. ೨-೧೭೭).

[ಸಂ.]

**ಸಾತೀನ** (ನಾ). ಒಂದು ಬಗೆಯ ಕಡಲೆ; ಬಟ್ಟಕಡಲೆ : "ಕಳಾಯಃ, ಖಂಡಿಕಃ, ಸಾತೀನಃ — ಈ ೩ ಬಟ್ಟಗಡಲೆ" (ಪಲಾಯಿ. ೯೫-೪೨೮). [ಸಂ.]

**ಸಾತೆ** (ನಾ). ಮಂಚಿಕೆ; ಅಟ್ಟ (?) : ಪೊಲನನೆಲ್ಲರುಮ್ಮೆದಿ ಬಿಲ್ಲರ ನಿಲಿಸಿ ಕಳಿವನು ಕಟ್ಟಿ ಮರಮೆಟ್ಟೊಲೆಯದೇಱಿಯೆ ಸಾತೆಯನುನಿಂದುಳಿಗಳನು ಕಟ್ಟೀ ಸಲೆ ಬಳಸಿ ಹಜ್ಜೆಯನಱಿದು ಲೆಲೆಲೆಲೆಯೆನುತೆ ಹರಕೊಳಿಸಿ ಸೋವುತರುಲಿದು ಸನ್ನೆಯ ಹಾಡೆ ಹಳುವನು ಜಡಿದರವರಂದು (ಸಾಳ್ವಭಾ. ೫-೨೪). [?]

**ಸಾತ್ಕುಡಿ** (ನಾ). ಈಳೆಜಾತಿಗೆ ಸೇರಿದ ಒಂದು ಬಗೆಯ ಹಣ್ಣು ; ಮೂಸಂಬಿ: ಸಾತ್‌ಕುಡಿ, ಕಮಲಾಹಣ್ಣು (ಮೈಜಿಗಿ. ೨೨-೪೦೪). [<— ತಮಿ. ಚಾತ್ತುಕ್ಕುಟಿ]

**ಸಾತ್ತಟಿಗೆ** 'ಸಾಂತಳ್ಗೆ' ನೋ.

**ಸಾತ್ತುಗಾಮುಂಡ** (ನಾ). ಒಬ್ಬಾತನ ಹೆಸರು : ಬಳ್ಳಿಗ್ಗಮಯ ಗಾಮುಣ್ಡನ್ ಗುಂದುಗುಡೆಯಾ ಸಾತ್ತುಗಾಮುಣ್ಣ (ಎಕ. VIII ,ಸೊರಬ. ೧೦-೧೩; ಸು. 800). [? + ಗಾಮುಂಡ]

**ಸಾತ್ತ್ವಿಕ** (ಗು). ೧. ಸತ್ತ್ವಗುಣದಿಂದ ಕೂಡಿದ; ಒಳ್ಳೆಯ ಗುಣವನ್ನು ಹೊಂದಿದ. (ನಾ). ೨. ಸಾತ್ತ್ವಿಕ, ರಾಜಸ ಮತ್ತು ತಾಮಸ ಎಂಬ ಮೂರು ಬಗೆಯ ಗುಣಗಳಲ್ಲಿ ಒಂದು; ಸತ್ತ್ವಯುಕ್ತವಾದ ಗುಣ : ಬುದ್ಧಿ ಎಂಬ ಸಮುದ್ರದಲ್ಲಿ ಗುಳ್ಳೆಗಳಂತೆ ಅಹಂಕಾರವೆಂಬ ಮೂರನೆಯ ತತ್ತ್ವವು ಹೊರಬೀಳುವುದು. ಅದು ಸಾತ್ತ್ವಿಕ ರಾಜಸ ತಾಮಸ ಎಂದು ಮೂರು ವಿಧ (ಓಂದಿಸಾ. ೫೫). ೩. ಸತ್ತ್ವಗುಣಗಳಿಂದ ಕೂಡಿದವನು;ಸಾಧುಸ್ವಭಾವದವನು : ಜೀವನು ತನ್ನನ್ನು ಸಾತ್ತ್ವಿಕ, ರಾಜಸ, ತಾಮಸನೆಂದು ಭಾವಿಸಿಕೊಳ್ಳುತ್ತಿರುವನು (ಶಕ್ತಿವಿ. ೪೮). ೪. ಬ್ರಾಹ್ಮಣ. ೫. ಬ್ರಹ್ಮನ ಹೆಸರು. ೬. ಶರತ್ಕಾಲದ ರಾತ್ರಿ. ೭.[ಕಾವ್ಯಮೀ] ಸ್ಥಾಯಿ, ಸಂಚಾರಿ ಮತ್ತು ಸಾತ್ತ್ವಿಕ ಎಂಬ ಮೂರು ಬಗೆಯ ಭಾವಗಳಲ್ಲಿ ಒಂದು; ಆಂತರಿಕಭಾವನೆ, ಉದ್ವೇಗ ಮೊದಲಾದುವುಗಳ ಬಾಹ್ಯಸೂಚನೆ,- ದೇಹವಿಕಾರ : ಸಾತ್ತ್ವಿಕಗಳೂ ಚಿತ್ತವೃತ್ತಿರೂಪವಾದ ಅನುಭವವಿಶೇಷಗಳೇ (ಕೃಪಿಡಿ. ೧೮೯). ೮. [ನಾಟ್ಯ] ಆಂಗಿಕ, ವಾಚಿಕ, ಸಾತ್ತ್ವಿಕ ಮತ್ತು ಆಹಾರ್ಯಕಗಳೆಂಬ ನಾಲ್ಕು ಬಗೆಯ ಅಭಿನಯಗಳಲ್ಲಿ ಒಂದು; ಸ್ವೇದ, ರೋಮಾಂಚ, ಅಶ್ರು ಮೊದಲಾದ ಎಂಟುಬಗೆಯ ಸಾತ್ತ್ವಿಕಭಾವಗಳ ಅಭಿನಯ : ಆಂಗಿಕ, ವಾಚಿಕ, ಆಹಾರ್ಯ (ವೇಷಭೂಷಣ) ಮತ್ತು ಸಾತ್ತ್ವಿಕ — ಇದು ನಾಟ್ಯಕಲೆಯ ಆಧಾರ (ಭಾರದ. ೫೫೨). [ಸಂ.]

**ಸಾತ್ತ್ವಿಕಭಾವ** (ನಾ). = ಸಾತ್ತ್ವಿಕ ೭ : "ಮೈಮರವಾಗುವುದು (ಎಂದರೆ ನಿಶ್ಚೇಷ್ಟತೆ), ಬೆವರು, ರೋಮಾಂಚ, ಧ್ವನಿವಿಕಾರ, ನಡುಕ, (ಮುಖದ) ಬಣ್ಣ ವ್ಯತ್ಯಾಸವಾಗುವುದು, ಕಂಬನಿ, ಮೂರ್ಛೆ" — ಈ ಎಂಟನ್ನು ಪ್ರತ್ಯೇಕಿಸಿ ಇವಕ್ಕೆ ಸಾತ್ತ್ವಿಕಭಾವಗಳೆಂದು ಹೆಸರು ಕೊಟ್ಟಿದ್ದಾರೆ . . . ಸಾತ್ತ್ವಿಕಭಾವಗಳನ್ನು ಒಂದು ವಿಶೇಷರೀತಿಯ ಅನುಭಾವಗಳೆಂದು ಗಣಿಸಿದರ ಸಾಕು (ಭಾರಮಿಾ. ೩೫೦); ಭಾವಗಳು ಮೂರುವಿಧವಾದುವು, ಸ್ಥಾಯಿಭಾವ, ಸಂಚಾರೀಭಾವ, ಸಾತ್ತ್ವಿಕಭಾವ (ಭಾರದ. ೫೫೩). [ಸಂ.]

**ಸಾತ್ಮ್ಯ** (ಗು). ೧. ಸ್ವಭಾವಕ್ಕೆ ಹೊಂದಿಕೊಳ್ಳುವ; ಪ್ರಕೃತಿಗೆ ಒಡಂಬಡುವ. (ನಾ). ೨. ಯುಕ್ತವಾಗಿರುವಿಕೆ; ಯೋಗ್ಯವಾಗಿರುವಿಕೆ. ೩.[ವೈದ್ಯಶಾ] ವಿರುದ್ಧಪ್ರಕೃತಿಯುಳ್ಳ ದೇಹಕ್ಕೂ ಸಹ ವಿರುದ್ಧ ಆಹಾರಪಾನೀಯಗಳು ಒಗ್ಗುವುದು, — ಒಡಂಬಡುವುದು : ವಿರುದ್ಧಪಾನಾಹಾರಂಗಳು ವಿರುದ್ಧಪ್ರಕೃತಿಯುಳ್ಳವನಾಗಿದ್ದರೂ ದೇಹಕ್ಕೆ ಒಡಂಬಟ್ಟು ಬಂದರೆ ಅದೇ ಸಾತ್ಮ್ಯವೆನಿಸಿಕೊಂಬುದು . . . ದೇಶಸಾತ್ಮ್ಯ, ದೇಹಸಾತ್ಮ್ಯ, ವ್ಯಾಧಿಸಾತ್ಮ್ಯವೆಂದು ಆ ಸಾತ್ಮ್ಯ ಮೂಱುತೆಱನಾಗಿಹುದು (ವೈದ್ಯಸಾ. I. ೧೨); ವಿರುದ್ಧಪಾನಾಹಾರಗಳು

ವಿರುದ್ಧಪ್ರಕೃತಿಯುಳ್ಳವನಿಗಾದರೂ ಒಡಂಬಟ್ಟು, ಬರುವುದಾವುದುಂಟೋ ಅದೇ ಸಾತ್ಮ್ಯವೆನಿಸಿಕೊಂಬುದು (ಸಕವ್ಯ. ೧೬). [ಸಂ.]

**ಸಾತ್ಯವತೇಯ** (ನಾ). ಸತ್ಯವತಿಯ (ಮತ್ತು ಪರಾಶರಮಹರ್ಷಿಯ) ಪುತ್ರ; ವೇದವ್ಯಾಸ : "ಸಾತ್ಯವತೇಯಃ, ಪಾರಾಶರ್ಯಃ, ದ್ವೈಪಾಯನಃ, ವ್ಯಾಸಃ — ಈ ೪ ವ್ಯಾಸಂ" (ಹಲಾಯು. ೬೮-೨೫೮); ಬಳಿಕ ಸಾತ್ಯವತೇಯನಾ ಶುಕಗೆ ವಲಿದು ತಿಳುಹಿದ ಸಾಂಖ್ಯ ಯೋಗಂಗಳನು ಪಿರಿದಹ ಮೋಕ್ಷಧರ್ಮಂಗಳನು ಬೋಧಿಸಿದ (ತಿಮ್ಮಶಾಂ. ೯೯-೧೩). [ಸಂ.]

**ಸಾತ್ವತ** (ನಾ). ೧. ಕೃಷ್ಣ. ೨. ವಿಷ್ಣು. ೩. ಬಲರಾಮ : "ಬಲದೇವಃ, ಬಲಭದ್ರಃ, ಮುಸಲೀ . . . ಸಾತ್ವತಃ . . . ಕಾಮಪಾಲಃ, ಹಲಾಯುಧಃ — ಈ ೧೮ ಬಲದೇವನ ಪೆಸರ್" (ಹಲಾಯು. ೬-೨೯). ೪. ಬಹಿಷ್ಕೃತನಾದ ವೈಶ್ಯನ ಮಗ. [ಸಂ.]

**ಸಾತ್ವತಿ** (ನಾ). [ಕಾವ್ಯಮಿ] ಕಾವ್ಯ, ನಾಟಕಗಳಲ್ಲಿ ನಾಯಕನ ಸ್ವಭಾವವನ್ನು ತಿಳಿಸುವ ಕೈಶಿಕಿ, ಸಾತ್ವತಿ, ಆರಭಟಿ ಮತ್ತು ಭಾರತಿ ಎಂಬ ನಾಲ್ಕು ಬಗೆಯ ವೃತ್ತಿಗಳಲ್ಲಿ ಒಂದು; ಶೌರ್ಯ, ಉದಾರತೆ, ಉಲ್ಲಾಸ ಮುಂತಾದುವುಗಳಿಂದ ಕೂಡಿರುವುದು : ಭಾರತಿ ಸಾತ್ವತಿ ಕೈಶಿಕೆಯಾರಭಟಿಯುಮೆಂಬ ವೃತ್ತಿಯೊಳ್ ರಸಮಂ ಸಂಚಾರಿಸುವ ಭಾವಮಂ ವಿಸ್ತಾರಿಸುವ ಬೆಡಂಗು ಬೇಱೆ ನೀಲಾಂಜನೆಯಾ (ಆದಿಪು. ೯-೨೬); ಚಾಗಂ ಬೀರಂ ಸೊಬಗೆಂಬೀ ಗುಣಮುಂ ಶಾಂತವೃತ್ತಿಯುಂ ಸಾಹಸದುದ್ಯೋಗಮುಮತಿಲಲಿತ ಸದಾಭೋಗದೊಳಿಂಬಾಗೆ ರಂಜಿಕುಂ ಸಾತ್ವತಿಯೊಳ್ (ಕಾವ್ಯಾಥ. ೮೫೯); ಸಾತ್ವತಿಯು ಸತ್ತ್ವ, ಶೌರ್ಯ, ತ್ಯಾಗ, ದಯೆ, ಹರ್ಷ ಮುಂತಾದವುಗಳಿಂದ ಕೂಡಿ ಗೆಲುವಾಗಿರುವುದು (ಕೃಪಿಡಿ. ೨೧೧). [ಸಂ. ಸಾತ್ವತೀ]

**ಸಾತ್ವಿಕ** (ಗು). ೧. = ಸಾತ್ತ್ವಿಕ ೧ : ಸಾತ್ವಿಕ ಸುಭಕ್ತಿ ಸ್ಥಿರಮನಸ್ಸನು ಚಿಕ್ಕಮಾದಯನೆಂಬ ಸದುಭಕ್ತ . . . ಪಡಿಯಂ ಕೊಡುತಿರಲು (ಬಸವು. ೪೭-೪). ೨. = ಸಾತ್ತ್ವಿಕ ೨ : ರಮಾಧವನಂ ಕೀರ್ತಿಪುದೇ ಸಮಸ್ತಫಲ ಸನ್ಮೋಕ್ಷಪ್ರದಂ ಸಾತ್ವಿಕಂ (ಸಾತ್ವಿವಿ. ೧೪); ಅದರಲ್ಲಿ ಹಲವು ಪ್ರಧಾನವಾಗಿ ಸಾತ್ವಿಕ, ಮತ್ತೆ ಹಲವು ಪ್ರಧಾನವಾಗಿ ರಾಜಸಿಕ ಅಥವಾ ತಾಮಸಿಕ (ಸೌಂದಸ. ೧೧೧). ೩. = ಸಾತ್ತ್ವಿಕ ೩ : ಭೂತಿಕನ ಸೀರೆಯ ಸಾತ್ವಿಕ ನೆಱೆವುಟ್ಟಿರೆ ಭೂತಿಕ ಸಾತ್ವಿಕನಾದ ಸಾತ್ವಿಕ ಭೂತಿಕನಾದ (ಬಸವ. ೯೧೦); ಜೀವರಾಶಿಗಳು ದೇವಮನುಷ್ಯಾದಿಭೇದಗಳಿಂದ ಸಾತ್ವಿಕರು, ರಾಜಸರು, ತಾಮಸರೆಂಬ ಮೂರುವಿಧ'ರಾಗಿ ಭಾಗಿಸಲ್ಪಟ್ಟಿರುವರು (ಹಸಾರ. ೧-೪ ವಿಶೇಷಾರ್ಥ). ೪. ಸತ್ತ್ವಗುಣದಿಂದ ಕೂಡಿದುದು; ಒಳ್ಳೆಯದು; ಋಜುವಾದುದು : ನಿನ್ನ ಪರಿಣಾಮ ಸಾತ್ವಿಕವಾದುದು. ನಮ್ಮಂಥ ಯತಿಗಳೂ ನಿನ್ನ ದರ್ಶನ ಮಾಡಿ ಮಾರ್ಗದರ್ಶನ ಪಡೆಯಬೇಕು (ದಾನಚಿಂ. ೧೭೭); ಅವರ ಸುಖದುಃಖಗಳನ್ನು ನೋಡಿಕೊಂಡು ಹೋಗಬೇಕು! ಅನ್ಯಮಾರ್ಗವಾವುದೂ ಸಾತ್ವಿಕವಾದುದಲ್ಲ (ಕಂಬಹು. ೩೫). ೫. = ಸಾತ್ತ್ವಿಕ ೭ : ಸಾತ್ವಿಕ ಸ್ವೇದಬಿಂದುಗೆ ರೋಮೋದ್ಗತಿಗಿರ್ಕೆಯಾದ ಸುತೆಗಂ ಜಾಮಾತೃಗಂ ಪ್ರೀತಿ ಕೈಮಿಗೆ ಕೈನೀರೆಱೆದಂ ಕನತ್ಕಳಶ ಹಸ್ತಂ ತಜ್ಜನಶ್ರೀಪ್ರಿಯಂ (ಚಂದ್ರಪು. ೬-೭೧). ೬. = ಸಾತ್ತ್ವಿಕ ೮ : ಆಗಳ್ ನಾಟ್ಯವಿಧಿಯಂ ನಿರ್ವರ್ತಿಸಿ . . . ಎಂಟು ಸಾತ್ವಿಕ ಭಾವಂಗಳುಮನಾಂಗಿಕಸಾತ್ವಿಕ ವಾಚಿಕಾಹಾರ್ಯಕಮೆಂಬ ನಾಲ್ಕಭಿನಯಮುಮಂ. . . ಪಾತ್ರಸಂಕ್ರಮಣದೊಳ್ ನೆಱೆಯೆ ತೋಱೆ (ಅಜಪು. ೫-೩೦ ವ); ಆ ನಾಟ್ಯಕ್ಕಾಂಗಿಕಮುಂ ಮಾನಿನಿ ಕೇಳ್ ವಾಚಿಕಾಖ್ಯಮಾಹಾರ್ಯಕಮುಂ ಭೂನುತ ಸಾತ್ವಿಕಮೆಂದೆಂಬೀ ನಾಲ್ಕಭಿನಯಮದಕ್ಕೆ ರಂಜಿಸಿ ತೋರ್ಕುಂ (ಲಾಸ್ಯರಂ. ೧-೫೦); ಅಭಿನಯವು 'ಆಂಗಿಕ' (ಅಂಗಚಲನೆಗಳು), 'ವಾಚಿಕ' (ಮಾತಿಗೆ ಸಂಬಂಧಪಟ್ಟವು), 'ಆಹಾರ್ಯಕ' (ವೇಷಭೂಷಣಾದಿಗಳ ರಚನೆ), 'ಸಾತ್ವಿಕ' (ರೋಮಾಂಚಾದಿಗಳ ಪ್ರದರ್ಶನ) — ಎಂದು ನಾಲ್ಕು ವಿಧ (ಕೃಪಿಡಿ. ೨೧೫ ಅಡಿಟಿ). [ಸಂ.]

**ಸಾತ್ವಿಕಗುಣ** (ನಾ). ಸತ್ತ್ವಯುತವಾದ ಗುಣ; ಒಳ್ಳೆಯತನ; ಸತ್ಯಸಂಧತೆ : ಸತ್ಯಂ ಸಾತ್ವಿಕಗುಣಕೆ ಮಹಾತ್ಯಾಗಂ ರಾಜಸಕ್ಕೆ ವಿಕ್ರಮಮಧಿಕೋದ್ಧತ್ಯಂ ತಮಕ್ಕೆ ನೆಲೆಯಾಯ್ತಾತ್ಮತಂತಂ ನೃಪನಿದೇಂ ತ್ರಿಮೂರ್ತ್ಯಾತ್ಮಕನೋ (ಪುಷ್ಪಪು. ೩-೬); ಈ ಒಂದು ವಿವರಣೆಯಿಂದ ಸಾತ್ವಿಕಗುಣವೇ ನಿಜವಾದ ಆನಂದಾಂಶುವನ್ನು ಬಿಂಬಿಸಲು ಸಮರ್ಥವಾದುದು ಎನ್ನುವ ಅಂಶ ವ್ಯಕ್ತವಾಗುತ್ತದೆ (ಸೌಂದಸ. ೧೧೧). [ಸಂ.]

**ಸಾತ್ವಿಕತೆ** (ನಾ). = ಸಾತ್ವಿಕಗುಣ : ಸಮಾಜಕ್ಕೆ ಗೊತ್ತಿರದ ಒಂದು ಸಾತ್ವಿಕತೆ ದೇಸಾಯರ ಜೀವನವನ್ನು ತುಂಬಿದೆ (ಸಮಜೀ. ೧೧ ಪೀಠಿಕೆ). [ಸಂ. ಸಾತ್ವಿಕತಾ]

**ಸಾತ್ವಿಕದಾನ** (ನಾ). ಸದ್ಭಾವನೆಯಿಂದ ಸತ್ಪಾತ್ರರಲ್ಲಿ ಮಾಡುವ ದಾನ : ಮುಂದೆ ತನ್ನಯ ಗೃಹಗಳಲಿ ಶಾಂತಿಂದ ಬ್ರಹ್ಮಾರ್ಪಣವುಯೆಂದೇ ಅಂದು ಮಾಡುವ ದಾನ ಸಾತ್ವಿಕದಾನವದುಯೆಂದ (ಜ್ಞಾನಸಿಂ. ೩೦-೨೨). [ಸಂ.]

**ಸಾತ್ವಿಕಭಾವ** (ನಾ). = ಸಾತ್ತ್ವಿಕ ೭ : ಆಗಳ್ ನಾಟ್ಯವಿಧಿಯಂ ನಿರ್ವರ್ತಿಸಿ . . . ಎಂಟು ಸಾತ್ವಿಕಭಾವಂಗಳುಮನಾಂಗಿಕಸಾತ್ವಿಕವಾಚಿಕಾಹಾರ್ಯಕಮೆಂಬ ನಾಲ್ಕ ಭಿನಯಮುಮಂ . . . ಪಾತ್ರಸಂಕ್ರಮಣದೊಳ್ ನೆಱೆಯೆ ತೋಱೆ (ಅಜಪು. ೫-೩೦ ವ); ಸ್ವೇದಂ ವೈವರ್ಣ್ಯಂ ಸ್ವರಭೇದಂ ರೋಮಾಂಚನಂ ಪ್ರಕಂಪನಮಶ್ರೂದ್ಭೇದಂ ಸ್ತಂಭಂ ಲಯಮೆಂದಾದುವಿವೆಂಟುಂ ರಸಕ್ಕೆ ಸಾತ್ವಿಕಭಾವಂ (ಕಾವ್ಯಾವ. ೭೯೬). [ಸಂ.]

**ಸಾತ್ವಿಕೋಕ್ತಿ** (ನಾ). ಒಳ್ಳೆಯ ಮಾತು : ಅಂತು ಸಮುಚಿತಚರಾಚರಪರಿಗ್ರಹಂಗಳಂ ಸರಸಸಾತ್ವಿಕೋಕ್ತಿಯಿಂದಮಾಱೆ ನುಡಿದನಂತರಮಂತಃಪುರದ್ವಾರದಿಂ ಪೊಱಮಡುವ ಶುದ್ಧಾಂತಕಾಂತೆಯರ ತಂಡಮಂ ಕಂಡು (ಪುಷ್ಪಪು. ೧೩-೧೦೦ ವ). [ಸಂ.]

**ಸಾದ$_1$** (ನಾ). ಒಂದು ಬಗೆಯ ತೆರಿಗೆ : ಅಲನ್ದಯ [ಸ್ವ]ಯಂಭುಸೋಮೇಶ್ವರ ದೇವರ್ಗ್ಗಾಳ್ವ ೧೨ರಡೂರ್ಗ್ಗಳಾಜಲ್ಲಂ ಕಳ್ಳವಳಿಕೆ ಸಾದಂ ಬಣ್ಣಿಗೆಯನೆ [ಪ]ರಿಹಾರ ಮಾಡಿ ಬಿಟ್ಟಂ (ಎಕ. XXVIII, ೩೫-೫೪; 1082); ಸಾದಂ ಬಣ್ಣಿಗೆ ಬಳಂಬೆಯ ತೆಱೆ. . . ದಣ್ಣಾದಾಯವಿನ್ನಿನಿತುಮಂ (ಸೌಇಇ. IX-i, ೧೭೨-೧೮; 1106); ಸುಂಕ ಸಾದ ತಳಸಾರಿಗೆ . . . ಸಂಗಮೇಸ್ವರಕೆ ಪಾರಣೆಯ ಜಂಗಮಾರಾ[ಧ]ನೆಗೆ . . . ಕೊಟ್ಟ ಸಾಸನ (ಎಇ. XXI, ೧೪-೭೨; 1260). 'ಸಾದದೆಱೆ' ಪರಾ. [ದೇ. ॥ ತೆಲು. ಸಾದಮು]

**ಸಾದ$_2$** (ನಾ). ೧. ಮುಳುಗುವಿಕೆ; ತಳಸೇರುವಿಕೆ. ೨. ಹಾಳಾಗುವಿಕೆ ; ಕೆಡುವಿಕೆ. ೩. ತೆಳುವು; ಸಪೂರತೆ. ೪. ನೋವು; ವೇದನೆ. ೫. ಶುದ್ಧತೆ ; ಸ್ಪಷ್ಟತೆ. ೬. ನಡೆಯುವಿಕೆ; ಚಲನೆ. ೭. ಇಡುವಿಕೆ; ಇರಿಸುವುದು. ೮. ಆಯಾಸ; ದಣಿವು. ೯. ಕೆಸರು; ಪಂಕ : "ಪಂಕಃ, ಸಾದಃ . . . ಅವಕಿಲಃ — ಈ ೬ ಕೆಸಱು" (ಹಲಾಯು. ೧೧೨-೫೬). [ಸಂ.]

**ಸಾದಕ** (ನಾ). ೧. ಸಾಧನೆಮಾಡುವವನು; ಸಾಧಕ : ನಿಧಿ, ನಿದಿ; ಸಾಧಕ, ಸಾದಕ; ಭೈರವ, ಬೈರವ (ಶಬ್ದಾನು. ೧೪೩ ಪ್ರಯೋ). ೨. ಅಂಗಸಾಧನೆ; ವ್ಯಾಯಾಮ : ರೋಸದಿಂದೊರ್ಮೆ ಜಗಜಟ್ಟಿ ಇದಿರ್ಚಿ ಮುಂ ಮಧುರೆಯೊಳ್ ಕುವಲಯಾಪೀಡಕ್ಕಂ ಚಾಣೂರಂಗಂ ಮಾರ್ಮಲೆತಂತೆ ದಂಡೆಯಂ ಮಾಡಿ ಸಾದಕದೊದವಂ ಮೆಱೆಯುತ್ತೆ (ಚಿಕವಂ. ೧೬೪-೧೦). [< ಸಂ. ಸಾಧಕ]

**ಸಾದಣ** 'ಸಾದನೆ' ನೋ.

**ಸಾದಣೆ** 'ಸಾದನೆ' ನೋ.

**ಸಾದಣೆಗೈ** (ಕ್ರಿ). ಮಲ್ಲಸಾಧನೆಮಾಡು : ಅಣೆದುಬ್ಬಿ ತಗ್ಗಿ ತೊಡಕಿ ತೂಗಿ ಸರ್ವಾಂಗ ಕುಣಿದು ಕುಣಿದರೆಂದು ನುಡಿಯ ಪೆಣೆದು ಮೇಣದ ಬೊಂಬೆಯೆರಡು ಮೈಸೋಂಕಿ ಸಾದಣೆಗೈದವಚ್ಚರಿಯೆಂಬೆ (ಭರಚ. ೧೧-೯೬).

[ಸಾದಣ (< ಸಾದನೆ) + ಗೈ (< ಕೆಯ್$_1$)]

**ಸಾದದಂಡಿಗೆ** (ನಾ). ಒಂದು ಬಗೆಯ ದಂಡಿಗೆ, — ಪಲ್ಲಕ್ಕಿ : ಸವರವಳ್ಳಿಯ ಸರ್ಬ್ಬೇಶ್ವರದೇವರ ನಿವೇದ್ಯಕ್ಕಂ ಸಾದದಣ್ಡಿಗೆ x ಬಲ್ಲವರಸಂ ಪಸಾಯಿತ [ಒಕ್ಕ]ರಸ[ರು] . . . ಧಾರಾಪೂರ್ವ್ವಕಂ ಮಾಡಿ ಕೊಟ್ಟುದಂ (ನಾಂದೇಡ್. ೧೮-೭; 1115).

[ಸಾದ$_1$ + ದಂಡಿಗೆ]

**ಸಾದದೆಱೆ** (ನಾ). ಒಂದು ಬಗೆಯ ತೆರಿಗೆ : ರಾಮೇಸ್ವರದೇವರ್ಗ್ಗೆ ಪುರದ [ಸಾ]ದದ[ಱೆ] ಹಂದರುವಣವೆಂಬಿವಂ ಸರ್ವ್ವನಮಶ್ಯವಾಗಿ ಬಿಡೆಂದು ಬೇ x ವುದುಂ (ಸೌಇಇ. XX, ೭೮-೧೩; 1118); ಧರ್ಮಾಪುರದ ಶ್ರೀ ಕೇಶವದೇವರಿಂಗೆ . . . ಸಾದದೆಱೆ ಉದುವಲುದೆಱೆ ಅಯ್ನೂಱುಗುಳಿಯ ಪನ್ನಾಯದೆಱೆ ನಾವಿದದೆಱೆ ಇನ್ತಿನಿಸಱ ತೆಱೆಯನು ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಎಕ. IV (R), ಹುಣಸೂ. ೨೪-೪೦; 1162).

[ಸಾದ$_1$ + ತೆಱೆ]

**ಸಾದನ** 'ಸಾದನೆ' ನೋ.

**ಸಾದನೆ, ಸಾದಣ, ಸಾದಣೆ, ಸಾದನ** (ನಾ). ೧. ಸಾಧಿಸುವುದು; ಸಿದ್ಧಿಯನ್ನು ಪಡೆಯುವುದು : ಶುದ್ಧಿ—ಸುದ್ಧಿ, ಸಾಧನ—ಸಾದನೆ (ಶಮದ. ೨೫೫ ಪ್ರಯೋ). ೨. ದಾಖಲೆ; ದಸ್ತಾವೇಜು; ಅಧಿಕಾರಪತ್ರ : ಗುರುಪಪ್ಪಗವುಡ ಸೇನಬೋವ ತಿಪರಸರ ತಿಂಮರಸರು ಕೊಟ ಸಾದನೆ (ಎಕ. IX(S), ಮಾಗಡಿ. ೧೩೩-೬; 1339). **ಸಾದಣ** : ಅಂಗಸಾಧನೆ; ವ್ಯಾಯಾಮ : ಪುರದ ಬಹಿರ್ವಳಯದೊಳು ಬಿಲ್ಲೋಜರ ಗರುಡಿ ಜಟ್ಟಿಗಳ ಕಾಲಾಟ ಪಿರಿದು ಸಾದಣ[ಪಾಠಾಂ. ರಣೆ] ಸಬಳಿಗರ ಕೃಪಾಣದಿಂದರರೆ ಕೌತುಕವು ನೋಳ್ಪರಿಗೆ (ಅನಂಚ. ೧-೧೦೭). **ಸಾದಣೆ** : ೩. 'ಸಾದಣೆಗ್ಯೆ' ಪರಾ. **ಸಾದನ** : ೨. ಸರ್ವಕಾರ್ಯಂಗಳಲು ಯಲುವರು ಪ್ರತಿಪಾಳಿಸುವರು ರಾಜಮುದ್ರಾಸಹಿತ ತಾಂಬ್ರಸಾದನ ಕೊಟ್ಟರು (ಎಇ. XXVII, ೧೬೨-೮೮; 1256?). 'ಸಾಸನ' ಪರಾ. [< ಸಂ. ಸಾಧನ]

**ಸಾದರ₁** (ಗು). ೧. ಆದರದಿಂದ ಕೂಡಿದ; ಮರ್ಯಾದೆಯಿಂದ ಕೂಡಿದ. ೨. ಲಕ್ಷ್ಯದಿಂದ ಕೂಡಿದ; ಗಮನದಿಂದ ಕೂಡಿದ : ನಮ್ಮನೆ ಹೆಣ್ಣುಮಕ್ಕಳ ಸಾದರ ಪೋಷಣೆ ಮಾಡದಿದ್ದರೆ ದೇವರು ಮೆಚ್ಚ್ಯಾನೆ? (ಬಂದಜೀ. ೩೦). (ನಾ). ೩. ಗೌರವ; ಮನ್ನಣೆ : ಶರಣ ಇನ್ನೇಳೇಳೆನುತ ಸಾದರದಿನಾಗಳೆ ಸ್ಯಗೆಡದ ಮಾದರಸನಂ ನಿಜಕರಕಮಲದಿಂ ತೆಗೆದು ಬಿಗಿಯಪ್ಪಿ (ಬಸಪು. ೨೦-೬); ಸಾದರದೊಳೆನ್ನೊಡನೆ ರಮಿಸುವುದು (ಜೈಮಿಭಾ. ೧೬-೧೩). [ಸಂ.]

**ಸಾದರ₂, ಸಾದರು** (ನಾ). ಹಾಜರುಪಡಿಸುವುದು; ಪ್ರಕಟಿಸುವುದು : 'ಸಾದರಪಡಿಸು' ಪರಾ. **ಸಾದರು** : ಸಾದರಾಗುವ ಆಜ್ಞೆಗನುಸಾರ ಮರಣದಂಡನೆ ಅಥವಾ . . . ದಂಡನೆಗಳನ್ನು ವಿಧಿಸುತ್ತಿದ್ದರು (ಮಹಾವಂ. II,೨೯); ಯಾವ ವ್ಯಕ್ತಿಯನ್ನಾದರೂ . . . ನಿರ್ಬಂಧದಲ್ಲಿಟ್ಟಿದ್ದರೆ, ಆದೇಶವನ್ನು ಸಾದರು ಮಾಡದ ಪ್ರಾಧಿಕಾರಿಯು . . . ಆ ವ್ಯಕ್ತಿಗೆ ತಿಳಿಸತಕ್ಕುದು (ಭಾಧಾನ. ೧೯).

[<— ಅರ. ಹಿಂ. ಸಾದಿರ್; ಮರಾ. ಸಾದರ್]

**ಸಾದರಂ** (ಅ). ಆದರಪೂರ್ವಕವಾಗಿ : ನಾನದಂ ಬಲ್ಲಂತೆ ಬಣ್ಣಿಪೆಂ ಸಾದರಂ ಕಡುನೇಹದಿಂದಿಂತು ಪೊಗಳ್ದಪೆಂ (ತಿರುರ. ದೀ. ೭-೨); ಉರುತರ ವಿಭೂತಿಯಂ ಸಾದರಂ ಸಂತತಂ ಧರಿಸಿದವನೇ ಬ್ರಾಹ್ಮಣೋತ್ತಮಂ (ಆರಾಚ. ೧-೨-೫). [ಸಂ.]

**ಸಾದರಣ** (ನಾ). ಆದರ; ಮನ್ನಣೆ; ಗೌರವ : ''ಸಾದೃತಂ ಸಾದಂEರತ್ತೇಣಂ'' (ವಸ್ತುಕೋ. ೧೦೧-೨೦); ಚರಣವಿಷಯಭ್ರಾಂತಿಯಿಂದಂ ಚರಿಸಿ ರಾಜವದುಪಚರಣ ಸಾದರಣ[ಪಾಠಾಂ. ದಾದಿರಣ, ಸಾಧರಣ] ಕರಣಂಗಳನುಳಿದೆನೇ ಛಾಂದಸತ್ವದಲಿ (ಬಸಪು. ೪೫-೧೧). [ಸಂ.]

**ಸಾದರಣೆ** (ನಾ). = ಸಾದರಣ : ಕಾದಿ ಗೆದ್ದವ ಬೇರೆ ನಮಗೆ ಈ ಸಾದರಣೆ ಬೇಡೆಂದನು (ತುರಂಗ. ೩೭-೭೦). [ಸಂ. ಸಾದರಣ]

**ಸಾದರಪಡಿಸು** (ಕ್ರಿ). ಪ್ರಕಟಪಡಿಸು; ಹಾಜರುಪಡಿಸು : ಯಜಮಾನಿಯ ದುರಾಗ್ರಹಕ್ಕೆ ಕೆಲಜನ ವರಗಳ ಯಾದಿಯನ್ನು ಸಾದರಪಡಿಸಿದ್ದರು (ಸಂಜೀವಿ. ೫೨); ಭೀಮಪ್ಪ ವಕೀಲರ ಮುಖಾಂತರ ತನ್ನ ತಕರಾರುಅರ್ಜಿ ಸಾದರಪಡಿಸಿದ್ದ (ಮನಜ.೮).

[ಸಾದರ₂ + ಪಡಿಸು]

**ಸಾದರು** 'ಸಾದರ₂' ನೋ.

**ಸಾದಾ** (ಗು). ೧. ಸಾಧಾರಣವಾದ; ಸರಳವಾದ : ಆನೆಗೆ ಸಾದಾಬನಾತಿನ ಜೂಲು ೧ (ಎಕ. XIV, ನಂಜನ. ೨೯೨-೪೧; 1847); ಕಲಾವಂತರು ಸಾದಾತರದ ಅನ್ನವಸ್ತ್ರಗಳ ಮೇಲೆ ಸಂತುಷ್ಟರಾಗಿ ಉಳಿಯಬಹುದಾದರೆ ಸಮಾಜವು ಅವರನ್ನು ಸಾಕಲೂಬಹುದು (ಪ್ರಬಂಧ. ೧೯೯). (ನಾ). ೨. ಸಾಧಾರಣವಾದುದು; ಸರಳವಾದುದು : ಆನೆಕತ್ತಿಗೆ ಘಂಟೆಸರ ೨ ಕ್ಕೆ ದೊಡ್ಡದಕ್ಕೆ ಮಧ್ಯ ದೊಡ್ಡಘಂಟೆ ೧ ಯರಡುತರ ೨ ಸಾದಾ (ಎಕ. XIV, ನಂಜನ. ೨೬೨-೩೬; 1847).

**ಸಾದಾಅಂಚು** = ಜರಿ, ಹೆಣಿಕೆ ಮುಂತಾದುವುಗಳಿಲ್ಲದ ಸಾಧಾರಣವಾದ ಅಂಚು: ಸಾದಾಅಂಚಿನ ಪಂಚೆಗಿಂತ ಜರಿಅಂಚಿನ ಪಂಚೆಗೆ ಬೆಲೆ ಹೆಚ್ಚು (ರೂಢಿ). **ಸಾದಾಉಡುಪು** = ೧. ಸರಳವಾದ ಉಡುಗೆ : ಆಕೆಯದು ಸಾದಾಉಡುಪಿನಲ್ಲೂ ಎದ್ದು ಕಾಣುವ ಸೌಂದರ್ಯ (ರೂಢಿ). ೨. ಸಮವಸ್ತ್ರವಲ್ಲದ ಸಾಧಾರಣವಾದ ಉಡುಪು; ಮಫ್ತಿ : ಪೋಲೀಸಿನವರು ಅನೇಕ ವೇಳೆ ಕಳ್ಳತನಗಳನ್ನು ಪತ್ತೆಹಚ್ಚಲು ಸಾದಾಉಡುಪಿನಲ್ಲಿರುತ್ತಾರೆ (ರೂಢಿ). **ಸಾದಾದೋಸೆ** = (ಪಲ್ಯ ಮುಂತಾದ ಮಸಾಲೆಗಳನ್ನು ಹಾಕದ) ಸಾಮಾನ್ಯವಾದ ದೋಸೆ; ಖಾಲಿದೋಸೆ : ಸಿದ್ದ, ನಿನಗೆ ಸಾದಾದೋಸೆ ಬೇಕೋ? ಮಸಾಲೆದೋಸೆ ಬೇಕೋ? (ಕಪವು. ೬-೫). **ಸಾದಾನೇಯ್ಗೆ** = ಹೆಚ್ಚು ತೊಡಕಿಲ್ಲದ ಸರಳವಾದ ನೇಯ್ಗೆ : ಸಾದಾನೇಯ್ಗೆಗೆ ಕುಕ್ಕೆಯನ್ನು ಹೆಣೆಯುವಾಗ ಉಪಯೋಗಿಸುವ ಹೆಣಿಗೆ ಉಪಯೋಗಿಸಲ್ಪಡುತ್ತದೆ . . . ವಾಯಿಲ್, ಮಸ್ಲಿನ್, ಮಲ್ ಇವನ್ನು ಸಾದಾನೇಯ್ಗೆ ಉಪಯೋಗಿಸಿ ನೇಯುವರು (ಗೃಹವಿ. ೬೩). **ಸಾದಾಸೀದಾ** = ನೇರವಾದ ನಡವಳಿಕೆಯ; ಸರಳಸ್ವಭಾವದ : ಮೊದಲಿನಿಂದಲೂ ಅವನು ಸಾದಾಸೀದಾ ಮನುಷ್ಯನಲ್ಲ (ಸಾಹಜೆನ್. ೨೭೬). [<— ಪಾರ. ಸಾದ ; ಹಿಂ. ಸಾದಾ]

**ಸಾದಾಖ್ಯ** (ನಾ). [ವೀಶೈ] ''ಸಂತತ ಶಿವಭಾವದಿಂದಿರುವುದು'' (ವೀಶೈಪಾ. ೨೪-೬; 1961): ಆ ಸದಾಶಿವತತ್ತ್ವ ಸಾದಾಖ್ಯವೆನಿಸುತ ವಿಲಾಸಿಪುದು ಪಂಚಪ್ರಕಾರದಿಂ (ಲಶಿಚಿಂ. ೧-೨೩); ವಿಶ್ವವ್ಯಾಪಕವಾದ ನಿಷ್ಕಲಲಿಂಗವು . . . ಸಾಕಾರಲಿಂಗಗಳಾಗಿ ವಿಶ್ವದಲ್ಲಿ ನೆಲಸಿರುವುದು, ಇವು . . . ಸದಾಶಿವನಿಂದ ಹೊರಟು ಅವನ ಹೆಸರು ಮತ್ತು ಲಕ್ಷಣಗಳಿಂದ ಸಾದಾಖ್ಯಗಳೆನಿಸಿ ಜೀವರಿಗೆ ಅನುಗ್ರಹಮಾಡುತ್ತಿರುವುವು (ಶಕ್ತಿವಿ. ೨೬). 'ಪಂಚಸಾದಾಖ್ಯ' ಪರಾ. [ಸಂ.]

**ಸಾದಾಖ್ಯತತ್ತ್ವ** (ನಾ). = ಸಾದಾಖ್ಯ : ತದ್ವಿಂದುವಿಂ ಸದಾಶಿವನೆನಿಪ್ಪಾ ಸಾದಾಖ್ಯ ತತ್ತ್ವವಾಯ್ತು (ವೀಶೈಪು. ೬-೫-೧೩). [ಸಂ.]

**ಸಾದಾರತೆ** (ನಾ). ಆಧಾರವಾಗಿರುವಿಕೆ ; ಆಶ್ರಯಗುಣ : ಬೀರರಸಂಗಂ ಸಿತ ಪಂಕೇರುಹದಳನಯನೆ ರಬ್ಬಿಕಬ್ಬೆಗಮತಿಗಂಭೀರಗುಣಂ ಪುಟ್ಟಿದ ಸಾದಾರತೆಯೊಡವುಟ್ಟಿ ಕಂಬನೆಂಬ ಮಹಾತ್ಮಂ (ಸೌಇಇ. IX-I, ೧೫೫-೯; 1086).

[P ಇದು 'ಸಾಧಾರತೆ' ಎಂಬುದರ ಅಪಲಿಖಿತ]

**ಸಾದಿ** (ನಾ). ೧. ನಾಶಮಾಡುವಿಕೆ; ಹಾಳುಮಾಡುವಿಕೆ. ೨. ಕುಳಿತು ಕೊಂಡಿರುವವನು . ೩. ಕುದುರೆಯ ಸವಾರ; ರಾವುತ : ತಾರಾಪೀಡಂ . . . ವಾರ್ತೆಯನಾರಯ್ಯಲಾಪ್ತರನಿಸಿದ ಸಾದಿಗಳಂ ತ್ವರಿತಗತಂ ಬೆರಸಟ್ಟಿದಂ (ಕಾದಂಉ. ೬೬೧); ಕಡಿವಾಣವಿಡಿದೆಳೆದು ಬಲ್ಪಿಂದೆ ಸಾದಿಗಳ್ಪಡೆದೊಡಂ ನಿಲ್ಲದಶ್ವಶ್ರೇಣಿ ಪಡಲಿಟ್ಟುದು (ಶೇಷರಾ. ೧೦-೨೬). ೪. ಆನೆಯ ಸವಾರ ; ಮಾವುತ : ರಾವುತ್ತರ್ ಸಾದಿಗಳ್ ತೇರಾಳ್ಗಳ್ ದಂಡೆತ್ತಿ ಪೋದರ್ (ರಾಮಾಶ್ವ. ೯೩-೨೯). ೫. ರಥವನ್ನು ನಡೆಸುವವನು; ಸಾರಥಿ. ೬. ಆದಿಯನ್ನುಳ್ಳುದು; ಅನಾದಿಯಲ್ಲದುದು: ಏಕಜೀವಾಪೇಕ್ಷೆಯಿಂ ಅನಾದ್ಯಪರ್ಯವಸಾನಮುಂ ಅನಾದಿಪರ್ಯವಸಾನಮುಂ ಸಾದಿಪರ್ಯವಸಾನಮುಮೆಂದು ಭಂಗತ್ರಯಮಕ್ಕುಂ (ತತ್ತ್ವಪ್ರ. ೩೧).

[ಸಂ. ಸಾದಿ, ಸಾದಿನ್]

**ಸಾದಿತ** (ಗು). ೧. ಕುಳಿತುಕೊಂಡ; ಆಸೀನವಾದ. ೨. ಕುಳಿತುಕೊಳ್ಳುವಂತೆ ಮಾಡಿದ; ಕೂರಿಸಿದ. ೩. ನಿರುತ್ಸಾಹದಿಂದ ಕೂಡಿದ; ಖಿನ್ನವಾದ.

[ಸಂ.]

**ಸಾದಿಲ್ವಾರು** (ನಾ). (ಶಾಲೆ, ಕಚೇರಿ ಮುಂತಾದ ಕಡೆಗಳಲ್ಲಿ ಶಾಯಿ, ಕಾಗದ ಲೇಖನಿ ಮುಂತಾದುವಕ್ಕೆ ಬಳಸುವ) ಚಿಲ್ಲರೆಖರ್ಚು; ಅನಿರೀಕ್ಷಿತವಾಗಿ, ಆಗಂತುಕವಾಗಿ ಬರುವ ಸಣ್ಣಪುಟ್ಟ ವೆಚ್ಚ : ಹೊಟ್ಟೆಗೆ ಸಂಪಾದಿಸಲೇ, ಬಟ್ಟೆ ಹವಣಿಸಿಕೊಳ್ಳಲೇ, ಕಾಗದದ ಕಡ್ಡಿ ಸಾದಿಲ್ವಾರು ಹುಡುಕಿಕೊಂಡು ಹೋಗಲೇ! (ಶ್ರೀಕಥ. ೮೧); ತಿಂಗಳಿಗೆ ಎಂಟಾಣೆಯನ್ನಾದರೂ ಸಾದಿಲ್ವಾರಿಗೆ ಕೊಡಬೇಕು (ರಂಗಕ. ೫೦).

**ಸಾದಿಲ್ವಾರುಮೊಬಲಗು** = (ಕಚೇರಿ ಮುಂತಾದ ಕಡೆಗಳಲ್ಲಿ) ಚಿಲ್ಲರೆಖರ್ಚು, ಆಗಂತುಕವೆಚ್ಚಗಳಿಗೆ ಉಪಯೋಗಿಸಲು ಇರುವ ಹಣ : ಸಾದಿಲ್ವಾರು ಮೊಬಲಗನ್ನು ಹೆಚ್ಚಿಸಬೇಕು ಎಂಬುದು ಅವನ ತೀರ್ಮಾನವಾಗಿತ್ತು (ರಂಗಕ. ೫೦).

[<— ಮರಾ. ಸಾದಿಲ್‌ವಾರ್; ಅರ. ಸಾದಿರ್‌ವಾರಿದ್]

**ಸಾದಿಸು** (ಕ್ರಿ). ಹಿಂದಕ್ಕೆ ಪಡೆ; ಮರಳಿ ಪಡೆ : ಸಾದಿ[ಪಾಠಾಂ. ಧಿ]ಸುವೆಂ ಫಲ್ಗುಣನಿಂ ಸಾದಿ[ಪಾಠಾಂ. ಧಿ]ಸುವೆಂ ಪವನಸುತನ ಬಸಿಱಿಂ ಹಾ ಕರ್ಣಾ ದುಶ್ಶಾಸನ ತೆಗೆವೆಂ

ನಿರ್ದೋಷಿಬೇಟೆಕ್ಕೆ ಯಮಜನೊಳ್ ಪುದುವಾಟ್ಟೆಂ (ಗದಾಸಂ. ೪-೧೭). ☞ ಈ ಪದ್ಯದಲ್ಲಿ ಪ್ರಾಸಕ್ಕಾಗಿ ಕವಿಯು ಅಲ್ಪಪ್ರಾಣವನ್ನು ಬಳಸಿದಂತೆ ತೋರುತ್ತದೆ. [< ಸಾಧಿಸು]

**ಸಾದು₁** 'ಸಾಂದು' ನೋ.

**ಸಾದು₂** (ಗು). ೧. ಸಾಧುಸ್ವಭಾವದ; ಒಳ್ಳೆಯ. (ನಾ). ೨. ಒಳ್ಳೆಯತನ; ಸಾಧುಸ್ವಭಾವ : "ಸುಜನತ್ವ ಗಂಧಪ್ರವ್ಯಂಗಳೊಳ್ ಸಾದಕ್ಕು" (ಶಬ್ದಮಂ. ೧೧೧). ೩. ಸಾಧುಸ್ವಭಾವದ ವ್ಯಕ್ತಿ; ಸಜ್ಜನ: ಮಾತಾಳಿ, ಸಾದು, ಗಾಳು, ಪಾರು (ಭಾಷಾಭೂ. ೧೯೬ ಪ್ರಯೋ) ; ಸಾದು ಕೆರಳಿದ ತೆರಗಲೀ ಸಂವಾದ ಲೇಸೆಂದಮರರುಲಿಯಲು ಮಾಧವನ ಮೈದುನನು ಮದನನ ನೋಡಿ ನಸುನಗುತ . . . ಮರುಳೆ ಮರಳೆಂದ (ಕೋಗಯ. ೨೫ -೯೨).

**ಸಾದುಎತ್ತು, ಸಾದೆತ್ತು** = ಸೌಮ್ಯಸ್ವಭಾವದ ಎತ್ತು : ಹೊಸದಾಗಿ ಹೂಡಿದ ಮೂಡಲ ಹೋರಿ ಮುಸುಗರೆದು ಅಡ್ಡಾದಿಡ್ಡಿ ಜಗ್ಗುತಿದೆ. ಜೊತೆಗಿರುವ ಸಾದುಎತ್ತಿನ ಕೂಡ ಕಾದಾಟ (ನೆಲಮು. ೩೨-೫); ಕೆಂದ ಸಾದೆತ್ತಾಗಿ ಮುಂದಣಿವ ಮಗನಾಗಿ ಕುಂದದಲೆ ಗೆಯ್ಯ ಸೊಸೆಯಾದರಾ ಮನೆಗೆ ಬಿಂದಿಗೆಯ ಹೊನ್ನು (ಸರ್ವಜ್ಞ. ೧೭೧೫). [< ಸಂ. ಸಾಧು]

**ಸಾದುಗಪ್ಪು** (ನಾ). ಸಾಮಾನ್ಯವಾದ ಕಪ್ಪು; ನಸುಕಪ್ಪು: ಇಬ್ಬರ ಬಣ್ಣವೂ ಸಾದುಗಪ್ಪೇ (ಕಲಾಜ್ಯೋ. ೩); ಸ್ವರ್ಣವರ್ಣದ ಹೆಂಗಳೆಯರಿಗೆ ಕರಿಯ ಚಂದ್ರಕಾಳಿಯ ಸೀರೆಯೂ, ಸಾದುಗಪ್ಪಿನವರಿಗೆ ಬಿಳಿಯ ಪತ್ತಲಗಳೂ ಸೇರುವವು (ಅಂಬಿಕೆ. ೨೭). [ಸಾದು₂ + ಕಪ್ಪು₄ (< ಕರ್ಪು₁)]

**ಸಾದುಗಿಜು** (ಕ್ರಿ). ಒಳ್ಳೆಯ ವ್ಯಕ್ತಿಯೆಂದು ಭಾವಿಸು : ಸಾದುಗತ್ತು ಬಗೆಯಾದವ ನಾನೋಡಲಟ್ಟಿದೆಂ (ಕವಿರಾ. ೧-೧೨೮). [ಸಾದು₂ + ಗಿಜು]

**ಸಾದೃತ** (ನಾ). = ಸಾದರಣ : "ಸಾದೃತಂ ಸಾದಂEರತಿಣಂ" (ವಸ್ತುಕೋ. ೧೧೧-೨೦). [?]

**ಸಾದೃಶ್ಯ** (ನಾ). ಹೋಲಿಕೆ; ಒಂದೇ ರೀತಿ ಇರುವಿಕೆ : "ವಿದ್ಧಂಸೂರ್ಯಾಭಿಮುಖಾಯುದ್ಧಂ ಸಾದೃಶ್ಯಮಪ್ಪುದುಂ ತಾಂ ವಿದ್ಧಂ" (ವಸ್ತುಕೋ. ೧೨೭-೫೭); ನೃಪತಿಯ ಮರಣಸಾದೃಶ್ಯಪ್ರಹಾರವ್ಯಥೆಯ ಕಾಣಿಕೆಗೆ ಅರರೆ ಭಾಜನವಾದೆನ್ಯೆ ಹರಹರ ಮಹಾದೇವಾ (ಕುವ್ಯಾಕ. ೧೨-೯). [ಸಂ.]

**ಸಾದೇವ** (ನಾ). ಜೊತೆಯಲ್ಲಿರುವ ದೇವತೆ : ಸಹದೇವ — ಸಾದೇವ (ಶಮದ. ೨೯೧ ಪ್ರಯೋ); ಸಾದೇವಂ, ಸಹದೇವಂ (ಶಬ್ದಾನು. ೩೭೪ ಪ್ರಯೋ). [< ಸಂ. ಸಹದೇವ]

**ಸಾದ್ಯಂತ** (ಗು). ೧. ಮೊದಲಿನಿಂದ ಕೊನೆಯವರೆಗಿನ; ಸಮಗ್ರವಾದ : ಮರುದಿನ ರಾಚಪ್ಪನಿಗೆ ಸಾದ್ಯಂತ ಹಕೀಕತ್ತನ್ನು ವಿವರಿಸಿದೆ (ದೀಪಹ. II.೧೯೦). (ನಾ). ೨. ಮೊದಲಿನಿಂದ ಕೊನೆಯವರೆಗಿರುವುದು; ಸಮಗ್ರವಾದುದು : ಅವನ ಹದಿನಾಲ್ಕುವರ್ಷಗಳ ಇತಿವೃತ್ತ ಸಾದ್ಯಂತವಾಗಿ ಕೇಳಿ ಭಟ್ಟರಿಗಾದ ಆನಂದ — ಆಶ್ಚರ್ಯ ಅಷ್ಟಿಷ್ಟಲ್ಲ (ಹೊಸಕ್ಕಿ. ೭೨). [ಸಂ.]

**ಸಾಧಕ** (ನಾ). ೧. ನೆರವೇರಿಸುವುದು; ಪೂರೈಸುವುದು. ೨. ಅಭ್ಯಾಸ; ಪರಿಶ್ರಮ: 'ಕತ್ತಿಸಾಧಕ', 'ಗರುಡಿಸಾಧಕ' ಪರಾ. ೩. ಕಾರ್ಯವನ್ನು ಸಾಧಿಸುವವನು. ೪. (ಅಧ್ಯಾತ್ಮ, ಯೋಗ ಇತ್ಯಾದಿ) ಸಾಧನೆಯ ಪಥವನ್ನು ಹಿಡಿದವನು; ಸಾಧನೆಯ ಹಾದಿಯಲ್ಲಿರುವವನು : ವೇದಕ್ಕೆ ಬೆಲೆಯಿಲ್ಲ ಭೇದಕ್ಕೆ ಹೊಲಬಿಲ್ಲ ಸಾಧಕಗೆ ಆವ ಭಯವಿಲ್ಲ (ಸರ್ವಜ್ಞ. ೩೯೨); ಈಶ್ವರೋಪಾಸನೆಯು ಮೋಕ್ಷಕ್ಕೆ ಸಾಧನವಾಗುತ್ತದೆ, ಸಾಧಕನು ಶಾರೀರಕ ಮತ್ತು ಮಾನಸಿಕಪ್ರಯತ್ನಗಳಿಂದ ಕ್ರಮಕ್ರಮವಾಗಿ ವಿಕಾಸವನ್ನು ಪಡೆಯಬೇಕು (ಭಾರದ. ೧೫೧). ೫. ಕುಶಲನಾದವನು; ನಿಪುಣ; ಸಮರ್ಥ : ಕೈಕರಣೆಗಳಲಧಿಕನನತಿಶುಚಿಯ ಸಾಧಕನನಕ್ರೋಧಿಯನನಾಲಸನ . . . ಪತಿಕರಿಸುವುದು ಸೂಪಕಾರತೆಗೆ (ಕುವ್ಯಾಉ. ೩-೯೨). ೬. ಯಕ್ಷಿಣಿಗಾರ; ಐಂದ್ರಜಾಲಿಕ : ಭೈರವನಂತ ಭಾಂಕಾರಂಗುಡುತಿರ್ಪ ಸಾಧಕರಿಂ (ಕಾವ್ಯಸಾ. ೫೭೮ ಶೂದ್ರಕ); ಯಂತ್ರತಂತ್ರಗಳ ಸಾದರದಿ ಸಾಧಿಸಿಹ ಘುಟಿಕಾಪಾದುಕಾಸಿದ್ಧಿಗಳ ಪಡೆದಿಹ ಸಾಧಕರು ಮೊದಲಾ ಕಾಲಾಧೀನರಾಗಿಹರು (ಅಮೃತ. ೨-೩೭). ೭. ಸಹಾಯ ಮಾಡುವಿಕೆ; ಸಹಕಾರವನ್ನು ಒದಗಿಸುವಿಕೆ : (ಕಿ). ೮. ಸಾಧಿಸಿದುದು ; ಸಿದ್ಧಿ : ಶಪಸಪ್ರವೀಣರು — ಈ ಮೊದಲಾದವರು ತಂತಮ್ಮ ವಿದ್ಯಾಪರಿಶ್ರಮದ ಕಲಾಪರಿಣತಿಯ ಸಾಧಕಗಳಿಂದ ಆಸ್ಥಾಯಿಕೆಯ ಮನೋರಂಜನವನ್ನು ಸಿದ್ಧಿಗೊಳ್ಳತೊಡಗುವರು (ಚಿಬ್ಬಅ. ೩೨-೧೧). ೯. ರಸವಿದ್ಯೆಯನ್ನು ಬಲ್ಲವನು : ಬಳವೈರಿಯೆಂಬ ಸಾಧಕ ನಿಳೆಯಂ ಪೊಸಮೂಸೆ ಮಾಡಿ ಶಶಿಮಂಡಲಮಂ ಗುಳಿಗೆಯಿಡ ತಿಮಿರಕಾಳಿಕೆ ತಿಳಿದಂತೆ ಜಲಕ್ಕನಾಯ್ತು ಪೊಸವೆಳ್ದಿಂಗಳ್ (ಅನಂಪು. ೭-೮೫). ೧೦. ಅಂಗಸಾಧನೆ ; ವ್ಯಾಯಾಮ : ಕೆಲವು ಆಪ್ತರು ಅರಸುಮಕ್ಕಳು ಊಳಿಗದವರು ಸಹ ಗರುಡಿಗೆ ಬಂದು ಹವಣಾಗಿ ಸಾಧಕವಂ ಮಾಡಿ (ವಚಿಕಾ. ೨); ಈ ಐದು ಜನರೂ ಒಂದೇ ಗರಡಿಯಲ್ಲಿ ಸಾಧಕವನ್ನು ಮಾಡಿದರು (ನೀತಿಚಿಂ. XII, ೪). ೧೧. ಶಸ್ತ್ರಗಳ ಪ್ರಯೋಗದ ರೀತಿ, — ಕ್ರಮ : ಆ ಕುಮಾರರು . . . ತಿರುಗುಚಕ್ರ ಗಂಡುಗೊಡಲಿ ಮೊದಲಾದ ಸಾಧಕಗಳನು ಕಲಿತು . . . ಆ ಗುರುಗಳಿಗೆ ಮನಸ್ಸಂತೋಷಮಾಡಿದರು (ವಚಿಕಾ. ೮). ೧೨. ಸಾಧನವಾದುದು; ಸಲಕರಣೆ; ಉಪಕರಣ : ತ್ರಿಜಗತ್ಸಾರಂ ಭಾವಿಪೊಡೆ ಜೋಯಿಸಂ ಸಾರಮಲ್ಲಿ ಜಾತಕಮದು ವಿಶ್ವಜನಾನಂದಿತಜೋತಿಷವು ಜಾತಕಮನಿಪ್ಪ ಸೂಕ್ತಿ ಸಾಧಕಮದಱಿಂ (ಜಾತಕ. ೧-೧೫). ೧೩. ನಂಜಿಕೊಳ್ಳುವ ಸಾಧನ; ವ್ಯಂಜನಪದಾರ್ಥ; ಮೇಲೋಗರ : ಇಂದು ನಿಮ್ಮ ಮನೆಯಲ್ಲಿ ಏನು ಸಾಧಕ ಮಾಡಿದ್ದೀರಿ? (ರೂಢಿ). ೧೪. [ಜೈನ] ಸಮಾಧಿಮರಣವ್ರತ; ಸಲ್ಲೇಖನ : ಸಾಧಕಮಂಬುದು ಜೀವಿತಾಂತ್ಯದೊಳು ದೇಹಾಹಾರತ್ಯಾಗಂಗೆಯ್ದು ಪರಮಧ್ಯಾನ ಶುದ್ಧಿಯಿಂ ಲೋಕಾಗ್ರದೊಳು ಮತಿಯನಿಡುವುದು (ಚಾವುಂಪು. ೨೨೭).

**ಸಾಧಕಬಾಧಕ** = ಅನುಕೂಲ ಮತ್ತು ಪ್ರತಿಕೂಲ : ಊಹೆಯು ಎಲ್ಲ ವಿಧದಲ್ಲೂ ಸರಿಯಾಗುವುದೇ ಎಂದು ಅದರ ಸಾಧಕಬಾಧಕಗಳನ್ನು ಪರಿಶೀಲಿಸಬೇಕು (ಶಿಕ್ಷಪ. ೫೪೦); ಸಾಧಕಬಾಧಕಗಳನ್ನು ಮುಂದಿಟ್ಟು ಸ್ಪಷ್ಟವಾಗಿ ಚರ್ಚಿಸಿದರು (ಓಂಕರು. ೩೫). [ಸಂ.]

**ಸಾಧಕಪ್ರತ್ಯಯ** (ನಾ). [ವ್ಯಾಕ] ಪ್ರಕೃತಿಯನ್ನು ಪದವನ್ನಾಗಿ ಸಾಧಿಸುವ ಪ್ರತ್ಯಯ; ಸಾಧಿತಪ್ರತ್ಯಯ : ಹಳೆಗನ್ನಡಶಬ್ದಗಳ ಮೂಲರೂಪದ ವರ್ಣಗಳು ಹೊಸಗನ್ನಡದಲ್ಲಿ ಬದಲಾದದ್ದಲ್ಲದೆ, ವ್ಯಾಕರಣದಲ್ಲಿ ಸಹ, ವಿಶೇಷವಾಗಿ ಸಾಧಕಪ್ರತ್ಯಯಗಳಲ್ಲಿಯೂ, ವಿಭಕ್ತಿಪ್ರತ್ಯಯಗಳಲ್ಲಿಯೂ ಬಹಳ ಭೇದ ಉಂಟಾಗಿದೆ (ಮುಂಬಯಿ. ೫-೨೪೨). [ಸಂ.]

**ಸಾಧಕಿ** (ನಾ). ೧. ಸಾಧನೆಯನ್ನು ಮಾಡುವವಳು. ೨. ವಾಮಾಚಾರದ ಸಾಧನೆಯನ್ನು ಮಾಡುವ ಸ್ತ್ರೀ; ಕಾಪಾಲಿಕಪಂಥದ ಸ್ತ್ರೀ : ಪಾವುಗೆ ಪಂಚಮಸ್ಸನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೫೩೩). [ಸಾಧಕ + -ಇ₂]

**ಸಾಧನ** (ನಾ). ೧. ಗುರಿಮುಟ್ಟುವ ಪ್ರಯತ್ನ; ಸಿದ್ಧಿಯನ್ನು ಪಡೆಯುವ ಯತ್ನ : ನಮ್ಮೆಲ್ಲ ಬಗೆಯಾದ ಪ್ರವೃತ್ತಿ, ನಿವೃತ್ತಿ, ಸಾಧನ, ಸಿದ್ಧಿ ಕರ್ಮ ಮೊದಲಾದವುಗಳಲ್ಲಿ . . . ಪರಮಾತ್ಮನ ಕೈವಾಡವು ಅವರವರ ಕರ್ಮಕ್ಕೆ ತಕ್ಕಂತೆ ಉಂಟೆಂಬ ರಹಸ್ಯಪ್ರಮೇಯದ ವಿಮರ್ಶೆಯನ್ನು ಕೂಲಂಕಷವಾಗಿ ಮಾಡಿರುವುದು ದ್ವೈತಸಿದ್ಧಾಂತದ ಒಂದು ದೊಡ್ಡವೈಶಿಷ್ಟ್ಯ (ಭಾರದ. ೨೪೦). ೨. (ಕಾರ್ಯವನ್ನು) ಸಾಧಿಸುವಿಕೆ ; ಗುರಿಮುಟ್ಟುವಿಕೆ : 'ಕಾರ್ಯಸಾಧನ' ಪರಾ. ೩. ಪೂರೈಸುವಿಕೆ; ನೆರವೇರಿಸುವಿಕೆ. ೪. ಪಡೆಯುವಿಕೆ; ಗಳಿಸುವಿಕೆ : (ಕಿ). ೫. (ಆಯುಧ, ಯಂತ್ರ ಮೊದಲಾದ) ಸಾಮಗ್ರಿ; ಉಪಕರಣ; ಸಲಕರಣೆ : ಕೊಡೆ ಟಕೆ ತಳ್ತ ಸೀಗುರಿ ಕರೀಂದ್ರಘಟಾಳಿ . . . ಏಗಡಿಸದ ಗಾಡಿಕಾರ್ತಿಯರ ಬರ್ಪ ನಿಯೋಗಿಗಳಾದ ಚೆಲ್ವನಾವೆಡೆಯೊಳಮಿಾಯೆ ಕಣ್ಗೊಸಗೆಯಂ ಪಡೆದತ್ತು ಸಮಸ್ತಸಾಧನಂ (ಆದಿಪು. ೪-೯೨); ಸಾರಥಿಯ ಬಲುಹಿಲ್ಲದಿರ್ದಡೆ ಭೂರಿಸಾಧನವಿವು ನಿರರ್ಥಕವು (ಕುವ್ಯಾಕ. ೫-೭); ಒಲ್ಲನೋ ಹರಿ ಕೊಳ್ಳನೋ ಎಲ್ಲ ಸಾಧನವಿದ್ದು ತುಳಸಿ ಇಲ್ಲದ ಪೂಜೆ (ಪುರಂದ. ೨-೭೯ ಅನುಪಲ್ಲವಿ). ೬. (ಕಾರ್ಯಸಾಧಕವಾದ) ಕಾರಣ; ಹೇತು; ನಿಮಿತ್ತ : ಸದ್ಧರ್ಮದಾ ಸತಿಯೇ ಸರ್ವಕೆ ಸಾಧನಂ (ಸೋಮೇಶ. ೮). ೭. ಸೈನ್ಯ; ದಳ : ಶ್ರೀಯನರಾತಿಸಾಧನಪಯೋನಿಧಿಯೊಳ್ ಪಡೆದುಂ ಧರಿತ್ರಿಯಂ ಜೀಯನ ಬೇಡಿಕೊಳ್ಳದ

. . . ಇಂತುದಾತ್ತನಾರಾಯಣನಾದ ದೇವನೆಮಗೀಗರಿಕೇಸರಿ ಸೌಖ್ಯಕೋಟಿಯಂ (ಪಂಪಭಾ. ೧-೧); ಕಱೆಯೆ ಬಲ್ಸರಿಯೆಂಬಿನಮಂಬನಂಬು ನಟ್ಟುದೆ ನೆಱನಾಗೆ ಕೂಡೆ ಗತಜೀವಿತಮಾಯ್ತು ಕಿರಾತಸಾಧನಂ[ಪಾಠಾಂ. ಸಂಕುಲಂ] (ಪಂರಾಮಾ. ೪-೬೩); ಸಕಲರಿಪುಸಾಧನವನೊಬ್ಬನೆ ಕರ್ಣ ಗೆಲಿದನು (ಕುವ್ಯಾಕ. ೧೧-೬). **೮. ಸೈನ್ಯದ ಭಾಗ; ಸೇನೆಯ ತುಕಡಿ** : ''ಸಾಧನಮೆನೆ ಸೇನಾಂಗಂ'' (ವಸ್ತುಕೋ. ೧೩೪-೯೮). **೯. ಸಹಾಯ; ನೆರವು** : (ಕ). **೧೦. ಮಂತ್ರತಂತ್ರಗಳಿಂದ ಜಯಿಸುವುದು,— ಹತೋಟಿಗೆ ತೆಗೆದುಕೊಳ್ಳುವುದು. ೧೧. ಅಭ್ಯಾಸ; ಸಾಧನೆ ಮಾಡುವಿಕೆ**: ಸಂಗೀತದ ಸಾಧನ, ನಿರೂಪಣ, ಪೋಷಣ ಮಿಗಿಲಾಗಿ ಅಭಿರುಚಿ ಮತ್ತು ಪ್ರವೃತ್ತಿಗಳಲ್ಲಿ ಆಗುವ ಬದಲಾವಣೆಗಳು ಗಮನಾರ್ಹ (ಭಾರದ. ೫೪೫). **೧೨. ಕೊಲ್ಲುವಿಕೆ; ವಧಿಸುವಿಕೆ. ೧೩. ಹೋಗುವಿಕೆ ;ತೆರಳುವಿಕೆ. ೧೪. ಹಿಂದಿನಿಂದ ಹೋಗುವಿಕೆ; ಹಿಂಬಾಲಿಸುವಿಕೆ. ೧೫. ಔಷಧಿ; ಮದ್ದು. ೧೬. ಪುರುಷನ ಜನನೇಂದ್ರಿಯ; ಶಿಶ್ನ. ೧೭. ಧನ; ಐಶ್ವರ್ಯ. ೧೮. ಸ್ನೇಹ; ಗೆಳೆತನ. ೧೯. ಲಾಭ; ಪ್ರಯೋಜನ. ೨೦. ಯುದ್ಧ; ಕದನ. ೨೧. ಶವವನ್ನು ಸುಡುವಿಕೆ; ಶವದಹನ. ೨೨. ಕಾಯ, ವಚನ ಮತ್ತು ಮನಸ್ಸು ಎಂಬ ತ್ರಿಕರಣಗಳು; ಕರಣತ್ರಯ** : ''ಸಾಧನಂ ತಾಂ ಕರಣಂ'' (ವಸ್ತುಕೋ. ೧೩೪-೯೮). **೨೩. ಹಸು ಮೊದಲಾದ ಪ್ರಾಣಿಗಳ ಕೆಚ್ಚಲು. ೨೪. ಪ್ರಮಾಣ; ಸಾಕ್ಷ್ಯ; ಸಕಾರಣವಾಗಿ ಸಾಧಿಸುವಿಕೆ. ೨೫. ಹಿಂಸೆ; ತೊಂದರೆ** : (ಕ). **೨೬. ಪೂಜೆ; ಉಪಾಸನೆ. ೨೭. ಲೋಹಮಾರಣ; ಲೋಹಪುಟ. ೨೮. ಕೀರ್ತಿವಂತ; ಯಶೋವಂತ**: (ಕ). **೨೯. ದಿಕ್ಕು; ದಿಸೆ**: (ಕ). **೩೦. ಸಹಾಯಕವ್ಯಕ್ತಿ** : (ಕ). **೩೧. ಅನ್ನ ಮೊದಲಾದ ಆಹಾರಗಳ ರುಚಿ; ಷಡ್ರಸ** : (ಕ). **೩೨. ದಾಖಲೆ; ದಸ್ತಾವೇಜು** : ಭೂಕಾಣಿಯನು ದೇವರಿಗೆ ಬಿಟ ಸಾಧನ (ಎಕ. X (s), ಬೌರಿಂಗ್. ೧೧೨-೧; 14ನೆಯ ಶತ); ಇಂಗ್ರೇಜದೊಡ್ಡಸರಕಾರಕ್ಕೆ ಅರಿಕೆ ಆಗುವ ಬಗ್ಗೆಯೂ, ಸಮಸ್ತ ಜನರು ತಿಳಿಯುವ ಬಗ್ಗೆಯೂ, ಈ ಸಾಧನದಲ್ಲಿ ಬರೆಸಿ, ಕೊಡಗಿನ ರಾಜಸ್ಥಾನದಲ್ಲಿ ಇಟ್ಟು ಇದೆ (ರಾಜೇಂದ್ರ. ೧೧೦). **೩೩. [ನ್ಯಾಯ] ತರ್ಕಸರಣಿ ಅಥವಾ ನ್ಯಾಯ ಸರಣಿಯ ಮಧ್ಯಪದ; ಸಿದ್ಧಾಂತಸಮರ್ಥನೆಯ ಕಾರಣ** : ಅದು ಸಾಧನ ದೂಷಣ ಪ್ರಯೋಗಾನ್ಯಥಾನುಪಪತ್ತಿಯಿಂ ಬಹಿರರ್ಥಸಿದ್ಧಿಯಕ್ಕುಮದಱಿಂ ವಿಜ್ಞಾನ ಮಾತ್ರಮೆ ತತ್ತ್ವಮಾತ್ಮಾದಿ ತತ್ತ್ವಮಿಲ್ಲೆಂಬ ನಿನ್ನ ಮಾತು ಭಿನ್ನಭಾಜನಸಮಾನಂ (ಆದಿಪು. ೨-೧೦ ವ). **೩೪. ಸಾಲದ ಹಣ; ದಂಡ ಮುಂತಾದುವುಗಳನ್ನು ಕೊಡಲು, ಆಸ್ತಿಯನ್ನು ಸ್ವಾಧೀನಪಡಿಸಲು, ಮಾಡುವ ಬಲಾತ್ಕಾರ,— ಜುಲುಮೆ.** ''ವಸುವಿನೊಳು ಪೀಡೆಯೊಳು ಕಾರ್ಯದೊಳು ಲಿಂಗವರ್ಚಸದೊಳು ಕುಠಾರಾದಿಯೊಳು ಕರಣದೊಳು ಗೃಹಕ್ಕೆಸೆವ ಮುಟ್ಟುಗಳೊಳನ್ನಾದಿ ರುಚಿಕಾರದೊಳು ಸಾಧನಾಖ್ಯಮೆನಿಕ್ಕುಂ'' (ಮಂಗರಾ. ೧೪೭-೩೭); ''ವಸುವಿನೊಳಾಶೆಯೊಳ್ ಪಡೆಯೊಳಂಕದೊಳಾಯತದಲ್ಲಿ ಲಿಂಗವರ್ಚಸದೊಳಗನ್ನಮುಖ್ಯರುಚಿಸಂಚಯದೊಳ್ ಕರಣತ್ರಯಂಗಳೊಳ್ ಜಸಯುತನೊಳ್ ಗೃಹೋಪಕರಣಂಗಳೊಳುತ್ತಮಕಾರ್ಯದಲ್ಲಿ ವರ್ತಿಸುವದು ಸಾಧನಾಹ್ವಯ'' (ನಾನಾರ. ೧೧೫). [ಸಂ.]

**ಸಾಧನಂಗುಡು (ಕ್ರಿ). ಅವಶ್ಯಕವಾದ ವಸ್ತುಗಳನ್ನು ಕೊಡು; ಅಗತ್ಯವಾದ ಸಲಕರಣೆಗಳನ್ನು ಒದಗಿಸು** : ಶಿವಾರ್ಚನೆಗರ್ಘ್ಯಜಲಂಗಳೀವ ನೀಡಾಗದೆ ಸಾಧನಂಗುಡುವ . . . ತಾಪಸೇಂದ್ರರ ಕುಮಾರಿಯರೊಪ್ಪುಗುವಲ್ಲಿ ಸಂತತಂ (ಶಬಶಂ. ೨-೬೪). [ಸಾಧನ + ಕುಡು$_1$(< ಕೊಡು$_1$)]

**ಸಾಧನಗಾತಿ (ನಾ). ಅಂಗಸಾಧನೆ ಮಾಡುವವಳು** :ಆ ಸಾಧನಗಾತಿಯು ಕಾಮನ ಗರಡಿಯೊಳ್ . . . ಕಣ್ಣುಗಳಂ ಮುಚ್ಚಿ (ಸೌಗಂಧಿ. ೫೫೮-೧೫). [ಸಾಧನ + - ಕಾತಿ$_5$]

**ಸಾಧನಗೈ (ಕ್ರಿ). ಅಂಗಸಾಧನೆ ಮಾಡು; ಕಸರತ್ತುಮಾಡು** : ಗರಡಿಯೊಳಗೆ ಸಾಧನಗೈದು ದೇಹದೊಳಿರುವ ಜಲವ ಮೇಲೆ ಧರಿಸಿ ಮಿಱುಪ ಕುಂಕುಮವಸನದೆ ಕೈಸಾಣೆಯ ದೊರೆಗಳ ಕುವರರ್ಕೈದಿಹರು (ಕಂನವಿ. ೭-೧೭). [ಸಾಧನ + ಗೈ (< ಕೆಯ್$_1$)]

**ಸಾಧನಚತುಷ್ಟಯ (ನಾ). [ವೇದಾಂತ] ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರ ಫಲ ಭೋಗವಿರಾಗ, ಶಮಾದಿಷಟ್ಕಸಂಪತ್ತಿ ಮತ್ತು ಮುಮುಕ್ಷುತ್ವಗಳೆಂಬ ನಾಲ್ಕು ಬಗೆಯ ಮೋಕ್ಷಸಾಧಕವಾದ ಹೇತುಗಳು** : ಸಾಧನಚತುಷ್ಟಯವ ವೇದಿಸುತೆ ತತ್ವಮಸ್ಯಾದಿ ವಾಕ್ಯಂಗಳಿಂ ಬೋಧಿಸುತೆ (ಮನೋವಿ. ೧-೩೧); ಶಮಾದಿಷಟ್ಕವ ಪಡೆದು ಮೋಕ್ಷವನು ಅರ್ಥಿಸುತ ಸಾಧನಚತುಷ್ಟಯ ಸತ್ಯಸಂಪತ್ತಿರ್ದು ನಿರ್ಮಲ ಚಿತ್ತನಾದುತ್ತಮಗೆ ಪೇಳೀ ಅನುಭವಾಮೃತವ (ಅಮೃತ. ೩-೩). [ಸಂ.]

**ಸಾಧನಸಮಗ್ರ (ನಾ). ಆಯುಧಗಳ ಬಳಕೆಯಲ್ಲಿ ಪ್ರಾವೀಣ್ಯವನ್ನು ಪಡೆದವನು; ಶಸ್ತ್ರವಿದ್ಯಾಪ್ರವೀಣ** : ಮುಮ್ಮೊನೆಯ ಬೋಳೆಯ ಸರಳಿನಲಿ ಸಾಧನಸಮಗ್ರರು ಶಿಶುವನೆಚ್ಚರು ದೆಸೆದೆಸೆಗೆ ಕವಿದು (ಕುವ್ಯಾದ್ರೋ. ೬-೧೧). [ಸಂ.]

**ಸಾಧನಸಿದ್ಧಿ (ನಾ). ಸಾಧನೆಯ ಪರಿಪೂರ್ಣತೆ, — ಸಫಲತೆ** : ಮನಸಿಜಮಂತ್ರ ದೇವತೆಯರಂಗನೆಯರ್ ತದುದಾರಸಾರಸಾಧನೆಗನುಸಾರಿಯಪ್ಪ ಸಕಲೀಕರಣಂಗಳ ವಾವುವೆನ್ನ ನಚ್ಚಿನ ಸೊಬಗೆಂತುಮಾಗೆ ತನಗೆನ್ನದ ನಿಶ್ಚಯಮಪ್ಪ ದಾನಮೆಂಬಿನಿತನಿತಿಲ್ಲದೊಂದೆ ಗಣಿಕಾಜನಸಾಧನಸಿದ್ಧಿಯಕ್ಕುಮೇ (ಶಾಂತಿಪು. ೮-೯೯). [ಸಂ.]

**ಸಾಧನಿ (ನಾ). ನಂಜಿಕೊಳ್ಳುವ ಸಾಧನ, — ವ್ಯಂಜನ** : ಮೇಲೆ ಸಾಧನಿಗೆ ಚಟ್ನಿಣಿಯೋ ಬೇಳೆಹುಳಿಯೋ ಇದ್ದರೂ ಸರಿಯೇ (ವಿಜಯ. ೧೦೬). [< ಸಾಧನ]

**ಸಾಧನೆ (ನಾ). ೧. (ಅಧ್ಯಾತ್ಮ, ಸಂಗೀತ ಇತ್ಯಾದಿಗಳ ಸಿದ್ಧಿಗಾಗಿ ಮಾಡುವ) ಪರಿಶ್ರಮ; ಅಭ್ಯಾಸ** : ಸಾಧಕಗೆ ತಿಳಿಯುವುದು ತುದಿಯಲ್ಲಿ ಸಾಧನೆಯೆ ಸಿದ್ಧಿ ಎಂದು (ಪಾಂಚಜ. ೪೫-೧೨); ಕೊನೆಗೆ ಒಂದು ದಿನ ಭಟ್ಟರಿಗೆ ಚಳಿಜ್ವರ ಬಂದು ಸಾಧನೆಗೆ ಸ್ವಲ್ಪ ವಿಚ್ಛಿತ್ತಿ ಬಂದಿತ್ತು (ರಾಮಾನ. ೯೩). **೨. ಸಾಧಿಸಿದುದು; ಸಿದ್ಧಿ** : ಇಂತು ವಿದ್ಯೆ ಗುಣ ಜ್ಞಾನ ಧರ್ಮ ಆಚಾರಶೀಲಂಗಳ ನಮ್ಮ ಕೂಡಲಸಂಗನ ಶರಣರು ಸಾಧಿಸಿದ ಸಾಧನೆಯನೆ ಸಾಧಿಸುವುದು (ಬಸವ. ೬೧೩). **೩. ಅಂಗಸಾಧನೆ; ವ್ಯಾಯಾಮ** : 'ಗರುಡಿಸಾಧನೆ' ಪರಾ. **೪. ಸ್ವಾಧೀನ; ವಶ** : 'ಸಾಧನೆವೋಗು' ಪರಾ. **೫. = ಸಾಧನಚತುಷ್ಟಯ** : ಸಾಧನೆಗಳಾವಾವೆಂದರೆ ನಿತ್ಯಾನಿತ್ಯ ವಸ್ತು ವಿವೇಕವೆಂದು . . . ಮುಮುಕ್ಷುತ್ವವೆಂದು ನಾಲ್ಕುವಿಧಮಾಗಿಪ್ಪುದು (ನಾನಾಗು. ೧೯-೨). **೬. [ಗಣಿತ] ಉತ್ತರರೂಪವಾದ ಫಲಿತಾಂಶ, ಎಣಿಕೆ ಇತ್ಯಾದಿಗಳ ಯಥಾರ್ಥತೆಯನ್ನು ಪರಿಶೀಲನೆಮಾಡುವ ಕ್ರಮಬದ್ಧವಾದ ವಿವರಣೆ, — ಗಣಿತಕ್ರಿಯೆ** : ಈ ದೇಶಗಳಲ್ಲೆಲ್ಲಾ ತೀವ್ರವಾದ ತರ್ಕವನ್ನವಲಂಬಿಸಿದ ಸಾಧನೆ(Proof)ಯ ಕಡೆಗೆ ಅಷ್ಟಾಗಿ ಪ್ರಾಮುಖ್ಯತೆಯು ತೋರಿರಲಿಲ್ಲ (ಗಣಚ. ೧೮).

**ಸಾಧನೆ ಮಾಡು = ೧. ಅಭ್ಯಾಸ ಮಾಡು; ಅಭ್ಯಾಸ ನಡೆಸು** : ಬೆಳಿಗ್ಗೆ ಹೊತ್ತಿಗ ಮುಂಚೆ ಎದ್ದು ಕತ್ತಿನವರೆಗೂ ತಣ್ಣೀರಿನಲ್ಲಿ ಮುಳುಗಿ ಅಕಾರ ಉಕಾರ ಸಾಧನೆ ಮಾಡಿದರೆ ನಿಮಗೆ ಪಲುಕು ಬರುತ್ತೆ (ರಾಮಾನ. ೯೩). **೨. ವ್ಯಾಯಾಮ ಮಾಡು; ಕಸರತ್ತು ನಡೆಸು** : ಅವನು ಗರುಡಿಮನೆಯಲ್ಲಿ ನಿತ್ಯವೂ ಸಾಧನೆ ಮಾಡುತ್ತಾನೆ (ರೂಢಿ). **೩. (ಯಾವುದೇ ವಸ್ತುವನ್ನು) ಹಿಂತಿರುಗಿಸಲು ಒತ್ತಾಯಪಡಿಸು; ವಸೂಲುಮಾಡು** : (ಕ). **೪. ಪ್ರಯತ್ನದಿಂದ ಪಡೆ; ಪರಿಶ್ರಮದಿಂದ ಗಳಿಸು; ಸಾಧಿಸು** :ನೀನು ಅವರ ಮೇಲೆ ದ್ವೇಷಕಟ್ಟಿಕೊಂಡರೆ ಏನು ಸಾಧನೆ ಮಾಡಿದಂತಾಯಿತು? (ರೂಢಿ). **೫. ರೂಢಿಸು; ಕಾರ್ಯರೂಪಕ್ಕೆ ತರು** : ಹಾವು ಹನ್ನೆರಡುವರ್ಷವಾದರೂ ದ್ವೇಷವನ್ನು ಸಾಧನೆ ಮಾಡುತ್ತದೆ (ರೂಢಿ). [ಸಂ. ಸಾಧನ]

**ಸಾಧನೆಗೆಯ್ಯು, ಸಾಧನೆಗೈ (ಕ್ರಿ). ೧. ಅಂಗಸಾಧನೆ ಮಾಡು ;ಕಸರತ್ತುಮಾಡು**: ಪೊಡೆವಟ್ಟು ಬೇಡಿಕೊಂಡೆದ್ದು ಸಾಧನೆಗೆಯ್ಯತೊಡಗಿದ ಜಗಜಟ್ಟಿದೈತ್ಯ (ಮೋಹತ. ೧೧-೬೫). **ಸಾಧನೆಗೈ : ೨. ಪರಿಶ್ರಮ ಮಾಡು; ಅಭ್ಯಾಸ ಮಾಡು** : ಸಾಧನೆಗೈದರೆ ಸಹನೆಯ ನೀಗದೆ ಬೆಳಗದೆ ನಿನ್ನಾತ್ಮತೇಜ (ಇಂಚಾಪ. ೨೧೫-೬೨).

[ಸಾಧನೆ + ಗೆಯ್ಯು( < ಕೆಯ್$_1$)]

**ಸಾಧನೆಗೈ** 'ಸಾಧನೆಗೆಯ್ಯು' ನೋ.

**ಸಾಧನೆವೋಗು (ಕ್ರಿ). ಸ್ವಾಧೀನವಾಗು; ವಶವಾಗು** : ಬುಧಕೋಟಿಗೆ ಕೊಟ್ಟ ನರ್ಥಮಂ ಸಾಧನೆವೋಯ್ತು ಸರ್ವನಿಧಿಯೆಂಬಿನೆಗಂ ದೊರೆ ಯಾರ್ ಕುಮಾರ ಲಕ್ಷ್ಮೀಧರ ದೇವನೊಳ್ ಪತಿಹಿತಕ್ರಮದೊಳ್ ಪಡೆದೀವ ದಾನದೊಳು (ಎಕ. V, ಬೇಲೂರು. ೧೧೨- ೫೮; ಸು. 1220). [ಸಾಧನೆ + ಪೋಗು$_1$ (< ಪೋ$_1$)]

**ಸಾಧರ್ಮ್ಯ (ನಾ). ೧. ಸಹಾನುವರ್ತನೆ; ಸಾಹಚರ್ಯ** : ಬಸವಣ್ಣನವರು

ಇಲ್ಲಿ ಸಾಧರ್ಮ್ಯವನ್ನು ಸೂಚಿಸುವರೋ ಇಲ್ಲವೇ ತಾದಾತ್ಮ್ಯವನ್ನು ಸೂಚಿಸುವರೋ ಎಂಬುದನ್ನು ಗುರುತಿಸಬೇಕು. ಇಲ್ಲಿ ಸಾಧರ್ಮ್ಯದ ಉದಾಹರಣೆಯನ್ನು ಕೊಟ್ಟಿದ್ದರೂ, ಬಸವಣ್ಣನವರು ಬಹುತರವಾಗಿ ತಾದಾತ್ಮ್ಯವನ್ನೇ ಸೂಚಿಸಿರಬಹುದು ಎಂದೆನಿಸುವುದು (ಪರಪ. ೧೩೦). ೨. ಕೂಡುಒಡೆತನ; ಸಹಸ್ವಾಮ್ಯ. ೩. ಒಂದೇ ರೀತಿಯ ನಡವಳಿಕೆ; ಸಮಾನಗುಣಧರ್ಮ. ೪. ಒಂದೇ ಮತಧರ್ಮಕ್ಕೆ ಸೇರಿರುವಿಕೆ; ಸಮಾನಧರ್ಮವನ್ನು ಹೊಂದಿರುವಿಕೆ. [ಸಂ.]

**ಸಾಧವ್ಯ** (ನಾ). ಮುತ್ತೈದೆತನ; ಸುಮಂಗಲಿತನ : ಅಗಲಂಚಿನ ಸೀರೆಯ ಬದಲು ಗೀರಂಚಿನ ಸೀರೆ ಉಟ್ಟು, ಸೀರಾದ ಒಂದೊಂದು ಬಳೆಯನ್ನು ತೊಟ್ಟು, ಸಾಧವ್ಯವನ್ನು ಕಾಪಾಡುವುದು (ಎರಸ. ೯೯). [ಸಂ.]

**ಸಾಧಾರ** (ನಾ). ೧. ಸಮರ್ಥನೆ ಮಾಡುವ ಪ್ರಮಾಣ; ಸಾಧಿಸುವ ವಸ್ತು : ಥಾಮಸ್‌ಬರೊ... ಧ್ವನಿಪರಿವರ್ತನೆಯಿಂದ ಮೊದಲುಗೊಂಡು ಅರ್ಥವ್ಯತ್ಯಾಸದವರೆಗೆ ಸಾಧಾರಗಳಿಂದ ವಿವರವಾಗಿ ಪರಿಶೀಲಿಸಿದ್ದಾರೆ (ದ್ರಾವಿವಿ. ೪೩). ೨. [ವೀಶೈ] ಒಂದು ಬಗೆಯ ದೀಕ್ಷೆ : ಈ ನಾಲ್ಕುನಾಬಾಲವೃದ್ಧರ್ಗೆ ಬೋಧಿಪುದು ತಾನೇಯದಧಿಕಾರ ವೈಯ ಸಾಧಾರವೆಂಬಾ ದೀಕ್ಷೆ ಬಹುವಿಧವಲಾ (ವೀಶೈಪು. ೬-೬-೬೪). [ಸಂ.]

**ಸಾಧಾರಣ** (ಗು). ೧. ಅನೇಕರಿಗೆ ಅಥವಾ ಎಲ್ಲರಿಗೆ, ಎಲ್ಲಕ್ಕೆ ಅನ್ವಯಿಸುವ, - ಸಂಬಂಧಿಸುವ; ಸಾರ್ವತ್ರಿಕವಾದ : ಈ ಪ್ರಾಂತಗಳೊಳಗಿಂದ ಮುಂಬಯಿಗೆ ಮಾರಾಟಕ್ಕೆ ಬರುವ ಮಾಲಿನ ಬಗೆ ಸಾಧಾರಣಮಾಹಿತಿ (ಮುಂಬಪ್ಯಾ. ೨೪ ಪ್ರಸ್ತಾವನ). ೨. ವಿಶೇಷವಲ್ಲದ; ಸಾಮಾನ್ಯವಾದ. ೩. ಸಮಾನವಾದ; ಒಂದೇ ರೀತಿಯ. ೪. ಮಿಶ್ರವಾದ; ಬೆರೆತ. (ನಾ). ೫. ಅನೇಕರಿಗೆ ಅಥವಾ ಎಲ್ಲರಿಗೆ, ಎಲ್ಲಕ್ಕೆ ಅನ್ವಯಿಸುವಂತಹುದು; ಸಾರ್ವತ್ರಿಕವಾದುದು. ೬. ಎಲ್ಲರಿಗೂ ಅನ್ವಯಿಸುವ ಸಾಮಾನ್ಯವಾದ ನಿಯಮ; ಸಾರ್ವತ್ರಿಕವಾದ ಕಟ್ಟಳೆ. ೭. ಸಾಮಾನ್ಯವಾದುದು; ವಿಶೇಷವಲ್ಲದುದು. ೮. ನಿರ್ದಿಷ್ಟವಾದ ಗುಣಧರ್ಮ; ನಿಶ್ಚಿತವಾದ ಶೀಲಸ್ವಭಾವ. ೯. ಅರುವತ್ತು ಸಂವತ್ಸರಗಳಲ್ಲಿ ನಲವತ್ತನಾಲ್ಕನೆಯ ಸಂವತ್ಸರ : ಮತ್ತಮಾ ವರ್ಷವೇ ಪ್ರಭವ ವಿಭವ . . . ಸೌಮ್ಯ ಸಾಧಾರಣ . . . ಕ್ರೋಧನ ಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೨೬೩). ೧೦. ಮೂರು ಬಗೆಯ ದೇಶಭೇದಗಳಲ್ಲಿ ಒಂದು; ಜಲವಸತಿಯಿರುವ ಪ್ರದೇಶ; ಜವುಗುನೆಲ : ದೇವಮಾತೃಕ ಸಾಧಾರಣಾನೂಪ ಜಾಂಗಲಭೇದಂಗಳುಮಂ (ಆದಿಪು. ೮-೬೩ ವ); ಜಾಂಗಲ, ಅನೂಪ, ಸಾಧಾರಣವೆಂದು ದೇಶ ಮೂಱುತೆಱ (ವೃದ್ಧಸಾ. I, ೧೦); ದೇಶಭೇದವು ಜಾಂಗಲ, ಅನೂಪ, ಸಾಧಾರಣವೆಂದು ಮೂರು ತೆರನಾಗಿರುವುದು (ಸಕವ್ಯ. ೧೫). ೧೧. [ದ್ವೈತ] ಪರಮಾತ್ಮನ ಹತ್ತುಬಗೆಯ ವಿಭೂತಿರೂಪಗಳಲ್ಲಿ ಒಂದು : ಶ್ರೀತರುಣಿವಲ್ಲಭನ ಪರಮವಿಭೂತಿರೂಪವ ಕಂಡಕಂಡಲ್ಲೀ ತಿಳಿದು ಚಿಂತಿಸುತ ಮನದಲಿ ನೋಡು ಸಂಭ್ರಮದಿ ನೀತ ಸಾಧಾರಣ ವಿಶೇಷ ಸಜಾತಿ ನೈಜಾಹಿತವು ಸಹಜವಿಜಾತಿ ಖಂಡಾಖಂಡ ಬಗೆಗಳನಱಿತು ಬುಧರಿಂದ (ಹಸಾರ. ೫-೧). ೧೨. [ಜೈನ] ಹದಿನಾರುಬಗೆಯ ಕರ್ಮಪ್ರಕೃತಿಗಳಲ್ಲಿ ಒಂದು : ಪೂರ್ವೋಕ್ತವಿಧಾನದಿನಂತರ್ಮುಹೂರ್ತದಿಂ ನಿದ್ರಾನಿದ್ರಾ ಪ್ರಚಲಾಪ್ರಚಲಾ . . . ಸ್ಥಾವರ ಸಾಧಾರಣ ಸೂಕ್ಷ್ಮಂಗಳೆಂಬ ಪದಿನಾಱುಂ ಕರ್ಮಪ್ರಕೃತಿಗಳಂ ನಿಶ್ಶೇಷಂ ಕಿಡಿಸಿ (ಆದಿಪು. ೧೦-೧೪ ವ).

**ಸಾಧಾರಣರ್** (ಬಹುವ) = ಸಾಮಾನ್ಯರಾದ ಜನ; ವಿಶಿಷ್ಟಗುಣಧರ್ಮಗಳನ್ನು ಹೊಂದಿರದವರು : ಸಾಧಾರಣರಿವರೆನಿಪ ವಿರೋಧಿಗಳುಮನುಱಿದ ನೆಗಟ್ಟುದನುಚಿತಂ (ಪಂಪಾಮಾ. ೧೪-೮೨). [ಸಂ.]

**ಸಾಧಾರಣದೇಶ** (ನಾ). = ಸಾಧಾರಣ ೧೦ : ಸಂಕರಲಕ್ಷಣ ಉಳ್ಳದು ಸಾಧಾರಣದೇಶವೆನಿಸಿಕೊಂಬುದು (ವೃದ್ಧಸಾ. I, ೧೦); ಈ ಎರಡು ಲಕ್ಷಣಗಳೂ ಕೂಡಿರುವ ಸಂಕರದೇಶವು ಸಾಧಾರಣದೇಶವೆನಿಸಿಕೊಂಬುದು ಸಂಕರರೋಗಗಳನ್ನುಂಟು ಮಾಡುವುದು (ಸಕವ್ಯ. ೧೫). [ಸಂ.]

**ಸಾಧಾರಣಧರ್ಮ** (ನಾ). ೧. ಎಲ್ಲರಿಗೂ ಸಮಾನವಾದ ಧರ್ಮ; ಸಾರ್ವತ್ರಿಕವಾದ ಕರ್ತವ್ಯ. ೨. ಸಾಮಾನ್ಯವಾದ ಗುಣ; ಸ್ವಾಭಾವಿಕವಾದ ಗುಣಧರ್ಮ : ಕೆಲಮುಖವಾಗಿ ಹರಿಯುವುದು ದ್ರವಪದಾರ್ಥಗಳ ಸಾಧಾರಣಧರ್ಮ (ರೂಢಿ). ೩. [ಕಾವ್ಯಮೀ] ಉಪಮೆಯ ಲಕ್ಷಣಗಳಲ್ಲಿ ಒಂದು; ಉಪಮಾನ ಮತ್ತು ಉಪಮೇಯಕ್ಕೆ ಇರುವ ಸಮಾನಾಂಶ : ಶಿಶುಗಳಲ್ಲಿರುವ ಹಾಗೆಯೇ ಗಿಳಿಗಳಲ್ಲಿಯೂ ಕಂಡುಬರುವ ಬಳಸುವುದು ಸುಳಿದಾಡುವುದು ಹಾಲು ಕುಡಿಯುವುದೇ ಮೊದಲಾದ ಸಾಧಾರಣಧರ್ಮಗಳೂ ಸ್ಪಷ್ಟವಾಗಿ ಉಕ್ತವಾಗಿರುವುದರಿಂದ ಈ ಹೋಲಿಕೆ ಪೂರ್ಣೋಪಮೆ (ಕೃಪಿಡಿ. ೨೫೭). [ಸಂ.]

**ಸಾಧಾರಣೀಕರಣ** (ನಾ). ೧. (ಬೇರೆಬೇರೆ ವಿಚಾರ ಮುಂತಾದುವನ್ನು ಒಂದು) ಸಾಮಾನ್ಯಸೂತ್ರಕ್ಕೆ ಅಳವಡಿಸುವಿಕೆ, — ಸಾರ್ವತ್ರಿಕಗೊಳಿಸುವಿಕೆ : ವಿಶಾಲಾರ್ಥದಲ್ಲಿ ವಿಜ್ಞಾನ ವಸ್ತುಸತ್ಯದಿಂದ ಸಾಧಾರಣೀಕರಣದತ್ತ, ಮತ್ತೆ ಅದರಿಂದ ಹೆಚ್ಚು ಹೆಚ್ಚು ವ್ಯಾಪಕವಾದ ಸಾಧಾರಣೀಕರಣಗಳತ್ತ ಮುಂಬರಿಯುತ್ತದೆ (ಸಾಹಿಪ್ರ. ೭೧). ೨. ವಿಶಿಷ್ಟವಾದದ್ದು ಸಾಧಾರಣವಾಗುವ ವಿಧಾನ; ವೈಶಿಷ್ಟ್ಯದಿಂದ ಕೂಡಿರುವುದು ಸಾಧಾರಣವಾಗುವ ಕ್ರಮ. ೩. [ಕಾವ್ಯಮೀ] ಭಾವವು ರಸವಾಗಿ ಸಹೃದಯನಲ್ಲಿ ಆಸ್ವಾದವಾಗುವ ವಿಧಾನ; ಕಾವ್ಯ ನಾಟಕಾದಿಗಳ ಪಾತ್ರ, ಸಂದರ್ಭಗಳೊಂದಿಗೆ ಸಹೃದಯನು ಏಕೀಭವಿಸುವಿಕೆ,— ಒಂದಾಗುವಿಕೆ; ಪಾತ್ರಗಳ ಭಾವ, ಸುಖದುಃಖಾನುಭವಗಳು ಸಾರ್ವತ್ರಿಕಗೊಳ್ಳುವಿಕೆ : ಈ ಸಾಧಾರಣೀಕರಣದಿಂದ ಸೋತವನ ಮನಸ್ಸಿನ ಅವ್ಯಕ್ತವಾದ ನೋವು ನಮಗೆ ಪರಿಚಯವಾಗುತ್ತದೆ (ಆಸುಕ. ೫೨); ಭಾರತೀಯಕಾವ್ಯ ಮೀಮಾಂಸೆಯಲ್ಲಿ ಬರುವ ಅಭಿನವಗುಪ್ತನ 'ಸಾಧಾರಣೀಕರಣ' ತತ್ತ್ವವನ್ನು ಬಹುಮಟ್ಟಿಗೆ ಆಶ್ಚರ್ಯಕರವಾಗಿ ಹೋಲುವ ಈ 'ಮಾನಸಿಕದೂರ' ಇನ್ನೂ ವಿಸ್ತಾರವಾದ ತುಲನಾತ್ಮಕಅಭ್ಯಾಸಕ್ಕೆ ಯೋಗ್ಯವಾಗಿದೆ (ಸೌಂದಸ. ೮೮). [ಸಂ.]

**ಸಾಧಾರಣೀಕರಿಸು** (ಕ್ರಿ). ಸಾಮಾನ್ಯಸೂತ್ರಕ್ಕೆ ಅಳವಡಿಸು; ಸಾರ್ವತ್ರಿಕಗೊಳಿಸು : ಇಲ್ಲಿ ಸಾಧಾರಣೀಕರಿಸಿ 'ವ್ಯಂಜನದ ಪಿಂದಣ ಲಘು' ಎಂದು ಹೇಳದೆ, ''ಪದ್ಯಾರ್ಧದ ತುದಿಯ ವ್ಯಂಜನದ ಪಿಂದಣ ಲಘು'' ಗುರುವಾಗುವುದೆಂದು ಹೇಳಿದೆ (ಸಂಶೋಧ. ೧೦೭); ವಿಷಯಗಳನ್ನು ''ಸಾಧಾರಣೀಕರಿಸಿ'' ನಾಟಕೀಯವನ್ನಾಗಿ ನಿರೂಪಿಸುವ ಕಾವ್ಯಗಳಲ್ಲಿ ಹೋಮರನ ಮಹಾಕಾವ್ಯಗಳು ಹೇಗೆ ಮೊದಲಿನವಾಗಿವೆಯೋ ಹಾಗೆಯೇ ಅವನ ವೈನೋದಿಕಕಾವ್ಯ . . . ಕೂಡ ಮೊದಲನೆಯದು (ಅರಿಕಾ. ೭೭).

[ಸಾಧಾರಣೀಕರಣ + - ಇಸು]

**ಸಾಧಾರಣೀಕೃತ** (ನಾ). ಕಾವ್ಯ, ನಾಟಕಾದಿಗಳ ಪಾತ್ರ, ಸಂದರ್ಭ ಮುಂತಾದುವು ಸಹೃದಯನೊಂದಿಗೆ ಏಕೀಭವಿಸುವುದು, — ಸಾರ್ವತ್ರಿಕಗೊಳ್ಳುವುದು : ಭಟ್ಟನಾಯಕನು ಕಾವ್ಯದ ಶಬ್ದವ್ಯಾಪಾರದಿಂದ ವಿಭಾವಾನುಭಾವಗಳು ಸಾಧಾರಣೀಕೃತವಾಗುವುದರ ಜೊತೆಗೆ ಅದರಿಂದಲೇ ರಸವೂ ಭೋಗ್ಯವಾಗುವುದೆಂದು ಹೇಳುತ್ತಾನೆ (ಭಾರಮೀ. ೩೬೮). [ಸಂ.]

**ಸಾಧಾರಣೆ** (ನಾ). [ಕಾವ್ಯಮೀ] ನಾಯಿಕೆಯರ ಮೂರುಪ್ರಕಾರಗಳಲ್ಲಿ ಒಂದು; ವೇಶ್ಯೆ : 'ನಾಯಿಕೆಯರಲ್ಲಿ' ಸ್ವೀಯೆ, (ತನ್ನವಳು), 'ಅನ್ಯೆ' (ಇತರಳು), ಸಾಧಾರಣೆ (ವೇಶ್ಯೆ) ಎಂದು ಮೂರು ವಿಧ (ಕೃಪಿಡಿ. ೨೦೦). [ಸಂ. ಸಾಧಾರಣಾ]

**ಸಾಧಿತ** (ಗು). ೧. ಸಾಧಿಸಿದ; ಸಿದ್ಧಿಯನ್ನು ಪಡೆದ : ಸಾಧಿತಸಮ್ಯಗ್ದರ್ಶನಬೋಧ ಚರಿತ್ರಂಗಳೆಂಬ ಧರ್ಮಮಿದವ್ಯಾಬಾಧಂ (ಶಾಂತಿಪು. ೬-೪೫). ೨. ಮುಗಿಸಿದ ; ಪೂರೈಸಿದ. ೩. ಸಿದ್ಧಾಂತ ಮಾಡಿ ತೋರಿಸಿದ; ಸಮರ್ಥಿಸಿದ. ೪. ಪಡೆದ; ಗಳಿಸಿದ : ಸೌಜನ್ಯಕಂದಾಂಕುರಂ ಶ್ರೀವಿಜಯಂಗೆ ಹೇತಿವಿದಾರಿಣೆಯುಂ ಬಂಧ ವಿಮೋಚನಿಯುಮೆಂಬಿವೆರಡುಂ ವಿದ್ಯೆಗಳಂ ಕೊಟ್ಟು ಮತ್ತಂ ಸಾಧಿತಮಹಾವಿದ್ಯಂಮಾಡಿ (ಶಾಂತಿಪು. ೬-೩೭ ವ); ಸಾಧಿತಪಂಚಧಾರೆಗಳೆನಿಪ್ಪ ಮನೋಜ್ಞತುರಂಗಮಂಗಳುದ್ಬೋಧಿತ ವಿಸ್ಮಯಾಭಿನವವೀಧಿಗಳೊಳ್ ಬಿಡದುಚ್ಚನೀಚಮಾರ್ಗಾಧಿಕವೇಗದಿಂದೆ ಪರಿಲಂಘಿಸುವೆಲ್ಲಿ (ಬಾಧಪು. ೮-೧೨). ೫. ಹುಟ್ಟಿದ; ನಿಷ್ಪನ್ನವಾದ: 'ಸಾಧಿತಶಬ್ದ' ಪರಾ. ೬. ನಿಗ್ರಹಿಸಿದ; ಸ್ವಾಧೀನಕ್ಕೆ ತೆಗೆದುಕೊಂಡ : ಸಾಧಿತಶತ್ರುಷಡ್ವಲರನುಕ್ರಮದಿಂ ಚರರಂ ದ್ವಿಷನ್ನೃಪಾಷ್ಟ್ಯಾದಶತೀರ್ಥದೊಳ್ನಡೆಯಿಸಲ್ಕೆಜೆವರ್ (ಶಾಂತಿಪು. ೨-೪೨). ೭. ಮರಳಿ ಪಡೆದ; ವಸೂಲು ಮಾಡಿದ. ೮. ದಂಡ, ಜುಲ್ಮಾನೆ

ಮೊದಲಾದುವನ್ನು ಹಾಕಲ್ಪಟ್ಟ– ವಿಧಿಸಲ್ಪಟ್ಟ. ೯. ಕೊಡುವಂತೆ ಮಾಡಿದ. [ಸಂ.]

**ಸಾಧಿತಧಾತು** (ನಾ). [ವ್ಯಾಕ] ನಾಮಪ್ರಕೃತಿ ಅಥವಾ ಧಾತುವಿಗೆ 'ಇಸು' ಅಥವಾ 'ಸು' ಮುಂತಾದ ಪ್ರತ್ಯಯಗಳನ್ನು ಸೇರಿಸಿ ನಿಷ್ಪನ್ನಮಾಡಿದ ಹೊಸ ಧಾತು; IP ಉದಾಹರಣೆಗೆ: ನಡೆ + ಇಸು; ಇಂಬುಕೆಯ್ + ಸು; ಇತ್ಯಾದಿ: ಸಾಧಿತಧಾತು–೧ ನಾಮಪ್ರಕೃತಿಗಳಿಂದಲೂ ಧಾತುಗಳಿಂದಲೂ ಬೇರೆ ಬೇರೆ ರೀತಿಗಳಲ್ಲಿ ಹೊಸ ನಾಮಪ್ರಕೃತಿಗಳನ್ನು ಸಾಧಿಸುವಂತೆಯೇ ಹೊಸಧಾತುಗಳನ್ನೂ ಸಾಧಿಸಬಹುದು (ಮಧ್ಯಮ. ೧೪೯). [ಸಂ.]

**ಸಾಧಿತನಾಮಪ್ರಕೃತಿ** (ನಾ). [ವ್ಯಾಕ] ನಾಮಪ್ರಕೃತಿ ಅಥವಾ ಧಾತುವಿಗೆ ಪ್ರತ್ಯಯ ಅಥವಾ ಬೇರೆ ಪದವನ್ನು ಸೇರಿಸಿ, ನಿಷ್ಪನ್ನಮಾಡಿದ ಹೊಸ ನಾಮಪದ: ಸಾಧಿತನಾಮಪ್ರಕೃತಿಗಳನ್ನು (೧) ಕೃದಂತನಾಮ, (೨) ಕೃದಂತಭಾವನಾಮ, (೩) ತದ್ಧಿತಾಂತಭಾವನಾಮ, (೪) ತದ್ಧಿತಾಂತನಾಮ, (೫) ಸಮಾಸ ಎಂದು ಐದು ಬಗೆಯಾಗಿ ವಿಂಗಡಿಸಬಹುದು (ಮಧ್ಯಮ. ೧೨೨). [ಸಂ.]

**ಸಾಧಿತಶಬ್ದ** (ನಾ). [ವ್ಯಾಕ] ಧಾತು, ನಾಮಪ್ರಕೃತಿಗಳಿಗೆ ಪ್ರತ್ಯಯ ಮೊದಲಾದುವನ್ನು ಸೇರಿಸಿ ನಿಷ್ಪನ್ನಮಾಡಿದ ಹೊಸ ಶಬ್ದ : ನಾವು ಬಲ್ಲ ಎಷ್ಟೋ ಧಾತುಗಳಿಗೂ ನಾಮಪ್ರಕೃತಿಗಳಿಗೂ ಪ್ರತ್ಯಯ ಮೊದಲಾದುವನ್ನು ಸೇರಿಸಿ ಹೀಗೆ ಹೊಸ ಶಬ್ದಗಳನ್ನು ಸಾಧಿಸಬಹುದು. ಈ ರೀತಿ ಉಂಟಾದ ಶಬ್ದಗಳಿಗೆ ಸಾಧಿತ ಶಬ್ದಗಳೆಂದು ಹೆಸರು (ಮಧ್ಯಮ. ೧೧೪). [ಸಂ.]

**ಸಾಧಿಷ್ಟಿತ** (ನಾ). ಪ್ರಭುತ್ವ; ಮೇಲಧಿಕಾರ : ಕಳಿಙ್ಗಬ್ಬೆಯ ಮಗಂ ಪರಕಯ್ಯನ್ ಇನ್ತು ಪಾರಮ್ಪರ್ಯ್ಯಾಯಮೆಡೆವಱಿಯದೆ ಬನ್ದ ಧರ್ಮ್ಮಸನ್ತತಿ ಮುದ್ದಿಮಯ್ಯಂಗೆ ಪರಕಯ್ಯಂ ಪನ್ನಿರ್ವ್ವರ ಅರಸಿನ ಸಾಧಿಷ್ಟಿತದೊಳ್ ಕಾಲಂ ಕಟ್ಟಿ ಕೊಟ್ಟ ಭೂಮಿ ಆವುದೆನ್ದೊಡೆ (ಎಕ. XI, ದಾವಣ, ೧೭–೧೨ ; 889).

[IP ಇದು 'ಸಾಧಿಷ್ಠಿತ' ಎಂಬುದರ ಅಪಲಿಖಿತ]

**ಸಾಧಿಸು** (ಕ್ರಿ). ೧. ಪಡೆ; ದೊರಕಿಸಿಕೊಳ್ಳು: ಪ್ರತಿಕೂಲನಾಗಿ ನಿಲೆ ವಿಧಿ ಮತ ನಯಮನುಕೂಲಮಾಗಿ ನಿಲೆಯುಂ ಕಾರ್ಯಸ್ಥಿತಿಯಂ ಸಾಧಿಸಲಾಗದು (ಕವಿರಾ. ೩–೧೪೫); ಗೋವರ್ಧನಭಟಾರರ್ ಸಮಾಧಿಮರಣದಿಂದಂ ರತ್ನತ್ರಯಮಂ ಸಾಧಿಸಿ ಮುಡಿಪಿ ದೇವಲೋಕಕ್ಕೆ ಪೋದರ್ (ವಡ್ಡಾರಾ. ೭೪–೨೮) ; ಸಾಧಿಸುವೊಡಮರಿನ್ನಪರಂ ಸಾಧಿಸುವೊಡಮಸ್ತ್ರಚಯಮನಿನ್ನುಂ ತನುವಂ ಬಾಧಿಸು ತಪೋಗ್ನಿಯಿಂದಾರಾಧಿಸು ನೀಂ ಮಗನೆ ದುರಿತಹರನಂ ಹರನಂ (ಪಂಪಭಾ. ೮–೮). ೨. ಸ್ವಾಧೀನಪಡಿಸಿಕೊಳ್ಳು; ವಶಪಡಿಸಿಕೊಳ್ಳು: ಅರಸಂ ಪರಚಕ್ರಮಂ ಸಾಧಿಸಿ ಬಂದು ಮಗಂ ಕುರುಡಾದುದಂ ಕಂಡಾದಮಾನುಮುಬ್ಬೆಗಂಬಟ್ಟು ಸೈರಿಸಲಾಱದೆ . . . ಜಿನದೀಕ್ಷೆಯಂ ಕೈಕೊಂಡು ಪರತ್ರಯಂ ಸಾಧಿಸಿದೊಂ (ವಡ್ಡಾರಾ. ೭೫–೨೩) ; ಎಡಱುವಹಿತರಂ ಚಕ್ರಮೆ ಸಾಧಿಸಿ ದಪ್ಪುದು (ಆದಿಪು. ೧೪–೬೧) ; ವಿಜಯಗರ್ವದಲಿಹ ಬಲವ ನೀನೊಬ್ಬನೇ ಸಾಧಿಸುವುದರಿದು (ಕುಮಾರವ್ಯಾಸ. ೪–೪೨). ೩. ರುಜುವಾತುಮಾಡು; ಪ್ರಮಾಣಪಡಿಸು: ಏನನಾದರೆಯೂ ಸಾಧಿಸಬಹುದು ಮತ್ತೇನನಾದರೆಯೂ ಸಾಧಿಸಬಹುದಯ್ಯ ತಾನಾರೆಂಬುದ ಸಾಧಿಸಬಾರದು ಕೂಡಲಸಂಗಮದೇವರ ಕರುಣವುಳ್ಳವಂಗಲ್ಲದೆ (ಬಸವ. ೬೨೫) ; ಕದ್ದ ಕಳವ ಮಱಸಿಕೊಂಡು ನಾ ಸಜ್ಜನನೆಂಬಂತೆ ಇದ್ದ ಗುಣವ ನೋಡಿ ಹೊದ್ದಿ ಸಾಧಿಸಲಾಗಿ ಕದ್ದ ಕಳವು ಕೈಯಲ್ಲಿದ್ದ ಮತ್ತೆ ಸಜ್ಜನತನ ಉಂಟೇ (ಮೋಳಿಮಾ. ೨೩–೯೧). ೪. ಆಚರಿಸು; ಅನುಸರಿಸು : ಜಪತಪಸ್ನಾನಾಗ್ನಿಹೋತ್ರ ವಿಧಿವೇಳೆಗಳನು ಸಾಧಿಸುವ . . . ಮುನಿಗಳಾಶ್ರಮದೆಡೆಯೊಳಿರುತಿರ್ದರು (ಜೈಮಿಭಾ. ೧೦–೧೫). ೫. ಸಿದ್ಧಿಯಾಗು; ಕೈಗೂಡು : ಈ ದಾರಿ ಅಷ್ಟು ಸುಗಮವಲ್ಲ . . . ದಾರಿಯೂ ಸಾಗದು. ಗುರಿಯೂ ಸಾಧಿಸದು (ದೀಪಹ. II. ೧೪೦); ಎಷ್ಟು ಪ್ರಯತ್ನಿಸಿದರೂ, ಚಾರುನ ಸಂಗಡ ಸರಿಯಾಗಿ ವಿಲಾಸ ವಿನೋದನ ಹೊಂದಿಸಿ ಹದಕ್ಕೆ ತಂದುಕೊಳ್ಳುವುದು ಭೂಪತಿಗೆ ಸಾಧಿಸದೆ ಹೋಯ್ತು (ಇಪ್ಪಕ. ೨೭೯); ಯಾವ ಕೆಲಸಕ್ಕೇ ಆಗಲಿ ತಲೆ ಹೋದರೆ ಹೋಗಲಿ ಎಂಬುದಾಗಿ ಹೊಡೆದಾಡುವ ಜನ ನಮ್ಮಲ್ಲಿ ಇಲ್ಲ. ಅಂಥವರಿದ್ದರೆ ಆ ಕೆಲಸ ಸಾಧಿಸಿಯೇ ಸಾಧಿಸುತ್ತದೆ (ಗರುಡಾ. ೬೯). ೬. ಪೂರ್ವಗ್ರಹಪೀಡಿತವಾಗಿರು : ತಪ್ಪ ಸಾಧಿಪ ನೃಪನೊಳಿಪ್ಪವನೆ ಕಡುಹೆಡ್ಡ (ಸರ್ವಜ್ಞ. ೨೨೨). ೭. ಛಲ, ರೋಷ ಮುಂತಾದುವನ್ನು ಬಹಳ ಕಾಲದವರೆಗೂ ಹೊಂದಿರು : ನನ್ನ ಮೇಲೆ ದ್ವೇಷವನ್ನು ಸಾಧಿಸಬೇಡ (ರೂಢಿ). ೮. ಕಾಯು; ನಿರೀಕ್ಷಿಸು : ಬಾಧೆಯುಂಟೇ ನಿನ್ನ ಸತ್ಕಕೆ ಸಾಧಿಸುವುದವಧಿಯನು ನಿನ್ನ ವಿರೋಧಿಗಳಿಗೆ ನಿವಾಸವಹುದು ಕೃತಾಂತಲೋಕದಲಿ (ಕುಮಾರವ್ಯಾಸ. ೪–೧೩); ಪಾಯ್ವನೀ ಪರಿಯಜಂ ನಿರ್ಲಕ್ಷನಾಗೆ ತಲೆಗಾಯ್ವನೇ ನಿನ್ನನೆನುತೆಱಗುವಂ ಬಿದಿಯೊಳೆದು ಮಯ್ಯಳಿಗೆ ಸಂದು ಸಾಧಿಸುವಂ ಮುರಧ್ವಂಸಿ (ಚಿಬಪು. ೧೬–೩೩). ೯. ಉದ್ದೇಶವು ನೆರವೇರು : ಆವನೊರ್ವಂಗೆ ಪರಾಕ್ರಮಶಕ್ತಿಯಿಲ್ಲದಿರ್ದೊಡಮನ್ಯಶಕ್ತಿಪರಾಕ್ರಮದಿಂ ಸಾಧಿಸಿಕೊಂಬುದು (ಪಂಚತಂ. ೮೧–೨೧); ಸಾಧಿಸಿಕೊಳ್ ಮನೋಮುದದಿನೆಂದು ತದಿಂದ್ರರಥಂ ವಿಶಾಳಪುಣ್ಯೋದಿತಫಲ್ಗುಣಂಗೆ ನೆಱೆ ಮಂತ್ರಪದಂಗಳನಿತ್ತಂ (ನೇಮಿಪು. ೧೦–೫೫). [ಸಾಧನ + - ಇಸು]

**ಸಾಧಿಸುಹ** (ನಾ). (ಛಲ, ದ್ವೇಷ ಮುಂತಾದುವುಗಳನ್ನು) ಸಾಧನೆ ಮಾಡುವುದು : "ವೈರಶುದ್ಧಿ, ಪ್ರತೀಕಾರ, ವೈರನಿರ್ಯಾತನ - ಹಗೆಯ ಸಾಧಿಸುಹ" (ನಾಚಿರಾ. ೩). [ಸಾಧಿಸು + - ಹ$_2$ ( < - ಪ$_2$)]

**ಸಾಧು$_1$** (ಗು). ೧. ಒಳ್ಳೆಯ; ಉತ್ತಮವಾದ. ೨. ಪ್ರಾಮಾಣಿಕವಾದ; ವಿಶ್ವಾಸಯೋಗ್ಯವಾದ. ೩. ಒಳ್ಳೆಯ ಸ್ವಭಾವದ; ಸೌಮ್ಯಸ್ವಭಾವದ : ಅಲ್ಲಿಂ ತಳರ್ದು ಪೋಸದಿಂ ಸಾಧು[ಪಾಠಾಂ. ದು, ರ್ದು]ಬ್ರಾಹ್ಮಣನಂತೆ ಚಪ್ಪರದಿಂ ಪೊಱಮಟ್ಟು (ಸಂಬರ. ೬–೮೩). ೪. ತಕ್ಕುದಾದ; ಯೋಗ್ಯವಾದ. ೫. ಶುದ್ಧವಾದ; ಶಿಷ್ಟವಾದ. ೬. ಸುಂದರವಾದ; ಮನೋಹರವಾದ. ೭. ಸದ್ವಂಶಸ್ಥವಾದ. (ನಾ). ೮. ಒಳ್ಳೆಯದು; ಉತ್ತಮವಾದುದು : "ಪ್ರಾಗ್ರ್ಯಂ, ಪ್ರಾಗ್ರಹರಂ . . . ಸೌಮ್ಯಂ, ಸಾಧು, ವಲ್ಗು, ಚಾರು, ಸುಷಮಂ, ವಾಮಂ, ಶುಭಂ, ಪೇಶಲಂ — ಈ ೨೯ ಒಳ್ಳಿತು" (ಹಲಾಯು. ೧೧೪–೪). ೯. ಸೌಮ್ಯವಾದುದು; ಉಗ್ರವಲ್ಲದುದು : ಆನೆಯೊ ಸಿಂಹವೊ ಮೊಸಳೆಯೊ ಮಾನೋ ಉಗ್ರವೊ ಸಾಧುವೊ ಎಂತೋ ಏನೋ (ಅನಿಕೇ. ೩೦–೧೬). ೧೦. ತಕ್ಕುದು; ಯೋಗ್ಯವಾದುದು : ತಮ್ಮ ಈ ಭಾವನೆಯು ಸಾಧುವೆಂದು ನನಗೆ ತೋರುವುದಿಲ್ಲ (ನಡಿದಾ. I. ೫೬೫); ಆದರೆ ಈ ಅಭಿಪ್ರಾಯ ಸಾಧುವಲ್ಲ (ಶಿಕ್ಷದ. ೧೨೧). ೧೧. (ಭಾಷೆ ಮುಂತಾದುವುಗಳ ವಿಚಾರದಲ್ಲಿ) ಶುದ್ಧವಾದುದು; ಶಿಷ್ಟವಾದುದು: ಒಂದು ಶಬ್ದರೂಪವು ಸಾಧುವೇ, ಅಸಾಧುವೇ ಎಂದು ನಿರ್ಣಯಿಸುವುದರಲ್ಲಿ ಶಿಕ್ಷಾಶಾಸ್ತ್ರ, ಭಾಷಾಗತಿ, ಶಿಷ್ಟಸಮ್ಮತಿ, ಇವೆಲ್ಲವನ್ನೂ ಗಮನಕ್ಕೆ ತಂದುಕೊಳ್ಳಬೇಕು (ದ್ರಾವಿವಿ. ೮೭). ೧೨. ಸುಂದರವಾದುದು ; ಮನೋಹರವಾದುದು : "ಕಮನೀಯಮಭಿರಾಮ ಮುಜ್ಜ್ವಳಂ . . . ಪ್ರಿಯ ಸಾಧು ರಮಂ ರಮಣ್ಯಂ ರಮ್ಯರುಚಿರಂ ಪ್ರವೇಕಮನೆ ಸೌಮ್ಯಕ್ಕೆ ನಾಮಮಕ್ಕುಂ" (ಮಂಗರಾ. ೧೨೭–೨). ೧೩. ಒಳ್ಳೆಯ ವ್ಯಕ್ತಿ; ಸಭ್ಯ; ಸತ್ಪುರುಷ : ಸಾಧುಗೆ ಸಾಧು ಮಾಧೂ(ಧು)ರ್ಯ್ಯನ್ಗೆ(ಂಗೆ) ಮಾಧೂ(ಧು)ರ್ಯ್ಯಮ್ ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್ ಮಾಧವನೀತನ್ ಪೆಱನಲ್ಲ (ಇಆ. X, ೬೧–೫ ; ಸು. 700). ೧೪. ಸಂನ್ಯಾಸಿ; ಯತಿ : "ಯತಿ ಸಂಯಮಿ ಋಷಿ ಮುನಿ ಸುಶ್ರುತನಾತಂ ಸಾಧು" (ವಸ್ತುಕೋ. ೫೭–೩೩); ಮೋದದಿ ನಿನ್ನಯ ಪಾದವ ತೋಱೊ ಸಾಧುವಂದಿತನೆ ಆದರದಿಂದಲೆ (ಪುರಂದ. ೧–೬–೨); ಯಜ್ಞವೆಂದರೆ ಭಗವದರ್ಚನೆ ಮತ್ತು ಅರ್ಪಣ - ಸಾಧು ಸಂತರ ಸೇವೆ (ಶಕ್ತ್ಯಿ. ೪೭). ೧೫. ಒಳ್ಳೆಯ ವಂಶದಲ್ಲಿ ಹುಟ್ಟಿದವನು; ಸತ್ಕುಲಪ್ರಸೂತನಾದವನು : ಕುಳಜಾತಂ ತಕ್ಕನಾರ್ಯಂ ಸುಜನನಭಿಜನಂ ಸಾಧು ಸದ್ವೃತ್ತನಪ್ಪಂ" (ವಸ್ತುಕೋ. ೧೦೦–೧೧). ೧೬. ಚಿನ್ನ, ಬೆಳ್ಳಿಗಳ ವ್ಯಾಪಾರ ಮಾಡುವವನು; ರತ್ನಪಡಿವ್ಯಾಪಾರಿ. ೧೭. ಬಡ್ಡಿ ವ್ಯವಹಾರ ನಡೆಸುವವನು; ಕುಸೀದಕ. ೧೮. [ಜೈನ] ಪಂಚಪರಮೇಷ್ಠಿಗಳಲ್ಲಿ ಒಬ್ಬ ; ಜೈನ ಸಂನ್ಯಾಸಿ : "ನಗ್ನಾಟಃ . . . ನಿರ್ಗ್ರಂಥಃ, ಸಾಧುಃ - ಈ ೧೦ ಸವಣರ ಪೆಸರ್" (ಹಲಾಯು. ೫೭–೧೮೯); ಅರ್ಹತ್, ಮುನಿ (ಸಿದ್ಧ), ಆಚಾರ್ಯ, ಉಪಾಧ್ಯಾಯ, ಸಾಧು ಇವರು ಪಂಚಪರಮೇಷ್ಠಿಗಳು (ಹಿಂದಸಾ. ೯೦). [ಸಂ.]

**ಸಾಧು₂** (ಅ). ಚೆನ್ನಾಗಿ, ಸೊಗಸಾಗಿ ಎಂಬಿತ್ಯಾದಿಯಾದ ಒಪ್ಪಿಗೆ, ಮೆಚ್ಚುಗೆಗಳ ಉದ್ಗಾರವನ್ನು ಸೂಚಿಸುವ ಒಂದು ಅವ್ಯಯ : ಸಾಧು, ವತ್ಸ, ನೀನು ದೇವಪುತ್ರನ ಮರ್ಯಾದೆಗೆ ತಕ್ಕ ಹಾಗೆ ನುಡಿಯುತ್ತೀಯೆ (ಬಾಣಾಳ. ೮೫). 'ಸಾಧುಕಾರ', 'ಸಾಧುವಾದ' ಪರಾ. [ಸಂ.]

**ಸಾಧುಕಾರ** (ನಾ). (ಮೆಚ್ಚುಗೆ, ಪ್ರಶಂಸೆ ಇತ್ಯಾದಿಗಳನ್ನು ಸೂಚಿಸುವ ಸಲುವಾಗಿ ಮಾಡುವ) ಸಾಧು, ಸಾಧು ಎಂಬ ಉದ್ಗಾರ, – ಘೋಷ : ಪೆಱನಂ ಮಿಥ್ಯಾದರ್ಶನಕ್ರಿಯಾಕಾರಣಾವಿಷ್ಟನಂ ಪ್ರಶಂಸಾದಿಗಳಿಂ ಸಾಧುಕಾರದಿಂ ದೃಢಂ ಮಾಳ್ಪುದು (ತತ್ತ್ವಪ್ರ. ೨೫೭); ಮಹಾಜನರೆಲ್ಲ ಸಾಧುಕಾರ ಮಾಡಿದರು (ಹತ್ತುಮ. ೪೭). [ಸಂ.]

**ಸಾಧುಜನ** (ನಾ). ೧. ಒಳ್ಳೆಯ ಜನ; ಪ್ರಾಮಾಣಿಕಜನ: ರಸರೂಪಗಂಧ ಶಬ್ದಸ್ಪರ್ಶವೆಂದೆಂಬ ವಿಷಯದೊಳು ನೂಲಿನೊಳು ಸಾಧುಜನದೊಳು . . . ಪರಮ ನೊಳು ಗುಣಮನಿಕ್ಕುಂ (ಮಂಗರಾ. ೧೪೭-೩೭). ೨. [ಜೈನ] ಪಂಚಪರಮೇಷ್ಠಿಗಳಲ್ಲಿ ಕೊನೆಯ ವರ್ಗಕ್ಕೆ ಸೇರಿದ ಶ್ರವಣಸಮೂಹ: ವಿದ್ಯೋಪಶಮಗಂಭೀರಸ್ಥಿರವ ದಾನ್ಯತ್ವ ಸಾಧುಜನಸಹಾಯತಾದಿ ಗುಣನಿಧಾನನಂ ನಿನ್ನನ್ನನಂ ಮತ್ತೊರ್ವನನೆಲ್ಲಿಯುಂ ಕಂಡುಂ ಕೇಳ್ದುಮಱಿಯೆವು (ಶಾಂತಿಪು. ೩-೭೫ ವ). [ಸಂ.]

**ಸಾಧುತನ** (ನಾ). ಒಳ್ಳೆಯತನ; ಸಜ್ಜನಿಕೆ : ಅವರ ಪ್ರಾಮಾಣಿಕತನ, ಸಾಧುತನ ನಮ್ಮ ಶಿನ್ನ ಒಪ್ಪಿಕೊಳ್ಳುತ್ತಿದ್ದನೆ? (ಮೂರುದಾ. ೧೩೫). [ಸಾಧು₁ + - ತನ]

**ಸಾಧುತ್ವ** (ನಾ). ೧. = ಸಾಧುತನ. ೨. ಔಚಿತ್ಯ ; ಯಥಾರ್ಥತೆ: ಕಾವ್ಯದಲ್ಲಿನ ಸಾಧುತ್ವಾಂಶವು [Correctness] ರಾಜನೀತಿಯಲ್ಲಿಯೋ ಅಥವಾ ಇನ್ನಾವ ಕಲೆಯಲ್ಲಿಯೋ ಇರುವ ಸಾಧುತ್ವದ ವಿಧದ್ದಲ್ಲವೆಂಬುದನ್ನು ಗಮನದಲ್ಲಿಡಬೇಕು (ಅರಿಕಾ. ೧೩೮). [ಸಂ.]

**ಸಾಧುಪಂಥ** (ನಾ). ತಕ್ಕ ಮಾರ್ಗ; ಉಚಿತವಾದ ದಾರಿ: ಲೇಸು ಮಾಡಿದಿರೆನ್ನ ಚಿತ್ತಕ್ಲೇಶ ಬೀತುದು ನಾನು ಬದುಕಿದೆ ದೋಷಿಯಿರಲಗ್ನಿಪ್ರವೇಶವೆ ಸಾಧುಪಂಥವದು (ಕೌಶಿರಾ. ೪೩-೨೯). [ಸಂ.]

**ಸಾಧುಪುರುಷ** (ನಾ). ಮುನಿ; ತಪಸ್ವಿ : ಇದರಿಂದ, ಇಲ್ಲವೇ ತುಂಬ ಬಲಿಷ್ಠನಾದ ಮನುಷ್ಯ ತಯಾರಾಗಬಹುದು, ಇಲ್ಲವೇ ವಾಸನಾಬಂಧನಗಳನ್ನು ಕತ್ತರಿಸಿ ಒಬ್ಬ ದೊಡ್ಡ ಸಾಧುಪುರುಷನಾಗಬಹುದು (ನಿಬಂಧ. II. ೨೭೨). [ಸಂ.]

**ಸಾಧುಪ್ರಾಣಿ** (ನಾ). ೧. ಸೌಮ್ಯಸ್ವಭಾವದ ಪ್ರಾಣಿ; ಹಿಂಸ್ರವಲ್ಲದ ಮೃಗ. ೨. (ಅಲಂ) ಸೌಮ್ಯಸ್ವಭಾವದ ವ್ಯಕ್ತಿ ; ನಿರುಪದ್ರವಿಯಾದ ಮನುಷ್ಯ: ಪೊಂಪಾಪತಿಭಟ್ಟ, — ತಸೀಲ ಕಚೇರಿಯು ಒಂದೂಟ ಕೊಟ್ಟು ಸಾಕಿರುವ ಸಾಧುಪ್ರಾಣಿ (ಹನ್ನೊಂದ. ೧). [ಸಂ. ಸಾಧುಪ್ರಾಣಿನ್]

**ಸಾಧುಮಾರ್ಗ** (ನಾ). ಸರಿಯಾದ ಮಾರ್ಗ; ಸತ್ಪಥ : ಮಾಡಲರಿಯದೆ ಜಪತಪಂಗಳ ಆಡಲರಿಯದೆ ಸಾಧುಮಾರ್ಗದೊಳಾಡುವವರನು ನೋಡಲಾರದೆ ಕೇಡ ನೆನನೆನದು . . . ಆಡುತಡರುವ ಮೂಢನೊಳ್ ಮಾತಾಡಬ್ಯಾಡೆಂದ (ಗಗತಾ. ೨೦-೨). [ಸಂ.]

**ಸಾಧುವಾದ** (ನಾ). ಒಳ್ಳೆಯದು, ಒಳ್ಳೆಯದಾಗಲಿ ಎಂಬ ಅರ್ಥದ ನುಡಿ : ಪರಸುವ ಪೌರವೃದ್ಧರ ಕುಲಾಂಗನೆಯರ್ಕಳ ಸಾಧುವಾದದೊಳ್ ಬೆರಸಿ . . . ಬಂದುದದೊಂದನುಕೂಲಮಾರುತಂ (ಪಂಪಭಾ. ೨-೯೫); ಆಚಾರ್ಯರು ಸಾಧುವಾದ ಮಾಡಿದರು (ಬಾಣಾಳ. ೮೭). [ಸಂ.]

**ಸಾಧ್ಯ** (ಗು). ೧. ಮಾಡಬೇಕಾದ; ನೆರವೇರಿಸಬೇಕಾದ. ೨. ಕಾರ್ಯರೂಪಕ್ಕೆ ತರಬಹುದಾದ; ನಡೆಸಬಹುದಾದ; ಶಕ್ಯವಾದ. ೩. ಸಿದ್ಧಾಂತವನ್ನು ಮಾಡಿ ತೋರಿಸಬೇಕಾದ; ಸಿದ್ಧಪಡಿಸಬೇಕಾದ. ೪. ಗೆಲ್ಲಬಹುದಾದ; ಜಯಿಸಬಹುದಾದ. ೫. (ರೋಗ ಮುಂತಾದುವಂತೆ) ಗುಣಪಡಿಸ ಬಹುದಾದ; ವಾಸಿಮಾಡಬಹುದಾದ. ೬. [ತರ್ಕಶಾ] ನಿರ್ಣಯಿಸಬೇಕಾದ. (ನಾ). ೭. ಸಾಧಿಸಬಹುದಾದುದು; ಕಾರ್ಯರೂಪಕ್ಕೆ ತರಬಹುದಾದುದು: ಎಲ್ಲ ಸಂಗತಿಗಳನ್ನೂ ಕಲಹಾಕುವುದು ಈ ಕಿರುಹೊತ್ತಗೆಯ ಪರಿಮಿತಿಯಲ್ಲಿ ಸಾಧ್ಯವೂ ಇಲ್ಲ, ಸಾಧುವೂ ಅಲ್ಲ (ದ್ರಾವಿಪ. ೧೦). ೮. ಸಾಧಿಸಬೇಕಾದ ವಿಚಾರ ; ಸ್ಥಿರಪಡಿಸಬೇಕಾದ ವಿಷಯ. ೯. ಸಂಪೂರ್ಣತೆ; ಪರಿಪೂರ್ಣತೆ. ೧೦. ಒಂದು ಮಂತ್ರದ ಹೆಸರು: ಆ ಚಕ್ರದಲ್ಲಿ ಸಾಧ್ಯನಾಮದಿಂದ ಸಹಿತ ಅಕಾರ ಮೊದಲಾಗಿ ಕ್ಷಕಾರ ಪರ್ಯಂತವಾದ ಅಕ್ಷರಗಳು ಪೂಜಿಸತಕ್ಕದ್ದು (ಅರ್ಕಮಾ. ೩೯). ೧೧. ದೇವತೆಗಳಲ್ಲಿ ಒಂದು ವರ್ಗ, – ಗುಂಪು : "ಆದಿತ್ಯಾಃ, ವಿಶ್ವ, ವಸವಃ . . . ಸಾಧ್ಯಾಃ, ರುದ್ರಾಃ, (ಗಣದೇವತಾಃ) – ಗಣದೇವತೆಗಳ ಹೆಸರುಗಳು" (ಸಿದ್ಧಾಂತಿ. ೧೫); ಸಿದ್ಧರು ಸಾಧ್ಯರು . . . ಹಣೆಯೊಳು ಬರೆದುದನಳಿಸಲಶಕ್ತರು (೧೦ಂಚಾಪ. ೧೪೫-೧೨). ೧೨. (ರೋಗ ಮುಂತಾದುವಂತೆ) ಗುಣಪಡಿಸ ಬಹುದಾದುದು ; ವಾಸಿಮಾಡುವಂತಹುದು : ಈ ಐದು ಪ್ರಕಾರದಿಂದಲೂ ರೋಗಿಯ ರೋಗವರಿತು ಇದು ಸಾಧ್ಯ, ಇದು ಕಷ್ಟಸಾಧ್ಯ, ಇದು ಅಸಾಧ್ಯ ವೆಂದು ತಿಳಿದು ವೈದ್ಯನು ಚಿಕಿತ್ಸೆಯನ್ನು ಪ್ರಾರಂಭಿಸುವುದು (ಸಕವೈ. ೨೨). ೧೩. ದೊರಕುವವನು; ನಿಲುಕುವವನು; ಲಭ್ಯನಾಗುವವನು : ಸಾಧ್ಯ ಭವ್ಯಾತ್ಮರಿಗೆ ತ್ರಿಭುವನವೇದ್ಯ . . . ಮಿಥ್ಯಾಮಾರ್ಗದೋಜೆಗಭೇದ್ಯ ಪೂರ್ಣ ಕಟಾಕ್ಷದಿಂದಲಿ ರಕ್ಷಿಸುಗೆ ಜಗವ (ನಾಗಷ. ೧೫-೯೩). ೧೪. (ಮುಂದೆ ಸಾಗುವಳಿ ಮಾಡಬಹುದಾದ) ಜಮೀನಿನಿಂದ ಬರುವ ಆದಾಯ : ನೀಲೆ ನರಸಿಂಹ ಭಟ್ಟರಿಗೆ ಸಾಧ್ಯ ಖ ೩ ಬಾಸಿರಿಕಟ್ಟೆಗೆ ಟೆಂಕಲಾಗಿ ಉಪಾಧ್ಯಭಟ್ಟರಿಗೆ ಸಾಧ್ಯ ಖ ೨ . . . ನರಸಿಂಹಭಟ್ಟರಿಗೆ ಈ ಗ್ರಾಮಕ್ಕೆ ಸಲವಗ್ರಹಾರಾಮಕ್ಷೇತ್ರ ಗದ್ದೆ ಬೆದ್ದಲು ಮೊದಲಾದ ಸಿದ್ಧ ಸಾಧ್ಯಂಗಳೆಂಬ ಅಷ್ಟಭೋಗ ತೇಜಸ್ವಾಮ್ಯವನ್ನು ಅನುಭವಿಸಿ ಕೊಂಡು ಬಹರಿಯೆಂದು ಒಪ್ಪಿ ಕೊಟ್ಟ ದಾನಶಾಸನ (ಮೈಆಂ. ೧೯೨೯, ೧೮-೮೪; 1402). 'ಅಷ್ಟಭೋಗ', 'ಸಾಧ್ಯಭೂಮಿ' ಪರಾ. ೧೫. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಇಪ್ಪತ್ತೆರಡನೆಯದು: ವಿಷ್ಕಂಭ ಪ್ರೀತಿ ಆಯುಷ್ಮಾನ್ . . . ಶಿವ ಸಿದ್ಧ ಸಾಧ್ಯ ಶುಭ ಶುಕ್ಲ ಬ್ರಹ್ಮ ಐಂದ್ರ ವೈಧೃತಿಗಳೆಂಬ ಇಪ್ಪತ್ತೇಳು ಯೋಗಂ ಗಳುಂ (ವಿವೇಕ. ೨೬೨). ೧೬. [ತರ್ಕಶಾ] ಊಹಿಸಿ ತಿಳಿಯತಕ್ಕದ್ದು; ಸಾಧಿಸಬೇಕಾದುದು; ಅನುಮೇಯ : ವಿಶ್ವವಿಜ್ಞಾನವಾದಮೆಂಬಿದಂ ವಿಜ್ಞಾನದಿಂದ ನೀಂ ಸಾಧಿಸುವೆಯಪ್ಪೊಡೆ ಸಾಧ್ಯಸಾಧನಂಗಳ್ಗೆಕ್ಯಮಪ್ಪುದಱಿಂ ಸಾಧ್ಯಂ ನಿಶ್ಚಯಮಾಗದು (ಆದಿಪು. ೨-೧೦ ವ); ಸಾಧ್ಯ : — ಹಿಂದೆ ಹೇಳಿದ ರೀತಿಯಲ್ಲಿ ಧೂಮಜ್ಞಾನದಿಂದ ವಹ್ನಿಯ ಜ್ಞಾನವು ಹುಟ್ಟುವುದು. ಈ ಸಂದರ್ಭದಲ್ಲಿ ವಹ್ನಿ ಸಾಧ್ಯವೆನಿಸುವುದು . . . ಪರ್ವತವು ವಹ್ನಿ ಉಳ್ಳುದು ಎಂಬಲ್ಲಿ ವಹ್ನಿ ಸಾಧ್ಯ ; ಈ ಸಾಧ್ಯವುಳ್ಳ ಪರ್ವತವು ಪಕ್ಷ (ಭಾತತ್ತ್ವ. ೧೭೭).

**ಸಾಧ್ಯಮಾಗು, ಸಾಧ್ಯವಾಗು** = ೧. ಸಾಧಿಸಲಾಗು; ಗೆಲ್ಲು : ಏಱಿದ ಕೋಟೆ ಸಾಧ್ಯಮಾಗದ ದೆಶೆ ಕಪ್ಪಮಿಾಯದಿದಿರೆಂದುದಿನ್ನದ ಭೂಪರಾಟ್ಟಡಂಗಳ ಪಗೆ[ಕ]ರ್ಯನಾನ[ದಭಿ]ಮಾ[ನಿ] [ಶ]ರಣ್ಬುಗದನ್ಯ[ರಿತ್ತು] ಕಾಣದ ನೃಪರಿಲ್ಲ (ಕಇಆ. ೩-೨-೮೨; 1058). ೨. ದೊರಕು; ಲಭ್ಯವಾಗು : ಎಂತು ಶಿವಪಥವೆನಗೆ ಸಾಧ್ಯವಪ್ಪುದಯ್ಯಾ (ಬಸವ. ೩೭). ೩. ನೆರವೇರಿಸಲಾಗು; ನಡೆಸಲಾಗು : ಆದ್ಯರ ವಚನ ಆದ್ಯರಿಗಾಯಿತ್ತು ವೇದ್ಯರಿಗಲ್ಲದೆ ಸಾಧ್ಯವಾಗದು (ಬಸವ. ೮೪೨); ಊರಲ್ಲಿ ತಾನು ಬಂದು ಮೂರು ದಿನಗಳಾಗಿದ್ದರೂ ವಸಂತನನ್ನು ಸಂಧಿಸುವುದು ಸಾಧ್ಯವಾಗಿರಲಿಲ್ಲ (ಕಮನ. ೧೬೩). [ಸಂ.]

**ಸಾಧ್ಯಭೂಮಿ** (ನಾ). ವ್ಯವಸಾಯಕ್ಕೆ ಯೋಗ್ಯವಾದ ಭೂಮಿ : ಅಚ್ಯುತಭಟ್ಟರಿಗೆ ಖಂ ೧ ಮೇಲಾದ ಸಾಧ್ಯಭೂಮಿ ಯಜಮಾನಾದಿ ಸರ್ವಸ್ವಾಮ್ಯವೂ . . . ಗದ್ದೆ ಬೆದ್ದಲು ಮೊದಲಾದ ಸಿದ್ಧ ಸಾಧ್ಯಂಗಳೆಂಬ ಅಷ್ಟಭೋಗ ತೇಜಸ್ವಾಮ್ಯವನ್ನು ಅನುಭವಿಸಿಕೊಂಡು ಬಹರಿಯೆಂದು ಒಪ್ಪಿ ಕೊಟ್ಟ ದಾನಶಾಸನ (ಮೈಆಂ. ೧೯೨೯, ೧೮-೮೪; 1402). [ಸಂ.]

**ಸಾಧ್ಯಯೋಗ** (ನಾ). [ಜ್ಯೋತಿ] ಇಪ್ಪತ್ತೇಳು ವಿಧವಾದ ಯೋಗಗಳಲ್ಲಿ ಒಂದು : ಸಾಧ್ಯಯೋಗಕ್ಕೆ ಗಾನಾ ೩ ಗಳಿಗೆ ಮೇಲ ತ್ಯಾಜ್ಯಾ (ಭಾಸ್ಕರ. ೭೦-೭). [ಸಂ.]

**ಸಾಧ್ಯವೇಳೆ** (ನಾ). ಗೆಲ್ಲಲು ತಕ್ಕ ಅವಕಾಶ : ಆ ದುರ್ಗದಲ್ಲಿದ್ದ ದೊರೆಗಳ ವಿರೋಧವನಱಿದು ಇದೆ ದುರ್ಗಕ್ಕೆ ಸಾಧ್ಯವೇಳೆಯೆಂಬುದನಱಿತು ಮಾಯಾಮಲಂ

ನಾಸ್ತಿಯೆಂಬ ಮನ್ನೆಯ ಕಾಳಗವ ಹಿಡಿದು ದುರ್ಗವ ಮುತ್ತಿ ಕೈಯೊಳಗಾದರು ಮೂವರು ದೊರೆಗಳು (ಸಕವ. ಕ. I. ೧೩೭-೫೧೮). [ಸಂ. ಸಾಧ್ವವೇಲಾ]

**ಸಾಧ್ವಸ** (ನಾ). ೧. ಭಯ; ಅಂಜಿಕೆ : ಅಂತಭಿನವಸಂಗಸಮುತ್ಪನ್ನಸಾಧ್ವಸರಸ ರಮಣೀಯತರಮುಗ್ಧವಧೂವದನವಿಲೋಕನಸುಖಮನನುಭವಿಸಿ (ಆದಿಪು. ೪-೫೧ ವ); ಮನಂಗೆಲೆ ಮಾತಾಡುವ ಮಾತಿನಿಂ ಕಳೆದು ಲಜ್ಜಾಸಾಧ್ವಸೋದ್ರೇಕಮಂ ಜಲಜಾತಾಕ್ಷ ನೊಳಾಕೆ ಬಿಚ್ಚತಿಕೆಯಂ ಮಾಡಲ್ (ಜಗವಿ. ೧೦-೧೪೦). ೨. ಸಡಗರ; ಸಂಭ್ರಮ : ಸಾಧ್ವಸದಿಂ ಬೆಮರ್ ಬೆಮರ್ವಡೆಗೆಳನುಣ್ಮೆ ಪೊಣ್ಮಿದುದು . . . ಸತಿಗೆ ನೋಡಲೊಡಂ ಪಡೆಮೆಚ್ಚೆ ಗಂಡನಂ (ಪಂಪಭಾ. ೫-೧೫). ೩. [ಕಾವ್ಯಮಿ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದಾದ ಭಾಣಿಕೆಯ ಏಳು ಅಂಗಗೆಳಲ್ಲಿ ಒಂದು ; ಗಲಿಬಿಲಿ ; ಕ್ಷೋಭೆ : ಭಾಣಿಕಾ — ಇದರಲ್ಲಿಯೂ ಒಂದೇ ಅಂಕ . . . ಉಪನ್ಯಾಸ, ವಿನ್ಯಾಸ, ವಿಬೋಧ, ಸಾಧ್ವಸ, ಸಮರ್ಪಣ, ನಿವೃತ್ತಿ, ಸಂಹಾರ ಎಂಬ ಏಳು ಅಂಗಗಳು (ಸಂನಾಟ. ೩೬). [ಸಂ.]

**ಸಾಧ್ವಸಭಯ** (ನಾ). ಉದ್ವೇಗದಿಂದ ಉಂಟಾದ ಭಯ,— ಗಾಬರಿ : ಆಕಾರಾನುರೂಪ ದೌವಾರಿಕಾವಚನರಚನಾಶ್ರವಣಸಮುಪಜಾತಸಾಧ್ವಸಭಯ ಮುಮೆಬಿಕಮುಂ ಪೆರ್ಚೆ . . . ಭಾಸ್ವಜ್ಜಿನಚಂದ್ರಚಂದ್ರಪ್ರಭೆಗೆ ಜ್ಯೋತಿ ಸೋಲ್ವಂತೆ ಜ್ಯೋತಿಃಪ್ರಭೆ ಸೋಲ್ತು (ಶಾಂತಿಪು. ೫-೧೫೫ ವ). [ಸಂ.]

**ಸಾಧ್ವಿ** (ನಾ). ೧. ಸಚ್ಚಾರಿತ್ರ್ಯವುಳ್ಳ ಹೆಂಗಸು; ಸುಶೀಲೆ. ೨. ಗಂಡನಿಗೆ ವಿಧೇಯಳಾದ ಹೆಂಡತಿ ; ಪತಿವ್ರತೆ : "ಕುಲವಧು ಸಾಧ್ವಿ ಪತಿವ್ರತ ಕುಲಪಾಳಿಕೆ ಸತಿ ಚರಿತ್ರವತಿಯಕ್ಕುಂ" (ವಸ್ತುಕೋ. ೫೨-೪); ಧರಣೀನಂದನಗೇಹದೊಳ್ . . . ಭಾಸ್ಕರಪುತ್ರಾಂಶದೊಳಾಕೆ ತೊಟ್ಟು ಸುರನಾಥೇಜ್ಯಾಂಶದೊಳ್ ಸಾಧ್ವಿ (ಜಾತತಿ. ೨೨-೩); ತಡೆಯದೆಲ್ಲೆಡೆಯೊಳು ತಾನು ಬೀಸುವನೀಯೆಡರನೇಳಿಪೆನೆಂದೆಲರು ಸಡಗರ ದಿಂದ ಸಾಧ್ವಿಯರಡಿ ಸೋಂಕಿದ ಪುಡಿಯ ಮುಡಿಯೊಳಾನುವುದು (ಹದಿಬ. ೨-೭).

[ಸಂ. ಸಾಧ್ವೀ]

**ಸಾಧ್ವೀಮಣಿ** (ನಾ). ಪತಿವ್ರತೆಯರಲ್ಲಿ ಶ್ರೇಷ್ಠಳಾದವಳು: ಪತ್ನಿಯಾದ ಕುಸುಮ್ಮನೆಂಬ ಸಾಧ್ವೀಮಣಿಯೊಂದಿಗೆ ವಾಸಮಾಡಿಕೊಂಡಿದ್ದರು (ವಿದಾತ್ಯ. ೧ ಪೀಠಿಕೆ).

[ಸಂ.]

**ಸಾನ**$_1$, ಸೋನ$_1$ (ನಾ). ನಾಯಿ; ಶುನಕ : ವತ್ಸಲೋಪಕ್ಕೆ . . . ಶ್ವಾನ - ಸಾನ (ಶಮದ. ೨೮೧ ಪ್ರಯೋ.). **ಸೋನ**$_1$ : ಶ್ವಾನ , ಸೋನ (ಶಬ್ದಾನು. ೧೫೧ ಪ್ರಯೋ.); ಆನೆ ಮೇಲಿದ್ದವನು ಸೋನ ಕಂಡೋಡುವನೆ (ಸರ್ವಜ್ಞ. ೩೭೧).

[< ಪ್ರಾ. ಸಾಣ. / ಸಂ. ಶ್ವಾನ]

**ಸಾನ**$_2$ 'ಸ್ವಾನ' ನೋ.

**ಸಾನಂದ** (ಗು). ೧. ಆನಂದದಿಂದ ಕೂಡಿದ; ಹಿಗ್ಗಿನಿಂದ ಕೂಡಿದ : ಲೋಕಂ ತಮತಮಗೆ ಸಾನಂದಲೀಲೆಯೊಳಮಿತ್ರಸದ್ಭಕ್ತಿಪ್ರಭಾವದಲಿ ಸಂದು (ಬಸವು. ೫೩-೭). (ನಾ). ೨. ಸಂತೋಷ; ಆನಂದ : ಮೇಧಾವಿನಿ ಕಂದನಂ ತೆಗೆದೆತ್ತಿಕೊಳುತೆ ಬಿಗಿಯಪ್ಪಿ ಸಾನಂದದಿಂ ಪೊರೆಯೇಚಿದಳ್ (ಜೈಮಿಭಾ. ೨೮-೫೯); ಸಾನಂದದಿನೆಬ್ಬುತ್ತಂ ಭೂನಾಥಂ . . . ಮೈಮುರಿದು ನಿದ್ರೆಯಿಂದೆಬ್ಬುತ್ತಂ (ಮಲ್ಲಕಾ. ೩೧೭-೧೧೩). ೩. ಸಂತೋಷದಿಂದ ಕೂಡಿದವನು. ೪. ಒಬ್ಬ ಋಷಿಯ ಹೆಸರು : ಪುಲಸ್ತ್ಯ ಸಾನಂದ ಶತಾನಂದ ಶ್ವೇತಕೇತೂಪಮನ್ಯು ಮೊದಲಾದಷ್ಟಾಶೀತಿಸಹಸ್ರ ಋಷೀಶ್ವರರ್ಗನಂತಾಶ್ರಯಂಗಳುಂ (ವಿವೇಕ. ೧೭೪). [ಸಂ.]

**ಸಾನಂದಾಶ್ರು** (ನಾ). ಆನಂದದಿಂದ ಉಂಟಾಗುವ ಕಣ್ಣೀರು : ಮೃಡಗುಣ ಸ್ತುತಿಗೆಯ್ವ ಘೋಷಣವಡಗೆ ಸಾನಂದಾಶ್ರುಗಳನೆಡೆವಿಡದೆ ನೋಡುವ ನಯನಗಳು ಹೊಳೆದಾವರಿಸುತಿರಲು (ಬಸವು. ೩೩-೫). [ಸಂ.]

**ಸಾನಿ** (ನಾ). ೧. ಒಡತಿ; ಸ್ವಾಮಿನಿ; ನಾಯಕಿ : ನಿನ್ನ ಗಂಡ ನಿನಗೆ ನಾಯಕ. ಅವನಿಗೆ ಸರಿಸರಿಯಾಗಿ ಕುಳಿತುಕೊಳ್ಳತಕ್ಕವಳಾದ್ದರಿಂದ ನೀನು ಅವನಿಗೆ ಸಾನಿ (ಅದೂಟ. ೮೫). ೨. ಹೆಂಡತಿ; ಪತ್ನಿ : 'ದೊರೆಸಾನಿ' ಪರಾ. ೩. ವೇಶ್ಯೆ ಮತ್ತು ಕೆಲವು ಸಲ ವೇಶ್ಯೆಯ ಹೆಸರಿನ ಕೊನೆಗೆ ಸೇರುವ ಪದ : ಅವಳು ದೊಡ್ಡ ಶ್ರೀಮಂತ ಸಾಹುಕಾರನ ಸಾನಿ (ಹಳ್ಳಹಾ. ೮); ರಂಗಸಾನಿಯ ಕಡೆಗೆ ಒಂದು ಅಜೇಯವಾ... ತಿರಸ್ಕಾರದಿಂದ ಅವರು ನೋಡಿದರು (ಸಮಜೀ. ೨೨); ಉಳಿದ ಹೆಂಗಸರಿಂದ ಬೇ... ಯೆಂದು ತೋರಿಸುವ ವೃತ್ತಿನಾಮ ಒಂದೇ ಒಂದು - ಸಾನಿ, ಇದು ವೇಶ್ಯೆಯ ಹೆ... ಕೊನೆಗೆ ಇರುತ್ತದೆ (ನಮ್ಮನು. ೨೪೯). 'ನಾಯಕಸಾನಿ' ಪರಾ. ೪. ಹೆಂಗ...; ಸ್ತ್ರೀ : 'ಮಂತ್ರಸಾನಿ' ಪರಾ.

[< ಸಂ. ಸ್ವಾಮಿನೀ./ ತಮಿ. ಚಾನಿ ; ತುಳು. ತೆಲು. ಸಾನಿ]

**ಸಾನಿಗ** 'ಸ್ವಾನೀಕ' ನೋ.

**ಸಾನು** (ನಾ). ೧. ಬೆಟ್ಟದ ಮೇಲಿನ ಮಟ್ಟಸವಾದ ಮೇಲ್ಮೈಯುಳ್ಳ ಹರವಾದ ಪ್ರದೇಶ,— ಪ್ರಸ್ಥಭೂಮಿ : ಮದಮ್ಮೆರೇಯಕಭಾರಚಂಚರೀಕಮನಿಂದುಕ್ಷೀರ ರುಚಿಯಂ ವೃಷೇಂದ್ರನನಾ ರಮಣೀರತ್ನಮಿರುಳ ಕಡೆಯೊಳ್ ಕಂಡಳ್ (ಶಾಂತಿಪು. ೯-೨...); ಸಾನುವಿನೊಳೆಚಿಗಿ ಘನಸಂತಾನಂ ಕಾರ್ಗಾಲದಲ್ಲಿ ಕಚಿವುದು (ಚಂದ್ರಪು. ೧೦-...); ಏರಿದರ್ ದುಃಖಿಗಳ್ ಪರ್ಣಕುಟಿಯಿರ್ದೆಡೆಗೆ, ರಮ್ಯಸಾನು ಮಹೀಧರೋನ್ನತಿಗೆ (ಶ್ರೀರಾಮಾ. ೧೬೮-೩೩). ೨. (ಬೆಟ್ಟದ) ತುದಿ ; ಶಿಖರ. ೩. ಮೊಳಕೆ ; ಅಂಕುರ ೪. ಕಾಡು; ಅರಣ್ಯ. ೫. ರಸ್ತೆ; ದಾರಿ. ೬. (ಬಂಡೆ, ಬೆಟ್ಟಗಳ) ಕಡಿದಾದ ಕೊರಕಲು; ಕಣಿವೆ; ಪ್ರಪಾತ. ೭. ಬಿರುಗಾಳಿ; ಚಂಡಮಾರುತ ೮. ವಿದ್ವಾಂಸ ; ಪಂಡಿತ. ೯. ಸೂರ್ಯ. [ಸಂ.]

**ಸಾನುಕೂಲ** (ಗು). ೧. ಸ್ನೇಹದ; ಮೈತ್ರಿಯ. ೨. ಅನುಕೂಲಕರವಾದ; ಸುಗಮವಾದ. ೩. ಸಜ್ಜಾದ; ಸಿದ್ಧವಾದ. (ನಾ). ೪. ಅನುಕೂಲಕರ ವಾದುದು; ಸುಗಮವಾದುದು : ಚಂನಪಟ್ಟ ಮದ್ದೂರು ಸ್ವಾಧೀನವಾದಲ್ಲದೆ ಮುಂದಣ ಯತ್ನ ಸಾನುಕೂಲವಾಗದೂ ಯೆಂದೂ ಪ್ರಸ್ತಾಪವಾದಲ್ಲಿ (ಹೈದರ. ೪...).

[ಸಂ.]

**ಸಾನುತಳ** (ನಾ). ಬೆಟ್ಟದ ಮೇಲಿನ ಸಮತಲಪ್ರದೇಶ : ಮಿತಸಾರೇತರಸಾರ ಮಾಗೆ ವಿಜಯಾರ್ಧಾದೀಂದ್ರದುದ್ದಾಮಸಾನುತಳಂ ತದ್ವಿಭವಂ ತಳಾಮಳಕಮಂಬಾ ಸ್ಫೋಟದಿಂ ಬಂದು . . . ಕೃತಮಾಲಾಮರನಾಥನಂದೆಚಿಗಿದಂ ಶಾಂತೀಶಪಾದಾಬ್ಜದೊಳ್ (ಶಾಂತಿಪು. ೧೧-೩೫). [ಸಂ. ಸಾನುತಲ]

**ಸಾನುನಯ** (ಗು). ೧. ವಿನಯದಿಂದ ಕೂಡಿದ; ನಮ್ರ. (ನಾ). ೨. ಅನುನಯ; ವಿಶ್ವಾಸ : ಆಭರಣವನುಲೇಪನಾದಿಗಳ ಸಾನುನಯದಲಿ ಪಾಂಡುಪುತ್ರರ ಮಾನಿನಿಗೆ ಕೊಡಿ (ಕುವ್ಯಾಅ. ೨೨-೭). [ಸಂ.]

**ಸಾನುನಾಸಿಕ** (ಗು). ೧. ಮೂಗಿನಿಂದ ಉಚ್ಚರಿಸಬೇಕಾದ; ಅನುನಾಸಿಕದ ಉಚ್ಚಾರವುಳ್ಳ. (ನಾ). ೨. [ವ್ಯಾಕ] ಅನುನಾಸಿಕದಿಂದ ಕೂಡಿದುದು : ವಕಾರವನ್ನು ಸಾನುನಾಸಿಕವಾಗಿ ಉಚ್ಚರಿಸಿದುದನ್ನು ಕಂಡು ಗೇಲಿಮಾಡಲು ವಕಾರ ಯುಕ್ತವಾದ ಪದಗಳನ್ನೆಲ್ಲ ಒಟ್ಟಿಗೆ ಸೇರಿಸಿ ಹೇಳಿದ ಮಾತು ಇದು (ಸುವರ್ಣ. ೧೨೩); ಒಂದೇ ಕಾಲದಲ್ಲಿ . . . ಗಕಾರವು (ತಾನು) ಒಂದೇ ಆಗಿದ್ದುಕೊಂಡೇ ಉದಾತ್ತವೂ, ಅನುದಾತ್ತವೂ, ಸ್ವರಿತವೂ, ಸಾನುನಾಸಿಕವೂ, ನಿರನುನಾಸಿಕವೂ (ಆಗಿದೆ) (ಬ್ರಹ್ಮಭಾ. ೪೭೨). [ಸಂ.]

**ಸಾನುಪ್ರದೇಶ** (ನಾ). = ಸಾನುತಳ : ಹೇಮಕೂಟಾದ್ರಿಯ ಸಾನುಪ್ರದೇಶಗಳಲ್ಲಿ ಬೆಳೆದ ಸುಗಂಧಪೂರಿತ ಹೂಗಿಡಗಳ ಮೇಲೆ ಬೀಸಿ ಬಂದ ತಂಗಾಳಿ ಗ್ರಹಣೇಂದ್ರಿಯಕ್ಕೆ ಚೇತೋಹಾರಿಯಾಗಿತ್ತು (ರಾಜ್ಯೋದ. ೯೯). [ಸಂ.]

**ಸಾನುಭವ** (ಗು). ೧. ಅನುಭವದಿಂದ ಕೂಡಿದ; ಫಲಸಿದ್ಧಿಯನ್ನು ಹೊಂದಿದ (೬). (ನಾ). ೨. ಫಲಾನುಭವ; ಫಲಸಾಧನೆ : (೬). [ಸಂ.]

**ಸಾನುಭಾವ** (ಗು). ಅನುಭಾವದಿಂದ ಕೂಡಿದ; ಆತ್ಮಾನುಭವವನ್ನು ಹೊಂದಿದ : ರೂಢಶಿವಲಿಂಗಪ್ರಯೋಗಾಲೀಢಚಿತ್ತನು ಸಾನುಭಾವಪ್ರೌಢನ... (ಬಸವು. ೩೩-೨). [ಸಂ.]

**ಸಾನುಭೂತಿ** (ನಾ). ಇತರರ ಕಷ್ಟಕ್ಕೆ ಮರುಗುವ ಸ್ವಭಾವ; ಸಹಾನುಭೂತಿ ಅನುಕಂಪ : ಪರಬೊಮ್ಮನಾ ವಿಧಿಯ ನೇಮಿಸಿಹುದೇತಕೆನೆ ನರಜಾತಿ ಸಾನು... ಕಲಿಯಲೆಂದು (ಮಂಕುಕ. ೧೫೭). [ಸಂ.]

**ಸಾನುರಾಗ** (ಗು). ೧. ಅನುರಾಗದಿಂದ ಕೂಡಿದ. (ನಾ). ೨. ಅನುರಾಗ ; ಪ್ರೀತಿ : ಸಾನುರಾಗಂ ಕೊನರ್ದು ಕೊನರ್ದಾ ಶಿವಶರಣರಂ ಕಂಡು ಕಂಡುಬ್ಬಿ (ಬಸಪು. ೩೫-೩) ; ಏನು ಧನ್ಯಳೋ ಲಕುಮಿ ಎಂಥ ಮಾನ್ಯಳೊ ಸಾನುರಾಗದಿಂದ ಹರಿಯ ತಾನೆ ಸೇವೆ ಮಾಡುತಿಹಳು (ಪುರಂದ. ೧-೧೭ ಪಲ್ಲವಿ). [ಸಂ.]

**ಸಾನೂದ್ಯಾನ** (ನಾ). ಬೆಟ್ಟದ ಸಾನುಪ್ರದೇಶದಲ್ಲಿರುವ ತೋಟ ,— ಉದ್ಯಾನವನ : ಸಾನೂದ್ಯಾನಪ್ರತಾನಂ . . . ನಾನಾರತ್ನಪ್ರಕೂಟಪ್ರಕರದಿನೆಸೆದಿ ಪೂರ್ಜಯಂತಕ್ಕೆ ಬಂದಾ ಭೂನಾಥರ್ ಸೇವ್ಯಮಪ್ಪಾ ನಗದ ವಿಭವಮಂ ನೋಡುತುಂ ಬಂದರೆಲ್ಲಂ (ನೇಮಿಪು. ೭-೧೩). [ಸಂ.]

**ಸಾನೆಟ್** 'ಸಾನೆಟ್ಟು' ನೋ.

**ಸಾನೆಟ್ಟು , ಸಾನೆಟ್** (ನಾ). (ಪಾಶ್ಚಾತ್ಯರ ಪ್ರೇರಣೆಯಿಂದ ಆವಿಷ್ಕಾರಗೊಂಡ) ಒಂದೇ ಭಾವವನ್ನು ಹೊಂದಿರುವ, ಹದಿನಾಲ್ಕು ಸಾಲುಗಳ, ವಿವಿಧ ಅಂತ್ಯಪ್ರಾಸವನ್ನುಳ್ಳ ಒಂದು ಪದ್ಯಪ್ರಕಾರ ; ☞ ಇದನ್ನು ಅಷ್ಟಷಟ್ಪದಿ, ಚತುರ್ದಶಪದಿ, ಸುನೀತ ಎಂದೂ ಕರೆಯುತ್ತಾರೆ : ಸಾನೆಟ್ಟಿನ ಒಂದು ಮುಖ್ಯ ಅಗತ್ಯವೆಂದರೆ ಒಂದೇ ಒಂದು ಆಲೋಚನೆಯನ್ನು ಉದ್ದಕ್ಕೂ ಬೆಳೆಸಿಕೊಳ್ಳಬೇಕು ಎಂಬುದು (ಭಾವಗೀ. ೭೧); ಮೂರು ಸಾನೆಟ್ಟುಗಳು ವಿಶ್ವವಿದ್ಯಾಲಯಕ್ಕೆ ಮುಡಿಪಾಗಿವೆ (ನೆಲಮು. IX ನಾಲ್ಕುಮಾತು). **ಸಾನೆಟ್** : ಸಾನೆಟ್ ಪ್ರಾರಂಭವಾದದ್ದು ಪ್ರಣಯ ಗೀತೆಯಾಗಿ (ಭಾವಗೀ. ೭೨). [← ಇಂ. Sonnet]

**ಸಾನ್ನಾಯ್ಯ** (ನಾ). ಯಜ್ಞಯಾಗಾದಿಗಳಲ್ಲಿ ಅಗ್ನಿಗೆ ಅರ್ಪಿಸುವ ಹವಿಸ್ಸು ; ಚರು : ''ಹವಿ ಸಾನ್ನಾಯ್ಯಂ ಚರು'' (ವಸ್ತುಕೋ. ೫೯-೪೨) ; ಜಳದಿಂದಂ ಬಳಮಂ . . . ಚಂದ್ರಿಕೋಜ್ಜ್ವಳಸಾನ್ನಾಯ್ಯದಿನಿಂದುಲಕ್ಷ್ಮಿಯನುದಂಚದ್ದೀಪದಿಂ ಕಾಂತಿಯಂ ವಿಳಸದ್ಧೂಪದಿನೈಷ್ಯಮಂ ಫಲದಿನವ್ಯಾಬಾಧೆಯಂ ಮಾಡುಗುಂ (ಶಾಂತಿಪು. ೧೦-೫೫). [ಸಂ.]

**ಸಾನ್ನಿಧ್ಯ** (ನಾ). ಹತ್ತಿರದಲ್ಲಿರುವಿಕೆ; ಸಾಮೀಪ್ಯ : ಕೂಡಲಸಂಗನ ಪ್ರಸಾದ ಸಾನ್ನಿಧ್ಯದಿಂದ ಭವಜನಕರ್ಮ ಪಂಚಭೂತಪೂರ್ವನಾಸ್ತಿ (ಬಸವ. ೮೩೪); ವಧ್ಯಚಿಹ್ನಂಗಳಿಂದೆಸೆದು ಸಾನ್ನಿಧ್ಯದಲಿ ನಲಿವಾತ್ಮಜನ ಸದುಬುಧ್ಯನುಮತಿಗೆ ಮೆಚ್ಚಿ ಮಾತಾಪಿತರು ಹರುಷದಲಿ (ಬಸಪು. ೨೪-೨೦); ನಿನ್ನೊಳ್ಸದಾ ಕೃಪಾನಿಧಿಯ ಸಾನ್ನಿಧ್ಯಮಿರುತಿರಲಾಗಿ ವಾಜಿಮೇಧಂ ಬೇಹುದೆ (ಜೈಮಿಭಾ. ೧೦-೧೯). [ಸಂ.]

**ಸಾಪ್** 'ಸಾಫ಼$_2$' ನೋ.

**ಸಾಪ, ಶ್ರಾಪ, ಸಾಪಣೆ, ಸಾಪಳ** (ನಾ). ಕೆಡುಕಾಗಲೆಂದು ಬಯಸಿ ಹೇಳುವ ಮಾತು; ಶಾಪ : ಬಿದಿ ಸಾಪಮನಿತ್ತುದಱಿಂ ಬಿದಿರ್ಗಳ್ ಫಲಮಾಗಲೊಡನೆ ಸಾವುವು ಧರೆಯೊಳ್ (ಧರ್ಮಾಮೃ. ೩-೧೭೦); ಶಾಪ — ಸಾಪ, ಶಾರೀರ — ಸಾರೀರ (ಶಮದ. ೨೫೩ ಪ್ರಯೋ); ಗೆಂಟಿನೊಳ್ ದುಮ್ಮಾನದಿಂ ತಾರಿ ಲೋಕಮನೆ ಪಗೆವೊಂದು ರೋಸಮುಂ, ಬಿದಿ ನಿನಗೆ ಬರೆದಿಟ್ಟ ಸಾಪಮಾದುದು (ಸಂಸಪ. ೨೩-೧೮). **ಶ್ರಾಪ** : 'ಶ್ರಾಪಿಸು' ಪರಾ. **ಸಾಪಣೆ** : ಆತನಂ ನಿಂದಿಸಿದೊಡೊದಗಲಹುದವನ ಸಾಪಣೆಯೆಂದು ಮತ್ತನಿತು ಚದುರಿಂದ ಪಲ್ಗಿಸಿದು ನೆರೆದಜ್ಜರಂ ನಗಿಸಿ ನಗುತಿರ್ಪ ಸಮಯದಲ್ಲಿ (ಮಹಾಂತೇ. ೯-೩೨). **ಸಾಪಳ** : ಇತರರೂ ಬಸ್ಸಿನವನಿಗೆ 'ಸಾಪಳ' ಹಾಕಿದರು (ಸರ್ವಮಂ. ೪೬).

**ಸಾಪದಕ್ಕರ** = ಶಾಪದ ಮಾತು : ಪೊಱಮಡುವ ಸಾಪದಕ್ಕರದ ಪೊಯ್ಲಿಂಗೆ ನಡುಗುವಂತೆ ಕೆತ್ತುವ ತುಟಿಯುಂ . . . ಅಂಜಿಕೆಯಂ ಪುಟ್ಟಿಸೆ (ಕಬ್ಬಿಗಕಾ. ೩೧೦). [< ಸಂ. ಶಾಪ]

**ಸಾಪಂಗೊಳು** (ಕ್ರಿ). ಶಾಪವನ್ನು ಹೊಂದು, — ತಾಳು : ಸಪಿಸಲಾನೆಲ್ಲಿ? ಸಾಪಂಗೊಳುವ ತಾವೆಲ್ಲಿ? (ಹಬ್ಬಿರ. ೩೪-೯). [ಸಾಪ + ಕೊಳು (< ಕೊಳ್$_1$)]

**ಸಾಪಂದಳಿ** (ಕ್ರಿ). = ಸಾಪಂಗೊಳು : ಅನ್ನೆಗಮಿತ್ತಲಾ ಬಾಂದೊಱೆದಲೆಯನ ಸಾಪಂದಳೆದು ಬಂದು ನೀನೀ ಪೂವಿನ ಪೊಟಲೊಳ್ ನನೆಯಂಬನೆಂಬರಸಾದೆ (ಕಬ್ಬಿಗಕಾ. ೩೧೯). [ಸಾಪ + ತಳಿ$_1$]

**ಸಾಪಣೆ** 'ಸಾಪ' ನೋ.

**ಸಾಪತಿಕರಿಸು** (ಕ್ರಿ). ಜೊತೆ ಸೇರಿ ಕರುಣೆಯನ್ನು ತೋರಿಸು : ಸಾಪತಿಕರಿಸಿ ಕೊಂಡಿದ್ದೊಡೆಯನನು ಕರೆ ಕೊಲೆಗರುಹ ನೀನಲ್ಲ ಸಾರೆಂದ (ತೊರರಾ. ೬-೧೪-೬). [< ಸಹ$_2$ + ಪತಿಕರಿಸು]

**ಸಾಪತ್ನ** (ಗು). ೧. ಸವತಿಗೆ ಸಂಬಂಧಿಸಿದ ಅಥವಾ ಸವತಿಯಿಂದುಂಟಾದ. (ನಾ). ೨. ತಂದೆಯ ಬೇರೆ ಹೆಂಡತಿಯ ಮಗ ; ಮಲತಾಯಿಯ ಮಗ : ''ಉಪಮಾತೆಯನೆ ಬಲದಾಯೆನಿಕ್ಕುಮಾಕೆಗೆ ಪುಟ್ಟಿದಾತ ದಾಯಾದ್ಯನಾ ಸಾಪತ್ನನಕ್ಕು'' (ಮಂಗರಾ. ೯೨-೧೨). ೩. ಅಣ್ಣತಮ್ಮಂದಿರ ಮಕ್ಕಳು; ದಾಯಾದಿ : ಸಾಪತ್ನರಲಿ ಸದರವ ಕಾಣೆ (ಕುವ್ಯಾಆ. ೮-೬). ೪. ಹಗೆ; ಶತ್ರು : ಜಲದೊಳ್ ಪುಟ್ಟಿದ ವಸ್ತುವಿಂ ಪೆಱರ ಪೊನ್ನಿಂ ಭೋಗಿ ಸಾಪತ್ನರಂ ಗೆಲಲಾರ್ಪಂ . . . ಮಿನಾಲಯಪ್ರೋದ್ಭವಂ (ಜಾತಕ. ೧೭-೧೨); ಅರಸುಕುಲದಲಿ ಹುಟ್ಟಿ ಸಾಪತ್ನರು ಗಳಿರೆ ದೇಹಾಭಿಲಾಷೆಯಲುರಗನಂ ತೊಳಗಿಹುದು ಧರ್ಮವೆ (ಕುವ್ಯಾಉ. ೩-೨೨). [ಸಂ.]

**ಸಾಪತ್ನಕ** (ನಾ). ೧. ದ್ವೇಷ; ಹಗೆತನ. ೨. ಮಲತಾಯಿಯ ಮಗ; ಬಲಸೋದರ : ಅಕಟ ಲಕ್ಷ್ಮಣದೇವ ರಘುನಾಯಕನ ಮರಣದ ನುಡಿ ನಿನಗೆ ರಂಜಕವೆ . . . ಸಾಪತ್ನಕವಿವೇಕಕೆ ಸೊಗಸ ತಂದೈ (ತೊರರಾ. ೩-೯-೫). [ಸಂ.]

**ಸಾಪತ್ನಿ** (ನಾ). ಸವತಿ; ಸಹಪತ್ನಿ : ತವೆ ಸಾಪತ್ನಿಯರಾದ ಸಾಲ ಮಧುಪಾನಂ . . . ಸೂಳೆಯರೊಳೊಲ್ದಿರ್ಪಾಟಮಿಂತಲ್ಲ ಮುಂ ಸವಿಯಾಗಂತ್ಯದಿ ಕಷ್ಟಮೈ (ಸೋಮೇಶ. ೨೪). [ಸಂ. ಸಾಪತ್ನೀ]

**ಸಾಪತ್ನಿಕ** (ನಾ). ಹಗೆ; ಶತ್ರು: ಏನಗಿಂ ಸ್ವೇಚ್ಛಾವಿಹಾರವ್ಯತಿಕರವೊಗೆದತ್ತೇಕೆ ಗೋವಿನ್ನದಂಡೇಶನ ಚಿತ್ತಂ ದೃಪ್ತಸಾಪತ್ನಿಕಬಲದಳನೋದ್ರೇಕದೊಳ್ತಳ್ತುದು (ಎಕ. VII, ಶಿಕಾರಿ. ೧೩೭-೩೦; 1114). [< ಸಾಪತ್ನಕ]

**ಸಾಪತ್ನ್ಯ** (ನಾ). ೧. ಸವತಿಯಾಗಿರುವಿಕೆ; ಸಹಪತ್ನಿಯಾಗಿರುವಿಕೆ. ೨. ಸವತಿಯ ಮಗ : ''ಸವತಿಯ ತನಯಂ ಸಾಪತ್ನ್ಯನಂತವಂ ದಾಯಾದ್ಯಂ'' (ವಸ್ತುಕೋ. ೫೫-೧೯). ೩. ಅಣ್ಣತಮ್ಮಂದಿರ ಮಕ್ಕಳು ; ದಾಯಾದಿ ; ಜ್ಞಾತಿ: ಭರತಾನ್ವಯದೊಳಂದಿನಿಂದುವರೆಗಂ ಸಾಪತ್ನ್ಯರೊಳ್ [ಪಾಠಾಂ. ತ್ನರೊಳ್, ತ್ನ್ಯದೊಳ್] ಬದ್ಧಮತ್ಸರದಿಂದೆಮ್ಮನಕಾರಣಂ ಕದಡಿದೈ (ಗದಾಯು. ೭-೯). ೪. ಹಗೆ ; ಪ್ರತಿಸ್ಪರ್ಧಿ. ೫. ಹಗೆತನ; ವೈರ. [ಸಂ.]

**ಸಾಪತ್ರ** (ನಾ). ಒಟ್ಟಾಗಿ ಬರೆದುಕೊಟ್ಟ ಪತ್ರ : ಮಾಚಣ್ಣಗೌಡಮಾರಮತಿನಾಯ್ಕ ಮಾರಿಶೆಟಿಮಾರತಂಮ ಪಾಪಿನಾಯ್ಕ ಯಿ ನಾಲ್ವರಿಗೆ ಕೊಟ ಸಾಪತ್ರ ನೀಉ ನಮ್ಮ ಕಯ್ಯ ಕೊಂಡ ಕುದುರೆಯ ಗ ೬೫ ಹೊನ್ನ ಪತ್ರ ಹೋಯಿತಾಗಿ ಆ ಪತ್ರ ಸಾಪತ್ರ (ಎಕ. X, ಗೌರಿಬಿ. ೬೬-೨; ಸು. 1700). [< ಸಹ$_2$ + ಪತ್ರ]

**ಸಾಪರಾಧ** (ಗು). ಅಪರಾಧದಿಂದ ಕೂಡಿದ ; ತಪ್ಪನ್ನು ಮಾಡಿದ : ಮುಂದೊಂದು ಮಂದಿರದಲ್ಲಿ ಸಾಪರಾಧನಾಯಕಂ ತಿಳುಪುತ್ತಿರೆ ಖಂಡಿತೆಯಖಂಡಿತೇರ್ಷೆಯಿಂ ನೋಡಿ . . . ನಂಬಲಕ್ಕುಮೇ ಎಂಬಳ ನುಡಿಗೇಳುತ್ತಿರ್ಪನಂ (ರಾಜಶೇ. ೧೧-೧೨೪ ವ). [ಸಂ.]

**ಸಾಪಳ** 'ಸಾಪ' ನೋ.

**ಸಾಪಿಂಡ್ಯ** (ನಾ). ಸಮಾನಪಿತೃಗಳಿಗೆ ಪಿಂಡಪ್ರದಾನಮಾಡುವುದರಿಂದ ಇರುವ ಸಂಬಂಧ; ರಕ್ತಸಂಬಂಧ; ಜ್ಞಾತಿತ್ವ : ಸಾಪಿಂಡ್ಯವು ಮೂಲಪುರುಷನಿಂದ ಏಳುತಲೆಯವರೆಗೂ ಇರುವುದು (ಆರ್ಯಧ. ೧೧೫). [ಸಂ.]

**ಸಾಪಿಸು, ಶ್ರಾಪಿಸು** (ಕ್ರಿ). ಶಾಪವನ್ನು ಕೊಡು; ಶಪಿಸು : ಕಟ್ಟೆಯಿಂದಿಳಿದೇಱಿ ಕಯ್ಯೆತ್ತಿ ಸಾ[ಪಾಠಾಂ. ಶಾ, ಕೋ]ಪಿಸುತೆ ಕೆಟ್ಟೆನಿವರಿಂದೆನುತೆ ಕೈನೀಡಿ ಸಾ [ಪಾಠಾಂ. ಶಾ, ಕೋ] ಪಿಸುತೆ (ತಿರುರ. ದೇ. ೧೯-೧); ನೀರನಿಳಿದು ನೆಲವೊಯ್ದು ಧೂಳೆತ್ತಿ ಹೆಮ್ಮಾರಿಯ ಸಾ[ಪಾಠಾಂ. ಶ]ಪಿಸುತಳಲು ತೋರದನಿಯ ಕಲಕಲದಿಂ ಮಸಣದ ದಾರಿಯಳಲ ಪುಟ್ಟಿಸಿದುದು (ಶ್ರೀಪಾಲ. ೮-೪). **ಶ್ರಾಪಿಸು** : ಈಗಾಗಳೆ ತನ್ನ ಹೆಸರಲ್ಲೆ ಶ್ರಾಪಿಸಿ ಕಲ್ಲೊಗೆಯುವದೆಂದರೆ ಮನೆಯಲ್ಲಿ ನಿತ್ಯಕ್ರಮವಾಗಿದೆ (ಅನ್ನ. ೧೪೬). [ಸಾಪ + - ಇಸು$_3$]

**ಸಾಪು** 'ಸಾಫು' ನೋ.

**ಸಾಪುಗಾರ** (ನಾ). ಶುಚಿಗೊಳಿಸುವವನು; ಶುದ್ಧಿಮಾಡುವವನು : ಆದರೆ ಈ ಟೇಬಲ್ ಸಾಪುಗಾರರು ಮಾತ್ರ ಮಾಣಿಗಳಿಗಿಂತ ಕಡಿಮೆದರ್ಜೆಯವರು (ಮುಂಗಾಪು. ೫೭). [ಸಾಪು (< ಸಾಫು) + - ಗಾರ (< - ಕಾರ)]

**ಸಾಪುನಾಣ್ಯ** (ನಾ). ಸವೆದು ನುಣುಪಾಗಿ, ಚಲಾವಣೆಯಾಗದ ಸ್ಥಿತಿಗೆ ಬಂದ ನಾಣ್ಯ; ಸವಕಲುನಾಣ್ಯ : ಧರ್ಮ ನೀಡುವವರಿದ್ದ ಹಾಗೆಯೇ ಬೈದು ಕಳಿಸುವವರಿದ್ದರು; 'ಸಾಪು' ನಾಣ್ಯಗಳನ್ನೆಸೆಯುವವರೂ ಇದ್ದರು (ಬಸಸಿ. ೯೭).

[ಸಾಪು (< ಸಾಫು) + ನಾಣ್ಯ (< ನಾಣಯ)]

**ಸಾಪೇಕ್ಷ** (ಗು). ೧. (ಪರಸ್ಪರ) ಅವಲಂಬಿಸಿರುವ; ಪೂರಕವಾದ. ೨. ಪಕ್ಷಪಾತವುಳ್ಳ. (ನಾ). ೩. (ಪರಸ್ಪರ) ಅವಲಂಬಿಸಿರುವುದು; ಪೂರಕವಾದುದು : ಇಂತು ವಿಶೇಷ್ಯಂ ಕ್ರಿಯೆಯಂ ಸಂತಂ ನೋೞ್ಪುದಱಿನಕ್ಕುಮದು ಸಾಪೇಕ್ಷಂ ಚಿಂತಿಸೆ ಸಮಾಸಮಂ ಪೇೞ್ವಂತಪ್ಪ ಪದಂ ಸಮರ್ಥಮಲ್ತಪ್ಪುದಱಿಂ ಸಮನಿಸೆ ಸಾಪೇಕ್ಷಮುಮಾ ಸಮಾಸಮುಂ ಪೆಱಗುಮೆಲ್ಲಿಯಾನುಂ ಗಮಕಂ ಕ್ರಮಮದಱೊಳೆಲ್ಲಮೆನಲಿನಿತು ಮಾರ್ಗದೊಳ್ ಸಮಱುಗಿಂತು ಕವಿವೃಷಭರ್ಕಳ್ (ಕವಿರಾ. ೨-೯೪, ೯೫); ಇವೆ ಮಹಾಮಂತ್ರಾಸ್ತ್ರಸಂತತಿಯಿವೆ ಮಹಾಧನುರಾಜ್ಯ ಸತ್ಕೃತಿಸವನಸಾಪೇಕ್ಷಂಗಳಿವೆ (ಕುವ್ಯಾಗ. ೪-೩೭). [ಸಂ.]

**ಸಾಪೇಕ್ಷಕ** (ನಾ). = ಸಾಪೇಕ್ಷ ೩ : ಆಗ ಮೊದಲನೆಯವನಿಗೆ ಸಾಪೇಕ್ಷಕವಾಗಿ ಎರಡು ಮತ್ತು ಮೂರನೆಯವರ ವೇಗವು ತಾಸಿಗೆ ಮೂರು ಮತ್ತು ಹತ್ತು ಮೈಲಿಗಳು. ಆದರೆ ಎರಡನೆಯವನಿಗೆ ಸಾಪೇಕ್ಷವಾಗಿ ಮೂರನೆಯವನ ವೇಗವು ಏಳು ಮೈಲಿಗಳು (ಜ್ಯೋತಿರ್ವಿ. ೨೭ ಅಡಿಟ). [ಸಂ.]

**ಸಾಪೇಕ್ಷಕ್ರಿಯಾರೂಪ** (ನಾ). [ವ್ಯಾಕ] "ತಮ್ಮ ಅರ್ಥವನ್ನು ಪೂರ್ತಿ ಮಾಡುವುದಕ್ಕಾಗಿ ಬೇರೆ ಕ್ರಿಯಾಪದಗಳ ಸಹಾಯವನ್ನು ಅಪೇಕ್ಷಿಸುವ ಕ್ರಿಯಾರೂಪಗಳಿಗೆ ಸಾಪೇಕ್ಷಕ್ರಿಯಾರೂಪಗಳೆಂದು ಹೆಸರು" (ಮಧ್ಯಮ. ೭೪).

[ಸಂ.]

**ಸಾಪೇಕ್ಷವಾದ** (ನಾ). = [ವಿಜ್ಞಾ] ಪರಸ್ಪರಾವಲಂಬನೆಯ ಸಿದ್ಧಾಂತ: ಈ ಸಾಪೇಕ್ಷವಾದ (Relativity Theory)ವು ವಿಜ್ಞಾನವನ್ನು ತತ್ವಶಾಸ್ತ್ರಕ್ಕೆ ಮತ್ತಷ್ಟು ಸಮೀಪ ಮಾಡಿದೆ (ಬಾಲಪ್ರ. III, ೧೩೭೭); ಈಗ ಸಾಪೇಕ್ಷವಾದದ ಈ ಯುಗದಲ್ಲಿ ಯಾವುದೇ ಒಂದು ಭಾವವನ್ನು ಅತಿ ಸರಳಗೊಳಿಸಿ ಅದರ ಇತರ ಮುಖಗಳಿಂದ ಪ್ರತ್ಯೇಕಿಸಿ ನೋಡುವುದು ಪ್ರತಿಭಾವಂತನಿಗೆ ಅಸಾಧ್ಯ (ಎಮುಕ. IX, ಮುನ್ನುಡಿ). [ಸಂ.]

**ಸಾಪೇಕ್ಷೆ** (ನಾ). ಅಪೇಕ್ಷೆಯಿಂದ ಕೂಡಿರುವಿಕೆ; ಬಯಕೆಯನ್ನು ಹೊಂದಿರುವಿಕೆ: ರಾಯನೀ ಪರಿ ನುಡಿದು ಜನಸಮುದಾಯವನು ಕಳುಹಿದನು ಸುಮನೋಭೂಯ ಸಾಪೇಕ್ಷೆಯ ಸಮಾಧಿಯೊಳಿರಲು ರಾತ್ರಿಯಲಿ (ಕುವ್ಯಾಅ. ೨೧-೬೩).

[ಸಂ. ಸಾಪೇಕ್ಷ]

**ಸಾಪ್ತಪದೀನ** (ನಾ). ೧. ವಧೂವರರು ವಿವಾಹದ ಸಂದರ್ಭದಲ್ಲಿ ಏಳು ಹೆಜ್ಜೆಗಳಲ್ಲಿ ಜೊತೆಯಾಗಿ ಅಗ್ನಿಯನ್ನು ಪ್ರದಕ್ಷಿಣೆ ಮಾಡುವುದು; ಸಪ್ತಪದಿ. ೨. ಸ್ನೇಹ; ಸಖ್ಯ : "ಸ್ನೇಹಮಜರ್ಯಂ . . . ಸಾಪ್ತಪದೀನಂ ಸೌಹೃದಮದು" (ವಸ್ತುಕೋ. ೧೧೧-೪). [ಸಂ.]

**ಸಾಪ್ತಾಹಿಕ** (ಗು). ೧. ಏಳುದಿನಗಳಿಗೆ ಸಂಬಂಧಿಸಿದ: ಸಾಪ್ತಾಹಿಕ ಪುರವಣಿಯಲ್ಲಿ ಬಂದಿರುವ ವಿಶೇಷ ಲೇಖನ ಚೆನ್ನಾಗಿದೆ (ರೂಢಿ). (ನಾ). ೨. ವಾರಕ್ಕೊಮ್ಮೆ ಪ್ರಕಟವಾಗುವ ಪತ್ರಿಕೆ; ವಾರಪತ್ರಿಕೆ : ಸಾಪ್ತಾಹಿಕಗಳು ತುಂಬ ಜನಪ್ರಿಯವಾಗಿವೆ (ರೂಢಿ). [< ಸಂ. ಸಪ್ತಾಹ. / ಮರಾ. ಹಿಂ. ಸಾಪ್ತಾಹಿಕ್]

**ಸಾಫ್₁** 'ಸಾಫು' ನೋ.

**ಸಾಫ್₂** 'ಸಾಫ₂' ನೋ.

**ಸಾಫ₁** 'ಸಾಫು' ನೋ.

**ಸಾಫ₂, ಸಾಪ್, ಸಾಫ್₂** (ಅ). ೧. ಸ್ಪಷ್ಟವಾಗಿ ; ನೇರವಾಗಿ : ಬಾಪೂಸಾಹೇಬ ಅವರಿಗೆ ಭೂಮಿ ಮತ್ತು ವಾಡೇದ ಕಬಜಾ ಕೊಡಲಿಕ್ಕೆ ಸಾಫ ಒಲ್ಲೆಂದಾಗ, ಆ ಹೆಣ್ಣುಮಗಳು ಏನು ಮಾಡಬೇಕು? (ಗ್ರಾಮಾಯ. ೩೦೪) ; ಇಪ್ಪತ್ತರ ಮೇಲೆ ತಕ್ಕೊಂಡರೆ ನಾಲ್ವತ್ತೆಂಟು, ನೂರದ ಮೇಲಿದ್ದರೆ ನಾಲ್ವತ್ತೇಳರಂತೆ ಭಾವ ಬದ್ದೀತೆಂದು ಸಾಫ ಹೇಳುತ್ತಾರೆ (ಮುಂಬವ್ಯಾ. ೬೨); ನೀ ನನ್ನ ಕಡೆ ಬಂದು . . . ನನಗ ರಾಜಾನ ಪಾರ್ಟ ಕೊಡು ಅಂದರ, ನಾ ಸಾಫ ಒಲ್ಲೆ ಅಂತೇನಿ (ಗಂಮಾಯಿ. ೨೧೭). **ಸಾಪ್** : ೨. ಪೂರ್ಣವಾಗಿ; ತೀರಾ: ಮೈಯಿಂದ ಸಾಪ್ ಇಳಿದುಹೋಗಿದ್ದಾಳೆ (ಮೂರುದಾ. ೬೮). **ಸಾಫ್₂** : ೧. ಇದು ನೋಡು, ಹಾಂಗ ಸಾಫ್ ಒಡದು ಹೇಳಬ್ಯಾಡಾ (ಹೊಸಂಸಾ. ೧೫೯).

**ಸಾಫ್‌ಸಾಫ್ ಹೇಳು** = ಸ್ಪಷ್ಟವಾಗಿ ಹೇಳು ; ನೇರವಾಗಿ ನುಡಿ : ಇವತ್ತ ಸಂಜೆಗೆ ಡಾಕ್ಟರು ಬರ್‍ಲಿ, ಸಾಫ್ ಸಾಫ್ ಹೇಳಿ ಬಿಡತೇನಿ (ಹೊಸಂಸಾ. ೧೫೯).

[← ಅರ. ಹಿಂ. ಮರಾ. ಸಾಫ್]

**ಸಾಫಲ್ಯ** (ನಾ). ೧. ಸಾರ್ಥಕತೆ; ಸಫಲತೆ: 'ಜನ್ಮಸಾಫಲ್ಯ' ಪರಾ. ೨. ಸಫಲವಾದುದು ; ಸಾರ್ಥಕವಾದುದು ; ಯಶಸ್ವಿಯಾದುದು : ಎಮ್ಮಯ ಪುಣ್ಯವೆಮ್ಮ ಜನನಂ ಸಾಫಲ್ಯವು (ಗಿಂಕ. ೪-೪೧) : ಇಂದಾನು ಕೃತಕೃತ್ಯನಾದೆನೆನ್ನಯ ಜನ್ಮವಿಂದು ಸಾಫಲ್ಯವಾಯ್ತು (ಹಚಕಾ. ೫-೮೪). [ಸಂ.]

**ಸಾಫಲ್ಯತ್ವ** (ನಾ). ಸಫಲತೆಯನ್ನು ಹೊಂದಿರುವಿಕೆ; ಸಾರ್ಥಕತೆ : ಏನಿತು ಪುಣ್ಯಂಗೆಯ್ದವೋ ಮಜ್ಜನನ ಸಾಫಲ್ಯತ್ವವಾಯ್ತೆಂದೆನುತ ಹೇಳುತ ಬೆಸಗೊಳುತ ಜನರೆಯ್ದೆ ಕೀರ್ತಿಸಲು (ಬಸಪು. ೫-೫೧). [ಸಂ.]

**ಸಾಫು, ಸಾಪು, ಸಾಫ್₁, ಸಾಫ₁** (ನಾ). ೧. ಶುಭ್ರವಾದುದು; ಶುಚಿಯಾದುದು; ಸ್ವಚ್ಛವಾದುದು : (ಶ). ೨. ರೋಗವಿಲ್ಲದುದು; ನಿರೋಗಿಯಾದುದು : (ಶ). ೩. ಸಮತಲವಾದುದು; ಹಳ್ಳತಿಟ್ಟುಗಳಿಲ್ಲದುದು: ಸಾಫಾಗ್ ಅಳ್ಳ ತಿಟ್ಟಲ್ದಂಗೆ ಮಡಿಕೇರೀಲಿ ಮಂಜು! (ಕನ್ನಬಾ. ೧೦೮). ೪. ಸರಳವಾದುದು; ನಿಷ್ಕಪಟವಾದುದು : ನಮ್ಮಣ್ಣನ ಹತ್ತಿರ ಬರುವವರಲ್ಲೆಲ್ಲ ನೀವು ಒಬ್ಬರು ಸಾಫಾಗಿ ಮಾತನಾಡಿ ಅವರಿಗೆ ಒಳ್ಳೆಯದಾಗಲಿ ಎಂತ ನಿಜವಾಗಿ ಕಷ್ಟಪಡುತ್ತೀರಿ (ಶಿವಧ. ೩೪). ೫. ಸುಲಭವಾದುದು; ಸಲೀಸಾದುದು : ಸ್ನಾನಸಮಯದಲ್ಲಿ ಹೊಟ್ಟೆಯನ್ನು ಕಸುವಿನಿಂದ ತಿಕ್ಕಿದರೆ ಶೌಚಕ್ಕೆ ಸಾಫಾಗುತ್ತದೆ (ಬ್ರಹ್ಮಜೀ. ೧೨೫). ೬. ಪೂರ್ತಿಯಾದುದು; ಸಮಗ್ರವಾದುದು; ಪರಿಷ್ಕಾರವಾದುದು : (ಶ). ೭. ನಾಶ; ಹಾನಿ: (ಶ). **ಸಾಫು** : ೧. 'ಸಾಪುಗಾರ' ಪರಾ. ೩. "ಸಾಪು ; ನೆಲಸಮ" (ಕನ್ನಜಾ. ೨೧೧); ರಥ ಬರುವ ರಭಸಕ್ಕೆ ಗುಂಡುಕಲ್ಲು ತಗ್ಗು ಮಿಟ್ಟೆ ಗಿಡ ಸಾಪಾಗಿ ಕುಂಬಾರನ ಚಕ್ರದಂತೆ ತಿರುಗಲು ಭೂಮಿ (ಕರ್ನಾಕ. ೨೯೪). ೮. ಸವೆದು ನುಣುಪಾದುದು: 'ಸಾಪುನಾಣ್ಯ' ಪರಾ. ೯. ಸರಿ ; ಸ್ಫುಟ. **ಸಾಫ್₁**: (ಗು). ೧೦. ನೇರವಾದ ; ಸುತ್ತುಬಳಸಿಲ್ಲದ : ನಾವು ಅಲ್ಲೆಲ್ಲ ಸಾಫ್ ಯುದ್ಧಮಾಡಿ ಕಷ್ಟ ತೆಗೆದುಕೊಂಡೇ ಬಂದೆವು (ನಾಲ್ಕುಕ. ೧೧). **ಸಾಫು₁**: ೯. ಹಮ್ಮೂ ಗಂಟಲು 'ಸಾಫ' ಮಾಡಿಕೊಂಡ ಅಷ್ಟೆ (ಪುರುಷಾ. ೨೪).

**ಸಾಫಾಗಿರು** = ೧. ಚೆನ್ನಾಗಿರು ; ಸೊಗಸಾಗಿರು : ತಿಮ್ಮನ ಮಡದಿ ವೈನಾಗಿದ್ದಾಳೆ, ಸಾಪಾಗಿದ್ದಾಳೆ (ಕುಡಿಕೂ. ೨೪೧); ಎಲ್ಲರೂ 'ಮಾಣಿ ಎಷ್ಟು ಸಾಪಾಗಿದೆ' ಎಂದರು (ಮರಮ. ೧೩೭). ೨. ಉತ್ತಮವಾಗಿರು; ರುಚಿಯಾಗಿರು: ಕಾಫಿ ಅಂದರೆ ಇದು ಮಾರಾಯ್ರೆ . . . ಎಷ್ಟು ಸಾಪಾಗಿರುತ್ತೆ ಕುಡಿಯುವುದಕ್ಕೆ (ದೇವಹಂ. ೬೩). **ಸಾಫು ಮಾಡು** = (ಆಲಂ) ನಾಶಮಾಡು; ಹಾಳುಮಾಡು; ಮುಗಿಸು: ಮೊದಲು ಆರುಸಾವಿರ ವರ್ಷಾ ಉತ್ಪನ್ನವಿದ್ದದ್ದು ಈಗ ಎರಡುಸಾವಿರಕ್ಕೆ ಬಂದು ಹತ್ತಿದೆ. ಈ ಜನ ಎಲ್ಲಾ ತಿಂದು ಸಾಫುಮಾಡಿಬಿಟ್ಟರು (ಶ್ರೀಮಾತೃ. ೨೯). **ಸಾಫ್‌ಸೀದಾ** = ನಿಷ್ಕಪಟವಾದುದು; ಸಾಚಾ: ನಿನ್ನ ಹಾಗೇ ಲೋಕ ಎಲ್ಲಾ ಸಾಫ್‌ಸೀದಾಂತ ನೀನು ತಿಳಿದುಕೊಂಡಿದೀಯ (ಚಂದಕೋ. ೧೨೨).

[← ಅರ. ಹಿಂ. ಮರಾ. ಸಾಫ್]

**ಸಾಬ್** 'ಸಾಹೇಬ' ನೋ.

**ಸಾಬ** 'ಸಾಹೇಬ' ನೋ.

**ಸಾಬಕು, ಸಾಬಕ್ಕು** (ಗು). ೧. ಹಿಂದಿನ; ಮೊದಲಿನ; ಪೂರ್ವದ : ಸುಳ್ಯ ವಗ್ಯೆರೆ ಸಾಬಕುಸರಕಾರದ ಇಲಾಖೆ ಒಳಗೆ ಇರುವ ಸೀಮೆಯನ್ನು ಯಥಾಪ್ರಕಾರ

ಸರಕಾರ ತಾಲೂಕು ಮಾಡಿ (ರಾಜೇಂದ್ರ. ೧೧೨). (ನಾ). ೨. ಮೊದಲು ; ಪೂರ್ವ: ತಾಲ್ಲೂಕು ಮಜಕೂರಲ್ಲಿ ವಾರದ ಪೊಲ ಗದ್ದೆ ಪೈಕಿ ಸಾಬಕಿನಿಂದ ಹುಟ್ಟುವಳಿ ಜಾಸ್ತಿಯಾಗುತ್ತಿದ್ದದ್ದು . . . ಸ್ಥಳದ ಪಾರುಪತ್ಯಗಾರ ಮೊದಲಾದವರೇನಾದರೂ ಹೀನಕಂದಾಯಕ್ಕೆ ಮಾಡಿದ್ದರೆ ಆ ಬಾಬು ವಿಚಾರಣೆ ಮಾಡಿ ಕ್ರಮಪಡಿಸುವುದು (ಮಹಾವಂ. II, ೫೮). **ಸಾಬಕ್ಕು** : ೧. ನೀಉ ವಾಜಬಿ ಯಿದ್ದ ಮೇರಗೆ ಚಂನ್ನಾಗಿ ದರ್‍ಯಾಃಪ್ತು ಮಾಡಿ ಸಾಬಕ್ಕು ಮಾಮೂಲ್ಲು ಪ್ರಕಾರಕ್ಕೆ ನಡೆದುಕೊಳುವ ಹಾಗೆ . . . ಚೋರ ತಾಕಿಯಿತು ಮಾಡುವರು (ಮೈಆರ್. ೧೯೩೦, ೪೩-೩೨ ; 1812).

[← ಅರ. ಹಿಂ. ಸಾಬಿಕ್ : ಮರಾ. ಸಾಬಕ್, ಸಾಬೀಕ್]

ಸಾಬಕ್ಕು 'ಸಾಬಕು' ನೋ.

ಸಾಬಣ 'ಸಾಬೂನು' ನೋ.

ಸಾಬಾಣ 'ಸಾಬೂನು' ನೋ.

ಸಾಬಾಣು 'ಸಾಬೂನು' ನೋ.

ಸಾಬಿ 'ಸಾಹೇಬ' ನೋ.

ಸಾಬೀತ್ 'ಸಾಬೀತು' ನೋ.

ಸಾಬೀತು, ಸಾಬೀತ್, ಸಾಬೂತು (ನಾ). ೧. (ಯಾವುದೇ ವಿಚಾರವು ನಿಜವೆಂದು) ರುಜುವಾತು ಮಾಡಿದುದು ; ಪ್ರಮಾಣೀಕರಿಸಿದುದು : ನಿಮ್ಮ ಪ್ರತ್ಯುತ್ತರದಲ್ಲಿ ಪ್ರತ್ಯಕ್ಷರವೂ ಸುಳ್ಳೆಂದು ಸಾಬೀತಾಗಿ ದೋಷವು ಶತಾಧಿಕವಾಗಿದೆ (ಶ್ರೀರಾಯ. ೧೯೬); ನಾನೇ ಅಪರಾಧಿ ಅಂತ ಸಾಬೀತು ಆಗುತ್ತೆ (ಮರಳಿ. ೧೬೯). ೨. ಬಲವಾದುದು; ಗಟ್ಟಿಮುಟ್ಟಾದುದು : (ಕ). ೩. ಸುರಕ್ಷಿತತೆ; ಭದ್ರತೆ : ನಾರಾಯಣನನ್ನು ತಂದು ಹಾಕಿದ ಮೇಲೆ . . . ತೋಟವನ್ನು ಸಾಬೀತಾಗಿ ಇರಿಸಿಕೊಂಡಿದ್ದಾನೆ (ಚಟ್ಟಜೀ. ೧೯); ನಿನ್ನನ್ನು ಕಂತ್ರಿಗಳ ಕಣ್ಣು ತಪ್ಪಿಸಿ ಸಾಬೀತಿನಲ್ಲಿಟ್ಟುಕೊಳ್ಳುವುದು ತೋಪುನಿಗೆ ತುಂಬ ಸುಲಭವಲ್ಲ (ಹೊಸಕ್ಕಿ. ೫೧). **ಸಾಬೀತ್** : ೧. ಸುಳ್ಳು ಕಾರ್ಡಂತೆ, ಹೇಗೆ ಸಾಬೀತ್ ಮಾಡುತ್ತೀರ್‍ರೀ, ಅದರ ಮೇಲೆ ಅಮಲ್ದಾರರ ರುಜು ಇಲ್ಲವೆ ? (ಮರಳಿ. ೧೧೮). **ಸಾಬೂತು**: ೧. ಈಗ ನಡಸಿದಂಥಾ ಶರಾರತ್ತು ತಪ್ಪು ಅವರ ಮೇಲೆ ಸಾಬೂತು ಆಗಬೇಕು ಎಂಬುದನ್ನು ಕುರಿತು, ಅವರ ಕಡೆ ಜನರು ಸರಹದ್ದು ದಾಟಿ, ಸೀಮೆ ಒಳಗೆ ಬಂದಾಗ್ಯೂ, ನೀವು ಅಡ್ಡಿ ಮಾಡಬೇಡಿ (ರಾಜೇಂದ್ರ. ೯೨).

ಸಾಬೀತಾಗು = (ನಿಜವೆಂದು) ರುಜುವಾತಾಗು; ದೃಢಪಡು : ನಿಮ್ಮ ಅಪರಾಧವೇ ಸಾಬೀತಾಗುತ್ತೆ (ಚಂದತೋ. ೧೫೨); ಅಪರಾಧವೂ ಸಾಬೀತಾಗಿಲ್ಲ (ದೌಲತ್. ೨೫೫). **ಸಾಬೀತು ಮಾಡು, ಸಾಬೂತು ಮಾಡು** = ೧. (ನಿಜವೆಂದು) ರುಜುವಾತು ಮಾಡು : ಮೊಹಂಜೊದಾರೊದ ಮುದ್ರಿಕೆಗಳೇನಿದ್ದರೂ ಕೇವಲ ಅಲ್ಲಿದ್ದ ಅಧಿಕಾರಿಗಳ ಮುದ್ರಿಕೆಗಳೆಂದು ಸಾಬೀತು ಮಾಡಿದನು (ದ್ರಾವಿವಿ. ೨೪). ೨. ಬಲಪಡಿಸು; ದೃಢಪಡಿಸು : ಮೈಸೂರ ಅರಸುಗಳ ಸರಕಾರಕ್ಕೂ ತಮ್ಮ ಸರಕಾರಕ್ಕೂ ದೋಸ್ತಿ ಪಾಯಾ ಸಾಬೂತು ಮಾಡುವದರಿಂದಾ, ಉಭಯಕಡೆ ರೈತರಿಗೂ ಸುಖವೂ, ಫಾಯಿದೆಯೂ ಸಹಾ ಇದೆ (ರಾಜೇಂದ್ರ. ೨೩೯).

[← ಪಾರ. ಸಾಬಿತ್, ಸಬೂತ್; ಅರ. ಸಬೂತ್, ಸುಬೂತ್ ; ಹಿಂ. ಸಾಬಿತ್, ಸಾಬುತ್; ಮರಾ. ಸಾಬೀತ್, ಸಾಬೂದ್, ಸಾಬೂತ್, ಶಾಬಿತೀ]

ಸಾಬು (ನಾ). ಒಂದು ಬಗೆಯ ಮರ : 'ಸಾಬುಅಕ್ಕಿ' ಪರಾ.

[← ಮರಾ. ಸಾಬೂ]

ಸಾಬುಅಕ್ಕಿ, ಸಬ್ಬಕ್ಕಿ (ನಾ). ಸೀಮೆಅಕ್ಕಿ : ತವಕೀಲು (ಕೂವೆಹಿಟ್ಟು), ಸಬ್ಬಕ್ಕಿ (ಸಾಬುಅಕ್ಕಿ) ಬಟಾಟೆ . . . ಮುಂತಾದ ಪಿಷ್ಟೋತ್ಪಾದಕ ಕಂದಮೂಲಾದಿಗಳು . . . ಈ ವರ್ಗದೊಳಗ ಬರುತ್ತವೆ (ಮುಂಬಯಿ. ೫-೧೬೨): ಸಾಬುದಾಣ (ಸಾಬುಅಕ್ಕಿ) ಪಿಕ್ಕಲದ ವಜನವು ೫,೩೨೦ ಸೂರ್ತಿ ರೂಪಾಯಿಗಳ ತೂಕವಿರುತ್ತದೆ (ಮುಂಬವ್ಯಾ. ೧೧೯). **ಸಬ್ಬಕ್ಕಿ**: ಸಂಜೆ ಒಲೆ ಹಚ್ಚಿ ಸಬ್ಬಕ್ಕಿ ಗಂಜಿಯನ್ನಿಷ್ಟು ಬೇಯಿಸಿ ಸುನಂದಾ ತಾಯಿಗೆ ಕುಡಿಸಿದಳು (ಏಕಾಂಗಿ ೩೦) [ಸಾಬು + ಅಕ್ಕಿ]

ಸಾಬೂಣ 'ಸಾಬೂನು' ನೋ.

ಸಾಬುದಾಣ 'ಸಾಬೂದಾಣೆ' ನೋ.

ಸಾಬುದಾಣೆ 'ಸಾಬೂದಾಣೆ' ನೋ.

ಸಾಬುದಾನಿ 'ಸಾಬೂದಾಣೆ' ನೋ.

ಸಾಬೂತು 'ಸಾಬೀತು' ನೋ.

ಸಾಬೂದಾಣೆ, ಶಾಬೂದಾಣ, ಸಾಬುದಾಣ, ಸಾಬುದಾಣೆ, ಸಾಬುದಾನಿ (ನಾ). = ಸಾಬುಅಕ್ಕಿ : ಮಕ್ಕಳಿಗೆ ಒಂದೊಂದಾಣೆಯ ಕಲ್ಲುಸಕ್ಕರೆ ಮತ್ತು ಸಾಬೂದಾಣೆ ತಾ (ಭಾರತಿ. ೬೮). **ಶಾಬೂದಾಣ** : ಶಾಬೂದಾಣ, ಸಕ್ಕರೆ, ಚಿಮಣೀಯಣ್ಣೆ ಮತ್ತು ಕಡ್ಡೀಪೆಟ್ಟಿಗೆ (ಸ್ಮೃತಿಚಿ. ೪೩೮). **ಸಾಬುದಾಣ** : ಸಾಬುದಾಣ (ಸಾಬು ಅಕ್ಕಿ) ಪಿಕ್ಕಲದ ವಜನವು ೫,೩೨೦ ಸೂರ್ತಿ ರೂಪಾಯಿಗಳ ತೂಕವಿರುತ್ತದೆ (ಮುಂಬವ್ಯಾ. ೧೧೯). **ಸಾಬುದಾಣೆ** : ಸಾಬುದಾಣೆ ಕಿಚಡಿ ಅದ ಏನು? (ಚಂದುಟಿ. ೧೦೦). **ಸಾಬುದಾನಿ** : ರೋಗಿಗಳ ಊಟಕ್ಕೆ ಸ್ವಲ್ಪ ಸಾಬುದಾನಿ ಸಿಗುತ್ತದೆ (ಶ್ರೀಕಾಂತ. ೧೭).

[← ಹಿಂ. ಸಾಬೂದಾನಾ ; ಮರಾ. ಸಾಬೂದಾಣಾ, ಶಾಬುದಾಣಾ]

ಸಾಬೂನು, ಸಾಬಣ, ಸಾಬಾಣ, ಸಾಬಾಣು, ಸಾಬುಣ (ನಾ). ನೀರಿನೊಂದಿಗೆ ಬೆರೆತಾಗ ವಿಶೇಷವಾಗಿ ನೊರೆಯನ್ನು ಉಂಟುಮಾಡುವ, ಬಟ್ಟೆ, ಮೈಗಳನ್ನು ಶುದ್ಧಿಗೊಳಿಸಲು ಬಳಸುವ, ಕ್ಷಾರ, ಎಣ್ಣೆ ಮುಂತಾದುವುಗಳಿಂದ ತಯಾರಿಸುವ ಒಂದು ಬಗೆಯ ರಾಸಾಯನಿಕ ವಸ್ತು ; ಸೋಪು : ಸಾಬೂನಿನ ತಯಾರಿಯನ್ನು ಕಾವಿನ ಬಲದಿಂದಲೂ, ಕಾವಿಲ್ಲದೆಯೂ ಮಾಡುತ್ತಾರೆ (ಬಾಲಪ್ರ. III, ೧೪೯೩); ಸಾಬೂನು, ಕೊಬ್ಬು ಮತ್ತು ಕ್ಷಾರಪದಾರ್ಥಗಳನ್ನು ಮಿಶ್ರಮಾಡಿ ತಯಾರಿಸಿದ ಪದಾರ್ಥ (ಗೃಹವಿ. ೮೬). **ಸಾಬಣ** : ಸಾಬಣಾ (ಸಬಕಾರ), ಕುಂಕುಮಾ, ಹಿಪ್ಪಲಿ, ಅಕ್ಕಲಖಾರ (ಮುಂಬವ್ಯಾ. ೯೯). **ಸಾಬಾಣ** : ಸಾಹೇಬರ ಮನೆಯ ಸಾಬಾಣದಲ್ಲಿ ನಿತ್ಯ ನಮ್ಮ ಅರಿವೆ ಮಡಿಯಾಗಿ ಶುಭ್ರ ಧವಳವಾಗುತ್ತಿದ್ದವು (ದೀಪಹ. II, ೩೮). **ಸಾಬಾಣು** : ಅವನು ಅಂಗಿಗೆ ಸಾಬಾಣು ಹಚ್ಚಿದನು (ರಕ್ತಧ್ವ. ೪೮); **ಸಾಬುಣ** : (ಸಾಬುಣ) ಸಬಕಾರ ಪೆಟ್ಟಿಗೆ ಇಲ್ಲವೆ ಬಂಡಲ (ಮುಂಬವ್ಯಾ. ೨೫೭).

[← ಅರ. ಹಿಂ. ಸಾಬುನ್; ಮರಾ. ಸಾಬಣ, ಸಾಬೂಣ]

ಸಾಭಿಜ್ಞಾನ (ಗು). ೧. ನೆನಪಿನ ಕುರುಹುಗಳಿಂದ ಕೂಡಿದ; ಸ್ಮರಣೆಗೆ ತರುವ ಗುರುತುಗಳನ್ನು ಹೊಂದಿದ: ಸಮುದ್ರದತ್ತಂ . . . ಸರ್ವದೈತೆಯೊಳು ನೆರೆದು ಸಾಭಿಜ್ಞಾನ(ಸಂವುಜ್ಞ)ದುಂಗುರಮಂ ಕೊಟ್ಟು (ಚಾವುಂಪು. ೮೦). (ನಾ). ೨. ಕುರುಹಗಳಿಂದ ಕೂಡಿದುದು. ೩. ಕುರುಹು; ಗುರುತು: ಎಮಗಿರ್ಪತ್ತೊಂದು ದಿವಸವಾಯುಷ್ಯಮೆಂಬುದರ್ಕೆ ಸಾಭಿಜ್ಞಾನಮೇನೆಂದು ಬೆಸಗೊಂಡೊಡೆ ಭಟಾರರೆಂದರ್ . . . ಮತ್ತಂತೆ ಪೋಪನ್ನೆಗಂ ತೋಜ್‌ತೀವ್ರುಗುಮಿದೊಂದು ಸಾಭಿಜ್ಞಾನಂ (ವಡ್ಡಾರಾ. ೧೦೦-೬). [ಸಂ.]

ಸಾಭಿಜ್ಞಾನಪಟ (ನಾ). ನೆನಪಿಗೆ ತರುವ ಕುರುಹುಳ್ಳ ಪಟ ; ಜ್ಞಾಪಕವನ್ನುಂಟು ಮಾಡುವ ಗುರುತಿನ ಚಿತ್ರ : ಮನಃಪ್ರಿಯತಮನ ಬರೆದ ಸಾಭಿಜ್ಞಾನ ಪಟಮನೀವುದುಮಾಕೆಯುಮದಂ ನಿಮಿರ್ಚಿ ನೋಡಿ . . . ಮಾಧವಸಮಯ ದೊಳಲರ್ದ ಚೂತಲತೆಯನ ಪೋಲ್ತಳ್ (ಆದಿಪು. ೪-೨೨ ವ). [ಸಂ.]

ಸಾಭಿಪ್ರಾಯ (ಗು). ೧. ಅಭಿಪ್ರಾಯದಿಂದ ಕೂಡಿದ ; ಉದ್ದೇಶಪೂರ್ವಕವಾದ: ಮುರಮಥನ ಚಿತ್ತಸಿದ್ಧ ತರುವರಿಯ ಸಾಭಿಪ್ರಾಯವಾಕ್ಯಸ್ಫುರಣವನು (ಕುವ್ಯಾಕ. ೨೦-೨೯); ಅನೇಕವಿಧದಿನಾ ನೀತಿಭೂಷಣಮಂತ್ರಿಪಂ ಸಾಭಿಪ್ರಾಯಹಿತಮಿತಪ್ರಚುರ ವಚನನಿಚಯದಿನೊಡಂಬಡಿಸುತ (ರಾಜಶೇ. ೬-೧೩೨ ವ). (ನಾ). ೨. ಅಭಿಪ್ರಾಯದಿಂದ ಕೂಡಿದುದು; ಉದ್ದೇಶಸಹಿತವಾದುದು: ವಿಶೇಷಣವು ಸಾಭಿಪ್ರಾಯವಾಗಿದ್ದರೆ ಪರಿಕರಾಲಂಕಾರವೆನ್ನಿಸಿಕೊಳ್ಳುವುದು (ಕೃಬಿಡಿ. ೨೭೦). [ಸಂ.]

ಸಾಭಿಲಾಷ (ನಾ). ಅಪೇಕ್ಷೆ; ಕಾತರ: ಎನ್ನ ಮುನ್ನಿನ ಭವದ ಗಂಡನೆಂದು ಕಪೋತಿರತಿವರನಂ ಸಾಭಿಲಾಷದಿಂ ಪೊರ್ದೆ (ಚಾವುಂಪು. ೯೧). [ಸಂ.]

ಸಾಭಿಲಾಷೆ (ನಾ). = ಸಾಭಿಲಾಷ : ಭೀತಿಯಿಂದೈತರ್ಪ ಕಾಮಿನಿಯನು ಸಾಭಿಲಾಷೆಯೊಳೊರ್ವ ವಿಟನಿದಿರ್ವಂದು . . . ತರ್ಕೈಸಿದನದೇಂ ಪ್ರೌಢನೋ (ಜೈಮಿಭಾ. ೨೬-೮).

[ಸಂ. ಸಾಭಿಲಾಷ]

**ಸಾಮು$_1$** (ನಾ). ಕಡುನೀಲಿ ಬಣ್ಣ ; ಶ್ಯಾಮವರ್ಣ : 'ಸಾಮುವಣ್ಣ' ಪರಾ.

[< ಪ್ರಾ. ಸಾಮ. / ಸಂ. ಶ್ಯಾಮ ]

**ಸಾಮು$_2$** 'ಸಾಮು' ನೋ.

**ಸಾಮು$_3$** (ನಾ). ೧. ಶಾಂತಗೊಳಿಸುವಿಕೆ ; ಸಮಾಧಾನಪಡಿಸುವಿಕೆ. ೨. ಸಾಮ, ದಾನ, ಭೇದ ಮತ್ತು ದಂಡ ಎಂಬ ಕಾರ್ಯಸಾಧನೆಯ ಚತುರೋಪಾಯಗಳಲ್ಲಿ ಒಂದು; ಒಡಂಬಡಿಕೆ; ರಾಜಿ: ಸಾಮಂ ಪ್ರಿಯಜನಪ್ರಯೋಜ್ಯಂ . . . ದಂಡಂ ಪೌರುಷಾತ್ಯಯೋಚಿತಂ (ಶಾಂತಿಪು. ೩-೯೩ ವ) ; ಸಾಮದೊಳಳವಡುವೊಡೆ ಸಂಗ್ರಾಮಂ ರಿಪುನೃಪರೊಳೇಕೆ (ಪಾರ್ಶ್ವಪು. ೨-೪೦). ೩. ಸಾಂತ್ವನದ ನುಡಿ; ಸಮಾಧಾನದ ವಚನ: ಸಾಮಪೂರ್ವಕಮಕ್ರಮಣಾವಸಾನಾನಂದಿತಗಂಭೀರೋದಾರಸಾರಭಿನ್ನನಯ ಸಂತತಿಸಮನ್ವಿತಮನಱಿಯೆ ತೆಱೆಯೆ ನೆಱೆಯೆ ನುಡಿದು ಪ್ರೀತಿವರ್ಧನಂ ಮಾಣ್ಬುದುಂ (ಶಾಂತಿಪು. ೩-೮೯ ವ); ರಾತ್ರಿಯಲಿ ದಾಯವಿದು ತಮಗೆಂದು ದೈತ್ಯನಿಕಾಯ ಬಂದು ರಸಾತಳಕೆ ಕುರುರಾಯನನು ಕೊಂಡೊಯ್ದು ತಿಳುಹಿದರವರು ಸಾಮದಲಿ (ಕುಮ್ಯಾಅ. ೨೧-೬೩). ೪. ಶಾಂತಸ್ವಭಾವ; ಸಾಧುವಾದ ನಡವಳಿಕೆ. ೫. (ದೇವರ) ಛಂದೋಬದ್ಧವಾದ ಸ್ತೋತ್ರ, – ಕೀರ್ತನೆ. ೬. ಚತುರ್ವೇದಗಳಲ್ಲಿ ಮೂರನೆಯದು ಮತ್ತು ಗಾನಮಾಡಲಾಗುವ ಅದರ ಮಂತ್ರಭಾಗ: "ಸಾಮರ್ಗ್ಯಜುಸ್ತ್ರಯಂ ತ್ರಯಿಯೆನಿಕುಂ" (ವಸ್ತುಕೋ. ೩-೧೨); ನೆಱೆ ಸಾಮದೆ ಗೀತಸಾರಮಂ . . . ಗೆಲಿದೊಲವಿಂದೆ ಕೂಡಿ ಮಿಗೆ ಪುಟ್ಟಿಸಿದಂ ಬಿದಿ ನಾಟ್ಯವೇದಮಂ (ಲಾಸ್ಯರಂ. ೧-೮). ೭. [ದ್ವೈತ] (ಸಾಮವೇದದಲ್ಲಿ ಪ್ರತಿಪಾದ್ಯನಾದ) ಭಗವಂತನ ಐದು ರೂಪಗಳು : 'ಪಂಚಸಾಮ' ಪರಾ. ೮. [ಸಂಗೀತ] ಒಂದು ರಾಗದ ಹೆಸರು : ಸಾಮ – ೨೮ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ (ಸಂಗೀಚಂ. ೧೬೦).

**ಸಾಮಂ ಮಾಡು** = (?): ತಾಮರಸೋಪಮವದನಂಗಾಣುತ ಸಾಮಂ ಮಾಡದೆ ತದ್ಗಿರಿತಟದೊಳ್ ಭೀಮಾರಣ್ಯಮದೊಂದಿರೆ ಕಂಡದಱೊಳಗಡೆಗೆಯ್ದಿದನು (ಜಯಕಾ. ೧೫-೨೨); "ತಡಮಾಡು ; ಅಲಕ್ಷ್ಯಮಾಡು (?)" (ಪ್ರಭಣ್ಣ).

[ಸಂ. ಸಾಮನ್]

**ಸಾಮಂಜಸ್ಯ** (ನಾ). ೧. ಹೊಂದಾಣಿಕೆ; ಸಮಂಜಸತೆ : ಪರಸ್ಪರ ಸಾಮಂಜಸ್ಯವಿಲ್ಲದ ಲ್ಯಾಟಿನ್ ನ್ಯಾಯಶಾಸ್ತ್ರಗಳಿಂದ ಇಪ್ಪತ್ತು ಪುಟಗಳನ್ನೋದಿದನಂತೆ (ಪುನರು. ೧೦೬). ೨. ಔಚಿತ್ಯ; ಯುಕ್ತತೆ: ಇಲ್ಲದಿದ್ದರೆ 'ವೃತ್ತಿ'ಯ ಮಾತುಗಳಿಗೆ ಸಾಮಂಜಸ್ಯ ಬರುವುದಿಲ್ಲ (ಧ್ವನ್ಯಾಲೋ. ೪ ಅಡಿಟ). ೩. ನಿಷ್ಕೃಷ್ಟತೆ ; ಯಥಾರ್ಥತೆ.

[ಸಂ.]

**ಸಾಮಂತ** (ಗು). ೧. ಅಕ್ಕಪಕ್ಕದ; ನೆರೆಹೊರೆಯ. ೨. ಸರಹದ್ದಿನ; ಗಡಿಯ. ೩. ಸಾರ್ವತ್ರಿಕವಾದ; ಸಾರ್ವಲೌಕಿಕವಾದ. (ನಾ). ೪. ಒಬ್ಬ ರಾಜನಿಗೆ ಅಧೀನದಲ್ಲಿದ್ದು ಕಪ್ಪ, ಕಾಣಿಕೆಗಳನ್ನು ಒಪ್ಪಿಸುವ ಆಶ್ರಿತರಾಜ; ಮಾಂಡಲಿಕ: ಉಱದೆನ್ನಂ ಕುಡಲಿರ್ದ ಕೂಸನೊಡಗೊಂಡುಯ್ವಾತನಂ ತಾಗಿ ತಳ್ತಿಱಿಯಲ್ ಕೋಡಗಗಟ್ಟುಗಟ್ಟಿ ತರಲಿನ್ನಾರಾರ್ಪರಂತಪ್ಪ ಪೊಚ್ಚಱಸಾಮಂತರೆ ಪೋಗಿಮೆಂದು ಪಲರಂ ಪೇಟ್ಬಾಗಳ್ (ಪಂಪಭಾ. ೫-೨೧); ನೆರೆದ ಸಾಮಂತಾದಿ ಭಟಪರಿಕರನಿಕರವುದ್ಭ್ರಮಿಸಿ ಸವೆದರು ಕಾದಿ ತವೊಳ್ಗೆ (ಬಸವು. ೬೧-೩೯). ೫. ನೆರೆಯವನು; ಪಕ್ಕದಲ್ಲಿ ವಾಸವಾಗಿರುವವನು. ೬. ನೆರೆರಾಜ್ಯದ ರಾಜ; ಪಕ್ಕದ ರಾಜ್ಯದ ದೊರೆ. ೭. ಮೂರುಲಕ್ಷ ಕರ್ಷಗಳಷ್ಟು ಕಂದಾಯವನ್ನು ಪಡೆಯುವ ರಾಜಪುತ್ರ. ೮. ಮುಖ್ಯಸ್ಥ ; ಮುಖಂಡ. ೯. ನೆರೆಹೊರಿಕೆ ; ಅಕ್ಕಪಕ್ಕದಲ್ಲಿರುವಿಕೆ. ೧೦. [ಸಂಗೀತ] ಒಂದು ರಾಗದ ಹೆಸರು: ಸಾಮಂತರಾಗವು (೧) ಸಂಪೂರ್ಣ, ಆರೋಹದಲ್ಲಿ ದೈವತವು ವಕ್ರವಾಗಿದೆ (ಚತುಪ್ರ. ೧೪೧).

**ಸಾಮಂತಗಸಣಿ, ಸಾಮಂತಘುಸಣಿ** = ಸಾಮಂತರಲ್ಲಿ ಪ್ರಬಲನಾದವನು; ಸಾಮಂತವರ್ಗದಲ್ಲಿ ಬಲಿಷ್ಠನಾದವನು; ಒಂದು ಬಿರುದು : ಸಾಮನ್ತಗಸಣಿ ಧರ್ಮ್ಮರತ್ನಾಕರಂ . . . ಶ್ರೀಮಾನ್‌ಮಹಾಸಾಮನ್ತಗೋವಿದೇವಂ ಹುಳಿಯೇಱು ಹನ್ನೆರಡುಮಂ ಮಹೋತ್ಸವದಿಂನ್ನಾಳುತ್ತಮಿರೆ (ಎಕ. VI, ಕಡೂರು. ೩೪-೧೧: 1148); ಮಹಾಸಾಮನ್ತಘುಸಣಿ ಜಗವನಣ್ಣಲೆವ ಸಿತಗರ ಗಣ್ಣ ಸಾಮನ್ತಬಿಟ್ಟಿಯ ಹುಳಿಯಱ ವೃತ್ತಿಯೊಳು . . . ರಾಜ್ಯಂಗೆಯ್ಯುತ್ತಮಿರೆ (ಎಕ. XII, ಚಿಕ್ಕನಾ. ೩೨-೧೨; 1161 ?). **ಸಾಮಂತಚಕ್ರ** = ಆಶ್ರಿತರಾಜರ ಸಮೂಹ: ನಿಜವಿಜಯಶ್ರೀಪತಿಂವರಾಪರಿಣಯನೋತ್ಸವಾಲೋಕನಕುತೂಹಲಪ್ರಚಲಿತ ಸಮಸ್ತಸಾಮಂತಚಕ್ರಸುಂ . . . ಮೇದಿನೀಚಕ್ರಸುಮಾಗಿ ಚಕ್ರವರ್ತಿಯ ಬಲಮನಿದಿರ್ಚಲೆಂದು ಮೇಲೆತ್ತಿ ಬರ್ಪಾಗಳ್ (ಆದಿಪು. ೧೪-೯೧ ವ). **ಸಾಮಂತಚೂಡಾಮಣಿ** = ೧. ಸಾಮಂತರಾಜರಲ್ಲಿ ಶ್ರೇಷ್ಠನಾದವನು. ೨. (ಕನ್ನಡದ ಮಹಾಕವಿ ಪಂಪನ ಆಶ್ರಯದಾತ ರಾಜನಾದ) ಚಾಲುಕ್ಯ ಅರಿಕೇಸರಿಯ ಒಂದು ಬಿರುದು : ಅನ್ನೆಗಮಿತ್ತ ಬಲದೇವಂ ಸುಭದ್ರೆಯಂ ಸಾಮಂತಚೂಡಾಮಣಿಯುಯ್ವನೆಂಬುದಂ ಕೇಳ್ದು (ಪಂಪಭಾ. ೫-೨೦ ವ). **ಸಾಮಂತಾಧಿಪತಿ** = ಸಾಮಂತರಾಜರ ಒಡೆಯ ; ಒಂದು ಬಿರುದು : ಸಮಧಿಗತ ಪಂಚಮಹಾಶಬ್ದ ಮಹಾಸಾಮಂತಾಧಿಪತಿ . . . ಮಹಾಮಹಿಮೋತ್ತುಂಗಂ ನಾಮಾದಿ ಸಮಸ್ತಪ್ರಸಸ್ತಿಸಹಿತಂ (ಸೌಇಇ. XX. ೪೬-೩೩; 1072).

[ಸಂ.]

**ಸಾಮಂತಿಕೆ** (ನಾ). ೧. ಸಾಮಂತನಾಗಿರುವಿಕೆ ; ಅಧೀನರಾಜನಾಗಿರುವಿಕೆ: ನೊಳಂಬರು, ತತ್ಕಾಲೋಚಿತವಾಗಿ ತ್ರೈಲೋಕ್ಯಮಲ್ಲ . . . ಮುಂತಾದ ಚಾಳುಕ್ಯ ಚಕ್ರವರ್ತಿಗಳ ಬಿರುದುಗಳನ್ನೆ ತಮ್ಮ ಸಾಮಂತಿಕೆಯ ದ್ಯೋತಕವಾಗಿ ಸ್ವೀಕರಿಸಿದ್ದರು (ನೊಳಂಬ. ೭೩). ೨. ಉಂಬಳಿ ; ಜಹಗೀರು : ಶ್ರೀಮನ್ಮಹಾಮಣ್ಡಳೇಶ್ವರಂ ಮದನಕರ್ಣ್ನರಸರು . . . ಸೋಮೇಶ್ವರದೇವರ ಅಂಗಭೋಗ ರಂಗಭೋಗ ಅನ್ನದಾನ ವಿದ್ಯಾದಾನಕ್ಕಂ ಆಲೂರ ಸಾಮಂತಿಕೆಯಂ ಬಿಟ್ಟರು (ನಾಂದೇಡ್. ೧೫-೫; 1113).

[ಸಾಮಂತ + - ಇಕೆ ]

**ಸಾಮಕಿ** (ನಾ). ಒಂದು ಬಗೆಯ ಧಾನ್ಯ; ಸಾಮೆ : "ಸಾ|ಪಾಠಾಂ. ಶ್ಯಾ|ಮಕಿಯೆನಲು ಸಾಮೆಯುಕ್ಕುಂ" (ಮಂಗರಾ. ೧೧೦-೪).

[IP ಇದು 'ಶ್ಯಾಮಕ' ಎಂಬುದರ ಅಪಲಿಖಿತವಿರಬಹುದು]

**ಸಾಮಗಾನ** (ನಾ). ಸಾಮವೇದದ ಮಂತ್ರಗಳನ್ನು ಹಾಡುವಿಕೆ : ಸಾಮಗಾನಾನಂದ ನಾಮರೂಪಾತೀತ ಕಾಮಿತಫಲಪ್ರದಾಯಕ ರಕ್ಷಿಸೆಮ್ಮವಂ (ಆರಾಚ. ೧-೬-೧); ಸಾಮಗಾನಪ್ರೇಮ ಕಾಂಚನಧಾಮಧರ ಸುತ್ರಾಮವಿರಚಿತ ಕಾಮ ರಘುಕುಲಸೋಮ ರಕ್ಷಿಸು (ಹರಿಸಾ. ೬). [ಸಂ.]

**ಸಾಮಗ್ರಿ** (ನಾ). ೧. ಸಂಪೂರ್ಣತೆ; ಸಮಗ್ರತೆ. ೨. (ಸಂಸಾರಕ್ಕೆ) ಅಗತ್ಯವಾದ ವಸ್ತು, – ಸಾಧನ ; ಅವಶ್ಯಕವಾದ ಪದಾರ್ಥ, – ಸಲಕರಣೆ: ಸಯಮಾಡಿಪೆನೆಂಬ ಜೀವಂಗೆ ಮನವೆಂಬ ಸತಿ ತನ್ಮಾತ್ರೆಗಳೆಂಬ ಸುತರು ಇಂತಪ್ಪ ಸಂಸಾರಸಾಮಗ್ರಿಯಿಂ ಜೀವಿಸುತ್ತಮಿರಲು (ಆದವ. ೧೫-೩೩); ಆ ಕಂದರ್ಪಕಲ್ಪಲತೆಯ ಸಮಸಮಾಯೋಗ ಸಮುಪಕ್ರಮಿತಕಾಲಧಾತುವಯೋನುರೂಪಕರಣಪರಿರಂಭಚುಂಬನ ಕಳಾಸಾಮಗ್ರಿಯಿಂ ಕಾಮತಂತ್ರವಿಜ್ಞಾನಮಂ ಸುಜ್ಞಾನಂ ಮಾಡಿಯುಂ (ಚಂದ್ರಪು. ೨-೧೬ ವ). ೩. ಮೂಲವಿಷಯ ; ಮೂಲವಸ್ತು : ಒದವಿದ ಸಾಮಗ್ರಿಯೊಳೇಕದೇಶವೈಕಲ್ಯಮಾಗೆಯುಂ ಮತ್ತಂ ತತ್‌ಸದ್ಭವಫಲಸಿದ್ಧಿಯಂ ತೋರ್ಪುದದು ವಿಶೇಷೋಕ್ತಿಯೆಂಬಲಂಕೃತಿಯಕ್ಕುಂ (ಕಾವ್ಯಾವ. ೭೫೦); ಇಷ್ಟು ದಿನಗಳ ನಂತರ ಸಂಸ್ಕೃತಸಾಹಿತ್ಯದ ಒಂದು ಅಪೂರ್ವ ಸಾಮಗ್ರಿ ದೊರಕಿತ್ತು (ಬಾಣಆ. ೬). [ಸಂ. ಸಾಮಗ್ರೀ ]

**ಸಾಮಗ್ರಿಸಂಕಲನ** (ನಾ). [ಗ್ರಂಥಸಂ] ಗ್ರಂಥಸಂಪಾದನೆಯ ನಾಲ್ಕು ಹಂತಗಳಲ್ಲಿ ಮೊದಲನೆಯದು ; ಹಸ್ತಪ್ರತಿ ಇತ್ಯಾದಿ ಮೂಲಪರಿಕರಗಳ ಸಂಗ್ರಹ: ಮೊದಲನೆಯದು ಹಸ್ತಪ್ರತಿಗಳು, ಬಾಹ್ಯಸಾಕ್ಷಿಗಳು ಮುಂತಾದ ಲಿಖಿತ ಸಾಮಗ್ರಿಗಳನ್ನು ಒಂದೆಡೆ ಸೇರಿಸಿ ಪರೀಕ್ಷಿಸಿ ವರ್ಗೀಕರಣಮಾಡಿ ಪರಸ್ಪರಸಂಬಂಧ ಮತ್ತು ಪೀಳಿಗೆಯನ್ನು ರಚಿಸುವುದು ; ಇದನ್ನು ಸಾಮಗ್ರಿಸಂಕಲನ (Heuristics) ಎಂದು ಕರೆದಿದೆ (ಕನ್ನಸಂ. XII. ಪ್ರವೇಶ). [ಸಂ. ಸಾಮಗ್ರೀಸಂಕಲನ]

**ಸಾಮಜ** (ಗು). ೧. ಸಾಮವೇದಕ್ಕೆ ಸಂಬಂಧವಾದ ; ಸಾಮವೇದದಿಂದ ಹುಟ್ಟಿದ : ಸಾಮಜೋಲ್ಲಾಸದಿಂದ ಪಾಡುತ್ತೆ . . . ಗೋಚರಿಸಿದಂ ನಾರದಮುನೀಶ್ವರಂ

ಬಾಂದಳದೊಳು (ಜೈಮಿಭಾ. ೨೮-೮). (ನಾ). ೨. ಸಾಮೋಪಾಯದಿಂದ ಉಂಟಾದುದು; ಸಹೃದಯನಡವಳಿಕೆಯಿಂದ ಹುಟ್ಟಿದುದು. ೩. ಆನೆ; ಗಜ: ಸಾಮಜಮಶ್ವತ್ಥಾಮಂ ನಾಮದಿನೊಂದಟಿದೊಡಲ್ಲಿ ಕಂಡು ಹತೋಶ್ವತ್ಥಾಮಾ ಎನೆ (ಪಂಪಭಾ. ೧೨-೨೬); ಪವನಪಥಾಂತರದೊಳ್ ಪವನವೇಗದಿಂ ಸಾಮಜಾದಿವಾಹನ ಸಹಿತರ್ ದಿವಿಜರನೇಕದ್ವೀಪಾರ್ಣವಂಗಳಂ ಕಳಿದು ಮುಟ್ಟೆವರ್ಪವಸರದೊಳ್ (ಜಗವಿ. ೧-೪೨). [ಸಂ.]

**ಸಾಮಜಪತಿ** (ನಾ). ಆನೆಗಳ ಒಡೆಯ ; ಮುಖ್ಯವಾದ ಆನೆ: ರಜನಿವಿನೋದನಕ್ಕ ಮುಳಿದಿರ್ದ ಲತಾಂಗಿಯನಪ್ಪುಕೆಯ್ದು ಸಾಮಜಪತಿ ಪೊಕ್ಕು ಪಕ್ಕುವಿಡಿಯಂ ನಡೆಸೋಂಕುವವೋಲ್ . . . ಅಮರ್ದಪ್ಪೆ (ಶಾಂತಿಪು. ೮-೧೧೦). [ಸಂ.]

**ಸಾಮಜಪದಾಭಿರಾಮ** (ನಾ). ೧. ಸಾಮವೇದದ ಪದಗಳಿಂದ ರಮ್ಯವಾದುದು. ೨. ಆನೆಗಳಿಗೆ ಹಿತವಾದ ನಿವಾಸಸ್ಥಾನವಾದುದು. ೧ , ೨ : ಆ ಮಹಾವನಂ . . . ಪಿತಾಮಹಾನನದಂತೆ ಸಾಮಜಪದಾಭಿರಾಮಮುಂ ಸ್ಥಾಣು ನಿವಸನಮಾಗಿಯುಂ ಅಪರ್ಣಾನ್ವಿತಮಲ್ತು (ಚಂದ್ರಪ್ರ. ೫-೫೨ ವ). [ಸಂ.]

**ಸಾಮಜಪೋಷಕ** (ನಾ). (ಇಂದ್ರದ್ಯುಮ್ನವೆಂಬ) ಗಜೇಂದ್ರನನ್ನು ರಕ್ಷಿಸಿದವನು; ವಿಷ್ಣು : ರಾಮರಾಮ ಎಂಬೋ ಗಿಳಿ ಕೋಮಲಕಾಯದ ಗಿಳಿ ಸಾಮಜಪೋಷಕ ತಾನು ಪ್ರೇಮದಿ ಸಾಕಿದ ಗಿಳಿ (ಪುರಂದ. ೧-೧೧೨-೫). [ಸಂ.]

**ಸಾಮಜವೈರಿವಿಷ್ಟರ** (ನಾ). ಸಿಂಹಾಸನ ; ಸಿಂಹಪೀಠ : ತನ್ನ ದಿವ್ಯರೂಪುದೋಱ ಕಾಮಚಂಡಾಳಿನಿಸಮವಿದ್ಯೆಯತಿವಿದ್ಯೆ ಸಾಮಜವೈರಿವಿಷ್ಟರವ ಚಾಮರ ದಿವ್ಯಾತಪತ್ರಮನಧಿಕಸುಪ್ರೇಮದಿ ಕೊಟ್ಟಂತು ನುಡಿದ (ನೇಮಿಸಂ. ೧೯-೧೨೩). [ಸಂ.]

**ಸಾಮಜಾರಿ** (ನಾ). ಆನೆಯ ಶತ್ರು; ಸಿಂಹ : ಸಾಮಜಾರಿಗೆ ಸರಿಯೆ ಶುನಕಸ್ತೋಮವಾಶಾವಾರಣಕ್ಕಂ ಗ್ರಾಮಸೂಕರವಿತತಿ ಸರಿಯೇ (ಬಸವು. ೫೫-೨೨). [ಸಂ.]

**ಸಾಮಜಾಸುರ** (ನಾ). ಶಿವನಿಂದ ಹತವಾದ ಆನೆಯ ರೂಪಿನ ಒಬ್ಬ ರಾಕ್ಷಸ ; ಗಜಾಸುರ : ಮದಸಾಮಜಾಸುರನಂ ಮುನಿದು ತಾಂ ಕೊಂದನೇ ಮುನ್ನ (ಬಸವು. ೪೬-೧೮). [ಸಂ.]

**ಸಾಮತಿ** (ನಾ). ೧. ಹೋಲಿಕೆ; ಸಾದೃಶ್ಯ : ತಾನು ಕೊಟ್ಟ ಸಾಮತಿ ತನಗೇ ಸಂತಸವುಂಟುಮಾಡಿ ಕುದುರೆ ಕೆನೆದ ಹಾಗೆ ನಗುತ್ತಾನೆ (ನಾಡಿಗೇ. ೧೧೮). ೨. ಉಪಮಾನ; ದೃಷ್ಟಾಂತ: ನಾನು ಆಗಾಗ ಕೊಡುವ ಸಾಮತಿಯನ್ನು ಅವರು ಚೆನ್ನಾಗಿ ಅರ್ಥಮಾಡಿಕೊಂಡಿರುವಂತೆ ಕಾಣಿಸುತ್ತದೆ! (ನಂಟರು. VII, ೮೦೪). ೩. ದೃಷ್ಟಾಂತಗಳನ್ನುಳ್ಳ ಕಥೆ ; ನಿದರ್ಶನಗಳನ್ನುಳ್ಳ ಪ್ರಸಂಗ ,– ಪ್ರಕರಣ : ಯೇಸು ತನ್ನ ಶಿಷ್ಯರಿಗೆ . . . ಇನ್ನು ಇತರ ಸಾಮತಿಗಳನ್ನೂ ತಿಳಿಯಪಡಿಸಿ, ಹೀಗೆ ಎಷ್ಟೋ ವಿಷಯಗಳನ್ನು ಕುರಿತು ಧರ್ಮೋಪದೇಶ ಮಾಡಿದನು (ಗೊಲ್ಗೊಥಾ. V, ಮುನ್ನುಡಿ). ೪. ಗಾದೆ; ನಾಣ್ಣುಡಿ; ಲೋಕೋಕ್ತಿ : ಜನದ ಮಾತಿನಲ್ಲಿ ಎಂದಿನಿಂದಲೋ ಬೆರೆತುಕೊಂಡ ಕೆಲವು ಸಾಮತಿಗಳು ಎಲ್ಲ ಕಾಲದ ಕವಿಗಳಿಗೆ ಸಾಮಗ್ರಿಯನ್ನೊದಗಿಸುತ್ತವೆ (ಕಸಾಚ. ೩೧೨). [< ಸಂ. ಸಾಮ್ಯತಾ. / ತುಳು. ತೆಲು. ಸಾಮತಿ]

**ಸಾಮಯಿಕ** (ಗು). ೧. ಗೊತ್ತಾದ; ನಿಗದಿಯಾದ : ಅವುಗಳಲ್ಲಿ ಅನೇಕವು ಸಾಮಯಿಕಕ್ರಮವನ್ನು ಹಿಡಿದೋ ಹಿಡಿಯದೆಯೋ ಪರಿವರ್ತನಶೀಲವಾದುವುಗಳು (ಜ್ಯೋತಿರ್ವಿ. ೬೦). ೨. ಸಮಯೋಚಿತವಾದ; ಕಾಲಕ್ಕೆ ತಕ್ಕ : ಈ 'ಶೂದ್ರಕ'ದ ಕಾವ್ಯಭಾಗಗಳನ್ನು ವಿಮರ್ಶದೃಷ್ಟಿಯಿಂದ ನೋಡಿದರೆ ಸಾಮಯಿಕ ಹಾಗೂ ಪ್ರೌಢವಾದ ವರ್ಣನಾಶಕ್ತಿ ಎದ್ದು ಕಾಣುತ್ತದೆ (ಕಸಾಚ. ೫೧). ೩. ಸಂಪ್ರದಾಯಕ್ಕನುಸಾರವಾದ; ಲೌಕಿಕವಲ್ಲದ: ಲೌಕಿಕಸಾಮಯಿಕೋರುವಿವೇಕಮುಮಭ್ಯುದಯ ಪರಮ ನಿಃಶ್ರೇಯಸಮುಂ ಪ್ರಾಕಟಮಕ್ಕುಂ ವಿದಿತಾನೇಕಕವೀಶಪ್ರಯೋಗಪದಪದ್ಧತಿಯೊಳ್ (ಕವಿರಾ. ೧-೧೯). (ನಾ). ೪. ಕಾಲ; ವೇಳೆ. ೫. ಲೌಕಿಕವಲ್ಲದುದು; ಶಾಸ್ತ್ರಸಿದ್ಧಾಂತ: ಸಕಳಕಳಾಭಾಷಾಲೌಕಿಕಸಾಮಯಿಕಾದಿವರ್ಣನಾನಿರ್ಣಿಕ್ತಪ್ರಕಟತರ ವಸ್ತು ವಿಸ್ತರವಿಕಲ್ಪವಿದನಲ್ಲದಾಗದಾಗದು ಪೇೞಲ್ (ಕವಿರಾ. ೧-೨೮). ೬. [ಜೈನ] ಸಂಸಾರಕಾರಣಗಳನ್ನು ದೂರೀಕರಿಸಿ ಸಮ್ಯಕ್‌ಜ್ಞಾನವನ್ನು ಪಡೆಯಲು ಸಾಧಕವಾದ ಐದು ಬಗೆಯ ನಡವಳಿಕೆಗಳಲ್ಲಿ ಒಂದು : ಅಂತಾ ಪರಮಯೋಗೀಶ್ವರಂ . . . ಸಾಮಯಿಕಮುಂ ಛೇದೋಪಸ್ಥಾಪನಮುಂ ಪರಿಹಾರವಿಶುದ್ಧಿಯುಂ ಸೂಕ್ಷ್ಮಸಾಂಪರಾಯಮುಂ ಯಥಾಖ್ಯಾತಚಾರಿತ್ರಮುಮೆಂಬ ಪಂಚವಿಧಚಾರಿತ್ರದೊಳಂ . . . ನೆಱೆದು ನಿಸ್ಸಂಗರಾಗಿ (ಅಜಪು. ೧೨-೪ ವ). 'ಪಂಚಚಾರಿತ್ರ' ಪರಾ. ೭. ಹನ್ನೊಂದು ಬಗೆಯ ನೆಲೆಗಳಲ್ಲಿ ಒಂದು; ಮುಂಜಾನೆ, ಮಧ್ಯಾಹ್ನ ಮತ್ತು ಸಂಜೆಯಲ್ಲಿ ವಿಧಿಪೂರ್ವಕವಾಗಿ ಅರ್ಹತ್ಪೂಜೆಯನ್ನು ಮಾಡುವ ನೆಲೆ : ನಿಯತಂ ತ್ರಿಸಂಧ್ಯೆಯೊಳ್ ಸಮತೆಯಿನರುಹತ್ಪೂಜೆಯಿಂದಮಿರ್ಪಾತಂ ನಿಶ್ಚಯದಿಂ ಮೂಱನೆಯಂ ಸಾಮಯಿಕ ವ್ರತಧಾರಿ (ಸುಕುಮಾ. ೬-೨೮). ೮. ಸಾಮಯಿಕದ ನೆಲೆಯಲ್ಲಿರುವವನು: ಸಾಮಯಿಕವ್ರತಧಾರಿ ಪೆಸರೊಳಂ ಸಾಮಯಿಕಂ (ಸುಕುಮಾ. ೬-೨೮). [ಸಂ.]

**ಸಾಮಯಿಕತೆ** (ನಾ). ೧. ನಿಯತವಾಗಿರುವುದು : ಗುಹಾನಿಹಿತ, ಅಭಾವನೀಯ ಎನ್ನಬಹುದಾದ ರಸಪ್ರಕೃತಿಯು ಯಾವುದೊಂದು ವಿಶಿಷ್ಟ ಉತ್ತೇಜನ ಪಡೆದ ಸಾಮಯಿಕತೆಯ ಕಟ್ಟು ಕಾನೂನುಗಳಿಗೂ ಅಧೀನವಲ್ಲ (ನಿಬಂಧ. II, ೨೦). ೨. ತತ್ಕಾಲಕ್ಕೆ ಸಂಬಂಧಿಸಿದುದು; ಪ್ರಸ್ತುತತೆ: ಈ ಹೃದಯವೈಶಾಲ್ಯದಲ್ಲಿ ಏನೋ ಒಂದು ಕಣ್ಣುಮುಚ್ಚಣಿಕೆಯಿದೆ, ತೋರಿಕೆಯಿದೆ, ಸಾಮಯಿಕತೆಯಿದೆ (ಸಾಹಿವಿ. ೩೧). ೩. [ಕಾವ್ಯಮೀ] ಆರು ಬಗೆಯ ಅರ್ಥಗುಣಗಳಲ್ಲಿ ಒಂದು: ಅಗ್ನಿಪುರಾಣದಲ್ಲಿ . . . ಮಾಧುರ್ಯ, ಸಂವಿಧಾನ, ಕೋಮಲತ್ವ, ಉದಾರತಾ, ಪ್ರೌಢಿ, ಸಾಮಯಿಕತಾ ಇವು ಆರೂ ಅರ್ಥಗುಣಗಳೆಂದೂ . . . ಹೇಳಿದೆ (ಕೈಪಿಡಿ. ೨೩೨ ಅಡಿಟ). [ಸಂ. ಸಾಮಯಿಕತಾ]

**ಸಾಮರಸ** (ನಾ). ಸಮರಸವನ್ನು ಹೊಂದಿರುವಿಕೆ; ಹೊಂದಾಣಿಕೆ: ಸಾಮರಸಗೊಳಿಪುದಖಿಳರನೆಂದು ಕೌಸಲ್ಯೆ ಪ್ರೇಮದಿಂದೊರೆಯೆ (ವಂಕಾರಾ. ೨-೩೪-೩೦). [< ಸಾಮರಸ್ಯ ]

**ಸಾಮರಸ್ಯ** (ನಾ). ೧. ಸಾದೃಶ್ಯ; ಸಮಾನತೆ. ೨. ಸಮರಸದ ಭಾವ; ಐಕಮತ್ಯ: ಆಸಕ್ತಿಗೂ ಪ್ರಯತ್ನಕ್ಕೂ ಸಾಮರಸ್ಯವನ್ನು ಕಲ್ಪಿಸುವುದೇ ಶಿಕ್ಷಣ ವಿಧಾನದಲ್ಲಿ ಅತ್ಯಂತ ಪ್ರಧಾನವಾದ ಆಶಯ (ಕ್ರಿಯಾಶಿ. ೩೮). [ಸಂ.]

**ಸಾಮರಾಗ** (ನಾ). [ಸಂಗೀತ] ಒಂದು ರಾಗದ ಹೆಸರು: ವಸಂತದೊಳ್ ಮಧುಮಾಧವಿ ಮಕರಂದಿಯಾದುದು . . . ಸಾಮರಾಗದೊಳ್ ಕೌಮುದಿಕಾಂತಿ ಸೇವಿಯಾಯಿತ್ತು (ಹಮ್ಮಿರ. ೨-೯೦ ವ). [ಸಂ.]

**ಸಾಮರಿವಾಡ** (ನಾ). ಒಂದು ಊರಿನ ಹೆಸರು: ನರಿನ್ದಕಸಾಮರಿವಾದ(ಡ) ಗ್ರಾಮ ಪಥಿ (ಇಆ. VII, ೨೧೩-೫೬; ಸು. 10ನೆಯ ಶತ). [? + ವಾಡ (< ಬಾಡ)]

**ಸಾಮರ್ಥ್ಯ** (ನಾ). ೧. ದಕ್ಷತೆ; ಯೋಗ್ಯತೆ: ಗಗನಗಮನಸಾಮರ್ಥ್ಯ ತಾರ್ಕಿಕತಿಳಕರೆಂದು ಪೊಗೞ್ವುದು ಸಕಳಜನಂ ಪೂಜ್ಯಪಾದಭಟ್ಟಾರಕರಂ (ಚಾವುಂಪು. ೨); ವೇದಶಾಸ್ತ್ರಾರ್ಥರಹಸ್ಯಾಚಿಂತ್ಯಸಾಮರ್ಥ್ಯದ ಮುರಹರನಂ ಬಣ್ಣಿಸಲ್ ಬಲ್ಲನಾವಂ (ಜಗವಿ. ೧-೧೯). ೨. ಬಲ; ಶಕ್ತಿ : ಶಹಾಮೃಗದ ಮೈಯಲ್ಲಿ ಅದರ ಆಕಾರಮಾನಕ್ಕೆ ತಕ್ಕ ಸಾಮರ್ಥ್ಯವು ಇರುವುದು (ಮುಂಬಯಿ. ೪-೧೮೬). ೩. ಗುರಿ ಅಥವಾ ಉದ್ದೇಶದ ಏಕರೂಪತೆ ,– ಸಾದೃಶ್ಯ. ೪. ಶಬ್ದಕ್ಕಿರುವ ಅರ್ಥವನ್ನು ತಿಳಿಸುವ ಶಕ್ತಿ; ಪದದ ಅರ್ಥಸ್ಫುರಣಶಕ್ತಿ : ಗುಣಂ = ಶಬ್ದಸಾಮರ್ಥ್ಯವೆಂಬ ಗುಣಂ (ಶಮದ. ಪೀಠಿಕೆ. ೩. ಟೀಕೆ); ತನ್ನ ಸಾಮರ್ಥ್ಯಬಲದಿಂದಲೇ ಪದಗಳ ಅರ್ಥವು ವಾಕ್ಯದ ಅರ್ಥವನ್ನು ಪ್ರಕಾಶಿಸುವುದಾದರೂ (ಧ್ವನ್ಯಾಲೋ. ೨೪). ೫. ಧನ; ಐಶ್ವರ್ಯ. ೬. ಪ್ರಯೋಜನ; ಅನುಕೂಲ. [ಸಂ.]

**ಸಾಮರ್ಥ್ಯತೆ** (ನಾ). ಸಾಮರ್ಥ್ಯ; ಸತ್ತ್ವ : ವರತೇಜದಿಂ ಪವಿತ್ರಾಚರಣೆಯಿನತಿಕಮನ ವಿಮಳಸಾಮರ್ಥ್ಯತೆಯಿಂ ಕರಮೆಸೆದನುನಯದಿಂ ರಾಜರುಷಿ ಬ್ರಹ್ಮಋಷಿ ದೇವಋಷಿಗಳ್ ಬಂದರ್ (ಗಿರಿಕ. ೧೦-೬೬). [ಸಂ. ಸಾಮರ್ಥ್ಯತಾ]

**ಸಾಮರ್ಥ್ಯಪಣ** (ನಾ). = ಸಾಮರ್ಥ್ಯತೆ : ಏನನೆಂಬೆನು ಬೊಪ್ಪ ಕುಂತೀಸೂನುಗಳ ಸಾಮರ್ಥ್ಯಪಣವನು (ಕುವ್ಯಾಸ. ೧೨-೨೯). [ಸಾಮರ್ಥ್ಯ + - ಪಣ್]

**ಸಾಮರ್ಥ್ಯಪುರುಷ** (ನಾ). ಸಮರ್ಥನಾದ ವ್ಯಕ್ತಿ; ಬಲಿಷ್ಠ : ಅರಸ ಕೇಳ್ ಬಿಲುವಿದ್ಯದಲಿ ಮೂವರು ಕಣಾ ಸಾಮರ್ಥ್ಯಪುರುಷರು (ಕುವ್ಯಾಆ. ೮-೧೩). [ಸಂ.]

**ಸಾಮರ್ಥ್ಯಭಕ್ತಿ** (ನಾ). ಸತ್ತ್ವದಿಂದ ಕೂಡಿದ ಭಕ್ತಿ; ದೃಢಭಕ್ತಿ: ಕೊಂಡಾಡುವೆಂ ರಾಜಿಪೀ ಲಿಂಗಮಂ ಸಾಮರ್ಥ್ಯಭಕ್ತಿಯಿಂ (ಏಕ್ಕೆಪು. ೬-೧-೪೨). [ಸಂ.]

**ಸಾಮವಣ್ಣ** (ನಾ). ಕಡುನೀಲಿ ಬಣ್ಣ; ಶ್ಯಾಮವರ್ಣ : ಕೆಂಪು ಕರಿದು ಸಾಮವಣ್ಣ ತೆಳ್ಳಿತು ತೋರ ನುಂಪಿನ ಮೈಯ ಪೆಣ್ಣುಗಳ ಗುಂಪಿನೊಳಗೆ ಬಂದ ತಾನೊಬ್ಬ ಹಲವುರೂಪಂ ಪಡೆದವರ ಕೈವಿಡಿದು (ಭರಚ. ೧೫-೬). [ಸಾಮ್ಱ + ಬಣ್ಣ]

**ಸಾಮವರಾಲಿ** (ನಾ). [ಸಂಗೀತ] ಒಂದು ರಾಗದ ಹೆಸರು: ಸಾಮವರಾಲಿಯೆಂಬ ರಾಗವು (೩೦) ಸಾಮವೇದದಿಂದ ಹುಟ್ಟಿದೆ (ಚತುಪ್ರ. ೬೦). [ಸಂ. ಸಾಮವರಾಲೀ]

**ಸಾಮವರ್ಣ** (ನಾ). = ಸಾಮವಣ್ಣ: ಶ್ಯಾಮವರ್ಣ - ಸಾಮವರ್ಣ (ಶಮದ. ೨೮೧ ಪ್ರಯೋ). [ಸಾಮ್ಱ + ವರ್ಣ]

**ಸಾಮವಾಕ್ಯ** (ನಾ). ೧. ಸಮಾಧಾನದ ಮಾತು; ಸಾಂತ್ವನದ ನುಡಿ: (೩). ೨. ಸಾಮವೇದದ ವಾಕ್ಯ; ಸಾಮವೇದದ ಮಂತ್ರ : ತತ್ಪದ ತ್ವಂಪದ ಅಸಿಪದ ಯಿ ಮೂರು ಪದಕ್ಕೂ ಕೂಡಿ ಸಾಮವಾಕ್ಯವೆಂದು ಹೇಳಲ್ಪಡುವದು (ಈಶ್ವಸ್ವ. ೧೯-೬). [ಸಂ.]

**ಸಾಮವೇದ** (ನಾ). = ಸಾಮ ೬ : ವೇದವನ್ನು ನಾಲ್ಕುಭಾಗಗಳಾಗಿ ವಿಂಗಡಿಸಿ, ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂದು ಕರೆಯುವುದು ವಾಡಿಕೆ (ಭಾರದ. ೧೯). [ಸಂ.]

**ಸಾಮವೇದಿ** (ನಾ). ಸಾಮವೇದವನ್ನು ಅಧ್ಯಯನ ಮಾಡಿದವನು; ಸಾಮವೇದ ಪಾರಂಗತ: ಸಾಮವೇದಿಗಳಾಚಪದ್ಧಿಯ ಧಾಮವಡಗಿತು ದಳ್ಳುರಿಗೆ (ಬಸಪು. ೫೭-೩೭); ಸೆರೆನರದ ದರ್ಭೆಗಳ ಮಿದುಳಿನ ಚರುವಿನೆಲುವಿನ ಸಮಿಧೆಗಳ ಬಿಲುದಿರುರವದ ಚತುರಂಗರಭಸದ ಸಾಮವೇದಿಗಳ . . . ಸಂಗರಯಜ್ಞದೀಕ್ಷೆಯ ಮಚಿದಿರಕಟೆಂದ (ಕುವ್ಯಾಗ. ೧-೨೦). [ಸಂ. ಸಾಮವೇದಿನ್]

**ಸಾಮಸೂಮ** (ನಾ). ಮೌನ; ನೀರವತೆ : ಲವಲವಿಕೆಯೆಲ್ಲ ಎಕ್ಕೆಕ್ಕಿ ನಡೆದು ಮುಗ್ಗರಿಸಿಕೊಂಡು ಬಿತ್ತು. ಬರಿ ಸಾಮಸೂಮ ಹಬ್ಬುತ್ತ ಒಮ್ಮೆಗೆಲೆ ಸ್ತಬ್ಧವಾಗಿ ಇತ್ತು (ಚೈತ್ಯಾಲ. ೫೫-೬); ಮನೆಯಲ್ಲಿ ಅಲ್ಲಿಗೆ ಇಲ್ಲಿಗೆ ಸಾಮಸೂಮ ಇತ್ತು (ಮಾವಿತೋ. ೨೮). [← ಮರಾ. ಸಾಮಸೂಮ್]

**ಸಾಮಳವಾಡಿಗೆ** (ನಾ). ಒಂದು ಊರಿನ ಹೆಸರು : ಸಾಮಳವಾಡಿಗೆ ಒಡ್ಡವೊಡಿಗೆ ಮಧ್ಯವರ್ತಿ[ೕ]ಪಿಪ್ಪರಗೆನಾಮಗ್ರಮೋ ಸರ್ವ್ವಬಾಧಪರಿಹಾರೇಣ(೦) ದತ್ತಿ (ಸೌಇಇ. XI-i. ೮-೧೮; 862). [?]

**ಸಾಮಾಚಾರ** (ನಾ). [ಜೈನ] ಸಾಮಯಿಕಕ್ಕೆ ಪೋಷಕವಾದ ಆಚಾರ; ಒಳ್ಳೆಯ ಮಾತುಗಳಿಂದ ಕೂಡಿದ ವರ್ತನೆ : ಸೂತ್ರಾರ್ಥಂಗಳಂ ಗುರುಗಳು ಪೇಳುತ್ತಮಿರಲು ತಾಂ ಕೇಳ್ವಲ್ಲಿ ನಿಮ್ಮಡಿಗಳೆಂತು ಪೇಳ್ದಿರೆಂತೆಯಕ್ಕುಮೆಂಬ ಸಾಮಾಚಾರಮಕ್ಕುಂ (ಶಾಸ್ತ್ರಟೀ. ೯೪-೮). [ಸಂ.]

**ಸಾಮಾಜಿಕ** (ಗು). ೧. ಸಮಾಜಕ್ಕೆ ಸಂಬಂಧಿಸಿದ; ಸಾಂಘಿಕಜೀವನಕ್ಕೆ ಸೇರಿದ: ಸಾಮಾಜಿಕ ಮತ್ತು ರಾಜಕೀಯಜೀವನದಲ್ಲಿ ಶಕ್ತಿಹೀನರಿಗೆ ಸ್ಥಾನವಿಲ್ಲ (ಧರ್ಮಸಾ. ೧೪೫). ೨. ಸಂಘ ಅಥವಾ ಸಂಸ್ಥೆಗೆ ಸಂಬಂಧಿಸಿದ : (೩). (ನಾ). ೩. ಸಮಾಜಕ್ಕೆ ಸಂಬಂಧಿಸಿದುದು; ಸಾಂಘಿಕಜೀವನಕ್ಕೆ ಅನ್ವಯಿಸಿದುದು: ರಂಗಭೂಮಿ ಎಂಬುದು ಹೀಗೆ ಒಂದು ಸಾಮಾಜಿಕವಾದ, ಸಾರ್ವಜನಿಕವಾದ ವಿನೋದ ವ್ಯವಹಾರವಾಗಿದ್ದಿತು (ಭಾರದ. ೫೭೦); ಈ ಸಾಹಿತ್ಯರಸಗಳು . . . ಒಂದು ವಿಧದಲ್ಲಿ ಅವು ಸಾಮಾಜಿಕವಾಗಿವೆ (ಸಾಹಿವಿ. ೨೯). ೪. ಸಮಾಜದಲ್ಲಿರುವ ವ್ಯಕ್ತಿ: ನಾವು ಹಮ್ಮಿಕೊಂಡಿರುವ ಈ ಬೃಹತ್ಕಾರ್ಯಕ್ಕೆ ಸಾಮಾಜಿಕರ ಸಂಘಸಂಸ್ಥೆಗಳ ಸಹಕಾರ ಬೇಕು (ರೂಢಿ). ೫. ಆಸ್ಥಾನ, ಸಭೆಗಳಲ್ಲಿರುವ ಗಣ್ಯವ್ಯಕ್ತಿ : ಅಂತು ಸಾಮಾಜಿಕಸಮಾಜಮಂ ಜಗಜ್ಜನದಾರಿದ್ರ್ಯನಿದಾಘಕನಕಮೇಘನನೂನದಾನದಿಂ ತಣಿಪಿ ಮಾನ್ಯರಾಜನ್ಯಕಮಂ ತಾಂಬೂಲದಾನಪುರಸ್ಸರಂ ವಿಸರ್ಜಿಸುವುದುಂ (ಮಲ್ಲಿಪು. ೮-೬೫); ಆ ಸದಸ್ಯತ್ವವನು ವೇದವ್ಯಾಸ ಕೈಕೊಂಡನು ಮುನೀಂದ್ರಮಹಾಸಮಾಜದ ಬಯಕೆಗಾ ಶಾಂಡಿಲ್ಯ ನಾರದರು ಭೂಸುರರು ಸಾಮಾಜಿಕರು (ಕುವ್ಯಾಸ. ೬-೨೪). ೬. ಪ್ರೇಕ್ಷಕ ; ನೋಟಕ : ಸಾಮಾಜಿಕರ ಮತ್ತು ಪಾಠಕರ ವಿದ್ಯಾಬುದ್ಧಿ ಸಂಸ್ಕಾರಾದಿಗಳ ಮೇಲೆ ಪ್ರತಿಯೊಬ್ಬರಿಗೂ ರಾಮ . . . ಸಾವಿತ್ರಿ ಮುಂತಾದವರ ವಿಚಾರವಾಗಿ ಒಂದೊಂದು ಅಭಿಪ್ರಾಯವುಂಟಾಗಿರುತ್ತದೆ (ಕೃಪಿಡಿ. ೧೯೬). ೭. ಸಂಘ ಅಥವಾ ಸಂಸ್ಥೆಯ ಸದಸ್ಯ : (೩). [ಸಂ.]

**ಸಾಮಾಜಿಕಕ್ರಾಂತಿ** (ನಾ). ಸಮಾಜಕ್ಕೆ ಸಂಬಂಧಿಸಿದ ಕ್ರಾಂತಿ ; ಸಮಾಜ ಸಂಬಂಧವಾದ ಆಂದೋಳನ : ಪೇಟೆಗಳ ಮೂಲ್ಯಗಳ ಏರಿಕೆಯ ಪರಿಸ್ಥಿತಿ ಸಾಮಾಜಿಕ ಕ್ರಾಂತಿಗೆ ಕಾರಣವಾಯ್ತು (ಕರ್ನಾಕ. ೩೮೩). [ಸಂ.]

**ಸಾಮಾಜಿಕಜೀವನ** (ನಾ). ಸಮಾಜಕ್ಕೆ ಸಂಬಂಧಿಸಿದ ಬದುಕು; ಸಾಂಘಿಕ ಜೀವನ : ಅನೇಕ ಲತೆಗಳು ಹಬ್ಬಿ ಬೆಳೆಯಲು ಆಶ್ರಯ ಕೊಟ್ಟು ಶೋಭಿಸುವ ಮಹಾವೃಕ್ಷದಂತೆ ಭಾರತೀಯ ಸಾಮಾಜಿಕಜೀವನವು ಕಂಗೊಳಿಸುತ್ತಿದೆ (ಭಾರದ. ೩೮೧); ಕನ್ನಡನಾಡಿನ ಸಾಮಾಜಿಕಜೀವನದಲ್ಲಿ ಲಿಪಿಕಾರರಿಗೆ ಇದ್ದ ಸ್ಥಾನಮಾನಗಳು . . . ಸ್ವಲ್ಪಮಟ್ಟಿಗೆ ವಿಶದವಾಗಿದೆ (ಕನ್ನಸಂ. ೫೮). [ಸಂ.]

**ಸಾಮಾಜಿಕತೆ** (ನಾ). ಸಮಾಜಕ್ಕೆ ಸಂಬಂಧಿಸಿದ ನಡವಳಿಕೆ ; ಸಮಾಜದೊಂದಿಗೆ ಬೆರೆತು ನಡೆಯುವ ಸ್ವಭಾವ : ವಿಲಾಯತಿಯ ವಾಸದಿಂದ ಪುನಃ ಜಾಗ್ರತವಾದ ಸಾಮಾಜಿಕತೆಯು . . . ಮತ್ತೆ ಆಂತರಿಕತೆಯ ಇನ್ನೊಂದು ಮುಖಕ್ಕೆ ಅನುವು ಮಾಡಿಟ್ಟಿತ್ತು (ಸಮುಜೀ. ೯೭೭). [ಸಂ. ಸಾಮಾಜಿಕತಾ]

**ಸಾಮಾಜಿಕಪ್ರಜ್ಞೆ** (ನಾ). ಸಮಾಜದ ಬಗೆಗಿನ ಅರಿವು : ವಿಷ್ಣೂನ ಸಾಮಾಜಿಕಪ್ರಜ್ಞೆ ಮೊದಲಿನಿಂದ ತೀಕ್ಷ್ಣವಾಗಿತ್ತು (ಸಮುಜೀ. ೯೭೭). [ಸಂ. ಸಾಮಾಜಿಕಪ್ರಜ್ಞಾ]

**ಸಾಮಾಜಿಕವ್ಯವಸ್ಥೆ** (ನಾ). ಸಮಾಜಕ್ಕೆ ಸಂಬಂಧಿಸಿದ ಕಟ್ಟಳೆ ,– ನಿಯಮ: ಗಾರ್ಹಸ್ಥ್ಯ ಮತ್ತು ಸಾಮಾಜಿಕವ್ಯವಸ್ಥೆಯಲ್ಲಿ ಇಬ್ಬರಲ್ಲಿ ಭೂಮ್ಯಾಕಾಶದಷ್ಟು ಅಂತರ (ಶೇಪ್ರಶ್ನೆ. ೧೧೧). [ಸಂ. ಸಾಮಾಜಿಕವ್ಯವಸ್ಥಾ]

**ಸಾಮಾಧಿಕ** (ನಾ). = ಸಾಮಾಜಿಕ ೫ : ಕರಾಚೂರಿ ನಂದರಾಜಅರಸುಗಳು ತಿಳಿದು ತಿರುಗಿಬಿದ್ದು, ಆ ಕೃಷ್ಣರಾಜಒಡೆಯರ ಅರಮನೆಗೆ ಗುಂಡು ಹೊಡೆದು ಅವರ ಸಾಮಾಧಿಕರನ್ನು ಆಜ್ಞೆ ಮಾಡಿಸಿ, ಅವರ ಮನೆಗೆ ಪಾರಾಯಿಟ್ಟು ಬಂದೋಬಸ್ತು ಮಾಡಿದರು (ರಾಜೇಂದ್ರ. ೧೬). [< ಸಂ. ಸಾಮಾಜಿಕ]

**ಸಾಮಾನಿಕ** (ಗು). ೧. ಒಂದೇ ಮಟ್ಟಕ್ಕೆ ಸೇರಿದ; ಸಮಾನಸ್ಥಾನಕ್ಕೆ ಸಂಬಂಧಿಸಿದ : (೩). (ನಾ). ೨. [ಜೈನ] ಒಂದು ದೇವತಾವರ್ಗ ಮತ್ತು ಆ ವರ್ಗಕ್ಕೆ ಸಂಬಂಧಿಸಿದ ದೇವತೆ : ಆ ದೇವಂ . . . ದೇವಲೋಕಕ್ಕೆ ವಂದು ಚತುಸ್ಸಹಸ್ರಸಾಮಾನಿಕಸಮೇತನುಂ ತತ್ಪ್ರಮಾಣಾಂಗರಕ್ಷತ್ರಿದಶಾನೀಕನುಂ . . . ಆಗಿ ಪರಮೈಶ್ವರ್ಯಸಂಪನ್ನನಾದಂ (ಸುಕುಮಾ. ೯-೩೦ ವ); ಅವರೊಡನೆ ಸಾಮಾನಿಕತ್ರಯಸ್ತ್ರಿಂಶದಾತ್ಮರಕ್ಷಲೋಕಪಾಳಕಪ್ರಕೀರ್ಣಕಾಭಿಯೋಗ್ಯಕಿಲ್ಬಿಷಿತ ಪ್ರಮುಖಸಪ್ತಸೇನೆ ಸಂದಣಿಸೆ ವಂದು ನಿಂದರ್ (ಮಲ್ಲಿಪು. ೧೨-೧೯). [ಸಂ.]

**ಸಾಮಾನಿಕದೇವ** (ನಾ). = ಸಾಮಾನಿಕ ೨ : ಶ್ರೀಮತ್ಯಾರ್ಯೆಯುಂ ಸಮ್ಯಕ್ತ್ವ ಮಹಾತ್ಮ್ಯದಿಂ ಸ್ತ್ರೀತ್ವಮಂ ಪತ್ತುವಿಟ್ಟು ತತ್ಸ್ವಯಂಪ್ರಭವಿಮಾನದೊಳ್ ಶ್ರೀಧರಂಗೆ ಸಾಮಾನಿಕದೇವಂ ಸ್ವಯಂಪ್ರಭನೆಂಬೊಂ ದೇವನಾದೊಂ (ಆದಿಪು. ೫-೭೦ ವ); ಇತ್ತ ವಿಶಾಖಭೂತಿಯುಂ ಭೂರಿತಪೋಭಾರಮಂ ನಿರ್ವಹಿಸಿ ಶತಾರಕಲ್ಪದೊಳ್ ಸಾಮಾನಿಕದೇವನಾದೊಂ (ಶಾಂತಿಪು. ೭-೫೯ ವ). [ಸಂ.]

**ಸಾಮಾನು** (ನಾ). ೧. (ಸಂಸಾರಕ್ಕೆ ಅಗತ್ಯವಾದ) ಪದಾರ್ಥ; ಸಲಕರಣೆ ; ಸಾಮಗ್ರಿ : ನ್ಯೂನವಿಲ್ಲದ ಹಾಗೆಯೇ ಸಾಮಾನುಗಳನೊದಗಿಸುತ ನಿಮ್ಮಾಜ್ಞಾನುಸಾರವು ನಡೆಯಲ್ ತಮ್ಮನ ನೇಮಿಸಿಹೆ ನಾನು (ಅರ್ಜಾವಿ. ೧೮-೫೦); ಸಾಧ್ಯವಾದರೆ ಸಾಮಾನುಗಳನ್ನಿರಿಸಲು . . . ಉಗ್ರಾಣವಿರುವುದು ಒಳ್ಳೆಯದು (ಆಡುಸಾ. ೫೨); ಒಂದು ಸಾಮಾನು ನೆಟ್ಟಗ ನೋಡಿ ತರುವಂತಿಲ್ಲ ಬಿಡುವಂತಿಲ್ಲ (ಅಶೋಕ. ೧); ಪೆಪ್ಪರಮೆಂಟನಿಂದ ಸೂಜಿದಾರದವರೆಗೆ ಎಲ್ಲ ಸಾಮಾನುಗಳೂ ಇದ್ದುವು (ನಡೆದಾ. II. ೧೯೯೯). ೨. (ಪ್ರಯಾಣದ) ಪೆಟ್ಟಿಗೆ, ಗಂಟು ಮೂಟೆ, ಭಾಂಗಿ ಇತ್ಯಾದಿ ; ಸರಕು ; ಮಾಲು : ಸುಲಭವಾಗಿ ದೋಣಿಯಲ್ಲಿ ಒಂದು ಕಡೆಯಿಂದ ಮತ್ತೊಂದು ಪ್ರದೇಶಕ್ಕೆ ಸಾಮಾನು ಸಾಗಿಸುತ್ತೇವೆ (ನನದಿ. ೫). ೩. ಒಡವೆ ; ನಗ : ಚಿಂನದ ಮುಲಾವಿನ ಸಾಮಾನು . . . ಕತ್ತಿಗೆ ಹಾಕಿರುವ ಸಾಮಾನು . . . ಪುಲ್ಲೆಕಡೆಸಾಮಾನು . . .

ಗಂಗಾಜಮುನಾಸಾಮಾನು . . . ಬೆಳ್ಳಿಮುಲಾವಿನ ಸಾಮಾನು (ಎಕ. XIV. ನಂಜನ ೨೮೯-ನೇ ಶಲಂ; 1847).

ಸಾಮಾನು ಸಟ್ಟು = ೧. (ಸಂಸಾರಕ್ಕೆ ಅಗತ್ಯವಾದ) ಪದಾರ್ಥ : ಅವರು ಸಾಮಾನು-ಸಟ್ಟು ತಂದು ಹಾಕಿದರು. ನಾನವುಗಳನ್ನು ಹೊಂದಿಸಿ ಇಡುವ ಕೆಲಸ ಕೈಕೊಂಡೆ (ಸ್ಮತಿಚಿ. ೬೨). ೨. (ಪ್ರಯಾಣಕ್ಕೆ ಬೇಕಾದ) ಪದಾರ್ಥ; ಗಂಟುಮೂಟೆ ಇತ್ಯಾದಿ : ಅವರ ಸಾಮಾನು ಸಟ್ಟುಗಳೆಲ್ಲ ನಮ್ಮ ಕಂಪಾರ್ಟ್‌ಮೆಂಟಿನಲ್ಲಿಯೆ ಉಳಿದಿದ್ದುವು (ಜನಜೀ. ೧೧೪). ಸಾಮಾನು ಸರಂಜಾಮು = ಸಾಮಾನು ಸಟ್ಟು ೨: ಮೈಸೂರುಸವಾರರು ಶತ್ರುಗಳ ಬೆನ್ನುಹತ್ತಿ ಅವರ ಆನೆ, ಒಂಟೆ, ಸಾಮಾನು ಸರಂಜಾಮು ಮುಂತಾದುವನ್ನು ಬಹಳಮಟ್ಟಿಗೆ ಸ್ವಾಧೀನಪಡಿಸಿಕೊಂಡು ತಂದೊಪ್ಪಿಸಿದರು (ಮಹಾವಂ. II, ೪೯). [← ಪಾರ. ಹಿಂ. ಮರಾ. ಸಾಮಾನ್]

ಸಾಮಾನ್ಯ (ಗು). ೧. ಸಾರ್ವತ್ರಿಕವಾದ; ಎಲ್ಲಕ್ಕೂ, ಎಲ್ಲರಿಗೂ ಅನ್ವಯಿಸುವಂತಹ. ೨. ಒಂದೇ ರೀತಿಯ; ಏಕಪ್ರಕಾರದ. ೩. ಸಾಧಾರಣ ಮಟ್ಟದ : ಉತ್ತಮ ಮಧ್ಯಮ ಕನಿಷ್ಠವೆಂದು ಬಂದ ಜಂಗಮವನೆಂದೆನಾದರೆ ನೊಂದೆನಯ್ಯಾ ಬೆಂದೆನಯ್ಯಾ ಎನ್ನ ಕಿಚ್ಚು ಎನ್ನ ಸುಟ್ಟಿತ್ತು ಸುಖಿಜಂಗಮ ಸಾಮಾನ್ಯಜಂಗಮವೆಂದುಂಟೆ (ಬಸವ. ೪೦೦). ೪. ಕೆಳಮಟ್ಟದ ; ಕೆಳದರ್ಜೆಯ. ೫. ಪೂರ್ಣವಾದ ; ಸಮಗ್ರವಾದ. (ನಾ). ೬. ಸಾರ್ವತ್ರಿಕವಾದುದು; ಎಲ್ಲಕ್ಕೂ, ಎಲ್ಲರಿಗೂ ಅನ್ವಯಿಸುವಂತಹುದು: ನಮಗೆಲ್ಲರಿಗೂ ಸಾಮಾನ್ಯವಾದ ಒಂದು ವಿಶಿಷ್ಟವಾದ ಸಂಸ್ಕೃತಿ ಇದೆಯೇ? (ಭಾರದ. ೩). ೭. ಸಾಧಾರಣವಾದುದು; ಕೇವಲ : "ಸಾವಭೃತಂ ಸಾಮಾನ್ಯಂ ಕೇವಳಮೆಂಬುದದೆನಿಕ್ಕುಂ" (ವಸ್ತುಕೋ. ೧೨೬-೪೯); ಅಬ್ಜದಳಾಕ್ಷೀ ಪೇಟ ಸಾಮಾನ್ಯಮೆ ಬಗೆಯೆ ಭವತ್ಕೇಶಪಾಶಪ್ರಪಂಚಂ (ಪಂಪಭಾ. ೧೨-೧೫೭); ಇದು ಕೇಳ್ ಸಾಮಾನ್ಯಮೆ ಶಂಖದ ಬೂದಿಯನೊಳ್ಪಿತಾಗಿ ಪರಿಮರ್ದಿಸಿ ಸೀಸದಿನಂತದನೊಂದಿರೆ ಪೂಸಿದೊಡಂ ನರೆ ಕರಿಯವಾಗಿ ಸೊಗಯಿಸಿ ತೋರ್ಕುಂ (ಲೋಕೋಪ. ೯-೫೦). ೮. ವಾಡಿಕೆ; ರೂಢಿ: ಲಿಂಗತ್ರಯಮೆನ್ನದೆ ವಚನತ್ರಯಮೆನ್ನದೆ ಸ್ವರಾಂತ ವ್ಯಂಜನಾಂತಂಗಳೆನ್ನದೆ ಸಾಮಾನ್ಯದಿಂ ಸಂಬೋಧನೆಯ ಕಡೆಯೊಳ್ ವಿಕಲ್ಪದಿಂ ಎ ಏ ಎಂಬಿವಕ್ಕುಂ (ಶಮದ. ೧೨೪ ವೃತ್ತಿ). ೯. ಸಾಧಾರಣವಾದ ವ್ಯಕ್ತಿ; ನಾಡಾಡಿ: ಸಾಮಾನ್ಯನಲ್ಲನಾತಂ ನೇಮಿದನವಧರಿಪುದು (ನೇಮಿಪು. ೭-೧೯೭); ಅನಿರುದ್ಧಂ ನಳಕೂಬರಂ ವರಜಯಂತಂ ನೋಡೆ ಸಾಮಾನ್ಯರೇ (ಹಮ್ಮಿರ. ೨-೭೪). ೧೦. ಸಂಪೂರ್ಣತೆ; ಸಮಗ್ರತೆ. ೧೧. ನಿರ್ದಿಷ್ಟವಾದ ಗುಣಲಕ್ಷಣ; ಖಚಿತವಾದ ಸ್ವಭಾವ. ೧೨. ಜಾತಿ; ವರ್ಗ; ಬಣ: "ಜಾತಿ, ಜಾತಂ, ಸಾಮಾನ್ಯಂ - ೩ ಜಾತಿಯ ಹೆಸರುಗಳು" (ಸಿದ್ಧಾಂತಿ. ೪೩). ೧೩. ಸಮಾನಗುಣಲಕ್ಷಣಗಳಿಂದ ಭಿನ್ನವಸ್ತುಗಳಲ್ಲಿರುವ ಸಾಮ್ಯ,– ಸಾದೃಶ್ಯ. ೧೪. [ಕಾವ್ಯಮಿ] ಒಂದು ಬಗೆಯ ಅರ್ಥಾಲಂಕಾರ; ಉಪಮಾನ ಮತ್ತು ಉಪಮೇಯಗಳಲ್ಲಿ ಪರಸ್ಪರ ಸಾದೃಶ್ಯದಿಂದ ವ್ಯಾವರ್ತಕಧರ್ಮವಿಲ್ಲದೆ ವಿಶೇಷವು ತಿಳಿಯದಿರುವಿಕೆ : ಸಮನಾದ ವಸ್ತುವಿಗೆ ವಿಶೇಷ ತೋಱದಿಡೆ ವಿವರಿಸಲ್ಕಿದು ಸಾಮಾನ್ಯವು (ಕುವಲ. ೧೪೫-೧೭). ೧೫. [ತರ್ಕಶಾ] ವೈಶೇಷಿಕದರ್ಶನದ ಏಳು ಬಗೆಯ ಪದಾರ್ಥಗಳಲ್ಲಿ ಒಂದು ಬಗೆ : ಕಾಣಾದವೆಂಬ ವೈಶೇಷಿಕಶಾಸ್ತ್ರವೇ ದ್ರವ್ಯ ಗುಣ ಕರ್ಮ ಸಾಮಾನ್ಯ ವಿಶೇಷ ಸಮವಾಯ ಅಭಾವಗಳೆಂಬ ಪದಾರ್ಥಸಪ್ತಕಮಂ ಪ್ರತಿಪಾದಿಸುವುದಱಿಂ ಪ್ರಪಂಚಸ್ವರೂಪಮಂ ವಿವರಿಸಿ ನಿರ್ಭಾಗಿಸುತಿರ್ಕುಂ (ವಿವೇಕ. ೧೦). ೧೬. [ದ್ವೈತ] ಹತ್ತು ಬಗೆಯ ಪದಾರ್ಥಗಳಲ್ಲಿ ಒಂದು : ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ವಿಶಿಷ್ಟ, ಅಂಶಿ, ಶಕ್ತಿ, ಸಾದೃಶ್ಯ, ಅಭಾವ ಎಂದು ಪದಾರ್ಥಗಳು ಹತ್ತು (ಹಿಂದಸಾ. ೨೭೫). [ಸಂ.]

ಸಾಮಾನ್ಯಗಣಿತ (ನಾ). ವ್ಯವಹಾರಕ್ಕೆ ಅಗತ್ಯವಾದ ಸಾಮಾನ್ಯ ಲೆಕ್ಕಾಚಾರ ; ಹೆಚ್ಚು ಪಾರಿಭಾಷಿಕವಲ್ಲದ ಸಾಧಾರಣವಾದ ಗಣಿತ : ಸಾಮಾನ್ಯಗಣಿತವು ತಕ್ಕಮಟ್ಟಿಗಾದರೂ ತಿಳಿದಿತ್ತೆಂದು ಹೇಳಬೇಕು (ಗಣಿಚಿ. ೫). [ಸಂ.]

ಸಾಮಾನ್ಯಗತಿ (ನಾ). ಸಾಧಾರಣವಾದ ವೇಗ ; ಹೆಚ್ಚು ವೇಗವಲ್ಲದ ಚಲನೆ: ನೆಳಲನಱಸುತ ವೇಗಗತಿ ಸಾಮಾನ್ಯಗತಿಗಳಲಿ ಬಳಿವಿಡಿದು ಭೂಭುಜರ ಯಾನಂಗಳೊಳಗಳುಕದೆ ಡಗೆಯ ಸೈರಿಸಿ ಬಳಸುವವನೇ ಛತ್ರಧಾರಕನು (ಕುಮ್ಮಾಉ. ೩-೯೯). [ಸಂ.]

ಸಾಮಾನ್ಯಜನ (ನಾ). ಸಾಧಾರಣವಾದ ಜನ ; ಜನಸಾಮಾನ್ಯರು : ಹಚ್ಚಾಗಿ ಲಿಪಿಗಳು ಪ್ರಾಕೃತದಲ್ಲಿಯೇ ಇರುವುದರಿಂದ ಆಗ್ಗೆ ಸಾಮಾನ್ಯಜನರಿಗೂ ಪ್ರಾಕೃತವು ತಿಳಿಯುತ್ತಿದ್ದಿರಬೇಕು (ಕರ್ನಾಅ. ೬). [ಸಂ.]

ಸಾಮಾನ್ಯತೆ (ನಾ). ೧. ಸಾಧಾರಣವಾಗಿರುವಿಕೆ ; ಸಮಾನವಾಗಿರುವಿಕೆ : (*). ೨. ಕೆಳಮಟ್ಟದಲ್ಲಿರುವಿಕೆ ; ಕೀಳುದರ್ಜೆಯಲ್ಲಿರುವಿಕೆ : (*). [ಸಂ. ಸಾಮಾನ್ಯತಾ]

ಸಾಮಾನ್ಯಧರ್ಮ (ನಾ). ೧. ಎಲ್ಲರಿಗೂ ಅನ್ವಯಿಸುವ ಧರ್ಮ; ಸಾರ್ವತ್ರಿಕವಾದ ನಿಯಮ,– ವಿಧಿ : ಸಂಧ್ಯೋಪಾಸನೆಯು ದ್ವಿಜರಿಗೂ ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥರಿಗೂ ಸಾಮಾನ್ಯಧರ್ಮವು (ಆರ್ಯಧ. ೧೧). ೨. ಸಾಧಾರಣವಾದ ಸ್ವಭಾವ ; ಸಹಜವಾದ ಗುಣಧರ್ಮ : ಮಾನವನ ಸಾಮಾನ್ಯಧರ್ಮಗಳಾದ ಸತ್ಯ, ಅಹಿಂಸೆ, ಪ್ರೇಮ, ಔದಾರ್ಯ, ಆತ್ಮಶುದ್ಧಿ ಇತ್ಯಾದ್ಯಾತ್ಮಧರ್ಮಗಳು ಸನಾತನವಾಗಿ ಮುಂದುವರಿಯುತ್ತಿವೆ (ಖುಕ್ಸಾರ. ೧೨೨ ಪೀಠಿಕೆ). [ಸಂ.]

ಸಾಮಾನ್ಯನಿಯಮ (ನಾ). ಸೂತ್ರರೂಪವಾದ ಕಟ್ಟಳೆ ; ಎಲ್ಲರಿಗೂ, ಎಲ್ಲಕ್ಕೂ ಅನ್ವಯಿಸುವ ನಿಯಮ : ಇದು ಉಪದೇಶದಿಂದಲೇ ತಿಳಿಯಬೇಕಾಗಿದ್ದರೂ ಒಂದು ಸಾಮಾನ್ಯನಿಯಮವನ್ನು ಅನುಸರಿಸಬಹುದು (ಭಾರದ. ೧೫೭). [ಸಂ.]

ಸಾಮಾನ್ಯಪ್ರತ್ಯಯ (ನಾ). [ವ್ಯಾಕ] ಬಳಕೆಯಾದ ಪ್ರತ್ಯಯ; ಹೆಚ್ಚು ರೂಢಿಯಾದ ಪ್ರತ್ಯಯ : ಇಗೆ ಎಂಬುದು ಚತುರ್ಥೀವಿಭಕ್ತಿಯ ಸಾಮಾನ್ಯಪ್ರತ್ಯಯ (ಮಧ್ಯಮ. ೫೯). [ಸಂ.]

ಸಾಮಾನ್ಯಲಕ್ಷಣ (ನಾ). ೧. ಎಲ್ಲರಿಗೂ ಎಲ್ಲಕ್ಕೂ ಅನ್ವಯಿಸುವ ಗುಣಸ್ವಭಾವ: ಇವುಗಳಿಗೆಲ್ಲಾ ಕೆಲವು ಸಾಮಾನ್ಯಲಕ್ಷಣಗಳೂ ವಸ್ತು - ನಾಯಕ - ರಸಭೇದದಿಂದ ಕೆಲವು ಭೇದಗಳೂ ಇರುತ್ತವೆ (ಕೈಪಿಡಿ. ೨೦೫). ೨. ನಿಯತವಾದ ವಿಶೇಷಗುಣ; ವಿಶಿಷ್ಟವಾದ ಗುಣಸ್ವರೂಪ : (*). [ಸಂ.]

ಸಾಮಾನ್ಯವಾಕ್ಯ (ನಾ). [ವ್ಯಾಕ] ಒಂದು ಪೂರ್ಣಕ್ರಿಯಾಪದವನ್ನುಳ್ಳ ಸ್ವತಂತ್ರವಾಕ್ಯ : ಒಂದು ಪೂರ್ಣಕ್ರಿಯಾಪದವನ್ನುಳ್ಳ ಸ್ವತಂತ್ರವಾಕ್ಯಕ್ಕೆ ಸಾಮಾನ್ಯವಾಕ್ಯವೆಂದು ಹೆಸರು. ಸಾಮಾನ್ಯವಾಕ್ಯದಲ್ಲಿ ಒಂದೇ ಪೂರ್ಣಕ್ರಿಯಾಪದವಿರಬೇಕು; ಸಾಪೇಕ್ಷಕ್ರಿಯಾರೂಪಗಳು ಎಷ್ಟಾದರೂ ಇರಬಹುದು (ಮಧ್ಯಮ. ೧೯೪). [ಸಂ.]

ಸಾಮಾನ್ಯವಾಚಿ (ನಾ). ಒಂದು ಸಾಮಾನ್ಯವಾದ ಅರ್ಥವನ್ನು ಹೊಂದಿರುವ ವಸ್ತುವಾಚಕ : ಸಾಮಾನ್ಯವಾಚಿಗಳನೀ ತೆಱದಿಂದನನ್ಯಸಾಮಾನ್ಯಮಾನ್ಯಸುಚರಿತ್ರಗುಣಾವತಾರಂ ಸಾಮಾನ್ಯಮಪ್ಪ ಜನಮುಂ ತಿಳಿವಂತು ಪೇೞ್ದಂ ದಾಮೋದರಪ್ರಿಯಸುತಂ ಕವಿಕರ್ಣಪೂರಂ (ವಸ್ತುಕೋ. ೧೧೬-೩೫). [ಸಂ. ಸಾಮಾನ್ಯವಾಚಿನ್]

ಸಾಮಾನ್ಯಶೈವ (ನಾ). ೧. [ಶೈವ] ಶೈವಮತದ ನಾಲ್ಕು ಪ್ರಭೇದಗಳಲ್ಲಿ ಒಂದು : ಆ ಶೈವಂಗಳಲ್ಲಿ ಮುಖ್ಯವಾದ ಸಾಮಾನ್ಯಶೈವ ಮಿಶ್ರಶೈವ ಶುದ್ಧಶೈವ ವೀರಶೈವವೆಂದು ಚತುರ್ವಿಧಶೈವಂಗಳ್ (ವಿವೇಕ. ೬೮). ೨. ಸಾಮಾನ್ಯಶೈವ ಪಂಗಡಕ್ಕೆ ಸೇರಿದವನು: ಆವನೋರ್ವನು ಶ್ರೀವಿಭೂತಿಯ ಧಾರಣಮಾತ್ರದಿಂ ಶುದ್ಧಾತ್ಮನಾಗಿ . . . ಅಷ್ಟವಿಧಭಕ್ತಿಯುಕ್ತನಾಗಿರ್ಪಾತನೇ ಸಾಮಾನ್ಯಶೈವನಪ್ಪಂ (ವಿವೇಕ. ೬೮). [ಸಂ.]

ಸಾಮಾನ್ಯಾರ್ಥಕ (ನಾ). ೧. ವಿಶೇಷವಿಲ್ಲದ ಅರ್ಥವನ್ನು ಕೊಡುವಂತಹುದು. ೨. [ವ್ಯಾಕ] ಮೂರು ಬಗೆಯ ಕ್ರಿಯಾಪದಗಳಲ್ಲಿ ಒಂದು; ಸಾಮಾನ್ಯವಾದ ಅರ್ಥವನ್ನು ಕೊಡುವ ಕ್ರಿಯಾವಾಚಕ : ಕ್ರಿಯಾಪದಗಳನ್ನು ಸಾಮಾನ್ಯಾರ್ಥಕ, ವಿಧ್ಯರ್ಥಕ, ನಿಷೇಧಾರ್ಥಕ ಎಂದು ಮೂರು ಪಂಗಡಗಳಾಗಿ ವಿಭಾಗಿಸಬಹುದು (ಕೈಪಿಡಿ. ೪೩). [ಸಂ.]

ಸಾಮಾನ್ಯಾಲಂಕಾರ (ನಾ). [ಕಾವ್ಯಮಿ] ಒಂದು ಬಗೆಯ ಅರ್ಥಾಲಂಕಾರ ;

ಎರಡು ವಸ್ತುಗಳು ಸಮಾನವಾಗಿದ್ದು ವಿಶೇಷವಿಲ್ಲದಿರುವುದು: ಎರಡುಂ ವಸ್ತುಗಳುಂ ಸಮಾನಂಗಳಾಗಿರ್ಪುದಱಿಂದೊಂದಱೊಂದು ವಿಶೇಷಂ ಕಾಣಿಸದಿರೆ ಯದು ಸಾಮಾನ್ಯಾಲಂಕಾರಂ (ಅಪ್ರತಿ. ೧೨೨-೧); ಸಮನಾದೆರಡುವಸ್ತುವಿನೊಳೊಂದು ವಿಶೇಷ ತೋಱದಿರ್ದಡೆ ಸಾಮಾನ್ಯಾಲಂಕಾರವೆನಿಪುದು (ಕುವಲ. ೧೯೭-೨). [ಸಂ.]

**ಸಾಮಾನ್ಯಾವ್ಯಯ** (ನಾ). [ವ್ಯಾಕ] ಒಂದು ಕ್ರಿಯೆಯ ಕಾಲ, ಸ್ಥಾನ, ರೀತಿ ಮುಂತಾದುವನ್ನು ತಿಳಿಸುವ ಒಂದು ಅವ್ಯಯ : ಕ್ರಿಯೆಯ ಕಾಲ, ಸ್ಥಾನ, ರೀತಿ ಮೊದಲಾದುವನ್ನು ತಿಳಿಸುವ ಅವ್ಯಯಗಳಿಗೆ ಸಾಮಾನ್ಯಾವ್ಯಯಗಳೆಂದು ಹೆಸರು (ಮಧ್ಯಮ. ೧೫೪); ಸಾಮಾನ್ಯಾವ್ಯಯಗಳು – ಅಲ್ಲಂ, ಅಲ್ಲ, ಅಲ್ಲದೆ, ಅಲ್ತು . . . ಒಟ್ಟೆಕ್ಕಂ, ಒಟ್ಟಯಿಂ (ಕೃಪಿಡಿ. ೫೨). [ಸಂ.]

**ಸಾಮಾನ್ಯಾಸ್ತ್ರ** (ನಾ). ವಿಶೇಷಶಕ್ತಿಯಿಲ್ಲದ, ಸಾಧಾರಣವಾದ ಬಾಣ: ಸಾಮಾನ್ಯಾಸ್ತ್ರಂಗಳಿಂ ಭಂಗಮನೊಡರಿಸಿದಂ (ಪಂಪರಾಮಾ. ೧೪-೨೩). [ಸಂ.]

**ಸಾಮಾನ್ಯೆ** (ನಾ). ೧. ಸಾಧಾರಣಳಾದ ಹೆಂಗಸು : ಕಾಕುಮತಿಗಳು ನಾವು ಚಿತ್ರವ್ಯಾಕುಳತೆಯರು ನಾವು ಭಕ್ತಿವಿವೇಕಸಾಮಾನ್ಯೆಯರು ನಾವತಿಕಾಮಚಾರಿಯರು (ಬಸವ. ೪೮-೮೨). ೨. [ಕಾವ್ಯಮೀ] ಮೂರು ಬಗೆಯ ನಾಯಿಕೆಯರಲ್ಲಿ ಒಬ್ಬಳು; ವೇಶ್ಯೆ: ಸ್ವಕೀಯೆ ಪರಕೀಯೆ ಸಾಮಾನ್ಯೆಯ[ಶಾಂಗಾಂ. ಪಣ್ಯಾ]ರೆಂಬ ತ್ರಿವಿಧನಾಯಿಕೆಯರಿಂ (ವಿವೇಕ. ೧೮೨). [ಸಂ. ಸಾಮಾನ್ಯಾ]

**ಸಾಮಾನ್ಯೋಕ್ತಿ** (ನಾ). ವಿಶೇಷವಲ್ಲದ ಮಾತು; ಸಾಧಾರಣವಾದ ಉಕ್ತಿ : ಸಾಮಾನ್ಯಮುಂ ವಿಶೇಷಮುಂ ಎಂದು ಸತ್ವರೂಪಣಂ ದ್ವಿವಿಧಂ ಸಾಮಾನ್ಯೋಕ್ತಿಯಿಂ ಅಸ್ತಿ ಮಿಥ್ಯಾದೃಷ್ಟಿಯೆಂದು ಬೇಱೆವೇಱೆ ಪೇೞ್ದುದು (ತತ್ತ್ವ.ಪ್ರ. ೧೭); "ಕಲ್ಲುಂ ಕಳ್ಳಿಯುಂ ನಾಟ್ಟ" ಎಂಬ ವಚನ ಕ್ರಿ.ಶ. ಆನೇ ಶತಮಾನದಿಂದಲೂ . . . ತಮಿಳುನಾಡಿನ ಶಾಸನಗಳಲ್ಲಿ ಕಾಣಬರುವ ಸಾಮಾನ್ಯೋಕ್ತಿ (ಶಾಸಗಿ. ೬). [ಸಂ.]

**ಸಾಮಾಭಾಸ** (ನಾ). ತೋರಿಕೆಯ ಸಾಮೋಪಾಯ; ಸಾಮೋಪಾಯದ ಸೋಗು : ಸಾಮಾಭಾಸದಿಂ ದಂಡೋಕ್ತಿಯನೆ ನುಡಿಯಲೊಡಂ (ಚಂದ್ರಪ್ರ. ೬-೨೨ ವ). [ಸಂ.]

**ಸಾಮಾಯಿಕ** (ನಾ). ೧. ಸಮಚಿತ್ತತೆ ; ಸಮಭಾವ. ೨. [ಜೈನ] ಪ್ರಾಪಂಚಿಕ ವ್ಯವಹಾರಗಳಿಂದ ನಿವೃತ್ತಿಯನ್ನು ಹೊಂದಿ, ಆತ್ಮನಲ್ಲಿ ಏಕಾಗ್ರತೆಯಿಂದಿರುವಿಕೆ ; ರಾಗದ್ವೇಷಾದಿ ಭಾವನೆಗಳನ್ನು ತೊರೆದು ಆತ್ಮಚಿಂತನೆಯಲ್ಲಿರುವಿಕೆ : ಚಿತ್ತತ್ತ್ವೈಕಾಗ್ರಚಿಂತಾನಿರೋಧರೂಪಸರ್ವಸಾವದ್ಯಯೋಗ ನಿವೃತ್ತಿಲಕ್ಷಣೀಭೂತಸಾಮಾಯಿಕಮುಂ (ತತ್ತ್ವ.ಪ್ರ. ೨೬೭). ೩. ತ್ರಿಕಾಲಗಳಲ್ಲಿ ಏಕಾಂತದಲ್ಲಿದ್ದು ಚಿತ್ತೈಕಾಗ್ರತೆಯಿಂದ ಮಾಡುವ ಆತ್ಮಧ್ಯಾನ: ಶ್ರಾವಕಂ ತನ್ನ ನಿತ್ಯಸ್ಥಿತಿಯೊಳಕ್ಕೆ ಪರ್ವದಿನಂಗಳೊಳಕ್ಕೆ ತನ್ನ ಸಾಮಾಯಿಕದ ಸಮಯದೊಳಕ್ಕೆ (ರತ್ನಕ. ೩ ೨೫ ವ). ೪. ಸಂಸಾರಕಾರಣಗಳನ್ನು ದೂರೀಕರಿಸಿ ಸಮ್ಯಗ್ಜ್ಞಾನವನ್ನು ಪಡೆಯಲು ಸಾಧಕವಾದ ಐದು ಬಗೆಯ ನಡವಳಿಕೆಗಳಲ್ಲಿ ಒಂದು: ಅದು ಸಾಮಾಯಿಕಚ್ಛೇದೋಪಸ್ಥಾಪನಾಪರಿಹಾರಶುದ್ಧಿಸೂಕ್ಷ್ಮಸಾಂಪರಾಯ ಯಥಾಖ್ಯಾತ ಚಾರಿತ್ರಭೇದದಿಂ ಪಂಚವಿಧಮೆಂದು ಹೇಯೋಪಾದೇಯ ತತ್ವಮನಱಿಪಿ (ಆದಿಪು. ೧೦-೩ ವ); ದಶಕುಶಲಧರ್ಮದೊಳ್ ನಿಯತಾತ್ಮನಾಗಿ ಸಾಮಾಯಿಕಚ್ಛೇದೋಪಸ್ಥಾಪನಾ ಪರಿಹಾರಶುದ್ಧಿಚಾರಿತ್ರದೊಳ್ ಕೂಡ ನೆಗಟುತ್ತಂ (ವರ್ಧಮಾ. ೧೦-೭ ವ). ೫. ಏಳು ಬಗೆಯ ಸಂಯಮಗಳಲ್ಲಿ ಒಂದು : ಸಾಮಾಯಿಕ ಛೇದೋಪಸ್ಥಾಪನಾಪರಿಹಾರವಿಶುದ್ಧಿಸೂಕ್ಷ್ಮಸಾಂಪರಾಯ ಯಥಾಖ್ಯಾತಚಾರಿತ್ರ ದೇಶಸಂಯಮ ಅಸಂಯಮವಿಕಲ್ಪದಿಂ ಸಂಯಮಂ ಸಪ್ತವಿಧಂ (ತತ್ತ್ವ.ಪ್ರ. ೧೭). ೬. ಹದಿನಾಲ್ಕು ಬಗೆಯ ಅಂಗಬಾಹ್ಯಗಳಲ್ಲಿ ಒಂದು : ಅಂಗಬಾಹ್ಯಂ-ಸಾಮಾಯಿಕಮುಂ ಚತುರ್ವಿಂಶತಿಸ್ತವನಮುಂ ವಂದನೆಯುಂ . . . ದಶವೈಕಾಲಿಕೆಯುಂ . . . ಮಹಾಪುಂಡರೀಕಮುಂ ಅಶೀತಿಕೆಯುಂ ಎಂದು ಪದಿನಾಲ್ಕು ತೆಱಂ ಅಲ್ಲಿ ಸಾಮಾಯಿಕಮೆಂಬುದು ನಾಮಸ್ಥಾಪನಾದ್ರವ್ಯಕ್ಷೇತ್ರಕಾಲಭಾವಂಗಳಲ್ಲಿ ಸಮತ್ವವಿಧಾನಮಂ ವಿಧಿಯಿಸುಗುಂ (ತತ್ತ್ವ.ಪ್ರ. ೬೫). ೭. ನಾಲ್ಕು ಬಗೆಯ ಶಿಕ್ಷಾವ್ರತಗಳಲ್ಲಿ ಒಂದು: ವಿನುತದೇಶಾವಕಾಸಿಕ ಸಾಮಾಯಿಕ ಘನತರಪ್ರೋಷಧನಿಯಮ ಅನುಪಮ ವೈಯಾವೃತ್ಯಮೆಂಬಿವು ನಾಲ್ಕು ಜನನುತ ಶಿಕ್ಷಾವ್ರತವು (ನಾಗಕು. ೨೮-೯೭). ೮. ಏಕಾಂತಸ್ಥಳದಲ್ಲಿ ಆತ್ಮಧ್ಯಾನದಲ್ಲಿ ತೊಡಗಿರುವವನು : ದರ್ಶನಿಕನು ವ್ರತಿಕನು ಸಾಮಾಯಿಕ ಸುರುಚಿರ ಪ್ರೋಷಧನಿಯಮಿ . . . ಅನುಮತಿವಿರತ ವರವುದ್ದಿಷ್ಟ ವಿರತನೆಂದು ಹನ್ನೊಂದು ಪರಿಯಿದು (ನಾಗಕು. ೨೮-೩೯); ಸಾಮಾಯಿಕ : – ಮೊದಲ ನೆಲೆಗಳ ಶೀಲಗಳೊಂದಿಗೆ ತನ್ನ ಮನಸ್ಸನ್ನು ಪರಿಶುದ್ಧ ವಸ್ತುಗಳ ಮೇಲೂ, ಪರಮಾತ್ಮನ ಮೇಲೂ ಕೇಂದ್ರೀಕರಿಸಿ ಏಕಾಂತಸ್ಥಳಗಳಲ್ಲಿ ಆತ್ಮಧ್ಯಾನದಲ್ಲಿ ಸಂಜೆ ಮುಂಜಾನೆ ನಿರತನಾಗಿರುವವನು (ಭಾರದ. ೧೮೪). 'ಸಾಮಯಿಕ' ಪರಾ. [ಸಂ.]

**ಸಾಮಾಯಿಕವ್ರತ** (ನಾ). [ಜೈನ] ನಾಲ್ಕು ಬಗೆಯ ಶಿಕ್ಷಾವ್ರತಗಳಲ್ಲಿ ಒಂದು : ಪರಿಕಿಪೊಡಸ್ಮರಣಮನಾದರಂ ಮನೋವಾಕ್ಕರೀರದುಷ್ಪ್ರಣಿಧಾನಂ ನಿರುಪಮಶಿಕ್ಷಾವ್ರತದೊಳ್ ನಿರುದ್ಧ ಸಾಮಾಯಿಕವ್ರತಕ್ಕತಿಚಾರಂ (ಸುಕುಮಾ. ೬-೨೧). [ಸಂ.]

**ಸಾಮಾರ್ಥ** (ನಾ). ಸಾಮೋಪಾಯದ ರಹಸ್ಯ ,— ತಿರುಳು : ವಸಿಷ್ಠಂಗೆ ಕೌಶಿಕಂ ನುಡಿದ ಪ್ರತಿಜ್ಞೆಯಂ ಗೆಲುವೊಡಿನ್ನು ಜಾಣಂ ಹರಿಶ್ಚಂದ್ರರಾಯನುನ್ನತಿಯಳಿವ ಕಾಣಬೇಕೆಂದಖಿಳಸಾಮಾರ್ಥದ ಕಲಾಪ್ರವೀಣನಂತಸ್ಥದೇಕಾಂತದೊಳು ಚಿಂತೆಯಿಂ ಭ್ರಾಂತಿಯೋಗದೊಳಿರ್ದನು (ಹಚಕಾ. ೩-೧). [ಸಂ.]

**ಸಾಮಿ$_1$, ಸಾಯ್ಮಿ$_3$, ಸಾವಿ$_1$, ಸೋಮಿ$_1$** (ನಾ). ೧. ಯಜಮಾನ ; ಒಡೆಯ : ವತ್ವಲೋಪಕ್ಕೆ . . . ಸ್ವಾತಿ – ಸಾತಿ, ಸ್ವಾಮಿ – ಸಾಮಿ (ಶಮದ. ೨೮೧ ಪ್ರಯೋ); ಹಗೆಯ ಭುಜದಗ್ಗಳಿಕೆಯನೆ ಕೊಂಡಾಡಿ ಸಾಮಿಯನಿಳಿಕೆಗಾಬಿರಿ ನಿಮ್ಮ ಪೈಕಕೆ ಖುಲ್ಲತನ ಸಹಜ (ಕುವ್ಯಾವಿ. ೭-೫). ೨. ದೊರೆ; ರಾಜ: ಕನ್ನವಾಡ ಗಂಗವಾಡ ಬಳೆಯವಾಡ ರೆರ್ನಾಡಾಳ ಸಿಯಳಾಟ ಸಾಮಿಸರ್ಬರಸ ಕೋಟೋರ್ ಶಿನ್ದರ್ಗೆ ಆ ಶೆಂಬಾಜ ಗೆಯೋದಂ (ಮೈಆರಿ. ೧೯೨೯, ೧೧೪-೨: ಸಃ. 820); ಮಗನಟಲೊಳ್ ಕರಂ ಮಱುಗುತಿರ್ಪಿನಮೆನ್ನ ತನೂಜನಾಳ್ದ ಸಾಮಿಗಮಟಿವಾಗ ಶೋಕರಸವಿರ್ಮಡಿಸಿತ್ತು (ಪಂಪಭಾ. ೧೩-೧೦೬); ಸಾಮಿ ಬಂದೊಡೆ ವಿನೀತಗುಣರ್ ಬೆಸಕೆಯ್ಯದಿರ್ಕುಮೇ (ಪುಷ್ಪಪು. ೧೪-೨೪). ೩. ಅಧಿಕಾರಿ : 'ಪಟ್ಟಣಸಾಮಿ' ಪರಾ. ೪. ಗಂಡ; ಪತಿ : ಎಲೆ ಪರಪುಷ್ಟ ಕೇಳ್ . . . ವನರಾಜಿ ಕೇಳ್ ನೆನೆಯುತಿರ್ಪುದು ಕೂರ್ಪುದು ಸರಿಸಿರ್ಪುದಗ್ಗಲಿಸಿದ ನಲ್ಮೆ ತಣ್ಮಲೆಯ ಬೆನ್ನನೆ ಪೋದಪೆಮಮ್ಮ ಸಾಮಿಯಾ (ಆಪು. ೬-೧೧೨). ೫. ದೇವರು; ಪರಮಾತ್ಮ : ಅಂಬುಜಾಕ್ಷಿಯ ಕಾದ ದೇವಗೆ ಶಂಬರಾರಿಯ ಪಡೆದ ಸಾಮಿಗೆ . . . ನಂಬಿದವರನು ಸಲಹುವರಸಗೆ ಕೊಡುವೆನೀ ಕೃತಿಯ (ಕೋಗಯು. ೧-೨೨). ೬. ಕೆಲವರ ಹೆಸರುಗಳ ಜೊತೆಯಲ್ಲಿ (ಗೌರವಾರ್ಥವಾಗಿ) ಸೇರುವ ಶಬ್ದ :'ಗಾಮುಂಡಸಾಮಿ' ಪರಾ. **ಸಾಯ್ಮಿ$_3$** : ೬. ಶಿರಡಿ ಸಾಯಿಬಾಬಾ ಪ್ರಸಿದ್ಧ ಸಂತರು (ರೂಢಿ). **ಸಾವಿ$_1$** : ೧. ನಿಜಮಕಾರದ ವಕಾರಕ್ಕೆ – ತಾಮರೆ, ತಾವರೆ . . . ಸಾಮಿ, ಸಾವಿ (ಶಮದ. ೧೧೪ ಪ್ರಯೋ). ೬. ಶ್ರೀಮಂ ಮಹಾಪ್ರತಾಪಿ ಭಯಿರವದೇವವೊಡೆಯರ ಬಂಟ ಕಲುವಣಿಕೆಯ ಬರದ ಹಾಲೆಯ ಬಳಿಯ ಗೋವಿಂದಸಾವಿ (ಕಾ. I. ೫೬-೧೧: 1438). **ಸೋಮಿ$_1$** : ೧. "ಸಾಮಿ (ವಿ, ಸೋಮಿ) – ಸ್ವಾಮಿನ್ – ಒಡೆಯ" (ತದ್ಭಕೋ. ೪೪). ೫. ಮೇಲಿರೋ ಸೋಮಿ ಕಣ್ ತೆರೆದಾಗ, ಲಕ್ಷ್ಮಿ ಮನೆಬಾಗಿಲ್ ತಾವ ಓಡಿಬತ್ತಾಳೆ! (ಹಾಹುತ್ತ. ೫೯). ೭. ಗುರುಹಿರಿಯರು, ದೇವರು, ಅಧಿಕಾರಿಗಳು ಮುಂತಾದವರನ್ನು ಕುರಿತು ಗೌರವಸೂಚಕವಾಗಿ ಸಂಬೋಧಿಸುವಾಗ ಬಳಸುವ ಒಂದು ಶಬ್ದ: ಹೋಯ್ತು ಸೋಮಿ ಹೋಯ್ತು, ನಮ್ಮೂರಿಗೆ ಏನೋ ಬಂದ್ಬುಡ್ತು (ಹುಟ್ಟಿಹ. ೧೬೮); ಏನು ಸೋಮಿ, ನಿಮ್ಮಂಥ ಧಾರಾಳವಾಗಿ ಖರ್ಚುಮಾಡೋರೆ ಇಷ್ಟು ಚೌಕಾಸಿ ಮಾಡಿದರೆ ಬಡವರ ಗತಿ ಏನು ಸೋಮಿ? (ಮಹಾಲ. ೩೯).

[< ಸಂ.ಸ್ವಾಮಿನ್./ ಪ್ರಾ. ಸಾಮಿ, ಸಾಮಿಅ. / ತಮಿ. ಚಾಮಿ ; ತುಳು. ತೆಲು. ಸಾಮಿ]

**ಸಾಮಿ$_2$** (ನಾ). ಒಂದು ಬಗೆಯ ಮರ : ಸಾಮಿ (ರಾಯಿನಿ). – ದೊಡ್ಡ ವೃಕ್ಷ. ಕಟ್ಟಿಗೆ ಕೆಂಪು (ಕಭಾಗ. ೪೯). [< ಸಂ. ಸಾಮಿಕ]

**ಸಾಮಿ$_3$** (ನಾ). ೧. ಅರೆಪಾಲು ; ಅರ್ಧ : "ಖಂಡಃ, ಅರ್ಧಃ(ರ್ಧಂ) . . . ಸಾಮಿ – ಈ ೭ ಅರ್ಧಂ" (ಹಲಾಯು. ೧೧೮-೨೮). ೨. ನಿಂದೆ. [ಸಂ.]

**ಸಾಮಿಕ** (ನಾ). [ಸಂಗೀತ] ರಾಗದ ಸ್ವರೂಪರಚನೆಯಲ್ಲಿಯ ಮೂರು ಸ್ವರಗಳ ಪ್ರಯೋಗ : ರಾಗ, ಕ್ರಮವಾಗಿ ಸ್ವರೂಪಗೊಂಡ ರೀತಿಯಲ್ಲಿ ಆರ್ಚಿಕ (ಏಕಸ್ವರ ಪ್ರಯೋಗ), ಗಾತಿಕ (ದ್ವಿಸ್ವರ ಪ್ರಯೋಗ), ಸಾಮಿಕ (ಮೂರು ಸ್ವರಗಳ ಪ್ರಯೋಗ) . . . ಸಂಪೂರ್ಣ (ಏಳು ಸ್ವರಗಳ ಪ್ರಯೋಗ) ಎಂಬ ಹಂತಗಳು ಕಂಡುಬಂದಿದೆ (ಸಂಗೀಚಂ. ೨೨). [?]

**ಸಾಮಿದೋಹಿ** (ನಾ). ಒಡೆಯನಿಗೆ ಕೇಡು ಬಗೆಯುವವನು ; ಸ್ವಾಮಿದ್ರೋಹಿ: ಸಂಗರಕೆ ಹೆಂಗಳ್ಳ ದನುಜಗೆ ಮಂಗಳನ ಬಲವಿಲ್ಲ ತೊಡಚಲು ಭಂಗ ತಪ್ಪದು ಸಾಮಿದೋಹಿಗೆ ಕೇಡುಗಾಲವೆನೆ (ಕಾಶಿರಾ. ೩೨-೩). [< ಸಂ. ಸ್ವಾಮಿದ್ರೋಹಿನ್]

**ಸಾಮಿಪಕ್ವ** (ಗು). ಅರ್ಧಹಣ್ಣಾದ; ಅರೆಪಕ್ವವಾದ: ಮಣಿಕನಕ ರಜತ ಪಾತ್ರಂಗಳೊಳ್ ಪರಿಪಕ್ವ ಸಾಮಿಪಕ್ವ ಶಲಾಟುಭೇದ ಭಿನ್ನಂಗಳಪ್ಪ ಮಾಕಂದ . . . ದ್ರಾಕ್ಷಾಚೋಚಮೋಚಾದಿ ಫಳಕುಳಂಗಳುಂ ಸೊಗಯಿಪುವು (ಚಂದ್ರಪ್ರ. ೬-೫೪ ವ). [ಸಂ.]

**ಸಾಮಿಯಬ್ಬೆ, ಸಾವಿಯಬ್ಬೆ** (ನಾ). ಒಬ್ಬಾಕೆಯ ಹೆಸರು : ಶ್ರೀಸಾಮಿಯಬ್ಬೆ ಸೆದೆಗೊಟ್ಟಡೆ ಸಾನ್ತರನ ಬಿನ್ನನಪ್ಪ ಮೊಗಮಂ ನೋಡೆನೆನ್ದರಸಿ XXX ಪಱಿದು ಪ್ರಭಾವತಿ ಕನ್ತಿಯರೆನ್ದು ಪೆಸರಂ ಕೊಣ್ಡು ಸನ್ಯಾಸನಂಗೆಯ್ದೊಡೆ (ಎಕ. VIII, ನಗರ. ೪೫-೮; ಸು. 950). **ಸಾವಿಯಬ್ಬೆ** : ಜಿನೇನ್ದ್ರಭಕ್ತಿಸದ್ಭಾವದೆ ಸಾವಿಯಬ್ಬೆ ಜಿನಶಾಸನದೇವತೆ ತಾನೆ ಕಾಣಿರೇ (ಎಕ. II (R), ೧೭೨-೧೩; ಸು. 10ನೆಯ ಶತ). [ಸಾಮಿ₁ + ಅಬ್ಬೆ₁]

**ಸಾಮಿಷ** (ಗು). ಮಾಂಸದಿಂದ ಕೂಡಿದ.

**ಸಾಮಿಷ ಆಹಾರ** = ಮಾಂಸದಿಂದ ಕೂಡಿದ ಆಹಾರ ; ಮಾಂಸಾಹಾರ: ಸಾಮಿಷ ಆಹಾರವನ್ನು ಪ್ರತಿಪಾದಿಸುವ ಆಗಮ ಸೂತ್ರಗಳು ಬಹು ಪ್ರಾಚೀನ ಕಾಲದುವೆಂದೂ ಬಲ್ಲವರು ಹೇಳುತ್ತಾರೆ (ಜೈನಪ. ೫೨೮). **ಸಾಮಿಷ ಆಹಾರಿ** = ಮಾಂಸಾಹಾರವನ್ನು ಸೇವಿಸುವ ವ್ಯಕ್ತಿ ; ಮಾಂಸಾಹಾರಿ: ನಿರ್ಗ್ರಂಥಸಂಘವನ್ನು ಕಟ್ಟುವಾಗ – ಆರಂಭದಲ್ಲಿ . . . ಎಷ್ಟೋ ಜನರು ಸಾಮಿಷ ಆಹಾರಿಗಳೂ ನಿರ್ಗ್ರಂಥಸಂಘದಲ್ಲಿ ಸೇರಿದರು (ಜೈನಪ. ೫೨೭). [ಸಂ.]

**ಸಾಮೀಪ್ಯ** (ನಾ). ೧. ಸನಿಹದಲ್ಲಿರುವಿಕೆ ; ಸಾನ್ನಿಧ್ಯ: ಚರಣಚುಂಬನಕೆ ಕಲ್ಲೆ ತಾಂ ಬೆಣ್ಣೆಯಾಯ್ತೆನೆ ಕಂಪಿಸಿತು ಬಂಡೆ, ಪ್ರೇಮಸಾಮೀಪ್ಯದಿಂ . . . ತಲ್ಲಣಂಗೊಳ್ಳು ವಬಲೆಯೋಲ್ (ಶ್ರೀರಾಮಾ. ೩೮-೨೮೧); ನಿನ್ನ ಸಾಮೀಪ್ಯ ನನಗೆ ಬೇಕಿಲ್ಲ (ದೂಬಟ್ಟ. ೧೦೯). ೨. [ತತ್ತ್ವಶಾ] ನಾಲ್ಕು ವಿಧದ ಮೋಕ್ಷಪದವಿಗಳಲ್ಲಿ ಒಂದು; ಮುಕ್ತನಾದ ಜೀವನಿಗೆ ದೊರಕುವ ಪರಮಾತ್ಮನ ಸಾನ್ನಿಧ್ಯ : ಕರ್ತರು ನಿಮ್ಮ ಗಣಂಗಳು ಎನ್ನ ತೊತ್ತುಮಾಡಿ ಸಲಹಿದ ಸುಖವು ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯದಂತುಟಲ್ಲಾ ಕೇಳಿರಯ್ಯಾ (ಬಸವ. ೪೭೪); ಪರಮನಱಿವನು ಬಸವನನುವನು ಪುರಹರನ ಸಾಲೋಕ್ಯದೊಳಗಮಿರ್ದಿರಲಹುದು ಸಾಮೀಪ್ಯದಿಂ ಸಂದಿಲ್ಲದಿರಲಹುದು (ಬಸಪು. ೧-೩೦). ೩. ಸಾಮೀಪ್ಯವೆಂಬ ಮೋಕ್ಷ ಪದವಿಯನ್ನು ಹೊಂದಿದ ವ್ಯಕ್ತಿ : ಈ ಲೋಕದ ಭೀತರು ಆ ಲೋಕದ ಕಲಿಗಳು ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯರೆಲ್ಲರೂ ಅಜಾತಂಗೆ ಸರಿಯೆ (ಬಸವ. ೯೦೧). [ಸಂ.]

**ಸಾಮೀಪ್ಯಂಬಡೆ** (ಕ್ರಿ). ಸಾನ್ನಿಧ್ಯವನ್ನು ಹೊಂದು ; ಸಮೀಪದಲ್ಲಿರು : ಸುರಭಿ ವಿಲೇಪನಸುರುಚಿರರತ್ನಾಭರಣಮನತಿಗಳೆಯಿಸಿ . . . ತೊವಲ್ದೊವೆಗಳೀಶನ ಸಾಮೀಪ್ಯಂಬಡೆವಂತೆ . . . ದುರ್ಜನಸಂತತಿಗಾನಂಜುವೆನು (ಜಯಿಕಾ. ೧-೧೯). [ಸಾಮೀಪ್ಯ + ಪಡೆ₁]

**ಸಾಮೀಪ್ಯಪದ** (ನಾ). = ಸಾಮೀಪ್ಯ ೨ : ನಿಮ್ಮ ಶರಣರ ಅರ್ಚನೆ ಪೂಜೆಯೇ ಎನಗೆ ಸಾಮೀಪ್ಯಪದವಯ್ಯಾ (ಉರಿಪೆ. ಕ. ೧೭೩-೨೩೩); ಆನವನ ಭಕ್ತಿಭರಕ್ಕೆ ಮಚ್ಚಿ . . . ಸಾಮೀಪ್ಯಪದಮಂ ಸಾರ್ಚಿದೆಂ (ವೃಷವಿ. ೧೪-೧೦೬). [ಸಂ.]

**ಸಾಮು, ಸಾಮು₂** (ನಾ). ೧. ಶಾರೀರಿಕವ್ಯಾಯಾಮ; ಅಂಗಸಾಧನೆ: ಜಟ್ಟಿಗಳಾಡುತಿಹ ಸಾಮುಗಳಿಗನುಸರಗೂಡಿದೊಸ್ತುವ ನೋಡಿ ಕೊಡುತಿಹ ರಾಯ ಬಿಜ್ಜಣನು (ಬಿಜ್ಜಪು. ೮೨-೨೬); ಸಾಯುವ ತನಕ ಸಾಮು ಕಲಿತರೆ ಯುದ್ಧ ಮಾಡುವುದು ಯಾವಾಗ? (ಗಾದೆ). ೨. ಕತ್ತಿ ಮೊದಲಾದುವುಗಳಿಂದ ಮಾಡುವ ವಿಶೇಷ ಸಾಧನೆ ; ಕಸರತ್ತು : ಹೂವುಗಳೆನುವ ಹದವಾದ ಕತ್ತಿಗಳ ಮೇಲೆ ಸಾಮುಗಳ ಮಾಡಿ (ಸೌಗಂಧಿ. ೪೭೬-೧೪); ಕೊನೆಯ ಮೀಸೆಯ ಕುಣಿಸುತಾಹವವೊನೆಯ ನಾಯಕರಿತ್ತೆರದಿ ಸಾಮಿನಲಿ ನಡೆದರು ರಣಮುಖಾವನಿಗೆ (ಪಶುಭಾ. ೭-೫೮); ಅವನು . . . ಕತ್ತಿಯ ಸಾಮಿನಲ್ಲಿ ಜಾಣನು (ಛತ್ರಶಿ. ೨೬). **ಸಾಮು₂** : ೧. ಎಲವೊ ಗರುಡಿಯ ಕಟ್ಟಿ ಸಾಮುವ ಕಲಿಸಿ ಬಳಿಕಾ ಕೋಲ ಮಕ್ಕಳ ಬಲದಿ ಬದುಕುವ ಕೃಪಣವೃತ್ತಿಯ ನಿಮ್ಮ ಕೂಡೆಮಗೆ ಕಲಹವೇತಕೆ (ಕುವ್ಯಾವಿ. ೮-೧೬). [< ಸಂ. ಶ್ರಮ. / ತೆಲು. ಸಾಮು]

**ಸಾಮುಗಲಿಸು** (ಕ್ರಿ). ಶಾರೀರಿಕವ್ಯಾಯಾಮವನ್ನು ಹೇಳಿಕೊಡು, – ಅಭ್ಯಾಸ ಮಾಡಿಸು : ಗರುಡಿಯೊಳು ಸಾಮುಗಲಿಸುವ ಶಿಷ್ಯರನು ಕುಳ್ಳಿರ್ದೋದಿಸುವ . . . ಪರರ ಮನೆಯೊಳು ಜಾತವೆಂದರೆ ಹರುಷದೊಳು ಹಿಗ್ಗುವ ವಿಡಂಬದ ಪರಿಯ ನಾಥರು ನೀವು (ಕುವ್ಯಾವಿ. ಓರಿ೯. ೮-೨೦). [ಸಾಮು + ಕಲಿಸು₁]

**ಸಾಮುದಾಯಿಕ** (ಗು). ೧. ಸಮುದಾಯಕ್ಕೆ ಸಂಬಂಧಿಸಿದ ; ಗುಂಪಿಗೆ ಸಂಬಂಧಪಟ್ಟ. ೨. ಒಟ್ಟಾದ ; ಸಮಷ್ಟಿಯ : ಒಂದೊಂದು ದೇಶದ ಜನಕ್ಕೂ ಒಂದು ಸಾಮುದಾಯಿಕ ಸ್ವಾಭಿಮಾನ ಸಹಜವಾಗಿರುತ್ತದೆ (ರಾಜ್ಯಶಾ. ೧೨). (ನಾ). ೩. ಸಮೂಹಕ್ಕೆ ಸಂಬಂಧಪಟ್ಟುದು: ಒಂದು ನಂಬರಿನ ಸರಹದ್ದಿನ ಹೊರಗಿರುವ ಸಾಮುದಾಯಿಕವಾದ ಸ್ಥಳ ಅಥವ ಸರ್ಕಾರಿ ಘಡನಂಬರಿನಲ್ಲಿ . . . ವಿನಿಯೋಗಿಸಿಕೊಂಡಿದ್ದರೆ ಅದನ್ನು ಗ್ರಾಮನೌಕರರು ತಡೆಯುವುದು (ಭೂಮಿಆ. ೩೭). [ಸಂ.]

**ಸಾಮುದ್ರ** (ಗು). ೧. ಸಮುದ್ರಕ್ಕೆ ಸಂಬಂಧಿಸಿದ; ಕಡಲಿನ. (ನಾ). ೨. ಸಮುದ್ರದ ಮೇಲೆ ವ್ಯಾಪಾರ ಮಾಡುವವನು; ಸಮುದ್ರವ್ಯಾಪಾರಿ. ೩. ಸಮುದ್ರದ ಉಪ್ಪು ; ಕಡಲುಪ್ಪು : ಸಾಮುದ್ರಂ ಗರ್ದುಗಿನ ಕೊನೆ ಸಾಮಾನ್ಯಂ ಸರ್ವರೋಗಹರಂ (ಅಶ್ವಶಾ. ೭-೩೫). ೪. ಒಂದು ಬಗೆಯ ಸಮುದ್ರ ಪ್ರಾಣಿಯ ಮೂಳೆ ; ಸಮುದ್ರದ ನೊರೆ. ೫. ಶರೀರದ ಮೇಲಿನ ಗುರುತು ,– ಚಿಹ್ನೆ. [ಸಂ.]

**ಸಾಮುದ್ರಕ** (ನಾ). ೧. = ಸಾಮುದ್ರ ೩.೨. ಮುಖ್ಯವಾಗಿ ಅಂಗೈ ರೇಖೆಗಳ ಮತ್ತು ಶರೀರದ ಮೇಲಿನ ಗುರುತುಗಳ ಆಧಾರದ ಮೇಲೆ ಮನುಷ್ಯನ ಭವಿಷ್ಯವನ್ನು ತಿಳಿಸುವ ಶಾಸ್ತ್ರ ; ಭವಿಷ್ಯಶಾಸ್ತ್ರ : ಸಕಲವಾದ ಸಾಮುದ್ರಕದಲ್ಲಿ ಹೇಳಿ ಇರುವ ಮುವ್ವತ್ತೆರಡು ಲಕ್ಷಣಗಳುಳ್ಳಂಥವನಾಗಿ (ಶಿವದ. ೨೨೪-೧೪). [ಸಂ.]

**ಸಾಮುದ್ರಲವಣ** (ನಾ). = ಸಾಮುದ್ರ ೩ : ಸಾಮುದ್ರಲವಣ, ಪದ್ಮಕೇಸರ, ಇವೆರಡನು ಸಮಾಂಶವಾಗಿ ತೆಗೆದುಕೊಂಡು ನೀರಿಂದ ಅರೆದು ಪಾನವ ಮಾಡಿಸಲು ಓತಿಯ ಎಲ್ಲಾ ವಿಷಗಳೂ ಶಮನವಹವು (ವೈದ್ಯಸಾ. II, ೨೨೦). [ಸಂ.]

**ಸಾಮುದ್ರಿಕ** (ಗು). ೧. = ಸಾಮುದ್ರ ೧. ೨. ಸಮುದ್ರದ ಮೇಲೆ ಸಂಚಾರಮಾಡುವ. ೩. ಭವಿಷ್ಯವನ್ನು ಸೂಚಿಸುವುವು ಎನ್ನಲಾದ, ಮುಖ್ಯವಾಗಿ ಅಂಗೈ ಮೇಲಿನ ಗೆರೆಗಳು ಅಥವಾ ಶರೀರದ ಮೇಲಿನ ಗುರುತುಗಳಿಗೆ ಸಂಬಂಧಿಸಿದ. (ನಾ). ೪. = ಸಾಮುದ್ರಕ ೨ : ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕಾಯುರ್ವೇದ ಧನುರ್ವೇದ ಹಸ್ತ್ಯಶ್ವತಂತ್ರ ರತ್ನ ಪರೀಕ್ಷೆಗಳುಮಂ . . . ಉಪದೇಶಂಗೆಯ್ದಂ (ಆದಿಪು. ೮-೬೦ ವ). ೫. ಮುಖ್ಯವಾಗಿ ಹಸ್ತರೇಖೆಗಳ ಆಧಾರದ ಮೇಲೆ ಭವಿಷ್ಯವನ್ನು ಹೇಳುವವನು ; ಸಾಮುದ್ರಿಕಶಾಸ್ತ್ರವನ್ನು ಬಲ್ಲವನು ; ಜ್ಯೋತಿಷಿ : ಸಾಮುದ್ರಿಕರಿಗೆ ಕೈತೋರಿಸಿದ್ದನ್ನು ಬಹಳ ಜನರು ಬಚ್ಚಿಡುವರು (ನಿರಾಭ. ೧೬೮). ೬. ಹಸ್ತರೇಖೆ ಅಥವಾ ದೇಹದ ಮೇಲಿನ ಗುರುತುಗಳಿಂದ ಸೂಚಿತವಾಗುವುವೆಂದು ಹೇಳಲಾಗುವ ಅದೃಷ್ಟ, – ಭಾಗ್ಯ : ಎನ್ನಯ ಸಾಮುದ್ರಿಕವಿಂತಿರಲು ನಂಬಿದರಿಂಬೆನೆ ಜನ ಮೆಚ್ಚಿರಲು ಶಿವಗಾಯಿತು ಮರುಳ್ಗಳ ಬಲುಕಾಟ (ಗಣೇಶ. ೮-೧೯೧). ೭. ಒಂದು ಬಗೆಯ ಔಷಧೀಸಸ್ಯ ; ಸಮುದ್ರ ಫಲ (?) : ವಿದಿತಂ ಸಾಮುದ್ರಿಕಮಂ ಸದಮಲತಕ್ರಮುಮನೊಂದುತಿಂಗಳ್ವರ ಮಿಕ್ಕಿದೊಡೆ ಮಱಿಗಾಲದೊಳ್ ಬಡಗುದುರೆಗೆ ಬಲಮಕ್ಕುಂ (ಅಶ್ವಶಾ. ೭-೫೦). [ಸಂ.]

**ಸಾಮುದ್ರಿಕಜ್ಞ** (ನಾ). = ಸಾಮುದ್ರಿಕ ೫ : ಶ್ರೀಗಾಗರನೆಂತೆನಿಸಿದನೀ ಗರುವರ ಹಿರಿಯನೆಂದು ರೇಖಾವಳಿಯಂ ತೂಗಿ ಪರಿಕಿಸುತೆ ಕರದೊಳ್ ನೈಗಮಸಾಮುದ್ರಿಕಜ್ಞರಿಂತೆಂದೊರೆದರ್ (ವಸ್ತುವಂ. ೫-೩೩). [ಸಂ.]

**ಸಾಮುದ್ರಿಕಾಲಕ್ಷಣ** (ನಾ). ಮುಖ್ಯವಾಗಿ ಅಂಗೈ ಮೇಲಿನ ವೈಶಿಷ್ಟ್ಯಪೂರ್ಣವಾದ ಗುರುತು, ಗೆರೆ ಮುಂತಾದುವು ಮತ್ತು ಅವುಗಳಿಂದ ಸೂಚಿತವಾಗುವ ಫಲನಿರೂಪಣೆ: ಇಲ್ಲಿ ಸಾಮುದ್ರಿಕಾಲಕ್ಷಣವನ್ನು ಹೇಳಲಾಗುತ್ತದೆ (ರೂಢಿ). [< ಸಂ. ಸಾಮುದ್ರಿಕ ಲಕ್ಷಣ]

**ಸಾಮುದ್ರಿಕಾಶಾಸ್ತ್ರ** (ನಾ). = ಸಾಮುದ್ರಕ ೨: ಅವರು ಸಾಮುದ್ರಿಕಾ ಶಾಸ್ತ್ರದಲ್ಲಿ ಬಹಳ ಪ್ರಸಿದ್ಧರು (ರೂಢಿ). [< ಸಂ. ಸಾಮುದ್ರಿಕಶಾಸ್ತ್ರ]

**ಸಾಮುದ್ರಿಕೆ** (ನಾ). = ಸಾಮುದ್ರಿಕಾಲಕ್ಷಣ. [ಸಂ. ಸಾಮುದ್ರಿಕ]

**ಸಾಮೂಹಿಕ** (ಗು). ೧. ಒಟ್ಟಾಗಿರುವ ; ಗುಂಪಿನ : ಬಿಳಿಯ ಉಡುಪನ್ನು ಧರಿಸಿದ ಮಕ್ಕಳು ಸಾಮೂಹಿಕ ಕವಾಯತು ಮಾಡಿದರು (ಕಪವು. ೪-೩೫). ೨. ಎಲ್ಲರಿಗೂ ಸಂಬಂಧಿಸಿದ ; ಸಾರ್ವಜನಿಕ : ಈ ಒಲೆಯನ್ನು . . . ವಿದ್ಯಾರ್ಥಿಗೃಹಗಳು, ಉಪಾಹಾರಗೃಹಗಳು, ಆಸ್ಪತ್ರೆಗಳು ಮೊದಲಾದುವುಗಳ ಸಾಮೂಹಿಕ ಅಡುಗೆಮನೆಗಳಿಗೆ ತಕ್ಕಂತೆಯೂ ಹೊಂದಿಸಿಕೊಳ್ಳುವುದು ಸಾಧ್ಯವಿದೆ (ಅಡುಸಾ. ೨೪); ನಾನು ಯಾವ ಸಾಮೂಹಿಕ ಕೆಲಸವನ್ನೂ ಮಾಡಿಯೇ ಇಲ್ಲ (ಶಾಲಮ. ೧೭೫). (ನಾ). ೩. = ಸಾಮುದಾಯಿಕ ೩ : ಅವರು ನಡೆಸುತ್ತಿರುವ ಚಳುವಳಿ ಸಾಮೂಹಿಕವಾದುದು (ರೂಢಿ). [ಸಂ.]

**ಸಾಮೂಹಿಕನಿಧಿ** (ನಾ). ಸಾರ್ವಜನಿಕರ ಕೆಲಸಗಳಿಗಾಗಿ ಮೀಸಲಿಟ್ಟ ಹಣ ; ಪುದುವಟ್ಟು : ನೀವೊಂದಿಷ್ಟು ಹಣ ಕೊಡಬೇಕಾಗುತ್ತದೆ. ಆ ಹಣವನ್ನು ಸಹ ಸಾಮೂಹಿಕನಿಧಿಗೆಂದು ನಿಮಗೇ ಹಿಂದಿರುಗಿಸಿ ಬಿಡುತ್ತಾರೆ (ಪುನರು. ೨೯೩). [ಸಂ.]

**ಸಾಮೂಹಿಕಬೇಸಾಯ** (ನಾ). ಎಲ್ಲರೂ ಒಟ್ಟಾಗಿ ನಡೆಸುವ ಬೇಸಾಯ, — ಕೃಷಿ : ಅವರ ಮಾತಿನಿಂದ ನಾಸ್ಯ ಆ ಹಳ್ಳಿಯ ಸಾಮೂಹಿಕಬೇಸಾಯದ ಅಧ್ಯಕ್ಷೆಯೆಂದು ತಿಳಿಯಿತು (ಯೋಧವು. ೩). [ಸಾಮೂಹಿಕ + ಬೇಸಾಯ (< ಬೆವಸಾಯ)]

**ಸಾಮೆ** 'ಸಾವೆ$_1$' ನೋ.

**ಸಾಮೆಯಕ್ಕಿ** 'ಸಾವೆಯಕ್ಕಿ' ನೋ.

**ಸಾಮೆಯನ್ನ** (ನಾ). ಸಾಮೆಅಕ್ಕಿಯಿಂದ ಮಾಡಿದ ಅನ್ನ : ಮೂರುದಿನವೂ ಸಾಮೆಯನ್ನವನ್ನೇ ತಿನ್ನಬೇಕು (ಸಕಪ್ರ. ಪಂ. ೪೯೩). [ಸಾಮೆ (< ಸಾವೆ$_1$) + ಅನ್ನ$_1$]

**ಸಾಮೆಹುಲ್ಲು** (ನಾ). ಒಂದು ಬಗೆಯ ಹುಲ್ಲು : ಸಾಮೆ, ಸಾಮೆಹುಲ್ಲು (ಮೈಔ. ೫೮-೧೧೪೮). [ಸಾಮೆ (< ಸಾವೆ$_1$) + ಹುಲ್ಲು (< ಪುಲ್)]

**ಸಾಮೋದ್ಭವ** (ನಾ). ಆನೆ ; ಗಜ : "ಮಾತಂಗಃ, ದ್ವಿರದಃ . . . ಸಾಮೋದ್ಭವಃ, ಸಿಂಧುರಃ- ಈ ೧೪ ಆನೆಯ ಪೆಸರ್" (ಹಲಾಯು. ೩೭-೭೧); ನವವರೂಥಾವಳಿಯ ಸುರಪನ ಧವಳದಂತಿಯ ವಿಗಡಸಾಮೋದ್ಭವ ಘಟಾಳಿಯ ಗರುವಸೇನೆಯ ಕಾಣಲಾಯ್ತಲ್ಲಿ (ತೊರರಾ. ೬-೭-೨೧). [ಸಂ.]

**ಸಾಮೋಪಚಾರ** (ನಾ). ಹಿತವಾದ ಮಾತು, ನಡವಳಿಕೆಗಳಿಂದ ಮಾಡುವ ಸಮಾಧಾನ : ಆದಷ್ಟು ಸಾಮೋಪಚಾರದಿಂದ ಅವರ (ಕೈಕೆಳಗಿನವರ) ಕೈಲಿ ಕೆಲಸಾ ತಕ್ಕೊಳ್ಳಬೇಕು (ಮುಂಬಯಿ. ೪-೭೩). [ಸಂ.]

**ಸಾಮೋಪಾಯ** (ನಾ). ೧. (ಕಾರ್ಯಸಾಧನೆಗಾಗಿ) ಮೃದುವಚನ, ಒಳ್ಳೆಯ ನಡವಳಿಕೆಗಳಿಂದ ಒಲಿಸಿಕೊಳ್ಳುವ ತಂತ್ರ,— ಯುಕ್ತಿ : ಕೇವಲ ಸಾಮೋಪಾಯಕ್ಕಾಗಿ ಅವನು ಅಂತೆ ವರ್ತಿಸುತ್ತಿರಲಿಲ್ಲ (ಪುನರು. ೬೯೧); ಎಂಥವರಿಗೂ 'ಗಿಲೀಟು ಮಾಡಿ' ತನ್ನ ಕಾರ್ಯ ಸಾಧಿಸಿಕೊಳ್ಳುವ ಸಾಮೋಪಾಯಗಳು ಅವನಲ್ಲಿದ್ದವು (ಕಂಬಹು. ೧೩). ೨. [ರಾಜನೀ] ಶತ್ರುವನ್ನು ಗೆಲ್ಲುವ ನಾಲ್ಕು ಉಪಾಯಗಳಲ್ಲಿ ಒಂದು; ವೈರಿಯೊಡನೆ ಸಂಧಾನವನ್ನು ನಡೆಸಿ ಮಾಡಿಕೊಳ್ಳುವ ರಾಜಿ ,— ಸಂಧಿ : ಸಾಮಜದಿಂದ ಪುಟ್ಟಿದ ಕದನ ಸಾಮೋಪಾಯದಿಂದ ಕದಲುವವೆಂದಾ ಸಚಿವೋತ್ತಮನನುವದಿಸಲಾ ನುಡಿಯನು ಕೇಳಿ . . . ಪೇಳ್ದನಿಂತೆಂದು (ಚಂಪ್ರಸಾಂ. ೨೦-೯೩). [ಸಂ.]

**ಸಾಮ್ಯ$_1$** (ನಾ). ಒಡೆತನ; ಯಜಮಾನಿಕೆ : ಮಲ್ಲಿಕ(ಕಾ)ರ್ಜುನಭಟ್ಟಾರರ ಶಿಷ್ಯರ್ ಚನ್ದ್ರತೇಜಭಟ್ಟಾರರ್ಗ್ಗೆ ಮಾವಿನೂರೊಳ್ ಬಗೆಗ [ನು] ಕೊಟ್ಟಂ ಸಾವಿರ(ಂ) ಬಳ್ಳಿಯ ತೋಣ್ಟದ ಸಾಮ್ಯಮ ಮುಗಿನ ಕಾಡಮ್ಮನುಂ ಎಚನಾಗನುಂ ಕುಪ್ಪನುಂ ಮಾದನುಂ ಒಕ್ಕಲ್ತನಂಗೆಯ್ಯೆ (ಎಇ.XXVI. ೬೨-೧೫; 906); ಕೋಗಟಿಯ ಚತುರಾಘಾಟ್ಟದೊಳಾದ ಮಣ್ಣು ನೀರ ಸಾಮ್ಯಕ್ಕಂ ದಣ್ಡದೋಸಮಲ್ಲ ಬಸದಿಗೆ (ಸೌಇಇ. IX-i, ೭೭-೨೮; 992). [< ಸಂ. ಸ್ವಾಮ್ಯ]

**ಸಾಮ್ಯ$_2$** (ನಾ). ೧. ಸಮಾನ; ಸರಿಸಮ: "ಪಡಿಪಾಟಿ ಪಾಂಗು ಪಾಸಟಿ . . . ಜೋಡಿಯು ಭಂಗಿ ಸಾಮ್ಯ" (ಶಬ್ದಮಂ. ೫೬); ಪೊಸೆಯಿಸುವರ್ಥ ಕ್ರಿಯೆಯಿಂ ಪ್ರಸಿದ್ಧ ವಸ್ತುವಿನ ದೊರೆಗೆ ವರೆ ಸಾಮ್ಯಂ (ಕಾವ್ಯಾವ. ೭೦೧). ೨. ಸಾದೃಶ್ಯ; ಹೋಲಿಕೆ : ಪುಷ್ಪಗರ್ಭಿತನವವಸಂತದ ಲಸಲ್ಲತೆಗೆ ಪಣ್ ಬೀತುಪೋದ ಮಾಗಿಯ ಮರದ ಸಾಮ್ಯಮೇಂ? (ಚಿತ್ರಾಂಗ. ೭೪-೨೦೩೬); ಇಲ್ಲಿ ಸಾಮ್ಯಗಳ ವರ್ಣನೆಯನ್ನು ಮಾಡಬೆಯೇ 'ವ್ಯತಿರೇಕ'ವನ್ನು ಮಾತ್ರ ತೋರಿಸಿದೆ (ಧ್ವನ್ಯಾಲೋ. ೮೫). ೩. ಹೊಂದಾಣಿಕೆ; ಸಾಮರಸ್ಯ. ೪. ಸಂಗೀತ, ನೃತ್ಯ ಮುಂತಾದುವುಗಳಲ್ಲಿಯ ತಾಳದ ಸಮತ್ವ: "ಲಯಃ - ೧ ಸಾಮ್ಯಂ - ನೃತ್ಯಗೀತವಾದ್ಯಗಳು ಸರಿಯಾಗಿರುವದಕ್ಕೆ ಹೆಸರು" (ಸಿದ್ಧಾಂತಿ. ೬೦). ೫. ಪಕ್ಷಪಾತವಿಲ್ಲದಿರುವಿಕೆ ; ಸಮತೆ. ೬. ಯೋಗ್ಯವಾದುದು; ತಕ್ಕುದು: ಉಂಡು ಬದುಕುವ ಬಹಳ ಭಾಗ್ಯರ ಕಂಡಸೂಯಂಬಡುವ ಖಿದ್ಧರ ಭಂಡರೆನ್ನದೆ ಲೋಕ ನಿನಗಿದು ಸಾಮ್ಯವಲ್ಲ (ಕುವ್ಯಾಸ. ೧೨-೪೯). [ಸಂ.]

**ಸಾಮ್ಯತೆ** (ನಾ). ಹೋಲಿಕೆ; ಸಾದೃಶ್ಯ : ಉಪಮಾನ - ಯಾವ ವಸ್ತುವಿನ ಸಾಮ್ಯತೆಯ ಕೊಡತಕ್ಕದ್ದೋ, ಆ ವಸ್ತು (ಗಂಗಾಮ. ೬). [ಸಂ. ಸಾಮ್ಯತಾ]

**ಸಾಮ್ಯತ್ವ** (ನಾ). = ಸಾಮ್ಯತೆ : "ಸಾಮ್ಯತ್ವ[ಪಾಠಾಂ. ಸಾಮ್ಯ]ದೊಳಗುಬ ಭಂಗದೊಳ್ ಪಾಟ" (ಶಬ್ದಮಂ. ೯೧). [ಸಂ.]

**ಸಾಮ್ಯದೋಷ** (ನಾ). ಹೋಲಿಕೆಯಿಂದಾದ ತಪ್ಪು ,— ಪ್ರಮಾದ : ಚೋರನನು ಕಾಣುತ್ತ ಮರಳಿದು ಚೋರನೆಂದೊಡೆ ಪತಿತನನು ನಿಷ್ಠೂರತನದಿಂ ಪತಿತನೆಂದೊಡೆ ಸಾಮ್ಯದೋಷವದು (ಕುವ್ಯಾಉ. ೪-೯೧). [ಸಂ.]

**ಸಾಮ್ಯಪ್ರತೀತಿ** (ನಾ). ಹೋಲಿಕೆಯ ಭಾವನೆ : ಪ್ರತಿವಸ್ತೂಪಮೆ ಸಾಮ್ಯಪ್ರತೀತಿಯಿಂದಂ ಸಮಾನವಸ್ತುನ್ಯಸನಂ ಪ್ರತಿಪಾದಿಸುವುದಭೇದಾತ್ಮತೆಯಿಂದುಪಮೆಯನದಲ್ತೆ ರೂಪಕಮಕ್ಕುಂ (ಕಾವ್ಯಾವ. ೬೮೫). [ಸಂ.]

**ಸಾಮ್ಯವಾದ** (ನಾ). ಎಲ್ಲರೂ ಸಮಾನರೆಂದು ಪ್ರತಿಪಾದಿಸುವ ಒಂದು (ರಾಜಕೀಯ) ತತ್ತ್ವ ; ಸಮತಾವಾದ : ಮನುಷ್ಯರಲ್ಲೂ ಇತರ ಪಶುಪಕ್ಷಿ ಸ್ಥಾವರಗಳಲ್ಲೂ ಬಾಹ್ಯಶರೀರಗಳಲ್ಲಿ ತಾರತಮ್ಯವಿರುವ ಹಾಗೆ, ಆತ್ಮಸ್ವರೂಪದಲ್ಲೂ ಮನುಷ್ಯಾದ್ಯಾಕಾರಭೇದವಾದ ಏಕಾತ್ಮವಾದಕ್ಕೂ ಸಾಮ್ಯವಾದಕ್ಕೂ ಸಾಕ್ಷಾತ್ಕೃತಿ ಪಕ್ಷವಾಗಿರುವುದು (ಹಿಂದಸಾ. ೨೭೭); ಪ್ರಾಣಿಗಳಿಗೂ ಇಲ್ಲಿ ಸಾಮ್ಯವಾದದ ಚಿಂತೆ . . . ಕತ್ತೆ ಹಿಂಡಿಗೆ ಒಂದು ಕಡೆಯಲ್ಲಿ ಸಾಮ್ಯವಾದದ ಬೋಧೆ ಭರದಿಂದ ಸಾಗುತ್ತಿತ್ತು (ಕೋಗಿಲೆ. ೨-೪೪). [ಸಂ.]

**ಸಾಮ್ಯವಾದಿ** (ನಾ). ಸಮತಾವಾದದ ತತ್ತ್ವಗಳನ್ನು ಅನುಸರಿಸುವ ವ್ಯಕ್ತಿ ; ಸಮಾಜವಾದಿ : ಮೇಲಿನ ಸಂಗತಿಗಳನ್ನು ಗಮನಿಸಿದಲ್ಲಿ ಧರ್ಮದ ವಿರುದ್ಧವಾಗಿ ಸಾಮ್ಯವಾದಿಗಳು ಎತ್ತಿದ ಆಕ್ಷೇಪಣೆಗಳು ಸರಿ, ನ್ಯಾಯವಾದವುಗಳು - ಎಂದು ಎನಿಸಬಹುದು (ಧರ್ಮಸಾ. ೧೩). [ಸಂ. ಸಾಮ್ಯವಾದಿನ್]

**ಸಾಮ್ರಾಜ್ಞಿ** (ನಾ). ೧. ಸಾಮ್ರಾಜ್ಯದ ಒಡತಿ ; ಚಕ್ರವರ್ತಿನಿ : ಅತ್ತಿಮಬ್ಬೆ ನೀನು ಧರ್ಮಸಾಮ್ರಾಜ್ಯಸಾಮ್ರಾಜ್ಞಿ ! (ದಾನಚಿಂ. ೧೭೬). ೨. ಸಾಮ್ರಾಟನ ಹೆಂಡತಿ. [< ಸಂ. ಸಮ್ರಾಜ್ಞೀ]

**ಸಾಮ್ರಾಜ್ಯ** (ನಾ). ೧. ಸಾರ್ವಭೌಮಾಧಿಕಾರವನ್ನುಳ್ಳ ರಾಷ್ಟ್ರ ; ಚಕ್ರಾಧಿಪತ್ಯ: ಹೇಯಂ ಸಾಮ್ರಾಜ್ಯಮುಪಾದೇಯಂ ಪ್ರವ್ರಜ್ಯಮೆಂದು ಮಾಣದೆ ರಾಜ್ಯಶ್ರೀಯಂ ಕೊಟ್ಟಂ ಮುಕ್ತಿಶ್ರೀಯಂ ಬಗೆದರ್ಕಕೀರ್ತಿಗಾಗಳ್ ಭರತಂ (ಆದಿಪು. ೧೬-೬೨); ಶಿಕ್ಷಾಪುರಸ್ಸರಂ ಸಕಲಸಾಮ್ರಾಜ್ಯಶ್ರೀಯಂ ಶ್ರೀಷೇಣಭೂಪತಿ ನಿಜತನೂಜನೊಳ್ ನಿಯೋಜಿಸಿ

(ಚಂದ್ರಪ್ರ. ೪-೨೪ ವ); ಅಡವಿಯೇ ಸಾಮ್ರಾಜ್ಯ ನಿಮ್ಮಡಿಯೊಡನಿರಲು ನೀವಿಲ್ಲದಾ ಪುರವಡವಿ ನಮಗಹುದು (ಕುವ್ಯಾವಿ. ೧-೯). ೨. (ರಾಷ್ಟ್ರದ) ಪರಮಾಧಿಕಾರ ; ಆಧಿಪತ್ಯ. ೩. [ಜೈನ] ಮೋಕ್ಷಕ್ಕೆ ಸಂಬಂಧಿಸಿದ ಏಳು ಉತ್ತಮಸ್ಥಾನಗಳಲ್ಲಿ ಒಂದು: ಸಜ್ಜಾತಿಸದ್ಗೃಹಿತ್ವಪಾರಿವ್ರಾಜ್ಯಸುರೇಂದ್ರತ್ವಸಾಮ್ರಾಜ್ಯಪರಮಾರ್ಹಂತ್ಯ ಪರಿನಿರ್ವಾಣಮೆಂಬೇೞುಂ ಪರಮಸ್ಥಾನಸಾಮಾಕೃತಾನ್ವಯಕ್ರಿಯೆಗಳಂ (ಆದಿಪು. ೧೫-೧೭ ವ). ೪. ಐವತ್ತುಮೂರು ಬಗೆಯ ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು; ಭೂಮಂಡಲಾಧಿಪತ್ಯವನ್ನು ಪಡೆದು ದುಷ್ಟಶಿಕ್ಷಣ, ಶಿಷ್ಟ ಪರಿಪಾಲನೆಯನ್ನು ಮಾಡುತ್ತಾ ಧರ್ಮದಿಂದ ರಾಜ್ಯ ಪರಿಪಾಲನೆ ಮಾಡುವುದು: ದ್ವಾದಶಾಂಗದೊಳ್ ವೇಟ್ಟುದಾನ ಪ್ರೀತಿ ಸುಪ್ರೀತಿ . . . ಚಕ್ರಾಭಿಷೇಕ ಸಾಮ್ರಾಜ್ಯಪರಿನಿಷ್ಕ್ರಮಣಯೋಗಸಮ್ಮಹಾರ್ಹಂತ್ಯವಿಹಾರಯೋಗ್ಯ ತ್ಯಾಗ ನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ). [ಸಂ.]

**ಸಾಮ್ರಾಜ್ಯಕ್ರಿಯೆ** (ನಾ). = ಸಾಮ್ರಾಜ್ಯ ೪ : ಚಕ್ರರತ್ನಂಬೆರಸು ನಿಧಿರತ್ನಂಗಳಂ ಪೂಜಿಸಿ . . . ಶ್ರೀದೇವಿಯರುಂ ಸರಿದ್ದೇವಿಯರುಂ ವಿಶ್ವೇಶ್ವರಾದೇವಿಯರುಂ ತಂತಮ್ಮ ನಿಯೋಗದೊಳ್ ಓಲಗಿಸಿ ಸುಖಮಿರ್ಪುದು ಸಾಮ್ರಾಜ್ಯಕ್ರಿಯೆ (ಚಾವುಂಪು. ೨೧೯). [ಸಂ. ಸಾಮ್ರಾಜ್ಯಕ್ರಿಯಾ]

**ಸಾಮ್ರಾಜ್ಯಶಾಹಿ, ಸಾಮ್ರಾಜ್ಯಷಾಹಿ** (ನಾ). ೧. ಚಕ್ರಾಧಿಪತ್ಯದ ಸರ್ವಾಧಿಕಾರ; ಸಾರ್ವಭೌಮತ್ವದ ಅಧಿಕಾರ: ಈ ಸಾಮ್ರಾಜ್ಯಶಾಹಿಗೆ ಹತ್ತೊಂಭತ್ತನೆಯ ಶತಮಾನದಲ್ಲಿ ಸುಗ್ಗಿಯ ಅನುಭವವಾಗಿತ್ತಂತೆ (ವಿಶಸಂ. ೪); ಬ್ರಿಟಿಷ್ ಸಾಮ್ರಾಜ್ಯಶಾಹಿಯ ಹಿಂಸೆ, ದಬ್ಬಾಳಿಕೆ, ಕ್ರೂರಶಿಕ್ಷೆಗಳ ಪರಿಣಾಮ ಹೀಗೇ ಆಯಿತು (ಆತ್ಮಾರ್ಪ. ೧೩೦). ೨. ಸಾರ್ವಭೌಮಾಧಿಕಾರವುಳ್ಳ ವ್ಯಕ್ತಿ; ಸರ್ವಾಧಿಕಾರಿ : ಆ ದಡದ ಸಾಮ್ರಾಜ್ಯಶಾಹಿಗಳೆಂದರೇ ವೆಂಕಟಪೂಂಜರು (ಕಂಬಹು. ೨). **ಸಾಮ್ರಾಜ್ಯಷಾಹಿ** : ೧. ಬ್ರಿಟಿಷ್ ಸಾಮ್ರಾಜ್ಯಷಾಹಿಯನ್ನು ದಿಟ್ಟತನದಿಂದ ಎದುರಿಸಿದ ನಿಮಗೆ ರಂಗನಾಥ, ಕಲ್ಲಪ್ಪನಂತಹ ಲಂಚಕೋರ ಹೇಡಿಗಳನ್ನು ಎದುರಿಸುವುದು ಕಷ್ಟವೇನೂ ಅಲ್ಲ (ಪಂಜಪಂ. ೧೮೩). [ಸಾಮ್ರಾಜ್ಯ + ಶಾಹಿ]

**ಸಾಮ್ರಾಜ್ಯಷಾಹಿ** 'ಸಾಮ್ರಾಜ್ಯಶಾಹಿ' ನೋ.

**ಸಾಮ್ರಾಟ** (ನಾ). ಚಕ್ರಾಧಿಪತಿ; ಸಾರ್ವಭೌಮ : ಸಾಮ್ರಾಟರ ಪ್ರಭಾವವು ಕುಂದದಂತೆ ನೋಡಿಕೊಳ್ಳಲು ಮತ್ತು ಅಗತ್ಯಬಿದ್ದಂತೆ ಸಾಮ್ರಾಟರ ದಿಗ್ವಿಜಯಗಳಲ್ಲಿ ನೆರವಾಗಲು ಅನೇಕ ಸಾಮಂತ ಅರಸುಗಳು ಅಲ್ಲಲ್ಲಿಯ ಸಂಸ್ಥಾನಗಳಲ್ಲಿ . . . ಆಡಳಿತಸೂತ್ರಗಳನ್ನು ವಹಿಸಿಕೊಂಡರು (ಸೋಲಂಬ. ೭೦). [< ಸಂ. ಸಮ್ರಾಜ್]

**ಸಾಮ್ರಾಣಿ** (ನಾ). ೧. ಒಂದು ಬಗೆಯ ಮರದಿಂದ ದೊರಕುವ ಪರಿಮಳ ಯುಕ್ತವಾದ ಧೂಪದ್ರವ್ಯ; ಸಾಂಬ್ರಾಣಿ : ಸಾಮ್ರಾಣಿಯ ಹೊಗೆ, ದೀಪದ ಬೆಳಕು, ಏನೇನೋ ಗಲಾಟೆ (ಹೊಸಕ್ಟ. ೧೨೦). 'ಸಾಂಬ್ರಾಣಿ' ಪರಾ. ೨. [ಸಂಗೀತ] (?) : ದೇಶೀಯ ವಿಶೇಷಭೇದದಿನಾಚಾರ್ಯವಿರಚಿತಾಭಿನಯ ಭೇದದಿಂ ಜನಿಯಿಸಿದ ನೂಱುನಾಲ್ವತ್ತುಂ ರಾಗಭೇದದೊಳಮುವ ನೋರೊಂದಱಿಕೊಳ್ಳೆರಸುವ ಸಾಮ್ರಾಣಿಭೇದದೊಳಂ ಚಚ್ಚಪುಟ ಚಾಚುಪುಟಾದಿ ಸಕಲತಾಳ ಸಂಚಾರಸಮುದಿತಮಪ್ಪಿಪ್ಪತ್ತೆಂಟು ವಸ್ತುಗೀತದೊಳಮತಿಪ್ರವೀಣನಪ್ಪ ಗಾಣಂ ಪಾಡಲೊಡರಿಸುವುದುಂ (ಮಲ್ಲಿಪು. ೮-೨೫ ವ). [ಸಂ.]

**ಸಾಮ್ರಾಣಿಧೂಪ** (ನಾ). ಸಾಂಬ್ರಾಣಿಯನ್ನು ಕೆಂಡದ ಮೇಲೆ ಹಾಕುವುದರಿಂದ ಉಂಟಾಗುವ ಪರಿಮಳಯುಕ್ತವಾದ ಹೊಗೆ : ರಂಗಮುದ್ರೆಯ ತೊಡೆದು ಸಾಮ್ರಾಣಿಧೂಪಮಂ ಲಿಂಗಕ್ಕೆ ಗುಪ್ಪದಿಂ ಮಂಚರಸನರ್ಪಿಸಲು (ಗುರುಚಾ. ೭-೪೦). [ಸಂ.]

**ಸಾಯ್** 'ಸಾ' ನೋ.

**ಸಾಯ್ಯ**$_1$ 'ಸಾಹ್ಯ' ನೋ.

**ಸಾಯ್ಯ**$_2$ (ನಾ). ೧. ಕೊನೆ ; ಮುಕ್ತಾಯ. ೨. ಸಂಜೆ ; ಸಾಯಂಕಾಲ : "ಬೈಗಿನ ಪೊೞ್ತಂ ಸಾಯಮೆಂಬುದು" (ಹಲಾಯು. ೧೮-೧೧೯); ತತ್ಸಾಯಮಾವರಿಸೆ ಕಾಳಾಂಬರವನುಟ್ಟ ನಿಶಿಯಾಂಗನೆಯ ಬಳಗಮೆನೆ ರಾಜಿಸಿದರು ತರುಣಿಯರು (ಸವಮೋ. ೨೪-೬೨). [ಸಂ.]

**ಸಾಯಂ** (ಅ). ಸಾಯಂಕಾಲದಲ್ಲಿ ; ಸಂಜೆಯಲ್ಲಿ : 'ಸಾಯಂಫೇರಿ' ಪರಾ. [ಸಂ.]

**ಸಾಯಂಕಾಲ** (ನಾ). ಹಗಲಿನ ಕೊನೆಯ ಭಾಗ ; ಸಂಜೆ : "ದಿವಸಾಂತವಪ್ಪಿರುಳು ಸಾಯಂಕಾಲವೆನಿಕು" (ವಂಗರಾ. ೨೦-೭); ಸಾಯಂಕಾಲ ಹೆಣ್ಣುಗುಬ್ಬಿಯು ಗಂಡನನ್ನು ಕುರಿತು ಆ ದಿನ ನಡೆದ ಸಂಗತಿಯನ್ನು ಹೇಳಿತು (ನೀತಿಚಂ. VIII. ೭); ಪ್ರಾತಃಕಾಲದಲ್ಲಾಗಲಿ, ಸಾಯಂಕಾಲದಲ್ಲಾಗಲಿ ಪಡಸಾಲೆಗೆ ನೇರವಾಗಿ ಬಿಸಿಲು ಬೀಳದಂತೆ . . . ಮನೆಯನ್ನು ಕಟ್ಟಲು ಮಾಡಬೇಕಾಗಿಲ್ಲ (ನಂಟರು. ೧೮). [ಸಂ.]

**ಸಾಯಂತನ** (ಗು). ೧. ಸಂಜೆಯ ; ಸಂಧ್ಯಾಸಮಯದ : ವನಸಾಯಂತನ ಮಲ್ಲಿಕಾಮುಕುಳಕೋಟ್ಯಗ್ರಂಗಳೊಳ್ ಕೂಡೆ ನೂತನಸದ್ಗಂಧಿಗಳೊಳ್ ಮದಾಂಧ ಮಧುಪಂ . . . ಪಾಯ್ದು (ಶಾಂತಿಪು. ೭-೧೨೮). (ನಾ). ೨. ಸಂಜೆ ; ಸಾಯಂಕಾಲ: ಆಗಳ್ ಸಾಯಂತನದ ನಿಯೋಗಮನೋಳಿಯೊಳೆ ತೀರ್ಚಿ ಸಂಗರವಿಜಯೋದ್ಯೋಗಿ ವಿಧಿಪೂರ್ವಕಂ ಚೆಲ್ವಾಗಿರೆ ಹರಿ ದರ್ಭಶಯನತಳಗತನಾದಂ (ವರ್ಧಮಾ. ೪-೩೩). [ಸಂ.]

**ಸಾಯಂತನಸಮಯ** (ನಾ). ಸಂಜೆಯ ವೇಳೆ ; ಸಾಯಂಕಾಲದ ಹೊತ್ತು : ಅನ್ನೆಗಮಾಷಾಢಪೌರ್ಣಮಾಸೀವಾಸರಸಾಯಂತನ ಸಮಯದೊಳ್ ಪರಭಾಗಂ ಬಡೆದು ಗಗನೋಭಯಭಾಗದೊಳ್ ದಿಗ್ಭಿತ್ತಿಗಳುಂ . . . ಬೆಳಗೆ (ಆದಿಪು. ೬-೫೧ ವ); ಸಾಯಂತನಸಮಯಸಮೀರಣಂ ಸೌಖ್ಯಸಾರಸರ್ವಸ್ವಮೆನಿಸಿದಾಗಳ್ (ಚಂದ್ರಪ್ರ. ೮-೪ ವ). [ಸಂ.]

**ಸಾಯಂಫೇರಿ** (ನಾ). ರಾಜಕೀಯ ಅಥವಾ ಧಾರ್ಮಿಕ ಉತ್ಸವಗಳ ಆಚರಣೆಯ ಅಂಗವಾಗಿ ಸಾಯಂಕಾಲದಲ್ಲಿ ಮಾಡುವ ಸಾಮೂಹಿಕ ಮೆರವಣಿಗೆ : ಸಿದ್ದಾಪುರದಲ್ಲಿ ಗಾಂಧಿ ದಿನಾಚರಣೆಯ ನಿಮಿತ್ತ . . . ಸ್ತ್ರೀಯರು ರಾಷ್ಟ್ರಧ್ವಜ ಹಿಡಿದು ಸಿದ್ದಾಪುರಕ್ಕೆ ಬಂದು ಸಾಯಂಫೇರಿ ತಗೆದರು (ಕರವೀ. ೧೮೪). 'ಪ್ರಭಾತಫೇರಿ' ಪರಾ. [ಸಾಯಂ + ಫೇರಿ]

**ಸಾಯಂಸಂಧ್ಯೆ** (ನಾ). ಸಂಜೆಯಲ್ಲಿ ಮಾಡುವ ಸಂಧ್ಯಾವಂದನೆ : ನಮ್ಮ ನೆರೆಹೊರೆಯ ಒಬ್ಬ ಗೃಹಸ್ಥರು ಸಾಯಂಸಂಧ್ಯೆಗೆ ಕುಳಿತಿದ್ದರು (ಸ್ಮೃತಿಚಿ. ೨೦). [ಸಂ. ಸಾಯಂಸಂಧ್ಯಾ]

**ಸಾಯಕ**$_1$ 'ಸಾಹ್ಯಕ' ನೋ.

**ಸಾಯಕ**$_2$ (ನಾ). ೧. ಬಾಣ; ಶರ : ತನ್ನಂಕದೊಂದುಗ್ರಸಾಯಕದಿಂ ನಾಯಕರಂ ಪಡಲ್ವಡಿಸುತುಂ ತಾಂ ತಂದನಂದಂಬೆಯಂಬಿಕೆಯಂಬಾಲೆಯರೆಂಬ ಬಾಲೆಯ[ರನೇಂ] ಭೀಷ್ಮಂ ಯಶೋಭಾಗಿಯೋ (ಪಂಪಭಾ. ೧-೭೪); ವರಗಾಂಗೇಯ ಚಾಪವ ಮಿಡಿದು ಬೆರಳಲಿ ಸಾಯಕವ ತೂಗುತ್ತ ತಡೆದನು ಪಾರ್ಥನುರವಣೆಯ (ಕುವ್ಯಾವಿ. ೮-೪೯). ೨. ಕತ್ತಿ ; ಖಡ್ಗ : "ಕರವಾಲ ಸಾಯಕಂ ರಿಷ್ಟಿ ಮಂಡಲಾಗ್ರಮೆನೆ ಖಡ್ಗಂ" (ವಸ್ತುಕೋ. ೮೪-೧೭). [ಸಂ.]

**ಸಾಯನ** (ನಾ). [ಜ್ಯೋತಿ] ಅಯನದ ಗತಿಯನ್ನು ಅನುಸರಿಸಿ ಗ್ರಹಗಳ ಸ್ಥಾನವನ್ನು ನಿರ್ದೇಶಿಸುವುದು : ಪ್ರತಿಯೊಂದು ನಕ್ಷತ್ರದ ಅವನಾಮಕೋನ, ಸವ್ಯಾರೋಹಣಗಳೂ ವರ್ಷ ವರ್ಷಕ್ಕೂ ಬದಲಿಸುತ್ತಿರುತ್ತವೆ. ಪಾಶ್ಚಾತ್ಯಖಗೋಳಜ್ಞರ ಈ ಪದ್ಧತಿಯನ್ನು ಸಾಯನಪದ್ಧತಿ ಎಂದು ನಮ್ಮವರು ಕರೆಯುತ್ತಾರೆ (ನಕ್ಷತ್ರ. ೬೫). [ಸಂ.]

**ಸಾಯರ್** 'ಸಾಯರು' ನೋ.

**ಸಾಯರ** 'ಸಾಯರು' ನೋ.

**ಸಾಯರಬಾಬು** 'ಸಾಯರುಬಾಬು' ನೋ.

**ಸಾಯರಯಿಲಾಖೆ** (ನಾ). ಕಂದಾಯ, ತೆರಿಗೆ ಮುಂತಾದುವುಗಳ ವಸೂಲಿಗೆ ಸಂಬಂಧಿಸಿದ ಆಡಳಿತಶಾಖೆ : ದವ್ಸ ಧಾನ್ಯವೇನಾದರು ತನ್ನುಕೊಳುವಲ್ಲು

ಸಾಯರರಯಿಲಾಖೆಯವರು ಸುಸ್ಕ ಬರಬೇಕೆಸ್ಸು ಅಡ್ಡಿ ಮಾಡದನ್ತೆ (ಮೈಅರಿ. ೧೯೩೦, ೪೩-೩೯; 1812). [ಸಾಯರ ( < ಸಾಯರು) + ಇಲಾಖೆ]

**ಸಾಯರು, ಸಾಯರ್, ಸಾಯರ** (ನಾ). ಸುಂಕ ; ಜಕಾತಿ : ಕೆಲವು ಡಿಸ್ಟ್ರಿಕ್ಟುಗಳಲ್ಲಿ ಸಾಯರು ಅಮಾನಿಯಾಗಿಯೂ ಇನ್ನು ಕೆಲವು ಡಿಸ್ಟ್ರಿಕ್ಟುಗಳಲ್ಲಿ ಷಿಕ್ಮಿಯಾಗಿಯೂ ನಡೆಯುತ್ತಿತ್ತು (ಚಾಮವಂ. ೩೩೩). **ಸಾಯರ್:** (ಶೈಸ್‌ಗ. II,೫೭೧). **ಸಾಯರ:** 'ಸಾಯರಬಾಬು', 'ಸಾಯರಯಿಲಾಖೆ' ಪರಾ.

[← ಅರ. ಸ್ಹಾಇರ್; ಹಿಂ. ಮರಾ. ಸಾಯರ್]

**ಸಾಯರುಬಾಬು, ಸಾಯರಬಾಬು** (ನಾ). ಸುಂಕ, ಜಕಾತಿ ಮುಂತಾದುವಕ್ಕೆ ಸಂಬಂಧಿಸಿದುದು : ಜಮೀನು ಮತ್ತು ಸಾಯರುಬಾಬುಗಳಲ್ಲಿ ಹಿಂದಿನ ಮಹಾಪ್ರಭುಗಳವರ ಕಾಲದಲ್ಲಿದ್ದಂತೆಯೇ ತೆರಿಗೆಯನ್ನು ದಾಖಲ್ಮಾಡಿದರು (ಮಹಾವಂ. II, ೩೦). **ಸಾಯರಬಾಬು :** ದೇಶದೊಳಗಿನ ಕೆಲವು ಸರಕುಗಳ ಮೇಲೆ ಎಕ್ಸಾಯಿಜ್ ಅಂದರೆ ಸಾಯರಬಾಬು ಎಂಬ ಜಕಾತಿಯನ್ನು ಅಥವಾ ಕರವನ್ನು ಕೂಡ್ರಿಸಿ ಅದನ್ನು ಎತ್ತಲಿಕ್ಕೂ ಯೋಚಿಸಿದನು (ಇಂಗ್ಲಂಡ. ೨೦೩). [← ಮರಾ. ಸಾಯರಬಾಬ್]

**ಸಾಯಸ** (ನಾ). ೧. ಕಷ್ಟ ; ತೊಂದರೆ : ಸತ್ಯವತೀನಂದನಂ ತನ್ನ ಮಕ್ಕಳ ಸಾಯಸಂಗಳ್ಗೆ ಮನ್ಮುಮಿಕ್ಕು ಕಣ್ಣ ನೀರಂ ನೆಗಪೆ (ಪಂಪಭಾ. ೭-೫೯ ವ). ೨. ಶ್ರಮ ; ಪ್ರಯತ್ನ : ಅನೇಕ ಸಾಯಸದಿಂದ ಗಳಿಸಿದಂತಹ ಧನವನು ಗುರುಲಿಂಗಜಂಗಮಕ್ಕೆ ವೆಚ್ಚಿಸಲೊಲ್ಲದೆ . . . ಮಿಱುಗುತ್ತಿಹನು (ಚನ್ನವ. ಕ. ೪೧೨-೮೭೦) ; ಕೃತಿ ಪೊಸತಾದಡೇನದಕೆ ಕುಂದೆ . . . ನೋಡಿ ಸತ್ಕವಿಪ್ರತತಿಗಳ್ಗದೆ ಮೆಚ್ಚುವುದು ಸಾಯಸಮಂ ನೆಱ ಬಲ್ಲ ಸೂರಿಗಳ್ (ನನ್ನಚಾ. ೧-೨೭) ; ಕಾಯಸುಖವನು ಬಯಸಿ ಧನವನು ಸಾಯಸದಲಾರ್ಜಿಸಿ ಮದಾಂಧರ ಗಾಯಕರ ಪಾತಕರ ಭಂಡರ ಬಯಕೆಗಳ ಬಯಸಿ (ಅಮೃತ. ೧-೩೨). ೩. ಶ್ರಮದ ಕೆಲಸ ; ಪರಿಶ್ರಮದ ಕೆಲಸ : ಸಾಯಸಕ್ಕೊಳಗಾಗಿ ರಕ್ಕಸ ನಾಯಕರು ಕಲಕೆಲರು ಬೆರಳನು ಬಾಯಲಿಟ್ಟರು ವಾನರಂಗಳ ಗಾಯದುರ ವಣೆಗೆ (ಕಾಶಿರಾ. ೨೦-೨೬). [< ಸಂ. ಸಾಯಾಸ]

**ಸಾಯಸಂಗೊಳ್, ಸಾಯಸಗೊಳ್, ಸಾಯಸಗೊಳ್ಳು** (ಕ್ರಿ). ೧. ಕಷ್ಟಪಡು ; ತೊಂದರೆಗೆ ಒಳಗಾಗು : ಮಾಯೆ ಸದ್ರೂಪಿಣಿಯದೀ ನಿಖಿಳಜಗವಾಗಿ ಸಾಯಸಂಗೊಳುತಮಿಹುದೆಂದೊಡೇನು (ಅನುಸಾ. ೧-೫-೩). ೨. ಆಯಾಸಕ್ಕೊಳಗಾಗು; ಬಳಲು : ಸಾಧಕಜನಂಗಳನ್ನಶಾಸ್ತ್ರಸಂಭ್ರಮಗಳಲ್ಲಿ ಸಾಯಸಂಗೊಳ್ಳದೆ (ಪರಮಾ. ೮೮). **ಸಾಯಸಗೊಳ್ :** ೨. ಕಂಪಿಲರಾಯಗೆ ತಲೆದೊಡ್ಡಾದನ್ನೀ ನೆಳತೋಳ ಕೊಡುವೆನೆ ನಿನಗೆ ಸಾಯಸಗೊಳಬೇಡ (ಕುಠಾಸಾಂ. ೩೪-೮೧); ಕಾಯಕವನು ಮಾಡಿ ಸಾಯಸಗೊಳಲೇಕೆ (ಅವುಬಸಾಂ. ೭-೫೯). **ಸಾಯಸಗೊಳ್ಳು :** ೧. ವಾಯುವ ಹಿಡಿದು ದಂಡವ ಕೊಂಡು ಸಾವರ ಹಿಡಿದು ಸಂಕದೋಲೆಯನಿಕ್ಕಿ ವಿಧಿಯಲ್ಲಿ ಸಾಯಸಗೊಳ್ಳದೆ . . . ಇವನೇನೆನ್ನದಿಪ್ಪುದೇ ಸರ್ವಜ್ಞಾನದ ಒಳಗು (ಮೋಳಿಮಾ. ೧೦೫-೪೧೮). [ಸಾಯಸ + ಕೊಳ್$_1$]

**ಸಾಯಸಗೊಳ್** 'ಸಾಯಸಂಗೊಳ್' ನೋ.

**ಸಾಯಸಗೊಳಿಸು** (ಕ್ರಿ). ಕಷ್ಟಕ್ಕೆ ಒಳಗಾಗಿಸು; ತೊಂದರೆಪಡಿಸು: ಕಬ್ಬ ಕಡಿದಡೆ ಖಂಡಿಸಿದಡೆ . . . ನಾನಾಪ್ರಕಾರದಲ್ಲಿ ಸಾಯಸಗೊಳಿಸಿದಡೆಯು ಮಿಗೆಮಿಗೆ ಮಧುರವಾಗಿಪ್ಪುದಲ್ಲದೆ ವಿಷವಾಗದು (ಚನ್ನವ.ಕ. ೧೨೮-೨೪೭).

[ಸಾಯಸಗೊಳ್ (< ಸಾಯಸಂಗೊಳ್) + - ಇಸು$_3$]

**ಸಾಯಸಗೊಳ್ಳು** 'ಸಾಯಸಂಗೊಳ್' ನೋ.

**ಸಾಯಸಪಡು** (ಕ್ರಿ). ಕಷ್ಟಪಡು; ತೊಂದರೆಗೊಳಗಾಗು : ಜೀಯ ಪರಾಕಿದು ಬೇಜೊಂದೋಯರದಿಂ ಬಂದು ವಂದಿಪರ್ ಕಿಱಿಯರಸರ್ ಸಾಯಸಪಡುವರ್ ಸಂತತಮಿಾಯಸಕಮನೆಳಸಿ ದಟ್ಟಗಟ್ಟುವರನಿಬರ್ (ಚಿಕವಿ. ೫-೫೮).

[ಸಾಯಸ + ಪಡು$_1$]

**ಸಾಯಸಿಗ** 'ಸಾಸಿಗ' ನೋ.

**ಸಾಯಾಹ್ನ** (ನಾ). ಸಂಜೆ ; ಸಾಯಂಕಾಲ : ಜೀವನದ ಸಾಯಾಹ್ನವು ಸ್ವರ್ಣವನ್ನು ಹುಡುಕಿಕೊಂಡು ಶೀತವಾಗಿ ಬಿಟ್ಟಿದೆ (ನಿಬಂಧ. II, ೧೬೦). [ಸಂ.]

**ಸಾಯಾಳು** (ನಾ). ಸಹಾಯಕ್ಕಾಗಿ ಇರುವ ಮನುಷ್ಯ ; ರಕ್ಷಣೆಯನ್ನು ನೋಡಿಕೊಳ್ಳುವ ಯೋಧ : ಆಳ ಮೇಳಿಯ ಮುರಿದುದೀ ಸಾಯಾಳು ಸತ್ತುದು ಹಲವು ಪಡಿಬಲದಾಳು ಕೂಡದ ಮುನ್ನ ಕೊಂದನು ಕೋಟಿಸಂಖ್ಯೆಗಳ (ಕುಮ್ಮಾಕ. ೧೩-೧೫). [ಸಾಯ್$_1$ (< ಸಾಹ್ಯ) + ಆಳು$_3$ (< ಆಳ್$_3$)]

**ಸಾಯಿ$_1$** 'ಸಾ' ನೋ.

**ಸಾಯಿ$_2$** (ನಾ). ನೆರವಾಗುವವಳು; ಸಹಾಯಮಾಡುವವಳು: ಶಮಂಗೆ ಪ್ರೀತಿ ಕಾಮಂಗೆ ರತಿ ಹರುಷಂಗೆ ಆನಂದಿನಿಯೆರೆಂಬ ಸ್ತ್ರೀಯರುಗಳು. ಅವರು ಜಗತ್ತಿನ ಧರ್ಮಂಗಳಿಗೆ ಸಾಯಿಗಳಾಗಿರ್ಕುಂ (ಭೈರಸೂ. I, ೧೫). [ಸಾಯ್$_1$ (< ಸಾಹ್ಯ) + - ಇ$_2$]

**ಸಾಯಿ$_3$** 'ಸಾಮಿ$_1$' ನೋ.

**ಸಾಯಿ$_4$** (ನಾ). ಹಾಲು, ಮೊಸರು ಮುಂತಾದುವುಗಳ ಕೆನೆ : (ಶ).

[← ಮರಾ. ಸಾಯ]

**ಸಾಯಿಗುತ್ತ** (ನಾ). ಮರಣಾಂತಿಕವಾದ ರೋಗ : ಆಶ್ಲೇಷೆಯೊಳು ಮೈನೆರೆದಡಾ ಪುತ್ರನಾಸ್ತಿಯು . . . ಸ್ವಾತಿಯೊಳು ಕಡುಚಪಳೆ ಸಾಯಿಗುತ್ತವನುಳ್ಳಳ್ಕೆ ತಿಳಿ (ವೀಶೈಪು. ೪-೨೦-೧೮). [ಸಾಯಿ$_1$ (< ಸಾ) + ಕುತ್ತ]

**ಸಾಯಿತ್ಯ, ಸಾಹಿತಿಯ** (ನಾ). ೧. ಸಲಕರಣೆ ; ಸಾಮಗ್ರಿ : ಮಾನ್ಯದ XXX ಉಭಯ ಸಾಯಿತ್ಯಕೆ ಮಧುಲಿಂಗಸ್ವಾಮಿಗೆ ನಡಸುವ ಸೇವೆ (ಸೌಇಇ. XX, ೨೫೩-೩೭ ; 1598). **ಸಾಹಿತಿಯ:** ೨. ಕಾವ್ಯ, ನಾಟಕ ಮುಂತಾದ ರಚನೆ : ಮುನ್ನಿಲ್ಲದ ಸಾಹಿತಿಯೆಳಿಗನ್ನದೊಳಂದೊಗೆದ ಮುನಿಯಿನುಣ್ಮಿದ ತೆಱದಿಂ ಮುನ್ನಿಲ್ಲದ ಸಂಗೀತಮುಮಿನ್ನೆಗಮಿಾ ಚಿಕ್ಕದೇವನಿಂ ನೆಗೞ್ದುದು ದಲ್ (ಚಿಕವಿ. ೪-೧೩೦).

[< ಸಂ. ಸಾಹಿತ್ಯ]

**ಸಾಯಿಬ್ಬೆ** (ನಾ). ಒಬ್ಬಾಕೆಯ ಹೆಸರು : ಮಲದ ಕುಮಾರಣನ್ನಿಭಟಾರರ ಸಿಷಿತ್ತಿಯರ್ ಸಾಯಿಬ್ಬೆಕನ್ತಿಯರ XXX (ಎಕ II, ೧೩೬-೬ ; ಸು. 950).

[P ಇದು 'ಸಾಮಿಯಬ್ಬೆ' ಎಂಬುದರ ಅಪಲಿಖಿತ]

**ಸಾಯಿರ** 'ಸಾಸಿರ' ನೋ.

**ಸಾಯಿರಗಯ್ಯ** 'ಸಾಸಿರ್ಗೈಯ' ನೋ.

**ಸಾಯಿಲ** (ನಾ). ಒಂದು ವಂಶದ ಹೆಸರು : ಸಾಯಿಲರ ಕೋಜಯ್ಯ ಕೊಟರರ ಅಳಿಯ ಸಿರಿ ಮೇಜ ತುಱುವಾನ್ನಿಕ್ಕಿಸಿ ಕಾದಿ ಸತ್ತ (ಎಕ. X, ಶಿದ್ಲಘ. ೫೯-೪. ಸು. 900).

[?]

**ಸಾಯಿಸು, ಸಾಸಿಸು** (ಕ್ರಿ). ಸಾಯುವಂತೆ ಮಾಡು; ಕೊಲ್ಲು : ಒಂದು ಹೆಂಡತಿಯನ್ನು ಸಾಯಿಸಿ ಎರಡನೆಯ ಮದುವೆಯಾಗಿ ಸುಖಪಡುವುದು ಅಷ್ಟು ಸುಲಭವೆ? (ಪದ್ಮಸ. ೧೪೭). **ಸಾಸಿಸು :** ನೇಸಱನೊಳದಂದೆನ್ನಂ ಸಾಸಿಸುವಂ ಸುರಪಸೂನು ವಲ್ಲದೊಡಱವಂ (ನೇಮಿಪು. ೧೨-೭೩). [ಸಾಯು (< ಸಾ) + - ಇಸು$_1$]

**ಸಾಯು** 'ಸಾ' ನೋ.

**ಸಾಯುಜ್ಯ** (ನಾ). ೧. ಅನ್ಯೋನ್ಯಸಂಯೋಗ ; ಏಕತೆ : ಪ್ರಳಯತಿಮಿರದ ಬೀಜ ನೀಲಾಚಳದ ಸಾಯುಜ್ಯವೊ ನಭೋಮಂಡಲದೊಳದನೇವೊಗಳುವೆನು ಮಸಗಿತು ತಮಸ್ತೋಮ (ಕುಮ್ಮಾದ್ರೋ. ೧೫-೨೮); ತನ್ನೊಂದು ಜೀವಿತಕೆ ರಾಜಪುತ್ರಿಯೆ ಸರ್ವ ಸುಖಮಾಗೆ . . . ಮರೆತಳು ತನ್ನನುಂ ತಾನೆ, ಕೈಕೆಯೊಳ್ ಸಾಯುಜ್ಯ ಪೊಂದಿ (ಶ್ರೀರಾಮಾ. ೨೪-೬೨೭). ೨. [ತತ್ತ್ವಶಾ] ನಾಲ್ಕು ಬಗೆಯ ಮೋಕ್ಷಗತಿಗಳಲ್ಲಿ ನಾಲ್ಕನೆಯದು ; ಮುಕ್ತಜೀವನು ಪರಮಾತ್ಮನಲ್ಲಿ ಲೀನವಾಗುವುದು : ಕರ್ತರು ನಿಮ್ಮ ಗಣಂಗಳು ಎನ್ನ ತೊತ್ತುಮಾಡಿ ಸಲಹಿದ ಸುಖವು ಸಾಲೋಕ್ಯ ಸಾಮಿಪ್ಯ ಸಾರೂಪ್ಯ ಸಾಯುಜ್ಯದಂತುಟಲ್ಲಾ (ಬಸವ. ೪೭೪) ; ಸಾಯುಜ್ಯದ ನಿಲವಿನಂತೆ ಶಿವನ ಸುಖದಂತೆ . . . ಬೆಳಬೆಳಗಿ ನಳನಳಿಸಿ ಬಳೆಯುತಿರ್ದಳ್ (ಗಿಂಕ. ೩-೬೯ ವ). [ಸಂ.]

**ಸಾಯುಜ್ಯಪದ** (ನಾ). = ಸಾಯುಜ್ಯ ೨ : ಅಯ್ಯಾ ನಿಮ್ಮ ಪುರಾತನರ ಜ್ಞಾನಾನುಭವಸಮರಸಾನಂದವೇ ಎನಗೆ ಸಾಯುಜ್ಯಪದವಯ್ಯಾ (ಉರಿಪ.. ಕ. ೧೭೩-೨೩೩). [ಸಂ.]

**ಸಾಯುಜ್ಯಪದವಿ** (ನಾ). = ಸಾಯುಜ್ಯ ೨ : ರಕ್ಕಸಿಯ ಮನೆಯಲ್ಲು

ಭೋಜನವುಂಡು ತೃಪ್ತಿಯಾಯಿತ್ತೆಂದು ಬೆಸಗೊಂಡರೆ ಹೇಳಿಹೆನು ನೀರ ಕೈಯಲು ಕಿಚ್ಚ ಬಯ್ಕೆಯ ಕೊಟ್ಟಂತೆ ಸಾಯುಜ್ಯಪದವಿಯನವರತ್ತ ಬಲ್ಲರು (ಬಸವ. ೯೨೧) ; ಮದನರಿಪುವಂ ಕುಱಿತು ಮೆಚ್ಚಿಸಿ ಪದುಳದಿಂ ಸಾಯುಜ್ಯಪದವಿಯೊಳೊದಗಿ ಪಡೆದನು ನಿಮಿಷದಲಿ ಶಿವಭಕ್ತರಂತಾಗಿ (ಬಸಪು. ೫೩-೫೪) ; ಪರಮಾನಂದಪದದೊಳಗಾಳಿ ನಿಜಸಾಯುಜ್ಯಪದವಿಯ ಪಡೆದು ಸುಖಿಯಹುದು (ಅಮೃತ. ೧-೮). [ಸಂ.]

**ಸಾಯ್ಯುಗ್ಗದುರೆ** 'ಸಾಗುದುರೆ' ನೋ.

**ಸಾರ್$_1$, ಸಾರು$_1$** (ಕ್ರಿ). ಸಾರ್ದ (ಭೂತಕೃ), ಸಾರ್ದು (ಭೂತನ್ಯೂ), ಸಾರ್ವ$_1$ (ಭವಿಕೃ). ೧. (ಹತ್ತಿರಕ್ಕೆ) ಬರು ; ಸಮೀಪಿಸು: ಬಾಯ ಕಂಪಿಂಗೆ ಸಾರ್ವಳಿಪ್ರಕರಮುಂದು ಸೀಗುಡಿವೊಲಾಗೆ (ಪಂಪಭಾ. ೪-೮೯); ಈ ಗುಹೆಯತ್ತ ಸಾರದಂತಿರಲಿವನಂ ನಿವಾರಿಸು (ಕಾದಂಬ. ೫೫೭); ಜೋಡೆಯ ಬಂಡರ ಸಾರ್ದ ನೆತ್ತ ಗಾಱರ ಚದುರಂಗಕಾಱರೊರೆಗಾಱರ ಬಾಜಿಪ ಬೀಣೆಗಾಱರಾಗರಮನೆ ಪೆಂಪುಸೊಂಪ ನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್ (ಕಬ್ಬಿಗಾ. ೪೨). ೨. (ಹತ್ತಿರಕ್ಕೆ) ಹೋಗು; ತೆರಳು: ಶ್ರೀಮತಿವೆರಸಾಗಳತಿಪ್ರೇಮದೆ ಮುನಿಯುಗಳನಿಕಟಮಂ ಸಾರ್ದು (ಆದಿಪು. ೫-೧) ; ಸುಣ್ಣದಂತೆ ತೀವ್ರಮಪ್ಪ ಕತ್ತರಿವಾಳೆಯಂತೆ ಸಾರಲರಿದಪ್ಪ . . . ಸಂಸಾರಮಂ ನಂಬಿ (ಧರ್ಮಾಮೃ. ೩-೧೮೬). ೩. ಹತ್ತಿರದಲ್ಲಿರು; ಬಳಿಯಲ್ಲಿರು : ಅದ[ಱಾ] ಕ್ರಿಯೆ ಸಾರ್ದಿರೆ ಪತ್ತಿ ಮುಂದೆ ಸಯ್ಯುಕ್ಕುಮನುಕ್ರಮಾನುಗತದಿಂ ಬರಮಾಗೆಮಗೆಂಬ ಕಾರಕಂ ಸಕ್ಕದವೇನೊ (ಕವಿರಾ. ೧-೧೧೭). ೪. ಸೇರು ; ತಲುಪು ; ಮುಟ್ಟು : ಅಮ್ಮ ನೀನುಂ ತಪೋವನಮಂ ಸಾರ್ವುದಮಾನದಾರ್ಗೆ ಮೞೆವೆಂ ಮತ್ತಾಜ್ಯಸಾಮ್ರಾಜ್ಯಮಂ (ಆದಿಪು. ೧೪-೧೩೨) ; ತೋಱೆಯಿಂದು ಸಾರೆ ಮಾಯದ ತೋಱೆಗಳ್ಕಾಯ್ಪಣ್ಣೆಯಾಗಿ ಪತ್ತಿ ಸುಡಲ್ (ಧರ್ಮಾಮೃ. ೩-೮೩) ; ಮುನಿಪನುತ್ತರದಲಗು ಬೆನ್ನಲಿ ಮೂಡಿದುದು ಹೆಡತಲೆಗೆ ಸಾರ್ದುದು ಜಿಹ್ವೆ ಕಳವಳಿಸಿದವು ಕರಣಚಯ (ತೊರರಾ. ೧-೯-೨೮). ೫. ಸರಿ; ಜರುಗು: ಬಿಸಿಲೊಳ್ ನಿಂದೊಡೆ ನೆಟಲತ್ತ ಸಾರಿಮೆಂದೆಂದುಮೞಿವನಲ್ಲಂ ನಮ್ಮಂ (ಸುಕುಮಾ. ೨-೬೫). ೬. ಮುಂದಕ್ಕೆ ಸಾಗು, — ನಡೆ: ಮುಂದಣ ಮೃಗವಂ ಕಣ್ದೋರ್ಕೆಂದು ಕೊರಲ್ಕೊಂಡ ಗೀತರವದಿಂ ತಾವುಂ ಪೊಂದುವುವು ಸಾರ್ದ ಮೃಗಚಯಂ (ಧರ್ಮಾಮೃ. ೫-೨೩) ; ಅಭವನಂ ಬೀಳ್ಕೊಂಡು ಸಾರ್ದು ಹರವರಿಯ ಹರುಷಾಂಭೋಧಿಯೊಳಕೊಂಡು ಪೊಱಮಟ್ಟನಚ್ಚ ಶಿವಲಿಂಗಾರ್ಚಕಂ (ತಿರುರ. ದೇ. ೬-೪); ಪಿಶಿತಭೋಜನದಲ್ಲಿಗೆ ನಿಲ್ಲದೆಕ್ಕೆಯಿಂ ಸಾರ್ವ ನಿಶಾಚರೀಜನಮಂ . . . ಈಕ್ಷಿಸಿದಂ ಪ್ರತಿರೂಪಶೂದ್ರಕಂ (ಕಾವ್ಯಸಾ. ೫೩೪). ೭. ಬೆರೆ ; ಒಂದುಗೂಡು : ಕೆಲರೊಡವಂದಾದುದಯದೊಳೆ ಸಾರ್ವರ್ ಎಡರೊಳಗಲ್ವರ್ (ಕಾವ್ಯಸಾ. ೮೯ ಶೂದ್ರಕ). ೮. ಲಭಿಸು ; ಪ್ರಾಪ್ತವಾಗು : ನಮಗೆ ಪಾರಣೆಯಂ ಮಾಟ್ಪುಗಳ್ ಯಥಾಕರ್ಮದ ದೋಷಮಂ ಸಾರ್ತರ್ಕುಂ (ವಡ್ಡಾರಾ. ೧೧೩-೨೧) ; ಪ್ರತಿಸೂರ್ಯಂ ಸೂರ್ಯನಿಂದಂ ಬಡಗಲೊಗೆಯೆ ವೃಷ್ಟಿಪ್ರದಂ ತೆಂಕಲಾದಂದು ತಗುಳ್ಗುಂ ಗಾಳಿ ಸಾರ್ದಿರ್ಕೆಲದೊಳೊಗೆಯೆ ಕೊಳ್ಗುಂ ಮಹಾವೃಷ್ಟಿ (ಲೋಕೋಪ. ೪-೩೭) ; ಮೂಱು ಕೋಟಿ ಕವಿಲೆ[ಗ]ಳುಮನನಿಬರುಬ್ರಾಹ್ಮಣರು ಮನಳಿದನಿಸು ಪಾಪಂ ಸಾರ್ಗ್ಗುಂ (ಸೌಇಇ. XI-i, ೧೧೩-೧೧; 1070). ೯. ಪಡೆ ; ಹೊಂದು : ಗಿರಿರಾಜನ ಸಂಗಸುಖಮಂ ಸಾರ್ದು ಮಂಗಳಾಕಾರೆಯಾಗಿರೆ (ಗಿಂಕ. ೧, ಕಥಾಗರ್ಭಂ). ೧೦. ಆಶ್ರಯಿಸು : ಅರಸರ ದೆಸೆಯಿಂ ಮನೆಯುಂ ಕವರ್ತೆವೋಪುದುಂ ಪೆಱರ ಕೀಲಿಲೊಳಿಮ್ಮಬ್ಬೆಯುಂ ಮುತ್ತಬ್ಬೆಯುಂ ಸಾರ್ದು ಬದುಗುಗೆಯ್ದುಣೆ (ಆದಿಪು. ೩-೩೪ ವ) ; ಸಂಗರದೊಳ್ಪಾಂಡವರಂ ಗೆಲಲ್ಕೆಱೆಯನಿನ್ನೇಕಾಕಿ ದುರ್ಯೋಧನಂ ಸೆರಗಂ ಸಾರ್ದಪನೆಂಗುಮಿಾ ಧರೆ (ಗದಾಯು. ೩-೪೭). **ಸಾರು$_1$**: ೧. ಆರಿಗಱುಪುವೆನು ಹೇಳೆಲೆ ಮಗನೆ ಸಾರಿನ್ನಳಲದಿರೆನ್ನೆಲೆ ಮಗನೆ (ಹಚಕಾ. ೧೨-೩೦ ರಗಳೆ); ಸಾರಿ ಕೈಗೊಡುವದಟರನು ಕಣ್ಗೋರೆಯಲಿ ಕೋಪಿಸುತ ತನ್ನಯ ತೇರನಿಳಿದನು ಪಾರ್ಥನಸುರಾರಿಯ ನಿರೂಪದಲಿ (ಕುವ್ಯಾದ್ರೋ. ೮-೧೨). ೪. ದ್ಯುಮಣಿ ಪಡುವಣ ಕಡಲ ಸಾರುವ ಸಮಯವಾಯಿತ್ತು (ಕುವ್ಯಾಕ. ೪-೩೪); ಚೆಂದದೆ ಬಳಕಿರುತಿರೆ ದಿನನಾಯಕನಂದು ಸಾರಿದನಸ್ತಗಿರಿಯ (ಕಂನವಿ. ೯-೧೬೪). ೬. ಅಮರದಿಶಾಂಗನೆಯ ಸಾರಿದನು ರವಿ (ತೊರರಾ. ೭-೨೮-೭೮). ೮. ಕಲ್ಲಿನೊಳಗಣ ಅಪ್ಪು ದಳ್ಳುರಿಯಲ್ಲಿಪ್ಪುದೇ ಹಿಳಿದಡೆ ಸಾರದು (ಮೋಳಿಮಾ. ೧೦೬-೪೫೪); ಪುಣ್ಯದಿಂ ಸಾರಿತ್ತು ನಮಗಚಲಸಂಪದಂ (ನಂಬಿರ. ೩-೨೫); ವಾರಿಜಾಕ್ಷನ ಭೃತ್ಯರಿಗೆ ಭಯ ಸಾರುವುದೆ (ತೊರರಾ. ೬-೨೨-೬). ೧೦. ಗಗನದೊಳು ಬಟ್ಟೆಯಂ ನಡೆದು ಬೆಂಡಾದ ಖಚರರು ಸಾರಲೆಂದಿಟ್ಟ ಭದ್ರಂಗಳೋ (ಹಚಕಾ. ೧-೩೭) ; ಆರಿಗೋಱಲುವೆನಾರ ಸಾರುವೆನಾರು ತನ್ನನು ಸಲಹುವರು (ಕುವ್ಯಾಅ. ೬೧೪. ೨೬-೩೪); ಮೂಱುಜನ್ಮವೆ ಸಾಕು ಹಗೆತನದಿಂದ ಬೇಗದಲಿ ಸಾರುವೆವು ನಿಮ್ಮಡಿಯ ಸಿರಿಚರಣಾರವಿಂದವನು (ತೊರರಾ. ೧-೮-೨೧); ಬಿಸಿಲಿಂದೆ ಭಟರು ಪೆರ್ಮರಗಿಡನೆಳಲ ಸಾರಿದರು (ಮೋಹತ. ೧೯-೪೯). ೧೧. ದೂರ ಸರಿ ; ದೂರ ಹೋಗು : ಆರು ನೀನೆನ್ನಿನಿಯನಲ್ಲ ಬಿಡು ಸಾರು (ಹಚಕಾ. ೨೧೦ ಪ) ; ಸದೆಗ ನೀ ಸಾರೆಲವೊ ಭಾರಿಯ ಮದಗಜದ ಬಡಿಹೋರಿ (ಕುವ್ಯಾಕ. ೨-೧೮). ೧೨. ಅಡಗು ; ಮರೆಯಾಗು : ವಿಮಲನೀರಿನೊಳು ಶಿಖಿಯಿರ್ದು ಆರಿಗೂ ತೋಱದದಂತೆ ಎನ್ನೊಳಗೆ ಸಾರಿಹನು ಶಿವನು (ಸರ್ವಜ್ಞ. ೩೨೮).

**ಸಾರ್ಸಾರ್, ಸಾರುಸಾರು** (ದ್ವಿರುಕ್ತಿ) : ಸಾರೆಸಾರೆ ತನುವಂ ತತ್ಕುಂಜಸಂಜಾತ ಭೂಜಗಳತ್ಪುಷ್ಪಪರಾಗ ಸೌರಭವಹನ್ಮಂದಾನಿಲಂ ಸೋಂಕೆ (ಆದಿಪು. ೧೩-೧೦); ಕುಳಿರುತ್ತಂ ಸುತ್ತಲುಂ ಕತ್ತಲಿಪ ತರುತಲಚ್ಛಾಯೆಯಂ ಸಾರ್ದುಸಾರ್ದುತ್ಪಲ ಗಂಧೋದ್ಗಾರಿ ಪಂಪಾಸರದ ಸಲಿಲಮಂ ಪೀರ್ದುಪೀರ್ದು . . . ತರುತಲಸ್ಕಂದದೊಳ್ ನಿಂದೆನಾಗಳ್ (ಕಾದಂಬ. ೭೩೪); ಸಾರುಸಾರಭಿಮನ್ಯು ಫಡ ಇನ್ನಾರ ಬಸುಱನು ಹೊಗುವೆ (ಕುವ್ಯಾದ್ರೋ. ೫-೫೨). [ದೇ. ॥ ತಮಿ. ಚಾರ್; ಮಲ. ಚಾರು]

**ಸಾರ್$_2$** (ನಾ). ಸಮೀಪ ; ಹತ್ತಿರ ; ಸಾನ್ನಿಧ್ಯ : ಜನಿತಮುದಶ್ರುಮಿಶ್ರನಯನದ್ವಿತಯಂ ನರನಾಥ ಚಕ್ರಿ ಸದ್ವಿನಯದೆ ಸಾರ್ಗೆ ವಂದು ಮುನಿಸೇವ್ಯಸುಧರ್ಮಮುನೀಶ್ವರಾಂಘ್ರಿ ಪಾವನವನಜಕ್ಕೆ ತಾನೆಱಗಿದಂ (ಕುಸುಮಾ. ೪-೧೧೧) ; ಇನ್ನಿದಾಯ್ತೆನ್ನ ಕಾರ್ಯವೆನುತ್ತುಂ ಕುಸುಮಾವಳೀಸತಿಯ ಸಾರ್ಗೆಯ್ತಂದೆನೌತ್ಸುಕ್ಯದಿಂ (ಕುಸುಮಾ. ೧೨-೧೭೦).

**ಸಾರಣ್** = ಹತ್ತಿರ ; ಸಮೀಪ : ತನಗೆ ಕರುಣಾರಸಂ ಸಂಜನಿಯಿಸೆ ಸಾರಣ್ಗೆ ಕರೆದು ಕುಳ್ಳಿರಿಸಿ ಲತಾತನು ಕಣ್ಣನೀಯಂ ತೊಡೆದಳ್ (ಪಂರಾಮಾ. ೯-೩೮) ; ಪಿರಿದು ದಿನಮಾಯ್ತು ಬಂದೆಮ್ಮರಸನ ಸಾರಣ್ಗೆ ಪೋಗವೇಟ್ಟುದು (ದಶಕು. ೨-೮೩).

[< ಸಾರ್$_1$]

**ಸಾರ್$_3$** 'ಸರ್$_2$' ನೋ.

**ಸಾರ$_1$, ಸಾರು$_4$** (ನಾ). ೧. ಸಣ್ಣ ತೊರೆ, ಹಳ್ಳ ಮುಂತಾದುವನ್ನು ದಾಟಲು ಹಾಕುವ ಮರದ ಅಡ್ಡಗಟ್ಟೆ ; ಸಂಕ ; ಪೂಲು : ಸಾರ ಪರಿಕಾಲ್ವಳನೊಯ್ಯನೆ ದಾಂಟಿ (ಮಲ್ಲಿಪು. ೨-೨೮) ; ಮುಕ್ಕುಱಕಿ ಧರ್ಮಜ ನಕುಲ ಸಾತ್ಯಕಿ ಭೀಮನಂದನರು ಸರಳ ಸಾರವ ಕಟ್ಟಿದರು (ಕುವ್ಯಾದ್ರೋ. ೩-೩೧) ; ಅಷ್ಟು ದೊಡ್ಡ ಹೊಳೆಗೆ ಸಾರ ಹಾಕಲಿಕ್ಕೆ ಅದೇನು ಹಳ್ಳವೆ? (ಮಲೆಮ. ೭೦೮). ೨. ಸೋಪಾನ ; ಮೆಟ್ಟಿಲು : ಸುರನಿಲಯಂಗಳೀಶನ ದಿನೇಶನ ಪಾದಯುಗಕ್ಕೆ ಭಕ್ತರಪ್ಪರ[ನ]ವರಿಪ್ಪ ಶಾಶ್ವತ ಪದಕ್ಕಡರ್ದೇಱಿಸಲೆಂದು ಸಾರಮಾಗಿರೆ ಬಿದಿ ಕಟ್ಟಿದೊಂದು ಪಥಮೆಂಬವೊಲಂ ಬರಮಂ ತಱುಂಬಿ ಭಾಸುರತರಶಾತಕುಂಭಕಳಶಂಗಳನೊಪ್ಪುಗುಮೆನ್ನು ನೋರ್ಪ್ಪಡ (ಎಇ. XVIII, ೧೯೧-೨೩; 1104). ೩. ಹಿಂದಿನ ಕಾಲದ ಯುದ್ಧಗಳಲ್ಲಿ ಕೋಟೆಯನ್ನು ಏರಲು ಬಳಸುತ್ತಿದ್ದ (ಸೋಪಾನದಂಥ) ಒಂದು ಬಗೆಯ ಸಾಧನ : ಸಾರ ಎನ್ನುವುದು ಕೋಟೆಯನ್ನು ಹತ್ತುವುದಕ್ಕೆ ಶತ್ರುಗಳು ಬಳಸಿ ಕೊಳ್ಳುತ್ತಿದ್ದ ಸಾಧನ (ಕಶಾಅ. ೨೮೭). 'ನಡೆಸಾರ$_2$,' 'ಸಾರಮಾರಿ' ಪರಾ. **ಸಾರು$_4$**: ೨. ಬಸುವ ಆ 'ಸಾರು'ಗಳ ಮೇಲೆ ಕುಳಿತೇ ಇದ್ದ (ಬಸಿ. ೭೭). [ದೇ. ॥ ತಮಿ. ಚಾರ]

**ಸಾರ$_2$** (ಗು). ೧. ಅತ್ಯುತ್ಕೃಷ್ಟವಾದ; ಶ್ರೇಷ್ಠವಾದ : ಸಾರಸಹಕಾರಧಾರಾಸಾರಂ ಕೊಳದಟವೆಯಂತೆ ಸುರಿತರೆ ಪಲವುಂ ಧಾರಾಗೃಹಂಗಳತನುವಿಕಾರಮನೊದವಿಪುದು ದೇವದಂಪತಿಗದಱೊಳ್ (ಆದಿಪು. ೬-೯೫) ; ಸಾರಪ್ರಸನ್ನತರಗಂಭೀರಗುಣಾಧಾರಪದ ದೊಳಿರ್ಪಂದದೆ ಶೃಂಗಾರಾದಿ ರಸಸಮೃದ್ಧಿ ವಿಚಾರಿಪೊಡುತ್ತಾನಪದದೊಳಿರಲರಿದಪುದೇ (ಪಾರ್ಶ್ವಪು. ೧-೭೩). (ನಾ). ೨. ವಸ್ತು, ವಿಷಯ ಮುಂತಾದುವುಗಳ ಸಾರವತ್ತಾದ ಭಾಗ ; ಸತ್ತ್ವ ; ತಿರುಳು : ಜೋಯಿಸಗಬ್ಬಮಿದೆನ್ನದೆ ಚೀಯೆನ್ನದೆ ಸಾರಮೆನ್ನರೆನ್ನರುಮದಱಿಂ ಜೀಯೆನೆ ತಜ್ಞರ್ ವಿಬುಧಾದೇಯಮಿದೆನೆ ಪೇಟ್ಟು

ಮೞ್ವುದಱಿವಂ ಮೞ್ವೆಂ (ಜಾತತಿ. ೧-೧೩) ; ಇದು ಪುರಾಣದ ಸಾರವಿದು ಶ್ರುತಿ ಸ್ಮೃತಿಯುಳುಮೆಯಿದು ಶಿವಾಗಮದೊಂದು ಗೂಢಾರ್ಥವು (ಸಾನಂಚ. ೧-೨೫); ಪತಿಯ ಪಾದಾಂಬುಜದೊಳ್ ಭಕ್ತಿಗೈವುದು ಸತಿಯರ ಧರ್ಮದ ಸಾರ (ಹದಿಬ. ೩-೪). ೩. ರಸದಿಂದ ಕೂಡಿರುವಂಥದು: ಸಾರಮನಂಗಜಂಗಮಲತಾಲಲಿತಾಂಗಿಯ ರಿಂದಮಲ್ತೆ ಸಂಸಾರಂ (ಪಂಪಭಾ. ೧-೧೧೪). ೪. ಶಕ್ತಿಯುತವಾದುದು; ಸಮರ್ಥವಾದುದು: ಸಾರಂಗಳ್ ನಿನ್ನ ಶರಾಸಾರಂಗಳಸಾರಮುಱಿದ ಕೆಯ್ದುಗಳೆಂತುಂ (ಪಂಪಭಾ. ೧೨-೪೬) ೫. ಔಚಿತ್ಯ; ಯುಕ್ತತೆ. ೬. ಸತ್ತ್ವವುಳ್ಳವನು; ಸಮರ್ಥ : ತೋಱುತಿದೆ ಚಿತ್ರದಲಿ ಮಿಕ್ಕಿನ ಮೂಱುಮಕ್ಕಳಿಗಿಂತ ರಾಮನೆ ಸಾರ [ಪಾಠಾಂ. ನೀಱ, ವೀರ]ನೀ ಸಾಮ್ರಾಜ್ಯಸತಿಗೆಂದವನಿಪತಿ ನುಡಿದ (ತೊರರಾ. ೨-೧-೬). ೭. ಮೂಳೆಯ ಪೊಳ್ಳುಭಾಗದಲ್ಲಿರುವ ಮೆತ್ತನೆಯ ಪದಾರ್ಥ; ನೆಣ. ೮. ಗಿಡಮರಗಳ ಕಾಂಡದ ಮಧ್ಯದಲ್ಲಿರುವ ತಿರುಳು; ಕೆಚ್ಚು : "ಮಜ್ಜಾ, ಸಾರಃ – ಈ ೨ ಮರದ ಕೆಚ್ಚು" (ಹಲಾಯು. ೩೦-೩೯). ೯. ಸಸ್ಯಗಳಿಗೆ ಶಕ್ತಿಯನ್ನು ಕೊಡುವ ಪದಾರ್ಥ; ಗೊಬ್ಬರ : ಒಂದಿಷ್ಟು ತರಕಾರಿ ಬೆಳೆಯಿಸಬೇಕು. ಅವನ್ನು ನಡುವುದು, ನೀರೆರೆಯುವುದು, ಸಾರ ಹಾಕುವುದು (ಮುಗಿಯು. ೩೬೧). ೧೦. ಮಕರಂದ ; ಬಂಡು. ೧೧. ಕೀವು; ರಸಿಕೆ. ೧೨. ವೀರ್ಯ; ರೇತಸ್ಸು. ೧೩. ಶೌರ್ಯ; ಪರಾಕ್ರಮ. ೧೪. ನೈಪುಣ್ಯ; ಚಾಕಚಕ್ಯತೆ : 'ಲವಣಸಾರ' ಪರಾ. ೧೫. ದೃಢತೆ. ೧೬. ಸಿರಿ; ಸಂಪತ್ತು. ೧೭. ಅಭಿಪ್ರಾಯ; ತಾತ್ಪರ್ಯ. ೧೮. ನೀರು; ಜಲ. ೧೯. ಮಳೆ; ವೃಷ್ಟಿ: ಸಮ್ಮುಖದೊಳವಗಡಿಸುವಿಭಕೋಟಗಳ ಕೊಂದನು ಸರಳ ಸಾರದಲಿ (ಕುವ್ಯಾದ್ರೋ. ೫-೬) ; ಬೊಬ್ಬಱಿದು ಮಾತಾಡು ನೀನೇ ಮಹೇಶ ನೆಂಬಾತನೆಂದೆನುತಲನುಮಾನಮಿಲ್ಲದೆ ಸರಳ ಸಾರಮಂ ಕಱೆದನದನೇನೆಂಬೆನಚ್ಚರಿ ಯನು (ಚಬಪು. ೨೬-೩೫). ೨೦. ಅದೇ ತಾನೆ ಕಡೆದ ಬೆಣ್ಣೆ; ನವನೀತ. ೨೧. ಒಂದು ಬಗೆಯ ಲೋಹ; ಉಕ್ಕು. ೨೨. ಶಕ್ತಿ; ಕಸುವು : ಇನ್ನು ಆ ಹಳೆಯ ಎಕ್ಕಡವನ್ನು ಯಾರು ನೋಡಿಕೊಳ್ಳುವರು . . . ಅದರ ಸಾರ ವಯಸ್ಸೂ ಕಳೆದು ಹೋಗುತ್ತ ಬಂದಿದೆ (ಪಂಯಾತ್ರ. ೪೮). ೨೩. ಇಂಗಾಲಾಮ್ಲ ಅನಿಲವನ್ನು ಹುದುಗಿಸಿ, ನೊರೆಯುಕ್ಕುವಂತೆ ಮಾಡಿದ ಪಾನೀಯ(ಸೋಡಾ)ದಲ್ಲಿನ ಅಶುದ್ಧ ಇಂಗಾಲಾಮ್ಲಲವಣ. ೨೪. ಮೀನು. ೨೫. ರೋಗ ; ವ್ಯಾಧಿ. ೨೬. ಸ್ಥಿರವಾದುದು. ೨೭. ಕ್ಲೇಶ; ಸಂಕಟ : "ಸ್ಥಿರ ದುಃಖಂ ವಸ್ತು ಶೌರ್ಯಂ ಜಲಚರ ಮಲ ಕೆಚ್ಚಿಂದ್ರಿಯಂ ಸಾರಮಕ್ಕುಂ" (ನಾನಾರ. ೮೧). ೨೮. [ಕಾವ್ಯಮೀ] ವಾಸ್ತವಾಲಂಕಾರದಲ್ಲಿ ಒಂದು ಬಗೆ ; ಒಂದು ವಸ್ತುವಿಗಿಂತ ಮತ್ತೊಂದು ವಸ್ತುವು ಅತಿಶಯವಾಗಿದೆ ಎಂದು ಹೇಳುವುದು: ಇತರೇತರಕಾರಕ ಸಂಪ್ರತಿ ಪತ್ತಿಪರಸ್ಪರಂ ಸಮೂಹದೊಳೆಸೆವೊಂದತಿಶಯಗುಣದಿಂ ನಿರ್ಧಾರಿತಮಪ್ಪುದು ಸಾರಮೆಂಬ ಸದಲಂಕಾರಂ (ಕಾವ್ಯಾವ. ೬೫೮) ; ಸಾರ–ಉತ್ತರೋತ್ತರೋತ್ಕರ್ಷವರ್ಣನೆ ಎಂದರೆ ಒಂದಕ್ಕಿಂತ ಮತ್ತೊಂದು ಅತಿಶಯವಾಗಿದೆ ಎಂದು ಹೇಳುವುದು ಸಾರಾಲಂಕಾರ (ಕೃಪಿಡಿ. ೨೮೨). [ಸಂ.]

**ಸಾರಂಗ₁** (ನಾ). ೧. ವಿಷ್ಣುವಿನ ಬಿಲ್ಲು; ಶಾರ್ಙ್ಗ : 'ಸಾರಂಗಪಾಣಿ₁' ಪರಾ. ೨. ಶಾರ್ಙ್ಗವೆಂಬ ಬಿಲ್ಲನ್ನು ಧರಿಸಿರುವವನು; ವಿಷ್ಣು : ಸರಸಿಜ ನಯನನಾಮ ನಾರದ ನಿನ್ನ ದಾಸರ ಸಂಗತಿಯನನುಸಾರದಲೆ ಸಾರಲಿಲ್ಲವು ನಿನ್ನ ಸಾರಸುಧೇನಾಮ ಲೋಕ ಸಾರಂಗನಾಮ ಶಿರಿವಿಜಯವಿಠ್ಠಲನೆ (ವಿಸಾಪು. ೩೦-೧).

[< ಸಂ. ಶಾರ್ಙ್ಗ]

**ಸಾರಂಗ₂** (ಗು). ೧. ನಾನಾಬಣ್ಣಗಳಿಂದ ಕೂಡಿದ: 'ಸಾರಂಗವಟ್ಟೆ' ಪರಾ. ೨. ಚುಕ್ಕೆಗಳಿಂದ ಕೂಡಿದ. (ನಾ). ೩. ಹಲವು ಬಣ್ಣಗಳಿಂದ ಕೂಡಿದುದು; ಮಿಶ್ರ ವರ್ಣ : "ಸಾರಂಗಃ, ಶಬಳಃ – ಈ ೨ ಬೆರಕೆವರ್ಣಂ" (ಹಲಾಯು. ೧೨೧-೫೧). ೪. ಹುಲ್ಲೆ ; ಜಿಂಕೆ: ಕೊಂಚೆಯಂಚೆ ಕಪಿ ಸಾರಂಗಂ ನವಿಲ್ (ಲೋಕೋಪ. ೧೨-೧೪) ; ಬೆಳೆದ ಸಾರಂಗದೆಳವಱಿಯನೆರಳೆಯ ತೊಡೆಯನುಗ್ರಮಾತಂಗದಂತಂಗಳಂ . . . ಹರಿಶ್ಚಂದ್ರರಾಯಂಗೆ ಕಾಣಿಕೆಯನಿತ್ತಡಿಗೆಱಗುತಿರ್ದರಗ್ಗದ ಬೇಡವಡೆಯೊಡೆಯರು (ಹಚಕಾ. ೫-೩) ; ಒಂದು ಸಾರಂಗವು ತನ್ನನ್ನು ಬೆನ್ನಟ್ಟಿ ಬರುವ ಬೇಟೆನಾಯಿಗಳಿಂದ ಜೀವ ಉಳಿಸಿಕೊಳ್ಳುವುದಕ್ಕಾಗಿ . . . ಸೊಪ್ಪೆಯ ಮರೆಗೆ ಅಡಗಿಕೊಂಡಿತು (ಮುಂಬಯಿ. ೪-೪೧). ೫. ಮೈಮೇಲೆ ಚುಕ್ಕೆಗಳಿರುವ ಜಿಂಕೆ ; ಚುಕ್ಕೆದುಪ್ಪಿ : "ಸಾರಂಗಂ ಪೃಷತಾಖ್ಯಂ" (ವಸ್ತುಕೋ. ೪೦-೪) ; ಸೀತೆಯಂ . . . ಶರಭಸಾರಂಗಪ್ರಮುಖ ಮೃಗವಿಕೀರ್ಣ ನಾನಾವೃಕ್ಷಗುಲ್ಮಲತಾಸಂಘಟ್ಟನಕುಧರಕುಂಜಸಂಚರಣವನೇಚರ ಭಯಂಕರಮುಮಪ್ಪ ಭೀಮಾಟವಿಗೊಯ್ದು ರಥದಿಂದಿೞಿಪೆ (ಪುಣ್ಯಾಸ್ರ. ೬-೧೭ ವ). ೬. ಸಿಂಹ; ಕೇಸರಿ. ೭. ಆನೆ ; ಗಜ : 'ಸಾರಂಗವದನ' ಪರಾ. ೮. ಒಂದು ಬಗೆಯ ಪಕ್ಷಿ; ಚಾತಕ : "ಸಾರಂಗಮೇಣಮುಂ ಚಾತಕಮುಂ" (ವಸ್ತುಕೋ. ೧೨೨-೨೬). ೯. ನವಿಲು ; ಮಯೂರ: ಸಾರಂಗ ಸರ್ಪನ ಪಿಡಿವವೊಲು ಪುಲಿಯ ಪಿಡಿವುದೇ (ಶಂಕದಾ. ೧೨-೪). ೧೦. ದೊಡ್ಡ ಕಪ್ಪುದುಂಬಿ : ಸದ್ಗುಣಭೂಷಂ ಮಾರಾರಿ ಜನಪದಾಂಬುಜಸಾರಂಗಂ ಬಾಳ್ಗೆ ವಿಬುಧಸಂಸ್ತುತವೃತ್ತಂ (ಕಇ. II-i, ೧೭-೧೭ ; 1556). ೧೧. ಒಂದು ಬಗೆಯ ಕುದುರೆ : ಜರ್ದಾ ಸಾರಂಗ ಎಂಬುದಾಗಿ ಹಲವು ಬಣ್ಣದ ಕುದುರೆಗಳುಂಟು (ಮುಂಬಯಿ. ೩-೫೫). ೧೨. ಮೋಡ ; ಮೇಘ : "ಚಾತಕದೊಳು ಘನಂಗಳೊಳು ತುರಗಕುಲದೊಳು ಶಬಲವರ್ಣದೊಳು ಪೃಷತ ದೊಳ್ ಸಾರಂಗನಾಮಮಕ್ಕು" (ಮಂಗರಾ. ೧೪೯-೪೪). 'ಸಾರಂಗಗಮನ' ಪರಾ. ೧೩. ಕೊಂಬು ; ಕೋಡು. ೧೪. ಕಣ್ಣು : ಸಾರಂಗಶ್ರವಣಭೂಷಣ ಸುರಭಿಸಂಹಾರ . . . ಸಾರಂಗಜಟಿ ಸಿದ್ಧನಂಜೇಶ ಪಾಲಿಪುದು (ಚಬಪು. ೬೩-೭೭ ಅ). ೧೫. ಕರ್ಪೂರ. ೧೬. ಕಮನೀಯತೆ; ಮನೋಹರತೆ : "ಕಂಗಳೊಳುಂ ಮೇಘದೊಳು ತುರಂಗದೊಳಾನೆಯೊಳು ಭೃಂಗ ಕಮನೀಯದೊಳು ಕುರಂಗಾದಿ ಚಾತಕದೊಳು ಸಾರಂಗದೊಳೊಂಬತ್ತು ಶಬ್ದಮಿವು ಸಾರಂಗಂ" (ಶಬ್ದಮಂ. ೨೦); "ಕಂಗಳೊಳಶ್ವ ಜಾತಿಯೊಳು ಚಾತಕದೋಳ್ ಗಜದೋಳ್ ಕುರಂಗದೊಳಭ್ರದೋಳ್ ಶೃಂಗದೋಳ್ ಶಬಲವರ್ಣದೊಳುಂ ಕಮನೀಯದಲ್ಲಿ ಸಾರಂಗಮೆನಿಕ್ಕುಂ" (ನಾನಾರ. ೩೫). ೧೭. ಚಿನ್ನ ; ಬಂಗಾರ. ೧೮. ಹೊಳಪು ; ಕಾಂತಿ. ೧೯. ಒಂದು ಬಗೆಯ ತಂತೀವಾದ್ಯ: ಸಾರಂಗದ ತಿದಿಯಲ್ಲಿ ಧಾರೋದ್ರಿಜವ ತುಂಬಿದರು ಮೇರುಮಂದಿರದ ಮೇಲೆ ಮನೆಯ ಮಾಡಿದರಾರೊ ತಿದಿಯ ಹಱಿವೆ ಮನೆಯ ಸುಡುವೆ (ಸಕವ.ಕ. II, ೨೪೮-೨೮) ; ನಮ್ಮ ದೇಶದ ತಂತಿವಾದ್ಯಗಳಲ್ಲಿ ಅತಿಶ್ರೇಷ್ಠವೆಂದರೆ ವೀಣೆಯೇ ಸರಿ. ಅನಂತರದ ಸ್ಥಾನವು ಸಾರಂಗ, ದಿಲ್ರುಬಾ, ಇಸ್ರಾಜ್ ಮೊದಲಾದವುಗಳಿಗೆ ಸೇರುವುದು (ಬಾಲಪ್ರ. II, ೧೧೦೭). 'ಸಾರಂಗವೀಣೆ' ಪರಾ. ೨೦. ಕೋಗಿಲೆ. ೨೧. ಭೂಮಿ. ೨೨. ಇರುಳು ; ರಾತ್ರಿ. ೨೩. ಛತ್ರಿ ; ಕೊಡೆ. ೨೪. ಚಂದನ; ಶ್ರೀಗಂಧ. ೨೫. ಬಿಲ್ಲು; ಧನುಸ್ಸು : ಸಾರಂಗನಾಮಾಯುಧಾಕಲಿತಕರಪದ್ಮ ಸಾರಂಗಜಟಿ ಸಿದ್ಧನಂಜೇಶ ಪಾಲಿಪುದು ಸಾರಂಗಪದವನೊಲಿದು (ಚಬಪು. ೬೩-೭೭ ಅ). ೨೬. ಒಡವೆ ; ಆಭರಣ. ೨೭. ವಸ್ತ್ರ ; ಉಡುಪು : ಮುತ್ತುಸ್ವಾಮಿ . . . ಬರಿಗೈಯಿಂದ ಹೋದರೆ ಹೇಗೆ ಎಂದು ಅವಳಿಗಿಷ್ಟವಾದ ಸಿಲ್ಕ ಸಾರಂಗವನ್ನು ಕೊಂಡು ಕ್ವಂಟನ್‌ಬಸ್ಸನ್ನು ಹಿಡಿದ (ಕನಸಿ. ೮೬). ೨೮. ಕೂದಲು. ೨೯. ತಾವರೆ ; ಕಮಲ. ೩೦. ಹೂವು ; ಪುಷ್ಪ. ೩೧. ಶಿವ ; ಈಶ್ವರ : 'ಸಾರಂಗಪದ' ಪರಾ. ೩೨. ಕಾಮ ; ಮನ್ಮಥ. ೩೩. ಶಂಖ. ೩೪. ಚಂದ್ರ : 'ಸಾರಂಗತೇಜ', 'ಸಾರಂಗಮೌಲಿ' ಪರಾ. ೩೫. [ಸಂಗೀತ] ಒಂದು ರಾಗದ ಹೆಸರು : ಮಧುಮಾಧವಿ ಶಂಕರಾಭರಣ ಹಿಂದೋಳ ಬಂಗಾಳ ಗುಂಡಕ್ರಿ ಶ್ರೀರಾಗ ಸಾರಂಗ [ಪಾಠಾಂ. ೪೧] . . . ಕರ್ನಾಟಕಬಂಗಾಳಮೆಂಬಿಪ್ಪತ್ತೇ ರಾಗಾಂಗದಿಂದಾದ ರಾಗಂಗಳು (ವಿವೇಕ. ೧೮೮); ಕೃಷ್ಣಭಾಗವತರು ತ್ಯಾಗರಾಜರ ಕೀರ್ತನೆ "ನೀವಾಡನೇ ಗಾನಾ" ಎಂಬುದನ್ನು ಸಾರಂಗರಾಗದಲ್ಲಿ ಹಾಡಿದುದನ್ನು ಶರಭಶಾಸ್ತ್ರಿಗಳು ಕೇಳಿದರು (ಸಂಗೀತ. ೯೧).

**ಸಾರಂಗತನುಜವಾಮಾಂಗ = ಶಿವ (?)** : ಸಾರಂಗತನುಜವಾಮಾಂಗನಂ ಭಂಗನಂ ಸಾರಂಗತೇಜ . . . ಸಾರಂಗಮೌಲಿ ತ್ರಾಹಿ (ಚಬಪು. ೬೩-೭೭ ಬ). [ಸಂ.]

**ಸಾರಂಗಗಮನ** (ನಾ). ಮೋಡದಲ್ಲಿ ಚಲಿಸುವವನು ; ಚಂದ್ರ : ಸಾರಂಗಗಮನ [ಪಾಠಾಂ. ಪಯಣ] ಹರಿಮಿತ್ರನಂ ಪಾತ್ರನಂ . . . ಸಾರಂಗಮೌಲಿ ತ್ರಾಹಿ (ಚಬಪು. ೬೩-೭೭ ಬ). [ಸಂ.]

**ಸಾರಂಗಚರ್ಮ** (ನಾ). ಆನೆಯ ತೊಗಲು.

ಸಾರಂಗಚರ್ಮಾಂಬರ = ಗಜಚರ್ಮವನ್ನು ಧರಿಸಿದವನು; ಶಿವ: ಸಾರಂಗಸುರಜ್ಯೇಷ್ಠ ಶತಧರ್ಮನಮಿತಪದ ಸಾರಂಗಚರ್ಮಾಂಬರ . . . ಪಾಲಿಪುದು ಸಾರಂಗಪದವನೊಲಿದು (ಚಿಬಪು. ೬೩-೭೭ ಅ). [ಸಂ. ಸಾರಂಗಚರ್ಮನ್]

**ಸಾರಂಗಜಟಿ** (ನಾ). ಮನೋಹರವಾದ ಜಟೆಯನ್ನುಳ್ಳವನು; ಶಿವ: ಸಾರಂಗನಾಮಾಯುಧಾಕಲಿತಕರಪದ್ಮ ಸಾರಂಗಜಟಿ ಸಿದ್ಧನಂಜೇಶ ಪಾಲಿಪುದು ಸಾರಂಗಪದವನೊಲಿದು (ಚಿಬಪು. ೬೩-೭೭ ಅ). [ಸಂ. ಸಾರಂಗಜಟಿನ್]

**ಸಾರಂಗಟ್ಟು**, ಸಾರಗಟ್ಟು (ಕ್ರಿ). ಸಣ್ಣ ತೊರೆ ಮುಂತಾದುವನ್ನು ದಾಟಲು ಅಡ್ಡಗಟ್ಟೆ ಹಾಕು; ಸಂಕವನ್ನು ನಿರ್ಮಿಸು : ನೀರಡಸಿ ಕುಡಿದು ಸಿಂಪೆಯ ನೀರೊಳಗರೆಮುಳುಗಿ ಮುಗ್ಗುಲಿಕ್ಕಿರ್ದುದು ಮುನ್ನೀರಂ ನೀಲಾಚಲದಿಂ ಸಾರಂಗಟ್ಟಿದ ವೋಲಿರೆ ಬಟಲ್ಬು ಉಲಾಯಂ (ಯಶೋಚ. ೩-೬೮) ; ನದನದೀಪತಿಗೆ ಸಾರಂಗಟ್ಟುವೊರ್ ಚಲದ ಬಲದ ವಾನರಕುಲದ ಕ್ಷಿಪ್ರಕಾರ್ಮಿಕಕೌಶಲರ್ (ಶ್ರೀರಾಮಾ. ೫೧೧-೧೪೪).
**ಸಾರಗಟ್ಟು** : ಸಾರಗ[ಪಾಠಾಂ. ಕ]ಟ್ಟಿತು ಸಾಗರಕೆ ವೃಂದಾರಕಾಚಲವಿಡಿದು ಗಿರಿಗಳ ಭಾರಕಿಳೆ ಕಡುತಗ್ಗುತಿರ್ದುದು ನಿಮಿಷನಿಮಿಷದಲಿ (ತೊರರಾ. ೬-೫-೧೪).
[ಸಾರ$_1$ + ಕಟ್ಟು$_1$]

**ಸಾರಂಗತೇಜ** (ನಾ). ಚಂದ್ರನ ತೇಜಸ್ಸುಳ್ಳವನು : ಸಾರಂಗತೇಜ ಅಜವಲಿಗನಂ ತಲೆಗನಂ ಸಾರಂಗಮೌಳಿ ತ್ರಾಹಿ (ಚಿಬಪು. ೬೩-೭೭ ಬ). [ಸಂ. ಸಾರಂಗತೇಜಸ್]

**ಸಾರಂಗಧರ** (ನಾ). ೧. ಜಿಂಕೆಯನ್ನು ಧರಿಸಿದವನು; ಚಂದ್ರ : ಸಾರಂಗಧರ ಕಲಾಜೂಟವಿಲಸದ್ದೇವ ಸಾರಂಗವಾಹನಾದ್ಯಖಿಳದೇವರ ದೇವ . . . ಸಾರಂಗವರವೀವುದು (ಚಿಬಪು. ೬೨-೧). ೨. ಶಿವ: ಸಾರಂಗಧರ ಪರಮವಾಹನ ಮಹಾದೇವ . . . ಪಂಪಾವಿರೂಪಾಕ್ಷ ಸಾರಂಗವರವೀವುದು (ಚಿಬಪು. ೬೨-೧). [ಸಂ.]

**ಸಾರಂಗನಾಟ** (ನಾ). [ಸಂಗೀತ] ಒಂದು ರಾಗದ ಹೆಸರು : ನಾಟ, ಸೌರಾಷ್ಟ್ರ, ಸಾರಂಗನಾಟ, ಶುದ್ಧವಸಂತ . . . ಸಾಮವರಾಳೀ - ಈ ಮೂವತ್ತೊಂದು ರಾಗಗಳು ಪಡ್ಜವನ್ನು ನ್ಯಾಸ, ಗ್ರಹ, ಅಂಶವನ್ನಾಗಿ ಉಳ್ಳವುಗಳು (ಚತುಪ್ರ. ೫೭). [ಸಂ.]

**ಸಾರಂಗಪದ** (ನಾ). ಶಿವನ ನೆಲೆ; ಕೈಲಾಸ : ಸಾರಂಗಜಟಿ ಸಿದ್ಧನಂಜೇಶ ಪಾಲಿಪುದು ಸಾರಂಗಪದವನೊಲಿದು (ಚಿಬಪು. ೬೩-೭೭ ಅ). [ಸಂ.]

**ಸಾರಂಗಪದ್ಮ** (ನಾ). ''ಆಕಾಶಗಂಗೆ'' (ಚಿಬಪು. ಕೋಶ).

ಸಾರಂಗಪದ್ಮಧರ = ಆಕಾಶಗಂಗೆಯನ್ನು ಧರಿಸಿದವನು; ಶಿವ : ಸಾರಂಗಪದ್ಮಧರ ಜೀಮೂತಚಾರಮಣ . . . ಸಿದ್ಧನಂಜೇಶ ಪಾಲಿಪುದು ಸಾರಂಗಪದವನೊಲಿದು (ಚಿಬಪು. ೬೩-೭೭ ಅ). [ಸಂ.]

**ಸಾರಂಗಪಾಣಿ$_1$** (ನಾ). 'ಶಾರ್ಙ್ಗ'ವೆಂಬ ಬಿಲ್ಲನ್ನು ಹಿಡಿದಿರುವವನು; ವಿಷ್ಣು : ತೆಂಗಾಯಿ ಪಲಸು . . . ಭೃಂಗಾಯಿವಣ್ಣಳು ಸಹಿತ ಹಿಂಗದೆ ಬಹುಫಲಾದಿಗಳ ತೋಂಟಿಗರು ಸಾರಂಗಪಾಣಿಗೆ ಸಾರ್ಚಿದರು (ಮೋಹತ. ೪-೬೨).
[< ಸಂ. ಶಾರ್ಙ್ಗಪಾಣಿ]

**ಸಾರಂಗಪಾಣಿ$_2$** (ನಾ). ಜಿಂಕೆಯನ್ನು ಕೈಯಲ್ಲಿ ಹಿಡಿದವನು; ಶಿವ : ಸಾರಂಗಪಾಣಿ ದೇವ ಸಾರಂಗಧರ ಪರಮವಾಹನ ಮಹಾದೇವ . . . ಸಾರಂಗವರವೀವುದು (ಚಿಬಪು. ೬೨-೧). [ಸಂ.]

**ಸಾರಂಗಭೈರವಿ** (ನಾ). [ಸಂಗೀತ] ಒಂದು ರಾಗದ ಹೆಸರು: ನೀಲೋತ್ಪಳಿನಿ ಏಕಚ್ಛವಿ . . . ಸಾರಂ[ಪಾಠಾಂ. ಳ]ಗಭೈರವಿ . . . ವಸಂತಬಂಗಾಳ ಉಪಾಂಗಮೆಂಬ ಇಪ್ಪತ್ತೆರಡು ಕ್ರಿಯಾಂಗದಿಂದಾದ ರಾಗಂಗಳು (ವಿವೇಕ. ೧೮೮). [ಸಂ. ಸಾರಂಗಭೈರವೀ]

**ಸಾರಂಗಮಣಿ** (ನಾ). ''ಸೂರ್ಯ'' (ಚಿಬಪು. ಕೋಶ) : ಸಾರಂಗಮಣಿ ಪದ್ಮ ಧೂಮಾಂಕ ಗೋಪದ್ಮ ಸಾರಂಗಸುರಜ್ಯೇಷ್ಠ . . . ಪಾಲಿಪುದು ಸಾರಂಗಪದವನೊಲಿದು (ಚಿಬಪು. ೬೩-೭೭ ಅ). [ಸಂ.]

**ಸಾರಂಗಮೌಳಿ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದವನು; ಶಿವ : ಸಾರಂಗತೇಜ ಅಜವಲಿಗನಂ ತಲೆಗನಂ ಸಾರಂಗಮೌಳಿ ತ್ರಾಹಿ (ಚಿಬಪು. ೬೩-೭೭ ಬ).
[ಸಂ. ಸಾರಂಗಮೌಲಿನ್]

**ಸಾರಂಗವಟ್ಟೆ** (ನಾ). ಬಣ್ಣಬಣ್ಣದ ಬಟ್ಟೆ,– ವಸ್ತ್ರ : ಸಾರಂಗವಟ್ಟೆ [ಪಾಠಾಂ. ಟ್ಟ] ಪಳಿ ಸಂಧ್ಯಾರಾಗಂ ತ್ರಿವಳಿ ಮಂಚಟಿಗೆ ಪಲ್ಲಕಿ ನಲ್ಲೂರ ತೆಳಗಾವಿಯೆಂಬಾ ಸೀರೆಗಳಂ ಸತಿಯರೊಲೆಯೊಳುರುಪಿದರಾಗಳ್ (ತ್ರಿಪುವಿ. ೧೦-೨೮). [ಸಾರಂಗ$_2$ + ಬಟ್ಟೆ$_2$]

**ಸಾರಂಗವದನ** (ನಾ). ಆನೆಯ ಮುಖವುಳ್ಳವನು ; ಗಣಪತಿ.

ಸಾರಂಗವದನಪಿತ = ಗಣಪತಿಯ ತಂದೆ ; ಶಿವ : ಸಾರಂಗವದನಪಿತ ಪಂಪಾ ವಿರೂಪಾಕ್ಷ ಸಾರಂಗಪದವೀವುದು (ಚಿಬಪು. ೬೨-೧). [ಸಂ.]

**ಸಾರಂಗವಾಹನ** (ನಾ). (ಐರಾವತವೆಂಬ) ಆನೆಯನ್ನು ವಾಹನವಾಗಿ ಉಳ್ಳವನು ; ಇಂದ್ರ : ಸಾರಂಗವಾಹನಾದ್ಯಖಿಳದೇವರ ದೇವ ಸಾರಂಗಪಾಣಿದೇವ . . . ಪಂಪಾವಿರೂಪಾಕ್ಷ ಸಾರಂಗವರವೀವುದು (ಚಿಬಪು. ೬೨-೧). [ಸಂ.]

**ಸಾರಂಗವೀಣೆ** (ನಾ). ಒಂದು ಬಗೆಯ ವೀಣೆ: ಕ್ಷೋಣಿಯೊಳು ಪೆಸರುಳ್ಳ ರಾವಳವೀಣೆ . . . ಸಾರಂಗವೀಣೆ ಪಿನಾಕವೀಣೆಗಳು ತಾನು ಮೊದಲವು ಮುನ್ನವವರೊಳು ಗಾನಮೊಪ್ಪುವ ದಂಡಿಗೆಯನವಧಾನಿಸುತ (ಬಸಪು. ೧೯-೭).
[ಸಂ. ಸಾರಂಗವೀಣಾ]

**ಸಾರಂಗಿ** (ನಾ). ೧. ಚುಕ್ಕೆಗಳಿರುವ ಒಂದು ಬಗೆಯ ಜಿಂಕೆ,– ದುಪ್ಪಿ : ''ಪೃಷತೀ – ಸಾರಂಗಿ'' (ಒಷಧಿ. ೧೦೨). ೨. ಒಂದು ಬಗೆಯ ತಂತೀವಾದ್ಯ : ಒಂದೆಡೆಗೆ ವೀಣೆ ಸಾರಂಗಿ ತಂಬುರಿಯಿಂತು ಸಂದಣಿಸಿ ಪೂರ್ಮಿಸೆ (ಶ್ರೀರಾಮ. ೪-೫೫) ; ತಾಳ ಮದ್ದಳೆ ಸಿತಾರ್ಸಾರಂಗಿಯೂ ಚಂದದಿಂ ಮುಖವೀಣೆ ಮೋರ್ಚಿಂಗ್ ಪಿಟೀಲುಗಳ ಪಿಂದೆ ನುಡಿಪಿಮ್ಮೇಳದವರೊಡನೆ (ಅರ್ಜಾವಿ. ೨೪-೫೦). [ಸಂ. ಸಾರಂಗೀ]

**ಸಾರಂಗಿಡು** 'ಸಾರಂಗೆಡು' ನೋ.

**ಸಾರಂಗೆಡು**, ಸಾರಂಗಿಡು (ಕ್ರಿ). ಸತ್ತ್ವವನ್ನು ಕಳೆದುಕೊಳ್ಳು ; ನಿಸ್ಸಾರವಾಗು: ಆರಯ್ದು ನೋಡೆ ತೊರೆಗಳ ನೀರುಂ ವಾರಿಧಿಯ ನೀರ ಪೊರ್ದುಗೆಯಿಂದಂ ಸಾರಂಗಟ್ಟುಪ್ಪಪ್ಪವೊಲಾರುಂ ದುರ್ಜನರ ಕೂಟದಿಂದಂ ಕೆಡರೇ (ಧರ್ಮಾಮೃ. ೨-೭೭).
**ಸಾರಂಗಿಡು** : ಸಾರಂಗಿಡೆ ಪಾರ್ಥಿವಪರಿವಾರಂ ದೆಸೆಗೆಟ್ಟು ಪೋಪವೋಲ್ಪೋದುವು ನಿಸ್ಸಾರಸರೋಜಾಕರದಿಂ ಸಾರಸಕಳಹಂಸಚಕ್ರವಾಕಕುಟುಂಬಂ (ಪಂರಾಮಾ. ೬-೮೭).
[ಸಾರ$_2$ + ಕೆಡು$_1$]

**ಸಾರಂದಗಾಚಿಕೆ** (ನಾ). ತೋರಿಕೆ ; ಆಡಂಬರ ; ಸೋಗು : ಮಹಾಂಧಕಾರದಲ್ಲಿ ಸಂದಿಲ್ಲದೆ ಹೊದ್ದಿ ಬಾಹಾಗ ಬಂದುದ ಬಲ್ಲೆಯಾ . . . ಇದಕ್ಕೆ ಸಾರಂದಗಾಚಿಕೆಯ ಮಾತೇಕೆ ಅದು ನೀ ಬಂದುದು ಬೆಂಬಳಿ ಕಂಬಳಿಯಿಲ್ಲದೆ ಲಿಂಗವೆ (ಮೋಳಿಮಾ. ೧೬೪-೬೧೩). [ಸಾರಂದಗಾಚು + – ಇಕೆ]

**ಸಾರಕ** (ಗು). ೧. ಭೇದಿಯಾಗಿಸುವ; ವಿರೇಚಕಗುಣವುಳ್ಳ. (ನಾ). ೨. ಹೊರದೂಡುವುದು ; ವಿಸರ್ಜಿಸುವುದು. ೩. ವಿರೇಚಕಗುಣವುಳ್ಳದು: ಕಕ್ಕಿ . . . ಕಾಯಿಯೊಳಗಿನ ತಿಳಲು ಸಾರಕವಿರುತ್ತದೆ; ಅದನ್ನು ಔಷಧಕ್ಕೆ ಉಪಯೋಗಿಸುವರು (ಕಭಾಗ. ೩೭). ೪. ಜೇನು; ಮಧು : ''ಕುಸುಮರಸ ಮಾಕ್ಷಿಕಂ ಕ್ಷೌದ್ರ ಸಾರಕಾಖ್ಯಾತಿ ಮಧುವಿನೊಳ್ ವರ್ತಿಸುಗುಂ'' (ವಸ್ತುಕೋ. ೯೪-೧೩).
[ಸಂ.]

**ಸಾರಕಿ**, ಸಾರಿಗೆ$_3$ (ನಾ). ೧. ಒಂದು ಬಗೆಯ ಹಕ್ಕಿ. ೨. ಹೆಣ್ಣುಗಿಳಿ : ಮೃಗ ಚಕೋರ ಕೀರ ಸಾರಕಿ[ಪಾಠಾಂ. ರಿವ]ಗಳ ತಾಣದಿಂದೆ ಸೆಜ್ಜೆ ಸೊಗಸನೆಸಗುತಲ್ಲಿ ಗಲ್ಲಿಗೊಪ್ಪಿ ತೋರ್ಪವು (ಜನವ. ೮-೧೪) ; ಸಾರಕಿಯು ಪಾರಿವ ಮರಾಳವು ಚಾರುವಿದ್ಯಾಧಿಕರು ಘನಗಂಭೀರಬಂಧುಸಮೂಹ ಸಖಿಸಖಿನಿವಹ ತೆರಳಿದುದು (ಸಾಗಪ. ೩-೫೧).
**ಸಾರಿಗೆ$_3$** : ೨. ಗಿಳಿ ಗೀಜಗ ಸೋಗೆನವಿಲು ಸಾರಿಗೆ[ಪಾಠಾಂ. ಗ] . . . ಕಣ್ಣವಿಲ್ಲಳ ಹೊರ್ ಮುಂದೆ ತಳರೆ ತಡೆಯದೆಯ್ದಿದನು (ಕುರಾಸಾಂ. ೩೪-೩); ಹಾ! ಎನ್ನ ಪಂಜರದ ಸಾರಿಗೆಯೇ! ಪಾಲನೆರೆವೆಳಾವಳೋ! (ರಾಮಾಶ್ವ. ೪೦-೩). [< ಸಂ. ಸಾರಿಕಾ]

**ಸಾರಗ** (ನಾ). ೧. ಮೈಮೇಲೆ ಚುಕ್ಕೆಗಳಿರುವ ಜಿಂಕೆ; ಚುಕ್ಕೆದುಪ್ಪಿ : ಸಾರಗದ ಕವಲುಗೊಂಬೆಚಿದವು ಸರ್ಪನಾ ಸಾರಗದ ಮರೆಗೆ ಮೊಲೆಯಾವ ಪೆಣ್ಬುಲಿವಿಂದು (ಸಮ್ಮಕಾ. ೧-೧೪); ಹುಲ್ಲೆ ಮರೆ ಸಾರಗಗಳ ಕಂಗಿಡಿಸುವ ಜಂಘಾಲಿಗಳು ನಡುವಿನ ರತ್ನಮೇಖಲೆಯಾಂತು ಬಾಲವ ಬಡಿಯುತೆ ನಡೆದುವೊಗ್ಗಿನಲಿ (ಮೋಹತ. ೧೯-೧೨) ;

ಸಾರಗದ ಕೊಂಬನ್ನು ಮೊಲೆಹಾಲಿನಲ್ಲಿ ತೇದು ಕದಡಿ ಸೇವಿಸಿದರೆ ದಾಹಜ್ವರ ಗುಣಮಕ್ಕುಂ (ಸಕವ. ೭೮). [< ಸಂ. ಸಾರಂಗ]

**ಸಾರಗಟ್ಟು** 'ಸಾರಂಗಟ್ಟು' ನೋ.

**ಸಾರಗನ್ನಡ** (ನಾ). ಸತ್ತ್ವಯುತವಾದ ಕನ್ನಡ; ತಿರುಳ್ಗನ್ನಡ: ತಿಳಿಯತಿ ಗೂಢಗನ್ನಡವನಾ ಮಱೆಗನ್ನಡ ಸಾರಗನ್ನಡಂಗಳು ಮೊದಲಾದ ಸಾಸಿರದ ಮೇಲೆರಳ್ನೂಱುಮಿವಾದಿಯಾದವಂ (ಕವಿಜ. ೪-೪). [ಸಾರ್$_2$ + ಕನ್ನಡ$_1$]

**ಸಾರಘ** (ನಾ). ಜೇನುತುಪ್ಪ: "ಸಾರಘಂ, ಮಾಕ್ಷಿಕಂ, ಕ್ಷೌದ್ರಂ, ಮಧು, ಪುಷ್ಪರಸಃ - ಈ ೫ ಜೇನುತುಪ್ಪಂ" (ಹಲಾಯು. ೧೦೨-೪೭೭). [ಸಂ.]

**ಸಾರಜನಕ** (ನಾ). [ವಿಜ್ಞಾ] ಬಣ್ಣ, ರುಚಿ ಮತ್ತು ವಾಸನೆಗಳಿಲ್ಲದುದು ಹಾಗೂ ವಾಯುಮಂಡಲದಲ್ಲಿ ಶೇಕಡ ಎಂಬತ್ತರಷ್ಟಿರುವ ಒಂದು ಬಗೆಯ ರಾಸಾಯನಿಕವಸ್ತು; ನೈಟ್ರೋಜನ್: ಇಂಗಾಲ, ಸಾರಜನಕ . . . ಕಬ್ಬಿಣ ಮೊದಲಾದ ನಿರವಯವಸ್ತುಗಳು ಸಸ್ಯಗಳ ಆಹಾರದ ಘಟಕವಸ್ತುಗಳು (ಪ್ರಾಣಿಶಾ. ೭); ಸಾರಜನಕ, ಹೀಲಿಯಂ ಇತ್ಯಾದಿ ಅನಿಲಗಳನ್ನು ತುಂಬಿದ ಗಾಜಿನ ಬುರುಡೆಯೊಳಗೆ ಟಂಗ್‌ಸ್ಟನ್ ಎಂಬ ಲೋಹದ ಸಣ್ಣತಂತಿಯನ್ನು ಎರಡು ತಾಮ್ರದ ತಂತಿಗಳಿಗೆ ಸೇರಿಸಿರುತ್ತಾರೆ (ಭೌತವಿ. ೩೪೫). [ಸಂ.]

**ಸಾರಟು** 'ಸಾರೋಟು' ನೋ.

**ಸಾರಡಿ** (ನಾ). ಕೊಳೆಬಟ್ಟೆಗಳ ಮೂಟೆ ,— ಗಂಟು : ಸರಿಸರಿದು ಹಾಸರಗತ್ತಿಯಂತೆ ಸಾರಡಿಯ ಪೊತ್ತು ನಿಸ್ಸಾರರವನಾದೆನೊ ಸರಿಯರೊಳಗೆ (ವಿಶಾಸು. ೩೦-೧). [?]

**ಸಾರಡೆ** 'ಸರಾಡ$_1$' ನೋ.

**ಸಾರಣ$_1$** (ನಾ). ಗಂಧರ್ವ: 'ಸಾರಣವೆಣ್' ಪರಾ. [< ಸಂ. ಚಾರಣ]

**ಸಾರಣ$_2$** (ನಾ). [ಸಂಗೀತ] ನಾದ; ಧ್ವನಿ: ಮಾನಿತಂ ನವತಾಣಮುಂ ಸಂಧಾನಮಮರಂ ತಾಳಪತ್ರಮನೂನಪತ್ರಂ ಪೊಟ್ಟವಣೆ ಸಾರಣಮಲರ್ದಿರಲು (ಬಸವು. ೧೯-೮). [ಸಂ. ಸಾರಣಾ]

**ಸಾರಣ$_3$** (ನಾ). ೧. ಒಂದು ಬಗೆಯ ಸುಗಂಧವಸ್ತು. ೨. ಸುಗಂಧವಸ್ತು, ಗೋಮಯ ಮುಂತಾದುವುಗಳಿಂದ ನೆಲವನ್ನು ಸಾರಿಸುವುದು: 'ಸಾರಣಂಗೆಯ್' ಪರಾ. [ಸಂ.]

**ಸಾರಣಂಗೆಯ್** (ಕ್ರಿ). ಸುಗಂಧವಸ್ತು, ಗೋಮಯ ಮುಂತಾದುವುಗಳಿಂದ ನೆಲವನ್ನು ಸಾರಿಸು, — ಬಳಿ: ಚನ್ನಪೂಗಿದುಗಳಡಿಯಂ ಸಾರಣಂಗೆಯ್ವಂ ಗಾಳಿ ಸೋಂಕದಂತೆ ತರಿಸಿ ಕಟನಿಕರಂಗಳಂ ಸುತ್ತಲುಂ ಕಟ್ಟಿ (ಆರಾಚ. ೨-೩-೫).

[ಸಾರಣ$_3$ + ಕೆಯ್$_1$]

**ಸಾರಣವೆಣ್** (ನಾ). ಗಂಧರ್ವಸ್ತ್ರೀ: ತೋರಣಗುಡಿಗೋಪುರಕೆ ಕೆಯ್ಯಿಕ್ಕುವ ವಾರಣನಿಚಯವೆಣ್ದೆಸೆಯ ಸಾರಣವೆಣ್ಣಳ ನುಡಿನಡೆಗಲಿವ ವಿಚಾರಣದಿಂದಲೆಯ್ದಿದರು (ಮೋಹತ. ೨೪-೨೪). [ಸಾರಣ$_1$ + ಪೆಣ್]

**ಸಾರಣಿ$_1$** 'ಸಾರವಣೆ' ನೋ.

**ಸಾರಣಿ$_2$** (ನಾ). ೧. ತೋಡು; ನಾಲೆ; ಕಾಲುವೆ : "ಯಾನಮನಲ್ಕೆ ಸಾರಣಿಯೆನಲ್ ನೀರ ಹರಿಕುಣಿಯೆನಿಕ್ಕುಂ" (ಮಂಗರಾ. ೧೨೫-೧೯). ೨. ಒಂದು ಬಗೆಯ ವನಸ್ಪತಿ ಗಿಡ; ಮುಳ್ಳಗಸೆ : "ಸಾರಣೀ . . . ಭದ್ರಬಲಾ - ೫ ಕಿರಿಯ ಹಸಾರಣೀಗಿಡ, ಸಾರಣೀಗಿಡ" (ಸಿದ್ಧಾಂತಿ. ೧೪೭). [ಸಂ. ಸಾರಣೀ]

**ಸಾರಣಿ$_3$**, ಸಾರಿಣಿ$_2$ (ನಾ). ಒಂಟೆ. **ಸಾರಿಣಿ$_2$** : 'ಸಾರಿಣಿಸವಾರ' ಪರಾ.

**ಸಾರಣೀಸವಾರ** = ಒಂಟೆಯನ್ನು ನಡೆಸುವವನು; ಒಂಟೆಸವಾರ : ರಹಸ್ಯವಾಗಿ ತಮ್ಮ ಹೆಸರಿನಿಂದ ಟೀಪೂಸುಲ್ತಾನನ ಬಳಿಗೆ ಜಾಗತ್ರೆಯಾಗಿ ಬರುವಂತೆ ಅರ್ಜಿಯನ್ನು ಬರೆದು ಸಾರಣೀಸವಾರನ ಸಂಗಡ ಕಳುಹಿಸಿಕೊಟ್ಟು (ಮಹಾವಂ. I, ೨೩೨). 'ಸಾಂಡಣಿ' ಪರಾ. [← ಮರಾ. ಸಾಂಡಣೀ; ಹಿಂ. ಸಾಂಡನೀ]

**ಸಾರಣಅರಿವೆ** (ನಾ). ಸಾರಣೆಗೆ ಉಪಯೋಗಿಸುವ ಬಟ್ಟೆ; ಸಾರಿಸುವ ಬಟ್ಟೆ : ಸಾರಣಅರಿವೆಗಿಂತ ಸ್ವಾರಸ್ಯವಿಲ್ಲದಲೆ ಸಾರದುರಿತಪ್ರಸಾರವನು ಉಂಡೆ (ವಿಶಾಸು. ೩೦-೧). [ಸಾರಣಿ$_1$ (< ಸಾರವಣೆ) + ಅರಿವೆ (< ಅಱುವೆ)]

**ಸಾರಣಿಗೆ, ಸಾಣಿಗೆ$_2$** (ನಾ). ಜರಡಿ; ಒಂದರಿ: "ಚಾಳನಿ ರಂಧ್ರಿ ಸಾರಣಿಗೆ" (ಮಂಗರಾ. ೬೨-೨೧); ಸಾರಣಿಗೆಯಂತೆ ರಸ ಬಿಟ್ಟು ಕಸ ಎತ್ತಿಹಿಡಿಯುವ ಮಹಾಪುರುಷರ ಬಗ್ಗೆ ರನ್ನನು ವಿಷಾದಿಸುವನು (ಸಾಹಿವಿ. ೭೧). **ಸಾಣಿಗೆ$_2$** : ತಮಗೆ ಬೇಕಾದಾಗ ಹಿಟ್ಟು ಜಲ್ಲಿಸುವ ಸಾಣಿಗೆಯಲ್ಲಿ ಹಾಕಿ ಜಲ್ಲಿಸಿದರೆ . . . ಖಂಡಗಗಟ್ಟಲೆ ಧಾನ್ಯವನ್ನಾದರೂ ಕಡೆಗೆ ಮಾಡಿಕೊಳ್ಳಬಹುದು (ಕೃಷಿಪ್ರ. ೬೯); ಇವರು ಚಾಪಿ, ಬುಟ್ಟಿ, ಮೊರ, ಸಾಣಿಗೆ ಮುಂತಾದ ಬಿದಿರಿನ ಒಡವೆಗಳನ್ನು ಮಾಡಿ ಮಾರುತ್ತಾರೆ (ಕಭಾಗೆ. ೪೫೩).

[ಸಾರಣಿ$_2$ + -ಇಗೆ$_1$]

**ಸಾರಣೆ$_1$** (ನಾ). ಪ್ರಕಟಪಡಿಸುವಿಕೆ; ಘೋಷಿಸುವಿಕೆ: 'ಸಾರಣೆಗರೆ' ಪರಾ.

[ಸ್ಸಾರು$_2$(< ಸಾಱು$_1$) + -ಅಣೆ$_4$]

**ಸಾರಣೆ$_2$** (ನಾ). ಒಂದರಿ; ಜರಡಿ : ಸಾರಣೆಯಂತಿರೆ ಕಸಮಂ ಪಿಡಿವರ್ ಕೆಲರ್ ಮಹಾಪುರುಷರ್ಕಳ್ (ಅಜಿಪು. ೧-೯೧); ನಿನ್ನ ಬಾಲದೊಳೊಂದು ತೂತಿಹುದೆಂದಂತೆ ಸಾರಣೆ ಸೂಜಿಯ ಕುರಿತು (ಇಂಚಾಪು. ೧೧೨-೪೮).

[ದೇ. ‖ ತುಳು. ಸಾರಣೆ./ ಸಂ. ಚಾಲನೀ]

**ಸಾರಣೆ$_3$** (ನಾ). ೧. [ಸಂಗೀತ] ಷಡ್ಜಸ್ವರದ ಧ್ವನಿ ,— ನಾದ: ಸಾರಣೆ ಮಾಣ್ದ ವೀಣೆಯವೊಲಾದುದು ಸಂದಣಿ ಪಿಂಗೆ (ಅನಂಪು. ೫-೮೮). ೨. ವೀಣೆ, ತಂಬೂರಿ ಮುಂತಾದ ತಂತೀವಾದ್ಯಗಳಲ್ಲಿರುವ ಷಡ್ಜಸ್ವರದ ತಂತಿ: ಸಾರಣೆಯ ತಂತಿಗಿಂತ ದಪ್ಪವಾಗಿರುವ ಮಂದ್ರ, ಪಂಚಮದ ತಂತಿಯ ಸ್ಥಾಯಿಯು ಕಡಿಮೆಯಾಗಿರುವುದೂ ಇದರಿಂದ ಅರ್ಥವಾಗುತ್ತದೆ (ಭೌತವಿ. ೧೪೨); ಬಲದಿಂದ ಎಡಕ್ಕೆ ನಾಲ್ಕುತಂತಿಗಳು ಕ್ರಮವಾಗಿ ಪಂಚಮ, ಸಾರಣೆ, ಅನುಸಾರಣೆ ಮತ್ತು ಮಂದ್ರ ಎಂದು ಕರೆಯಲ್ಪಟ್ಟಿದೆ (ಸಂಗೀಚಂ. ೧೧೧). 'ಅನುಸಾರಿಣಿ' ಪರಾ. [ಸಂ. ಸಾರಣಾ]

**ಸಾರಣೆ$_4$** (ನಾ). ೧. ಒಂದು ಬಗೆಯ ಸುಗಂಧದ್ರವ್ಯ. ೨. ಸುಗಂಧದ್ರವ್ಯಗಳ ಲೇಪನ: ಮಕರಕೇತನನ ಕೇತಕಿಯಲಗಂ ಪರಾಗದ ಸಾರಣೆಯೊಳ್ ಪರಿಮಳದ ಹೊಗರೆತ್ತುವಳಿಕುಂತಳೆಯರಿಂ (ಗಿರಿಕ. ೭-೧೧ ವ); ಅವರ ದೇಹಾಂಗಗಳಿಗೆ, ಕರ್ಪೂರ . . . ಜವ್ವಾಜಿಗಳ ಸಾರಣೆಯನ್ನು ಲಘುವಾಗಿ ಲೇಪಿಸಿದರು (ಶಾಂತಲಾ. ೧೦೪). ೩. ಕಸ್ತೂರಿ, ಚಂದನ ಮುಂತಾದ ಸುಗಂಧದ್ರವ್ಯಗಳಿಂದ ಅಥವಾ ಗೋಮಯದಿಂದ ನೆಲವನ್ನು ಸಾರಿಸುವುದು, — ಬಳಿಯುವುದು : ಮಾಂಸದ ಭಿತ್ತಿಗೆ ರಸದ ಹೊಸಣೆ ಸುಖದ ನೆಲಗಟ್ಟು ರಕ್ತದ ಸಾರಣೆ ಮಜ್ಜೆಯ ಕಾರಣೆ (ಆದವ. ೧೫-೩೩); ಪುರವೀಥಿಯಲಿ ಪ್ರಕಟವಾಗಿರಲಾರ್ದ್ರಕಸ್ತೂರಿಕೆಯ ಸಾರಣೆಯಿಂದೆ ನವಮೌಕ್ತಿಕಫಲಾವಳಿ ರಂಗವಾಲಿಗಳಭಿನವಿಸುತಿರಲು (ಬಸವು. ೪-೩); ಕೆದಱಿದರಲು ಮೌಕ್ತಿಕರಂಗವಲಿ ಮಿಗಮದದ ಸಾರಣೆಯ ಕುಂಕುಮದಿ ಹುದುಗಿದ ಗಂಧದ ಕಾರಣೆ ಪನಿನೀರೊಳೊದವಿದ ಚಳಯಮೊಪ್ಪಿದುದು (ವರ್ಧಚ. ೫-೪೩). ೪. ನಯಗಾರೆ ಹಾಕುವುದು; ಗಿಲಾವು ಮಾಡುವುದು: ಅವರ ಮನೆ, ಬಚ್ಚಲು ಪ್ರತಿಯೊಂದು ನಿರ್ಮಾಣವಾಯಿತು. ಸಾರಣೆ ಮುಗಿಯಿತು (ಜಾರುದಾ. ೨೨೪); ಸಾರಣೆಗೆಂದು ತಂದುಹಾಕಿದ್ದ ಮರಳುಗುಡ್ಡೆ ಇತ್ತು (ಕಪಪು. ೫-೭೦).

**ಸಾರಣೆಕಾರಣೆ** = ನೆಲವನ್ನು ಸಾರಿಸುವುದು ಹಾಗೂ ಗೋಡೆಯ ಕೆಳಭಾಗದಲ್ಲಿ ಬಣ್ಣದ ಗೆರೆ ಬಳಿಯುವುದು: ರಕ್ತಚಂದನದಲ್ಲಿ ಸಾರಣೆಕಾರಣೆ ರಕ್ತಚಂದ್ರಿಕೆಯ ಮೇಲ್ಗಟ್ಟು ರಕ್ತ ವರ್ಣದ ಪುಷ್ಪಮಾಲೆಯಿಂದಾ ಶಾಲೆ ಯುಕ್ತಿಗೊಪ್ಪಿತು ಸಂಜೆಯಾಯ್ತು (ಭರಚ. ೨೦-೧೨೭); ಮನೆಯನ್ನೆಲ್ಲಾ ಸಾರಣೆಕಾರಣೆಗಳಿಂದ ಶೃಂಗಾರಗೊಳಿಸಿದ್ದರು (ಅಲ್ಲವಿ. ೬೩). [ಸಂ. ಸಾರಣ]

**ಸಾರಣೆಗರೆ** (ಕ್ರಿ). ಡಂಗುರಸಾರು; ಘೋಷಿಸು: ವನಕ್ಕೆತರಲಿ ನೃಪವರರೆಂದು ಸಾರಣೆಗರೆದರವನಾಪ್ತಿಗರು (ಜಿನಭಾ. ೧೯-೧). [ಸಾರಣೆ$_1$ + ಕರೆ$_1$]

**ಸಾರಣೆಗೆಯ್** (ಕ್ರಿ). ಸುಗಂಧದ್ರವ್ಯಗಳಿಂದ ಅಥವಾ ಗೋಮಯದಿಂದ ನೆಲವನ್ನು ಸಾರಿಸು: ಚಮರೀರಾಜಿ ರಜಂಗಳಂ ಕಳೆಗುಮುದ್ಯದ್ದಂತಿ ನೀರಿಟ್ಟು ಸಂಭ್ರಮದಿಂ ಸಾರಣೆಗೆಯ್ವುದಲ್ಲಿ ಪವನಂ ಪೂಧೂಳಿಯಿಂ ರಂಗಮಂ ಕ್ರಮದಿಂ ಮಾಳ್ಪುದು (ಶಬಶಂ. ೨-೭೨); ಕೈಯಿಂ ಕತ್ತುರಿಸಾರಣೆಗೆಯ್ದನೀಶಪೂಜಾಸ್ಥಳದೊಳ್ (ಭೈರವು. ೧೭-೪೪). [ಸಾರಣೆ$_4$ + ಕೆಯ್$_1$]

**ಸಾರಣೆಗೆಲಸ** (ನಾ). ಸುಗಂಧದ್ರವ್ಯಗಳಿಂದ ಸಾರಿಸುವುದು ,– ಶುದ್ಧಿಗೊಳಿಸುವುದು: ಪೊಳೆವ ಪನ್ನೀರ್ಚಳೆಯದಿಂದುಜ್ವಲಿಪ ಮೃಗಮದದೆಸೆವ ಸಾರಣೆಗೆಲಸದಿಂ . . . ಪುರವೀಧಿ ರಂಜಿಸಿತು (ಕಾವೇಮ. ೧-೪೫). [ಸಾರಣೆ$_4$ + ಕೆಲಸ]

**ಸಾರಣೆದೆಗೆ** (ಕ್ರಿ). ಸಾರಣೆಯನ್ನು ಮಾಡು; ಸಾರಿಸು : ವರಕುಂಕುಮಸಾರಣೆದೆಗೆಯುತ ಮುತ್ತ ಪರಪಿ ರಂಗವಲಿಯನಿಕ್ಕಿ (ಗೊಮ್ಮಟಚ. ೩-೭). [ಸಾರಣೆ$_4$ + ತೆಗೆ$_1$]

**ಸಾರತ** (ನಾ). ವಿಷಯಾಸಕ್ತಿ ; ವಿಷಯಾಭಿಲಾಷೆ (?): ಸಾರತ ಸವೆದು ಆರತವಳಿದು ಸಾಕಾರ ಸನ್ಮೂರ್ತಿಯ ಸಂವಿತ್ತು ಸಂಸುಖವಾಗಿ ಸಾನಂದವೇದ್ಯವಾದ ಮಹಾಮಹಿಮರ ತೋಱಿಸಯ್ಯ ಎನಗೆ (ಆದವ. ೧೭-೪೧). [ಸಂ.]

**ಸಾರತಪ** (ನಾ). ಶ್ರೇಷ್ಠವಾದ ತಪಸ್ಸು : ಪರಮಾಳೋಚನದೊಳ್ . . . ನಿಬಿಡಕಾರ್ಯೋತ್ಸರ್ಗದೊಳ್ ಶುದ್ಧಿ ತಳ್ತಿರೆ ದೋಷಪ್ರತಿಕಾರಸಾರತಪಮಂ ತತ್ಕಾಪಸಂತಾಳ್ದಿದಂ (ಸುಕುಮಾ. ೪-೧೫). [ಸಂ.]

**ಸಾರತಿಗೆಯ್ಮೆ** (ನಾ). ರಥವನ್ನು ನಡೆಸುವುದು; ಸಾರಥ್ಯ: ಸಾಧ್ವೀ ನಳ ನಳಕೂಬರ ಮಾತಲಿಗಳಂ ಸಾಟಿಗೈಯದ ಸಾರತಿಗೆಯ್ಮೆಯೊಂದುಜಾಣ್ಮೆಯಿಂ ಸೂಟಿಯಿಂ ನೂಂಕೆ ಪಾಱ ನಾಡಿಂ ನಾಡಿಂಗೆ ಧೀಂಕಿಟ್ಟುವೋ ಎನೆ ಪವನಜವಮಂ ಮುಂಚೆ ವಾಜಿಗಳೋಟಂಗೊಂಡುವು (ರಾಮಾಶ್ವ. ೨೯-೩೦).

[ಸಾರತಿ$_0$ + ಗೆಯ್ಮೆ (< ಕೈಮೆ$_1$)]

**ಸಾರಥಿ** (ನಾ). ರಥವನ್ನು ನಡೆಸುವವನು; ಸೂತ : ಸಾರಥಿಯಪ್ಪೊಡಪ್ಪನೆನಗೀತನೆ (ಪಂಪಭಾ. ೮-೯೮) ; ಬಲುಹು ಸಾರಥಿಯಿಂದ ರಿಪುಗಳ ಗೆಲವು ಸಾರಥಿಯಿಂದ ಸಾರಥಿಯೊಲಿದಡೇನೇನಾಗದು (ಕುಮಾ‍ವ್ಯಾಕ. ೫-೬).

ಸಾರಥಿಮಾಡು = ಸಾರಥಿಯನ್ನಾಗಿ ನಿಯಮಿಸು: ಸಾರಥಿಮಾಡು [ಪಾಠಾಂ. ಡೆ]ಮತ್ಸ್ಯಸುತನುತ್ತರನಂ[ತದ]ರಾತಿಸೈನ್ಯಕೂಪಾರದ ಪಾರಮಂ ತಡೆಯದೆಯ್ದುವೆನೆಂಬುದುಂ (ಪಂಪಭಾ. ೮-೯೭). [ಸಂ.]

**ಸಾರಥಿತನ** (ನಾ). ರಥವನ್ನು ನಡೆಸುವುದು; ಸಾರಥ್ಯ : ಧನುವನಿಕ್ಕಡಿಗಳೆದು ರಿಪುಸೂತನ ಶಿರವ ಹರಿಯೆಸಲು ಸಾರಥಿತನವ ತಾನೇ ಮಾಡುತಿದಿರಾದನು ಕೃಪಾಣದಲಿ (ಕುಮಾ‍ವ್ಯಾದ್ರೋ. ೧೩-೪೪); ವ್ಯಥಿಸಿದಂ ಗಾಯದಿಂ ಸೂತನಳಿಯಲ್ಕೆ ಸಾರಥಿತನವನುಂ ತಾನೆ ಮಾಡುತಿದಿರಾದನತಿರಥರೊಳಗ್ಗಳೆಯನರ್ಜುನನಾಸುಧನ್ವಂಗೆ (ಜೈಮಿಭಾ. ೧೩-೨೧). [ಸಾರಥಿ + - ತನ]

**ಸಾರಥ್ಯ** (ನಾ). ೧. = ಸಾರಥಿತನ : ಕೌರವನೃಪತಿ ಶಲ್ಯಗೆ ಹೇಳಿದನು ಸಾರಥ್ಯ ಸಂಯೋಜನಸಮಾಹಿತವ (ಕುಮಾ‍ವ್ಯಾಕ. ೭-೧); ದಿವ್ಯರಥಹಯಚಾಪಶರಕೇತು ಕಂಬುಗಳ್ಸವ್ಯಸಾಚಿತ್ವಮಿವು ನಿನಗೊದಗಿದವು ರಣದೊಳವ್ಯಯಂ ಸಾರಥ್ಯಮಂ ಮಾಡಲಿನ್ನು ಜಯಮಹುದೆ ಹುಲುಸೂತನಿಂದೆ (ಜೈಮಿಭಾ. ೧೩-೯). ೨. (ಆಲಂ) ಮುಂದಾಳುತನ ; ನೇತೃತ್ವ : ಅವರ ಸಾರಥ್ಯದಲ್ಲಿ ಅಂದಿನ ಸಮಾರಂಭವು ಯಶಸ್ವಿಯಾಗಿ ನಡೆಯಿತು (ರೂಢಿ). [ಸಂ.]

**ಸಾರದ** (ನಾ). ೧. ನಾಚುವ ಸ್ವಭಾವ ; ಸಂಕೋಚಪ್ರಕೃತಿ : "ಸಾರದ(ಮ)ನಿಕು ಮಧೃಷ್ಟಂ" (ವಸ್ತುಕೋ. ೧೨೬-೫೨). ೨. ಪರಿಶುದ್ಧವಾದುದು; ಪವಿತ್ರವಾದುದು. ೩. ಮುನಿಯ ಸಿದ್ಧಾಂತ ,– ತತ್ತ್ವ : "ಸಾರದಮಕ್ಕುಂ ವಿಶುದ್ಧಮುಂ ಮುನಿಮತಮುಂ" (ವಸ್ತುಕೋ. ೧೨೬-೫೨). [< ಸಂ. ಶಾರದ]

**ಸಾರದಾರು** (ನಾ). ಗಟ್ಟಿಯಾದ ಮರದ ತೊಲೆ ,– ದಿಮ್ಮಿ : ದಿವ್ಯಶಕ್ತಿ ಪ್ರಭಾವದಿಂದ ಮಾನುಷಾರಣ್ಯಂಗಳ ಮಹಾದ್ರುಮಂಗಳಂ ತರಿಸಿ ನಡಿಸಿ ನಟ್ಟ ಕಂಭಂಗಳ ಮೇಗೆ ಸಾರದಾರು[ಪಾಠಾಂ. ದರಂ]ಗಳನೆಡೆಗಿಱಿದಿರೆ ಪಾಸಿ ಪಸರಿಸಿ ಪಡೆಗೆ ನಡೆಯಲಿಂಬುಮಾಡಿದಾಗಳ್ (ಆದಿಪು. ೧೩-೫೨ ವ). [ಸಂ.]

**ಸಾರದೆ** (ನಾ). ಸರಸ್ವತಿ ; ಶಾರದೆ : "ನುಡಿವೆಣ್ . . . ಸಾರದೆ, ಸರಸತಿ - ಈ ೭ ಸರಸ್ವತಿಗೆ ಪೆಸರ್" (ಕಶಸಾ. ೪೮-೧೬೨). [< ಸಂ. ಶಾರದಾ]

**ಸಾರದೆಯಾಳ್ಮ** (ನಾ). ಸರಸ್ವತಿಯ ಗಂಡ; ಬ್ರಹ್ಮ : "ಬದಿಯಲರಿಚಂ ಬೇದಬಿಜ್ಜೆಗಂ ಬೊಮ್ಮ ಸಾರದೆಯಾಳ್ಮ[ಪಾಠಾಂ. ಣ್ಮ] ನಾಲ್ಮೊಗಂ . . . ಬ್ರಹ್ಮಗೆ ಒದವಿರ್ಪ ನಾಮ" (ಶಬ್ದಮಂ. ೯). [ಸಾರದೆ + ಆಳ್ಮ]

**ಸಾರಧನ** (ನಾ). ಶ್ರೇಷ್ಠವಾದ ಸಂಪತ್ತು ,– ಐಶ್ವರ್ಯ : ಸೋದರಮಾವಂ ಭದ್ರಮಿತ್ರನಲ್ಲಿ ಮೊದಲ್ಗೊಂಡು ಸ್ಥಳಯಾತ್ರೆಗೆ ಪೋಗಿ ಸಂಖ್ಯಾತೀತಸಾರಧನಮಂ ಪಡೆದು ಬರ್ಪೆಡೆಯೊಳ್ (ಶಾಂತಿಪು. ೯-೯೦ ವ). [ಸಂ.]

**ಸಾರಧಾತುಜ್ಞ** (ನಾ). ಚಿನ್ನ ಮೊದಲಾದ ಶ್ರೇಷ್ಠವಾದ ಖನಿಜಗಳ ಪರೀಕ್ಷೆಯಲ್ಲಿ ನಿಪುಣನಾದವನು: ಧಾತುಜ್ಞರ್ ಸಂತತತನುಧಾತುಜ್ಞರ್ ಭೂರಿಸಾರಧಾತುಜ್ಞರ್ ಸದ್ಧಾತುಜ್ಞರ್ ನೆರೆದಿರ್ದರ್ ಕೌತುಕ ಹಮ್ಮೀರವೀರರಾಜನ ಸಭೆಯೊಳ್ (ಹಮ್ಮೀರ. ೨-೧೧೩). [ಸಂ.]

**ಸಾರಪೊಪ್ಪಳಿ** (ನಾ). ಶ್ರೇಷ್ಠವಾದ ಪೊಪ್ಪಳಿ ಸೀರೆ: ಚಾರುವಸನ ಪೊಂಬಟ್ಟೆ ಬಿಳಿಯ ವಸ್ತ್ರ ಸಾರಪೊಪ್ಪಳಿ ಮೊದಲಾದ ಸೀರೆಸಹಿತ ಸ್ನಾನವ ಮಾಳ್ಪ ವಿಪ್ರರ ನಾರಿಯರೆಸೆದರಿತ್ತಟದೆ (ಕಂನವಿ. ೫-೫೧). [ಸಾರ$_2$ + ಪೊಪ್ಪಳಿ$_1$]

**ಸಾರಪ್ರಭೆ** (ನಾ). ಶ್ರೇಷ್ಠವಾದ ಕಾಂತಿ; ಉಜ್ವಲವಾದ ಬೆಳಕು: ಸಾರಪ್ರಭೆ ಮಸುಳ್ದುದೊ ಪೇಳ್ನೀರಾಜನವೋಜೆದಪ್ಪಿ ಮನಮಿತ್ತೆಯೊ ಪೇಳೋರಂತೆ ಗಡಣಿಸಿರ್ದುಪಹಾರಕ್ಕಿದಿರಿಟ್ಟ ಸೊಡರ ಕಳೆ ಕುಂದಿದುದೋ (ವೃಷವಿ. ೩೨-೧೫).

[ಸಂ. ಸಾರಪ್ರಭಾ]

**ಸಾರಬೀದಿ** (ನಾ). ಸಂಪದ್ಭರಿತವಾದ ಬೀದಿ: ಬಸದಿವರೆಗಂ [ದ್ರು]ಮ್ಮಮುಂ ಪೊನ್ನುಂ ಸಾರಬೀದಿಯಾಗಿEಗೆ3ಯುಮುಗುತ್ತಂ[ಪಾಠಾಂ. ತುಡುಗೆಗಳುಂ ಮುತ್ತುಂ] ಪೋದುವೆಂದು ಪೇೞ್ದೊಡೆ (ವಡ್ಡಾರಾ. ೧೭೭-೧೧); "ಸಾರಬೀದಿಯಾಗಿಯುಂ- ಬೀದಿ ಯುದ್ದಕ್ಕೂ, ಕಟ್ಟೆ ಕಟ್ಟಿದ ಹಾಗೆ (?)" (ವಡ್ಡಾರಾ. ೨೭೭ ಟಿಪ್ಪಣಿ). [ಸಾರ$_2$ + ಬೀದಿ]

**ಸಾರಭೂತ** (ನಾ). ೧. ಅತ್ಯುತ್ಕೃಷ್ಟವಾದುದು; ಶ್ರೇಷ್ಠವಾದುದು: ವೇದದ ಸಾರಭೂತವಾದ ಒಂದು ಭಾಗವು ಪುರುಷಸೂಕ್ತ (ನಕ್ಷತ್ರ. ೧). ೨. ಶ್ರೇಷ್ಠನಾದವನು; ಉತ್ತಮ ವ್ಯಕ್ತಿ: ಸಾರಭೂತರಲೇ ಸಮಸ್ತವಿಕಾರಿಗಳೊಳೀ ವಿಶ್ವನೃಪ ಸಂಹಾರರಿಬ್ಬರ ಬೀಯವನು ಮೇಲಿನ್ನು ಕೇಳು (ಕುಮಾ‍ವ್ಯಾಕ. ೧೯-೨೬). [ಸಂ.]

**ಸಾರಮಣಿ** (ನಾ). ಶ್ರೇಷ್ಠವಾದ ಮಣಿ; ಅನರ್ಘ್ಯರತ್ನ: ಸಾರಮಣಿ ಪ್ರಸಾನು ವಿಜಯಾರ್ಧಮಹೀಧರಗೋಮಿನೀಮುಖಾಕಾರಮಂ . . . ಗುಹಾದ್ವಾರಮನೆಯ್ದಿದತ್ತು ಪಡೆ (ಪಾರ್ಶ್ವಪು. ೧೧-೫೫). [ಸಂ.]

**ಸಾರಮತಿ$_1$** (ನಾ). [ಸಂಗೀತ] ಒಂದು ರಾಗದ ಹೆಸರು: ದೇವಗಾಂಧಾರಿ ಕೀರ್ತನೆ ಮುಗಿಸಿ ಪಿಳ್ಳಪ್ಪ ಸಾರಮತಿಯ ಕೀರ್ತನೆ ಆರಂಭಿಸಿದ್ದ (ಉದರಾ. ೨೬).

[ಸಂ. ಸಾರಮತೀ]

**ಸಾರಮತಿ$_2$** (ನಾ). ಒಳ್ಳೆಯ ಬುದ್ಧಿ; ಸದ್ಭಾವನೆ: ಮುನಿಕುಲಾದ್ಯರು ಸಾರಮತಿಯಲಿ ತಮ್ಮ ತಮ್ಮಯ ಪೆಸರೊಳೊಂದೊಂದು ಚಾರುಶಿವಲಿಂಗಂಗಳಂ ಸಲೆ . . . ಪ್ರತಿಷ್ಠಿಸಿ (ಬಸಪು. ೫೪-೬೫). [ಸಂ.]

**ಸಾರಮಹಿಮಾಕರ** (ನಾ). ಅತಿಶಯವಾದ ಮಹಿಮೆಯುಳ್ಳವನು: ಗಿರಿಸುತಾಕಾಂತನಂ ಪರಿಹೃತಕೃತಾಂತನಂ ಸಾರಮಹಿಮಾಕರಂ ವೈರಿಜನಭೀಕರಂ ಭಾಜಿತ ದಿನಾಧಿಪಂ ರಾಜಿತಜನಾಧಿಪಂ ರಾಜಸುತೆ ನಲ್ಮೆಯಿಂ ಪೂಜಿಸಿದನೊಲ್ಮೆಯಿಂ (ರಾಜಶೇ. ೧೩-೫೧ ರಗಳೆ). [ಸಂ.]

**ಸಾರಮಾರಿ** (ನಾ). ಹಿಂದಿನ ಕಾಲದಲ್ಲಿ ಯುದ್ಧ ಸಮಯದಲ್ಲಿ ಕೋಟೆಯನ್ನು ಹತ್ತಲು ಬಳಸುತ್ತಿದ್ದ 'ಸಾರ' ಎಂಬ ಸಾಧನವನ್ನು ನಾಶಮಾಡುತ್ತಿದ್ದ ಒಂದು ಬಗೆಯ ಸಾಧನ: ಕಣೆಯ ಕಲ್ಪೊರಲೆ ಡೆಂಕಣಿಯಾಗೆಯುಂ ಸಾರಮಾರಿಯ ಪೊಯ್ಲೊಳೋರಣಿಕೆಗೆಡೆಯುಂ . . . ವೀರಭಟಕುಣಪಗಳಿಂ ಪೆಣೆದ ಪೆರ್ಮಟೆಯಂ ಕಱೆವ ವಿಳಯಜಳಧರದೊಡ್ಡಿನಂತೆ ದೊಡ್ಡಿಗೊಂಡಿರ್ದುದು (ಅನಂಪು. ೧೧-೮೪ ವ) ; ಪಲವು ತೆಱದ ಸಾರಮಾರಿ ಬದ್ದರ ನೆಲಗುಮ್ಮ ಹಾರೆ ಸಬಳಗಳ ಸಾಲಿಂದ ಘೋರಾಕಾರಮಾಯ್ತು ಕೋಂಟೆ ಕಣ್ಗೆ (ಚಂಪ್ರಸಾಂ. ೮-೯).

[ಸಾರ$_1$ + ಮಾರಿ$_2$]

**ಸಾರಮೇಯ** (ನಾ). ೧. ನಾಯಿ; ಶ್ವಾನ: ಸಮಾಧಿಗುಪ್ತರೆಂಬ ಯತಿಪತಿಗಳಧ್ಯಯನಂ ನಿನಗನಿಷ್ಟಮಪ್ಪುದಱಿನಧ್ಯಯನಾಂತರಾಯಮಂ ಮಾಡಲೆಂದವರೋದುವಾವಾಸದೊಳ್ ಸಂಕ್ಲೇಶಮಾಗೆ ಸಾರಮೇಯಪೂತಿಕಳೇವರಮನಿಕ್ಕಿದೊಡೆ (ಆದಿಪು. ೩-೩೮ ವ);

ಸಿದ್ದೇಶ್ವರಂ ತನ್ನ ಪದಪಂಕಜದ ಮೇಗೆ ಹೊರಳುವ ಸಾರಮೇಯನಿರವಿಂಗೆ ಬೆಚಗಾಗಿ ನುಡಿಸಿದೊಡೆ (ಸಿದ್ಧರಾ. ೭-೪೭). ೨. ಸಾಹಸ; ಪರಾಕ್ರಮ. ೧, ೨: ಪರಮಶ್ಲಾಘ್ಯಗುಣಂ ಸದಾಮದಹಿತಂ ಶೌರ್ಯೋತ್ತರಂ ಗಂಧಬಂಧುರನೆಂದುಂ ನರಸಾರಮೇಯನಬಳಾಪ್ರೇಮಾಸ್ಪದೋದ್ಯದ್ವನೇಚರನೇತ್ರಾಸ್ಯಂ . . . ಈತಂ ನಸುಪಿಂಗೆ ಬರ್ಚುಮೆನಗೀಗಳ್ ಪಾರವಶ್ಯಂ ಸಖೀ (ರಾಜಶೇ. ೧೧-೧೭೫). [ಸಂ.]

**ಸಾರಮೇಯಶಿಶು** (ನಾ). ನಾಯಿಯ ಮರಿ: ಅಂತಾ ಯತಿನಾಯಕನೊಂದು ಸಾರಮೇಯಶಿಶುವಂ ಕಂಡು ಪ್ರೀತಿವಟ್ಟು ನಡಪುತ್ತಿರ್ಪುದುಂ (ಪಂಚತಂ. ೨೦೦-೧೮). [ಸಂ.]

**ಸಾರರಸ** (ನಾ). ತುಪ್ಪ, ಹಾಲು, ಜೇನು, ಮೊಸರು ಮುಂತಾದ ಶ್ರೇಷ್ಠವಾದ ದ್ರವವಸ್ತು: ಸಾರರಸವೆಂದರೆ ಪರಮಾತ್ಮನು ಸಾತ್ವಿಕ, ರಾಜಸ, ತಾಮಸರೆಂಬ ತ್ರಿವಿಧದಜೀವರನ್ನು ಸೃಷ್ಟಿಸಿ, ಅವರುಗಳು ಭೋಗಿಸುವುದಕ್ಕಾಗಿ ಸಾತ್ವಿಕ, ರಾಜಸ, ತಾಮಸ ಪದಾರ್ಥಗಳನ್ನು ಸೃಷ್ಟಿಸಿರುವನು (ಹಸಾರ. ೧೩-೨೭ ತಾತ್ಪರ್ಯ). [ಸಂ.]

**ಸಾರವಣೆ, ಸಾರಣೆ[1], ಸಾರಳಿ** (ನಾ). ೧. ಸುಗಂಧವಸ್ತುಗಳಿಂದ ಅಥವಾ ಗೋಮಯದಿಂದ ನೆಲವನ್ನು ಸಾರಿಸುವಿಕೆ: ಯಕ್ಷಕರ್ದಮದ ಸಾರವಣೆ [ಪಾಠಾಂ. ಸಾರಣೆ]ಯಿಂ ಬಿಡುಮುತ್ತಿನ ರಂಗವಲಿಯಿಂ . . . ದಿವ್ಯಶಯನಗೃಹದ ವೈಡೂರ್ಯ ಪರ್ಯಂಕದೊಳ್ ಪವಡಿಸಿರ್ದು (ಆದಿಪು. ೩-೧೧ ವ); ಸಾರವಣೆ ಮಳಯಜಂ ಕರ್ಪೂರರಜಂ ರಂಗವಲ್ಲಿ ಸಲೆ ಪೊಂದಳಿರ್ಗಳ್ ತೋರಣಮೆನೆ ಕರಮೆಸೆವುವು ವಾರಾಂಗನೆಯರ ನಿವಾಸದೊಳಗುಂ ಪೊಱಗುಂ (ಸುಕುಮಾ. ೯-೬೧); ಸಿರಿಕಂಡದ ಕೋಟ್ಕೆಸಱೊಳ್ ಬೆರಸಿದ ಕತ್ತುರಿಯ ಸಾರವಣೆ ಬೆಳಗಿದ ಕಪ್ಪುರವಳಿಕಿನ ಸೊಡರ್ಗಳ್ ಸುಂದರಮೆನೆ ಜಿನಪತಿಯನವನಿಪತಿ ಪೂಜಿಸಿದಂ (ಪಂರಾಮಾ. ೧೨-೩). ಸಾರಣೆ[1]: ೧. 'ಸಾರಣೆಅರಿವೆ' ಪರಾ. ೨. ಲೇಪನ; ಗಿಲಾವು: ಸುಣ್ಣ ಮುಂತಾದ ಸಾರಣೆ ಇಲ್ಲದ್ದರಿಂದ ಅವು ಹಾಳುಗೋಡೆಗಳ ಹಾಗೆ ಕಾಣಿಸುವುವು (ಕಭಾಗ. ೭). ಸಾರಳಿ : ೧. ಮೃಗಮದದ ಸಾರಳಿಯ ಕುಂಕುಮದೊಗುಮಿಗೆಯ ಕಾರಳಿಯ ಪೊಸಮುತ್ತುಗಳ ನಾನಾಬಗೆಯ ಚಿತ್ರದ ರಂಗವಲ್ಲಿಗಳ . . . ಪಚ್ಚೆಯ ತೋರಣಗಳೋರಣಾವ ಪಸರಿಪವು (ಅನಂರಾ. ೧-೩-೨೮).

[< ಪ್ರಾ. ಸಾರವಣ. / ಸಂ. ಸಾರಣ./ ತುಳು. ಸಾರಣೆ, ಸಾರಳಿ. / ಮರಾ. ಸಾರವಣ]

**ಸಾರವತಿ** (ನಾ). ಒಂದು ಬಗೆಯ ಸಸ್ಯ: "ಹಾಡಗಂ ಸಾರವತಿಯಕ್ಕು" (ಮಂಗರಾ. ೪೦ ೩೨) [ಸಂ. ಸಾರವತೀ]

**ಸಾರವತ್ತು** (ನಾ). ಸತ್ತ್ವದಿಂದ ಕೂಡಿದುದು; ತಿರುಳುಳ್ಳುದು: ಆಗ ನಾನು ಆ ಕಾದಂಬರಿಯ ಸಾರವತ್ತಾದ ಭಾಗವನ್ನು ಓದುತ್ತಿದ್ದೆ (ರೂಢಿ). [ಸಂ. ಸಾರವತ್]

**ಸಾರವಸ್ತು** (ನಾ). ಉತ್ತಮವಾದ ಪದಾರ್ಥ; ಶ್ರೇಷ್ಠವಾದ ಸಾಮಗ್ರಿ: ಸಾರವಸ್ತುಗಳಿಂ ನೆಱೆದಂಭೋರಾಶಿಯ ಕಾದಿಗೆ ಕಾವನುಂ ಸೀರಪಾಣಿ ವಿಳಾಸದಿನಾಳ್ದಂ ಚಕ್ರಧರಂ (ಪಂಪಭಾ. ೪-೩೨); ಕೌರವನು ತನ್ನರಮನೆಗೆ ಹರಿ ಬಾರದಿರನೆಂದಖಿಳವಿಧದಲಿ ಸಾರವಸ್ತುವ ತರಿಸಿಯಾರೋಗಣೆಗೆ ಮಾಡಿಸಿದ (ಕುವ್ಯಾಉ. ೮-೨). [ಸಂ.]

**ಸಾರವಾನ** (ನಾ). ಒಂಟೆಯ ಮೇಲೆ ಪ್ರಯಾಣಮಾಡುವವನು : ಸಾರವಾನನಿಗೆ ದಯೆ ಹುಟ್ಟಿ . . . ಆ ಬ್ರಾಹ್ಮಣನನ್ನು ಬದುಕಿಸಬೇಕೆಂಬ ಹವಣಿಕೆಯಿಂದ ಒಂಟೆಯನ್ನು ತಂದು ಬಾವಿಯ ದಂಡೆಯ ಮೇಲೆ ನಿಲ್ಲಿಸಿದನು (ಮುಂಬಯಿ. ೪-೧೭೭); ದೊಡ್ಡವರಾದಂತೆ ಸಾರವಾನರಾಗಿ ವ್ಯಾಪಾರ ಉದ್ಯೋಗಗಳನ್ನು ಮಾಡುತ್ತ ಪ್ರಪಂಚವನ್ನು ಸಾಗಿಸತೊಡಗಿದರು (ಹಿಂಮುಸ. ೯).

[← ಪಾರ. ಸಾರ್ಬಾನ್, ಸಾರ್ವಾನ್; ಮರಾ. ಹಿಂ. ಸಾರವಾನ್]

**ಸಾರವಿಚಾರ** (ನಾ). ಶ್ರೇಷ್ಠವಾದ ವಿವೇಚನೆ: ಸಾರವಿಚಾರಚಂಚುರಮತಿಪ್ರಸರಂ . . . ಸುಜನವತ್ಸಳನೆಲ್ಲಿಯುಮಿತನೆಂದು ಕೈವಾರದೆ ಬಣ್ಣಿಕುಂ ವಿಬುಧಮಂಡಳಿ ಪಂಡಿತನಾಗವರ್ಮನಂ (ವಸ್ತುಕೋ. ೧೧೭-೩೭). [ಸಂ.]

**ಸಾರವೀರ** (ನಾ). ಶ್ರೇಷ್ಠನಾದ ಪರಾಕ್ರಮಿ ,– ಸಾಹಸಿ: ಹಾ ಮದೀಶ ಯಿದೆತ್ತಡಂಗಿದೆ ಕಿನ್ನರೇಶಾ . . . ಸಾರವೀರಗುಣಾನುರಂಜನ ಕಿನ್ನರೇಶಾ (ವೃಷವಿ. ೨೪-೭ ರಗಳೆ). [ಸಂ.]

**ಸಾರವೆ** 'ಸಾರ್ವೆ' ನೋ.

**ಸಾರಶಾಸ್ತ್ರ** (ನಾ). ಶ್ರೇಷ್ಠವಾದ ವಿದ್ಯೆ; ಉತ್ತಮಮಟ್ಟದ ಶಾಸ್ತ್ರ: ಸಾರಶಾಸ್ತ್ರವನಱಿವ ಕೃಷ್ಣಾಜಿನದ ಕಡೆಗೆ ದಾರವಿಕ್ಕುವ ಕಂದಮೂಲಫಲಮಂ ತಪ್ಪ ಚಾರುಮುನಿಪುತ್ರರ್ಗೆ ವಂದಿಸುತ ಬಂದಿದಿರೊಳೊಂದು ಕೊಳನಂ ಕಂಡನ (ಹಚಆ. ೫-೫೫). [ಸಂ.]

**ಸಾರಸ** (ಗು). ೧. ಸರೋವರಕ್ಕೆ ಸಂಬಂಧಿಸಿದ. ೨. ಸರೋವರದಲ್ಲಿ ಇರುವ ,– ವಾಸಿಸುವ: ವಿರುವತ್ಸಾರಸರಾಜಹಂಸರವದಿಂದೇವಂದಿಸಿ ಬನ್ನಿಮಿಂತಿರಿಮೆಂದಾದರಿಪಂತುಟಾಯ್ತು . . . ಅನಿಲಜಂಗಧ್ಯಾಗತಪ್ರೀತಿಯಿಂ (ಗದಾಯು. ೭-೪೦). (ನಾ). ೩. ಕೊಳ; ಸರೋವರ: ಈ ಸಾರಸವು ನಿನ್ನದು ನಿನ್ನ ತಮ್ಮದಿರಸುವನೆಳೆದವ ನಾನು ಕೇಳ್ಕೆ ಧರ್ಮಸುತ (ಕುವ್ಯಾಅ. ೨೩-೩೬). ೪. ಬಕ; ಕೊಕ್ಕರೆ: ಸಾರಸಹಂಸಕೋಕಿಳಕುಳಧ್ವಾನೋತ್ಕರಂ ಚೆಲ್ವನಾಯ ಕರಂ . . . ನಂದನಂ (ಪಂಪಭಾ. ೫-೮೦); ಸಾರಸ ರಸವದ್ಧ್ವನಿಯಿಂ ನೀರಜರಜ . . . ಮದಾಳಿಗಳ ಗಳರುತಿಯಿಂ ಸೌರಭರಭಸದಿನದು ಸಂಚಾರಣರಣದೂಮ . . . ಪದ್ಮವನವನಮಧ್ಯಂ (ಜಗವಿ. ೧೧-೬೦); ಸಾರಸಂ ಸಲಿಲದೊಳ್ಪಿನದ ಪಕ್ಕಂಗಳ ಬಿದಿರ್ಚಿ (ಚೈಮಿಭಾ. ೨೮-೩೭). ೫. ಹಂಸ; ಮರಾಳ. ೬. ತಾವರೆ; ಕಮಲ: "ಅರವಿಂದಂ ರಾಜೀವಂ ಸರಸಿರುಹಂ ಸಾರಸಂ ಮಹೋತ್ಪಳಮಬ್ಜಂ . . ಶತಪತ್ರಂ" (ವಸ್ತುಕೋ. ೨೫-೧೯); ಬಂಕಣ್ಣಗಳಾ ರಮ್ಯವಹ ಪೇಪಸಾರಸಂಗಳ ನೆನೆಯುತಾ ರಾಣಿ ಶಿವನ ಭಜಿಸಿ (ಭಾವಚಿ. ೯-೪೩). ೭. ಒಂದು ಬಗೆಯ ಗಿಡ; ಬೆಟ್ಟದಾವರೆ: "ಸಾರಸಂ ಬೆಟ್ಟದಾವರೆಯಕ್ಕು" (ಮಂಗರಾ. ೩೫-೧೫). ೮. ಯವ. ೯. ಒಂದು ಬಗೆಯ ಮರ: "ಸಾರಸಮೆನಲ್ಕೆ ಗಾವಟ" (ಮಂಗರಾ. ೪೨-೪೮). ೧೦. ಬೆಟ್ಟ; ಪರ್ವತ: "ವಿಕಸಿತಾಂಬುಜದೊಳು ಮರಾಳನೊಳು ಕಾಲನೊಳ್ ಸಕಲಗಿರಿಯೊಳು ಸಾರಸಾಖ್ಯಮಕ್ಕು" (ಮಂಗರಾ. ೧೫೨-೫೭). ೧೧. ಹತ್ತಿರ; ಸಮೀಪ. ೧೨. ದುರುಳ; ದುಷ್ಟ: "ಬಿಸಜ ವಿಹಂಗ ಧೂರ್ತ ಗಿರಿಗಾವಟ ಮೃತ್ಯು ಸಮೀಪ ಹಂಸ ಸಾರಸಮೆನಿಕ್ಕುಂ" (ನಾನಾರ. ೫೭). ೧೩. ಚಂದ್ರ. [ಸಂ.]

**ಸಾರಸಂಗ್ರಹ** (ನಾ). ಸತ್ತ್ವಯುತವಾದ ಸಾರಾಂಶ ,– ಸಂಗ್ರಹ: ಈ ಬಗೆಯ ಅದರ ಉಪಯೋಗಗಳನ್ನು ಎಲ್ಲಕ್ಕೂ ಮೊದಲು ಸಾರಸಂಗ್ರಹವಾಗಿ ಹೇಳಿದವರೆಂದರೆ ಸಿ.ಎ. ಕಟರ್ (ಗ್ರಂಥಾಲ. ೩೮). [ಸಂ.]

**ಸಾರಸತ್ತ್ವ** (ನಾ). ಅತಿಶಯವಾದ ಶಕ್ತಿ ,– ಬಲ: ಸುಯ್ಯಿನಲಿ ಮುರುಕಿಸುವ ರಿಪುಭಟನನೋರೆಯೊಳೆಚಿಗಿ ನೋಡುತ ಸಾರಸತ್ವದ ನೆಱವಣಿಗೆ ಕೈಗೊಡಲೆದ್ದನು ಗದೆಯ ಕೈ ನೀಡಿ (ಕುವ್ಯಾಗ. ೭-೩೦). [ಸಂ.]

**ಸಾರಸನ** (ನಾ). ೧. ಡಾಬು; ಒಡ್ಯಾಣ: ಹಾರಂ ಸಾರಸನಂ ಕೇಯೂರಂ ಕರ್ಣಿಕೆ ವಿಚಿತ್ರಮಣಿಕಟಕಂ ಮಂಜೀರವಮೆನೆ ವಿವಿಧಾಳಂಕಾರಮನವಟಯಿಸಿದಳ್ ಜಿನಾಂಬಿಕೆಗೊರ್ವಳ್ (ವರ್ಧಮಾ. ೧೧-೪೫); ಹಾರಕೇಯೂರ ಸಾರಸನ ನೂಪುರರವಕೆ ಕಿವಿಗೊಟ್ಟು ಬೆರಗಾದುದಾ ಅಯೋಧ್ಯಾವನಂ (ಶ್ರೀರಾಮಾ. ೧೬-೪೨೭). ೨. (ಪುರುಷರ) ನಡುಕಟ್ಟು; ನಡುಪಟ್ಟಿ. [ಸಂ.]

**ಸಾರಸನಯನ** (ನಾ). ಕಮಲದಂತಹ ಕಣ್ಣುಗಳುಳ್ಳವನು; ವಿಷ್ಣು: ಮಾರಜನಕ ಮಂಜುಳಾಂಗ ಸಾರಸನಯನ ಸಕಲಲೋಕೇಶ್ವರ ಸಾಂದೆ ಸಲಹೆನ್ನ ನೊಲಿದು (ಅಕ್ಷಸಾಂ. ೬೦-೩). [ಸಂ.]

**ಸಾರಸಭವ** (ನಾ). ತಾವರೆಯಲ್ಲಿ ಹುಟ್ಟಿದವನು; ಬ್ರಹ್ಮ: 'ಸಾರಸಭವಾಂಡ' ಪರಾ. [ಸಂ.]

**ಸಾರಸಭವಾಂಡ** (ನಾ). ಬ್ರಹ್ಮನಿಂದ ಸೃಷ್ಟಿಯಾದ ಜಗತ್ತು; ಬ್ರಹ್ಮಾಂಡ : ಸಾರಸಭವಾಂಡಭಿತ್ತಿಯ ವಾರಾವರಣಾಂತರಾಳದೊಳ್ ನೆಲಸಿರ್ಕುಂ ಕಾರಣ ವೈಕುಂಠಾಭಿಧಮಾರಯೆ ತದ್ವ್ಯೂಹಲೋಕಮಮಿತಾಲೋಕಂ (ಚಕವಿ. ೫-೧೩೮). [ಸಂ.]

**ಸಾರಸರ್ವಸ್ವ** (ನಾ). ಸಮಗ್ರವಾದ ತಿರುಳು: ವೇದಗಳ ಸಾರಸರ್ವಸ್ವ ಉಪನಿಷತ್ತುಗಳಾದರೆ ಉಪನಿಷತ್ತುಗಳ ಸಾರಸರ್ವಸ್ವ ಭಗವದ್ಗೀತೆ (ಭಾರದ. ೯೨೯). [ಸಂ.]

**ಸಾರಸಪಕ್ಷಿ** (ನಾ). ಬಕ; ಕೊಕ್ಕರೆ: ಮಱಿಮುಂಬೆಗಳು ಕಳಹಂಸೆ ರಥಾಂಗಗಳುತ್ತರ

ಸಾರಸವಕ್ಕಿ ಮೆಚ್ವಾ ಕಮಲಾಕರದ ಸೌಂದರ್ಯದೊಂದಿರವ ನಾನೇನ ಬಣ್ಣಿಸುವೆ (ಕಂನವಿ. ೨೩-೩೨). [< ಸಂ. ಸಾರಸಪಕ್ಷಿನ್]

**ಸಾರಸವದನೆ** (ನಾ). ತಾವರೆಯಂತೆ ಮುಖವುಳ್ಳವಳು; ಕಮಲಾನನೆ: ವುಸುಟ ಚೌಡಯ್ಯಂಗಳಿಗೆ ವಂದಿಸಿದ ಬಾಲಕಿ . . . ಅಸುಗಳೆದಡಾ ಅಯ್ಯನಂತೀಕ್ಷಿಸುತವಾ ಕ್ಷಣದಲ್ಲಿಯಾ ಸಾರಸವದನೆಯೊಳು ಪ್ರಾಣವಂ ಪಡೆದೀಯನೆ ಮುನ್ನ (ಬಸಪು. ೪೬-೪೩). [ಸಂ. ಸಾರಸವದನಾ]

**ಸಾರಸವಾಸ** (ನಾ). ಕಮಲದಲ್ಲಿ ನೆಲಸಿರುವಿಕೆ: ನೀಂ ಸಾರಸವಾಸಮಾತ್ರದಿಂ ಸಂತಸವಾಂತದನೆಂತು ಮರೆದೆಯೆಲೆ ಮಧುಕರನೇ (ಶಾಕುಂತ. ೬೦-೧೧೦೧). [ಸಂ.]

**ಸಾರಸಸಖ** (ನಾ). ತಾವರೆಯ ಮಿತ್ರ; ಸೂರ್ಯ: ಸಾರಸಸಖನಾ ನಗಕಾಸಾರಸಮುತ್ಪನ್ನ ಕಮಳಮಂ ಕೀಳ್ವಾಂತಂ (ರಾಜಶೇ. ೧-೧೧೧). [ಸಂ.]

**ಸಾರಸಸಖತನಯ** (ನಾ). ೧. ಸೂರ್ಯನ ಮಗ. ೨. ಶನಿ : ಉದಗ್ರಗ್ರಾಹದೊಳ್ ಸಾರಸಸಖತನಯಂ ದಂಡದೊಳ್ ರೋಹಿಣೀನಂದನನಂತಾ ದ್ವಂದ್ವದೊಳ್ವಿಶ್ರುತಮೆನೆ . . . ಪುತ್ರನಂ ಪೆತ್ತಳ್ (ಸುಕುಮಾ. ೧೦-೨೬). [ಸಂ.]

**ಸಾರಸಾರಿ** (ನಾ). ತಾವರೆಯ ಶತ್ರು; ಚಂದ್ರ: ಸರೋರುಹಸಾರಸಾರಿಬೃಂದಾರಕ . . . ಸಮೀರಭುಗ್ನರೋದ್ಗಾರಯಶಂ ವಿರಾಜಿಸಿದುದೆಣ್ದೆಸೆಯೊಳ್ ಚಿಕವೀರದೇವನಾ (ರಾಜಶೇ. ೧-೬೬). [ಸಂ.]

**ಸಾರಸಾಸನ** (ನಾ). (ವಿಷ್ಣುವಿನ ನಾಭಿಯ) ಕಮಲವೇ ಪೀಠವಾಗುಳ್ಳವನು; ಬ್ರಹ್ಮ: ಅಖಿಳದಿವೌಕಪ್ರಸರಪ್ರಚೋದಿತಂ ಸಾರಸಾಸ[ಪಾಠಾಂ. ನ]ನಂ ದಂತ ಕಾಂತಿ ಪಸರಿಸೆ ನುಡಿದಂ (ವಿಷ್ಣುಪು. ೫-೧-೩೫). [ಸಂ.]

**ಸಾರಸಿ** (ನಾ). ಹೆಣ್ಣುಕೊಕ್ಕರೆ: "ಸಾರಸಾ. ಲಕ್ಷ್ಮಣಾ – ಈ ೨ ಸಾರಸಿ" (ಹಲಾಯು. ೪೧-೯೧). [ಸಂ. ಸಾರಸೀ]

**ಸಾರಸೆ** (ನಾ). ೧. ಹಂಸವನ್ನು ವಾಹನವಾಗುಳ್ಳವಳು; ಸರಸ್ವತಿ: ಶಾರದೆಯ ಸುಕುಮಾರಿ ಬ್ರಹ್ಮಿಣಿ ಸಾರಸಯ ಸುಪವಿತ್ರ . . . ಉದ್ಧರಿಸು ಕಾವ್ಯವ (ಬಿಜ್ಜಪು. ೩೧-೧೧). ೨. ಹೆಣ್ಣು ಕೊಕ್ಕರೆ : "ಸಾರಸಾ, ಲಕ್ಷ್ಮಣಾ – ಈ ೨ ಸಾರಸಿ" (ಹಲಾಯು. ೪೧-೯೧). [ಸಂ. ಸಾರಸಾ]

**ಸಾರಸೋದ್ಭವ** (ನಾ). ವಿಷ್ಣುವಿನ ನಾಭಿಕಮಲದಲ್ಲಿ ಜನ್ಮ ತಾಳಿದವನು; ಬ್ರಹ್ಮ: ವೀರಭದ್ರಾದಿ ಗಣನಿಕರಮಂ ದೈತ್ಯಾದಿ ಸಾರಸೋದ್ಭವ ಸಹಸ್ರಾಕ್ಷಾದಿ ನಿರ್ಜರರುಮಾರಯಲ್ . . . ಕರಂ ಭೋರೆನುತ ಜೋಹರಿ ಸಹಸ್ರಾಕ್ಷ ಎಂದುಲಿಗುಮಾವಗಂ ಸಂತಸದೊಳು (ಆರಾಚ. ೧-೫-೭೯). [ಸಂ.]

**ಸಾರಸೋನ್ನತಪೀಠ** (ನಾ). ೧. ಶ್ರೇಷ್ಠವೂ ಉನ್ನತವೂ ಆದ ಆಸನ. ೨. ಶ್ರೇಷ್ಠವಾದ ಕಮಲದ ಪೀಠ. ೧, ೨ : ಆ ನೃಪೇಂದ್ರನುಪೇಂದ್ರನಂತೆ ಸದಾನಂದಕರಾಜಿತನುಂ ಕಮಳಭವನಂತೆ ಸಕಳವಿಬುಧಸಂಸೇವಿತಸಾರಸೋನ್ನತ ಪೀಠಾಸೀನನುಂ . . . ಎನಿಸಿರ್ದಂ (ರಾಜಶೇ. ೩-೯ ವ). [ಸಂ.]

**ಸಾರಸ್ವತ** (ಗು). ೧. ಸರಸ್ವತಿಗೆ ಸಂಬಂಧಿಸಿದ. ೨. ವಿದ್ವತ್ತಿನಿಂದ ಕೂಡಿದ. ೩. ಸರಸ್ವತಿ ಎಂಬ ನದಿಗೆ ಸಂಬಂಧಿಸಿದ. (ನಾ). ೪. ವಿದ್ವತ್ತು; ಪಾಂಡಿತ್ಯ: ತನ್ನ ಸಾರಸ್ವತದಿಂ [ಬಣ್ಪ]ನೊಳಂ ಬುದ್ಧಿಯೊಳಂ ತಾಂ ಪ[ಡೆ]ದಂ ಪಿರಿಯನೆನಿಸುವರ್ನ್ನರ್ಂ ರನ್ನಂ (ಕಇಅ. ೧೨-೩-೫೭; 1093). ೫. ಸರಸ್ವತೀ ನದಿ. ೪, ೫ : ಎಲ್ಲರುಂ ಸಾರಸ್ವತಯುಕ್ತರಾಗಿಯುಂ ತಾಂ ಜಡಧಿಯೆಂದೆನಿಸರು (ಚಬಪು. ೬-೪೫). ೬. ವಿದ್ವತ್ತಿನಿಂದ ಕೂಡಿದುದು; ಪಾಂಡಿತ್ಯಪೂರ್ಣವಾದುದು : ವಾಗ್ದೇವಿಯ ಭಂಡಾರದ ಮುದ್ರೆಯನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ (ಗದಾಯು. ೧-೩೮). ೭. ವಿದ್ವಾಂಸ; ಪಂಡಿತ: ಇದು . . . ಅಮ್ಮನ ಭಕ್ತಾಭಿಧಾನ ಮಲ್ಲಪಾರ್ಯ ತದನುಜಾತಾಭಿಜಾತಸಾರಸ್ವತ ಪುನ್ನಮಾರ್ಯಕಾರಿತಮುಮಪ್ಪ ಪುರಾಣಚೂಡಾಮಣಿಯೊಳ್ ಪ್ರಥಮಾಶ್ವಾಸಂ (ಶಾಂತಿಪು. ೧-೯೬ ವ). ೮. ಸರಸ್ವತೀನದಿಯ ಸುತ್ತಮುತ್ತಲಿನ ಪ್ರದೇಶ,– ಸ್ಥಳ: ಶ್ರೀಗೋವಿಂದಪೈಗಳು . . . ಗೌಡಸಾರಸ್ವತರ ಮೂಲವಾಸಸ್ಥಾನವು ಸಾರಸ್ವತದೇಶವೆಂದೂ . . . ಕೊಂಕಣಕ್ಕೆ ಕಾಲಕ್ರಮೇಣ ಬಂದಿರಬೇಕೆಂದೂ (ಕನಿಷ್ಠ ಪಕ್ಷ ಕ್ರಿ.ಶ.ದ ಆರಂಭದಲ್ಲಿ) ತಿಳಿಸುತ್ತಾರೆ (ತುಳುನಾ. ೧೬೦). ೯. ಕರಾವಳಿಯಲ್ಲಿ ವಾಸಿಸುವ ಒಂದು ಬ್ರಾಹ್ಮಣಪಂಗಡ : ನಮ್ಮ ಸಾರಸ್ವತರಲ್ಲಿ ಗೆಳತಿಯರಿಗೇನು ಕಡಿಮೆ? (ಮುಕ್ತಿ. ೨೮): ಈ ಪಂಚಗೌಡ ಬ್ರಾಹ್ಮಣರ ಮೊದಲಿಗರು ಸಾರಸ್ವತರು (ತುಳುನಾ. ೧೬೦). ೧೦. ಪ್ರಾಕೃತಭಾಷೆ: ಪ್ರಾಕೃತಭಾಷೆಗೆ ಸಾರಸ್ವತವೆಂತಲೂ ಬಾಲಭಾಷೆಯೆಂತಲೂ ಹೆಸರುಗಳುಂಟು (ಮುಂಬಯಿ. ೪-೧೨೫). ೧೧. ಒಬ್ಬ ಮುನಿಯ ಹೆಸರು. ೧೨. [ಜೈನ] ಎಂಟು ವಿಧವಾದ ಲೋಕಾಂತಿಕದೇವರುಗಳಲ್ಲಿ ಒಂದು ವರ್ಗ: ಬ್ರಹ್ಮಕಲ್ಪಾಂತವಾಸಿಗಳುಮಪ್ಪ ಸಾರಸ್ವತಾದಿತ್ಯವಹ್ನ್ಯರುಣಗರ್ದತೋಯತುಷಿತಾವ್ಯಾಬಾಧಾರಿಷ್ಟರೆಂಬೆಣ್ಬರುಂ ಲೋಕಾಂತಿಕದೇವರ್ ಬಂದು (ಆದಿಪು. ೯-೬೦ ವ). [ಸಂ.]

**ಸಾರಸ್ವತಗುಣ** (ನಾ). ಪಾಂಡಿತ್ಯ; ವಿದ್ವತ್ತು: ಅತಿಶಯಧವಳೋರ್ವಿಪೋದಿತಾಳಂಕೃತಿಮತಿ[ಯೆ] ನಿರಂತರಪ್ರತೀತಂ ಶ್ರುತಿಯುವತಿಕೃತೋಪಚಾರ ಸಾರಸ್ವತಗುಣದಿಂದೆ ಕೃತಕೃತ್ಯಮಕ್ಕುಂ (ಕವಿರಾ. ೧-೧೪೮). [ಸಂ.]

**ಸಾರಸ್ವತಸ್ಫುರಿತ** (ಗು). ೧. ತನಗೆ ತಾನೇ ಬಿರಿದ; ಸ್ವಯಂ ವಿಕಸಿತವಾದ. ೨. ವಿದ್ಯೆಯಿಂದ ಪ್ರಕಾಶಿಸುವ. ೧, ೨ : ಆ ಮಹಾಸ್ಥಾನಂ ಸಾರಸ್ವತಸ್ಫುರಿತ ಮಾನಸಕಮಳವಿತತಾಮೋದವಾಹ ಸುಧಿರಾಜಸಮನ್ವಿತಮುಂ . . . ಎನಿಸಿರ್ದುದು (ರಾಜಶೇ. ೧೪-೧೫೮ ವ). [ಸಂ.]

**ಸಾರಸ್ವಾದು** (ನಾ). ಉತ್ತಮರುಚಿ; ಮಧುರವಾದ ಸವಿ: ಸಾರಸ್ವಾದು ಲೇಸೆಂದಡೆ ಜಿಹ್ವೆ ಹೊಲಿತೆಯಾಗಿ ಕುಜುಹುಗೊಂಡಿತ್ತೆ (ಮದೇವ. ೨೮೨-೪೯). [ಸಂ.]

**ಸಾರಹೃದಯ** (ಗು). ಒಳ್ಳೆಯ ಅಂತಃಕರಣವುಳ್ಳ: ನೀರೊರೆವ ಕಣ್ಣುಗಳನೊರಸುತ ಸೀರೆಯಲ್ಲಿ ಗದಗದಿತಗಳದಲಿ ಸಾರಹೃದಯಮಹೀಶನದ್ದನು ಖೇದಪಂಕದಲಿ (ಕುವ್ಯಾಗ. ೮-೨೧). [ಸಂ.]

**ಸಾರಳಿ** 'ಸಾರವಣೆ' ನೋ.

**ಸಾರಳ್ಯ** (ನಾ). ಸರಳತನ; ನಿರಾಡಂಬರ: ಚಿತ್ರದಲ್ಲಿಯ ಸಾರಳ್ಯ, ಗಭೀರತೆ . . . ಪ್ರೇಕ್ಷಕರನ್ನು ಆಶ್ಚರ್ಯಚಕಿತರನ್ನಾಗಿಸಿತು (ಉದರಾ. ೮೮); ಮಾತಿನಲ್ಲಿ ಸಾರಳ್ಯವಿತ್ತು ಏನೂ ಕೊಂಕುತನವಿರಲಿಲ್ಲ (ನಡೆದಾ. II, ೧೫೧೦). [ಸಂ. ಸಾರಲ್ಯ]

**ಸಾರಾ** (ನಾ). ಸಕಲ; ಸಮಸ್ತ; ಎಲ್ಲಾ: ಟೀಪುಸುಲ್ತಾನರು ತಮ್ಮ ಸಾರಾ ದಂಡು ತೆಗೆದುಕೊಂಡು ತಮ್ಮ ಸರ್ವಶಕ್ತಿಯಿಂದಾ ಸಿದ್ಧೇಶ್ವರನ ಗದ್ದಿಗೆ ಮಾರ್ಗವಾಗಿ ಬಂದಲ್ಲಿ, ಅಲ್ಲಿ ಜನರಲ್ ಹಾಟ್ಲಿಸಾಹೇಬರು ಹಾಜರು ಇದ್ದರು (ರಾಜೇಂದ್ರ. ೧೬೭).

ಸಾರಾಸಗಟು = ಒಟ್ಟಾದುದು ; ಮೊತ್ತ : ಜನಪದಕಾವ್ಯವನ್ನು ಸಾರಾಸಗಟಾಗಿ ಇಟ್ಟುಕೊಂಡು ಅಭ್ಯಾಸಿಸುವುದು ತಪ್ಪು (ಕಜಕಾ. ೧೪ ಪ್ರಸ್ತಾವನೆ).

[← ಮರಾ. ಸಾರಾ. / ಸಂ. ಸರ್ವ]

**ಸಾರಾಂಶ** (ನಾ). ೧. ತಿರುಳು; ಸತ್ತ್ವ: (ಕ). ೨. (ಬೋಧನೆ, ಭಾಷಣ, ಲೇಖನ, ಪದ್ಯ ಮುಂತಾದವುಗಳ) ತಾತ್ಪರ್ಯಾರ್ಥ; ಉದ್ದಿಷ್ಟವಾದ ಆಶಯ : ಸಾರಾಂಶವೇನೆಂದರೆ ತಾವು ಎರಡನೆಯವರಿಗೆ ಮಾಡಿದ ಹಾಗೆ, ಅವರು ತಮಗೆ ಮಾಡುವರು (ಮುಂಬಯಿ. ೪-೮೫). [ಸಂ.]

**ಸಾರಾಚಾರ** (ನಾ). ಶ್ರೇಷ್ಠವಾದ ಸಂಪ್ರದಾಯ; ಕಟ್ಟುಪಾಡು: ಸಾರಾಚಾರವಿಚಾರಘೋರತಪದಿಂ ಶ್ರೀಪಾರ್ವತೀದೇವಿಯಂ ಧೀರಂ ಪರ್ವತರಾಜ ನೊರ್ಮೆ ಪಡೆದಂ (ಹಮ್ಮೀರ. ೨-೬). [ಸಂ.]

**ಸಾರಾಯ$_1$**, ಸರಾಯ, ಸರಾಯಿ, ಸರಾಯಿಾ, ಸಾರಾಯಿ (ನಾ). ಈಚಲುಮರ, ಕಬ್ಬು, ಧಾನ್ಯ ಮುಂತಾದವುಗಳಿಂದ ಭಟ್ಟಿಯಿಳಿಸಿದ ಮದ್ಯ; ಹೆಂಡ: ಹೇಸರಗತ್ತೆಯ ಮೇಲೆ ಸಾರಾಯದ ಪೀಪಗಳ ಲೆಕ್ಕವಿಲ್ಲೆಂದು ಪೇಳ್ವರಾರದನು (ಕಂನವಿ. ೧೧-೩೮) ; ಕ್ಷೀರವನು ಮಾನವರು ಮಾಱುವರು ಮನೆಮನೆಗೆ ಸಾರಾಯದೆಡೆಗೆ ಹಾಱುವರು ದುರುಳರ ದಾರಿ ಇಂತೆಂದ (ಸರ್ವಜ್ಞ. ೮೨೨). **ಸರಾಯ:** ಗಾಂಜ ಅಪು ಸರಾಯ ಮುಂತಾದ ಅಮಲೇರುವ ಪದಾರ್ಥಗಳನ್ನು ಎಷ್ಟುಮಾತ್ರವೂ ಸೇವಿಸಬಾರದು (ಮುಂಬಯಿ. ೪-೨೫); ಒಂದು ಬಟ್ಟಲ ತುಂಬ ಸರಾಯ ಕುಡಿಯುತ್ತಾನೆ (ಮೋಹಿನೀ. ೫೫). **ಸರಾಯಿ:** ಸುಮಾರು ೬೦ ವರ್ಷಗಳವರೆಗೆ ತೆಂಗಿನಮರವು

ಕಾಯಿಗಳನ್ನೂ ಸರಾಯಿಯನ್ನೂ ಕೊಡುತ್ತದೆ (ಕಭಾಗ. ೩೪); ಪರಮೇಶ್ವರಭಟ್ಟನೇನೋ ತಾನಾಗಿ ಸರಾಯಿ ಕೊಡಲು ಆಗ್ರಹಪಡಿಸುತ್ತಿರಲಿಲ್ಲ (ಗಂಮಾಯಿ. ೯೮). **ಸರಾಯಿಾ :** ಈ ಕಾಕಿವೆಯು ಸರಾಯಿಾ ಮಾಡುವುದರಲ್ಲಿ ಮುಖ್ಯವಾಗಿ ಉಪಯೋಗಿಸಲ್ಪಡುತ್ತದೆ (ಮುಂಬಯಿ. ೫-೨೦೧). **ಸಾರಾಯಿ :** ಪದೇ ಪದೇ ಸ್ವಲ್ಪ ಸಾರಾಯಿಯನ್ನು ಕುಡಿಸುವುದು (ಗ್ರಾಮಾಕ. ೧೫೫); ನಿನಗೆ ಬೇಕಾದ ಮಾಂಸವನ್ನೂ ಅನ್ನವನ್ನೂ ಮೊಸರು ಸಾರಾಯಿ ಕಳ್ಳು ಮೊದಲಾದ ಪಾನಗಳನ್ನೂ . . . ಕಳಿಹಿಸುತ್ತೇವೆ (ಪ್ಯಾಸಚಿ. ೭೧).

ಸಾರಾಯದಂಗಡಿ = ಹೆಂಡ ಮಾರುವ ಅಂಗಡಿ; ಪಡಖಾನೆ: ಭಂಗಿಯ ಹೇಟಪಿನಿಯ ಮೊಟ್ಟೆ ಸಾರಾಯದಂಗಡಿ ಸುಲೆಯ ತಿತ್ತಿಗಳ ಜಂಗುಳಿ . . . ಒಪ್ಪಿದುವು (ಶಂಸವಿ. ೧೯-೨೨). [ದೇ. ‖ ತಮಿ. ಮಲ. ಚಾರಾಯ; ತುಳು. ಸಾರಾಯಿ; ತೆಲು. ಸಾರಾ, ಸಾರಾಯಮು, ಸಾರಾಯಿ. / ಪ್ರಾ. ಸರಯ. / ಸಂ. ಸರಕ]

**ಸಾರಾಯ್ದ$_2$ (ಗು).** ೧. ಸಾರವತ್ತಾದ; ಸತ್ತ್ವಪೂರ್ಣವಾದ: ನೀರೆಜೆದುಪ ಕಾರಕ್ಕೆಳನೀರಂ ರುಚಿವೆರಸು ತೀವಿ ವನಪಾಲಕರಂ ಪಾರುತ್ತಿರ್ಪಂತಿರ್ಪುವು ಸಾರಾಯ ಫಲಾಳಿ ನಾಳಿಕೇರಂ ಬನದೊಳ್ (ಗಿರಿಕ. ೨-೪೭). ೨. ಉತ್ತಮವಾದ; ಶ್ರೇಷ್ಠವಾದ: 'ಸಾರಾಯಪದ' ಪರಾ. (ನಾ). ೩. ತಿರುಳು; ಸತ್ತ್ವ: ಭೂಮಿಯ ಸಾರಾಯದಲೊಂದು ತರು ಬೆಳೆಯಿತ್ತು ನವರಸಫಲವನಿತ್ತಿತ್ತು (ಬಸಹ. ೧೧೫-೧೨೭); ಪರಮಜಿನೇಶ್ವರಮತದೊಳು ಪರಿಕಿಸಿ ಸಾರಾಯಮಪ್ಪವಂ ಕೊಂಡು ಕರಂ ವಿರಚಿಸಿತಪ್ಪುದಚಿಂದಂ ಪರಮಾಗಮಸಾರಮಾದುದೀ ಕೃತಿಯಿಂದಂ (ಪರಮಾ. ೬೩-೧೫೯); ಅವನಿಪಂ ಧರ್ಮಸಾರಾಯಮಂ ಕೇಳ್ದನಾ ಮುನಿವರನೊಳು (ಜೈಮಿಭಾ. ೫-೪೮). ೪. ಜ್ಞಾನ; ಅನುಭಾವ: ಊರಿಂಗೆ ದಾರಿಯನು ಯಾರು ತೋಱಿದಡೇನು ಸಾರಾಯದ ನಿಜವ ತೋಱುವ ಗುರುವು ತಾನಾರಾದಡೇನು (ಸರ್ವಜ್ಞ. ೩೪). ೫. [ವೀಶೈ] ನಿಜತತ್ತ್ವ : ದೂರವಿಲ್ಲದ ಗಮನಕ್ಕೆ ದಾರಿಯ ಪಯಣ ಹಲವಾಯಿತ್ತು ಸಾರಾಯ ನಿರ್ಣಯವನೇನೆಂಬೆ (ಅವಚಂ. ೨೧-೮೭); ಸತ್ಕರ ಸಾರಾಯದ ಅನುಭಾವದ ಉಪದೇಶವು ಬರಲು ಸುತ್ತಿದ ಪ್ರಪಂಚು ಭವಕರ್ಮಂಗಳು ಬಿಟ್ಟೋಡುವವಾ ಶರಣರ ಆಜ್ಞೆಗೆ (ಶಿವಗೀ. ೭೭-೩೭೭). ೬. ನಿಜತತ್ತ್ವವನ್ನು ಅರಿತವನು: ಮಾರಾರಿಯ ಬೆಳಸನಾರಯ್ಯ ಸಂತವಿಡುವರೆಂದರೆ ಸಾರಾಯಂಗಲ್ಲದೆ ಮತ್ತಿನ್ನಾರಿಗಹುದು ಹೇಳಾ (ಅವಚಂ. ೨೫೦-೧೧೪೩); ಶಿವಭಕ್ತಿಸಾರಾಯಂ[ಪಾಠಾಂ. ಸಾರ್ವಭೌಮ] ಜಂಗಮ ಪ್ರಾಣಿ ಸಂಗನ ಬಸವಂ (ಬಸರ. ೭-೧೧೪). [ಸಾರ$_2$ + ಆಯ$_1$]

**ಸಾರಾಯಗುಡುಹಿ (ನಾ).** ಹೆಂಡ ಕುಡಿಯುವವನು; ಮದ್ಯಪಾನ ಮಾಡುವವನು: ಸಾರಾಯಗುಡುಹಿಗಳ ಸಾರಿ ಸಂಹರಿಪೆ (ಕಂಠ. ೪೯-೧೧).

[ಸಾರಾಯ್ದ$_1$ + ಕುಡುಹಿ (< ಕುಡಿಹಿ)]

**ಸಾರಾಯಪದ (ನಾ).** ಶ್ರೇಷ್ಠವಾದ ಪದವಿ; ಮುಕ್ತಿ: ತಾರಾಚಳಾಗ್ರ ನಿಳಯಾರೂಢನೊಪ್ಪಿದಂ ಸಾರಾಯಪದವೀವ ಶರಣಪತಿಯೊಪ್ಪಿದಂ (೧೮ಚಿರ. ದೇ. ೧೧೪-೧೦). [ಸಾರಾಯ್ದ$_2$ + ಪದ$_2$]

**ಸಾರಾಯಮತಿ (ನಾ).** [ವೀಶೈ] ನಿಜತತ್ತ್ವದ ಜ್ಞಾನ ,– ಅರಿವು : ತಾರಕಾರಾತಿ ಯೆಂಬಭಿಧಾನದಿಂದ ವೃಂದಾರಕರ ಪೊರೆದ ಕ್ರೌಂಚಾರಿ ರಕ್ಷಿಪುದೆನ್ನ ಸಾರಾಯಮತಿ ಯನಿತ್ತು (ಪ್ರಭುರಾ. ೧-೧೩). [ಸಾರಾಯ್ದ$_2$ + ಮತಿ]

**ಸಾರಾಯಶರಣ (ನಾ).** [ವೀಶೈ] ನಿಜತತ್ತ್ವವನ್ನರಿತ ಭಕ್ತ ; ಶಿವತತ್ತ್ವಜ್ಞಾನಿ: ಮಾರಯ್ಯನೊಬ್ಬ ಸಾರಾಯಶರಣನೆಂಬುದು ಶಂಕರದಾಸಿಮಯ್ಯನಿಗೆ ಮನವರಿಕೆ ಯಾಯಿತು (ಶರಚ. ೬೩). [ಸಾರಾಯ್ದ$_2$ + ಶರಣ]

**ಸಾರಾಯಸೋನೆ (ನಾ).** ಒಳ್ಳೆಯ ಮಳೆ: ನಮ್ಮ ಭೀಷ್ಮದ್ರೋಣನಿವನಲ್ಲ ಅಳುಕದಿರಿ ಕವಿಕವಿಯೆನುತ ಹೆಬ್ಬಲ ಸಘಾಡದಲೌಕಿ ಕರ್ಣನ ಹೊಲಬುಗೆಡಿಸಿದುದಂಬುಗಳ ಸಾರಾಯಸೋನೆಯಲಿ (ಕುಪ್ಯಾಕ. ೧೧-೨೦). [ಸಾರಾಯ್ದ$_2$ + ಸೋನೆ$_1$]

**ಸಾರಾಯಿ** 'ಸಾರಾಯ್ದ$_1$' ನೋ.

**ಸಾರಾಯಿಬೇಲ (ನಾ).** ಒಂದು ಬಗೆಯ ಮರ: ಬಿಳೀಜಾಲಿ, ತೊಪ್ಪಾಲಿ, ಸಾರಾಯಿಬೇಲ, ತುಂಬೆಮರ (ಮೃಔಗಿ. ೧-೧೭). [ಸಾರಾಯಿ ? + ಬೇಲ (< ಬೆಳಲ್)]

**ಸಾರಾಯ್ಗೆ (ನಾ).** ಒಳ್ಳೆಯದು; ಶ್ರೇಷ್ಠವಾದುದು: ಸಾರಾಯ್ಗೆಯರಲಿಂಡೆಯೊಳ್ ಶಿವಲಿಂಗಮಂ ಮುಂಬರಿವ ನೇಹದಿಂ ಕರುಣಿಸಿದನಿವನೆಳ್ಗೆಯಂ ಬಣ್ಣಿಸುವೊ ಡರಿದೆನುತ್ತಲ್ಲ ಮೃಡಗಣಾಡಂಬರಂ ನುತಿಸುತಿರಲಿಷ್ಟಲಿಂಗವನರ್ಚಿಸುತ್ತಿರ್ದನಾ ಯೊರ್ಂತ್ರಮಂ (ಕೊಟ್ಟೂಬ. ೧೫-೭೦). [< ಸಾರಾಯ್ದ$_2$ + - ಗೆ]

**ಸಾರಾಲಂಕಾರ (ನಾ).** [ಕಾವ್ಯಮಿಾ] ಒಂದು ವಸ್ತುವಿಗಿಂತ ಮತ್ತೊಂದು ವಸ್ತುವು ಅತಿಶಯವಾಗಿದೆ ಎಂದು ಹೇಳುವ ಒಂದು ಬಗೆಯ ಅರ್ಥಾಲಂಕಾರ: ಉತ್ತರೋತ್ತರವಾದ ಪದಗಳಲ್ಲಿ ಒಂದಕ್ಕಿಂತ ಒಂದು ಹೆಚ್ಚಾಗಿ ವರ್ಣಿಸಲು ಸಾರಾಲಂಕಾರವು (ಕುವಲ. ೯೮); ಉತ್ತರೋತ್ತರೋತ್ಕರ್ಷ ವರ್ಣನೆ ಎಂದರೆ ಒಂದಕ್ಕಿಂತ ಮತ್ತೊಂದು ಅತಿಶಯವಾಗಿದೆ ಎಂದು ಹೇಳುವುದು ಸಾರಾಲಂಕಾರ. ಲಕ್ಷ್ಯ – ಕಲಿ ಪಾರ್ಥಂ ಪಾರ್ಥನಿಂದಂ ಕಲಿ ರವಿತನಯಂ ಪಾರ್ಥನಿಂ ಕರ್ಣನಿಂದಂ ಕಲಿ ಭೀಮಂ ಪಾರ್ಥನಿಂ ಕರ್ಣನಿನನಿಲಜನಿಂ ರಾಘವಾಧೀಶಭೃತ್ಯಂ ಕಲಿ ಶಕ್ರಾಪತ್ಯನಿಂ ಕರ್ಣನಿನನಿಲಜನಿಂದಂಜನಾಪುತ್ರನಿಂದಂ ಕಲಿ ಧಾತ್ರೀಚಕ್ರದೊಳ್ ವಿಕ್ರಮಗುಣನಿಲಯಂ ವೀರಮಾರ್ತಾಂಡದೇವಂ (ಕೃಪಿಡಿ. ೨೮೨). [ಸಂ.]

**ಸಾರಾಸಾರ (ನಾ).** ೧. ಸತ್ತ್ವವುಳ್ಳುದು ಮತ್ತು ಸತ್ತ್ವವಿಲ್ಲದುದು. ೨. ಸಾಮರ್ಥ್ಯ ಮತ್ತು ಅಸಾಮರ್ಥ್ಯ; ಬಲಾಬಲ : ಮಾಹೇಂದ್ರನಂದನನ ಸಾರಥಿಯ ಬಲಗೊಂಡು ಸಾರಾಸಾರಗಳ ನಿರ್ಣೈಸಿ ಪೇಳ್ದನು (ಕಭವಿ. ೫೩೫). ೩. ಒಳಿತು ಮತ್ತು ಕೆಡುಕು : ಕುಟುಂಬದಲ್ಲಿ ಎಲ್ಲರೂ ಸಾರಾಸಾರ ವಿಚಾರ ಮಾಡಿ ನಡೆದರೆ ಒಳಿತು (ಕನ್ನಜಾ. ೯೯). [ಸಂ.]

**ಸಾರಿ$_1$, ಸಾರೆ$_2$ (ನಾ).** ಬಾರಿ; ಸಲ; ಸರತಿ : ನಾಲ್ಕುಸಾರಿ ತೆಂಗಿನ ಕಾಯಿಗಳನ್ನು ಕೊಯ್ಯುತ್ತಾರೆ (ಮುಂಬಯಿ. ೨-೪೨); ಈ ಕಾರಿಕೆಗಳಲ್ಲಿ ನಾವು ಯುಕ್ತಿವಾದವನ್ನು ಸಾಮಾನ್ಯರೀತಿಯಲ್ಲಿ ಮೊದಲನೆ ಸಾರಿ ನೋಡುತ್ತೇವೆ (ತತ್ವಪ್ರಾ. ೪೦೮). **ಸಾರೆ$_2$ :** ಚಿಕ್ಕಣ್ಣನಿಂದ ಈ ಸಾರೆಯ ಬಿಡುವಿಗಾಗಿ ನಮ್ಮಲ್ಲಿಗೇ ಬರಬೇಕೆಂದು ಪತ್ರ ಬಂದಿತು (ಅಲ್ಪವಿ. ೧); ಈ ಸಾರೆ ಮಾತ್ರ ಪಶ್ಚಿಮ ಟಿಬೇಟದಲ್ಲಿರುವ ಮಾನಸಸರೋವರ ಕೈಲಾಸಗಳಿಗೆ ಮುಟ್ಟೇತೀರುವ ನಿರ್ಧಾರದಿಂದ ಹೊರಟೇಬಿಟ್ಟನು (ಕೈಲಾಸ. ೪).

[ದೇ. ‖ ತಮಿ.ಚಾರಿ ; ತುಳು. ತೆಲು. ಸಾರಿ]

**ಸಾರಿ$_2$ (ನಾ).** ಸೀರೆ : ಸಾರಿಯ ನಿಱಿ ಬಲ್ಮುತ್ತಿನೇಕಾವಳಿ ಚಾರುಚಂದನದಪ್ಪಬೊಟ್ಟು . . . ರಾಜಿಸಲು ನಡೆತಂದು ಫಣಿರಾಜತನಯಗಾ ಗಾಯಕಿ ಪೊಡಮಟ್ಟಳು (ನಾಗಕು. ೨೭-೨). 'ಸಾಟಿ' ಪರಾ.

[< ಪ್ರಾ. ಸಾಡಿಆ, ಸಾಡೀ./ಸಂ. ಶಾಟೀ./ಹಿಂ. ಮರಾ. ಸಾಡೀ]

**ಸಾರಿ$_3$ (ನಾ).** [ನಾಟ್ಯ] ನೃತ್ಯದ ಒಂದು ಪ್ರಕಾರ : ದೊರೆ ರಾಯನ ಸಾರಿಯ ಮೇಳವೆಣ್ಣುಗಳುಱ ನಾಲ್ಕುದೆಸೆಯ ದೇಸಗಳ ಬಿರುದಿನ ಗಣಿಕೆಯರ್ಪುರವರನಾರಿಯ ರಿರದೆ ಸಿಂಗರಿಸಿಯ್ಯೆದಿದರು (ಕಂಸವಿ. ೨೧-೬೪); ಪುರುಪ್ಪಾಡ್, ತೋದಯಂ ಮತ್ತು ಅಷ್ಟಕಲಶಂ ಇವು ತಾಂಡವನೃತ್ಯಗಳು. ಸಾರಿ ಕುಮ್ಮಿ ಪಂತಡಿ ಇವು ಲಾಸ್ಯಗಳು (ಭಾರದ. ೫೫೭). [< ಸಂ. ಚಾರೀ]

**ಸಾರಿ$_4$ (ನಾ).** ಆನೆಯ ಮೇಲೆ ಕುಳಿತುಕೊಳ್ಳಲು ಹಾಕುವ ಮಂಟಪ; ಅಂಬಾರಿ; ಹೌದಾ: "ದುಂಡಿಚೆಯುಮಂ ಬಿಸುಗೆ ಸಾರಿಯೆಂದಕ್ಕು" (ಕಬ್ಬಿಕೈ. ೮೦); ಕರಿಸೇನಾಸಾರಿನದ್ಧೋತ್ತರಲಕದಲಿಕಾಕಾನನೋಚ್ಚುಂಬ್ಯಮಾನಾಂಬರಚಕ್ರಂ . . . ವಜ್ರಬಾಹುಕ್ಷಿತಿಪತಿಗಿದಿರಂ ಬಂದನುತ್ಸಾಹದಿಂದಂ (ಆದಿಪು. ४-೨೪) ; ಕರಿಸೇನಾ ಸಾರಿಭಾರಗ್ರಥನಮುರುತುರಂಗೌಘ ಪಲ್ಯಾಣಸಜ್ಜೀಕರಣಂ . . . ಬಲಯುಗಳ ದೊಳಂ ಕಣ್ಣಗುರ್ವಾದುವಾದಂ (ಚಂದ್ರಪು. ೧೦-೬೫). ℙ ಸಂಸ್ಕೃತದ 'ಶಾರಿ' ಎಂಬ ರೂಪವನ್ನು 'ಆದಿಪು' ಮತ್ತು 'ಚಂದ್ರಪು' ಪ್ರಯೋಗಗಳಲ್ಲಿ 'ಸಾರಿ' ಎಂದು ಬಳಸಲಾಗಿದೆ. [< ಸಂ. ಶಾರಿ]

**ಸಾರಿ$_5$ (ನಾ).** ೧. ಪಗಡೆಯಾಟದಲ್ಲಿ ಉಪಯೋಗಿಸುವ ಕಾಯಿ: ಪಿಡಿಯೆಂಬರಿಷ್ಟಧನವಂ . . . ಕೊಲ್ಲೆಂಬಿರಾ ಸಾರಿಯಂ (ಶಾಸಂ. XVIII, ೨೯೫-೧೩; 1188); ಸದರದೆ ದಾಯಮಂ ಪಿಡಿವ ವಿತ್ತಮನೊಡ್ಡುವ . . . ಸಾರಿಯಂ ಕೆದಱುವ ನೆತ್ತಗಾಱರ ವಿನೋದಮನೀಕ್ಷಿಸುತಿರ್ದನುರ್ವಿಪಾ (ದಶಕು. ೮-೯೯); ಸಮರ ದ್ಯೂತಕೇಳಿಯಲಿ ಹಲಗೆಯ್ಯೆ ಕುರುಭೂಮಿ ಕೌರವಕುಲದ ತಲೆ ಸಾರಿಗಳು

ಸಜೆಯಲಿ ಗೆಲಲು ಬಂದನು ಕೊಳು, ಹಾಸಂಗಿಗಳನೆನುತಚ್ಚ (ಕುಮಾರವ್ಯಾಸಭಾ. ೧೦-೪೯). ೨. ಚದುರಂಗದ ಆಟದಲ್ಲಿ ಉಪಯೋಗಿಸುವ ಕಾಯಿ; ಚದುರಂಗದ ಕಾಯಿ: (೬). [ಸಂ. ಸಾರಿ, ಸಾರೀ]

**ಸಾರಿ$_6$** 'ಸವಾರಿ' ನೋ.

**ಸಾರಿ$_7$** (ನಾ). (?): ಆ ಕಳದ ಕಲದೊಳ್ ಸಾರಿಯುಂ ಕೋಲೂಡ್ಡಿ ಗೆಲ್ವ . . . ತಕ್ಕು ಮಿಕ್ಕುವರೆ (ಪುಷ್ಪಪು. ೨-೬೦ ವ). [?]

**ಸಾರಿಕೆ** (ನಾ). ಹೆಣ್ಣುಗಿಳಿ; ಶಾರಿಕೆ : "ಪುರುಳಿಯೆಂದುಂ, ಸಾರಿಕೆಯೆಂದುಂ ಪೆಣ್ಗಿಳಿ" (ಕಶಸಾ. ೫೫-೨೦೩); ಪಾಟಿನೆ ಕರಂ ಪಿರಿದುಂ ಗಟಿಪುತ್ತುಮಿರ್ಪಳಂ ಸಾರಿಕೆಯೆಂಬರಲ್ಲದಭಿಸಾರಿಕೆಯೆಂಬರೆ ಬುದ್ಧಿಯಳ್ಳವರ್ (ಪಂಪಭಾ. ४-೮೩); ಸಾರಿಕೆಯ ಕೀರದಂಚೆಯ ಪಾರಾವತದಿಂಚರಂಗಳಿಲ್ಲದ ಕೋಪಾಗಾರಮನಾ ವಧು ಪೊಕ್ಕಳ್ (ಜಗವಿ. ೧೨-೬೬). [ಸಂ. ಸಾರಿಕಾ]

**ಸಾರಿಕೆಬೇಟೆ** (ನಾ). ಒಂದು ಬಗೆಯ ಬೇಟೆ ,– ಶಿಕಾರಿ: ಎರಡನೆಯ ತರಹದ ಬೇಟೆಯನ್ನು "ಸಾರಿಕೆಬೇಟೆ" ಎಂದು ಕರೆಯುತ್ತಾರೆ. ಅದರಲ್ಲಿ ಬೇಟೆಗಾರನು ಒಬ್ಬನೇ ಹೊರಟು (ನಾಯಿ ಗೀಯಿ ಒಂದೂ ಇರುವುದಿಲ್ಲ) ಕಾಡಿನಲ್ಲಿ ಸುಮ್ಮನೆ ಅಲೆಯುತ್ತ ಹೋಗುತ್ತಾನೆ. ಆಗ ಕಣ್ಣಿಗೆ ಬಿದ್ದ ಪ್ರಾಣಿಗಳನ್ನು ಹೊಡೆಯುತ್ತಾನೆ (ಮಲೆಚಿ. ೫).

[ಸಾರಿಕೆ$_7$ + ಬೇಟೆ (< ಬೇಂಟೆ)]

**ಸಾರಿಗೆ$_1$** (ನಾ). ೧. ಹತ್ತಿರ; ಸಮೀಪ: ಪಶುವನು . . . ನಾ ಬಿಡೆನು ತಾ ಬಿಡೆನೆನುತ ತಮ್ಮೊಳಗೆ ನಿರ್ಣಯಿಸಲರಿಯದ ಸುಧರ್ಮವನೆನ್ನ ಸಾರಿಗೆ ಬಂದರವರೀ ಬನ್ನಬಡಿಸಿದ ಹದನನಿದನವಧರಿಸಿ ಕೇಳೆಂದ (ವಿಭಾಗ. ೧೦-೮೩-೩೫). ೨. ಕೊಡ ಕೊಳ್ಳುವ ವ್ಯವಹಾರ; ವ್ಯಾಪಾರ : ಪೊರಮಟ್ಟನಾಕ್ಷಣಂ . . . ನೆರೆದು ಬಳ್ಳಾರಿ ಸಂತೆಗೆ ಪೋಪ ಸಾರಿಗೆಯ ಜನರೊಡನೆ ಚಚ್ಚರದೊಳು (ಮಹಾಂತೇ. ३-४೯). ३. ಆದಾಯ; ವರಮಾನ: ಸಾಲ ಮೂಲವ ತಿಂತು ಸುಂಕ ಸಾರಿಗೆ ತಿಂತು ಬರ ಬಂದು ದೇಶವ ತಿಂತು . (ಇಂಚಾಪ. ೧೬೧-४४). ४. ಸರಕುಗಳನ್ನು ಅಥವಾ ಜನರನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸುವುದು; ಸಾಗಣೆ: ವ್ಯಾಪಾರದ ಸಾರಿಗೆ ಮಾಡುವದೂ, ಬೇರೆ ಹಲಕೆಲವು ಕಾರಣಗಳ ನಿಮಿತ್ತ ಊರಿಂದೂರಿಗೆ ಮನೆ ಬಿಟ್ಟು, ಅನೇಕ ದಿನಗಳವರೆಗೆ ಗಂಡು ಹೋಗಬೇಕಾಗುವುದು (ಕನ್ನಜಾ. ೧೨೧). ೫. ವಾಹನಸಂಚಾರ: ಒಂದೊಂದು ರಾಷ್ಟ್ರವೂ ತನ್ನದೇ ಆದ ರೈಲು, ರಸ್ತೆ, ಹಡಗು, ವಿಮಾನ ಇತ್ಯಾದಿ ಸಾರಿಗೆಯ ಪದ್ಧತಿ ಮತ್ತು ನೀತಿಗಳನ್ನು ಅನುಸರಿಸುತ್ತದೆ (ಅಂತಸಂ. ೨३४); ಸಾರಿಗೆ ನಿಂತು ಪ್ರವಾಸಿಗಳ ಗೋಳನ್ನು ಮಾತ್ರ ಹೆಚ್ಚಿಸಿತು (ಗೊಂಡಾರ. ೬೦). ೬. ಸಂಚಾರಕ್ಕಾಗಿ ಬಳಸುವ ಸಾಧನ; ವಾಹನ. ೭. ಸವಾರಿ: ಆಗಿನ ಕಾಲದ ಬಣಜಿಗರು ವ್ಯಾಪಾರಕ್ಕೆ ಹೋಗುವ ಕುದುರೆಯ ಸಾರಿಗೆಯನ್ನು ಚಿಕ್ಕಮಕ್ಕಳು ಆಟದಲ್ಲಿ ಅನುಕರಣಮಾಡಿರಬಹುದೆಂದು ಊಹಿಸಬಹುದು (ಕನ್ನಜಾ. ४೫). ೮. ಅನೇಕ ಸೀಳುಗಳುಳ್ಳ ಸಾಗುವಳಿಜಮೀನಿನ ಅಥವಾ ತೋಟದ ಭಾಗ: ಪಂಚಸತಗೋತ್ರಾನ್ವಯರುಮಪ್ಪೈನೂರ್ವ್ವರು ನಕರಮುಮಿರ್ದ್ದು ಬಿಟ್ಟ ಧರ್ಮ್ಮಮಾವುದೆಂದಡೆ ಸಾರಿಗೆಯೊಕ್ಕಲಲು ಭತ್ತ ಕೊಳಗ ೧ ಎಳ್ಳು ಉಪ್ಪು ಗೋದುವೆ ಬಳ್ಳ ೨ (ಸೌಇಇ. XI-ii, ೧೫೮-೧೫ ; 1109); ಚಿಕ್ಕ ನಾಗಣ್ಣನು ಎಳ್ಳೇಶ್ವರದೇವರಿಗೆ ಕೊಟ್ಟ ಗದ್ದೆ ಸಲಗೆವೊನ್ನು ಮಾವಿನ ಸಾರಿಗೆಯೊನ್ನು ಹಿರಿಯ ಹೊಲನೊನ್ನು (ಎಕ. IV, ಹೊಳೆನ. ೯३-೧೫ ; 1237); ಇದಕ್ಕೆ ಬ ಸಾರಿಗೆ ವಾಯವ್ಯ ಮೂಡಮುಖನೆ ೧ ಇದಕ್ಕೆ ಮೂತೆವರ ಮಧ್ಯ ಅರೆಸಾರಿಗೆ ನೈಋತ್ಯ ತೆಂಕಮುಖನೆ ೧ (ಎಕ. II, ತಿರುಮ. ೬३-೫೬४ ; 1748). ೯. ಒಂದು ಬಗೆಯ ತೆರಿಗೆ: ಕಿಸುಕಾಡೆಪ್ಪತ್ತರೊಳಂ ಸಾರಿಗೆ ಬೀರವಣಸಹಿತಂ ಸುಂಕಂ ಪರಿಹಾರಂ (ಎಇ. XV, ೬೯-೨३; 1051).

[ಸಾರ್$_1$ + - ಇಗೆ$_0$]

**ಸಾರಿಗೆ$_2$** (ನಾ). ಸಲ; ಬಾರಿ; ಸರತಿ: ಧಾರುಣೀಶರು ಮಡಿದರೊಂದೇ ಸಾರಿಗೆಯಲೈನೂಱು (ಕುಮಾರವ್ಯಾಸಭಾ. ೧೮-೫೧); ಧುರದೊಳೊಂದೊಂದು ಸಾರಿಗೆಗನಿತು ಬಾಣಂಗಳುರವಣಿಸಿ ಕೆಡಿದನಿತುಮುಂದಿ ಸುಭಟರ ಕಳೇವರದೊಳಂಬಂ ಬಿಡದೆ ತುಂಬುವನೆನಲ್ ಬಣ್ಣಿಸಲ್ ಪವಣೆ ಗುಹನದಟನು (ಚೆಬಪು. ३೯-२೫); ಅಕ್ಷತೆಗೆ ಬಂದ ಅತಿಥಿಗಳಿಗೆಲ್ಲಾ ಸಾರಿಗೆ ಮೇಲೆ ಸಾರಿಗೆಯಂತೆ ಚಹಾ, ಪಾನ್‌ಸುಪಾರಿ ಮುಗಿಯುವವರೆಗೂ ತಾಸೆರಡುತಾಸಾಯಿತು (ವೈವಿ. ೧೫). [ಸಾರಿ$_1$ + - ಗೆ]

**ಸಾರಿಗೆ$_3$** 'ಸಾರಕಿ' ನೋ.

**ಸಾರಿಗೆದೇರ** (ನಾ). ಗಿಳಿಯನ್ನು ವಾಹನವಾಗಿ ಉಳ್ಳವನು; ಮನ್ಮಥ : ಸಾರಿಗೆದೇರನೈದೆ ಬಡಿದಾಡುವ ಮುತ್ತಿನ ಕಂತುಕಂ ಲಸನ್ಮಾರನ ಮಂತ್ರಿಯೊಲ್ಕುವರಿಯೊಪ್ಪಿದಳ್ (ಉದ್ಭಟ. ೬-೧೧೮).

[ಸಾರಿಗೆ$_3$ (< ಸಾರಕಿ) + ತೇರು$_2$ (< ತೇರ್$_2$) + - ಅ$_7$]

**ಸಾರಿಗೆಸಂಸ್ಥೆ** (ನಾ). ಜನರ ಹಾಗೂ ಸರಕುಗಳ ಸಾಗಾಣಿಕೆಯ ಏರ್ಪಾಡನ್ನು ನೋಡಿಕೊಳ್ಳುವ ಕಾರ್ಯಾಲಯ: ಸಾರಿಗೆಸಂಸ್ಥೆಯು ಅನುಭವಿಸುತ್ತಿರುವ ಲಕ್ಷಾಂತರರೂಪಾಯಿಗಳ ನಷ್ಟವನ್ನು ಕಟ್ಟುನಿಟ್ಟಾದ ಮೇಲುಸ್ತುವಾರಿಯಿಂದ ಹೋಗಲಾಡಿಸಬಹುದು (ರೂಢಿ). [ಸಾರಿಗೆ$_1$ + ಸಂಸ್ಥೆ]

**ಸಾರಿಗೆಹೊಲ** (ನಾ). ಬೆಳೆ ಬೆಳೆಯುವ ಅನೇಕ ತುಂಡುಭೂಮಿಗಳನ್ನು ಹೊಂದಿರುವ ಒಂದು ನಿರ್ದಿಷ್ಟಪ್ರಮಾಣದ ಜಮೀನು : ಉರ ಮುಂದಣ ಸಾರಿಗೆಹೊಲ ಕಂಬ ೫೦ ತೆಂಕಳ ಸಾರಿಗೆಹೊಲ ಕಂಬ ೫೦ . . . ಆಗುಮಾಡಿ ಅನುಭವಿಸಿ ನಡಸುವಂತಾಗಿ ಕೊಟ್ಟ ಕೊಡಗೆ (ಮೈಆರಿ. ೧೯३४, ४४-೬ ; 1523); ಮಳಲೂರ ಪಟ್ಟಣದ ಸೂಲದ ಸಾರಿಗೆಹೊಲಗಳಿಗೆ XXX ಭಯಿರವದೇವರ ಹೊಂದಾ X ಯಾಗಿರ್ದ್ದ ಚತುಸ್ಸೀಮೆ (ಎಕ. IX (S), ಚನ್ನಪ. ೧೫೨-೧೫ ; 1535). [ಸಾರಿಗೆ + ಹೊಲ (< ಪೊಲ)]

**ಸಾರಿಗೊಳಿಸು** (ಕ್ರಿ). ಸವಾರಿಗಾಗಿ ವಾಹನಗಳನ್ನು ಸಜ್ಜುಗೊಳಿಸು: ಭೇರೀರಥಂಗಳಂ ಸಾರಿಗೊಳಿಸಿಯುಂ ಅಡಿಗಡಿಗೆ ನೆಲನನುಗ್ಗಡಿಸಿಯುಂ ಇಂತತಿಚಿತ್ರಮಾಗೆ ಯಾತ್ರೆಯಂ ನಡೆಯಿಪಲ್ಲಿ (ಚಂದ್ರಪ್ರ. ೧೨-೮೫ ವ).

[ಸಾರಿ$_6$ (< ಸವಾರಿ) + ಕೊಳ್$_1$ + - ಇಸು$_3$]

**ಸಾರಿಡು** (ಕ್ರಿ). ಬೆರೆಯುವಂತೆ ಮಾಡು; ಒಂದುಗೂಡಿಸು: ಕಪ್ಪುರಗಂಪನೆಣ್ದೆಸೆಗೆ ಸಾರಿಡೆ ಪಣ್ಣನೆ ಸುಯ್ಯಲರ್ ಸಮಂತುಪ್ಪುಳಗಣ್ಗೊಳಪ್ಪ ಕುಡುಮಿಂಚಿನ ಮಂಜರಿಯೊಳ್ಪಳಂಚೆ . . . ಪಾಡಿದರ್ ನಲಿದು ಗಾಯಿನಿಯರ್ ನವಗೀತಜಾಳಮಂ (ಉದ್ಭಟ. ३-२). [ಸಾರ್$_1$ + ಇಡು$_1$]

**ಸಾರಿಣಿ$_1$** (ನಾ). ೧. ನೀರು ಹೋಗಲು ಮಾಡಿದ ನಾಲೆ, ತೋಡು: "ಯಾನಂ, ಸಾರಿಣೀ - ಈ ೨ ಹರಿಕೇಣಿ" (ಹಲಾಯು. ೧೧३-೬३). ೨. ಹೊಳೆ; ನದಿ.

[ಸಂ. ಸಾರಿಣೀ]

**ಸಾರಿಣಿ$_2$** 'ಸಾರಣಿ$_3$' ನೋ.

**ಸಾರಿಣಿಸವಾರ** (ನಾ). ಒಂಟೆಯ ಮೇಲೆ ಸಾಗುವವನು; ಒಂಟೆಸವಾರ: ಹೈದರನು . . . ಇಬ್ಬರು ಅಧಿಕಾರಿಗಳು ಮತ್ತು ಇಬ್ಬರು ಸಾರಿಣಿಸವಾರರನ್ನು ಕರೆಸಿ ಅವರಲ್ಲಿ ಆ ಹಣವನ್ನು ಹಂಚಿದನು (ಒಡಕ. ೮೬). [ಸಾರಿಣಿ$_2$ (< ಸಾರಣಿ$_3$) + ಸವಾರ]

**ಸಾರಿತ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ: ಅವಳ ಎರಡು ಕಾಲ್ಗಳಂ ಪುರುಷನ ಹೆಗಲ ಮೇಲಿಕ್ಕೆ ಸಾರಿತಮೆಬ ಕರಣಂ (ಕಾಮಶಾ. ೨३೫). [ಸಂ.]

**ಸಾರಿಮೇಳ** (ನಾ). 'ಸಾರಿ' ನೃತ್ಯದಲ್ಲಿ ತೊಡಗಿರುವ ಗುಂಪು,– ತಂಡ: ವಸಂತೋತ್ಸವ, ನಾಟಕಶಾಲೆ, ಸಾರಿಮೇಳ, ಗಂಧರ್ವವೀಣೆ ಮುಂತಾದ ಮಹಾರಾಜವೈಭವದಿಂದ ಸತ್ಕೀರ್ತಿಯಂ ಪಡೆದು (ಮಹಾವಂ. I, ೬४); ಸಾರಿಮೇಳಕ್ಕೆ ಪ್ರತಿಯಾಗಿ ಸಪ್ತಾಂಗಮುದ್ರೆಯ ಮಂತಣಗಳೂ . . . ಕಯ್ಯೊಡ್ಡಿ (ವಿಗಡ. ೧३-४).

[< ಸಂ. ಚಾರೀಮೇಲ]

**ಸಾರಿರ** 'ಸಾರೀರ' ನೋ.

**ಸಾರಿವೆ** (ನಾ). ಒಂದು ಬಗೆಯ ಬಳ್ಳಿ; "ಶಾಮಲತಾ" (ಪಂಡಿತ. ೨೫೭).

[ಸಂ. ಸಾರಿವಾ]

**ಸಾರಿಸು$_1$** 'ಸಾಜಿಸು' ನೋ.

**ಸಾರಿಸು$_2$**, ಸಾರೈಸು (ಕ್ರಿ). ೧. ಸುಗಂಧದ್ರವ್ಯಗಳಿಂದ ಅಥವಾ ಗೋಮಯದಿಂದ ನೆಲವನ್ನು ಒರಸು ,– ಬಳಿ: ಕಸಗಳವೆಡೆಗಳೊಳಂ ಸಾರಿಸುವೆಡೆಯೊಳ ಮಕ್ಕಿಗುಟ್ಟುವೆಡೆಯೊಳ್ಸಲೆ ಸೋಧಿಸಿ ಜೀವನಿಕರಮಂ ರಕ್ಷಿಸುವರೆನಲ್ ಜೈನರಿಂ

ದಯಾಪರರೊಳರೇ (ಸಮಪ. ೫-೮); ಅಮಳಾಂಬುವಂ ತಾಂ ಪೊತ್ತು ತಂದು ಸುಗೋಮಯದಿ ಬೆರಸುತ್ತ ಶೋಧಿಸಿ ಸಾರಿಸಿದನಾ ದೇಗುಲವನೆಲ್ಲ (ಬಸಪು. ೧೮-೩೪); ನೆರೆದ ಭೂಸುರತತಿಯ ನೋಟಕೆ ಕರೆಸಿ ಕುಳ್ಳಿರಿಸುವನು ಸಾತ್ಯಕಿ ಭರದಿನೆಂಜಲ ತೆಗೆಸಿ ಸಾರಿಸುವುದು ವಿಕರ್ಣಂಗೆ (ಕುವ್ಯಾಸ. ೭-೧೭). **೨. ಸುಗಂಧದ್ರವ್ಯ, ಔಷಧ ಮುಂತಾದುವನ್ನು ಲೇಪಿಸು ,– ಸವರು** : ಬಾರೆಲವೊ ಸಾರಥಿ ಸಮೀಪವೊ ದೂರವೋ ನಿನ್ನವಗೆ ಸಾವ ವಿಕಾರ . . . ಔಷಧಿಗಳುಳ್ಳಡೆ ಸಾ [ಪಾಠಾಂ. ಸೇ]ರಿಸೇಱಿನ ಮೇಲಮಾರ್ಗದ ದಾರಿಯವರಾವಲ್ಲ ಬೇಗುಪಚರಿಸು ನೀನು (ತೊರರಾ. ೬-೨೪-೨೦). **೩. ಸವರಿಕೊಳ್ಳು; ಹಚ್ಚಿಕೊಳ್ಳು**: ದೆಸೆದೆಸೆಗಳೆಲ್ಲ ಚಂದನಚರ್ಚೆಯಿಂದ ಸಾರಿಸಿದಂತುಟಾಯ್ತು ನಲವೇಱಿದುದು ಸಸ್ಯಾಳಿಯಾ ಶಶಾಂಕೋದಯದೊಳು (ಸಮ್ಮಕಾ. ೧-೪೦). **೪. ಹರಡು; ಹಾಸು** : ಪಗಲಡಗಿದಾ ವೇಳೆಯಲಿ ಸಲಿಲ ಪೊಗದಂತೆ ತೊಗಲ ಸಾರಿಸಿ ಮೇಣಮನ್ನೊರಸಿ ದಿವ್ಯವಸ್ತ್ರಗಳ ಹಚ್ಚಡಿಸಿ ತಲೆಗಿಂಬನಮರಿಸಿ ತರುಣನಂ ಪೊಗಿಸಿ ಕಡುಜವದೊಳು (ಲಕ್ಷ್ಮಭಾ. ೩-೩೩-೧೪). **೫. (ಆಲಂ) ಏನೂ ಉಳಿಯದಂತೆ ಚೊಕ್ಕಟಗೊಳಿಸು**: ವೇದೋಜಿಸುತನ್ನೆದಿದನು ರಣವ ಸಾರಿಸಿ ಹೆಣಗಳನೆತ್ತುವೊಡೊಂದು ಕ್ಷಣ ನಿಲಲಂಜಿ ಬೌದಸಗೆ ಕುಣಪಗಳೀಡಾಡಿ ಬಿರುದ ಬಿಸುಟು ಹಿಂದಕಣಿಗೆಟ್ಟು ಸರಿದರು (ಕಂಸವಿ. ೧೮-೧೧೮). **೬. ಹಾಳುಮಾಡು; ನಾಶಮಾಡು**: ತಲತಲಾಂತರದಿಂದ ಬಂದಿದ್ದ ಆಸ್ತಿಯನ್ನೆಲ್ಲಾ ಒಂದೇ ವರ್ಷದಲ್ಲಿ ಸಾರಿಸಿಬಿಟ್ಟ (ರೂಢಿ). **ಸಾರೈಸು** : ೧. ''ಸಾರವಣೆ ಸಾರೈಪುದಕ್ಕುಂ'' (ಕವಿಕಂ. ೨೫೦); ಇಂಬಾಗಾರೈವುದು ಪುಳ್ಳಿ ಬೆರಟಿಯೊಳಗಣ ಪುಟುವಂ ಸಾರೈಸುವಲ್ಲಿ ದಯೆಯಿಂದಾರೈವುದು (ಸಮಪ. ೬-೯೯) ; ಎಲೆ ಪುತ್ರಿ ನಿನ್ನನು ಪಲವು ನೋಂಪಿಯ ನೋಂತು ನೆಲನನಿರದೆ ಸಾರೈಸಿ ಅಲಸದೆವುಂಡು ಪಡೆದೆನು (ಅಂಜಚ. ೯-೧೨೯). [ಸಾರಣೆ$_4$ + - ಇಸು$_3$]

**ಸಾರೀರ, ಸಾರಿರ (ಗು)**. ೧. ಶರೀರಕ್ಕೆ ಸಂಬಂಧಿಸಿದ; ದೈಹಿಕವಾದ : (೬). **(ನಾ). ೨. ಶರೀರಕ್ಕೆ ಸಂಬಂಧಿಸಿದುದು ; ಶಾರೀರಿಕವಾದುದು** : ಶಕಾರಕ್ಕೆ- ಅಶನಿ-ಅಸನಿ . . . ಶಾಪ - ಸಾಪ, ಶಾರೀರ - ಸಾರೀರ (ಶಮದ. ೨೫೩ ಪ್ರಯೋ). **ಸಾರಿರ: ೩. ಕಂಠದ ನಾದಮಾಧುರ್ಯ** : ನಾರಾಟಕಾವುಳವೆಂಬ ಧ್ವನಿಗೂಡಿ ನಿಗುರ್ವ ಚೌಕುಳವೆಂಬ ಸಾ[ಪಾಠಾಂ. ಶಾ]ರಿರ ಸುಗತಿಯಿಂದನುಬದ್ಧಗೂಡಿ ಪ್ರಗಣಿತಾಳತಿಯಸೆಯ ಸಂಧಿಸೆ ಗಮಕಸಪ್ತಕವು (ಬಸಪು. ೧೯-೧೦). [< ಸಂ. ಶಾರೀರ]

**ಸಾರು$_1$** 'ಸಾರ್$_1$' ನೋ.

**ಸಾರು$_2$** 'ಸಾಱು$_1$' ನೋ.

**ಸಾರು$_3$** 'ಸಾಱು$_2$' ನೋ.

**ಸಾರು$_4$** 'ಸಾರ$_1$' ನೋ.

**ಸಾರುವಭೌಮ, ಸಾರ್ಬಭೌಮ (ನಾ)**. ೧. **ಅತ್ಯುನ್ನತವಾದ ಅಧಿಕಾರ; ಪರಮಾಧಿಕಾರ** : ಸಾರುವಭೌಮದ ಪದವನು ನೆನೆಯರೇನುವನು ಒಳ್ಳಿತೆನ್ನರು . . . ಮುಕುತಿಯನು ಬಯಸುವ ಮಹಾಶ್ರಿತರು (ನಿಭಾಗ. ೧೧-೨೧-೨೧). **ಸಾರ್ಬಭೌಮ : ೨. ಪರಮಾಧಿಕಾರವುಳ್ಳವನು; ಚಕ್ರವರ್ತಿ** : ಏಕಚ್ಛತ್ರದಿಂದಂ ಸುರಪತಿ ವಿಭವಂ ಪಾಳಿಸುತ್ತಿರ್ದ್ದನುರ್ಬ್ಬೀಶ್ವರಚೂಡಾರತ್ನಂ . . . ತ್ರೈಳೋಕ್ಯಮಲ್ಲಂ ಶಶಿವಿಶದಯಶೋವಲ್ಲಭಂ ಸಾರ್ಬ್ಬಭೌಮ (ನಾಂದೇಡ್. ೩-೪ ; 1047). [< ಸಂ. ಸಾರ್ವಭೌಮ]

**ಸಾರುವೆ** 'ಸಾರ್ವೆ' ನೋ.

**ಸಾರೂಪ್ಯ (ನಾ)**. ೧. **ತಾದ್ರೂಪ್ಯ; ಸಮಾನರೂಪತ್ವ** : ವೀರರಿದಿರಹ ಹೊತ್ತು ರಣಮೈಲಾರರಾದರು ಮರಳಿ ತೆಗೆವುತ ಭೈರವನ ಸಾರೂಪ್ಯವಾದರು (ಚಿಪ್ಯಾವಿ. ೮-೭೦) ; ಧಾತ್ರೀನರರೆಲ್ಲಂ ಚಂದ್ರಸಾರೂಪ್ಯಮನೆ ಪಡೆದರೆಂಬಂತೆ ಕಣ್ಗೊಪ್ಪುತಿರ್ದರ್ (ರಾಜಶೇ. ೧೧-೬೭). **೨. [ತತ್ತ್ವಶಾ] ಮೋಕ್ಷದ ನಾಲ್ಕು ಪ್ರಕಾರಗಳಲ್ಲಿ ಒಂದು ; ಇಷ್ಟದೇವರಿಗೆ ಸಮಾನವಾದ ರೂಪವನ್ನು ಪಡೆಯುವುದು** : ಕರ್ತರು ನಿಮ್ಮ ಗಣಂಗಳು ಎನ್ನ ತೊತ್ತು ಮಾಡಿ ಸಲಹಿದ ಸುಖವು ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯದಂತುಟಲ್ಲಾ (ಬಸವ. ೪೭೪); ಸಾರೂಪ್ಯದ ಸುಧೆಯಂತೆ . . . ಗಿರಿಜಾತೆ ಶೈಶವಲೀಲೆಯನೊಳಕೊಂಡು ತೊಳತೊಳಗಿ ಬೆಳಬೆಳಗಿ ನಳನಳಿಸಿ ಬಳೆಯುತಿರ್ದಳ್ (ಗಿರಿಕ. ೩-೭೯ ವ); ಸೇವಿಸುವಱಿಕೆಯ ದಾಸರ್ಗೆ ಮಱುವುಟ್ಟಂ ಪೋಗೊಳಿಸಿ ಸಾರೂಪ್ಯಮನಿತ್ತು ತನ್ನಂತು ಮಾಟ್ಟಿ ಸಾಲ್ಗೋಳಿನೆಸೆವ ಪುರುಷೋತ್ತಮನೊಂದು ವಾಸದ ಗುಡಿಯಿರ್ಕುಂ (ರಾಮಾಶ್ವ. ೭೪-೮). [ಸಂ.]

**ಸಾರೂಪ್ಯಪದ (ನಾ)**. **ನಾಲ್ಕು ಮೋಕ್ಷಪದವಿಗಳಲ್ಲಿ ಒಂದು; ಇಷ್ಟದೇವತೆಗೆ ಸಮಾನವಾದ ರೂಪವನ್ನು ಪಡೆದಿರುವ ಸ್ಥಾನ** : ನಿಮ್ಮ ಗಣಂಗಳ ಧ್ಯಾನವೇ ಎನಗೆ ಸಾರೂಪ್ಯಪದವಯ್ಯಾ (ಉರಿವ. ಕ. ೧೭೩-೨೩೩); ಸಾರೂಪ್ಯಪದವಿತ್ತನೀಶ್ವರ ನವಂಗೆ (ವೀಶೈಪು. ೨-೭ ಸೂಚನೆ). [ಸಂ.]

**ಸಾರೆ$_1$ (ನಾ)**. **ಹತ್ತಿರ; ಸಮೀಪ** : ಎಳೆಯೊಳ್ ತೋಱಿದ ರೂಪನಾಗಳೆ ನಭೋಭಾಗಾಗ್ರದೊಳ್ ತೋರ್ಪನಾಗಳೆ ಗೆಂಟಾಗಳೆ ಸಾರೆಯಾಗಿ ಪೊಳೆವಂ ಸೂಕ್ಷ್ಮಾಂಗನಾಗಿರ್ಪಂ (ಆದಿಪು. ೭-೧೨೧); ಗುರುವಿಂಗೂ ಶಿಷ್ಯಂಗೂ ಆವುದು ದೂರ ಆವುದು ಸಾರೆಯೆಂಬುದನಾರು ಬಲ್ಲರು (ಅವಚಂ. ೨೧೧-೯೪೯); ಸಾರೆಯಾಯ್ತಸ್ತ ಮಯಸಮಯ (ಕುವ್ಯಾಅ. ೧೭-೧೩). [< ಸಾರ್$_1$]

**ಸಾರೆ$_2$** 'ಸಾರಿ$_1$' ನೋ.

**ಸಾರೆ$_3$** 'ಸೇರೆ$_1$' ನೋ.

**ಸಾರೆ$_4$ (ಅ)**. ೧. **ಹತ್ತಿರದಲ್ಲಿ; ಸಮೀಪದಲ್ಲಿ**: ಆ ಪೊಟಲ ಸಾರೆ ಪರಾಳಕೂಟಮೆಂಬೂರೊಳ್ ದೇವಿಲನೆಂಬೊಂ ಶಾಕಟಿಕಂ ಪರದಂ (ವಡ್ಡಾರಾ. ೭೬-೮) ; ಕಾದಂಬರಿ ಕೇಯೂರಕನುಮಂ ಪರಿಜನಮುಮನರಸನ ಸಾರೆಯಿರವೇಟ್ಟು (ಕಾದಂಉ. ೧೭೦). **೨. ಒಡನೆ; ಜೊತೆಯಲ್ಲಿ** : ಶ್ರೀಧರೆಯುಂ ಯಶೋಧರೆಯುಂ ಗುಣವತಿ ಆರ್ಯಿಕೆ(ಕಂತಿಕೆ)ಯರ ಸಾರೆ ತಪಂಬಟ್ಟರ್ (ಚಾವುಂಪು. ೧೫೯); ಪುದಿದ ಸುತಮೋಹದಿಂದೋದಿದೊಡಂ ಮುನಿಜನದ ಸಾರೆ ಬಸದಿಯೊಳಿರ್ದಾಡಿದೊಡಮಿ ವನಲಸುಗೆಂದಾನಿದನಱಿಯದೆ ದುಷ್ಪಕಷ್ಟರೊಡನಾಡಿಸಿದೆಂ (ಧರ್ಮಾಮೃ. ೨-೮೦); ಈತನೊಡ್ಡಿನ ಸಾರೆ ಸಂಗರಕಾತುಕೊಂಡದೆ ಕೃಪನ ದಳಸಂಘಾತವೊಂದಕ್ಷೋಣಿ ಸುಭಟರ ಸಾಲ ಮಧ್ಯದಲಿ (ಕುವ್ಯಾಭೀ. ೩-೧೨). [< ಸಾರೆ$_1$]

**ಸಾರೆಕರೆ** 'ಸಾರೆಗರೆ' ನೋ.

**ಸಾರೆಗದ್ದೆ (ನಾ)**. **ಒಂದು ಬಗೆಯ ಗದ್ದೆ** : ಶ್ರೀಕಾಳೇಶ್ವರದೇವರಂಗಭೋಗಕಂ ತ್ರಿಕಾಲಪೂಜೆ ಸೊಡರುನಿವೇದ್ಯಗುರುಪರ್ವ್ವ ನಿಮಿತ್ತವಾಗಿ ಬಿಟ್ಟ ದತ್ತಿ X X X ಬಡಗಲು ಹಿರಿಯ ಕೆಱೆಯ ಕೆಳಗೆ ಗೌಡಉಂಬಳಿಯ ಸಾರೆಗದ್ದೆ ಮತ್ತರೊನ್ದು (ಎಕ. VI, ತರೀಕೆ. ೧೨-೩೪ ; 1166). [ಸಾರೆ$_1$ + ಗದ್ದೆ (< ಗಱ್ದೆ)]

**ಸಾರೆಗರೆ, ಸಾರೆಕರೆ (ಕ್ರಿ)**. **ಬಳಿಗೆ ಬರಹೇಳು; ಹತ್ತಿರಕ್ಕೆ ಕರೆ** : ಅಂದು ಕೂಡಲತ್ಯಾತುರಚಿತ್ತ ಸಾರೆಗರೆದಿನ್ನೆಗಮೇಕೆಯೊ ಬಾರದಿರ್ದೆಯೆಂದಾ ತರಳಾಕ್ಷಿ . . . ನುಡಿದಳ್ (ನೇಮಿಪು. ೭-೧೪೨) ; ಭೈರವೇಂದ್ರಂ ಸಂತಸಂದಳೆದು ಪುತ್ರನಂ ಸಾರೆಗರೆದು (ಕೊಟ್ಟೂಬ. ೧೮-೧೭). **ಸಾರೆಕರೆ** : ಆಸ್ಥಾಯಿಕಾಜನಕ್ಕೆ ಲಕ್ಕೆತೆಱದಿಂ ಪೊಗಟ್ಟು ಸಾರೆಕರೆದೇಱಲಿಕ್ಕಲ್ವೇಟ್ಟು ಕುಳ್ಳಿರಿಸಿ (ಶಾಂತಿಪು. ೩-೫೩ ವ). [ಸಾರೆ$_4$ + ಕರೆ$_1$]

**ಸಾರೆಬರ್** 'ಸಾರೆವರ್' ನೋ.

**ಸಾರೆಬರು** 'ಸಾರೆವರ್' ನೋ.

**ಸಾರೆವರ್, ಸಾರೆಬರ್, ಸಾರೆಬರು (ಕ್ರಿ)**. **ಸಮೀಪಿಸು; ಸನಿಹಕ್ಕೆ ಬರು**: ನೋಟಕರ್ ತಳವೆಳಗಾಗೆ ಸಾರೆವರೆ ನೀರದಮಾರ್ಗದಿನಂದು ನಾರದಂ (ಪಂಪಭಾ. ೭-೭); ಮಹಾಪ್ರತೀಹಾರನಪ್ಪ ಸುಭದ್ರನೆಂಬುದೊಂದು ವನಮಹಿಷನ ಸಾರೆವಂದು (ಪಂಚತಂ. ೩೩-೭) ; ಸರಸರನೆ ಸಾರೆವಂದು ಕೆಲದೊಳಿಕ್ಕಿರ್ದಾನೆದಲೆಯ ನೆತ್ತಪ್ಪುದಿದ ಮುತ್ತಂ ದಾಳಿಂಬಬೀಜಂಗೆತ್ತೆತ್ತಿ ಕಳ್ಕನೆ ಮುಕ್ಕಲ್ ನೋಡಿ (ರಾಜಶೇ. ೫-೫೫ ವ). **ಸಾರೆಬರ್** : ಆನುಮಿಾ ತೀರ್ಥದ ಸಮೀಪದೊಳ್ ತಾಪಸರೂಪಧಾರಿಯಾಗಿರ್ದು ಸಾರೆಬಂದುದೇನಾನುಂ ಪ್ರಾಣಿಗಳಂ ತಿಂದು ಕಾಲಮಂ ಕಟಿವೆಂ (ಪಂಚತಂ. ಅ. ೧೬೭-೧೪). **ಸಾರೆಬರು** : ಸಾರೆಬರೆವರೆ ಕಂಡನಲ್ಲಿ ಕುಬೇರನಾಳಿದ್ದುದು ತದೀಯ ಸರೋರುಹದ ಕಾಹಿನಲಿ ಯಕ್ಷರು ಲಕ್ಷಸಂಖ್ಯೆಯಲಿ (ಕುವ್ಯಾಅ. ೧೦-೪೫); ಆ ಮೃಕಂಡುಮುನಿ ತನ್ನಂದನಂ ದಿನಂ ಸಾರೆಬರೆ ಕಂಡು ಶಿವಪೂಜೆಯಂ ಮಾಡುತಿರಲು (ಚೆಬಪು. ೫೧-೧೯). [ಸಾರೆ$_4$ + ವರ್]

ಸಾರ್ೈಸು 'ಸಾರಿಸು₂' ನೋ.

**ಸಾರೋಕ್ತಿ** (ನಾ). ಸಾರವತ್ತಾದ ನುಡಿ ; ಸತ್ತ್ವವುಳ್ಳ ಮಾತು : ತನಯೆ ತಪದಿಂದೆ ನೀಂ ನಿನ್ನನೆಯಲ್ಲದೆ ನಮ್ಮ ಕುಲಮುಮಂ ಬೆಳಗಿದೆಯೆಂತೆನೆ ಮುಗಿಲ ಮುತ್ತು ಮುಗಿಲಂ ನೆನೆಯಿಸಿ ಮಂಡಲಿಯ ನಿಪುಣರಿಂ ಪೊಗಟಿಸದೇ ಎಂದು ಗಂಭೀರಧೀರೋದಾರಸಾರೋಕ್ತಿಗಳಂ ನುಡಿದು (ಶಾಂತಿಪು. ೪-೧೦೫ ವ). [ಸಂ.]

**ಸಾರೋಟು, ಸಾರಟು** (ನಾ). ಜೋಡುಕುದುರೆಗಳನ್ನಾಗಲಿ ಎತ್ತುಗಳನ್ನಾಗಲಿ ಹೂಡಿರುವ ಬಂಡಿ, – ಸವಾರಿಗಾಡಿ : ಕೈಯಾಡಿತು ಬೀಳಲಿಲ್ಲ ಏಟು; ಕಾಲಾಡಿತು, ಓಡಲಿಲ್ಲ ಕ್ರಾಂತಿಯ ಸಾರೋಟು (ನಡಬಂ. ೭೨-೧೯); ಸುಸಜ್ಜಿತವಾದ ಸಾರೋಟಿನ ಮೇಲೆ ಅವರನ್ನು ಕುಳ್ಳಿರಿಸಲಾಯಿತು (ಪ್ರೇಮಾಶ್ರ. ೫೪). **ಸಾರಟು** : ವಾಗ್ದೇವಿಯು ಕೂತುಕೊಂಡಿರುವ ಸಾರಟಿನ ಎತ್ತುಗಳು ಕಾಣಲಿಕ್ಕೆ ಪುಷ್ಟಿಯಾಗಿದ್ದರೂ ಸಾರಟು ಮೆಲ್ಲಗೆ ಎಳೆಯುವ ದೆಸೆಯಿಂದ ಚಂಚಲನೇತ್ರರ ಅವಸರವು ಹದಮೀರಿತು (ವಾಗ್ದೇವಿ. ೪೧). [← ಇಂ. Chariot. / ತಮಿ. ಚಾರಟ್ಟು ; ತುಳು. ಸಾರಟ್, ಸಾರೊಟು ; ತೆಲು. ಸಾರಟು]

**ಸಾರೋದ್ಧಾರ** (ನಾ). ೧. ಅತ್ಯುತ್ತಮವಾದುದು; ಉತ್ಕೃಷ್ಟವಾದುದು: ಹರಿಯೆ ಚಿತ್ತಯಿಸ್ಯೆಯಹಿಂಸಾಪರಮಧರ್ಮವು ಎಂಬ ವಾಕ್ಯದ ಸರಣಿ ಸಾರೋದ್ಧಾರ ವಲ್ಲಾ ಸಕಲದರುಶನಕ್ಕೆ (ಕುವ್ಯಾಭೀ. ೩-೫೦). ೨. ಪೂರ್ಣವಾದ ಉದ್ಧಾರ : ವೇದಪುರಾಣತಂತ್ರಗಳ ಸಾರೋದ್ಧಾರ ಮಾಡಿ ಪ್ರಾಚೀನಶಾಸ್ತ್ರದ ಗೌರವವನ್ನು ಉಜ್ವಲವಾಗಿರುವಂತೆ ಮಾಡಿದನು (ನಿಬಂಧ. II, ೩೭೭). ೩. ಕ್ರಮಬದ್ಧವಾಗಿಯೂ ನಿರಂತರವಾಗಿಯೂ ಆಗುವಂಥದು; ಅಡೆತಡೆಯಿಲ್ಲದುದು : ರಥೋತ್ಸವ ಮುನ್ನಾದ ಸಕಲೋತ್ಸವಂಗಳು ಧರ್ಮಾಧ್ಯಯನ ರಾಮಾನುಜಕೂಟ ಮುನ್ನಾದ ಸೇವೆಗಳು ಸಾರೋದ್ಧಾರವಾಗಿ ನಡೆಯತಕ್ಕ ಬಗ್ಯೆ . . . ನಿಷ್ಕರ್ಷೆಮಾಡಿ (ಎಕ. XIV, ಮೈಸೂರು, ೭೧-೩೩ ; ಸು. 1828); ಹೊಸಗನ್ನಡದಲ್ಲಾಗಲೀ ಹಳಗನ್ನಡದಲ್ಲಾಗಲೀ ಪಂಚಮೀವಿಭಕ್ತಿಯ ಕಾರ್ಯವನ್ನು ತೃತೀಯೆಯೇ ಸಾರೋದ್ಧಾರವಾಗಿ ಮಾಡುತ್ತ ಬಂದಿದೆ (ಸಂಶೋಧ. ೭೯). [ಸಂ.]

**ಸಾರೋರ್ವೀಜ** (ನಾ). ಸತ್ತ್ವಯುತವಾದ ಮರ : ಸಾರೋರ್ವೀಜಸಮಾಜ ದಿಂದೆಸೆವ ಲೀಲೋದ್ಯಾನಸಂತಾನದಿಂ . . . ಶ್ರೀಗೃಹರಾಜಿಯಿಂ ಗಜಪುರಂ ಸಂಸೇವ್ಯಮವ್ಯಾಹತಂ (ನೇಮಿಪು. ೨-೩೭). [ಸಂ.]

**ಸಾರ್ಕೆ** (ನಾ). ೧. ಸಮೀಪ ; ಹತ್ತಿರ : ಕದಪಿನ ಕಣ್ಣ ಸಾರ್ಕೆಯನಳಂಕೃತಮಪ್ಪ ಗಳಪ್ರದೇಶಮಂ ಪದಕದ ತಾಣಮಂ . . . ಅಂಗುಲೀಕದ ಕುಸುಮಂಗಳಂ ಪಱಿದು ಪತ್ತಿಸಿದಂತೆವೊಲೊಪ್ಪಿ ತೋರ್ಪಿನಂ (ಕಾವ್ಯಸಾ. ೬೭೬ ಕೂದ್ರಕ); ನೀರ್ ಪೊರ್ಕುವಟಿಯೊಳ್ ಜೋಲ್ವುಳ್ಳೆಡೆ ಸಾರ್ಕೆಯೊಳೇಂ ನೃಪನ ಮನಮನಳವಡಿಸಿದುದೋ (ಆದಿಪು. ೧೧-೧೪೫); ಅರ್ಕಕೀರ್ತ್ಯಾದಿರಾಜರ ಮುಖ ನಗೆವೆತ್ತುವರ್ಕನ ಕಂಡಬ್ಬದಂತೆ ಸಾರ್ಕೆಯ ಸಖರು ಮುಂತಾದವರೆಲ್ಲ ಕುಳಿರ್ಕೋಡಿದರು ನೋಡಿ ಜಿನನ (ಭರತೇ. ೭೭-೯೦) . ೨. ಹತ್ತಿರಕ್ಕೆ ಬರುವಿಕೆ ; ಆಗಮನ : ತದ್ನಾಯಿಕಾನಾಯಿಕೆಯರ . . . ನೆಱನಱಿದು ಪಾಡುವ ಪಾಟಕ್ಕಂ ಪೊಟ್ಟುಱಿದು ಸಾರ್ವ ಸಾರ್ಕೆಗಂ ಮನಂಬೆಚ್ಚು ಪತ್ತೆಪೊಯ್ದಂತಾಗಿರೆ (ಶಾಂತಿಪು. ೩-೫೯ ವ). ೩. ಒಡನಾಟ; ಸಂಗ: ಆ ಪ್ರಸವದ ದಿವ್ಯಸೌರಭದ ಸಾರ್ಕೆಯ ಸಮ್ಮದದಲ್ಲಿ ಕೂಡಿ ಬಂದೆಸಗಿದುದಾ . . . ಮಂದಮಾರುತಂ (ಮಹಾನೀ. ೧೪-೫). ೪. ದೊರಕಿದುದು; ಲಭ್ಯ; ಪ್ರಾಪ್ತಿ : ಸಿರಿಯ ಸಾರ್ಕೆಗಮಾಯತಿಯಿರ್ಕೆಗಂ ಪೆಱರ್ ಮೇಗೆನಲಿಲ್ಲದಂತು ನೆಗೞ್ದಿರ್ದುದಱಿಂ (ಶಾಂತಿಪು. ೧-೬೮); ಎಸಕದ ಸೋಮವಂಶಜರೊಳಾರ್ದೊರೆ ತನ್ನೊಳೆನಿಪ್ಪುದೊನ್ದು ಸಾಹಸದ ನಿಮಿರ್ಕೆ ವರ್ಧಿಸುವ ರಾಜ್ಯದರ್ಮಕ್ಕೆ . . . ವೈರಿಗಳ ರಾಜ್ಯದ ಸಾರ್ಕೆ ಕಡುರ್ಪ್ಪಿಂ ವಿಗುರ್ಬ್ಬಿಸುವ ಮಾಸೆಯಂ ಸುಡುವ ತೇಜದಳುರ್ಕೆ ಧರಿತ್ರಿಯೊಳ್ ವಿರಾಜಿಸುತ್ತಿರಲ್ (ಎಕ. XI, ದಾವಣ. ೮೫-೨೧ ; 1143) ; ನಿಜಭುಜಕ್ಕೆ ವರ್ಪ ವಸುಮತೀಚಕ್ರದ ಸಾರ್ಕೆಗೆ ಸಂಚಕರಮೆನಿಸಿ ಕೆಯ್ಸಾರ್ದು ಬೆಸನಂ ಪಾರ್ವ ಚಕ್ರರತ್ನಮಂ ಚಕ್ರಧರಸಪಾಂಗ ಲೋಚನಮರೀಚಿಗಳನುಜ್ವಳಿಸಿ ಬೆಸಸಲ್ (ವರ್ಧಪು. ೮-೭೦ ವ). [ಸಾರ್₁ + - ಕೆ]

**ಸಾರ್ಕೆಗುಡು** (ಕ್ರಿ). ಸಮೀಪಿಸಲು ಅವಕಾಶ ಕೊಡು, – ಆಸ್ಪದ ನೀಡು : ಎನ್ನನಪ್ಪುವಳಿಯಾಸೆಯಿಂ ದೂರದೊಳ್ ನಿಮಿರ್ವ ನಿಡುತೋಳ್ಗಳುಂ ತನ್ನೊಳ್ ತೋಱಿ ಸತ್ತ್ವಗುಣಕ್ಕೆ ಸಾರ್ಕೆಗುಡದೆ . . . ಅಚ್ಚಬೆಳ್ದಿಂಗಳೊಳೊಯ್ಯನೊಯ್ಯನೆ ಬರುತಿರ್ದನನಾಂ ದೂರದೊಳ್ ಕಂಡು ಭಯಂಗೊಂಡು (ಕಾದಂಬ. ೫೬೫). [ಸಾರ್ಕೆ + ಕುಡು₁ ( < ಕೊಡು₁)]

**ಸಾರ್ಕೆವರ್** (ಕ್ರಿ). ಹತ್ತಿರಕ್ಕೆ ಬರು; ಸಮೀಪಕ್ಕೆ ಬರು: ಕಂದರ್ಪನಾರ್ಪಿಂ ಕುಟಿಲ ಕುಸುಮಕೋದಂಡದೊಳ್ ಸಾರ್ಕೆವಂದೈಮೊಗ ನಿನ್ನಂ ಮಾಣದೆಚ್ಚಂದು (ಶಬಶಂ. ೨-೯). [ಸಾರ್ಕೆ + ಬರ್ ( < ವರ್)]

**ಸಾರ್ಚು** (ಕ್ರಿ). ೧. ಹತ್ತಿರಕ್ಕೆ ಬರು ; ಸಮೀಪಿಸು : "ಸಾರ್ಚು – ಸಮೀಪಾಗಮನೇ" (ಶಮಧಾ); ಪುಟ್ಟಿ ಸಮಸ್ತಧಾತ್ರಿಗೆ ಭಯಂ . . . ಶಿಶುಪಾಲನಿದಿರ್ಚಿ ಸಾರ್ಚಿದಂ (ಜಗವಿ. ೭-೯೫) ; ಸಲ್ಲಲಿತಾಂಗಭೂಷಣದೆ ನಿಲ್ಲದೆ ಜಗವ ಮೋಹಿಪ ಮಿಂಡಿವೆಂಗಳು ಪಲ್ಲಕ್ಕಿಯ ಸಾರ್ಚಿದರು (ಮೋಹತ. ೨೪-೪). ೨. ಹೋಗು; ತೆರಳು : ಇನಿಯನ ವರವಾಕ್ಯವ ಕೇಳ್ದು ಮಾನಿನಿ ನನೆಗೋಲನರ್ಧಾಂಗನೆಗೆ ಮೊನೆದೋಱದೆ ಮೃದು ವಾಕ್ಯದಿಂದಡಿಗೆಯ ಮನೆಗೆಲಸಕೆ ಸಾರ್ಚಿದಳು (ಮೋಹತ. ೧೧-೪೧). ೩. ಬಂದು ಸೇರು; ತಲುಪು: ಭವನಾಂಗಣದೊಳ್ ಸಾರ್ಚಿದಿಂದ್ರಾಯುಧಮಂ ಚಂದ್ರಾಪೀಡನೇಱಿ ದಿಗಂತರಂಗಳೆಲ್ಲಮನಂತಹಯಹೇಷಾರವಂಗಳಿಂ ತೆಕ್ಕನೆ ತೀವೆ . . . ಪೊಱಮಟ್ಟು (ಕಾದಂಬ. ೫೧೧). ೪. ಮುಟ್ಟು ; ಸೋಕು : ಚರ್ಚರಲ್ ಶಶಿಶಿಶುವಂ ಕಱಿಗರ್ಚಲ್ ಘನಘಟೆಯನುರ್ಚಲಮರದ್ರುಮಮಂ ಸಾರ್ಚಲಿನನೆಂಬ ಸೊಡರನೊಡರ್ಚಿದುವೆನೆ ನೀಳ್ದುವಿದಱ ಶಿಖರಕರಂಗಳ್ (ಕಾವ್ಯಾವ. ೫೫೬). ೫. ತಲುಪಿಸು; ಸೇರಿಸು: ಭವಜಳಧಿಯ ತಡಿಗೆ ಸಾರ್ಚು . . . ನೀಂ ಭವಮಥನಾ (ಆದಿಪು. ೧೦-೫೮); ತಮ್ಮಂ ನಂಬಿದರಂ ಸೊರೆಯ ಕಾಯ್ ಮುಂತಾಗಿ ನದಿಯ ತಡಿಯಂ ಸಾರ್ಚುವುದೆಂದೊಡೆ (ಪಂಚತಂ. ಅ. ೬೫-೧೫); ಎಱೆಯ ಕೇಳ್ ನಿನ್ನ ವಿಯೋಗಸಂತಾಪದ ತೊಱೆಯೊಳು ಮುಳುಗಿರ್ದನೆನ್ನ ಮಱೆಯದೆ ತಡಿಗೆ ಸಾರ್ಚಿದಳನೀಕ್ಷಿಪುದು (ಮೋಹತ. ೩೧-೪೦). ೬. ಮುಟ್ಟಿಸು; ತಾಗಿಸು; ಸೋಕಿಸು : ಅವರ್ ಚರಣಕಮಲದೊಳ್ ಶಿರೋಭಾಗಮಂ ಸಾರ್ಚುವುದುಂ (ದಶಕು. ೨-೩೪ ವ); ಬೊಮ್ಮಗೆ ಪೇಳೆ ತನ್ನ ತೋಳೊಳಪ್ಪುವನ ಸೃಷ್ಟಿಸಿ ಕುಡಬೇಕೆಂದು ಭಾಳವನಡಿಗೆ ಸಾರ್ಚಿದಳು (ಮೋಹತ. ೯-೨೯). ೭. ಚಾಚು; ನೀಡು: ನಟ್ಟಿರುಳ್ ಮಱೆದು ಸಾರ್ಚಿದ ನಲ್ಲಳ ತಳ್ತ ತೋಳ್ಗಳಂ ಮೆಲ್ಲಮೆಲ್ಲನೆ ಪತ್ತುವಿಡಿಸಿ (ಪಂಪಭಾ. ೪-೧೨) ; ಪದಘಾತಕ್ಕೆ ಧರಿತ್ರಿ ಬಾಯ್ಬಿಡೆ ಭುಜಾದಂಡಂಗಳಂ ಸಾರ್ಚಿ ಬಿರ್ಚಿದಿಳಾಸಂಧಿಗೆ ಮೆಯ್ಯೊಣರ್ಚಿ (ಪಂರಾಮಾ. ೧೧-೯); ಪೊಸವಾಣಿತಿವುಲ್ಲೆ . . . ತೊರೆದ ಮೊಲೆಯಂ ಸಾರ್ಚಿ ತಣಿಯೂಡದೆ ನಡೆಗೊಳಿಸಿ ತವಕದಿಂ ಬರುತ್ತುಂ (ಪುಷ್ಪಪು. ೩-೭೭ ವ). ೮. ಧರಿಸು; ತೊಡು: ಚಂಚನ್ಮಣಿಕಿಂಕಿಣಿಗಳಿನಂಚಿತಮಾಡಿರ್ದ ವಿವಿಧರಚನಾಯುತಸತ್ಕಾಂಚನ ಕಾಂಚೀವಳಯಮುಮಂ ಚೆಲ್ವನಿತಂಬದಲ್ಲಿ ಸಾರ್ಚಿದಳೊಲವಿಂ (ಬಾಧಪು. ೬-೬೯) ; ಮಲಯರುಹಘುಸೃಣಂಗಳಂ ಪೂಸುವಂಗದೊಳ್ ತಳೆವರೇ ಭಸಿತಮಂ ದಿವ್ಯವಸ್ತ್ರಮನುಡುವ ಸೆಳೆನಡುವಿಗಕಟ ವಲ್ಕಲಮನೇಂ ಸಾರ್ಚುವರೆ (ಚೆಬಪು. ೩೭-೮). ೯. ಧರಿಸುವಂತೆ ಮಾಡು; ತೊಡಿಸು: ಸತಿಗೆ ಮಣಿಪಾದುಕೆಗಳಂ ಸಾರ್ಚಿ ಕೆಲಕೆಲರ್ ಕೃತಪುಣ್ಯಕೆಗಾದರದಿ ಕೈಗೊಟ್ಟು ಕೆಲಕೆಲರ್ (ವರ್ಧಪು. ೧೩-೫೨); ಶತಕೋಟಿನೀಲಮಾಣಿಕ್ಯದೋಲೆಯ ಬಾಣಸುತೆಯ ಕರ್ಣದೊಳು ಸಾರ್ಚಿದರು (ಮೋಹತ. ೨೩-೩೫). ೧೦. (ಒರಗಿಸಿ) ಇಡು; ಇರಿಸು : ಕೆಲದ ಲತೆಯ ಮೆಳೆಯೊಳ್ ಬಿಲ್ಲುಮಂಬುಮಂ ಸಾರ್ಚಿ ಕೊಳನಂ ಪೊಕ್ಕು (ಪಂಪಭಾ. ೮-೩೮ ವ); ಮೇಗಣ್ಗೆತ್ತಿ ಪಾದಂಗಳಂ ಶಿರಮಂ ಸೂಚಿಯ ಮೇಲೆ ಸಾರ್ಚಿ ತಪಮಂ ಮಾಳ್ಪನ್ನ ಭಾವಂ . . . ಬೀಱಿಶಾಶ್ಚರ್ಯಮಂ (ವೃಷವಿ. ೧೧-೪೭); ಸುಗುಣೋದ್ರೇಕಕೆ ಕೂರ್ತು ವೀರಚಿಕದೇವಂ ಬೀಣೆಯಂ ಲೀಲೆಯಿಂ ತೆಗೆದುತ್ತುಂಗದೊಳಿಟ್ಟು ನೇವರಿಸಿ ವಕ್ಷೋಜಂಗಳೊಳ್ ಸಾರ್ಚಿ ಸೆಳ್ಳುಗುರಿಂ ಠಾವಱಿತೌಂಕಿ . . . ಸರಂದೋಱುಗುಂ (ಚಿಕವಿ. ೪-೧೩೨). ೧೧. ಹತ್ತಿರಕ್ಕೆ ತರು; ಸಮೀಪಕ್ಕೆ ತೆಗೆದುಕೊಂಡು ಬರು: ತದಬ್ಜಮಂ ನೃಪವರಂ ವಕ್ತ್ರಾಬ್ಜದೊಳ್ ಸಾರ್ಚಿ ಕಂಪು ಕರಂ ಪೊಂಪುಳಿಯೆಂದು ಸೋಲ್ತುಸಿರ್ವಿನಂ ಘ್ರಾಣೇಂದ್ರಿಯೌತ್ಸುಕ್ಯಮಂ ಪ್ರಕಟಂ ಮಾಡಿ ನೃಪಂಗಲಂಪು

ವಡೆದತ್ತಂಭೋಜಗಂಧಾಸವಂ (ಆದಿಪು. ೪-೬೯) ; ಕಡುಗಲಿ ಚಂಡಿಕೆಯಂ ತನ್ನೆಡಗ್ಕೆಯಿಂ ದಡಸಿ ಪಿಡಿದು ಸಾರ್ಚಿ ಕೊರಲ್ಗಾ ಕಡುಗಮನೆ ಘರಿಘರಿಲನೆಡೆಯುಡುಗದೆ ಕೊಱೆದರರೆ ಮಡಗಿದಂ ನಿಜಶಿರಮಂ (ರಾಜಶೇ. ೧೪-೨೯). ೧೨. ಕೊಡು; ಒಪ್ಪಿಸು : ಪಿರಿದಪ್ಪೀ ದ್ರವ್ಯಮಂ ಸಾರ್ಚಿ ಮೇದಿನಿಕಾಂತಾಪತಿಯಲ್ಲಿ ಮೆಚ್ಚುಗೊಳುವೆಂ (ಧರ್ಮಾಮೃ. ೧೨-೧೮೬); ಎಲ್ಲ ತೇಜಂಗಳಂ ಶರಣತತಿಗೀವುತಂ ಎಲ್ಲ ಮಾನ್ಯಂಗಳಂ ಭಕ್ತರ್ಗೆ ಸಾರ್ಚುತಂ (೩೪೮ರ.ದೇ. ೪೯-೧೨); ತೆಂಗಾಯಿ ಪಲಸು ಕಿತ್ತಳೆ ಮಾವು ಮಾದಲ ಭೃಂಗಾಯಿವಣ್ಗಳು ಸಹಿತ ಹಿಂಗದ ಬಹುಫಲಾದಿಗಳ ತೋಂಟಿಗರು ಸಾರಂಗಪಾಣಿಗೆ ಸಾರ್ಚಿದರು (ಮೋಹತ. ೪-೬೨). ೧೩. (ಪಕ್ಕಕ್ಕೆ) ನೂಕು; ತಳ್ಳು: ತಡವರಿಸಿ ಕೈಯಿಡುವ ಬಾಲಂಗೆ ಮೋಹದಿಂದೆ ಜೋಲ್ದೊಲೆವ ಹಾರಮಂ ಸರಿದು ಮುಯ್ಯಿಗೆ ಸಾರ್ಚಿ ಪಾಲ್ದೊರೆದ ಮೊಲೆಯೂಡಿ . . . ತೂಗುವಳು (ಜೈಮಿಭಾ. ೧೮-೨೦). ೧೪. ಸರಿಪಡಿಸು; ತಿದ್ದು: ನೆವದಿಂ ಪರ್ಚುವ ಮುತ್ತಿನೆಕ್ಕಸರವಂ ಜೋಲ್ದಿರ್ದುವೆಂಬಂತೆ ಸಾರ್ಚುವ ಕರ್ಣೋತ್ಪಲಮಂ ತೊಡರ್ಚುವ . . . ಅತಿಪ್ರೌಢೆಯ ಪೊರ್ದುವಾಸೆಗೆ ನೃಪಂ ರೋಮಾಂಚಮಂ ತಾಳ್ದಿದಂ (ಮಲ್ಲಿಪು. ೩-೬೩); ಚರಣತಳಕ್ಕೆ ಬೀೞ್ಚ ಮಣಿಕಾಂಚಿಯನೆತ್ತದೆಯುರ್ಚುತಿರ್ಪ ನೂಪುರಮನೆ ಸೃತು ಸಾರ್ಚದೆ . . . ಬಂದು ಸಂಭ್ರಮದೊಳೀಕ್ಷಿಸಿದಳ್ ಪದೆಪಿಂ ತ್ರಿಪಿಷ್ಟನಂ (ಶಾಂತೀಶ್ವ. ೩-೨೯) ; ಮೊಲೆವಿಣ್ಪಂ ಬಳ್ಕುತುಂ . . . ಚಲವೇಣೀಭಾರದಿಂದೋಸರಿಸುವ ಮುಸುಕಂ ಸಾರ್ಚುತುಂ ಪಾಣ್ಬೆ ಪೋದಳ್ (ರಸರ. ೪-೧೮೯). ೧೫. ಆವರಣವನ್ನಾಗಿ ಮಾಡಿಕೊಳ್ಳು; ಮರೆಮಾಡಿಕೊಳ್ಳು : ನಡುಗುತ್ತುಂ ಮೇಲುದೆಂದೊರ್ಮೊದಲೆ ತೆಗೆದು ಹಾರಾಂಶುವಂ ಸಾರ್ಚುತಂ . . . ಕಾಂತೆಯೆಂತಾನುಮೆಟ್ದಳ್ (ಕಾದಂಉ. ೨೩೪) ; ಇದು ಕನಸೆಂಬೊಡಂ ಕನಸಿದಲ್ತು ದಿಟಂ . . . ಅದಱ ಕಾರಣಮಂ ತಿಳಿವನ್ನೆಗಂ ವನಾಂತದೊಳೊಱಗಿರ್ಪೆನೆಂದು ಮುಸುಕಂ ಪದೆದೆನ್ನ ಮುಖಕ್ಕೆ ಸಾರ್ಚಿದೆಂ (ದಶಕು. ೧೧-೩೦) ; ಸೆಱಗ ಮೊಗಕೆ ಸಾರ್ಚಿ ನಗುವಳು ಕಂಭದ ಮಱೆಗೆ ಹೋಹಳು (ಭರಚ. ೮-೩೯). ೧೬. ಸಿದ್ಧಪಡಿಸು; ಅಣಿಗೊಳಿಸು : ಇಂದುವದನೆ ರುಕ್ಮಿಣಿ ಸತ್ಯಭಾಮೆಯರಂದುಗೆ ಘಲಿರೆಂಬ ರವದಿ ಬಂದು ವಸಂತಪೂಜೆಯ ಮಾಡಬೇಕೆನಲಂದು ಸಾರ್ಚಿದರು ವಸ್ತುಗಳ (ಮೋಹತ. ೧೪-೪೭). ೧೭. (ಬಿಲ್ಲಿಗೆ) ಬಾಣವನ್ನು ತೊಡು,– ಹೂಡು : ಮೊನೆಯಂಬಂ ದೊಣೆಯಿಂದಮುರ್ಚಿ ತಿರುವಾಯೊಳ್ ಸಾರ್ಚಿ ಬೇಗಂ ಪ್ರಹಸ್ತನ ವಕ್ಷಸ್ಥಲಮಂ ಕರುತ್ತಿಸುವುದುಂ (ಪಂರಾಮಾ. ೧೩-೯೦); ನಿಡುಸರಳ ತುಡು ಕೆಲಕೆ ಸಿಡಿಯದಿರ್ಪೊಡೆ ಸಾರ್ಚು ತುಡುಕು (ಜೈಮಿಭಾ. ೨೮-೪೫). ೧೮. ಒಡ್ಡು ; ಈಡು ಮಾಡು: ಇದಕ್ಕೆಣೆಯಾಗಿ ಮದೀಯ ಪುತ್ರನಂ ಮಾಣದೆ ತಂದು ಭಂಡಿಗಿರ ದಿಕ್ಕುವೆನೆಂದು ನಿಜಾತ್ಮಜಾತನಂ ಕ್ಷೋಣಿಪನಂದು ತಚ್ಛಕಟಮಾರ್ಗಕೆ ಸಾರ್ಚಿದಂ (ಉದ್ಭಟ. ೧೨-೮೫). ೧೯. ಕೂಡಿಸು; ಸೇರಿಸು : ಪಲ್ಲವಾಧರವ ಕರ್ದುಂಕಿದು ಪೊಳೆವ ಕೆಂಬಲ್ಲಿಗೆ ರಸದಂಬುಲವ ಮೆಲ್ಲಗೆ ಸಾರ್ಚಿ ನಾಲಗೆಯಿಂದ ರತಿದೇವಿ ಬಲ್ಲಂತೆ ಶಾಖ ಮಾಡಿದಳು (ಮೋಹತ. ೧೬-೫೯). ೨೦. ತಾಕು; ಎದುರಾಗು : ಚೋಳಂ ಕೊಟ್ಟ ನಾಡಂ ಕೊಡದೆ ಕಾದಿ ಕೊಳ್ಳಿಮೆನೆ ವಿಜಿಗೀಷುವೃತ್ತಿಯನ್ವಮೆತ್ತಿ ಬಳಮೆರಡುಂ ಸಾರ್ಚ್ಚಿದಲ್ಲಿ (ಎಕ. II, ೨೪೦-೨೧ ; 1175). ೨೧. ಒದಗು; ಸಂಭವಿಸು: ಸಾರ್ಚಿದಗಲ್ಕೆಯೊಳಿಂತು ಬೇಟದುಬ್ಬದಿಗಮನಾಂತ ನಲ್ಲಳ ಮುಖಾಂಬುಜಮಂ ನಡೆ ನೋಡಿ ನೋಡಿ ಸಾಯದೆ ಬರ್ದುಕಾಡಿದಂ (ಆದಿಪು. ೧೨-೨೫); ಕೃತಶಾಸ್ತ್ರ[ರ್]ಧೃತಶಾಸ್ತ್ರರಪ್ರತಿಹತಪ್ರಾಗಲ್ಭ್ಯಗಳ್ ಪೃಥಾಸುತರುದ್ಯೋಗಮನೆತ್ತಿಕೊಳ್ವ ದೆವಸಂ ಸಾರ್ಚಿತ್ತು (ಪಂಪಭಾ. ೮-೯೭). ೨೨. ಉಂಟುಮಾಡು; ಒದಗಿಸು: ನಿರ್ದೋಷಭಾಸುರತೆಯಿಂ ದಿನರಾಜನಂತೆ ಮತ್ಕೃತಿ ಬುಧಗುರುತರಾನಂದಮಂ ಸಾರ್ಚುತಿರ್ಕುಳಿಗೊಳದೆ ಮನಮಂ ಮಹೀತಳದೊಳು (ನಂದಿವಾ. ೧-೨೫) ; ಶೋಕರಸಂದಾಳ್ದುದಿಭಂ ವ್ಯಥಾನ್ಯಪರಿಭಂಗಂ ಭಂಗಮಂ ಸಾರ್ಚದೇ (ರಾಜಶೇ. ೫-೭೩). ೨೩. ಹರಡು ; ಹಾಸು : ತುಡು ಕೋಲಂ ಹರಿಣಂಗೆ ಸಾರ್ಚು ಬಲೆಯಂ ಕೋಕಂಗೆ (ಕಾವ್ಯಸಾ. ೧೦೬೪). ೨೪. ಹಬ್ಬು; ವ್ಯಾಪಿಸು : ಪೊಟ್ಟು ಪೊದಟ್ಟು ಸಾರ್ಚಿತೋ ಪೊಸಯಿಸಿಯಾಗಸಂ ನೆಲಕುರುಳ್ಚಿತೊ ಪೆರ್ಚಿತುಪೆರ್ಚಿತೆಂಬಿನಂ ಪಸರಿಸುವಾ ಮರಾಟಭಟರಂ ಸದೆದಂ ಚಿಕದೇವಭೂವರಂ (ಅಪ್ರತಿ. ೨೫-೨೨). ೨೫. ಹಬ್ಬಿಸು; ವ್ಯಾಪಿಸುವಂತೆ ಮಾಡು : ಘುಡುಘುಡಿಸಿ ಮೊಳಗುವಸಿತಾಭ್ರಮಂ ಕುಲಗಿರಿತಟಪ್ರದೇಶಕೆ ಸಾರ್ಚುವನಿಲನಂತೆ . . . ನಿರ್ಮಲವಾಜಿಯಂ ಸುವೇಗಂ ತಂದು ನಿಲಿಸಿದಂ ಧರ್ಮಜನ ಸಮ್ಮುಖದೊಳು (ಜೈಮಿಭಾ. ೫-೧೧); ಕ್ಲಾಂತಿಯೇಂ ನಿನ್ನ ಕಡುಸಂತಸದ ತಿಳಿಮೆಗಿನ್ನೆಂತು ನಿನ್ನಯ ಬಳಿಗೆ ತನ್ನ ನೆಳಲಂ ಚಿಂತೆ ಸಾರ್ಚಿತು? (ಗಿಳಿಮಂ. ೮-೯೪). ೨೬. ಸೂಚಿಸು ; ಪ್ರಕಟಪಡಿಸು : ಬೆರ್ಚಂ ಕಟ್ಟಿದ ರೀತಿಯಂ ಮೆಱೆಯೆ ಶಾರ್ಙ್ಗಂ . . . ಗದೆ ಸುವರ್ಣಸ್ತಂಭದೊಂದೊರೆಯಂ ಸಾರ್ಚಲ್ (ಪಸ್ತವಂ. ೩-೨೩). ೨೭. ಎಳೆ; ಜಗ್ಗು : ಪಿರಿದುಮುಧರ್ಮದೆ ಗತಿಗೆಟ್ಟರಸುಗಳೆಲೆ ಪೆಟವುಗೊಂಡರೆಂಬಂತೆ ವಲಂ ಕರವಿಡಿದು ಸಾರ್ಚುವೆತ್ತುವ ತುರಿಪದೆ ಕೆಯ್ಗುಡುವುದಕ್ಕೆ ಲಜ್ಜಿಸರರಬರ್ (ಕಾದಂಪೂ. ೫೬೦). [ಸಾರ್ + - ಚು]

ಸಾರ್ಚುಂದೊಲೆ (ನಾ). (ಯುದ್ಧದ ಸಂದರ್ಭಗಳಲ್ಲಿ) ಕೋಟೆಗೆ ಒರಗಿಸಿ, ಅದರ ಮೂಲಕ ಹತ್ತುತ್ತಿದ್ದ ಮರದ ದಿಮ್ಮಿ ,– ತೊಲೆ : ದುರ್ಗಕ್ಕೆ ನಿಚ್ಚಣಿ ಸಾರ್ಚುಂದೊಲೆ ವೀರಸೇತು . . . ಪಡಿಗೋಂಟೆಯೆಂಬ ಬಹುಕೋಟಾಯಂತ್ರ ಸಾಮಗ್ರಿ ತಿಂತಿಣಿಗೊಂಡಾಂತಿರೆ ಲಗ್ಗೆಗಾರ್ದು ವಸುಷೇಣಂ ಸಾರ್ದು ಸೂಟ್ಕೆಸಿದಂ (ಅನಂಪು. ೧೧-೮೩). [ಸಾರ್ಚು + ತೊಲ್]

ಸಾರ್ತರ್ (ಕ್ರಿ). ೧. ಹತ್ತಿರಕ್ಕೆ ಬರು; ಸಮೀಪಿಸು: "ಸಾರ್ತರ್ (ಸಾರ್ + ತರ್) - ಸಮೀಪಾಗಮನೇ" (ಶಮಧಾ); ಮುನಿ ವೀತರಾಗನೆಂದುಂ ಬನಮಂ ಸಾರ್ತಕ್ಕುಮಾವ ತೆಱದಿಂ ಪೋಪಂ . . . ಪಗೆವಂಗೆ ಪಾಪಕರ್ಮಂ ಪೊಲ್ಲಂ (ಕವಿರಾ. ೧-೭೯); ಆಂ ಸತ್ತೊಡಂ ನಂಬನೆನ್ನಂ ಮಱುಗುತ್ತಿರ್ದಪ್ಪಳಿಂದೆಂದೆಣಿಸಿ ನುಡಿದೊಡಂ ಪೇೞ್ನಾನೇನುಮಂ ಕೇಳ್ ಪೆಱತೇಂ ಸಾರ್ತಡವಂ ಕಾಲ್ಪಿಡಿದೊಡವೊಸೆಯಂ (ಕಾದಂಉ. ೫೪೧); ಮನೋಹರೆ ಮಾನ್ಯೆ ಮೇನೆ ಸಾರ್ತಂದು ನಿಜೇಶನಂ ಪ್ರಿಯದೊಳಪ್ಪಿ . . . ಸುಖಾನ್ವಿತೆಯಾಗುತೊಪ್ಪಿದಳ್ (ಗಿರಿಕ. ೩-೧೯). ೨. ಒದಗು; ಉಂಟಾಗು: ನುಡಿ ತಡವಪ್ಪುದೊಂದು . . . ನುಡಿಗಳ್ ಮೊಱೆಯಂ ಮಱೆಯಿಪ್ಪುದೊಂದು ಕಳ್ಗಡಿದವರಂದಮಿಂತು ಸಿರಿ ಸಾರ್ತರೆ ಸಾರ್ವುದು (ಪಂಪಭಾ. ೨-೪೯); ಉದಯಂ ರಾಜೇಂದ್ರಚಂದ್ರಾತ್ಮಕನೆನಿಸಿದ ಚಂದ್ರಂಗೆ ಸಾರ್ತಂದುದು (ಕಾದಂಉ. ೭೭೬); ಪದುಳಂ ತ್ರಿಪ್ರಭೃತಿಗ್ರಹಂಗಳಿರೆ ತಂತಮ್ಮುಚ್ಚದೊಳ್ ಭೂಪವಂಶದವಂ ಭೂಪತಿಯಕ್ಕುಂ . . . ಮೂಲತ್ರಿಕೋಣದೊಳಂ ತತ್ಕ್ರಮದಿಂ ಗ್ರಹಂಗಳಿರೆಯುಂ ಸಾರ್ತಕ್ಕುಮಂತಾ ಫಳಂ (ಜಾತತಿ. ೧೨-೧). [ಸಾರ್ + ತರ್]

ಸಾರ್ಥ (ಗು). ೧. ಅರ್ಥಸಹಿತವಾದ ; ಅರ್ಥಗರ್ಭಿತವಾದ. ೨. ಗುರಿಯನ್ನು ಹೊಂದಿದ; ಲಕ್ಷ್ಯವುಳ್ಳ. ೩. ಒಂದೇ ರೀತಿಯ ಅರ್ಥವನ್ನುಳ್ಳ; ಸಮಾನಾರ್ಥಕವಾದ. ೪. ಉಪಯುಕ್ತವಾದ ; ಪ್ರಯೋಜನದಿಂದ ಕೂಡಿದ: ಅಮ್ಮಸೂನು, ನಿನ್ನ ಬಾಳು ಸಾರ್ಥ ಬಾಳು (ಮುಂದಳಿ: ೪೦-೯). ೫. ಸಮೃದ್ಧವಾದ ; ಶ್ರೀಮಂತವಾದ. (ನಾ). ೬. ಅರ್ಥಸಹಿತವಾದುದು; ಅನ್ವರ್ಥವಾದುದು: ಅನುಜಂ ನಾಮಾಕ್ಷರದಿಂದನಂತವೀರ್ಯಂ ಪರಾಕ್ರಮಕ್ರಮದಿಂ ತನ್ನನೆ ತಾನೆ ಪೋಲ್ದುಮೆಂಬಿನಮನಂತವೀರ್ಯಂಗನಂತವೀರ್ಯತೆ ಸಾರ್ಥಂ (ಶಾಂತಿಪು. ೨-೧೧). ೭. ವ್ಯಾಪಾರಸ್ಥರ ಗುಂಪು; ವರ್ತಕಸಮೂಹ : ಸಮುದ್ರದತ್ತಂ ಮಗುಟ್ದು ಬಂದು . . ಆರುಮಱಿಯದಂದಿನಿರುಳು ಸಾರ್ಥಮಂ ಕೂಡಿ ಪೋದಂ (ಬಾವುಪು. ೮೦); ಆ ಬೀಡಂ ಕಂಡೆಡೆಗೊಂಡು ಕಿರಾತಸೇನೆ ಕವಿದಿಱಿಯೆ ನೆರಂಗೆಡೆ[ದಾ] ಸಾರ್ಥಂ ದೆಸೆಗೆಟ್ಟಡವಿಯೊಳತ್ತಿತ್ತ ಸೂಸಿ ಪೋಪುದುಮಾಗಳ್ ಆ ಸಾರ್ಥದೊಡನೆ ತೀರ್ಥ ಯಾತ್ರಾ ನಿಮಿತ್ತದಿಂ ಬರುತಿರ್ದ ಸಾಗರಸೇನರೆಂಬ ಯೋಗೀಶ್ವರರ್ . . . ಬರ್ಪಿನಂ (ವರ್ಧಮಾ. ೬-೮) ; ನಿರುಪಮನಂದು ಪೇಟ್ದು ಪೊಱಮಟ್ಟರದಾಗಳೆ ದಕ್ಷಿಣಾಸೆಯೊಳ್ ಬರುತಿರೆ ಸಾರ್ಥಮೊಂದನಸಮೋದ್ಯಮತತ್ಪರನಂದು ಕಂಡದಂ ತ್ವರಿತದಿನೆಯ್ದಿ ವಂದು (ನೇಮಿಪು. ೪-೬೮). ೮. ಮನುಷ್ಯರ ಸಮೂಹ; ಜನಸಮುದಾಯ. ೯. ಯಾವುದಾದರೂ ಸಮಾನಜಾತಿಯ ಪ್ರಾಣಿಗಳ ಗುಂಪು,– ಹಿಂಡು : "ಸಮರೂಪಜಂತು ಸಮುದಯಮುಮುದಕ್ಕುಂ ಸಂಘ ಸಾರ್ಥ(ಮನಿತುಂ) ತಿರ್ಯಕ್ಸಮುದಾಯಂ ಯೂಥಂ ಪಶುಸಮೂಹ(ಮದು ತಾಂ)ಸಮಂತು ಸಮಜ ಮೆನಿಕ್ಕುಂ" (ವಸ್ತುಕೋ. ೧೦೨-೨೮). ೧೦. ಯಾತ್ರಿಕರ ಗುಂಪು; ಯಾತ್ರಾರ್ಥಿಗಳ

ಸಮೂಹ. ೧೧. ರಾಶಿ; ಒಟ್ಟಿಲು: ಯಮತನೂಜಂ . . . ನಿನಗಾವ ವಸ್ತುವುಂ ತೀರದುದಿಲ್ಲವಾದೊಡಮಿವಂ ಜನರಂಜನೆಗಿತ್ತನೆಂದು ದೈತ್ಯಾರಿಗೆ ಕೊಟ್ಟನುತ್ತಮಗಜಾಶ್ವರಥಾದಿ ಪದಾರ್ಥಸಾರ್ಥಮಂ (ಜಗವಿ. ೧೭-೫೯). [ಸಂ.]

**ಸಾರ್ಥಕ** (ಗು). ೧. ಅರ್ಥದಿಂದ ಕೂಡಿದ; ಯಥಾರ್ಥವಾದ : ಹೊಯಿಸಳ ಬಿಟ್ಟಿದೇವಪ್ರಭುವು . . . ಭಗವಂತನ ಆಶೀರ್ವಾದವನ್ನೂ ಆತನ ನಾಮಾಂಕಿತವೆ ಆದ ವಿಷ್ಣುವರ್ಧನನೆಂಬ ಸಾರ್ಥಕನಾಮವನ್ನೂ ಆಂತರು (ಶಾಂತಲಾ. ೧೨೧). ೨. ಪ್ರಯೋಜನವುಳ್ಳ; ಸಫಲವಾದ; ಉಪಯುಕ್ತವಾದ. (ನಾ). ೩. ಅರ್ಥಪೂರ್ಣವಾದುದು; ಯಥಾರ್ಥವಾದುದು: ಕುವಲಯಮಂ ಮೃದುಕರಪಾತವಿಳಾಸದಿನೆಯ್ದೆ ನೀನಲರ್ಚೆ ನಿಮಿರ್ಚೆ ಭುವನಾಂತರಾಳದೊಳ್ ತನುಭವ ನಿನ್ನಯ ರಾಜನಾಮಮಂ ಸಾರ್ಥಕಮಂ (ಚಂದ್ರಪ್ರ. ೪-೨೦); ನನ್ನ ರಾಜಶಬ್ದವು ಸಾರ್ಥಕವಾದದ್ದು (ಶಾಕುಂತ. ೬೫-೨೨); ಮಂಥರೆಯ . . . ಬದುಕು ಸಾರ್ಥಕ ಮಧುರಮಾಯ್ತು ಶಿಶುಸನ್ನಿಧಿಯ ಪ್ರೇಮಸೌಂದರ್ಯ ಮಹಿಮೆಯಲಿ (ಶ್ರೀರಾಮಾ . ೨೩-೬೧೨). ೪. ಫಲಕಾರಿಯಾದುದು; ಸಫಲವಾದುದು: ನೋಳ್ಪುದೀ ಮರದೊಳದೆಷ್ಟೊಂದು ಫಲವಿದೆ ಮಾಗಿ ಸಕಾಲಿಕವಾಗಿ ನೆರಳಿದೆ ಹಣ್ಣದೆ ಸಾರ್ಥಕವಾಗಿದೆ (೧೦ಚಾಪ. ೧೯೭-೨೨). ೫. ಪ್ರಯೋಜನ; ಉಪಯೋಗ: ಆಗಿ ಹೋದ ಮೇಲೆ ಚಿಂತಿಸುವುದರಲ್ಲಿ ಯಾವ ಸಾರ್ಥಕವೂ ಇಲ್ಲ (ದೇವಹಂ. ೨೫೯). ೬. ಗುಂಪು; ಸಮೂಹ: ಜಗಮನ ದಿರ್ಪಲಾರ್ಪ ಬಿರುದಾಂತ ಬಲಂಗಳನೆತ್ತಿ ನುಂಗಿ ವಿಳಾಸಮೊಪ್ಪೆ ಗದ್ದಿಗೆಯೊಳಗಿರ್ದು ದಗ್ಗಳಿಕೆಯಗ್ಗದ ಪಾರ್ಥಿವ ಪುತ್ರಸಾರ್ಥಕಂ (ಅನಂಪು. ೨-೨೮). [ಸಂ.]

**ಸಾರ್ಥಕತೆ** (ನಾ). ೧. ಅರ್ಥಪೂರ್ಣತೆ ; ಯಥಾರ್ಥತೆ : ಪ್ರಬಂಧಕ್ಕೆಲ್ಲ ಒಂದೇ ಪ್ರಧಾನರಸವನ್ನು ತರುವುದರಿಂದ ಅತಿಶಯವಾದ ಸಾರ್ಥಕತೆಯಂತೆ ಸೌಂದರ್ಯಾತಿಶಯವೂ ಬರುತ್ತದೆ (ಧ್ವನ್ಯಾಲೋ. ೨೪೭). ೨. ಸಫಲತೆ ; ಸಾಫಲ್ಯ : ಪ್ರಯತ್ನ ಪುರುಷಜನ್ಮದ ಸಾರ್ಥಕತೆ ಎನ್ನುತ್ತಾರೆ, ತಿಳಿದವರು (ಚಿತಂಬಾ. ೩೩).
[ಸಂ. ಸಾರ್ಥಕತಾ]

**ಸಾರ್ಥಕ್ಯ** (ನಾ). ೧. ಸಾರ್ಥಕತೆ : ಶಿಕ್ಷಣವ್ಯವಸ್ಥೆಯ ಸಾರ್ಥಕ್ಯವನ್ನು ನಿಷ್ಕರ್ಷಿಸುವಾಗ . . . ಎಲ್ಲ ಅಂಶಗಳನ್ನೂ ಪರೀಕ್ಷಿಸಬೇಕು (ಶಿಕ್ಷದ. ೩೩೯). ೨. = ಸಾರ್ಥಕತೆ ೨: ಸರಿಯಾದ ವಿವೇಚನೆಯಿಂದ ಪ್ರಯೋಗಿಸಿದಂತಹ 'ರೂಪಕ' ವೇ ಮೊದಲಾದ ಅಲಂಕಾರ ವರ್ಗವೂ ಧ್ವನಿಗೆ ಆತ್ಮಭೂತವಾದ ಶೃಂಗಾರದಲ್ಲಿ ಸಾರ್ಥಕ್ಯವನ್ನು ಪಡೆಯುತ್ತದೆ (ಧ್ವನ್ಯಾಲೋ. ೮೦). ೩. ಪರಿಪೂರ್ಣತೆ; ಸಂಪೂರ್ಣತೆ : (೬). [ಸಂ.]

**ಸಾರ್ಥತೆ** (ನಾ). ೧. ಅನ್ವರ್ಥವಾಗಿರುವಿಕೆ; ಯಥಾರ್ಥತೆಯನ್ನು ಹೊಂದಿರುವಿಕೆ: ಪ್ರಚುರಚಂದನ ನಂದನಗಂಧದಿಂ ದಿಶಾಪರಿಧಿಯನೆಯ್ದೆ ಬಾಸಣಿಸುತಿರ್ಪುದು ಸಾರ್ಥತೆಯಂ ನಿಜಾಖ್ಯೆಯೊಳ್ ನೆರಪಿ ಸುಗಂಧಿಮಂಡಲ ಮಿಳಾರಮಣೀರಮಣೀಯಕುಂಡಲಂ (ಚಂದ್ರಪ್ರ. ೩-೧೧). ೨. ಸಮೃದ್ಧವಾಗಿರುವಿಕೆ ; ಶ್ರೀಮಂತವಾಗಿರುವಿಕೆ : (೬). [ಸಂ. ಸಾರ್ಥತಾ]

**ಸಾರ್ಥನಾಥ** (ನಾ). ವ್ಯಾಪಾರಿಗಳ ತಂಡದ ಮುಖ್ಯಸ್ಥ : ಶ್ರೀವಿಭುತಂತ್ರಗುಪ್ತನತಿ ನಿರ್ಮಳಧಾರ್ಮಿಕ ಚಂದ್ರಗುಪ್ತನೆಂಬಾ ವರಸಾರ್ಥನಾಥರುರುಮಾರ್ಗಶ್ರಮದಿಂದೆ ಬಂದು . . . ಬಿಟ್ಟರುದಾರತೀರದೊಳ್ (ಪಾರ್ಶ್ವಪು. ೪-೧೦೩). [ಸಂ.]

**ಸಾರ್ಥನಾಮ** (ನಾ). ಅನ್ವರ್ಥಕವಾದ ಹೆಸರನ್ನು ಹೊಂದಿದ ವ್ಯಕ್ತಿ : ಕಥನಕಲೆಯಲ್ಲಿಯೇ ಆನಂದವನ್ನು ಪಡೆದು ಆನಂದವನ್ನು ನೀಡಬೇಕೆಂಬ ಉದ್ದೇಶವನ್ನು ಹೊಂದಿ ಸಾರ್ಥನಾಮರಾದ ಆನಂದರು . . . ಕಡೆಯ ಕಾಣಿಕೆಯನ್ನು ಸಲ್ಲಿಸಿದರು (ಸುವರ್ಣ. ೧೫೮). [ಸಂ. ಸಾರ್ಥನಾಮನ್]

**ಸಾರ್ಥಪತಿ** (ನಾ). = ಸಾರ್ಥನಾಥ : ಸಮುನ್ನತಧರ್ಮಶ್ರವಣಕ್ಕೆ ಸಾರ್ಥಪತಿ ಗಳ್ತಾಮಟ್ಟಿಯಂ ಮಾಡಿದರ್ (ಪಾರ್ಶ್ವಪು. ೪-೧೦೭). [ಸಂ.]

**ಸಾರ್ಥವಾಹ** (ನಾ). ೧. ವ್ಯಾಪಾರಿಗಳ ತಂಡದ ಮುಖ್ಯಸ್ಥ; ವರ್ತಕರ ಮುಖಂಡ ,– ಮುಂದಾಳು : (ಲೋಕಸ. ೩೦). ೨. ವ್ಯಾಪಾರಿ; ವರ್ತಕ : "ವೈದೇಹಕಃ, ಸಾರ್ಥವಾಹಃ . . . ಕ್ರಯವಿಕ್ರಯಿಕಃ – ೮ ವರ್ತಕತನ ಮಾಡುವವನ ಹೆಸರು" (ಸಿದ್ಧಾಂತಿ. ೨೯೭). [ಸಂ.]

**ಸಾರ್ಥವಾಹಕ** (ನಾ). = ಸಾರ್ಥವಾಹ ೧: ಧರ್ಮಸ್ವಾಮಿ ಜಿನೇಶ್ವರ ಧರ್ಮರತಂ ಸಾರ್ಥವಾಹಕಂ ಬಂಧು[ಬ]ಳರ್ ಮರ್ಮರಪತ್ರಾಳುಳದೊಳ್ ಪೆರ್ಮರದಿಟ್ಟೆಡೆಯೊಳಲ್ಲಿ ಬೀಡಂ ಬಿಟ್ಟಂ (ವರ್ಧಮಾ. ೬-೭). [ಸಂ.]

**ಸಾರ್ಥಾಧಿಪತಿ** (ನಾ). = ಸಾರ್ಥವಾಹ ೧ : ಆ ಶಾಂತಾತ್ಮರಂ ಸಾರ್ಥಾಧಿಪತಿ ಗಳತಿಶಯತೀರ್ಥಮೆ ತಮ್ಮಿದಿರ್ಗೆ ವಂದುದೆಂದನುಪಮಪುಣ್ಯಾರ್ಥಿಗಳಮಳಚರಿತ ಕೃತಾರ್ಥರನೊಲವಿಂದೆ ಬಂದು ಬಂದಿಸಿದರವರ್ (ಪಾರ್ಶ್ವಪು. ೪-೧೦೫). [ಸಂ.]

**ಸಾರ್ದ** 'ಸಾರ್$_1$' ಪರಾ.

**ಸಾರ್ದು** 'ಸಾರ್$_1$' ಪರಾ.

**ಸಾರ್ದ್ರ** (ಗು). ೧. ತೇವದಿಂದ ಕೂಡಿದ ; ಒದ್ದೆಯಾದ. ೨. ಮೃದುವಾದ ; ಕೋಮಲವಾದ : 'ಸಾರ್ದ್ರವಿಲೋಕನ', 'ಸಾರ್ದ್ರಹೃದಯ' ಪರಾ. (ನಾ). ೩. ತೇವದಿಂದ ಕೂಡಿದುದು; ಒದ್ದೆಯಾದುದು : "ಆರ್ದ್ರಂ ಸಾರ್ದ್ರಂ" (ವಸ್ತುಕೋ. ೧೦೭-೫೧). [ಸಂ.]

**ಸಾರ್ದ್ರತೆ** (ನಾ). ತೇವ ; ಆರ್ದ್ರತೆ : ಮಿತ್ರಪಾರ್ಥಿವಾಂತರಂಗಚಂದ್ರಕಾಂತಸಂತಾನಮಂ ಸಾರ್ದ್ರತೆಗೆ ಸಲ್ಲಿಸಿಯುಂ (ಚಂದ್ರಪ್ರ. ೧೩-೫೫ ವ). [ಸಂ. ಸಾರ್ದ್ರತಾ]

**ಸಾರ್ದ್ರವಿಲೋಕನ** (ನಾ). ಆರ್ದ್ರತೆಯಿಂದ ಕೂಡಿದ ದೃಷ್ಟಿ ; ಪ್ರೇಮದಿಂದ ಕೂಡಿದ ನೋಟ : ಇನಿಯನ . . . ಸಾರ್ದ್ರವಿಲೋಕನವಮಾತನೊಂದು ಸೋಂಕಿನಿತಿರದಾಱಿಪಂತೆನಗೆ ತಾಪಮನಾಱಿಸಲಾಱವೀ ಮೃಣಾಳನಿಕರವೀ ಹಿಮಾಂಬುಲವಂ (ಚಂದ್ರಪ್ರ. ೮-೬೫). [ಸಂ.]

**ಸಾರ್ದ್ರಹೃದಯ** (ನಾ). ೧. ಮೃದುವಾದ ಮನಸ್ಸು ; ಕೋಮಲಹೃದಯ. ೨. ಮೃದುಹೃದಯವುಳ್ಳವನು : ದುಃಖದತಿಶಯಬಲೆಯೊಳ್ ಮಲುಮಲನೆ ಮಱುಗಿ ಸಿಲ್ಕಿರ್ದವಳಂ ಕಂಡು ಕರುಣಸಾರ್ದ್ರಹೃದಯಂ ಮನ್ಯು[ಗ]ದ್ಗದಕಂಠನು ಮಾಗಿ ನೀಡುಂ ಭಾವಿಸಿ ನೋಡಿ (ಸುಕುಮಾ. ೪-೬೦ ವ). [ಸಂ.]

**ಸಾರ್ದ್ರಾಂತರಂಗ** (ನಾ). = ಸಾರ್ದ್ರಹೃದಯ ೨ : ಪಿತೃಸಂದೇಶದಿಸಾ ಮಹೋನ್ನತಿಯುತಂ ಸಾರ್ದ್ರಾಂತರಂಗಂ . . . ಪ್ರಭಾವತಿಯೆಂಬಗ್ಗದ ಕನ್ನೆಯಂ ಮದುವೆನಿಂದಂ (ಚಂದ್ರಪ್ರ. ೪-೧೨). [ಸಂ.]

**ಸಾರ್ಧ** (ಗು). ಅರ್ಧದಿಂದ ಕೂಡಿದ : ಆ ಮಹೀಧರದ ಚೂಲಿಕಾಗ್ರದಿಂ ವಾಲಾಗ್ರಮಾತ್ರಾಂತರಿತಮಾಗಿ ಸಾರ್ಧರಜ್ಜ್ವಭ್ಯಂತರದೊಳ್ ಸೌಧರ್ಮೇಂದ್ರನ ಋತುವಿಮಾನಂ ನಡುವಾಗೆ (ಸುಕುಮಾ. ೧೧-೬೦ ವ). [ಸಂ.]

**ಸಾರ್ಪಿಷ್ಕ** (ನಾ). ತುಪ್ಪದಲ್ಲಿ ಮಾಡಿದುದು : "ತುಪ್ಪದಿಂ ಸಂಸ್ಕೃತಮಾದುದು ಸಾರ್ಪಿಷ್ಕಂ" (ವಸ್ತುಕೋ. ೯೪-೧೨). [ಸಂ.]

**ಸಾರ್ಬಭೌಮ** 'ಸಾರುವಭೌಮ' ನೋ.

**ಸಾರ್ಬರಿ** (ನಾ). ಅರುವತ್ತುಸಂವತ್ಸರಗಳಲ್ಲಿ ಒಂದು; ಶಾರ್ವರಿ : ಶ್ರೀಸಿಂಹಣವಿಜಯ ವಿಜಯರಾಜ್ಯದ ೩೧ನೆಯ ಸಾರ್ಬ್ಬರಿಸಂವತ್ಸರದ ಮಾಘ ಶು ೧೦ (೯೩. IV, ೨-೫ ; 1241). [< ಸಂ.ಶಾರ್ವರಿನ್]

**ಸಾರ್ಬೀಟು** (ಕ್ರಿ). ಮುಂದುವರಿದು ಹರಿ, – ಸುರಿ: ಸ್ತನತಾರಾತುಳಹಾರ ವಲ್ಲಿಗೆಣೆಯಂ ತಾಮುಂ ಪೆಱುತ್ತಿರ್ಪುವೆಂದೆನಲಾ ಚೂತಕದಿಂ ಪಯಃಕಣಗಣಂ ಸಾರ್ಬೀಟಲಾ ಲೋಲಲೋಚನಹರ್ಷಾಮಳಬಾಷ್ಪಮಯ್ದೆಮೊಗಳಂ ತಳ್ತೀಟ್ (ಕುಸುಮಾ. ೧೫-೧೨೭). [ಸಾರ್$_1$ + ಬೀಟು$_1$]

**ಸಾರ್ವ$_1$** 'ಸಾರ್$_1$' ಪರಾ.

**ಸಾರ್ವ$_2$** (ಗು). ೧. ಸಾರ್ವತ್ರಿಕವಾದ ; ಸರ್ವಸಾಧಾರಣವಾದ. ೨. ಎಲ್ಲರಿಗೂ, ಎಲ್ಲಕ್ಕೂ ಅನ್ವಯಿಸಬಹುದಾದ : ಸಾರ್ವನಿಗಮಾರ್ಥಮಂ ತಿಳಿದು ಸತ್ಕರ್ಮಮಂ ಸಾರ್ವಕಾಲಂಗೆಯ್ದು . . . ಪರರೊಡವೆಗೆ ಪಾರ್ವನಲ್ಲದೆ ಸದಾಚಾರದಿಂ ನಡೆದೊಡಾ ಪಾರ್ವನಿಹದೊಳ್ಕೀರ್ತಿಪರನಾಗಿ ಬಳಿಕವಂ ಪಾರ್ವನುತ್ತಮಗತಿಗೆ ದೇಹಾವಸಾನದೊಳ್ (ಜೈಮಿಭಾ. ೫-೪೯). [ಸಂ.]

**ಸಾರ್ವಕಾಲ** (ನಾ). ಎಲ್ಲಾ ಕಾಲ; ಸದಾಕಾಲ : 'ಸಾರ್ವಕಾಲಂಗೆಯ್' ಪರಾ. [ಸಂ.]

**ಸಾರ್ವಕಾಲಂಗೆಯ್** (ಕ್ರಿ). ಎಲ್ಲ ಕಾಲಗಳಲ್ಲೂ ನಡೆಸು; ಸತತವಾಗಿ ಆಚರಿಸು : ಸಾರ್ವನಿಗಮಾರ್ಥಮಂ ತಿಳಿದು ಸತ್ಕರ್ಮಮಂ ಸಾರ್ವಕಾಲಂಗೆಯ್ವು . . . ಸದಾಚಾರದಿಂ ನಡೆದೊಡೆ (ಜೈಮಿಭಾ. ೫-೪೯). [ಸಾರ್ವಕಾಲ + ಕೆಯ್]

**ಸಾರ್ವಕಾಲಿಕ** (ಗು). ೧. ಎಲ್ಲ ಕಾಲಕ್ಕೂ ಸಂಬಂಧಿಸುವ ,– ಅನ್ವಯಿಸುವ : ಇದೇ ಸಾರ್ವಕಾಲಿಕ ಸಿದ್ಧಾಂತವಾಗುವುದೆಂದು ಹೇಗೆ ಹೇಳುವುದು? (ವಿಜ್ಞಾ.ಕ. ೬). (ನಾ). ೨. ಎಲ್ಲ ಕಾಲಕ್ಕೂ ಸಂಬಂಧಿಸಿದುದು; ಎಲ್ಲ ಸಮಯಕ್ಕೂ ಅನ್ವಯವಾಗುವಂತಹುದು : ಇದರೊಳಗಿನ ಆತ್ಮವೀರದ ಕತೆ ದೇಶಾಚಾರ ಕಾಲಾಚಾರಗಳನ್ನು ಮೀರಿ ಸಾರ್ವಕಾಲಿಕವಾದ ಸಾರ್ವದೇಶಿಕವಾದ ಗುಣವನ್ನು ಹೊಂದಿ ಗುರುತ್ವವನ್ನು ಪಡೆದಿದೆ (ವೀರಯೋ. VI, ಮುನ್ನುಡಿ). [ಸಂ.]

**ಸಾರ್ವಕಾಲಿಕಸತ್ಯ** (ನಾ). ಯಾವಾಗಲೂ ಇರುವಂಥ ಸತ್ಯ; ಶಾಶ್ವತವಾದ ನಿಜ : ಸಾರ್ವಕಾಲಿಕಸತ್ಯವೆಂದು ಭಾವಿಸಿದುದನ್ನು ಸುಳ್ಳೆಂದು ಹೇಳಲು ಹೊರಟರೆ ಮೂರ್ಖತನವಾಗುತ್ತದೆ (ರೂಢಿ). [ಸಂ.]

**ಸಾರ್ವಜನಿಕ** (ಗು). ೧. ಎಲ್ಲ ಜನರಿಗೂ ಸಂಬಂಧಿಸಿದ; ಸರ್ವರಿಗೂ ಸಂಬಂಧಪಟ್ಟ : ಮನೆಗಳಲ್ಲಿ ಹಾಗೂ ಸಾರ್ವಜನಿಕ ಉಪಾಹಾರಗೃಹಗಳಲ್ಲಿ ಆಹಾರವಸ್ತುಗಳನ್ನು ಅನಾರೋಗ್ಯಕರಸ್ಥಿತಿಯಲ್ಲಿರಿಸುವುದೇ ಇದಕ್ಕೆ ಕಾರಣವಾಗಿದೆ (ಆಡುಸಾ. ೮೪); ಪ್ರಾಚೀನಸಂಪ್ರದಾಯ ಪಾಲಿಸಿದ ಭಾರತೀಯರಿಗೆ . . . ಸಾರ್ವಜನಿಕಸ್ಥಳಗಳಲ್ಲಿ ಧಿಕ್ಕಾರ (ಬುಕ್ಕಾರ. ೧೧೫ ಪೀಠಿಕೆ). ೨. ರಹಸ್ಯವಲ್ಲದ; ಬಹಿರಂಗವಾದ : ಸದನಗಳ ಅಧಿವೇಶನವು ನಡೆಯುತ್ತಿದ್ದಲ್ಲಿ ಸಂದೇಶದ ಮೂಲಕವೂ ಮತ್ತು ಅವುಗಳ ಅಧಿವೇಶನವು ನಡೆಯುತ್ತಿಲ್ಲದಿದ್ದಲ್ಲಿ ಸಾರ್ವಜನಿಕ ಅಧಿಸೂಚನೆಯ ಮೂಲಕವೂ . . . ತಮ್ಮ ಉದ್ದೇಶದ ಅಧಿಸೂಚನೆಯನ್ನು ಕೊಡಬಹುದು (ಭಾಧಾನ. ೫೩). (ನಾ). ೩. ಜನ; ಜನತೆ ; ಸಾರ್ವಜನಿಕರ ಚಿತ್ತವನ್ನು ಉದ್ದೀಪನಗೊಳಿಸುವುದೇ . . . ಅದರ ಉದ್ದೇಶವಾಗಿತ್ತು (ನಿಬಂಧ. I, ೩೩೪). ೪. ಬಹಿರಂಗವಾದುದು; ಪ್ರಕಟವಾದುದು.

ಸಾರ್ವಜನಿಕಜೀವನ = ಸರ್ವರಿಗೂ ಸಂಬಂಧಿಸಿದ ಜೀವನ; ಸಮಾಜ ಜೀವನ: ಪ್ರಾಚೀನಕಾಲದಲ್ಲಿ . . . ಅಂತಃಛಿದ್ರಗಳಿಗೆ ಅವಕಾಶವಿರಲಿಲ್ಲ. ಇದ್ದರೂ ಸಾರ್ವಜನಿಕಜೀವನಕ್ಕೆ ಕುಂದಕ ಬರುವಷ್ಟಿರಲಿಲ್ಲ (ಆರ್ಯಧ. ೮೩). ಸಾರ್ವಜನಿಕರಜ = ಎಲ್ಲರಿಗೂ ಅನ್ವಯವಾಗುವಂಥ ರಜ ; ಸಾರ್ವತ್ರಿಕವಾದ ಬಿಡುವು : ಸರ್ಕಾರವು ಈ ಕೆಳಕಂಡ ದಿನಗಳನ್ನು ಸಾರ್ವಜನಿಕರಜವೆಂದು ಘೋಷಿಸಿದೆ (ರೂಢಿ). ಸಾರ್ವಜನಿಕಸೇವೆ = ಸಮಾಜಸೇವೆ; ಲೋಕಸೇವೆ : ಅವರು ತಮ್ಮ ಜೀವನದುದ್ದಕ್ಕೂ ಸಾರ್ವಜನಿಕಸೇವೆಯಲ್ಲೇ ನಿರತರಾಗಿದ್ದರು (ರೂಢಿ). [ಸಂ.]

**ಸಾರ್ವತ್ರಿಕ** (ಗು). ೧. ಎಲ್ಲ ಕಡೆಗಳಲ್ಲೂ ಇರುವ. ೨. ಎಲ್ಲಕಾಲಕ್ಕೂ ಸಂಬಂಧಿಸಿದ. ೩. ಎಲ್ಲರಿಗೂ ಅನ್ವಯಿಸುವ : ನಾಡಿನ ಭಾಗ್ಯೋದಯ ವಾಗಬೇಕಾದರೆ ಯಶಸ್ವಿಯಾಗತಕ್ಕ ಸಾರ್ವತ್ರಿಕ ಶಿಕ್ಷಣಯೋಜನೆ ಅನಿವಾರ್ಯ (ಶಿಕ್ಷದ. ೧೩೫). (ನಾ). ೪. ಎಲ್ಲರಿಗೂ ಸಂಬಂಧಿಸಿದುದು ; ಸರ್ವಸಾಮಾನ್ಯ ವಾದುದು : ಪ್ರಾಚೀನಕಾಲದಲ್ಲಿ ನಾವು ಸ್ವತಂತ್ರರಾಗಿದ್ದೆವು . . . ಸಮೃದ್ಧಿಯು ಸಾರ್ವತ್ರಿಕವಾಗಿತ್ತು (ಆರ್ಯಧ. ೮೩); ಅವು ಸಾರ್ವತ್ರಿಕವಾದಷ್ಟೂ ಅವುಗಳ ಶಿಕ್ಷಣ ಪ್ರಭಾವ ವ್ಯಾಪ್ತಿಯಲ್ಲೂ ಆದರ್ಶದಲ್ಲೂ ಹೆಚ್ಚಬಲ್ಲುದು (ಶಿಕ್ಷದ. ೫೭).

ಸಾರ್ವತ್ರಿಕರಜ = ಎಲ್ಲರಿಗೂ ಅನ್ವಯಿಸುವ ರಜೆ, – ಬಿಡುವು : ಅಂದು ಸಾರ್ವತ್ರಿಕರಜವಿದ್ದುದರಿಂದ ನಾನು ಮೈಸೂರಿಗೆ ಹೋಗಿದ್ದೆ (ರೂಢಿ). [ಸಂ.]

**ಸಾರ್ವತ್ರಿಕಚುನಾವಣೆ** (ನಾ). ಲೋಕಸಭೆಯ ಪ್ರಜಾಪ್ರತಿನಿಧಿಗಳನ್ನು ಸರ್ವಮತದಾನದ ಮೂಲಕ ಆರಿಸಲು ನಡೆಸುವ ಚುನಾವಣೆ; ಮಹಾಚುನಾವಣೆ : ಬಿಗಿಯಾದ ಬಂದೋಬಸ್ತಿನಲ್ಲಿ ಆ ಕ್ಷೇತ್ರದ ಸಾರ್ವತ್ರಿಕ ಚುನಾವಣೆಯು ನಡೆಯಿತು (ರೂಢಿ). [ಸಾರ್ವತ್ರಿಕ + ಚುನಾವಣೆ]

**ಸಾರ್ವತ್ರಿಕತೆ** (ನಾ). ಎಲ್ಲಕ್ಕೂ ಅನ್ವಯವಾಗುವಂಥ ಗುಣ ; ಸರ್ವವ್ಯಾಪಕತ್ವ: ಸಾಹಿತ್ಯದೃಷ್ಟಿಯಿಂದ ಈ ಕಾವ್ಯವು ಕನ್ನಡಿಗರಿಗೆಲ್ಲ ಸೊತ್ತಾಗಬೇಕಾದರೆ ಅದರೊಳಗೆ ಒಂದು ಸಾರ್ವತ್ರಿಕತೆ ಬೇಕು (ಸಾಹಿಸ. ೧೬೭). [ಸಂ. ಸಾರ್ವತ್ರಿಕತಾ]

**ಸಾರ್ವಭೌಮ** (ನಾ). ೧. ಸಮಸ್ತಭೂಮಂಡಲವನ್ನೂ ಒಳಗೊಂಡುದು; ವಿಶ್ವವ್ಯಾಪಿಯಾದುದು. ೨. ಸಮಸ್ತಭೂಮಂಡಲಕ್ಕೆ ಸಂಬಂಧಪಟ್ಟುದು. ೩. ಸಮಸ್ತಭೂಮಂಡಲಕ್ಕೆ ಅಧಿಪತಿಯಾದವನು ; ಚಕ್ರವರ್ತಿ : ಪಡೆವಂ ಶಾಶ್ವತಶ್ರೀಯನೆಂಬುಜ್ಜುಗದೊಳ್ ಚಿತ್ತಂ ಕರಂ ತಣ್ಣಲೆಯ ನಚಿಯೆ ನಿಶ್ಚೈಸಿದಂ ಸಾರ್ವಭೌಮಂ (ಆದಿಪು. ೬-೨೭); ಇರ್ವತ್ತೊಂದನಿತ್ತಂ ಕರಿಗಳನವರಾದಿತ್ಯನಂತೀಯ ದಂದಾತನನಿರ್ವತ್ತೊಂದುವಂಶಂ ಕಿಡೆ ಮುಳಿದನೊ ಸತ್ಕಾಶ್ರಯಂ ಸಾರ್ವಭೌಮಂ (ಗಧಾಯು. ೧-೨೮) ; ದೇವದೇವ ಸುಕುಮಾರ ಸಾರ್ವಭೌಮನಪ್ಪ ಸೌಂದರಪೆರುಮಾಳೆಯಿರ ವನವಧರಿಪುದು (ನಂಬಿರ. ೪-೧೭). ೪. ಅಷ್ಟದಿಗ್ಗಜಗಳಲ್ಲಿ ಒಂದು; ಈಶಾನ್ಯದಿಕ್ಕಿನ ಆನೆ; ಕುಬೇರನ ಆನೆ : "ಐರಾವತಃ . . . ಸಾರ್ವಭೌಮಃ, ಸುಪ್ರತೀಕಃ – ಈ ೮ ಮೂಡಣಂ ಕ್ರಮದಿನಿರ್ದ ದೆಸೆಯಾನೆಗಳ್" (ಹಲಾಯು. ೧೮-೧೦೪); ಅತಿವಿಹ್ವಲಮಾದುದು ಸಾರ್ವಭೌಮಮುಂದದಿರ್ದುದು ಸುಪ್ರತೀಕಮಿರದಾಲಿಸಿ ತತ್ಪಟಹಪ್ರಣಾದಮಂ (ಪುಷ್ಪಪು. ೫-೮). ೫. (ಆಲಂ) ಸರ್ವಶ್ರೇಷ್ಠವಾದುದು : ನನ್ನ ಸುಖವೇ ಸಾರ್ವಭೌಮ. ಮಿಕ್ಕುದೆಲ್ಲ ಗೌಣ (ವಾತ್ಸಲ್ಯ. ೧೯೧). ೬. ಸರ್ವಶ್ರೇಷ್ಠನಾದವನು : ಸಾರ್ವಭೌಮನು ಸೃಷ್ಟಿಯೊಳಗದೊರ್ವನೆ ಕಾಣೊ ಸರ್ವವನು ತನ್ನಾತ್ಮವೆಂದು ಬದುಕುವನು ನಿರ್ವಿಕಾರಾಂತರಂಗದಿ ಜಗವ ಧರಿಸುವನು ಸರ್ವಮಂಗಳನವನು (ಮಂಕುತ. ೮೦೫). [ಸಂ.]

**ಸಾರ್ವಭೌಮಕ** (ನಾ). ಸಾಮ್ರಾಜ್ಯಾಧಿಪತಿ ; ಚಕ್ರವರ್ತಿ : ಅವನಾ ನಿತಂಬನಿಯ ಕಂಡು ಬಿಡಲಾಱದೆ ವಿರೋಧವ ಕೊಂಡು ಕರೆದನು ಕಾಳಗಕೆ ಕೈಕೊಂಡು ಮನದಾದಿಯಲಿ ಕಪಿಕುಲ ಸಾರ್ವಭೌಮಕನ (ತೊರರಾ. ೪-೨-೨೪) ; ಸಾರ್ವಭೌಮಕ ನಿನ್ನ ರಕ್ಷೆಯಂ ಶಿಕ್ಷೆಯಂ ಮೀರ್ವರಲ್ಲ (ಜೈಮಿಭಾ. ೨೭-೫೩). [ಸಂ.]

**ಸಾರ್ವಭೌಮತೆ** (ನಾ). ಸಾಮ್ರಾಜ್ಯಪದವಿ; ಚಕ್ರವರ್ತಿಪಟ್ಟ : ಸಾರ್ವಭೌಮತೆ ನಾಲ್ಕುಗುಣಕೆ ಗುಣರಾಜ್ಯದಲಿ ಧೈರ್ಯ ಮೊದಲಿನದೆರಡನೆಯದು ಮತಿಯೋಜೆ ಸರ್ವದಯೆ ಮೂರನೆಯದದುವೆ ನೀತಿಯ ಮೂಲ ನಿರ್ಮಮತ್ವವೆ ಮುಕುಟ (ಮಂಕುತ. ೭೫೭). [ಸಂ. ಸಾರ್ವಭೌಮತಾ]

**ಸಾರ್ವಭೌಮಿಕ** (ಗು). ೧. ಸಾರ್ವಭೌಮನಿಗೆ ಸಂಬಂಧಿಸಿದ; ಚಕ್ರವರ್ತಿಗೆ ಸಂಬಂಧಪಟ್ಟ. ೨. (ಆಲಂ) ಶ್ರೇಷ್ಠವಾದ; ಅತ್ಯುತ್ತಮವಾದ : ಇಂದು ಭಾರತವು ಉಪನಿಷತ್ತಿನ ಸಾರ್ವಭೌಮಿಕಧರ್ಮದಿಂದ ಬಹಳ ದೂರ ಸರಿದುಹೋಗಿದೆ (ಭಾರದ. ೪೭). ೩. ಅತ್ಯಧಿಕವಾದ; ಪರಾಕಾಷ್ಠೆಯ : ತೀರ ಚಲನೆಯ ಸಾರ್ವಭೌಮಿಕ ಉದಾಸೀನನಿರ್ವೇಗದಲಿ, ಎನಿತೊ ದಿನಗಳಿಂದುದ್ಯಾನಯಜ್ಞ ವೇದಿಯೊಳುದಿಸಿ, ಕವಿಮನೋಧ್ಯಾನದೇವತಾವಸ್ತುವಾಗಿಹುದೀ ಮಹಾಕುಟ್ಮಲಾಕಾರ (ಅನಿಕೇ. ೨೨-೪). (ನಾ). ೪. (ಆಲಂ) ಶ್ರೇಷ್ಠವಾದುದು; ಅತ್ಯುತ್ತಮ ವಾದುದು: ಸರ್ವಶಾಸ್ತ್ರಂಗಳೊಳ್ ಸಾರ್ವಭೌಮಿಕಮಪ್ಪ ಸಂಖ್ಯಾಕಾಂಡಮನ್, ಲೇಖನನ್ಯಾಸಮನ್ . . . ಅಗ್ಗಳಮಪೂರ್ವಂ ನವನಿರ್ಮಿತಿಗಳನ್ ಪೊಣಿಸಂದುದೆನ್ನ ಜಾಣ್ (ಬದ್ಧಪ್ರ. ೨೫-೫೨೨). [ಸಂ.]

**ಸಾರ್ವಭೌಮಿಕೆ** (ನಾ). ಚಕ್ರವರ್ತಿತ್ವ ; ಸರ್ವಾಧಿಕಾರತ್ವ : ಈ ಸಾರ್ವಭೌಮಿಕೆಯ ಬಿಂಕಪೊಂಕಗಳೆಲ್ಲ ನೆರೆಯಿಳಿವಂತೆ ಇಳಿದುಹೋಗಿ ಅವನು ಸ್ನೇಹಭಾವದಿಂದ ತನ್ನೊಡನೆ ಹೊಂದಿ ನಡೆಯುವ ಕಾಲ ಬಂದೇ ಬರುತ್ತದೆ (ಬದ್ಧಪ್ರ. XXX, ಪೀಠಿಕೆ). [ಸಂ. ಸಾರ್ವಭೌಮಿಕ]

**ಸಾರ್ವರ್ತುಕ** (ಗು). ೧. ಎಲ್ಲ ಋತುಗಳಿಗೂ ಸಂಬಂಧಿಸಿದ: 'ಸಾರ್ವರ್ತುಕವನ' ಪರಾ. (ನಾ). ೨. ಎಲ್ಲ ಋತುಗಳಿಗೂ ಸಂಬಂಧಿಸಿದುದು : ಜಂಬುಜಂಬೀರಪನಸ . . . ಕದಳೀಷಂಡ ಕಮಳಷಂಡಂ ಗಳಿಂದಿಡಿದು ಕಡುಬೆಡಂಗಾದ ಸಾರ್ವರ್ತುಕವಾದ ಸದಮಳತಪೋವನದ ಪರಮಪವಿತ್ರತವೆತ್ತ ಪರ್ಣಶಾಲೆಯೊಳ್ (ರಾಜಶೇ. ೧-೧೨೫ ವ) ; ಇಂತೊಪ್ಪುವ ಭಾಗೀರಥಿಗಿರ್ಮೆಯ್ಯೊಳಂ ಸಾರ್ವರ್ತುಕಮೆನಿಸಿ ಕೌಂಗಿನ ದಾಳಿಂಬದ ಚೆಂದೆಂಗಿನ . . . ಕಟವೆಯ ಪೊಸತೋಂಟಂಗಳ್ ಕಣ್ಗೆಡ್ಡಮಾಗಿ ಸಾಲ್ಗೊಂಡುವು (ರಾಮಾಶ್ವ. ೩೦-೧೫). [ಸಂ.]

**ಸಾರ್ವರ್ತುಕಂ** (ಅ). ಎಲ್ಲ ಋತುಗಳಲ್ಲೂ : ಕನಕಪ್ರಾಕಾರವೇಱುಂ ಬಳಸಿರೆ ವಿಳಸದ್ಗೋಪುರಾಟ್ಟಾಳಕಂ ನಂದನವೇಱುಂ ಲೋಚನಾನಂದಮನೊದವಿಸೆ ಸಾರ್ವರ್ತುಕಂ ರಂಜಿಕುಂ (ಶಂರಾಮಾ. ೧೦-೧೦೨). [< ಸಾರ್ವರ್ತುಕ]

**ಸಾರ್ವರ್ತುಕವನ** (ನಾ). ಎಲ್ಲ ಋತುಗಳಲ್ಲೂ ಫಲಪುಷ್ಪಗಳನ್ನು ಬಿಡುವ ಮರಗಿಡಗಳುಳ್ಳ ತೋಟ: ಸಾರ್ವರ್ತುಕವನಶೋಭಿತಗೀರ್ವಾಣಾಚಳದೊಳಿಂದ್ರ ನಮರಸಮೇತಂ ನಿರ್ವರ್ತಿತ ಜಿನಸವನಂ ನೇರ್ವಡೆಪಡೆ ವಾರಣಾಸಿಗಭಿಮುಖನಾದಂ (ಪಾರ್ಶ್ವಪು. ೧೪-೧೧೦). [ಸಂ.]

**ಸಾರ್ವರ್ತುಕೋದ್ಯಾನ** (ನಾ). = ಸಾರ್ವರ್ತುಕವನ: ಸಿರಿ ತಂದಿಕ್ಕಿದಶೋಕೆ ವಾಗ್ವನಿತೆಯಿಟ್ಟಾವ್ರಂ . . . ತರದಿಂದಂ ರತಿಯಿಟ್ಟ ದಾಡಿಮಕುಲಂ ಸಾರ್ವರ್ತುಕೋದ್ಯಾನದೊಳ್ (ಗಿರಿಕ. ೨-೩೧). [ಸಂ.]

**ಸಾರ್ವಲೌಕಿಕ** (ಗು).೧. ಎಲ್ಲ ಲೋಕಗಳಿಗೂ ಸಂಬಂಧಿಸಿದ; ವಿಶ್ವವ್ಯಾಪಕವಾದ: ಸಾರ್ವಲೌಕಿಕಸೌಖ್ಯ ನೆಲಸುವನ್ನೆಗಮಿಳೆಯೊಳೊರ್ವನುಂ ಸುಖಿಯಲ್ಲು (ಮಂಕುಕ. ೮೫೩). (ನಾ). ೨. ಸರ್ವವಿದಿತವಾದುದು; ಎಲ್ಲರಿಗೂ ತಿಳಿದುದು : ಬದುಕು ಶಾಶ್ವತವಲ್ಲವೆನ್ನುವುದು ಸಾರ್ವಲೌಕಿಕವಾದ ಸತ್ಯ (ರೂಢಿ). [ಸಂ.]

**ಸಾರ್ವೆ, ಸಾರವೆ, ಸಾರುವೆ** (ನಾ). ೧. ಸಣ್ಣನದಿ, ನಾಲೆ ಮುಂತಾದುವುಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ದಾಟಿಹೋಗುವುದಕ್ಕಾಗಿ ಹಾಕುವ ಸೇತುವೆ; ಸಂಕ: ಕೆಳಗೆ ಹರಿಯುವ ನೀರು, ಮೇಲೆ ಬಿಸಿಲು, ಮಳೆ ಇವುಗಳನ್ನು ಲೆಕ್ಕಿಸದೆ ಸಾರ್ವೆಯ ಮೇಲೆ ನಿಂತು ಕೆಲಸಮಾಡುವವರ ಸಾಹಸವೆಷ್ಟು? (ಕೊನಭೇ. ೩೨). **ಸಾರವೆ** : ೨. (ಕಟ್ಟಡಗಳನ್ನು ಕಟ್ಟುವಾಗ) ಮೇಲೆ ಹತ್ತಲು ಅನುಕೂಲವಾಗುವಂತೆ ಮರ, ಕಲ್ಲು ಮುಂತಾದುವುಗಳಿಂದ ಕಟ್ಟುವ ಮೆಟ್ಟಲು,— ಪಾವಟಿಗೆ: (೬). **ಸಾರುವೆ** : ೨. ಮಲ್ಲಿಕಾರ್ಜುನದೇವರು ಉಂನತಮಾಡಿದರು ಸಾರುವೆ ಹಾಕಿಸಿದರು (ಮೈಆರಿ. ೧೯೪೫, ೪-೫; 1903); ಸಾಮಾನುಗಳನ್ನು ಸಾರುವೆಗಳ ಮೇಲೆ ಆಳುಗಳು ಕಟ್ಟೆಯ ಮೇಲಕ್ಕೆ ಸಾಗಿಸುತ್ತಾರೆ (ಶಿಲ್ಪಸಾ. ೪೦೪). 'ಸಾರ್₁' ಪರಾ. [ಸಾರ್₁ + - ವೆ. / ತೆಲು. ಸಾರುವ ]

**ಸಾಲ್₁, ಸಾಲು₁** (ಕ್ರಿ). ೧. ಕಡವನ್ನು ತೆಗೆದುಕೊಳ್ಳು ; ಸಾಲಮಾಡು : "ಸಾಲ್- ಋಣೇ, ಸಸ್ಯಪಂಕ್ತೌ ಚ (ಪೈರಿನ ಸಾಲು)" (ಶಮಥಾ); ಇದು ಪುಸಿ ನನ್ನಿಯೆಂದಱಿಯದಾ ರಿಣಮೋಚನತೀರ್ಥಮಂಬ ಕೊಂಡದೊಳಿರದಿಕ್ಕಿದಾಗ ಕರಿದಾಗಡೆ ತಾಂ ಬಿಳಿದಪ್ಪುದನ್ನವಪ್ಪುದಕಮನೊಮ್ಮೆ ಮಾಯೆ ಗಡ ಕೊಂಡ ರಿಣಂಗಳ ದೋಷಮಂತೆ ಪೋಪುದು ಗಡ ಸಾಲ್ವ ಸಾಲಿಗರ್ಗೆ ನಿಗ್ಗಮಮಲ್ಲದ ಪೋಪಡಾ ರಿಣಂ (ಸಮಪ. ೧೨-೨೫). ೨. ಸಾಕಾಗು; ಅಗತ್ಯವನ್ನು ಪೂರೈಸುವಷ್ಟಾಗು; ತಣಿಯುವಷ್ಟಾಗು: ಅಧೀಶ್ವರನಾ ದಯೆ ಸಾಲ್ಗುಂ (ಕವಿರಾ. ೧-೧೧೫); ಭಟಾರಾ ಇನಿತುಕಾಲಮುಂಡುದು ಸಾಲ್ಗುಮೆಮಗೆ (ವಡ್ಡಾರಾ. ೮೨-೨೦); ಬಳೆಯಲ್ಕಣ್ಮದುದಿಲ್ಲ ವಿಂಧ್ಯಗಿರಿಯುಂ ತನ್ನಾಜ್ಞೆಯಿಂದೊರ್ಮೆ ಮುಕ್ಕುಳಿಸಲ್ಕಂಬುಧಿ ಸಾಲ್ದುದಿಲ್ಲ (ಪಂಪಭಾ. ೪-೨೦); ಸತ್ತ ಮಗಂದಿರ್ಸತ್ತರ್ನೀನೆಮಗುಳ್ಳೊಡೆ ಸಾಲ್ಕುದು (ಗದಾಯು. ೪-೩). ೩. ತಕ್ಕುದಾಗು; ಉಚಿತವಾದುದಾಗು: ನೀನಿರಾನೆ ರಿಪುಸೇನೆಗೆ ಸಾಲ್ವೆನವುಂಕಿ ಪೇಡಿ ಪಾಡಿಗಟ್ಟಿಱಿ ವೆಡಗೆಯ್ಯ ಕೈಯುಗುರೆ ಸಾಲದೆ ನಚ್ಚಿನ ಕೈದುವೇಟ್ಟುದೇ (ಕಾವ್ಯಸಾ. ೪೧೧ ಶೂದ್ರಕ); ಅತಿತೃಷ್ಣಾಪರನಾಗಿ ಮುನ್ನೆ ತೊಡರ್ದಿರ್ದಾ ಗಾಂಪೆ ಸಾಲ್ಗುಂ ಮದಾಕೃತಿಯಂ ಮಾಸಿಸಿ ಮುಪ್ಪು ಚಪ್ಪರಿಸೆಯುಂ (ಆದಿಪು. ೧-೮೧) ; ನೆರಪಲ್ ಸಿರಿಯಂ ದುರಿತಮನುರುಪಲ್ ದಶದಿಶೆಯೊಳಿಂದುಕರರುಚಿ ಯಶಮಂ ಪರೆಪಲ್ ಪರನ್ನಪರುಮನೊತ್ತರಿಪಲ್ ಸಾಲ್ಕುದು ನಯಜ್ಞಹಿತಮಿತವಚನಂ (ರಾಜಶೇ. ೧೩-೧೫). ೪. ಶಕ್ತವಾಗು; ಸಮರ್ಥವಾಗು: ನೀನಿರಾನೆ ರಿಪುಸೇನೆಗೆ ಸಾಲ್ವೆನವುಂಕಿ ಪೇಡಿ ಪಾಡಿಗಟ್ಟಿಱಿವೆಡಗೆಯ್ಯ ಕೈಯುಗುರೆ ಸಾಲದೆ ನಚ್ಚಿನ ಕೈದುವೇಟ್ಟುದೇ (ಕಾವ್ಯಸಾ. ೪೧೧ ಶೂದ್ರಕ); ಪೆಱಗಂ ತಗುಳ್ವಯಾದವಬಲಮುಂಟಪ್ಪೊಡದನಂಬುಗಾಣಿಸಲ್ ನೀನೆ ಸಾಲ್ವೆಯುಱಿದುದಂ ಮಾಣಿಸಲಾನೆ ಸಾಲ್ವೆಂ (ಪಂಪಭಾ. ೫-೨೦ ವ) ; ಈ ಬೂತೆನ್ನ ಸರಂಗೇಲ್ವೊಡಲ್ಲದೆ ಪೊಱಮಡುವನಲ್ಲನಿವಂಗಾನೆ ಸಾಲ್ವೆಂ (ಗದಾಯು. ೭-೯ ವ); ಬಱಿದೂಱಿ ತಡೆಯಲಾವಂ ಸಾಲ್ವಂ! ಹರಂಗವಮಂತಿರೆ ಪಱಿಗುಂ! (ರಾಮಾಶ್ವ. ೧೪-೧೭). **ಸಾಲು₁** : ೨. ಭವಬಂಧನದುರಿತಂಗಳ ಗೆಲುವೊಡೆ ಓಂ ನಮಃಶಿವಾಯ ಶರಣೆಂದೊಡೆ ಸಾಲದೇ (ಬಸವ. ೭೯); ಬಸವಾ ಬಸವಯೆಂದುಸುರಿದಡೆ ಸಾಲದೆ ವಿಷವಮೃತವಹುದು (ಬಸಪು. ೮-೨೪); ಎಲೆ ವೃಕೋದರ ನಕುಳ ಸಾತ್ಯಕಿ ನಿಲಿಸಿರೈ ತಂಗಿಯನು ತನ್ನಯ ಕೊಲೆಗೆ ಮಗನಳಿವೊಂದು ಸಾಲದೆ ತನ್ನ ನುಡಿಯೇಕೆ (ಕುಮ್ಮಾದ್ರೋ. ೭-೧೯); ಕೂತು ಉಣ್ಣುವವನಿಗೆ ಕುಡಿಕೆ ಹಣವೂ ಸಾಲದು (ಗಾದೆ). ೪. ಬತ್ತೀಸಾಯುಧದಲ್ಲಿ ಅಭ್ಯಾಸವು ಮಾಡಿದರೇನು ಹಗೆಯ ಕೊಲುವರೆ ಒಂದಲಗು ಸಾಲದೆ (ಬಸವ. ೭೩೪) ; ಕಂದುಗೊರಲನೊಳು ಕಾದಲ್ಕೆ ಸ್ಮರ ತನ್ನದೊಂದು ಬಿಲ್ಲದು ಸಾಲದೆಂದು ತಂದಿಲ್ಲಿ ಬೆಳಸಿದನೆಂಬಂತೆ ಬೆಳ್ಳಬ್ಬು ಸಂದಣಿಸಿತು ಬನಬನದಿ (ಮೋಹತ. ೨-೪೭) ; ಇಂತಹ ಮಸ್ತಿ ತುಂಬಿದ ಹೆಣ್ಣಿಗೆ ಅಂತಿಂತಹ ಗಂಡು ಸಾಲುವನೆ ? (ಮೂರುದಾ. ೨೪೧). [ದೇ. ‖ ತಮಿ. ಚಾಲ್ ; ತೆಲು. ಚಾಲು]

**ಸಾಲ್₂** (ಕ್ರಿ). ೧. ಪಡೆ; ಹೊಂದು: ಪರದನಾರ್ಬ್ಬನ್ನಡವಂಗಡಿಯ ಪಾಜಿಕದಿಂದಿಱಿಯೆನನ್ನಾಯದೊಳ್ಪರಧನಂ ಪೊಯ್ದಡೆ ಸಾವು ಸಾಲ್ಬರ್ (ಸೌಇಇ. IX-i, ೭೭-೩೫ ; 992). ೨. ಹೋಗು: ಸಾಸಿರಕಾವಿಲೆಯು ಸಾಸಿರಪವ್ವರ್ಗರು[o] ಕೊ[o]ನ್ದಾ ಲೋಕಕೆ ಸಾಲ್ಗು೦ (ಸೌಇಇ. XI-i, ೯-೪೪ ; 862). [< ಸಲ್]

**ಸಾಲ್₃, ಸಾಲು₂** (ನಾ). ೧. ಪಂಕ್ತಿ; ಓಳಿ; ಶ್ರೇಣಿ: ನೀರ್ಗಾಯ ತುಱುಗಲಿಂದೆಱಗಿದ ನಾಳಿಕೇರಭೂರುಹಂಗಳುಂ . . . ಬಳ್ವಳ ಬೆಳೆದೆಳಗೌಂಗಿನ ಸಸಿಯ ಸಾಲ್ಗಳುಂ (ಚಂದ್ರಪು. ೧-೧೦೬) ; ಕಣ್ಗೆ ಮಂಗಳಮಾದ ತೆಂಗುಗಳ ಸಾಲ್ಗಳಿಂ ತಣ್ಣಂಪನೀವ ಪೂವಲ್ಲಿಗಳ ಮೇಲ್ಗಳಿಂ (ಉದ್ಭಟ. ೩-೮೮) ; ಹದ್ದು ಕಾಗೆಗೆ ನಿನ್ನವರು ಸಾಲಿದ್ದು ಬೋನವ ಸವಸಿದರು ಬಲವಿದ್ದು ಮಾಡುವುದೇನು ನಿಮಗಿನ್ನು (ಕುಮ್ಮಾಕ. ೩-೫) ; ಕಣ್ಗೆ ರಮಣೀಯಮಾಗಿವೆ ಕರ್ಣತನಯ ನೋಡೀ ಪುರದ ಮುಗಿಲಟ್ಟಳೆಯ ಸಾಲ್ಗಳು (ಜೈಮಿಭಾ. ೩-೨೦). ೨. ಭೂಮಿಯನ್ನು ಉಳುವಾಗ ನೇಗಿಲಿನಿಂದುಂಟಾಗುವ ಗೆರೆ, — ರೇಖೆ ; ಉಕ್ಕೆ : ನಿನ್ನುಟ್ಟ ಸಾಲೊಳೊಗೆದುದು ಪೊನ್ನೊಳ್ ತೀವಿರ್ದ ಕಳಶಮದನಾಂ ಕೊಂಡಂದೆನ್ನೊಳ್ಪು ಕಿಡುಗುಂ (ಜೀವಸಂ. ೨೦೦-೩೭). ೩. ಗುಂಪು; ಸಮೂಹ : "ಬಂಬಲ್, ತುಱುಗಲ್ . . . ಸಾಲ್,' ಮೊಕ್ಕಳಂ, ತೋಮಂ, ತೆಮ್ಮಲ್, ಗುಮ್ಮಿ, ಗೊಂದಣಿ (ಉಂದಲ್) - ಈ ೪೦ ಸಮೂಹಂ" (ಕಶಸಾ. ೫೭-೨೨೨) ; ಪಣ್ಗಳ ಸಾಲಿಂದೆನಸುಂ ಮೊದಲ್ ಗುಱಿಗಳೆಲ್ಲಂ ತೀವಿ ತುಂಬುರ್ಚಿ ಪೋಯ್ತಿಳೆಯೋಳ್ ತಾನೆನೆ ತದ್ವನಾಂತರದೊಳಿಂತೊಪ್ಪಿರ್ಪುವಿಮ್ಮಾವುಗಳ್ (ಕುಸುಮಾ. ೧-೯೫); ಶರಣರ ಮೈಯೊಳು ಬುರುಬುರನೆ ನೆಗೆನೆಗೆದೇಳ್ವ ಪುಳಕದ ಸಾಲ್ಗೆ ದೃಷ್ಟಿಯಾದಪುದೆಂದು ಗವಸಣಿಗೆಯಿಕ್ಕುವಂತೆ ಮೈತೀವಿ ಪೊದೆಯಿಸಿ (ಬಸರ. ೮-೧೪). **ಸಾಲು₂** : ೧. ಇವರು ಗಾಣದಲ್ಲಿ ಬಪ್ಪ ಸಾಲಿನ ಹೆಜ್ಜೆಯಂತೆ . . . ಮೆಟ್ಟಿದ ಹೆಜ್ಜೆಯ ಮೆಟ್ಟುವ ಕಷ್ಟಜೀವಿಗಳಿಗೆತ್ತಣ ಗತಿಯೋ (ವಾಲೀವಚಾ. ೧೦-೩೫) ; ನೆಗೆಹಿದವು ಕೈದೀವಿಗೆಯ ಸಾಲುಗಳು ಹೊಂದಂಡಿಗೆಯ ದೂವಾರಿಗಳು ವೆಂಠಣಿಸಿದರು ಸೀಗುರಿ ಮೊಗವ ಮೋಹಿದವು (ಕುಮ್ಮಾದ್ರೋ. ೮-೫೫); ಪರಿಪರಿಯ ಮಣಿಕನಕಮಯದುಪ್ಪರಿಗೆಗಳ ಸಾಲಿನಲಿ ಸುರವನ ಪುರವನಣಕಿಸುತಿರ್ದುದಾ ಸತ್ಯಾವತೀನಗರ (ತೊರರಾ. ೧-೯-೧೦) ; ದಂತಿಗಳ ಪಂತಿಗಳ, ವಾಜಿಗಳ ರಾಜಿಗಳ, ಕಾಲಾಳುಗಳ ಸಾಲುಗಳ, ರಥಸಮೂಹಗಳ . . . ಮೆರವಣಿಗೆ ಚಲಿಸಿತು ಕಡಲ ತಡಿಗೆ (ಚಿತ್ರಾಂಗ. ೮೮-೨೪೩೯). ೩. "ಸಾಲುಯೆನಲಕ್ಕುದು ಸಮೂಹ" (ಕಶರ. ೧೦೭). ೪. ಪದ್ಯ, ಗದ್ಯ ಮುಂತಾದುವುಗಳ ಒಂದು ಪಂಕ್ತಿ : ಈ ಹೊಸಗನ್ನಡ ಯುಗದಲ್ಲಿಯೂ ಹಳೆಗನ್ನಡದ ಅಚ್ಚಗನ್ನಡದ ಕೆಲವು ಸಾಲುಗಳು - ಹಾಡುಗಳು ಮಿಂಚಿನಂತೆ ಆಗಾಗ ಮಿನುಗುತ್ತಿವೆ (ಕಾಲೂರ. ೬ ಹರಕೆ) ; ನನಗೆ ಆ ಪದ್ಯದ ಒಂದು ಸಾಲೂ ಮರೆತಿಲ್ಲ (ರೂಢಿ). ೫. ಸುರಿಯುವಿಕೆ; ಧಾರೆ: ಒಡನೆ ಕಳುಹುತ ಬಂದನಾ ನೆಲದೊಡೆಯನನುಜರುಸಹಿತ ನಯನದಿ ಬಿಡುವನಿಯ ಸಾಲಿನಲಿ ನನೆದರು ಬಂದು ಕಿಱಿದೆಡೆಯ ನಡೆ ವಿಜಯನಾಗೆಂದು ತನುವನು ತಡವಿದರು (ಕುಮ್ಮಾದ್ರೋ. ೪-೫೩).

**ಸಾಲುಸಾಲು, ಸಾಲಾಸಾಲು** (ದ್ವಿರುಕ್ತಿ) : ಎಡಬಲದುಪ್ಪರಿಗೆಯ ಸಾಲುಸಾಲಲಿಯಡರಿ ನೋಡುವ ಹೆಣ್ಣುಗಂಡು ಜಡಜಕುಟ್ಮಲಯೌವನೆಯರನೀಕ್ಷಿಸಿ ಪಡೆದರು ತನುತಾಪಗಳನು (ಮೋಹತ. ೨೪-೨೦) ; ಮೊದಲಿಗೆ ಅರಣ್ಯಮಧ್ಯದಲ್ಲಿ

ಸಾಲಾಸಾಲು ತಂಬುಗಳು ಹುಟ್ಟಿಕೊಂಡುವು (ಚಾರುದಾ. ೧೬೩). **ಸಾಲ ಮನ್ನೆಯ ಬೇಂಟೆಕಾಱ** = ಒಂದು ಬಿರುದು (?): ಪತಿಕಾರ್ಯ್ಯಧುರಂಧರಂ ಸಾಲ ಮನ್ನೆಯ ಬೇಣ್ಟೆಕಾಱನುದ್ದಂಡಗಣ್ಡಭಂಗಾಱಂ . . . ಪರಬಲಸಾಧಕನೆನಿಸಿದಡ್ಡಾಯಿದದ ಹರಿಹರ ದಣ್ಣಾಯಕನನ್ವಯಾವತಾರವೆನ್ತೆನ್ದೊಡೆ (ಎಕ. III, ಮಂಡ್ಯ. ೧೨೧-೨೪ ; 1235). **ಸಾಲ್ಗೆಯ್ಯ ನೃಪ** = ಸಾಲಾಗಿ ಕೈಗಳುಳ್ಳ ರಾಜ; ಸಹಸ್ರಬಾಹು; ಕಾರ್ತವೀರ್ಯಾರ್ಜುನ: ದುರ್ಗುಣಂ ಸದ್ಗುಣಾಭರಣಮಿರ್ಪಾ ಸಾಲ್ಗೆಯ್ಯ ನೃಪನೊಳುಂ ಪುಟ್ಟಿತಲ (ಪರಶು. ೨೩-೫). [ದೇ. ‖ ತಮಿ. ಮಲ. ಚಾಲ್ ; ತುಳು. ಸಾಲ್ ; ಕೊಡ. ಸಾಲ್ = ಸರತಿ; ತೆಲು. ಚಾಲು ]

**ಸಾಲ್$_4$** 'ಸಾಲು$_3$' ನೋ.

**ಸಾಲ್‌ಆಖೈರು** 'ಸಾಲಾಖೈರು' ನೋ.

**ಸಾಲ್‌ಜಾಡ** 'ಸಾಲ್‌ಝಾಡ' ನೋ.

**ಸಾಲ್‌ಜಾಡೆ** 'ಸಾಲ್‌ಝಾಡ' ನೋ.

**ಸಾಲ್‌ಝಾಡ, ಸಾಲ್‌ಜಾಡ, ಸಾಲ್‌ಜಾಡೆ, ಸಾಲಜೇಡು** (ನಾ). ವರ್ಷದ ತಃಖ್ತೆ, — ಲೆಕ್ಕಪಟ್ಟಿ : (ರೈಸ್‌ಗ. II, ೫೬೦). **ಸಾಲ್‌ಜಾಡ :** (ಮ್ಯಗಜಿ. IV, ೭೮೪). **ಸಾಲ್‌ಜಾಡೆ:** (ಮ್ಯಗಜಿ. IV, ೭೮೪). **ಸಾಲಜೇಡು :** ಇನ್ನೂ ಚಪ್ಪರವನ್ನು ಪೂರ್ಣ ಅಳಿದಿಲ್ಲ. ಊರಿನ ಸಾಲಜೇಡು ಮುಗಿಸಿಲ್ಲ (ಮೂಕಜ್ಜಿ. ೧೮೭).

[<— ಮರಾ. ಸಾಲಝಾಡಾ]

**ಸಾಲ್‌ಬಸಾಲ್** (ನಾ). ಪ್ರತಿವರ್ಷ; ವರ್ಷಂಪ್ರತಿ : (ಮ್ಯಗಜಿ. IV, ೭೮೪).

[<— ಮರಾ. ಸಾಲಬಸಾಲ್]

**ಸಾಲ$_1$** (ನಾ). (ನಿಗದಿಯಾದ ಕಾಲದಲ್ಲಿ) ಬಡ್ಡಿ ಅಥವಾ ಬಡ್ಡಿಯಿಲ್ಲದೆ ಹಿಂತಿರುಗಿಸುವ ಕರಾರಿನ ಮೇಲೆ ಕೊಟ್ಟ ಅಥವಾ ಪಡೆದ ಹಣ, ಪದಾರ್ಥ ಮುಂತಾದುವು; ಕಡ: ಸ್ವಸ್ತಿಶ್ರೀ ಶ್ರೀಪುರುಷಮಹಾರಾಜರ್ ಪೃಥುವೀರಾಜ್ಯಗೆಯೆ ಕೂಡಲೂರ್ಪ್ಪಾಡಿ ಒಡೆಯ ನನ್ದಿಕಾದನಾ ಎಱನಾಗನಾ ವ್ಯವಹಾರದನ್ತರಮ್ ಸಾಲ ಮಿಲ್ಲಾಮ್ (ಎಕ. X, ಕೋಲಾರ. ೭-೪ ; ಸು. 760) ; ಐದುದಿನಕಾದೊಡಮಾಱುದಿನಕಾದೊಡಂ ತನ್ನ ಮನೆಯಲ್ಲಿ ಮಾದುರಮನಾದೊಡಮಟ್ಟು ಸಾಲಮಿಲ್ಲದೆ ಪರರಾಳಲ್ಲದುಂಡಿ ಹುದುಚಿತಮೆಲೆ ರಾತ್ರಿಂಚರ (ಪಂಚತಂ. ಅ. ೫೨-೩೧); ಜೋಳವಾಳಿಯೊಳುಂಡು ಮಾಡಿದ ಸಾಲವನು ತಲೆಗಳಲಿ ತಿದ್ದಿದರಾಳ ತಱುಬುವ ಪತಿಗೆ ಹರುಷವ ಮಾಡಿ ತಮತಮಗೆ (ಕುಮ್ಮಾಭೀ. ೬-೧೦) ; ಸಾಲವನು ಕೊಂಬಾಗ ಹಾಲೋಗರುಂಡಂತೆ ಸಾಲಿಗನು ಬಂದು ಎಳೆವಾಗ ಕಿಬ್ಬದಿಯ ಕೀಲು ಮುಱಿದಂತೆ (ಸರ್ವಜ್ಞ. ೧೩೯೧).

**ಸಾಲಕೇಳು** = ೧. ಕಡವನ್ನು ಕೇಳು; ಎರವಲನ್ನು ಬೇಡು : ಅವನು ಈ ತಿಂಗಳು ನನ್ನ ಹತ್ತಿರ ನೂರುರೂಪಾಯಿ ಸಾಲಕೇಳಿದ್ದಾನೆ (ರೂಢಿ). ೨. ಕೊಟ್ಟ ಕಡವನ್ನು ವಾಪಸ್ಸು ಕೇಳು : ಸಾಲ ಕೇಳದೆ ಹೋಯಿತು, ಹೊಲ ನೋಡದೆ ಹೋಯಿತು (ಗಾದ). **ಸಾಲ ತಿದ್ದು** = ೧. ಕಡಕೊಡು : ಅವನು ಬಂದ ಹಣವನ್ನೆಲ್ಲ ಕೇಳಿದವರಿಗೆ ಸಾಲ ತಿದ್ದಿ ಮುಗಿಸಿದ (ರೂಢಿ). ೨. ತೆಗೆದುಕೊಂಡ ಕಡವನ್ನು ತೀರಿಸು, — ಹಿಂತಿರುಗಿಸು: ಕಲಿತೆನೆಂಬುವ ತಣಿವೆ, ಸಾಲ ತಿದ್ದಿದೆನೆಂಬ ತಿಳಿಮನವೆ ಫಲವ್ಯಸೆ! (ಹಚ್ಚರ. ೧೮-೬೬). **ಸಾಲತೀರಿಸು** = ಕೊಂಡ ಕಡವನ್ನು ಹಿಂದಕ್ಕೆ ಕೊಡು; ಋಣಮುಕ್ತವಾಗು: ಈ ವರ್ಷ ಸಾಲತೀರಿಸದಿದ್ದರೆ ಮರ್ಯಾದೆ ಹೋಗುತ್ತದೆ (ರೂಢಿ). **ಸಾಲತೀರು** = ಕಡವನ್ನು ಹಿಂದಕ್ಕೆ ಕೊಟ್ಟು ಮುಗಿ; ಋಣ ಹರಿ: ಸಾಲಗಾರನು ಕೊಡುವ ಹಣದ ಜೊತೆಗೆ ಬ್ಯಾಂಕು ಸೇರಿಸುವ ಹಣವೂ ಲಾಭವೂ ಸೇರುವುದರಿಂದ ಗೊತ್ತಾದ ಕಾಲಕ್ಕೆ ಮುಂಚೆಯೇ ಸಾಲತೀರುವ ಅವಕಾಶವುಂಟು (ಹಣಪ್ರ. ೧೫೯) ; ಜೋಲುವವನ ಕಾಲು ಹಿಡಿದರೆ ಸಾಲ ತೀರೀತೇ? (ಗಾದ). **ಸಾಲಸೋಲ** = ಕಡ ಮುಂತಾದುವು : ಇನ್ನು ಮುಂದೆ ಅವನು ಮಾಡುವ ಸಾಲಸೋಲಗಳಿಗೆ ತಾನು ಜವಾಬ್ದಾರನಾಗುವುದಿಲ್ಲವೆಂದೂ . . . ಎಚ್ಚರಿಕೆ ಕೊಟ್ಟನು (ಪುನರು. ೩೪೧).

[< ಸಾಲ್$_1$ / ತುಳು. ಕೊಡ. ಸಾಲ; ಕೋತ. ಚಾಲ್$_1$]

**ಸಾಲ$_2$, ಸಾಳ$_1$** (ನಾ). ೧. ಮರ; ವೃಕ್ಷ : "ತರು ವನಸ್ಪತಿ ಸಾಲಮಂಘ್ರಿಪಮ . . . ಕುಜಮೆನಲು ವೃಕ್ಷಕ್ಕೆ ನಾಮವಕ್ಕುಂ" (ಮಂಗರಾ. ೩೧-೧). ೨. ಅಂಟುದ್ರವವನ್ನು ಸ್ರವಿಸುವ ಒಂದು ಬಗೆಯ ಎತ್ತರವಾದ ಮರ; ಸರ್ಜವೃಕ್ಷ; ಶಾಲವೃಕ್ಷ: ಸಾಲಪ್ರಾಂಶುವಿಶಾಲಲೋಲನಯನಂ . . . ಗಂಗಾತ್ಮಜನ್ಮಂ ಜಯಶ್ರೀಲೋಲಂ ಜಮದಗ್ನಿರಾಮಮುನಿಯೊಳ್ ಕಲ್ತಂ ಧನುರ್ವಿದ್ಯೆಯಂ (ಪಂಪಭಾ. ೧-೬೮); ವಾರವಧೂಜನಮುಗ್ಧಸಾಲಕಾನನಮಿರೆ ಸಾಲಕಾನನಮನೀಕ್ಷಿಸಲಟ್ಟಿಗನಾದೆ (ಪಂರಾಮಾ. ೭-೧೧) ; ಈಳೆ ಹೊಂಗೇದಗೆಯ . . . ಸಾಲಸಂತಾನವನು . . . ಬಾಲದಿಂದಲಿ ಕಿತ್ತೊರಸಿ ಹುಡಿಹುಡಿ ಮಾಡಿದನು ಹನುಮ (ಕಾಶಿರಾ. ೧೧-೨೦). ೩. ಆವರಣ ; ಸುತ್ತುಗೋಡೆ; ಪ್ರಾಕಾರ : ಇರೆ ನೀಚಗೃಹದಿ ಸೌಮ್ಯರ್ ಮರಮೊದಲೊಳ್ ಸಾಲ[ಪಾಠಾಂ. ಳ] ಮೂಲದೊಳ್ ಜನನಂ (ಜಾತತಿ. ೪-೨೨); ಇರುಳೊಸರ್ವ ಚಂದ್ರಮಣಿ ಬಂಧುರತತ್ಪುರಸಾಲದಂಬು ಬಳೆಯಿಸೆ ಬೆಳೆದಾ ಪುರನಂದನವಂ ಹರಹರ ಸುರನಂದನವೆಂದು ಬಣ್ಣಿಸಲ್ಬಗೆವುಗದೇ (ರಾಜಶೇ. ೨-೩೩). **ಸಾಳ$_1$ :** ೨. ಸಾಳತಮಾಳಕಾನನಭರೋದ್ಧತಸಿಂಧುರಕಂಠಗರ್ಜನಾಭೀಳಮಂ . . . ಇಂದುಕಾಂತ [ಸು]ಸಲೀಳಮನೆಯ್ದಿದನಿಂದ್ರಕೀಳಮಂ (ಪಂಪಭಾ. ೭-೭೬); ಸಾಳರಸಾಳತಾಳ . . . ಹಿಂತಾಳ ಮಹೀಜಮುಖ್ಯತರುಸಂತತಿಯಿಂ ವನಬೃಂದವೊಪ್ಪುಗುಂ (ಯಾದಚಂ. ೧-೩೫). ೩. "ಪರಿಧಿ ಪ್ರಾಕಾರ ವಪ್ರನಾಮಂ ಸಾಳಂ" (ವಸ್ತುಕೋ. ೪೬-೬). [ಸಂ.]

**ಸಾಲಂಕಾರ** (ಗು). ೧. ಅಲಂಕಾರಸಹಿತವಾದ; ಸಿಂಗರಿಸಲ್ಪಟ್ಟ: ಅತ್ಯಧಿಕಹಯಗಜರಥಂಗಳೊಂದೊಂದನೌಚಿತ್ಯಸಾಲಂಕಾರಗೋಸಹಸ್ರವನೊಂದುಭಾರ ಪೊನ್ನಂ ಕುಡುವುದು (ಜೈಮಿಭಾ. ೨-೨೭); ಸಾಲಂಕಾರತ್ರಿಮೂರ್ತಿದಾನ . . . ಗಜಾಶ್ವರಥದಾನ ಮೊದಲಾದ ಅನೇಕ ದಾನಗಳನ್ನು ಮಾಡಿ (ಮಹಾಮ. II, ೧೬೯). (ನಾ). ೨. ಅಲಂಕಾರಸಹಿತವಾದುದು: ಮಂದನೆಯ ಮದದುಬ್ಬುಗೊಬ್ಬಿನ ಛಂದಸಾಲಂಕಾರದಲಿ ಹರಿನಂದನನು ಹಲುದಿನುತ ಹರಿತಂದೊದೆದನತಿರಥನ (ತೊರರಾ. ೬-೩೯-೭). [ಸಂ.]

**ಸಾಲಂಕೃತಕನ್ಯಾದಾನ** (ನಾ). ವಧುವನ್ನು ವಸ್ತ್ರಾಭರಣಗಳಿಂದ ಅಲಂಕರಿಸಿ ವರನಿಗೆ ಧಾರೆಯೆರೆದು ಕೊಡುವುದು : ಮನೆ ಮಾರಿದ ಸುದ್ದಿ ನನ್ನ ಕಿವಿಗೆ ಬಿತ್ತು. ಅಲ್ಲದೆ ಇದು ಸಾಲಂಕೃತಕನ್ಯಾದಾನವೇ ಆಗಿತ್ತು! (ಸ್ಮೃತಿಚಿ. ೩೪೮). [ಸಂ.]

**ಸಾಲಂಗಿ** (ನಾ). ಒಂದು ಬಗೆಯ ಉದ್ದವಾದ ಅಂಗಿ (?) : ಮಲಯಜ ವನನುಲೇಪನಂಗೆಯ್ದು ಧೂಪಿಸಿದ ಬಿಳಿಯ ಪಟ್ಟೆಯನುಟ್ಟು ದುವ್ವಟದ ಹಚ್ಚಡವನಳವಡಿಸಿ ಸಾಲಂಗಿಯಂ ತೊಟ್ಟು . . . ಸೌಂದರಂ ವನಕೆ ಪೊಱಮಟ್ಟನು (ಸೌಂದಪು. ೧೦-೧೧). [ಸಾಲ್$_3$? + ಅಂಗಿ$_2$]

**ಸಾಲಂಗುಳಿ, ಸಾಲಗುಳಿ** (ನಾ). ಸಾಲಮಾಡುವ ಸ್ವಭಾವವುಳ್ಳವನು: ಗುಳಿ ಪ್ರತ್ಯಯಕ್ಕೆ – ಆಟಂಗುಳಿ, ಸಾಲಂಗುಳಿ, ಲಂಚಂಗುಳಿ (ಶಮದ. ೨೦೨ ಪ್ರಯೋ); ಲಂಚಮಂ ಕೊಳ್ವಂ, ಲಂಚಂಗುಳಿ. ಏವಂ ಸಾಲಂಗುಳಿ, ಆಟಂಗುಳಿ (ಶಬ್ದಾನು. ೪೧೪ ಪ್ರಯೋ). **ಸಾಲಗುಳಿ :** ಸಾಲಗುಳಿಗೆ ಆ ಯೋಗ್ಯತೆ ಉಂಟಾಗುವುದು ಅವನ ಚರಸ್ಥಿರ ಆಸ್ತಿಯಿಂದ (ಶಬ್ದವಿ. ೮೧). [ಸಾಲ$_1$ + - ಗುಳಿ$_2$ (< - ಕುಳಿ$_3$)]

**ಸಾಲಂಗೊಡು, ಸಾಲಕೊಡು** (ಕ್ರಿ). ಕಡವನ್ನು ಕೊಡು; ಎರವಲು ನೀಡು: ಒಕ್ಕಲಿಗರ್ ಸಾಕ್ಷಿಯಿಲ್ಲದೆ ಸಾಲಂಗೊಟ್ಟರಂತೆ [ಬೆಕ್ಕಸಂ] ಬೆಱಗಾಗೆ (ಧರ್ಮಾಮೃ. ೨-೬೯). **ಸಾಲಕೊಡು :** ಆಧಾರವಿಲ್ಲದಲೆ ಸಾಲಕೊಡುವುದು ಕಷ್ಟ ಮಾದ ಹುಣ್ಣದು ಮತ್ತೆ ಹುಟ್ಟಿದರೆ ಕಷ್ಟ (ಪುರಂದ. ಧಾ. ೫-೧೪೮-೫); ಸಾಲಕೊಡುವವನು ಸಾಲಗುಳಿಯ ರಪಣವನ್ನು ನೋಡಿ ಕೊಟ್ಟರೆ ಅದು ವಸೂಲಾಗುವುದರಲ್ಲಿ ಅವನಿಗೆ ಸಂದೇಹವಿರುವುದಿಲ್ಲ (ಶಬ್ದವಿ. ೮೧). [ಸಾಲ$_1$ + ಕೊಡು$_1$]

**ಸಾಲಂಗೊಳ್** (ಕ್ರಿ). ಕಡವನ್ನು ಪಡೆ; ಸಾಲಮಾಡು: ಪುರುಷಂ ತೀರಮೆಯಿಂದಂ ಪರದೇಶದೊಳಿರ್ದರಿತ್ತಲುತ್ತಮಪಾತ್ರಂ ಬರೆ ಸಾಲಂಗೊಂಡುಂ ಬಿತ್ತರದಿಂದಿಕ್ಕುವಡೆ ಧರ್ಮಪತ್ನಿಯೆನಿಕ್ಕುಂ (ಸಮಪ. ೫-೧೨೯). [ಸಾಲ$_1$ + ಕೊಳ್$_1$]

**ಸಾಲಂಚು** (ನಾ). (?): ಮಿಂಚುವ ಪರಿವಾಣ ಚಂಬು ಗಿಂಡಿಗಳು ಸಾಲಂಚಿನ ಮಜ್ಜನಸಾಲೆ ಪಂಚಾರತಿಗಂಟೆಗಳಿಂದ ಮೆಱೆದುವು ಕಂಚುಗಾಱರ ಪಸರಗಳು (ಕಂನವಿ. ೬-೬೯). [?]

**ಸಾಲಂಬಡು, ಸಾಲಬಡು** (ಕ್ರಿ). ಸಾಲಕ್ಕೆ ಸಿಕ್ಕು; ಋಣಕ್ಕೆ ಬೀಳು:

ಸಾಲಂಬಡಲಾಗದೆಂಬುದುತ್ತರವಾಕ್ಯಂ (ನೀತಿವಾ. ೩೧-೧೪). **ಸಾಲಬಡು :** ಮಾರಿಕವ್ವೆಯ ನೋಂತು ಕೊರಳಲ್ಲಿ ಕಟ್ಟಿಕೊಂಬರು ಸಾಲಬಟ್ಟರೆ ಮಾಱಿಕೊಂಬರಯ್ಯಾ ಸಾಲಬಟ್ಟರೆ ಅವಱನೊತ್ತೆಯನಿಟ್ಟುಕೊಂಡುಂಬರಯ್ಯಾ (ಬಸವ. ೫೫೯). [ಸಾಲ$_1$+ ಪಡು$_1$]

**ಸಾಲಂಮಿಶ್ರಿ** 'ಸಾಲಾಮಿಸ್ರಿ' ನೋ.

**ಸಾಲಕ** 'ಶಾಲಕ' ನೋ.

**ಸಾಲಕೊಡು** 'ಸಾಲಂಗೊಡು' ನೋ.

**ಸಾಲಗ$_1$** (ನಾ). ಕಡವನ್ನು ಕೊಡುವವನು; ಎರವಲು ನೀಡುವವನು: "ಋಣಕಃ = ಸಾಲಗಂ" (ಶಾಶಕ್ಯ. ೨೩೯). [ಸಾಲ$_1$ + - ಗ$_2$]

**ಸಾಲಗ$_2$, ಸಾಳಗ** (ನಾ). ೧. [ಸಂಗೀತ] ಹೊಂದಾಣಿಕೆ; ಮೇಳ; ಸಾಮಂಜಸ್ಯ: ಸೂಡವು ಶುದ್ಧ, ಛಾಯಾಲಗವೆಂಬ ಕ್ರಮದಿಂದ ಎರಡು ಬಗೆ . . . ಛಾಯಾಲಗವೆಂಬ ಮಾತು ಅಪಭ್ರಂಶವಾಗಿ ಸಾಲಗವೆಂದಾಗಿದೆ (ಚತುಪ್ರ. ೭೦). **ಸಾಳಗ:** ೧. ಛಾಯೆಯಿಂದಾಣತಿಮಾಡಿ ಸಾಳಗದ ದೇಸಿಯ ಗೀತಮನಂದು ಪಾಡುವಿಂಪಾಣನನುರ್ವರಾಧಿಪತಿ ಲೀಲೆಯಿನೆಕ್ಕಲಗಾಣನೊರ್ವನಂ ಕೇಳುತ್ತುಮಿರ್ದಂ (ಚಂದ್ರಪ್ರು. ೭-೯೭); ಸೇರಿ ಲಾಲಿತಶುದ್ಧ ಸಾಳಗಪೂರದೇಶೀಮಾರ್ಗವೆಸೆಯಲಪಾರ ಲಳಿಧ್ರುತ ಮಧ್ಯಲಲಿತ ವಿಳಂಬಿತಂಗಳೊಳು (ಬಸಪು. ೧೯-೧೧) ; ಸಾಳಗದ ಸನ್ಮೋಹನದ ಮಳೆಗಾಲವೋ ಗೀತವೊ . . . ನರ್ತನವೊ ಸೊಗಸಿನ ಮೇಳವಣಿಗಳ ಪಾಟಿಯಾದುದು ಜನದ ಕಣ್ಮನಕೆ (ಕುವ್ಯಾಅ. ೧೨-೨೦). ೨. ಮದ್ದಳೆಯ ನಾಲ್ಕು ಬಗೆಯ ವಾದನಕ್ರಮಗಳಲ್ಲಿ ಒಂದು: ಶುದ್ಧ ಸಾಳಗ ಸಂಕೀರ್ಣ ಶವಣೆಗಳೆಂಬ ಚತುರ್ವಿಧ ಮೃದಂಗಮಂ ಮೇಳೈಸಿ . . . ತ್ರಿವಿಧಕ್ರಮುವಱಿದು ನುಡಿಸುವ ಕಡುಜಾಣರಪ್ಪ ಮರ್ದಳಿಕಾಱರಿಂ (ವಿವೇಕ. ೧೯೧). ೩. ಒಂದು ರಾಗದ ಹೆಸರು : ಮತ್ತೊರ್ವ ಮಾನಿನಿ ಸಾಳಗ ಗವುಳಗಳನು ಮನದೊಲವಿಂದಾಯೆಂದು ಪಾಡಿದಳು (ಜೀವಂಸಾಂ. ೧೯-೪೩); ಮಧುಮಾಧವಿ ಶಂಕರಾಭರಣ . . . ಶ್ರೀರಾಗ ಸಾಳಗ . . . ಕರ್ನಾಟಕಬಂಗಾಳಮೆಂಬಿಪ್ಪತ್ತೇ ರಾಗಾಂಗದಿಂದಾದ ರಾಗಂಗಳು (ವಿವೇಕ. ೧೮೮). [ಸಂ.]

**ಸಾಲಗಾತಿ** (ನಾ). ೧. ಸಾಲವನ್ನು ಕೊಟ್ಟವಳು; ಕಡವನ್ನು ನೀಡಿದವಳು: (೬). ೨. ಸಾಲವನ್ನು ಪಡೆದವಳು; ಕಡವನ್ನು ಹೊಂದಿದವಳು : ಪತಿಗೆ ಹೆಂಡತಿ ಸಾಲಗಾತಿ ತಾನಂತೆ ; ನಮ್ಮೊಳಂತಲ್ಲ, ನಾ ಸಾಲಿಗನೆ ನಿನ್ನ(ಗಿಳಿವಿ. ೫೮-೩೭).
[ಸಾಲ$_1$ + - ಕಾತಿ$_5$]

**ಸಾಲಗಾರ** (ನಾ). ೧. ಕಡವನ್ನು ಕೊಟ್ಟವನು; ಎರವಲು ನೀಡಿದವನು : ಮೊದಲೇ ಆತನ ಬಡತನ ; ಮೇಲೆ ಸಾಲಗಾರರ ಹಿಂಸೆ (ನೀತಿಚಿಂ. XIII, ೪); ಪಡಕೊಂಡ ಹಣಕ್ಕೆ ನ್ಯಾಯವಾದ ಮಠಾಧಿಪತಿಯು ಹೊಣೆಯಲ್ಲವೆಂದು ಅದಾಲತಿನಲ್ಲಿ ಫೈಸಲಾಗಿ ಸಾಲಗಾರರ ಬಾಯಿಗೆ ಮೃತ್ತಿಕೆ ಆಯಿತು. ಧನಶೋಕದಿಂದ ಸಾಲಗಾರರು ಸಂತಾಪಪಟ್ಟರು (ವಾಗ್ದೇವಿ. ೨೮೭) ; ಸಾಲಗಾರನ ಮನೆಗೆ ಸವುದೆ ಹೊತ್ತರೆ, ಮೇಲಣ ಬಡ್ಡಿಗೆ ಸಮವಾಯಿತು (ಗಾದ). ೨. ಕಡವನ್ನು ಪಡೆದವನು ; ಋಣಿ : ಅವರಿಗೆಲ್ಲಾ ನಾನು ಸಾಲಗಾರನಾಗಿ ಕೈಜೋಡಿಸಿ ತಲೆಬಾಗುತ್ತೇನೆ (ಕಾಲೂರ. ೫ ಮುನ್ನುಡಿ).
[ಸಾಲ$_1$+ - ಗಾರ (< - ಕಾಱ)]

**ಸಾಲಗಾರಿಕೆ** (ನಾ). ಕಡವನ್ನು ಪಡೆಯುವುದು ; ಸಾಲಮಾಡುವುದು : ಶ್ರೀಮಂತ ದಳವಾಯಿಯವರು - ಬೆಳ್ಗೊಳದ ಸ್ಥಾನದವರ ಸಾಲಗಾರಿಕೆಯ ವಿಷಯವಾಗಿ ಆಧಿಕಾರಿಕನಿರ್ಣಯವನ್ನು ಈಗ ಈವೋಲಗದಲ್ಲಿ ಅಪ್ಪಣೆಕೊಡುವುದಾಗಿ ಅಭಯ ಮಾಡಿದ್ದರು (ಬೆಟ್ಟಅ. ೨೦೦-೧೭). [ಸಾಲಗಾರ + - ಇಕೆ]

**ಸಾಲಗಾರ್ತಿ** (ನಾ). = ಸಾಲಗಾತಿ : (೬). [ಸಾಲಗಾರ + - ತಿ$_1$ (< - ಇತ್ತಿ)]

**ಸಾಲಗುಳಿ** 'ಸಾಲಂಗುಳಿ' ನೋ.

**ಸಾಲಗುಳಿಕ** (ನಾ). ಸಾಲಮಾಡುವ ಸ್ವಭಾವದ ವ್ಯಕ್ತಿ : ಅಪ್ಪಯ್ಯ, ಎಂಥ ಸಾಲಗುಳಿಕರು ನೀವು ! (ಭಾಮಿನಿ. ೧೯). [ಸಾಲಗುಳಿ (< ಸಾಲಂಗುಳಿ) + - ಕ$_3$]

**ಸಾಲಗೇರಿ** 'ಸಾಲುಗೇರಿ' ನೋ.

**ಸಾಲಗ್ರಾಮ** (ನಾ). ವಿಷ್ಣುವಿನ ಸ್ವರೂಪವೆಂದೂ ಪೂಜಾರ್ಹವೆಂದೂ ಭಾವಿಸಲಾದ, ಸಾಮಾನ್ಯವಾಗಿ ಗಂಡಕೀನದಿಯಲ್ಲಿ ದೊರೆಯುವ ಕಪ್ಪನೆಯ ದುಂಡುಕಲ್ಲು : ಸಾಲಗ್ರಾಮ ಶಕ್ತಿ ಲಕ್ಷ್ಮಿ ದುರ್ಗಿ ಎಂಬ ಕಿಱುಕುಳದೈವಮಂ ಪೂಜಿಸಿ (ಸರ್ವವ. ೧೭೮-೮೨೯); ತೆಗೆ ತಿಲವನೌಪಾಸನದ ಕೊಳವಿಗಳ . . . ಬೇಳೆಗಳ ಸಾಲಗ್ರಾಮಗಳ ದೋಸೆಗಳ ಕಾವಲಿಗಳನೆನುತ ಕಳವಳಿಸೆ ಭೂಸುರರು (ತೊರರಾ. ೫-೮-೭೦); ಬಟ್ಟೆಯೊಳ್ಪುಣ್ಯವಶದಿಂದರ್ಭಕನ ಕಣ್ಗೆ ಪುಟ್ಟ ಸಾಲಗ್ರಾಮದೊಂದು ರಮಣೀಯಶಿಲೆ ಕಟ್ಟೆಸಕದಿಂದೆ ಕಾಣಿಸಲು (ಜೈಮಿಭಾ. ೨೮-೨೩). [ಸಂ.]

**ಸಾಲಜೇಡು** 'ಸಾಲ್‌ಝಾಡ' ನೋ.

**ಸಾಲಣ** 'ಶಾಲಣ' ನೋ.

**ಸಾಲತ್ತ** (ನಾ). ಒಂದು ಪಂಗಡದ ಹೆಸರು : ಪೆರ್ವ್ವಯಲ ಕೆಱರುಂ ತೆನನ್ದಾಕರುಂ ಕೊಳನೆಲ್ಲೂರ ಸಾಲತ್ತರುಂ ವಾರದಱುಂ ಏನೆವ್ವರುಂ ನರಸಾಕ್ಷಿ (ಎಕ. V (R), ಕೃಷ್ಣನ. ೧೦೫-೭೨ ; ಸು. 890). [?]

**ಸಾಲತ್ತಕಾಡು** (ನಾ). ಒಂದು ಸ್ಥಳದ ಹೆಸರು : ಕಿಱುಮಾಮಿಪಂಳಮೆ ವದಿರಕೆಱೆವ ಸಾಲತ್ತಕಾಡೇಱಿನ ಪೇರೊಟ್ಟೆವಿ ಪಗನ್ತೆವಂಳಮ ಗೋಸನ್ತನೆ ಕೊಣ್ಡೆನ್ದಗೆಱೆವ (ಎಕ. V (R), ಕೃಷ್ಣನ. ೧೦೫-೭೪ ; ಸು. 890). [ಸಾಲತ್ತ$_?$ + ಕಾಡು$_2$]

**ಸಾಲತ್ತಿ** (ನಾ). ಒಂದು ಸ್ಥಳದ ಹೆಸರು : ದುಗ್ಗತಿಗವುಣ್ಡೆಯ ಮಗಂ ನಾಗತಿ ಸಾಲತ್ತಿಯ [ತು]ಱುಗೊಳ ಸತ್ತಂ (ಸೌಇಇ. XX, ೧೪-೪; 878). [?]

**ಸಾಲಪತ್ರ** (ನಾ). ಸಾಲವನ್ನು ಪಡೆದ ವ್ಯಕ್ತಿ ಅಥವಾ ಸಂಸ್ಥೆಯು ಸಾಲದ ವಿವರ, ನಿಬಂಧನೆ ಮತ್ತು ಹಿಂತಿರುಗಿಸುವ ವಾಗ್ದಾನಗಳೊಂದಿಗೆ ಸಾಲಕೊಟ್ಟವರಿಗೆ ಬರೆದುಕೊಡುವ ಪತ್ರ : ಯಾವಾಗ ಮಾರಿದರೂ ತಕ್ಷಣ ಅಷ್ಟು ಲೋಹವನ್ನೂ ನಾಣ್ಯವನ್ನೂ ಬೆಲೆಯನ್ನೂ ಕೊಂಡು ತರುವ ಸಾಲಪತ್ರ, ಲೇವಾದೇವಿಪತ್ರಗಳೂ ಇರುವುವು (ಹಣಪ್ರ. ೨೮). [ಸಾಲ$_1$ + ಪತ್ರ]

**ಸಾಲಪರ್ಣಿ** (ನಾ). ಒಂದು ಬಗೆಯ ಮರ : ಸಾಲಪರ್ಣಿ, ಕೊಳಕುನಾರು (ಮೃಔಗಿ. ೨೯-೫೭೧). [ಸಂ. ಸಾಲಪರ್ಣೀ]

**ಸಾಲಬಂದಿಕೆ** (ನಾ). ಬಟ್ಟೆ, ಮರ, ದಂತ ಮೊದಲಾದುವುಗಳಿಂದ ತಯಾರಿಸಿದ ಗೊಂಬೆ, — ಪುತ್ತಳಿ : "ಕನ್ನಡದಲ್ಲಿ 'ಮದನಕ್ಕೆ' ಎಂಬುದು ಬಹುಶಃ ಮದನಿಕಾ ಎಂಬ ಸಂಸ್ಕೃತಪದದ ತಮಿಳುರೂಪಾಂತರದಿಂದ ಬಂದಿತೆಂದು ಊಹಿಸಲಾಗಿದೆ. ಶಿಲ್ಪಿಗಳು ಇವುಗಳನ್ನು 'ಸಾಲಬಂದಿಕೆ', 'ಪುತ್ಥಳಿ' ಎಂದು ಕನ್ನಡಶಾಸನಗಳಲ್ಲಿ ಕರೆದಿರುವರು (ಹೊಯ್ಸವಾ. ೨೭). [< ಸಾಲಭಂಜಿಕೆ]

**ಸಾಲಬಡಕ** (ನಾ). ಸಾಲ ಮಾಡುವವನು ; ಸಾಲಗಾರ : (೬).
[ಸಾಲ$_1$ + - ಬಡಕ$_2$ (< - ಬಡಿಕ$_2$)]

**ಸಾಲಬಡು** 'ಸಾಲಂಬಡು' ನೋ.

**ಸಾಲಬಾಗೆ, ಸಾಲುಬಾಗೆ** (ನಾ). ಒಂದು ಬಗೆಯ ಬಾಗೆಮರ : ಸಾಲಬಾಗೆ, ಬೆಳ್ಳಟ್ಟೆ, ಬಿಕುಲ್ (ಮೃಔಗಿ. ೪-೬೭). **ಸಾಲುಬಾಗೆ :** "ಬಿಕುಲ್, ಬೆಳ್ಳಟ್ಟೆ, ಅಥಂಜಿ, ಸಾಲುಬಾಗೆ" (ಸಸ್ಯನಿ. ೮). [ಸಾಲ$_?$ + ಬಾಗೆ$_1$]

**ಸಾಲಭಂಜಿಕೆ** (ನಾ). = ಸಾಲಬಂದಿಕೆ: ಗೃಹದೇವತೆಯರ್ ಸನ್ನಿದವಾದರೆನಿಸಿ ರಂಜಿಸುವ ಮಣಿಮಯ ಸಾಲಭಂಜಿಕೆಗಳೊಳಂ (ಕಾದಂಪೂ. ೭೯); ಕಮಲಜಂ ನೀಲದಿಂದ ಮಾಡಿದ ಸಾಲಭಂಜಿಕೆಗಳೊದವಿ ಜೀವಂದಳೆದವೋ (ಹಚಕಾ. ೭-೪); ಸಾಲಭಂಜಿಕೆ ಗೆತ್ತರಸಂ ನೋಡಿದಂ ಲಲಾಟಕೋಮಲೆಯಂ (ಶಮದ. ೨೪೦ ಪ್ರಯೋ); ಮರಕತದ ಸೋಪಾನಗಳ ಸುತ್ತಣ ಸಾಲಭಂಜಿಕೆಗಳ ವಿಲಾಸದಲಿ ಸೊಗಸಿತಾ ಮಂಟಪ (ತೊರರಾ. ೧-೧೩-೮); ಸಾಲಮಣಿಮಯದ ಸೋಪಾನದೊಳ್ನಿಲಿಸಿರ್ದ ಸಾಲಭಂಜಿಕೆಗಳೊ ವಿಚಿತ್ರಮೆನೆ ರಂಜಿತ ರಸಾಲಪಲ್ಲವಪಾಣಿಪಾದತಳದಬಲೆಯರ ರೂಪುಗಳ್ಕಣ್ಗೆಸೆದುವು (ಜೈಮಿಭಾ. ೩೦-೧೩). [ಸಂ. ಸಾಲಭಂಜಿಕಾ]

**ಸಾಲವಣಿಗ** (ನಾ). = ಸಾಲಂಗುಳಿ : ವಣಿಗಪ್ರತ್ಯಯಕ್ಕೆ - ಕೂಟ್ಟಣಿಗಂ ಮತ್ತೆ ಕೆಲವಱೊಳುಂಟು - ಲಂಚವಣಿಗಂ, ಸಾಲವಣಿಗಂ (ಶಮದ. ೨೦೭ ಪ್ರಯೋ).
[ಸಾಲ$_1$ + - ವಣಿಗ$_2$]

**ಸಾಲವಿದ್ಯೆ** (ನಾ). (ಕೋಟೆಯ) ಪ್ರಾಕಾರವನ್ನು ರಚಿಸುವ ಕೌಶಲ : ಆಕೆಯ ಕೈಯೊಳಾ ವಿದ್ಯೆಯಂ ಕೊಂಡು ಕಱಿಪಿ ಮಱುದಿವಸಂ ಸಾಲವಿದ್ಯೆಯಂ ಪ್ರತಿವಿದ್ಯೆಯಿಂ

ಕಿಡಿಸಿ ದುರ್ಲಂಘ್ಯಪುರಮಂ ರಾವಣಂ ಮುತ್ತುವುದುಂ (ಪಂರಾಮಾ. ೧೦-೯೩ ವ).

[ಸಂ. ಸಾಲವಿದ್ಯಾ]

**ಸಾಲಾಂಬಾಲ** (ಗು). ಕಠಿಣವಾದ; ಉಗ್ರವಾದ: ಶ್ರೀಬಾಳಾಮೇಲ್ಕಿಖಿಮೇಲೆ ಸರ್ಪದ ಮಹಾದನ್ತಾಗ್ರದುಳ್ಸಲ್ವವೊಲ್ ಸಾಲಾಮ್ಬಾಲತಪೋಗ್ರದಿನ್ತು ನಡದೊಂ **ನೂಱೆಣ್ಬುಸಂವತ್ಸರಂ** (ಎಕ. II (R), ೨೫-೨ ; ಸು. 700). [?]

**ಸಾಲಾಖೈರು, ಸಾಲ್ಆಖೈರು** (ನಾ). ವರ್ಷದ ಕೊನೆ; ಸಂವತ್ಸರದ ಅಂತ್ಯ: ಬಾಕಿ ಏನಾದರೂ ನಿಂತರೆ ಅದು ಸಾಲಾಖೈರಿನಲ್ಲಿ ವ್ಯವಸ್ಥೆಯಾಗುತ್ತಿತ್ತು (ಮಹಾವಂ. II, ೧೮). **ಸಾಲ್ಆಖೈರು** : (೩). [ಸಾಲ್$_4$(< ಸಾಲು$_3$) + ಆಖೈರು]

**ಸಾಲಾಮಿಸಿರಿ** 'ಸಾಲಾಮಿಸ್ರಿ' ನೋ.

**ಸಾಲಾಮಿಸ್ರಿ, ಸಾಲಂಮಿಶ್ರಿ, ಸಾಲಾಮಿಸಿರಿ** (ನಾ). ಒಂದು ಬಗೆಯ ಸಸ್ಯ ಮತ್ತು ಔಷಧೀಯಗುಣವುಳ್ಳ ಅದರ ಗೆಡ್ಡೆಯಿಂದ ತಯಾರಿಸುವ ಹಿಟ್ಟು : ಸಾಲಾಮಿಸ್ರಿ ತೊಲೆ ಮೂರು ಕೊಳವಳಿಕೆಬೀಜ ತೊಲೆ ಮೂರು (ಕಾಮಶಾ. ೨೬೫). **ಸಾಲಂಮಿಶ್ರಿ** : ಸಾಲಂಮಿಶ್ರಿ . . . ಗುಲಾಬನೀರು (ಮುಂಬವ್ಯಾ. ೯೯). **ಸಾಲಾಮಿಸಿರಿ** : (೩). [← ಅರ. ಸಾಲಬಮಿಸ್ರೀ ; ಹಿಂ. ಸಾಲಮಮಿಶ್ರೀ ; ಮರಾ. ಸಾಲಂಮಿಶ್ರೀ, ಸಾಲ ಮಿಶ್ರೀ./ ಮಲ. ಸಾಲಬ್‌ಮಿಸ್ರೀ ; ತುಳು. ಸಾಲಾಮಿಸ್ರಿ ; ತೆಲು. ಸಾಲಮಿಶ್ರಿ]

**ಸಾಲಾವಳಿ, ಸಾಲುವಳಿ** (ನಾ). ಮದುವೆಯನ್ನು ನಿಶ್ಚಯಿಸುವಾಗ ವಧೂವರರ ಜಾತಕ, ಮನೆತನ ಇತ್ಯಾದಿ ವಿಷಯಗಳಲ್ಲಿ ಕಂಡುಬರುವ ಹೊಂದಾಣಿಕೆ, — ಸಾಮರಸ್ಯ: ಶಕುನಾ ನಮಗಾದೊ ಸಾಲಾವಳಿ ನಿಮಗಾದೋ ನಾಳೀಯ ಲಗ್ನಾ ನಮಗಾದೋ (ಹುಟ್ಟಿಹ. ೧೬೪) ; ಹೆಣ್ಣುನೋಡುವುದೆಂದರೆ ಆ ಕಾಲದಲ್ಲಿ ಸುಲಭವಾಗಿರಲಿಲ್ಲ. ವಾವೆ ನೋಡಬೇಕು; ಸಾಲಾವಳಿ ನೋಡಬೇಕು (ನನ್ನೂರು. ೭೦). **ಸಾಲುವಳಿ** : ಕೊಡಬೇಕೆನುತ ಜೋಯಿಸರ ಕರೆಯಿಸಿ ತಾನು ಬಿಡದೆ ಸಾಲುವಳಿ ಕೇಳೆ (ಪೂಜ್ಯಚ. ೮-೮). [← ತುಳು. ಸಾಲಾವಳಿ]

**ಸಾಲಾವೃಕ** (ನಾ). ೧. ನಾಯಿ; ಶ್ವಾನ. ೨. ಕಪಿ; ಕೋತಿ. ೩. ನರಿ; ಸೃಗಾಲ: "ಸಾಲಾವೃಕಾಹ್ವಯಂ ಶ್ವ ಸೃಗಾಲ ಪ್ಲವಗಂಗಳೊಳ್ ಪ್ಲವಂಗಮಶಬ್ದಂ" (ವಸ್ತುಕೋ. ೧೩೦-೭೬). [ಸಂ.]

**ಸಾಲಿ$_1$** 'ಸಾಲೆ$_2$' ನೋ.

**ಸಾಲಿ$_2$, ಶಾಲೆ$_2$, ಸಾಲೆ$_3$** (ನಾ). ೧. ಬತ್ತ; ನೆಲ್ಲು : 'ದಬ್ಬಣಸಾಲಿ' ಪರಾ. **ಶಾಲೆ$_2$**: ೧. ಶ್ರೀಜನ್ನ ಕಲ್ಲನಿಱಿಸಿ ಪನ್ನಿರ್ಕ್ಕಣ್ಣುಗ ಬೆದೆಮಣ್ಣೊಟ್ಟಾರ್ದ್ದಿವಸಕೆಣ್ಬೂಗ್ಗೀ ಶಾಲೆಗೊಡುವೊದು (ಮೈಆರಿ. ೯೪೪, ೬-೩; 808 ?); ಪಚ್ಚೆಯ ಶಾಲೆಯಂ ಧರಾಲಲನೆ ವಿಳಾಸದಿಂ ತಳೆದಳೆಂದೆನೆ ಶಾಲೆಯ ಗರ್ದೆ ತೋಱುಗುಂ (ರಾಜಶೇ. ೨-೧೦). **ಸಾಲೆ$_3$** : ೧. "ಸಾಲೆ - ೧. ಶಾಲೀ = ನೆಲ್ಲು (೨. ಚೇಲ)" (ತದ್ಭಕೋ. ೪೪). ೨. ಒಂದು ಬಗೆಯ ಬತ್ತ : ಭಾರದ್ವಾಜಗೋ ಆಶ್ವಲಾಯನಸೂ ಭಾಗವತ ಸೇವೆಯ ತಿಂಮಣಗೆ ಹಲವು ಸಾಲೇ ಭತ್ತ XXX (ಎಕ. VIII, ತೀರ್ಥಹ. ೧೯-೭೮ ; 1573). [< ಸಂ. ಶಾಲಿ]

**ಸಾಲಿಕ್ಕು** (ಕ್ರಿ). ಒಂದರ ಹಿಂದೊಂದು ಇರು; ಸಾಲುಗಟ್ಟು: ಉಕ್ಕಿತೋ ವಿಲಯಾಬ್ಧಿಯೆನೆ ಸಾಲಿಕ್ಕಿ ನಡೆದುದು ಸೇನೆ (ಕುವ್ಯಾಕ. ೮-೨೫) ; ಜೀವವ ತೊಱೆದ ಕರಿ ತುರಗಗಳ ಸಾಲಿಕ್ಕಿದ ಮೆದೆಯಿಂದ ಮೆಱೆದುದು ರಣಭೂಮಿಯಂದು (ಕಂನವಿ. ೧೫-೬೫).

[ಸಾಲ್$_3$ + ಇಕ್ಕು]

**ಸಾಲಿಗ$_1$** (ನಾ). ೧. ಕಡವನ್ನು ಕೊಟ್ಟವನು ; ಸಾಲಗಾರ : ಸಾಲಿಗರ್ ಕಲುಗುಂಡಂ ತಲೆಗೇಱಿಪರ್ ತೊಲಗಿರಲ್ ಲಕ್ಷ್ಮೀಕಟಾಕ್ಷೇಕ್ಷಣಂ (ಸೋಮೇಶ. ೫೧); ಸಾಲವನು ಕೊಂಬಾಗ ಹಾಲೋಗರುಂಡಂತೆ ಸಾಲಿಗನು ಬಂದು ಎಳೆವಾಗ ಕಿಬ್ಬದಿಯ ಕೀಲು ಮುಱಿದಂತೆ (ಸರ್ವಜ್ಞ. ೧೩೯೧). ೨. ಸಾಲವನ್ನು ಪಡೆದವನು; ಋಣವನ್ನು ಹೊಂದಿದವನು : ಸಾಲಿಗನು ಸಾಲವನು ತಿರ್ದಿ ಪೋಪಂತೆ ಪಾಪಕ್ಕೆ ನಿರ್ಣಯಂಗಂಡು ನೆಱೆ ಪೋಪನಾ ಜೀವನು (ಸಿದ್ಧರಾ. ೭-೯) ; ಕವಿವ ನೃಪಾಲಕರು ಭೀಮಂಗೆ ಹರಣದ ಸಾಲಿಗರು ಸಂದಣಿಸಿತಬುಜವ್ಯೂಹದಗ್ರದಲಿ (ಕುವ್ಯಾದ್ರೋ. ೧೨-೨೭) ; ಬೆಂಡಿರದೆ ಮುಳುಗಿದರು ಗುಂಡೆದ್ದು ತೇಲಿದರು ಬಂಡಿಯ ನೊಗವು ಚಿಗಿತರೂ ಸಾಲಿಗನು ಕೊಂಡದ್ದು ಕೊಡನು (ಸರ್ವಜ್ಞ. ೧೩೯೭). [ಸಾಲ$_1$ + - ಇಗ]

**ಸಾಲಿಗ$_2$, ಸಾಳಿಗೆ$_1$** (ನಾ). ಸೀರೆ ಮುಂತಾದುವನ್ನು ನೇಯುವವನು ; ನೇಕಾರ: ಇರುಳ್ ಪೊಱಮಟ್ಟು ಪಾಟಳೀಪುತ್ರಮಂ ಪೊಕ್ಕು ಪಸಿದು ಸಾಲಿಗರ ಮನೆಯಂ ಪೊಕ್ಕು ಸಾಲಿಗರ ಬಿರ್ದಿಯನುಣಲ್ವೇಡಿದೊಡೆ (ವಡ್ಡಾರಾ. ೧೮೮-೧೬) ; ಸಾಲಿಗನ ಕೈಯೊಳ್ ದೂದವಿಯಪ್ಪವಳ್ ವೃಥಾ ಮೂಗಂ ಕೊಯಿಸಿಕೊಂಡಳ್ (ಪಂಚತಂ.೨೯-೧೯) ; ಕಾಸಿ ಕಮ್ಮಾಱನಾದ ಬೀಸಿ ಮಡಿವಾಳನಾದ ಹಾಸನಿಕ್ಕಿ ಸಾಲಿಗ[ಪಾಠಾಂ. ಸಾಲಿಗಾರ]ನಾದ ವೇದವನೋದಿ ಹಾರುವನಾದ (ಬಸವ. ೫೯೧) ; ಮೂಡಲಾಗಿ ಹೋದ ಸಾಲಿಗರ ಕೇರಿಯ ಮಗ ಗರವಾರಗಳನು ಆ ಮೂಡಬಾಗಿಲ ಸುಂಕವನೂ . . . ಧಾರೆಯನೆಱದು ಕೊಟಂಥಾ ಧರ್ಮ್ಮಶಾಶನಕೆ ಶುಭಮಸ್ತು (ಸೌಇಇ. IX-ii, ೪೭೬-೧೩; 1506). **ಸಾಳಿಗೆ$_1$** : ಮಣಿಗಾಱ ಪದ್ಮಸೆಟ್ಟಿ . . . ಸಾಳಿಗೆ ಮಾಚಿಸೆಟ್ಟಿಯೊಳಗಾಗಿ ಸಮಸ್ತವಣಿಗ್ಘಾಮ್ಮಿಕರುವಂ ಮಹನೀಯ ಪxಷದಂ ಮಾಡಿ (ಎಕ. VII, ಶಿಕಾರಿ, ೧೧೯-೭೮ ; 1181).

[ಸಾಲೆ$_2$ + - ಇಗ]

**ಸಾಲಿಗಸಮಯ** (ನಾ). ನೇಯ್ಗೆಯವರ ಮಂಡಲಿ; ನೇಕಾರರ ಸಂಘ: ಸಾಲಿಗಸಮಯಂಗಳ್ ಗೌಡಮುಖ್ಯವಾಗಿ ನೂಲ ಪರ್ವ್ವಕ್ಕೆ ವರ್ಷಂಪ್ರತಿ ಒಕ್ಕಲಲ್ಲಿ ವೀಸವಯ್ದಂ ಕೊಟ್ಟರ್ (ಎಇ. V, ೧೯-೬೩ ; 1161). [ಸಾಲಿಗ$_2$ + ಸಮಯ$_1$]

**ಸಾಲಿಗ್ರಾಮ, ಸಾಲಿಗ್ರಾವ, ಸಾಳಿಗ್ರಾವ** (ನಾ). = ಸಾಲಗ್ರಾಮ : ಅವನೇ ಹೋಗಿದ್ದಾನೆ. ಇನ್ನೆಂತಹ ಸಾಲಿಗ್ರಾಮವನ್ನು ತರುವನೋ ನೋಡೋಣ (ಸವತಿ. ೮೨); ದೊಡ್ಡವರು ಎಲ್ಲರಿಗೂ ದೊಡ್ಡವರು. ಅಂಥವರನ್ನು ನಮ್ಮವರು ನಿಮ್ಮವರೆಂದಾಡುವುದು 'ಇದು ನನ್ನ ದೇವರ ಪೆಟ್ಟಿಗೆ-ಅದು ನಿನ್ನ ದೇವರ ಪೆಟ್ಟಿಗೆ' ಎಂದು ಪ್ರತ್ಯೇಕ ಸಂಪುಟಗಳಲ್ಲಿ ಸಾಲಿಗ್ರಾಮಗಳನ್ನು ಕಟ್ಟಿಟ್ಟುಕೊಂಡಂತೆ ! (ಕಭವಿ. IX, ಮುನ್ನುಡಿ). **ಸಾಲಿಗ್ರಾವ** : (೩). **ಸಾಳಿಗ್ರಾವ** : ನದಿಯೊಳಿರ್ಪ ಕಲ್ಲೆಲ್ಲಂ ಸಾಳಿಗ್ರಾವಂ ವಲಂ (ರಾಮಾಶ್ವ. ೭೯-೮).

[< ಸಂ. ಸಾಲಗ್ರಾಮ]

**ಸಾಲಿಗ್ರಾವ** 'ಸಾಲಿಗ್ರಾಮ' ನೋ.

**ಸಾಲಿಡು** (ಕ್ರಿ). ೧. ಸಾಲನ್ನು ರಚಿಸು; ಪಂಕ್ತಿಮಾಡು : ರಿಸಿಯರ್ ಕನ್ನಮಿಕ್ಕಿ ತಮ್ಮ ಬಸದಿಯೊಳ್ ಕಸವರಮನೊಟ್ಟಿಟ್ಟು ಸಾಲಿಟ್ಟಂತಿರೆ (ವಡ್ಡಾರಾ. ೧೧೭-೧೦) ; ಪೆಣನಂ ಸಾಲಿಟ್ಟವೋಲಾಗೆ ಮೇದಿನಿಯೊಳ್ ಖಚರಸೇನೆ ಬೀಱೆ ಬಯಲಾದತ್ತಾಗಸಂ (ಪಂರಾಮಾ. ೯-೭೯) ; ಕೆಂದಾವರೆವೂಗಳಂ ತರದೆ ಕೇಸಡಿ ಸಾಲಿಡೆ ಬಿಂಕದಿಂ ನೆಗಟ್ಟೂವಗಮೋಲಗಿಪ್ಪ ಸಱಿಮಿಂಡಿಯರೊಪ್ಪಿದರೆತ್ತ ನೋಟ್ಪೊಡಂ (ಕಬ್ಬಿಕಾ. ೧೩೩). ೨. ಸಾಲಾಗಿರು; ಪಂಕ್ತಿಗೊಳ್ಳು : ಸಾಲಿಟ್ಟು ಬೆಳೆದಡಕೆಗಳ . . . ಕಡಲಿಟ್ಟು ಸುರಿವ ಸುಧಾರಸದ ಹೊಂಗಟ್ಟುಗಳ ಫಲಭೂಜರಾಜಿಯ ಕಿತ್ತನಾ ಹನುಮ (ತೊರರಾ. ೫-೪-೫) ; ಕಟ್ಟಿದುವು ಮನೆಮನೆಯ ಮುಂದಾಗಲಿರದೆ ಸಾಲಿಟ್ಟುವು ಮಕರತೋರಣಂಗಳಾಕಾಶಮಂ ಮುಟ್ಟಿದುವು ಕೇತನಪ್ರತತಿಗಳ್ (ಚಿಬಪು. ೬-೫೨). ೩. ಒಂದರ ಹಿಂದೊಂದು ನಡೆ ; ಸಾಲಾಗಿ ಚಲಿಸು : ಥಟ್ಟು ಮುರಿದುದು ಕೂಡೆ ತೆರೆ ಸಾಲಿಟ್ಟ ಸಾಗರದಂತೆ (ಕುವ್ಯಾಭೀ. ೮-೭೪) ; ಬಟ್ಟಬಲ್ಮೊಲೆಯ ಭಾವೆಯರಾಯತಿವೆತ್ತು ಪಟ್ಟಣದಿಂ ಪೊಱಮಟ್ಟು ನೆಟ್ಟನೆ ಸ್ಮರನಿರ್ದ ನಂದನದೆಡೆಗೆ ಸಾಲಿಟ್ಟುದನೇಕಸಂಭ್ರಮದಿ (ವೋಹತ. ೫-೨೯). ೪. ಹೊರಸೂಸು; ಚೆಲ್ಲು; ಬೀರು : ನಗೆಮೊಗದಿಂ ಮುಗುಳ್ನಗೆ ತುಳುಂಕೆ ಬಳಲ್ಮುಡಿಯಿಂದರಲ್ಗಳಲ್ಪುಗೆ ನಿಡುಗಣ್ಗಳಿಂ ಪೊಳೆವು ಸಾಲಿಡೆ . . . ಗೋಪಿ ಡಕ್ಕೆಯ ಲಯಕ್ಕೆ ಪೆಱಳ್ ಜತಿಮೆಟ್ಟುತಾಡಿದಳ್ (ಜಗವಿ. ೫-೧೫) ; ಅಸಿ ಪರಶು ಪಟ್ಟಿಸ ಮುಸುಂಡಿಪ್ರಸರಧಾರಾಪಾತದಲಿ ಮೈ ಬಸಿಯೆ ರಕುತದ ಸಾರ ಸಾಲಿಡೆ ಬಲದೊಳೊಳಹೊಕ್ಕ (ಕುವ್ಯಾದ್ರೋ. ೧೫-೬೩) ; ಸಾಲಿಡುವ ಕಂಬನಿಯ ಮಱುಕದ ಮಾಲೆಗಿಚ್ಚಿನ ಚುಚ್ಚಿನಂಗದ ಬಾಲೆ ಬಾಯ್ಬಿಡುತೀಕ್ಷಿಸಿದಳಾಸುರದ ಮಸ್ತಕವ (ತೊರರಾ. ೬-೧೨-೨೭). ೫. ಹರಡು; ಚೆಲ್ಲು : ಸೂಸುವ ಮಿದುಳ ಮೊಗೆದೆಣ್ಣಸೆಗೆ ಸಾಲಿಡುವ . . . ಕಿಱಿಯ ಬರಿಕ್ಕೆ ಬಿಡಿಸಿದವು ಹುಟ್ಟಾಗಿ ಯಮರಾಜನ ಪರಿಗ್ರಹಕೆ (ಕುವ್ಯಾಭೀ. ೪-೮೨). ೬. ಉಂಟುಮಾಡು; ಒದಗಿಸು : ಶಿರೀಷದ ಮಾಲೆಯಂ ಪ್ರಭಾಮಾಲೆಯಿನೇಟಿಸುತ್ತಿರೆ ಭುಜಂ ನಖಮಾಲೆ ಮಯೂಖಮಾಲೆಯಂ ಸಾಲಿಡೆ ಬಾಲೆ ಬಂದು ವನಮಾಲಿಗೆ ಮಾಲೆಯನೊಲ್ದು ಸೂಡಿದಳ್ (ಜಗವಿ. ೧೦-೮೪); ಬಿಂಕದಿಂ ಕೊಂಕಿ ನಿಂದು ಕಂಕಣಝಣಝಣತ್ಕಾರಂ ಸಭೆಯ ಕಿವಿಗೆ ಸವಿಗಳಂ ಸಾಲಿಡೆ

ಸೂಳಱಿದಿಕ್ಕುವ ಚಾಮರಗ್ರಾಹಿಣಿಯರೊಳಂ (ಗಿರಿಕ. ೨-೧೦೫ ವ) ; ತವರಾಜದ ಸಿರಿಯಂತಿರೆ ಸವಿಯಂ ಸಾಲಿಡುವುದಖಿಳಬುಧತತಿಗೆಲ್ಲಂ ಕಿವಿಯೊಳ್ ನಾಗೇಂದ್ರನ ನಿಜಕವಿತೆಯ ಕನ್ನಡದ ನುಡಿಯ ಬೆಡಗಿನ ಗಡಣಂ (ಪುಣ್ಯಾಸ್ರ. ೧-೩೧). [ಸಾಲ್$_3$ + ಇಡು$_1$]

**ಸಾಲಿಪೈಠಣೆ** (ನಾ). ಒಂದು ಬಗೆಯ ಬಟ್ಟೆ : ಆಲವಟ್ಟ ನ ಬೀಸಿ ಗಂ... ನಾವರಿಸಿ ಸಾಲಿಪೈಠಣೆಯನು ತೊಡಿಸಿ ಮೇಲುಕುಲಾಯುವನಿಕ್ಕಿ ಭ... ಲೀ... ತೊಡಿಸಿದರು (ಜಿನರಾ. ೯-೪೯). [ಸಾಲಿ$_1$ (< ಸಾಲೆ$_2$) + ಪೈಠಣೆ (< ಪೈಠಣ)]

**ಸಾಲಿಯಾನ** 'ಸಾಲಿಯಾನಾ' ನೋ.

**ಸಾಲಿಯಾನಾ, ಸಾಲಿಯಾನ, ಸಾಲ್ಲೀಯಾನಾ** (ಅ). ಒಂದು ವರ್ಷಕ್ಕೆ ; ವರ್ಷಂಪ್ರತಿ : ಅಂಥವನು ಸಾಲಿಯಾನಾ ೧೦ ರೂಪಾಯಿಗೆ ಕಡಿಮೆ ಇಲ್ಲದಂತೆ ಕಂದಾಯ ಕೊಡುವ ಜಮೀನ್ ಹಿಡುವಳೀದಾರನಾಗಿರಬೇಕು ಅಥವಾ ಸಾಲಿಯಾನಾ ೧೦ ರೂಪಾಯಿಗಿಂತ ಕಡಿಮೆ ಇಲ್ಲದಂತೆ ಪೂರಾ ಕಂದಾಯ ಬೀಳುವ ಇನಾಂಜಮೀನನ್ನು ಪಡೆದಿರಬೇಕು (ಗ್ರಾಮಾಕ. ೧೨). **ಸಾಲಿಯಾನ** : ಭೂಮಿ ವುತ್ತಾರ ಹೋಗಲಾಗಿ ಸಾಲಿಯಾನ ಜೋಡಿ ೩೩ ॥ ೧ ॥ ಬರುತ್ತಾಯಿದ್ದದ್ದು ಸರಿಯಷ್ಟೆ (ಮೈಆರಿ. ೧೯೩೪, ೫೨-೧೦ ; 1812). **ಸಾಲ್ಲೀಯಾನಾ** : ಸಾಲ್ಲೀಯಾನಾ ಕಂಟಿರಾಯಿ ಐದುವರಹಾದ ಪ್ರಕಾರಾ ಜೋಡಿ ತೆಗೆದ್ದುಕೊಂಡು (ಮೈಆರಿ. ೧೯೨೯, ೯೪-೪೬ ; 1813).

[← ಪಾರ. ಸಾಲಿಯಾನಾ; ಹಿಂ. ಸಾಲಾನಾ, ಸಾಲಿಯಾನಾ ; ಮರಾ. ಸಾಲನಾ, ಸಾಲಿನಾ, ಸಾಲೀನಾ]

**ಸಾಲಿಸು** (ಕ್ರಿ). ೧. ಸಾಲವನ್ನು ಕೊಡು ; ಕಡವನ್ನು ನೀಡು : ತನ್ನಂ ತಪದಿಂ ನೋಯಿಸದುನ್ನತಿಯಂ ದಿವ್ಯಭೋಗಮಂ ಬಯಸುವ ಗಾಂಪಂ ನೆಱೆ ಪೋಲ್ಕುಂ ಸಾಲಿಸದಿನ್ನಳಿಪಿಂ ಬಡ್ಡಿವೇಡಿ ಮುಱುಗುವ ಮರುಳಂ (ಧರ್ಮಾಮೃ. ೬-೧೫೬). ೨. ಸಾಕುಮಾಡು; ನಿಲ್ಲಿಸು: ಆಲಿಸುತೆ ಬೇಗಮೋಹೋ ಸಾಲಿಸಿಮೆನೆ ವಿರಸಮಪ್ಪ ಕಬ್ಬಂಬೇಟ್ಟಾಲೋಲತೆಯಿಂದಂ ಬ[ರೆಬರೆ]ದೋಲೆಗಳಂ ಕಿಡಿಸುವಂತು ತಾಟೊಳು ಪಗೆಯೇ (ಬಂಹರಿ. ೧-೧೧). [ಸಾಲ್$_1$ + - ಇಸು$_3$]

**ಸಾಲಿಱು** (ಕ್ರಿ). ಸಾಲಾಗಿರು; ಪಂಕ್ತಿಗೊಳ್ಳು : ಸಾಲಿಱಿದಳಿ ಕವಿದಿರೆ ಪೂಮಾಲೆಯುನವುರ್ದೆತ್ತಿ ಪಿಡಿದ ಕಾಮಿನಿಯೊರ್ವಳ್ ಲೀಲೆಯಿನಲರ್ವಿಲ್ಲಂ ಪೂಗೋಲಂಗಿರದೆತ್ತಿ ಕೊಡುವ ರತಿಯಂ ಪೋಲ್ತಳ್ (ವೃಷವಿ. ೪-೮೬).

[ಸಾಲ್$_3$ + ಇಱು$_1$]

**ಸಾಲೀವೊಗೆ** (ನಾ). ಒಂದು ಸ್ಥಳದ ಹೆಸರು : ಎಡೆವೊಟಲ್ಲಾಮವಿಷಯೇ ಸಾಲೀವೊಗೆನೋ(ನಾ)ಮಗ್ರಾಮಸ್ಸೋದಕಂ ಸಹಿರಂಣ್ಯಂ ಅಕರಮಭಟಪ್ರವೇಶಂ ಸಸರ್ವ್ವವಾ(ಬಾ)ಧಾಪರಿಹಾರೋ ದತ್ತಃ (ಇಇ. XIX, ೧೫೦-೨೩; 682). [?]

**ಸಾಲು$_1$** 'ಸಾಲ್$_1$' ನೋ.

**ಸಾಲು$_2$** 'ಸಾಲ್$_3$' ನೋ.

**ಸಾಲು$_3$, ಸಾಲ್$_4$** (ನಾ). ವರ್ಷ ; ಸಂವತ್ಸರ : ಇಡೀ ಸಾಲು (ವರ್ಷ) ಬೆವರನ್ನು ಸುರಿಸಿ, ಎದೆಯ ರಕ್ತವನ್ನು ಭೂಮಿತಾಯಿಗೆ ಬಸಿದು ಬೆಳೆದ ಕಬ್ಬನ್ನು ಆಲೆಯಾಡಿ, ಬೆಲ್ಲದಡಿಗೆಯನ್ನು ಕಂಡಾಗ ರೈತರಿಗಾಗುವ ಹೆಚ್ಚಳ ಹೇಳತೀರದು (ಕವಿಕೋ. II, ೧೭). **ಸಾಲ್$_4$** : (ಶಿ). [← ಪಾರ. ಹಿಂ. ಮರಾ. ಸಾಲ್]

**ಸಾಲುಗಂಬ** 'ಸಾಲುಗಂಭ' ನೋ.

**ಸಾಲುಗಂಭ, ಸಾಲುಗಂಬ** (ನಾ). ಸಾಲಾಗಿ ಕಟ್ಟಿರುವ ಕಂಭ : ವೈಡೂರ್ಯದ ಬಲುಭಿತ್ತಿ ಪಚ್ಚೆಯ ಸಾಲುಗಂಭ ಇತ್ತರದೊಳಗಾಸ್ಥಾನಮಂಟಪದೊಳು ಬಿತ್ತರದೊಳಗೊಪ್ಪಿದುವು (ಕಂನವಿ. ೨೦-೨೮). **ಸಾಲುಗಂಬ** : ಓಲಗಶಾಲೆಯ ರನ್ನಕುರುಜುಗಳ ಸಾಲುಗಂಬಗಳ ಮಱೆಯಲಿ . . . ಮುದ್ದುಬಾಲಕಿಯರು ರಾಜಿಸಿದರು (ಕಂನವಿ. ೨೧-೨೪). [ಸಾಲು$_2$ (< ಸಾಲ್$_3$) + ಕಂಭ]

**ಸಾಲುಗಟ್ಟು** 'ಸಾಲ್ಗಟ್ಟು' ನೋ.

**ಸಾಲುಗನ್ನಡಿ** (ನಾ). ಸಾಲಾಗಿ ಜೋಡಿಸಿದ ಕನ್ನಡಿ : ಹೊನ್ನಾನೆಗಲ್ಲಿಂದ ಹೊಳೆವಳಿಗೆಯ ಸಾಲುಗನ್ನಡಿಯಿಂದ ಗೋಡೆಗಳ ಕಿನ್ನರಕಿಂಪುರುಷರ ಚಿತ್ರದಿಂದ ಸಂಪನ್ನಗೃಹಗಳು ಮೆಱೆದುವು (ಭರಚ. ೧೫-೨೪). [ಸಾಲು$_2$ (< ಸಾಲ್$_3$) + ಕನ್ನಡಿ$_1$]

**ಸಾಲುಗುಜಸ್ತಾ** 'ಸಾಲುಗುದಸ್ತಾ' ನೋ.

**ಸಾಲುಗುದಸ್ತಾ, ಸಾಲುಗುಜಸ್ತಾ** (ನಾ). ಕಳೆದ ವರ್ಷ; ಹಿಂದಿನ ವರ್ಷ: (ಶಿ). **ಸಾಲುಗುಜಸ್ತಾ** : (ಶಿ). [← ಮರಾ. ಸಾಲಗುದಸ್ತ]

**ಸಾಲುಗುದಸ್ತಾಬಾಕಿ** (ನಾ). ಕಳೆದ ವರ್ಷದ ಬಾಕಿ ; ಹಿಂದಿನ ವರ್ಷದ ಉಳಿಕೆ: ಸಾಲುಗುದಸ್ತಾಬಾಕಿಯಲ್ಲಿ ಒಂದು ಕಾಸೂ ಬಾಕಿ ನಿಲ್ಲದಂತೆ ಶ್ರಾವಣ ಶುದ ೧೫ರೊಳಗೆ ವಸೂಲು ಮಾಡಬೇಕು (ಮಹಾವಂ. II, ೬೫). [ಸಾಲುಗುದಸ್ತಾ + ಬಾಕಿ]

**ಸಾಲುಗೇರಿ, ಸಾಲಗೇರಿ** (ನಾ). (?): ನಾನು . . . ಸ್ತ್ರೀವೇಷವನ್ನು ಹಾಕಿಕೊಂಡು ಅರಮನೆ ಸಾಲುಗೇರಿಯಲ್ಲಿ ಕೆಲಸಕ್ಕೆ ಸೇರಿ ಚೆಲುವಾಂಬಾವನ್ನು ಭೇಟಿಮಾಡಿ ಅವಳನ್ನು ಕರೆದುಕೊಂಡು . . . ನಮ್ಮೂರಿಗೆ ಸೇರಬೇಕೆಂಬ ಯೋಚನೆಯು ಬಂತು (ಚೆಂಗಾಳ್ವ. ४೮೭). **ಸಾಲಗೇರಿ** : ಮೈಸೂರ ಅರಮನೆಯು ಶಿಥಿಲವಾಗಿದ್ದುದರಿಂದ ಜಂತದ ತೊಟ್ಟಿ . . . ನಾಮತೀರ್ಥದ ತೊಟ್ಟಿ ಮುಂತಾದ ತೊಟ್ಟಿಗಳನ್ನೂ ಒಳಬಾಗಿಲಲ್ಲಿ ಸಾಲಗೇರಿಗಳನ್ನೂ ವಿಸ್ತಾರವಾಗಿ ಕಟ್ಟಿಸಿ (ಮಹಾವಂ. I, ೮೦). [?]

**ಸಾಲುಗೊಳ್** 'ಸಾಲ್ಗೊಳ್' ನೋ.

**ಸಾಲುಗೊಳಿಸು** 'ಸಾಲ್ಗೊಳಿಸು' ನೋ.

**ಸಾಲುಗೊಳ್ಳು** 'ಸಾಲ್ಗೊಳ್ ನೋ.

**ಸಾಲುತೋಪು** (ನಾ). (ರಸ್ತೆಯ ಎರಡು ಪಕ್ಕಗಳಲ್ಲೂ ಇರುವ) ಸಾಲುಮರ: (ಶಿ). [ಸಾಲು$_2$ (< ಸಾಲ್$_3$) + ತೋಪು$_1$]

**ಸಾಲುದಲೆ** 'ಸಾಲ್ದಲೆ' ನೋ.

**ಸಾಲುದೆರೆ** (ನಾ). ಒಂದರ ಹಿಂದೊಂದರಂತೆ ಬರುವ ಅಲೆ : ತುರಗನಿಕರ ಸಾಲುದೆರೆ ಮದಗಜಗಳು ಗಿರಿ ಡಾಳಿಪ ಚಾಮರಾಳಿ ಮೆಱೆವ ಶಫರಿ ಬೆಳ್ಗೊಡೆ ನೊರೆಯೆನೆ ಬಲಶರಧಿಯ್ಯೆತಂದುದು (ಕಂನವಿ. ೧೨-೩). [ಸಾಲು$_2$ (< ಸಾಲ್$_3$) + ತೆರೆ$_4$]

**ಸಾಲುಧೂಪ** (ನಾ). ಒಂದು ಬಗೆಯ ಧೂಪದ ಮರ; ಬಿಳಿಗುಗ್ಗುಳದ ಮರ : ಧೂಪದ ಮರ, ಸಾಲುಧೂಪ, ಬಿಳೀಗುಗ್ಗಲ, ಬಿಳಿಡಾಮರ್, ಹಾಗಡಮರ, ಉಗುಳುಧೂಪ (ಮೈಡಿಗಿ. ೭೭-೧೫೭೭). [ಸಾಲು$_?$ + ಧೂಪ]

**ಸಾಲುಬಾಗೆ** 'ಸಾಲಬಾಗೆ' ನೋ.

**ಸಾಲುಮಂಟಿಗೆ** (ನಾ). ಕಾಲುಬೆರಳಿಗೆ ಧರಿಸುವ ಒಂದು ಬಗೆಯ ಆಭರಣ: ಕಾಲುಂಗುರವ ಕದ್ದು ಮೇಲೆ ಪಿಲ್ಲಿಯ ತೆಗೆದು ಸಾಲುಮಂಟಿಗೆಯನಿಳುಹಿದ (ಗುಂಡುಸು. ೩-೧೬೦). [ಸಾಲು$_?$ + ಮಂಟಿಗೆ (< ಮೆಂಟಿಕೆ)]

**ಸಾಲುಮಣೆ** (ನಾ). ರಾಗಿ ಮುಂತಾದುವುಗಳ ಪೈರನ್ನು ಸಾಲಾಗಿ ನಾಟಿ ಮಾಡಲು ಅನುಕೂಲವಾಗುವಂತೆ ಉಕ್ಕೆಹೊಡೆಯುವ ಸಾಧನ : ರೈತರು ರಾಗಿ ನಾಟಿಮಾಡುವ ಮುನ್ನ ಸಾಲುಮಣೆ ಹೊಡೆಯುತ್ತಾರೆ (ರೂಢಿ).

[ಸಾಲು$_2$ (< ಸಾಲ್$_3$) + ಮಣೆ$_1$]

**ಸಾಲುಮರ** 'ಸಾಲ್ಮರ' ನೋ.

**ಸಾಲುಮಳಿಗೆ** 'ಸಾಲ್ಮಳಿಗೆ ' ನೋ.

**ಸಾಲುಮೂಲಿಗ** (ನಾ). ವ್ಯಾಪಾರಿಗಳ ಒಂದು ವರ್ಗಕ್ಕೆ ಸೇರಿದವನು : ಹರದರುನ್ನತರು ಮುನ್ನುರಿದಂಡಮಂ ಕಬ್ಬಿಲರನಖಿಳಸಾಲು[ಪಾಠಾಂ. ನಾಲ್ಕು] ಮೂಲಿಗರನದಿದೆನ್ನದಿಹ ಪರಿಜನವನ್ನೆದೆ ನೆರಹಿದರು ನೆರೆಯಿತ್ತು ಮಿಗೆ ಭೂಮಿ ಬೆಸಲಾದಂತಿರೆ (ಸೋಮಚ. ೪-೫೦). [ಸಾಲುಮೂಲೆ + - ಇಗ]

**ಸಾಲುಮೂಲೆ** (ನಾ). ವ್ಯಾಪಾರಿಗಳ ಒಂದು ವರ್ಗ ; ಹರದರ ಒಂದು ಪಂಗಡ: ಸಾಲುಮೂಲೆಯವರ ವೊಪ್ಪ ಶ್ರೀಗಣೇಶ್ವರ ಗವಡೇಶ್ವರದೇವರು (ಎಕ. V, ಬೇಲೂರು. ೭೫-೧೩೩; 1382) ; ಅಯಿವತ್ತಾಱುದೇಶದ ಸಾಲುಮೂಲೆ ಸಮಸ್ತಹಲರು ಪಞ್ಚಾಳ ಸಹಿತವಾಗಿ ಕೂಡಿ (ಎಕ. X, ಬೌರಿಂಗ್. ೭೨-೧೦ ; 1480?). [?]

**ಸಾಲುವ** (ನಾ). = ಸಾಲುಮೂಲಿಗ : ತಲಕಾಡ ಹಮುಗಿಯನು ಗವುಡುಗಳು ಅಣ್ಣತಮ್ಮ ಸಾಲುವರು XX ಏ X ಮಗ್ಗದ ಹುರುಳಗವುಡ ಬಿದಿಯಗವುಡ ಏಚಗವುಡ ಆ ಮಕ್ಕಳು ಚನ್ನು XX ದವನು XX ಮಾಡಿ ಹೊಯಿಸ್ಸಳಪಟ್ಟಮಂ ಕಟ್ಟಿಸಿಕೊಣ್ಡು (ಎಕ. XVI, ತಿಪಟೂ. ೧೫೭-೧೮ ; ?). [?]

**ಸಾಲುವಲೆ** 'ಸಾಲ್ವಲೆ' ನೋ.

**ಸಾಲುವಳಿ** 'ಸಾಲಾವಳಿ' ನೋ.

**ಸಾಲುವಿಡಿ** 'ಸಾಲ್ವಿಡಿ' ನೋ.

**ಸಾಲುಳು** (ಕ್ರಿ). ಸಾಲಾಗಿ ಉಳು; ಸಾಲುಕ್ಕೆಯನ್ನು ಮಾಡು : ಚಲುವುನೆಲ ಸಾಲುತ್ತು, ಕಳೆಯ ಹೊಂಬೆಳೆಯಿಟ್ಟು ನಗಿಸಿದರು ನಾಡನು, ಕಡಿದು ಕಗ್ಗಾಡನು (ಹೂಂಗಳು. ೨೨-೧೫). [ಸಾಲು$_2$ (< ಸಾಲ್$_3$) + ಉಳು (< ಉೞ್)]

**ಸಾಲೆ$_1$** (ನಾ). ೧. ಗುಳ್ಳೆಗಳ ಸಾಲು : 'ಬೆಮರ್ಸಾಲೆ' ಪರಾ. ೨. ಉಳುವಾಗ ನೇಗಿಲಿನಿಂದುಂಟಾಗುವ ಗೆರೆ; ಉಕ್ಕೆ: ಮೂಱಡಿ ತೂಮ್ಬು ದೇವಭೋಗಂ ಈ ಕಟನಿ ಫಲಮಾ ಕೊಣ್ಡು ಬೆಳೆಸಿ ನಾಗೊಮ್ಮೆಯುಂ ಸಾಲೆ ಉಳುವದು (ಎಕ. X, ಕೋಲಾರ. ೧೧-೧೦; 753). [< ಸಾಲ್$_3$]

**ಸಾಲೆ$_2$, ಶಾಲೆ$_1$, ಸಾಲಿ$_1$, ಸಾಳಿ** (ನಾ). ೧. ಅರಿವೆ; ಬಟ್ಟೆ; ವಸ್ತ್ರ: ಕಡುಸಣ್ಣಸಾಲೆಯುಡಿಗೆಯ ಪಂಚರತ್ನದೊಳ್ತೊಡಿಗೆಯ ವಿಲಾಸಿನಿಯರೇಳ್ನೂಂದರ್ (ಸೌಂದಪು. ೭-೪೧); ತಾಯಂತೆ ಮಕ್ಕಳು, ನೂಲಂತೆ ಸಾಲೆ (ಗಾದ). ೨. ಸೀರೆ : ಗಟ್ಟಿಱುಚ ನಸುದೋಱುವಂದದೊಳುಟ್ಟ ಸಾಲೆಯ ಮೇಲುದೊಪ್ಪಿರೆ ದಿಟ್ಟೆಯೊರ್ವಳು ನಿಂದಳಂಗಜನಲಗಿನಂದದಲಿ (ಜೀವಂಚ. ೧೭-೩೩). ೩. ನೇಕಾರರ ಒಂದು ಪಂಗಡ: ನೇಯ್ಗಾರರೂ, ಪಂಚಾಂಗಕರ್ತರೂ, ವರ್ಣಗಾರರೂ . . . ಪಟ್ಟೆಗಾರ, ಸಾಲೆ, ಸೇಣೆಯ (ತುಳುನಾ. ೧೭೩). 'ಪಡಸಾಲೆ$_2$', 'ಪದ್ಮಸಾಲೆ' ಪರಾ. **ಶಾಲೆ$_1$** : ೨. ಹಾಲ ಸುಂಕವ ಬೇಡಿ ಕೋಲನ್ನೆ ಅಡ್ಡಕಟ್ಟಿ ಶಾಲೆಯ ಸೆಳೆಕೊಂಡು ಹೇಳದೋಡಿದ ಕೃಷ್ಣ (ಪುರಂದ. ೧-೯೧-೧); ಪಚ್ಚೆಯ ಶಾಲೆಯಂ ಧರಾಲಲನೆ ವಿಳಾಸದಿಂ ತಳೆದಳೆಂದನೆ ಶಾಲೆಯ ಗರ್ದೆ ತೋಱುಗುಂ (ರಾಜಶೇ. ೨-೧೦); ನಮ್ಮೂರ ಪುರೋಹಿತರು ಹೊಳೆಯಲ್ಲಿ ಸ್ನಾನಕ್ಕೆ ಇಳಿಯುವುದಕ್ಕೂ ಮೇಲುಗಡೆ . . . ಹೆಂಗಸರು ಶಾಲೆ ಕುಕ್ಕುವುದಕ್ಕೂ ಸರಿಹೋಗಿದೆ (ಹೇಮಾವ. ೨). **ಸಾಲಿ$_1$** : ೨. ಒಡನುಟ್ಟ ಸಾಲಿಯ ನಿಱೆಯೊಳಗಳವಟ್ಟ ಕಡುಚೆಲ್ವ ಕಾಂಚಿಯ ದಾಮ ಜಡೆ ತುಂಬಿದ ಪೂಸರದ ಪೂರ್ತಿಯ ಸಿದ್ದಿ ಮಡದಿಯ್ಕೆತಂದಳರ್ತಿಯಲಿ (ಕಂಸವಿ. ೨೧-೭೦); ಬಿತ್ತಿದ ಹೊಲದಾಗೆ ಮುತ್ತು ಸೂರಿಟ್ಟಂಗೆ ಸಾರಿ ಗೌರಮನ ಗೆಣತೇರ ಕಣ್ಣೀರು ಸಾಲೀ ಸೆರಗೆಲ್ಲ ನೆನೆದವು (ನಾಪದ. ೧೦೮). ೪. ಒಂದು ಬಗೆಯ (ಜಾಳು)ಬಟ್ಟೆ : ಬಿಳಿಯುಳ್ಳಿಯಂ ಹುರಿದು ಹಿಂದುಮುಂದಂ ಚಿವುಟಿ ಹೊಳಚಿ ನಡುವಣ ದಿಂಡ ತೆಗೆದು ಸಾಲಿ [ಪಾಠಾಂ. ನಾಲಿ, ಸಾರಿ]ಯ ವಸ್ತ್ರದೊಳಗೆ ಪೊಟ್ಟಣಗಟ್ಟಿ (ಸೂಪಶಾ. ೩-೮); ಲಾಲಿತಚೆಂಬಾವುಗೆ ಮೆಟ್ಟಿ ಮೃದುವೆತ್ತ ಸಾಲಿಯ ದುಪ್ಪಟದಾಳ್ದು ಸೋಲಿಸಿ ತೊಲಗಿ ಪೋದವನ ನಿಟ್ಟಿಸುವ ಸಲೀಲೆಯಿಂದದ್ದಳಾ ಕುವರಿ (ಮೋಹತ. ೨೮-೬); ವೀಳೆಯಕಿದು ಚಲುಪಾಲಿಗೆ ಕ್ರಯಕಿದು ಸಾಲಿಯ ಸೀರೆಗಿದೆಂದು ಹೇಳಿ ನೀ ಮುದ್ದುಮಾತಿಂ ಪೊನ್ನ ಸೆಳೆಕೊಂಡು ಜಾಳಿಗೆಯನು ಕಟ್ಟು ಮಗಳೆ (ಕಂಸವಿ. ೬-೧೪೯). **ಸಾಳಿ** : ೩. ಸಾಳಿ ಅಂದರೆ ಬಟ್ಟೆ ನೆಯ್ಯುವವರುಯೆಂಬ ಹೆಸರು ನಡಿಯುತ್ತದೆ (ಕಭಾಗ. ೧೫೯); ಇವರು ಸಾಳಿಯ ಜಾತಿಯವರು (ಕರ್ನಾಸಂ. ೧೮೯).

**ಸಾಲೆರೋಗ, ಶಾಲೆರೋಗ** = ಅತ್ಯಧಿಕವಾಗಿ ಋತುಸ್ರಾವವಾಗುವ ಒಂದು ಬಗೆಯ ರೋಗ : (ಕ). **ಸಾಲೇರ ಪಂಚೆ** = ಒಂದು ಬಗೆಯ ಪಂಚೆ , — ಧೋತ್ರ: ಸಾಲೇರ ಪಂಚೆಯನ್ನು ಮೈಮೇಲೆ ಹಾಕಿಕೊಂಡು . . . ಸೋಮಯಾಜರು ಕೆಳಹಿತ್ತಲಿಗೆ ಹೋದರು (ದೇವಹಂ. ೨೧೧). **ಸಾಲೇಹುಳ** = ಜೇಡರ ಹುಳು : "ಲೂತಾ, ತಂತುವಾಯಃ, ಊರ್ಣನಾಭಃ, ಮರ್ಕಟಕಃ — ಜಾಡಹುಳು, ಸಾಲೇಹುಳ" (ಸಿದ್ಧಾಂತಿ. ೧೫೭).

[< ಪ್ರಾ. ಸಾಲಿಅ./ ಸಂ. ಶಾಟಕಾ./ ತೆಲು. ಸಾಲೆ, ಸಾಳಿಯ]

**ಸಾಲೆ$_3$** 'ಸಾಲಿ$_2$' ನೋ.

**ಸಾಲೆ$_4$** (ನಾ). ೧. ಮನೆ ; ವಾಸಸ್ಥಾನ : ಆಱುಂ ಋತುಗಳ ಪೂಗಳನೊಂದುಮಾಡಿ ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದೋಜನ ಸಾಲೆಯಿರ್ಪಂತಿರ್ದ ಪೂವಿನ ಸಂತೆಯೊಳ್ (ಪಂಪಭಾ. ೪-೮೦ ವ); ಪಾಡುವ ತುಂಬಿ ಗಾಣರೆಂದೆನೆ ನನೆಯಂಬನೋಲಗದ ಸಾಲೆವೊಲಿರ್ದುವು ಬಂದ ಮಾವುಗಳ್ (ಚನ್ನಕಾ. ೬೧); ಶಂಕರನ ಸೌಖ್ಯದ ಸಾಲೆ . . . ಎನಿಸುವಾ ಭೃಂಗಿನಾಥನ ಪರಿ ವಿರಾಜಿಸುತಿರ್ದುದಾ ಶಶಿಧರನ ಸಭೆಯೊಳಗೆ (ಪ್ರಭುಲೀ. ೨-೨೩). ೨. ಕಮ್ಮಾರ, ಕುಂಬಾರ ಮೊದಲಾದವರು ಕೆಲಸ ಮಾಡುವ ಸ್ಥಳ : 'ಕಮ್ಮಾರಸಾಲೆ', 'ಕುಂಬಾಱಸಾಲೆ' ಪರಾ. ೩. ವಿದ್ಯೆಯನ್ನು ಕಲಿಸುವ ಸ್ಥಳ : ದಿನಾಲು ನೇಮದಿಂದ ಸಾಲೆಗೆ ಬಂದು . . . ಕಲಿಯಬೇಕು (ಮುಂಬಯಿ. ೪-೧); ಹರಯದಲಿ ಮುಪ್ಪಿನನುಭವ ಸೇರಲೆಂದು, ಜರಯೊಳಗೆ ಹರೆಯದುತ್ಸಾಹ ಇರಲೆಂದು . . . ಹರಸಿದೆವು ಸಾಲೆಯಾ ಬಾಲಕರು ಬಂದು (ಕವಿಪು. ೧೭-೮). ೪. ಆನೆ, ಕುದುರೆಗಳನ್ನು ಕಟ್ಟುವ ಸ್ಥಳ : ಆನೆಗಳ ಸಾಲೆಗಳ್ ಪರಮಾನಂದಮನೆಯ್ದೆ ಮಾಳ್ಪುವಖಿಳಜನಕ್ಕಂ ದಾನಪರಿಮಳವಿಲೋಭನಿಲೀನಾಳಿ ಕುಳಪ್ರಣಾದದಿಂ ಮುಖರಂಗಳ್ (ಬಾಧಪು. ೧-೧೫೦).

**ಸಾಲೆಗೆ ಹಾಕು** = ಮೊದಲ ಬಾರಿಗೆ ಮಗುವನ್ನು ಪಾಠಶಾಲೆಗೆ ಸೇರಿಸು : ಸರಿಯಾದ ವಯಸ್ಸಿಗೆ ಮಕ್ಕಳನ್ನು ಸಾಲೆಗೆ ಹಾಕಬೇಕು (ರೂಢಿ). **ಸಾಲೆ ಬರೆ** = ಕಲಿ; ವಿದ್ಯಾಭ್ಯಾಸ ಮಾಡು : ಏನು ಸಾಲೆ ಬರೆದಿರುವೆಯಾ . . . ಸಾಲೆ ಬರೆಯೋದು ನಮಗ್ಯಾಕಪ್ಪಾ? (ಮುಕ್ಕಪು. ೩). **ಸಾಲೆಮಠ** = ಪಾಠಶಾಲೆ ; ವಿದ್ಯಾಲಯ : ಈಗಲೂ ಹಳ್ಳಿಗಳಲ್ಲಿ ಪಾಠಶಾಲೆಗಳನ್ನು 'ಮಠ', 'ಸಾಲೆಮಠ' ಎಂದು ಕರೆಯಲು ಬಹುಮಟ್ಟಿಗೆ ಪ್ರಾಚೀನ ದೇವಸ್ಥಾನಗಳೇ ಕಾರಣ (ಕಶಾಅ. ೧೯೦). [< ಸಂ. ಶಾಲಾ]

**ಸಾಲೆ$_5$** (ನಾ). ಒಂದು ಬಗೆಯ ಮರ : ಸಾಲೆಬೇರು, ಹಾಲಿವಾಣದ ತಿಗಡು, ತಾವರೆಯ ಹೂವು, ನೈದಿಲ ಗೆಡ್ಡೆ ಈ ಔಷಧಿಗಳಿಂದ ಕಷಾಯವಂ ಮಾಡಿ (ವಿವೈವಿ. ೧೫೨). [< ಸಂ. ಶಾಲ]

**ಸಾಲೆಯ** (ನಾ). ಬಟ್ಟೆ ನೇಯುವವನು; ನೇಕಾರ : "ಸಾಲೆ[ಪಾಠಾಂ. ಳೆ] ಯನುವಿಂದ ಕುವಿಂದಕನೆನಿಕ್ಕು" (ಮಂಗರಾ. ೧೧೧-೨). [ಸಾಲೆ$_2$ + - ಅ$_7$./ ತಮಿ. ಮಲ. ಚಾಲಿಯನ್; ತುಳು. ಸಾಲ್ಯೆ ; ತೆಲು. ಸಾಲಿಯ]

**ಸಾಲೇಱು** (ಕ್ರಿ). ೧. ಗುಂಪುಗೂಡು ; ರಾಶಿಯಾಗು : ಮಾಲೆಗಟ್ಟಿದ ಬಳ್ಳಿಗರುಳು ಸಾಲೇಱಿದ ಪಂದಲೆಯಿಂದ ಹೇರಾಲಯ ಭಯಂಕರಮಾಯ್ತು (ಶ್ರೀಪಾಲ. ೮-೩೩). ೨. ಗುಂಪಿನ ಮೇಲೆ ಬೀಳು; ಗುಂಪನ್ನು ಆಕ್ರಮಿಸು : ಪಲಮ್ಬರು ನಾಯಕರೊಡನೆ ಯೇಕಾಂಗವೀರನಾಗಿ ಸಾಲೇಱಿ ತಳ್ತಿಱಿದು ಹೆಸರೊಳು ವಿಶೇಸವಾಗಿದ್ದ ನಾಯಕರಂ ಪಲಮ್ಬರ ಕೊನ್ದು ಸಾಲಕಾಮಯ್ಯನೆಮ್ಬ ಪೆಸರಂ ಪಡೆದು ಸುರಲೋಕಪ್ರಾಪ್ತನಾದನ್ (ಎಕ. XII, ತಿಪಟೂ. ೬೩-೧೧; 1138?). [ಸಾಲ್$_3$ + ಏಱು$_{II}$ (< ಏಱ್$_1$)]

**ಸಾಲೋಕ್ಯ** (ನಾ). ೧. (ಇನ್ನೊಬ್ಬರೊಂದಿಗೆ) ಒಂದೇ ಲೋಕದಲ್ಲಿರುವಿಕೆ; ಸಮಾನಲೋಕದಲ್ಲಿ ನೆಲಸಿರುವಿಕೆ. ೨. ನಾಲ್ಕು ಬಗೆಯ ಮೋಕ್ಷಗಳಲ್ಲಿ ಒಂದು; ಇಷ್ಟದೇವತೆಯಿರುವ ಲೋಕದಲ್ಲಿ ನೆಲಸುವಿಕೆ: ಕರ್ತರು ನಿಮ್ಮ ಗಣಂಗಳು ಎನ್ನ ತೊತ್ತುಮಾಡಿ ಸಲಹಿದ ಸುಖವು ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯದಂತುಟಲ್ಲಾ ಕೇಳಿರಯ್ಯಾ (ಬಸವ. ೪೭೪); ಸಾಲೋಕ್ಯದ ಸವಿಯಂತೆ ಸಾಮೀಪ್ಯದ ಸೀಮೆಯಂತೆ . . . ಗಿರಿಜಾತೆ ಶೈಶವಲೀಲೆಯನೊಳಕೊಂಡು . . . ಬಳೆಯುತಿರ್ದಳ್ (ಗಿರಿಕ. ೩-೬೯ ವ); ಸಾಲೋಕ್ಯ ಸಾಮೀಪ್ಯ ಸಾಯುಜ್ಯವೆಂಬ ಚತುರ್ವಿಧಫಲಪದಂಗಳ ನಾನೊಲ್ಲೆನಯ್ಯಾ (ಅಖಂಡೇ. ೧೬೧-೨೨). ೩. ಇಷ್ಟ ದೇವತೆಯ ಲೋಕದಲ್ಲಿ ನೆಲಸುವ ಮೋಕ್ಷಪದವಿಯನ್ನು ಪಡೆದವನು: ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯರೆಲ್ಲರೂ ಅಜಾತಂಗೆ ಸರಿಯೆ (ಬಸವ. ೯೦೧). [ಸಂ.]

**ಸಾಲೋಕ್ಯಪದ** (ನಾ). = ಸಾಲೋಕ್ಯ ೨ : ಅಯ್ಯಾ ನಿಮ್ಮ ಶರಣರ ಚರಣದ ಭಕ್ತಿಯೇ ಎನಗೆ ಸಾಲೋಕ್ಯಪದವಯ್ಯಾ (ಉರಿಪ. ಕ. ೧೭೩-೨೩೩); ಕೂರ್ತಾನಿವನಿಗೆ ಸಾಲೋಕ್ಯಪದವನಿತ್ತನು (ಕುರಾಸಾಂ. ೬-೯೩). [ಸಂ.]

**ಸಾಲ್ಕುಳಿ** (ನಾ). ಸಾಲವನ್ನು ಮಾಡುವ ಸ್ವಭಾವದವನು: ಮಾಳ್ಪುದು ಶೀಲಮಿಂತಂಗೆ ಮಾಳ್ಕುಳಿ, ಏವಂ ಆಟ್ಕುಳಿ, ಪೋರ್ಕುಳಿ, ಸಾಲ್ಕುಳಿ, ಅಡುಕುಳಿ . . . ಸಾಲ್ಕುಳಿ ಋಣಶೀಲಃ (ಶಬ್ದಾನು. ೫೪೫ ಪ್ರಯೋ). [< ಸಾಲ$_1$ + - ಕುಳಿ$_3$]

**ಸಾಲ್ಗಟ್ಟು, ಸಾಲುಗಟ್ಟು** (ಕ್ರಿ). ಸಾಲಾಗಿರು; ಪಂಕ್ತಿಯಲ್ಲಿರು: ಭಜನೆಯ ಮಾಡಿ ಬಾಗಿಲ ಬಂದು ಕಾದಿಹ ದ್ವಿಜರನುಮತವ ತೀರಿಸದ ನಿಜಲೋಭಿಶತವೆಂಬಂದದಿ ಸಾಲ್ಗಟ್ಟಿ ಕುಜವಿದ್ದುದಾ ಬನಬನದಿ (ಮೋಹತ. ೨೪-೪೮). **ಸಾಲುಗಟ್ಟು**: ಚೋಳಭೂನಾಥನ ಪಿರಿಯ ಕರಿ . . . ಸಾಲುಗಟ್ಟಿ ಮದಾಂಬುಧಾರಾಜಾಲವುಗೆ

ಪುರವೀಥಿವಿಡಿದಾಭೀಳದಿಂದೆಯ್ತಪ್ಪ ಸಮಯದೊಳು (ಬಸವು. ೨೨-೬).

[ಸಾಲ್$_3$ + ಕಟ್ಟು$_1$]

**ಸಾಲ್ಗುಚ್ಚು** (ನಾ). ಒಂದರ ಪಕ್ಕದಲ್ಲಿ ಮತ್ತೊಂದರಂತೆ ಕಟ್ಟಿದ ಕುಚ್ಚು; ಸಾಲಾಗಿರುವ ಗೊಂಡೆ: ಪವಳ ಮೌಕ್ತಿಕ ಸಾಲ್ಗುಚ್ಚ ... ಚ್ಚೆಯದ ತೋರಣದಿ ವಾರಣಸಿದಾ (ನವಮೋ. ೩-೭). [ಸಾಲ್$_3$ + ಕುಚ್ಚು$_4$]

**ಸಾಲ್ಗುಡಿ** (ನಾ). ಒಂದರ ಪಕ್ಕದಲ್ಲಿ ಮತ್ತೊಂದರಂತೆ ಜೋಡಿಸಿದ ಬಾವುಟ, - ಪತಾಕೆ ; ಧ್ವಜಮಾಲೆ : ಸಾಲ್ಗುಡಿ ಮಕರಟೆಕ್ಕೆ ಸತ್ತಿಗೆ ಸೀಗುರಿ . . . ಮುಂತಾದುವನ್ನು ಹಿಡಿದು ಉಳಿಗಗುದುತ್ತ . . . ರಂಜಿಸುತ್ತಿರುವ ಸೇವಾಜನರ ಒಡ್ಡಣೆ (ಚನ್ನಬ. ೩೦-೭).

[ಸಾಲ್$_3$ + ಗುಡಿ$_2$]

**ಸಾಲ್ಗೊಳ್, ಸಾಲುಗೊಳ್, ಸಾಲುಗೊಳ್ಳು** (ಕ್ರಿ). ೧. ಸಾಲಾಗಿರು; ಪಂಕ್ತಿಗೊಳ್ಳು : ಸಾಲ್ಗೊಂಡಿರ್ದ ತುಪ್ಪದ ಕೊಡಂಗಳೊಳ್ ನಾಲ್ಕೆರಡನೆಡಹಿ ನಮಃ ಶಿವಾಯಯೆಂಬ ವೃದ್ಧಧ್ವನಿ ಪುಟ್ಟೆ ಕೊಡಂಗಳ ಮೇಲೊಡೆದಿಳ್ವು (ಸಂಬಿರ. ೬-೪೦); ಶಶಿರವಿವೀಧಿಗಳೊಳು ಸಾಲ್ಗೊಂಡು ಸಂತಸದೊಳೊಪ್ಪುವ ಸರ್ವಜನರ ವಸತಿಗಳಸೆವುವು ನವರತ್ನಹೇಮಪ್ರಸರದುಪ್ಪರಿಕೆಗಳಿಂದ (ಕಂಸವಿ. ೨-೬೯). ೨. ರಾಶಿಯಾಗು ; ಒಟ್ಟಾಗು: ತನುವಿನಲ್ಲಿ ಪುಳಕಂ ಸಾಲ್ಗೊಂಡುಣ್ಮುತ್ತಿರೆ ಗಿರಿಪತಿಸುತೆ ನುಣ್ಮಳಲಿಂ ದಿವ್ಯಲಿಂಗಮಂ ವಿರಚಿಸುವಳ್ (ಎಕ. VIII(S), ಸೊರಬ. ೫೮೭-೪; 1207); ಸರಸಪರಿಮಳಕೆ ಸಾಲ್ಗೊಂಡೆಜಗಲ ವ್ರಳಿಪಳಿಪ್ರತಾನಮನೊಳಗಣ್ಗೆ ಪುಗಲೀಯದೆ ಸೋದು ಕಳೆವೆಳೆಗೊಂಗಿನ ಬಾಗಿಲ್ವಾಡದ ಕಾಪಿನ ಚಾಂಪೇಯನಿರ್ಮಿತವಾದ ಜಂತ್ರದ ಪುತ್ಥಳಿಗಳಿಂ (ರಾಜಶೇ. ೧೦-೩೧ ವ). **ಸಾಲುಗೊಳ್** : ೧. ಸೊಗಸಾಗಿ ಸಾಲುಗೊಂಡಾವರಣವಾದ ವಿಶಾಲಕಲ್ಪವೆಸಲ್ಕೆ ಪೆಂಪಂ ತಾಳಿದುದುವಿದು ಕಲ್ಪತರುವನುಮಾನವೇಕೆ (ಬಸವು. ೨೬-೪೧); ತೊಳಪ ಬೆಳ್ಮುಗಿಲ ಮೊಗ್ಗರದಂತೆ ಸಾಲುಗೊಂಡಳವಟ್ಟು ಪುರದೆಂದಲ್ಕೆದಿ ಸಲಿಲವನೀಂಟಿ ಮರಳಿ ಪೋಪ ತೇಜಿಯ ಬಳವೊಪ್ಪಿದುವು (ಕಂಸವಿ. ೨-೫೫). **ಸಾಲುಗೊಳ್ಳು** : ೧. ಅದರ ಎಲೆಗಳು . . . ನೇರಿಲ ಎಲೆಯ ಹಾಗೆ ಇದ್ದು, ದೇಟಿನ ಬುಡದಿಂದ ತುದಿಯ ತನಕ ಎರಡೆರಡರಂತೆ ಸಾಲುಗೊಂಡಿರುತ್ತವೆ (ಮುಂಬಯಿ. ೪-೫೫). [ಸಾಲ್$_3$ + ಕೊಳ್$_1$]

**ಸಾಲ್ಗೊಳಿಸು, ಸಾಲುಗೊಳಿಸು** (ಕ್ರಿ). ೧. ಸಾಲಾಗಿರುವಂತೆ ಮಾಡು; ಪಂಕ್ತಿಗೊಳಿಸು: ಧ್ವಜಂಗಳನು ಇತ್ತರದಿ ಸಾಲ್ಗೊಳಿಸಿ ದಿವಿಜರು ಪೆತ್ತ ರತ್ನವಿಮಾನ ಕೋಟಿಯ ಸೂತ್ರಿಸಿದವೊಲು ನಡೆಸಿದರು ಸುರವೇತ್ರಪಾಣಿಗಳು (ಸಾಳ್ವಭಾ. ೩೩-೩೮); ಬಳಸಿರೆ ಕಟ್ಟ ಬಿಟ್ಟ ಪೊಸಮಲ್ಲಿಗೆಮಾಲೆ . . . ಸಾಲ್ಗೊಳಿಸಿದ ಮೌಕ್ತಿಕಪ್ರಸರಮಂ ಹರಿನೀಲವಾಣಿಪ್ರತಾನದೊಳ್ಕೆಳಗೊಳಿಸುತ್ತ ತತ್ತಿಸಿದವೋಲ್ಕೆಜೆದಿರ್ದುದು ಮಂಟಪಾಗ್ರದೊಳ್ (ರಾಜಶೇ. ೮-೩). ೨. ಗುಂಪುಗೂಡಿಸು ; ಒಟ್ಟಾಗಿಸು : ಕದಳಿಯ ಫಲ ನಾಳಿಕೇರ ಖರ್ಜೂರಗಳ್ಮುದವಿಡಿದಿಕ್ಕುದಂಡಗಳ ಮೆದೆಮೆದೆಯಾಗಿ ಸಾಲ್ಗೊಳಿಸಿ ನೈವೇದ್ಯವ ಪದುಳದೊಳೊಲಿದು ಮಾಡಿದರು (ಕಂಸವಿ. ೨೨-೨೭). ೩. ಒಂದಾದ ನಂತರ ಒಂದು ಬರುವಂತೆ ಮಾಡು ; ನಿರಂತರವಾಗಿರುವಂತೆ ಮಾಡು : ಒಡನೊಡನೆ ಪಾರ್ಥನ ಚರಿತ್ರಮಂ ಸಾಲ್ಗೊಳಿಸಿ ನುಡಿನುಡಿಗಳಲ್ಲು . . . ಮಱುಗಿದರುಲೂಪಿ ಚಿತ್ರಾಂಗದೆಯರು (ಜೈಮಿಭಾ. ೨೩-೬೦). **ಸಾಲುಗೊಳಿಸು** : ೧. ಸಿತವಟ್ಟವಿಡಿ ಗದ್ದುಗೆಯಲ್ಲಿ ಮಂದಸ್ಮಿತಮುಖಿಯರ ಸಾಲುಗೊಳಿಸಿ ಸತಿಯರ ತಲೆವಣಿ ಸಖಿಯೊಡ ನಿರ್ದಳು ರತಿ ಸರಸತಿಯ ಠೀವಿಯಲಿ (ಮೋಹತ. ೨೭-೫). [ಸಾಲ್ಗೊಳ್ + -ಇಸು$_3$]

**ಸಾಲ್ದಲೆ, ಸಾಲುದಲೆ** (ನಾ). ಸಾಲಾಗಿರುವ ತಲೆ; ಶಿರಸ್ಸುಗಳ ಸಮೂಹ : ಕೂರಂಬಿನಿಂ ತವೆ ನಿನ್ನ ಸಾಲ್ದಲೆಯನ್ನು ಕಳಚುವೆಂ ನೋಡೆನುತೆ ದಾನವಂ ಬೆನ್ನಬತ್ತಳಿಕೆ ಯಿಂದುಗಿದು ಬಿಡಲಾ ಬಾಣವೆಲ್ಲವಂ ಮುಳಿದು ಕಡಿದಂ ಗುಹಂ (ಚಬಸು. ೪೦-೬). 'ಸಾಲ್ದಲೆಯ' ಪಠಾ. **ಸಾಲುದಲೆ** : ಬೀಸಿದುದು ಬಿರುಗಾಳಿ ರಾಮಶರಾಸನದ ಸರಳೋಟದಲಿ ಹೊಱಬೀಸಿಬಿದ್ದವು ಬಿರುದಿನಸುರರ ಸಾಲುದಲೆ ನೆಲಕೆ (ತೊರರಾ. ೩-೬-೧೦). [ಸಾಲ್$_3$ + ತಲೆ$_1$]

**ಸಾಲ್ದಲೆಯ** (ನಾ). ಸಾಲಾದ ತಲೆಗಳನ್ನುಳ್ಳವನು; ದಶಕಂಠ; ರಾವಣ : ಸಾಲ್ದಲೆಯನಾತ್ಮಭವನತಿವೇಗದಿಂದ ಬಂದಾಲ್ದಂಬುಗಳ ಮಳೆಯ ಕರೆಯೆ (ವಂಕಾರಾ. ೬-೪೪-೯). [ಸಾಲ್ದಲೆ + -ಅ$_7$]

**ಸಾಲ್ದಳೆ** (ಕ್ರಿ). ಸಾಲನ್ನು ಹೊಂದು ; ಪಂಕ್ತಿಗೊಳ್ಳು : ತೊಳಪ ಕಳಸದ ಗುಡಿಯ ಸಾಲ್ದಳೆದ ಕನ್ನಡಿಯ . . . ಗೊಂದಳದ ಬಗೆ ಕಂಗಳಿಂಬಿಗೆ ಕೌತುಕಂಗಳಿಂ ಬೀದಿಗ ಳೊಳಸೆದಿರ್ಪುವು (ಜೈಮಿಭಾ. ೩-೧೭). [ಸಾಲ್$_3$ + ತಳೆ$_1$]

**ಸಾಲ್ದೆಗೆ** (ಕ್ರಿ). ೧. = ಸಾಲ್ದಳೆ : ಸಾಲ್ದೆಗೆಯೆ ಬಳ್ಳಿನಂ ಮಿಗೆ ಸಾಲ್ದೆಗೆದುದು ವಿಹಗವೀಥಿ ಮುಗಿಯುತ್ತಬ್ಬಂ ಹೋಲ್ದುವು (ಗಿರಿಕ. ೪-೬೮). ೨. ಸಾಲಾಗಿ ರಚಿಸು; ಪಂಕ್ತಿಗೊಳಿಸು : ಜಗದಗಲಕ್ಕೆ ಸಾಲ್ದೆ[ಪಾಠಾಂ. ಲ್ದೆ]ಗೆದು ನೀಳ್ದು ನಿಜಿಸಿದ ಮಾಣಿಕ್ಯಸ್ತಂಭಕೋಟಿಗಳೆಳಗೆಂಪುಗಳೊಪ್ಪುವ ಚಪ್ಪರದ ಮೇಲ್ಕಟ್ಟಂ ಹೊತ್ತತ್ತು ತಿರ್ದುವು (ಗಿರಿಕ. ೧೦-೨೮ ವ). [ಸಾಲ್$_3$ + ತೆಗೆ$_1$]

**ಸಾಲ್ಮರ, ಸಾಲುಮರ** (ನಾ). ಸಾಲಾಗಿರುವ ಮರ; ವೃಕ್ಷಗಳ ಸಾಲು: ಸಲ್ಲಲಿತೋಭಯತಟದ ಸಾಲ್ಮರದೊಳು ಬೆಲ್ಲದ ಪಾನಕವೆಚೆದು ಅಲ್ಲದ ಕೆನೆಮೊಸರೆಱೆ ನವ ಕರೆಕರೆದೆಲ್ಲರಿಗುಣಬಡಿಸುವರು (ಮೋಹತ. ೨-೩೨); ತಳ್ತಾವರಿಸಿರ್ದ ಸಾಲ್ಮರಗಳಿಂದೆ ಹೃತಾತಪತಾಪಮಾಗಿ . . . ಸೌಖ್ಯಾವಹಮಿಾಕೆಗಕ್ಕೆಯನುಕೂಲಸಮೀರಣಮಾಗಿ ಮೇಣ್ ಪಥಂ (ಶಾಕುಂತ. ೫೩-೮೯). **ಸಾಲುಮರ** : ಪಲಸು ನೇಱಿಲು ಚೂತ . . . ಲಲಿತಶುದ್ಧಸ್ಫಟಿಕದಲಿ ಬಿಗಿದ ಕೋಮಲ ಸಾಲುಮರಗಳೊಪ್ಪಿದುವು (ಮೋಹತ. ೨-೫೪) ; ಸಾಲುಮರಗಳನ್ನು ಬೆಳೆಸಬೇಕೆಂಬ ಧರ್ಮಬುದ್ಧಿ ಹಳ್ಳಿಯ ಜನರಲ್ಲಿ ಮಾಯವಾಯಿತು (ಕಳಹು. ೧೦೧). [ಸಾಲ್$_3$ + ಮರ$_1$]

**ಸಾಲ್ಮಳಿಗೆ, ಸಾಲುಮಳಿಗೆ** (ನಾ). ಸಾಲಾಗಿರುವ ಮಳಿಗೆ; ಅಂಗಡಿಸಾಲು: ಪದ್ಮದಳನೇತ್ರ ಕೇಳಾ ವೀಧಿಯಿಕ್ಕಲದೊಳೆರ್ದ ಸಾಲ್ಮಳಿಗೆಯಂಗಡಿಗೆಯ ಮಂಟಪಂ (ನವಮೋ. ೨-೨೯). **ಸಾಲುಮಳಿಗೆ** : ಹಲವು ದೀಪ್ತಿಯ ಪಟ್ಟೆ ಝಲ್ಲಿ ನಾನಾವರ್ಣದಳೆದ ಚಿತ್ರಾಂಬರನಿಚಯ ಸುಲಲಿತ ದೇವಾಂಗವಸ್ತ್ರದೊಟ್ಟಿಲ ಸಾಲುಮಳಿಗೆಗಳಿರ್ದುವಿಕ್ಕೆಲದಿ (ಮೋಹತ. ೩-೨೪). [ಸಾಲ್$_3$ + ಮಳಿಗೆ (< ಮೞಿಗೆ)]

**ಸಾಲ್ಮೊಗ** (ನಾ). ಅನೇಕಮುಖಗಳುಳ್ಳವನು; ಆದಿಶೇಷ: ಶಾಲ್ಮಲಿಯಂ ಸುರದ್ರುಮವೆನುತ್ತಲಗರ್ದಮನೋಜೆದಪ್ಪಿ ಮೇಣ್ ಸಾಲ್ಮೊಗನೆಂದು ಕಾಳ್ಪುರವನಂಬುಧಿ ಯೆಂದಱಿವಪ್ಪರಂದದಿಂ (ವೀರವಿ. ೧೨-೮೭). [ಸಾಲ್$_3$ + ಮೊಗ]

**ಸಾಲ್ಲಿಬ್ರಹ್ಮ** (ನಾ). ಒಬ್ಬಾತನ ಹೆಸರು : ಪಂಚಲದೇವನ್ ಸಾಲ್ಲಿಬ್ರಹ್ಮನಂ ಕಟಿಪಿ (ಮೈಆರಿ. ೧೯೪೨, ೨-೫; 973). [ಸಾಲ್ಲಿ$_{0}$ + ಬ್ರಹ್ಮ]

**ಸಾಲ್ಲೀಯಾನಾ** 'ಸಾಲಿಯಾನಾ' ನೋ.

**ಸಾಲ್ವಲೆ, ಸಾಲುವಲೆ** (ನಾ). ಬೇಟೆಯಲ್ಲಿ ಬಳಸುವ ಒಂದು ಬಗೆಯ ಬಲೆ : ಇಡುವಲೆ ಸಿಡಿವಲೆ ಕಿಱುವಲೆ . . . ನಿಡುವಲೆ ಸಾಲ್ವಲೆ ಬಿಡುವಲೆಗಳೆನಿಪ್ಪವೆಸೆದುವಾ ಬೇಂಟೆಗರೊಳ್ (ಶಬಶಂ. ೩-೨೪). **ಸಾಲುವಲೆ** : ಸಾಲುವಲೆ ಬೀಸುವಲೆ . . . ಸಗಾಢವಲೆಗಳ ಹೊಱೆಗಳೋಳಿಯಂ ಪೊತ್ತು ನಡೆತಂದುದು ಪುಳಿಂದರೂಪದಲಿ ಭೂತಗಣಂಗಳು (ಸೌಂದಪು. ೧೮-೩೯); ತಡಿಕೆವಲೆ ತಟ್ಟಿವಲೆ ಸಾಲುವಲೆ . . . ಇಡುವಲೆಯದೊಳವಲೆಯು ಮಱೆವಲೆಗಳಿರ್ದುವಾ ಶಬರರಲ್ಲಿ (ಸಿದ್ಧೇಪು. ೮-೭).

[ಸಾಲ್$_3$ + ಬಲೆ$_1$]

**ಸಾಲ್ವಿಡಿ, ಸಾಲುವಿಡಿ** (ಕ್ರಿ). ೧. ಸಾಲಾಗಿರು; ಪಂಕ್ತಿಗೊಳ್ಳು: ರಂಗದೊಳೆಲ್ಲರು ಮೊತ್ತವಾಗಿರೆ ನಿಂದು ಹೆಂಗಳು ಮತ್ತಂಟು ದೆಸೆಗೆ ದಾಂಗುಡಿಯಟ್ಟು ಸಾಲ್ವಿಡಿದಾಗ ಶೃಂಗಾರಗಂಗೆ ಪರಿವವೊಲಾಡಿದರು (ಭರಚ. ೧೩-೯೮); ಸಾಲ್ವಿಡಿದೆಡೆಗೊಂಡನೇಕ ಬಕಪಂಕ್ತಿಗಳಿಂ ಕೆಱೆ ತಳ್ತು ರಂಜಿಕುಂ (ರಾಜಶೇ. ೬-೯). ೨. ಗುಂಪುಗೊಳ್ಳು; ಸಮೂಹಗೊಳ್ಳು : ಸಾಲ್ವಿಡಿದಾಮ್ರಭೂಜದೆಳಗೊಂಬುಗಳೊಳ್ ಪಸುರ್ವೆತ್ತು ಬಿಣ್ಪನಿಂ ನೇಲ್ವ ಫಲಂ (ನಳಚಂ. ೬೧೭). **ಸಾಲುವಿಡಿ** : ೧. ಸಾಲುವಿಡಿದೆಸೆವ ವಾರಣಶಾಲೆ ನವವಾಜಿಶಾಲೆ ಬಹುವಿಧಶಸ್ತ್ರಶಾಲೆ (ಸಮ್ಯಕೌ. ೪-೫); ಜೋಗಿಗ ಮುಚ್ಚಿಗರ ಗೃಹ ಸಾಲುವಿಡಿದು ರಾಜಿಪುವು (ಕಂಸವಿ. ೬-೫೭). [ಸಾಲ್$_3$ + ಪಿಡಿ$_1$]

**ಸಾಲ್ಸರಿ** (ನಾ). ನಿರಂತರವಾಗಿ ಸುರಿಯುವ ಮಳೆ : ಮೆಲ್ಸರಿ ಸೂಳ್ಸರಿ . . . ಬಲ್ಸರಿ ಕಾಲ್ಸರಿ ಸಾಲ್ಸರಿ ಸಲೆ ಸುರಿದು ಕಱೆದುವಿರುಳುಂ ಪಗಲುಂ (ರಾಜಶೇ. ೮-೧೧೨); ಮೆಲ್ಸರಿ ತೆಳ್ಸರಿ ಸಾಲ್ಸರಿ ಸೂಳ್ಸರಿ ಸುರಿದುವು - ಉಧೋ ಉಧೋ ! (ಶ್ರೀರಾಮಾಯಣ ದರ್ಶನಂ. ೫೨-೧೯).

[ಸಾಲ್$_3$ + ಸರಿ$_7$]

ಸಾವ 'ಸಾ' ಪರಾ.

**ಸಾವಂತ** (ನಾ). ೧. ಚಕ್ರವರ್ತಿಗೆ ಅಧೀನನಾಗಿರುವ ರಾಜ,— ಮಾಂಡಲಿಕ : ಮೊದಲೊಳ್ಸಾವಂತರಿನಿನಿಸುದಿತೋದಿತನಾಗಿ ಮಂಡಲೇಶ್ವರನಿಂದಭ್ಯುದಯಪರನೆನಿಸಿ (ಗದಾಯು. ೧-೩೪); ನಿಜ ಮಕಾರದ ವಕಾರಕ್ಕೆ : ತಾಮರೆ - ತಾವರೆ, ಸಾಮಂತಂ- ಸಾವಂತಂ (ಶಮದ. ೧೦೪ ಪ್ರಯೋ); ದಂಡನಾಥಾಮಾತ್ಯಶೇಖರ ಮಂಡಳಿಕ ಸಾವಂತ ಹಯವೇದಂಡ ರಥಪರಿಕರಸಹಿತವಾತ್ಮಾನುರಾಗದಲಿ ಚಂಡತೇಜದಿ ನಡೆವುತಿರಲು (ಬಸಪು. ೫-೧೪); ರಾವಣ ಹೊದ್ದಿದನು ಸಿಂಹಾಸನವ ಸಾವಂತರೊಗ್ಗಿನಲಿ (ತೊರರಾ. ೬-೩೪-೨). ೨. ಪಕ್ಕದ ರಾಜ್ಯದ ರಾಜ; ನೆರೆಯ ನಾಡಿನ ದೊರೆ: ಅರಸರಿಗೆ ತಂದೆಚೆದು ಮೊದಲಲಿ . . . ಕುಮಾರಕರ್ಗೆಚೆದು ತರಿಸಿ ಸಾವಂತರಿಗೆಚೆದು ಶಿಷ್ಯರಿಗೆಚೆದು ನಂಟರಿಗೆಚೆದು (ಬಸಪು. ೫೯-೨೬). ೩. ಮುಖ್ಯಸ್ಥ; ಮುಖಂಡ; ನಾಯಕ: ನಾಳ್ಪಭುಗಳು ಅಧಿಕಾರಿ ಸಾವಂತಮಾರಯ್ಯನುಂ ಮಲದ್ಧಾರಿಯಾಗಿ ನೇಮಿಚಂದ್ರ ಭಟ್ಟಾರಕರ ದೇವರ ಕಾಲಂ ತೊಳದು (ಎಕ. VII, ಶಿವಮೊ. ೬೫-೯; 1204?); ತಿಳಿದವನ ಮತಿವಿದನ ಭಾಷಾವಳಿ ಲಿಪಿಜ್ಞನ . . . ಸಾವಂತರ ವಿಶೇಷದಲವಸರವನಱಿದು (ಕುಮ್ಮಾಉ. ೩-೯೮). ೪. ಉತ್ತರ ಕರ್ನಾಟಕದಲ್ಲಿ ಗಂಡಸರ ಹೆಸರಿನ ಕೊನೆಯಲ್ಲಿ ಸೇರುವ ಒಂದು ಶಬ್ದ: ಕೊಂಕಣೇಮಹಾರಾಷ್ಟ್ರರು . . . ಇವರ ಅಡ್ಡ ಹೆಸರುಗಳು ಸಾವಂತ, ದೇಸಾಯಿ, ಸಾಯಿಳ ಇತ್ಯಾದಿಗಳುಂಟು (ಕಭಾಗ . ೧೩೪).

ಸಾವಂತಗಸಣಿ = ಅಧಿಕಾರಿಗಳನ್ನು ಅಂಕೆಯಲ್ಲಿಟ್ಟುಕೊಳ್ಳುವವನು,– ನಿಗ್ರಹಿಸುವವನು(?); ಒಂದು ಬಿರುದು: ಸಿತಗರ ಗಣ್ಡ ಸಾವನ್ತಗಸಣಿ ಅರವಾನೆಗೊಣ್ಡಯರ ಗಣ್ಡ ತಮ್ಮಯ್ಯನ ಪೆಸರಲಿಲಿಂ XXX ಷ್ಟೆಯಂ ಮಾಡಿ (ಎಕ.VI, ತರೀಕೆ. ೩೬-೨೨; 1178 ?). ಸಾವಂತ ಮಾರ = ಅಧಿಕಾರಿಗಳಲ್ಲಿ ಮನ್ಮಥನಂತಿರುವವನು,— ಶ್ರೇಷ್ಠನಾದವನು (?); ಒಂದು ಬಿರುದು : ಅವರೊಳತಿ ಪ್ರಖ್ಯಾತಂ ವಿಮಳಯಶಂ ಸಾವಂ[ಮಂ]ತಮಾರ ಧೀರೋದಾತ್ತಂ ಕವಿಗುರು . . . ಜನವಿನೂತ ಪ್ರಧಾನ ಚೂಡಾರತುನ ಮಾರಂ (ಎಕ.VII, ಶಿವಮೊ. ೮೮-೨೫; 1203).

[< ಸಂ. ಸಾಮಂತ]

**ಸಾವಂತಿಕೆ** (ನಾ). ಚಕ್ರವರ್ತಿಗೆ ಅಧೀನರಾಜನಾಗಿರುವಿಕೆ; ಮಾಂಡಲಿಕತನ : ನಿಮ್ಮಿಬ್ಬರನ್ನೂ ನಾವು ಎಂದೂ ಸಾವನ್ತಿಕೆಗೆ ತಂದುಕೊಂಡವಾದರೂ . . . ನಮಗೆ ಕತ್ತಿಯಂ ಮಸೆದು ದ್ರೋಹವನ್ನು ಬಗೆದು ಉಜ್ಜುಗಿಸುತ್ತಿರುವುದು ಬಹಳ ವಿಷಾದಕರವಾಗಿದೆ (ಬಿರುಗಂ. ೩೭-೧೨). [ಸಾವಂತ + - ಇಕೆ]

**ಸಾವಂದಯ್ಯ** (ನಾ). ಒಬ್ಬಾತನ ಹೆಸರು : ಮಗ ಸಾವನ್ದಯ್ಯ (ಎಕ.VIII, ಸೊರಬ. ೫೭೦-೧೭; 951). [ಸಾವಂದ + ಅಯ್ಯ]

**ಸಾವಕಾತಿ** (ನಾ). ಶ್ರೀಮಂತ ಹೆಂಗಸು; ಧನಿಕಸ್ತ್ರೀ : ವಸಂತಸೇನೆಯು ಬಹಳ ಸಾವಕಾತಿಯಾಗಿದ್ದಳು (ರೂಢಿ). [< ಸಾವಕಾರ + - ತಿ (< - ಇತ್ತಿ)]

**ಸಾವಕಾರ, ಸಾವುಕಾರ, ಸಾಹುಕಾರ** (ನಾ). ೧. ಹಣವಂತ ; ಧನಿಕ ; ಶ್ರೀಮಂತ: ಹುಜೂರು ಮೋದೀಖಾನೆ ಸಾವಕಾರ ಬೆಟ್ಟದ ಪುರದ ಮೇಗಳ ಮನೆ ಲಿಂಗಣ್ಣನ ಮಗ (ಎಕ. XIV, ಹುಣಸೂ. ೧೪೫-೫; 1867); ನಮ್ಮ ರುದ್ರಪ್ಪ ಸಾವಕಾರರನ್ನು ಬಲ್ಲೆಯಷ್ಟೆ? (ನಟಸಾ. ೫೮೦); ಸಾವಕಾರರಾದರೇನು ಸಾವು ತಪ್ಪಿಸ್ಯಾರೋ (ಗಾದೆ). ೨. ಬಡ್ಡಿಗೆ ಹಣ ಕೊಟ್ಟು ವ್ಯವಹಾರ ಮಾಡುವವನು ; ಲೇವಾದೇವಿ ನಡೆಸುವವನು : ಐವತ್ತು ಸಾವಿರ ರೂಪಾಯಿ ಎಲ್ಲಿಂದ ತರಬೇಕು? ನೀವು ಸಾವಕಾರರು, ನಿಮ್ಮ ಮಾತು ಬೇರೆ (ಕುಹಿಂ. ೧೫೫). ೩. ದೊಡ್ಡ ವ್ಯಾಪಾರಿ ; ವರ್ತಕ : ದಾರಿಕಾರ ನಿನ್ನಲ್ಲಿ ಮುತ್ತಿನ ಹಾರ ಐತೆಯಂತೆ ಕೊಡ ಸಾವಕಾರ್ಗೆ (ಜನಿಮಾ. ೧೫); ಒಬ್ಬ ಸಾವಕಾರನು ವ್ಯಾಪಾರದೊಳಗೆ (ಮುಂಬಯಿ. ೨-೨೪). **ಸಾವುಕಾರ** : ೧. ಇದನ್ನು ತೆಗೆದುಕೊಂಡು ನೀವೇ ಸಾವುಕಾರರಾಗಿರಿ (ಫಲಸಂ. ೫೭); ಕೊಣಬೇಗೌಡಂಬೋನು ದೊಡ್ಡ ಸಾವುಕಾರ (ನಾಪದ. ೨೧). ೨. ನಾವು ಸಾವುಕಾರರು; ರೂಪಾಯಿ ಕೊಟ್ಟರೆ ಆಯಿತು ನಮ್ಮ ಕೆಲಸ . . . ನಾನೊಂದು ವೇಳೆ ರೂಪಾಯಿ ಕೊಡದಿದ್ದರೆ ಕಾಸಿಮಅಲಿಯು ಮತ್ತೊಬ್ಬ ಸಾವುಕಾರನ ಕಡೆಯಿಂದ ತೆಗೆದುಕೊಳ್ಳುವನು (ಕುಹಿಂ. ೧೭೨). ೩. ಆ ಸಾವುಕಾರನ ಹಾಗೆ ಕಾಳ ಕೊಸರುವ ದುಡಿಮೆ, ಮಡಿವನಕ ಬದುಕುವುದು ತಪ್ಪಿಲ್ಲ (ಉಯ್ಯಾಲೆ. ೬-೧೧). **ಸಾಹುಕಾರ** : ೧. ಇಬ್ಬರೂ . . . ಸಾಹುಕಾರ ಕೊರಗಯ್ಯನಲ್ಲಿಗೆ ಹೋದರು (ಹಂಕೋ. ೫೪); ಸಾಹುಕಾರ ಭಿಕಾರಿಯಾದ (ನಟಸಾ. ೪೧೭). ೨. ಸಾಲಗಾರರು ಸಾಲತೀರ್ಮಾನಕ್ಕಾಗಿ ಕೊಟ್ಟ ಅಡಕೆ, ಭತ್ತ, ಬೆಲ್ಲ ಮುಂತಾದವುಗಳೆಲ್ಲವನ್ನೂ ಸಾಹುಕಾರರ ಬಡ್ಡಿಯೇ ನುಂಗಿ ಬಿಡುತ್ತಿತ್ತು (ಪಂಜಪಂ. ೯). ೩. ಸಾಹುಕಾರರು ಅಂಗಡಿಗೆ ಇನ್ನೂ ಬಂದಿಲ್ಲ (ರೂಢಿ).

[← ಮರಾ. ಸಾವಕಾರ್, ಸಾಹುಕಾರ್ ; ಹಿಂ. ಸಾಹೂಕಾರ್./ ತಮಿ. ಚಾವ್ಕಾರ್; ತೆಲು. ಸಾಹುಕಾರಿ, ಸಾಹುಕಾರು, ಸಾಹೂಕಾರು]

**ಸಾವಕಾರಿ, ಸಾವುಕಾರಿ** (ನಾ). ಖಾಸಗಿ; ಸ್ವಂತ : ನಿಮಗೆ ಸರ್ಕಾರದಲ್ಲಾದರೂ ಕೆಲಸ ಸಿಕ್ಕುತ್ತೆ. ಸಾವಕಾರೀಲೂ ಸಿಕ್ಕುತ್ತೆ. ಆದರೆ ನಮ್ಮಂಥವರಿಗೇ ತೊಂದರೆ (ಹೊಸಮಾ. ೮೨). **ಸಾವುಕಾರಿ** : ನಮ್ಮ ಭಾಷೆಯಲ್ಲಿ ತೀರಾ ಹೊಂದಿಕೊಂಡು ಹೋದ . . . ಶಬ್ದಗಳೆಂದರೆ - ಕಚೇರಿ . . . ಅಮಾರ, ಸಾವುಕಾರಿ, ದಸ್ತಾವೇಜು, ಮೊಖದ್ದಮೆ, ದಾವಾ (ಭಾಷಾಶಾ. ೧೬೬). [← ಮರಾ. ಸಾವಕಾರೀ ; ಹಿಂ. ಸಾಹೂಕಾರೀ./ ತಮಿ. ಚಾವಕಾರಿ]

**ಸಾವಕಾರಿಕೆ, ಸಾಹುಕಾರಿಕೆ** (ನಾ). ೧. ಹಣವಂತಿಕೆ; ಶ್ರೀಮಂತಿಕೆ: ಅವರ ಸಾವಕಾರಿಕೆ ಬಹಳ ಜೋರಾಗಿದೆ (ರೂಢಿ). ೨. ಸಾವುಕಾರನ ವ್ಯವಹಾರ; ಲೇವಾದೇವಿ ; ಬಂಡವಾಳಗಾರಿಕೆ : (೬). **ಸಾಹುಕಾರಿಕೆ** : ೨. ಆ ಉದ್ಯೋಗವನ್ನು ಬಿಟ್ಟು ಈಗ ಮನೆಯಲ್ಲಿಯೇ ಕುಳಿತು ಸಾಹುಕಾರಿಕೆ ಮಾಡುತ್ತಿದ್ದಾರೆ (ಪಂಚಿ. ೭); ಬಂಡವಾಳಗಾರರು ತಾವು ಪಡೆದ ಲಾಭದ ಹಣವನ್ನೆಲ್ಲ . . . ಸಾಹುಕಾರಿಕೆಯಲ್ಲಿ ಅಥವಾ ಬಂಡವಾಳಗಾರಿಕೆಯ ಉದ್ಯೋಗಗಳ ಪಾಲುಗಳನ್ನು ಕೊಂಡುಕೊಳ್ಳುವು ದರಲ್ಲಿಯೇ ತೊಡಗಿಸಬಹುದು (ಮಾವಾದ. ೧೪೦). [ಸಾವಕಾರ + - ಇಕೆ]

**ಸಾವಕಾಶ** (ಗು). ೧. ಬಿಡುವಿರುವ; ವಿರಾಮವಿರುವ. (ನಾ). ೨. ಬಿಡುವು; ವಿರಾಮ : ಆ ಮಾತು ಆಡುವುದಕ್ಕೆ ಇನ್ನೂ ಸಾವಕಾಶವಿದೆ (ಮಹಾಗ. ೧೧೭). ೩. ನಿಧಾನ; ತಡ : ಸಾವಕಾಶವಿಲ್ಲದ ಮನೋರಥಕ್ಕೆ ಸುಖಾಗಮನವೆ? (ಶಾಕುಂತ. ೩೮-೨೨); ಗೋವು ಸ್ನಾನವ ಮಾಡಿಕೊಂಡು ಗವಿಯ ಬಾಗಿಲ ಪೊಕ್ಕು ನಿಂತು ಸಾವಕಾಶವ ಮಾಡದಂತೆ ವ್ಯಾಘ್ರರಾಯನ ಕರೆದಳು (ಗೋಹಾಡು. ೧೯-೯೧). [ಸಂ.]

**ಸಾವಗ** (ನಾ). ಒಂದು ಜಾತಿ ಮತ್ತು ಆ ಜಾತಿಗೆ ಸೇರಿದ ವ್ಯಕ್ತಿ : ಗೋಪುರದ ಮೂಡಣ ಅಂಗಡಿಗಂ ಗಾಣ ೧ ಅಲ್ಲಿ ಬೆಸಗೆಯ್ವ ಕಲ್‌ಕುಟಿಗರ ಮನೆ ೧ ಸಾವಗರಿರ್ಪ್ಪ ಪೊಲಮನೆ ೧ (ಇಇ. XIX, ೨೭೩-೪೧; 1054). [?]

**ಸಾವಗಿಸು, ಸಾಗಿಸು₂** (ಕ್ರಿ). ೧. ನೇರಮಾಡು; ಸರಿಪಡಿಸು; ಕ್ರಮಪಡಿಸು: "ಸಾವಗಿಸುವುದೆಂದು ಸಸಿನೆ ಮಾಡ್ಪುದು" (ಶಶಸಾ. ೬೩-೬೯೯); ಸಾವಗಿಸುವ ಮೇಲುದಂ ಮೊಲೆಗಳಳ್ಳಿಱಿಯುತ್ತಿರೆ (ಪಂಪಭಾ. ೮-೫೯); ಪರೆದ ಕುರುಳ್ಗಳಂ ಸಡಿಲ್ದ ಮುಡಿಯುಮಂ ಸಾವಗಿಸಲೆಂದೆಳಸುವ ವಿಳಾಸಿನಿಯರಂ ಹೂಂಕಾರದಿಂ ನಿರಾಕರಿಸಿಯುಂ (ಜಗವಿ. ೧೧-೭ ವ); ಕನಕಕನತ್ಕಾಂಚಿಯೊಳ್ ನೀವಿಯಂ ಸಾವಗಿಸುತ್ತಂ ಬಂದರೀರ್ವರ್ ಸುಲಲಿತ ಚತುರಾಪಾಂಗೆಯರ್ ಕಾಂತೆಯರ್ಕಳ್ (ಪುಣ್ಯಾಸ್ರ. ೧-೪೨). ೨. ಕ್ರಮಕ್ಕೆ ಒಳಪಡಿಸು; ವ್ಯವಸ್ಥೆಗೆ ಒಳಗುಮಾಡು : ಮೂವತ್ತಿರ್ಛಾಸಿರ್ವರ್ ದೇವರ ಮೆಯ್ಗಾಪು ದೇವದೇವಂಗವರಂ ಸಾವಗಿಸಿ ತಂತ್ರಪಾಲತೆಗಾವಗಮಾಗಿಯೆ ನೃಪಾಂಘ್ರಿ ಯುಗಲದ ಮೊದಲೊಳ್ (ಶಾಂತಿಪು. ೧೦-೧೮೩). ೩. ಸಂತೈಸು; ಉಪಚರಿಸು: ವಿಯೋಗದುಪವಾಸದ ಪಾರಣೆಗೆಂದು ಚಕ್ರವಾಕಿಗೆ ರಮಣಂ ಮೃಣಾಳಕಬಳಂಗಳನಾಗಳೆ ಬಂದು ನೀಡಿ ಸಾವಗಿಸಿದಂ (ಶಾಂತಿಪು. ೮-೧೧೧); ಸಲೆ ಸಾವಗಿಸುತ್ತಿರ್ದಂ ದೇವಿಯರನಗಣಿತ ಶಿಶಿರೋಪಚಾರದಿಂದಿನ್ನೆವರಂ (ಕುಸುಮಾ. ೧೨-೧೬೦). ೪. ಸುಮ್ಮನಿರು; ಮೌನದಿಂದಿರು: "ಸಾವಗಿಪುದುಂ ಸ್ಥಿತನಲ್ಕುಪ್ಪುದದು ಮೌನಾರ್ಥವು" (ಅಭಿಕೌ. ೪೮); ರಿಪುಶಿರಮನೆರಡುಂ ಕರದಿಂ ಸಾವಗಿಸದೊಡದು ಕಿಬ್ಬಂ (ಎಕ. V, ಅರಸೀ.೧೦೮-೬; 1254). ೫. ನಿಶ್ಶೇಷ್ಟಗೊಳಿಸು; ಸ್ತಬ್ಧಗೊಳಿಸು: ಮಲ್ಲಿಗೆಸರಲ ಬಲ್ಲಣೆಗೆ ತಲ್ಲಣಂಗೊಂಡು ಸಾವಗಿಸುವ ನೋವನೋವದೆ ಬಾವೆಯೊಡನೆ . . . ಸೇವಿಸುವ ಬಿಜ್ಜೋದರರುಂ (ರಾಮಾಶ್ವ. ೬೩-೬). **ಸಾಗಿಸು₂** : ೧. ಚೆನ್ನಾಗಿ ತಿಲಕವ ತಿದ್ದಿ ಧಿಮ್ಮಕುಂತಳವ ಸಾಗಿಸಿ ಕೊಳುತೊಯ್ಯನೆ ತನ್ನ ತಾ ನಕ್ಕಳುಬ್ಬಿನೊಳು (ಭರಜ. ೧೧-೭೫). [ ? + - ಇಸು]

**ಸಾವಡರ್** (ಕ್ರಿ). ಸಾವನ್ನು ಹೊಂದು ; ಸತ್ತುಹೋಗು : ಈ ನಿಜಲಲನೆ ಪಡೆದ ಹಸುಗೂಸು ಬಲುರೋಗದಿಂ ಸಾವಡರ್ದುದು (ಕೃಭಂ. ೨-೬೯). [ಸಾವು + ಅಡರ್]

**ಸಾವಡಸು** (ಕ್ರಿ). ಸಾವು ಉಂಟಾಗು; ಮರಣವು ಪ್ರಾಪ್ತವಾಗು: ಆವ ಕಾಲವ ಕಳಿದರೆ ಜೀವವುಳ್ಳನ್ನ ಸಾವಡಸದೆ ಮಾಣ್ದಪುದೆ (ಮೋಹತ. ೩೩-೪೭).

[ಸಾವು + ಅಡಸು]

**ಸಾವಣ, ಸಾಣ$_1$, ಸಾಣ್ಣೆ$_1$, ಸೋಣ, ಸೋಣ್ಣೆ$_2$, ಸೋಣೆ, ಸೋನೆ$_2$** (ನಾ). ೧. ಚಾಂದ್ರಮಾನದ ಐದನೆಯ ತಿಂಗಳು ; ಶ್ರಾವಣಮಾಸ : ನವರಾಗದನು ಭೋಗ ಸುಗ್ಗಿ ಸಾವಣವು! (ಕವಿಕಾ. ೯೪-೪). **ಸಾಣ$_1$** : ೧. ಮೆರೆಯುತ್ತಿತ್ತು ಸಾಣಮಾಸ (ಕವಿಕಾ. ೭೮-೧೫). **ಸಾಣ್ಣೆ$_1$** : ೧. ದೀವಳಿಗೆಯ ಹಬ್ಬದಲಿ ರಂಗಪೂಜೆ ೧ ಸಾ[ಣ]ಯ ಸಹಸ್ರಕ್ಕೆ ಅಕ್ಕಿ ಮು ೧ (ಸೌಇಇ. IX-ii, ೪೪೮-೧೧;1442). **ಸೋಣ** : ೧. ಜೋಗಿ ನಡೆತರ ಸೋಣದಲ್ಲ . . . ಹಿಕ್ಕಿಲಿಗೆ ನಾನೋಡಿದ (ಗಿಲಿವಿಂ. ೬೭-೯೭); ಉಳಿದದ್ದನ್ನು ಸೋಣ, ಕನ್ಯೆ ತಿಂಗಳಲ್ಲಿ ಕೊಟ್ಟರೂ ಸಾಕು (ಒಡ್ಡಿಉ. ೧೦). **ಸೋಣ್ಣೆ$_2$** : ೧. ದೇವಸ್ಥಾನದಲಿ ನಿತ್ಯ ಪುರಾಣ ನ[ಡ]ವಂತಾಗಿ ಮಠದಲಿ ಸೋಣೆ ಮುವತ್ತು ದಿನ ಪುರಾಣ ನಡಸೂವಂತಾಗಿ ಮಾಡಿಕೊಂಡು (ಕಇ. I, ೫೩-೨೪; 1433); ಭಯಿರರಸ ಒಡೆಯರು ಮಾಡಿದ ಸೋಣೆಯ ಧರ್ಮ್ಮಕ್ಕೆ ಶ್ರೀಕಳಶನಾಥದೇವರಿಗೆ ಸಲುದು ಗ ೨ (ಮೈಆರಿ. ೧೯೪೦, ೨೮-೨೭; 1509). **ಸೋಣೆ** : ೧. ಸುರೇಸ್ವರ ಶ್ರೀಪದಂಗಳ ಮಠದಲ್ಲಿ ಸೋಣೆ ದಿ ೩೦ ಪುರಾಣ ನಡವಂತಾಗಿಯೆ (ಕಇ. I, ೫೩-೨೨; 1433); ತೊಳಸೆಪೂಜೆ ಸೋಣೆಯ ತಿಂಗಳ ಚಉತೀ ಹೋಮಕೆ (ಸೌಇಇ. ೧೯೩೭, ಉಡುಪಿ. ೩೦೦-೦೩; 1544); ಆಸಾಡಿ, ಸೋಣೆ, ಕನ್ನೆ – ಈ ಮೂರು ತಿಂಗಳೂ ಬಿಡುವು (ಅನಾಥ. ೧೯೯). ೨. (ಕರಾ) ಶ್ರಾವಣಮಾಸದಲ್ಲಿ ಗದ್ದೆಯಂಚಿನಲ್ಲಿ ಬೆಳೆಯುವ ಒಂದು ಬಗೆಯ ಗಿಡ ಮತ್ತು ಅದರ ಹೂವು. **ಸೋನೆ$_2$** : ೧. ಆಉದೂ ಸಲ್ಲದು [ಸೋನೆ]ಯ ತಿಂಗಳಲಿ ಸೋನೆಮರಿಯಾದೆ ಸಲುಉದು (ಸೌಇಇ. ೧೯೩೧, ಕೊಂಡಾಪುರ್. ೩೭೭-೧೪; 1306); ಚಿಕ್ಕದೇವರಿಗೆ ಅಸಾಡಿಸೋನೆಗೆ ರುದ್ರಪೂಜೆಗೆ ಅಱುವತ್ತು ಹಾನೆ ಅಕ್ಕಿಯನೂ ಕೊಟ್ಟು (ಸೌಇಇ. IX-ii, ೪೩೦-೩೪; 1406).

[< ಪ್ರಾ. ಸಾವಣ./ ಸಂ. ಶ್ರಾವಣ]

**ಸಾವದಿಸು(?)** (ಕ್ರಿ). ಸಮಿಪಿಸು ; ಹತ್ತಿರಕ್ಕೆ ಬರು (?) : ಮಣ್ನಳಿಕ ಮಾಱಟ ಮೂನೂಱಟ ಮನ್ನೆಯ ಬೆನ್ನರಸನಂ ಸಾವದಿಸಿ ಬಿನ್ನಪಂಗೆಯ್ದು ಕಂಬೇಶ್ವರದ ಖಣ್ಡಸ್ಪುಟಿತ್ತ ಜೀರ್ಣೋದ್ಧಾರಕ್ಕಂ (ಸೌಇಇ. IX-i, ೧೫೫-೩; 1086). [? + – ಇಸು]

**ಸಾವದ್ಯ** (ಗು). ೧. ನಿಂದಾರ್ಹವಾದ; ದೋಷಪೂರ್ಣವಾದ : ಬಾಧಾಪರಿಹಾರಾರ್ಥಂ ಸಾವದ್ಯಪಥದೊಳು ಬಾರದೆ ನಿರವದ್ಯಪಥದೊಳು ಬಂದವೆಂಬುದುಂ (ಚಾವುಂಪು. ೫೭). (ನಾ). ೨. ದೋಷ; ಕಳಂಕ : ಶಿಷ್ಟಾಚರಣವಿಧಿಗಳಂ ತಿರ್ದಿ ಕಾರುಣ್ಯದಿಂದಂ ಸಾವದ್ಯಂ ಸಾರದಂತಾಗಿರೆ . . . ಓಸರಿಸಿ ಕಳೆಗೆ ಸಂಸಾರಕಾಂತಾರದಿಂದಂ (ಆದಿಪು. ೧-೩); ನಿತ್ಯಾಲಂಬಂ ನಿರವದ್ಯಮಾಯ್ತು ಚರಿತಂ ಸಾವದ್ಯಮುಂ ಪೊರ್ದದೆಂದೀ ಲೋಕಂ ಪೊಗಟ್ಟ ಪ್ರಮತ್ತಗುಣಸಂಸ್ಥಾನಕ್ಕೆ ಪಕ್ಕಾದ ಬೋಧಾಲೋಕರ್ ದಯೆಗೆಯ್ಗೆ (ಚಂದ್ರಪು. ೧-೫). ೩. ದೋಷಯುಕ್ತವಾದುದು; ಕಳಂಕಪೂರ್ಣವಾದುದು.

[ಸಂ.]

**ಸಾವದ್ಯಕ್ರಿಯೆ** (ನಾ). ಕಳಂಕಪೂರ್ಣವಾದ ಕೃತ್ಯ; ದೋಷಯುಕ್ತವಾದ ಕ್ರಿಯೆ: ಹಿಂಸಾದ್ಯಶೇಷ ಸಾವದ್ಯಕ್ರಿಯಾನಿವೃತ್ತಿಗೆಯ್ದು ಕಾಯವಾಙ್ಮನಃಕರ್ಮಯೋಗ ತ್ರಯವಿಶುದ್ಧಿಯಿಂದೆಸಗುವೆಸಕಂ ಸಮ್ಯಕ್ಚಾರಿತ್ರಮೆಂಬುದಕ್ಕುಂ (ಸುಕುಮಾ. ೬-೮ ವ).

[ಸಂ. ಸಾವದ್ಯಕ್ರಿಯಾ]

**ಸಾವದ್ಯದೂರತ್ವ** (ನಾ). ದೋಷವಿಲ್ಲದಿರುವಿಕೆ ; ದೋಷವಿಮುಕ್ತವಾಗುವಿಕೆ: ಅಱಿವಂ ತಾಳ್ದಿರವುಂ ಹಿತಾತಿರುಚಿಯುಂ ಸಾವದ್ಯದೂರತ್ವಮುಂ ಪಱಗೊಳ್ಪುಂ ತನಗೊಳ್ಪುಮಪ್ಪ ನುಡಿಯುಂ . . . ಒಯ್ಯನ್ನಮುಕ್ತ್ಯಯಸುಖಾವಾಸಕ್ಕೆ (ಜೀವಸಂ. ೧೬೭-೨). [ಸಂ.]

**ಸಾವದ್ಯಭೀರು** (ನಾ). ದೋಷಕ್ಕೆ ಹೆದರುವ ವ್ಯಕ್ತಿ ; ಪಾಪಭೀರು : ಸಾವದ್ಯಭೀರುಗಳ್ ಕೆಲರಾ ಎವಿಧಫಲಪ್ರಸೂನಪಲ್ಲವತತಿಯಿಂ ತೀವಿದ ರಾಜಾಂಗಣಮ ನಿಳಾವಂದ್ಯರ್ ಮೆಟ್ಟಲೊಲ್ಲದಲ್ಲಿಯೆ ನಿಂದರ್ (ಆದಿಪು. ೧೫-೯). [ಸಂ.]

**ಸಾವಧ** (ನಾ). ೧. ಎಚ್ಚರ; ಜಾಗೃತ: ನಿಮ್ಮ ಮಿತ್ರನಾದ ಪಂತನನ್ನು ಎಚ್ಚರಗೊಳಿಸಿರಿ ಮತ್ತು ನೀವೂ ಸಾವಧರಾಗಿರಿ (ಅಂಬಿಕ. ೨೪); ಮೂರ್ಛಿತಳಾದ ರಮಾದೇವಿಯು ಜನರ ಉಪಚಾರದಿಂದ ಸಾವಧಗೊಂಡಳು (ಸ್ಕೂಲಮಿ. ೯೩). ೨. ಸಮಾಧಾನ; ನಿರಾಳ : ಯಜಮಾನಳೇ ಸಾವಧರಾಗಿರಿ. ಯಾಕಂದರೆ ವಸಂತಮಾಧವಜಯಪರು ಸುರಕ್ಷಿತವಾಗಿ ಬಂದಿದ್ದಾರೆ (ಮುಂಜುಕ. ೯೭).

[← ಮರಾ. ಸಾವಧ./ ಸಂ. ಸಾವಧಾನ]

**ಸಾವಧಗಿರಿ** (ನಾ). ಸಮಾಧಾನ; ಶಾಂತಿ; ಸಹನೆ: ನನ್ನಷ್ಟು ಸಾವಧಗಿರಿಯನ್ನು ಬೇರೆ ಯಾರೂ ವಹಿಸಿರಲಿಕ್ಕಿಲ್ಲ! (ಕಳ್ಳಕಾ. ೧೪). [← ಮರಾ. ಸಾವಧಗಿರೀ]

**ಸಾವಧಾನ** (ನಾ). ೧. ಎಚ್ಚರದಿಂದಿರುವಿಕೆ ; ಲಕ್ಷ್ಯದಿಂದಿರುವಿಕೆ. ೨. ಎಚ್ಚರಿಕೆ; ಲಕ್ಷ್ಯ; ಗಮನ : ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ (ಶೂನ್ಯಸಂ. ೧೮-೨೨); ಕವಿಗುರುವ, ನೀಡೆನಗೆ ವಾಙ್ಮಂತ್ರಶಕ್ತಿಯಂ ಸಾವಧಾನದಿ ಕೇಲ್ದು ಸಾಗುವೆನ್ (ಶ್ರೀರಾಮಾ. ೫-೧೦೮); ಹೋ! ಅವಧಾನ, ಅವಧಾನ! ಸಾವಧಾನ ಮಹಾಸನ್ನಿಧಾನ (ಸವತಿ. ೧). ೩. ಸಮಾಧಾನ; ತಾಳ್ಮೆ; ಸಹನೆ : ಅಂಗದಲ್ಲಿ ಸಂಗಗೊಳಿಸಿದ ಬಳಿಕ ಅದೇ ಪ್ರಾಣಲಿಂಗವೆಂದಱಿದು ಸಾವಧಾನದಿಂದರ್ಚಿಸಬೇಕು (ಚನ್ನವ. ಕ. ೬೪-೧೪೭); ಗುರು ಲಿಂಗಜಂಗಮವ ಶಿವನೆಂದೆಂಬ ಭಾವದಿಂ ಭಜಿಸಿ ತೀರ್ಥಪ್ರಸಾದವ ಕೊಂಡು ಸಾವಧಾನದೊಳಿರ್ಪವರನೆಲ್ಲಿಯುಂ ಕಂಡುದಿಲ್ಲ (ಸಿದ್ಧೇಪು. ೧-೫೦); ತಂದೆಯವರು . . . ಅಷ್ಟೊಂದು ಸಾವಧಾನವಾಗಿ ಶಾಂತಮನಸ್ಸಿನಿಂದ ಹೇಳಿದ್ದನ್ನು ನಾನು ನೋಡಿದ್ದು ಇದೇ ಮೊದಲು (ಸುವಸಂ. ೨೦). ೪. ನಿಧಾನ; ಸಾವಕಾಶ: ಆ ವೀರವರ್ಮಂ ಕನಲ್ದಾಗ . . . ಆಹವದೊಳೆನ್ನ ಕೂಡೆ ಸಾವಧಾನದೊಳೊದಗಿದೊಡೆ ಕಾಣಬಹುದೆನುತೆ ಪಾವನಿಯನಡಸಿ ಪೊಯ್ದೊಡೆ (ಜೈಮಿಭಾ. ೨೭-೪೮); ವಸತಿಸೌಕರ್ಯವಿಲ್ಲದಿದ್ದರಿಂದ ನಾವು ಸಾವಧಾನ ಮಾಡಬೇಕಾಯಿತು (ಹಸುಹೂ. ೩೦೮). ೫. ಆರು ವಿಧವಾದ ಭಕ್ತಿಗಳಲ್ಲಿ ಒಂದು : ಭಕ್ತಿ ಆರು ವಿಧವಾಗಿದೆ. ಶ್ರದ್ಧಾಭಕ್ತಿ, ನೈಷ್ಠಿಕಭಕ್ತಿ, ಸಾವಧಾನಭಕ್ತಿ, ಅನುಭಾವಭಕ್ತಿ, ಆನಂದಭಕ್ತಿ, ಸಮರಸಭಕ್ತಿ (ಭಾರದ. ೧೯೯). [ಸಂ.]

**ಸಾವಧಾನಿ** (ನಾ). ಎಚ್ಚರವುಳ್ಳವನು; ಸಮಾಧಾನಚಿತ್ತವುಳ್ಳವನು: ಪ್ರಾಣಲಿಂಗಕ್ಕೆ ಕೊಟ್ಟು ಕೊಂಬಲ್ಲಿ ನಿರಂತರ ಸಾವಧಾನಿ ಗುಹೇಶ್ವರ ನಿಮ್ಮ ಪ್ರಸಾದಿ (ಅವಚಂ. ೫೬-೨೪೦); ಮುಕ್ತಸ್ಥಿತಿಯಲ್ಲಿಯೂ ಮೈಮರೆಯದೆ ಸಾವಧಾನಿಯಾಗಿ ಭಕ್ತನಾಗಿರಬೇಕು (ಭಾರದ. ೧೩೦). [ಸಂ. ಸಾವಧಾನಿನ್]

**ಸಾವಧಿಠೇವಣಿ** (ನಾ). ಒಂದು ನಿರ್ದಿಷ್ಟ ಅವಧಿಯನ್ನು ಗೊತ್ತುಪಡಿಸಿ ಬ್ಯಾಂಕಿನಲ್ಲಿ ಬಡ್ಡಿಗಾಗಿ ಇಡುವ ಹಣ; ಇಡುಗಂಟು: ಅವರು ನಿವೃತ್ತರಾದ ಮೇಲೆ ಬಂದ ಹಣವನ್ನು ಸಾವಧಿಠೇವಣಿಯಲ್ಲಿ ತೊಡಗಿಸಿದ್ದಾರೆ (ರೂಢಿ).

[ಸಾವಧಿ + ಠೇವಣಿ]

**ಸಾವನ** (ನಾ). ೧. ಐದು ಬಗೆಯ ಸಂವತ್ಸರಗಳಲ್ಲಿ ಒಂದು : ಆ ಸಂವತ್ಸರವೇ ಸೌರ ಚಾಂದ್ರ ಬಾರ್ಹಸ್ಪತ್ಯ ನಾಕ್ಷತ್ರ ಸಾವನಭೇದದಿಂದೈದುತೆಱನಾಗಿರ್ಪುದು (ವಿವೇಕ. ೩೨೦). ೨. ಯಜ್ಞದ ಕೊನೆಯ ಭಾಗ,— ಅಂತ್ಯದ ಭಾಗ. ೩. ಸೌರಮಾನಪದ್ಧತಿಯ ತಿಂಗಳು. ೪. ಸೂರ್ಯೋದಯದಿಂದ ಸೂರ್ಯಾಸ್ತದವರೆಗಿನ ದಿನದ ಭಾಗ. [ಸಂ.]

**ಸಾವನಿಗ** (ನಾ). (?) : ಸಾವನಿಗರ ಪಱೆಯರ [ನಾ] ಸೀವಿಗಳ ನೆಗರ್ತೆವೆತ್ತ ಗಂದಿಗರ ಬೆಡಂಗಾವರಿಸುವ [ತಂ]ಬುಲಿಗರ ಪೂವೆತ್ತುವ ಮಾಲೆಗಾಱರಂಗಡಿಯಡಿಗಂ (ವರ್ಧಮಾ. ೧-೬೭); ಮತ್ತಮಲ್ಲಿಯೊರ್ವಂ ಸಾವನಿಗನ ಚಿತ್ರಮಂ ಬರೆದಂಗಡಿಗೆ ಪೋಗಿ ಕುಳ್ಳಿರ್ದೊಡಂದಾ ವಣಿಕ್ಪತಿಗೆ ಲಾಭಮಾದೊಡೀತಂ ಬಂದಲ್ಲಿ ಪಡೆದೆನೆಂದಾತನ ತೇಜಕ್ಕಂ ಬುದ್ಧಿಗಂ ಮಚ್ಚಿ ಕೂಸಂ ಕುಡಲೆಂದಿರ್ದಂ (ಜೀವಸಂ. ೨೦೫-೧೪). [ಸಾವನ$_1$ + – ಇಗ]

**ಸಾವಭೃತ** (ನಾ). ಸಾಮಾನ್ಯವಾದುದು; ಕೇವಲ: "ಸಾವಭೃತಂ ಸಾಮಾನ್ಯಂ ಕೇವಳಮೆಂಬುದದೆನಿಕ್ಕುಂ" (ವಸ್ತುಕೋ. ೧೨೬-೯೯). [ಸಂ.]

**ಸಾವಯ$_1$** (ನಾ). ೧. [ವೀಶೈ] ಅವಯವಸಹಿತವಾದುದು; ಅಂಗಸಹಿತವಾದುದು : ತನುವೆ ಸಾವಯವಾಗಿ ರೂಪಾದಿ ಗುಣವರ್ತಿಯೆನಿಸುತ ಘಟಾದಿಯಂತಳಿವ ಭೌತಿಕವಲ್ಲೆ (ವೀಶೈಪು. ೫-೪-೯). ೨. ಜೀವಾತ್ಮ : ಶರಣನು ದೃಷ್ಟಾದೃಷ್ಟವನಱಿಯನು ಸಾವಯ ನಿರವಯವೇನೆಂದು ವಿವರಿಸಿ ನುಡಿಯನು (ಚನ್ನವ. ೫೮೨-೧೪೯೬).

[< ಸಂ. ಸಾವಯವ]

**ಸಾವಯ್ಯ₂** (ನಾ). ಒಂದು ಬಗೆಯ ಸಸ್ಯ : ಬಿಳಿದಾಳೆ, ಮಸ್ಸಿ, ಶಾವಿಗೆ, ಸಾವಯ, ಕೈತಾಳೆ (ವೃಜಿಗ. ೭೨-೧೪೭೫). [?]

**ಸಾವಯವ** (ಗು). ೧. ಅವಯವಗಳಿಂದ ಕೂಡಿದ; ಸಾಕಾರವಾದ: ಪೋಪ್ ಅದನ್ನು 'ಆಲೋಚನೆಯ ವಸ್ತು' ಎಂದು ಕರೆದಾಗ, ಅದರ ಮುಖ್ಯವಾದ ಸಾವಯವ ಸ್ವರೂಪವನ್ನು ಅರಿತುಕೊಳ್ಳಲು ಆತ ಸಂಪೂರ್ಣ ಅಸಮರ್ಥನಾದ (ಸಾಹಿಪ್ರ. ೨೩). ೨. ಮೂಲಭೂತವಾದ; ಜೈವಿಕ: ಪ್ರೋಟೀನುಗಳು ಸಸಾರಜನಕಯುಕ್ತವಾದ ಸಾವಯವಆಹಾರಾಂಶಗಳು (ಗೃಹವಿ. ೯). (ನಾ). ೩. ಅವಯವಸಹಿತವಾದುದು; ಸಾಕಾರವಾದುದು : ಎನ್ನಂಗವನು ಶ್ರೀಗುರು ಮಂತ್ರವ ಮಾಡಿ ತೋಱಿದನಾಗಿ ಸಾವಯವ[ಪಾಠಾಂ. ಸಾವಯ]ಕ್ಕೆ ನಿರವಯವಕ್ಕೆ ಭಿನ್ನವಿಲ್ಲವಯ್ಯ (ಮಹಾದೇ. ಬ. ೭೩-೧೮೧); ತನು ಕರಣ ಮೊದಲಾದವನಿತು ಸಾವಯವಂಗಳೆನಿಸಿ ತಾ ತೋಱುತಿಹುದಾಗಿ ನಿರವಯವೆನಲು ಮತ್ತಂತು ತೆಱಹಿಲ್ಲ (ಅನುಮು. ೧-೪-೪೭); ಪರಮಾತ್ಮನ ಸ್ವರೂಪವನ್ನು ತಿಳಿಸಲು ಶ್ರುತಿಗಿಂತಲೂ ಅಧಿಕವಾದ ಪ್ರಮಾಣವನ್ನು ನಾವು ಕಾಣಲಾರೆವು. ಮೂರ್ತ ಎಂದರೆ ಸಕಲ, ಸಾವಯವ; ಅಮೂರ್ತ ಎಂದರೆ ನಿಷ್ಕಲ, ನಿರವಯವ ಎಂದರ್ಥ (ಶಕ್ತಿವಿ. ೨೩). [ಸಂ.]

**ಸಾವಯವರೂಪಕ** (ನಾ). [ಕಾವ್ಯಮೀ] ರೂಪಕಾಲಂಕಾರಗಳಲ್ಲಿ ಒಂದು ಬಗೆ; ವ್ಯಕ್ತಿ ಅಥವಾ ವಸ್ತುವನ್ನು ಸಮಗ್ರವಾಗಿ ಮತ್ತೊಂದರಲ್ಲಿ ಆರೋಪಿಸಿ ರೂಪಕಮಾಡದೆ, ಒಂದೊಂದು ಅವಯವವನ್ನೂ ಮತ್ತೊಂದರಲ್ಲಿ ಆರೋಪಿಸಿ ರೂಪಕಮಾಡುವುದು; ಒಂದೊಂದೂ ಅವಯವದ ರೂಪವನ್ನೊಳಗೊಂಡುದು: ಸ್ಫುರಿತಾಧರಪಲ್ಲವೆ ಬಂಧುರಲೋಚನಕುಸುಮೆ ಲೋಲಭುಜಶಾಖೆ ಮನೋಹರೆ ಕಾಂತೆಯೆಂಬುದವಯವನಿರೂಪಣಕ್ರಮದಿನವಯವಂ ರೂಪಕದೊಳ್ (ಸಾವಯವರೂಪಕಂ) (ಕವಿರಾ. ೩-೧೫); ಸಾವಯವರೂಪಕಕ್ಕೆ- ಪರಿಲುಳಿತಘರ್ಮಜಲಮಂಜರಿ ವಿಚಲದ್ಭ್ರೂಪತಾಕಮತಿತರಳತರ ಸ್ಫುರಿತಾಧರ ಪಲ್ಲವಮಿವಳ ರೋಷಮಂ ವಕ್ತ್ರಮಿದೆ ವಲಂ ಕನ್ನಡಿಕುಂ (ಕಾವ್ಯಾವ. ೬೯೦). 'ನಿರವಯವರೂಪಕ' ಪರಾ. [ಸಂ.]

**ಸಾವರಣೆ** 'ಸಂವರಣೆ₁' ನೋ.

**ಸಾವರಿಸು** 'ಸಂವರಿಸು₁' ನೋ.

**ಸಾವರ್ಣಿಕ** (ನಾ). ಸಗೋತ್ರದವನು : ಜಡನಾದವನ ಸಾವರ್ಣಿಕನಾ ದುರಾಚಾರ ನಾದವನಾ ಶ್ರಾದ್ಧಕ್ಕೆ ಹೇಳಬಾರದು (ಶೀಷಧ. ೧೭-೨೦). [ಸಂ.]

**ಸಾವಶ್ಯಪ್ರಣವ** (ನಾ). ಪಂಚಪ್ರಣವಮಂತ್ರಗಳಲ್ಲಿ ಒಂದು : ಸಾಕಲ್ಯಪ್ರಣವ, ಶಾಂಭವಪ್ರಣವ, ಸೌಖ್ಯಪ್ರಣವ, ಸಾವಶ್ಯ[ಪಾಠಾಂ. ಸ್ಯ]ಪ್ರಣವ ಸಾಯುಜ್ಯಪ್ರಣವವೆಂಬ ಪಂಚಪ್ರಣವಮಂತ್ರಂಗಳಂ (ವಿವೇಕ. ೮೧). [ಸಂ.]

**ಸಾವಜ್** (ನಾ). ಹೆಣದ ಮುಂದೆ ಬಾರಿಸುವ ಒಂದು ಬಗೆಯ ಚರ್ಮವಾದ್ಯ: ಬಲೆಯಿರ್ದಿಲೆಲ್ಲು ಸಾವಜ್ ಪುರಿಯೋಡು . . . ವಿಮುಕ್ತಕೇಶಿಯಿದಿರೊಳ್ ಬರೆ ಕಾಣಲುಮಾಗದು (ಲೋಕೋಪ. ೧೨-೧೦); ನೆಱನಂ ದುಷ್ಕೃತಮೆಂಬ ಜೇನ ನೊಣಮೇಂ ಪಾಯ್ದಾಱವೇ ಬಂದು ಬೆಟ್ಟುಱ ದುಃಖಜ್ವಲನಾರ್ಚಿಗಳ್ ಬಳಸಿದುಂ ತಳ್ಪಟ್ಟವೇ ಪೊಯ್ಯ ಸಾವಜ್[ಪಾಠಾಂ. ಸಾಯ್ಪುರ]ಗಳ್ ಬೆರ್ಚದೆ ತೀಡವೇ ಕಿವಿಗಳೊಳ್ . . . ಪೇಟು ಜೀವನೇ (ಜೀವಸಂ. ೮೨-೧೪). [< ಸಾವು + ಪಜ್₁./ ಕೊಡ. ಚಾವುಪರೆ]

**ಸಾವಾಸ** (ನಾ). ಜೊತೆಯಲ್ಲಿರುವಿಕೆ; ಒಡನಾಟ: ಕಲಿತವರ ಸಾವಾಸ ಚಲೋ (ಮಣ್ಣುಹ. ೫೭). [< ಸಂ. ಸಹವಾಸ]

**ಸಾವಾಸಿ, ಸವ್ವಾಶೆ, ಸವ್ವಾಶಿ** (ನಾ). ೧. ಜೊತೆಗಿರುವವನು; ಸಹವಾಸಿ; ಒಡನಾಡಿ: ಸಾಗೆ - ಸಹದೇವ - ಸಾದೇವ; ಸಹವಾಸಿ - ಸಾವಾಸಿ (ಶಮದ. ೫೯೧ ಪ್ರಯೋ); ಸಾದೇವಂ, ಸಹದೇವಂ; ಸಾವಾಸಿ, ಸಹವಾಸಿ (ಶಬ್ದಾನು. ೩೭೪ ಪ್ರಯೋ). ೨. ಅಂತಃಪುರದ ಕಾವಲುಗಾರ, — ವೃದ್ಧಕಂಚುಕಿ : "ಸೌವಿದಃ ಸೌವಿದಲ್ಲಃ, ಸ್ಥಾಪತ್ಯಃ, ಕಂಚುಕೀ - ಈ ೪ ಸಾವಾಸಿ" (ಹಲಾಯು. ೭೦-೨೬೩); ಬಱಿಯಟ್ಟಿ ಬಂದು ಮುನ್ನಂ ಪುಟುವಗೆಗೊಳಗಾದಳೆಂದು ಸಾವಾಸಿಗಳಂ ಕಱಿಪಿದನಲ್ಲಂ ತಲೆಯಂ ಬಱಿಯಟ್ಟಿದನೆಂದು ಪೋದುದಸು ಶಶಿಮುಖಿಯಾ (ಅನಂಪು. ೧೨-೫); ದಾಸದಾಸಿಜನಕ್ಕೆಱೆದು ವಿಶ್ವಾಸಿಗಳಿಗಾರ್ಯರಿಗೆಱೆದು ಸಾವಾಸಿಗಳಿಗೆಱೆದಂಗರಕ್ಷಕರಿಂಗೆಱೆದು (ಬಸವು. ೫೯-೨೮). ೩. ಕಾವಲುಗಾರ : ಕೇಶಿರಾಜನ ಶಿಷ್ಯನೋ ಸತ್ಕೇಶ ಚಾಮಯ್ಯನ ಮನೆಯ ಸಾವಾಸಿಯೋ (ಬಸವು. ೪೭-೩೫). ೪. ಆರ್ಯ; ಹಿರಿಯ: "ಸಾವಾಸಿ[ಪಾಠಾಂ. ಸೋವಾಸೆ]ಯುಂ ಆರ್ಯನೆಂದೆನಿಸಿಕೊಂಬುದು" (ಮಂಗರಾ. ೧೪೧-೧೪); "ಸೂರ್ಯಂ ತಾಪಸಭೋಗಭೂಮಿಭವರುಂ ಸಾವಾಸಿಯುಂ ವೃದ್ಧರಿಂತಾರ್ಯಾಖ್ಯಂ" (ನಾನಾರ. ೧೦೭); ಅಜ್ಜಂ = ಸಾವಾಸಿ (ಪೊಸವಾಸಿ) (ಶಮದ. ಪು. ೨). ೫. ಬ್ರಾಹ್ಮಣರಲ್ಲಿ ಒಂದು ಒಳಪಂಗಡ ಮತ್ತು ಆ ಪಂಗಡಕ್ಕೆ ಸೇರಿದ ವ್ಯಕ್ತಿ; ಸಾವಾಸಿಬ್ರಾಹ್ಮಣ : ಗುತ್ತಿಯಧಿಕಾರಿ ಪೆರ್ಗ್ಗಡೆ ಹಂಪಣಯ್ಯಂಗಳು ಶ್ರೀ ಬಿಲ್ಲವರಸರು ಪಾಳೆಯದ ಸಾ[ವಾ]ಸಿ ಜನಾರ್ದ್ದನಭಟ್ಟನಾಯಕನುಂ (ಸೌಇಇ. VIII, ೩೭೨-೧೨; 1101); ಗುತ್ತಿಯ ದಣ್ಣನಾಯಕಂ ಸಂಬುದೇವನುಂ ಪಾಳಯದ ಸಾವಾಸಿ ಆನನ್ನಭಟ್ಟನುಂ . . . ಮಾದಿರಾಜಂಗೆ ಬಿಟ್ಟ ಕೆಯಿ (ಸೌಇಇ. IX-i, ೨೩೨-೧೨; 1135); ಈ 'ಸಾವಾಸಿ' ಬ್ರಾಹ್ಮಣರು ಕರ್ನಾಟಕದಲ್ಲಿ ಬಂದು ನೆಲಸಿ ಲೌಕಿಕಕಾರ್ಯಗಳಲ್ಲಿ ತೊಡಗಿದ್ದರೆಂದು . . . ತಿಳಿದುಬರುವುದು (ಕರ್ನಾಸಂ. ೨೯೫). **ಸವ್ವಾಶೆ** : ೫. ಧಾರವಾಡಜಿಲ್ಲೆಯಲ್ಲಿ 'ಸವ್ವಾಶೆ' ಎಂಬ ಬ್ರಾಹ್ಮಣರು ಇರುವರೆಂದೂ ಶ್ರೀರಾಮನು ವನವಾಸಕ್ಕೆ ಹೋದಾಗ ಅವನ ಸಹವಾಸದಲ್ಲಿದ್ದ 'ಸಹವಾಸಿ'ಎಂಬವನು ತಮ್ಮ ಮೂಲಪುರುಷನೆಂದು ಈ ಜನರ ಅಭಿಪ್ರಾಯವಿದೆಯೆಂದೂ . . . ಗೆಜೆಟಿಯರಕಾರರು ಹೇಳುತ್ತಾರೆ (ಕರ್ನಾಸು. ೨೯೨). **ಸವ್ವಾಶಿ** : ೫. ಸವ್ವಾಶಿ ಬ್ರಾಹ್ಮಣರು - ಇವರು ಧಾರವಾಡಜಿಲ್ಲೆಯಲ್ಲಿ ಮಾತ್ರ ಇದ್ದಾರೆ. ರಾಮನು ವನವಾಸಕ್ಕೆ ಹೋದಾಗ ಆತನ ಜತೆಯಲ್ಲಿದ್ದ "ಸಹವಾಸಿ" ಯೆಂಬುವನು ತಮ್ಮ ಜಾತಿಯ ಮೂಲಸ್ಥಾಪಕನೆಂದು ಇವರು ಹೇಳುವರು (ಕಭಾಗ. ೮೨).

ಸಾವಾಸಿಗರ ದಂಡ = ಸಾವಾಸಿಗಳಲ್ಲಿ ಮುಖ್ಯನಾದವನು : ರಾಯಪಾಳ ಸಾವಾಸಿಗರ ದಂಡ ಶ್ರೀಮನ್ಮಾಳ್ಪ್ರಭು ಘಟಸರ್ಪ ಹಡವಳ ಕಾಮಯ್ಯ (ಕರ್ನಾಸಂ. ೨೯೫).

[< ಸಂ. ಸಹವಾಸಿನ್./ ಮರಾ. ಸವಾಶಾ, ಸವಾಶೇ; ಗುಜ. ಸವಾಸೋ]

**ಸಾವಿ** 'ಸಾಮಿ₁' ನೋ.

**ಸಾವಿತ್ರ** (ಗು). ೧. ಸೂರ್ಯನಿಗೆ ಸಂಬಂಧಿಸಿದ : ನಿನ್ನ ಸಾವಿತ್ರಮಂತ್ರವನ್ನು ಅನುಷ್ಠಾನಮಾಡಿದರೆ ಅದು ಗಾಯತ್ರವಾಗುವುದು (ಮಹಾಣ. ೨೮೩). ೨. ಸೂರ್ಯವಂಶದ. (ನಾ). ೩. ಸೂರ್ಯ; ಭಾನು. ೪. ಶಿವ; ಈಶ್ವರ. [ಸಂ.]

**ಸಾವಿತ್ರಿ** (ನಾ). ೧. ಸೂರ್ಯನ ಕಿರಣ,— ರಶ್ಮಿ. ೨. ಋಗ್ವೇದದಲ್ಲಿ ಸೂರ್ಯನನ್ನು ಕುರಿತು ಇರುವ ಪ್ರಸಿದ್ಧವಾದ ಒಂದು ಮಂತ್ರ; ಗಾಯತ್ರೀಮಂತ್ರ : "ಸಾವಿತ್ರಿ = ೧. ವೇದಮಂತ್ರ" (ಗಂಗಾಮ. ೩೨೮). ೩. ಸವಿತೃದೇವತೆಯ ಮಗಳು; ಸೂರ್ಯನ ಪುತ್ರಿ: ಮಿತಾಹಾರನೂ ಜಿತೇಂದ್ರಿಯನೂ ಆಗಿದ್ದುಕೊಂಡು ನಿತ್ಯವೂ ಸಾವಿತ್ರಿಯನ್ನುದ್ದೇಶಿಸಿ ಹತ್ತುಸಾವಿರ ಹೋಮವನ್ನು ಮಾಡುತ್ತಿದ್ದನು (ವಚಭಾ. ೧೬೬). ೪. ಬ್ರಹ್ಮನ ಒಬ್ಬಳು ಹೆಂಡತಿಯ ಹೆಸರು. ೫. ಪಾರ್ವತಿಯ ಹೆಸರುಗಳಲ್ಲಿ ಒಂದು : ಸಾಮವೇದಮಯವಾಗಿ ತಮೋಗುಣಾಧಿಕ್ಯದಿಂ ರುದ್ರಾಧಿದೇವತೆಯೆನಿಸಿ ಸಾವಿತ್ರಿ ಮಹೇಶ್ವರಿಯೆಂಬ ಪೆಸರ್ವಡೆದು (ವಿವೇಕ. ೧೨೦); ತಾಯೆ ಪಾರ್ವತಿ ಪರಮಕಲ್ಯಾಣಿ ಶಂಕರಪ್ರೀಯೆ ಸರ್ವೇಶ್ವರಿ ಜಗನ್ಮಾತೆ ಸನ್ನುತಚ್ಛಾಯೆ ಸಾವಿತ್ರಿ . . . ಕಾಳಿ ಕಾತ್ಯಾಯನಿ (ಜೈಮಿಭಾ. ೩೦-೭೨); ಪರಮ ಪತಿವ್ರತೆಯಿದ್ದ ಬಳಿಯೊಳಾ . . . ಸರಸತಿ ಸಾವಿತ್ರಿಗಾಯತ್ರಿಯರುಮಾ ಪರಿಸರದೊಳು ಬಳಸಿಹರು (ಹದಿಬ. ೨-೧೬). ೬. ಅಶ್ವಪತಿರಾಜನ ಮಗಳು; ಸತ್ಯವಾನನ ಹೆಂಡತಿ : ಸಾವಿತ್ರಿಯ ವರದಿಂದ ಹುಟ್ಟಿದವಳಾದ್ದರಿಂದ ಅವಳಿಗೆ ಸಾವಿತ್ರಿಯೆಂದೇ ಹೆಸರಿಟ್ಟರು (ವಚಭಾ. ೧೬೭); ಸತ್ಯವಾನನ ರೂಪ ಗುಣಗಳನ್ನು ಸಾವಿತ್ರಿ ಮೆಚ್ಚಿದಳು (ಭಾಹಬ್ಬ. ೮೯). ೭. ಒಂದು ಸಸ್ಯದ ಹೆಸರು; ದೇವಪತ್ರ ; ಗಾಂಧಾರಿ: "ದೇವಪತ್ರಂ ಪಂಚಪತ್ರೆ, ಗಾಂಧಾರಿಯುದು ಸಾವಿತ್ರಿ[ಪಾಠಾಂ. ತ್ರೆ]ಯುಕ್ಕು" (ಮಂಗರಾ. ೪೦-೩೦). ೮. ಮದುವೆಯಾದ ಸ್ತ್ರೀ ; ವಿವಾಹಿತೆ: "ಸಾವಿತ್ರೀ = ೧. ವೇದಮಂತ್ರ, ೨. ಮದುವೆಯಾದ ಸ್ತ್ರೀಯಳು" (ಗಂಗಾಮ. ೩೨೮).

[ಸಂ. ಸಾವಿತ್ರೀ]

**ಸಾವಿತ್ರೀವ್ರತ** (ನಾ). ಜ್ಯೇಷ್ಠಮಾಸದಲ್ಲಿ ಸ್ತ್ರೀಯರು ತಮ್ಮ ಸುಮಂಗಲಿತನದ ಶ್ರೇಯಸ್ಸಿಗಾಗಿ ಮೂರುದಿನ ಮಾಡುವ ಒಂದು ವ್ರತ; ಸಾವಿತ್ರೀದೇವಿ ಪೂಜೆಯ ವ್ರತ: ಮುಂಬಯಿ ಮೊದಲಾದ ಮಹಾನಗರಗಳಲ್ಲಿ . . . ಆಲದ ಹರಿಯನ್ನು ಎಲ್ಲಿಂದಲಾದರೂ ತರಿಸಿ ಅದನ್ನು ಒಂದೆಡೆಯಲ್ಲಿ ಊರಿ ಸುವಾಸಿನಿಯರೆಲ್ಲ ಒಟ್ಟಾಗಿ ಸಾವಿತ್ರೀವ್ರತಾಚರಣೆ ಮಾಡುತ್ತಾರೆ (ಭಾಹಬ್ಬ. ೯೧). 'ವಟಸಾವಿತ್ರೀವ್ರತ' ಪರಾ. [ಸಂ.]

**ಸಾವಿನಿಮ್ಮಡಿ** (ನಾ). ಒಬ್ಬಾಕೆಯ ಹೆಸರು: ಸ್ವಸ್ತಿಶ್ರೀ ನಾಗಾರ್ಜುನಯ್ಯನಸ್ ವಿಜ್ಜಿಯಡೆಯ ಮಗಳ್ ಸಾವಿನಿಮ್ಮಡಿ ಸರ್ವ್ವಶಾಸ್ತ್ರಪ್ರಸಿದ್ಧಿ ಶ್ರೀ (ಎಕ. X, ಬಾಂಂಗ್. ೬೫-೨: ಸು. 900). [ಸಾವಿ$_1$ (< ಸಾಮಿ$_1$) + ಇಮ್ಮಡಿ (< ಇರ್ಮಡಿ)]

**ಸಾವಿಯಬ್ಬೆ** 'ಸಾಮಿಯಬ್ಬೆ' ನೋ.

**ಸಾವಿರ** 'ಸಾಸಿರ' ನೋ.

**ಸಾವಿರಾಲಿ** (ನಾ). ಸಾವಿರ ಕಣ್ಣುಗಳು; ಸಹಸ್ರನೇತ್ರ: ಸಾವ ಹರಯವ ಎನುತ ಗಗನದ ದೇವತತಿ ಮಱುಗಿತ್ತು ಶಕ್ರನ ಸಾವಿರಾಲಿಯೊಳೊಱೆತ ಮಸಗಿತು ಪೌತ್ರಶೋಕದಲಿ (ಕುಮ್ಮಾದ್ರೋ. ೬-೬೩). [ಸಾವಿರ (< ಸಾಸಿರ) + ಆಲಿ$_2$]

**ಸಾವು, ಸಾಹು$_2$** (ನಾ). ೧. ಮರಣ; ಮೃತ್ಯು: "ನಿಧನಂ, ನಾಶಃ, ಮೃತ್ಯುಃ, ಮರಣಂ . . . ದೀರ್ಘನಿದ್ರಾ — ಈ ೧೨ ಸಾವು" (ಹಲಾಯು. ೧೦೫-೬); ರಕ್ಕಸಮಣಿಯ ಕೋಣೆಯ ಗಂಗನ ಕಾಳೆಗದೊಳ್ ತನ್ನ ಸಾವಂ ನಿಶ್ಚಯ್ಸಿ ಕಾಳೆಗಕಿಡೆ ರಕ್ಕಸಮಣಿಯ ಕಟ್ಟಿಪಿ ತನ್ನ ಬಲಮುಂ ಮಾರ್ಬ್ಬಲಮುಂ ತನ್ನನೆ ಪೊಗಟೆ (ಎಕ. II, ೧೩೮-೪; 940); ಘಟೋತ್ಕಚನಿಳಾವಂತನ ಸಾವಂ ಕಂಡು ಸ್ಮರಿಸದಳಂಭೂಷನನೆಟ್ಟುವುದುಂ (ಪಂಪಭಾ. ೧೧-೭ ವ); ಮರಳಿರ್ದ ಕೈಕೆಯರು ಮತ್ಸ್ಯರು ಬಿರುದ ಸೃಂಜಯರಕಟಕಟ ಋಳರು ವೃಥಾ ನಿಮಗೇಕೆ ಸಾವೆನುತಿರ್ದನಾ ದ್ರೋಣ (ಕುಮ್ಮಾದ್ರೋ. ೧೭-೬೨); ದೊಂಬರ ಸಾವು ಗಣೆಯ ಮೇಲೆ ಬಿಲ್ಲವರ ಸಾವು ಮರದ ಮೇಲೆ (ಗಾದೆ). ೨. ಹೆಣ; ಶವ: "ಶುಕದೊಳವಿಳವ್ವುಗದೊಳು ಸಾವಿನೊಳು ಶಬಾಕ್ಯಂ" (ಮಂಗರಾ. ೧೫೨-೫೭). **ಸಾಹು$_2$** : ೧. ತನಗೆ ಸಾಹು ತಪ್ಪದು (ನಿಭಾಗ. ೩-೯-೨). P ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ.

**ಸಾವಿಗೆ ಹೋಗು** = ಸತ್ತವರ ಪಾರ್ಥಿವಶರೀರವನ್ನು ನೋಡಿ ಅಂತ್ಯಕ್ರಿಯೆಗಳಲ್ಲಿ ಭಾಗವಹಿಸಲು ಹೋಗು: ಯಾರಾದರೂ ಬಂಧುಗಳು ಸತ್ತಾಗ, ಅವರ ಸಾವಿಗೆ ಹೋಗುವುದು ಸಾಮಾನ್ಯವಾದ ಪದ್ಧತಿ (ರೂಢಿ). **ಸಾವುನೋವು** = ಮರಣ ಮತ್ತು ಸಂಕಟ,— ತೊಂದರೆ: ವಾಹನಗಳ ಅಪಘಾತಗಳಿಂದ ಅನೇಕ ಸಾವುನೋವುಗಳು ಉಂಟಾಗುತ್ತವೆ (ರೂಢಿ). **ಸಾವುಸೂತಕ** = ೧. ಯಾರಾದರೂ ಸತ್ತಾಗ (ದಾಯಾದಿಗಳಿಗೆ) ಉಂಟಾಗುವ ಮೈಲಿಗೆ; ಸಾವಿನ ಕಾರಣದಿಂದ ಬರುವ ಸೂತಕ. ೨. ಅಂತ್ಯಕ್ರಿಯೆ ಮತ್ತು ಸೂತಕ ತೆಗೆಯುವ ವಿಧಿ: ಬೈದಿತಿಯು ಲೋಕಯಾತ್ರೆಯನ್ನು ಮುಗಿಸಿದಳು. ಅನಂತರ ಜಾತಿವಿಧಿಗೆ ಅನುಸಾರವಾಗಿ ನಡೆಯತಕ್ಕ ಸಾವು ಸೂತಕಗಳು ನಡೆದವು (ಕಗದ್ಯ. ೨-೬೬).

[ದೇ. ॥ ತಮಿ. ಚಾ, ಚಾವು; ಕೊಡ. ತೆಲು. ಚಾವು]

**ಸಾವುಕಾರ** 'ಸಾವಕಾರ' ನೋ.

**ಸಾವುಕಾರಿ** 'ಸಾವಕಾರಿ' ನೋ.

**ಸಾವುಗಾಣ್** (ಕ್ರಿ). ಸಾಯು; ಮರಣ ಹೊಂದು: ಕಂದಿದಳ್ ಕುಂದಿದಳ್ ಕೋಟಲೆಗೊಂಡಳ್ ಸಾವುಗಂಡಳ್ . . . ವಿರಹದುರಿಯ ಸಂತಾಪವಿಭ್ರಾಂತಿಯಿಂದಂ (ಕಾವ್ಯಸಾ. ೫೯೨). [ಸಾವು + ಕಾಣ್]

**ಸಾವೆ$_1$, ಸಾಮೆ** (ನಾ). ೧. ಒಂದು ಬಗೆಯ ತೃಣಧಾನ್ಯ: "ಶ್ಯಾಮಾಕಃ, ಶ್ಯಾಮಕಃ — ಈ ೨ ಸಾವೆ" (ಹಲಾಯು. ೯೬-೪೩೦); ತೆಂಗಿನ ಮರನಂ ಕಡಿದು ಸಾವೆಗೆ ಬೇಲಿಯನಿಕ್ಕುವಂತೆ (ಧರ್ಮಾಮೃ. ೧೩-೧೪೦); ಅನುನಾಸಿಕ ವಕಾರಕ್ಕೆ — ಸೇವಂ, ಸೋವೆ, ಸಾವೆ . . . ಸೇವಗೆ (ಶಮದ. ೧೬ ಪ್ರಯೋ); ಕುಡುವುದು ಪಥ್ಯಂಗಳೊಳಂ ತೊಡಗೂಡಿದ ಸಾವೆಯೋಗರಂ ತಕ್ರಮುಮಂ (ಖಮದ. ೧೨-೭). **ಸಾಮೆ** : ೧. ಕೆಲರು ಗೋಧಿಯ ಸಾಮೆಯನು ಕೆಲಕೆಲರು . . . ಪತಿಕರಿಸಿರಲು (ರಾಮಚ. ೧೧-೩೩); ಸಾಮೆ, ನವಣೆ, ಸಜ್ಜೆ, ಹಾರಕ – ಇವು ಹೆಚ್ಚು ಆದಾಯಕರವಾದ ಪೈರುಗಳಲ್ಲವಾದ್ದರಿಂದ ಇವಕ್ಕೆ ಹೆಚ್ಚುವ್ಯವಸಾಯ ಮಾಡಿ ಫಲವಿಲ್ಲ (ವ್ಯವಮ. ೪೪). ೨. ಒಂದು ಬಗೆಯ ಹುಲ್ಲು: "ಅಪುತ್ರವಲ್ಲೀ—ಸಾವೆ" (ಒಷಧಿ. ೭); ಸಾವೆ, ಸಾವೆಹುಲ್ಲು (ಮೈಡಿಗಿ. ೫೯-೧೧೮೮). [< ಸಂ. ಶ್ಯಾಮ]

**ಸಾವೆ$_2$** (ನಾ). ಒಂದು ಬಗೆಯ ಗಿಡ ಮತ್ತು ಅದರ ಗಡ್ಡೆ : ಸಾವೆ ತಿನ್ನುವವನ ಮನೆಯಲ್ಲಿ ಸಜ್ಜಿಗೆ ಹುಡುಕಿದ ಹಾಗೆ (ಗಾದೆ). 'ಸಾವೆಗೆಡ್ಡೆ' ಪರಾ.

[< ಸಂ. ಶ್ಯಾಮಾ]

**ಸಾವೆಗೆಡ್ಡೆ** (ನಾ). ತರಕಾರಿಯಾಗಿ ಬಳಸುವ ಒಂದು ಬಗೆಯ ಗಡ್ಡೆ; **ಸಾಮೆಗೆಡ್ಡೆ**: ಕೆಸವಿನಗೆಡ್ಡೆ, ಸಾವೆಗೆಡ್ಡೆ (ಮೈಡಿಗಿ. ೨೪-೪೩೭).

[ಸಾವೆ$_2$ + ಗೆಡ್ಡೆ (< ಗಡ್ಡೆ)]

**ಸಾವೆಯಕ್ಕಿ, ಸಾಮೆಯಕ್ಕಿ** (ನಾ). ಸಾವೆಧಾನ್ಯದ ಕಾಳು: ಬದನೆಯ ಪಳಿದೆಯ, ಬುಡುಮೆಯ ಪಲ್ಯ, ಸಾವೆಯಕ್ಕಿಯನ್ನ (ರಾಮನ. ೨೬). **ಸಾಮೆಯಕ್ಕಿ** : ಕಗ್ಗೆಚಕ್ಕೆಯನ್ನು ಹಸುವಿನ ಮಜ್ಜಿಗೆಯೊಡನೆ ಕುಟ್ಟಿ ಆ ಮಜ್ಜಿಗೆಯನ್ನು ಕುದಿಸಿ ಅದರಲ್ಲಿ ಸಾಮೆಯಕ್ಕಿಯನ್ನು ಬೇಯಿಸಿ ಒಂದು ದಿನ ಮಾಡಿ ತಿನ್ನಬೇಕು (ಸಕವೈ. ೪೯೩ ಪ); ಸಾಮೆಯಕ್ಕೀ ಅನ್ನ ಸಪ್ಪೆ ಬೇಳೇ ಉದಕ ಉಂಡು ನೋಡಯ್ಯ ಕಡುರುಚಿಯಾ (ಹಳ್ಳಿಯ. ೧೩೯). [ಸಾವೆ$_1$ + ಅಕ್ಕಿ$_1$]

**ಸಾವೇರಿ$_1$** (ನಾ). [ಸಂಗೀತ] ಒಂದು ರಾಗದ ಹೆಸರು: ಬಳಿಕ ಸಮಸ್ತ ರಾಗಂಗಳೊಳಗೆ ರಾಮಕ್ರಿಯ . . . ಸಾವೇರಿ . . . ಮಧ್ಯಮಾವತಿಯೆಂಬ ಮೂವತ್ತಾಱು ರಾಗಂಗಳೇ ಮುಖ್ಯವಾಗಿ ಬಳಕೆಯಿಂದಧುನಾತನರಲ್ಲಿ ಪ್ರಸಿದ್ಧಿಗೊಂಡಿಪ್ಪವು (ವಿವೇಕ. ೨೩೪); ಲಲಿತಸಾಳಂಗ ಸಾವೇರಿ ಗುಜ್ಜರಿಗೌಳ ಫಲಮಂಜರಿಗಳೆಂಬ ವಿವಿಧರಾಗಂಗಳಂ ಬಳಸಿ ಪಾಡಿಸಿದಂ (ಜೈಮಿಭಾ. ೨೧-೫೭); ಸಾವೇರಿ ೧೫ನೇ ಮೇಳಕರ್ತ ಮಾಯಾಮಾಳವಗೌಳದಲ್ಲಿ ಜನ್ಯ. ಉಪಾಂಗರಾಗ, ಪ್ರಸಿದ್ಧರಾಗ (ಸಂಗೀತಂ. ೧೫೩).

[ಸಂ. ಸಾವೇರೀ]

**ಸಾವೇರಿ$_2$** (ನಾ). ಒಂದು ಬಗೆಯ ಮರ: ಚಾರಿ ಮಂಗಾರಿಯಿಂ ಚಿಲ್ಲು ಬೆಲ್ಲವತ ಬಂದಾರಿ ಸಾವೇರಿಯಿಂ ತಡಸು ಕೊಡಸೀಜಿ ಸಿರಿವಾರ ಮತ್ತಾರಿಯಿಂದುಗಿನಿ ಬಗಿನಿ ಪಚಾರಿ ಮಂದಾರಿ ದೇವದಾರಿ . . . ಎಸೆದವು (ಸಂದಿಮಾ. ೧೩-೧೩). [?]

**ಸಾಶಂಕ** (ಗು). ೧. ಅಳುಕು, ಭಯ, ಅನುಮಾನಗಳಿಂದ ಕೂಡಿದ; ಶಂಕೆಗೊಂಡ. (ನಾ). ೨. ಅಳುಕು, ಭಯ, ಸಂದೇಹಗಳಿಂದ ಕೂಡಿದುದು; ಶಂಕೆಯಿಂದ ಕೂಡಿದುದು. ೩. ಆತಂಕ, ಭಯ, ಸಂದೇಹಗಳಿಂದ ಕೂಡಿದ ವ್ಯಕ್ತಿ; ಶಂಕೆಯಿಂದ ಕೂಡಿದವನು: ಇವರೆಲ್ಲರನ್ನೂ ಈ ಸ್ಥಿತಿಯಲ್ಲಿ ಬಿಟ್ಟು ತಾನು ಹೊರಬೀಳುವದು ಯೋಗ್ಯವೇ ಎಂದು ಸಾಶಂಕನಾದ (ಹೊಸಕ್ಕಿ. ೨೦೭); ಅವನ ಸರ್ವಪ್ರಿಯತೆಗಾಗಿ ಅವನ ವಿಷಯದಲ್ಲಿ ಖಾನಸಾಹೇಬ ಸಾಶಂಕನಾಗಿದ್ದ (ಪ್ರೇಮಾತ್ರ. ೩೫). [ಸಂ.]

**ಸಾಶನ** (ಗು). ೧. ಆಹಾರವನ್ನು ಸ್ವೀಕರಿಸುವ; ಭೋಜನವನ್ನು ಮಾಡುವ. (ನಾ). ೨. ಆಹಾರವನ್ನು ಸ್ವೀಕರಿಸುವವನು; ಭೋಜನ ಮುಂತಾದುವನ್ನು ಮಾಡುವವನು: ಸಾಶನಾಹ್ವಯ ಸ್ತ್ರೀಪುರುಷರೊಳು ವಾಸವಾಗಿಹನೆಂದರಿದು ವಿಶ್ವಾಸಪೂರ್ವಕ ಭಜಿಸಿ ತೋಷಿಸು ಸ್ವಾವರೋತ್ತಮರ (ಹಸಾರ. ೨೪-೨೯). [ಸಂ.]

**ಸಾಶ್ರುಪಾತ** (ಗು). ಕಣ್ಣೀರಿಡುವ; ಗೋಳಾಡುವ: ಸ್ಮರವಿಶಿಖನಿಷಂಗಂ ಸಾಶ್ರುಪಾತಾಂತರಂಗಂ ಹರವಿಚಳದಪಾಂಗಂ ಮ್ಲಾನಮಾಯ್ತು ರಥಾಂಗಂ (ಚಂದ್ರಪ್ರ. ೬-೫). [ಸಂ.]

**ಸಾಷಾಢ** (ಗು). ೧. ಪೂರ್ವಾಷಾಢ ಮತ್ತು ಉತ್ತರಾಷಾಢ ನಕ್ಷತ್ರಗಳಿಂದ ಕೂಡಿದ. ೨. (ಋಷಿಗಳು ಹಿಡಿಯತಕ್ಕ) ಮುತ್ತುಗದ ದಂಡದಿಂದ ಕೂಡಿದ. ೧, ೨ : ವಳಯಾಭೂತ ತಮಸ್ತಮಾಳಗಹನಂ ಸಾಷಾಢ ಸಪ್ತರ್ಷಿಸಂಕುಳಸಂಪೂತ ವರುಂಧತೀಸ್ತುತಿನುತಂ ಮೂಲಾನ್ವಿತಂ ವ್ಯೋಮಮಂಡಳಮಾಯ್ತಾಶ್ರಮಮೆಂದು ಬಂದೆಳಸಿದಂ ವೈರಾಗದಿಂ ದೌತವಲ್ಕಲಶೋಭಾಂಬರನಂದು ಮಿತ್ರವಿರಹೋದ್ವೇಗಾತುರಂ ಚಂದ್ರಮಂ (ಕಾದಂಪೂ. ೨೮೩). [ಸಂ.]

**ಸಾಷ್ಟಾಂಗ** (ನಾ). ೧. ಎದೆ, ಹಣೆ, ಎರಡು ಕೈಗಳು, ಎರಡು ಮಂಡಿಗಳು

ಮತ್ತು ಎರಡು ಪಾದಗಳು ಹೀಗೆ ಒಟ್ಟು ದೇಹದ ಎಂಟು ಅಂಗಗಳಿಂದ ಕೂಡಿದುದು, — ಅವಯವಗಳಿಂದ ಕೂಡಿದುದು: ಆತನಂ ರಾಮಸ್ವಾಮಿಯಲ್ಲಿಗುಯ್ಯುದುಮಾತಂ ಸಾಷ್ಟಾಂಗಪ್ರಣತನಾಗಿ (ಪಂರಾಮಾ. ೧೪-೪೬ ವ); ಭಯಭಕ್ತಿಯಿಂ ಬೆಲ್ಲಿದನೊಡಲನಿಳೆಯೊಳಾ ಬಭ್ರುವಾಹನಂ ನೀಡಿ ಸಾಷ್ಟಾಂಗದಿಂದ (ಜೈಮಿಭಾ. ೧೭-೪೭); ನೆಟೆ ನೋಡಿ ಸಾಷ್ಟಾಂಗದಿಂದಲಷ್ಟಾಂಗನ ಸುಚರಣದೊಳ್ ಮೈಯಿಕ್ಕಿ (ನಂದಿಮಾ. ೧೮-೩೮). ೨. ದೇಹದ ಎಂಟು ಅಂಗಗಳನ್ನು ನೆಲಕ್ಕೆ ಸೋಕಿಸಿ ಮಾಡುವ ನಮಸ್ಕಾರ : ನೀತಿಯ ಕಂಡಲ್ಲಿಗೆ ಸಾಷ್ಟಾಂಗವ ನೀ ತಳುವದೆ ಮಾಡೈ (ಕವಿಪ. ೪೯); ಸಾಷ್ಟಾಂಗ ಮಾಡಿದರೂ ಅಟ್ಟುಂಬೋದು ಹೋಗಲಿಲ್ಲ (ಗಾದೆ).

**ಸಾಷ್ಟಾಂಗ ಬೀಳು** = ದೇಹದ ಎಂಟು ಅಂಗಗಳನ್ನು ನೆಲಕ್ಕೆ ಸೋಕಿಸಿ ನಮಸ್ಕಾರಮಾಡು ,— ಅಡ್ಡಬೀಳು: ಇನ್ನೊಂದು ಸಲ ಬಂದು ಯಜಮಾನರಿಗೆ ಸಾಷ್ಟಾಂಗಬೀಳುತ್ತೇನೆ (ಪಸುಪೂ. ೩೭೯). [ಸಂ.]

**ಸಾಷ್ಟಾಂಗತ** (ನಾ). = ಸಾಷ್ಟಾಂಗ ೨: ಆ ತಾರೆ ನಡುವಣ ರೋಹಿಣಿಯಂತೆ ವಿತತದಿಂದೊಪ್ಪಿರಲು ಸಾಷ್ಟಾಂಗತವಗೈದಗ್ರಜನ ಏಳೆಂಬುತಲಿ ಕೊಡಿಸಿದಲೊಂದು ಗದ್ದುಗೆ ಬಸವ ಕುಳಿತಲ್ಲಿ (ಬಸ್ವಪು. ೯೩-೧೨). [< ಸಾಷ್ಟಾಂಗ]

**ಸಾಷ್ಟಾಂಗನಮಸ್ಕಾರ** (ನಾ).= ಸಾಷ್ಟಾಂಗ ೨ : ನೀವು ಇದನ್ನು ಸ್ವೀಕರಿಸಿ ನನ್ನನ್ನು ನರಕದಿಂದ ಮೇಲೆತ್ತಬೇಕು ಎಂದು ಬೇಡಿಕೊಂಡು ಮುದುಕನಿಗೆ ಸಾಷ್ಟಾಂಗನಮಸ್ಕಾರ ಹಾಕಿದನು (ಕಂಬುಮು. ೨೧). [ಸಂ.]

**ಸಾಷ್ಟಾಂಗಪ್ರಣಾಮ** (ನಾ). = ಸಾಷ್ಟಾಂಗ ೨ : ಮಹೀಸುರಕುಲನುಮಾ ಪರಮೇಶ್ವರರಿಗೊಲವಲರೆ ಸಾಷ್ಟಾಂಗಪ್ರಣಾಮವನಿಕ್ಕಿ ಕೈಮುಗಿದು (ಬಸಪು. ೫೦-೧೨); ತನುವನೀಡಾಡಿ ಸಾಷ್ಟಾಂಗಪ್ರಣಾಮದಿಂ . . . ಕಣ್ಣಣಿಯದಚ್ಯುತನಂ ನಿರೀಕ್ಷಿಸಿದನು (ಜೈಮಿಭಾ. ೧೩-೨೫). [ಸಂ.]

**ಸಾಷ್ಟಾಂಗಮೆಱಗು, ಸಾಷ್ಟಾಂಗವೆರಗು, ಸಾಷ್ಟಾಂಗವೆಱಗು** (ಕ್ರಿ). ದೇಹದ ಎಂಟು ಅಂಗಗಳನ್ನು ನೆಲಕ್ಕೆ ಸೋಕಿಸಿ ನಮಸ್ಕಾರಮಾಡು: ತನ್ನುನೀಶ್ವರನ ಶ್ರೀಪಾದಪದ್ಮಕ್ಕೆ ಸಾಷ್ಟಾಂಗಮೆಱಗಿ ಪೊಡೆವಟ್ಟು (ಸುಕುಮಾ. ೧೨-೪ ವ); ಸಾಷ್ಟಾಂಗಮೆಱಗಿ ಶಂಭುಗೆ ತುಷ್ಟಿಯನೆಯ್ದಿಸುತೆ ಕರಯುಗಳಮಂ ಮುಗಿಯುತೆ (ಹಾಲಾಸ್ಯ. ೨-೧-೩೭).

**ಸಾಷ್ಟಾಂಗವೆರಗು** : ಹಣೆಯ ಪಾದಕೆ ಹಚ್ಚಿ ನಮಿಸುವೆವು ಸಾಷ್ಟಾಂಗವೆರಗುವೆವು (ನೇಲಮು. ೨೭-೫); ಇಬ್ಬರೂ ತಲೆತುಂಬ ಹೂ ಮುಡಿದು . . . ಮತ್ತೊಮ್ಮೆ ಶಾರದೆಗೆ ಸಾಷ್ಟಾಂಗವೆರಗಿದರು (ಶಾಂತಲಾ. ೫೮). **ಸಾಷ್ಟಾಂಗವೆಱಗು** : ಪೊಂಗಿ ದಾಸಿಯು ದುಗ್ಗಳೆಯು ಸಾಷ್ಟಾಂಗವೆಱಗಿಯೆ ನಮಿಸಿ ದಾಸಯ್ಯಂಗಳಡಿಗಳ ಮೇಲೆ ಇಬ್ಬರು ಕೆಡೆದು ಬಿಡದಿರಲು (ಬಸಪು. ೨೩-೩೫); ಶ್ರೀಮದುತ್ಸಹದೇವನುತ . . . ಪ್ರೇಮದಿಂ ಸಾಷ್ಟಾಂಗವೆಱಗಿಯೆ ಮಾಳ್ಪೆ ಬಿನ್ನಹವ (ಪರಿಸಾ. ೧೭). [ಸಾಷ್ಟಾಂಗ + ಎಱಗು$_1$]

**ಸಾಷ್ಟಾಂಗವೆರಗು** 'ಸಾಷ್ಟಾಂಗಮೆಱಗು' ನೋ.

**ಸಾಷ್ಟಾಂಗವೆಱಗು** 'ಸಾಷ್ಟಾಂಗಮೆಱಗು' ನೋ.

**ಸಾಸ$_1$** (ನಾ). ಸಾಹಸ; ಪರಾಕ್ರಮ; ಶೌರ್ಯ: "ಸಾಸಂ ಸಾಹಸಂ" (ಕರ್ಣಾನಿ. ೭೧); ಜಯಸಿಂಘದೇವನರಪಂ . . . ನೆಗಟ್ದೀ ದಾಸಂ ಕರಂ ಸಾಸದೊಳ್ ಪಡೆದುದನತ್ತ ಧೋಗತಿಗೆXಗ್ಗವಳಂತಿರೆ ಪೂಟ್ದು ಬಯ್ದು (ಸೌಇಇ. XI-i, ೭೫-೩೭; 1042); ಗಂಡಿನ ಮಾತುಗಳ್ ಪಿರಿಯವಲ್ಲದೆ ಮಾಡಿದ ಸಾಸಮುಂಟೆ ದೋರ್ದಂಡಸಹಸ್ರಮಂ . . . ಹೈಹಯನಂ ಸುರದ್ವಿಷಂ (ಜಗವಿ. ೧೮-೮೨); ಮೊಸಳೆಯ ಕೂಡೆ ಸಾಸದಿಂ ಪರಿರಚಿಸಿ ಯುದ್ಧಮಂ (ಸೌಂದಪು. ೧೭-೭೫); ಎನ್ನ ಸಾಸಕೆ ಜಗವು ಅಡಿಯಾಳುತನ ಮಾಡಿ ಮನ್ನಣೆಯ ತೋರುವುದು ತಾನೆಂದು ಬಗೆದೆ (ವಿಜೀಗೀ. ೧೦-೯). 'ಸಾಯಸ$_1$' ಪರಾ.

[< ಸಂ. ಸಾಹಸ]

**ಸಾಸ$_2$, ಸೋಸ, ಸ್ವಾಸ** (ನಾ). ಶ್ವಾಸ; ಉಸಿರು: "ಸ್ವಾ[ಪಾಠಾಂ. ಶ್ವಾ]ಸಂ ಸಾಸಮೆನಲ್" (ಕರ್ಣಾನಿ. ೭೧); ಸಮಾನಾನಿಲಂ . . . ಅನ್ನರಸಮಂ ಲೇಸಾಗಿ ಬಹುರೋಮನಾಳಕ್ಕೆ ಹಂಚಿಕ್ಕಿ ಸಾಸದಿಂದಿಹುದಿದು (ವೀಶೈಪು. ೪-೨೦-೨೩). **ಸೋಸ** : ವಾಸನಾವಾಸನದ ಪರಿಮಳ ಸೋಸ [ಪಾಠಾಂ. ಪರಿಮಳೋಶ್ವಾಸ] ನಾಸಿಕವಂ ನೆನೆವನಳಿಯಾಸೆಯಲಿ ನೆನೆವಂ ಸಮುಜ್ಜ್ವಲದಂತಪಂತಿಯನು (ಬಸಪು. ೪೨-೨೬); ನಿರೂಢಿಯ ಸೋಸಮಯ ಗದುಗದಿತ ಕಂಠದ ತಳಿತಭಂಗದ ತಿರುಗುವಾಲಿಗಳ . . . ಕೆಲಕೆ ಜಾಱಿದ ಗದೆಯ ಗರುವಾಯಳಿದ ಭೀಮನ ಕಂಡನಾ ಭೂಪ (ಕುವ್ಯಾಳ. ೧೩-೩೮). **ಸ್ವಾಸ** : 'ಮೇಲ್ಸ್ವಾಸ' ಪರಾ. [< ಸಂ. ಶ್ವಾಸ]

**ಸಾಸಗ್ಗಳ ?** (ನಾ). (?) : ಪೇಸುವಳೋ ನಾಣ್ಚುವಳೋ ಬೇಸಱುವಳೋ ಪಳಿಗೆ ಪಾಪಕಂಜುವಳೋ ಛೀ ಸನ್ನೆವೆಳೆಯರಕ್ಕಸಿ ಸಾಸಗ್ಗಳ ಕಣೆಕನಿಷ್ಠಲಂಜಿಕೆಯೆಂಬಳ್(?) (ಪಸಾರ. ೨೯೮). [?]

**ಸಾಸಟಂಕೊಡಿಗೆ** (ನಾ). ಒಂದು ಬಗೆಯ ಕೊಡುಗೆ,— ದತ್ತಿ (?) : ಉಂಬಳಂ ಕೊಡಿಗೆ ಪಣ ೨ ವಿ ೫ . . . ಪತ್ರಿಮಳವೆಗೆ ವಿ ೨ ‖ ಸಾಸಟಂಕೊಡಿಗೆ ವಿ ೨ ‖ ತವರದಡಿಗೆ ವಿ ೨ ‖ (ಕಇಇ. ೧೧೭-೯೨-೩೫; 1057). [ಸಾಸಟ್ಟ$_0$ + ಕೊಡಿಗೆ (< ಕೊಡಂಗೆಯ್$_2$)]

**ಸಾಸತ, ಸಾಸದ** (ಗು). ೧. ಸ್ಥಿರವಾದ; ನಾಶವಿಲ್ಲದ. (ನಾ). ೨. ಶಾಶ್ವತ; ಅಮರ: ಪತ್ವ ಲೋಪಕ್ಕೆ . . . ಶಾಶ್ವತ – ಸಾಸತ; ಶ್ವಾನ – ಸಾನ (ಶಮದ. ೨೮೧ ಪ್ರಯೋ). **ಸಾಸದ** : ೨. ಮೊಱದೊಳ್ಳಲಮೂತ್ರದೊಳಾಳುತೇಳುತುಂ ಕೂಸೆ ನಿಸಿರ್ಪುದೆಂತುಟದನಾಂ ಮಱೆದಾಗಳೆ ಠಕ್ಕು ಜವ್ವನಂ ಸಾಸದವೆಂದು ನಚ್ಚಿದೆನಲಾ (ಅಪಶ. ೪೫). [< ಸಂ. ಶಾಶ್ವತ]

**ಸಾಸದ** 'ಸಾಸತ' ನೋ.

**ಸಾಸನ** (ನಾ). ೧. ಆಜ್ಞೆ; **ಅಪ್ಪಣೆ:** ದೇವನೆಂದಿರಿ ಸಾಸನದಿ ನಿಜ್ಞಾವ ನಡೆಯದ ನಿಮ್ಮ ಪಾದಕೆ ಸೇವಿಸುವೆನೆರವಿಲ್ಲದಂದದೊಳೆಂದನಾ ಬಸವ (ಬಸ್ವಪು. ೯೪-೧೭). ೨. ರಾಜ ಮುಂತಾದವರು ಶಿಲೆ ಅಥವಾ ತಾಮ್ರದ ಪಟ್ಟಿಕೆಯ ಮೇಲೆ ದಾನ ದತ್ತಿ ಮುಂತಾದ ಮಹಾಕಾರ್ಯಗಳನ್ನು ಮಾಡಿದ ನೆನಪಿಗಾಗಿ ಬರೆಸುವ ಬರಹ; ರಾಜಾಜ್ಞೆ; ಶಾಸನ: ಮಾಧುರ್ಯ್ಯಸುಕರ ಚಾತುರ್ಯ್ಯ ಗುಣಪ್ರೋನ್ನತರಿಲ್ಲೆನೆ ಸಾಸನಮನ್ನಿದೆ ಚೆಲ್ವಾಗೆ ಸಾಮಿಯಣ್ಣಂ ಬರೆದೋಂ (ಸೌಇಇ. XI-i, ೪೧-೫೭; 969); ಸೇನಬೋವಂ ಮೊಱಡಿಯ ಚಾವುಣ್ಣಮಯ್ಯಂ ಸಾಸನಮಂ ಬರೆದಂ (ಸೌಇಇ. XX, ೧೯-೭೪; 1015).

**ಸಾಸನವಾಗು** = ಸ್ಥಿರವಾಗು; ನಿರ್ಣಯವಾಗು: ವೆರ್ಗ್ಗಡೆತನಕೆಯ ಅರಿಉರ್ಪ್ಪನ್ನಿರ್ವ್ವರು ತೊಱೆಕ್ಕಾರಾಟ್ಟ ಉಪೆಕ್ಕವಿಯ ಮೂವಲ್ತೊಗೆಯು ಕೂಡಲೂರು ಇನೆತ್ತುಮೂರ್ ನೆರ ಸಾಸನಮಾಗೆ ಕುದಿಯ್ಯುಕೊ XX ಲು (ಎಕ. IV, ಗುಂಡ್ಲುಪೇ. ೮೮-೬; ಸು. 750). **ಸಾಸನವರ್ತ್ತಿಯಾಗಿ** = ಶಾಸನಪೂರ್ವಕವಾಗಿ; ಆಜ್ಞಾಧಾರಕನಾಗಿ: ನೊಳಂಬವಾಡಿಯಿಂ ಮೇಲೆ ಪಾನುಂಗಲ್ಲು ನಾಡು ಬನವಾಸೆದೇಸಮಂ ಸಾಸನವರ್ತ್ತಿಯಾಗೆ ದಯೆಗೆಯ್ದು ಕೊ[ಟ್ಟು] (ಸೌಇಇ. XX, ೪೯-೧೪; 1076 ?).

[< ಸಂ. ಶಾಸನ]

**ಸಾಸನಂಗೊಡು** (ಕ್ರಿ). ಅಪ್ಪಣೆಯನ್ನು ಕೊಡು; ಆಜ್ಞೆಯನ್ನು ನೀಡು: ಚಾವುಣ್ಣಯ್ಯಂಗೆ ಇವರ್ ಪೇಱೆ ನಾಡು ಸಾಸನಂಗೊಟ್ಟರ್ ಇದಕ್ಕೆಮಣ್ಣೆಗರ್ ಸಾಕ್ಷಿ (ಎಕ. IX, ಹೊಸಕೋ. ೧೧೧-೮; 997). [ಸಾಸನ + ಕೊಡು$_1$]

**ಸಾಸನಗಬ್ಬ** (ನಾ). ಪದ್ಯರೂಪದಲ್ಲಿ ಬರೆದ ಶಾಸನ; ಶಾಸನಕಾವ್ಯ: ಸನ್ಧಿವಿಗ್ರಹಿ ದಾಮರಾಜಂ ಸಾಸನಗಬ್ಬಮಂ ಪೇಳ್ದು ಬರೆದಂ (ಎಕ. VII, ಶಿವಮೊ. ೧೦-೫೯; 1085). [ಸಾಸನ + ಕಬ್ಬ$_1$]

**ಸಾಸನಿಗ** (ನಾ). ಶಾಸನವನ್ನು ಪಡೆದವನು; ಆಜ್ಞೆಯನ್ನು ಸ್ವೀಕರಿಸಿದವನು: ಕವಿಳಾಸಪುರವೇ ಸಾಸನದ ವನೆ ಬಸವರಾಜನೇ ಸಾಸನಿಗನೆಂದುವುಭಯ ನಾನಾದೇಸಿ ಮುಮ್ಮುರಿದಂಡಂಗಳು ಕೊಟ[ಟ್ಟ] [ಸಾ(ಶಾ)ಸನ] (ಎಇ. XXI, ೧೪-೭೯; 1260).

[ಸಾಸನ + - ಇಗ]

**ಸಾಸವಾಸಿ** (ನಾ). ಸಾಹಸದ ಖ್ಯಾತಿಯನ್ನು ಪಡೆದವನು; ಪ್ರಸಿದ್ಧವಾದ ಸಾಹಸವಂತ ,— ಪರಾಕ್ರಮಶಾಲಿ: ಬೀಸುವ ಸಬಳಂ ವಿಚಿತ್ರಮನೆ ತಳ್ತಿಱಿದರ್ ಮನೆಯಲ್ಲಿ ಕಲ್ತ ಪಾರ್ಥಿವಕುಲ ವಿದ್ಯೆಯಂ ಮೊನೆಯೊಳಂ ನೆಱೆ ತೋರ್ಪುರು ಸಾಸವಾಸಿಗಳ್ [ಪಾಠಾಂ. ತೋರ್ಪರ ಸಾಸವಾರಿಗಳ್] (ಜಗವಿ. ೭-೫೯).

[ಸಾಸ$_1$ + ವಾಸಿ$_1$]

**ಸಾಸವೆ** 'ಸಾಸಿವೆ' ನೋ.

**ಸಾಸವೆಗಲಸು** (ಕ್ರಿ). ಸಾಸವೆ ಮುಂತಾದ ಸಂಬಾರಪದಾರ್ಥಗಳನ್ನು ಸೇರಿಸಿ ಕಲಸಿ; ಒಂದು ಬಗೆಯ ಖಾದ್ಯವನ್ನು ತಯಾರಿಸು: ಗಂಗಾದೇವಿಯ ಹುಳಿಯ ಕಾಸಿ ಗೌರೀದೇವಿಯ ಕೂಳನಟ್ಟು ಭಕ್ತನ ಬಾಡನಟ್ಟು ದೇವನ ಸಾಸವೆಗಲಸಿ ಬ್ರಹ್ಮನಡ್ಡಣಿಗೆ ವಿಷ್ಣು ಪರಿಯಾಣ ರುದ್ರನೋಗರ ಈಶ್ವರ ಮೇಲೋಗರ ಸದಾಶಿವ ತುಪ್ಪ ಉಣಲಿಕ್ಕಿ ಕೈಕಾಲು ಮುಱಿಯಿತ್ತು ಗುಹೇಶ್ವರ (ಅವಚಂ. ೧೨೫-೫೭೮). [ಸಾಸವೆ (< ಸಾಸಿವೆ) + ಕಲಸು$_1$]

**ಸಾಸವೆಗುಡಿ** (ಕ್ರಿ). ಸಾಸವೆಯನ್ನು (ಅರೆದು) ಕುಡಿ: ಬಿಡದೌಡುಗರ್ಚಿ ನೋವಿಂದ ಡಿಗಡಿಗಹಹಾಯೆನುತ್ತುಮೆಡಗಯ್ಯಿಂದಂ ತಡವರಿಸುತ್ತುಂ ಸಾಸವೆಗುಡಿದಂತಿರೆ ಕರಮ ಮುಱುಗಿ ತಳವೆಳಗಾದಂ (ಧರ್ಮಾಮೃ. ೧-೧೪೩). [ಸಾಸವೆ (< ಸಾಸಿವೆ) + ಕುಡಿ$_1$]

**ಸಾಸವೆಗೊಡ** (ನಾ). ಸಾಸವೆಯ ಕದಡನ್ನು ತುಂಬಿದ ಕೊಡ: ಕರಿಯ ಮಡ್ಡಿನ ಪೊಟ್ಟಣ . . . ಅರೆದ ಸಾಸವೆಗೊಡ ಕಾದಡವಿಯ ಬಹು ಹರವಿಗಳೊಪ್ಪಿದುವಾಗ (ಕಂನವಿ. ೧೧-೧೩೩). [ಸಾಸವೆ (< ಸಾಸಿವೆ) + ಕೊಡ$_2$]

**ಸಾಸಿ** (ನಾ). ಸಾಹಸಿ; ಪರಾಕ್ರಮಿ: ತಮ್ಮನ ಸಾಸಿಯೆಂದುಬ್ಬಿಸಿ ನುಡಿದ (ಭರತೇ. ೫೧-೧೦೦); ಆತನೇ ಸಾಸಿಯೆನೆ ಕೇಳ್ದು (ಚೆಬಸು. ೧೬-೪೨). [< ಸಂ. ಸಾಹಸಿನ್]

**ಸಾಸಿಗ, ಸಾಯಸಿಗ** (ನಾ). ೧. ಸಾಹಸಶಾಲಿ; ಪರಾಕ್ರಮಿ: (೬). ೨. ಧೈರ್ಯಶಾಲಿ; ಸ್ಥೈರ್ಯವಂತ: ಸಾಸಿರ್ವರ್ ವನಿತೆಯರ್ . . . ಅರಸುಗಳ್ವೆರಸಾ ಸಾಸಿಗನುಚಿತದೀಕ್ಷೆಯಂ ಕೈಕೊಂಡಂ (ಆದಿಪು. ೬-೫); ಪಾಪಮನೆ ಪೆರ್ಚಿಸಿ ಸತ್ತು ನರಕದೊಳಾದ ಮಹಾದುಃಖಮೆಂಬಗ್ನಿಗೆ ತಮ್ಮ ಶರೀರಮೆಂಬ ಪುಳ್ಳಿಗಳನಿಕ್ಕುವರದೇಂ ಸಾಸಿಗರೋ (ಧರ್ಮಾಮೃ. ೬-೧೬೫); ಸಾಸಿಗನು ತಂದೆಯನು ಕೊಲ್ಲದೆ ಹೇಸಿ ಬಿಟ್ಟನು (ಕೌಶಿಕಾ. ೨೮-೬೨). ೩. ದುಡುಕಿನವನು; ಉದ್ಧಟತನದ ವ್ಯಕ್ತಿ : ಕಾಳೋರಗನಂ ಕೂಸು ಪಿಡಿವಂತೆ ಪಿಡಿದಂ ಸಾಸಿಗನವಿವೇಕಿ ಸೀತೆಯಂ ದಶಕಂಠಂ (ಪಂರಾಮಾ. ೯-೧೧೧). ೪. ಅವಿವೇಕಿಯಾದವನು; ಮೂರ್ಖ: ಮಗನಂ ಪಡೆವಂತಿರೆ ಬಂಜೆಗೆ ಮರ್ದಂ ಮಾಳ್ಪೆನೆಂಬ ಸಾಸಿಗನೇಂ ತಾಂ ಪುಗಿಸುವನೆ ಜೀವವಂತದುವೆ ಗರ್ಭದೊಳುಮರ್ದಿ ಮೇಣದಕ್ಕುಮೆ ಜೀವಂ (ಸಮುಪ. ೧೨-೩೫). ‘ಸಾಹಸಿಗ’ ಪರಾ. **ಸಾಯಸಿಗ:** (ಗು). ೫. ಸಾಹಸದಿಂದ ಕೂಡಿದ; ದಿಟ್ಟ: ಸಾಯಸಿಗ ಭುಜ ಬಲನೆ . . . ರಾಯದಳವೆತ್ತಿ ಬಂದರೆ ನಾಯಂ ಹಲ್ಲಣಿಸಿ ಗೆಲುವರೇ ನೃಪತಿಲಕಾ (ನೀತಿಸಾ. ೩೪೯). [< ಸಂ. ಸಾಹಸಿಕ]

**ಸಾಸಿಮೆ** ‘ಸಾಸಿವೆ’ ನೋ.

**ಸಾಸಿರ, ಸಾಯಿರ, ಸಾವಿರ** (ನಾ). ೧. ಒಂದು ಸಂಖ್ಯೆ ; ಸಹಸ್ರ ; ಹತ್ತುನೂರು: ಮಲೆ ಸಾಸಿರಮುಮಾಳೆ (ಇಆ. XIV, ೨೩೨-೫೦; 9ನೆಯ ಶತ); ಸಾಸಿರ ಪೊಂಗೆಯ್ದುಂ ಚಿಃ ಕಾಸಟಂ (ಪಂಪಭಾ. ೩-೪೪); ಬಿಡುವಲ್ಲಿ ನೂಱು ಪರಿವಾಗಳ್ಸಾಸಿರಂ (ಗದಾಯು. ೩-೩); ನೆನೆದು ನಾಮೋಚ್ಚರಣೆಗೆಯ್ಯೆ ಸಾಸಿರಪಶುಗಳನು ದಾನವಿತ್ತ ಫಲ (ಸೌಂದಪು. ೭-೩೧). ೨. (ಅಲಂ) ಅನೇಕ; ಹೇರಳ; ಹಲವು: ‘ಸಾಸಿರವಗೆ’ ಪರಾ. **ಸಾಯಿರ:** ೧. ಬಾರಣಾಸಿಯೊಳ್ ಸಾಯಿರ ಕವಿಲೆಯುಮಂ . . . ಅಱಿದ ಬ್ರಹ್ಮಾತಿಯಕ್ಕು (ಇಆ. XII, ೨೨೫-೧೨; 916); ಒಡೆಯರ್ಗೆ ಸಾಯಿರಗದ್ಯಾಣಪೊನ್ನಂ ಕುಡುವೆಂನೆ (ಚಾವುಂಪು. ೪೯). **ಸಾವಿರ** : ೧. ಸಾವಿರ(೦) ಬಳ್ಳಿಯ ತೋಣ್ಟದ ಸಾಮ್ಯಮ (ಎಇ. XXVI, ೪-೧೫; 906); ತೋಡಿದನು ಕೂರಂಬಿನಲಿ ಸಾವಿರಮಹಾರಥ'ರ (ಕುಮ್ಮಾದ್ರೋ. ೧-೬೮); ಒಬ್ಬರ ಕಣ್ಣಿಗೊಂದಾಳು ಸಾವಿರವಾಗಿ ಮಬ್ಬುವಿಡಿದು ಕಾಣಿಸಲು (ಕಂನವಿ. ೧೪-೯೧). ೨. ನಿನಗೆ ನಂಬಿಗೆ ಸಾವಿರ[ಪಾಠಾಂ. ಬಹಳ]ವನಿತ್ತಪೆಂ ಪಾಡು ಎಂಬ ನುಡಿಗೇಳುತುಂ (ನಂಬಿರ. ೧೧-೭೪); ಸಾವಿರ ಜನರ ಮುಂದೆ ಕೆಲಸ ಮಾಡುವಾಗ ಇವಳಿಗೆ ಹೆದರಿಕೆಯಾಗುವುದಿಲ್ಲ (ಎಧ್ರುವ. ೮೦).

ಸಾವಿರಾರು = ಅಸಂಖ್ಯ; ಹೇರಳ: ನಿಮ್ಮಂತಹ ಮೇಡಂಗೆ ನನ್ನಂತಹ ಸಾವಿರಾರು ಶಿಷ್ಯೆಯರು (ನಿಂದನೆ. ೧೯೯). [< ಸಂ. ಸಹಸ್ರ]

**ಸಾಸಿರಕಣ್ಣ** ‘ಸಾಸಿರ್ಗಣ್ಣ’ ನೋ.

**ಸಾಸಿರಗಣ್ಣ** ‘ಸಾಸಿರ್ಗಣ್ಣ’ ನೋ.

**ಸಾಸಿರಗದಿರ** (ನಾ). ಸಾವಿರಾರು ಕಿರಣಗಳನ್ನು ಹೊಂದಿದವನು; ಸೂರ್ಯ: ಸಾಸಿರಗಣ್ಣಗೆ ಸೊಬಗಿನೊಳಿಮ್ಮಡಿ ಸಾಸಿರಗದಿರಗೆ ತೇಜದೊಳಯ್ಮಡಿ (ಜಯಕಾ. ೧೫-೧); ಸಾಸಿರಗದಿರನೋರಗೆಯ ಭಾಸುರ ತೇಜೋಪೇತನೊಪ್ಪಿದನು ವಿಲಾಸರಸಾಬ್ಧಿ ಚಂದ್ರಮನು (ಶ್ರೀಪಾಲ. ೮-೨). [ಸಾಸಿರ + ಕದಿರ್$_2$ + - ಅ$_7$]

**ಸಾಸಿರಗಯ್ಯ** ‘ಸಾಸಿರ್ಗೈಯ’ ನೋ.

**ಸಾಸಿರಗೆಯ್ಯ** ‘ಸಾಸಿರ್ಗೈಯ’ ನೋ.

**ಸಾಸಿರದಲೆಯ** ‘ಸಾಸಿರ್ದಲೆಯ’ ನೋ.

**ಸಾಸಿರದೋಳ** ‘ಸಾಸಿರ್ದೋಳ’ ನೋ.

**ಸಾಸಿರಮಡಿ** ‘ಸಾಸಿರ್ಮಡಿ’ ನೋ.

**ಸಾಸಿರವಗೆ** (ನಾ). ಹಲವು ಬಗೆ; ಅನೇಕ ರೀತಿ: ಸಾಸಿರವಗೆಯ ಚೋಳಿಯ ಮಾತ ಕಿವಿಯೊಳು ಸೂಸಿ (ಮೋಹತ. ೧೦-೨೦). [ಸಾಸಿರ + ಬಗೆ$_2$]

**ಸಾಸಿರವಧಿ** (ನಾ). ೧. ಸಾವಿರವರ್ಷಗಳ ಕಾಲ. ೨. (ಅಲಂ) ದೀರ್ಘಾಯುಷ್ಯ; ಜೀವಿತಾವಧಿ: ನಿನಗಾಂ ಕಲಿಸಿದುದೆ ನಿನ್ನ ಸಾಸಿರವಧಿಗೆ ಸಾಕು (ಹಪ್ಪರ. ೪-೬). [ಸಾಸಿರ + ಅವಧಿ]

**ಸಾಸಿರಶಿರ** (ನಾ). ಸಾವಿರ ತಲೆಗಳುಳ್ಳವನು; ಸಹಸ್ರಶೀರ್ಷ; ಪರಮಾತ್ಮ: ಸಾಸಿರಶಿರನೆ ಸಾಸಿರಲೋಚನನೆ . . . ಸಾಸಿರಚರಣನೆ ಸಾಸಿರ ನಮೋ ನಮೋ (ಪುರಂದ. ಧಾ. ೨-೫-೭). [ಸಾಸಿರ + ಶಿರ$_2$]

**ಸಾಸಿರಾಹ್ವಯ** (ನಾ). ಸಹಸ್ರನಾಮವನ್ನು ಹೊಂದಿದವನು; ಭಗವಂತ: ಬಲರಾಮ . . . ರುಕ್ಮಾಂಗದರು ಮುಖ್ಯ ಯಾದವಬಲಾಢ್ಯರುಗಳು ಸಾಸಿರಾಹ್ವಯನ ಕೆಲಬಲದೊಳಂ ಮಂಡಿಸಿರಲು (ನವಮೋ. ೧೭-೧೪). [< ಸಂ. ಸಹಸ್ರಾಹ್ವಯ]

**ಸಾಸಿರ್ಗಣ್ಣ, ಸಾಸಿರಕಣ್ಣ, ಸಾಸಿರಗಣ್ಣ** (ನಾ). ಸಾವಿರಾರು ಕಣ್ಣುಗಳುಳ್ಳವನು; ಹಲವುಗಣ್ಣ; ಇಂದ್ರ: “ಇಂದಿರಂ . . . ಮುಗಿಲ್ದೇರನೊಸೆದು ಸಾಸಿರ್ಗಣ್ಣಂ [ಪಾಠಾಂ. ಸಾಸಿರಗಣ್ಣ] ಬೆಟ್ಟುವಗೆಯನೆನಲ್ಕೆ ಸುರಪತಿಯು ನಾಮಮಕ್ಕುಂ” (ಶಬ್ದಮಂ. ೧೦); ಸಾಸಿರ್ಗಣ್ಣಂ ಮೊದಲಹ ಭಾಸುರ ದಿವಿಜರ್ಕಳು . . . ನಿಂದು ಪೊಡಮಡುತ್ತಿರ್ಪರಣಂ (ಹಾಲಾಸ್ಯ. ೩-೪-೭). **ಸಾಸಿರಕಣ್ಣ** : ಸೌಧರ್ಮೇಂದ್ರಂ ಸಾಸಿರಕಣ್ಣನತೀಂದ್ರಿಯದರ್ಶನನಿದೇಂ ಜಿನಂ ಸುಂದರನೋ (ಶಾಂತಿಪು. ೧೨-೧೬). **ಸಾಸಿರಗಣ್ಣ** : ಸಾಸಿರಗಣ್ಣಗೆ ಸೊಬಗಿನೊಳಿಮ್ಮಡಿ (ಜಯಕಾ. ೧೫-೧). [< ಸಾಸಿರ + ಕಣ್ + - ಅ$_7$]

**ಸಾಸಿರ್ಗೈಯ, ಸಾಯಿರಗಯ್ಯ, ಸಾಸಿರಗಯ್ಯ, ಸಾಸಿರಗೆಯ್ಯ** (ನಾ). ೧. = ಸಾಸಿರಗದಿರ : “ತಾವರೆಗೆಳೆಯಂ . . . ಸಾಸಿರ್ಗೈಯ, ಗರಂಗಳಾಣ್ಮಂ – ಈ ೧೧ ಸೂರ್ಯನ ಪೆಸರ್” (ಕಶಸಾ. ೪೮-೨೮). **ಸಾಯಿರಗಯ್ಯ** : ೧. ತುತಿಪೆಂ ಸಾಯಿರಗಯ್ಯಂ ಕುಳಿರ್ಗಯ್ಯಂ ಕಾರ್ಬಟ್ಟೆಗನೆಂಬೊಳ್ಗಣ್ಣವನಂ (ಉದ್ಭದೇ. ೩-೭೬). **ಸಾಸಿರಗಯ್ಯ**: ೧. “ಸೂರ್ಯನೊಳ್ ಸಾಸಿರಗಯ್ಯಂ” (ಕರ್ಣಾನಿ. ೯೧). **ಸಾಸಿರಗೆಯ್ಯ** : ೨. ಸಾವಿರ ಕೈಗಳನ್ನು ಹೊಂದಿದವನು; ಬಾಣಾಸುರ: ಸಾಸಿರಗೆಯ್ಯನಂದನೆಯ ಲಾವಣ್ಯಾಂಬುರಾಶಿಯನೊಡಗೂಡಿ (ಮೋಹತ. ೨೪-೩).

[< ಸಾಸಿರ + ಕೈ$_2$ (< ಕೆಯ್$_2$) + - ಅ$_7$]

**ಸಾಸಿರ್ದಲೆಯ, ಸಾಸಿರದಲೆಯ** (ನಾ). ಸಾವಿರ ತಲೆಗಳುಳ್ಳವನು ; ಆದಿಶೇಷ: “ಸಾಸಿರ್ದಲೆಯಂ, ಸಹಸ್ರಶಿರಾ” (ಶಬ್ದಾನು. ೩೫೭ ವ್ಯಾಖ್ಯಾ). **ಸಾಸಿರದಲೆಯ:** “ಸಾಸಿರ್ದಲೆಯಂ, ಸಾಸಿರದಲೆಯಂ” (ಶಬ್ದಾನು. ೩೫೭ ಪ್ರಯೋ).

[< ಸಾಸಿರ + ತಲೆ$_1$ + - ಅ$_7$]

**ಸಾಸಿರ್ದೋಳ, ಸಾಸಿರದೋಳ** (ನಾ). = ಸಾಸಿರ್ಗೈಯ : “ಸಾಸಿರ್ದೋಳಂ, ಸಹಸ್ರಬಾಹುಃ” (ಶಬ್ದಾನು. ೩೫೭ ವ್ಯಾಖ್ಯಾ). **ಸಾಸಿರದೋಳ** : “ಸಾಸಿರ್ದೋಳಂ, ಸಾಸಿರದೋಳಂ” (ಶಬ್ದಾನು. ೩೫೭ ಪ್ರಯೋ). [< ಸಾಸಿರ + ತೋಳ್ + - ಅ$_7$]

**ಸಾಸಿರ್ಮಡಿ, ಸಾಸಿರಮಡಿ** (ನಾ). ಸಾವಿರ ಸಲ; ಸಹಸ್ರಪಟ್ಟು: ನೆಯ್ದಿಲ ಕಡುಗಂಪುಮನಿವಱ ಕಂಪು ಗೆಲ್ದುವು ಸಾಸಿರ್ಮಡಿಯೆನೆ ಪೊಂಬಣ್ಣದ ಕೆಂಪಿಡಿದಿರೆ ಸೊಗಯಿಪ್ಪುವು ಗಂಧಶಾಲಿವನಂಗಳ್ (ಆದಿಪು. ೧-೬೦); ಧರ್ಮಮುಮರ್ಥಮುಂ ಬಿಡದೆ ಕಾಮಮುಮನ್ನೊಳಗೊಂದಕೊಂದು ಸಾಸಿರ್ಮಡಿಯಾಗಿ ಪೆರ್ಚಿದುದು (ಬಾಧಪು. ೩-೫೭);

ನಿನ್ನನ್ನು ನೋಡುತ್ತಿದ್ದರೆ, ನನ್ನ ಹೃದಯಕ್ಕೆ ಹಿಂಸೆಯು ಸಾಸಿರ್ಮಡಿಯಾಗಿ ಹೆಚ್ಚುವುದು (ಸುಗುಣ. ೧೪೧-೧೨). **ಸಾಸಿರಮಡಿ** : ಸವಿಯೊಳು ಸಾಸಿರಮಡಿ ಮಿಕ್ಕುವು (ಧರ್ಮಾಮೃ. ೧-೧೫೩); ಸಂದ ಸಾಸಿರವಮಡಿಯೆಂದು ಭಾವಿಸದಿರಲೊಂದದಿಹುದೆ ಪಾತಕವು (ಅಂಜಚ. ೧೧-೮೦). 'ಸಾಸಿರ್ಮೆ' ಪರಾ. [< ಸಾಸಿರ + ಮಡ್ತಿ]

**ಸಾಸಿರ್ಮಡಿಸು** (ಕ್ರಿ). ಸಾವಿರಪಟ್ಟು ಹೆಚ್ಚಾಗು; ಸಹಸ್ರದಷ್ಟು ವೃದ್ಧಿಸು: ವಕ್ತ್ರಕಂಜಂಗಳೊಳೆ ಕೂಡೆ ಸಾಸಿರ್ಮಡಿಸುತ್ತುಂ (ಸೂಕ್ತಿಸು. ೧೨-೨೦).

[ಸಾಸಿರ್ಮಡಿ + - ಇಸು₃]

**ಸಾಸಿರ್ಮೆ** (ನಾ). ಸಾವಿರಸಲ; ಸಹಸ್ರಬಾರಿ : "ಸಾಸಿರ್ಮೆ ಸಹಸ್ರವಾರದೊಳ್" (ಕರ್ನಾಟ.೮೫); ಮೆ ಪ್ರತ್ಯಯಕ್ಕೆ - ಒರ್ಮೆ, ಇರ್ಮೆ, ಮೂರ್ಮೆ, ಸಾಸಿರ್ಮೆ (ಶಮದ. ೨೦೭ ಪ್ರಯೋ); ಒಂದು ಮೊದಲಾದ ಸಂಖ್ಯಾವಾಚಿಗಳಿಗೆ ಆವೃತ್ತಿ ಎಂಬರ್ಥದಲ್ಲಿ ಮೆ ಸೇರುವುದು - ಒರ್ಮೆ, ಇರ್ಮೆ, ಸಾಸಿರ್ಮೆ (ಕೈಪಿಡಿ. ೫೨). 'ಸಾಸಿರ್ಮಡಿ' ಪರಾ.

[< ಸಾಸಿರ + - ಮ್ಮೆ]

**ಸಾಸಿವೆ, ಸಾಸವೆ, ಸಾಸಿಮೆ, ಸಾಸುವೆ** (ನಾ). ೧. ಒಂದು ಬಗೆಯ ಸಂಬಾರಪದಾರ್ಥ; ವಿಶೇಷವಾಗಿ ಒಗ್ಗರಣೆಗೆ ಹಾಕಲು ಬಳಸುವ, ರಾಗಿಯಾಕಾರದ ಸಣ್ಣ ಕಾಳು; ಸರ್ಷಪ: ಕಡಲು ಸಾಸಿವೆಯೊಳಗಡಗಿದಂತೀ ಮೂಱು ಪೊಡವಿಯಷ್ಟಗಲದ ಹಂಸ ಬಡವ್ಯೊಳೆರ್ದುದ ನೆನೆದು ಬೆಕ್ಕಸಬಟ್ಟು ಬೆಡಗೋಯೆಂದನೆ ನೃಪನೆಸೆದಾ (ಭರತ. ೩-೨೨); ಎಳ್ಳು, ಧನಿಯ, ಸಾಸಿವೆ, ಹುಚ್ಚೆಳ್ಳು ಮೊದಲಾದವುಗಳನ್ನು . . . ಬೆಳೆಯುತ್ತಾರೆ (ವ್ಯವಮು. ೪೪). ೨. ಸಾಸಿವೆಕಾಳಿನಿಂದ ತೆಗೆದ ಎಣ್ಣೆ: ಬೆಂದ ಹುಣ್ಣಲಿ ಸಾಸಿವೆಯ ಬಳಿಯದಿರು (ಕುವ್ಯಾದ್ರೋ. ೧-೮). ೩. ಒಂದು ಬಗೆಯ ಮೇಲೋಗರ : ಸಾರಿನಲ್ಲೂ ಊಟ ಮಾಡಿದಿರಿ; ಸಾಸಿವೆಯಲ್ಲೂ ಊಟ ಮಾಡಿದಿರಿ (ಮೂಕಜ್ಜಿ. ೨೨೬). ೪. ಒಂದು ಅತಿ ಸಣ್ಣ ಅಳತೆ, — ಪ್ರಮಾಣ; ಒಂದು ಕೂದಲ ತುದಿಯಷ್ಟು ಪ್ರಮಾಣ: ಕರಿರೋಮಾಗ್ರಂ ಸಾಸಿವೆ (ವ್ಯವಹಾ. ೮-೩೭ ಅನುಬಂಧ). ೫. ಅಕ್ಷತೆಯಾಗಿ ಬಳಸುವ ಒಂದು ಬಗೆಯ ಬಿಳಿಯ ಬಣ್ಣದ ಕಾಳು: ಗೊಂಬೆಗೇನು ಜೀವ ಇರುತ್ತದೆಯೇ? ಸಾಸಿವೆ ಇಕ್ಕೋದಕ್ಕೆ (ಸುವಸಂ. ೩೦). **ಸಾಸವೆ** : ೧. ಸಾಸವೆಯ ಮೇಲೆ ಸಾಗರವರಿದಂತಾಯಿತ್ತಯ್ಯ (ಬಸವ. ೩೩೩); ಸರ್ಷಪಂ- ಸರುಸವಂ, ಸರ್ಷಪಮೆಂದು, ಸಾಸವೆ (ಶಮದ. ೬. ೨೫೪ ಪ್ರಯೋ). **ಸಾಸಿಮೆ** : ೧. ಉತ್ತರ ಪ್ರತ್ಯುತ್ತರಗಳು ಕವಯಿತ್ರಿ ಹೇಳಿದಂತೆ "ಎಣ್ಣೆ- ಸಾಸಿಮೆ ಸಿಡಿದಂತಿವೆ" (ಕರ್ನಾಕ. ೨೬೩). ೩. ಪಡುವಲಕಾಯಿಯ ಸಾಸಿಮೆಗೆ ಒಗ್ಗರಣೆ ಹಾಕುವುದಿತ್ತು (ದೇವಹಂ. ೩೫). **ಸಾಸುವೆ** : ೧. ಜೀವಜಶೃಂಗಂ ಸಾಸುವೆ ತಾವಿನಿತುಂ ಭೂತಜ್ವರೋಪಶಾಂತಿಗೆ ಧೂಪಂ (ಕಲ್ಯಾಕಾ. ೩-೫೦); ಹುರುಳಿ ಸಾಸುವೆ ಮೆಂತೆಯದ ಚೂರ್ಣ ಹಪ್ಪಳಂ ಸಂಭಾರವಸ್ತುವಹವು (ಸೂಪಶಾ. ೪-೧). ೩. ಈಗ ನಿಮಗೇನು ಬೇಕು ಹೇಳಿ; ಸಾರನ್ನು ತರಲೋ ಸಾಸುವೆ ತರಲೋ? (ಮೂಕಜ್ಜಿ. ೨೨೭).

[< ಸಂ. ಸರ್ಷಪ./ ತುಳು. ಸಾಸಿಮೆ, ಸಾಸೆಮಿ; ತೆಲು. ಸಾಸುವುಲು]

**ಸಾಸಿವೆಗದಡು** (ನಾ). ಸಾಸಿವೆಯನ್ನು ಅರೆದು ಕದಡಿದ ನೀರು; P ಇದನ್ನು ಯುದ್ಧಕಾಲದಲ್ಲಿ ಶತ್ರುಗಳ ಮೇಲೆ ಎರಚಲು ಬಳಸುತ್ತಿದ್ದರು: ಕಾಯ್ದೆಣ್ಣೆಗೂಡಿ ಮಳಲರಗು ಸಾಸಿವೆಗದಡು ಸುಣ್ಣಕಲ್ಲಂಬಲಿಗಳುಂ ಸುರಿದುವು (ಚಿಬಪು. ೪೨-೩೨). [ಸಾಸಿವೆ + ಕದಡು₂]

**ಸಾಸಿವೆಹಾಲು** (ನಾ). = ಸಾಸಿವೆಗದಡು : ಸಾಸಿವೆಹಾಲು ಸಾಧಕಾಂಗಾರ ನಾಸಿಕದ ನೀರ ಬರಿಸಿತ್ತು (ಕಲ್ಯಾಶಾ. ೯-೧೧೪). [ಸಾಸಿವೆ + ಹಾಲು₁ (< ಪಾಲ್₁)]

**ಸಾಸಿಸು** 'ಸಾಯಿಸು' ನೋ.

**ಸಾಸುವೆ** 'ಸಾಸಿವೆ' ನೋ.

**ಸಾಸುವೆಬದನೆಗಾಯಿ** (ನಾ). ಒಂದು ಬಗೆಯ ಬದನೆಕಾಯಿಯ ಪಲ್ಯ: ಉತ್ತರಿಸಿದೆಳೆಯ ಬದನೆಯಕಾಯ ಕತ್ತರಿಸಿ . . . ಸಾಸುವೆಗೆ ಹುಳಿಯನು ಇತ್ತರೆದು . . . ಜೀರಿಗೆ ಮೆಂತೆಯನಿಕ್ಕಲದುವೆ ಸಾಸುವೆಬದನೆಗಾಯಾದುದು (ಸೂಪಶಾ. ೪-೨೭).

[ಸಾಸುವೆ (< ಸಾಸಿವೆ) + ಬದನೆಗಾಯಿ (< ಬದನೆಕಾಯ್)]

**ಸಾಸ್ಕರ** (ನಾ). (?) : ಭಾಸ್ಕರೋದಯಕಾಲಕೆಲ್ಲೆಲ್ಲಿ ಅರಸಿ ನಯನಾಸ್ಕರಂಗೊಳದಿರಲು . . . ಸಾಸ್ಕರಪ್ರವೀರ ನಾನೀ ರತ್ನಸಂಚಯವನಾಸ್ಕರಿಪೆನ್ನೆದಿ ಖಳಬರಲಿನೀಕ್ಷಿಪೆನು ಯಂಬಾಸ್ಕರದಿ ಬೀಳ್ಕೊಟ್ಟನೆಲ್ಲರ (ಜನಮು. ೨೨-೧೨); ಪಾಸ್ಕರವಾಸಗೋತ್ರದ ಮಿಸುನಿಯ ನಾಮ ಭಾಸ್ಕರದಕ್ಷ ಪಾಂಗಜನಾ ಆಸ್ಕರ ಸೇರಿದವನ ವಾಚ್ಯಕೆ ದೂರ ಸಾಸ್ಕರಲ್ಲದಗೆ ನಾ ನಮಿಪೆ (ದೇವಪು. ೧-೩೭). 'ಆಸ್ಕರ' ಪರಾ. [?]

**ಸಾಸ್ನ** (ನಾ). ದನಗಳ ಕುತ್ತಿಗೆಯ ಕೆಳಭಾಗದಲ್ಲಿ ಜೋತಾಡುವ ಚರ್ಮದ ಪದರ; ಗಂಗೆದೊವಲು: "ಕೊರಲೊತ್ತಿನ ತೊಗಲು ಸಾಸ್ನವದು" (ಮಂಗರಾ. ೫೩-೨); ಪ್ರಣವರವಠಣತ್ಕಾರನಾನಂದ ಸಾಸ್ನಾಸ್ಪದನಾಮ್ನಾಯಾಂತ ಘಂಟಾಗಳ ನಮೃತಕಕುದ್ಬಂಧುರಂ . . . ತೊಳಗಿದನಭವಾಂಭೋಧಿಚಂದ್ರಂ ವೃಷೇಂದ್ರಂ (ರಾಜಶೇ. ೧೪-೧೫೦); ಗೋವು ಎಂಬುದಕ್ಕೆ ಅರ್ಥವೇನೆಂದು ಕೇಳಿದರೆ ಸಾಸ್ನಾ ಮೊದಲಾದು ದನ್ನುಳ್ಳುದು ಗೋವು ಎಂದು ಮತ್ತೊಂದು ಶಬ್ದದಿಂದ ಉತ್ತರ ಕೊಡುವೆವು (ಭಾತತ್ತ್ವ. ೪೦೦). [ಸಂ. ಸಾಸ್ನಾ]

**ಸಾಹಚರ್ಯ** (ನಾ). ಸಹವಾಸ; ಒಡನಾಟ; ಮೈತ್ರಿ: ಇಂದ್ರನಿಗೂ ಮರುತ್ತುಗಳಿಗೂ ಇರುವ ಸಾಹಚರ್ಯ ಪ್ರಸಿದ್ಧವಾದುದು (ಋಕ್ಸಾರ. ೭೧ ಟಿಪ್ಪಣಿ); ಒಂದು ಸ್ಥಳದಲ್ಲಿ ವಹ್ನಿ ಧೂಮಗಳ ಸಾಹಚರ್ಯವನ್ನು ನೋಡಿದ ಮಾತ್ರದಿಂದಲೇ ಸಕಲ ವಹ್ನಿಧೂಮಗಳ ಸಾಹಚರ್ಯವು ಗೃಹೀತವಾಗಿ (ಹಿಂದಸಾ. ೧೪೧). [ಸಂ.]

**ಸಾಹಣ, ಸಹಣ** (ನಾ). ೧. ಕುದುರೆಗಳನ್ನು ಸಾಕುವುದು,— ಪಳಗಿಸುವುದು: (?). ೨. ಆನೆ, ಕುದುರೆಗಳನ್ನು ಕಟ್ಟುವ ಮನೆ; ಲಾಯ; ಕರೋಟಿ: ಸುಧಾಧವಳಿತದೀರ್ಘಮಂದಿರಸಾಹಣಂಗಳಂ ತೋಱೆ (ಶಾಂತಿಪು. ೩-೧೫ ವ); ರಾಗದಿನೆಳೆತಂದ ದಂತಿಹಯಸಂತತಿಯಲ್ಲದೆ ಹೊನ್ನನಿತ್ತು ಕಟ್ಟಿದ ಕರಿವಾಜಿ ಸಾಹಣದೊಳಿಲ್ಲಿಯುವಿಲ್ಲೆನಿಪೊಂದು ಸಾಹಸಾಭ್ಯುದಯಮಂ (ಎಕ. XI, ದಾವಣ.೪೨-೩೪; ಸು. 1162); ವಿಚಾರಿಸುವೊಡಮಾಯಂದದಿಭಂ ಬನದೊಳಿಲ್ಲ ಸಾಹಣದೊಳಮಿಲ್ಲೆಂ ದರಸನಾನೆಯಂ ತಾಂ ನಿಂದೆನಸುಂ ನೋಡಿ ನೋಡಿ ವಿಸ್ಮಯಮುತ್ತಂ (ಚಂದ್ರಪ್ರ. ೯-೯೫). ೩. (?): ರಜನೀಚರಿಯರ್ಕಳ ಮಿಕ್ಕ ಪೆರ್ಮೃಣಂ ಬಳ್ಳುವ ಸಾಹಣಂ ತಲೆಯ ಪೂಂಜಿಗೆ ಕುಂದವು (ಕಾವ್ಯಸಾ. ೫೩೧ ಶೂದ್ರಕ). **ಸಹಣ** : ೧. ಪಟ್ಟಸಹಣದ ಹಿರಿಯ ಸಹಣದ ವಿಮಲಸಹಣಿಗಳವರ ಕರೆಯನುತ ಧುರಧುರಂಧರರೊಱಲಿದರು (ಕುವ್ಯಾಭೀ.೪-೪೭). 'ಸಾಹಣಿ' ಪರಾ. [? ./ ತೆಲು. ಸಾಹಿಣ]

**ಸಾಹಣಿ, ಸಹಣಿ, ಸಾಣಿ, ಸಾಹಿಣಿ** (ನಾ). ೧. ಆನೆ ಮತ್ತು ಕುದುರೆಗಳನ್ನು ಪಳಗಿಸುವವನು; ಕಾಸ್ತಾರ: ತಂತಮ್ಮ ಮುಂದೆ ಸಂದಣಿಸಿ ಪಲ್ಲಣಿಸಲವ್ವಳಿಪ ರಾವುತರ್ವರಸು ಸನ್ನದ್ಧರಾದ ಸಾಹಣಿಗಳುಮಂ (ವರ್ಧಪು. ೯-೫೭ ವ); ಅಶ್ವಗಜಸಾಹಣಿ ಗಳೆಗೆ ಎಚಿದು . . . ಭಂಡಾರಿಗಳಿಗೆಚಿದು ಆ ಗರಳಮಂ ಬಸವನವಿಳ ನಿಯೋಗಿಗಳಿಗೆಚಿ ಯಲ್ಲವರ್ಗಳ ಭಾಗಕದು ಪಾಲ್ಪುಪ್ಪಾಗಿರೆ (ಬಸಪು. ೫೯-೨೮). 'ಗಜಸಾಹಣಿ' ಪರಾ. ೨. ಕುದುರೆಯ ಸವಾರ, — ರಾವುತ: ಸೆಣಸುವ ಸಾಹಣಿ ಸರಭಭೇರುಣ್ಣನುಂ . . . ಸಮಸ್ತಪ್ರಶಸ್ತಿಸಹಿತಂ [ಶ್ರೀಮನ್ಮಹಾ]ಸಾಹಣಿ ಬಲ್ಲರಸರ್ (ಸೌಇಇ. XI-i, ೧೦೭-೧೧; 1068). ೩. ಕುದುರೆದಳದ ಮುಖಂಡ: ಸಾಹಸದಿಂ ಋತುಪರ್ಣನ ಸಾಹಣಿಯಂ ಸಾರ್ದುಸುಖದಿನಿರ್ದನಿಳೇಶಂ (ನಳಚಂ. ೬೪೮). **ಸಹಣಿ**: ೧. ದುಷ್ಟ ವಾಜಿಯಂ ಕಂಡು ಸ[ಪಾಠಾಂ. ಸಾ]ಹಣಿಯಂ ಬೆಸಗೊಂಡನೀ ಪಾರುವವನೀ ಪರಿಯಲಿರಿಸುವ ಕಾರಣಮೇನೆನಲ್ (ಪುಣ್ಯಾಸ್ರ. ೭-೫೦ ವ); ಪಂಚಪಲ್ಲವದ ತೇಜಿಗಳ ಸಿಂಗರಿಸಿ ತರುತುಂ ಚಮತ್ಕಾರದಿಂ ಸಹಣಿಗಳು ಮುಂದಿದೆ (ಚೇರಮ. ೧೧-೪೪). ೩. 'ವಿಮಲಸಹಣಿ' ಪರಾ. **ಸಾಣಿ**: ೧. ಅಮಳಸ್ಯಂಧವಗಳಂ ಪಿಡಿದರಿಕ್ಕೆಲದಲ್ಲಿ ಸಾಣಿಗಳು ಸಿಂಗರಿಸಿ (ಭಾವಚಿಂ. ೮-೩); ರಾವುತರಿಗೆ . . . ಸಾಣಿಗಳಿಗೆ ಜೀವಿತಗಳ ಹೆಚ್ಚುಮಾಡಿ ಮನ್ನಣೆಯಿತ್ತು (ಭರತ. ೫೩-೧೧೪); ಅಶ್ವಗಳನು ತಳುವದೆ ಕೋಲುನೇಣಿಂ ತಿದ್ದುತಿಹರಲ್ಲಿ ಬಳಿಸಂದು ಬಲು ಸಾಣಿ [ಪಾಠಾಂ. ಸಾಣ, ಸಹಣಿ, ಸಾಹಣಿ]ಗಳು (ಕುರಾಸಾಂ. ೪-೭೩). **ಸಾಹಿಣಿ** : ೧. ಪಾರುವೇಟೆಗೆ ಧರಿಸಿದ್ದ ಸಾಹಿಣಿಯ ಉಡುಪನ್ನೇ ಸಿಂಗಿರಾಜನು ಆಗಲೂ ಧರಿಸಿದ್ದನು (ರೂಲೀಟಾ. ೧೫). [ಸಾಹಣ + - ಇ₃./ ಪ್ರಾ. ಸಾಹಣ = ಸೈನ್ಯ./ ಸಂ. ಸಾಧನ = ಸೈನ್ಯ./ ಹಿಂ. ಸಾಹನಿ = ಸೇನೆ, ಸೇನಾನಿ; ಮರಾ. ಸಾಹಾಣ = ಸೈನ್ಯ, ಸಾಹಣೀ = ಸೇನಾನಿ./ ತೆಲು. ಸಾಹಣಿ]

**ಸಾಹಣಿಗ, ಸಾಣೆಗ$_1$** (ನಾ). = ಸಾಹಣಿ ೧ : ಸುರಗಿಕಾಱಂ ಚೌಡರಾಯನ ತುರಗಗಜ ಸಾಹಣಿಗ (ಬಸವು. ೯-೪೭). **ಸಾಣೆಗ$_1$** : ಗಳೆ ಕೋಲುವಿಡಿದು ಬಂದಾಂತ ಸಾಣೆಗರನು ತುಳಿದಶ್ವಶಾಲೆಯ ನೂಂಕಿ . . . ಕೆಡಹುತಿರ್ದುದು (ನಾಗಕು. ೭-೯); ಕರಿಹಯಾವಳಿಯನುವ ತೋರಿಸಲೆಂದು ಸಾಣೆ[ಪಾಠಾಂ. ಹೆ]ಗರನುವಿನೊಳು ಬರಲೆಂದು ಕರಸಿದ (ಜಿನಭಾ. ೮-೨೫). [ಸಾಹಣ + - ಇಗ]

**ಸಾಹಣಿತಿ** (ನಾ). ಕಾಸ್ತಾರನ ಪತ್ನಿ; ಸಾಹಣೆಯ ಹೆಂಡತಿ: ಸಾಹಿಣಿಯರ ಸಾಹಣಿತಿ ಜಕ್ಕವೆ (ಎಕ. V, ಹಾಸನ. ೧೪೮-೩; 1200 ?). [ಸಾಹಣ + - ತಿ$_1$ (< - ಇತ್ತಿ)]

**ಸಾಹಣಿಪೆರ್ಗಡೆ** 'ಸಾಹಣಿವೆರ್ಗಡೆ' ನೋ.

**ಸಾಹಣಿವೆರ್ಗಡೆ, ಸಾಹಣಿಪೆರ್ಗಡೆ** (ನಾ). ಕಾಸ್ತಾರರ ಮುಖ್ಯಸ್ಥ ; ಸಾಹಣಿಗಳ ಮುಖಂಡ: ಮಹಾಪ್ರಚಣ್ಡದಣ್ಡನಾಯಕನನ್ತ್ಯುರಾಧ್ಯಕ್ಷಮಾ[ನೆ] ಸಾಹಣಿವೆರ್ಗ್ಗಡೆ ಲೋಕಸಹವಾಸಿಗಳಧಿಷ್ಠಾಯಕಂ (ಸೌಇಇ. XX. ೭೪-೧೭; 1112). **ಸಾಹಣಿಪೆರ್ಗಡೆ**: ಶ್ರಿಮದನ್ತ್ಯುರಾಧ್ಯಕ್ಷಂ ಕರಿ ತುರೆಯ ಸಾಹಣಿಪೆರ್ಗ್ಗಡೆ ಹೇರಿಕನ್ನಡಸನ್ನಿವಿಗ್ರಹಿ (ಸೌಇಇ. XV. ೨೭-೧೧; 1144). [ಸಾಹಣಿ + ಪೆರ್ಗಡೆ$_1$]

**ಸಾಹಸ** (ನಾ). ೧. ಪರಾಕ್ರಮ; ಶೌರ್ಯ: ಸಾಹಸಮಂ ಪೂಣ್ದಂ ರಿಪು ಸಾಹಸಮುಂ ಸಾಹಮಸ್ಮಿಯೆಂಬಿನಿತು (ಚಂದ್ರಪ್ರ. ೧೧-೧೦೦); ಸಾಹಸದ ತನಿಹೊಗರಿನಾತಗಳೆಲ್ಲಿ ಭೀಮಾರ್ಜುನರ ಬರಹೇಳು (ಕುಮಾದ್ರೋ. ೧-೫೩); ಬರುವ ಚಕ್ರದ ಬಿಂಕವೆಲ್ಲವ ನೋಡಿ ಯತಿವರ ಶಂಕೆಯಿಲ್ಲದೆ ನುಂಗಿದನು ನಿಶ್ಶಂಕಸಾಹಸದಿ (ಗಗತಾ. ೪-೧೦೮). ೨. ಧೈರ್ಯ; ದಿಟ್ಟತನ. ೩. ಶಕ್ತಿಯನ್ನು ಮೀರಿ ಮಾಡುವ ಕಾರ್ಯ: ಅವನು ತುಂಬ ಸಾಹಸವನ್ನು ಮಾಡಿ ಇಲ್ಲಿಗೆ ತಲುಪಿದ್ದಾನೆ (ರೂಢಿ). ೪. ಹಿಂಸೆ; ಕ್ರೌರ್ಯ. ೫. ದರೋಡೆ, ಅತ್ಯಾಚಾರ ಮುಂತಾದ ನೀಚಕಾರ್ಯ. ೬. ದುಡುಕುತನ; ಹಿಂದೆ ಮುಂದೆ ನೋಡದೆ ಮುನ್ನುಗ್ಗುವ ಪ್ರವೃತ್ತಿ: ಬೇಡ ಬೇಡಾ ಸಾಹಸಂ ದೇವಿ ಬೇಡುವೆನು (ಚಿತ್ರಾಂಗ. ೩೭-೧೦೧೯). ೭. ರಭಸ; ಜೋರು. ೮. ದಂಡನೆ ಶಿಕ್ಷೆ.

**ಸಾಹಸಭೀಮ** = ಪರಾಕ್ರಮದಲ್ಲಿ ಭೀಮನಂತಿರುವವನು ; ಒಂದು ಬಿರುದು: ಪತಿಹಿತಪ್ರಕಾರನೇಕಾಂಗವೀರ ಸನ್ಯಾಮರಾಮ ಸಾಹಸಭೀಮ (ಎಕ. II, ೧೪೧-೧೫; 1139). **ಸಾಹಸರು** (ಬಹುವ) = ಪರಾಕ್ರಮಶಾಲಿಗಳು; ಶೂರರು: ವಿಕಟಭುಜಬಲದ ವರು ಸಾಹಸರು (ತುರಂಗ. ೧೩-೩). **ಸಾಹಸ ವಿದ್ಯಾಧರಿ** = ಸಾಹಸದಲ್ಲಿ ವಿದ್ಯಾಧರಸ್ತ್ರೀಯನ್ನು ಹೋಲುವವಳು; ಒಂದು ಬಿರುದು: ಧಾತ್ರೀಜನರಕ್ಷಾಮಣಿ ಸಾಹಸವಿದ್ಯಾಧರಿ ಸಕಳಕಳಾವತಿ (ಸೌಇಇ. XX, ೭೦-೯; 1094). **ಸಾಹಸವೈನತೇಯ** = ಶೌರ್ಯದಲ್ಲಿ ಗರುಡನಂತಿರುವವನು; ಒಂದು ಬಿರುದು: ಕಟಕಕಮಳಾರ್ಕ್ಕಂ ಕಾರ್ಯ್ಯಬೃಹಸ್ಪತಿ ಗುಣರತ್ನಪಯಟ್ಟಿತಿ ಸಾಹಸವೈನತೇಯಂ ಸತ್ಯರಾಧೇಯಂ (ಕಇಆ. ೧-೧-೨; 1092). **ಸಾಹಸೋತ್ತುಂಗ** = ಪರಾಕ್ರಮದಲ್ಲಿ ಅಗ್ಗಳನಾದವನು; ಶ್ರೇಷ್ಠನಾದ ಶೂರ; ಒಂದು ಬಿರುದು: ತ್ಯೆಲನಸಿಂಘಂ ಸಾಹಸೋತ್ತುಂಗಂ ಸರಣಾಗತವಜ್ರಪಂಜರಂ (ಸೌಇಇ.XX, ೪೧-೧೧; 1068); ಸಾಹಸೋತ್ತುಂಗಂ ಆತ್ರೇಯಗೋತ್ರಸಮುದ್ಧರಣಂ (ಸೌಇಇ. XX. ೭೪-೬; 1100). [ಸಂ.]

**ಸಾಹಸತೇಜ** (ನಾ). ಶೌರ್ಯದಿಂದ ಉಜ್ವಲಗೊಂಡವನು; ಕ್ಷಾತ್ರತೇಜ: ಎಲ್ಲಿ ಆರ್ಯರ ರಾಜರು - ಈಗೆಲ್ಲಿ ಸಾಹಸತೇಜರು? (ಹೊಂಗಳು. ೧-೧೬).

[ಸಂ. ಸಾಹಸತೇಜಸ್]

**ಸಾಹಸಭೂಷಣೆ** (ನಾ). ಧೈರ್ಯ ಸ್ಥೈರ್ಯಗಳೇ ಅಲಂಕಾರವಾಗಿರುವವಳು; ಅತ್ಯಂತ ಧೈರ್ಯಶಾಲಿನಿ : ಆ ಸಾಹಸಭೂಷಣೆ ನಾಲ್ವಾಸಿರ್ವರ್ ಕುಡದ ಕೂಸುಗಳ್ವೆರಸು . . . ಅಮಳದೀಕ್ಷೆಯಂ ಕೆಯ್ಕೊಂಡಳ್ (ಶಾಂತಿಪು. ೪-೮೪).

[ಸಂ. ಸಾಹಸಭೂಷಣಾ (ಸಾಹಸ + ಭೂಷಣ + -)]

**ಸಾಹಸಮಲ್ಲ** (ನಾ). ಅತ್ಯಂತ ಶೂರನಾದ ಯೋಧ; ಮಹಾಪರಾಕ್ರಮಿ: ಸಾಹಸಮಲ್ಲನಡಹಾಯಿದನು ದ್ರುಪದನು ಧನುವನೊದರಿಸುತ (ಕುಮಾದ್ರೋ. ೨-೪೭); ಆಹವಮಲ್ಲವಲ್ಲಭನಾತನ ಮಗನಿಱಿವಬೆಡೆಂಗಂ ಸಾಹಸಮಲ್ಲಂ (ಸೌಇಇ. XX, ೧೯-೨೧; 1015). [ಸಂ.]

**ಸಾಹಸರಸಿಕ** (ನಾ). ಪರಾಕ್ರಮದಲ್ಲಿ ಆಸಕ್ತನಾದವನು, – ರುಚಿಯುಳ್ಳವನು: ಬಾಹುಬಲಿ ತನ್ನ ದಕ್ಷಿಣಬಾಹುವ ಕೆಲದಲ್ಲಿ ನಿಂದ ಚಕ್ರಮನಾಗಳ್ ಸಾಹಸರಸಿಕಂ ಕಂಡು (ಆದಿಪು. ೧೪-೧೨೦). [ಸಂ.]

**ಸಾಹಸವಂತ** (ನಾ). ಪರಾಕ್ರಮಿ ; ಶೂರ: ಸಾಹಸವಂತನಿಂದ್ರಿಯರತಂ ಬಹುಮೂರ್ಖನತೀವಕಾಮುಕಂ (ದಶಕು. ೯-೭೪); ಕುದುರೆಯನೇರಿದ ಸಾಹಸವಂತ ರಾಹುತರು (ಇಚಸಾಂ. ೧೫-೪೩). [ಸಂ. ಸಾಹಸವತ್]

**ಸಾಹಸಸಂಪನ್ನತೆ** (ನಾ). ಪರಾಕ್ರಮದ ಶ್ರೀಮಂತಿಕೆ: ತನ್ನ ವಿಭವಂ ತನ್ನೋಜೆ ತನ್ನುದ್ಧಸಾಹಸಸಂಪನ್ನತೆಯಿಂ ಧರಾವಳಿಯಮಂ ನಾನಾವಿಧ[೦] ಕೂಡೆ ಮುದ್ರಿಸಿದಂ . . . ನೃಪಾಳೋ [ತ್ತಮಂ] (ಸೌಇಇ.XX, ೫೦-೧೧; 11ನೆಯ ಶತ). [ಸಂ. ಸಾಹಸಸಂಪನ್ನತಾ]

**ಸಾಹಸಾಂಕ** (ನಾ). ಹೆಸರಾದ ಕಲಿ; ಶ್ರೇಷ್ಠವೀರ: ಅಮ್ಮನ ಗಂಧವಾರಣನುಂ ಸಾಹಸಾಂಕನುಮೆನಿಸಿದ ಭೀಮಸೇನಂ (ಗದಾಯು. ೨-೧ ವ); ಕಿರಾತರಲ್ಲಿ ನೀನುಜೆ ಸಾಹಸಾಂಕನೆನಿಪಯ್ (ವಿಜಯ. ೪-೫೩). [ಸಂ.]

**ಸಾಹಸಿ** (ನಾ). ೧. ಸಾಹಸಕಾರ್ಯಗಳನ್ನು ಮಾಡುವ ವ್ಯಕ್ತಿ; ಪರಾಕ್ರಮಿ: ಜಗದ್ವಿಖ್ಯಾತ ಸಾಹಸಿ ಪಾರ್ಥ ಹೇಳ್ಕೆ (ಕುಮಾಉ. ೭-೧೨); ಅತಿಸಾಹಸಿ ಸರೋಧಿಮಧ್ಯಸ್ಥಿತನುದ್ಧತನಾ ಸಿಂಹಳನ್ (ರಾಜಶೇ. ೫-೧೩೧). ೨. ಧೈರ್ಯದಿಂದ ಮುನ್ನುಗ್ಗಿ ಕೆಲಸ ಮಾಡುವ ವ್ಯಕ್ತಿ. ೩. ದುಷ್ಟಸ್ವಭಾವದ ವ್ಯಕ್ತಿ; ಕ್ರೂರಿ. ೪. ವಿಮರ್ಶೆಯಿಲ್ಲದೆ ಕೆಲಸ ಮಾಡುವವನು; ದುಡುಕುಸ್ವಭಾವದ ವ್ಯಕ್ತಿ: ಅವನು ರಾಮನಂತೆ ವೀರ, ಭೀಮನಂತೆ ಸಾಹಸಿ (ಸಾಹಿಸ. ೧೫). [ಸಂ. ಸಾಹಸಿನ್]

**ಸಾಹಸಿಕ** (ನಾ). = ಸಾಹಸಿ ೧ : ಸಾಹಸಿಕಂ ಮುರಾರಿ ಪುಗುತಂದಂ . . . ಶಸ್ತ್ರಗೇಹಮಂ (ಜಗವಿ. ೬-೨೮); ಸಾಹಸಿಕನಾದಡೆ ನಿಲ್ಲೆನುತ ಮೂದಲಿಸಿದನು ಶಲ್ಯ (ಕುಮಾಶ. ೩-೫೮). [ಸಂ.]

**ಸಾಹಸಿಕೆ** (ನಾ). ಶೌರ್ಯ; ಪರಾಕ್ರಮ: ಇವರ ಸಾಹಸಿಕೆಯನಱಿದಪೆವು (ತ್ರಿಪುಸಾಂ. ೧೪-೧೫೭); ಹಿರಿಯರು ಕಟ್ಟಾಳ್ತನದ ಸಾಹಸಿಕೆಯ ಪರಾಕ್ರಮದಿಂದ ಸಂಪಾದಿಸಿ ತಮ್ಮ ಕೆಯ್ಯಾಪಿಗೊಪ್ಪಿಸಿರುವ ರಾಜ್ಯಶ್ರೀಗೆ (ಚಿಟ್ಟಿಅ. ೨೪-೨೫). [ಸಾಹಸ + - ಇಕೆ]

**ಸಾಹಸಿಗ, ಸಾಹಸೀಕ** (ನಾ).= ಸಾಹಸಿ ೧ : ಬೇಹಿನ ಸಾಹಸಿಗನೊರ್ವಂ ಪುರಕೆ ಪರಿತಂದು (ಬಸರ. ೧೧-೧೮); ಇದು ಕೈದುಕಾಱರ ಠಾವು ಸಾಹಸಿಗರಿಗೆ ಸಮಯವಿದು (ಕುಮಾದ್ರೋ. ೧೪-೨೭); ಅದರಲ್ಲಿ ತನ್ನಂತಹ ಸಾಹಸಿಗನಿಗೆ ನ್ಯಾಯವಾದ ಹಕ್ಕು ಇದೆ (ಮುಂಗಾಮು. ೬೧). **ಸಾಹಸೀಕ** : ಗಮನ ತಟ್ಟೆಯವಾಯ್ತು . . . ಸಾಹಸೀಕರು ಭ್ರಮಿಸುತಿದೆ (ಕುಮಾದ್ರೋ. ೧೦-೨೫). 'ಸಾಸಿಗ' ಪರಾ. [ಸಾಹಸ + - ಇಗ]

**ಸಾಹಸಿಗತನ** (ನಾ). ೧. ಶೌರ್ಯ; ಪರಾಕ್ರಮ . ೨. ಧೈರ್ಯ ಸ್ಥೈರ್ಯಗಳಿಂದ ಕೂಡಿರುವಿಕೆ: ಸಾಹಸಿಗತನದಿಂದಲಾ ನಿರ್ಮೋಹದಲಿ ನಿಲುವವನೆ ನಿತ್ಯನು (ಪ್ರಭುಲೀ. ೧೩-೬೨). [ಸಾಹಸಿಗ + - ತನ]

**ಸಾಹಸಿತನ** (ನಾ). = ಸಾಹಸಿಗತನ ೧ : ಕುಸುಬಿ ಕುಸುಕಿಱಿದು ಪೊಸೆದು ಪೂಳ್ಕೆ ಸಾಹಸಿತನಕೆ ಬೆರಸಿದ ಮಲ್ಲನನೊರಸಿ ಬಿಡುವ (ಗಿಂಕ. ೨-೧೦೫ ವ).

[ಸಾಹಸಿ + - ತನ]

**ಸಾಹಸೀಕ** 'ಸಾಹಸಿಗ' ನೋ.

**ಸಾಹಸೋನ್ನತಿ** (ನಾ). ಪರಾಕ್ರಮದ ಅತಿಶಯತೆ; ಶೌರ್ಯಾಧಿಕ್ಯ: ಹೂಸಿಕದ ಹೂಣೆಗತನವ ಸೊನ್ನಾರವಿದ್ಯೆಯ ಸಾಹಸೋನ್ನತಿಯ ಸೊಗಸ ಹುಟ್ಟಿಸಿ ಸುಲಿವ ರಸವಾದಿಗಳನಿವರ ವಿಡಾಯಿಗಳ . . . ಕರ್ಣ ನೋಡೆಂದ (ಕುಮಾದ್ರೋ. ೧೬-೨೫). [ಸಂ.]

**ಸಾಹಸ್ರ** (ಗು). ೧. ಸಾವಿರಕ್ಕೆ ಸಂಬಂಧಿಸಿದ ; ಸಹಸ್ರಸಂಬಂಧವಾದ. (ನಾ). ೨. ಸಾವಿರವನ್ನುಳ್ಳುದು ; ಸಹಸ್ರಸಂಬಂಧವಾದುದು. ೩. ಸಾವಿರಗಳ ಮೊತ್ತ; ಸಹಸ್ರಗಳ ಗುಂಪು. ೪. ಸಾವಿರಸೈನಿಕರನ್ನುಳ್ಳ ಸೈನ್ಯ. ೫. ಸಾವಿರಸೈನಿಕರನ್ನುಳ್ಳವನು : ''ಸಾಹಸ್ರಃ, ಸಹಸ್ರಿನ್ . . . ಯಾರು ಸಾವಿರದ ಲೆಕ್ಕವುಳ್ಳ ಸೈನ್ಯದಿಂದ ಬಲವುಳ್ಳವರೋ ಅಂಥವರ ಹೆಸರುಗಳು'' (ಸಿದ್ಧಾಂತಿ. ೨೫೫). ೬. ಇಪ್ಪತ್ತೆಂಟು ಶಿವಾಗಮಗಳಲ್ಲಿ ಒಂದು : ಕಾಮಿಕ . . . ಸೂಕ್ಷ್ಮ, ಸಾಹಸ್ರ . . . ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಭಾರದ. ೭೨). [ಸಂ.]

**ಸಾಹಾಯ್ಯ** (ನಾ). ಸಹಾಯ; ಒತ್ತಾಸೆ; ನೆರವು: ಮುರಾರಿಯ ಪರಮಸಾಹಾಯ್ಯದಲಿ ಸಾಹಸಮಲ್ಲನುರವಣಿಸೆ (ಕುವ್ಯಾದ್ರೋ.೯-೩೮); ಪಾಕಶಾಸನ ಮುಖ್ಯದೇವತಾನಿಚಯಕ್ಕನೇಕಸಾಹಾಯ್ಯಮನ್ನೆಸಗಿ ಸತ್ಕೀರ್ತಿಯಂ ಜೋಕೆಯಿಂ ಗಳಿಸಿ (ವೆಂಕಾರಾ. ೨-೨-೯). [ಸಂ.]

**ಸಾಹಿಣಿ** 'ಸಾಹಣಿ' ನೋ.

**ಸಾಹಿತಿ** (ನಾ). ರಸಾವಹವಾದ ಕೃತಿಗಳನ್ನು ರಚಿಸುವವನು; ಬರಹಗಾರ; ಲೇಖಕ : ರವೀಂದ್ರರು . . . ಒಳ್ಳೆಯ ಸಾಹಿತಿಗಳಿದ್ದಂತೆ ಒಳ್ಳೆಯ ಸಂಗೀತಜ್ಞರೂ ಇದ್ದರು (ಧರ್ಮಸಾ. ೬೪); ಚಿತ್ರಕಾರರು ಚಿತ್ರಕಲಾಪ್ರದರ್ಶನದ ಕಡೆಗೂ ಸಾಹಿತಿಯೊಬ್ಬನು ನೂತನ ಪುಸ್ತಕಗಳ ಕಡೆಗೂ . . . ಗಮನ ಕೊಡುತ್ತಾರೆ (ಶಿಕ್ಷದ. ४೮೦).

[ಸಂ. ಸಾಹಿತೀ./ ತೆಲು. ಸಾಹಿತಿ = ಪಾಂಡಿತ್ಯ]

**ಸಾಹಿತಿಯ** 'ಸಾಯಿತ್ಯ' ನೋ.

**ಸಾಹಿತ್ಯ** (ನಾ). ೧. ಸಾಹಚರ್ಯ; ಸಂಬಂಧ: ಕರ್ತೃಕೂಡಲಸಂಗಮದೇವರ ಒಲವಿನ ದಯದ ಚಿತ್ತವಿಡಿದಂಗಲ್ಲದೆ ಶಿವತತ್ತ್ವ ಸಾಹಿತ್ಯವಾಗದು (ಬಸವ. ೮೦೬); ಅಂತಪ್ಪ ಪರಬ್ರಹ್ಮವ ಸರ್ವಾಂಗದಲ್ಲಿ ಸಾಹಿತ್ಯವ ಮಾಡಿಕೊಂಡು ಲಿಂಗಾಂಗಸಮರಸಾನಂದದಲ್ಲಿ ಅವಿರಳಜ್ಞಾನಪ್ರಸಾದವನಾರೋಗಿಸುತಿರ್ದ (ಕೋಲಶಾಂ. ೨೦-೧೪); ಸಾಂಗತ್ಯವಿಲ್ಲದ ಸಂಸಾರವೇತಕೆ ಬರಿಯ ಸಾಹಿತ್ಯವೆ ಸಾಕೆ (ಇಂಚಾಪ. ೧೭೮-೬೯). ೨. ರಸಾವಹವಾದ ಕಾವ್ಯ, ನಾಟಕ, ಕಥೆ, ಕಾದಂಬರಿ, ಪ್ರಬಂಧ ಮುಂತಾದ ವಿವಿಧ ಪ್ರಕಾರಗಳನ್ನೊಳಗೊಂಡ ಸೃಜನಾತ್ಮಕ ಬರವಣಿಗೆ : ವ್ಯಾಕರಣಮರ್ಥಶಾಸ್ತ್ರಾನೀಕಂ ಸಾಹಿತ್ಯವಿದ್ಯೆಯಿತಿಹಾಸಂ ಮಿಕ್ಕೀಕಾಕ್ಷರಮಿ(ಮು)ನಿತರ್ಕ್ಕಂ ಟೀಕಂಬರೆಯಲ್ಪ ಮಗ್ರರಾಭ್ಯಾ[ಸಿಸುವ] ರ್ (ಎಇ. XIII, ೩೩೨-೫೪; 929); ಬರೆಹ ವಾಚನ . . . ವ್ಯಾಕರಣ ಸಂಗೀತ ಸಾಹಿತ್ಯ . . . ಮುಖೋದ್ಗತಂ ಬಸವಂಗೆ (ಬಸಪು. ೩-೪೨); ರಸಾತ್ಮಕವಾಗಿದ್ದು ಜನಸಾಮಾನ್ಯಕ್ಕೂ ಹೃದಯಾನಂದವನ್ನು ಉಂಟುಮಾಡುವುದು ಸಾಹಿತ್ಯ (ಕೈಪಿಡಿ. ೧೩೮). ೩. ಕಾವ್ಯಲಕ್ಷಣಶಾಸ್ತ್ರ. ೪. ಕಾವ್ಯಲಕ್ಷಣಪರಿಣತಿ : ತನುವಿಂದೊಂದು ಗುಣಂಗಳಿಂದೆರಡು ಸಾಹಿತ್ಯಂಗಳಿಂ ಮೂಱು ಸನ್ಮನದಿಂ ನಾಲ್ಕು . . . ತನಗಿನ್ನಾರ್ಸರಿ ನಾಗವರ್ಮಕೃತಿಗೆಂದಂ ಕಾಳಿದಾಸಂಬರಂ (ಛಂದೋಂಬು.೧-೨೫). ೫. (ಅಮೂಲ್ಯವಾದ) ಸಾಮಗ್ರಿ; ಸಲಕರಣೆ: ಮೇನೆಯುಂ ಗಿರರಾಜನುಂ ಕಣ್ ತೀವಿ ನೋಡಿ . . . ಸಾಹಿತ್ಯಮಂ ಸಯ್ತಿಡುವಂತೆ ಪ್ರಾಣಮಂ ಪರಿರಕ್ಷಿಪಂತೆ . . . ಮುಕ್ತಿಯಂ ಮೂರ್ತಿಗೊಳಿಸುವಂತೆ ಪಾರ್ವತಿಯಂ ಸಲಹುತ್ತುಮಿರೆಯಿರೆ (ಗಿರಿಕ. ೩-೧೧೯ ವ); ತಮ್ಮ ರಾಜ್ಯದಿಂದ ಆಗುವಂಥಾ ಸಾಹಿತ್ಯ ಮಾಡಿಸಿ ಕೊಟ್ಟು (ರಾಜೇಂದ್ರ. ೬೧); ಅವಳು ಮೈ ತೊಳೆದುಕೊಂಡು ದೇವರ ಪೂಜೆಯ ಸಾಹಿತ್ಯವನ್ನು ಸರಿಪಡಿಸಬೇಕೆನ್ನುವಾಗ (ನಿರಾಭ. ೫೩). ೬. ಒಂದು ಗೊತ್ತಾದ ವಿಷಯವನ್ನೊಳಗೊಂಡ ವೈಜ್ಞಾನಿಕವೂ ಶಾಸ್ತ್ರೀಯವೂ ಆದ ಸೃಜನೇತರ ಬರವಣಿಗೆ. ೭. ಒಂದು ನಿರ್ದಿಷ್ಟ ದೇಶ, ಭಾಷೆ ಅಥವಾ ಕಾಲದಲ್ಲಿ ಸೃಷ್ಟಿಯಾದ ಸಮಗ್ರ ಬರವಣಿಗೆ. ೮. ಪ್ರಚಲಿತ ವಿಚಾರಗಳಿಗೆ ಸಂಬಂಧಿಸಿದ ಉಪಯುಕ್ತಮಾಹಿತಿಗಳನ್ನೊಳಗೊಂಡ ಬರವಣಿಗೆ. ೯. ಯಾವುದೇ ಬಗೆಯ ಮುದ್ರಿತವಿಷಯ. ೧೦. ವಿದ್ವಾಂಸ; ಪಂಡಿತ: ಕಡೆತನಕಮೇಗುತ್ತರೋತ್ತರವನೀವ ಭಾಷೆಗಳನವಧರಿಸುವುದು ಸಾಹಿತ್ಯರು (ಸೋಮಚ. ೧-೨೫); ಕೂಡಿತಿದು ಪುಣ್ಯದಲಿ ಸುರಸತಿ ಮಾಡಿದವಕೃತಿ ನಿನ್ನ ಭಾಷೆಯು ಬೀಡ ಸಲಹಿದುದಜಿಯೆ ನೀ ಸಾಹಿತ್ಯನಲ್ಲೆಂದ (ಕುವ್ಯಾಆ.೮-೫೩). ೧೧. ಭೋಜನಸಾಮಗ್ರಿ,- ಪದಾರ್ಥ.

**ಸಾಹಿತ್ಯ ಮಾಡಿಕೊಳ್ಳು** = ಸಜ್ಜುಮಾಡಿಕೊಳ್ಳು; ಸಿದ್ಧಪಡಿಸಿಕೊಳ್ಳು : ನಾವು ದುಡುಕದೆ ಸ್ವಲ್ಪ ಸಾಹಿತ್ಯ ಮಾಡಿಕೊಂಡು . . . ಮುತ್ತಿಗೆ ಹಾಕಿದರೆ ಖಿಲ್ಲೆ ಸ್ವಾಧೀನವಾಗುವುದು (ಚಿತ್ರಸಾ. ೬೭). [ಸಂ.]

**ಸಾಹಿತ್ಯಕ** (ಗು). ರಸಾವಹವಾದ ಕೃತಿಗಳಿಗೆ ಸಂಬಂಧಿಸಿದ,— ಬರವಣಿಗೆಗೆ ಸಂಬಂಧಪಟ್ಟ : ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಹಿತ್ಯಕ - ಎಲ್ಲ ಬಗೆಯ ಕ್ರಾಂತಿಗಳೂ ಆ ಕಾಲದಲ್ಲಿ ಕಂಡು ಬರುವವು (ಸಾಹಿಸ. ೧೩೪); ಸಣ್ಣಪುಟ್ಟ ಸಾಹಿತ್ಯಕ ಚಳುವಳಿಗಳು ನವ್ಯಮಾರ್ಗದಲ್ಲಿಯೇ ಲಯವಾಗಿ ಸಫಲವಾದವು (ನವ್ಯಕಾ.೨೭). [ಸಂ.]

**ಸಾಹಿತ್ಯಕಾರ** (ನಾ). ರಸಾವಹವಾದ ಕೃತಿಗಳನ್ನು ರಚಿಸುವವನು ; ಬರಹಗಾರ; ಸಾಹಿತಿ : ಒಬ್ಬ ವ್ಯಕ್ತಿಯನ್ನು ಸಾಹಿತ್ಯಕಾರ . . . ಅಥವಾ ಆತನ ಕೃತಿಯನ್ನು ಸಾಹಿತ್ಯ ಎಂದು ಕರೆಯಬೇಕಾದರೆ ಅಲ್ಲಿ ನಾವು ಸಾಮಾನ್ಯವಾಗಿ ಅರಸುವುದು ಆತನ 'ಆತ್ಮಾಭಿವ್ಯಕ್ತಿ' ಯನ್ನು (ಶ್ರೇಷ್ಠಪ್ರ. ४೨); ಈ ಉಲ್ಲಂಘನೆ ಎಲ್ಲೆಲ್ಲಿ ಎಷ್ಟು ತಕ್ಕುದು ಅಥವಾ ತಗದು ಎಂಬ ವಿವೇಕ ಸಾಹಿತ್ಯಕಾರನಿಗೆ ಇರಬೇಕು (ಸಂಶೋಧ. IV. ೮೦೬). [ಸಂ.]

**ಸಾಹಿತ್ಯಕ್ಷೇತ್ರ** (ನಾ). ಬರಹಗಾರರ ರಸಾವಹವಾದ ಕೃತಿರಚನೆಗೆ ಸಂಬಂಧಿಸಿದ ವಲಯ,— ಬರವಣಿಗೆಗೆ ಸಂಬಂಧಪಟ್ಟ ಕ್ಷೇತ್ರ: ಸಾಹಿತ್ಯಕ್ಷೇತ್ರದಲ್ಲಿಯೂ ಮಾನವದೃಷ್ಟಿ ಇಂದು ಮಲಿನವಾಗಿದೆ (ನವ್ಯಕಾ. ४). [ಸಂ.]

**ಸಾಹಿತ್ಯಗುಣ** (ನಾ). ರಸಾವಹವಾದ ಬರವಣಿಗೆಯ ಸಾರಲಕ್ಷಣ: ಸಾಹಿತ್ಯಗುಣವು ಮುಖ್ಯವಾಗಿ ಜನಜೀವನಗುಣದ ಪ್ರತಿಫಲ (ಜೀವಸಾ. ४೯). [ಸಂ.]

**ಸಾಹಿತ್ಯಗೋಷ್ಠಿ** (ನಾ). ಬರಹಗಾರರ ರಸಾವಹವಾದ ಬರವಣಿಗೆಗಳನ್ನು ಕುರಿತಾದ ಚರ್ಚೆ, ವಾಚನ ಮುಂತಾದುವುಗಳಿಗಾಗಿ ಸೇರಿದ ಕೂಟ,— ಸಭೆ : ಸಾಹಿತ್ಯಗೋಷ್ಠಿಯ ಈ ಶುಭಪ್ರಸಂಗದಲ್ಲಿ ತಮ್ಮೆಲ್ಲರ ಸಹವಾಸ ಅಲ್ಪಾವಧಿಯಾದರೂ ದೊರೆತುದು ನನ್ನ ಸುದೈವ (ನವ್ಯಕಾ. ೧); ಈಗ ತಾವು ತುಸು ತಡೆದು ನಮ್ಮ ಸಾಹಿತ್ಯಗೋಷ್ಠಿಯಲ್ಲಿ ಭಾಗವಹಿಸಿ ಅನಂತರ ದಯಮಾಡಿಸಬೇಕೆಂದು ವಿನಂತಿಮಾಡಿಕೊಳ್ಳುತ್ತೇವೆ (ಪುನರು. ೨೦೬). [ಸಂ.]

**ಸಾಹಿತ್ಯಚರಿತ್ರೆ** (ನಾ). ಒಂದು ಭಾಷೆಯ ವಿವಿಧಕ್ಷೇತ್ರಗಳಿಗೆ ಸೇರಿದ ಲೇಖಕರ ಜೀವನ ಹಾಗೂ ಕೃತಿಗಳಿಗೆ ಸಂಬಂಧಿಸಿದ ಇತಿಹಾಸ ಮತ್ತು ಅವುಗಳನ್ನೊಳಗೊಂಡ ಗ್ರಂಥ : ಸಾಹಿತ್ಯಚರಿತ್ರೆಯಲ್ಲಿ ಜನಪದಸಾಹಿತ್ಯಕ್ಕೆ ಮೇಲಾದ ಸ್ಥಾನವಿದೆ (ಕಸಾಚ. ೧). [< ಸಂ. ಸಾಹಿತ್ಯಚರಿತ]

**ಸಾಹಿತ್ಯಜ್ಞಾನ** (ನಾ). ರಸಾವಹವಾದ ಬರವಣಿಗೆಗಳ ಬಗೆಗಿನ ತಿಳಿವಳಿಕೆ: ಕವಿತಾಶಕ್ತಿ ಮತ್ತು ಸಾಹಿತ್ಯಜ್ಞಾನವು ಸೇರಿ ಕಾವ್ಯವು ಉತ್ಪತ್ತಿಯಾಗುವ ಅಂಶವೂ ಕಾವ್ಯ ರಚನೆಯು ಪವಿತ್ರಕಾರ್ಯವೆಂಬುದೂ ಇದರಿಂದ ತೋರಿಬರುತ್ತದೆ (ಭಾರದ. ४४८). [ಸಂ.]

**ಸಾಹಿತ್ಯನಿರ್ಮಿತಿ** (ನಾ). ರಸಾವಹವಾದ ಕೃತಿಯ ರಚನೆ , — ಬರವಣಿಗೆಯ ಸೃಷ್ಟಿ : ಸಾಹಿತ್ಯನಿರ್ಮಿತಿಯಲ್ಲಿ ಮಾತ್ರ ಈಚೀಚೆಗೆ ಇದಕ್ಕೆ ಅಷ್ಟಾಗಿ ಪ್ರಾಶಸ್ತ್ಯ ಪ್ರಾಥಮ್ಯಗಳು ದೊರೆತಿಲ್ಲ (ಕಾವ್ಯಕು. ೧೬); ೧೨ ನೆಯ ಶತಮಾನದ ಮುಂದೆ ಔತ್ತರೇಯಗೌಡೀಯ ಭಾಷೆಗಳಲ್ಲಿ ಸಾಹಿತ್ಯನಿರ್ಮಿತಿಗೆ ಪ್ರಾರಂಭವಾಯಿತೆನ್ನಬಹುದು (ಸಾಹಿಸ. ೩೮). [ಸಂ.]

**ಸಾಹಿತ್ಯಪ್ರಕಾರ** (ನಾ). ೧. ಗದ್ಯ, ಪದ್ಯ ಮತ್ತು ಮಿಶ್ರ ಅಥವಾ ಚಂಪೂ ಎಂಬ, ಬರವಣಿಗೆಯ ಮೂರು ಬಗೆ. ೨. ಕಾವ್ಯ, ನಾಟಕ, ಕಥೆ, ಕಾದಂಬರಿ, ಪ್ರಬಂಧ ಮುಂತಾದ, ರಸಾವಹವಾದ ಬರವಣಿಗೆಯ ಪ್ರಭೇದ: ಸಾಹಿತ್ಯಪ್ರಕಾರಗಳು ವಿವಿಧವಾಗಿರುವುದಲ್ಲದೆ ಒಂದೊಂದು ಪ್ರಕಾರದಲ್ಲಿಯೂ ಸಣ್ಣಪುಟ್ಟ ಭೇದಗಳನ್ನು ಕಾಣಬಹುದು (ನವ್ಯಕಾ. ೩). [ಸಂ.]

**ಸಾಹಿತ್ಯಪ್ರಭೇದ** (ನಾ). = ಸಾಹಿತ್ಯಪ್ರಕಾರ : ಸಾಹಿತ್ಯಪ್ರಭೇದಗಳು, ಪುರಾಣ ಸಾಹಿತ್ಯದ ಲಕ್ಷಣಗಳು - ಇವುಗಳನ್ನು ಕುರಿತು ಎರಡು ಲೇಖ ಇವೆ (ಸಾಂಪಸ. ४ ನಿವೇದನ). [ಸಂ.]

**ಸಾಹಿತ್ಯಪ್ರೇಮಿ** (ನಾ). ರಸಾವಹವಾದ ಕೃತಿಗಳನ್ನು ಆಸಕ್ತಿಯಿಂದ ಅಭ್ಯಾಸಮಾಡುವುದು, ಓದುವುದು, ಕೇಳುವುದು ಮುಂತಾದುವುಗಳ ಕಡೆಗೆ ಒಲವಿರುವ ವ್ಯಕ್ತಿ : ಅವರಂತಹ ವಿದ್ವತ್‌ಪಕ್ಷಪಾತಿಗಳೂ ಸಾಹಿತ್ಯಪ್ರೇಮಿಗಳೂ ಸಹಾಯಕರ್ತರೂ ದೊರಕುವುದು ಸುಲಭವಲ್ಲ (ಜೀವಸಾ. ೫೧).

[ಸಂ. ಸಾಹಿತ್ಯಪ್ರೇಮಿನ್]

**ಸಾಹಿತ್ಯಭಾವ** (ನಾ). ಹಿತಕರವಾದ ನಡವಳಿಕೆ; ಒಳ್ಳೆಯ ಪ್ರವೃತ್ತಿ: ಮುಂದೆ ಗುರುವನು ಬಂಧುಜನವನು ಹಿಂದೆ ಕರ್ಮಾಂತ್ಯದಲಿ ಸೇವಕವೃಂದವನು ಕೊಂಡಾಡುವುದು ಸಾಹಿತ್ಯಭಾವವಿದು (ಕುವ್ಯಾಉ. ೩-೬೬). [ಸಂ.]

**ಸಾಹಿತ್ಯಭಾಷೆ** (ನಾ). ೧. ಸಹಾನುಭೂತಿಯ ಮಾತು: ಪಾಂಡುನಂದನರು ಗಾಸಿಯಾದರು ಗಟ್ಟಿಬೆಟ್ಟದ ಪೈಸರದೊಳೆಂದಳಲಿ ಮಱುಗುತ ಸೂಸಿದೈ ಸಾಹಿತ್ಯ ಭಾಷೆಯ ನೆಂದನಾ ಕರ್ಣ (ಕುವ್ಯಾಆ. ೧೭-೧೭). ೨. ಕೃತಿರಚನೆಯಾಗಿ ಲಿಖಿತರೂಪದಲ್ಲಿ

ಪ್ರಕಟವಾಗಲು ಸಮರ್ಥವಾಗಿರುವ ಪರಂಪರಾಗತವಾದ ಭಾಷೆ; ಸಾಹಿತ್ಯವು ವ್ಯಕ್ತಗೊಳ್ಳುವ ನುಡಿ : ಸಾಹಿತ್ಯಭಾಷೆಯಲ್ಲಾದರೂ ಅದು ಒಂದುಗೂಡಿರುವುದು ಅವಶ್ಯಕ (ಸಂಶೋಧ. ೮೯). [ಸಂ. ಸಾಹಿತ್ಯಭಾಷಾ]

**ಸಾಹಿತ್ಯರಂಗ** (ನಾ). = ಸಾಹಿತ್ಯಕ್ಷೇತ್ರ : ನಾನು ಈ ವಯಸ್ಸಿನಲ್ಲಿ ಸಾಹಿತ್ಯರಂಗಕ್ಕೆ ಕಾಲಿಟ್ಟಿರುವುದು ಸ್ವಲ್ಪ ವಿಮರ್ಶಾರ್ಹವಾದ ವಿಷಯವೇ (ಚಂಗಾಳ್ಳ. ೧, ಮುನ್ನುಡಿ). [ಸಂ.]

**ಸಾಹಿತ್ಯರಸ** (ನಾ). ರಸಾವಹವಾದ ಬರವಣಿಗೆಯನ್ನು ಓದಿದಾಗ ಅಥವಾ ಕೇಳಿದಾಗ ಉಂಟಾಗುವ ಆನಂದ; ಸಾಹಿತ್ಯದ ಸ್ವಾರಸ್ಯವು ಒದಗಿಸುವ ಸಂತೋಷ : ಸಾಹಿತ್ಯರಸದ ರುಚಿಯು ಶಂಕರನಿಗಾದರೂ ತಿಳಿಯುವುದೋ ಇಲ್ಲವೋ (ಜೀವಸಾ. ೧೪೧); ಸಾಹಿತ್ಯರಸದ ಆಸ್ವಾದದಲ್ಲಿ ವಿಮುಖನಾಗಿದ್ದ ಭೂಪತಿಯ ಬಳಿಗೆ ತಂದು . . . ಹೀಗೆ ನೆಲೆದಪ್ಪಿಸಿಬಿಟ್ಟದ್ದಕ್ಕೆ ಅವಮಲನು . . . ಸಿಡಿಮಿಡಿಗೊಂಡನು (ಇಪ್ಪಕ. ೨೪೧). [ಸಂ.]

**ಸಾಹಿತ್ಯರೇಖೆ** (ನಾ). ಹಿತವಾಗಿ ಜೊತೆಗೂಡಿರುವಿಕೆ; ಸಖ್ಯ : ಸಾಕಿದನ ಸಮಯಕೆ ಸುಳಿದಿರ್ಕೆ ಸಾಹಿತ್ಯರೇಖೆಯಲಿ (ಕುವ್ಯಾಗ. ೪-೩೧). [ಸಂ. ಸಾಹಿತ್ಯರೇಖಾ]

**ಸಾಹಿತ್ಯವಿದ್ಯೆ** (ನಾ). ಕಾವ್ಯಲಕ್ಷಣಶಾಸ್ತ್ರ: ಪ್ರಕಟಿತೋಕ್ತಿ ವಿವಿಕ್ತಕಳಾಕಳಾಪಕನು ಪಾಹಿತಸಾಹಿತ್ಯವಿದ್ಯೆಯೊಳ್ (ಕವಿರಾ. ೩-೨೧೮); ರೂಪಕಶಾಸ್ತ್ರವು . . . ಸಾಹಿತ್ಯವಿದ್ಯೆಯ ಶಿರೋರತ್ನವಾಗಿದೆ (ಸಾಹಿವಿ. ೩).

**ಸಾಹಿತ್ಯವಿದ್ಯಾವಿತರ್ಕ** = ಕಾವ್ಯಲಕ್ಷಣಶಾಸ್ತ್ರದಲ್ಲಿ ಪರಿಣತನಾದವನು; ಒಂದು ಬಿರುದು : ಮಹಾಪ್ರಚಣ್ಡದಣ್ಡನಾಯಕಂ ವೈರಿನಾಯಕಂ ಸಾಹಿತ್ಯವಿದ್ಯಾವಿತರ್ಕ್ಕಂ ಕಟಕಕಮಳಾರ್ಕಂ (ಕಇಅ. ೮-೩-೨೮೦; 1062). [ಸಂ. ಸಾಹಿತ್ಯವಿದ್ಯಾ]

**ಸಾಹಿತ್ಯವಿಮರ್ಶೆ** (ನಾ). ಸಾಹಿತ್ಯಕೃತಿಗಳ ಗುಣದೋಷಗಳನ್ನು ಪರಿಶೀಲನೆ ಮಾಡಿ ಮೌಲ್ಯಮಾಪನಮಾಡುವುದು : ಇವು ಕಾವ್ಯದ ಭವಿತವ್ಯಕ್ಕೂ ಸಾಹಿತ್ಯವಿಮರ್ಶೆಗೂ ಹೆಚ್ಚು ಉಪಕಾರಿಗಳಾಗಿವೆ (ನವ್ಯಕಾ. ೧೩೦). [ಸಂ. ಸಾಹಿತ್ಯವಿಮರ್ಶ]

**ಸಾಹಿತ್ಯಸಂಘ** (ನಾ). ಸಾಹಿತ್ಯದಲ್ಲಿ ಆಸಕ್ತಿಯಿರುವವರು ಸಾಹಿತ್ಯಸಂಬಂಧವಾದ ಚಟುವಟಿಕೆಗಳನ್ನು ನಡೆಸುವುದಕ್ಕಾಗಿ ರಚಿಸಿರುವ ಸಂಸ್ಥೆ,— ಕೂಟ: ಈಗಾಗಲೇ ಅನೇಕಸ್ಥಳಗಳಲ್ಲಿ ಕರ್ಣಾಟಕ ಸೇವಾಸಮಿತಿಗಳೂ ಸಾಹಿತ್ಯಸಂಘಗಳೂ ಏರ್ಪಾಟಾಗಿವೆ (ಸಾಹಿಶ. ೫೭); ಸಾಹಿತ್ಯಸಂಘಗಳು ತಮ್ಮ ಕಾರ್ಯರಂಗವನ್ನು ಕೇವಲ ಸಾಹಿತ್ಯಕ್ಕೆ ಅಡಕಮಾಡಿಕೊಳ್ಳಬೇಕಾದ ಅಗತ್ಯವಿಲ್ಲ (ಸಾಹಿಜೀ. ೩೪). [ಸಂ.]

**ಸಾಹಿತ್ಯಸಮ್ಮೇಲನ, ಸಾಹಿತ್ಯಸಮ್ಮೇಳನ** (ನಾ). ಒಬ್ಬ ಅಧ್ಯಕ್ಷರ ನೇತೃತ್ವದಲ್ಲಿ ಸಾಹಿತ್ಯದ ವಿವಿಧವಿಷಯಗಳನ್ನು ಕುರಿತು ಸಾಹಿತ್ಯಜ್ಞರು ಕಲೆತು ಚರ್ಚೆ ಮಾಡಲು ಕರೆಯುವ ಅಧಿವೇಶನ : ಪೂಜ್ಯ ಪಂಜೆ ಮಂಗೇಶರಾಯರ ಹಿರಿತನದಲ್ಲಿ ನೆರೆದ ಸಾಹಿತ್ಯಸಮ್ಮೇಲನದ ಅಂಗವಾದ ಕವಿಗೋಷ್ಠಿಯ ಅಧ್ಯಕ್ಷಸ್ಥಾನವು ನನ್ನದಾಗಿತ್ತು (ನವ್ಯಕಾ. ೧). **ಸಾಹಿತ್ಯಸಮ್ಮೇಳನ** : ಮೊನ್ನೆ ಹುಬ್ಬಳ್ಳಿಯಲ್ಲಿ ನಡೆದ ಸಾಹಿತ್ಯಸಮ್ಮೇಳನದಲ್ಲಿ ಈ ರೀತಿಯಾದ ಒಂದು ನಿರ್ಣಯವು ಅಂಗೀಕೃತವಾಗಿದೆ (ಸಾಹಿಶ. ೫೭). [ಸಂ.]

**ಸಾಹಿತ್ಯಸಮ್ಮೇಳನ** 'ಸಾಹಿತ್ಯಸಮ್ಮೇಲನ' ನೋ.

**ಸಾಹಿತ್ಯಸೃಷ್ಟಿ** (ನಾ). ಸೃಜನ ಅಥವಾ ಸೃಜನೇತರ ಬರವಣಿಗೆಯ ರಚನೆ : ಸಾಹಿತ್ಯಸೃಷ್ಟಿಗೆ ಈ ಶತಮಾನದಲ್ಲಿ ಇಡಿಯ ಭಾರತವರ್ಷದಲ್ಲಿಯೇ ಕರ್ನಾಟಕವು ಕೇಂದ್ರವಾಗಿದ್ದಿತೆಂಬುದು ಇದರ ಮೇಲಿಂದ ದೃಢವಾಗುವುದು (ಸಾಹಿಸ. ೫೨); ಸಾಹಿತ್ಯಸೃಷ್ಟಿಯಲ್ಲಿ ಕಣ್ಣೀರಿನ ಮಿಡಿತವು ಶಾಶ್ವತವಾದ ಗಂಭೀರವಾದ ಪರಿಣಾಮವನ್ನುಂಟು ಮಾಡಬಲ್ಲುದು (ಸಾಸಮಾ. ೧೭೦). [ಸಂ.]

**ಸಾಹಿತ್ಯಸೇವೆ** (ನಾ). ಸಾಹಿತ್ಯಕೃತಿಗಳ ರಚನೆಮಾಡುವುದು ಮತ್ತು ಅವುಗಳ ರಚನೆ, ಪ್ರಸಾರ, ಉನ್ನತಿಗಾಗಿ ಆಸಕ್ತಿವಹಿಸಿ ದುಡಿಯುವುದು: ಧಾರವಾಡದ ಆಲೂರ ವೆಂಕಟರಾಯರು . . . ಅನೇಕರಿಗೆ ಸಾಹಿತ್ಯಸೇವೆಯ ದೀಕ್ಷೆಯನ್ನು ಕೊಟ್ಟರು (ಸಾಸಮಾ. ೮). [ಸಂ. ಸಾಹಿತ್ಯಸೇವಾ]

**ಸಾಹಿತ್ಯಿಕ** (ಗು). ೧. = ಸಾಹಿತ್ಯಕ : ಶಾಂತವನ್ನು ಸಾಹಿತ್ಯಿಕರಸವೆಂದು ಒಪ್ಪಿಕೊಳ್ಳಬಹುದೋ ಇಲ್ಲವೋ (ಸಾಹಿಸಂ. ೯); ಅಕ್ಕಮಹಾದೇವಿ ಹೊಸಯುಗದ ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕಕ್ರಾಂತಿಗಳೆಲ್ಲ ಮೈವೆತ್ತು ಬಂದ ರೂಪದಂತಿದ್ದಾಳೆ (ಕರ್ನಾಕ. ೬೯). (ನಾ). ೨. ಸಾಹಿತ್ಯಕ್ಕೆ ಸಂಬಂಧಪಟ್ಟುದು : ಮೊಘಲ್ ಕಲೆ ನಿರೂಪಣಾತ್ಮಕವೂ ಸಾಹಿತ್ಯಿಕವೂ ವಾಸ್ತವವೂ ಆಗಿತ್ತು (ಭಾರದ. ೫೨೯). [ಸಂ.]

**ಸಾಹಿತ್ಯೇತಿಹಾಸ** (ನಾ). = ಸಾಹಿತ್ಯಚರಿತ್ರೆ : ಒಬ್ಬ ವ್ಯಕ್ತಿಯ ಹೆಸರಿನಿಂದ ಸಾಹಿತ್ಯವೊಂದು ಬೆಳೆದುದು ಸಾಹಿತ್ಯೇತಿಹಾಸದಲ್ಲಿ ಇದೇ ಮೊದಲು (ಭಾರದ. ೪೭೭); ಮೈಸೂರಿನ ಮುಮ್ಮಡಿ ಕೃಷ್ಣರಾಜರಿಗೆ ಕನ್ನಡ ಸಾಹಿತ್ಯೇತಿಹಾಸದಲ್ಲಿ ಒಂದು ಪ್ರಮುಖಸ್ಥಾನವಿರುವುದು (ಸಾಸಮಾ. ೧). [ಸಂ.]

**ಸಾಹಿತ್ಯೋಪಾಸಕ** (ನಾ). ರಸಾವಹವಾದ ಕೃತಿಗಳನ್ನು ಪ್ರೀತಿ, ಗೌರವ ಶ್ರದ್ಧೆಗಳಿಂದ ಅಧ್ಯಯನಮಾಡುವವನು : ಕುವೆಂಪುರವರು ನಿಜವಾದ ಸಾಹಿತ್ಯೋಪಾಸಕರು (ಸಾಸಮಾ. ೧೦೩). [ಸಂ.]

**ಸಾಹಿತ್ಯೋಪಾಸನೆ** (ನಾ). = ಸಾಹಿತ್ಯಸೇವೆ : ಸಾಹಿತ್ಯೋಪಾಸನೆಯ ಉತ್ಸಾಹವು ನೂರಾರು ಎಳೆಯ ಕಣ್ಣುಗಳಲ್ಲಿ ಹೊಳೆಯುತ್ತಿವೆ (ಜೀವಸಾ. ೧೯). [ಸಂ. ಸಾಹಿತ್ಯೋಪಾಸನಾ]

**ಸಾಹಿಯಾಣ** (ನಾ). ಒಂದು ಪ್ರದೇಶದ ಹೆಸರು ಮತ್ತು ಆ ಪ್ರದೇಶದಲ್ಲಿ ತಯಾರಾದ ವಸ್ತ್ರ : ಸಾಹಿ[ಪಾಠಾಂ. ಸುಯಿ]ಯಾಣದ ಚೀನದ ಧವಳವಟ್ಟದ ಜೊಂಗುದೇವಾಂಗದ ಸಕಳಪಟ್ಟೆಗಳುಮಂ ಮೆಟ್ಟುವೆಡೆಗಳೊಳೆಲ್ಲಂ ಪಾಸಿ (ಆದಿಪು. ೪-೩೪ ವ); ಕಾಲೋಹಣದ ಸಾಹಿಯಾಣದ ಚೀನದ . . . ಪುಟ್ಟೆಗೆಗಳನೊಟ್ಟಿ ಬೆಟ್ಟಾಗಿ ಪುಂಜಿಸಿ (ಸುಕುಮಾ. ೧೦-೯೧ ವ). [?]

**ಸಾಹು**$_1$ 'ಸಾ' ನೋ.

**ಸಾಹು**$_2$ 'ಸಾವು' ನೋ.

**ಸಾಹು**$_3$ (ನಾ). (?) : ಸಾಹಿನ ಬಿಲ್ಲಾಳುಗಳಾ ಜಾಯಿಲವ್ಯೂಹಮನತಿಜೋಕೆಯೊಳು ಸೋಹಿಸಿಕೊಂಡು ಬಂದರು (ನೇಮಿಸಂ. ೨-೧೨). [?]

**ಸಾಹುಕಾರ** 'ಸಾವಕಾರ' ನೋ.

**ಸಾಹುಕಾರಿಕೆ** 'ಸಾವಕಾರಿಕೆ' ನೋ.

**ಸಾಹೇಬ್** 'ಸಾಹೇಬ' ನೋ.

**ಸಾಹೇಬ, ಸಾಬ್, ಸಾಬ, ಸಾಬಿ, ಸಾಹೇಬ್** (ನಾ). ೧. ಒಡೆಯ; ಯಜಮಾನ: ಸಾಹೇಬರು ಇನ್ನೂ ಮನೆಗೆ ಬಂದಿಲ್ಲ (ರೂಢಿ). ೨. ಮೇಲಧಿಕಾರಿ; ವರಿಷ್ಠಅಧಿಕಾರಿ: ಸಾಹೇಬರು ಊರಲ್ಲಿಲ್ಲ. ಈ ಜಿಲ್ಲೆಯ ಆಡಳಿತಕ್ಕೀಗ ನಾನೇ ಮುಖ್ಯಾಧಿಕಾರಿಯಾಗಿದ್ದೇನೆ (ಪುನರು. ೨೨೩); ಗಂಡಿನ ಕಡೆಯ ಬೀಗರು ಅಂದರೆ ಕಚೇರಿಗೆ ಸಾಹೇಬರು ಬಂದ ಹಾಗೆ (ಪ್ನಿ.೭). ೩. ಗೌರವಸೂಚಕವಾಗಿ ಹೆಸರಿನ ಕೊನೆಯಲ್ಲಿ ಸೇರಿಸುವ ಪದ : ಅದಲು ಶಾ ಪದಾಶಹಾಸಾಹೇಬರಿಗೆ ಪುಣ್ಯವಾಗಬೇಕೆಂದು (ಬೂಂಕಶಾ. ೧೯೫೩, ಬಂಕಾಪುರ. ೧೧-೪; 1520); ಕಲೂಸಪೇಟೆಯ ರಾಜಮಹಾರಾಜೆಸಾಹೇಬರವರ್ರು (ಎಕ.IX, ಚನ್ನಪ. ೫-೭; 1799); ಇದೇ ನನೀಲಾಲಸಾಹೇಬ ಒಂದು ಕಾಲದಲ್ಲಿ ಹಣ ಸಾಲಮಾಡುವುದಕ್ಕೆ ಹೀಗೆ ಅಲೆಯುತ್ತಿರಲಿಲ್ಲವೆ? (ಸಾಹೇಬ್.೭೬೯). ೪. (ಶ್ರೀಮಂತ, ಮಹಾಶಯ ಇತ್ಯಾದಿಯಂತೆ) ಗೌರವ ಪ್ರತಿಷ್ಠೆಗಳ ಸೂಚಕವಾಗಿ ಬಳಸುವ ಪದ : ಬರ್ರಿ ಬಾಬೂ ಸಾಹೇಬ (ಕುರಿಹಿಂ. ೫೩). ೫. (ಗೌರವಪೂರ್ವಕವಾಗಿ) ಸ್ತ್ರೀಯರನ್ನು ಸಂಬೋಧಿಸುವ ಅಥವಾ ಸೂಚಿಸುವ ಪದ : ಬೀಬಿ ಸಾಹೇಬ, ಮಾಫ್ ಮಾಡಬೇಕು (ಇಪ್ಪಕ. ೧೮೩); ಮೇಮಸಾಹೇಬಳು ನನ್ನ ಹತ್ತಿರ ಬಂದು ಕುಳಿತುಕೊಂಡು, ನನ್ನ ಕಡೆಗೆ ಮಿಕಿಮಿಕಿ ನೋಡತೊಡಗಿದಳು (ಕುರಿಹಿಂ. ೧೧೧). ೬. ಇಂಗ್ಲೀಷ್ ಜನಾಂಗದವನು; ಆಂಗ್ಲ: ನಿಯೋಗಿಯು ಅಮಾನುಷರೀತಿಯಲ್ಲಿ ಸಾಹೇಬರ ಅವತಾರ ತಾಳಿದ್ದ (ಸಮುಜೀ.೯೧೧). ೭. ಮಹಮ್ಮದೀಯ; ಇಸ್ಲಾಂ ಮತಾನುಯಾಯಿ: ಮಸೀದಿಯ ಮುಂದೆ ಒಬ್ಬ ವಯಸ್ಸಾದ ಸಾಹೇಬರು ನಿಂತಿದ್ದರು (ರೂಢಿ). **ಸಾಬ್**: (೬). **ಸಾಬ** : ೭. 'ಎಮ್ಮನ್‌ಸಾಹೇಬ್' ಎಂದರೆ ಸಾಬನಲ್ಲ ಮತ್ತೆ ಪಕ್ಕಾ ಬ್ರಾಹ್ಮಣಜಾತಿ! (ಕಂಬಹು. ೪೧); ಎಲ್ಲಾ ಸಾಬರ ಮನಸ್ಸೂ ಮುರಿದುಹೋಗಿತ್ತು (ತುಟಮಿ. ೭೭). **ಸಾಬಿ** : ೩. ಕುನ್ದಗ್ರಾಮದ ಜಹಗೀರದಾರ್ ಹಯತ್ತಖಾನಸಾಬಿ ಯಾ ಮೇರೆ (ಎಕ. IX, ಕೊಡಗು. ೨೯-೨೯; 1857). ೭. ಸೊಕ್ಕಿನ ಸಾಬಿ ಈಗೇಕೆ ಮಾತು (ತುಟಮಿ. ೧೨೫); ೫-೬. ಆಡುಗಳನ್ನು ಆಡಿಸುತ್ತಾ

ಒಬ್ಬ ಸಾಬಿ ಇದ್ದ (ದಿಲ್ಲಿಪ. ೪೯). **ಸಾಹೇಬ್** : ೩. ರಾವ್‌ಸಾಹೇಬ್ ಮತ್ತು ತಾತ್ಯಾಟೋಪೆಯವರು . . . ಮುಂದಿನ ಯುದ್ಧಯೋಜನೆಗಳನ್ನು ರಚಿಸತೊಡಗಿದರು (ಝೂರಾಣಿ.೩೦೩). ೪. ಸಾಹೇಬರೆಂದರೆ ಸಾಹೇಬ್ ನನೀಸಾಹೇಬರು (ಸಾಹೇಬ್. ೭೩೯). ೫. ಇಲ್ಲ ಬಾಯಿಸಾಹೇಬ್, ಅವನು ತ್ಯಜಿಸಿಲ್ಲ (ಝೂರಾಣಿ. ೧೭೫).
[<— ಅರ. ಸಾಹಿಬ್; ಹಿಂ. ಸಾಹಬ್, ಸಾಹೇಬ್; ಮರಾ. ಸಾಹೇಬ್, ಸಾಬ್]

**ಸಾಹೇಬಕಿ** (ನಾ). ದೊಡ್ಡಸ್ತಿಕೆ; ಹಿರಿತನ: ನಾನು ಭಾವಿಸಿದೆ . . . ನನ್ನ ಸಾಹೇಬಕೀಯ ರೈಲುಗಾಡಿಯನ್ನು ಹತ್ತಿ . . . ದರ್ಪದೊಂದಿಗೆ ಅಲ್ಲಿಂದ ಹೊರಟು ಹೋಗಿಬಿಡಬೇಕೆಂದು (ಇಪ್ಪತ. ೧೮೨). [< ಸಾಹೇಬ]

**ಸಾಹೇಬಗಿರಿ** (ನಾ). = ಸಾಹೇಬಕಿ : ಪಂಡಿತನಿಗೆ ಸಾಹೇಬಗಿರಿಯನ್ನು ಮಾನವೀಯರೀತಿಯಲ್ಲಿ ಮುಟ್ಟಬೇಕೆಂಬ ಇಚ್ಛೆಯಿತ್ತು (ಸಮಜೀ. ೯೧೧).
[ಸಾಹೇಬ + - ಗಿರಿ$_2$]

**ಸಾಹ್ಯ, ಸಾಯ$_1$** (ನಾ). ಸಹಾಯ ; ನೆರವು : ಅರಿಗಾವುದು ತಕ್ಕುದಾರಿಗಾವುದು ದಕ್ಕದೀ ರಹಸ್ಯದಿನಾದ ಸಾಹ್ಯವುಪಕಾರ ತಾರತಮ್ಯ ವಿವೇಕವರಿಯದಾ ಸಂಸ್ಕಾರ ಪ್ರೇರಕವೊ ಚೌರ್ಯಕ್ಕೆ (ಮಂಕುತ. ೮೭೧); ವಾಗೀಶನ ಸಾಹ್ಯವನ್ನು ಪಡೆದು ಕೊಂಡು (ಬೆನ್ನಬೇ. ೩೭). **ಸಾಯ$_1$** : ಮನೆಪ್ಪಂದ್ರ ಪುಜ್ಯೆಯ ಬಾಗಿಲು ನಿಲಕೆ ಸಾಯ ಮಾಡಿರೆದ (ಎಕ. IX, ಕೊಡಗು. ೨೯-೨೧; 1857); ಆದವರು ಆ ಬಡಪಾಯಿಗೆ ಅಷ್ಟು ಸಾಯಾ ಮಾಡಿರಯ್ಯ (ಮಲ್ಲಿ. ೯). [< ಸಂ. ಸಾಹಾಯ್ಯ./ ತುಳು. ತೆಲು. ಸಾಯ./ ಮರಾ. ಸಾಯ]

**ಸಾಹ್ಯಕ, ಸಾಯಕ$_1$** (ನಾ). ೧. ನೆರವುನೀಡುವವನು ; ಸಹಾಯಕ : ಈ ಇನಾಮದಾರರು ಮೊದಲಿಗೆ ಅರಸನಿಗೆ ಸಾಹ್ಯಕರಾಗಿದ್ದು . . . ಅಭಿಪ್ರಾಯಗಳು ಕೇಳಲ್ಪಡುತ್ತಿದ್ದವು (ಮುಂಬಯಿ. ೫-೨೫೭). **ಸಾಯಕ$_1$** : ೨. ನೆರವುನೀಡುವಂಥದು; ಸಹಾಯಕವಾಗುವಂಥದು : ಬಹಳ ಕಪಟೋಪಾಯಕಿದು ಸಾಯಕವಲೇ ತಿಳಿಯೆ (ಕೋಗಯ. ೧೭-೪೦). [< ಸಂ. ಸಾಹಾಯ್ಯಕ]

**ಸಾಳ$_1$** 'ಸಾಲ$_2$' ನೋ.

**ಸಾಳ$_2$** (ನಾ). ಒಂದು ಬಗೆಯ ವಾದ್ಯ : ಭೋರ್ಗರೆದುವನಿತಱೊಳ್ ಸಾಳ ನಿಃಸಾಳಂ (ಚೆಬಪು. ೩೧-೩೦). 'ನಿಸ್ಸಾಳ' ಪರಾ. [?]

**ಸಾಳಂಗ$_1$** (ನಾ). ೧. [ಸಂಗೀತ] ಒಂದು ರಾಗದ ಹೆಸರು : ಸಾಳಂಗ ನಾಟಿ ಭೈರವಿ ದೇಶಿ ಗುಜ್ಜರಿ . . . ಭೈರವಿ[ಯಱಿ]ದೊಳವನವನೊಲ್ದು ಪಾಡಿದ (ತ್ರಿಭುತಿ. ೬-೩೦); ಪಾಡಿ ವಸಂತ ಸಂಕೀರ್ಣ . . . ಸಾಳಂಗಗಳೆಂಬ ಗಾಡಿಕಾತಿಯರು ಗಾನವನಾಲಾಪವಮಾಡಿದರು (ಸೊಬಸೋ. ೨೪-೩೫); ಲಲಿತ ಸಾಳಂಗ ಸಾವೇರಿ ಗುಜ್ಜರಿ ಗೌಳ ಪಳಮಂಜರಿಗಳೆಂಬ ವಿವಿಧ ರಾಗಂಗಳಂ (ಜೈಮಿಭಾ. ೨೧-೫೭). ೨. ಒಂದು ಬಗೆಯ ವಾದ್ಯ : ಪರಮೇಶ್ವರಮುಖಕಮಳವಿನಿರ್ಗ್ಗತ ಸು[ಶು]ದ್ಧಸಾಳಂಗ ಬ್ರಹ್ಮವೀಣಾದಿ ಗೇಯ ಗಾಂಧರ್ಬ್ಬ[ರ್ವ] (ಕೊಲ್ಹಾಶಾ. ೨೧-೧೫; 1209); ತಾಳ ಮದ್ದಳೆ ಪಾವುಜ ಶ್ರುತಿ ಮುಖವೀಣೆ ಸಾಳಂಗ ಶುದ್ಧ ಗಾನೆಯರ ಮೇಳ (ಮೋಹತ. ೩-೩೧). ೩. ಮದ್ದಳೆಯನ್ನು ನುಡಿಸುವ ಒಂದು ಕ್ರಮ : ಶುದ್ಧ ಸಾಳಂಗ ಸಂಕೀರ್ಣ ತವಣೆಗಳೆಂಬ ಚತುರ್ವಿಧಮೃದಂಗಮಂ ಮೇಲ್ಕೈಸಿ (ಭೈರಪು. ೫-೫ ವ). ೪. (?) : ಸರಿಸಕೆ ಸರಿಸ ವಿಷಮಕೆ ವಿಷಮಗತಿ ಶರಸಾರ ಸಾಳಂಗದಲಿ ರಂಜಿಸಿದ (ಕುಮ್ಯಾಕ.೨೦-೩೪). [ಸಂ. ಸಾಲಂಗ]

**ಸಾಳಂಗ$_2$** (ನಾ). ಒಂದು ಬಗೆಯ ಬಟ್ಟೆ : ರಂಗು ಚಿತ್ರ ವಸಂತರತಿ ಸಾಳಂಗ ಗುಜ್ಜರಿ ರತುನ . . . ಸುರಾಗರಚಿತ ತುರಂಗವಿಲಸಿತವಸನ ಬಾಲಕೆ ಸೇರಿದವು ಕಪಿಯ (ತೊರರಾ. ೫-೮-೧೭). 'ಸಾಱಿಗೆ' ಪರಾ. [?]

**ಸಾಳಗ** 'ಸಾಲಗ$_2$' ನೋ.

**ಸಾಳಗಸೂಳ** (ನಾ). [ಸಂಗೀತ] ಹಾಡುವ ಒಂದು ಕ್ರಮ : ಧ್ರುವ ಮಟ್ಟೆಯ ರೂಪಕ ಝುಂಪೆ ತಿವಡೆ ಅಟತಾಳ ಏಕತಾಳ ಮೊದಲಾದ ಸಾಳಗಸೂಳಮಂ ಪಾಡುವಲ್ಲಿ (ವಿರೂಪಾ. ೬೩ ವ). [< ಸಂ. ಸಾಲಗಸೂಡ]

**ಸಾಳಾಂಗ** (ನಾ). ಒಂದು ರಾಗದ ಹೆಸರು : ಶುದ್ಧ ಸಾಳಾಂಗ ಗತಿವಡೆದ ರಾಗದಲ್ಲಿ ಪರಿಷ್ಕಾಯಕದಳ ಕಂಮರನು ಪೂಜಿತನು ರಸವನಾಲಿಸುತ (ಸರ್ವಪ. ೯೦-೪೯೯).
[< ಸಂ. ಸಾಲಂಗ]

**ಸಾಳಿ** 'ಸಾಲಿ$_2$' ನೋ.

**ಸಾಳಿಗೆ$_1$** 'ಸಾಲಿಗ$_2$' ನೋ.

**ಸಾಳಿಗೆ$_2$** 'ಸಾಱಿಗೆ' ನೋ.

**ಸಾಳಿಗ್ರಾವ** 'ಸಾಲಿಗ್ರಾಮ' ನೋ.

**ಸಾಳುವ$_1$, ಚಾಳುವ, ಸಳವ, ಸಾಳ್ವ$_1$** (ನಾ). ಬೇಟೆಗಾಗಿ ಪಳಗಿಸುವ ಒಂದು ಬಗೆಯ ಹಕ್ಕಿ ; ಗಿಡುಗ ; ಡೇಗೆ : ಪುಲ್ದಂಡೆ ಬೆಳ್ಳಾರ್ಪಟಮೆರೆ ಬಲೆಗಳ್ ಸಾಳುವಂ ಕೂಳೆಗಾಳಂ . . . ದೀಹದ ಪುಲಿ (ಗಿರಿಕ. ೧-೭೯); ಕೊಂಡುದಂತದುವೆ ಸಾಳುವನಲ್ಲದು ತೃಪ್ತಿತತ್ತಲಾ ಕೊಂಡುದು ಜಾಯಿಲಂ (ಸೂಕ್ತಿಸು. ೩-೧೨೧); ಸಾಳುವನ ಕೂಡರಗಿಳಿಗೆ ಸಮಮೇಳವೇ (ಕುಮ್ಯಾಕ. ೧೧-೫೮). **ಚಾಳುವ** : ಚಾಳುವನ ಹಕ್ಕಿಯನು ಪಾಳೆಯದ ನಾಯಿ ಹಿಡಿದುದ ಕಂಡೆನಯ್ಯ (ಸಿದ್ಧೇವ. ೧೯೨-೫೮೪). **ಸಳವ** : ಸುಟ್ಟುರೆಯ ಬಿರುಬಿಂಗೆ . . . ನಭಕ್ಕೇರುತಿವೆ ಪೆರ್ಗೋಡುಗಳ್, ತಾಯಿ, ಸಳವನೆರಗಿದ ಖಗದ ತಿಪ್ಪುಳ್ಗರಿಗಳಂತೆ ! (ಶ್ರೀರಾಮಾ. ೫೨೬-೭೦೮). **ಸಾಳ್ವ$_1$** : ಮುಂಗುರಿಯುಂ ಖಗಮಂ ಸಾಳ್ವಗಳಿರಲಾಜ್ಞೆಯ ಲಿಂಬುಗೊಂಡನಾ ವನರಾಜಂ (ಮಲ್ಲಕಾ. ೩-೧೯೦); ಗಿಳಿಯು ಗಿಡಗನ ಕೂಟ ಮಱಿಗೋಗಿಲೆಯ ಸಾಳ್ವನ ಸಖ್ಯ (ತೊರರಾ. ೧-೫-೪೩); ಹರಡೆ ಗವುಂಜು ಲಾವುಗೆ ಕಪೋತನು ಸಾಳ್ವನು ಚೆಟ್ಟಿ ಟಿಟ್ಟಿಭಂ (ನನ್ನಬಾ. ೬-೨೧೩); ಪಿಂಗಳಿಕ ಸಾಳ್ವನರಳಿಗ (ರುಕ್ಮಾಂಗ. ೧೦-೫). [ದೇ. ‖ ತೆಲು. ಸಾಳುವ, ಸಾಳ್ವ]

**ಸಾಳುವ$_2$, ಸಾಳ್ವ$_2$** (ನಾ). ೧. ವಿಜಯನಗರವನ್ನು ಆಳಿದ ಒಂದು ರಾಜ ವಂಶದ ಹೆಸರು : ಸಾಳುವ ಮಲ್ಲಿರಾಜೇಂದ್ರ (ಕ಼. I, ೬೨-೫; 1481); ಸಾಳುವ ನರಸಿಂಗರಾಯ ಮಹಾರಾಯ (ಎಕ. XVI, ಚಿಕ್ಕನಾ. ೮೬-೭;1497); ಸಾಳುವ ನೃಸಿಂಹರಾಜ್ಯ (ಎಕ. VII, ಶಿವಮೊ. ೮೩-೨೩; 1587). ೨. ರಸರತ್ನಾಕರ, ಸಾಳ್ವಭಾರತ ಮುಂತಾದ ಕೃತಿಗಳನ್ನು ರಚಿಸಿದ, ಹದಿನಾರನೆಯ ಶತಮಾನದ ಒಬ್ಬ ಕನ್ನಡಕವಿಯ ಹೆಸರು: ಪಟ್ಟದಾ ಕವಿಯೆಂದೊಡೆಣ್ದೆಸೆ ಮುಟ್ಟೆ ಪಸರಿಪುದರಿದೆ ಗುಣವಳವಟ್ಟ ನಿರ್ಮಲ ಕೀರ್ತಿಯಾತನ ಸುಕವಿ ಸಾಳುವನ (ಸಾಳ್ವಭಾ. ೧-೩೩). **ಸಾಳ್ವ$_2$** : ೧. ವಿಜಯನಗರವನ್ನು ಸಾಳ್ವ ಮನೆತನದವರೂ ಆಳಿದರು (ರೂಢಿ). ೨. ಸಾಜಕವಿ ಕರ್ಣಾಟಲಕ್ಷಣದೋಜೆಗನು ಕವಿಸಾಳ್ವನಿಂ ಜಿನರಾಜಚರಿತೆಯ ಭಾಮಿನೀಷಟ್ಪದಿ ಯಲುಸುರೆಂದು ಸುರಸ ಸಾಳುವದೇವಭೂಪತಿ ನಿರವಿಸಿದನು (ಸಾಳ್ವಭಾ. ೧-೩೫); ಮಾರ್ಗಸಾರಂಗಳಿಂ ರಸರತ್ನಾಕರಮಂ ಸಮಂತು ಕವಿಸಾಳ್ವಂ ಪೇಟ್ದನೊಳ್ಪೆಂಬಿನಂ (ರಸರ. ೧-೫).

**ಸಾಳ್ವ$_1$** 'ಸಾಳುವ$_1$' ನೋ.

**ಸಾಳ್ವ$_2$** 'ಸಾಳುವ$_2$' ನೋ.

**ಸಾಱಿಕೆ** (ನಾ). ಪ್ರಕಟಣೆ; ಘೋಷಣೆ: ತೋಱಿಸುವೆನರೆಘಳಿಗೆಯಲಿ ನಗೆಗಾಱರಿಗೆ ಹಗರಣವ ಸನ್ನೆಯ ಸಾಱಿಕೆಯಿದೀಗೆಂದು ಸಂತೈಸಿದನು ಸುಗ್ರೀವ (ತೊರರಾ. ೬-೨೭-೫೮). [ಸಾಱು$_1$ + - ಇಕೆ]

**ಸಾಱಿಸು, ಸಾರಿಸು$_1$** (ಕ್ರಿ). ಡಂಗುರ ಹೊಡೆಸು; ಘೋಷಣೆ ಮಾಡಿಸು; ಪ್ರಕಟಗೊಳಿಸು : ರಾಜ್ಯಾರ್ಹರಲ್ಲದವರ್ ಬರವೇಡ ಸಿಂಹಾಸನಸ್ಥರೆ ಬರ್ಪುದೆಂದು ಸಾಱಿಸಿ (ಜಗವಿ. ೮-೭೮ ವ); ಲಗ್ನೆ ಮಾಡಲೊಲ್ಲದೆ ಪಡೆಯಂ ಸಾಱಿಸಿ . . . ತೆಗೆಯವೇಟ್ದನಾ ವಸುಷೇಣಂ (ಅನಂಪು. ೧೨-೨೭); ಹೊಳಲ ಪರಿವಾರಕ್ಕೆ ಸಾಱಿಸು ಕೆಲಬಲದ ರಾಯರಿಗೆ ದೂತರ ಕಳುಹಿ ನೆರಹಿಸು (ಕುಮ್ಯಾಭೀ. ೧-೮). **ಸಾರಿಸು$_1$** : ಅಮರಾವತಿಯ ಬೀದಿಯೊಳ್ ಸಾರಿಸಿಯೆಂದು ಗೊತ್ತುಗಾರನಿಗೆ ಅಪ್ಪಣೆಯನಿತ್ತು (ಸೌಗಂಧಿ. ೫೦೩-೧೨); ಬಾದಶಹನು . . . ಈ ಹೊತ್ತು ಕೊತವಾಲನ ತಲೆ ಹೊಡಿಸುತ್ತೇವೆಂದು ಡಂಗುರವ ಸಾರಿಸಿದನು (ಮುಂಬಯಿ. ೪-೨೦); ಸುಂಕ ಇಷ್ಟು ಕೊಡಬೇಕೆಂದು ಸಾರಿಸಿರಲಿಲ್ಲವೇನಯ್ಯ (ಚಂಗಾಳ್ವ. ೩೭೭). [ಸಾಱು$_1$ + - ಇಸು$_3$]

**ಸಾಱು$_1$, ಸಾರು$_2$** (ಕ್ರಿ). ೧. ಡಂಗುರಹೊಡೆ; ಘೋಷಿಸು; ಪ್ರಕಟಪಡಿಸು: "ಸಾಱು-ಘೋಷಣೇ, (ಡಂಗುರಹೊಡಿ), ರಸಾರ್ದ್ರೀಚ (ಬೇಳೆಯ ಸಾರು)" (ಶಮಭಾ); ಸಾಱುಗಾನೆಯುವರೆಲ್ಲರುಮಂ ನೃಪ[ತಾ]ನೆ ಮತ್ತೇಱು[ವಂ] ಪಣೆದೊಡಾನೆಯಂ (ಕವಿರಾ. ೧-೧೩೪); ಮೂಱುಸೂಟ್ಟುರಂ ಸಾಱಿ ನುಡಿದು (ಪದ್ಮರಾ. ೧೧೬-೬); ತಂಡದೆ

ಕೀೞ್ ಸಾಱುವ ಪಲರ್ ಪಡೆವಳ್ಳರ ಮಾತುಗಳ್ ಮನಂಗೊಂಡಿರೆ (ಪಂಪಭಾ. ೧೦-೪೯); ಮಱುದಿವಸ . . . ಪರಿಣಯವೆಂದು ಸಾಱಿತು ಪಾಳೆಯಂಗಳಲ್ಲಿ (ಕುವ್ಯಾಅ.೧೩-೧). ೨. ಒತ್ತಿಹೇಳು; ಖಂಡಿತವಾಗಿ ಹೇಳು : ಸಾಱಿದಂ ಕೆಡಬೇಡ ತೊಲಗು ಹರಿವಿಧಿಗಳಂ ಗಾಱಾಗಿಸಿದ ವಿಕ್ರಮಂ ಸಲ್ಲದು (ಚಬಪು. ೪೯-೫೧). **ಸಾರು$_2$** : ೧. ಮುಖದಲ್ಲಿ ಉಂಟಾಗುವ ವಿಕಾರಗಳೂ . . . ಇದನ್ನು ಸಾರುತ್ತವೆ (ದೇಕಸ್ವ. ೨೫); ಈ ಬ್ರಾಹ್ಮಿಲಿಪಿ ಹುಟ್ಟಿ ಬೆಳೆದದ್ದು ಭಾರತದಲ್ಲಿಯೇ ಎಂದು ಸಾರಿದ್ದಾರೆ (ದ್ರಾವಿವಿ. ೪೮).

**ಸಾಱುಸಾಱು, ಸಾರುಸಾರು** (ದ್ವಿರುಕ್ತಿ) : ೧. ಒತ್ತಿ ಹೇಳು; ಖಂಡಿತವಾಗಿ ಹೇಳು : ಸಾಱುಸಾಱಲು ಎನ್ನ ಮಾತಂ ಮೀಱಿ ಕಳುಹಿದೆ ಮತ್ತಕರಿಯಂ (ಬಸಪು.೨೨-೨೨). ೨. ಪ್ರಕಟಪಡಿಸು; ಪ್ರಚಾರಮಾಡು : ಗೋವಿಂದಭಟ್ಟ ಊರತುಂಬ ಇಡೀದಿನ ಅಲೆದು . . . ಮಗನ ಮಹತಿಯನ್ನು ಸಾರಿಸಾರಿ ಬಂದ (ದೀಪಹ. II, ೧೫೦). **ಸಾರಿಸಾರಿಹೇಳು** = ಸಾಱುಸಾಱು ೧ : ಈ ಸಮಯದಲ್ಲಿ ದುಡುಕಿಮಾತನಾಡುವುದು ಒಳ್ಳೆಯದಲ್ಲವೆಂದು ಅವರು ಮಗನಿಗೆ ಸಾರಿಸಾರಿ ಹೇಳಿದರು (ರೂಢಿ).

[ದೇ. ‖ ತಮಿ. ಮಲ. ಚಾಱು$_{ii}$; ತುಳು. ಸಾರಿ, ಸಾರು; ತೆಲು. ಚಾಟು]

**ಸಾಱು$_2$, ಸಾರು$_3$** (ನಾ). ಅನ್ನದೊಂದಿಗೆ ಕಲಸಿಕೊಳ್ಳಲು ಬಳಸುವ, ಸಾಮಾನ್ಯವಾಗಿ ಬೇಳೆ ಅಥವಾ ಕಾಳು, ಸಂಬಾರಪದಾರ್ಥ ಮುಂತಾದುವನ್ನು ಹಾಕಿ ತಯಾರಿಸುವ ಒಂದು ಬಗೆಯ ರಸ,— ಮೇಲೋಗರ: ಹುಳಿದಾಳಿದ ಸಾಱು ಶಿಖರಿಣಿ ಬಹುಕೂಟದಳೆದ ನಿಂಬೆಯ ಹಣ್ಣ ಸವಿದು (ಮೋಹತ. ೩-೫೩); ರಸ ರಸಾಯನ ಸಾರ್ಗಳುಪ್ಪುಗಾಯ್ಗಳುಕಂ (ಜೈಮಿಭಾ. ೬-೪೪). **ಸಾರು$_3$** : ಸಾರನ್ನು ಬಡಿಸುವಾಗ ಅದು ಹರಿದು ಪಲ್ಲೆಯಲ್ಲಿ ಸೇರಿದರೆ ಕ್ಷಮಿಸಲು ಸಾಧ್ಯವೆ (ಹುಚ್ಚುಹು. ೧೩); ಅಡಿಗೇ ಗುಣ ಸಾರಿನಲ್ಲಿ ನೋಡು, ಮಡಿಗೇ ಗುಣ ಫಲದಲ್ಲಿ ನೋಡು (ಗಾದ).

[ದೇ. ‖ ತಮಿ. ಮಲ. ಚಾಱು ; ತುಳು. ಚಾರ್, ಚಾರು, ಸಾರು ; ತೆಲು. ಚೇರು]

**ಸಾಱೆದೆ** (ನಾ). ಒಂದು ಸ್ಥಳದ ಹೆಸರು : ಕೆಸವೂರ ಮಹಾಜನಕ್ಕೆ ಸಾಲೆ ಆಚನ್ದ್ರತಾರಕಂ ಸಾಱೆದೆ ಮಹಾಜನಕ್ಕೆ ಎರಡು ಸಾಲೆ ಆಚನ್ದ್ರಕಾರಕಂ (ಎಕ. VII, ಶಿಕಾರಿ. ೪೫-೧೫; 890 ?). [?]

**ಸಾಱೆಗೆ, ಜಾಱೆಗೆ, ಸಾಳಿಗೆ$_1$** (ನಾ). ಉಡುಗೆ; ಉಡುಪು : "ಸಾಱೆಗೆಯೆಂದು ಉಡುಗೆ" (ಕಶಸಾ. ೬೩-೩೯೫); ದುಕೂಲದ ಚೆಲ್ವನಪ್ಪ ಸಾಱೆಗೆಗೆ ಪಯೋಜಸೂತ್ರ ನವಮುಂಜಿಗೆ (ಶಾಂತಿಪು. ೮-೯೦). **ಜಾಱೆಗೆ** : "ಜಾಱೆಗೆಯೆಂದು ಉಡಿಗೆ" (ಶಮದ. ನ. ೩೩ ವೃತ್ತಿ) ; ಜಾಱೆಗೆ, ಜೋಱೆಗೆ (ಶಬ್ದಾನು. ೧೪೦ ವ್ಯಾಖ್ಯಾ). **ಸಾಳಿಗೆ$_1$** : "ಉಡಿಗೆಯೊಳು ಸಾಳಿಗೆಯೆನಿಕ್ಕು" (ಕಶರ. ೧೩೦). 'ಸಾಲೆ$_2$', 'ಸಾಳಿ' ಪರಾ.

**ಸಿಂಗ$_1$, ಸಿಂಘ$_1$** (ನಾ). ೧. ಸಿಂಹ; ಕೇಸರಿ : "ಐಮೊಗಮೆಂದುಂ, ಸಿಂಗಮೆಂದುಂ ಸಿಂಹಂ" (ಕಶಸಾ. ೫೧-೧೦೦); ತುಂಗಗಿರಿಶಿಖರದಿಂದಂ . . . ಸುರಿಗೆಯ ಮೊನೆಯೊಳ್ ಪೊಂಗಿ ಸೊಡರ್ಗುಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಕಾವ್ಯಸಾ. ೧೧೧೪ ಶೂದ್ರಕ); ಸಿಂಗಂ ಮಸಗಿದವೋಲ್ ನರಸಿಂಗಂ ತಳ್ತಿಱಿಯೆ (ಪಂಪಭಾ. ೧-೩೪); ಅಂಗವಿಸಿ ಮಱಿಹುಲ್ಲೆ ಖುರದಲಿ ಸಿಂಗವನು ಹೊಯ್ವಂತೆ ನೃಪರುತ್ತುಂಗ ಸಹಸಿಯ ಮೇಲೆ ಕೈಮಾಡಿದರು (ಕುವ್ಯಾಭೀ. ೯-೨೦). ೨. ಒಬ್ಬಾತನ ಹೆಸರು: ಅರಟ್ಟXXರಮ್ಮಗನ್ದಿರ್ ಸಿಂಗಂ ದೀಕ್ಷೆ ಬೀಳಾದು ಅರಟ್ಟತೀರರ್ ಕುಡಲೂರದ ಗೊಟ್ಟಿಮಡಿ ಒಡೆಯೆಮ್ಮರಾಳ್ಕೆಕಯ (ಎಕ. III, ಮೈಸೂರು. ೨೫-೩; ಸು. 750). ೩. [ಛಂದ] ಆರು ಬಗೆಯ ಪ್ರಾಸಗಳಲ್ಲಿ ಒಂದು; ಸಿಂಹಪ್ರಾಸ : ನಿಜದಿಂ ಬಂದೊಡೆ ಸಿಂಗಂ ಗಜ ದೀರ್ಘಂ . . . ಹಯಮಂಬುಜಮುಖಿ ದಡ್ಡಕ್ಕರಂಗಳಿವು ಷಟ್ಪ್ರಾಸಂ (ಛಂದೋಂಬು. ೧-೪೬ ಆದಿಪದ್ಯ). ೪. [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಐದನೆಯದು; ಸಿಂಹರಾಶಿ. ೫. ಸೌರಮಾನಪದ್ಧತಿಯ ಒಂದು ತಿಂಗಳಿನ ಹೆಸರು; ಸಿಂಹಮಾಸ : 'ಸಿಂಗವೆರೆ' ಪರಾ. **ಸಿಂಘ$_1$** : ೧. ಕಟ್ಟಿದ ಸಿಂಘಮನ್ಕಟ್ಟೊಡೇನೆ ಮಗೆನ್ದು ಬಿಟ್ಟವೊಲ್ ಕಲಿಗೆ ವಿ[ಪ]ರೀತಂಗಹಿತರ್ಕ್ಕಳ್ ಕೆಟ್ಟುರ್ಮೆಣ್ ಸತ್ತರವಿಚಾರಂ (ಇಆ. X, ೬೧-೯; ಸು. 700); ಆನೆಯ ಸಿಂಘದ ಗಿಳಿಗಳ ನಾನಾ ರೂಪುಗಳನಕ್ಕರಂಗಳೊಳೆಸೆಯಲು ತಾನಳವಡಿಸಿದನ್ (ಎಕ. XI, ಚಿತ್ರದು. ೪೭-೩೭; 1067).

**ಸಿಂಗದೇರಳ್, ಸಿಂಗದೇರವಳ್** = ಸಿಂಹವನ್ನು ವಾಹನವಾಗಿ ಉಳ್ಳವಳು; ಪಾರ್ವತಿ : "ಮಾಕಾಳಿ, ಮಾದೇವಿ, ಸಬ್ಬಾಣಿ, ಐಕಿಲ್ವೆಟ್ಟಣುಗಿ, ಸಿಂಗದೇರಳ್ — ಈ ೫ ಪಾರ್ವತಿಯ ಪೆಸರ್" (ಕಶಸಾ. ೪೭-೩); "ಐಕಿಲ್ವೆಟ್ಟಣುಗಿ ಸಿಂಗದೇರವಳ್ ಸಬ್ಬಾಣಿಯೆಂದು ಶಿವೆಯ ಲಳಿತನಾಮಂ" (ಕಬ್ಬಕೈ. ೫). **ಸಿಂಘನ ಗರುಡ** = (ಆಲಂ) ಅತ್ಯಂತ ಪರಾಕ್ರಮಿ; ಒಂದು ಬಿರುದು : ಸುಭಟಶಿರಶ್ಶೇಖರಂ ಸಮರೈಕವೀರಂ . . . ಕಟಕಸನ್ನಾಹಂ ಸಿಂಘನ ಗರುಡಂ ಶ್ರೀಜಗದೇಕಮಲ್ಲದೇವರ ಮಗಂ (ಸೌಇಇ. XX, ೨೧-೪೭; 1019). [< ಪ್ರಾ. ಸಿಂಘ./ ಸಂ. ಸಿಂಹ]

**ಸಿಂಗ$_2$, ಸಿಂಗಿ$_2$** (ನಾ). ೧. ಬೆಟ್ಟದ ತುದಿ, — ಶಿಖರ; ಶೃಂಗ: "ಶೃಂಗಕೇಸರಿಗಳೊಳ್ ಮದನನಲ್ಲಿ ಅಱಿಗೆ ಸಿಂಗಮದೆಂದು" (ಶಬ್ದಮಂ. ೮೪); ಶೃಂಗ, ಸಿಂಗ (ಶಬ್ದಾನು. ೧೫೮ ಪ್ರಯೋ). ೨. (ಪ್ರಾಣಿಗಳ) ಕೊಂಬು; ಕೋಡು : 'ಸಿಂಗನಾದ$_2$' ಪರಾ. **ಸಿಂಗಿ$_2$** : ೨. 'ಸಿಂಗಿನಾದ' ಪರಾ. [< ಪ್ರಾ. ಸಿಂಗ./ ಸಂ. ಶೃಂಗ]

**ಸಿಂಗ$_3$** (ನಾ). ಕಾಮ; ಮನ್ಮಥ: ಕುಡುವಿಲ್ಲ ಪೂಪುಣಂಬಂ ಸುಗ್ಗಿಗೆಳೆಯ ಪೆಣ್ಬಡೆಯನಿಂಗೋಲ್ವಿಲ್ಲಂ ಗಿಳಿದೇರ ಸಿಂಗ ಪೆಱಗೊಡೆಯ . . . ಎಂಬಿವಿಂತೊಡನೆ ಮನ್ಮಥನಾಮ" (ಶಬ್ದಮಂ. ೮); "ಶೃಂಗಕೇಸರಿಗಳೊಳ್ ಮದನನಲ್ಲಿ ಅಱಿಗೆ ಸಿಂಗಮದೆಂದು" (ಶಬ್ದಮಂ. ೮೪). [?]

**ಸಿಂಗಕೇಸರಿ** (ನಾ). ಬೆಟ್ಟಮಲ್ಲಿಗೆ ; ಕೊಡಸಿಗೆಮರ : "ಸಿಂಗಕೇಸರಿ ಶಕ್ರಶಾಖಿಯೆನಿಸಿಕ್ಕು" (ಮಂಗರಾ. ೩೬-೧೯). [< ಸಂ. ಸಿಂಹಕೇಸರ]

**ಸಿಂಗಗಟ್ಟಿಗೆ** (ನಾ). ಬೇಟೆಯ ಸಾಧನಗಳಲ್ಲಿ ಒಂದು ; ಸಿಂಹವನ್ನು ಹಿಡಿಯಲು ಬಳಸುವ ಒಂದು ಬಗೆಯ ಮರದ ಸಾಧನ : ತಡಿಕೆವಲೆ . . . ಹಿಡಿಯರಳೆ ಸಿಂಗ[ಪಾಠಾಂ. ಸಿಲುಕು]ಗಟ್ಟಿಗೆ ಬೀಸುಗಣ್ಣೆ . . . ಕತ್ತಿ ಬಡಿಕೋಲ್ಕಲ್ಲಿ ಹಿಡಿದ ಹುಲಿ ಶರಭಭೇರುಂಡ ಸಿಂಹಪ್ರಕರವೆರಸಿ ನಡೆವರ ಕಂಡನು (ಆಸಪು. ೩-೧೪ ; ಹಚಕಾ. ೫-೯ ನೋ).

[ಸಿಂಗ$_1$ + ಕಟ್ಟಿಗೆ$_1$]

**ಸಿಂಗಡಿ$_1$** 'ಸಿಂಗಾಡಿ' ನೋ.

**ಸಿಂಗಡಿ$_2$** 'ಸಾಂಗಡ' ನೋ.

**ಸಿಂಗಡಿಅರಸ** (ನಾ). ಒಬ್ಬಾತನ ಹೆಸರು : ಕುನ್ದಸತ್ತಿಅರಸಂ ವಡಗೆರೆನಾಡು ಮೂನೂಱುಮಾಳೆ ಮುದುಗುನ್ದೂರ ಸಿಙ್ಗಡಿಅರಸ ಪುವಗಾಮಮಾಳ್ದುವಿದ್ದರ್ (ಎಕ. VII (R), ಮಳವ. ೧೨೨-೬; 776). [ಸಿಂಗಡಿ$_?$ + ಅರಸ]

**ಸಿಂಗಣ** 'ಸಿಂಗಳ$_1$' ನೋ.

**ಸಿಂಗಣಂದಿ** (ನಾ). ಒಬ್ಬಾತನ ಹೆಸರು : ಶ್ರೀ ವಟ್ಟೆದೆಗುರವಡಿಗಳ್ಮಾಣಾಕ್ಕಸ್ಸಿಂಗಣನ್ದಿ ಗುರವಡಿಗಳ್ನೋನ್ತು ಕಾಲಂ ಕೆಯ್ದಾರ್ (ಎಕ. II, ೩೨; ಸು. 700).

[< ಸಂ. ಸಿಂಹನಂದಿನ್]

**ಸಿಂಗಣಿಕ$_1$** 'ಸಿಂಗಳೀಕ' ನೋ.

**ಸಿಂಗಣಿಕ$_2$** 'ಸಿಂಗಳಕ' ನೋ.

**ಸಿಂಗಣೀಕ** 'ಸಿಂಗಳೀಕ' ನೋ.

**ಸಿಂಗನಡು** (ನಾ). ೧. ಸಿಂಹದ ಸೊಂಟ; ಸಿಂಹಕಟಿ. ೨. (ಆಲಂ) ಸಣ್ಣದಾಗಿರುವ ಸೊಂಟ; ಚಿಕ್ಕ ನಡು : ಸಿಂಗನಡುವಿನೊಪ್ಪಿಡಿನಡುವುಗಳ ಸಣ್ಣನಡುವಿನಿಲ್ಲುಂಟೆಂಬ ನಡುವಿನಬಲೆಯರ್ಕ್ಕದೆ ಬರುತಿರ್ದರು (ಚಬಪು. ೩೭-೪೨). [ಸಿಂಗ$_1$ + ನಡು$_2$]

**ಸಿಂಗನಾದ$_1$** (ನಾ). ೧. ಸಿಂಹದ ಕೂಗು, — ಗರ್ಜನೆ : ಆ ಮಹಾಟವಿಯ ಮೃಗರಾಜ ಪಿಂಗಳಕ ಸಿಂಗನಾದಮಂ ಕೇಳ್ದು ಸಾಮಜಘಟೆಯೆಲ್ಲಂ ಬೆದಱೆ (ಪಂಚತಂ. ೨೫). ೨. ಜೋರಾದ ಕೂಗು; ಬಲವಾದ ಧ್ವನಿ : ಸಿಂಗನಾದದೆ ಸಿಂಗ ಗರ್ಜಿಸಲಾನಗ ಪಿಂಗದೆ ಮಾರ್ದನಿಗೊಡಲು ಸಂಗಡಿಸಿದ ರವವಾ ಪ್ರಳಯದ ಸಿಡಿಲಿಂಗೊರೆದೊರೆಯಾಯಿತಂದು (ಅಂಜಚ. ೧೦-೨೦). [ಸಿಂಗ$_1$ + ನಾದ$_1$]

**ಸಿಂಗನಾದ$_2$, ಸಿಂಗಿನಾದ** (ನಾ). ಕೊಂಬಿನ ಧ್ವನಿ : ದಾಸಯ್ಯನ ಜಾಗಟೆ, ಭವನಾಶಿ, ಶಂಖ, ಗರುಡಗಂಬಗಳು, ಜೋಗಿಯ ಸಿಂಗನಾದ . . . ಅವರು ನಡೆಸುವ ಆಚರಣೆಯ ಸಾಧನ ಸಲಕರಣೆಗಳು (ಕವಿಕೋ. I, ೭೦೪). **ಸಿಂಗಿನಾದ** : ಹಿಂಡುಗೂಡು ತ್ತಿಲ್ಲರುಗಳು ಬಾಯೊಳ್ಕಟ್ಟಿಕೊಂಡಾಗ ಸಿಂಗಿನಾದವನೂದುತೆಯ್ತರಲ್ಪಂದರಲ್ಲಿಂದ

ಬಂದರೊ ಎಂದವರ ನೋಡಿ ನಸುನಗುತ ಸುಮ್ಮನಿರಲು (ಸಿದ್ಧೇಪು. ೫-೪).

[ಸಿಂಗ$_2$ + ನಾದ$_1$./ ತೆಲು. ಸಿಂಗಿನಾದ]

**ಸಿಂಗಪೀಠ** (ನಾ). ಸಿಂಹಾಸನ; ಗದ್ದುಗೆ: ಮಂಗಳೆಯನಂಗದೊಳ್ ಸಂಗೊಳಿಸಿ ಪರಶಿವಂ ಸಿಂಗಪೀಠದಿ ಪ್ರಮಥ ಗಂಗೆವಾಳುಕರು ಮುನಿಪುಂಗವರ್ಸಹಿತೋಲಗಂಗೊಟ್ಟು (ಚೆಬಪು. ೧-೮). [ಸಿಂಗ$_1$ + ಪೀಠ]

**ಸಿಂಗಪ್ರಾಸ** (ನಾ). [ಛಂದ] ಆರು ಬಗೆಯ ಪ್ರಾಸಗಳಲ್ಲಿ ಒಂದು; ಸಿಂಹಪ್ರಾಸ: ಸಕಳಕಳಾನಿಧಿ ನಿಕಟದೆ . . . ಕಾವ್ಯಮೆಂಬಮೃತಪಯೋಧಿ ಕರಂ ಪೆರ್ಚುಗುಮಲ್ಲದೆ ಕುಕವಿ ಬುಧಪ್ರಭೃತಿಯಿದಿರೊಳೇಂ ಪೆರ್ಚುಗುಮೇ? – ಇದು ಸಿಂಗಪ್ರಾಸಂ (ಛಂದೋಂಬು. ೩. ೧-೪೪). [< ಸಂ. ಸಿಂಹಪ್ರಾಸ]

**ಸಿಂಗಬಲ** (ನಾ). ೧. ಸಿಂಹದ ಬಲ, — ಶಕ್ತಿ. ೨. ಸಿಂಹಕ್ಕೆ ಸಮಾನವಾದ ಶಕ್ತಿಯುಳ್ಳವನು; ಮಹಾಬಲಶಾಲಿ : ಸಿಂಗಬಲನೆಂಬಗುರ್ವಿನ ಸಿಂಹಮನಸಿಧೇನು ಕಿರಣ ಕೇಸರಮಾಲಾಸಂಗತಮುನಡಸಿ ನುಂಗಲ್ ಸಂಗತಬಲ ನೊಂದು ಶರಭವಿಪರ್ಣಂತಿರ್ದಂ (ಪಂಪಭಾ. ೮-೭೪). [< ಸಂ. ಸಿಂಹಬಲ]

**ಸಿಂಗಮುಯ್** (ನಾ). ೧. ಸಿಂಹದ ಹೆಗಲು. ೨. ಸಿಂಹದ ಹೆಗಲಿನಂತಿರುವ ವಿಶಾಲವಾದ ಹೆಗಲು: ನಿಡುದೋಳ್ ಸಿಂಗಮುಯ್ ಗೂಳಿಕಣ್ ಪೇರೆರ್ದೆಯುಮಾದವಂ . . . ತಳೆದಂ ಸುಂದರಾಖ್ಯೆಯಂ (ಸೌನಂದ. ೨-೫೮).

[ಸಿಂಗ$_1$ + ಮುಯ್$_2$ (< ಮುಯ್ಯು)]

**ಸಿಂಗರ** 'ಸಿಂಗಾರ' ನೋ.

**ಸಿಂಗರಂಗಾಣ್** (ಕ್ರಿ). ಅಲಂಕಾರವನ್ನು ಕಾಣು; ಶೃಂಗಾರವನ್ನು ನೋಡು: ಪಲತೆಱದ ಸಿಂಗರಂಗಂಡು ಮುದ್ದಾಡುತಂ ಜಾವಾತನಂ ಬಸವದಂಡೇಶ್ವರಂ ಸುಖದೊಳಿರುತಿರ್ದನು (ಚೆಬಪು. ೫-೪೭). [ಸಿಂಗರ (< ಸಿಂಗಾರ) + ಕಾಣ್]

**ಸಿಂಗರಂಗೆಯ್, ಶೃಂಗರಂಗೈ, ಸಿಂಗರಂಗೈ, ಸಿಂಗರಗೆಯ್, ಸಿಂಗರಗೈ** (ಕ್ರಿ). ೧. ಶೃಂಗಾರಮಾಡು; ಅಲಂಕರಿಸು : ಮದನಂ ಲಕ್ಷಣಯುಕ್ತ ಹಸ್ತಿನಿಯನೀಗಳ್ ಸಿಂಗರಂಗೆಯ್ದು ಹಸ್ತದೊಳೀ ಮಾಲೆಯನಿತ್ತನೋ ದಿಟವೆನಲ್ ಪೇಟೆಂಬಿನಂ ಮಂದಯಾನದಿನೆಟ್ಟಂದಳ್ (ನಳಚಂ. ೩೨೮). **ಶೃಂಗರಂಗೈ** : ೧. ಶೃಂಗರಂಗೈದ ಗಜವ್ರಜಸ್ಯಂದನಾಳಿಯುತ ರಂಗಚಯದೊತ್ತಲು (ನವಮೋ. ೩೪-೨೭). **ಸಿಂಗರಂಗೈ** : ೧. ''ವೇಶಂ ಪ್ರಸಾಧನಂ ಮಂಡನಂ ಪ್ರತಿಕರ್ಮವಮಾ ಸಿಂಗರಂಗೈವುದಕ್ಕು'' (ಮಂಗರಾ. ೯೮-೧೯). **ಸಿಂಗರಗೆಯ್**: ೧. ತರುಣಿಯರಲಂಕರಿಸಲಿಂತು ನಲವಿಂದ ಸಿಂಗರಗೆಯ್ದು ಶುಭಮುಹೂರ್ತದೊಳು ಪೊಱಮಟ್ಟು (ಸೌಂದಪು. ೭-೩೨). **ಸಿಂಗರಗೈ** : ೧. ಆ ವೇಳೆಯಲಿ ಸಿಂಗರಗೈದು ನಿನ್ನಯ ಭಾವದ ಬಗೆದೋಱಿಯುವನ ಕಾವನಂಬಿಗೆ ಮಯ್ಯೊಡ್ಡಿಸಿ ಸೆಳೆದು ಸಂಭಾವಿಸು ಮೋಹರತಿಯೊಳು (ಕಂನವಿ. ೯-೫೭). ೨. ಸಜ್ಜಾಗು; ಸಿದ್ಧವಾಗು : ದಶಶಿರ ಭರದಿ ಬಂದೋಲಗವನಿತ್ತನು ಧುರಕೆ ಸಿಂಗರಗೈಯುತಿರ್ದ ನುದಾರಸಾಹಸನು (ಕಾಶಿರಾ. ೪೧-೧). [ಸಿಂಗರ (< ಸಿಂಗಾರ) + ಕೆಯ್$_1$]

**ಸಿಂಗರಂಗೈ** 'ಸಿಂಗರಂಗೆಯ್' ನೋ.

**ಸಿಂಗರಂಬೆಱು** (ಕ್ರಿ). ಶೃಂಗಾರವನ್ನು ಹೊಂದು ; ಅಲಂಕಾರದಿಂದ ಶೋಭಿಸು: ಕತ್ತುರಿಯ ಸಾರಣೆಯಿಂ ಕುಂಕುಮದ ಕಾರಣೆಯಿಂ . . . ಸಿಂಗರಂಬೆತ್ತ [ಪಾಠಾಂ. ಸಿಂಗರವೆತ್ತ] ರಾಜವೀಥಿಗಳಿಂ ಮಂಗಳತರಮಾಗಿ ಕಣ್ಗೊಳಿಪ ನಿಜರಾಜಧಾನಿಯೆನಿಪ ಕೈಲಾಸಪುರವರಮಂ ಪೊಕ್ಕು (ಶಬಶಂ. ೫-೫೭ ವ). [ಸಿಂಗರ (< ಸಿಂಗಾರ) + ಪೆಱು$_1$]

**ಸಿಂಗರಗದುಗು** (ನಾ). ೧. ಒಂದು ಬಗೆಯ ಮರ; ಪ್ರಿಯಂಗುವೃಕ್ಷ. ೨. (?). ೧, ೨ : ಸುರಪನಂತಿಂದ್ರವಾರುಣಿಯಿಂದೆ . . . ಧನಿಕನಂದ ದೊಳೆ ಸಿಂಗರಗದುಗಿನಿಂ ಶಿವನ ತೆಱದೊಳಾಲದಿನೊಪ್ಪಿತಾ ಘೋರತರಕಾನನಂ (ಚೇರಮ. ೧೦-೧೫). [ಸಿಂಗರ$_?$ + ಗದುಗು$_1$ (< ಗರ್ದುಗು)]

**ಸಿಂಗರಗೆಯ್** 'ಸಿಂಗರಂಗೆಯ್' ನೋ.

**ಸಿಂಗರಗೇರಿ** (ನಾ). ಅಲಂಕಾರದಿಂದ ಶೋಭೆಗೊಂಡ ಬೀದಿ : ಅಂಗಡಿಗೇರಿ ಯಾನೆಯ ಶಾಲೆ . . . ಜನರ ಸಿಂಗರಗೇರಿಯ ನೋಡುತ ನೆಱೆ ಗಣಿಕಾಂಗನಾವೀಥಿಗೈತಂದ (ಕಂನವಿ. ೧೦-೨೨). [ಸಿಂಗರ (< ಸಿಂಗಾರ) + ಕೇರಿ]

**ಸಿಂಗರಗೈ** 'ಸಿಂಗರಂಗೆಯ್' ನೋ.

**ಸಿಂಗರಗೊಳ್, ಸಿಂಗರಗೊಳು, ಸಿಂಗರಗೊಳ್ಳು** (ಕ್ರಿ). ಅಲಂಕಾರವನ್ನು ಹೊಂದು,— ಪಡೆ : ಸುರಸುಂದರಿಯರ್ಕಳ್ ಸಿಂಗರಗೊಂಡುಳುಪಿರ್ದ ಬಣ್ಣದಿಂ . . . ಬರೆವರ್ (ಶಾಕುಂತ. ೧೦೦-೧೭೮). **ಸಿಂಗರಗೊಳು** : ತನಗು ಹಿರಿದುಂಟೆಂಬ ತಿಳಿವ ಹೊಳಪಿನೊಳಿಟ್ಟು ಆತ್ಮ ಸಿಂಗರಗೊಳುವ ವಿನ್ಯಾಸವೇ (ಮುಳದೇ. ೨೦-೮). **ಸಿಂಗರಗೊಳ್ಳು** : ಅವಳು ಚಿನ್ನದ ಹುರಿಯಿಂದ ಸಿಂಗರಗೊಂಡಿದ್ದ ನೀಲಿಯಂಚಿನ ಸಮವಸ್ತ್ರವನ್ನೂ ನೀಲಿಯ ದಬಾಲಿಯನ್ನೂ ಧರಿಸಿದ್ದಳು (ಪುನರು. ೧೮೮).

[ಸಿಂಗರ (< ಸಿಂಗಾರ) + ಕೊಳ್$_1$]

**ಸಿಂಗರಗೊಳು** 'ಸಿಂಗರಗೊಳ್' ನೋ.

**ಸಿಂಗರಗೊಳ್ಳು** 'ಸಿಂಗರಗೊಳ್' ನೋ.

**ಸಿಂಗರಜೋಗಿ, ಸಿಂಗರಜೋಯಿ** (ನಾ). ಕಾಮ; ಮನ್ಮಥ: ''ಕುಡುವಿಲ್ಲ ಸಿಂಗರಜೋಗಿ ಮಿನುಪ ಮಿಾಂಬಟವಿಗೆಯ . . . ಎನೆ ಮನ್ಮಥನಾಮಮಕ್ಕುಂ'' (ಕಬ್ಬಿಕೈ. ೮). **ಸಿಂಗರಜೋಯಿ** : ಸಿಂಗರಜೋಯಿಯ ಕುಲದೇವತೆಯ ಗೃಹಾಂಗಣ ಸಮ್ಮೋಹನರಸಪೂರಿತದಿಂಗಡಲೊಳಗಣ ಬುದ್ಬುದವೋ ಸಿಂಗರದೆಱವೆಟ್ಟುಗಳೋ ಅಂಗಜಗಿರಿದುರ್ಗಗಳೋ ಎನೆ . . . ವೇಶ್ಯಾವಾಟಂ ಕಣ್ಗೊಪ್ಪಿದುವು (ಜಯಕಾ. ೧-೬೨).

[ಸಿಂಗರ (< ಸಿಂಗಾರ) + ಜೋಗಿ$_1$./ ಸಂ. ಶೃಂಗಾರಯೋನಿ]

**ಸಿಂಗರಜೋಯಿ** 'ಸಿಂಗರಜೋಗಿ' ನೋ.

**ಸಿಂಗರಥ** (ನಾ). ೧. ಸಿಂಹಗಳನ್ನು ಹೂಡಿದ ತೇರು, – ರಥ : ಅಖಿಲ ನೃಪಾಲ ರಥ ಹಯವು ಸಿಂಗರಥಕಿದಿರಾಗಲಮ್ಮವು (ಸಾಳ್ವಭಾ. ೧೯-೫). ೨. ಸಿಂಹಗಳನ್ನು ಹೂಡಿದ ರಥವುಳ್ಳವನು : ಸಿಂಗವೆರಡನು ಸಾಕಿ ತೇರೊಳು ಸಂಗೊಳಿಸಿದದಱಿಂದೆ ಪೆಸರಲಿ ಸಿಂಗರಥನೆನಿಸಿಪ್ಪನು (ಸಾಳ್ವಭಾ. ೧೯-೫). [ಸಿಂಗ$_1$ + ರಥ]

**ಸಿಂಗರದೋಂಟ, ಸಿಂಗರದೋಟ** (ನಾ). ಅಲಂಕೃತವಾದ ವನ; ಸುಂದರವಾದ ಉದ್ಯಾನ : ಸಿಂಗರದೋಂಟದ ಬಾಗಿಲುಪ್ಪರಿಗೆಯ ಹೊಂಗಳಸವ ನೋಡಿ ನಮಿಸಿ ಹೆಂಗಳ ರನ್ನೆ ಪಲ್ಲಕ್ಕಿಯನಿಳಿದಳು (ಮೋಹತ. ೨೪-೩೨). **ಸಿಂಗರದೋಟ** : ಕಂದರ್ಪನ ನಿಜನಗರಿ ಮಂದಸಮಾರನಾಡುಂಬೊಲನೆನೆ ಬಗೆವಂದುದಾ ಸಿಂಗರದೋಟ (ಶ್ರೀಪಾಲ. ೫-೧೭); ಸಿಂಗರದೋಟದ ಸಿರಿಗಂಪ ಸುಜನರ್ಗೆ ತಂಗಾಳಿ ತಂದೀವ ತೆಱದೆ ಮಂಗಳ ಹರಿಕಥಾಮೃತವ ನಾ ನಿನ್ನ ಕರ್ಣಂಗಳಿಗೆಱೆವೆ (ಮೋಹತ. ೧೦-೨).

[ಸಿಂಗರ (< ಸಿಂಗಾರ) + ತೋಂಟ]

**ಸಿಂಗರದೋಟ** 'ಸಿಂಗರದೋಂಟ' ನೋ.

**ಸಿಂಗರಭೂಮಿ** (ನಾ). ಅಲಂಕೃತವಾದ ಭೂಮಿ; ಸೊಬಗಿನ ತಾಣ: ಅಂಗನೆಯರ ಪಾದದರುಣಮರೀಚಿ ಬೆಡಂಗುವಡೆದ ಱುಳಿರ್ಗಲ್ಲ ಸಿಂಗರಭೂಮಿಯ ರಾಗ ಮಾಡಲು ಸ್ತ್ರೀಯರಂಗಸೋಂಕೇನ ಪುಟ್ಟಿಸದೊ (ವರ್ಧಚ. ೧-೩೨).

[ಸಿಂಗರ (< ಸಿಂಗಾರ) + ಭೂಮಿ]

**ಸಿಂಗರವಡಿಸು** (ಕ್ರಿ). ಅಲಂಕಾರ ಮಾಡು; ಶೃಂಗರಿಸು: ಮುಡಿಸಿದರಲರ ಪೆರ್ದುಱುಬೊಳು ಸಿಂಗರವಡಿಸಿದರ್ ಬಾಣನಂದನೆಯ (ಮೋಹತ. ೩೧-೭).

[ಸಿಂಗರವಡು + - ಇಸು$_3$]

**ಸಿಂಗರವಡು, ಶೃಂಗರವಡು** (ಕ್ರಿ). ಅಲಂಕಾರವನ್ನು ಹೊಂದು; ಅಲಂಕೃತಗೊಳ್ಳು : ದಾನವಮಲ್ಲ ಸಿಂಗರವಟ್ಟು ಶೂಲಿಗೆ ನಮಿಸಿ ಖಡ್ಗವ ಪಿಡಿದು ಝಳಪಿಸಿದ (ಕಾಶಿರಾ. ೨೧-೧೦). **ಶೃಂಗರವಡು** : ಕೇಳಲಾಶಿಸದಱಿಯನವನಲಿ ಹೇಳುವಾತನು ಜಾಣನೆನಿಸನು ಬಾಲೆ ಶೃಂಗರವಟ್ಟು ಕುರುಡನ ಮುಂದೆ ಕುಣಿದಂತೆ (ಕಾಶಿರಾ. ೨೩-೧೦). [ಸಿಂಗರ (< ಸಿಂಗಾರ) + ಪಡು$_1$]

**ಸಿಂಗರವಡೆ** 'ಸಿಂಗಾರವಡೆ' ನೋ.

**ಸಿಂಗರವನ** (ನಾ). ಅಂದವಾದ ತೋಟ; ಅಲಂಕಾರಯುಕ್ತವಾದ ವನ: ಸ್ಮರನರಗಿಳಿ ಪೊನ್ನ ಪಂಜರವಿಳಿದು ಸಿಂಗರವನದೊಳು ಹೋಗುವಂತೆ ತರುಣಿ ಪಲ್ಲಕ್ಕಿಯಿಂದಿಳಿದು ಭೂಪಾಲರ ನೆರವಿಗೆಯ್ದಿದಳು (ಭರಚ. ೫೫-೭೮); ಅಂಗಜ ಹೆಂಗಳ ಸಿಂಗರವನದೊಳು ತೂಂಗಿಸಿ ಮುನಿಮೃಗಾವಳಿಯ ಜಂಗುಳಿಗೊಡ್ಡಿದ ಬೆಳ್ಳಾರವಲೆಯೆನೆ

ಕಂಗೊಳಿಸಿತು ಸೂಳೆಗೇರಿ (ಕಂಸವಿ. ೬-೯೧). 'ಸಿಂಗರದೋಂಟಿ' ಪರಾ.

[ಸಿಂಗರ (< ಸಿಂಗಾರ) + ವನ]

**ಸಿಂಗರವಾನ್** (ಕ್ರಿ). = ಸಿಂಗರವಡು: ಕಾಸೆ ಚೆಲ್ಲಣ ಪೊಂಬರಿಯಣದೊಳು ಕುವರನಿಗೆ ಸರಿಮೈಭಾಗವ ಕಳುಹಲು ಕೈಕೊಂಡು ಪಿರಿದು ಸಿಂಗರವಾಂತು ಬಂದ (ಮೋಹಕ. ೧೨-೪೮). [ಸಿಂಗರ (< ಸಿಂಗಾರ) + ಆನ್$_1$]

**ಸಿಂಗರವುಯಿಲ್** (ನಾ). ಶೃಂಗಾರಕಲಹ; ರತಿಕ್ರೀಡೆ : ಕಳಿವೂದಾಳ್ದಿ ಕಟಲ್ಬು ಬೀಟೆಯುಡೆನೂಲ್ ಪರ್ಚೊಂಡೆ ಪೊನ್ನೇವುರಂ ಕಳನಾದಂಗೊಳೆ ಪೊಂಗಿ ಸಿಂಗರವುಯಿಲ್ಲೊಂಡೊಂದುವೇಂ ಗೆಲ್ಲಮಂ (ಅಪ್ರತಿ. ೧೭-೨೩).

[ಸಿಂಗರ (< ಸಿಂಗಾರ) + ಪುಯಿಲ್ (< ಪೊಯಿಲ್)]

**ಸಿಂಗರಶಾಲೆ** (ನಾ). ಅಲಂಕೃತವಾದ ಭವನ; ಸಿಂಗರಿಸಿದ ನಿಲಯ: ಸರಸಿಜಭವನ ನೇಮದೆ ಸುರವರ್ಧಕಿ ಹರುಷದೊಳಗೆ ಕೈಗೈದ ಪಿರಿದು ಸಿಂಗರಶಾಲೆಯನೆ ದಿವ್ಯಪ್ರಾಕಾರ ಪರಿಶೋಭಿಸಿದುದು (ಕಂಸವಿ. ೭-೭೪). [ಸಿಂಗರ (<ಸಿಂಗಾರ) + ಶಾಲೆ$_3$]

**ಸಿಂಗರಿಗ** 'ಸಿಂಗಾರಿಗ' ನೋ.

**ಸಿಂಗರಿಸು** 'ಸಿಂಗಾರಿಸು' ನೋ.

**ಸಿಂಗರೂಹ** 'ಶಿಂಗರೂಪ' ನೋ.

**ಸಿಂಗಲಾಂಚನ**, ಸಿಂಘಲಾಂಛನ (ನಾ). ೧. ಸಿಂಹದ ಚಿಹ್ನೆ,— ಗುರುತು. ೨. ಧ್ವಜದಲ್ಲಿ ಸಿಂಹದ ಚಿಹ್ನೆಯನ್ನು ಉಳ್ಳವನು : ಪ್ರಥಮತುಳಾಪುರುಷದಾನ ಪಾರಗ ಸಿಂಗಲಾಂಚನಂ ವಾನರಧ್ವಜ (ಎಕ. VIII, ಸಾಗರ. ೧೦೩-೧೧; 1089). **ಸಿಂಘಲಾಂಛನ:** ೨. ಸಾಚಾಚರೇಂದ್ರಧ್ವಜವಿರಾಜಮಾನಮಾನೋತ್ತುಂಗ ಸಿಂಘಲಾಂಛನ (ಸೌಇಇ. XX, ೭೭-೧೨; 1118). [< ಸಂ. ಸಿಂಹಲಾಂಛನ]

**ಸಿಂಗಲೀಕ** 'ಸಿಂಗಳೀಕ' ನೋ.

**ಸಿಂಗವಟ್ಟಿಗೆ**, ಸಿಂಗವಡ್ಡಿಗೆ (ನಾ). ಒಂದು ಬಗೆಯ ತೆರಿಗೆ : ಚೈತ್ರದ ಪರ್ಬ್ಬಕ್ಕೆ ಆದಿತ್ಯವಾರದ ಸಿಂಗವಟ್ಟಿಗೆ ೨ ಪವಿತ್ರದ ಪರ್ವ್ವಕ್ಕೆ ಆದಿತ್ಯವಾರದ ಸಿಂಗವಟ್ಟಿಗೆ ೨ . . . ನಾಗೇಶ್ವರದೇವರ್ಗ್ಗೆ ೫೦ ಮತ್ತರಲು ತಂತಮ್ಮಾಯಮಂ ಬಿಟ್ಟರು (ನಾಂದೇಡ್. ೩-೨೨ ವ ; 1047); ಯೆಲೆಯ ಹೇಱಿಂಗೆ ವೀಸವೊಂದು ಸ್ಥಳದ ಸಿಂಗವಟ್ಟಗೆ ಸೋಮವಾರದಲು ನಿವಾಳಿಗೆ ಗಾಣಕ್ಕೆ ಯೆಣ್ಣೆ ಸೊಳಸಗೆಯೆರಡು ದೇವರಿಗೆ ನಡೆವ ಗಾಣವೊಂದು (ಕಇ. I, ೩೦-೪೭; 1222); ಬೇಳೆ ಸಿಂಗವಟ್ಟಗೆಯ ಮಾಱುವ ಫೇಣಂದಂ ಒಳಗಣ ಕುದುರೆಗೆ ಬೇಳೆ ಪ್ರತಿ ಗದ್ಯಾಣ ಒಂದಕ್ಕಂ (ಎಕ. V, ಬೇಲೂರು. ೭೫-೧೦೯; 1382). **ಸಿಂಗವಡ್ಡಿಗೆ** : ಬಾದರಿಗರಿಗೆ ತೆಱೆ ಮಾನ್ಯಂ ಈ ಬ್ರಹ್ಮಪು XXX ಯ ಸಿಂಗವಡ್ಡಿಗೆ ಸುಂಕ ಮಾನ್ಯದಂಡ ದೋಷ ಅಪುತ್ರಿಕವಿ[ಲ್ಲ] (ಸೌಇಇ. XV, ೧೮೭ ೪೫; 1248).

[?]

**ಸಿಂಗವಡ್ಡಗಿ** (ನಾ). ಶ್ರೇಷ್ಠನಾದ ಬಡಗಿ; ಕುಶಲನಾದ ಮರಗೆಲಸದವನು: ತದಸೂರಾ ಸಿಙ್ಗವಡ್ಡಗಿ ರಾಪಮ್ಮನ್ ಸಿರಿವಾಳ್ಯ ಮಾಡಿದಾನ್ (ಸೌಇಇ. XX, ೮-೩; ಸು. ೫ನಯ ಶತ). [ಸಿಂಗ$_1$ + ಬಡ್ಡಗಿ(< ಬಡಗಿ)]

**ಸಿಂಗವಡ್ಡಿಗೆ** 'ಸಿಂಗವಟ್ಟಿಗೆ' ನೋ.

**ಸಿಂಗವಣೆ** (ನಾ). = ಸಿಂಗಪೀಠ: ಎಸಳ್ಕಳೆಯಲ್ಕಾ ನುಡಿ ಸಿಂಗವಣೆ ಝಲ್ಲಿಯಸುಗೆ ಮುಕ್ತಾವಳಿವೆಳಗು ಮಿಸುಗುವಚ್ಛತ್ರವರೆಯೆಸೆವ ಭವನ ಪಾದಬಿಸರುಹಕಾನೆಱಗುವೆನು (ಶ್ರೀಪಾಲ. ೧-೨); ತೇಜೋನಿಧಿ ಸಿಂಗವಣೆಯೊಳು ಕುಳಿತು ವಿಭ್ರಾಜಿಸಿದನು ರಾಜೇಂದ್ರ (ಜ್ಞಾನಚ. ೨೭-೭೩). [ಸಿಂಗ$_1$ + ಮಣೆ$_1$]

**ಸಿಂಗವರಿ** 'ಸಿಂಗವಱಿ' ನೋ.

**ಸಿಂಗವಲೆ** (ನಾ). ಸಿಂಹವನ್ನು ಹಿಡಿಯುವ ಒಂದು ಬಗೆಯ ಬಲೆ: ಹಾಸುವಲೆ ಕಣ್ಣವಲೆ . . . ವ್ಯಾಘ್ರುವಲೆ ಸಿಂಗವಲೆ . . . ನೀರುವಲೆ ಶಶಕವಲೆಯು (ಯಕ್ಮಾ೦ಗ. ೧೦-೧೯). [ಸಿಂಗ$_1$ + ಬಲೆ$_1$]

**ಸಿಂಗವಸುಳೆ** (ನಾ). ಸಿಂಹದ ಮರಿ : ಮುಂಗಾರ ಮೊಳಗುಗೇಳಿದ ರಾಜಹಂಸನ ಭಂಗಿಯವೊಲು ಬೆದಱಿದನು ಸಿಂಗವಸುಳೆನಡುವಿನ ಜಾರೆಯ ನುಡಿಗಂಗಜರಾಜ ಕುಂಜರನು (ನೇಮಿಸಂ. ೧೯-೧೧). [ಸಿಂಗ$_1$ + ಪಸುಳೆ]

**ಸಿಂಗವಱಿ**, ಸಿಂಗವರಿ (ನಾ). = ಸಿಂಗವಸುಳೆ: ಕರಮುಕ್ತವಾ ಯಂತ್ರಮುಕ್ತ ಮುಕ್ತಾಮುಕ್ತ ಉರುತರದ ಮೂದೆಱದ ಕೈದುಕಾಱರು ಸಿಂಗವಱಿಗಳೆನೆ ಕಡುಕೆಯಿದು ಹೂಣಿಸಿ ಪಚಾರಿಸುತೆ (ಸಾಳ್ವಭಾ. ೨೫-೧೪); ಅಳಿಗಳಪ್ಪುಗೆ ಸಿಂಗವಱಿಗಳ ಚೆಲ್ಲಾಟ ಕಳಹಂಸಗಳ ಬಾಯ್ಗೂಟ . . . ಇರ್ವರ ನೆಲೆಗೊಂಡು ಮೆಱೆದುವು (ಕಂಸವಿ. ೧೦-೪೪).

**ಸಿಂಗವರಿ** : ನವಿಲಗರಿ ನರಿಗೊಂಬು . . . ಸಿಂಗವರಿ ಬದನಿಕೆ ಬೆತ್ತ ಕತ್ತುರಿ ಪುಣುಗು ಪುಲಿಯುಗುರ . . . ಇತ್ತು ಬಿನ್ನೈಸಿದನು ಶಬರಪತಿ (ಅನಂರಾ. ೩-೩-೭); ಮೊಲೆವಾಲ ಕುಡಿಯುತ್ತ ಸಿಂಗವರಿಗಳು ಮೂರು ಆಟವಾಡುವುವು (ಬಾಲಪ್ರ. III, ೧೨೭೯).

[ಸಿಂಗ$_1$ + ಮಱಿ]

**ಸಿಂಗವಿಟ್ಟರ**, ಸಿಂಘವಿಷ್ಟರ (ನಾ). ಸಿಂಹಾಸನ; ಗದ್ದುಗೆ: ಕಂಗೊಳಿಸುವ . . . ಚಾವಡಿಯ ಸಿಂಗವಿಟ್ಟರದೊಳೊಡ್ಡೋಲಗಗೊಟ್ಟರ್ದ ಲಿಂಗಾರ್ಚಕ ಜಾಣ ಬಾಣ (ಮೋಹಕ. ೨೦-೩೧). **ಸಿಂಘವಿಷ್ಟರ** : ಸಿಂಘವಿಷ್ಟರವನೇಱಿದನಾ ಜಯಸಿಂಘವಲ್ಲಭಂ (ಎಕ. VII, ಶಿಕಾರಿ. ೧೨೫-೧೭; 1019). [< ಸಂ. ಸಿಂಹವಿಷ್ಟರ]

**ಸಿಂಗವೆರೆ** (ನಾ). "ಸಿಂಹಮಾಸದ ಚಂದ್ರ" (ಗಿಲಿವಿಂ. ೧೩೮ ಟಿಪ್ಪಣಿ): ಕಾತಿಕೆಯ ಮಳೆ ಮುಗಿದು ಬಂದು ಸಿಂಗವೆರೆ ಇನ್ನುಮೊಗೆಯದ ಸಂಜೆಯೊಂದು ಆ ಕೆಳವ ಕೋವನಂಗಡಿಯಲ್ಲಿ ನಿಂದೆ (ಗಿಲಿವಿಂ. ೧೨೩-೪೦). [ಸಿಂಗ$_1$ + ಪೆರೆ$_1$ (< ಪೆಱೆ)]

**ಸಿಂಗವೇಂಟೆ** (ನಾ). ಸಿಂಹವನ್ನು ಹಿಡಿಯುವುದು; ಸಿಂಹದ ಬೇಟೆ: ಸಿಂಗವೇಂಟೆಯನಾಡಿ ತಿರುಗಿ ರಿಪುಮಾತಂಗಸಿಂಗನೆಯ್ದಪ್ಪಾಗ (ಹಚಕಾ. ೫-೩೮); ಅಪಭ್ರಂಶಕ್ಕಂ ದೇಶೀಯಪದಕ್ಕಂ ಸಮಾಸಂ — ರಾಯಗೋಟೆ, ಸಿಂಗವೇಂಟೆ, ಸೆಜ್ಜೆವನೆ (ಶಮದ. ೨೯ ಪ್ರಯೋ). [ಸಿಂಗ$_1$ + ಬೇಂಟೆ]

**ಸಿಂಗಳ$_1$**, ಸಿಂಗಣ, ಸಿಂಘಣ (ನಾ). ಸಿಂಹಳದೇಶ ಮತ್ತು ಆ ದೇಶಕ್ಕೆ ಸೇರಿದ ವ್ಯಕ್ತಿ : ಸೌರಾಷ್ಟ್ರ ಸಿಂಗಳ ದ್ರವಿಡ ಕಾಂಬೋಜದೇಶದ ಸಕಲಶರಣರ್ರತರುತಿರ್ದರು (ಚೆಬಪು. ೬-೪೯); ಸಿಂಗಳದ ದೇಶದಿಂದಂಗನೆಯು ಬಂದಾಳು (ಸರ್ವಜ್ಞ. ೧೦೯೭). **ಸಿಂಗಣ:** ಮೂಡಣ ಕಡಲ ಕರವಳಿಗಳನು ಶೋಧಿಸಿ . . . ತಡಿಯ ಸಿಂಗಣ ತಾಮ್ರಪರ್ಣಿಯ ಹುಡುಕಿ ಹೊಳೆಸಾಲಿನಲಿ ತಿರುಗಿತು ಬಲವು ಬಲಿಮುಖರ (ತೊರರಾ. ೪-೧೧-೫).

**ಸಿಂಘಣ:** ಇಂದು ಕನಕನನೆ ಭೇದಿಸಿದಂದಕ್ಕುಂ ಚೋಳ ಸಿಂಘಣಗರ್ತಿಭಯಮುಂ (ಜಟ್ಟಮ. ೭-೧೧೧). [< ಪ್ರಾ. ಸಿಂಘಲ./ ಸಂ. ಸಿಂಹಲ]

**ಸಿಂಗಳ$_2$** 'ಸಿಂಗಾರ' ನೋ.

**ಸಿಂಗಳಕ**, ಸಿಂಗಣೆಕ$_2$, ಸಿಂಗಳಿಕ$_2$ (ನಾ). = ಸಿಂಗಳ$_1$: ಕುಸುರಿದರಿವುತ ಸಿಂಗಳಕದ ಹಸರ ಕೆಡಸಿದುದೇನ ಬಣ್ಣಪೆನಸುರ ಪಾಳಯ ಬಿಡಲು ನಾನಾವಿವರ ಮಾರ್ಗದಲಿ (ಮೂಲರಾ. ೩-೩೨). **ಸಿಂಗಣೆಕ$_2$**: ಉಭಯತಟವರ್ತಿಗಳಪ್ಪ ಕೊಂಕಣಗ ಸಿಂಗಣೆಕ ಶಬರ ಚಾಂಡಾಲ ಪ್ರಭೃತಿಗಳೆಲ್ಲಮೇಕೆ ಪಾಪಕ್ಷಯಮುಂ ಪುಣ್ಯಬಂಧಮುಮಾಗಲೆವೇಳ್ಕುಂ (ಪಸಾರ. ೯೩). **ಸಿಂಗಳಿಕ$_2$** : ಅಂಗ ವರಾಳ ಸಿಂಗಳಿಕ ಗೊರ್ಜ್ಜರ . . . ಯಾದವ ಮಹೀಭುಜಮೌಳಿಮಣಿಪ್ರಜಪ್ರಭಾಲಿಂಗಿತಪಾದಪೀಠನ್ (ಸೌಇಇ. XX, ೪೭-೫; 1072). [< ಸಂ. ಸಿಂಹಲಕ]

**ಸಿಂಗಳಪಿಪ್ಪಲಿ** (ನಾ). ಒಂದು ಬಗೆಯ ಔಷಧೀಸಸ್ಯ,— ಹಿಪ್ಪಲಿ: "ಬ್ರಹ್ಮಭೂಭುಜ—ಸಿಂಗಳಪಿಪ್ಪಲಿ" (ಓಷಧಿ. ೧೦೮). [< ಸಂ. ಸಿಂಹಲಪಿಪ್ಪಲೀ]

**ಸಿಂಗಳಿಕ$_1$** 'ಸಿಂಗಳೀಕ' ನೋ.

**ಸಿಂಗಳಿಕ$_2$** 'ಸಿಂಗಳಕ' ನೋ.

**ಸಿಂಗಳೀಕ**, ಶಿಂಗಣೆಕ, ಶಿಂಗಲೀಕ, ಶಿಂಗಳೀಕ, ಸಿಂಗಣೆಕ$_1$, ಸಿಂಗಣೀಕ, ಸಿಂಗಲೀಕ, ಸಿಂಗಳಿಕ$_1$ (ನಾ). ೧. ಕಪ್ಪುಮುಸುಡಿನ ಒಂದು ಬಗೆಯ ಕೋತಿ; ಮುಸುವ: ನಡುಮನೆಯಲಾಡುವ ಸಿಂಗಳೀಕನನು ಒಂದು ಉಡು ನುಂಗಿದುದ ಕಂಡು (ಸಿದ್ಧೇಮ. ೪೮-೧೩೫); ವಾನರ ಸಿಂಗಳೀಕ ಮುಸು ಕರಡಿಯ ಬಲಂ ಮುತ್ತಿದುದು (ಜೈಮಿಭಾ. ೨೦-೧೮). **ಶಿಂಗಣೆಕ** : ೧. ಕರಡಿ ಕಪಿ ಮುಸು ಶಿಂಗಣೆಕಗಳ ನೆರವಿಗಳು (ಉತ್ತಕ. ೩೩-೧೧).

**ಶಿಂಗಲೀಕ** : ೨. (ಆಲಂ) ಕಪ್ಪುಕೋತಿಯಂತೆ ಇರುವವನು ; ಕೆಟ್ಟಮುಖದವನು: ಸರಸ್ವತಿ — (ಲಲಿತೆಗೆ) ನನ್ನ ಮಾತು ಕೇಳಿಕೊಂಡು ಕುಣಿಯಬೇಡ. ಆ ಶಿಂಗಲೀಕನ್ನ ಕಟ್ಟಿಕೊಂಡು ಕುಣಿ! (ಆಷಾಭೂ. ೨೭). **ಶಿಂಗಳೀಕ** : ೧. ಹರಿ ಎಂಬವಳಿಗೆ

ಶಿಂಗಳೀಕಗಳು ಕಪಿಗಳು . . . ಹುಟ್ಟಿದವು (ಶೃವಾಳ. ೧೮೯); **ಕೋತಿಗಳಲ್ಲಿ ಜಾತಿ: ಶಿಂಗಳೀಕ,** ಕರ್ಕೋಡಗ, ಕೋತಿ (ನಮ್ಮನು. ೨೪೯). **ಸಿಂಗಣಿಕ**$_1$ **: ೧. ಹಣೆಯ ಜೂಬಿನ ಜೂಲುಗೂಡಲ** ಕಣುಗಿಡಿಯ ಕಡುಕಾಹುರದ ಸಿಂಗಣಿಕಗಳನರ್ಬುದವನತಿಬಲ **ತಾರ ತೋಱಿಸಿದ** (ತೊರರಾ. ೪-೭-೨೩). **ಸಿಂಗಣೀಕ : ೧.** ಹಲುಗಿರಿದು ಹಣಗಿದವು ಕೋಡಗ ಸಿಂಗಣೀಕಗಳು (ಅಂಬಿಕಾ. ೩೨-೩). **ಸಿಂಗಲೀಕ : ೧.** ಹರಿಹರಿದಸುರಭಟರನು ಸಿಂಗಲೀಕರು ಸೀಳಿ ಬಿಡುತಿರಲು (ಕಾಶಿರಾ. ೨೦-೪). **ಸಿಂಗಳಿಕ**$_1$ **: ೧.** ಮುಸು ಕರಡಿ ಸಿಂಗಳಿಕ **ಕೋಡಗ** ವಸರಗಳ ಸಂದಣಿಯ ಸಂಭ್ರಮವೆಸೆದುದ್ದ (ತೊರರಾ. ೬-೩೦-೧೬); **ತಂಗಿಗಾದುದು ತಿರಿವ** ಪ್ರಾಪ್ತಿಯ ಭಂಗ . . . ಸಿಂಗಳಿ[ಪಾಠಾಂ. ಣಿ]ಕರಂತೆಸವ ಜೀವವ ನುಂಗದೇತಕೆ ಮೃತ್ಯು ಪಾಪಿಗಳಂಗವನು ನೋಡುವರೆ ಶಿವಶಿವಯೆಂದನಾ ರಾಮ (ಕೃಷ್ಣಾಕಾ. ೧೯-೯).

[ದೇ. ॥ ತೆಲು. ಸಿಂಗಿಲೀಕ, ಶಿಂಗಿಲೀಕ]

**ಸಿಂಗಾಡಶಂಭ** (ನಾ). **[ಅಶ್ವಶಾ]** ಕುದುರೆಗೆ ಬರುವ ಒಂದು ಬಗೆಯ ನಾಸಿಕರೋಗ: ಮೂಗಿನಲ್ಲಿ ಹತ್ತಿಯ ಹಾಗೆ ಬಿದ್ದಡೆ ಅದಂ ಸಿಂಗಾಡಶಂಭಮೆಂಬುದು (ಅಶ್ವವೈ. ೧೨-೭೦ ಟೀಕು). **'ಶಂಭ', 'ಸಿಂಘಾಣ', 'ಸೆಂಬ' ಪರಾ.**

[< ಸಂ. ಸಿಂಘಾಣಶಂಭ?]

**ಸಿಂಗಾಡಿ, ಶಿಂಗಾಡಿ,** ಸಿಂಗಡಿ$_1$ (ನಾ). ಬಿಲ್ಲು; ಧನುಸ್ಸು : ಕಡುಚೆಲ್ವೆನಿಪ ಸಿಂಗಾಡಿ ಭಲ್ಲೆಯ ಕತ್ತಿವಿಡಿದು ಬಂದರು ರಾವುತರು (ಅಂಜಚ. ೬-೮೧); ಕಡುಪಿಂ ಕಾಯ್ಸೇಱಿ ಸಿಂಗಾಡಿಯನೆ ಸೆಳೆದು . . . ಮಾಣದೆಚ್ಚಂ (ರಾಜಶೇ. ೬-೧೧೧); ಕಾವನ ಸಿಂಗಾಡಿಯಂತೆ ಬಾಗಿರ್ಪ ಪುರ್ಬುಂ (ಅದ್ಭುತ. ೮-೧೪). **ಶಿಂಗಾಡಿ : ಹೊಂದಿಕೆಯ** ಶಿಂಗಾಡಿಯನೆ ಹುರಿಗೊಂಡ ಮಿಾಸೆಗಳ (ಆನಂರಾ. ೩-೭-೩೪). **ಸಿಂಗಡಿ**$_1$ **: ಸ್ಮರವೀರ ತಾ ಮನದಂದು** ಕರದೊಳುವಿಡಿದ ಸುವರ್ಣಸಿಂಗಡಿಯನು ಜಱೆವ್ಪು ಕಿವಿ ಕೋಮಲೆಯ (ಜ್ಞಾನಚ. ೨-೧೧); ಸ್ಮರನ ಸಿಂಗಡಿಗಿಂದಧಿಕ ಪುರ್ಬು (ಶ್ರೀಕೃಪಾ. ೨೯).

**ಸಿಂಗಾಡಿತೆಗವ ಹೆಜ್ಜೆ = ಕತ್ತಿವರಸೆಯಲ್ಲಿ ಒಂದು ಭಂಗಿ : ಒಂದು ಬಾರಿ** ದೇಹಭ್ರಮಣವನ್ನು ಮಾಡಿ ಒಂದು ಪಾದವನ್ನು ಚಾಚಿ ಮತ್ತೊಂದು ಪಾದದಲ್ಲಿ ನಿಂತು ಕೈಗಳಿಂದ ಬಿಲ್ಲ ತೆಗೆವದರ ಆಕಾರ ತೋರುವುದು ಆವದೂ ಅದರ ಹೆಸರು ಸಿಂಗಾಡಿ ತೆಗವ ಹಜ್ಜೆಯೆಂದು ತಿಳಿವರು (ವಿದ್ವಟೀ. ೪-೪೩). **ಸಿಂಗಾಡಿನಾಯಕಾಗ್ರಣಿ = ಬಿಲ್ಲುಗಾರರ** ಮುಖಂಡ; ಒಂದು ಬಿರುದು : ರಣಿತನುದರದೊಳಾ ರಾಮಂ ಪುಟ್ಟುವನ್ನದಿಂ ದಶರಥಧಾತ್ರೀರಮಣಂಗನೆ ದುರ್ಗುಣದೂರಂ ಸಿಂಗಾಡಿನಾಯಕಾಗ್ರಣಿಯೊಗೆದಂ (ಎಕ. XIV, ನಾಗಮಂ. ೧೪೦-೩೦ ; 1225). **ಸಿಂಗಾಡಿಮಾರಾಕಾರ = ಬಿಲ್ಲನ್ನು ಹಿಡಿದ** ಮನ್ಮಥನ ಆಕಾರವುಳ್ಳವನು; ಒಂದು ಬಿರುದು : ಸಾಮನ್ತ ಸಿಂಗಾಡಿ ಮಾರಾಕಾರಂ ವರಸೂನುವಂ ಪಡೆದನನ್ನಾ ಕಾಮದೇವಂ ಮಹೀಲೋಕಂ ಬಣ್ಣಿಸುತಿಪ್ಪಿನಂ ಹಿರಿಯ ಮಾಚ ಖ್ಯಾತ ಸಾಮನ್ತನಂ (ಎಕ.XIV, ನಾಗಮಂ.೧೪೦-೩೩; 1225). **ಸಿಂಗಾಡಿಯ ಕಾಮದೇವ =** ಬಿಲ್ಲನ್ನು ಹಿಡಿದಿರುವ ಮನ್ಮಥ; ಒಂದು ಬಿರುದು : ಬಣ್ಣಿಪ್ಪುದೀ ಧರೆ ಸಿಂಗಾಡಿಯ ಕಾಮದೇವನನಮಿತ್ರಭೇದಗಾಂಡೀವಿಯಂ (ಎಕ. XIV, ನಾಗಮಂ. ೧೪೦-೩೧ ; 1225). **[ದೇ. ॥ ತಮಿ. ಚಿಱ್ಚಾಟಿ, ಚಿಱ್ಚಾಣಿ ; ಮಲ. ಚಿಂಗಾಡಿ ; ತೆಲು.** ಸಿಂಗಾಣಿ, ಸಿಂಗಿಣಿ./ ಸಂ. ಸಿಂಜಿನೀ]

**ಸಿಂಗಾಡಿಗಟ್ಟು** (ನಾ). ಕತ್ತಿವರಸೆಯಲ್ಲಿ ಒಂದು ಪಟ್ಟು : ಒಂದು ಪಾದವನ್ನು ನಿಲಿಸಿ, ಮತ್ತೊಂದು ಪಾದವನ್ನು ಹಿಂದಕ್ಕೆ ಮುದಿಡಿಕೊಂಡು ಶಿರಸ್ಸನ್ನು ಹಿಂದಕ್ಕೆ ಬಗ್ಗಿಸುವುದಾವುದುಂಟು ಅದು ಸಿಂಗಾಡಿಗಟುಟ್ಟುತೆಯೆಂದು ಸಮ್ಮತವು (ವಿದ್ವಟೀ.೪-೪೧). [ಸಿಂಗಾಡಿ$_1$ + ಕಟ್ಟು$_1$]

**ಸಿಂಗಾಡಿಗತ್ತಿ** (ನಾ). ಬಿಲ್ಲಿನಂತೆ ಬಾಗಿರುವ ಒಂದು ಬಗೆಯ ಕತ್ತಿ : ಸುಲಲಿತ ತರಕಸ ಸಿಂಗಾಡಿಗತ್ತಿ ಜವದಾಡೆ ಅಲ್ಲಿ ಅದೆ ಅವನುಡಿಯಲ್ಲಿ (ಸಕಮ.ಕ. II, ೭೭೫-೭೪).

[ಸಿಂಗಾಡಿ + ಕತ್ತಿ]

**ಸಿಂಗಾಡಿಪುರ್ಬು** (ನಾ). ಬಿಲ್ಲಿನ ಹಾಗೆ ಬಾಗಿರುವ ಹುಬ್ಬು ; **ಡೊಂಕಾಗಿರುವ** ಹುಬ್ಬು: ತರಬೇಕು ತರುಣಿಯಳ . . . ಸ್ಮರನ ಸಿಂಗಾಡಿಪುರ್ಬಿನ ನೀರೆ ಮಲ್ಲಿಗೆ ಪರಿಮಳಿಸುವ ಮೈಯ ವರಕರಿಗಮನೆಯ (ಯಕ್ಷಬ. ೨೧೨).

[ಸಿಂಗಾಡಿ + ಪುರ್ಬು (< ಪುರ್ವು)]

**ಸಿಂಗಾಡಿಬಿಲ್ಲು** 'ಸಿಂಗಾಡಿವಿಲ್ಲು' ನೋ.

**ಸಿಂಗಾಡಿಯಂಬು** (ನಾ). ಒಂದು ಬಗೆಯ ಬಾಣ: ಸಿಂಗಾಡಿಯಂಬಿನ ಮಳೆಯುಱಿಬಿಗೆ ಬಲ ಕಂಗೆಟ್ಟು ದಸೆದೆಸೆಗೋಡಿ (ಕಂಸವಿ. ೧೧-೬೦); ಸಿಂಗಾಡಿಯಂಬಿನ **ಮಳೆ ಬಾಣದಾರ್ಭಟೆ** . . . ಕಂಗೆಡಿಸಿದುವು ತ್ರಿಜಗವ (ಕಂಸವಿ. ೧೪-೨೧).

[ಸಿಂಗಾಡಿ + ಅಂಬು]

**ಸಿಂಗಾಡಿವಿಡಿ** (ಕ್ರಿ). ಬಿಲ್ಲನ್ನು ಹಿಡಿ; ಧನುಸ್ಸನ್ನು ಹಿಡಿ: ತಂಗಾಳಿ ತೀಡೆ ತಿಂಗಳ್ ಮೂಡೆ ಮನಸಿಜಂ ಸಿಂಗಾಡಿವಿಡಿಯೆ (ಚಿಬಪು. ೧೦-೭೫); ಸಿಂಗಾಡಿವಿಡಿದಂಗಜಂ ಪೆಕ್ಕಳಿ ಸಲಂದವರ ವೀಡಿನೊಳ್ ಪೊಕ್ಕನಾ ಭಾನು (ರುಕ್ಮಾಂಗ. ೧೧-೩). [ಸಿಂಗಾಡಿ + ಪಿಡಿ$_1$]

**ಸಿಂಗಾಡಿವಿಲ್ಲು,** ಸಿಂಗಾಡಿಬಿಲ್ಲು (ನಾ). ಒಂದು ಬಗೆಯ ಬಿಲ್ಲು, — ಧನುಸ್ಸು: ಕೋಲನುಗುಳಿಸುತ ಸಿಂಗಾಡಿವಿಲ್ಲಿಂದ ಮೇಲವರಿರದೆಯ್ದೆಂದು ಮೇಲೆ ಬಿದ್ದರು (ಕುರಾಸಾಂ. ೪೪-೧೨೮). **ಸಿಂಗಾಡಿಬಿಲ್ಲು :** ಬಲ್ಲಿತೆನಿಪಾ ನಾಳಿವಿಲ್ಲುಗಳನಂತೆ ಸಿಂಗಾಡಿಬಿಲ್ಲುಗಳ . . . ಪಿಡಿದಾ ನಿಶಾಟರು ನೆರೆದುದವನೊಡನೆ (ಸಾಳ್ವಭಾ. ೫-೧೩); ಸಿಂಗಾಡಿಬಿಲ್ಲ ಮೋಹರದಲ್ಲಿ ಹಿರಿಯ ತುರಂಗವನೇಱಿ ಕುಣಿಸುತ ಅಂಗದೇಶದ ರಾಯ . . . ಸಾಗಿದನು (ಭರಚ. ೨೨-೧೨); ಸಿಂಗಾಡಿಬಿಲ್ಲಿನವರೂ . . . ಭರ್ಜಿಯವರೂ ಮುಂದೆ ನಡೆಯಲಿ (ಪಟಮಾ. ೨). [ಸಿಂಗಾಡಿ + ಬಿಲ್ಲು$_1$ (< ಬಿಲ್$_2$)]

**ಸಿಂಗಾಯ್** (ನಾ). ಒಂದು ಬಗೆಯ ವಿಷದ ಕಾಯಿ : ಕರ್ವು ಕೈಪೆಯಾಯ್ತೇ! ತೆಂಗಾಯ್ ಸಿಂಗಾಯಾಯ್ತೇ! (ರಾಮಾಶ್ವ. ೩೫-೧೭). [< ಸಿಂಗಿ$_2$ + ಕಾಯ್$_4$]

**ಸಿಂಗಾರ, ಶೃಂಗರ,** ಸಿಂಗರ, ಸಿಂಗಳ$_2$ (ನಾ). ೧. ಅಲಂಕಾರ; ಶೃಂಗಾರ : ಸುಭಟರಿಗಾಯುಧದ ಸಿಂ[ಪಾಠಾಂ. ಶೃಂ]ಗಾರವೋ ಮೇಣ್ ಕಾಲ ನೇವುರವೊ (ಕುಮ್ಯಾಕ. ೪-೨); ಸಿರಿಯ ರಮಣನ ವೈಭವಂಗಳ ಮೆಱೆವ ಸಿಂಗಾರವನು ನೋಡುತ ಹರುಷದೊಳಗೋಲಾಡುತಿರ್ದುದು ಸಕಲಜನ ನಲಿದು (ಕಾಶಿರಾ. ೪೪-೪೮); ದೊಣೆಗೇಕೆ ಚಿತ್ತಾರ ಕಣೆಗೇಕೆ ಸಿಂಗಾರ ಗುರಿಯನು ಕಂಡೆಚ್ಚದವಗೆ (ಇಂಚಾಪ. ೮೬-೨೦). **೨. ಚೆಲುವು;** ಅಂದ; **ಶೋಭೆ :** ಕಂಗೊಳಿಸುತಿಹೊಪ್ಪಿಡಿನಡುವಿನ . . . ಸಿಂಗಾರದ ಸೆಳೆನಡುವಿನ ಬಲು ಮೋಹನಾಂಗಿಯರ್ಕೈತಂದರಾಗ (ಕಂಸವಿ. ೯-೮೧). ೩. ಪ್ರಣಯವನ್ನು ವ್ಯಕ್ತಪಡಿಸುವ ಹಾವಭಾವ; ಶೃಂಗಾರಚೇಷ್ಟೆ : ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ ನಮ್ಮ ನಲ್ಲ ಸುಳಿಯಲಿಲ್ಲ ಸುಳಿದು ಸಿಂಗಾರವ ಮಾಡಲಿಲ್ಲ (ಬಸವ. ೮೪೯). **೪. ಅಡಕೆಯ ಹೂವಿನ ಗೊಂಚಲು; ಹೊಂಬಾಳೆ : ಸೋಮಯಾಜರು . . .** ಸಿಂಗಾರದ ಎಸಳನ್ನು ಕಿತ್ತು "ಹೆಗ್ಗಡತಿಗೆ ಕೊಡಿ" ಎಂದರು . . . ಹೆಗಡೆ ಸಿಂಗಾರದ ಎಸಳನ್ನು ಜೋಬಿನ ಒಳಬಿಟ್ಟ (ದೇವಹಂ. ೧೯೬); ಸಿಂಗಾರದ ಅಕ್ಕಿ ಮುಖಕ್ಕೆಲ್ಲ ಅಂಟಿಕೊಂಡು ಪಾತ್ರಿಯ ರೂಪ ಮತ್ತಷ್ಟು ವಿಕಾರವಾಯಿತು (ಕುಡಿಕೂ. ೬೫). **ಶೃಂಗರ :** ೧. 'ಶೃಂಗರಂಗ್ಯೆ', 'ಶೃಂಗರವಡು' ಪರಾ. **ಸಿಂಗರ : ೧.** "ಶೃಂಗಾರದೊಳ್ ಸಿಂಗರಂ" (ಕರ್ಣಾನಿ. ೬೫); ಸಿಂಗರದ ಚೆನ್ನನಾಂತ ಪಟ್ಟವಣೆಯ (ಕಬ್ಬಿಕಾ. ೩೪೧); ಸಿಂಗರಕಿದೇ ಸೀಮೆಯೆಂದೆನಿಪ ಪೇರುರಮೊಪ್ಪೆ (ಸೌಂದಪು. ೪-೫); ಚೆಲುವೆಗೆ ತಕ್ಕ ಸಿಂಗರವ ನಿರ್ಮಿಸಿ . . . ನಿಲವುಗನ್ನಡಿಯ ತೋಱಿದರು (ಮೋಹತ. ೨೩-೫೩). **೨.** ಸಿಂಗರಮದಾಗೆ ತಾಂಡವಮುಖ್ಯ ನೃತ್ಯಂಗಳಿಂದೆ (ಭಾವಚಿಂ. ೧-೩೬); ಅರಸಂಚೆ ಕೋಗಿಲೆ . . . ಪಾರಿವವು ಪರಿಶೋಭಿಸಿರುವಾ ಉದ್ಯಾನದ ಸಿಂಗರವನದೇನ ಬಣ್ಣಿಪೆನು (ಕಂಸವಿ. ೨-೫೦). **೫.** ಒಡವೆ, ಆಭರಣ ಮುಂತಾದ ಅಲಂಕಾರಸಾಧನ : ಸಿಂಗರಂ ರುದ್ರಾಕ್ಷಿ ಜಂಗಮಂ ರುದ್ರಾಕ್ಷಿ ಮಂಗಳಂ ರುದ್ರಾಕ್ಷಿ ಅಂಗತತಿ ರುದ್ರಾಕ್ಷಿ (ರುದ್ರಾಕ್ಷ. ೫-೧೫); ಅಮಳವಸ್ತುಗಳುಮಂ ಸೀರೆಯಂ ರತ್ನಭಂಡಾರವನು ಲೇಪನಾಗಾರವ ಸಿಂಗರವನಿತ್ತು ತಣಿಯಂ (ಸಾಸಂಚ. ೧-೯೫); ಮಂಗಳಕರಮಾತ್ರವನಲ್ಲದೆ ಮಿಕ್ಕ ಸಿಂಗರಗಳನು ಚಿಂತಿಸದೆ ಸಂಗಾತಿವೆಂಗಳ ಸರಸಭಾಷಣವ ಮನಂಗೊಳಿಸದೆ ಮಱುಗುವಳು (ಹದಿಬ. ೭-೧೧). **೬. [ಕಾವ್ಯಮಿಾ] ನವರಸಗಳಲ್ಲಿ ಒಂದು; ಶೃಂಗಾರರಸ :** ಸಿಂಗರಮೇಟ್ಸೆಯಂ ಪಡೆಯ ದೇಸೆ ಪೊದಟ್ಟಿರೆ ಕೊಂಕು ತೀವೆ . . . ನನೆವಿಲ್ಲನ ಬೀರಮನೊಲ್ದು ಪೇಟ್ವೆನಾಂ (ಕಬ್ಬಿಕಾ. ೧೭); ರೌದ್ರಮುಱಿವೆಯ್ದೆ ಸಿಂಗರಮುನ್ನತವೀರಮಾವಗಂ (ಉಮಾಶ. ೨). **ಸಿಂಗಳ**$_2$ **: ೧.** ಆ ಪುರದ ತರದ ವಿಸ್ತರದ ಸೌಧೋತ್ಕರದ ತ್ರಿಪುರದ ರಾಪಣದ ಸಿಂಗಳದ ಮಂಗಳದ ಗೋಪುರದ ಮತ್ತವಾರಣದ ತೋರಣದ ಘನತರದ ವೃಷಭಧ್ವಜಗಳು

(ಗುಭಚ. ೧೭-೫೩); ಸಿಂಗಳನಾದ ತುರಂಗದ ಮೇಲೇರಿ ಸಿಂಗಾಡಿ ತೀರ ಜೋಡಿಸುತ ಶೃಂಗಾರವಡದು ಭುಜಂಗಭೂಪರು ರಣರಂಗದಿ ಬಂದು ನಿಂದಿಹರು (ಸೌಂದಕಾ. ೭-೧೦೩). **ಸಿಂಗಾರದೇಜೆಯ** = ಕಾಮ; ಮನ್ಮಥ: ಸಿರಿರಾಣಿಯಣುಗಂಗೆ ಸಿಂಗಾರದೇಜೆಯಂಗೆ . . . ಮದನಂಗೆ ಸುರುಚಿರಾಂಗಂಗೆ ಸುಖಿಮಕ್ಕೆ (ಚಿಕವಿ. ೬-೧೫೪ ವ). **ಸಿಂಗಾರಹಾರ** = ಒಂದು ಬಿರುದು : ಗಜಭೀಮ ಸಿಂಗಾರಹಾರ ವೀರಪ XX ಟ (ಎಕ. VII, ಶಿವಮೊ. ೬೯-೧೨; 1320). [< ಪ್ರಾ. ಸಿಂಗಾರ./ ಸಂ. ಶೃಂಗಾರ]

**ಸಿಂಗಾರಕಾಟಿ** (ನಾ). ಸುಂದರ; ಚೆಲುವ: ಗಂಗಾದೇವನು ತನ್ನ ಸಂಗಸಂಪದ ಗೂಡಿ ಬಂದಿದಿರ್ಗೊಂಡನು ಸಿಂಗಾರಕಾಟಿಭಾವವನು (ಭರಚಿ. ೩೬-೨೭).

[ಸಿಂಗಾರ + -ಕಾಟಿ]

**ಸಿಂಗಾರಗಿಡ** (ನಾ). ಅಡಕೆಯ ಮರ: ಬಂಜೆಯ ಮನಿಮುಂದ ಸಿಂಗಾರಗಿಡ ಹುಟ್ಟಿ ಕೊಂಗಿ ಕೊಂಗಿಲಿ ಗಿಳಿ ಕೂತು ಓಡ್ಯಾವ ಬಂಜೀಯ ಬದುಕು ಹೆರವರಿಗೆ (ಕನ್ನಜಾ. ೧೦೪). [ಸಿಂಗಾರ + ಗಿಡ (< ಗಿಡು)]

**ಸಿಂಗಾರದುಱುಬು** (ನಾ). ಅಂದವಾದ ಕೇಶಾಲಂಕಾರ: ತಳುದೊಗಲ ನಿಡುಸೋಗೆ ಯುಡುಗೆಯನೆಳಗರುಳ ಸಿಂಗಾರದುಱುಬಿನ ಕೆಳದಿಯರ ಕೈನೇಣ ಕಿಱುದೊಟ್ಟಿಲಿನ ಬೊಂಬೆಗಳ . . . ಕೆಳೆಗಳೊಳು ಕೊಡಗೂಸು ಪೂತನಿನಿಕರವೊಪ್ಪಿದವು (ಕುಮ್ಮಾಭೀ. ೫-೩೪).

[ಸಿಂಗಾರ + ತುಱುಬು$_2$ (< ತುಱುಂಬು$_2$)]

**ಸಿಂಗಾರಬಳ್ಳಿ** (ನಾ). ಒಂದು ಬಗೆಯ ಬಳ್ಳಿ: ಸಿಂಗಾರಬಳ್ಳಿ, ಕ್ರಿಮಿಘ್ನ (ಮೈಔಗಿ. ೩೫-೬೭೭). [ಸಿಂಗಾರ$_7$ + ಬಳ್ಳಿ]

**ಸಿಂಗಾರಬೀಜ** (ನಾ). ಒಂದು ಬಗೆಯ ಜಲಸಸ್ಯ: ಮುಳ್ಳುಕೊಂಬುಬೀಜ, ಸಿಂಗಾರಬೀಜ, ನೀರು ಅಕ್ರೋಟು (ಮೈಔಗಿ. ೭೫-೧೫೩೪). [ಸಿಂಗಾರ$_7$ + ಬೀಜ]

**ಸಿಂಗಾರಮುಱುಕು** (ನಾ). (ಅಲಂ) ಅತಿಶಯಸೌಂದರ್ಯದಿಂದ ಕೂಡಿದುದು: ಬಂಗಾಳದರಸೀತ ನೋಡೆಂದರೀಕ್ಷಿಸಿ ಮುಂಗಡೆಗೆಯ್ದಿದಳೊಡನೆ ಸಿಂಗಾರಮುಱುಕು ವಿಡಾಯ ಹಾರಿತು ಹೊಸ ಬಿಂಗಿಯಂತಿರ್ದನಾ ನೃಪತಿ (ಭರಚಿ. ೫೫-೯೪).

[ಸಿಂಗಾರ + ಮುಱುಕು$_3$ (< ಮುಱಿಕು)]

**ಸಿಂಗಾರವಡೆ**, ಸಿಂಗರವಡೆ (ಕ್ರಿ). ಅಲಂಕಾರವನ್ನು ಹೊಂದು; ಅಲಂಕೃತವಾಗು: ಸಿಂಗಾರವಡೆದ ಜೂಟಳದುಯ್ಯಲೆಯ ಮಂಗಳವಿಭವದಿನಡರ್ದು (ಮೋಹತ. ೧೪-೮೮). **ಸಿಂಗರವಡೆ**: ಸಿಂಗರವಡೆದಿಹ ಪುರಜನ ಬಹುಬಗೆಹಂಗಳು ವಿಪ್ರನಾರಿಯರು . . . ರಂಗನುತ್ಸವದೊಳ್ಕೆದಿದರು (ಕಂಪವಿ. ೯-೬೩). [ಸಿಂಗಾರ + ಪಡೆ$_1$]

**ಸಿಂಗಾರಸೊಗ** (ನಾ). ಪ್ರಣಯದ ಸುಖ: ಪೆಕ್ಕೊಲಿದ ನಲ್ಲನಿರೆ, ಗಂಡೊಲಿದ ನಲ್ಲೆಯಿರೆ, ಸಿರಿಬಾಳ್ಕೆ ಸಿಂಗಾರಸೊಗಕೆ ಹೊಯಿಕ್ಕೈಯಿಹುದೆ ಪೇಳ್ ಬದುಕಿನಲಿ? (ಶ್ರೀರಾಮಾ. ೫೪-೨). [ಸಿಂಗಾರ + ಸೊಗ]

**ಸಿಂಗಾರಹೂ**, ಸಿಂಗಾರಹೂವು (ನಾ). ಅಡಕೆಯ ಹೂವಿನ ಗೊಂಚಲು; ಹೊಂಬಾಳೆ: ದೈವ್ವದಿಂದ ಪ್ರೇರಿತವಾದವನಂತೆ ಕೈಯಲ್ಲಿ ಸಿಂಗಾರಹೂ ಹಿಡಿದು ನಡುಗತೊಡಗಿದ (ಕುಡಿಕೂ. ೬೫). **ಸಿಂಗಾರಹೂವು**: ಹಿರಿಮಲೆಯ ಯಜಮಾನ ಪೂಜಾರಿಯ ಕೈಗೆ ಸಿಂಗಾರಹೂವು ಹಾಕಿದ . . . ತುಕ್ರ ಅವಮಾನ ಸಹಿಸಲಾರದೆ, ಇನ್ನಷ್ಟು ಸಿಂಗಾರಹೂವನ್ನು ಕೊಂಡು ಪೂಜಾರಿಯ ಕೈ ಮೇಲೆ ಇರಿಸಲು ಹೋದರ, ಪೂಜಾರಿಯು ಅದನ್ನು ಸ್ವೀಕರಿಸಲಿಲ್ಲ (ಕುಡಿಕೂ. ೧೪೭). [ಸಿಂಗಾರ + ಹೂ$_2$ (< ಪೂ$_2$)]

**ಸಿಂಗಾರಹೂವು** 'ಸಿಂಗಾರಹೂ' ನೋ.

**ಸಿಂಗಾರಿ** (ನಾ). ಅಲಂಕರಿಸಿಕೊಂಡಿರುವವಳು; ಚೆಲುವೆ; ಬೆಡಗಿ: ಕಾಲೊಳು ಹೆಜ್ಜೆಯ ಹಾಕುತ ನರ್ತಿಸೆ ಬಿಂಕದ ಸಿಂಗಾರಿ (ಚಂದ್ರಮಾ. ೩೩-೪); ಚಿಮ್ಮುತ ನಿರಿಯನು ಬನದಲಿ ಬಂದಳು ಬಿಂಕದ ಸಿಂಗಾರಿ (ಇಂಗೀತ. ೪೯-೨). [ಸಿಂಗಾರ + -ಇ$_2$]

**ಸಿಂಗಾರಿಗ**, ಸಿಂಗರಿಗ (ನಾ). ೧. ಅಲಂಕರಿಸುವವನು; ಅಲಂಕಾರ ಮಾಡುವವನು: ಆ ಸಿಂಗಾರಿಗರು ಒಕ್ಕಂ ಗ ೩೭ ಆ ಪರಿಚಾರಕರು ಒಕ್ಕಂ ಗ ೨೪ ದೇವರ ಅಗ್ಗಣಿಯವರು ಒಕ್ಕಂ ಗ ೨೪ (ಎಕ V (R), ತಿರುಮ. ೯೭-೮೩; 1269). **ಸಿಂಗರಿಗ**: ೧. ಮಾಡುವಂಗೆ – ಕಬ್ಬಿಗಂ, ಸರವಂದಿಗಂ, ಸಿಂಗರಿಗಂ (ಶಮದ. ೧೯೭ ಪ್ರಯೋ). ೨. ಅಲಂಕರಿಸಿಕೊಂಡಿರುವವನು; ಚೆಲುವ: "ಸಿಂಗರಿಗನೆನೆ ಚೆಲುವಂ" (ಚತುವಿ. ೧೯೭); ಪರನೊಲಿದು ಸಿಂಗರಿಗನಾಗಿ ವಿಭವದೆ ಸಾಗಿ . . . ಶಿವಲೋಕಮಂ ಪೊಕ್ಕನು (ಚೆಬಪು. ೩೭ ಸೂಚನ); ವರರತ್ನದೀಪಗಳಿಂದ . . . ಸುರಗಿರಿಯಂತೆ ಸಿಂಗರಿಸಿದರ್ಘ್ಯಗಳ ಸಿಂಗರಿಗರತ್ತಿದರಾ ಜಿನಗೆ (ಭರಚಿ.೭೦-೧೭). [ಸಿಂಗಾರ + -ಇಗ]

**ಸಿಂಗಾರಿಸು, ಶೃಂಗರಿಸು, ಸಿಂಗರಿಸು** (ಕ್ರಿ). ೧. ಅಲಂಕರಿಸು; ಅಲಂಕಾರಮಾಡು: ಕಮಲಮುಖಿಯರ ಕರೆದು ಸಿಂಗಾರಿಸಲು ನೇಮಿಸಿದ (ತೊರರಾ. ೧-೧೪-೧೨). ೨. ಅಲಂಕೃತವಾಗು; ಅಲಂಕರಣಹೊಂದು : ತೋರಣಗಟ್ಟಿರ್ದುವಲ್ಲಲ್ಲಿ ಕುರುಜ ಸಿಂಗಾರಿಸಿರ್ದುವು ಕೆಲಬಲದಿ (ಭರಚಿ. ೩೬-೨೫). **ಶೃಂಗರಿಸು** : ಸಂಗಡ ಮಿರ್ದಂಗನೆಯರ್ ಶೃಂಗರಿಸೆ ಮಂಗಳಮುಖಿ ಹೊಂಗಿ ಹೊರೆಯೇಱೆ (ಗಿರಿಕ. ೯-೬ ವ); ವಸ್ತ್ರಾಲಂಕಾರ ಗಂಧಮಾಲ್ಯಗಳಿಂದಲಂಕೃತನಾಗಿ ಶೃಂಗರಿಸಿರುವ ದಿವ್ಯಾಶ್ವವನ್ನೇರಿ (ಸೌಗಂಧಿ. ೨೫೮-೧೨). **ಸಿಂಗರಿಸು** : ೧. ಚಪ್ಪರಮನುಱೆ ಸಿಂಗರಿಸಿ (ಪದ್ಮರಾ. ೩-೩೯); ಸಜ್ಜೆಯನು ಸಿಂಗರಿಸು ನಿನ್ನಿನಿಯ ಬಂದಪ ನೀಲವೇಣಿ (ಮೋಹತ. ೩೦-೪೨); ಜನರೆಲ್ಲ ಹರುಷದಿಂದ ತಮ್ಮ ಮನೆಗಳನ್ನು ಸಿಂಗರಿಸುತ್ತಿದ್ದಾರೆ (ಜೀವರಂ. ೫೦). ೨. ರುದ್ರ ಕನ್ನೆಯರೊಲಿದು ಸಿಂಗರಿಸಿ ಕುಳ್ಳಿರಲು (ಬಸರ. ೧-೧೩); ಸಿಂಗರಿಸಿ ಸುಳಿದಾಡುವರ ಕಂಡನು ನೃಪತಿ ಹರ್ಷಿಸುತ (ನಳಚ. ೮-೪೮); ಪರಿಪರಿ ಪಾತ್ರವೆಂಗಳು ಸಿಂಗರಿಸಿಯೆ ಹರುಷದೊಳಗೆ ನಡೆತಂದು (ಕಂಪವಿ. ೭-೧೦೭). [ಸಿಂಗಾರ + -ಇಸು$_1$]

**ಸಿಂಗಾಸನ** (ನಾ). ಸಿಂಹಪೀಠ; ಸಿಂಹಾಸನ : ಓ! ಶಿವರುದ್ರ! ಸಿಂಗಾಸನ . . . ಇದನ್ನು ಯಾರಾದರೂ ಹೊತ್ತುಕೊಂಡು ಹೋದರೆ ಏನು ಗತಿ? (ಚಿಟ್ಟುಳ. ೧೦೫-೧೯); ಹಿರಿಯ ಎರೆಯಂಗನೇನೋ ಸಿಂಗಾಸನ ತನಗೆ ಬೇಡವೇ ಬೇಡ ಎಂದು ಹಟ ತೊಟ್ಟಿದ್ದನಹುದು (ಸವತ. ೧೯೭). [< ಸಂ. ಸಿಂಹಾಸನ./ ಪ್ರಾ. ಸಿಂಘಾಸಣ]

**ಸಿಂಗಿ$_1$** (ನಾ). ೧. ಒಂದು ಬಗೆಯ ಘೋರವಾದ ವಿಷ : "ಸಿಂಗಿ ವಿಷಾಂತರಾಹ್ವಯಮೆ" (ಕರ್ಣಾನಿ. ೨೧); ಅಂತರಂಗಶುದ್ಧವಿಲ್ಲದವರ ಸಂಗ ಸಿಂಗಿ ಕಾಳ ಕೂಟವಿಷವೋ (ಬಸವ. ೧೧೯); ಸಿಂಗಿಯನು ಬಿತ್ತಿದೆನು ಪಾಂಡವರಂಗದಲಿ ತತ್ಫಲದ ಬೆಳಸಿನ ಸಿಂಗಿಯಲಿ ಸಾವೆನು (ಕುಮ್ಮಾಸ. ೧೨-೪೪). ೨. ಒಂದು ಜಾತಿಯ ಮೀನು (?): ಬತ್ತಿದಲೆಗಳ ಮೆಯ್ಯ ಬೂದಿಯವೊತ್ತಿ ಬಿಗಿದುಡಿದಾರ ಕಚ್ಚುಟವಿತ್ತಬಿದ ಕಾಮಾಕ್ಷಿಕಂಠದ ಸಿಂಗಿನಾಥಗಳ (ಶಂಕದಾ. ೧೫-೪). [< ಸಂ. ಶೃಂಗೀ]

**ಸಿಂಗಿ$_2$** 'ಸಿಂಗ$_2$' ನೋ.

**ಸಿಂಗಿಗೊರಳ** (ನಾ). ಕೊರಳಲ್ಲಿ ವಿಷವನ್ನು ಧರಿಸಿದವನು; ವಿಷಕಂಠ; ಶಿವ: ನಿಮಗೀ ಭಂಗವಾರಿಂದಾಯ್ತು ನಡುಗುವಿರೇಕೆ ಹೇಳಿಯೆನೆ ಸಿಂಗಿಗೊರಳನವರ್ಗಳೆಮ್ಮನು ಭಂಗಿಸಿದರೀ ಪರಿಯೆನಲು (ನಿಭಾಗ. ೪-೩-೪).

[ಸಿಂಗಿ$_1$ + ಕೊರಳು (< ಕೊರಲ್) + -ಅ$_7$]

**ಸಿಂಗಿತಲೆಪಣ್ಯಾರ** (ನಾ). ಒಬ್ಬಾತನ ಹೆಸರು: ತಮ್ಮ ಪ್ರಸಾದಪರನಪ್ಪೊನ್ನೆ ಆರಿದ (ಹಾರಿತ)ಗೋತ್ರಜನ್ನೆ ಸಿಂಗಿತಲೆಪಣ್ಯಾರನ್ನೆ ಕಾಸಂಪಳ್ಳಿಯಾ ಸಮಭಾಗಮಾನ್ ಚನ್ದ್ರಸೂರ್ಯ್ಯರುಳ್ಳಪ್ಪಿನಂ ಸರ್ವ್ವವಿರುದ್ಧರಹಿತಂ ಗೋಪಾಲದೇವ[ರ್] ಕೊಟ್ಟರ್ (ಎಇ. XXI, ೧೭೮-೮; ಸು. ೮ನಯ ಶತ). [?]

**ಸಿಂಗಿನಾದ** 'ಸಿಂಗನಾದ' ನೋ.

**ಸಿಂಗಿವಲ್ಲು** (ನಾ). ವಿಷದ ಹಲ್ಲು: ಕೆಳಗಣ ಹಲ್ಲು ಹದಿನಾರಕ್ಕೆ ಹೆಚ್ಚಾಗಿಯಿರೆ ತಾಯಿಗೆ ಆಗದು ಸಿಂಗಿವಲ್ಲಾಗೆ ವ್ಯಥವೇ (ಕಾಶೀಮ. ೧೯೫-೫). [ಸಿಂಗಿ$_1$ + ಹಲ್ಲು (< ಪಲ್)]

**ಸಿಂಗಿವಾವು** (ನಾ). ಒಂದು ಬಗೆಯ ವಿಷಸರ್ಪ; ಉರಿಸಿಂಗಿ: ಬೆಂಗದಿರನ ನುರಿವಿನ ಕಾಂತಶಿಲೆಯಗ್ಗಿ ಸಿಂಗಿವಾವಿನ ಪಚ್ಚೆಗಳ ಜಂಗುಳಿ ಮರಗೊಂಬಿನೊತ್ತುರಿ ಯಿಂದುಱು ಲಿಂಗಂಬೋಲಾದುದಾ ಶಿಖರಿ (ಶ್ರೀಪಾಲ. ೪-೫೧). [ಸಿಂಗಿ$_1$ + ಪಾವು$_1$]

**ಸಿಂಗುಟ್ಟಿ** (ನಾ). ಒಬ್ಬಾತನ ಹೆಸರು: ಶ್ರೀ ತರುಣವಸನ್ತನ್ ಸಾಮನ್ತಕೇಸರಿಯಾ ಕೊಟ್ಟ ಪನ್ನಾಸು ಸಿಂಗುಟ್ಟಿಯಾ ಲಿಖಿತಂ (ಸೌಇಇ. IX-i, ೪೭-೧೯; ಸು. 9ನಯ ಶತ). [?]

**ಸಿಂಗೂರ್** (ನಾ). ಒಂದು ಊರಿನ ಹೆಸರು: ಸತ್ತಿಯೂರುಂ ಸಿಂಗೂರು ನಗರಲ ಪನ್ನಿರ್ವ್ವರು ಮಹಾಪರಿಷೆಯು ಎಡನಾಡ ಮುವನ್ನಾರ್ಬ್ಬ್ಯಾಮುಣ್ಣುಗಳುಂ ಸಕ್ಕಿ (ಎಕ. III (R), ನಂಜನ. ೨೬೯-೮; ಸು. 10ನಯ ಶತ). [? + ಊರು$_3$ (< ಊರ್)]

**ಸಿಂಗೆ** (ನಾ). (ಜಮೀನಿನ) ಸಣ್ಣಭಾಗ; (ಹೊಲ, ಗದ್ದೆ, ಮುಂತಾದುವುಗಳ)

ಭಾಗ; ಸೀಳು: ಚಳಹೊಂಡದ ಗದೆಯ ಸಿಂಗೆ ೧ ಅಂತು ಗದೆಯ ತುಂಡು ೨ ಸಿ ೧ ಗದೆಯ ಕಲವಿನ ಹಕ್ಕಲೂ ಸಹ (ಮೈಅಂ. ೧೯೩೦, ೫೬-೧೭; 1597).

[ದೇ. ‖ ತುಳು. ಸಿಂಕೆ, ತಿರ್ಕೆ, ಸಿರ್ಕೆ = ತುಂಡು, ಚೂರು]

**ಸಿಂಗೆಯ** (ನಾ). ಒಬ್ಬಾತನ ಹೆಸರು: ಪೆರ್ಮ್ಮಾಡಿ ಬೂತುಗಂ ಗಂಗವಾಡಿಯ ನರಸುಗೆಯ್ಯ ಬೂತಯ್ಯನ ಮಾದಯ್ಯ ಸಿಂಗೆಯರ ಮಾದಯ್ಯ ಗಾವುಣ್ಣಗೆಯ್ಯ (ಮೈಅಂ. ೧೯೩೫, ೩೩-೩; 968). [< ಸಿಂಗ$_1$ + ಅಯ್$_1$ (< ಅಯ್ಯ$_1$)]

**ಸಿಂಘ$_1$** 'ಸಿಂಗ$_1$' ನೋ.

**ಸಿಂಘ$_2$** (ನಾ). (?): ಕರವಾಳಿಂದೇಸುವೇಟ್ಟಂದಿಜಿಯಲಹಿತರಂ ಯುದ್ಧದೊಳ್ ಖುದ್ದ ಕೋಪಂ ನೊರೆನೆತ್ತರ್ ಸೂಸೆ ಕಂಡಂ ಸಡಿಲೆ ಕಟಲಲಾ ಕಾಳಿಜಂ ಮೂಳೆ ಬೀಟಲ್ಕರಿಯಲ್ ನುರ್ಗಾಗೆ ಬಿಕ್ಕೊಕ್ಕುರುಳೆ ತೊರಳೆಗಳ್ ಸಿಂಘಗಳ್ ತಾಜಿ ಪಾಜಿಲ್ ಕರುಳೊಕ್ಕಾ ಸಂಧಿಬಂಧಂ ಬಿಡಲತಿಭಯದಿಂ ಘೋರಮಾಯ್ತಾಜಿರಂಗಂ (ಶಾಸಪಂ. ೧೩೮; ಎಕ. VIII, ಸಾಗರ. ೧೪೦-೧೭; 1265 ನೋ). [ಇದು 'ಬಂಘ' ಎಂಬುದರ ಅಪಲಿಖಿತವಿರಬಹುದೇ?]

**ಸಿಂಘಳ** 'ಸಿಂಗಳ$_1$' ನೋ.

**ಸಿಂಘಪರಿಶೆ** (ನಾ). [ಶೈವ] ಶೈವಗುರುಗಳ ಒಂದು ಗುಂಪು; ಸಿಂಹಪರ್ಷೆ: ಹರಿಕೇಶ್ವರದೇವರಿಂಗೆ ನಿವೇದ್ಯಕ್ಕಂ ತಪೋಧನರ್ಗ್ಗೆ ಆಹಾರದಾನಕ್ಕಂ ಸಿಂಘಪರಿಶೆ ಬ್ರಹ್ಮೇಶ್ವರಪಂಡಿತರ ಕಾಲ[ಂ] ಕರ್ಚ್ಚಿ (ಕಇ. ೨೦-೧೧-೧೨; 1031). [< ಸಿಂಹಪರ್ಷೆ]

**ಸಿಂಘಲಾಂಛನ** 'ಸಿಂಗಲಾಂಚನ' ನೋ.

**ಸಿಂಘವಿಷ್ಟರ** 'ಸಿಂಗವಿಟ್ಟರ' ನೋ.

**ಸಿಂಘವುರಗಣ** (ನಾ). ಸಿಂಹಪುರವೆಂಬ ಊರಿಗೆ ಸಂಬಂಧಿಸಿದ ಜೈನಮುನಿಗಳ ಒಂದು ವರ್ಗ: ಸಿಂಘವುರಗಣದ ನಾಗಣನ್ನಾಚಾರ್ಯ್ಯರ್ಪ್ಪಡೆದೊರತ್ತಿಗೇರಿಯ ಬಟ್ ಇದರ್ಕ್ಕೆ ಸಾಕ್ಷ್ಯ (ಕಇ. II, ೫-೧೧; 814). [< ಸಂ. ಸಿಂಹಪುರಗಣ]

**ಸಿಂಘಾಣ** (ನಾ). ೧. ಮೂಗಿನ ಮಲ; ಸಿಂಬಳ; ಗೊಣ್ಣೆ. ೨. [ಅಶ್ವಶಾ] ಕುದುರೆಯ ಮೂಗಿಗೆ ಸಂಬಂಧಿಸಿದ ಒಂದು ಬಗೆಯ ರೋಗ: ತುರಗದ ನಯನಂಗಳ್ ನೀರ್ ಸುರಿಗುಂ ನಾಸಾಂತರಂಗದಿಂದಂ ಶ್ಲೇಷ್ಮಂ ಸುರಿಗುಮಡಿಗಡಿಗೆ ಕೆಮ್ಮುತ್ತಿರೆ ಸಿಂಘಾ(ಹಾ)ಣದ ವಿಕಾರಮೆಂದಱಿವುದದಂ (ಅಶ್ವಶಾ. ೧೧-೪೯). [ಸಂ.]

**ಸಿಂಘಿನಿ** (ನಾ). ಮೂಗು; ನಾಸಿಕ: "ನಾಸಿಕಂ ಸಿಂಘಿನಿ ಘ್ರಾಣಮಾ ಘೋಣಮೆನೆ ನಾಸೆಯೆನೆ ಮೂಗಕ್ಕು" (ಮಂಗರಾ. ೯೪-೫). [< ಸಂ. ಸಿಂಘಿಣೀ]

**ಸಿಂಚನ** (ನಾ). ಚಿಮುಕಿಸುವುದು; ಸಿಂಪಡಿಸುವಿಕೆ: ಔಷಧದ್ರವ್ಯವನ್ನು ಗಾಯದ ಮೇಲೆ ಸ್ವಲ್ಪಸ್ವಲ್ಪ ಸಿಂಚನ ಮಾಡಬೇಕು (ರೂಢಿ). [ಸಂ.]

**ಸಿಂಜಾನ** (ನಾ). (ಗೆಜ್ಜೆ, ಕಿರುಗಂಟೆಗಳಿಂದುಂಟಾಗುವ) ಕಿಣಿಕಿಣಿಧ್ವನಿ; ಕ್ವಣನ: ಸಿಂಜಾನ ಸಮದಷಟ್ಚರಣಂ ಜೇವೊಡೆಯೆನಿಸೆ . . . ನವಮಂಜುಲಲತೆ ಮದನಚಾಪಲತೆಯನೆ ಪೋಲ್ಗುಂ (ಲೀಲಾವ. ೫-೩೧); ಕಡಗ ಕಂಕಣ ಝಣತ್ಕಾರ ಮನ್ನನುವಹಿಸಿ ಬೆಡಗೆನಿಪ ಸಿಂಜಾನಮಂಜೀರಮಂಜುಳದ ನುಡಿ (ವಂಶಾರಾ. ೧-೬-೧೪).

[ಸಂ.]

**ಸಿಂಜಾನಮಣಿ** (ನಾ). ಕಿಣಿಕಿಣಿಧ್ವನಿಯನ್ನುಂಟು ಮಾಡುವ ಕಿರುಗಂಟೆ: ಅಭಿನವ(ನ)ಮೇರು ಮಂದಾರಪಾರಿಜಾತಸಂತಾನಕಕುಸುಮಮಂಜರೀಮಧ್ಯಲಂಬಮಾನ ಸಿಂಜಾನಮಣಿಕಿಂಕಿಣೀಕ್ವಣಿತದೊಳ್ (ಶಾಂತಿಪು. ೧೧-೭೭ ವ). [ಸಂ.]

**ಸಿಂಜಿತ** (ನಾ). = ಸಿಂಜಾನ: ಬಳೆಗಳ್ಗಲ್ಲೆನದಂತೆ ಕಣ್ಸೆಳಗದತ್ತಂ ಸೂಸದಂತಿಟ್ಟ ಮಂಜುಳಭೂಪಾಳಿಯ ಸಿಂಜಿತಂ ನೆಗಳದಂತೆ . . . ಪುಂಶ್ಚಳಿಯರ್ ಬಂದುಪಕಾಂತ ಸೂಚಿತ ನಿಶಾಂತಾಂತಂಗಳಂ ಪೊರ್ದಿದರ್ (ರಾಜಶೇ. ೧೧-೨೪). [ಸಂ.]

**ಸಿಂಜಿನಿ** (ನಾ). ೧. ಬಿಲ್ಲಿನ ಹೆದೆ; ಜ್ಯಾ: "ಬಿಲ್ಲ ಹೆದೆ ಜೀವೆ ಸಿಂಜಿನಿ ಮೌರ್ವಿ ಜ್ಯಾ ಗುಣವೆನಿಸಿಕ್ಕು" (ಮಂಗರಾ. ೮೭-೩೩); ಜೋದರಾನೆಗಳನಂಕುಶವಿಕ್ಕಿ ನೂಂಕಿದರ್ . . . ಸೆದಿ ಸಿಂಜಿನಿಯ ತಲೆವಿಲ್ಲೊಂಡು ಪೊಕ್ಕರ್ ಧನುರ್ಧರರ್ ಮೂದಲಿಸುತೆ (ಚಿಬಪು. ೧೭-೧೪); ಪಟುಭುಜನೊತ್ತಿ ಜೇವೊಡೆದು ಸಿಂಜಿನಿಯಂ ಸೆಳೆದಾರ್ದು ಸಾರ್ದು ಸಂಘಟಿಸಿ ತೊಡರ್ಚುತೆಚ್ಚೊಡೆ (ರಾಜಶೇ. ೬-೮೭). ೨. ಕಾಲಿನ ಕಡಗ; ಅಂದುಗೆ: "ಸಿಂಜಿನೀ, ಪಾದಕಟಕಃ- ಈ ೨ ಕಾಲ ಕಡಗಂ" (ಹಲಾಯು. ೯೨-೪೦೭); ದುಕೂಲವನುಟ್ಟು ಚಲ್ಲಣಮಂ ಖಚಿಸಿ ಮಣಿರಚಿತಸಿಂಜಿನಿಯ ಕಟ್ಟಿಕೊಂಡು . . . ಸೋವಲದೇವಿ ನಡೆ ತಾರೌ (ಬಸಪು. ೧೨-೪೩). [ಸಂ. ಸಿಂಜಿನೀ]

**ಸಿಂಜಿನಿಗೆಯ್, ಸಿಂಜಿನಿಗೈ** (ಕ್ರಿ). ಬಿಲ್ಲಿನ ಹೆದೆಯನ್ನು ಅನುವುಗೊಳಿಸು; ಹೆದೆಯೇರಿಸು: ಸಿಂಜಿನಿಗೆಯ್ದು ಬಲುಬಿಲ್ಲ ಕರದೊಳಗಾಂತು ಜೇವೊಡೆದ (ಮೋಹತ. ೧೯-೩೭). ಸಿಂಜಿನಿಗೈ: ಇನಿರಸವಾಂತ ಕರ್ವಿಲ್ಲಿಗೆ ಭ್ರಮರಸಿಂಜಿನಿಗೈದೆಡದ ಹಸ್ತದಲಿ ದನಿಗೆಯ್ಯುತಿರೆ (ಮೋಹತ. ೫-೩೭). [ಸಿಂಜಿನಿ + ಕೆಯ್$_1$]

**ಸಿಂಜಿನಿಗೈ** 'ಸಿಂಜಿನಿಗೆಯ್' ನೋ.

**ಸಿಂಜಿನಿಗೊಳಿಸು** (ಕ್ರಿ). = ಸಿಂಜಿನಿಗೆಯ್: ರಂಜಿಪ ಹೊಂಗಟ್ಟಿನ ಬಿಲ್ಲ ಮನ್ಮಥ ಸಿಂಜಿನಿಗೊಳಿಸಿ ಜೇವೊಡೆಯೆ ಅಂಜಿದು ಫಣಿರಾಯ ತಲೆದೂಗೆಯಲು ರತ್ನ ಗುಂಜಿಯಂತೆಸೆದು ಚೆಲ್ಲಿದುವು (ಮೋಹತ. ೧೨-೫೫); ಅನಿತರೊಳು ಮಾರೇಕ್ಷು ಚಾಪಕೆ ಭ್ರಮರ ಸಿಂಜಿನಿಗೊಳಿಸಿ ಜೇವೊಡೆಯೆ (ನವಮೋ. ೬-೨೨). [ಸಿಂಜಿನಿ + ಕೊಳ್$_1$ + -ಇಸು$_1$]

**ಸಿಂಜಿನೀವಳಯ** (ನಾ). ಕಾಲುಕಡಗ; ಪಾದಕಟಕ: ಮಂಜುಘೋಷಮಂ ಬೀಱುವ ಸಿಂಜಿನೀವಳಯ ಕಾಂಚಿಗಳಿಂಬಿವಱಿಂದದೊಂದು ಚೆಲ್ವೇಱಿರೆ ಭೋಗಿಭಾಮಿನಿಯರಾ ಮಡುವಿಂ ಪೊಱಮಟ್ಟರ್ (ಜಗವಿ. ೩-೧೦೨); ಅಳಕಂ ನೀಳಬಳಾಹಕಂ ಘನರವಂ ಸತ್ಕಿಂಕಿಣೀಸಿಂಜಿನೀವಳಯಧ್ವಾನಮನೇಕಭೂಷಣಮ[ಣಿ]ಜ್ಯೋತ್ಸ್ನಾಳಿ ಗೋತ್ರಾರಿ ಚಾಪಳ ಚಾಪಂ ತಮಗೆಂಬಿನಂ (ನಳಚಂ. ೪೩೭). [ಸಂ. ಸಿಂಜಿನೀವಲಯ]

**ಸಿಂಟ** (ನಾ). ಹೊಲಸು ನಾರುವವನು; ಕೊಳಕ: ಒಂದು ಮೃಗಂ ಬೀಱದು ನೋಡಿಂದಿನ ಬೇಂಟೆಯೊಳ್ ಸಿಂಟನಂ ಕಂಡುದಱಿಂ (ಯಶೋಚ. ೪-೫೦).

[ಸಿಂಟು + -ಅ$_7$]

**ಸಿಂಟಿಮರ** (ನಾ). ಒಂದು ಬಗೆಯ ಮರ: ಉಡಿಮರ, ಗೊಡ್ಡ, ಊದಿಮರ, ಸಿಂಟಿಮರ, ಗೂಗಲ್, ಹಣ್ಣುಗೊಡ್ಡ (ಮೃಡಿಗಿ. ೫೭-೧೧೫೦). [ಸಿಂಟಿ$_1$ + ಮರ$_1$]

**ಸಿಂಟು** (ನಾ). ಕೆಟ್ಟವಾಸನೆ; ದುರ್ನಾತ: 'ಸಿಂಟ', 'ಸಿನುಗು' ಪರಾ. [?]

**ಸಿಂಟೆಗೊಳ್** (ಕ್ರಿ). ಶೇಖರಿಸು; ಕೂಡಿಸು; ಸಂಗ್ರಹಮಾಡು (?: ರತ್ನ ಮೊದಲಾದೆಲ್ಲ ವಸ್ತುಗಳ ಸಿಂಟೆಗೊಂಡೀ ಫಣಿಕುಮಾರನ ತುಂಟತನವನು (ಫಣಿಚ. ೨-೪೩). [ಸಿಂಟೆ$_1$ + ಕೊಳ್$_1$]

**ಸಿಂಡಮೂಗು** (ನಾ). ಗೆಡ್ಡೆಮೂಗು; ಮೊಂಡಾಗಿರುವ ಮೂಗು: ಮಿನುಗುವ ಕಣ್ಣು, ಸಿಂಡಮೂಗು, ಮೊಂಡಕ್ರಾಪು, ಎರಡು ಕೈಯನು ಜೇಬೊಳಗೆ ಇಳಿಬಿಟ್ಟು ಹೊರಗೆ ಬಂದವನಿಗೆ ಊಟದ ಮನೆಯ ಮೂಲೆಯಲ್ಲಿದ್ದ ನಾನು ಕಂಡೆ (ಹೊಸಹ. ೧೧೨); ಕುಳ್ಳಾಗಿ, ಗುಜ್ಜಾಗಿದ್ದ ಸಿಂಡಮೂಗಿನ ಸಾಬು . . . ಅವನಿಗೆ 'ಲುಂಗೀಸಾಬು' ಎಂದು ಹೆಸರು ಬಂದಿತ್ತು (ಮಕಮ. ೨೭೮). [ಸಿಂಡ$_1$ + ಮೂಗು]

**ಸಿಂಡರಿಸು** (ಕ್ರಿ). ೧. (ಕೋಪ, ಜುಗುಪ್ಸೆ ಮೊದಲಾದುವುಗಳಿಂದ) ಹುಬ್ಬು ಗಂಟಿಕ್ಕು; ಮುಖ ಗಂಟುಹಾಕಿಕೊಳ್ಳು: ಮೂರನೆಯ ಮಂತ್ರಿಗಳು ಮುಖವನ್ನು ಸಿಂಡರಿಸಿಕೊಂಡು 'ಚೆನ್ನಾಯ್ತು' ಎಂದರು (ಚಂಗಾಳ್ಯ. ೫೬೦); ಮೂರ್ತಿ ಮುಖ ಸಿಂಡರಿಸಿಕೊಂಡು ಗೊಣಗಿದ (ಬದುಕ್ಷ. ೪೦). ೨. (ಆಲಂ) ಅರಳಿಸು; ಹಿಗ್ಗಿಸು: ಅದು ವಾಸನೆ ನೋಡುವಂತೆ ತನ್ನ ರೋಜಾಬಣ್ಣದ ಮೂಗನ್ನು ಸಿಂಡರಿಸಿಕೊಳ್ಳುತ್ತಾ ಅಲುಗಾಡದೆ ನನ್ನ ಅಂಗೈಯ ಮೇಲೆ ಕುಳಿತಿತ್ತು (ಕಾಲಿಮ. ೩೮). [? + -ಇಸು$_1$]

**ಸಿಂಡು** 'ಜಿಡ್ಡು' ನೋ.

**ಸಿಂಡುವಾಸನೆ** (ನಾ). ಕಮಟುವಾಸನೆ; ದುರ್ಗಂಧ: ಆಗ ಸಿಂಹದ ಸಿಂಡು ವಾಸನೆಯು ಪೈಶಾನಿನ ಮೂಗಿಗೆ ಮುಟ್ಟಿತು (ಮಣಸ. ೯೫).

[ಸಿಂಡು(< ಜಿಡ್ಡು) + ವಾಸನೆ$_2$]

**ಸಿಂತರಿಸು** (ಕ್ರಿ). ತಿರಸ್ಕರಿಸು; ಅಲ್ಲಗಳೆ: ಎಲ್ಲರೂ ಅವಳು ಮಾಡಿದ್ದನ್ನು ಸಿಂತರಿಸಿ (ಅಲ್ಲಗಳೆದು) ಬಿಡುವರು . . . ಎಂತಾದು ಮಾಡಿದರು ಸಿಂತರಿಸಿ ಬಿಡುವಾರು ಎಂತಾದ ನನ್ನ ಕೈಗೂಣ ಶಿವಲಿಂಗ (ಕನ್ನಜಾ. ೧೧೧). [? + -ಇಸು$_1$]

**ಸಿಂತುರು** (ನಾ). (?): ದಂತಿ ತುರಗರಥ ಭಟರು ವಿಮಾನಗಳಂ ತರಿಸದೆ ಹೊಕ್ಕು ಕಲಸೆ ಸಂತಸದಿಂದ ಪಾಯ್ದುಳವೆಲ್ಲ ಮಸಗಿತು ಸಿಂತುರು ಮಸಗಿದಂದದೊಳು (ಭರತ. ೪೭-೨೭). [?]

**ಸಿಂತ್ರ** (ನಾ).(?): ವ್ಯೋಮಾದಿ ಭೂತಂಗಳ ಸೋಮತಂತ್ರ ಕಾಮಾದಿಷಡ್‌ವರ್ಗದ ಸಂಗ ಸಿಂತ್ರ ವಾಮಾಂಗ ಹಸ್ತಾಬ್ಜದ ಲಿಂಗಮಂತ್ರ ನಾಮಾದಿ ಮೂಲಾಕ್ಷರವೆ ಸ್ವತಂತ್ರ (ಮೈಲಾರ.೧೮೧-೮); ಭಾವೆ ಹಿಡಿದಿದ್ದಾಳು ಬಟ್ಟಲಲ್ಲಿ ವೀಳಯವ . . . ಯಂತ್ರಾ ಮಾಯಾದಿಂದಾಗಲಿ ತಂತ್ರಾ ಜಪದಿಂದಾಗಲಿ ಸಿಂತ್ರಾವಾಗಲಿ ಶಾಬಲ ಮಂತ್ರವಾಗಲಿ . . . ಕಂತುಪಿತನಾ ಕರತಂದವಳಿಗೆ ಕರುಣಿಸಿ ಕೊಡುವೆನೆಂದು (ಶ್ರೀಕೃಪಾ. ೧೭). [?]

**ಸಿಂದ$_1$** 'ಸಿಂಧ' ನೋ.

**ಸಿಂದ$_2$** (ನಾ). ಒಂದು ಬಗೆಯ ಮರ: ಮಿಕ್ಕ ಸಿಂದವು ಕರಿಬೇವು ಮಾಮರಗಳು ಇಕ್ಕೆಲದಲಿಯೆಸೆದಿಹುದು (ಮಾದೇಸಾಂ. ೧-೫೭). [?]

**ಸಿಂದ$_3$** (ನಾ). ಒಂದು ರಾಜವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದ ವ್ಯಕ್ತಿ: ಸಿಂದವಂಶದ ಅರಸರಲ್ಲಿ ಕ್ರಿ. ಶ. ೧೧೧೩ ರಿಂದ ೧೧೨೫ರ ವರೆಗಣ ಶಾಸನಗಳುಳ್ಳ II ಆಚುಗಿ ಅಥವಾ ಆಚರಸನೂ . . . ಆಳತೊಡಗಿದನು (ಮೂರುಉ. ೭೩); ಸಿಂದರು, ಸಿಂಧೂತೀರದಿಂದ ಬಂದವರೆಂಬ ಮಾತು ಅವರ ಮನೆತನದ ಹೆಸರಿನಿಂದ ತಿಳಿದು ಬರುವುದಾದರೂ, ಸಿಂಧೂತೀರದ ಯಾವ ನಾಡಿನಿಂದ ಬಂದರು ಎಂಬ ಮಾತು ಸಂದಿಗ್ಧವಾಗಿಯೇ ಉಳಿಯುತ್ತದೆ (ತುಳುನಾ. ೨೩೨). 'ಸಿಂಧು' ಪರಾ. [?]

**ಸಿಂದಗಾವುಂಡ** (ನಾ). ಒಬ್ಬಾತನ ಹೆಸರು: ಅವರ ದಣ್ಣನಾಯಕಂ ಶ್ರೀಧರಯ್ಯನುಂ ನಾಡುಂ ನಾಲ್ಕಾವ್ಹುಣ್ಣಂ ಸಿನ್ದಗಾವುಣ್ಣನುವಿಟ್ಟು (ಎಕ. IX. ಹೊಸಕೋ. ೧೧೧-೫; 997). [ಸಿಂದ$_{3?}$ + ಗಾವುಂಡ(< ಗಾಮುಂಡ)]

**ಸಿಂದಿ, ಸೇಂದಿ** (ನಾ). ೧. ಮದ್ಯವನ್ನು ತೆಗೆಯುವ ಒಂದು ಬಗೆಯ ಕಾಡು ಈಚಲಮರ: ಸಿಂದಿಯ ಮರಗಳು ಬೆಳೆಯತಕ್ಕಂಥ ಭೂಮಿಯಾದರೆ ತಂಪಿನ ಮರಗಳು ಚನ್ನಾಗಿ ಬೆಳೆಯುವವು (ಕೃಷಿಪ್ರ. ೧೪೭); ತೇವುನೆಲದಲ್ಲಿ ಲಕ್ಕಿ, ಸಿಂದಿ, ಕಳ್ಳಿ ಎಂಬ ಕೀಲುಮರಗಳನ್ನು ಕಾಣಬಹುದು (ಮುಂಬಯಿ. ೫-೧೯೪). ೨. ಮದ್ಯ; ಸುರೆ; ಹೆಂಡ: ಸಿಂದಿಯನು ಸೇವಿಪನು ಹಂದಿಯಂತಿರುತಿಹನು (ಸರ್ವಜ್ಞ. ೧೨೯೯); ಸಿಂದಿ ಸರಾಯಿಗಳನ್ನು ಕುಡಿಯಬೇಡಿರಿ (ಹಬ್ಬಬ. ೨೧೭); ಉತ್ತರಕನ್ನಡಜಿಲ್ಲೆಯಲ್ಲಿ ತೆಂಗಿನ ಗಿಡದಿಂದ ಸಿಂದಿ ತೆಗೆಯುವುದುಂಟು (ಕರವೀ. ೩೨). **ಸೇಂದಿ** : ೨. ಸೇಂದಿಯ ವಿಚಾರದಲ್ಲಿ ಬೊಂಬಾಯಿ ಸರ್ಕಾರದವರು ಅನುಸರಿಸುತ್ತಿದ್ದ ಕಾರ್ಯನೀತಿಯನ್ನು ತೀವ್ರವಾಗಿ ಖಂಡಿಸುತ್ತಿದ್ದರು (ಭಾಗ್ಯಶಿ. ೮೮). [<— ಮರಾ. ಶಿಂದೀ, ಶಿಂಧೀ; ಹಿಂ. ಸೇಂಧೀ]

**ಸಿಂದು** 'ಸೆಂದು' ನೋ.

**ಸಿಂದುಕೆ** (ನಾ). ಒಂದು ಬಗೆಯ ಸಣ್ಣ ಮರ: "ತೊಟೆವುತ್ತಿ ಸಿಂದುಕೆ [ಪಾಠಾಂ. ಸಿಂಧುಕಿ]ಯೆನಿಕ್ಕು" (ಮಂಗರಾ. ೩೫-೧೪). [ಸಂ. ಸಿಂದುಕ]

**ಸಿಂದುರ$_1$** 'ಸೆಂದುರ' ನೋ.

**ಸಿಂದುರ$_2$, ಸಿಂದೂರ$_1$, ಸಿಂಧೂರ$_2$** (ನಾ). ಆನೆ; ಗಜ: ಸಿಂಧುರ – ಸಿಂದುರ; ಸ್ಕಂಧವ–ಸ್ಕಂದವ (ಶಮದ. ೨೫೫ ಪ್ರಯೋ). **ಸಿಂದೂರ$_1$**: 'ಸಿಂದೂರಲಾಂಛನ' ಪರಾ. **ಸಿಂಧೂರ$_2$**: ಮಂದಿಯಂ ನೂಂಕಿಸಲು ಒಂದಿಷ್ಟು ಮಣಿಯದಿರೆ ಸಿಂಧೂರ ನೂಚೆಂಟನೊಂದ ಬಾರಿಗೆ ಬಿಗಿಸಿ ಮುಂದಕ್ಕೆ ಮಿಣಿ ಹಚಿದು ಬೀಳೆ (ಪ್ರಾಥರಾ. ೧೨-೮). [< ಸಂ. ಸಿಂಧುರ]

**ಸಿಂದುರ$_3$** (ನಾ). ಒಂದು ಬಗೆಯ ಹೂವು ಮತ್ತು ಅದರ ಮರ; ಸಿಂಧುವಾರ: ಅಲರ್ದಪೊಸ ಸಿಂದುರಂಗಳನಲೆವಳಿಕುಳಮಂ ತಳರ್ಚಿ ತಣ್ಮಲೆವಲರೀಯಲೆದಪು ವೆಮ್ಮಂತಃಪುರಲಲನೆಯರಂ ಕೋಡು ಸೇಡುಗೊಳ್ಳಿನಂ (ಆದಿಪು. ೧೧-೮೮); ಪೂತ ಗೊಜ್ಜಗೆಗಳ ಸಿಂದು[ಪಾಠಾಂ. ಧು]ರಂಗಳೊಳಗೋಗರಗಂಪನೆ ಬೀಱುತಿರ್ಪ ಮಲ್ಲಿಗೆಯೊಳರಲ್ದ ಸಂಪಗೆಯೊಳಗ್ಗಲಿಸಿತ್ತು ಬಸಂತಮಾಸದೊಳ್ (ಪಂಪಭಾ ೫-೩೦). [< ಸಂ. ಸಿಂದುವಾರ]

**ಸಿಂದುರಂಬೊರೆ** (ಕ್ರಿ). ಸಿಂಧೂರವನ್ನು ಬಳಿ,— ಲೇಪಿಸು : ಅವಗಾಹನಕ್ಕೆಂದು ಬಂದ ಸೊಕ್ಕಿದಾನೆಗಳ ಸಿಂದುರಂಬೊರೆದ ಸಲಿಲಗಳೊಳಂ . . . ಒಪ್ಪಂಬೆತ್ತ ವೇತ್ರವತಿಯೆಂಬ ನದಿಯಿಂ ಸುತ್ತುಗೊಂಡಿರ್ಪುದಾ ರಾಜಧಾನಿಯೊಳ್ (ಕಾದಂಪೂ. ೧೭). [ಸಿಂದುರ$_1$ (< ಸೆಂದುರ) + ಪೊರೆ$_2$]

**ಸಿಂದುವಱಿ** (ಕ್ರಿ). ನಾಶವಾಗು; ಧ್ವಂಸವಾಗು: ಕಿಱಿಯಮುಗಿಳಿಯ ಬಸವನಹಳ್ಳಿಯ ಪೇಲವರಿಗೆ ಹೆಟಿಗೆ ಹುರಿಗೆ ಸಿನ್ದುವಱಿದು ದೇವಳಿಗೆನಾಡ ಎಳ್ಪದಿವ್ಪುರುಪ್ರಭುಗಳಱೆಯಲು (ಎಕ. VI, ಚಿಕ್ಕಮ. ೧೫-೧೧; 1074?). [ಸಿಂದು$_1$ (< ಸೆಂದು)? + ಪಱಿ$_1$]

**ಸಿಂದುವಾರ** (ನಾ). = ಸಿಂದುರ$_3$: ಮತ್ತೊರ್ವಳ್ ಸಿಂದು[ಪಾಠಾಂ. ಧು]ವಾರ ಕುಸುಮಸುರಭಿನಿಶ್ವಾಸೆ . . . ಎನೆ (ಆದಿಪು. ೧೧-೧೧೭ ವ); ಒದವಿದ ತೋರಮಲ್ಲಿಗೆಯ ಹಾರದ ಸೂಸಕದಿಂದೆ ಸಿಂದ [ಪಾಠಾಂ. ಧು]ವಾರದ ಚಮರೀಜದಿಂದೆ . . . ಚೆಲ್ವುವೆತ್ತುದು ಕದಳೀದ್ರುಮಗ್ರಥಿತ ಸುಂದರವಂದನಮಾಲಿಕಾವೃತಂ (ಕಾದಂಉ.೨೦೩). 'ಸಿಂಧುವಾರ' ಪರಾ. [ಸಂ.]

**ಸಿಂದೂರ$_1$** 'ಸಿಂದುರ$_2$' ನೋ.

**ಸಿಂದೂರ$_2$** (ನಾ). ಮಂಗಳದ್ರವ್ಯವಾದ ಕೇಸರಿಬಣ್ಣದ ಪುಡಿ; ಚಂದ್ರ: "ಸಿಂದೂ [ಪಾಠಾಂ. ಧೂ]ರಮೆನಲು ಚಂದ್ರಂ" (ಮಂಗರಾ. ೩೦-೭); ಕುಳಭೂಭೃತ್ಕೂಟದೊಳ್ ಮಾಣಿಕದೆಳವಿಸಿಲೆಂತಂತೆ ದಿಕ್ಕುಂಭಿಕುಂಭಸ್ಥಳದೊಳ್ಸಿಂದೂರಮೆಂತಂತೆ . . . ಪರ್ವಿತ್ತು . . . ದಶರಥವಸುಧಾಧೀಶತೇಜಃಪ್ರಕಾಶಂ (ಪಂಪರಾಮಾ. ೩-೧೩); ಸಿನ್ದೂರದಲ್ಲಿ ತೊಳಿಕೆಯನ್ನದ್ದಿ ಹದ ಮಾಡಿಕೊಳ್ಳುತ್ತಿರುವಳು (ಮಂತ್ರಶ. ೨೪-೧೪). [ಸಂ.]

**ಸಿಂದೂರಬೊಟ್ಟು** (ನಾ). ಹೆಂಗಸರು ಹಣೆಯ ಮೇಲೆ (ದುಂಡಾಗಿ) ಇಡುವ ಕೆಂಪುಬೊಟ್ಟು: ಇನ್ನೇನು ಸಿಂದೂರಬೊಟ್ಟು ಇಟ್ಟರೆ ಮದುಮಗಳ ಸಿಂಗಾರವೆಲ್ಲ ಮುಗಿಯಿತು (ರೂಢಿ). [ಸಿಂದೂರ$_2$ + ಬೊಟ್ಟು$_2$ (< ಬಟ್ಟು)]

**ಸಿಂದೂರಲಾಂಛನ** 'ಸಿಂಧೂರಲಾಂಛನ' ನೋ.

**ಸಿಂದೂರವಸನ** (ನಾ). ಕೆಂಪುಬಣ್ಣದ ಬಟ್ಟೆ; ಅರುಣವರ್ಣದ ವಸ್ತ್ರ: ಸಿಂದೂರವಸನಮಂ ಕಳೆದೊಂದು ಸಿತಾಂಬರಮನುಟ್ಟು (ಜಗವಿ. ೧೨-೪೮). [ಸಂ.]

**ಸಿಂದೆ** 'ಸಿವನೆ' ನೋ.

**ಸಿಂದೆಱ** (ನಾ). ಒಂದು ಊರಿನ ಹೆಸರು: ಅಣ್ಣುಗಿಯಾ ಗಾಮಿಗರುಂ ನೀರೆಲ್ಲಿಯಾ ಸಿನ್ದೆಱಗಾಮಿಗರುಂ ಮುಖಿಮಾಗೆ (ಎಕ. VII, ಶಿಕಾ. ೧೫೪-೧೧; ಸು. 685). [?]

**ಸಿಂಧ, ಸಿಂದ$_1$** (ನಾ). ಬಾವುಟ; ಧ್ವಜ: ಪೊಳೆವ ನವಿಲ ಸಿಂಧಂ ಬೆಡಂಗಾಗೆ (ಜಗವಿ. ೧೮-೫೧); ಹೂಡಿದರು ರಥವೆರಡನಿವರು ಸಘಾಡದಲಿ ಕಪಿ ಗರುಡಸಿಂಧವ ಜೋಡಿಸಿದರು (ಕುಮಾ.ಆ. ೨೦-೨೧); ಸಿಂಧ ಸೀಗುರಿ ಛತ್ರ ಚಾಮರ ಪತಾಕೆಗಳ್ಸಂದಣಿಸಿ (ಜೈಮಿಭಾ. ೨೨-೫). **ಸಿಂದ$_1$**: ಅಂತುಭಯಬಲಮುಂ . . . ಮಿಳಿರ್ದು ಮಿಳ್ಳಿಸುವ ಪೆಸರ ಕುಱಿಪಿನ ಪಳಯಿಗೆಗಳುಂ ಸಂದಣಿಸಿ ಮುಂದೆ ನಿಂದ ಪಲವುಂ ಸಿಂದಂಗಳುಂ [ಪಾಠಾಂ. ಚೆಂದಮುಂ] (ಪಂಪಭಾ. ೧೩-೩೪ ವ); ಮುಗಿಲ ಮುಟ್ಟುವ ವೈಜಯಂತಿಗಳಿಂ ನವದುಗುಲದ ನೇಜಯದಿಂದ ಸೊಗಯಿಪ ಸಿಂದಂಗಳಿಂದ ಸ್ವಯಂವರ ಮಿಗೆ ರಂಜಿಸಿದುದು (ರಾಮವಿ. ೭-೩೨). [IP ಸಂಸ್ಕೃತಮೂಲವಿರಬಹುದೆಂದು ತೋರುವ ಈ ಶಬ್ದವು ಸಂಸ್ಕೃತಕೋಶಗಳಲ್ಲೆಲ್ಲೂ ದೊರಕಿಲ್ಲ]

**ಸಿಂಧಮ್ಮನಾಡು** (ನಾ). ಒಂದು ಪ್ರದೇಶದ ಹೆಸರು : ಸಿನ್ದಮ್ಮನಾಡ ಬವರದೊಳು ಕೆಲ್ಲೀಗೆಱೆಯ ತುಱುಂಗಳೊಳೆ XXX ಸತ್ತ (ಎಕ. V, ಅರಸೀ. ೯೯-೪; ಸು. 890). [? + ನಾಡು]

**ಸಿಂಧು$_1$** (ನಾ). ೧. ಕಡಲು; ಸಮುದ್ರ: ಶ್ರೀವರ್ಧಮಾನಪ್ರವರಮುನಿಜನಾನಂದ ಸಂಸ್ತುತ್ಯ ಸಿಂಧುಸ್ತೋಮಾಳಂಕಾರಿತಾಂಭೋನಿಧಿ ನಿರುಪಮಬೋಧಾಕರಂ (ಸುಕುಮಾ. ೧-೧); ಸಿಂಧೂಪರೀತಭೂತಳಮನೀಟ್ಟುಕೊಳಲ್ಕರಚಕ್ರದಿಂ ಜರಾಸಂಧನ ಕಂಠಮಂ ಕಡೆಯೆ ಕೇಶವನಿಟ್ಟಪನೆಂದು ತೋರ್ಪವೋಲ್ಲಂಧಗಜೇಂದ್ರಯಾನೆ . . . ಕಂಕಣದಿಂದಿಡುವಳ್ ವಿನೋದದೊಳ್ (ಅರ್ಥನೇ. ೭-೪೧); ದುರ್ವಾಸಮುನಿಶಾಪದಿಂದಂದು ಪೋದ ಸುರರರ್ಥಮಂ ಬೇಡಿ ಮಥಿಯಿಸಿದೊಡಂ ತತ್ಸಿಂಧು ಪೂರ್ವಾಮರಾಮರರ ಬಲ್ಕಾವ ಪಿಡಿಸುತುಚ್ಚೈಶ್ರವಮೆನಿಪ್ಪ ಹಯವ ಸರ್ವಬಾಧೆಯೊಳಿತ್ತಂ (ಭಾವಚಿಂ. ೭-೧೨). ೨. ನದಿ; ಹೊಳೆ: ಪೊಳೆವೆಳದಿಂಗಳೊಳ್ಮಿಱಿಗಳಿಂ ಸುರಸಿಂಧುವ ಶೀಕರಂಗಳಿಂ ಜಳನಿಧಿಯಲ್ಲಿ ಮಾರ್ಪೊಳೆವ ತಾರೆಗಳಿಂ ಸಮೆದಂತೆ . . . ಎಸೆದುದುಜ್ವಳಮೌಕ್ತಿಕ ಹಾರಮಂಡಲಂ (ಕಾದಂಉ. ೧೧೭); ಸಿಂಧುವನು ಹಿಮಗಿರಿಗೆ ಹಿಂದಿರುಗಿ ಬೇರೊಂದು ಚೆಂದದಲಿ ಪರಿದು ಬಾರೆಂದಾಣತಿಪೆಯಾ? (ಮಂಕುಕ. ೮೭೭). 'ಸುರಸಿಂಧು' ಪರಾ.

೩. ಒಂದು ನದಿಯ ಹೆಸರು: ಇರಾವತಿಯೆಂಬ ಸಿಂಧುಯೆಂಬ ಶತಾದ್ರಿಯೆಂಬ ನದಿಗಳ ತೀರದ ದೇಶದೊಳ್ ಪುಟ್ಟಿದ ಸ್ತ್ರೀ (ಕಾಮಶಾ. ೨೧೮); ಸಿಂಧು ಎಂಬುದರ ಬದಲಾಗಿ ಹಿಂದು ಎಂದು ಅಪಭ್ರಂಶವಾಗಿ ಆ ನದಿಯ ಪ್ರದೇಶಕ್ಕೆ ಹಿಂದುಸ್ಥಾನವೆಂಬ ಹೆಸರು ಮೊದಲು ಬಂದು ಇತ್ತಿತ್ತ ಇಡೀ ಹಿಂದುಸ್ಥಾನಕ್ಕೆ ಬಂದಿರಬಹುದೆಂದು ಕೆಲವರು ಅನ್ನುತ್ತಾರೆ (ಮುಂಬಯಿ. ೪-೧೦೦). **೪. ಒಂದು ದೇಶದ ಹೆಸರು; ಸಿಂಧೂನದಿಯ ತೀರದ ಪ್ರಾಂತ:** ಲಾಳ ಬರ್ಬರ ಪಾಂಡ್ಯ ತುರುಕ್ಕ ತುಳುವ ನೇಪಾಳ ಸಿಂಧು . . . ಇಂತನೇಕ ಭೂಪನ್ನದೇಶದೊಳಧಿಕಸೀಮಂತಮಣಿಯೆನಿಪ ಕುಂತಳದೇಶ ಮೆಱೆವುದು (ಪ್ರೌಢರಾ. ೧-೩೧); ಮರಳಿ ಕೃಷ್ಣಾರ್ಜುನರ್ಸಿಂಧುದೇಶದ ಮೇಲೆ ಗಜನಗರಿಗೈತಂದರು (ಜೈಮಿಭಾ. ೩೨ ಸೂಚನೆ). **೫. ಸಿಂಧುದೇಶಕ್ಕೆ ಸೇರಿದ ಜನ ಮತ್ತು ಅಲ್ಲಿಯ ರಾಜ:** ಇದಿರೆ ಶಕಟವ್ಯೂಹವದಱಗ್ರದಲಿ ದುಶ್ಶಾಸನನು ಕೆಲಬಲದೊದವಿನಲಿ ಬಾಹ್ಲಿಕನು ಸೌಬಲ ಸಿಂಧು ಮಾಗಧರು (ಕುಮಾದ್ರೋ. ೯-೧೮); ನಿಜಹರ್ಷದುರ್ವಿನಿಂದೀ ಸಿಂಧುನೃಪನೆರಡು ಕುದುರೆಗಳನುರ್ವರಾಧಿಪಗೀಯಲು (ಭಾವಚಿಂ. ೬-೧೨); "ಜನಪದಭೇದ ವಾರ್ಧಿ ನದಿಯೆಂಬಿವು ಸಿಂಧು ಸಮಾಖ್ಯ" (ನಾನಾರ.೭೧). **೬. ಬೆಣ್ಣೆಯನ್ನು ತೆಗೆದ ಮಜ್ಜಿಗೆ; ತಕ್ರ :** ಮೊಸರ ನಾಲ್ಕಱೊಳೊಂದು ಭಾಗ ನೀರೆಱೆದುಕೊಂಡದನು ಕಡೆದು ಅನುಮಾಡೆ ಸಿಂಧು [ಪಾಠಾಂ. ದು]ವೆಸರಾಯ್ತು (ಸೂಪಶಾ. ೨-೧೩); ಮೂರು ಭಾಗ ಮೊಸರು ಒಂದು ಭಾಗ ನೀರನೆರೆದು ಬೆಣ್ಣೆಗಳೆದ ಮಜ್ಜಿಗೆ ಸಿಂಧುವೆಂಬುದು, ಇದಕ್ಕೆ ತಕ್ರವೆಂದು ಹೆಸರಿದೆ (ಭೀಮಸೂ. ೨೮). **೭. [ಸಂಗೀತ] ಒಂದು ರಾಗದ ಹೆಸರು:** ರಾಮಕ್ರಿಯೆ . . . ಸಿಂಧು . . . ಮಧ್ಯಮಾವತಿಯೆಂಬ ಮೂವತ್ತಾಱುರಾಗಂಗಳೇ ಮುಖ್ಯಮಾಗಿ . . . ಪ್ರಸಿದ್ಧಗೊಂಡಿರ್ಪವು (ವಿವೇಕ. ೨೩೪). [ಸಂ.]

**ಸಿಂಧು₂ (ನಾ). ೧. ಕಾನೂನಿನ ಪ್ರಕಾರ ಒಪ್ಪಿತವಾದುದು, – ಸಾಧುವಾದುದು:** ರಾಮಕೃಷ್ಣನ ಬುದ್ಧಿಗೆ ಅಷ್ಟು ಸ್ವಾಸ್ಥ್ಯವಿಲ್ಲವೆಂದೂ . . . ಆತ ಬರಕೊಟ್ಟ ರಿಕಾರ್ಡುಗಳಾವುವೂ ಸಿಂಧುವಲ್ಲವೆಂದೂ ಒಂದು ಪ್ರಕಟಣೆಯ ಜಾಹೀರು ಕೊಡಬೇಕು (ತ್ಯಾಗಮ. ೬೨). **೨. ಸಫಲವಾದುದು; ಸಾರ್ಥಕವಾದುದು:** ಒಂದೆ ಮಂತ್ರದಲಿ ಎಲ್ಲರ ಕೊಂದು ಮಂತ್ರಶಕ್ತಿಯನು ಮಾಡುವೆ ಸಿಂಧು (ಕೋಗಿಲೆ. ೨೧-೬೩).

**ಸಿಂಧುಮಾಡಿಸು = ಕಾನೂನಿನ ಪ್ರಕಾರ ಒಪ್ಪಿತವಾಗುವಂತೆ ಮಾಡು; ಕಾನೂನುಬದ್ಧವಾಗುವಂತೆ ಮಾಡು:** ಅದು ಕಾಯಿದೆಗೆ ಸರಿಯಾದ ರೀತಿಯಲ್ಲಿ ಬರೆದಿದೆ. ಅದನ್ನು ಕೋರ್ಟಿನಲ್ಲಿ ಹಾಜರುಪಡಿಸಿ ಸಿಂಧುಮಾಡಿಸಬೇಕೆಂದು ನನಗೆ ತಿಳಿಸಿದ್ದಾರೆ (ನಿಷ್ಠಾಮ. ೧೭೧). **ಸಿಂಧುವಾಗು = ಕಾನೂನಿನ ಪ್ರಕಾರ ಒಪ್ಪಿತವಾಗು, – ಊರ್ಜಿತವಾಗು, – ನಿಲ್ಲು:** ಈ ಅಭಿಪ್ರಾಯ ಸಿಂಧುವಾಗಲಾರದು (ತುಳಸಾ. ೨೦); ಸಬ್‌ರಿಜಿಸ್ಟ್ರಾರರವರ ಸಮಕ್ಷಮ ರಿಜಿಸ್ಟಾದರೆ ಸಿಂಧುವಾಗುವುದೆಂಬ ಕಾನೂನು ಬಳಕೆಗೆ ಬಂತು (ಗಂಗಾಳ. ೬೬). [?]

**ಸಿಂಧುಜ (ನಾ). ೧. ಕಡಲಿನಿಂದ ಉತ್ಪತ್ತಿಯಾದುದು. ೨. ಚಂದ್ರ. ೩. ನೀರಿನಲ್ಲಿ ಹುಟ್ಟಿದುದು; ಜಲಚರ. ೪. ಕಲ್ಲುಪ್ಪು; ಸೈಂಧವಲವಣ. ೫. ಸಿಂಧುದೇಶದಲ್ಲಿ ಹುಟ್ಟಿದುದು.** [ಸಂ.]

**ಸಿಂಧುತನ (ನಾ). ಸಾರ್ಥಕ್ಯ; ಸಫಲತೆ:** ಸಾಧಕದಿ ತಿಳಿದೆಲ್ಲ ಕುಟಿಲವ ಭೇದಿಸೀಗನ್ಮೋನ್ಮದಲಿ ನಿಜಸಾಧುಗಳ ನೆರೆ ಭಜಿಸಿ ಪಡೆ ನೀ ಸಿಂಧುತನವನ್ನು (ಪಶುಭಾ. ೧-೮). [ಸಿಂಧು₂ + - ತನ]

**ಸಿಂಧುತೋಯ (ನಾ). ಸಮುದ್ರದ ನೀರು; ಸಾಗರದ ಜಲ:** ಚಿರವಿಕ್ಷೋಭಿತ ಸಿಂಧುತೋಯಶಿಶಿರಂ . . . ಚಕ್ರಿಯನಾಜಿಸಿತ್ತು ವಿಜಯಾರ್ಥೋಪಾಂತಮಂದಾನಿಳಂ (ಆದಿಪು. ೧೩-೯); ಬಿಟ್ಟೆಱಗಿದ ವಂಜುಳಪ್ರಕರಮಂ ಪರಿವರ್ಧಿಪ ಸಿಂಧುತೋಯದಂತೆ . . . ರಾಜಲೀಲೆ ಕಣ್ಗೆಱೆದುದು ಪುಷ್ಪದಂತಮಹಿಪಾಳನೊಳ್ (ಪುಷ್ಪಪು. ೧೩-೬). [ಸಂ.]

**ಸಿಂಧುದ್ವಾರ (ನಾ). ಸಮುದ್ರದ ಮುಂಭಾಗ :** ನಿಜವಿಜಯಕುಂಜರಂಗಳಂ ವಿಹಾರಿಸಿ ಬಂದು ಸಿಂಧುದ್ವಾರದೊಳ್ ಸಮುದ್ರಕಲ್ಲೋಲಲೀಲಾಂದೋಳಿತವನ ದೇವತಾಂದೋಳನಾನುಕಾರಿ ತಾಂಬೂಲಲತಿಕಾಲಂಬಕ್ರಮುಕಮುಂ (ಆದಿಪು. ೧೩-೩ ವ); ಅಂತು ಬಂದು ಶಾಂತೀಶ್ವರಂ ನಿಜವಿಜಯಸ್ಕಂಧಾವಾರಮಂ ಸಿಂಧುದ್ವಾರಕ್ಕಿದಿರಾಗಿ ಬೀಡಂ ಬಿಡಿಸಿ (ಶಾಂತಿಪು. ೧೧-೧೯ ವ). [ಸಂ.]

**ಸಿಂಧುನಂದನೆ (ನಾ). ಸಾಗರಪುತ್ರಿ; ಲಕ್ಷ್ಮಿ.**

**ಸಿಂಧುನಂದನೆಯಾಣ್ಮ = ಲಕ್ಷ್ಮಿಯ ಪತಿ; ವಿಷ್ಣು:** ಸಿಂಧುನಂದನೆಯಾಣ್ಮ ಪರಮೇಷ್ಠಿ ಶತಧರ್ಮವಂದಿತಪದಾಂಭೋಜ ಒಲಿದು ಪಾಲಿಪುದೆನ್ನ (ಪ್ರೌಢರಾ. ೧೭-೧). [ಸಂ. ಸಿಂಧುನಂದನಾ]

**ಸಿಂಧುನದಿ (ನಾ). = ಸಿಂಧು ೩:** ಸಿಂಧುನದೀತೀರದಿಂಬಿಡಿದು ಪೋಗಿ . . . ಸಿಂಧು ದೇವಿಯಿಂದಂ ಸಿಂಧುಜಳಂಗಳೊಳಭಿಷಿಕ್ತನಾಗಿ (ಆದಿಪು. ೧೩-೬೭ ವ). [ಸಂ. ಸಿಂಧುನದೀ]

**ಸಿಂಧುಪತಿ (ನಾ). ೧. ನದಿಗಳ ಒಡೆಯ; ಸಮುದ್ರ:** ಸ್ಕಂಧಾವಾರೇಭ ಮಹೋಚ್ಚಕಂಧಾವಳಿಯಂ ಕವೇರಕನ್ನಿಕೆಯುಂ ತತ್ಸಿಂಧುಪತಿಗಿಂಬಿನಿಂದತಿಸಂಧಿಸಿದಂ ನೃಪತಿ ಬಿಟ್ಟು ತದುಭಯತಟದೊಳ್ (ಶಾಂತಿಪು. ೧೧-೨). **೨. ಸಿಂಧುದೇಶದ ರಾಜ; ಜಯದ್ರಥ.** [ಸಂ.]

**ಸಿಂಧುಪುತ್ರ (ನಾ). ನದಿಯ ಮಗ; ಭೀಷ್ಮ; ಗಾಂಗೇಯ:** ರಾಜ್ಯಂ ನಷ್ಟ ರಾ[ಜ]ಮಾದುದಕ್ಕೆ ಮಮ್ಮಲಮಱುಗಿ ಯೋಜನಗಂಧಿ ಸಿಂಧುಪುತ್ರನನಿಂತೆಂದಳ್ (ಪಂಪಭಾ. ೧-೮೦ ವ). [ಸಂ.]

**ಸಿಂಧುಪೂರ (ನಾ). ಸಮುದ್ರದ ಅಥವಾ ನದಿಯ ಪ್ರವಾಹ:** ಸೌಂದರ್ಯ ಬಾಂಧವ್ಯಗಳನು ಬರಿದೆನಲಹುದೆ . . . ಸಿಂಧುಪೂರದಿ ಬಿದ್ದವರೊಳೊಬ್ಬರೊಬ್ಬರನು ಅಂದಿಕೊಳಲದು ಬರಿದೆ? (ಮಂಕುಕ. ೬೫೨). [ಸಂ.]

**ಸಿಂಧುಪ್ಲವ (ನಾ). = ಸಿಂಧುಪೂರ:** ಸಮಸ್ತಸುರಕೋಟಿ ಹೇಮಘಟಕೋಟಿಯಿಂ ಮಿಸಿಸೆ ದುಗ್ಧಸಿಂಧುಪ್ಲವಂ ಶ್ರಮಾಂಬುಲವಮೊಂದುಮಂ ನಿನಗೆ ಪುಟ್ಟಿಸಲ್ಕಾರ್ತುದಿಲ್ಲಂ (ಆದಿಪು. ೧೩-೮೩). [ಸಂ.]

**ಸಿಂಧುಬಂಧನ (ನಾ). ೧. ಸಮುದ್ರಕ್ಕೆ ಸೇತುವೆಯನ್ನು ಕಟ್ಟುವಿಕೆ; ಸೇತುಬಂಧನ. ೨. ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದವನು; ರಾಮ:** ಕುಂದಕುಟ್ಮಲರದನ ಪರಮಾನಂದ ಹರಿ ಗೋವಿಂದ ಸನಕಸನಂದವಂದಿತ ಸಿಂಧುಬಂಧನ ಮಂದರಾದ್ರಿಧರ (ಹರಿಸಾ. ೧೨). [ಸಂ.]

**ಸಿಂಧುಬಿಂದುನ್ಯಾಯ (ನಾ). [ತರ್ಕಶಾ] ಲೌಕಿಕನ್ಯಾಯಗಳಲ್ಲಿ ಒಂದು; P 'ಪರಮಾತ್ಮಪ್ರಾಪ್ತಿಯೆಂಬ ಮೋಕ್ಷಕ್ಕೆ ಹೋಲಿಸಿದಾಗ ಅಭ್ಯುದಯ ವೆಂಬುದು ಸಮುದ್ರದಲ್ಲಿ ಒಂದು ಬಿಂದುವಿದ್ದಂತೆ' ಎಂಬ ಅಭಿಪ್ರಾಯ:** ಈ ಪರಮಾತ್ಮಪ್ರಾಪ್ತಿಯೆಂಬ ನಿಶ್ಶ್ರೇಯಸ್ಸಿನಲ್ಲಿ ಅಭ್ಯುದಯವೆಂಬ ಫಲವು ಸಿಂಧುಬಿಂದು ನ್ಯಾಯದಿಂದ ಅಡಗಿರುವುದೆಂದು ತಿಳಿಯಬೇಕು (ಹಿಂದಸಾ. ೧೭೪). [ಸಂ.]

**ಸಿಂಧುರ (ನಾ). ೧. ಆನೆ; ಗಜ:** ವಜ್ರದಂತಚಕ್ರವರ್ತಿಯುಮನಂತಸಾಮಂತಾಂತಃಪುರಪರಿವಾರಪರಿವೃತನುಂ ಬಂಧುರಗಂಧಸಿಂಧುರಾರೂಢನುಮಾಗಿ (ಆದಿಪು. ೪-೨೩ ವ); ನರಲುತ್ತುಂ ಪೊರಳುತ್ತುಮಿರ್ಪ ಭಟರಿಂ ಪಿಟ್ಟಾದ ಪೀಱಾದ ಸಿಂಧುರದಿಂ (ಪಂಚರಾಮಾ. ೯-೧೨೪). **೨. ಒಬ್ಬ ರಾಕ್ಷಸನ ಹೆಸರು; ಗಜಾಸುರ:** ಸಿಂಧುರಜಟಾಭಸ್ಮ ಶಾರ್ದೂಲಾಂಧ . . . ಜಲಂಧರ ಪ್ರಮುಖಾಸುರರನಪಹರಿಸನೇ ಹರನು (ಬಸವಪು. ೫೪-೫೭). **೩. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ:** "ಗಗನಾಂಬರಂ ವ್ಯೋಮ ಸಿಂಧುರಂ ಲೋಚನಂ ನಗಮ್ಮೆಕ್ಕಮೆಂಬ ಸಂಖ್ಯೆಗಳು ಕೃತಯುಗಮಕ್ಕು" (ಮಂಗರಾ. ೨೨-೧೪). [ಸಂ.]

**ಸಿಂಧುರಂಗ (ನಾ). ಸಮುದ್ರತೀರ:** ಸಿಂಧುರನಗರದಿಂದ ನಡೆತಂದು ಪವನಜಂ ಸಿಂಧುರಂಗದೊಳೆಸೆವ ದ್ವಾರಕೆಯೊಳ್ಕೆದೆ (ಜೈಮಿಭಾ. ೬ ಸೂಚನೆ). [ಸಂ.]

**ಸಿಂಧುರಘಟೆ (ನಾ). ಆನೆಗಳ ಗುಂಪು, – ಸಮೂಹ :** ಸಿಂಧುರಘಟಾಸಂದೋಹದಿಂ . . . ಸೇನಾಚಕ್ರಮೇನೊಪ್ಪಿತೋ (ಪುಷ್ಪಪು. ೧೪-೪೬). [ಸಂ. ಸಿಂಧುರಘಟಾ]

**ಸಿಂಧುರವಿರೋಧಿ (ನಾ). ಆನೆಗೆ ವೈರಿಯಾದುದು; ಸಿಂಹ.**

**ಸಿಂಧುರವಿರೋಧಿಪೀಠ = ಸಿಂಹಪೀಠ; ಸಿಂಹಾಸನ:** ಸಿಂಧುರವಿರೋಧಿಪೀಠಂ ಗಂಧಕುಟೀಮಧ್ಯದಲ್ಲಿ ಸಿರಿಯಂ ಪಡೆಮಾತೇಂ ಧರಿಯಿಸಿ ಕಮಲದ ತೆಱದಿಂ ಧಾರ್ಮಿಕ ನಿಕರಮಧುಕರಮನೇನೆಱಗಿಸಿತೋ (ಪಾರ್ಶ್ವಪು. ೧೬-೭೪). 'ಗಜವೈರಿಪೀಠ' ಪರಾ. [ಸಂ. ಸಿಂಧುರವಿರೋಧಿನ್]

**ಸಿಂಧುರಸ್ಕಂಧ (ನಾ). ಆನೆಯ ಹೆಗಲು, – ಭುಜ; ಗಜಸ್ಕಂಧ:** ಆ ಮಹೇಂದ್ರಂ

ಗರ್ವಾಂಧಂ ಸಿಂಧುರಸ್ಕಂಧದಿನಿಱಿದು (ಚಂದ್ರಪ್ರ. ೫-೧೧೨).

**ಸಿಂಧುರಸ್ಕಂಧಪೀಠ** = ಆನೆಯ ಬೆನ್ನಿನ ಮೇಲೆ ಕುಳಿತುಕೊಳ್ಳಲು ಹಾಕುವ ಭದ್ರಾಸನ; ಅಂಬಾರಿ: ರಾಜ್ಯಲಕ್ಷ್ಮೀಲೀಲಾಲಂಬನವೆನಿಸಿದ ಬಿಸುಗೆಯ ಮತ್ತಾಲಂಬನಮನವಳಂಬಿಸಿ ಸಿಂಧುರಸ್ಕಂಧಪೀಠದೊಳ್ ಸುಖಾಸೀನನಾಗಿರ್ದಾಗಳ್ (ಆದಿಪು. ೧೪-೧೧೨ ವ). [ಸಂ.]

**ಸಿಂಧುರಾಜ** (ನಾ). ೧. ನದಿಗಳ ಒಡೆಯ; ಸಾಗರ: ತೊಳತೊಳಗಿ ಬೆಳಗುವ ನದೀವಧುಗಳುಳ್ಗದಡು ತಿಳಿದು ನಿಜಕಾಂತನಾಗಿಹ ಸಿಂಧುರಾಜನಂ ನೆರೆಯದಿರರೆಂ ಬೊಲಾಯ್ತು (ಜೈಮಿಭಾ. ೨೫-೪); ಸಿಂಧುರಾಜನ್ಮದಸಿಂಧುರಹರ್ಯಕ್ಷ ಪರಾಕು (ಯಾದಚಂ. ೩-೧ ವ). ೨. ಜರಾಸಂಧ. [ಸಂ.]

**ಸಿಂಧುರಾನನ** (ನಾ). ೧. ಆನೆಯ ಮುಖ; ಗಜಮುಖ. ೨. ಆನೆಯ ಮುಖವುಳ್ಳವನು; ಗಣಪತಿ: ಮಂದಹಾಸಾಸ್ಯದಿಂದೆಂದನಾ ಪರಮೇಶನಿಂದು ನಿನ್ನಯ ಶಿಷ್ಯನಪ್ಪೂತಿಯಂ ಕರೆಸಿ ಸಿಂಧುರಾನನಮಾತೆಗೀಗ ರಾಗವನು ಕೇಳಿಸುವದೆಂದುಚೆ ನೇಮಿಸೆ (ಪ್ರಾಥರಾ. ೭-೩೧). [ಸಂ.]

**ಸಿಂಧುರಾಮಕ್ರಿಯೆ** (ನಾ). [ಸಂಗೀತ] ಒಂದು ರಾಗದ ಹೆಸರು: ಹಾಗೆಯೇ ಶೈವಪಂತುವರಾಲಿಯ (ಮೇಳದ)ಲ್ಲಿ ಸಿಂಧುರಾಮಕ್ರಿಯಾ (ಚತುಪ್ರ. ೧೩೦).

[ಸಂ. ಸಿಂಧುರಾಮಕ್ರಿಯಾ]

**ಸಿಂಧುರಾಸನ** (ನಾ). ಗಜಲಾಂಛನವನ್ನುಳ್ಳ ಪೀಠವನ್ನು ಹೊಂದಿದವನು: ಕನಕಚ್ಛಾಯನಜೇಯಸಂಹನನನೂನಸ್ಯಾಪದೇಯಾದಿನಾಥಂ . . . ಸಿಂಧುರಾಸನನಬ್ಜಾಯತನೇತ್ರನೀಗಭಿಮತಂ ಸರ್ವಾಙ್ಗಯಕ್ಷಂ (ಸುಕುಮಾ. ೧-೯). [ಸಂ.]

**ಸಿಂಧುರಿಪು** (ನಾ). ಸಮುದ್ರದ ವೈರಿ; ಅಗಸ್ತ್ಯಋಷಿ: ಸಿಂಧುರಿಪು ಗಾರ್ಗ್ಯ ಗಾಲವ ಕಪಿಲ ಮುದ್ಗಲ ಮುನೀಂದ್ರ ಗೌತುಮ ರೋಮಶಾದಿಗಳ್ ಶಿಷ್ಯಗಣವೃಂದ ಬಂದರಲ್ಲಿಗೆ (ತುರಂಗ. ೭೯-೩). [ಸಂ.]

**ಸಿಂಧುಲವಣ** (ನಾ). ಘನರೂಪದಲ್ಲಿ ಖನಿಜವಾಗಿ ದೊರೆಯುವ ಒಂದು ಬಗೆಯ ಅಡಿಗೆ ಉಪ್ಪು; ಕಲ್ಲುಪ್ಪು; ಸೈಂಧವಲವಣ. [ಸಂ.]

**ಸಿಂಧುವರಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು: ಸಿಂಧುವರಾಳಿ ಕನ್ನಡ ವರಾಳಿ ದ್ರಾವಿಡವರಾಳಿ ಪ್ರಥಮವರಾಳಿಯೆಂಬ ನಾಲ್ಕು ರಾಗಂಗಳುಂ ಉಪಾಂಗ ವರಾಳಿಗಳು (ವಿವೇಕ. ೨೩೪). [ಸಂ. ಸಿಂಧುವರಾಲೀ?]

**ಸಿಂಧುವಾರ** (ನಾ). ಒಂದು ಬಗೆಯ ಹೂವು ಮತ್ತು ಅದರ ಮರ: ಮಲ್ಲಿಕಾ ಬದ್ಧಕುಟ್ಮಳಾಡಂಬರಕದಂಬಸಂಸಂದಾರವಿಂದವಿಕಸಿತಸಿಂಧುವಾರಪ್ರಬುದ್ಧಲೋಧ್ರಂಗಳಿಂ (ಆದಿಪು. ೭-೩೭ ವ); ಪ್ರೌಢೆಯರಾದ ವನಿತೆಯರೊದೆದೊಡೆ ಮುಖಪ್ರಸನ್ನತೆ ಕಂಡರೆ ಕ್ರಮದಿಂ ಕುಸುಮಿತಂಗಳಪ್ಪ ಅಶೋಕ . . . ಸಿಂಧುವಾರ . . . ಚಂಪಕಂಗಳೆಂಬ ದಶದೋಹಳವೃಕ್ಷಜಾತಿಗಳುಂ (ವಿವೇಕ. ೨೧೨). [ಸಂ.]

**ಸಿಂಧುಶಯನ** (ನಾ). (ಕ್ಷೀರ)ಸಾಗರದಲ್ಲಿ ಮಲಗಿರುವವನು; ವಿಷ್ಣು: ಒಂದೆ ಮನದಲಿ ಸಿಂಧುಶಯನ ಮುಕುಂದ ಎನೆ ಎಂದೆಂದು ವಾಸಿಪನಾ ಮಂದಿರದೊಳಗೆ (ಪುರಂದ. ೧-೧೪೭-೧). [ಸಂ.]

**ಸಿಂಧುಶುಕ್ತಿ** (ನಾ). (ಸಮುದ್ರದ) ಕಪ್ಪೆಚಿಪ್ಪು: ಕಣ್ಮುಚ್ಚಿದೆವೆಗಳಿಂ ಸ್ರವಿಸಿದತ್ತಶ್ರುಶೋಕದ ಸಿಂಧುಶುಕ್ತಿಯಿಂ ನಿಶ್ಚಬ್ದತಾಬಿಂದುಮುಕ್ತಾಫಲಗಳುಕ್ಕಿ ಸುರಿವಂತೆ (ಶ್ರೀರಾಮಾ. ೧೭೭-೪೦೧). [ಸಂ.]

**ಸಿಂಧುಸಂಗಮ** (ನಾ). ನದಿಯು ಸಮುದ್ರವನ್ನು ಸೇರುವ ಸ್ಥಳ: "ಸಂಭೇದಃ, ಸಿಂಧುಸಂಗಮಃ — ನದಿಗಳ ಕೂಡಿಕೆ ಹೆಸರು. ಕಡಲಿನೊಳು ಹೊಳೆಯ ಕೂಡ್ಕು, ನದೀಸಂಗಮು" (ಸಿದ್ಧಾಂತಿ. ೮೮). [ಸಂ.]

**ಸಿಂಧೂತ್ಥ** (ನಾ). ಕಡಲಿನಿಂದ ಉತ್ಪತ್ತಿಯಾಗುವ ಲವಣ; ಕಡಲುಪ್ಪು; ಸೈಂಧವಲವಣ: "ಸಿಂಧೂತ್ಥಂ, ಮಾಣಿಮಂಥಂ, ಸೈಂಧವಂ, ಲವಣೋತ್ತಮಂ — ಈ ೪ ಸೈಂಧವಂ" (ಹಲಾಯು. ೧೦೦-೪೭೦); ಹಿಪ್ಪಲಿ ಸಿಂಧೂತ್ಥಂ ಸದಗುಪ್ಪೆ ಮರಿಚಮಗ್ಗಿ ನಾಗರಂ ವಾಸಿತದಿಂದೊಪ್ಪುವ ಕಳ್ ಪ್ರತಿಪಾನಕಮಪ್ಪುದು ತುರಗಕ್ಕೆ (ಅಶ್ವಶಾ. ೭-೮೮).

[ಸಂ.]

**ಸಿಂಧೂದ್ಭವ** (ನಾ). ೧. = ಸಿಂಧೂತ್ಥ: ಹಿಪ್ಪಲಿ . . . ವಿಳಂಗಾಗ್ನಿಲೋಧ್ರ ಸಿಂಧೂದ್ಭವಮಂ ತಪ್ಪದೆ ಸಮಮಾಗಿರೆ ಯೋಜಿಪ್ಪುದು (ಅಶ್ವಶಾ. ೭-೮೪). ೨. = ಸಿಂಧುಪುತ್ರ : ಮೇರೆಯೊಳ್ ವಾರ್ಧಿ ಸೌಚವ್ರತದೊಳ್ ಸಿಂಧೂದ್ಭವಂ ಸತ್ಯದೊಳಿನತನಯಂ ಸೌರ್ಯದೊಳ್ ಭೀಮಸೇನಂ (ಎಕ. VIII, ನಗರ. ೩೫-೮; 1077). [ಸಂ.]

**ಸಿಂಧೂರ$_1$** 'ಸೆಂದುರ' ನೋ.

**ಸಿಂಧೂರ$_2$** 'ಸಿಂದುರ$_2$' ನೋ.

**ಸಿಂಧೂರತಿಲಕ** (ನಾ). ಹಣೆಯ ಮೇಲಿಡುವ ಕೆಂಪು ಗುರುತು, — ಕುಂಕುಮದ ಬೊಟ್ಟು: ಇದು ಮೂಡಣಂಗನೆಯ ಸಿಂಧೂರತಿಲಕವೋ (ಹಚಕಾ. ೩-೮೮).

[< ಸಂ. ಸಿಂದೂರತಿಲಕ]

**ಸಿಂಧೂರಲಾಂಛನ, ಸಿಂದೂರಲಾಂಛನ** (ನಾ). ಧ್ವಜದಲ್ಲಿ ಆನೆಯ ಗುರುತುಳ್ಳವನು: ಚಟ್ಟಕುಳಭೂಷಣಂ ಸಿಂಧೂರಲಾಂಛನಂ ಸಫಳೀಕೃತವಿದ್ಯುಜ್ಜನಾಭವಾಂಛನಂ (ಕೊಲ್ಹಾಶಾ. ೨೩-೧೧; 578 ?). **ಸಿಂದೂರಲಾಂಛನ:** ವೈರಿಕುಳವಿಳಯಾಂತಕವಿಭೀಷಣಂ ಸಿಂದೂರಲಾಂಚ್ಛನಂ (ಸೌಇಇ. XX, ೫೦-೫; ಸು. 1070). [< ಸಂ. ಸಿಂಧುರಲಾಂಛನ]

**ಸಿಂಪಡಿಸು, ಸಿಂಪರಿಸು, ಸಿಂಬಡಿಸು** (ಕ್ರಿ). ೧. ಸಿಂಚನೆ ಮಾಡು; ತಳಿ; ಚಿಮುಕಿಸು: ಕಮಂಡಲೋದಕವನ್ನಭಿಮಂತ್ರಿಸಿ ಅವಳ ಮೇಲೆ ಸಿಂಪಡಿಸಿದನು (ಶ್ರೀರಾಪ. ೭೨); ಸೆಗಣಿನೀರು ಸಿಂಪಡಿಸಿ ಆಕರ್ಷಕವಾಗಿ ರಂಗೋಲಿ ಬಿಡುತ್ತಾರೆ (ಚೋರೇದೇ. ೨೩). ೨. ಹಚ್ಚು; ಬಳಿ; ಲೇಪಿಸು: ಮುಖಕ್ಕೆ ಮತ್ತಷ್ಟು ಪೌಡರ ಸಿಂಪಡಿಸಿಕೊಂಡು ಕೆಳಗೆ ಬಂದಾಗ ಮೀನಾಕ್ಷಿ ಗೇಟಿನ ಬಳಿ ನಿಂತಿದ್ದಳು (ದೂಚಟ್ಟ. ೭). **ಸಿಂಪರಿಸು :** ೧. ಅಗಿಯುವ ಕೀಟಗಳ ಹತೋಟಿಗೆ ಹೊಟ್ಟೆಪಾಷಾಣವನ್ನು ಸಿಂಪರಿಸಬೇಕು ಅಥವಾ ಪುಡಿಯನ್ನು ಧೂಳಿಸಬೇಕು (ಕೀಟಬ. ೭೪). **ಸಿಂಬಡಿಸು :** ೧. ಗಂಡಹೆಂಡರ ಮಾತು ಒಂದೆ ಹಾಸಿಗಿ ಮ್ಯಾಲ ಗಂಧ ಸಿಂಬಡಿಸಿ ನಗತಾಳ ನನ ತಮ್ಮ ಗಂಗಿ ನಿನಗೆಲ್ಲಿ ದೊರೆತಾಳ (ಗರತಿ. ೮೧). 'ಸಿಂಪಿಣಿ' ಪರಾ. [<— ಮರಾ. ಶಿಂಪಡಣೇಂ, ಶಿಂಪಣೇಂ, ಶಿಪಣೇಂ, ಸಿಂಪಡಣೇಂ, ಸಿಂಪಣೇಂ]

**ಸಿಂಪಣಿ** 'ಸಿಂಪಿಣಿ' ನೋ.

**ಸಿಂಪರಿಸು** 'ಸಿಂಪಡಿಸು' ನೋ.

**ಸಿಂಪಿ$_1$** 'ಸಿಪ್ಪು' ನೋ.

**ಸಿಂಪಿ$_2$, ಚಿಪ್ಪಿ** (ನಾ). ೧. ಬಟ್ಟೆ ಹೊಲೆಯುವವನು; ಚಿಪ್ಪಿಗ: ಆ ಸಿಂಪಿ ಮುನವೇಲ್ ಇವಳಿಗೆ ಶೋಕಿನ ಅಂಗಿ ಹೊಲಿದು . . . ಪುಕ್ಕಟೆ ಕೊಡುತ್ತಾನೆ (ದಕ್ಷಿನ. ೬೩); ಲೆಕ್ಕವಿಲ್ಲದಷ್ಟು ಅರಿವೆ ಹೊಲಿಸಿದ್ದರು: ಪೇಟೆಯ ಸಿಂಪಿಯಿಂದಲೇ ಮತ್ತೆ! (ಮೂರುದಾ. ೧೨೭). **ಚಿಪ್ಪಿ :** ೧. 'ಚಿಪ್ಪಿಗ$_2$' ಪರಾ. ೨. ಶಿಲ್ಪಕಾರ್ಯ ಮಾಡುವವನು ; ಶಿಲ್ಪಿ: ಗೌಳ ನೀಂ ಸಂತ್ಯಸು ಗಾಯಕರ ತಿರ್ದು ಪಾಂಚಾಳ ನೀಂ ಚಿಪ್ಪಿಗಳ ಗುರ್ಜರನೆ ಕಾದಿರ್ಪುದರಮನೆಯೊಳೊಳವಾಗಿಲಂ (ಭಾವಚಂ. ೫-೨೮). 'ಸಿಪ್ಪಿಗ' ಪರಾ.

[<— ಮರಾ. ಶಿಂಪೀ, ಸಿಂಪೀ./ ಪ್ರಾ. ಸಿಪ್ಪಿ./ ಸಂ. ಶಿಲ್ಪಿನ್./ ತಮಿ. ಚಿಪ್ಪಿ ; ತೆಲು. ಚಿಪ್ಪವಾಡು]

**ಸಿಂಪಿಗ** 'ಸಿಪ್ಪಿಗ' ನೋ.

**ಸಿಂಪಿಗನಹುಲ್ಲು** (ನಾ). ಒಂದು ಬಗೆಯ ಹುಲ್ಲು: ಗೊಳಗೊಳಕೆ . . . ಸಿಂಪಿಗನ ಹುಲ್ಲು, ಜೇಕು . . . ಇವಲ್ಲದೆ ನಾನು ಹೆಸರಿಸಲಾರದ ಏನೇನೋ ಜಾತಿಯ ಎಲ್ಲವೂ ಮಣ್ಣಿನ ರಚನೆಯಲ್ಲಿಯೆ ಇದ್ದ ಹಾಗೆ ತೋರುತ್ತದೆ (ಗಾಳಿಪ. ೧೦೪). 'ಸಿಂಪಿಗೆಯ ಪುಲ್' ಪರಾ. [? + ಹುಲ್ಲು ( < ಪುಲ್)]

**ಸಿಂಪಿಗಹಕ್ಕಿ** (ನಾ). (ಎಲೆ, ನಾರು ಮುಂತಾದುವುಗಳನ್ನು) ಒಂದನ್ನೊಂದಕ್ಕೆ ಸೇರಿಸಿ ಗೂಡು ಕಟ್ಟುವ ಪ್ರವೃತ್ತಿಯುಳ್ಳ ಹಕ್ಕಿ: ಸಿಂಪಿಗಹಕ್ಕಿ ಎಲೆಗಳನ್ನು ಜೋಡಿಸಿ ಹೊಲೆದು ಗೂಡು ರಚಿಸುತ್ತದೆ (ಪಕ್ಷಿ. ೪೭).

[ಸಿಂಪಿಗ (< ಸಿಪ್ಪಿಗ) + ಹಕ್ಕಿ(< ಪಕ್ಕಿ)]

**ಸಿಂಪಿಗೆಯಪುಲ್** (ನಾ). ಒಂದು ಬಗೆಯ ಹುಲ್ಲು: ಕೆಯ್ದುಗಳನೆ ಮಾಜಿ ಸಿಂಪಿಗೆಯ ಪುಲ್ವಿಡಿವರ್ ಸುಭಟರ್ ಧರಿತ್ರಿಯೊಳ್ (ಜಟ್ಟಮ. ೭-೧೨೭). 'ಸಿಂಪಿಗನ ಹುಲ್ಲು' ಪರಾ. [ ? + ಪುಲ್]

**ಸಿಂಪಿಣೆ, ಸಿಂಪಣೆ** (ನಾ). ಚಿಮುಕಿಸುವುದು; ಸೇಚನೆ; ಸಿಂಚನ: ಸಿಂಪಿಣೆಯ ತಣ್ಪಿನಿಂ ಪೂವಲಿಯ ತಿಣ್ಪಿನಿಂ ಮನಂಗೊಳಿಸುವ ಭವನಾಂಗಣದೊಳವತರಿಸಿ (ಕಾದಂಉ. ೪೬೨): ಭೋರೆಂದೆಱಗುವ ಜಲಧರಧಾರಾಪುಷ್ಕರದಿನಾತ್ಮಕರಪುಷ್ಕರಮಂ ಪೂರಿಸಿ ಸಿಂಪಿಣೆಯಂ ಕಾಂತಾರದೊಳಾಡಿದುವು ಕರಿಗಳುಂ ಕರಿಣಿಗಳುಂ (ಪಂರಾಮಾ. ೭-೧೫೯). **ಸಿಂಪಣೆ:** ಆಲಿಗೊಡುವ ಶೀತಜಲದ ಸಿಂಪ[ಪಾಠಾಂ. ಪಿ]ಣೆಗಳಿಂ ಮೇಲೆ ಸೂಸುವ ತುಷಾರವನಂಬುವಟಿಗೆಗಳಿಂ(ನಳಚಂ. ೧೯೫ ರಗಳೆ). 'ಸಿಂಪಡಿಸು' ಹೋ. [?]

**ಸಿಂಪಿಣೆಗೆ** (ನಾ). ಸಿಂಚನ; ಸೇಚನೆ: 'ಸಿಂಪಿಣೆಗೆಗೊಡು' ಪರಾ.

[ಸಿಂಪಿಣೆ + -ಗೆ]

**ಸಿಂಪಿಣೆಗೆಗೊಡು** (ಕ್ರಿ). ೧. ಸೇಚನಮಾಡು. ೨. ಸೇಚನವನ್ನು ಹೊಂದು,— ಪಡೆ: ಏಲಾರಸದಿಂ ಸಿಂಪಿ [ಪಾಠಾಂ. ಪ]ಣೆಗೆಗೊಟ್ಟು ಮುಟ್ಟಿದೊಡಲ್ಲದಱಿಯಲ್ಬಾರ ದೆಂದೆನಿಪ ಭೃಂಗದ ಚಪ್ಪರಂಗಳುಮಂ (ಕಾದಂಉ.೨೧೪). [ಸಿಂಪಿಣೆಗೆ + ಕೊಡು₁]

**ಸಿಂಪಿಣೆಯಾಡು** (ಕ್ರಿ). ೧. ಸೇಚನಮಾಡು; ಸಿಂಪಡಿಸು; ಸೂಸು: ಉಚ್ಚಳಿಪ ನೆತ್ತರ ಕುಂಕುಮರ್ಘಾರಿಯಂ ದಿಶಾಲಳನೆಯರತ್ತ ಸಿಂಪಿಸುತ ಸಿಂಪಿಣೆಯಾಡೆ (ಜಗವಿ. ೧೭-೮೮); ನಲ್ಲರೊಳ್ ನಲಿವ ಸಿಂಪಿಣೆಯಾಡುವ ನರ್ತಿಪೊಂದು ಚಿತ್ರವಿಧದ ಚಿತ್ರಕಾಮಿನಿಯರಿಂದೆಸೆದಿರ್ದುದು ತಜ್ಜನಾಶ್ರಯಂ (ಚಂದ್ರಪು. ೬-೪೯). ೨. ಓಲಾಡು; ಮುಳುಗಾಡು: ಮನದೊಳ್ ಗುಡಿಗಟ್ಟಿ ಬಗೆಯೊಳ್ ಬದ್ದವಣಂಬೊಯ್ಯು ರಾಗರಸದೊಳ್ ಸಿಂಪಿಣೆಯಾಡಿ ನಡೆದೆಯ್ದುವಂದು (ಜಗವಿ. ೧೧-೨೯ ವ).

[ಸಿಂಪಿಣೆ + ಆಡು₁]

**ಸಿಂಪಿಸು** (ಕ್ರಿ). ೧. ಚಿಮುಕಿಸು; ತಳಿ; ಸೇಚನ ಮಾಡು: "ಚಳಯಕ್ಕೆ ಸೂಸುವುದಕ್ಕೆ ಸಿಂಪಿಸೆಂದಕ್ಕುಂ" (ಕಬ್ಬಕೈ. ೬೮); ಚಾರುಚಾಮೀಕರಯಂತ್ರವ್ರಾತದಿಂ ಕುಂಕುಮಘನರಸಮಂ ಸಿಂಪಿಸುತ್ತಿರ್ದನೆಂಬಂತಿರಲೆತ್ತಂ ನೀಳ್ದು ಪೊಣ್ಮುತ್ತುದಯಸಮಯದೊಳ್ಕೋಣಸೂರ್ಯಾಂಶುಜಾಲಂ (ಕಾದಂಪೂ. ೧೪೧); ಸಿಂಪಿಸಿದ ಗಂಧದ ಬಂಧದಕ್ಷತೆಯ ಕೀಲಣೆಯ ಮಣಿವೆಳಗುಗಳ ಹರಿದಾಳಿಯಲಿ ಕಾಳೋರಗನ ಕುಡಿನಾಲಗೆಯ ವೋಲೆಸೆದುದಂಕುಶ (ಕುಮಾರವ್ಯಾ. ೩-೫೭); ಎಡದೆಡೆವೆರಲ ಸೆಳ್ಳುಗುರಿಂದೆ ಕಂಬನಿಗಡಣವ ಮೊಗದು ಸಿಂಪಿಸುತ (ಮೋಹತ. ೯-೮). ೨. ಬಳಿ; ಲೇಪಿಸು: ದಮಯಂತಿಯ ವಕ್ಷಶಿರೋಜಕ್ಕೆ ತೈಲವಂ ಸಿಂ [ಪಾಠಾಂ.ನುಂ] ಪಿಸಿದರ್ (ನಳಚಂ. ೪೨೮). 'ಸಿಂಪಡಿಸು' ಪರಾ. [< ಸಿಂಪಿಣೆ + -ಇಸು₁]

**ಸಿಂಪು₁** 'ಸಿಪ್ಪು' ನೋ.

**ಸಿಂಪು₂** (ನಾ). ಎಳೆಯ ಕಾಯಿ; ಹೀಚು: ನಸುಮಿಡಿ ಸಿಂಪು ಪೂಮಿಡಿ ಬಟಲ್ಮಿಡಿಕಾಯ್ ಪೊದಟ್ಟು ಕಾಯ್ ನಸುಪರೆದೋರೆ ದೋರೆಯರೆವಣ್ ತನಿವಣ್ಣೆಸೆದತ್ತು ಮಾಮರಂ (ಸೂಕ್ತಿಸು.೧೧-೬೯); ಅರಲರಲ್ಬರಲು ನಸುಮಿಡಿ ಸಿಂಪು ಸಿರ್ಮಿಡಿಗಳೆರದಾ ಬಳಲ್ಮಿಡಿಗಳಲ್ಲಿ ಬಲ್ಮಿಡಿಕಾಯ್ಗಳೆರರೆ ನಸುದೋರೆ ದೋರೆಗಳು ಮರವಣ್ಣು ತನಿವಣ್ಗಳೊಳಿಮ್ಮಾವೆಸೆದುದು (ವೀಶೈಪು. ೨-೩-೧೫). [?]

**ಸಿಂಪೆ** 'ಸಿಪ್ಪು' ನೋ.

**ಸಿಂಬ** (ನಾ). ಆಳು; ತೊತ್ತು: 'ಸಿಂಬಕ', 'ಸಿಂಬಿ₃' ಪರಾ.

**ಸಿಂಬಕ** (ನಾ). ಆಳು; ತೊತ್ತು; ಸೇವಕ: ಲಿಂಗಕ್ಕೆ ಮಾಡಿದ ಬೋನವ ಸಿಂಬಕ ತಿಂಬಂತೆ ಸಮಯೋಚಿತವನಱಿಯದೆ ಉದರವ ಹೊರೆವವರ ನರಕದಲ್ಲಿಕ್ಕದೆ ಮಾಣ್ಬನೆ ಕೂಡಲಸಂಗಮದೇವ (ಬಸವ. ೪೨೬); ಕರಿಕಾಲನ ಕರಾಳುವೊ ಮಸಣಿದೇವನ ಕಿಂಕರನೊ ಬಾಣಸಿಗನೋ ಚೇರಮನ ಕಕ್ಕಯ್ಯಗಳ ಸಿಂಬಕನೊ (ಬಸಪು. ೪೭-೩೪); ತುಡುಗುಣಿತನ ವಡ್ಡೆಸೆ ಸಂಗನಾರೋಗಿಸೂವಡೆ ಬಾಯಿ ಬೇಕಲ್ಲ ಚರಲಿಂಗದೊಡಲೆ ತನ್ನೊಡಲಾರಿಗರ್ಪಿಸಲಿ ಒಡೆಯಗಟ್ಟಡಿಗೆ ತಿಂಬುವ ಸಿಂಬಕನೊಲೆಂದನು (ಸಂಗಿರಾ. ೩೧-೩೮). [ಸಿಂಬ + -ಕ₃]

**ಸಿಂಬಡಿಸು** 'ಸಿಂಪಡಿಸು' ನೋ.

**ಸಿಂಬಳ** 'ಸಿಂಬುಳ್' ನೋ.

**ಸಿಂಬಿ₁, ಸಿಂಬೆ₁** (ನಾ). ೧. ಪಾತ್ರೆ, ಬುಟ್ಟಿ ಮುಂತಾದುವುಗಳ ತಳಕ್ಕೆ ಇಡುವ ಅಥವಾ ತಲೆಯ ಮೇಲೆ ಹೊರೆಯನ್ನು ಹೊರಲು ಇಟ್ಟುಕೊಳ್ಳುವ ಬಟ್ಟೆ ಮುಂತಾದುವುಗಳ ಸುರುಳಿ; ಸಿವುಡು: ಖಳರ ಬಹುಭಾರದಿಂ ನೊಂದು ತದ್ಭಾರಮಂ ಕಳೆಯಲ್ಕಮಳದುಕೂಲದ ಸಿಂಬಿಯಂ ಸುತ್ತಿ ಚಳಕದಿಂದಂ ತಲೆಯೊಳಾಂತಿರಲ್ (ಮಡಿಕ್ಯಾ. V,೧೨೫೨); ಚಿನ್ನಾದ ಹರವ್ಯಲ್ಲ ರನ್ನಾದ ಸಿಂಬ್ಯಲ್ಲ ಮಣ್ಣಾರವಿಗೇಕೆ ಕಡುದುಃಖ ಮಾದಮ್ಮ ಪುರುಸಾಗೆ ಹೇಳು ತರುತಾನೆ (ಹಳಪ. ೧೦೫). ೨. ಸುರುಳಿ; ಸುತ್ತು: ಶೇಷಂ ಫಣಂ ಬಳ್ಕಿ ಸುರ್ಕಿದಪಂ ಸೀರೆಯ ಸಿಂಬಿವೋಲ್ ಖಳನ್ನಪಾಲಾಕ್ರೌಹಿಣೀಭಾರದಿಂ (ಜಗವಿ. ೧-೩೦); ಒರಗಲ್ಸಿಂಬಿಯ ಸುತ್ತಿ ಶೇಷಫಣೆ ಕೂರ್ಮೇಂದ್ರಂ ವಲಂ ತೆಕ್ಕೆಯಿಂ ಸೊರಗಲ್ . . . ಬಂದತ್ತು ಸೇನಾವ್ರಜಂ (ಚಂದ್ರಪ್ರಭು. ೧೨-೪೭); ಮಂಟಪದ ಕಟ್ಟೆಯ ಮೇಲೆ ಉದ್ದಕ್ಕೂ ಹಿಂಡಿ ಸಿಂಬಿಯಾಕಾರದಲ್ಲಿ ಸುಕ್ಕೆಯಲ್ಲಿಟ್ಟ ಸೀರೆಗಳು (ಗರುಡಾ. ೪೬); ೩. (ವ್ಯಂಗ್ಯವಾಗಿ) ಪೇಟ; ರುಮಾಲು: ಹೊತ್ತಿಗೆ ಸರಿಯಾಗಿ ಸಿಂಬಿ ಸುತ್ತಿಕೊಂಡು ಹೋಗಿ ಒಂದಿಷ್ಟು ಊದಿ ಬಂದರಾಯಿತು ಎನ್ನುವ ಮನೋಭಾವ ಅವರಲ್ಲಿ ನೆಲಸಿತ್ತು (ರಾಗಿಣಿ. ೧). 'ಚಿಮ್ಮುರಿ' ಪರಾ. **ಸಿಂಬೆ₁:** ೧. "ಸಿಂಬೆಯೆಂದು ಸಿವುಡು" (ಕಶಸಾ. ೭೨-೬೩೨); ಕೈಯ ಬೋಹರಿಗೆ ಮಂಡೆಯ ಮೇಲೆ ಸಿಂಬೆ [ಪಾಠಾಂ. ಬಿ] ಸಿಂಬಕನ ಮನೆಯ ಮಗ ನಾನಯ್ಯಾ (ಬಸವ. ೩೫೪); ಈ ಭೂಮಿಯನ್ನು ಹೊರಬೇಕಾದರೆ ನನಗೊಂದು ಸಿಂಬೆ ಬೇಕು (ಮಣಸ. ೧೧೧). ೨. ಸರ್ಪಯಜ್ಞದಲ್ಲಿ ಸರ್ಪಗಳು ಅಗ್ನಿಕುಂಡದಲ್ಲಿ ಸಿವುಡು ಸಿವುಡಾಗಿ ಬಂದು ಬೀಳುತ್ತಿದ್ದಂತೆ ನಮ್ಮ ಮನೆಯಲ್ಲಿಯ ಬಟ್ಟೆಗಳು ಸಿಂಬೆಸಿಂಬೆಯಾಗಿ ಸರಸರನೆ ಆ ರಾಶಿಯ ಮೇಲೆ ಬಂದು ಬೀಳಹತ್ತಿದವು (ಸ್ಮೃತಿಚಿ. ೩೫೭).

**ಸಿಂಬಿ ಹೊರು** = (ಅಲಂ) (ಮತ್ತೊಬ್ಬರ) ಹೊರೆಯನ್ನು ಹೊರು; ಜವಾಬ್ದಾರಿಯನ್ನು ಹೊಂದು: ಜೀವಮಾನವೆಲ್ಲ ತಲೆಯ ಮೇಲೆ ಸಿಂಬಿ ಹೊತ್ತು ಕಂಡವರ ನಿರರ್ಥಕಸೇವೆಯಲ್ಲಿ ಕಳೆಯುವುದು ರಾಜನ ಮನಸ್ಸಿಗೆ ಬೇಡವಾಗಿತ್ತು (ನಟಸಾ. ೨೫).

**ಸಿಂಬಿ₂, ಸಿಂಬು** (ನಾ). ಬಿರುಕು; ಸೀಳು. ಸಿಂಬು.

**ಸಿಂಬಿಯಾಗು, ಸಿಂಬಾಗು** = ೧. ಬಿರುಕು ಬಿಡು; ಒಡೆ: ಆರು ಹರದಾರಿ ದೂರ, ನಡೆದು ನನ್ನ ಕಾಲೆಲ್ಲ ಸಿಂಬಿಯಾಯಿತು (ಜಾರುದಾ. ೧೨೩); ದೇವರ ಗರ್ಭಗುಡಿಯ ಮುಂದಿನ ಧ್ವಜಮರ ಕೂಡಾ ಒಡೆದು ಸಿಂಬಾಗಿ ಹೋಗಿದೆ (ದೇವಹಂ. ೯೨). ೨. ಸೀಳಾಗು; ಕವಲಾಗು: ಗೋಡೆಗಳಂತಿರುವ ಅವುಗಳ ಮೈಮೇಲೆ ಬೆಟ್ಟದ ನೀರು ಇಳಿದು, ಒಡೆದು, ಸಿಂಬಿಯಾಗಿ ತೆಳ್ಳಗಿನ ಬಿಳಿಯ ತೆರೆಯೊಂದನ್ನು ಗಾಳಿಗೆ ಹಿಡಿದಂತೆ ಕಾಣುವ ನೋಟ—ಬಲು ಚೆನ್ನ (ಕುಡಿಕೂ. ೧೯೯). [ದೇ. ‖ ತಮಿ. ಚಿಮ್ಬು = ಬಿದಿರು ಮುಂತಾದುವುಗಳ ಸೀಳು,— ದೆಬ್ಬೆ; ಮಲ. ಚಿಮ್ಬು; ತೆಲು. ಚಿಂಪಿ = ಚೂರು, ಚಿಂದಿ]

**ಸಿಂಬಿ₃** (ನಾ). ಸೇವಕಿ; ದಾಸಿ; ತೊತ್ತು: ರಂಭೆಯ ನುಡಿ ಸಿಂಬಿ [ಪಾಠಾಂ. ಬೆ]ಗೆ ಶೃಂಗಾರವೆ (ಅವಚಂ.೭೧-೩೧೫); ರಂಭೆಯ ಸರಿಮಿಗಿಲೆನಿಪ ನಿತಂಬಿನಿಯರ ಬಿಟ್ಟು ಸಿಂಬಿಗೊಲಿವಂತಕ್ಕುಂ (ನೀತಿಸಾ. ೩೫೩); ತತ್ಪ್ರಸಾದಮಂ ಭೋಗಿಸುತ್ತವಿರತಂ ಸುಖಮಿರ್ದಳಾ ಮಲ್ಲಮಾಂಬೆ ಶರಣೆಯರ ಸಿಂಬಿ (ಮಲ್ಲಚ. ೨ ಸೂಚನೆ). 'ಸಿಂಬೆ₂' ಪರಾ.

[ಸಿಂಬ + -ಇ₂]

**ಸಿಂಬಿ₄** (ನಾ). ಹೊಟ್ಟು ತೆಗೆದ ಅಕ್ಕಿ ಮುಂತಾದ ಧಾನ್ಯ: "ಸದಕಂ ತಂಡುಲಮಕ್ಷತಮದು ನಿಸ್ತುಷವಾದ ಸಿಂಬಿಧಾನ್ಯಮದಕ್ಕುಂ" (ವಸ್ತುಕೋ. ೯೫-೨೧).

[ಸಂ. ಸಿಂಬೀ, ಸಿಂಬಾ]

**ಸಿಂಬಿಕಂಬ** (ನಾ). ಕುಸ್ತಿಯ ಕಣದಲ್ಲಿರುವ ಕಂಬ (?): ಇಬ್ಬರನ್ನೂ ಸಿಂಬಿಕಂಬಕ್ಕೆ ಬಿಗಿದು ಕರುಳಿಗೆ ಚಾಕು ಹಾಕಿ ಮಟ್ಟಮಣ್ಣಿನೊಳಗೆ ಸಮಾಧಿ ಕಾಣಿಸ್ಬೇಕು (ಭೀಮಕಾ. ೨೪೧). [ಸಿಂಬಿ₂ + ಕಂಬ₁ (< ಕಂಭ)]

**ಸಿಂಬಿಕಿ** (ನಾ). ಸೇವಕಿ; ತೊತ್ತು; ದಾಸಿ: ಚೆನ್ನೆಯನಖಿಲಕಲಾಸಂಪನ್ನೆಯ ನೊಲಿಸದೀ ಕುರೂಪಿಯಂ ಸಿಂಬಿಕಿಯಂ ತನ್ನ ಮನದಿರವನರಿಯದೆ ಕುನ್ನಿಯನೊಲಿಸುವುದು ಪ್ರೌಢಿಯೇ (ನೀತಿಸಾ. ೭೭೫). 'ಸಿಂಬಿ₃' ಪರಾ. [< ಸಿಂಬಕ + -ಇ₂]

**ಸಿಂಬಿಯಣುಗ** (ನಾ). ದಾಸಿಯ ಮಗ; ದಾಸೀಪುತ್ರ: ನಂಬಿಯೆನ್ನಯ ಸಿಂಬಿಯಣುಗನೇ ಸಹಜವೆಂದೆಂಬುದಕೆ ಲಿಖಿತವುಂಟೆನೆ (ಪ್ರಾಭರಾ. ೧೭-೨೨).

[ಸಿಂಬಿ₃ + ಅಣುಗ (< ಅಣುಂಗ)]

**ಸಿಂಬು** 'ಸಿಂಬಿ₂' ನೋ.

**ಸಿಂಬುಳ್,** ಸಿಂಬಳ, ಸಿಂಬುಳ, ಸಿಂಬುಳು, ಸುಂಬಳ್ಳ, ಸುಂಬಳು, ಸುಂಬುಳ (ನಾ). ಮೂಗಿನಲ್ಲಿ ಸುರಿಯುವ ಶ್ಲೇಷ್ಮ; **ಗೊಣ್ಣೆ:** ಉಗುಟುಂ ಪೇಲುಂ ಸಿಂಬುಳುಮಗಲಿರ್ದವನೆಯ್ದೆ ನೋಡಿ ಪೇಸುವರ್ (ಧರ್ಮಾಮೃ. ೭-೧೪೪); ಬಿಸುನೆತ್ತರ್ ತೊಗಲೆಲ್ಬು . . . ಸಿಂಬುಳ್ ಸಿಳ್ಪುಗಳ್ ಲೋಳೆ . . . ಉರ್ವಿಸುಗುಂ ಪೇಸುಪತಂಕರಂ ಕಿಸುಗುಳಂ ಕಾಯಂ ಶುಚಿಪ್ರಾಯಮೇ (ಪುಷ್ಪ.ಪು. ೧೩-೯೯). **ಸಿಂಬಳ:** ಮೂಗಿನಲ್ಲಿ ಸುರಿವ ಸಿಬುಳು - ಸಿಂಬಳ ಹಲ್ಲಿನಲ್ಲಿ ಕಿಸಿಕೆ ಉರದಲ್ಲಿ ಮಾಂಸದ ಗ್ರಂಥಿ (ಸಿದ್ಧೇವ. ೫೦-೧೪೨); ಪೂತನೆಯೊರ್ವಳ್ ಬಿಸುನೆತ್ತರಿಂಟೆ ಸಿಂಬಳವೊಸರ್ವಿನೆಗಂ ಪೇಸಿ ಮೊಗದೊಳು ಗುಳ್ಳಳ್ಳಗುಟ್ಟಿಂ (ಅಪ್ರತಿ. ೨೭-೬); ಕಣ್ಣಿನಲ್ಲಿ ಜಿಬರ ಮೂಗಿನಲ್ಲಿ ಸಿಂಬಳ (ರಾಮಾನ. ೧೧೦). **ಸಿಂಬುಳ:** ಸಿಂಬುಳ ನಾಳಿ ಮೂಗುಗುಟ ಪೆರ್ದೊಜೆ ಬಾಯ್ ಮಲದಾಗರಂ ಬಸಿಱ್ (ಧರ್ಮಾಮೃ. ೫-೨೮). **ಸಿಂಬುಳು:** ಸಿಂಬುಳು ಕೀವು ಕೆರಂಕ ಸ್ವಗಂಬು . . . ಜೀವಂ ಬೆಂಬಿಡದೀ ಪಂದೊವಲ ಪಸುಂಬೆಯೊಳೀಯೊಡಲೊಳಾವ ಸುಖಕಿರ್ದಪುದೋ (ಆಜಿಪು. ೭-೫೪); ನಾಸಿಕಂ ಸಿಂಬುಳದ ಹಿರಿನಾಳವೆಂದಿರದ ಪೇಸಿಕೆಯ ಮುಖವು ಬಚ್ಚಲ ನಾಳವೆಂದಿರದ . . . ಎಱಗಿದಂ ಪ್ರಾಯದೊಳು ಭೀಬತ್ಸವೆಂದಿರದೆ (ಪಿಂಡೋರ. ಪ. ೫೦೩-೩); ರಕ್ತ ಶ್ಲೇಷ್ಮ ಸಿಂಬುಳಿಂದೆಯಾದ ಕೂಪದಲ್ಲಿ ಎಲುಗಳುಳಿಯೆ ಕ್ರಿಮಿಗಳುಳಿಯೆ ಹೂಗಿಸಿ ಸುತ್ತಿ ಬರಿಸಿಯಲ್ಲಿ (ಸಾನಂಚ. ೭-೧೭). **ಸುಂಬಳ್ಳ$_1$:** ತನ್ನ ಮಕ್ಕಳ ಸುಂಬಳ ಒರೆಸುವಾಗ ಇರುವ ಸಹಜತೆಯ ಭಾವವು ಎರಡನೆಯವರ ಮಕ್ಕಳ ಸುಂಬಳವನ್ನು ಕಳೆಯುವಾಗ ಬರಬೇಕು (ಭಾರಸಂ. ೧೩೪). **ಸುಂಬಳು:** ವಿಶಾಲನೇತ್ರಾಂಬುಗಳಂ ಕೂಡೆ ಸುರಿಸುತ್ತ ಸುಂಬಳನೀಡಾಡುತ್ತಳುತ ಕರೆಯುತಂ ಸತ್ರವರಂ (ಹಾಲಾಸ್ಯ. ೪-೧೫-೩೧). **ಸುಂಬುಳ:** ಕೀವು ಸುಂಬುಳ ನೆತ್ತರುಗುಳು ತಿಪ್ಪೆಗಳಂತೆ ಭಾವಯಂ ಕಾಣಬೇಕು (ಮಹಾಂತೇ. ೨೭-೬).

ಸಿಂಬಳದ ಹುಳ, ಸುಂಬಳದ ಹುಳು = ಒಂದು ಬಗೆಯ ಹುಳು; **ಗೊಣ್ಣೆ ಹುಳು:** ಕೋಪ, ಆತ್ಮಮರುಕವಾಗಿ - ಸರ್ಪ, ಸಿಂಬಳದ ಹುಳವಾಗಿ - ಕಜ್ಜಿ ಕೀವಾಗುತ್ತದೆ (ಹೊಸಕ್ರಿ. ೨೨೦); "ಸಣ್ಣ ಸಸ್ಯಗಳನ್ನು ಹಾಳು ಮಾಡುವ, ಚಿಪ್ಪಿಲ್ಲದ, ಒಂದು ಬಗೆಯ ಬಸವನ ಹುಳು ; ಗೊಂಡೆಹುಳು, ಸುಂಬಳದ ಹುಳು" (Slug. ೧೦೫೨).

[ದೇ. ॥ ತೆಲು. ಚೀಮಿಡಿ. / ಸಂ. ಸಿಂಘಾಣ. / ಮರಾ. ಶೇಂಬೂಡ]

ಸಿಂಬುಳ 'ಸಿಂಬುಳ್' ನೋ.

ಸಿಂಬುಳು 'ಸಿಂಬುಳ್' ನೋ.

ಸಿಂಬೆ$_1$ 'ಸಿಂಬಿ$_1$' ನೋ.

**ಸಿಂಬೆ$_2$ (ನಾ). ೧.** ಸೇವಕಿ; ದಾಸಿ; **ತೊತ್ತು:** ಸಿಂಬೆಗ ರಂಬೆತನ ಉಂಟೆ . . . ಡಿಂಗರಿಗಂಗೆ ಸಮವೆಂಬ ಸಂಭ್ರಮ ಉಂಟೆ (ಶೂನ್ಯಸಂ. ೧೨೦-೧೩); ರಂಬೆಯ ಬಿಟ್ಟು ಸಿಂಬೆಯ ಬಯಸುವ ಶಿಖಂಡಿಯಂತೆ (ಸಿದ್ಧೇವ. ೧೩೪-೩೭೬). **೨.** ದಾಸಿ, **ತೊತ್ತು** ಎಂಬರ್ಥದ ಒಂದು ಬೈಗುಳು: ಚಂಡಿ ನೀ ಚಂಡಿ ಸಿಂಬೆ ನೀ ಸಿಂಬೆಯೆಂದು ತಲೆಯೆತ್ತಿಯೊರ್ವರೊರ್ವರು ಕಚ್ಚಿ ತಾವು ಮುಂದಲೆವಿಡಿದು . . . ಬಿದ್ದುರುಳುವ ಚೌವಟ ಬೇಟಗಾರ್ತಿಯರ ಜಗಳಮಂ ಕಂಡು ನಗುತಿರ್ದನಣುವ (ಕುಮುರಾ. ೧೪-೫೪) ; ಬಗೆಬಗೆಯ ಗುಣದ ಗೋಸುಂಬೆಯರ್ಸಿಂಬೆಯರ್ಜಗದ ಮರ್ತ್ಯರ ಮನದ ಗಂಟುಗಳ್ ನಂಟುಗಳ್ (ಷಡಿಲ. ೨-೫೯). 'ಸಿಂಬಿ$_3$' ಪರಾ. [ಸಿಂಬ + - ಎ$_2$]

**ಸಿಂಬೆ$_3$ (ನಾ).** ಒಂದು ಬಗೆಯ ಮರ ಮತ್ತು ಅದರ **ಕಾಯಿ:** ಸಿಂಬೆ ಕೂಗಲಿ ಪಿಪ್ಪಲಿಗಾಯ ಕೊಯ್ವರು ಸಿಂಬೆಯ ಕಳಿವಣ್ಣಳೊಡನೆ (ಮೋಹತ. ೪-೬೭).

[?./ಸಂ. ಶಿಂಬೀ, ಶಿಂಬಾ = ಒಂದು ಬಗೆಯ ಸಸ್ಯ./ ತಮಿ. ಚಿಮ್ಬೈ = ಕಾಡುಹುರಳಿ]

**ಸಿಂಬೆಗೊಳ್ (ಕ್ರಿ).** ಸುರುಳಿಯಾಗು; **ಸುತ್ತುವರಿ:** ಆ ವಾರಣದ ತೋರಹತ್ತಮಾನು ಪೂರ್ವಿಸ್ಥೂಳಮುಮಾಭೀಳಮುಮತಿಪ್ರಲಂಬಮುಮಾಗೆ ಸಿಂಬೆಗೊಂಡು ನಖಮುಖದೊಳ್ ಕುಪ್ಪಳಿಸಿ ರೌದ್ರರಸಮಂ ಕಱವ ಕಾರಮುಗಿಲೊಡ್ಡು ಕಾಲೂಱದಂತಿರ್ಪುದು (ಅನಂಪು. ೧೩-೨೦ ವ). [ಸಿಂಬೆ$_1$ (< ಸಿಂಬಿ$_1$) + ಕೊಳ್$_1$]

**ಸಿಂಹ (ನಾ). ೧.** ಮೃಗರಾಜನೆಂದು ಹೆಸರಾದ ಒಂದು ಬಗೆಯ ವನ್ಯಮೃಗ; **ಕೇಸರಿ:** ನೀರ್ಗೆ ಪೋಗದ ತೃಷ್ಣಾತುರನಾಗಿಯುಂ ಮಗುಟ್ಟುದಾ ಸಿಂಹಂ ಭಯಭ್ರಾಂತಿಯಿಂ (ಪಂಚತಂ. ೨೩-೮೩); ಕಸ್ತುರಿಯ ಮೃಗ ಶಾರ್ದೂಲಚರ್ಮವ ಸಿಂಹದುಗುರುಗಳ . . . ಕೋಡಗದ ಮಱಿಗಳನರಸ ರಾಮಂಗಿತ್ತು ಕಂಡುದು ಶಬರಸಂದೋಹ (ತೊರರಾ. ೩-೩-೪); ಸಿಂಹಕ್ಕಿಂತ ಹುಲಿಯು ಕ್ರೂರವು (ಮುಂಬಯಿ. ೪-೩೭). **೨.** ಒಂದು ನರಕದ **ಹೆಸರು:** ಸಿಂಹ . . . ವ್ಯಾಘ್ರಮೆಂಬೈದು ಮಂತ್ರಿನರಕಂಗಳ ಮಧ್ಯದಲ್ಲಿ ಮಹಾಚಂಡವೆಂಬರಸುನರಕವಿಹುದು (ವಿವೇಕ. ೧೫೦). **೩.** (ಅಲಂ) ಸಮಾಸಗಳಲ್ಲಿ ಶ್ರೇಷ್ಠ, ಪ್ರಮುಖ ಎಂಬರ್ಥದಲ್ಲಿ ಬಳಕೆಯಾಗುವ ಒಂದು **ಶಬ್ದ:** 'ಸಿಂಹದ್ವಾರ' ಪರಾ. **೪.** [ಛಂದ] ಆರು ಬಗೆಯ ಪ್ರಾಸಗಳಲ್ಲಿ ಒಂದು; "ಪ್ರತಿಪಾದದ ಒಂದೆರಡನೆಯ ಸ್ವರಗಳ ನಡುವ ಒಂದೇ ವಿಧವಾದ ಒಂದು ವ್ಯಂಜನವು ಬಂದು ಅದರ ಹಿಂದಿನ ಸ್ವರವು ಹ್ರಸ್ವವಾಗಿದ್ದರೆ ಸಿಂಹಪ್ರಾಸ" (ಕ್ಪಿಡಿ. ೭೧). **೫.** [ಜ್ಯೋತಿ] ಜ್ಯೋತಿಶ್ಚಕ್ರದ ಹನ್ನೆರಡುರಾಶಿಗಳಲ್ಲಿ **ಒಂದು:** ಘಟೋಕ್ಷ ವೃಶ್ಚಿಕ ಸಿಂಹಂ ಸ್ಥಿರರಾಶಿ (ಜಾತಕ. ೧-೨೩); ಆ ಖಗೋಳದಲ್ಲಿ ಮೇಷ . . . ಸಿಂಹ . . . ಮೀನವೆಂಬ ಪನ್ನೆರಡುರಾಶಿಗಳು (ವಿವೇಕ. ೨೫೪). 'ದ್ವಾದಶರಾಶಿ' ಪರಾ. **೬.** [ವಾಸ್ತು] ಕಟ್ಟಡನಿರ್ಮಾಣಕ್ರಮದಲ್ಲಿ ನೋಡಬೇಕಾದ ಎಂಟು ಬಗೆಯ ಆಯಪ್ರಕಾರಗಳಲ್ಲಿ **ಒಂದು:** ಪಸರಿಸೆ ತರದಿಂ ಧ್ವಜ ಧೂಮ ಸಿಂಹ ಶುನ ಕೋಕ್ಷಖರಗಜಧ್ವಾಂಕ್ಷಂಗಳ್ ದೆಸೆಯಿಂದ ಮೂಡನಾಳ್ಕುಂ ದೆಸೆಯಾಯಂ ಶುಭದಮಲ್ಲಿ ಪೆಱವಶುಭಂಗಳ್ (ಲೋಕೋಪ. ೩-೧೯); ವಿವಿಧವಾದ ಪ್ರಾಸಾದಾದಿಗಳು ಎಂಟು ವಿಧವಾದ ಗಜ, ಉಷ್ಟ್ರ(ಒಂಟೆ), ಖರ, ಸಿಂಹ, ವೃಷ, ಧ್ವಜ, ಧೂಮ, ಶ್ವಾನ ಎಂಬ ಆಯಗಳನ್ನರಿತು ನಿರ್ಮಾಣವಾಗತಕ್ಕದ್ದೆಂದೂ . . . ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಭಾರದ. ೮೦). 'ಧೂಮಾಯ' ಪರಾ. [ಸಂ.]

**ಸಿಂಹಕಟಿ (ನಾ).** (ಸಿಂಹದ ನಡುವಿನಂತೆ) ಬಹಳ ಸಣ್ಣದಾದ **ಸೊಂಟ:** ತುಂಬುಕುತ್ತಿಗೆ, ಉನ್ನತವೂ ವಿಶಾಲವೂ ಆದ ವಕ್ಷ, ಸಿಂಹಕಟಿ (ಶಾಂತಲಾ. ೧೦೭). [ಸಂ.]

**ಸಿಂಹಕಡಗ (ನಾ).** ಸಿಂಹದ ಮುಖದ ಆಕಾರವನ್ನು ಕೆತ್ತಿರುವ ಒಂದು ಬಗೆಯ ಬಳೆ, - **ತೋಡ:** ಕೀಲ ಕಡಗ . . . ಸಿಂಹಕಡಗ ಗೌಳಸರದ ಪಣೆಗಡಗದ ಸೊಬಗಿನ ನೀಲಕುಂತಳೆಯರೊಪ್ಪಿದರು (ಕಂಸವ. ೨೪-೩೯). [ಸಿಂಹ + ಕಡಗ$_1$]

**ಸಿಂಹಕೇಸರ (ನಾ).** ಸಿಂಹದ ಕತ್ತಿನ ಮೇಲಿರುವ ಜೂಲುಕೂದಲು; **ಅಯಾಲು:** ಸಿಂಹಕೇಸರದುಯ್ಯಲಾಡುವ ಗಜವ ನೋಡೆಂದುಱುಬಿದನು ನೃಪನ (ಕುಮಾರ್ದ್ರೋ. ೧೫-೫೭). [ಸಂ.]

**ಸಿಂಹಕ್ರೀಡ (ನಾ).** [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ **ಒಂದು:** ಪದಯುಗದಲಾತಚಾರಿಯನೊದವಿಸಿ ಮತ್ತೊಂದು ಪಾದಮಂ ಮುಂತಿರಿಸುತ್ತೊದೆದು ನೆಲನಂ ಪತಾಕಮನದು ಮತ್ತಂ ಕೈ[ಗ]ಳೊಂದೆ ಸಿಂಹಕ್ರೀಡಂ (ಲಾಸ್ಯರಂ. ೪-೧೫೦). [ಸಂ.]

**ಸಿಂಹಕ್ರೀಡಿತ (ನಾ).** = **ಸಿಂಹಕ್ರೀಡ:** ತಲಪುಷ್ಪಪುಟ, ಲೀನ, ವಿವರ್ತಿತ . . . ಸ್ಖಲಿತ, ಸಿಂಹಕ್ರೀಡಿತ, ಸಿಂಹಾಕರ್ಷಿತ . . . ಗಂಗಾವತರಣ - ಈ ನೂಱೆಂಟು ಕರಣಗಳ್ (ಲಾಸ್ಯರಂ. ೪-೪೨೨). [ಸಂ.]

**ಸಿಂಹಗರ್ಜನೆ (ನಾ). ೧.** ಸಿಂಹದ ಗಟ್ಟಿಯಾದ ಕೂಗು, — ಆರ್ಭಟೆಯ ಧ್ವನಿ. **೨.** (ಅಲಂ) ಶೌರ್ಯಾಲಾಪ; **ವೀರಗರ್ಜನೆ:** ಸಿಂಹಗರ್ಜನೆಯಿಂ ಗರ್ಜಿಸಿ ಕುರುರಾಜದ್ವಾರೋಪಾಂತಮನೆಯ್ದುವಂದಾಗಳ್ (ಗದಾಯು. ೬-೩೧ವ); ಇವರ ಸಿಂಹಗರ್ಜನೆಯಿಂದಲೇ ಗಂಗಸಾಮ್ರಾಜ್ಯ ಬಹುತೇಕ ವಿಶಾಲಗೊಂಡಿತು (ನೊಳಂಬ. ೧೮).

[ಸಂ. ಸಿಂಹಗರ್ಜನ]

**ಸಿಂಹಘಂಟಿಕೆ (ನಾ).** ಸಿಂಹನಾದದಂತೆ ಧ್ವನಿಯನ್ನು ಹೊರಡಿಸುವ ಗಂಟೆಯಂತಹ ಒಂದು ಬಗೆಯ **ವಾದ್ಯ:** ಪ್ರೀತಿ ಮಿಗೆ ಶಂಖಪಟಹ ವಿನೂತಘೋದ್ಘುರ ಸಿಂಹಘಂಟಿಕಾನಿಸ್ವನಸಂಕೇತದೆ ಭವನ ಭೌಮ ಜ್ಯೋತಿಷ ವೈಮಾನಿಕಾಮರರ್ನೆರೆತಂದರ್ (ಸುಕುಮಾ. ೮-೬೪). [ಸಂ. ಸಿಂಹಘಂಟಿಕಾ]

**ಸಿಂಹತಾಳತ (ನಾ).** = **ಸಿಂಹಕಡಗ:** ಹಿರಿಯ ವೈಣಿಕರಾದ ವೆಂಕಟರಮಣದಾಸರಿಗೆ ವೈಸ್‌ರಾಯ್ ಲಾರ್ಡ್‌ಕರ್ಜನ್ ಒಂದು ಸಿಂಹತಾಳತವನ್ನು ಬಹುಮಾನವಾಗಿ ಕೊಟ್ಟು ಮೆಚ್ಚುಗೆಯನ್ನು ವ್ಯಕ್ತಪಡಿಸಿದರು [ತಾಳತವೆಂದರೆ ಒಂದು ಚಿನ್ನದ ಬಳೆ. ರತ್ನಖಚಿತವಾದ

ಇದರ ಎರಡು ಕಡೆಯೂ ಸಿಂಹದ ತಲೆಯನ್ನು ಕೆತ್ತಲಾಗಿದೆ] (ಸಂಗೀತ. ೬೬).

[ಸಿಂಹ + ತಾಳತ್ರ$_1$]

**ಸಿಂಹದ್ವಾರ** (ನಾ). (ಅರಮನೆ, ದೇವಾಲಯ ಮುಂತಾದುವುಗಳ) ಪ್ರಮುಖವಾದ ಬಾಗಿಲು; ಮುಖ್ಯದ್ವಾರ: ಅಸವನೆಗೆ ಕೆಯ್ಗೆ ತೋಂಟಕ್ಕೆ ಸಿಂಹದ್ವಾರ [ಪಾಠಾಂ. [ಸ]ಮಗಾರ]ಗೃಹಕೆ ಪೊಳೆವನೆಗಾಳ್ಗಾಂ ಬೆಸವೋದನೆಂದು ಪುಂಶ್ಚಲಿ ಸುಶೀಲೆ ಪೋಕುಂ (ಮನತಿ. ೮-೪೯). [ಸಂ.]

**ಸಿಂಹಧ್ವನಿ** (ನಾ). ೧. = ಸಿಂಹಗರ್ಜನೆ ೧. ೨. = ಸಿಂಹಗರ್ಜನೆ ೨: ಕಳಕಳಿಕೆ ತಗ್ಗಿದ ಸಭಾಸ್ಥಳದೊಳಗೆ ಸಿಂಹಧ್ವನಿಯಲವನಿಪಕುಲಕುಠಾರನು ಪರಶುರಾಮನು ನುಡಿದನರಸಂಗೆ (ಕುವ್ಯಾಉ. ೯-೯). [ಸಂ.]

**ಸಿಂಹನಂದನ** (ನಾ). [ಸಂಗೀತ] ಒಂದು ತಾಳದ ಹೆಸರು: ಧ್ರುವ ಮಟಯ . . . ಸಿಂಹ[ಪಾಠಾಂ. ಹಾ]ನಂದನ ಸಿಂಹವಿಕ್ರೀಡಿತ ಸಿಂಹನಾದ ಸಪ್ತಮುದ್ರಿತ ಜಯಾಳವೆಂಬವೇ ಮೊದಲಾದ ನೂಱೊಂದು ತಾಳಂಗಳಾದೊಡೆ (ವಿವೇಕ. ೧೯೨); ೧೦೮ ತಾಳಗಳಲ್ಲಿ ಸಿಂಹನಂದನವೇ ಅತ್ಯಂತ ದೊಡ್ಡತಾಳ (ಸಂಗೀತ. ೨೮). [ಸಂ.]

**ಸಿಂಹನಾದ** (ನಾ). ೧. = ಸಿಂಹಗರ್ಜನೆ ೧. ೨. = ಸಿಂಹಗರ್ಜನೆ ೨: ಗೆಲಲೆನಗೆ ರಿಪುಬಲಂ ಬಲ್ಲಲಮಾಡೊಡೆ ಸಿಂಹನಾದಮಂ ಮೊಱೆಪ್ಪಿಂ (ಪಂರಾಮಾ. ೯-೯೭). ೩. [ಸಂಗೀತ] ಒಂದು ತಾಳದ ಹೆಸರು: ಸಿಂಹನಾದ . . . ಜಯಾಳವೆಂಬವೇ ಮೊದಲಾದ ನೂಱೊಂದು ತಾಳಗಳಾದೊಡೆ (ವಿವೇಕ. ೧೯೨). [ಸಂ.]

**ಸಿಂಹನಾದಂಗೆಯ್** (ಕ್ರಿ). ರಣಗರ್ಜನೆಯನ್ನು ಮಾಡು; ವೀರಾಲಾಪವನ್ನು ಮಾಡು: ಹಿಡಿಂಬಕವೈರಿ ಸಿಂಹನಾದಂಗೆಯ್ದಂ (ಗದಾಯು. ೭-೧೭); ಅವಂ ರಣಕೋಣೆಗೆ ಪೋಗಿ ಲಕ್ಷ್ಮಣಂ ಕೇಳದಂತು ವೈಕುರ್ವಣಶಕ್ತಿಯಿಂ ಸಿಂಹನಾದಂಗೆಯ್ಕೆಂಬುದುಂ ಅಂತೆಗೆಯ್ವೆನೆಂದು ವಿದ್ಯಾದೇವತೆ ಪೋಗಿ ಸಿಂಹನಾದಂಗೆಯ್ವುದುಂ (ಪಂರಾಮಾ. ೯-೯೭ ವ). [ಸಿಂಹನಾದ + ಕೆಯ್$_1$]

**ಸಿಂಹಪರ್ಷೆ** (ನಾ). [ಶೈವ] ಶೈವಮುನಿಗಳ ಒಂದು ವರ್ಗ : ಕೋಗಳಿಯಯ್ನೂಱು ಮಠಾಧಿಪತಿಗಳಪ್ಪ ಸಿಂಹಪರ್ಷೆಯ ಶ್ರೀಮನ್ಮಲೆಯಾಳಪಂಡಿತದೇವರ ವರಶಿಷ್ಯರ್ (ಸೌಇಇ. IX-i. ೧೦೧-೩೫; ಸು. 1045); ಪರ್ಷೆಗಳಲ್ಲಿ . . . ಬಹು ಪ್ರಸಿದ್ಧವಾದುವು ಎರಡು - ಶಕ್ತಿಪರ್ಷೆ ಮತ್ತು ಸಿಂಹಪರ್ಷೆಗಳು (ಕಶಾಅ. ೧೩೧). [ಸಿಂಹ + ಪರ್ಷೆ$_0$ (< ಪರಿಸೆ$_1$)]

**ಸಿಂಹಪಾಲು** (ನಾ). (ಆಲಂ) ಹೆಚ್ಚುಭಾಗ; ಅಧಿಕಾಂಶ : ಬರುವ ಆದಾಯದಲ್ಲಿ ಅವನಿಗೆ ಯಾವಾಗಲೂ ಸಿಂಹಪಾಲು ಕೊಡಬೇಕು (ರೂಢಿ).

[ಸಿಂಹ + ಪಾಲು$_2$ (< ಪಾಲ್$_2$)]

**ಸಿಂಹಪೀಠ** (ನಾ). ೧. ಸಿಂಹಲಾಂಛನವನ್ನು ಹೊಂದಿರುವ ಪೀಠ; ರಾಜನ ಗದ್ದುಗೆ; ಸಿಂಹಾಸನ: ಏಱೆದ ಸಿಂಹಪೀಠಮಿರದೊರಲಿದುದು (ಶಾಂತಿಪು. ೩-೧೦೫); ಕೈಲಾಸದಲ್ಲಿ ಶಿವನು ಓಲಗದಿ ಸಿಂಹಪೀಠದೊಳಿರಲು (ಪ್ರೌಢರಾ. ೨-೨); ದತ್ತು ತೆಗೆದುಕೊಂಡಾಕ್ಷಣಕ್ಕೆ ದತ್ತುಪುತ್ರನು ಸಿಂಹಪೀಠವನ್ನೇರಬೇಕು ಎಂದೇನೂ ಇಲ್ಲ (ಸವತಿ. XIV ಪ್ರಸ್ತಾವನೆ). ೨. [ವಾಸ್ತು] ಸಿಂಹದ ಶಿಲ್ಪವನ್ನು ಹೊಂದಿರುವ ವಿಗ್ರಹದ ಪೀಠ : ಆದಿನಾಥ ಶಾಂತಿನಾಥ ವಿಗ್ರಹಗಳಿಗೆ ಲತಾತೋರಣ ಸಿಂಹಪೀಠಗಳಿವೆ (ಹೊಯ್ಸವಾ. ೮೦); ಮಧ್ಯಫಲಕದಲ್ಲಿ ಯಕ್ಷಯಕ್ಷಿ, ಗಂಧರ್ವರ ನಡುವೆ ಸಿಂಹಪೀಠ . . . ಸಿಂಹಪೀಠದ ಮೇಲೆ ಪ್ರಭಾವಳಿ ಮುಕ್ಕೊಡೆ ಹೊಂದಿರುವ ಜಿನವಿಗ್ರಹವಿದೆ (ಹೊಯ್ಸವಾ. ೧೦೩). ೩. [ವೀಶೈ] ಶಿವಪೂಜಾಯೋಗಪೀಠಗಳಲ್ಲಿ ಒಂದು: ಶಿವಾರ್ಚನೆಗುಪಯುಕ್ತಮಾಗಿ ಅನಂತಪೀಠ ಕಮಠಪೀಠ ಸಿಂಹಪೀಠ ಪದ್ಮಪೀಠ ಭದ್ರಪೀಠ ಯೋಗಪೀಠಗಳ ಭಾವನೆಯೆಂದುಪಕಲ್ಪಿತಮಾದ ದಿವ್ಯಮಂಟಪಮಧ್ಯಗತಸಿಂಹಾಸನಕ್ಕೆ (ವಿವೇಕ. ೧೦೪). ೪. [ಜೈನ] ''ಸಮವಸರಣದ ಗಂಧಕುಟಿಯ ಮಧ್ಯದಲ್ಲಿ ಸುಂದರವೂ ಉನ್ನತವೂ ಶ್ರೇಷ್ಠವಾದ ರತ್ನಗಳಿಂದ ಕಾಂತಿಸಮೂಹವುಳ್ಳುದೂ ಆದ ಸುವರ್ಣದ ಮಹಾಪೀಠ'' (ಜೈನಕೋ. ೨೭೬). [ಸಂ.]

**ಸಿಂಹಪುಚ್ಛೆ** (ನಾ). ಒಂದು ಬಗೆಯ ಹುಲ್ಲು; ನರಿಬಾಲದ ಹುಲ್ಲು: ''ಕ್ರೋಷ್ಟುವಿನ್ನಾ, ಸಿಂಹಪುಚ್ಛೀ, ಕಲಶೀ, ಧಾವನೀ, ಗುಹಾ - ೫ ನರಿಬಾಲದ ಹುಲ್ಲು, ನರಿಬಾಲದ ಹೊನ್ನೆ'' (ಸಿದ್ಧಾಂತಿ. ೧೩೩). [ಸಂ. ಸಿಂಹಪುಚ್ಛೀ]

**ಸಿಂಹಪೋತ** (ನಾ). ೧. ಸಿಂಹದ ಮರಿ: ಎನಿತು ಮದವಾರಣಂ ಕ್ರೋಧಿನಿ ಪೊಕ್ಕುಂ ಸಿಂಹಪೋತಮಂ ಗೆಲ್ಗುಮೆ (ಶಾಂತಿಪು. ೪-೫೧). ೨. ಒಂದು ಬಗೆಯ ಕುದುರೆ: ಸಿಂಗದ ಕೇಸರಮಂ ಪೋಲ್ವಂಗರುಹಂ ಮಿಶ್ರಕೇಶವಾಲಧಿ ಮುಷ್ಕಾಪಾಂಗಾಸ್ಯಮರುಣಮಾದ ತುರಂಗಮಮದು ಸಿಂಹಪೋತಂ (ಅಶ್ವಶಾ. ೨-೨೭). [ಸಂ.]

**ಸಿಂಹಪ್ರಾಸ** (ನಾ). [ಛಂದ] ಆರು ಬಗೆಯ ಪ್ರಾಸಗಳಲ್ಲಿ ಒಂದು; ಅದ್ವಿತ್ವವೂ ಹ್ರಸ್ವಸ್ವರಯುಕ್ತವೂ ಆಗಿರುವ ಪ್ರಾಸ: ಪ್ರತಿಪಾದದ ಒಂದೆರಡನೆಯ ಸ್ವರಗಳ ನಡುವೆ ಒಂದೇ ವಿಧವಾದ ಒಂದು ವ್ಯಂಜನವು ಬಂದು ಅದರ ಹಿಂದಿನ ಸ್ವರವು ಹ್ರಸ್ವವಾಗಿದ್ದರೆ ಸಿಂಹಪ್ರಾಸ (ಕೈಪಿಡಿ. ೭೧). [ಸಂ.]

**ಸಿಂಹಬಲ** (ನಾ). ಸಿಂಹದಷ್ಟು ಶೌರ್ಯವುಳ್ಳವನು; ಸಿಂಹದ ಬಲಕ್ಕೆ ಸಮನಾದ ಬಲವನ್ನು ಹೊಂದಿರುವವನು: ಬಕಸಂಹರಣಂ ಕೀಚಕಮಥನಂ ನಿರಸ್ತಮಿತ ವೈರಿನಿವಹ ಗಜಸಿಂಹಬಲಂ (ಗದಾಯು. ೧-೫೪). [ಸಂ.]

**ಸಿಂಹಭಾಗ** (ನಾ). = ಸಿಂಹಪಾಲು: ಇದಕ್ಕೆ ಪ್ರತಿಫಲವಾಗಿ ಅವನಿಗೆ ಕೊಳ್ಳೆಯಲ್ಲಿ 'ಸಿಂಹಭಾಗ' ದೊರೆಯುತ್ತಿತ್ತು (ಇಸ್ಲಾಂಸಂ. ೩೫). [ಸಂ.]

**ಸಿಂಹಮುದ್ರೆ** (ನಾ). ಸಿಂಹದ ಗುರುತು, — ಚಿಹ್ನೆ.

**ಸಿಂಹಮುದ್ರೆಕಲ್ಲು** = ಸಿಂಹದ ಲಾಂಛನವನ್ನು ಕೆತ್ತಿರುವ (ಗಡಿ)ಕಲ್ಲು: ಈ ಊರ ವಾಮನಮುದ್ರೆಕಲ್ಲ ಬಡಗವತ್ತು ಸಿಂಹಮುದ್ರೆಕಲ್ಲ ಬಳಿಯ ಪಡುವಮುಖವಾನೆ (ಎಕ. V (R), ತಿರುಮ. ೧೬-೧೧೮೧ ; 1749). [ಸಂ. ಸಿಂಹಮುದ್ರಾ]

**ಸಿಂಹರವ** (ನಾ). ೧ . ಸಿಂಹನಾದ; ಸಿಂಹಗರ್ಜನೆ. ೨ . = ಸಿಂಹನಾದ ೨: ಧುರದೊಳ್ ದುರ್ಜಯನಾರ್ಗಮೆನ್ನನುಜನೆಂಬೀ ನಿಶ್ಚಯಂಗೆಟ್ಟು ಸಿಂಹರವಂ ದೋಱಿದಂ (ಪಂರಾಮಾ. ೯-೯೮). ೩. [ಸಂಗೀತ] ಒಂದು ರಾಗದ ಹೆಸರು: ಸಿಂಹರವವೆಂಬ ರಾಗವು ಷಡ್ಜವನ್ನು ನ್ಯಾಸ, ಅಂಶಗ್ರಹವನ್ನಾಗಿ ಉಳ್ಳದ್ದು (ಚತುಪ್ರ. ೬೩).

[ಸಂ.]

**ಸಿಂಹರಾಶಿ** (ನಾ). = ಸಿಂಹ ೫: ಕಟಕದ ಮೇಲಿರುವ ಸಿಂಹರಾಶಿಯ ಕೇಸರಶಿರವು ನಮಗೆ ನೆತ್ತಿಯ ಮೇಲೆ ಕಾಣುತ್ತದೆ (ನಕ್ಷತ್ರ. ೭೭). 'ದ್ವಾದಶರಾಶಿ' ಪರಾ. [ಸಂ.]

**ಸಿಂಹಲ, ಸಿಂಹಳ** (ನಾ). ೧. ಭಾರತದ ದಕ್ಷಿಣಕ್ಕಿರುವ ಒಂದು ದ್ವೀಪದ ಹೆಸರು; IP ಈಗಿನ ಶ್ರೀಲಂಕಾ: ಲಾಳ ಮಾಳವ ಸಿಂಧು ಸಿಂಹಲ [ಪಾಠಾಂ. ಳ]ಗೌಳ ಗುರ್ಜರ . . . ಕೇರಳ ಮುಖಾಪಾರ ದೇಶಂಗಳೊಳೆಸೆವ ಜಂಗಮವು ಭಕ್ತಾಳಿ (ಬಸವು. ೭-೧೮). ೨. ಸಿಂಹಳದೇಶಕ್ಕೆ ಸೇರಿದ ಜನ ಮತ್ತು ಅಲ್ಲಿಯ ರಾಜ: ವಿತತಚತುರಂಗಬಳಸಂಯುತನತಿಸಾಹಸಿ ಸರೋಧಿಮಧ್ಯಸ್ಥಿತನುದ್ಧತನಾ ಸಿಂಹಲಂ [ಪಾಠಾಂ. ಳಂ] (ರಾಜಶೇ. ೫-೧೩೧). **ಸಿಂಹಳ:** ೧. ಅಂಗ ವಂಗ ಕಳಿಂಗ ಕೊಂಗ ಮಾಳವ ಚೋಳ ನೇಪಾಳ ಸಿಂಹಳ . . . ಮರುಪ್ರಭೃತಿಭೂಪಾಲಕರಿಂ (ಜಗವಿ. ೨-೩೯ ವ); ಮತ್ತಮಾ ಭರತವರುಷದಲ್ಲಿಯೇ ಅಂಗ ವಂಗ ಕಳಿಂಗ ತೆಲುಂಗ ಕೊಂಗ ಲಾಟ ಬಂಗಾಳ ಚೋಳ ಕೇರಳ ಗೌಳ ಪಾಂಚಾಳ ಸಿಂಹಳ . . . ಎಂಬೈವತ್ತಾಱು ಬಗೆಯ ಜನರಿಂದ . . . ನಿರೂಢಮಾದೈವತ್ತಾಱು ಪ್ರಾಂತಗಳಿರ್ಪವು (ವಿವೇಕ. ೨೪೩). ೨. ಸಿಂಹಳಗಹ್ವರೀಭರ್ತೃ ಮಸ್ತಕಾಂಕುಶ ಪರಾಕು (ಯಾದಚಂ. ೩-೧ ವ). [ಸಂ.]

**ಸಿಂಹಲಂಘನ** (ನಾ). ಸಿಂಹದ ನೆಗೆತ, — ಜಿಗಿತ: ಕಲ್ಪಾಂತಕೃತಾಂತನಂತೆ ಮಾಮಸಕಂಮಸಗಿ ಪೊಡೆವ ಸಿಡಿಲಂತೆ ಸಿಡಿಲ್ದು ಸಿಂಹಲಂಘನದಿಂದಂಬರಕ್ಕೆ ನೆಗೆದು (ಪಂರಾಮಾ. ೧೧-೧೪೩ ವ). [ಸಂ.]

**ಸಿಂಹಲಗ್ನ** (ನಾ). [ಜ್ಯೋತಿ] ಸೂರ್ಯನು ಸಿಂಹರಾಶಿಯನ್ನು ಪ್ರವೇಶಿಸುವ ಕಾಲ; ಒಂದು ದಿನದ ಹನ್ನೆರಡು ಭಾಗಗಳಲ್ಲಿ ಒಂದು; ಸಿಂಹರಾಶಿಯು ಉದಯಿಸುವ ಕಾಲ: ರವಿಚಂದ್ರರ್ ನಿಲೆ ಸಿಂಹಲಗ್ನದೊಳಿಳಾಜಾತಾರ್ಕಜರ್ ನೋಡೆ ನೇತ್ರವಿಹೀನಂ ನರಂ (ಜಾತತಿ. ೪-೩೮). [ಸಂ.]

**ಸಿಂಹಲಲಾಟ** (ನಾ). ೧. ಸಿಂಹದ ಮುಂದಲೆಯ ಆಕೃತಿಯುಳ್ಳ ಬಳೆ; ಸಿಂಹಕಡಗ. ೨. [ವಾಸ್ತು] ಸಿಂಹದ ಮುಂದಲೆಯ ಶಿಲ್ಪಾಕೃತಿ: ಮೇಲೆ ಮಕರಗಳ ಮಧ್ಯದಲ್ಲಿ ಸಿಂಹಲಲಾಟ, ಗೋಡೆಗಳಲ್ಲಿ ಜಾಲಂಧ್ರಗಳೂ ಇವೆ (ಹೊಯ್ಸವಾ. ೧೨೩).

[ಸಂ.]

**ಸಿಂಹಲಾಂಛನ** (ನಾ). ೧. ಸಿಂಹದ ಗುರುತು; ಸಿಂಹಲಾಂಛನ. ೨. ಧ್ವಜದಲ್ಲಿ ಸಿಂಹದ ಗುರುತುಳ್ಳವನು,— ಸಿಂಹಲಾಂಛನವನ್ನುಳ್ಳವನು: ಬನವಾಸಿಪುರ ವರೇಶ್ವರಂ ಸಾಹಾಚರೇಂದ್ರಧ್ವಜಂ ಸಿಂಹಲಾಂಚನಂ (ಸೌಇಇ. XX. ೪೬-೭; 1068).
[IP ಇದು 'ಸಿಂಹಲಾಂಛನ' ಎಂಬುದರ ಅಪಲಿಖಿತ]

**ಸಿಂಹಲಾಂಛನ** (ನಾ). ೧. = ಸಿಂಹಲಾಂಚನ ೧: ಇವರ ತಾಮ್ರಪಟ್ಟಿಕೆಗಳ ಮೊಹರುಗಳ ಮೇಲೆ ಸಿಂಹಲಾಂಛನವಿರುತ್ತದೆ (ಕರ್ನಾಅ. ೮). ೨. = ಸಿಂಹಲಾಂಚನ ೨. **ಸಿಂಹಲಾಂಛನಪ್ರಸೂತಂ** = ಸಿಂಹಲಾಂಛನವುಳ್ಳವರ ವಂಶದಲ್ಲಿ ಹುಟ್ಟಿದವನು; ಒಂದು ಬಿರುದು: ಮಹಾಸಾಮನ್ತಂ ವಿಜಯಶ್ರೀಕಾನ್ತಂ ಮಣಲೆರಾನ್ವಯಪ್ರಸೂತಂ ಸಿಂಹಲಾಂಛನಪ್ರಸೂತಂ ಪುರಿಕರಪುರವರೇಶ್ವರಂ . . . ಜಯಕೇಶಿಯರಸರ್ (ಸೌಇಇ. XX, ೪೬-೨೧; 1074). [ಸಂ.]

**ಸಿಂಹಲೀಲ** (ನಾ). ೧. [ಸಂಗೀತ] ಒಂದು ತಾಳದ ಹೆಸರು: ಸಿಂಹಲೀಲ (ತಾಳ)ದಲ್ಲಿ ಮೊದಲು ಕೊನೆಗಳಲ್ಲಿ ಲಘುವಿರುವ ಮೂರು ದ್ರುತಗಳಿರುತ್ತವೆ (ಚತುಪ್ರ.೮೭). ೨. ಒಂದು ಪ್ರಬಂಧದ ಹೆಸರು: ಸಿಂಹಲೀಲಾತಾಳದಲ್ಲಿ ವಿರಚಿತವಾಗಿರುವ ಪ್ರಬಂಧವು ಸಿಂಹಲೀಲವೆಂದು ಸ್ಮೃತವಾಗಿದೆ (ಚತುಪ್ರ. ೮೭). [ಸಂ.]

**ಸಿಂಹವರ್ಣ** (ನಾ). ಸಿಂಹದ ಸ್ವಭಾವವನ್ನು ಹೊಂದಿದವನು; ಪರಾಕ್ರಮಿ: ತಮ್ಮ ಬಲಮಟ್ಟುಡುವುದುಮಂ . . . ಕಂಡು ತಾಂ ಸಿಂಹವರ್ಣನುಂ ಸಿಂಹಾನೀಕನುಂ ಪಾಪೇಭಕಂಠೀರವನುಮಪ್ಪುದಱಿಂದಮೆಯ್ದೆ ಮುಳಿದು (ಶಾಂತಿಪು. ४-೧೭ ವ). [ಸಂ.]

**ಸಿಂಹವಾಹನ** (ನಾ). ಶಿವ. [ಸಂ.]

**ಸಿಂಹವಾಹನೆ** (ನಾ). ದುರ್ಗೆ; ಪಾರ್ವತಿ. [ಸಂ. ಸಿಂಹವಾಹನಾ]

**ಸಿಂಹವಾಹಿನಿ** (ನಾ). ೧. ಸಿಂಹವನ್ನು ವಾಹನವಾಗಿ ಉಳ್ಳವಳು; ದುರ್ಗೆ; ಪಾರ್ವತಿ. ೨. [ಜೈನ] ಒಂದು ಬಗೆಯ ವಿದ್ಯೆ: ಕೇಸರಿವಿಕ್ರಮನೆಂಬೊ ಸಮ್ಮೇದಗಿರಿಯೊಳ್ ಸಿಂಹವಾಹಿನಿಯುಂ ಗರುಡವಾಹಿನಿಯುಮೆಂಬ ವಿದ್ಯಾದಿಗಳಂ ಸಾಧಿಸಿ ತನ್ನಳಿಯರ್ಗೆ ಕೊಟ್ಟು (ಚಾವುಂಪು. ೨೬೮); ಅಂತದಂ ಗರುಡಾಧಿಪನಪ್ಪ ಮಹಾಲೋಚನನಱಿದು ಬಹುವಿದ್ಯಾಪರಿವಾರಮನುಳ್ಳ ಸಿಂಹವಾಹಿನಿಯುಂ ಗರುಡವಾಹಿನಿಯುಮೆಂಬೆರಡು ವಾಹನವಿದ್ಯೆಗಳುಮಂ . . . ಕುಡೆಂದು . . . ಬೆಸಸುವುದುಂ (ಪಂರಾಮಾ. ೧೩-೧೫೬ ವ). 'ಗರುಡವಾಹಿನಿ' ಪರಾ. ೩. ಭರತಚಕ್ರವರ್ತಿಯ ಪರ್ಯಂಕ,—ಶಯ್ಯೆ: ಸಿಂಹವಿಧೃತಮಪ್ಪ ಸಿಂಹವಾಹಿನಿಯೆಂಬ ಮೃದುಶಯ್ಯೆಯುಂ ಅನುತ್ತರೆಯೆಂಬ ಸಿಂಹಾಸನಮುಂ (ಆದಿಪು. ೧೫-೩ ವ); ಚಕ್ರೇಶ್ವರನೆಣ್ಬತ್ತುನಾಲ್ಕುಲಕ್ಕೆ ಭದ್ರಗಜಂಗಳಿಂದಂ . . . ಸಿಂಹವಾಹಿನಿಯೆಂಬ ಶಯ್ಯೆಯಿಂದಂ . . . ನೆಱೆದೈಶ್ವರ್ಯದ ಮೇಗೆ ವಜ್ರ ಬೆಸದಾಳಂತಾಗಿಯುಂ (ಶಾಂತಿಪು. ೧೧-೮೪ ವ). [ಸಂ. ಸಿಂಹವಾಹಿನೀ]

**ಸಿಂಹವಿಕ್ರಮ** (ನಾ). ೧. = ಸಿಂಹಬಲ. ೨. [ಕಾಮಶಾ] ಕರಣಭೇದಗಳಲ್ಲಿ ಒಂದು: ಭಿತ್ತಿಯೆಡೆಯನಂಬುಜಾಕ್ಷಿಯೊತ್ತುಗೊಂಡು ನಿಂದು ತನ್ನ ಚಿತ್ತದವನನಪ್ಪಲು . . . ಎತ್ತಿ ರಮಿಸಲದುವೆ ಕೇಳು ಮತ್ತದಂತಿಗಮನೆ ಸಿಂಹವಿಕ್ರಮಾಖ್ಯವು (ಜನವ. ೯-೪೬). [ಸಂ.]

**ಸಿಂಹವಿಕ್ರೀಡಿತ** (ನಾ). ೧. [ಸಂಗೀತ] ಒಂದು ತಾಳದ ಹೆಸರು: ಚಂಚತ್ಪುಟ . . . ಸಿಂಹವಿಕ್ರೀಡಿತ . . . ಜಯಾಳವೆಂಬವೇ ಮೊದಲಾದ ನೂಱೊಂದುತಾಳಂಗಳಾದೊಡೆ (ವಿವೇಕ. ೧೯೨). ೨. [ಜೈನ] ದೀರ್ಘಉಪವಾಸ ಮತ್ತು ಪಾರಣೆಗಳಿಂದ ಕೂಡಿದ ಒಂದು ಬಗೆಯ ವ್ರತ: ಸರ್ವತೋಭದ್ರ ಸಿಂಹವಿಕ್ರೀಡಿತಗಳೆಂಬ ತಪದೊಳ್ ನೆಗೞ್ದು (ಆದಿಪು. ೩-೫೬ ವ); ಸಿಂಹಗವಿಕ್ರೀ[ಪಾಠಾಂ. ನಿಷ್ಕ್ರೀ]ಡಿತತಪದೊಳ್ ನೆಗೞ್ದೆನ್ನ ತಪದ ಫಲಮುಂಟಪ್ಪೊಡೆ ಅನ್ಯಜನ್ಮದೊಳ್ಮಹಾಬಲಪರಾಕ್ರಮನಪ್ಪೆಂ (ಚಾವುಂಪು. ೧೭೫). [ಸಂ.]

**ಸಿಂಹವಿಧೃತ** (ನಾ). = ಸಿಂಹವಾಹಿನಿ ೩: ಸಿಂಹವಿಧೃತಮಪ್ಪ ಸಿಂಹವಾಹಿನಿಯೆಂಬ ಮೃದುಶಯ್ಯೆಯುಂ (ಆದಿಪು. ೧೫-೩ ವ). [ಸಂ.]

**ಸಿಂಹವಿಷ್ಟರ** (ನಾ). = ಸಿಂಹಪೀಠ ೧: ನೃಪನೆಟ್ಟು ಸಿಂಹವಿಷ್ಟರದಿಂದಂ ನಡೆದೇೞಬಡಿಯಂ ಜನನಿರ್ದೆಡೆಗೆಱಗಿ ಬೞಿಕ್ಕೆ ಮಚ್ಚುಗೊಟ್ಟಂ . . . ನೃಪೇಂದ್ರಂ (ಶಾಂತಿಪು. ೧-೮೨); ಕುಮತಿ ಕೌರವನಿಳಿಯದಿರ್ದನು ಸಿಂಹವಿಷ್ಟರವ (ಕುವ್ಯಾಉ. ೮-೫೮). [ಸಂ.]

**ಸಿಂಹಶಿಶು** (ನಾ). ಸಿಂಹದ ಮರಿ; ಸಿಂಹಪೋತ: ಅಂಬೆಗಾಲಿಕ್ಕುವ ಪದದೊಳ್ ಸಿಂಹಶಿಶುವೊಲೆಸೆದಂ ಕೃಷ್ಣಂ (ಜಗವಿ. ೩-೩೬); ಅರರೇ ಜನನಿಯ ಮೊಲೆವಾಲರೆಯುಂಡೀ ಸಿಂಹಶಿಶುವನಿರದೊಡನಾಡಲ್ . . . ಸೆಳೆಯುತಿರ್ಪಂ ಬಲ್ಪಿಂ (ಶಾಕುಂತ. ೧೦೪-೧೭೬). [ಸಂ.]

**ಸಿಂಹಸಂಕ್ರಾಂತಿ** (ನಾ). [ಜ್ಯೋತಿ] ಸಿಂಹಲಗ್ನದಲ್ಲಿ ಬರುವ ಸಂಕ್ರಮಣ: ಈಶ್ವರಸಂವತ್ಸರದ ಶ್ರಾವಣಶುದ್ಧ ೫ ಆದಿವಾರ ಸಿಂಹಸಂಕ್ರಾಂತಿ ಪುಣ್ಯಕಾಲದಲು (ಎಕ. V (R), ತಿರುಮ. ೧೭-೨೬; 1397). [ಸಂ.]

**ಸಿಂಹಸಂಘಾತ** (ನಾ). ಸಿಂಹಗಳ ಗುಂಪು,— ಸಮೂಹ: ಸಿಂಹಸಂಘಾತರ ವ್ಯಕಾಭೀಳಮಂ ಭೀಕರಕುಧರಗುಹಾರೌದ್ರಮಂ . . . ನಿರ್ಜನವನಮನಿದಂ ನೀನೆಂತು ಪೊಕ್ಕೆ (ಪಂಚತಂ. ೫೭-೩). [ಸಂ.]

**ಸಿಂಹಸಂಹನನ** (ನಾ). ೧. ಸಿಂಹದ ಆಕಾರ,—ಆಕೃತಿ. ೨. (ಆಲಂ) ಸುಂದರವಾದ ಆಕಾರ,—ಆಕೃತಿ. ೩. ಸುಂದರವಾದ ಆಕಾರವುಳ್ಳವನು; ಚೆಲುವ: "ಪ್ರಕೃಷ್ಟತರಮೂರ್ತಿ ಸಿಂಹಸಂಹನನನವಂ" (ವಸ್ತುಕೋ. ೧೦೦-೧೬). [ಸಂ.]

**ಸಿಂಹಸ್ಥಪರ್ವಣಿ** (ನಾ). ಸಿಂಹಮಾಸದಲ್ಲಿ ಬರುವ ಹುಣ್ಣಿಮೆ ಅಥವಾ ಅಮಾವಾಸ್ಯೆ: ಹಜಾಮರಿಗೆ ಭಟ್ಟರಿಗೆ ಸಿಂಹಸ್ಥಪರ್ವಣಿ ಇದ್ದಂತೆ ಈ ಗುಲಾಮರಿಗೆ ಈ ಪ್ಲೇಗು ಪರ್ವಕಾಲವಾಗಿದೆ (ಸ್ಮೃತಿಚಿ. ೩೧೫). [ಸಂ. ಸಿಂಹಸ್ಥಪರ್ವಣೀ]

**ಸಿಂಹಸ್ವಪ್ನ** (ನಾ). (ಆಲಂ) ಅತಿಯಾದ ಭಯವನ್ನುಂಟುಮಾಡುವ ವಸ್ತು ಅಥವಾ ವ್ಯಕ್ತಿ: ದೊಡ್ಡವರ ಬಾಯಿಂದ ದಡ್ಡಮಾತುಗಳನ್ನು ಆಡಿಸಿ ತಂಟೆ ತಂದಿಡುತ್ತಾರೆಂಬುದು ಹಲವರಿಗೆ ಸಿಂಹಸ್ವಪ್ನ (ಚುಟ್ಟುಹು. ೯೯). [ಸಂ.]

**ಸಿಂಹಸ್ವರ** (ನಾ). ಸಿಂಹದ ಗರ್ಜನೆ; ಸಿಂಹನಾದ: "ವಿಷಮುಂ [ಸಿಂಹ] ಸ್ವರಮುಂ ಕ್ಷ್ವೇಡಾಂಕಂಗಳ್" (ವಸ್ತುಕೋ. ೧೨೯-೬೯). [ಸಂ.]

**ಸಿಂಹಳ** 'ಸಿಂಹಲ' ನೋ.

**ಸಿಂಹಳಪಿಪ್ಪಲಿ** (ನಾ). ಹಿಪ್ಪಲಿಯಲ್ಲಿ ಒಂದು ಬಗೆ : "ಅದ್ರಿಜಾಹ್ವಾ— ಸಿಂಹಳಪಿಪ್ಪಲಿ" (ಓಷಧಿ. ೫). [ಸಂ. ಸಿಂಹಲಪಿಪ್ಪಲೀ]

**ಸಿಂಹಳಹಿಪ್ಪಲಿ** (ನಾ). = ಸಿಂಹಳಪಿಪ್ಪಲಿ : "ಅಮಳಸ್ಥಾ - ಸಿಂಹಳಹಿಪ್ಪಲಿ" (ಓಷಧಿ. ೫). [ಸಿಂಹಳ (=ಸಿಂಹಲ) + ಹಿಪ್ಪಲಿ]

**ಸಿಂಹಾಕರ್ಷಿತ** (ನಾ). [ನಾಟ್ಯ] ನೂರೆಂಟು ವಿಧವಾದ ಕರಣಗಳಲ್ಲಿ ಒಂದು: ಸಿಂಹಾಕರ್ಷಿತ — ಪದಮಂ ವೃಶ್ಚಿಕಪಾದಮಂ ಸಮೆದು ಹಸ್ತದ್ವಂದ್ವಮಂ ಪದ್ಮಕೋಶದ ಚೆಲ್ವಂ ಪುದಿದಿರ್ದು ಮೇಣ್ ಕರಮದೂರ್ಣನಾಭಮಂ ಮಾಡಿ . . . ಹಸ್ತಂಗಳುಂ ಮೊದಲಂತಾದೊಡೆ ಸಿಂಹದಾಕರುಷಣಂ ತಾನಕ್ಕುಂ (ಲಾಸ್ಯರಂ. ४-೧೫೧). [ಸಂ.]

**ಸಿಂಹಾಣ** (ನಾ). ೧. ಕಬ್ಬಿಣದ ತುಕ್ಕು,—ಕಿಟ್ಟ: " ಮಂಡೂರಂ, ಸಿಂಹಾಣಂ—೨ ಕಬ್ಬಿಣದ ಕಿಟ್ಟಕ್ಕೆ ಹೆಸರುಗಳು" (ಸಿದ್ಧಾಂತಿ. ೩೦೪). ೨. ಗೊಣ್ಣೆ; ಸಿಂಬಳ: 'ರಕ್ತಸಿಂಹಾಣ' ಪರಾ. [ಸಂ.]

**ಸಿಂಹಾನೀಕ** (ನಾ). (ಆಲಂ) ಪರಾಕ್ರಮಿಗಳಿಂದ ಕೂಡಿದ ಸೈನ್ಯವುಳ್ಳವನು: ತಮ್ಮ ಬಲಮಟ್ಟುಡುವುದುಮಂ . . . ಕಂಡು ತಾಂ ಸಿಂಹವರ್ಣನುಂ ಸಿಂಹಾನೀಕನುಂ ಪಾಪೇಭಕಂಠೀರವನುಮಪ್ಪುದಱಿಂದಮೆಯ್ದೆ ಮುಳಿದು (ಶಾಂತಿಪು. ४-೧೭ ವ). [ಸಂ.]

**ಸಿಂಹಾಯ** (ನಾ). = ಸಿಂಹ ೬: ವಿಸ್ತಾರವಾಗಿ ಉದ್ದ ಅಗಲವನು ಅಳೆದು ಒಟ್ಟುಗೂಡಿಕೊಂಡ ಕೋಲುಯೆಷ್ಟೋ ಅದನು ೩ ಹೆಚ್ಚಿ . . . ಅದಂ ಎರಿಂದ ಭಾಗಿಸಿ ಉಳಿದವು ಆಯಂಗಳೂ XXX ೩ ರುಳಿದರೆ ಸಿಂಹಾಯ (ಆಯಟೀ. ೧-೫). [ಸಂ.]

**ಸಿಂಹಾರಿ** (ನಾ). ಸಿಂಹದ ವೈರಿ; ಶರಭ: ಆ ಸರ್ಪನಂ ಹಸ್ತಿಯಂ ಕೇಸರಿಯಂ ಸಿಂಹಾರಿಯೆಂಟುಂಪದದಿನಿಱಿದುದು (ಜಗವಿ. ೧೬-೧೪). [ಸಂ.]

**ಸಿಂಹಾವಲೋಕನ, ಸಿಂಹಾವಲೋಕನ** (ನಾ). ೧. ಸಿಂಹದ ದೀರ್ಘವಾದ ಹಿನ್ನೋಟ. ೨. (ಆಲಂ) ಹಿಂದೆ ನಡೆದ ಘಟನೆ ಅಥವಾ ಕಾರ್ಯವನ್ನು ಮತ್ತೊಮ್ಮೆ ವಿವರವಾಗಿ ಅವಲೋಕಿಸುವುದು,— ಪುನರಾಲೋಕನ ಮಾಡುವುದು; IP ನಡೆದಾಡುವಾಗ ಸ್ವಲ್ಪದೂರ ಹೋಗಿ, ಹಿಂದೆ ನೋಡಿಕೊಂಡು ಮುಂದೆ ನಡೆಯುವ ಸಿಂಹದ ಸ್ವಭಾವದಂತೆ ಮನುಷ್ಯನು

ತಾನು ಹಿಂದೆ ಮಾಡಿದ ಕಾರ್ಯವನ್ನು ಮತ್ತೆ ಪರಿಶೀಲಿಸಿ ಮುಂದಿನ ಕಾರ್ಯದಲ್ಲಿ ಪ್ರವೃತ್ತನಾಗುವುದು: ಹತ್ತನೆಯ ಶತಮಾನದ ಸಾಹಿತ್ಯದ ಈ ಚರಿತ್ರೆಯು ಆ ಕಾಲದಲ್ಲಿ ನಿರ್ಮಿತವಾದ ಇತರ ಸಾಹಿತ್ಯದ ಸಿಂಹಾವಲೋಕನವನ್ನು ಮಾಡಿದ ಹೊರತು ಪರಿಪೂರ್ಣವಾಗಲಾರದು (ಸಾಹಿಸ. ೩೭); ಇಡೀ ರಾಷ್ಟ್ರದ ವಿದ್ಯಾ ಸಂಸ್ಥೆಯ ರಾಜಕೀಯ ನಿರ್ವಹಣವೇನು ! ನಿರ್ಮೋಹಿಯಂತೆ ಆರ್ಷ ಆಧ್ಯಾತ್ಮಗ್ರಂಥಗಳ ಸಿಂಹಾವಲೋಕನವೇನು ! (ಜೀವಾತ್ಮ. xii, ಮುನ್ನುಡಿ). ೩. [ಕಾಮಶಾ] ಕರಣಭೇದಗಳಲ್ಲಿ ಒಂದು : ಸತಿ ಮೊಗಮನೊಡನೆತ್ತಿ ತಲೆವಿಡಿದು ಕುಡುಕುಗೊಳೆ ಸಿಂಹಾವಲೋಕನಮದು (ಜನವ. ೯-೫೦). ಸಿಂಹಾವಲೋಕನ : ೨. 'ಸಿಂಹಾವಲೋಕನಕ್ರಮ' ಪರಾ. [ಸಂ.]

**ಸಿಂಹಾವಲೋಕನಂಗೈ** (ಕ್ರಿ). (ಸಿಂಹದಂತೆ ದೂರದಲ್ಲಿ ನಿಂತು) ಹಿಂದಕ್ಕೆ ತಿರುಗಿ ನೋಡು : ಸಿಂಹಗಾಂಭೀರ್ಯದಿಂದೆಳ್ಳು ನಡೆದಡವಿಯೊಳ್ ಮರೆಯಾದ ನೊರ್ಮೆಯುಂ ಸಿಂಹಾವಲೋಕನಂಗೈಯದೆಯೆ (ಚಿತ್ರಾಂಗ. ೧೪-೩೭೭). [ಸಿಂಹಾವಲೋಕನ + ಗೈ (< ಕೆಯ್$_1$)]

**ಸಿಂಹಾವಲೋಕನಕ್ರಮ, ಸಿಂಹಾವಲೋಕನಕ್ರಮ** (ನಾ). ಹಿಂದೆ ನಡೆದ ಘಟನೆ ಅಥವಾ ಕಾರ್ಯವನ್ನು ಮತ್ತೊಮ್ಮೆ ಸಮಗ್ರವಾಗಿ ಪರಿಶೀಲಿಸುವ ವಿಧಾನ; ಪುನರಾಲೋಕನ ಕ್ರಮ: ಶೇಕಡ ೧೦೦ರಷ್ಟನ್ನು ಸಿಂಹಾವಲೋಕನಕ್ರಮದಿಂದ ಹೊರವದರವನ್ನು ನೋಡಿದಾಗ ಕೂಡ . . . ಎಂಥ ಅಮೂಲ್ಯವಾದ ಆಧಾರಸಾಮಗ್ರಿಗಳು ದೊರಕಿವೆ ಎಂಬುದನ್ನು ತೋರಿಸುವುದೇ ಈ ಉಪನ್ಯಾಸದ ಮುಖ್ಯಉದ್ದೇಶ (ಶಾಸಗಿ. ಹಿನ್ನುಡಿ). ಸಿಂಹಾವಲೋಕನಕ್ರಮ : ಒಳಪೊಕ್ಕು ನೋಡೆ ಭಾರತದೊಳಗಣ ಕಥೆಯೆಲ್ಲಮಾ ಗದಾಯುದ್ಧದೊಳಂತೊಳಕೊಂಡತ್ತನೆ ಸಿಂಹಾವಲೋಕನಕ್ರಮದಿ ನಡೆಪಿದಂ ಕವಿರನ್ನಂ (ಗದಾಯು. ೧-೪೫). [ಸಂ.]

**ಸಿಂಹಾವಲೋಕಿಸು** (ಕ್ರಿ). (ಸಿಂಹದಂತೆ) ಮುಂದೆ ಹೋಗಿ ನಿಂತು ಮತ್ತೊಮ್ಮೆ ಹಿಂದಿರುಗಿ ನೋಡು: ಆಮೇಲೆ ತನಗೆ ತಾನೇ ಪ್ರದಕ್ಷಿಣೆ ಬಂದು ಬೆಟ್ಟುಗದ್ದೆಗಳನ್ನು ಮಜಲುಗದ್ದೆಗಳನ್ನು ಸಿಂಹಾವಲೋಕಿಸಿದ (ಬಾಳಿಗಿ. ೧೧೯). [ಸಿಂಹಾವಲೋಕನ + - ಇಸು$_1$]

**ಸಿಂಹಾವಳಿ** (ನಾ). ೧. ಸಿಂಹಗಳ ಗುಂಪು, – ಸಮೂಹ. ೨. [ಸಂಗೀತ] ಒಂದು ರಾಗದ ಹೆಸರು: ನೀಲೋತ್ಪಲಿನಿ ಏಕಚ್ಛವಿ . . . ಗಂಧಿಕಾಮೋದಿ ಸಿಂಹಾವಳಿ ಕಾಮದೇವ ದೇವನಾದೋತ್ತರ ವಸಂತಬಂಗಾಳವೆಂಬಿಪ್ಪತ್ತೆರಡು ರಾಗಂಗಳುಂ ಕ್ರಿಯಾಂಗದಿಂದ ಪುಟ್ಟಿದವು (ವಿವೇಕ. ೨೩೪). [ಸಂ. ಸಿಂಹಾವಲಿ]

**ಸಿಂಹಾವಲೋಕನ** 'ಸಿಂಹಾವಲೋಕನ' ನೋ.

**ಸಿಂಹಾವಲೋಕನಕ್ರಮ** 'ಸಿಂಹಾವಲೋಕನಕ್ರಮ' ನೋ.

**ಸಿಂಹಾಸಂದಿ** (ನಾ). = ಸಿಂಹಾಸನ ೧ : ಮುನ್ನಮೆ ಸುರಾನೀಕಂ ಜನಂಗಳ್ ಮನಂಗೊಳೆ ಮಾಡಿಟ್ಟ ವಿಚಿತ್ರಮಂಟಪದ ಸಿಂಹಾಸಂದಿಯೊಳ್ಬಾಲನಂ ಕುಲಿಶಾಸ್ತ್ರಂ ಪಿರಿದುಂ ವಿಭೂತಿವೆರಸಿಟ್ಟೀಂ ಸಂತಸಂಬಟ್ಟನೋ (ಆದಿಪು. ೭-೧೧೦); ಕನಕದ ರಜತದ ಕಾಂಸ್ಯದ ಮನೆಮುಟ್ಟುರಿ ಮುಟ್ಟೆ ಕರಗಿ ಕಣ್ಣಿಟ್ಟುವು ದೈತ್ಯನ ಸಿಂಹಾಸಂದಿಗೆ ರಾಮನ ವೀರಶ್ರೀ ಕಡಂಗಿ ಕಣ್ಣಿಟ್ಟಳೆನಲ್ (ಪಂರಾಮಾ. ೧೧-೧೫೨). [ಸಂ. ಸಿಂಹಾಸಂದೀ]

**ಸಿಂಹಾಸನ** (ನಾ). ೧. ಪಟ್ಟಾಭಿಷಿಕ್ತನಾದ ರಾಜನು ಕುಳಿತುಕೊಳ್ಳುವ, ಸಿಂಹದ ಪ್ರತಿಮೆಗಳನ್ನೊಳಗೊಂಡಿರುವ ಪೀಠ; ಸಿಂಹವಿಷ್ಟರ : ಸಿಂಹವಾಹಿನಿಯೆಂಬ ಮೃದುಶಯ್ಯೆಯುಂ ಅನುತ್ತರೆಯೆಂಬ ಸಿಂಹಾಸನಮುಂ (ಆದಿಪು. ೧೪-೩ ವ); ಧರಣಿಪತಿ ಸಿಂಹಾಸನದ ಮೇಲಿರದೆ ಬಹರೇ (ಕುಮಾವ್ಯಾ. ೮-೭೦). ೨. [ಯೋಗ] ಒಂದು ಬಗೆಯ ಆಸನ: ಸುಖಸ್ಥೈರ್ಯ ನಿಶ್ಚಲಾವಹಮಾದ ಯೋಗ ಯೋಗ್ಯಾಸನಗಳಲ್ಲಿ ಸಿಂಹಾಸನ . . . ಅರ್ಧಾಸನಾದಿಯೆಂಭತ್ನಾಲ್ಕಾಸನಭೇದಂಗಳು (ವಿವೇಕ. ೧೪೯); ಮುಖ್ಯವಾದ ಕೆಲವು ಆಸನಗಳು . . . ೧. ಉತ್ತಾನಾಸನ . . . ೫೬. ಸಿಂಹಾಸನ. ೫೭. ಗೋಮುಖಾಸನ (ಭಾರದ. ೧೬೭). ೩. [ಜೈನ] ಪಾರಿವ್ರಾಜಕಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು; ಆಸನವನ್ನು ತ್ಯಜಿಸಿ ಪರಮಾತ್ಮನ ದಿವ್ಯಾಸನವನ್ನು ಹೊಂದುವ ವ್ರತ: ಪಾರಿವ್ರಾಜ್ಯಲಕ್ಷಣಮಪ್ಪ ಸೂತ್ರ(ಪದ)ಂಗಳಿಪ್ಪತ್ತೇಳು ತೆಱನಕ್ಕುಮವಾವುವೆಂದಡೆ – ಜಾತಿಯುಂ ಮೂರ್ತಿಯುಂ . . . ನಾಥತ್ವಮುಂ ಸಿಂಹಾಸನಮುಂ . . . ಆಹಾರಮುಂ ಸುಖಮುಮೆಂದಕ್ಕುಂ (ಚಾವುಂಪು. ೨೨೮). [ಸಂ.]

**ಸಿಂಹಾಸನವೇರು** 'ಸಿಂಹಾಸನವೇಱು' ನೋ.

**ಸಿಂಹಾಸನವೇಱು, ಸಿಂಹಾಸನವೇರು** (ಕ್ರಿ). ೧. ಸಿಂಹಪೀಠವನ್ನು ಏರು, – ಹತ್ತು: ಗೊಂದಣದತಿಚತುರಕವೀಂದ್ರರ ಬಲುಸಂದಣೆಯೊಳು ಸಿಂಹಾಸನವೇಱಿ . . . ಓಲಗಮಿರ್ದಂ (ಜಯಕಾ. ೩-೧). ಸಿಂಹಾಸನವೇರು : ೨. ಪಟ್ಟಕ್ಕೆ ಬರು; ರಾಜ್ಯಾಧಿಕಾರವನ್ನು ವಹಿಸಿಕೊಳ್ಳು: ಆ ರಾಜಕುಮಾರನು ತಂದೆಯ ಕಾಲಾನಂತರ ಸಿಂಹಾಸನವೇರಿದನು (ರೂಢಿ). [ಸಿಂಹಾಸನ + ಏಱು$_1$ (< ಏಱ್$_1$)]

**ಸಿಂಹಾಸನಸ್ಥ** (ನಾ). ಸಿಂಹಾಸನವನ್ನು ಉಳ್ಳವನು; ರಾಜ: ಆ ಧೂರ್ತನೆನ್ನನೆ ಕುಱಿತು ರಾಜ್ಯಾರ್ಹರಲ್ಲದವರ್ ಬರವೇಡ ಸಿಂಹಾಸನಸ್ಥರ್ ಬರ್ಪುದೆಂದು ಸಾರಿಸಿ (ಜಗವಿ. ೮-೭೮ ವ); ಅನೇಕ ಸಾಮಂತಅರಸುಗಳು ಅಲ್ಲಲ್ಲಿಯ ಸಂಸ್ಥಾನಗಳಲ್ಲಿ ಸಿಂಹಾಸನಸ್ಥರಾಗಿ ಆಡಳಿತಸೂತ್ರಗಳನ್ನು ವಹಿಸಿಕೊಂಡರು (ನೊಳಂಬ. ೭೦). [ಸಂ.]

**ಸಿಂಹಾಸನಾರೂಢ** (ನಾ). ೧. ಸಿಂಹಾಸನದಲ್ಲಿ ಕುಳಿತವನು. ೨. ಪಟ್ಟಾಭಿಷಿಕ್ತನಾದವನು; ರಾಜ; ದೊರೆ: ಹರಿವರ್ಮನು ಕ್ರಿ.ಶ. ೫೩೬ರಲ್ಲಿ ಸಿಂಹಾಸನಾರೂಢನಾದನೆಂದು ಮೇಲೆಯೇ ಹೇಳಿದ್ದೇನೆ (ಕರ್ನಾಟ. ೧೨). [ಸಂ.]

**ಸಿಂಹಾಸನಾರೋಹಣ** (ನಾ). ೧. ಸಿಂಹಾಸನವನ್ನು ಹತ್ತುವಿಕೆ, – ಏರುವಿಕೆ. ೨. ಪಟ್ಟವನ್ನು ವಹಿಸಿಕೊಳ್ಳುವಿಕೆ : ಪಟ್ಟಂ = ಸಿಂಹಾಸನಾರೋಹಣಂ (ಕಾಶಕ. ೨೦). [ಸಂ.]

**ಸಿಂಹಾಸನಾಸೀನ** (ನಾ). ೧. = ಸಿಂಹಾಸನಾರೂಢ ೧ : ಆಸ್ಥಾನಮಂಡಪದೊಳ್ . . . ಉತ್ತುಂಗಸಿಂಹಾಸನಾಸೀನಂ . . . ಒಡ್ಡೋಲಗಂಗೊಟ್ಟಿರೆ (ಆದಿಪು. ೨-೨ ವ); ಉಗ್ರಸೇನನ ಸೂನು ಸಿಂಹಾಸನಾಸೀನನಾಗಿ ಲೀಲೆಯಿಂದೊಡ್ಡೋಲಗಂಗೊಟ್ಟಿರ್ದಲ್ಲಿ (ಜಗವಿ. ೨-೩೯ ವ). ೨. = ಸಿಂಹಾಸನಾರೂಢ ೨ : ಅಯೋಧ್ಯಾಸಿಂಹಾಸನಾಸೀನನು ಮುದಿತೋದಿತಸಾಮ್ರಾಜ್ಯಸುಖಾನುಭವನುಂ ಕೃತಕೃತ್ಯನುಮಪ್ಪ ಸಕಲಚಕ್ರವರ್ತಿ (ಆದಿಪು. ೧೫-೫ ವ). [ಸಂ.]

**ಸಿಂಹಾಸ್ಯ** (ನಾ). ೧. ಸಿಂಹದ ಮುಖ. ೨. ಸಿಂಹದ ಮುಖವುಳ್ಳದು. ೩. ಒಂದು ಬಗೆಯ ಸಸ್ಯ; ಆಡುಸೋಗೆ: "ವೃದ್ಧಮಾತಾ, ಸಿಂಹೀ . . . ಸಿಂಹಾಸ್ಯಃ, ವಾಶಕಃ, ವಾಜಿದಂತಕಃ – ಆ ಅಡ್ಡಸರದ ಗಿಡ, ಆಡುಸೋಗೇಗಿಡದ ಹೆಸರು" (ಸಿದ್ಧಾಂತಿ. ೧೩೫). [ಸಂ.]

**ಸಿಂಹಿ** (ನಾ). ೧. ಹೆಣ್ಣುಸಿಂಹ: ಹತ್ತಡಿಯ ಹದ್ದಿನಲಿ ಸುತ್ತಲಿನ ಸರೆಯಲ್ಲಿ ನರರ ಅಂಕೆಯೊಳಲ್ಲಿ ಸಿಂಹ ಸಿಂಹಿಯರು (ಬಾಲಪ್ರ. III, ೧೨೭೮). ೨. ಆಡುಮುಟ್ಟದ ಗಿಡ; ಆಡುಸೋಗೆ: "ವೃದ್ಧಮಾತಾ, ಸಿಂಹೀ . . . ಮೇಕೆ ಒಲ್ಲದ ಗಿಡ" (ಸಿದ್ಧಾಂತಿ. ೧೩೫). ೩. ಒಂದು ಬಗೆಯ ಬದನೆಗಿಡ; ಗುಳ್ಳಬದನೆ: "ವಾರ್ತಾಕೀ, ಹಿಂಗುಳೀ, ಸಿಂಹೀ, ಭಂಟಾಕೀ, ದುಸ್ಪ್ರಧರ್ಷಿಣೀ – ೫ ಬದನೇಗಿಡದಲ್ಲಿ ಮುಳ್ಳುಜಾತಿ. ಗುಳ್ಳವಾದಿ, ರಾಜಗುಳ್ಳ, ತನಿಗುಳ್ಳ, ರಾಮುಗುಳ್ಳ, ಮುಲಕ" (ಸಿದ್ಧಾಂತಿ. ೧೩೬). ೪. ರಾಹುವಿನ ತಾಯಿ; ಸಿಂಹಿಕೆ. [ಸಂ. ಸಿಂಹೀ]

**ಸಿಂಹಿಕಾತನಯ** (ನಾ). ಸಿಂಹಿಕೆಯ ಮಗ; ರಾಹು: "ಇನರಿಪು . . . ಸಿಂಹಿಕಾತನಯಂ ತಮಂ ಖೇಚರಾಹಿಯೆನೆ ರಾಹು" (ಮಂಗರಾ. ೧೨-೭). [ಸಂ.]

**ಸಿಂಹಿಕಾತ್ಮಜ** (ನಾ). = ಸಿಂಹಿಕಾತನಯ: ಪ್ರತಿವಾದಿ ರವಿ ಸಿಂಹಿಕಾತ್ಮಜಂ ವಿಮಲನುನ್ನತಪಂಡಿತೇಶ್ವರಂ ಕಾಲವಾದಮನೊಸೆದು ವಿತತಮಪ್ಪಂತೆ ಜಯಿಸಿದ ಕಥನಮಂ ಕೇಳ (ಆರಾಚ. ೩-೪ ಸೂಚನ). [ಸಂ.]

**ಸಿಂಹಿಕೆ** (ನಾ). ೧. ರಾಹುವಿನ ತಾಯಿ: ಅರಿ ಬೊಬ್ಬಿಱಿದೊಡನೆ ಕಡುಹಿನ ವೀರನಾ ಸಿಂಹಿಕೆಯ ಸೀಳ್ದ ಶರೀರದೊಳಗೊಂಡೆಡದ ಭಾಗದ ಹೋಳ ದಶಶಿರನ ಊರಿಗಿಟ್ಟನು (ತೊರರಾ. ೫-೧-೨೨). ೨. ಒಂದು ಬಗೆಯ ಗಿಡ: "ಸೊಂಡೆ ರುಚಿ ಚಿತ್ರರತೆ ಸಿಂಹಿಕಾ [ಪಾಠಾಂ. ತಾ]ಕ್ಕಂ" (ಮಂಗರಾ. ೩೯-೨೮). [ಸಂ. ಸಿಂಹಿಕಾ]

**ಸಿಂಹೀಮಧ್ಯೆ** (ನಾ). ಸಿಂಹದ ನಡುವಿನಂತಿರುವ ಸಣ್ಣ ನಡುವನ್ನು ಹೊಂದಿರುವವಳು: ಭೂಭೃನ್ನಿತಂಬೋಜ್ಜ್ವಲೆ ಸಿಂಹೀಮಧ್ಯೆ ಬಿಂಬಾಧರೆ

ಶುಕವಿಲಸದ್ವಾಣಿ ತಾನಾದ ಪಾಂಗಿಂದೆ ಲತಾತನ್ವಂಗಿ ಕಲ್ಪದ್ರುಮಸಮನೃಪನೊಳ್ಕೂಡಿ ಬಾಳುತ್ತಮಿರ್ದಳ್ (ರಾಜಶೇ. ೩-೨೦). [ಸಂ. ಸಿಂಹೀಮಧ್ಯಾ]

**ಸಿಂಹೇಂದ್ರಮಧ್ಯಮ** (ನಾ). [ಸಂಗೀತ] ಒಂದು ರಾಗದ ಹೆಸರು : ಸಿಂಹೇಂದ್ರ ಮಧ್ಯಮ – ೫೭ನೇ ಮೇಳಕರ್ತರಾಗ. ಎಲ್ಲಾ ವೇಳೆಯಲ್ಲೂ ಹಾಡಬಹುದು (ಸಂಗೀಚಂ. ೧೫೧). [ಸಂ.]

**ಸಿಂಹೋದ್ಭವ** (ನಾ). [ಜ್ಯೋತಿ] ಸಿಂಹರಾಶಿಯಲ್ಲಿ ಜನಿಸಿದವನು : ಕ್ರೂರಂ . . . ಅನಿಮಿತ್ತಕ್ರೋಧಿ ಸಿಂಹೋದ್ಭವಂ (ಜಾತತಿ. ೧೭-೫). [ಸಂ.]

**ಸಿಕ್, ಸಿಕ್ಕ$_3$, ಸಿಖ್** (ನಾ). ೧. ಗುರುನಾನಕ್ ಸ್ಥಾಪಿಸಿದ ಪಂಥ ,– ಮತ: ಉತ್ತರಭಾರತದಲ್ಲಿ ರಾಮಾನಂದ ಪರಂಪರೆಯ ಸಾಧುಗಳೇ ಧರ್ಮವನ್ನೂ ಆತ್ಮಗೌರವವನ್ನೂ ರಕ್ಷಿಸುವ ಭಾರದಲ್ಲಿ ಈಗಿನ ''ಸಿಕ್'' ಪಂಥಕ್ಕೆ ತಳಹದಿಯಾದರೆಂದು ಜನಶ್ರುತಿಯಿದೆ (ಭಾರದ. ೨೭೭). **ಸಿಕ್ಕ$_3$** : ೨. ಸಿಕ್‌ಮತದ ಅನುಯಾಯಿ: ಹಿಂದು ಪಾರಸಿ ಬೌದ್ಧ ಸಿಕ್ಕ ಮುಸಲಿಮ ಕ್ರಿಸ್ತ ಹಿಂದುಳಿದ ಜನರೆನದೆ ಎಲ್ಲರೊಂದಾಗೆ (ಕುಮಾಕೃ. xvi, ಮುನ್ನುಡಿ); ಪ್ರತಿಯೊಬ್ಬ ಸಿಕ್ಕನೂ ಸೊಂಟದಲ್ಲಿ 'ಕೃಪಾಣ' ಎಂದು ಒಂದು ಸಣ್ಣಕತ್ತಿಯನ್ನು ಇಟ್ಟುಕೊಂಡಿರುತ್ತಾನೆ (ದಿಲ್ಲಿಪ. ೩೫). **ಸಿಖ್** : ೧. ಅವನು ಸಿಖ್ ಮತದ ಅನುಯಾಯಿ (ರೂಢಿ). [<— ಹಿಂ. ಸಿಕ್ಖ್, ಸಿಖ್; ಮರಾ. ಶೀಕ್, ಶೀಖ್, ಸೀಖ್]

**ಸಿಕತ** (ನಾ). ೧. ಮರಳು; ಉಸುಕು : ''ವಾಳುಕಮೆನಲ್ ಸಿಕತಮೆನೆ ಮಳಲಕ್ಕು'' (ಮಂಗರಾ. ೧೨೨-೧೧); ಕಲನೊಂದಂ ತೀವಿ ನೀರಂ ಪೊಸದು ಸಿಕತದೊಳ್ ಗಾಣಮಂ ಪೊಯ್ದು ಮತ್ತಂ ಶಿಲೆಯೊಳ್ ಧಾನ್ಯಂಗಳಂ ಬಿತ್ತಿಯುಮೊಣಗಿದ ಭೂಜಕ್ಕೆ ನೀರ್ವೊಯ್ಯುದುಂ (ಪಂರಾಮಾ. ೧೭-೫೫). ೨. ಮರಳಿನ ತೀರ ,– ದಡ. ೩. ಸಣ್ಣ ಹರಳು ,– ಕಣ: ಅದರೊಳಗೆ ಹತ್ತುತ್ತ ಕಬ್ಬಿನ ತುದಿಯ ಪಾಲ್ನೀಡಲ್ಕೆ ಸಿಕತವಿಳಿದು ಮಧುರ ಪಾಯಸವು ಕೆಲಲ್ಮರದ ದರ್ವಿಯೊಳು (ದೇವಪು. ೨-೪೨). [ಸಂ. ಸಿಕತಾ]

**ಸಿಕತತಟ** (ನಾ). ಮರಳಿನ ತೀರ , – ದಡ :ಸಾರೆ ಬರೆ ದಕ್ಷಿಣಸಿಕತತಟವಿಪಿನಪಂಕ್ತಿ . . . ನಡೆಗೊಂಡನಡವಿಕೀಳ್ಪಟ್ಟೆಯೊಳಿಳಾತ್ಮಜಾವಲ್ಲಭಂ (ಶ್ರೀರಾಮಾ. ೧೨೭-೪೯).

[ಸಿಕತ + ತಟ್ಟ$_3$]

**ಸಿಕತಭಾಂಡ** (ನಾ). ಮರಳಿನ ಗಡಿಗೆ: ಕಮಲಮುಖಿಯರು ಸಿಕತಭಾಂಡಮಂ ಮಾಡಲಾ ಕ್ರಮವಳಿವುತೊಡೆದು ಮಳಲೆತ್ತತ್ತ ಕೆದಱುವುದು (ವೀಶ್ವಪು. ೩-೨೦-೨೫).

[ಸಿಕತ + ಭಾಂಡ]

**ಸಿಕತಾಕೃತಿ** (ನಾ). ಮರಳಿನ ಆಕಾರ ,– ಆಕೃತಿ: ಸಿಕತಾಕೃತಿಯಾದುದೊ ತಾಂ ಪ್ರಕಟದೆ ಭೃಗು ದೇವತಾಪ್ರಹಾಸಮರೀಚಿಪ್ರಕರಮೆನೆ ಬೆಳ್ಮಳಲ್ ಪುದಿದು ಕರಂ ಕಣ್ಗೆಸೆದುದು (ಕುಸುಮಾ. ೭-೬೦). [ಸಂ.]

**ಸಿಕತಿಲ, ಸಿಕತಿಳ** (ಗು). ೧. ಮರಳಿನಿಂದ ಕೂಡಿದ: ಕೈಲಾಸತರಂಗಿಣೀತರಂಗಿತ ಕಾಂಚನಸಿಕತಿಲಭೂಭಾಗದೊಳ್ ಸೂರ್ಯಕಾಂತಮಣಿಮಯಶೂಲಪಾಣಿ ದೇವಾಯತನಮಿರ್ದುದನನತಿದೂರದೊಳೆ ನೋಡಿ (ಕಾದಂಪೂ. ೬೫೫). ೨. (ನಾ). ಮರಳುನೆಲ: ''ಮರಳುಳ್ಳ ಪ್ರಾಂತವಾದ ದೇಶಕ್ಕೆ ಸಿಕತಾ , ಸಿಕತಿಲ ಎಂತಲೂ . . . ಊಹಿಸತಕ್ಕದು'' (ಸಿದ್ಧಾಂತಿ. ೯೭). **ಸಿಕತಿಳ** : ೨. ''ಪುಳಿನಸ್ಥಳಿ ಸ್ಯೈಕತೆ ಸಿಕತಿಲಾಹ್ವಯಂ ಸಿಕತೆ ವಾಳುಕಾಪರ್ಯಾಯಂ'' (ವಸ್ತುಕೋ. ೨೪-೧೪). [ಸಂ.]

**ಸಿಕತಿಲತಲ, ಸಿಕತಿಳತಳ** (ನಾ). ಮರಳಿನಿಂದ ಕೂಡಿದ ಭೂಮಿ: ಸಿಕತಿಲತಲಶಯ್ಯಾಚಯಸ್ಪರ್ಶನೀಯಂ (ಚಂದ್ರಪು. ೧-೧೧೨). **ಸಿಕತಿಳತಳ** : ನುಣ್ಮಣಲಂ ಮಣಲ್ದಿಂಟೆಗೆತ್ತದಱ ಪರಿತಪ್ತಲೋಹರಜಸ್ಸಿಕತಿಳತಳದೊಳ್ ಮೆಯ್ಯನೀಡಾಡುವುದುಂ (ಶಾಂತಿಪು. ೭-೯೧ ವ). [ಸಂ.]

**ಸಿಕತಿಳ** 'ಸಿಕತಿಲ' ನೋ.

**ಸಿಕತಿಳತಳ** 'ಸಿಕತಿಲತಲ' ನೋ.

**ಸಿಕತೆ** (ನಾ). ೧. ಮರಳು; ಉಸುಕು: ''ಸಿಕತಾ , ವಾಳುಕಾ – ಈ ೨ ಮಣಲ್'' (ಹಲಾಯು. ೧೧೦-೪೮). ೨. ಮರಳಿನಿಂದ ಕೂಡಿದ ನೆಲ; ಉಸುಕುಭೂಮಿ: ''ಮಳಲುಳ್ಳ ಮಹಿ ಸಿಕತೆಯಕ್ಕುಂ'' (ಮಂಗರಾ. ೨೮-೩). [ಸಂ. ಸಿಕತಾ]

**ಸಿಕರ , ಚಿಕರ , ಸಿಖರ , ಸಿಖಾರ** (ನಾ). ೧. ಮರ, ಬೆಟ್ಟ ಮುಂತಾದುವುಗಳ ತುದಿ ,– ಅಗ್ರಭಾಗ; ಶಿಖರ: ಗಂಗಿಯೊಳಗ ಸ್ನಾನ ಮಾಡಿ ಶಿವನ ಸಿಕರ ಸುತ್ತಿ ಬಂದು (ಮಲ್ಲಿಗ. ೪); ಮಲ್ಲಯ್ಯ ಸಿವನ ಸಿಕರಾದ ಮೇಲಿರುವ ಬೆಳ್ಳಿ ಬಸವಣ್ಣಾನ ನೆನೆದೇನು (ಗೌರಪ. ೫). ೨. (ದೇವಾಲಯದ ಮಹಾದ್ವಾರ ಅಥವಾ ಗರ್ಭಗುಡಿಗೆ ಕಟ್ಟುವ) ಗೋಪುರ ,– ಗುಮ್ಮಟ: ವಿಕ್ರುತುಸಂವತ್ಸರದ ಕಾರ್ತಿಕಶುಧ ೫ಲು **ಸರ್ವ್ವಜ್ಞಶಟಯು ಸರ್ವಜ್ಞಶಟ ತಂಮ ಗೆಲುಷ್ಮೆಯನ ಕೊಮಾರ ಚಿಗದೇಮಂಣನು** ಯಿಕ್ಕರ್ತ್ತರು ಕಟಿಸಿದ ಸಿಕರ (ಎಕ. XVI, ಮದ್ದಗಿ. ೧೧೪-೪; 1650). **ಚಿಕರ** : ೧. ''ಚಿಕರಂ ಶಿಖರಾಭಿಧಾನದೊಳ್'' (ಕರ್ಣಾನ. ೨೭). **ಸಿಖರ** : ೨. 'ಸಿಖರದೀಪ್ತಿ' ಪರಾ. **ಸಿಖಾರ** : ೨. ಶ್ರೀಮತು ಕೂರಡಿಯ ಬಡಗಿ ಮಲ್ಲೋಜನು ಮಾಡಿಸಿದ ಸಿಖಾರಕ್ಕೆ ಮಂಗಳ ಮಹಾ ಶ್ರೀ ಶ್ರೀ ಶ್ರೀ (ಎಕ. XI, ದಾವಣ. ೧೭೪-೭; 1417). [< ಸಂ. ಶಿಖರ]

**ಸಿಕರಣೆ** 'ಸೀಕರಣೆ' ನೋ.

**ಸಿಕಲ** 'ಶಿಕಲ' ನೋ.

**ಸಿಕಲಗಾರ** 'ಶಿಕಲಗಾರ' ನೋ.

**ಸಿಕಲಿ** 'ಶಿಕಲ' ನೋ.

**ಸಿಕಲಿಗಾರ** 'ಶಿಕಲಗಾರ' ನೋ.

**ಸಿಕಲಿಗೆಯ್** (ಕ್ರಿ). ಸಾಣೆಹಿಡಿ; ಹರಿತಗೊಳಿಸು : ಅಸಿ ಪಿಂಡಿವಾಳ ಸೆಲ್ಲಹ ಬಲ್ಲಹ ಕತ್ತಿ ಮುಸಲ ಮುದ್ಗರ ತೋಮರಗಳ ಮಸೆವ ಸಿಕಲಿಗೆಯ್ವ ಸಾಣೆಗಾಱರು ಕಣ್ಗೆಸೆದರಾ ಕುಮ್ಮಟದೊಳಗೆ (ಕುರಾಸಾಂ. ೩೭-೬೧). [ಸಿಕಲಿ (< ಶಿಕಲ) + ಕೆಯ್$_1$]

**ಸಿಕಿ$_1$** (ನಾ). ಬೆಂಕಿ; ಕಿಚ್ಚು; ಶಿಖಿ: ''ಶಿಖಿಯೊಳ್ ಸಿಕಿ ಕಿಚ್ಚು ಬೆಂಕಿಯೊಳ್'' (ಕರ್ಣಾನ. ೫೩). [< ಸಂ. ಶಿಖಿನ್]

**ಸಿಕಿ$_2$** 'ಸಿಕೆ' ನೋ.

**ಸಿಕಿನಿ** 'ಶಿಕಲ' ನೋ.

**ಸಿಕಿನಿವಳೆಯ** (ನಾ). ದುಂಡಾದ ಮಸೆಗಲ್ಲು ,– ಸಾಣೆಕಲ್ಲು : ಸುರಪನಿಡುವ ಚಿಗಿಹಲ್ಲೆಯ ಮೋಹನಶರಮಂ ಬೆಳಗುವ ಸಿಕಿನಿವಳೆಯ ರತಿವರನಾ ಮೋಹನವಂಚಕ ವಿತತಿಯನಱಿಸಿ ಹಿಡಿದು ತರಲು ಭರದಿಂ ನಡೆಯಿಪ ಬೆಳ್ಳಿಯ ಬಟ್ಟಲ ಪಿರಿದುಂ ಮೋಹನಮಲ್ಲಂ ದಕ್ಷಿಣಕರದಿಂದೆತ್ತಿಧ ಸಂಗ್ರಾಣಿಗೆ ಸಮನೆನೆ ಸಸಿ ಸೊಗಯಿಸಿತು (ಜಯಕಾ. ೧೪-೧೧). [ಸಿಕಿನಿ (< ಶಿಕಲ) + ವಳೆಯ]

**ಸಿಕಿರೆಅಜೆ** (ನಾ). ಒಂದು ಸ್ಥಳದ ಹೆಸರು (?) : ಸಿಕಿರೆಅಜೆಯಿನ್ ತೆಙ್ಕ ನೋಡಿ ನಡದು ಪೇರ್ಒಟ್ಟೆ ದುಗ್ಗನ ಕೆಜೆ ಮೂಡ್ಯ ಕಡೆಗೋಡು (ಮ್ಮಆರಿ. ೧೯೧೪, ೧೨-೨೨;810).

[ಸಿಕಿರೆ$_0$ + ಅಜೆ$_4$]

**ಸಿಕೆ, ಸಿಕಿ$_2$** (ನಾ). ೧. ತುದಿ; ಕೊನೆ; ಅಗ್ರಭಾಗ : ಸುಂಡಿಲ ಸಿಕೆಯಿಂ ಸೀಕರಮಂ ಮಿಗೆ ಮಱುಕದೊಳು ಕಳಭದ ಮೇಲೆ ಕಱೆವ ಪಿಡಿಗಳ್ ಒಪ್ಪಿದುವು (ಜಯಕಾ. ೧೫-೨೦). **ಸಿಕೆ$_2$**: ೨. ಕೂದಲು; ಜುಟ್ಟು; ಶಿಖೆ: ತಲೆಯೆಡೆಯಂ ಬೆಳರ್ತಿಸುವೋರೆ ಸಿಕಿ. . . ಚಂದಿರನೆಂಬ ಸಂದೆಯಮಂ ಸಮನಿಸುತ್ತಿದೆ ಆ ಸಿಕಿಯೊಳ್ಕಟ್ಟದೊಳ್ಪಟ್ಟೆಯ ಮೂಱುಂ ಸೆಱಂಗುಗಳೊಳ್ಕೋದು ನೇಲ್ವ ಬಟ್ಟಮುತ್ತುಗಳುಂ . . . ತಾರಗೆವೆಣ್ಗಳೆಂಬ ನೆನಪಂ ನಿಗುರಿಸುತ್ತಿದೆ (ಚಿಕವಂ. ೮೨-೧). [< ಸಂ. ಶಿಖಾ]

**ಸಿಕ್ಕ$_1$** 'ಸಿಲ್ಕು$_1$' ಪರಾ.

**ಸಿಕ್ಕ$_2$, ಚಿಕ್ಕ$_2$, ಚಿಕ್ಕು$_1$** (ನಾ). ೧. (ಪಾತ್ರೆ , ಬುಟ್ಟಿ ಮುಂತಾದುವುಗಳನ್ನು ಇಟ್ಟು ಇಳಿಬಿಡುವ) ಹಗ್ಗದ ಜಾಳಿಗೆ; ನೆಲುವು : ಮೂಲೆಯಲ್ಲಿ ಸಿಕ್ಕದ ಮೇಲೆ ದೊಡ್ಡ ಬುಟ್ಟಿಯಲ್ಲಿ ನೆಲ್ಲುಹುಲ್ಲಿನ ಮೇಲಿರುವ ಮೊಟ್ಟೆಗಳನ್ನು ರೆಕ್ಕೆಗಳಲ್ಲಿ ಅಪ್ಪಿಕೊಂಡು ಕಾವು ಕೂತಿರುವ ಕುಕ್ಕುಟಗರ್ಭಿಣಿ (ಕಾನೂರು. ೩೭); ನಾಗಂದಿಗೆಯಿಂದ ನೇಲುತ್ತಿದ್ದ ಬುಟ್ಟಿಯಲ್ಲಿ ಕಾವು ಕೂತಿದ್ದ ಹೇಟೆಯನ್ನೆತ್ತಿ (ಮಲಮ. ೨೭೯). **ಚಿಕ್ಕ$_2$** : ೨. ಬಲೆಯಂತೆ ಹೆಣೆದಿರುವ ಚೀಲ ; ಕಲ್ಲಿ : ಚಿಕ್ಕದಲ್ಲಿಕ್ಕಿದ ಬುತ್ತಿ ಪೆಗಲಲ್ಲಿ ಪಕ್ಕೆಯೊಳಗೆ ಕೋಲು (ವಿಸ್ಮೋಸು. ೧೯-೪). ೩. (ಪ್ರಾಣಿಗಳು ತಿನ್ನುವುದಕ್ಕೆ ತಡೆ ಹಾಕಲು, ಅವುಗಳ ಬಾಯಿಗೆ ಕಟ್ಟುವ) ಕುಕ್ಕೆ ; ಬಾಯಿಕುಕ್ಕೆ : ಎಡೆ ಹೊಡೆಯುವಾಗ ಎತ್ತಿನ ಬಾಯಿಗೆ ಚಿಕ್ಕ ಹಾಕಬೇಕು (ರೂಢಿ). 'ಬಾಯಿಚಿಕ್ಕ' ಪರಾ. **ಚಿಕ್ಕು$_1$** : ೩. ಎತ್ತಿನ ಬಾಯಿಗೆ ಚಿಕ್ಕು ಹಾಕಿದ್ದೀಯಾ? (ರೂಢಿ). [< ಸಂ. ಶಿಕ್ಯ , ಶಿಕ್ಯಾ./ ತಮಿ. ಚಿಕ್ಕಮ್; ತೆಲು. ಚಿಕ್ಕ]

**ಸಿಕ್ಕು₃** 'ಸಿಕ್' ನೋ.

**ಸಿಕ್ಕಟಿಗೆ, ಸಿಕ್ಕಟ್ಟಿಗೆ, ಸಿಕ್ಕಣಿಗೆ** (ನಾ). ಕೂದಲಿನ ಸಿಕ್ಕು ಬಿಡಿಸುವ ಸಾಧನ; ಹಲ್ಲುಗಳು ದಪ್ಪನಾಗಿದ್ದು ದೂರದೂರವಾಗಿರುವ ಹಣಿಗೆ : ಪಟನುಡಿವಂಡಿರ ಕುರುಳ ಸಿಕ್ಕುವಿಡಿಸಲ್ಕೊಂಡ ಸಿಕ್ಕಟಿಗೆಯಂ ಪೋಲ್ಕು ಮುಕ್ಕೋಲುಂ (ಚಿಕವಂ. ೧೯-೧೮); ಮಗಳೆ ನಾವು ಬರುವಾಗ ಕಿರಿಗೆ, ಸಿಕ್ಕಟಿಗೆ, ಬಾಚಣಿಗೆ . . . ತಹೆವು (ಶರಲೀ. ೩೮೭); ಸಿಕ್ಕಟಿಗೆ ಬಾಚಣಿಗೆ ತುರುಬಿಲಿ (ಕರಿಕ. ೨೦-೫). **ಸಿಕ್ಕಟ್ಟಿಗೆ :** ಅಟಮಟ ಸಂಸಾರ ಹರನ ಜಟಾಜೂಟ ತಳತುದಿ ಸಿಗದಂಥ ಮಾಟ ಇದಕೆ ಸಿಕ್ಕಟ್ಟಿಗೆ ಮರೆವು ಮೌನವು ನಗುವು ಬಿಡುವುದು ಎಲ್ಲ ಜಟಿಲವು (ಚಂದ್ರವೀ. ೬-೨೪). **ಸಿಕ್ಕಣಿಗೆ :** (?).

[ಸಿಕ್ಕು₃ (< ಸಿಲ್ಕು₂) + ಅಟಿಗ್ಗೆ₁ (< ಪಣಿಗೆ)./ ತಮಿ. ಚಿಕ್ಕಮ್, ಚಿಕ್ಕಚ್ಚಿಕ್ಕಿ = ಬಾಚಣಿಗೆ ; ಮಲ. ಚಿಕ್ಕಚ್ಚಿಕ್ಕಿ = ಬಾಚಣಿಗೆ; ತೆಲು. ಚಿಕ್ಕಂಟು, ಚಿಕ್ಕಂಟೆ, ಚಿಕ್ಕಟ್ಟು]

**ಸಿಕ್ಕಟ್ಟಿಗೆ** 'ಸಿಕ್ಕಟಿಗೆ' ನೋ.

**ಸಿಕ್ಕಣ** (ನಾ). ಸಿಕ್ಕು; ತೊಡಕು; ಗೋಜು: ಈ ಚರಿತ್ರೆಯ ಸಿಕ್ಕಣಗಳನ್ನು ಮೆಲ್ಲನೆ ಬಿಡಿಸಿ ಬಾಚಿ ಮುಡಿಗಟ್ಟುವುದೆಂದರೆ ಸುಲಭವಲ್ಲ (ನಾಡೋಜ. ೧೪). [< ಸಿಕ್ಕು₃]

**ಸಿಕ್ಕಣಿಗೆ** 'ಸಿಕ್ಕಟಿಗೆ' ನೋ.

**ಸಿಕ್ಕನೆ** (ಅ). ರಭಸವಾಗಿ, ಕೂಡಲೆ ಎಂಬರ್ಥದ ಒಂದು ಅನುಕರಣಾವ್ಯಯ: 'ಸಿಕ್ಕನೆಸೀಳ್' ಪರಾ. [? + -ಅನೆ₁]

**ಸಿಕ್ಕನೆಸೀಳ್** (ಕ್ರಿ). ರಭಸವಾಗಿ ಸೀಳು, — ಸಿಗಿ: ಅದಂತಿರಲ್ಕೆ ನೀಂ ಸಿಕ್ಕನೆ ಸೀಳ್ದುದಿಬ್ಬರಳನಿತ್ತುಮನರ್ದಿ ನೃಮೂತ್ರದೊಳ್ ಬುಧಂ (ಖಮದ. ೭-೨೭); ಅಂತು ರಕ್ಕಸನ ತನು ಸಿಕ್ಕನೆಸೀಳ್ವಂತೆ ಪೊಯ್ದೊರಸಿ ಕೊಂದು ವೇದಮಾತೃಕೆಯಂ ತಂದು . . . ವಿಶ್ವರೂಪನಾಗಿ ಕ್ಷೀರಾಬ್ಧಿಗೈದಿ ಬ್ರಹ್ಮಾದಿಗಳಂ ಕರಸೆ (ದಶಾವ. ೨-೨೮ ವ).

[ಸಿಕ್ಕನೆ + ಸೀಳ್₁]

**ಸಿಕ್ಕಲಗಾರ** 'ಶಿಕಲಗಾರ' ನೋ.

**ಸಿಕ್ಕಾ, ಶಿಕ್ಕಾ, ಶಿಕ್ಕೆ, ಶಿಖಾ, ಸಿಕ್ಕೆ** (ನಾ). ೧. (ರಾಜ, ಸರಕಾರ, ಅಧಿಕಾರಿ ಮುಂತಾದವರ) ಮುದ್ರೆ; ಮೊಹರು; ರಸ್ಸೆ. ೨. (ರಾಜನ) ಮುದ್ರೆಯುಳ್ಳ ಉಂಗುರ; ಮುದ್ರೆಯುಂಗುರ: ರಾಯರು ಸಿಕ್ಕಾ (ಮೊಹರುಂಗುರ) ಇದೆಯೆಂದು ಹೇಳಿದರು (ಕಥವಿ. ೫೪೩). ೩. ಮುದ್ರೆಯುಳ್ಳ ನಾಣ್ಯ. **ಶಿಕ್ಕಾ :** ೧. ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ ಶಬ್ದಗಳೆಂದರೆ . . . ಕಚೇರಿ . . . ಶಿಕ್ಕಾ ಇತ್ಯಾದಿ (ಭಾಷಾಶಾ. ೧೭೭); ಉಪಕಾರ್ಯದರ್ಶಿ ಕಾರ್ಯದರ್ಶಿ ಅದಕ್ಕೆ ರೆಕಾರ್ಡ್ ಶಿಕ್ಕಾ ಹಾಕುತ್ತಾರೆ (ದೀಪಹ. II, ೩೧೮). **ಶಿಕ್ಕೆ :** ೧. "ಶಿಕ್ಕೆ – ಮುದ್ರೆ" (ಜಾನಕೋ. ೪೫). **ಶಿಖಾ:** ೪. [ವೀಶೈ] ಜಗದ್ಗುರುವಿನ ಪಟ್ಟಾಧಿಕಾರವನ್ನು ಸ್ವೀಕರಿಸುವಾಗ ಧರಿಸುವ ರಾಜಮರ್ಯಾದೆಯ ಮೂರು ಬಗೆಯ ಲಾಂಛನಗಳಲ್ಲಿ ಒಂದು; IP "ಶಿಖಾ ಶೈಲ : ಇವೆರಡನ್ನೂ ಶೂನ್ಯಸಿಂಹಾಸನದ ಜಗದ್ಗುರು ಪಟ್ಟವನ್ನು ಕಟ್ಟುವಾಗ ಆ ಪಟ್ಟಾಧಿಕಾರಿಯ ಕೊರಳಿಗೆ ಹಾಕುವಂಥವು" (ಮಹಾವಿ. ಕೋಶ): ನಿನ್ನ ಲೆಕ್ಕದೊಳ್ . . . ಇರಲೆನುತ್ತಂ ಬರೆಸಿ ಸ್ವರ್ಣಸಿಂಹಾಸನಂ ವರಶಿಖಾಶೈಲಂಗಳಂ ಅವನ ವಶಕೀ ತ್ರಿವಿಧಮಂ ಕೊಟ್ಟು (ಮಹಾವಿ. ೧೩-೩೮); ಆ ಶಿಖಾಶೈಲಂಗಳಂ ಕೊರಳಿಂಗೆ ಧರಿಸುತೆ (ಮಹಾವಿ. ೨೫-೨೮). **ಸಿಕ್ಕೆ :** ೧. ಕಾಗದ ಬರೆಬರೆದು ಸಿಕ್ಕೇವನೊತ್ತ್ಯಾನ ಕಾಲಾಳ ಹೋಗಿ ಕರಿರೆಂದ (ಲೋಕಗೀ. ೨೦೩).

[<— ಅರ. ಸಿಕ್ಕ; ಪಾರ. ಶಿಕ್ಕಾ; ಹಿಂ. ಸಿಕ್ಕಾ; ಮರಾ. ಶಿಕ್ಕಾ, ಸಿಕ್ಕಾ]

**ಸಿಕ್ಕಾಪಟ್ಟೆ** 'ಸಿಕ್ಕಾಬಟ್ಟೆ' ನೋ.

**ಸಿಕ್ಕಾಬಟ್ಟೆ, ಸಿಕ್ಕಾಪಟ್ಟೆ** (ಅ). ಮನಸ್ಸು ಬಂದ ಹಾಗೆ; ಮಿತಿಯಿಲ್ಲದೆ; ವಿಪರೀತ: ನಗರದ ಜನಗಳು ಸಿಕ್ಕಾಬಟ್ಟೆ ಮಾತಾಡುತ್ತಿದ್ದಾರೆ (ವ್ಯಾಸಪಿ. ೫೮); ಭೇದಿಯನ್ನು ಅಲಕ್ಷಿಸಿ, ಸಿಕ್ಕಾಬಟ್ಟೆ ತಿನ್ನಿಸಿದರೆ ಮಕ್ಕಳಿಗೆ ಆಮಶಂಕೆ ಬರುವುದುಂಟು (ಗೃಹವಿ. ೧೪೭). **ಸಿಕ್ಕಾಪಟ್ಟೆ :** ಸಿಕ್ಕಾಪಟ್ಟೆ ಹರಟೆ ಹೊಡೆಯುತ್ತಿದ್ದ (ಬಾಳವೃ. ೧೦೫); ದಾಸದಾಸಿಯರಿಗೆ ಅವಳು ಸಿಕ್ಕಾಪಟ್ಟೆ ಬೈದು ಅನರ್ಥ ಮಾಡಿಬಿಡುತ್ತಾಳೆ (ಇಪ್ರಕ. ೨೬೦).

[< ಸಿಕ್ಕು₁./ IP ಇದು 'ಕಂಡಾಬಟ್ಟೆ', 'ಮೂರಾಬಟ್ಟೆ' ಮುಂತಾದ ರೂಪಗಳ ಸಾದೃಶ್ಯದ ಮೇಲೆ ರಚನೆಯಾಗಿರುವ ರೂಪವಿರಬಹುದು]

**ಸಿಕ್ಕಿತೆ** (ನಾ). ಆಪ್ತಸೇವಕಿ, — ದಾಸಿ; ಲೆಂಕಿತಿ: "ಸಿಕ್ಕಿತೆ [ಪಾಠಾಂ. ಶಿಕ್ಷಿತೆ]ಯೆನಲು ಲೆಂಕಿತಿಗೆ ನಾಮಮಕ್ಕುಂ" (ಮಂಗರಾ. ೯೦-೪). [?]

**ಸಿಕ್ಕಿಸು** 'ಸಿಲ್ಕಿಸು' ನೋ.

**ಸಿಕ್ಕು₁** 'ಸಿಲ್ಕು₁' ನೋ.

**ಸಿಕ್ಕು₂** 'ಸಿಲ್ಕು₁' ಪರಾ.

**ಸಿಕ್ಕು₃** 'ಸಿಲ್ಕು₂' ನೋ.

**ಸಿಕ್ಕುದಕ್ಕು** (ನಾ). ಸಿಕ್ಕಿಸಿಕೊಂಡು ಹಿಡಿಯುವ ಒಂದು ಬಗೆಯ ಬೇಟೆಯ ಸಾಧನ : ಪುಲಿವಲೆ ಕೊಂಬು ಕಣ್ಣಿ ಮಿಡಿಗಣ್ಣಿ ತೊವಲ್ವಲೆ ಸಿಕ್ಕುದಕ್ಕು ಪೆರ್ಮೊಲವಲೆ . . . ಕಾನನಸ್ಥಳದೊಳಗಲ್ದು ತೋಹುವಿಡಿದೊಡ್ಡಿದರ್ಕೆದೆ ಪುಳಿಂದನಾಯಕರ್ (ದಶಕು. ೨-೧೧೫). [ಸಿಕ್ಕು₁ (< ಸಿಲ್ಕು₁) + ದಕ್ಕು₄ (< ದರ್ಕು₂)]

**ಸಿಕ್ಕುಬಂಧನ** (ನಾ). ಕ್ಲೇಶಕರವಾದ ಸೆರೆ; ಕಷ್ಟಕರವಾದ ಬಂಧನ: ಲೆಕ್ಕಕ್ಕೆ ದುಕ್ಕಿಲ್ಲ ಬೆಕ್ಕಿಗಂ ವ್ರತವಿಲ್ಲ ಸಿಕ್ಕುಬಂಧನದಿ ಸುಖವಿಲ್ಲ ನಾರಿಗೆ ಸಿಕ್ಕದವರಿಲ್ಲ (ಸರ್ವಜ್ಞ. ೧೭೫೦). [ಸಿಕ್ಕು₃ (< ಸಿಲ್ಕು₂) + ಬಂಧನ]

**ಸಿಕ್ಕುಮೂತ್ರ** (ನಾ). ಮೂತ್ರವಿಸರ್ಜನೆಗೆ ತಡೆಯುಂಟಾಗುವ ಒಂದು ಬಗೆಯ ರೋಗ: ಆ ಬೇರಂ ಹಾಲಲ್ಲಿ ಅರೆದು ಕುಡಿಯಲು ಸಿಕ್ಕುಮೂತ್ರ ಮಾಣ್ಗುಂ (ವಿಷವಿ. ೧೯). [ಸಿಕ್ಕು₃ (< ಸಿಲ್ಕು₂) + ಮೂತ್ರ]

**ಸಿಕ್ಕುವಲೆ** (ನಾ). ಪ್ರಾಣಿ, ಪಕ್ಷಿಗಳನ್ನು ಹಿಡಿಯುವ ಒಂದು ಬಗೆಯ ಬಲೆ: ತಡಿಕೆವಲೆ . . . ಸಿಡಿವವಲೆ ಸಿಕ್ಕು[ಪಾಠಾಂ. ಸಿಲುಕು]ವಲೆ . . . ಮಂದಸಿನವಲೆಯ ಹೊಡೆಗಳ ಬೇಡವಡೆ ನೆರೆದುದು (ಹಚಕಾ. ೫-೮); ತೊಡಕುವಲೆ ಸಿಕ್ಕುವಲೆ ಸಿಡಿಲುವಲೆ ಹಾಸುವಲೆ ಬೀಸುವಲೆ ಚಕ್ಕನೆಯಳವವಲೆ ಮೊದಲಾದ ಪರಿಪರಿಯ ವಲೆಸಮೂಹವ ನೋಡುತೆ (ನವಮೋ. ೧೭-೨೦). [ಸಿಕ್ಕು₃ (< ಸಿಲ್ಕು₂) + ಬಲೆ₁]

**ಸಿಕ್ಕುಸಿಕ್ಕು₁** 'ಸಿಲ್ಕು₁' ಪರಾ.

**ಸಿಕ್ಕುಸಿಕ್ಕು₂** 'ಸಿಲ್ಕು₂' ಪರಾ.

**ಸಿಕ್ಕೆ** 'ಸಿಕ್ಕಾ' ನೋ.

**ಸಿಕ್ಕೆಮೋರ್ತಬ, ಶಿಕ್ಕಾಮೋರ್ತಬ್ಬ** (ನಾ). ಮುದ್ರೆ; ಮೊಹರು; ರಸ್ಸೆ: ಸೊಟ್ಟಬಟ್ಟಾದ ಹಳೆಯ ಸಿಕ್ಕೆಮೋರ್ತಬಗಳುಳ್ಳ ಬಂಗಾರದ ನಾಣ್ಯಗಳಿದ್ದವು (ದೇವಆ. ೨೯). **ಶಿಕ್ಕಾಮೋರ್ತಬ್ಬ :** ಗವ್ನರ್ನರನ ಸಾಬನೂ ಕೂಡ ನಮ್ಮ ಊರ ಪೋಸ್ಟಮನ್ ಪಾಂಡೂನಂತೆ ಶಿಕ್ಕಾಮೋರ್ತಬ್ಬ ಮಾಡಲಿಕ್ಕೆ ಸಿದ್ಧನಾಗಿಯೇ ನಿಂತಿರುತ್ತಿದ್ದ (ದೀಪಹ. II, ೩೧೮). [ಸಿಕ್ಕೆ (< ಸಿಕ್ಕಾ) + ಮೋರ್ತಬ₁ (< ಮೋರ್ತಬ್ಬ₁)]

**ಸಿಕ್ಕೆಯುಂಗುರ** (ನಾ). ಮುದ್ರೆಯನ್ನುಳ್ಳ ಉಂಗುರ; ಮೊಹರನ್ನುಳ್ಳ ಉಂಗುರ: ಈ ಸಿಂಹಾಸನಕ್ಕೆ ನೀನೇ ಬಾಧ್ಯನು ಎಂದು ಹೇಳಿ ಸಿಕ್ಕೆಯುಂಗುರವನ್ನು . . . ಮುಂದೆ ಚಾಚಿದನು (ಕುಮುದಿ. ೪೪). [ಸಿಕ್ಕೆ (< ಸಿಕ್ಕಾ) + ಉಂಗುರ]

**ಸಿಕ್ಕೇದಾರ** 'ಸಿಕ್ದಾರ್' ನೋ.

**ಸಿಕ್ಕೊಡೆ** (ಕ್ರಿ). ಕೂದಲಿನ ಗೋಜನ್ನು ಬಿಡಿಸು; ಸಿಕ್ಕು ಬಿಡಿಸು: ಕಾಮಿನಿಯ ನೀಲ ನಿಡುಗುರುಳ ಸಿಕ್ಕೊಡೆದು ಪೊಂಬಲಿಗೆಯೊಳು ಪರಪಿದೋಲ್ ರಾಮಣಿಯ್ಯಕದಿ ರಮಣಿಯ ಬೆನ್ನೊಳೊಪ್ಪುತಿರೆ (ನವಮೋ. ೨೩-೭). [ಸಿಕ್ಕು₃ (< ಸಿಲ್ಕು₂) + ಒಡೆ₁]

**ಸಿಕ್ತ** (ಗು). ೧. ಸಿಂಪಡಿಸಿದ; ಸೇಚನ ಮಾಡಿದ. ೨. ತೊಯ್ದ; ನೆನೆದ; ಆರ್ದ್ರವಾದ: ಹರಿವಿದಳಿತಮದಗಜಕುಂಭರಕ್ತಸಿಕ್ತಾರ್ದ್ರಮೌಕ್ತಿಕಪ್ರಕರದವೋಲ್ ಕರಮಸೆವ ದಾಡಿಮಿಬೀಜರಾಜಿಯಂ ತೆಗೆದು ರಸವನಾಸ್ವಾದಿಸಿದಂ (ಕಾದಂಪೂ. ೮೭); ಸತ್ಕಂ ಸದ್ಗುರುಪದಸೇವಾಕೃತಕೃತ್ಯಂ ಶಂಕರಭಜಕಂ . . . ಭವವಿಮುಕ್ತಂ ಸುಖಜಲಸಿಕ್ತಂ ಗತರಕ್ತಂ (ಉದ್ಭದೇ. ೩-೨೦). (ನಾ). ೩. ಆರ್ದ್ರವಾದುದು; ನೆನೆದುದು: ವಜ್ರಬಾಹುಮಹೀಪತಿ ವಜ್ರದಂತಚಕ್ರವರ್ತಿಸೂಕ್ತಾಮೃತಸಿಕ್ತಮಪ್ಪ ನಿಜಮನೋರಥಾಪುರದ್ರುಮದಿನೊಗೆದಂಕುರಿಸಿದಂಕುರನಿಕರಮನನುಕರಿಸುವ ರೋಮಾಂಚನಿಚಯದಿಂ ನಿಚಿತಾಂಗನಾಗಿ (ಆದಿಪು. ೪-೨೯ ವ). [ಸಂ.]

**ಸಿಕ್ಥ** (ನಾ). ೧. ಬೇಯಿಸಿರುವ ಅನ್ನದ ಅಗುಳು. ೨. ಅನ್ನದ ತುತ್ತು, — ಉಂಡೆ. ೩. ಜೇನುಮೇಣ. ೪. ನೀಲಿಯ ಪುಡಿ. [ಸಂ.]

**ಸಿಕ್ಥಕ** (ನಾ). ೧. = ಸಿಕ್ಥ ೧. ೨. (ಪ್ರಸಾದದ) ಅನ್ನದ ಉಂಡೆ : ತಱುವಾಯಿಂ ಪರಿವಿಡಿಯೊಳೆಡೆಗೊಂಡ ಪಂತಿಗೆ ತೀರ್ಥಪ್ರಸಾದಂಗಳನೋರಣದಿಂ ಪಚ್ಚುಗೊಟ್ಟುಂ ಸವಿದುಂ ತಂತಮ್ಮೆಡೆಗೆ ಪೋದಿಂಬಳಿಯಿಂ ತನ್ನ ಪಾಲ ಸಿಕ್ಥಕಮನುಂಡೆಮ್ಮೆಳೆಯನುಂ ಪೊಱಮಟ್ಟಂ (ರಾಮಾಶ್ವ. ೭೭-೯). ೩. = ಸಿಕ್ಥ ೩ : "ಸಿಕ್ಥಕಂ ಮೇಣಮದು" (ಮಂಗರಾ. ೧೦೫-೧೪). [ಸಂ.]

**ಸಿಕ್ದಾರ್, ಸಿಕ್ಕೇದಾರ** (ನಾ). ಸೇನೆಯ ಪೋಲೀಸ್ ಅಧಿಕಾರಿ : ಪ್ರತಿಯೊಂದು ಪರ್ಗಣಕ್ಕೂ ಒಬ್ಬ ಅಮೀರನೂ ಅವನಿಗೆ ಸಹಾಯಕರಾಗಿ ಒಬ್ಬ ಕೋಶಾಧಿಕಾರಿ (ಪೋತದಾರ್), ಒಬ್ಬ ಕಾರ್ಯದರ್ಶಿ ಮತ್ತು ಒಬ್ಬ ಸೇನಾ – ಪೋಲೀಸ್ ಅಧಿಕಾರಿ (ಸಿಕ್‌ದಾರ್) ಇವರೂ ಇದ್ದರು (ಇಸ್ಲಾಂಸಂ. ೬೩). **ಸಿಕ್ಕೇದಾರ** : ಹಿಸ್ಸಾರ ಫಿರೋಜಾ ಸುಬೆಯ ಸಿಕ್ಕೇದಾರನಾದ ಹಾಮಿದಖಾನನು ಕಾದಲಿಕ್ಕನುವಾಗಿರುತ್ತಾನೆಂದು ಕೇಳಿ ಅವನಿಗಿದಿರಾಗಲು ಹುಮಾಯನನನ್ನು ಕಳುಹಿದನು (ಮೋಬಾದ. ೧೯). [?]

**ಸಿಖ್** 'ಸಿಕ್' ನೋ.

**ಸಿಖಂಡಿ** (ನಾ). ಪೌರುಷಹೀನನಾದವನು; ಸತ್ತ್ವಹೀನ; ನಪುಂಸಕ: ಸರಿಯಾಗಿ ಯಿಬ್ಬರಿಗೆ ಚಂದ್ರಸ್ವರ ನಡವಾಗ ಸುರತಮಂ ಗೈಯಲು ಸಿಖಂಡಿ ತಾಂ ಪುಟ್ಟುವನು (ನವಮೋ. ೧೪-೪೫). [< ಸಂ. ಶಿಖಂಡಿನ್]

**ಸಿಖರ** 'ಸಿಕರ' ನೋ.

**ಸಿಖರದೀಪ್ತಿ** (ನಾ). (ಕಟ್ಟಡ, ದೇವಾಲಯ ಮುಂತಾದುವುಗಳ) ಗೋಪುರಕ್ಕೆ ಮಾಡುವ ದೀಪಾಲಂಕಾರ: ಹಿಡಿಮ್ಮನಾತದೇವರಿಗೆ [ತ]ತ್ಸಂವತ್ಸರದ ತಥಾ ತಿಥಿ ಕಾರ್ತ್ತಿಕ ಶು ೧೫ ಪುಣ್ಯಕಾಲದಲ್ಲಿ ಮಹಾಪೂಜೆ ನೈವೇದ್ಯ ಸಿಖರದೀಪ್ತಿಯನ್ನು ಮಾಡಿ (ಎಕ. XI. ಚಿತ್ರದು. ೧೪-೧೨; 1411). [< ಸಂ. ಶಿಖರದೀಪ್ತಿ]

**ಸಿಖರಿ** (ನಾ). ಒಂದು ಬಗೆಯ ಸಸ್ಯ; ಅಪಾಮಾರ್ಗ; ಉತ್ತರಣೆ: "ಜಂಘಾಲಿಃ – ಸಿಖರಿ" (ಓಷಧಿ. ೬೦). [< ಸಂ. ಶಿಖರಿನ್]

**ಸಿಖಾರ** 'ಸಿಕರ' ನೋ.

**ಸಿಖಿಮಂಥಣಿ** (ನಾ). ಘರ್ಷಣೆಯಿಂದ ಯಾಗಾಗ್ನಿಯನ್ನು ಹುಟ್ಟಿಸಲು ಬಳಸುವ ಮರದ ಕೊರಡು; ಅರಣಿ : ಗಡುಗೆಯ ಬ್ರಾಹ್ಮಣಂಗೆವೂಂ ಆಚಾರಿಯರಿಗೆವೂಂ ಸಿಖಿಮಂಥಣಿಗೆ ಹೋಮದ ವರದಕ್ಷಿಣೆಗೆವೂಂ ಗ ೬ ವ ೫ ಹ ೨ (ಎಕ. V (R), ತಿರುಮ. ೯೬-೮೦; 1269). [< ಸಂ. ಶಿಖಿಮಂಥನ]

**ಸಿಗಡಿ** 'ಸೀಗಡಿ' ನೋ.

**ಸಿಗರೇಟ್** 'ಸಿಗರೇಟು' ನೋ.

**ಸಿಗರೇಟು, ಸಿಗರೇಟ್** (ನಾ). ಹೊಗೆ ಸೇದಲು, ಹೊಗೆಸೊಪ್ಪಿನ ಪುಡಿ ಮತ್ತು ಮತ್ತನ್ನುಂಟುಮಾಡುವ ದ್ರವ್ಯವನ್ನು ಇಟ್ಟು ಸುತ್ತಿರುವ ಕಾಗದದ ಸಣ್ಣ ಸುರುಳಿ; ಹೊಗೆಸೊಪ್ಪಿನ ಬತ್ತಿ: ದಾರಿಹೋಕರು ಬೀಡಿ ಸಿಗರೇಟನ್ನು ಸೇದುತ್ತಾ ಹೋಗುತ್ತಿದ್ದುದನ್ನು ನೋಡಿ ನನಗೆ ಸಿಗರೇಟಿನ ಚಟ ಬೇರೆ ಹಿಡಿಯಿತು (ಮಗಮಾಂ. ೫೨); ಅವರಿಗಂಟಿಕೊಂಡಿದ್ದ ಇನ್ನೊಂದು ವ್ಯಸನ ಸಿಗರೇಟಿನದು (ರತ್ನಗೋ. ೫). **ಸಿಗರೇಟ್** : ಸಿಗರೇಟ್ ಸೇದಬೇಕೆಂಬ ಇಚ್ಛೆಗೆ ಭೌತತತ್ತ್ವ ಕಾರಣವಲ್ಲ (ಜೀವಾತ್ಮ. ೧೦೧).

[<— ಇಂ. Cigarette]

**ಸಿಗಳಿಗೆ** 'ಸೆಗಳಿಕೆ' ನೋ.

**ಸಿಗಿ** (ಕ್ರಿ). (ಉದ್ದುದ್ದವಾಗಿ) ಸೀಳು; ಹರಿ : ಕೇಳಿಯೊಳಿನಿಯಂಗೆ ಸುಖವನೆಯ್ದಿಸದ ಥಡಾಳಿಸಿದವಳ ಪೇರುರವ ಬಾಳಿನೊಳ್ ಸಿಗಿವಂತೆ ಕೂರುಗುರ್ಗೊನೆಯಿಂದ ಸೀಳಿದಲೊಂದು ಬೆಳ್ಳಿಲೆಯ (ಮೋಹತ. ೧೬-೩೩); ಅಪ್ಪಾಜಿ ಕಂಡರೆ ನಮ್ಮನ್ನೆಲ್ಲ ಸಿಗಿದಾರು (ಚಿಕರಾ. ೬).

**ಸಿಗಿಸಿಗಿ** (ದ್ವಿರುಕ್ತಿ) : ವಸ್ತ್ರರಾಶಿ ವಸುಧೆಯೊಳು ಬೀಳೆ ಸಿಗಿಸಿಗಿದು ಕಂಬಿಯ ಸೆರಗಿನೆಸೆವ ಶಾಲೆಗಳ ಜಂಗಮವಿಸರಕಿತ್ತನಾ ಬಸವಯ್ಯನು (ಗುರುಚಾ. ೬-೧೦). **ಸಿಗಿದುಕಟ್ಟು** = ಸೀಳಿ ಭಾಗ ಮಾಡಿ (ತೋರಣ) ಕಟ್ಟು: ಕಾಡು ಇದೆ, ಕಡಿ: ಸಿಗಿದು ಕಟ್ಟು ತೋರಣ (ಚಂಡಮ. ೪೬-೧). **ಸಿಗಿದುತೋರಣಕಟ್ಟು** = ೧. = ಸಿಗಿದುಕಟ್ಟು. ೨. (ಅಲಂ) ಉಗ್ರವಾಗಿ ಶಿಕ್ಷಿಸು : ಅಲ್ಲಿ ಅಂಥ ಅಧಿಕಪ್ರಸಂಗವೇನಾದರೂ ಮಾಡಿ ಬಂದರೆ ಸಿಗಿದು ತೋರಣ ಕಟ್ಟುತ್ತೇನೆ (ಮೂರುದಾ. ೮೪). **ಸಿಗಿದುಬಿಡು** = ೧. ಸೀಳಿ ಹಾಕು; ಕತ್ತರಿಸಿ ಚೆಲ್ಲು. ೨. = ಸಿಗಿದು ತೋರಣಕಟ್ಟು ೨ : ನಾನು ನಿಮ್ಮೊಡನೆ ಮಾತುಕತೆ ಆಡ್ತೀನೆಂದು ತಿಳಿದರೆ ನನ್ನ ಸಿಗಿದು ಬಿಡ್ತಾರೆ (ಅವಜ. ೧೪೪).

[ದೇ. II ಮಲ. ಚೀನ್ತು; ತುಳು. ತಿಗಿ, ತಿಗು; ತೆಲು. ಚಿಂಚು, ಚಿಂಪು, ಚೀರು; ಪರ್ಜಿ. ಚೀಕ್; ಕುಇ. ಸಿಕ್ಇನ್ನ; ಕುರುಖ್. ಚೀನ್ನಾ]

**ಸಿಗು** 'ಸಿಲ್ಕು$_1$' ನೋ.

**ಸಿಗುಡಿ** (ನಾ). ಕುರೂಪಿಯಾದವಳು (?) : ಒಂದುಮೊಲೆ ದೊಡ್ಡಿತಾದೊಂದು ಮೊಲೆ ಸಣ್ಣಮಾದೊಂದುಮೊಲೆಯಿಳಿದೊಂದುಮೊಲೆಯೇಱಿದ ಚಂದವಿಲ್ಲದ ಸಿಗುಡಿ [ಪಾಠಾಂ. ರು] ಸಂದಿಸಿದ ದನಿಯ . . . ಪೆಣ್ಣಳಂ ತರಲಾಗದು (ಜನವ. ೧೧-೯); ಬರಡೆಯಾಗಲು ನೋವು ಸಿಗುಡಿ[ಪಾಠಾಂ. ಡೆ]ಯಾಗಲು ದುಃಖ ಪರಿಹಾಸಗೈವರು ಪೆಣ್ಣ (ರಾಮವಿ. ೧೨-೧೩೦). [?]

**ಸಿಗುಡಿತೆ** 'ಸೇಗುಡಿತೆ' ನೋ.

**ಸಿಗುಣೂರ್** (ನಾ). ಒಂದು ಊರಿನ ಹೆಸರು (?) : ಸ್ವಸ್ತಿ ಶ್ರೀ ಸಿಗುಣೂರರ್ ಕೆಳೆನಲ್ಲು (ಎಕ. X (S), ಮುಳಬಾ. ೧೧೮-೧; 9ನೆಯ ಶತ). [? + ಊರ್]

**ಸಿಗುರು** 'ಸಿವುಱು$_2$' ನೋ.

**ಸಿಗುಳು$_1$** (ಕ್ರಿ). ಸಿಗಿ; ಸೀಳು; ತುಂಡು ಮಾಡು: ದೈತ್ಯರು . . . ಇಡಲಮಿತ ತೂಣೀರ ಚಾಪಗಳ ಸಿಗುಳಿಯಿಕ್ಕುಯಬಾಣದಲಿ ಸಂಯುಗದೊಳಾ ಮೂವರ ಶಿರಂಗಳ ನೆಗಯಿಸಿದ ಗಗನಾಂಗಣಕೆ ರಾಘವನು (ಅನಂರಾ. ೩-೪-೧೧). 'ಸಿವುಱು$_1$' ಪರಾ.

[IP ಇದು 'ಸಿಗಿ' ಮತ್ತು 'ಸೀಳು' ಎಂಬ ಎರಡು ಶಬ್ದಗಳೂ ಸೇರಿ ಆದ ರೂಪವಿರಬಹುದು]

**ಸಿಗುಳು$_2$** (ನಾ). ತುಂಡು; ಸೀಳು: ಮದ್ದೂರನ್ನಾಯ ನಮ್ಮಣ್ಣನ್ಮೇಲೆ ಬಿದ್ದರೆ ಇದ್ದೆಗಾರ ತಂಗಿ ಕಿರಿಯೋಳು ಕೂತ್ಕಂಡು ಬರಕೊಟ್ಟು ಎಲೆಯ ಸಿಗುಳಲ್ಲಿ (ಕಜಕಾ. ೭).

[< ಸಿಗುಳು$_1$]

**ಸಿಗುಱ್** 'ಸಿವುಱು$_2$' ನೋ.

**ಸಿಗುಱು** 'ಸಿವುಱು$_2$' ನೋ.

**ಸಿಗುಱೇಳು** 'ಸಿವುಱೇಟ್' ನೋ.

**ಸಿಗೆನಡು** (ನಾ). ಒಂದು ಪ್ರದೇಶದ ಹೆಸರು: ಪೆರ್ಮ್ಮಾಡಿಯ ಸುಳಿ ಜೋಗಬ್ಬೆಯ ಮಗಳ್ ಸಿಗೆನಡ ಪೆರ್ಮ್ಮಾಡಿಗಾವುಣ್ಣನ ಪೆಣ್ಡತಿ ಚಾವುಣ್ಣಬ್ಬೆ ಈ ದೇಗುಲವ ಮಡಿಸಿ ತೆರಗಾಲಂ ದೆವಟ್ಟ ಬಿಟ್ಟಳ್ (ಮೈಆರಿ. ೧೯೩೦, ೧೪-೭; 882).

[IP ಇದು 'ಸೀಗೆನಾಡು' ಎಂಬುದರ ಅಪಲಿಖಿತವಿರಬಹುದು]

**ಸಿಗ್ಗ** (ನಾ). "ನಾಚಿಕೆಯುಳ್ಳವನು" (ಪ್ರಭಣ್ಣ). [ಸಿಗ್ಗು$_1$ + -ಅ$_7$]

**ಸಿಗ್ಗನೆ** (ಅ). ಒಂದು ಅನುಕರಣಾವ್ಯಯ : ಸಿಗ್ಗನೆ ಸಿಗಿದು ಬಿಜ್ಜನೆ ಬೀಗಿ ಡಜ್ಜನೆ ತೇಗಿ (ಶಬ್ದಾನು. ೨೦ ವ್ಯಾಖ್ಯಾ). [? + - ಅನೆ$_1$]

**ಸಿಗ್ಗಾನು** (ಕ್ರಿ). ನಾಚಿಕೆಯನ್ನು ಹೊಂದು; ನಾಚು: ಧರಯೊಳೊಂದಂ ಪಡೆದವಳ ಮೊಗವ ನೋಡಲಾಗದುಯೆನಲು ಸಿಗ್ಗಾಂತೆಯೋ (ನವಮೋ. ೧೦-೩೯).

[ಸಿಗ್ಗು$_1$ + ಆನು$_1$ (< ಆನ್$_1$)]

**ಸಿಗ್ಗಾಮೆ** (ನಾ). ಒಂದು ಊರಿನ ಹೆಸರು; IP ಇದು ಧಾರವಾಡ ಜಿಲ್ಲೆಯ ಈಗಿನ **ಶಿಗ್ಗಾಂವ** : [ಮೂ]ಸಱಿ ಕಳ್ಳವಳ್ಳ ಪೆದ್ದಮನಾಳುತ್ತಮಿಬ್ಬು ಕುಪ್ಪೆಯರಸರ್ಗ್ಗೆ ಬಿನ್ನಪಂಗೆಯ್ದು ಸಿಗ್ಗಾಮೆಯ ಕಳ್ಳವಳ್ಳದೆಱೆವ ಶ್ರೀಕ[ಲ್ಯೆ]ಱೆಭಟಾರಗೆ ಕೊಟ್ಟನ್ (ಕಇ. I, ೧೪-೭; ಸು. 866). 'ವಳ್ಳಿಗ್ಗಾಮೆ' ಪರಾ. [? + ಗಾಮ್ಮೆ$_0$ (< ಗಾಮ)]

**ಸಿಗ್ಗಾಳಿ** (ನಾ). ನಾಚಿಕೆಯ ಸ್ವಭಾವದ ವ್ಯಕ್ತಿ; ಸಂಕೋಚಪ್ರವೃತ್ತಿಯ ವ್ಯಕ್ತಿ: ನೀಱಿಂ ಜೂದಾಳಿ ಕರಂ ನೀಱಿಂ ಮಾತಾಳಿ ಕರಯೆ ಸಿಗ್ಗಾಳಿಯಿವಳ್ (ಕಾವ್ಯಾವ. ೩೫೩); ಆ! ಸಿಗ್ಗಾಳಿ! ಆಗಳುಂ ಸುಶೀಲದಿನೆ ಬಾಗಿ ನಡೆವ . . . ತಿಳಿಪೆ ತಿಳಿವ, ನಿನ್ನ ರತಿರಹಸ್ಯಮನಿನ್ನೆಂತು ಮಱೆವೆನೋ! (ರಾಮಾಶ್ವ. ೪೫-೨೯); ಅವನು ಪ್ರಶ್ನಿಸಿದಾಗ ಅವಳು ಸಿಗ್ಗಾಳಿಯಾಗಿ ನುಣುಚುನುಣುಚಾಗಿ ಉತ್ತರ ಕೊಟ್ಟಳು (ಪುನರು. ೪೯೭).

[ಸಿಗ್ಗು$_1$ + -ಆಳ್ತಿ]

**ಸಿಗ್ಗು$_1$** (ನಾ). ೧. ನಾಚಿಕೆ; ಲಜ್ಜೆ: ಚಕ್ರೇಶ ಸಿಗ್ಗನುೞಿ ಮುಳಿಸಂ ನೀನೆಂದಿಂಗಂ ಬಿಸುಡು (ಆದಿಪು. ೧೪-೧೨೮); ಮದನಮದೋದ್ರೇಕದಿನೆನ್ನಿದಿರೊಳ್ ಧೃತಿಗೆಟ್ಟು ಸಿಗ್ಗಿನಿಂ ತನ್ನೊಳ್ ಪೊಲ್ಲದನೆತ್ತಾಚರಿಸುಗುಮೋ ಒದವಿದ ಸಿಗ್ಗಿಂದಮಾರುಮೇನನೊಡರ್ಚರ್ (ಕಾದಂಪೂ. ೮೨೫); ಹೊಸದರಲಿ ಸಿಗ್ಗು ಪ್ರೇಮವನು ನಸುಮರೆಸಿರಲು ನೀನೆನ್ನ ಬಳಿ ಸುಳಿಯಲಾರದೆಯೆ (ನನ್ನಪ. ೧೩-೨). ೨. ಅವಮಾನ; ಮುಖಭಂಗ: ದ್ರೌಪದಿ ತನ್ನ ಕೇಶಪಾಶಮಂ ದುಶ್ಶಾಸನಂ ಪಿಡಿದು ತೆಗೆದನೆಂಬ ಸಿಗ್ಗಗ್ಗಳಂ ಪೆರ್ಚೆ ಸಭೆಯೊಳಿಂತೆಂದಳ್ (ಪಂಪಭಾ. ೭-೯ ವ); ಆ ದಿವಿಜವನಿತೆಯರೆನಿತಾನುಂ ತೆಱದ ಶೃಂಗಾರಚೇಷ್ಟೆಗಳನುಪಯೋಜಿಸಿಯುಮೆಂತುಮೇಗೆಯ್ದುಮಾ ಜಂಗಮಮೇರುವೆನಿಸಿದ ಸೌಜನ್ಯಕಂದಾಂಕುರನಂ ಸಂಚಳಿಸಲಾಱದೆ ಸಿಗ್ಗಿನನುಕಂಪೆಯಂ ತಳೆ (ಶಾಂತಿಪು. ೯-೯೯ ವ); ಶಾಸ್ತ್ರಿಗಳೇ ಸಿಗ್ಗಿನಿಂದ ಸರಿದುಹೋದ ಗಂಟಲು ಸರಿಪಡಿಸಿಕೊಂಡು ಏನೋ ಹೇಳುವುದಕ್ಕೆ ಪ್ರಯತ್ನಿಸಿದರು (ಹೂಸಕ್ಕಿ. ೪೩). ೩. ಖಿನ್ನತೆ; ಜುಗುಪ್ಸೆ; ಖೇದ: ''ಖಿನ್ನಂ ಸಿಗ್ಗು'' (ಕರ್ಣಾನಿ. ೬); ಒಗ್ಗೊಡೆದು ಕುಳ್ಳಿರಿಸಿದಾಸನ ರ್ಝುಗ್ಗೆನಲು ಕುಳ್ಳಿರ್ದು ಕೋಪದ ಸಿಗ್ಗಿನೊಳಗಾಡುತ್ತ ನೇಗಿಲನೆತ್ತಿ ಮೋದುತಿರೆ (ಕೃಷ್ಣಾಕಾ. ೨೦-೫೦).

**ಸಿಗ್ಗಾಗು** = ೧. ನಾಚಿಕೊಳ್ಳು; ಲಜ್ಜೆಯನ್ನು ಹೊಂದು: ಹರಿಶ್ಚಂದ್ರಭೂಭುಜಂ ತನ್ನ ಸಾರ್ದರ ಬೇಡಿದರ ಬಯಸಿದರ ಸೋಂಕಿದರ ಬೆರಸಿದರನು ತನ್ನಂತೆ ಮಾಳ್ಪುನ್ನತಿಕೆಯಂ ಕಂಡು ನಾಚಿ ಸಿಗ್ಗಾಗಿ ಸೆಡೆದು . . . ಸ್ವರ್ಗಸ್ಥವಾಯ್ತು ಸುರತರು (ಹಚಕಾ. ೧-೪೨). ೨. ನಾಚಿಕೆಯಾಗು; ಲಜ್ಜೆಯಾಗು: ನಾನೊಬ್ಬಳೆ ವೀಣೆ ನುಡಿಸಿ ಹಾಡಲು ಸಿಗ್ಗಾಗುತ್ತದೆ (ಶಾಂತಲಾ. ೮೧). ೩. ಅವಮಾನಗೊಳ್ಳು; ಅಪಮಾನಿತನಾಗು; ಭಂಗಿತನಾಗು: ವಿಷ್ಣುಮತ್ಸ್ಯಂ . . . ತನ್ನ ಪಾಂಡಿತ್ಯದ ಗರ್ವದಿಂದಂ ವೃಷಭಸೇನಾಚಾರ್ಯರೊಡನೆ ವಾದಗೆಯ್ದು ನೆರವಿಯೊಳ್ ಸೋಲ್ತು ಸಿಗ್ಗಾಗಿ ಪೋಗಿ ನಟ್ಟನಡುವಿರುಳ್ ಬಂದು ಕಿಚ್ಚಂ ತಗುಳ್ಚಿ ಪೋದಂ (ವಡ್ಡಾರಾ. ೧೯೩-೨೧); ವಿಷಖರ್ಪರನೆಂಬಂ ತನ್ನ ಮಲ್ಲರೆಲ್ಲರುಮಂ ಕೊಂದೊಡೆ ಸಿಗ್ಗಾಗಿ ತನ್ನ ಬಾಣಸಿಗನಾಗಿರ್ದ ವಲ್ಲಲನಂ ಕರೆದು ಪೇೞ್ದಾಗಳ್ (ಪಂಪಭಾ. ೮-೫೭ ವ). ೪. ಖೇದಗೊಳ್ಳು; ಜುಗುಪ್ಸೆಯನ್ನು ಹೊಂದು : ನಿಮ್ಮ ಮಾವನಂ ನೀಂ ನಿರಾಕರಿಸಿ ನುಡಿದೊಡೆನ್ನ ಭರ್ತಾರಂ ನಿನ್ನನೇನುಮೆನಲಱಿಯದೆ ತನ್ನಂ ತಾನೆ ನಿಂದಿಸಿಕೊಂಡು ಸಿಗ್ಗಾಗಿ ಪೋಗಿ ತಪಂಬಟ್ಟಂ (ಸುಕುಮಾ. ೫-೭ ವ); ಬಂದ ತನ್ನೊಂದು ಸೇವೆಯ ನೆನೆದಾ ಕಾರ್ಯದಂದಗೆಟ್ಟುದಕೆ ಸಿಗ್ಗಾಗಿ ಕಂದಿದ ಮೊಗ ಕೆಲಬಲಕೆ ಕಾಲಿಡದ ಕಣ್ಣಂದೆಯ್ದುತಿರ್ದ ಮೋನದೊಳು (ಭರಚ. ೪೯-೩). ೫. ನಾಚಿಕೆ, ಅವಮಾನಗಳಿಂದ ಕೆರಳು, – ಸಿಟ್ಟುಗೊಳ್ಳು : ಅದಂ ಕಂಡು ಸಿಂಹೋದರಂ ಸಿಗ್ಗಾಗಿ ಸಿಂಹದಂತೆ ಮೇಲ್ವಾಯ್ವುದುಂ (ಪಂರಾಮಾ. ೭-೫೮ ವ).

[ದೇ. ‖ ತೆಲು. ಸಿಗ್ಗು; ಕೊತ. ಚಿಗ್]

**ಸಿಗ್ಗು$_2$** (ನಾ). ಒಂದು ಬಗೆಯ ಮರ; ನುಗ್ಗೆಮರ : ಸಿಗ್ಗು ಗುಗ್ಗುಳಂ ಮತ್ತಮನೇಕ ವೃಕ್ಷತತಿಯಿಂದೆಸೆದಿರ್ದುದು ತದ್ವನಾಂತರಂ (ಸಳಚಂ. ೭೧).

[< ಪ್ರಾ. ಪಾಲಿ. ಸಿಗ್ಗು./ ಸಂ. ಶಿಗ್ರು]

**ಸಿಗ್ಗುಗೆಡಿಸು** (ಕ್ರಿ). ನಾಚಿಕೆಗೆಡುವಂತೆ ಮಾಡು; ಅವಮಾನಗೊಳಿಸು: ಸಿಂಧುರಾಜನನು ಸದೆದು ಸಿಗ್ಗುಗೆಡಿಸಿಹನು (ಕಂಕ. ೬-೩). [ಸಿಗ್ಗು$_1$ + ಕೆಡಿಸು$_1$]

**ಸಿಗ್ಗುಡಿತೆ** 'ಸೇಗುಡಿತೆ' ನೋ.

**ಸಿಗ್ಗೊಂದು** (ಕ್ರಿ). ನಾಚಿಕೆಯನ್ನು ಹೊಂದು; ಲಜ್ಜೆಗೊಳ್ಳು: ಹಿಂದೆ ಜಂಗಮ ವೇಷಮಂ ನೆವದಿಂದೆ ಧರಿಸಿದ್ದುದನಱಿದು ಸಿಗ್ಗೊಂದಿ (ಬಸಪು. ೩೮-೧೯).

[ಸಿಗ್ಗು$_1$ + ಒಂದು$_1$]

**ಸಿಚ** (ನಾ). ಬಟ್ಟೆಯ ಅಂಚು; ಸೆರಗಿನ ತುದಿ; ಕರೆ: ''ವರ್ತಿ ಸಿಚಮೆನೆ ಕರೆಯಕ್ಕು'' (ಮಂಗರಾ. ೧೧೧-೨೮). [ಸಂ. ಸಿಚ್]

**ಸಿಚಯ** (ನಾ). ೧. ಅರಿವೆ; ಬಟ್ಟೆ; ವಸ್ತ್ರ: ''ವಾಸಮಾಚ್ಛಾದನಂ ವಸ್ತ್ರಂ ಪಟಂ ಚೇಲಮಾ ಸಿಚಯಂ . . . ಅಂಬರಮೆನಲ್ಕಾ ಸೀರೆಯಕ್ಕು'' (ಮಂಗರಾ. ೧೧೦-೨೭). ೨. ಮೇಲುಹೊದಿಕೆ; ಸೆರಗು: ತೊಲಗುತ್ತಿದೆ ಘನಕುಚಯುಗಳದಿಂದೆ ನೋಡಿದೆ [ಸಿಚಯಂ] [ಪಾಠಾಂ. ಸಾಚರಿ] ನಿನ್ನಯ ಮುಂದೆ (ಕಾದಂಪೂ. ೪೮೨). ೩. ಅಂಗಿ; ಕವಚ: ಚಳವಾಲೋರಸ್ಸ್ಥಳಂ ಕಾಂಚನರುಚಿಸಿಚಯಂ ಸಂಚಲತ್ಕರ್ಣಪೂರಂ . . . ವೃಂದಾವನಾಂತಸ್ಸ್ಥಳಮಂ ಪೊಕ್ಕಂ (ಜಗವಿ. ೪-೧೧೪). ೪. ಹಳೆಯ ಬಟ್ಟೆ; ಜೀರ್ಣವಸ್ತ್ರ. [ಸಂ.]

**ಸಿಚಯಕ** (ನಾ). ಕುಪ್ಪಸ; ರವಿಕೆ: ವಸುಧಾಂಗನೆ ಮೇಲ್ಕೊಂಡಳೊ ಪೊಸ ಪಸುರ್ವಟ್ಟೆಯ ವಿಳಾಸದಿಂದೆಸೆವ ದುಕೂಲಸಿಚಯಕಮನೆನೆ ತನ್ನದಿಯೆಸೆದುದು (ಜಗವಿ. ೮-೯). [ಸಂ.]

**ಸಿಟಕು** 'ಸಿಡುಕು$_2$' ನೋ.

**ಸಿಟ್ಟಿ, ಸಿಷ್ಟಿ, ಸುಟ್ಟಿ$_1$** (ನಾ). ೧. ಜಗತ್ತು; ಪ್ರಪಂಚ: ಇಷ್ಟನೊರ್ವ್ವನಧಿದೇವತೆ ಗೆಂದೊಸದಿತ್ತುದಂ ದುಷ್ಟನೊರ್ವ್ವನದಱ ಫಳಮಂ ಸಲೆ ತಿಂದವಂ ಸಿಟ್ಟಿ ಮೇಲೆ ಪರಮಾತ್ಮನೆ ಬಂದೆಡೆಗೋವದಂ ಕಟ್ಟಿ ಕೊಣ್ಣ ಬದಿರನ್ತೆ ಕುಲಕ್ಷಯಮಾಗುಗುಂ (ಎಕ. VIII, ನಗರ. ೫೮-೧೯; 1062); ಮಾದಿಯಣಂ ಪುಟ್ಟಿ ಸಿಟ್ಟಿಯೊಳು ಕರಮೆಸೆದಂ (ಬೊಂಕಶಾ. ೧೯೩೯, ಕುಂದಗಲ್. ೧೦೬-೧೩; ?). ೨. ಸೃಷ್ಟಿ; ನಿರ್ಮಾಣ : ಸೃಷ್ಟಿ-ಸಿಟ್ಟಿ (ಶಮದ. ೨೮೩ ಪ್ರಯೋ); ಕಣ್ಣಿಗೆ ಕಾಣುವ ಬೊಮ್ಮನ ಸಿಟ್ಟಿಯೊಳೀ ತಣ್ಣದಿರನೆ ಸುಂದರನು (ನವಿಲು. ೬೮-೫). **ಸಿಷ್ಟಿ** : ೧. ಸಿಷ್ಟಿಯೊಳಗ್ಗಳಮೆನಿಪ್ಪ ಬರ್ಮ್ಮನೆ ಗಾವುಣ್ಡಂ (ಸೌಇಇ. XX, ೩೫-೧೪; 1055). **ಸುಟ್ಟಿ$_1$** : ೨. ಸೃಷ್ಟಿ, ಸುಟ್ಟಿ; ಕಷ್ಟ,ಕಟ್ಟಿ (ಶಬ್ದಾನು. ೧೬೦ ಪ್ರಯೋ). [< ಸಂ. ಸೃಷ್ಟಿ]

**ಸಿಟ್ಟಿಪತಿ** (ನಾ). (ಆಲಂ) ಭೂಮಿಯ ಒಡೆಯ; ರಾಜ: ಸಿಟ್ಟಿಪತಿ ಜಯಸಿಂಹರಾಯನ ಕೊಟ್ಟಣವ ವಾರಿಯರ ಕೈಯಲಿ ಕುಟ್ಟಿಸಿದನೊಲವಿಂದೆ ಶಂಕರದಾಸಿಮಯ್ಯಗಳು (ಶಂಕದಾ. ೯ ಸೂಚನೆ). [< ಸಂ. ಸೃಷ್ಟಿಪತಿ]

**ಸಿಟ್ಟು** (ನಾ). ಮುಳಿಸು; ಕೋಪ: ಮುನಿಸಂಕುಳಮುಮನಾನುರ್ಕಿಂದಂ ಪಳಿದೊಡೆ ಮುನಿದೆನ್ನ ಸಿಟ್ಟನೆನ್ನೊಳ್ ಕಳೆದಂ (ಧರ್ಮಾಮೃ. ೧-೧೭೭); ಆದರೆ ಸಿಟ್ಟು . . . ನನಗೇ ಹೆಚ್ಚು (ಹಾಹುತ್ತ. ೪); ಬಡವನ ಸಿಟ್ಟು ದವಡೆಗೆ ಮೂಲ (ಗಾದೆ).

**ಸಿಟ್ಟಂ ನುಡಿ** = ಕೋಪದಿಂದ ಮಾತನ್ನಾಡು; ಮಾತಿನಲ್ಲಿ ಸಿಟ್ಟನ್ನು ವ್ಯಕ್ತಪಡಿಸು: ವೈರಿನಾಯಕದಿಕ್ಕುಂಜರಂ ಮಟ್ಟನಿರದೆ ಸಿಟ್ಟಂನುಡಿವ ದುಟ್ಟನಾಯಕರ ನಿಟ್ಟೆಲ್ವಂ ಮುಱಿದು (ಕೊಲ್ಹಾಶಾ. ೧೫-೬೩; 1186). **ಸಿಟ್ಟಾಗು** = ಕೋಪಗೊಳ್ಳು; ರೋಷಹೊಂದು; ಕೆರಳು: ದಣಿಗಳು ಆ [ಮಾ]ತು ಕೇಳಿ ಮಹ ಸಿಟ್ಟಾಗಿ (ಎಕ. XI, ಮೊಳಕಾ. ೨೫-೭೭; 1665); ಅನ್ಯಾಯ ಮಾಡಿದರೆ ದೇವರು ನಿಮ್ಮ ಮೇಲೆ ಸಿಟ್ಟಾಗುವನು (ಮುಂಬಯಿ. ಕಿ. ೪-೯೪). **ಸಿಟ್ಟಿಗೆಬ್ಬಿಸು** = ಕೋಪಗೊಳ್ಳುವಂತೆ ಮಾಡು; ರೇಗಿಸು; ಉದ್ರೇಕಿಸು: ವಿನಾಕಾರಣ ಅವನನ್ನು ಸಿಟ್ಟಿಗೆಬ್ಬಿಸಿದಂತಾಯಿತು (ರೂಢಿ). **ಸಿಟ್ಟಿಗೇಳು** = ಸಿಟ್ಟಾಗು: ಸಿಟ್ಟಿಗೆದ್ದಾಗ ಅದು ಗುರುಗುಟ್ಟುತ್ತದೆ (ಮುಂಬಯಿ. ೪-೩೬); ನೀವು ಸಿಟ್ಟಿಗೇಳುವ ಕಾರಣವೂ ಇಲ್ಲ (ಕಮನೆ. ೩೨೩). **ಸಿಟ್ಟಿನದು** = ಕೋಪವನ್ನು ಸ್ವಭಾವವಾಗುಳ್ಳುದು: ಗಂಡಕ . . . ಜಾತ್ಯಾಸಿ ಸಿಟ್ಟಿನದಲ್ಲ (ಮುಂಬಯಿ. ೪-೪೭). **ಸಿಟ್ಟುಇಳಿಸು** = ಕೋಪವಿಳಿಯುವಂತೆ ಮಾಡು; ರೋಷವು ಕಡಮೆಯಾಗುವಂತೆ ಮಾಡು: ಆತನ ಸಿಟ್ಟು ಇಳಿಸಿದನು (ಮುಂಬಯಿ. ಕಿ. ೫-೪೭). **ಸಿಟ್ಟು ತೀರಿಸಿಕೊಳ್ಳು** = ರೋಷವನ್ನು ತೀರಿಸಿಕೊಳ್ಳು: ಮಗನ ಕೊಂದ ಸಿಟ್ಟು ತೀರಿಸಿಕೊಳ್ಳಬೇಕೆಂದು (ಮುಂಬಯಿ. ಕಿ. ೫-೪೭). **ಸಿಟ್ಟು ನುಂಗಿಕೊಳ್ಳು** = (ಆಲಂ) ಕೋಪವನ್ನು ವ್ಯಕ್ತಪಡಿಸದೆ ಇರು; ರೋಷವನ್ನು ತಡೆದುಕೊಳ್ಳು, – ಅಡಗಿಸಿಕೊಳ್ಳು: ಏನಾದರಾಗಲಿ ಸಿಟ್ಟು ನುಂಗಿಕೊಂಡು ಸುಮ್ಮನಿದ್ದುಬಿಡೋಣವೆಂದರೆ ಸಾಧ್ಯವಾಗಲಿಲ್ಲ (ರೂಢಿ). **ಸಿಟ್ಟುನೆತ್ತಿಗೇರು** = (ಆಲಂ) ಅತಿಯಾದ ಕೋಪವುಂಟಾಗು; ಕೋಪೋದ್ರೇಕ ಉಂಟಾಗು: ಅಧ್ಯಕ್ಷತೆವಹಿಸಿದ್ದ ಮೋಹನನಿಗೆ ಈ ಭಾಷಣಗಳನ್ನು ಕೇಳಿ ಸಿಟ್ಟು ನೆತ್ತಿಗೇರಿತ್ತು (ಪಂಜಪಂ. ೧೨೩). **ಸಿಟ್ಟು ಮಾಡು** = ಕೋಪವನ್ನು ವ್ಯಕ್ತಪಡಿಸು; ರೇಗು : ಮನೆಯ ಯಜಮಾನನು ಆಳುಮಕ್ಕಳನ್ನು ಒದರುತ್ತಾ ಅವರಿಗೆ ಸಿಟ್ಟು ಮಾಡುತ್ತಾ ಹಕ್ಕೆಯೊಳಗೆ ಬಂದನು (ಮುಂಬಯಿ. ೪-೪೩). [ದೇ. ‖ ತಮಿ. ಚೀಱು, ಚೀಱ್ಱಮ್; ಮಲ. ಚೀಱು, ಚೀಱ್ಱು; ತುಳು. ಶಿಟ್ಟು, ಸಿಟ್ಟು, ಸೀರು; ತೆಲು. ಚೀರು]

**ಸಿಟ್ಟುಗುಟ್ಟು** (ಕ್ರಿ). ಕೋಪದಿಂದ ರೇಗು; ಮುಳಿಸಿನಿಂದ ಸಿಡುಕು : ಇಂತು ರೋಮಜರೆಂಬರು ಸಿಟ್ಟುಗುಟ್ಟಿ ತರುಮರನಡಿಯಲಿದ್ದರು (ಬಸವ. ೮೫೭); ಅಷ್ಟು

ಮಹಿಷಿಯರು ಸಿಟ್ಟುಗುಟ್ಟಲಿ ಎನ್ನ . . . ಪುರಂದರವಿಠಲನ್ನ ಕಂಡಲ್ಲಿ ಬಿಡುವೆನೆ (ಪುರಂದ. ಧಾ. ೧-೧೬೯-೪). [ಸಿಟ್ಟು + ಕುಟ್ಟು₁]

**ಸಿಟ್ಟೇರು** (ಕ್ರಿ). ಕೋಪವು ಹೆಚ್ಚಾಗು; ರೋಷವೇರು : (ಪೆನ್ಸಿಲನ್ನು ಅಪ್ಪಳಿಸಿ ಗದ್ದುಗೆಯಿಂದಿಳಿದು ಅತ್ಯಂತ ಸಿಟ್ಟೇರಿ) . . . (ಹೋಗುವನು) (ಪ್ರಕಾಶ. ೭೫). [ಸಿಟ್ಟು + ಏರು₁ (< ಏಱ್₁)]

**ಸಿಡಕ್ಕನೆ** (ಅ). ಸಿಟ್ಟಿನಿಂದ ರಭಸವಾಗಿ ಹೋಗುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಲಲಿತ ಸಿಡಕ್ಕನೆ ತನ್ನ ರೂಮಿಗೆ ಹೊರಟುಹೋಗಿದ್ದಳು (ರೂಪಸ. ೬೭). [ಸಿಡಕ್₀ + -ಅನೆ₁]

**ಸಿಡಿ₁** (ಕ್ರಿ). ೧. ಚಿಮ್ಮು; ಎಲ್ಲ ಕಡೆಗೂ ಎಗರು, — ಹಾರು : ಲವಣಾಂಬುರಾಶಿ ಕುಕ್ಕುಟಗುದಿವಲ್ಲಿ ಕೂಟ್ಟುದಿಯೆ ಮೇಗೆ ಸಿಡಿಲ್ದಗುಳಂತೆ ಕೂಡೆ ತತ್ತಟಗುದಿಯುತ್ತು ಮಿರ್ಪ ಕುದಿಯೊಳ್ ಸಿಡಿದಲ್ಲಿಯ ಮುತ್ತುಗಳ್ (ಪಂಪಭಾ. ೧೧-೧೫೩); ಕ್ಷೀರವಾರಿಧಿಯ ನಮರಸಂದೋಹವು ಭೋರೆಂದು ಕಡೆವಲ್ಲಿ ಸಿಡಿದಾ ನೀರ ಬಿಂದುಗಳೆನಲೊಗೆದವಾಗಸದೊಳು ಚಾರುನಕ್ಷತ್ರಸಂಕುಳವು (ಅಂಜಚ. ೫-೧೧೪); ನೆರೆದು ಘನಘನಮದೇಭೋತ್ಕರ ಮಿಾಂಟಿ ಮರುತ್ತರಂಗಿಣೀಜಳಮಂ ಫೂತ್ಕರಿಸೆ ಸಿಡಿದಿಳಿವ ಕಣಗಣದಿರವೆನಿಸಿದುದರರೆ ಸುರಿವ ಪೆರ್ಮಳೆ ನಭದಿಂ (ರಾಜಶೇ. ೮-೧೧೯). ೨. ನೆಗೆ; ಹಾರು : ಆ ಕುಳಿಂದಂ . . . ಸಿಡಿದೋಡುವಾ ಕುರಂಗದ ಬೆನ್ನನೈದಿದಂ (ಜೈಮಿಭಾ. ೨೮-೫೩); ಕೋವಿಗಳ್ ಬಡಿಯೆ ಮಿಡಿಗಳ ಹುಲ್ಲೆ ಕಡವೆಗಳವೆಲ್ಲ ಸಿಡಿದೋಡಿದುವು ತಂಡತಂಡದಿಂ ಕಂಡೆಡೆಗೆ (ಕಾಲೂರ. ೯೨-೧೬೧). ೩. ಚೆಲ್ಲಾಪಿಲ್ಲಿಯಾಗು; ಚೆದರು; ಹರಡು : "ಸಿಡಿ — ವಿಕೀರ್ಣೇ, ಸೂಕ್ಷ್ಮಾಯಸದಾಹಾಂತಗಜಕ್ರೋಧವಸ್ತುನೋಃ" (ಶಮಧಾ. ನ); ಹಿಂದೆ ಹಿಡಿವರು . . . ತಿರುಗಿದರೆ ಬಲದಿಂದ ಕೈಮಾಡುವರು ಕವಿದರೆ ಸಿಡಿವರೆಡಬಲಕೆ (ಕುವ್ಯಾದ್ರೋ. ೩-೩೦); ಸಿಂಗದ ಬಟ್ಟೆ ನೋಳ್ಪೊಡಿಂತಿದು ಗಜಮೌಕ್ತಿಕಂ ಸಿಡಿದುದಿಲ್ಲಿ . . . ಎಂದು ಪಲವಚ್ಚೆಯಂ ಪರೀಕ್ಷಿಸಿ (ಶಬಶಂ. ೩-೪೬). ೪. ಒಡೆ; ಬಿರಿ ; ಸೀಳು : ಕರುಳುಗಿಯೆ ತಲೆ ಸಿಡಿಯೆ ನಿಟ್ಟೆಲು ಮುಱಿಯೆ . . . ಹಳಚಿದರು (ಕುವ್ಯಾಭೀ. ೪-೨೮); ಸಿಡಿದುದು ದಂತಿದಂತಮದು ಸಂಗಡಮಾಗಿರೆ ಕುಂಭಮೌಕ್ತಿಕಂ . . . ಬೇಸಗೆ ಯುಗ್ರಮೆಂತುಟೋ (ರಾಜಶೇ. ೫-೪೬); ಕಲ್ಲು ಮುಳ್ಳನು ತುಳಿದು ಕಾಲೆಲ್ಲ ಸಿಡಿಯುತಿದೆ ಕಣ್ಣೀರು ಹರಿಯುತಿದೆ (ಕವಿಸೋ. ೭೬-೨). ೫. ಆಸ್ಫೋಟವಾಗು ; ಸ್ಫೋಟಿಗೊಳ್ಳು: ಮೊಱೆದೆಱಗಿಕೊಳ್ವ ಮೞೆ ಭೋರ್ಗರೆದೂದುವ ಗಾಳಿ ಸಿಡಿದು ಪೊಯ್ವ ಸಿಡಿಲ್ ಕಾರಿರುಳೊಳಗುರ್ವಂ ಪಡೆದಿರೆ ಮರವಾನಸನೆನೆ ತಪಸ್ವಿ ಮರವೊದಲಿರ್ದಂ (ಆದಿಪು. ೬-೩೨); ಮೞೆ ಭೋರ್ಭೋರೆಂದಹೋರಾತ್ರಮುಮುಡುಗದೆ ಕೊಳ್ವಲ್ಲಿ . . . ಮೆಯ್ಯಂ ಜಳೂಕಾವಳಿಗಳ್ ಪೀರ್ವಲ್ಲಿ ಮರ್ವುರ್ವಿಸೆ ಸಿಡಿದು ಸಿಡಿಲ್ ಬಂದು ಪೊಯ್ವಲ್ಲಿ ಹೈಮಾಚಳಮಿರ್ಪಂತಾಗಳಿರ್ದ[ಂ] . . . ಯೋಗಿನಾಥಂ (ಸುಕುಮಾ. ೪-೯); ವಿಜ್ಞಾನವು ಮಾನವನ ಕಲ್ಯಾಣಕ್ಕೆಂದು ಜನ್ಮತಾಳಿ ಸಿಡಿಯುವ ಪರಮಾಣುಗಳನ್ನೂ ಜಲಜನಕಮಾರಕಅಣುಗಳನ್ನೂ ನಿರ್ಮಿಸಿ ವಿಶ್ವಮೇಧಕ್ಕೆ ಅಣಿಮಾಡುತ್ತಿದೆ (ಭಾರದ. ೧೭೫). ೬. (ಕಣ್ಣೀರನ್ನು) ಮಿಡಿ; ಸೂಸು : ಘಟೋತ್ಕಚನ ಸಾವಿಂಗೆ ಕರಮುಟಲ್ದು ಕಣ್ಣ ನೀರಂ ಸಿಡಿವಂತಕಾತ್ಮಜನನನಂತನಿಂತೆಂದಂ (ಪಂಪಭಾ. ೧೨-೧೫ ವ); ವಿನಯಮಂ ನುಡಿಯುತುಂ ಮುದಶ್ರುವಂ ಸಿಡಿಯುತುಂ ಪುನಃಪುನರಾಲಿಂಗನಂಗೆಯ್ಯುತುಂ (ಶಾಂತೀಶ್ವ. ೫-೧೭ ವ); ನುಡಿಯದಶ್ರುಗಳಂ ಸಿಡಿಯುತ್ತಿರೆ (ಪುಷ್ಪಪು. ೩-೭೨). ೭. ಕುಣಿ; ನೆಗೆ : ಸಿಡಿದ ಮಿಾಸೆಯ ಬಿಗಿದ ಹುಬ್ಬಿನ ಜಡಿವ ರೋಮಾಂಚನದ ಖಾತಿಯ ಕಡುಹುಕಾಱರು ಮಸಗಿದರು (ಕುವ್ಯಾದ್ರೋ. ೫-೭೯). ೮. (ದೂರಕ್ಕೆ ಚಿಮ್ಮಿ) ಪ್ರತ್ಯೇಕವಾಗು; ಬೇರ್ಪಡು : ಶ್ರೀಸಂಗಮೇಶ್ವರಲಿಂಗದ . . . ವೀರದೊಳೊಂದಂ ಲೇಸನೀಯೆ ವೀರಭದ್ರನಾದಂ ಚೆಲುವಿನೊಳಿನಿತುಂ ಸಿಡಿಯೆ ಕಾಮನಾದಂ (ಬಸರ. ೮-೧೩೬). ೯. ದೂರ ಸರಿ; ದೂರವಾಗು : ಫಡಫಡೆತ್ತಲು ಸ್ವಾಮಿದ್ರೋಹರು ಸಿಡಿದರೋ ನಿಜಕುಲದ ಬೇರ್ಗಳ ಕಡಿದರೋ . . . ಎನುತ ಸೇನೆಯ ತಡೆದು ನಿಂದನು (ಕುವ್ಯಾಕ. ೨-೧೦); ಪಡೆಗಾರು ಕರ್ತರೆಲ್ಲಿರಿಸಿದೆ ವಿಜಯಾಂಕ ಸಿಡಿದೇಕೆ ಬಂದೆ ನೀನೆನಲು (ಭರಚ. ೩೭-೩); ಅಲರ್ಗೊಯ್ಯು ಬೇಳಂಬದಿಂದೆ ಕೆಲ ಸಿಡಿದು ಬಂದಾ ವಿಷಯೆ ಚೂತದ್ರುಮದ ನೆಳಲೊಳು . . . ಮಲಗಿಹ ಚಂದ್ರಹಾಸನಂ ಕಂಡು (ಜೈಮಿಭಾ. ೩೦-೧೯). ೧೦. (ಆಲಂ) ಯಾತನೆಯಿಂದ (ತಲೆಯ) ಸ್ನಾಯುಗಳು ಮಿಡಿ, — ತುಡಿ: ಊಟ ಮುಗಿಸಿ ಚಾಪೆಯಲ್ಲಿ ಉರುಳಿಕೊಂಡಾಗ ಬ್ಯಾರಿಗಳ ತಲೆ ಸಿಡಿಯುತ್ತಿತ್ತು (ಮುಂಗಾಮು. ೨). ೧೧. ಕೆರಳು; ಸಿಟ್ಟಿಗೇಳು : ಹಂಸನಾಥನ ನೋಡುವಾಗ ಕರ್ಮಾಳಿವಿಧ್ವಂಸನವಹುದೆನಲಿವನು ತಾಂ ಸಿಡಿದು (ಭರಚ. ೨೪-೧೬); ತನ್ನ ಮಗಂದಿರೇ ಎಂದಾದರೊಮ್ಮೆ ಅವರಿಗೆ ಕಠಿನಮಾತುಗಳನ್ನು ಆಡಿದ್ರೋ ಆದರೆ ಆಕೆ ಸಿಡಿದು ಹೋಗುವಳು (ಮಧುನ. ೫).

**ಸಿಡಿಸಿಡಿ₁** (ದ್ವಿರುಕ್ತಿ) : ಮಡುವಿನಿಂ ಪೊಱಮಟ್ಟು ಮಱಿಮಿಾನಿನಂತೆ ಕೆಲ ಸಿಡಿಸಿಡಿದು ಪೊರಳಿ (ಚಬಪು. ೧೯-೪೩).

**ಸಿಡಿ₂** (ನಾ). ೧. ಸಿಡಿಯುವಿಕೆ ; ಸ್ಫೋಟ : 'ಸಿಡಿಗೊಳ್ಳು' ಪರಾ. ೨. ಹಾರಿದ ಸಣ್ಣ ಚೂರು, — ಸಣ್ಣ ಕಣ ; ಸ್ಫುಲಿಂಗ : ಒಂದು ರತ್ನಮಂ ತೆಗೆದು ಸಿಲೆಯ ಮೇಲಿಟ್ಟು ಬೇಱೊಂದು ಸಿಲೆಯೊಳ್ ಪೊಯ್ಯೆ ಸಿಡಿದ ಸಿಡಿಯೊಂದು ಗಳಹನ ನಡುನೊಸಲಂ ತಾಗಿ ಪರಿವ ನೆತ್ತರ ಪೊನಲಿಂ (ಪುಣ್ಯಾಸ್ರ. ೧೧-೨೦). [< ಸಿಡಿ₁]

**ಸಿಡಿ₃** (ನಾ). ೧. ಕಬ್ಬಿಣದ ಕೊಕ್ಕೆ : (೬). ೨. ಹಳ್ಳಿಗಳ ವಾರ್ಷಿಕಹಬ್ಬಗಳಲ್ಲಿ ಗ್ರಾಮದೇವತೆಗೆ ಸಲ್ಲಿಸುವ ಒಂದು ಬಗೆಯ ಸೇವೆ ; ℙ ಎತ್ತಿನ ಗಾಡಿಯ ಮೇಲೆ ಬಾವಿಯಿಂದ ನೀರನ್ನೆತ್ತುವ ಏತದಂತಹ ಏತವನ್ನು ಹೂಡುತ್ತಾರೆ. ಆ ಏತದ ತುದಿಯಲ್ಲಿ ಎರಡು ಕಬ್ಬಿಣದ ಕೊಕ್ಕೆಗಳಿರುತ್ತವೆ. ದೇವರ ಗುಡಿಯ ಮುಂದೆ ಹೆಬ್ಬಾಗಿಲಿನ ಬಳಿ ಈ ಏತದ ಗಾಡಿ ನಿಂತಿರುತ್ತದೆ. ಹರಕೆ ಸಲ್ಲಿಸುವ ವ್ಯಕ್ತಿ ಅಲ್ಲಿಗೆ ಬಂದಾಗ ಏತವನ್ನು ಬಗ್ಗಿಸಿ ಅದರ ತುದಿಯಲ್ಲಿರುವ ಕೊಕ್ಕೆಗಳನ್ನು ಸೊಂಟಕ್ಕೆ ಚುಚ್ಚಿ ಅನಂತರ ಏತವನ್ನು ಮೇಲಕ್ಕೆ ಎತ್ತುತ್ತಾರೆ. ಹೀಗೆ ಎತ್ತಿ ಇಳಿಸಿಯಾದ ಮೇಲೆ (ಅದರಿಂದಾದ ಗಾಯಕ್ಕೆ ಔಷಧಿಹಾಕಿ) ಆ ವ್ಯಕ್ತಿಯನ್ನು ದೇವರ ಮುಂದೆ ಕರೆದುಕೊಂಡು ಹೋಗಿ ಪೂಜೆ ಮಾಡಿಸುತ್ತಾರೆ. ಇದು ಹಿಂದೆ ಸಿಡಿ ಆಡಿಸುತ್ತಿದ್ದ ವಿಧಾನ. ಈಗೀಗ ಸೊಂಟಕ್ಕೆ ಕಬ್ಬಿಣದ ಕೊಕ್ಕೆಗಳನ್ನು ಚುಚ್ಚುವ ಬದಲು ಬಟ್ಟೆಯನ್ನು ಸೊಂಟಕ್ಕೆ ಬಿಗಿದು ಸಿಡಿಕಂಬದ ಅಡ್ಡಮರಕ್ಕೆ ತೂಗುವಂತೆ ಕಟ್ಟುವ ಸೌಮ್ಯವಿಧಾನಗಳು ರೂಢಿಗೆ ಬಂದಿವೆ : ತಿಂಗಳಿಗೆ ಒಂದು ಬಾರಿ ಉಚ್ಚಂಗಮ್ಮನಿಗೆ ಉತ್ಸವ, ವರುಷಕ್ಕೆ ಒಂದು ಬಾರಿ ಸಿಡಿ ಈ ಪ್ರಕಾರ ನಡೆಯುವಂತೆ ಏರ್ಪಾಡು ಮಾಡಿಸಿದ್ದನು (ಚಿತ್ರಪಾ. ೫೮); ಕನ್ನಡರಮಣಿಯರು ಧಾರಾಳವಾಗಿ ಅನುಸರಿಸಿದ ಸಿಡಿ, ಸಹಗಮನ, ಆನೇ ಕಾಲ ಹರಕೆ, ಜೋಹಾರ ಮುಂತಾದ ಕಠೋರವಾದ ಪದ್ಧತಿಗಳು ಅವರ ವೀರಜೀವನದ ಉಜ್ವಲತೆಯನ್ನು ಬೀರುತ್ತವೆ (ಕಮಿಂಚ. ೨೯). ೩. ಸಿಡಿಯಾಡಲು ಹರಸಿಕೊಂಡ ಗುಂಪು : ಏಳೂರ ಸಿಡಿ ಬಂದು ತಾನಾಕೆ ನಿಂತಾವು ತಾಯೂರ ಸಿಡಿ ಬರಲಿಲ್ಲಾ ದೊಡ್ಡಮ್ಮ ಕೋಡ್ಗಲ್ಲ ಹತ್ತೀ ದನಿ ತೋರೇ (ಮುಟ್ಟಪ. ೬೬). ೪. ಪ್ರಾಣಿಗಳನ್ನು ಹಿಡಿಯಲು ಬಳಸುವ ಸಾಧನ; ಕೊಕ್ಕೆ ಬಲೆ ಮುಂತಾದವು : ಆ ಬಲೆಯೊಳ್ತವೆ ಸಿಲ್ಕಿದಂ ಸಮಂತಾಱುಗೆ ಪಣ್ಣಿ ಪೋದ ಸಿಡಿಯೊಳ್ಕಿಗೆ ಬಿಟ್ಟ ಬಿಡಾಲನಂದದಿಂ (ಉದ್ಭಟ. ೬-೧೨೬); ಉರುಳು ಪಾಡಿ ಸಿಡಿ ಸೆಳೆಗಾಣ ಬೆಳ್ಳಾರ ತಡಿಕೆ ದೀವದ ಖಗಮೃಗಸಂತತಿಗೂಡಿ ನಡೆತಂದನಾ ವನಚರನು (ನೇಮಿಸಂ. ೨-೩೮); ಹಾಳು ಹೆಗ್ಗಣದ ಉಪದ್ರವವಂತೂ . . . ಎಷ್ಟು ಬೋನುಗಳನ್ನು ಮಾಡಿಕೊಂಡಾಗ್ಲೂ ಸಿಡಿ ಒಡ್ಡಿಕೊಂಡಾಗ್ಲೂ ಇದ್ದೇ ಇದೆ (ಮುದ್ರಾಮಂ. ೧೧೬). ೫. ಒಂದು ಬಗೆಯ ಆಯುಧ : ಒಡ್ಡಿದ ಸೂಲಂಗಿಗಳಿಂದೊಡ್ಡಿದ ಡೆಂಕಣಿಯ ಮೇಲೆ ಆಲುವ ಹೆಣ ಮತ್ತಡ್ಡಾಯುಧ ಸಿಡಿ ಗರಗಸ ಒಡ್ಡಿಹ ಮಾಱಂಬುಗಂಡ ನೃಪಕುಲತಿಲಕಂ (ನನ್ನಚಾ. ೪-೧೭೨). ೬. ಆನೆಯನ್ನು ಚೋದಿಸುವ ಸಾಧನ ; ಅಂಕುಶ : "ಸಿಡಿ — ವಿಕೀರ್ಣೇ, ಸೂಕ್ಷ್ಮಾಯಸದಾಹಾಂತಗಜಕ್ರೋಧವಸ್ತುನೋಃ" (ಶಮಧಾ. ನ); ಸಿಡಿಯಂ ಕಂಡ ಸಿಂಧುರದಂತೆ ಕೆಳರ್ದು ಸೇನಾಸಮನ್ವಿತಂ ಪೊಱಮಟ್ಟು (ಮಹಾನೇ. ೭-೯೩ ವ).

**ಸಿಡಿ ಚುಚ್ಚಿಸಿಕೊಳ್ಳು** = (ಹರಕೆಯನ್ನು ಸಲ್ಲಿಸುವುದಕ್ಕಾಗಿ) ಸಿಡಿಕಂಬದ ಅಡ್ಡಮರಕ್ಕೆ ತೂಗುವಂತೆ ಇರುವ ಕಬ್ಬಿಣದ ಕೊಕ್ಕೆಯನ್ನು ಸೊಂಟಕ್ಕೆ ಚುಚ್ಚಿಸಿಕೊಂಡು ಸಿಡಿಯಾಡು : ಹತ್ತು ಹದಿನೆರಡು ವರ್ಷಗಳಿಗೊಮ್ಮೆ ತನ್ನ

ಅಪೂರ್ವಉತ್ಸವಕಾಲದಲ್ಲಿ , ಜನ ಸಿಡಿ ಚುಚ್ಚಿಸಿಕೊಳ್ಳುವ ಉತ್ಸವ ಜರುಗಿಸಿ , ಭಕ್ತರು ಕೇಳಿದಂಥ ವರಗಳನ್ನು ಸಲ್ಲಿಸಿ , ಮೆರೆದ ಹಿರಿಯ ದೆವ್ವ ಕಲ್ಕುಡ (ಕುಡಿಕೂ. ೨).

[ದೇ. ॥ ತಮಿ. ಚೆಟಿಲ್; ತುಳು. ಸಿಡಿ, ಸೆಡಿ; ತೆಲು. ಸಿಡಿ, ಸಿಡುಲು, ಸಿಳ್ಳು]

**ಸಿಡಿ$_{4}$** ‘ಸೀಡಿ’ ನೋ.

**ಸಿಡಿ$_{5}$** (ನಾ). ಮೆಟ್ಟಿಲು ; ಏಣಿ : (ಕ).

[<— ಮರಾ. ಶಿಡೀ , ಶಿಢೀ , ಸಿಡೀ , ಸಿಢೀ; ಹಿಂ. ಸೀಢೀ./ ಪ್ರಾ. ಸಿಡ್ಢೀ./ ಸಂ. ಶ್ರೇಢೀ , ಶ್ರೇಣೀ]

**ಸಿಡಿಂಗು** (ನಾ). (?) : ಚಿರಕಾಲವಸುರನ ಸಿಡಿಂಗಿತ್ತು ಕೊಟ್ಟ ಜವ [ಪಾಠಾಂ. ಸಿಗಳ್ಕೆ ಕೊಟ್ಟ ಜೀವಿತ್ತು] ಚಿರಕಾಲವಂಗಜನ ಬರ್ದುಗೆಯೊಳುಂ ಬಳಿಕ ಚಿರಕಾಲ ಬಸುಱ ಭಂಗದೊಳು ಮೇಣ್ಚಿರಕಾಲ ಮಂಗಲದಿ ಗಿರಿಜಾತೆಯ (ಮದೇಪು. ೧೩-೩). [?]

**ಸಿಡಿಂಬ** ‘ಸಿಡುಂಬು’ ನೋ.

**ಸಿಡಿಂಬು** ‘ಸಿಡುಂಬು’ ನೋ.

**ಸಿಡಿಕಂಬ** (ನಾ). ಸಿಡಿಯಾಡಿಸಲು ನೆಟ್ಟ ಕಂಬ, — ಸನ್ನೆಗೋಲು : ದೇವರ ಗುಡಿಯ ಮುಂದೆ ಸಿಡಿಕಂಬದ ಬಳಿ ಸಾರಿಸಿ , ರಂಗೋಲಿ ಇಟ್ಟು , ಪೂಜೆ ಮಾಡಿದ ಒಂದು ಸ್ಥಳದಲ್ಲಿ ಬಂದು ನಿಂತು . . . ಅಬ್ಬರಿಸುತ್ತಾನೆ (ನನ್ನೂರು. ೬೪).

[ಸಿಡಿ$_{3}$ + ಕಂಬ$_{1}$ (< ಕಂಭ)]

**ಸಿಡಿಕಲ್ಲು** ‘ಸಿಡಿಗಲ್’ ನೋ.

**ಸಿಡಿಖಂಡ** (ನಾ). ಹಾರಿದ ಮಾಂಸಖಂಡ : ‘ಸಿಡಿಖಂಡಂಗೊಳ್’ ಪರಾ.

[ಸಿಡಿ$_{1}$ + ಖಂಡ]

**ಸಿಡಿಖಂಡಂಗೊಳ್** (ಕ್ರಿ). ಚಿಮ್ಮಿದ ಮಾಂಸಖಂಡವನ್ನು ತೆಗೆದುಕೊಳ್ಳು : ಅಡಗಿನ ಕಡುವೆಸನಿಗ ತಿನ್ನಡಗಂ ನಿನ್ನಡಗನೆಂದು ಪೇಸೇಟ್ವಿನೆಗಂ ಸಿಡಿಖಂಡಂ ಗೊಂಡುಗಿಬಗಿದಿಡಿ[ದಿ]ಡಿದೆಡೆವಿಡದೆ ಕೂಱುಗೊಳ್ವರ್ ಬಾಯೊಳ್ (ಸುಕುಮಾ. ೧೧-೪೨).

[ಸಿಡಿಖಂಡ + ಕೊಳ್$_{1}$]

**ಸಿಡಿಗಂಟಿ** (ನಾ). ಒಂದು ಬಗೆಯ ಮುಳ್ಳುಗಿಡದ ಪೊದೆ ,— ಹೊದರು : ಅಡವಿಯೊಳಗಱಸುವಡೆ ಸಿಡಿಗಂಟಿ ತಾನಲ್ಲ ಮಡುವಿನೊಳಗಱಸುವಡೆ ಮತ್ಸ್ಯ ಮಂಡುಕವಲ್ಲ (ವಚಸಂ. ೪-೭). [ಸಿಡಿ$_{1}$ + ಕಂಟಿ$_{2}$]

**ಸಿಡಿಗನ್ನ** (ನಾ). ಪ್ರಕಟವಾದ ಮೋಸ; ಬಹಿರಂಗವಾದ ಕಪಟ : ಅತಿ ಮೂರ್ಖನೆಂದು ಸಿಡಿಗನ್ನದೊಳು ಕಟಕಿಯೊಳು ಹದಿರೊಳಣಕದೊಳಾದಿಮಯ್ಯನಂ ನುಡಿದನವನು (ಸೋಮಚ. ೨-೧೧೧). [ಸಿಡಿ$_{1}$ + ಗನ್ನ$_{1}$]

**ಸಿಡಿಗಲ್**, **ಸಿಡಿಕಲ್ಲು** (ನಾ). ೧. ಚಿಮ್ಮುವ ಕಲ್ಲು : ನೆಗ್ಗಿ ಸಿಡಿಗಲ್ಗಳಿಂದೊರಗಿದವು ವ್ಯಾಘ್ರಂಗಳು (ಪರಶು. ೨೧-೩೨). **ಸಿಡಿಕಲ್ಲು** : ೨. ಸಿಡಿತಲೆಯನ್ನು ಕೊಡಲು ಬಳಸುತ್ತಿದ್ದ ಕಲ್ಲು ,— ಶಿಲೆ (?) : ಆ ಬಯಲುಸೀಮೆ ಮೂಡಲು ಸಿಡಿಕಲ್ಲು ಮೇರೆ ಬಡಗಲು ಪಡುವಲು ತೆಂಕಲು ಗವನಿ ಮೇರೆಯೊಳಗಾಗಿ ಬಸದಿಯ XX ಸಣ್ಣ ಶ್ರೀ (ಎಕ. VIII, ನಗರ. ೫೯-೧೬; 1066). [ಸಿಡಿ$_{1}$ + ಕಲ್$_{3}$]

**ಸಿಡಿಗುಂಡು** (ನಾ). ೧. ಎಸೆಯುವ ಕಲ್ಲು; ಬೀಸಿ ಚಿಮ್ಮುವ ಕಲ್ಲು: ಖಗಮೃಗವ್ರಾತಮಂ ಪಾತಮಂ ಮಾಡಿದರ್ಕೂಡೆಕೂಡೆ ಸಿಡಿಗುಂಡು ಬಡಿಕೋಲ್ಗಳುಱುಬೆಯಿಂದಿಱುಬೆಯಿಂದಿಡುಗವಣೆ ನೇಣುರಲ್ಗೊಲೆಗಳಿಂ ಬಲೆಗಳಿಂ (ಜೈಮಿಭಾ. ೨೮-೪೭). ೨. ಫಿರಂಗಿಯಿಂದ ಹಾರುವ ಗುಂಡು : ಸಿಡಿಗುಂಡಿನೆದುರಿನಲಿ ಕೂರಸಿಗಳೆದುರಿನಲಿ . . . ಮುಂದಿಟ್ಟ ಕಾಲ ಹಿಂದೆಗೆಯದಳಿವವನು ಸತ್ಯಾಗ್ರಹಿ ! (ಪಾಂಚಜ. ೨೦-೯). ೩. ಸ್ಫೋಟಕವಸ್ತು : ಜಲಗರ್ಭನಾವೆಗಳು . . . ನೀರಿನ ಕೆಳಕ್ಕೆ ಮುಣುಗಿ ವೈರಿಹಡಗುಗಳ ಮಗ್ಗುಲನ್ನು ಸೇರಿ ಅಲ್ಲಿ ಸಿಡಿಗುಂಡುಗಳನ್ನು (Bombs) ಕಟ್ಟಿ ಮರೆಯಾಗುತ್ತಿದ್ದುವು (ಬಾಲಪ್ರ. II, ೭೬೬). [ಸಿಡಿ$_{1}$ + ಗುಂಡು]

**ಸಿಡಿಗೊಳ್ಳು** (ಕ್ರಿ). ಸ್ಫೋಟಗೊಳ್ಳು; ಚೂರುಚೂರಾಗು : ಬೀಳುತಿರ್ದವು ಕೆಲವು ಉರಿಯೊಳಗೆ ಹೊಗೆಯೊಳಗೆ . . . ಬೀಳುತಿರ್ದುವು ಕೆಲವು ಝಣಝಣತ್ಕಾರದಿಂ ಶಿಖಿಯೊಳಗೆ ಸಿಡಿಗೊಂಡವು (ತುರಂಗ. ೬-೩೮). [ಸಿಡಿ$_{2}$ + ಕೊಳ್ಳು$_{1}$ (< ಕೊಳ್$_{1}$)]

**ಸಿಡಿಝೋಮು** (ನಾ). ಸಿಡಿತದಿಂದೊಡಗೂಡಿದ ಜೋಮು; ಸ್ನಾಯುಗಳ ತುಡಿತ : ಎರಡು ವಾರಗಳಿಂದ ಹಗಲೂ ರಾತ್ರಿ ಸಿಡಿಝೋಮು ತಲೆಯನ್ನು ಬಿಗಿದಿದೆ, ತುಂಬಾ ಕಷ್ಟವಾಗಿದೆ (ಮನೋನಂ. ೧೦೦). [ಸಿಡಿ$_{2}$ + ಝೋಮು (< ಜುಮ್ಮು$_{3}$)]

**ಸಿಡಿತ** (ನಾ). ೧. ಆಸ್ಫೋಟ : ಈ ಬಾಧೆಗಳಿಂದ ಗಣಿಗಳೊಳಗೆ ಸಿಡಿತವನ್ನು (Explosion) ತಪ್ಪಿಸಿ ಸಹಸ್ರಾರುಜನರ ಪ್ರಾಣಾಪಾಯವನ್ನು ಹೋಗಲಾಡಿಸುವುದು ಹೇಗೆ , ಎಂದು ಕೆಲವರು ಚಿಂತಿಸುತ್ತಿದ್ದರು (ವಿಜ್ಞಾಕ. ೭೩). ೨. ಯಾತನೆಯಿಂದ ಸ್ನಾಯುಗಳು ಮಿಡಿಯುವಿಕೆ ,— ತುಡಿಯುವಿಕೆ : ಪೇರೇರುಗಳ ಕಿಚ್ಚು ಸಿಡಿತದಿಂ ತೆಣರುತಿರೆ ಹೋರಾಟ ಬಾಳ್ವೆಯಂ ಬೇಡೆನ್ನುತ್ತಿತ್ತು (ಕಾಲೂರ. ೧೦೫-೨೧೩); ತಲೆಯ ಸಿಡಿತಕ್ಕೆ ಮಲಶೋಧನೆಕೊಂಡ ಹಾಗೆ (ಗಾದ) [ಸಿಡಿ + - ತ$_{2}$]

**ಸಿಡಿತಲೆ** ‘ಸಿಡಿದಲೆ’ ನೋ.

**ಸಿಡಿತಲೆಗೊಡು** ‘ಸಿಡಿದಲೆಗೊಡು’ ನೋ.

**ಸಿಡಿದಲೆ**, **ಸಿಡಿತಲೆ** (ನಾ). ೧. ದೇಹದಿಂದ ಬೇರೆಯಾಗಿ ಚಿಮ್ಮುತ್ತಿರುವ ತಲೆ; ದೇಹದಿಂದ ಬೇರ್ಪಟ್ಟ ತಲೆ : ತಮ್ಮಟೆಯಾಟಕ್ಕೆ ಬಾಯ್ಬಿಡೆಗುಟ್ಟುವ ಸಿಡಿದಲೆಗಳುಮಂ (ಅರ್ಜುನೇ. ೫-೪೧ ವ); ಮತ್ತಮವರ ಪಸುಳೆಗಳ್ ಪಕ್ಕಿಯ ಸಿಡಿದಲೆಯೊಳ್ ತಿಱಿಕಲ್ಲಾಟಮಂ . . . ತುಡುಂಕಿ ಪಿಡಿವೆಡೆಯೊಳ್ ಕೊಡಪುವ ಕೋಟಿಯೆಱಂಕೆಯ ಪೊಯ್ಲಿಂ ನೆಗೆದ ದೂಳಿ ಕಣ್ಗೆ ಬೀೞೆ ಕಣ್ಮುಚ್ಚುವುದಱಿಂ ಕಣ್ಮುಚ್ಚಾಟಮಂ ಕಲ್ವರ್ (ಚಿಕವಂ. ೮-೧೨). ೨. ಸ್ವಾಮಿಭಕ್ತಿಯ ಕಾಣಿಕೆಯಾಗಿ ಸಂಕಲ್ಪದಂತೆ ತಲೆಯನ್ನು ಅರ್ಪಿಸುವಿಕೆ ,— ಬಲಿಯಾಗುವಿಕೆ : ಪೊಡೆವ ವೀರವಱೆಯ ಪಿಡಿವ ಬಿರುದಿನ ಕಾಳೆಯ ಸುತ್ತಿಱಿದ ಮುತ್ತಿನ ತಳೆಯ ತಲೆಗೆ ಮುಂದಲೆಯಾಗಿ ಲೆಂಕರ್ಕುಡುವ ಸಿಡಿದಲೆಯ ಸಹಗಮನಸಮುತ್ಸುಕತೆಯಿಂ ಕೈವಿಡಿಸೆ (ಅನಂಪು. ೧೧-೭೪ ವ). ೩. ಸ್ವಾಮಿಭಕ್ತಿಯ ಕಾಣಿಕೆಯಾಗಿ ತಲೆಯನ್ನು ಅರ್ಪಿಸುವ ವೀರ : ಪವಡಿಸಿಹ ರಾಜನಂ ಪೊಡೆಯ ಸೀಳ್ದಪರಂತೆ ಕುನ್ನಿಗಳ್ ತಾವೆತ್ತ ಸಿಡಿದಲೆಗಳೆತ್ತನುತೆ ಬಲ ಮತ್ತೆ ಮೆತ್ತಿದುದು (ಪರಶು. ೧೩-೩೨). **ಸಿಡಿತಲೆ** : ೨. ಹೊನ್ನಿ ಸಿಡಿತಲೆಯುಗೊಟ್ಟು ಸುರಲೋಕಪ್ರಾಪ್ತಿಯಾದಲ್ಲಿ ಚನ್ದ್ರಾರ್ಕ್ಕವುಳ್ಳನ್ನ XXX ಸ್ಥಿರಸ್ಥಾಯಿಯಾಗಿ ನಿಲಿಸಿದ ಕಲ್ಲು (ಎಕ. XI, ಮೊಳಕಾ. ೧೨-೬; ಸು. 1215).

[ಸಿಡಿ$_{1}$ + ತಲೆ$_{1}$]

**ಸಿಡಿದಲೆಗುಡು** ‘ಸಿಡಿದಲೆಗೊಡು’ ನೋ.

**ಸಿಡಿದಲೆಗೊಡು**, **ಸಿಡಿತಲೆಗೊಡು**, **ಸಿಡಿದಲೆಗುಡು** (ಕ್ರಿ). ೧. ತಲೆಯನ್ನು ಕತ್ತರಿಸು : ಕಡಿದನು ಖಳರೆಚ್ಚ ಕೋಲ್ಗಳ ವಕ್ಷದೊಳಿಡಿದನೆಲ್ಲರಿಗೆ ಕೂರ್ಗಣೆಯ ಉಡಿದನು ಕಲಹಕಾತುರಿಯದ ದೈತ್ಯರ ಸಿಡಿದಲೆಗೊಟ್ಟನಾಹವದಿ (ಮೋಹತ. ೩೪-೧೧). **ಸಿಡಿತಲೆಗೊಡು** : ೨. ತಲೆಯನ್ನು ಕಾಣಿಕೆಯಾಗಿ ಅರ್ಪಿಸು : ಹೊಣೆಯನ್ನು ಹೊತ್ತವನು ಪ್ರಾಣವನ್ನು ಬಿಟ್ಟಾನು ! ಸಿಡಿತಲೆಗೊಟ್ಟು ಮಾನವನ್ನು ಕಾಪಾಡಿಕೊಂಡಾನು ! (ಸವತಿ. ೪). **ಸಿಡಿದಲೆಗುಡು** : ೩. ಬಲಿಕೊಡು : ತಲೆ ಬೋಳಿಸಿ ಹೋತಂ ಸಿಡಿದಲೆ[ಪಾಠಾಂ. ಹೊಂತಂ ಮಿಡಿದಲೆ]ಗುಡುವರ್ (ಸಮಪ. ೯-೧೨೧).

[ಸಿಡಿದಲೆ + ಕೊಡು$_{1}$]

**ಸಿಡಿನುಡಿ** (ಕ್ರಿ). ಕೋಪದಿಂದ ನುಡಿ ; ರೇಗಿ ಮಾತನಾಡು : ಮಾಡಿಕೊಳ್ಳುವವರು ನೋಡಿ ಮೆಚ್ಚಿದರಾಯಿತು ಎಂದು ತಡೆಯಲಾರದೆ ಸಿಡಿನುಡಿದಳು (ತೇಮೋಡ. ೧೦೩); ಇವಳು ಒಮ್ಮೆಯಾದರೂ ಸಿಡಿನುಡಿಯಬಾರದೆ? (ಕಪ್ಪುಹು. ೨೪). [ಸಿಡಿ$_{1}$ + ನುಡಿ$_{1}$]

**ಸಿಡಿಪಿಡಿ** (ನಾ). ಕೋಪ ; ಅಸಹನೆ ; ಸಿಡಿಮಿಡಿ : ಏನೇ, ಹಾಗೆ ಸಿಡಿಪಿಡಿ ಸುರುವು ಮಾಡಿಬಿಡ್ತೀಯಾ ಮನೆಗೆ ಬಂದ ಕೂಡಲೇ (ಹನ್ನೊಂದ. ೮೦); ಸರೋಜಳಲ್ಲಿ ಸಿಡಿಪಿಡಿ ತೋರಹತ್ತಿತ್ತು (ಭಾರಥಿ. ೧೫೭).

ಸಿಡಿಪಿಡಿ ಮಾಡು = ಅಸಹನೆಯಿಂದ ವರ್ತಿಸು : ಹೆಂಡತಿ ಸಿಡಿಪಿಡಿಮಾಡತೊಡಗಿದಳು (ರಂಗರೋ. ೧೦೦). ‘ಸಿಡಿಮಿಡಿ’ ಪರಾ. [< ಸಿಡಿ$_{1}$]

**ಸಿಡಿಬಲೆ** ‘ಸಿಡಿವಲೆ’ ನೋ.

**ಸಿಡಿಬು** ‘ಸಿಡುಂಬು’ ನೋ.

**ಸಿಡಿಮಜ್ಜಿಗೆ** (ನಾ). (ಬಾಣಂತಿಯರಿಗೆ ಬಡಿಸಲು) ಕಾದ ಬಿಳಿಕಲ್ಲು ಹಾಕಿ ಸಿಡಿಸಿ ಉಪ್ಪು , ಮೆಣಸು , ಅರಿಸಿನ ಮುಂತಾದುವುಗಳನ್ನು ಬೆರಸಿ

ಸಂಸ್ಕಾರಗೊಳಿಸಿದ ಮಜ್ಜಿಗೆ : ಮಜ್ಜಿಗೆಯೊಳಗೆ ಉಪ್ಪು ಶುಂಠಿಯ ತದಕುಟ್ಟಿ ಹಾಕಿ, ಒಂದು ಬಿಸಣಿಗೆಯಲಿ ಕಾಯಲೆತ್ತಿವೊಪ್ಪಚ್ಚಿ ಬೆಣ್ಣೆಯ ಹಾಕಿ, ಸಾಸಿವೆ, ಜೀರಿಗೆ, ಕರಿಬೇವು ಹಾಕಿ ತೊಳಸುತ್ತವೊಡೆಯದ ಮುನ್ನ ಎರದುಂಬುದೀಗ ಸಿಡಿಮಜ್ಜಿಗೆ (ಭೀಮಸೂ. ೨೯). 'ಸಿಡಿಯಳೆ' ಪರಾ. [ಸಿಡಿ₁ + ಮಜ್ಜಿಗೆ]

**ಸಿಡಿಮದ್ದು** (ನಾ). ೧. (ಬಂಡೆಯನ್ನು ಒಡೆಯಲು ಬಳಸುವ) ಸ್ಫೋಟಕ ವಸ್ತು; ಡೈನಮೈಟು : ಸಿಡಿಮದ್ದಿನ ಪೇರುಂಡೆಯು ನಾನು ; ಸಿಡಿವ ಫಿರಂಗಿಯು ನಾನು (ಪಾಂಚಜ. ೧೬-೬); ಸಿಡಿಮದ್ದನ್ನು ಸಿಡಿಯಿಸಿ ಬೆಂಕಿಯಿಂದ ಸುತ್ತುಮುತ್ತು ಸುಡುವುದೂ ಸೃಷ್ಟಿಯೇ (ಸಾಹಿಜೀ. ೯). ೨. ಪಟಾಕಿ : ಬೀದಿಯ ತುಂಬಾ ಹುಡುಗರು ಸುಡುವ ಸಿಡಿಮದ್ದಿನ ಹಾವಳಿ (ರೂಢಿ). [ಸಿಡಿ₁ + ಮದ್ದು (< ಮರ್ದು)]

**ಸಿಡಿಮರ** (ನಾ). = ಸಿಡಿಕಂಬ : ಸಿಡಿಮರದ ಹತ್ತಿರ ಸಾರಿಸಿ, ರಂಗೋಲಿ ಇಟ್ಟು ಪೂಜೆ ಮಾಡಿದರು (ರೂಢಿ). [ಸಿಡಿ₃ + ಮರ₁]

**ಸಿಡಿಮಿಡಿ** (ನಾ). ೧. ಅಸಹನೆ; ಕೋಪ : ಸಿಡಿಮಿಡಿಯಿಂದಾಚರಿಸಲು ಬಾಲಕ (ಯೋಗಾಂವಿ. ೨-೧೦); ಗಾಡಿಯವನು . . . ಸುತ್ತು ಹಾಕಿ ಹಾಕಿ ಕೊನೆಗೆ ಬೇಸತ್ತು ಸಿಡಿಮಿಡಿಯ ಸ್ವರದಲ್ಲಿ ನುಡಿದನು (ಇಪ್ಪತ. ೩೩೦); ಸಿಡಿಮಿಡಿಗೆ ಬೆದರಿ ಬಗೆ ಸುಡುವ ಕಾಟಂ ಪಿರಿದು (ಕಾಲೂರ. ೧೯-೨೨೩). ೨. ಗಾಬರಿ; ತಳಮಳ : "ಸಿಡಿಮಿಡಿಯನಲ್ಕೆ ತಳ್ವಂಕಂ ತಾಂ" (ಕವಿಕಂ. ೨೫೩). ೩. ದುಃಖ; ವ್ಯಥೆ : 'ಸಿಡಿಮಿಡಿಗೊಳ್' ಪರಾ.

**ಸಿಡಿಮಿಡಿ ಮಾಡು** = ಅಸಹನೆಯಿಂದ ವರ್ತಿಸು; ಅಶಾಂತಸ್ಥಿತಿಯಲ್ಲಿರು : ಕಚೇರಿಯಿಂದ ಸಿಡಿಮಿಡಿ ಮಾಡುತ್ತಲೆ ಕಟ್ಟಿ ಮನೆಗೆ ಬರುವುದು ಗಂಗವ್ವನ ಸಾಮಾನ್ಯ ಅನುಭವವಾಯಿತು (ಗಂಮಾಯಿ. ೩೧); ಹೋದವನು ಮುಂದೆ ತಿರುಗಿ ಬಂದ ಮೇಲೆ ಸಿಡಿಮಿಡಿ ಮಾಡಿ ಸರಿದು ಮಾತಾಡದೆ ಸುಮ್ಮನಿರಲು (ಕನ್ನಜಾ. ೧೧೮). **ಸಿಡಿಮಿಡಿಯಾಗು** = ಸಿಡಿಮಿಡಿಮಾಡು : ಪಡು(ಡ)ಗುಂ ಪೊರಳ್ಗುಂ (ಸಲೆ) ಸಿಡಿಮಿಡಿಯಕ್ಕುಂ ಬೆಮರ್ತುಮುಮ್ಮಳಿಸುಗುಂ . . . ಸುಭಿಕ್ಷಶೂಲೆ ಕೆರಳ್ದೊಡೆ ತುರಗಂ (ಅಶ್ವಶಾ. ೧೧-೪); ಗಂಡನು ತನ್ನ ಪ್ರೇಮವನ್ನು ಅವಳ ಮೇಲೆ ತೋರಿಸದೆ ಸಿಡಿಮಿಡಿಯಾಗಿ ವೈಮನಸ್ಸಿನಿಂದಿರಲು (ಕನ್ನಜಾ. ೧೦೦). [< ಸಿಡಿ₁./ ತೆಲು. ಚಿಡಿಮುಡಿ, ಸಿಡಿಮುಡಿ]

**ಸಿಡಿಮಿಡಿಗುಟ್ಟು** (ಕ್ರಿ). ಅಸಮಾಧಾನವನ್ನು ವ್ಯಕ್ತಪಡಿಸು; ಸಿಟ್ಟಿನಿಂದ ವರ್ತಿಸು : ಹಾಗ್ಯಾಕೆ ಮಾಡಿದೆಯೊ? ಅಂತ ಸಿಡಿಮಿಡಿಗುಟ್ಟುತ್ತಾ ಇದ್ದಾರೆ (ಮನೋನಂ. ೨೦೨); ಸಿಡಿಮಿಡಿಗುಟ್ಟಬಾರದಂತೆ ಬರೋದು ತಡವಾದರೇಂತ ತಿಳಿಸೇ ಬಿಡಿ (ವೃದ್ಧವಿ. ೮೯). [ಸಿಡಿಮಿಡಿ + ಕುಟ್ಟು₁]

**ಸಿಡಿಮಿಡಿಗೆಯ್** (ಕ್ರಿ). ಅಸಮಾಧಾನ, ರೋಷಗಳನ್ನು ವ್ಯಕ್ತಪಡಿಸು; ಕ್ರೋಧಗೊಳ್ಳು : ಕೇಳಿ ಸಿಡಿಮಿಡಿಗೆಯ್ಯುತೆದ್ದು ನೃಪಾಲನೋಲಗವನು ವಿಸರ್ಜಿಸಿ (ಜೀವಂಚ. ೬-೬). [ಸಿಡಿಮಿಡಿ + ಕೆಯ್₁]

**ಸಿಡಿಮಿಡಿಗೊಳ್, ಸಿಡಿಮಿಡಿಗೊಳು, ಸಿಡಿಮಿಡಿಗೊಳ್ಳು** (ಕ್ರಿ). ೧. ಅಸಮಾಧಾನವನ್ನು ಹೊಂದು; ಅಸಹನೆಯಿಂದ ವರ್ತಿಸು : ಸಿಡಿಮಿಡಿಗೊಂಡು ತನ್ನ ಕಲುಷೋಗ್ರಕೃಶಾನುವ ತನ್ನ ದೇಹಮಂ ಸುಡೆ (ಪಂರಾಮಾ. ೧೪-೧೬೩); ಕೋಡಗಮಂ ಪುಲ್ಲೊಳ್ ಮುಚ್ಚೆ ಸಿಡಿಮಿಡಿಗೊಂಬಂತೆ ಸಿಡಿಮಿಡಿಗೊಳುತ್ತುಂ (ಧರ್ಮಾಮೃ. ೧-೧೫೬); ತಾರಾಚಳನಾಥನ ಘನವೈರಾಗ್ಯಕ್ಕಂಜಿ ನಡುಗಿ ಸಿಡಿಮಿಡಿಗೊಳ್ವಳ್ (ಗಿರಿಕ. ೫-೮೮). ೨. ಗಾಬರಿಗೊಳ್ಳು; ತಬ್ಬಿಬ್ಬಾಗು : ಸಿಡಿಲ ಸೇತುವಿನಂತೆ ಜ್ವಾಲೆಯೆದ್ದುದ ನೋಡಿ ಸಿಡಿಮಿಡಿಗೊಂಡರತ್ತಿತ್ತ (ಭರಚ. ೨೯-೮೬). ೩. ದುಃಖಪಡು; ವ್ಯಥೆಗೊಳ್ಳು : ಮುಡಿ ಮೊಲೆ ನಿತಂಬಭಾರಕ್ಕೆ ತೊಡೆ ನಡು ಕೊರಲ್ ಕಡಿವಂತಿರಾದಪ್ಪುದೇಗೆಯ್ವೆನೆಂದು ಸಿಡಿಮಿಡಿಗೊಂಬ ಮಾನಿನಿಯ ಭರವನಾಲಿಸಿ ನಿಲುವನವನೀಶ ಮರನಡಿಯೊಳು (ಹಚಕಾ. ೯-೨೮). ೪. (ಆಲಂ) ನಾಶವಾಗು; ಹಾಳಾಗು : ದೊಡ್ಡ ಹಂಚಟ್ಟು ಹುರಿದವೋಲ್ ಸೇನೆ ಸಿಡಿಮಿಡಿಗೊಂಡು ಬೇವ ಕಮರ್ವರಿಯಿತ್ತಜಾಂಡಕಂದು (ಚಬಸ್ಪು. ೪೦-೧೫). **ಸಿಡಿಮಿಡಿಗೊಳು** : ೧. ಜವನ ಮಂತಣ ಸೂಲದಂತೆ ನೆಗೆದ ಕೊಂತದ ಕೂರ್ಮೊನೆಯ ಕೋಲಾಟಕ್ಕೆ ತಾರಗೆವಟ್ಟೆಯೊಳ್ ನಡೆವ ಬಿಜ್ಜೋದರಿಯರ್ ಪುಗಲಱಿಯದೆ ಸಿಡಿಮಿಡಿಗೊಳುತ್ತಿರೆಯುಂ (ಕಬ್ಬಿಕಾ. ೨೮೮); ಮೃಡನಡಿಗೆ ಪೊಡಮಡುಗು ಪಾಲಂ ಕುಡಿಯದಿರ್ದಡೆ ನೋಡಿ ಕಡು ಸಿಡಿಮಿಡಿಗೊಳುತ್ತೋರಂತೆ ಚಿಂತಿಸುತಿರ್ಕು ಕೊಡಗೂಸು (ಬಸಪು. ೧೪-೧೯). ೨. ಪಿಡಿವೆತ್ತ ಕಳ್ಳನಂತೆ ಸಿಡಿಮಿಡಿಗೊಳುತಿರ್ದುಂ (ಪಂಚತಂ. ೧೮-೨೦); ಫಣಿಯ ಪಿಡಿದವಿವೇಕಿಮರ್ಕಟನ ವಾಳ್ಕೆಯಿಂ ಸಿಡಿಮಿಡಿಗೊಳುತಿರ್ದರವರನಿಬರು (ಸೌಂದಪು. ೧೨-೮೪); ನೀರನೆಱೆವ ನೀಱೆಯರ ಲಾವಣ್ಯಾಂಬುಪೂರದ ಸುಳಿಯೊಳು ಸಿಲುಕಿ ದಾರಿಗರತಿಸಿಡಿ[ಪಾಠಾಂ.ಡು]ಮಿಡಿಗೊಳು ತಂಗಜವೀರಗೊಡಲನೊಪ್ಪಿಸಿದರು (ರಾಮವಿ. ೨-೬೩). **ಸಿಡಿಮಿಡಿಗೊಳ್ಳು** : ೧. ಸಂತೋಷದಿಂದ ಆಡಿಕೊಂಡಿರುವ ಮಗುವು ಇದ್ದಕ್ಕಿದ್ದ ಹಾಗೆ ಸಿಡಿಮಿಡಿಗೊಳ್ಳುವುದು (ಗೃಹವಿ. ೧೪೩); ಅವನ ಹೆಂಡತಿ ಮೂಗಮ್ಮ . . . ಒಂದೊಂದು ಬಾರಿ ಸೊಸೆಯಂದಿರ ಮೇಲೆ ಸಿಡಿಮಿಡಿಗೊಳ್ಳುತ್ತಿದ್ದಳು (ನನ್ನೂರು. ೧೧೦). ೫. ತವಕಿಸು; ಅವಸರಗೊಳ್ಳು : ಕಡಿವಾಣದಡಿ ನೊರೆ ಸುರಿಸುತ್ತ ಮುನ್ನುಗ್ಗಲು ಸಿಡಿಮಿಡಿಗೊಳ್ಳುತ್ತಿದ್ದ ಕಪ್ಪು ಹೊಳಪಿನ ಕುದುರೆಗಳ ಲಗಾಮನ್ನವನು ಬಹು ಪ್ರಯಾಸದಿಂದ ಹಿಡಿದುಕೊಂಡಿದ್ದನು (ಪುನರು. ೪೪೦). [ಸಿಡಿಮಿಡಿ + ಕೊಳ್₁]

**ಸಿಡಿಮಿಡಿಗೊಳು** 'ಸಿಡಿಮಿಡಿಗೊಳ್' ನೋ.

**ಸಿಡಿಮಿಡಿಗೊಳ್ಳು** 'ಸಿಡಿಮಿಡಿಗೊಳ್' ನೋ.

**ಸಿಡಿಮಿಡಿಯೋಗು** 'ಸಿಡಿಮಿಡಿವೋಗು' ನೋ.

**ಸಿಡಿಮಿಡಿವರ್** (ಕ್ರಿ). ೧. ಗಾಬರಿಗೊಳ್ಳು; ಚಡಪಡಿಸು : [ಗ]ಂಗೆಯಂ ಮಿಾವಾಗಳ್ ನೆಗಟುಂ ಬಂದು ಕಾಲಂ ಪಿಡಿದೊಡೆ ಬಿಡಿಸಲಱಿಯದೆ ಸಿಡಿಮಿಡಿವಂದು . . . ಧನದೇವನಂ ಕರೆದೀ ನೆಗಟಂ ಬಿಡಿಸಂಬುದುಂ (ಸುಕುಮಾ. ೬-೧೬ ವ). ೨. ಅವಸರಪಡು; ತ್ವರೆಗೊಳ್ಳು; ತವಕಿಸು : ಯೌವನೋನ್ಮತ್ತೆಯರುಟ್ಟಿ ಪಟ್ಟಣಿಗೆಯ ನಿಱಿಯ ತುಱುಂಗಲಂ ನೆಗಪಿ ನುಣ್ದೊಡೆಯ ಚೆಲ್ವಂ ನೋಡಲೆಂದು ಸಿಡಿಮಿಡಿವರ್ಪ ಕಾತರವಿಟರ ಕಣ್ಗೆ ಪಾರಣೆಯಂ ಮಾಡಿಸಿಯುಂ (ಚಂದ್ರಪ್ರ. ೮-೪ ವ).

[ಸಿಡಿಮಿಡಿ + ಬರ್ (< ವರ್)]

**ಸಿಡಿಮಿಡಿವೋಗು, ಸಿಡಿಮಿಡಿಯೋಗು** (ಕ್ರಿ). ೧. ಸಿಟ್ಟು ಮಾಡಿಕೊಳ್ಳು; ಅಸಮಾಧಾನ ಹೊಂದು; ಕೋಪಗೊಳ್ಳು : ಬಳ್ಳಿ ಮರನನು ಹಬ್ಬುವಂದದಿ ನಿಲ್ಲದಡರಲು ಬಳಿಕ ತಾ ತನ್ನಲ್ಲಿ ಸಿಡಿಮಿಡಿವೋಗುತಿರ್ದನು ಸಿದ್ಧರಾಮಯ್ಯ (ಪ್ರಭುಲೀ. ೧೩-೩೩); ಸಿಡಿಮಿಡಿವೋಗುತ್ತಿದ್ದ ಸಿದ್ಧರಾಮನನ್ನು ಕುರಿತು ಅಲ್ಲಮ . . . ಬುದ್ಧಿ ಹೇಳುತ್ತಾನೆ (ಶೂನ್ಯಕು. ೭೮). **ಸಿಡಿಮಿಡಿಯೋಗು** : ೨. ದುಃಖಪಡು; ವ್ಯಥೆಗೊಳ್ಳು : ತನ್ನ ದೆಸೆಯಿಂದಾದ ಬಾಧಿತಭಿನ್ನಹೃದಯನು ಕನಸು ಕಳವಳಗನ್ನದಲಿ ತಲೆ ಸಿಕ್ಕಿ ಸಿಡಿಮಿಡಿಯೋದನಡಿಗಡಿಗೆ (ತೊರರಾ. ೬-೪೫-೧೨).

[ಸಿಡಿಮಿಡಿ + ಪೋಗು₁ (< ಪೋ₁)]

**ಸಿಡಿಯಳೆ** (ನಾ). = ಸಿಡಿಮಜ್ಜಿಗೆ : ತಿಳಿಮಜ್ಜಿಗೆಯೊಳುಳ್ಳಿ ಶುಂಠಿ ಸೈಂಧವವಿಕ್ಕಿ ಕಳಸಿಗೆಯ ಕಾಸಿ ಜೀರಿಗೆ ಸಾಸುವೆಯನಿಕ್ಕಿ ಬಳಿಕದಂ ಹುಯ್ಯುವೊಗ್ಗರಿಸಿ . . . ಬಿಳಿಯುಪ್ಪನಿಕ್ಕಿ ನೀರೋಗರಕೆ ಹಾಕಿ ಸಿಡಿಯಳೆಯ ಕೂಳಾಯಿತು (ಸೂಪಶಾ. ೩-೩೦).

[ಸಿಡಿ₁ + ಅಳ್ಕೆ₂]

**ಸಿಡಿಯಾಡು** (ಕ್ರಿ). ಸಿಡಿಯನ್ನು ಆಚರಿಸು : ಹಳ್ಳಿಗಳಲ್ಲಿ ಈಗ ಸಿಡಿಯಾಡುವ ಸಂಪ್ರದಾಯಕ್ಕೂ ಹಿಂದೆ ಸಿಡಿತಲೆಯನ್ನು ಕೊಡುತ್ತಿದ್ದ ವಿಧಾನಕ್ಕೂ ಬಹಳ ವ್ಯತ್ಯಾಸವಿದೆ (ಕಶಾಅ. ೩೦೦). [ಸಿಡಿ₃ + ಆಡು₁]

**ಸಿಡಿರೋಷ** (ನಾ). ಅತಿಯಾದ ರೋಷ; ಅಧಿಕವಾದ ಕ್ರೋಧ : ಗುಡುಗುಡಿಪ ಸಿಡಿರೋಷಮುಕ್ಕಿ, ತಾಂ ನಿಂತ ಬಂಡೆಯನಾನೆಯೊರ್ಮಂಡೆಯಂ ಗೆತ್ತು, ನಖವಜ್ರದಿಂದಪ್ಪಳಿಸೆ (ಶ್ರೀರಾಮಾ. ೬೫೫-೨೨೦). [ಸಿಡಿ₁ + ರೋಷ]

**ಸಿಡಿಲ್₁** (ನಾ). ೧. ಚಿಮ್ಮು; ಸಿಡಿ : ಲವಣಾಂಬುರಾಶಿ ಕುಕ್ಕುಟಗುದಿವಲ್ಲಿ ಕೊಟ್ಟುದಿಯ ಮೇಲೆ ಸಿಡಿಲ್ದುಗುಳಂತೆ . . . ಸಿಡಿದಲ್ಲಿಯ ಮುತ್ತುಗಳ್ (ಪಂಪಭಾ. ೧೧-೧೫೩); ಒಡವುಟ್ಟಿದನರಸಿಯನೆನ್ನೊಡವುಟ್ಟಿದರೆನ್ನದಬ್ಬೆಯೆಂದತ್ತಿಗೆ ಯೆಂದೊಡೆ ನಾಲಗೆಯಾತನ ತಲೆ ಸಿಡಿಲ್ದು ಪಾಱೆಟ್ಟುಮೆನ್ನ ಪಾಱುಂಬಳೆಯೊಳ್ (ಶಾಂತಿಪು. ೬-೮೦); ಸಿಡಿಲ್ದ ಸೀರ್ಪನಿಗಳೊಪ್ಪಿರೆ ಧೂಮದವೋಲ್ (ರಾಜಶೇ. ೫-೬೯). ೨. ನೆಗೆ; ಹಾರು : ದೆಸೆಗೆತ್ತಂ ಗಜಜುತ್ತುಮಿರ್ಪ ಪುಲಿಯಿಂ ನೀಳಾಭ್ರಮಂ ದಂತಿಗೆತ್ತು ಸಿಡಿಲ್ದಾಗಸಕೆಯ್ದೆ ಪಾಯ್ವ ಪಲವುಂ ಸಿಂಗಂಗಳಿಂದೆ . . . ಕಾಮ್ಯಕವನಂ

ಮಾಡಿತ್ತತಿಪ್ರೀತಿಯಂ (ಪಂಪಭಾ. ೭-೨೬). ೩. ಚೆದರು ; ಹರಡು ; ಚೆಲ್ಲಾಪಿಲ್ಲಿಯಾಗು : "ಸಿಡಿಲ್ – ವಿಕೀರ್ಣೇ (ಎರಚು), ಮೇಘವಹ್ನೌಚ" (ಶಮಧಾ). ೪. ಸೀಳು ; ಬಿರಿ : ತಚ್ಛಶಿಕಾಂತಶಿಳಾತಳಂ [ಸಿ][ಪಾಠಾಂ. ಸ]ಡಿಲ್ದಂದೊಡೆದತ್ತಿದೇಂ ಬಿಸಿದೊ ಬೇಟದ ಬೆಂಕೆ ಮೃಗಾಂಕವಕ್ತ್ರೆಯಾ (ಪಂಪಭಾ. ೫-೭); ಇಕ್ಕಿದ ಸೀಸಕಂ ಪಱಿದು ನೆತ್ತಿ ಸಿಡಿಲ್ದೊಡೆದು (ಶಬ್ದಶಾ. ೨೮೦). ೫. ಹೊರಬೀಳು; ಹೊರಕ್ಕೆ ಬರು : ಇಱುಂಕಿದೆಱುಂಕೆಯೊಳಗಣಿಂ ಸಿಡಿಲ್ದು ದೈವವಶದಿಂ ಗಾಳಿಯೊಳ್ ತೆರಳ್ದು ತಱಗೆಲೆಯ ರಾಶಿಯೊಳ್ ಪೋಗಿ ಬಿರ್ದ (ಕಾದಂಪೂ. ೧೪೫). ೬. ಸಡಿಲವಾಗು : ಎಡೆಯಱಿದು ತೊಳಗುವಂತಿರೆ ಸಿಡಿಲ್ದು ಪೊ[ಱ]ಪೊ[ಣ]ಯ್ಯುಟ್ಟುದಾಗಳಂಗಜಕಲೆಯೊಳ್ (ಕಾವ್ಯಸಾ. ೬೫೮ ಶೂದ್ರಕ). ೭. ಆರ್ಭಟಿಸು; ಗರ್ಜಿಸು : ನೆಗೞ್ತೆಯ ಗಾಂಡಿವಮಂ ತಗುಳ್ದು ಜೇವೊಡೆಯೆ ಸಿಡಿಲ್ ಸಿಡಿಲ್ದು ಪೊಡೆವಂತೆವೊಲಾಯ್ತು (ಪಂಪಭಾ. ೮-೧೦೧); ಘೋರನಿರ್ಘೋಷಮುಣ್ಮಿದುದೆಂಬಂತೆ ಸಿಡಿಲ್ ಸಿಡಿಲ್ದೆಱಗಿತೋ ಪೇೞ್ (ಪಂಚತಂ. ೨೬-೬); ಕಲ್ಪಾಂತಕೃತಾಂತನಂತೆ ಮಾಮಸಕಂ ಮಸಗಿ ಪೊಡೆವ ಸಿಡಿಲಂತೆ ಸಿಡಿಲ್ದು ಸಿಂಹಲಂಘನದಿಂದಂಬರಕ್ಕೆ ನೆಗೆದು (ಪಂರಾಮಾ. ೧೧-೧೪೩ ವ). ೮. ಕನಲು; ಕಿಡಿಕಿಡಿಯಾಗು : ಸಂಜಯನ ನುಡಿಗೆ ಫಣಿರಾಜಕೇತನಂ ಸಿಡಿಲ್ದು (ಗದಾಯು. ೩-೨೨ ವ); ಸಿಂಹೋದರಂ ಘನರವಕ್ಕೆ ಸಿಡಿಲ್ದ ಸಿಂಹದಂತೆ ಮುನಿದು (ಪಂರಾಮಾ. ೭-೫೨ ವ); ಸುಕೇಶಿನಿ ಕೇಳ್ದು ತುಂಬುರುಗೊಳ್ಳಿಯಂ ಕಂಬದೊಳ್ಪೊಯ್ದಂತೆ ಸಿಡಿಲ್ದು [ಕಿಡಿಕಿಡಿವೋಗಿ] (ಧರ್ಮಾಮೃ. ೩-೪೮); ಸಿಡಿಲ್ದುಗುವ ಸೊರ್ಕುನುಡಿ ಬಿಗಿವಿಡಿಯವೇೞ್ಕುಂ (ಬಧ್ಯಪ್ರ. ೧೮-೩೮೧).

**ಸಿಡಿಲ್$_2$, ಸಿಡಿಲು** (ನಾ). (ಸಾಮಾನ್ಯವಾಗಿ ಮಳೆಗಾಲದಲ್ಲಿ) ಎರಡು ಮೋಡಗಳ ಗುಂಪಿನ ನಡುವಿನ ಘರ್ಷಣೆಯ ಫಲವಾಗಿ ಜೋರಾದ ಶಬ್ದದೊಂದಿಗೆ ಗೋಚರಿಸುವ ವಿದ್ಯುತ್ಪ್ರವಾಹ : ಮೊೞೆದೆಱಗಿ ಕೊಳ್ವ ಮೞೆ ಘೋರ್ಗರೆದೂದುವ ಗಾಳಿ ಸಿಡಿದು ಪೊಯ್ವ ಸಿಡಿಲ್ ಕಾರಿರುಳೊಳಗುರ್ವಂ ಪಡೆದಿರೆ (ಆದಿಪು. ೬-೩೨); ಸಿಡಿಲ ಪೊಡರ್ಪಾ ಕ್ಷಣದೊಳೆ ಕಿಡುವುದು . . . ಎನಲೇಂ ಕಿಡಿಕಿಡಿವೋದನೊ ಕೋಪತಾಪದಿಂ ಪವನಸುತಂ (ಪಂರಾಮಾ. ೧೧-೧೪೧); ಮುಗಿಲ್ಗಳತಿಭರದಿಂ ಸಿಡಿಲ್ಮಿಂಚುಗಳ ಕೂಡೆ ಪೆರ್ಮಳೆಯನು ಸೂಸದು . . . ಅಚಲೇಂದ್ರತನುಜೆ ತಪಮಿರೆ ಬನದೊಳು (ಜೈಮಿಭಾ. ೧೫-೧೭). ಸಿಡಿಲು : ಬಯಲ ಸಿಡಿಲು ಹೊಯ್ದಡೆ ಹಿಂದೆ ಹೆಣನ ಸುಡುವರಿಲ್ಲ (ಅವಚಂ. ೬೭-೨೯೭); ಸಿಡಿಲು ಜಂಗಮವಾಯ್ತೊ ಪ್ರಳಯದ ಮೃಡನು ಬಾಲಕನಾದನೋ ಕೊಲೆಗಡಿಕನಹುದೋ ಕಂದ (ಕುಮ್ವ್ಯಾದ್ರೋ. ೬-೪೮); ಗೊಳ್ಳೆಂದು ನಗೆಯ ತೆರೆನೊರೆಯುಕ್ಕೆ ಮಸಗಿತುತ್ಸಾಹದಿಂ ಪಾಂಡವದಳದ ಜಳಧಿ; ಸಿಡಿಲು ಕೋಲಾಡಿದುದು (ಚಿತ್ರಾಂಗ. ೭೭-೨೦೨೦).

ಸಿಡಿಲ ಕಿಚ್ಚು = ಸಿಡಿಲಿನಿಂದ ಉಂಟಾಗುವ ಬೆಂಕಿ; ಮೇಘಾಗ್ನಿ : ಸಿಡಿಲ ಕಿಚ್ಚಿನ ಬೇಗೆಯನಾಱಿಸಲ್ ಜಲಧರಸಂಕುಲಮಿರ್ಪ ತಾಣಂ (ಕಾದಂಉ. ೨೧೮). **ಸಿಡಿಲ ಕಿಡಿ** = ಮೇಘಾಗ್ನಿಯ ಕಣ; ಸ್ಫುಲಿಂಗ : ಸಿಡಿಲ ಕಿಡಿಯಂತೆಸೆವ ಕಣ್ಣು . . . ಮೃತ್ಯುವಿನ ಕಯ್ಯ ನಿಡಿಯ ನಾರಾಚದಗೆಯೆನಿಪ ಮೆಯ್ರೋಮತತಿ . . . ಮೆಱೆವ ಸೂಕರನಿರಲು (ಹಚಕಾ. ೬-೪). **ಸಿಡಿಲ ಗರ್ಜನೆ** = ಸಿಡಿಲಿನ ಶಬ್ದ, – ಆರ್ಭಟ : ಕಕ್ಕಸದ ಸಿಡಿಲ ಗರ್ಜನೆಗಳಂ ಕಲ್ಪಾಂತಕುಕ್ಕುವಬ್ಧಿಗಳ ಪೆರ್ದೆಱೆಗಳ ಸುಘೋಷಮಂ ಮಿಕ್ಕುವು ಸಮಸ್ತವಾದ್ಯಧ್ವನಿಗಳು (ಜೈಮಿಭಾ. ೭-೩೧). **ಸಿಡಿಲ ದನಿ** = ಸಿಡಿಲ ಗರ್ಜನೆ : ಸಿಡಿಲ ದನಿಗೇಳ್ದ ಸಿಂಹಂ ಸಿಡಿಲ್ದು ನೆಗೆವಂತೆ ಗಜಱಿ ಗರ್ಜಿಸಿ (ಪಂರಾವಾ. ೮-೨೮). **ಸಿಡಿಲ ಬಳಗ** = ಒಂದಾದ ಮೇಲೆ ಒಂದರಂತೆ ಹೊಡೆಯುವ ಸಿಡಿಲು; ಸಿಡಿಲುಗಳ ಸಾಲು : ಪೌಲೋಮಿಪತಿ . . . ವಿಳಯಕಾಳಾಂಬುದದಂತೆ ಮೊೞಗುಮಂ ಸಿಡಿಲ ಬಳಗಮನೊಳಕೊಂಡ ದ್ರೋಣ ಮಹಾದ್ರೋಣ ಪುಷ್ಕಳಾವರ್ತ ಸುವರ್ತಕಂಗಳೆಂಬ ಮುಗಿಲ್ಗಳಂ ಬೆಸಸಿದಾಗಳ್ (ಪಂಪಭಾ. ೫-೯೫ ವ); ಸಿಡಿಲ ಬಳಗಂಗಳಂ ಬಱಿಸಿಡಿಲ ಚಯಂ ಪೊಯ್ವ ತೆಱದೆ ವಾಹಕರಂದಿರ್ವಡೆಯವರ್ಗಳೊಡನೆ ಪೊಯ್ದರ್ (ನೇಮಿಪು. ೧೧-೬೧). **ಸಿಡಿಲ ಮಱಿ** = ಸಣ್ಣ ಸಿಡಿಲು : ಆಲಿಕಲುಗಳು ಸಿಡಿಲ ಮಱಿಗಳ ಮೇಲುವಾಯ್ದವು (ಕುವ್ಯಾಕ.೧೦-೨೬); ಸಿಡಿಲ ಮಱಿ ತಾ ಕಾರ್ಮುಕದೊಳುಗ್ಗಡಿಸುವಂತಿರೆ ಧಣಧಣತ್ಕೃತಿ ಜಡಿಯೆ . . . ಅಡಸಿ ಬಂದುದು ಚಾಪವಾ ರಘುಭೂಪನಿದ್ದೆಡೆಗೆ (ತೊರರಾ. ೩-೬-೫೦). **ಸಿಡಿಲ ಮೞೆ** = ಸಿಡಿಲಿನಿಂದ ಕೂಡಿದ ಮಳೆ; ಭಾರಿ ಮಳೆ : ಸಿಡಿಲ ಮೞೆಯೆನಿಸಿ ಕಱೆದರ್ ಬಿಡದೆ ಸರಲ್ಮೞೆಯಂ (ಜಗವಿ. ೧೮-೩೮). **ಸಿಡಿಲ ಸರಿ** = ಸಿಡಿಲ ಮೞೆ : ಸಿಡಿಲ ಸರಿ ಮೊೞಗುಗಳ ಮೞೆ . . . ಬಿಡದ ರಜನಿಗಳ ಮೞೆಯೊಳ್ ಮಿಡುಕದೆ ಮರಮೊದಲೊಳಿರ್ದನಿರ್ಪವೊಲಚಳಂ (ಅರ್ಧನೇ. ೪-೬೧). **ಸಿಡಿಲು ಬಡಿ** = ಸಿಡಿಲು ತಾಕು : ದೇವಿಯನ್ನು ಸ್ಮರಿಸುತ್ತ ಮೇಲೆ ಹತ್ತುವಾಗ ಭಯಂಕರವಾದ ಸಿಡಿಲು ಬಡಿಯುತ್ತದೆ (ಸಂಸಕ. ೯೯).

[ದೇ. ‖ ತುಳು. ತೆಡಿಲ್, ಶಿಡಿಲ್, ಸಿಡಿಲ್, ಸಡಿಲ್; ಕೊಡ. ತೆಡ್]

**ಸಿಡಿಲಂಕರಾಮ** (ನಾ). ಒಬ್ಬಾತನ ಹೆಸರು : ಸಿಡಿಲಂಕರಾಮನ ಮಾಡಿಸಿದ ದೇಗುಲ ಸಿಡಿಲೇಶ್ವರಕ್ಕೆ (ಎಕ. XI, ಹೊಳಲ್ಕೆ. ೨೩-೧೪; 968). [ಸಿಡಿಲಂಕ$_0$ + ರಾಮ]

**ಸಿಡಿಲಯ್ಯ** (ನಾ). ಒಬ್ಬಾತನ ಹೆಸರು : ಶ್ರೀದಿವ್ಯಲಿಂಗಿಭಟಾರರ್ಗೆ ಸೂದ್ರಕಯ್ಯಂ ಕಾಲ್ಗೞೆಯೆ ಸಿಡಿಲಯ್ಯಂ ಕಾಲಂ ಕೞ್ಚಿ (ಎಕ. XI, ಹೊಳಲ್ಕೆ. ೨೩-೧೪; 968).

[ಸಿಡಿಲ್$_?$ + ಅಯ್ಯ$_1$]

**ಸಿಡಿಲಿಂಗಳ** (ನಾ). ಸಿಡಿಲಿನಿಂದುಂಟಾಗುವ ಬೆಂಕಿ, – ಕಿಚ್ಚು : ಸಿಡಿಲಿಂಗಳದ ಜಂಗಳದಕ್ಷಿಯುಗಳಗಳ ಕುಲಿಶದಂಷ್ಟ್ರದ ವಿಕೃತವಕ್ತ್ರದ ವಿಲಯಭೈರವನಂತೆ ಮುಂದಕೆ ಸುಳಿಯಲು (ತೊರರಾ. ೩-೧-೮). [ಸಿಡಿಲ್$_2$ + ಇಂಗಳ$_1$]

**ಸಿಡಿಲು** 'ಸಿಡಿಲ್$_2$' ನೋ.

**ಸಿಡಿಲುಮರಿ** (ನಾ). ೧. ಮಿಂಚು : ಸಿಡಿಲುಮರಿಯೆಂದರೆ 'ಮಿಂಚು' ಎಂಬ ಅರ್ಥ (ಪಾರ್ತಿಸು.೧೩). ೨. (ಆಲಂ) ಬಹಳ ಚುರುಕಾದ ವ್ಯಕ್ತಿ : ಇಡೀ ಮದುವೆ ಮನೆಯಲ್ಲಿ ಆ ಸಿಡಿಲುಮರಿಯ ಓಡಾಟ ಹೇಳತೀರದು. ಎಲ್ಲ ಕೆಲಸಕ್ಕೂ ಅವನೇ ಮುಂದು (ರೂಢಿ). [ಸಿಡಿಲು (< ಸಿಡಿಲ್$_2$) + ಮರಿ (< ಮಱಿ)]

**ಸಿಡಿಲುವಲೆ** (ನಾ). ಒಂದು ಬಗೆಯ ಬಲೆ : ಕಣ್ಣವಲೆ ಸಿಡಿಲುವಲೆ . . . ಮರೆವಲೆಗಳಿರ್ದುವಾ ಶಬರರಲ್ಲಿ (ಸಿದ್ಧೇಪು. ೮-೬); ಸಿಡಿಲುವಲೆ ಹಾಸುವಲೆ ಬೀಸುವಲೆ ಚಕ್ಕನೆಯಳೆವ ಪಕ್ಕಿ ಮೊದಲಾದ ಪಂಪರಿಯ ವಲೆಸಮೂಹವ ನೋಡುತ (ನವಮೋ. ೧೬-೨೦). [ಸಿಡಿಲು (< ಸಿಡಿಲ್$_2$) + ಬಲೆ$_1$]

**ಸಿಡಿಲುಹೊಡೆ** 'ಸಿಡಿಲ್ವೊಡೆ' ನೋ.

**ಸಿಡಿಲೆರಗು** 'ಸಿಡಿಲೆಱಗು' ನೋ.

**ಸಿಡಿಲೆಱಗು, ಸಿಡಿಲೆರಗು** (ಕ್ರಿ). ಸಿಡಿಲು ಅಪ್ಪಳಿಸು, – ಬಡಿ; ಸಿಡಿಲುಹೊಡೆ : ದುರ್ಯೋಧನಂ . . . ಸಿಡಿಲೆಱಗುವಂತೆ ಘೋರೆಂದೊಡನೆಱಗಿ ಮಹೋಗ್ರ ಘನಗದಾಪರಿಘದಿನಾ[ರ್ದಡೆ]ಗಿಡೆ ಪೊಯ್ದೊಡೆ ಭೀಮಂ ಕೆಡೆದಂ (ಪಂಪಭಾ. ೧೩-೯೫); ಸೂಳವಿಸಿದವು ಲಗ್ಗೆಯಲಿ ನಿಸ್ಸಾಳತತಿ ಸಿಡಿಲೆಱಗಿತೆನಲು (ಕುವ್ಯಾದ್ರೋ. ೪-೫೨); ನರಸಿಂಹ ನಡುವಜ್ರಗಂಬವನೊಡೆದು ಘುಡುಘುಡಿಸುತ ಪೊಱಮಟ್ಟಂತೆ ಮಹದಾದಿ ಸಿಡಿಲೆಱಗಿದುವು (ಮೋಹತ. ೪-೩೪). **ಸಿಡಿಲೆರಗು** : ಲಗ್ನಪತ್ರಿಕೆ ಓದಿದೆ. ತಲೆಗೆ ಸಿಡಿಲೆರಗಿದಂತಾಯಿತು (ರಾಮಾನ. ೬೯). [ಸಿಡಿಲ್$_2$ + ಎಱಗು$_1$]

**ಸಿಡಿಲೇಳಿಗೆ** 'ಸಿಡಿಲೇಟ್ಗ' ನೋ.

**ಸಿಡಿಲೇಳ್ಗೆ** 'ಸಿಡಿಲೇಟ್ಗ' ನೋ.

**ಸಿಡಿಲೇಟ್ಗ, ಸಿಡಿಲೇಳಿಗೆ, ಸಿಡಿಲೇಳ್ಗ** (ನಾ). ಸಿಡಿಲಿನ ವೇಗ, – ರಭಸ : ಅವಂ ಮೊೞಗಿ ಸಿಡಿಲ್ದದೊಂದು ಸಿಡಿಲೇಟ್ಗೆಯಿನೆಯ್ತರೆ (ಪಂಪಭಾ. ೩-೧೬); ಮೊೞೆದು ಹಿತೋಪದೇಶಮನೆ ಕೇಳಲೊಡಂ ಸಿಡಿಲೇಟ್ಗೆಯಿರ್ದು . . . ಗುರುಸಂಕುಳಮಂ ಮಱೆದಿಂತು ಮುಮ್ಮಲಂ ಮಱುಗಿಪರಲ್ತೆ ತಮ್ಮ ನಿಜಗರ್ವದೆ ಮಾಯ್ದ ನೃಪರ್ (ಕಾದಂಪೂ. ೫೪೪). **ಸಿಡಿಲೇಳಿಗೆ** : ಕೇಳೆ ಸಿಡಿಲೇಳಿಗೆಯಲೆದ್ದು ನೃಪಾಲಕರು ಗಜಬಜಿಸಿ ರಭಸದೊಳೋಲಗವ ಹೊಱವಂಟು ನಡೆದರು (ಕುವ್ಯಾವಿ. ೪-೪೧); ಅದ್ರಿಗಳ ಹೆಡತಲೆ ಸೀಳೆ ಸಿಡಿಲೇಳಿಗೆಯಲೆದ್ದವು ವಿವಿಧವಾದ್ಯರವ (ಕುವ್ಯಾದ್ರೋ. ೧-೪೪). **ಸಿಡಿಲೇಳ್ಗೆ** : ಅನ್ತು ಸಿಡಿಬಲೆಯು ಸಿಡಿ[ಲೇಳ್ಗೆ]ಯುಮಿಪ್ಪಂತಿರ್ದ್ದ ಕುಂದುಗೊಳದ ಕಲಿಗೊಡಗೆ ಕಲಿಗಳಂಕುಸಂ ಕಾಮದೇವನೆತ್ತಲುತ್ತವಳನಾಗಿಪ್ಪುದುಂ (ಸೌಇಇ. XX, ೧೨೬-೫; 1186); ಕೊನೆಮೀಸೆ ಕೆತ್ತ ಸಿಡಿಲೇಳ್ಗೆಯಿಂದಂ ಕರಂ ನಡೆ ತೋಱು ತೋಱು ಕೊಂಡವನೆನುತ್ತಿರಲು (ನಂಬಿರ. ೧೭-೧೭೦). [ಸಿಡಿಲ್$_2$ + ಏಟ್ಗ]

**ಸಿಡಿಲೊಬ್ಬುಳಿ** (ನಾ). ಸಿಡಿಲುಗಳ ಸಮೂಹ : ತಿವಿದ ಸಿಡಿಲೊಬ್ಬುಳಿಯೊ ಪ್ರಳಯದ ಜವನ ನೆರವಿಯೊ . . . ಎನೆ ಸ್ಯಂಧವನ ಕಾಹಿನ ಮೋಹರಂಗಳು ಕಿಡಿಯನುಗುಳಿದವು (ಕುವ್ಯಾದ್ರೋ. ೯-೨೫).

[ಸಿಡಿಲು (< ಸಿಡಿಲ್$_2$) + ಒಬ್ಬುಳಿ$_1$ (< ಒರ್ವುಳಿ)]

**ಸಿಡಿಲ್ಗೆಂಡ** (ನಾ). = ಸಿಡಿಲಿಂಗಳ : ಸಿಡಿಲ್ಗೆಂಡವೆಂಬಂತು ಕಣ್ಗಳ್ ಕಡುಗೆಂಪಂ ತಾಳ್ದೆ (ಜಗವಿ. ೧೩-೬೯). [ಸಿಡಿಲ್$_2$ + ಕೆಂಡ]

**ಸಿಡಿಲ್ತರ್** (ಕ್ರಿ). ಹಾರಿ ಬರು; ಚಿಮ್ಮಿ ಬರು : ಸಂಪುಟಂ ಪತ್ತುಗೆವಿಟ್ಟೋರಂದದಿಂ ಸಿಂಪುಗಳುಗುಟೆ ಸಿಡಿಲ್ತಂದ ಮುಕ್ತಾಫಲಶ್ರೇಣಿಗಳಿಂದಂ ಪಶ್ಚಿಮಾಂಭೋಧಿಯ ಪುಳಿನಚಯಂ ಬೆಳ್ಪನಾಳ್ದಿರ್ದುವಾಗಳ್ (ಕಾದಂಪೂ. ೧೧೨). [ಸಿಡಿಲ್$_1$ + ತರ್]

**ಸಿಡಿಲ್ದನಿ** (ನಾ). ಸಿಡಿಲು ಬಡಿಯುವಾಗ ಉಂಟಾಗುವ ಶಬ್ದ : ಘುಡುಘುಡು ಚಿಳಿಛಿಟಿಲೆಂದುಗ್ರಡದ ಸಿಡಿಲ್ದನಿಯೆ ಪೊಡೆಯೆ ಗಗನಸ್ಥಳದಿಂದೆ . . . ಎಡೆವಿಡದಿಳಿ ವಾಲಿವರಲ ಮಳೆ ಬಗೆಗೊಳಿಕುಂ (ರಾಜಶೇ. ೬-೧೧೩). [ಸಿಡಿಲ್$_2$ + ದನಿ$_1$]

**ಸಿಡಿಲ್ಮಳೆ** (ನಾ). ಸಿಡಿಲಿನ ಆರ್ಭಟದಿಂದೊಡಗೂಡಿದ ಮಳೆ; ಭಾರಿಮಳೆ : ಮೂಲೆಗೊಳುತ್ತುಮೊತ್ತರಿಸಿ ಪಾಯ್ವ ಸರಲ್ಗಳಿನುಣ್ಮೆ ವಿಸ್ಫುಲಿಂಗಾಲಿ ಬರಲ್ ಸರಲ್ಮಳೆ ಸಿಡಿಲ್ಮಳೆಯಂ ಗೆಲೆವಂದುದೆಂಬಿನಂ (ಜಗವಿ. ೧೩-೭೭). [ಸಿಡಿಲ್$_2$ + ಮಳೆ]

**ಸಿಡಿಲ್ಬೆಳಗು** (ನಾ). ಸಿಡಿಲು ಬಡಿಯುವ ಮೊದಲು ತೋರುವ ಬೆಳಕು; ಮಿಂಚು : "ತಾಂ ಮುಗಿಲ್ಗಿಚ್ಚು ಸಿಡಿಲ್ಬೆಳಗದು ನೋಡಲು ತಾಂ[ಪಾಠಾಂ. ಕಾರ್ಮುಗಿಲ್ಗಿಚ್ಚು ಸಿಡಿಲ್ ಮುಗಿಲ್ಬೆಳಗು ಮಿಂಚದು] ಸೋನೆಗೆ ನಾಮಂ ತಂದಲ್" (ಚತುಸಿ. ೧೧೧). [ಸಿಡಿಲ್$_2$ + ಬೆಳಗು$_2$]

**ಸಿಡಿಲ್ವೊಡೆ, ಸಿಡಿಲುಹೊಡೆ** (ಕ್ರಿ). ೧. ಸಿಡಿಲು ಬಡಿ, — ಅಪ್ಪಳಿಸು: ನಿನಗಾಯಬ್ಬೆಯೊಡೆಯಳೆಂಬುದಂ ಪೇಳ್ಪುದುಮದಂ ಕೇಳ್ದು ತೊಟ್ಟನೆ ನೆತ್ತಿಯಂ ಸಿಡಿಲ್ವೊಡೆದಂತಾಗೆ (ಕಾದಂಉ. ೭೩೯). **ಸಿಡಿಲುಹೊಡೆ** : ೧. ಬ್ಲಾಂಡಿಂಗ್ಸ್ ಸಿಡಿಲುಹೊಡೆದವನಂತೆ ಹಾರಿ ಬಿದ್ದ (ಯೋಧವು. ೨೭). ೨. ಇಂದ್ರನ ವಜ್ರಾಯುಧದ ಹೊಡೆತ ಬೀಳು : ಸಿಡಿಲುಹೊಡೆದುಚ್ಛಳಿಸಿದುರದುಗ್ಗಡದ ಗಾಯದ . . . ದಡಿಗರಕ್ಕಸರಾಯರಿದ್ದುದು ಕೋಟಿಸಂಖ್ಯೆಯಲಿ (ತೊರರಾ. ೩-೭-೫).

[ಸಿಡಿಲ್$_2$ + ಪೊಡೆ$_1$]

**ಸಿಡಿಲ್ಸಿಡಿ** (ಕ್ರಿ). ಸಿಡಿಲು ಚಿಮ್ಮು, — ಸ್ಫೋಟಿಸು : ಇಟ್ಟೊಡೆ . . . ಮಹಾ ವೈಷ್ಣವಾಸ್ತ್ರಮಂ ಗಾಂಗೇಯಂ ತೊಟ್ಟಸುಪುದುಮೆರಡುಂ ಕಿಡಿಗುಟ್ಟಿ ಸಿಡಿಲ್ಸಿಡಿಯೆ ಪೋರ್ದುವಂಬರತಳದೊಳ್ (ಪಂಪಭಾ. ೧೧-೨೨). [ಸಿಡಿಲ್$_2$ + ಸಿಡಿ$_1$]

**ಸಿಡಿವನಿ** (ನಾ). ಮೇಲಕ್ಕೆ ಚಿಮ್ಮುವ ಹನಿ, — ತೊಟ್ಟು : ಕಡಲ ಸಿಡಿವನಿಯೊ ಮೇಘಾವಳಿಯ ತತ್ತಿಗಳೊ . . . ಎನೆ ತಾರಾಳಿ ನೆಗೆದವು (ಸೋಮಚಿ. ಪರಿ. ೨೧೭); ಎಡಬಲದ ಚಾಮರದ ಗಾಳಿಯ ತಡೆವ ಚಾರುವ್ಯಜನದಮೃತದ ಸಿಡಿವನಿಯ . . . ಪರಮೈಶ್ವರ್ಯದಲಿ ರಂಜಿಸಿದನಸುರಾರಿ (ನಿಭಾಗ. ೪-೪-೧೪). [ಸಿಡಿ$_1$ + ಪನಿ$_1$]

**ಸಿಡಿವಲೆ, ಸಿಡಿಬಲೆ** (ನಾ). ಒಂದು ಬಗೆಯ ಬಲೆ : ತಡಿಕೆವಲೆ ಕಣ್ಣಿವಲೆ . . . ತಡೆವಲೆ ಸಿಡಿವಲೆ ನಿಡುವಲೆಗಳೊಪ್ಪಿದವು ಲುಬ್ಧಕರೊಳ್ (ಗಿರಿಕ. ೧-೮೦); ಉರುಗದೆಯ ದಡಿವಲೆಯುಲಿಸಿ ಮುದ್ಗರದ ಸಿಡಿವಲೆಗಳಲಿ ಸಮರದೊಳರಿಮೃಗವ್ರಾತವನು ಭೀಮಕಿರಾತ ಕೈಕೊಂಡ (ಕುವ್ಯಾದ್ರೋ. ೧೨-೩೧); ಗರ್ಭಗೃಹಮಂ ಪೊಕ್ಕೊಡಂ ಬಿಡದೆ ಸಿಡಿವ[ಪಾಠಾಂ. ದ]ಲೆಯಿಕ್ಕಿ (ಚಿಕವಂ. ೭-೧೨). **ಸಿಡಿಬಲೆ** : ಅನ್ತು ಸಿಡಿಬಲೆಯು ಸಿಡಿ[ಲೇಳ್ಗೆ]ಯುಮಿಪ್ಪಂತಿರ್ದ್ದ ಕುಂದುಗೊಳದ ಕಲಿಗೊಡಗೆ ಕಲಿಗಳಂಕುಸಂ ಕಾಮನೆತ್ತಲುತ್ತವಳನಾಗಿಪ್ಪುದುಂ ಚಲದಂಕರಾಮ ಮಾದಿಸೆಟ್ಟಿ . . . ಮಹಾಲಗ್ಗೆ ಮಾಳ್ಪುದುಂ (ಸೌಇಇ. XX, ೧೨೬-೫; 1186). [ಸಿಡಿ$_1$ + ಬಲೆ$_1$]

**ಸಿಡಿಸಾಲೆ** (ನಾ). ಒಂದು ಬಗೆಯ ಸಸ್ಯ : ತೊಗರತ್ತಿ, ಸಿಡಿಸಾಲೆ (ವೈಜಿಗಿ. ೫-೭೪).

[?]

**ಸಿಡಿಸಿಡಿ$_1$** 'ಸಿಡಿ$_1$' ಪರಾ.

**ಸಿಡಿಸಿಡಿ$_2$** (ನಾ). ಕೋಪ; ಸಿಟ್ಟು.

**ಸಿಡಿಸಿಡಿಯಾಗು** = ಕೋಪಗೊಳ್ಳು; ರೇಗು : ಮಾತೆತ್ತಿದರೆ ಸಾಕು ಸಿಡಿಸಿಡಿಯಾಗುತ್ತಿದ್ದರು (ಆಲಹೂ. ೪೦). **ಸಿಡಿಸಿಡಿಸಿಟ್ಟು** = ಅಧಿಕವಾದ ಸಿಟ್ಟು; ಉಗ್ರಕೋಪ : ಭೀಮನು ಪ್ರಳಯೋಗ್ರಾಂತಕನಂತೆ ಸಿಡಿಸಿಡಿಸಿಟ್ಟಿನಲಿದ್ದಾನೆ (ಸಾಹಿಸಂ. ೧೦೩). [< ಸಿಡಿ$_1$]

**ಸಿಡಿಸಿಡಿವೋಗು** (ಕ್ರಿ). ಕೋಪಗೊಳ್ಳು; ರೇಗು : ಸಿಡಿಸಿಡಿಯೋ[ವೋ]ಗಿ ಕಣ್ಣಡರೆ ಕೆಂಪವನುದ್ಧತನಪ್ಪಂ (ಮಹಾನೇ. ೫-೭೫). [ಸಿಡಿಸಿಡಿ$_2$ + ಪೋಗು$_1$ (< ಪೋ$_1$)]

**ಸಿಡಿಸು** (ಕ್ರಿ). ೧. ನೀರು, ಮಣ್ಣು ಮುಂತಾದುವನ್ನು ಮೇಲೆ ಚಿಮ್ಮುವಂತೆ ಮಾಡು, — ಚಿಮ್ಮಿಸು : ಕೊಳಚೆ ಮೇಲೆ ಹಂಟೆ ಹಾಕಿ, ಮೋರೇ ಮೇಲೆ ಸಿಡಿಸಿಕೊಂಡಂತೆ (ಗಾದೆ). ೨. ಸಿಂಪಡಿಸು; ಚಿಮುಕಿಸು : ಅಲ್ಲಿ ಗಂಗೋದಕವನ್ನು ಸಿಡಿಸಿ, ಆ ಸ್ಥಳವನ್ನು ಶುದ್ಧಮಾಡಿದರು (ಮುಂಬಯಿ. ೫-೬೧). [ಸಿಡಿ$_1$ + - ಸು$_1$]

**ಸಿಡಿಹಾಯ್** (ಕ್ರಿ). (ಸಸ್ಯಗಳಿಗೆ) ರೋಗ ತಗಲು, — ಅಂಟು : ನೀರು ಬಹಳ ದೂರ ಇರುವ ತೆವರುಕಟ್ಟುಭೂಮಿಯಲ್ಲಿ ಮಾವಿನ ಗಿಡಗಳನ್ನು ಬೆಳೆಸಿದರೆ ಕೆಲವು ವರ್ಷಕ್ಕೆ ಸಿಡಿಹಾಯ್ದು ಒಣಗಿಹೋಗುವವು (ಕೃಷಿಪ್ರ. ೧೪೦).

[ಸಿಡಿ$_4$ (< ಸೀಡಿ) + ಹಾಯ್$_1$ (< ಪಾಯ್$_1$)]

**ಸಿಡಿಹು** (ನಾ). ಆತಂಕ; ಕಳವಳ : ಸಿಡಿಹಿನಿಂ ನೋಡಿ ಪಕ್ಕವ ಬದಿರ್ದು ಬೆದಱುತ್ತ ನಡುಗೊಂಬನೇಱೆ ಸುಸ್ವರಗಳಿಂ ಧ್ವನಿಗೆಯ್ದು ಪಡಿಯಱುವಾಂಕಿತವಕ್ಕಿ ಪೌಸರದೊಳಿಹವು (ಪ್ರಭುಪು. ೩-೧೯). [ಸಿಡಿ$_1$ + - ಹು$_2$ (< - ಪು$_2$)]

**ಸಿಡುಂಬು, ಸಿಡಿಂಬ, ಸಿಡಿಂಬು, ಸಿಡಿಬು, ಸಿಱುಂಬು** (ನಾ). ೧. ದಟ್ಟವಾದ ಮೆಳೆ, — ಹೊದರು : ಅಳವಿಗಟಿಯೆ ಬಳೆದು ಪುದುಂಗೊಳಿಸಿದ ಬಿದಿರ ಸಿಡುಂಬನೆಡೆಗೊಳೆ ಕಡಿವ ಪೋಡುಂಗಾಱನಂತೆ (ಪಂಪಭಾ. ೧೨-೧೬.೭ ವ); ಬಿದಿರ ಸಿಡುಂಬಿನೊಳ್ ಗಜಱಿ ಗರ್ಜಿಸಿ ಪೆರ್ವುಲಿ ಪಾಯೆ (ಮಲ್ಲಿಪು. ೧೦-೭೩); ನಿತ್ಯಬಿಂದುಗೆ- ಬೆಡಂಗು, ಕಡಂಗು . . . ಸಿಡುಂಬು, ಸೆಱಂಗು (ಶಮದ. ೩೭ ಪ್ರಯೋ); ಸಿಡುಂಬು ಮೆಳೆ ಬಳ್ಳಿ . . . ನಾನಲ್ಗಳೊಳೆಡೆವಿಡದೊಡಿತ್ತು ಪಂದಿ ಜವದಿಂದಾಗಳ್ (ಶಬಶಂ. ೪-೨೩). ೨. (ಮುಳ್ಳುಗಳಿರುವ) ಮರ; ವೃಕ್ಷ : "ಸಿಡುಂಬೆಂದು ಕುಜಂ" (ಕಶಸಾ. ೭೩-೭೫೯). **ಸಿಡಿಂಬ** : ೧. ನಾನಲುಮಂ ಬಾನಲುಮಂ ಸಿ[ಪಾಠಾಂ. ಸ] ಡಿಂಬಮನಿಡಿಂಬಮಂ . . . ಕಳೆದು ಪೋಗಿ (ಲೀಲಾವ. ೬-೧೪ ವ). **ಸಿಡಿಂಬು** : ೧. ನಟ್ಟ ಕೂರ್ಗಣೆಯ ಬೆಣ್ಪೊಱೆಯಿಂದೆ ಬಟಲ್ವನುರ್ವಿ ಪೆರ್ವಿದಿರ ಸಿಡಿಂಬಿನೊಳ್ ಪುದಿದದೊಂದು ಕುಳಾಚಳದಂತೆ ಸಿಂಧುಜಂ (ಪಂಪಭಾ. ೧೧-೪೫). **ಸಿಡಿಬು** : ೧. "ಪ್ರತಾನೇ = ಸಿಡಿಬನುಳ್ಳ (ಶಾಖೆಯುಪಶಾಖೆ ಗಂಡುಗಳನುಳ್ಳ), ವಂಶೇ = ಬಿದಿರೊಳ್" (ನೀತಿವಾ. ೨೯-೩೭). **ಸಿಱುಂಬು** : ೧. ಮಿಸುಗುವ ಸಿಱುಂಬಿನಿಂದೆಡೆವಿಡದಿಱುಂಬಿ ನಿಂದೊಸರ್ವೊಜ್ಜರಂಗಳಿಂದೆ . . . ಮೆಱೆವರಣ್ಯಂಬೊಕ್ಕನು (ಚೀರಮ. ೧೧-೧೭).

**ಸಿಡುಕ, ಸೀಡಕ** (ನಾ). ೧. ಸಿಟ್ಟುಮಾಡಿಕೊಳ್ಳುವ ಸ್ವಭಾವದವನು; ಕೋಪಿಷ್ಠ : ನಾವು ಸಾಮಾನ್ಯವಾಗಿ ಎಂಥವನನ್ನು ಸಿಡುಕ, ಮುಖಗೇಡಿ . . . ಜೊತೆ ಬೇಡದ ಗೊಡ್ಡು — ಎಂದು ಕರೆಯುತ್ತೇವೆಯೋ ಅಂಥವನು ಸಹ ಸಮಾಜ ಸಂಬಂಧಗಳನ್ನು ಒಂದೆರಡನ್ನಾದರೂ ಉಳಿಸಿಕೊಂಡಿರುತ್ತಾನೆ (ರಾಜ್ಯಶಾ. ೩೭); ಅವನು ಬಡವನಾಗಿರಲಿ ಸಿಡುಕನಾಗಿರಲಿ, ಅವನಲ್ಲಿ ಅವರಿಗೆ ಗೌರವವೇ (ಬಂಕಿಮ. ೨೦೯). **ಸೀಡಕ** : (ಗು). ೨. ಕೋಪಿಸಿಕೊಳ್ಳುವ; ಸಿಟ್ಟುಮಾಡಿಕೊಳ್ಳುವ : ಆ ನ್ಯಾಯಮೂರ್ತಿಗಳು ಇಂತಹ ಸೀಡಕಪ್ರವೃತ್ತಿಗಾಗಿ ಹೆಸರಾಗಿದ್ದರು (ಕೂನೆಕಾ. ೪೫).

[ಸಿಡುಕು$_2$ + - ಅ$_7$]

**ಸಿಡುಕಲು$_1$** (ಗು). ಚಿಮ್ಮುವಂಥ; ಹಾರುವ : ಮಳೆಯ ಸಿಡುಕಲು ಹನಿಗಳಿಂದ ದಾರಿಗಳು ಮೊದಲೇ ನೆನೆದು ಹೋಗಿರಲು, ಸುಳಿಗಾಳಿ ಅವರನ್ನು ಸೆಟೆಯುವಂತೆ ಮಾಡುತ್ತಲಿದ್ದಿತು (ಕೃತಕ್ಕ. ೨). [< ಸಿಡಿ$_1$ + - ಕಲು$_2$ (< - ಕಲ್$_4$)]

**ಸಿಡುಕಲು$_2$** 'ಸಿಡುಕು$_2$' ಪರಾ.

**ಸಿಡುಕಿ** (ನಾ). ಕೋಪಗೊಳ್ಳುವ ಸ್ವಭಾವದವಳು : ಅವಳು ತುಂಬಾ ಸಿಡುಕಿ (ರೂಢಿ). [ಸಿಡುಕ + - ಇ$_2$]

**ಸಿಡುಕು$_1$** (ಕ್ರಿ). ಕೋಪಗೊಳ್ಳು; ರೇಗು : "ನಿಮಗ್ಯಾರು ಬೇಕಾಗಿದೆ?" ಎಂದು ಮುದುಕಿ ಸಿಡುಕಿದಳು (ಪುನರು. ೨೮೨). [< ಸಿಡಿ$_1$]

**ಸಿಡುಕು$_2$, ಸಿಟುಕು** (ನಾ). ಕೋಪ; ಸಿಟ್ಟು : ವಸುಮತಿ ದಸ್ತಗೀರನನ್ನು ಸಿಡುಕಿನಿಂದ

ನೋಡಿ . . . ಹಣವನ್ನು ದೂರ ಸರಿಸಿದಳು (ಮಣ್ಣಮ. ೧೪೫); ಗಡಿಗೆಯ ಮುಖವೇಕೆ ಗುಡುಗಿನ ದನಿಯೇಕೆ ಸಿಡುಕಿನ ಪರಿತಾಪವೇಕೆ (೧೦ಚಾಪ. ೧೧೦-೩೬). **ಸಿಟಕು.**

**ಸಿಟಕುಪಟಕುಮಾಡು** = ಸಿಟ್ಟಾಗು; ರೇಗು : ತಂದೆತಾಯಿಗಳು ಹುಡುಗರ ಮೇಲೆ ಆಗಾಗ್ಗೆ ಸಿಟಕುಪಟಕು ಮಾಡಿದರೆ (ಮುಂಬಯಿ. ೫-೪೭). **ಸಿಡುಕಲು₁** = ರೇಗುವ; ಕೋಪಗೊಳ್ಳುವ : ಅವನದ್ದು ಸಿಡುಕಲು ಸ್ವಭಾವ (ರೂಢಿ).

[< ಸಿಡುಕು₁ / ತಮಿ. ಚಿಟುಕ್ಕು]

**ಸಿಡುಕು₃, ಶಿಡಕು** (ನಾ). ರೇಖೆ; ಪಟ್ಟೆ : ಕಪ್ಪಾನ ಸಿಡುಕುಗಳಿಂದ ಬೆಟ್ಟದ ಸಾಲುಗಳೂ ನಕಾಶದಲ್ಲಿ ತೋರಿಸಲ್ಪಟ್ಟಿರುತ್ತವೆ (ಮುಂಬಯಿ. ೫-೨೪೭). **ಶಿಡಕು** : ಮುಸಲ್ಮಾನರ ಮನೆಗಳಲ್ಲಿ ಹೊರಗೋಡೆಗಳನ್ನು ಬರಿ ಸುಣ್ಣದಿಂದ ಸಾರಿಸುವರು ಇಲ್ಲವೆ ಅವಕ್ಕೆ ಸುಣ್ಣದ ಶಿಡಕುಗಳನ್ನು ಕೊಡುವರು (ಕಭಾಗ. ೨೨೮). [?]

**ಸಿಡುಕುತನ, ಸೀಡಕತನ** (ನಾ). ಕೋಪಗೊಳ್ಳುವ ಸ್ವಭಾವ : ನೀವು ನಿಮ್ಮ ಸಿಡುಕುತನವನ್ನು ಬಿಟ್ಟರೆ ಎಂದಿಗೂ ಜಗಳವು ಬರಲಾರದು (ವೋಹಿನೀ. ೪೯). **ಸೀಡಕತನ** : ಸೀಡಕತನದಿಂದಲೂ ಸ್ವೇಚ್ಛಾಚಾರದಿಂದಲೂ ಕ್ರೂರಮುದ್ರೆಯಿಂದಲೂ ತನ್ನ ನಂಬಿಗಸ್ತರನ್ನಾದರೂ ಹೆದರಿಸುತ್ತಿದ್ದರು (ಮೋಚಾದ. ೧೧೦). [ಸಿಡುಕು₁ + -ತನ]

**ಸಿಡುಕುಮುಖ** (ನಾ). ಸಿಟ್ಟನ್ನು ವ್ಯಕ್ತಪಡಿಸುವ ಮುಖ ; ಕೆರಳಿದ ಮುಖ : ಹದಗಟ್ಟಿದ್ದ ಮೇರಿ ಸಿಡುಕುಮುಖದಿಂದಲೇ ಮಾಸ್ತರನ್ನು ತಿನ್ನುವಂತೆ ನೋಡುತ್ತಾ ಕುರ್ಚಿ ಬಿಟ್ಟೆದ್ದು ಬಂದಳು (ಕಾವೇರಿ. ೮೯). [ಸಿಡುಕು₂ + ಮುಖ]

**ಸಿಡುಕುಮೋರೆ** (ನಾ). = ಸಿಡುಕುಮುಖ : ಗಂಡನ ಕಡೆಗೆ ತಿರುಗಿ, ಸಿಡುಕುಮೋರೆಯ ಮಾಡಿ, ನೆಲಗುಡುಗಿನಂತಾಡಿದಳ್ (ಶ್ರೀರಾಮಾ. ೧೫೫-೯೮).

[ಸಿಡುಕು₂ + ಮೋರೆ (< ಮೋಱೆ)]

**ಸಿಡುಕುವಲೆ** (ನಾ). ಒಂದು ಬಗೆಯ ಬಲೆ : ಸಿಡುಕು[ಪಾಠಾಂ. ಡಿವ]ವಲೆ ಸಿಲುಕುವಲೆ . . . ಮಂದಾಸುವಲೆಯ ಹೊಳೆಗಳ ಮೊತ್ತಮಂ ಕಂಡನಾದಯ್ಯನು (ಸೋಮಚ. ಪರಿ. ೨೧೧; ಪಚಕಾ. ೫-೮ ನೋ). 'ಸಿಡಿವಲೆ' ಪಠಾ. [ಸಿಡುಕು₁ + ಬಲೆ₁]

**ಸಿಡುಗುಟ್ಟು** (ಕ್ರಿ). = ಸಿಡುಕು₁ : ತಂದೆ ಕೋಪದಿಂದ ಸಿಡುಗುಟ್ಟಿದ (ಕತ್ತಲೆ. ೪೮); ಆಗಲಿಂದ. ತಂದೆಯಿದಿರಾಗಿ ಮುಖವನ್ನು ಕಿರಿದು ಮಾಡಿಕೊಂಡು ಸಿಡುಗುಟ್ಟುತ್ತಿದ್ದಳು (ಕವಿಕ. ೨೮). [< ಸಿಡುಕು₁ + ಕುಟ್ಟು₁]

**ಸಿಡುಬು** (ನಾ). ೧. ಕೀವು ತುಂಬಿದ ಬೊಕ್ಕೆಗಳು ಮೈಮೇಲೆ ಹೊಮ್ಮುವ ಒಂದು ಬಗೆಯ ಸಾಂಕ್ರಾಮಿಕರೋಗ; ಮೈಲಿಬೇನೆ; ಅಮ್ಮ : ದೆಸೆದೆಸ ಮುಸೆವಾ ಪ್ಲೇಗುಂ ಘಸಣಿಯ ಸಿಡುಬಿಂಪ್ಲೆಂಜುಂ ಮುಸಣಿಭಯವನೇ ತೋರ್ಗುಂ (ಮೈಸೂಮ. ೨-೯೧); ಜನರನ್ನು ಮೃತ್ಯುಮುಖಕ್ಕೆ ತಳ್ಳುವ ಮಹಾರೋಗಗಳಲ್ಲಿ ಸಿಡುಬು ಒಂದಾಗಿದೆ (ಮಾನಸಾ. ೧). ೨. ಮೈಲಿಬೇನೆಯನ್ನು ತಡೆಗಟ್ಟುವುದಕ್ಕಾಗಿ ಮುಂಚಿತವಾಗಿಯೇ ಚುಚ್ಚುಮದ್ದಿನ ಮೂಲಕ ಕೊಡುವ ಲಸಿಕೆ : ಅವರ ಮಗುವಿಗೆ ಸಿಡುಬು ಹಾಕಿಸಿದ್ದಾರೆ (ರೂಢಿ).

**ಸಿಡುಬು ತಗಲು, ಸಿಡುಬು ತಗುಲು** = ಮೈಲಿಬೇನೆಗೆ ಒಳಗಾಗು; ಸಿಡುಬಿನ ಸೋಂಕಾಗು : ಜಲಜಳಿಗೀಗ ಸಿಡುಬುತಗಲಿತು (ಚಿಗುಬ. ೩೨); ಸಿಡುಬುತಗುಲಿದಾಗ ವೈದ್ಯರ ಪಾಲನೆಗೆ ಮಗುವನ್ನು ಒಪ್ಪಿಸಬೇಕು (ಗೃಹವಿ. ೧೫೦). **ಸಿಡುಬು ಹಾಕು** = ಮೈಲಿಬೇನೆಯನ್ನು ತಡೆಗಟ್ಟುವ ಲಸಿಕೆಯನ್ನು ಚುಚುಮದ್ದಿನ ಮೂಲಕ ರಕ್ತಕ್ಕೆ ಸೇರಿಸು; ದೇವಿಹಾಕು : ಹುಟ್ಟಿದ ಆರುತಿಂಗಳೊಳಗೇ ಮಕ್ಕಳಿಗೆ ಸಿಡುಬುಹಾಕುತ್ತಾರೆ (ರೂಢಿ). [< ಸಿಡಿ₁ / ತುಳು. ಶಿಡಿಬು, ಶಿಡುಬು, ಸಿಡುಬು]

**ಸಿಡುಬುಡಾಕು** (ನಾ). ಸಿಡುಬುರೋಗ ತಗುಲದಂತೆ ಮುಂಚಿತವಾಗಿಯೇ ಚುಚ್ಚುಮದ್ದಿನ ಮೂಲಕ ರಕ್ತಕ್ಕೆ ಸೇರಿಸುವ ಸಿಡುಬಿನ ಲಸಿಕೆ; ದೇವಿ: ಇವನು ಮೈಸೂರಿನಲ್ಲಿ ಸುಮಾರು ೨೫೦೦೦ ಜನಕ್ಕೆ . . . ಸಿಡುಬುಡಾಕು (vaccination) ಹಾಕಿದನು (ಪಾಶ್ಚಾವಿ. ೨೭೪). [ಸಿಡುಬು + ಡಾಕು₂ (< ಡಾಗು₁)]

**ಸಿಡುಬುಬೇನೆ** (ನಾ). = ಸಿಡುಬು ೧ : ಯಾವುದಾದರೊಂದು ಮನೆಯಲ್ಲಿ ಯಾರಿಗಾದರೂ ಸಿಡುಬುಬೇನೆ ಬಂದ ಕೂಡಲೆ ಮನೆಯಲ್ಲಿರುವ ಇತರರಿಗೆ ದೇವಿಹಾಕಿಸಬೇಕು (ಕೆಲರೋ. ೬೦). [ಸಿಡುಬು + ಬೇನೆ]

**ಸಿಡುಬುರೋಗ** (ನಾ). = ಸಿಡುಬು ೧ : ನಾವು ಹೋಗುವ ಮಾರ್ಗದಲ್ಲಿ ಸಿಡುಬುರೋಗ ತಗುಲಿ ಅನೇಕರು ಮಡಿದರೆಂಬ ಸುದ್ದಿ ಕೇಳಿ ನಮಗೆಲ್ಲಾ ತುಂಬಾ ಗಾಬರಿಯಾಯಿತು (ಪ್ರತಾಪ. ೧೧೭); ಸಿಡುಬುರೋಗ ಮುಖ್ಯವಾದ ಸಾಂಕ್ರಾಮಿಕ ರೋಗಗಳಲ್ಲಿ ಒಂದಾಗಿರುತ್ತದೆ (ಕೆಲರೋ. ೫೪). [ಸಿಡುಬು + ರೋಗ]

**ಸಿಡ್ಲು** (ನಾ). ಕಣ್ಣಿನ ಪಿಸುರು ; ಗೀಜು : "ದೂಷಿಕಾ . . . ಕಣ್ಣಿನ ಸಿಡ್ಲು, ಗೀಜು" (ಸಿದ್ಧಾಂತಿ. ೧೮೮). [?]

**ಸಿಣಕು** 'ಸಿಣುಕು' ನೋ.

**ಸಿಣುಕು, ಸಿಣಕು** (ಕ್ರಿ). ೧. ಅಸಹ್ಯ, ಅಸಮ್ಮತಿ ಮುಂತಾದುವನ್ನು ಸೂಚಿಸಲು ಮುಖವನ್ನು ಕಿವಿಚು, - ಸಿಂಡರಿಸು : ಒಂದೊಂದು ಸಲ ಅಲ್ಲಿ ಹತ್ತುಜನ ಸೇರಿರುವ ವೇಳೆ ರಾಮಾಚಾರ್ಯ, ಇವನಂತ ಬೇರೆ ಜನ, ವಚ್ಚರೋ ವಚ್ಚಲೋ ಎಂಬ ಪದ ಬಂದೊಡನೆ ತಾಳಲಾರದೆ ಮುಖವ ಸಿಣುಕುವರು (ನವರಾ. IV, ೭೨-೨೧). **ಸಿಣಕು** : ೨. (ಮುಖವು) ಸಿಂಡರಿಸಿಕೊಳ್ಳು, - ಕಿವಿಚು : ಮುಖಕ್ಕೆ ಬಿಸಿಲು ತಾಗಿ ಮುಖ ಸಿಣಕಿತು (ಚಿಕರಾ. ೩೪೮).

[ದೇ. ‖ ತಮಿ. ಚಿಣುಕ್ಕು; ತುಳು. ಸಿರಿಂಟು, ಸಿರುಂಟು, ಸಿಂಟುರ್, ಸಿಂದುರ್]

**ಸಿತ** (ಗು). ೧. ಬಿಳಿಯ ; ಶ್ವೇತವರ್ಣದ : ಲತಾಂತಂ ತಳ್ತ ಶಯ್ಯಾಶ್ರಿತಸಿತಮೃದುಳ ಪ್ರಚ್ಛದಚ್ಛನ್ನಶಯ್ಯಾತಲದೊಳ್ . . . ಶೂದ್ರಕನೃಪತಿ ಸುಖಾಸೀನನಾಗಿರ್ದಂ (ಕಾದಂಪೂ. ೬೦); ನವಾಶೋಕವೃಕ್ಷಂ ಸಿತಚಂಚೆಚ್ಚಮರಂ ಬೆಳ್ಗೊಡೆ ಸೊಗಯಿಪ ಭಾಮಂಡಳಂ (ಸುಕುಮಾ. ೪-೫೦). ೨. ಕಟ್ಟಿದ; ಬಿಗಿದ. ೩. ಸುತ್ತುವರಿದ. ೪. ಪತ್ತೆ ಹಚ್ಚಿದ ; ಕಂಡುಹಿಡಿದ. ೫. ಕೊನೆಮುಟ್ಟಿದ ; ಮುಗಿದ. (ನಾ). ೬. ಬಿಳಿಯ ಬಣ್ಣ; ಬಿಳುಪು : "ಗೌರಃ, ಶ್ವೇತಃ, ಸಿತಃ . . . ಪಾಂಡುರಃ -- ಈ ೧೨ ಬಿಳಿದು" (ಹಲಾಯು. ೧೨೧-೪೭); ತರದಿಂದಂ ಲೋಹಿತ ಸಿತ . . . ಮಲಿನವರ್ಣಮಿವು ಗೃಹವರ್ಣಂ (ಜಾತಕ. ೧-೨೧). ೭. ಶುಕ್ರ; ಬೆಳ್ಳಿನಕ್ಷತ್ರ : ಓರಂತಿರೆ ಬೆಳಗುತ್ತಂ ತಾರಾರವಿಚಂದ್ರ ಭಗಣಬುಧಸಿತಗುರ್ವಂಗಾರಕ . . . ಮೇಗೆಸೆದಿರ್ಕುಂ (ವರ್ಧಮಾ. ೧೫-೧೮); ದಿನಪಾಬ್ಜಾರಬುಧಾಮರೇಜ್ಯಸಿತಮಂದಾಹೀಂದ್ರಕೇತುವ್ರಜಂ ನಿನಗೇಕಾದಶರಕ್ಕೆ (ಪುಷ್ಪಪು. ೮-೭೪). ೮. ಸಕ್ಕರೆ : ಬಟೀಕೆ ಚಾತುರ್ಜಾತಕಂ ನಾಳಿಕೇರದ ತೋಯಂ ಸಿತಮೆಂಬಿವಂ ಕಲಸಿ (ಲೋಕೋಪ. ೮-೭); ಪನ್ನೆರಟ್ಟವಡಿ ಮಂಡಗೆಯೊಮ್ಮನ ತುಪ್ಪವಣ್ಣವಾಲ್ಕೆರಸಿ ಸಿತಾನ್ವಿತಂ ತೆಜುವರ್ (ಧರ್ಮಪ. ೯-೧೮). ೯. ಬಾಣ. ೧೦. ಬೆಳ್ಳಿ. ೧೧. ಶುಕ್ಲಪಕ್ಷ : ಅಂತು ಜ್ಯೇಷ್ಠಮಾಸದ ಸಿತಚತುರ್ದಶಿಯೊಳ್ ಭರಣೀನಕ್ಷತ್ರದೊಳಪರಾಹ್ನದೊಳ್ ಪರಮದೀಕ್ಷೆಯಂ ಕೆಯ್ಕೊಳ್ವುದುಂ (ಶಾಂತಿಪು. ೧೧-೧೦೬ ವ). ೧೨. ಶ್ರೀಗಂಧ. ೧೩. ಕಗ್ಗಲಿಮರ ; ಖದಿರ : "ಖದಿರಂ ಸಿತಮಜಿಯಂತದು ಕದಿರಂ" (ವಸ್ತುಕೋ. ೩೫-೧೫). [ಸಂ.]

**ಸಿತಕ** 'ಸಿತಗ' ನೋ.

**ಸಿತಕಂದ** (ನಾ). (ಗೆಡ್ಡೆಗಳುಳ್ಳ) ಒಂದು ಬಗೆಯ ಸಸ್ಯ : "ಖಂಡಕಃ – ಸಿತಕಂದ, ಸಕ್ಕರೆ" (ಓಷಧಿ. ೪೨). [ಸಂ.]

**ಸಿತಕರ** (ನಾ). ೧. ಬಿಳುಪಾದ ಕಿರಣಗಳುಳ್ಳವನು; ಚಂದ್ರ : 'ಸಿತಕರಚೂಡ' ಪೂ. ೨. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : ಶಶಾಂಕ ಸೋಮಂ ಸುಧಾಂಶು ರಜನಿಕರಂ . . . ಸಿತಕರ ಒಂದಱ ನಾಮಂ (ವ್ಯವಹಾ. ೯-೧). [ಸಂ.]

**ಸಿತಕರಚೂಡ** (ನಾ). ಚಂದ್ರನನ್ನು ಜಟೆಯಲ್ಲಿ ಧರಿಸಿದವನು; ಶಿವ : ನಾಡಾಡಿಯಲ್ಲು ಸಿತಕರಚೂಡನೆನಿಪ್ಪಮಳಕೋಟಿನಾಥಸ್ಥಾನಂ ರೂಢಿಯೊಳಾಚನ್ದ್ರಾರ್ಕ್ಕಂ (ಎಕ. VIII, ಸೊರಬ. ೨೭೬-೫೮; 1070). [ಸಂ.]

**ಸಿತಕರಿ** (ನಾ). ಬಿಳಿಯ ಆನೆ; ಐರಾವತ : ಸುರರಿಗೆರೆಯನದೆಂಬೆನೆ ಸಿತಕರಿಯ ಪರಿವಿಡಿಯಿಲ್ಲ (ಕೋಗಯ. ೧೧-೨೬). [ಸಂ. ಸಿತಕರಿನ್]

**ಸಿತಕೀರ್ತಿ** (ನಾ). ನಿರ್ಮಲವಾದ ಯಶಸ್ಸು; ಧವಳಕೀರ್ತಿ : ಒತ್ತರಿಪ ಸಿತಕೀರ್ತಿಯೊಳು ಪ್ರಭೆವೆತ್ತು ಪರದರುಶನದ ಮೂಗಿನ ಕತ್ತಿಯೆಂಬಾ ಲೆಕ್ಕೆಯವನಾ ಪುರದೊಳೆತ್ತಿಸಿದ (ಬಸವು. ೫೩-೫೭). [ಸಂ.]

**ಸಿತಕುಷ್ಠ** (ನಾ). ಒಂದು ಬಗೆಯ ಕುಷ್ಠರೋಗ; ಬಿಳಿಯ ಕುಷ್ಠ : [ಗೃಹದಿಂ]

ದ್ವಿತೀಯ ೦ಃಘದೊಳಿರೆ ಸದ್ಗ್ರಹೇತರಗಣಂ ಸಿತಕುಷ್ಮಸಮೇತನಾ ನರಂ (ಜಾತಕ. ೨೦-೧೨). [ಸಂ.]

**ಸಿತಗ, ಸಿತಕ, ಸಿಟ್ಗಿ** (ಗು). ೧. ಲಂಪಟತನದಿಂದ ಕೂಡಿದ; ಜಾರತನದ : ಸಿತಗತುಂಬಿಗಳೆಯ್ದಿ ಪುಷ್ಪರಸಮಂ ಪೀರ್ವುತತಿಲಂಪಟತ್ವದಿಂದೆಸಳ್ಗಡಣಮಂ ಕೊರಗಿಸುತ (ಅರಾಚ. ೨-೧-೧೨). ೨. ಗಟ್ಟಿಗತನವುಳ್ಳ; ಬಲಿಷ್ಠವಾದ . (ನಾ). ೩. ಹಾದರಿಗ; ಜಾರ : "ಸಿತಗಂ, ಜೋಡಂ, ಪರಳಿಗಂ, ಪಾಣ್ಬಂ — ಈ ೪ ಜಾರಂಗೆ ಪೆಸರ್" (ಶಸಾ. ೬೨-೩೮೭); ದೀವದಿಂ ನಿಂದು ಸಿತಗನಂ ನುಡಿವುದು (ಕವಿರಾ. ೨-೧೫೦); ಸಿಂಗಾರ ಸಿತಗನು ಹೊಳೆವ ಮಣಿರಥವೇಱಿ ಹೋಱವಂತ (ಶಾಶಿರಾ. ೩೭-೫).೪. ನೀಚ; ಅಲ್ಪ : ನಿನ್ನ ಸಿತಗತನದಿಂ ಶತವಾರಂ ಹುತವಹನಂ ಪ್ರವೇಶಂಗೆಯ್ದೊಡಂ ಸಿತಗನೆಯಾಗಿ ಪುಟ್ಟುವೆ (ಪಂಚತಂ. ೪. ೧೯೨-೨೫); ಸಿತಗಂ ಮಱೆದು ಎನ್ನಾಜ್ಞೆಯಂ ಮೀಱಿ ಕೀೞ್ ನಡೆವಂ (ನಂಬಿರ. ೧೫-೧೮೮); ಸುರರೊಳಗೆ ಸಿತಗರ ಸೀಳುವೆನು (ಕುಮಾವ್ಯೋ. ೧೭-೩೨). ೫. ಕಠೋರವಾಗಿರುವವನು; ನಿಷ್ಠುರಿ : ರೊದ್ದವ ತುಳಿವ ಸಿತಗರಂ ಪಿಡಿವ ರಾಯರಾಯಪುರ ಸೂಱೆಕಾಱ (ಎಕ. II, ೧೪೩-೪೦; 1131); ಕೂಳ ಸೊಕ್ಕು ತಲೆಗೇಱಿ ರಾಣಿವಾಸದೊಡನೆ ಸರಸ ಬೇಡ ಕೂಡಲಸಂಗಮದೇವ ಕರಸಿತಗನಯ್ಯ (ಬಸವ. ೬೪೨); ಸುತರು ನಾಲ್ವರು ಸಾಧುಮಕ್ಕಳು ಸಿತಗನೊಬ್ಬನು . . . ಆತನ ಸಲಹಲಾರಾಱೆ (ಸಂಭವ. ೨೩-೩೮). ೬. ಮೋಸಗಾರ ; ಕಪಟಿ : ಇಂತಪ್ಪ ಸಿತಗನೀ ವಟು . . . ಸಂತಮಿದಲಾರ್ಕುಮೇ (ಅರ್ಥನೇ. ೬-೩೨). ೭. ಗಟ್ಟಿಗ ; ಬಲಿಷ್ಠ : ಹತ್ತುಸಾವಿರ ಮಕುಟವರ್ಧನರು ಸಾಯಲಂಜದ ಸಿತಗರದೆ ತನ್ನಾಯತದೊಳಪ್ರತಿಮರೌದ್ರದ ನಾಯಕರ ನೆರವಿಯೊಳು ಶಲ್ಯನೃಪಾಲ ನೋಡು (ಕುಮಾವ್ಯಾಭಿ. ೩-೯). **ಸಿತಕ** : ೨. ಅತಿರಥಮಹಾರಥಿಕರರ್ಧರಥಸಮರಥರು ಸಿತಕರಾವುತರುಮಾರೋಹಕರ್ (ಲಕಿಚಂ. ೩೦-೩೭). **ಸಿಟ್ಗಿ** : ೧. ಖಟ್ಗಕರನಾಗಿ ಪಿರಿದುಂ ಸಿಟ್ಗರ ಸೂಳೆಯರ ಸಂಗದಿರ್ಪುದು ಭೂದೇವರ್ಗಿದು ತಕ್ಕುದೆ ನಿಜನಿಜಮಾರ್ಗದೊಳಿರವೇಟ್ಟುದಾವನುಂ ದ್ವಿಜತಿಲಕಾ (ಶಬ್ದಾನು. ೧೪೦ ಪ್ರಯೋ. ಪುಟ ೧೬೯).

**ಸಿತಗರ ಗಂಡ** = ನೀಚರನ್ನು ನಿಗ್ರಹಿಸುವವನು; ಒಂದು ಬಿರುದು: ಶರಣಾಗತವಜ್ರಪಂಜರಂ ಸಿತಗರ ಗಣ್ಡಂ (ಎಕ. VI, ಕಡೂರು. ೩೨-೧೦; 1139); ಶ್ರೀಮನ್ಮಹಾಸಾಮಂತಾಧಿಪತಿ ಸಿತಗರ ಗಣ್ಣ ಮಣ್ಣಳಿಕರವಿರಾಹು (ಎಕ. XVI, ಚಿಕ್ಕನಾ. ೬೨-೨೭: 1242). [< ಸಂ. ಷಿಡ್ಗ]

**ಸಿತಗತನ** (ನಾ). ೧. ಹಾದರ; ವ್ಯಭಿಚಾರ : ನಿನ್ನ ಸಿತಗತನದಿಂ ಶತವಾರಂ ಹುತವಹನಂ ಪ್ರವೇಶಂಗೆಯ್ದೊಡಂ ಸಿತಗನೆಯಾಗಿ ಪುಟ್ಟುವೆ (ಪಂಚತಂ. ೪. ೧೯೨-೨೫). ೨. ತುಂಟತನ; ಚೇಷ್ಟೆ : ಮಾಡಲಾಪಡೆ ಸಿತಗತನಗಳನು ಕಾಣಲೀ ಜಗವ್ಯೆದ (ನಿಭಾಗ. ೧೦-೯-೪೭). [ಸಿತಗ + -ತನ]

**ಸಿತಗಲ, ಸಿತಗಳ** (ನಾ). ನೀಲಕಂಠ; ಶಿವ : ವ್ರತವ ಕೆಡಿಸಿ ಕೈವಿಡಿದ ಕಾರಣದಿಂ ಹತವಾದಳವಳುರಿಯೊಳಗೆ . . . ಎಂಬಾ ನುಡಿಗೇಳ್ದಾ ಸಿತಗಲ ತನ್ನ ಮನದೊಳಗೆ (ಪ್ರಭಲಿಂ. ೩-೧೨೮); ಲಸಿತಸಿತಗಲನ ಗಾತ್ರಾಮರಕ್ಷಿತಿರುಹಾವೃತಕಲ್ಪಲತೆ ಶೈಲಸುತೆ (ಉದ್ಭಟ. ೧-೮). **ಸಿತಗಳ** : ವಿತತಗಣ ಚತುರಗುಣ ಸುರರಾಜ ವರತೇಜ ಸಿತಗಳನೆಯುತಿಬಳನೆ ಶರಣಾಗು (ಹಚಿಕಾ. ೧-೫); ಸಿತಗಳನಂ ದಿಗಂಬರನನಸ್ಥಿವಿಭೂಷಣನಂ. . . ಧವಳದೇಹನನುಗ್ರನನೊಲ್ದು (ದಶಕು. ೧-೪). 'ಅಸಿತಗಲ' ಪರಾ.

[ಈ ಸಂಸ್ಕೃತದಲ್ಲಿ 'ಸಿತಿಗಲ' ಎಂಬುದಕ್ಕೆ 'ನೀಲಕಂಠ' ಎಂಬ ಅರ್ಥವಿದೆ. ಅದರ ಸಾಮ್ಯದ ಮೇಲೆ ಇಲ್ಲಿ ಭ್ರಮೆಯಿಂದ 'ಸಿತಗಲ' ಪದವನ್ನು ಬಳಸಿದಂತಿದೆ]

**ಸಿತಗಳ** 'ಸಿತಗಲ' ನೋ.

**ಸಿತಗಾನೆ** (ನಾ). ದುಷ್ಟಗಜ; ತುಂಟ ಆನೆ : "ವ್ಯಾಳನೆನೆ ಸಿತಗಾನೆ" (ಮಂಗರಾ. ೪೭-೪). [ಸಿತಗ + ಆನೆ]

**ಸಿತಗೆ** (ನಾ). ಜಾರೆ; ಸೂಳೆ : "ಚದುರರ್ ಸಿತಗೆಯು ಜೋಡೆಯು ಬೆದಗಾರ್ತಿಯು ಪಾಣ್ಬೆಯೆನಲು ಜಾರೆಯರಕ್ಕುಂ" (ಕವಿಕಂ. ೧೬೮); ಏನೀ ಪೊತ್ತೆತ್ತವೋಪ್ಪೆ ಸಿತಗೆ ಮಗುಳೆ ಮಗುಳೆ (ಸುಕುಮಾ. ೭-೨೧); ಒಕ್ಕಲಿತಿ ಜೋಡೆಯಾದಂತಕ್ಕುಮವಳ್ ಸಿತಗೆ ಪತಿಗೆ ಮಿಗೆ ಕಾಯ್ಬಳ್ (ಕಾವ್ಯಾವ. ೩೩೩). [ಸಿತಗ + -ಎ]

**ಸಿತಚಂದನ** (ನಾ). ಒಂದು ಬಗೆಯ ಶ್ರೀಗಂಧ; ಬಿಳಿಯ ಚಂದನ : "ತ್ರಿಚಂದನಂ — ರಕ್ತ, ಪೀತ, ಸಿತಚಂದನ" (ಒಷಧಿ. ೭೦). [ಸಂ.]

**ಸಿತಚಾಮರ** (ನಾ). ಬಿಳಿಯ ಚಮರೀಮೃಗದ ಕೂದಲಿನಿಂದ ಮಾಡಿದ ಚಾಮರ, — ಚೌರಿ: ಕೋಮಲಿಕೆಯರು ಸಿತಚಾಮರವ ಚಿಮ್ಮಲು ಭೂಪ ಮೆಱೆದನು (ಕುಮ್ಮಾಕ. ೬-೪೫). [ಸಂ.]

**ಸಿತಚೌರಿ** (ನಾ). = ಸಿತಚಾಮರ : ಪಿಡಿದು ಚಾಮರ ಛತ್ರ ಕುಂಚ ಸಿತಚೌರಿಯ ಚಮತ್ಕಾರದಿಂ (ನನಮೋ. ೧೦-೧೭). [ಸಿತ + ಚೌರಿ (< ಚವರ)]

**ಸಿತಛತ್ರ** (ನಾ). ಬಿಳಿಯ ಕೊಡೆ ; ಶ್ವೇತಛತ್ರ : ಸಿತಛತ್ರತಂಪಿನೊಳು ಬಪ್ಪಾತ ನೀನು ಎಂತು ಬಿಱುಬಿಸಿಲನಾನುವೆ (ಹಚಿಕಾ. ೯-೬). [ಸಂ.]

**ಸಿತಛತ್ರೆ** (ನಾ). ಒಂದು ಬಗೆಯ ಸಸ್ಯ; ಕಾಡುಸಬ್ಬಸಿಗೆ : "ಶತಪುಷ್ಪಾ, ಸಿತಛತ್ರಾ . . . ಕಾರವೀ — ೭ ಕಾಡುಸಬ್ಬಸಿಕೆ ಪೆಸರು" (ಸಿದ್ಧಾಂತಿ. ೧೪೭).

[ಸಂ. ಸಿತಛತ್ರಾ]

**ಸಿತಚ್ಛದ** (ಗು). ೧. ಬಿಳಿಯ ರೆಕ್ಕೆಗಳುಳ್ಳ : 'ಸಿತಚ್ಛದಖಗ' ಪರಾ. (ನಾ). ೨. ಬಿಳಿಯ ರೆಕ್ಕೆ. ೩. ಬಿಳಿಯ ರೆಕ್ಕೆಗಳುಳ್ಳದು. [ಸಂ.]

**ಸಿತಚ್ಛದಖಗ** (ನಾ). ಬಿಳಿಯ ರೆಕ್ಕೆಗಳುಳ್ಳ ಪಕ್ಷಿ; ಹಂಸ : "ಅಂಚೆ ಸಿತಚ್ಛದಖಗಂ ಮರಾಳಂ ಹಂಸಂ" (ವಸ್ತುಕೋ. ೪೩-೧೮). [ಸಂ.]

**ಸಿತಚ್ಛವಿ** (ನಾ). ಬಿಳಿಯ ಕಾಂತಿ; ಧವಳಪ್ರಕಾಶ : ಸಿತಚ್ಛವಿಯಿಯುಮೊಪ್ಪುವ ದಂಡಿಗೆಯುಂ ನಿಕಾಮನಿರ್ಮಳದಶನಂಗಳುಂ ಸೆಣಸೆ (ಶಾಂತಿಪು. ೩-೧೭). [ಸಂ.]

**ಸಿತತುರಗ** (ನಾ). ೧. ಬಿಳಿಯ ಕುದುರೆ. ೨. ಬಿಳಿಯ ಕುದುರೆಗಳುಳ್ಳವನು; ಅರ್ಜುನ : ಸುರಪನರಸಿಯ ಶಾಪದಲಿ ಸಿತತುರಗನರೆವೆಣ್ಣಾಗಿ ಮತ್ಸ್ಯೇಶ್ವರನ ಮಗಳಿಗೆ ನಾಟ್ಯವಿದ್ಯಾಭ್ಯಾಸಂಗದಲಿ ಇರಲು (ಕುಮ್ಮಾವಿ. ೧-೨೩). [ಸಂ.]

**ಸಿತದೀಧಿತಿ** (ನಾ). ಬಿಳಿಯ ಕಿರಣಗಳುಳ್ಳವನು; ಚಂದ್ರ : ಅಖಿಳಮನುಜಪಶು ಕೀಟಕಸಂತತಿಯುಮನಾಪ್ಯಾಯಿಸುಗುಂ ಸಿತದೀಧಿತಿ ನಿಜಕರಸ್ರುತೋದಾಣುಗಳಿಂ (ವಿಷ್ಣುಪು. ೨-೨-೨೦೧). [ಸಂ.]

**ಸಿತದೀಪ್ತಿ** (ನಾ). = ಸಿತಚ್ಛವಿ : ಹರಿಣಾಂಕನುದಯಿಸುತ ತನ್ನ ಸಿತದೀಪ್ತಿಯನು ಹರಹಿದನು (ಪ್ರೌಢರಾ. ೬-೬). [ಸಂ.]

**ಸಿತದೂರ್ವಾಂಕುರ** (ನಾ). ಬಿಳಿಯ ಗರಿಕೆಯ ಚಿಗುರು : ಸಿತದೂರ್ವಾಂಕುರ ಮಾತುಲುಂಗ ನಳಿನೀಬೃಂಗಾರ ಗೋರೋಚನಾಕ್ಷತ ದಧ್ಯಾದಿ ವಿಡಂಬಮಂಗಳದೊಳೀಂ (ಆದಿಪು. ೧೭-೧೦). [ಸಂ.]

**ಸಿತದೇಹ** (ನಾ). ಬಿಳಿಯ ದೇಹ,-ಶರೀರ : ಕರಾಗ್ರದೊಳ್ಕಮಲಸಂಭವನೂತ್ನ ಕಪಾಲಮುಂ ವಿಜೃಂಭಿಸೆ ಸಿತದೇಹದೊಳ್ಬು ಜಗಮಂಡನಮೊಪ್ಪೆ (ಮಾಧವಾ. ೨-೧೪). [ಸಂ.]

**ಸಿತದ್ಯುತಿ** (ನಾ). = ಸಿತಚ್ಛವಿ : ಆ ಘನಸಮಯಂ . . . ಸಿತವಾರಿದೋಪಲ ಸಿತದ್ಯುತಿಯುಂ . . . ಆಗಿಯುಂ (ರಾಜಶೇ. ೮-೧೧೮ ವ). [ಸಂ.]

**ಸಿತಪಕ್ಷ** (ನಾ). ೧. ಬಿಳಿಯ ರೆಕ್ಕೆ. ೨. ಬಿಳಿಯ ರೆಕ್ಕೆಗಳುಳ್ಳದು ; ಹಂಸ. ೩. ಶುಕ್ಲಪಕ್ಷ : ಸಿತಪಕ್ಷದ ಪಂಚಮಿ ದಿನಪತಿವಾರಂ . . . ನೆಗಟ್ಟುದೀ ಮತ್ಕೃತಿ ಜಗದೊಳ್ ಪುದಿದು ಸಾಗರಾಂತಕ್ಷಿತಿಯಂ (ಆದಿಪು. ೧೬-೭೭); ಸಿತಪಕ್ಷದಂತೆ ಚಂದ್ರಕಿರಣಾಂಕಿತನಿಶಾಂತಮುಂ . . . ಎಂಬ ಮಹನೀಯಮಹಿಮೆಯಂ ತಳೆದು (ಪುಷ್ಪಪು. ೯-೩೦ ವ); ಒದವಿದ ಪಾಲ್ಗುಣ ಸಿತಪಕ್ಷದ ರೋಹಿಣಿಯೊಳ್ ಶಶಾಂಕನಂ ಪರಿವೇಷಂ ಪುದಿದೊಡೆ (ಜಗ್ಗನ್ಮ. ೮-೯೨). ೨ , ೩ : ಸುರರ ನಿವಾಸದಂತನಿಮಿಷಪ್ರಕರಂ . . . ಮಧುಮಾಸದಂತೆ ಸಿತಪಕ್ಷಯುತಂ (ಗಿರಿಕ. ೨-೫೪). ೪. ಚಂದ್ರ. [ಸಂ.]

**ಸಿತಪ್ರಮೇಹ** (ನಾ). ಬಿಳುಪಾಗಿ ಮೂತ್ರ ಹೋಗುವ ಒಂದು ಬಗೆಯ ಮೇಹರೋಗ : ಸಿತಪ್ರಮೇಹಕ್ಕೆ ಚಿತ್ರಮೂಲದ ಕಷಾಯವಂ ಮಾಡಿ ಕೊಡುವುದು (ವಿಷ್ಣುವಿ. ೨೪). [ಸಂ.]

**ಸಿತಭಾನು** (ನಾ). = ಸಿತದೀಧಿತಿ : ಸಿತಭಾನು ಶಾಂತಾಸು ನಿಜಭಾನುತೇಜ ಭೂಪತಿ ಪೇಳು ಮುಂದಣ ಕಥೆಯ (ರಾಮವಿ. ೧೯-೬). [ಸಂ.]

**ಸಿತಭಾನುಮುಖಿ** (ನಾ). ಚಂದ್ರನಂತೆ ಮುಖವುಳ್ಳವಳು; ಇಂದುಮುಖಿ :

ಸಿತಭಾನುಮುಖಿಯತಿಹಿತಮಿತವಾಣಿ ಸನ್ಮತಿವಂತೆ ಮಾಯಾವಿದೂರೆ (ರಾಮವಿ. ೧೯-೩). [ಸಂ. ಸಿತಭಾನುಮುಖೀ]

**ಸಿತಮತಿ** (ನಾ). ಸೂಕ್ಷ್ಮಬುದ್ಧಿಯುಳ್ಳವನು: ಇದು ಶಿವಕೃತಮಕ್ಕುಮಭವ ನೊಲ್ಮೆಗೆ ನೃಪನಗ್ಗದ ಮಹಿಮೆಗೆ ಕಾರಣಮಿಂತಿದು ತಾನೆಂದಱಿದನವನದೇಂ ಸಿತಮತಿಯೋ (ರಾಜಶೇ. ೧೪-೪). [< ಸಂ. ಶಿತಮತಿ]

**ಸಿತಯಶ** (ನಾ). ೧. = ಸಿತಕೀರ್ತಿ: ಉದಾರಕೃತಿ ಸಿತಯಶಮಂ ತಿಳಿಜೊನ್ನ ಮನಿಂದಮುಜ್ವಳಕಳೆವಡೆವವೊಲಬಳೆ ಪಡೆದಳಮಳಾರ್ಭಕನಂ (ರಾಜಶೇ. ೪-೫೧). ೨. ನಿರ್ಮಲವಾದ ಕೀರ್ತಿಯನ್ನು ಗಳಿಸಿದವನು :ಕಲಕೇತಬೊಮ್ಮಗುಣೋತ್ತಮಂ ಮೆಱೆವಾದಿಭಕ್ತನುದಾತ್ತಚರಿತಂ ಸಿತಯಶಂ (ಬಸವು. ೨೯-೧). [ಸಂ. ಸಿತಯಶಸ್]

**ಸಿತರೋಚಿ** (ನಾ). ೧. ಬಿಳಿಯ ಕಿರಣಗಳುಳ್ಳವನು; ಚಂದ್ರ. ೨. ಯತಿ; ಮುನಿ. ೩. ಸಜ್ಜನ ; ಸತ್ಪುರುಷ. ೪. ನಿರ್ಮಲವಾದ ಯಶಸ್ಸು. ೫. ಶಿವ . "ಏಣಾಂಕ ಮುನೀಂದ್ರ ಸಜ್ಜನ ಸುಕೀರ್ತಿ ಶಿವಂ ಸಿತರೋಚಿವಾಚಕಂ" (ನಾನಾರ. ೧೪೭). [ಸಂ. ಸಿತರೋಚಿಸ್]

**ಸಿತವಟ್ಟೆ** (ನಾ). ಬಿಳಿಯ ಬಟ್ಟೆ; ಶ್ವೇತಾಂಬರ: ಸಿತವಟ್ಟೆವಿಡಿಗದ್ದುಗೆಯಲ್ಲಿ ಮಂದಸ್ಮಿತಮುಖಿಯರ ಸಾಲುಗೊಳಿಸಿ ಸತಿಯರ ತಲೆವಣಿ ಸಖಿಯೊಡನಿರ್ದಳು ರತಿ ಸರಸತಿಯ ಠೀವಿಯಲಿ (ಮೋಹತ. ೨೭-೫). [ಸಿತ + ಬಟ್ಟೆ]

**ಸಿತವಣ್ಣ** (ನಾ). ಬಿಳಿಯ ಬಣ್ಣ; ಶ್ವೇತವರ್ಣ : ಪೊಳೆವ ಮುತ್ತಿನ ಕಂಠಮಾಲೆ ನೆಲಸಿದ ಜವ್ವನದ ಸಿತವಣ್ಣದ ಮೆಯ್ಯ ನಳಿನವದನೆಯರೊಪ್ಪಿದರು (ಜೀವಂಸಾಂ. ೨೦-೧೧). [ಸಿತ + ಬಣ್ಣ]

**ಸಿತವರ್ಣ** (ನಾ). = ಸಿತವಣ್ಣ : "ಸಿತವರ್ಣಂ ಕರ್ಕಂ" (ವಸ್ತುಕೋ. ೮೭-೨೪). [ಸಂ.]

**ಸಿತವಾಹನ** (ನಾ). = ಸಿತತುರಗ ೨ : ನೀನಿಂದು ಸಿತವಾಹನಂಗೀಯದಿರ್ಕುದುರೆಯಂ (ಜೈಮಿಭಾ. ೯-೧). [ಸಂ.]

**ಸಿತವ್ಯಾಲ** (ನಾ). = ಸಿತಕರಿ : ಪುಷ್ಪಮಾಲೆಯಂ ದುರ್ವಾಸಲೋಲಮುನಿ ಕುಡೆ ಸಿತವ್ಯಾಲಕುಂಭಕ್ಕಿಟ್ಟೊಡೆ (ಭಾವಚಿಂ. ೩-೧೯). [ಸಂ.]

**ಸಿತಶಾಲಿ** (ನಾ). ಒಂದು ಬಗೆಯ ಬತ್ತ: "ಸಿತಶಾಲಿ ಕೆಂಗಟವೆ ಕೆಂಬತ್ತಿ . . . ಎಂದಿವು ನೆಲ್ಲ ಭೇದಂಗಳ್" (ಮಂಗರಾ. ೧೧೦-೪). [ಸಂ.]

**ಸಿತಶಿವ** (ನಾ). ಒಂದು ಬಗೆಯ ಉಪ್ಪು; ಕಲ್ಲುಪ್ಪು. [ಸಂ.]

**ಸಿತಶೂಕ** (ನಾ). ಒಂದು ಬಗೆಯ ಧಾನ್ಯ; ಯವೆ. [ಸಂ.]

**ಸಿತಸರ್ಷಪ** (ನಾ). ಬಿಳಿಯ ಸಾಸುವೆ : ಬುದ್ಧಿಸಾಗರಂ ಸಗರನ ಮೇಲೆ ಸಿತಸರ್ಷಪಂಗಳನಿಟ್ಟಿಯೆ ಸುರಿವುದುಂ (ಅಜಿಪು. ೧೦-೫೩ ವ); ಅತಿಸಿತಸರ್ಷಪ ಶೇಷಾಕ್ಷತಂಗಳಂ ಮಂಗಳಾರ್ಥದಿಂ ಪೆರ್ವೆಂಡಿರ್ . . . ತಳಿದರ್ (ಸುಕುಮಾ. ೧೧-೭). [ಸಂ.]

**ಸಿತಸಿಂಧುವಾರ** (ನಾ). ಒಂದು ಬಗೆಯ ಹೂವು; ಬಿಳಿಯ ಲೊಕ್ಕಿ : ಜಿನನುರದೊಳೆಸೆವ ಪಾಲಿನ ಪೊನಲ್ . . . ಮನೋಜ್ಞಸಿತಸಿಂಧುವಾರಮಾಲೆಯ ನಿಟಿಳಿಕುಂ (ಶಾಂತಿಪು. ೧೦-೯೭). [ಸಂ.]

**ಸಿತಹಯ** (ನಾ). = ಸಿತತುರಗ ೨ : "ಇಂದ್ರಜಂ ಸಿತಹಯಂ . . . ಫಲ್ಗುಣನೆ ನಲ್ಕರ್ಜುನನೆನಿಕ್ಕು" (ಮಂಗರಾ. ೭೮-೩); ಸಿತಹಯನನಕಟಾ ತೋಱಿರ್ಕೆ (ಕುವ್ಯಾಕ. ೮-೩೭). [ಸಂ.]

**ಸಿತಾಂಗ** (ನಾ). ೧. ಬಿಳಿಯ ದೇಹ; ಬಿಳುಪಾದ ಶರೀರ : ಉಜ್ವಲಿಸುವಪ್ರತಿಮ ದೀಪದವೊಲು ಸಿತಾಂಗದ ಸತಿಯ ಜಠರದಲಿ ಅತುಳಿತಪ್ರಭೆವೆತ್ತು (ಬಸವು. ೩-೧೨). ೨. ಬಿಳುಪಾದ ದೇಹವುಳ್ಳವನು; ಶಿವ : ಒಲಿದು ಕೀರ್ತಿಸಲೊತ್ತುವವೊ ತಾಂ ಪಲವು ಮಾತೃಕೆಗಳಿಗೆನುತ ಕೋಮಳಸಿತಾಂಗನನಾವಗಂ ನೆನೆವಂದವೋ (ಬಸವು. ೩೫-೨೪). ೩. ಶುಕ್ರಗ್ರಹ : "ಸಿತಾಂಗನುಶನನಸುರಗುರುವೆಂದೆನಲು ಶುಕ್ರಂ" (ಮಂಗರಾ. ೧೨-೬). ೪. ಒಂದು ಬಗೆಯ ಸನ್ನಿಪಾತ : ಆ ತ್ರಯೋದಶ ಸನ್ನಿಪಾತಮಾವುವೆಂದೊಡೆ . . . ಚಿತ್ತವಿಭ್ರಮ , ಸಿತಾಂಗ (ಸಕವ್ಯ. ೧೫೧). [ಸಂ.]

**ಸಿತಾಂಗಿ** (ನಾ). ಬಿಳುಪಾದ ದೇಹವುಳ್ಳವಳು; ಸರಸ್ವತಿ: ಸಿತಾಂಗಿಯೆನ್ನ ಹೃದಯಾಬ್ಜದೊಳಿರ್ದು ಮತಿಪ್ರಕಾಶಮನ್ನೆಸಗು (ಕಜಿಕಂ. ೪). [ಸಂ. ಸಿತಾಂಗೀ]

**ಸಿತಾಂಬರ** (ನಾ). ೧. ಬಿಳಿಯ ಬಟ್ಟೆ; ಶ್ವೇತವಸ್ತ್ರ : ಸಿತಾಂಬರದಿಂದೆ ಗಾಳಿಸಿ (ಲೋಕೋಪ. ೮-೫೩). ೨. [ಜೈನ] ಶ್ವೇತಾಂಬರಪಂಗಡಕ್ಕೆ ಸೇರಿದ ಸಂನ್ಯಾಸಿ. [ಸಂ.]

**ಸಿತಾಂಬು** (ನಾ). ಬೆಳ್ಳಗಿರುವ ನೀರು; ನಿರ್ಮಲಜಲ : ಮಜ್ಜನ ಭೋಗಿಸುವರೆ ಸಿತಾಂಬು ತಿಳಿಗೊಳನು (ಕುವ್ಯಾಅ. ೨೧-೭). [ಸಂ.]

**ಸಿತಾಂಬುಜ** (ನಾ). ಬಿಳಿಯ ತಾವರೆ : "ಪುಂಡರೀಕಮೆನಿಕುಂ ಸಿತಾಂಬುಜಂ ತಾನದಱೊಳ್" (ವಸ್ತುಕೋ. ೨೫-೨೦); ಮಾನಸದಿಂ ಸಿತಾಂಬುಜಶತಂ ತಳರ್ವಂತೆವೊಲೆಯ್ದೆ . . . ಬಂದೆಱಗಿತ್ತು . . . ಮರಾಳಮಂಡಳಂ (ಜಗವಿ. ೪-೭೪); ಸಿತಾಂಬುಜಮೌಕ್ತಿಕೌಘಸುಕ್ಷೀರವಿಶೇಷಗೌರರುಚಿಪೂರಿತಚಿತ್ರಶರೀರದಿಂದೆ ಮೇಣ್ ಪುಣ್ಯದ ಪುಂಜದಂತೆ . . . ಎಸೆವ . . . ವೃಷಭೇಶ್ವರನಂ ಕಂಡು (ಹಮ್ಮಿ.ರ. ೫-೪). [ಸಂ.]

**ಸಿತಾಕ್ಷತ** (ನಾ). ಬಿಳಿಯ ಮಂತ್ರಾಕ್ಷತೆ : ಪುಷ್ಪಸಂಕುಳದಿಂ ಪೂಜ್ಯತೆಯುಂ ಸಿತಾಕ್ಷತದಿನುದ್ಯದ್ವೃತ್ತಮುಂ . . . ಫಲದಿನವ್ಯಾಬಾಧೆಯುಂ ಮಾಡುಗುಂ (ಶಾಂತಿಪು. ೧೦-೫೫); ಮಡಿವರ್ಗ ದೂರ್ವಾಂಕುರ ಸಿತಾಕ್ಷತ ಧವಳಸರ್ಷಪ ವರಫಲಾವಳಿಯ ತರಿಸಿದನು (ಕುವ್ಯಾಕ. ೧-೨೮). [ಸಂ.]

**ಸಿತಾತಪತ್ರ** (ನಾ). = ಸಿತಚ್ಛತ್ರ : ಶತಪತ್ರದ ಸಿತಾತಪತ್ರದೊಳಂ ಪೊಂಬಾಟೆಯ ಚಾಮರಂಗಳೊಳಮೆಸೆವ . . . ಪದ್ಮರಾಗದ ಪಟ್ಟವಣೆಯೊಳ್ ನಿಲಿಸಿದ ಕಾಮದೇವನನತಿಪ್ರೀತಿಯಿಂದರ್ಚಿಸಿ (ಕಾದಂಉ. ೭೯೧); ಉಡಿದು ಕೆಡೆದ ಸಿತಾತಪತ್ರದ ನಡುವೆ ಹರಿಸಾಲಿನ ಕಪಾಲದ ಗಡಣವಿರೆ (ಕುವ್ಯಾಕ. ೧೯-೮೮); ತೋರದೇತಕೊ ಏನೊ ಲೋಕಪೂಜಿತ ದೇವ ದಶರಥಸಿತಾತಪತ್ರಂ! (ಶ್ರೀರಾಮಾ. ೧೫೯-೧೯೭). [ಸಂ.]

**ಸಿತಾಬ್ಜ** (ನಾ). ಬಿಳಿಯ ಕಮಲ; ಪುಂಡರೀಕ : ಸಿತಾಬ್ಜಮೆಂಬ ಕಣ್ ಮಿಸುಪ ಪರಾಗಮೆಂಬ ನಸುಗೆಂಪಿನೊಳೊಂದಿರೆ (ಚಂದ್ರಪು. ೭-೬೩). [ಸಂ.]

**ಸಿತಾಭ್ರ** (ನಾ). ೧. ಬಿಳಿಯ ಮೋಡ; ಬೆಳ್ಮುಗಿಲು : ಧರಣಿಪನ ಕೀರ್ತಿವಧು ನಭಃಕಬರಿಯಲ್ಲಿ ಗೊಜ್ಜಗೆಯ ಸರೋತ್ಕರವಾಂತವೊಲ್ ಸಿತಾಭ್ರಂ ನೆರೆದಿರೆ (ರಾಜಶೇ. ೯-೬). ೨. ಕರ್ಪೂರ. [ಸಂ.]

**ಸಿತಾರ್** 'ಸಿತಾರು' ನೋ.

**ಸಿತಾರ** 'ಸಿತಾರ್' ನೋ.

**ಸಿತಾರು, ಸಿತಾರ್, ಸಿತಾರ** (ನಾ). ಒಂದು ಬಗೆಯ ತಂತೀವಾದ್ಯ : ಮಕ್ಕಳು ನರ್ತನವಿದ್ಯೆಯ ಕಲಿತರು ಕಲಿತರು ತಾಯಿ ಸಿತಾರು (ಇಂಚಾಪ. ೪೭-೨೧); ಆ ಸಿತಾರಿನ ಹುಡುಗ ಅಷ್ಟು ಊಟ ಮಾಡಿದ್ದನ್ನು ನಾನು ನೋಡಿಯೇ ಇರಲಿಲ್ಲ (ಮಹಾತ್ಮಾ. ೪೨). **ಸಿತಾರ್** : ಎರಡು ಪಾರ್ಶ್ವಂಗಳೋಳ್ತಾಳಮದ್ದಳೆಸಿತಾರ್ಸಾರಂಗಿಯೂ (ಅರ್ಜಾವಿ. ೨೪-೫೧); ವೆಂಕಟರಮಣದಾಸರು . . . ಸಿತಾರ್ ಮತ್ತು ರುದ್ರವೀಣೆಗಳ ವಾದನದಲ್ಲಿಯೂ ಪ್ರವೀಣರಾಗಿದ್ದರು (ಸಂಗೀತ. ೬೯). **ಸಿತಾರ** : ಸಿತಾರವನ್ನಾದರೂ ತಾ (ಕಲಾಜ್ಯೋ. ೧೧೧). [<— ಪಾರ. ಸಿತಾರಾ; ಹಿಂ. ಮರಾ. ಸಿತಾರ್]

**ಸಿತಾಳ** 'ಸೀತಳ' ನೋ.

**ಸಿತಿ** (ನಾ). ೧. ಬಿಳಿಯ ಬಣ್ಣ; ಬಿಳುಪು. ೨. ಕರಿಯ ಬಣ್ಣ; ಕಪ್ಪು. [ಸಂ.]

**ಸಿತಿಕಂಠ** (ನಾ). ಕಪ್ಪು ಕೊರಳುಳ್ಳವನು; ನೀಲಕಂಠ; **ಶಿವ** : ಸಿತಿಕಂಠನಂ ಕುರ್ತು ತಪಗೆಯ್ದು (ಪ್ರೌಢರಾ. ೮-೯೬). [ಸಂ.]

**ಸಿತಿಗಳ** (ನಾ). ಶಿವ; ಸಿತಿಕಂಠ : ಈ ಸಿತಿಗಳನೇನುಮನಱಿಯದ ಮತಿರಹಿತೆಯ ಮಾತುಗೇಳ್ದು ಪಾಲ್ಗುಡಿದಪನೇ (ವೃಷವಿ. ೯-೪೧). 'ಸಿತಗಲ' ಪರಾ. [ಸಂ. ಸಿತಿಗಲ]

**ಸಿತಿನಿ** (ನಾ). ಒಂದು ಬಗೆಯ ಔಷಧದ್ರವ್ಯ : ಅರಿದಳ, ಸಿತಿನಿ, ನಗ್ಗಿಲ ಹೂವು . . . ಇವೆಲ್ಲವ ಸಂಪಾದನೆ ಮಾಡಿ (ವಿಷ್ಣವಿ. ೧೭೫). [?]

**ಸಿತೆ** (ನಾ). ಒಂದು ಬಗೆಯ ಸಕ್ಕರೆ; ರಾಯಿಪುಡಿಸಕ್ಕರೆ : "ಶರ್ಕರಾ, ಸಿತಾ - ತವರಾಜನೆಂಬ ಸಕ್ಕರೆ; ರಾಯಿಪುಡೀಸಕ್ಕರೆ" (ಸಿದ್ಧಾಂತಿ. ೨೮೭). [ಸಂ. ಸಿತಾ]

**ಸಿತೇಕ್ಷು** (ನಾ). ಬಿಳಿಯ ಕಬ್ಬು : ಕಂತು ಚಾಪಕ್ಕೆ ಚಿತ್ತದೊಳಾಳ್ದಿರ್ಪ ಸಿತೇಕ್ಷುಮಾಲೆ

ವಿಷಮಾಸ್ತ್ರಂ ಪಂಚಬಾಣಕ್ಕೆ ಮಾಣದೆ ಕಣ್ಣಾದಿರಿಸಿಟ್ಟ ಮಲ್ಲಿಗೆ . . . ಎಸೆಗುಂ ತನ್ನಂದನೋಪಾಂತದೊಳ್ (ಚಂದ್ರಪು. ೧-೧೦೪). [ಸಂ.]

**ಸಿತೇಕ್ಷುದಂಡ** (ನಾ). ಬಿಳಿಯ ಕಬ್ಬಿನ ಜಲ್ಲೆ : ಎಸೆವ ಸಿತೇಕ್ಷುದಂಡಮಂಡಲಿ ಬನದೊಳ್ (ಮಲ್ಲಿಪು. ೨-೪೩). [ಸಂ.]

**ಸಿತೇತರ** (ನಾ). ೧. ಬಿಳುಪಲ್ಲದುದು; ಕಪ್ಪು. ೨. ಒಂದು ಬಗೆಯ ಕುದುರೆ : "ಸಿತೇತರಾಖ್ಯಂ ತುರಂಗಮಿಂದ್ರಾಯುಧನುಂ" (ವಸ್ತುಕೋ. ೮೬-೨೪). [ಸಂ.]

**ಸಿತೇತರಗತಿ** (ನಾ). ೧. ಕಪ್ಪುಹೊಗೆಯೊಡನೆ ಹಬ್ಬುವವನು; ಅಗ್ನಿ : "ಸಪ್ತಾರ್ಚಿಃ . . . ಸಿತೇತರಗತಿಃ . . . ಹುತಾಶನಃ — ಈ ೪೦ ಕಿಚ್ಚಿನ ಪೆಸರ್" (ಹಲಾಯು. ೧೨-೬೨). ೨. (ಆಲಂ) ದುರಾಚಾರಿ; ಪಾಪಿ. ೧, ೨ : ಪರಿಕಿಪೊಡ ವಿಚಾರಿ ಸಿತೇತರಗತಿಯಾದಂ ಪ್ರಭಂಜನಪ್ರಿಯನತಿನಿಷ್ಠುರಜಿಹ್ವನುಷರ್ಬುಧನಂತಿರೆ ದುರ್ಬುಧನಾರೊಳೊಂದಿ ಪಡೆಯಂ ನೋವಂ (ಚಂದ್ರಪು. ೧-೪೨). [ಸಂ.]

**ಸಿತೋತ್ಪಲ** (ನಾ). ಬಿಳಿಯ ತಾವರೆ: "ಕುಮುದಂ ಕೈರವಮೆಂದು ಸಿತೋತ್ಪಲವದಲ್ಲಿ ಪೇಟಲ್ಪಡುಗುಂ" (ವಸ್ತುಕೋ. ೨೫-೨೨). [ಸಂ.]

**ಸಿತ್ತುಂಡೆಗಿಡ** (ನಾ). ಒಂದು ಬಗೆಯ ಔಷಧೀಸಸ್ಯ : ಸಿತ್ತುಂಡೆಗಿಡ, ಸಿಡಿಗೋಲಿ, ಹನುಮಂತತೊಪ್ಪಲು , ಚೇಡುಬೀರ (ಮೈಔಗಿ. ೨೧-೩೯೩).

[ಸಿತ್ತುಂಡ್ಕ + ಗಿಡ (< ಗಿಡು)]

**ಸಿದಕು** 'ಸಿದುಗು$_1$' ನೋ.

**ಸಿದಾಯ** 'ಸಿದ್ದಾಯ' ನೋ.

**ಸಿದಿಗೆ, ಶಿದ್ದಿಗೆ, ಸಿದ್ದಿಗೆ$_2$** (ನಾ). ೧. ಹೆಣವನ್ನು ಸುಡಲು ಒಟ್ಟಿದ ಕಟ್ಟಿಗೆಯ ರಾಶಿ; ಚಿತೆ : ಸ್ಮರನಿಟ್ಟ ಸಿದಿಗೆಯಂತಿರೆ ಸಿರಿಮಂಚಂ ಸ್ಮರಮಹಾಗ್ನಿಯಿಂ (ಲೀಲಾವ. ೧೪-೬೫); ಸುದತಿಯರ ಒಲುಮೆ ಅಜಿಯದ ಅರಸು ತಾ ಸಿದಿಗೆಯ ಹೆಣನು (ಸರ್ವಜ್ಞ. ೭೫೨). ೨. ಹೆಣ ಹೊರುವ ಸಾಧನ; ಚಟ್ಟ : ಭಾವದೊಳು ಕೃಪೆ ಹುಟ್ಟಿ . . . ಸಿದಿಗೆಯನಿಳುಹವೇಳ್ದು (ಬಸಪು. ೩೨-೪೩); ತಿಂಮನ ಇತಿಶ್ರೀಯಾಯಿತೆಂದು ಸಿದಿಗೆ ಬಿಗಿದು ನಾಲ್ವರು ಭುಜ ಕೊಟ್ಟು ನಡದೇ ಬಿಟ್ಟರು (ತಿಂಮತ. ೧೯); ಬಾಬಣ್ಣನ ಮನೆಯ ಮುಂದೆ ಸಿದಿಗೆ ಕಟ್ಟುತ್ತಲಿದ್ದಾರೆ (ಅಶೋಕ. ೨೪೮). **ಶಿದ್ದಿಗೆ :** ೨. ಸೀತಮ್ಮನ ಶವವನ್ನು ಶಿದ್ದಿಗೆಯ ಮೇಲೆ ಹಾಕಿ ಕಟ್ಟುತ್ತಲಿದ್ದಾರೆ (ಪ್ರಣಸ. ೨೨). **ಸಿದ್ದಿಗೆ$_2$ :** ೧. "ಚಿತೆಯೆನಲು ಸಿದ್ದಿಗೆಯೆನಿಕ್ಕುಂ" (ಮಂಗರಾ. ೧೧೮-೭). ೨. ಕುಲದಲಧಿಕ ಹಾರುವಂಗೆ ಸಿದ್ದಿ [ಪಾಠಾಂ. ದ್ಧಿ]ಗೆ ಯ್ಯೆಸಲೆ (ಬಸವ. ೫೯೭); ಸಿದ್ದಿಗೆಯ ನುಲಿಯ [ಪಾಠಾಂ. ಸಿದಿಗೆಯ ತುದಿಯಲಿ] ಒತ್ತಿ ಬಿಗಿಬಿಗಿದು ಹಂಜರಿಸಿ (ಹಚಕಾ. ೧೧-೪೩); ಚವುಡರಸನಾ ಸಿದ್ದಿಗೆಯನುಱ ತಟ್ಟಿ . . . ತರಳೆ ಏಳೇಳೆನುತ ಪೆಸರಲಿ ಕರೆಯಲು (ಬಸಪು. ೩೨-೩೪); ನೆಟ್ಟನೆ ಶೂಲದ ಮರ ಹಳೆಯ ಸಿದ್ದಿಗೆಯ ಕಟ್ಟಿ ತವಗ ಮಾಡಿ ಕುಳಿತ (ಹರಿಸಾಂ. ೪-೧೮).

**ಸಿದುಗು$_1$,** ಸಿದಕು (ಕ್ರಿ). ಕೈಯಿಂದ ಹುಡುಕು; ತಡಕಾಡು: "ಸಿದುಗು — ಹಸ್ತಾನ್ವೇಷಣೇ (ಕೈಯಿಂದ ಹುಡುಕು)" (ಶಮಧಾ); ಗಳಗಳನೆ ಮುನ್ನ ಬೆಂದುಳಿದಿರ್ದ ಕರಿಗೊಳ್ಳಿಗಳನೆಲ್ಲವಂ ಸಿದುಗಿ ತಂದೊಟ್ಟಿ (ಹಚಕಾ. ೧೨-೩೫). **ಸಿದಕು :** ಪುಸ್ತಕವನ್ನು ಎಲ್ಲೋ ಇಟ್ಟು ಮನೆಯೆಲ್ಲಾ ಸಿದಕಿದ (ರೂಢಿ).

**ಸಿದುಗು$_2$** (ನಾ). ಕಸ; ಹೊಲಸು: ನೆಲದ ಮೇಲೆ ಬಗ್ಗಿಕೊಂಡು ಸಿದುಗನ್ನೆಲ್ಲಾ ಬದಿಗೆ ಮಾಡಿ ಬಿದ್ದಿದ್ದ ರೂಪಾಯಿಗಳನ್ನು ಶೋಧಿಸತೊಡಗಿದಳು (ಪ್ರತಿಬಿಂ. ೭).

[ದೇ. ॥ ತಮಿ. ಚಿತಕು = ದೋಷ , ತಪ್ಪು]

**ಸಿದ್ದಾಯ, ಸಿದಾಯ** (ನಾ). ಗೊತ್ತುಪಡಿಸಿದ ತೆರಿಗೆ; ನಿಗದಿಯಾದ ಕಂದಾಯ : ಊರ್ಗಳ ಸಿದ್ದಾಯವನಿತ್ತು (ಎಕ. VII, ಶಿಕಾರಿ. ೧೦-೫೨; 1085); ರಾಯ ನಿನಗಾವಿಂದು ದಿಟ ಸಿದ್ದಾಯವನು ನಾವ್ತೆತ್ತವಲ್ಲದೆ ವಾಯುಜನ ಫಲುಗುಣನ ಬಿಲ್ಲಿನ ಬಲುಮೆಗಂಜಿದೆವೆ (ಕುವ್ಯಾಸ. ೮-೩೦); ಇವನ ಸಿದ್ದಾಯಕಾಗಿ ಏನೆಂಬೆನೊಂದು ಸಾಸಿರಬಂಡಿ ಕನಕಮಂ ನ್ಯೂನಮಿಲ್ಲದೆ ತೆತ್ತು ಬಹೆವು (ಜೈಮಿಭಾ. ೧೭-೧೨). **ಸಿದಾಯ:** ಸಿದಾಯ ವರಾಡ ಬಿರಾಡ ಗರಿಕೆ X ಹೊರೆಕೆ ಮುಂತ್ತಾದವ ತರಿಸಿಕೊಂಡು (ಸೌಇಇ. XX, ೨೫೩-೨೫; 1598). [< ಸಂ. ಸಿದ್ಧಾಯ./ ತೆಲು. ಸಿದ್ದಾಯಮು]

**ಸಿದ್ದಿಗೆ$_1$, ಸಿದ್ಧಿಗೆ** (ನಾ). ೧. ಎಣ್ಣೆ, ತುಪ್ಪ ಮುಂತಾದ ದ್ರವಪದಾರ್ಥಗಳನ್ನು ತುಂಬುವುದಕ್ಕಾಗಿ ಬಳಸುವ ಚರ್ಮದ ಚೀಲ; ಬುದ್ದಲಿ: ತುಂಬಿದ ಸಿದ್ದಿಗೆಯಂತೆ ರಥದ ಗಾಲಿಯಂತೆ ಬಟ್ಟಿತ್ತಾಗಿರ್ಪ (ಪಂಚತಂ. ೧೫೧-೧೯). ೨. ದ್ರವಪದಾರ್ಥಗಳನ್ನು ಅಳೆಯುವ ಒಂದು ಅಳತೆ : ತುಪ್ಪಮೆಣ್ಣೆಯೆಮ್ಬಿವು ಕೊಡಕ್ಕೆ ಸೊಲ್ಲಗೆ ಸಿದ್ದಿಗೆ ಗರವಾನಂ (ಎಇ. XIX, ೩೩-೨೭; 1135). **ಸಿದ್ಧಿಗೆ:** ೧. ತಿತ್ತಿ ಸಿದ್ಧಿಗೆ ತೊಗಲ್ವೇಱನೊಳಗೆ ಬಂದತ್ತು ಗಂಗಾಸಾಗರವು (ಕುರಾಸಾಂ. ೧೯-೧೧).

[ದೇ. ॥ ಮಲ. ಚುತ್ತಿಕ; ತುಳು. ಶಿದ್ದಿಗೆ, ಸಿದ್ದಿಗೆ ; ತೆಲು. ಸಿದ್ದಿಯ]

**ಸಿದ್ದಿಗೆ$_2$** 'ಸಿದಿಗೆ' ನೋ.

**ಸಿದ್ದೆ** (ನಾ). ೧. ಒಂದು ನಿರ್ದಿಷ್ಟ ಅಳತೆ, — ಪ್ರಮಾಣ: ಪ್ರತಿ ಸೋಮವಾರಕ್ಕೆ ಅಕ್ಕಿ ಸಿದ್ದೆ ೧ (ಮೈಆರಿ. ೧೯೩೪, ೧೭-೮; ?); ಹೊನ್ನಾವರ ಕುಮಟಾ ತಾಲೂಕುಗಳಲ್ಲಿ . . . ೨ ಅರವಲಕ್ಕೆ ೧ ಸಿದ್ದೆ , ೨ ಸಿದ್ದೆಗೆ ೧ ಶೇರು (ಕಭಾಗ. ೨೯೦). ೨. ಒಂದು ನಿರ್ದಿಷ್ಟ ಅಳತೆಯನ್ನು ಅಳೆಯುವ (ಲೋಹ, ಮರ ಮುಂತಾದುವು ಗಳಿಂದಾದ) ಸಾಧನ: ಕಿಟ್ಟನ ಕೈಯಲ್ಲಿ ಬತ್ತ ಅಳೆಯುವ ಮರದ ಹಾನೆ, ಶಂಕರನ ಕೈಯಲ್ಲಿ ಹಿತ್ತಾಳೆಯ ಸಿದ್ದೆ (ಸ್ವಪ್ನಹೊ. ೬೯); ಅದರ ಸಮೀಪದಲ್ಲಿ ಕವುಚಿಹಾಕಿದ ಒಂದು ಸಿದ್ದೆಯ ಮೇಲೆ ಚಿಮಣಿದೀಪ ಇಡಿಸಿದರು (ಮಲಮ. ೨೩೫).

[ದೇ. ॥ ತಮಿ. ಚಿತ್ತಿ, ಚಿತ್ತೈ, ಚುತ್ತಿ; ತುಳು. ಶಿದ್ದೆ, ಸಿದ್ದೆ; ತೆಲು. ಸಿದ್ದೆ]

**ಸಿದ್ದೆಗುಮ್ಮ** (ನಾ). ಮೆಣಸಿನಕಾಯಿಯ ಹೊಗೆಯ ಘಾಟನ್ನು ಅನುಭವಿಸುವಂತೆ ಮಾಡುವ ಒಂದು ಬಗೆಯ ಶಿಕ್ಷೆ : ಸಿದ್ದೆಗುಮ್ಮ ಎಂದರೆ, ಒಂದು ಬಿದಿರಿನ ಸಿದ್ದೆಯಲ್ಲಿ ಎಂದರೆ ಅಳತೆಯ ಪಾತ್ರೆಯಲ್ಲಿ ಒಣಮೆಣಸಿನಕಾಯಿಗೆ ಉರಿಯುವ ಕೆಂಡವನ್ನು ಹಾಕಿ, ಅದನ್ನು ಮೂಗಿಗೆ ಒತ್ತಿ ಹಿಡಿದು, ಬಾಯಲ್ಲಿ ಉಸಿರೆಳೆದುಕೊಳ್ಳದಂತೆ ಅದನ್ನೂ ಕೈಯಿಂದ ಒತ್ತಿ ಹಿಡಿಯುತ್ತಾರೆ (ಕಾನೂರು. ೩೬೦); ಅವರು ಅವನನ್ನು ಚಿಕ್ಕಂದಿನಿಂದಲೂ . . . ಸಿದ್ದೆಗುಮ್ಮ ಮಾಡಿ, ಕತ್ತಲೆಕೋಣೆಯಲ್ಲಿ ಉಪವಾಸ ಕೂಡಿಹಾಕಿ ಭಯಂಕರವಾಗಿ ಪಳಗಿಸಲು ಪ್ರಯತ್ನಪಟ್ಟಿದ್ದರು (ಮಲಮ. ೩೨೪). [ಸಿದ್ದೆ + ಗುಮ್ಮ$_1$]

**ಸಿದ್ಧ** (ಗು). ೧. ನಿರ್ವಹಿಸಿದ; ಪೂರೈಸಿದ; ನೆರವೇರಿಸಿದ. ೨. ಅಣಿಯಾದ; ತಯಾರಾದ. ೩. ಪಡೆದ; ಹೊಂದಿದ. ೪. ಸಮಂಜಸವಾದ; ಸಾಧುವಾದ. ೫. ರುಜುವಾತಾದ; ಸ್ಥಿರೀಕರಿಸಿದ. ೬. ಸಾಧಿಸಿದ; ಯಶಸ್ವಿಯಾದ. ೭. ಪಕ್ವವಾದ; ಹಣ್ಣಾದ. ೮. ಕೀರ್ತಿಯನ್ನು ಹೊಂದಿದ; ಪ್ರಸಿದ್ಧವಾದ. (ನಾ). ೯. ಅಣಿಯಾದುದು; ತಯಾರಾದುದು : ಸಿದ್ಧವಾದ ಸರಕನ್ನು ದೋಣಿಗಳ ಮೂಲಕ . . . ಕಳುಹಿಸಬಹುದು (ನವದಿ. ೨೨). ೧೦. ತಯಾರು; ಸನ್ನದ್ಧ: ನೀನು ಎಲ್ಲಿಗೆ ಕರೆದರೂ ನಾನು ಬರಲು ಸಿದ್ಧ (ರೂಢಿ). ೧೧. ತಯಾರಾಗಿರುವ ವ್ಯಕ್ತಿ : ನಾನು ಬರುವ ಹೊತ್ತಿಗೆ ನೀವೆಲ್ಲ ಸಿದ್ಧರಾಗಿರಿ (ರೂಢಿ). ೧೨. ಅಣಿಮಾದಿ ಅಷ್ಟಸಿದ್ಧಿಗಳನ್ನು ಸಾಧಿಸಿದವನು ; ಅಲೌಕಿಕಸಾಮರ್ಥ್ಯವುಳ್ಳವನು: ಸಿದ್ಧರೆಂದರೆ ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ, ಸಾಯುಜ್ಯ ಮತ್ತು ಸೌಷ್ಟಿತ ಎಂಬ ತತ್ತ್ವಗಳಲ್ಲಿ (ಧ್ಯೇಯಗಳಲ್ಲಿ) ನಿಷ್ಣಾತರಾದ ಪವಿತ್ರಸಂತರು (ತುಳುನಾ. ೪೭); ಸಿದ್ಧರು ಸಾಧ್ಯರು ವರತಾಪಸೋತ್ತಮರು . . . ಹಣೆಯೊಳು ಬರೆದುದನಳಿಸಲಶಕ್ತರು (ಇಂಚಾಪ. ೧೪೫-೧೨). ೧೩. ದೇವತೆಗಳಲ್ಲಿಯ ಒಂದು ಪಂಗಡ: ಖಚರಕಿನ್ನರ ಸಿದ್ಧನಿರ್ಜರನಿಚಯವೆಮಗೋಲೈಸಿ ಹೋಗಲಿ (ಕುವ್ಯಾಕ. ೬-೫); ವಿದ್ಯಾಧರ ಅಪ್ಸರ . . . ಸಿದ್ಧ ಭೂತ ಬೇತಾಳರೆಂಬ ದೇವತಾಭೇದಂಗಳಲ್ಲಿ (ವಿವೇಕ. ೧೭೦); ಅವನ ದರ್ಶನದಿಂದ ಸಿದ್ಧನಾಗಿ ಸ್ವರ್ಗಕ್ಕೆ ಬರಲು ಸಮರ್ಥವಾಗುವೆ (ವಚಭಾ. ೧೨೪). ೧೪. ನಿಜವಾದುದು; ಸತ್ಯ: ಆ ಭೂತಂಗಳುಂ ಕಾಯಾಕಾರಪರಿಣತಂಗಳಕ್ಕುಮಿದು ಪ್ರತ್ಯಕ್ಷಪ್ರಮಾಣಸಿದ್ಧಂ (ಶಾಂತಿಪು. ೮-೧೨೮ ವ); ಆ ನೀಚನಾದ ರಾವಣನೇ ಆದರೂ ನಮಗೆ ಶರಣಾಗತನಾಗಿ ಬಂದಲ್ಲಿ ನಾವು ಮನ್ನಿಸಿ ರಕ್ಷಿಸುವುದೇ ಸಿದ್ಧ (ನೀತಿಚಂ. XIV, ೧೮). ೧೫. ಕೆಲವು ಶಾಸನಗಳ ಆರಂಭದಲ್ಲಿ ಹೇಳುವ ಶುಭಸೂಚಕವಾದ ಶಬ್ದ: ಸಿದ್ಧಂ ನೆಱದಾದ ವ್ರತಶೀಲನೋನ್ಪಿಗುಣದಿಂ . . . ನೋನ್ತು (ಎಕ. III (R), ೮೬-೧; 7ನಯ ಶತ). ೧೬. [ಜೈನ] ಪಂಚಪರಮೇಷ್ಠಿಗಳಲ್ಲಿ ಒಬ್ಬ: ತ್ರಿಲೋಕೈಕಚೂಡಾಮಣಿಗಳ್ಸಿದ್ಧರ್ ಸ್ವಕೀಯಪ್ರಭುತೆಯನೆಮಗಂ ಮಾಳ್ಕತಿಪ್ರೀತಿಯಿಂದಂ (ಆದಿಪು. ೧-೨);

ಸಿದ್ಧರ್ಕಳ್ . . . ಉದ್ಧರಿಸುಗೆಮ್ಮಂ (ಪುಷ್ಪಪು. ೧-೨). ೧೭. [ಶೈವ] ಇಪ್ಪತ್ತೆಂಟು ಶಿವಾಗಮಗಳಲ್ಲಿ ಒಂದು: ಲಲಿತ, ಸಿದ್ಧ, ಸಂತಾನ . . . ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಭಾರದ. ೬೨). ೧೮. [ವೀಶೈ] ಮೂರು ಬಗೆಯ ಪ್ರಸಾದಗಳಲ್ಲಿ ಒಂದು; ಲಿಂಗಕ್ಕೆ ಅರ್ಪಿಸಿ ಉಳಿದುದು: ಉರುಶುದ್ಧಸಿದ್ಧ ಪ್ರಸಿದ್ಧಂ . . . ಇನಿತುಮಂ ನಿಯಮದಿಂದಿರದೆ ಕೊಂಬರ ವಿವರಮಂ ಪೇಳ್ವೆನು (ಲಶೀಚಂ. ೪೭-೧೫); ಶುದ್ಧ ಸಿದ್ಧ ಪ್ರಸಿದ್ಧವೆಂದು ಪ್ರಸಾದಲಿಂಗ ತ್ರಿವಿಧವು (ವಿವೇಕ. ೧೧೨). [ಸಂ.]

**ಸಿದ್ಧಉಡುಪು** (ನಾ). ಬೇರೆ ಬೇರೆ ಅಳತೆ ಹಾಗೂ ಆಕಾರಗಳಲ್ಲಿ ಹೊಲಿದು ತಯಾರಿಸಿಟ್ಟಿರುವ ಉಡುಪು : ನಮ್ಮ ಮನೆಯ ಎದುರಿನಲ್ಲಿ ಸಿದ್ಧಉಡುಪುಗಳ ಅಂಗಡಿಯಿದೆ (ರೂಢಿ). [ಸಿದ್ಧ + ಉಡುಪು]

**ಸಿದ್ಧಕ್ಷೇತ್ರ** (ನಾ). ಸಿದ್ಧರೂ ಮುನಿಗಳೂ ನೆಲಸಿರುವ ಸ್ಥಳ : ಈ ಮೆಯ್ಯೊಳೀ ತೋರ್ಪುದೆ ಸಿದ್ಧಕ್ಷೇತ್ರಂ (ಸುಕುಮಾ. ೪-೪೭). [ಸಂ.]

**ಸಿದ್ಧಗೊಳಿಸು** (ಕ್ರಿ). ೧. ತಯಾರುಮಾಡು; ಏರ್ಪಾಡುಮಾಡು : ಮುಖ್ಯಾಧಿಕಾರಿಯು ಸಮಾರಂಭಕ್ಕೆ ಅಗತ್ಯವಾದುದನ್ನು ಸಿದ್ಧಗೊಳಿಸಲು ಹೇಳಿದರು (ರೂಢಿ). ೨. ಖಚಿತಪಡಿಸು; ದೃಢಪಡಿಸು: ಕನ್ನಡವು ಕ್ರಿ.ಶ. ೫ನೆಯ ಶತಕ್ಕಿಂತ ಮುಂಚೆ ದಕ್ಷಿಣಕನ್ನಡಸಮುದ್ರತೀರದಲ್ಲಿ ವ್ಯವಹಾರಭಾಷೆಯಾಗಿತ್ತೆಂದು ಹಲವು ಪಂಡಿತರು ಸಿದ್ಧಗೊಳಿಸಿದ್ದಾರೆ (ಕಸಾಚ. ೬). [ಸಿದ್ಧ + ಕೊಳ್ + - ಇಸು]

**ಸಿದ್ಧಘೃತ** (ನಾ). ಒಂದು ಬಗೆಯ ಔಷಧೀದ್ರವ್ಯ : ಸಿದ್ಧಘೃತ - ಕೊಡಸಿಗೆಬೀಜ , ಲಾಮಂಚ . . . ನೆಲಗುಳ್ಳ ಸಹ ಚೂರ್ಣಂಗಯ್ದು ತುಪ್ಪದಲ್ಲಿ ಹಾಕಿ ಅಟ್ಟು , ಆ ಘೃತವನ್ನು ಸೇವಿಸಲು ಸಕಲಜ್ವರ . . . ತಲೆಬೇನೆ ಸಹ ಮಾಣ್ಗುಂ (ಸಕವ್ಯ. ೧೧೩). [ಸಂ.]

**ಸಿದ್ಧಚಕ್ರ** (ನಾ). [ಜೈನ] ಸಾಧಕನು ಸಿದ್ಧಿಯನ್ನು ಪಡೆಯಲು ಪೂಜಿಸುವ ಒಂದು ಬಗೆಯ ಚಕ್ರ : ಜಗತ್ಯತಿಶಯಂ ಶ್ರೀಸಿದ್ಧಚಕ್ರಂ ಮಹತ್ ಅದೆಲ್ಲಮಂ ಹ್ರೀಂಕಾರದಿಂ ತ್ರಿಧಾವೇಷ್ಟನಮಂ ಮಾಡಿ (ಪ್ರತಿಷ್ಠಾ. ೧೦-೧೫).

ಸಿದ್ಧಚಕ್ರದ ನೋಂಪಿ = ಸಿದ್ಧಚಕ್ರವನ್ನು ಪೂಜಿಸುವ ವ್ರತ ,- ನೋಂಪಿ : ದೇವಣನು ಸಿದ್ಧಚಕ್ರದ ನೋಂಪಿ ಶ್ರುತಪಂಚಮಿ ನೋಂಪಿಗೆ ಮಾಡಿಸಿದ ಪಂಚಪರಮೇಷ್ಠಿಗಳ ಪ್ರತಿಮೆ (ಕಇಆ. ೭೩-೧೧-೪; 12ನೆಯ ಶತ). [ಸಂ.]

**ಸಿದ್ಧತೆ** (ನಾ). ೧. ಪರಿಪೂರ್ಣತೆ ; ಸಮಗ್ರತೆ. ೨. ಏರ್ಪಾಡು ; ತಯಾರು : ಮದುವೆಗೆ ಸಕಲಸಿದ್ಧತೆಗಳೂ ನಡೆದಿವೆ (ರೂಢಿ). [ಸಂ. ಸಿದ್ಧತಾ]

**ಸಿದ್ಧದೇವದಾರು** (ನಾ). ಒಂದು ಬಗೆಯ ಮರ :"ಶಿವದಾರುಃ - ಸಿದ್ಧದೇವದಾರು" (ಓಷಧಿ. ೧೬೫). [ಸಂ.]

**ಸಿದ್ಧನಿಲಯ** (ನಾ). = ಸಿದ್ಧಕ್ಷೇತ್ರ : ಮೂಱುಂಲೋಕದಿಂ ಮೇಲೆ ಬೆಳ್ಗೊಡೆ ಯಿರ್ಪಂತೆವೊಲಿರ್ದ ಸಿದ್ಧನಿಲಯಕ್ಕಾನಂದದಿಂ ಪೋಗಿ (ಪಂರಾಮಾ. ೧೭-೮೨). [ಸಂ.]

**ಸಿದ್ಧಪಡಿಸು** (ಕ್ರಿ). ತಯಾರುಮಾಡು ; ಸಿದ್ಧಗೊಳಿಸು : ಜಾತಕ ಸಿದ್ಧಪಡಿಸಲು ಅವರನ್ನೇ ಕೇಳಿಕೊಳ್ಳಲಾಯಿತು (ಒಡ್ಡಿಉ. ೧೩); ಅಮ್ಮೆಯನು ಮುಂದೆ ಬರುವ ವಿಪತ್ತನ್ನು ತಿಳಿಯದೆ ಸಡಗರದಿಂದ ಸಿದ್ಧಪಡಿಸುತ್ತಿದ್ದರು (ಚಂಗಾಳ್ಯ. ೧೮೮). [ಸಿದ್ಧ + ಪಡಿಸು]

**ಸಿದ್ಧಪತ್ರೆ** (ನಾ). ಗಾಂಜಾಎಲೆ ; ಭಂಗಿಸೊಪ್ಪು : "ಭಂಗೀ = ರೀತಿಯುಂ, ಸಿದ್ಧಪತ್ರೆಯುಂ" (ಕಾತಕ್ಯ. ೨೩೫); ಸಿದ್ಧಪತ್ರೆ ಶಿವಧ್ಯಾನ , ಸಿದ್ಧ ಬಿದ್ದರೆ ಎಮ್ಮೆ ಕೋಣ (ಗಾದ). [ಸಂ. ಸಿದ್ಧಪತ್ರ]

**ಸಿದ್ಧಪದ** (ನಾ). [ಜೈನ] ಸಿದ್ಧನ ನೆಲೆ; ಮೋಕ್ಷ: ಸಿದ್ಧಪದಮಂ ಕೈಕೊಳ್ಳುದ ಕಡ್ಡಮೊಡ್ಡಣಮೊಡ್ಡಿರ್ದಘಸ್ಯೆನ್ಯಮಂ ತುಬಿಯಿಸಲ್ (ಶಾಂತಿಪು. ೧-೭); ಇನ್ನು ಮುಂದೆ ಸಾಧಕನು ಅರ್ಹತಪದವನ್ನು ಹತ್ತಬೇಕು. ಆಮೇಲೆ ಸಿದ್ಧಪದವು (ಜೈನಪ. ೫೧೦). [ಸಂ.]

**ಸಿದ್ಧಪರಮೇಷ್ಠಿ** (ನಾ). [ಜೈನ] ಪಂಚಪರಮೇಷ್ಠಿಗಳಲ್ಲಿ ಒಬ್ಬ ; ಕರ್ಮಗಳನ್ನು ನಾಶಗೊಳಿಸಿ ಮುಕ್ತಿ ಪಡೆದವನು : ಸಿದ್ಧಪರಮೇಷ್ಠಿಗಳಷ್ಟಗುಣಂಗಳಂ ನೆನೆಯುತ್ತಂ (ಆದಿಪು. ೧೦-೧೪ ವ); ವಿದ್ಯೆಗಳಂ ಸಾಧಿಸಿ ಸಿದ್ಧಪರಮೇಷ್ಠಿಗಳಂ ಸ್ತುತಿಯಿಸುತಿರ್ಪ ಸಮಯದೊಳ್ (ಪಂರಾಮಾ. ೧೦-೧೩೮ ವ). [ಸಂ. ಸಿದ್ಧಪರಮೇಷ್ಠಿನ್]

**ಸಿದ್ಧಪುರುಷ** (ನಾ). ಅಲೌಕಿಕಶಕ್ತಿಯನ್ನು ಹೊಂದಿದವನು: ಸಿದ್ಧಪುರುಷರಿಗೆ ಕ್ಷೇಮವೆಂಬುದು ಸ್ವಾಧೀನವಾಗಿರುವುದು (ಶಾಕುಂತ. ೭೫-೨೪); ಸಿದ್ಧಪುರುಷರು ದೇವತಾಸಾಕ್ಷಾತ್ಕಾರ ಪಡೆದು ತಮ್ಮ ಅಲೌಕಿಕಸಾಮರ್ಥ್ಯದಿಂದ ಬೀಜಾಕ್ಷರಗಳನ್ನು ಉಚ್ಚರಿಸಿರುತ್ತಾರೆ (ಭಾರದ. ೧೫೪). [ಸಂ.]

**ಸಿದ್ಧಪ್ರಯೋಗ** (ನಾ). ಫಲ ಕೊಡುವಂಥದು; ಪರಿಣಾಮಕಾರಿಯಾದುದು: ಮಗಳೆ ಬಾ ಕೊಳ್ ಐದು ಮಂತ್ರಾಳಿಗಳನಿವು ಸಿದ್ಧಪ್ರಯೋಗವು (ಕುವ್ಯಾಆ. ೬-೧೭); ಅದರಿಂದಿದು ಸಿದ್ಧಪ್ರಯೋಗವೆಂದರಿವುದು (ಸಕವ್ಯ. ೩೭೬). [ಸಂ.]

**ಸಿದ್ಧಪ್ರಸಾದ** (ನಾ). [ವೀಶೈ] ಮೂರು ಬಗೆಯ ಪ್ರಸಾದಗಳಲ್ಲಿ ಒಂದು ; ಲಿಂಗಕ್ಕೆ ಅರ್ಪಿಸಿ ಉಳಿದುದು: ಶುದ್ಧಪ್ರಸಾದ ಗುರುವಿನದದು ಸಿದ್ಧಪ್ರಸಾದ ಲಿಂಗದದು ಪ್ರಸಿದ್ಧಪ್ರಸಾದ ಜಂಗಮದದು ಇಂತೀ ತ್ರಿವಿಧ ಒಂದಾದವರ ತೋಱಾ (ಬಸವ. ಕ. ೭೯೦); ಮನುಜನಸುವಮೃತತ್ವಮಂ ಪಡೆದನುವಹುದು ಮೇಣಾವುದಂ ಬಿಡದನುಭವಿಸುವವನೊಂದುವಂ ಸಿದ್ಧಪ್ರಸಾದಸುಖ (ಬಸಪು. ೪೩-೬೩). [ಸಂ.]

**ಸಿದ್ಧಪ್ರಸಾದಿ** (ನಾ). [ವೀಶೈ]ಸಿದ್ಧಪ್ರಸಾದವನ್ನು ಸ್ವೀಕರಿಸುವವನು: ಕಾಲನ ಕೊಂದಾತನಲ್ಲದೆ ಶುದ್ಧಪ್ರಸಾದಿಯಲ್ಲ ಕಾಮನ ತಿಂದಾತನಲ್ಲದೆ ಸಿದ್ಧಪ್ರಸಾದಿಯಲ್ಲ (ಅವಚಂ. ೨೭೬-೧೨೭೮). [ಸಂ. ಸಿದ್ಧಪ್ರಸಾದಿನ್]

**ಸಿದ್ಧಮಾತೃಕ** (ನಾ). ಪ್ರಾಚೀನ ನಾಗರೀಲಿಪಿ: ಬಹುಬಳಕೆಯಲ್ಲಿರುವ ವರ್ಣಮಾಲೆಯನ್ನು 'ಸಿದ್ಧಮಾತೃಕ' ಎಂದು ಕರೆಯುತ್ತಾರೆ. ಇದು ಮೊದಲಿಗೆ ಕಾಶ್ಮೀರದಲ್ಲಿ ಹುಟ್ಟಿತೆಂದು ಕೆಲವರು ಅಭಿಪ್ರಾಯಪಡುತ್ತಾರೆ (ಪ್ರವಾಇ. I, ೩೫೬). [ಸಂ. ಸಿದ್ಧಮಾತೃಕಾ]

**ಸಿದ್ಧಮೂಲಿಕೆ** (ನಾ). ಸಿದ್ಧಿಯನ್ನುಂಟುಮಾಡುವುದೆಂದು ನಂಬಲಾದ ಮೂಲಿಕೆ: ಆ ಮಹಾತ್ಮರು . . . ತಿಮ್ಮಣ್ಣನಾಯಕನಿಗೆ ದೆಸೆಗಟ್ಟಿನ ದೂಳಿತ, ಸಿದ್ಧಮೂಲಿಕೆ, ಕೈಅಂಬು ಇವುಗಳನ್ನು ಕೊಟ್ಟು . . . ಹೊರಟು ಹೋದರಂತೆ (ಚಿತ್ರಪಾ. ೭). [ಸಂ. ಸಿದ್ಧಮೂಲಿಕಾ]

**ಸಿದ್ಧರಸ** (ನಾ). ೧. ಪಾದರಸ ; ಪಾರಜ. ೨. ಯಾವುದೇ ಲೋಹವನ್ನು ಬಂಗಾರವನ್ನಾಗಿ ಮಾರ್ಪಡಿಸುವುದೆಂದು ನಂಬಲಾದ ಒಂದು ಬಗೆಯ ರಸ: ಶೋಕರಸಮೆಲ್ಲಂ ಪೋಗಿ ನಿರ್ವೇಗರಸಂ ಪುಟ್ಟೆ ಸಿದ್ಧರಸಮಂ ಮುಟ್ಟಿದ ಲೋಹದಂತೆ ಶುದ್ಧಾಂತರಂಗನಾಗಿ (ಆದಿಪು. ೬-೫೭ ವ); ಆಗದಿಹುದೇ ಸಿದ್ಧರಸ ಸಂಯೋಗದಿಂ ಸೌವರ್ಣ (ಬಸಪು. ೫೭-೭೯); ಸಿದ್ಧರ ಸತತವಿಶುದ್ಧರ . . . ನೆನೆದು ನಾನೀಗ ಸಿದ್ಧರಸದೊಳು ಲೋಹವನದ್ದಿದಂತಾತ್ಮಸಿದ್ಧಿಯ ಪಡೆವೆನಿನ್ನೇನು (ಭರಚ. ೧-೨). [ಸಂ.]

**ಸಿದ್ಧರಸವೇದ** (ನಾ). ೧. ರಸವಾದದಲ್ಲಿ ಸಿದ್ಧಿಯನ್ನು ಪಡೆದವನು. ೨. ಬಯಕೆಯು ಈಡೇರಿದವನು. ೧ , ೨ : ಬದ್ಧರಸಮಂ ಸಿದ್ಧರಸ ವೇದನುಮಾದ ರಸವಾದಿಯಂತೆ ಜ್ವಳನಜಟಿ ರಾಗಿಸಿ ನೈಮಿತ್ತಿಕನಂ ಬರಿಸಿ (ಶಾಂತಿಪು. ೫-೩೭ ವ). [< ಸಂ. ಸಿದ್ಧರಸವೇದಿನ್]

**ಸಿದ್ಧಲಿಕೆ** (ನಾ). ತುಪ್ಪ ಮೊದಲಾದ ದ್ರವಪದಾರ್ಥಗಳನ್ನು ತುಂಬುವ ಚರ್ಮದ ಚೀಲ : ತುಪ್ಪ ತುಂಬಲಿಕ್ಕೆ ಸಿದ್ಧಲಿಕೆ ಎಣ್ಣೆ ತುಂಬಲಿಕ್ಕೆ ಬುದ್ದಲಿಕೆ (ವಚಶಾ. I, ೩೭೦). [< ಸಿದ್ದಿಗೆ]

**ಸಿದ್ಧಲೇಪ** (ನಾ). = ಸಿದ್ಧರಸ ೨: ಅಮೃತಫಲ ಸುಕಬೀಜ ಸಿದ್ಧಲೇಪಾದಿ ಸುವಸ್ತುಗಳನೇಕವಾಗಿ ಅಲ್ಲಿಯಣ ಶಿವಭಕ್ತರಿಗೆ ಸುಕೃತಾನುರೂಪದಿಂದಾನಂದ ಕರಗಳಾಗಿರ್ಕುಂ (ವಿವೇಕ. ೨೧೦). [ಸಂ.]

**ಸಿದ್ಧವಟಕ** (ನಾ). ಒಂದು ಬಗೆಯ ಔಷಧದ ಗುಳಿಗೆ : ಸಿದ್ಧವಟಕ - ಜಾಕಾಯಿ, ವಾದಕ್ಕಿ . . . ಎಲಚಿಯ ಪ್ರಮಾಣ ಗುಳಿಗೆಯಂ ಮಾಡಿ . . . ಮೆಲ್ಲಲು ಸರ್ವಾತಿಸಾರಂ ಮಾಣ್ಗುಂ ; ಸಿದ್ಧವಟಕವೆಂದಿದಂ ಆತ್ರೇಯಮುನಿಗಳು ನಿರ್ಮಿಸಿದರು (ಸಕವ್ಯ. ೩೬೫). [ಸಂ.]

**ಸಿದ್ಧವಸ್ತು** (ನಾ). ಕಚ್ಚಾಮಾಲುಗಳಿಂದ ತಯಾರಾಗಿ ಮಾರಾಟಕ್ಕೆ ಸಜ್ಜಾಗಿರುವ ಪದಾರ್ಥ: ಸಿದ್ಧವಸ್ತುಗಳು ಭಾರತಕ್ಕೆ ಆಮದಾಗಿ ಬರುತ್ತವೆ (ಭೂವಿವ. ೩೭೭); ಟಾಟಾರವರು . . . ಕಚ್ಚಾಮಾಲುಗಳ ಸಂಗ್ರಹ, ಸಿದ್ಧವಸ್ತುಗಳ ಮಾರಾಟ ಮೊದಲಾದ

ಎಲ್ಲ ವಿಚಾರಗಳನ್ನು ತಿಳಿದುಕೊಂಡು ಸ್ವದೇಶಕ್ಕೆ ಹಿಂದಿರುಗಿದರು (ಕಪವು. ೬-೮೭). [ಸಂ.]

**ಸಿದ್ಧವೈದ್ಯ** (ನಾ). ಭಾರತೀಯ ವೈದ್ಯಕೀಯ ಪ್ರಕಾರಗಳಲ್ಲಿ ಒಂದು : ಅವರು ಸಿದ್ಧವೈದ್ಯದಲ್ಲಿ ಪರಿಣತರು (ರೂಢಿ). [ಸಂ.]

**ಸಿದ್ಧಶಿಲೆ** (ನಾ). ೧. ಪವಿತ್ರವಾದ ಬಂಡೆಗಲ್ಲು : ಜಿನವಲ್ಲಭನ ಸುಧರ್ಮ್ಮ ಸನ್ತತಿಯೊಳ್ಪೊಟ್ಟ ಗುಣಾವಳಿಯನೀ ವೃಷಭಗಿರಿಯ ಸಿದ್ಧಶಿಲೆಯೊಳೆಚೆಯಮ್ಮಂ ಟಂಕ್ಕೋ(ಕೋ)ತ್ಕೀರ್ಣ್ಣಮ್ಮಾಡಿದಂ (ಶಾಸಸಂ. ೯-೧೧; ಸು. 975). ೨. [ಜೈನ] ಸಿದ್ಧರು ನೆಲಸಿರುವ ಬೆಟ್ಟ: ಸಾವಂ ರಾವಣನೆಂದರ್ ಕೇವಲಿಗಳ್ ಸಿದ್ಧಶಿಲೆಯನುದ್ಧರಿಸಿದ ಶೌರ್ಯಾವಷ್ಟಂಭದಿನದು ಪುಸಿಸಾವಾದುದು ನಿನಗೆ ವೈರಿಶಸ್ತ್ರಾಹತಿಯಿಂ (ಪಂರಾಮಾ. ೧೪-೪೫). [ಸಂ. ಸಿದ್ಧಶಿಲಾ]

**ಸಿದ್ಧಶೇಷೆ** (ನಾ). [ಜೈನ] ಪೂಜೆ ಮಾಡಿದ ಹೂವು, ಅಕ್ಷತೆ ಮೊದಲಾದುವು; ಪ್ರಸಾದ : ಮಾರಮಥನನಂ ಸ್ತುತಿಯಿಸಿ ತತ್ಪ್ರಕಟಫಲಪ್ರಾಪ್ತಿಗೆ ಸಂಚಕರಂಗೊಳ್ವಂತೆ ಸಿದ್ಧಶೇಷೆಯನಾಗಳ್ ಕೊಂಡು (ಆದಿಪು. ೪-೨). [ಸಂ. ಸಿದ್ಧಶೇಷಾ]

**ಸಿದ್ಧಶೈಲ** (ನಾ). = ಸಿದ್ಧಶಿಲೆ ೨ : ನಿನಗೆ ಸಿದ್ಧಶೈಲಮನೆತ್ತಿದನ ಕೈಯೊಳ್ ಮರಣಮಕ್ಕುಂ (ಪಂರಾಮಾ. ೧೧-೭ ವ). [ಸಂ.]

**ಸಿದ್ಧಸಹಣಿ** (ನಾ). ಅಶ್ವಸೈನ್ಯದ ಮುಖ್ಯಸ್ಥ : ಸಿ[ದ್ಧ]ಸಹಣಿ ಮ(ಂ)ನ್ನೆಯ ಬೋಯರಸನು (ಸೌಇಇ. XX, ೩೭೩-೫; ಸು. 14ನೆಯ ಶತ). [ಸಿದ್ಧ + ಸಹಣಿ (< ಸಾಹಣಿ)]

**ಸಿದ್ಧಸೇಸೆ** (ನಾ). = ಸಿದ್ಧಶೇಷೆ: ಶ್ರೀಜಿನಪತಿಪದಕಮಳವಿರಾಜಿತವಿುಂ ಸಿದ್ಧಸೇಸೆಯಂ ತಳೆದನಿಳಾಪೂಜಿತಚರಿತಂ (ಮಲ್ಲಿಪು. ೧೧-೧); ನಿತ್ಯವ್ರತಂಗಳಂ ಕೈಕೊಂಡು ಸಿದ್ಧಸೇಸೆಯಂ ಕೊಂಡು (ಧರ್ಮಾಮೃ. ೫-೭೦). [< ಸಿದ್ಧಶೇಷೆ]

**ಸಿದ್ಧಹಸ್ತ** (ನಾ). ೧. ಸಿದ್ಧಿಯನ್ನು ಪಡೆದುದು ; ಎತ್ತಿದ ಕೈ : ರಾಜ್ಯಾಡಳಿತದ ಕ್ಷೇತ್ರದಲ್ಲಿ ರಾಜಾಜಿಯವರ ಕೀರ್ತಿ ಬೆಳೆದಿದೆ ; ಆ ಬಗೆಯಲ್ಲಿ ಅವರದು ಸಿದ್ಧಹಸ್ತ (ರಾಜವ. ೮೫). ೨. ಸಿದ್ಧಿಯನ್ನು ಪಡೆದವನು ; ನಿಪುಣ : ಕಥಾರಚನೆಯಲ್ಲಿ ಇವನು ಸಿದ್ಧಹಸ್ತನಾದನು (ಮೊಪಾಸಾ. ೫ ಮುನ್ನುಡಿ). [ಸಂ.]

**ಸಿದ್ಧಾಂಜನ** (ನಾ). ಸಿದ್ಧಿಯನ್ನು ದೊರಕಿಸುವ ಅಂಜನ : ಮುನಿವಾಕ್ಯಮೆಂದೆಂಬ ಸಿದ್ಧಾಂಜನಮಿಟ್ಟುಮರಸುತ್ತಲೈತರೆ (ನಾಗಪ. ೧೦-೭೩). [ಸಂ.]

**ಸಿದ್ಧಾಂತ** (ನಾ). ೧. ನಿರ್ಣಯ ; ತೀರ್ಮಾನ ; ನಿರ್ಧಾರ : ಸಿದ್ಧಾಂತಪದವು ಯುಕ್ತಿಯಿಂದ ಸಾಧಿಸಲ್ಪಟ್ಟ ನಿರ್ಣಯವೆಂದರ್ಥದಲ್ಲಿರುವುದು (ಹಿಂದಸಾ. ೧೮೩); ಮಗಳ ಮನೆಯೆಂಬ ಕಿಚ್ಚಿಗಾದರೂ ತಮ್ಮಲ್ಲಿಗೆ ಅದು ಬರಬೇಕಾದದ್ದು ನ್ಯಾಯ ಎಂದು ಅವಳ ಸಿದ್ಧಾಂತ (ಹೊಸಕ್ಷಿ. ೪೩). ೨. ನಿರ್ಣಯಾತ್ಮಕವಾದ ತತ್ತ್ವ : "ಸಮಯ ಸಿದ್ಧಾಂತಮಕ್ಕುಂ" (ಮಂಗರಾ. ೪-೧೦); ಕಂತುವೆ ಪರಮಾತ್ಮನಾಗೆ ತನ್ಮತಮೆ ಸಿದ್ಧಾಂತಮಾಗೆ (ಶಾಂತಿಪು. ೭-೧೦ ವ); ನಿಮ್ಮಯ ಪೂರ್ವಪಕ್ಷಮೆಮಗಾದುದೇ ವಲಂ ಸಿದ್ಧಾಂತಂ (ಗದಾಯು. ೪-೮); ವಿದಿತವ್ಯಾಕರಣದ ತರ್ಕದ ಸಿದ್ಧಾಂತದ ವಿಶೇಷದಿಂ ತ್ರೈವಿದ್ಯಾಸ್ಪದರೆಂದೀ ಧರೆ ಬಣ್ಣಿಪುದು ದಿವಾಕರನಂದಿದೇವಸೈದ್ಧಾಂತಿಗಳಂ (ಸುಕುಮಾ. ೧-೨೮). ೩. ಧರ್ಮ, ಜ್ಯೋತಿಷ್ಯ ಮುಂತಾದುವುಗಳಿಗೆ ಸಂಬಂಧಿಸಿದ ಶಾಸ್ತ್ರಗ್ರಂಥ : ಒಳ್ಳಿತಪ್ಪ ದಿವಸವಾರನಕ್ಷತ್ರಮುಹೂರ್ತದೊಳ್ ಸಿದ್ಧಾಂತಮಂ ತೊಡಗಿಸೆ (ವಡ್ಡಾರಾ. ೬-೧೫); ಸಿದ್ಧಾನ್ತಾದಿ ಸಮಸ್ತಶಾ[ಸ್ತ್ರಾ]ಮೃತಪಾರಾವಾರಪಾರಗರುಂ (ಸೌಇಇ. XX, ೪೬-೨೫; 1072). ೪. [ಶೈವ] ಶೈವದ ನಾಲ್ಕು ಪ್ರಭೇದಗಳಲ್ಲಿ ಒಂದು: ಆ ಶೈವವೇ ವಾಮ ದಕ್ಷಿಣ ಮಿಶ್ರ ಸಿದ್ಧಾಂತವೆಂದು ನಾಲ್ಕು ತೆಱನಾಗಿರ್ಪುದವಱಲ್ಲಿ . . . ಪರಶಿವಪರವಾದುದೇ ಸಿದ್ಧಾಂತಮಕ್ಕುಂ (ವಿವೇಕ. ೬೭). ೫. [ನ್ಯಾಯ] ಷೋಡಶಪದಾರ್ಥಗಳಲ್ಲಿ ಒಂದು : ನ್ಯಾಯವೇ ಪ್ರಮಾಣ ಪ್ರಮೇಯ . . . ಸಿದ್ಧಾಂತ . . . ನಿಗ್ರಹಸ್ಥಾನಂಗಳೆಂಬ ಷೋಡಶಪದಾರ್ಥಂಗಳಂ ವೇಳುತ್ತವೇ ಪ್ರಪಂಚಕ್ಕೀಶ್ವರಕರ್ತೃತ್ವಮಂ ನಿಶ್ಚೈಸುವುದು (ವಿವೇಕ. ೧೨); ನ್ಯಾಯದರ್ಶನದಲ್ಲಿ ಪ್ರಮಾಣ . . . ಸಿದ್ಧಾಂತ ಅವಯವ ತರ್ಕ . . . ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದಸಾ. ೧೧೨).

ಸಿದ್ಧಾಂತಚಕ್ರವರ್ತಿ = ಹಿಂದಿನ ಕಾಲದಲ್ಲಿ ಆಗಮದ ಆರುಖಂಡಗಳನ್ನು ಅಭ್ಯಾಸ ಮಾಡಿದವರಿಗೆ ಕೊಡುತ್ತಿದ್ದ ಒಂದು ಬಿರುದು: ಈ ಷಟ್‌ಖಂಡಾಗಮದ ಪೂರ್ಣಅಭ್ಯಾಸಿಗಳಿಗೆ 'ಸಿದ್ಧಾಂತಕಚಕ್ರವರ್ತಿ' ಎಂಬ ಪದವಿಯನ್ನು ಕೊಡಲಾಗುತ್ತಿದ್ದಿತು (ಜೈನಪ. ೧೬೨). [ಸಂ.]

**ಸಿದ್ಧಾಂತಿ** (ನಾ). ೧. ಸಿದ್ಧಾಂತಗಳನ್ನು ಸ್ಥಾಪಿಸುವವನು ; ತತ್ತ್ವಗಳನ್ನು ನಿರೂಪಿಸುವವನು: ನೆಗಟ್ಟಿರ್ದಣಂದಿಸಿದ್ಧಾಂತಿಗಳಧಿಗತಸಕಳತತ್ತ್ವರಾಯತಲವಣಾಬ್ಧಿ ಗಭೀರಭೂರಿವಾರಿಧಿನಿಗೂಢಮಹರುದ್ಧಸತ್ವಸಿದ್ಧಿಸಮೇತರ್ (ಶಾಂತಿಪು. ೧-೨೧); ಆತ್ಮನಲ್ಲಿ ಮಲವು ಪುದುಗಿರ್ದ ಭೇದವ ತಿಳಿದು ಗೂಹಿಸಿ ಹೇಳಬಲ್ಲಡೆ ಸಿದ್ಧಾಂತಿ ಎಂಬೆ (ಉರಿಪೆ. ಕ. ೨೦೬-೨೮೬). ೨. ಶಾಸ್ತ್ರ, ವಿಜ್ಞಾನಗಳನ್ನು ಅಭ್ಯಾಸಮಾಡಿದವನು ; ವಿಜ್ಞಾನಿ: ಅವರು ಮಹಾಸಿದ್ಧಾಂತಿಗಳು. ಅವರ ಗುರುತ್ವದಿಂದ ನನ್ನ ಮಗನು ವಿದ್ವಾಂಸನಾಗುತ್ತಾನೆ (ಚಂಗಾಳ್ವ. ೪). ೩. ಭವಿಷ್ಯ ಹೇಳುವವನು ; ಜ್ಯೋತಿಷಿ : ಅಪ್ಪಾಜಿಯವರು ಸ್ನಾನ ಮುಗಿಸಿ ಮಡಿಯುಟ್ಟು ವೈಖಾನಸರ, ಸಿದ್ಧಾಂತಿಗಳ, ಪುರೋಹಿತರ ಒಡಗೂಡಿ . . . ನಡೆದುಬಂದರು (ಶಾಂತಲಾ. ೨೫೭). ೪. ಪ್ರಯೋಗಗಳನ್ನು ನಡೆಸುವವನು; ಪ್ರಯೋಗಶೀಲ : (ಕ). [ಸಂ. ಸಿದ್ಧಾಂತಿನ್]

**ಸಿದ್ಧಾಂತಿಗ** (ನಾ). = ಸಿದ್ಧಾಂತಿ ೧: ಪ್ರಭಾಚಂದ್ರಸಿದ್ಧಾನ್ತಿಗರ ಗುಡ್ಡನಾಗಿ (ಎಕ. VII, ಶಿಕಾರಿ. ೧೦-೫೩; 1085); ಜೋಯಿಸಮನೞಿವನೋದುವಂ ವೋಙ್, ಜೋಯಿಸಿಗಂ. ಏವಂ ಗಣೆದಿಗಂ, ಸಿದ್ಧಾಂತಿಗಂ (ಶಬ್ದಾನು. ೪೦೮ ಪ್ರಯೋ). [ಸಿದ್ಧಾಂತ + - ಇಗ]

**ಸಿದ್ಧಾಂತಿಸು** (ಕ್ರಿ). ನಿರ್ಣಾಯಕವಾಗಿ ಹೇಳು: ಏನಾ ಮಾಯೆಯುಂ ಬೊಮ್ಮನೆಂ ಮಾಸಿಪ್ಪೊಂದು ಪದಾರ್ಥಮಾಗಲೆರಡಂ ಸಿದ್ಧಾಂತಿಸಲ್ಕಾರದೇ (ಮೈಸೂಮು. ೨-೪೨); ಇದೇ ಕೊನೆಯ ಮಾತೆಂದು ವಿಮರ್ಶಕನು ಏನನ್ನೂ ಖಚಿತವಾಗಿ ಸಿದ್ಧಾಂತಿಸಲಾರನು, ಹಾಗೆ ಸಿದ್ಧಾಂತಿಸಲೂ ಬಾರದು (ಸಮಾಲೋ. ೨೦೩). [ಸಿದ್ಧಾಂತ + - ಇಸು]

**ಸಿದ್ಧಾಗಮ** (ನಾ). ಒಂದು ಆಗಮದ ಹೆಸರು: ಆ ಸಿದ್ಧಾಂತಭೇದಂಗಳಾವವೆಂದೊಡೆ ಕಾಮಿಕಾಗಮ . . . ಲಲಿತಾಗಮ ಸಿದ್ಧಾಗಮ . . . ವಾತೂಲಾಗಮವೆಂಬವೇ ಇಪ್ಪತ್ತೆಂಟು ದಿವ್ಯಾಗಮಂಗಳಕ್ಕುಂ (ವಿವೇಕ. ೬೩). [ಸಂ.]

**ಸಿದ್ಧಾದಾಯ** (ನಾ). ಒಂದು ಬಗೆಯ ತೆರಿಗೆ: ತೆರಿಗೆಯ ವ್ಯವಸ್ಥೆಯ ಪುನರ್ಘಟನೆ ಮಾಡಿ ಬಂಕದೆರೆ, ಸಿದ್ಧಾದಾಯ, ಬಿಟ್ಟಿಕೊಟ್ಟಣ . . . ತಳವರಿಕೆ, ಗುತ್ತಿಗೆಗಳೆಂಬ ಹದಿಮೂರು ಹೊಸಕರಗಳನ್ನು ನಿಯೋಜಿಸಿದರು ಬಸವಣ್ಣನವರು (ಶರಚ. ೧೨೯). [ಸಂ.]

**ಸಿದ್ಧಾನ್ನ** (ನಾ). ತಯಾರಾದ ಅಡುಗೆ ; ಸಿದ್ಧವಾಗಿರುವ ಆಹಾರ : ಸಿದ್ಧಾನ್ನವನ್ನು ತಳ್ಳಿಬಿಡುವುದು ಪ್ರಸಾದರಾವಿಗೆ ಮಾತ್ರ ಒಳ್ಳೆಯದೆ ! (ಲಕ್ಷ್ಮೀಪ್ರ. ೭೩). [ಸಂ.]

**ಸಿದ್ಧಾಯ** (ನಾ). = ಸಿದ್ದಾಯ: ಸಿದ್ಧಾಯದ ಪೊನ್ನೊಳ್ಪತ್ತುಗದ್ಯಾಣ ಪೊನ್ನುಂ . . . ಬಿಟ್ಟರ್ (ಎಕ. I(R), ೯೭-೭; 9ನೆಯ ಶತ); ಸಿದ್ಧಾಯವ ತೆತ್ತು ಬಿತ್ತಿ ಉಂಬ ಒಕ್ಕಲಿಗರಾದರು (ಸರ್ವವ. ೧೬೫-೭೮೩); ಸಂಜಾತವಸ್ತುಗಳ ಸಿದ್ಧಾಯುವಂ ಕುಡವೇಳ್ಪುದರಸಂಗೆ ನಾವು (ಜೈಮಿಭಾ. ೨೯-೧೬). [ಸಂ.]

**ಸಿದ್ಧಾಯತನ** (ನಾ). ೧. ಪವಿತ್ರವಾದ ಸ್ಥಳ; ದೇವಾಲಯ: ಇದು ಸಿದ್ಧಾಯತನಂ ಮನಂಗೊಳಿಸಿ ತೋಱುತ್ತಿರ್ಪುದು (ಕಾದಂಪೂ. ೬೫೭). ೨. [ಜೈನ] ಸಿದ್ಧರ ಆವಾಸಸ್ಥಾನ; ಸಿದ್ಧರ ಕ್ಷೇತ್ರ : ಪೆಂಡಿರ್ಕಳ ಪ್ರಳಾಪಂಗೆಯ್ವುದಱ ಕಳಕಳಧ್ವನಿಯಿಂದಂ ಕಳಕಳಾಯತಮೆಂದು ಸಿದ್ಧಾಯತನಮಾದುದು (ವಡ್ಡಾರಾ. ೩೧-೩). [ಸಂ.]

**ಸಿದ್ಧಾರ್ಥ** (ನಾ). ೧. ಸಿದ್ಧಿಯನ್ನು ಪಡೆದವನು ; ಗುರಿಯನ್ನು ಸಾಧಿಸಿದವನು. ೨. ಬುದ್ಧನ ಹೆಸರುಗಳಲ್ಲಿ ಒಂದು : "ಬುದ್ಧಂ ಸಮಂತಭದ್ರಂ ಸಿದ್ಧಾರ್ಥಂ ಮುನಿ ತಥಾಗತ . . . ಶಾಕ್ಯಂ ಸುಗತಂ" (ವಸ್ತುಕೋ. ೨-೧೦). ೩. ಬಿಳಿಯ ಸಾಸುವೆ : "ಬಿಳಿದಪ್ಪ ಸರ್ಷಪಂ ಸಿದ್ಧಾರ್ಥಂ" (ವಸ್ತುಕೋ. ೧೫-೧೯); ಸ್ವಜನಪರಿಜನಂಗಳ್ ಸಿದ್ಧಾರ್ಥಂಗಳಂ ಮಾಂಗಲ್ಯಮೆಂದಿರ್ವರ್ಗಂ ಸೇಸೆಯನಿಕ್ಕಲ್ (ವಡ್ಡಾರಾ. ೨೬-೧೪); ಸಿದ್ಧಾರ್ಥ ದೂರ್ವಾಂಕುರ . . . ಕಳಮಾವೃತಕರಪಲ್ಲವೆಯರಪ್ಪ ಪುರಂಧ್ರಿಯರುಂ ಬದ್ಧವಣದ ಪಱೆಗಳುಂ ಬೆರಸಿದಿರ್ವಂದು (ಪಂಪಭಾ. ೩-೨ ವ); ಅಟ್ಟಿಯಿಂ ಮಂಗಳಾರ್ಥಮೆಂದು ಸಿದ್ಧಾರ್ಥದ ಸೇಸೆಗಳನಿಕ್ಕಿದೊಡೆ (ಸುಕುಮಾ. ೧೧-೩೫ ವ).

೪. ಒಂದು ಬಗೆಯ ಕುದುರೆ ; ಬಿಳಿಯ ಸಾಸುವೆಬಣ್ಣದ ಕುದುರೆ : ತುರಗದ ಮೆಯ್ವರ್ಣಂ ಸಿತಸರುಷಪಮಂ ಪೋಲ್ತು ತೋಱೆ ಸಿದ್ಧಾರ್ಥಂ (ಅಶ್ವಶಾ. ೨-೨೮). [ಸಂ.]

**ಸಿದ್ಧಾರ್ಥವೃಕ್ಷ** (ನಾ). ಇಚ್ಛಿಸಿದುದನ್ನು ಸಿದ್ಧಿಸುವಂತೆ ಮಾಡುವ ಮರ ; ಕಲ್ಪವೃಕ್ಷ : ಚೈತ್ಯವೃಕ್ಷಪರಿಕಲಿತಚತುರ್ದಿಗವಸ್ಥಿತಸಿದ್ಧಪ್ರತಿಮಾವಭಾಸಿಸಿದ್ಧಾರ್ಥವೃಕ್ಷಪರಿಭ್ರಾಜಿತಮಪ್ಪ ಮಧ್ಯಪ್ರದೇಶಮಮಂ (ಆದಿಪು ೧೦-೩೩ ವ). [ಸಂ.]

**ಸಿದ್ಧಾರ್ಥಿ** (ನಾ). ಅರುವತ್ತುಸಂವತ್ಸರಗಳಲ್ಲಿ ಐವತ್ತು ಮೂರನೆಯದು : ಆ ವರ್ಷವೇ ಪ್ರಭವ . . . ಸಿದ್ಧಾರ್ಥಿ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೨೬೩). [ಸಂ. ಸಿದ್ಧಾರ್ಥಿನ್]

**ಸಿದ್ಧಾಸನ** (ನಾ). [ಯೋಗ] ಒಂದು ಬಗೆಯ ಯೋಗಾಸನ : ಸಿದ್ಧಾಸನ . . . ಸುಖಾಸನಂಗಳೇ ಜಪಕರ್ಮಕ್ಕೆ ಯೋಗ್ಯಮಾದಾಸನಗಳೆಂದು (ವಿವೇಕ.೮೮); ಈತ . . . ಸಿದ್ಧಾಸನ ಹಾಕಿ, ನೀರಲ್ಲಿ ಕುಳಿತು ತಪಸ್ಸುಮಾಡುವುದುಂಟು (ಸ್ವಪ್ನಪೂ. ೧೩). [ಸಂ.]

**ಸಿದ್ಧಿ** (ನಾ). ೧. ಸಾಧಿಸಿದುದು ; ಸಾಧನೆ : ಯಾವುದೋ ಹಾದಿಯೊಂದನು ಹಿಡಿದು ನಡೆಯಲಿದ್ದೆಡೆಯೆ ಸಿದ್ಧಿ ! (ಪಾಂಚಜ. ೪೨-೯); ಬುದ್ಧಿ ಶ್ರದ್ಧೆಗಳೆರಡೂ ಸಿದ್ಧಿಗೆ ಅಗತ್ಯವೆಂಬುದು ದಾರ್ಶನಿಕರ ವಾದವಿಧಾನ (ಭಾರದ. ೧೨೨). ೨. ಕಾರ್ಯಸಫಲತೆ ; ಜಯ: ಸಲ್ಲದಾ ನಿನ್ನ ಬಯಕೆಯ ಸಿದ್ಧಿ (ಚಿತ್ರಾಂಗ. ೨೪-೬೬೬). ೩. ಮೋಕ್ಷ ; ಮುಕ್ತಿ: ಪೆರ್ಗ್ಗೊರವಂ ಸಮಾಧಿ ನೆಱೆದೊನ್ನೋನ್ತೆಯ್ದಿದೋರ್ಸ್ಸಿದ್ಧಿಯಾನ್ (ಎಕ. II, ೨೨-೪; ಸು. 700); ಜಾತಿವರ್ಗದ ಪರಮಧರ್ಮದ ಸಾರವಿದನಾಚರಿಸಿ ಸಿದ್ಧಿಯನೈದಿದನ . . . ಧರ್ಮವ್ಯಾಧನೆಂಬನ ಕಥೆಯ ಕೇಳು (ಕುವ್ಯಾಅ. ೧೪-೪೮). ೪. ಸಿದ್ಧತೆ ; ಏರ್ಪಾಡು. ೫. ಅಣಿಮಾ, ಗರಿಮಾ ಮುಂತಾದ ಎಂಟು ಬಗೆಯ ಅಲೌಕಿಕಶಕ್ತಿ. ೬. ಸಾತ್ವಿಕಗುಣಗಳಲ್ಲಿ ಒಂದು : ವಿರತಿ . . . ಸಿದ್ಧಿ . . . ನಿಶ್ಚಯ ಮುಂತಾದ ಸಾತ್ತ್ವಿಕಗುಣಂಗಳಿಂ (ವಿವೇಕ. ೨೪೭). ೭. [ಯೋಗ] ಇಪ್ಪತ್ತೇಳು ಬಗೆಯ ಯೋಗಗಳಲ್ಲಿ ಒಂದು : ವಿಷ್ಕಂಭ . . . ಸಿದ್ಧಿ . . . ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೨೬೨). ೮. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : ಸಿದ್ಧಿ ವಾರಣಮಾರಯೆ ಯೆಂಟಕ್ಕೆ ನಾಮಂ (ವ್ಯವಹಾ. ೯-೮). ೯. [ಸಾಂಖ್ಯ] ಐವತ್ತು ಪದಾರ್ಥಗಳಲ್ಲಿ ಒಂದು : ಉಳಿದ ಐವತ್ತು ಪದಾರ್ಥಗಳು ಪ್ರತ್ಯಯಸರ್ಗಕ್ಕೆ ಸೇರಿದವು. ವಿಪರ್ಯಯಗಳು ಐದು, ತುಷ್ಟಿಗಳು ಒಂಬತ್ತು, ವಧಗಳೆಂಬ ಅಶಕ್ತಿಗಳು ಇಪ್ಪತ್ತೆಂಟು, ಸಿದ್ಧಿಗಳು ಎಂಟು, ಅಂತೂ ಐವತ್ತು (ಹಿಂದಸಾ. ೫೭). [ಸಂ.]

**ಸಿದ್ಧಿಗೆ** 'ಸಿದ್ಧಿಗೆ₁' ನೋ.

**ಸಿದ್ಧಿಪ್ರದಾಯಕ** (ನಾ). ಇಷ್ಟಾರ್ಥವನ್ನು ನೀಡುವವನು : ಸಮಸ್ತಸಿದ್ಧಿಪ್ರದಾಯಕ ವಿನಾಯಕ ಮಾಳ್ಪುದೆಮಗೆ ನಿರ್ವಿಘ್ನತೆಯನು (ಜೈಮಿಭಾ. ೧-೩). [ಸಂ.]

**ಸಿದ್ಧಿಮಂತ್ರ** (ನಾ). ಸಿದ್ಧಿಯನ್ನು ಸಾಧಿಸುವ ಮಂತ್ರ : ಅವನಿಗೆ ಶರಣರ ಹಾಡು ಶಿವಪದವನ್ನು ಕೊಡುವ ಸಿದ್ಧಿಮಂತ್ರವೇ ಆಗಿದೆ (ಕನ್ನಹಾ. ೧೬). [ಸಂ.]

**ಸಿದ್ಧಿಯೋಗ** (ನಾ). [ಯೋಗ] ಇಪ್ಪತ್ತೇಳು ಯೋಗಗಳಲ್ಲಿ ಒಂದು : ಸಿದ್ಧಿಯೋಗಕ್ಕೆ ಸಮಾ ೫೭ ಗಳಿಗೆ ಮೇಲೆ ತ್ಯಾಜ್ಯ (ಭಾಸ್ಕರ. ೭೦-೪). [ಸಂ.]

**ಸಿದ್ಧಿವರು** (ಕ್ರಿ). ಸಿದ್ಧಿಸು ; ಈಡೇರು : ಆತನನ್ನು ನನ್ನ ಸಮ್ಮೋಹನಾಸ್ತ್ರಗಳಿಗೆ ಗುರಿಗೆಯ್ಯುದೂ . . . ಒಂದೆರಡು ನಿಮಿಷಗಳಲ್ಲಿ ಸಿದ್ಧಿವರುವ ಅಳಿಗಜ್ಜವಲ್ಲ ! (ಮಂತ್ರಶ. ೨೮-೪). [ಸಿದ್ಧಿ + ಬರ್ು₁ (< ವರ್)]

**ಸಿದ್ಧಿವಾರ** (ನಾ). ಸಿದ್ಧಿಸುವ ವಾರ ; ಸ್ಥಿರವಾರ ; ಶನಿವಾರ : ಸಿದ್ಧಿವಾರದ ದಿನ ನೆಲದಂಗ ತಂದು ಕತ್ತರಿಸಿ ನೆಳಲಲ್ಲಿ ಒಣಗಿಸಿ . . . ಮೂರುದಿನಗಳು ಸೇವಿಸೆ ಶ್ಲೇಷ್ಮಜ್ವರ ಗುಣವಾಗುವುದು (ಸಕವೈ. ೯೧). [ಸಂ.]

**ಸಿದ್ಧಿಸು** (ಕ್ರಿ). ೧. ಈಡೇರು ; ನೆರವೇರು : ಸಾಮಂ ಸಿದ್ಧಿಸಿದೊಡೆ ವಿಜಯವಹುದು (ಪಂಚತಂ. ೧೬೮-೧೭); ಸುದತಿ ಮನೋರಥಂ ಸಖಿಗೆ ಪೇಳದೆ ಸಿದ್ಧಿಸದು (ಜಗವಿ. ೧೧-೧೨); ಎಲೆ ಮಹೀಪತಿತನುಜ ಕೇಳ್ ತಪವೀ ತಪೋವನದೊಳಗೆ ಸಿದ್ಧಿಪುದು (ತೊರರಾ. ೧-೧೧-೫); ಅವನ ಉದ್ದೇಶ ಸಿದ್ಧಿಸಲಿಲ್ಲ (ಪ್ರವಾ॰. II, ೩). ೨. ಪ್ರಾಪ್ತವಾಗು ; ದೊರಕು : ನೂತನವಿದ್ಯೆ ಸಿದ್ಧಿಸಿತೆಂದು ಖಳ ಮಿನಕೇತುವ ಕೊಂಡಾಡಿದನು (ಮೋಹತ. ೧೨-೮೩); ಅಭ್ಯಾಸದಿಂದ ಕಾರ್ಯಕೌಶಲ್ಯ ಸಿದ್ಧಿಸುತ್ತದೆ (ಶಿಕ್ಷದ. ೨೪೪). ೩. ಫಲಕಾರಿಯಾಗು ; ಸಫಲವಾಗು : ತದೀಯ ಶರಾಳಿಗಳು ಸಿದ್ಧಿಸಲಿ (ಕುವ್ಯಾಅ. ೪-೨೧); ಧೀರೋದಾತ್ತ ಹರನೊಳು ಕಾಳಗ ಕಂದರ್ಪ ನಿಮಗೆ ಸಿದ್ಧಿಪುದೇ (ಮೋಹತ. ೬-೭). ೪. ಸಾಧಿಸು ; ಪಡೆ : ಮಾಳನುಂ ಮಾರಗನುಂ ನಾಗ x x x ಮುದ್ದನು ಒಡನೆ ಸಿದ್ಧಿಸಿದರ್ (ಎಕ. VII, ಶಿಕಾರಿ. ೨೪-೭; ಸು. 920 ?); ಅರಮನೆಯೊಳಗಣ ಬಸನಿಯೊಳಗೆ ದೇವರಿರುತಾತ್ಮಪದವ ಸಿದ್ಧಿಪುದು (ಭರತ. ೫೯-೩೦). [ಸಿದ್ಧಿ + - ಇಸು]

**ಸಿದ್ಧೌಷಧ** (ನಾ). ೧. ರೋಗಕ್ಕೆ ತಕ್ಕುದಾದ ಔಷಧ,— ಪ್ರಭಾವಶಾಲಿಯಾದ ಮದ್ದು : ಆ ವೈದ್ಯರದು ಸಿದ್ಧಹಸ್ತ, ಅವರು ಕೊಡುವ ಮದ್ದು ಸಿದ್ಧೌಷಧ (ರೂಢಿ). ೨. (ಅಲಂ) ಸಮರ್ಪಕವಾದ ಪರಿಹಾರ ; ಸರಿಯಾದ ಮಾರ್ಗ : ಈ ಅಪಮಾನವನ್ನು, ಈ ನಿಕೃಷ್ಟತೆಯನ್ನು ತೊಲಗಿಸಲು ಸೇಡುತೀರಿಸಿಕೊಳ್ಳುವುದೇ ಸಿದ್ಧೌಷಧ (ನಿಶಃ. ೬೭); ಸಮಸ್ತಸಮಸ್ಯೆಗಳಿಗೆ ತನ್ನ ಕಾರ್ಯಕ್ರಮ ಸಿದ್ಧೌಷಧವೆಂದು ಅವನು ನಂಬಿಕೊಂಡಿದ್ದನು (ಪುನರು. ೫೩೭). [ಸಂ.]

**ಸಿಧಿ** (ನಾ). ಚಿತೆ ; ಸಿಬಿಕೆ : ಗುರುಪುರೋಹಿತಬಂಧುವರ್ಗವ ಕರಿಸಿ ತದನಂತರದೊಳಪರಕ್ರಿಯೆವಿಧಾನದಲಿ ಪರಿಪರಿಯ ಸಮಿಧೆಗಳ ರಾಶಿಯ ಸುರಿದು ಸಿಧಿಯನು ಹೂಡಿ ದಶಕಂಧರನ ಹೋಮಾಗ್ನಿಯಲಿ ಸಂಸ್ಕಾರವನು ಮಾಡಿಸಿದ (ಆನಂರಾ. ೬-೨೨-೨೮). [< ಸಿದಿಗೆ]

**ಸಿಧ್ಮ** (ನಾ). ೧. ಬಿಳಿಯ ಚುಕ್ಕೆಗಳುಂಟಾಗುವ ಒಂದು ಬಗೆಯ ಚರ್ಮರೋಗ; ಚಿಬ್ಬು : "ಸಿಧ್ಮವೆಂದರೆ ಚಿಬ್ಬು" (ಮಂಗರಾ. ೧೧೩-೨). ೨. ಒಂದು ಬಗೆಯ ಕುಷ್ಠರೋಗ: ಇಲ್ಲಣ, ಅರಿಸಿನ, ಕೋಷ್ಠ, ರಾಗಿ, ಕೊಡಸಿಗೆಯ ಕಾಯಿ, ಇದಂ ಮಜ್ಜಿಗೆಯಲ್ಲಿ ಅರೆದು ಶಿಶುಗಳಿಗೆ ಪೂಸೆ, ಸಿಧ್ಮವೆಂಬ, ಪಾಮಾ ಎಂಬ, ವಿಚರ್ಚಿಯೆಂಬ ಮೂಱುತೆಱದ ಕುಷ್ಠ ಮಾಣ್ಗುಂ (ವೈವಿ. ೮೨). [ಸಂ.]

**ಸಿಧ್ಮಲ, ಸಿಧ್ಮಳ** (ಗು). ೧. ಚಿಬ್ಬುಗಳಿಂದ ಆವೃತವಾದ. **ಸಿಧ್ಮಳ:** (ನಾ). ೨. ಚಿಬ್ಬುಗಳುಳ್ಳವನು : "ಕಿಲಾಪಯುತಂ ಸಿಧ್ಮಳನಕ್ಕುಂ" (ವಸ್ತುಕೋ. ೬೩-೩೮). [ಸಂ.]

**ಸಿಧ್ಮಳ** 'ಸಿಧ್ಮಲ' ನೋ.

**ಸಿನಿಕ** (ನಾ). ಇತರರಲ್ಲಿ ತಪ್ಪನ್ನು ಹುಡುಕಿ, ತನ್ನ ಅಣಕ, ಕುಚೋದ್ಯಗಳಿಂದ ಹೀಯಾಳಿಸುವ ಸ್ವಭಾವದವನು : ಆ ಸಿನಿಕ ಯಾರ ಬಗ್ಗೆಯೂ ಒಂದೇ ಒಂದು ಒಳ್ಳೆಯ ಮಾತನ್ನು ಆಡಿದ್ದು ನಾನು ಕೇಳಿಲ್ಲ (ರೂಢಿ). [<— ಇಂ. cynic]

**ಸಿನಿಕತನ** (ನಾ). ಎಲ್ಲದರಲ್ಲೂ ತಪ್ಪು ಕಂಡುಹಿಡಿದು ಹೀಯಾಳಿಸುವ ಸ್ವಭಾವ: ದಿಗ್ಭ್ರಾಂತಿಯನ್ನು ಮರೆಯಲು ಕಲಿಸಿಕೊಟ್ಟಿತು ಅವನು ಬೆಳೆಸಿಕೊಂಡ ಸಿನಿಕತನ (ಏಳಜೀ. ೩೫). [ಸಿನಿಕ + -ತನ]

**ಸಿನಿಮಾ, ಸಿನೆಮಾ** (ನಾ). ಚಲನಚಿತ್ರ : ಈಗೇನು ಸಿನಿಮಾ, ಟಾಕಿ, ನಾಟು ಮುಂತಾದವುಗಳಿಗೇ ಹೆಚ್ಚು ಪ್ರೋತ್ಸಾಹನವೇ ವಿನಹ, ಹಳೇಕಾಲದ ನಾಟಕಗಳನ್ನು . . . ನೋಡುವವರು ಯಾರು? (ರಾಯಕ. ೬೫); ಸಿನಿಮಾದಲ್ಲಿ ಯಾವ ಆಸಕ್ತಿಯೂ ಉಳಿದಿರಲಿಲ್ಲ (ಮೋಹಬ. ೪೨೦). **ಸಿನೆಮಾ :** ಮೆಲ್ಲ ಮೆಲ್ಲನೆ ನಾಟಕ ಸಿನೆಮಾಗಳ ಅನುಕರಣೆಯ ಹಾವಳಿಯಾಗುತ್ತಿದೆ (ಯಕ್ಷಬ. ii, ಮುನ್ನುಡಿ). [<— ಇಂ. cinema]

**ಸಿನಿಮಾತಾರೆ** (ನಾ). ಚಲನಚಿತ್ರಗಳಲ್ಲಿ ಅಭಿನಯಿಸುವ ನಟ ಅಥವಾ ನಟಿ : ಸಿನಿಮಾತಾರೆಗಳೊಡನೆ ಹೋಲಿಸಿ ನೋಡಿದಾಗ ರಂಗನಟರಿಗೆ ತಮ್ಮ ಆದಾಯ ಕಡಿಮೆಯೆಂದೆನಿಸುತ್ತದೆ (ಸಾಹಿಜೀ. ೬೭). [ಸಿನಿಮಾ + ತಾರೆ₂]

**ಸಿನಿಮಾಮಂದಿರ** (ನಾ). ಚಲನಚಿತ್ರವನ್ನು ಪ್ರದರ್ಶಿಸುವ ಮಂದಿರ ; ಟಾಕೀಸು : ತುಂಬಿದ ಬೀದಿಗಳಲ್ಲಿ ಸಿನಿಮಾಮಂದಿರಗಳಲ್ಲಿ ಜೊತೆಗೂಡು ಸ್ವಚ್ಛಂದದಿಂದ ನಲಿಯುವುದಕ್ಕಿಂತಲೂ ಹೆಚ್ಚೇನು ಬೇಕು? (ಚಂದುಟ. ೨೫೦). [ಸಿನಿಮಾ + ಮಂದಿರ]

**ಸಿನಿಮಾಯ** (ನಾ). ಚಲನಚಿತ್ರದ ರೀತಿ : ಮಗ ವೆಂಕಟಕೃಷ್ಣನ ವಿದ್ಯಾಭ್ಯಾಸ, ಎಲ್ಲಾ ಸಿನಿಮಾಯವಾಗಿ ಅವರ ತೇಲುತ್ತಿದ್ದ ಮನಸ್ಸಿನಲ್ಲಿ ಮೂಡಿದುವು (ಮಾಮನೆ. ೩೯). 'ನಾಟಕೀಯ' ಪರಾ. [< ಸಿನಿಮಾ]

**ಸಿನಿರವ** (ನಾ). (ಹೆದರಿಕೆಯನ್ನುಂಟುಮಾಡುವ) ಒಂದು ಬಗೆಯ ಧ್ವನಿ : ಪೆಟಲ್ಗಳೊ ರಣರಕ್ಕಸಿಯರ ನಾಸಾಪುಟಗಳೊ ಪೊಗೆಯೊ ನಿಟ್ಟುಸಿರೊ ಪಟಲೆಂಬ ದನಿಯೋ ಸಿನಿರವವೋಯೆನೆ ಭಟರ್ಗಳ ಭಯಗೊಳಿಸಿತ್ತು (ಚಂಪ್ರಸಾಂ. ೮-೪೮).
[ಸಿನಿ, + ರವ]

**ಸಿನೀವಾಲಿ** (ನಾ). ಚಂದ್ರಕಲೆಯಿಂದ ಕೂಡಿದ ಅಮಾವಾಸ್ಯೆ : ''ಚಂದ್ರನಂ ಕಾಣಬಹಂತಹ ಅಮಾವಾಸ್ಯೆ ಸಿನೀವಾಲಿಯೆಂಬುದು'' (ಹಲಾಯು. ೧೯-೧೧೨).
[ಸಂ. ಸಿನೀವಾಲೀ]

**ಸಿನುಗು** (ನಾ). ದುರ್ವಾಸನೆ ; ಸಿಂಡು : ಕೋಳ್ಗಿಗದ ಸಿನುಗು ಕೌರಹ ಬಿಸಿಯುಸಿರ್ ಮೊಗಕೆ ತೀಡುತಿರೆ (ಚಿತ್ರಾಂಗ. ೧೫-೩೯೭); ಮಳೆಯಲ್ಲಿ ತೊಪ್ಪನೆ ತೊಯ್ದು ಮೆಯ್ಯಿಂದ ಆವಿ ಏಳುತ್ತಿರುವ ಕಂತ್ರಿನಾಯಿಯ ಸಿನುಗುವಾಸನೆ! (ಮಲೆಮ. ೬).

**ಸಿನೆ** (ಅ). ೧. ಸಂಪೂರ್ಣವಾಗಿ ; ಪೂರ್ತಿಯಾಗಿ : ದೇವಭಕ್ತರಿಲ್ಲದೂರು ಸಿನೆ ಹಾಳು (ಬಸವ. ೮೭); ಗುಹೇಶ್ವರನೆಂಬ ಶಬ್ದ ಸಿನೆ ಬಂಜೆಯಾಯಿತ್ತು (ಅವಚಂ. ೧೩೭-೬೫); ಅಱಿವು ಮಱವೆ ಸಿನೆಯಳಿದು ನಿಜದಱಿವು ಜನಿಸಿದಲ್ಲದೊಡಾತ್ಮಗನುವಹುದೆ ಪರಿಪೂರ್ಣದಿರವು (ಮನೋವಿ. ೬-೫೦). ೨. ಸ್ವಲ್ಪವೂ ; ಎಳ್ಳಷ್ಟೂ ; ಲವಲೇಶ ಮಾತ್ರವೂ : ಅವಕ್ಕೆಡೆಯಾಗಿರ್ಪ ಅಭಿಮಾನವೃತ್ತಿ ಸಿನೆಯಿಲ್ಲೇನೆಂಬೆನಾಶ್ಚರ್ಯಮಂ (ಶತಕ. ೧೧೦-೫೭); ಈ ಲಿಂಗಕೆನ್ನಂಗಕ್ಕೆ ಸಿನೆ ಭೇದವಿಲ್ಲೆಂದು (ಸಿದ್ಧೇಪು. ೫-೩೩).
[< ಸಂ. ಶೂನ್ಯ]

**ಸಿನೆಮಾ** 'ಸಿನಿಮಾ' ನೋ.

**ಸಿನ್ನೆ** 'ಸಿವನೆ' ನೋ.

**ಸಿಪಲೆ** 'ಸಿಪಿಲೆ' ನೋ.

**ಸಿಪಲೆವಕ್ಕಿ** 'ಸಿಪಿಲೆಹಕ್ಕಿ' ನೋ.

**ಸಿಪಲೆಹಕ್ಕಿ** 'ಸಿಪಿಲೆಹಕ್ಕಿ' ನೋ.

**ಸಿಪಾದಾರ** (ನಾ). ಸೈನ್ಯಾಧಿಕಾರಿ : ಸೈದ್‌ಹಮ್ಮದ ಸಿಪಾದಾರ ಶೇಕ್‌ಅನ್‌ಸರ ಸಿಪಾದಾರ (ರಾಜೇಂದ್ರ. ೪೨). [<— ಪಾರ. ಸಿಪಾಹ್‌ದಾರ್]

**ಸಿಪಾಯಿ, ಶಿಪಾಯಿ** (ನಾ). ೧. ಸೈನಿಕ ; ಯೋಧ : ನಮ್ಮ ಜನರೂ ಸಹ ಸಿಪಾಯಿಗಳಾಗಬಯಸುತ್ತಾರೆ (ರಂಗಕ. ೩೭); ಕಾಜಿಯು ಹೆಚ್ಚು ಸಿಪಾಯಿಗಳನ್ನು ತರುವಂತೆ ಫೌಜುದಾರನಿಗೆ ಹೇಳಿಕಳುಹಿಸಿದನು (ಬಂಕಿಮ. ೩೦೨). ೨. ಆಳು ; ಜವಾನ : ಕುಳಿತು ಬೇಸತ್ತ ಸುಮಳಿಗೆ ಸ್ಕೂಲಬೋರ್ಡಿನ ಸಿಪಾಯಿ ಕರೆದಾಗ ಆತ ದೇವರಂತೆ ಕಂಡಿರಬೇಕು (ಬಸ್ತುಹಿ. ೯). **ಶಿಪಾಯಿ :** ೧. ಸೋಲ್ಜರ್ ಶಿಪಾಯಿ ಪರಾರಿಯಾಗುವದಕ್ಕೆ ಕುಮ್ಮಕ್ಕು ಮಾಡೋಣ — ೨ ಸಂವತ್ಸರ ಮತ್ತು ಜುರ್ಮಾನೆ (ಗ್ರಾಮಾಕ. ೧೭೯); ಹೈದರನ ತಾತ ಶಿಪಾಯಿ (ಯಕ್ಷಪ್ರ. ೧೩೭). ೨. ಥಿಯೇಟರು ಬಾಗಿಲು ಕಾಯುವ ಶಿಪಾಯಿ (ಹೇಮಂತ. ೩೫೫); ಖಾಸಗೀ ಶಿಪಾಯಿಯ ಹಾಗೆ ಕಾಣುತ್ತಾನೆ (ರತ್ನಗೋ. ೧೬). ೩. ಪೋಲೀಸು ; ಪ್ಯಾದೆ : ಇನ್ಸ್‌ಪೆಕ್ಟರನು ಕೊತವಾಲನನ್ನು ಕಾಣದೆಯೇ ಶೀಘ್ರವಾಗಿ ಅಲ್ಲಿಂದ ತನ್ನ ಶಿಪಾಯಿಯೊಡನೆ ಮನೆ ಮುಟ್ಟಿದ (ಕೊತಕಾ. ೬೦).
[<— ಪಾರ. ಹಿಂ. ಸಿಪಾಹೀ; ಮರಾ. ಶಿಪಾಈ, ಶಿಪಾಯ, ಸಿಪಾಈ]

**ಸಿಪಾಯಿಗಿರಿ** (ನಾ). ೧. ಸಿಪಾಯಿಯ ಉದ್ಯೋಗ : (೬). ೨. ಸಾಹಸ ; ಶೌರ್ಯ : ತಮ್ಮ ಸಿಪಾಯಿಗಿರಿಯನ್ನು ನೋಡಿ ಬಹಳ ಸಂತೋಷವಾಯಿತು. ತಮ್ಮನ್ನು ಪರೀಕ್ಷಿಸಲು ಬಂದೆವು (ಚಿತ್ರಪಾ. ೮೭). [<— ಪಾರ. ಸಿಪಾಹ್‌ಗಿರೀ; ಹಿಂ. ಸಿಪಾಹಗಿರೀ; ಮರಾ. ಶಿಪಾಈಗಿರೀ, ಸಿಪಾಈಗಿರೀ]

**ಸಿಪಾಯಿತನ** (ನಾ). = ಸಿಪಾಯಿಗಿರಿ ೧ : ಶರೀರಶ್ರಮದಿಂದ ಕೆಲಸಮಾಡುವುದು ಅವರ ಸಿಪಾಯಿತನದ ಗೌರವಕ್ಕೆ ಕಡಿಮೆಯೆಂದು ತಿಳಿಯುವರು (ಬಾಲಪ್ರ. I, ೯೧೭).
[ಸಿಪಾಯಿ + - ತನ]

**ಸಿಪಾರಸು** 'ಶಿಫಾರಸ್ಸು' ನೋ.

**ಸಿಪಾಲೆ** (ನಾ). ಒಂದು ಬಗೆಯ ಸಸ್ಯ : ''ಪ್ರಾಣಜಃ — ಸಿಪಾಲೆಯ ಸೊಪ್ಪು'' (ಓಷಧಿ. ೯೬). [?]

**ಸಿಪಾಸಾಲಾರ** (ನಾ). ಸೈನ್ಯದ ಒಬ್ಬ ಅಧಿಕಾರಿ : ರಸ್ತುಸಾಮಾನು ಸರಂಜಾಮು ಮುಂತಾಗಿ . . . ಸಿಪಾಸಾಲಾರರ ತಾಬೆ ಮಾಡಿ (ರಾಜೇಂದ್ರ. ೪೨).
[<— ಪಾರ. ಸಿಪಾಹ್‌ಸಾಲಾರ್]

**ಸಿಪಿಗೆಂಡೆ** 'ಸೀಪಿಯಗೆಡ್ಡೆ' ನೋ.

**ಸಿಪಿಲೆ, ಚಿಪಿಲೆ, ಸಿಪಲೆ, ಸೀಪಲೆ** (ನಾ). ತನ್ನ ಉದ್ದವಾದ ತೋಕೆಯನ್ನು ಸದಾ ಅಲುಗಾಡಿಸುತ್ತಿರುವ ಒಂದು ಬಗೆಯ ಹಕ್ಕಿ . ದಿಕ್ಕಿಗೆ ಪೆಸರಾಂತ ಸಿಪಿಲೆಗೆ ಕವಳವನಿಕ್ಕಿ ಕಾದಿಸುತಿರ್ದ ಮದನ (ಮೋಹತ. ೫-೩೫); ಗರಿಪುಕ್ಕಮಂ ಕುಣಿಕುಣಿಸಿ ಸಿಳ್ಳನೂದಿತು ಸಿಪಿಲೆ (ಶ್ರೀರಾಮಾ. ೨೨೮-೨೧). **ಚಿಪಿಲೆ :** ಶುಕ ಗಿಡುಗ ಚಿಪಿಲೆ ಗುಬ್ಬಿಯು . . . ಕೂಗಲು ಬನದೊಳ್ (ಹಮುಚ. ೨೦೬). **ಸಿಪಲೆ :** ತಗರು ಸಿಪಲೆ ಕೋಳಿಕಾಳಗಗಳು ನೆಱೆ ಪಗಡೆಜೂಜುಗಳ ನೆವದಲಿ . . . ಸೊಗಸುಗಾಱರು ಚರಿಸುವರು (ಕಂನವಿ. ೬-೧೯೭). **ಸೀಪಲೆ :** ತಗರು ಸೀಪಲೆ ಕೋಳಿ ಕೋಣನ ಭರದಿಂದ ಕಾದಿಸುವುದನು (ಜ್ಞಾನಚ. ೩೮-೧೧೨). [ದೇ. ‖ ತಮಿ. ಮಲ. ಚೇವಲ್ = ಗಂಡುಹಕ್ಕಿ]

**ಸಿಪಿಲೆಗಚ್ಚಿಸು** (ಕ್ರಿ). ಸಿಪಿಲೆಹಕ್ಕಿಗಳು ಒಂದನ್ನೊಂದು ಕಚ್ಚುವಂತೆ ಮಾಡು ; ಸಿಪಿಲೆಹಕ್ಕಿಗಳ ಕಾಳಗವಾಡಿಸು : ತಗರ್ವೆಣಗಿಸುವ ಸಿಪಿಲೆಗಚ್ಚಿಸುವ ಕೋಳಿಗಾಳೆಗವ ಕಾದಿಸುವ . . . ಜೂಜುಗಳನೊಡ್ಡಿ (ಜೈಮಿಭಾ. ೬-೩೯); ಸಿಪಿಲೆಗಚ್ಚಿಸುವರು ಚರಣಾಯುಧಗಳ ಕುಪಿತಮುಖದೆ ಕಾದಿಸುವರು (ಕಂನವಿ. ೨-೭೭).
[ಸಿಪಿಲೆಗಚ್ಚು + - ಇಸು]

**ಸಿಪಿಲೆಗಚ್ಚು** (ನಾ). ಸಿಪಿಲೆಹಕ್ಕಿಗಳ ಕಾಳಗ, — ಕಾದಾಟ : ತಗರ ಪೊಯ್ಲಾಟ ಹಿಳ್ಳೆಗಳೋಟ ಸಿಪಿಲೆಗಚ್ಚುಗಳ ಸರಸಾಟ (ಲಕ್ಷ್ಮೀಭಾ. ೧-೨೮-೫). [ಸಿಪಿಲೆ + ಕಚ್ಚು]

**ಸಿಪಿಲೆಹಕ್ಕಿ, ಸಿಪಲೆವಕ್ಕಿ, ಸಿಪಲೆಹಕ್ಕಿ** (ನಾ). = ಸಿಪಿಲೆ : ಮನೆಯ ಸೂರಿನಲ್ಲಿ ನೇತಾಡುತ್ತಿದ್ದ ಗೂಡುಗಳಲ್ಲಿ . . . ಸಿಪಿಲೆಹಕ್ಕಿಗಳು ಸೆರೆಯಾಗಿ . . . ಅವನ ಪ್ರೀತಿಗೆ ಪಾತ್ರವಾಗಿದ್ದವು (ಮುಗಮಾಂ. ೨೫). **ಸಿಪಲೆವಕ್ಕಿ :** ಅವನೀಶ್ವರರ ನಂದನರು ತವಕದೆ ಸಿಪಲೆವಕ್ಕಿಗಳ ಕಾದಿಸುತಿಹ ಸುವಿಲಾಸವನೇವೇಳ್ವೆ (ಕಂನವಿ. ೭-೧೩). **ಸಿಪಲೆಹಕ್ಕಿ :** ಪಚ್ಚೆಹಕ್ಕಿಯು ಪಾರಿವಾಳವು ಹೆಚ್ಚಿನಾ ಗೌಜೀನ ಹಕ್ಕಿಯು ಕಚ್ಚಿ ಆಡುವ ಸಿಪಲೆಹಕ್ಕಿಯು ರಚ್ಚಿಸಿ ಮೆರೆದವರಣ್ಣದಿ (ಗೋಹಾಡು. ೩-೧೩). [ಸಿಪಿಲೆ + ಹಕ್ಕಿ (< ಪಕ್ಕಿ)]

**ಸಿಪಿವಿಷ್ಟ** (ನಾ). ಶಿವ ; ರುದ್ರ : ಸಿಪಿವಿಷ್ಟನಂಗಭವಿಭಸಿತವಾಗಿಯೇ ತಾನು ಗುಪಿತದಿಂದಿರೆ (ಮೈಲಾರ. ೧೮೯-೬). [< ಸಂ. ಶಿಪಿವಿಷ್ಟ]

**ಸಿಪ್ಪಡಂಬಡೆ** (ಕ್ರಿ). ವ್ಯಥೆಗೊಳ್ಳು ; ಖಿನ್ನತೆಯನ್ನು ಹೊಂದು (?) : ಮನದನ್ನಳಪ್ಪ ಕೆಳದಿಗುಸಿರ್ದಂದು ಸಿಪ್ಪಡಂಬಡೆದನನ್ನೆಗಂ ಬಿನ್ನನಿರ್ದ ವಯಸ್ಯೆಯಾಸ್ಯಮಂ ಅವನೊಡನಾಡಿ ಕಂಡು (ಚಂದ್ರಪು. ೮-೭೭ ವ). 'ಸಿಬ್ಬದಿ' ಪರಾ. [ಸಿಪ್ಪಡ, + ಪಡೆ]

**ಸಿಪ್ಪಡಸು** (ಕ್ರಿ). (ಕಪ್ಪನೆಯ) ಚಿಪ್ಪು ಕವಿ, — ಮುಸುಕು : ಒಡನೆ ದಿಗಂತದಂತಿಗಳ ಕೋಡ ಮೊದಲ್ಗಳೊಳೆಯ್ದೆ ಪೊಕ್ಕು ಸಿಪ್ಪಡಸಿದ ಮಾಟ್ಕೆಯಾದುವು . . . ಆ ಯಮುನೆಗಗ್ಗದ ಯಾಗದ ಧೂಮದೇಟ್ಗೆಯೊಳ್ (ಪಂಪಭಾ. ೬-೩೭); ಲೋಹದ ಸಿಪ್ಪಡಸಿದ ಸನ್ನಾಹಂ ಹಕ್ಕರೆ ಹಯಾಂಗಮಂ ಪೊಯ್ಯಲ್ಕೆ (ಮಹಾನೇ. ೧೧-೧೩೭).
[ಸಿಪ್ಪು + ಅಡಸು]

**ಸಿಪ್ಪರಿಗವಿದ್ಯೆ** (ನಾ). ದರ್ಜಿಯ ಕೆಲಸ : ಸಾಮುದ್ರಿಕೆಯ ಲಕ್ಷಣ, ಚಿತ್ತಾರಿವಿದ್ಯೆ, ಸಿಪ್ಪರಿಗವಿದ್ಯೆ, ಪುಸ್ತಕದ ಲೇಖಿನವಿದ್ಯೆ . . . ನಾನಾವಿದ್ಯೆಗಳನು . . . ಅರಿತು (ವಚಕಾ. ೮). [< ಸಿಪ್ಪಿಗ + ವಿದ್ಯೆ]

**ಸಿಪ್ಪಿಗ, ಚಿಂಪಿಗ, ಚಿಪ್ಪಿಗ, ಶಿಂಪಿಗ, ಸಿಂಪಿಗ** (ನಾ). ಬಟ್ಟೆ ಹೊಲೆಯುವವನು; ದರ್ಜಿ : ಕುಪ್ಪಸದಂತೆ ಬೆನ್ನಂ ಪತ್ತಿ ಕೆತ್ತುವರ್ ಸಿಪ್ಪಿಗನಂತೆ ಪೊಲಿವರ್ (ಧರ್ಮಾಮೃ. ೩-೭೩); ಯೆಂಣೆಯಂ ಕೊಟರು ಸಿಪ್ಪಿಗರುಂ (ಬೊಂಕಶಾ. ೧೯೩೪, ಹಿರೇಕೆರೂರ್. ೨೨-೪೫; ?). **ಚಿಂಪಿಗ :** ಒಬ್ಬ ಚಿಂಪಿಗನಲ್ಲಿ ಅವುದಾನೊಂದು ಉಡಿಗೆತೊಡಿಗೆಯ ಹೊಲಿಸಿಕೊಂಡು . . . ಒಪ್ಪಿದರೆ ಇಟ್ಟುಕೊಂಬರು (ವಚಶಾ. I, ೯೬); ಗಾಣಿಗರ್ ಚಿಂಪಿ[ಪಾಠಾಂ. ಚಿಪ್ಪಿ]ಗರ್ . . . ಜೂಜುಗಾಱರ್ ಮುಖ್ಯರೊದಗಿ ಬರುತಿರ್ದರು (ಚಿಬಪು. ೪೭-೪೧). **ಚಿಪ್ಪಿಗ :** ಆ ವಿಗಡ ಜನಿಸುವನು ಚಿಪ್ಪಿಗನಾಗಿ ಧರಣಿಯಲಿ (ಸಂಭಪ. ಪರಿ. ೩೪೪); ಶರತ್ಕಾಲವೆಂದೆಂಬ ಚಿಪ್ಪಿಗಂ ಬಿಳಿಯ ಹಳೆಯಂಬರಂ ಹಱಿಯದಂತು . . . ಹೊಲಿದ ಬೆಳ್ಗೊಡೆಯೊ . . . ಎನಲು ಬೆಳ್ಮುಗಿಲೆಸೆದವು (ಚೇರಮ. ೪-೩);

ಚಿಪ್ಪಿಗನೇಳಿಗೆಯನಾಗಿಸುವ . . . ವರವನು ಕಾಂಬೆ ನಾನು (ನಿಭಾಗ. ೧೦-೩೨-೩೭). **ಶಿಂಪಿಗ** : ಶಿಂಪಿಗರು : ಇವರಲ್ಲಿ ಕನ್ನಡಿಗರು, ಮಹಾರಾಷ್ಟ್ರಯೆಂಬೆರಡು ವರ್ಗಗಳಿವೆ (ಕಭಾಗ. ೧೫೨). **ಸಿಂಪಿಗ** : ಗಂದಿಗರ ಅಂಗಡಿಯ ಸಾಲ್ಗಳು ಮುಂದೆ . . . ಕುಪ್ಪಸಗಳನು ಮಾಡುವ ಸಿಂಪಿಗರ ಮಳಿಗಿ (ನಂದಿಲೀ. ೯-೯); ಎಳ್ಳು ಗಾಣಿಗ ಬಲ್ಲ ಸುಳ್ಳು ಸಿಂಪಿಗ ಬಲ್ಲ ಕಳ್ಳರನು ಬಲ್ಲ ತಳವಾರ (ಸರ್ವಜ್ಞ. ೧೪೨೦); ನನ್ನನ್ನು ಸಿಂಪಿಗನ ಕಡೆಗೆ ಒಯ್ದರು (ಕಪಪು. ೪-೫೭). [< ಸಂ. ಶಿಲ್ಪಿಕ./ ಪ್ರಾ. ಸಿಪ್ಪಿಅ./ ತಮಿ. ಚಿಪ್ಪಿ, ಚಿಪ್ಪಿಯನ್; ತುಳು. ಚಿಪ್ಪಿಗೆ; ತೆಲು. ಚಿಪ್ಪವಾಡು./ ಮರಾ. ಶಿಂಪೀ, ಸಿಂಪೀ]

**ಸಿಪ್ಪಿಗಗೊತ್ತಳಿ** (ನಾ). ದರ್ಜಿಗಳ ಸಂಘ : ಸಮಸ್ತಸಿಪ್ಪಿಗಗೊತ್ತಳಿಯೆಲ್ಲಂ ದೇವರ ಚೈತ್ರಪವಿತ್ರದ ಪರ್ವಕ್ಕೆ . . ಒಂದು ಪಣಮುಂ (ಎಕ. VII. ಶಿಕಾರಿ. ೧೧೩-೩೨; 1139); ಅಲ್ಲಿನ ನೇಕಾರಗೊತ್ತಳಿ, ಸಿಪ್ಪಿಗಗೊತ್ತಳಿಗಳೂ ಕೂಡ ಸ್ವಲ್ಪ ನೆರವಾಗಿವೆ (ಸವತಿ. ೨೦).
[ಸಿಪ್ಪಿಗ + ಕೊತ್ತಳಿ (< ಕೊತ್ತಲಿ)]

**ಸಿಪ್ಪಿಡು** (ಕ್ರಿ). ಚೀಪು; ಹೀರಿಕೊಳ್ಳು: ಸೊಪ್ಪುಸೊವಡಾಗದೆಸಟೆಸಲ್ಪಪ್ಪದ ಮೊಗಮಿಟಿದು ಕಾರ್ದು ಚಪ್ಪಲರ್ವಿನೆಗಂ ಸಿಪ್ಪಿಟ್ಟು ಕರೆದು ಕೊಂಡುವು ಸಪ್ಪದ ಮುಪ್ಪಳದಿನೊಟಿವ ನಱುವಂಡುಗಳಂ (ಲೀಲಾವ. ೯-೮೭). [< ಸೀಪು₁ + ಇಡು₁]

**ಸಿಪ್ಪು₁, ಚಿಂಪಿ, ಚಿಂಪೆ, ಚಿಪ್ಪು₁, ಸಿಂಪಿ₁, ಸಿಂಪು₁, ಸಿಂಪೆ, ಸಿರ್ಪು** (ನಾ). ೧. ಸಾಮಾನ್ಯವಾಗಿ ಸಮುದ್ರದಲ್ಲಿ ದೊರಕುವ, ಗಟ್ಟಿಕವಚವುಳ್ಳ (ಭರಣಿಯಾಕಾರದ) ಒಂದು ಪದಾರ್ಥ; ಶುಕ್ತಿ : ಜಲನಿಧಿಯ ಸಿಪ್ಪಿನೊಳಗಣಿ ನನುಪಮಮೌಕ್ತಿಕಮ ಪುಟ್ಟುವಂದದಿನೊಗೆದಂ (ಸೌಇಇ. IX-i, ೧೮೭-೧೫; 1111); ಕರಮೆಸೆವ ಮುತ್ತು ಸಿಪ್ಪಿನ ಪೊರೆಯೊಳ್ಪಜ್ಜಳಿಸೆ (ಪಾರ್ಶ್ವಪು. ೫-೮೭). ೨. ತೆಂಗಿನಕಾಯಿ ಮೊದಲಾದುವುಗಳ ಕರಟ : ಬಿದಿರಂಡೆ ಕೊಂಬು ಪೊಸಸಿಪ್ಪು [ಪಾಠಾಂ. ಹೊಯಿಸಿಪ್ಪು] ನಾಳಿಗಳಿಸೆಯೆ (ಬಾಣರ. ಹ. ೩-೨೪). ೩. ತಲೆಯ ಮೇಲುಭಾಗ ; ಓಡು ; ಬುರುಡೆ: "ಕಪಾಲಮೆಂಬುದು ತಲೆಯ ಸಿಪ್ಪು" (ಹಲಾಯು. ೧೦೪-೧೧); ಕಯ್ಯ ಸಿಪ್ಪು ಸೆಳೆಮೆಟ್ಟಿದ ಪಾವುಗೆ ತೊಟ್ಟ ಜೋಗವಟ್ಟಿಗೆ ತೆಗೆದುಟ್ಟ ಸೋಗೆ ಕರವೊಪ್ಪಿರೆ ಜೋಗಿಣ ಬರ್ಪಳೊಪ್ಪಿದಳ್ (ಲೀಲಾವ. ೪-೭೭). ೪. ಭರಣಿ ; ಸಂಪುಟ : ಕೊಂಚೆಯಂಚೆಯ ಕುಂತಳಿಕೆಯ ಮಾಣ್ಕೆಯ ಸಿಪ್ಪುಗಳೊಳ್ ತೀವಿ (ಪಂಪಭಾ. ೪-೮೭ ವ); ಪೊಡರ್ವ ಗಂಧದ ಸಿಪ್ಪು ಕರ್ಪುರದ ನಾಳಿಗಳ ಪಿಡಿದು (ಪದ್ಮರಾ. ೮-೭); ಕರ್ಪುರ ಕರಡಿಗೆ ಕೂಡಿದ ಗಂಧದ ಸಿ[ಪಾಠಾಂ. ಚಿ]ಪ್ಪು ಸಾದಿನ ಪನಿನೀರ ಕುಪ್ಪಿಗೆಯಾಂತು (ಕುರಾಸಾಂ. ೨೧-೪೯). ೫. ಚೂರು; ಚೆಕ್ಕೆ : ಅಂತಾ ದಂತಿಘಟೆಗಳಂ . . . ಭಾರ್ಗವರ್ ಸುರಗಿಱಿವಂತಿಱಿಯೆ ಸೂಸುವ ಕನ್ನೆತ್ತರ್ ಕಲ್ಲುದಿರ್ವ ಸಕ್ಕದ ಸಿಪ್ಪುಗಳುಂ ಸಿಡಿಲ್ದು ಜೀಟೆಳ್ದ ಕೋಟ್ಕಳುಮುಗುರ್ವಂ ಪಡೆಯೆ (ಪಂಪಭಾ. ೧೦-೯೩ ವ). ೬. ಒಂದು ಬಗೆಯ ವಾದ್ಯ : ಪಟವದ ತಿವಳಿಯ ಜುಂಕದ ಮೊಳಸಿನ ಜೇಕಿರದ ಸಿವಿರ ಸಿಪ್ಪಿನ ಲಯದಿಂದೆಟಲದೆ ಕುಣಿದರ್ ಕೆಲಬರ್ (ಅಜಿಪು. ೫-೩೨). **ಚಿಂಪಿ** : ೧. "ಜಲಶುಕ್ತಿ = ಸಣ್ಣ ಚಿಂಪಿ" (ಗಂಗಾಮು. ೧೩೮). **ಚಿಂಪೆ** : ೧. "ಮುಕ್ತಾಸ್ಫೋಟ – ಮುತ್ತು ಹುಟ್ಟುವ ಚಿಂಪೆ" (ಗಂಗಾಮು. ೨೫೮). **ಚಿಪ್ಪು₁** : ೧. ಚಿಪ್ಪಿನ ಮಂದಿರದಲ್ಲಿ ಮುತ್ತು ಬೆಳೆದ ಭೇದದಂತೆ (ಮೋಳಿಮಾ. ೯೫-೩೭೭); ಸ್ವಾತಿಯುದಕದೊಳಾದ ಮೌಕ್ತಿಕವ್ರಾತಕಯ್ಯನೆ ಚಿಪ್ಪು (ಕುವ್ಯಾಕ. ೮-೩); ಜಲಬಿಂದು ಚಿಪ್ಪಿಂದಲೊಡೆದು ಸಿಡಿವ ಮುತ್ತುಗಳೆನಲೊಪ್ಪಿದುದು (ಕಂನವಿ. ೫-೪೫). ೩. ಪೊಡೆದೊಡೆ ಲೌಡಿಯಿಂ ಠೌಳಿಯೊಡನೆ ತಲೆಯೊಡೆದು ಚಿಪ್ಪುಗಳೆಳ್ವವು (ಕುರಾಸಾಂ. ೧೩-೧೦೦). ೪. ಲೇಪನ ಚಿಪ್ಪುಗಳನು ಕರದಿ ಪಿಡಿದು ಪುಷ್ಪಗಂಧಿಯರು (ಅಂಜಚ. ೮-೪೮). ೫. ಉರವನೆಚ್ಚನು ಜರಿಯೆ ಜೋಡಿನ ಚಿಪ್ಪು ದೆಸೆದೆಸೆಗೆ (ಕುವ್ಯಾಕ. ೪-೭). ೭. ಹೊರಆವರಣ; ಮೇಲ್ಮೈ: ಬೆಂಗಡೆಯೊಳ್ ಮೂಡಿದ ಬಲ್ಲೆಯದಿಂ ಬಲುಚಿಪ್ಪಂ ಜೋಡಿಸಿದಾ ಸೀಸಕಮಂ ಹಱಿದು (ಜಯಕಾ. ೭-೩೭); ತಪ್ಪು ನೆಪ್ಪುಗಳ ಚಿಪ್ಪನೊಡೆದು ತೆಗೆದಪ್ಪಿದವನೆ ಬಲ್ಲ (ನಲಮು. ೩೮-೮). ೮. ಬಾಳೆಹಣ್ಣಿನ ಹಣಿಗೆ : ಹತ್ತುಬಾಳೆಯ ಹಣ್ಣಿರುವ ಒಂದು ಚಿಪ್ಪಿನಲ್ಲಿ ಚಿಪ್ಪಂಬ ಹನ್ನೊಂದನೆಯ ವಸ್ತುವಿಲ್ಲ (ಧ್ವನ್ಯಾಲೋ. ೩೯ ಅಡಿಟ). **ಸಿಂಪಿ₁** : ೧. ಸಿಂಪಿಯ ಮುತ್ತಾಯಿತು ಅವಳ ಕಣ್ಣೀರು (ಏಳಜೀ. ೪೫); ಮುತ್ತಿನ ಲಡಿಯ ಮೇಲೆ ಕಿಮ್ಮತ್ತು ಆಗತಕ್ಕದ್ದು. ಸಿಂಪಿಯ ಮುತ್ತು (ಮುಂಬವ್ಯಾ. ೧೩೯). ೯. ಮಕ್ಕಳಿಗೆ ಹಾಲು, ಔಷಧ ಮುಂತಾದುವನ್ನು ಕುಡಿಸುವ ಸಾಧನ; ಒಳಲೆ: ಕಾಫಿಗೆಂದು ಎಸರಿಟ್ಟ ಒಲೆಯು ಶಾಂತವಾಗಿದ್ದಿತು. ಮೇಲಿನ ನೀರು ಸಹ ಕುದ್ದು ಕುದ್ದು ಸಿಂಪಿಯಷ್ಟು ಉಳಿದಿದ್ದಿತು (ಜಯಂತ. ೧೩೫); ತಲೆದಿಸೆಯಲ್ಲಿ ಔಷಧ ಹಾಕುವ ಸಿಂಪಿಯೊಂದಿತ್ತು (ಅಶೋಕ. ೨೪೭). **ಸಿಂಪು₁** : ೧. ನಸುದೆಱೆಯುತ್ತಮಿರ್ದ ಪೊಸಮುತ್ತಿನ ಸಿಂಪಿನ ಸಂಪುಟಂಗಳಿಂ ನುಸುಳ್ದು ಸುಪಾಣಿಯಾಗಿ ಪೊಱಪೊಣ್ಮುವ ಮುತ್ತಿನ ಮಾಲೆಯಂದದಿಂ (ಕಾದಂಪೂ. ೩೩೧);ಮುನ್ನೂಱಱುವತ್ತು ನಕ್ಷತ್ರಕ್ಕೆ ಬಾಯಿಬಿಟ್ಟುಕೊಂಡಿಪ್ಪುದೆ ಸಿಂಪು ಅದು ಸ್ವಾತಿಗಲ್ಲದೆ ಬಾಯ್ದೆಱೆಯದು (ಬಸವ. ೮೯೯); ಮುತ್ತುಗಳು ಸಮುದ್ರದೊಳಗೆ ದೊಡ್ಡಸಿಂಪುಗಳಲ್ಲಿ ಹುಟ್ಟುತ್ತವೆ (ಮುಂಬಯಿ. ೫-೨). ೯. ಕಿಸಲಯದೆಸಳ ಮಾಣಿಕ್ಯದ ಸಿಂಪಿಂ ಫಳರಸದ ಪಾಲನೆಱೆದು . . . ಪುಂಡರೀಕದೆಸಳ ಬೆಳ್ಳಿಯ ಸಿಂಪಿಂ ಪರಿಮಳದ ರಸಮನೆಱೆದು (ಗಿಂಕ. ೨-೭೧ ವ). **ಸಿಂಪೆ**: ೯. "ಒಳಲೆ = ಕೂಸಿಗೆ ಹಾಲು ಹಾಕುವ ಸಿಂಪೆ" (ಗಂಗಾಮು. ೬). Δ **ಸಿರ್ಪು** : ೧. ಸಿರ್ಪಿನ ಬಣ್ಣದ ಮುಗಿಲುಂ ನೇರ್ಪಡೆ (ಜಟ್ಟಮು. ೮-೧೩). ೩. ಮಿದುಳ್ಗಳುಗೆ ತಲೆಯ ಸಿರ್ಪುಗಳುದಿರೆ (ಅರ್ಧನೇ. ೪-೧೧೫); ಬಿರುದ ನಾಯಕರ ಶಿರದ ಸಿರ್ಪ್ಪಂ ಬಿದಿರ್ಚುವ . . . ಶ್ರೀಮತು ಹಬ್ಬೆಯನಾಯಕಂ (ಕೊಲ್ಹಾಶಾ. ೧೫-೬೩; 1186). ೪. ಎಡದ ಕರದೊಳ್ಗಂಧಂ ಪೂಮಾಲೆ ಸಿರ್ಪಿನ ಸೇಸೆ ಪೊಂಬಡಲಗೆಯೊಳೊಂದಂದಂ ಚೆಲ್ವಾಗೆ . . . ಒರ್ವಂ ಬಂದಂ ಪ್ರಗಲ್ಭಪುರೋಹಿತಂ (ಅರ್ಧನೇ. ೨-೧೯). ೧೦. ಸಿಗುರು;ಸಿಬುರು : ವಲ್ಲಭಪ್ರಣಯದಿಂ ಬೀರಸಿರಿ ವಿಗುರ್ವಿಸಿದ ಸನ್ನಣದ ವಜ್ರದ ಸಿರ್ಪುಗಳೆವೆನಿಸಿ ಮೆಯ್ನುರ್ವಿರ್ಗಳಿಡುಕುಱೊಳು ತುಱುಗಿ ತೋಱುವ ಬೆಮರ ಬಿಂದುಗಳುಂ (ವರ್ಧಪು. ೭-೮೧ ವ).

**ಚಿಪ್ಪುಕೊಡು** = (ಆಲಂ) ಬರಿದು ಮಾಡು ; ನಿಶ್ಶೇಷಗೊಳಿಸು :ಇದ್ದುದನ್ನೆಲ್ಲಾ ಅಣ್ಣತಮ್ಮಂದಿರು ಪೋಲುಮಾಡಿ ಮಕ್ಕಳಿಗೆ ಚಿಪ್ಪುಕೊಟ್ಟರು (ರೂಢಿ). **ಚಿಪ್ಪುಚೀಱುಗಿಸು** = ಚೂರುಚೂರುಮಾಡು; ಸಂಪೂರ್ಣವಾಗಿ ಧ್ವಂಸಮಾಡು: ಅವನಟ್ಟೆ ತೋಳ್ಗಳಂ ಚಪ್ಪರಿಸಿಕೊಂಡೆದ್ದು . . . ಚಿಪ್ಪುಚೀಱುಗಿಸಿತು ಸಕಲಪರಿವಾರಮಂ (ಜೈಮಿಭಾ. ೧೩-೫೦). **ಚಿಪ್ಪುಚೀಱಾಗು** = ಚೂರುಚೂರಾಗು: ಬೆಟ್ಟ ಚಿಪ್ಪುಚೀಱಾಗಿ ಸೂಜಿಯ ಮೊನೆ ಮುಱಿದು (ಸಕವ. ಕ. II, ೨೨೭-೬೭). **ಚಿಪ್ಪುಚೂರು** = ಚೂರುಚೂರು: ಚಿಪ್ಪುಚೂರು ಮಾಳ್ಪೆನೆನುತಲಪ್ಪಳಿಸಿದನು (ರಾವಣೋ. ೯).

[ದೇ. ‖ ತಮಿ. ಮಲ. ಚಿಪ್ಪಿ, ಚಿಮ್ಮು; ತುಳು. ಚಿಪ್ಪಿ, ತಿಪ್ಪಿ, ಸಿಪ್ಪಿ; ತೆಲು. ಚಿಪ್ಪ./ ಸಂ. ಶುಕ್ತಿ./ ಪ್ರಾ. ಸಿಪ್ಪಿ ]

**ಸಿಪ್ಪೆ** (ನಾ). ೧. ಹಣ್ಣು, ಕಾಯಿ ಮೊದಲಾದುವುಗಳ ಮೇಲಿನ ಪದರ; ತೋಲು: ಫಲ ಒಳಗೆ ಪಕ್ವವಾಗಿಯಲ್ಲದೆ ಹೊಱಗಣ ಸಿಪ್ಪೆ ಒಪ್ಪಗೆಡದು (ಮಹಾದೇ. ಬ. ೭೩-೧೮೩); ರಸವಡೆದ ನಿಂಬೆಹಣ್ಣಿನ ಹುಳಿಯನದಱ ಸಿಪ್ಪೆಯ ಸುಟ್ಟು ಬೂದಿಯಾಗಲಿ ಸುಣ್ಣದುದಕವಾಗಲಿ ಕೂಡಿ ಚೆನ್ನಾಗಿ ಕಾಸಿದೊಡೆ (ಸೂಪಶಾ. ೨-೩೭); ಆಲೂಗಡ್ಡೆ ಸಿಪ್ಪೆ ತೆಗೆಯುವ . . . ಸಲಕರಣೆಗಳು (ಅಡುಸಾ. ೩೪); ಸಿಪ್ಪೆ ತಿಂದವ ಸಿಕ್ಕಿಕೊಂಡ, ಹಣ್ಣು ತಿಂದವ ನುಣುಚಿಕೊಂಡ (ಗಾದೆ). ೨. ಒಣಗಿದ ಗಾಯ ಅಥವಾ ಹುಣ್ಣಿನ ಮೇಲಿನ ಪದರ ; ಹೆಕ್ಕಳಿ : 'ಸಿಪ್ಪೆಗಟ್ಟು' ಪರಾ. ೩. ಅಡಿಕೆ, ತೆಂಗು ಮುಂತಾದ ಫಲಗಳ ನಾರುನಾರಾದ ಹೊರಪದರ : (೬). ೪. ಆವರಣ ; ಕವಚ: ಹೊರಚಲುವು ಸಿಪ್ಪೆ ಚಪ್ಪರಿಸಿ ಕೆಟ್ಟಿತು ಕಣ್ಣು (ನಡಬಂ. ೧೯-೩).

**ಸಿಪ್ಪೆಯ ಕಾಯಿ** = ಸುಲಿಯದೆ ಇರುವ (ತೆಂಗಿನ) ಕಾಯಿ: ಲಲಿತ . . . ಕೋಣೆಯಲ್ಲಿಟ್ಟ ಸಿಪ್ಪೆಯ ಕಾಯಿ ಎರಡು ತಂದು ಮಂದಾರಳಿಗೆ ಮೂರು ಸುತ್ತು ಸುಳಿದು 'ಕಲ್ಲುಕುಟಿಕ'ನಿಗೆ ಹೇಳಿಕೊಂಡಳು (ಬಾಳಿಮ್ಮ. ೨೧). **ಸಿಪ್ಪೆಹಿಪ್ಪೆಗಳಾಗು** = ಸಂಪೂರ್ಣವಾಗಿ ರಸವಿಲ್ಲದಾಗು : ಹಸ್ತ ಮುಟ್ಟಿದ ರೂಪು ಸಿಪ್ಪೆಹಿಪ್ಪೆಗಳಾಯಿತು (ದೀಕ್ಷಾಬೋ. ೯೯-೫).

**ಸಿಪ್ಪೆಗಟ್ಟು** (ಕ್ರಿ). ಹೆಕ್ಕಳೆಯುಂಟಾಗು : ಗಾಯ ಸಿಪ್ಪೆಗಟ್ಟಿ ಮಾಯುವ ಸ್ಥಿತಿಗೆ ಬಂದಿದೆ (ರೂಢಿ). [ಸಿಪ್ಪೆ + ಕಟ್ಟು₁]

**ಸಿಪ್ಪೆದೆಗ** (ಕ್ರಿ). ಕಾಯಿ, ಹಣ್ಣು ಮೊದಲಾದುವುಗಳ ಮೇಲಿನ ಪದರವನ್ನು ಸುಲಿ: ಬದನೆಕಾಯಿಗಣ್ಣೆಯಂ ತಡಹಿ ಕೆಂಡದಿ ಸುಟ್ಟು ಸಿಪ್ಪೆದೆಗೆದು . . . ತುಪ್ಪವಿಟ್ಟಾ ಕಾಯನ್ನು ಮಡಗಿ ಬೇಯಿಸಿ (ಸೂಪಶಾ. ೪-೨೫). [ಸಿಪ್ಪೆ + ತೆಗೆ₁]

**ಸಿಪ್ಪೆಸುಲಿ** (ಕ್ರಿ).೧. = ಸಿಪ್ಪೆದೆಗೆ : ಅವಳು ಸಿಪ್ಪೆಸುಲಿದ ಕಿತ್ತಳೆಹಣ್ಣೊಂದನ್ನು ನನಗೆ ಕೊಟ್ಟಳು (ರೂಢಿ). ೨. ಗಾಯ, ಹುಣ್ಣು ಮೊದಲಾದುವುಗಳ ಮೇಲೆ

ಹೆಕ್ಕಳೆಯುಂಟಾಗು: ರೋಗಿಯ ಮೈಮೇಲಿನ ಸಿಪ್ಪೆಸುಲಿಯುವವರೆಗೂ ರೋಗಿಯನ್ನು ಬೇರ್ಪಡಿಸಿಟ್ಟಿರಬೇಕು (ಕೆಲರೋ. ೬೪). [ಸಿಪ್ಪೆ + ಸುಲಿ$_{1}$]

**ಸಿಫಾರಸು** 'ಶಿಫಾರಸ್ಸು' ನೋ.

**ಸಿಬರು** 'ಸಿವುಟು$_{2}$' ನೋ.

**ಸಿಬಾರ** 'ಸೀಯದರ' ನೋ.

**ಸಿಬಿಕೆ** 'ಸಿಬಿಗೆ' ನೋ.

**ಸಿಬಿಗೆ , ಶಿವಿಗೆ , ಸಿಬಿಕೆ , ಸಿಬುಕ , ಸಿವಿಕೆ , ಸಿವಿಗೆ** (ನಾ). ೧. ಅಂದಣ; ಪಲ್ಲಕ್ಕಿ: ವೇಸರಿಗಟ್ಟೆಗಳುಂ ಪಿಡಿಗಳುಂ ಸಿಬಿಗೆಗಳುಮನೇಱಿ . . . ಬರೆ (ವಡ್ಡಾರಾ. ೮೦-೧೦); ಕರಿತುರಗರಥಗಳಂ ಸಿಬಿಗೆಯುಂ ತಾನೇಱಿ ಬರುತಿರಲು (ಜ್ಞಾನಚಿಂ. ೧-೬೦). **ಶಿವಿಗೆ** : ೧. ಶಿವಿಗೆಯ ಕೆಲದೊಳ್ ತಾನುಂ ತುರಂಗಾರೂಢನಾಗಿ ಬರ್ಪಂದಮಂ ಮಾಯೆಯಿಂ ಮಾಡಿ (ಚಾವುಂಪು. ೩೦೪); ಶಿವಿಗೆಯಂ ಶ್ರೀನಾಥ ನೊಲ್ದೇಱಿದಂ (ಅನಂಪು. ೯-೬೧); ಅರಸನನ್ನು ಒಂದು ಶಿವಿಗೆಯಲ್ಲಿ ಮಲಗಿಸಿ . . . ಕಳುಹಿಸಿ ಕೊಟ್ಟರು (ಚಿಕರಾ. ೪೨೮). **ಸಿಬಿಕೆ** : ೧. ಅವರ್ಣನೀಯವಾದ ಸುಂದರ ಸಿಬಿಕೆಗಳಲ್ಲಿ ಕುಳಿತು ಯಾವತ್ತೂ ರಾಣಿಯರು ಹೊರಟರು (ತುಳಸೀ. ೧೬೮). ೨. ಹೆಣವನ್ನು ಹೊರುವ ಸಾಧನ; ಚಟ್ಟ: ಅವಳು ಸತ್ತರೆ ಸಿಬಿಕೆಯ ಮುಂದಿನ ಕಂಬಿಗೆ ನನ್ನ ಹೆಗಲನ್ನು ಕೊಡುವೆ (ಜಯಂತ. ೩೬೫); ಆ ಸುಡುಗಾಡಿನಲ್ಲಿ ಹರಿದ ಹೂಮಾಲೆಗಳು ಸೂರೆಯಾಗಿದ್ದವು . . . ಕಳಲಿದ ಸಿಬಿಕೆಗಳು ಬಿದ್ದಿದ್ದವು (ಬಿದುರ. ೧೮೧). **ಸಿಬುಕ** : ೧. ಮೊಗಮೊಗೆದು ಹೊನ್ನ ರಾಸಿಯ ನಿವಾಳಿಸಿ ಮತ್ತೆ ಪಗಲಾಣ್ಮ ತೇಜಮಂ ಜಱಿಪ ಸಿಬುಕದೊಳಿಟ್ಟು ಕೊಂಡೊಯ್ದನರಮನೆಗವಂ (ಪ್ರಭುಪು. ೪-೫೨). **ಸಿವಿಕೆ** : ೧. ಕಬಲ — ಕವಳ , ಶಿಬಿಕೆ — ಸಿವಿಕೆ (ಶಬ್ದಾನು. ೧೪೪ ಪ್ರಯೋ). **ಸಿವಿಗೆ** : ೧ . ನಡೆತಂದರ್ ಸಂತಸದೆ ಪೊನ್ನ ಕಳಸದ ದಂತದ ಸಿವಿಗೆಗಳನೇಱಿ ಭೋಗಿಯರರೆಬರ್ (ಪಂಪಭಾ. ೯-೧೦೧); ಸುರಪತಿವಿರಚಿತಮಪ್ಪ ಸುದರ್ಶನಸಿವಿಗೆಯನೇಱಿ (ಪುಣ್ಯಾಸ್ರ.೧೦-೧೯ ವ); ಸಿಂಗರಂಬೆತ್ತ ಸಿವಿಗೆಯೊಂದು ನೆಲಕ್ಕಿೞಿತರ್ಪುದುಂ (ರಾಮಾಶ್ವ. ೮೦-೨೮). [< ಸಂ. ಶಿಬಿಕಾ, ಶಿವಿಕಾ]

**ಸಿಬಿರ** (ನಾ). ಸೈನ್ಯ ಮುಂತಾದುವು ತಾತ್ಕಾಲಿಕವಾಗಿ ಬೀಡುಬಿಡುವ ಸ್ಥಳ; ಪಾಳೆಯ; ಠಾಣ್ಯ: ಉಯ್ಗೆ ಸಿಸುಗಳ್ ಸಿಬಿರಕ್ಕೆ ಬಟಲ್ದ ಭೂಪನಂ (ಪಂಪಭಾ. ೧೨-೧೧೮); ಶಬರಾವಳಿಯ ಬಲುಸಿಬಿರವದಱೊಳು ತೀವಿದಿಭಕುಂಭಜ ಸುಮೌಕ್ತಿಕರಾಶಿ (ಸಾಳ್ವಭಾ. ೫-೫); ಬಾವಿಯ ಹತ್ತಿರವೇ ಒಂದು ದೊಡ್ಡ ಸಿಬಿರ (ಗಂಗಾಸಾ. ೧). [< ಸಂ. ಶಿಬಿರ]

**ಸಿಬಿರು** 'ಸಿವುಟು$_{2}$' ನೋ.

**ಸಿಬುಕ** 'ಸಿಬಿಗೆ' ನೋ.

**ಸಿಬುರು** 'ಸಿವುಟು$_{2}$' ನೋ.

**ಸಿಬುಟು** 'ಸಿವುಟು$_{2}$' ನೋ.

**ಸಿಬ್ಬ** 'ಚಿಬ್ಬು' ನೋ.

**ಸಿಬ್ಬಂದಿ , ಶಿಬಂದಿ , ಶಿಬ್ಬಂದಿ** (ನಾ). ಒಬ್ಬ ಮೇಲಧಿಕಾರಿಯ ಉಸ್ತುವಾರಿಯಲ್ಲಿ ಕಚೇರಿಯ ಕಾರ್ಯನಿರ್ವಹಿಸುವವರ ಗುಂಪು; ನೌಕರ ವರ್ಗ: ಇವರ ಕಾಲದಲ್ಲಿ . . . ಇಲಾಖೆಗಳ ಸಿಬ್ಬಂದಿಗಳು ಬಡಾಯಿಸಿದುವು (ಮಹಾಮಂ. II, ೧೧೧); ಉಪಾಧ್ಯಾಯರು ಮತ್ತು ಸಿಬ್ಬಂದಿಯ ವಾಸದ ಮನೆಗಳು (ಚೆಂಗೂಲಿ. ೪ ಮುನ್ನುಡಿ). **ಶಿಬಂದಿ** : ಶಿಬಂದೀಜನರಿಗೆ . . . ನಿರಂಕುಶಪ್ರಭುತ್ವವನ್ನು ನಡೆಯಿಸುತಾ (ಮಂಜುಕ. ೧೩); ಅಲ್ಲಿ ಬೇರೆ ಸರಕಾರ . . . ಸಾಹುಕಾರರು ಮತ್ತು ಅವರ ಶಿಬಂದಿಯವರನ್ನುಳಿದು ಇತ್ತೂ ಎಂದು ಹೇಳಲಾಗದು (ರಕ್ತರೂ. ೬೪). **ಶಿಬ್ಬಂದಿ**: ಆ ಇಲಾಖಾಶಿಬ್ಬಂದಿಯ ಒಬ್ಬ ಅಧಿಕಾರಿಯಿಂದ . . . ವಿಕ್ರಯಿಸಲ್ಪಡುವದು (ಗ್ರಾಮಾಕ. ೧೦೮); ಅಂಗರಕ್ಷಕರು ೮, ಶಿಬ್ಬಂದಿ ಜನ ೨೦೦ (ಗುರುದ. ೧೧).
[<— ಪಾರ. ಶಿಬಂದೀ; ಮರಾ. ಶಿಬಂದೀ, ಸಿಬಂದೀ]

**ಸಿಬ್ಬಂಬೊಯ್** 'ಚಿಬ್ಬಂಬೊಯ್' ನೋ.

**ಸಿಬ್ಬತಿ** 'ಸಿಬ್ಬದಿ' ನೋ.

**ಸಿಬ್ಬದಿ , ಸಿಬ್ಬತಿ , ಸಿಬ್ಬಿದಿ , ಸಿಬ್ಬುದಿ** (ನಾ). ೧. ನಾಚಿಕೆ; ಲಜ್ಜೆ; ಸಿಗ್ಗು: 'ಸಿಬ್ಬದಿಗೊಳು' ಪರಾ. **ಸಿಬ್ಬತಿ** : ೨. (ಅಗಲಿಕೆಯ) ದುಃಖ; ಸಂತಾಪ: ಕಾದಂಬರಿಯ ಅಗಲಿ ಬಂದ ಮನಸ್ಸಿನ ಸಿಬ್ಬತಿಯಿಂದ ಎಂದಿನ ರೀತಿಯಲ್ಲಿ ಮಾತನಾಡಿಕೊಂಡಿರದೆ (ವಚಕಾ. ೯೦). 'ಸಿಪ್ಪಡಂಬಡೆ' ಪರಾ. **ಸಿಬ್ಬಿದಿ** : ೧.'ಸಿಬ್ಬಿದಿಗೊಳ್' ಪರಾ. **ಸಿಬ್ಬುದಿ** : ೧. 'ಸಿಬ್ಬುದಿಗೊಳು' ಪರಾ. ೩. (?): ಗುಬ್ಬಿ ಗುಂಭವನೊಡೆದು ಒಬ್ಬುಳಿಕೆಯಾಯಿತ್ತು ತನ್ನ ಸಿಬ್ಬುದಿ [ಪಾಠಾಂ. ಸಿಬ್ಬುದ್ಧಿ, ಸುಬುದ್ಧಿ]ಯ ಬಿಟ್ಟು ಕಬ್ಬಕ್ಕಿಯ ಹಿಂಡನೊಲ್ಲದೆ ನಿಬದ್ಧಿಯಾಗಿ ಅಲ್ಲಿಯೆ ಹೋಯಿತ್ತು ಲಿಂಗವನಱಿತು (ಸಕವ. ಕ. I, ೩೫-೧೩); ಬ್ರಹ್ಮನ ಹರಿದಾಟ ವಿಷ್ಣುವಿನ ಕಾಲಾಟ ರುದ್ರನ ಬಾಯಾಟ ಈ ತ್ರಿವಿಧ ಸಿಬ್ಬುದಿ[ಪಾಠಾಂ. ದ್ಧಿ] ಹಱಿದು ಅಕ್ಕನ ಗುಕ್ಕಿನೊಳಗಾಗಬೇಡ (ಸಕವ. ಕ. I, ೩೫-೧೬). [?./ ತೆಲು. ಸಿಬ್ಬಿತಿ , ಸಿಬ್ಬೆತ]

**ಸಿಬ್ಬದಿಗೊಳು , ಸಿಬ್ಬಿದಿಗೊಳ್, ಸಿಬ್ಬುದಿಗೊಳು** (ಕ್ರಿ). ನಾಚಿಕೆಪಡು; ಲಜ್ಜೆಗೊಳಗಾಗು: ತಿಬ್ಬಳಿಯಡಂಗಿ ಬಿಳ್ಳಾ ವೀರಭಟವಿತತಿ ಸಿಬ್ಬದಿಗೊಳುತ್ತ ಸಿಡಿಮಿಡಿಗೊಂಬ ನೃಪಸಮಿತಿ (ಸಮ್ಯಕೌ. ೮-೬೩). **ಸಿಬ್ಬಿದಿಗೊಳ್** : ಒಬ್ಬರ ಮೊಗವನೊಬ್ಬರು ನೋಡಿ ತಮ್ಮೊಳು ಸಿಬ್ಬಿದಿಗೊಂಡು ಚಿಂತಿಪರು (ಭರಚ. ೪-೨೯); ಒಬ್ಬರೊಬ್ಬರ ಮೋಱ ನೋಡಿ ನಾಣ್ಬುವರತಿಸಿಬ್ಬದಿಗೊಂಡು ಜಾಱುವರು (ಭರಚ. ೫೫-೧೦೮). **ಸಿಬ್ಬುದಿಗೊಳು** : ಸೋತನ್ಯಗುಳರತ್ನವ ಸಿಬ್ಬುದಿ [ಪಾಠಾಂ. ಸಿಬುದ್ಧಿ, ಸುಬುದ್ಧಿ]ಗೊಳುತ್ತಿರಲು ಜೂಜುಗಾರರ್ನೆರೆದು . . . ಬೊಬ್ಬಿಡಲು (ಸಿಂಗಿರಾ. ೯-೨೧). [ಸಿಬ್ಬದಿ + ಕೊಳು (< ಕೊಳ್$_{1}$)]

**ಸಿಬ್ಬಲು** 'ಚಿಬ್ಬಲ್' ನೋ.

**ಸಿಬ್ಬಿದಿ** 'ಸಿಬ್ಬದಿ' ನೋ.

**ಸಿಬ್ಬಿದಿಗೊಳ್** 'ಸಿಬ್ಬದಿಗೊಳು' ನೋ.

**ಸಿಬ್ಬು** 'ಚಿಬ್ಬು' ನೋ.

**ಸಿಬ್ಬುದಿ** 'ಸಿಬ್ಬದಿ' ನೋ.

**ಸಿಬ್ಬುದಿಗೊಳು** 'ಸಿಬ್ಬದಿಗೊಳು' ನೋ.

**ಸಿಬ್ಬೆ** 'ಚಿಬ್ಬು' ನೋ.

**ಸಿಮ** (ನಾ). ತಣಿವು; ತಂಪು: ನಿನ್ನ ಕೈ ಮಹಾ ಸಿಮ, ನೀರಿನ ಪಸೆ ಒರೆಸಿಕೊಂಡಿಲ್ಲ (ಬಾಳಿಗಿ. ೯೧). [<— ತುಳು. ಶಿಮ, ಸಿಮ]

**ಸಿಮಟಿ** (ನಾ). ಒಂದು ಬಗೆಯ ಮರ: ಮರಗಳು: ಹೆಸವ . . . ಸುರಗಿ , ಉಡಿ, ಸಿಮಟ , ಸಣ್ಣಹೆಸರೆ (ನಮ್ಮನು. ೨೩೬). [<— ತಮಿ. ಚಿಮಟ್ಟಿ, ಚಿಮುಟ್ಟಿ]

**ಸಿಮಹಿಡಿ** (ಕ್ರಿ). ತಣ್ಣಗಾಗು; ಆರು: ಅಪ್ಪಯ್ಯ ಎದ್ದಿದ್ದಾರೆಯೆ ನೋಡಮ್ಮ. ಕಾಫಿ ಸಿಮಹಿಡಿದು ಹೋಗಿದೆ (ಅನುರ. ೩೬). [ಸಿಮ + ಹಿಡಿ$_{1}$ (< ಪಿಡಿ$_{1}$)]

**ಸಿಮಿಸಿಮಿ** (ನಾ). (ಮುಖ್ಯವಾಗಿ ಸುಡುವ ಶಬ್ದವನ್ನು ಸೂಚಿಸುವ) ಒಂದು ಅನುಕರಣಪದ: ಫೂತ್ಕರಿಸಿದವು ಫಣಿ ವದನದಲಿ ದಳ್ಳುರಿಯ ಸಿಮಿಸಿಮಿಗಳ ತುಷಾರದ ಕಿಡಿಯ ತುಂತುಱಿನ . . . ಗರಳಾಕ್ಷರದ ಜಿಗಿಯಲಿ ಮಾತು ತೋಱಿತು ಬೆಸಸು ಬೆಸಸು (ಕುಮಾರವ್ಯಾಸ. ೨೫-೧೧); ಶ್ರಾವಣಸಂಧ್ಯಾಸಮಯಸಮೀರನು ಅಮಂದಗಮನದಿ ಬರುತಿಹನು . . . ಮರ್ಮರ ಸಿಮಿಸಿಮಿ ಸದ್ದನು ಮಾಡಿ (ಪಾಂಚಜ. ೨೩-೫).

**ಸಿಮಿಸಿಮಿಗರೆ** (ಕ್ರಿ). (ಸುಡುವುದರಿಂದ) ಸಿಮಿಸಿಮಿ ಎಂದು ಸದ್ದು ಮಾಡು: ಖರನ ಕರಕೋಪಾನಲನ ದಳ್ಳುರಿಗೆ ಸೀದವು ತಾರೆ ಸಿಮಿಸಿಮಿಗರೆದುದಂಬರಸಿಂಧು ಸುರಪುರ ಹೊಗೆದುದಗಲದಲಿ (ತೊರರಾ. ೩-೫-೬). [ಸಿಮಿಸಿಮಿ + ಕರೆ$_{1}$]

**ಸಿಮಿಸಿಮಿತ** (ಗು). ಸಿಮಿಸಿಮಿ ಎಂದು ಸದ್ದುಮಾಡುವ: ವಿತತಪಟುನಟನ ವಿಘಟಿತಜಟಾಪಟಲಗಳಿತಗಂಗಾತರಂಗಸೀಕರನಿಕರಸಿಮಿಸಿಮಿತ ನಿಟಲತಟಪಟು ನಯನಶಿಖಿಶಿಖೋದ್ದಾಮಧೂಮರೇಖಾರಚಿತ (ರಾಜಶೇ. ೧೩-೫೪ ವ).
[ಸಿಮಿಸಿಮಿ + -ತ$_{2}$]

**ಸಿಮಿಸಿಮಿಸು** (ಕ್ರಿ). = ಸಿಮಿಸಿಮಿಗರೆ: ಉರಿಯೊಳು ಕದಳಿಗಳು ಸಿಮಿಸಿಮಿಸೆ (ನಳಚ. ೬-೭); ನೊರೆಗಟ್ಟಿ ಸಿಮಿಸಿಮಿಸಿ ನಿಂದಿರುವ ನೆತ್ತರನು ಕೊಡಲಿಯಲುಗಿಂದಿಕ್ಕಿ . . . ಮತ್ತಮಾರ್ದಿಕ್ಕುವನು (ಶಕಾರ. ೮೩). [ಸಿಮಿಸಿಮಿ + -ಇಸು$_{3}$]

**ಸಿಮೆಂಟು** (ನಾ). ನೆಲಕ್ಕೆ ಸಾರಣೆ ಮಾಡಲು, ಇಟ್ಟಿಗೆ ಅಥವಾ ಕಲ್ಲಿನ ಗೋಡೆಗಳನ್ನು ಕಟ್ಟಲು ಬಳಸುವ, ಸುಟ್ಟ ಸುಣ್ಣಕಲ್ಲು ಮತ್ತು ಜೇಡಿ ಮಣ್ಣನ್ನು ಬೆರಸಿ ತಯಾರಿಸಿದ ಕಲ್ಲುಗಾರೆ : ತಾರ್ಸಿ ಸೆಜ್ಜೆ ಸಿಮೆಂಟು ಇತ್ಯಾದಿಗಳನ್ನು ಕುರಿತ ಪಾಂಡಿತ್ಯ ನನಗಿಲ್ಲ (ಚಂಗೂಲಿ. ೨); ಅವರವು . . . ಇಟ್ಟಂಗಿ – ಸಿಮೆಂಟುಗಳಿಂದ ಕಟ್ಟಲ್ಪಟ್ಟಿರುತ್ತವೆ (ಕೃತಕೈ. ೧೩೭). [<— ಇಂ. Cement]

**ಸಿಮ್ಮನೂರ್** (ನಾ). ಒಂದು ಊರಿನ ಹೆಸರು: ಸಿಮ್ಮನೂರ ಕಿಳ್ಳಮ್ಮನ್ ಅಣ್ಣುಗಿಯ ರಟ್ಟಿಗನ್ (ಎಕ. VIII, ಸೊರಬ. ೧೦-೧೩; ಸು. 800). [? + ಊರ್]

**ಸಿಮ್ಮಿಸು** (ಕ್ರಿ). ನೆಗೆಯುವಂತೆ ಮಾಡು; ಚಿಮ್ಮಿಸು: ನೆಗೆವ ಧೂಳಿಯಿಂ ತಾಂ ನಿಮಿರ್ದು ಸಿಮ್ಮಿಸಲ್ ಕೆನ್ನನೊದಗಿದವು ತುರಗಂ (ಚೇರಮ. ೧೧-೪೨). 'ಚಿಮ್ಮಿಸು' ಪರಾ. [ಸಿಮ್ಮು + -ಇಸು]

**ಸಿಮ್ಮು** (ಕ್ರಿ) ಚಿಮ್ಮು; ಹಾರು: ಕಾದ ಸುವರ್ಣಶಲಾಕೆಗಂದು ಕೂರ್ತಂಗಜಕಾರುಕಂ ಬಿಡದೆ ಸಿಮ್ಮುವ ಶೀತಲವಾಃ ಕಣಾಳಿಯೋಲ್ (ಉದ್ಭಟ. ೭-೪೭); ಎಣ್ಣೆಸೆಯೊಳ್ಸಿಮ್ಮಿದಮೃತ ಕಣವಿಸರಮನಲ್ಲೆಬೆದುದಮರ್ದ ತಾರಾನಿಚಯಂ (ಉದ್ಭಟ. ೧೦-೩೦). 'ಚಿಮ್ಮು$_1$' ಪರಾ. [< ಚಿಮ್ಮು$_1$]

**ಸಿಯಕೊಲ್ಲ** (ನಾ). ಒಬ್ಬಾತನ ಹೆಸರು: ಶ್ರೀ ಗುಣ್ಣಜ್ಜಲಾ ಸಿಯಕೊಲ್ಲ ಅಸಿಉನ್ನತನ್ ಎನ್ಸೊನ್ ಕೆಳೆಇನಿತ್ತನ್ (ಎಕ. XVI, ತುಮಕೂ. ೯೫-೭; ಸು. 7ನೆಯ ಶತ).

[IP ಇದು 'ಸಿಯಕೆಲ್ಲ' ಎಂಬುದರ ಅಪಲಿಖಿತ]

**ಸಿಯಗೆಲ್ಲ** (ನಾ). ಒಬ್ಬಾತನ ಹೆಸರು: ಶ್ರೀಪುರುಷಮಾಹರಾಜರ್ಪೃಥುವೀ ರಾಜ್ಯಂಗೆಯೆ ಸಿಯಗೆಲ್ಲರ್ ಮಱುಗರೆನಾಡುಮೂನೂಱುಮಾಳೆ (ಎಕ. XVI, ತುಮಕೂ. ೮೭-೭; 750); ಸ್ವಸ್ತಿಶ್ರೀ ಸಿಯಗೆಲ್ಲರಶರ ಆಳು ರಣಕೇತುಗಳ ಮಗನ್ ದೆವೆಯನೆಮ್ಮೋನ್ . . . ಸತ್ತಾನ್ (ಎಕ. XII, ಮಧ್ಯಗಿ. ೩೮-೧; ಸು.950). [< ಶ್ರೀ + ಕೆಲ್ಲ$_1$]

**ಸಿಯಳಾಱ, ಶಿಯಳಾರ, ಶಿಳಱ, ಶಿಳಾಱ, ಸೆಳಱ** (ನಾ). ೧. (ಪ್ರಾಚೀನ ಕರ್ನಾಟಕದ) ಒಂದು ರಾಜಮನೆತನದ ಹೆಸರು: ಕನ್ನವಾಡ ಗಂಗವಾಡ ಬಳೆಯುವಾಡ ರೆರ್ನಾಡಾಳ ಸಿಯಳಾಱ ಸಾಮಿ ಸರ್ಬರಸ ಕೊಟೋರ್ (ಮೈಆರಿ. ೧೯೨೯, ೧೧೮-೨; 920). **ಶಿಯಳಾರ** : ೧. ಮಹೇಶ್ವ[ರ]ಂ ಶಿಯಳಾರವಂಸೋದ್ಭವಂ . . . ಸುವರ್ಣ್ನಗರುಡಧ್ವಜಂ ವಿಮಳಕೀರ್ತ್ತಿಧ್ವಜಂ (ಸೌಇಇ. XX, ೫೦-೧೦; 1077). **ಶಿಳಱ** : ೧. ಪ್ರಕಟಯಶಶಿಳಱದಿವಾಕರನುದಿಯಿಸಿದನಿಳೆಗೆ (ಸೌಇಇ. XX, ೭೧-೨೮; 1109). **ಶಿಳಾಱ** : ೧. ಶಿಳಾಱಕುಳಕಮಳಮಾರ್ತ್ತಣ್ಣಂ ಸಮರಪ್ರಚಣ್ಣಂ (ಸೌಇಇ. XX, ೧೭-೪೫; 1109). **ಸೆಳಱ** : ೧. ಭೀಮಬಲಂ ಸೆಳಱರ ಕುಲಕೀ ಮಹಿಯೊಳ್ ತಿಲಕದನ್ತೆ ಕಂಚಿಗನೆಂಬೋಂ (ಎಇ. IV, ೭೪-೩; 945); ಜೀಮೂತವಾಹನಾನ್ವಯಾಂಬರಶಶಚ್ಚಂದ್ರ . . . ಸೆಳಱಕುಳಕಮಳಮಾರ್ತ್ತಂಡ (ಕಇ. II, ೧೨-೩೩; 1114). ೨. ಒಬ್ಬಾತನ ಹೆಸರು: ಭೀಮಬಳಂ ಸೆಳಱನೆಂಬ ಹೆಸರೆಸೆವರಸಂ (ಕೊಲ್ಹಾಶಾ. ೯-೪೭; 1170). 'ಶಿಲಾಹಾರ' ಪರಾ. [?]

**ಸಿಯಾಳ** 'ಸೀಯಾಳ' ನೋ.

**ಸಿಯಿಮ್ಮ** (ನಾ). ಒಬ್ಬಾತನ ಹೆಸರು : ಸನ್ಧಿವಿಗ್ರಹಿ ಸಿಯಿಮ್ಮ (ಎಕ. VIII, ಸೊರಬ. ೪೭೭-೨೭; 991). [?]

**ಸಿಯ್ಯನೆ** 'ಸೀಯನೆ' ನೋ.

**ಸಿರ್** 'ಸಿಱ್' ನೋ.

**ಸಿರ$_1$** (ನಾ). ತಲೆ; ಶಿರಸ್ಸು: ಸಿಡಿಲೇತಕೆ ಕೆಡೆದುದಿಲ್ಲ ನಿನ್ನಯ ಸಿರದೊಳ್ (ಕಾದಂಬು. ೫೭೧); ಸಂಸಾರಸಾಗರ ಸಿರದುದ್ದವಾದ ಬಳಿಕ ಏನ ಹೇಳುವೆನಯ್ಯಾ (ಬಸವ. ೮೯); ನಿಷಧಪತಿ ಸಿ[ಪಾಠಾಂ. ಶಿ]ರವ ನಸುಬಾಗಿದನು (ನಳಚ. ೫-೭).

[< ಸಂ. ಶಿರಸ್]

**ಸಿರ$_2$** (ನಾ). ೧. ನರ; ನಾಡಿ: ಕಿವಿಗಳ್ ತೋರ್ಪೊಡೆ ನಿರ್ಮಾಂಸವಾಗಿ ಸಿರವ(ರೆಯ) ಸಮವಾಗಿ [ನೆರೆ]ನಿಲೆ . . . ದುಃಖಿತೆಯಕ್ಕುಂ (ಲೋಕೋಪ. ೧೧-೫೫); ಅವನ ಗಂಟಲ ಸಿರ ಬಿಗಿದು . . . ಕಣ್ಣೀರು ಸುರಿಸಿದನು (ಮುಂಬಯಿ. ೪-೭೫). ೨. (ಕೆಲವು ಹಣ್ಣುಗಳು ಹಾಗೂ ಎಲೆಗಳಲ್ಲಿರುವ) ನಾರು; ಎಳೆ: ಆಕೆಯ ಸುಣ್ಣ ತಂಬಾಕ ತಿಕ್ಕುವ ಕ್ರಮವನ್ನಾಗಲೀ, ಎಲೆಗಳ ಸಿರಗಳನ್ನು ಕಿತ್ತುವ ನಯವನ್ನಾಗಲೀ ನೋಡಲು ಹತ್ತಿಪ್ಪತ್ತು ಚಿಕ್ಕಚಿಕ್ಕಮಕ್ಕಳು ಸುತ್ತಲೂ ನೆರೆಯುತ್ತಿದ್ದರು (ಗಂಮಾಯಿ. ೧೩೩). [ಸಂ. ಸಿರಾ]

**ಸಿರ$_3$** 'ಶಿರಾ' ನೋ.

**ಸಿರ$_4$** (ನಾ). ಒಂದು ಸ್ಥಳದ ಹೆಸರು: ಸ್ವಸ್ತಿಶ್ರೀ ಸಿರದ ದೆವೆಟೆಯರ ಮಗ ದಾವಣಗವುದದ ಮಹಾಜನಕ್ಕೆ ಕೊಟ್ಟದು ಶಾಲೆ (ಎಕ. VII, ಶಿಕಾರಿ. ೪೫-೩೩; ಸು. 890?).

[?]

**ಸಿರ$_5$** (ನಾ). ಕುದುರೆಯ ದೇಹದ ಒಂದು ಭಾಗ: ಎರಡುಂ ಕಿವಿಯೆಡೆಗಳ್ಕುಂ ಸಿರಮೆಂಬಭಿಧಾನ (ಅಶ್ವಶಾ. ೯-೨೧). [?]

**ಸಿರಂಜಿ** (ನಾ). ಒಂದು ಬಗೆಯ ಗಿಡ ಮತ್ತು ಅದರ ಬೇರು: ಸಿರಂಜಿ ಎಂಬುದು ಆ ಗಿಡದ ಬೇರು ಮತ್ತು ಆ ಬೇರಿನ ಎಲ್ಲ ಅದ್ದಕಡ್ಡಿ ಸಹ ನೂಲನ್ನು ಕೆಂಪುಬಣ್ಣ ಮಾಡುವುದಕ್ಕೆ ಬರುತ್ತದೆ. ಅದರಿಂದ ಅದರ ಬೇರುಗಳಿಗೆ ಸಿರಂಜಿ ಎನ್ನುತ್ತಾರೆ (ಕೃಷಿಪ್ರ. ೯೧). [?]

**ಸಿರಂಟು** 'ಶಿರಂಟು' ನೋ.

**ಸಿರಂದೂಗು** (ಕ್ರಿ). ತಲೆಯು ತೂಗಾಡು, – ಅಲುಗಾಡು: ಎಡೆಗೊಂಡೀ ಮುಪ್ಪುದೋಱಲ್ ನೆರೆ ನೆಗೆದು ಸಿರಂದೂಗಿ ಬೆನ್ ಬಾಗಿ (ರತ್ನಾಶ. ೩೮).

[ಸಿರ$_1$ + ತೂಗು$_1$ (< ತೂಂಕು$_1$)]

**ಸಿರಂಬೊರೆ** (ಕ್ರಿ). ತಲೆಗೆ ಲೇಪಿಸು,– ಹಚ್ಚು: ನೆಲಕಲೆವ ಮೇಲುದು ಸಿರಂಬೊರೆದ ಕಮ್ಮೆಕ್ಕೆ (ಚಿಬಪು. ೧೯-೨೪). [ಸಿರ$_1$ + ಪೊರೆ$_2$]

**ಸಿರಕಲು** (ನಾ). ಸಣ್ಣ ಕೊರಕಲು: ಬುದ್ಬುದನಿಕರಗಳಿಂ ಕೊರಕಲದೆ ಸಿರಕಲದೆ ಪರಕಲಿಸಿ . . . ಚರಿಪ ಘಟಪಾನದಿಯ ನೋಡುತ್ತೆ (ದುರಪು. ೨೧-೩); ಒಂದು ಸಿರಕಲ ಕೂಡಿ ಅದರ ಗುಂಟ ಹರಿಯಿತು (ಮನಬೆ. ೧೩೭). [?]

**ಸಿರಗಡಿಸು** (ಕ್ರಿ). ತಲೆಯನ್ನು ಕತ್ತರಿಸುವಂತೆ ಮಾಡು; ಶಿರಚ್ಛೇದ ಮಾಡಿಸು: ಯೋಗಿಣಿ ಪರಮೇಷ್ಠಿ ಸಿರಗಡಿಸಿದಳು (ದೇವಾಂಪು. ೨-೨೫೦).

[ಸಿರ$_1$ + ಕಡಿಸು (< ಕಡಿಯಿಸು$_2$)]

**ಸಿರಗತ್ತಿ** (ನಾ). ಒಂದು ಬಗೆಯ ಸಸ್ಯ: ಸೋಮಲತೆ, ಮಂಜಿಷ್ಠ, ಸಿರಗತ್ತಿ (ಮೈಜಿಗಿ. ೭೭-೧೩೬೦). [?]

**ಸಿರಣವಟ್ಟೆ** (ನಾ). ಮಲ್ಲಯುದ್ಧದ ಒಂದು ಪಟ್ಟು: ಎಸೆವ ಮುಹಗ್ಗಳಂ . . . ಚಟ್ಟು ಸಿರಣವಟ್ಟೆ ಬಾಹುದಣೆ ಖಿಮ್ಮರಿ ಕತ್ತರಿ ಖೋಡವಂಕುಶಂ ಸಸಿಕುವೆನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್(?) (ಚಂದ್ರಪು. ೫-೭೮). 'ಸೀರಣ' ಪರಾ. [?]

**ಸಿರತಾಳಿ** (ನಾ). ಒಂದು ಬಗೆಯ ಉಡುಪು: ನಾನಾಬಗೆಯ ದುಗುಲವ ವಿರಚಿಸುತಿಹ ಸೇಲಿಗದ ಸಿರತಾಳಿ ಜೋಡು ಪೈಠಣಿಗಳ ಹೊಲಿಗೆಯ ಗರುವ ಚಿಪ್ಪಿಗಗೇರಿಯಿಹುವು (ಕಂನವಿ. ೭-೫೫). [?]

**ಸಿರನಿ** (ನಾ). ದೇವರು ಅಥವಾ ಗುರುವಿನ ಹೆಸರಿನಲ್ಲಿ ಹಂಚುವ ಸಿಹಿಪದಾರ್ಥ: ಮುದುಕಿಯ ಗಂಗಾಯಾತ್ರೆಯಾದರೆ ಸಿರನೀ ಹಂಚುವುದಕ್ಕೆ ಒಂದೂಕಾಲುರೂಪಾಯಿ ಮುಡುಪಿಟ್ಟಿದ್ದೇನೆ (ಅರಗಿ. ೯೧).

[<— ಪಾರ. ಶೀರೀನೀ; ಹಿಂ. ಸಿರನೀ; ಮರಾ. ಶಿರಾಣೀ, ಸಿರಾಣೀ]

**ಸಿರಪೇಚು** 'ಸಿರಪೇಷ್' ನೋ.

**ಸಿರಪೇಷ್, ಶಿರಪೇಚ, ಶಿರಪೇಚು, ಶಿರಪೇಷು, ಸಿರಪೇಚು** (ನಾ). ಕಿರೀಟ, ಪೇಟ, ಟೋಪಿ ಮುಂತಾದುವುಗಳ ತುದಿಗೆ ಅಲಂಕಾರಕ್ಕಾಗಿ ಅಳವಡಿಸಿದ ಮುತ್ತು ಮುಂತಾದುವುಗಳ ಕುಚ್ಚು; ತುರಾಯಿ : ನವರತ್ನಖಚಿತದ ಸಿರಪೇಷ್ ತುರಾಯಿಕಲ್ಲಿಯನು ಸರಸಿಜಮುಖಿಯೊರ್ವ ಪಿಡಿದು ನಿಂದಿರ್ದಳು (ಕಂನವಿ. ೨೪-೬೯). **ಶಿರಪೇಚ** : ಸಾವುಕಾರನ ತಿಜೋರಿಯಲ್ಲಿರುವ . . . ರತ್ನ ಕೆಚ್ಚಿದ ಶಿರಪೇಚ ಆಭರಣದ ಮೇಲೆ ನನ್ನ ಕಣ್ಣು ಕುಳಿತಿದೆ (ಕಳ್ಳಕಾ. ೪). **ಶಿರಪೇಚು** : "ಶಿರಪೇಚು-ತುರಾಯಿ" (ಜಾನಕೋ. ೪೭). **ಶಿರಪೇಷು** : ತುರಾದವರು ಹೂವಿನ ತುರಾಯನ್ನೂ ಕಲ್ಕಿಯವರು 'ಶಿರಪೇಷಿ' ನಂತಹ ಕುಚ್ಚನ್ನೂ ಉಪಯೋಗಿಸುವುದರಿಂದ ಇವರಿಗೆ ಈ ಹೆಸರುಗಳು ಬಂದಿವೆ (ಕರ್ನಾಸಂ. ೨೪); ಆ ಕಾಲದಲ್ಲಿ ಆತನು . . . ದಿವ್ಯವಾದ

ವಜ್ರದ ಶಿರಪೇಷನ್ನು ಧರಿಸಿ ಮಂಡಿಸಿದ್ದನು (ಭಾರವೀ. ೧೫೭). **ಸಿರಪೇಚು** : ಬೆರಳಿಗುಂಗುರವಿಡಿಸಿ ಕೊರಳ ಪದಕವ ಹಾಕಿ ಸಿರಪೇಚು ತಲೆಗೆ ವಜ್ಜರದು (ನಾಡಪ. ೯). [<— ಪಾರ. ಸರಪೇಚ್, ಸರಪೇಶ್; ಹಿಂ. ಸಿರಪೇಚ್, ಸಿರಪೇಶ್; ಮರಾ. ಸರಪೇಚ್]

**ಸಿರಪೊಟ್ಲ** 'ಶಿರಪೊಟ್ಟಲಿ' ನೋ.

**ಸಿರಮಾಲೆ** (ನಾ). ತಲೆಯ ಮೇಲೆ ಏಳುವ ಹುಣ್ಣು: ಈ ತೈಲದಿಂ ಕಜ್ಜಿ, ಇಸುಬಿನ ಹುಣ್ಣು, ಊತಿ, ಪಳೇಹುಣ್ಣು, ಸಿರಮಾಲೆ, ಗಂಡಮಾಲೆ, ದನವಿನ ವ್ರಣ – ಇವೆಲ್ಲಾ ಮಾಣ್ಗುಂ (ವಿವೈವಿ. ೬೯). [ಸಿರ$_1$ + ಮಾಲೆ$_1$]

**ಸಿರಸ್ತೇದಾರ** 'ಶಿರಸ್ತೆದಾರ' ನೋ.

**ಸಿರಾ** 'ಶಿರಾ' ನೋ.

**ಸಿರಾಜಿ** 'ಶಿರಾದಿ' ನೋ.

**ಸಿರಿ** (ನಾ). ೧. ಸಂಪತ್ತು; ವೈಭವ: ಅಂಬರಚರರಾಜನ ಸಿರಿಯ ಪೆಂಪನಾಂ ನೆಱೆಯೆ ಪೊಗೞ್ವೆನೆಂಬವನೆ ಗಾಂಪಂ (ಶಾಂತಿಪು. ೩-೭); ಅನಿಮಿಷಚಾಪದಂತೆ ಸಿರಿ ಶಾರದನೀರದ ಕಾಂತಿಯಂತೆ ಯೌವನದೆಸಕಂ (ಪಂಚತಂ. ೫೯-೧೪); ಹರಿಯ ಕಾರುಣ್ಯಾಂಬುಧಿಯೆ ಸಿ[ಪಾಠಾಂ. ಶಿ]ರಿ (ನಳಚ. ೧-೧೭); ಹುಲ್ಲಿನ ಉರಿ, ಕನಸಿನ ಸಿರಿ ನಿಲ್ಲದು (ಗಾದೆ). ೨. ಐಶ್ವರ್ಯದ ಅಧಿದೇವತೆ; ಲಕ್ಷ್ಮಿ: ಅದಂ ಪಟಿಕೆಯ್ದು ತೊಟ್ಟನುಡಿದಂತುಡಿದ ಮಹಾಪುರುಷರಱಿಯದುಡಿದರೆ ಸಿರಿಯಂ (ಕವಿರಾ. ೩-೧೭೫); ತಾವರೆಯೆಸಟ್ಗಳ ನಡುವಿರ್ಪ ಸಿರಿಯುಮಾಕೆಯ ಕೆಲದೊಳ್ ನಸುಮಸುಳ್ದು ತೋರ್ಪಳ್ (ಪಂಪಭಾ. ೧-೪೦); ಪಾಲ್ಗಡಲೊಳಗೊಗೆದ ಸಿರಿಯೊಡನುದಯಿಸಿದ ಅಮೃತಕಳಾಭರ ನೆನಿಪ್ಪ ಚಂದ್ರನ ಕಿರಣಾಮೃತಮನೀಂಟ (ಪಂಚತಂ. ೨೫-೧೦); ತನಿಜವ್ವನದ ಕಡುಚಲುಶಬರಿಯರು ಕಾಳರಾತ್ರಿಯ ಸಿರಿಗಳೆನಿಸಿದರು (ಸಾಳ್ವಭಾ. ೧೭-೭); ಸಿರಿ ಯೊಲಿದರೆ ಐಶ್ವರ್ಯ, ಹರಿಯೊಲಿದರೆ ವೈಕುಂಠ (ಗಾದೆ). ೩. ಚೆಲುವು; ಶೋಭೆ; ಸೊಬಗು: ಕಡುರಯ್ಯಂ ಬನದ ತೊಱೆಯ ಸಿರಿ ಧರಣಿಪತೀ (ಆದಿಪು. ೧೧-೬೭); ಮರುಳ್ದುಂಬಿಯೊಂದಲರ್ದ ಪೊಂದಾವರೆಯ ಸಿರಿಗೆತ್ತು ಮೊಗಕೆಱಗೆ (ಪದ್ಮರಾ. ೮-೪೭); ಸುತವಿನೋದದ ಸಿರಿಗೆ ದಿವಿಜರ ಪತಿಯು ಸಿರಿ ತೊತ್ತೆಂದು . . . ಉಬ್ಬಿದನು ಕಲಿಪಾಂಡು ವಿಪಿನದಲಿ (ಸಂಭವ. ೧೭-೩). ೪. ಏಳಿಗೆ; ಅಭ್ಯುದಯ: ಆಕೆಯ ನಡುವಿನ ಬಡತನಮುಂ ಪಗೆವರ ಸಿರಿಯುಮೊಡನೊಡನೆ ಕೆಟ್ಟುವು (ಪಂಪಭಾ. ೧-೧೪೧ ವ); ಪೂರ್ಣಚಂದ್ರನ ಸಿರಿಯಂತೆ . . . ರುದ್ರಭಟ್ಟನ ಕವಿತಾರಸಂ ಮನಮನಿರ್ಕುಳಿ ಗೊಳ್ವುದು ಸಜ್ಜನರ್ಕಳಾ (ಜಗವಿ. ೧-೧೭); ಸಂದಣಿಗಳಲಿ ಸೈಗಱೆದರಂಬಿನ ಸಿರಿಯನುರವಣಿಸಿ (ಉದ್ಯೋ. ೧೫-೯೦). ೫. ಆಧಿಕ್ಯ; ಹೆಚ್ಚಳ: ನೋಡುತಂ ಬೆಱಗಾಗುತಲ್ಲಿ ಬಸವಣ್ಣನಿರೆ ಕೂಡೆ ಲೆಕ್ಕದ ಸಂಭ್ರಮಂ ಸಿರಿಯನುಗುಳುತಿರೆ (ಬಸರ. ೫-೬೮). ೬. ಹಿರಿಮೆ; ಶ್ರೇಷ್ಠತೆ: ಇಂದುಮುಖಿ, ಹೆಸರಿನ ಹುಸಿಗೆ ನಿನ್ನದೆಯ ಸಿರಿಯ ಮಾರದಿರು (ಚಿತ್ರಾಂಗ. ೩೭-೯೯೧).

**ಸಿರಿಯ ಕರುಮಾಡ** = ಲಕ್ಷ್ಮಿಯ ನಿವಾಸ; ಕಮಲ: ''ಕೆಸರ್ವುಲ್ಲಿಗೆ, ಸಿರಿಯ ಕರುಮಾಡಂ, ತಾಮರೆ, ನೀರ್ವೂ – ಈ ೪ ಕಮಲಕ್ಕೆ ಪೆಸರ್'' (ಕಶಸಾ. ೫೪-೧೭೫). **ಸಿರಿಯುಳ್ಳಂ** = ಐಶ್ವರ್ಯವಂತ; ಧನಿಕ: ಉರಗನ ವಿಷಮೇಱಿದರುಂ ಸಿರಿಯುಳ್ಳರು . . . ಮೆಯ್ಯಱಿಯರ್ (ಧರ್ಮಾಮೃ. ४-೧೯೮); ಸಿರಿಯೊಡೆಯಂ ಸಿರಿಯುಳ್ಳಂ (ಕಾವ್ಯಾವ. ೩೩೭). [< ಸಂ. ಶ್ರೀ]

**ಸಿರಿಂಗೆಱೆ** (ನಾ). ಒಂದು ಊರಿನ ಹೆಸರು; IP ಚಿತ್ರದುರ್ಗಜಿಲ್ಲೆಯ ಈಗಿನ ಸಿರಿಗೆರೆ: ಹೆದರಿಗಟ್ಟವುಂ ಕಾರಿಂಗೆಱೆಯಂ ಸಿರಿಂಗೆಱೆಯುಂ ಇಟ್ಟಿಗೆಯುಮನ್ತು ನಾಲ್ಕುಂ ಬಾಡವುಮಂ (ಎಕ. XI, ಚಿತ್ರದು. ೭೭-೨೨; 937). [ಸಿರಿ + ಕೆಱೆ]

**ಸಿರಿಕಂಟ** (ನಾ). ಈಶ್ವರ; ಶಿವ: ಕೋಟಿಮೂವತ್ತೆರಳ್ಗಣನಾಯಕರ ಸಹಂ ಸಿರಿ [ಪಾಠಾಂ. ತಿ]ಕಂಟನೋಲಗಿಪರು (ಸಂದಿಮಾ. ೫-೨೩). [< ಸಂ. ಶ್ರೀಕಂಠ]

**ಸಿರಿಕಂಡ, ಸಿರಿಖಂಡ** (ನಾ). ೧. ಒಂದು ಬಗೆಯ ಮರ; ಚಂದನವೃಕ್ಷ: ನಾಗಾಚಲದೊಳ್ ಸಿರಿಕಂಡಂ ಪುಟ್ಟುವಂತ (ಅಜಿಪು. ೬-೨೮ ವ). ೨. ಶ್ರೀಗಂಧದ ಕೊರಡನ್ನು ತೇದು ತೆಗೆದ ಲೇಪನ ವಸ್ತು: ''ಮಲಯಜಮಿರದದು ಬಾವನ್ನಮೆಂದು ಸಿರಿಕಂಡಮೆನಲ್'' (ಕವಿಕಂ. ೫೫); ಅಗರುವ ಮೆಚ್ಚುವಚ್ಚ ಸಿರಿಕಂಡದೊಳಗ್ಗಲಿಸಿತ್ತು (ಪಂಪಭಾ. ೫-೩೦); ಕತ್ತುರಿಗಂಪು ಸಿರಿಕಂಡದ ತಿಳಿಗಂಪು (ಚೆಬಪು. ೩೭-೪೭). **ಸಿರಿಖಂಡ** : ೧. ಮರನನಱಿವಂತು ಬಲ್ಲರೆ ಸಿರಿಖಂಡವಂ (ಧರ್ಮಾಮೃ. ೧-೨೦೩); ದುರುಳ ಕಾಷ್ಠಕ . . . ಶಬವ ಶೃಂಗರಿಸಿ ಸಿರಿಖಂಡದ ಕೊಱಡುಗಳಿಂದ ದಹಿಸಿದ (ಜೀವಂಸಾಂ. ೫-೭೭). ೨. ಸುಯ್ಯೆಲರೊಳು ಸಿರಿಖಂಡಕೆ ಪರಿಮಳ ಮುಯ್ಯಾನುತಿಪ್ಪುಡಿ ಮಾಡಿ ರಯ್ಯಮೆನಿಪ ಶಶಿಕಾಂತಸಣ್ಣಗೆ ಯಾಳಗೊಯ್ಯನರೆವರು ನಾರಿಯರು (ವರ್ಧಚ. ೧-೧೯). [< ಸಂ. ಶ್ರೀಖಂಡ]

**ಸಿರಿಕಂಡವೆಟ್ಟು** (ನಾ). ಶ್ರೀಗಂಧದ ಮರಗಳು ಬೆಳೆಯುವ ಪರ್ವತ; ಮಲಯ ಪರ್ವತ: ಬೇವು ಬೊಬ್ಬುಲಿಗಳಂ ತನ್ನಂತೆ ಮಾಡ್ಪ ಸಿರಿಕಂಡವೆಟ್ಟನೊಳ್ ಪುಟ್ಟಿಯುಂ (ಕಬ್ಬಿಸಾ. ೫೪). [ಸಿರಿಕಂಡ + ಬೆಟ್ಟು$_2$ (< ಬೆಟ್ಟ$_1$)]

**ಸಿರಿಕನ್ನೆ** (ನಾ). ಒಂದು ಬಗೆಯ ಸಸ್ಯ: ''ಸಿರಿಕನ್ನೆ ಮಧುಮೂಲಿಯೆನೆ ಹಣ್ಣೆ'' (ಮಂಗರಾ. ೪೫-೪೮). [ಸಿರಿ$_1$ + ಕನ್ನೆ$_1$]

**ಸಿರಿಕಾಳಗಿಡ** (ನಾ). ಕಟುವಾಸನೆಯುಳ್ಳ ಒಂದು ಬಗೆಯ ಸಸ್ಯ; ಅಜಗಂಧಿ: (ಕಿ). [ಸಿರಿಕಾಳ$_6$ + ಗಿಡ (< ಗಿಡು)]

**ಸಿರಿಖಂಡ** 'ಸಿರಿಕಂಡ' ನೋ.

**ಸಿರಿಗಂದ** (ನಾ). ಲಕ್ಷ್ಮಿಯ ಮಗ; ಮನ್ಮಥ : ವಾರಣಾಸಿಯೆಂಬ ಪುರದೊಳ್ನಾಥ ಕುಲಾಂಬರಚಂದ್ರಂ ಸಿರಿಗಂದಂಗೆಣೆಯೆನಿಪನಕಂಪಂ ಸುರಪರಿವೃಢನಮರಾವತಿಯೊಳು ಸುಖಮಿರ್ಪಂದದಿನಿರ್ಪಂ (ಜಯಕಾ. ೩-೧೭). [ಸಿರಿ + ಕಂದ$_1$]

**ಸಿರಿಗಂಧ** (ನಾ). ೧. = ಸಿರಿಕಂಡ ೧ : ''ಚಂದನಂ, ಮಳಯಜಂ, ಶ್ರೀಖಂಡ(ಃ)ಂ, ರೋಹಿಣೀದ್ರುಮ: – ಈ ೪ ಸಿರಿಗಂಧಂ'' (ಹಲಾಯು. ೮೯-೩೯೦). ೨. = ಸಿರಿಕಂಡ ೨: ಕತ್ತುರಿ ಸಿರಿಗಂಧಗಳಣ್ಪು ರಾಮ ಕೃಷ್ಣರೊಳೆಸೆಗುಂ (ಜಗವಿ. ೬-೨೨); ಮೆಯ್ಯೊಳ್ ಪೂಸಿದ ಸಿರಿಗಂಧದ . . . ಮುಡಿದ ಕದಂಬಪ್ರಸೂನದ ಬೆರಕೆಗಂಪಿಗುರವಣಿಸಿ . . . ಎಱಗುವ ಮಧುಕರನಿಕರಂ (ಗಿರಿಕ. ೨-೧೦೫ ವ); ಪೂಸಿದ ಸಿರಿಗಂಧ ಕರಿಕಾದುದು (ಮೋಹತ. ೨೮-೧೭). [< ಸಂ. ಶ್ರೀಗಂಧ]

**ಸಿರಿಗಂಪು** (ನಾ). (ಶ್ರೀಗಂಧ ಮೊದಲಾದ) ಉತ್ಕೃಷ್ಟವಾದ ಸುವಾಸನಾ ದ್ರವ್ಯ: ತಾಪಕ್ಕಿಕ್ಕಿದ ಸಿರಿಗಂಪು ಪಣೆಯೊಳೆಸೆದುದು (ಚಂದ್ರಪು. ೮-೮೭); ಕೃಷ್ಣ ಕೈದೊಳೆದು ಮಿಟಾದ ಸಿರಿಗಂಪ ಕೈಕೊಂಡು ಕರ್ಪೂರಕೂಟವೀಟಿಕೆಯನು ಸವಿದು (ಮೋಹತ. ೧೪-೧೭). [ಸಿರಿ + ಕಂಪು]

**ಸಿರಿಗಜ್ಜ** (ನಾ). ಶ್ರೇಷ್ಠವಾದ ಕೆಲಸ; ಮಹಾಕಾರ್ಯ: ಮದವನೊಡಗೂಡಿ ಮಧುನೃಪಂ ವಿಧಿವಿಲಾಸಕೆ ತನ್ನ ಕೈಂಕರ್ಯಮಂ ಸಲ್ಲಿಸುವ ಸಿರಿಗಜ್ಜದೊಳ್ ತೊಡಗಿ (ಶ್ರೀರಾಮಾ. ೪೩-೪೦೭). [ಸಿರಿ + ಕಜ್ಜ$_1$]

**ಸಿರಿಗಣೆ** (ನಾ). ಒಂದು ಬಗೆಯ ಉತ್ತಮವಾದ ರೇಷ್ಮೆಬಟ್ಟೆ: ಪೊಂಬಟ್ಟೆ ಸಿರಿಗಣೆ[ಪಾಠಾಂ. ಣ] ಗುಜ್ಜರಾಷ್ಟ್ರದ ಪಟ್ಟೆ ವಾರಾಣಸಿಯ ದಸರಿಯ ಹೊತ್ತಿ ಸಿರಿವಣ್ಣ (ಬಸಪು. ೧೧-೨೭). [ಸಿರಿ + ಕಣೆ$_7$]

**ಸಿರಿಗತ್ತಿ** (ನಾ). ಒಂದು ಬಗೆಯ ಕತ್ತಿ: ಸಿರಿಗತ್ತಿ ದೊಣೆಗತ್ತಿ ಕೊಂಗತ್ತಿ ಧರಿಸಿ (ಸೌಂದಕಾ. ೩-೧೧೧). [ಸಿರಿ$_1$ + ಕತ್ತಿ]

**ಸಿರಿಗನ್ನಡ** (ನಾ). ಸಂಪದ್ಯುಕ್ತವಾದ ಕನ್ನಡಭಾಷೆ: ಮಂಗಳಮಯ ತಾನೆತ್ತಲು ನಾಡು ಸಿಂಗರದಾ ಸಿರಿಗನ್ನಡನಾಡು (ಹೂಂಗಳು. ೧೧-೧೩); ದೊರೆಕೊಳುಗೆ ಚಿರಶಾಂತಿ ; ಸಿರಿಗನ್ನಡಂ ಗೆಲ್ಗೆ ! (ಶ್ರೀರಾಮಾ. ೬-೧೫೫). [ಸಿರಿ + ಕನ್ನಡ$_1$]

**ಸಿರಿಗನ್ನಡಿ** (ನಾ). ಉತ್ತಮವಾದ ಕನ್ನಡಿ: ಸಿರಿಗನ್ನಡಿ ಕನ್ನಡಿಪುದಾದುದಿಂದು ಶ್ರೀಯಂ (ಆದಿಪು. ೭-೧೦); ಬೀರಸಿರಿಯ ಸಿರಿಗನ್ನಡಿಯ ಪಿಡಿಗೆ ಪಡಿಯಾದ ಪಿಡಿಯನಡುವಿನೊಳೇಂ (ವರ್ಧಪು. ೧೦-೫ ವ). [ಸಿರಿ + ಕನ್ನಡಿ$_1$]

**ಸಿರಿಗಾಳು** (ನಾ). ಒಂದು ಊರಿನ ಹೆಸರು: ತಸ್ಯ ಕ್ಷೇತ್ರಸ್ಯ ಸೀಮಾ ಪೂರ್ವೋತ್ತರ ದಿಗ್ಭಾಗೇ ಸಿರಿಗಾಳುಗ್ರಾಮಸೀಮ್ನಿ (ಎಕ. XI, ದಾವಣ. ೭೭-೩೧; 694). [ಸಿರಿ + ಕಾಳು$_7$]

**ಸಿರಿಗುವರ** (ನಾ). = ಸಿರಿಗಂದ: ''ಕಾಮಂ ಸಿರಿಗುವರಂ ರತಿಮನೋಹರಂ ಮಾಧುಮಿತ್ರಂ'' (ವಸ್ತುಕೋ. ೫-೨೮). [ಸಿರಿ + ಕುವರ$_2$]

**ಸಿರಿಗೂಡು** (ಕ್ರಿ). ಲಕ್ಷ್ಮೀಸಮೇತವಾಗಿರು; ಲಕ್ಷ್ಮಿಯೊಡನೆ ಇರು: ಸಿರಿಗೂಡಿ ನರಹರಿ ಶೇಷತಲ್ಪದೊಳಾಗ ಹರುಷದೆ ರಾಜಿಸುವಂತೆ (ಕಂನವಿ. ೮-೯೪).
[ಸಿರಿ + ಕೂಡು$_1$]

**ಸಿರಿಗೆಡು** (ಕ್ರಿ). ಐಶ್ವರ್ಯವು ಕಳೆದುಹೋಗು; ಬಡತನ ಬರು: ನಾವು ಸಿರಿಗೆಟ್ಟು ಬಡವರಿದ್ದಪೆವೆಮ್ಮ ಇರವಂ ಸುಡು (ಬಸಪು. ೨೯-೨೮). [ಸಿರಿ + ಕೆಡು$_1$]

**ಸಿರಿಗೇಡಿ** (ನಾ). ಸಂಪತ್ತನ್ನು ಕಳೆದುಕೊಂಡವನು; ಐಶ್ವರ್ಯವನ್ನು ನೀಗಿಕೊಂಡವನು: ಈ ಸಿರಿಗೇಡಿ ಚಾರುದತ್ತನು ನಾನು ಹೇಳಿದರೆ ಅನ್ನುವುದಿಲ್ಲ (ಮುಂಬಯಿ. ೬-೨೦೮); ಸಿರಿಗೇಡಿ ನೀನೆಲ್ಲಿ ಕೂತಿದ್ದೇಳ (ಲೋಕಗೀ. ೬೯). [ಸಿರಿ + ಕೇಡಿ$_1$]

**ಸಿರಿಗೇಡುಗ** (ನಾ). ಐಶ್ವರ್ಯವನ್ನು ಹಾಳುಮಾಡುವವನು; ಸಂಪತ್ತನ್ನು ನಾಶಗೊಳಿಸುವವನು: ನೋಡಿದ್ಯೆ ಬೊಮ್ಮ ನೀಂ ದನುಜರ್ಗೆ ಮುಂಬರ್ಪ ಕೇಡನಱಿಯದೆ ಪರವನಿತ್ತೆಯವರಿವರ ಸಿರಿಗೇಡುಗರಲಾ (ಚಬಪು. ೪೧-೩೬).
[ಸಿರಿ + ಕೇಡುಗ]

**ಸಿರಿಗೋದು** (ನಾ). ಒಂದು ಊರಿನ ಹೆಸರು: ಪೂರ್ವೋತ್ತರ ದಿಭಾ(ಗ್ಗಾ)ಗೇ ಸಿರಿಗೋದುಗ್ರಾಮ ಸೀಮ್ನಿ (ಇಆ. VI, ೯೩-೩೧; 695). [?]

**ಸಿರಿತನ** (ನಾ). ಐಶ್ವರ್ಯ; ಶ್ರೀಮಂತಿಕೆ: "ಈಶ - ಐಶ್ವರ್ಯೇ, ಸಿರಿತನದೊಳ್" (ಕಾಶಕ್ಯ. ೧೭೦); ನನಗೆ . . . ಸಿರಿತನ ಬೇಕೆಂದು ದೇವರಲ್ಲಿ ಬೇಡಿಕೊಂಡವನಲ್ಲ (ಪದ್ಮಸ. ೨೨೩). [ಸಿರಿ + - ತನ]

**ಸಿರಿತಾಳೆ** (ನಾ). ಒಂದು ಬಗೆಯ ತಾಳೆಯ ಮರ; ಶ್ರೀತಾಳೆ: ಕಮ್ಮರದಾರ ಕೇರ ನೇಳಲ ಸಿರಿತಾಳೆಯಿಂಗುಳದ ನೆಲ್ಲಿಯ ನೀವದ ಸೋಲೆಯಾಲದಿಂ . . . ಕಟ್ಟಲಿಸುತಿರ್ದುದು ಕಾನನವೆತ್ತ ನೋಟ್ಪೊಡಂ (ಲೀಲಾವ. ೬-೨೧). [< ಸಂ. ಶ್ರೀತಾಲ]

**ಸಿರಿತುಪ್ಪೆ** (ನಾ). ಧಾನ್ಯವನ್ನು ಶೇಖರಿಸಿಡುವ ದೊಡ್ಡ ಗಳಗೆ, — ತೊಂಬೆ: ನೂರುಮಡಿ ಭತ್ತ ಆ ಬಾಕಿಮಾರಿನಿಂದ ಪ್ರತಿವರುಷ ಭಟ್ಟರ ಮನೆಯ 'ತುಪ್ಪೆ'ಯಲ್ಲಿ ಬಿದ್ದೇ ತೀರುತ್ತದೆಂದರೆ ಅಚ್ಚರಿಪಡಬೇಕಾಗಿಲ್ಲ. ಭಟ್ಟರ ಮನೆಯಲ್ಲಿ 'ಸಿರಿತುಪ್ಪೆ'ಯನ್ನೇ ಹಾಕಬೇಕು. ಅಷ್ಟೊಂದು ಭತ್ತ ಹಿಡಿಸಬೇಕಲ್ಲ? ಒಂದಲ್ಲ, ಜೋಡು 'ಸಿರಿತುಪ್ಪೆ' ಹಾಕುತ್ತಿದ್ದರು (ದಂಬಸಾ. ೧೨). [ಸಿರಿ + ತುಪ್ಪೆ (< ತೊಂಬೆ$_2$)]

**ಸಿರಿತುಳಸಿ** (ನಾ). ಶ್ರೇಷ್ಠವಾದ ತುಳಸಿ; ಶ್ರೀತುಳಸಿ: ಮುಟ್ಟಬೇಡ . . . ಸಿರಿತುಳಸಿವನಮಾಲೆಯಿಂದೊಪ್ಪುವವರ (ಕನಕ. ೮೫-೨). [< ಸಂ. ಶ್ರೀತುಲಸೀ]

**ಸಿರಿದರ** 'ಸೀಯದರ' ನೋ.

**ಸಿರಿದಾರ** 'ಸೀಯದರ' ನೋ.

**ಸಿರಿದಿನ** (ನಾ). ಅಭ್ಯುದಯದ ಕಾಲ; ಉತ್ಕರ್ಷದ ಕಾಲ: ಎಲೆ ಜೀವ, ಬಾಳಿದೆವು ಬಹುಕಾಲ ಇಲ್ಲಿ, ಹೊಳೆವ ಸಿರಿದಿನಗಳಲಿ, ದುರ್ದಿನಗಳಲ್ಲಿ (ಇಂಗೀತ. ೯೬-೬).
[ಸಿರಿ + ದಿನ]

**ಸಿರಿದೇವಪ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಆತ್ರೆಯರ ಕೇಸಣ್ಣನ ಮಗನ್ ಸಿರಿದೇವಪ ಕೊಟ್ಟುದು (ಎಕ. VII, ಶಿಕಾರಿ. ೪೫-೭೦ ; ಸು. 890?).
[ಸಿರಿ + ದೇವ + ಅಪ (< ಅಪ್ಪ$_1$)]

**ಸಿರಿದೇವಿ** (ನಾ). ಐಶ್ವರ್ಯದ ಅಧಿದೇವತೆ; ಲಕ್ಷ್ಮಿ: ಹರಿದರುಶನಕಾಗಿ ನಾರದರು ಬರಲು ಸಿರಿದೇವಿ ಹೊಱಗಿನ ಬಾಗಿಲಲ್ಲಿದ್ದಳು (ಪುರಂದ. ೩-೫೦ ಪಲ್ಲವಿ); ಸಿರಿದೇವಿ ಪಾದಪದ್ಮವನೊತ್ತ ಭೋಗೀಶ್ವರಭೋಗತಲ್ಪದೊಳೆಸೆವ ಹರಿಯ ಕಂಡು (ಕಂನವಿ. ೫-೩೨). [< ಸಂ. ಶ್ರೀದೇವೀ]

**ಸಿರಿಧರ** (ನಾ). ಲಕ್ಷ್ಮಿಯನ್ನು ಹೊಂದಿರುವವನು; ವಿಷ್ಣು: ಸಿರಿ [ಪಾಠಾಂ. ಶ್ರೀ]ಧರನು ಸೋಮೇಶ್ವರನನರ್ಚಿಸ ಬರುತ (ಬಸಪು. ೪೩-೪೧); ಸಿರಿಧರ ಪಶ್ಚಿಮರಂಗನೀ ಪುರದಲ್ಲಿ ಸ್ಥಿರವಾಗಿ ನೆಲಸಿದ ಬಗೆಯ ಹರುಷದೊಳೊರೆವೆನು (ಕಂನವಿ. ೫-೧೧). [< ಸಂ. ಶ್ರೀಧರ]

**ಸಿರಿನುಡಿ** (ನಾ). ಶ್ರೇಷ್ಠವಾದ ಮಾತು : ಕನ್ನಡತಾಯಿಯ ಸಿರಿನುಡಿಭೇರಿಯ ಬಾರಿಸು ಮೊಳಗಿಸು ಗೆಳೆಯ (ಇಂಚಾಪ. ೨೪೪-೧೦೮); ಅವನ . . . ಕೆಲವು ಸಿರಿನುಡಿಗಳಾದರೂ ಹತ್ತನೆಯ ಶತಮಾನದ ಸಾಲಿಗೆ ಬಂದಿದ್ದಿರಬಹುದು (ಸಾಹಿಸ. ೩೬). [ಸಿರಿ + ನುಡಿ$_2$]

**ಸಿರಿಪಚ್ಚೆ** 'ಸಿರಿವಚ್ಚೆ' ನೋ.

**ಸಿರಿಪಟ್ಟ** (ನಾ). ಒಂದು ಊರಿನ ಹೆಸರು: ಸಿರಿಪಟ್ಟನಾಮಗ್ರಾಮೇ ಪಶ್ಚಿಮ ಸ್ಯಾಂದಿಶಿ (ಇಆ. VII, ೨೧೪-೩೪; 10ನೆಯ ಶತ). [ಸಿರಿ + ಪಟ್ಟ$_1$]

**ಸಿರಿಪದ** (ನಾ). ಮಂಗಳಕರವಾದ ಚರಣ; ಪೂಜ್ಯಪಾದ: ಪ್ರವಹಿಸಲಿ ಮುಗಿದ ಕೈಮ್ಮನಳಿಗೆಯಿಂದೆಲ್ಲ ನಮನಂಗಳೆನ್ನವಾ ಸಿರಿಪದದ ತಡಿಗೆ (ಮಲದೇ. ೨೧-೨).
[< ಸಂ. ಶ್ರೀಪದ]

**ಸಿರಿಬೀಡು** 'ಸಿರಿವೀಡು' ನೋ.

**ಸಿರಿಮಂಚ** (ನಾ). ಶ್ರೇಷ್ಠವಾದ ಮಂಚ: ಇರ್ವರರಸಿಯರುಂ . . . ಅರಸನ ಸಿರಿಮಂಚದೊಳ್ ಗಾಢಾಲಿಂಗನಂಗೆಯ್ದು ಮಱೆದೊಱಗಿರ್ದರ್ (ಪಂಚತಂ. ೧೯೫-೩); ಬಂದರರಸಂ ಸಿರಿಮಂಚಮನಳಂಕರಿಸಿ ಕುಳ್ಳಿರ್ಪುದುಂ (ಅರ್ಥನೇ. ೧-೧೧೧ ವ); ಇನಿಯಂ ಪೋದನಿತು ಬೇಗಮಂ ಸೈರಿಸಲಾಱದೆ ಪರಿತಂದು ಸೆಜ್ಜೆವನೆಯ ಸಿರಿಮಂಚದೊಳ್ ಕುಳ್ಳಿರ್ದು (ಗಿರಿಕ. ೨-೧೦೫ ವ). [ಸಿರಿ + ಮಂಚ]

**ಸಿರಿಮರ** 'ಸಿರಿವರ$_1$' ನೋ.

**ಸಿರಿಮಾಳ್ಕೆ** (ನಾ). ಸುಂದರವಾದ ರಚನೆ: ಸಮೆದುದಧ್ವರಶಾಲೆ . . . ರಮಣೀಯಗಂಧಬಂಧುರದೇವ ಕಾನನನಿಕೇತನದ ಸಿರಿಮಾಳ್ಕೆಯಿಂದೆ (ಶ್ರೀರಾಮಾ. ೧೦-೨೭೧). [ಸಿರಿ + ಮಾಳ್ಕೆ (< ಮಾಟ್ಕೆ)]

**ಸಿರಿಮುಡಿ** (ನಾ). ೧. ಚೆಲುವಾದ ತುರುಬು; ಅಂದವಾದ ಮುಡಿ: ಮಾನಿನಿಯ ಸಿರಿಮುಡಿಯ ಕಟ್ಟುವ ಸೂಸ ಮುಡಿಸುವ ವರಕಟಾಕ್ಷಕೆ ಕಾಡಿಗೆಯನಿಡುವ ಏನ ಹೇಳಿದ ಮಾಡಬಲ್ಲೆನು (ಕುಮ್ಮಾವಿ. ೧-೩೧); ನೇವರಿಸಿದರು ಸೆಳ್ಳುಗುರ್ಗಳಲಿ ಶಶಿಮುಖಿಯ ಸಿರಿಮುಡಿಯ (ತೊರರಾ. ೧-೧೪-೧೩); ಅಚ್ಚರವೆಣ್ಣುಗಳಿಗೆ ಸಿರಿಮುಡಿಗಲರೀವೊಲಂಬರಕಡರಿದ ಮರಗಳೊಪ್ಪಿದುವಡಕೆಗಳ (ಕಂನವಿ. ೫-೭೭). ೨. ಪವಿತ್ರವಾದ ಶಿರಸ್ಸು: ಕಂಪುಳ್ಳ ಸಂಪಗೆಯ ಪೂಗಳಂ ತಿಱಿತಂದು ಹಂಪಿನಿಂ ಶಶಿಧರನ ಸಿರಿಮುಡಿಗೆ ಬೇಕೆಂದು (ಬಸರ. ೧-೨೮); ಸಿರಿಮುಡಿಯೊಳೆಸೆವ ಪೆಱೆಯಂ ತೆಗೆದು . . . ವಿಟಜಂಗಮಾಕೃತಿಯನಾಂತು (ಪದ್ಮರಾ. ೫-೪೨). ೩. ಕಿರೀಟ; ಮುಕುಟ: ಸಿರಿಮುಡಿಯ ಮುಸುಕಿನ ರಾಯರಿದ್ದರು ಬಯಲ ಬಿಂಕದಲಿ (ಕುಮ್ಮಾಅ. ೧೪-೬); ಇಲ್ಲಿಯ ಸರಾಫಕಟ್ಟೆಯಲ್ಲಿ ಭೂತಕ್ಕೆ ಒಂದು ಬಂಗಾರದ ಸಿರಿಮುಡಿ ಮಾಡಲಿಕ್ಕೆ ಹಾಕಿದ್ದಾರೆ (ಒಡ್ಡಿಉ. ೨೧). [ಸಿರಿ + ಮುಡಿ$_2$]

**ಸಿರಿಮುದ್ದ** (ನಾ). ಒಬ್ಬಾತನ ಹೆಸರು: ಸಿರಿಮುದ್ದನೆಂಬನಾತನ ಪಿರಿಯ ಮಗಂ ನೆಗಟ್ಟಂ (ಸೌಇಇ. XI-i, ೪೫-೬; 980). [ಸಿರಿ + ಮುದ್ದ$_1$]

**ಸಿರಿಮುರಿ** (ನಾ). ಬಾಗಿರುವ ಒಂದು ಬಗೆಯ ಆಯುಧ: ಕಡಿತಲೆ . . . ಸಿರಿಮುರಿ ಕಕ್ಕಡೆ ಚುಂಚುಲೆ ರವಿಹಾಸ ಉರಿಯನುಗುಳುತಿರ್ದುವಲ್ಲಿ (ಭರಚ. ೨೦-೧೩೪).
[ಸಿರಿ$_7$ + ಮುರಿ$_3$ (< ಮುರಿವು)]

**ಸಿರಿಮೆಯ್** (ನಾ). ೧. ಕಾಂತಿಯುಕ್ತವಾದ ದೇಹ; ಶೋಭಾಯಮಾನವಾದ ಶರೀರ : ಪರಮಭಾಗವತರ ಸಿರಿಮೆಯ್ಯೊಳ್ಪೊಳಪ ವಿಮಲೋರ್ಧ್ವಪುಂಡ್ರಚ್ಛಾಯೆಯಿಂ ಸತ್ವಮಯಮುಂ (ಚಿಕವಂ. ೧೨೨-೬). ೨. (ಆಲಂ) ಐಶ್ವರ್ಯ; ಶ್ರೀಮಂತಿಕೆ: ಸಿರಿಮೆಯ್ಯೊಳಗಂದಱಿವಿರೆ ನೆರವಿಯೊಳಾರಱಿವರ್ (ಪಂಪಭಾ. ೨-೬೩). ೩. ಹಿರಿಮೆ; ಔನ್ನತ್ಯ: ಗೆಲಲುಂ ಸಾಯಲುಮಾಱದೆ ತೊಲಗಿದೊಡೆ ನೆಗೞ್ತೆ ತೋಱುಗುಮೆ ಸಿರಿಮೆಯ್ಯಂ (ಗದಾಯು. ೨-೨೧). [ಸಿರಿ + ಮೆಯ್$_2$]

**ಸಿರಿಮೇಱ** (ನಾ). ಒಬ್ಬಾತನ ಹೆಸರು: ಸಾಯಿಲರ ಕೋಜಯ್ಯ ಕೊಟರರ ಅಳಿಯ ಸಿರಿಮೇಱತುಱುವಾನ್ನಿಕ್ಕಿಸಿ ಕಾದಿ ಸತ್ತ (ಎಕ. X, ಶಿಡ್ಲಘ. ೫೯-೫; ಸು. 900). [?]

**ಸಿರಿಮೊಗ** (ನಾ). ಚೆಲುವಾದ ಮುಖ; ಸುಂದರವದನ: ಎಳನಗೆಯ ಸಿರಿಮೊಗದ ಚೆಲುವಿನ ಹೊಳೆಹೊಳೆವ ನಿಟ್ಟೆಸಳುಗಂಗಳ . . . ಮುನ್ನಿನ ರೂಪ ತೋಱು (ಕುಮ್ಮಾಭೀ. ೩-೭೭); ಪರಮಬ್ರಹ್ಮಹೃದಯಸರಸಿರುಹೋದರದೊಳಗೊಗೆದಾತನ ಸಿರಿಮೊಗದೊಳು ಗರುವಿಕೆದಾಳಿ ನೆಱೆದ ಕೈವಲ್ಯಸತಿಗೆ ಸಹಚರಿಯಾಗಿ (ಜಯಕಾ. ೧-೬).
[< ಸಂ. ಶ್ರೀಮುಖ]

**ಸಿರಿಯಕ್ಕ** (ನಾ). ಲಕ್ಷ್ಮಿಯ ಅಕ್ಕ; ದಾರಿದ್ರ್ಯದ ಅಧಿದೇವತೆ; ಜ್ಯೇಷ್ಠಾ

ದೇವಿ : ಅರಸರುಂ ಮಂಚಕ್ಕೆ ಬರಿಸಿ ಎನ್ನ ಬೆರಸಿದ ಬಳಿಕ ಆನಂಬುವಳಿ ಆನು ಸಿರಿಯಕ್ಕನೇ ಪರುಷ ಮುಟ್ಟಿದ ಬಳಿಕ ಲೋಹವೇ (ಬಸವ. ೭೩೮). [ಸಿರಿ + ಅಕ್ಕ₁]

**ಸಿರಿಯಡಿ** (ನಾ). ಶ್ರೇಷ್ಠವಾದ ಪಾದ; ದಿವ್ಯಸನ್ನಿಧಿ; ಶ್ರೀಪಾದ: ನೀಲದ ಪೆಂಡೆಯಂಗಳ ಧರಿಸಿದ ಸಿರಿಯಡಿಗಳನಱಿಸಿ ಕುಱುಪುಗಂಡೆಱಗಿ ಕೃತಾರ್ಥನಪ್ಪೆಂ (ಚಿಕವಂ. ೧೨೯-೫). [ಸಿರಿ + ಅಡಿ₁]

**ಸಿರಿಯಣುಗ** (ನಾ). ಲಕ್ಷ್ಮಿಯ ಮಗ; ಮನ್ಮಥ: ಸಿರಿಯಣುಗಂ ಸಮ್ಮೋಹನಶರದಿಂ ವಿರಹಿವಿತಾನಮನೆಚ್ಚು ಕೆಡಪೆ (ಜಯಕಾ. ೩-೩೯). [ಸಿರಿ + ಅಣುಗ (< ಅಣುಂಗ)]

**ಸಿರಿಯಣ್ಣ** (ನಾ). ಒಬ್ಬಾತನ ಹೆಸರು: ನಾಗಮಯ್ಯನ ಮಗ ಚನ್ನಯ್ಯನುಂ ಸಿರಿಯಣ್ಣನುಂ . . . ಪೊನ್ನ ಕೊಟ್ಟರ್ (ಎಕ. X; ಚಿಂತಾಮ. ೪೪-೧೩; 960?). [ಸಿರಿ + ಅಣ್ಣ₁]

**ಸಿರಿಯದರ** 'ಸೀಯದರ' ನೋ.

**ಸಿರಿಯದಾರ** 'ಸೀಯದರ' ನೋ.

**ಸಿರಿಯಬಾರ** 'ಸೀಯದರ' ನೋ.

**ಸಿರಿಯಮಯ್ಯ** (ನಾ). ಒಬ್ಬಾತನ ಹೆಸರು: ಇರುಗಮಯ್ಯನ ಮಗಂ ಸಿರಿಯಮಯ್ಯನೆರಡುಕೆಱೆಯಂ ತೂಂಬನಿಕ್ಕಿ (ಎಕ. IX, ಬೆಂಗಳೂ. ೭೯-೫; ಸು. 870). 'ಸಿರಿಯಮ್ಮ' ಪರಾ. [ಸಿರಿ + ಅಮ (< ಅಮ್ಮ₁) + ಅಯ್ಯ₁]

**ಸಿರಿಯಮ್ಮ** (ನಾ). ಒಬ್ಬಾತನ ಹೆಸರು: ಕಾಕಂಬಾಟ ಕಂಬಯ್ಯನುಂ ಅಸಗಗೋಡ ಸಿರಿಯಮ್ಮನುಂ (ಎಕ. XI, ಚಿತ್ರದು. ೭೫-೨೩; 941); ಬಿಜ್ಜೆವರುಮಯಿನ್ದ ಮಯ್ಯನೆಱೆಯಮ್ಮನುಂ ಸಿರಿಯಮ್ಮನುಂ (ಎಕ. XI, ಹೊಳಲ್ಕೆ. ೩೦-೧೨; 964). [ಸಿರಿ + ಅಮ್ಮ₁]

**ಸಿರಿಯರಸ** (ನಾ). ೧. ಲಕ್ಷ್ಮಿಯ ಒಡೆಯ; ವಿಷ್ಣು: "ಅರಲ್ದೊಡೆಯಂ . . . ಸಿರಿಯರಸಂ . . . ಕಾವನಯ್ಯಂ – ಈ ೧೨ ವಿಷ್ಣುಗೆ ಪೆಸರ್" (ಕಶಸಾ. ೧-೯); ಸಿರಿಯರಸಂ[ಪಾಠಾಂ. ಯೆಱೆಯಂ] ಮಾದೇವಂ ಸರಸತಿಯೆಱೆಯರ್ಕಳಡಿಗಳೆಂಬೀ ಕೆಂದಾವರೆಗಳ್ ಪೊರೆಗೆಮ್ಮಂ (ಕಬ್ಬಿಕಾ. ೨). ೨. ಕೃಷ್ಣ: ಸಿರಿಯರಸನ ಶ್ರೀಚರಣವ ನೆನೆದು ಕರುಣಿಸಿ ರೂಪವ ತಾ ಕೈಕೊಂಡು (ಕುಮ್ಮಾದ್ರೋ. ೭೧೪. ಪರಿ. ೨೪೪). [ಸಿರಿ + ಅರಸ₁]

**ಸಿರಿಯರಸಿ** (ನಾ). ಐಶ್ವರ್ಯದ ಅಧಿದೇವತೆ; ಲಕ್ಷ್ಮಿ: "ಸಿರಿಯರಸಿ [ಪಾಠಾಂ. ಲಕುಮಿ] ಮಾಲಕುಮಿಯೆನೆ ಸದಾ ಶ್ರೀಸತಿಗೆ ನಾಮಮಕ್ಕುಂ" (ಕಬ್ಬಿಕೈ. ೭); ಪೇರೆರ್ದೆಯಂ ಕಡಲ್ಗೆತ್ತು ಕೌಸ್ತುಭಮುಂ ಸಿರಿಯರಸಿಯುಂ ನೆಲಸಿರ್ಕುಂ (ಚಿಕವಂ. ೧೨೮-೧೧). [ಸಿರಿ + ಅರಸಿ]

**ಸಿರಿಯಾಣ್ಮ** (ನಾ). = ಸಿರಿಯರಸ ೧ : "ಸಿರಿಯಾಣ್ಮಂ ಪೊಡೆಯಲರಂ" (ಕರ್ಣಾನಿ. ೩); ಮಹದಾಧಿಕ ಭಾಸುರಕಾರ್ಯಪರಂಪರೆಯಂ ಸಿರಿಯಾಣ್ಮನೆ ನಿತ್ಯನಾಗಿ ಕಣ್ದೊಳಿಸಿರ್ಕುಂ (ವಿಷ್ಣುಪು. ೧-೪-೯೭). [ಸಿರಿ + ಆಣ್ಮ (< ಆಳ್ಮ)]

**ಸಿರಿಯೆಱೆಯ** (ನಾ). = ಸಿರಿಯರಸ ೨ : "ಸಿರಿಯೆಱೆಯಂ ಸೌರಿಯೆಂದು ತಾವರೆಗಣ್ಣಂ" (ಕರ್ಣಾನಿ. ೩). [ಸಿರಿ + ಎಱೆಯ]

**ಸಿರಿಯೇಱು** (ಕ್ರಿ). ಶೋಭಿಸು: ಚರಣಂಗಳ್ ಲೀಲೆಯೇಱಲ್ ಮೊಗಂ ಸಿರಿಯೇಱಲ್ ತಲೆಗೇಱಿದುತ್ಸವದೆ ನಿಮ್ಮಂ ಪೂಜಿಸುತ್ತೆ (ಪಂಪಾಶ. ೧.೮). [ಸಿರಿ + ಏಱು₁ (< ಏಱ್₁)]

**ಸಿರಿಯೊಡೆಯ** (ನಾ). ೧. ಧನಿಕ; ಶ್ರೀಮಂತ: ಸಿರಿಯೊಡೆಯನಾಗಿಯುಂ ದರ್ಪರಹಿತಂ (ಶಾಂತಿಪು. ೩-೭೭); ಸಿರಿಯೊಡೆಯಂ ಸಿರಿಯುಳ್ಳಂ ಸರೂಪಿ ಗುಣವಂತ ನಧಿಕದಾನಿ (ಕಾವ್ಯಾವ. ೩೩೭). ೨. = ಸಿರಿಯರಸ ೨: ಸಿರಿಯೊಡೆಯಂ ಕೀಱುಳಾಗಿರಲಱಿವನೆ ಪರಿಸುತಂ ಕಿರೀಟಿಯ ರಥಮಂ (ಸಮವ. ೮-೧೪೪). [ಸಿರಿ + ಒಡೆಯ₁]

**ಸಿರಿಯೋಲಗ** (ನಾ). ವೈಭವಪೂರ್ಣವಾದ ದರ್ಬಾರು: ಅಷ್ಟದಿಕ್ಪಾಲರ ಮಧ್ಯದಲಿ ವೈಕುಂಠಪಟ್ಟಣವು ಸಿರಿಯೋಲಗವು ನಿತ್ಯದಿ (ಕನಕ. ೧೨೯-೧). [ಸಿರಿ + ಓಲಗ₁]

**ಸಿರಿಯೋಲಗಂಗೊಡು** (ಕ್ರಿ). ವೈಭವಪೂರ್ಣವಾದ ದರ್ಬಾರನ್ನು ನಡೆಸು: ರಮ್ಯಹರ್ಮ್ಯಾಗ್ರದೊಳೆ ಸಿರಿಯೋಲಗಂಗೊಟ್ಟು (ಪಂಪಭಾ. ೪-೫೨ ವ). [ಸಿರಿಯೋಲಗ + ಕೊಡು₁]

**ಸಿರಿರಾಣಿ** (ನಾ). = ಸಿರಿಯರಸಿ: ಸಿರಿರಾಣಿಯ ಪೆತ್ತ ಸೂದೆಗಡಲಿಳಿಯ ತಾತ್ಪರಿಯದಿ ನೋಡಬಂದಂತೆ . . . ಪರಿದಳು ತುಂಗಬೆಳ್ಗಂಗೆ (ಮೋಹತ. ೭-೩೫); ಪರಮಪತಿವ್ರತೆಯಿದ್ದ ಬಳಿಯೊಳಾ ಸಿರಿರಾಣಿ ಸೇರಿ ಬಂದಿಹಳು (ಹದಿಬ. ೨-೧೭). [ಸಿರಿ + ರಾಣಿ]

**ಸಿರಿರಾಯ** (ನಾ). = ಸಿರಿಯರಸ ೧ : ಸಿರಿಯೊಡನೆ ಸಿರಿರಾಯನುತ್ಸವದಿ ನಿಂತಿಹನು ಕಡುಸವಿಯ ಮೆಲುನಗೆಯೊಳು (ಮಲೆದೇ. ೪೮-೧೧). [ಸಿರಿ + ರಾಯ]

**ಸಿರಿಲಕ್ಷ್ಮಿ** (ನಾ). ಸಂಪತ್ತಿನ ಒಡತಿ; ಧನಲಕ್ಷ್ಮಿ: ಸಿರಿಲಕ್ಷ್ಮಿ ಜಯಲಕ್ಷ್ಮಿ ಶಾರದಾಲಕ್ಷ್ಮಿಯಾ ವರಕೀರ್ತಿಲಕ್ಷ್ಮಿಯರಂತೆ ಪರಿಶೋಭಿಸುವ ರಾಜಪುತ್ರಿಯರನು ಭೂಪ ರಂಜಿಸಿದ (ಕಂಸವ. ೭-೬೯). [< ಸಂ. ಶ್ರೀಲಕ್ಷ್ಮೀ]

**ಸಿರಿಲೋಲ** (ನಾ). = ಸಿರಿಯರಸ ೨ : ಸಿರಿಲೋಲಸಹಿತ ಯುಧಿಷ್ಠಿರಾದಿಗಳು . . . ಹೊಕ್ಕರು ಕಾಳೆಗದ ಕಳನ (ಕುಮ್ಮಾದ್ರೋ. ೯-೨೯). [< ಸಂ. ಶ್ರೀಲೋಲ]

**ಸಿರಿವಂತ** (ನಾ). ಐಶ್ವರ್ಯವಂತ; ಧನಿಕ: ಎಂತು ಪೊಲ್ಲರುಮೊಳ್ಳಿದರುಮೊಳರಂತು ತಿರಿಕರುಂ ಸಿರಿವಂತರುಮೊಳರ್ (ಧರ್ಮಾಮೃ. ೯-೬೮); ಜಗವರಾಜಕವಾಯ್ತು ಕುಮುದಾಳಿಗಳ ಬಾಗಿಲು ಹೂಡಿದವು ಸೂಱೆಗರು ಕವಿದುದು ತುಂಬಿಗಳು ಸಿರಿವಂತರರಮನೆಯ (ಕುಮ್ಮಾದ್ರೋ. ೧-೪೩). [ಸಿರಿ + - ವಂತ]

**ಸಿರಿವಂತಗಾಲ್** (ನಾ). ಒಂದು ಸ್ಥಳದ ಹೆಸರು: ಸಿರಿವಂತಗಾಲೊಳ ಇಟ್ಟೂಱು ಭತ್ತದ ಮಣ್ಣು ಮಹಾದೇವರ್ಗ್ಗೆ ಬಿಟ್ಟಂ (ಎಕ. IV, ಗುಂಡ್ಲುಪೇ. ೧೪-೭; ಸು. 995?). [?]

**ಸಿರಿವಂತಿಕೆ** (ನಾ). ಶ್ರೀಮಂತಿಕೆ; ಸಿರಿತನ: ಸಿರಿಯಂ ಪರಿಭವಿಸಿ ತಂದು ಪೊಸಯಿಪ ಸಿರಿವಂತಿಕೆಯಿಂದ ಕಾಲೋಳೂದೆದಪರೆನಿಕುಂ (ಶಾಂತಿಪು. ೧೦-೧೭); ಸಿರಿವಂತಿಕೆಯ ಬಿಗುಮಾನವೂ ಪರಂಪರಾಗತವಾದುದೇನೊ! (ಆಬೋಲೀ. ೪೫). [ಸಿರಿವಂತ + - ಇಕೆ]

**ಸಿರಿವಂತಿಗೆ** (ನಾ). ಹುರಿಯಲು ಬಳಸುವ ಮಡಕೆಯ ಓಡು; ಹುರಿಯೋಡು: "ಸಿರಿವಂತಿಗೆಯೆಂದೆ[ನ]ಲ್ಕೆ ಹುರಿಯೋಡಕ್ಕುಂ" (ರನ್ನಕು. ೨); ಆ ಸಿರಿವಂತಿಗೆಯಂ ತೊಱೆವಂತಿರೆ ಖಚರಶ್ರೀಯನುಱಿದನಾ ಜಿನಚಂದ್ರಂ (ಶಾಂತಿಪು. ೭-೬೯); ಸಿರಿವಂತಿಗೆ = ಹುರಿಯೋಡು (ಕಮುದ. ಪರಿ. ೨); ಬಾಂದಳಮೆಂಬ ಸಿರಿವಂತಿಗೆಯೊಳಪರಿಮಿತ ಜಗತ್ತುಗಳೆಂಬ ಜೋಳದೊಳ್ಪೆತ್ತುಗಳನು ಹುರಿಯುತ್ತಿರಲ್ (ಶೀಷರಾ. ೩-೧೧). [?]

**ಸಿರಿವಂತೆ** (ನಾ). ಶ್ರೀಮಂತ ಹೆಂಗಸು; ಭಾಗ್ಯವಂತೆ: ಸಿರಿವಂತೆ, ಗುಣವಂತ (ಶಬ್ದಾನು. ೧೯೭ ಪ್ರಯೋ). [ಸಿರಿವಂತ + - ಎ₂]

**ಸಿರಿವಚ್ಚ** (ನಾ). ೧. ವಿಷ್ಣುವಿನ ಎದೆಯ ಮೇಲಿರುವ ಕಪ್ಪುಮಚ್ಚೆ; ಶ್ರೀವತ್ಸ: ಸಿರಿವಚ್ಚದ ಪಚ್ಚವಣಿಗಳ ಬೆಳಗಿನೊಳ್ಪೆರಸಿ (ಚಿಕವಂ. ೧೨೩-೧೭); ಸಿರಿವಚ್ಚಲಚ್ಚಣದಿ ನೊಪ್ಪುವೆರ್ದೆಯುಂ, ಬೆಳ್ಪಟ್ಟೆ ಬಿಗಿದ ನಡುವುಮಿಂದ ಬಾಗೆ (ಅದ್ಭುತ. ೩೫-೨೫). ೨. ಒಬ್ಬಾತನ ಹೆಸರು : ಮಣಿದಿಯು ಸಿರಿವಚ್ಚನುಂ ಶ್ರೀಪುರುಷನುಂ . . . ಎಱಿದು ಸತ್ತೂರ್ (ಷ್ಮಆರ. ೧೯೪೪, ೬-೧; 808). [< ಸಂ. ಶ್ರೀವತ್ಸ]

**ಸಿರಿಪಚ್ಚೆ, ಸಿರಿಪಚ್ಚೆ** (ನಾ). ೧. ಶ್ರೇಷ್ಠವಾದ ಹಸುರುಕಲ್ಲು: ಸಿರಿಪಚ್ಚೆಯ ಪಳಿಕಿಂ ಕಂಡರಿಸಿದ ಕರುವೆನೆ . . . ಕರಮೆಸೆದಂ ಭೂಪತಿ ಪುರಸತಿಯರ ಕಣ್ಗಳ ಕದಿರಿಂದ (ಜಯಕಾ. ೧೦-೫೭). **ಸಿರಿಪಚ್ಚೆ** : ೨. ಉತ್ತಮವಾದ ಪಚ್ಚೆತೆನೆ: ಸಿರಿಗಂಪು ಸಿರಿಪಚ್ಚೆ ಪನಿನೀರು ಬಿಜ್ಜಣದೆಲರುಪದಾರಗಳಿಂದ ಧರಣೀಪತಿ ದಿಟ್ಟಿದೆಱೆದು (ನೇಮಿಸಂ. ೮-೧೧೯); ಪನ್ನೀರ ಚೆಂಬುಗಳೆಡೆಗುಡ್ಡೆ ಸಿರಿಪಚ್ಚೆ ಪನ್ನೆಗಪ್ಪುರದ ರಾಶಿಗಳು (ಭರಚ. ೪೭-೧೮). [ಸಿರಿ + ಪಚ್ಚೆ₁ (< ಪಸು₃)]

**ಸಿರಿವಡೆ** (ಕ್ರಿ). ಸೊಬಗನ್ನು ಹೊಂದು: ಪರಮೆಗಳ ಸೇಣಿ ಹರಿನೀಲಮಣಿತೋರಣದ ಸಿರಿವಡೆಯೆ (ಶೀಷರಾ. ೭-೩೦). [ಸಿರಿ + ಪಡೆ₁]

**ಸಿರಿವಣ್** (ನಾ). ವೈಷ್ಣವರು ಮುದ್ರೆಗಳನ್ನು ಧರಿಸಲು ಬಳಸುವ ಪವಿತ್ರವಾದ ಮಣ್ಣು; ಗೋಪಿಚಂದನ: ಸಿರಿವಣ್ಣೆಳಗಿನಬ್ಬರಕ್ಕಿರ್ಬಗಿಯಾಗಿರ್ಕಲಕ್ಕೆ ಸರಿಯುತ್ತೆ . . . ಕುರುಳ್ಗಟ್ಟಲೆ ನುಣ್ಬಣೆಯಂ ಪತ್ತಿ ಪದುಳದೊಳಿರ್ಕುಂ (ಚಿಕವಂ. ೧೨೮-೩). [ಸಿರಿ + ಮಣ್]

**ಸಿರಿವಣ್ಣ** (ನಾ). ಒಂದು ಬಗೆಯ ಬಣ್ಣದ ಬಟ್ಟೆ: ಗುಜ್ಜರಾಷ್ಟ್ರದ ಪಟ್ಟೆ

ವಾರಾಣಸಿಯ ದಸರಿಯ ಹೊತ್ತಿ ಸಿರಿವಣ್ಣ . . . ಈ ವಿವಿಧ ಪಟ್ಟಾವಳಿಗಳುಂಟು (ಬಸಪು. ೧೧-೨೭). [ಸಿರಿ + ಬಣ್ಣ]

**ಸಿರಿವದನ** (ನಾ). ಕಾಂತಿಯಿಂದ ಕೂಡಿದ ಮುಖ; ಶೋಭಿಸುವ ಮುಖ: ಸೊಂಪುಗೆಟ್ಟುದು ಸಿರಿವದನ ಮನದಿಂಪು ಬೀತುದು (ಕುವ್ಯಾಭೀ. ೬-೨೭). [ಸಿರಿ + ವದನ]

**ಸಿರಿವಧು** (ನಾ). ಸಂಪದ್ಯುಕ್ತಳಾದವಳು: ತಿರುಮಲರಾಜನ ಬಿಟ್ಟು ಸಿರಿವಧು ಜಯಲಕ್ಷ್ಮಿ ಬೆಟ್ಟದ ಚಾಮನ ನೆಱೆ ಹರುಷದಲಿ ಸೇರಿದಳು (ಕಂನವಿ. ೩-೯೪).
[< ಸಂ. ಶ್ರೀವಧೂ]

**ಸಿರಿವರ$_1$, ಸಿರಿಮರ** (ನಾ). ಒಂದು ಬಗೆಯ ಶ್ರೇಷ್ಠಜಾತಿಯ ಮರ; ಅರಳಿ: ''ಸಿರಿವರಂ ಚಳದಳಂ ಪಿಪ್ಪಲಂ ಬೋಧಿಯಶ್ವತ್ಥಮೆನಲರಳಿಯಕ್ಕುಂ'' (ಮಂಗರಾ. ೩೪-೧೧); ''ಗೌರಃ – ಸಿರಿವರ, ಬೆಜ್ಜಲು'' (ಓಷಧಿ. ೫೧). **ಸಿರಿಮರ** : ''ದೃಢತರುಃ – ಸಿರಿಮರ , ಬೆಜ್ಜಲಮರ'' (ಓಷಧಿ. ೭೯). [ಸಿರಿ + ಮರ$_1$]

**ಸಿರಿವರ$_2$** (ನಾ). ಲಕ್ಷ್ಮಿಯ ಗಂಡ; ವಿಷ್ಣು: ಸಿರಿವರ ನಿನ್ನ ಸರಿ ಯಾರು ಕಾಣೆ (ಪುರಂದ. ೧-೬೩-೩); ಸಿರಿವರನ ಬಗೆಯೊಳೊಗೆದಾ ಗಿರಿಶನ ಸಿರದಲ್ಲಿ ನೆಲಸಿ ಸನ್ಮಾರ್ಗದೊಳೇ ಚರಿಸುವ ಚಂದ್ರನ ವಂಶಂ ಪರಿಶುದ್ಧತೆವೆತ್ತು ನೆಗಳ್ದುದೇನಚ್ಚರಿಯೇ (ಅಪ್ರತಿ. ೧-೨). [< ಸಂ. ಶ್ರೀವರ]

**ಸಿರಿವಲ್ಲಭ** (ನಾ). = ಸಿರಿವರ$_2$: ಸಿರಿವಲ್ಲಭ ನಿಂಗೆ ಸರಿಯಿಹಪರದಲಿಲ್ಲ (ಗಗತಾ. ೫-೨೦). [< ಸಂ. ಶ್ರೀವಲ್ಲಭ]

**ಸಿರಿವಟಿಯಿಗೆ** (ನಾ). ಸಂಪದ್ಯುಕ್ತವಾದ ಬಾವುಟ: ರವಿಶಶಿಬಿಂಬಧ್ವಜದ ಧವಳಾತಪತ್ರವ್ರಜದೊಳಗನೆ ನಡೆಯ ಪೊನ್ನ ಸಿರಿವಟಿಯಿಗೆಯೊಳ್ (ಶಾಂತಿಪು. ೧೦-೧೫೦).
[ಸಿರಿ + ಪಟಿಯಿಗೆ]

**ಸಿರಿವಾಗಿಲ್** (ನಾ). ಮುಖ್ಯದ್ವಾರ; ಶ್ರೀದ್ವಾರ: ಬದಿಗೆ ಸೋಮವಾರದನ್ನು ಸಿರಿವುರದ ಸಿರಿವಾಗಿಲಂ ಕುಂಚವಡುಗ ದಾಸಯ್ಯಂ ಮಾಡಿಸಿದುದಕೆ (ಸೌಇಇ. XI-i, ೭೫-೧೫; 1042). [ಸಿರಿ + ಬಾಗಿಲ್]

**ಸಿರಿವಾಯ್** (ನಾ). ೧. ಚೆಲುವಾದ ಬಾಯಿ : ಎಮ್ಮ ಬಸಿಱೊಳ್ ಬಂದು ಜಗಮಂ ಸಲಪುವೆನೆಂದು ತನ್ನರ್ಭಾವತಾರಮರ್ಯಾದೆಯಂ ಮೀಱಿ ಸಿರಿವಾಯ್ದೆಱೆದು ನಿರವಿಸಿ ಎನ್ನೆರ್ದೆಯೊಳ್ ಬಂದು ನಿಂದಂ (ಚಿಕವಂ. ೧೩೫-೧೦). ೨. = ಸಿರಿವದನ : ಸಿರಿವಾಯ ರಾಮರಾಜಂ ಸಿರಿಯಂ ಪಿರಿದೆನಿಸಲೆಳಸಿ ಕಡುನಿಡುವಯಣಂದೆರಳಲ್ಕೆ (ಚಿಕವಿ. ೨-೩೩).
[ಸಿರಿ + ಬಾಯ್]

**ಸಿರಿವಾರ** 'ಸೀಯದರ' ನೋ.

**ಸಿರಿವಾಳಿಗೆ** (ನಾ). ಸಂಪದ್ಭರಿತವಾದ ಮಾಳಿಗೆ,– ಉಪ್ಪರಿಗೆ: ತಂತಮ್ಮ ಸಿರಿವಾಳಿಗೆಗಳ ಬಾಗಿಲೊಳ್ ನಿಂದು ಪರಸುವ ಹದಿಬದೆಯರ ಪರಕೆದನಿಯುಮ ನಾಲಿಸುತ್ತೆ (ಚಿಕವಂ. ೧೩೩-೮). [ಸಿರಿ + ಮಾಳಿಗೆ$_1$]

**ಸಿರಿವಾಳ್ಯ?** (ನಾ). ದೇವಸ್ಥಾನದ ಒಂದು ಭಾಗ (?) : ಸಿಜ್ಜವಡ್ಡಗಿ ರಾಪಮ್ಮನ್ ಸಿರಿವಾಳ್ಯ ಮಾಡಿದಾನ್ (ಸೌಇಇ. XX, ೮-೩; 8ನೆಯ ಶತ). [?]

**ಸಿರಿವೀಡು , ಸಿರಿಬೀಡು** (ನಾ). ಐಶ್ವರ್ಯದಿಂದ ತುಂಬಿದ ಮನೆ; ಸಂಪತ್ತಿನ ನೆಲೆ: ಮಹಮ್ಮದನಿಗೆ ಸಿರಿವೀಡಾಗಿ ಸಂತೋಷವನ್ನು ಹುಟ್ಟಿಸಿತು (ಪೃಮಹ. ೧೪). **ಸಿರಿಬೀಡು** : ಭಾರತವು ಸಂಪತ್ತಿನ ಮತ್ತು ವೈಭವದ ಶಿಖರವನ್ನೇ ಏರಿ . . . ಸಿರಿಬೀಡೇ ಆಯಿತೆಂದರೂ ಅತಿಶಯೋಕ್ತಿಯಲ್ಲ (ಭಾರದ. ೩೭೭). [ಸಿರಿ + ಬೀಡು]

**ಸಿರಿವುರ** (ನಾ). ಒಂದು ಊರಿನ ಹೆಸರು: ಮುಳ್ಗನ್ನು(ನ್ದ)ಪನ್ನೆರಡುಮಂ ವಾಯಿವರ್ಮ್ಮನಾಳೆ ಸಿರಿವುರಕೆ ಬಗೆಗ ಪೆರ್ಗ್ಗಾವುಣ್ಡವಾಗುತ್ತಿರೆ (ಎಇ. XXVI, ೬೨-೧೧; 906); ಪುಯ್ಯಲ ಪಿನ್ದಕ್ಕಿ ಮುನ್ದಾಗಿ ಸಿರಿವುರದ ಹಳಮೆಗೆ ತುಱುವನಿಕ್ಕಿಸಿ ಮ[illegible]ಬ್ದು ಬರುತ್ತಿಟ್ಡೊಡೆ (ಎಕ. XII, ತಿಪಟೂ. ೧೦-೯; ಸು. 930). [ಸಿರಿ + ಪುರ$_2$]

**ಸಿರಿವೆಣ್, ಸಿರಿವೆಣ್ಣು** (ನಾ). ೧. ಐಶ್ವರ್ಯದ ಅಧಿದೇವತೆ; ಲಕ್ಷ್ಮಿ: ಸಿರಿವೆಣ್ಣಂ ದೂವೆದೊಟ್ಟಿಂಗೆಣೆಯನೆ ಬಗೆದಂ (ಚಂದ್ರಪ್ರ. ೧೦-೧೨೮); ಅರಹಂತನ ಮೆಲ್ಲಡಿದಾವರೆಗಳ್ ಬಗೆಯಲ್ಲಿ ನಿಂದುವೆಂದೊಡೆ ನಲವಿಂ ಸಿರಿವೆಣ್ಣುವನೊಳ್ ನಿಚ್ಚಂ ಬೆರಸಿರ್ದಪಳ್ (ಕಬ್ಬಿಕಾ. ೧೩). **ಸಿರಿವೆಣ್ಣು** : ೧. ಕರತಳದೊಳಮರಭೂರುಹವನು ಕಟಾಕ್ಷದೊಳು ಸಿರಿವೆಣ್ಣನೆಸಕಮಂ . . . ಪೆತ್ತನೋ ತಥ್ಯವೆನಲು (ಸೌಂದಪು. ೪-೧೧); ಸಿರಿವೆಣ್ಣ ನೆಱೆ ತಳೆದ ಬಿಸಜಗಳೊ (ಭಾವಚಿಂ. ೧-೪೫). ೨. ಚೆಲುವೆ; ಅಂದಗಾತಿ: ಸಿರಿವೆಣ್ಣಗಿನಿಯನ ಜಯಿಸೆ ಚೆಲುವಿನಲಗೊಂದಿರಲ್ ಕೂರಂಬೇಕೆ? (ಚಿತ್ರಾಂಗ. ೨೦-೫೨೯).
[ಸಿರಿ + ಪೆಣ್]

**ಸಿರಿವೆಣ್ಣರಸ** (ನಾ). ಲಕ್ಷ್ಮಿಯ ಒಡೆಯ; ವಿಷ್ಣು: ತೊಳಗುವ ಸಂಕುಂ ಪಾಱುಂಬಳೆ ನೇರ್ಪಡೆ . . . ಮುಗಿಲೆಡೆಯೊಳಿರ್ದಂ ತಳತಳಿಸುವ ತೊಡವನಾಂತು ಸಿರಿವೆಣ್ಣರಸಂ (ಕಬ್ಬಿಕಾ. ೨೯೨). [ಸಿರಿವೆಣ್ + ಅರಸ$_1$]

**ಸಿರಿವೆಣ್ಣು** 'ಸಿರಿವೆಣ್' ನೋ.

**ಸಿರಿವೆಱು** (ಕ್ರಿ). ಸೊಗಸಾಗು; ಶೋಭಿಸು: ಕರಿಗವುನೆಯರು ತಂದರು ರತ್ನಮಯ ಹೊನ್ನ ಹರಿವಾಣದುಂಬಿದಾರತಿಯ ತಿರುಹಿ ನಿವಾಳಿಸೆ . . . ಸಿರಿವೆತ್ತು ನಿಂದರಿಕ್ಕಲದಿ (ಮೋಹತ. ೨೨-೧೩). [ಸಿರಿ + ಪೆಱು$_1$]

**ಸಿರಿವೊತ್ತು, ಸಿರಿಹೊತ್ತು** (ನಾ). ೧. ಮುಂಜಾನೆ, ಮಧ್ಯಾಹ್ನ ಮತ್ತು ಸಂಜೆ ಎಂಬ ದಿನದ ಮೂರು ಶುಭಕಾಲಗಳು : (ಕ). ೨. ಸಂಜೆ; ಸಾಯಂಕಾಲ: (ಚತುನಿ. ಕ. 1, ೮೧). **ಸಿರಿಹೊತ್ತು**: ೩. ಶುಭಸಮಯ: ತಣ್ಣೆಲರು ತೀಡುತಿದೆ, ಪಯಣಕಿದೆ ಸಿರಿಹೊತ್ತು (ಹಚ್ಚೆರ. ೫-೭೮). [ಸಿರಿ + ಪೊತ್ತು$_4$ (< ಪೊಱ್ತು)]

**ಸಿರಿಷ** 'ಸಿರಿಸ' ನೋ.

**ಸಿರಿಸ , ಸಿರಿಷ , ಸಿರೀಸ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು; ಬಾಗೆ: ಸಿರಿಸಂ ಸೀರೆ ಬೆಳಲ್ಲವಂಗಮೆಲವಂ (ಕಾವ್ಯಸಾ. ೧೦೪೦ ಶೂದ್ರಕ); ಸಿರಿಸಂ ಕಂಮ್ಮರನೀಳೆ ಬಾಳೆ ವಕುಳಂ (ಸೌಇಇ. IX-i, ೩೪೩-೪೦; 1226?); ರಸದಾಳಿ ಸಿರಿಸ ದಾಳಿಂಬದ ಸಾಲ್ಗಳ್ ಸಲೆ ಸೊಗಸಿದುವಲ್ಲಿ (ಜಯಕಾ. ೧೫-೪೩). **ಸಿರಿಷ** : ಸಿರಿಷದ ತರುವಿನೊಳು ಪರಮಾನಂದಜ್ಞಾನೋತ್ಪತ್ತಿಯಾಗೆ (ವರ್ಧಚ. ೫-೪). **ಸಿರೀಸ** : ''ಪತಂಗಿಕೇರಿಷ್ಯಃ – ಸಿರೀಸ'' (ಓಷಧಿ. ೯೪); ಕೋಮಳಸಿರೀಸಸುಮನೋದ್ದಾಮ ಕಾಂತಿಯಂ ತಾಳ್ದಿ . . . ತೋಱುಗುಂ ನಳಿತೋಳ್ಗಳ್ (ವರ್ಧಮಾ. ೩-೩೭). [< ಸಂ. ಶಿರೀಷ]

**ಸಿರಿಸಂಘ** (ನಾ). [ಜೈನ] ಧಾರ್ಮಿಕಸಂಘಗಳಲ್ಲಿ ಒಂದು: ನಮಿಲೂರಾ ಸಿರಿಸಂಘದಾಜಿಗಣದಾ ರಾಜ್ಞೀಮತೀಗನ್ತಿಯಾರ್ . . . ಸ್ವರ್ಗ್ಗಾಲಯಮೇಱಿದಾರ್ (ಎಕ. II, ೯೭-೧; ಸು. 700). 'ಶ್ರೀಸಂಗ' ಪರಾ. [< ಸಂ. ಶ್ರೀಸಂಘ]

**ಸಿರಿಸಲ** (ನಾ). = ಸಿರಿಸ: ಸಿರಿಸಲದ ಮರದರಳುಗಳ ಸರಸಾದ ಹಾರಗಳು ಹರಿದು ನೀರೊಳು ಹರಿಯೆ (ರಘುವಂ. ೧೯೨-೬); ಚೆಂದ ಕುರುವಕವು ಹೆಳಲಿನಲ್ಲಿ ಸಿರಿಸಲವು ಕಿವಿಯ ಬಳಿಗೆ (ಮೇಘದೂ. ೧೯-೩). [< ಸಿರಿಸ]

**ಸಿರಿಹರಿ** (ನಾ). ವಿಷ್ಣು; ಶ್ರೀಹರಿ: ಸೋಲಿಗರ ಸೀಮೆ ಸಿರಿಹರಿ ವೆಂಕಟ್ರಮಣ ಸೋಲೀಸು ಬೇಡ ಗೆಲಿಸಯ್ಯ (ಗರುಡಾ. ೧೭೧). [< ಸಂ. ಶ್ರೀಹರಿ]

**ಸಿರಿಹಸ್ತ** (ನಾ). ಶ್ರೇಷ್ಠವಾದ ಕೈ : ಮಸ್ತಕ ಬಿರಿದು ಸುರಿವ ರಕ್ತವ ಸಿರಿಹಸ್ತದಿನೊತ್ತಿ ನಿಲ್ಲಿಸುತೆ (ಮೋಹತ. ೧೨-೬೩). [< ಸಂ. ಶ್ರೀಹಸ್ತ]

**ಸಿರಿಹೆಟ್ಟಿಗೆ** (ನಾ). ಚೆಲುವಾದ ಹೆಣ್ಣು; ಸುಂದರಿ: ಅಷ್ಟದಿಕ್ಪಟ್ಟಣಂಗಳಲಿರ್ಪ ಪರಮ ಸಿರಿಹೆಟ್ಟಿಗೆಯರವನುಳಿದು ತಮ್ಮಖಿಳವಸ್ತುಗಳ . . . ತಂದು (ನವಮೋ. ೨-೪೮).
[ಸಿರಿ + ಹೆಟ್ಟಿಗೆ (< ಪೆಟ್ಟುಗೆ)]

**ಸಿರಿಹೊತ್ತು** 'ಸಿರಿವೊತ್ತು' ನೋ.

**ಸಿರೀಸ** 'ಸಿರಿಸ' ನೋ.

**ಸಿರು** 'ಸಿಱು' ನೋ.

**ಸಿರುಕೀರೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಸೊಪ್ಪು; ಚಿಲಿಕೆ: ಚಿಲಿಕೆಸೊಪ್ಪು , ಸಿರುಕೀರೆ (ವೃಔಗಿ. ೫-೯೧). 'ಚಿಲುಕೀರೆ' ಪರಾ.
[ಸಿರು$_7$ + ಕೀರೆ./ ತಮಿ. ಚಿಱುಕೀರೆ , ಚಿಱುಕ್ಕೀರೈ]

**ಸಿರುಗಣ್ಣು** (ನಾ). ಒಂದು ಬಗೆಯ ಕಣ್ಣಿನ ರೋಗ : ಆ ಬೇರಂ ಜೇನುತುಪ್ಪದಿಂದ ಹಚ್ಚಲು ಸಿರುಗಣ್ಣು ಮಾಣ್ಗುಂ (ವಿಷ್ವವಿ. ೧೩೫). [ಸಿರು$_7$ + ಕಣ್ಣು (< ಕಣ್)]

**ಸಿರುವಾಯಿ** (ನಾ). ಹರಿದುಹೋಗಿರುವ ಮೇಲುತುಟಿ : (ಕ). 'ಸಿಱುವಾಯ' ಪರಾ. [ಸಿರು (< ಸಿಱು) + ಬಾಯಿ$_1$ (< ಬಾಯ್)./ ತುಳು. ಸಿರಿಬಾಯಿ, ತಿರಿಬಾಯಿ]

**ಸಿರೆ$_1$** (ನಾ). ೧. ನರ; ರಕ್ತನಾಳ: ''ಸಿರೆ ನಾಳಿಪತ್ರಮನೆ ಸರೆಯಕ್ಕು'' (ಮಂಗರಾ. ೧೩೪-೩೪); ರೂಕ್ಷಸಸ್ಥೂಲಸಿರೆಯುಳ್ಳವರ್ಗಳೂ (ವೀಶ್ಮಪು. ೪-೨೩-೨೧). ೨. ಕೆಲವು ಹಣ್ಣು ಮತ್ತು ಎಲೆಗಳಲ್ಲಿರುವ ನಾರು, — ಎಳೆ: ಬಿರಿಯಲ್ ಪೊಂಗಿದ ಪಣ್ಗಳ ಸಿರೆಯಱಿದಲ್ಲಿರಿಸಿ ಚಂಚುಪುಟದಿಂ ಸವಿಯಂ ಬರೆತೆಗೆದು . . . ಮೆಱೆದುದಾಮ್ರದೊಳ್ ಶುಕನಿಕರಂ (೧ಗಿಕ. ೨-೩೮). [ಸಂ. ಸಿರಾ]

**ಸಿರೆ$_2$** (ನಾ). ಮೆಣಸಿನ ಬಳ್ಳಿ: ತಳ್ತಡರ್ವ ಲತೆಗಳುಂ ಕೈವಿಟ್ಟ ಸಿರೆಗಳುಂ ಸೋರ್ವ ಸೋನೆಗಳುಂ ಒಱೆದುಗುವ ಪನಿಗಳುಂ . . . ಎಸೆಯೆ (ಲೀಲಾವ. ೬-೬೦ ವ).

[ಸಂ. ಸಿರ]

**ಸಿರೋತಿಗೆ** (ನಾ). ಒಂದು ಬಗೆಯ ಭಕ್ಷ್ಯ: ಸಣ್ಣಕ್ಕಿಗಳ ಬೋನ ಬೆಣ್ಣೆ ಕಾಸಿದ ತುಪ್ಪಾ ನುಣ್ಣನೆ ಕಡುಬು ಸಿರೋತಿಗೆ (ದೇವಾಂಪು. ೫-೨೨೮). [?]

**ಸಿರ್ಕ** (ನಾ). (ದ್ರಾಕ್ಷಿ, ಸೇಬು ಮುಂತಾದ ಹಣ್ಣುಗಳ ರಸದಿಂದ ಮಾಡಿದ) ಒಂದು ಬಗೆಯ ಹುಳಿದ್ರವ: ಯಾವಾಗಲಾದರೊಮ್ಮೆ ತೊಳೆಯುವ ನೀರಿಗೆ ಹುಳಿರಸ ಅಥವಾ ಸಿರ್ಕ ಬೆರಸಿದರೆ ಪಾತ್ರೆಗಳಲ್ಲಿ ಕಲೆಗಳಿದ್ದರೆ ಹೋಗಿ ಶುಭ್ರವಾಗುವುವು (ಅಡುಸೌ. ೪೪). [<— ಪಾರ. ಸಿರ್ಕಾ; ಹಿಂ. ಸಿರಕಾ; ಮರಾ. ಶಿರಕಾ, ಶಿರ್ಕಾ, ಸಿರಕಾ]

**ಸಿರ್ಕು$_1$** 'ಸಿಲ್ಕು$_1$' ನೋ.

**ಸಿರ್ಕು$_2$** 'ಸಿಲ್ಕು$_2$' ನೋ.

**ಸಿರ್ಕುಂಗೊಳಿಸು** (ಕ್ರಿ). ತೊಡಕನ್ನುಂಟುಮಾಡು; ಅಡ್ಡಿಪಡಿಸು: ಸಾಂಗನಿಜ ಶೀಲಮಂ ಸಿರ್ಕುಂಗೊಳಿಸಿದೆಯೋ (ವೃಷವಿ. ೩೨-೧೨).

[ಸಿರ್ಕು$_2$ (< ಸಿಲ್ಕು$_2$) + ಕೊಳ್$_1$ + - ಇಸು$_3$]

Δ **ಸಿರ್ಪು** 'ಸಿಪ್ಪು' ನೋ.

**ಸಿರ್ಪೆ** (ನಾ). (?) : ಕರ್ಪುಂ ನೇರ್ಪುಂ ಸಿ[ಪಾಠಾಂ. ಪೆ]ರ್ಪೆಯುಮಡರ್ಪುಮಾರ್ಪುಂ . . . ರೇಫಸಂಯೋಗಂಗಳ್ (ಶಮದ. ನ. ೫೦). 'ಸಿಪ್ಪೆ' ಪರಾ. [?]

**ಸಿರ್ಮಲಗೆ** (ನಾ). ಒಂದು ಊರಿನ ಹೆಸರು; IP ಬಿಜಾಪುರಜಿಲ್ಲೆಯ ಈಗಿನ ಚಿಮ್ಮಲಗೆ: ಕನ್ನವುರಿವಿಷಯೇ ಸಿ[ರ್ಮ್ಮ]ಲಗೆಪೂರ್ವ್ವದಿಗ್ಭಾಗೇ (ಸೌಇಇ. XI-i, ೮-೧೩: 862). [?]

**ಸಿರ್ವೆಗಾರ** (ನಾ). ಮೇಲಧಿಕಾರಿ; ಮೇಲ್ವಿಚಾರಕ: ಸಿರ್ವೆಗಾರ್ರು ರಾಣುವೆಯವರು ಅಳು ಗುರ್‍ರಿಕಾರ ವೆನ್ಕಟಕೃಷ್ಣಮರಾಜ್ಯೆಯ ಸಹ ಬರ್‍ರೆಸಿ ಕೊಟ ದಾನಶ್ಯಾಸನದ ಕ್ರಮ (ಎಕ. XIV, ತಿರುಮ. ೨೫೪-೧೮; 1758). [IP ಇದು 'ಸೇರುವೆಗಾರ' ಎಂಬುದರ ಅಪಲಿಖಿತ]

**ಸಿಲದೆ** (ನಾ). ಒಂದು ಬಗೆಯ ಔಷಧೀಸಸ್ಯ: ಅಂಡವಾತಕ್ಕೆ . . . ಹಕ್ಕಿ ಕಾರ, ಸೊಗದೆ, ಸಿಲದೆ, ನಾಯಿನಾರೆ, ಇವಂ ಆಡಿನ ಹಾಲಲ್ಲಿ ಕೊಡಿಸುವುದು (ವಿವೈವಿ. ೧೪೭).

[<— ತಮಿ. ಚಿಲನ್ತಿ]

**ಸಿಲಾಲಿಕಿತ್ತ** (ನಾ). ಕಲ್ಲಿನಲ್ಲಿ ಕೆತ್ತಿರುವ ಬರಹ; ಶಿಲಾಶಾಸನ: ಸಿಲಾಲಿಕಿತ್ತ ಯಿದಕೆ ಯಿ ೩ ಹಳ್ಳಿ ಕಾಣಿಗೆ (ಎಕ. IX (S), ಕಾನಕಾ. ೩೦-೮; 1332).

[IP ಇದು 'ಶಿಲಾಲಿಖಿತ' ಎಂಬುದರ ಅಪಲಿಖಿತ]

**ಸಿಲಾಸ್ತಂಭ** (ನಾ). ಕಲ್ಲುಕಂಬ; ಶಿಲಾಸ್ತಂಭ: ಸಸಿರವಿಕಿರಣತತಿಗಳುಳ್ಳನ್ನೆಗಮೀ ಶಾಸನದ ಸಿಲಾಸ್ತಂಭಂ ಭಾಸುರತರಮಾಗಿ ನಿಲ್ಕೆ ವಸುಧಾತಲದೊ[ಳ್] (ಸೌಇಇ. XI-i, ೧೪-೨೫; 872). [IP ಇದು 'ಶಿಲಾಸ್ತಂಭ' ಎಂಬುದರ ಅಪಲಿಖಿತ]

**ಸಿಲುಕಂಬು** (ನಾ). ಅಲಗಿನಿಂದ ಕೂಡಿರುವ ಒಂದು ಬಗೆಯ ಬಾಣ: ನೀಳದಾರಂ ಬಿಗಿದ ಸಿಲುಕಂಬಿನಿಂ . . . ಮಿಾನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂನಾಥನು (ಹಚಿಕಾ. ೫-೪೪).

[ಸಿಲುಕು$_3$ + ಅಂಬು$_2$./ ತೆಲು. ಚಿಲುಕುಟಮ್ಮು, ಚಿಲ್ಕುಟಮ್ಮು]

**ಸಿಲುಕಿಟ್ಟಿ** (ನಾ). ಮೊನೆಯುಳ್ಳ ಒಂದು ಬಗೆಯ ಈಟಿ : ಭೂರಿಭೀಕರವರಾಹನ ತಲೆ ಸಿಲುಕಿಟ್ಟಿ ಪೂರ್ಕೈವ ವಿಷದ ಜೀರ್ಕೊಳವೆ ಮಾರಿವೊಗದ ಡೆಂಕಣಿ ಮಸೆದಲ ಗುಗಳ್ತೋಱಿದುಪತಿಭಯಾಂಕುರವ (ಕಂಸವಿ. ೧೧-೧೩೨). [ಸಿಲುಕು$_3$ + ಇಟ್ಟಿ$_2$]

**ಸಿಲುಕಿಸು** 'ಸಿಲ್ಕಿಸು' ನೋ.

**ಸಿಲುಕು$_1$** 'ಸಿಲ್ಕು$_1$' ನೋ.

**ಸಿಲುಕು$_2$** 'ಸಿಲ್ಕು$_2$' ನೋ.

**ಸಿಲುಕು$_3$** (ನಾ). ಅಲಗು; ಮೊನೆ: 'ಸಿಲುಕಂಬು', 'ಸಿಲುಕಿಟ್ಟಿ' ಪರಾ.

[ದೇ. ‖ ತಮಿ. ಚಿಲುಕ್ಕು = ಕಬ್ಬಿಣದ ಸಲಾಕೆ ; ತೆಲು. ಚಿಲುಕು]

**ಸಿಲುಕು$_4$** 'ಶಿಲುಕು' ನೋ.

**ಸಿಲುಕುಗಟ್ಟಿಗೆ** (ನಾ). ಬೇಟೆಯ ಒಂದು ಸಾಧನ; ಪ್ರಾಣಿಯು ಸಿಕ್ಕಿಹಾಕಿಕೊಳ್ಳುವಂತೆ ಅಳವಡಿಸಿರುವ ಮೊನಚಾದ ಕೋಲು, — ಕಟ್ಟಿಗೆ: ಸಿಲುಕು[ಪಾಠಾಂ. ಸಿಂಗ]ಗಟ್ಟಿಗೆ ಬೀಸುಗಣ್ಣೆ . . . ಭೇರುಂಡ ಸಿಂಹಪ್ರಕರವೆರಸಿ ಬೇಡರು ನೆರೆದರು (ಹಚಕಾ. ೫-೯); ಆ ಬೇಡಂ . . . ಹದವಿಲ್ಲು ಸರಳು ಪಲವಂದದ ಬಲೆ ಬಡಿಕೋಲು ಸಿಲುಕುಗಟ್ಟಿಗೆಯುಂ ಕೊರ್ಬಿದ ನಾಯ ಪಿಡಿದು ಬರುತಿರ್ಪುದ ಕಂಡು ಮೃಗಂಗಳೆಲ್ಲ ಬೆದಱಿದವಾಗಳ್ (ನನ್ನಚಾ. ೫-೧೦೨). [ಸಿಲುಕು$_3$ + ಕಟ್ಟಿಗೆ$_1$]

**ಸಿಲುಕುಗುದುರೆ** 'ಸಿಲ್ಕುಗುದುರೆ' ನೋ.

**ಸಿಲುಕುಬಳೆ** (ನಾ). ಪ್ರಾಣಿಯು ಸಿಕ್ಕಿಹಾಕಿಕೊಳ್ಳಲು ಕೊಕ್ಕೆಯನ್ನು ಅಳವಡಿಸಿರುವ ಒಂದು ಬಗೆಯ ಬೇಟೆಯ ಸಾಧನ: ಸಿಲುಕುಬಳೆ ತಳುಕು ಚೌದಾರೆ ದಸಿ ಬಿಸುಗದಿರು ಸವಿವಾಯನೆಂಬ ನಾನಾಸರಳನು ಸೆಳೆದು (ಸೋಮಚ. ೫-೨೬).

[ಸಿಲುಕು$_3$ + ಬಳೆ$_2$]

**ಸಿಲುಪಿ** 'ಸಿಲ್ಪಿ' ನೋ.

**ಸಿಲುಪು, ಶಿಲುವು, ಸಿಲುವು** (ನಾ). ೧. (ದ್ರವಪದಾರ್ಥವು)ಮಂದವಲ್ಲದುದು; ತಿಳಿಯಾದುದು: ಕೆಂಪಾಗುವಂದದಿಂ ಕಾಸಿಕೊಂಡು ಸಿಲುಪಾದ ಮೊಸರಿನೊಳು ಹುಳಿ ಮೆಣಸು ಕರಿಬೇವಿನೆಲೆಯರಿಸಿನವನಿಕ್ಕಿಕೊಂಡು (ಸೂಪಶಾ. ೫-೧೧). **ಶಿಲುವು** : ೨. (ಕಾಗದ, ಬಟ್ಟೆ, ಲೋಹದತಗಡು ಮುಂತಾದುವುಗಳ) ತೆಳುವು ; ನವುರು: ಕಳಿಂಗದೇಶದ ಶಿಲುವಾದ ಶೀರೆಯನುಡಿಸಿ (ಸೌಗಂಧಿ. ೧೭೪-೬). **ಸಿಲುವು** : ೨. ''ಆಯತಾ — ನೀಳವಾಗಿ, ತನ್ವಿ — ಸಿಲುವಾಗಿ'' (ಬಾಹಟೀ. ೨-೩-೧೧೪ ವ); ಹಿರಿದು ಸಿಲುವಾ [ಪಾಠಾಂ. ತೆಳುಪಾ, ಸಿಲಪಾ]ಗಿ ಕಣಕವನೊತ್ತಿಕೊಂಡು (ಸೂಪಶಾ. ೧-೩೯). [?]

**ಸಿಲುಬೆ** 'ಶಿಲುಬೆ' ನೋ.

**ಸಿಲುವು** 'ಸಿಲುಪು' ನೋ.

**ಸಿಲುವೆ** 'ಶಿಲುಬೆ' ನೋ.

**ಸಿಲೆ$_1$, ಸೆಲೆ$_5$** (ನಾ). ಕಲ್ಲುಬಂಡೆ; ಅರೆ: ''ಸಿಲೆಯೆಂದೆನೆ ಶಿಲೆಯಕ್ಕುಂ'' (ಕವಿಕಂ. ೫೧); ಎಣ್ಬರಿಂದಂ ತಳರ್ಚಲಾಱದಂತಪ್ಪ ಪಿರಿದೊಂದು ಸಿಲೆಯಂ ತಂದು ತಲೆಯತ್ತಿಟ್ಟು ಪಟ್ಟೆರ್ದುದಂ ಕಾಷ್ಠಕೂಟಂ . . . ಕಂಡು (ವಡ್ಡಾರಾ. ೭೬-೨೮); ಸಿಲೆಯ ಮೇಲಾದೊಡಂ ಶಕುನಮಂ ನಿಱಿಪಂತೆ ನಿಱಿಸುವೆಂ ಪಂದಿಯಂ ನೀಂ ಮೆಚ್ಚಲುಂ (ಪಂಪಭಾ. ೫-೪೭); ಸಿ[ಪಾಠಾಂ. ಶಿ]ಲೆಯ ಮಱೆಯ ಹೇಮದಂತೆ (ಮಹಾದೇ. ಬ. ೯-೨). **ಸೆಲೆ$_5$** : ಪಾಸಱೆಗಳುಮಂ ಕನಕದ ಪಿರಿಯ ಸೆಲೆಗಳುಮನೊಟ್ಟಿ ಬೆಟ್ಟಾಗಿ ಪುಂಜಿಸಿ (ಪಂಪಭಾ. ೬-೩೧ ವ); ಅಣುವಂ ಸಿಡಿಮಿಡಿಗೊಂಡಸವಸದಿಂ ದಪ್ಪುಗವಗೆಯನಂ ಕೈಯ ಪೆರ್ಮರನೊಳ್ ಸೆಲೆಯೊಳ್ ಮಲೆಯೊಳ್ ಮಲೆದು ತಾಗಿದಂ (ರಾಮಾಶ್ವ. ೧೩೧-೨೪).

[< ಸಂ. ಶಿಲಾ]

**ಸಿಲೆ$_2$** (ನಾ). ಉಕ್ಕಿನ ಕವಚ; ಚಿಲಖತ್ತು: ಖಾನಖಾನರು ಪೌಜ ಬೇಱ ಬೇಱಳವಡಿಸಿಯೆ ನಡೆತರಲು ಸಿಲೆಯ ಸಂಜೋಗದ ರಾವುತರೊಗ್ಗಲಿ ಖಳನ್ನೆತಂದ ನುಬ್ಬಿನಲಿ (ಕಂನವಿ. ೧೧-೨೯); ತಲೆ ಠವುಳಿ ಜೋಡುದಗಲೆ ಬೆನ್ನೊಳಳವಟ್ಟ ಬಿಲುಬಾಣ ಗಳ ಬತ್ತಳಿಕೆಯ ಸಿಲೆಯ ಸಂಜೋಗದ ಕುದುರೆಯ್ನೆತಂದುವು (ಕಂನವಿ. ೧೮-೮೩).

[<— ಅರ. ಸಿಲಾಹ್; ಮರಾ. ಸೀಲ, ಸೀಲ್ಹಾ]

**ಸಿಲೆದಾರ** 'ಶಿಲೆದಾರ' ನೋ.

**ಸಿಲೇದಾರ** 'ಶಿಲೆದಾರ' ನೋ.

**ಸಿಲ್ಕಾಸಿಲ್ಕಿ** (ನಾ). (ಆಲಂ) (ತರ್ಕದ ರೀತಿಯಲ್ಲಿ) ಒಂದಕ್ಕೊಂದು ತೊಡರಿಕ್ಕುವುದು; ಒಂದು ಅಡ್ಡಿಗೆ ಇನ್ನೊಂದು ಅಡ್ಡಿಯನ್ನು ಒಡ್ಡುವುದು: ನಾಲ್ಕುಮುಪಾಯದ ನುಡಿಗಳ ಸಿಲ್ಕಾಸಿಲ್ಕಿಗಳನೆಯ್ದೆ ನುಡಿದ್ಯೆ (ಶಾಂತಿಪು. ೩-೯೧).

[< ಸಿಲ್ಕು$_2$ + ಸಿಲ್ಕು$_2$ + - ಇ$_3$]

ಸಿಲ್ಕಿಸು , ಸಿಕ್ಕಿಸು , ಸಿಲುಕಿಸು (ಕ್ರಿ). ೧. ಬಂಧನಕ್ಕೊಳಗಾಗುವಂತೆ ಮಾಡು; ಸಿಕ್ಕಿಕೊಳ್ಳುವಂತೆ ಮಾಡು: ಮಿಳಿರ್ವ ಬಂಬಲ್ಗುರುಳುಗಳೆಂಬ ತೊಡಂಕುವಲೆ ಬಸಂತನ ಕೆಳೆಯನೆಂಬೆರಲೆಯಂ ಸಿಲ್ಕಿಸೆಯುಂ (ಕಬ್ಬಿಕಾ. ೧೨೩). **ಸಿಕ್ಕಿಸು** : ೧. ಒಳಹೊಗಿಸಿ ಸಾತ್ಯಕಿಯ ಸಿಕ್ಕಿಸಿ ಗೆಲುವ ತವಕವ ಕಂಡು ಕೆಣಕಿದರಳವಿಯಲಿ ಸಹದೇವನಕುಳರು ಕೌರವಾನುಜನ (ಕುವ್ಯಾಕ. ೪-೫); ಹಕ್ಕಿಗಳರಸ ಜೀಮೂತವಾಹನಗೆ ದುಮ್ಮಿಕ್ಕಿದೊಲೆಱಗಿ ರಕ್ಕಸನ ಸಿಕ್ಕಿಸಿ ತಲೆಮುಱಿವಂತೊದ್ದು ನೆಲದೊಳಗಿಕ್ಕಿದ ಕಾವು ಖಾತಿಯಲಿ (ಮೋಹತ. ೧೨-೯೪). ೨. ಒಳಪಡಿಸು; ಗುರಿಯಾಗಿಸು: ಕನ್ನಡ ಮಾತುಗಳನ್ನು ಬಗೆಬಗೆಯ ಪ್ರಸಂಗಗಳಿಗೆ ಹಚ್ಚಿ ತೀಡಬೇಕು . . . ಅನ್ಯಭಾಷಾಪದಗಳ ಸಂಪರ್ಕ ಸಂಘರ್ಷಣೆಗಳಿಗೆ ಅವನ್ನು ಸಿಕ್ಕಿಸಬೇಕು (ಸಾಹಿಶ. ೬೩); ನನ್ನನ್ನು ಈ ಇಕ್ಕಟ್ಟಿಗೆ ಸಿಕ್ಕಿಸಬೇಡ (ರೂಢಿ). ೩. ಒಳಹೊಗಿಸು; ತೂರಿಸು: ಅಲ್ಲಲ್ಲಿ ಊದುಕಡ್ಡಿ ಸಿಕ್ಕಿಸಿತ್ತು (ಕೀಲುಗೊಂ. ೧೫೨); ಬೆಟ್ಟಕ್ಕೆ ಹೋಗುವವನ ಸೊಂಟದಲ್ಲಿ ಕುಡುಗೋಲು ಸಿಕ್ಕಿಸಿದ ಹಾಗೆ (ಗಾದೆ). ೪. ನೇಲುವಂತೆ ಮಾಡು; ನೇತುಹಾಕು: ಅವರು ಅಂಗಿಯನ್ನು ಗೂಟಕ್ಕೆ ಸಿಕ್ಕಿಸಿದ್ದರು (ರೂಢಿ). ೫. ದೊರಕುವಂತೆ ಮಾಡು; ಲಭಿಸುವಂತೆ ಮಾಡು: ನನ್ನ ಸಮಯಕ್ಕೆ ಹಣ ಸಿಕ್ಕಿಸುವ ಜವಾಬ್ದಾರಿ ನಿನ್ನದು (ರೂಢಿ). **ಸಿಲುಕಿಸು** : ೧. ಬೆಳ್ಳಾರಬಲೆಗಳ ಹರಹಿ ಸೊಪ್ಪಿನ ತೋಹಿನಲಿ ಸಿಲುಕಿಸಿದರಾ ಮೃಗನ (ಕುವ್ಯಾಆ. ೨೩-೧೦); ನಿನ್ನ ಮುತ್ತಿನಂಥ ಮಕ್ಕಳ ಆಟಪಾಟ ನನ್ನನ್ನು ನಿನ್ನ ಋಣದಲ್ಲಿ ಸಿಲುಕಿಸಿವೆ ಗೊತ್ತೇ? (ಕಂಬಹು. ೧೨೩). ೨. ನನ್ನನ್ನು ಈ ಗೊಂದಲದಲ್ಲಿ ಸಿಲುಕಿಸಿ ತಮಾಷೆ ನೋಡಬೇಡ (ರೂಢಿ). [ಸಿಲ್ಕು$_1$ + – ಇಸು$_3$]

**ಸಿಲ್ಕು$_1$, ಸಿಕ್ಕು$_1$, ಸಿಗು, ಸಿರ್ಕು$_1$, ಸಿಲುಕು$_1$** (ಕ್ರಿ). ಸಿಕ್ಕ$_1$ (ಭೂತಕೃ), ಸಿಕ್ಕು$_2$ (ಭೂತನ್ಯೂ). ೧. ಬಂಧನಕ್ಕೊಳಗಾಗು; ಕಟ್ಟುಬೀಳು; ಸೆರೆಯಾಗು: "ಸಿರ್ಕು, ಸಿಲ್ಕು – ಪ್ರತಿಬಂಧೇ" (ಶಮಧಾ); ಬಾಟ್ಟು ಪಂಬಲದೇನಿಂ ನಿನಗುಂಟೆ ನಿನ್ನನುಜರಂ ಕಂಡೆಂತುಮೇನೆನ್ನ ತೋಳ್ವಲೆಯೊಳ್ ಸಿಲ್ಕಿದೆಯೆಂದು ಮೂದಲಿಪುದುಂ (ಪಂಪಭಾ. ೧೨-೧೪೬); ಇದಱ ಬಲೆಯೊಳ್ ಸಿಲ್ಕವೇಡ (ಪಂಚತಂ. ೨೩೩-೬); ಮಾಕಂದಮಹೀಜದ ಮಧುರಫಲವನಾನಂದದಿ ಕಂಡಾಯೆಡೆಗೆಯ್ದುತ್ತಲ್ಲಿಯ ಬಲೆಯೊಳಿ ಸಿಲ್ಕಿ (ಜಯಕಾ. ೨-೩೩). ೨. ತೊಡಕಿಕೊಳ್ಳು; ತೊಡರಿಕೊಳ್ಳು: ಉಱುವ ಕಾಳ್ಗಿಚ್ಚಿನೊಳು ಸಿಲ್ಕಿದ ಗಱಿ ನೆಱೆಯದಂಚೆಯವೊಲಾದರು . . . ಶೋಕೋದ್ರೇಕ ಪರವಶರು (ಸಾನಂಚ. ೭-೪೨); ಅವನಂ ನೋಳ್ಪ ಸುರುಚಿರಪಲ್ಲವಪಾಣಿಯ ತನುತನು ಪಿರಿದುಂ ನಡುಗಿ ಮನೋಹರಮಾದುದು ಪರಿವೊನಲೊಳ್ಸಿಲ್ಕಿದ ನವಮೋಹನಲತೆ ಕಂಪಿಸುವಂತೆ (ಜಯಕಾ. ೪-೨೦). ೩. ದೊರಕು; ಲಭಿಸು; ಲಭ್ಯವಾಗು: ಪಿಂಜರಿವಟ್ಟಲೊಳ್ಮಿಱುಪ ಸೀಧುವನೀಂಟುತೆ ನೋಡಲಲ್ಲಿ ಮೇಣ್ಮಂಜುಮುಖೀಯೆಂದು ಬಿಂಬಿಸೆ ಸುಧಾರುಚಿ ಸಿಲ್ಕಿದನೆಂದು ನೋೞ್ಪ ತಕ್ಕಂಜದಳಾಕ್ಷಿಯಂ . . . ಜಱಿದು (ಉದ್ಭಟ. ೫-೭೮); ಕಕ್ಕಸವೇಡನೋರ್ವನುಱೆ ಬೇಂಟೆಯನಾಡಲೊಡಂ ಪುಡುಂಕಿ ಬಲ್ಪಕ್ಕಿಗಳಂದು ಸಿಲ್ಕಿದವು (ಹಮ್ಮಿರ. ೪-೬೨). ೪. ವಶವಾಗು; ಅಧೀನಕ್ಕೊಳಪಡು: ಮಿಥಿಳಾಪತಿ ಸಿಲ್ಕಿದಂ . . . ಸೇನೆ ಪರೆದುದೆಣ್ದೆಸೆಗಾಗಳ್ (ದಶಕು. ೨-೨೮). ೫. ಸಿಕ್ಕಿಬೀಳು; ಪತ್ತೆಯಾಗು: ಸಿಲ್ಕಿದ್ದೆ ಪೋ ಪೋಱಮಡು ಕೊಳದಿಂ ಸತ್ತೊಡಂ ಪುಟ್ಟಿ ನೀನೀಗಡೆ ದಲ್ ಕೊಂದಪ್ಪೆಂ (ಪಂಪಭಾ. ೧೩-೭೮). ೬. ಎಟುಕು; ನಿಲುಕು: ಇಡೆ ತಿರುಗುತ್ತ ಬರ್ಪ ಬಡಿಕೋಲೊಳೆ ಸಿಲ್ಕುತೆ ಸಿಲ್ಕದಾ ಮೊಲಂ ಗಿಡುಗಳೊಳೋಡಿ ಪೊಕ್ಕ ಪದದೊಳ್ (ಗಿಂಕ. ೧-೮೮); ಪಿಡಿವ ತಳಕ್ಕೆ ಸಿಲ್ಕುತುಮುಮರ್ಚಿದೊಡಂ ನುಸುಳುತ್ತುಂ . . . ಚಮರೀಮೃಗಶಾಬಮಿಂತು ಸಂಗಡಿಯೊಳೆ ಪೋಗವೋಗೆ ಬೞಿಯಂ ಬಿಡದೆಯ್ದುತುಮಿರ್ದಂ (ಕುಸುಮಾ. ೭-೮೦). ೭. ಸೇರು; ಕೂಡು: ನೀಳನೀರಜವನಂಗಳ ಚೆಲ್ವುಗಳೆಂಬುವಾ ಲತಾಂಗಿಯ ಕಡೆಗಣ್ಣ ಬೆಳ್ಪುಗಳ ಸಿಲ್ಕಿದ ಸಿಲ್ಕಿನ ಸಿಲ್ಕಿವಲ್ಲವೇ (ಪಂಪಭಾ. ೪-೭೦); ತಕ್ಕು ಕಡಂಗಿದಚ್ಛಸವಿನೋಟಕೆ ಸಿಲ್ಕಿದ ದಿಟ್ಟಿ ಮೂರ್ಛೆಗೊಲ್ದಿಕ್ಕುವ ಚೇತನಂ . . . ಒಪ್ಪೆ ಶಿವೆಯಂ ನಲಿದರ್ಚಿಸುತೊಪ್ಪಿದಂ ನೃಪಂ (ಉದ್ಭಟ. ೪-೩); ನಿಮಿರ್ದುವು . . . ಸಮುದ್ರಿಷ್ಟಿಯಾಗಿ ಸಿಲ್ಕಿದುವೆಮೆಯಿಕ್ಕಲ್ಕಱಿದುವವಳ ಧವಳಕಟಾಕ್ಷಂ (ಶಮದ. ೨೨೫ ಪ್ರಯೋ). ೮. ಚುಚ್ಚಿಕೊಳ್ಳು; ನಾಟು; ಒಳಸೇರು: ಅಡಿಯಲ್ಲಿ ಸಿಲ್ಕಿದ ಮುಳ್ಗಳಂ ನಿಲ್ಲದೊತ್ತಿ ಪುಳುಂಬಿನಿಂ ಕಳೆಯುತ್ತೆ . . . ಅರಣ್ಯಸಂಚರನೊಪ್ಪಿದಂ (ಉದ್ಭಟ. ೪-೧೨೦). **ಸಿಕ್ಕು$_1$** : ೧. ಸಿಕ್ಕಿದೆರಲೆಯಂತೆ ಪಲ್ಲ ಸಂದಿಯಡಕೆಯಂತೆ (ಧರ್ಮಾಮೃ. ೯-೨೩); ಬಹುಕಾಂಕ್ಷೆಯೊಳು ಸಿಕ್ಕಿ[ಪಾಠಾಂ. ಲ್ಕಿ]ದಂತಿರಬೇಕು ನಿಃಸ್ಪೃಹನಾಗಬೇಕೆದೆಯೊಳಗೆ (ಭರಚ. ೨-೯); ರೊಕ್ಕಗಳಿಲ್ಲ ಮೋಹಕ್ಕೆ ನಾ ಸಿಕ್ಕಿ ದಕ್ಕಿದೆ ನಿನಗೆ (ಕಂನವಿ. ೨-೧೦೫). ೨. ಘನವಿಟಪಕೋಟಿಯೊಳ್ ಸಿಕ್ಕಿ[ಪಾಠಾಂ. ಸಿಲ್ಕಿ] ನಿಂದ ತಾರಗೆಗಳೆಲರಿನುದಿರ್ದಪು ವಿಳೆಗೆಂಬಿನೆಗಂ. . . ಬಿರಿದ ಬಿದಿರ ಮುತ್ತುಗಳುಗುಗುಂ (ವರ್ಧಪು. ೧೦-೪೨); ಮೃಡನಱಿದು ನಗುತೊತ್ತಲಾ ಗಿರಿಯಡಿಯಲೇ ಕೈಸಿಕ್ಕಿಯಜ ನಡನಡುಗಲೊದಱಿದನವನು ವರುಷಸಹಸ್ರಪರಿಯಂತ (ತೊರರಾ. ೧-೮-೩೨). ೩. ಸಿಕ್ಕಿತೇ ನಮಗೀಗಲಡವಿಯ ಮೆಕ್ಕಲು (ಸಂಭಪ. ೭-೩೭); ಈ ಹವ್ಯಾಸದಿಂದಲೇ ರಾಯರಿಗೆ 'ಚಾಕ್ಲೇಟು ಕಾಕಾ' ಎಂಬ ಬಿರುದು ಸಿಕ್ಕಿತು (ಕಂಬಹು. ೧೨೧); ದೂರದ ನೀರು ದಾರೀಲಿ ಸಿಕ್ಕೀತೆ? (ಗಾದೆ). ೪. ಸಿಕ್ಕಿದ ಕಳ್ಳನಂತೆ ಪಲವಂ ನೆನೆಯುತ್ತುಂ (ಧರ್ಮಾಮೃ. ೧-೧೪೪); ಹಕ್ಕಲಾದುದು ನಮ್ಮ ಬಲ ಶಿಶು ಸಿಕ್ಕನಿನ್ನೂ ಪಾಂಡವರ ಪುಣ್ಯಕ್ಕೆ ಸರಿಯಿಲ್ಲೆನುತ ಕೌರವರಾಯ ಗರ್ಜಿಸಿದ (ಕುವ್ಯಾದ್ರೋ. ೫-೮೦); ಓಡಿ ಸಿಕ್ಕಬೇಡ, ಆಡಿ ತಪ್ಪಬೇಡ (ನೀತಿಚಿಂ. V, ೧೭). ೫. ಮೊನ್ನೆ ಅವರ ಮನೆಯಲ್ಲಿ ಕದ್ದ ಕಳ್ಳ ಸಿಕ್ಕಿದ್ದಾನೆ (ರೂಢಿ). ೬. ಕಂಡುದ ಹಿಡಿಯಲೊಲ್ಲದೆ ಕಾಣದುದನಱಸಿ ಹಿಡಿದಹೆನೆಂದಡೆ ಸಿಕ್ಕದೆಂಬ ಬಳಲಿಕೆಯ ನೋಡಾ (ಅವಚಂ. ಕ. ೨೪-೫೧); ಆ ಎತ್ತರದ ರೆಂಬೆಯಲ್ಲಿರುವ ಹೂವು ಕೈಗೆ ಸಿಕ್ಕುವುದಿಲ್ಲ (ರೂಢಿ). ೯. ಈಡಾಗು; ಗುರಿಯಾಗು: ಈ ಮಹಾಸ್ತ್ರಕೆ ಸಿಕ್ಕಿದೆವೆಯೆಂದೊಱಲಿತರಿಸೇನೆ (ಕುವ್ಯಾದ್ರೋ. ೧೯-೩೪); ಲಾಗಿಸಿ ನಭಕುಪ್ಪರಿಸುವ ಬಂದಿದಿರಾಗಿ ನಿಲ್ಲುವ ಭೂತದಂತೆ ತಾಗುವ ಶಸ್ತ್ರಕೆ ಸಿಕ್ಕದೆ ಬಯಲಾಗಿ ತಾಗಿ ಗರ್ಜಿಪ ಸಿಂಹದಂತೆ (ಮೋಹತ. ೧೧-೭೮). ೧೦. ಭೇಟಿಯಾಗು; ಸಂಧಿಸು: ನೀವು ನಿಲ್ದಾಣದ ಹತ್ತಿರ ಸಿಕ್ಕಿದ್ದಿರೆಂದು ಭಾಸ್ಕರನೂ ಹೇಳಿದ್ದ (ಕಮನೆ. ೧೫೦). ೧೧. (?) : ತಂಡತಂಡದೆ ಕೃಷ್ಣನಗರಿಯೊಳ್ ಚಲಿಸುವ ಮಂಡಳಿಕರ ಕಾಲ ಕಡಗ ಪೆಂಡೆಯ ತಾಟಾಡಿ ಸಿಡಿದ ರತ್ನಗಳ ಕೈದಂಡೆಯೊಳ್ ಸಿಕ್ಕಿ ಬಾಚುವರು (ಮೋಹತ. ೩-೬೧). **ಸಿಗು** : ೧. ತ್ರಿಕೂಟಗಳ ತಿರುಗಣೆಯಲ್ಲಿ ನನ್ನ ಅಂತರಾತ್ಮವು ಸಿಕ್ಕು ಹೊಯ್ದಾಡಹತ್ತಿತ್ತು (ಮುಂಗಾಪು. ೪೨); ಈ ಆಸೆಗಳ ಕಾಮನೆಗಳ ಜಾಲದಲ್ಲಿ ಸಿಕ್ಕ ಮಾನವ ಸತ್ವರಜತಮೋಗುಣಗಳ ಕೈಗೊಂಬೆಯಾಗುತ್ತಾನೆ (ಧರ್ಮಸಾ. ೧೩೧). ೩. ಸೊನ್ನಗಾರಗೆ ಶುದ್ಧಭಂಗಾರ ದೊರೆಯೆ ಸಂಪನ್ನಚಿತ್ರಕಗೆ ಸುಂದರಗಾತ್ರ ಸಿಗಲು . . . ಎಸಗದಿರ್ದಪರೆ ನಗವನಾಕಾರನಿಸ್ಸಂಗಮಾಲಾಕೃತಿಗಳ (ಪರಶು. ೧-೨೦); ಸಿಕ್ಕ ಬೇಟೆಯನ್ನು ಎಲ್ಲರೂ ಸರಿಯಾಗಿ ಹಂಚಿಕೊಳ್ಳಬೇಕು (ಮುಂಬಯಿ. ೪-೧೦); ಇಂಥವರು ಜಗತ್ತೇ ಸುತ್ತಿ ಬಂದರೂ ಸಿಗಲಾರರು (ಭಾರತಿ. ೫೭). ೬. ಸಂಗಡಿಯನ್ನು . . . ಆ ಹುಡುಗನ ಕೈಗೆ . . . ಸಿಗುವ ಹಾಗೆ ಹೊಳೆಯಲ್ಲಿ ತೇಲಿಬಿಟ್ಟನು (ಮುಂಬಯಿ. ೪-೩೮); ಮೇಲಿನ ರೆಂಬೆಯಲ್ಲಿರುವ ಹೂವು ನನ್ನ ಕೈಗೆ ಸಿಗುತ್ತಿಲ್ಲ (ರೂಢಿ). ೧೦. ರಜೆಯ ಮೇಲಿರುವುದರಿಂದ ಇಂದು ಅವರು ಕಚೇರಿಯಲ್ಲಿ ಸಿಗುವುದಿಲ್ಲ (ರೂಢಿ). **ಸಿರ್ಕು$_1$** : ೧. "ಸಿರ್ಕು, ಸಿಲ್ಕು – ಪ್ರತಿಬಂಧೇ" (ಶಮಧಾ); ಸೋರ್ಕಿ ಶರೀರ ನಾರಿ ಧನವೆನ್ನವೆಮೆಂದವರಲ್ಲಿ ಕಣ್ಮನಂ ಸಿರ್ಕಿ ವಿವೇಕಿಗಳ್ಬಿಡದ ಧರ್ಮಮನೊಲ್ಲದೆ . . . ಅಂತಕನೊಯ್ಯೆ ಕಾಲದೊಳ್ ಮರ್ಕಟನಂತೆ ಪಲ್ಗಿರಿವರು (ನೀತಿಸಾ. ೯೮೮). ೨. ನಳಿನೀಸಂಪತ್ತಿಸೂತಂ ಪೆಱಗುಡುಗೆ ಹಯಂ ಜಾಱೆ ತೋಳ್ಜಾಱೆ ತೇರ್ವ್ಯಾಕುಳ ಚಕ್ರಂ ಸಿರ್ಕೆ ಶೃಂಗಾಗ್ರದಿನಿೞಿವೆಡೆಯೊಳ್ ಪದ್ಮಿನೀಕೋಶದೇಶಾವಳಿಯಂ ಕೈಕೊಂಡು ಬೆಂಬತ್ತಿಸೆ (ಅನಂಪು. ೭-೬೨). **ಸಿಲುಕು$_1$** : ೧. ಮಾಯದ ಸಂಸಾರದಲ್ಲಿ ಸಿಲುಕಿದೆನು ಎನ್ನ ದೇವ . . . ನಿಮ್ಮ ಹೊದ್ದುವಂತೆ ಮಾಡಾ ನಿಮ್ಮ ಧರ್ಮ (ಮಹಾದೇ. ಬ. ೧೪-೧೩); ಸಿಲುಕುವುವು ಮೃಗಪಕ್ಷಿ ಹೂಡಿದ ಬಲೆಗಳಲಿ ಕಾಡಾನೆ ಬೀಸಿದ ಬಲೆಯ ಕೊಂಬುದೆ (ಕುವ್ಯಾಕ. ೧೩-೧೪). ೨. ಮರದ ತುದಿಗೊಂಬುಗಳೊಳ್ ಪೊಳೆವುವು ಸಿಲುಕಿದ ತಾರಾವಳಿಗಳವೆನೆ ತೊಳಗಿ ಮೊಳೆವ ಕುಸುಮಾವಳಿಗಳ್ (ಕಾದಂಪೂ. ೯೪); ರಿಪುಭಟ ನಿವಹಮಧ್ಯದೊಳೀತ ಸಿಲುಕಿದನು (ಕುವ್ಯಾದ್ರೋ. ೧೧-೧೭); ಮುಗಿಲ ಪೇರಲೆಗಳೊತ್ತಾಟದೊಳು ಸೆರೆ ಸಿಲುಕಿ ಚಂದಿರನ ಕಿರುನಗೆಯು ಮಾಯವಾಗುತಲಿರಲು (ಕವಿಕಾ. ೨೮-೬). ೩. ನೋಡುತಿರ ಕಾಣಬರುತ್ತಿದೆ ಮುಟ್ಟುವರೆ ಕೈಗೆ ಸಿಲುಕದು (ಅವಚಂ. ೧೭೬-೭೦೦); ಇವಳು ಬಹುವಿಧಪುಣ್ಯಶಕ್ತಿಯೊಳೆವಗೆ ಸಿಲುಕಿದಳೆಂದು (ಕುವ್ಯಾಸ. ೧೫-೯); ಸ್ತುತಿಗೆ ಸಿಲುಕದ ಅಪ್ರತಿಮ(ಮಹಾ)ಮಹಿಮ ನೀನೆ (ಪುರಂದ. ೨-೨೭-೩). ೪. ದ್ರೋಣಂಗರಸ ಸಿಲುಕಿದನೆಂದು ಬಗೆದ್ಯೆ ಮರುಳೆ ಮುರವೈರಿಯ ಕಟಾಕ್ಷದ ಕಾಹು ಘನವೆಂದ

(ಕುವ್ಯಾದ್ರೋ. ೨-೬೪); ಈ ಸೂಳೆ ವಿನ್ನಣದೋಜೆ ಸಿಲುಕಿದನು (ಸಾಳ್ವಭಾ. ೧೭-೨೬); ನಾನು ಚಂದ್ರಗುಪ್ತನಿಗೆ ಸಿಲುಕಿದರೆ ಏನು ಮಾಡುವನೋ? (ಮುದ್ರಾಮಂ. ೧೬೭). ೫. ಸಂಭೋಗದಲಿ ಸಿಲುಕಿದನಿಂದ್ರನಾತನ ಸದೆದುದೀ ಮುನಿಶಾಪ ರೂಪಾಯ್ತಂಗ ವಬಲೆಯರ (ತೊರರಾ ೧-೧೨-೧೭). ೬. ಆಕಾರ ನಿರಾಕಾರವ ನುಂಗಿ ಬಯಲು ಸಮಾಧಿಯಲ್ಲಿ ಸಿಲುಕಿತ್ತು ನೋಡಾ (ಅವಚಂ. ೧೬೬-೭೫೦); ಚಿತ್ತವೆನಗೊಬ್ಬನಲಿ ಸಿಲುಕಿತು ಮರಳಿಪೊಡೆ ಕಮಲಾಕ್ಷಗಳವಲ್ಲ (ನಳಚ. ೩-೩೩). ೭. ಪಾರ್ಥನ ಸರಳ ಚೂಣಿಗೆ ಸಿಲುಕಿದೆನು ಪರಿಹರಿಸಿ ನೀವು (ಕುವ್ಯಾಭೀ. ೧೦-೬); ನಾನು ನಿರಪರಾಧಿಯಾದರೂ ಸುಳ್ಳುಅಪವಾದಕ್ಕೆ ಸಿಲುಕಿದ್ದೇನಾದರೂ ನಿಮ್ಮ ಕ್ರೂರಕೃತ್ಯವನ್ನು ಕ್ಷಮಿಸುತ್ತೇನೆ (ಪಾಶ್ಚಾಪು. ೧೬).

**ಸಿಕ್ಕುಸಿಕ್ಕು₁, ಸಿಲುಕುಸಿಲುಕು, ಸಿಲ್ಕುಸಿಲ್ಕು** (ದ್ವಿರುಕ್ತಿ) : ದಕ್ಷಿಣದ ಅರಸಂಗೆ ಸೊಕ್ಕಿನ ತುರುಕರು ಸಿಕ್ಕುಸಿಕ್ಕಳಿದು ಜಗವೆಲ್ಲ ವಶವಹುದು (ಸರ್ವಜ್ಞ. ೧೧೦೬); ನಾಭಿಯಿಂದ ಕೆಳಗೆ ವೇದನೆಯುಂಟಾಗಿ ಮೂತ್ರ ವಿವರ್ಣಗೂಡಿ ಸಿಕ್ಕಿಸಿಕ್ಕಿ ಮೂತ್ರ ಬಿಡುತ್ತ . . . ದಾಹವನೂ ಉಂಟುಮಾಡುವುದೊ ಅದೇ ಪಿತ್ತಾಧಿಕ್ಯವಾದ ಮೂತ್ರ ಕೃಚ್ಛ್ರವೆಂದರಿವುದು (ಸಕವ್ಯ. ೩೭೦); ನೆರೆಯಿಲ್ಲ ಸಂಸಾರವಿಳಿದಂತೆ ಬಾವಿಯೊಳು ಸಿಲುಕಿಸಿಲುಕಿ ಭ್ರಮಿತನಾದೆ (ಪುರಂದ. ೧-೧೫೯-೧); ರುಧಿರಸ್ರೋತಂಗಳಂ ದಾಂಟಿದಾಂಟಿಭ ದೋರ್ನಿಲಲತಾಪ್ರತಾನವಿಪಿನವ್ರಾತಂಗಳೊಳ್ಸಿಲ್ಕಿಸಿಲ್ಕಿ ಭರಂಗೆಯ್ದುಜಿದೆಯ್ದು . . . ಕುರುಪ್ರಭು ಕಂಡಂ ಶರಜಾಲಜರ್ಜರಿತಗಾತ್ರತ್ರಾಣನಂ ದ್ರೋಣನಂ (ಗದಾಯು. ೪-೪೭). **ಸಿಕ್ಕಿಕೊಳ್, ಸಿಕ್ಕಿಕೊಳ್ಳು** = ೧. ಸಿಕ್ಕಿಬೀಳು; ಸೆರೆಯಾಗು: ಎಲ್ಲಿ ನೋಡಿ ದೊಡಶ್ವಗಜರಥದೊಳಗಿರ್ದು ಚೆಲ್ಲಿದ ಕರುಳು ಕಾಲ್ಬಲೆಗೆ ಬಲ್ಲಿದ ಚಮರಿಯ ಮಿಗ ಸಿಕ್ಕಿಕೊಂಡಂತೆ ಝಲ್ಲಿಯ ಕುದುರೆ ಬಿದ್ದಿಹುವು (ಮೋಹತ. ೪೦-೬೮). ೨. ಇಕ್ಕಟ್ಟಿನಲ್ಲಿ ಬೀಳು; ತೊಡಕಿಗೆ ಬೀಳು: ಕತೆ ಹೇಳಲು ಆರಂಭಿಸಿ ಈಗ ಪೇಚಿನಲ್ಲಿ ಸಿಕ್ಕಿಕೊಂಡಾಗಿದೆ (ಆಲಹೂ. ೩೩). ೩. ಒಳಹೊಗು; ಚುಚ್ಚಿಕೊಳ್ಳು: ಕಾಲಿನಲ್ಲಿ ಸಿಕ್ಕಿಕೊಂಡಿದ್ದ ಮುಳ್ಳು ಹೊರಗೆ ಬರದೆ ಕೀವಾಗಿ ಗಾಯವಾಯಿತು (ರೂಢಿ). **ಸಿಕ್ಕಿಬೀಳು** = ೧. ಬಂಧಿಸಲ್ಪಡು; ಸೆರೆಯಾಗು: ನಾವೀಗ ಬೋನಿನಲ್ಲಿ ಸಿಕ್ಕಿಬಿದ್ದೆವು (ನಡೆದಾ. II. ೮೮೦). ೨. ಸಿಕ್ಕಿಹಾಕಿಕೊಳ್ಳು; ಪತ್ತೆಯಾಗು: ಬೆಳ್ಳಿ ಸಿಕ್ಕಿಬಿದ್ದ ಕಳ್ಳನಂತಾದಳು (ಕಾಲೂರ. ೫ ಕಥಾಸಾರ). **ಸಿಕ್ಕಿಹಾಕಿಕೊಳ್ಳು** = ಸಿಕ್ಕಿಬೀಳು ೨: ಯಾರಿಗೂ ತಿಳಿಯದಂತೆ ಆತ ಕತ್ತಲಲ್ಲಿ ಮನೆ ಬಿಟ್ಟು ಹೊರಡುವಾಗ ನಾಯಿಯ ಬಗುಳುವಿಕೆಯಿಂದ ಸಿಕ್ಕಿಹಾಕಿಕೊಂಡನು (ರೂಢಿ). **ಸಿಕ್ಕುಹಾಕು** = ವಶವಾಗುವಂತೆ ಮಾಡು : ಕಳ್ಳರ ಕೈಗೆ ಸಿಕ್ಕುಹಾಕಿ ಹೋದೆಯೇನೋ ಎಂದು ಅರಚಿದಳು (ದೇವೀಚಾ. ೪೦).

[ದೇ. ‖ ತಮಿ. ಚಿಙ್ಕು, ಚಿಕ್ಕು; ಮಲ. ತೆಲು. ಚಿಕ್ಕು; ತುಳು. ತಿಕ್ಕು, ಸಿಕ್ಕು, ಸಿಕ್ಕಾವು, ಸಿಲ್ಕು; ಕೊಡ. ಚಿಕ್ಕ್; ಕೋತ. ಚಿಕ್; ಕೋಲಾ. ಸಿಕ್]

**ಸಿಲ್ಕು₂, ಸಿಕ್ಕು₃, ಸಿರ್ಕು₂, ಸಿಲುಕು₂** (ನಾ). ೧. ಬಂಧನ; ಸೆರೆ: ನೀಳನೀರಜ ವನಂಗಳ ಚೆಲ್ವುಗಳೆಂಬುವಾ ಲತಾಂಗಿಯ ಕಡೆಗಣ್ಣ ಬೆಳ್ಪುಗಳ ಸಿಲ್ಕಿದ ಸಿಲ್ಕಿನ ಸಿಲ್ಕಿವಲ್ಲವೇ (ಪಂಪಭಾ. ೪-೭೦); ನೀನಾರ್ಗೆ . . . ನಿನಗಿಂತೆಂತಾಯ್ತು ನಾಗಪಾಶಬಂಧ ವಿಧಾನದ ಬಲು ಸಿಲ್ಕು (ಪುಷ್ಪಪು. ೫-೧೧೨). ೨. ಸೆರೆಯಾದ ವಸ್ತು ಮುಂತಾದುವು; ಬಂಧನಕ್ಕೊಳಗಾದುದು: ನೀಳನೀರಜವನಂಗಳ ಚೆಲ್ವುಗಳೆಂಬುವಾ ಲತಾಂಗಿಯ ಕಡೆಗಣ್ಣ ಬೆಳ್ಪುಗಳ ಸಿಲ್ಕಿದ ಸಿಲ್ಕಿನ ಸಿಲ್ಕಿವಲ್ಲವೇ (ಪಂಪಭಾ. ೪-೭೦). ೩. ಗೊಂದಲ; ತೊಡಕು; ತೊಡರು: ಎಲ್ಲಂಗಮೆಲ್ಲ ಧನಮುಮನೆಲ್ಲೆಡೆಯೊಳಮೆಲ್ಲ ತೆಱದೊಳಂ ಕುಡುಗೆಮ ಸಿಲ್ಕಿ[ಪಾಠಾಂ. ರ್ಕಿ,ಕ್ಕಿ]ಲ್ಲದೆ ಬವರದೊಳೇಂ ಗಳ ಗೆಲ್ಲಂಗುಡದಿರ್ಕೆ ಪೊಣರ್ದೊಡಾರ್ಗಂ ಗಂಡಂ (ಕಾವ್ಯಾವ. ೨೫೩); ಬಲ್ಕೆವೆತ್ತಾ ಪೂರ್ವೆಯೆಂದರೆಷ್ಟೆಂಬುದ ಸಿಲ್ಕಾಗದಂತೆ ಪೇಳುವೆನು (ಭರಚ. ೭೬-೭). ೪. ಅಡ್ಡಿ; ತಡೆ; ನಿರ್ಬಂಧ: ಬರೆ ಮೂತ್ರ ಪುರೀಷದ ಸಿಲ್ಕಿ[ಪಾಠಾಂ. ಕ್ಕಿ]ರೆ ಬೀೞ್ಗುಂ ವಾಜಿ ವಿಗತಜೀವಿತನಕ್ಕುಂ (ಅಶ್ವಶಾ. ೬-೪೫). ೫. ಮೀನು ಮುಂತಾದುವನ್ನು ಸೆರೆಹಿಡಿಯುವ ಬಲೆ, ಗಾಳ ಮುಂತಾದ ಸಾಧನ: ಕಾಡೊಡೆಯಂ ತೋಡಿಲ್ಲದ ತೊಱೆವೇಂಟೆಯಾಡಲೆಳಸುತಿಱಿಗೂಳಿ ಹಂಜರಗೂಳಿಡುಗಾಣಂ ಸೊರ್ಕು ಸಿಲ್ಕುರಿಲ್ . . . ಸೂಸುಗೂಳ್ಗಳೆಂಬಿವಂ ಕೊಂಡು (ರಾಜಶೇ. ೫-೧೧೪ ವ). ೬. ಅಗಡುತನ; ತುಂಟತನ: 'ಸಿಲ್ಕುಗುದುರೆ' ಪರಾ.

**ಸಿಕ್ಕು₃** : ೩. ಶರಣರ ಚರಣದ ರಜದೊಳು ಸರಳಿಸಿ ನೆಗೆದುರುಳಿ ಹೊರಳಿ ಹೊಂಗುವ ಸುಖಮಂ ಕರುಣಿಸಿ ಮಿಕ್ಕಿನ ಸಿಕ್ಕಿನ ವರಗಳನೊಲ್ಲೆಂ (ಶಂಕಕಂ. ೨೫-೯೮); ಉದಯದಲಿ ದೀಕ್ಷಿತರು ಕೋಣೆಯೊಳಗಡೆ ಕುಳಿತು ಸೂತ್ರದಾವುದೊ ಒಂದು ಸಿಕ್ಕ ಬಿಡಿಸಿ ಅರ್ಥವ ಬರಸುತಿಹರು (ಸುನೀತ. ೧೦-೧೪); ಒಟ್ಟಿನಲ್ಲಿ ಗ್ರಾಮದ ಎಲ್ಲಾ ಸಿಕ್ಕುಗಳೂ ಆಗ ತೀರ್ಮಾನವಾಗಿಬಿಡುತ್ತಿದ್ದವು (ಗರುಡಾ. ೮೮). ೪. ಸೊಕ್ಕಿದುರುಮೀನುಗಳ ಗಂಟಲೊಳಿಕ್ಕಿದವಲಾ ಗಾಣ ಗಂಟಲ ಸಿಕ್ಕ ಬಿಡಿಸಿದೆ ಗರುವೆ ನೀನು (ಕುವ್ಯಾಸ. ೧೫-೫೫); ಸೂತಜನ ರಥದ ಗಾಲಿಗೆ ಸಿಕ್ಕ[ಪಾಠಾಂ. ಲ್ಕ]ನಿಕ್ಕಿದ ಮಹೀತಳದೊಳೆಡರಿಲ್ಲಿವಂಗೆ (ಜೈಮಿಭಾ. ೨೭-೪೨). ೬. ತೊಂದರೆ; ಕ್ಲೇಶ; ಕಷ್ಟ: ಸಿಕ್ಕು ರೋಗಾದಿಗಳು ಹೊದ್ದದ ಉತ್ಕಟದ ವರವೀಯಬೇಕು (ಕಾಶಿರಾ. ೪೪-೩೪); ಕಪಿಲೆಯೊಂದು . . . ಕಱೆಯಲ್ಕೆ ಬರೆ ಕಱುವಿಗಂ ಮೊಲೆಯ ಕೊಡದೆ ಒದೆವುತಿರೆಯುರನುಂಡುದೊ ಮನೆಯ ದೇವರಿಂದಿದಕೆ ಸಿಕ್ಕಾದುದೋ . . . ಎಂದು ತಮ್ಮೊಳು ಚಿಂತಿಸುತ್ತ (ಸಿದ್ಧೇಪು. ೯-೩೭); ಹೆಣ್ಣುಕೊಡದಿದ್ರೆ ಸಿಕ್ಕಿಲ್ಲ ತಮ್ಮಯ್ಯ ನಿನ್ನೂರ ಮೇಲೆ ಬರುತೀನೋ (ಹುಟ್ಟಿಹ. ೧೦೧). ೮. ಕೂದಲು, ದಾರ ಮುಂತಾದುವು ಗಂಟುಗಂಟಾಗಿರುವುದು,– ಗೋಜಲಾಗಿರುವುದು: ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ . . . ಕೂಡಲಸಂಗನ ಶರಣರೊಡನೆ ಮಱೆದು ಸರಸವಾಡಿದರೆ (ಬಸವ. ೬೬೧ ಆ); ಕಚಗಳ ಸಿಕ್ಕ ಬಿಡಿಸುತಣೆಗಂಟಿಕ್ಕಿ . . . ಅಂಗನೆಯರೊಪ್ಪಿದರು (ಕಂನವಿ. ೫-೫೪); ಮಲಗಿದ್ದಾಗ ಅದರ ತಲೆಯ ಸಿಕ್ಕು ತೆಗೆದು ಬಾಚಬೇಕೆಂದು ಅಪ್ಪಣೆ ಮಾಡಿತ್ತು (ಪಂಚಾಮ್ಯ. ೧೦೧). **ಸಿರ್ಕು₂** : ೧. ಶ್ರುತದೊಳ್ ತಗುಳ್ದ ಕಡುಚಿಂತೆ ದುರ್ವಾಜಿಗಳೊಳೆ ತೊಡರ್ವ ಸಿರ್ಕು ನೆಗಟ್ಟ ಕರಿಗಳೊಳೆ ಪಿಡಿಕುತ್ತು ವರಭೂಷಣಂಗಳೊಳೆ ಮುತ್ತು (ಬಂಹರಿ. ೧-೧೯ ರಗಳೆ). ೩. ಕಸವರಮೆತ್ತನಂತಗುಣಮೆತ್ತ ಕಳತ್ರದ ಸಿರ್ಕಿದೆತ್ತ ನಿನ್ನಸದೃಶರೂಪದೂರ್ಧ್ವಗತಿಭಾವವಿದೆತ್ತ (ಜೀವಸಂ. ೭೬-೩೧); ಈ ಶಾಸನದ ರಾಯಸವನ್ನೋದಿದಷ್ಟರಿಂದ ಈ ಸಿರ್ಕಿನ ಕಷ್ಟಸನ್ನಿಗೆ ತಗುಪ ಪ್ರತೀಕಾರವನ್ನೊಡ್ಡಿ ಗೆಲ್ಲಲಾಗುವುದೇನು? (ಮುಂತ್ರಶ. ೧೪-೧). ೬. ಚಿತ್ರಭಾನುಸಂವತ್ಸರದೊಳ್ ಸಿರ್ಕಿಲ್ಲ ಪ್ರಜೆಗೆ ಶುಭದಂ (ಜಟ್ಟಮ. ೭-೯). **ಸಿಲುಕು₂** : ೨. ಬಾಟೆಯ ಗುದಿ ಬಲಗಯ್ಯೊಳ್ ಬಾಟೆಯ ಗೊನೆ ಪೆಗಲೊಳೊಪ್ಪೆ ಹಕ್ಕಿಯ ಸಿಲುಕಂ ತೋಳ ಮೊದಲೆತ್ತಿ ಬರುತಿರೆ ಬಾಳೆಯ ಕಯ್ ಪಿಡಿದು ವನಚರಂ ನಡೆತಂದಂ (ಸೂಕ್ತಿಸು. ೩-೧೭೧).

**ಸಿಕ್ಕುಸಿಕ್ಕು₂** (ದ್ವಿರುಕ್ತಿ) : ಪಾಶ್ಚಾತ್ಯವಿದ್ವಾಂಸರು ಇಂಗ್ಲೀಷಿನಲ್ಲೂ ನಿರ್ದೇಶಿಸಿರುವರೆಂದು ಹೇಳುವುದನ್ನು ಸಿಕ್ಕುಸಿಕ್ಕಾಗಿ ಮಾಡಿ ಬಿಡಿಸಲಾಗದ ಗಂಟಿನಂತೆ ಒಂದು ಒಗಟಾಗಿ ಮಾಡಿಟ್ಟರೆಂದು ಹೇಳಬಹುದು (ದ್ರಾವಿವಿ. ೮೨). **ಸಿಕ್ಕುಬಿಡಿಸು** = ದಾರ, ಕೂದಲು ಮೊದಲಾದುವುಗಳ ಗಂಟನ್ನು ಬಿಡಿಸು,– ಗೋಜಲನ್ನು ಬಿಡಿಸು: ಮನದ ತಲೆಯನು ಹಿಕ್ಕಿ ಸಿಕ್ಕು ಬಿಡಿಸಲು ಹೋದ ಹಣಿಗೆಯೇ ಮುರಿದಿಹುದು ಹಣಗಿ ಹಣಗಿ (ಕಲ್ಲೋಲ. ೬೩-೪). **ಸಿಕ್ಕುಮಾಡು** = ೧. ಗಂಟುಗಂಟಾಗುವಂತೆ ಮಾಡು; ಗೋಜಲಾಗಿಸು: ದಾರದ ಸಿಕ್ಕು ಬಿಡಿಸು ಎಂದು ಕೊಟ್ಟರೆ ಮತ್ತಷ್ಟು ಸಿಕ್ಕು ಮಾಡಿರುವೆಯಲ್ಲ? (ರೂಢಿ). ೨. ತೊಂದರೆಯನ್ನುಂಟುಮಾಡು, ಕ್ಲೇಶವನ್ನುಂಟು ಮಾಡು: ಎನ್ನಯ ಮಕ್ಕಳಿರ ನೀವಿಂದು ಬಂಧುಗಳೆಲ್ಲರನು ಕೊಂದು ಸಿಕ್ಕು ಮಾಡಿದಿರೆನ್ನೊಳು (ತಿಮ್ಮಸ್ತ್ರೀ. ೨-೭೩). **ಸಿಲ್ಕಾದ ಕುದುರೆ** = ತುಂಟುಕುದುರೆ; ಅಗಡುಕುದುರೆ: "ಸಿಲ್ಕಾದ ಕುದುರೆ ಸೂಕಳನೆನಿಕ್ಕುಂ" (ಮಂಗರಾ. ೮೨-೧೫).

[ದೇ. ‖ ತಮಿ. ಚಿಕ್ಕು, ಚಿಲುಕು, ಚಿಲುಕ್ಕು; ಮಲ. ಚಿಲುಕು; ತುಳು. ತಿಕ್ಕು, ಸಿಕ್ಕು; ತೆಲು. ಚಿಕ್ಕು, ಸಿಲುಗು, ಸಿಲುವು; ತೊದ. ಸಿಕ್]

**ಸಿಲ್ಕು₃** 'ಶಿಲುಕು' ನೋ.

**ಸಿಲ್ಕು₄** (ನಾ). ರೇಷ್ಮೆ : ಹಬ್ಬದ ಪ್ರಯುಕ್ತ ಖಾದಿ ಮತ್ತು ಸಿಲ್ಕಿನ ಬಟ್ಟೆಗಳ ಮೇಲೆ ರಿಯಾಯಿತಿ ಇದೆ (ರೂಢಿ). [<— ಇಂ. Silk]

**ಸಿಲ್ಕುಗಾಣ್** (ಕ್ರಿ). ಸೆರೆಯಾಗು; ಬಂಧನಕ್ಕೊಳಗಾಗು: ಅಂಗಜಮಂತ್ರ ಸಿದ್ಧಿವಡೆದಂತಿರೆ ಮಿಾಂಬೊಣರಾಗಿ ಬಾಳ ಜಾಳಂಗಳ ಸಿಲ್ಕುಗಂಡುವು ಕುಮಾರಿಯ ಕಣ್ (ಅರ್ಧನೇ. ೨-೩೫). [ಸಿಲ್ಕು₂ + ಕಾಣ್]

**ಸಿಲ್ಕುಗುದುರೆ, ಸಿಲುಕುಗುದುರೆ** (ನಾ). ತುಂಟುಕುದುರೆ; ವಿಗಡಾಶ್ವ:

ಅದೇನಂತಹ ಕಟ್ಟಾಯದಾತುರಕೆ, ಪ್ಲುತಪ್ರಯಾಣಕ್ಕೆ ಉರವಣಿಸುತ್ತಿರುವ ಸಿಲ್ಕುಗುದುರೆಯು . . . ಕುಣಿದಾಡುತ್ತಿರುವಂತೆ? (ಮಂತ್ರಶ. ೬೩-೨೨). **ಸಿಲುಕುಗುದುರೆ:** “ಸೂಕಳನೆಂಬುದು ಸಿಲುಕುಗುದು[ಪಾಠಾಂ. ದಿ]ರೆ” (ಹಲಾಯು. ೬೨-೨೮೬).

[ಸಿಲ್ಕು$_2$ + ಕುದುರೆ]

**ಸಿಲ್ಕುವಳಿ?** (ಕ್ರಿ). ಗಟ್ಟಿಯಾಗಿ ದನಿಯೆತ್ತಿ ಕೂಗು (?) : ಎನ್ನ ಕೆಳೆಯನೊಳಗನಱಿದಪೆನೆಂದು ನಾಲ್ಕೈದು ಕೊರಲಂ ಸಿಲ್ಕುವಳಿದು (ಪಂಚತಂ. ೧೨೬-೫); ಪಲವುಂ ಸೂಟುಲಿದು ಪಲ್ಗರ್ಚಿ ಕಲ್ಲಸರದಿಂ ಸಿಲ್ಕುವಳಿದು ಮಾಣ್ಬುದುಂ (ಪಂಚತಂ. ೧೨೬-೧೨). [?]

**ಸಿಲ್ಪಿ, ಶಿಲ್ಪಿ$_2$, ಸಿಲುಪಿ** (ನಾ). ಊದುವ ಒಂದು ಬಗೆಯ ಸಾಧನ ಮತ್ತು ಅದರಿಂದ ಹೊರಡಿಸಬಹುದಾದ ಶಬ್ದ; ಸಿಳ್ಳು; ಸೀಟಿ: ಕಂದಕದಾರಿಯೊಳೋಡುತಲಿದೆ ಸಿಲ್ಪಿಯನೂದುತ ರೈಲು (ಕೋಗಿಲೆ. ೮೯-೨೨). **ಶಿಲ್ಪಿ$_2$** : ಬಂದೆಯಾ ಚೆಲುವಾ, ಬಾ ಅಂತ ಶಿಲ್ಪಿ ಹೊಡೆಯಿತು (ಚೆಂಗೂಲಿ. ೧೧೪). **ಸಿಲುಪಿ** : ರೈಲುಗಾಡಿ ಸಿಲುಪಿಯನ್ನು ಊದಿ ಹೊರಟುಬಿಟ್ಟಿದೆ (ನಿಬಂಧ. I, ೨೫೩). [?]

**ಸಿಲ್ಪಿನೀತೃಣ** (ನಾ). ಒಂದು ಬಗೆಯ ಸಸ್ಯ: “ಶಿತಕ್ಷೇತ್ರಜಾ — ಸಿಲ್ಪಿನೀತೃಣ” (ಓಷಧಿ. ೧೬೬). [< ಸಂ. ಶಿಲ್ಪಿನೀತೃಣ]

**ಸಿಲ್ಲಕು** ‘ಶಿಲುಕು’ ನೋ.

**ಸಿಲ್ಲಪಯ್ಯ** (ನಾ). ಒಬ್ಬಾತನ ಹೆಸರು: ಗೊಮ್ಮಲಯ್ಯನ ಭಾವಂ ಸಿಲ್ಲಪಯ್ಯಂ ತಪೋಧನರ್ಗಂ ಚಾ(ಛಾ)ತ್ರರ್ಗಂ . . . ನಾಲ್ಕು ಮಾವಿನ ಮರನ ಬಿಟ್ಟ (ಎಇ. XXVIII, ೩೫-೫೬; 1002). [ಸಿಲ್ಲಪ$_0$ + ಅಯ್ಯ$_1$]

**ಸಿಲ್ಲಿಮಿಳ್ಳಿ** ‘ಸಿಳ್ಳಿಮಿಳ್ಳಿ’ ನೋ.

**ಸಿಲ್ಹ** (ನಾ). ಒಂದು ಬಗೆಯ ಸುಗಂಧದ್ರವ್ಯ; ಲೋಬಾನ; ಹಾಲುಮಡ್ಡಿ: “ತುರುಷ್ಕಃ, ಪಿಂಡಕಃ, ಸಿಲ್ಹಃ, ಯಾವನಃ . . . ತದುಕಿನ ಮಡ್ಡಿ ಎಂಬ ಧೂಪದ ಹೆಸರುಗಳು” (ಸಿದ್ಧಾಂತಿ. ೨೦೬). [ಸಂ.]

**ಸಿವ, ಚಿವ** (ಗು). ೧. ಮಂಗಳಕರವಾದ: ಸುಸ್ವಾಗತ ಸಿವಸುಗ್ಗಿಗೆ ಮೊಗ್ಗುಗಳೀ ಲಗ್ಗೆಗೆ (ಮಾನಸ. ೧೦-೧೬). (ನಾ). ೨. ಶಿವ; ಈಶ್ವರ: ರುದ್ರಸಟಿಯರ ದೆಸಭಾಗದ ಮಹಾಮತ್ತಿಗೆ ಸಿವಪ್ರೀತವಾಗಿ ಮಾಡಿದ ಭಕ್ತಿ (ಎಕ. V (R), ತಿರುಮ. ೨೦೧-೮; 1611). **ಚಿವ** : ೨. “ಚಿವಂ[ಪಾಠಾಂ. ಮಂ] ಶಿವಮೆನಲ್” (ಕರ್ಣಾನಿ. ೬೧). [< ಸಂ. ಶಿವ]

**ಸಿವಂಗಿ, ಶಿವಂಗಿ$_1$, ಸಿವ್ವಂಗಿ** (ನಾ). ಚಿರತೆಯ ಜಾತಿಗೆ ಸೇರಿದ ಒಂದು ಬಗೆಯ ಕ್ರೂರಪ್ರಾಣಿ: ಒಂದಾನೊಂದು ಸಿವಂಗಿಯು ಹೊಟ್ಟೆಗೆ ಏನಾದರೂ ಸಿಕ್ಕೀತೆ, ಬಾಯಿಗೆ ಹಾಕಿಕೊಂಡೇನೆ ಎಂದು ಕಾದುಕೊಂಡು ಕೂತಿತ್ತು (ಸುಮಚ. ೪೬); ಸಿವಂಗಿ ಹಾಗೆ ಸಿರ್ ಅನ್ನಬೇಡ (ಚಂದತೋ. ೧೪). **ಶಿವಂಗಿ$_1$** : ಶಿವಂಗಿಗಳು ಕಡಹಗಳು ಕಾಡೆಮ್ಮೆಗಳು (ಸಿದ್ಧಕಾ. ೬-೩೨); ಹುಲಿಯ ಚರ್ಮದಿಂದಲೂ ಶಿವಂಗಿಯ ಚರ್ಮದಿಂದಲೂ ರಥಗಳನ್ನು ಅಲಂಕರಿಸಿ (ಕೃವಾಲು. ೨೪೪). **ಸಿವ್ವಂಗಿ** : ಸಾಳುವ ಡೇಗೆ ಸಿವ್ವಂಗಿಗಳು (ಆನಂರಾ. ೩-೩-೬). [ದೇ.॥ ತಮಿ. ಚಿವಿಙ್ಕಿ; ಮಲ. ಸಿವಿನ್ನಿ; ತೆಲು. ಸಿವಂಗಿ, ಸಿವ್ವಂಗಿ, ಚಿವಾಗಿ, ಚಿವ್ವಂಗಿ]

**ಸಿವಚೆಳ್ಳೆ** (ನಾ). ಒಂದು ಬಗೆಯ ಸಸ್ಯ: “ಲಘುಶೀಲಃ, ಲಘುಶೀತ — ಈ ಯೆರಡುಂ ಸಿವಚೆಳ್ಳೆ” (ಓಷಧಿ. ೧೪೨). [ಸಿವ$_?$ + ಚೆಳ್ಳೆ (< ಸೆಳ್ಳೆ)]

**ಸಿವಟ** ‘ಸೀವಟ$_2$’ ನೋ.

**ಸಿವಡಿ$_1$** ‘ಸಿವುಡು’ ನೋ.

**ಸಿವಡಿ$_2$, ಸಿವುಂಡಿ, ಸಿವುಡಿ$_2$** (ನಾ). ಲೆಕ್ಕದ ಪುಸ್ತಕ; ವಹಿ; ಕಿರ್ದಿ: ಕೌಂಕುಟ ಸಿವಡಿಯ ಕೆಲದಡಪದ ಪಿಡಿದ ಕೊಡೆಯ . . . ಅಕ್ಕರಿಗರುಂ ಬಳಸಿ ಬರೆ (ಲೀಲಾವ. ೯-೫೪ ವ); ಪುರದ ಬಾಗಿಲ ಬೀಯಗಂಗಳನಿರಿಸಿ ಸಿವಡಿಯ ದಂಡಮುದ್ರೆಯ ನೊಪ್ಪಿಸಿದಂ (ಸಾನಂಚ. ೯-೯೯). **ಸಿವುಂಡಿ** : ಚನ್ನಾಗಿ ಬರದು ಸಿವುಂಡಿಯಾ ನಿರ್ಣಯವಾಗಿರಿ[ಸಿ]ಕೊಂಡೂ ಲೆಕ್ಕವ ಮಱೆಯದೇ ತನ್ನ ಗುಣವಱಿತು ಹೇಳಲೂ ಮನ್ನಿಸುವನು ಶಾನುಭಾಗಾವುತ್ತಮನೆಂಬರು (ಗುಭಚ. ೧೬-೧೦೦). **ಸಿವುಡಿ$_2$** : ಸಿವುಡಿಯಿದು ಕರಣವಿದು ಮೇಲುಳ್ಳ ಸರ್ವಸ್ವವಿದು ನೋಡಿಕೋ ಮಹಾಪುರುಷ (ಹಚಕಾ. ೯-೪); ಎಸೆವ ಸಿವುಡಿಯಂ ದಂಡಮುದ್ರೆಯುಮನುರುತರದ ಬೀಯಗಮನುದ್ಯನ್ನಿಯೋಗಮ ನೆಲ್ಲವಂ ತರಿಸಿಯೊಪ್ಪಿಸಲೊಡಂ (ಪದ್ಮರಾ. ೬-೧೦೨); ಆ ಕಡೆಯ ಲೆಕ್ಕವೇನಾಯ್ತೆಂದು ಕೇಳ್ಗೊಲು ವಿವೇಕದಿಂ ನುಡಿದು ಕರೆಸಲು ಸಿವುಡಿ ಸಹಿತ ಬರಲು (ಸಿಂಗಿರಾ. ೧೬-೨೬).

[?]

**ಸಿವಡು** ‘ಸಿವುಡು’ ನೋ.

**ಸಿವಡುಕಟ್ಟು** ‘ಸಿವುಡುಗಟ್ಟು’ ನೋ.

**ಸಿವಡುಗಟ್ಟು** ‘ಸಿವುಡುಗಟ್ಟು’ ನೋ.

**ಸಿವದಿಡು** (ಕ್ರಿ). ‘ಶಿವ ಶಿವ’ ಎಂದು ದೇವರಲ್ಲಿ ಮೊರೆಯಿಡು; ‘ಶಿವಧೋ’ ಎಂದು ಕೂಗಿಕೊಳ್ಳು: ಪಲುಂಬಿ ಗೋಳಿಟ್ಟು ಆಲಿಟ್ಟು ಸಿವದಿಟ್ಟು ಮೊಱೆಯಿಟ್ಟು ಮೂರ್ಛಿಸುತ್ತೆ (ಬಸರ. ೪-೩೯); ಮಂದಿರಕ್ಕೆ ಮಂದಿರವೇ ಥರಗುಟ್ಟಿ ನಡುಗುವಂತೆ ಚೀರುವಳು . . . ಗೋಳಿಟ್ಟು ಸಿವದಿಟ್ಟು ಕೂಗುವಳು (ತುಂಗಭ. ೧೪೨). ‘**ಶಿವದಿಡು**’ ಪರಾ. [< ಶಿವಧೋ + ಇಡು$_1$]

**ಸಿವನಿ, ಶಿವನಿ$_2$** (ನಾ). ಕುದುರೆಯ ಗುದಸ್ಥಾನದ ಕೆಳಭಾಗ: ಬಾಲದ ಮೊದಲೊಳು ತಿಕದೊಳುದರದೊಳುಂ ಸಿವನಿಯೊಳು ಕುದುರೆಗೆ ಸಿಳಿಯಾದೊಡೆ (ಅಶ್ವವೈ. ೪-೩೦). **ಶಿವನಿ$_2$** : ಗುದದೊಳ್ ವೃಷಣದೊಳಂ . . . ಶಿವನಿಯೊಳಂ ಕುದಿರೆಗೆ ಸುಟಿಯಾದೊಡೆ ಕೊಲ್ಲದೆ ಮಾಣ್ಗುಮೆ ರಣದೊಳಧಿಪನಂ ಮಾರ್ಗಣದೊಳ್ (ಅಶ್ವಶಾ. ೪-೩೦). [< ಸಂ. ಸೀವನೀ]

**ಸಿವನೆ, ಶಿವನೆ, ಸಿಂದೆ, ಸಿನ್ನೆ** (ನಾ). ಭೂಮಿಯ ಒಂದು ಅಳತೆ: ವೊಂದು ಸಿವನೆ ಕೆಯಿ ಬೊಂಮ್ಮೆಯನಾಯಕಂಗೆ ವುಂಬಳಿಯಾಗಿ ಬೀರರಸ ಕೊಟ್ಟದು (ಎಕ. VIII, ಸಾಗರ. ೬೮-೧೦; 1265); ಒಂದು ಸಿವನೆ ಕಬುನಾಡ ಚಣವಡ್ಡಿಯಲೊಂದು ಸಿವನೆ ತಮ್ಮ ಕೋಟೆನಾಯ್ಕ ಕೊಟ್ಟುದು (ಮೈಆರಿ. ೧೯೩೧, ೬೬-೧೧; ಸು. 1300). **ಶಿವನೆ** : ಶಿವನೆಯ ಕಿಱುದೆಱೆ ಕುಱುಕುಳಾಯ ಒಳಗಾಗಿ ಕಾಹಂ ಪಡೆದು ಸುಖಸಂಖ್ಯೆಯಿನಿರೆ (ಎಕ. VIII, ಸಾಗರ. ೮೦-೨೮; 1096); ‘ಶಿವನೆ’ ಎಂಬ ಅಳತೆಯು ಶಾಸನಗಳಲ್ಲಿ ದೊರಕುತ್ತದೆ (ಕಶಾಅ. ೩೯೪). **ಸಿಂದೆ** : ಸೊಡಳದೇವನ ಕೆಱೆಯ ಮೇಲೆ ಸಿಂನ್ದೆ ೧ ಆ ಕೆಳಗಣ ಸರು ಸಿಂನ್ದೆ ೧ (ಮೈಆರಿ. ೧೯೩೧, ೬೫-೧೦; 1303). **ಸಿನ್ನೆ** : ಧರ್ಮಕಾರ್ಯಕ್ಕೆ ಕೊಟ್ಟ ದೇವಸ್ವದ ವ್ರಿತ್ತಿಗಳಾವವೆಂದಡೆ ಪಡಹಳ್ಳಿಯ ಹರಳಿಯ ಸಿಂನೆ ೧ . . . ಕಳವೆಗಾರಲ್ಲಿ ಸಿಂನೆ ೧ (ಎಕ. VIII, ಸಾಗರ. ೯೯-೧೬; 1220); ದೇವರ ಕೆಯಿ ಸಿಂನೆ (ಎಕ. VIII, ಸಾಗರ. ೬೨-೧೯; 1307); ಸಿನ್ನೆ — ಇದೂ ಭೂಮಿಯ ಪ್ರಮಾಣವನ್ನು ತೋರಿಸುತ್ತದೆ (ಸಂಭಾಸೆ. ೨೦೮). [?]

**ಸಿವನ್ನಿ** ‘ಸೀವನ್ನಿ’ ನೋ.

**ಸಿವಪುರ** (ನಾ). ಶಿವಭಕ್ತರು ನೆಲಸಲು ನಿರ್ಮಿಸಿದ ಊರು : ಕೆಱೆಗೋಡೆನಾಡ ಬಿದಿರಕೋಟೆಯ ಮಲ್ಲೆಯನಾಯಕ ಸೋಮೆಯನಾಯಕ ತಂಮ ಹಳಿಯ ಸಿವಪುರವಾಗಿ ಭಕ್ತರಿಗೆ ಧಾರಾಪೂರ್ವಕಂ ಮಾಡಿ ಕೊಟ್ಟ ಧರ್ಮವನು (ಮೈಆರಿ. ೧೯೩೩, ೪೮-೧೧; 1185). [ಸಿವ + ಪುರ$_2$]

**ಸಿವಮಾರ** (ನಾ). ಒಬ್ಬಾತನ ಹೆಸರು : ಸಿವಮಾರನ ಬಸದಿ (ಎಕ. II, ೪೧೫; 810).

[< ಸಂ. ಶಿವಮಾರ]

**ಸಿವರಾಮಕಳ್ಳಿ** (ನಾ). ಒಂದು ಬಗೆಯ ಸಸ್ಯ; ಪಾಪಾಸುಕಳ್ಳಿ: (ಕ).

[ಸಿವರಾಮ$_0$ + ಕಳ್ಳಿ$_2$]

**ಸಿವಳಿಗೆ** ‘ಸೀವಳಿಗೆ’ ನೋ.

**ಸಿವಾಯಿ** ‘ಶಿವಾಯಿ$_2$’ ನೋ.

**ಸಿವಾಲ್ಯ, ಶಿವಾಲ್ಯ** (ನಾ). ಶಿವನ ದೇವಸ್ಥಾನ, — ಗುಡಿ: ತಾವು ಮುನ್ನಿಟ್ಟು ಕೊಟ್ಟ ನಾಡ ಸಿವಾಲ್ಯಂಗಳಿಗೆ ಆ ಅಭ್ಯಾಗತೆ ಅನ್ಯಾಯ ತಪ್ಪುತಪುಡಿ ದಣ್ಣ . . . ಯಿನ್ನಿವುಯಿಲ್ಲೆನ್ನು (ಎಕ. VI, ಚಿಕ್ಕಮ. ೪೯-೨೫; 1265); ಪೆರುಮನ್ನಲಪಟ್ಟಣ ಪೆರುಮಾಳ ಸಿವಾಲ್ಯಕ್ಕೆ (ಮೈಆರಿ. ೧೯೨೯, ೨೫-೩; ?). **ಶಿವಾಲ್ಯ** : ಆ ವೀರಯ್ಯದೇವರ ಶಿವಾಲ್ಯ ದಲ್ಲಿಯಿಹ ಒಡೆಯರುಗಳು ನಾಲ್ವತ್ತು ಒಡೆಯರುಗಳಿಗೆ ಸಲುವ ಸಕಲಸಯಿದಾನ . . . ಸಲುವುದೆನೆ (ಎಕ. III (R), ಗುಂಡ್ಲುಪೇ. ೬೬-೧೬; 1476). [< ಸಂ. ಶಿವಾಲಯ]

**ಸಿವಿಕೆ** ‘ಸಿಬಿಗೆ’ ನೋ.

**ಸಿವಿಗೆ** 'ಸಿಬಿಗೆ' ನೋ.

**ಸಿವಿಲ್** (ಗು). ೧. ಸರ್ಕಾರಿ ಆಡಳಿತವಿರುವ: ಸಿವಿಲ್ ಇಲಾಖೆಯನ್ನು ತ್ಯಜಿಸಿ . . . ಯುದ್ಧಕಾಲದಲ್ಲಿ ಸೈನ್ಯವನ್ನು ಸೇರಿದ್ದು ಅವನು ತನ್ನ ಜೀವನದಲ್ಲಿ ಕಂಡ ಮತ್ತೊಂದು ಜಾಗೃತಿ (ಪುನರು. ೧೩೩). ೨. ಕಾನೂನಿಗೆ ಒಳಪಟ್ಟ: 'ಸಿವಿಲ್ ವಿವಾಹ' ಪರಾ. [<— ಇಂ. Civil]

**ಸಿವಿಲ್‌ವಿವಾಹ** (ನಾ). ಮತಸಂಸ್ಕಾರವಿಲ್ಲದೆ ಕಾನೂನು ಕಟ್ಟಳೆಗಳಿಗನು ಸಾರವಾದ ಮದುವೆ: ಇಬ್ಬರೂ ಸಿವಿಲ್‌ವಿವಾಹದ ರೀತಿ ಮದುವೆಯಾದರು (ದೂರಸ. ೪೦). [ಸಿವಿಲ್ + ವಿವಾಹ]

**ಸಿವಿಙು** (ನಾ). ಒಂದು ಬಗೆಯ ವಾದ್ಯ: ಪಟವದ ತಿವಳಿಯ ಜುಂಕದ ಮೊಳಸಿನ ಚೇಕಿರದ ಸಿವಿಙ ಸಿಪ್ಪಿನ ಲಯದಿಂದೆಬಲದೆ ಕುಣಿದರ್ ಕೆಲಬರ್ (ಅಜಿಪು. ೫-೩೨); ಕಂಕರಿಯ ಸಿವಿಙ ಪಂಪಿನ ಝುಂಕಟ (ಪುಷ್ಪಪು. ೧೨-೨೭); ಸಿವುಙಿವಿತೆಙ ಸಿಪ್ಪಿನ ಕೊರಗಿನ ಕಿನ್ನರದ ಸರಮೆ ಸರಮಾ ಪೊಟಲೊಳ್ (ಸೂಕ್ತಿಸು. ೪-೧೦೪). [?]

**ಸಿವುಂಡಿ** 'ಸಿವಡಿ$_2$' ನೋ.

**ಸಿವುಡಿ$_1$** 'ಸಿವುಡು' ನೋ.

**ಸಿವುಡಿ$_2$** 'ಸಿವಡಿ$_2$' ನೋ.

**ಸಿವುಡಿಗೆ** (ನಾ). = ಸಿವಡಿ$_2$ : ಪುಸ್ತಕಗ್ರಹಣಪೂರ್ವಕ = ಸಿವುಡಿಗೆಯಂ (ಕವಳಿಗೆಯಂ) ಪಿಡಿವುದು ಮುಂತಾಗಿ (ನೀತಿವಾ. ೧೭-೫೩). [ಸಿವುಡಿ$_2$ (< ಸಿವಡಿ$_2$) + -ಇಗೆ$_1$]

**ಸಿವುಡು , ಸಿವಡಿ$_1$, ಸಿವಡು , ಸಿವುಡಿ$_1$** (ನಾ). ೧. ತಲೆಯ ಮೇಲಿನ ಹೊರೆಯು ಅಲುಗಾಡದಂತಿರಲು ಹೊರೆಯ ಅಡಿಯಲ್ಲಿಡುವ ಹುಲ್ಲು, ಬಟ್ಟೆ ಮುಂತಾದುವುಗಳ ಸುರುಳಿ; ಸಿಂಬಿ: "ಸಿಂಬೆ ಸಿವುಡೆಂದಕ್ಕುಂ" (ಕವಿಕಂ. ೨೪೪); ಪಾಸುಗಿ ತನ್ನ ಶಿರಕೆ ಸಿವುಡಂ ಕೊಟ್ಟಂ (ಹಚಕಾ. ೩-೨೨); ಸೈನ್ಯಭಾರದಿಂ ಸೀರೆಯಂ ಸುತ್ತಿದಂತೆ ಸಿವುಡಾದನಹಿರಾಜಂ (ಚೆಬಪು. ೪೮-೨೨). ೨. (ಎಲೆ, ಹುಲ್ಲು, ಮೊದಲಾದುವುಗಳ) ಕಟ್ಟು ; ಕಂತೆ: ಪಲ್ಲೆಯ ಸಿವುಡನ್ನು ಮುಂದೆ ಎಳೆದು ಕೊಂಡಳು (ಸಂಜೀವಿ. ೨೪); ಪತ್ರಿಕೆಯ ಸಿವುಡೊಂದನ್ನು ಹಿಡಿದುಕೊಂಡು ರಾಯರಲ್ಲಿಗೆ ನಡೆದ (ಅಪನಾ. ೨೦). ೩. ಭತ್ತವನ್ನು ಅಳೆಯುವ ಒಂದು ಅಳತೆ : ಆಯದ ಸಿವುಡು ೨೦ನೆ ನಿಯಕ್ಕೆ ಸಿವುಡು ೮ ಗದ್ದೆಗಳ ಕೋರ್ರಿಗೆಗೆಯ್ದರೆ (ಎಕ. XI, ಹಿರಿಯೂ. ೮೮-೧೯; 1589). **ಸಿವಡಿ$_1$** : ೩. ಆಧಿಕ್ರಯದಾನ ದೋಹಳಂಗಳಿಗೆ ಸಿವಡಿಯೂ ಭಾಗವೂ (ಎಕ. VI, ತರೀಕೆ. ೫೫-೨೭; 1291?). **ಸಿವಡು** : ೨. ನಾಲ್ಕು ಸಿವಡು ಹುಲ್ಲು ತಂದು ಆ ಕುದುರೆಗೆ ಹಾಕಿದನು (ಮುಂಬಯಿ. ೩-೧೧೬). **ಸಿವುಡಿ$_1$** : ೧. ಈ ಪ್ರಕಾರದಿ ಬಸವರಾಜನತಿಪ್ರತಿಚ್ಛೆಗೆ ಕಳಸ ವಾಯ್ದಾವಿಳ ಪ್ರಮಥರುದ್ರರ ಸಿವುಡಿಗಳಿಗೇಙ ಸಂದಿತ್ತು (ಬಸಪು. ೩೭-೪೮). 'ಸೂಡು$_2$' ಪರಾ.

[ದೇ. ‖ ತಮಿ. ಚಿವಿಟು, ಚುಮಟು, ಚುಮ್ಮಾಟು; ಮಲ. ಚುಮಟು, ಚುಮ್ಮಾಟು]

**ಸಿವುಡುಕಟ್ಟು** 'ಸಿವುಡುಗಟ್ಟು' ನೋ.

**ಸಿವುಡುಗಟ್ಟು , ಸಿವಡುಕಟ್ಟು , ಸಿವಡುಗಟ್ಟು , ಸಿವುಡುಕಟ್ಟು** (ಕ್ರಿ). ೧. ಕಂತೆಯನ್ನಾಗಿ ಕಟ್ಟು: ಏನಿದೀ ಹನಿಹನಿಯ ತೆನೆತೆನೆ ಸಿವುಡುಗಟ್ಟುತ ಒಗೆವುದು! (ನಲಮು. ೧೧-೧). **ಸಿವಡುಕಟ್ಟು** : ೧. ಬತ್ತದ ಪೈರು ಚನ್ನಾಗಿ ಬೆಳೆದು . . . ಬತ್ತವಾದ ಮೇಲೆ ಕೊಯ್ದು ಹೊರೆಯ ಕಟ್ಟಿ ಕಣಕ್ಕೆ ಒಯ್ದು ಸಿವಡುಕಟ್ಟಿ ಬಡಿದು ರಾಶಿಯ ಮಾಡಿದರೂ ಬರುತ್ತದೆ (ಕೃಷಿಪ್ರ. ೫೫). **ಸಿವಡುಗಟ್ಟು** : ೨. ಗುಂಪುಗೂಡು; ಹಿಂಡಾಗು: ಸಿವಡುಗಟ್ಟಿ ಜನವು ನಿಂತಲ್ಲೆಲ್ಲಾ ಅದೇ ಪಡೆಮಾತೇ (ಕನಕ. ೩೦). **ಸಿವುಡುಕಟ್ಟು** : ೧. ತೆನೆ ಕುಯ್ದು ಸಿವುಡುಕಟ್ಟಿ ನಿಲ್ಲಿಸಿದ ಮೆದೆಗಳು (ರಾಜಾದೇ. ೬೨); ಕೆಲವರು ಅವುಗಳನ್ನು ಸಿವುಡುಕಟ್ಟಿ ಗೂಡುಹಾಕುತ್ತಿದ್ದರು (ಕಪಪು. ೩-೬೪).

[ಸಿವುಡು + ಕಟ್ಟು$_1$]

**ಸಿವುಡೆ** (ನಾ). (?) : ಸಿವುಡೆಯರೆನಿಸಿದ ವೀರರ ಮೂಗಿಗೆ ಕವಡೆಯ ಕಟ್ಟಿ ನೀರ್ತರಿಸಿ ಡವುಡೆ ಜೇಗಟೆ ಮಲಹರಿಯ ಜಾಡಿಸಿಕೊಂಬ ಪ್ರವುಡೆಯರಿರ್ದರಿಕ್ಕೆಲದಿ (ಮೋಹತ. ೨೦-೩೯). [?]

**ಸಿವುಙು$_1$, ಚಿವರು, ಚಿವುರು$_1$, ಚೀರು$_1$, ಚೂರು$_1$, ಜಿಗುಙು, ಜಿವಿರು** (ಕ್ರಿ). ಕೆರೆ; ತುರಿಸು: ದಕ್ಷಿಣಕಟದೊಳ್ ಸಿವುಙುವ ದಕ್ಷಿಣರದನದೊಳೆ ಹಸ್ತಮಂ ಪೇಙುವ ಚೆಲ್ವೀಕ್ಷಣಹರಮೆನೆ ಜಯಮನನಕ್ಷರಮಙಿಪಿದುದು ಭರತರಾಜಮದೇಭಂ (ಆದಿಪು. ೧೨-೫೯). **ಚಿವರು** : ಕಸಕಸಿಯ ಕಾಯಿಗಳು ಹಣ್ಣಾಗುವ ಹದಕ್ಕೆ ಬಂದಾಗ . . . ಆ ಕಾಯಿಗಳಿಗೆ . . . ನಾಲ್ಕು ದಿಕ್ಕಿಗೂ ಚಿವರಿದ ಹಾಗೆ ಗೆರೆಗಳನ್ನು ಹಾಕಬೇಕು (ಕೃಷಿಪ್ರ. ೧೯೭); ಕೈಗೆ ಕೈಹತ್ತಿತು. ಚಿವಟುವುದೂ ಚಿವರುವುದೂ ನಡೆಯಿತು (ಕುಂಹಿಂ. ೭೭). **ಚಿವುರು$_1$** : ಬೋಧರಾಯನ ಹಣೆಗೆ ಏನೋ ಚಿವುರಿದಂತಾಯಿತು (ರಕ್ತಧ್ವ. ೯೦); ಕೈಲಾಗದ ಹೇಡಿ ಚಿವುರಿಕೊಳ್ಳುತ್ತಾನೆ (ಜಮಿಷ್ಣಾ. ೧೩೪). **ಚೀರು$_1$** : (೩). **ಚೂರು$_1$** : ಅನಂತನೂ ಅವಳ ಕೈಗೆ ಚೂರಿದ. ಆಕೆ ಕೆರಳಿ ಅವನನ್ನು ನುಗಿಸಿಕೊಟ್ಟಳು (ನಿಸರ್ಗ. ೨೫). **ಜಿಗುಙು** : ಅಂಬುಜಮುಖಿ ಮುನಿದತಿಕೋಪದಿ ಮೊಗವೆದೆ ತೋಳ್ ಕೊರಳೆದೆಯ ಜಿಗುಙಿ (ನಿಜಸಾಂ. ೪-೨). **ಜಿವಿರು** : "ಗಿಲ್ಲಿತೀತಿ ಜಿವಿರಿದಪನೆಂಬುದು" (ಶಾಶಕ್ಕ. ೪೯).

[ದೇ. ‖ ತೆಲು. ಚೀರು; ಕುರುಖ್. ಚೇರ್ವಾ = ವಿಭಾಗಿಸು]

**ಸಿವುಙು$_2$, ಚಿವುರು$_2$, ಚೀರು$_2$, ಚೀಙು$_4$, ಸಿಗುರು, ಸಿಗುಙು್, ಸಿಗುಙು, ಸಿಬರು, ಸಿಬಿರು, ಸಿಬುರು, ಸಿಬುಙು** (ನಾ). ೧. (ನಯವಾದ ಮರ, ಲೋಹ ಮೊದಲಾದುವುಗಳ) ಮೊನೆಯುಳ್ಳ ನವುರಾದ ಕಡ್ಡಿ : ಮುಳ್ಳುಂ ಸಿವುಙುಗಳುಂ ನಟ್ಟು . . . ಬಾತೊಡೆ . . . ಒಲೆಗಲ್ಲ ಸೇಕಗೆಯ್ಯಲ್ ಮಾಣ್ಬುಂ (ಲೋಕೋಪ. ೯-೧೭೫); ತೆಂಗಿನ ತಿರುಳೆಲೆಯ ಸುಲಿಕೆಯೊಳಂ ಕೇದಗೆಯ ಬೆಳ್ಪುಙಿಯ ಸಿವುಙೊಳಂ ಬೇಙೆವೇಙೆ ಸುತ್ತಿ (ಮಲ್ಲಿಪು. ೫-೪೯). **ಚಿವುರು$_2$** : (೩). **ಚೀರು$_2$** : (೩). **ಚೀಙು$_4$** : ೨. ಚಕ್ಕೆ; ಕೆಲ್ಲೆ: 'ಚೀಙೇಟ್' ಪರಾ. **ಸಿಗುರು** : ೧. ಸಣ್ಣದಾದ ಸಿಗುರು ಹೊಕ್ಕರೂ ಮೈಯ ನೋವನ್ನು ತಾಳಿಕೊಳ್ಳುವುದು ಶ್ರಮ (ಭೀಷ್ಮಚ. ೨೩೫); ನಾಲ್ಕು ಸಿಗುರು ಗಳನ್ನಾದರೂ ಮಾಡೋಣ, ಕೊಟ್ಟೆಕಡ್ಡಿಗಳಿಗಾದಾವು (ಮೂರುದಾ. ೫೫). ೩. (ಆಲಂ) (ಸಂದೇಹದ) ಉಳಿಕೆ; ಅವಶೇಷ: ಸ್ವಲ್ಪವೂ ಸಿಗುರನ್ನು ನಿಲ್ಲಿಸದ ನಿಗಮನವು ತರ್ಕದಿಂದ ಎಂದೂ ದೊರೆಯುವುದಿಲ್ಲ (ದೂರಸ. ೨೦೫). **ಸಿಗುಙು್** : ೧. ಮುಳ್ಳು ಸಿಗುರ್ಗಳುಂ ಪೊಙಗಮುಚ್ಚಳಿಕುಂ (ವಿಮುದ. ೨-೨೦೦). **ಸಿಗುಙು** : ೧. ಬಿದಿರ ಸಿಗುಙೊಂದನುಡಿವರದ ನಾರಿಯೆಂದಾ ನಾಮಮಾತ್ರಕ್ಕೆಯೊಣಮರಂ ಸೇರಿಯಿಕ್ಕಡೆಯಿಲ್ಲಿ ಬಾಗುತಿರ್ಪುದು ಗಡಾ (ವೀಶೈಪು. ೩-೫-೪೭). ೩. ರೂಡಿಸಿದ ಭಟ ನೀನು ಹರಿಬವ ಬೇಡಿ ತೊಡಕಿದೆ ನಾನು ಖಾಡಾಖಾಡಿಯಲಿ ಸಿಗುಙಿಲ್ಲ ತಗೆ ಹಂಗೇಕೆ ತೆತ್ತಿಗರ (ಕುವ್ಯಾಕ. ೧೯-೩೦). **ಸಿಬರು** : ೧. ಸಿಬರು ಮಾಡಿಕೊಂಡು ಪತ್ರಾವಳಿ ಹಚ್ಚತೊಡಗಿದರು (ಕವಲು. ೧೧೫); ಒಣಗಿ ತಾರವಾದ ಸಿಬರಿನ ಪೆಂಡಿಯನ್ನು ತೆಗೆದು (ದೀಪಹ. II, ೩). **ಸಿಬಿರು** : ೧. ಜೋಳದ ದಂಟನ್ನು ಸಿಗಿದು ಸಿಗಿದು ಸಿಬಿರನ್ನು ಮಾಡುತ್ತಿದ್ದರು (ಮುಂಗಾಮು. ೯೩). **ಸಿಬುರು** : ೧. ಕೈಗೆ ಸಿಬುರು ಚುಚ್ಚಿಕೊಂಡು ತುಂಬಾ ನೋವಾಗುತ್ತಿದೆ (ರೂಢಿ). **ಸಿಬುಙು** : ೧. ಒಂದು ಬಿದಿರಿಗೆ ಕವೆ ಮೂಙು ಆ ಕವೆಯ ಒಳಗೆ ಲಕ್ಕ ಸಿಬುಙು (ಸರ್ವವ. ೪೧-೨೦೯); ತೆಂಗಾಯ ಪೊಳೆವವು ಸಿಬುಙಿನೊಳ್ಪುದುಗಿ (ಕರಚಾ. ೫-೨೧).

**ಸಿಗುರಾಗು** = (ಆಲಂ) ಒಗಟಾಗು; ಜಟಿಲವಾಗು: ಆ ನಿರ್ಣಯವನ್ನು ಕುರಿತು ಪುನರಾಲೋಚನೆ ಮಾಡಿದಾಗಲೆಲ್ಲಾ ರಾಜವಂಶದ ಸಮಸ್ಯೆ ಹೆಚ್ಚು ಸಿಗುರಾಗುತ್ತಿತ್ತೇ ವಿನಾ ನಯವಾಗುತ್ತಿರಲಿಲ್ಲ (ಕೃಷ್ಣಭೂ. ೧೧).

[< ಸಿವುಙು$_1$./ ತುಳು. ಸಿಗುರು = ಒಡೆ; ತೆಲು. ಚಿರುಗು]

**ಸಿವುಜೇಟ್, ಚೀಜೇಟ್, ಸಿಗುಜೇಳು** (ಕ್ರಿ). ೧. ಸಿಬುರು ಏಳು: ಅವನೀ ಭರ್ತಾರನ ಚಿತ್ತವಜ್ರಮಂ ತಾಗಿ ತಾಗಿ ತರಳಾಪಾಂಗಂ ಸಿವುಙೆದ್ದಂತೆಪೊಲೆಸೆದುವು (ಅರ್ಧನೇ. ೩-೨೭). **ಚೀಜೇಟ್** : ೨. ಚಕ್ಕೆಯೇಳು; ಹೆಕ್ಕಳೆಯುಂಟಾಗು: ಕೆನ್ನೆತ್ತರ ಹೊಲಸಿಂಗೆ ಪೋಗದೆ ಮುಸುಙುವ ನೊಳವಿಂಗೆ ಕೆರಳ್ದು ಝಾಡಿಸುತೊದೆಯೆ ಚೀಙೆಟ್ಟ ಹೆಟ್ಟಗಳ್ ಮೇಲೆ ಪಳಂಚಿ ಧೂಳಿವಿಡುತಿರೆ (ಕುಸುಮಾ. ೧೪-೨೯ ವ). **ಸಿಗುಜೇಳು** : ೧. ನಿಜನಿಶ್ಚಯದ ಬಿದಿರು . . . ಮಿಥ್ಯವೆಂಬ ಸಿಗುಙೆದ್ದರೆ ಕೆತ್ತಿ (ಸರ್ವವ. ೬೧-೩೨೨); ಸಿಡಿಲು ಸಿಗುಙೆದ್ದಂತೆ ಬಾರಿಸಿ ಜಡಿವ ಕೈದುಗಳು (ಕುವ್ಯಾಉ. ೧೧-೩೯). ೩. (ಆಲಂ) ತೊಡಕುಂಟಾಗು; ಭಂಗಬರು: ನುಡಿ ಯಡಹಿದರೆ ಸಿಗುಙೆಳ್ಗು ಸದ್ಗುಣಕೆ (ಕುವ್ಯಾಸ. ೧೫-೩೭). ೪. ಒಳಗೊಳಗೇ ಚುಚ್ಚಿ

ವೇದನೆಪಡು; ಚಿಟುಕುಮುಳ್ಳಾಡು : ಕೇಳಿ ಕಡುಸಿಗ್ಗಾಗಿ ಸಿಗುಚಿದ್ದೇಳಿಗೆಯ ಚಿಂತೆಯಲಿ ಜಗದ ಜನಾಳಿಗೀ ಪದ್ಧತಿ ತಿರಸ್ಕರಿಸುವುದಲೇ ಏನುತ ಕೇಳಿಸಿದನೀ ನುಡಿಯನನುಜರ ಮೇಳದಲಿ (ತೊರರಾ. ೧-೩-೫). [ಸಿವುಟು₂ + ಏಟು₁]

**ಸಿವೆ** (ನಾ). ಪಾರ್ವತಿ; **ಶಿವೆ:** ಶಿವಾ — ಸಿವೆ, ಶೀತ — ಸೀತ (ಶಮದ. ೨೫೩ ಪಯೋ.). [< ಸಂ. ಶಿವಾ]

**ಸಿವ್ವಂಗಿ** 'ಸಿವಂಗಿ' ನೋ.

**ಸಿಶ್ಯಂತಿ** 'ಶಿಷಿತ್ತಿ' ನೋ.

**ಸಿಷಿತ್ತಿ** 'ಶಿಷಿತ್ತಿ' ನೋ.

**ಸಿಷ್ಟ** (ನಾ). ಯೋಗ್ಯನಾದವನು; ಸಜ್ಜನ: ಹರಿಯ ಸಿಷ್ಟರ ಪೊರೆಯಲೋಸುಗ ಧರಿಸಿ ತಾನೊಂದೊಂದು ವೇಷವ (ಗಗತಾ. ೫-೨೦). [< ಸಂ. ಶಿಷ್ಟ]

**ಸಿಷ್ಟಿ** 'ಸಿಟ್ಟಿ' ನೋ.

**ಸಿಷ್ಯಂತಿ** 'ಶಿಷಿತ್ತಿ' ನೋ.

**ಸಿಸವು** 'ಸಿಸವೆ' ನೋ.

**ಸಿಸವೆ, ಶಿಸವೆ, ಶಿಸ್ಸು, ಸಿಸವು, ಸಿಸುವು** (ನಾ). ಗಟ್ಟಿಯಾದ ಒಂದು ಬಗೆಯ ಕರಿಮರ: (೬). **ಶಿಸವೆ :** "ಅಗುರು– ೧. ಕೃಷ್ಣಾಗರುಚಂದನ, ಚಂದಾಳ. ೨. ಶಿಸವೆಯ ಮರ" (ಗಂಗಾಮ. ೪). **ಶಿಸ್ಸು :** ಶಿಸ್ಸು . . . ಬಿಂಡಿ, ಇರಗುಂಡಿಮಾವು (ಮೈಶಿಗ. ೨೮-೫೫೨). **ಸಿಸವು:** ಅದರೊಳಗಿಂದ ಹಾಯ್ದು ಹೊರಬಂದ ಅಚ್ಚು ಸಿಸವಿನ ಕೆಚ್ಚಿನದು (ಚಿಳಭಾ. ೧೩೫). **ಸಿಸುವು:** ಆ ಮರಗಳು ಯಾವವೆಂದರೆ — ತೇಗು, ಗಂಧಮರ, ಸಿಸುವು (ಕರಿಮರ), ಅಬನಸ, ಹೊನ್ನಿ (ಕಭಾಗ. ೩೩); ಇಲ್ಲಿ ಹುಟ್ಟುವ ತೊಲೆಗಳಲ್ಲಿ ತೇಗು, ಹದ್ದೇಗು . . . ಸಿಸುವು, ಹಲಸು, ಶ್ರೀಗಂಧ ಮೊದಲಾದವುಗಳೇ ಮುಖ್ಯ (ಮುಂಬಯಿ. ೫-೨೦೦). [< ಸಂ. ಶಿಂಶಪಾ. / ಮರಾ. ಶಿಂಸವ, ಶಿಸವ, ಶಿಸವೀ]

**ಸಿಸಿರ** (ನಾ). ಷಡೃತುಗಳಲ್ಲಿ ಒಂದು; ಮಾಘ, ಫಾಲ್ಗುಣ ಮಾಸಗಳ ಅವಧಿ; **ಶಿಶಿರ:** ಸಿಸಿರವುನೆ ಪಿಡಿದು ಪರಕೆಗೆ ಬಸಂತನಲರ್ವೋದ ಮಾವಿನಡಿಮಂಚಿಕೆಯೊಳ್ ಕುಸುರಿದಜಿಡಿದಗಿನಂತೆವೊಲೆಸೆದುವು ತದ್ವನದೊಳುದಿರ್ದ ಮುತ್ತದ ಮುಗುಳ್ಗಳ್ (ಯಶೋಚ. ೧-೩೭); ಮೈಗೆ ಮಂಜಿನ ಮುಸುಕು ದಾಸಿ ಸಿಸಿರದ ನಸುಕು ಬಿರುಸಿನೊಲು ಬಿಗಿದಿಹಳು ಅರಸುಕನ್ನೆ ! (ಗರಿ. ೭೦-೮). [< ಸಂ. ಶಿಶಿರ]

**ಸಿಸಿಲ್, ಸಸಿಲ್, ಸಸ್ಲೆ, ಸಿಸಿಲು** (ನಾ). ಒಂದು ಬಗೆಯ ಮೀನು : ಹಂಗರಿಗಂ ಸಕ್ಕರೆಗಂ ಸಿಸಿಲ್ವವಳವಾಯಂ ಹೈದಲುಂ ಬಾಳೆ ಹೆಗ್ಗರಿಲುಂ . . . ಪಂದಿಗನೆಂಬ ಮೀನ್ಗೆಗದನಾ ಭಕ್ತಂ ಮಹಾಲೀಲೆಯಿಂ (ತ್ರಿಪುವಿ. ೫೭-೮). **ಸಸಿಲ್ :** ಸಸಿಲ್ಗೊದಳೆಮೀನ್ಗೊಂ ಬೊಪ್ಪುಮೀನ್ ಪಂದಿಮೀನ್ . . . ಬಣ್ಣಮೀನೆನಿಪಿವೆಲ್ಲಂ ಬೀಳ್ವುವಾ ತಾಣದೊಳ್ (ರಾಜಶೇ. ೫-೧೧೫). **ಸಸ್ಲೆ :** ಒಂದು ಬಾಳೆಮೀನು ಒಂದು ಸಸ್ಲೆಮೀನು ಹನ್ನೆರಡು ಮೈಲಿ ನಾಲೆಯಲ್ಲಿ ಎಲ್ಲಿ ಈಜುತ್ತಿದ್ದರೂ ಹಿಡಿದುಕೊಂಡು ಬರುತ್ತಾನೆ (ಬಿಸ್ತಕ. ೧೫); ಅಸ್ಲೆ ಮಳೆಗೆ ಸಸ್ಲೆ ಬೆಟ್ಟಕ್ಕೆ ನೆಗೀತು (ಬೈಸರ್ವ. ೯೯). **ಸಿಸಿಲು :** ತಂತಲು ಸಿಸಿಲು ಬೊಂಪು ಸವಿವಾಯ ಗೊದಳೆ . . . ಆನೆವೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದುರು (ಹಚಕಾ. ೫-೪೫). [?]

**ಸಿಸಿಲು** 'ಸಿಸಿಲ್' ನೋ.

**ಸಿಸು** (ನಾ). ೧. ಹಸುಳೆ; ಎಳೆಮಗು : ಸಿಸುವಂ ತಾಯೊಕ್ಕಲಿಗಂ ಸಸಿಯಂ . . . ರಕ್ಷಿಸುವಂದದಿಂ (ಧರ್ಮಾಮ್ಮ. ೩-೨೪); ತಾಯ ಮುಂದೆ ಪರಿವ ಸಿಸುವಿನಂತೆ [ಪಾಠಾಂ. ಪರಿವೆಳಗಬುವಿನಂತೆ] (ವರ್ಧಪು. ೧೧-೯೯); ಸಿಸುವ ನೋಡಿ ಕಣ್ಣೆ ಮಾಯವೆ ಮುಸುಕುವುದು (ಪ್ರಭುಲೀ. ೩-೨೪). ೨. ಎಳೆಯ ಹುಡುಗ; ಚಿಕ್ಕವನು : ಉಯ್ಗೆ ಸಿಸುಗಳ್ ಸಿಬಿರಕ್ಕೆ ಬಟಲ್ವ ಭೂಪನಂ (ಪಂಪಭಾ. ೧೨-೧೧೮). [< ಸಂ. ಶಿಶು]

**ಸಿಸುಗೆಡು** (ಕ್ರಿ). ಮಗುವನ್ನು ಕಳೆದುಕೊಳ್ಳು : ದೆಸೆಗೆಟ್ಟಂತೆ ಚಿಂತಿಸಿ ಸಿಸುಗೆಟ್ಟರಂತೆ ಮಱುಗಿ (ಧರ್ಮಾಮ್ಮ. ೧-೧೭೮). [ಸಿಸು + ಕೆಡು₁]

**ಸಿಸುತನ** (ನಾ). ಬಾಲ್ಯ; **ಶೈಶವ:** ಸಿಸುತನಮನುತ್ತರಿಸಿ ಮುಕ್ತಿಗೆ ನೆನೆಯೆ . . . ಚಾರಣಯುಗವನಪರಾಜಿತನೃಪತಿ ಕಂಡ (ಸಾಳ್ವಭಾ. ೪ ಸೂಚನೆ). [ಸಿಸು + -ತನ]

**ಸಿಸುಮಗ** (ನಾ). ಚಿಕ್ಕಮಗ: ಅವನ ಸಿಸುಮಗನೊಬ್ಬನು ಎತ್ತಿನ ಮೇಲೆ ಕುಳಿತು ನಗಾರಿಯನ್ನು ಬಾರಿಸುತ್ತಾ ಉತ್ಸಾಹದಿಂದ . . . ಹಾಡುತ್ತಾನೆ (ಗರುದಾ. ೧೭೨). [ಸಿಸು + ಮಗ]

**ಸಿಸುವು** 'ಸಿಸವೆ' ನೋ.

**ಸಿಸುಳಹಾಟಿ** (ನಾ). ಒಂದು ಊರಿನ ಹೆಸರು; P ಈಗಿನ ನವಲಗುಂದ ತಾಲ್ಲೂಕಿನ ಶಿಶುವಿನ ಹಳ್ಳಿ: ಕನ್ನರಾಸಿಯೊಳ್ಪೋಮುಗ್ರಹಣದೊ [ಳ್ಸಿ] ಸುಳಹಾಟಿಯ್ಯ ದಿಂಬರು ಮಹಾಜನಮನವಧಾರಿಸಿ (ಸೌಇಇ. XI-i, ೧೪-೧೧; 872). [?]

**ಸಿಸೃಕ್ಷೆ** (ನಾ). ಸೃಷ್ಟಿ ಮಾಡಬೇಕೆಂಬ ಅಪೇಕ್ಷೆ,— ಬಯಕೆ: ಕಾವ್ಯರಸಸಿಸೃಕ್ಷೆ ದಿವ್ಯಸ್ಫೂರ್ತಿನಿರೀಕ್ಷೆ (ಕ್ರೌಂಚಪ. ೩೦-೧೧). [ಸಂ. ಸಿಸೃಕ್ಷಾ]

**ಸಿಸ್ತು** 'ಶಿಸ್ತು' ನೋ.

**ಸಿಸ್ತುಗಾತಿ** 'ಶಿಸ್ತುಗಾತಿ' ನೋ.

**ಸಿಸ್ತುಗಾರ** 'ಶಿಸ್ತುಗಾರ' ನೋ.

**ಸಿಸ್ತುಗಾರಿಕೆ** 'ಶಿಸ್ತುಗಾರಿಕೆ' ನೋ.

**ಸಿಸ್ಯ** (ನಾ). ಕಲಿಯುವವನು; ವಿದ್ಯಾರ್ಥಿ: ಶ್ರೀಮತು ಕರಿಯಪಗಳ ಸಿಸ್ಯ ತಮ್ಮಯ (ಮೈಆರ. ೧೯೨೯, ೨೭-೨; ?). [< ಸಂ. ಶಿಷ್ಯ]

**ಸಿಹಿ** 'ಸೀ₂' ನೋ.

**ಸಿಹಿಕರಣೆ** 'ಸೀಕರಣೆ' ನೋ.

**ಸಿಹಿಗಾಯ್** 'ಸೀಕಾಯ್' ನೋ.

**ಸಿಹಿಗುಂಬಳ** 'ಸೀಗುಂಬಳ' ನೋ.

**ಸಿಹಿಗೆಣಸು** 'ಸೀಗೆಣಸು' ನೋ.

**ಸಿಹಿತೆನೆ** 'ಸೀತೆನೆ' ನೋ.

**ಸಿಹಿತೊಂಡೆ** 'ಸೀದೊಂಡೆ' ನೋ.

**ಸಿಹಿದಟ್ಟು** (ಕ್ರಿ). (ಆಲಂ) ಅತಿಯಾಗಿ ಸಂತೋಷಗೊಳ್ಳು: ಅಹುದಹುದಧಿಕ ಪ್ರಸಂಗವಾದುದು ನಾವು ಸಿಹಿದಟ್ಟಿ ಮಱೆದಿದ್ದೆವು (ಭರಚ. ೪೩-೨೭). [ಸಿಹಿ (< ಸೀ₂) + ತಟ್ಟು₁]

**ಸಿಹಿದ್ರಾಕ್ಷೆ** (ನಾ). ಸಿಹಿಯಾಗಿರುವ ದ್ರಾಕ್ಷಿಹಣ್ಣು: "ಮಧುರಬೀಜಪೂರಕಃ – ಸಿಹಿದ್ರಾಕ್ಷೆ" (ಓಷಧಿ. ೧೨೩). [ಸಿಹಿ (< ಸೀ₂) + ದ್ರಾಕ್ಷೆ]

**ಸಿಹಿನಿಂಬಿ** 'ಸೀನಿಂಬೆ' ನೋ.

**ಸಿಹಿನಿಂಬೆ** 'ಸೀನಿಂಬೆ' ನೋ.

**ಸಿಹಿನೀರು** 'ಸೀನೀರು' ನೋ.

**ಸಿಹಿಪಾಲೆ** 'ಸಿಹಿವಾಲೆ' ನೋ.

**ಸಿಹಿಪುನರ್ನವ** (ನಾ). ಒಂದು ಬಗೆಯ ಸಸ್ಯ : ಕೊಮ್ಮೆ, ಪಸಲೆಸೊಪ್ಪು , ಸಿಹಿಪುನರ್ನವ (ಮೈಶಿಗ. ೭೫-೧೪೩೮). [ಸಿಹಿ (< ಸೀ₂) + < ಪುನರ್ನವಿ]

**ಸಿಹಿಮಾತು** 'ಸೀಮಾತು' ನೋ.

**ಸಿಹಿಮಾದಲ** (ನಾ). ಒಂದು ಬಗೆಯ ಮಾದಲಗಿಡ: "ಮಧುಕರ್ಕಟೀ– ಸಿಹಿಮಾದಲ" (ಓಷಧಿ. ೧೨೧). [ಸಿಹಿ (< ಸೀ₂) + ಮಾದಲ]

**ಸಿಹಿಮಾವು** 'ಸೀಮಾವು' ನೋ.

**ಸಿಹಿಮೂತ್ರರೋಗ** (ನಾ). ಮೂತ್ರದಲ್ಲಿ ಸಕ್ಕರೆ ಹೆಚ್ಚಾಗಿ ಹೋಗುವ ಒಂದು ಬಗೆಯ ಮೂತ್ರರೋಗ; ಸಕ್ಕರೆರೋಗ: ಸಿಹಿಮೂತ್ರರೋಗವುಳ್ಳವರು ಔಷಧ ತೆಗದುಕೊಳ್ಳುವುದು ಮಾತ್ರವಲ್ಲದೆ ಆಹಾರಸೇವನೆಯಲ್ಲೂ ಕಟ್ಟುನಿಟ್ಟಾಗಿರಬೇಕು (ರೂಢಿ). [ಸಿಹಿ (< ಸೀ₂) + ಮೂತ್ರರೋಗ]

**ಸಿಹಿಮೆಕ್ಕೆ** (ನಾ). ಒಂದು ಬಗೆಯ ಮೆಕ್ಕೆಬಳ್ಳಿ: ಸಿಹಿಮೆಕ್ಕೆ ಕಹಿಮೆಕ್ಕೆ ಬಿತ್ತಿದಾಗಳೆ ಫಲವಹುವು (ಭರಚ. ೭೮-೫೭). [ಸಿಹಿ (< ಸೀ₂) + ಮೆಕ್ಕೆ₁]

**ಸಿಹಿಮೊಸರು** 'ಸೀಮೊಸರು' ನೋ.

**ಸಿಹಿಲವಂಗ** (ನಾ). ಲವಂಗದಲ್ಲಿ ಒಂದು ಭೇದ: ಆಮದಾಗುವ ವಸ್ತುಗಳಾವುವೆಂದರೆ . . . ಗುಗ್ಗುಲ, ಸಿಹಿಲವಂಗ, ಪರಿಶುದ್ಧವಾದ ಹೊಳಪುಗಾಜು (ಪ್ರವಾಇ. I, ೯೫). [ಸಿಹಿ (< ಸೀ₂) + ಲವಂಗ]

**ಸಿಹಿವಾಳೆ, ಸಿಹಿಪಾಲೆ, ಸಿಹಿಹಾಲೆ** (ನಾ). ಒಂದು ಬಗೆಯ ಸಸ್ಯ: "ಮಧುಕಾಕ್ಷೀ- ಸಿಹಿವಾಲೆ" (ಓಷಧಿ. ೧೨೦). **ಸಿಹಿಪಾಲೆ:** "ಜೀವಪೃಷ್ಠಾ, ಜೀವಧಾನೀ, ಜೀವಭದ್ರಾ- ಈ ಮೂಱುಂ ಸಿಹಿಪಾಲೆ" (ಓಷಧಿ. ೬೩); ಚಿಲುಕೀರೆಸೊಪ್ಪು ಸಿಹಿಪಾಲೆ ಸೊಪ್ಪು ಚಕ್ರವರ್ತಿ ಪುಳ್ಳಂಪುರುಚಿ (ವಿಷಚಿ. ೧೩-೩). **ಸಿಹಿಹಾಲೆ:** ಸಿಹಿಹಾಲೆಯ ಬೇರ ತೊಕ್ಕು (ವೈದ್ಯಸಾ. I, ೪೧೫); ಕೊಳವಳಿಕೆಬೇರು, ಸಿಹಿಹಾಲೆ, ರೊಡ್ಡಿ . . . ಯಷ್ಟಿಮಧುಕ ಇವುಗಳನ್ನು . . . ಕಾಯಿಸಿ (ಸಕವ್ಯ. ೮೫). [ಸಿಹಿ (< ಸೀ$_2$) + ಪಾಲ್$_2$]

**ಸಿಹಿವಿಲ್** 'ಸೀಬಿಲ್' ನೋ.

**ಸಿಹಿವಿಲ್ಲ** 'ಸೀಬಿಲ್ಲ' ನೋ.

**ಸಿಹಿಸಾಱು** 'ಸೀಸಾಱು' ನೋ.

**ಸಿಹಿಸೊಡರಿ** (ನಾ). ಒಂದು ಬಗೆಯ ಸಸ್ಯ: "ವೃಕ್ಷಗಂಧ- ಸಿಹಿಸೊಡರಿ" (ಓಷಧಿ. ೧೫೭). [ಸಿಹಿ (< ಸೀ$_2$) + ಸೊಡರಿ]

**ಸಿಹಿಹಾಲೆ** 'ಸಿಹಿವಾಲೆ' ನೋ.

**ಸಿಹುಕೂರ್** (ನಾ). ಒಂದು ಊರಿನ ಹೆಸರು: ತಸ್ಯೈವ ಸಿಹುಕೂರೇ ಪಞ್ಚವಿಂಶತಿನಿವರ್ತನಂ (ಇಆ. VI, ೯೦-೩೮; 692). [? + ಊರ್]

**ಸಿಳಿಸಿಳಿ** (ನಾ). ಬೆಂಕಿ, ಮಿಂಚು ಮುಂತಾದುವುಗಳ ಆರ್ಭಟವನ್ನು ಸೂಚಿಸುವ ಒಂದು ಅನುಕರಣ ಶಬ್ದ: ಸಿಳಿಸಿಳಿ [ಪಾಠಾಂ. ಛಳಛಳ] ಧ್ವನಿ ಮಸಗೆ ತಿಲ ಹಕ್ಕಳಿಸಿದವು . . . ಹವಿಗೆ ಭುಗಿಲೆಂದುಲಿದು ನಲಿದಾಡಿದನು ಹುತವಹನಶ್ವಮೇಧದಲಿ (ತೊರರಾ. ೧-೭-೪೯).

**ಸಿಳಿಸಿಳಿಲ್** (ನಾ). ಬೆಂಕಿ, ಮಿಂಚು ಮುಂತಾದುವುಗಳ ಆರ್ಭಟವನ್ನು ಸೂಚಿಸುವ ಒಂದು ಅನುಕರಣ ಶಬ್ದ: ಏಳುನಾಲಿಗೆ ಸಾರ್ಚಿ ಧಗಧಗಲ್ಲಿಳಿ ಸಿಳಿಲ್ಲಿನದದಿಂ . . . ದಹಿಸುತಲಿರ್ಪ (ನವಮೋ. ೬-೫೦).

**ಸಿಳೀಮುಖ** (ನಾ). ೧. ಬಾಣ; ಸರಳು: ಕಿಚ್ಚುಗಿಡಿಗೆದಱುವ ಸಿಳೀಮುಖ ಕೊಚ್ಚಲಿಭದವಯವವನಮರರಿಗಚ್ಚರಿಯ ತನಿಸೂಱೆ ಬಿಟ್ಟನು ಭೀಮ ಬವರದಲಿ (ಕುಮ್ಮಾದ್ರೋ. ೧೨-೨೦). ೨. ತುಂಬಿ; ಭ್ರಮರ. ೧, ೨ : ಆ ವನಂ . . . ನೀರಜದಂತೆ ನಿಷಂಗದಂತೆ ನಿಬಿಡ ಸಿ[ಪಾಠಾಂ. ಶಿ]ಳೀಮುಖಮುಂ . . . ಎನಿಸಿದುದು (ರಾಜಶೇ. ೨-೭೮ ವ). [< ಸಂ. ಶಿಲೀಮುಖ]

**ಸಿಳ್ಳಿ** 'ಸಿಳ್ಳು$_1$' ನೋ.

**ಸಿಳ್ಳಿಕ್ಕು** (ಕ್ರಿ). ಬಾಯಿಂದ ಊದಿ ಸದ್ದುಮಾಡು; ಸಿಳ್ಳುಹಾಕು: ಎನ್ನವನೆ ನೋಡೆನುತ ಎತ್ತಿಕ್ಕಿಯಾಡುತಂ ಚೆನ್ನವನ ನೋಡೆಂದು ಸಿಳ್ಳಿಕ್ಕಿಯಾಡುತಂ (ಕಣ್ಣರ. ದೇ. ೧೪೯-೮). [ಸಿಳ್ಳು$_1$ + ಇಕ್ಕು]

**ಸಿಳ್ಳಿಡು, ಸೀಳಿಡು$_2$** (ಕ್ರಿ). = ಸಿಳ್ಳಿಕ್ಕು: ಕೋಲಂ ಬೀಸುತ ಸಿಳ್ಳಿಡುತ . . . ಕೌಲೇಯಮನಲ್ಲಿ ಕರೆವುತಂ ನಡೆತಂದಂ (ವೃಷವಿ. ೧೧-೬೩). **ಸೀಳಿಡು$_2$:** ಗಾಳಿಯಿಂ ತಲೆಗೂದಲಲುಗಲು ಸೀಳಿಡುತ ಕಣುಬಿಟ್ಟು ನೋಡುತ್ತ . . . ನಾಯಂ ಕರೆವುತ (ಬಸವು. ೨೦-೧೩). [ಸಿಳ್ಳು$_1$ + ಇಡು$_1$]

**ಸಿಳ್ಳಿಮಿಳ್ಳಿ, ಸಿಲ್ಲಿಮಿಳ್ಳಿ** (ಗು). ಗಣನೆಗೆ ಬಾರದ; ಯಃಕಶ್ಚಿತ್ತು: ಆ ಮೂರಂತಸ್ತಿನ ಮನೆಯೊಳಗೆ ಈಗ ಸಿಳ್ಳಿಮಿಳ್ಳಿ ಮೂರೇ ಮೂರು ಪ್ರಾಣಿಗಳು ವಾಸವಾಗಿವೆ (ಎರಸ. ೧). **ಸಿಲ್ಲಿಮಿಳ್ಳಿ :** (ಓ). [?]

**ಸಿಳ್ಳಿಹಾಕು** 'ಸಿಳ್ಳುಹಾಕು' ನೋ.

**ಸಿಳ್ಳು$_1$, ಶಿಳ್ಳಿ, ಶಿಳ್ಳು, ಸಿಳ್ಳಿ, ಸಿಳ್ಳಿ, ಸಿಳ್ಳೆ$_1$, ಸೀಳು$_3$** (ನಾ). ೧. (ಮನುಷ್ಯ ಹಕ್ಕಿ ಮುಂತಾದುವು) ಬಾಯಿಂದ ಊದಿ ಮಾಡುವ ಸದ್ದು; ಸೀಟಿ: ಮುಂಗೈಯೊಳಾಡುವದು ಹಿಂಗುವದು ಪೊಂಗುವದು ಸಿಂಗಿಯಲಿ ಸಿಳ್ಳ ಬಿಡುತಿಹುದು ಆ ಮಿಗದ ಸಂಗವನು ನೋಡು (ಸರ್ವಜ್ಞ. ೨೦೫೪); ಗರಿಪುಕ್ಕಮಂ ಕುಣಿಕುಣಿಸಿ ಸಿಳ್ಳನೂದಿತು ಸಿಪಿಲೆ (ಶ್ರೀರಾಮಾ. ೨೨೮-೨೦); ಮಧುರನು ಏನೂ ಹೇಳದೆ ಇದ್ದವನು ಸಿಳ್ಳನ್ನು ಕೇಳಿದ ಕೂಡಲೆ ಧಡಧಡನೆ ಇಳಿದನು (ಬಂಕಿಮ. ೪೦). ೨. ಸೀಟಿಯ ಧ್ವನಿಯನ್ನು ಹೊರಡಿಸುವ ಒಂದು ಬಗೆಯ ಊದುವ ಸಾಧನ: 'ಸಿಳ್ಳುಹೊಡೆ' ಪರಾ. ಶಿಳ್ಳಿ: ೧. 'ಶಿಳ್ಳಿಹೊಡೆ' ಪರಾ. ಶಿಳ್ಳು : ೧. 'ಶಿಳ್ಳುದನಿ' ಪರಾ. ಸಿಳ್ಳಿ : ೧. 'ಸಿಳ್ಳಿಹಾಕು' ಪರಾ. ಸಿಳ್ಳೆ$_1$ : ೧. ಸಿಳ್ಳೆಯ ಹೊಡಿಬೇಡ ನೆಟಿಕೆಯ ಮುರಿಬೇಡ (ಇಂಚಾಪ. ೧೬೦-೯೦). ೨. 'ಸಿಳ್ಳೆಯೂದು' ಪರಾ. ಸೀಳು$_3$ : ೧. ಎಳೆಮಕ್ಕಳು ಕೌತುಕದಿಂದ ಚಪ್ಪಾಳೆ, ಸೀಳು ಇಕ್ಕುತ್ತಿದ್ದರು (ಕುಟ್ಟಿದೂ. ೫೨). [ದೇ. ‖ ತಮಿ. ಚೀಟ್ಟು, ಚೀಕ್ಕೆಲ್ ; ಮಲ. ಚಿಳ್, ಚೀಳ್./ ಮರಾ. ಶಿಳಈ, ಶಿಳೀ, ಶೀಳ್]

**ಸಿಳ್ಳು$_2$, ಸಿಳ್ಳೆ$_3$** (ನಾ). ಕಣ್ಣಿನ ಪಿಸುರು; ಗೀಜು: ಕೀವು ಕೀಣ ಕೊಟೆ ಸಿಂಬುಳ್ ಸಿಳ್ಳುಗಳ್ . . . ದುರ್ಗಂಧಮುರ್ವಿಸುಗುಂ (ಪುಷ್ಪವು. ೧೩-೪೯). 'ಸಿಳ್ಳುಗಣ್ಣು' ಪರಾ. ಸಿಳ್ಳೆ$_3$ : 'ಸಿಳ್ಳೆಮುಸುಡು' ಪರಾ. [?]

**ಸಿಳ್ಳುಗಣ್ಣು, ಸಿಳ್ಳೆಗಣ್ಣು** (ನಾ). ಪಿಸುರು ತುಂಬಿದ ಕಣ್ಣು; ಗೀಜುಗಣ್ಣು: ಸಿ(ಶಿ)ಳ್ಳುಗಣ್ಣಿಗೆ ಮಂಜಂತೆ (ಚದಾವ. ೧೦೫-೭). **ಸಿಳ್ಳೆಗಣ್ಣು :** (ಓ).

[ಸಿಳ್ಳು$_2$ + ಕಣ್ಣು (< ಕಣ್)]

**ಸಿಳ್ಳುನಾಯಿ** 'ಸೀಳ್ನಾಯ್' ನೋ.

**ಸಿಳ್ಳುಲಿ** (ನಾ). ಸಿಳ್ಳಿನ ಶಬ್ದ: ಅಲ್ಲೊಂದು ಇಲ್ಲೊಂದು ಸಿಳ್ಳುಲಿ ನೀರವತಾವೀಣೆಯ ತಂತಿಯನ್ನು ಮಿಾಟಿದಂತೆ ಕೇಳಿಬರುತ್ತಿತ್ತು (ಮಲೆಮ. ೨೦೦). [ಸಿಳ್ಳು$_1$ + ಉಲಿ$_2$]

**ಸಿಳ್ಳುಹಾಕು, ಸಿಳ್ಳಿಹಾಕು, ಸಿಳ್ಳೆಹಾಕು** (ಕ್ರಿ). (ಮನುಷ್ಯ, ಪಕ್ಷಿ ಮುಂತಾದುವು ಬಾಯಿಂದ ಊದಿ) ಸಿಳ್ಳಿನ ದನಿ ಮಾಡು; ಸೀಟಿಹೊಡೆ: ಪೊದೆಗಳಲ್ಲಿ ಹಕ್ಕಿಗಳು ಸಿಳ್ಳುಹಾಕಿ ಚಿಲಿಪಿಲಿಗುಟ್ಟುತ್ತಿದ್ದವು (ಯೋಧವು. ೩); ಡಕಾಯಿತರು . . . ಮನೆಯ ಹಿಂದೆ ಹೋಗಿ ಹಾಲಕ್ಕಿಯಂತೆ ಸಿಳ್ಳುಹಾಕಿದರು (ಬಂಕಿಮ. ೪೦). **ಸಿಳ್ಳಿಹಾಕು:** ಕಾಜಾಣಾನೂ ಸಿಳ್ಳಿಹಾಕಾಕೆ ಸುರುಮಾಡಿದುವಲ್ಲಾ ! (ಮಲೆಮ. ೨೭೦). **ಸಿಳ್ಳೆಹಾಕು:** ಅವನು ಸಿಳ್ಳೆಹಾಕಿ ಅವರ ಗಮನ ಸೆಳೆದನು (ರೂಢಿ). [ಸಿಳ್ಳು$_1$ + ಹಾಕು (< ಪಾಯ್ಕು$_1$)]

**ಸಿಳ್ಳುಹೊಡೆ, ಶಿಳ್ಳಿಹೊಡೆ** (ಕ್ರಿ). ೧. = ಸಿಳ್ಳುಹಾಕು: ಸಿಳ್ಳುಹೊಡೆಯುತ್ತ . . . ಅಡ್ಡಾಡಲು ಪ್ರಾರಂಭಿಸಿದೆ (ಚಂದುಟ. ೯೮); ನೀಲ . . .ಸಿಳ್ಳುಹೊಡೆದು ತನ್ನ ಪ್ರಾಣಮಿತ್ರ ಕುದುರ ಹೈರಿಯನ್ನು ಕರೆದನು (ಬಂಗಾಹ. ೬೮). ೨. ಸೀಟಿಯಂಥ ಸಾಧನದಿಂದ ಧ್ವನಿಮಾಡು: ಕಂದರದ ಮರೆಯಿಂದ ತೂರಿ ಬಹ ರೈಲು . . . ಸಿಳ್ಳುಹೊಡೆವುದು ಮಾಯಕಾರನಂತೆ ! (ಭಾವಜೀ. ೨೦-೨೦). **ಶಿಳ್ಳಿಹೊಡೆ:** ೧. ಬಾಗಿಲಾಚೆ ಶಿಳ್ಳಿಹೊಡೆದಾಗ ಬಾಗಿಲು ತೆಗೆದಳಂತೆ (ಚಂಗೂಲಿ. ೧೯೧). [ಸಿಳ್ಳು$_1$ + ಹೊಡೆ$_1$ (< ಪೊಡೆ$_1$)]

**ಸಿಳ್ಳೆ$_1$** 'ಸಿಳ್ಳು$_1$' ನೋ.

**ಸಿಳ್ಳೆ$_2$** (ನಾ). ಕವಲಾಗಿರುವ ಚುಚ್ಚುಗೋಲು: "ಸರ್ವಲಾ, ತೋಮರಃ - ೨ ಮರದ ಸಿಳ್ಳೆ, ಡಾಣೆ ಮುಂತಾದ ಆಯುಧಕ್ಕೆ ಹೆಸರು" (ಸಿದ್ಧಾಂತಿ. ೨೬೭).

[<— ತೆಲು. ಚಿಳ್ಳು, ಸಿಳ್ಳು]

**ಸಿಳ್ಳೆ$_3$** 'ಸಿಳ್ಳು$_2$' ನೋ.

**ಸಿಳ್ಳೆ$_4$** (ಗು). ಸೊರಗಿದ; ಬಡಕಲಾದ: 'ಸಿಳ್ಳೆಕಾಯ' ಪರಾ. [?]

**ಸಿಳ್ಳೆಕಾಯ** (ನಾ). ಸೊರಗಿದ ಶರೀರ ; ಬಡಕಲು ಮೈ : ಒಬ್ಬ ಸ್ಥೂಲಶರೀರದವನು. ಮತ್ತೊಬ್ಬ ಸಿಳ್ಳೆಕಾಯದವನು (ಚಂಗಾಳ್ಳ. ೪೬). [ಸಿಳ್ಳೆ$_4$ + ಕಾಯ]

**ಸಿಳ್ಳೆಗಣ್ಣು** 'ಸಿಳ್ಳುಗಣ್ಣು' ನೋ.

**ಸಿಳ್ಳೆಮುಸುಡು** (ನಾ). ಪಿಸುರಿನಿಂದ ಕೂಡಿದ ಮುಖ : ಸಿ[ಪಾಠಾಂ. ಹಿ]ಳ್ಳೆಮುಸುಡಿನ ತೊತ್ತ ನಡೆ (ತೊರರಾ. ೫-೮-೭೭). [ಸಿಳ್ಳೆ$_3$ (< ಸಿಳ್ಳು$_2$) + ಮುಸುಡು (< ಮುಸುಂಡು)]

**ಸಿಳ್ಳೆಯೂದು** (ಕ್ರಿ). ಸೀಟಿಯಂಥ ಸಾಧನದಿಂದ ಧ್ವನಿಮಾಡು : ಸೆರೆಮನೆಯ ದ್ವಾರಪ್ರದೇಶದಲ್ಲಿದ್ದ ಕಾವಲುಗಾರ ಸಿಳ್ಳೆಯೂದಿದನು (ಪುನರು. ೨೦೭).

[ಸಿಳ್ಳೆ$_1$ (< ಸಿಳ್ಳು$_1$) + ಊದು$_1$]

**ಸಿಳ್ಳೆಹಾಕು** 'ಸಿಳ್ಳುಹಾಕು' ನೋ.

**ಸಿಱ್, ಸಿರ್** (ನಾ). ವೇಗವನ್ನಾಗಲೀ ಕೋಪವನ್ನಾಗಲೀ ಸೂಚಿಸುವ ಒಂದು ಅನುಕರಣ ಶಬ್ದ : ಬಡಿವಲ್ಲಿ ನಿಡಿಯ ಪುಳ್ಳಿಯ ಕಡೆಯುಡಿ ಸಿಱ್ಱೆಂದು ಪಾಱೆ (ಧರ್ಮಾಮ್ಮ. ೧೨-೨೨೩). **ಸಿರ್:** ಸಿವಂಗಿ ಹಾಗೆ ಸಿರ್ ಅನ್ನಬೇಡ (ಚಂದತೋ. ೧೪).

**ಸಿಱು, ಸಿರು** (ಕ್ರಿ). ಸೀಳು; ಬಿರಿ : 'ಸಿಱುಗವಡೆ', 'ಸಿಱುವಾಯ' ಪರಾ. **ಸಿರು:** 'ಸಿರುವಾಯಿ' ಪರಾ. [< ಸಿವುಱು$_1$]

**ಸಿಱುಂಬಳಾಡು** 'ಸೀಱುಂಬುಳಾಡು' ನೋ.

**ಸೀಟುಂಬು** 'ಸಿಡುಂಬು' ನೋ.

**ಸೀಟುಂಬುಣಿ** (ನಾ). ಮೆಳೆ; ಪೊದೆ (?): ಉಗುರು ತುಪ್ಪುಳು ಹಜ್ಜೆಗಳ ಸೀಟುಂಬುಣಿಯ ಹುತ್ತುಗಳ ನೋಡುತ ಸನ್ನೆಗೆಯ್ಯುತ್ತ ಹರದು ನಡೆ (ಚೀರಮ. ೧೦-೨೦).

[ಸೀಟುಂಬು (< ಸಿಡುಂಬು) + ಉಣಿ₂]

**ಸೀಟುಂಬುಲಾಡು** 'ಸೀಟುಂಬುಳಾಡು' ನೋ.

**ಸೀಟುಂಬುಳ್** 'ಸೀಟುಂಬುಳು' ನೋ.

**ಸೀಟುಂಬುಳಾಡು** 'ಸೀಟುಂಬುಳಾಡು' ನೋ.

**ಸೀಟುಗವಡೆ** (ನಾ). ಒಡೆದ ಕವಡೆ; ಬಿರಿದು ಹೋದ ಕವಡೆ: ದಿವ್ಯರತ್ನ ಭೂಷಣಮೊಲ್ಲದೆ ಸಿ[ಪಾಠಾಂ. ಸೀ]ಟುಗವಡೆಯ ಸರಂಗಳ ಬೇಡಿ ಬದುಕುವ ವಿಕಾರಿ ಯಂದದಿ (ನಂದಿಮಾ. ೨೨-೧೧). [ಸೀಟು + ಕವಡೆ₂]

**ಸೀಟುವಾಯ** (ನಾ). ಸೀಳಿದ ಬಾಯುಳ್ಳವನು: ಮುಟುವೆಲ್ಲಿ ಕಟುವ ಬಿಡು ಮಿಗೆ ತುಟಿಸಾವಂ ಕಟೆವರೇಳು ಬಿದಿರ ಪಿಡಿ ನೀಂ ಸೀಟುವಾಯನೆನಿಪ್ಪಬ್ಬರ ತುಟುಹಟ್ಟಿ ಯೊಳರ್ಬಿ ಪರ್ಬುತಿರ್ಪವಸರದೊಳ್ (ದಶಾವ. ೯-೧೭೫).

[ಸೀಟು + ಬಾಯ್ + - ಅ₇]

**ಸೀಟಾಲೇಖ** (ನಾ). ಶಿಲಾಶಾಸನ; ಶಿಲಾಲೇಖ: ಸೀಟಾಲೇಖಮಂ ಬರೆದಂ ಶ್ರೀಮನ್ಮಹಾಶಾಮನ್ತಂ ಮಂಗಿಯೇಚಯ್ಯನ ಸನ್ಧಿವಿಗ್ರಹಿ ಬಮ್ಮಯ್ಯಂ (ಎಕ. XI, ಚಿತ್ರದು. ೮೨-೬೭; 1074). [P ಇದು 'ಶಿಲಾಲೇಖ' ಎಂಬುದರ ಅಪಲಿಖಿತ]

**ಸಿಟ್ಗ** 'ಸಿತಗ' ನೋ.

**ಸೀ₁, ಸೀಯು** (ಕ್ರಿ). ಸೀತ್ತ₁, ಸೀದ₁ (ಭೂತಕೃ), ಸೀದು₁ (ಭೂತನ್ಯೂ). ೧. (ಉರಿಯಿಂದ ಆಹಾರಪದಾರ್ಥ ಮುಂತಾದವು) ಹೆಚ್ಚಾಗಿ ಸುಟ್ಟುಹೋಗು; ಕರಿಕಾಗು: ಸೀಯೆ ತಲೆ ಬೇಯೆ ಮೆಯ್ ಮೇಲ್ವಾಯೆ ಕರಂ ಪಸಿದ ಪುಲ್ಮರುಳ್ (ಕಾವ್ಯಸಾ. ೫೩೭ ಶೂದ್ರಕ); ಉಭಯಬಲಂಗಳೊಳಂ . . . ಕೊಳ್ಳಿವೀಸಿದಾಗಳ್ . . . ಅಜನ ಪದ್ಮವಿಷ್ಟರದೆಸಟಂದರೆಸೀದುವು (ಪಂಪಭಾ. ೧೦-೩೭); ತೇಜದ ಸೋಂಕಿನಿಂದವೆಮೆ ಸೀಗೆಂದುದ್ಧತರ್ನ್ನೋಡಲಂಜುವಿನಂ ವಿಶ್ರಮವಿಭ್ರಮಂ ಸೊಗಯಿಸಿತ್ತೀ ವಿಷ್ಣುಭೂಪಾಲನೊಳ್ (ಮೈಆರಿ. ೧೯೩೭, ೨೮-೯; 1148); ಝುಳಕೆ . . . ಅಂಬುಜದೆಸಳು ಸೀದವು ತುಂಬಿಗಳು ಸಹಿತ (ಕುವ್ಯಾಆ. ೨೦-೫೪). ೨. ಬತ್ತು; ಒಣಗು: ನಿನ್ನೀ ನಗೆಮೊಗದ ಸಿರಿ ಸೀದು ಕರಿಯಾಯ್ತು (ಕುವ್ಯಾಸ. ೧೪-೨); ಬೀತುದು ಮಳೆಗಾಲ ಜಲ ನೆಲೆಗೊಂಡುದು ಸೀತರುಣಾಬ್ಜ ಕೊಬ್ಬಿದುವು (ಮೋಹತ. ೪-೪೨). ೩. ಅತಿಯಾದ ಬಿಸಿಯಿಂದ ಕಾಯು; ಹೆಚ್ಚಾಗಿ ಸುಡು: ಅಲ್ಲಿ ದೂತರೆಯ್ದೆ ಉರಿವ ಕಿಚ್ಚಿನೊಳಗೆ ತಲೆಕೆಳಕನೆ ಪಿಡಿದು ಸೀವುತಿಪ್ಪ ಕುದಿವ ಕಟ್ಟುಗುಳವನೆಚಿದು ಕುಡಿಯಿಮೆಂದು ಬಡಿವರಪ್ಪ (ಸಾನಂಚ. ೬-೧೦೩). ೪. (ಆಲಂ) ನಾಶವಾಗು; ಅಳಿ: ಆ ಮಹಾನಾರಾಯಣಾಸ್ತ್ರದ ಸೀಮೆ ಸೀದುದು [ಪಾಠಾಂ. ಬಿದ್ದುದು] (ಕುವ್ಯಾಕ. ೧-೨೭). **ಸೀಯು:** ೧. ಒಲೆಯಡಿಯನುಟುಹಿದಡೆ ಹೊಗೆ ಗೋಳಕನಾಥನ ಕೊರಳ ಸುತ್ತಿತ್ತು ಮಹೀತಳನ ಜೆಡೆ ಸೀಯಿತ್ತು (ಬಸವ. ೯೩೦); ಒತ್ತುವ ಪದ್ಮಪತ್ರ ಕದಳೀದಳಸಂಕುಳಮೆಯ್ದೆ ಬೆಂದು ಸೀಯುತ್ತಿವೆ (ಗಿರಿಕ. ೪-೧೧೪); ಅನ್ನವು ಸೀದ ವಾಸನೆ ಮನೆಯೊಳಗೆಲ್ಲಾ ತುಂಬಿ ಹೊರಗಿನ ವಾತಾವರಣದಲ್ಲಿ ಸೇರಿಹೋಗುತ್ತಿದ್ದಿತು (ನಿರಾತ. ೧೦೭). ೩. ಅವರೆಲ್ಲರು ದುಃಖದಿ ಕೋಪದಿ ಬಂದೀ . . . ಗುಡಿಯನು ಹೊತ್ತಿಸಿ ಅಂದದ ಮೂರ್ತಿಯ ಸೀಯುವರೊ (ಕವಿಸೋ. ೫೦-೧೬). ೪. ಕರ್ಣನೆ ಕೋಲ ಗಜೆ ಸೋಂಕಿದರೆ ಸೀಯದೆ ಸಿತಗತನ ನಿನಗೆ (ಕುವ್ಯಾಕ. ೧೬-೧೭). ೫. (ಆಲಂ) ಲಕ್ಷಿಸು; ಗಣನೆಗೆ ತೆಗೆದುಕೊಳ್ಳು: ಉದಧಿ ನದಿಯ ನೀರಂ ಸೀವುದೆ ಭಾಸ್ಕರಂ ಕನ್ನಡಿಯ ಬೆಳಗಂ ಪಾರ್ವನೆ (ಬಸರ. ೮-೧೨೦); ಆ ಹಳ್ಳೀಲಿ ಅವನನ್ನು ಯಾರೂ ಸೀಯಲಿಲ್ಲ, ಅದಕ್ಕೇ ಇಲ್ಲಿಗೆ ಬಂದಿದ್ದಾನೆ (ರೂಢಿ). ೬. ವಿಕ್ರಯಿಸು; ಮಾರು: ಜಮೀನನ್ನು ರೈತರಿಗೆ ಗುತ್ತಿಗೆ ಮಾಡಿದರೆ . . . ವ್ಯವಸಾಯದ ಮುಟ್ಟುಗಳು ಕೆಟ್ಟು ಅವುಗಳನ್ನು ಕಾಲುಭಾಗ ಬೆಲೆಗಾದರೂ ಸರಿಯೆ ಸೀಯಲಾಗದೆಂದೂ . . . ಪಾರುಪತ್ಯಗಾರ ವಾದಿಸಿದನು (ಪುನರು. ೨೬೫).

**ಸೀದುಬಿಡು** = (ಆಲಂ) ಮಾರು; ವಿಕ್ರಯಿಸು: ತಂದ ಮಾಲೆಲ್ಲಾ ಸಿಕ್ಕಾಪಟ್ಟೆ ಸೀದುಬಿಡುತ್ತಾನೆ (ಮರಳಿ. ೮); ಬರೋ ಚುಂಚನಗಿರಿಜಾತ್ರೇಲಿ ನಿಮ್ಮನ್ನು ಹೋದಷ್ಟಕ್ಕೆ ಸೀದುಬಿಡ್ತೀನಿ! (ನನ್ನೂರು. ೨೯೭). **ಸೀದುಹೋಗು** = ೧. ಅಧಿಕವಾದ ಉರಿಯಿಂದ ಆಹಾರಪದಾರ್ಥ ಮುಂತಾದುವು ಸುಟ್ಟುಹೋಗು, — ಕರಿಕಾಗು: ಕೊಮ್ಮೆ ಬೇರು ತಂದು . . . ಬೇರು ಸೀದುಹೋಗದಂತೆ ಕಾಯಿಸಿ (ಸಕಸ್ವೆ. ಪರಿ.೮೬೨). ೨. (ಆಲಂ) ನಾಶವಾಗು: ನಮ್ಮ ವಂಶಾಂಕುರವು ಸೀದುಹೋಗುತ್ತದೆ (ಲಕ್ಷ್ಮೀಪ್ರ. ೩೭).

[ದೇ. ‖ ತಮಿ. ತೀ, ತೀಯ್; ಮಲ. ತೀ = ಬೆಂಕಿ; ತುಳು. ಚೀಂಬು, ಚೀಂತು]

**ಸೀ₂, ಸಿಹಿ** (ನಾ). ೧. ಷಡ್ರಸಗಳಲ್ಲಿ ಒಂದು; ಸವಿ: ಹಾರ್ಯಸೆ ಸೀ[ಪಾಠಾಂ. ಸಿಹಿ] ಯುಳ್ಳ ಸಕ್ಕರೆಯು ಪಡಿಯಿಲ್ಲ (ಚನ್ನರ. ದೇ. ೩೫-೨೦); ಜೇನೆಯ್ಯ ಸೀಯೆನಿಪ್ಪಾ ಗೇಯ ರಸದಿಂಪನೇನೆಂಬೆ (ಪದ್ಮರಾ. ೮-೬೨); ಆಡಿನ ಹಾಲು ಸೀ ಆಗಿ ಇರುವದು (ಮುಂಬಯಿ. ೩. ೫-೧೫). **ಸಿಹಿ:** ೧. ಸಕ್ಕರೆಗೆ ಸಿಹಿಯಾಗಿರ್ಪುದೆಂತು ಸಹಜಂ . . . ಅಂತೆ ಚಕ್ರವರ್ತಿಯ ದೇವೇಂದ್ರನ ಸರ್ವಜ್ಞನ ಪದವಿಯನೆಯ್ದುವ ಪುರುಷಂಗೆ . . . ಭಕ್ತಿಯುಂ ಸಹಜವಮಾಗಿರ್ಕುಂ (ಧರ್ಮಾಮೃ. ೪-೪೦); ರೋಗಿಗೆ ಹಾಲು ಸಿಹಿಯಪ್ಪುದೆ (ಶೂನ್ಯಸಂ. ೨೭೦-೪೫); ಒಗರುಪ್ಪು ಸಿಹಿ ಕಹಿ ಹುಳಿ ಕಾರಗಳ ತೆಗೆತೆಗೆದೀವುತಿಹನು ನಾಲಗೆಗೆ (ಭರತೇ. ೪-೯೩); ಸಿಹಿಯೋ ಕಹಿಯೋ (ಅನಿಕೇ. ೩೧-೨). ೨. ಸವಿಯಾದ ಪದಾರ್ಥ: ಅವರ ಮಗುವಿನ ಹುಟ್ಟುಹಬ್ಬಕ್ಕೆಂದು ಎರಡು ಬಗೆ ಸಿಹಿ ಮಾಡಿದ್ದರು (ರೂಢಿ).

[ದೇ. ‖ ತಮಿ. ತಿತ್ತಿ, ತೀಮ್, ತೀಯಮ್, ತೀವು; ಮಲ. ತಿತ್ತು; ತುಳು. ಶೀ; ತೆಲು. ತಿಯ್ಯ, ತೀಪಿ, ತೀಪು, ತೀಯ; ಕುಇ. ಸೆಪ; ಕುವಿ. ತೀಪ]

**ಸೀ₃** (ನಾ). 'ಛೀ', 'ಬಿಡು' ಎಂಬರ್ಥದಲ್ಲಿ ಬಳಸುವ ಒಂದು ಉದ್ಗಾರವಾಚಕ: ಅಂದಿನಾ ನಿನ್ನ ಗರ್ಜನೆಯುಂ ಬೀರಮುಮಿಗಾಗಳೆಂತು ಪುಡಿಯೊಳ್ ಚಿಃ ಸೀ ಪೊರಲ್ದಪ್ಪುದೇ (ಶಾಂತಿಪು. ೭-೬೦).

**ಸೀಂಟು, ಸೀಟ್ಟು₁** (ಕ್ರಿ). ೧. ಒರಸು; ಉಜ್ಜು; ತೊಡೆ: ಇದು ನೀತಿಶಾಸ್ತ್ರದ ಬಲ್ಮೆಯಲ್ತೆಂದದಂ ಸೀಂಟಿ ತಾನಿಂತೆಂದು ಬರೆದಂ (ವಡ್ಡಾರಾ. ೧೮೪-೧೩); ಕಣೆ ರೋಮರೋಮಂದಪ್ಪದೆ ನಾಂಟಿದುವು ಸೀಂಟಿದುವು ವಿಧಿಲಿಪಿಯಂ (ಪಂಚಾಮಾ. ೧೩-೭೦); ಸ್ವೇದಬಿಂದುಪ್ಲವಮಂ ಸೀಂಟುತ್ತ ಕುಳ್ಳಿರ್ದಡೆಯೊಳಡಸಿ ನೆರ್ಮಾಗುತುಂ . . . ಅವನೀಶಂ ಗಾಸೆಯಾದಂ ಪ್ರಿಯಸಚಿವಸುತಂ (ಲೀಲಾವ. ೬-೪೨); ನಿತ್ಯಬಿಂದುಗೆ — ಬೆಡಂಗು . . . ಸೀಂಟು, ತೋಂಟಂ (ಶಮದ. ೩೭ ಪ್ರಯೋ). ೨. ಕೊನೆಯ ತೊಟ್ಟಿನವರೆಗೆ ಹಿಂಡು, — — ಹಿಳಿ: (೩). ೩. (ಮಕ್ಕಳು ಅಥವಾ ಹೆಳವರಂತೆ) ನೆಲದ ಮೇಲೆ ಕುಳಿತಂತೆಯೇ ಸರಿ, — ಜರುಗು: (೩). ೪. ಗುದವನ್ನು ತೊಳೆ, — ಪ್ರಕ್ಷಾಲಿಸು: "ಸೀಂಟು — ಗುದಸಮ್ಮಾರ್ಜನೇ" (ಶಮಧಾ). ೫. (ಆಲಂ) ನಾಶಮಾಡು; ಧ್ವಂಸಗೊಳಿಸು: ಇಂದ್ರಾದ್ಯರಂ ಸೀಂಟುವ ಯಕ್ಷಾಧೀಶನಂ ಕಟ್ಟುವ . . . ಅಗುರ್ವಂ ತೋಱಿದಪ್ಪಂ (ಜಗವಿ. ೧೩-೩೮). ೬. ಅಲಕ್ಷಿಸು; ತೆಗೆದುಹಾಕು: ತನ್ನನುಜೆಗೆ ನಂದನನತುಳ್ಯನತನಪ್ಪಂ ಗಡಾಗಿ ಸೀಂಟಿದವೀ ಮಾತೆನ್ನದಿರೆನ್ನಯ ತಾಯುಮನೆನ್ನು ಮನವನೋಲೆಗಳಸುವಂ ಗಡ ಕೇಳಾ (ಅರ್ಥನೇ. ೭-೧೭). **ಸೀಟ್ಟು₁:** ೧. ವಿಧಿಯಿಲ್ಲದೆ ಗೋಪುವಿನ ಮುಖವನ್ನು 'ಸೀಟಿ'ದನು (ಬಾಳಹೂ. ೯೭). ೨. ಸಿರಿವಂತರೆಂದರೆ ಸಮಾಜದಲ್ಲಿಯ ಬಡಜನರ ರಕ್ತವನ್ನು ಸೀಟುವವರು (ಜನಜೀ. ೧೦೪).

**ಸೀಂಟಿ ಕಳೆ** = ೧. ಒರೆಸಿ ಬಿಡು; ತೊಡೆದು ಹಾಕು: ಪೂರ್ವಾವನೀಪಾಲಪ್ರಶಸ್ತಿಗಳೊಂದೊಂದಂ ದಂಡರತ್ನದಿಂ ಸೀಂಟಿ ಕಳೆದು (ಆದಿಪು. ೧೩-೭೧ ವ). ೨. ಒರೆಸಿಕೊಳ್ಳು; ತೊಡೆದುಕೊಳ್ಳು: ಬಿಸುನೆತ್ತರ್ ಕಣ್ಣಂ ಕವಿಯೆ ಸೀಂಟಿ ಕಳೆದು (ಪಂಪಭಾ. ೧೨-೭೪ ವ). ೩. ಚಿವುಟಿ ಹಾಕು; ಕತ್ತರಿಸು: ಬೆಳೆಯಿಸಬೇಡರಾತಿತರುವಂ . . . ಅದಂ ಮೊಳೆಯೊಳೆ ತೊಡೆ ಸೀಂಟಿ ಕಳೆಯಲ್ ಬಗೆದಪ್ಪುದು (ಸೂಕ್ತಿಸು. ೧೭-೧೮).

[ದೇ. ‖ ತಮಿ. ಚಿನ್ನು, ಚೀನ್ನು; ಮಲ. ಚೀಣ್ಣು = ತಡವು]

**ಸೀಂತು** 'ಸೀನ್₁' ಪರಾ.

**ಸೀಂದು** (ಕ್ರಿ). ಸಶಬ್ದವಾಗಿ ಮೂಗಿನಿಂದ ಸಿಂಬಳವನ್ನು ತೆಗೆದುಹಾಕು: ಅವಡು, ಕವಡು, ಸೀಂದು, ಸುಂದು ಇತಿ ಮೋದ್ವಾದಿರಾಕೃತಿಗಣಃ (ಶಬ್ದಾನು. ೫೯೭ ಪ್ರಯೋ). 'ಸೀಂಟು' ಪರಾ. [ದೇ. ‖ ತಮಿ. ಚೀನ್ನು, ಚಿನ್ನು; ಮಲ. ಚೀನ್ನು, ಚೀಱ್ಟು; ತೆಲು. ಚೀದು; ಪರ್ಜಿ. ತೀದ್; ಗದಬ. ಸಿಂದ್; ಕುಇ. ಸ್ರಿಂದ]

**ಸೀಂಪ** 'ಸೀನ್$_1$' ಪರಾ.

**ಸೀಂಪಾಲ** 'ಸೀಂಬಾಲ' ನೋ.

**ಸೀಂಬಾಲ, ಶೀಂಬಾಲ, ಸೀಂಪಾಲ** (ನಾ). ೧. ಒಂದು ಊರಿನ ಹೆಸರು: ತಸ್ಯ ಸಾಕ್ಷಿಣ . . . ಮಣಿಯಗುರೆಯ ನನ್ದ್ಯಾಲ ಸೀಂಬಾಲಾದಪಭೃತ್ಯಯಾಂ (ಎಕ. I (R), ೧-೩೩; 466?); ಅಮಣಿಯ ನಂದ್ಯಾಲ ಸೀಂಬಾಲದೇಶ ಪ್ರಕೃತ್ಯಾಧ್ಯಕ್ಷಾಣಾಂ (ಮೈಆರ್. ೧೯೩೦, ೩-೨೧; 500). **ಶೀಂಬಾಲ:** ೨. 'ಸೀಂಬಾಲ' ಎಂಬ ಊರಿಗೆ ಸೇರಿದವನು : ಮಣಿಯರುನ್ನಂದ್ಯಾಲರುಂ ಶೀಮ್ಬಾಲರುಂ . . . ಎಲ್ಲಾ ಸಾಮನ್ತರು ಮತ್ತಾಣಿಉಂ ಸಾಕ್ಷಿ (ಮೈಆರ್. ೧೯೪೧, ೧-೩೪; ಸು. 643). **ಸೀಂಪಾಲ:** ೧. ಮಣಿಯದೆಗುರೆಯ ನಂದಿಯಾಲ ಸೀಮ್ಬಾಲನಾಣ್ಣಜೆಯ ಮದಣ್ಣ (ಮೈಆರ್. ೧೯೩೪, ೭೮-೨೭; ?). [?]

**ಸೀಂಬುಟು** (ನಾ). ಕೀವಿನಲ್ಲಿ ಉತ್ಪತ್ತಿಯಾಗುವ ಒಂದು ಬಗೆಯ ಹುಳು: ಕಾಯ್ದ ಕಾವಲಿಯೊಳ್ ಕುಳ್ಳಿರಿಸೊಯ್ದು ಬಾಲವುಟುವುಂ ಕೀವಾಗಿ ತೀವಿರ್ದ ಸೀಂಬುಟುವಂ ಬಾಯ್ಗೆಟೆ (ದಶಕು. ೩-೧೭). [? + ಪುಟು]

**ಸೀಕಂಚಿ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹಣ್ಣು: ಆ ಮಣ್ಣಿಂದ ಒಂದು ಸೀಕಂಚಿ ಗಿಡಾ ಹುಟ್ಟು (ಎಮುಕ. ೬). [ಸೀ$_2$ + ಕಂಚಿ$_1$]

**ಸೀಕರ** (ನಾ). ೧. ಸಣ್ಣ ಹನಿ; ತುಂತುರು: ಉಗುಟ ಸೀಕರಂಗಳ್ ತಮ್ಮ ಮುಂಗೈಯ ಮೇಗೆ ಬಿಟ್ಟೊಡೆ (ವಡ್ಡಾರಾ. ೬೯-೨೫); ಸೀಕರಮುಣ್ಮುವ ದಿಗ್ಗಜವ್ರಜಂ ಬಳಸಿದ ದಿವ್ಯದಂತಿಯೆನೆ . . . ಕಣ್ಣೆಸೆದಂ ನೃಪರೂಪಚಂದ್ರಮಂ (ಕಾದಂಪೂ. ೫೮೯); ಸುರುಚಿರಪಂಕಜಾಕರದ ಸೀಕರಮಂ ನಯದಿಂದಮೆತ್ತಿ ಬಂಧುರನವಗಂಧಶಾಳಿವನರಾಜಿಯನೊಯ್ಯನೆ ಸೋಂಕಿ . . . ತೊಳಗುತಿಪ್ಪುದು ಗಂಧವಹಂ ಪುರಾಂತದೊಳ್ (ವರ್ಧಮಾ. ೧-೬೦). ೨. ಹನಿಮಳೆ; ತುಂತುರುಮಳೆ: ಸೀಕರದ ಸೇಸೆಯೊಳು ಮಿಂದು ಸುಮನೋರಜವ ಪೂಸಿ ಕೆಂದಳಿರ ತೆರೆಮರೆಗೊಂಡ ಶುಕಯೋಗಿ! (ಕವಿಕಾ. ೪೭-೭). [ಸಂ.]

**ಸೀಕರಣೆ, ಶಿಖರಣೆ, ಶೀಕರಣೆ, ಸಿಕರಣೆ, ಸಿಹಿಕರಣೆ** (ನಾ). ೧. (ಸಾಮಾನ್ಯವಾಗಿ) ಮಾವು, ಬಾಳೆ ಮುಂತಾದ ಹಣ್ಣುಗಳಿಗೆ ಸಕ್ಕರೆ, ಹಾಲು ಮುಂತಾದುವನ್ನು ಬೆರಸಿ ತಯಾರಿಸುವ ಒಂದ ಬಗೆಯ ಸಿಹಿಯಾದ, ಗಟ್ಟಿ, ದ್ರವರೂಪದ ಪದಾರ್ಥ: ಸೀಕರಣೆ ಹೊದಕ ಪಾನ ಪಳಿದೆಯವೆಂಬ ನಾನಾಭಿನ್ನರುಚಿಯ ಶಾಕಂಗಳುಂ . . . ಮೊದಲಾಗಿ ಹದನಱಿದು ಬಡಿಸೆ (ಧರ್ಮಪ. ೨-೫೭ ವ); ಕಳಿತ ಬಾಳೆಯ ಹಣ್ಣ ಸಕ್ಕರೆಯ ಪೊಸಪಾಕದೊಳಗೆ ಕೆಲವಂ . . . ಚಿಲುಪಾಲಿನೊಳ್ ಕೆಲವನಿಲುಹಿಕೊಂಡಿಂತು ನಾನಾಪರಿಯ ಸೀಕರಣೆಗಳನು ಹಸನಂ ಮಾಳ್ಪುದು (ಸೂಪಶಾ. ೪-೯೦); ಪಕ್ವಫಲರಸಾಯನದ ಸೀಕರಣೆಗಳನು . . .ದಧಿ ದುಗ್ಧ ಮುಂತಾದ ಭೋಜ್ಯಪರಿಕರಮನುಜೆ ನೀಡಿಸಿದನಾ ಮಹಾಚರಕೊಲ್ಲು ಚೆನ್ನಬಸವೇಶಂ (ಚಬಪು. ೫-೬೦). **ಶಿಖರಣೆ:** ೧. ರಣಮಹೀಪಾತ್ರೆಯಲಿ . . . ನೆಣವಸೆಯ ಶಿಖರಣೆಯ ಕರುಳಿನ ವಿವಿಧಶಾಖೆಗಳ ಗಣನೆಯಿಲ್ಲದ ರುಧಿರಘೃತದಿಂದುಣಬಡಿಸಿದರು (ಆನಂರಾ. ೪-೫-೨೮). **ಶೀಕರಣೆ:** ೧. ಹತ್ತೆಂಟು ಹಣ್ಣುಗಳ ಶೀಕರಣೆಯನ್ನು ತಿನ್ನುವಾಗ ವಸಂತರಾಯನ ಆದರ ವಿನಯಗಳು ಉಕ್ಕೇರಿದವು (ಗಂಮಾಯಿ. ೨೧೩); ಒಳಗೆ ತಾಯಿ ಮಕ್ಕಳು ಶೀಕರಣೆಯನ್ನು ಸುರಿಯುತ್ತಿದ್ದರು (ಭಾರಥಿ. ೧೯). **ಸಿಕರಣೆ:** ೧. ಪತ್ರಫಲಶಾಕ ಸಿಕರಣೆ . . . ಬಹುಭಕ್ಷ್ಯಭೋಜ್ಯವ ಸಲೆ ಸಮರ್ಪಿಸಿದನೀಶ್ವರಗೆ (ಮೋಹತ. ೨೦-೪೧); ಮಧು ಶರ್ಕರಾಮಿಷ ಪಳಿದ್ಯ ಸಿ[ಪಾಠಾಂ. ಸೀ]ಕರಣೆ ಶಾಕ ತನಿವಣ್ಣಳ . . . ಸವಿಧನಚ್ಯುತಂ (ಜೈಮಿಭಾ. ೬-೪೪). ೨. ಒಂದು ಬಗೆಯ ಮೇಲೋಗರ : ಬದನೆಯ ಬಲಿದ ಹಣ್ಣ ಕುಯಿದು ತಿಳಿದುಪ್ಪದೊಳಗುದಕಮಂ ಕೂಡಿಯೊಗ್ಗರಿಸಿ . . . ಹುಣಿಸೆಯ ಕೊಣಬಿನೊಳು ಕೆಲವು ಹೋಳ ಹುದುಗಿ ಘಾಸುವೆಯ ಸಿ[ಪಾಠಾಂ. ಸೀ]ಕರಣೆ ಮೊಸರ ಸಿಕರಣೆಯೊಳೊದವಿಸಿ (ಸೂಪಶಾ. ೪-೩೦). **ಸಿಹಿಕರಣೆ :** ೧. ಹಲವು ಪರಿಯ ಸಿಹಿಕರಣೆ ರಸಾಯನಗಳ ತಂತಂದು ನೀಡಿದರು (ಇಚಸಾಂ. ೧೧-೭೪).

[ಸೀ$_2$ + ಕರಣೆ$_2$./ ಮರಾ. ಶಿಕರಣ, ಶಿಕ್ರಣ, ಶಿಖರಣ ./ ಸಂ. ಶಿಖರಿಣೀ]

**ಸೀಕರಿ, ಚೀಕರಿ** (ನಾ). ಸೀಕಲು; ಕರಿಕು: ಈ ಹನುಮ . . .ಪುಚ್ಛಾಗ್ರದಲಿ ಸುತ್ತಿದ ನಿವಸನದ ಶಿಖಿಯಿಂದ ಸೀಕರಿಮಾಡಿದನು ಪುರವ (ತೊರರಾ. ೫-೯-೧೩); ಸೀಕರಿಗಳಾದವು ತರುವ್ರಜ (ದೇವೀಮ. ೨-೮). **ಚೀಕರಿ:** 'ಚೀಕರಿವೋಗು' ಪರಾ.

ಸೀಕರಿಯಾಗು = ೧. ಸುಟ್ಟು ಕರಿಕಾಗು; ಸೀದುಹೋಗು: ನೆಜೆ ಸೀಕರಿಯಾಗೆ ಪತಂಗಪಕ್ಷಿಸಂಕುಳವವನೀತಳಂ ಬಿರಿಯೆ . . . ವನಾಂತರಾಳಮಂ ಬಳಸಿ ದವಾನಳಂ ಬಳಸಿತು (ಉದ್ಭಟ. ೯-೮೪); ಸೀಕರಿಯಾ[ಪಾಠಾಂ. ಯೋ]ದ ಬೀಜವನೊಂದಜೊಂದಱ ವಿವರವಳಿಯದೆ ಗುಡಿಸಿಕೊಂಡೊಯ್ದು (ಬಸಪು. ೬೦-೧೮); ಅವಳ ಶೂಲದ ಶಿಖಿಯಲಾ ವನನಿವಹ ಸೀಕರಿಯಾಯ್ತು (ತೊರರಾ. ೧-೧೦-೧೭). ೨. (ಆಲಂ) ಇಲ್ಲವಾಗು; ಕಳೆದುಹೋಗು: ಏನನೆಂಬೆನು ಪಾರ್ಥನುಗ್ರತಪೋನಿದಾಘಜ್ವಾಲೆಯನುಸಂಧಾನವನು ತತ್ಪರಿಸರದ ಪಾವನತಪೋಧನರ . . . ಸಮಾಧಿಧ್ಯಾನ ಸೀಕರಿಯಾಯ್ತು ಸಾರವಿಚಾರ ಶಮಸಹಿತ (ಕುವ್ಯಾ ಅ. ೫-೧೨); ಕರಗಿ ಸೀಕರಿಯಾಯ್ತು ನೇಹವು ಕರುಣೆಕಡಲಾಱಿತ್ತು (ಕಾಶಿರಾ. ೪೩-೧೬). [ಸೀ$_1$ + ಕರಿ$_2$]

**ಸೀಕರಿಗಳೆ** (ಕ್ರಿ). ೧. ಸುಟ್ಟು ಕರಿಕುಮಾಡು; ಸೀಯಿಸು: ದೆಶೆದೆಶೆಗೆ ಸೀಕರಿಗಳೆವು ತೈತಹ ತ್ರಿಶೂಲವ ಕಂಡು (ನಿಭಾಗ. ೬-೧೧-೨). ೨. (ಆಲಂ) ಹರಿದುಹೋಗು; ಜೀರ್ಣವಾಗು: ಸೀಕರಿಗಳೆದ ಕೌಪೀನವಸನದ ಸೀಳಿದುಡಿಗೆಗಳ . . . ನೆಗ್ಗಿದ ಕಮಂಡಲುಗಳಲಿ ನಡೆತಂದ (ನಿಭಾಗ. ೧೦-೫೪-೨). [ಸೀಕರಿ + ಕಳೆ$_1$]

**ಸೀಕರಿಗೊಳ್, ಸೀಕರಿಗೊಳು** (ಕ್ರಿ). ಸೀದುಹೋಗು; ಕರಿಕಾಗು: ಕಾನನದ ಬೇಂಟೆಯೊಳ್ಸಿಕ್ಕಿ ಸೀಕರಿಗೊಂಬ ಮೃಗಪೋತಕಂಗಳಂತೆ (ಜೈಮಿಭಾ. ೨೧-೪೧). **ಸೀಕರಿಗೊಳು:** ಪೊತ್ತಿ ಸೀಕರಿಗೊಳುತಿರ್ಪ ಶುಷ್ಕದಳಸಂಕುಳಧೂಮವಿಮಿಶ್ರದಿಂದಮಂಬರಮನೆ ಚುಂಬಿಸುತ್ತಿರದೆ ಸುಟ್ಟುರೆಗಳ್ ನೆಗೆದತ್ತುಮೆತ್ತಲುಂ (ಕುಸುಮಾ. ೮-೧೨೧). [ಸೀಕರಿ + ಕೊಳ್$_1$]

**ಸೀಕರಿಗೊಳಿಸು** (ಕ್ರಿ). ಸುಟ್ಟು ಕರಿಕುಮಾಡು; ಸೀಯಿಸು: ಸಿಡಿಲುಗಿಡಿಗಳು ಸೂಸೆಯಲ್ಲಮನಡಿಗಳೆಡೆಯನು ಹೊದ್ದಲಮ್ಮದೆ ಸಿಡಿದು ಸೀಕರಿಗೊಳಿ[ಪಾಠಾಂ. ಗರಿ] ಸುತಿರ್ದುವು ಸಕಲಜೀವರನು (ಪ್ರಭುಲೀ. ೧೩-೩೦). [ಸೀಕರಿಗೊಳ್ + -ಇಸು$_3$]

**ಸೀಕರಿಗೊಳು** 'ಸೀಕರಿಗೊಳ್' ನೋ.

**ಸೀಕರಿಯೋಗು** 'ಸೀಕರಿವೋಗು' ನೋ.

**ಸೀಕರಿವೋಗು, ಚೀಕರಿವೋಗು, ಸೀಕರಿಯೋಗು** (ಕ್ರಿ). ೧. ಸೀದುಹೋಗು; ಕರಿಕಾಗು: ಸೀಕರಿವೋದತ್ತು ಮೃಣಾಳತಂತುರಚಿತಜ್ವಾಲೀಖೆ. . . ತಪೋರಾಜ್ಯತತ್ಪರ ಯೋಗೀಶ್ವರ ಬಾಲಚಂದ್ರಮುನಿನಾಥಜ್ಞಾನನೇತ್ರಾಗ್ನಿಯಿಂ (ಪಂರಾಮಾ. ೧-೧೬); ಶೋಕಾಗ್ನಿಯೊಳ್ ಬೆಂದುಗಿದು ಸೀದು ಸೀಕರಿವೋಗಿ ಪೊರಳ್ದು (ಗಿರಿಕ. ೮-೭೭ ವ); ಪಾರ್ಥನ ವಿಕ್ರಮಾಗ್ನಿಜ್ವಾಲೆಯಲಿ ನೆಜೆ ಸೀದು ಸೀಕರಿವೋಯ್ತು ಕುರುಸೇನೆ (ಕುವ್ಯಾಕ. ೧೪-೨೬). ೨. (ಆಲಂ) ಇಲ್ಲವಾಗು; ಹಾಳಾಗು: ಆ ತಪೋವನದ ತಪೋಧನರ್ಗೆ . . . ಜಪಾನುಷ್ಠಾನಮಿಲ್ಲಾಯ್ತು ಸದ್ವ್ರತಮುಂ ಸೀಕರಿವೋದುದು (ಶಬಶಂ. ೨-೧೦೭). ೩. ನೋಯು; ಸಂತಾಪಪಡು: ಆಕೆಯ ರೂಪನು ಕೇಶವ ತಾ ನೋಡಿ ವ್ಯಾಕುಲವಾಗಿ ಮನದೊಳು ಸೀಕರಿವೋದನು ಮನಸಿಜತಾಪದಿನಾ ಕಂಸಾರಿ ಬಸವಳಿದು (ಕಾಮಕ. ೧-೪೦). **ಚೀಕರಿವೋಗು:** ೧. ಕಾಯ್ದ ಲೋಹದ ತೊಱೆಯನೀಸಿಸೆಯಲ್ಲಿ ಬೆಂದು ಚೀಕರಿವೋಗೆ ಮಗುಟೆ ಒಡುವರಂ (ರತ್ನಕ. ೨-೪ ವ). **ಸೀಕರಿಯೋಗು:** ೧. ನಿಡುಸುಯಿಲಿಂದ ಸೀಕರಿಯೋದವೇಕಾವಳಿಯ ಮುತ್ತುಗಳು (ಕುವ್ಯಾವಿ. ೩-೫೫); ಪೊಸಮಾಂದಳಿರ ಹಚ್ಚಡಿಸಿತು ಮಾರನ ಬಿಸಜದೆಲೆಗಳಿಂದೆ ಬೀಸೆ ನಸುಸುಯಿಗಿಡಿಗಳಿಂ ದುರಿದು ಸೀಕರಿಯೋದನುಸುರಲೇನಂಗತಾಪವನು (ಅಂಜಚ. ೫-೮೧).

[ಸೀಕರಿ + ಪೋಗು$_1$ (< ಪೋ$_1$)]

**ಸೀಕರಿಸು$_1$** (ಕ್ರಿ). ೧. ಸೀಯುವಂತೆ ಮಾಡು; ಕರಿಕಾಗುವಂತೆ ಮಾಡು: ಉರಿವ ಕೊಳ್ಳಿಯ ತೆಗೆತೆಗೆದು ಕುಕ್ಕಿರಿದು ಸರ್ವಾವಯವಗಳ ಸೀಕರಿಸಿ (ಆನಂರಾ. ೬-೧೯-೨೫). ೨. (ಆಲಂ) ಕೆರಳು; ಉಗ್ರವಾಗು: ಕೈಗಾರುಮೆಟುಕದಿರೆ, ಸಿಟ್ಟು ಸೀಕರಿಸುರಿಯೆ, ತನ್ನ ಕಣ್ಣಿಂ ತಾನೆ ಕಿಳ್ತನಮಮಾ, ಭೀತಿ ಬಡಿಯಲ್ಕೆ ನೋಳ್ಪರ್ಗೆ! (ಶ್ರೀರಾಮಾ. ೧೦೨-೫೧).

[ಸೀಕರಿ + -ಇಸು$_3$]

**ಸೀಕರಿಸು$_2$** (ಕ್ರಿ). ಸಶಬ್ದವಾಗಿ ಮೂಗಿನಿಂದ ಸಿಂಬಳವನ್ನು ತೆಗೆದುಹಾಕು:

ಪುರಾಣಿಕರು ಪುರಾಣ ನಿಲ್ಲಿಸಿ ಸೀಕರಿಸಿ, ನಾಸೀಪುಡಿಯ ಒಂದೊಬ್ಬಿಯನ್ನು ಮೂಗಿಗೆ ಏರಿಸುವರು; ಒಂದೆರಡು ಸಲ ಸೀನುವರು (ಹೊಸಂಸಾ. ೮೨). [< ಸೀಂದು + - ಇಸು$_3$]

**ಸೀಕರಿಸು$_3$** (ಕ್ರಿ). ತೆಗೆದುಕೊಳ್ಳು; ಸೇವಿಸು: "ಆಸ್ವಾದಯನ್, ಆಸ್ವಾದಕಃ- ಈ ೨ ಸೀಕರಿಸುವಂ" (ಕಾಶಕ್ಕ. ೨೮೧); ಮೇಲೋಗರ ಕಚರಿಗಳೊಪ್ಪಿರಲವನೆಲ್ಲಮುಮಂತಪ್ಪನೆ ಸೀಕರಿಸಲವೃಂ ಮುಗಿದವು ಬೇಗಂ (ಹಾಲಾಸ್ಯ. ೧-೮-೨೦). [< ಸ್ವೀಕರಿಸು]

**ಸೀಕಲು, ಚೀಕಲು** (ನಾ). ೧. ಸೀದುಹೋದುದು; ಕರಿಕು: ಪಾತ್ರೆಯ ತಳದಲ್ಲಿ ಬರಿ ಸೀಕಲು ಉಳಿದಿತ್ತು (ರೂಢಿ). ೨. ರಸವಿಲ್ಲದುದು; ನಿಸ್ಸಾರವಾದುದು: ರಸಭಾವಗಳ ಪರಿಪುಷ್ಟಿಯಿಲ್ಲದೆ ಕಾವ್ಯ ಅಳ್ಳಕವಾಗಿಲ್ಲ, ಸೀಕಲಾಗಿಲ್ಲ (ನಂಜುಂಡ. ೧೫೧). ೩. ಬಡಕಲು; ಕೃಶ. (ಗು). ೪. ಸೀದುಹೋದ; ಕರಿಕಾದ: ಸೀಕಲುರೊಟ್ಟಿ, ಮೆದುಗದ ಚಟ್ನಿ ತಿಂದು ಮುದುಕಿಗೆ ಬೇಸರವಾಯಿತು (ದೇಶಾಂಕ. ೬೦). **ಚೀಕಲು:** ೩. ನಮ್ಮ ಬ್ರಾಹ್ಮಣಹೆಂಗಸರನ್ನು ನೋಡಿ, ಎಲ್ಲಾ ಚೀಕಲು (ಬೈಸರ್ವ. ೪೦); ಕೊಳಕುಕಾಲರ್ ಸುತ್ತುವರಿದಿದ್ದ ಸೀಕಲುಸೀಕಲಾದ ಕತ್ತನ್ನವಳು ಅತ್ತಿಂದಿತ್ತ ತಿರಿಚುತ್ತಿದ್ದಳು (ಪುನರು. ೨೪೦). [ಸೀಕು$_1$ + - ಅಲು (< - ಅಲ್$_2$)]

**ಸೀಕಳಿ ?** (ಕ್ರಿ). ಸೀಳು; ಕೊಲ್ಲು (?): ಅದಟನ ಪಟುತರದ ವಿಶಳಬಿರುದರನಮ ವಟ್ಟಿದುದು ಪಿಡಿದ ಸೀಕಳಿದುದು ಮದರಿಪುರದನಿಗಳ ತ್ಯೆಲಭೂಪನ ಸಿಂಗ (ಎಕ. VIII, ಸಾಗರ. ೧೦೩-೨೯; 1089). [?]

**ಸೀಕಾಯ್, ಸಿಹಿಗಾಯ್** (ನಾ). ೧. ಸವಿಯಾದ ಕಾಯಿ: ವಿಷದ ಕುಂಬಳಕಾಯ ತಂದೇ ಅಸಮಬಹುತೀರ್ಥದಲಿ ಮುಳುಗಿಸೆ ವಿಷವುಯೆಂಬುದು ಹೋಗಿ ಸೀ[ಪಾಠಾಂ. ಶೀ]ಕಾಯಹುದೆ (ಜ್ಞಾನಸಿಂ. ೨೨-೨೯). **ಸಿಹಿಗಾಯ್ :** ೨. ಒಂದು ಬಗೆಯ ಮೇಲೋಗರ: ಬೆಂದ ಕುಂಬಳದ ಕಾಯ್ಗಳ ಪಲವು ತೆಱ ಮಾಡಿಯೊಂದು ಪುಳಿಚಾರಾಗಿಯೊಂದು ಸಿಹಿಗಾ[ಪಾಠಾಂ. ಕಾ]ಯಾಗಿ . . . ಮಾಡಿ (ಸೂಪಶಾ. ೫-೩೨).

[ಸೀ$_2$ + ಕಾಯ್$_4$]

**ಸೀಕು$_1$, ಚೀಕು$_1$** (ನಾ). ಹೆಚ್ಚು ಉರಿಯಿಂದ ಸೀದುಹೋದ ಆಹಾರಪದಾರ್ಥ ಮುಂತಾದುವು; ಕರಿಕು: "ಭಿಸ್ಸಟಾ, ದಗ್ಧಿತಾ —೨ ಅನ್ನದ ಸೀಕು" (ಸಿದ್ಧಾಂತಿ. ೨೮೮). 'ಸೀಕಲು' ಪರಾ. **ಚೀಕು$_1$:** ಪಾತ್ರೆಯಲ್ಲಿರುವ ಅನ್ನದ ಚೀಕನ್ನು ನಾಯಿಗೆ ಹಾಕು (ರೂಢಿ). 'ಚೀಕಲು' ಪರಾ. [< ಸೀ$_1$]

**ಸೀಕು$_2$, ಚೀಕು$_2$** (ನಾ). ಕಾಯಿಲೆ; ಬೇನೆ: (೬). **ಚೀಕು$_2$:** (೬). [<— ಇಂ. Sick]

**ಸೀಕುಂಬಳ** 'ಸೀಗುಂಬಳ' ನೋ.

**ಸೀಕೆ** 'ಸೀಗೆ' ನೋ.

**ಸೀಕ್ಕುರಿ** 'ಸೀಗುರಿ$_1$' ನೋ.

**ಸೀಗಟೆಗಿಡ** (ನಾ). ಒಂದು ಬಗೆಯ ಸಸ್ಯ: (ಮೃಔಗಿ. ೩೦-೫೭೪).

[? + ಗಿಡ (< ಗಿಡು)]

**ಸೀಗಡಿ, ಸಿಗಡಿ, ಸೀಗುಡಿ** (ನಾ). ಒಂದು ಬಗೆಯ ಸಣ್ಣ ಮೀನು: ಸೀಗಡಿ ಕೊರವಂ ಬಂಪು . . . ಹಂದಿಗನಾನೆಮೂಗಮದಲೆಂಬಗಣಿತಶಫರಾಳಿಗಳನೆ ತೆಗೆದರ್ ಬೇಡರ್ (ತ್ರಿಷುವಿ. ೨೭-೯೧); ಇವಕ್ಕೆ ಮೀನು, ಸೀಗಡಿಗಳೇ ಮುಖ್ಯಾಹಾರ (ಪಕ್ಷಿ. ೮೦). **ಸಿಗಡಿ:** ಕೆಂಪಿಗೆ ಏಡಿ, ಸಿಗಡಿ, ಮೀನು ಹಿಡಿಯುವುದೆಂದರೆ ತುಂಬ ಇಷ್ಟ (ಕುಡಿಕೂ. ೧೬೧). **ಸೀಗುಡಿ:** ಸೀಗುಡಿ ಗೆಂಡೆ . . . ಆನೆಮೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದರು (ಹಚಕಾ. ೫-೪೫): ತಾಳಿಸಿ ತಿಂಬ ಸೀಗುಡಿ ಕರಿಮೀನಿನ ಗೂಳಯವನು ಕಂಡ ರಾಯ (ಹಂಸಾಂ. ೪-೨); ಗಱಿಮೀನ್ಸೀಗುಡಿ ಗೆಂಡೆಮೀನ್ . . . ಬಣ್ಣಮೀನೆನಿಪಿವೆಲ್ಲಂ ಬೀಳ್ದುವಾ ತಾಣದೊಳ್ (ರಾಜಶೇ. ೫-೧೧೫). [ದೇ. ‖ ತುಳು. ಚೀಕಡೆ; ತೆಲು. ಸೀಗಾಡು./ ಹಿಂ. ಸೀಂಗೀ. ಮರಾ. ಶಿಂಗಟೀ, ಶಿಂಗಡೀ]

**ಸೀಗುಂಬಳ, ಸಿಹಿಗುಂಬಳ, ಸೀಕುಂಬಳ** (ನಾ). ಸಿಹಿಯಾಗಿರುವ ಒಂದು ಬಗೆಯ ಕುಂಬಳ; ಸಕ್ಕರೆಗುಂಬಳ: (ಮೃಔಗಿ. ೨೭-೪೯೦). **ಸಿಹಿಗುಂಬಳ:** ಕುಂಬಳಕಾಯಿಗಳಲ್ಲಿ ಸಿಹಿಗುಂಬಳ ಮತ್ತು ಬೂದುಗುಂಬಳವೆಂಬ ಮುಖ್ಯವಾದ ಎರಡು ವಿಧಗಳಿವೆ (ತರಚ. ೨೪). **ಸೀಕುಂಬಳ :** ಈವತ್ತು ಸೀಕುಂಬಳದ ಪಲ್ಯ ಮಾಡಿದ್ದೆ (ರೂಢಿ).

[ಸೀ$_2$ + ಕುಂಬಳ]

**ಸೀಗುಡಿ** 'ಸೀಗಡಿ' ನೋ.

**ಸೀಗುಡಿತೆ** 'ಸೇಗುಡಿತೆ' ನೋ.

**ಸೀಗುರಿ$_1$, ಸೀಕ್ಕುರಿ** (ನಾ). ೧. ಚಾಮರ: "ಚಾಮರಂ, ಪ್ರಕೀರ್ಣಕಂ — ಈ ೨ ಸೀಗುರಿ" (ಹಲಾಯು. ೬೦-೨೬೯); ನೂಕಿದನು ರಥವನು ತನ್ನ ಸೇನೆಗೆ ಸೀಗುರಿಯ ಬೀಸಿ (ಕುಮ್ಮಾದ್ರೋ. ೫-೬೩). ೨. (ದೇವರು, ರಾಜ ಮೊದಲಾದವರಿಗೆ ಗೌರವ ಸೂಚಕವಾಗಿ ಹಿಡಿಯುವ) ಚಾಮರದಂಥ ಒಂದು ಬಗೆಯ ಸಾಧನ: ಅಯ್ನೂರ್ವರರಸಿಯರ್ಕಳುಂ ಪೆಂಡವಾಸದಗ್ಗಳದ ಸೂಳೆಯರ್ಕಳುಂಬೆರಸು ವೇಸರಿಗಟ್ಟಿಗಳುಂ ಪಿಡಿಗಳುಂ ಸಿಬಿಗೆಗಳುಮನೇಱಿ ಸೀಗುರಿಗಳುಮಂ ಕೊಡೆಗಳುಮಂ ಪಿಡಿಯಿಸಿ . . . ವಿದ್ಯಾಧರಿಯರ್ಕಳ್ ಬರ್ಪಂತೆ ಬಂದು (ವಡ್ಡಾರಾ. ೮೦-೧೦); ಕೊಡೆ ತಟೆ ತಳ್ತ ಸೀಗುರಿ . . . ಚೆಲ್ವನಾವೆಡೆಯೊಳಮಿಾಯೆ ಕಣ್ಗೊಸಗೆಯಂ ಪಡೆದತ್ತು ಸಮಸ್ತಸಾಧನಂ (ಆದಿಪು. ೪-೯೨ ); ಮೌಳಿಚಳನದೊಳೇಳುತೆಱಗುವ ಮಧುಕರನಿಕರಂ ಸೌರಭ್ಯ ಲಕ್ಷ್ಮಿಯರಿಕ್ಕುವ ನೀಲದ ಸೀಗುರಿಯಂತಿರೆ (ಗಿರಿಕ. ೨-೧೦೫ ವ). ೩. ಒಂದು ಬಗೆಯ ಕೊಡೆ; "ನವಿಲುಗರಿಯ ಕಣ್ಣುಗಳಿಂದ ಮಾಡಿದ ರತ್ನಖಚಿತ ಕಲಶದಂಡಗಳನ್ನುಳ್ಳ ಛತ್ರಿ" (ಪಂಪದೀ. ೧೧೪): ತಳ್ತು ಪಿಡಿದ ಕನಕಪದ್ಮದ ಸೀಗುರಿಗಳ ನೆಟಲೆಡೆವಱಿಯದೆ ಬರೆ (ಪಂಪಭಾ. ೩-೪೮ ವ); ಚಿತ್ರಸಂಭವಭುವನೇಶ್ವರಂಗಳಕಜಾಳಮೆ ಸೀಗುರಿಯಾಗೆ ಪೋಲ್ತು ತೋಱುವುದಸಿತೋತ್ಪಲೇಕ್ಷಣೆಯ ಯೌವನಲಕ್ಷ್ಮಿಯ ರಾಜ್ಯಲಕ್ಷ್ಮಿಯಂ (ಅಜಿಪು. ೨-೨೫); ಹೊಂಬಾಳೆಗಳ ಚಮರಮುತ್ಪಲದ ಮೇಲ್ಕಟ್ಟು ಮುಡಿವಳದ ಸೀಗುರಿ ಮೆಱೆದವಾ ಶೈತ್ಯಶಾಲೆಯೊಳಗೆ (ಹಚಕಾ. ೩-೪೫). ೪. (ದೇವರ ಅಥವಾ ರಾಜರ ಮೆರವಣಿಗೆಯಲ್ಲಿ ಗೌರವಾರ್ಥವಾಗಿ ಕೊಂಡೊಯ್ಯುವ) ಒಂದು ಬಗೆಯ ಬಿರುದಿನ ಫಲಕ : ಹಡಪ ಸೀಗುರಿ ಚಾಮರದ . . . ತಾಳವೃಂತಕದ ನುಡಿನಗೆಯ ಪರಿಹಾಸಕರ ವಂಗಡದ ಸೇವಾಸಖಿಯರಲಿ ವಿಂಗಡಿಸಿ ನೋಡಿದು ಕಾಣದಳವಳಿದಳಲಿದನು ಹನುಮ (ತೊರರಾ. ೫-೨-೮೯); ಉಡುಪಾನನೆಗಿಂತೆಯ್ದಿದ ನೋವವಳಡಪ . . . ಚಮರ ಸೀಗುರಿ ಬಿಜ್ಜಣ ಮುಡಿವೂ ಕರಗಂಬೊತ್ತ ಮಡದಿಯರ್ಗಂ ದೀವದ ಖಗಮೃಗಕಂ ಬಿಡದಡಸಿತು (ಜಯಕಾ. ೨-೪೧). **ಸೀಕ್ಕುರಿ:** ೧. ಹೊಕ್ಕುಳ ಗಂಟೆ ಸೀಕ್ಕು[ಪಾಠಾಂ. ಸೋಕ]ರಿ ಮುಖರಂಭವ ಸಿಕ್ಕಿ ಡೊಂಕಣಿಗಳ ಬಿಗಿದು ಸೊಕ್ಕಿದ ಮದಕರಿಗಳ . . . ಶೃಂಗರಿಸಿ (ಬಸಪ. ೫-೬೦).

**ಸೀಗುರಿಯನಿಕ್ಕು** = ಚಾಮರ ಬೀಸು: ಸ್ಮರನರಸಿಗೆ ಸೀಗುರಿಯನಿಕ್ಕು[ಪಾಠಾಂ. ನೆತ್ತು]ವಂತಿರ್ಪ ಸೋಗೆನವಿಲ್ಗಳಿಂ . . . ಮನಂಗೊಳಿಸಿ ( ಅರ್ಧನೇ. ೪-೬೮ ವ); ದೇವಿಗೆ ಸಿರಿದೇವಿ ಸೀಗುರಿಯನಿಕ್ಕಲು (ಭೈರಸೂ. 1, ೩೪). **ಸೀಗುರಿಯವರು** = ಚಾಮರವನ್ನು ಬೀಸಿ ಸೇವೆಮಾಡುವವರು: ಒಱಲಿ ಕೆಡೆದರು ಹಡಪಿಗರು ಸೀಗುರಿಯವರು ಸತ್ತಿಗೆಯವರು (ಕುಮ್ಮಾಭೀ. ೧೦-೧೨).

[ದೇ. ‖ ತಮಿ. ಚವಿಱಿ; ತೆಲು. ಸೀವಿರಿ ./ ಮರಾ ಸೀರಗಿರೀ, ಸೀರೀಗಿರೀ]

**ಸೀಗುರಿ$_2$** (ನಾ). ಒಂದು ಬಗೆಯ ಮರ: ಸೆಳ್ಳು ಸೀಗುರಿಯೊಡವಾರು ಬನ್ನಿ ಕಲುವಾದರಿ ಪಾದರಿಯಾದಿಯಾದ ಪೆರ್ಮರಗಳ ಕಾಡೊಳ್ಕೆತರುತಮಿರ್ದರು ವೈದ್ಯತನೂಜರಿರ್ವರುಂ (ಪುಣ್ಯಾಸ್ರ. ೩-೭೩). [<— ತಮಿ. ಚೀಕ್ಕಿರಿ]

**ಸೀಗುರಿಕಾಱ** (ನಾ). 'ಸೀಗುರಿ' ಎಂಬ ಛತ್ರಿಯನ್ನು ಹಿಡಿದಿರುವವನು: ಸೂಳೞಿದಿಕ್ಕೆಲದೊಳಿಕ್ಕುವ ಚಾಮರ ಸೀಗುರಿಕಾಱರಿಂ . . . ಭಕ್ತಮಹಾಗಣಂಗಳಿಂ ಕಿಕ್ಕಿಱಿಗಿಱಿದು (ಭೈರಸೂ. I, ೧೮). [ಸೀಗುರಿ$_1$ + - ಕಾಱ]

**ಸೀಗುರಿಕೆ** (ನಾ). ತಾಪ; ಶಾಖ: ಒಂದಿಹ ಸೀಗುರಿಕೆಯಲಿ ಮೂಱುಲೋಕವು ಬೇಗೆಗೊಳ ಗಾಗಿರ್ದರಳಲುತ ಬಯಸಿ ಪವನನನು (ಉತ್ತರ. ೩೧-೪೫). [< ಸೀಕರಿ + - ಇಕೆ]

**ಸೀಗುರಿಯಿಕ್ಕು** (ಕ್ರಿ). ಚಾಮರ ಬೀಸು: ಸಿರಿಸರಸ್ವತಿಯರಂದೊಲಿದು ಚಾಮರವಿಕ್ಕೆ ಅರರೆ ಇಂದ್ರಾಣಿಯರು ನಲಿದು ಸೀಗುರಿಯಿಕ್ಕೆ (ಬಸರ. ೧-೨೧೨). [ಸೀಗುರಿ$_1$ + ಇಕ್ಕು]

**ಸೀಗುರಿವಿಡಿ** (ಕ್ರಿ). ಚಾಮರದಂಥ ಸಾಧನವನ್ನು ಹಿಡಿದುಕೊಳ್ಳು: ಪಡಿಯಱಿಕೆಯ ಸೀಗುರಿವಿಡಿವಡಪದ ಕನ್ನಡಿಯ ಪಡಿಗದಾಕೆಗಳೆಲ್ಲಂ ಮಿಡುಕಲಣ ಮಱಿಯದಿರ್ದಿರ್ದೆಡೆಯೊಳ್ಪೆಱಗಾಗಿ ಮೂಗರಂದದಿನಿರ್ದರ್ (ಕಾದಂಪೂ. ೩೨೯).

[ಸೀಗುರಿ$_1$ + ಪಿಡಿ$_1$]

**ಸೀಗುರಿಸು** (ಕ್ರಿ). ೧. ಸುಡು; ದಹಿಸು: ಸೀಗುರಿಸುವುರಿವಿಷದ ಲೋಳೆಯ ಲಾಗಿಸುವ ನಾಲಗೆಯ ಸುಯ್ಲಿನ ಬೇಗುದಿಯ ತೊಡಬೆಗಳ ಹಾವ್ ತುಡುಕಿದವು ಘಟ್ಟನಲಿ (ಕುವ್ಯಾಕ. ೨೬-೩೯). ೨. ಸುಟ್ಟುಹೋಗು; ದಹಿಸಲ್ಪಡು: ಪೋಗಿ ಸುರಲೋಕಕ್ಕೆ ಅಮೃತಕ್ಕಾಗಿ ಕಾಪಾಗಿರ್ದ ವಹ್ನಿಯನಾ ಗರುತ್ಮನು ನೋಡಿ ಜ್ವಾಲಾಶತ ಸಹಸ್ರದಲಿ ಸೀಗುರಿಸುವುದು ಸಲ್ಲದೆಂದತಿವೇಗದಲಿ ಬ್ರಹ್ಮನನು ಕಾಬುದ್ಯೋಗದಲಿ ಪರಮೇಷ್ಠಿಲೋಕಕ್ಕಾತನ್ನೆದಿದನು (ತಿಮ್ಮಆ. ೩-೬೫). ೩. ಸಂತಾಪಿಸು; ಬೇಗುದಿಗೊಳ್ಳು: ತಾಗಿದೆಳೆಮುಳ್ಳಿನಲಿ ಮದಗಜ ಸೀಗುರಿಸುವುದೆ (ಕುವ್ಯಾಅ. ೧೦-೫೦). ೪. ಹಬ್ಬು; ವ್ಯಾಪಿಸು: "ಸೀಗುರಿಸಿತೆನಲ್ಕೆ ಬಳ್ಳಿಮೂಡಿದುದಕ್ಕುಂ" (ಭಾರನಿ. ೧೬); ಚುಂಬಿಸಿತು ಕಡುಶೋಕ ಮಿಡಿದನು ಕಂಬನಿಯನುಗುರಿನಲಿ ಘನಕರುಣಾಂಬುನಿಧಿ ಸೀಗುರಿಸಿ ಮೈಗೂಡಿಬಿದ ರೋಮದಲಿ (ಕುವ್ಯಾಅ. ೨೦-೯). [< ಸೀಕರಿ + -ಇಸು]

**ಸೀಗೆ, ಶೀಗೆ, ಸೀಕೆ** (ನಾ). ೧. ಹಬ್ಬುವ ಒಂದು ಬಗೆಯ ಮುಳ್ಳುಪೊದೆ; IP ತಲೆಕೂದಲನ್ನು ಶುಚಿಗೊಳಿಸಲು ಇದರ ಕಾಯಿಯಿಂದ ಮಾಡಿದ ಪುಡಿಯನ್ನು ಉಪಯೋಗಿಸುತ್ತಾರೆ: "ತೈಲಾರಿಯೆನಲಾ ಸೀಗೆಯಕ್ಕು" (ಮಂಗರಾ. ೪೫-೪೮); ಸತಿಯಳಲು ಸೀಗೆಯೊಳಗಣ ಬಾಳೆಗೆಣೆಯಾದುದು (ಹಚಕಾ. ೧೨-೧೩); ಅವರುಂ ದರಿದ್ರ ಸಂಗತರಾಗಿ ಜೀವಿಪರ್ ಸೀಗೆಯೊಳಗಣ ಬಾಳೆಯಂತೆ (ಚೆಬಪು. ೩-೧೨); ಅಡುಗಬ್ಬು ಸೀಗೆಗೆ ಸಹ ಮ ಲ (ಎಇ. VIII, ೧೩೩-೪೨; 1586); ಸೀಗೆಯಡಿಯಣ ಬಾಳೆಯಂತಾಗಿ ದೇವಿ ತನು ಬಾಗಿ ನಡದಳು (ತುರಂಗ. ೩೫-೩೦). ೨. ಸೀಗೆಕಾಯಿಯ ಮೇಲೆ ಹಾಕುವ ತೆರಿಗೆ: ಚರಾದಾಯ ಹೊರಾದಾಯ ಸೀಗೆ ಮಡ್ಡಿ ಪತಂಗ ಪೊಪ್ಪಳಿ ಗಿಡಗಾವಲು (ಮೈಆರಿ. ೧೯೨೭, ೧೧೩-೫೯; 1826). ೩. ಆಶ್ವೀಜಶುದ್ಧಹುಣ್ಣಿಮೆಯಂದು (ಸೀಗೆಯ ಕಾಯಿಗಳು ಫಲಕ್ಕೆ ಬರುವ ಕಾಲದಲ್ಲಿ) ಪೂಜಿಸಲು ಇಡುವ ಗೌರಿ: ನಾಗರಪಂಚಮಿ, ಗೌರಿಸೀಗೆ, ಅರಳೆಲೆಬಸವ ಮೊದಲಾದವುಗಳು ಹೆಣ್ಣಿನ ಹಬ್ಬಗಳು . . . ಸೀಗೆಯನ್ನಿಟ್ಟು ಬನದೂಟ ಮಾಡಿ . . . ಹೆಣ್ಣು ಆರುತಿಯೆತ್ತುವುದು (ಜನಗೀ. ೧೬ ಮೊದಲ ಮಾತು). 'ಸೀಗೆಗೌರಿ' ಪರಾ. ಶೀಗೆ: ೧. ಶನಿವಾರದ ಎಂಣೆ ಶೀಗೆಯಕಾಯಿ ಸಹ ಹನ್ನೆರಡು ಹಣ (ಎಕ. VI, ೩೨-೨೦; 1448); ಶೀಗೆ:- ಮರವು ತಕ್ಕಮಟ್ಟಿಗೆ ದೊಡ್ಡದಾಗುತ್ತದೆ. ಕಾಯಿ ಪ್ರಸಿದ್ಧ (ಕಭಾಗ. ೪೮). ೩. ಹೆಣ್ಣು ಮಕ್ಕಳು . . . ಬೆಳದಿಂಗಳಿನಲ್ಲಿ ಆಡಿ, ಹಾಡಿ, 'ಶೀಗೆ' ಯನ್ನು ತಂದು ಇಡುವರು . . . ಈ ಶೀಗೆಗೆ ಆರತಿಯನ್ನು ಬೆಳಗಿ ಆಡುವರು (ಕನ್ನಜಾ. ೧೬೭). ಸೀಕೆ: ೧. ಆ ತರುಗುಲ್ಮಲತಾ ಪ್ರತಾನಸೀಕಾಕುಂಜಂಗಳಂ ಸವರ್ದಾ ತಾಣಮಂ ಮನೋಹರಮಪ್ಪಂತು ಸೈತುಗೊಳಿಸಿ (ಕಳನ್ನ. ೧-೫೫).

**ಶೀಗೆಯ ಹುಣ್ಣಿಮೆ, ಶೀಗೆಯ ಹುಣ್ಣಿವೆ** = ಆಶ್ವಯುಜಮಾಸದ ಹುಣ್ಣಿಮೆ ಮತ್ತು ಅಂದು ಆಚರಿಸುವ ಗೌರೀಪೂಜೆ: ಶೀಗೆಯ ಹುಣ್ಣಿಮೆಯ ಚರಗವನ್ನು ಚೆಲ್ಲಿದ ಒಕ್ಕಲಿಗನು ಶುಭದಿನವನ್ನು ನೋಡಿ ಭೂಮಿಗೆ ಕುಡಗೋಲು ಹಾಕುವನು (ಕನ್ನಜಾ. ೧೬೭); ಇಂದು ಶೀಗೆಯ ಹುಣ್ಣಿವೆ (ಸ್ವಾತಿಚಿ. ೧೧೫). **ಸೀಗೆಯ ಕೆಯಿ** = ಸೀಗೆಯು ಬೆಳೆದಿರುವ ಭೂಮಿ: ಬಡಗಣ ಹೊಲದಲು ಸೀಗೆಯ ಕೆಯಿ ಕಂಬ ೨೭ (ಎಕ. VI, ತರೀಕೆ. ೬೦-೫೨; 1154). **ಸೀಗೆಯ ಮೆಳೆ** = ಸೀಗೆಯ ಪೊದರು: ಎಳೆಯ ಬಾಳೆಯ ಸುಳಿಗೆ ಸೀಗೆಯ ಮೆಳೆಯೊಡನೆ ಸರಸವೆ (ಕುವ್ಯಾದ್ರೋ. ೧೨-೨೯); ಎಳೆವಾಳೆ ಬಲ್ಪಿಗೆ ಬಂದರೆ ಸೀಗೆಯ ಮೆಳೆಯೊಳು ಮಥನವೆ (ಮೋಹತ. ೩೪-೨೪). [ದೇ. II ತುಳು. ಶೀಗೆ, ಸೀಗೆ]

**ಸೀಗೆಕಾಯಿ, ಶೀಗೆಕಾಯಿ** (ನಾ). ಸೀಗೆಯ ಮೆಳೆಯ ಕಾಯಿ: (೬). ಶೀಗೆಕಾಯಿ: ಅಟ್ಟ ಅಡಿಗೆಲ್ಲಾ ಅರಿಶೀನ ಶೀಗೆಕಾಯಿ ಉಂಡ ಬಾಯಲ್ಲೀ ಗಮಗಾಮಾ (ಹುಟ್ಟಹ. ೫೦). [ಸೀಗೆ + ಕಾಯ್$_4$ (< ಕಾಯ್$_4$)./ ತಮಿ. ಚೀಕ್ಕಾಯ್, ಚೀಯಕ್ಕಾಯ್, ಚೀಕ್ಕೆಕ್ಕಾಯ್; ಮಲ. ಚೀಕ್ಕಕಾಯಿ, ಚೀಯಕ್ಕಾಯಿ; ತುಳು. ಸೀಗೆಕಾಯಿ; ತೆಲು. ಸೀಕಾಯ./ ಮರಾ. ಶಿಕೇಕಈ, ಶಿಕೇಕಾಈ]

**ಸೀಗೆಗೆರೆ** (ನಾ). ಒಂದು ಕೆರೆಯ ಹೆಸರು: ಸೀಗೆಗೆರೆನಾಮತಟಾಕ (ಮೈಆರಿ. ೧೯೪೨, ೭೫-೧೧೩; 819). [ಸೀಗೆ + ಕೆರೆ$_2$ (< ಕೆಱೆ)]

**ಸೀಗೆಗೌರಿ** (ನಾ). = ಸೀಗೆ ೩: ಹೊಲಗಳಲ್ಲಿ ನೆರನೆರೆಯಾಗಿಯೇ ಸೀಗೆಗೌರಿಯ ಪೂಜೆ ನಡೆಯುತ್ತಿದೆ (ಭಾಹಬ್ಬ. ೧೪೨). [ಸೀಗೆ + ಗೌರಿ]

**ಸೀಗೆಣಸು, ಸಿಹಿಗೆಣಸು** (ನಾ). ಗೆಣಸಿನಲ್ಲಿ ಒಂದು ಬಗೆ: ಕೆಲವರು ಸೀಗೆಣಸನ್ನು ಕೆಂಡದಲ್ಲಿ ಸುಟ್ಟು ತಿನ್ನುತ್ತಾರೆ (ರೂಢಿ). ಸಿಹಿಗೆಣಸು: "ಮಹಾನೀಲಾ — ಕರಿಯಗಿರಿಕರ್ಣೀ, ಹಿರಿಯ ನೇಜಿಲ್, ದೊಡ್ಡ ಸಿಹಿಗೆಣಸು" (ಓಷಧಿ. ೧೧೭). [ಸೀ$_2$ + ಗೆಣಸು (< ಗೆಟಸು)]

**ಸೀಗೆಪುಡಿ** (ನಾ). ಸೀಗೆಕಾಯಿಯನ್ನು ಜಜ್ಜಿ ಮಾಡಿದ ಪುಡಿ: ಜಿಡ್ಡಾದ ಪಾತ್ರೆಗಳನ್ನು ಕಡಲೆಹಿಟ್ಟು ಸೀಗೆಪುಡಿ ಮಿಶ್ರಮಾಡಿ ಉಜ್ಜಿದರೆ ಒಪ್ಪವಾಗುವುವು (ಗೃಹವಿ. ೧೭೭). [ಸೀಗೆ + ಪುಡಿ]

**ಸೀಗೆಯೊಬ್ಬೆ** (ನಾ). ಸೀಗೆಯ ಪೊದರು, — ಮೆಳೆ: ಬಸದಿಯ ಕೆಱೆಯೊಳಗು ಹಡುವಲು ಸೀಗೆಯೊಬ್ಬೆ ಕಟ್ಟು ಬಡಗಲು (ಎಕ. V, ಹಾಸನ. ೬೯-೭೮; 1155). [ಸೀಗೆ + ಒಬ್ಬೆ$_1$ (< ಒಬ್ಬೆ)]

**ಸೀಗೆವೆಳೆ** (ನಾ). = ಸೀಗೆಯೊಬ್ಬೆ: ತರುಗುಲ್ಮಲತಾಪ್ರತಾನಾವೃತಮಾದ ಸೀಗೆವೆಳೆಯ ಮಧ್ಯದೊಳ್ ರಾಮೇಶ್ವರನೆಂಬ ಮಹಾದಿವ್ಯಲಿಂಗಂ ನೆಲಸಿರ್ಪುದು (ಕಳನ್ನ. ೧-೫೫). [ಸೀಗೆ + ಮೆಳೆ$_1$]

**ಸೀಗೆಹುಣ್ಣಿವೆ, ಶೀಗೆಹುಣ್ಣಿಮೆ** (ನಾ). ಆಶ್ವಯುಜಮಾಸದ ಪೌರ್ಣಮೆ ಮತ್ತು ಅಂದು ಆಚರಿಸುವ ಗೌರೀಪೂಜೆ: ಸೀಗೆಹುಣ್ಣಿವೆ ಮುಂದೆ ಸೋಗಿನ ಚಂದ್ರಮ ಸಾಗಿ ಬರುವೊಲು ಬರುವ ಚಳಿಯಾಕೆ (ಗರಿ. ೧೦೬-೧); ಹೆಜ್ಜುಗ್ಗಿ ಅಥವಾ ಸೀಗೆಹುಣ್ಣಿವೆಯನ್ನು ಮಂಗಳವಾರ ಇಲ್ಲವೆ ಶುಕ್ರವಾರ ಆಚರಿಸುವರು (ಭಾಹಬ್ಬ. ೧೪೨). ಶೀಗೆಹುಣ್ಣಿಮೆ: ಆಶ್ವಿನಶುದ್ಧಹುಣ್ಣಿಮೆಯೇ ಶೀಗೆಹುಣ್ಣಿಮೆ (ಕನ್ನಜಾ. ೧೬೫); ಶೀಗೆಹುಣ್ಣಿಮೆ ದಿನ ಉಣ್ಣಲಿಕ್ಕೆ ಕರೆಯುವರೆಲ್ಲಾ (ಶರೀಫ. ೩೭-೧). [ಸೀಗೆ + ಹುಣ್ಣಿವೆ (< ಪುಣ್ಣಮೆ)]

**ಸೀಗೆಹುಳಿ** (ನಾ). ನೀರಿನಲ್ಲಿ ಕಲಸಿದ ಸೀಗೆಪುಡಿ: ನಿಮ್ಮ ಪ್ವಾಜಿಗೆ ಸೀಗೆಹುಳಿ ತಡೆಯೋದಿಲ್ಲ. ಅದಕ್ಕೋಸ್ಕರ ಹೆಸರುಹಿಟ್ಟು ಉಪಯೋಗಿಸುವುದು (ಚಂಗಾಳ್ಯ. ೧೦). [ಸೀಗೆ + ಹುಳಿ$_2$ (< ಪುಳಿ$_3$)]

**ಸೀಗ್ರಲಿಕಿತ** (ನಾ). ಶಾಸನದ ಬರವಣಿಗೆಯ ಒಂದು ಸಂಪ್ರದಾಯ: ಮಠದಾಚಾರ್ಯ್ಯ ಬ್ರಹ್ಮೇಶ್ವರಜೀಯರ ಸೀಗ್ರಲಿಕಿತ (ಸೌಇಇ. IX-i, ೧೧೪-೨೫; 1054). [IP ಇದು 'ಶೀಘ್ರಲಿಖಿತ' ಎಂಬುದರ ಅಪಲಿಖಿತ]

**ಸೀಜೋಳ** (ನಾ). ಸಿಹಿಯಾದ ರುಚಿ ಇರುವ ಒಂದು ಬಗೆಯ ಜೋಳ: ಸೀಜೋಳ ತಿಂದರೆ ದನ ಸೊಕ್ಕುತ್ತವೆ (ರೂಢಿ). [ಸೀ$_2$ + ಜೋಳ]

**ಸೀಟಿ, ಸೀಟೆ** (ನಾ). ೧. ಬಾಯಿಂದ ಊದಿ ಮಾಡುವ ಶಬ್ದ; ಸಿಳ್ಳು: ಷರಾಯಿಜೇಬಿನಲ್ಲಿ ಕೈಯಿಟ್ಟು, ಸೀಟಿ ಹಾಕುತ್ತಾ ತಿರುಗಾಡುವುದು ಅವನ ಸ್ವಭಾವ (ಗಂಸಮ. ೨೭). ೨. ಸಿಳ್ಳಿನಂತಹ ಧ್ವನಿ ಹೊರಡಿಸುವ ಒಂದು ಬಗೆಯ ಸಾಧನ; ಶಿಲ್ಪಿ: ಅವರು ಸೀಟಿ ಊದಿದ ಕೂಡಲೆ ಎಲ್ಲ ನಾಯಿಗಳು ಜಾಗ್ರತವಾದವು (ನಾಕಥೆ. ೨೯). ಸೀಟೆ: ೨. ಆ ಸಮಯಕ್ಕೆ ಸರಿಯಾಗಿ ಸೀಟೆ ಹಿಡಿದುಕೊಂಡಿದ್ದ ಗಾರ್ಡ್ ತನ್ನ ಪೆಟ್ಟಿಗೆಯ ಕಡೆಗೆ ಬಿರಬಿರನೆ ಹೆಜ್ಜೆಹಾಕಿದನು (ಪುನರು. ೪೫೭). [<— ಹಿಂ. ಸೀಟೀ; ಮರಾ. ಶಿಟೀ]

**ಸೀಟು$_1$** 'ಸೀಂಟು' ನೋ.

**ಸೀಟು$_2$** (ನಾ). ೧. ಆಸನ; ಪೀಠ: ಆಕೆಯ ಸಮೀಪವಾಗಿಯೇ ಗಂಡಸರ ಸೀಟಿನಲ್ಲಿ ಕುಳಿತಿರುವ ಯುವಕನ ಕಣ್ಣುಗಳಲ್ಲಿ ಒಲವು ತುಂಬಿದೆ (ಏಕಾಂಗಿ. ೯೦). ೨. ಎಡೆ; ಸ್ಥಾನ: ಸೀಟನ್ನ ಪಡೆಯದ ವಿದ್ಯಾರ್ಥಿಗೇತಕೆ ಕಟ್ಟುವ ಶುಲ್ಕದ ಚಿಂತೆ (ಇಂಚಾಪ. ೨೨೦-೮೮). ೩. ಚುನಾವಣೆಯಲ್ಲಿ ಅಭ್ಯರ್ಥಿಯು ಸ್ಪರ್ಧಿಸಲು ಪಕ್ಷವು ಕೊಡುವ ಅವಕಾಶ: ಈ ಸಲದ ಚುನಾವಣೆಗೆ ತನ್ನ ಪಕ್ಷವು ತನಗೇ ಸೀಟು ಕೊಡುವುದೆಂದು ನಂಬಿದ್ದ ಅವನಿಗೆ ನಿರಾಶೆ ಕಾದಿತ್ತು (ರೂಢಿ). [<— ಇಂ. Seat]

**ಸೀಟುಗಾಲು** (ನಾ). ನಡೆಯುವಾಗ ನೆಲವನ್ನು ಉಜ್ಜಿಕೊಂಡು ಹೋಗುವ ಕಾಲು: (೬). [ಸೀಟು$_1$ (< ಸೀಂಟು) + ಕಾಲು$_1$ (< ಕಾಲ್$_1$)]

**ಸೀಟೆ** 'ಸೀಟಿ' ನೋ.

**ಸೀಡಕ** 'ಸಿಡುಕ' ನೋ.

**ಸೀಡಕತನ** 'ಸಿಡುಕುತನ' ನೋ.

**ಸೀಡಿ, ಸಿಡಿ$_4$** (ನಾ). ೧. (ಅವರೆ ಮತ್ತು ತೊಗರಿ ಧಾನ್ಯಗಳ) ಬೀಜಕೋಶಗಳಲ್ಲಿರುವ ಕಾಳುಗಳನ್ನು ತಿಂದುಹಾಕುವ ಕೀಟ: (ಎಸಮ್ಮ. XV, ೩೭).

**ಸಿಡಿ$_4$** : ೨. ಸಸ್ಯಗಳಿಗೆ ತಗಲುವ ರೋಗ : 'ಸಿಡಿಹಾಯ್' ಪರಾ.
[ದೇ. ‖ ತೆಲು. ಚೀಡ]

**ಸೀಡಿಸು** (ಕ್ರಿ). ಮಡಿಚು; ಮುದುರು (?) : ಯಾರ್‍ರೋ ಅದೂ? ಕೊಡೆ ಸೂಡಿದೋರು? ಸೀಡಿಸ್ಕಿರೋ ಇಲ್ಲೋ! (ಮಲೆಮ. ೭೨೪). [? + -ಇಸು$_3$]

**ಸೀತ$_1$** 'ಸೀ$_1$' ಪರಾ.

**ಸೀತ$_2$** 'ಸೀನ್$_1$' ಪರಾ.

**ಸೀತ$_3$** (ನಾ). ೧. ಚಳಿ ; ಕುಳಿರು : ಮಾಗಿಯ ದಿವಸಂ ರಿಸಿಯರ್ಕಳ್ ಸೀತದೊಳ್ ಸೆಡೆಗುಂ (ವಡ್ಡಾರಾ. ೧೯೧-೨೬); ವ್ಯಂತರದೇವರಂ ಸೌಂತೆಯ ಬಳ್ಳಿಯೊಳೆಟ್ಟು ಪೊಕ್ಕಂತೆ ಮಾಡಿ ಜ್ಯೋತಿಷ್ಕದೇವರಂ ಸೀತಂ ಪತ್ತಿದ ವಾತಾಧಿಕರಂತೆ ಮಾಡಿ (ಧರ್ಮಾಮೃ. ೭-೯೫). ೨. ತಂಪು; ಶೈತ್ಯ : ಸೀತವುಳ್ಳನ್ನಕ್ಕ ಉಷ್ಣವ ಪ್ರತಿಪಾದಿಸಬೇಕು ಉಷ್ಣವುಳ್ಳನ್ನಕ್ಕ ಸೀತವ ಪ್ರತಿಪಾದಿಸಬೇಕು (ವಚರ. ೮೬); ಶೀತ ಸೀತ, ಶುಚಿ ಸುಚಿ (ಶಮದ. ೨೫೩ ಪ್ರಯೋ); ಕಲ್ಲಾಗಿನ ನೀರು ಬಹಳ ಸೀತ (ಗಂಗಾಸಾ. ೯೧). ೩. ಶೀತಬಾಧೆಯಿಂದ ಉಂಟಾಗುವ ಒಂದು ಬಗೆಯ ರೋಗ; ನೆಗಡಿ: ಜ್ವಲನಂ ಜ್ವರಂಗೊಂಡ ನೆಂದು ಮಂತ್ರಿಸುವಂತೆ ಜಲಕೆ ಸೀ[ಪಾಠಾಂ. ಶೀ]ತಂ ಬಂದುದೆಂದು ಭಾವಿಸುವಂತೆ (ರುದ್ರರ. ದೇ. ೨೦೮-೬). [< ಸಂ. ಶೀತ]

**ಸೀತಳ, ಶೀತಾಳ$_1$, ಸಿತಾಳ, ಸೀತಾಳ$_3$** (ನಾ). ೧. ಶೈತ್ಯ; ತಂಪು: ತೆಗೆದಪ್ಪಿದರೆ ಚಂದನದ ಸೀತಳದ ಹಾಂಗೆ ಆಗಬೇಕವ್ವಾ (ಸಕವ. ಕ. II, ೧೮೮-೪೮೯). ೨. ಚಳಿಯಿಂದ ಕೂಡಿದ ಜ್ವರ; ಶೀತಜ್ವರ: ''ಸೀ[ಪಾಠಾಂ. ಶೀ]ತಳವೆನಲು ಸನ್ನಿ'' (ಮಂಗರಾ. ೧೧೪-೪). ೩. ಒಂದು ಬಗೆಯ ನೀರಾವರಿಭೂಮಿ: ಸೀತಳಕೆ ಗ ೧ ಹತುಖಂಡಿಗೆ ಉಪಹರ (ಎಕ. VI, ಕಡೂರು. ೯೭-೧೦೭; 1166). **ಶೀತಾಳ$_1$** : ೪. ತಣ್ಣನೆಯ ನೀರು; ಶೀತಲಜಲ: ಘನಶೀತಾಳದಜವಟ್ಟಿಗೆಯ ಮಧ್ಯದಲಂದು ಚಮರಗಳ ಡಾಳಿಸುತಲಿ . . . ಧರ್ಮವ ಮಾಡಿದರ ಕೊಂಡೊಯ್ಯುರು (ಪ್ರಪ್ಲಾಚ. ೯-೧೪). **ಸಿತಾಳ** : ೫. ಪವಿತ್ರವಾದ ನೀರು ; ಶುದ್ಧಜಲ : ಆಚಾರವೆ ಅರ್ಪಿತ ಮಹತ್ವವೆ ಸಿ[ಪಾಠಾಂ. ಶಿ] ತಾಳ (ಅವಚಂ. ೮೪-೩೭೪); ಶಿಶು ಬಂಧುಗಳು . . . ಮುಂತಾದ ಇವರಿಗೆಲ್ಲಕ್ಕೂ ಒಡೆಯರಿಗೆ ಸಲುವುದಕ್ಕೆ ಮುನ್ನವೆ ಸಿತಾಳ ಶಿವದಾನವೆಂದು ಇಕ್ಕಬಹುದೆ (ಸಕವ. ಕ. I, ೪೨೮-೧೬೦೧). **ಸೀತಾಳ$_3$** : ೫. ಲಿಂಗಕ್ಕೆ ನೈವೇದ್ಯವ ತೋಱಿ ಸೀತಾಳವ [ಪಾಠಾಂ. ಶೈತ್ಯವ] ಕೊಟ್ಟು . . . ಪ್ರಸಾದಭೋಗವ ಮಾಡುವುದು ಲಿಂಗಪ್ರಸಾದ (ಚನ್ನವ. ಕ.೧೩೯-೩೧೪); ಸೀತಮ್ಮ ಮಿಾಡ್ನೀರು ಸೀತಾಳ ಪಾತಾಳ (ಹಳ್ಳಿಯ. ೭೪). (ಗು). ೬. ತಂಪಾದ; ತಣ್ಣಗಿರುವ: ಕುರುಕುಲಕಾಲಸರ್ಪನ ತಾಯುದರ ಸೀತಾಳವಮಳಿಗೆಯಲೇ (ಕುವ್ಯಾಕ. ೨೨-೧). [< ಸಂ. ಶೀತಲ]

**ಸೀತಱ್, ಸೀತಱು, ಸೀತುಱು** (ನಾ). ೧. ಅಂಜಿಕೆ; ಭಯ: ''ಕೆಕ್ಕಳಿಸಿದುದೆಂದುಂ ಸೀತಱೆಂದುಂ ಭಯವಿಕಾರಂ'' (ಕಶಸಾ. ೫೬-೨೨೪). **ಸೀತಱು** : ೨. ಕೋಪ; ಸಿಟ್ಟು : ''ಮುಳಿಸು . . . ಸೀತಱು ಕಾವು ತಿಳಿಯೆ ಕೋಪದ ಪೆಸರು'' (ಶಬ್ದಮಂ. ೪೦). 'ಸೀತಱುದಾಳು' ಪರಾ. **ಸೀತುಱು** : ೧. 'ಸೀತುಱುಗೊಳ್' ಪರಾ.
[ದೇ. ‖ ತೆಲು. ಚೀದರ]

**ಸೀತಱು** 'ಸೀತಱ್' ನೋ.

**ಸೀತಱುದಾಳು** (ಕ್ರಿ). ಕೋಪಗೊಳ್ಳು; ಸಿಟ್ಟಾಗು: ಋಷಿವರನೆಡೆಗೆ ಕಮಲ ಸಂಭವನೆಯ್ತರಲ್ಕನ್ನಣೆಯ ಮಾಡದಿರೆಯವನ ಮೇಲೆ ಸೀತಱುದಾಳುತೆ (ಪಾಸೋಪು. ೧೧-೫೩). [ಸೀತಱು (< ಸೀತಱ್) + ತಾಳು$_1$ (< ತಾಳ್$_1$)]

**ಸೀತಾಕುಮಾರಕ** (ನಾ). ಸೀತೆಯ ಮಗ: ರುಧಿರಾಕ್ಷನೆಂಬ ಶೂರಾಸುರಂ . . . ಸೀತಾಕುಮಾರಕನ ಕರದ ಕೋದಂಡಮಂ ತುಡುಕಿದಂ ಮೇಲ್ವಾಯ್ದು (ಜೈಮಿಭಾ. ೨೦-೪೮). [ಸಂ.]

**ಸೀತಾಗ್ರ** (ನಾ). ನೇಗಿಲಿನಿಂದ ಉತ್ತ ಸಾಲು, — ಗೆರೆ : ''ಪಾತ್ರಂ ಸೀತಾಗ್ರಮುಂ'' (ವಸ್ತುಕೋ. ೧೩೪-೧೧೮). [ಸಂ.]

**ಸೀತಾಪತಿ** (ನಾ). ಸೀತೆಯ ಗಂಡ; ರಾಮ: ಅಯೋಧ್ಯೆಯ ರಾಮ ಪಟ್ಟಾಭಿರಾಮನೆ ಸೀತಾಪತಿ ಜಾನಕೀಮನೋಹರ (ಪುರಂದ. ೫-೭೯-೧೮). [ಸಂ.]

**ಸೀತಾಫಲ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹಣ್ಣು: ಸೀತಾಫಲ ದ್ರಾಕ್ಷೆಗೊಂಚಲುಗಳ ಈ ಪರಿಯಿಂದ ಹರಿಯ ಮಂಟಪಕ್ಕೆ ಗೊನೆಗಳ ಕಟ್ಟಿ ನಾ ಕೈಯ ಮುಗಿಯುತಲಿದ್ದೆ (ಪುರಂದ. ೫-೬೯-೬); ಅಂಜೂರ ಸೀತಾಫಲದ ವೃಕ್ಷಗಳು (ಜನಭಾ. ೭೯-೨೮). 'ರಾಮಫಲ' ಪರಾ. [ಸಂ.]

**ಸೀತಾಶೃಂಗಿ** (ನಾ). ಒಂದು ಬಗೆಯ ಸಸ್ಯ: ಅತಿವಿಷ, ಅತಿಬಜೆ, ಸೀತಾಶೃಂಗಿ (ವೃಟಿಗಿ. ೨-೨೯). [< ಸೀತೆ$_1$ + ಶೃಂಗಿ$_2$]

**ಸೀತಾಳ$_1$** 'ಸೀತಾಳಿ' ನೋ.

**ಸೀತಾಳ$_2$** 'ಸೀತಾಳಿ' ನೋ.

**ಸೀತಾಳ$_3$** 'ಸೀತಳ' ನೋ.

**ಸೀತಾಳಗಡುಗೆ** (ನಾ). ತಂಪಾದ ನೀರಿನ ಕೊಡ: ಶ್ರೀಕಲಿದೇವರಂಗೆ ನಿವೇದ್ಯಕ್ಕೆ ನನ್ದಾದೀವಿಗೆಗಂ ಸೀತಾಳಗಡುಗೆ ವಸುಧಾರೆಗಂ . . . ಧಾರಾಪೂರ್ಬ್ಬಕಂ ಮಾಡಿ ಕೊಟ್ಟ ಭೂಮಿ (ಎಕ. XI, ದಾವಣ. ೭೪-೩; 1054?).
[ಸೀತಾಳ$_3$ (< ಸೀತಳ) + ಗಡುಗೆ (< ಗಡಿಗೆ)]

**ಸೀತಾಳಗದ್ದುಗೆ** (ನಾ). = ಸೀತಾಳಗಡುಗೆ: ಸ್ಥಾನಾಚಾರ್ಯ್ಯರಿಬ್ಬರುಂ ಸೀತಾಳಗದ್ದುಗೆಗೆ ಕೊಡ ೨೦ ವಸುಧಾರೆ ೩ ಮಂ ನಡಸುವರ್ (ಸೌಇಇ. IX-i, ೨೯೬-೭೨; 1176). [ಸೀತಾಳ$_3$ (< ಸೀತಳ) + ಗದ್ದುಗೆ$_1$ (< ಗರ್ದುಗೆ$_1$)]

**ಸೀತಾಳಸಿಡುಬು** 'ಸೀತಾಳೆಸಿಡುಬು' ನೋ.

**ಸೀತಾಳಿ, ಸೀತಾಳ$_1$** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು: ಸೀತಾಳಿದಂಡೆವೂಮಾಲೆಯಂ ಕಟ್ಟುತ್ತಿರ್ದಾಕೆ ಕಂಡು, ಬಿಲ್ಲುಂಬೆರಗುವಾಗಿ, ರಿಕ್ತಾಗಮನದ ಖಿನ್ನತೆಗೆ ಕಾರಣಂ ಕೇಳೆ (ಶ್ರೀರಾಮಪ. ೮೬-೨೭೬); ಪಶ್ಚಿಮದೇಶಗಳ ಸಂಸ್ಕೃತಿಯಲ್ಲಿ ಸೀತಾಳಿಗೆ ಒಂದು ಪ್ರತ್ಯೇಕಸ್ಥಾನ ಕಲ್ಪಿತವಾಗಿದೆ (ಹಸುಹೂ. ೨೭೩). **ಸೀತಾಳ$_1$** : ಚಿತ್ರ ವಿಚಿತ್ರ ಹೂವು ಬಿಡುವ, ಗಡ್ಡೆಬೇರಿನ ಒಂದು ಸಸ್ಯಜಾತಿ; ಸೀತೆಹೂವಿನ ಗಿಡ ; ಸೀತಾಳಗಡ್ಡೆ (Orchid. ಇಂಕನ). [ದೇ. ‖ ತಮಿ. ಚೀತಳಿ]

**ಸೀತಾಳೆ, ಶೀತಾಳ$_2$, ಸೀತಾಳ$_2$** (ನಾ). ಒಂದು ಬಗೆಯ ಮೈಲಿಬೇನೆ; ಸಣ್ಣಸಿಡುಬು: ''ಸೀತಾಳೆ (ಸೀತಾಳ) — ಶೀತಲಾ = ಒಂದು ಬೇನೆ'' (ತದ್ಭಕೋ. ೪೫). **ಶೀತಾಳ$_2$** : ಗೋಣೆತಟ್ಟು, ಸಣ್ಣತಟ್ಟು, ಶೀತಾಳ, ಸಿಡುಬು . . . ಮುಂತಾದ ರೋಗಗಳಿಂದ ಮರಣಹೊಂದಿದ್ದರೆ ಅಂತವುಗಳನ್ನು ಶಿಡಬಿನ ಹೆಡ್ಡಿಂಗಿನಲ್ಲಿ ಕಾಣಿಸಕೂಡದು (ಗ್ರಾಮಾಕ. ೧೫೬). **ಸೀತಾಳ$_2$** : ಮಗುವನ್ನು ಶುಚಿಯಾಗಿಟ್ಟುಕೊಂಡು ಸೀತಾಳ ಇಳಿದ ಮೇಲೆ ಬೇವಿನ ಸೊಪ್ಪು ಉಜ್ಜಿ ಸ್ನಾನಮಾಡಿಸಬೇಕು (ಗೃಹವಿ. ೧೫೦).
[< ಸಂ. ಶೀತಲಾ]

**ಸೀತಾಳೆಸಿಡುಬು , ಸೀತಾಳಸಿಡುಬು** (ನಾ). ಸಣ್ಣ ಸಿಡುಬು; ಸೀತಾಳೆ: ಸೀತಾಳೆಸಿಡುಬು ಒಂದು ಸಾಂಕ್ರಾಮಿಕ ರೋಗ (ರೂಢಿ). **ಸೀತಾಳಸಿಡುಬು** : ಸೀತಾಳಸಿಡುಬು: ಈ ಖಾಯಿಲೆ ಬಹಳ ಚಿಕ್ಕಮಕ್ಕಳಿಗೆ ಸಹ ಬರುತ್ತದೆ (ಗೃಹವಿ. ೧೫೦).
[ಸೀತಾಳೆ + ಸಿಡುಬು]

**ಸೀತು$_1$** 'ಸೀನ್$_1$' ಪರಾ.

**ಸೀತು$_2$** 'ಸೀದು$_2$' ನೋ.

**ಸೀತುಱು** 'ಸೀತಱ್' ನೋ.

**ಸೀತುಱುಗೊಳ್** (ಕ್ರಿ). ಸಿಟ್ಟಾಗು; ಕೆರಳು: ಪಿಡಿಯಲಾಗ ಧೇನುವತಿಸೀತುಱು ಗೊಂಡು ಚತುರ್ಬಲಂಗಳಂ ಕೆಡಪಿ (ದಶಾವ. ೭-೮೫).
[ಸೀತುಱು (< ಸೀತಱ್) + ಕೊಳ್$_1$]

**ಸೀತೆ$_1$** (ನಾ). ೧. ಒಂದು ಬಗೆಯ ಹುಲ್ಲು: ''ಮಾನುವೆ ಸೀತೆಯೆನಿಕ್ಕು'' (ಮಂಗರಾ. ೩೩-೮). ೨. ಒಂದು ಬಗೆಯ ಮರ ಮತ್ತು ಅದರ ಹೂವು : ಅರಳಿದ ಗೊಂಚಲು ಒತ್ತಾಗಿ ನಾಜೂಕಾಗಿ ಪೋಣಿಸಿದ ದಂಡೆಯಂತೆ ಕಾಣುತ್ತದೆ . . . ಹೆಂಗಸರು ಸೀತೆಯ ದಂಡೆ ಎನ್ನುತ್ತಾರೆ (ಹಸುಹೂ. ೨೭೩). 'ಸೀತೆಹೂ' ಪರಾ. [< ಸಂ. ಶೀತಾ]

**ಸೀತೆ$_2$** (ನಾ). ೧. ನೇಗಿಲಿನಿಂದ ಉತ್ತ ಗೆರೆ; ಉಕ್ಕೆ; ಸಾಲು: ''ಸೀತಾ, ಲಾಂಗಲಪದ್ಧತಿಃ - ಈ ೨ ನೇಗಿಲ ಸಾಲ್'' (ಹಲಾಯು. ೯೪-೪೨೨). ೨. ಉತ್ತ ನೆಲ, — ಭೂಮಿ:

ಸೀತೆಯ ದೂಸಱಿಂದಱಿದ ರಾವಣನಂತಿರೆ ನೀನುಮಿಾಗಳೀ ಸೀತೆಯ ದೂಸಱಿಂದಱಿಯಲಾಟಿಸಿದ್ಯೆ (ಪಂಪಭಾ. ೯-೪೯); ಸರ್ವಲಕ್ಷಣಸಸ್ಯಸಂಪತ್ತಿಗೆ ಸೀತೆಯಪ್ಪುದಱಿಂ ಸೀತೆಯೆಂದು ಪೆಸರನಿಟ್ಟು ಕೊಂಡಾಡಿ ನಡಪುತ್ತುಮಿರೆ (ಪಂರಾಮಾ. ೪-೨೫ ವ). ೩. ಜನಕನ ಮಗಳು; ರಾಮನ ಹೆಂಡತಿ; ℙ ಜನಕನು ಸಂತಾನಾರ್ಥವಾಗಿ ಯಜ್ಞಮಾಡಲು ಭೂಮಿಯನ್ನು ಶುದ್ಧಿ ಮಾಡುತ್ತಿದ್ದಾಗ, ಉತ್ತ ಭೂಮಿಯಲ್ಲಿ ಈಕೆ ದೊರಕಿದ ಕಾರಣ 'ಸೀತೆ' ಎಂಬ ಹೆಸರು ಬಂದಿತು: ನಿನಗಂತು ಸೀತೆಯೇ ಸೀತೆ ಕಡಂಗಿ ಕಾಯ್ದು ಕಡೆಗಣ್ಚದಳಪ್ಪೊಡೆ ಧಾತ್ರನಿಂ ತೊದಳ್ವಾತಿನೊಳೇನೊ ಪಾಂಡವರ ಕೆಯ್ಯೊಳೆ ನಿನ್ನ ನಿಸೇಕಮಾಗದೇ (ಪಂಪಭಾ. ೯-೪೯); ಅನುಬಂಧ ಮನ್ನುಯಾಗತಮೆನಿಸಿದುದದನಧಿಕವಾಗೆ ಮಾಟ್ಪನುನಯದಿಂದೆ . . . ಸೀತೆಯಂ ನಿನಗಿತ್ತಂ (ಪಂರಾಮಾ. ೪-೭೯); ಭೂತಳದೊಳ್ ಕಾಳಬ್ಬೆಯೆ ಸೀತೆಗೆ ರುಗ್ಮಿಣಿಗೆ ರತಿಗೆ ಸರಿದೊರೆ (ಎಕ. II (R), ೫೫೯-೧೫; 1214). ೪. ಗಂಗಾನದಿಯ ನಾಲ್ಕು ಶಾಖೆಗಳಲ್ಲಿ ಒಂದು; ಗಂಗೆಯ ಪೂರ್ವಭಾಗದ ಶಾಖೆ: ಮೆಲ್ಲಗೆ ತರ್ಕೈಸಿತ್ತು ಪೂರ್ವಾಬ್ಧಿಯನಖಿಳನದೀಖ್ಯಾತಸೀತಾಪ್ರವಾಹಂ (ಮಲ್ಲಿಪು. ೨-೧೦); ಮನಂಗೊಳಿಪ ಸೀತಾತರಂಗಿಣಿಯ ದಕ್ಷಿಣೋತ್ತರತಟಂಗಳೆರಡಱೊಳ ಮೆಂಟುಪಟ್ಟಂಡ ಮಂಡಲಂಗಳಿರ್ಪುವು (ಪುಷ್ಪಪು. ೨-೮ ವ).

**ಸೀತೆದಂಡು** = ಭೂಮಿಯನ್ನು ಸಾಗುವಳಿ ಮಾಡುವವರು; ಬೇಸಾಯಗಾರರ ಗುಂಪು: ನಮ್ಮ ಕಡೆ ಕೆಲವರು ರೈತರನ್ನು ಸೀತೆದಂಡು ಎಂದು ಕರೆಯುತ್ತಾರೆ (ಬೈಸರ್ವ. ೧೦೭). [ಸಂ. ಸೀತಾ]

**ಸೀತೆನೆ , ಸಿಹಿತೆನೆ** (ನಾ). ಇನ್ನೂ ಬಲಿಯದೆ ಹಾಲು ತಂಬಿ ಸಿಹಿಯಾಗಿರುವ ತೆನೆ; ಬೆಳಸಿ: "ಯೂಷಮೆಂಬುದು ಸೀತನೆ" (ಹಲಾಯು. ೯೬-೪೩೧); ಮಾಳಿಗೆಯಂ ಸುಟ್ಟು ಸೀತೆನೆಯಂ ತಿಂಬ . . . ಪಟ್ಟೆಯಂ ಪಱಿದು ಚಂಡಂ ಮಾಡುವ ಕಟ್ಟೆಗ್ಗರಂತೆ (ಧರ್ಮಾಮೃ. ೯-೧೭೨); ಕಿಚ್ಚು ಮಾಡಿದನು ಎಚ್ಚರದಿಂದಲೆ ಸಚ್ಚಿದಾನಂದಗೆ ಸೀತೆನೆ ತಿನಿಸಲು (ಸಿದ್ಧಪು. ೩-೭೭). **ಸಿಹಿತೆನೆ :** ಬೆಳಸೆ, ಸಿಹಿತೆನೆ [ಸೀತೆನೆ] (ಕಂನುಹು. ೮೯).

[ಸೀ₂ + ತೆನೆ₁]

**ಸೀತೆಹೂ, ಸೀತೆಹೂವು** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು: ಗಂಧನಕುಲ, ರಸ್ನಾ, ಸೀತೆಹೂ (ಮೈಜಿಗಿ. ೭೭-೧೩೭೧). **ಸೀತೆಹೂವು :** ಸಾಹೇಬರುಗಳೂ, ದೊರೆಗಳೂ, ಮೇಲಧಿಕಾರಿಗಳೂ ಬಂದಾಗ ಅವರಿಗೆ ಸೀತೆಹೂವಿನ ಒಂದೆರಡು ದಂಡೆಗಳನ್ನು ಕೊಡುತ್ತೇವೆ (ಹಸುಹೂ. ೨೭೩). [ಸೀತೆ₁ + ಹೂ₂ (< ಪೂ₂)]

**ಸೀತೆಹೂವು** 'ಸೀತೆಹೂ' ನೋ.

**ಸೀತ್ಕರಿಸು** (ಕ್ರಿ). (ಸಂತೋಷದಿಂದ) ಧ್ವನಿಮಾಡು; ಸೀತ್ಕಾರಮಾಡು: ತನಿವಣ್ಗಳ ಸಾರಮಂ ಶುಕಾವಳಿ ಸಲೆ ಪತ್ತಿ ಸೀತ್ಕರಿಸಿ ಕಣ್ಗಳನಿಂತರೆಮುಚ್ಚಿ ಪೀರುತುಂ ವಿಳಸಿತಚುಂಬನಾಭಿನಯಮಂ ನೆಱೆ ತೋರ್ಪವೊಲಿರ್ದುದಾವ್ರುದೊಳ್ (ಕುಸುಮಾ. ೫-೮೯). [ಸಂ. ಸೀತ್ಕರಣ + -ಇಸು₁]

**ಸೀತ್ಕಾರ** (ನಾ). ೧. ನೋವು, ದುಃಖ, ಸಂತೋಷ ಮುಂತಾದುವನ್ನು ಸೂಚಿಸುವಾಗ ಮಾಡುವ ಧ್ವನಿ: ಕುಸುಮಾಯುಧನಿಸೆ ನೊಂದು ಸೀತ್ಕಾರಮೊಗೆಯೆ (ಕಾದಂಬ. ೩೭); ವಿತರಶ್ರೀತ್ಕಾರವಕ್ತ್ರಂ ಜಳನಿಬಿಡಿತವಾಸಸ್ಸುಟೀಭೂತನಿಮ್ನೋನ್ನತಂ . . . ಕಣ್ಗೆವಂದಿರ್ದುದು (ಚಂದ್ರಪ್ರ. ೭-೧೪೯). ೨. [ಕಾಮಶಾ] ರತಿಕ್ರೀಡೆಯ ಒಂದು ಧ್ವನಿ: ಸಾರಸದೊಲ್ ಸೀತ್ಕಾರಂ ಮಿಗೆ ಮಾಳ್ಪುದು (ಜನವ. ೮-೨೧); ಚುಂಬನ ಕಾತರ ದೈನ್ಯ ಸಂಕಲಿತ ಸೀತ್ಕಾರಗಳಿಂದೆ . . . ಸುರತವೆಸಗುವ ಜಾಣ (ಇಚಸಾಂ. ೯-೭೫). [ಸಂ.]

**ಸೀತ್ಕಾರಿ** (ನಾ). [ಯೋಗ] ಕುಂಭಕದ ಎಂಟು ಪ್ರಕಾರಗಳಲ್ಲಿ ಒಂದು: ಸೂರ್ಯಭೇದನ ಉಜ್ಜಾಯಿ ಸೀತ್ಕಾರಿ . . . ಕೇವಲಮೆಂಬಷ್ಟಕುಂಭಕಪ್ರಕಾರಂಗಳುಂ (ವಿವೇಕ. ೧೩೨). [ಸಂ. ಸೀತ್ಕಾರಿನ್]

**ಸೀತ್ಕೃತ** (ನಾ). ೧. = ಸೀತ್ಕಾರ ೨: ಸೀತ್ಕೃತಂ . . . ಶ್ವಸಿತಮುರುರಾತ್ಕೃತಂ ಎನಿಪೀ ಚಮತ್ಕೃತಿಯನಱಿದು ರಮಿಸುವನೆ ಚದುರಂ (ಜನವ. ೮-೫೦); ಸ್ತನಿತಂ ಬಿದಿರ ಗಂಟೊಡೆದಂತೆ ನಾಲಿಗೆಯಿಂದ ಸೀತ್ಕೃತಂ (ಕಾಮಶಾ. ೨೪೧). ೨. [ನಾಟ್ಯ] "ಕ್ಲೇಶ ಮತ್ತು ಶೈತ್ಯವನ್ನು ತೋರಿಸುವಂತೆ ಉಸುರು ಬಿಡುವುದು" (ಲಾಸ್ಯರಂ. ೨೭೮ ಗದ್ಯಾನುವಾದ): ಸಮಮುಂ . . . ಸೂತ್ಕೃತಂ ಸೀತ್ಕೃತಮುಂ ಇಂತುಂ ಪತ್ತೊಂಬತ್ತುಂ ಕಾಂತೇ ಕೇಳ್ ವಾಯುಭೇದಂ (ಲಾಸ್ಯರಂ. ೩-೭೭). [ಸಂ.]

**ಸೀತ್ಕೃತಿ** (ನಾ). = ಸೀತ್ಕಾರ ೧: ಕರಿಕರಾಗ್ರಸೀತ್ಕೃತಿ . . . ವಿಹಗಸಮುತ್ಕರ ಚೀತ್ಕೃತಿ ತೀವಿ ವಿಪಿನದೊಳ್ ಬಿಡದೆಸೆಗುಂ (ರಾಜಶೇ. ೫-೭೨). [ಸಂ.]

**ಸೀತ್ಯ** (ಗು). ೧. ಉಳುಮೆಯಾದ; ಉತ್ತ. (ನಾ). ೨. ಉತ್ತ ಭೂಮಿ: "ಕೃಷ್ಟಂ ಕ್ಷೇತ್ರಂ ಸೀತ್ಯಂ" (ವಸ್ತುಕೋ. ೬೩-೭೦). ೩. ಕಾಳು; ಧಾನ್ಯ. ೪. (ಬತ್ತ ಮುಂತಾದುವುಗಳ) ಎಳೆಯ ಗಿಡ; ಸಸಿ: "ಸೀತ್ಯಂ, ಸ್ವಸ್ಯಂ – ಈ ೨ ಸಸಿ" (ಹಲಾಯು. ೯೪-೪೨೦). [ಸಂ.]

**ಸೀದ₁** 'ಸೀ₁' ಪರಾ.

**ಸೀದ₂** 'ಸೀದಾ₁' ನೋ.

**ಸೀದ₃** 'ಸೀದಾ₃' ನೋ.

**ಸೀದಾ₁, ಸೀದ₂** (ನಾ). ೧. ಸ್ವಯಂಪಾಕಕ್ಕೆ ಅಗತ್ಯವಾದ ಅಕ್ಕಿ, ಬೇಳೆ, ಹಿಟ್ಟು, ಸೌದೆ ಮುಂತಾದ ವಸ್ತು: ಉಪ್ಪು ಸಹ ಸೀದಾ ಒಡವೆಗಳಲ್ಲಿ ಪ್ರಮುಖಸ್ಥಾನ ಪಡೆದಿತ್ತು (ಸುತ್ತುಮು. ೨೦); ಹಳ್ಳಿಯಲ್ಲಿ ಈ ಬಗೆಯ ಕ್ರಾಂತಿಯಾದರೂ ನಾವಲಿಗರಿಗೆ ಅವರ ಆಯಾ, ಸೀದಾ ತಪ್ಪುತ್ತಿರಲಿಲ್ಲ (ಹೊಲಮ. ೭೮). ೨. ಒಬ್ಬ ಮನುಷ್ಯನಿಗೆ ನಿಗದಿಯಾಗಿ ಕೊಡುವ ಆಹಾರಪದಾರ್ಥಗಳ ಪ್ರಮಾಣ; ರೇಷನ್ನು : ಅರಿವೆಯ ಬರ ಕಾಳಿನ ಸೀದಾ, ಪ್ರವಾಸದ ಅಗ್ನಿದಿವ್ಯ ಇವನ್ನೆಲ್ಲ ಆಗ ಅನುಭವಿಸಬೇಕಾಗಿರಲಿಲ್ಲ (ಸವಜೀ. ೪೪೫); ಕಳೆದ ಸಲ ಸೀದಾದಲ್ಲಿ ಎಲ್ಲ ಧಾನ್ಯ ಸಿಕ್ಕಿರಲಿಲ್ಲ (ಪುರುಷಾ. ೧). ೩. ಉಚಿತವಾಗಿ ಕೊಡುವ ಆಹಾರಪದಾರ್ಥ; ಪಡಿ: ನವರಾತ್ರಿಯಲ್ಲಿ ಬ್ರಹ್ಮವೃಂದಕ್ಕೆ ವಾಡೆಯಿಂದ ನಿತ್ಯ ಸೀದಾ ದೊರೆಯಿತು (ಗ್ರಾಮಾಯ. ೬). **ಸೀದ₂** : ೧. ಅವರು ಅತಿಥಿಗಳಾದ ಬ್ರಾಹ್ಮಣರನ್ನು ಪೂಜಿಸಿ, ಚರಣತೀರ್ಥ ತಕ್ಕೊಳ್ಳುವರು. ಬ್ರಾಹ್ಮಣೇತರರಿಗೆ ಬೇಕಾದ ಸೀದವನ್ನು ಕೊಡುವರು (ಗುರುಪ್ರ. ೧).

[<— ಹಿಂ. ಸೀಧಾ; ಮರಾ. ಶಿಧಾ./ ಬಂಗಾಲಿ. ಸಿಧಾ; ಸಿಂಧಿ. ಸೀಧೋ; ಗುಜ. ಸೀಂಧೂ, ಸೀಧೂ]

**ಸೀದಾ₂** (ಗು). ೧. ನೇರವಾದ; ಅಂಕುಡೊಂಕಿಲ್ಲದ: ಸೀದಾ ರಸ್ತೆ ಇವನೆಂದೂ ಕಂಡುದಿಲ್ಲ (ನೆಲಮು. ೨೮-೭). ೨. ಸರಳವಾದ: ಶಿವ ದೇವತೆಗಳಲ್ಲೆಲ್ಲ ಸೀದಾ ದೇವರು (ಪ್ರಹಾರ. ೪). (ನಾ). ೩. ಸರಿಯಾದುದು; ಋಜುವಾದುದು: 'ಪೂಟ್‍ಲಾಯ್ರಿ' ಅನ್ನೋ ಮಾತು, ಅವರಿವರಿಗೆ ಉಲ್ಟಾ ಸೀದಾ ಹೊಡೆದು ಮೋಸಮಾಡಿ ಕಾಸು ಕಮಾಯಿಸೋರಿಗೆ ಹೇಳೋ ಮಾತು (ನಮ್ಮಳ್ಳಿ. ೨೩).

**ಸೀದಾಸಾದಾ** = ೧. ನಿಷ್ಕಪಟವಾದ; ಸರಳವಾದ: ನಿನ್ನಷ್ಟು ಸೀದಾಸಾದಾ ಮನುಷ್ಯರು ಸಿಗುವುದೇ ಅಪರೂಪ (ರೂಢಿ). ೨. ನಿಷ್ಕಪಟವಾದ ವ್ಯಕ್ತಿ ; ಸರಳವ್ಯಕ್ತಿ: ಶಾಂತಿಬಾಯಿ ಕಾಣುವಷ್ಟು ಸೀದಾಸಾದಾ ಅಲ್ಲ (ಬದುಕ. ೧೪೭).

[<— ಹಿಂ. ಸೀಧ, ಸೀಧಾ; ಮರಾ. ಸೀಧಾ]

**ಸೀದಾ₃, ಸೀದ₃** (ಅ). ನೇರವಾಗಿ; ನೆಟ್ಟಗೆ: ಧನದಾಸನು ಸೀದಾ ನನ್ನ ಬೀಡಾರದೊಳಗೇ ನುಗ್ಗುವುದನ್ನು ಕಂಡು, ಯಾಕೋ ನನ್ನ ಕೈ, ಸೆರಗಿನಿಂದ ನಡುವನ್ನು ಬಿಗಿದುಕೊಂಡಿತು (ಪಿತ. ೮೯); ತಂತ್ರಿಯವರು ಸೀದಾ ಮನೆಗೆ ಬಂದರು (ಪದ್ಮಸ. ೧೪೧). **ಸೀದ₃** : ಸೀದ ಸ್ವಲ್ಪವೂ ತಪ್ಪದಂತೆ, ವರನ ತಲೆಯ ಮೇಲೆಯೇ ಸುರಿಯುತ್ತಾರೆ (ಸುವಸಂ. ೫೪); ಊಟವನ್ನು ಮಾಡಿ ಸೀದ ಬಂದು . . . ಮರದಡಿ ಕುಳಿತುಕೊಂಡು ಒಬ್ಬನೆ ಯೋಚನೆ ಮಾಡುತ್ತಿರುತ್ತಿದ್ದ (ಕಲಾಸಾ. ೨೮). [< ಸೀದಾ₂]

**ಸೀದಾಸಾಮಗ್ರಿ** (ನಾ). ಆಹಾರಪದಾರ್ಥಗಳ ತಯಾರಿಕೆಗೆ ಬೇಕಾಗುವ ಧಾನ್ಯ, ಸೌದೆ ಮುಂತಾದ ಅವಶ್ಯ ವಸ್ತು: ಅವರ ಸಂಪನ್ನಸ್ಥಿತಿಯನ್ನು ಹಬ್ಬಹುಣ್ಣಿಮೆಗಳಲ್ಲಿ ದೇಸಾಯರು ಅವರ ಮನೆಗೆ ಕಳಿಸುವ ಸೀದಾಸಾಮಗ್ರಿಗಳನ್ನು . . . ಹೇಳಿ ಮಗನು ಅಚ್ಚರಿಪಡುವಂತೆ ಮಾಡಿದ್ದಳು (ಜಯಂತ. ೭೧).

[ಸೀದಾ₁ + ಸಾಮಗ್ರಿ./ ಮರಾ. ಶಿಧಾಸಾಮಗ್ರೀ]

**ಸೀದು₁** 'ಸೀ₁' ಪರಾ.

**ಸೀದು₂, ಸೀತು₂** (ನಾ). ಒಂದು ಬಗೆಯ ಮದ್ಯ: ಮಧು ಸೀತುಂ ಕಟು ಸೀದು ಪೋ

ಪುಳಿತ ಕಳ್ಳಲ್ತುಂ ಕರಂ . . . ಎಂದು ಕುಡಿದರ್ ಕಾಮಾಂಗಮಂ ಕಾಂತೆಯರ್ (ಪಂಪಭಾ. ೪-೮೮); ಹಸಿತಾಂಭೋಜಾಸ್ಯೆಯರ್ ಮುಕ್ಕುಳಿಸಿಯುಗುಳ್ವಿನಂ ಸೀದುವಂ ಸೀದುವಂ ಸೇವಿಸಿ ಸೊರ್ಕಿಂದೀ ಮಹೀಜಂ ತಳೆದು ಪುಳಕಘರ್ಮಾಂಬುಸಂದೋಹಮಂ ಸಂತಸದಿಂ ಪಾಡುತ್ತುಮಿರ್ದತ್ತು (ಜಗವಿ. ೧೪-೩೦). **ಸೀತು$_2$:** ಮಧು ಸೀತುಂ ಕಟು ಸೀದು ಪೋ ಪುಳಿತ ಕಳ್ಳಲ್ತುಂ ಕರಂ . . . ಕಕ್ಕರಕ್ಕಿಂತುಟಪ್ಪುದು ಕಳ್ಳಪ್ಪುದು ತಪ್ಪದೆಂದು ಕುಡಿದರ್ ಕಾಮಾಂಗಮಂ ಕಾಂತೆಯರ್ (ಪಂಪಭಾ. ೪-೮೮).

[< ಸಂ. ಸೀಧು]

**ಸೀದೊಂಡೆ, ಸಿಹಿತೊಂಡೆ** (ನಾ). ಸವಿಯಾಗಿರುವ ಒಂದು ಬಗೆಯ ತೊಂಡೆ: 'ಸೀದೊಂಡೆಬಳ್ಳಿ' ಪರಾ. **ಸಿಹಿತೊಂಡೆ:** ಕಾಗೆದೊಂಡೆ, ಸಿಹಿತೊಂಡೆ, ತೊಂಡೇಕಾಯಿ (ಮೈಡಿಗಿ. ೨೩-೪೨೩). [ಸೀ$_2$ + ತೊಂಡೆ$_1$]

**ಸೀದೊಂಡೆಬಳ್ಳಿ** (ನಾ). ಒಂದು ಬಗೆಯ ಬಳ್ಳಿ: (ಕ). [ಸೀದೊಂಡೆ + ಬಳ್ಳಿ]

**ಸೀಧು** (ನಾ). ಒಂದು ಬಗೆಯ ಮದ್ಯ: ಉನ್ಮತ್ತಕಾಮಿನೀಗಂಡೂಷಸೀಧುಸೇಕ ಪುಳಕಿತವಕುಳಮುಕುಳವಿದಳಿತಮನೋಹರಾಶೋಕಲತಾ[ರ]ಮಣೀರಮಣೀಯ ನೂಪುರ [ರವ] ರಮ್ಯಮಂ . . . ವನಮನೆಯ್ದೆ ವಂದು (ಪಂಪಭಾ. ೫-೧೦ ವ); ವಕುಳದ ಮರಂಗಳೆಲ ರಲೆಪದಿಂ ಕೆದಱಿದ ಸೀಧುಧಾರಾಪ್ರಸರದಿಂ ತುಂತುರ್ವಸಗಿದಂತೆಯುಂ (ಕಾದಂಪೂ. ೧೧೧೦); ಬಳಿಕಮಮೃತಮುಂ ಸೀಧುವುಂ ಪುಟ್ಟಿತಾಗಳ್ (ತ್ರಿಪುವಿ. ೧೬-೨೨). 'ಶೀಧು' ಪರಾ. [ಸಂ.]

**ಸೀನ್$_1$, ಶೀನು, ಸೀನು$_1$** (ಕ್ರಿ). ಶೀತ$_1$, ಸೀತ$_2$ (ಭೂತಕೃ), ಸೀಂತು, ಸೀತು$_1$ (ಭೂತನ್ಯೂ), ಸೀಂಪ (ಭವಿಕೃ) (ನೆಗಡಿ, ಘಾಟು ಮುಂತಾದುವುಗಳ ಪರಿಣಾಮವಾಗಿ) ಮೂಗಿನಿಂದ ಸಶಬ್ದವಾಗಿ ಉಸಿರು ಬರು: "ಸೀನ್ — ಕ್ಷುತಕರಣೇ" (ಶಮಧಾ); ಪುಟ್ಟಿದಾಗಳೆ ಮಾತಾಪಿತೃಯುಗಲಂಗಳ್ ಸೀಂತುಮಾಗುಳಿಸಿಯುಂ ಪರಾಸುಗಳಾಗೆ (ಆದಿಪು. ೫-೪೧ ವ); ಆತ್ಮಜರ್ ಪುಟ್ಟಿರೆ ಸೀಂತುಮಾಗುಳಿಸಿಯುಂ ಪಿತೃಗಳ್ ಕರಗುತ್ತೆ ಸಗ್ಗದೊಳ್ ಪುಟ್ಟುವರ್ (ಶಾಂತಿಪು. ೬-೧೦೬); ಕೊರೆದುಂ ಸುಯ್ದುಂ ಸೀಂತುಂ ಮೊಱೆದುಂ ನಿದ್ರೆಯನೆ ಕೆಡಿಪ ಮುದುವೊಱಸಂ ಮತ್ತೆರಡಿಲ್ಲದೊಲ್ಲೆಂ (ಧರ್ಮಾಮೃ. ೨-೫೪); ಸೀಂಪಂ, ಸೀಂಪಿನಂ, ನೋಂಪಂ, ನೋಂಪಿನಂ (ಶಬ್ದಾನು. ೫೧೬ ಪ್ರಯೋ). **ಶೀನು :** ಶೀತ ಭರಕೀ ಹನುಮನುಲ್ಕಾಪಾತದಂತಿರೆ ಸಿಡಿದು ಬಿದ್ದನು (ತೊರರಾ. ೫-೨-೪೬); ನನಗಾದರೋ ಕಚ್ಚಗುಳಿ ಇಟ್ಟ ಹಾಗಾಯಿತು. ಬಲವಾಗಿ ಶೀದೆ. ನಾ ಶೀದುದಕ್ಕಾಗಿ ಅಲ್ಲಿದ್ದವರು ಹೇಳದೆ ಕೇಳದೆ ಕಾಲಿಗೆ ಬುದ್ಧಿ ಹೇಳಿದರು (ಗಲಿಪ್ರ. ೧೨). **ಸೀನು$_1$:** ಶಿಶು ಸೀನಲು ಮಹಾಸ್ಥಿರಜೀವಿಯಾಗೆಂದು ಹರಸಲು (ಜೀವಂಚ. ೫-೪೦); ಹಿರಿಯ ಮೂಗಿನ ಹೋರು ತುಂಬಲು ಭರದಿ ಬಿಱಿಸಿಂದವನು ಸೀತರೆ ಗಿರಿಯ ತೋರದ ಭಟರು ತಱಗೆಲೆಯಂತೆ ಹಾಱಿದರು (ಕಾಶಿರಾ. ೨೪-೫); ಕೇಶರಿಸಿ ಕೆಮ್ಮಿ ಸೀತುಂ (ಚೆಬಪು. ೯-೧೨); ಈ ಪುಡಿಯು ಉಳಿದವರ ಮುಖಕ್ಕೂ ಹಾರಿತು . . . ಎಲ್ಲರೂ ಏಕಪ್ರಕಾರವಾಗಿ ಸೀನಲಾರಂಭಿಸಿದರು (ಗಲಿಪ್ರ. ೨೪); ಬಾತವರು ಬದುಕುವುದಿಲ್ಲ, ಸೀತವರು ಸಾಯುವದಿಲ್ಲ (ಗಾದೆ).

**ಸೀನ್$_2$, ಸೀನು$_2$** (ನಾ). (ನೆಗಡಿ, ಘಾಟು ಮುಂತಾದುವುಗಳ ಪರಿಣಾಮವಾಗಿ) ಮೂಗಿನ ಮೂಲಕ ಸಶಬ್ದವಾಗಿ ರಭಸದಿಂದ ಬರುವ ಉಸಿರು: ಸೀನಂ ಬೆರ್ಕಿನ ದನಿಯುಂ . . . ಪೊಗೆಯಂ ತಾನಾಗಿಯೆ ಕಂಡು ಪೋಗಲಾಗದು ಮನುಜಂ (ಲೋಕೋಪ. ೧೨-೪೭); ಮಲವುಂ ಮೂತ್ರಂ ಸೀನುಂ ಘಟಿಲನೆಯೊರ್ಮೊದಲೆ ಪೋಪೊಡಂ . . . ತಿಳಿ ನೀನಾತಂಗೆಯಾಱುತಿಂಗಳ ಮರಣಂ (ಪಸಾರ. ೩೬೧); ಸೀನ್ ಕೆಮ್ಮು . . . ಛರ್ದಿಯಂ ನಿರೋಧಂಗಳಂ ಮಾಡಿಸುತ್ತೆ (ಚೆಬಪು. ೫೮-೨೪). **ಸೀನು$_2$:** ಆಗುಳಿಗೆ ಸೀನು ತೇಗಿದನಾಗಿಸುಗುಂ (ಕಲ್ಯಾಕಾ. ೨-೧೭); ಏಱಿತುಸುರಿನಲರೆದ ಮೆಣಸಿನ ಕಾರ ನೆತ್ತಿಗೆ ಸೀನು ಸಿಡಿಲಾಕಾರದಲಿ ಹೊಱವಂಟು ಹೊಡೆದುದು ಪುರದ ನೆರವಿಗಳ (ತೊರರಾ. ೬-೨೬-೩೩); ಕೈಗೊಡತಿಸೊಪ್ಪನ್ನು ಚೂರ್ಣಮಾಡಿ ಆಘ್ರಾಣ ಮಾಡಿದರೆ ಸೀನು ಬರುವುದು (ಸಕವ್ಯ. ಪರಿ. ೪೯೩). [< ಸೀನ್$_1$]

**ಸೀನಿಂಬೆ, ಸಿಹಿನಿಂಬಿ, ಸಿಹಿನಿಂಬೆ** (ನಾ). ಸವಿಯಾದ ರುಚಿಯಿಂದ ಕೂಡಿರುವ ನಿಂಬೆ: ಗಜನಿಂಬೆ ಸೀನಿಂಬೆ ಚಾರುತರಯಮೃತನಿಂಬೆ (ನವಮೋ. ೨೪-೫೦); ಅತ್ತೆ ಕಂಡರಬ್ಬ ಎನುವ ಬಾಳೆ ಸೀನಿಂಬೆ (ಗೋಕುನಿ. ೩೧-೧೧). **ಸಿಹಿನಿಂಬಿ :** "ಮಧುಜಂಬಃ - ಸಿಹಿನಿಂಬಿ" (ಓಷಧಿ. ೧೨೦). **ಸಿಹಿನಿಂಬೆ:** "ಪಿತ್ತದ್ರಾವೀ — ಸಿಹಿನಿಂಬೆ" (ಓಷಧಿ. ೯೮).

[ಸೀ$_2$ + ನಿಂಬೆ]

**ಸೀನಿದ್ದೆ** (ನಾ). (ಆಲಂ) ಬೆಳಗಿನ ಜಾವದ ಸವಿನಿದ್ದೆ: ನನಗೆ ಒಂದು ಥರಾ ಮಂಪರು ಮಂಪರು ಸೀನಿದ್ದೆ (ಹೊಸಕ್ಷ. ೧೧೩). [ಸೀ$_2$ + ನಿದ್ದೆ]

**ಸೀನೀರು, ಸಿಹಿನೀರು** (ನಾ). (ಕುಡಿಯಲು ಯೋಗ್ಯವಾದ) ಸವಿಯಾದ ರುಚಿಯಿರುವ ನೀರು: ಮಣ್ಣಿನಿಂದ ಮರಳುಗಳಿಂದಲೂ ಕೂಡಿಯಿದ್ದರೆ ಆ ಭೂಮಿಯಲ್ಲಿ ಸೀನೀರು ಬೀಳುವದು (ಸೌಗಂಧಿ. ೪೩೨-೨೧). **ಸಿಹಿನೀರು:** ಕಬ್ಬು ಬಾಳೆ ನಾರಿವಾಳಕ್ಕೆ ಸಿಹಿನೀರನೆಱೆದವರಾರಯ್ಯ (ಮಹಾದೇ. ಬ. ೧೦-೩). [ಸೀ$_2$ + ನೀರು$_1$ (< ನೀರ್)]

**ಸೀನು$_1$** 'ಸೀನ್$_1$' ನೋ.

**ಸೀನು$_2$** 'ಸೀನ್$_2$' ನೋ.

**ಸೀನ್ಕೆ** (ನಾ). ಸೀನುವಿಕೆ; ಸೀನುವುದು: ಬಾನ್ಕೆ, ಆನ್ಕೆ, ಸೀನ್ಕೆ, ಕೂಸ್ಕೆ (ಶಬ್ದಾನು. ೫೫೭ ಪ್ರಯೋ). [ಸೀನ್$_1$ + - ಕೆ]

**ಸೀಪಲೆ** 'ಸಿಪಿಲೆ' ನೋ.

**ಸೀಪಲ್ಯ** (ನಾ). ಹುಳಿಯನ್ನು ಹಾಕದೆ ಮಾಡುವ ಒಂದು ಬಗೆಯ ತರಕಾರಿಯ ಮೇಲೋಗರ: (ಕ). [ಸೀ$_2$ + ಪಲ್ಯ$_1$]

**ಸೀಪಿ, ಚೀಪ್ಪು$_3$, ಸೀಬಿ** (ನಾ). ಒಂದು ಬಗೆಯ ಸಸ್ಯ: (ಮೈಡಿಗಿ. ೫೦-೧೦೦೫). **ಚೀಪ್ಪು$_3$:** ಚೀಪಿನ ಗಿಡ ಹುಲುಸಾಗಿ ಬೆಳೆದಿದೆ (ರೂಢಿ). **ಸೀಬಿ :** 'ಸೀಬಿಗೆಡ್ಡೆ' ಪರಾ.

[ದೇ. ‖ ತಮಿ. ಚೇಮ್ಬು, ಚೇಮ್ಪ್ಪು; ಮಲ. ಚೇಮ್ಪ, ಚೇಮ್ಬು]

**ಸೀಪಿಯಗೆಡ್ಡೆ, ಶಿಪಿಗೆಂಡೆ, ಶೀವಿಗೆಡ್ಡೆ, ಸಿಪಿಗೆಂಡೆ, ಸೀಬಿಗೆಡ್ಡೆ, ಸೀಬಿಯಗೆಡ್ಡೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಗೆಡ್ಡೆ: "ಜಾಯಾವೃಕ್ಷಃ— ಸೀಪಿಯಗೆಡ್ಡೆ" (ಓಷಧಿ. ೬೨). **ಶಿಪಿಗೆಂಡೆ:** ಚಂಗಲಕೋಷ್ಠ, ಶಿಪಿಗೆಂಡೆ . . . ತಾವರೆಗಣಸು ಇವು ಪ್ರತ್ಯೇಕ ಮೂಱುವರಹ ತೂಕವ ಚೂರ್ಣಿಸಿ (ವೈದ್ಯಸಾ. I. ೩೬೭). **ಶೀವಿಗೆಡ್ಡೆ:** ಹಿಪ್ಪಲಿ, ದ್ರಾಕ್ಷಿ, ಶೀವಿಗೆಡ್ಡೆ . . . ಶುಂಠಿ — ಇವಂ ಚೂರ್ಣವಂ ಮಾಡಿ (ಸಕವ್ಯ. ೨೫೧). **ಸಿಪಿಗೆಂಡೆ:** ಕರಿಗೊರಟೆ, ಸಿಪಿಗೊಂEಗೆಂ3ಡೆ, ಕರಿಲೊಕ್ಕಿಬೇರು . . . ಕೊಮ್ಮೆಬೇರು (ಸಕವ್ಯ. ೩೮೩). **ಸೀಬಿಗೆಡ್ಡೆ:** "ಕಸೇರುಕಾ — ಸೀಬಗೆಡ್ಡೆ, ಹಂದಿಗೆರಕನ ಗೆಡ್ಡೆ" (ಓಷಧಿ. ೨೪). **ಸೀಬಿಯ ಗೆಡ್ಡೆ:** "ಕುದ್ದಾಲಕಃ— ಕಂಚವಾಳ, ಸೀಬಿಯ ಗೆಡ್ಡೆ, ಹೇರಾಟ" (ಓಷಧಿ. ೩೫). [< ಸೀಪಿ + ಗೆಡ್ಡೆ' (< ಗಡ್ಡೆ)]

**ಸೀಪಿಸು** (ಕ್ರಿ). ಹೀರುವಂತೆ ಮಾಡು; ಚೀಪಿಸು: ಮಧುಶರ್ಕರೆಯೊಡೆವೆರೆದಿರ್ಪ ಬೆಟ್ಟ ಸೀಪಿಸಿದರರ್ಭಕಗೆ (ಮೋಹತ. ೧೭-೨೮). [ಸೀಪು$_1$ + - ಇಸು$_3$]

**ಸೀಪು$_1$, ಚೀಪು$_1$** (ಕ್ರಿ). ರಸವನ್ನು ಒಳಗೆ ಎಳೆದುಕೊಳ್ಳು; ಹೀರು: ಸೀಪುವದು, ಏನಾದರೂ ಹೀರಿಕೊಂಡು ಕುಡಿಯುವದು ಮೊದಲಾದ ಕೆಲಸಗಳು (ಮುಂಬಯು. ೫-೭೮); ಗಗನದಮೃತದ ಪೊಲೆಯ ಸೀಪುವೆಲೆಗಳ ನಡುವೆ ಮುದದ ಹನಿಯಾರಿಸುತ ತೇವುಗೊಳುವಂತೆ (ಮಲೆದೇ. ೪೨-೭); ಬೊಟ್ಟು ಸೀಪಿದರೆ ಹೊಟ್ಟೆತುಂಬೀತೇ? (ಗಾದೆ). **ಚೀಪು$_1$:** ನೀರಿಗೆ ಬೆರಳು ಅದ್ದಿ ಚೀಪಿದಂತಾಯ್ತು (ಹುಟ್ಟಹ. ೧೪೧);

[ದೇ.‖ ತಮಿ. ಚೀಪ್ಪು; ತೆಲು. ಸಿಬುಕು, ಸಿವುಕು; ಕುರುಖ್. ಚೀಪ್ನಾ; ಮಲ್ತೊ. ಚೀಪೆ]

**ಸೀಪು$_2$** (ನಾ). ಸಿಹಿ; ಸವಿ: ವಿಷದ ಕಯ್ಪೆಯುಂ ಸೀಪುಂ ಮೂರ್ಖನ ನಗೆಯುಂ ಮುನಿಸುಂ . . . ಪೊಲ್ಲೆಂತಂತೆ ಮಿಥ್ಯಾದೃಷ್ಟಿಯ ನೆಗಟ್ತೆಯುಮೊಂದು ಪೊಲ್ಲೆಂದು ಮುನಿದು ಬಲಿಯನಿಂತೆಂದಂ (ಧರ್ಮಾಮೃ. ೯-೧೩೨); ಸೀಪೊದವಿದ ನುಣ್ಗೊನೆಯಂ ಕೂಪರಸದ್ರಾಕ್ಷೆಗೆಸೆವ ಕುಸುಮದ ರಜದಿಂ ಕಾಪುವರೆದೊಸರ್ವ ಸೊನೆಯಿಂ ತೂಱಱಿವ ರಸಾಲಲತೆಗಳೇನೊಪ್ಪಿದುವೋ (ಧರ್ಮನಾ. ೨-೫೬). [ಸೀ$_2$ + - ಪು$_2$]

**ಸೀಪೆ** (ನಾ). = ಸೀಪು$_2$: ಇಂಪುವೆತ್ತ ಮಾಂಸವನತಿಸೀಪೆಯಪ್ಪ ಮಧುವಂ . . . ಗಱಿಸಿಕೊಂಡು (ದಶಕು. ೧೨-೭೯). [ಸೀ$_2$ + - ಪೆ./ ತುಳು. ಸೀಪೆ, ಶೀಪೆ, ತೀಪೆ]

**ಸೀಬರಿ** (ನಾ). (ಚೂಪುವೆಲೆಗಳುಳ್ಳ) ಒಂದು ಬಗೆಯ ಸಸ್ಯ: (ಕ). [?]

**ಸೀಬರಿಬಳ್ಳಿ** (ನಾ). = ಸೀಬರಿ: "ಸೀಬರಿಬಳ್ಳಿ, ಬಹುಸುತೆ, ಶೀಪಾರಿಮೂಲಿ, ಶತಮೂಲಿಕೆ" (ಸಸ್ಯನಿ. ೧೬). [ಸೀಬರಿ + ಬಳ್ಳಿ]

**ಸೀಬರಿಬೇರು, ಶೀಬಾರಿಬೇರು** (ನಾ). = ಸೀಬರಿ: (೬). **ಶೀಬಾರಿಬೇರು:** ಶೀಬಾರಿಬೇರು, ಶಹಾವಲಿ, ಆಷಾಢಿಬೇರು, ಆಹೇರು, ಮಜ್ಜಿಗೆಗಡ್ಡೆ (ಮೃಔಗಿ. ೧೦-೧೬೮). [ಸೀಬರಿ + ಬೇರು (< ಬೇರ್$_1$)]

**ಸೀಬಳ್ಳಿ** (ನಾ). ಒಂದು ಸ್ಥಳದ ಹೆಸರು: ಸೀಬಳ್ಳಿಯಜೆಹಯ್ಯನ ಜೇಷ್ಠಪುತ್ರ ನಂಗಮ್ಮನ ಮಗ ಜೋಗಯ್ಯ (ಎಕ. VIII, ಸೊರಬ. ೪೭೭-೧೭; 991). [?]

**ಸೀಬಿ** 'ಸೀಪಿ' ನೋ.

**ಸೀಬಿಗೆಡ್ಡೆ** 'ಸೀಪಿಯಗೆಡ್ಡೆ' ನೋ.

**ಸೀಬಿಯಗೆಡ್ಡೆ** 'ಸೀಪಿಯಗೆಡ್ಡೆ' ನೋ.

**ಸೀಬಿಲ್, ಸಿಹಿವಿಲ್** (ನಾ). (ಮನ್ಮಥನ) ಸಿಹಿಯಾದ ಕಬ್ಬಿನ ಬಿಲ್ಲು: 'ಸೀಬಿಲ್ಲ' ಪರಾ. **ಸಿಹಿವಿಲ್:** ಅಸಮಾಸ್ತ್ರ ನಾಣ್ಚೆ ಜಿನನ ಮುಂದೆ ಸಿಹಿವಿಲ್ಲ ಹಿಸುಕಿ ಬೀಸಾಡಿ ಸಾರ್ವಂತೆ ರಸದಾಳಿಗಬ್ಬಿನ ರಸದೊಳಾ ನೃಪತಿ ಮಿಾಯಿಸುವಂದ ಮೆಱೆದುದಾ ಜಿನನ (ಭರಚ. ೧೬-೭೬). [ಸೀ$_2$ + ಬಿಲ್$_2$]

**ಸೀಬಿಲ್ಲ, ಸಿಹಿವಿಲ್ಲ** (ನಾ). ಸಿಹಿಯಾದ ಕಬ್ಬಿನ ಬಿಲ್ಲನ್ನು ಹೊಂದಿರುವವನು; ಮನ್ಮಥ: ಭ್ರೂಭ್ರಮಣೇಕ್ಷಣ ಶೋಭಿಪ ನಖಸ್ಪರ್ಶ ಲೋಭದ ವಚನಗಳಿಂದ ತ್ರಿಭುವನೇಶ್ವರ ತಾ ಬ್ಯಾಗನೆ ರತಿಲೋಭದ ಸುಖವ್ಯೆದಿಸಿದ ಸೀಬಿಲ್ಲನ ಗಣೆಗಿಂಬಾದವು ಫುಲ್ಲನಾಭನ ಬಲುಒಲುಮಿಂದ (ಪ್ರಸಭಾ. ೪೪-೧೧). **ಸಿಹಿವಿಲ್ಲ :** ಬಹಿರಾತ್ಮರಿಗೆ ತನ್ನ ಪುಷ್ಪಬಾಣವ ತೋಱಿ ಬಹುಬಾಧೆಗೊಳಿಸಿದ ಸೊಕ್ಕು ಸಹಜಾತ್ಮರಸಿಕಗೆನಗೆ ತೋಱುತಿದ್ದನೆ ಸಿಹಿವಿಲ್ಲ ಸುಡು ಫಡಾಯೆಂದ (ಭರಚ. ೪೯-೫೧). [ಸೀಬಿಲ್ + - ಅ$_7$]

**ಸೀಬು** (ನಾ). ೧. ಬಿದಿರು, ಬೆತ್ತ ಮೊದಲಾದುವುಗಳ ಸಣ್ಣ ಸೀಳು, — ತುಂಡು: ಕೊಱಡುಮರನಡುಗುಬ್ಬು ಸೀಬು ಬಿದಿರು ಬಡಿಗೆ ಬೆತ್ತಂಗಳೇನುಂ ದೊರಕದಿದ್ದಡೆ ಹುಲುಸರವಿಗಳನೆಯ್ದೆ ಹೊಸೆಹೊಸೆದು (ಬಸಪು. ೧೬-೨೧); ಕಾಬಾಳೆ ದೀಪದ್ರಾಕ್ಷೆಕೇತನ ತೋರ ಸೀಬಾಂತ ಬಿದಿರ್ವೆತ್ತಗಳ ಲೋಬಾನ ಚಂದನಗಾಡಿನೊಳ್ಪಂದಿ ಮತ್ತೇಭಂಗಳಿರೆ ಕಂಡರವರು (ಮೋಹತ. ೧೯-೨೧); ಬಿದಿರ ಸೀಬನು ಬೊಗ್ಗಿಸಲು ಕೈ ಚದರಿ ಪಿಂದಕೆ ಬಿರ್ದ ನಾಚಿಗೆಯದೆಯೊಳಗೆ ನಿಲದಿಂತು ನುಡಿದರೆ (ಜನಭಾ. ೬೩-೩೪). ೨. ಸಣ್ಣ ಜಾತಿಯ ಬಿದಿರು, — ಬೆತ್ತ: ಕುಕ್ಕೀ ಹೆಣೆಯುವುದಕ್ಕಾಗಿ ಹಾಕಿದ್ದ ಸೀಬು ಇವನಿಗೆ ಹಾಸುಗೆಯಾಗಿತ್ತು (ಸುಮಚ. ೩೧); ಸಣ್ಣ ಸೀಬಿನ ತೊಟ್ಟಿಲು ನೋಡಿ ತೆಗೆದುಕೊಂಡು ಬಾರಪ್ಪ (ನಡದಾ. II, ೧೦೦೯). ೩. ಸಿಬುರು; ಸಿಗುರು: ಕೈಗೆ ಚುಚ್ಚಿಕೊಂಡಿದ್ದ ಸೀಬು ತೆಗೆಯುವಷ್ಟರಲ್ಲಿ ಸಾಕಾಯಿತು (ರೂಢಿ). ೪. (ಮನೆಯ ಚಾವಣಿಗೆ ಹಾಕುವ) ಬಿದಿರಿನ ದಪ್ಪ ತುಂಡು: ಅವುಗಳ ಮೇಲೆ (ಎಳೆಗಳ ಮೇಲೆ) ಸೀಬು ಅಡ್ಡ ಹರವಿ (ಮುಂಬಯಿ. ೪-೧೧೮). ೫. ತೆಂಗಿನ ಮಟ್ಟೆಗಳು ಮರಕ್ಕೆ ಅಂಟಿಕೊಂಡಿರುವಂತೆ ಹಿಡಿದಿರುವ ಜಾಲರಿಯಂತಹ ನಾರಿನ ತೊಗಟೆ; ಸೀರೆ: ತೆಂಗಿನ ಮರ ಹತ್ತಿ . . . ಅದನ್ನು ತೆಂಗಿನ ಮಟ್ಟೆಗಳ ಸಂದಿನಲ್ಲಿ ಭದ್ರವಾಗಿ ಗಿಡಿದು, ಸೀಬು ಮರೆಮಾಡಿ, ಕೆಳಗಿಳಿದ (ನನ್ನೂರು. ೨೧೧). [ದೇ. ‖ ತಮಿ. ಚಿಮ್ಪು ; ಮಲ. ಚಿಮ್ಪು, ಚೀಮ್ಪು]

**ಸೀಬೆ, ಚೇಪೆ$_2$** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು; ಪೇರಲ: ಸೀಬೆ, ಚೇಪಕಾಯಿ (ಮೃಔಗಿ. ೭೪-೧೩೧೧); ನಿಂಬೆ . . . ಸೀಬೆ . . . ಇವೇ ಮುಂತಾದ ಹಲವು ಹಣ್ಣಿನ ಗಿಡಗಳನ್ನು ತೋಟಗಳಲ್ಲಿ ಬೆಳೆಯಬಹುದು (ವ್ಯವಮ. ೫೮). **ಚೇಪೆ$_2$:** ನೆಲ್ಲಿ, ಕಿರುನೆಲ್ಲಿ, ಚೇಪೆ, ದಾಳಿಂಬೆ (ನಮ್ಮನು. ೨೩೭).

**ಸೀಬೋರೆ** (ನಾ). ಸವಿಯಾದ ರುಚಿಯಿರುವ ಎಲಚಿಹಣ್ಣು : ಬೋರೆಯರಬೋರೆ ಪುಳಿಬೋರೆ ಸೀಬೋರೆಯಿಂ ರಾಯಬೋರೆಯು ಬೆಳವಲಂ (ನವಮೋ. ೨೪-೫೦). [ಸೀ$_2$ + ಬೋರೆ$_2$]

**ಸೀಮ** (ನಾ). ೧. ಒಂದು ಪ್ರದೇಶದ ಗಡಿ, — ಮೇರೆ: "ಅವಧಿ ಸೀಮ ಸೀಮಾಘಾಟಂ" (ವಸ್ತುಕೋ. ೪೫-೧). ೨. (ಜಮಿಾನಿನ) ಗಡಿಯನ್ನು ಸೂಚಿಸುವ ದಿಬ್ಬ, — ದಿಣ್ಣೆ: ಕೇತಯನ ಕುಱುಮಱಿ ಅಪಸುಬಾಳ ಹೊಲಮೇರೆಯ ಸೀಮಕ್ಕೆ ಕಟಕದ ಚಂದ್ರದಂಡನಾಯಕನ ಕುದುರೆಅ ಮೇಲೆವರಿದಡೆ (ಸೌಇ. IX-i, ೨೮೪-೯; ಸು. 1190). ೩. ಒಂದು ಮಿತಿಗೆ ಒಳಪಟ್ಟವನು: ಸೀಮರ ಕಂಡೆ ನಿಸ್ಸೀಮರ ಕಂಡೆ ಭಾವರ ಕಂಡೆ ನಿರ್ಭಾವರ ಕಂಡೆ (ಚನ್ನವ. ೮. ೪೦೦-೮೪೫). [ಸಂ. ಸೀಮನ್]

**ಸೀಮಂತ** (ನಾ). ೧. ಕೂದಲನ್ನು ಎರಡುಕಡೆಗಳಿಗೂ ವಿಭಾಗಿಸುವ ಗೆರೆ; ಬೈತಲೆ: "ಸೀಮಂತಮೆಂಬುದು ಬಯ್ತಲೆ" (ಹಲಾಯು. ೮೭-೩೭೫); ಸಮದಸಮಸ್ತ ಸಾಮಂತಸೀಮಂತಿನೀಸೀಮಂತಸಿಂಧೂರಪೂರಪಲ್ಲವಪ್ರಸರರಸಹರಣಚರಣನುಂ. . . ಎನಿಸಿ ಪೊಗಳ್ತೆವಡೆದು (ರಾಜಶೇ. ೫-೧ ವ); ರವಿಕೀರ್ತಿ . . . ಅಗರುಧೂಪದಿಂದ ಸುಗಂಧಿತ ವಾಗಿದ್ದ ಸೀಮಂತವನ್ನು ಒಂದು ಸಾರಿ ಮುದ್ದಿಸಿ, ಮರಗಳ ಮಧ್ಯೆ ಮರೆಯಾದನು (ರೂಲೇಖಾ. ೧೨೮). ೨. (ಚೊಚ್ಚಲು) ಬಸಿರಿಹೆಂಗಸಿಗೆ ನಾಲ್ಕು, ಆರು ಅಥವಾ ಎಂಟನೆಯ ತಿಂಗಳಲ್ಲಿ ಮಾಡುವ ಸಂಸ್ಕಾರಗಳಲ್ಲಿ ಒಂದು; **ಶ್ರೀಮಂತ:** ಬಿಸುಗದಿರನ ಮುಂಬಸಿಱೊಳು ಮೂಡಣ ದೆಸೆವೆಣ್ಣ ಸೀಮಂತದ ವಸಗೆಯ ವಾದ್ಯಗಳೆನೆ ದೇಗುಲಗಳೊಳೆಸೆದವು ಶಂಖನಿನಾದಂ (ಶ್ರೀಪಾಲ. ೨-೨೮); ಸೀಮಂತಮಂ ತಾಂ ಚಾರು ಲೋಚನೆಗೆ ವಿಸ್ತರಿಸಿದಂ (ಜೈಮಿಭಾ. ೧೮-೩೭). [ಸಂ.]

**ಸೀಮಂತಕ** (ನಾ). [ಜೈನ] ರತ್ನಪ್ರಭೆಯೆಂಬ ನರಕದಲ್ಲಿರುವ ಹದಿಮೂರು ಬಗೆಯ ಇಂದ್ರಕಗಳಲ್ಲಿ ಒಂದು: ರತ್ನಪ್ರಭೆಯೊಳ್ ಸೀಮಂತಕನಿಲಯ . . . ವಿಕ್ರಾಂತಾಖ್ಯ ತ್ರಯೋದಶೇಂದ್ರಕ ತತ್ಸಂಬಂಧಿಶ್ರೇಢೀಬಂಧಪ್ರಕೀರ್ಣಕವಿಕಲ್ಪದಿಂ ತ್ರಿಂಶಲ್ಲಕ್ಷಬಿಲಂಗಳಪ್ಪುವು (ತತ್ತ್ವಪ್ರ. ೧೨೦). [ಸಂ.]

**ಸೀಮಂತಪುತ್ರ** (ನಾ). ಚೊಚ್ಚಲು ಮಗು: ಈತಂಗೆ . . . ರುಕ್ಮಾಂಗದನೆಂಬ ಸೀಮಂತಪುತ್ರನುಂಟು (ರಾಮಾಶ್ವ. ೧೨೨-೨೦). [ಸಂ.]

**ಸೀಮಂತಪುತ್ರಿ** (ನಾ). ಚೊಚ್ಚಲುಮಗಳು. [ಸಂ. ಸೀಮಂತಪುತ್ರೀ]

**ಸೀಮಂತಮಣಿ** (ನಾ). ೧. ಬೈತಲೆಗೆ ಧರಿಸುವ ಒಂದು ಬಗೆಯ ಒಡವೆ; ಬೈತಲೆಬಟ್ಟು; ಚೂಡಾಮಣಿ: ಸೀಮಂತಮಣಿಯನ್ನು ಕಟ್ಟುವರು (ಆಭ್ರಭು. ೧೭). ೨. (ಆಲಂ) ಶ್ರೇಷ್ಠವಾದ ವಸ್ತು ಅಥವಾ ವ್ಯಕ್ತಿ: ನಾರಿಯರ ಸೀಮಂತಮಣಿ ಲಕ್ಷಣದ ಕಣಿ . . . ಪೊಂಬಟ್ಟಲೊಳು ಭಿಕ್ಷಮಂ ತರುತಿರ್ದಳು (ಭಿಕ್ಷಾಚ. ೩-೩೮); ಇಂತೆಸೆವ ಛಪ್ಪನ್ನದೇಶದೊಳಗಧಿಕಸೀಮಂತಮಣಿಯೆನಿಪ ಕುಂತಳದೇಶ ಮೆಱೆವು ದತ್ಯಂತಸೊಬಗಿಂ (ಪ್ರಾಢರಾ. ೧-೩೨); ತಾಮ್ರಾಧರೆಯರ ಸೀಮಂತಮಣಿ ಸೀತಾರಮಣಿ ಗರ್ಭಮಂ ತಾಳ್ದಳು (ಜೈಮಿಭಾ. ೧೮ ಸೂಚನೆ). [ಸಂ.]

**ಸೀಮಂತರತ್ನ** (ನಾ). = ಸೀಮಂತಮಣಿ ೧: ಶ್ರುತಿಸತೀಸೀಮಂತರತ್ನಂ ಮಹೇಶ್ವರಪಾದಾಬ್ಜನಖಂ ಸುಖೋದಯಕರಂ ತಾನಿರ್ಕೆ ಮಚ್ಚಿತ್ತದೊಳ್ (ರಾಜಶೇ. ೧-೩); ಭೂರಮೆಯ ಸೀಮಂತರತ್ನಂಬೋಲ್ ರಂಜಿಪ ಅಯೋಧ್ಯಾನಗರ ದೋಳ್ ನೇಸಱ ಬೞಿಯ ಪಲಂಬರರಸರರಸುಗೆಯ್ಯುತಿರ್ದರ್ (ರಾಮಾಶ್ವ. ೭-೭). [ಸಂ.]

**ಸೀಮಂತರೇಖೆ** (ನಾ). ಬೈತಲೆಯ ಗೆರೆ, — ಗೀರು: ಸೊಗಯಿಸುವನೇಕ ಸಸ್ಯಸಂಪತ್ಸಾರಕೇದಾರಲಕ್ಷ್ಮೀಸೀಮಂತಿನಿಯ ಸೀಮಂತರೇಖಾವಿಲಾಸಮನುಂಟುಮಾಡುವ ಘಂಟಾಪಥಂಗಳ ಕೆಲದೊಳ್ (ಚಂದ್ರಪ್ರ. ೧-೯೭); ಈ ಮನೋಹರವಾದ ಭೂಮಾನಿನಿಯ ಚೆಲ್ವ ಸೀಮಂತರೇಖೆಯಂತೊಪ್ಪುತಿರ್ಪ ಆ ಮಾರ್ಗದಲ್ಲಿ ನಾನಾಮೋದಜಲಧಿಸುಖಧಾಮ ವಾದಱವಟಿಗೆಗಳು ಮೆಱೆವವು (ಗುರುಭಾ. ೨-೧೭). [ಸಂ. ಸೀಮಂತರೇಖಾ]

**ಸೀಮಂತಿನಿ** (ನಾ). ಹೆಂಗಸು; ಸ್ತ್ರೀ: ಪಸರಂಗೆಯ್ದವೊಲಪ್ಪ ಪೊಚ್ಚಱ ಮಹಾ ಸಾಮಂತ ಸೀಮಂತಿನೀಪ್ರಸರಂ . . . ಎಸೆಯುತ್ತಿರ್ಪನ್ನೆಗಂ (ಪಂಪಭಾ. ೫-೨೫); ಮಂಡೋದರಿ . . . ಸಮಸ್ತಾಂತಃಪುರಸೀಮಂತಿನಿಯರ್ವೆರಸು ಸೀತೆಯ ಸಮಿಾಪಕ್ಕೆ ಬಂದು (ಪಂರಾಮಾ. ೯-೧೭೧ ವ). [ಸಂ. ಸೀಮಂತಿನೀ]

**ಸೀಮಂತೋನ್ನಯನ** (ನಾ). ನಾಲ್ಕು, ಆರು ಅಥವಾ ಎಂಟನೆಯ ತಿಂಗಳಲ್ಲಿ ಗರ್ಭಿಣಿಸ್ತ್ರೀಗೆ ಮಾಡುವ ಒಂದು ಸಂಸ್ಕಾರ; ಬೈತಲೆ ತೆಗೆಯುವ ಶಾಸ್ತ್ರ: ಅವರ್ಗೆ ಪುಂಸವನಸೀಮಂತೋನ್ನಯನಾದಿ ಸಕಲಮಂಗಳಮಂ ದಶರಥನರನಾಥಂ ಮಾಡುವುದುಂ (ಪಂರಾಮಾ. ೩-೧೩೩ ವ); ನಿಜನಾಥಕಲ್ಪಿತ ಪುಂಸವನದ ಸೀಮಂತೋನ್ನಯನಾದಿ ಮಂಗಳಂಗಳನೊಳಕೆಯ್ದು (ಚಂದ್ರಪ್ರ. ೩-೯೨ ವ). [ಸಂ.]

**ಸೀಮರಸ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಅಜ್ಜೆ ಕಲ್ನಾಡು XXX ಪುನ್ನಾಡರಸರಾ ಮಗನ್ದಿರ್ ಸೀಮರಸ XXX (ಎಕ. IX, ದೇವನ. ೪೧-೨; ಸು. 900 ?). [? + ಅರಸ$_1$]

**ಸೀಮಾಂತ** (ನಾ). ೧. ಗಡಿಪ್ರದೇಶ; ಸರಹದ್ದು: ಭಾರತಸರಕಾರದ ಸೀಮಾಂತ ನೀತಿಯು ಕ್ರಮೇಣ ಹಿಗ್ಗುತ್ತ ಹಿಗ್ಗುತ್ತ ಸಂಯಮದ ಬಂಧನವನ್ನು ಹರಿದೊಗೆದು ಅತಿಕ್ರಮಣದ ಕಡೆಗೆ ಸಾಗುತ್ತದೆ (ಇಪ್ಪಕ. ೨೨೭). ೨. ಪರಮಾವಧಿ; ಪರಾಕಾಷ್ಠೆ: ಮತ್ತೆ ನಿಡುನಟ್ಟು ನಿಟ್ಟಿಪಳ್ ದೂರ ವನಸೀಮಾಂತಸೀಮಂತರೇಖೆಯೆನಲೊಪ್ಪುವಾ ಬಟ್ಟಬಯಲ್ಪಟ್ಟೆಯಂ (ಶ್ರೀರಾಮಾ. ೨೬೮-೧೫೦). [ಸಂ.]

**ಸೀಮಾಂತಪೂಜೆ** (ನಾ). ೧. (ಮದುವೆಯ ಸಂದರ್ಭದಲ್ಲಿ) ವರನು ಗ್ರಾಮದ ಎಲ್ಲೆಕಟ್ಟನೊಳಗೆ ಆಗಮಿಸಿದಾಗ ಮಾಡುವ ಉಪಚಾರ: ಸೀಮಾಂತಪೂಜೆಯೂ ಆದರಸತ್ಕಾರಗಳೂ ಆದ ಬಳಿಕ ಜನಕನು ಬೀಗರಿಗಾಗಿ ಗೊತ್ತುಮಾಡಿದ್ದ ಮಂದಿರಗಳಿಗೆ ಅವರನ್ನು ಕರಕೊಂಡು ಹೋಗಿ ಇಳಿಸಿದನು (ತುಳಸೀ. ೯೩). ೨. (ಮದುವೆಯ ಸಂದರ್ಭದಲ್ಲಿ) ವರನನ್ನು ಬರಮಾಡಿಕೊಳ್ಳುವ ಸಮಾರಂಭ; ವರನನ್ನು ಎದುರುಗೊಳ್ಳುವಿಕೆ: ನಾಡ್ಕರ್ಣಿ ರಾಮರಾಯರ ಹಿರಿಯ ಮಗಳು ಸುಮಿತ್ರೆಗೆ ನಾಳೆ ಮದುವೆ. ಇದೀಗ ಸೀಮಾಂತಪೂಜೆ (ಮೂರುದಾ. ೨೦೫). [ಸಂ. ಸೀಮಾಂತಪೂಜಾ]

**ಸೀಮಾಕರ** (ನಾ). (ರೈಲು, ಹಡಗು, ವಿಮಾನ ಇತ್ಯಾದಿಗಳಲ್ಲಿ ಸಾಗಣೆಯಾಗುವ ವಸ್ತುಗಳು ಅಥವಾ ಅವುಗಳಲ್ಲಿ ಸಂಚಾರ ಮಾಡುವ ಪ್ರಯಾಣಿಕರಿಗೆ) ಕೊನೆಯ ಸರಹದ್ದಿನಲ್ಲಿ ವಿಧಿಸುವ ತೆರಿಗೆ, — ಸುಂಕ : ರೈಲ್ವೆ ಮೂಲಕ . . . ಅಥವಾ ವಿಮಾನದ ಮೂಲಕ ಸಾಗಿಸತಕ್ಕ ವಸ್ತುಗಳ ಮೇಲೆ ಅಥವಾ ಸಂಚಾರ ಮಾಡತಕ್ಕ ಪ್ರಯಾಣಿಕರ ಮೇಲೆ ವಿಧಿಸತಕ್ಕ ಸೀಮಾಕರಗಳು (ಭಾಧಾನ. ೧೫೨). [ಸಂ.]

**ಸೀಮಾತು, ಸಿಹಿಮಾತು** (ನಾ). (ಆಲಂ) ಇನಿದಾದ ಮಾತು; ಸವಿನುಡಿ: ಸೀಮಾತುಗಳ ಸೊನೆಯ ಸುರಿಸಿ ಎದೆಮುಗುಳಿಂದೆ (ಗಾ. ೯-೬). **ಸಿಹಿಮಾತು:** ನಿನ್ನ ಸಿಹಿಮಾತಿಗೆ ಮರುಳಾಗಿ ತಪ್ಪುಮಾಡಿದೆ (ರೂಢಿ). [ಸೀ$_2$ + ಮಾತು$_1$]

**ಸೀಮಾಪುರುಷ** (ನಾ). (ಆಲಂ) ಎಲ್ಲೆಯನ್ನು ಮೀರಿದವನು; ಅಸಾಮಾನ್ಯ ವ್ಯಕ್ತಿ: ಶಾಸ್ತ್ರಲೌಕಿಕಕಳೆಯೊಳ್ ಬೇರ್ವರಿದ ನೇಮಿ ಜನ್ನಿಗರಿರ್ವರೆ ಕರ್ಣಾಟಕೃತಿಗೆ ಸೀಮಾಪುರುಷರ್ (ಧರ್ಮನಾ. ೧-೪೧); ಆತ್ಯಂತಿಕಸುಖದ ಸೀಮೆಯ ಸೀಮಾರೇಷೆಯನ್ನು ರೇಖಿಸುವ ಸೀಮಾಪುರುಷರ ಜೀವನದ ರಸಸಮುದ್ರದ ತರತ್ತರಂಗಗಳನ್ನು ಎಬ್ಬಿಸುವ ಪ್ರತಿಭಾಪ್ರಭಂಜನರು ಮಹಾಕವಿಗಳು (ಸಾಹಿಸಂ. ೧೪). [ಸಂ.]

**ಸೀಮಾರೇಖೆ** (ನಾ). ೧. ಎಲ್ಲೆಯನ್ನು ಗುರುತಿಸುವ ಗೆರೆ: ಇಂಥ ಐಕ್ಯವನ್ನು ಒದಗಿಸಲು ಬೇರೆ ಸ್ಥಳಗಳಿವೆ; ಬೇರೆ ಕಾಲವಿದೆ. ಇಲ್ಲಿ ನಾವು ಒಂದು ಸೀಮಾರೇಖೆಯನ್ನು ಎಳೆಯೋಣ (ಗೊತ್ತುಗು. ೧೯). ೨. ಪರಮಾವಧಿ; ಪರಾಕಾಷ್ಠೆ: ಅವನ ಕಲ್ಪನಾಪಕ್ಷಿ ಗರಿಗೆದರಿ ಜೀವನಾಕಾಶದ ಸೀಮಾರೇಖೆಯನ್ನು ಮುಟ್ಟಲು ತವಕಿಸುತ್ತದೆ (ಪುನರು. ೫೪). [ಸಂ. ಸೀಮಾರೇಖಾ]

**ಸೀಮಾರೇಷೆ** (ನಾ). = ಸೀಮಾರೇಖೆ ೧: ಆತ್ಯಂತಿಕಸುಖದ ಸೀಮೆಯ ಸೀಮಾರೇಷೆಯನ್ನು ರೇಖಿಸುವ ಸೀಮಾಪುರುಷರ ಜೀವನದ ರಸಸಮುದ್ರದ ತರತ್ತರಂಗಗಳನ್ನು ಎಬ್ಬಿಸುವ ಪ್ರತಿಭಾಪ್ರಭಂಜನರು ಮಹಾಕವಿಗಳು (ಸಾಹಿಸಂ. ೧೪). [ಸಂ. ಸೀಮಾರೇಷಾ]

**ಸೀಮಾಲಂಘನ** (ನಾ). ಎಲ್ಲೆಯನ್ನು ಮೀರುವುದು,— ಉಲ್ಲಂಘಿಸುವುದು: ಲಿಂಗಸೀಮೆ ಸೀಮಾಲಂಘನವಾದಲ್ಲಿ ಸೀಮೆಯ ಮಾಟದಲ್ಲಿ ಪ್ರಾಣ(ವಿ?)ಯೋಗ ವಾಗಬೇಕು (ಸರ್ವವ. ೧೯೦-೮೮೯); ಕಾಳಕೂಟಾರ್ಣವದ ಸೀಮಾಲಂಘನವೊ ಮೃತ್ಯುವಿನ ಪಾಳಯವೊ (ಕುಮ್ಮಾದ್ರೋ. ೯-೨೫). [ಸಂ.]

**ಸೀಮಾವಿವಾದ** (ನಾ). ಗಡಿಪ್ರದೇಶಕ್ಕೆ ಸಂಬಂಧಿಸಿದ ಕಲಹ, — ಜಗಳ: ಸೀಮಾವಿವಾದದಿಂ ತದ್ಭೂಮಿಜರೋರೊರ್ವರಂ ಪಳಂಚಲೆವೆಡೆಯೊಳ್ ಸೀಮೆಗಳ ತೊಡರನುಡುಗಿಸಿ ಸೀಮಂಕರನೆಂಬುದೊಂದು ಪೆಸರಂ ಪಡೆದಂ (ಆದಿಪು. ೬-೫೭); ಸೀಮಂಕರನೆಂಬೊನಯ್ದನೆಯ ಕುಲಧರಂ . . . ವೃಕ್ಷಸೀಮಾವಿವಾದಮಂ ಬರಿಸಿದಂ (ಚಾವುಂಪು. ೧೧). [ಸಂ.]

**ಸೀಮಾವು, ಸಿಹಿಮಾವು** (ನಾ). ಸವಿಯಾದ ರುಚಿಯಿರುವ ಮಾವು: ಪುಂಖಾನುಪುಂಖಮೆಂಬ ಸೀಮಾವಿನ ದೋರೆಗಾಯ್ಗಳಂ ಗೊಲೆವೆರಸು ನೆಲಕ್ಕೆ ಬೀಟಲೀಯದೆ. . .ಮನೋಹರಂಗೆ ಕುಡುತಿರ್ಪುದುಂ (ಧರ್ಮಾಮೃ. ೧೩-೩೦). **ಸಿಹಿಮಾವು:** "ಕಾಮಫಲಃ, ಕಾಮಾಯುತಃ – ಈಯೆರಡುಂ ಸಿಹಿಮಾವು" (ಒಷಧಿ. ೩೦). [ಸೀ$_2$ + ಮಾವು]

**ಸೀಮಾಸ್ಥಳ** (ನಾ). ಗಡಿಪ್ರದೇಶ; ಸರಹದ್ದು: ಬಳಿಕ ಹಸ್ತಿನಪುರದ ಸೀಮಾಸ್ಥಳಕೆ ಬಂದರು ನಿಖಿಳಕಾಂತಾವಳಿ ಸಹಿತ (ಕುಮ್ಮಾಗ. ೧೨-೨೬). [ಸಂ. ಸೀಮಾಸ್ಥಲ]

**ಸೀಮಿತ** (ಗು). ೧. ಮಿತಿಗೆ ಒಳಪಟ್ಟ: ಈ ಸೀಮಿತ ಕಾಲಾವಧಿಯಲ್ಲಿ ನಾನು ಹೆಚ್ಚಿಗೆ ಹೇಳಲಾರೆ (ರೂಢಿ). (ನಾ). ೨. ಮಿತಿಗೆ ಒಳಪಡುವಂಥದು: ಸ್ತ್ರೀಯ ರಂಗ ಮನೆಗೆ ಮಾತ್ರ ಸೀಮಿತವೇ? (ಧರ್ಮಸಾ. ೬೩). [ಸಂ.]

**ಸೀಮಿತಗೊಳಿಸು** (ಕ್ರಿ). ಮಿತಿಗೊಳಿಸು; ಅಂಕೆಯಲ್ಲಿರಿಸು: ಜ್ಯೂಸ್, ಓಡಿನ್, ಜೆಹೋವ ಇವರೆಲ್ಲ ಆಕಾಶದೇವತೆಗಳು. ಇವರ ಪ್ರಧಾನಹವ್ಯಾಸ ಎಂದರೆ ಶಕ್ತಿಯನ್ನು ಸೀಮಿತಗೊಳಿಸುವಿಕೆ (ಬಧ್ನಪ್ರ. ೫೫ ಪೀಠಿಕೆ). [ಸೀಮಿತ + ಕೊಳ್$_1$ + - ಇಸು$_1$]

**ಸೀಮುಟು** (ನಾ). ಇತರರು ತಿಂದು ಮಿಕ್ಕ ಅನ್ನದ ಅಗುಳು; ಎಂಜಲನ್ನ: "(ಸೀಮುಟು) = ಎಂಜಲವುಳು" (ಶಮದ. ಪರಿ. ೨). [?]

**ಸೀಮೆ** (ನಾ). ೧. ಎಲ್ಲೆ; ಗಡಿ; ಮೇರೆ: ಸರಿದ್ಗಿರಿದರೀಭೂರುಹವನಸೀಮೋಪಲಕ್ಷಿತಂಗಳುಮಪ್ಪ ಮಹಾಗ್ರಾಮಂಗಳುಮಂ . . . ಮಾಡಿದಂ (ಆದಿಪು. ೮-೬೩ ವ); ಮೇರು ಪಡುವಣ್ಗೆ ಸೀತಾತೀರಂ ತೆಂಕಣ್ಗೆ . . . ತನಗೆ ಸೀಮೆಯೆನಿಕ್ಕುಂ (ಮಲ್ಲಿಪು. ೨-೧೨); ಅಂಬುಧಿಗೆ ಸೀಮೆಯಲ್ಲದೆ ಹರಿವ ನದಿಗೆ ಸೀಮೆಯೆಲ್ಲಿಯದು (ಬಸವ. ೪೧೮); ಚತುರಂಬುನಿಧಿಮೇಖಲೆಯ ಉತ್ತರಕುರುನರೇಂದ್ರರ ಸೀಮೆಪರಿಯಂತ ನೆಲವಿದೆಮ್ಮದು (ಕುಮ್ಮಾಸ. ೧೩-೫೯). ೨. ಗಡಿಯನ್ನು ನಿರ್ದೇಶಿಸುವ ಸ್ಥಳದಲ್ಲಿರುವ ಹಳ್ಳಿ, ಹೊಲ ಮುಂತಾದುವು: ವಡಗಣ್ಣಾ ಸೀಮೆ ಪೆರಮುಟ್ ಪಡುವಣ್ಣಾ ಸೀಮೆ ತಣ್ಣಳ್ಳಿ ಗಾರಪಾಟಿ ತೆಙ್ಕಣ್ಣಾ ಸೀಮೆ ನೆಯ್ವಲ್ಲಿಟೆಯಾ ಏರಿ (ಎಕ. XXI, ೧೧೮-೧೧; ಸು ೮ನೆಯ ಶತ). ೩. ಮಿತಿ; ಕಟ್ಟು; ಪರಿಮಿತಿ: ಆ ಮಹಾನಾರಾಯಣಾಸ್ತ್ರದ ಸೀಮೆ ಸೀದುದು (ಕುಮ್ಮಾಕ. ೧-೨೭); ನಳಿನನಾಭನ ಮಹಿಮೆಗಾವುದು ಸೀಮೆ (ತೊರಾರಾ. ೧-೮-೫೦); ತೀರ್ಥಪ್ರಸಾದರು ಮೊಗ್ಗಾವಿಗೆ ಬಂದಂದಿನಿಂದ ಅವರ ಭಾವಿಕತೆಗೆ ಸೀಮೆಯೇ ಇರಲಿಲ್ಲ (ಸಮಜೀ. ೪೦). ೪. ಪ್ರದೇಶ; ಜಾಗ; ಸ್ಥಳ: ಮಾಳೇನಹಳ್ಳಿ ಸೀಮೆ ದೇಸಾಯಿ ಬೆಳುವಂದೂರ ಶಾಖೆ ಶಿವಪ್ಪನಾಯಕರು ದೇವಲೋಕಪ್ರಾಪ್ತವಾದ ಸಮಾಧಿ (ಎಕ.VII, ಶಿಕಾರಿ. ೩-೫; 1061); ರೋಮದ ಸೀಮೆ ತ್ವಕ್ಕಿನ ಇಕ್ಕೆ . . . ಎಲುವಿನ ಬಲುಹಿಂದಿಪ್ಪುವುದೀ ಕಾಯ ಹೇಯವಯ್ಯ (ಆದವ. ೧೫-೩೪); ನಾನು ಪಿರಿಯಾಪಟ್ಟಣದ ಸೀಮೆಯವನು (ಚಂಗಾಳ್ಯ. ೧). ೫. ಪ್ರಾಂತ; ರಾಜ್ಯ: ರಾಮಗಿರಿಯ ದುರ್ಗ ಮೊದಲಾದ ಘನವಹ ಸೀಮೆಯ ಖಳನಿಗೆ ಕೊಟ್ಟು . . . ಕುಣಿಗಿಲ ಸೀಮೆಗೈದಿದನೇವೇಳ್ವೆ (ಕಂಠವಿ. ೧೧-೬೨); ಬಂಗಾಲ ವಾಯವ್ಯಪ್ರಾಂತ ಪಂಜಾಬ ಮುಂತಾದ ಕೆಲವು ಸೀಮೆಗಳಲ್ಲಿ ನೀಲಿಯು ಬಹಳ ಹುಟ್ಟುತ್ತದೆ (ಮುಂಬಯಿ. ೪-೫೪). ೬ . ದೇಶ; ನಾಡು: ಆ ಶಬರ ಸಂದೋಹ ಲೀಲೆಯಿಂ ಕಾಷ್ಠಾಂಗಾರನ ಸೀಮೆಯ ಮೇಲೆ ಮುಸುಕಿತು (ಜೀವಂಧಸಾಂ. ೮-೧೬); ಸೀಮೆಯನೆಲ್ಲಂ ತಿರುಗುತ್ತಾ ಮಹಿತವಣಿಗ್ಗ[ರ] ಬಹುವಿತ್ತಮನಾಗಳ್ ಪ್ರೇಮದಿ ಗಳಿಸುತ್ತಂ ಬರ್ಪಾ ಮಾರ್ಗದೊಳಿರ್ದುದೊಂದು ಘೋರಾರಣ್ಯಂ (ಹಾಲಾಸ್ಯ. ೧-೪-೯). ೭. ಭೂಮಿ; ಜಗತ್ತು: ರಾಮನಜೀವನು ಕೃಷ್ಣನಜೀವನು ಸೀಮೆಯಲಿ ಕಲಿಪಾರ್ಥನಜೀವನು ಭೂಮಿಪತಿಗಳೊಳುಳಿದ ಸುಭಟರಿಗಜೀವುದಿಲ್ಲ (ಕುಮ್ಮಾದ್ರೋ. ೪-೩೩). ೮. ವಿದೇಶ; ಹೊರದೇಶ: ನಾನು ಸೀಮೆಗೆ ಹೋಗುತ್ತಿದ್ದೇನೆ (ಬಾಣಾಳಿ. ೭). ೯. ಮೇರೆಯನ್ನು ಸೂಚಿಸುವ ರೇಖೆ, — ಗೆರೆ: ಸೀಮೆಯಿದು ಜಲಧಿಗಂ ಪೃಥ್ವೀ ಮಂಡಲಕೆಂದು ಪರಶುರಾಮಂ ಬರೆದಾ ಸೀಮೆಯ ಮೇರೆಯನಿಪ್ಪುದು ಭೂಮಿಗೆಯಳಿಕಂಬೊಲಾಯ್ತು ಸೀಮಾಲಂಘ್ಯಂ (ಸೂಕ್ತಿಸು. ೨-೨೭). ೧೦. ಪರಾಕಾಷ್ಠೆ; ಪರಮಾವಧಿ: ಈ ಧರಣೀಮಂಡಳದಲ್ಲಿ ಸಾರತರಸೌಖ್ಯಕ್ಕೀಕೆಯೇ ಸೀಮೆ (ಬಾಧಪು. ೨-೫೫); ಕಾಮವೆತ್ತಲು ಪರಮತತ್ವದ ಸೀಮೆಯೆತ್ತಲು (ಪ್ರಭುಲೀ. ೭-೪೦); ರಾಮನುಂ ಭರತನುಂ ತಬ್ಬಿಕೊಂಡತ್ತಂದು . . . ಸೀಮೆಯಂ ಮುಟ್ಟಿತಲ ಬಾಂಧವ್ಯಸೌಂದರ್ಯ (ಮಂಜುಕ. ೪೬೧). ೧೧. ಕಟ್ಟಳೆ; ನಿರ್ಬಂಧ: ಎನ್ನ ಕಾಯಕ್ಕೆ ಸೀಮೆಯ ಮಾಡುವೆ . . . ಎನ್ನ ಶ್ರೋತ್ರಕ್ಕೆ ಸೀಮೆಯ ಮಾಡುವೆ . . . ಎನ್ನ ತ್ವಕ್ಕಿಗೆ ಸೀಮೆಯ ಮಾಡುವೆ . . . ಎನ್ನ ಪ್ರಾಣಕ್ಕೆ ಸೀಮೆಯ ಮಾಡುವೆ ಎನ್ನ ಪ್ರಾಣಲಿಂಗದಲ್ಲಿ

ಪ್ರಸಾದರೂಪಾಗಿ ಹಿಂಗದೆ ನೀವಿರುವ ಕಾರಣ (ಬಸಹ. ೬-೧೬); ಅಂಗನಾವಿಷಯದ ಸೀಮಾಸಂಗತಿಯ ಸೇರಿಸಿದನ್ನೆ ಮುನಿಪುಂಗವನ ಕರುಣದಲಿ ಗದುಗಿನ ವೀರನಾರಯಣ (ಕುವ್ಯಾಅ. ೧೮- ೩೪). ೧೨. ವ್ಯತ್ಯಾಸ; ಭೇದ: ದೇವಲೋಕ ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕ ಕೇವಲ ಶರಣನಾಗಲರಿಯ (ಬಸವ. ೯೨೩); ಕೀಳುಮೇಲಿನ ಸೀಮೆ ನಿನ್ನಲಿ ಬೀಳುಕೊಂಡುದು ಸಾಕು ನಮಗಿನ್ನಾಳುತನವೇಕೆ (ಕುವ್ಯಾಕ. ೫-೨೩). ೧೩. (ಒಂದು ಪ್ರದೇಶದ) ಎಲ್ಲೆಯ ಗುರುತು; ಬಾಂದು: (ಕ). ೧೪. ತೀರ; ದಡ. ೧೫. ಕ್ಷಿತಿಜ; ದಿಗಂತ. ೧೬. (ಆಲಂ) ವಲಯ; ಕ್ಷೇತ್ರ: ಪ್ರಾಣಾಯಾಮವಂತರ್ಮುಖ ಸವಿಷಯ ಸ್ತೋಮ ಚಾರಿತ್ರಪ್ರವರ್ತನಸೀಮೆಯಲಿ ಪೊಸತೆನಿಸೆ ಪ್ರತ್ಯಾಹಾರಮೊದಗಿರಲು (ಬಸಪು. ೩೫-೧೮).

**ಸೀಮೆಯ ಕಂದಾಚಾರದ ಚಾವಡಿ** = ಹದಿನೆಂಟು ಕಚೇರಿಗಳಲ್ಲಿ ಒಂದು; ಗಡಿಪ್ರದೇಶಕ್ಕೆ ಸಂಬಂಧಿಸಿದ ಸೈನ್ಯಖಾತೆಯನ್ನು ನೋಡಿಕೊಳ್ಳುವ ಕಚೇರಿ: ಸೀಮೆಯ ಕಂದಾಚಾರದ ಚಾವಡಿ — ಇಲ್ಲಿ ಗಡಿಗಳಲ್ಲಿರುವ . . . ಸಿಬ್ಬಂದಿಯ ಜನಗಳ ಲೆಕ್ಕವನ್ನೂ . . . ಜಕೀರಿಸಾಮಾನು ಮುಂತಾದವುಗಳ ಲೆಕ್ಕವನ್ನೂ ಬರೆವಂತೆ ನಿಬಂಧನೆ ಮಾಡಿದರು (ಮಹಾವಂ. I. ೧೯೭). **ಸೀಮೆಯವರು** = ಹೊರದೇಶದ ಜನ; ವಿದೇಶೀಯರು: ಭದ್ರಯ್ಯ ಕೈಯಿನ್ನ ಸೀಮೆಯವರಿಗೆ ಹಿನ್ನೆ ಬರದ ಪ್ರಕಾರ ಕೊಡಸಿ (ಎಕ. VIII. ಸೊರಬ. ೨೬೬-೨೬; 1629 ?). [ಸಂ. ಸೀಮಾ]

**ಸೀಮೆಅಕ್ಕಿ** 'ಸೀಮೆಯಕ್ಕಿ' ನೋ.

**ಸೀಮೆಅಗಸೆ** 'ಸೀಮೆಯಗಸೆ' ನೋ.

**ಸೀಮೆಅಲ್ಲೆಕಾಯಿ** (ನಾ). (ಹೊರದೇಶದಿಂದ ಆಮದಾದ) ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ: ಸೀಮೆಅಲ್ಲೆಕಾಯಿ, ಡಿವಿಡಿವಿ (ಮೈಔಗಿ. ೧೫-೨೬೮).
[ಸೀಮೆ + ಅಲ್ಲೆ? + ಕಾಯಿ$_4$ (< ಕಾಯ್$_4$)]

**ಸೀಮೆಅವರೆಕಾಯಿ** (ನಾ). ಒಂದು ಬಗೆಯ ಅವರೆಕಾಯಿ: ಸೀಮೆಅವರೆಕಾಯಿ . . . ಬೆಟ್ಟಪ್ರದೇಶದಲ್ಲಿ ಹೆಚ್ಚಾಗಿ ಬೆಳೆಯಾಗುತ್ತದೆ (ತರಜ. ೪೩).
[ಸೀಮೆ + ಅವರೆ$_1$ + ಕಾಯಿ$_4$ (< ಕಾಯ್$_4$)]

**ಸೀಮೆಈರುಳ್ಳಿ** (ನಾ). (ಹೊರದೇಶದಿಂದ ಆಮದಾದ, ಉದ್ದುದ್ದವಾಗಿರುವ) ಒಂದು ಬಗೆಯ ಈರುಳ್ಳಿ: ಬಿತ್ತಿದ ಸುಮಾರು ೪-೫ ತಿಂಗಳಲ್ಲಿ ಸೀಮೆಈರುಳ್ಳಿ ಬೆಳೆ ಸಿದ್ಧವಾಗುತ್ತದೆ (ತರಜ. ೫೪). [ಸೀಮೆ + ಈರುಳ್ಳಿ]

**ಸೀಮೆಕಚೋರ** (ನಾ). ಒಂದು ಬಗೆಯ ಕಚೋರ: (ಮೈಔಗಿ. ೩೨-೮೨೮).
[ಸೀಮೆ + ಕಚೋರ]

**ಸೀಮೆಕಮಲ** (ನಾ). (ವಿದೇಶದ) ಒಂದು ಬಗೆಯ ಕೃತಕವಜ್ರ: ಎಳಸಾದ ಮೂಗಿಗೆ ಒಪ್ಪೋಂಥ ಸೀಮೆಕಮಲದ ಬೇಸ್ರಿ (ಬಾಗಿಸ. ೧).
[ಸೀಮೆ + ಕಮಲ$_2$ ./ ತಮಿ. ಚೀಮ್ಕಕ್ಕಮಲಮ್]

**ಸೀಮೆಕೋಳಿ** (ನಾ). ವಿದೇಶಿ ತಳಿಯ ಕೋಳಿ: ಅತ ಹತ್ತು ಸೀಮೆಕೋಳಿಗಳನ್ನು ಸಾಕುತ್ತಿದ್ದಾನೆ (ರೂಢಿ). [ಸೀಮೆ + ಕೋಳಿ$_1$ (< ಕೋೞ್$_1$)]

**ಸೀಮೆಗಲ್ಲು** (ನಾ). ಗಡಿಯನ್ನು ಸೂಚಿಸುವ ಕಲ್ಲು; ಬಾಂದುಗಲ್ಲು: ಅಂಕವ್ವೆ ದೇವಿಯ ಪಾಲಪರಿಯಂತರ ಹಾಕಿದ ಸೀಮೆಗಲ್ಲಿಂದ ಪಡುವಲು ಸಲುಉದು (ಮೈಆಅ. ೧೯೪೬, ೧೮-೧೨; 1488). [ಸೀಮೆ + ಕಲ್ಲು (< ಕಲ್$_3$)]

**ಸೀಮೆಗಳಿ** (ಕ್ರಿ). ಅತಿಶಯಿಸು; ಹಿರಿಮೆಯಿಂದ ಕೂಡಿರು: ಮಹಾಲಿಂಗದಾ ಮಹಾಮಹಿಮೆಯ ಸುಧಾಬ್ಧಿಯ ತರಂಗಬುದ್ಬುದಶೀಕರಂಗಳೆನಿಸಿ ತಾಮರಸಸಂಭವರು ತಾಮರಸಲೋಚನರು ಸೀಮೆಗಳ[ಪಾಠಾಂ. ರಿ]ದಸುರಸುರನರತಿರ್ಯಗಾದಿಗಳು ಆ ಮಧ್ಯದೊಳ್ ಸುಳಿವರು (ಲಶಿಚಂ. ೧-೧೯). [ಸೀಮೆ + ಕಳಿ$_1$ (< ಕೞಿ$_1$)]

**ಸೀಮೆಗಳೆ** (ಕ್ರಿ). ದಾಟು; ಮೀರು: ನಡುವಗಲಾದುದು ನಿನ್ನಯ ಪೂಣ್ಕೆಯದುತ್ಕಟವು ಸೀಮೆಗಳೆದುದು (ಉದ್ಭಟೇ. ೭-೮). [ಸೀಮೆ + ಕಳೆ$_1$]

**ಸೀಮೆಗಾಬಿ** (ನಾ). ಗಡಿನಾಡಿನಲ್ಲಿರುವವನು: ಸೀಮೆಗಾಬಿಂಹ ಹಿತ್ತಿಲಿಂ ಪಡುವ ಒತ್ತಿನ ನೀರು ಹರಿವ[ದ]ದನು ಮೂಡಕೇರ್ಯಿ ಹಲರು ಮುಟ್ಟಿಸ ಸಲ್ಲದು (ಸೌಇಇ. IX-ii, ೪೫೭-೫೩; 1455). [ಸೀಮೆ + - ಗಾಬಿ (< - ಕಾಬಿ)]

**ಸೀಮೆಗೆಡಿಸು** (ಕ್ರಿ). ಮೇರೆಯನ್ನು ಮೀರುವಂತೆ ಮಾಡು: ಆ ಮುಕುಂದಪದಾಬ್ಜ ಪರಿಮಳಧಾಮತುಳಸೀಗಂಧವಹ ನಿಸ್ಸೀಮರಂತಶ್ವಾಸಗತಿಯಲಿ ಹೊಕ್ಕು ಹೃದಯವನು ಸೀಮೆಗೆಡಿಸಿತು ಮುಕ್ತರನು (ನಿಭಾಗ. ೩-೫-೩೭). [ಸೀಮೆಗೆಡು + - ಇಸು$_3$]

**ಸೀಮೆಗೆಡು** (ಕ್ರಿ). ಮೇರೆಯೇ ಇಲ್ಲವಾಗು; ಎಲ್ಲೆಯನ್ನು ಮೀರು: ಚೆನ್ನಮಲ್ಲಿಕಾರ್ಜುನ ನಿಮ್ಮನರಿದು ಸೀಮೆಗೆಟ್ಟೆನು (ಮಹಾದೇ. ಬ. ೨೭-೫೪). [ಸೀಮೆ + ಕೆಡು$_1$]

**ಸೀಮೆಗೊಳಿಸು** (ಕ್ರಿ). ಪರಾಕಾಷ್ಠೆಗೆ ಮುಟ್ಟಿಸು: ಶಂಕರನ ಪ್ರೇಮಮಂ ಸೀಮೆಗೊಳಿಸುವಂತೆ ಹರನ ಮನೋರಥಮಂ ಮದವೇರಿಪಂತೆ ಪಾರ್ವತಿಗೆ ಸುವಾಸಿನಿಯರ್ ಸಿಂಗರಮಂ ಮಾಡಿ (ಗಿರಿಕ. ೧೦-೪೫ ವ). [ಸೀಮೆ + ಕೊಳ್$_1$ + - ಇಸು$_3$]

**ಸೀಮೆಗೋರಂಟಿ** (ನಾ). ಒಂದು ಬಗೆಯ ಗೋರಂಟಿ, — ಮದರಂಗಿ: (ಮೈಔಗಿ. ೬೦-೧೨೦೭). [ಸೀಮೆ + ಗೋರಂಟಿ$_2$]

**ಸೀಮೆತುತ್ತಿ** (ನಾ). (ಜವುಗುಪ್ರದೇಶದಲ್ಲಿ ಬೆಳೆಯುವ ಬಿಂದಿಗೆಹೂವಿನ ಜಾತಿಯ) ಒಂದು ಬಗೆಯ ಸಸ್ಯ: (ಮೈಔಗಿ. ೫-೮೮). [ಸೀಮೆ + ತುತ್ತಿ$_1$]

**ಸೀಮೆತೆಂಗು** (ನಾ). ಒಂದು ಬಗೆಯ ತೆಂಗು: ಎಣ್ಣೆತೆಂಗು, ಸೀಮೆತೆಂಗು (ಮೈಔಗಿ. ೩೩-೬೩೦). [ಸೀಮೆ + ತೆಂಗು$_1$]

**ಸೀಮೆತೋಕೆಗೋಧಿ** (ನಾ). (ಹೊರದೇಶದ) ಉದ್ದವಾದ ಒಂದು ಬಗೆಯ ಗೋಧಿ: ಸೀಮೆಓಟ್ಸು, ಸೀಮೆತೋಕೆಗೋಧಿ (ಮೈಔಗಿ. ೧೦-೧೮೨).
[ಸೀಮೆ + ತೋಕೆಗೋಧಿ]

**ಸೀಮೆದಳೆ** (ಕ್ರಿ). ಗಡಿಯನ್ನು ಹೊಂದು; ಎಲ್ಲೆಯನ್ನು ಪಡೆ: ಇವನೊರ್ವನೆ ಸಾಗರಂಗಳಿಂ ಕರಿದೆನಿಸಿರ್ದ ಸೀಮೆದಳೆದೀ ನೆಲನೆಲ್ಲಮನಾಳ್ವಂ (ಶಾಕುಂತ. ೨೭-೫೦).
[ಸೀಮೆ + ತಳೆ$_1$]

**ಸೀಮೆಧಾರಣೆ** (ನಾ). ದೇಶದಲ್ಲಿ ಪ್ರಚಲಿತವಿರುವ ಪೇಟೆವಸ್ತುಗಳ ಮಾರಾಟದ ದರ: ಸೀಮೆಧಾರಣೆಯು ಮಾರುಕಟ್ಟೆಯ ಧಾರಣೆಯ ಅರವಾಸಿಯಷ್ಟಿರುತ್ತಿತ್ತು (ಪಂಜಪಂ. ೯). [ಸೀಮೆ + ಧಾರಣೆ$_2$]

**ಸೀಮೆನಾಭಿಗಿಡ** (ನಾ). ಒಂದು ಬಗೆಯ ವಿಷಸಸ್ಯ; ವತ್ಸನಾಭಿ: ಕಟುವಿಷ, ಸೀಮೆನಾಭಿಗಿಡ (ಮೈಔಗಿ. ೨-೩೦). [ಸೀಮೆ + ನಾಭಿ + ಗಿಡ (< ಗಿಡು)]

**ಸೀಮೆನೆಲ್ಲಿ** (ನಾ). ನೆಲ್ಲಿಯಲ್ಲಿ ಒಂದು ಬಗೆ: (ಮೈಔಗಿ. ೪೨-೧೦೪೨).
[ಸೀಮೆ + ನೆಲ್ಲಿ]

**ಸೀಮೆನೇಗಿಲು** (ನಾ). (ವಿದೇಶೀಯವಾದ) ಕಬ್ಬಿಣದ ಗುಳವಿರುವ ನೇಗಿಲು: ಮಂಗಳೂರು ಹೆಂಚಿನ ಮನೆ, ಸೀಮೆನೇಗಿಲು . . . ಕುಡಿಯುವ ನೀರಿಗೆ ಸೇದೊ ಬಾವಿ — ಇತ್ಯಾದಿ, ಇತ್ಯಾದಿ ಗೌಡರು ಮಾಡಿದ ಹೊಸತನಗಳು (ನಮ್ಮೂರು. ೧೧೩).
[ಸೀಮೆ + ನೇಗಿಲು (< ನೇಗಿಲ್)]

**ಸೀಮೆನೌಲಾದಿ** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೭೮-೧೫೯೯).
[ಸೀಮೆ + ನೌಲಾದಿ]

**ಸೀಮೆಬದನೆಕಾಯಿ** (ನಾ). (ಹೊರದೇಶದಿಂದ ಬಂದ) ಒಂದು ಬಗೆಯ ತರಕಾರಿ: ಚೌಚೌ, ಸೀಮೆಬದನೆಕಾಯಿ (ಮೈಔಗಿ. ೬೯-೧೪೦೭).
[ಸೀಮೆ + ಬದನೆಕಾಯಿ (< ಬದನೆಕಾಯ್)]

**ಸೀಮೆಬೆಂಡೆ** (ನಾ). ಒಂದು ಬಗೆಯ ಸಸ್ಯ: ಸಣ್ಣಬಿಂದಿಗೆಗಿಡ, ಸೀಮೆಬೆಂಡೆ (ಮೈಔಗಿ. ೫೨-೧೦೪೩). [ಸೀಮೆ + ಬೆಂಡೆ]

**ಸೀಮೆಮಾವು** (ನಾ). ಮಾವಿನಲ್ಲಿ ಒಂದು ಬಗೆ: ಸೀಮೆಮಾವು, ಅವೊಕಾಡೊಹಣ್ಣು (ಮೈಔಗಿ. ೬೦-೧೨೯೯). [ಸೀಮೆ + ಮಾವು]

**ಸೀಮೆಯಕ್ಕಿ, ಸೀಮೆಅಕ್ಕಿ** (ನಾ). ಒಂದು ಬಗೆಯ ಧಾನ್ಯ; ಸಬ್ಬಕ್ಕಿ: ಹಬ್ಬಕ್ಕೆ ಸೀಮೆಯಕ್ಕಿ ಪಾಯಸ ಮಾಡಿದ್ದೆ (ರೂಢಿ). **ಸೀಮೆಅಕ್ಕಿ**: ಸಬ್ಬಕ್ಕಿ, ಸಾಗುಅಕ್ಕಿ, ಸೀಮೆಅಕ್ಕಿ (Sago. ೫೦೫೧). [ಸೀಮೆ + ಅಕ್ಕಿ$_1$]

**ಸೀಮೆಯಗಸೆ, ಸೀಮೆಅಗಸೆ** (ನಾ). ಅಗಸೆಯಲ್ಲಿ ಒಂದು ಬಗೆ: (ಕ). **ಸೀಮೆಅಗಸೆ**: ದೊಡ್ಡತಂಗಡಿ, ಸೀಮೆಅಗಸೆ (ಮೈಔಗಿ. ೧೮-೩೨೮). [ಸೀಮೆ + ಅಗಸೆ$_1$]

**ಸೀಮೆಯೆಣ್ಣೆ** (ನಾ). ಕಲ್ಲಿದ್ದಲು, ಪೆಟ್ರೋಲಿಯಂ, ಪ್ಯಾರಫಿನ್

ಮುಂತಾದುವುಗಳನ್ನು ಬಟ್ಟಿಯಿಳಿಸಿ ತೆಗೆದ ಎಣ್ಣೆ: ಮಗ್ಗುಲಲ್ಲಿ ಸೀಮೆಯೆಣ್ಣೆಯ ಡಬ್ಬ, ಬುದ್ಧಿವಂತ, ಪಂಪು (ರಾಮಾಸ. ೧೧೧). [ಸೀಮೆ + ಎಣ್ಣೆ]

**ಸೀಮೆಶಾವಂತಿಗೆ** (ನಾ). ಒಂದು ಬಗೆಯ ಸೇವಂತಿಗೆ: ಸೀಮೆಶಾವಂತಿಗೆ, ಚೆಂಡುಮಲ್ಲಿಗೆ (ಮೃಡಿಗಿ. ೬೩-೧೫೧೧). [ಸೀಮೆ + ಶಾವಂತಿಗೆ (< ಸೇವಂತಿಗೆ)]

**ಸೀಮೆಸಂಕೇಶ್ವರ** (ನಾ). ಒಂದು ಬಗೆಯ ಸಸ್ಯ: ಸೀಮೆಸಂಕೇಶ್ವರ, ದೊಡ್ಡರತ್ನಗಂಧಿ . . . ಕತ್ತೀಕಾಯಿ (ಮೃಡಿಗಿ. ೨೯-೫೭೪). [ಸೀಮೆ + < ಸಂಕೇಶ್ವರಿ]

**ಸೀಮೆಸುಣ್ಣ** (ನಾ). ಕಪ್ಪುಹಲಗೆಯ ಮೇಲೆ ಬರೆಯುವುದಕ್ಕೂ ಸುಣ್ಣ ಮಾಡುವುದಕ್ಕೂ ಉಪಯೋಗವಾಗುವ ಮೆತುವಾದ ಬಿಳಿಯ ಸುಣ್ಣಕಲ್ಲು: ಹೊಂಬುಚದ ಸೀಮೆಸುಂಣದ ಬಸ್ತಿಯ ಸಿದ್ಧಾಪುರದಲ್ಲೂ ಸಿದಂಮಾಜಿಯವರೂ ಕಟ್ಟಿಸ್ತ (ಎಕ. VIII. ತೀರ್ಥಹ. ೫೩-೧೩; 1664); ಸುಣ್ಣವು ಈ ಗ್ಯಾಸವನ್ನು ಶೋಷಿಸಿ ಕೊಂಡು ಸೀಮೆಸುಣ್ಣ(ಖಡು) ಎಂಬ ಕಟಕದಂಥ ಪದಾರ್ಥವನ್ನುಂಟುಮಾಡುತ್ತದೆ (ಮುಂಬಯಿ. ೫-೧೫೫). [ಸೀಮೆ + ಸುಣ್ಣ]

**ಸೀಮೆಸೋಂಪು** (ನಾ). ಒಂದು ಬಗೆಯ ಸೋಂಪು: "ಸೀಮೆಸೋಂಪು, ಶಹಾಜೀರಿಗೆ" (ಸಸ್ಯನಿ. ೨೯). [ಸೀಮೆ + ಸೋಂಪು]

**ಸೀಮೆಹತ್ತಿ** (ನಾ). (ಹೊರದೇಶದ) ಹತ್ತಿ: "ಕರೀಅರಳೆ, ಸೀಮೆಹತ್ತಿ, ಅಮೆರಿಕಾಹತ್ತಿ" (ಸಸ್ಯನಿ. ೬೬). [ಸೀಮೆ + ಹತ್ತಿ (< ಪಟ್ಟಿ)]

**ಸೀಮೆಹರಳು** (ನಾ). ಔಡಲದಲ್ಲಿ ಒಂದು ಬಗೆ: "ತೊಟ್ಟ, ಕರೀತುರುಕುಹರಳು, ಸೀಮೆಹರಳು, ತೊಟ್ಟೀಗಿಡ" (ಸಸ್ಯನಿ. ೬೮). [ಸೀಮೆ + ಹರಳು (< ಪರಲ್)]

**ಸೀಮೆಹಲಸು** (ನಾ). (ಹೊರದೇಶದ) ಒಂದು ಬಗೆಯ ಹಲಸು: ಸೀಮೆಹಲಸು, ದೀವಿಹಲಸು, ರೊಟ್ಟೀಹಲಸು (ಮೃಡಿಗಿ. ೯-೧೬೦). [ಸೀಮೆ + ಹಲಸು (< ಪಲಸು)]

**ಸೀಮೆಹಸು** (ನಾ). ವಿದೇಶಿ ತಳಿಯ ಹಸು: ಆತ ನಾಲ್ಕು ಸೀಮೆಹಸುಗಳನ್ನು ಕಟ್ಟಿದ್ದಾನೆ (ರೂಢಿ). [ಸೀಮೆ + ಹಸು$_2$ (< ಪಸು$_4$)]

**ಸೀಮೆಹುಣಸೆ** (ನಾ). ಒಂದು ಬಗೆಯ ಹುಣಸೆ: ಸೀಮೆಹುಣಸೆ, ಕೊರಕಾಪುಳಿ, ಕೊಟ್ಟಾಂಪುಳಿ (ಮೃಡಿಗಿ. ೬೨-೧೨೬೩). [ಸೀಮೆ + ಹುಣಸೆ (< ಪುಳಿಸೆ)]

**ಸೀಮೊಸರು, ಸಿಹಿಮೊಸರು** (ನಾ). ಸವಿಯಾದ ಮೊಸರು: ಚಪಾತಿಯೊಂದಿಗೆ ನಂಚಿಕೊಳ್ಳಲು ಚಟ್ನಿಪುಡಿ, ಸೀಮೊಸರು ಕೊಟ್ಟೆ (ರೂಢಿ). **ಸಿಹಿಮೊಸರು:** ನನಗೆ ಸಿಹಿಮೊಸರು ತುಂಬಾ ಇಷ್ಟ (ರೂಢಿ). [ಸೀ$_2$ + ಮೊಸರು (< ಮೊಸರ್)]

**ಸೀಮೋಲ್ಲಂಘನ** (ನಾ). ೧. ಗಡಿಯನ್ನು ದಾಟುವುದು; ಎಲ್ಲೆಯನ್ನು ಕ್ರಮಿಸುವುದು: ಯುದ್ಧ ಬಂದಿತು ಸಿದ್ಧರಾಗಿರಿ ಇಂದೆ ಸೀಮೋಲ್ಲಂಘನ! (ನಲಮು. ೪೭-೨). ೨. ಮೀರುವಿಕೆ; ದಾಟುವಿಕೆ: ಸೀಮೋಲ್ಲಂಘನ ಆದದ್ದು ಠೀಕ ಆತಂದಿ (ದೀಪಹ. II, ೩೬೧).

**ಸೀಮೋಲ್ಲಂಘನ ಮಾಡು** = ೧. ಗಡಿಯನ್ನು ದಾಟು: ಸತ್ವಶಾಲಿಯಾದ ಯಾವುದೇ ಸಂಸ್ಕೃತಿಯಾಗಲಿ, ತನ್ನ ಜನ್ಮಭೂಮಿಯ ಸೀಮೋಲ್ಲಂಘನ ಮಾಡಿ ಅನ್ಯಾನ್ಯದೇಶಗಳಲ್ಲಿ ಪ್ರಸೃತವಾಗುವುದು ಇತಿಹಾಸಪ್ರಸಿದ್ಧ (ಭಾರದ. ೩೩೮); ಭಾರತದಲ್ಲಿ ಜನ್ಮವೆತ್ತಿದ ಈ ಮತವು ಸೀಮೋಲ್ಲಂಘನ ಮಾಡಿ, ಎಲ್ಲ ಮಾನವರ ಕಲ್ಯಾಣಕ್ಕಾಗಿ ಮೈತ್ರಿಯಿಂದ ದುಡಿಯಿತು (ಮನೋನಂ. ೨೭೯). ೨. ನವರಾತ್ರಿಯಲ್ಲಿ ವಿಜಯ ದಶಮಿಯಂದು ಊರಿನ ಗಡಿಯನ್ನು ದಾಟುವ ಒಂದು ವಿಧಿಯನ್ನು ಆಚರಿಸು: ಮೆರವಣಿಗೆ ಊರ ಸುತ್ತೆಲ್ಲ ಸುಳಿದು ಸೀಮೋಲ್ಲಂಘನ ಮಾಡಿ ಮರಳಿ ಬಂದಿತು (ಪ್ರಬಂಧ. ೯೭). [ಸಂ.]

**ಸೀಯ** (ನಾ). ಹಡಗಿನ ಒಂದು ಭಾಗ: ಅಂಭೋಧಿವೀಚೀಪ್ರಚಯವಚಳದಂತೆಬ್ಬು ಪರ್ವಿರ್ದೊಡಂದುಚ್ಚಳಿಸಲ್ ತನ್ನಾವೆ ಸೀಯಂ ಪಱಿಯೆ ಮುಱಿವುದುಂ (ನೇಮಿಪು. ೪-೭೩). [?]

**ಸೀಯಂ** (ನಾ). ಮೂರನೆಯದು: ಅವ್ವಲ್, ದೂಯಂ, ಸೀಯಂ, ಚಾರಂ ನಾಲ್ಕನು ಹೇಳುವರಂತೆಲೋ (ನಾಪದ. ೧೪೩). [ದೇ. II ತುಳು. ಸಿಯಂ, ಶೀಯಂ, ಶಿಯಂ. /ಹಿಂ. ಸಿಹ]

**ಸೀಯದರ, ಸಿಬಾರ, ಸಿರಿದರ, ಸಿರಿದಾರ, ಸಿರಿಯದರ, ಸಿರಿಯದಾರ, ಸಿರಿಯಬಾರ, ಸಿರಿವಾರ, ಸೀಯದಾರ, ಸೀಯಬಾರ** (ನಾ). ಅಗಸೆ; ಹೆಬ್ಬಾಗಿಲು; ಮಹಾದ್ವಾರ: ಪಂದಲೆಯೋಳಿದೋರಣದ ಸೀಯದರಂ . . . ಮಿಂಚಿದುದಾ ಶ್ಮಶಾನದೊಳ್ (ಕಾವ್ಯಾವ. ೫೭); ಆ ರಾಜಗೇಹಾಜಿರದ ಸೀಯದರದ ಕಂಟಿಯ ಬಾರದಂತರಾಳದಲ್ಲಿ ಗಿರಿಗಳ ರೂಪದಿಂ ಕೆಲವು ಕರ್ಪೂರಗಳಿರ್ದಪುವು (ಅನಂಪು. ೧-೧೧೭ ವ). **ಸಿಬಾರ:** ೭೭೦ ವರ್ಷಇಲ್ಲದ ಸಿಬಾರವ ಅಜುವರಿಬರ ಪುತ್ರ ಮಡವರಿ ಬಸವ್ವ(ವಯ್ಯ) ಮಾಡಿಸಿದ ಸಿಬಾರ ಮಂಗಳಮಹಾಶ್ರೀ (ಸೌಇಇ. XV, ೧೭೨-೧; 1226). **ಸಿರಿದರ:** ಸಿಂದರಂ, ಸಿರಿದಾರಂ, ಸಿರಿಬಾರಂ (ಶಬ್ದಾನು. ೩೭೮ ಪ್ರಯೋ). **ಸಿರಿದಾರ:** ಮನೆಮನೆಯ ಮುಂದಣ ಸಿರಿದಾರದ ಮೊಗಶಾಲೆಯೊಳು . . . ರಾಜಕುಮಾರರಿರಲು ಕಂಡಳಾಗ (ಶ್ರೀಪಾಲ. ೨-೨೦). **ಸಿರಿಯದರ:** ಶ್ರೀದ್ವಾರ— ಸಿರಿಯದರ, ಸಿರಿಯದಾರ, ಸಿರಿಯಬಾರ (ಶಮದ. ೨೯೬ ಪ್ರಯೋ); ಗಂಧರ್ವಕನ್ನಿಕೆಯರೀಶ್ವರನಿರ್ದ ಮಣಿಮಯಹರ್ಮ್ಯೋಪಕಂಠವಂ ಸಾರ್ದು ಸಿರಿಯದರದೊಳ್ನಿಂದು ಸುವರ್ಣವಲ್ಲರಿಯಂ ಬಾಜಿಸುತ್ತೆ (ವೀರವಿ. ೭-೧೧ ವ). **ಸಿರಿಯದಾರ:** "ಸಿರಿಯದರಂ, ಸಿರಿಯದಾರಂ, ಸಿರಿಯಬಾರಂ — ಈ ೩ ಶ್ರೀದ್ವಾರಕ್ಕೆ ಪೆಸರ್" (ಕಶಸಾ. ೫೯-೨೯೯). **ಸಿರಿಯಬಾರ:** "ಸಿರಿಯದರ ಸಿರಿಯಬಾರಂ ನೆಱೆ ತಾಂ ಶ್ರೀದ್ವಾರ" (ಕವಿಕಂ. ೧೪೨). **ಸಿರಿವಾರ:** ಪೊನ್ನ ರನ್ನದ ಸಿರಿವಾರಂ[ಪಾಠಾಂ. ರೂವಾರಂ]ಗಳ್ ಮನಂಗೊಳೆ ವಿವಾಹಗೇಹಮಂ ಮಾಡಿಸಿದಾಗಳ್ (ಜಗವಿ. ೧೦-೯೨ ವ). **ಸೀಯದಾರ:** ಸೀಯದರಂ, ಸೀಯದಾರಂ, ಸೀಯಬಾರಂ (ಶಬ್ದಾನು. ೩೭೮ ಪ್ರಯೋ). **ಸೀಯಬಾರ:** ಶತ್ರುಂಜಯಮಹೀಪಾಲ ಗೋಮಂಡಳಿಗಂ ನಂದಿಮಿತ್ರನ ಗೋಮಂಡಳದೊಳೊರ್ಮೆ ಪೋರಿಗಳಾಗಿ ರಾಜಮಂದಿರದ ಸೀಯ[ಪಾಠಾಂ. ಸಿರಿಯ]ಬಾರದೊಳ್ ಪೊಣರ್ದು (ಶಾಂತಿಪು. ೯-೪೭ ವ); ಸೀಯಬಾರವಂತಃಪುರಮುಯ್ಯಲ್ . . . ಒರ್ಮೆಯೆ ನೆಱೆದಾಡಂಬರದಿಂ ತುಱುಗಿರೆ (ಪುಷ್ಪಪು. ೬-೨೩). [< ಸಂ. ಶ್ರೀದ್ವಾರ]

**ಸೀಯದಾರ** 'ಸೀಯದರ' ನೋ.

**ಸೀಯನೆ, ಸಿಯ್ಯನೆ** (ಅ). ೧. ಸಿಹಿಯಾಗಿ; ಸವಿಯಾಗಿ: ಕಱಿಣೆಯ ಸೀಯನಪ್ಪ ಮೊಳೆವಾಲ್ಗೆ ತಗುಳ್ವುದು ತತ್ಕಿಶೋರಕೇಸರಿ (ಪಂಪಭಾ. ೭-೮೦); ಕಂಡರಿಸಿದೊಡಿಕ್ಷು ಕಾಂಡಮನೆ ಸೀಯನೆ ಸದ್ರಸಮುಣ್ಮಿದಿರ್ದೊಡಂ . . . ರಸಜ್ಞಸುಮನೋಜ್ಞಮೆ ಕಾವ್ಯಮದುಂ ಧರಿತ್ರಿಯೊಳ್ (ರಾಜಶೇ. ೧-೫೧). ೨. (ಆಲಂ) ಇಂಪಾಗಿ; ಇನಿದಾಗಿ: ಏರ್ದಯಂ ಪಿಡಿದಲುಗುವ ಸೀಯನಪ್ಪ ಗೀತಾತೋದ್ಯನಾದಕ್ರಮದಿರೊಳೆ ಕರ್ಣ್ಣ ವಂದು ಬಗೆಯನುಱೆ ಸೆಱೆವಿಡಿದ ವಿದ್ಯಾಧರವಿಳಾಸಕ್ಕಂ ಬೆಕ್ಕಸಂಬಟ್ಟು (ಆದಿಪು. ೨-೪೧ ವ); ಸೀಯನೆ ಪೇಟ್ಟ ಕಾದಲನ ಮಾತನೆ ಭಾವಿಸಿ ಕೇಳ್ವ ಭಾವಮೊಲ್ದೀಯೆ (ಲೀಲಾವ. ೨-೯೨). **ಸಿಯ್ಯನೆ:** ೧. ಕಮ್ಮನೆ, ಇಮ್ಮನೆ, ಸಿಯ್ಯನೆ (ಶಮದ. ೩೦೦ ಪ್ರಯೋ); ತನಿವಣ್ಣಂ ಮನವಾರೆ ನೋಡಿ . . . ಚಂಚುಪುಟದಿಂದಂ ಮೆಲ್ಪಿನಿಂ ಸೀಳ್ದು ಸಿಯ್ಯನೆ [ಪಾಠಾಂ. ಸೀಯೆನೆ]ಸೋರ್ವಾ ರಸಧಾರೆಯಂ ಸವಿದು (ಶಬಶಂ. ೨-೪೯).

**ಸೀಯನಾಗು** = ಹಿತವಾಗು; ತಂಪಾಗು: ಮೈಯನಾ ರಾಯ ತಡವಿದನಾ ಸುತರು ನೋಯಿಸಿದವು ಸ್ವಾಮಿಯೆಂದರಿಲ್ಲಿಲ್ಲಣ್ಣ ಸೀಯನಾಯ್ತಾಗೆದೆಯೆಂದ (ಭರತೇ. ೪೫-೭೭). [ಸೀ$_2$ + - ಅನ್$_1$ ./ ತೆಲು. ತೀಯನ, ತಿಯ್ಯನಿ; ಕುರುಖ್. ತೀನ್ನಾ = ಸಿಹಿಯಾಗಿರುವ]

**ಸೀಯಬಾರ** 'ಸೀಯದರ' ನೋ.

**ಸೀಯವಲ್ಲವರಸ, ಶೀಯವಲ್ಲವರಸ** (ನಾ). ಒಬ್ಬಾತನ ಹೆಸರು: ಶ್ರೀಮತ್ ಕೊಙ್ಗೊಣಿ ಮುತ್ತರಸರಾ ಬೆಸದೆ ಕಾಡುವಟ್ಟಿ ದಣ್ಣಱಿದು ಕೊವಳಲದುಳ್ ಏಱಿದೋರ್ ಸೀಯವಲ್ಲವರಸ (ಎಕ. IX, ಹೊಸಕೋ. ೨೧-೭; ಸು. 750). **ಶೀಯವಲ್ಲವರಸ:** ಮುತ್ತರಸರುಂ ಶೀಯವಲ್ಲವರಸರುಂ . . . ಎಲ್ಲಾ ಸಾಮಂತರುಂ ಅತ್ತಾಣಿಲುಂ ಸಾಕ್ಷಿ (ಮೈಆರ್. ೧೯೧೪, ೧-೩೩; 788). [< ಸಂ. ಶ್ರೀವಲ್ಲಭ + ಅರಸ$_1$]

**ಸೀಯವೂರ್** (ನಾ). ಒಂದು ಸ್ಥಳದ ಹೆಸರು: ಸೀಯವೂರಮ ಅಕ್ಕಬ್ಬೆ ಆಳುತ್ತಿರೆ ಅಲ್ಲಿ ಕೊಟ್ಟುದು ಎಣ್ಣಣ್ಣುಗ ಮಣ್ಣು (ಎಕ. XII, ಸಿರಾ. ೨೪-೪೧; ಸು. 900). [? + ಊರ್]

**ಸೀಯಾವಳಿ** (ನಾ). ಒಂದು ಬಗೆಯ ಸಿಹಿಖಾದ್ಯ: ಸಕ್ಕರೆಯ ಘೃತದೊಡನೆ ಪರಿಪಾಕದಡಿಗೆಯಿಂ ಗೈದ ಲಡ್ಡಿಗೆ ಬತಾಸಂ ಸೀರ್ಣೆ ಸಹಿತ ಸೀಯಾವಳಿಗಳಾ ಕೊಡುತ ರೊಟ್ಟಿವನವನು ಕೊಳುತಲಿ (ನವಮೋ. ೧೭-೬೧). [< ಸೀ$_2$]

**ಸೀಯಾಳ, ಸಿಯಾಳ** (ನಾ). (ಕರಾ) ಎಳನೀರಿರುವ ತೆಂಗಿನ ಕಾಯಿ; ಬೊಂಡ: ದಧಿ ದಿವ್ಯಮಧು ಸಕ್ಕರೆ ಸೀಯಾಳವ್ಂ ಇಂದಿರೇಶಗೆ ಬೇಗ ಶಿರದ ಮೇಲಭಿಷೇಕ ಮುದದಿಂ ಮಾಡಿದ ಬಳಿಕ (ಪಾದಿಜ. ೩೩-೪); ಆ ನೀರಿಗೆ (ಎಳೆಗಾಯೊಳಗಿನ ನೀರು) ಎಳೆನೀರು ಎಂತಲೂ ಎಳೆಗಾಯಿಗೆ ಸೀಯಾಳವೆಂತಲೂ ಅನ್ನುತ್ತಾರೆ (ಮುಂಬಯಿ. ೨-೫೧); ತೋಟದಲ್ಲಿ ನಿಂಗ ಇದ್ದರೆ ಕೆಂದಾಳಿಮರದಿಂದ ಎರಡು ಸೀಯಾಳ ತೆಗೆಯುವಂತೆ ಹೇಳು (ದೇವಹಂ. ೧೫೯). **ಸಿಯಾಳ:** ಜಾರಪ್ಪ . . . ಒಂದು ಸಿಯಾಳವನ್ನು ತಂದು ತನ್ನ ದನಿಗೆ ಕೊಡುತ್ತಿದ್ದ (ಪರಾವ. ೧೦೮); ಪೂಂಜರ ಸಂಗಾತಿಗಳು . . . ನಾಲ್ಕಾರು ಸಿಯಾಳಗಳನ್ನು ಧ್ವಂಸಮಾಡಿದ್ದರು (ಕಂಬಹು. ೩). [?]

**ಸೀಯಿಸು** (ಕ್ರಿ). ಸೀದುಹೋಗುವಂತೆ ಮಾಡು; ಕರಿಕುಮಾಡು: ಕಾವಲಿಯ ಮೇಲಿನ ರೊಟ್ಟಿಯನ್ನು ಸೀಯಿಸಿ, ಕೆಲಸಕ್ಕೆ ಬಾರದ ತಿಂಡಿಪೋತ ಎನಿಸಿಕೊಂಡನು (ಆರ್ಯಕೀ. ೩೧). [ಸೀ$_1$ + -ಇಸು$_3$]

**ಸೀಯು** 'ಸೀ$_1$' ನೋ.

**ಸೀರ್, ಸೀರು$_2$** (ನಾ). ೧. ಹೇನಿನ ಮೊಟ್ಟೆ, — ತತ್ತಿ: ರಸಮಂ ಫಣಿವಲ್ಲೀದಳರಸದೊಳ್ ಮರ್ದಿಸಿ ಬಟ್ಟಿಕ್ಕೆ ಕಪ್ಪಡದೊಳ್ ಭಾವಿಸಿ ತಲೆಯೊಳ್ ಕಟ್ಟಿದೊಡುಳ್ಳ ಸೀರುಮುಳ್ಳನಿತು ಪೇನುಮಾಗಳೆ ಕಿಡುಗುಂ (ಲೋಕೋಪ. ೯-೫೭); ತಲೆಯೊಳ್ ತೀವಿದ ಪೇನ ಸೀರ್ಮಲಮನೆಂತುಂ ಬಾರ್ಚಿ ತಾಂ ತಾಳ್ದಿಯಾ ತಲೆಯಂ ನಿರ್ಮಲಮಪ್ಪಿನಂ ಪಣಿಗೆ ಮಾಳ್ಕುಂ (ಜೀವಸಂ. ಪರಿ. 1, ೨೩೮). **ಸೀರು$_2$:** ೧. ಒಬಲೆ ತಗುಣೆ ಪೇನು ಸೀರು . . . ತುಂಬುಟು ಮೊದಲಾದವಜೊಳಂ (ಪಸಾರ. ೪೯); ಧೂಪ ಹಾಕುವಲ್ಲಿ . . . ಮಂಡೆಯ ಅಗುರು, ಹೇನು, ಸೀರು . . . ಹೋಗುವುವು (ಸಕವ್ಯ. ೩೩). 'ಈರ್$_2$' ಪರಾ. (ಗು). ೨. ಸಣ್ಣ; ಚಿಕ್ಕ: 'ಸೀರ್ದುಪ್ಪುಟ್', 'ಸೀರ್ಪುಲ್', 'ಸೀರ್ವನಿ' ಪರಾ. ೩. ತೆಳ್ಳಗಿರುವ; ತೆಳ್ಳನೆಯ: ನಾರುವದನಾದ ಕಣಕವನು ನಿಂಬೆಯ ಹಣ್ಣ ತೋರದುಂಡೆಯ ಮಾಡಿ ಮೊಮ್ಮಿಕ್ಕುವನ್ನವರ ಸೀರಟುವೆಯಂ ಕವಿಸಿ (ಸೂಪಶಾ. ೧-೨೬). ಸೀರನಿತು = ಸ್ವಲ್ಪಪ್ರಮಾಣ; ಅತಿ ಕಡಿಮೆ: ವನಚರ ವನವನಜನಿವಹಮುಳ್ಳನಿತುಂ ಸೀರನಿತುಮಾಣಮುಟಿದುದಿಲ್ಲೆಂಬಿನಮುಂಡಂ ದಹನನಳುರ್ದು ಖಾಂಡವವನಮಂ (ಪಂಪಭಾ. ೫-೯೭); ಎನಗೆಳ್ಳನಿತುಂ ಸಾಸವೆಯನಿತುಂ ಸೀರನಿತು ಮೋಹಮಿಲ್ಲವನಿಯ ಮೇಲೆ (ಧರ್ಮಾಮೃ. ೧೧-೧೦೨). [ದೇ. ‖ ತುಳು. ಚೀರ್, ಸೀರ್; ಕೊಡ. ಚೀರೀ; ಕೋತ. ಕುರುಖ್. ಚೀರ್; ಕೋಲಾ. ಗೊಂಡಿ. ಸೀರ್; ನಾಯ್ಕಿ. ಶೀರ್]

**ಸೀರ$_1$** (ನಾ). ತುಂತುರು; ಹನಿ: "ಸೀರ ತಂದಲಿವು ಶೀಕರಮುಂ" (ಕವಿಕಂ. ೯೦); ಪೊಳೆವ ರತ್ನಚಯದಿಂದೀರದಿಂ ಸೀ[ಪಾಠಾಂ. ಶೀ]ರದಿಂ . . . ಕಡಲ್ ಕಣ್ಗೆಸೆದುದು (ಸಂದಿಮಾ. ೨-೫). [ದೇ. ‖ ಕೋತ. ಚೀಲ್ರ್ = ತುಂತುರುಬೀಳು; ತೊದ. ಸೀರ್; ಕುೞ. ಸೀರ್ವ = ಹನಿಸು]

**ಸೀರ$_2$** 'ಸೀರೆ$_2$' ನೋ.

**ಸೀರ$_3$** (ನಾ). ೧. ನೇಗಿಲು; ಹಲ: "ಹಲಂ, ಲಾಂಗಲಂ, ಸೀರಃ — ಈ ಮೂಱು ನೇಗಿಲ್" (ಶಬ್ದಮ. ೯೪-೪೨೧); ಸೀರಗದಾಯುಧ ರುಧಿರೋದ್ಗಾರಿ ಗದಾಯುಧರು ಪೇಂದ್ರನೆರಡುಂ ಕೆಲದೊಳ್ ಪೀರರ್ ಚಕ್ರಮನಾಮೆ ನಿವಾರಿಪೆಮೆಂದೆಂಬ ಪೂಣ್ಕೆಯಿಂ ಪೂಣ್ದಿರ್ದರ್ (ಮಹಾನೇ. ೧೩-೭೮). ೨. ಸೂರ್ಯ. [ಸಂ.]

**ಸೀರ$_4$** (ನಾ). ೧. ಗೆರೆ; ಪಟ್ಟೆ; ಗೀರು: (೬). ೨. ಗೀರುಗಳುಳ್ಳದು; ಪಟ್ಟೆಗಳಿಂದ ಕೂಡಿರುವುದು: (ಮುಂಬಯಿ. ೬. ೩-೭೪). ೩. ನೀಳ; ಉದ್ದ: (ನರಿಯ) ಮೋರೆ ಸೀರ, ಉದ್ದಕ್ಕೆ ಹಾದಿರುತ್ತದೆ (ಮುಂಬಯಿ. ೩-೭೪); ದೇಶಪಾಂಡೆ ರಂಗ ಎಲ್ಲಕ್ಕೂ ಹಿರಿಯ . . . ಮೈಕಟ್ಟು ತೆಳ್ಳಗೆ; ನಿಲುವು ಮಧ್ಯಮ; ಮೋರೆ ಸೀರವಾಗಿತ್ತು (ಮೇದಿಮ. ೫). ೪. ಬಡಕಲು; ಸಪೂರ: ಮಹಾತ್ಮರ ತಲೆಯನ್ನು ಕೊಡದಷ್ಟು ಗಡುತರವಾಗಿಯೂ ಕಾಲುಗಳನ್ನು ಕಡ್ಡಿಯಷ್ಟು ಸೀರವಾಗಿಯೂ ತೆಗೆಯುವ ವಿಕೃತ ಚಿತ್ರಕಾರನು . . . ಅಸೂಯೆಯಿಂದ ಹಾಗೆ ಮಾಡುವದಿಲ್ಲ (ನಿರಾಭ. ೧೪ ಮುನ್ನುಡಿ); ಅವಳ ಸೀರವಾದ ಕೈಯನ್ನು ಎತ್ತಿ ಮೃದುವಾಗಿ ಒತ್ತಿದೆ (ಮುಕ್ತಿ. ೩೮). [← ಮರಾ. ಶೀರ]

**ಸೀರಣ** (ನಾ). ವೇಗವಾಗಿ ಹೆಜ್ಜೆಯಿಡುವ ಒಂದು ಕ್ರಮ, — ಗತಿ: "ಕಳಾಸ ಚಾಳೆಯ ಮಂಡಿ ಸೀರಣಂ ಹಜ್ಜೆಯಕ್ಕುಂ" (ಮಂಗರಾ. ೮೮-೩೮). [← ತಮಿ. ಚೀರಣಿ]

**ಸೀರಣಿಗೆ** (ನಾ). ಹೇನಿನ ಮೊಟ್ಟೆಯನ್ನು ಬಾಚಿ ತೆಗೆಯಲು ಉಪಯೋಗಿಸುವ ಮರದ ಹಣಿಗೆ; ಈರಣಿಗೆ: ಸೀರಣಿಗೆ ಕಿವಿಯೋಲೆ ತಾಳಿ ಮೂಗುತ್ತಿಯೆನೆ ಆರನಲಿ ಪದಿರ ಪುರುಳರಿವು ದೊಡ್ಡಂಗೆ (ಕಾಲಜ್ಞಾ. ೫೨-೭೮); ರನ್ನದ ಬಾಸಣಿಗೆ ಚಿನ್ನದ ಸೀರಣಿಗೆ (ಗೌರಪ. ೧೦). [ಸೀರ್ + ಹಣಿಗೆ (< ಪಣಿಗೆ)]

**ಸೀರಣಿಗೆಕಸ** (ನಾ). ಒಂದು ಬಗೆಯ ಸಸ್ಯ: (೬). [ಸೀರಣಿಗೆ? + ಕಸ]

**ಸೀರದನಿ** (ನಾ). ಸಣ್ಣಧ್ವನಿ; ಕೀಚಲುಧ್ವನಿ: ಹೆಣ್ಣಿನ ದನಿಯನ್ನು ಅನುಕರಣ ಮಾಡುವ ಭರದಲ್ಲಿ ಸೀರದನಿ ತೆಗೆದು ತಾರಸ್ವರವನ್ನು ಮುಟ್ಟುವ ಅವನ ಹವಣಿಕೆ ನಡೆದಾಗ ಕೇಳುವವರಿಗಾಗುವ ಕಸಿವಿಸಿ ಅಷ್ಟಿಷ್ಟಲ್ಲ! (ಚೀನಬಾ. ೨೯೯). [ಸೀರ$_4$ + ದನಿ$_1$]

**ಸೀರಧರ** (ನಾ). ನೇಗಿಲನ್ನು ಹಿಡಿದಿರುವವನು; ಹಲಧರ; ಬಲರಾಮ: ಶ್ರೀರಮಣಂ ಜಿನಚಂದ್ರನುದಾರಂ ಜಿನಭವನಸಮಿತಿಗತ್ಯುತ್ಸವದಿಂ ಸೀರಧರನೆಱಗೆ ಶೇಷವಚೋರಚನೆಗೆ ಖಚರದೂತನುದ್ಯತನಾದಂ (ಶಾಂತಿಪು. ೩-೧); ಸೀರಧರ ನೀನುಮಿಂತೀ ನಾರಾಯಣನಗಲಲೊಡನೆ ನಿನ್ನಯ ಮನದೊಳ್ ದೂರಿಸಿ ಜಿನದೀಕ್ಷೆಯನಾಂತಾರಳಿವನೆ ನೆಗಳ್ದು ದೇವನಪ್ಪೆ ದಿವದೊಳ್ (ಮಹಾನೇ. ೧೬-೨೦). [ಸಂ.]

**ಸೀರನಿಗೆಸೊಪ್ಪು** (ನಾ). ಒಂದು ಬಗೆಯ ಸಸ್ಯ: ಸೀರನಿಗೆಸೊಪ್ಪು, ಕೆಂಪುನೆಲಅಕ್ಕಿ (ಮೈಡಿಗಿ. ೭೪-೧೨೯೨). [ಸೀರನಿಗೆ$_0$ + ಸೊಪ್ಪು$_2$]

**ಸೀರನಿಗೆಹಂಬು, ಶೀರಣಿಗೆಹಂಬು** (ನಾ). ಒಂದು ಬಗೆಯ ಬಳ್ಳಿ: (ಮೈಡಿಗಿ. ೬೯-೧೪೦೬). **ಶೀರಣಿಗೆಹಂಬು** : ಶೀರಣಿಗೆಹಂಬು, ಶೀರಂಗೆಬಳ್ಳಿ (ಸಸ್ಯನಿ. ೧೧೮). [ಸೀರನಿಗೆ$_0$ + ಹಂಬು$_2$ (< ಪರಪ್ಪು$_2$)]

**ಸೀರಪಾಣಿ** (ನಾ). = ಸೀರಧರ: ಸಾರವಸ್ತುಗಳಿಂ ನೆಱೆದಂಭೋರಾಶಿಯ ಕಾದಿಗೆ ಕಾವನುಂ ಸೀರಪಾಣಿ (ಪಂಪಭಾ. ೪-೩೨); ಭಾಗಿಗಳಾರ್ ಸೀರಪಾಣಿಯೊರೆಗಂ ದೊರೆಗಂ (ಪಂರಾಮಾ. ೬-೧೩೪). [ಸಂ.]

**ಸೀರಸನಿ** (ನಾ). ಒಂದು ಬಗೆಯ ಮರ; ತಿಗಡೆ: "ಕುಟನ್ನಟಮೆನಲ್ ಸೀರಸನಿ [ಪಾಠಾಂ. ನೀರಸನಿ, ಸೀರಸಗಿ]" (ಮಂಗರಾ. ೪೨-೪೦). [?]

**ಸೀರಹಸ್ತ** (ನಾ). = ಸೀರಧರ: ನಿಷಾದಿಯನುರುಳೆಚ್ಚು ಗಜಪ್ರಿಯತೆಯನಹಿತರ್ ಪೊಗಟೆ ಸೀರಹಸ್ತಂ ಮೆಱೆದಂ (ಶಾಂತಿಪು. ೪-೧೯). [ಸಂ.]

**ಸೀರಾಂಗ** (ನಾ). ನೇಗಿಲಿನ ಒಂದು ಭಾಗ; ಗುಳ. [ಸಂ.]

**ಸೀರಾಯುಧ** (ನಾ). ೧. ನೇಗಿಲು; ಹಲ: ಸೀರಾಯುಧದಿಂದಬ್ಧಿಯ ನೀರಂ ಬಲಭದ್ರನೆಯ್ದೆ ತಿರ್ದಿದೊಡೆ (ಮಹಾನೇ. ೧೬-೪೦). ೨. ನೇಗಿಲನ್ನು ಆಯುಧವಾಗಿ ಉಳ್ಳವನು; ಬಲರಾಮ: ಉಗ್ರಶಸ್ತ್ರತತಿಯಿಂ ಸೀರಾಯುಧಂ ಕಾದೆ (ಶಾಂತಿಪು. ೪-೩೬); ಸೀರಾಯುಧನುಂ ಗದಾಯುಧನುಮಾ ಕ್ಷಣದೊಳ್ ಇದು ದೇವದಾನವರ ಕೋಪ ದಿನುಣ್ಮಿದ ಕಿಚ್ಚು . . . ಎನುತ್ತೆ (ಮಹಾನೇ. ೧೬-೪೦). [ಸಂ.]

**ಸೀರಾಸ್ತ್ರ** (ನಾ). = ಸೀರಾಯುಧ ೨: ಶರಂಗಳಂ ಮುಳಿದು ಕಡಿದುಂ ಸೀಳ್ದುಂ ನೇರ್ದುಂ ನಿಜಾಸ್ತ್ರದಿನೇಂ ಮನಂಗೊಳಿಸಿದನೊ ಸೀರಾಸ್ತ್ರಂ ನೋಟ್ಪೆಂದ್ರರುಂದ್ರಸಭಾಳಿಯಂ (ಶಾಂತಿಪು. ೪-೨೪). [ಸಂ.]

**ಸೀರಿ** (ನಾ). = ಸೀರಾಯುಧ ೨ : ಸೀರಿ ಕೃತಕಾರ್ಯವಿಪರ್ಯಯಮಾದುದೆಂದು ಸುಸ್ಥಿರನದನಂತೆ ವಂಚಿಸುವ ಬುದ್ಧಿಯಿಂ (ನೇಮಿಪು. ೬-೧೧೦); ಸೀರಿ ನಾರಾಯಣ ರೆಸಕಮನೇವೇಟ್ಟಪೆಂ (ಅನಂಪು. ೧೩-೧೫). [ಸಂ. ಸೀರಿನ್]

**ಸೀರಿಪ್ರಿಯೆ** (ನಾ). ಒಂದು ಬಗೆಯ ಮದ್ಯ: "ಸೀರಿಪ್ರಿಯೆ ಸೀಧು ಮದಿರ ಸುರೆ (ಯಿರೆ) ಕಳ್ಳುಂ" (ವಸ್ತುಕೋ. ೯೨-೫). [?]

**ಸೀರಿಸು** (ಕ್ರಿ). ಸೀರಣಿಗೆಯಿಂದ ಕೂದಲನ್ನು ಬಾಚಿ ಹೇನಿನ ಮೊಟ್ಟೆಗಳು ಹೋಗುವಂತೆ ಮಾಡು: ಆಕೆ ಮಗಳ ತಲೆಯನ್ನು ಸೀರಿಸಿದರು (ರೂಢಿ). [ಸೀರ್ + -ಇಸು$_3$]

**ಸೀರು$_1$** (ಕ್ರಿ). ೧. ಸೀರಣಿಗೆಯಿಂದ ಕೂದಲನ್ನು ಬಾಚಿ ಹೇನಿನ ಮೊಟ್ಟೆಗಳನ್ನು ತೆಗೆದುಹಾಕು: ಕೂತುಕೋ ಬಾ, ತಲೆ ಸೀರುತ್ತೇನೆ (ರೂಢಿ). ೨. (ಆಲಂ) ಒಟ್ಟು ಮಾಡಿಕೊಳ್ಳು: ಕಂಚು ಕಾಸು ಸೀರಿಕೊಂಡು ಕಂಚೇರ್ಕೈವರು ಕೂಡಿಕೊಂಡು ಅರಸರ

ಮಡದಿ ದುರಪತಿ ಕೂಡ ಸರಸದಿಂದ ಕರಿಯ ಬಂದೆ (ಲೋಕಗೀ. ೧೩೯). ೩. ಸೆಳೆದುಕೊಳ್ಳು: 'ಸೀರುಂಡೆ' ಪರಾ. [< ಸೀರ್]

**ಸೀರು$_2$** 'ಸೀರ್' ನೋ.

**ಸೀರು$_3$** 'ಸೀಱು$_3$' ನೋ.

**ಸೀರು$_4$** (ನಾ). ಭವಿಷ್ಯ (?): ಅವರು ಜ್ಯೋತಿಷಿಗಳನ್ನು, ಕಣಿ ಹೇಳುವವರನ್ನು ಅಂದರೆ ಒಟ್ಟಾರ 'ಸೀರು ಹೇಳುವವರನ್ನು' ಕರೆದುಕೊಂಡು ಬರುತ್ತಾರೆ (ಗಂಗಾವ. ೧೦). [?]

**ಸೀರುಂಡೆ** (ನಾ). ಕೊಳ್ಳೆ ಹೊಡೆದ ವಸ್ತು; ಲೂಟಿ; ಸೂರೆ: ಪ್ರಸಾದವಿನಿಯೋಗ ಹೊಡೆದಾಟದ ತನಕಾ ಸಾಗಿ ಮಾಮೂಲಿನಂತೆ ಸಿಕ್ಕವರಿಗೆ ಸೀರುಂಡೆ ಆಗಿ ಜಗಳದಲ್ಲಿ ಕೊನೆಗೊಂಡಿತು (ವೃದ್ಧವಿ. ೭೯); ನನ್ನ ಸಾಮಾನುಗಳೂ ಸಿಕ್ಕವರ ಸೀರುಂಡೆಯಾದುವು (ಪ್ರವಾ೯. II, ೧೦೬). [ಸೀರು$_1$ + ಉಂಡೆ]

**ಸೀರುಂಬುಳಾಡು** 'ಸೀಱುಂಬುಳಾಡು' ನೋ.

**ಸೀರುಡಿಕೆ** 'ಸೀರೆಉಡುಕೆ' ನೋ.

**ಸೀರುಮಣ್ಣು** 'ಸೀಱುಮಣ್ಣು' ನೋ.

**ಸೀರುಮಣ್ಣುಗೊಡು** 'ಸೀಱುಮಣ್ಣುಗೊಡು' ನೋ.

**ಸೀರೆ$_1$** (ನಾ). ೧. ಬಟ್ಟೆ; ವಸ್ತ್ರ: ಸಾದುಗೆತ್ತು ಬಗೆಯಾದವನಾನೋಡಲಟ್ಟಿದೆ ನಾಡಮಾನುಮಱಿಮಾನಸನಾಗದೆ ಮಾಳದೊಳ್ ಮೋದದಾನುಡುವ ಸೀರೆಗಮೆನ್ನನ ದಿರ್ಪಿ ಬಾರದೆ ಪೋದೆಡೆಯೊಳೆ ತಡೆದಾನವನೆಂದಪಂ (ಕವಿರಾ. ೧-೧೨೮); ಅಯ್ಯಾ ಎನಗುಡಲಿಲ್ಲೇನುಮೊಂದು ದಮ್ಮಕ್ಕಾದೊಡಂ ಸೀರೆಯಂ ಕೊಂಡೀಯಿಂ (ವಡ್ಡಾರಾ. ೭೭-೧೧); ವಿಲಸಿತದುಕೂಲವಸ್ತ್ರಂಗಳನಲ್ಲದೆ ಪೆಱವು ಸೀರೆಗಳನುಟ್ಟಱಿಯಂ (ಸುಕುಮಾ. ೧೦-೧೦೪); ಊರ ಸೀರೆಗೆ ಅಸಗ ತಡಬಡಗೊಂಬಂತೆ . . . ನಿಮ್ಮನಱಿಯದ ಕಾರಣ ಕೆಮ್ಮನೆ ಕೆಟ್ಟೆನಯ್ಯಾ (ಮಹಾದೇ. ಬ. ೧೯-೩೧). ೨. ಹೆಂಗಸರು ಉಡುವ ಬಟ್ಟೆ; ಸಾಲೆ: ಬೆಸಕೆಯ್ಯ ಪೆಂಡಿರ ಮೊಲೆಗಳಂ ಸೀರೆಯಿಂ ಕಟ್ಟಿಸಿ ಕೂಸುಗಳಂ ಮೊಲೆಯುಣಲೀಯದೆ ಬೆಸಕೆಯ್ಸುಗುಂ (ವಡ್ಡಾರಾ. ೧೭೦-೧೨); ತಳಿರ್ಗಳ ಸೀರೆಯುಟ್ಟು ಗುರುಗಂಜಿಯ ಹಾರಮನಾಂತು (ಗಿಂಕ. ೧-೧೨೩); ಹರಹರಾಯೆನುತಾಗ ಸೀರೆಯ ಸೆಱಗ ಹಱಿದಿತ್ತಳು ನೃಪಾಲಗೆ (ನಳಚ. ೫-೬); ವಸ್ತ್ರ ಎಂಬರ್ಥದಲ್ಲಿರುವ 'ಚೀರ' ಎಂಬ ಸಂಸ್ಕೃತಶಬ್ದವು ಸೀರೆ ಎಂದು ತದ್ಭವವಾಗಿ ಹೆಂಗುಸರು ಮಾತ್ರ ಉಡುವ ವಸ್ತ್ರವೆನಿಸಿದೆ (ಸಂಶೋಧ. ೮೯). ೩. ನಾರುಮಡಿ; ವಲ್ಕಲ: ಬಾರದಿರನಾ ಭರತಂ . . . ತಂದೆಯ ಭಾರವನ್ನಬರೀ ಸುಮಂತ್ರನ ಸಾರಲೆಂದಾ ಸೀರೆಯನು ಸೆಳೆದುಟ್ಟು ನೊಲವಿನಲಿ (ತೊರರಾ. ೨-೩-೩೧). [ದೇ. ‖ ತಮಿ. ಚೀರ್ಯೆ, ಚೀಲ್ಯೆ; ಮಲ. ಚೀಲ, ಶೀಲ; ತುಳು. ಸೀರ, ಶೀರೆ; ತೆಲು. ಚೀರ./ ಹಿಂ. ಮರಾ. ಚೀರ./ ಪ್ರಾ. ಚೀರ./ ಸಂ. ಚೀರ]

**ಸೀರೆ$_2$**, ಸೀರ$_2$ (ನಾ). ೧. ಒಂದು ಬಗೆಯ ಮರ: ಸಿರಿಸಂ ಸೀರೆ ಬೆಳಲ್ಲವಂಗ ಮೆಲವಂ (ಕಾವ್ಯಸಾ. ೧೦೪೦ ಶೂದ್ರಕ); ಆ ಸರಸಿಜಭವನೀಕೆಯ ಕೇಶಕ್ಕೊಲಿದೀಯೆ ತಮ್ಮ ಚೆಲ್ವಂ ಮುನಿದೀ ದೇಶದೊಳಿರಲೊಲ್ಲಡೆ ಮಲೆದೇಶದೊಳಿಂತಪ್ಪುವಂಜಿ ಸೀರೆಯ ತರುಗಳ್ (ಧರ್ಮಾಮೃ. ೨-೧೩೯); ಓರಂತೆ ತಾಳ ತೆಂಗಿನ ಸೀರೆಯ ಕಳ್ಗಳ್ ಕಳರ್ಚಿ ನಿತ್ಯಗ್ರಹಮಂ ಪಾರಯ್ಸೆ ಕುಣಿದರರೆಬರ್ ಭೋರೆನೆ ಕೆಯ್ಪುಱಿಯೆ ಬಂಜೆವಱೆಯೆನೆ ವನದೊಳ್ (ಪುಷ್ಪಪು. ೫-೯೮). ೨. ತೆಂಗಿನಮರದಲ್ಲಿ ಮಟ್ಟೆಯನ್ನು ಸುತ್ತಿಕೊಂಡಿರುವ ನಾರಿನಂತಹ ಹೊದಿಕೆ; ಸೀಬು: ತೆಂಗಿನ ಮರದ ಸೀರೆಯನ್ನು ಕೆಲವರು ಉರುವಲಿನಂತೆ ಉಪಯೋಗಿಸುತ್ತಾರೆ (ರೂಢಿ). ೩. ಒಂದು ಬಗೆಯ ಮದ್ಯ: "ಮೈರೇಯಮಾಸವಂ ಮಧು ಮಾಧವಂ ಸೀಧು ಸೀರೆ ಸುರೆ ಕಳ್ಳೆನಿಕ್ಕುಂ" (ಮಂಗರಾ. ೬೫-೮). **ಸೀರ$_2$**: ೧. ಮಾವರವಾವು ಸೀರ ನಾರಂಗ ಲವಂಗ . . . ಮಾತುಳುಂಗಂ ಭೂಜಂಗಳ್ (ಸೌ೯. XV, ೫೭-೫೮; 1184).

[ದೇ. ‖ ಕೋಲಾ. ಸಿರ, ಚೀರೆ; ನಾಯ್ಕಿ. ಶೀರೆ; ಪರ್ಜಿ. ಸೀರ್]

**ಸೀರೆ$_3$** (ನಾ). ನೇಗಿಲು; ಹಲ: ಮಗನನೆತ್ತಿ ಪುಳಕಾಂಕುರಮಂ ಮೈಗಗ್ಗಳಿಸದ ಕಾಂತೆಯ ಕೈಗಮದೇಂ ಭೇದಮುಂಟೆ ಸೀರೆಯ ಕೈಗಂ (ಮಲ್ಲಿಪು. ೩-೧೧೫). [ಸಂ. ಸೀರ]

**ಸೀರೆಉಡುಕೆ**, ಸೀರುಡಿಕೆ (ನಾ). ಸೀರೆಯನ್ನು ಕೊಡುವುದರ ಮೂಲಕ ಮಾಡಿಕೊಳ್ಳುವ ಪುನರ್ವಿವಾಹ; ಉಡುಕೆ: ತಮ್ಮ ಜಾತಿಯಲ್ಲಿ ಮೊದಲಿನ ಗಂಡ ಸತ್ತ ಮೇಲೆ 'ಸೀರೆಉಡುಕೆ' ಎಂದು ಮಾಡಿ ಬೇರೆಯೋರ್ವನಿಗೆ ಕೊಡುವುದಿಲ್ಲವೆ? (ಚಂದಜೀ. ೮೬). **ಸೀರುಡಿಕೆ**: ಒಂಟಿಬಾಳು ಸಾಕಾಗಿದ್ದ ಇಬ್ಬರೂ ಜಂಟಿಬಾಳಿಗೆ ಒಪ್ಪಿ 'ಸೀರುಡಿಕೆ' ಮಾಡಿಕೊಂಡರು (ಮಲೆಮ. ೭೯). [ಸೀರೆ$_1$ + ಉಡುಕೆ$_1$]

**ಸೀರೆಗಳ್ಳ** (ನಾ). ಬಟ್ಟೆಯನ್ನು ಕದಿಯುವವನು: "ಪಾಟಚ್ಚರಃ, ಪಟಚ್ಚಾರಃ — ಈ ೨ ಸೀರೆಗಳ್ಳಂ" (ಹಲಾಯು. ೫೬-೧೮೫). [ಸೀರೆ$_1$ + ಕಳ್ಳ$_1$]

**ಸೀರೆರೋಗ** (ನಾ). ಹೆಚ್ಚು ಋತುಸ್ರಾವವಾಗುವ ಒಂದು ಬಗೆಯ ರೋಗ: (ಕ). [ಸೀರೆ$_1$ + ರೋಗ]

**ಸೀರೆವರದ** (ನಾ). ಬಟ್ಟೆಯ ವ್ಯಾಪಾರಿ; ಜವಳಿವ್ಯಾಪಾರಿ: "ದೂಸಿಗನೆನಲ್ ಸೀರೆವರದಂಗೆ ನಾಮಂ" (ಕಬ್ಬಿಕ್ಕೆ. ೩೪); ಮಿಗೆ ಬೆಲೆಯೇಱಿದ . . . ಬಟ್ಟೆಯ ಮಱಿಗೆಗಳಿಂ ಸೋಲಿಪುವು ಸೀರೆವರದರ ಪಸರಂ (ಕಬ್ಬಿಕಾ. ೩೮). [ಸೀರೆ$_1$ + ಪರದ$_1$]

**ಸೀರ್ಕರಡಿ** (ನಾ). ಜಗಳವಾಡಲು ಸಿದ್ಧವಾಗಿರುವ ಕರಡಿ; ಭಯಂಕರವಾದ ಕರಡಿ: ಪೋದ ಮಾರಿಯನ್ನಳೆ ಮನೆದೊಟ್ಟು ಸೀರ್ಕರಡಿಯನ್ನಳೆ ನಾದುನಿ (ಪಂಪಭಾ. ೪-೯೮); ತರುಣಿಯರೆಂಬ ಪೆರ್ಬುಲಿಗಳಂ ಹರಿಣಾಕ್ಷಿಯರೆಂಬ ಕ್ರೂರ ಸೀರ್ಕರಡಿಗಳಂ . . . ಸ್ಮರಶರದಿಂದೆ ಮೆಯ್ಯಱಿಯದೊಯ್ಯನೆ ಪೊರ್ದಿದರಪ್ಪೊಡೆ (ಧರ್ಮಾಮೃ. ೭-೧೫೪); ಅರ್ಕಾಂಶುಗೆ ಹುಗಲಿಲ್ಲದೆ ಸೀರ್ಕರಡಿಯ ಕಡುಪಿನಂದದಡವಿಯ ತಮಮಂ ಮಾರ್ಕೊಂಡು ಸುೞಿವ ಕಾಡೆಳವೆರ್ಕಿನ ಕಣೆ ನಡೆವ ಸೊಡರ್ಗಳೆನೆ ಜಲಜಲಿಕುಂ (ಅರ್ಧನೇ. ೫-೮೧). [< ಸೀಱು$_1$ + ಕರಡಿ$_1$]

**ಸೀರ್ಣ** (ನಾ). ಕೃಶ; ಬಡಕಲು: ಜೀರ್ಣವಾದ, ಸೀರ್ಣವಾದ ದೇಹವನ್ನು ದೇಹಸ್ಥನಾದ ಆತ್ಮನು ತ್ಯಜಿಸಿ ನವದೇಹಧಾರಿಯಾಗಿ ಹುಟ್ಟುತ್ತಾನೆ (ಭಾರದ. ೧೧೪).

[< ಸಂ. ಶೀರ್ಣ]

**ಸೀರ್ಣೆ** (ನಾ). ಒಂದು ಬಗೆಯ ಸಿಹಿಪದಾರ್ಥ: ಪರಿಪಾಕದಡಿಗೆಯಿಂ ಗೈದ ಲಡ್ಡಿಗೆ ಬತಾಸಂ ಸೀರ್ಣೆ ಸಹಿತ ಸೀಯಾವಳಿಗಳಂ ಕೊಡುತ (ನವಮೋ. ೧೭-೬೧).

[← ತಮಿ. ಚೀರಣಿ]

**ಸೀರ್ದುಪ್ಪುೞ್** (ನಾ). ಸಣ್ಣ ಕೂದಲು: ಬರಿಯ ಸೀರ್ದುಪ್ಪುೞ ಬಂಬಲ್ಗಳನುಗುರಿಂ ಪಿಕ್ಕಿ ಬಿಸಿಲ್ಗಾದುದದೊಂದು ಮರದ ಕೋಡೊಳ್ ಕೋಡಂ (ಜಗವಿ. ೧೪-೧೧).

[ಸೀರ್ + ತುಪ್ಪುೞ್]

**ಸೀರ್ನಾಯ್** (ನಾ). ಒಂದು ಬಗೆಯ ಭಯಂಕರವಾದ ನಾಯಿ: ಪಾಪಂಗಳಂ ಗೆಯ್ದವರಾನೆಯುಂ ಸಿಂಹಮುಂ . . . ತೋಳನುಂ ಸೀ[ಪಾಠಾಂ. ನೀ]ರ್ನಾಯುಂ . . . ಆಗಿ ತಿರಿಕಗತಿಯೊಳ್ ಪುಟ್ಟಿ (ವಡ್ಡಾರಾ. ೯೭-೪); ದುರ್ಜನನಂತೆ ಕವಿವ ಸೀರ್ನಾಯ್ಗಳಿಂ . . . ಅದ್ಭುತಮಪ್ಪ ಭೀಮವನಮೆಂಬ ಪೇರಡವಿಯೊಳಗೆ ಪೊಕ್ಕು (ಧರ್ಮಾಮೃ. ೧೩-೧೦೦); ಒಂದರಣ್ಯದೊಳ್ ಸೀ[ಪಾಠಾಂ.ನೀ]ರ್ನಾಯಾಗಿ ಪುಟ್ಟಿ ಕಾಟ್ಗಿಚ್ಚಿಂ ಬೆಂದು (ಪುಣ್ಯಾಸ್ರ. ೮-೩೦ ವ). [ಸೀಱ್$_?$ + ನಾಯ್]

**ಸೀರ್ಪಡಿಸು** (ಕ್ರಿ). ಕಿರಿಚುತ್ತಾ ಒದ್ದಾಡು, — ಚಡಪಡಿಸು: ಇಡೆ ಕಾಲಂ ಬಲಿ ಸಿಲ್ಕಿ ಪಲ್ಕಿರಿದು ಕಣ್ಬೋತಂದು ಸುಯ್ಗುಟ್ಟು ಸೀರ್ಪಡಿಸುತ್ತಿರ್ದ ಧರಾಮರರ್ ನಡುಗೆ (ನೇಮಿಪು. ೫-೨೪). [< ಸೀಱು$_1$ + ಪಡಿಸು]

**ಸೀರ್ಪನಿ** 'ಸೀರ್ವನಿ' ನೋ.

**ಸೀರ್ಪನಿವಡಪ**, ಸೀರ್ಪನಿವಡಹ (ನಾ). ತುಂತುರುಮಳೆ; ಸೋನೆಮಳೆ: ಜನವನಿತುಂ . . . ಮರವಟ್ಟಿರಲ್ಕೆ ಸೀರ್ಪನಿವಡಪಂ ಪೊದಟ್ಟು ಮಸಗಿತ್ತು ತುಷಾರದ ತುಂತುಱುಂಬಿನಂ (ಕುಸುಮಾ. ೬-೩೭). **ಸೀರ್ಪನಿವಡಹ**: ಸೀರ್ಪನಿವಡಹಂ ಪೊದಟ್ಟು ಮಸಗಿತ್ತು ತುಷಾರದ ತುಂತುಱುಂಬಿನಂ (ಶಾಂತೀಶ್ವ. ೧೨-೫೯).

[ಸೀರ್ಪನಿ (< ಸೀರ್ವನಿ) + ಬಡಪ]

**ಸೀರ್ಪನಿವಡಹ** 'ಸೀರ್ಪನಿವಡಪ' ನೋ.

**ಸೀರ್ಪುರ್ಲ್** (ನಾ). ಸಣ್ಣ ಹುಲ್ಲುಕಡ್ಡಿ: ಮೂಲೋಕಮಂ ಯೌವನಚತುರತರಾಪಾಂಗದಿಂದೊಂದು ಸೀರ್ಪುರ್ಲ್ಗೆಸೆವನ್ನಂ ಮಾಡುತಂಗಪ್ರಭೆಯೊಳಖಿಲಕಾಂತಾರಮಂ ಕೂಡೆ ತೇಂಕಾಡಿಸುತಂ (ಕಾದಂಬ. ೫೪೭); ದಶದಶಗ್ರೀವರಾತಂಗೊಂದು ಸೀರ್ಪುರ್ಲ್ಗೆ ಸಾಟಿ, ಶತಕೋಟಿಬಲಶಾಲಿ ವಾಲಿಗೆ ಕಣಾ! (ಶ್ರೀರಾಮಾ. ೨೯೬-೩೦೬). [ಸೀರ್ + ಪುಲ್]

**ಸೀರ್ಪೆ** (ನಾ). ಕಿರಿಚಾಟ; ಚೀರಾಟ: ಉಲಿವ ಕಲಿಭಟರುಗಳ ಬೊಬ್ಬೆಯಿಂ ಸೀರ್ಪೆಯಿಂ . . . ಬ್ರಹ್ಮಾಂಡಗಳು ಬಿರಿದುವಾಗ (ತುರಂಗ. ೫೦-೪೭).

[< ಸೀಱು$_1$ + -ಪೆ]

**ಸೀರ್ಮಿಡಿ** (ನಾ). ಚಿಕ್ಕ ಕಾಯಿ; ಸಣ್ಣ ಮಿಡಿ: ಸೀರ್ಮಿಡಿಗಳೆರದಾ ಬಳಲ್ಮಿಡಿಗಳಲ್ಲಿ . . . ತನಿವಣ್ಣೊಳಿಮ್ಮಾವೆಸೆದುದು (ವಿಕ್ರಪು. ೨-೩-೧೫). [ಸೀರ್ + ಮಿಡಿ$_2$]

**ಸೀರ್ಮೀನ್** (ನಾ). ಚಿಕ್ಕ ಮೀನು; ಸಣ್ಣಮೀನು: ಪಲವಕ್ಕಿಗಳ ಮೊತ್ತಮಂ ತುತ್ತಲೆಂದು ಸಿಡಿದ ಸೀರ್ಮೀನ್ಗಳಿಂ (ಚಿಕಮ. ೪-೧); ಅಂಚೆವಿಂಡುಗಳ ಬಾಯ್ಗಳಿನೊಕ್ಕಮೃತ ಧಾರಾಸಾರಶೀಕರಂಗಳಂ ಸೀರ್ಮೀನ್ಗೆತ್ತು (ಚಂದ್ರಪ್ರ. ೧-೯೦ ವ). [ಸೀರ್ + ಮೀನ್$_2$]

**ಸೀರ್ಮುತ್ತು** (ನಾ). ಚಿಕ್ಕಮುತ್ತು; ಸಣ್ಣಮುತ್ತು: ಬೆಳಗಪ್ಪ ಜಾವದಯ್ಮಲ್ ಕೊಳೆ ಶೀತಕ್ಕಾಱದಳ್ಕಿ ತೊಟ್ಟರ್ದ ಧರಾತಳಮೆಂಬ ಪೆಣ್ಣ ಪೊಸಕಂಚುಳಿಕೆಯ ಸೀರ್ಮುತ್ತಿನಂದಮಾದವು ಪನಿಗಳ್ (ಕಾವ್ಯಸಾ. ೬೯೪ ಶೂದ್ರಕ); ಸಿಡಿವ ಸೀ[ಪಾಠಾಂ. ನೀ]ರ್ಮುತ್ತುಗಳೊ ತಡೆಯದೆ ವಿಚಾರಿಸೆನೆ ತಾರಾಳಿಯೆಸೆದುವು (ಪಚಿಕಾ. ೩-೪೯).

[ಸೀರ್ + ಮುತ್ತು$_2$]

**ಸೀರ್ಪನಿ, ಸೀರ್ಪನಿ** (ನಾ). ಸಣ್ಣ ಹನಿ; ತುಂತುರು: ತುಱುಂಗಿ ತೂಱಿ ಸಿಡಿವ ಸೀರ್ವ[ಪಾಠಾಂ. ರ್ಪ]ನಿ ಕಡುಬೆಡಂಗುವಡೆಯೆ (ರಾಜಶೇ. ೨-೮ ವ). **ಸೀರ್ಪನಿ:** ಕೊಳದ ತಡಿಯಲ್ಲಿ ಸೀರ್ಪನಿಗಳ ತುಱುಗಲನುಗುಟ್ಟಿ ಚಂದ್ರಕಾಂತದ ಶಿಲೆಯೊಳ್ . . . ಎಸಟ ಪಸೆಯ ಮೇಲೊಱಗಿರ್ದಂ (ಕಾದಂಪೂ. ೯೦೫); ಪರಿವ ತೊಱೆಗಾಲ್ಗಳ ಸೀರ್ಪನಿಗಳನೀಂಟಿಯುಂ (ಕಬ್ಬಿಕಾ. ೫೪); ಬಡಬಶಿಖಿ ನೆಯ್ಯ ಸೀರ್ಪನಿಗಡಣದಿ ತಣಿದಪುದೆ (ವೃಷಭ. ೫-೭೭). [ಸೀರ್ + ಪನಿ$_2$]

**ಸೀಲ, ಸೀಳ** (ನಾ). ನಡತೆ; ನಡವಳಿಕೆ: ಮಣಿಸುತ ಲೋಕವ ತೇಜೆತ್ಯಯೆನೆ ಕುಣಿಸಿ ಸೀಲವ ಪಱಿವಡಿಸಿ ಮುನಿಜನವನು ಮೂರ್ಛೆಗೊಳಿಸಿ ಮಾಯವ ಮಾಟ್ಟ ವನಿತೆಯ ಗೇಳಸದರ್ಗಣೆಯೇ (ಕಪಿಚ. III, ೧೩೮ ಬೆಳ್ಗೊಳದ ಗೊಮ್ಮಟೇಶ್ವರಚರಿತ). **ಸೀಳ:** ಚದುರ ಪಾಱಿಯ ಸೀಳದ ಪೆಂಪಿಂದಾ ಸತಿಗಾರ್ ದೊರೆ ಧಾತ್ರಿಯೊಳ್ (ಕಾವ್ಯಾವ. ೧೭೪).

[< ಸಂ. ಶೀಲ]

**ಸೀಲಗುಣ** (ನಾ). ಒಳ್ಳೆಯ ನಡತೆ; ಸದಾಚಾರ: ಆ ಯತಿಯ ತನೂಭವನಂದಾ ಯತಿಯಿಂ ಸೀಲಗುಣವ ಪಾಲಿಸುತಿರ್ದಂ (ಕಇ. I, ೪೧-೨೦; 1417?). [< ಸಂ. ಶೀಲಗುಣ]

**ಸೀಲವಂತೆ** (ನಾ). ಒಳ್ಳೆಯ ನಡತೆಯುಳ್ಳವಳು; ಶೀಲವಂತೆ: ಬೈರಪನಾಯಕರು ಪುಣ್ಯಸ್ತ್ರೀ ಚೆನಾಜಿಅಂಮ ಸೀಲವಂತ್ತೆ ಬೋಣಿನಾಯಕರಿಗೆ ಕೊಟ್ಟ ಸೀಲವಂತ್ತಪುರ (ಎಕ. XVI, ಚಿಕ್ಕನಾ. ೪೭-೭; ಸು. 18ನೆಯ ಶತ). [ಸೀಲ + - ವಂತ + - ಎ$_2$]

**ಸೀಲಾಗಿಡ** (ನಾ). ಒಂದು ಬಗೆಯ ಸಸ್ಯ: ಬಟ್ಟೆಹರಕುಗಿಡ, ಸೀಲಾಗಿಡ (ಮೈಜಿಗಿ. ೭೪-೧೫೦೯). [ಸೀಲ್ಡಾ + ಗಿಡ (< ಗಿಡು)]

**ಸೀಲು** (ನಾ). ಮುದ್ರೆ; ಮೊಹರು: ಸೀಲಾಗಿದ್ದ ಡಬ್ಬಗಳನ್ನು ಕೆಲವರು ಕಲ್ಲಿನಿಂದಲೇ ಕುಟ್ಟಿ ತೆಗೆದುಬಿಟ್ಟರು (ಗೋಪುರ. ೪೩).

**ಸೀಲು ಮಾಡು** = ಮೊಹರು ಮಾಡು: ಸೀಲುಮಾಡಿದ ಹಾಗೆ ಕಣ್ಣು ಮುಚ್ಚಿರುವಳು (ಚಂದ್ರವೀ. ೧೧-೪೪). [<— ಇಂ. Seal]

**ಸೀಲೆ** 'ಸೇಲೆ' ನೋ.

**ಸೀವ** (ನಾ). ಒಂದು ಪಂಗಡದ ಹೆಸರು (?): ಗೋವರ್ಧನಂ ಗೋವರ್ಧನಗಿರಿಯನೆತ್ತುವಂತೆತ್ತಿ ಗೋಕುಲಮಂ ಕಾದುದಂ ಕಂಡು ಗೋವರುಂ ಸೀವರುಂ ಜಕ್ಕರುಂ ಮಕ್ಕಳುಂ ಮಱಿಗಳುಂ ಬೆಕ್ಕಸಂಬಟ್ಟು (ಅರ್ಧನೇ. ೮-೧೭ ವ). [?]

**ಸೀವಟ$_1$** (ನಾ). ಹಣ್ಣುಗಳನ್ನು ಸೇರಿಸಿ ಮಾಡುವ ಮಿಶ್ರಣ: ಅರಸ ಬಂದನು . . . ಮಡದಿ ಸಕಲನಿಯೋಗಿಜನ ಸಹಿತ ಸರಸಿ ನೆಱೆಯವು ಸ್ನಾನಪಾನಕೆ ತರು ಲತಾವಳಿಗಳು ಯುಧಿಷ್ಠಿರನರಮನೆಯ ಸೀವಟಕೆ ಸಾಲವು (ಕುಮಾವ್ಯಾಅ. ೯-೨೦).

[<— ಮರಾ . ಚಿವಡಾ]

**ಸೀವಟ$_2$, ಷೀವಟ, ಸಿವಟ, ಸೀವಟ್ಟ** (ನಾ). ೧. ಒಬ್ಬನ ಅಧಿಕಾರಕ್ಕೆ ಒಳಪಟ್ಟುದು,— ಸ್ವಾಮ್ಯದಲ್ಲಿರುವಂಥದು: ಶಾನ್ತಿವರ್ಮರಸಂ ಸುಗನ್ಧವರ್ತ್ತಿಯಲ್ ತನ್ನ ಮಾಡಿಸಿದ ಬಸದಿಗಾವೂರ ತನ್ನ ಸೀವಟದ ಪೊಲದೊಳಗೆ ಸರ್ವ್ವಬಾಧಾಪರಿಹಾರಮಾಗಿ ಬಿಟ್ಟ ಮತ್ತನ್ನೂಱಯ್ವತ್ತು (ಸೌಇಇ. XX, ೧೮-೩೭; 980); ತಮ್ಮ ಸೀವಟದ ಪೊಲದೊಳಂಕೇಶ್ವರದ ಗಡಿಂಬದಲಿ (ಕಇ. V, ೫೨-೪೦; 1087); ತನ್ನರಸುತನಕ್ಕೆ ಸೀವಟಮೆನಲ್ ಸಲೆ ಸಲ್ವಱುವತ್ತಮತ್ತರುವ್ವರೆಯನುದಾರಿ ರಾಯರಸಂ . . . ಬಿಟ್ಟಂ (ಸೌಇಇ. XV, ೨೦೪-೫೫; 1199). ೨. ಒಬ್ಬನ ಅಧಿಕಾರಕ್ಕೆ ಒಳಪಟ್ಟ ಭೂಮಿ,— ಸ್ವಾಮ್ಯಕ್ಕೆ ಒಳಪಟ್ಟಿರುವ ಕ್ಷೇತ್ರ: ಸಂಕ್ರಮಣದಂದು ತಮ್ಮ ಸೀವಟಂ ಇಟ್ಟಗೆಯಲು (ಬೊಂಕಶಾ. ೧೯೫೪, ರಾಣೆಬೆನ್ನೂರ್. ೨೯-೯; 991); ಕಂಚರಸಂ ತನ್ನ ಸೀವಟದೊಳಗೆ ಧರ್ಮ್ಮಾನುರಾಗಚಿತ್ತಂ ಸಹಿರಣ್ಯಪೂರ್ವ್ವಕಂ ಕುಡೆ (ಎಇ. XVI, ೫೫-೨೨; 1053). ೩. ಕ್ಷೇತ್ರ; ಭೂಮಿ: ಗ್ರಾಮೇ ಮುಳುಗುನ್ದಾಖ್ಯೇ ಸೀವಟೇ ಷಡ್ನಿವರ್ತ್ತನಂ (ಸೌಇಇ. XX, ೧೩-೧; 875); ಕಾರೆಯಬಾಗುನಾಮಧೇಯಸ್ಯ ಸೀವಟೇ ದ್ವಾದಶನಿವರ್ತ್ತನಂ ಸರ್ವ್ವನಮಶ್ಯಂ ದತ್ತಂ (ಸೌಇಇ. XX, ೬೧-೨೧; 1098?); ಯಿದಕ್ಕೆ ಸೀಮೆ ತೆಂಕಲು ಸಂಕರಬಸದಿಯ ಪೊಲಂ ಮೇರೆ ಮೂಱುಂದೆ[ರೆ]ಯೊಳಂ ಸೀವಟಂ ಸೀಮೆ (ಸೌಇಇ. XX, ೯೯-೪; 1128). ೪. (ಆಲಂ) ಸೀಮೆ; ಮೇರೆ: ಕೌರವರಾಯನು . . . ಭಂಗದ ಭಾರಣೆಯ ಬಿಸುಸುಯ್ಲ ಸೂಟೆಯ ಸ್ಮರಣೆಯ ಸೀವಟದ ಸಿರಿಮಂಚದಲಿ ಪವಡಿಸಿದ (ಕುಮಾವ್ಯಾಸ. ೧೨-೨). **ಷೀವಟ:** ೧. ಶ್ರೀಮನ್ಮಹಾಮಂಡಳೇಶ್ವರಂ ಬನ್ನರಸರುಂ ಗ xxx ತಮ್ಮ ಷೀವಟ ತಾವಸವಳ್ಳಿಯ ಹೊಲದೊಳಗೆ . . . ಹಂನಿಮತ್ತರು ಕೆಯ್ಯಂ ಸರ್ವ್ವಬಾಧಾಪರಿಹಾರಂ ಸರ್ವ್ವನಮಸ್ಯವಾಗಿ ಬಿಟ್ಟರು (ಕಇ. II, ೨೪-೩೯; 1167). **ಸಿವಟ:** ೨. ಜಲನಿಧಿಪರಿವೇಷ್ಟಿತಭೂವಳಯದೊಳೊಪ್ಪುತ್ತಮಿಪ್ಪ ಕು(ಂ)ನ್ತಳಧಾತ್ರೀಲಲನೆಗೆ ಕೈಯಿಗಂನಡಿಯೆನೆ ಪುಲಿಗೆಱೆನಾಡೊಳೆಸರುಮಾ ಸಿವಟ[ವ್] (ಸೌಇಇ. XI- ii, ೧೭೮-೧೨; 1127). **ಸೀವಟ್ಟ:** ೨. ಅಲ್ಲಿಂ ಪಡುವಲು ಸೀವಟ್ಟದ ಸನ್ದಿನೊಳು ನ್ಯೆರಿತಿಯ ಗುಡ್ಡೆ ಅಲ್ಲಿಂ ಬಡಗಲು ಸೀವಟ್ಟದ ತದ್ದರಪೊಲದ ಸಂದಿನಲು ವಾಯವ್ಯದ ಗುಡ್ಡೆ (ಸೌಇಇ. XX , ೧೮-೩೯; 980). [?]

**ಸೀವಟಗೇರಿ** (ನಾ). ಒಬ್ಬನ ಸ್ವಾಮ್ಯಕ್ಕೆ ಸೇರಿದ ಕೇರಿ: ದೇವರ ಭೋಗದ ಸೂಳೆಯರ್ಗ್ಗೆ ದೇಗುಲದಿಂ ಮಾ x ಲು ಬಿಟ್ಟ . . . ಪಡಂಗಿಲೆಯ ಪಡುವಲೂರಿಂ ಪೊಱಗಣ ಸೀವಟಗೇರಿಯ ಸೀಮೆ (ಕಇ. V, ೫೨-೪೭; 1087). [ಸೀವಟ + ಕೇರಿ]

**ಸೀವಟ್ಟ** 'ಸೀವಟ' ನೋ.

**ಸೀವಟ್ಟಣ** (ನಾ). ಮಲ್ಲಯುದ್ಧದ ಒಂದು ವರಸೆ: ಅನಾಳ್ದುದೆ ಕತ್ತರಂ ಕರವಡಂ ಸೀವಟ್ಟಣಂ ಢೊಕ್ಕರಂ ಪಸರಂ ಸಂದಣಬವಟ್ಟಿ ಪೊಟ್ಟು ಮುಹಡಂ ಚೌವಟ್ಟಿ ಪಿಟ್ಟಾಳಸಂ ಎಂದು ಮಲ್ಲವಾತುಮಂ ನುಡಿದು (ಬಾಧಪು. ೧೭-೧೯). [?]

**ಸೀವನ** (ನಾ). ೧. ಬಟ್ಟೆ ಹೊಲಿಯುವುದು: "ಸ್ಯೂತಿ ಸೀವನಂ" (ವಸ್ತುಕೋ. ೧೧೪-೨೨). ೨. ಹೊಲಿಗೆ. [ಸಂ.]

**ಸೀವನಿ** (ನಾ). ಸೂಜಿ. [ಸಂ. ಸೀವನೀ]

**ಸೀವನೆ** 'ಸೀವನ್ನಿ' ನೋ.

**ಸೀವನ್ನಿ, ಶಿವನಿ$_1$, ಶಿವನ್ನಿ, ಸಿವನ್ನಿ, ಸೀವನೆ** (ನಾ). ೧. ಒಂದು ಬಗೆಯ ಮರ; ತೇಗ: ಕುಟಜಂ ಕಬ್ಬನ್ನಿ ಸೀವನ್ನಿ ತುಂಬುರುಹಂ (ಕಾವ್ಯಸಾ. ೧೧೪೦ ಶೂದ್ರಕ). ೨. ಒಂದು ಬಗೆಯ ಔಷಧೀಸಸ್ಯ: ತದಾಸ್ಯಮನೆ ಬಿಲ್ವಂ ತಗ್ಗಿ ಸೀವನ್ನಿ ಪಾದರಿಯಾವುಂಡಗೆಯೇಱಿವಂ ತೆಗಪಿ ಸೇಕಂಗೆಯ್ಯೆ ಮಾಣ್ಗುಂ ಕಫಂ (ಲೋಕೋಪ. ೯-೨೨೫); ಗಿರಿಕನ್ನೆಯ ಸೀವನ್ನಿಯ ಯೆರಡುಂ ಗುಳ್ಳಂಗಳೆಸೆವಪಾಮಾರ್ಗದ ಬೇರ್ವೆರಸಿದ ನೀಲಿಯಿಯುಮೊಂದಾಗಿರೆ . . . ಪರಿಮರ್ದಿಸಿ (ಖಮಧ. ೧೩-೧೩೯); ಸೀವನ್ನಿಯ ಬೇರು, ಬೇವಿನ ಬೀಜ . . . ಆಲದ ಹಣ್ಣು ಇವಿಷ್ಟನು ನೀರಿಂದ ಅರೆದು ಪಾನಲೇಪನಂಗಳಮಾಡಿಸಲು ಮನುಷ್ಯರ ಹಲ್ಲ ವಿಷ ಶಮನವಹುದು (ವೈದ್ಯಸಾ. II, ೨೨೩). **ಶಿವನಿ$_1$:** ೧. "ಶ್ರೀಪರ್ಣಿಕಾ . . . ಕಟ್ಫಲಃ— ೫ ಕಿರಿಯ ಶಿವನೀಮರದ ಹೆಸರುಗಳು. ಇದನ್ನು ತ್ಯಾಗದ ಮರವೆಂದು ಕೆಲವರನ್ನುವರು" (ಸಿದ್ಧಾಂತಿ. ೧೨೧). ೨. ಬೆಲ್ಲವತ್ತದ ಬೇರು, ನರುವಲಬೇರು, ಶಿವನೀ ಬೇರು . . . ಮರದರಿಸಿನ, ಈ ಇಪ್ಪತ್ತೆಂಟು ಔಷಧಿಗಳ ಪ್ರತ್ಯೇಕ ಐದುವರಹತೂಕವಂ ನಾಗುಳನೀರಲ್ಲಿ ಕಷಾಯವೆತ್ತಿ (ವೈದ್ಯಸಾ. II, ೫೯). **ಶಿವನ್ನಿ:** ೧. ಗುಲಡುಮರ, ಶಿವನ್ನಿ (ಮೈಜಿಗಿ. ೪೦-೭೮೩). **ಸಿವನ್ನಿ:** ೧. ಸಿವನ್ನಿಯ . . . ಬಸುರಿಯ ದುರಿಕ್ಷಕಕ್ಕಾಂತರಾಳದಿಂ ಪುದಿದಿಕ್ಕುಂ (ವರ್ಧಮಾ. ೫-೫೦). ೨. ರೊಡ್ಡಿ . . . ಸಿವನ್ನಿಯ ಬೇರು, ಹೆಗ್ಗೊಡನಾರಿಗಿಡ್ಡೆ,

ಕಕ್ಕೇಬೇರಿನ ಚೆಕ್ಕೆ, ನಾಗಕೇಸರ ಇಷ್ಟು ದ್ರವ್ಯಗಳ ಪ್ರತ್ಯೇಕ ಮೂಱುವರಹತೂಕವ ತೆಗೆದುಕೊಂಡು (ವೈದ್ಯಸಾ. I, ೪೧೫). **ಸೀವನೆ:** ೧. "ಗಂಭಾರೀ, ಸರ್ವತೋಭದ್ರಾ . . . ಕಾಶ್ಮರ್ಯ: — ೭ ಸೀವನೆಯ ಮರದ ಹೆಸರು"(ಸಿದ್ಧಾಂತಿ. ೧೨೦).

[< ಸಂ. ಶ್ರೀಪರ್ಣಿ, ಶ್ರೀಪರ್ಣೀ]

**ಸೀವರ$_1$** (ನಾ). ೧. ಜುಗುಪ್ಸೆ; ಅಸಹ್ಯ: 'ಸೀವರಿಸು' ಪರಾ. ೨. ಹೆದರಿಕೆ; ಭಯ: 'ಸೀವರಿಕೆ' ಪರಾ.

**ಸೀವರ$_2$** (ನಾ). ೧. ಹನಿಮಳೆ; ತುಂತುರುಮಳೆ : ಈಶ್ವರಜಟಾಜೂಟಾಟವೀಸಿಂಧು ಸೀವರಮಂ ಸೇವಿಸಲಿರ್ದಂ (ಎಕ. VIII , ಸಾಗರ. ೧೦೭-೩೫; 1042). ೨. (ನೀರಿನ) ತೊಟ್ಟು; ಹನಿ: "ಸೀವರಮೆಂದುಂ ತಂದಲೆಂದುಂ ಶೀಕರಂ" (ಕಶಸಾ. ೫೩-೧೪೫); ನೇಱಿಲ ಪಣ್ಣ ಕೊಂಬುಡಿದು ಬಿರ್ದಪೊಲೊಟ್ಟದ ಸೀವರ [ಪಾಠಾಂ. ಶೀವರ, ಸೀದಱ]ಕ್ಕೆ ಪಾಯ್ದಾಱಿಡಿವಿಂಡಿನಿಂ ಮುಱಿದು ಸೂಸಿದ ಮಾವಿನ ಕೊಂಬು ಮೇಲ್ಮದಂಗಾಱ (ಅರ್ಧನೇ. ೫-೯೨). [< ಪ್ರಾ. ಸೀಅರ./ ಸಂ. ಶೀಕರ]

**ಸೀವರಿ** (ನಾ). ಹನಿ; ತುಂತುರು: ಕನಸು ಝುಲ್ಲನೆ ಝುಳಕೆ, ಸೋರ್ವ ಸೀವರಿಯಾ ಕುಡಿದು ಕಿಲಕಿಲ ಕೆಲೆವೆ ಕಂಠದಿಂ ಕವಿಯಾ (ಗಿರಿಜಾ. ೪೮-೧೨).

[< ಪ್ರಾ. ಸೀಅರಿ./ ಸಂ. ಶೀಕರಿನ್]

**ಸೀವರಿಕೆ** (ನಾ). ಅಂಜಿಕೆ; ಭಯ: ಪ್ರಹಸ್ತನ ಸಾಯಕದ ಬಲುಗಲಹ ಸೀವರಿಕೆಯನು ರಘುಕುಲದ ರಾಯರಲಿ ಹುಟ್ಟಿಸಿತು (ತೊರರಾ. ೬-೧೯-೪೭).

[ಸೀವರ$_1$ + - ಇಕೆ]

**ಸೀವರಿಸು** (ಕ್ರಿ). ೧. ಆರ್ಭಟಿಸು; ಅಬ್ಬರಿಸು: ಹರದಂ ಲೆಕ್ಕಿಸುವಂ ಧರಾಧಿಪತಿ ತೇಜಂದೋಱುವಂ ಸಂದ ನಾಣ್ ಬಿರುದರ್ ಕಿತ್ತಲಗೆತ್ತಿ ಸೀವರಿಸುವರ್ (ಸೂಕ್ತಿಸು. ೮-೩೭೯); ಅಱೆದನಿವ ಚಾಪವನು ಬೋಳೈಸಿದನು ಬಲಹೋ ಶಿವಯೆನುತ ಸೀವರಿಸಿದನು ಡಾವರಿಸಿದನು ಧನುವ (ಕುವ್ಯಾಆ. ೧೪-೧೪). ೨. ಜುಗುಪ್ಸೆಪಡು; ಹೇಸು: ಸಿರಿಖಂಡಕೆ ಸೀವರಿಪಳು ತಂಗಾಳಿಗುರಿವಳು ಕಮ್ಮಲರ್ಗಳು ಸೋಂಕೆ ಹುರುಳುಗೆಡುವಳು (ಸೊಬಗಿನ. ೨೭-೧೫); ಹಱಿವುತಿದೆಯರಿಸಿನದ ಸಿರಿ ಸೀವರಿಸುತಿದೆ ಸೀವಂತದೊಳು ಹಂತರಿಸುತಿದೆ ಕಾಡಿಗೆಯ ಗಾಡಿಗತನದ ಸೌಭಾಗ್ಯ (ತೊರರಾ. ೬-೧೨-೩೪). ೩. ಉಪೇಕ್ಷೆ ಮಾಡು; ಅಸಡ್ಡೆ ಮಾಡು: ಕುಬೇರಜನ ಸೀವರಿಪ ಧನಭೋಗದಿಂಪು ಕಲೆ ಸೊಬಗು ಚೆಲ್ವಾವರಿಸಿದತಿಪದಸ್ಥೆಯರಾದ ವಾರಾಂಗನೆಯರಿರ್ದರಾಯೆಡೆಯೊಳು (ನಂದಿಮಾ. ೨೩-೩೨). ೪. ಹಿಂಜರಿ; ಹಿಮ್ಮೆಟ್ಟು: ಹೊಸಮುಖಕೆ ಸೀವರಿಸಿದವ್ವುದೆಸೆದೆಸೆಗೆ ಹಿಂಡುಗಳೊಡೆದು ಹಾಯ್ದವು ಮಸಗಿತಂಬಾರವದ ಕಳಕಳವಾಯ್ತು ನಿಮಿಷದಲಿ (ಕುವ್ಯಾವಿ. ೪-೩೭); ಹರಹರಾ ಪೆರ್ಬೊಳೆಯ ಲಕ್ಷೀಕರಿಸಿದನೆ ಭಾವಿಸಿದನೇ ಸೀವರಿಸಿದನೆ ಮನದೊಳಗೆ ಶಂಕರದಾಸಿಮಯ್ಯಗಳು (ಶಂಕದಾ. ೫-೧೭). ೫. ಪ್ರಜ್ವಲಿಸು; ಧಗಧಗಿಸು: ಸೀವರಿಸಿ ಶಿಖಿ ಮೊಗೆದುದು ಮರುತ್ಪಥವ (ತೊರರಾ. ೧-೧೭-೧೧); ಸಿಡಿಲೆಱಗಿ ಸೀವರಿಸಿ ಮಿಂಚಿನ ಕುಡಿವರಿಯೆ ಕಣ್ಣುಚ್ಚಿ ಬಲುಮಳೆ ಹೊಡೆಯಲು (ಶಂಕದಾ. ೫-೧೩). [ಸೀವರ$_1$ + - ಇಸು$_3$]

**ಸೀವಳಿ** (ನಾ). ಉಜ್ಜಿ ಮೆರಗು ಕೊಡಲು ಉಪಯೋಗಿಸುವ ಕಡ್ಡಿ: ಸೀವಳಿ ಗಂಧ ಹುಡಿ ಹಸುಂಬೆಯರಷ್ಟಶೆಟ್ಟಿಯರು ವ್ಯವಹರಿಪರು (ನವಮೋ. ೨-೪೭).

[ದೇ. ॥ ತಮಿ. ಚೀವುಳಿ]

**ಸೀವಳಿಗೆ, ಸಿವಳಿಗೆ** (ನಾ). ಒಂದು ಬಗೆಯ ಮೈಲಿಬೇನೆ; ಸಿಡುಬು: ಸಲಿಲಯುತಂ ಮಧುವಂ ಕುಡಿಯಲೊಡಂ ಸೀವಳಿಗೆಯಪ್ಪುಮವು ಮಾಣ್ಗುಂ (ಲೋಕೋಪ. ೯-೨೭); ಸೀವಳಿಗೆಯಾಗೆ ಸಲೆ ಮಾರಿಯ ಹುಣ್ಣೆಂಬರು (ಸಮಪ. ೯-೨೭). **ಸಿವಳಿಗೆ:** ಕಹಿಬ್ರಹ್ಮಿಯ ರಸವಂ, ಶ್ರೀಖಂಡ, ಇದಱ ಸಮಾನ ಗೋಮಯ ಮೂಱುದಿನ ಕುಡಿಯೆ ಸಿವಳಿಗೆ ಮಾಣ್ಗುಂ (ವಿಷ್ವವಿ. ೭೩). [?]

**ಸೀವಳಿವಿಲ್ಲು** (ನಾ). ಒಂದು ಬಗೆಯ ಬಿಲ್ಲು: ಪದವಿಲ್ಲುಗಳನೆಡೆಗೆಡೆಗೆ ಸೀವಳಿವಿ[ಪಾಠಾಂ. ಬಿ]ಲ್ಲುಗಳ ಪಿಡಿದಾ ನಿಶಾಟರು ನೆರೆದುದವನೊಡನೆ (ಸಾಳ್ವಭಾ. ೫-೧೩).

[ಸೀವಳಿ$_?$ + ಬಿಲ್ಲು$_1$ (< ಬಿಲ್$_2$)]

**ಸೀವಿ** (ನಾ). ಒಂದು ಬಗೆಯ ವೃತ್ತಿ ಮತ್ತು ಅದರಲ್ಲಿ ವ್ಯವಹರಿಸುವವನು (?): ಸಾವನಿಗರ ಪಱೆಯರ[ನಾ] ಸೀವಿಗಳ ನೆಗರ್ತಿವೆತ್ತ ಗಂದಿಗರ ಬೆಡಂಗಾವರಿಸುವ [ತಂ]ಬುಲಿಗರ ಪೂವೆತ್ತುವ ಮಾಲೆಗಾಱರಂಗಡಿಯಡಿಗಂ (ವರ್ಧಮಾ. ೧-೭೭). [?]

**ಸೀವು** (ಕ್ರಿ). ೧. ಅಲಂಕರಿಸಿಕೊಳ್ಳು; ಸಿಂಗರಿಸಿಕೊಳ್ಳು: "ಸೀವು — ಭೂಷಣೇ (ಅಲಂಕರಿಸಿಕೊಳ್ಳು)" (ಶಮಧಾ). ೨. ಹೆರೆ; ಒರೆದುಹಾಕು: ನೆಲದ ಮೇಲೆ ಚಾಪೆಯಂತೆ ಹಾಸಿ ತೂಗಟೆಯ ಒಣಬೆನ್ನನ್ನು ಕತ್ತಿಯಿಂದ ಸೀವಿ ಹಾಕಿದ (ಹಸುಹೂ. ೮೮). 'ಚೀವು' ಪರಾ. [ದೇ. ॥ ತಮಿ. ಮಲ. ಚೀವು ; ತೆಲು. ಚೀವು, ಚಿವ್ವು]

**ಸೀಸ$_1$** (ನಾ). ೧. ಮಲ್ಲಯುದ್ಧದ ಒಂದು ವರಸೆ, — ಪಟ್ಟು: ಪಿರಿದೆನಿಪ ಹಟ್ಟಾಂಗ ಸೀಸವು ಬೆರಸಿದ ಗದೆ ರಾಯಕರವಾಳುರುವ ದೊಂದಿಗಳೆಂಬ ತಾನಕದಿಂದ ಕಾದಿದರು (ಸಾಳ್ವಭಾ. ೨೨-೭೦); ವೀರಚಿಕದೇವಂ ನೋಟಕರ್ ಮೆಚ್ಚೆ ಮಲ್ಲಗೆಯೊಳ್ . . . ಸೀಸಂ ಕರಂ ಕೊಂಕಸಂ ಮಗುಟ್ಟಿಂತೀ ಗತಿಭೇದದಿಂ ತೊಡಕಿ ತೋರ್ಕುಂ ಸಾಧಕಪ್ರೌಢಿಯಂ (ಚಿಕವಿ. ೪-೧೪೭). ೨. [ಛಂದ] ಪ್ರತಿಚರಣದಲ್ಲೂ ಮೊದಲು ಆರು ವಿಷ್ಣುಗಣಗಳೂ ಕೊನೆಯಲ್ಲಿ ಎರಡು ಬ್ರಹ್ಮಗಣಗಳೂ ಬರುವ ನಾಲ್ಕು ದೀರ್ಘಚರಣಗಳುಳ್ಳ ಒಂದು ದೇಸಿಛಂದಸ್ಸು: ಸೀಸ ಪುರುಹೂತಗಣಂಗಳಾಱುಂ ಸರಸಿಜಸಖಗಣಗಳೆರಡು ಸಂಧಿಸಿ ಬರ್ಕುಂ ಚರಣಕ್ಕೆ ಸೀಸದಂತ ದೊಳೊಱಗಿಂತಹ ಸರಳ ತನ್ನೊಳೊಪ್ಪುವ ತೆಱದಿಂ (ಛಂದೋಂಬು. ೩-೨೨೨ ಅಡಿಪದ್ಯ); 'ಸೀಸ'ದಲ್ಲಿ ಆದಿಪ್ರಾಸವು ನಿಯತವಾಗಿದೆ. ೨. ಅಂತ್ಯಪ್ರಾಸವು ತಕ್ಕಮಟ್ಟಿಗೆ ಕಾಣುತ್ತದೆ. ೩. ಅನುಪ್ರಾಸವು ಪದ್ಯದ ಉದ್ದಕ್ಕೂ ತನ್ನ ವಿಲಾಸವನ್ನು ಬೀರಿದೆ. ೪. ಈ ಪದ್ಯದ ಪ್ರತಿಚರಣದಲ್ಲಿ ಪಂಚಮಾತ್ರಾಗಣಗಳು ೬ ಮತ್ತು ತ್ರಿಮಾತ್ರಾಗಣಗಳು ೩— ಹೀಗೆ ಮಾತ್ರಾಗಣಗಳು ಹೊರೆದುತ್ತವೆ (ಛಂದೋವಿ. ೨೦೭). 'ಕಿರಿಸೀಸ' ಪರಾ.

[<— ತೆಲು. ಸೀಸ./ ಪ್ರಾ. ಸೀಸ./ ಸಂ. ಶೀರ್ಷ]

**ಸೀಸ$_2$** (ನಾ). ತಲೆ; ಶಿರ: ಸೇಸಿಕ್ಕಲ್ಗಂಧಶಾಲ್ಯಕ್ಷತಶತಮನಿಷಂ ಪುಷ್ಪದಾಮಂ ತುಱುಂಬಲ್ಸೀಸಕ್ಕಿಂಬಾದುದು (ಅರ್ಧನೇ. ೧-೭೦); ನಭಕ್ಕೆ ಪುಟನೆಗೆದನಿಲಜನ ಸೀಸ [ಪಾಠಾಂ. ಸಿರಿಸ, ಸಿರಸ]ಕ್ಕೆ ಹೊಯ್ದಾರಿದನು ಕೌರವನೃಪತಿ ಖಾತಿಯಲಿ (ಕುವ್ಯಾಗ. ೭-೯).

[< ಸಂ. ಶೀರ್ಷ./ ಪ್ರಾ. ಸೀಸ]

**ಸೀಸ$_3$** (ನಾ). ಒಂದು ಬಗೆಯ ಲೋಹ: ತನ್ನ ಗುರುವ ನಿಂದೆಗೇಳಿದವನ ಕಿವಿಯೊಳೆಱೆದು ಕಾಯ್ದ ತಾಮ್ರ ಸೀಸ ತವರವಾದಿಯಾದ ರಸವನೆಱೆದು (ಸಾನಂಚ. ೬-೧೧೨); ಸೀಳಬಹುದೇ ಸೀಸದುಳಿಯಲಿ ಶೈಲವನು (ಕುವ್ಯಾದ್ರೋ. ೧-೨೯).

ಸೀಸದ ಕಡ್ಡಿ = ಸೀಸಕಡ್ಡಿ: ಪ್ರಧಾನನ್ಯಾಯದರ್ಶಿ ತನ್ನ ಸೀಸದ ಕಡ್ಡಿಯಿಂದ ಮೇಜನ್ನು ಕುಟ್ಟಿದನು (ಪುನರು. ೧೧೨); ಸೀಸದ ಕಡ್ಡಿ . . . ಉಪಯೋಗಿಸಿ ಆಕಾರಗಳನ್ನು ಬರೆಯಲು ಅವು ಪ್ರಾರಂಭಮಾಡುವುವು (ಗೃಹವಿ. ೧೪೦). [ಸಂ.]

**ಸೀಸಕ$_1$** (ನಾ). ಮಲ್ಲಯುದ್ಧದ ಒಂದು ವರಸೆ,— ಪಟ್ಟು: ಮಲ್ಲನನೌಂಕಿ ಪಿಡಿದು ಸುತ್ತಿ ಮುತ್ತಿ ಸೆಳೆದಿಕ್ಕಿ ಸೀಸಕದೊಳ್ ಪೊಕ್ಕು ಭುಜದೊಳಣೆದುರದೊಳ್ ತೆಂದು (ಗಿರಿಕ. ೨-೧೦೫ ವ). 'ಸೀಸ$_1$' ಪರಾ. [<— ತೆಲು. ಸೀಸಕ]

**ಸೀಸಕ$_2$** (ನಾ). ೧. (ಯೋಧರು ಧರಿಸುವ ಕಬ್ಬಿಣ, ಉಕ್ಕು ಇತ್ಯಾದಿ ಲೋಹದ) ಟೊಪ್ಪಿಗೆ; ಶಿರಸ್ತ್ರಾಣ: ಗುರು ಕವಚಂ ಕರ್ಣಂ ಬಾಹುರಕ್ಕೆ ಸುರಸಿಂಧುನಂದನಂ ಸೀಸಕಮಾಗಿರೆ ಮೆಯ್ಯೆ ಮುಳಿಯಲಱಿಯದೆ ಕುರುರಾಜನ ತೊಡೆಯನುಡಿವೆನೆಂದಂ ಭೀಮಂ (ಗದಾಯು. ೨-೨೯); ವಿವಿಧ ವಜ್ರಾಂಗಿಗಳ ಸೀಸಕ ಕವಚಗಳ ತೊಟ್ಟತುಳಬಲರೇಱಿದರು ತೇಜಿಗಳ (ಕುವ್ಯಾಭೀ. ೪-೫೦). ೨. ಗುರುತು; ಲಾಂಛನ (?): ಬಟ್ಟತೆನಿಪ್ಪ ಚೊಲ್ಲೆಯದ ಮಟ್ಟಿಯ ಸೀಸಕಮಿಟ್ಟ ನಾಮದೊಳ್ಪಟ್ಟು ಮನಂಗೊಳಲ್ ಗರುಡಿಗ್ಯೆಮೆಯೊಳೇ ಚಿಕದೇವರಾಯನಂ ನಿಟ್ಟಿಪ ಜಟ್ಟಿಗರ್ ಬೆಱೆವರಲ್ಲಿಯ ಚಿತ್ತರ ಬೊಂಬೆಯೆಂಬಿನಂ (ಚಿಕವಿ. ೪-೧೩೪).

[< ಸಂ. ಶೀರ್ಷಕ./ ಪ್ರಾ. ಸೀಸಕ, ಸೀಸಕ್ಕ]

**ಸೀಸಕ$_3$** (ನಾ).= ಸೀಸ$_3$: "ಸೀಸಕ . . . ಈ ೨ ಸೀಸಂ"(ಹಲಾಯು. ೨೪೧೮). [ಸಂ.]

**ಸೀಸಕಂದಾಳ್** (ಕ್ರಿ). ಶಿರಸ್ತ್ರಾಣವನ್ನು ತೊಡು, — ಧರಿಸು: ಸೀಸಕಂದಾಳ್ದು ಕಾಲಾಳ್ಗಡಣಂ ಕೈಕೊಂಡು ನಾನಾಯುಧಮನಮಮು ಬಂದತ್ತದಂ ಪೇಳ್ವೆನೇನಂ (ರಾಜಶೇ. ೧೩-೭೦). [ಸೀಸಕ$_2$ + ತಾಳ್$_1$]

**ಸೀಸಕಡ್ಡಿ** (ನಾ). ಸೀಸದ ಮೊನೆಯನ್ನು ಉಳ್ಳ, ಬರೆಯುವ ಒಂದು ಸಾಧನ; ಪೆನ್ಸಿಲ್ಲು: ಕಾಗದ ಸೀಸಕಡ್ಡಿಯೊಂದಿಗೆ ಸನ್ನದ್ಧನಾಗಿದ್ದ (ಹುಚ್ಚುಹು. ೯೯); ನಮ್ಮದೋ ಬರಿ ಸೀಸಕಡ್ಡಿ ಬರೆದಂತಿಹುದು ಮರುಚಣ ಅಳಿಸಬಹುದು (ನೆಲಮು. ೮೮-೭).
[ಸೀಸ$_3$ + ಕಡ್ಡಿ]

**ಸೀಸಪತ್ರ** (ನಾ). = ಸೀಸ$_3$: "ಸೀಸಕಂ, ಸೀಸಪತ್ರಂ — ಈ ೨ ಸೀಸಂ" (ಹಲಾಯು. ೨೮-೧೮). [ಸಂ.]

**ಸೀಸಪತ್ರಕ** (ನಾ). = ಸೀಸ$_3$: "ತ್ರಪುವಂಗಂ ಸೀಸಂ ಸೀಸಪತ್ರಕಂ ನಾಗಮಱಗೆ ಸೌರಾಷ್ಟ್ರಕಂ" (ವಸ್ತುಕೋ. ೨೯-೯). [ಸಂ.]

**ಸೀಸಪದ್ಯ** (ನಾ). = ಸೀಸ$_1$ ೨: ಸೀಸಪದ್ಯದೊಡನೆ ಸೇರಿಸಿ ಹಾಡುವ ಗೀತಿ — ಆಟಗೀತಿ, ತೇಟಗೀತಿ ಎಂದು ಎರಡು ವಿಧ (ಕೃಪಿಡಿ. ೧೫೧); ತೆಲುಗಿನ ಆದ್ಯಕವಿ ನನ್ನಯಭಟ್ಟನು (೧೧ನೆಯ ಶತಮಾನದ ಮಧ್ಯಭಾಗ) ಸೀಸಪದ್ಯವನ್ನು ಬಳಸಿರುವುದರಿಂದ ಸೀಸಪದ್ಯವು ತೆಲುಗಿನಲ್ಲಿ ಪೂರ್ವದಿಂದಲೂ ರಚಿತವಾಗುತ್ತ ಇದ್ದಿತೆಂಬುದು ಸ್ವತಃಸಿದ್ಧ (ಛಂದೋವಿ. ೨೦೫). [ಸೀಸ$_1$ + ಪದ್ಯ]

**ಸೀಸಭಸ್ಮ** (ನಾ). ೧. ಸೀಸಲೋಹದ ಪುಡಿ: (ಬಳಿಯುವ ಬಣ್ಣಗಳು, ಮೆರುಗು ಎಣ್ಣೆಗಳು, ಮೊ.) ಬಳಿದ ಮೇಲೆ ಬೇಗ ಒಣಗುವುದಕ್ಕಾಗಿ ಅವುಗಳಿಗೆ ಸೇರಿಸುವ ಸೀಸ ಭಸ್ಮ, ಮ್ಯಾಂಗನೀಸ್ ಭಸ್ಮ, ಮೊ.ವು (Drier. ೫೦೩). ೨. [ವೈದ್ಯಶಾ] ಸೀಸಲೋಹ ಮುಂತಾದುವನ್ನು ಹಾಕಿ ತಯಾರಿಸುವ ಒಂದು ಬಗೆಯ ಚೂರ್ಣ: ಸೀಸಭಸ್ಮವಂ ಮಾಡುವ ಕ್ರಮ — ಮಣಿಸಿಲೆಯನ್ನೂ ಎಕ್ಕೆಹಾಲನ್ನೂ ಕೂಡ ಅರೆದು ಸೀಸಪತ್ರಂಗಳ ತೊಡೆದು ಪುಟವನಿಕ್ಕಲು (ಸೀಸ)ಭಸ್ಮವಕ್ಕು (ವಿಷ್ಣವಿ. ೫೫); ಶುಂಠಿ, ಅಪಿನಿ, ಸೀಸಭಸ್ಮ . . . ಅತಿಬಜೆ ಇವಂ ಸಮಭಾಗವಾಗಿ . . . ಜೇನುತುಪ್ಪ ಪ್ರತಿಪಾಕವಿಕ್ಕಿ ಕೊಡಲು ಸಕಲವಾದ ಅತಿಸಾರಂ ಗುಣಮಕ್ಕುಂ (ಸಕವೈ. ೩.೩೦). [ಸಂ. ಸೀಸಭಸ್ಮನ್]

**ಸೀಸವಟಕ** (ನಾ). [ವೈದ್ಯಶಾ] ಸೀಸಲೋಹದ ಚೂರ್ಣ ಮುಂತಾದುವುಗಳನ್ನು ಹಾಕಿ ತಯಾರಿಸುವ ಒಂದು ಬಗೆಯ ಗುಳಿಗೆ: ಸೀಸವಟಕ : — ಸೀಸವನ್ನು ಏಳುಬಾರಿ ಕರಗಿಸುವುದು . . . ಈ ಪ್ರಕಾರದಲ್ಲಿ ಅಱುವತ್ತು ಪುಟವನಿಕ್ಕುವುದು (ವಿಷ್ಣವಿ. ೫೬). [ಸಂ.]

**ಸೀಸವಾಳು** (ನಾ). ಸೀಸಲೋಹದ ಕತ್ತಿ (?): ಏಸು ಬೇಹುದು ಮಲ್ಲತನ ನಿನಗೈಸು ನಿನ್ನಯ ಸೀಸವಾಳಿಗೆ [ಪಾಠಾಂ. ವಾಳವ,ವಾಳನು] ಹೊಯ್ವೆನೆಂದನು ನಿನ್ನ ಮಗ ನಗುತ (ಕುವ್ಯಾಕ. ೧೯ ४೦). [ಸೀಸ$_3$ + ಬಾಳು$_3$ (< ಬಾಳ್$_3$)]

**ಸೀಸಾಯಿ** 'ಸೀಸೆ' ನೋ.

**ಸೀಸಾರು** 'ಸೀಸಾಱು' ನೋ.

**ಸೀಸಾಱು, ಸಿಹಿಸಾರು, ಸೀಸಾರು** (ನಾ). (ಖಾರ, ಹುಳಿಗಳೆರಡನ್ನೂ ಹಾಕದೆ ಮಾಡುವ) ಒಂದು ಬಗೆಯ ಸಾರು: ಖಾರಸಾಱು ಮಾಡಬೇಡ ಉಣ್ಣಲಾಱೆನೆ ಎನಗೆ ಸೀಸಾಱು ಮಾಡಿದರೆ ಬೇಗನುಂಬುವೆ (ಪುರಂದ. ४-೫-೧). **ಸಿಹಿಸಾರು:** ಮತ್ತೆ ಹತ್ತುದಿನಗಳ ಮೇಲೆ ಸಿಹಿಸಾರು, ಹಾಲನ್ನ ಎರಡುಹೊತ್ತು ತಿನ್ನುವಂತೆ ಆಯಿತು (ನವನೀ. ೬೦). **ಸೀಸಾರು :** ಸೀಸಾರು ಬಹಳ ರುಚಿಯಾಗಿದೆ (ರೂಢಿ). [ಸೀ$_2$ + ಸಾಱು$_2$]

**ಸೀಸು** (ನಾ). ಒಂದು ಬಗೆಯ ಲೋಹ; ಸೀಸ: ಅದಕ್ಕೆ ಅಷ್ಟೇ ಸೀಸು ಕೂಡಿಸಿ ಸಣ್ಣ ಮುಶಿಯೊಳಗೆ ಹಾಕಿ ಜಾಲಗಾರನ ಕೈಯಲ್ಲಿ ಕರಗಿಸಲಿಕ್ಕೆ ಕೊಡುವನು (ಕಭಾಗ. ೨೮೨); ಸೌಟನೊಳಗೆ ಸೀಸು ಹಾಕಿ ಬೆಂಕಿಯ ಮೇಲೆ ಹಿಡಿ (ಮುಂಬಯಿ. ೫-೧೨೦). [< ಸಂ. ಸೀಸ]

**ಸೀಸೆ, ಶೀಶೆ, ಶೀಷೆ, ಸೀಸಾಯಿ** (ನಾ). ಗಾಜಿನ ಬುಡ್ಡಿ; ಬಾಟಲು; ಕುಪ್ಪಿ: ಕಲ್ಲೆಣ್ಣೆಯನ್ನು . . . ಸೀಸೆಯಲ್ಲಿ ತಂದಿದ್ದನು (ಸ್ಕೂಲುಮಿ. ೧೭೩); ಒಲೆನಿನ್ ಎರಡು ಸೀಸೆ ಮದ್ಯವನ್ನು ಕುಡಿದಿದ್ದನು (ಮಲನಾ. ೭). **ಶೀಶೆ:** ದಿನಕ್ಕೆ ಒಂದು ಸಲವಾದರೂ ಎದೆಹಾಲಿನ ಬದಲು ಶೀಶಹಾಲನ್ನು ಕೊಡಬೇಕು (ಗೃಹವಿ. ೧೦೯). **ಶೀಷೆ:** ತೊಡೆಯ ಮೇಲಣ ಹದಿನೆಂಟು ತಿಂಗಳ ಮಗು ಶೀಷೆಯಿಂದ ಹಾಲು ಕುಡಿಯುತ್ತಿತ್ತು (ವಿಳಜೀ. ೧೭೯); ಟೇಬಲ್ಲುಗಳೂ ಶೀಷೆಗಳೂ ಇದ್ದ ಕೊಳಕುಮೇಜು (ಪುನರು. ೩೦೦). **ಸೀಸಾಯಿ:** ಕೈ ಜಾರಿ ಕೆಳಗೆ ಬಿದ್ದು ಸೀಸಾಯಿ ಒಡೆದುಹೋಯಿತು (ರೂಢಿ).
[<— ಪಾರ. ಶೀಶ; ಹಿಂ. ಶೀಶಾ, ಶೀಶೀ; ಮರಾ. ಶಿಸಾ]

**ಸೀಸೆಬಿರಟುಮರ, ಶೀಸೆಬಿರಟುಮರ** (ನಾ). ಒಂದು ಬಗೆಯ ಮರ: ಬಿರಟು, ಸೀಸೆಬಿರಟುಮರ (ಮೈಡಿಗೆ. ೫೪-೧೦೭೭). **ಶೀಸೆಬಿರಟುಮರ:** "ಶೀಸೆಬಿರಟುಮರ, ಬಿರಡೆಮರ, ಕಾರ್ಕ್‌ಮರ, ಬಿರಟುಮರ" (ಸಸ್ಯನಿ. ೯೦).
[ಸೀಸೆ + ಬಿರಟು (< ಬಿರಡೆ$_2$) + ಮರ$_1$]

**ಸೀಸೋರೆ** (ನಾ). ಸಿಹಿಯಾದ ರುಚಿಯಿರುವ ಸೋರೆಕಾಯಿ: "ತುಂಬೀ, ಅಲಾಬೂ -೨ ಸೀ[ಪಾಠಾಂ. ಶೀ]ಸೋರೇಗಿಡದ ಹೆಸರುಗಳು, ಕಾಯಿಸೋರೆ" (ಸಿದ್ಧಾಂತಿ. ೧೪೮). [ಸೀ$_2$ + ಸೋರೆ$_1$]

**ಸೀಹುಂಡ** (ನಾ). ಒಂದು ಬಗೆಯ ಕಳ್ಳಿಗಿಡ; ಮುಂಡಗಳ್ಳಿ: "ಸೀಹುಂಡಃ, ವಜ್ರದ್ರುಃ, ಸ್ನುಕ್, ಸ್ನುಹೀ, ಗುಡಾ, ಸಮಂತದುಗ್ಧಾ — ೬ ಕಳ್ಳೀಹೆಸರುಗಳು, ಬೊಂತೇಕಳ್ಳಿ" (ಸಿದ್ಧಾಂತಿ. ೧೫೭). [ಸಂ.]

**ಸೀಳ್$_1$, ಸೀಳು$_1$** (ಕ್ರಿ). ೧. ತುಂಡುಮಾಡು; ಹೋಳುಮಾಡು: "ಸೀಳ್ — ವಿದಾರಣೇ, ಶಕಲೇ ಚ" (ಶಮಧಾ); ಮೃಡ ಬೇಕೆಂದೆನೆ ಸೀಳ್ದು ತನ್ನ ಸುತನಂ ನೈವೇದ್ಯಮಂ ಮಾಡನೇ (ಸೋಮೇಶ. ೮४). ೨. ಎರಡು ಪಾಲಾಗುವಂತೆ ಸಿಗಿ: ನೆಯ್ಮಿಲ ಕಾವಂ ತುದಿಗೆಯ್ದು ಸೀಳ್ವ ತೆಱದಿಂ ಸೀಳ್ದಂ ಜರಾಸಂಧನಂ (ಪಂಪಭಾ. ೬-೨೭); ರಾವಣನಂ ಕೋವಣವಂ ಸೀಳ್ವಂತೆ ಸೀಳ್ದು (ಧರ್ಮಾಮೃ. ೭-೯೫). ೩. ಬಗಿ; ತೋಡು: ನರಸಿಂಹಾಕಾರದಿಂ ದಾನವಪತಿಯುರವಂ ಸೀರ್ದಂ (ಮೈಅರಿ. ೧೯೨೪, ೬೫-೨೨; 1081); ಇರದೆ ಸೀಳಿದು ಹೊಟ್ಟೆಯನು ತೆಗೆಸುವರು ಕರುಳನು (ನಿಭಾಗ. ೫-೧೧-೩೩). ೪. ಹರಿ; ಹರಿದುಹಾಕು: ಕಾಮನ ಪಟಮಂ ಸೀಳ್ದು ಕಳೆ ವೃಥಾಪೂಜಿತಮ (ಕಾದಂಉ. ೫೯೧); ಕಪ್ಪಡಮಂ ಸೀಳ್ದು [ಮನೆಯಂ ಪೊಱಮಟ್ಟು] (ಪಂಚತಂ. ೧೯೩-೧೩). ೫. ಬಿರುಕು ಬಿಡಿಸು; ಬಿರಿಯುವಂತೆ ಮಾಡು: ಸಮನಾಗಿರೆ ಶಾಖಾಬೀಜಮನೆರಡಂ ಕೊಂಡು ಸೀಳ್ದು ಸಂಧಿಸಿ ಮಧುವಾಜ್ಯಮನಲ್ಲಿ ತೊಡೆದು ನಡುಗೊಂಡೆ ಮೊದಲ್ ಪಿರಿದಾಗಿ ತತ್ಫಳಂ ಬೇಱಕ್ಕುಂ (ಲೋಕೋಪ. ೬-೨೨); ಅರಗಿಳಿ ಸೀಳ್ದೊಡೆ ಮಡಿಯೊಳ್ಪರಿದಿರೆ ನೆಲ್ಪಾಲ್ (ರಾಜಶೇ. ೨-೧೪). ೬. ಬಿರುಕುಬಿಡು; ಬಿರಿ: ನೀರೇಱದ ನಾಳಿಪುಣ್ಕೊಡೆದು ಸೌಳಿನ ಸೀಳ್ದುದು ದೋಣಿಪ್ಪೋಪಿನಂ (ಸುಕುಮಾ. ೫-೧೭); ಸೀಳೆ ಶೈಳಮಹಿರಾಜಂ ಬಳ್ಕೆ ಕೂರ್ಮಂ . . . ನಿಸ್ಸಾಳಧ್ವಳಂಧಳಂಧಳರವಂ ಪರ್ಬಿತ್ತು ಮೂಲೋಕಮಂ (ಗಿಂಕ. ೬-೫४). ೭. ತುಂಡಾಗು; ಕತ್ತರಿಸಿಹೋಗು: ರಸನ ನೀಳಕ್ಕೆ ಸೀಳ್ದುದು ನುಡಿದಡಿಂತಹ ಭಾಷೆಯಂ (ಬಸವು. ೩೫-४೯). **ಸೀಳು$_1$:** ೧. ಅರೆಯಂ ಸೀಳುವೊಡಾನೆ ಮೆಟ್ಟಲಹುದೇ ಚಾಣಂಗಳಿಂದಲ್ಲದೇ (ಸೋಮೇಶ. ೭೭); ಪಿರಿದಾಗಿ ಬಲಿದ ಬಾಳೆಯ ಕಾಯಿಗಳನು ತಂದೆರಡಾಗಿ ಸೀಳಿ . . . ತೆಗೆದುಕೊಂಡು (ಸೂಪಶಾ. ४-೭೩). ೨. ನೀನಲ್ಲ ದನ್ಯದೈವವುಂಟೆಂಬವನ ಬಾಯ ಕೆನ್ನೆವಾರೆ ಸೀಳದಲ್ಲದೆ ಎನ್ನ ಮುನಿಸು ಹೋಗದಯ್ಯ (ಬಸವ. ೭೫೦); ಹಸುಳೆತನದಲಿ ಹರನ ಮಗನಾ ವಿಷಮದೈತ್ಯನ ಸೀಳಿ ಬಿಸುಡನೆ (ಕುವ್ಯಾದ್ರೋ. ೫-೨೫). ೩. ಎಲೆ ಮರುಳೆ ನಿನ್ನೊಡಲ ಸೀಳಿಯೆ ತಿಳಿರಕುತದಲಿ ತಾಯ ತುಱುಬನು ನಾದಿಸುವೆನೆಂದ (ಕುವ್ಯಾದ್ರೋ. ೫-४४). ೪. ಕೋಪಿಸುತೆದ್ದು ಸೆಳೆದು ಸಬ್ಬನೆ ಸೀಳೆ . . . ಹೋಗದೆಲೆ ಮಗನೆ ಇದು ಪಡಿಪತ್ರವೆಂದೆನುತೆ (ಸಂದರ. ೭-೮೫); ಇಟ್ಟ ವಿಭೂತಿಯಱಿಯದಿರೆ ಸೀಳಿದ ಬಟ್ಟೆಯಂತಕ್ಕು (ಸರ್ವಜ್ಞ. ೧೨೦). ೫. ಸೀಳಿದುದು ತೋಳ್ಗಳಂ ಕಳಹಂಸ ಸಾರಸಮ್ಮಿಣಾಳಮೆಂದುಂ ಚಂಚುವಿಂ (ಚಂಪು. ೧೧-೬४); ತಲೆಯೆತ್ತಿ ಕೂದಲ ಸೆಳೆಕೊಳ್ವ ಮುಳ್ಳು ಮೈಯುಲುಗೆ ಸೀಳುವ ಬಲುಮುಳ್ಳು (ಕಂವಿ. ೧೮-४೭). ೬. ಸೂಳವಿಸಿ ಬೊಬ್ಬಿಱದವರುನಿಸ್ಸಾಳಚಯವದ್ರಿಗಳ ಹೆಡತಲೆ ಸೀಳೆ (ಕುವ್ಯಾದ್ರೋ. ೧-४४); ಕಾಲೊಳು ಮೂಡಿದ ದಸಿಮುಳ್ಳುಗಳು ತಾಕಿ ಸೀಳಿದ ಮೃಗಾಯದಿಂದ . . . ಜನಜಾಲವೈದಿತು ದೆಸೆದೆಸೆಗೆ (ಕಂವಿ. ೧೧-೫೦). ೭. ಬಿರಿದ ಬತ್ತಳಿಕೆಗಳ ಸೀಳಿದ ಹರಿಗೆಗಳ ಹೇರಾಳದಲಿ ರಂಜಿಸಿತು ರಣಭೂಮಿ (ಕುವ್ಯಾಕ. ೧೫-೩೨); ಹರಿಗೆ ಹಱದವು ಕವಚ ಸೀಳಿದವು (ಕಾಶಿರಾ. ೩೨-೨೭). ೮. ಬೇರ್ಪಡಿಸು; ಪ್ರತ್ಯೇಕಿಸು; ವಿಭಾಗಿಸು: ನಾಣ್ಯವ ಹೊದ್ದೆನೆಂದರೆ ಬೆಲೆಯಲ್ಲಿ ಸಿಕ್ಕಿ ಸೀಳಬಹುದೇ ಬಾಳಾಂಬಕನ ಬಲ್ಲೆ ವೆಂದಡೆ ಕಾಳುಮರ್ತ್ಯರಲ್ಲಿ ಸತ್ಕವ ಸೀಳಬಹುದೇ (ಮೋಳಿಮಾ. ೩೫-೧೪೫). 'ಕೀಟ್', 'ಗೀಳ್$_1$' ಪರಾ. [ದೇ . ॥ ತೆಲು. ಚೀಲು]

**ಸೀಳ್$_2$, ಸೀಳು$_2$** (ನಾ). ೧. ಚೂರು; ತುಂಡು: ಪೊಡೆಗೆಡೆದ ಹೇರೊಡಲ ಸೀಳ್ಗಳಂ

ಪೋಳ್ದಳಿಂ (ಜೈಮಿಭಾ. ೪-೪೬). ೨. ಬಿರುಕು; ಒಡಕು: ಬಾಳ ರಕ್ತವನೀಂಟುವ ಜಿಗುಳೆಯೊಲಿರ್ಪ ತೋಳ ಮೇಗಳ ಸೀಳ್ಗಳೀನೇ (ಮೋಹತ. ೧೮-೭೭). **ಸೀಳು$_2$:** ೧. ಜನನದ ನೆಲೆಯ ಕಾಲಕೆ ಸತಿಯರುದರದೊಳಿಳಿದುದೊಂದೊಂದವಯವದ ಸೀಳೆರಡು ಸಮನಾಗಿ (ಹುವ್ಯಾಸ. ೨-೪೩); ಬೆಳಗ್ಗೆ ರಾಮನಾಥ ಮಾಡಿಕೊಟ್ಟ ಬಿದಿರಿನ ಸೀಳುಗಳನ್ನು ಹುಡುಕಿ ತಂದಳು (ಮೂರುದಾ. ೫೫). ೩. ಜಮೀನಿನ ಒಂದು ಸಣ್ಣ ಭಾಗ: ಕಾಲುವೆ ದಂಡೆಯ ಗದ್ದೆ ಖ ೧ ಕ್ಕೆ ದಳವೈನ ಮೊದಲದಳೆ ೧ ಕ್ಕೆ ಸೀಳು ೩ಕ್ಕೆ ಖ ೧/೪ (ಎಕ. XVI. ಚಿಕ್ಕನಾ. ೫೩-೧೭; 1639). ೪. ನೂಲಿನ ಲಡಿ; ''ಸೂತ್ರವೇಷ್ಟನ, ಜೇಡರು ಸುತ್ತಿದ ನೂಲು, ಪಟ್ಟೆ'' (ಗಂಗಾಮು. ೬). ೫. ಉಕ್ಕೆ; ಉಳುಮೆ: ನಮ್ಮ ಹೊಲಕ್ಕೆ ಮೊದಲ ಸೀಳು ಆಗಿದೆ (ರೂಢಿ). 'ಸೀಳುಕ್ಕೆ' ಪರಾ.

**ಸೀಳಾಗು = ಭಾಗವಾಗು;** ಪಾಲಾಗು: ಎರಡು ಸೀಳಾಯ್ತುವನ ಕರಿ (ಹುವ್ಯಾಕ. ೨-೨೦); ತನುವೆರಡು ಸೀಳಾಯ್ತು ವಜ್ರದಲದ್ರಿ ಬಿರಿವಂತೆ (ನಿಭಾಗ. ೧೧-೩೬-೨೨).

[< ಸೀಳ್$_1$./ ಮಲ. ಚೀಳ್; ತುಳು. ಸೀಳ್, ಚೀಲ್; ತೆಲು. ಚೀಲಿಕ, ಚೀರಿಕ]

**ಸೀಳ** 'ಸೀಲ' ನೋ.

**ಸೀಳಿಕೆ (ನಾ). ೧. ಚೂರು;** ತುಂಡು: ಬಿದಿರ ಸೀಳಿಕೆ [ಪಾಠಾಂ. ಸಿಲಿಕ್ಕೆ]ಯಲ್ಲಿ ಕಾಲ ಕೆಸಱ್ಗೆಲ್ಲಮಂ ಬಳಿದು ಕಳೆದು ಮತ್ತಾಕೆಯಟ್ಟುದುದಕದಿಂ ಪಾದಂಗಳನೊದ್ದೆಯಂ ಮಾಡಿ (ಪುಣ್ಯಾಸ್ರ. ೩-೧೭ ಪ). ೨. ಬಿರುಕು ಬಿಟ್ಟಿದ್ದು: ಅಂಗಾಲಿನ ಸೀಳಿಕೆಯಿಂದ ಹೆಜ್ಜೆ ಊರಲಾಗುವುದಿಲ್ಲ (ರೂಢಿ). [ಸೀಳ್$_1$ + - ಇಕೆ]

**ಸೀಳಿಕ್ಕು (ಕ್ರಿ). ಕತ್ತರಿಸಿ ಹಾಕು;** ಕಡಿ; ಕೊಚ್ಚು: ಸೌಂದರಿಯೊಳ್ ಕೂಡವೆನೆಂಬು ದೆಗ್ಗು ಮರುಳೇ ಸೀಳಿಕ್ಕದೇಂ ಮಾಣ್ಬನೇ (ಧರ್ಮಾಮೃ. ೧೩-೧೩೧). [ಸೀಳ್$_1$ + ಇಕ್ಕು]

**ಸೀಳಿಡು$_1$ (ಕ್ರಿ). = ಸೀಳಿಕ್ಕು:** ಆತನೊಡಲಂ ಸೀಳಿಡು ದಿಶಾಬಲಿಗೊಡೆಂದೆಸಲ್ . . . ಕರಿತುರಂಗರಥಸಂದಣಿಯ ಮೇಲಿಡಿದುವಂಬುಗಳ್ (ಚಿಬಪು. ೩೨-೫).

[ಸೀಳ್$_1$ + ಇಡು$_1$]

**ಸೀಳಿಡು$_2$** 'ಸಿಳ್ಳಿಡು' ನೋ.

**ಸೀಳಿಸು (ಕ್ರಿ). ೧.** ಸಿಗಿಯುವಂತೆ ಮಾಡು: ಅಚ್ಚಗೊಂಡದೊಳಗುರ್ವಿಸೆ ಸೀಳಿಸಿ ಮಾಣದಿಕ್ಕೆ ಪೋಟ್ಟ್ರಿರ್ವಗಿ ಮಾಡಿ ತಾಳಿಸೆ (ಶಾಂತಿಪು. ೭-೯೫); ಕಟದೆಲ್ಲು ಸೀಳೆ ಸೀಳಿಸಿ ಕಟವಾಯ್ಗಳಂ (ಅನಂಪು. ೯-೩೬); ನುಡಿದರೆ ಬಾಯ ಸೀಳಿಸುವೆ (ಕೌಶಿರಾ. ೧೮-೫೦). ೨. ಹರಿದು ಹಾಕುವಂತೆ ಮಾಡು; ಹರಿದು ಹಾಕಿಸು: ಬಡ್ಡಿಯಿಕ್ಕುವಂ ಮೊದಲಂ ಕೊಟ್ಟು ಪತ್ರವಂ ಸೀಳಿಸುವಂತೆ (ಧರ್ಮಾಮೃ. ೧೪-೧೦೪). [ಸೀಳ್$_1$ + - ಇಸು$_3$]

**ಸೀಳು$_1$** 'ಸೀಳ್$_1$' ನೋ.

**ಸೀಳು$_2$** 'ಸೀಳ್$_2$' ನೋ.

**ಸೀಳು$_3$** 'ಸಿಳ್ಳು$_1$' ನೋ.

**ಸೀಳುಂಗಲ್ಲ (ನಾ). ಬಿರಿದ ಗಲ್ಲ;** ಸೀಳಿ ಹೋದ ಗಲ್ಲ: ಗೇಣಂಜುಂಗೆ, ಸೀಳುಂಗಲ್ಲಂ (ಶಬ್ದಾನು. ೫೫ ಪ್ರಯೋ). [ಸೀಳು$_1$ (< ಸೀಳ್$_1$) + ಗಲ್ಲ$_1$]

**ಸೀಳುಕಂಡಿ** 'ಸೀಳುಗಂಡಿ' ನೋ.

**ಸೀಳುಕ್ಕೆ (ನಾ). ಮೊದಲ ಉಕ್ಕೆ,**— ಉಳುಮೆ: ವಕ್ಕಲಿಗನ ಭರದಿ ಸೀಳುಕ್ಕೆಯುತ್ತುತ್ತು (ಜ್ಞಾನಚ. ೧೩-೬); ಒಂದು ದಿನ ಇವನು ಮಂಡಹಳ್ಳಿಗೆ ಹೋಗುವ ದಾರಿಪಕ್ಕದ ದರೆಹೊಲದಲ್ಲಿ ಸೀಳುಕ್ಕೆ ಹೊಡೀತಾ ಇದ್ದ (ನನ್ನೂರು. ೨೯೭).

[ಸೀಳು$_2$ (< ಸೀಳ್$_2$) + ಉಕ್ಕೆ (< ಉಟ್ಕೆ)]

**ಸೀಳುಗಂಡಿ, ಸೀಳುಕಂಡಿ (ನಾ).** ಕಿಂಡಿ; ರಂಧ್ರ: ಹೊರಗಿನ ವಿದ್ಯುತ್ಪ್ರವಾಹವು ಅರ್ಧಸುತ್ತು ಬಂದಾಗ ಈ ಸೀಳುಗಂಡಿಯಿರುವ (Slit) ಕೊಳವಿಯು ಅದರ ದಿಕ್ಕನ್ನು ತಿರುಗಿಸುತ್ತದೆ (ಶಿಲ್ಪನಾ. ೨೩೬). **ಸೀಳುಕಂಡಿ:** ಅವನು ನನ್ನ ಬಾಗಿಲ ಸೀಳುಕಂಡಿಯಲ್ಲಿ ತನ್ನ ಆಳುಮೋರೆಯನ್ನಿರಿಸಿದನು (ಪುನರು. ೫೦೫). [ಸೀಳು$_1$ (< ಸೀಳ್$_1$) + ಕಂಡಿ$_1$]

**ಸೀಳುಗಾಯ (ನಾ). ಬಿರುಕುಂಟಾಗುವ ಗಾಯ;** ಬಿರಿದ ಗಾಯ: ಆ ಹುಡುಗನ ಕಾಲಿಗೆ ಸೀಳುಗಾಯ ಆಗಿದೆ (ರೂಢಿ). [ಸೀಳು$_1$ (< ಸೀಳ್$_1$) + ಗಾಯ]

**ಸೀಳುದಾರಿ** 'ಸೀಳ್ದಾರಿ' ನೋ.

**ಸೀಳುನದಿ (ನಾ). ಕವಲುಗೊಂಡ** ನದಿ; ಉಪನದಿ: ಸಮುದ್ರವನ್ನು ದಾಟಿ ಬಂದ ವರ್ತಕರು ಒಂದು ಸೀಳುನದಿಯಲ್ಲಿ ಸಿಕ್ಕಿ ಮುಳುಗಿದಂತಾಯಿತು (ವಚಭಾ. ೩೧೬)

[ಸೀಳು$_1$ (< ಸೀಳ್$_1$) + ನದಿ]

**ಸೀಳುನಾಯಿ** 'ಸೀಳ್ನಾಯ್' ನೋ.

**ಸೀಳುನಾಲಿಗೆ (ನಾ).** (ಆಲಂ) ಎರಡು ರೀತಿ ಆಡುವ ನಾಲಿಗೆ; ಸುಳ್ಳು ಹೇಳುವ ನಾಲಿಗೆ: ಸೀಳುನಾಲಿಗೆಯವನನ್ನು ನಂಬಬಾರದು (ರೂಢಿ).

[ಸೀಳು$_1$ (< ಸೀಳ್$_1$) + ನಾಲಿಗೆ (< ನಾಲಗೆ)]

**ಸೀಳುಹಾದಿ (ನಾ).** ೧. ಕವಲುಹಾದಿ; ''ಕಾಲುದಾರಿ'' (ಜಾನಕೋ. ೪೯). ೨. (ಆಲಂ) ಕೆಟ್ಟ ಮಾರ್ಗ: ''ವ್ಯಧ್ವಃ: . . . ಕಾಪಥಃ — ೫ ಕೆಟ್ಟದಾರಿ, ಸೀಳುಹಾದಿ'' (ಸಿದ್ಧಾಂತಿ. ೯೭). [ಸೀಳು$_1$ (< ಸೀಳ್$_1$) + ಹಾದಿ (< ಪಾದಿ$_1$)]

**ಸೀಳೆ (ನಾ).** ಒಂದು ಬಗೆಯ ಮರ; ಚಳ್ಳೆಮರ: ''ಝುಕ್ತಿಃ, ಶ್ಲೇಷ್ಮಾತಕಃ, ಶೀತಃ, ಉದ್ದಾಲಃ, ಬಹುವಾರಕಃ — ಈ ೫ ಸೀಳೆಯ ಮರ'' (ನಾಚಿರಾ. ೧೧೭). [< ಸಂ. ಶೇಲು]

**ಸೀಳೆಲುಬು (ನಾ).** ಕವಲನ್ನು ಹೊಂದಿರುವ ಎಲುಬು: ತೋಳೆಲುಬಿಗೆ ಅಂಟಿ ಕೊಂಡು ತಿರುಗಾಡಬಲ್ಲ ಮುಂಗೈಯ ಸೀಳೆಲುಬಿದೆ (ಬಾಲಪ್ರ. I. ೧೯೬).

[ಸೀಳು$_1$ (< ಸೀಳ್$_1$) + ಎಲುಬು (< ಎಲ್ವು)]

**ಸೀಳ್ಕಿಡಹು (ಕ್ರಿ).** ತುಂಡು ಮಾಡಿ ಚೆಲ್ಲು: ಇಬ್ಬಗಿಯಾಗಿ ತನ್ನೊಡಲ ಸೀಳ್ಕಿಡಹಬೇಡವೆ (ಜೈಮಿಭಾ. ೧೯-೨೯). [ಸೀಳ್$_2$ + ಕೆಡಹು (< ಕೆಡಪು)]

**ಸೀಳ್ಗಡಿ (ಕ್ರಿ).** ಇಬ್ಭಾಗವಾಗುವಂತೆ ಕತ್ತರಿಸು, — ತುಂಡುಮಾಡು: ಹಸ್ತಿಮಸ್ತಕವ ಸೀಳ್ಗಡಿದುದುರ್ದಯಮಳ ಪೇರ್ಮುತ್ತ ತಂದು (ನವಮೋ. ೧೬-೨೪).

[ಸೀಳ್$_2$ + ಕಡಿ$_1$]

**ಸೀಳ್ಗಾಯ್ (ನಾ).** ಬಿರಿದಿರುವ ಕಾಯಿ; ಬಿರುಕು ಬಿಟ್ಟಿರುವ ಕಾಯಿ: ಸೀಳ್ಗಾಯ್ಗಳ್ ಬೀಗಿ ಬೆಳೆದು ಕೆಂಬಿತ್ತುಗಳಿಂ ಪೋಳ್ದಿರ್ದರೆ ದಾಳಿಂಬದ ತಾಟ್ಗಳ್ ನಿಟ್ಟಿಪರ ದಿಟ್ಟಿಗಿಟ್ಟಳಮೆಸಗುಂ.(ಶಬ್ದಾನು. ೧೯೩ ವ್ಯಾಖ್ಯಾ). [ಸೀಳ್$_1$ + ಕಾಯ್$_4$]

**ಸೀಳ್ದಾರಿ, ಸೀಳುದಾರಿ (ನಾ).** ಕವಲೊಡೆದಿರುವ ದಾರಿ; ಕವಲುದಾರಿ: ರಾಜಮಾರ್ಗವನ್ನು ಬಿಟ್ಟು ಸೀಳ್ದಾರಿಯನ್ನು ಹಿಡಿದು ಒಂದು ಸಣ್ಣ ಕೆರೆಯ ದಂಡೆಗೆ ಬಂದು ನಿಂತ (ಫಲಸಂ. ೬). **ಸೀಳುದಾರಿ:** ಇತರ ಸೀಳುದಾರಿಗಳು ಆಸ್ಟ್ರೇಲಿಯ, ಭಾರತಗಳಿಗೆ ಹೋಗುತ್ತವೆ (ಭೂವಿವ. ೨೦೭); ಸೀಳುದಾರಿಗಳು ಬೈತಲೆಯಂತೆ ತೋರುತ್ತಿವೆ (ಕುಂಕುಮ. ೪೧). [ಸೀಳ್$_1$ + ದಾರಿ]

**ಸೀಳ್ನರಿ (ನಾ).** ಕ್ಷುದ್ರವಾದ ನರಿ (?): ಸಿಡಿಲ ಭರವೆತ್ತ ಶಿಶುಗಳ ಬಳಗವೆತ್ತ ಗುಡಿಗುಡಿಪ ಸಿಂಹಮದೆತ್ತ ಸೀಳ್ನರಿಗಳೆತ್ತಲು (ಚಿಬಪು. ೩೧-೩೬). [ಸೀಳ್$_1$ + ನರಿ]

**ಸೀಳ್ನಾಯ್, ಸಿಳ್ಳುನಾಯಿ, ಸೀಳುನಾಯಿ (ನಾ).** ೧. ಭಯಂಕರವಾದ ಒಂದು ಜಾತಿಯ ನಾಯಿ; ಉಗ್ರವಾಗಿರುವ ಒಂದು ಜಾತಿಯ ನಾಯಿ (?): ಸೆರೆಯಂ ತೆಗೆವ ಸೀಳ್ನಾಯ್ಗಳುಮಂ . . . ಕಂಡು (ಗಧಾಯು. ೫-೩ ವ); ಪಾಲಿಂ ಮರ್ದಿಸಿ ಪುಷ್ಕರಮೂಲಮನಲ್ಲದೊಡೆ ಬಂಚಿಮದುವಾಗಲುಮಂ ಪಾಲಿಂದರೆದೀಂಟುಗೆ ತಾಂ ಸೋಲಿಸೆ ಸೀಳ್ನಾಯ [ಪಾಠಾಂ. ಶೋಧಿಸೆ ಶೀಳ್ನಾಯ] ವಿಷಮನಂತದೆ ಸಾಲ್ಗುಂ (ಖಮದ. ೧೩-೨೧); ಸಿಂಹದ ಮಱಿ ಸೀಳ್ನಾಯಾಗಬಲ್ಲುದೇನಯ್ಯ (ಅಖಂಡೇ. ೨೦-೯). **ಸಿಳ್ಳುನಾಯಿ:** ೧. ಹುಲಿ ಅಟ್ಟುತ್ತಿದೆಯೋ? ಅಥವಾ ಸಿಳ್ಳುನಾಯಿಗಳೋ? (ಮಲಮು. ೭೭). **ಸೀಳುನಾಯಿ:** ೧. ಸಿಂಹದ ಮಱಿಯ ಸೀಳುನಾಯಿ [ಪಾಠಾಂ. ಸೀಳ್ನಾಯಿ] ತಿಂಬಡೆ ಭಂಗವಿನ್ನಾರದು ಚೆನ್ನಮಲ್ಲಿಕಾರ್ಜುನ (ಮಹಾದೇ. ಬ. ೯೩-೨೧೪); ಸೀಳುನಾಯಿ. ಸೀಱ್‌ನಾಯ್. ಸಿರ್ ಎಂದು ಮೇಲೆ ಬೀಳುವ ನಾಯಿ (ನಮ್ಮನು. ೧೧೦). ೨. 'ಬೇಟೆನಾಯಿ' (ಜಾನಕೋ. ೫೦). 'ಸೀರ್ನಾಯ್' ಪರಾ. [ಸೀಳ್$_1$ + ನಾಯ್]

**ಸೀಱ (ನಾ).** ಒಬ್ಬಾತನ ಹೆಸರು: ರಾಚಮಲ್ಲಗಾಮುಣ್ಡನುಂ ಸೀಱನುಂ ಗಂಗ ಗಾಮುಣ್ಡನುಮ್ . . . ಸಾಕ್ಷಿಯಾಗೆ ಕೊಟ್ಟತ್ತು (ಎಕ. XII. ೧೭-೪೭; 813). [?]

**ಸೀಱು$_1$, ಸೇಱು (ಕ್ರಿ).** ೧. ಸಿಟ್ಟಿಗೇಳು; ಸಿಡಿಮಿಡಿಯಾಗು: ಆಗ ಮೆಱೆಮಿಂಡ ಸೀಱುತಿವನೇ ನಂಬಿಯಾತನ ಗಾಱುಗೆಲಸಕೆ ಶಂಕರಂ ಮನವೂಱಿ ನಿಚ್ಚಂ ಪಡಿಯನಿಕ್ಕು ವನಹುದ ಲೇಸಾಯ್ತು . . . ಎನುತ (ಬಸಪು. ೨೬-೨೧). ೨. ಜಗಳವಾಡು: ''ಸೀಱು —ದುಷ್ಕಲಹೇ, ದುಃಖಲಯೇ'' (ಶಮಧಾ.ನ). 'ಸೀರ್ಕರಡಿ' ಪರಾ. ೩. ಕಿರಿಚು;

ಕೂಗು; ಚೀರು: ಹಾಱ ಕೆಡವುತ ಜಿನಬಸದಿಗಳನೇಱಿಯಲ್ಲಿಂದಿಳಿಯ ಜಾಱುತ ಸೀಱುತಪತಾಪಿಸುತ (ಬಸವು. ೫೨-೧೩); ಕೆಟ್ಟೆನೆಂದೊಱಲುತ ಸೀಱುತಳವಳಿಯುತ್ತ . . . ನಡೆದು (ಭಾವಚಿಂ. ೮-೩೦). **ಸೇಱು:** ೪. ನಿಂದಿಸು; ದೂಷಿಸು: ದಿನದಿನಕೆ ನಿಯಮಾಚಾರಭಾಷೆಗಳ ಸೇಱಿದನ (ಬಸವು. ೪೫-೧೮). 'ಕೀಱು$_1$', 'ಕೀಱು$_2$' ಪರಾ.

[ದೇ. ‖ ತಮಿ. ಮಲ. ಚೀಱು; ತುಳು. ಸೀರುನಿ; ತೆಲು. ಚೀರು, ಚೀಱು]

**ಸೀಱು$_2$** (ಕ್ರಿ). ಚೆದರು; ಹರಡು: ವಿವಿಧವ್ಯಪಥಪಾಂಸುಗಳಿಂದ ನಾಡೆ ಸೀಱಿದ ತಲೆಯುಂ . . . ನೆಗೞ್ದಲ್ (ಕಾದಂಬ. ೬೩೬); ನೂಱೂಱು ಪಟಲ ಗುಂಡುಗಳ ಜೋಡಿಸಿ ಕಂಚಗಾಱರ ಪಸರಕಟ್ಟಂತೆ ಸೀಱಿ ಸಿಡಿಲು ಬೀಳುತಿವೆಯೆಡಬಲದೊಳಗೆ (ಭರತೇ. ೩೪-೬೪). [ದೇ. ‖ ತೆಲು. ಚೀಱುಮು; ತೊದ. ಸೀರ್; ಕುಇ. ಸೀರ್ಪ]

**ಸೀಱು$_3$, ಶೇರು, ಸೀರು$_3$, ಸೇರು$_2$** (ನಾ). ೧. ಒಂದು ಬಗೆಯ ಜಿಗುಟುಮಣ್ಣು; ಜೇಡಿಮಣ್ಣು: 'ಸೀಱುಮಣ್ಣು' ಪರಾ. **ಶೇರು:** ೨. ಕೆಸರು; ಬದಿ: ಇಳಿಚಾರು ತೀಕ್ಷ್ಣವಾಯಿತು, ಜೌಗು ಅಧಿಕವಾಗಿ ಶೇರಾಯಿತು (ಹಸುಹೂ. ೧೫೧). **ಸೀರು$_3$:** ೧. 'ಸೀರುಮಣ್ಣು' ಪರಾ. **ಸೇರು$_2$:** ೧. ಆ ಮನೆಯನ್ನು ಪೂರ್ತಿ ಸೇರಿನಲ್ಲೇ ಕಟ್ಟಿದ್ದಾರೆ (ರೂಢಿ). 'ಚೀಱು$_3$' ಪರಾ.

**ಸೇರಮಣ್ಣು** = ಜಿಗಿಯಾದ ಮಣ್ಣು; ಜೇಡಿಮಣ್ಣು: ಮೇಲೊಂದು ಮುಚ್ಚಳವಂ ಮುಚ್ಚಿ, ಅದರ ಸಂದಿಗೆ ಸೇರಮಣ್ಣಂ ಕೊಟ್ಟು, ಕುಕ್ಕುಟಪುಟ ಹಾಕುವುದು (ಸಕವ್ಯ. ೬೩).

[ದೇ. ‖ ತಮಿ. ಮಲ. ಚೇಱು; ಕೋತ. ಚೇರ್; ತೊದ. ಸೋಱ್]

**ಸೀಱುಂಬಳ್** 'ಸೀಱುಂಬುಳು' ನೋ.

**ಸೀಱುಂಬಾಳು** 'ಸೀಱುಂಬುಳು' ನೋ.

**ಸೀಱುಂಬುಳ್** 'ಸೀಱುಂಬುಳು' ನೋ.

**ಸೀಱುಂಬುಳಾಡಿಸು** (ಕ್ರಿ). ಎರಚು; ಚೆಲ್ಲಾಪಿಲ್ಲಿ ಮಾಡು: ಬೆಂಬೀಳದೆ ತನಗಿದಿರಾದ ನೃಪನಿಕುರುಂಬವ ತಾನಿರದೆಚ್ಚ ಅಂಬುಗಳಿಂದ ಕರುಳ್ಗಳ ಸೀಳಿ ಸೀಱುಂಬುಳಾಡಿಸಿ ಕೊಂದನತ್ತ (ನೇಮಿಸಂ. ೨೯-೧೨೦). [ಸೀಱುಂಬುಳಾಡು + -ಇಸು$_1$]

**ಸೀಱುಂಬುಳಾಡು, ಸಿಱುಂಬಳಾಡು, ಸಿಱುಂಬುಲಾಡು, ಸಿಱುಂಬುಳಾಡು, ಸೀರುಂಬುಳಾಡು** (ಕ್ರಿ). = ಸೀಱುಂಬುಳಾಡಿಸು: ಜಟಾಸುರನೆಂಬಸುರನನಾ ಗಿರೀಂದ್ರಕಂದರದೊಳ್ ಸೀಳ್ದು ಸೀಱುಂಬುಳಾಡಿ (ಪಂಪಭಾ. ೮-೩೧ ವ); ಸೃಗಾಲಶಾರ್ದೂಲ ಕಾಕಂಗಳ್ ಕಥಕನ ಪೃಥುಶರೀರಮಂ ಸೀಳ್ದು ಸೀಱುಂಬುಳಾಡಿ ಕೊಂದುವು (ಪಂಚತಂ. ೧೪೫-೧೮). **ಸಿಱುಂಬಳಾಡು:** ಆ ನರಿಗಳ್ ಸೀಳ್ದು ಸಿಱುಂಬಳಾಡಿ ತಿನೆ (ಸುಕುಮಾ. ೧೨-೩೯); ಮುಂಬರಿಯುತ ಶರಭಂಗಳ ಸೀಳಿ ಸಿಱುಂಬಳಾಡುತ ಬರೆ (ಶ್ರೀಪಾಲ. ೬-೩೪). **ಸಿಱುಂಬುಲಾಡು:** ಮಿಕ್ಕಿದಿರಾನ್ತ ವೈರಿಗಳನಾಹವರಂಗದೊಳಿಕ್ಕಿ ಮೆಟ್ಟಿ ಸೀಳ್ಚಿಕ್ಕಿ ಸಿಱುಮ್ಬುಲಾಡಿ (ಎಕ. VI. ಕಡೂರು. ೩೮-೫೮; 1191). **ಸಿಱುಂಬುಳಾಡು:** ದಂತಿಗಳಂ ಸೀಳ್ದು ಸಿಱುಂಬುಳಾಡಿದುದದೊಂದುತ್ಕಂಠಕಂಠೀರವಂ (ಜಗವಿ. ೧೬-೧೨); ಸಿಂಹಮಂ ಶರಭಂ ಸೀಳ್ದು ಸಿಱುಂಬುಳಾಡಿದವೊಲಾಂ ಮಾೞ್ಪೆಂ ದ್ವಿಷದ್ಭೂಪನಂ (ಮಹಾನೇ. ೫-೮೪). **ಸೀರುಂಬುಳಾಡು:** ಎರಳೆಗಳ ತಂಡಮಂ . . . ಪಿಡಿದು ನೆತ್ತರಂ ಕುಡಿದು ಝುಂಕಿಸಿ ಸೀರುಂಬುಳಾಡಿ ಸುಂಟಿಗೆಯಂ ತಿಂದು ತೇಗುವ ತರಕ್ಸುಗಳೊಳಂ (ಮರಾಚ. ೮-೨೪ ವ). [ಸೀಱುಂಬುಳು + ಆಡು$_1$]

**ಸೀಱುಂಬುಳು, ಸಿಱುಂಬುಳ್, ಸೀಱುಂಬಳ್, ಸೀಱುಂಬಾಳು, ಸೀಱುಂಬುಳ್** (ನಾ). ಹರಡಿ, ಚೆಲ್ಲಾಪಿಲ್ಲಿಯಾಗಿರುವುದು: "ಸೀಱುಂಬುಳುಯೆಂದು ಕವಿಗಳಿಂ ಸೂಸಾಟಂ" (ಕವಿಕಂ. ೨೨೫). **ಸಿಱುಂಬುಳ್:** "ಸಿಱುಂಬುಳೆಂದು ಸೂಸಾಟಂ" (ಕಶಸಾ. ೬೬- ೪೬೩). **ಸೀಱುಂಬಳ್:** "ಸೀಱುಂಬಳೆಂದಕ್ಕು ಸೂಸಾಟಕ್ಕೆ" (ಶಬ್ದಮಂ. ೬೨). **ಸೀಱುಂಬಾಳು:** ಕಂಬುಕಂಧರಗಳ ಕವಲಂಬುಗಳಿಂ ಸೀಱುಂಬಾಳುವಂತಿಡುತಿಹರು (ಜ್ಞಾನಚಿ. ೧೩-೬೩). **ಸೀಱುಂಬುಳ್:** "ಸೀಱುಂಬುಳ್ಸೂಸಾಟಂ" (ಕವಿಕಂ. ೧೯೫). [< ಸೀಱು$_2$]

**ಸೀಱುಡು** (ನಾ). ದುಂಬಿಯ ಜಾತಿಗೆ ಸೇರಿದ ಒಂದು ಬಗೆಯ ಹುಳು; ಜೀರುದುಂಬಿ: ತಳ್ತೊಳ್ದ ಸೀಱುಡುವಿಂದದ್ಭುತದಿಂ ಹಿಡಿಂಬವನಮಂ ಪೊಕ್ಕಂ ಮರುನ್ನಂದನಂ (ಪಂಪಭಾ. ೩-೯); ಕರೆದುವು ಸೀಱುಡುಗಳ್ ಪೆರ್ಮರಂಗಳೆಲೆಯಿಕ್ಕಿ ಕಟಿಲೆ ಬಿಟ್ಟುವು (ಪಂರಾಮಾ. ೭-೮೬). 'ಜೀಱುಂಡೆ' ಪರಾ. [?]

**ಸೀಱುದಲೆ** (ನಾ). ಕೆದರಿದ ಕೂದಲುಳ್ಳ ತಲೆ: ತೋರಗಿವಿ ಕೆಂಗಣ್ಣು ಬಿಡುವಾಯಿ ನಿಡುದಾಡೆ ಸೀಱುದಲೆ ಬಱತಂಗವಱತ ಮೊಲೆ (ಸಿದ್ಧರಾ. ೬-೧); ಕಣೆಗಾಲ ಸೋಂಕಿದುಡುಗೆ ಸೀಱುದಲೆಯ ಕೊರವಿಯರದೇಂ ಕಡುದೇಸಿವಡೆದರೋ (ನೇಮಿಸಂ. ೨೧-೫೩).

[ಸೀಱು$_2$ + ತಲೆ$_1$]

**ಸೀಱುಮಣ್ಣು, ಸೀರುಮಣ್ಣು, ಸೇರುಮಣ್ಣು** (ನಾ). (ಪಾತ್ರೆ, ಮಡಕೆ ಇತ್ಯಾದಿಗಳ ಬಾಯನ್ನು ಗಾಳಿ ಹೋಗದಂತೆ ಭದ್ರಪಡಿಸಲು ಬಳಸುವ) ಒಂದು ಬಗೆಯ ಜಿಗುಟಾದ ಮಣ್ಣು; ಜೇಡಿಮಣ್ಣು: ಮಂಡಗೆಗೆ ತುಪ್ಪ ಸಕ್ಕರೆ ಬಟ್ಟವಾಲಿಕ್ಕಿಕೊಂಡು ಪಿಂಡಂ ಮಾಡಿ ಹೊಸಮಡಕೆಯೊಳಗೆ ನೆಯ್ಯುಂಡದೊಡವಿಕ್ಕಿ ಅದನಿರಿಸಿ ಮುಚ್ಚುಳನಿಟ್ಟು ಸೀ[ಪಾಠಾಂ. ನೀ]ಱುಮಣ್ಣಿಕ್ಕಿ (ಸೂಪಶಾ. ೧-೨೧). 'ಚೀರುಮಣ್ಣು' ಪರಾ. **ಸೀರುಮಣ್ಣು:** ಹಸುವಿನ ಹಾಲು ೪ ಕೊಳಗವನ್ನು ೧ ಗುಡಾಣಕ್ಕೆ ಹೊಯ್ದು . . . ಮುಚ್ಚಳ ಮುಚ್ಚಿಸಿ ಸೀರುಮಣ್ಣು ಕೊಟ್ಟು (ಸಕವ್ಯ. ೩೯೦). **ಸೇರುಮಣ್ಣು:** ಚೀರುಮಣ್ಣನ್ನು ಕೆಲವರು ಸೇರುಮಣ್ಣೆಂದೂ ಹೇಳುತ್ತಾರೆ (ರೂಢಿ).

[ಸೀಱು$_3$ + ಮಣ್ಣು (< ಮಣ್)]

**ಸೀಱುಮಣ್ಣುಗೊಡು, ಸೀರುಮಣ್ಣುಗೊಡು** (ಕ್ರಿ). (ಪಾತ್ರೆ, ಮಡಕೆ ಮುಂತಾದುವುಗಳೊಳಗೆ ಗಾಳಿ ಹೋಗದಂತೆ ಅವುಗಳ ಬಾಯಿಗೆ) ಜಿಗುಟಾದ ಚೇಡಿಮಣ್ಣನ್ನು ಬಳಿ,— ಮೆತ್ತು: ಪರಿಮಳಂ ಪೋಗದಂದದಿ ಸೀ[ಪಾಠಾಂ.ನೀ]ಱುಮಣ್ಣುಗೊಡಲುರಿಗೆಂಡದ ಮೇಲೆ ಹೊತ್ತದಂದದೊಳವಂ ತಿರುಹಿ (ಸೂಪಶಾ. ೫-೨೨). **ಸೀರುಮಣ್ಣುಗೊಡು:** ಕುಂಬಳದ ಬಳ್ಳಿಯಂ ಸಣ್ಣನಾಗಿ ಕತ್ತರಿಸಿ ತದಕಿ ಉಪ್ಪಿನಲ್ಲಿ ಅಟ್ಟಿ ಮಡಕೆಗೆ ಹಾಕಿ ಮುಚ್ಚಳವ ಮುಚ್ಚಿ ಸೀರುಮಣ್ಣುಗೊಟ್ಟು (ಸಕವ್ಯ. ೩೬೫). [ಸೀಱುಮಣ್ಣು + ಕೊಡು$_1$]

**-ಸು$_1$** (ಪ್ರ). ಧಾತುಗಳಿಗೆ ಪ್ರೇರಣಾರ್ಥದಲ್ಲಿ ಸೇರುವ ಕೃತ್‌ಪ್ರತ್ಯಯ : ಕೆಲವು ಎಕಾರಾಂತ ಧಾತುಗಳಿಗೆ ಪ್ರೇರಣಾರ್ಥದಲ್ಲಿ ಇಸು ಪ್ರತ್ಯಯಕ್ಕೆ ಬದಲಾಗಿ — ಸು ಎಂಬುದು ಸೇರುವುದುಂಟು (ಮಧ್ಯಮ. ೧೫೧). 'ಇಂಬುಕೆಯ್ಸು' ಪರಾ.

**-ಸು$_2$** (ಪ್ರ). ನಾಮವಾಚಕದ ಮೇಲೆ ಸೇರಿ, ಕ್ರಿಯಾರ್ಥವನ್ನು ಕೊಡುವ ಪ್ರತ್ಯಯ: 'ಪಟಿಸು' ಪರಾ.

**-ಸು$_3$** (ಪ್ರ). ಧಾತುವಿನ ಮೇಲೆ ಸೇರಿ ಭಾವನಾಮಗಳನ್ನು ಸಾಧಿಸುವ ಕೃತ್‌ಪ್ರತ್ಯಯ: 'ಮುನಿಸು$_2$' ಪರಾ.

**ಸು$_4$-** (ಉಪ) ಒಳ್ಳೆಯ, ಸುಂದರ, ಉತ್ತಮ, ಸಂಪೂರ್ಣ, ಯೋಗ್ಯ ಇತ್ಯಾದಿ ಅರ್ಥಗಳಲ್ಲಿ, ಪದಗಳ ಆದಿಯಲ್ಲಿ ಸೇರುವ ಸಂಸ್ಕೃತದ ಒಂದು ಉಪಸರ್ಗ: 'ಸುಜಾಣ', 'ಸುಜಾಣೆ', 'ಸುಡಾಳ' ಪರಾ. [ಸಂ.]

**ಸುಂಕ$_1$** (ನಾ). ೧. (ಸರಕುಗಳ ತಯಾರಿಕೆ, ಮಾರಾಟ, ಆಮದು, ರಫ್ತು, ಇತ್ಯಾದಿಗಳಿಂದ ಸರಕಾರಕ್ಕೆ ಸಲ್ಲಿಸಬೇಕಾದ) ತೆರಿಗೆ; ಜಕಾತಿ: ಶ್ರೀಮತು ಹಬ್ಬೊಳಲ ಕೊಂಗಳೇಸ್ವರದೇವರಿಗೆ ಸುಂಕದ ಹೆಮ್ಮಾಡಿಯಣ್ಣ ಅರಿಸ . . . ಸಂಚೆದೀವಿಗೆ ಕೊಟ್ಟ ಗದ್ಯಾಣ ೧ರ ಧರ್ಮ್ಮ (ಎಕ. IV, ಕೃಷ್ಣರಾ. ೪೧-೩; ಸು. 950?); ಅಡಕೆಯ ತೋಟದಲು ವರ್ಷಕ್ಕೆ ಮರದಲೊಂದಡಕೆ ಎಲೆಯ ಸುಂಕ (ಎಕ. VII, ಶಿಕಾರಿ. ೨೦-೧೬; 1032); ಭಾಂಡವ ತುಂಬಿದ ಬಳಿಕ ಸುಂಕವ ತೆತ್ತಲ್ಲದೆ ವಿರಹಿತ ಹೋಗಬಾರದು (ಬಸವ. ೧೯೮). ೨. ಕೊಡುಗೆ; ಕಾಣಿಕೆ: ನಿಡುಹುರ್ಬಿಗಂ ಕರ್ವಿಲ್ಲ ಬಿಂಕಮಂ ಸುಂಕಮಿಕ್ಕಿದಂತೆ ನಗೆಮೊಗಕ್ಕೆ ಚಂದ್ರಮಂಡಲದೊಪ್ಪಮಂ ಕಪ್ಪಮಿಕ್ಕಿದಂತೆ (ಪುಣ್ಯಾಸ್ರ. ೨-೩೨ ವ); ಹುಬ್ಬಿನ ಬಿಂಕವು ಇಂದ್ರನ ಸುಂಕವು ಸೋಕಿದರರೆ ನೆಲೆಗೊಳಿಸುತಿವೆ (ಹಾಡುಪಾ. ೨೨-೨). ೩. ಒಂದು ಬಗೆಯ ಲೆಕ್ಕ (?): ಬಿಸಿಗೆ ವಂದಕೊಪಿರಲೆ ಸಾಗಿಹ ಗಂಧ ಪಂಚಭಾರದ ಸುಂಕಂ ಅರಸನೊಲಿದೀವ ಪಡಿಯಂಬರದಿಂ ತೊಂಭತ್ತು ಭಾರಕ್ಕೇನುಂ ಬಕ್ಕುಂ (ಭಾಸ್ಕರ. ೩೪-೪).

**ಸುಂಕದ ಕಟ್ಟೆ** = ತೆರಿಗೆ ವಸೂಲಿ ಮಾಡುವ ಉಕ್ಕಡ; ಜಕಾತಿಕಟ್ಟೆ: ನರಸುಂಹಪುರದ ಸುಂಕದ ಕಟ್ಟೆಯಲ್ಲಿ ದೇವರ ಹೆಸರಿಗೆ ನಡೆಯುನ ಮಸಾಶನ ತಿಂಗಳು ೧ ಕ್ಕೆ . . . ರೂ ೧೨ (ಎಕ. V(R), ತಿರುಮ. ೧೪೦-೩೯; 1855); ತೌಳಿಕಾರರಿಗೆ ಸುಂಕದ ಕಟ್ಟೆ ಕೇಡಿಗೆ ತಾವು ಕೊಡುವ ಕಲ್ಲ ಮಂಟಪದ ನವರಂಗವೆನಿಪೆನ್ನ ಸರ್ವಾಂಶದಲಿ

ಕಾಣುವವಸರವಿಲ್ಲ (ಭಕ್ತಸ. III, ೩). **ಸುಂಕದ ಮರ್ಯಾದೆ** = ತೆರಿಗೆಯ ಕಟ್ಟಳೆ,—ವ್ಯವಸ್ಥೆ: ಕನ್ನರದೇವನ ಮರ್ಯ್ಯಾದೆಯಲಾದ ಸುಂಕದ ಮರ್ಯ್ಯಾದೆಯಂ ತಪ್ಪದೆ ನಡಯಿಮೆನ್ದು ಬಿಟ್ಟಂ (ಸೌಇಇ. IX-i, ೭೬-೧೫; 991). **ಸುಂಕದ ಹೆಗ್ಗಡೆ** = ತೆರಿಗೆಯನ್ನು ವಸೂಲುಮಾಡುವ ಅಧಿಕಾರವುಳ್ಳವನು; ಸುಂಕದ ಅಧಿಕಾರಿ: ಸುಂಕದ ಹೆಗ್ಗಡೆ ಬೊಪ್ಪಡೆ ಒಳಗಾಗಿ ಸುಂಕ ಆಯ ದಾಯ ಸಮಸ್ತಮಸ್ಯವಾದಿ ಧಾರಾಪೂರ್ವಕ ಮಾಡಿ ಬಿಟ್ಟರು (ಎಕ. V (R), ಮೈಸೂರು. ೨೧೫-೧೪; 1175). **ಸುಂಕವ ಮಾಡು** = ತೆರಿಗೆಯನ್ನು ವಸೂಲುಮಾಡು; ಸುಂಕವನ್ನು ತೆಗೆದುಕೊಳ್ಳು: ಪೆದ್ದರಸರು ಸುಂಕವ ಮಾಡುವ ಕಾಲದಲು . . . ಕೊಟ್ಟ ಸಿಲಾಶಾಸನ (ಎಕ. XIV. ಚಾಮರಾ. ೧೨೦-೩; 1474?).

[< ಪ್ರಾ. ಸುಂಕ, ಸುಕ್ಕ./ ಸಂ. ಶುಲ್ಕ./ತಮಿ. ಚುಙ್ಕ, ಚುಕ್ಕ; ಮಲ. ಚುಂಗ; ತುಳು. ತೆಲು. ಸುಂಕ]

**ಸುಂಕ$_2$** 'ಸುಂಕು$_3$' ನೋ.

**ಸುಂಕ$_3$** (ನಾ). (?): ಮರ್ಕಟನ ಕೆಯ್ಯ ಸುಂಕಂ ಕರ್ಕಟಕನ ಕರಕಪಾಲ ವಾಂಗುಲಿ ಯುತದಿಂದರ್ಕಕ್ಷೀರದೆ ತೀವಿ ವಿಷಕ್ಕೇಱಲುಮಿೞಿಯೆ ಪೂಸಲೇೞುಗುಮಿೞಿಗುಂ (ಖಮದ. ೧೧-೩೭). [?]

**ಸುಂಕಂಗೊಳ್** (ಕ್ರಿ). (ಆಲಂ) (ಸುಂಕದಂತೆ) ವಸೂಲುಮಾಡು; ಸೆಳೆದುಕೊಳ್ಳು; ವಶಪಡಿಸಿಕೊಳ್ಳು : ನನೆ ಪೇೞ್ ಬಂದ ಮಾವಂ ಮನೋಭಾವಂ ನಿಂದು ನೋೞ್ಪುದುಂ ವಿರಹಾಳಂಬಿನಿಯರಭಿಮಾನಧನಮುಳ್ಳನಿತುಮನಾಲೀಢಮಿಟ್ಟು ಸುಂಕಂಗೊಂಡಂ (ಮಲ್ಲಿಪು. ೬-೩೧); ನಿನ್ನ ಪ್ರಾಣವಲ್ಲಭನಪ್ಪೊದ್ದಾಯನಮಹಾರಾಜನ ಬಿಂಕಮಂ ಸುಂಕಂಗೊಂಡು ವೀರಮಂ ದೂರಂ ಮಾಡಿ . . . ಕೋಡಗಗಟ್ಟುಗಟ್ಟಿ ತಂದಂ (ಧರ್ಮಾಮೃ. ೪-೨೫೨). [ಸುಂಕ$_1$ + ಕೊಳ್$_1$]

**ಸುಂಕಂವಿಡು** (ಕ್ರಿ). ತೆರಿಗೆವಿನಾಯಿತಿಯನ್ನು ಮಾಡು: ಸುಂಕಂವಿಟ್ಟರ್ XXX ಈವೂರಯೆಲ್ಲಕ್ಕಂ (ಎಕ. III. ನಂಜನ. ೨೩-೭: ಸು. 750). [ಸುಂಕ$_1$ + ಬಿಡು$_1$]

**ಸುಂಕಗಳ್ಳ** (ನಾ). ತೆರಿಗೆಯನ್ನು ಕೊಡದೆ ವಸ್ತುಗಳನ್ನು ಕಳ್ಳತನದಿಂದ ಸಾಗಿಸುವವನು : "ಕಳ್ಳತನದಿಂದ ಸಾಗಿಸುವವನು, ಸುಂಕಗಳ್ಳ" (Smuggler. ಇಂಕನಿ).

[ಸುಂಕ$_1$ + ಕಳ್ಳ$_1$]

**ಸುಂಕಠಾಣೆ** (ನಾ). ತೆರಿಗೆಯನ್ನು ವಸೂಲು ಮಾಡುವ ಉಕ್ಕಡ; ಜಕಾತಿಕಟ್ಟೆ: ಘಟ್ಟದ ಕೆಳಗಣ ಸುಂಕಠಾಣೆಗಳಲ್ಲೂ ಬರೆಸಿ (ಮೈಆರಿ. ೧೯೨೮, ೫೮-೧೧; 1674).

[ಸುಂಕ$_1$ + ಠಾಣೆ (< ತಾಣ)]

**ಸುಂಕಣೆ, ಸುಂಕರಿ** (ನಾ). ೧. ಒಂದು ಬಗೆಯ ಹುಲ್ಲು : ಸುಂಕಣೆ ಹಳದಿ ಹೂನ್ನಿಯೊ ಶ್ವೇತ ಮುತ್ತಲವು (ನಂದಿಲೀ. ೭-೧೮). **ಸುಂಕರಿ** : ೧. ಸುಂಕರೀಹುಲ್ಲು, ಕರೀವುನುಗದ ಹುಲ್ಲು, ಊಬಿನ ಹುಲ್ಲು, ಸಣ್ಣ ಊಬಿನ ಹುಲ್ಲು, ಕರಡಹುಲ್ಲು (ವ್ಯಜಿಗಿ. ೪೩-೮೪೪). ೨. (ಆಲಂ) ಅಲ್ಪ; ಕ್ಷುದ್ರ (?): ಬರಿಯ ರಾಜಸದಿಂದಮಲ್ಲರೊಳ್ಪುಸಿವ ಸುಂಕರಿ ಬಿಂಕಮಂ ಬಿಡದ ಜಡಮತಿಗಳಂ ಸಾಮಭೇದದಿಂದ ವಶಗೊಳಿಸಲಳವೆ (ವಂಕಾರಾ. ೬-೭-೧೪). [< ಪ್ರಾ. ಸುಂಕಲಿ]

**ಸುಂಕಪಾಳ** 'ಸಂಕಪಾಲ' ನೋ.

**ಸುಂಕಮಾನ್ಯ** (ನಾ). ತೆರಿಗೆಯನ್ನು ರದ್ದುಗೊಳಿಸುವಿಕೆ;ಸುಂಕದ ರಿಯಾಯಿತಿ: ಯಿಾ ಧರ್ಮ್ಮವನು ಆರೊಬ್ಬರು ಅಳಿದರೆ . . . ಕವಿಲೆಯ ಕೊಂದ ಪಾಪದಲಿ ಹೋಹನು ಸುಂಕಮಾನ್ಯ (ಎಕ. V (R), ತಿರುಮ. ೩೪-೧೧; 1564). [ಸುಂಕ$_1$ + ಮಾನ್ಯ]

**ಸುಂಕರಿ** 'ಸುಂಕಣೆ' ನೋ.

**ಸುಂಕವೆಗ್ಗಡೆ** 'ಸುಂಕವೆರ್ಗಡೆ' ನೋ.

**ಸುಂಕವೆರ್ಗಡೆ, ಸುಂಕವೆಗ್ಗಡೆ** (ನಾ). ತೆರಿಗೆಯನ್ನು ವಸೂಲಿ ಮಾಡುವ ಅಧಿಕಾರಿ: ಕಥಾನುರಾಗದಿಂದಿರ್ದಲ್ಲಿ ಸುಂಕವೆರ್ಗ್ಗಡೆ ಮಲ್ಲಿಯಣದಂಡನಾಯಕಂ (ಬೊಂಕಶಾ. ೧೯೩೪, ಬಂಕಾಪುರ. ೪-೨೦; 984?); ಇಂತಿನಿತುಮಂ ಪೆರ್ಗ್ಗಡೆ ಕರಣಂಗಳ್ ಸುಂಕವೆರ್ಗ್ಗಡೆಗಳುಂ . . . ರಕ್ಷಿಸುವರ್ (ಸೌಇಇ. XX, ೪೫-೩೨; 1071). **ಸುಂಕವೆಗ್ಗಡೆ** : ಬಳ್ಳಿಗಾವೆಯ ಸ್ಥಳದ ಠಾಣೋಗದ ಸುಂಕವೆಗ್ಗಡೆ ಕೊಮ್ಮರಾಜಂ (ಎಕ. III (S), ಶಿಕಾರಿ. ೩೩೪-೧೯; ಸು.1100). [ಸುಂಕ$_1$ + ಪೆರ್ಗಡೆ$_1$]

**ಸುಂಕಾಧಿಕಾರಿ** (ನಾ). = ಸುಂಕವೆರ್ಗಡೆ: ಸುಂಕಾಧಿಕಾರಿ ಮಂಚ್ಯರಸಂಗೆ ಪುಣ್ಯವಾಗಲು ಅಡ್ಡವಟ್ಟೆಯ ಸುಂಕವನು ಮಾನ್ಯವಾಗಿ . . . ಬಿಟ್ಟ ಕೋಣ ೧೦ (ಕಇಅ. ೪೫-೬೩-೩೪; 1229); ಕೊಪ್ಪದ ನಾಡ ಸುಂಕಾಧಿಕಾರಿ ಮಾದಣ್ಣನ ಮಗ (ಎಕ. VI. ಕೊಪ್ಪ. ೧೧-೧೦; 1327). [ಸುಂಕ$_1$ + ಅಧಿಕಾರಿ]

**ಸುಂಕಿಕ್ಕು** (ಕ್ರಿ). ಸುರುಳಿ ಸುತ್ತು: ನಾರ ಸೀರೆಯನೊಗೆವ ಜಡೆಗೆ ಸುಂಕಿಕ್ಕುವಾದಾರಮಂ ಬಿಗಿವ . . . ಚಾರುಮುನಿಪುತ್ರರ್ಗೆ ವಂದಿಸುತ ಬಂದು (ಹಚಕಾ. ೫-೫೫).

[ಸುಂಕು$_1$ (< ಸುರ್ಕು$_2$) + ಇಕ್ಕು]

**ಸುಂಕಿಗ** (ನಾ). ೧. ತೆರಿಗೆಯನ್ನು ವಸೂಲು ಮಾಡುವ ಅಧಿಕಾರಿ: ಪಡಿಸಣಿಗಂ, ಸುಂಕಿಗಂ (ಭಾಷಾಭೂ. ೧೬೮ ಉದಾ); ಶ್ರೀಮತು ಮೂಱುನಾಡ ಸುಂಕಿಗರುವಿಟ್ಟು ಮುನ್ನೆ ನಡವಾಱು ಪೇಱಿನ ಮೇಲೆ (ಎಇ. XVI, ೭೭-೧: 1037); ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವ (ಮಹಾದೇ. ಬ. ೪೩-೧೦೦). ೨. (ಆಲಂ) ಸೂರೆಕಾರ; ವಸೂಲಿಗಾರ (?): ಎಸುತ ಹೊಗುವರು ಭಟನ ಘಾಯಕೆ ಮುಸುಡ ತಿರುಹುವರಡಿಗಡಿಗೆ ಸಾಹಸದ ಸುಂಕಿಗನೊಡನೆ ತಲೆಯೊತ್ತಿದರು ಷಡುರಥರು (ಕುವ್ಯಾದ್ರೋ. ೬-೨೬). [ಸುಂಕ$_1$ + -ಇಗ]

**ಸುಂಕಿಗಿತಿ** (ನಾ). ಸುಂಕದ ಅಧಿಕಾರಿಯ ಹೆಂಡತಿ: ಅರಸನ ಪೆಂಡತಿ, ಅರಸಿತಿ ಏವಂ . . . ಸುಂಕಿಗಿತಿ, ತೋಟಿಗಿತಿ (ಶಬ್ದಾನು. ೧೯೧ ಪ್ರಯೋ).

[ಸುಂಕಿಗ + -ಇತಿ$_1$ (< -ಇತ್ತಿ)]

**ಸುಂಕಿಡು** (ಕ್ರಿ). ಸುರುಳಿ ಮಾಡು; ಸುತ್ತು: ಯಜ್ಞೋಪವೀತಮಂ ಬಂಧಿಸುವ ಜಡೆಗೆ ಸುಂಕಿಡುವ [ಪಾಠಾಂ. ಯ ಸುಂಕಿಸುವ] . . . ಮುನೀಶ್ವರರ ಕುಮಾರರಂ ಕಂಡು ಕೈಮುಗಿದಂ ಹರಿಶ್ಚಂದ್ರನು (ಹಚಕಾ. ೬-೩೭); ಜೆಡೆಗೆ[ಪಾಠಾಂ. ಯೆ] ಸುಂಕಿಡುವಕ್ಷಮಾಲೆಯ ಕೋವ . . . ಕುಮಾರತಾಪಸಬೃಂದಮೇನೆಸೆದಿರ್ದುದೋ (ವೃಷಖ. ೧೧-೪೪).

[ಸುಂಕು$_1$ (< ಸುರ್ಕು$_2$) + ಇಡು$_1$]

**ಸುಂಕಿನುಂಡೆ** 'ಸುಖಿನುಂಡೆ' ನೋ.

**ಸುಂಕು$_1$** 'ಸುರ್ಕು$_2$' ನೋ.

**ಸುಂಕು$_2$** 'ಸೋಂಕು$_2$' ನೋ.

**ಸುಂಕು$_3$**, ಸುಂಕ$_2$, ಸುಕ್ಕು$_3$, ಸೂಕ (ನಾ). ೧. ಧಾನ್ಯಗಳ ಮೇಲಿರುವ ಹೊಟ್ಟಿನ ಮೊನಚಾದ ತುದಿ; ಧಾನ್ಯಶೂಕ: ರಾಜಾನ್ನದ ಸುಂಕಿನೋಪಾದಿಯಲ್ಲಿ ಸೂಕ್ಷ್ಮವಾಗಿ . . . ಪರಮಾತ್ಮಲಿಂಗವು ವಿಶೇಷವಾಗಿರುತ್ತಿದ್ದಿತು (ಕ್ರವಟೀ. ೨೪); ಸುಂಕಿನ ಜೋಳದ ರಾಸಿಯನ್ನು ನೋಡಿ ನೋಡಿ ನಲಿಯಬೇಕು (ಚೆಲುಮ. ೨೩೬). ೨. ತುದಿ; ಮೊನೆ: ಅಮೃತಕಲಶದ ಕೆಳಗೆ ಹಾಕಿರ್ದ ದರ್ಭೆಯ ನೆಕ್ಕಲು ಆ ದರ್ಭೆಯ ಸುಂಕಿನಿಂದ ಸರ್ಪಗಳ ನಾಲಿಗೆ ಯರಡಾಗಿ ಸೀಳಲು (ಕಾಶೀಮ. ೨೫೯-೪). **ಸುಂಕ$_2$** : ೧. ಹಂತಿಯ ತಿರುಗವ ಬಸವಣ್ಣನ ಮೈಮೇಲಿನ ಸುಂಕವನ್ನು . . . ಜಾಡಿಸುವಳು (ಕನ್ನಜಾ. ೨೭). ೨. ಹುಲ್ಲು ಮುಂತಾದುವುಗಳ ಎಲೆಯ ಮೇಲಿರುವ ಊಬು: ನೊಣನುತ್ತಕವೆಂಬ ವನಸ್ಪತಿಯ ಎಲೆಗಳ ಮೇಲೆ ಅಂಟಿನಂಥ ಜಿಗುಟುಪದಾರ್ಥವೂ ಸುಂಕವೂ ಇರುವದುಂಟು (ಮುಂಬಯಿ. ೬-೨೭೫). **ಸುಕ್ಕು$_3$** : ೧. ಜೋಳದ ತೆನೆಗಳ ಸುಕ್ಕು ಗಾಳಿಗೆ ಹಾರಿ ಹೋಯಿತು (ರೂಡ). **ಸೂಕ**: ೧. ಹೃದಯಕುಹರಾಂಭೋಜದೊಳಗೆ ನೀವಾರಸೂಕದ ಸದೃಶವಾದ ನಿನ್ನಂ ಭಾವಿಸಿ (ಭಕ್ತಸು. III, ೨೪-೩)

[< ಪ್ರಾ. ಸುಂಕಅ, ಸೂಅ./ ಸಂ. ಶೂಕ./ ತೆಲು. ಸುಂಕು]

**ಸುಂಕುದಬ್ಬೆಹುಲ್ಲು, ಸುಕ್ಕುದಬ್ಬೆಹುಲ್ಲು** (ನಾ). (ಊಬಿನಿಂದ ಕೂಡಿರುವ) ಒಂದು ಬಗೆಯ ಹುಲ್ಲು: (ವ್ಯಜಿಗಿ. ೫೪-೧೦೮೬). **ಸುಕ್ಕುದಬ್ಬೆಹುಲ್ಲು** (ವ್ಯಜಿಗಿ. ೨೦-೩೬೭). [ಸುಂಕು$_3$ + ದಬ್ಬೆ$_2$ (< ದರ್ಭೆ) + ಹುಲ್ಲು (< ಪುಲ್)]

**ಸುಂಕುಬುಲ್, ಸುಂಕುಬುಲ್ಲು** (ನಾ). (ಊಬಿನಿಂದ ಕೂಡಿರುವ) ಒಂದು ಬಗೆಯ ಹುಲ್ಲು: ಪಕ್ಕಿಗಳೆಲ್ಲಂ ಪರ್ದು ಕಾಗೆಗಳೆ ಪುಲ್ಲೆಲ್ಲಮೆ ಸುಂಕುಬುಲ್ಲೆ . . . ಚರಿಯಿಸುವರೆಲ್ಲಂ ಕಿರಾತಗಣಮು[ಂ] ರಾಕ್ಷಸಗಣಮೆ (ಬಂಹರಿ. ೮-೧೩ ವ). **ಸುಂಕುಬುಲ್ಲು** : "ಶೂಕತೃಣ:- ಸುಂಕುಬುಲ್ಲು" (ಒಷಧಿ. ೧೬೯). [ಸುಂಕು$_3$ + ಪುಲ್]

**ಸುಂಕುಬುಲ್ಲು** 'ಸುಂಕುಬುಲ್' ನೋ.

**ಸುಂಕುರೋಗ** 'ಸೋಂಕುರೋಗ' ನೋ.

**ಸುಂಕೇಶ್ವರ, ಸಂಕೇಶ್ವರಿ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು: ಅಡಸಾರ ಸುಂಕೇಶ್ವರ ಅದರಗಂಚಿ ಗೋರಟಿ ರುದ್ರಗಂಟಿ (ಕೃಷಿಪ್ರ. ೨೦೦). **ಸಂಕೇಶ್ವರಿ:** ಸಣ್‌ಕತ್ತಿ, ಸಂಕೇಶ್ವರಿ, ವಾತನಾರಾಯಣ, ಕೆಂಪುಕೆಂಚಗೆ, ನೀರಂಗಿ (ಮೃಚಿ. ೨೮-೫೬೩). [ದೇ. ‖ ತೆಲು. ಸುಂಕೇಸರಿ, ಸುಂಕೇಸಲ, ಸುಂಕಾಸರಿ./ ಮರಾ. ಸಂಕಾಸುರ, ಸಂಕೇಶ್ವರ]

**ಸುಂಕ್ಲಾಯಿ** (ನಾ). ಒಬ್ಬ ಕ್ಷುದ್ರದೇವತೆಯ ಹೆಸರು: ಬುಳ್ಳನು ಸುಂಕ್ಲಾಯಿ . . . ಬಕ್ಕಾಯಿ ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು ಪೊಳ್ಳಲ್ಲದೆ ಗತಿ ಇಲ್ಲವೊ (ವಿಸಾಸು. ೫೮-೨). [?]

**ಸುಂಗಲಂಬು** (ನಾ). ಒಂದು ಬಗೆಯ ಬಾಣ: ಕಾಲಾಳ್ಕಾದುತ್ತಿರೆ ಸುಙ್ಗಲಂಬು ಪಾಱಿದೊಡೆ (ಸೌಇಇ. IX-I. ೫೮-೧೧; ಸು. 10ನೆಯ ಶ). 'ಚುಂಗಲ' ಪರಾ.

[? + ಅಂಬು₁]

**ಸುಂಚಿಸು** (ಕ್ರಿ). ಲೇಪಿಸು; ಬಳಿ: ವಿದ್ಯಾಧರತಂತ್ರಕ್ಕೆ ವಿಧಿ ಮಂತ್ರಿಸಿ ಕಾಡಿಗೆಯಂ ಸುಂಚಿಸಿದನೆಂಬಂತಿಂದ್ರನೀಲದ ವಿಮಾನಂಗಳಿಂ (ಧರ್ಮಾಮೃ. ೮-೧೯೬). [? + -ಇಸು₁]

**ಸುಂಟ** 'ಶುಂಟ' ನೋ.

**ಸುಂಟಗೆ, ಶುಂಟಿಕೆ, ಸುಂಟಿಗೆ, ಸುಂಡಿಕೆ, ಸೂಂಟಗೆ** (ನಾ). ೧. ಸುಟ್ಟ ಮಾಂಸ: ಚತುರಂಗಸಾಧನದ ಮಯ್ಮಯ್ಯೊಳ್ ಜಗಿಲ್ತಾಂತ ನಾಯಕರಂ ಸುಂಟಗೆಯಾ [ಪಾಠಾಂ. ಟಗೆಯೂ, ಟಗೆಯೂ]ಱಿದಂತೆ ರಥದೊಳ್ ಜೋಲ್ವನ್ನೆಗಂ [ಕೋ]ದು ಚಾಪಕಳಾಕೌಶಳಮಂ ಜಗಕ್ಕೆ ಮೆಱೆದಂ ಮಯ್ಯೆರ್ಚಿ ಕುಂಭೋದ್ಭವಂ (ಪಂಪಭಾ. ೧೨-೨೫); ಕುತ್ತಿದ ಕೊಂತದೊಳ್ ಕೋಲ ಸುಂಟಗೆಯಂತೆ ಸಾಲಿಟ್ಟು ಬೀಱೆಯುಂ (ಅನಂಪು. ೧೧-೮೪ ವ). ೨. ಮಾಂಸ; ಬಾಡು: ಸುಡುವರ್ ಸುಂಟಗೆ ಕಾಸುವರ್ . . . ವೈರದಿಂ (ಅನಂಪು. ೯-೩೧); ಸುಂಟಗೆಯ ಕೋಲೊಳುರುಳ್ಚಿ ಕಾಸುತ್ತ (ಬಸಪು. ೧೮-೨೮). ೩. "ಎಲುಬಿನ ಭೇದ" (ಶಮದ. ನ. ೪೬ ವೃತ್ತಿ, ಅಡಿಟಿ). **ಶುಂಟಿಕೆ:** ೨. ರಣದೊಳಹಿತರ ಪಿಡಿದು ಶುಂಟಿಕೆಯಣಲೊಳಡಸುವ ಸುರಪಸಿಬಿಗಳ ಮಣಿಸುವತಿಬಲರಮಮ ಬಂದುದು ಭೂಮಿಯಗಲದಲಿ (ಅಂಬಿಕಾ. ೮-೪೧). **ಸುಂಟಿಗೆ:** ೧. "ಸುಂಟಗೆಯೆಂದುಂ ಕೊಟ್ಟಸಮೆಂದುಂ ಸುಡುಬಾಡು" (ಕಶಸಾ. ೫೨-೧೨೪); ತುಱುಗಿದೆಲುವಿನ ಸಾಲ ಸುಂಟಿಗೆ ಮೆಱೆವ ಮಾಂಸದ ರಾಸಿಗಳ ಹರದೆಱಕೆಗಳ ಕಂಡಬಲೆ ಹೊಗಳಿದಳಡಬಳದ ಮನೆಯ (ಕುವ್ಯಾವಿ. ೩-೩೭). ೨. ಇತ್ತಲು ಹೋಮಂ ಮಾಡುವರಿತ್ತಲು ಸುಂಟಿಗೆಯನೊಯ್ದು ಕಾಸುವರೆಂಬರ್ (ಸಮಪು. ೧೪-೯೯); ಅರಿಯ ಖಂಡದಿ ಹಸಿಯ ಸುಂಟಿಗೆವೆರಸಿ ಭೂತಾವಳಿಯ ದಣಿಸಿದ (ಕುವ್ಯಾಕ. ೮-೪೨). ೪. ಸಲಾಕಿಯಲ್ಲಿಟ್ಟು ಸುಡಲು (ಮುಖ್ಯವಾಗಿ) ತೆಗೆದುಕೊಳ್ಳುವ ದೇಹದ ಭಾಗ; ಗುಂಡಿಗೆ; ಹೃದಯ: ಕೆದಱಿತೀಱೆಯ ದೆಸೆ ಸುನೀತನ ಸದೆದು ತೆಗೆ ಸುಂಟಿಗೆಯನೆನುತಲಿ ಯದುನೃಪಾಲರು ಗಜಬಜಿಸಲು (ಕುವ್ಯಾಸ. ೮-೩೯); ತೊರಳಿಗುಪ್ಪೆ ಮಜ್ಜೆಯ ತೆವರ್ ಸುಂಟಿಗೆಯ ಸಾಲ್ ತಳಿತ ಖಂಡಂಗಳ ಬಣಬೆ . . . ತದ್ರಣರಂಗದೆಲ್ಲೆಡೆಯೊಳುಂ ತೀವೆ (ಚಿಬಪು. ೪೮-೫೬). **ಸುಂಡಿಕೆ:** ೨. ನಿನ್ನದೆಯ ಹಳಚಿ ಕವಿ ಬಲ ಮೇಘನಾದರ ಸೆಳೆದುತ್ತಸ್ಸುಂಡಿಕೆಗಳನಿಬರು ಮೆಲುವ್ವವೆಂದನು (ಅಂಬಿಕಾ. ೨೭-೧೨). **ಸೂಂಟಗೆ:** ೨. ಸತ್ತಿಗೆ ಗಗ್ಗರಂ ಕರುಳ ಬಕ್ಕಳೆ ಮಿಾಂಟದ ಕಣ್ಣಳ್ಕೆಸರಂ ಸುತ್ತಿದ ಬಾಳದುಳ್ಮಿಯ ಸೂಂಟಗೆ ಪಂದಲೆಯೊಂದು ಬಾಸಿಗಂ . . .ಒಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೫೩೩). ೫. ನೆಣ; ಕೊಬ್ಬು: ನೇಪಾಳನ ಬೆನ್ನ ಸೂಂಟಗೆಗೆ . . . ಕಾಯ್ದು ಖಿಳ್ಗಮಾಕಾಳಿಯಡತ್ತುರ್ತ ನಿಳ್ಕುವಳು ನಾಲಗೆಯಂ ನರಸಿಂಗಭೂಪನ (ಎಕ. IV. ಹುಣಸೂ. ೧೩೭-೧೭; 1162).

**ಸುಂಟಗೆಯ ಕೋಲು** = **ಸುಂಟಗೆಗೋಲ್**: ಕಣ್ಣಪ್ಪದೇವನು ಆ ಮೃಗವನೆಸದು ಮಾಂಸವ ತೆಗದು, ಸುಂಟಗೆಯ ಕೋಲಿನಲ್ಲಿ ಸರಗೊಳಿಸಿ ಉರಿಯ ಕಾಸಿ . . . ಮಾಂಸವ ಸಮರ್ಪಿಸಲು (ಭೈರಸೂ. I. ೧೨೭). [?]

**ಸುಂಟಗೆಗೋ** (ಕ್ರಿ). ಸುಟ್ಟ ಮಾಂಸವನ್ನು ಕಂಬಿಯಲ್ಲಿ ಪೋಣಿಸು: ಗಱಿ ಸೀದು ಮುಱುಂಟಿ ವಿಹಂಗಸಂಕುಲಂ ಗೆಂಟಱೊಳೊಂದಿ ತಾಱಿದ ಮರಂಗಳ ತೊಱಲು ಗೊಂಬುಗೊಂಬಿನೊಳ್ ಸುಂಟಗೆಗೋದ ಮಾಟ್ಕೆಯುವೊಲಿರ್ದುವು[ದುಂ]ಗಿ ನಿದಾಘ ಕಾಲದೊಳ್ (ಸೂಕ್ತಿಸು. ೧೦-೧೯೯). [ಸುಂಟಗೆ + ಕೋ₁]

**ಸುಂಟಗೆಗೋಲ್, ಸುಂಟಗೆಗೋಲು, ಸುಂಟಿಗೆಗೋಲು** (ನಾ). ಮಾಂಸವನ್ನು ಸಿಕ್ಕಿಸಿ ಸುಡಲು ಬಳಸುವ ಕೋಲು,— ಚುಚ್ಚುಗೋಲು; ಮಾಂಸವನ್ನು ಚುಚ್ಚಿ ಸುಡಲು ಬಳಸುವ ಸಲಾಕಿ,— ಕಂಬಿ: ಚೆನ್ನ ಸುಂಟಗೆಗೋಲನಳವಡಿಸಿ ತಂದು ಪೊಸಕಿಚ್ಚಂ ಪೊಸೆದು (ಕನ್ನರ. ದೇ. ೧೫೧-೫); ಮಸೆವ್ವಮು ಕೊಡೆ ಕತ್ತಿಗಳನಾಗಳೆ ಸುಂಟಗೆಗೋಲ್ಗಳಲ್ಲಮಂ ಬಸಿವುದು ಕೋಪದಿಂದರೆಯುತಿರ್ಪುದು ಸಂಬರಮಂ (ಸೂಕ್ತಿಸು. ೩-೯೮). **ಸುಂಟಗೆಗೋಲು:** ಸುಂಟಗೆಗೋಲಿಂದಡಗಂ ಮಿಾಂಟ ಪೊರಳ್ಚುತ್ತೆ ಪಚಿಸಿ (ವೃಷಪು.೧೦-೯೩). **ಸುಂಟಿಗೆಗೋಲು**: ಮೃಗವಂ ಬಿರ್ಚಿ ಮೇಲ್ಗಂಡಂಗಳಂ ತೆಗದು . . . ತಾಂ ಕಾಸಲ್ವೇಡಿ ಪೊಸ ಸುಂಟಿಗೆಗೋಲನೊಂದಂ ಕೀಸಿ ಪೊಸಕಿಚ್ಚಂ ಪೊಸೆದು ಪಟುವಂ ಮಾಡಿ (ತ್ರಿಪುವಿ. ೨೭-೧೨೨ ವ); ತನ್ನ ಗಯುಗದ ನವಖಂಡಮಂ . . . ಕಿಚ್ಚನೊಳಗಿಟ್ಟು ಸುಂಟಿಗೆಗೋಲಿನಿಂ ತವಕದಿಂ ತಿರುವಿ ಪಚಿಸುತ್ತೆ (ಮಹಾವಿ. ೭-೪೩).

[ಸುಂಟಗೆ + ಕೋಲ್₁]

**ಸುಂಟಗೆಗೋಲು** 'ಸುಂಟಗೆಗೋಲ್' ನೋ.

**ಸುಂಟರ** 'ಸುಟ್ಟುರೆ' ನೋ.

**ಸುಂಟರಗಾಳಿ** 'ಸುಟ್ಟುರೆಗಾಳಿ' ನೋ.

**ಸುಂಟರುಗಾಳಿ** 'ಸುಟ್ಟುರೆಗಾಳಿ' ನೋ.

**ಸುಂಟಿ, ಸುಂಠಿ, ಸೊಂಟಿ** (ನಾ). (ಅಡಿಗೆಗೆ ಅಥವಾ ಔಷಧಿಗೆ ಉಪಯೋಗಿಸುವ) ಒಂದು ಬಗೆಯ ಬೇರು; (ಹಸಿ ಅಥವಾ ಒಣ) ಶುಂಠಿ; ಕಾರಗೆಣಸು: ಬಿಸುನೀರೊಳ್ ಕುಡಿಯಿಸು ಹಿಂಗು ಸುಂಠಿ ಸಂವರ್ಚಲಂಗಳಂ (ಲೋಕೋಪ. ೯-೮); ಸುಂಟಿ ತಿಂದ ಬಾಯೊಳ್ ಬಿಸಿನೀರಂ ಕುಡಿದರಂತೆ ಮಿಡುಮಿಡುಮಿಡುಕಿ (ಧರ್ಮಾಮೃ. ೧೦-೧೯೨ವ). **ಸುಂಠಿ:** ಉಮರಾವತಿಯ ಕಡಿಯ ಸುಂಠಿಯು ಇತ್ತ ಕಡೆಗೆ ಬಹಳ ಪ್ರಖ್ಯಾತವದೆ (ಮುಂಬವ್ಯಾ. ೫೮). **ಸೊಂಟಿ**: ಸೊಂಟಿಯ ರಸದಿಂದ ಕೊಂಡರೆ ಕೆಡುವುದು ಕಂಟಕವಾದತಿಸಾರ (ಸಾಳ್ವಸಾಂ. ೭). [ಪ್ರಾ. ಸುಂಠೀ./ ಸಂ. ಶುಂಠಿ, ಶುಂಠೀ]

**ಸುಂಟಿಗೆ** 'ಸುಂಟಗೆ' ನೋ.

**ಸುಂಟಿಗೆಗಳೆ** (ಕ್ರಿ). ಮಾಂಸವನ್ನು ಕೀಳು: ಸದೆವಂಪುರ್ದುವ ಸುಡುವಡುವ ಸುಂಟಿಗೆಗಳೆವ ನೆತ್ತರ್ಗಱೆವ . . . ಗೆಯ್ಮೆಯೊಳ್ ಕ್ಷೆಮೆಯುಂ ಸಫಲಮುವ್ವುವು (ಚಕಮಂ. ೯-೪). [ಸುಂಟಿಗೆ (< ಸುಂಟಗೆ) + ಕಳೆ₁]

**ಸುಂಟಿಗೆಗೋಲು** 'ಸುಂಟಗೆಗೋಲ್' ನೋ.

**ಸುಂಟಿಗೆಯಡಗು** (ನಾ). ಗುಂಡಿಗೆಯ ಮಾಂಸ: "ಸುಂ [ಪಾಠಾಂ. ಡುಂ] ಟಿಗೆಯಡಗೆನೆ ಹೃದಯಮಾಂಸಂ" (ಭಾರನಿ. ೧೮). [ಸುಂಟಿಗೆ (< ಸುಂಟಗೆ) + ಅಡಗು₁]

**ಸುಂಟಿದಿನ್** (ಕ್ರಿ). ಶುಂಠಿಯನ್ನು ತಿನ್ನು: ತಲೆಯಂ ಬಲುಡರ್ಗಿರ್ಚಿ ನಿಲಲಾಱದೆ ಸುಂಟಿದಿಂದ ಕೋಡಗದಂತುಮ್ಮಳಿಸಿ (ಧರ್ಮಾಮೃ. ೧-೧೪೧). [ಸುಂಟಿ + ತಿನ್]

**ಸುಂಟಿಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಶ). 'ಶುಂಠಿಹುಲ್ಲು' ಪರಾ.

[ಸುಂಟಿ + ಹುಲ್ಲು (< ಪುಲ್))]

**ಸುಂಟುರುಗಾಳಿ** 'ಸುಟ್ಟುರೆಗಾಳಿ' ನೋ.

**ಸುಂಟುರೆ** 'ಸುಟ್ಟುರೆ' ನೋ.

**ಸುಂಟೆ** (ನಾ). ಬಿಲ್ಲೆ; ಚೂರು: ಒಬ್ಬ ಹುಡುಗಿಯು . . . ಒಂದು ದಪ್ಪ ಬೆರಣಿ ಸುಂಟೆಯನ್ನು ಇರಿಸಿ ಅದಕ್ಕೆ ಕೈಮುಗಿಯುತಾ (ಪಟೇಮಾ. ೬). [?]

**ಸುಂಠಿ** 'ಸುಂಟಿ' ನೋ.

**ಸುಂಠಿವೆರಲ್** (ನಾ). ಚಿಕ್ಕ ಬೆರಳು; ಗಿಡ್ಡ ಬೆರಳು: ಕೊಱಟುದಲೆಯ ಕೊಳೆನಾಱುವ ಕಬ್ಬಾಯ ಸುರುಟುಕಿವಿಯ ಸುಂಠಿವೆರಲ (ಸೇಮಿಸಂ. ೭-೧೦೩).

[ಸುಂಠಿ₁ (P <— ತಮಿ. ಚುಣ್ಣು = ಚಿಕ್ಕದು) + ಬೆರಲ್]

**ಸುಂಠಿಸು** (ಕ್ರಿ). (?): ನೆರೆಹೊರೆಗಳಿಂ ನೀಡಿಸಿಕೊಳುತ ಮಕ್ಕಳಾ ಕೂಡೆ ಸುಂಠಿಸುವ ರಲ್ಲಳುಕದಿರ್ಪವರಲ್ಲ (ಲಿಂಗಪು. ೧೮-೧೯). [? + — ಇಸು₁]

**ಸುಂಡ** (ನಾ). ೧. (ಉದ್ದವಾದ ಮೂತಿ ಇರುವ ಒಂದು ಜಾತಿಯ) ಚಿಕ್ಕ ಇಲಿ; ಮೂಗಿಲಿ; ಚುಚುಂದರ: ಹಾಗೆಯ ಇರು ಸುಂಡ ಹೀಗೆಯ ಇರು ಸುಂಡ ಅಡಕೇಯ ಕುಕ್ಕೇಲಿ ಇರು ಸುಂಡ ನಮಗೆ ಅಡಕೆ ಕೊಟ್ಟೋಳ ಕಡಿ ಸುಂಡ

(ನನ್ನೂರು. ೧೦೩); ಸುಂಡ ತನ್ನ ಪ್ರಾಯದಲ್ಲಿ ಮೂಗಂಡಗ ಬಾಳಿತು (ಗಾದೆ). ೨. ಇಲಿಯ ಮರಿ: ಗಜದೊಳ್ ಸುಂಡಗೆ ಯುದ್ಧವೇ (ಸೋಮೇಶ. ೪೫); ಪೆಟ್ಟಿಗೆಯಿಂದ ಸುಂಡಗಳು ನೆಗೆದು ಬಂದಿದ್ದರೆ ಬೆಕ್ಕು ಹೇಗೆ ಮಾಡುತ್ತಿದ್ದಿತೊ ಹಾಗೆ (ಬಾಳಹೂ. ೯೯).

[ದೇ. ॥ ತಮಿ. ಚುಣ್ಣನ್; ಮಲ. ಚುಣ್ಣ; ತೆಲು. ಚುಂಡು./ ಸಂ. ಶುಂಡಮೂಷಿಕಾ, ಶುಂಡಿಮೂಷಿಕಾ]

**ಸುಂಡಲ** 'ಸುಂಡಿಲ್' ನೋ.

**ಸುಂಡಲು** 'ಸುಂಡಿಲ್' ನೋ.

**ಸುಂಡಳೆ** (ನಾ). (?): ಸುಳಿವ ಸೀಳುವ ಹಳಚಿ ಮಾರ್ಮಲ ಮಲತು ಹೋರುವ ಕಳೆಯಲುರೆ ನೊಂದಳಲಿ ಸುಂಡಳೆ ತೆಗೆದುವಸುವ (ಮೂಲರಾ. ೫-೨೫). [?]

**ಸುಂಡಾಯ್ತ** (ನಾ). (?): ಸೀಸಕ ಭುಜಯುಗದ ಬಿಕ್ಕೆ ಸುಂಡಾಯ್ತ [ಪಾಠಾಂ. ಸೂಡಾಯ್ತ, ಸೂಡಾಯ] ಕೈದುಗಳ್ ತುಂಬಿ ಬಂಡಿಗಳಗಣಿತಂ ಬಂದುವು (ಚಿಬಪು. ೪೭-೪೪); "ಹಸ್ತ (ಮುಖ?) ರಕ್ಷಕ" (ಚಿಬಪು. ಕೋಶ). [?]

**ಸುಂಡಾಲ**, ಸುಂಡಾಳ (ನಾ). ೧. ಸೊಂಡಿಲನ್ನುಳ್ಳದು; ಆನೆ: ಸುರೇಂದ್ರನಜ ಸುಂಡಾಲವೋ ಭಾನುವೋ ವಿಧುವೆಯ್ಯುತ್ತಿಹನೊ (ಭೈರಪು. ४-४೦). **ಸುಂಡಾಳ:** ೧. ತತುಪುರವೀಧಿಯೊಳು ಸುಳಿವ ಸುಂಡಾಳಬ್ರಜ (ಕಹುಲ. ೬-೧೭; 1218). ೨. ನೀರಾನೆ: ಖಳನಕ್ರಕ್ರೂರಕರ್ಕಾಟಕತತಿ[ಗುಮ]ತಿಮಿವ್ಯಾಳ ಸುಂಡಾಳಭೇಕೀಕುಳಭೀಳಂ . . . ತರಂಗಾಳಿಭದ್ರಂ ಸಮುದ್ರಂ (ಪುಣ್ಯಾಸ್ರ. ೧-೩೭). [< ಸಂ. ಶುಂಡಾಲ]

**ಸುಂಡಾಳ** 'ಸುಂಡಾಲ' ನೋ.

**ಸುಂಡಿಕೆ** 'ಸುಂಟಗೆ' ನೋ.

**ಸುಂಡಿಲ್**, ಶುಂಡಲ, ಶುಂಡಿಲ್, ಶುಂಡಿಲು, ಸುಂಡಲ, ಸುಂಡಲು, ಸುಂಡಿಲ, ಸುಂಡಿಲಿ$_2$, ಸುಂಡಿಲು, ಸೊಂಡಿಲ್, ಸೊಂಡಿಲು (ನಾ). ೧. ಆನೆಯ ಕೈ; ಗಜಹಸ್ತ: ದೋರ್ಲತಿಕೆ ಸುಂಡಿಲ್ಗಂಧುರಮದಮೆಳಜವ್ವನಮಾಗಿರೆ ಗಣಿಕೆಯರೆಸದ ರಂಗಜನ ಪಿಡಿಗಳವೋಲ್ (ಉದ್ಭಟ. ೧೦-೪೦); ವ್ಯಗ್ರದಾನೆಯ ಸುಂಡಿಲಂ ಹಸ್ತಾಗ್ರದಿಂ ಪಿಡಿದೊತ್ತಿ (ಬಸವು. ೨೨-೧೫). **ಶುಂಡಲ** : ೧. ಮತ್ತಗಜಗಳ ಶುಂಡಲದಂದದ ಕತ್ತಿಗಳ (ದೇವೀಮು. ೩-೩೨). **ಶುಂಡಿಲ್:** ೧. ಕಾಲಸೂಚುತ್ತದಜ ಶುಂಡಿಲ ನಾಳಮಂ ಹೊಕ್ಕಿಜಿ ದಿಜಿದು (ಬಸವು. ೧೮-೪೪). **ಶುಂಡಿಲು** : ೧. ಅವನ ಬಾಲ ಶುಂಡಿಲು ತಾಗಿ ಹಿಂದೆ ಮುಂದೆ ಅನೇಕ ಪರ್ವತಂಗಳು ಒಡೆದು ಪುಡಿಯಾಗಿ ಸಮಸ್ತಪ್ರಾಣಿಗಳಿಗೆ ಮಾರಣವಾಗೆ (ಭೈರವೂ. I, ೩೩). **ಸುಂಡಲ:** ೧. ಕರಿಮೊಗಂ ಸುಂಡಲದಿ ಸ್ತನ್ಯಪಾನಂಗೈವುತಿರಲು (ನವಮೋ. ೬-೨). **ಸುಂಡಲು:** ೧. ಪಾಶಾಂಕುಶದ ಹಸ್ತಮೋದಕದ ಸುಂಡಲಿನ ಸಿರಿ ಡೊಳ್ಳಿನಾ ಗಣನಾಯಕನೆಮಗೆ ಬುದ್ಧಿಯತಿವರ್ಧಿಸ್ಕೆ (ಪರಶು. ೧-೧); ದಿಗ್ಗಜಗಳ ಸುಂಡಲುಗಳಿಂದ ಹೊರಡುವ ತುಂತುರ್ವನಿಗಳಂತೆ ನಕ್ಷತ್ರಗಳು ಕಾಣಿಸಿದುವು (ವಚಕಾ. ೬೦). **ಸುಂಡಿಲ:** ೧. ತುಂತುರ್ಗಳಂ ಸುರಿಪ ಸುಂಡಿಲದಿಂ ಯಥೇಷ್ಟಂ ತಾಂ ತನ್ನ ಕಾಂತೆಗೆ ಭವೇಕವನಾಗಿಪಂ (ಉರಾಚ. ೭೪-೨೦). **ಸುಂಡಿಲಿ$_2$**: ೧. ಉರೆ ಹಸ್ತಯುಗ ಸುಂಡಿಲಿಯ ಕೊರಳಿನಲಿ ಬಂಧಿಸಿದ ಮುತ್ತಿನಸು ಪಟ್ಟಿಗೆಯ ಜತ್ತಿಗೆಯ ಪೇರ್ದುರುಬು ಮಾವತಿಗ (ನವಮೋ. ೨೪-೮). **ಸುಂಡಿಲು:** ೧. ಸುಂಡಿಲು ಮುಜಿದರೆ ಗಜವೇನು ಬಾತೆ (ಬಸವ. ೬೩೪); ಸುಂಡಿಲನು ತೂಗಾಡುವುದು . . . ಬಲುಕಣೆಯ ಹಿಡಿಹಂಗೆ ಲಾಗಿಸುತಿರ್ದುದಾ ದಂತಿ (ಕುವ್ವಾದ್ವೋ. ೩-೩೭). **ಸೊಂಡಿಲ್** : ೧. ಸೊಂಡಿಲೊಳ್ ಕೊನವೆತ್ತ ಮದಹಸ್ತಿಗಳ ಕಟ್ಟಿಕೊಂಡಿರ್ದ ಕೇಸರಿಗಳನು . . . ಬೀಳಲಿಕ್ಕಿದನು (ಮೋಹತ. ೧೯-೩೭); ಸೆಳೆಗೊಂಬು ಸೊಂಡಿಲ್ ಕವಲ್ದೊಂಬು ಕೊಂಬುಗಳ್ (ಚಿಬಪು. ೪೭-೩). **ಸೊಂಡಿಲು:** ೧. ತುಳಿದುದಂಸುಭಟರನು ಸಾವಿರ ತಲೆಯ ಸೆಳೆದುದು ಸೊಂಡಿಲಲಿ (ಕುವ್ವಾದ್ವೋ. ೩-೧೪); ಚಂಡಪ್ರತಾಪಿ ವಿಶ್ವೇಶ್ವರ ಮಲೆತಿರೆ ಕಂಡು ಹಲಾಯುಧ ಮುಳಿದು ಸೊಂಡಿಲು ದಂತಗಳೊಡೆವಂತೆ ಮುಸಲದೆ ಕೊಂದನು ಕೂಗಿ ಬೊಬ್ಬಿಜಿದು (ಮೋಹತ. ೩೮-೬೩). ೨. ಮೂತಿ; ಮುಖ: ನೆಗಳ ಸೊಂಡಿಲ ಚಿನ್ನದಣಸಿನ ಪಲ್ಲಕ್ಕಿ ಸೊಗಯಿಪ ರತ್ನವಿಮಾನ . . . ಮುಂತಾದ ವಸ್ತುಗಳನಿತ್ತನು ಕೃಷ್ಣ ಮಗಗೆ (ಮೋಹತ. ೧೫-೨೦). ೩. ಆನೆ; ಹಸ್ತಿ: ಸೊಂಡಿಲು ಕದಳಿಯ ವನವ ಪೊಕ್ಕಂದದಿ ಉದ್ದಂಡತನದಲ್ಲಾಡುತಿಹರು (ಚಂದ್ರಹಾ. ೩-೧೮). 'ಸುಂಡಾಲ' ಪರಾ.

ಸುಂಡಿಲ ಮೊಗ = ಸೊಂಡಿಲಿನಿಂದ ಕೂಡಿದ ಮುಖವುಳ್ಳವನು; ಗಣೇಶ : "ಸುಂಡಿಲ ಮೊಗಂ ವಿಘ್ನೇಶ್ವರಂ" (ಶಶು. ೧೯೯). **ಸುಂಡಿಲವಾಳು** = ಆನೆಯ ಸೊಂಡಿಲಿಗೆ ಕಟ್ಟಿದ ಕತ್ತಿ: ಸುಂಡಿಲವಾಳೆ ಸೂಸಿಗವೆತ್ತ ಶೃಂಗವೇತಂಡಗಳುರವಣಿಸಲ್ಕೆ ಖಂಡಚಂದಿರ ಬಾಣದಿಂದೆಚ್ಚು ಕಡಿದ ಕೋದಂಡಶಿಕ್ಷಾದೀಕ್ಷಿತನು (ಮೋಹತ. ೩೪-೩೯).

[?./ ಸಂ. ಶುಂಡಾಲ = ಆನೆ./ ತಮಿ. ತೊಣ್ಣಲ; ತುಳು. ಸುಂಡಿಲ್, ಸುಂದಿಲ್]

**ಸುಂಡಿಲ** 'ಸುಂಡಿಲ್' ನೋ.

**ಸುಂಡಿಲಿ$_1$**, ಚುಂಡಿಲಿ (ನಾ). ಸುಂಡ; ಮೂಗಿಲಿ: "ಚುಚುಂದರೀ, ಗಂಧಮೂಷಿಕಾ — ಈ ೨ ಸುಂಡಿಲಿ" (ಹಲಾಯು. ೩೯-೮೨); ಮಸಕದ ಸುಂಡಿಲಿಯ . . . ಬಸೆಯಂದದ ಗಂಧಮಸವೊಡಶುಭಂ ತುರಗಂ (ಅಶ್ವಶಾ. ೩-೨೨). **ಚುಂಡಿಲಿ:** ಅಗೋ ಚುಂಡಿಲಿಯನ್ನು ಹಿಡಿಯುವುದಕ್ಕೆ ದೊಡ್ಡ ಬಂಡೆಯನ್ನು (ಕಥಾಮಂ. iv,-೮); ಆರ ಮನೆ ಸಂಡಿಗೆಯೊ ಚುಂಡಿಲಿಯೊ ಹುಳುವೊ (ಮಂಕುಹ. ೬೪೨). [ಸುಂಡ + ಇಲಿ$_1$./ ತಮಿ. ಚುಣ್ಣೆಲಿ; ಮಲ. ಚುಂಡೆಲಿ; ತುಳು. ಸುಂಡೆಲಿ, ಸುನ್ನಲಿ; ತೆಲು. ಚುಂಡೆಲುಕ]

**ಸುಂಡಿಲಿ$_2$** 'ಸುಂಡಿಲ್' ನೋ.

**ಸುಂಡಿಲು** 'ಸುಂಡಿಲ್' ನೋ.

**ಸುಂಡಿಸು** (ಕ್ರಿ). ೧. (ದ್ರವಪದಾರ್ಥವನ್ನು) ಕುದಿಸಿ ಕಡಿಮೆಯಾಗುವಂತೆ ಮಾಡು; ಅಟ್ಟಿಸು: (೩). ೨. ಸುಡು; ದಹಿಸು: ಅಂಡಿಸಿದ ಸದ್ಗುರುಚರಾದಿ ಸದ್ವಕ್ರರ್ಗೆ ಸುಂಡಿಸಿದ ಜ್ಞಾನಾಗ್ನಿಯಿಂ ಭವಾರ್ಣವವ ಮಿಗೆ ದಂಡಿಸಿದ ದಶವಿಧೇಂದ್ರಿಯ ಗಳುತ್ಪಾತಮಂ (ಏಕೋತ್ತ. ೮-೫೯). [ಸುಂಡು$_1$ + -ಇಸು$_1$./ ತೆಲು. ಚುಂಡಿಂಚು]

**ಸುಂಡು$_1$** (ಕ್ರಿ). ೧. ಆವಿಯಾಗು : (೩). 'ಸುಂಡಿಸು' ಪರಾ. ೨. (?): ಮಂಡಗೆಗೆ ತುಪ್ಪ ಸಕ್ಕರೆ ಬಟ್ಟನಾಲಿಕ್ಕಿಕೊಂಡು ಪಿಂಡಂ ಮಾಡಿ ಹೊಸಮಡಕೆಯೊಳಗೆ ನೆಯ್ ಸುಂಡ[ಪಾಠಾಂ. ನೆಯ್ಯುಂಡ]ದೊಡವಿಕ್ಕಿ ಅದನಿರಿಸಿ (ಸೂಪಶಾ. ೧-೨೧).

ಸುಂಡಿಕೊಳ್ಳು = ಮುದುಡಿಕೊಳ್ಳು; ಸುರುಟಿಕೊಳ್ಳು: ಕೈಕಾಲುಗಳು ಸುಂಡಿಕೊಂಡು ಅವರು ವಿಪರೀತಚಳಿಯಿಂದ . . . ಸಾಯುತ್ತಿದ್ದರು (ಪ್ರವಾ. I, ೭೨). ಸುಂಡಿಹೋಗು = ಒಣಗು; ಬಾಡು; ಶುಷ್ಕವಾಗು: ಕಂಡೆ ಸುರುಟಿ ಸುಂಡಿಹೋಗಿ ಜೋಲುಬಿದ್ದ ಮಾಂದಳಿರ (ಮಾಂಡವ. ೩೩-೧೭).

[ದೇ. ॥ ತಮಿ. ಚುಣ್ಣು; ಮಲ. ಚುಣ್ಣು; ತೆಲು. ಚುಂಡು]

**ಸುಂಡು$_2$**, ಸೊಂಡು (ನಾ). ತಲೆಯಲ್ಲಿ ಉಂಟಾಗುವ ಹೊಟ್ಟು: 'ಸುಂಡುತಲೆ' ಪರಾ. **ಸೊಂಡು:** ತಿಳಮದು . . . ಆಮಳಕಮನಿಂಬಾಗಿರೆ ತಲೆಯೊಳಗೆಲ್ಲಂ ಪೂಸೆ ಸೊಂಡು [ಪಾಠಾಂ. ಸೊಂದು] ತಡೆಯದೆ ಕಿಡುಗುಂ (ಲೋಕೋಪ. ೯-೫೪).

[ದೇ. ॥ ತಮಿ. ಚುಣ್ಣು ; ತೆಲು. ಚುಂಡು]

**ಸುಂಡು$_3$** (ನಾ). ಬಾಣ (?): ಈ ತುಂಬಿಗಳು ಮನ್ಮಥನ ಕಬ್ಬೆಂಬ ಬಿಲ್ಲಿನಲ್ಲಿ ಬಿಡುವ ಸಣ್ಣ ಸುಂಡುಗಳೆಂಬಂತೆ ಕಾಣಿಸುವವು (ಅಕಮಾ. ೪೮). [?]

**ಸುಂಡುತಲೆ** (ನಾ). ಹೊಟ್ಟಿನಿಂದ ಕೂಡಿರುವ ತಲೆ: ಬೊಕ್ಕತಲೆ ಸುಂಡುತಲೆಗಳಿಗೆ ಇದರ ಪ್ರಯೋಗ ತುಂಬ ಗುಣಕರ (ಬಜಹ. ೬). [ಸುಂಡು$_2$ + ತಲೆ$_1$]

**ಸುಂಡೆ$_1$**, ಸೊಂಡೆ$_1$ (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ: ತದುಕಿಲ ಸುಂಡೆ ಪಾಪಟೆಯ . . . ಉಪ್ಪುಗಾಯಿಗಳೆಲ್ಲ ಸುವ್ವಾರಿಯರು ಬಡಿಸಿದರತಿ ವಿಚಿತ್ರದಲಿ (ಆನಂದಾ. ೬-೨೫-೩೮). **ಸೊಂಡೆ$_1$**: ೧. "ಚುಂಡಃ— ಸೊಂಡೆ" (ಓಷಧಿ. ೫೭); ಶಾಲ್ಮಲಿ ಸೊಂಡೆ [ಪಾಠಾಂ. ಸೋವೆ] ಸುರಹೊನ್ನೆ . . . ಕರ್ಣಿಕಾರದ ಮೊತ್ತವಿದೆ ನೋಡಬಲೆ (ತೊರಾ. ೩-೧-೨೭). ೨. ಒಂದು ಬಗೆಯ ಸಸ್ಯ: "ಗರುಗಮಂಗಾರಕಂ ಭೃಂಗಮದು ಸೊಂಡೆ" (ಮಂಗರಾ. ೩೯-೨೮).

[ದೇ. ॥ ತಮಿ. ಚುಣ್ಣೈ; ಮಲ. ಚುಂಟ; ಕೊಡ. ಚುಂಡ]

**ಸುಂಡೆ$_2$**, ಸೊಂಡೆ$_2$ (ನಾ). ೧. ಮೂತಿ; ಮುಖ; ಮೋರೆ: "ಚುಂಚ – ಸುಂಡೆ" (ಅಕಾವಿ. ೧೦-೪). **ಸೊಂಡೆ$_2$**: ೧. ಅದಕ್ಕೆ ಕಿರಿದಾದ್ದೊಂದು ಸೊಂಡೆಯುಂಟು (ಮುಂಬಯಿ. ೬-೨೬೭); ಅವರು ಅಪಜಯಪಟ್ಟು ಸೊಂಡೆಯ ಒಣಗಿಸಿಕೊಂಡು ಬಂದಿದ್ದನ್ನು ನೋಡಿ ಅಸಮಾಧಾನಪಟ್ಟನು (ಭಾಮ್ಮಹ. ೩೭೦). ೨. ಆನೆಯ ಸೊಂಡಿಲು; ಗಜಹಸ್ತ: ಒಂದು ಆನೆಯು ಗಡುತರವಾದದ್ದೊಂದು ಹಗ್ಗವನ್ನು ಸೊಂಡೆಯಲ್ಲಿ

ತಕ್ಕೊಂಡು ಹೋಗಿ (ಕಭಾಗ. ೫೭೭); ಆನೆಯ ವಿಶೇಷಲಕ್ಷಣವು ಅದರ ಸೊಂಡೆ.ಸೊಂಡೆಯ ತುದಿಗೆ ಎರಡು ಹೊರಳೆಗಳಿರುವುವು (ಮುಂಬಯಿ. ೪-೨೨). 'ತುಂಡ' ಹೋ.

[< ಸಂ. ಶುಂಡಾ]

**ಸುಂಡೆ$_3$** (ನಾ). ಬೋರೆ; ಬುಗುಟೆ: ಅಯ್ಯಗಳೆದ್ದು ರೋಷದಲಿ ಹಿಂಡುಹಲಗೆಯ ನೇರಿ ನೆತ್ತಿಯ ಸುಂಡೆಯೇಳಲು ನೂಕೆದು (ಪ್ರಪ್ಪಾಚ. ೬-೬೧). 'ಬಾಸುಟಿಬ್' ಪರಾ.

[< ಬಾಸುಂಡೆ?]

**ಸುಂತಿ,** ಸುನತಿ, ಸುನ್ನತಿ (ನಾ). (ಯೆಹೂದ್ಯರು ಮತ್ತು ಮುಸಲ್ಮಾನರಲ್ಲಿ) ಗಂಡಸಿನ ಜನನಾಂಗದ ಮುಂದೊಗಲ ಭಾಗವನ್ನು ಕತ್ತರಿಸುವ ಒಂದು ಧಾರ್ಮಿಕ ವಿಧಿ,— ಮತಸಂಸ್ಕಾರ: ಯಾವತ್ತು ಮುಸಲ್ಮಾನರು ಯೆಂಟನೇ ವರ್ಷದ ನಂತರ ಗಂಡುಮಕ್ಕಳ ಸುಂತಿಯನ್ನು ಮಾಡುವರು (ಕಭಾಗ. ೨೨೯); ಹುಮಾಯೂನನು ಬಹಳ ಉತ್ಸವದಿಂದ ಮಗನ ಸುಂತಿಯನ್ನು (ಮುಂಜಿ)ಮಾಡಿದನು (ಅಕ್ಬರ. ೧೫). **ಸುನತಿ:** (೬). **ಸುನ್ನತಿ:** (೬).

[<— ಅರ. ಹಿಂ. ಸುನ್ನತ್; ಮರಾ. ಸುಂತಾ, ಸುನತ, ಸುನತಾ]

**ಸುಂದ** (ನಾ). ನಿರುತ್ಸಾಹದಿಂದ ಕೂಡಿರುವವನು; ಖಿನ್ನನಾದವನು: ಶಾಂತಾಬಾಯಿಯ ಚಿಂತನೆಯಿಂದರ್ಧ ಅವನು ಮಧ್ಯಾಹ್ನ ಊಟವಾಗುವವರೆಗೂ ಸುಂದನಾಗಿಯೇ ಅಲೆದಾಡಿದ (ಪ್ರೇಮತ. ೧೫). [ಸುಂದು$_3$ + - ಅ$_7$]

**ಸುಂದರ** (ಗು). ೧. ಅಂದವಾದ; ಚೆಲುವಿನಿಂದ ಕೂಡಿದ: ಒಂದಱ ಮಾತುಗಳಂ ಪೆಱತೊಂದಱೊಳಱಿದಿಟ್ಟು ಕೂಡೆ ಪೇೞ್ವೊಡದಕ್ಕುಂ ಸುಂದರತರಂ ಸಮಾಹಿತಮೆಂದುಂ (ಕವಿರಾ. ೨-೬೩); ವೃಷವಾಹನನಿಂದು ಕುಂದಸುಂ[ಪಾಠಾಂ. ಸೌಂ]ದರತರವರ್ಣನೀ ವೃಷಭನಾಥಕಥಾರಚನೋಕ್ತಿಯಲ್ಲಿ ಮಾಟ್ಕಿರದೆಮಗಾಗಲುಂ ವೃಷಭಯಕ್ಷನವಿಘ್ನಮನಃ ಪ್ರವೃತ್ತಿಯಂ (ಆದಿಪು. ೧-೮). (ನಾ). ೨. ಸೊಗಸು; ಚೆಲುವು: ಏಕಾಂತದಿ ಯೌವನದಾ ಕಾಂತೆಯ ಸುಂದರವ ತಾ ಕಂಡು ಭ್ರಮಿಸದೆ (ಮೈಲಾರ. ೭೨-೨೫); ಸುಂದರ ಎಂಬ ಪದ 'ಸುಂದ್' ಎಂಬುದರಿಂದ ಬಂದಿದೆಯಂತೆ. ಸುಂದ್ ಎಂದರೆ ಪ್ರಕಾಶಿಸುವುದು ಎಂದು ಅರ್ಥ (ಸೌಂದಸ. ೪೫). ೩. ಅಂದವಾದುದು; ಚೆಲುವಿನಿಂದ ಕೂಡಿರುವುದು: ಇಂತು ಸಮಾಸೋಕ್ತಿಯೊಳೊಂದಾಗಿರೆ ಸಕ್ಕದಂಗಳುಂ ಕನ್ನಡಮುಂ ಸುಂದರಮಕ್ಕುಂ ಕವಿಪದಮೊಂದಿದವೋಲ್ ಕನಕರಚನೆಯೊಳ್ ಮಣಿನಿಕರಂ (ಕವಿರಾ. ೧-೬೧). ೪. ಸೌಂದರ್ಯದಿಂದ ಕೂಡಿದವನು; ಚೆಲುವ: ಇದೇಂ ಜಿನಂ ಸುಂದರನೋ (ಶಾಂತಿಪು. ೧೨-೧೭); ನೀರೆ ನೀ ಕರೆತಾರೆ . . . ಸುಕುಮಾರಸುಂದರನ (ಪುರಂದ. ೨-೧೪೭ ಪಲ್ಲವಿ). ೫. ಒಂದು ಬಗೆಯ ಸಸ್ಯ: "ರೇಚಕ:— ತಿಲಕವೃಕ್ಷ, ಸುಂದರ" (ಓಷಧಿ. ೧೪೦). ೬. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ, ಪ್ರತಿಯೊಂದು ಪಾದದಲ್ಲಿ ಹದಿನಾಲ್ಕು ಅಕ್ಷರಗಳಿರುವ ಶಕ್ವರಿಛಂದಸ್ಸಿನ ಒಂದು ವೃತ್ತ: ಶೀತಕರದ್ವಿತಯಂ ಕೃಶಾನುಮರುಲ್ಲಗೋಪೇತ ಮಗೇಂದ್ರದೊಳಾಗೆ ವಿಶ್ರಮಣಂ ಜಗತ್ಕಾತಮದಾ ಕವಿರಾಜಹಂಸವಿನಿರ್ಮಿತಂ ಸಾತಿಶ ಯೋಕ್ತಿಯೆ ಸುಂದರಂ (ಛಂದೋಂಬು. ೨-೧೫೦). 'ಸುಂದರವೃತ್ತ' ಪರಾ. [ಸಂ.]

**ಸುಂದರತೆ** (ನಾ). ಚೆಲುವು; ಅಂದ: ಆಲೋಕಪ್ರಿಯಜನನಯನಸುಂದರತೆಯುಂ . . . ಕರಮೊಪ್ಪೆ (ಶಾಂತಿಪು. ೧೨-೧೯ ವ). [ಸಂ. ಸುಂದರತಾ]

**ಸುಂದರರೂಪ** (ನಾ). ೧. ಅಂದವಾದ ರೂಪ: ಸುಂದರರೂಪದೆ ಘುಟ್ರಿಯನಿಂದು ಕಲಾಮೌಲಿವಾಹನಂ ಪಾಯ್ಕುತೆ ತಾನಂದು ನಡೆನೋಡಿ (ಹಾಲಾಸ್ಯ. ೨-೧೩-೧೮). ೨. ಚೆಲುವ; ಸೊಬಗ: ಪುರುಪರಮೇಶ್ವರಪುತ್ರಂ ಭರತೇಶ್ವರಚಕ್ರವರ್ತಿಗನುಜ ನೆನಲ್ ಸುಂದರರೂಪನೀ ಕುಮಾರನೆ ದೊರೆ ಚಕ್ರಿಗಮೆಸೆಯದಿನಿತು ತೇಜಸ್ಫುರಿತಂ (ಆದಿಪು. ೧೪-೪೫). [ಸಂ.]

**ಸುಂದರವೃತ್ತ** (ನಾ). = ಸುಂದರ ೬: ಕಂದಂಗಳ್ ಪರವಾಗಿರೆ ಸುಂದರವೃತ್ತಂಗಳ ಕ್ಕರಂ ಚವುಪದಿ ಮತ್ತಂ ದಲ್ ಗೀತಿಕೆ ತಿವದಿಗಳಂದಂಬೆತ್ತೆಸೆಯೆ ಪೇೞ್ವೊಡದು ಚತ್ತಾಣಂ (ಕವಿರಾ. ೧-೩೫); ಸುಂದರವೃತ್ತಮದೊಪ್ಪೆ ಭಂಭರಸಂಲಗಂ (ಕೃಪಿಡಿ. ೮೩). [ಸಂ.]

**ಸುಂದರವೇಷ** (ನಾ). ಸೊಗಸಾದ ಅಲಂಕಾರವನ್ನು ಮಾಡಿಕೊಂಡವನು: ಹಿತಮಿತಮೃದುವಚನಂ ಲಲಿತಮಧುರಸುಂದರವೇಷಂ (ಆದಿಪು. ೧-೨೯). [ಸಂ.]

**ಸುಂದರಾಂಗ** (ನಾ).= ಸುಂದರರೂಪ ೨: ಬಂದ ಬಂದವರಿಗೆ ಹೇಳದಿರು ಸುಗಲವ್ವೆ ಸುಂದರಾಂಗನಿಗೆ ಸದರ ಆದೀತು (ಸಿದ್ಧಪು. ೪-೧೭). [ಸಂ.]

**ಸುಂದರಾಂಗಿ** (ನಾ). ಚೆಲುವೆ; ಅಂದಗಾತಿ: ಒಂದು ವಕ್ಕಿಯೊಳ್ ನಿಂದೊಡಾ ಲಗಂ ಸುಂದರಾಂಗಿ ಕೇಳ್ ಸಂದ ನಂದಕಂ (ಛಂದೋಂಬು. ೨-೭೭); ಸುಂದರಾಂಗಿಯರ್ಕೈದಿ ಬಗೆಬಗೆಯಿಂದ ಪೂಜೆಯ ಮಾಡಿ (ಜನಭಾ. ೪೨-೨೭). [ಸಂ. ಸುಂದರಾಂಗೀ]

**ಸುಂದರಾಕಾರ** (ನಾ). ೧. ಅಂದವಾದ ರೂಪ; ಸುಂದರರೂಪ: ಸುಂದರಾಕಾರಸಂಪನ್ನನೆಂದುಮಿಾ ನೃಪನಂದನಂ ನಂದನಂ ಬುಧಕೀರಾಳಿವೃಂದಕ್ಕೆ ಸಕಲರ್ತುಕಂ (ಕಾವ್ಯಾವ. ೫೭೧). ೨. ಸುಂದರ; ಚೆಲುವ: ತೃಣೀಕೃತತ್ರಿಭುವನಸಕಲ ಸೌಂದರ್ಯಾತಿಶಯಸುಂದರಾಕಾರನುಮಪ್ಪ ತೀರ್ಥಕರಕುಮಾರಂಗೆ ಸೌಧರ್ಮೇಂದ್ರಂ . . . ಪ್ರಸಾಧನಪ್ರಾರಂಭಂಗೆಯ್ಯೆ (ಶಾಂತಿಪು. ೧೧-೫೭ವ). [ಸಂ.]

**ಸುಂದರಿ** (ನಾ). ೧. ಸೌಂದರ್ಯವನ್ನು ಹೊಂದಿದವಳು; ಚೆಲುವೆ: ಸುಂದರಿ ಜೀವಲೋಕದ ಸುಖಕ್ಕೆ ಪರಾಙ್ಮುಖಿಯರ್ಕಳಾಗಿ ನಿನ್ನೊಂದಿಗರೀ ತಪಕ್ಕೆಳಸಿದಂದು ಮನೋಜನ ಬಿಲ್ಲ ಬಲ್ಮೆ . . . ನಿರರ್ಥಕಮಾಗದಿರ್ಕುಮೆ (ಕಾದಂಉ. ೫೫೪); ಸುಂದರಿ ಮಾರೀಚಿಯಂ ನೀಂ ತಂದೊಡೆಯಾಂ ನಿನಗೆ ದಾಸಿಯಾದಪೆಂ (ದಶಕು. ೮-೬೮). ೨. ಹೆಂಗಸು; ಸ್ತ್ರೀ: "ಭಾಮಿನಿ ನಿತಂಬಿನಿ ಪ್ರಮದೆ ಸುಂದರಿ ಲಲನೆ . . . ವರವರ್ಣನಿಯೆನಲ್ಕೆ ಹೆಂಗೂಸೆನಿಕ್ಕು" (ಮಂಗರಾ. ೮೯-೧). ೩. ಒಂದು ಬಗೆಯ ತಂತೀವಾದ್ಯ: ಬಳಿಕ ವಿಪಂಚಿಕೆ . . . ಸುಂದರಿ . . . ಕಾಲಕೀಯೆಂಬ ಮೂವತ್ತಮೂಱು ತಂತ್ರೀವಾದ್ಯಂಗಳಲ್ಲಿ (ವಿವೇಕ. ೨೩೭). ೪. [ಜ್ಯೋತಿ] ಕನ್ಯಾರಾಶಿ: ಧನು ಝಷಂ ಸುಂದರಿ ಮಿಥುನಂ ದ್ವಿಸ್ವಭಾವರಾಶಿಗಳೆನಿಕುಂ (ಜಾತತಿ. ೧-೨೩).

[ಸಂ. ಸುಂದರೀ]

**ಸುಂದರಿಸು** (ಕ್ರಿ). ಸೊಗಸಾಗುವಂತೆ ಮಾಡು; ಸಿಂಗರಿಸು: ತೊಟ್ಟು . . . ದಿವ್ಯಮಾಲ್ಯಂಬರಗಳಂ ಇಟ್ಟು ನೊಸಲಿಗೆ ತಿಲಕಮಂ ರಚಿಸಿ ಸುಂದರಿಸಿ ಪೊಂದೇರ್ಗ ಳನ್ನಡರ್ದು ದಿಟ್ಟರೆದೆ ಝಲ್ಲೆನಲ್ಸಂಗರಕೆ ಬರಲು (ತುರಂಗ. ೫೧-೪೬); ನವರತ್ನಾದಿ ಭೂಷಣದಿ ಸುಂದರಿಸಿ ಸುಕುಮಾರ ನಿನಗೆಮ್ಮಿಂದಲೇನಭಿಲಾಷೆವುಂಟೆಂದಿಂದುಮುಖಿ ಯರು ಕೇಳ್ದರು (ಜನಭಾ. ೪೨-೨೮). [ಸುಂದರ + - ಇಸು$_3$]

**ಸುಂದು$_1$,ಚುಂದು** (ಕ್ರಿ). ೧. ಮಲಗು; ಶಯನಮಾಡು: "ಸುಂದು— ಮೈಥುನೇ, ಶಯನೇ ಚ" (ಶಮಧಾ). ೨. ಕೂಡು; ಸಂಭೋಗಿಸು: "ಸುಂದು— ಮೈಥುನೇ, ಶಯನೇ ಚ" (ಶಮಧಾ); ತಪ್ಪಿದವರ ಹೆಂಡತಿಯನು ಹದಿನೆಂಟು ಜಾತಿಗಳು ಸುಂದು (ಸೌಇಇ. IX-ii, ೫೧೩-೫೦; 1521). 'ಮಱಸುಂದು$_1$' ಪರಾ. **ಚುಂದು:** ೨. ಬ್ರಾಂಬ್ರ ಹೆಂಗಳಿಗೆ ಮಂಗ ಚುಂದೋದುಂಟೆ (ಹಾಸ್ಯಮಂ. ೫೫).

**ಸುಂದು$_2$** (ನಾ). ಕೂಟ; ಸಂಭೋಗ: (೬). 'ಮಱಸುಂದು$_2$' ಪರಾ.

[< ಸುಂದು$_1$]

**ಸುಂದು$_3$** (ನಾ). ಮನಸ್ಸಿನ ಖಿನ್ನತೆ,— ನಿರುತ್ಸಾಹ: ನೀನು ಮುಟ್ಟೆ ಮ್ಮೆ ಜುಮ್ಮು ತಟ್ಟತೋ ಅಗಲಹೂವ ತೆರೆದು ನೀಚಗಿರಿಯ ಕಡವಾಲ ಇಹವು ಹೋಗಲ್ಲಿ ಸುಂದು ಮರೆದು (ಮೇಘದೂ. ೬-೨೫).

**ಸುಂದ ಬಡಿ, ಸುಂದು ಬಡಿ** = ಮಂಕಾಗು; ಕಳೆಗುಂದು: ಕಂದನು ಹೋದ ದಾರಿ ಸುಂದ ಬಡಿದು ನೋಡಿ . . . ಹಿಂದಿರುಗಿ ತಾಯಿ ಮನಿಯಾಗ (ಸಿದ್ಧಪು. ೩-೯೮); ಒಳಗಿನ ದೃಶ್ಯವನ್ನು ನೋಡಿ ಸುಂದುಬಡಿದಂತಾದಳು (ಮಾಲತಿ. ೧೪). **ಸುಂದಾಗು = ಸುಂದಬಡಿ:** ವೈನಿ ಯಾಕೋ ಸುಂದಾಗಿದ್ದರು (ವೃನಿ. ೨೦೪). [ದೇ. ‖ ತುಳು. ಸುಂದು]

**ಸುಂದುವಡೆ** (ಕ್ರಿ). ಮಂಕಾಗು, ಕಳೆಗುಂದು: ನಗದೆ ಬನದಿಸದೆ ಪಗಲಿರುಳು ಸುಂದುವಡೆದಂತಿರಲು (ಮಹಾಂತೇ. ೧೩-೬). [ಸುಂದು$_3$ + ಪಡೆ$_1$]

**ಸುಂಪುರೆ** (ನಾ). ಮೆಚ್ಚಿಕೆಯನ್ನು ಸೂಚಿಸುವ ಒಂದು ಮಾತು; ಕೊಂಡಾಟದ ಒಂದು ನುಡಿ: "ಅರರೆ ದಣು . . . ಚಾಗು ಸಲೆ ಸುಂಪುರೆಯೆನೆ ಕೊಂಡಾಟದ ನುಡಿ" (ಭಾರಸಿ. ೪೭). 'ಪುರೆ$_1$' ಪರಾ.

**ಸುಂಬ** (ನಾ). ಒಬ್ಬ ರಾಕ್ಷಸನ ಹೆಸರು; ಶುಂಭಾಸುರ: ಶುಂಭ — ಸುಂಬ (ಶಮದ. ೨೫೫ ಪ್ರಯೋ). [< ಸಂ. ಶುಂಭ. / ಪ್ರಾ. ಸುಂಭ]

**ಸುಂಬಳ** 'ಸಿಂಬುಳ್' ನೋ.

**ಸುಂಬಳಕಾರ** 'ಸೋಮಲಕಾರ' ನೋ.

**ಸುಂಬಳು** 'ಸಿಂಬುಳ್' ನೋ.

**ಸುಂಬು$_1$** (ನಾ). (ಕರಾ) ಮಕ್ಕಳ ಆಟವನ್ನು ನಿಲ್ಲಿಸುವ ಒಂದು ಸೂಚನೆ. [<— ತುಳು. ಸೂಂಬೊ]

**ಸುಂಬು$_2$** (ನಾ). ಸುರುಳಿ; ಸಿಂಬೆ: ತೆಗೆದು ಡೊಂಬನು ಹುರಿಯ ಸುಂಬನು, ಬಿಗಿದು ಬಟ್ಟಲನೇರಿಸಿ ಬೊಗರಿಯಂತೆಯೆ ತಿಗರಿಯಂತೆಯೆ ನೆಗೆದು ಕುಣಿದನು ಧಿಮಿಧಿಮಿ (ಕವಿಪು. ೩೮-೮). [< ಪ್ರಾ. ಸುಂಬ = ಒಂದು ಬಗೆಯ ಹುಲ್ಲಿನ ಹಗ್ಗ]

**ಸುಂಬುಳ** 'ಸಿಂಬುಳ್' ನೋ.

**ಸುಂಬುಳಗುಱಿ** (ನಾ). ಒಂದು ಬಗೆಯ ಕುರಿ: ಇಂಬಾದ ಬ್ರಹ್ಮದಲ್ಲಿ ತುಂಬಿದ ಜಗವೆಲ್ಲಾ ಸಂಭ್ರಮಿಸುತ್ತಿದೆ ಸಂಸಾರದಲ್ಲಿ ಕುಂಭದೊಳಗಣ ಸುಧೆಯನುಂಬ ಭೇದವನಱಿಯದೆ ಸುಂಬುಳಗುಱಿಯಂತಾದರು ಜಗವೆಲ್ಲವು (ಪದಗೋ. ೨೪೯-೨೩೮). [ಸುಂಬುಳ$_?$ + ಕುಱಿ$_3$]

**ಸುಂಬೆ** (ನಾ). ಒಂದು ಬಗೆಯ ಫಲವೃಕ್ಷ (?): ಈ ಭೂಮಿಗಳಿಗೆ ವುಳ್ಳ ಕರೆ ಮುರೆ ಮನೆ ಬಾಪಿ ಹಲಸು ಮಾವು ಸುಂಬೆ ನಿಕ್ಕಿಲುರ್ಕ್ಕಂದ್ರ್ವೆ ಕದಿರು ಜಲಪಾಶಾ(ಷಾ)ಣ ಸಹ ಮೂಲಧಾರೆಯನು ಯೆರ(ಎರೆದು)ಕೊಟ್ಟು ಯಿಸಿಕೊಂಡ ದೊಡ್ಡವರ(ರಾ)ಹ ಗ ೮೦ (ಎಇ. XX. ೯೪-೪೧; 1556). [?]

**ಸುಕ$_1$** (ನಾ). ಗಿಣಿ; ಗಿಳಿ: "ಕೀರ ಪರಿಣಾಮ ಸುಕ ಶಬ್ದ" (ಶಬ್ದಮಂ. ೭೯). [< ಪ್ರಾ. ಸುಕ./ ಸಂ. ಶುಕ]

**ಸುಕ$_2$** 'ಸೊಗ' ನೋ.

**ಸುಕಂಠ** (ನಾ). ಉತ್ತಮವಾದ ಕೊರಳು, — ಕಂಠ: ನಗೆಗಣ್ಣೊಳು ಮತ್ಸ್ಯರೂಪಂ ಚರಣಯುಗಳದೊಳು ಕೂರ್ಮ್ಮರೂಪಂ ಸುಕಣ್ಠೋ[ಜ್ಜುಗ]ದಾದಿ ಕ್ರೋಡರೂಪಂ (ಸೌಇಇ. XX. ೧೦೭-೩೬; 1138). [ಸಂ.]

**ಸುಕಂಡಕ** (ನಾ). ಒಂದು ಬಗೆಯ ಗಡ್ಡೆ; ಈರುಳ್ಳಿ: "ಪಲಾಂಡುಃ,ಸುಕಂದಕಃ — ೨ ನೀರುಳ್ಳೀ ಹೆಸರುಗಳು" (ಸಿದ್ಧಾಂತಿ. ೧೪೬). [ಸಂ.]

**ಸುಕಂಬಾಟು** 'ಸೊಗವಾಟು' ನೋ.

**ಸುಕನಾಸಿ** 'ಸುಖನಾಸಿ' ನೋ:.

**ಸುಕನ್ಯೆ** (ನಾ). ೧. ಒಳ್ಳೆಯ ಹುಡುಗಿ: ಇವಳಿ ಕೊಳೆ ಸೋಕದ ಸುಕನ್ಯೆಯು, ಇವಳಿ ದೊಂಬರ ಚೆನ್ನೆಯು (ಕವಿಪು. ೪೦-೩೫). ೨. ಚ್ಯವನಋಷಿಯ ಹೆಂಡತಿಯ ಹೆಸರು: ಧರಣೀಂದ್ರಶೇಖರನ ತನುಭವೆ ಸುಕನ್ಯೆ ಪರಿಪೂರ್ಣಲಾವಣ್ಯೆ (ಶಿಷರಾ. ೮-೧೫). [ಸಂ. ಸುಕನ್ಯಾ]

**ಸುಕಬಾಳು** 'ಸೊಗವಾಟು' ನೋ.

**ಸುಕಮಿರ್** 'ಸೊಗಮಿರ್' ನೋ.

**ಸುಕರ** (ಗು). ೧. (ಮಾಡಲು) ಸುಲಭವಾದ; ಶಕ್ಯವಾದ. ೨. ಸುಂದರವಾದ; ಮನೋಹರವಾದ: ಎಂದಿಂತು ಪೇಟ್ದ ಮಾಟ್ಕೆಯೊಳೊಂದುವುದೋಜಸ್ವಿತಾಗುಣಂ ಕೈಕೊಳೆಯುಂ ಸುಂದರಮಾಗದು ಕವಿಪದಮೆಂದು ವ್ಯತ್ಯಯದಿನಿಡುವೊಡದು ಸುಕರತರಂ (ಕವಿರಾ. ೨-೯೦); ಸಕಳಪಾಪಕ್ಷಯಮೆನಿಸಿ ವರಸುಕರಪೋಕ್ಷಾಂಗನೆಯನೊಂದುಗು ನಿಕಟಫಲಸಂಪ್ರಾಪ್ತಿಯಿದು (ಬಸಪು. ೩-೭೯). (ನಾ). ೩. ಸುಲಭವಾದುದು; ಸರಾಗವಾದುದು: ಮಾರಕಾಮಂ ರಣದೊಳ್ ಪೇಸೇಟೆ ಹೊಯ್ದು ಕೊನ್ದಿನ್ತಾ ಸುಕರಂಬೆರಸು ತವಿಸಿದಮ್ಮಾರ್ಪಡೆಯಂ (ಎಕ. VIII, ಸೊರಬ. ೨೫೦-೯; 1237); ಇಷ್ಟಾದರೂ ಆತನ ಸಿದ್ಧಾಂತಮಂಡನೆಯಿಂದ ಖಂಡನಕಾರರ ಕೆಲಸ ದುಷ್ಕರವಾಗುವ ಬದಲು ಸುಕರವೇ ಆಗಿದ್ದಂತೆ ತೋರುತ್ತದೆ (ಧ್ವನ್ಯಾಲೋ. XXVIII ಪೀಠಿಕೆ). ೪. ಸರಿಯಾದುದು; ನೇರ್ಪಾದುದು: ಅಕಟ ಜಡಮತಿಗೆ ಮರುಳುಮ್ಮತವನಿಕ್ಕಿದೊಡೆ ಸುಕರಮಪ್ಪುದೆ [ಪಾಠಾಂ. ಸುಕರೆಯಪ್ಪುದೆ] (ಜೈಮಿಭಾ. ೨-೩೬); ಸಕಲಜನಾನಂದ ಸುಖದೊಳಗಿರುವರು ಸುಕರಮಾಗಿದೆ ವೃಷ್ಟಿ ಸುಕಲಾಧಿಪನೆ (ನಳನಾ.೩-೨೦). ೫. ಸುಂದರವಾದುದು; ಮನೋಹರವಾಮದು: ಸುಕರಮದಾಗಿರ ಕರ್ಣಾಟಕದಿಂ ಕಾವ್ಯಾವಲೋಕಮಂ ವಿರಚಿಸುವೆಂ (ಕಾವ್ಯಾವ. ೩); ಮಕರತೋರಣ ರತ್ನತೋರಣ ಮುಕುರತೋರಣಪಂಕ್ತಿಗಳನತಿಸುಕರವೆನಲೆತ್ತಿಸಿದನಾ ಪುರವೀಥಿವೀಥಿಯಲಿ (ಬಸಪು. ೪-೩). ೬. ಚೆಲುವಾದ ಕೈ, —ಹಸ್ತ. ೫, ೬: ನುತಸುಕರಪದ್ಮರಾಗಂ ಕ್ಷಿತಿಯೊಳ್ ರವಿಯಿಂದೆ ಮೆಱೆವುದುಚಿತಮದೀಗಳ್ನುತಸುಕರಪದ್ಮರಾಗಕ್ಷಿತಿಯಿಂ ರವಿರಾಗವಾಂಪುದಿದು ಚಿತ್ರತರಂ (ರಾಜಶೇ. ೮-೨೬). ೭. ಮನೋಹರವಾದ ಕಿರಣ. ೮. ಮಂಗಳಕರವಾದುದು. ೭, ೮: ಇಂದುಬಿಂಬದಂತಿರೆ ಸುಕರಪ್ರಸಿದ್ಧಮೆನಿಕುಂ ವಿಳಸತ್ಕೃತಿ ಸನ್ಮನೋಜ್ಞನಾ (ರಾಜಶೇ. ೧-೮೨). ೯. ಚೆಂಡಾಟದ ಒಂದು ವಿಧಾನ: ಒಳಗಂ ದಕ್ಷಿಣ ಸುಕರ ದುಷ್ಕರಮಂ ಪೊಱಗಣ ಸುಕರದುಷ್ಕರಭೇದಮಂ ಒಳಗೆ ವಾಮದ ವಿಷಮಮನಲ್ಲಿಯ ವಿಷಮದುಷ್ಕರಮನಿನ್ನದಱ ಪೊಱಗಗ್ಗಳಿಕೆಯೆನಿಪತಿವಿಷಮಮನದಱತಿವಿಷಮದುಷ್ಕರಮೆಂಬ ದುಷ್ಕರಮಂ ಎಳೆಯೊಳೊರ್ವ್ವನೆ ಚಾರಿಸಲ್ ಬಲ್ಲಂ ನಾಲ್ಕುಪ್ರಕರಣಮುಮನಿನ್ನರಾಜಂ (ಎಕ. II (R). ೧೭೩-೭೭; 982). 'ದುಷ್ಕರ' ಪರಾ. ೧೦. ದಯಾಪರತೆ; ಉಪಕಾರಬುದ್ಧಿ : 'ಸುಕರತೆ'ಪರಾ. [ಸಂ.]

**ಸುಕರಕವಿ** (ನಾ). ಉತ್ತಮನಾದ ಕವಿ; ಶ್ರೇಷ್ಠಕವಿ: ಸುಕವಿ ಸುಕರಕವಿ . . . ನುತಮಹಾಕವೀಂದ್ರಂ ಸರಸ್ವತೀಮುಖಮುಕುರಂ (ಸುಕುಮಾ. ೧-೫೨); ಸುಕರಕವಿ:ೀಬಿರಂ ತಾರ್ಕಿಕತಿಲಕಂ . . . ಕವಿರಾಜಮಲ್ಲನಪ್ರತಿಮಲ್ಲಂ (ಅರ್ಧನೇ. ೧-೫೧). [ಸಂ.]

**ಸುಕರತೆ** (ನಾ). ೧. ಸುಲಭವಾಗಿರುವಿಕೆ; ಸರಳವಾಗಿರುವಿಕೆ: ಸುಕರತೆ, ಸ್ಪಷ್ಟತೆ, ಶಾಂತಿ, ಸೊಬಗು— ಈ ಗುಣಗಳ ಒಂದು ಮಾದರಿಯನ್ನೇ ತನ್ನ ಗದ್ಯದ ಮೂಲಕ ಸ್ಥಾಪಿಸಿಕೊಟ್ಟ ಫ್ರಾನ್ಸಿನ ಪ್ರಭಾವ (ಸಾಹಿಪ್ರ. ೫೧). ೨. ದಯಾಪರತೆ; ಉಪಕಾರಬುದ್ಧಿ: ಜ್ಯಾಪ್ರತಿಪಾಳನಮಂ ಧರ್ಮಪ್ರೀತಿಯಿನ್ನೆದೆ ಮಾಡಿದಂ ಸುಕರತೆಯಿಂ (ಚಂದ್ರಪ್ರ. ೨-೭೩). [ಸಂ. ಸುಕರತಾ]

**ಸುಕರಮಂತ್ರ** (ನಾ). ಸರಿಯಾದ ಮಾತು; ಉಚಿತವಾದ ನುಡಿ: ಸುಕರಮಂತ್ರವನಱುಹು ನೀನಿನ್ನಂಜಬೇಡನೆಲು (ಕುವ್ಯಾಉ. ೬-೧೩). [ಸಂ.]

**ಸುಕರಾಜ** (ನಾ). ಒಂದು ಬಗೆಯ ಹೂವು: ಜಾಲದ ಪುಷ್ಪ . . . ಮೇಲಾದ ಸುಕರಾಜಪುಷ್ಪ ಲೀಲೆಯಿಂ ದೇವತಾಕುಸುಮಂಗಳೆಲ್ಲಾ ಕಾಲದೆ ರಾಜಿಸುತಿಹುವು (ಕಂಸವಿ. ೫-೧೦೦). [< ಸುಗಂಧರಾಜ]

**ಸುಕರೆ** (ನಾ). ಸಾಧುಸ್ವಭಾವದ ಹಸು: "ಅಚಂಡೀ, ಸುಕರಾ — ೨ ಸಾಧುವಾಗಿ ಸಾತ್ವಿಕಸ್ವಭಾವವುಳ್ಳ ಆಕಳು" (ಸಿದ್ಧಾಂತಿ. ೨೯೫). [ಸಂ. ಸುಕರಾ]

**ಸುಕರ್ಮ** (ನಾ). ೧. ಒಳ್ಳೆಯ ಕಾರ್ಯ; ಸತ್ಕಾರ್ಯ: ಕಾಲದ್ರವ್ಯ ಸುಕರ್ಮಶುದ್ಧಿಯ ಪೇಳುವರು ಅಲ್ಪರಾಗೆ (ಹಸಾರ. ೧೯-೧೭). ೨. ಒಳ್ಳೆಯ ಕೆಲಸವನ್ನು ಮಾಡುವವನು; ಸತ್ಕಾರ್ಯವನ್ನು ಮಾಡುವವನು: ಕನಕಂ ವೃಶ್ಚಿಕ ಮೇಷದೊಳ್ ನಿಲೆ ಚಮೂನಾಥಂ ಸುಕರ್ಮಾಟನಂ . . . ಕ್ಷೀಣದೇಹನೆನಿಕ್ಕುಂ (ಜಾತತಿ. ೧೭-೧೮). ೩. [ಜ್ಯೋತಿ] ಇಪ್ಪತ್ತೇಳು ಬಗೆಯ ಯೋಗಗಳಲ್ಲಿ ಏಳನೆಯದು: ವಿಷ್ಕಂಭ ಪ್ರೀತಿ . . . ಸುಕರ್ಮ ಧೃತಿ . . . ಐಂದ್ರ ವೈಧೃತಿಗಳೆಂಬ ಇಪ್ಪತ್ತೇಳು ಯೋಗಂಗಳುಂ (ವಿವೇಕ. ೨೬೨). [ಸಂ. ಸುಕರ್ಮನ್]

**ಸುಕಲೆ** (ನಾ). ೧. ಉತ್ತಮವಾದ ಲಲಿತಕಲೆ, — ವಿದ್ಯೆ: ಸಕಲಸುಕಲಾಕುಶಲಂ ಭೂನುತ ವಿಕ್ರಮವಿಜಯಂ ಭೂನಾಥನೆ ನಿನಗೆ ಪುತ್ರನಾದಪಂ (ಹಮ್ಮೀರ. ೨-೧೩). ೨. (ಮನೋಹರವಾದ) ಗುರುತು; ಚಿಹ್ನೆ: ಸುಕಲೆಗಳನಾಂತ ಮೊಲೆ . . . ಸೊಪ್ಪಾದಧರಮೊಪ್ಪಿತಾ ಕಾಂತೆಗೆ (ಜೈಮಿಭಾ. ೧೧-೨೫). [ಸಂ. ಸುಕಲಾ]

**ಸುಕವಿ** (ನಾ). ಉತ್ತಮಕವಿ; ಒಳ್ಳೆಯ ಕವಿ: ಕಣ್ಗೆ ವಂದಂ ಸುಕವಿಜನಮನೋಮಾನಸೋತ್ತಂಸಹಂಸಂ (ಆದಿಪು. ೧-೮೩).

ಸುಕವಿಶುಕಚೂತ = ಒಳ್ಳೆಯ ಕವಿಗಳೆಂಬ ಗಿಳಿಗಳಿಗೆ ಮಾವಿನಂತಿರುವವನು; ಒಂದು ಬಿರುದು: ವಾಜಿಕುಳಾರ್ಣ್ಣವಪಾರಿಜಾತ ಸುಕವಿಶುಕಚೂತ ಬನ್ಧುವನವಸನ್ತ (ಸೌಇಇ. XX. ೬೯-೩೫; 1107). [ಸಂ.]

**ಸುಕಾಣ** 'ಚುಕ್ಕಾಣಿ' ನೋ.

**ಸುಕಾಣು** 'ಚುಕ್ಕಾಣಿ' ನೋ.

**ಸುಕಾರ** (ನಾ). ಸು ಎಂಬ ಅಕ್ಷರ: ಇಸುವಿನ ಸುಕಾರಮಂ ಲೋಪಿಸುವರ್

ಕುಂ ಪರದೊಳಾಗೆ ಕುಂಮಿಂಗೆ ಕೆಲರ್ ಪೊಸಯಿಸುವರ್ ದ್ವಿರ್ಭಾವವಮಂ (ಶಮದ. ೨೨೮ ಪ್ರಯೋ.). [ಸಂ.]

**ಸುಕಾಲಿ** (ನಾ). ಒಂದು ಅಲೆಮಾರಿ ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ; ಲಂಬಾಣಿ: ಪೈರುಗಳಂ ತಂದು ಸುರಿಯುವಂತೆ ಸುಕಾಲಿಯರು . . . ಮೊದಲಾದ ಬಿಡಿವರ್ತಕರಿಗೆ ನೇಮಿಸಿರುವನು (ಸೌಗಂಧಿ. ೧೩೫-೧೪); ಅವಳ ವೇಷಭೂಷಣಗಳನ್ನು ನೋಡಿದರೆ . . . ಸುಕಾಲಿಗಳ ಹೆಣ್ಣಿನಂತೆ ಕಾಣುತ್ತಿದ್ದಳು (ಶ್ರೀರಾಯ. ೫೪). [ ? ./ ತೆಲು. ಸುಕಾರಿ, ಸುಕಾಲಿ]

**ಸುಕಾಲಿಗ, ಸುಕ್ಕಾಲಿಗ** (ನಾ). ಸುಕಾಲಿ; ಲಂಬಾಣಿ: (ಕೃಸಗ. II. ೫೬೨). **ಸುಕ್ಕಾಲಿಗ:** (ಮೈಗಜ. IV. ೭೮೭). [< ಸುಕಾಲಿ]

**ಸುಕಾಸೆ** (ನಾ). ಉತ್ತಮವಾದ ಕಾಸೆ, — ಕಟಿವಸ್ತ್ರ: ರಾಜಿಸುವ ಬೆಳ್ಪಟ್ಟೆಯ ಸುಕಾಸೆಯನಲಂಕರಿಸಿ ಶಶಿ ರವಿಯ ಪಳಿವ ತಾಳವನೊತ್ತುತ್ತೆ . . . ಲಾಸ್ಯಮುಮನಾಡಿ ಭೃಂಗೀಶ ನಗಿಸುವ ಶಿವನ ಪಂಚಮುಖವ (ಏಕೋಪು. ೨-೫೭). [ಸು-+ ಕಾಸೆ]

**ಸುಕುಮ, ಸೂಕ್ಷುಮ** (ಗು). ೧. ಸೂಕ್ಷ್ಮವಾದ; ನಾಜೂಕಾದ: ಒಂದು ಅಸಡಿಯ ಬೆಳಗು ದುಜ್ಯೋದನನು, ತನ್ನ ಸುಕುಮದೇಹದ ಕೋರನ ಕೂಡ, ಪಾಗಲದಲ್ಲಿ ವೋರದ ಆಟವನ್ನು ಕಂಡು (ಭಾಪಾಶಾ. ೨೯೨). (ನಾ). ೨. ಸೂಕ್ಷ್ಮವಾದುದು; ನಾಜೂಕಾದುದು: ಸೂಕ್ಷ್ಮ— ಸುಕುಮ, ಹರ್ಷ — ಹರುಸ (ಶಮದ. ೨೫೪ ಪ್ರಯೋ.). **ಸೂಕ್ಷುಮ:** ೧. ಮೃದುವೆನಿಪ ಪಕ್ಕಿಗಳ ಸೂಕ್ಷುಮವದನ ದವತಾರದಪೊಲಕ್ಕಿಯ ಬೆದಚಿಕೆಯಲಾ ತಾಯಿತಂದೆಯರ ಬಳಿವಿಡಿದು (ಶಿಭಾಗ. ೧೧-೧೩-೫೫). [< ಸಂ. ಸೂಕ್ಷ್ಮ./ ಪ್ರಾ. ಸುಖುಮ]

**ಸುಕುಮಾರ** (ಗು). ೧. ಮೃದುವಾದ; ಕೋಮಲವಾದ: ಶೃಂಗಾರರಸಂ ಸಮಂತು ಸುಕುಮಾರತರೋಕ್ತಿಗಳಿಂ ಪ್ರಸನ್ನಗಂಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತ[ದಿಂ] (ಕವಿರಾ. ೨-೯೯); ಸುಕುಮಾರಸುರಭಿಸಂತಾನಕಕುಸುಮದ ಬಣ್ಣವಾಸಿಗಂಗಳನೆತ್ತುತ್ತಕಳಂಕಮೂರ್ತಿಗಾ ಗಾಡಿಕಾರ್ತಿಗಮರಿಯರ ಮಾಲೆಗಾರ್ತಿಯರಾದರ್ (ಶಾಂತಿಪು. ೯-೧೮೨). (ನಾ). ೨. ಕೋಮಲತೆ; ಮೃದುತ್ವ: "ಮೃದು ಸುಕುಮಾರಂ ಕೋಮಳಂ" (ವಸ್ತುಕೋ. ೪೫-೧೦೫); ಯಾವಾಗಲೂ ಗುಲಾಬಿಯಂತೆ ಸುಕುಮಾರವಾಗಿದ್ದ ನಿಮ್ಮ ಶರೀರ ಇದೇಕೆ ಹೀಗಾಯ್ತು? (ಪುನರು. ೨೮೩). ೩. ಕೋಮಲವಾದ ಶರೀರವನ್ನು ಹೊಂದಿದವನು; ಚೆಲುವ: ಸುಕುಮಾರನೆಂಬ ಪೆಸರೀ ಸುಕುಮಾರಂಗೀ ಸಮಸ್ತಧಾರಿಣಿಯೊಳ್ ಸಾರ್ಥಕಮಾದುದು (ಸುಕುಮಾ. ೧೧-೩೭); ನಿನ್ನ ಬಸುರಿಂ ಬೆಳೆವ ಸುಕುಮಾರಂ ನಿಖಿಳಪಾವನನೆನಿಪ್ಪ ಜಗನ್ನುತೋನ್ನತಮೂರ್ತಿಯಲ್ಲದೆ ಜಾವಳನೆ ಕೇಳು (ಬಸಪು. ೩-೧೯). ೪. ಒಳ್ಳೆಯ ಮಗ; ಸುಪುತ್ರ. ೫. [ಕಾವ್ಯಮಿ] ಕಾವ್ಯಗುಣಗಳಲ್ಲಿ ಒಂದು; ಮೃದುವಾದ ಅಕ್ಷರ ಅಥವಾ ಪದಗಳ ಪ್ರಯೋಗ: ಸುಕುಮಾರತರಾಕ್ಷರಪದನಿಕರವಿಶಿಷ್ಟ ಪ್ರಯೋಗಗತ ಮಪ್ಪುದದಾ ಸುಕುಮಾರಮೆಂಬುದಕ್ಕುಂ (ಕವಿರಾ. ೨-೭೦); ಸುಕುಮಾರಂ ಸುಕುಮಾರಶೋಭೆ ವಿಲಸತ್ಕಾಂತಿ ಸ್ಫುರತ್ಕಾಂತಿ . . . ಆಗೊಪ್ಪಿರ್ಪ ವಾಕ್ಕೀತಿಮಾಡಿ ಕರಂ ಪ್ರೇಮದೊಳಿರ್ಕೆ ಕೋಮಳ ಮದೀಯಾಸ್ಯಾಂಬುಜಾವಾಸದೊಳ್ (ಶಾಂತೀಶ್ವ. ೧-೧೩). ೬. [ನಾಟ್ಯ] ರೂಪಕಗಳಲ್ಲಿ ಒಂದು ಭೇದ; ಲಘು ಮತ್ತು ವಿನೋದಕರವಾದ, ಸುಖಾಂತವಾದ ಪ್ರಹಸನ: ನಾಟಕದಲ್ಲಿ ಸುಕುಮಾರ, ಆವಿದ್ಧ ಎಂದು ಎರಡು ಪ್ರಯೋಗಗಳಿವೆ (ಸಾಹಿವಿ. ೧೨೨). 'ಆವಿದ್ಧ' ಪರಾ. [ಸಂ.]

**ಸುಕುಮಾರಕ** (ನಾ). = ಸುಕುಮಾರ ೩: ಸುಕುಮಾರಕಂ ಕುಮಾರಕನೆಂದು ಜಯವಧುಗನಂತವೀರ್ಯಂ ಪ್ರಿಯನಾದೊಂ (ಶಾಂತಿಪು. ೪-೪೭); ಸುಕುಮಾರಕನೊರ್ವಂ ಮಣಿಮಕುಟಮುಮಂ ತಿರ್ದುವೊಂದು ನೆವದಿಂದೆ ಭುಜಾಧಿಕಶೋಭೆಯನಾಕ್ಷಣದೊಳ್ ಪ್ರಕಟಿಸಿ ಮೆಟೆದಂ ಸರೂಪವಮಂ ವೈಭವಮಂ (ಬಾಧಪು. ೧೧-೯೧). [ಸಂ.]

**ಸುಕುಮಾರತೆ** (ನಾ). ೧. ಕೋಮಲತೆ; ಲಾಲಿತ್ಯ: ಪರನ ಮನೋಹರಂ ಗಿರಿಜೆಯಾ ನಡೆಯಾ . . . ಪರೆಯವೀ ಸುಕುಮಾರತೆಯಾ ಸುಧಾಮಯಂ (ಗಿರಿಶ. ೪-೫೭). ೨. = ಸುಕುಮಾರ ೫: ಶ್ಲೇಷ ಪ್ರಸಾದ ಸಮತೆ ಮಾಧುರ್ಯ ಸುಕುಮಾರತೆ . . . ಸಮಾಧಿಗಳೆಂಬ ದಶಪ್ರಾಣವಿಡಿದು (ವಿವೇಕ. ೨೨೭); ಶ್ಲೇಷ ಪ್ರಸಾದ, ಸಮತೆ, ಮಾಧುರ್ಯ, ಸುಕುಮಾರತೆ . . . ಸಮಾಧಿ — ಈ ಹತ್ತುಗುಣಗಳೇ ವೈದರ್ಭಮಾರ್ಗದ "ಪ್ರಾಣ" (ಭಾರಮಿ. ೨೯). [ಸಂ. ಸುಕುಮಾರತಾ]

**ಸುಕುಮಾರಪ್ರಯೋಗ** (ನಾ). = ಸುಕುಮಾರ ೬: ನಾಟಕ, ಪ್ರಕರಣ, ಭಾಣ, ವೀಥಿ, ಅಂಕ ಈ ಐದು ಸುಕುಮಾರಪ್ರಯೋಗಗಳು (ಸಾಹಿವಿ. ೧೨೨); ಸುಕುಮಾರಪ್ರಯೋಗದಲ್ಲಿ ರತಿ, ಹಾಸ, ಉತ್ಸಾಹ, ವಿಸ್ಮಯಗಳಿಗೆ ಸ್ಥಾನವಿದೆ (ಹೊಸಂಸಾ. ಮುನ್ನುಡಿ ೭). 'ಆವಿದ್ಧಪ್ರಯೋಗ' ಪರಾ. [ಸಂ.]

**ಸುಕುಮಾರಾಂಗ** (ನಾ). ಕೋಮಲವಾದ ದೇಹ; ಮೃದುವಾದ ಶರೀರ: ಅಂಗನಾಕುಸುಮಸುಕುಮಾರಾಂಗಸಮುಚಿತಮುಮಪ್ಪ ಲಾಸ್ಯಮಂ . . . ಪರಿಸ್ಫುಟಂ ಮಾಡಿ (ಶಾಂತಿಪು. ೭-೩೨ವ). [ಸಂ.]

**ಸುಕುಮಾರಾಂಗಿ** (ನಾ). ಕೋಮಲವಾದ ಶರೀರವನ್ನು ಹೊಂದಿದವಳು; ಚೆಲುವೆ: ಪ್ರಕಟಿತವಿಳಾಸನಧಿರಾಜಕುಮಾರಂ ನಳಿನಕೇತು ಕಂಡವರಂ ತತ್ಸುಕುಮಾರಾಂಗಿಗೆ ಸೋಲ್ತೆಟೆದುಕೊಂಡನನ್ಯಾಯವೃತ್ತಿಯಿಂ ಕೋಮಳೆಯಂ (ಶಾಂತಿಪು-೧೦). [ಸಂ.ಸುಕುಮಾರಾಂಗೀ]

**ಸುಕುಮಾರಿ** (ನಾ). ೧. ಒಳ್ಳೆಯ ಮಗಳು; ಸುಪುತ್ರಿ: ಇತ್ತಲೀ ಮಮಕಾರನೆಂಬ ನೃಪೋತ್ತಮನ ಸುಕುಮಾರಿ ಮಿಗೆ ಬಳೆವುತ್ತಲಿರ್ದಳು ಗಳಿಗೆಸಂಖ್ಯೆಗೆ ಸಕಲಸುಖದಿಂದ (ಪ್ರಭುಲಿ. ೩-೨೩). ೨. ಕೋಮಲೆ; ಸುಂದರಿ: ಸುಕುಮಾರಿಯರಂ ನೀಳಾಳಕೆಯರ ನೆರೆದಂದು ತಂದು ಶುಭಲಗ್ನದೊಳಾ ನಕುಳ ಸಹದೇವರೊಳ್ ಸೋತ್ಸುಕಚಿತ್ತಂ ನೆರಪಿದಂ (ನೇಮಿಪು. ೧೦-೧೩); ಸನ್ನುತಸುಕುಮಾರಿಯರ್ . . . ಅರಸನ ಸಂಗಡಮುನ್ನತಜಳಕೇಳಿಗೆಂದು ನಿಂದರ್ ಕ್ರಮದಿಂ (ಹಮ್ಮಿ.ರ. ೪-೨೧). [ಸಂ. ಸುಕುಮಾರೀ]

**ಸುಕುಮಾರಿಕಾವಾಸ** (ನಾ). ಒಂದು ಬಗೆಯ ಕೊಳಲು: ಜಾತಿವಾಸ ಸಜಾತಿವಾಸ ಸುಕುಮಾರಿಕಾ[ಪಾಠಾಂ. ಕ]ವಾಸ . . . ಭುವನಾಧಿಪತಿವಾಸವೆಂಬ ಹದಿನೆಂಟುತೆಱದ ವಾಸಂಗಳ ಲಕ್ಷಣವನಱಿದು (ವಿವೇಕ. ೨೫೭). [ಸಂ.]

**ಸುಕುಮಾರಿಕೆ** (ನಾ). = ಸುಕುಮಾರಿ ೨: ದಾದಿಯುಮಾ ಸುಕುಮಾರಿಗಾದರದಿ ನವಂತಿನಾಥನಂ ತೋಱಿದಳ್ (ಶಾಂತಿಪು. ೫-೧೧೭). [ಸಂ. ಸುಕುಮಾರಿಕಾ]

**ಸುಕುಲೀನ** (ನಾ). ಒಳ್ಳೆಯ ವಂಶದಲ್ಲಿ ಜನಿಸಿದವನು: ಸುಕುಲೀನಂ ವಿಬುಧಾನ್ವಿತಂ . . . ಎಸೆದಂ ಭೂಮಧ್ಯದೊಳ್ ಲಕ್ಷ್ಮಣಂ (ನೇಮಿಪು. ೧-೩೧). [ಸಂ.]

**ಸುಕೃತ** (ಗು). ೧. ಚೆನ್ನಾಗಿ ಮಾಡಿದ; ಯುಕ್ತವಾಗಿ ಮಾಡಿದ. ೨. ಮಂಗಳಕರವಾದ; ಶುಭಕರವಾದ: ಸುಕೃತಸುರದ್ರುಮವನಪಾಲಕನೆಂಬಿನಮತುಲ ವಿಚಕಿಲೋದ್ಗಮಮಂ ತಂದು . . . ಋಷಿನಿವೇದಕನಿತ್ತಂ (ಪಂರಾಮಾ. ೬-೨೫). ೩. ಅನುಕಂಪದಿಂದ ನಡೆಸಿಕೊಂಡ. (ನಾ). ೪. ಪುಣ್ಯ; ಸುಪು: ಅಂತು ಪೂರ್ವಜನ್ಮಸಂಚಿತಸುಕೃತದಿಂ ದಿವ್ಯಾಯುಧವಸ್ತುವಾಹನಂಗಳುಮಂ ದಿವ್ಯಸ್ತ್ರೀಯರುಮಂ ಸ್ವೀಕರಿಸಿ (ಪಂರಾಮಾ. ೧೫-೧೧ ವ); ನೀನು ನೆರಹಿದ ಸುಕೃತಫಲವದನೇನ ಹೇಳುವೆನು (ಕುವ್ಯಾದ್ರೋ. ೮-೪೧). ೫. ಪವಿತ್ರವಾದ ಕಾರ್ಯ; ಸತ್ಕಾರ್ಯ: ಅಂಗವೆಂಬುದು ಪೂರ್ವಕರ್ಮಸಂಗಶೇಷವು ಪುಣ್ಯಪಾಪೋತ್ತುಂಗನಿಳಯಂ ಸುಕೃತ ದುಃಕೃತಗತಿಗಳಾಶ್ರಯವು (ಬಸಪು. ೫- [illegible]); ಸುಕೃತವನೊಂದಿ ಕೀರ್ತಿ ಶುಭಶೀಲವ ನೊಂದಿ ಸುನೀತಿ . . . ನಡೆವಂದದಿಂ ನಿಜಾಧಿಕನೊಡಗೂಡಿ ಕೂರ್ತು ನಡೆದಳ್ ದಮಯಂತಿ (ನಳಚಂ. ೫೧೮). ೬. ಅದೃಷ್ಟ; ಭಾಗ್ಯ: ನಿಜವಾಗಿ ನನ್ನ ಸುಕೃತಪ್ರತಿಬಂಧಕವಾದ ಪುರಾಕೃತಕರ್ಮವು ಆಗ ಪರಿಣಮಿಸತೊಡಗಿತು (ಶಾಕುಂತ. ೧೧೧-೫); ಭಾಷೆಯೂ ಸಹ ಅಲೌಕಿಕಮಾಧುರ್ಯಭಾವದಲ್ಲಿ ಕವಿಗೊದಗಿ ಬರುವುದೊಂದು ಸುಕೃತ (ಕಾವ್ಯಕು. ೪೫). ೭. ಅದೃಷ್ಟಶಾಲಿ; ಭಾಗ್ಯವಂತ: ಕಾಯಿರೇ ಸರ್ವಾಪರಾಧಿಗಳ ಪಿಸುಣರಂ ದುರ್ಮತಿಗಳಂ ಸ್ಥಿರಿಸಿ ಸುಕೃತರಂ ಮಾಡಿ ಎಮ್ಮುವಂ (ಬಸಪು. ೩೨-೬೨); ಸಿರಿ ಹೋದ ಕಾಲಕೆ ಒಬ್ಬಿಬ್ಬರಾದರು ಬಂದರೆ ನೀವೆ ಸುಕೃತರು (ಇಂಚಾವ. ೨೨೩-೫). ೮. ಪ್ರತಿಫಲ; ಪುರಸ್ಕಾರ. [ಸಂ.]

**ಸುಕೃತಂಬೆಱು** (ಕ್ರಿ). ಪುಣ್ಯವನ್ನು ಗಳಿಸು, — ಪಡೆ: ಈಗಳೆ ಜನ್ಮಾಭಿಷೇಕ ವಿಭೂತಿಯಂ ಸಮೆದು ಸುಕೃತಂಬೆತ್ತೆಟ್ಟಿಂದಂ (ಪುಷ್ಪಪು. ೨೨-೧೧). [ಸುಕೃತ + ಪೆಱು]

**ಸುಕೃತಕರ್ಮಿ** (ನಾ). ಒಳ್ಳೆಯ ಕೆಲಸವನ್ನು ಮಾಡುವವನು; ಸತ್ಕಾರ್ಯವನ್ನು

ಮಾಡುವವನು: ಸಕಲಕರ್ತನು ದೈವವಾದೊಡೆ ಸುಕೃತಕರ್ಮಿಯನೇಕೆ ದಕ್ಷನನಕಟ ಮುಖದೊಳು ಪಾರವೆಯ್ದಿಸದಾಯ್ತು (ಬಸವು. ೫೪-೧೭). [ಸಂ. ಸುಕೃತಕರ್ಮಿನ್]

**ಸುಕೃತನಿಧಾನ** (ನಾ). ೧. ಪುಣ್ಯಸ್ಥಾನ; ಮುಕ್ತಿ: ದರ್ಶನಮುಪಾತ್ತಜಿನತತ್ವಶ್ರದ್ಧಾನಂ ಚರಿತಂ ಸುಕೃತನಿಧಾನಂ ತಾನೆಂದು ಪೇೞ್ದರಲ್ತೆ ಮಹಾತ್ಮರ್ (ಚಂದ್ರಪ್ರ. ೭-೨೩). ೨. ಮುಕ್ತಿಯನ್ನು ಸಾಧಿಸಿದವನು: ಸುಕೃತನಿಧಾನರ್ ಲೋಕಾಂತಿಕದೇವರ್ ದೇವದೇವನೊಳ್ ವೈರಾಗ್ಯಂ ವಿಕಸಿತಮಾದುದನವಧಿಪ್ರಕಾಶದಿಂದಱಿದು (ವರ್ಧಮಾ. ೧೪-೯೨). [ಸಂ.]

**ಸುಕೃತಾಕಾರ** (ನಾ). ಮಂಗಳಕರವಾದ ರೂಪವನ್ನು ಹೊಂದಿದವನು: ಸುಕೃತಾಕಾರಂ ತದ್ರೂಪಕುಮಾರಂ . . . ಶಾಸ್ತ್ರಪ್ರಕರಾರ್ಕರ್ಣನದಿನಿಂತು ನೆಱೆ ನುಡಿಗಲ್ತಂ (ಕುಸುಮಾ. ೬-೧೫೨). [ಸಂ.]

**ಸುಕೃತಿ$_1$** (ನಾ). ೧. ಅದೃಷ್ಟಶಾಲಿ; ಭಾಗ್ಯವಂತ: ಹರಸೇವೆಗೈವ ಸುಕೃತಿಗೆ ಸುರಸೇವೆಯನೊಲ್ಲು ಮಾಳ್ಪವಂ ಸಮನೆ (ವೃಷಭ. ೩-೩೭). ೨. ಒಳ್ಳೆಯ ಕೆಲಸ ಮಾಡುವವನು; ಸತ್ಕಾರ್ಯ ಮಾಡುವವನು: ಸುಕೃತಿಗಲ್ಪಾಯುಷ್ಯಮಂ ನೀಡುವಂ ಸುಡು ಪಾಪಿಷ್ಠನ ಬೊಮ್ಮನಂ (ಸೋಮೇಶ. ೩೩); ಪಾಪಿಯಂ ಪ್ರೋತ್ಸಹಿಸಿ ಸುಕೃತಿಯ ಪರೀಕ್ಷಿಸುತ ವೇಪಿಪನು ವಿಧಿ ನಮ್ಮ (ಮಂಕುಕ. ೧೫೯). [ಸಂ. ಸುಕೃತಿನ್]

**ಸುಕೃತಿ$_2$** (ನಾ). ೧. ಒಳ್ಳೆಯ ಕೆಲಸ; ಸತ್ಕಾರ್ಯ: ಸುಕೃತಿಯಾಯಿತು ನಿಮ್ಮಯ ನನಹಿಂದವೆ ಮುಕುತಿಯ ಫಲಗಳ ದಾಂಟಿಯೆ ಬಂದೆನು (ಮಹಾದೇ. ಬ. ೯೬-೨೩). ೨. ಒಳ್ಳೆಯ ಗುಣ; ಸಹೃದಯತೆ: ಆ ದೇವನುಜ್ಜ್ವಲತತ್ಯಾಗಮನಕ್ಕೆ ತನ್ನ ತನುವಂ ತಂದಿರ್ದುವೇನೆಯ್ದೆ ಮಂಡಲನಾಥತ್ವಮನೆಯ್ದಿದಂ ಸುಕೃತಿಗಾ ಪಾಡ್ಗುಣ್ಯಮೇಂ ಬಾಲ್ತೆಯೋ (ಶಾಂತಿಪು. ೧೦-೧೦೮); ಸುಕೃತಿನಿಳಯಂ ಸಹಸ್ರಾರಕಲ್ಪದೊಳ್ ರುಚಿರಮಾದ ರುಚಿಕಾಖ್ಯವಿಮಾನಕದೊಳ್ ಸೂರ್ಯಪ್ರಭಸಂಜ್ಞಿಕನನಿಮಿಷಮುಖ್ಯನಾದನಾ ಮುನಿಮುಖ್ಯಂ (ವರ್ಧಮಾ. ೧೨-೯೭). ೩. [ಛಂದ] ಅಕ್ಷರಛಂದಸ್ಸಿನಲ್ಲಿ ಇಪ್ಪತ್ನಾಲ್ಕನೆಯ ಛಂದಸ್ಸು; ಪ್ರತಿಯೊಂದು ಪಾದದಲ್ಲಿ ಇಪ್ಪತ್ತುನಾಲ್ಕು ಅಕ್ಷರಗಳಿರುವ ಸಮವೃತ್ತಗಳ ಛಂದಸ್ಸು: ಉಕ್ತೆ . . . ಸು[ಪಾಠಾಂ. ಸಂ]ಕೃತಿ ಅತಿಕೃತಿ ಉತ್ಕೃತಿ ಎಂದಿಪ್ಪತ್ತಾಱುಛಂದಂಗಳಕ್ಕುಂ (ಛಂದೋಂಬು. ೧-೪೭ ವ). [ಸಂ.]

**ಸುಕೇಶಿ** (ನಾ). ೧. ಸೊಗಸಾದ ಕೂದಲನ್ನು ಹೊಂದಿರುವವಳು: ವರಕಂಠೀರವಮಧ್ಯೆ . . . ಸುಕೇಶಿ ರಾಜಶುಕಸಲ್ಲಾಪಾಂಗಶೃಂಗಾರ ಭಾಸುರ ಬಿಂಬಾಧರೆ (ಹಮ್ಮೀ. ೨-೭೨). ೨. ಒಬ್ಬ ಅಪ್ಸರೆಯ ಹೆಸರು; ದೇವಗಣಿಕೆಯರಲ್ಲಿ ಒಬ್ಬಳು: ಹೇಷಿತಘೋಷಣ ಶ್ರವಣಮಾತ್ರವಿತ್ರಾಸನರಚಿತಜಂಭಾರಿದೇಹಪರಿರಂಭರಂಭಾತಿಲೋತ್ತಮೋರ್ವಶೀ ಸುಕೇಶಿಯೆಂಬ ಕೇಶಿಯುಮಂ . . . ಕರೆದು (ಜಗನ್ನಾ. ೩-೨೨ ವ). [ಸಂ. ಸುಕೇಶೀ]

**ಸುಕೇಸರ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ, ಪ್ರತಿಪಾದದಲ್ಲಿ ಹದಿನೈದು ಅಕ್ಷರಗಳಿರುವ ಅತಿಶಕ್ವರಿ ಛಂದಸ್ಸಿನ ಒಂದು ವೃತ್ತ: ಅಮರಗಣಾರ್ಕ ಶೀತಕರ ಭಾನು ಪಾವಕೋತ್ತಮ ಗಣ ಪಂಚಕಂ ನೆರೆಯೆ ಚೆಲ್ವುವೆತ್ತ ವೃತ್ತಂ . . . ಶುಭದಂ ಸುಕೇಸರಂ (ಛಂದೋಂಬು. ೨-೧೫೭). [ಸಂ.]

**ಸುಕೋಶ** (ನಾ). ಉತ್ತಮರೀತಿಯ ಅಂಡಕೋಶ(?): ಪೀನಾಯತಾಮ್ರ ಪಲ್ಲವಕೋಶ ಸುಕೋಶ[ಪಾಠಾಂ. ಶ್ಯ]ಮೋಹನನುಂ . . . ಅಪ್ಪ ವಿಜಯಪರ್ವತ ಗಜೇಂದ್ರಂ ಬೞಿಯ ಮುಂದೆ ನಿಲ್ವುದುಂ (ಆದಿಪು. ೧೨-೫೭ ವ). [ಸಂ.]

**ಸುಕ್ಕ** (ನಾ). ಒಣಗಿದುದು; ಶುಷ್ಕವಾದುದು: "ಸುಕ್ಕಂ, ಶುಷ್ಕಂ" (ಕರ್ಣಾನಿ. ೭೨). [< ಪ್ರಾ. ಸುಕ್ಕ, ಸುಕ್ಖ./ ಸಂ. ಶುಷ್ಕ]

**ಸುಕ್ಕಟ** (ನಾ). (ಮೆಚ್ಚುಗೆ, ಕೊಂಡಾಟಗಳನ್ನು ಸೂಚಿಸುವ) ಒಂದು ಉದ್ಗಾರವಾಚಕ ಶಬ್ದ (?): ಅಕ್ಕಟಕ್ಕಟ ಭೀಮನೊಬ್ಬನು ಸುಕ್ಕಟ ಸುಮಾನಿತನು ಕಡೆಯಲಿ ಮಕ್ಕಳಾಟಿಕೆ ನಮ್ಮದೆಂಬಿರಿ ಭಾವ ಪೇಳೆನಲು (ಕೃಷ್ಣಾಕಾ. ೨೭-೧೭). [?]

**ಸುಕ್ಕರ, ಸುಕ್ರ** (ನಾ). [ಜ್ಯೋತಿ] ಶುಕ್ರಗ್ರಹ: ಎತ್ತಲ್ಲಿ ಬಿಟ್ಟಿರಿ ಬುತ್ತಲ್ಲಿ ಉಂಡಿರಿ ಸುಕ್ಕರ ನಿಮಗಲ್ಲಿ ಉದಿಸಿದ (ನಾಪದ. ೧೨೧). ಸುಕ್ರ: 'ಸುಕ್ರವಾರ' ಪರಾ. [< ಸಂ. ಶುಕ್ರ./ ಪ್ರಾ. ಸುಕ್ಕ]

**ಸುಕ್ಕಾಲಿಗ** 'ಸುಕಾಲಿಗ' ನೋ.

**ಸುಕ್ಕಿನುಂಡೆ** 'ಸುಖಿನುಂಡೆ' ನೋ.

**ಸುಕ್ಕಿಸು** (ಕ್ರಿ). ೧. ಮುದುಡುವಂತೆ ಮಾಡು: ಸುಕ್ಕಿಸದಿರರ್ಧಚಂದ್ರಧ್ವಜವನೊಡೆಯಾ! (ಗಿರಿಜಾ. ೧೮-೨೪). ೨. ಕುಗ್ಗಿಸು; ನಿವಾರಿಸು: ದೈತ್ಯನ ಮಾಯೆಯೆಲ್ಲವ ಸುಕ್ಕಿಸಿದನದಟಂದ ಮಾಯಾಸಂಜ್ಞಿಕಾಸ್ತ್ರದಲಿ (ಸಂಛಪ. ೧೯-೮). ೩. ನೆರಿಗೆಗಟ್ಟುವಂತೆ ಮಾಡು: ಬೇಜಾರಿನಿಂದ ಹಣೆಯನ್ನು ಸುಕ್ಕಿಸಿದನು (ರೂಢಿ). [ಸುಕ್ಕು$_1$ (< ಸುರ್ಕು$_1$) + -ಇಸು$_3$]

**ಸುಕ್ಕು$_1$** 'ಸುರ್ಕು$_1$' ನೋ.

**ಸುಕ್ಕು$_2$** 'ಸುರ್ಕು$_2$' ನೋ.

**ಸುಕ್ಕು$_3$** 'ಸುಂಕು$_3$' ನೋ.

**ಸುಕ್ಕುಂಗುರುಳು** 'ಸುರ್ಕುಂಗುರುಳ್' ನೋ.

**ಸುಕ್ಕುಂದುಱುಬು** (ನಾ). ಗುಂಗುರುಕೂದಲಿನ ಮುಡಿ: ಕನ್ನಡಿಮೊಗದ ಸುಕ್ಕುಂದುಱುಬಿನ ಕಡುಚೆನ್ನೆಯರೆಸೆದರೊಗ್ಗಿನೊಳು (ಕುರಾಸಾಂ. ೨೮-೪೭). [ಸುಕ್ಕು$_1$ (< ಸುರ್ಕು$_1$) + ತುಱುಬು$_2$ (< ತುಱುಂಬು$_2$)]

**ಸುಕ್ಕುಗಟ್ಟು** (ಕ್ರಿ). ನೆರಿಗೆಯಾಗು; ನಿರಿಬೀಳು; ಸುಕ್ಕಾಗು: ಅವನ ಕಂದುಬಣ್ಣದ ಮೋರೆ ಸುಕ್ಕುಗಟ್ಟಿತ್ತು (ಮಹಾತ್ಮಾ. ೫); ಕುಣಿದು, ಕುಣಿದು ದೇಹ ಸುಕ್ಕುಗಟ್ಟಿತಲ್ಲ (ಮೂಕಜ್ಜಿ. ೨೪೮). [ಸುಕ್ಕು$_1$ (< ಸುರ್ಕು$_1$) + ಕಟ್ಟು$_1$]

**ಸುಕ್ಕುಗುಪ್ಪಸ** (ನಾ). ನೆರಿಗೆಯಿಂದ ಕೂಡಿರುವ ಒಂದು ಬಗೆಯ ಅಂಗಿ: ಸುಕ್ಕುಗುಪ್ಪಸ ಕಿಱುವರಲ ಚೊಕ್ಕಮುದ್ರಿಕೆ ಚೆಲ್ವುವೆತ್ತಿರಲಾಸ್ಥಾನವೊಕ್ಕನಾ ಮಂತ್ರಿತಿಲಕನು (ಕುರಾಸಾಂ. ೯-೧೦೭). [ಸುಕ್ಕು$_1$ (< ಸುರ್ಕು$_1$) + ಕುಪ್ಪಸ]

**ಸುಕ್ಕುಗುರುಳು** 'ಸುರ್ಕುಂಗುರುಳ್' ನೋ.

**ಸುಕ್ಕುದಬ್ಬೆಹುಲ್ಲು** 'ಸುಂಕುದಬ್ಬೆಹುಲ್ಲು' ನೋ.

**ಸುಕ್ಕೆ** 'ಚುಕ್ಕೆ$_2$' ನೋ.

**ಸುಕ್ಕೆಸೊಪ್ಪು** 'ಚುಕ್ಕೆಸೊಪ್ಪು' ನೋ.

**ಸುಕ್ರ** 'ಸುಕ್ಕರ' ನೋ.

**ಸುಕ್ರಮ** (ನಾ). ಶ್ರೇಷ್ಠವಾದ ಪಾದ: ಚಕ್ರಪಾಣೀ ರಂಗನಾಥ ಸೋಮೇಶ್ವರನ ಸುಕ್ರಮವ ಪೂರ್ದಿ ಶಿವಭಕ್ತಿಪರನಾದ ಭೂಚಕ್ರದೊಳಗೀತಂಗೆ ತೊಣೆಗಾಣೆವು (ಗುರುಚಾ. ೧೨-೩೨). [ಸಂ.]

**ಸುಕ್ರವಾರ** (ನಾ). ಒಂದು ವಾರದ ಹೆಸರು; ಶುಕ್ರವಾರ: ಸುಕ್ರವಾರಮುತ್ತರಾಯಣ ಸಂಕ್ರಾನ್ತಿಯನ್ದು . . . ಕೊಟ್ಟ ಪೊಂಗದ್ಯಾಣವಯ್ವತ್ತಯ್ದು (ಮ್ಯಆರ. ೧೯೨೯, ೬೬-೧೧; 964); ಫಾಲ್ಗುಣಮಾಸದ ಸುಕ್ರವಾರ (ಎಕ. VII. ಶಿಕಾರಿ. ೪-೭೮; 1122). [ಸುಕ್ರ (< ಸುಕ್ಕರ) + ವಾರ$_3$]

**ಸುಕ್ರುಂಡೆ** 'ಸುಖಿನುಂಡೆ' ನೋ.

**ಸುಕ್ರುತ** (ನಾ). ಪುಣ್ಯ; ಸುಕೃತ: ನಡಸೂದಕ್ಕೆ ಸಹಾಯವಾದವರು ವಾರಣಾಸಿಯಲಿ ಸಾವಿರಕವಿಲೆಯನು ಬ್ರಾ(೦)ಹ್ಮರಿಗೆ ಕೊಟ್ಟು ಸುಕ್ರುತವನೂ ಪಡೆಯಲುಳವರು (ಸೌಇಇ. XI-ii, ೪೭೬-೨೧; 1506). [< ಸಂ. ಸುಕೃತ]

**ಸುಕ್ಷಣ** (ನಾ). ಅಗ್ನಿ; ಬೆಂಕಿ (?): ಸಕ್ಷಮದಕ್ಷಶಿಕ್ಷಣವಿಚಕ್ಷಣಸುಕ್ಷಣ ಲಕ್ಷಣೇಕ್ಷಣಾ ರಕ್ಷಿತಲಕ್ಷಿತೇಶ್ವರ ಮುಮುಕ್ಷು . . . ಶಿವಾಕ್ಷಿಸಂಭವಾ (ರಾಜಶೇ. ೧-೧೧). [?]

**ಸುಕ್ಷಣೆ** (ನಾ). = ಸುಕ್ಷಣ (?): ವಿರೂಪಾಕ್ಷ ಕೋಪಂ ಮಸಗಿ ಫಣೆಗಣ್ ವಿಕಾಸಿಸಲ್ ಸುಕ್ಷಣೆ ಭುಗಿಲ್ ಭುಗಿಲೆನುತ್ತುರಿಯಲದಱೊಳಂ ಜನಿಸಿದಂ ವೀರಭದ್ರಂ (ಗುರುಚಾ. ೪-೨೦). [?]

**ಸುಕ್ಷೇತ್ರ** (ನಾ). ೧. ಸಾರವತ್ತಾದ ಭೂಮಿ; ಫಲವತ್ತಾದ ನೆಲ: ಮಹಾಸುಕ್ಷೇತ್ರವಾಸದ ವಾಲುಕದ ಮಱೆಯ ಅಪ್ಪುವಿನಂತೆ (ಮೋಳಿಮಾ. ೮೨-೩೭); "ನದಿಯ ಬಳಿಯಲ್ಲಿರುವ ಹೊಲ" (ಮೋಳಿಮಾ. ಕೋಶ). ೨. ಪುಣ್ಯಭೂಮಿ; ತೀರ್ಥಕ್ಷೇತ್ರ: ನಕ್ಷತ್ರವಾದರೂ ಸುಕ್ಷೇತ್ರದಲ್ಲಿರಬೇಕು (ಗಾದೆ). [ಸಂ.]

**ಸುಕ್ಷೇಮ** (ನಾ). ನೆಮ್ಮದಿ; ಸೌಖ್ಯ: ಪ್ರೇಮವೆಸೆಯಲು ಬಸವನಂ ಸನ್ನಾಮಿ ಕಿನ್ನರ

ಶರಣನಂ ಸುಕ್ಷೇಮದಿಂ ಜೀವಂತರಂ ಮಾಡಿದನು (ಬಸವು. ೩೭-೪೪); ಮಂದಿರದ ಸುಕ್ಷೇಮ ಕುಶಲವನಂದು ಕೇಳಿದು ವೀಳೆಯವನಾ ಮಂದಿಗಿತ್ತನು (ಕುಮಾವ್ಯಾ. ೭-೨೨). [ಸಂ.]

**ಸುಕ್ಷೇಮಿ** (ನಾ). ನೆಮ್ಮದಿಯಿಂದಿರುವವನು; ಕ್ಷೇಮವಾಗಿರುವವನು: ಈ ಮಹಿಯೊಳೀವರೆಗೆ ನಾವ್ ಸುಕ್ಷೇಮಿಗಳು (ಹರಿಶಾ. ೧೭). [ಸಂ. ಸುಕ್ಷೇಮಿನ್]

**ಸುಕ್ಷ್ವೇಡನಗ್ರೀವ** (ನಾ). ಕಂಠದಲ್ಲಿ ವಿಷವನ್ನು ಧರಿಸಿರುವವನು; ಶಿವ: ಅತುಳ ಚಕ್ಷುಶ್ರವಣಾಭರಣ ಸುಕ್ಷ್ವೇಡನಗ್ರೀವ ರಕ್ಷಿಸುಗೆ (ನವಮೋ. ೧೭-೧). [ಸಂ.]

**ಸುಖ** (ಗು). ೧. ಆನಂದಭರಿತವಾದ; ಆಹ್ಲಾದಕರವಾದ. ೨. ಹಾಯಾದ; ನಿರಾಂತಕವಾದ. ೩. ತಕ್ಕ; ಯೋಗ್ಯವಾದ. (ನಾ). ೪. ಸಂತೋಷ; ನಲಿವು: ರಮಿಯಿಪುದಮರಿಯರೊಳ್ . . . ನಗೆ ಸಬ್ಬವಮಮರಿಯರೊಳ್ ನಡೆವುದಮರನೇಂ ಸುಖಮಯನೋ (ಶಾಂತಿಪು. ೭-೭೭); ನಂದನಿರ್ದಂ ಸುಖದಿಂ (ಜಗವಿ. ೩-೨೭). ೫. [ಜ್ಯೋತಿ] ಲಗ್ನದಿಂದ ನಾಲ್ಕನೆಯ ರಾಶಿ: ಚತುರ್ಥಕ್ಕೆ ವಲಂ ಮತ್ತಂ ಪಾತಾಳ ವೇಶ್ಮ ಸುಖ ಹಿಬುಕ ಬಂಧುವೆಂದ್ಯೆದು ಪೆಸರ್ (ಜಾತತಿ. ೧-೩೪).

**ಸುಖದುಃಖ** = ಸಂತೋಷ ಮತ್ತು ಅಳಲು: ಸಕಳಕ್ಕೆ ಕರ್ತನು ಆತ್ಮನಾದಡೆಯು ಅನವರತ ಸುಖದುಃಖಸಮಿತಿಯೊಳನುಭವಿಸುತಲಸುವನೆ (ಬಸವು. ೫೪-೧೩); ಸುಂಕದವನ ಕೂಡೆ ಸುಖದುಃಖ ಹೇಳಿದರೆ ಕಂಕುಳಲ್ಲಿ ಏನು ಅಂದನಂತೆ (ಗಾದ). **ಸುಖಸಂಕಥಾವಿನೋದ** = ಸಾಮಂತರು, ಅಧಿರಾಜರೊಡನೆ ದೊರೆಯು ನಡೆಸುವ ಸೌಹಾರ್ದಯುತವಾದ ಸರಸಸಂಭಾಷಣೆ; ರಾಜಯೋಗ್ಯವಾದ ಒಂದು ಬಗೆಯ ಮನರಂಜನೆಯ ಕಾಲಕ್ಷೇಪ: ಪೌದನಪುರಕ್ಕೆ ಪೋಗಿ ಸುಖಸಂಕಥಾವಿನೋದದಿನರಸುಗೆಯ್ಯುತ್ತುಮಿರ್ (ಶಾಂತಿಪು. ೬-೨೩ ವ); ದುಷ್ಟನಿಗ್ರಹ ಶಿಷ್ಟಪ್ರತಿಪಾಳನದಿಂ ಸುಖಸಂಕಥಾವಿನೋದದಿನ್ನಾಳುತ್ತಮಿರೆ (ಎಕ. XI, ಚಿತ್ರದು. ೪೭-೧೨; 1067). [ಸಂ.]

**ಸುಖಂಗೆಯ್** (ಕ್ರಿ). ಸಂತೋಷವನ್ನುಂಟುಮಾಡು; ಸುಖವನ್ನು ನೀಡು: "ಉಚಿ ಸುಖಂಗೆಯ್ವವಂ[ಪಾಠಾಂ. ಗೈವವಂ] ಶಿವಕಾರಿಯಕ್ಕು" (ಮಂಗರಾ. ೭೮-೯). [ಸುಖ + ಕೆಯ್₁]

**ಸುಖಂದಳೆ**, ಸುಖದಳೆ (ಕ್ರಿ). ಸಂತೋಷವನ್ನು ಹೊಂದು; ನಲಿವನ್ನು ಪಡೆ: ಪುಳಕಿಪ ತನು . . . ಸುಖಂದಳೆವ ಮನಂ ಕಂಪಿಪ ಕೆಯ್ ಕಳವಳಿಸುವ ಗಳಮನೂನ ಮಸತೀಕುಳದೊಳ್ (ಗಿರಿಕ. ೪-೮೫). **ಸುಖದಳೆ:** ತಳುಗದಪಮಳಾಧರವ ಚುಂಬಿಸಿ ಸುಖದಳೆದಳು (ಕಂಸವಿ. ೧೦-೩೦). [ಸುಖ + ತಳೆ₁]

**ಸುಖಂಬಡು**, ಸುಖಪಡು, ಸುಖಬಡು, ಸುಖವಡು (ಕ್ರಿ). ಸಂತೋಷವನ್ನು ಅನುಭವಿಸು; ಆನಂದಪಡು: ಎನ್ನೆವರಂ ಜೀವಿಸುವನನ್ನೆವರಂ ಸುಖಂಬಡುವುದು (ಪಂಚತಂ. ೭೩-೬). **ಸುಖಪಡು:** ಅವಳು ಅದರಲ್ಲಿ ಸುಖಪಟ್ಟರೆ ತಾನೂ ಸುಖಪಡುವನು (ಸವತಿ. ೫೦); ಒಂದು ಹೆಂಡತಿಯನ್ನು ಸಾಯಿಸಿ ಎರಡನೆಯ ಮದುವೆಯಾಗಿ ಸುಖಪಡುವುದು ಅಷ್ಟು ಸುಲಭವೇ? (ಪದ್ಮ.ಸ. ೧೪೭). **ಸುಖಬಡು:** 'ಸುಖಬಡಿಸು' ಪರಾ. **ಸುಖವಡು:** ಈ ವನಿತೆಯೊಳೊಂದಿ ಸುಖವಟ್ಟು ಮಡಿದಡೆ ಜೀವನ್ಮುಕ್ತಿ (ಮೋಹತ. ೩೩-೪೭). [ಸುಖ + ಪಡು₁]

**ಸುಖಂಬಡೆ**, ಸುಖವಡೆ (ಕ್ರಿ). = ಸುಖಂದಳೆ: ಬಹ್ವಾರಂಭಪರಿಗ್ರಹವಿಹ್ವಲನಿಂದ್ರಿಯ ಸುಖಾರ್ಥಿ ಸಂಸಾರಗುಹಾಗಹ್ವರದೊಳಗಿರುಳಿನ ಚಕ್ರಾಹ್ವದವೊಲ್ ಮಱುಗದೇಂ ಸುಖಂಬಡೆದಪನೇ (ಆದಿಪು. ೩-೭೮); ಕೂಡಿ ಸುಖಂಬಡೆವುದು ಜಂಗಮಲಿಂಗದ ವಿಷಯ ಸುಖಂಬಡೆದು ಪರಿಣಾಮತೆಯನ್ನೆದುವುದು ಪ್ರಸಾದಲಿಂಗದ ವಿಷಯ (ಆದವ. ೫-೧೨). **ಸುಖವಡೆ:** ಇನಿವಾತಿನಿಂದ ಸೋಲಿಸಿ ಕೂಡಿಯವನಿಂದ ಘನಸುಖವಡೆಯಬೇಕಬಲೆ (ಕಂಸವಿ. ೯-೧೫೫). [ಸುಖ + ಪಡೆ₁]

**ಸುಖಂಬಾೞ್**, ಸುಖಬಾಳು, ಸುಖವಾಳು (ಕ್ರಿ). ನೆಮ್ಮದಿಯಿಂದ ಜೀವಿಸು; ಸುಖವಾಗಿ ಬದುಕು: ಮೃಗಗಣಮೆ ಸುಖಂಬಾೞ್ಗುಂ ಸೊಗಯಿಸುವ ವನಾಂತರಾಳದೊಳ್ ಬಹುತೃಣದೊಳ್ (ಕವಿರಾ. ೩-೧೩೯); ನೀನೆನ್ನ ಬುದ್ಧಿಯಂ ಕೇಳ್ದು ಸುಖಂಬಾೞ್ವೊಡೆ (ಪಂಚತಂ. ೫೪-೧೯). **ಸುಖಬಾಳು:** ಆಲಯದೊಳಗೆ ಏಂಗಡವಾಗಿ ಸುಖಬಾಳೆಂದ (ಮೋಹತ. ೧೧-೫೦). **ಸುಖವಾಳು:** ಮನೆಯೊಳು ಮನೆಗಟ್ಟಿಕೊಂಡೆಮ್ಮಿ ಸೆರೆಮನೆಯೊಳು ಸುಖವಾಳುತಹಳೆ (ಪ್ರಭಂಜ. ೩-೧೩೭). [ಸುಖ + ಬಾೞ್₁]

**ಸುಖಕರ** (ಗು). ೧. ಸಂತೋಷವನ್ನುಂಟುಮಾಡುವ; ಆಹ್ಲಾದಕರವಾದ: ಮಲಯರುಹ ಶಿಶಿರಕರಶೀತಲಿಕಾ ಕರಕೇಂದುಕಾಂತಜಲಶೀತಳಮಿಾ ಲಲನಾಲಿಂಗನಸುಖಕರವಿಲಾಸಮೆಂಬುದು ಬಹೂಪಮಾನವಿಕಲ್ಪಂ (ಕವಿರಾ. ೩-೮೦). (ನಾ). ೨. ಸಂತೋಷವನ್ನು ಕೊಡುವಂಥದು; ಸುಖಪ್ರದವಾದುದು: ಹುಟ್ಟುವವಳಿವವದರಿನಿದೊ ಸಂಸ್ಕಾರದುಪಶಮವೆ ಸುಖಕರಂ (ವೃಶಾಖ. ೮೯-೭೫೪). ೩. ಅನುಕೂಲಕರವಾದುದು: ಎಷ್ಟೋ ಮಂದಿ ಗೃಹಿಣಿಯರು ಅಡುಗೆಮನೆಯನ್ನು ಕೆಲಸಕ್ಕೆ ಸುಖಕರವಾಗಿ ಹೇಗೆ ವ್ಯವಸ್ಥೆಗೊಳಿಸಬಹುದು . . . ಎಂದು ಯೋಚಿಸುತ್ತಿದ್ದಾರೆ (ಅಡುಶಾ. ೧೧). [ಸಂ.]

**ಸುಖಕಾರಿ** (ನಾ). ೧. ಸುಖಪ್ರದವಾದುದು: ಸಂತತಂ ಜನಸುಖಕಾರಿ . . . ಕೃಷ್ಣವೇಣಿ ನುತವಿಶಾಲಿ ಸೇವಿತಮಲಪ್ರಹರಿ ಸ್ಫುಟವಾಣಿ ರಾಜಿಕುಂ (ಹಮ್ಮಿ.ರ. ೧-೫೫). ೨. ಸುಖದಾಯಕನಾದವನು: ನೀನು ಒಳ್ಳೆಯ ಮಿತ್ರನಂತೆ . . . ಸುಖಕಾರಿಯಾಗಿಯೂ ಇರುತ್ತೀಯೆ (ಉತ್ಸಾರ. ೨೨). [ಸಂ. ಸುಖಕಾರಿನ್]

**ಸುಖಕೊಡು** 'ಸುಖಗೊಡು' ನೋ.

**ಸುಖಗೊಡು**, ಸುಖಕೊಡು (ಕ್ರಿ). ಆನಂದವನ್ನು ನೀಡು; ಸುಖಪ್ರದವಾಗು: ಅಕಳಂಕರೂಪೆಯ ರದನಚ್ಛದ ವಿಟಶುಕಗಳ್ಗೆ ಸುಖಗೊಡುತಿಹುದು (ಕಂಸವಿ. ೯-೩೨).

**ಸುಖಕೊಡು:** (೬). [ಸುಖ + ಕೊಡು₁]

**ಸುಖಗೋಷ್ಠಿ** (ನಾ). ಸುಖಕರವಾದ ಒಡನಾಟ: ಪರಿಕಿಸೆ ಪೆಂಡಿರ್ವರೆನಗಂ ತವರೊಳ್ ಸುಖಗೋಷ್ಠಿಯಿಂ ನಗುತ್ತಿರೆಯವರೆಂದರ್ (ಧರ್ಮಪ. ೯-೧೮). [ಸಂ.]

**ಸುಖಜಲ** (ನಾ). ಸಂತೋಷದಿಂದ ಸುರಿಯುವ ಕಣ್ಣೀರು; ಆನಂದಬಾಷ್ಪ: ಕಡೆಗೋಡಿವರಿದುವೆನಗಯ್ಯ ನಯನದ ಸುಖಜಲಂಗಳು (ಬಸವ. ೮೪೭). [ಸಂ.]

**ಸುಖಜೀವಿ** (ನಾ). ಸಂತೋಷದಿಂದಿರುವವನು; ಸುಖವಾಗಿರುವವನು: ಅವನೊಬ್ಬ ಸುಖಜೀವಿ (ರೂಢಿ). [ಸಂ. ಸುಖಜೀವಿನ್]

**ಸುಖದ** (ನಾ). ಸಂತೋಷವನ್ನು ಕೊಡತಕ್ಕುದು; ಸುಖದಾಯಕವಾದುದು: ಅನುಭವದ ಪಾಲೊಳು ವಿಚಾರಮಂಥನವಾಗೆ ಜನಿಯಿಕುಂ ಜ್ಞಾನನವನೀತವದೆ ಸುಖದಂ (ಮಂಕುಕ. ೫೪೪). [ಸಂ.]

**ಸುಖದಳೆ** 'ಸುಖಂದಳೆ' ನೋ.

**ಸುಖದಾಯಿ** (ನಾ). ಸಂತೋಷವನ್ನುಂಟುಮಾಡತಕ್ಕುದು: ಶ್ರೀಪಾಲಸಿಂಹನ ಆ ಚಿತ್ರವು ನೀರಡಿಸಿದ ಆ ಹೃದಯಕ್ಕೆ ನೀರಿನಂತೆ ಸುಖದಾಯಿಯಾಯಿತು (ಜಮಿಾನ್ದಾ. ೧೩೩). [ಸಂ. ಸುಖದಾಯಿನ್]

**ಸುಖಧಾಮ** (ನಾ). ಆನಂದದ ತವರು; ಸಂತೋಷದ ನೆಲೆ: ಅಗಲಿ ಸೈರಿಸಲಾಱದೇ ಮನ ಭಕುತರ ಪ್ರೇಮದಿಂದಲಿ ಪೊರೆಯುತಿಹ ಸುಖಧಾಮ ಪುರಂದರವಿಠಲನ (ಪುರಂದ. ಧಾ. ೨-೨೦-೫). [ಸಂ.]

**ಸುಖನಾಸಿ**, ಸುಕನಾಸಿ, ಸೊಖನಾಸಿ (ನಾ). [ವಾಸ್ತು] ದೇವಾಲಯದ ಗರ್ಭಗುಡಿಯಲ್ಲಿರುವ ಮುಂಭಾಗದ ಅಂಕಣ: ಸುಖನಾಸಿ ಗರ್ಭಗೃಹದಿಂ ರಂಗಮಂಟಪದ ಮುಖದ ಮೂಱುಂ ಕದವನಿಕ್ಕುತಂ (ಕಣ್ಣರ. ದೇ. ೧೩೫-೧); ಬರುತ ಮಿಗೆ ಪುಗಲಂಜಿ ಸುಖನಾಸಿಯೊಳು ನಿಂದಿಹನು (ಬಸವು. ೪೩-೪೧). **ಸುಕನಾಸಿ:** ಶಿವಗೃಹದಂತರಾಳಮನಣಂ ಪುಗಲಂಜಿ ಮುರಾರಿ ನಿಲ್ವನೊಪ್ಪುವ ಸುಕನಾಸಿಯೊಳ್ (ವೃಷವಿ. ೨೯-೮೩); ಸುಕನಾಸಿ ಅಥವಾ ಅರ್ಧಮಂಡಪ: ಗರ್ಭಗುಡಿಗೂ ರಂಗಮಂಡಪಕ್ಕೂ ಮಧ್ಯೆ ಉತ್ಸವವಿಗ್ರಹಗಳನ್ನಿಡಲು ಸುಕನಾಸಿ ಇರುತ್ತದೆ (ಹೊಯ್ಸವಾ. ೧೮). **ಸೊಖನಾಸಿ:** ಕುಱುವರ ಬಾಗಿಯಕ್ಕ ದೇವರ ಗರ್ಬ್ಭಗ್ರಿಹ ಸೊಖನಾಸಿಯ ಕೆಲಸಕ್ಕೆಂದು ಕೊಟ್ಟ ಗದ್ಯಾಣ ೧೫ (ಸೌಇಇ. XX, ೮೪-೫೨; 1123). [< ಸಂ. ಶುಕನಾಸ = ಮನೆಯ ಮೇಲಿರುವ ಒಂದು ಬಗೆಯ ಅಲಂಕಾರ. / ತೆಲು. ಶುಕನಾಶಿ = ದೇವಾಲಯದ ಮುಖ್ಯದ್ವಾರ]

**ಸುಖನಿಕೇತನ** (ನಾ). ಆನಂದದಾಯಕವಾದ ವಾಸಸ್ಥಾನ; ಸುಖಪ್ರದವಾದ ನಿವಾಸ: ಶ್ಲಾಘಿಸಿದ ಅಂಶಗಳನ್ನೆಲ್ಲಾ ಪುಂಜೀಕರಿಸಿ ನಿರ್ಮಿಸಿದ ಸುಖನಿಕೇತನ ಅದು (ನಂಟರು. ೧೮). [ಸಂ.]

**ಸುಖನಿಧಿ** (ನಾ). ಆನಂದಕ್ಕೆ ಆಶ್ರಯನಾದವನು: ವಾರಿಧಿಯಿಂ ಸುಖನಿಧಿ

ಕಂಠೀರವವಿಷ್ಟರದಿನಧಿಕಂ . . . ಎಂದರಸಿಗಮೋಘಂಗಳಪ್ಪ ಕನಸಿನ ಫಲಂಗಳುಮಂ ನಿವೇದಿಸುವುದುಂ (ಶಾಂತಿಪು. ೯-೨೧೧); ಶರಣರ ಮನೋರಥವೆ ಸುಖನಿಧಿಯೆ [ಪಾಠಾಂ. ಮುಖವೆ] ಶಂಕರಾ (ಸಂಬಸ. ೧೧-೪೩). [ಸಂ.]

**ಸುಖಪಡಿಸು** 'ಸುಖವಡಿಸು' ನೋ.

**ಸುಖಪಡು** 'ಸುಖಂಬಡು' ನೋ.

**ಸುಖಪ್ರವೃತ್ತಿ** (ನಾ). ಸುಲಭವಾಗಿ ಆಗುವ ಮಲವಿಸರ್ಜನೆ; ಸರಾಗವಾದ ಕಾಲಪ್ರವೃತ್ತಿ: ಶುಂಠಿ, ಅಳಲೆಕಾಯಿ, ಸೈಂಧವ ಈ ಮೂರನು ಸಮನಾಗಿ ಚೂರ್ಣಂ ಮಾಡಿ ಬಿಸಿನೀರಿಂ ಕೊಡಲು ಸುಖಪ್ರವೃತ್ತಿಯಹುದು (ಸಕವೈ. ೩೦೧). [ಸಂ.]

**ಸುಖಪ್ರಸವ** (ನಾ). ಸುಲಭವಾಗಿ ಆಗುವ ಹೆರಿಗೆ; ಸರಾಗವಾಗಿ ಆಗುವ ಪ್ರಸವ: ಪೂರ್ಣಗರ್ಭಿಣಿಯಾದೀ ಹುಲ್ಲೆಗೆ ಯಾವಾಗ ಸುಖಪ್ರಸವವಾಗುವುದೋ ಆಗ ನನಗೆ ಕುಶಲಪತ್ರಿಕೆಯನ್ನು ಕಳುಹಿಸಬೇಕು (ಶಾಕುಂತ. ೫೫-೭). [ಸಂ.]

**ಸುಖಪ್ರಸೂತಿ** (ನಾ). = ಸುಖಪ್ರಸವ: ಅಂತು ಚಕ್ರವರ್ತಿಜನ್ಮೋತ್ಸವ ಸೂಚಕಮಪ್ಪನೇಕದೋಹಳಸಂದೋಹಂ ನೆಗಟೆ ಸುಖಪ್ರಸೂತಿಸಮಯದೊಳ್ (ಆದಿಪು. ೮-೩೩ ವ). [ಸಂ.]

**ಸುಖಬಡಿಸು** 'ಸುಖವಡಿಸು' ನೋ.

**ಸುಖಬಡು** 'ಸುಖಂಬಡು' ನೋ.

**ಸುಖಬಾಳು** 'ಸುಖಂಬಾಳ್' ನೋ.

**ಸುಖಮಜ್ಜನ** (ನಾ). ಹಿತಕರವಾದ ಸ್ನಾನ; ಸುಖಕರವಾದ ಸ್ನಾನ: ಎಲೆ ಸಖಿ, ನಿನಗೆ ಸುಖಮಜ್ಜನ ಬಳೆಯಿತೆ? (ಶಾಕುಂತ. ೫೦-೧೫). [ಸಂ.]

**ಸುಖಮುಖ** (ನಾ). ೧. ಸಂತೋಷಕರವಾದುದು; ಸುಮುಖವಾದುದು: ನಿನ್ನ ಬಾಳಾದರೂ ಸುಖಮುಖವಾಗಬಹುದೆಂದು ಆಸೆಯಿಂದಿದ್ದೆ (ಕುಸುಸಂ. ೧೪). ೨. ಪ್ರಸನ್ನತೆ; ಹರ್ಷದ ಭಾವ: ಸರ್ವಾಂಗಂ ಸಡಿಲ್ದನುಭವದ ಜೊಮ್ಮು ಜಕ್ಕುಲಿಸೆ ಸುಖಮುಖದೊಳ್ ಮೂರ್ಛಿತರಾಗಿ (ನಂಬಿರ. ೧೪-೫೨); ಸುಖಿಗಳಗ್ರಣಿಯಲ್ತೆ ನಿಮ್ಮಣ್ಣನಾತಗೆ ಸುಖಮುಖದೋಱು (ಭರಚ. ೫೦-೪೪). [ಸಂ.]

**ಸುಖಮುಖಿ** (ನಾ). ಪ್ರಸನ್ನಳಾದವಳು; ಹರ್ಷಿತೆಯಾದವಳು: ಶುಭದ ಸಂದೇಶಕಾರಣವನರಿಯುವ ಕುತೂಹಲಕೆ ಕಣ್ದೆರೆದಳತಿಸುಖಮುಖೀ (ಶ್ರೀರಾಮಾ. ೫೦೫-೧೫೦). [ಸುಖಮುಖ + - ಇ$_2$]

**ಸುಖಮುಱುಕ** (ನಾ). ನೆಮ್ಮದಿಗೆ ಭಂಗತರುವವನು; ಸುಖವನ್ನು ಹಾಳುಮಾಡುವವನು: ಅಱಿದಱಿದಚ್ಚಮೋಹಿಗಳ ನೋಯಿಪ ಸುಖಮುಱುಕ ಹೋಗೆಂದಳು ಪ್ರಮದೆ (ಭರಚ. ೫೦-೫೭). [ಸುಖ + ಮುಱುಕ$_2$]

**ಸುಖರೂಪ** (ನಾ). ೧. ಹಿತಕರವಾದ ಆಕಾರವನ್ನು ಹೊಂದಿರುವಿಕೆ. ೨. ಕ್ಷೇಮ; ಕುಶಲ: ಊರಿಗೆ ಸುಖರೂಪವಾಗಿ ಹೋಗಿ ತಲುಪಿದ್ದಕ್ಕೆ ಕಾಗದ ಬರಿ (ರೂಢಿ). [ಸಂ.]

**ಸುಖಲೋಲಾಪ್ತಿ** (ನಾ). ಸುಖಭೋಗದಲ್ಲಿ ಆಸಕ್ತಿಯನ್ನು ಹೊಂದಿರುವಿಕೆ: ನಿನ್ನ ಸ್ಥಳದಲ್ಲಿ ನಾನು ಇದ್ದರೆ ಸುಖಲೋಲಾಪ್ತಿಯಲ್ಲಿರುವುದರ ಹೊರತು ಮತ್ತೇನೂ ಮಾಡುತ್ತಿರಲಿಲ್ಲ (ಮಳನಾ. ೧೨೨). [ಸುಖ + ಲೋಲಾಪ್ತಿ (< ಲೋಲುಪ್ತಿ)]

**ಸುಖಲೋಲುಪ** (ನಾ). ಸುಖಭೋಗದಲ್ಲಿ ಆಸಕ್ತಿಯುಳ್ಳವನು: ಅವರು ಸಹಕರಿಸದಿದ್ದರೆ, ಸುಖಲೋಲುಪರಾಗಿದ್ದಿದ್ದರೆ ಸ್ವರಾಜ್ಯವೆಲ್ಲಿ! (ಭಾರದ.೪೮೯). [ಸಂ.]

**ಸುಖವಡಿಸು**, ಸುಖಪಡಿಸು, ಸುಖಬಡಿಸು (ಕ್ರಿ). ಸಂತೋಷವನ್ನು ಹೊಂದುವಂತೆ ಮಾಡು; ಆನಂದಪಡಿಸು: ಕೂಟಸ್ಥಿತಿಯಲ್ಲಿ ಸುಖವಡಿಸುತೆ ನರನಾಟಕವನು ಬಿತ್ತಿದನು (ಮೋಹತ. ೪-೩೦). **ಸುಖಪಡಿಸು:** ಮುಪ್ಪಿನ ತಂದೆತಾಯಿಗಳನ್ನು ಸುಖಪಡಿಸಲು ಅವನು ಬಹಳ ಶ್ರಮಪಡುತ್ತಿದ್ದಾನೆ (ರೂಢಿ). **ಸುಖಬಡಿಸು:** ಆತನ ತಂದೆನ್ನ ಸುಖಬಡಿಸುವುದೆಂದಳೊಲಿದು (ಮೋಹತ.೨೮-೨೫).
[ಸುಖವಡು (< ಸುಖಂಬಡು) + - ಇಸು$_1$]

**ಸುಖವಡು** 'ಸುಖಂಬಡು' ನೋ.

**ಸುಖವಡೆ** 'ಸುಖಂಬಡೆ' ನೋ.

**ಸುಖವರ್ಚಕ** (ನಾ). ೧. ಹಿತಕರವಾದ ಕಾಂತಿಯನ್ನು ಹೊಂದಿರುವುದು. ೨. (ಸ್ವಭಾವಜನ್ಯವಾದ ಒಂದ ನಿರ್ದಿಷ್ಟ ಸಂಯುಕ್ತದ) ಸೋಡಾಕಾರ್ಬೋನೇಟು ಖನಿಜ, — ಕ್ಷಾರ: "ಸರ್ಜಿಕಾಕ್ಷಾರಃ, ಕಾಪೋತಃ,ಸುಖವರ್ಚಕಃ, ಸೌವರ್ಚಲಂ, ರುಚಕಂ — ಐ ಸಸ್ಯಕ್ಷಾರದ ಹೆಸರುಗಳು" (ಸಿದ್ಧಾಂತಿ. ೩೦೭). [ಸಂ.]

**ಸುಖವಾಳು** 'ಸುಖಂಬಾಳ್' ನೋ.

**ಸುಖವಿರೇಕ** (ನಾ). = ಸುಖಪ್ರವೃತ್ತಿ: ಶುಂಠಿ, ಹಿಪ್ಪಲಿ, ಮೆಣಸು, ದಂತಿ, ತಿಗಡೆ, ಕಟ್ಟವತ್ತಿಗೆ ಬೀಜ, ಒಂದೆಲಗ, ಅಳಿಲೆಕಾಯಿ, ತಾರೆಕಾಯಿ . . . ಚೂರ್ಣವಂ ಮಾಡಿ ಬೆಲ್ಲವೆರಸಿ ಜೇನುಗೂಡಿ ಸೇವಿಸೆ ಸುಖವಿರೇಕಮಾಗಿ ಉದರವ್ಯಾಧಿಯು ಕೆಡುಗುಂ (ಸಕವೈ. ೩೦೨). [ಸಂ.]

**ಸುಖಸಂಗಿ** (ನಾ). ವಿಷಯಾಸಕ್ತನಾದವನು: ಮಿಂದಂ ಮಾಯದನಂ ಗುಣನಿಂದಿತನಂ ಪವಡಿಸಿದನನೆಳ್ವಾತಂ ಸ್ವಚ್ಛಂದಚರಂ ಬದ್ಧನ ಕಾಣ್ಬಂದದೆ ಸುಖಸಂಗಿಯಾದ ಜನವಿದನರಿವೆಂ (ಶಾಕುಂತ. ೬೪-೧೧೧). [ಸಂ. ಸುಖಸಂಗಿನ್]

**ಸುಖಸಂಪನ್ನ** (ನಾ). ಆನಂದದಿಂದ ತುಂಬಿದವನು; ಹರ್ಷಭರಿತನಾದವನು: ಜಱೆಮರಣ ಶೋಕಾದಿ ಭಯಗಳ ಮಱೆದು ಸುಖಸಂಪನ್ನರಾದರು ಹರಸುತಿರ್ದುದು ರಾಮರಾಜ್ಯದೊಳಖಿಳಜನನಿವಹ (ತೊಶಿರಾ. ೪೪-೫೭). [ಸಂ.]

**ಸುಖಸನ್ನಿ** (ನಾ). ಸ್ತ್ರೀಸಂಭೋಗದಿಂದುಂಟಾಗುವ ಸನ್ನಿದೋಷ: ಈ ಲಕ್ಷಣಂಗಳು ನವಜ್ವರದಲ್ಲಿ ಸ್ತ್ರೀಸಂಗದಿಂದುಂಟಾದ ಸನ್ನಿದೋಷವೆಂದು ತಿಳಿವುದು. ಇದನ್ನು ಸುಖಸನ್ನಿಯೆಂಬರು (ವೃದ್ಧಸಾ. I, ೧೧೧). [ಸಂ.]

**ಸುಖಸಾಧ್ಯ** (ನಾ). ಸುಲಭವಾಗಿ ಶಮನಮಾಡಲು ಸಾಧ್ಯವಾದುದು: ಆ ಕ್ಷುದ್ರಕವೆಂಬ ಶ್ವಾಸವು ಔಷಧಸೇವನೆಯಿಂದಾದರು ತನ್ನಿಂತಾನೆಯಾದರೂ ಶಮನವಹುದು. ಈ ಶ್ವಾಸವು ಸುಖಸಾಧ್ಯ (ಸಕವೈ. ೨೨೮). [ಸಂ.]

**ಸುಖಸಾರ** (ನಾ). ಆನಂದದ ಸಾರ; ಹರ್ಷದ ತಿರುಳು: ನಿಮ್ಮೆಲ್ಲರುಂ ಪೋಗಿ ಮರ್ತ್ಯದೊಳ್ ಸಲೆ ಸಂದು . . . ಸಕಲಸುಖಸಾರದಿಂ ಪರಿಣಮಿಸಿ ಬರ್ಪುದೆನೆ (ನಂಬಿರ. ೧-೫೪). [ಸಂ.]

**ಸುಖಸುಪ್ತಿ** (ನಾ). ಹಿತಕರವಾದ ನಿದ್ರೆ; ನೆಮ್ಮದಿಯಿಂದ ಕೂಡಿರುವ ನಿದ್ರೆ: ಸುಖಸುಪ್ತಿ [ಪಾಠಾಂ. ಸುಷುಪ್ತಿ, ದ ಸೂಕ್ತಿ]ಯೊಳ್ ಕಿಱಿದುಬೇಗಮಿರ್ದು ಎಂತಕ್ಕೆ ಎಚ್ಚತ್ತು (ನಂಬಿರ. ೧೪-೫೩). [ಸಂ.]

**ಸುಖಸೊಮ್ಮು** (ನಾ). ಆನಂದದ ಆಧಿಕ್ಯ; ಅಧಿಕವಾದ ಸಂತೋಷ: ಸುಮ್ಮಾನ ಮಿಗಲಲ್ಲಿ ಕೆಲವು ದಿವಸ ಸುಖಸೊಮ್ಮಿನೊಳಿರೆ (ಭರಚ. ೪೩-೪). [ಸುಖ + ಸೊಮ್ಮು$_4$]

**ಸುಖಾಂತ** (ಗು).೧. ಆನಂದದೊಡನೆ ಕೊನೆಗೊಳ್ಳುವ; ಸುಖಪ್ರದವಾಗಿ ಮುಕ್ತಾಯವಾಗುವ: ಕೆಲವು ಸುಖಾಂತಕೃತಿಗಳು ನಮ್ಮನ್ನು ಹಿಗ್ಗಿಸಬಹುದು (ಸೌಂದಸ. ೯). ೨. ಸ್ನೇಹಭಾವದ; ಮೈತ್ರಿಯಿಂದ ಕೂಡಿದ. (ನಾ). ೩. ಆನಂದದೊಡನೆ ಕೊನೆಗೊಳ್ಳುವ ಕಥಾನಕ; ಸುಖಪ್ರದವಾಗಿ ಮುಕ್ತಾಯಗೊಳ್ಳುವ ಕಥೆ: ರಾಮಾಯಣ ಉತ್ತರರಾಮಚರಿತಗಳು ಸುಖಾಂತಗಳು (ಅರಿಕಾ. ೧೭೭). ೪. ಸಂತೋಷ; ಆನಂದ: "ವಾರಿಯೊಳು . . . ಸುಖಾಂತದೊಳು ಮಾರುತನೊಳೋರಂತೆ ಕಂ ಶಬ್ದಮಕ್ಕು" (ಮಂಗರಾ. ೧೪೫-೨೯). ೫. ಸಂತೋಷವನ್ನು ಹಾಳುಮಾಡುವುದು; ಸುಖವನ್ನು ನಾಶಮಾಡುವುದು. [ಸಂ.]

**ಸುಖಾಂತನಾಟಕ** (ನಾ). ಸಂತೋಷದಲ್ಲಿ ಕೊನೆಗೊಳ್ಳುವ ನಾಟಕ: ಸೋಫೋಕ್ಲಿಸನ ದುರಂತನಾಟಕ ಈಡಿಪಸ್ ಮತ್ತು ಯೂರಿಪಿಡೀಸನ ಸುಖಾಂತನಾಟಕ ಟೌರಸ್ಸಿನಲ್ಲಿ ಇಫಿಜೆನಿಯಗಳೆರಡನ್ನೂ ಉತ್ತಮವಾದ ರುದ್ರನಾಟಕಗಳೆಂದು ಮೆಚ್ಚಿದುದೇ ಅಲ್ಲದೆ . . . ಆದರ್ಶಕೃತಿಗಳನ್ನಾಗಿಯೂ ಪರಿಗಣಿಸಿದನು (ಅರಿಕಾ. ೧೭೭). [ಸಂ.]

**ಸುಖಾಕರ** (ನಾ). ಆನಂದಕ್ಕೆ ನೆಲೆಯಾದವನು: ಬೋಧಾವಾಪ್ತಿಯಿಂದಂ ಸುಖಾಕರನಾಗೆಂದು ಫಲಪ್ರದೋಕ್ತಿ ತಳಿದಂ ಶೇಷಾಕ್ಷತೌಘಂಗಳಂ (ಆದಿಪು. ೯-೭೪). [ಸಂ.]

**ಸುಖಾಗಮನ** (ನಾ). ೧. ಕ್ಷೇಮವಾದ ಆಗಮನ, — ಬರವು: ಎಲೈ ಇಂದ್ರಸಾರಥಿಯಾದ ಮಾತಲಿಯೆ, ನಿನಗೆ ಸುಖಾಗಮನವೇ? (ಶಾಕುಂತ. ೯೭-೭); ಬಯಸು ವೆನ್ ನಿನಗೆ, ಪೂಜ್ಯನೆ, ಸುಖಾಗಮನಮಂ (ಶ್ರೀರಾಮಾ. ೧೪-೩೬೧). ೨. ಆದರದಿಂದ

ಸ್ವಾಗತವನ್ನು ಬಯಸುವಿಕೆ; ಸುಸ್ವಾಗತ: ಮನೆಯವರೆಲ್ಲರೂ ಬಾಗಿಲಲ್ಲಿ ನಿಂತು ಅತಿಥಿಗಳಿಗೆ ಸುಖಾಗಮನವನ್ನು ಕೋರಿದರು (ರೂಢಿ). [ಸಂ.]

**ಸುಖಾತ್ಮ** (ನಾ). ಸುಖಸ್ವರೂಪನಾದವನು: ಪ್ರೀತಿಂಕರವಿಮಾನದೊಳ್ . . . ಅಹಮಿಂದ್ರಪರಮೈಶ್ವರ್ಯಮುಂ ದೊರೆಕೊಳೆ ಸುಖಾತ್ಮನಿರೆ (ಶಾಂತಿಪು. ೯-೩೦ ವ). [ಸಂ. ಸುಖಾತ್ಮನ್]

**ಸುಖಾಪ್ತಿ** (ನಾ). ಆನಂದವನ್ನು ಹೊಂದುವುದು: ಭೂಭಾಗಿ ಸುಖಾಪ್ತಿಯಂ ಪಡೆದುದು (ಶಾಂತಿಪು. ೧೨-೨೪). [ಸಂ.]

**ಸುಖಾವಾಪ್ತಿ** (ನಾ). ಆನಂದವನ್ನು ಹೊಂದುವಿಕೆ; ಸಂತೋಷಪ್ರಾಪ್ತಿ: ಶ್ರೀದೇವೇಂದ್ರಮುನೀಂದ್ರವಂದಿತಗುಣವ್ರಾತಂ . . . ದಯೆಗೆಯ್ಯನಕ್ಕೆಮಗೆ ಮುಕ್ತಿಶ್ರೀ ಸುಖಾವಾಪ್ತಿಯಂ (ಆದಿಪು. ೧-೧). [ಸಂ.]

**ಸುಖಾಶ್ರು** (ನಾ). = ಸುಖಜಲ: ತನು ಪುಳಕಂಗಳಂ ತಳೆಯೆ ನೇತ್ರದೊಳುಣ್ಮೆ ಸುಖಾಶ್ರು (ರಾಜಶೇ. ೮-೭೪). [ಸಂ.]

**ಸುಖಾಸನ** (ನಾ). ೧. ಹಿತಕರವಾದ ಆಸನ; ಅನುಕೂಲಕರವಾದ ಪೀಠ: ಮನಮೊಸೆದಿಕ್ಕಿರ್ದ ಸುಖಾಸನದೊಳ್ ಕುಳ್ಳಿರಿಸುವಂತೆ ಸಿಕತಿಳತಳದೊಳ್ ಆ ಭೀಮಾಟವೀ ಸರಸ್ತೀರದೊಳಿರಿಸಿ ಪೋಪುದುಂ (ಶಾಂತಿಪು. ४-೯೭); ರುದ್ರಾಕಾರನಂ ಬಿಜಯಂಗೆಯಿಸಿ . . . ಸುಖಾಸನದೊಳಿರಿಸಿ (ಬಸವು. ೨೪-೨೨). ೨. ಆರಾಮಕುರ್ಚಿ: ನಾನು ಸುಖಾಸನದಲ್ಲಿ ಕುಳಿತು ಎರಡೂ ಕಡೆಗೆ ನೀಡಿ ನಿಂತ ಆಸನದ ಬದಿಪಟ್ಟಿಗಳ ಮೇಲೆ ಕಾಲೂರಿ . . . ಯೋಚಿಸಹತ್ತಿದನು (ಇಪ್ಪತ್ತ. ೪೭೯). ೩. [ಯೋಗ] ಒಂದು ಬಗೆಯ ಆಸನ: ಸಿದ್ಧಾಸನ ಪದ್ಮಾಸನ . . . ಸುಖಾಸನಂಗಳೇ ಜಪಸಿದ್ಧಿಗೆ ಯೋಗ್ಯಗಳಾದ ಷಡಾಸನಂಗಳು (ವಿವೇಕ. ೯೫). [ಸಂ.]

**ಸುಖಾಸೀನ** (ನಾ). ಆರಾಮವಾಗಿ ಕುಳಿತುಕೊಂಡಿರುವವನು: ಸಿಂಧುರಸ್ಕಂಧಪೀಠದೊಳ್ ಸುಖಾಸೀನನಾಗಿರ್ದಾಗಳ್ (ಆದಿಪು. ೧೪-೧೦೨ ವ). [ಸಂ.]

**ಸುಖಿ**$_1$, ಸುಗಿಯ (ನಾ). (ಅಕ್ಕಿಹಿಟ್ಟು, ಬೆಲ್ಲ, ತೆಂಗಿನಕಾಯಿ ಇತ್ಯಾದಿಗಳನ್ನು ಬೆರಸಿ ಕರಿದು ಮಾಡುವ) ಒಂದು ಬಗೆಯ ಸಿಹಿಭಕ್ಷ್ಯ: ಪಂಚಪರ್ವ ಅಯಿದಕಂ ಸುಖಿ ಪಡಿನೈವೇದ್ಯಕೆ ಚ [ಗ ೧೫೦]ತಿರುನಾಳು ೨ ಕಂ ದಿ ೨೦ ಸುಖಿ ನೈವೇದ್ಯ ಗ ೬ (ಸೌಇಇ. IX-ii. ೬೦೭-೫; 1543). 'ಸುಖಿನಪ' ಪರಾ. **ಸುಗಿಯ:** ಅತಿರಸದ ಹರಿವಾಣ ೧ ವಡೆಯ ಹರಿವಾಣ ೧ ಸುಗಿಯದ ಹರಿವಾಣ ೧ (ಸೌಇಇ. IX-ii. ೫೫೦-೫; 1562). [ದೇ. ‖ ತಮಿ. ಚುಕಿಯನ್; ಮಲ. ಸುಖಿಯ; ತೆಲು. ಸುಕಿಯ]

**ಸುಖಿ**$_2$ (ಗು). ೧. ಸಂತೋಷದಿಂದ ತುಂಬಿದ; ಸುಖವಾದ. ೨. ಸೌಕರ್ಯದಿಂದ ಕೂಡಿದ ; ಅನುಕೂಲದಿಂದಿರುವ. (ನಾ). ೩. ಸಂತೋಷದಿಂದಿರುವವನು: ಚಕ್ರಿಯುಂ ಚತುರುತ್ತರನವದಶೀತಿಲಕ್ಷಪೂರ್ವಂ ಬಟ್ಟಿತ್ತುತ್ತಮ ಸುಖಿ ಪವಡಿಸಿ ತನ್ಮುತ್ತರ್ಯದುಕೂಲ ವಿಶದಶಯ್ಯಾತಳದೊಳ್ (ಶಾಂತಿಪು. ४-೧೦೬); ಸೋಂಕಿನಲ್ಲಿ ಸುಖಿ ಸರ್ವಾಂಗಕಲಿಗಳು (ಬಸವ. ೩೨೫). ४. (?): "ಅಜಾಜೀವಿ ಜಾಬಾಲನೆನೆ ಸುಖಿಯಕ್ಕು" (ಮಂಗರಾ. ೬೦-೧೮). 'ಅಜಾಜೀವಿ' ಹೋ. ೫. ತಪಸ್ವಿ; ಸಂನ್ಯಾಸಿ. [ಸಂ. ಸುಖಿನ್]

**ಸುಖಿತನ** (ನಾ). ಆನಂದದ ಸ್ಥಿತಿ; ಸುಖ: ಕೆಳೆಯತನಂ. ಸುಖಿತನಂ (ಶಬ್ದಾನು. ४३೨ ಪ್ರಯೋ.). [ಸುಖಿ$_2$ + - ತನ]

**ಸುಖಿನಪ** (ನಾ). = ಸುಖಿ$_1$: ಅತಿರಸ ೫ ಸುಖಿನಪ ೫ ... ಹೂರಿಗೆ ೫ (ಸೌಇಇ. IV. ೫೫೦-೮; 1521). [< ಸುಖಿ$_1$ + < ಅಪ್ಪ$_2$]

**ಸುಖಿನುಂಡೆ, ಸುಂಕಿನುಂಡೆ, ಸುಕ್ಕಿನುಂಡೆ, ಸುಕ್ರುಂಡೆ, ಸುಖಿಯನುಂಡೆ, ಸುಖಿವುಂಡೆ** (ನಾ).= ಸುಖಿ$_1$: ಫೇಣಿ ಸುಖೀನುಂಡ ವಡೆ ಗಾಂಗಿಯ . . . ಬಡಿಸಿದರೊಲವಿಂ (ಮೋಹತ. ३-४೨); ಸುಖಿನುಂಡೆಗೆ ಅಕ್ಕಿಗಂ ಹೆಸಱು ಪ ೧ ಬೆಲ್ಲ ೫ ತುಪ್ಪಂ (ಎಕ. VI ಮೂಡಗ. ४೦-೧೫; 1552). **ಸುಂಕಿನುಂಡೆ:** ಎಳ್ಳುಂಡೆ ಕಡಲೆಗಳುಂಡೆ ಪೊರುಂಡೆಯ ಒಳ್ಳೆಯ ಸುಂಕಿನುಂಡೆಗಳ (ಜ್ಞಾನಸಿ. ३೬-೧೨೦). **ಸುಕ್ಕಿನುಂಡೆ:** ಸುಕ್ಕಿನುಂಡೆ ಎಂಬುದು ಭಕ್ಷ್ಯರಾಜನೆನಿಸಿಕೊಂಡಿದೆ ನಮ್ಮೂರಲ್ಲಿ (ಓಂಕತ. ೨೫); ಸುಕ್ಕಿನುಂಡೆ ವಡೆಗಳಿಲ್ಲ ಶ್ರಾದ್ಧಕ್ಕೆ (ಮರಮ. ೭೯). **ಸುಕ್ರುಂಡೆ** : ಒಡೆ, ಸುಕ್ರುಂಡೆ, ಸುಟ್ಟವು, ಅಪ್ಪ (ಕಸಂಸ್ಕೃ. ೨೯೦). **ಸುಖಿಯನುಂಡೆ:** ಸುಖಿಯನುಂಡ ಫೇಣಿ ತಾ ರಂಗಫೇಣಿಯ ನೀಡುವರು (ಇಚಿಸಾಂ. ೧೧-೭೮). **ಸುಖಿವುಂಡೆ:** ತುಪ್ಪದಲ್ಲಿ ಮಾಡ್ತಾರೆ ಇಪ್ಪತ್ತುಸಾವಿರ ತುಪ್ಪದ ಗಾರಿಗೆ ಸುಖಿವುಂಡೆ (ಜಗೀತ. ೯೭). [< ಸುಖಿ$_1$ + ಉಂಡೆ./ ತುಳು. ಸುಕ್ನುಂಡೆ]

**ಸುಖಿಯನುಂಡೆ** 'ಸುಖಿನುಂಡೆ' ನೋ.

**ಸುಖಿಯಿಸು** 'ಸುಖಿಸು' ನೋ.

**ಸುಖಿವುಂಡೆ** 'ಸುಖಿನುಂಡೆ' ನೋ.

**ಸುಖಿಸು, ಸುಖಿಯಿಸು** (ಕ್ರಿ). ನಲಿವನ್ನು ಹೊಂದು; ಸುಖಪಡು: ಶಿವಗೋಷ್ಠಿಯೊಳು ನಲಿದು ಸುಖಿಸುತಿಪ್ಪರ್ಕೆಲರು (ತಿರುನೀ. ದೇ. ೧೫-೬); ಧರ್ಮದಿಂದಾದುದು ಸಿರಿಯೆಂದು ಸುಖಿಸುತ್ತ ಧರ್ಮವ ಮಱೆಯರುತ್ತಮರು (ಭರತ. ೨-೧೦). **ಸುಖಿಯಿಸು:** ದೇವಕಾರ್ಯದೊಳಿನಿಸುಂ ನೋಯದೆ ಸುಖಿಯಿಪ ಸವಣರುಪಾಯಮನಿಂ ನಿನ್ನೊಳಣ್ಣ ಭಾವಿಸಿ ನೋಡಾ (ಧರ್ಮಾಮೃ. ೬-೧೧೨). [ಸುಖ + - ಇಸು]

**ಸುಖೀರಾಜ್ಯ** (ನಾ). ನೆಮ್ಮದಿಯಿಂದ ಕೂಡಿರುವ ರಾಜ್ಯ : ತನ್ನ ಕಲ್ಪನೆಯ 'ಸುಖೀರಾಜ್ಯ'ದಲ್ಲಿ ಇರಬೇಕಾದ ಮೂಲತತ್ತ್ವಗಳನ್ನೂ ವಿವರಿಸಿದ್ದಾನೆ (ಭಾರದ. ४೫೦); ಪ್ರಾಚೀನಕರ್ಣಾಟಕವು 'ಸುಖೀರಾಜ್ಯ'ವಾಗಿದ್ದಿತೆ? (ಕಶಾಅ. ४೦೬). [ಸುಖಿ$_2$ + ರಾಜ್ಯ]

**ಸುಖೋದಯ** (ನಾ). ೧. ಆನಂದದ ಉದಯ; ಸಂತೋಷದ ಉತ್ಪತ್ತಿ: ಮನದಱಿವಂ ಕಳಲ್ಚುವ ರತಾಂತಸುಖೋದಯದಿಂದೆ ನಿದ್ರೆಯಂ ನೆನೆಯದೆ ಪೋದು ವಂತವರ್ಗೆ ಚಿತ್ತಜಕೇಳಿಗಳಿಂದೆ ಪೊಟ್ಟುಗಳ್ (ಚಂದ್ರಪ್ರ. ೬-೮೫). ೨. [ಜೈನ] ಐವತ್ತು ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ದೇವತೆಗಳಿಂದ ಸುತ್ತುವರಿಯಲ್ಪಟ್ಟು ಬಹಳಕಾಲ ದಿವ್ಯಸುಖವನ್ನು ಅನುಭವಿಸುವುದು : ಅಭಿಷೇಕವಿಧಿದಾನ ಸುಖೋದಯ . . . ಎಂಬಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ). 'ದೀಕ್ಷೆ' ಪರಾ. [ಸಂ.]

**ಸುಖೋಷ್ಣ** (ನಾ). ಹಿತಕರವಾದ ಶಾಖ, — ಬಿಸುಪು: ಬೆಟ್ಟದ ಎಲ್ಲ ತೀರ್ಥ ನಿರ್ಝರಿಣಿಗಳನ್ನೂ ತಂದು ಒಟ್ಟಾಗಿ ಬೆರೆಯಿಸಿ ಸುಖೋಷ್ಣವಾಗಿ ಕಾಯಿಸಿಟ್ಟದ್ದೇನೆ (ಸಪತಿ. ೨೮೫). [ಸಂ.]

**ಸುಗಂಧ** (ಗು). ೧. ಸುವಾಸನೆಯಿಂದ ಕೂಡಿದ; ಪರಿಮಳಭರಿತವಾದ: ನಿರ್ವಾಣಭೂಮಿಯನನೇಕಸುರಭಿಸುರತರುಕುಸುಮಸುಗಂಧಾಕ್ಷತಂ[ಪಾಠಾಂ.ಗಂಧಾಕ್ಷತಂ]ಗಳಿಂದಮರ್ಚಿಸಿ (ಆದಿಪು. ೧೬-೫೦ ವ). (ನಾ). ೨. ಸುವಾಸನೆ; ಕಂಪು; ಪರಿಮಳ: ನಿನಗೆ ಗಂಧವ ಹೂಸುವಲ್ಲಿ ನಾ ದುರ್ಗುಣಭಾವಿ ನೀ ಸುಗಂಧಭಾವಿ (ಮೋಲಮಾ. ३೬-೧೫೦); ಸುರತರು ಸುಗಂಧದ ತವರ್ಮನೆಯೆದೆಂದೆನಿಪ ಪೂದೋಟಮಂ ದೂರದಿಂ ಕಂಡು (ಪುಷ್ಪರ. ಹ. ೫೨೨-೧೮). ೩. ಪರಿಮಳ: ಶಚಿ ವಿರಚಿಸಿದಳ್ ಸುಗಂಧಲೇಪನವಿಧಿಯಂ (ಪುಷ್ಪಪು. ೧೧-೬೨); ಈ ಸೇವಕರು . . . ಮೈಗೆಲ್ಲ ಸುಗಂಧಗಳನ್ನು ಪೂಸಿಕೊಂಡಿದ್ದರು (ಪ್ರವಾಇ. I. ೭೯). ४. ಒಂದು ಬಗೆಯ ರಾಸಾಯನಿಕವಸ್ತು; ಗಂಧಕ. ೫. ಒಂದು ಬಗೆಯ ಔಷಧೀಸಸ್ಯ: ಸುಗಂಧದ ಮೂಲದ ಬೇರಿನ ಗಂಧ ಎಲೆಬಳ್ಳಿಯನೇತಕ್ಕೆ ವೇಧಿಸದು (ಮದೇವ. ೨೮೫-೬೦). [ಸಂ.]

**ಸುಗಂಧತೈಲ** (ನಾ). ಸುಗಂಧದ್ರವ್ಯಗಳನ್ನು ಬೆರಸಿ ತಯಾರಿಸಿದ ಎಣ್ಣೆ,— ದ್ರವಪದಾರ್ಥ: ಬಣ್ಣದ ಕರವಸ್ತ್ರಕ್ಕೆ ಅತ್ತರದ ಸುಗಂಧತೈಲ ತೊಡೆದು ಬಹಳ ಜತನದಿಂದ ವೇಷಮಾಡಿಕೊಳ್ಳುತ್ತಿದ್ದನು (ಇಪ್ಪತ. ೧೫೦). [ಸಂ.]

**ಸುಗಂಧದ್ರವ್ಯ** (ನಾ). (ಹೂವು ಮೊದಲಾದುವುಗಳಿಂದ ಭಟ್ಟಿಯಿಳಿಸುವ) ಪರಿಮಳದ್ರವ್ಯ: "ಸುರಭಿ ಸುಗಂಧದ್ರವ್ಯಂ" (ವಸ್ತುಕೋ. ೧३४-೧೦೦); ತನ್ನ ದೊಡ್ಡ ಟ್ರಂಕಿನಲ್ಲಿ ಸುಗಂಧದ್ರವ್ಯ ಉಂಟು (ಇಪ್ಪತ. ೬೨). [ಸಂ.]

**ಸುಗಂಧಪಾಲ, ಸುಗಂಧಿಪಾಲ** (ನಾ). ಒಂದು ಬಗೆಯ ಔಷಧೀಸಸ್ಯ: "ಗೋಪೀ, ಶ್ಯಾಮಾ . . . ಉತ್ಪಲಶಾರಿಬಾ — ೫ ಸುಗಂಧಪಾಲಗಿಡದ ಹೆಸರು, ಸೊಗದೇಬೇರು ಪ್ರಸಿದ್ಧ" (ಸಿದ್ಧಾಂತಿ. ೧೬೭). **ಸುಗಂಧಿಪಾಲ :** ಸುಗಂಧಿಪಾಲ, ದ್ರಾಕ್ಷಿ ಹಣ್ಣು . . . ಹಿಪ್ಪಲಿ ಇವುಗಳನ್ನು ಲೆಕ್ಕದಲ್ಲಿ ಕೂಡಿಸಿ, ಶರ್ಕರೆಗೂಡಿ ಎಳನೀರಿನಲ್ಲಿ ಕಲಸಿ ತೆಗೆದುಕೊಳ್ಳೆ ವಿದಾಹ, ಛರ್ದಿಯಿಂದ ಕೂಡಿದ ಪೈತ್ಯಜ್ವರಂ ಮಾಣ್ಬುಂ (ಸಕವೈ. ೭೭). [ದೇ. ‖ ತುಳು. ಸುಗಂಧಿಬೂರು; ತೆಲು. ಸುಗಂಧಪಾಲ]

**ಸುಗಂಧಬಳ್ಳಿ** (ನಾ). ಒಂದು ಬಗೆಯ ಔಷಧೀಸಸ್ಯ: "ಅನಂತಮೂಲ, ಕರಿಬಂಟ, ಸುಗಂಧಬಳ್ಳಿ . . . ಕೆಂಪುಗಂಧಿ" (ಸಸ್ಯನಿ. ೭೦). [ಸುಗಂಧ + ಬಳ್ಳಿ]

**ಸುಗಂಧಬೇರು** (ನಾ). = ಸುಗಂಧ ೫: [illegible] ಅಕ್ಕಿಕಚ್ಚಿನಿಂದರೆದು ಕುಡಿಯಲು ಗರ್ಭೋತ್ಪತ್ತಿಯಹುದು (ಕಾಮಶಾ. ೨೭೭). [ಸುಗಂಧ + ಬೇರು (< ಬೇರ್₁)]

**ಸುಗಂಧಭಂಡಾರ** (ನಾ). ಪರಿಮಳದ್ರವ್ಯಗಳ ಕೋಶ: 'ಸುಗಂಧಭಂಡಾರಿಗ' ಪರಾ. [ಸುಗಂಧ + ಭಂಡಾರ]

**ಸುಗಂಧಭಂಡಾರಿಗ** (ನಾ). ಪರಿಮಳದ್ರವ್ಯಗಳ ಕೋಶದ ಮೇಲ್ವಿಚಾರಕ; ಸುಗಂಧದ್ರವ್ಯಗಳ ಭಂಡಾರವನ್ನು ನೋಡಿಕೊಳ್ಳುವವನು: ಸುಗಂಧ ಭಂಡಾರಿಗರ್ ವಿರಚಿಸಿ ತಂದು ಮುಂದಿಟ್ಟ ಘನಸಾರ . . . ಕಸ್ತೂರಿಕಾಸಾರ ವಿವಿಧಲೇಪನಂಗಳಿಂ ಮಯ್ಯಂ ತಿಮಿರ್ದು (ಸುಕುಮಾ. ೧೧-೩೨ ವ). [ಸುಗಂಧಭಂಡಾರ + -ಇಗ]

**ಸುಗಂಧಮುಸ್ತೆ** (ನಾ). ಒಂದು ಬಗೆಯ ಔಷಧೀಸಸ್ಯ: ಜಟಾಮಾಂಸಿ, ಸುಗಂಧ ಮದ್‌ಮುಸ್ತೆ (ವೃಷಿಗಿ. ೫೭-೧೧೨೦). [ಸಂ. ಸುಗಂಧಮುಸ್ತಾ]

**ಸುಗಂಧರಸ** (ನಾ). ಪರಿಮಳದ್ರವ್ಯಗಳ ರಸ: ಜಳದಿಂದಂ ಬಳಮಂ ಸುಗಂಧರಸದಿಂ ಸೌಗಂಧ್ಯಮಂ . . . ಫಲದಿನವ್ಯಾಬಾಧೆಯಂ ಮಾಡುಗುಂ (ಶಾಂತಿಪು. ೧೦-೫೫). [ಸಂ.]

**ಸುಗಂಧರಾಜ** (ನಾ). ಒಂದು ಬಗೆಯ ಸಸ್ಯ ಮತ್ತು ತೀವ್ರವಾದ ಪರಿಮಳವನ್ನು ಹೊಂದಿರುವ ಅದರ ಹೂವು: ಸುಗಂಧರಾಜ, ನೆಲಸಂಪಿಗೆ, ಸಂಧ್ಯಾರಾಗ (ವೃಷಿಗಿ. ೬೩-೧೨೮೨); ಸುಗಂಧರಾಜ ಹೇಮಳಿಗೆ ಪ್ರಿಯವಾದ ಹೂವು (ಮುಚ್ಚಿಬಾ. ೧೫೫). ಸುಗಂಧರಾಜಗೆಡ್ಡೆ = (ಔಷಧಿಗೆ ಉಪಯೋಗವಾಗುವ) ಸುಗಂಧರಾಜಸಸ್ಯದ ಗೆಡ್ಡೆ: (೬). [ಸಂ.]

**ಸುಗಂಧವರ್ತಿ** (ನಾ). ಒಂದು ಸ್ಥಳದ ಹೆಸರು; ಈಗಿನ ಬೆಳಗಾವಿಜಿಲ್ಲೆಯ ಸವದತ್ತಿ ಅಥವಾ ಸೌಂದತ್ತಿ: ದ್ವಾದಶಗ್ರಾಮಾಧಿಷ್ಠಾನಸ್ಯ ಸುಗನ್ಧವರ್ತ್ತಿ ಸಮನ್ವಿನಿಗ್ರಾಮೇ ಮುಳುಗುನ್ದಾಖ್ಯೇ ಸೀವಟೇ ಷಡ್ನಿವರ್ತನಂ (ಸೌಇಇ. XX. ೧೩-೧; 875). [?]

**ಸುಗಂಧವಾಳೆ** (ನಾ). ಸುವಾಸನೆಯಿಂದ ಕೂಡಿರುವ ಒಂದು ಬಗೆಯ ಬಾಳೆ: ಮಿಸುಗುವ ಸುಗಂಧವಾಳೆಯ ಹಣ್ಣ ಕತ್ತರಿಸಿ ಹೊಸತುಪ್ಪಮಂ ಕೂಡಿ ಮತ್ತಮಾ ಹಾಲೊಳಗೆ ಹೊಸೆದದಂ ಹಾಕೆ ಕದಳಿಪಕ್ವಫಲಸಾರಪಾಯಸವೆನಿಸಿಕೊಂಬುದು. (ಸೂಪಶಾ. ೩-೧೪). [ಸುಗಂಧ + ಬಾಳೆ₁ (< ಬಾೞೆ) ./ ತಮಿ. ಚುಕನ್ತವಾೞೈ]

**ಸುಗಂಧಾನಿಲ** (ನಾ). ೧. ಪರಿಮಳಭರಿತವಾದ ಗಾಳಿ; ಸುವಾಸನೆಯಿಂದ ತುಂಬಿದ ಗಾಳಿ. ೨. ಸುವಾಸನೆ; ಪರಿಮಳ: "ಸೌರಭ್ಯಮಾಮೋದಮನ ಸುಗಂಧಾನಿಲಂ" (ಮಂಗರಾ. ೧೫-೧೧). [ಸಂ.]

**ಸುಗಂಧಿ** (ಗು). ೧. ಸುವಾಸನೆಯಿಂದ ಕೂಡಿದ; ಪರಿಮಳಭರಿತವಾದ. ೨. ಧರ್ಮನಿಷ್ಠನಾದ; ಸಾತ್ವಿಕಸ್ವಭಾವವುಳ್ಳ. (ನಾ). ೩. ಸುವಾಸನೆ; ಪರಿಮಳ. ೪. ಒಂದು ಬಗೆಯ ಪರಿಮಳದ್ರವ್ಯ; ಏಲಾವಾಲುಕ: "ಏಲಾವಾಲುಕಂ, ಐಲೇಯಂ, ಸುಗಂಧೀ, ಹರಿವಾಲುಕಂ, ವಾಲುಕಂ— ೫ ಸುರಸುರಕೀ ಹೆಸರು; ಕಿರಿಯಾಲಕ್ಕೀ ಹೆಸರೆಂತಲೂ ಅನ್ನುವರು" (ಸಿದ್ಧಾಂತಿ. ೧೪೦). ೫. ಪರಿಮಳದಿಂದ ಕೂಡಿದ ಒಂದು ಬಗೆಯ ತೃಣಸಸ್ಯ; ಕೊನ್ನಾರಿಗೆಡ್ಡೆ. ೬. ಒಂದು ಬಗೆಯ ಔಷಧೀಸಸ್ಯ: "ಗೋಪೀ, ಶ್ಯಾಮಾ, ಶಾರಿಬಾ, ಅನಂತಾ, ಉತ್ಪಲಶಾರಿಬಾ — ಈ ೫ ಸುಗಂಧಿ" (ನಾಚಿರಾ. ೧೧೧); ಸುಗಂಧಿಯ ಬೇರು, ಗುರುಗುಂಜಿಯ ಬೇರು, ಅಳಲೇಕಾಯ ಚೂರ್ಣ, ಇವು ಎಲ್ಲವನ್ನೂ ಸಮಾನಂಗೊಂಡು ಬೆಲ್ಲದಲ್ಲಿ ಇಕ್ಕಿ ಮೆಲ್ಲಲು ಗರ್ಭಿಣಿಯ ಬಸಿರುಬೇನೆ ಮಾಣ್ಬುಂ (ವಿಷವಿ. ೧೯೬). ೭. ಒಂದು ಬಗೆಯ ಬಾಳೆ: ಬಾಳೆಯ ಕುಲದಲ್ಲಿ ಗುಜರಾಥಿ, ರಸಬಾಳೆ, ಸುಗಂಧಿ . . . ಏಣುಬಾಳೆ ಎಂದು ಈ ಪ್ರಕಾರ ಹಲವುವಿಧವಾದ ಬಾಳೆಯ ಕುಲಗಳುಂಟು (ಕೃಷಿಪ್ರ. ೧೫೭). 'ಸುಗಂಧವಾಳೆ' ಪರಾ. ೮. ಒಂದು ಬಗೆಯ ಸಸ್ಯ ಮತ್ತು ಅದರ ಹೂವು: "ಸೌಗಂಧಿಕ — ರಾತ್ರಿ ಅರಳುವ ಕಮಲ. ೨. ಸುಗಂಧೀಹೂವು. ೩. ಒಂದು ತರದ ಹುಲ್ಲು. ೪. ಗಂಧಕ" (ಗಂಗಾಮ. ೩೩೭); ಬಂಡೆಗಳ ಎಡೆಯಲ್ಲಿ ಒಂದು ಜಾತಿಯ ಸುಗಂಧಿ, ಬಿಳಿಯ ಹೂವರಳಿಸಿಕೊಂಡು ನಗುತ್ತಿರುತ್ತದೆ (ಕುಡಿಕೂ. ೧೭೧). ೯. ಹದಿನಾರು ಕುಲಪರ್ವತಗಳಲ್ಲಿ ಒಂದು: ಮತ್ತಂ ಸುಗಂಧಿ ಶಿಖಿ . . . ಪಾರಿಜಾತಮೆಂಬ ಹದಿನಾರು ಕುಲಾಚಲಂಗಳೇ . . . ಪಶ್ಚಿಮದಿಕ್ಕಿನಲ್ಲಿಹವು (ವಿವೇಕ. ೧೭೨). [ಸಂ. ಸುಗಂಧಿ, ಸುಗಂಧೀ]

**ಸುಗಂಧಿಕ** (ನಾ). ೧. (ಹಾಲುಮಡ್ಡಿ, ಸಾಂಬ್ರಾಣಿ ಮುಂತಾದ) ಪರಿಮಳದ್ರವ್ಯ; ಸುಗಂಧದ್ರವ್ಯ. ೨. ಗಂಧಕ. ೩. (ದೊಡ್ಡ ಜಾತಿಯ) ಒಂದು ಬಗೆಯ ಅಕ್ಕಿ. ೪. ಬಿಳಿಯ ತಾವರೆ. ೫. ಒಂದು ಬಗೆಯ ಹೂವು; ಕನ್ನೈದಿಲೆ: "ಕಲ್ಹಾರಂ ಸುಗಂಧಿಕಂ ಕನ್ನೈದಿಲೆನಿಸಿಕ್ಕು" (ಮಂಗರಾ. ೧೨೪-೧೭). [ಸಂ.]

**ಸುಗಂಧಿಗ** (ನಾ). ಪರಿಮಳದ್ರವ್ಯಗಳಲ್ಲಿ ವ್ಯವಹರಿಸುವವನು: ಸಗಣಿಗನ ಸಹವಾಸಕಿಂತಲು ಮಿಗೆ ಸುಗಂಧಿಗನೊಡನೆ ಜಗಳವು ಸಿಗುವುದೇ ಮೇಲೆಂಬರು (ನೀಸಾರಾ. ೧೯-೧೦೯). [ಸುಗಂಧ + -ಇಗ]

**ಸುಗಂಧಿತೆ** (ನಾ). ಸುವಾಸನೆ; ಪರಿಮಳ: "ಆಮೋದಃ, ಪರಿಮಳಃ, ಸೌರಭ್ಯಂ, ಸುಗಂಧಿತಾ — ಈ ೪ ಕಂಪು" (ಹಲಾಯು. ೧೪-೭೭). [ಸಂ. ಸುಗಂಧಿತಾ]

**ಸುಗಂಧಿಪಾಲ** 'ಸುಗಂಧಪಾಲ' ನೋ.

**ಸುಗಂಧೆ** (ನಾ). ಒಂದು ಬಗೆಯ ಸಸ್ಯ: (೬). [ಸಂ. ಸುಗಂಧಾ]

**ಸುಗತ** (ಗು). ೧. ಒಳ್ಳೆಯ ರೀತಿಯಲ್ಲಿ ಮುಂದುವರಿದ,— ಚಲಿಸಿದ. ೨. ತೆರಳಿದ; ನಡೆದ. ೩. ಚೆನ್ನಾಗಿ ಅನುಗ್ರಹಗೊಂಡ,— ಅನುಗ್ರಹೀತವಾದ. (ನಾ). ೪. ಬುದ್ಧನ ಒಂದು ಹೆಸರು: ಬಾಗುವೆ ನಾ ಸುಗತನಿಗಾತನೆನ್ನ ತಥಾಗತ ಕರುಣಾಳು ಹಿತನು (ಸೌನಂದ. ೧೫-೩೭); ಪಾಪಿ ಮಾರಂ ಬಂದು, ಪರಿನಿರ್ವೃತಿಸು ಸುಗತ, ಭಗವಂತ ಬದುಕಿಂದ ತೊಲಗೆಂದ (ವೈಶಾಖಿ. ೬೬-೨೫). ೫. ಬೌದ್ಧಧರ್ಮದ ಅನುಯಾಯಿ: ತೆಗೆಯಲ್ ಜೈಮಿನಿ ತಿಪ್ಪಕೊಂಡು ಪರಿಯಲ್ ವೈಶೇಷಿಕಂ ಪೋಗದುಂಡಿಗೆಯೊತ್ತಲ್ಪುಗತಂ (ಎಕ. V, ಚನ್ನರಾ. ೧೪೮-೩೯; 1094); ಸುಗತರ್ ತಾವಾವೆಡೆಯೊಳ್ ಬಗುಳುತಮಿರ್ದಪರುಮೇಶಶರಣರ್ ಭರದಿಂ ಪುಗುತಂ ಧರಾತಳಕ್ಕಂ ದಿಗಿಲನೆ ಕಾಣುತ್ತ ಬೌದ್ಧರುರಿದುರಿದೇಳ್ದರ್ (ಹಾಲಾಸ್ಯ. ೪-೧೩-೭೭). [ಸಂ.]

**ಸುಗತಮತ** (ನಾ). ಬೌದ್ಧಧರ್ಮ; ಬೌದ್ಧಮತ: ಸುಗತಮತಕ್ಕೆಣೆಯೆನೆ ಶೌಚಗುಣಂ ಕ್ಷಣಿಕಂ ಸಗರ್ವಚಾರ್ವಾಕಮತಕ್ಕೆ ಗಡಣೆಯೆಂದೆನೆ ಪೆಂಡಿರ ನೆಗಳ್ಕೆ ಪರಲೋಕಸೌಖ್ಯಘಾತುಕಮಲ್ತೇ (ಪಾರ್ಶ್ವಪು. ೩-೧೦೮). [ಸಂ.]

**ಸುಗತಿ** (ನಾ). ೧. ಒಳ್ಳೆಯ ನಡಗೆ; ಮೋಹಕವಾದ ನಡೆ: ಮಣಿನೂಪುರದ ಝಣಝಣನಿನದಯುತಸುಗತಿಗಳ ಯುವತಿಯರು . . . ಬಂದರು (ಬಸವು. ೫-೨೪). ೨. ಒಳ್ಳೆಯ ಸ್ಥಿತಿ; ಸುಸ್ಥಿತಿ: "ತನುವಿನೊಳು ದ್ರವ್ಯದೊಳು ಮುಕ್ತಿಯೊಳು ಸುಗತಿಯೊಳ್ . . . ಯೋಗಮೆನಿಸಿಕ್ಕು" (ಮಂಗರಾ. ೧೫೦-೫೦); ನಿನ್ನ ಭಕ್ತಿಯದೆಂಬುದೆಮಗೆ ಸುಗತಿ[ಪಾಠಾಂ. ಸದ್ಗತಿ]ಗೆ ಪಥವಹುದೆ (ಬಸವು. ೪೨-೮). ೩. ಸದ್ಗತಿ; ಮೋಕ್ಷ: ಸುಗತಿಗೆ ಭಕ್ತಿ ದುರ್ಗತಿಗೆ ನಿನ್ನ ಪದಪ್ರತಿಕೂಲವೃತ್ತಿ (ಮಲ್ಲಿಪು. ೧೨-೧೭೬); ಸುಗತಿಯ ಬಟ್ಟೆಯ ಮುಳ್ಗಳ್ . . . ಸುಗತಿಯ ಬಾಗಿಲ ಪಡಿಗಳ್ ಮೃಗಾಕ್ಷಿಯರ್ (ಧರ್ಮಾಮೃ. ೭-೧೫೮); ಅಲ್ಲಿ ವರ್ತಿಸುತಿರ್ಪ ಜೀವಿಗಳೆಲ್ಲರಿಗೆ ಕೊಟ್ಟನು ಸುಗತಿಯಂ (ಬಸವು. ೨-೨೯). ೪. ನೃತ್ಯದ ಮನೋಹರವಾದ ಲಯ: ಚಿಂದುಗಳ ಜತಿಗಳ ಹಾರವಿಪ ಸುಗತಿಗಳೊಳಾಡುವ ಪೂರಿಸುವ ವೀಣಾದಿ ವಾದ್ಯಧ್ವನಿಗೆ ಕುಣಿವವರ . . . ಅತ್ತಲೊತ್ತರಿಸಿ (ಬಸವು. ೫-೪೨). [ಸಂ.]

**ಸುಗತಿವಡೆ** (ಕ್ರಿ). ಮೋಕ್ಷವನ್ನು ಹೊಂದು; ಸದ್ಗತಿಯನ್ನು ಪಡೆ: ಸುಗತಿವಡೆವುದಿನ್ನೆಂತು ಕುಗತಿಗೆ ಸಲೆ ಸಲ್ಲೆನೆಂಬವೊಲ್ಲೆಲನಂ ನೆಟ್ಟಗೆ ಮೆಚ್ಚರೆ (ಶಾಂತೀಶ್ವ. ೧೩-೧೦೮). [ಸುಗತಿ + ಪಡೆ₁]

**ಸುಗಮ** (ಗು). ೧. ಪ್ರಯಾಣ ಮಾಡಲು ಸುಲಭವಾದ,— ಸರಾಗವಾದ. ೨. ಸುಲಭವಾದ; ಸರಾಗವಾದ. ೩. ಸರಳವಾದ; ತಿಳಿಯಲು ಸಾಧ್ಯವಾದ: ಇಂತಿವಾದಿಯಾಗಿರ್ಪ ಶಬ್ದಂಗಳಂ ಸಮನಿಸಿದ ಪೂರ್ವಪ್ರಸಿದ್ಧಕವಿಗಳ ಸುಗಮವಾಕ್ಯಂಗಳಿಂದಱಿವುದು (ಶಬ್ದಾನು. ೯೯). (ನಾ). ೪. ಸುಲಭವಾದುದು; ಸರಾಗವಾದುದು: ನಾವು ಯಾವ ಅವಸ್ಥೆಯಲ್ಲಿಯೇ ಇರಲಿ, ಆಗಿನ ಕರ್ತವ್ಯಗಳಲ್ಲಿ ನಿರತರಾದರೆ ನಮಗೆ ಮುಕ್ತಿಮಾರ್ಗ ಸುಗಮ (ಜೀವಾತ್ಮ. ೨೬೯);

ಬಸವಂತಿಯೇ ಆ ಕಂಟಕಮಯ ದಾರಿಯನ್ನು ಸುಗಮವಾಗಿಸಿದ್ದಳು (ದೀಪಹ. II, ೩೦೪). [ಸಂ.]

**ಸುಗಮತೆ** (ನಾ). ಸುಲಭ; ಸರಾಗ: ಕೆಲಸದಲ್ಲಿ ಯಾಂತ್ರಿಕ ಸುಗಮತ ಬಂದಿತು (ಗಂಮಾಯಿ. ೫೩). [ಸಂ. ಸುಗಮತಾ]

**ಸುಗಮಸಂಗೀತ** (ನಾ). ಸರಳವಾದ ಗಾಯನ; ಲಘುಸಂಗೀತ: ನಿನ್ನ ಜೇನಿನ ಮಾತು ಬಹು ಹಿತವಾಗಿದೆ ಸುಗಮಸಂಗೀತದ ಹಾಗ (ಚಂದ್ರವೀ. ೩೩-೩೨). [ಸಂ.]

**ಸುಗಹನಾವೃತಿ** (ನಾ). ಯಜ್ಞಯಾಗಾದಿಗಳು ನಡೆಯುವ ಸ್ಥಳದಲ್ಲಿ, ಅಪವಿತ್ರವಾದ ವಸ್ತುಗಳನ್ನು ತಡೆಗಟ್ಟಲು, ಸುತ್ತಲೂ ರಚಿಸಿರುವ ಆವರಣ. [ಸಂ.]

**ಸುಗಾಯಕ** (ನಾ). ಒಳ್ಳೆಯ ಸಂಗೀತಗಾರ; ಉತ್ತಮಗಾಯಕ: ತೀವಿದರು ಹೊಜವಳಯದಲಿ ನಾನಾವಿಧದ ನಾಟಕದ ನರ್ತನ ಭಾವಕದ್ರಾವಕ ಸುಗಾಯಕಮಲ್ಲ ಚಿತ್ರಕರು (ಕುವ್ಯಾಳ. ೧೨-೨೧). [ಸಂ.]

**ಸುಗಿ$_1$** (ಕ್ರಿ). ೧. ಸೀಳು; ಸಿಗಿ: ಇಂದಿವನ ಸುಗಿದು ತೋರಣಗಟ್ಟಿಸದ ಮಾಣೆನೆಂದು ಶಪಥವನೆ ಮಾಡಿದ ನೃಪನ ನುಡಿಗೇಳಿ (ಸಮ್ಯಕಾ. ೨-೯೨). ೨. ಸೆಳೆ; ಎಳೆ: ಬಸವಂ ತನ್ನ ಹೆಟ್ಟುಗೆಯುಟ್ಟುದಂ ಸುಗಿವುತ್ತಮಿರಲಾ ಹುಟ್ಟುಗೆಯದೊಂದುಡಿಯೊಳಗಲದೆ ಮಿಗೆ ಬೆಳೆವುತಿರಲು (ಬಸಪು. ೧೧-೩೩); ತದಂಗನೆಯಾವರಣಾಲಂಕಾರಂಗಳಂ ಕಳೆದುಕೊಳ್ಳುದುಂ . . . ಪುಣ್ಯದ ಫಲದಿಂ ಪರಿಭಾವಕ್ಕೊಳಗಾಗದ ವಸ್ತ್ರಾಭರಣಂಗಳುಂ ಪೂರ್ವಕ್ರಮದಿನಿರೆ ಸೂಟುಸ್ ಸೂಟೊಳ್ ಸುಗಿದುಕೊಳುತ್ತುಮವಟಿ ಪುನರ್ಭವಾಶ್ಚರ್ಯಮಂ ಕಂಡು (ಮಹಾನೀ. ೭-೩೭ ವ). ೩. (ಚರ್ಮ, ಮರಗಿಡಗಳ ತೊಗಟೆ ಇತ್ಯಾದಿಗಳನ್ನು) ಸುಲಿ,—ಎಡೆ: ಬಸಿಅ ಬಗಿಯುಗಿ ಕರುಳ ಸುಗಿ[ಪಾಠಾಂ. ನುಗಿ] ಚರ್ಮಮಂ (ಹಚಕಾ. ೬-೧೪); ಸುಗಿದ ಫಲ ಪುಂಡ್ರೇಕ್ಷುನಾನಾಭಕ್ಷ್ಯಣಾದಿಗಳ . . . ಸಿಂಪುಗಳನೆಸೆದುದು ನೋಡೆ ವಾರವಧೂಟಿಕಾನಿಳಯ (ಬಸಪು. ೧೨-೧೧). ೪. ಸುಲಿದು ಹೋಗು; ಬಿರಿ: ತಳೆದ ಪದ್ಮಾಸನಂ ಸುಗಿದ ತೊಗಲಂಗದಿಂ ಮೊಳೆತ ಹುತ್ತ . . . ಮೆಱೆವ ಘೋರ ತಪದಚಲಿತರನೀಕ್ಷಿಸಿದಂ (ಹಚಕಾ. ೯-೩೫). ೫. ಹೊರತೆಗೆ: ಸೌನಂದಕವೆಂಬ ಖಂಡೆಯವಾ ಕುಂದಣದೊರೆಯಿಂದ ಸುಗಿದನು ಫಣಿ ಹೆರೆಯಿಂದುಚ್ಚಿ ನಿಮಿರಿದಂತಾಯ್ತು (ಭರಚ. ೪೭-೩೪). ೬. ಚೂರುಮಾಡು; ತುಂಡುಮಾಡು: ಜಲಚರಂಗಳು . . . ಸುಗಿದು ತನುವೆಲ್ಲವಂ ತಗೆಯೆ ಜಪಿಯಿಸುತಿರ್ದ (ರುದ್ರರ. ದೇ. ೨೦೯-೬). ೭. ತುಂಡಾಗು; ಚೂರಾಗು: ಸುಗಿದು ತತ್ಪರ್ವತದ ತರುಗಳು ಚಿಗಿದು ಹಾಯ್ದವು (ತೊರರಾ. ೪-೧೨-೩೫). ೮. ಇರಿ; ತಿವಿ; ಚುಚ್ಚು: ಸುಗಿವ ಬೆನ್ನೊಳು ಕರುಳ ಪಾಸರೆಗೊಗೆವೆನು (ನಾಗಪ. ೯-೫೦). [ದೇ. II ಕುರುಖ್. ಚೊಖ್ನಾ; ಮಲ್ತೊ. ಚೊಗೆ, ಚೊಗ್ರೆ]

**ಸುಗಿ$_2$** (ಕ್ರಿ). ೧. ಹೆದರು; ಭಯಪಡು: "ಸುಗಿ — ಭಯೇ" (ಶಮಧಾ); ಯಮಪುತ್ರ ಮರುತ್ಸುತ ಯಜ್ಞಸೇನರುದ್ಧತಬಳರೆತ್ತಿ ಕಾದಿ ಸುಗಿದೋಡಿದರ್ (ಪಂಪಭಾ. ೧೧-೧೨೫); ವಾರಾಶಿಯ ಮಣಿಗಣಮಂ ಕ್ರೂರಕುಳೀರಕ್ಕೆ ಸುಗಿದು ಸಾಂಯಾತ್ರಿಕನೇಂ ತಾರನೆ (ಪಂರಾಮಾ. ೧-೩೦); ಸಮರೋತ್ಸವಕೆ ಸುಗಿದು . . . ಬಂದೆನೆಂದರಿಯದಿರೊ! (ಚಿತ್ರಾಂಗ. ೭೯ ೨೧೭೧). ೨. ಹೆದರಿಸು; ಅಂಜಿಸು: ಇತ್ತಲ್ ಭೂತಳದೊಳ್ ಹಿಮಮೊತ್ತರಿಸಿತು ಭುವನಜನಮನುಜೆ ನಡುಗಿಸುತುಂ ಸುತ್ತುತ್ತುಂ ಸುಗಿಯುತ್ತುಂ . . . ಬಂದನಮಮ ಶಿಶಿರನೃಪಾಲಂ (ಗಿರಿಕ. ೯-೭೮). ೩. ಹಿಂಜರಿ; ಹಿಮ್ಮೆಟ್ಟು: ಮಂತ್ರಪದಕ್ಕುರಗಂ ಸುಗಿವಂತೆವೊಲಗಿದು ಸುಗಿದು ತಲೆಗರೆದಿರ್ಪಂ (ಪಂಪಭಾ. ೭-೪೩); ಮದದಾನಯೊಂದು ಕಂಡತಿಭರದಿಂ ಗಿಜ್ಜನೆ ಪರಿತರೆ ಬಡಗಿಯು ಸುಜ್ಜನೆ ಸುಗಿದಂಜಿ ನಡುಗಿ ವನದೊಳಗಲ್ಲಂ ತಿಜ್ಜನೆ ತಿರಿತಂದು (ಧರ್ಮಾವ್ಯ. ೧೨-೧೫೫); ಅಂತು ದಾನವಾಂತಕನಿಸುವಮೋಘ ನಿಶಿತಸಾಯಕಸಂಹತಿಯ ಸಂಹೃತಿತ್ರಾಸದಿಂ ವಾಸವಂ ನಿಜಜನನೀಗರ್ಭಾವಾಸವಂ ಪುಗುವನೆಂಬಂತೆ ಸುಗಿಯೆಯುಂ (ಜಗವಿ. ೧೩-೭೭ ವ). ೪. ಕುಗ್ಗು; ಕುಂದು: ಸುಖಂ ಸುಗಿದು ಪೊಯ್ಯಡೆದಂತ ಹಾವಗಿದು ಬಿಟ್ಟಂತೆ ಬಗೆ ಬೆದಱ . . . ಇನ್ನೇಗೆಯ್ವೆನೆಂದನು ಹರಿಶ್ಚಂದ್ರನು (ಹಚಕಾ. ೬-೪೪); ಚಿಂತಾತಂಕಕೊಳಗಾಗಿ ನಡೆತಂದು ಗಣನಿಕರಮಂ ಕೂಡಿದಂ ಸುಗಿದ ಸಂತಸದೊಳು (ನಂದಿಮಾ. ೯-೫೦); ಕಂದಿನೊಳ್ ಕಂದಿಯುಂ ಆಸವೆಯೊಳಸಕಳಿದುಂ ಸುಯ್ಯೊಳ್ ಸುಗಿದುಂ . . . ಪಶ್ಚಿಮಾನಿಲಂ ಮೈದೋಱಲೊಡಂ (ರಾಮಾಶ್ವ. ೨-೨೨). ೫. ಕುಸಿ; ಕೆಳಕ್ಕೆ ಸರಿ: ಕೇಸರಿ ಪೋಲೆವಾಯ್ವುದಂ ಸುಗಿಯೆ ತಳಪ್ರಹಾರದೊಳ್ ಮಗ್ಗಿಪಂ (ಎಕ. VII, ಶಿಕಾರಿ. ೪-೧೫; 1122); ಧರೆಯಂ ಪೊತ್ತಿರ್ದ ಶೇಷಂ ಸುಗಿಯೆ ಭಯದಿನೋರ್ರೋರ್ವರಂ ತಾಗುವ . . . ಪೊಡರ್ಪುರ್ವಿಗೆಯಣಕಮಗುರ್ವದ್ಭುತಂ ದುರ್ನಿವಾರಂ (ಜಗವಿ. ೬-೭೪); ದೆಸೆಗಳೊಡನಾಕಂಪಂಗೆಳ್ಳನ್ನಮಾದವು ಭೀತಿಯಿಂ ವಸು[ಧೆ ಸುಗಿಯಲ್ ಸಾರ್ದತ್ತಳ್ಕಿ]ತ್ತು ಯಾದವಸೈನ್ಯಮೇನಸದಳಮಗುರ್ಬಾಯ್ತೋ ಚಕ್ರಾಗಮಂ ಸಮರಾಗ್ರದೊಳ್ (ಬಂಪುರಾ. ೧೨-೭೭). ೬. ಜೋಲು; ಜೋತುಬೀಳು: ಕುಸಿದ ತಲೆ ಹಣುಗಿದೊಡಲರಳ್ಳ ಬಾಯ್ ಸುಗಿದ ಕಿವಿ . . . ಎಸೆಯೆ (ಹಚಕಾ. ೫-೩೧). ೭. ಮುದುಡು; ಮುದುರು; ಮುಚ್ಚು: ಸುಗಿವುವು ತಿಗ್ಮದೀಧಿತಿಯ ಗೆತ್ತವನಂ ನಡೆ ನೋಡಿ ನೋಡೆ ದಿಟ್ಟಿಗಳಮೃತಾಂಶುವಂ (ವರ್ಧಪು. ೪-೩೩); ಸುಗಿದಿವೆ ಕಮಳಂ ಕುಮುದಂ ನಗುತಿವೆ (ಗಿರಿಕ. ೧-೧೧೧ ವ); ಪದ್ಮಿನೀ ಯುವತಿಯರು ಮುಖ ಸುಗಿದು ಮಧುಕರಧ್ವನಿಗಳಿಂ ತವೆ ಪಲುಂಬುವೊಲೆಸೆದುದಿದುವ ವರ್ಷಾಕಾಲವಾಹಾಹ (ಭಾವಚಿಂ. ೬-೩). ೮. ಅಡಗು; ಉಡುಗು: ಜೀಯ ಪಸಾದಮೆಂಬುದುಂ ನೋಡಿದ ದೃಷ್ಟಿಗಳ್ಗೆ ಸುಗಿ[ಪಾಠಾಂ. ಪುದಿ, ಪುಗಿ] ದಿರ್ಪುದುಮಾದಮ ಮಾನಭಂಗಮಂ ಮಾಡೆ ಮನಃಕ್ಷತಕ್ಕಳವಿಗಾಣೆವು ನೋಡಿರೆ ಪಾಂಡುರಾಜ[ನಾ] (ಪಂಪಭಾ. ೬-೧೭); ಜಡರಳ್ಗೆ ಬಳ್ಕಿ ನಡನಡನಡುಗಿ ಸುರುಳ್ದುಗಿದು ಸುಗಿದು ಬಂದತಿಭಯದಿಂ (ಸುಕುಮಾ. ೨-೧೭). ೯. ಪರಿತಪಿಸು: ಇನಿತುಂ ಕಾಮನ ಬೇಳ್ವೆಯೆಂದು ಸುಗಿದಳ್ ತನ್ನಂಗಿ ಬೆಳ್ದಿಂಗಳೊಳ್ (ಪಂಪಭಾ. ೪-೫೯); ಏಕೆ ಸುಗಿವೈ ನೀನಿಂತು ಮೇಧಾವಿಳಾ (ಕುಸುಮಾ. ೧೦-೫೩); ನಾನು ನಮ್ಮಕ್ಕನು ಸುಗಿದೆವು ಸುಯ್ದೆವು ಬಿಕ್ಕಿದೆವತ್ತೆವು ದಿನವು (ಇಂಚಾಪ. ೨೨-೯೯). ೧೦. ಬತ್ತಿ ಹೋಗು; ಒಣಗು: ದೇವ ವಿಸಯೋತ್ಕರಂ ಸಸ್ಯಾವಳಿ ಸುಗಿದುಗಿದು ಕೂಡೆ ಬಾಡಿರ್ದುದು (ಆದಿಪು. ೧೦-೬೭). ೧೧. ದಣಿ; ಬಳಲು: ಸುಡುವುದರಾಗ್ನಿಯುಮೊಡಲಂ ಮಿಡುಕುವಿನಂ ಕಡಿವ ಕಟ್ಟಿಱುಂಪೆಗಳುಮದಾವೆಡೆಯ ನುರಿಸುವುದೂ ನರಕದ ಕಡುದುಃಖದೊಳಗಿದು ಸುಗಿದು ನವೆದೆನಗೀಗಳ್ (ಆದಿಪು. ೫-೧೩); ಕೈಕಾಲ್ ಬೆಂದು ಸುಕ್ಕಿ ಸುಗಿದು ಮಡವಿಸುತರಳಿವುದನು ಕಣ್ಣಾರೆ ಕಂಡು (ಹಚಕಾ. ೧೦-೧೫); ನೆಱೆ ಸುಗಿದ ಹುಲಿಯಂತ ಬರಿಕೈ ಮುಱಿದ ಮದಗಜದಂತ . . . ಮೆಱೆದಿರೆ ನಮ್ಮ ಬಲವೆಂದ (ಕುವ್ಯಾಭೀ. ೭-೭).

**ಸುಗಿ$_3$** (ನಾ). ೧. ಭಯ; ಹೆದರಿಕೆ: 'ಸುಗಿಗೊಳ್' ಪರಾ. ೨. ಸುಲಿಗೆ; ಲೂಟಿ: "ಸುಲಿಗೆಯೊಳಂಜಿಕೆಯೊಳು ಸುಗಿ [ಪಾಠಾಂ. ಸುಗಿಯು]" (ಶಬ್ದಮಂ. ೮೧). [< ಸುಗಿ$_1$]

**ಸುಗಿ$_4$** (ನಾ). ಸುಗ್ಗಿ (?): ಆಸಡಿಯ ಹಬ್ಬ ಕ ೧ ಹಾನೆ ಸುಗಿಯ ಕಂಬಳಿಕ ೨ ಎತ್ತು ೨ . . . ಹಾನೆ ತುಪ ಸುಗಿಯ ಕಂಬಳಕೆ ೨ ಎತು (ಸೌಇಂಪ. ೧೯೩೨. ಉಡುಪಿ. ೩೩೭-೨೧; 1281); ನಾನು ಮೂಲವ ಮಾಡಿಕೊಂಡ ಮೇಲನೂರ ವೊಂದರ್ದ್ದ ಸುಗಿ ಮಕ್ಕಿಯ ಗದ್ದೆ ಗಡಿ ಮೂಡಲು ಗಂಟ್ಟಿ ನಡವ ಹಾನಬ್ಬೆಯಲ್ಲಿ ನಟ್ಟ ಕಲ್ಲು (ಎಕ. VIII, ಸಾಗರ. ೫೭-೧೫; 1562). [< ಸುಗ್ಗಿ?]

**ಸುಗಿಗೊಳ್** (ಕ್ರಿ). ಭಯಗೊಳ್ಳು; ಹೆದರು: ಹಗರಣ ಬಂದುದು ಜಗಕೆಂದು ಹಮ್ಮೈಸಿ ಸುಗಿಗೊಂಡು ಹಳವಳಿಸಿದುದು (ಗೊಮ್ಮಚ. ೫-೭೨). [ಸುಗಿ$_3$ + ಕೊಳ್$_1$]

**ಸುಗಿತ** (ನಾ). ಭಯ; ಹೆದರಿಕೆ: ಸುಗಿತಂ, ಸುಗಿತಂಗಳ್ (ಶಬ್ದಾನು. ೫೫೪ ಪ್ರಯೋ.). [ಸುಗಿ$_3$ + - ತ$_2$]

**ಸುಗಿಯು** 'ಸುಖಿ$_1$' ನೋ.

**ಸುಗಿಯಿಸು**, ಸುಗಿಸು (ಕ್ರಿ). ೧. ಕುಗ್ಗಿಸು; ಕುಗ್ಗಿಹೋಗುವಂತೆ ಮಾಡು: ನಗಂಗಳೇಱುಮಂ ನಗಪಲೊಡರ್ಚುವುಜ್ವಳದ ತೋಳ್ವಲಮಾ ನೆಗಟ್ವರ್ಕಪಂಬಮುಂ ಸುಗಿಯಿಪ ತೀವ್ರತೇಜಮಿವು ತನ್ನೊಳೆ ಸಮ್ಮತಮಾದುವು (ಎಕ. V, ಅರಸೀ. ೬೨-?; 1177). **ಸುಗಿಸು**: ೨. ಹೆದರಿಸು; ಅಂಜಿಸು: ಬಿಟ್ಟ ಕಣೆ . . . ಬಿಡದೆ ನೋಟಕಜನವನು ಅಟ್ಟಿ ತತ್ಪುರಿಗಳಂ ಪುಗಿಸಿದುವು ಸುಗಿಸಿದುವು (ಚಿಬಪು. ೪೩-೧೮). [ಸುಗಿ$_2$ + - ಇಸು$_3$]

**ಸುಗಿವಡೆ** (ಕ್ರಿ). ಸುಲಿಗೆಗೊಳಗಾಗು; ಲೂಟಿಗೊಳಗಾಗು: ಮತ್ತೊರ್ವಂ ಚೋರರಿಂದೆ ಸುಗಿವಡೆದಳಿವನಿತ್ತಱೊಳ್ . . . ಸೊಣಗನಾ ಸ್ಮಶಾನಭಸ್ಮದೊಳೊಂದಿ ಬಂದವನ ಪಣೆಯ ಮೆಟ್ಟಿ ಅತ್ತಲೆಯ್ದಲ್ (ಪದ್ಮರಾ. ೧೧-೧೩೪). [ಸುಗಿ$_3$ + ಪಡೆ$_1$]

**ಸುಗಿಸು** 'ಸುಗಿಯಿಸು' ನೋ.

**ಸುಗುಂಟುತನ** 'ಸುಗುಡುತನ' ನೋ.

**ಸುಗುಡ** (ನಾ). ೧. ಚತುರ; ಜಾಣ: ಸುಗುಡ ಸುವಿದ್ಯರ್ಗಿತ್ತ ಧನಂ ತನ್ನದು (ನೀತಿಸಾ. ೧೯೩). ೨. ವಿಷಯಾಸಕ್ತ; ರಸಿಕ: ಲಲನೆಯರನೊಡಗೂಡುತ್ತ ರಮಣಂಗಳಲ್ಲಿ ಬಡಿಹೋರಿಯಾಗುತ್ತ ಲಿಂಗವನಱಿದೆನೆಂಬ ಸುಗುಡರ ನೋಡಾ (ವೋೞವಾ. ೨೫-೯೯); ಬಗೆಯುಱಿದೊಲ್ದು ಮರಲ್ದು ಕಾತರಿಸುವ ಸುಗುಡ [ಪಾಠಾಂ. ಣ]ನೆಲ್ಲಿದನೆಂಬಳನ್ನ (ಕುರಾಸಾಂ. ೨೮-೧೦೦); ಸವಿನುಡಿಯ ಸೊಗಸಿನೊಳ್ಸುಗುಡ [ಪಾಠಾಂ. ಣ]ರಡಿವಿಡದಂತೆ ತಗುವ ಜಾರಾನಿಕರವಿರ್ಪರ್ವಿಚಿತ್ರದಿಂ ಸೊಗಸಿನಿಂದೆ (ವಿಕೋಪು. ೪-೭೦). (ಗು). ೩. ಚಾತುರ್ಯದಿಂದ ಕೂಡಿದ; ಕೌಶಲವನ್ನು ಹೊಂದಿದ: ಸುಗುಡ ತುಂಬುರ ನಾರದರ ಗಾನರಸವೆಯ್ದೆ ಸೊಗಸ ಬೀಱಲು (ಸೌಂದಪು. ೧೭-೫೪); ಮಿಗೆ ತೇಪು ಮಾಡದಿಹನರ್ಘ್ಯರತ್ನಗಳವೋಲ್ಸುಗುಡ ಪದ್ಮಿನಿ ಬೀಗಮುದ್ರೆಯೋಳ್ ಕುಳಿತವೋಲ್ . . . ದ್ರಾಕ್ಷಾಸುಪಾಕಗಾವ್ಯಂ (ವಿಕೋಪು. ೪-೮೩).
[<— ಮರಾ. ಸುಗಡ, ಸುಗಡಾ./ ತೆಲು. ಸುಗ್ಗಡಿ = ನೀತಿಬಾಹಿರನಾದವನು]

**ಸುಗುಡಿ** (ನಾ). ವಿಲಾಸಿನಿ; ವೇಶ್ಯೆ: ಕಕ್ಕೆಯದು ಕಹಿಗಾಯಿ ಬಿಕ್ಕೆಯದು ಹುಳಿಗಾಯಿ ಸೊಕ್ಕಿ ಸುಗುಡಿಗೆ ಹಾಱಿ ಹೋಹುದರಿಂದ ಸಕ್ಕರೆಯನುಣ್ಣೊ (ಸರ್ವಜ್ಞ. ೧೭೯೬).
[ಸುಗುಡ + -ಇ₂]

**ಸುಗುಡುತನ, ಸುಗುಂಟುತನ** (ನಾ). ೧. ಜಾಣ್ಮೆ; ಚಾತುರ್ಯ: ಮಾಯೆಗಳ ಮದ್ದುಗಳಿಂ ಮಱಹುಗಳ ಸೊಕ್ಕನಿಕ್ಕಿಸಿ ಸುಗುಡುತನ [ಪಾಠಾಂ. ಗಂಡುತನ, ಸುಗುಡತನ] ಮಱೆದು (ಬಸಪು. ೪೨-೧೭); ಪಗಡೆಯಲ್ಲಿ ಪತ್ತಿಸುತೆ ಸುಗುಡುತನಮಂ ಪುದಿದ ಚತುರಂಗದತ್ತ ಚದುರಂ ಪೊದೆಯಿಸುತೆ . . . ಎಸೆದುದಬಲಾಜನಂ (ಪದ್ಮರಾ. ೮-೮೮). ೨. ವಿಷಯಾಸಕ್ತಿ; ಬಯಕೆ: ಮೊರೆವ ತುಂಬಿಯ ಸುಗುಡುತನ [ಪಾಠಾಂ. ಸುಗುಡತನ] ತಾವರೆಯೊಳೆಸೆದುದು ಶರದಸಮಯದಲಿ (ಕುವ್ಯಾಆ. ೧೪-೩). **ಸುಗುಂಟುತನ**: ೩. ಧೂರ್ತತನ; ಕಪಟ: ತನ್ನಜ್ಞತೆಗೆಯವನ ಸಿಕ್ಕು ಸುಗುಂಟು [ಪಾಠಾಂ. ಸುಗಂಟು]ತನಕೆ ತಾನೇ ನಾಣ್ಚಿ ವಿಮಲದಾಸಂ ತನ್ನ ಮನದೊಳೆಣಿಸುತ್ತಿರಲ್ (ಸಮ್ಯಕೌ. ೯-೨೬).
[ಸುಗುಡು₁ + -ತನ]

**ಸುಗುಡೆ** (ನಾ). ಜಾಣೆ; ಚತುರೆ: ಸುಗುಡೆ ರತಿಮಂಗಲೆಯನೇಕಸತಿಯರುವೆರಸಿ . . . ಸೊಗಯಿಪ ಬಳಲ್ಮುಡಿಯೊಳಾಮೋದವಿಡಿದ ಬಿರಿಮುಗುಳ ಮುಡಿಸಿದಳು (ಸೌಂದಪು. ೧೩-೩೬). [ಸುಗುಡ + -ಎ₂]

**ಸುಗುಣ** (ಗು). ೧. ಒಳ್ಳೆಯ ಗುಣಗಳಿಂದ ಕೂಡಿದ; ಗುಣಸಂಪನ್ನವಾದ. (ನಾ). ೨. ಒಳ್ಳೆಯ ಗುಣ; ಸದಾಚಾರ: ಪರಮಗುರು ಪರತಂತ್ರ ನಿರ್ಭರಚರಿತ ಸುಗುಣೋದ್ಯುಕ್ತ . . . ಮಹಿಮಾಸುಗುಣ ಗುರುಭಕ್ತ (ಬಸಪು. ೩೯-೭೯); ಸುಗುಣೋದ್ರೇಕಕೆ ಕೂರ್ತು ವೀರಬಿಕದೇವಂ ಬೀಣೆಯಂ ಲೀಲೆಯಿಂ ತೆಗೆದುತ್ಸಂಗದೊಳಿಟ್ಟು ನೇವರಿಸಿ (ಚಿಕವಿ. ೪-೧೩೨). ೩. ಒಳ್ಳೆಯ ಗುಣಗಳಿಂದ ಕೂಡಿರುವವನು; ಗುಣಸಂಪನ್ನ: ಮಿಗೆ ಕಾತರವ ಪುಟ್ಟಿಸುವ ಸುಗುಣನ ಸೋಂಕದವಳ ಜನ್ಮ ಸೊಗಸಲ್ಲ (ಕುರಾಸಾಂ. ೨೨-೨೫); ಮಲ್ಲಟಿಗಾರ್ತಿಯೆನೆ ಸುತ್ತಿಬರ್ಪಾಕೆಯೆಂದು ಪೇಟ್ಕುರ್ ಸುಗುಣರು (ಕಬ್ಬಿಕೈ. ೨೭); ಸುಗುಣನಾವನು ಸುಚರಿತ್ರನಾವನು . . . ಎಂದು ಬಗೆದು ಭಾವಿಸಿ ಪೇಣ್ಣನೀವುದು (ಹದಿಬ. ೫-೧೫).

ಸುಗುಣಗಂಭೀರ = ಒಳ್ಳೆಯ ಗುಣ ಮತ್ತು ಗಾಂಭೀರ್ಯಗಳಿಂದ ಕೂಡಿದವನು; ಒಂದು ಬಿರುದು: ಚಾಮರಾಜಒಡೆಯರು ವೆಂಕಟಾದ್ರಿನಾಯಕನು ಒಪ್ಪಿಸಿಕೊಂಡಿದ್ದ ''ಸುಗುಣಗಂಭೀರ''ನೆಂಬ ಬಿರುದನ್ನು ತಾವೇ ವಹಿಸಿದರು (ಒಡೆಕ. ೧೦); ಸುಗುಣಗಂಭೀರಾದಿ ಬಿರುದಾಂಕಿತ ರೇಮಟಿ ವೇಂಕಟಾದ್ರಿ ನಾಯಕಕೃತ ವಿಜ್ಞಾಪನಾ (ಸುಗುಗಂ. ೫೩-೯). [ಸಂ.]

**ಸುಗುಣಾಪೋಹ** (ನಾ). [ಕಾವ್ಯಮೀ] ಅಪಹ್ನುತಿ ಅಲಂಕಾರದ ಒಂದು ಪ್ರಭೇದ: ಸ್ಮರನ್ನೆದಂಬುಗಳಲ್ಲಿವು ಶರಕೋಟಿಗಳಿಲ್ಲದಾಗಳಿಂತೀ ಲೋಕಾಂತರವರ್ತಿ ವಿರಹಿಗಣಮಂ ನಿರುತಂ ಮರ್ದಿಸುವುವೆನೆ ಸುಗುಣಾಪೋಹಂ (ಕವಿರಾ. ೩-೧೮೬).
[ಸಂ.]

**ಸುಗುಣೆ** (ನಾ). ಒಳ್ಳೆಯ ಗುಣದಿಂದ ಕೂಡಿರುವವಳು; ಸದಾಚಾರಸಂಪನ್ನೆ: ಅರಳಿಯ ಮರದಂತೆ ಮೊರೆವಾಕೆ ಸುಗುಣೆಯೆ (ಸರ್ವಜ್ಞ. ೧೮೩೫).
[ಸುಗುಣ + -ಇ₂./ ಸಂ. ಸುಗುಣೀ]

**ಸುಗುಣೆ** (ನಾ). = **ಸುಗುಣೆ**: ಸುಗುಣೆ[ಪಾಠಾಂ. ಣೆ] ನಿನಗನಿಮಿತ್ತವೀಗಳು ಮೃಗನಯನೆ ನೀನೆನ್ನನೀಕ್ಷಿಸಿ ಮುಗುಳುನಗೆಯುಂ ಚಿಂತೆಯುಂ ನಿನಗೇಕೆ ಪೇಳೆನಲು (ಬಸಪು. ೪೧-೫); ಇನಿಯನ ಬಗೆಯ ತಿಳಿದು ಬಂದಿಗೊಂಬ ಸುಗುಣೆಯಲಿಹಪರದೊಳು ಸೂಱೆಗೊಂಬರು ಸೊಗದ ಸುಗ್ಗಿಯು ಸುಲಭದೊಳು (ಹದಿಬ. ೮-೫೦); ಸುಗುಣೆ ನಿನಗುಚಿತಮಲ್ಲೀ ಬೆಗಡು (ಚಿಕವಿ. ೩-೩೩). [ಸಂ. ಸುಗುಣಾ]

**ಸುಗುರ್** (ಕ್ರಿ). ಸಡಿಲಗೊಳ್ಳು; ಜಾರು: ಪೊಗರ್ದಪುರ್ವುರುಹರಗಲ್ವಯಲರಿಂ ಸುಗುರ್ದ ಚೇಲಮದೊಗ್ದರ್ದ ಕರ್ದಮ (ನಾಗಪ. ೭-೭೨).
[?./ ತುಳು. ಸುಗುರು = ಸುರುಳಿ ಬಿಚ್ಚು]

**ಸುಗೋತ್ರ** (ನಾ). ೧. ಶ್ರೇಷ್ಠವಾದ ವಂಶ; ಸತ್ಕುಲ. ೨. ಶ್ರೇಷ್ಠವಾದ ಪರ್ವತ. ೧, ೨: ಕೃತ ಪದ್ಮಾನಂದನಾಲಂಬಿತರುಚಿವಿಭವಂ ಮಂಡಲಂಗೊಂಡು ಧಾತ್ರೀಪತಿ ಮಾರ್ತಾಂಡ ಸುಗೋತ್ರಸ್ಥಿತನೆಸೆಯೆ (ರಾಜಶೇ. ೫-೧೪). [ಸಂ.]

**ಸುಗೋಮಯ** (ನಾ). ಒಳ್ಳೆಯ ಸಗಣಿ; ಶುದ್ಧವಾದ ಗೋಮಯ: ಅಮ ಳಾಂಬುವಂ ತಾಂ ಪೊತ್ತು ತಂದು ಸುಗೋಮಯದಿ ಬೆರಸುತ್ತ ಶೋಧಿಸಿ ಸಾರಿಸಿದನಾ ದೇಗುಲವನೆಲ್ಲ (ಬಸಪು. ೧೮-೩೪). [ಸಂ.]

**ಸುಗ್ಗಗಾವುಂಡ** (ನಾ). ಒಬ್ಬಾತನ ಹೆಸರು: ಸುಗ್ಗಗಾವುಣ್ಣನ ಮಗ ಬಸವ (ಎಕ. V, ಅರಸೀ. ೧೭೫-೨; 908). [ಸುಗ್ಗ₁ + ಗಾವುಂಡ (< ಗಾಮುಂಡ)]

**ಸುಗ್ಗಿ** (ನಾ). ೧. ಬೆಳೆಯನ್ನು ಕೊಯ್ಯುವ ಕಾಲ; ವಸಂತಕಾಲ: ''ಬಸಂತಂ, ಸುಗ್ಗಿ, ಹೂವಿನ ಹಬ್ಬಂ– ಈ ೩ ವಸಂತಂ'' (ಕಶಸಾ. ೫೪-೧೭೨); ಸ್ವಸ್ತಿಶ್ರೀ ವಿಕ್ರಮಾದಿತ್ಯರಸಂ . . . ಸುಗ್ಗಿಯುಳ್ಳನ್ನು ಪೊನ್ನಿಟ್ಟ ಧರ್ಮ (ಮೈಆರಿ. ೧೯೩೩, ೫೯-೨; 800?); ಕಾವ್ಯಬಂಧಮೊಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊಱೆಯಿಂ ಬಟಲ್ವು ತುಂಬಿ ಗಳಿನೆ ತುಂಬಿ ಕೋಗಿಲೆಯೆ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್ (ಪಂಪಭಾ. ೧-೮); ಇಂತಿದೆ ಬಂದುದು ಸುಗ್ಗಿ (ಕಬ್ಬಕಾ. ೬೬); ಸುಗ್ಗಿಯ ಸಿರಿಯ ಹೊಸಬೆಳುದಿಂಗಳನು ಬಲುಮುಗಿಲು ಕವಿವಂತೆ (ಕುವ್ಯಾಸ. ೧೪-೫೦). ೨. ಹಬ್ಬ; ಪರ್ವ: ''ಸುಗ್ಗಿಯೆನಲ್ ಹಬ್ಬಮೆಂದು ತಿಳಿಗೆ'' (ಭಾರಸಿ. ೧೭); ಇದಕೊ ಸಾವಿನ ಸುಗ್ಗಿ ನಿನಗೆನುತಚ್ಚನಿಂದ್ರಾರಿಯನು ಸೌಮಿತ್ರಿ (ತೊರರಾ. ೬-೪೪-೧೩). ೩. ಹೆಚ್ಚಳ; ಸಮೃದ್ಧಿ; ಆಧಿಕ್ಯ: ''ಸುಗ್ಗಿಯೆನಲ್ ಬಹಳಮೆಂಬುದು'' (ಚತುನಿ. ೧೫೦); ಬಾಳಚಕೋರಮಾಗಿ ಬೆಳ್ದಿಂಗಳ ಸುಗ್ಗಿಗಂಡುವು ಕುಮಾರನ ಕಾಂತಿ ಮುಖೇಕ್ಷಣಂಗಳೊಳ್ (ಅರ್ಧನೇ. ೨-೩೫); ನೆನಹು ನಿಲುಕದ ಸುಖದ ಸುಗ್ಗಿಯಂ ಸವಿದನೀಶನ ಕುಮಾರಂ (ಸಿದ್ಧರಾ. ೨-೧೭); ಕಡಲಿಡುವ ರಕುತದ ಸುಗ್ಗಿ ಶಾಕಿನಿಯರಿಗೆ ಸೇರಿತು (ಕುವ್ಯಾಭೀ. ೪-೯). ೪. ಸಮೃದ್ಧಿಯ ಕಾಲ; ಹೆಚ್ಚಳದ ಕಾಲ: ಪೊಸತೆನಿಸಿರ್ಪ ಜವ್ವನದ ಸುಗ್ಗಿ ವಿವೇಕದ ಜನ್ಮಭೂಮಿ . . . ಕುಸುಮಶರಾಧಿ ದೇವತೆಯವೋಲ್ ಪರಿರಂಜಿಪ ರೂಪಮಿಾಕೆಯಾಗೆಸೆವುತಮಿರ್ದಳ್ (ಜಾಧಪು. ೬-೫೪); ಮಾವಿನ ಹಣ್ಣಿನ ಸುಗ್ಗಿಯಲ್ಲಿ ಭಟ್ಟರ ಮನೆಯ ಮುಂದೆ ಚಿಕ್ಕಮಕ್ಕಳ ಗುಂಪೇ ನೆರೆಯುತ್ತಿತ್ತು (ಹಬ್ಬಬ. ೭೭). ೫. ಪ್ರಾಯ; ಯೌವನ: ಎಡ್ನಮಾಡೊಡಲಿಂದ ಸುಗ್ಗಿಯಿಂ ಚೆಲ್ವಡೆದ ದೊಡ್ಡನೆಂಬವನೊಬ್ಬನಲ್ಲಿ ಬಂದಿರ್ದಂ (ಕಾಲೂರ. ೪೧-೫೦). ೬. (ಕರಾ) ಬತ್ತದ ಎರಡನೆ ಬೆಳೆಯ ಗದ್ದೆ: ಈ ವರ್ಷ ನಾವೇ ನಾಲ್ಕು ಮುಡಿ ಸುಗ್ಗಿ ಮೂರು ಮುಡಿ ಮಜಲನ್ನು ಸಾಗುವಳಿ ಮಾಡಿಸಿದೆವು (ಮುಗಿಯು. ೧೫೧).

ಸುಗ್ಗಿಯ ಕಣ = ಬೆಳೆಯನ್ನು ಕಟಾವು ಮಾಡಿ ಒಟ್ಟಿರುವ ಕಣ; ಒಕ್ಕಣೆಯ ಸ್ಥಳ: ಎಲ್ಲ ಜನರೂ ಸುಗ್ಗಿಯ ಕಣಕ್ಕೆ ಭಿಕ್ಷಕ್ಕೆಂದು ಹೋಗುವುದು ಬೆಳುವಲದ ಎಲ್ಲ ಹಳ್ಳಿಗಳಲ್ಲಿಯೂ ಪ್ರತ್ಯಕ್ಷ ಕಾಣಬಹುದು (ಕನ್ನಜಾ. ೧೩೧). **ಸುಗ್ಗಿಯ ಕುಣಿತ** = ಸುಗ್ಗಿಯ ಕಾಲದಲ್ಲಿ ಕುಣಿಯುವ ಕುಣಿತ: ಈ ಧ್ವನಿಯನ್ನು ಕೇಳಿದ ಕೂಡಲೇ ಗ್ರಾಮದ ಜನರು ಸುಗ್ಗಿಯ ಕುಣಿತವನ್ನು ಎದುರುಗೊಳ್ಳಲು ಅಣಿಯಾಗುತ್ತಾರೆ (ಕಜಕ. ೧೭೧). **ಸುಗ್ಗಿಯ ಗದ್ದೆ** = ಬತ್ತದ ಎರಡನೆ ಬೆಳೆಯ ಗದ್ದೆ: ಏನಿಲ್ಲದೆ ಹೋದರೆ ಮಜಲುಭೂಮಿಯನ್ನು ಸುಗ್ಗಿಯ ಗದ್ದೆಯಾಗಿ ಮಾಡಬಹುದು (ಮುಗಿಯು. ೧೫೩). **ಸುಗ್ಗಿ ಹೊರಡಿಸು** = ಉತ್ಸವ ಮಾಡಿಸು: ಗ್ರಾಮಗಳಲ್ಲಿ 'ಸುಗ್ಗಿ'

ಹೊರಡಿಸುವುದರಿಂದ ರೋಗರುಜಿನಗಳು ತೊಲಗುತ್ತವೆ (ಕಜಕ. ೧೭೩).

[ದೇ. ॥ ತುಳು. ಸುಗ್ಗಿ]

**ಸುಗ್ಗಿಕಾಲ** (ನಾ). ೧. = ಸುಗ್ಗಿ ೧: ಸುಗ್ಗಿಕಾಲದಲ್ಲಿ ಸುಗ್ಗ ತಿಂದರೆ ಕಾತಿಕೆಕಾಲದಲ್ಲಿ ಜಗಲಿ ತಿಂದಾನೆ? (ಗಾದೆ). ೨. ಸಮೃದ್ಧಿಯ ಕಾಲ: ಸುಗ್ಗಿಕಾಲದಲ್ಲಿ ಬಹಳವಾಗಿ ಸಿಕ್ಕುವ ಆಹಾರಪದಾರ್ಥಗಳನ್ನು ಗೃಹಿಣಿಯರು ಅಗ್ಗವಾಗಿ ಕೊಂಡು ಅವನ್ನು ಕೆಡದಂತೆ ಕೂಡಿಟ್ಟರೆ ತಮ್ಮ ಕುಟುಂಬಗಳಿಗೆ ಅವನ್ನು ಇಷ್ಟಪಟ್ಟಾಗ ಒದಗಿಸಬಹುದು (ಗೃಹವಿ. ೫೫).

[ಸುಗ್ಗಿ + ಕಾಲ]

**ಸುಗ್ಗಿಗಂಪು** (ನಾ). ಪರಿಮಳದ ಅತಿಶಯ: ಕಾವನ ದಾಟಿಗಳ್ಕುವಡವೋಪರ ಸುಯ್ಗಳ ಸುಗ್ಗಿಗಂಪಿನೊಳ್ ತೀವಿ ಪೊದಟ್ದು ತೇಂಕುತೊಲವಿಂದಿದಿರ್ವಂದುದು ಮಂದಮಾರುತಂ (ಚಿಕವಿ. ೬-೩೩): [ಸುಗ್ಗಿ + ಕಂಪು]

**ಸುಗ್ಗಿಗೆಳೆಯ** (ನಾ). ವಸಂತನ ಸ್ನೇಹಿತ; ಕಾಮ; ಮನ್ಮಥ: "ಇಂಗೋಲ್ಕಿಲ್ಲಂ . . . ಸುಗ್ಗಿಗೆಳೆಯಂ . . . ಅಯ್ಸರಳಂ, ಗಿಳಿದೇರಂ — ಇವು ೧೩ ಕಾಮದೇವಂಗೆ ಪೆಸರ್" (ಕಶಸಾ. ೪೭-೧೩). [ಸುಗ್ಗಿ + ಗೆಳೆಯ (< ಕೆಳೆಯ)]

**ಸುಗ್ಗಿದಾಸೋಹ** (ನಾ). ಬೆಳೆಗಳನ್ನು ಕೊಯ್ಯುವ ಕಾಲದಲ್ಲಿ ನಡೆಸುವ ಆರೋಗಣೆ,—ಸಂತರ್ಪಣೆ: ಇಳಿಹಾಳ ಬೊಮ್ಮಯ್ಯ, ಹೊಲಗೆಲಸಕಾಯಕವ ನಲುಮೆಯಲಿ ಸುಗ್ಗಿದಾಸೋಹ ಹರಸೇವೆ ಸಲಿಸಿ ಲಿಂಗದೊಳು ಬಯಲಾದ (ಕನ್ನಜಾ. ೧೩೧). [ಸುಗ್ಗಿ + ದಾಸೋಹ]

**ಸುಗ್ಗಿದೋರು** (ಕ್ರಿ). ಹೆಚ್ಚಾಗಿ ಕಾಣಿಸಿಕೊಳ್ಳು; ಅತಿಶಯವಾಗು: ಎಳೆಯ ತಳಿರ ಹೊಳೆವ ತಳಿರು ನುಣ್ಣದಪನು ಚುಂಬಿಸೆ ಸುಖದ ಭಾವ ಸುಗ್ಗಿದೋರಿ ತಳಿರು ಮುಖದಿ ಬಿಂಬಿಸೆ (ಕವಿಸೋ. ೨೩-೧೧). [ಸುಗ್ಗಿ + ತೋರು (< ತೋಱು)]

**ಸುಗ್ಗಿವಕ್ಕಿ** (ನಾ). ವಸಂತಕಾಲದ ಕೋಗಿಲೆ: "ಪಡಿಯಱವಕ್ಕಿ . . . ಸುಗ್ಗಿವಕ್ಕಿ ಪರಪುಟ್ಟಂ — ಈ ೫ ಪಿಕಂ" (ಕಶಸಾ. ೫೫-೨೦೫). [ಸುಗ್ಗಿ + ಪಕ್ಕಿ]

**ಸುಗ್ಗಿವಡೆ** (ಕ್ರಿ). ಸಮೃದ್ಧಿಯನ್ನು ಹೊಂದು; ಆಧಿಕ್ಯವನ್ನು ಹೊಂದು: ಸುಮನೋಗ್ಯಹದೊಳ್ಸಂಕರ ಶಿವಪತಿಯೊಳೊಡವೆರೆದಕಳಂಕಂ ಸುಖದ ಸುಗ್ಗಿವಡೆ ದಿರ್ದಪನೋ (ವೃಷವಿ. ೨೩-೧೮). [ಸುಗ್ಗಿ + ಪಡೆ$_1$]

**ಸುಗ್ಗಿವೆಱು** (ಕ್ರಿ). = ಸುಗ್ಗಿವಡೆ: ಭೊಗ್ಗನಯ್ಯನ ಕಾಣಲೊಡನೆ ರೋಮಾಂಚದ ಸುಗ್ಗಿವೆತ್ತಣುಗರಯ್ದಿದರು (ಭರಚ. ೫೮-೪೯). [ಸುಗ್ಗಿ + ಪೆಱು]

**ಸುಗ್ರಾಸಭೋಜನ** (ನಾ). ರುಚಿಕರವಾದ ಭೋಜನ; ಭರ್ಜರಿಯಾದ ಊಟ: ಅಮಲದಾರರಲ್ಲ . . . ಸುಗ್ರಾಸಭೋಜನ ಮಾಡಿದರು (ಗಂಪಾಯಿ. ೧೯೦); ದಾಮೋದರನಿಗೆ ಈ ದಿನ ಸುಗ್ರಾಸಭೋಜನವಾಯಿತು (ಚವಂ. ೨೧೫). [ಸಂ.]

**ಸುಗ್ರೀವ** (ಗು). ೧. ಸುಂದರವಾದ ಕತ್ತನ್ನು ಹೊಂದಿದ; ಚೆಲುವಾದ ಕಂಠವುಳ್ಳ. (ನಾ). ೨. ಸುಂದರವಾದ ಕಂಠ; ಚೆಲುವಾದ ಕುತ್ತಿಗೆ: ಸಲ್ಲಸದ್ರುಂಡಮಾಲಾಕಲಿತಮಾದ ಸುಗ್ರೀವದಿಂದ . . . ಸಿಂಹಾಸನಾಗ್ರದೊಳು ಕಣ್ಗೊಳಿಸಿರ್ದನು (ನಂದಿಮಾ. ೫-೮). ೩. (ಕಿಷ್ಕಿಂಧೆಯ ರಾಜನಾದ) ಕಪಿಗಳ ನಾಯಕನೊಬ್ಬನ ಹೆಸರು; ವಾಲಿಯ ಸಹೋದರ: ಬಂಧುಜನಂಗಳುಂಬೆರಸು ಸುಗ್ರೀವಂ ನಿಜಾಸ್ಥಾನಮಂಡಲದೊಳ್ ಕಿಂಕರಭಾವದಿಂದಿರೆ (ಪಂರಾಮಾ. ೧೧-೬೧); ಸುಗ್ರೀವನಂತೆ ನಿನ್ನ ಲೆಕ್ಕಿಸದಿರಬೇಕು (ಪುರಂದ. ಧಾ. ೩-೧೦೩-೪). ೨, ೩: ಮತ್ತಮಾ ತರುಣಿ . . . ಸುಗ್ರೀವಾಭಿರಾಮೆಯಾಗಿಯುಮಲಂಕಾರಾತಿಶೋಭಿತೆಯುಂ (ರಾಜಶೇ. ೭-೬೧ ವ). ೪. ಕೃಷ್ಣನ ನಾಲ್ಕು ಕುದುರೆಗಳಲ್ಲಿ ಒಂದು: ಈ ರಥಕ್ಕೆ ಬಲಗಡೆಯಲ್ಲಿ ಕಟ್ಟಿರುವ ಕುದುರೆ ಸುಗ್ರೀವವೆಂಬ ಕುದುರೆಗೆ ಸದೃಶವಾದದ್ದು (ವಚಭಾ. ೨೦೮). [ಸಂ.]

**ಸುಗ್ರೀವಾಜ್ಞೆ** (ನಾ). ೧. ಸುಗ್ರೀವನೆಂಬ ಕಪಿನಾಯಕನ ಕಟ್ಟಪ್ಪಣೆ,— ಆದೇಶ: ಮೂಱುದಿನದೊಳಗವನಿಜೇಶನ ಚರಣಸರಸಿರುಹವನು ಕಾಣಲು ಬೇಕು ಸುಗ್ರೀವಾಜ್ಞೆಯಿದು ನಮಗೆ (ತೊರರಾ. ೪-೧೨-೧೭). ೨. (ಆಲಂ) ವಿಶೇಷ ಸಂದರ್ಭದಲ್ಲಿ ತುರ್ತಾಗಿ ಹೊರಡಿಸುವ ಅಧಿಕೃತ ಆಜ್ಞೆ: ದಿನಕ್ಕೊಂದರಂತೆ ಆರ್ಡಿನೆನ್ಸಿನ ಸುಗ್ರೀವಾಜ್ಞೆಗಳನ್ನು ಜಾರಿಗೆ ತಂದರೂ ಜನರು ಮಣಿಯದಾದರು (ಕುರುಕಾ. ೧೩೩).

[ಸಂ. ಸುಗ್ರೀವಾಜ್ಞಾ]

**ಸುಗ್ರೀವೆ** (ನಾ). ಸುಂದರವಾದ ಕೊರಳನ್ನುಳ್ಳವಳು: ಎಲೆಗೆ ರಾಮಾಭಿರಾಮೆ! ಸುಗ್ರೀವೆ! ನೀಲಕುಂತಳೆ! (ರಾಮಾಶ್ವ. ೧೪೮-೩). [ಸಂ. ಸುಗ್ರೀವಾ]

**ಸುಚರಿತ** (ಗು). ೧. ಒಳ್ಳೆಯ ನಡತೆಯನ್ನು ಹೊಂದಿದ; ಉತ್ತಮವಾದ ಚಾರಿತ್ರ್ಯದ. (ನಾ). ೨. ಒಳ್ಳೆಯ ನಡತೆ; ಸಚ್ಚಾರಿತ್ರ್ಯ: ಸುಚರಿತದರ್ಶನ ಬೋಧೋಪಚಾರಮಂಬಿವಜೊಳುಚಿತವಿನಯದಿನಾದಂ ರಚಿಯಿಸಿ (ಸುಕುಮಾ. ४-೧೭). ೩. ಒಳ್ಳೆಯ ಚರಿತ್ರೆ: ಶ್ರುತಿಗಳು ಸುಚರಿತವನಾಲಿಸಲಿ (ಗಗತಾ. ೧೭-೬೩). ೪. ಒಳ್ಳೆಯ ನಡತೆಯನ್ನು ಹೊಂದಿದ ವ್ಯಕ್ತಿ: ಸುಚರಿತ ಸಜ್ಜನಸಂಗದೊಳು ನಾನರ್ಚಿಸುತ — ಜಾನಿಸುತ — ವಂದಿಸುತ (ವಿಸೀಗೀ. ೧-೧೩). [ಸಂ.]

**ಸುಚರಿತೆ** (ನಾ). ಉತ್ತಮವಾದ ನಡತೆಯನ್ನು ಹೊಂದಿದ ಪತ್ನಿ; ಸಾಧ್ವಿ; ಪತಿವ್ರತೆ: "ಕುಲಪಾಲಿಕಾ . . . ಸುಚರಿತಾ, ಸತೀ, ಸಾಧ್ವೀ — ಈ ೬ ಪತಿವ್ರತೆ" (ಹಲಾಯು. ೮೧-೩೪೧); ಸುಚರಿತೆ ಸೀತೆ ನಿನ್ನೊಡನೆ ಬರ್ಪವಳೆರ್ಪವಳಲ್ಲಳ್ (ಪಂರಾಮಾ. ೬-೧೭೫). [ಸಂ. ಸುಚರಿತಾ]

**ಸುಚರಿತ್ರ** (ಗು). ೧. = ಸುಚರಿತ ೧. (ನಾ). ೨. = ಸುಚರಿತ ೨: ಸುಚರಿತ್ರದೊಳ್ ದಯಾಪರಿಣತಿಯೊಳ್ . . . ಶಾಂತಿವರ್ಮ ಸಾಕ್ಷರಸಮಯಾವಲಂಬಿ ನಿನಗಾರ್ ದೊರೆ (ಪುಷ್ಪಪು. ೧-೮೦). ೩. = ಸುಚರಿತ ೪: ಸುಚರಿತ್ರರು ಎಂತಿರ್ದರೇನಯ್ಯಾ (ಬಸವ. ೭೯೧); ಸುಚರಿತ್ರರ್ ಸಲೆ ಕೀರ್ತಿಗೋಸುಗ ಮಹಾಕಷ್ಟಂಗಳಂ ತಾಳಿ . . . ಅಚಲಖ್ಯಾತಿಯ ತಾಳ್ದರ್ (ಸೋಮೇಶ. ೯೩). [ಸಂ.]

**ಸುಚರಿತ್ರತೆ** (ನಾ). ಒಳ್ಳೆಯ ನಡತೆ; ಉತ್ತಮವಾದ ನಡವಳಿಕೆ: ಹೃತ್ಸಮುದ್ಭೂತನಿನಾದ ಸೊರ್ಕು ಸುಚರಿತ್ರತೆಯಿಂ ಸಮಸಂದ ಸೌಷ್ಠವಂ ಚೇತದೊಳುಣ್ಮೆ ಕನ್ನೆ ತಳೆದಳ್ ಕಿಲಿಕಿಂಚಿತಭಾವಚೇಷ್ಟೆಯಂ (ಚಂದ್ರಪ್ರ. ೫-೧೨೨).

[ಸಂ. ಸುಚರಿತ್ರತಾ]

**ಸುಚರಿತ್ರೆ$_1$** (ನಾ). = ಸುಚರಿತ ೨: ಸುಚರಿತ್ರೆಯೊಳ್ ದಯಾಪರಿಣತೆಯೊಳ್ . . . ನಿನಗಾರ್ ದೊರೆ (ಪುಷ್ಪಪು. ೮-೬೭). [ಸಂ. ಸುಚರಿತ್ರ]

**ಸುಚರಿತ್ರೆ$_2$** (ನಾ). = ಸುಚರಿತೆ: ಈ ಸುಚರಿತ್ರೆಯರಸಗಿದನ್ನವನುಣಲಾಸೆವಡುವರು ಪಿತೃಗಳು (ಹದಿಬ. ೨-೧೨). [ಸಂ. ಸುಚರಿತ್ರಾ]

**ಸುಚಾಯಿಸು, ಸುಚಾಸು** (ಕ್ರಿ). ತಿಳಿ; ಹೊಳೆ; ಅರಿವಿಗೆ ಬರು: ದಿನಾ ನಿನ್ನ ಈ ಲೆಕ್ಚರು ಕೇಳಿ ಕೇಳಿ ನನಗೆ ಏನೂ ಸುಚಾಯಿಸದಂಗ ಆಗೇದ (ಎತ್ತಿಕ್ಕೆ. ೧೩); ನಾನು ಜಯಣ್ಣನ ಮುಖ ನೋಡಿದೆ. ಜಯಣ್ಣನಿಗೇನೂ ಸುಚಾಯಿಸಲಿಲ್ಲ (ವ್ಯನಿ. ೫೭). **ಸುಚಾಸು:** ಹಸಿವೆಯಾದರೆ ಮನಸ್ಸು ಉದ್ವಿಗ್ನವಾಗಿ ಬಿಡುತ್ತದೆ! ಏನೂ ಸುಚಾಸುವದೇ ಇಲ್ಲ (ಹೊಸಕ್ಕ. ೧೯೪); ನೀ ಏನ ಹೇಳಿದರೂ ನನ್ನ ಮನಸ್ಸಿಗೆ ಸುಚಾಸಲಿಲ್ಲ (ನಡದಾ. I, ೨೬೩). [ಸುಚ್ಯಾ$_1$ (IP <— ಮರಾ. ಸುಚಣೇ) + - ಇಸು$_1$]

**ಸುಚಾರಿತ್ರ** (ನಾ). = ಸುಚರಿತ ೩: ಅಯ್ಯನ ಸುಚಾರಿತ್ರವನೊಸದು ಪರಿಸಿದಡೆ ಕೇಳಿದಡಹುದಭಿಮತಾರ್ಥ (ಬಸಪು. ४೫-೫೫). [ಸಂ.]

**ಸುಚಾಸು** 'ಸುಚಾಯಿಸು' ನೋ.

**ಸುಚಿ** (ನಾ). ನಿರ್ಮಲತೆ; ಚೊಕ್ಕಟತನ: ಶುಚಿ — ಸುಚಿ, ಶುದ್ಧಿ — ಸುದ್ದಿ (ಶಮದ. ೨೫೩ ಪ್ರಯೋ); ವಚನ ಮಂಟಪ ಬಳ್ಳಿ ಸುಚಿ ಮೊಗ್ಗೆ ಹೂ ಬಿಡಲು ರುಚಿಜೇನ ಹುಟ್ಟ ಹೊಸಮತವ ಕಟ್ಟಿದರು ವಚನಶಾಸ್ತ್ರಕರು ನಾಡೊಳಗೆ (ಕನ್ನಜಾ. ೩೦೪).

[< ಸಂ. ಶುಚಿ]

**ಸುಚಿತ್ತ** (ನಾ). ೧. ಒಳ್ಳೆಯ ಮನಸ್ಸು; ಶುದ್ಧವಾದ ಅಂತಃಕರಣ: ಸುಚಿತ್ತದಿಂದಲೆನ್ನ ಮನವು ನಿಮ್ಮ ನೆನೆಯಲೊಲ್ಲದು (ಬಸವ. ४೭೬); ಪ್ರಾಣೇಶ್ವರಂ ಸುಚಿತ್ತದಲಿ . . . ಬೋನವಂ ಮಾಡಿ ಇತ್ತು (ಬಸಪು. ೨೭-೧೫). ೨. ಶುದ್ಧವಾದುದು; ತಿಳಿಯಾದುದು: ತೃಷೆಗೆ ಹಳ್ಳದಲ್ಲಿ ಸುಚಿತ್ತವಾದ ಅಗ್ಘವಣಿಯುಂಟು (ಮಹಾದೇ. ಬ. ೯೮-೨೨೬). ೩. [ವೀಶೈ] ಒಂಭತ್ತು ಬಗೆಯ ಹಸ್ತಗಳಲ್ಲಿ ಒಂದು; ಸಂಸಾರನಿಮಗ್ನತೆಯನ್ನು ಇಲ್ಲವಾಗಿಸಿ ವಿಶ್ವಬಂಧುತ್ವಭಾವವನ್ನು ಉಂಟುಮಾಡುವಿಕೆ: ಸುಚಿತ್ತವೇ ಮೊದಲು ನಿರವಯವೆ ಕಡೆಯಾದ ನವಹಸ್ತಂಗಳಿಂದ ಭಾವಪುಷ್ಪಂಗಳಲ್ಲಿ ಪೂಜೆಯಂ ಮಾಡಿ (ಘನವ. ೨೩-೧೯). [ಸಂ.]

**ಸುಚಿತ್ತೆ** (ನಾ). ಒಳ್ಳೆಯ ಮನಸ್ಸುಳ್ಳವಳು: ನಿಟಿಲಾಂಬಕಧ್ಯಾನಪ್ರಮತ್ತೆ ಸುಚಿತ್ತೆ . . . ಸಾರವೀರವ್ರತಭರಿತೆ ಚರಿತೆ (ಬಸವು. ೨೪-೧). [ಸುಚಿತ್ತ + - ಎ₂]

**ಸುಜಂಭ** (ನಾ). ೧. ಗಟ್ಟಿಯಾದ ದವಡೆಗಳನ್ನುಳ್ಳವನು. ೨. (ಅಲಂ) ಗಟ್ಟಿಗ; ಪರಾಕ್ರಮಿ: ಜಮ್ಮಾರಿನಿಭಂ ಶಾಲಾಸ್ತಂಭಮಮನೊಳ್ಪೊದವೆ ನಿಱಿಸಿದಂ ನಿಜಕೀರ್ತಿ[ಗ]ಸ್ತಂಭಮನೆ ನಿಱಿಸುವನ್ನ ಸುಜಂಭಂ ಕಂಚಿಗನಚಂಚಳಾಂಚಿತಧೈರ್ಯಂ (ಎಕ. IV, ೯೪-೨೧; 945). [ಸಂ.]

**ಸುಜನ** (ಗು). ೧. ಸಜ್ಜನಿಕೆಯಿಂದ ಕೂಡಿದ; ಒಳ್ಳೆಯ. (ನಾ). ೨. ಒಳ್ಳೆಯವನು; ಸಜ್ಜನ: "ಕುಳಜಾತಂ ತಕ್ಕನಾರ್ಯಂ ಸುಜನನಭಿಜನಂ ಸಾಧು ಸದ್ವೃತ್ತನಪ್ಪಂ" (ವಸ್ತುಕೋ. ೧೦೦-೧೧); ಸುಜನಜನವನಜದಿನಕರ (ಸೌಇ. XX, ೫೫-೩೯; 1082); ಸುಜನಜನಪ್ರಮೋದ ಘನಕುಂಜನಿಕಾಯಮನೊತ್ತಿ ಮೆಟ್ಟುತ . . . ಬಂದುದು ದೈತ್ಯಕುಂಜರಂ (ಉದ್ಭಟ. ४-೯४); ಬಂದ ಸುಜನಮೃಗಧೀವರಂ ಕಪಟಪಟು ಕೌಶಿಕಂ ವಾಸಿಷ್ಠಮುನಿ ಹೋದ ಹೊತ್ತನಱಿದು (ಹಚಕಾ. ೩-೫).

**ಸುಜನಕೈವಾರ** = ಒಳ್ಳೆಯವರ ಪ್ರಶಂಸೆಗೆ ಪಾತ್ರನಾದವನು; ಒಂದು ಬಿರುದು: ವೈರಿಘಟಾಕೇಸರಿ ಸುಜನಕೈವಾರನಾರೋಹಕತ್ರಿನೇತ್ರಂ (ಇಇ. V, ೧೭-೨೦; 1019). **ಸುಜನಪ್ರಸಂಗ** = ಸಜ್ಜನರ ಸಹವಾಸದಲ್ಲಿರುವವನು; ಒಂದು ಬಿರುದು: ವೈರಿದಿಕ್ಕುಂಜರಂ ಸುಜನಪ್ರಸಂಗಂ ಸಾಹಸೋತ್ತುಂಗಂ (ಸೌಇ. XI-i, ೭೮-೪೫; 1045). **ಸುಜನಪ್ರಸನ್ನ** = ಒಳ್ಳೆಯವರನ್ನು ತೃಪ್ತಿಗೊಳಿಸುವವನು; ಒಂದು ಬಿರುದು: ಮಹಾಪ್ರಚಣ್ಡದಣ್ಡನಾಯಕಂ ವಿಬ್ಬಬಳನಾಯಕಂ ಸುಜನಪ್ರಸನ್ನಂ (ಕಇ. IV, ೩-೯;1114). **ಸುಜನೋತ್ತಂಸ** = ೧. ಸಜ್ಜನರಲ್ಲಿ ಶ್ರೇಷ್ಠನಾದವನು. ೨. ಸುಜನರು ತನಗೆ ಭೂಷಣಪ್ರಾಯರೆಂದು ತಿಳಿದವನು; ಕನ್ನಡದ ಕವಿ ಬೊಪ್ಪಣಪಂಡಿತನ ಬಿರುದು: ಸುಜನರ್ಬ್ಬವ್ಕರೆ ತನಗವರಜಸ್ರಮುತ್ತಂಸಮಪ್ಪ ಪುರುಳಿಂ ಬೊಪ್ಪಂ ಸುಜನೋತ್ತಂಸನೆನಿಪ್ಪಂ ಸುಜನರ್ಗ್ಗುತ್ತಂಸಮಂಬ ಪುರುಳಿಂದೆನಿಸಂ (ಎಕ. II (R), ೩೩೭-೭೭; 12ನೆಯ ಶತ); ಗಜಗನ ಗುಣನಂದಿಯ . . . ಸುಜನೋತ್ತಂಸನ ಸುಮಾರ್ಗಮಿದಱೊಳ ಲಕ್ಷ್ಯಂ (ಶಮದ. ೫ ಪೀಠಿಕೆ). [ಸಂ.]

**ಸುಜನತೆ** (ನಾ). ಒಳ್ಳೆಯ ನಡತೆ; ಸದ್ಗುಣ: ಗಜತುರಗರತ್ನಮಿವು ಭೂಭುಜನಾವೊಂ ಪ್ರಬಲಪುಣ್ಯನವನನೆ ಸಾರ್ಗುಂ ನಿಜದಿಂದಮೆಂದು ಮಾಣ್ಬುದು ಸುಜನತೆ (ಚಂದ್ರಪು. ೯-೧೦೦); ಇಲ್ಲದ ಗುಣಮಂ ಪೆಱರೊಳ್ ಸೊಲ್ಲಿಸುವಂ ತನ್ನೊಳುಳ್ಳ ಗುಣಮಂ ತಾನಿಲ್ಲಂದಾಡುವ ಪುಸಿಕಂಗಲ್ಲಿಂದಂ ಬಂದುದಮಮ ಸುಜನತೆ ಚಿತ್ರಂ (ಪುಷ್ಪಪು. ೧-೫೭). [ಸಂ. ಸುಜನತಾ]

**ಸುಜನತ್ವ** (ನಾ). ೧. = ಸುಜನತೆ: "ಸುಜನತ್ವ ಗಂಧದ್ರವ್ಯಂಗಳೊಳ್ ಸಾದಕ್ಕು" (ಶಬ್ದಮಂ. ೧೦೦). ೨. ಕರುಣೆ; ದಯೆ. ೩. ಸಭ್ಯತೆ; ಸಂಭಾವಿತತನ. [ಸಂ.]

**ಸುಜನವತ್ಸಲ, ಸುಜನವತ್ಸಳ** (ನಾ). ಸದ್ಗುಣಿಗಳಲ್ಲಿ ಪ್ರೀತಿ ಇರುವವನು; ಸಜ್ಜನಪ್ರಿಯನಾದವನು: ಎನಗೆ ಸುತ ಸುಜನವತ್ಸಲ ನೆನವಿಗೆ ಗೋಚರನೆಯಾಗಿ ಪೋಗದೆ ಮತ್ತಂದಿನ್ನ ತೆಱದೆ ನಯನಗೋಚರನೆನಿಪ್ಪುದಂ ಪೇಟ ಪುಣ್ಯತರವಾಸರಮಂ (ಚಂದ್ರಪು. ೫-೧೭). **ಸುಜನವತ್ಸಳ**: ಸುಜನವತ್ಸಳನೆಲ್ಲಿಯುಮಿತನೆಂದು ಕೈವಾರದೆ ಬಣ್ಣಿಕುಂ ವಿಬುಧಮಂಡಳಿ ಪಂಡಿತ ನಾಗವರ್ಮನಂ (ವಸ್ತುಕೋ. ೧೧೭-೩೬). [ಸಂ.]

**ಸುಜನವತ್ಸಳ** 'ಸುಜನವತ್ಸಲ' ನೋ.

**ಸುಜಾಣ** (ನಾ). ಬುದ್ಧಿವಂತ; ಚತುರ: ಸಕಳದೊಳು ನಡೆಯದ ಸುಜಾಣನು ಸಕಳವಳಿಯಲು ಸಕಳದೊಳು ತಾನಳಿಯದಿಹ ನಿತ್ಯ (ಬಸವು. ೫೧-೪೪); ಕಾಂತ ಸುಜಾಣನೆಂಬುದು ಯತ್ನಸಿದ್ಧ (ಮೋಹತ. ೨೫-೨೪). [ಸು₄ - + ಜಾಣ]

**ಸುಜಾಣೆ** (ನಾ). ಬುದ್ಧಿವಂತೆ; ಚತುರೆ: ನರ್ತನದ ಸುಜಾಣೆಯರುಗಳ ಚಿತ್ತಸು . . . ಪೊಬಾಣ ಪರಾಕೆಂದರೊಲಿದು (ಮೋಹತ. ೧೭-೧೧); ಬಾಯ್ಗಳಂ ಬಿಡುವ ಬಿಡು ಗಂಗಳ ಸುಜಾಣೆಯರ್ ಸಲೆ ದಶಾವಸ್ಥೆಯೊಳ್ ಕಣ್ಗೆಸೆದರು (ಚಿಬಪು. ೧೯-೩೧). [ಸು₄ - + ಜಾಣೆ]

**ಸುಜಾತ** (ಗು). ೧. ಶ್ರೇಷ್ಠವಾದ ಕುಲದಲ್ಲಿ ಹುಟ್ಟಿದ: ಸುಜಾತ ಕವಿತಾ ವಿಚಕ್ಷಣಜನರ್ . . . ನಿಜಾಗಮದೆ ಪುಟ್ಟುವರ್ (ಹಾಲಾಸ್ಯ. ४-೩-೧೧). ೨. ಚೆನ್ನಾಗಿ ಅರಳಿದ: ಅಭಿನವ ಸುಜಾತ ಪಾರಿಜಾತ ಸುಮನಶ್ಶೇಖರಂ (ಶಾಂತಿಪು. ೭-೧೩ ವ). [ಸಂ.]

**ಸುಜಾತಿ** (ನಾ). ೧. ಒಳ್ಳೆಯ ವರ್ಗ; ಉತ್ತಮದರ್ಜೆ: ಸುಜಾತಿಯಪ್ಪ ಮಾಣಿಕ್ಯಮೆಂತುಂ ಕರ್ಚಿನೊಳಗಿರ್ದುಂ ಬೆಳಗುವಂತೆ (ಜೀವಸಂ. ೧-೯೭ ವ). ೨. [ವೀಶೈ] ಭಕ್ತರ ಪಂಗಡ: ಲಿಂಗಬಾಹ್ಯಂಗೆ ಲಿಂಗಬಾಹ್ಯನಾಗಬೇಕಲ್ಲದೆ ಸುಜಾತಿಯ ಬೆರಸಿ ದುದುಂಟೆ (ಮೋಲಿಮಾ. ೧೭೭-೭೨೨). [ಸಂ.]

**ಸುಜ್ಜಲು, ಚುಚುಲು, ಚುಜ್ಜಲು, ಚುಜ್ಜುಲು, ಸುಜ್ಜಿಲ್, ಸುಜ್ಜುಲು** (ನಾ). (ಸೊಪ್ಪನ್ನು ಒಣಗಿಸಿ ಪುಡಿಮಾಡಿ ಸೀಗೆಪುಡಿಯೊಂದಿಗೆ ಉಪಯೋಗಿಸುವ) ಒಂದು ಬಗೆಯ ಸಸ್ಯ; ಚಿಗರೆ: ಜಾಲ ಸುಜ್ಜ[ಪಾಠಾಂ. ಜ್ಜು]ಲು ಮತ್ತಿ ಕಡವ ಹಾಲೆ ಹಾದರಿ ಬನ್ನಿ ಮೊದಲಾದ ತರುಗಳ ಜಾಲದಿಂದೆಸೆದುದಾ ವಿಪಿನ (ರಾಮವಿ. ೧೫-೫೯); ದೇವದಾರ ಚೆಕ್ಕೆ . . . ಸುಜ್ಜಲಬೀಜ, ಹಸುರುಹಾವು – ಇವು ಪ್ರತ್ಯೇಕ ಗ ೧ ತೂಕವಂ ಕಲ್ಕವಂ ಮಾಡಿ ಹಾಕಿ (ಸಕಪ್ಪ. ೧೫೩). **ಚುಚುಲು**: (೬). **ಚುಜ್ಜಲು**: ಈ ಕಲ್ಲಿಗೆ ನೈಋತ್ಯದಲ್ಲೂ ಚುಜ್ಜಲಕಟ್ಟೆ ಕೆಳಗೆ ನೆಟ್ಟ ಕಲ್ಲು ೧ (ಎಕ. XIV, ಮೈಸೂರು. ೧೧೫-೩೭೦;1674); ಕಗ್ಗಲ್ಲ ಕಣಿವೇಲಿ ಚುಜ್ಜಲ ಬೋರೇಲಿ ಕದ್ದು ಬತ್ತೀನಿ ನಿನಗಾಗಿ (ಚೈಸರ್ವ. ೧೩೧). 'ಚುಜ್ಜಲುಮರ' ಪರಾ. **ಚುಜ್ಜುಲು**: ಚುಜ್ಜುಲು ಗೇರು ದೇವದಾರು . . . ಮೊದಲಾದ ಗಗನವಂ ತುಡುಕುವ ವೃಕ್ಷಂಗಳ್ (ಸೌಗಂಧಿ. ೫४-೭). **ಸುಜ್ಜಿಲ್**: ಸುಜ್ಜಿಲರಳಿ ಸಾಗಡೆಯುದಿಸಂಪಗೆ . . . ನೇಸಱವೆಳಗಿಗೆ ವೆಜ್ಜಗುಡದೆ ಬೆಳದಿರಲಾ ಬಿಂಜಂ ಭೀಕರತರಮಾಯ್ತು (ಜಯಕಾ. ೧೫-೨४). **ಸುಜ್ಜುಲು**: ಹುಲುವೆ ಸುಜ್ಜುಲು ಹೊಂಗೆ ತಾರೆ ತವಸಿ ಕಗ್ಗಲಿ . . . ಮರಗಳಲ್ಲಿಹವು (ಚಂಪ್ರಸಾಂ. ೯-೮೫).

**ಸುಜ್ಜಿಲ್** 'ಸುಜ್ಜಲು' ನೋ.

**ಸುಜ್ಜುಲು** 'ಸುಜ್ಜಲು' ನೋ.

**ಸುಜ್ಞ** (ಗು). ೧. ವಿವೇಕವನ್ನು ಹೊಂದಿದ; ಜ್ಞಾನಿಯಾದ. (ನಾ). ೨. ಜ್ಞಾನಿ; ಪ್ರಾಜ್ಞ; ವಿವೇಕಿ: ಆತನು ಅತ್ಯಂತ ಸುಜ್ಞನಾಗಿದ್ದು, ಶುಕ್ರಾಚಾರ್ಯನಂತೆ ಅತ್ಯಂತ ಹಿತೈಷಿಯಾಗಿದ್ದ (ತುಳಸಿ. ४೩). [ಸಂ.]

**ಸುಜ್ಞಾನ** (ನಾ). ಉತ್ತಮವಾದ ತಿಳಿವಳಿಕೆ; ವಿಶೇಷವಾದ ಜ್ಞಾನ: ಜ್ಞಾನ ವಿಜ್ಞಾನ ಸುಜ್ಞಾನ ಮಹಾಜ್ಞಾನ ಅಪರಜ್ಞಾನ ಇಂತೀ ಪಂಚಜ್ಞಾನವ ದಹ್ಯಮಾಡಿ ಬ್ರಹ್ಮಲಿಖಿತವ ತೊಡೆವಂತೆ ಧರಿಸುವದೆ ತ್ರಿಪುಂಡ್ರ (ಮೋಲಿಮಾ. ೧೫४-೫೮೧); ಕಾಮತಂತ್ರ ವಿಜ್ಞಾನಮಂ ಸುಜ್ಞಾನಂ ಮಾಡಿಯುಂ . . . ಕಾಲಮಂ ಸಲಿಸುತ್ತುಮಿರೆಯಿರೆ (ಚಂದ್ರಪು. ೨-೧೭); ತುರಗವಿತಾನವಿಲ್ಲದ ಮೋಹರಂ ಸುಜ್ಞಾನವಿಲ್ಲದ ಯೋಗಿ ಸೂನೃತವಿಲ್ಲದಾಲಾಪ (ಬಸವು. ೩೭-೩೧). [ಸಂ.]

**ಸುಜ್ಞಾನದ** (ನಾ). ವಿವೇಕವನ್ನು ನೀಡುವವನು: ಸುಜ್ಞಾನದನಂ ಲಕ್ಷಿಪೆನೀ ಕೃತಿಯ ಮೊತ್ತಮೊದಲೊಳೆ ನಯದಿಂ (ಹಾಲಾಸ್ಯ. ೧-೧-೯). [ಸಂ.]

**ಸುಜ್ಞಾನಿ** (ನಾ). ವಿಶೇಷವಾದ ಅರಿವುಳ್ಳವನು: ಇರ್ಪನುರು ಸಂಸಾರ ಮಾಯಾದರ್ಪ ವಿದಳನಮೂರ್ತಿ ಚರಲಿಂಗಾರ್ಪಿತಾರ್ಥಪ್ರಾಣವಪುರಭಿಮಾನಿ ಸುಜ್ಞಾನಿ (ಬಸವು. ೩೧-೧). [ಸಂ. ಸುಜ್ಞಾನಿನ್]

**ಸುಟಿ** 'ಸೂಟಿ₁' ನೋ.

**ಸುಟಿಕರ** (ನಾ). ಚತುರನಾದವನು; ನಿಪುಣ: ಸುಟಿ[ ಪಾಠಾಂ. ಶುಟಿ, ಶೂಟಿ, ಶುಠಿ, ಶುಧಿ]ಕರನೆಂಬು ಗುಱಿಯನಂಟುಮ ತೆಱದಿ ದೃಷ್ಟಿ ಮುಟ್ಟಿಸು ಲಿಂಗದೊಳ್ ಕುಮಾರ (ಷಟಿಲ. ೫-೫೭). [ಸುಟಿ (< ಸೂಟಿ₁) + ಕರ₁ (<- ಕಾರ₁)]

**ಸುಟಿಯಳಿ** (ಕ್ರಿ). ಕಾಂತಿಯನ್ನು ಕಳೆದುಕೊಳ್ಳು; ಬಾಡು; ಮುದುಡು: ಉರೆ ಸುಟಿಯಳಿದ ಕುಮುದಗಳ ನಲಿಸುತ್ತ (ಪರಶು. ೫-೩). [ಸುಟಿ (< ಸೂಟಿ₁) + ಅಳಿ₁ (< ಅಟಿ₁)]

**ಸುಟಿವಂತ** (ನಾ). ಚತುರ; ಕುಶಲನಾದವನು: ಸುಟಿವಂತ ಮೃದು ನಿನ್ನ ಕರ್ಮಗಳವು ಭೋಗ ಮಠದೊಳೊಯ್ಯನೆ ತೊಲಗುವುವು (ಭರತ. ೫४-೯४). [ಸುಟಿ (< ಸೂಟಿ₁) + -ವಂತ]

**ಸುಟಿವೇೞು** (ಕ್ರಿ). ವೇಗವಾಗು; ರಭಸವನ್ನು ಹೊಂದು; ಚುರುಕಾಗು: ಸುಟಿವೆತ್ತು ಮುಗಿಲಗಲದಿ ಪರಿವಾಕಾಶತಟನಿಯ ಬುದ್ಬುದದಂತೆ ಪಟುವಾಗಿ ನಿಖಿಲನಕ್ಷತ್ರ ಸಂದೋಹ ಸಂಘಟಿಸಿತು ಕೇಳಾಯತಾಕ್ಷಿ (ಮೋಹತ. ೧೫-೫).

[ಸುಟಿ (< ಸೂಟ್ಟ$_1$) + ಪೇೞು$_1$]

**ಸುಟು** (ಕ್ರಿ). ಕಟ್ಟು; ಅಳವಡಿಸು; ಜೋಡಿಸು(?): ಪೋತಬಮ್ಮ xxx ಯತನಂಗಳಿನ್ ಮಾಲೆಯಾ ಸುಟುವಾ ಬ[ಡಿ]ಗ ಮೊದಲಾಗಿಟ್ಟು ದೇವಣ್ಣ xx ಲೆಯವಮ್ ಮೊದಲಾಗಿ[ಟ್ಟು] ನಿಱಿಸಿ (ಸೌಇಇ. XI-i, ೧೩-೭; 869). [< ಸೂಡು$_1$?]

**ಸುಟ್ಟ$_1$** 'ಸುಡು' ಪರಾ.

**ಸುಟ್ಟ$_2$** (ನಾ). ಮೇಲೋಗರ; ವ್ಯಂಜನಪದಾರ್ಥ: "ಸುಟ್ಟಂ — ಮೇಲೋಗರಂ" (ಶಾಶಕ್ಕ. ೨೫೬). [< ಸುಡು]

**ಸುಟ್ಟರಗಾಳಿ** 'ಸುಟ್ಟುರೆಗಾಳಿ' ನೋ.

**ಸುಟ್ಟರೆ** 'ಸುಟ್ಟುರೆ' ನೋ.

**ಸುಟ್ಟಿ$_1$** 'ಸಿಟ್ಟಿ' ನೋ.

**ಸುಟ್ಟಿ$_2$** (ನಾ). [ಸಂಗೀತ] (?): ಗತಿಯೋಜೆ ಬಜಾವಣೆ ಠಾಯ ಸುಟ್ಟಿ ಕೋಮಳವಳಿ . . . ಸಂಗಳಿಸೆ ಸುಕಂಠೆ ಪಾಡಿ ಪುದಿದಲ್ ಮುದಮಂ ನರನಾಥ ಚಿತ್ತದೊಳ್ (ಕುಸುಮಾ. ೧-೩೭). 'ಸುರಿ' ಪರಾ. [?]

**ಸುಟ್ಟಿಸು, ಸೂಂಟಿಸು** (ಕ್ರಿ). ೧. ಬೆರಳಿನಿಂದ ತೋರಿಸು,—ನಿರ್ದೇಶಿಸು: ಕುಸುಮಪುರದತ್ತ ಸುಟ್ಟಿಸಿ ತೋಱಿ (ಲೀಲಾವ. ೧೪-೧೫೫ ವ); ಅಂತಕ ಮನೋಜ . . . ಎಂದೊದವಿದತರ್ಕ್ಯರೆಂಬವರ್ಗೆ ಸುಟ್ಟಿಸಬಾರದು (ಪಂಪಾಶ. ೪೭); ಅಂತು ಸುಟ್ಟಿಸಿ ತೋಱುವ ಬೆರಲ್ಗುಡಿಯಿಂ ಮುಂದು ಬಣ್ಣಿಸುವ ನುಣ್ನುಡಿಯಿಂ ಪಿಂದುಱಿಯೆ ಮುಂದುವರಿದು (ಅನಂಪು. ೫-೪೬ ವ). ೨. ಚಾಚು; ನೀಡು: ಸುಟ್ಟಿಪ ನುಣ್ಬೆರಲ್ಗೆ ನಿಮಿರ್ದ್ಯಕಲನೀವ ತುಷಾರವಾರಿಯಿಂ . . . ನೆಟ್ಟಗೆ ಮಾಡುತೊರ್ಮೆಯೆ ನೃಪಂಗೆನಸುಂ ಶಿಶಿರೋಪಚಾರಮಂ (ಕುಸುಮಾ. ೧೦-೩೩). **ಸೂಂಟಿಸು:** ೧. ಧನುಜಂಗಂಜಿ ಭಿಲ್ಲನು ವನದ ಕಡೆಯೊಳು ನಿಂದು ಸೂಂಟಿಸಿ ವಿನುತ ಸುಕೃತಿಗೆ ತೋಱಿದಂ ಗಡ ದೂರಪಥದಿಂದ (ಫಣಿಚ. ೩-೨೫).

[ಸುಟ್ಟು$_1$ + -ಇಸು$_1$]

**ಸುಟ್ಟು$_1$** (ಕ್ರಿ). ಬೆರಳಿನಿಂದ ತೋರಿಸು,—ನಿರ್ದೇಶಿಸು: "ಸುಟ್ಟು— ಅಂಗುಲಿದರ್ಶನೇ (ಬೆರಳಿನಿಂದ ತೋರಿಸು)" (ಶಮಧಾ); ಇಂತಳವುಮವನ ದೋರ್ವಳಮು ಮನರಸನಱಿಯಂ ನೀಮೇಕಱಿಯಿರೆ ಪೇೞಿಮೆಂದು ಕೆಲದೊಳಿರ್ದವರಂ ಸುಟ್ಟಿ ನುಡಿದೊಡೆ (ಬಂಹರಿ. ೬-೩೪ ವ); ಸುಟ್ಟಿದುದೆ ತೋಱಿ ತಾಣದ ಕಟ್ಟಳೆಯಂ ಮಾಡಲಿಂದ್ರನಾಣತಿಯಿನಿರಲ್ಬಟ್ಟಿರ್ ದಿಕ್ಪತಿಗಳ್ ಸಮಾಕಟ್ಟುಗಳಿಂ ಕೂಡಿ ಜನನ ಸವನೋತ್ಸವದೊಳ್ (ಶಬ್ದಾನು. ೪೪೩ ಪ್ರಯೋ); (ಆಕಾಶದ ಕಡೆಗೆ ಸುಟ್ಟಿ) ಮೇಲೊಬ್ಬನಿಹನಾತನೊಳಗೆ ಹೊರಗಲ್ಲವಂ ನೋಡುತಿಹನವನಿಗಿದನೊಪ್ಪಿಸಿಹ! (ಪಚ್ಚೆರ. ೩೪-೧೬).

**ಸುಟ್ಟಿದೋರ್ಕೆ** = ಬೆರಳನ್ನು ತೋರುವುದರ ಮೂಲಕ ಸೂಚಿಸುವಿಕೆ: ಬೀಸಾಟಮನೆ ಸುಟ್ಟಿದೋರ್ಕೆಗೆ ಗೆತ್ತು ನಾಮ್ ಬಂದೆವಿಲ್ಲಿಗೆ ಮಹೇಂದ್ರಾಚಲಕೆ! (ಶ್ರೀರಾಮಾ. ೩೭೩-೩೦೮). **ಸುಟ್ಟಿದೋಱು, ಸುಟ್ಟಿತೋರು, ಸುಟ್ಟಿತೋಱು, ಸುಟ್ಟಿದೋರು** = ಬೆರಳಿನಿಂದ ತೋರಿಸು: ತರಳತರತಾರಹಾರೋತ್ಕರರಚನೆಗೆ ಸುಟ್ಟಿದೋಱಿ ನೀರೇರುಹಬಂಧುರಗಂಧಿ ರಮಣನಿಂದಂ ಸುರಹೊನ್ನೆಯ ನನೆಯನೆಸೆಯೆ ಕೊಯ್ಸಿದಳೊರ್ವಳ್ (ಪುಷ್ಪಪು. ೮-೮೪); ಈತಂಗಸಾಧ್ಯಮಾವುದುಮಿಲ್ಲೆನುತ್ತು ಮಾತಂಗಳೊಡಗೊಂಡು ಪೋಗಿ ಬಳಾಹಗಿರಿಯ ಬಹಳಗುಹೆಯಂ ಸುಟ್ಟಿದೋಱುವುದುಂ (ಮಹಾಸೇ. ೭-೧೦೨ ವ); ಕೆಳಗೆ ಕಾಣಿಸುವ ಊರನ್ನು ನೋಡಿ ತನ್ನ ಹಿಂದಣ ತಾಣಗಳಲ್ಲಿ ಒಂದೊಂದನ್ನು ಸುಟ್ಟಿ ತೋರುವಳು (ಸವತಿ. ೨೮೧); ನಾರಾಯಣಂ ಬಲದೇವಂಗೆ ಸುಟ್ಟಿತೋಱಿ ಭೀಮಾರ್ಜುನರ್ಕಳಿವರಮೋಘಮಪ್ಪರೆಂದವರ ಸಾಹಸಕ್ಕೆ ಮೆಚ್ಚಿ ಸಂತಸಂಬಟ್ಟಿರ್ದಾಗಳ್ (ಪಂಪಭಾ. ೩-೭೧ ವ); ಲತಾಗಾರದ ಪುಟಿಲೆಡೆಯಂ ಸೀತಾರಮಣಗೆ ಸುಟ್ಟಿತೋಱಿದಂ ರಘುವೀರಂ (ಪಂರಾಮಾ. ೧೫-೨೪); ನೆನೆಯಲ್ಬಾರದು ಸುಟ್ಟಿತೋಱಲರಿದಾರ್ಗಂ ರಾಮಚಂದ್ರಪ್ರತೀಂದ್ರನ ದುರ್ವಾರನಿಘೋರವೀರತಪಂ (ಅನಂಪು. ೧-೨೩); ಸುಟ್ಟಿದೋರಿದಳು ಪೀಂಚಲು (ಮಲೆಮ. ೭೫೫).

[ದೇ. ॥ ತಮಿ. ಚುಟ್ಟು; ಮಲ. ಚೂಂಡು; ತುಳು. ತೂಂಡು; ಕುೞ. ಸೂಟ; ಕುವಿ. ಹೂತಲಿ]

**ಸುಟ್ಟು$_2$** 'ಸುಡು' ಪರಾ.

**ಸುಟ್ಟುಂದೋಱು, ಸುಟ್ಟುದೋಱು** (ಕ್ರಿ). = ಸುಟ್ಟಿಸು ೧: ನಿಟ್ಟಿಪರವೆ ಸೀವಂದದಿ ತನ್ನಂ ಸುಟ್ಟುಂದೋಱುವ ಬೆರಲುಡಿವಂದದೆ . . . ಎಚ್ಚ ಮಹಾಫಣನಾರಾಚಂ (ಜಯಕಾ. ೭-೩೮). **ಸುಟ್ಟುದೋಱು:** ಸುಟ್ಟುದೋಱಿದ [ಪಾಠಾಂ. ತೋಱಿದ] ಬೆರಳುರಿವುದಾ ದೆಸೆಯತ್ತ ಮೆಟ್ಟಿದ ಕಾಲ್ಮುರುಟುವುದು (ಶ್ರೀಪಾಲ. ೧೧-೫೮).

[ಸುಟ್ಟು$_1$ + ತೋಱು]

**ಸುಟ್ಟುಂಬೆ** (ನಾ). ೧. ತೋರುಬೆರಳು; ತರ್ಜನಿ: ಕಿಱುಕುಣಿಕೆಯ ಬೆರಲಿಂದೆಡೆವಱಿಯದೆ ಸುಟ್ಟುಂಬೆವರೆಗಮೆಯ್ದಿದ ಬರೆಯಿಂ ನೆಱೆ ನೂಱುವರ್ಷಂ (ಲೋಕೋಪ. ೧೧-೧೭); ಸುಟ್ಟುಂಬೆಯಂ ತೋಱಿ ನುಡಿಯುತ್ತುಮಿರ್ದ ಶ್ರೀದೇವಿಯ ಮಾತಂ ಕೇಳ್ದು (ಬಾಧಪು. ೬-೪೩ ವ); ಕವಿ ಸುಟ್ಟುಂಬೆಯಿಂದೆ ಸತ್ಕಮಂ ತೋರ್ಪನ್ (ಸಂಸಪ. ೪೦-೫). ೨. ಬೆರಳು; ಅಂಗುಲಿ: ಕೊರಲೊಳ್ತೊಗಯಿಪ ಹಾರಮನೆರಡುಂ ಸುಟ್ಟುಂಬೆಯಿಂದವಡಿಗಡಿಗಾಗಳ್ ತಿರುಪುತ್ತಂ . . . ಎಸೆದಳ್ (ಕಾದಂಉ. ೧೩೨). ೩. ನಡುವಣ ಬೆರಳು; ಮಧ್ಯಮೆ: ಕನಿಷ್ಠಿಕೆ ಸಮಂತು ಮುಟ್ಟದಿರೆ ಪೃಥ್ವಿಯಂ ಬಂಡೆ ಮತ್ತನಾಮಿಕೆಯದುದ್ದಮಾಗೆ ಮೞುವಾಚ್ಚೆ ಸುಟ್ಟುಂಬೆಯೊಂದೆ ನೀಟ್ಟು ನಿಲೆ ಕಡ್ಡೆ (ಲೋಕೋಪ. ೧೧-೫೧).

**ಸುಟ್ಟುಂಬೆಯ ನೆಟಲ್** = (ಅಲಂ) ಮಾರ್ಗದರ್ಶನದ ಆಶ್ರಯ: ದಮಿತಾರಿಗೆ ಪುಟ್ಟಿ ಸುಟ್ಟುಂಬೆಯ ನೆಟಲೊಳ್ಪಂದು ಮುಗುಳಿನೊಳ್ ಪೂಟ್ಟುಂ ಭ್ರೂಲತಾಪ್ರತಾನದೊಳ್ ಕಟ್ಟುಂ ಕಿಟ್ಟಟ್ಟುಮಿರ್ಪುದುಚಿತಮಲ್ತು (ಶಾಂತಿಪು. ೪-೮೨ ವ). **ಸುಟ್ಟುಂಬೆಯ ಬೆರಲ್** = ಸುಟ್ಟುಂಬೆ ೧: ಸುಟ್ಟುಂಬೆಯ ಬೆರಲಗ್ರದೊಳಿಟ್ಟಾ ತ್ರಿಕಟುಕಮನೊರಸೆ ಕಿಱು ನಾಲಗೆಯಂ ಮೆಟ್ಟಲ್ದವಮತಿ(?)ವಿಷಂ ಬಿಟ್ಟಡಗುಗುಂ (ಖಮದ. ೧೬-೬೨).

[< ಸುಟ್ಟುಂಬೆರಲ್?]

**ಸುಟ್ಟುಂಬೆಕ್ಕು** (ನಾ). ಮುಟ್ಟಿದರೆ ಎಲೆಗಳನ್ನು ಮುರುಟಿಕೊಳ್ಳುವ ಒಂದು ಬಗೆಯ ಸಸ್ಯ; ಮುಟ್ಟಿದರೆ ಮುನಿ: "ನಮಸ್ಕಾರಿ, ಗಂಡಕಾರಿ, ಖದಿರ . . . ಎಂದೊಡೆ ಮುಟ್ಟಿದರೆ ಮುರುಟುಹ ಸುಟ್ಟುಂಬೆಕ್ಕೆಂದೂ ಎಂಬರು" (ನಾಚಿರಾ. ೩). [ಸುಟ್ಟು$_2$ (< ಸುರುಂಟು) + ?]

**ಸುಟ್ಟುಂಬೆಬೆರಲು** (ನಾ). = ಸುಟ್ಟುಂಬೆ ೧: ತೂಗುವ ತಲೆ ತುಱುಗೆವೆಯಲುಗದ ನೋಟ ಮೂಗಿಟ್ಟು ಸುಟ್ಟುಂಬೆಬೆರಲು ಭೂಗಧಿಪನ ಕೊಂಡಾಡುವ ನುಡಿಯಿಂ ರಾಗಿಸಿತಾ ಮೃತಜೀವಿ (ಶ್ರೀಪಾಲ. ೮-೭೫). [ಸುಟ್ಟುಂಬೆ + ಬೆರಲು (< ಬೆರಲ್)]

**ಸುಟ್ಟುಂಬೆರಲ್, ಸುಟ್ಟುಬೆರಳು, ಸುಟ್ಟುವೆರಲ್** (ನಾ).= ಸುಟ್ಟುಂಬೆ ೧: ಕುರುಳ ಸುರ್ಬಿಂ ಪುರ್ಬಿಂಗಿಱಿವ ಚಮರ ಬಿರಿವೊನಲಂ ಸುಟ್ಟುಂಬೆರಲಿಂ ತೊಡೆದೀಡಾಡುತ್ತುಂ (ಲೀಲಾವ. ೬-೧೭ ವ); ಪುಸಿಯೆ ನೆಱೆಸುಡುಗು ಸುಟ್ಟುಂಬೆರಲ್ ಸುಡದಿರಲ್ ನಂಬಿ ಸಿದ್ಧಮಲ್ಲೇಶ್ವರನನು (ಸಿದ್ಧರಾ. ೭-೧೬). **ಸುಟ್ಟುಬೆರಳು:** ನೋವೆಂದರೆ 'ಇತ್ತಿಲ್ಲ ಇತ್ತ' ಎಂದು ಹಾದೀ ತೋರಿಸುವ ಸುಟ್ಟುಬೆರಳು (ವಿಚಾವಾಂ. ೬೫); (ಸುಟ್ಟುಬೆರಳಿಗೆ ಅವರನ್ನು ಗುರಿಮಾಡಿ) ನೋಡಿದಿರಾ (ಹೊಸಂಪಾ. ೧೧). **ಸುಟ್ಟುವೆರಲ್:** ಅರಸಿಗಂದು ರಕ್ಕಸಪಕ್ಕಿಗಳ ಪೊಣರ್ಕೆಯ ವಿಪಿನಮಂ ತೋಱಿ ಸುಟ್ಟುವೆರಲಿಂ (ಶ್ರೀರಾಮಾ. ೩-೩೯). [ಸುಟ್ಟು$_1$ + ಬೆರಲ್]

**ಸುಟ್ಟುಂಬೆಸಕಾಱ** (ನಾ). (ಬೆರಳಿನಿಂದ) ನಿರ್ದೇಶಿಸಿದುದನ್ನು ನೆರವೇರಿಸುವವನು (?): ಸಸಿಯ ಬೆಸದಿನಸಿಯೇಱಿಂಗೆ ಬಂದ ಸುಟ್ಟುಂಬೆಸಕಾಱ ನಂತಸಿದನ ಸುಸಿರದಿಂ ಪೊಕ್ಕು ದೇವಕುಲಂಗಳಾದಲೆಯೊಳೊತ್ತುಂಗೊಂಡಿರ್ದ ಕಟ್ಟಲೆಗೆ ಮಿಟ್ಟುವಾಗಿಯುಂ (ಚಂದ್ರಪ್ರ. ೮-೪೩ ವ). [ಸುಟ್ಟು$_1$ + ಬೆಸ$_1$ + -ಕಾಱ]

**ಸುಟ್ಟುದೋಱು** 'ಸುಟ್ಟುಂದೋಱು' ನೋ.

**ಸುಟ್ಟುಬೆರಳು** 'ಸುಟ್ಟುಂಬೆರಲ್' ನೋ.

**ಸುಟ್ಟುರೆ, ಸುಂಟರ, ಸುಂಟುರೆ, ಸುಟ್ಟರೆ** (ನಾ). ವರ್ತುಲಾಕಾರವಾಗಿ ಸುತ್ತಿ

ಸುತ್ತಿ ರಭಸವಾಗಿ ಬೀಸುವ ಗಾಳಿ; ಚಕ್ರಗಾಳಿ; ಆವರ್ತಮಾರುತ: ಅಟ್ಟೆಗಳಿಂದಂಬರಂಬರಂ ನೆಗೆದು ಪಾಱುವ ನೆತ್ತರ ಸುಟ್ಟುರೆಗಳಿಂದಂ (ಪಂಪಭಾ. ೧೦-೭೦ ವ); ಆನುಂ ತೊಡೆಯಡೆಯೊಳಿರ್ದೊಡನಂದು ಸುಟ್ಟುರೆಯ ತಱಗೆಲೆಯಂತೆ ತಿಱ್ಱನೆ ತಿರುಗಿ ಬೀಳ್ವಲ್ಲಿ (ಕಾದಂಪೂ. ೧೮೫); ಪವನಂ ಸುಟ್ಟುರೆಯಾಗಿ ಸುತ್ತಿ ಶಿಶುವಂ ಕಾದಿರ್ಪುದುಂ (ನೇಮಿಪು. ೩-೫೯); ಗಾಳಿ ಸುೞಿದು ಸುಟ್ಟುರೆಗಳೊಗೆವೊಡಂ (ಜಟ್ಟಮ. ೨-೧). **ಸುಂಟರ:** ಸುಂಟರ. ಮೂಲದಲ್ಲಿ ಶುೞ್. ತರ್, ಸುಟ್ಟರ, ಟದ ದ್ವಿತ್ವದ ಸಂದರ್ಭದಲ್ಲಿ ಕೆಲವು ವೇಳೆ ಬರುವಂತೆ (ಎಟ್ಟು, ಎಣ್ಟು) ಅನುನಾಸಿಕ ಬಂದು ಸುಣ್ಟರ ಆಗಿದೆ (ನಮ್ಮನು. ೧೦೫). **ಸುಂಟುರೆ:** ಆ ಕುವರನ ಪೂರ್ವಕೃತ ಪುಣ್ಯದೇವತೆ ಭೀಕರಮಪ್ಪ ಸುಂಟುರೆಯ ಆಕಾರದಿಂದ ಬಳಸಿ ರಕ್ಷಿಸುತಿರ್ದುದಾ ಕುಣಪಾಲಯದೊಳಗೆ (ನೇಮಿಸಂ. ೬-೩೯); ಸುಂಟುರೆಯಂತಿರೆ ಸುತ್ತಿ ಪತ್ತಿ ನಾಗಾಂತಕನಂತೆ ಪಾಱಿದುದು ತುಂಗತುರಂಗಮಿಳಾಧಿನಾಥನಾ (ರಾಜಶೇ. ೧೩-೭೮); ಒಮ್ಮೆ ಸುಂಟುರೆಯಾಗಿ ಸುಳಿಸುಳಿದು ಜೀವಗಳ ದೂಳಿಕಣಗಳ ಹಾಗೆ ತೂರಾಡಿ . . . ಮೆರೆವೆ ಲೋಕೈಕವೀರ! (ಬಾಸಿಗ. ೨೬-೧೨). **ಸುಟ್ಟರೆ:** ಉದಯಾದ್ರಿಶಿಖರದೊಳೂದುವ ಸುಟ್ಟರೆ ಕೆದಱಿದ ಕುಂಕುಮರಜವೋ . . . ಮೇಣ್ ತಾನಿದು ಶಶಿಯರುಣೋದಯವೋ (ನಾಗಕು. ೩೧-೫೦).

[ದೇ. ‖ ತಮಿ. ಚುೞಟ್ಟು; ಮಲ. ಚುೞಲು]

**ಸುಟ್ಟುರೆಗಾಳಿ, ಸುಂಟರಗಾಳಿ, ಸುಂಟರುಗಾಳಿ, ಸುಂಟುರುಗಾಳಿ, ಸುಟ್ಟರಗಾಳಿ** (ನಾ). = ಸುಟ್ಟುರೆ: ಸುಟ್ಟುರೆಗಾಳಿಯೊಳ್ ಸುೞಿಗೊಂಡು ತಱಗೆಲೆಗಳ್ ಪಾಱುವಂತೆ (ಗದಾಯು. ೮-೨೦ ವ); ಗಾಳಿಯೆಲ್ಲಂ ಸುಟ್ಟುರೆಗಾಳಿಯೆ ಗಿಡುವೆಲ್ಲಂ ಮುಳ್ಳುಗಿಡುಗಳೆ (ಬಂಹರಿ. ೮-೧೩ ವ); ಬಾಳಾಂತು ಬಳಸಿ ಬಟ್ಟೆಗೆ ಬಂದು ಸುಟ್ಟುರೆಗಾಳಿಯಂತೊದಗಿ ಸುತ್ತುವರು (ಭರತಚ. ೬೩-೫೧). **ಸುಂಟರಗಾಳಿ:** ಉರುವ ಸುಂಟರಗಾಳಿ ವಹಿಲದಿ ಕರಿಯ ಮೇಘವನಟ್ಟುವಂದದಿ (ಕಾಶಿರಾ. ೧೮-೧೧); ಸುಂಟರಗಾಳಿಯು ಖಾಸರೋಗಹರವಾಗಿ ದಾಹವನ್ನು ಅತಿಭೀತಿಯನ್ನೂ ಉಂಟುಮಾಡುವುದು (ಸಕವ್ಯ. ೫೭); ಸುಂಟರಗಾಳಿಗೆ ಸಿಕ್ಕಿದ ತರಗೆಲೆಯಂತಾಯಿತು, ನನ್ನ ಮನಸ್ಸು (ಮಗಮಾಂ. ೭೮). **ಸುಂಟರುಗಾಳಿ:** ಬಿಡದೆ ಕಡಿದಾಡಿದರು ಸೇನಾಗಡಲು ರಕುತದ ಕಡಲನುಗುಳಿತು ಬಿಡದೆ ಸುಂಟರುಗಾಳಿ ವಿಲಯದ ಮಳೆಯ ಪಡೆದಂತೆ (ಕುವ್ಯಾಭೀ. ೪-೮); ರಾತ್ರಿ ಸುಂಟರುಗಾಳಿಯೆದ್ದಿತು (ಹಸುಹೂ. ೩೪೦). **ಸುಂಟುರುಗಾಳಿ:** ಗಗನದ ಮುಗಿಲ ಮೋಹರವ ಧಾಳಿಯಲಿಯಱೆಯಟ್ಟಿ ಸುಂಟುರುಗಾಳಿಯುರವಣೆ ನಿಂದವೊಲು (ಕುವ್ಯಾದ್ರೋ. ೬-೬೦). **ಸುಟ್ಟರಗಾಳಿ:** ಸುಟ್ಟರಗಾಳಿ ಬಿಟ್ಟಾಗ ಅದರೊಳಗೆ ಕಸ, ಕಡ್ಡಿ, ಎಲೆ ಮುಂತಾದುವುಗಳು ಚಕ್ರಾಕಾರವಾಗಿ ತಿರುಗುತ್ತ ಮೇಲಕ್ಕೆ ಏರುವುದನ್ನು ಬಹು ಜನರು ನೋಡಿರಬಹುದು (ಮುಂಬಯಿ. ೫-೭). [ಸುಟ್ಟುರೆ + ಗಾಳಿ$_1$]

**ಸುಟ್ಟುರೆಮಸಗು** (ಕ್ರಿ). ೧. ಸುಂಟರಗಾಳಿ ಹರಡು, — ಆವರಿಸು. ೨. (ಆಲಂ) ಸುಂಟರಗಾಳಿಯ ಹಾಗೆ ಧಾವಿಸು: ಮುಂದನಾರಯ್ಯದೆ ಪಿಂದಂ ಪಾರದೆ ಮುಂದೆ ನಿಂದ ನಿಜಸ್ಕಂದನಮನೇಱಿ ಸುಟ್ಟುರೆಮಸಗಿ ನಿಟ್ಟುರಿಗೊಂಡಂ (ಅನಂಪು. ೧೧-೭೨ ವ).

[ಸುಟ್ಟುರೆ + ಮಸಗು]

**ಸುಟ್ಟುರೆವಿಡು** (ಕ್ರಿ). ಸುಂಟರಗಾಳಿಯಾಗು: ಯಕ್ಷಕರ್ದಮದಗರುವ ಕಪ್ಪುರದ ಕಂಪು ಸುಟ್ಟುರೆವಿಡುತುಂ ಮಗಮಗಿಸೆ (ಸುಕುಮಾ. ೧೦-೧೨೪). [ಸುಟ್ಟುರೆ + ಬಿಡು$_1$]

**ಸುಟ್ಟುವೆರಲ್** 'ಸುಟ್ಟುಂಬೆರಲ್' ನೋ.

**ಸುಠಿ** (ನಾ). ೧. [ಸಂಗೀತ] (?): ಸುಠಿವೊಟ್ಟಜಿದಾಳವಾಳಂ ಪದಿರ್ಪೊಱೆ ಕೊಂಕು ಕವ್ಮಾಣ ಪೆಸರಂ ಬೆಡಂಗುವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೧೬-೬೭ ವ). ೨. (?): ಸ್ಫುಟವೆನಲ್ಕೆ ತಿಳಿವುತಿರಲು ಸುಠಿ ಸಲಕ್ಷ ತನ್ನ ತಾನೆ ನಟಿಸಿ ಮುಂದೆ ತೋರ್ಪುದೆಂದು (ವೃಷಗೀ. ೮೪). 'ಸುಟ್ಟೆ$_2$' ಪರಾ. [?]

**ಸುಡಗೇಣಸು** (ನಾ). ಗೆಣಸಿನಲ್ಲಿ ಒಂದು ಬಗೆ: ಹಾಲಮಡ್ಡಿ, ಸುಡಗೆಣಸು, ಮಸ್ತಿ (ಮೈಔಗಿ. ೫೦-೧೦೧೫). [ಸುಡ$_7$ + ಗೆಣಸು (< ಗೆಱಸು)]

**ಸುಡಾಬು** (ನಾ). ಒಂದು ಬಗೆಯ ಸಸ್ಯ: ಸುರಹೊನ್ನೆ, ಪಿನ್ನೇಕಾಯಿ, ಪುನ್ನಾಗ, ಸುಡಾಬು, ಹೂಹೊಮ್ಮೆ (ಮೈಔಗಿ. ೧೬-೨೮೭). [?]

**ಸುಡಾಳ, ಸುಢಾಳ** (ನಾ). ೧. ಬಹಳ ಹೊಳಪು, — ಕಾಂತಿ: ಮುತ್ತಿನ ಬೈತಲೆಯ ಸುಡಾಳಮಾಲಿಕೆಯ ಕಟ್ಟಿದರು (ಮೋಹತ. ೨೩-೩೧). ೨. ಚೆಲುವು; ಅಂದ; ಸೊಬಗು: ಸುಡಾಳದಿಂಪು ನುಣ್ಪೊದವಿರೆ . . . ಸದಮಳವೀಣೆಯಂ ಪಡೆದು ಬಾಜಿಸುತಿರ್ದನನೇಕರೀತಿಯಿಂ (ದಶಕು. ೧೨-೫); ಬಾಳೆನ್ನ ಭಾಗ್ಯದ ನಿಧಿಯೆಂದೆನಿಪ ಸುಡಾಳ ಬಲ್ಮೊಲೆವೆತ್ತ ನೀಱೆ (ಮೋಹತ. ೧೧-೨). **ಸುಢಾಳ:** ೧. ಉದುರಿದವು ಧರಣಿಯಲಿ . . . ಖಂಡದ ಸುಢಾಳದ ಜಿಗಿಯ ಪೇಸಿಕೆನಿಕರ ನೂಱು (ಕುವ್ಯಾಆ. ೪-೪೨); ಸು[ಪಾಠಾಂ. ಚೆ]ಢಾಳದಲೊಲೆವ ಮಾಗಾಯಿಗಳ . . . ಮಾಯೆಗಿಕ್ಕಿದರು (ಪ್ರಭುಲೀ. ೩-೨೫). [ಸು$_4$- + ಡಾಳ$_1$]

**ಸುಡಿಗೆ** 'ಸುಡುಗೆ' ನೋ.

**ಸುಡಿಸು** (ಕ್ರಿ). ೧. ಸುಡುವಂತೆ ಮಾಡು; ದಗ್ಧವಾಗುವಂತೆ ಮಾಡು: ಮುಂದೆ ಬಣ್ಣವ ಹಚ್ಚಿ ಹಿಂದೆ ಸುಣ್ಣವ ಸುಡಿಸಿ ಹೊಂದಿಕೆಯ ಮಾತನಾಡುವ ಮಾನವರ ಹೊಂದಿಕೆಯ ನೋಡು (ಕಾಲಸಂ. ೬೭-೧೦೭); ಕಿಡಿಗಣ್ಣನಿಂದಳಿದುಳಿದ ದೇಹವನಿನ್ನು ಸುಡಿಸದೆ ತಳರೆಂದ ನಗುತ (ಮೋಹತ. ೩೮-೮). ೨. ಸುಟ್ಟುಹಾಕು; ದಹಿಸು: ಸುಡಿಸು ಕೈಲಾಸಮಂ ಕೆಡಿಸು ಹರಸಾಸಮಂ (ಚೆಬಪು. ೪೭-೨೨).

**ಸುಡಿಸಿಕೊಳ್, ಸುಡಿಸಿಕೊಳ್ಳು, ಸುಡಿಸಿಗೊಳ್ಳು** = ೧. (ಮೈಮೇಲೆ) ಬರೆ ಹಾಕಿಸಿಕೊಳ್ಳು: ಪುಣ್ಣುಡಿಸಿಕೊಳ್ವರಂತೆ ಮಿಡುಮಿಡುಮಿಡುಕುವರ್ ಬಡಿವೆತ್ತರಂತೆ ಸುಯ್ವರ್ (ಧರ್ಮಾಮೃ. ೩-೮೧); ಈ ಸ್ವಾಮಿಗೋಳ ಕೈಯ್ಯಿಂದ ಮೈ ಸುಡಿಸಿಗೊಂಬೋ ಸಂಕಟ ನನಗ್ಯಾಕ? (ಸಮಜೀ. ೩೯೧). ೨. ದಗ್ಧಮಾಡಿಸಿಕೊಳ್ಳು; ದಹನಗೊಳ್ಳು: ಉತ್ತ ಹೊಲ ಬಿತ್ತಿಸಿಕೊಂಡೀತು ಸತ್ತ ಹೆಣ ಸುಡಿಸಿಕೊಂಡೀತು (ಗಾದೆ).

[ಸುಡು + -ಇಸು$_3$]

**ಸುಡು** (ಕ್ರಿ). ಸುಟ್ಟ$_1$ (ಭೂತಕೃ), ಸುಟ್ಟು (ಭೂತನ್ಯೂ) ೧. ಸುಟ್ಟುಹಾಕು; ದಗ್ಧಗೊಳಿಸು: "ಸುಡು—ದಾಹೇ" (ಶಮಧಾ); ಪುಳ್ಳಿಗಳಂ ಕಡಿದೊಟ್ಟಿ ಕಿಚ್ಚನಿಕ್ಕಿ ಸುಟ್ಟು ಕಿಚ್ಚಿನ ಬಣ್ಣದಂತಾಗಿ ಸಿಲೆಯಂ ಮಾಡಿ (ವಡ್ಡಾರಾ. ೧೧೪-೧೧); ಕಾಯ್ದ ಬೆನ್ನೀರ್ ಮನೆ ಸುಡದು (ಪಂಪಭಾ. ೯-೩೮); ತೊಱೆಯೆಂದು ಸಾರೆ ಮಾಯದ ತೊಱಿಗಳ್ಮಾಯ್ದೆಣ್ಣೆಯಾಗಿ ಪತ್ತಿ ಸುಡಲ್ (ಧರ್ಮಾಮೃ. ೩-೮೩); ಪರಮಗರುಡೋದ್ಗಾರಮಣಿಯನು ಗರಳ ಸುಡುವುದೆ (ಕುವ್ಯಾದ್ರೋ. ೪-೮). ೨. ಉರಿಯಲ್ಲಿ ಬೇಯುವಂತೆ ಮಾಡು; ಬೆಂಕಿಯಲ್ಲಿ ಬೇಯಿಸು: ಕಟ್ಟಿಗೆಯಲ್ಲಿ ಚುಚ್ಚಿ ಸುಡುವ ಮಾಂಸ — ಶೂಲ್ಯ (ನಾಚಿರಾ.೩); ಸುಟ್ಟ ಬಾಡ ತಿಂದಾರು ಹೆಡಿಗೆ ಐನೂರ ಖಂಡಾವ ತಿಂದರು (ಕರಿಕ. ೬೭-೫); ಜವೆಗೋಧಿಯ ಕಾಳುಗಳಿಂದ ಸಹ ರೊಟ್ಟೀ ಮಾಡಿ, ತೋಡಿದ ಎರಡು ಕಲ್ಲುಗಳೊಳಗೆ ಹಾಕಿ, ಸುಡುತ್ತಾರೆ (ಮುಂಬಯಿ. ೩-೧೧೨). ೩. ತೀವ್ರವಾದ ಶಾಖವನ್ನು ನೀಡು; ಬೇಗೆಯನ್ನುಂಟುಮಾಡು; ದಹಿಸು: ನಡುವಗಲ ಬಿಸಿಲ್ ತನ್ನಂ ಸುಡೆ (ಕವಿರಾ. ೩-೧೧೫); ಮದನದವಾನಲಾರ್ಚಿ ತನುವಂ ಸುಡೆ (ಪಂಪಭಾ. ೫-೯); ರವಿಯುಂ ನಡುವಗಲೊಳ್ನಿಂದು ಕೆದಱಿದಂ ಕರತತಿಯಿಂ ಕಿಡಿಗಳನೆನೆ ಬಿಱುವಿಸಿಲುಂ ಸುಡುತಿರೆ (ಕಾದಂಪೂ. ೧೯೮); ಬೆಳದಿಂಗಳಿನ ಬಿಱುಸಾರ ಸುಡುವುದು ಕೈದು ಹಿಡಿದರೆ ಕಲಿಗಳೇ ದ್ವಿಜರು (ಕುವ್ಯಾದ್ರೋ. ೫-೩೮). ೪. ಬಹಳ ಶಾಖವನ್ನು ಹೊಂದು; ಕಾದು ಹೋಗು: ಸುಡುದುಪ್ಪವೆಱೆದಿಹರೆ ಕೊಡನೆತ್ತಿ ಹೊಯ್ಯುವರೆ (ಸರ್ವಜ್ಞ. ೯೩೮); ಅವುಗಳ ಜಳದಿಂದ ಮೈ ಸುಡುವುದು (ಮುಂಬಯಿ. ೪-೬೦). ೫. ದಹಿಸಿಹೋಗು; ದಗ್ಧವಾಗು: ಅಡುವಂತಾದಪುದೀಗಳೆನ್ನವಯವಂ ಕೂಡೆ ಕಣ್ಣಾಲಿಗಳುಡುವಂತಾದಪುದೇವೆನೆಯ್ದೆ ಹೃದಯಂ ಬೇವಂತುಟಾದಪ್ಪುದು (ಕಾದಂಪೂ. ೮೫೩); ಪುಯ್ಯಲಿಡೆ ಸುಡವೊತ್ತಿಸಿಯುಂ (ಧರ್ಮಾಮೃ. ೩-೭೩); ದಳ್ಳುರಿ ಸುತ್ತಿ ಸ್ಮರನ ಬಿಗಿದ ಬತ್ತಳಿಕೆ ಕರ್ಪುವಿಲ್ಲು ಸಹಿತೆ ಸುಟ್ಟುಗಿದುದು ಉರಿ ನಭಸ್ಥಳಕೆ (ಮೋಹತ. ೭-೩೯). ೬. (ಇಟ್ಟಿಗೆ, ಮಡಕೆ ಮುಂತಾದುವುಗಳನ್ನು ಬೆಂಕಿಯ ಶಾಖದಿಂದ) ಹದಗೊಳಿಸು, —ಒಣಗಿಸು: ಸುಣ್ಣಮುಮನಿಟ್ಟಗೆಯಂ ಸುಡುವಲ್ಲಿ ಸಾವ ಜೀವನಿಕರದೊಂದು ಹಿಂಸೆಯೊಳೆ ಪಾಪಮೆ ಮೊಕ್ಕಳಂ (ಸಮಪ. ೪-೧೨೭). ೭. ಸೇದು; ಧೂಮಪಾನಮಾಡು: ಹೆಡ್‌ಕ್ಲಾರ್ಕ್ ಹೊಗೆಬತ್ತಿ ಸುಡುತ್ತ ಕುಳಿತಿದ್ದ (ಬೆನ್ನುಹಿಂ. ೯). ೮. (ಆಲಂ) (ಗುಂಡಿಟ್ಟು) ಕೊಲ್ಲು; ಸಾಯಿಸು: ನಾಳೆ ದೊಡ್ಡ ಮಿಕಾನೆ ಸುಟ್ಟು — ತಂದು ಕೊಡ್ತೀನಿ (ಮಗಮಾಂ. ೨೮) ೯. ನಾಶಮಾಡು; ನಿವಾರಿಸು; ನೀಗು:

ಸುಡು ಸಂಸಾರಮನೊಲೆಯೊಳಗಿಡು ಸಂಸೃತಿಸುಖಮಂ (ಧರ್ಮಾಮೃ. ೮-೪೮); ಭವವಮಂ ಸುಟ್ಟೇಱಿ ಲೋಕಾಗ್ರಮಂ ಸ್ಥಿರನಾಗಿರ್ದ ರಸ್ಯಕನೀಗೆ ಮುದಮಂ (ರಸರ. ೧-೧); ಕಾಮ ಕ್ರೋಧವ ಬಿಡಬೇಕು . . . ಹೇಮದಾಸಿಯ ಸುಡಬೇಕು (ಪುರಂದ. ೧-೧೮೪-೨). **೧೧. ನಾಶವಾಗು; ಹಾಳಾಗು:** (ಕ). ೧೧. ದುಃಸ್ಥಿತಿಗೆ ಬರು: ಬಿಟ್ಟ ಮನೆಗೆ ಸುಟ್ಟ ಒಕ್ಕಲು (ಗಾದೆ).

**ಸುಟ್ಟಮೊಗ** = (ಆಲಂ) (ಕೋಪ, ಜುಗುಪ್ಸೆ, ತಿರಸ್ಕಾರ ಮುಂತಾದುವನ್ನು ಸೂಚಿಸುವ) ಕೆಟ್ಟ ಮುಖ; ಹಾಳಾದ ಮುಖ: ಸುಟ್ಟಮೊಗದ ಪೊಲ ಈ ನಿನ್ನ ಕೆಟ್ಟ ನಾಲಗೆಯುಮಯ್ (ಬಿಧ್ನಪ್ರ. ೬-೯೬). **ಸುಟ್ಟಿಕ್ಕು** = ನಾಶಪಡಿಸು; ನಿವಾರಿಸು: ಸಕಲಪ್ರಾಣಿವ್ರಜಕ್ಕೀ ಜನನ ಮರಣವೆಂತೆಂಬ ದುರ್ವಾರದುಃಖಪ್ರಕರಂ ತಾಂ ತಪ್ಪದಾನಿಂತಿದನನುಪಮನಂ ಶಂಭುವಂ . . . ಅನಘನಂ ಪೊರ್ದಿ ಸುಟ್ಟಿಕ್ಕಿ ನಿತ್ಯಾತ್ಮಕನಪ್ಪಂ (ಉದ್ಭಟ. ೧೧-೪೬). **ಸುಟ್ಟು ಸುಣ್ಣವಾಗು** = ಹೆಚ್ಚಾಗಿ ಬಳಲು,—ಆಯಾಸಗೊಳ್ಳು: ಅವನು ನೌಕರಿಗಾಗಿ ಅಲೆದು ಅಲೆದು ಸುಟ್ಟು ಸುಣ್ಣವಾದ (ರೂಢಿ). **ಸುಟ್ಟುಹೋಗು** = ದಗ್ಧವಾಗು; ದಹಿಸಿ ಹೋಗು: ಭಾಸ್ಕರನ ಮನೆ ಸುಟ್ಟು ಹೋಯಿತು (ಬಸಪು. ೫೬-೩೪). **ಸುಡುವತನ** = ದಗ್ಧಗೊಳಿಸುವ ಗುಣ; ದಹನಮಾಡುವ ಗುಣಧರ್ಮ: ಸೊಡರಿನ ಸುಡುವತನವನರಿಯದೆ ಬಂದು ಕೆಡುವ ಪುಳುವಿನವೋಲ್ (ಕೈವಲ್ಯ. ೨-೭-೩). **ಸುಡುಸುಣ್ಣಮಾಗು, ಸುಡುಸುಣ್ಣವಾಗು** = **ಅತಿಯಾಗಿ** ಬಳಲು; ಆಯಾಸಗೊಳ್ಳು: ಸುಡುಸುಣ್ಣವಾಗೀ ಮತ್ತೀ ಸುಡುಗಾಡೊಳು ಮಡಿದು ಹೋಹವಳ ಜೀವನನು ಹಡೆದ ಹರಣದೆಱೆಯನ ಲೇಸ ಮಱೆದೀ ಕಡುಪಾಪಿಯ ನಂಬಬಹುದೆ (ನೇಮಿಸಂ. ೧೪-೫೯); ಒಡಲಾಱಿ ನವೆದು ಬಳಿಕ ಸತ್ತು ಸುಡುಸುಣ್ಣ ವಪ್ಪುದಱಿಂದಂ (ಸಮ್ಯಕೌ. ೨-೬೩). [**ದೇ.** ||**ತಮಿ.** ಚುಟು; **ಮಲ.** ಚುಡು; **ಕೊಡ.** **ಚುಡ್**; **ತುಳು.** ಸುಡು, ಸುಡ್, ತುಡು; **ತೆಲು.** ಚೂಡು; **ಕೋಲಾ.** ಸುಡ್; **ಗೊಂಡಿ.** ಸುರ್‍ರಾನಾ]

**ಸುಡುಕ** (ನಾ). ಸುಟ್ಟುಹಾಕುವವನು; ದಗ್ಧಗೊಳಿಸುವವನು: ಊರು ಸುಡುಕ [ಪಾಠಾಂ. ಸೂತ, ಸೂದ]ನ ಕದನಕೌತುಕಸಾರವನು ಚಿತ್ತೈಸೆನುತ ರಘುವೀರ ನಿದಿರಲಿ ಭುಜವ ಹೊಯ್ದುಬ್ಬರಿಸಿದನು ಹನುಮ (ತೊರರಾ. ೬-೩೧-೧೭).

[ಸುಡು + -ಕ$_3$]

**ಸುಡುಗರ** (ನಾ). (ಆಲಂ) ಕ್ರೂರಗ್ರಹ: ಕೀಲ್ಗೊರವರಂಜಿಲದೇಂ ಫಣಿಯೋ ಮದೇಭಮೋ ಸುಡುಗರವೋ ಗಜಾರಿಯೊ . . . ಎಂದು ಗಳಪುತ್ತುಂ (ವೃಷವಿ. ೩೮-೯೨). 'ಮುದುಗರ$_1$' ಪರಾ. [ಸುಡು + ಗರ$_2$]

**ಸುಡುಗಾಡಿಕ್ಕೆ** (ನಾ). ಶ್ಮಶಾನಪ್ರದೇಶ; ಸುಡುಗಾಡು: ತಾಂ ಸುಡುಗಾಡಿಕ್ಕೆಗೆ ಭಂಟನಾಗನೆ ಹರಿಶ್ಚಂದ್ರಂ (ಸೋಮೇಶ. ೩೨). [ಸುಡುಗಾಡು + ಇಕ್ಕೆ$_1$ (< ಇರ್ಕೆ)]

**ಸುಡುಗಾಡು** (ನಾ). ೧. ಹೆಣಗಳನ್ನು ಸುಡುವ ಸ್ಥಳ; ಮಸಣ: ಅಸ್ಥಿಗಳ ನಾರಯ್ಯುತ್ತ ಹೊಕ್ಕನಾ ಸುಡುಗಾಡನವನೀಶನು (ಹಚಿಕಾ. ೧೧-೪೧); ಸುಡುಗಾಡಿಡು ಗಿರ್ಚಿಡುಗೂಟುಡುಗೂಱೆಯುಂ . . . ಪಡೆಯವು ಬಿಂದುವನುದಂತವೃತ್ತಿಯನಾಳ್ವಂ (ಶಮದ. ಸ. ೧೮೨); ಅತಿರಾಗದಿ ಪಾಡಿ ಕುಣಿವ ಮರುಳಸಂತತಿಯಿಂ ಸುಡುಗಾಡೆಸಯೆ (ಜೀವಂಸಾಂ. ೬-೬). ೨. (ಆಲಂ) ಹಾಳಾದುದು ಎಂಬರ್ಥದಲ್ಲಿ ಬಳಸುವ ತಿರಸ್ಕಾರಸೂಚಕ ಉದ್ಗಾರ: ಅದೇನೋ ಸುಡುಗಾಡು ಜ್ವರದ ಕಾಹಿಲೆ (ರಂಗವ. ೧೧೨).

**ಸುಡುಗಾಡ ಸಿದ್ಧ** = ಸುಡುಗಾಡುಸಿದ್ಧ: ಸುಡುಗಾಡ ಸಿದ್ಧನ ನಾಡಾವದು ಗೊತ್ತಿಲ್ಲ (ಸಿದ್ಧಪು. ೪-೫೮). [ಸುಡು + ಕಾಡು$_2$]

**ಸುಡುಗಾಡುಸಿದ್ಧ** (ನಾ). (ಆಲಂ) ಶ್ಮಶಾನದಲ್ಲಿ ವಾಸಿಸುವವನು: ಆ ಮುದಿಯೆತ್ತು ಎಲ್ಲಿಯೋ ಗಿಡದ ಹಸುರನ್ನು ನೋಡಿಬಿಟ್ಟಿದೆ, ಅವರ ಕೈಯಿಂದ ಕೊಸರಿಕೊಂಡು ಓಡಿಹೋಗಿ ಬಿಟ್ಟಿದೆ, 'ಸುಡುಗಾಡುಸಿದ್ಧ' ನ ಸಹವಾಸ ಸಾಕು ಎಂದು (ಸುವಸಂ. ೧೭). [ಸುಡುಗಾಡು + ಸಿದ್ಧ]

**ಸುಡುಗಾಯ್** (ನಾ). ಸುಡಲು ಹದವಾಗಿರುವ ಕಾಯಿ: ಸುಡುಗಾಯ ಹದದ ಬದನೆಯ ಕಾಯಿಗೆಣ್ಣೆಯಿಂ ತಡಹಿ ಕೆಂಡದಿ ಸುಟ್ಟು ಸಿಪ್ಪೆದೆಗೆದು (ಸೂಪಶಾ. ೪-೨೫). [ಸುಡು + ಕಾಯ್$_1$]

**ಸುಡುಗೆ, ಸುಡಿಗೆ** (ನಾ). ೧. ಸುಡುವಿಕೆ; ದಹನ ಮಾಡುವಿಕೆ: ಅವನು ಕುದುರೆಯನ್ನೇರಿ ಈ ಸುಡುಗೆಯನ್ನು ನೋಡುತ್ತಾ ಬೀದಿಗುಂಟ ಹೋಗುತ್ತಿರಲು (ಇಂಗ್ಲಂಡ. ೫೯). **ಸುಡಿಗೆ: ೨.** ದಗ್ಧವಾಗುವಿಕೆ (?): ಸುಡಿಗೆಮಯ ಸುರಲೋಕ ರಕ್ತದ ಕಡಲಮಯ ರಣರಂಗ (ನಿಭಾಗ. ೮-೧೩-೩೦).

**ಸುಡುಗೆಯ ಸುಡು** = (?): ದಟ್ಟುವಮಾಡುತ್ತನ್ನನೀ ಹುದುಹುಟ್ಟನಂ ಪೆತ್ತವಳು ಸುಡುಗೆಯ ಸುಟ್ಟಳೆನುತಾ ಕೈಯೊಳ ಹೆಟ್ಟುವಳು ಟೊಮ್ಮೆಯನು (ಮದೇಪು. ೫-೩೭).

[ಸುಡು + -ಗೆ]

**ಸುಡುನೀರು** (ನಾ). ಬಹಳ ಬಿಸಿಯಾಗಿರುವ ನೀರು; ಕುದಿಯುತ್ತಿರುವ ನೀರು: ಅಭ್ಯಂಜನದಲ್ಲಿ ಬಿಸಿನೀರನ್ನು ಉಪಯೋಗಿಸುವುದೇ ಇಲ್ಲ; ಎಲ್ಲ ಸುಡುನೀರ! (ಮಲೆಚಿ. ೩೦). [ಸುಡು + ನೀರು$_1$ (< ನೀರ್)]

**ಸುಡುನುಡಿ** (ನಾ). (ಆಲಂ) ತೀಕ್ಷ್ಣವಾದ ಮಾತು; ಕಟುವಾದ ನುಡಿ: ಜನ್ಮ ದ್ವೇಷಿಯಂ ಜಡಿದಾರುಹತನು ಸುಡುನುಡಿಗಳಿಂ ನುಡಿಯಲ್ (ವಾಗೀರ. ದೇ. ೨೬೪-೯); ಭಾಂಡಸ ಬಿಡುವೊಡಿನಿತು ಸುಡುನುಡಿಯೇಕೆ (ಅನಂಪು. ೮-೧೭ ವ). [ಸುಡು + ನುಡಿ$_2$]

**ಸುಡುಬಾಡು** (ನಾ). ಸುಟ್ಟ ಅಡಗು,—ಮಾಂಸ: "ಸುಂಟಿಗೆಯೆಂದುಂ ಕೊಟ್ಟಸಮೆಂದುಂ ಸುಡುಬಾಡು" (ಕಶಸಾ. ೫೨-೧೨೪); ಸುಡುಬಾಡಂ ಸುಟ್ಟಾ ಸುಂಟಿಗೆಯಂ ತಡೆಯದೆ ಮೆಲ್ಲು (ಜಯಕಾ. ೭-೨೫). [ಸುಡು + ಬಾಡು$_2$]

**ಸುಡುಬಿಸಿಲು** 'ಸುಡುವಿಸಿಲ್' ನೋ.

**ಸುಡುಮಣ್ಣು** (ನಾ). ಎಲೆ, ಕಸ, ಕಡ್ಡಿ ಮುಂತಾದುವುಗಳನ್ನು ಮಣ್ಣಿನೊಡನೆ ಸೇರಿಸಿ ಸುಟ್ಟು ತಯಾರಿಸುವ ಗೊಬ್ಬರ: ಸುಡುಗಾಡ ಕಿಚ್ಚಂತೆ ದಳ್ಳಿಸುವನೊಬ್ಬನೇಂ ನೋಡಿದೊಡೆ ಪೊಲದೆರೆಯ ಸುಡುಮಣ್ಣ ಗಯ್ಮೆ (ಕಾಲೂರ. ೧೧೯-೨೨೩).

[ಸುಡು + ಮಣ್ಣು$_1$ (< ಮಣ್)]

**ಸುಡುಮಿಡು** (ಕ್ರಿ). ಚಡಪಡಿಸು: ನಿಲಲೆಡೆಯಿಲ್ಲದಡಹಡಿಸಿ ಸುಡುಮಿಡುವಂದು ನಡ ನಡನಡುಗಿ (ಅಜಿಪು. ೧೧-೧೦ ವ). [?]

**ಸುಡುಮೆಯ್** (ನಾ). (ಜ್ವರದಿಂದ) ಕಾವೇರಿದ ಶರೀರ: ಸುಡುಮಯ್ ಕುಷ್ಠಶರೀರಿಯಾಗಲೊಲಿವರ್ ಪೊನ್ನಿತ್ತೊಡಂ ಸೂಳೆಯರ್ (ಸೋಮೇಶ. ೭೧).

[ಸುಡು + ಮಯ್$_2$]

**ಸುಡುರ್ದಲೆ** (ನಾ). (?): ಸುಡುರ್ದಲೆ [ಪಾಠಾಂ. ದಲೆ] ಬಿಟ್ಟ ಕಣ್ ಕಲಿಮೊಗಂ ಕಡಿಗೊಂಡುಡೆ . . . ತುಪ್ಪಮಂ ತೊಡೆದವೊಲಪ್ಪ ಮೀಸೆ ಮಿಸುಗುತ್ತಿರೆ ಬಂದನ ದೊರ್ವನಂದು ಬಿಲ್ಲಡಿದು ಯುವಾನನಲ್ಲಿಗೆ ನವೀನನವೀನರದೋತ್ಕಟಂ ಭಟಂ (ಅರ್ಧನೇ. ೬-೫೦); "ಸುಡುದಲೆ-ಬೇವ ಸಿರ" (ಪ್ರಭಣ್ಣ); ಸುಡುರ್ದಲೆ ಸಣ್ಣವುರ್ವೊಳು ಮೊಗಂ . . . ಮೆಲ್ಲಡಿ ಕೊಲ್ಲಿನೋಟಮುಗ್ಗಡದ ಸುವರ್ಣಮೆಂಬಿವಱಿನೊಪ್ಪಿದುದಿರ್ದ ವನೇಚರೀಜನಂ (ಪುಷ್ಪಪು. ೫-೯೦). [?]

**ಸುಡುವಿಸಿಲ್, ಸುಡುಬಿಸಿಲು** (ನಾ). ತೀಕ್ಷ್ಣವಾದ ಬಿಸಿಲು; ರಣಬಿಸಿಲು: ಸುಡುವಿಸಿಲ್; ಆಳ್ಗೇಡಿ ಕಾಡೊಳಲೆದಿರ್ವರುಂ ಕರೆಕರೆದು ಹುಡುಕಿದರು ಸೀತೆಯಂ (ಶ್ರೀರಾಮಾ. ೨೫೬-೭೪೭). **ಸುಡುಬಿಸಿಲು:** ಎಲ್ಲಿಗೆ ಹೋದಳಪ್ಪ ಈ ಸುಡುಬಿಸಿಲಿನಲ್ಲಿ (ಪದ್ಮಸ. ೧೬೮). [ಸುಡು + ಬಿಸಿಲ್]

**ಸುಡುವುಣ್** (ನಾ). ಸುಟ್ಟ ಹುಣ್ಣು,—ಗಾಯ: ಸುಡುವುಣ್ಣಾದಪುದಿಂದು ನಿನ್ನಧರಮಪ್ಪಿಂಗೆಯ್ದುದಂತಾಗಿ ಮಯ್ ಬಡವಾಯ್ತಕ್ಕಟದಾರೊಳಾಯ್ತು ವಿರಹಂ (ಲೀಲಾವ. ೨-೬೮). [ಸುಡು + ಪುಣ್]

**ಸುಡುಸುಡನೆ** (ಅ). ತೀವ್ರವಾಗಿ; ಪ್ರಖರವಾಗಿ: ಸುಡುಸುಡನೆ ಸುಡುವ ಬಿಜುಬಿಸಿಲ ಸೆಕೆಯುಸುರ ಬಿಸಿ ಹೊಡೆದುದು (ಹಚಿಕಾ. ೭-೯). [ಸುಡುಸುಡು$_1$ + -ಅನೆ$_1$]

**ಸುಡುಹ** (ನಾ). ದಗ್ಧಮಾಡುವಿಕೆ; ದಹನ: "ಭರ್ಜನಂ ದಹನಮೆನಲು ಸುಡುಹಂ" (ಮಂಗರಾ. ೧೪-೯). [ಸುಡು + -ಹ$_2$ (< -ಪ$_2$)]

**ಸುಡ್ಡಾಸುಡ್ಡಿ** (ನಾ). (?): ದುಷ್ಕರ್ಮಿ ಹೋಗದಿರು ಮಿಱಿ ಹೋದರೆ . . . ಕೆಡಹಿ ನಿಱಿಗಿರುಳನುಗಿವೆಂ ನಂಬಿಯೆನುತ ಕಲಿಕಾಮ ಸುಡ್ಡಾಸುಡ್ಡಿಯಿಂದಟ್ಟಿದ (ಸೌಂದಪು. ೧೭-೨೮). "ದಿಕ್ಕಾಪಾಲು" (ಷಟ್ಪದಿ). [?]

**ಸುಢಾಳ** 'ಸುಡಾಳ' ನೋ.

**ಸುಣಿಸೊಕ್ಕು** (ನಾ). (ಆಲಂ) ದುರಹಂಕಾರ; ಅತಿಯಾದ ಗರ್ವ(?): ಜಗುನೆಯಲ್ಲಿ ಪಡಿಪರಿದು ಬೇಗಂ ಮಾಣ್ದಿರೆಯುಂ ಮತ್ತಂ ಸುಣಿಸೊಕ್ಕೆ ಕೊಣಕುತುಂ ಪಾಱಿ ದೆಸೆದೆಸೆಗೆ ಪರಿದು ಪಿರಿಯ ಮರಂಗಳನುಱಿದೆ ಕೊಂಡು ನೂಂಕಿ (ಪಂಚತಂ. ೪೬-೩); ನೀನಿಂ ಸುಣಿಸೊಕ್ಕುಗೆಟ್ಟಿರವಿದೇಂ ನಡೆ ಗೆಲ್ಲದೊಳೊಳ್ಳಿತಕ್ಕುಮೇ (ಬಂಹರಿ. ೧೨-೬೮).

[? + ಸೊಕ್ಕು$_2$ (< ಸೊರ್ಕು$_2$)]

**ಸುಣ್ಣ** (ನಾ). ೧. (ಒಂದು ಬಗೆಯ ಬಿಳಿಯ ಭಸ್ಮದಿಂದ ಕೂಡಿದ) ಕಲ್ಲು ಅಥವಾ ಕಪ್ಪೆಚಿಪ್ಪು ಇತ್ಯಾದಿಗಳನ್ನು (ಆವಿಗೆಯಲ್ಲಿ ಅಥವಾ ಒಲೆಯಲ್ಲಿ) ಸುಟ್ಟು ತಯಾರುಮಾಡಿದ ಪದಾರ್ಥ; ಚೂರ್ಣ: "ಚೂರ್ಣಮೆನಲು ಸುಣ್ಣಂ" (ಮಂಗರಾ. ೭೮-೪); ಸುಣ್ಣಮುಮನಿಟ್ಟಿಗೆಯಂ ಸುಡುವಲ್ಲಿ ಸಾವ ಜೀವನಿಕರದೊಂದು ಹಿಂಸೆಯೊಳ್ ಪಾಪಮೆ ಮೊಕ್ಕಳಂ (ಸಮಪ. ೪-೧೨೭); ಚೂರ್ಣ — ಸುಣ್ಣ, ಚೇಲ— ಸೇಲೆ (ಶಮದ. ೨೬೩ ಪ್ರಯೋ). ೨. ನೀರಿನಲ್ಲಿ ಕುದ್ದು ಬಿಳುಪಾದ, ಚೊಕ್ಕವಾದ ಸುಣ್ಣ; ಬೆಂದ ಸುಣ್ಣ: ಅಲ್ಲಲ್ಲಿಗೆ ಸುಣ್ಣದ ಪೊನಲ್ಲಲ್ಲಿಗೆ ರಾಸಿಗೆಯ್ದು ಕೆಂಡಂಗಳ್ (ಧರ್ಮಾಮೃ. ೩-೭೬); ಸುಣ್ಣದ ಭಂಡಿ ಬನ್ದ ಪೆರ್ವ್ವಟ್ಟೆಯೆ ಪಳ್ಳಮಾದುವೆನೆ ಮಾಡಿಸಿದಂ ಜಿನರಾಜಗೇಹಮಂ (ಎಕ. II, ೧೪೩-೧೧; 1131); ಗೋಪಾಲನೊಬ್ಬನ ಹಿಡಿದು ಮೂಗಿನ ಮೇಲೆ ಸುಣ್ಣವ ಬರೆದು ಬಿಟ್ಟರು ಹಗೆಯ ಪಟ್ಟಣಕೆ (ಕುವ್ಯಾವಿ. ೫-೩). ೩. (ತಾಂಬೂಲದಲ್ಲಿ ಬಳಸುವ ಅಥವಾ ವೀಳೆಯದೆಲೆಗೆ ಹಚ್ಚುವ) ನೆನೆಹಾಕಿ ಮೆದುಮಾಡಿದ (ಕೆನೆಯಂಥ) ಸುಣ್ಣ: ಸುಣ್ಣಮಂ ಬಱಿದ ತಿಂಬೆಗ್ಗನಂ ಪೋಲ್ಕುಂ (ಧರ್ಮಾಮೃ. ೧೩-೧೩೪); ಅಖಂಡಿತವೆ ಅಡಕೆ ಏಕೋಭಾವವೆ ಎಲೆ ಶುದ್ಧಶಿವಾಚಾರವೆ ಸುಯಿಧಾನದ ಸುಣ್ಣ ವಿವೇಕವಿಚಾರದಿಂದ ವೀಳೆಯವನವ ಧರಿಸುವುದು (ಅಪಚಂ. ೮೪-೩೭೪); ಸುಣ್ಣವನೆಲೆಗೆ ಪೂಸಿದಳು (ಮೋಹತ. ೧೬-೩೪); ಒಂದು ಕಣ್ಣಿಗೆ ಬೆಣ್ಣೆ ಒಂದು ಕಣ್ಣಿಗೆ ಸುಣ್ಣ (ಗಾದ). ೪. (ಕಟ್ಟಡಗಳ ಶುಭ್ರತೆಗಾಗಿ) ಸುಣ್ಣ ಬಳಿಯುವಿಕೆ: ಇದಕ್ಕೆ ಸುಣ್ಣಕ್ಕೆ ಸೊತೆಗವುಲ್ಲದುಣ್ಣಾತ ವಾರಣಾಸಿಯುಂ ಕವಿಲೆಯನಟಿದ . . . ಅನ್ತೆ ಎಱೆಯಂಗೇಶ್ವರದ ಸ್ಥಾನಿಕ ಇ ಲೇಖ ಬರೆದೊಂ (ಮೈಆರಿ. ೧೯೩೮, ೬೭-೯; 906?); ಸುಣ್ಣದ ಭೀಮ ತಳ್ತಿಱಿದು ತು[ಱು]ವಂ ಮಗುಳ್ಚ್ಚಿ ಸುರಲೋಕಪ್ರಾಪ್ತನಾದ (ಎಕ. VIII, ಸೊರಬ. ೧೭೦-೭; 1207).

**ಸುಣ್ಣದ ಕಲ್ಲು** = ಸುಟ್ಟಾಗ ಸುಣ್ಣವನ್ನು ಬಿಡುವ ಒಂದು ಬಗೆಯ ಕಲ್ಲು: "ಉಪಲಃ- ಸುಣ್ಣದ ಕಲ್ಲು" (ಒಷಧಿ. ೧೫); ಅಲ್ಲಿಂ ಬಡಗ ಬೆಲಪುತ್ತಿನ ಸುಣ್ಣದ ಕಲ್ಲ ಕುಪ್ಪೆ ಕಡವರೆಯ ಕಲ್ಲ ಪುಣುಸೆಯ ಕಲ್ಲ ಕುಪ್ಪೆಯ ಕಿಱಿಯ ಕೆಱೆ (ಸೌಇಇ. XI-i, ೧೧೬-೨೮; 1075). **ಸುಣ್ಣದ ಕಾಯಿ** = (ತಾಂಬೂಲಕ್ಕೆ ಬಳಸುವ) ಸುಣ್ಣವನ್ನು ತುಂಬಿಡುವ ಸಣ್ಣ ಲೋಹದ ಡಬ್ಬಿ: ಬೀಸಣಿಗೆ ಚಂಚಿ ಸುಣ್ಣದ ಕಾಯಿ (ಗುರುಚಾ. ೩-೫೧); ಒಂದೀಟು ಸುಣ್ಣದ ಕಾಯಿ ಇತ್ತಾಗ ಒಗೀತೀಯೇನು? (ಆಮನಿ. ೨). **ಸುಣ್ಣದ ಕುಡಿಕೆ** = ತಾಂಬೂಲಕ್ಕೆ ಬಳಸುವ ಸುಣ್ಣವನ್ನಿಡುವ ಚಿಕ್ಕ ಪಾತ್ರೆ: ಭರಣಿ ಸುಣ್ಣದ ಕುಡಿಕೆ ಮಣಿವುಪಕರಣತತಿ . . . ಹಿರಿಯ ಚಿತ್ರದ ಭಿತ್ತಿಯಿಂ ಪೊಸ ಪರಿಯೆನಿಸಿ ರಾಜಿಸಿದಪುದು ಗಣಿಕಾನಿಕೇತನವು (ಬಸಪು. ೧೨-೧೨). **ಸುಣ್ಣದ ಗೂಡು** = ಸುಣ್ಣವನ್ನು ಸುಡಲು ಬಳಸುವ ಆವಿಗೆ: (೬). **ಸುಣ್ಣದ ಬೋಯಿ** = ಸುಣ್ಣವನ್ನು ತಯಾರಿಸುವವನು ಅಥವಾ ಮಾರುವವನು: (೬). **ಸುಣ್ಣದೆಲೆ** = ಸುಣ್ಣ ಹಚ್ಚಿದ ವೀಳೆಯದೆಲೆ: ಸುಣ್ಣದೆಲೆಯನೊತ್ತೆಯಿಟ್ಟು ಮದದಾನೆಯುಮಂ ಮಾಣಿಕಮುಮನೊತ್ತೆವಿಡಿಸಲಟ್ಟುವ ಚಿಕ್ಕ ಪೋರ್ಕುಳಿಬೊಜಂಗರುಮಂ . . . ಕತ್ತುರಿ ಬೊಜಂಗರುಮಂ ನೋಡಿ (ಪಂಪಭಾ. ೪-೮೭ ವ).

[< ಪ್ರಾ. ಚುಣ್ಣ./ ಸಂ. ಚೂರ್ಣ./ ತಮಿ. ಚುನ್ನ; ತೆಲು. ಸುನ್ನ]

**ಸುಣ್ಣಕಟ್ಟು** (ನಾ). ೧. ಅಕ್ಕಿ ಮುಂತಾದ ದವಸಧಾನ್ಯಗಳು ಕೆಡದಂತೆ ಇರಲು, ಒಂದು ಗೊತ್ತಾದ ಪ್ರಮಾಣದಲ್ಲಿ ಸುಣ್ಣ ಬೆರಸುವಿಕೆ: ಸುಣ್ಣಕಟ್ಟು ಅಕ್ಕಿಯ ಅನ್ನ ರುಚಿಯಾಗುವುದಿಲ್ಲ (ರೂಢಿ). ೨. ಒಣಶುಂಠಿಯ ಪುಡಿಗೆ ನೀರನ್ನು ಬೆರಸಿ, ಔಷಧವಾಗಿ ಉಪಯೋಗಿಸುವ ಅದರ ತಿಳಿ: (೬). [ಸುಣ್ಣ + ಕಟ್ಟು$_3$]

**ಸುಣ್ಣಕಲ್** (ನಾ). ಸುಟ್ಟಾಗ ಸುಣ್ಣವನ್ನು ಬಿಡುವ ಒಂದು ಬಗೆಯ ಕಲ್ಲು: ಪೆತ್ತರೊಡಲೊಳು ಸುಣ್ಣಕಲ್ಲುದಿವಂತೆ ಮಾಳ್ಪೆ (ವರ್ಧಚ. ೭-೨೬); ಪನ್ನೀರ ಚೆಲ್ಲಿದಳ ವಳುರಸ್ಥಳದಿ ಅಲ್ಲಿಯದಿಲ್ಲಿ ಭೋರ್ಗರೆಯುತಿರ್ದುವು ಸುಣ್ಣಕಲ್ಲಿಗೆ ನೀರೆಱೆದಂತೆ (ಮೋಹತ. ೨೭-೬೦); ಮಳಲರಗು ಸಾಸಿವೆಗದಡು ಸುಣ್ಣಕಲ್ಲಂಬಲಿಗಳುಂ ಸುರಿದುನ್ವ (ಚಿಬಪು. ೪೨-೩೨). [ಸುಣ್ಣ + ಕಲ್$_3$]

**ಸುಣ್ಣಕಾಯಿ** (ನಾ). ತಾಂಬೂಲಕ್ಕೆ ಬಳಸುವ ಸುಣ್ಣವನ್ನು ತುಂಬಿಡುವ ಚಿಕ್ಕ ಲೋಹದ ಡಬ್ಬಿ: ಸೂಳೆಯ ಮನೆಗೋಗ್ಯಾಗ ಸುಣ್ಣಕಾಯ ಮರೆತಾನು (ಕಜಾ. ೭೭).

[ದೇ. ‖ ತುಳು. ಸುಣ್ಣದ ಕಾಯಿ; ತೆಲು. ಸುನ್ನಪುಕಾಯ]

**ಸುಣ್ಣಕೊಲೆ** 'ಸುಣ್ಣಕೊಲ್ಲಿ' ನೋ.

**ಸುಣ್ಣಕೊಲ್ಲಿ, ಸುಣ್ಣಕೊಲೆ** (ನಾ). ಒಂದು ಸ್ಥಳದ ಹೆಸರು (?): ಸುಣ್ಣಕ್ಕೊಲ್ಲಿಯೊಳ್ ಕು(ಕೂ)ಡಿತ್ತು (ಇಆ. XVIII, ೩೭೮-೨೭; 8ನೆಯ ಶತ). **ಸುಣ್ಣಕೊಲೆ**: ಅನ್ತೆ ಬನ್ದು ಸುಣ್ಣಕೊಲೆ ಮೂಡಣ ಬೇಲಿಯಿಂ ಅನ್ತೆ ಬನ್ದು ವಾಡಿವರೆಯ ತೆಂಕಣ ಬೇಲಿಯಿಂ (ಎಕ. III, ನಂಜನ. ೧೩೯-೨೦: 915 ?). [?]

**ಸುಣ್ಣಗತ್ತನೀರು** (ನಾ). ಸುಣ್ಣ ಕುದಿಸಿದ ನೀರು (?): ಆ ಪುರರಕ್ಷಕನ ಪಿಡಿತರಿಸಿ ಚೇರುಬಂದ ಚಮ್ಮಟಿಗೆ ಕಕ್ಕಡ ಸುಣ್ಣಗತ್ತನೀರು ಮುಂತಾದವಂ ತರಿಸಿ (ನನ್ನಚಾ. ೩-೪೫ ವ). [ಸುಣ್ಣ + ? + ನೀರು$_1$ (< ನೀರ್)]

**ಸುಣ್ಣಗದಡು** (ನಾ). ಸುಣ್ಣವನ್ನು ಕಲಕಿದ ನೀರು; ಸುಣ್ಣದ ರಾಡಿ: ಕರಗಿ ಕಾದ ಸೀಸವನ್ನು ಎಱೆದು ಬಾಯೊಳಿರದೆ ಸುಣ್ಣಗದಡಂ ತುಂಬಿಸಿ (ಸುಸಾರ. ೭೫-೩).

[ಸುಣ್ಣ + ಕದಡು$_2$]

**ಸುಣ್ಣಗಾರ$_1$** 'ಸುಣ್ಣಗಾಱ' ನೋ.

**ಸುಣ್ಣಗಾರ$_2$** (ನಾ). ಸುಣ್ಣದ ತಿಳಿ; ಸುಣ್ಣದ ಕ್ಷಾರ (?): ನೆಲೆಗಡಿವಡಿದು ಆಲೆಗಾಣದಲ್ಲಿ ಹಿಂಡುವಟ್ಟ ಕಬ್ಬಿನ ಜೀವರಸವದು ಸುಣ್ಣಗಾರಕ್ಕೆ ಮೆಯ್ಗೊಟ್ಟು ತನಿಗುದಿಪದಿಂದ ಸಕ್ಕರೆಯಾಗಿಯೇ ಅಣ್ಣೆವಾಲನ್ನು ಧನ್ಯಮಾಡಿಕೊಳ್ಳಬೇಕಾಗಿದೆ (ಮಂತ್ರಶ. ೧೫೯-೪). [ಸುಣ್ಣ + ಕಾರ$_2$]

**ಸುಣ್ಣಗಾರ್ತಿ** (ನಾ). ಸುಣ್ಣವನ್ನು ತಯಾರಿಸುವವಳು: ಮಣಿಗಾರ್ತಿ, ಆಳುಗಾರ್ತಿ, ಸುಣ್ಣಗಾರ್ತಿ (ಭಾಷಾಭೂ. ೧೯೪ ಪ್ರಯೋ). [ಸುಣ್ಣಗಾಱ + -ತಿ$_1$ (<— ಇತ್ತಿ)]

**ಸುಣ್ಣಗಾಱ, ಸುಣ್ಣಗಾರ$_1$** (ನಾ). ಸುಣ್ಣವನ್ನು ತಯಾರಿಸುವವನು : ಕುಂಬಗಾಱಂ, ಸುಣ್ಣಗಾಱಂ (ಭಾಷಾಭೂ. ೧೯೧ ಪ್ರಯೋ). **ಸುಣ್ಣಗಾರ$_1$** : ಸುಣ್ಣಗಾರ ಸಿದ್ದನ ಹೊಲದ ಬಡಗ ತೆವರ ಮೂನಲ್ಲೂರ ದನದ ವೋಣೀ ಪ (ಎಕ. V (R), ತಿರುಮ. ೧೬-೯೦೯; 1749).

[ಸುಣ್ಣ + -ಕಾಱ]

**ಸುಣ್ಣಗುದಿ** (ನಾ . ಕುದಿಯುವ ಸುಣ್ಣ; ಮರಳುತ್ತಿರುವ ಸುಣ್ಣ: ದುಣ್ಣರನು ಬಂದೆನ್ನ ಸುಣ್ಣಗುದಿಯೊಳಗದ್ದಿ ಬಿಣ್ಣಿತ್ತುವೆಟ್ಟಗಳ ಪೊಱೆಸಿದವನು (ಪ್ರಭುಪು. ೩-೧೦೦).

[ಸುಣ್ಣ + ಕುದಿ$_3$]

**ಸುಣ್ಣಗೆಲಸ** (ನಾ). (ಕಟ್ಟಡಗಳಿಗೆ) ಸುಣ್ಣ, ಗಾರೆ ಮುಂತಾದುವನ್ನು ಬಳಿಯುವ ಕೆಲಸ: ಸುಣ್ಣಗೆಲಸವನು ಮಾಡಿಸಿ ಯಿ ದೇವಾಲ್ಯದ ಮುನ್ದಣ ಬಾಗಿಲ ಪಡಸಾಲೆ XXX ಮಾಡಿಸಿ (ಎಕ. XII, ಗುಬ್ಬಿ. ೨೯-೨೩; 1470). [ಸುಣ್ಣ + ಕೆಲಸ]

**ಸುಣ್ಣಜಾಜ** (ನಾ). ಸುಣ್ಣದ ರಾಡಿ: ಆಡಬಾರದ ಮಾತುಗಳನ್ನಾಡಿದ ತಪ್ಪಿಗಾಗಿ ಇವನ ಮುಖಕ್ಕೆ ಸುಣ್ಣಜಾಜವನ್ನು ಬಳೆದುಬಿಡಿ! (ಯಚ್ಚಮ. ೬).

[ಸುಣ್ಣ + ಜಾಜ$_?$]

**ಸುಣ್ಣನೀರ್** (ನಾ). ಸುಣ್ಣವನ್ನು ಕಲಸಿದ ನೀರು; ಸುಣ್ಣದ ತಿಳಿ: ಒಳಲೆಗಳಂ ಕೌಚಿ ಮೇಣ್ ಸುಣ್ಣನೀರ್ ಮುನ್ನೆಲೆಯೊಳ್ ತೋರ್ಪಂತೆ ತುಂಬಿಟ್ಟು (ಚಿಕವಿ. ೩-೫೭).

[ಸುಣ್ಣ + ನೀರ್]

**ಸುಣ್ಣಪಾರೆ** (ನಾ). = ಸುಣ್ಣಕಲ್: "ಕಟುಶರ್ಕರಾ — ಸುಣ್ಣಪಾರೆ, ಸುಣ್ಣಕಲ್ಲು" (ಒಷಧಿ. ೨೭). [ಸುಣ್ಣ + ಪಾರೆ$_2$]

**ಸುಣ್ಣಬಳಿ** (ಕ್ರಿ). (ಕಟ್ಟಡದ ಶುಭ್ರತೆಗಾಗಿ) ಸುಣ್ಣವನ್ನು ಬಳಿ,— ಹಚ್ಚು: ಕಟ್ಟಡಕ್ಕೆ ಸುಣ್ಣಬಳಿಯುವ ಕೆಲಸ ಇನ್ನೂ ಮುಗಿದಿಲ್ಲ (ರೂಢಿ).

[ಸುಣ್ಣ + ಬಳಿ$_1$ (< ಬಱಿ$_1$)]

**ಸುಣ್ಣಬೇವು** (ನಾ). ಬೇಯುವ ಸುಣ್ಣ: ಕಲ್ ಸುಣ್ಣಬೇವಾಯ್ತು ಮಟಲ್ ಹುರಿಗಡಲೆಯ ಮುಮ್ಮುಳಿಯಾಯ್ತು (ರಾಮಾಶ್ವ. ೫೨-೩); "ಸುಣ್ಣ ಬೇಯುವಿಕೆ; ತೀವ್ರವಾದ ಬಿಸುಪು" (ರಾಮಾಶ್ವ. ತ. ೧೬೫). [ಸುಣ್ಣ + ಬೇವು]

**ಸುಣ್ಣವರಲ್** (ನಾ). = ಸುಣ್ಣಕಲ್: ಎಣ್ಣೆಗೂಡ ಸುಣ್ಣವರಲ ಕೊಪ್ಪರಿಗೆ . . . ಬಿಡದೆಸೆದುವು ದುರ್ಗದೊಳಗೆ (ಕುರಾಸಾಂ. ೪೨-೩೮). [ಸುಣ್ಣ + ಪರಲ್]

**ಸುಣ್ಣಸೊದೆ, ಸುಣ್ಣಸೋತೆ** (ನಾ). (ಕಟ್ಟಡದ ಶುಭ್ರತೆಗಾಗಿ ಹಚ್ಚುವ) ಸುಣ್ಣ, ಗಾರೆ ಮುಂತಾದ ಲೇಪನವಸ್ತು: ಸುಣ್ಣಸೊದೆಯಂ ತಳೆದು ಮನೆಮನೆಯ ಗೋಡೆಗಳ್ ಬೆಳ್ಳಿಯಾದುವು ಚೈತ್ರದಾತಪದಿ (ಶ್ರೀರಾಮಾ. ೮೬೦-೨೫೮). **ಸುಣ್ಣಸೋತೆ:** ದೇಗುಲದ ಮಾಟ ಕೂಟ ಸುಣ್ಣಸೋತೆಗಂ ಉಕ್ಕುಳಗಾವೆಯ ಬಡಗವೊಲದ ಹೊಲಮೇರೆಯ ಹೊ[ಟ್ಟೆ]ಕರಿಯ ಕೆಯಿ ಘಳೆಯ ಮತ್ತರು ೪ (ನಾಂದೇಡ್. ೩೫-೯; 1149). [ಸುಣ್ಣ + ಸೊದೆ]

**ಸುಣ್ಣಸೋತೆ** 'ಸುಣ್ಣಸೊದೆ' ನೋ.

**ಸುಣ್ಣಹಚ್ಚು** (ಕ್ರಿ). ಸುಣ್ಣವನ್ನು ಬಳಿ,—ಲೇಪಿಸು: ಸುಣ್ಣ ಹಚ್ಚಿಕೊಂಡರೆ ತಣ್ಣಗಾದೀತೇ? (ಗಾದೆ). [ಸುಣ್ಣ + ಹಚ್ಚು₁ (< ಪಚ್ಚು₃)]

**ಸುಣ್ಣಹುಯ್ಯು** (ಕ್ರಿ). = ಸುಣ್ಣಬಳಿ: ಮನೆಗೆ ಸುಣ್ಣಹುಯ್ಯುವಾಗ ಅದನ್ನು ತೆಗೆದುಕೊಂಡು ಹೋಗಿ ಎಲ್ಲಿಯೋ ಒಳಗಡೆ ಅತ್ತೆಯ್ಯನು ಇಟ್ಟಿದ್ದರು (ಚಿಂಗಾಳ್ವ. ೨೫೩). [ಸುಣ್ಣ + ಹುಯ್ಯು₂ (< ಪೊಯ್₂)]

**ಸುಣ್ಣಹೊಡೆ** (ಕ್ರಿ). = ಸುಣ್ಣಬಳಿ: ನಮ್ಮ ಮನೆಗೆ ಸುಣ್ಣಹೊಡೆದಿಲ್ಲ (ರೂಢಿ). [ಸುಣ್ಣ + ಹೊಡೆ₁ (< ಪೊಡೆ₁)]

**ಸುತ** (ಗು). ೧. ಸುರಿದ; ಚೆಲ್ಲಿದ. ೨. ಹುಟ್ಟಿದ; ಜನ್ಮತಳೆದ. (ನಾ). ೩. ಮಗು; ಶಿಶು: "ಸೂನುಃ . . . ಸುತಃ . . . ಅಪತ್ಯಂ — ಈ ೧೨ ಮಗುವು" (ಹಲಾಯು. ೮೨-೩೪೩); ಕಳಹಂಸಂ ಸುಟಿಯದ ಪೂಗೊಳಂ . . . ಸುತನಾಡದಂಗಳಂ ರಂಜಿಕುಮೇ (ಜಗವಿ. ೨-೬೬). ೪. ಮಗ; ತನುಜ: ಕೃಪೆಯಿಂದಂ ನಡೆತಂದು ನಂಬಿದ ಸುತಂ ಸಂಸಾರದೊಳ್ ನೋಯಲಿರ್ದ (ನಂಬಿರ. ೮ ಸೂಚನಾಪದ್ಯ); ಸುತನಿರ್ದೇಂ ಮುಪ್ಪಿನಲ್ಲಾಗದಾ (ಸೋಮೇಶ. ೧೬). ೫. ಪ್ರಭು; ಅರಸು. ೬. [**ಜ್ಯೋತಿ**] ಲಗ್ನದಿಂದ ಐದನೆಯ ಸ್ಥಾನ: ಅಮರೇಜ್ಯಂ . . . ಮಂದನಿಂ ತ್ರಿತಯಾರಾತಿ ಸುತಾಂತ್ಯದೊಳ್ . . . ಶುಭದಂ (ಜಾತತಿ. ೧೦-೧೦). [ಸಂ.]

**ಸುತದೋಹಳ** (ನಾ). ಮಗನನ್ನು ಪಡೆಯುವ ಆಸೆ; ಪುತ್ರದೋಹಳ: ಸುತದೋಹಳಧೃತ ವಿಜಯಾಪತಿಸತಿಯಿಕ್ಷಿಸೆ ಕಟಾಕ್ಷಸಂಜ್ಞೆಯೊಳರಸಂಗತಿಮುದದೆ ಬಿನ್ನವಿಸಲುದ್ಯತೆಯಾದಳ್ ನೆಗೞ್ದ ಹರ್ಷವರ್ಧನೆಯಾಗಳ್ (ಕುಸುಮಾ. ೩-೫೨). [ಸಂ. ಸುತದೋಹಲ]

**ಸುತಪ** (ನಾ). ೧. ಒಳ್ಳೆಯ ತಪಸ್ಸು; ಶ್ರೇಷ್ಠವಾದ ತಪ: ದೀಕ್ಷೆಗೆ ಸುತಪಂ ಫಲಮೆನೆ ನೆಗಟ್ದುದದೆ ಬೋಧಿ ವಲಂ (ಪುಷ್ಪಪು. ೧೩-೫೪). ೨. ಪರಮಾತ್ಮ: ಸುತಪ ಏಕೋತ್ತರ ಸುಪಂಚಾಶತವರಣಕರಣದಿ ಚತುರ್ವಿಂಶತಿಸುತತ್ವದಿ ಧಾತುಗಳೊಳಗಿದ್ದು ವಿರತನಾಗಿರುದ್ದ (ಹಸಾರ. ೪-೨೩). [ಸಂ.]

**ಸುತಮೋಹ** (ನಾ). ಮಗನ ಮೇಲಿನ ಮೋಹ: ಸುತಮೋಹದೆ ಪಿತೃಮೋಹದೆ ಪಿತೃಸುತರೊಡವಂದರಶ್ರುಪೂರಿತನಯನರ್ (ಅಜಪು. ೬-೪೯); ಸುತಮೋಹದಿನೀ ವಧು ಪತಿಹಿತಮಂ ಭಾವಿಸಿದಳಿಲ್ಲ (ಪಂರಾಮಾ. ೬-೧೦೮). [ಸಂ.]

**ಸುತರಂಗೆ** (ನಾ). ಒಳ್ಳೆಯ ಅಲೆಗಳುಳ್ಳವಳು; ಗಂಗೆ: ತರತರದ ಸೀಕರದ ಭೀಕರದತುಳಗಂಗೆ ಸುತರಂಗೆ ನೋಳ್ಪಂಗೆ ಸಲೆ ಕಣ್ಗೆಸೆದಳಂದು ದಿವಿಜಸಿಂಧು (ಜೈಮಿಭಾ. ೯-೨೪). [ಸಂ. ಸುತರಂಗಾ (ಸು + ತರಂಗ + -)]

**ಸುತರಾಂ** (ಅ). ೧. ಪೂರ್ತಿಯಾಗಿ; ಪೂರಾ: ಜಲವೂ ಮಲವೂ ಸುತರಾಂ ಬದ್ಧಿಸಿಹೋದರೆ ಶರೀರವು ಬಹಳ ಅನಾರೋಗ್ಯಸ್ಥಿತಿಯಲ್ಲಿರುತ್ತದೆಯೆಂದು ಗೊತ್ತಾಗುವುದು (ಗ್ರಾಮಾಕ. ೧೧೮); ಈಗಂತೂ ಸುತರಾಂ ಸೊನ್ನೆನೆ (ಚಿಂಗೂಲಿ. ೧೦). ೨. ಸರ್ವಥಾ; ಖಂಡಿತವಾಗಿ: ಇವಳನ್ನು ತುಮಕೂರಿಗೆ ಕಳಿಸುವುದಕ್ಕೆ ನಾನು ಸುತರಾಂ ಒಪ್ಪುವುದಿಲ್ಲ (ಮಹಾಗ. ೪೪); ಅಂತಹ ಕಟ್ಟುಮಸ್ತಾದ ಆಳಲ್ಲ. ಆ ಹುಡುಗಿಗೆ ಸುತರಾಂ ಲಾಯಕ್ಕಲ್ಲ (ಶಿವರಾ. ೧೦೯); ಪಾಂಡವರಿಗೆ ರಾಜ್ಯಕೊಡುವುದರಲ್ಲಿ ಅವನಿಗೆ ಸುತರಾಂ ಇಷ್ಟವಿಲ್ಲ (ಸಂನಾಟ. ೯೦). [ಸಂ./ ಮರಾ. ಸುತರಾಮ್, ಸುತಾರಾಮ್]

**ಸುತಲ, ಸುತಳ** (ನಾ). ಏಳು ಅಧೋಲೋಕಗಳಲ್ಲಿ ಒಂದು. **ಸುತಳ:** "ತಳ ಮತ್ತತಳ ವಿತಳ ಸುತಳಂ ರಸಾತಳ ತಳಾತಳಮು ಪಾತಾಳಮೆಂದು ವರ್ತಿಸುವ ತಳಲೋಕಮೇಟಕ್ಕು" (ಮಂಗರಾ. ೧೦-೩೨); ಪಾತಾಳ ಮಹಾತಳ ರಸಾತಳ ತಳಾತಳ ಸುತಳ ವಿತಳ . . . ಸಪ್ತಪಾತಾಳಂಗಳ್ (ವಿವೇಕ. ೧೬೦); ಅತಳದಾಶ್ಚರ್ಯಮಂ ವಿತಳದ ವಿಚಿತ್ರಮಂ ಸುತಳದ ಸುರುಚಿಯಂ . . . ಅಱಿಯಿತ (ಜೈಮಿಭಾ. ೨೯-೧೨). [ಸಂ.]

**ಸುತಲಾಭ** (ನಾ). ಮಗನನ್ನು ಪಡೆಯುವುದು: ಅಪ್ರತಿಹತ ಸುತಲಾಭ ನಿವೇದಕವಾರ್ತೆ ತೀವೆ ಪುಳಕಮನಾಂತಳ್ (ಜಗವಿ. ೨-೮೬); ಆ ಶ್ವೇತಕೀರ್ತಿ ಸುತಲಾಭ ಶತ್ರುಕ್ಷಯಂ ಶಾಶ್ವತಸ್ವರ್ಗಭೋಗಂಗಳಾದಪುವು (ಜೈಮಿಭಾ. ೩೪-೪೨). [ಸಂ.]

**ಸುತಲಾಭಾರ್ಥಿ** (ನಾ). ಮಗನನ್ನು ಪಡೆಯಬೇಕೆಂಬ ಆಸೆಯುಳ್ಳ ವ್ಯಕ್ತಿ; ಪುತ್ರಾರ್ಥಿ: ಸುತಲಾಭಾರ್ಥಿ ವಿಶೇಷತೀರ್ಥಜಲದಿಂ . . . ಜಿನಪಾದಾಭ್ಯರ್ಚನಂ ಮಾಡಿದಳ್ (ಮಲ್ಲಿಪು. ೪-೨೬). [ಸಂ. ಸುತಲಾಭಾರ್ಥಿನ್]

**ಸುತಶೋಕ** (ನಾ). ಮಗನ ಅಗಲಿಕೆಯಿಂದ ಉಂಟಾಗುವ ದುಃಖ: ಸುತಶೋಕೋದ್ರೇಕದಿಂ ಸ್ಯಂಧವನನಟಿವೆನೆಂದರ್ಜುನಂ ಪೂಣ್ದಂ (ಪಂಪಭಾ. ೧೧-೧೨೬). [ಸಂ.]

**ಸುತಶ್ರೇಣಿ** (ನಾ). ಒಂದು ಬಗೆಯ ವನಸ್ಪತಿ; ಇಲಿಕಿವಿಗಿಡ: "ಚಿತ್ರಾ . . . ಸುತಶ್ರೇಣೀ, ರಂಡಾ, ಮೂಷಕಪರ್ಣೀ, ಎಲಿಯಾಲದ ಮರಕ್ಕೆ ಹೆಸರು, ಇಲಿಕಿವಿಗಿಡ" (ಸಿದ್ಧಾಂತಿ. ೧೩೨). [ಸಂ. ಸುತಶ್ರೇಣೀ]

**ಸುತಳ** 'ಸುತಲ' ನೋ.

**ಸುತಾನ** (ನಾ). ಇಂಪಾದ ಸ್ವರ; ಮಧುರಸ್ವರ: ವೀಣೆಯಂ ಗಾನಿ ಬಾಜಿಸೆ ಸುತಾನಂ ತಾನತಾನಮಾಗುಣ್ಮಡೊಡೆ ಬಂದ ಕೊಱತೆ ಗಾನಿಗೋ ವೀಣೆಗೋ (ಪದ್ಮರಾ. ೧-೩); ಸ್ಥಾಯಿ ಸಂಚಾರಿಗಳ ಸರಿಗಮಪಧನಿಯ ಸರದಾಯತದ ಶುದ್ಧ ಸಂಕೀರ್ಣ ಸಾಳಗದ ಪೂರಾಯತ ಸುತಾನಂಗಳಂ . . . ಸೂಗಸುಗೊಳಿಸಿ (ಜೈಮಿಭಾ. ೨೧-೫೮). [ಸಂ.]

**ಸುತಾಹೃತಿ** (ನಾ). ಮಗನನ್ನು ಅಪಹರಿಸುವುದು: ದಾನವನಿನಾದ ಸುತಾಹೃತಿಯೊಳ್ ಪೊದೞ್ದ ನಿನ್ನಾಧಿಯನಾನಭೀಕ್ಷಿಸಿ ಗುಣಪ್ರಣಯಿತ್ವದೆ ಬಂದೆನಲ್ತೆ (ಚಂದ್ರಪು. ೫-೩೦). [ಸಂ.]

**ಸುತಾಳಿಸು, ಸುತ್ತಾಳಿಸು** (ಕ್ರಿ). ಬೀಸು (?): ತೋರಗದೆಯ ಸುತಾಳಿಸಿ ಮುಂಗಾರ ಮುಗಿಲಂತೆ ಮೊಳಗಿ (ನಾಗಕು. ೧೮-೧೧೩). **ಸುತ್ತಾಳಿಸು:** ಬಾಳೇಂದು ಕೈದು ವನುದ್ದಕಟ್ಟಾಂತು ಸುತ್ತಾಳಿಸಿ ಖಡ್ಗಖಡ್ಗದೊಳು ಏಳಡಿ ಹಿಂದು ಮುಂದಕೆ ನಡೆದರು (ಭರಚ. ೬೩-೨೨). [ಸುತಾಳನ್ನ + - ಇಸು]

**ಸುತಿ** (ನಾ). ೧. ವೇದ; ಶ್ರುತಿ: "ಓದು, ಪಟವಾತು, ಬೇದಂ, ಸುತಿ — ಈ ೪ ವೇದಂ" (ಕಶಸಾ. ೫೭-೨೪೨) ನೆಲನೇ ತೇರ್ ಸಸಿ ಬಿಸುಗದಿರರೆ ಗಾಲಿ ಒಗ್ಗುವಡೆದ ಸುತಿಯೇ ಕುದುರೆಗಳ್ (ಉದ್ಭದೇ. ೪-೪೬); ಸುತಿಯೊರೆದ ಕಾರಣವಿನಿದಱಿಂ ಬಳಿಕೆ ನೀನತಿ ಶುಚಿರ್ಭೂತನಾಗೆಂದು ಕೊಡೆ (ಸಿದ್ಧೇಪು. ೬-೫೩). ೨. [ಸಂಗೀತ] ಗಾಯನ, ವಾದನಪ್ರಯೋಗಕ್ಕೆ ಆಧಾರವೆಂದು ಇಟ್ಟುಕೊಳ್ಳುವ ಸ್ವರ: ಪದಕೊರಲಿಂಪ ನಪ್ಪುಕೆಯೆ [ಕೊಂಕು ನ]ಯಂ ಗಮಕಂಗಳಿಂ ಪೊದರ್ಕೊದಳೆಡೆದಿಕ್ಕಿದಂತೆ ಸುತಿಯೊಳ್ ಸಮವಾಗಿರೆ ಜಾಣನಾಂತು . . . ಪಾಡಿದಳ್ (ಪಂಪಭಾ. ೭-೮೮); ಸಮಶುದ್ಧಸ್ಫುಟ ಮಪ್ಪುದೊಂದು ಸುತಿಯಂ ಪ್ರಾರಂಭಿಗಂ ಮಾಡೆ (ಶಾಂತಿಪು. ೧೧-೩೫). ೩. ಒಂದು ಬಗೆಯ ವಾದ್ಯ : ಸುತಿ ಮೌರಿ ಡೋಲು ತಂಬಟೆ . . . ಮಾರ್ದನಿಗುಟ್ಟಿದುದು (ಅದ್ಭುತ. ೩೨-೧೦). [< ಸಂ. ಶ್ರುತಿ]

**ಸುತಿಗುಡು** (ಕ್ರಿ). ಗಾಯನವಾದನ ವ್ಯವಹಾರದಲ್ಲಿ ಆಧಾರಸ್ವರವಾಗಿ ಸೇರು, — ಒಂದುಗೂಡು, — ಹೊಂದಿಕೊಳ್ಳು: ಪೂಗೊಯ್ಯ ಪುಳಿಂದಿ ಪಾಡುವ ಸಂಗೀತ ದಿಂಚರಕ್ಕೆ ಸು[ಪಾಠಾಂ. ಶ್ರು]ತಿಗುಡುವಂತಸೆವ ಪವನಪೂರಿತಕೀಚಕರಂಧ್ರನಿನದಕ್ಕೆ ಪಡೆಯೆತ್ತಿ ನಿಲುಂಬಿ ನಲಿವ ಫಣಿಗಳಿಂ (ರಾಜಶೇ. ೫ ೫೫ ವ). [ಸುತಿ + ಕುಡು₁ (< ಕೊಡು₁)]

**ಸುತಿಗೂಡು** (ಕ್ರಿ). ಗಾಯನವಾದನಗಳಲ್ಲಿ ಆಧಾರವೆಂದು ಇಟ್ಟುಕೊಂಡ ಸ್ವರಸ್ಥಾಯಿಯೊಡನೆ ಹೊಂದಿಕೊಳ್ಳು; ಶ್ರುತಿಗೂಡು: ಒಸೆದು ನೃಪಾಳನಾಡಿಸಿದ ಸೋಗೆಗಳಂತಿವು ಚಕ್ರಿ ಬೀಣೆ ಬಾಜಿಸೆ ಸುತಿಗೂಡಿ ತಾರಯಿಪ ತುಂಬಿಗಳಂತಿವು (ವರ್ಧಪು. ೫-೬೧); ಅಣಿಯಿಂ ನಾಲ್ವಡಿಕೃಷ್ಣರಾಜನೊಲವಿಂದಂ ಬೀಣೆಯಂ ಕೊಂಡು ಬಿನ್ನಣದಿಂದಂ ಸುತಿಗೂಡೆ ಕೂಡೆ ಲಯಮುಂ ತಾಳಂಗುಡಲ್ ಸ್ಥಾಯಿಯೊಳ್ (ಮೈಸೂಮ. ೫-೪೨). [ಸುತಿ + ಕೂಡು$_1$]

**ಸುತೀಕ್ಷ್ಣ** (ಗು). ೧. ಬಹಳ ತೀಕ್ಷ್ಣತೆಯುಳ್ಳ,— ಹರಿತವಾದ: ಆತನ ಮುಖದಲ್ಲಿ . . . ಯಾವ ಒಂದು ಉಜ್ವಲ ಸುತೀಕ್ಷ್ಣಶಕ್ತಿಯನ್ನು ನೋಡಿದೆನೋ ಅದನ್ನು ಇಂದಿಗೂ ಮರೆತಿಲ್ಲ (ಬಂಕಿಮ. ೨. ಮುನ್ನುಡಿ). (ನಾ). ೨. ಒಂದು ನರಕದ ಹೆಸರು: ಸದಮನ ಸುತೀಕ್ಷ್ಣ . . . ಶತಮಹಾಶನಮೆಂಬೈದು ಮಂತ್ರಿನರಕಂಗಳಂ ಪರಿವೇಷ್ಟಿಸಿ ಸುಘೋರವೆಂಬರಸುನರಕವಿಹುದು (ವಿವೇಕ. ೧೫೨). [ಸಂ.]

**ಸುತೆ** (ನಾ). ಮಗಳು; ತನುಜೆ: "ಪೆಣ್ ದುಹಿತನಂದನೆ ಪುತ್ರಿ ಸುತೆಯೆನಿಕ್ಕುಂ" (ಮಂಗರಾ. ೯೧-೯); ಸುತೆಯಂ ಕೊಟ್ಟೆನಗಖಿಳಕ್ಷಿತಿಯುಮನಾಳ್ದಿರದೆ ಸುಖದಿನತಿಚಪಳಂ ದುರ್ಮತಿಯಾಗಿ ಬೆಚ್ಚಿ ಪೋಪೊಂದತಿಶಯಮೇಕೆ (ಧರ್ಮಾಮೃ. ೧೦-೧೦೧); ಸುತೆಯುಂ ಸುತೆಯುಂ ಜಿತಸುರಸತಿತತಿಯಂ ರಾಜಮತಿಯನತ್ಯೂರ್ಜಿತಭೂಪತಿಸುತೆಯರಂದು ಪಂಚಶತಮಿತೆಯರ್ವೆರಸು ತರಿಸಿದಂ ಹರಿ ಭರದಿಂ (ನೇಮಿಪು. ೧೩-೫೦); ಸುತೆಯ ನತಿಶಯ ಸುರೂಪೋನ್ನತಿಯಂ ಬರವೇಟ್ಟು (ಶಾಂತೀಶ್ವ. ೯-೧೧). [ಸಂ. ಸುತಾ]

**ಸುತ್ತ** 'ಸುತ್ತುಂ' ನೋ.

**ಸುತ್ತಂ** 'ಸುತ್ತುಂ' ನೋ.

**ಸುತ್ತಣ** 'ಸುತ್ತು$_2$' ಪರಾ.

**ಸುತ್ತಣೆ** (ನಾ). (ವೀರೋಚಿತವಾದ) ಅಲಂಕಾರವಿಶೇಷ,— ಭೂಷಣ: ಮಣಿಕಟಿಯ ಸರಪಳಿಯ ಸರ ಮೊಚ್ಚೆಯದ ಸುತ್ತಣೆಯ . . . ಬಿರುದಿನ ಭಟ (ತೊರರಾ. ೭-೨೯-೧೩). [?]

**ಸುತ್ತಮುತ್ತ** 'ಸುತ್ತುಮುತ್ತು' ನೋ.

**ಸುತ್ತಮುತ್ತಲು** 'ಸುತ್ತುಮುತ್ತು' ಪರಾ.

**ಸುತ್ತರಿ** 'ಸುತ್ತುವರಿ' ನೋ.

**ಸುತ್ತಲ್** 'ಸುತ್ತು$_2$' ಪರಾ.

**ಸುತ್ತಲಿಸು** (ಕ್ರಿ). ಬಳಸು; ಸುತ್ತುಗಟ್ಟು: ಕೆಲಬರು ಸುತ್ತಲಿಸಿಕೊಂಡು . . . ಗೋವರ ಕುಸುಬಿದಬಿದರು (ಕುಮಾವ್ಯಾ.ಓಂ೧. ೫-೪೩). [< ಸುತ್ತು$_1$ + - ಇಸು$_1$]

**ಸುತ್ತಲು** 'ಸುತ್ತು$_2$' ಪರಾ.

**ಸುತ್ತಳತೆ** (ನಾ). ಸುತ್ತಲಿನ ಅಳತೆ; ಪರಿಧಿ: ಈ ಕೋಡಿನ ಬುಡದ ಸುತ್ತಳತೆ ಸುಮಾರು ಅರ್ಧಮೊಳ ಇರುವುದು (ಮುಂಬಯಿ. ೪-೪೭). [ಸುತ್ತು$_2$ + ಅಳತೆ]

**ಸುತ್ತಳಿ** 'ಸುತ್ತಟಿ' ನೋ.

**ಸುತ್ತಟಿ, ಸುತ್ತಳಿ** (ಕ್ರಿ). ೧. ಅಳ್ಳಕವಾಗು; ಸಡಿಲವಾಗು: ಸವಿ ಸಮನಾಗೆ ಸುತ್ತಟಿದ ತೋಳ್ ಸತವಾದೆರ್ದೆಯಿಂಪಲಂಪನಪ್ಪುವ ಬಗೆ ಬೀಗಿ ಬಾಯೊಳಗೆ ಸಿಲ್ಕಿದ ಬಾಯ್ . . . ರತಾಂತದೊಳ್ (ಲೀಲಾವ. ೯-೪೭); ಜಳಕೇಳಿಯೊಳಾಗಳ್ ಸುತ್ತಟಿದ ಬಟಲ್ಲುಡಿಯ ಪೊಳೆಪನಸಿತೋರಗನೀ ಸ್ಥಳದೊಳಿದೆಯೆಂದು ಭಯದಿಂ ಕೆಳದಿಯ ಕಂಧರಮನಪ್ಪಿದಳ್ ಬೇಜೋರ್ವಳ್ (ಕುಸುಮಾ. ೫-೧೪೯). **ಸುತ್ತಳಿ: ೨. ಸುತ್ತಲಿನ** ಪರಿವಾರವು ಇಲ್ಲವಾಗು (?): ಹುತ್ತೇಜಿ ಹಲುಗಿರಿದು ಹುಲುಗಚ್ಚಿ ಹಸಗಟ್ಟು ಸು[ಪಾಠಾಂ. ಸ]ತ್ತಳಿದು ಬತ್ತಳಿಸಿ ಹಿರಿದು ಮಂಡೆಯ ಬಿಟ್ಟು ವಿಸ್ತರಿಸಲಾಬಿದ (ಸೋಮಚ. ೫-೫೨). [ಸುತ್ತು$_2$ + ಅಟಿ$_1$]

**ಸುತ್ತಾಟ** (ನಾ). ೧. ತಿರುಗುವುದು; ಸಂಚಾರ: ಹೂವೊಡವೆ ಹೆರರ ಕೈಯಿಂದೂಟ ಹೆರರ ಕೈಯ ಸುತ್ತಾಟ (ಕಾಲೂರ. ೨೭-೧೫). ೨. ಒಂದು ಬಗೆಯ ಖಡ್ಗದ ವರಸೆ: ಸವ್ಯಾಪಸವ್ಯದಿಂದ ಹೊಕ್ಕು ಭ್ರಮಣಾಲು ಮಾಡಲ್ಪಟ್ಟಿತು ಅದು ಸುತ್ತಾಟ ಎಂಬುದೂ ಮತ್ತೊಂದಾದ ಅಲ್ಪಭ್ರಮಣಂ ಕಿರಿಸುತ್ತಾಟ ಎಂದೂ . . . ಖಡ್ಗಶಾಸ್ತ್ರ ಬಲ್ಲವರಿಂದ ನುಡಿಯಲ್ಪಡುವುದು (ಖಡ್ಗಟೀ. ೪-೬೩). [ಸುತ್ತು$_2$ + ಆಟ]

**ಸುತ್ತಾಡಿಸು** (ಕ್ರಿ). ೧. ಸುತ್ತು ತಿರುಗಿಸು,— ಆಡಿಸು; ಸುತ್ತ ಚಲಿಸುವಂತೆ ಮಾಡು: ಕೈಯಲ್ಲಿ ದೊಣ್ಣೆಯನ್ನು ಸುತ್ತಾಡಿಸಿದರು (ರೂಢಿ). ೨. ತಿರುಗುವಂತೆ ಮಾಡು; ಅಲೆದಾಡಿಸು: ಅವರು ಮನೆಮನೆ ಸುತ್ತಾಡಿಸಿದರು (ರೂಢಿ).

[ಸುತ್ತು$_2$ + ಆಡಿಸು]

**ಸುತ್ತಾಡು** (ಕ್ರಿ). ತಿರುಗು; ಅಲೆದಾಡು: ರಜೆಯೊಳು ಹತ್ತೂರು ಸುತ್ತಾಡಿ ದೂರದ ಬೊಂಬಾಯಿಯನು ಕಂಡು ಬಂದೆ (ಇಂಚಾಪ. ೨೮-೩೦); ಬಯಲಿನಲ್ಲಿ ಬಹಳ ಸುತ್ತಾಡಬೇಕಾಗುವುದರಿಂದ . . . ಆರೋಗ್ಯಭಾಗ್ಯ ಸುಧಾರಿಸಬಹುದು (ಸಸ್ಯಕ. ೮೫). [ಸುತ್ತು$_2$ + ಆಡು$_1$]

**ಸುತ್ತಾಲಯ** (ನಾ). (ದೇವಾಲಯದ) ಸುತ್ತಲಿನ ಗೋಡೆ; ಪ್ರಾಕಾರ; ಪೌಳಿ: ಶ್ರೀಗಂಗರಾಜ ಸುತ್ತಾಲಯವಂ ಮಾಡಿಸಿದಂ (ಎಕ. II, ೧೭೭-೧; ಸು. 1177).

[ಸುತ್ತು$_2$ + ಆಲಯ]

**ಸುತ್ತಾಳಿಸು** 'ಸುತಾಳಿಸು' ನೋ.

**ಸುತ್ತಿ$_1$** 'ಸುತ್ತಿಗೆ$_1$' ನೋ.

**ಸುತ್ತಿ$_2$** (ನಾ). ಮುತ್ತಿನ ಚಿಪ್ಪು; ಶುಕ್ತಿ: "ಸುತ್ತಿಯೆನೆ ಶುಕ್ತಿಯೊಳೆ" (ಕರ್ಣಾ. ೩೮); ಕಕಾರಕ್ಕೆ ತಕಾರಂ . . . ಶುಕ್ತಿ — ಸುತ್ತಿ (ಶಮದ. ೨೬೪ ಪ್ರಯೋ).

[< ಪ್ರಾ. ಸುತ್ತಿ./ ಸಂ. ಶುಕ್ತಿ]

**ಸುತ್ತಿಗುತ್ತಿಗೆ** (ನಾ). ವೇದಾಧ್ಯಯನ ಮಾಡಿದ ಬ್ರಾಹ್ಮಣರಿಗೆ ತೆರಿಗೆ ಯಿಲ್ಲದಂತೆ ಕೊಟ್ಟ ಭೂಮಿಯ ಗೊತ್ತುವಳಿ,— ಕರಾರು; ಶ್ರೋತ್ರಗುತ್ತಗೆ: ಮೂಱುಗ್ರಾಮವವನು ನಿವಗೆ ಸುತ್ತಿಗುತ್ತಿಗೆಯಾಗಿ ಕಲುಪಟೆಯಾಗಿ ಕೊಟೆವು (ಮೈಆರಿ. ೧೯೩೦, ೨೦-೯; 1546). 'ಸ್ರೋತ್ರಗುತ್ತಿಗೆ' ಪರಾ.

[ಸುತ್ತಿ$_0$ (< ಸಂ. ಶ್ರೋತ್ರಿಯ) + ಗುತ್ತಿಗೆ (< ಗುತ್ತಗೆ)]

**ಸುತ್ತಿಗೆ$_1$, ಸುತ್ತಿ$_1$** (ನಾ). (ಕಲ್ಲು, ಕಬ್ಬಿಣ ಮೊದಲಾದುವುಗಳನ್ನು ಕುಟ್ಟಲು ಬಳಸುವ) ಒಂದು ಬಗೆಯ ಕಬ್ಬಿಣದ ಸಾಧನ: "ಸುತ್ತಿಗೆ ಲೋಹ ಟಂಕಮಕ್ಕು" (ಮಂಗರಾ. ೧೧೩-೮); ನೊಂದ ಬೆರಳಿನ ಮೇಲೆ ಸುತ್ತಿಗೆ ಬಂದು ಬಿದ್ದವೊಲಾಯ್ತು (ಉತ್ತರಾ. ೨೯-೪೯). **ಸುತ್ತಿ$_1$**: ಸುತ್ತಿ ತೆಗೆದುಕೊಂಡು ಬಾ (ರೂಢಿ).

[ದೇ. ‖ ತಮಿ. ಚುತ್ತಿಯ, ಚುತ್ತಿ; ಮಲ. ಚುತ್ತಿಕ, ಚುತ್ತಿ; ತುಳು. ಸುತ್ತಿಗೆ, ಸುತ್ತಿಯೆ, ಸುತ್ತಿ, ಸುತ್ತೆ; ತೆಲು. ಸುತ್ತೆ./ ಮರಾ. ಸುತ್ಕೀ]

**ಸುತ್ತಿಗೆ$_2$** (ನಾ). ದಾರ; ನೂಲು; ಸೂತ್ರ: ಸುತ್ತಿದ ರೇಖೆ ವಡ್ಡಕ್ಕರಮಾದುದರ್ಕೆ . . . ಸೂತ್ರಿಕಾ—ಸುತ್ತಿಗೆ (ಶಮದ. ೨೬೧ ಪ್ರಯೋ). [< ಸಂ. ಸೂತ್ರಿಕಾ]

**ಸುತ್ತಿಗೆ$_3$** (ನಾ). (ಕರಾ) ಹಣವನ್ನು ಸಾಲಕೊಡುವಾಗ ಇಟ್ಟುಕೊಳ್ಳುವ ಆಧಾರ,— ಈಡು; ಒತ್ತೆ: (ಕಸಂಗ್ಲಾ. ೬೫). [?]

**ಸುತ್ತಿಡಿ** (ಕ್ರಿ). ಸುತ್ತುವರಿ; ಹಬ್ಬು: ನಳನಳಿಸುತ್ತ ಸುತ್ತಿಡಿದು ತೋರ್ಪ ಕದಂಬದಿಂ (ಗಿರಿಕ. ೧-೫೨). [ಸುತ್ತು$_2$ + ಇಡಿ$_1$]

**ಸುತ್ತಿಡು** (ಕ್ರಿ). ಸುತ್ತಲೂ ಕಟ್ಟು,— ಸುತ್ತು: ಮೇರುನವನೇ ಪಟ್ಟೆವೊಯ್ದಾ ವಾರಿರುಹಭವನಾ ಪುರಶ್ರೀ ಚಾರುತೆರೆ ಸುತ್ತಿಟ್ಟನೆನೆ ಹೊಂಗೋಂಟೆ ರಂಜಿಪುದು (ಸಾಳ್ವಭಾ. ೨-೭). [ಸುತ್ತು$_2$ + ಇಡು$_1$]

**ಸುತ್ತಿಸು** (ಕ್ರಿ). ೧. ಸುತ್ತಲೂ ಕಟ್ಟು: ಕಂಭಂಗಳೊಳೆಲ್ಲಂ ಸುಯ್ಯಾಣದ ಚಿನ್ನದ ಪಟಿಯ ಸಕಳವಟ್ಟೆಗಳಂ ಸುತ್ತಿ[ಸಿ] (ಪಂಪಭಾ. ೩-೪೦ ವ). **೨. ಸುತ್ತಿಕೊಂಡಿರು**; ಸಿಕ್ಕು ಹಾಕಿಕೊಂಡಿರು: ಅವನಿಜನರ್ಕಸುತಂ ಸಿಂಹವೃಷಾದ್ಯುದಯದೊಳೇಕಲಗ್ನಸ್ಥಿತರಾಗೆ ವಿಲಗ್ನಗೃಹನವಾಂಶಕದವಯವದೊಳ್ ಸುತ್ತಿಸುಗೆ ಕರುಳ್ತೊಡಕಕ್ಕುಂ (ಜಾತತಿ. ೪-೩೦). ೩. ತಿರುಗಿಸು; ಸುತ್ತುಹಾಕಿಸು: ನೋಟ ವಿಷಯದಿಂದೊಳಗಾದ ಪುರುಷರ ಕೋಟಲೆಗೊಳಿಸಿ ಸುತ್ತಿಸುತ ಆಟವಿದೆಂಬಂತೆ ತಿರುಗಿಸುತಿರ್ದರು ಱಾಟಳದುಯ್ಯಲೆಗಳನು (ಮೋಹತ. ೧೪-೮೯); ಅವರು ಹುಚ್ಚನನ್ನು . . . ಕೆಲವು ಬೀದಿಗಳಲ್ಲಿ ಬೇಗಬೇಗ ಸುತ್ತಿಸಿದರು (ರಾವಿಜ. ೨೩). ೪. ತೊಡಿಸು: ಆತನ ಕೈಯ ಪೂಮಾಲೆಯ ನಿನ್ನಯ ನೂತನವೇಣಿವಲ್ಲರಿಗೆ ಪ್ರೀತಿಯಿಂ ಸುತ್ತಿಸುವುದು (ಕಂಸವ. ೭-೧೪೯).

[ಸುತ್ತು$_1$ + - ಇಸು$_1$]

**ಸುತ್ತಿಱಿ** (ಕ್ರಿ). ಬಳಸು; ಸುತ್ತುವರಿ: ಪರ್ಯಾಯಂದಪ್ಪದೇಂ ಸುತ್ತಿಱಿದುವೊ ವಲಯಾಕಾರದೊಂದೊಂದನತ್ಯಾಶ್ಚರ್ಯಂ (ಆದಿಪು. ೧-೪೮); ಅಸಂಖ್ಯಾತದ್ವೀಪಮುಮಬ್ಧಿಯುಮೊಂದನೊಂದು ಸುತ್ತಿಱಿದಿರೆ (ಮಲ್ಲಿಪು. ೧-೬೧); ಸುತ್ತಿಱಿದಿರ್ಪುದು ಜಂಬೂದ್ವೀಪಮಂ ಕ್ಷಾರಪಯೋಧಿ (ಅನಂಪು. ೧-೬೨). [ಸುತ್ತು$_2$ + ಇಱಿ$_1$]

**ಸುತ್ತು$_1$** (ಕ್ರಿ). ೧. ಬಳಸು; ಪ್ರದಕ್ಷಿಣೆಮಾಡು: "ಸುತ್ತು – ವೇಷ್ಟನೇ" (ಶಮಧಾ); ಸಹಾಗ್ರದಿಂ ತಱಟ್ಟು ನೆತ್ತಿವರೆಗಂ ಬಳಸಿಯುಂ ಮೆಯ್ಯಂ ಸುತ್ತಿ ಎಲ್ಲಾ ಎಡೆಗಳೊಳಂ ಕಿಚ್ಚಂ ತಗುಳ್ಚಿ (ಪದ್ಮಾರಾ. ೧೫೪-೭); ಪಲ್ಲಿಯಂತೆ ಕೇರಂ ಪತ್ತುತ್ತುಂ ಎಲೆವಳ್ಳಿಯಂತೆ ಕಂಬಮಂ ಸುತ್ತುತ್ತುಂ (ಧರ್ಮಾಮೃ. ೧-೧೭೦); ಬೆಟ್ಟಕ್ಕೆ ಬೆಳ್ಳಾರ ಸುತ್ತಿತಯ್ಯಾ . . . ಹರನೊಡ್ಡಿದ ಬಲೆಯಲ್ಲಿ ಸಿಲುಕಿದ ಮೃಗವು ಕೂಡಲಸಂಗಮಂಗೆ ಓಗರವಾಯಿತಯ್ಯಾ (ಬಸವ. ೮೫೫); ನಗರವಿರ್ದುದು ಶರಧಿ ಸುತ್ತಿದ ನಗದವೊಲು ನಾನಾದಿಗಂತದ ಬಗೆಯ ಭಾರಿಯ ಬಹಳ ನರಸಾಗರದ ಮಧ್ಯದಲಿ ಸೊಗಸಿದುದು (ತೊರರಾ. ೧-೧೨-೩೧); ಕೊಂಕಣ ಸುತ್ತಿ ಮೈಲಾರಕ್ಕೆ ಹೋದ ಹಾಗೆ (ಗಾದೆ). ೨. ತಿರುಗು; ಅಲೆದಾಡು; ಸಂಚರಿಸು: ದಾರಿಯೊಳು ಸುತ್ತಿ ಸುಳಿದಱಸಿದಂ (ಸಿದ್ಧರಾ. ೨-೬೬); ಶೋಕದ ಸುರುಳಿಯನು ಸುತ್ತದ ಸುಸಮ್ಯ ಜ್ಞಾನಿಯಾಗೆಂದ (ತೊರರಾ. ೪-೪-೭೭). ೩. ಆವರಿಸು; ಮುತ್ತು: ಮಲೆಯುತ್ತೂಲೆಯುತ್ತೆ ಸುತ್ತಿ ಕೈವಱಿದ ಗಜೇಂದ್ರದಂತೆ ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೧೧೧೨ ಶೂದ್ರಕ); ಎಚ್ಚ ಶರಾಳಿಗಳ್ ಭಯಂಕರತರಮಾಗೆ ಭೂಭುವನಮಲ್ಲಮನೊರ್ವಯೆ ಸುತ್ತಿ ಮುತ್ತಿಕೊಂಡಿರೆ ದೆಸೆಗಾಣಲಾಗದು (ಪಂಪಭಾ. ೧೦-೧೧೭); ಕಣ್ಣುಗಳರಳಿದವು ಹೊಗೆ ಸುತ್ತಿ ಸುಯ್ಯಲಿ ಸುರಿದುದುರಿ (ಕುಮಾವ್ಯಾ. ೧೯-೧೩). ೪. ಸುರುಳಿಯಾಗು; ದುಂಡಾಗು: ಮರಗಟ್ಟೆಂಬಂತೆ ಸುತ್ತುಂ ಮೊದಲೊಳಜಗರಂ ಸುತ್ತ (ಕಾದಂಪೂ. ೧೨೦); ಆ ಪೊನ್ನ ನೊಂದು ಪನ್ನಗಂ ಸುತ್ತಿ ಪಟ್ಟಿರ್ದೊಡೆ ಕೊಳಲಂಜಿ ಪೋದೆಂ (ಪಂಚತಂ. ೧೭೭-೧೪); ಸುತ್ತಿದುರಗನ ಮಂದರಾಚಲ ಕಿತ್ತು ಬೀಳ್ವಂದದಲಿ (ಕುಮಾವ್ಯಾ. ೩-೬೫). ೫. ಸುರುಳಿಮಾಡು; ದುಂಡಾಗಿಸು : ಎಳವೆರೆ ಸುತ್ತಿದಂತೆ ಮಿಱುಗುತ್ತಿರೆ ಕೇದಗೆಯೋಲೆ (ಕಾದಂಅು. ೧೯೯). ೬. ಕಟ್ಟು; ಹಾಕು: ಖಡುಗಶಿಖಿ ಪರಶುಮೃಗ ಪುಲಿದೊವಲು ಸುತ್ತಿ ಬಿಗಿದುಡಿಯ ಹರಿನಯನವರಸಿದ ಮೆಲ್ಲಡಿಯ ನಿಜದ ಮೂರ್ತಿಯಂ ತೋಱಿಸಿದನು (ಸಿದ್ಧರಾ. ೨-೨೬); ಗಳಗಳಲಿ ಸೀರೆಗಳ ಸುತ್ತಲಿಯೆಂದು ಕೈವೀಸಿದನು ಕಲಿದ್ರೋಣ (ಕುಮಾವ್ಯಾ. ೧೫-೩೨). ೭. ತೊಡರು; ಸಿಕ್ಕಿಕೊಳ್ಳು: ಅಱಸುವ ಬಳ್ಳಿ ಕಾಲ ಸುತ್ತಿತ್ತೆಂಬಂತೆ (ಅವಚಂ. ೧೬೭-೭೫೨). ೮. ಕೂಡು; ಸೇರು: ನಸುಗಂಜಿ ಸುತ್ತಿಹುದು ವೊಣಗಿಹುದು ದೋಷವಶನಕ್ಕೆಂಟು ತೆಱನಪ್ಪುದು (ಸೂಪಶಾ. ೩-೧).

[ದೇ. ‖ ತಮಿ. ಮಲ. ಚುಱ್ಱು; ಕೊಡ. ಚುತ್ತ್; ತುಳು. ಸುತ್ತು, ಸುಂದು; ತೆಲು. ಚುಟ್ಟು; ಕೋಲಾ. ಸುತ್; ನಾಯ್ಕಿ. ಸುತ್; ಪರ್ಜಿ. ಚುತ್; ಕುವಿ. ಸೂತಾಲಿ]

**ಸುತ್ತು$_2$** (ನಾ). ೧. ಬಳಸಿರುವುದು; ವೇಷ್ಟನ: "ವಳಯಿತಂ ವೇಷ್ಟಿತಂ ಪರಿವೇಷ್ಟಿತಂ ಪರಿಕ್ಷಿಪ್ತಮೆನೆ ಸುತ್ತಕ್ಕು" (ಮಂಗರಾ. ೧೨೯-೧೨); ಅಮರಾನೀಕದ ಸುತ್ತು ಪೋಲ್ ದಿನನಾಥಾವಂಧ್ಯಸಂಧ್ಯಾಭ್ರವಿಭ್ರಮಮಂ (ಶಾಂತಿಪು. ೪-೧೧೭); ಮರಗಟ್ಟೆಂಬಂತೆ ಸುತ್ತುಂ ಮೊದಲೊಳಜಗರಂ ಸುತ್ತ (ಕಾದಂಪೂ. ೧೨೦); ಸುತ್ತಿನ ದಾರಿಗಳ ನೋಡಿ (ಗಗತಾ. ೧೪-೨). ೨. ಸುತ್ತಿರುವುದು; ಮಂಡಲ; ವಲಯ: ಬಿರಿಮುಗುಳ್ಗಳೊಳ್ ತುಱುಗಿದದಿವ್ಯಮೂರ್ತಿಯ ಸುತ್ತಿನೊಳಸೆದುಪಾಶ್ರಯಂಬಡೆದ ಸಾಂದ್ರ ಚಂದ್ರಕಾಂತದ ಶಿಲೆ (ಪಂಪಭಾ. ೫-೫ ವ); ಕರುಣದ ಸುತ್ತಿನಂತೆ ಸತ್ಯದ ಸಾಲದಂತೆ ಭಕ್ತಿವನಿತೆಯ ಕರ್ಣಪತ್ರದಂತೆ (ನಂಬಿರ. ೧೭-೫೭); ಸುಖದ ತನಿರಸದ ಪೆರ್ಮಡು ಸುಖದೂತ್ತಿನ ಸುತ್ತು ಸುಖದ ತಣ್ಬೆಳಲೆನಿಕುಂ (ಶ್ರೀವಧಾ. ೭೭). ೩. (ಸುತ್ತಲೂ ಕಟ್ಟುವ) ಪಟ್ಟಿ; ಕಟ್ಟು: ಅರಸಂಗೆ ಮನೆವರ್ಗಡೆ ಮುದ್ರಾಂಕಿತಮಪ್ಪುಪಾಯನದ ಮುದ್ರೆಯಂ ಕಳೆದು ಸುತ್ತನಱಿದು ಬಿತ್ತರಿಸಿ ತೋಱುವುದುಂ (ಶಾಂತಿಪು. ೨-೨೨ ವ); ತುಱುಬ ಬಲಿದೊಳಗೌಕಿ ಮೊನೆ ಮುಂಜೆಱಗನಳವಡೆ ಸೆಕ್ಕಿ ಸುತ್ತಿನೊಳಿಱುಕಿ ಬಿಗಿದ ಕಠಾರಿ ದಾರದ ಗೊಂಡೆಯದ ಕೆದಱಿ (ಕುಮಾವ್ಯಾ. ೧೭-೯೯). ೪. ಸುರುಳಿಯಾಕಾರದ ಗುಂಡಾಗಿರುವ ಒಂದು ಬಗೆಯ ಆಭರಣ: ಕಾಮಿಗಳನಸಂಗನಾಜ್ಞೆಯೊಳಿ ಪೋಣಿಸಿದೋಲೆಯ ಸುತ್ತು ನೋಟ್ಟೊಡಂ ಬಗೆಗೊಳಿಸಿತ್ತು (ಸೂಕ್ತಿಸು. ೮-೨೨೨); ತೊಟ್ಟು ಕುಪ್ಪಸ ಬಟ್ಟಿಹ ಸುತ್ತು . . . ಮಡಿಲೊಳಗೆ ಕಟ್ಟಿದ ಮಡಿಚೀಲವು ಹಡಪಗಳಿಂದ ಸೆಟ್ಟಿಗಳಿರುತಿಹರಲ್ಲಿ (ಅಂಜಚ. ೩-೮೦); ಮಣ್ಣು ಮೆತ್ತಿಕೊಂಡಿದ್ದ ಸುತ್ತು ಕಾಲುಂಗುರಗಳನ್ನು ಶುಚಿಮಾಡಿ ಮತ್ತೆ . . . ತೊಡಿಸಿದಳು (ಮಲಮ. ೬೭೨). ೫. ಅಗಲ; ಹರವು; ವಿಸ್ತೀರ್ಣ: "ಪರಿಣಾಹಃ, ವಿಶಾಲತಾ – ಈ ೨ ಸುತ್ತು" (ಹಲಾಯು. ೧೩೦-೧೧೧). ೬. ಬಳಸುಮಾತು; ನೇರವಲ್ಲದ ನುಡಿ: ಎಳಸುತ್ತಿರ್ದಪೆ ಪುಷ್ಪಮಂಜರಿಗೆ ಕೊಳ್ಳೀ ಸುತ್ತಿದೇಕೆ (ಕಾದಂಪೂ. ೭೬೯); ಸುತ್ತೇಕೆ ಬಳಸೇಕೆ ನೆಟ್ಟನೆ ಮಾತಾಡು ಬಂದಂಥ ಕಜ್ಜದ ಮೇಲೆ (೧ಂಚಾಪ. ೨೩೪-೭೭). ೭. ನೆರೆಹೊರೆ; ಪರಿಸರ: ಮನೆಯ ಒಳಗಿನಿಂದ ನೋಡಿದರೂ ಸುತ್ತಿನ ದೃಶ್ಯ ಬಲು ಸುಂದರವಾದದ್ದು (ಯೋಧಪು. ೨೪). ೮. (ಎಲೆ, ಪತ್ರ ಮೊದಲಾದುವುಗಳನ್ನು ಸುತ್ತಿ ಮಾಡಿದ) ಚುಟ್ಟ; ಹೊಗೆಸುತ್ತು: (ಕ).

**ಸುತ್ತಣ** = ಸುತ್ತ ಇರುವ: ಮರಮರ ಮಥನಿಸಿ ಕಿಚ್ಚು ಹುಟ್ಟಿ ಸುತ್ತಣ ತರುಮರಾದಿಗಳ ಸುಡಲಾಯಿತ್ತು (ಮಹಾದೇ. ಬ. ೬೯-೧೬೧); ಸುತ್ತಣ ಬೀದಿಯೊಳಗೆ ರಾಜಿಸುತಿಹ ಮೊತ್ತದಂಗಡಿಗೇರಿಯೊಳಗೆ (ಕಂಸವಿ. ೨-೮೨). **ಸುತ್ತಲ್, ಸುತ್ತಲು** = ಸುತ್ತ ಇರುವ ಪ್ರದೇಶ,— ಆವರಣ: ಪೊಸಕಾರೊಳಿಂತು ಬಳ್ಳಿಗೆ ಪಥಿಕಾಂಗನಾಜನಮನಂಜಿಸುವಂತಿರೆ ತೋಱಿ ಸುತ್ತಲುಂ (ಕವಿರಾ. ೧-೧೨೪); ಸುತ್ತಲುಂ ಪರಿವ ಜರಿವೊನಲ್ಗಳಿಂ (ಪಂಪಭಾ. ೩-೨೨ ರಗಳೆ); ಪಕ್ಷಿಮೃಗಕುಲವೆರಸಿ ಮೞೆದವು ಬನದ ಸುತ್ತಲು (ಕುಮಾವ್ಯಾ. ೩-೨). **ಸುತ್ತಿನುಂಗುರ** = ಬೆಳ್ಳಿ, ಬಂಗಾರಗಳಿಂದ ಮಾಡಿದ ಕಾಲಿನ ಬೆರಳಿಗೆ ಧರಿಸುವ ಉಂಗುರ: ಮುತ್ತಿನ ಮುಡಿಯ ವಿಲಾಸಿನಿಯರು ಸೂಲಗಿತ್ತಿಯ ಕರೆ ಪುರೋಹಿತರ ಸುತ್ತಿನುಂಗುರ ಮದ್ದುಮಣಿಯಂತ್ರಗಳ ತಂದು ತೆತ್ತಿಸಿದರು ಕಾಲ್ದೆಸೆಯ (ಮೋಹತ. ೧೭-೧೩). **ಸುತ್ತುಮಾತು** = ನೇರವಲ್ಲದ ಮಾತು; ಬಳಸುಮಾತು : "ಪದರುನುಡಿ, ಮುಸುಕುಮಾತು, ಸುತ್ತುಮಾತು, ಕಟಕಿ" (ಕಂನುಹು. ೮೭). [< ಸುತ್ತು$_1$. / ಮಲ. ಚುಱ್ಱು; ಕೊಡ. ಚುತ್ತ್; ತುಳು. ಸುತ್ರ; ತೆಲು. ಚುಟ್ಟು, ಚುಟ್ಟ; ಕುವಿ. ಸೂತು]

**ಸುತ್ತು$_3$** 'ಸುತ್ತುಂ' ನೋ.

**ಸುತ್ತುಂ, ಸುತ್ತ, ಸುತ್ತಂ, ಸುತ್ತು$_3$** (ಅ). ಸುತ್ತಲು; ಬಳಸಿಕೊಂಡು: ಸುತ್ತುಂ ಕುಣಿವುವು ನಲಿದಾಡಿ ಗೃಹಮಯೂರನಿಕಾಯಂ (ಕಾದಂಪೂ. ೧೦೦೧). **ಸುತ್ತ**: ಜೋದರ ಡರಿದರಂದು ಸುತ್ತ ಮೞೆದವು ಮೇಲೆ ಪಲ್ಲವಸತ್ತಿಗೆಯ ಸಾಲುಗಳು (ಕುಮಾವ್ಯಾ. ೩-೬). **ಸುತ್ತಂ**: ಕಲಿ ತಾನೊಬ್ಬನೆಂದಾಳ್ವರಿಯ ಸುತ್ತಂ ಸುತ್ತಿ ಬರುತಿರಲು (ಬಸಪು. ೧೬-೨೦). **ಸುತ್ತು$_3$**: ಅಂಚೆಗಳಿಂಚರಮುಂ ಸುತ್ತು ಚೆಲ್ವೆನಿಸಿರ್ದ ಗಂಧಶಾಲಿಗಳೀಂ ಮತ್ತಂ ಚಕ್ರವಾಕ ಹಂಸೀಸಂಚರದಿಂದೆಸೆವ ಬಹು ತಟಾಕದಿನೆಸೆಗುಂ (ಸೌಇಇ. IX-i, ೨೯೭-೧೭; 1177).

[< ಸುತ್ತು$_1$]

**ಸುತ್ತುಂಗಾಱ, ಸುತ್ತುಗಾಱ** (ನಾ). ತಿರುಗುವವನು; ಅಲೆಮಾರಿ: ಸೋಲದವನ ಸುತ್ತುಂಗಾಱನ . . . ಗಳಿಸಾಳಿವೆಂಗಳು ಬಯಸುವರೆ (೧೫ಚಿಸಾಂ. ೯-೪೯). **ಸುತ್ತುಗಾಱ**: ಗಾಳಿಸು ಗೆಲ್ವನಂ ಹರಹು ಹೂಱೆಗನಂ ಸುಲಿ ಸುತ್ತುಗಾಱನಂ (ಲೀಲಾವ. ೨-೧೦೭).

[ಸುತ್ತು$_2$ + - ಕಾಱ]

**ಸುತ್ತುಂಗುರುಳ್** (ನಾ). ಸುರುಳಿಯಾದ ಕೂದಲು; ಗುಂಗುರುಕೂದಲು: ಸುತ್ತಲುಂ ನಿನ್ನನಾ ಕೋಮಳೆಯಂದಂಬೆತ್ತ ಸುತ್ತುಂಗುರುಳಳವಡಿಸಲ್ (ಆದಿಪು. ೪-೨೦); ಸುತ್ತುಂಗುರುಳಂತರದೊತ್ತುತ್ತುಂ ದೆಸೆದೆಸೆಯೊಳಲೆವ ಕಣ್ಮಲರ್ಗಳಿನುನ್ಮತ್ತಗಜಗಮನೆಯರ್ ಬಂದೊತ್ತಗೆ ನಿಲ್ವರ್ ವಿಶಾಲದೊಂದಂಗಣದೊಳ್ (ಸುಕುಮಾ. ೯-೬೨).

[ಸುತ್ತು$_2$ + ಕುರುಳ್$_1$]

**ಸುತ್ತುಂಗೊಳ್, ಸುತ್ತುಗೊಳ್** (ಕ್ರಿ). ೧. ಬಳಸು; ಸುತ್ತುವರಿ: ಪೊಂದಳಿರ ತೊಂಗಲ್ಗಳ ಸುತ್ತುಂಗೊಂಡ ಸುರಿಗೆಯ ಮುತ್ತಿನ ಬುಂಬುಕಂಗಳ ನಡುವೆ (ಆದಿಪು. ೮-೧೫ ವ); ವೇತ್ರವತಿಯೆಂಬ ನದಿಯಿಂ ಸುತ್ತುಂಗೊಂಡಿರ್ಪುದಾ ರಾಜಧಾನಿ (ಕಾದಂಪೂ. ೧೭). **ಸುತ್ತುಗೊಳ್**: ೧. ಮರುತ್ಸುತಂ ಮುಳಿದು ಮಚ್ಚರದಿಂ ಗಜೆಗೊಂಡು ಸುತ್ತುಗೊಂಡಡಿಗಿಡೆ ನುರ್ಗಿ ಪೊಯ್ದು (ಪಂಪಭಾ. ೧೧-೭೪); ಅರಸರ ಪಕ್ಕದೊಳ್ ಸುತ್ತುಗೊಂಡು ಬೆರ್ಚಿ ಬಿಚ್ಚಳಿಸುತ್ತುಂ ಬರೆ (ಶಾಂತಿಪು. ೮-೬೫ ವ). ೨. ಆವರಿಸು; ಮುತ್ತು: ಬಳಸಿರ್ದುದ್ಯಾನಮುದ್ಯಾನದೊಳೊದವಿದ ಪದ್ಮಾಕರಂ

ಪದ್ಮಷಂಡಂಗಳೊಳೆತ್ತಂ ಸುತ್ತುಗೊಂಡಿರ್ದಳಿಕುಳಂ (ಸುಕುಮಾ. ೧-೭೧).
[ಸುತ್ತು₂ + ಕೊಳ್₁]

**ಸುತ್ತುಂಬರ್,** ಸುತ್ತುಬರು, ಸುತ್ತುವರು (ಕ್ರಿ). ಬಳಸಿಬರು; ಪ್ರದಕ್ಷಿಣೆ ಬರು: ವಿಮಾನಶ್ರೇಣಿ ಸುತ್ತುಂಬರೆ ಸುರಪತಿಗಳ್ ತಮ್ಮ ತಾಣಕ್ಕೆ ಪೋದರ್ (ಅಜಿಪು. ೬-೧೩೧). **ಸುತ್ತುಬರು:** ದೇವರಿಗೆ ಸುತ್ತುಬಂದು ಜನ್ನಯ್ಯ ತಿರುಗಿದಾಗ ವೆಂಕಮ್ಮ ಮುಂದೆ ನಿಂತಿದ್ದರು (ಪದ್ಮಸ. ೨೨೯). **ಸುತ್ತುವರು:** ಶಿವಭವನಮಂ ಮಂಟಪವನಭಿನವವೆಸೆಯೆ ಮಾಡಿಸಿಯದಱ ಸುತ್ತುವರೆ (ಬಸವು. ೧೬-೯).
[ಸುತ್ತು₂ + ಬರ್ (< ವರ್)]

**ಸುತ್ತುಂಬರಿಸು** (ಕ್ರಿ). ಬಳಸುವಂತೆ ಮಾಡು; ಪ್ರದಕ್ಷಿಣೆ ಹಾಕಿಸು: ಪಂತಿ ಗಟ್ಟಿದರಲ್ಲಿ ಮಿಗಗಳಂ . . . ಸುತ್ತುಂಬರಿಸಿ ಹರಿಸಿ (ಶ್ರೀರಾಮಾ. ೭೭೮-೧೯೯).
[ಸುತ್ತು₂ + ಬರಿಸು₁]

**ಸುತ್ತುಕೆಲಸ** 'ಸುತ್ತುಗೆಲಸ' ನೋ.

**ಸುತ್ತುಗಂಭ** (ನಾ). ಸುರುಳಿಯಾಕಾರದ ಕಂಬ; ದುಂಡಗಿರುವ ಕಂಬ: ಹೊನ್ನ ಸರಿಗೆದಗವ ಸುತ್ತುಗಂಭವೊಂದೆಸಕವಾಯಿತು ಮೇರುಶಿಖರಿ (ಪ್ರಭಂಜ. ೧-೫೧).
[ಸುತ್ತು₂ + ಕಂಭ]

**ಸುತ್ತುಗಟ್ಟು** (ಕ್ರಿ). ೧. ಬಳಸಿಕೊಂಡಿರು; ಸುತ್ತುವರಿದಿರು: ವ್ಯಾಘ್ರಚರ್ಮದಿಂದ ಸುತ್ತುಗಟ್ಟಲ್‌ಪಟ್ಟದ್ದಾಗಿ ಕಿರಿಗಂಟೆಗಳ ಮನೋಹರವಾದ ಧ್ವನಿಯುಳ್ಳದ್ದಾಗಿ ಬಿಳೀ ಕುದುರೆಗಳನ್ನು ಕಟ್ಟಿದ (ಕೃವಾಲಾ. ೭೭೭). ೨. ಮುತ್ತು; ಆವರಿಸು; ಕವಿ: ಕೇವಲ ಹಲವೇ ಜನ ವಿದೇಶೀಯರು ನಮ್ಮ ವಿಸ್ತಾರವಾದ ಮಾತೃಭೂಮಿಯನ್ನು ಸುತ್ತುಗಟ್ಟಿರುವರು (ರಘುರಾಣಿ. ೨೩೧); ಎಲ್ಲರೂ ಸುತ್ತುಗಟ್ಟಿಕೊಂಡು ಅಂಜನಪ್ಪ ಧರಣಯ್ಯರನ್ನು ಹಿಂದಕ್ಕೆ ಕರೆದೊಯ್ದರು (ಮರಳಿ. ೧೮೭). [ಸುತ್ತು₂ + ಕಟ್ಟು₁]

**ಸುತ್ತುಗತ್ತರಿಗೆ** (ನಾ). (?): ಪಂಚಾಂಡಕ ಚತುರ್ವೃತ್ತಿ ಚತುರಶೀತಿ ಸ್ಥಾನಕದೊಳುಚಿತ ನಿರ್ಗಮಕ್ಷಪಣಗಳನಳವಡಿಸಿ ಸುತ್ತುಗತ್ತರಿಗೆವರೆಗೊಯ್ದು ಕರುವೆಸನಿದನಿಸಿ ಸುವ್ಯಕ್ತ ಮಾದ ನಿಮ್ನೋನ್ನತಪ್ರಸಾರಿತ ನಿಕುಂಚಿತಪ್ರದೇಶಶುದ್ಧಿಯಿಂ (ವರ್ಧಪು. ೭-೩ ವ).
[ಸುತ್ತು₂ + ಕತ್ತರಿಗೆ₁]

**ಸುತ್ತುಗಾಬ** 'ಸುತ್ತುಂಗಾಬ' ನೋ.

**ಸುತ್ತುಗೆಲಸ,** ಸುತ್ತುಕೆಲಸ (ನಾ). ಸುತ್ತಮುತ್ತಲ ಕೆಲಸ; ಮೇಲುಕೆಲಸ; ಸಣ್ಣಪುಟ್ಟ ಕೆಲಸ: ಸುತ್ತುಗೆಲಸವ ಸೂಲ್ಗಿಸದೆಸಗುವುದು (ಹದಿಬ. ೪-೧೭). **ಸುತ್ತುಕೆಲಸ:** ಈಗ ಅಡಿಗೆಯ ರಾಗಪ್ಪ ಸುತ್ತುಕೆಲಸಮಾಡುತ್ತಿದ್ದ (ವಂಶವೃ. ೩೩೯); ಸುತ್ತುಕೆಲಸ ಬೇಕಾದಷ್ಟಿರುತ್ತ (ಬಾಳಹೂ. ೨೪೭). [ಸುತ್ತು₂ + ಕೆಲಸ]

**ಸುತ್ತುಗೊಳ್** 'ಸುತ್ತುಂಗೊಳ್' ನೋ.

**ಸುತ್ತುಗೋಂಟೆ** (ನಾ). (ಪಟ್ಟಣದ ಅಥವಾ ಊರಿನ) ಸುತ್ತಲೂ ಇರುವ ಕೋಟೆ; ವೃತ್ತಾಕಾರವಾಗಿರುವ ದುರ್ಗ: ಮುಂದಣ ಸುತ್ತುಗೋಂಟೆಯ ಕಲ್ಲನೊಂದಂ ಪಾದದುಂಗುಟದಲ್ಲಿಳಿಗೆ ಕೆಡನೂಂಕಿ (ಬಸವು. ೨೬-೩೧); ಎಡಗೋಂಟೆ ತಳಿಗೋಂಟೆಯು ಸುತ್ತುಗೋಂಟೆ (ಕಭ್ಯಕ್ರ. ೯೮). [ಸುತ್ತು₂ + ಕೋಂಟೆ]

**ಸುತ್ತುಗೋಡೆ** (ನಾ). ಸುತ್ತಲೂ ಹಾಕಿರುವ ಗೋಡೆ; ವೃತ್ತಾಕಾರದ ಭಿತ್ತಿ; ಪೌಳಿ: ಸಂರಕ್ಷಕಸಾಧನಗಳಾಗಿದ್ದ ಕೋಟೆ, ಸುತ್ತುಗೋಡೆಗಳು ತುಂಬ ಅವಶ್ಯಕ ವೆನಿಸುತ್ತಿದ್ದುವು (ಕರ್ನಾಜ. ೩). [ಸುತ್ತು₂ + ಗೋಡೆ]

**ಸುತ್ತುಡಿಗೆ** (ನಾ). ಸುತ್ತಿಕೊಂಡಿರುವ ಬಟ್ಟೆ; ಧರಿಸಿರುವ ವಸ್ತ್ರ (?): ಎತ್ತಿಕೊಂಡಾ ಕೂಸು ತಲೆಯಲಿ ಪೊತ್ತ ಗೂಡೆ ಮಲಿನವಸನದ ಸುತ್ತುಡಿಗೆ ತಲೆಜುಂಜು ಸೊಗಯಿಸೆ ಕೊರವಿಯಾಂ ಬಂದೆ (ಸಾಳ್ವಭಾ. ೩೧-೨೧).
[ಸುತ್ತು₂ + ಉಡಿಗೆ₁ (< ಉಡುಗೆ)]

**ಸುತ್ತುತಾನಕ** (ನಾ). ಕತ್ತಿವರಸೆಯಲ್ಲಿ ಒಂದು ಬಗೆ: ಪಾದಗಳಿಂದ ಸಮವಾಗಿ ನಿಂತು ಮುಂದುಗಡೆಯಲ್ಲ ಭ್ರಮಣದಿಂದ ಪಾದಗಳ ಗತಿಯು ಆವದು ಅದು ಸುತ್ತುತಾನಕಯಂದು ಮತಱೂ (ವಿಧ್ವಟೀ. ೫-೧೭). [ಸುತ್ತು₂ + ತಾನಕ]

**ಸುತ್ತುಬರು** 'ಸುತ್ತುಂಬರ್' ನೋ.

**ಸುತ್ತುಬಳಸು** 'ಸುತ್ತುವಳಸು' ನೋ.

**ಸುತ್ತುಬೇಲಿ** 'ಸುತ್ತುವೇಲಿ' ನೋ.

**ಸುತ್ತುಮುತ್ತ** 'ಸುತ್ತುಮುತ್ತು' ನೋ.

**ಸುತ್ತುಮುತ್ತಲು** 'ಸುತ್ತುಮುತ್ತು' ಪರಾ.

**ಸುತ್ತುಮುತ್ತು,** ಸುತ್ತಮುತ್ತ, ಸುತ್ತುಮುತ್ತ (ನಾ). ೧. ಸುತ್ತಲೂ ಇರುವ ಪರಿಸರ; ನೆರೆಹೊರೆ: ಕೊಳಚೆಯೇ ನೊಣಗಳ ಹುಟ್ಟು ಮತ್ತು ಬೆಳವಣಿಗೆಗೆ ತಕ್ಕ ಸ್ಥಳವಾಗಿರುವುದರಿಂದ ಮನೆಯ ಸುತ್ತುಮುತ್ತು ಎಲ್ಲಿಯೂ ಕೊಳಚೆ ತುಂಬಲು ಬಿಡಬಾರದು (ಆಡುಸೌ. ೫೦); ಯಾಲಕ್ಕಿಯ ಗಿಡಗಳು ಭರತಖಂಡದಲ್ಲಿಯೂ ಅದರ ಸುತ್ತುಮುತ್ತಿನ ಸೆಕೆಯುಳ್ಳ ನಡುಗಡ್ಡೆಗಳಲ್ಲಿಯೂ ಹುಟ್ಟುತ್ತವೆ (ಮುಂಬಯಿ. ೬. ೬-೨೯). ೨. (ಅಲಂ) ದಿಗ್ಬಂಧನ; ನಿರ್ಬಂಧ: ಬಂಧಿಸಿ ಧರೆಯ ದಿಕ್ಪಾಲಕರ ದಿಕ್ಕರಿಯ ಸುತ್ತುಮುತ್ತಿನಲಿರಿಸಿ (ಗಗಗಾ. ೫-೨೨). **ಸುತ್ತಮುತ್ತ:** ೧. ಹತ್ತಿರದ ಸುತ್ತಮುತ್ತ ಹಳ್ಳಿಗಳಲ್ಲಿ ತಾವೂ ಭಿಕ್ಷೆಗೆ ಪ್ರಾರಂಭಿಸಿದರು (ಚಕಸ. ೧೩೨); ಅವರ ಚರಿತ್ರೆ ರಾಂಪುರದ ಸುತ್ತಮುತ್ತ ಹಳ್ಳಿಗಳಲ್ಲೆಲ್ಲ ಜನಜನಿತವಾಗಿತ್ತು (ಮರಳಿ. ೪). **ಸುತ್ತುಮುತ್ತ:** (ಕ).

**ಸುತ್ತುಮುತ್ತಲು, ಸುತ್ತಮುತ್ತಲು** = ಸುತ್ತಲೂ ಇರುವ ಪ್ರದೇಶ; ನೆರೆಹೊರೆ: ಮನೆಯ ಸುತ್ತುಮುತ್ತಲು ಶುಚಿಯಾಗಿರಬೇಕು (ರೂಢಿ); ನೊಳಂಬರು ವಿಶೇಷವಾಗಿ ಮಧುಗಿರಿ ಮತ್ತು ಸುತ್ತಮುತ್ತಲ ಪ್ರಾಂತ್ಯಗಳನ್ನು ಆಳಿದ ಮಹಾನಾಡ ಪ್ರಭುಗಳಾಗಿದ್ದರು (ನೊಳಂಬ. ೭೧). [ಸುತ್ತು₂ + ಮುತ್ತು₁]

**ಸುತ್ತುವರಿ,** ಸುತ್ತರಿ (ಕ್ರಿ). ಬಳಸು; ಸುತ್ತಿಕೊಳ್ಳು: ದುರದುರಿಪ ನೇತ್ರಂಗಳ ಕೋಡಿಯಿರದೊತ್ತರಿಸಿ ಸುತ್ತುವರಿಯೆ (ಚಬಪು. ೪೪-೪೧); ಅವಳು ತುಳಸಿಕಟ್ಟೆಯನ್ನು ಸುತ್ತುವರಿಯ ಹತ್ತಿದಳು (ಕೂಕಕಾ. ೭೫). **ಸುತ್ತರಿ:** ಅವನು ೧೧೨೪ ದಿವಸಗಳಲ್ಲಿ ಪೃಥ್ವಿಯನ್ನು ಸುತ್ತರಿದು ಬಂದನು (ಮುಂಬಯಿ. ೪-೭೯). [ಸುತ್ತು₂ + ಪರಿ₁]

**ಸುತ್ತುವರು** 'ಸುತ್ತುಂಬರ್' ನೋ.

**ಸುತ್ತುವಲಗೆ** (ನಾ). ದುಂಡಗಿರುವ ಹಲಗೆ; ಗುರಾಣಿ; ಢಾಲು: ಸುತ್ತುವಲಗೆಯ ಮೇಲೆ ಕಣೆಗಳ ತೆತ್ತಿಸಿದರೀಚಿಸಲಿ ಸಬಳಿಗರೆತ್ತಿದರು ರಾವುತರು ಕೀಲಿಸಿದರು ರಥಧ್ವಜವ (ಕುವ್ಯಾಗ. ೧-೮). [ಸುತ್ತು₂ + ಪಲಗೆ]

**ಸುತ್ತುವಲೆ** (ನಾ). ಒಂದು ಬಗೆಯ ಬಲೆ; ಸುತ್ತಲೂ ಹರಡುವ ಬಲೆ: ಪೆಂಪಿನಾಕಾಶವಲೆ ಸುತ್ತುವಲೆ ಸುಲಭವಲೆ (ರುಕ್ಮಾಂಗ. ೧೦-೧೯). [ಸುತ್ತು₂ + ಬಲೆ₁]

**ಸುತ್ತುವಳಯ** (ನಾ). ಸುತ್ತಲೂ ಇರುವ ಪ್ರದೇಶ; ವೃತ್ತ; ವರ್ತುಳ: "ಸುತ್ತು ವಳಯಂ ತಿರುಪು" (ಮಂಗರಾ. ೨೫-೯); ಸೇನೆಯ ಸುತ್ತುವಳಯದ ಭರವ ಕೈಕೊಂಡೊಡ್ಡ ಮೆಱೆದನು ಗರುಡಿಯಾಚಾರ್ಯ (ಕುವ್ಯಾದ್ರೋ. ೪-೧೮); ಪರಮಸತಿ ಸಾವಿತ್ರಿ ಸಂಧ್ಯಾತರುಣಿ ಮೊದಲಾದ ವಿಳದೇವಿಯರಿರವು ಕಾಣಿಸಿತಾದಿಲಕ್ಷ್ಮಿಯ ಸುತ್ತುವಳಯದಲಿ (ತೊರರಾ. ೧-೮-೪೯); ಮೈರೋಚಿಬೆಳಗಿಂ ಕೋಂಟೆ ಸುತ್ತುವಳಯದಿ ಕುಳಿತ ತೆರದಿ (ನವಪೂ. ೨-೨೫). [ಸುತ್ತು₂ + ವಳಯ (= ವಲಯ)]

**ಸುತ್ತುವಳಸು,** ಸುತ್ತುಬಳಸು (ನಾ). ೧. ಸುತ್ತಿಕೊಂಡಿರುವುದು; ಬಳಸಿರುವುದು: ಸುತ್ತುವಳಸಿನ ತೆರಸೀರೆ ಕಣ್ಗೆ ರಂಜಿಸಿತು (ಮೋಹತ. ೬೬-೭೯). **ಸುತ್ತುಬಳಸು:** ೨. ನೆರೆಹೊರೆ; ಪರಿಸರ: ಮನೆಯಲ್ಲಿ ಶಾಲೆಯಲ್ಲಿ ಮಕ್ಕಳ ಸುತ್ತುಬಳಸಿನಲ್ಲಿ ಉತ್ತಮ ರೀತಿ, ನೀತಿ, ನಡೆ, ನುಡಿ ಉಳ್ಳವರು ಇರಬೇಕು (ಗೃಹವಿ. ೧೩೦). ೩. ಸುತ್ತಿ, ಬಳಸಿ ಆಡುವ ಮಾತು; ಬಳಸುಮಾತು: ಸ್ನೇಹಿತರೊಡನೆ ಸಾರ್ವಜನಿಕರೊಡನೆ ವಿಳಂಬವಿಲ್ಲದೆ ಸುತ್ತುಬಳಸುಗಳಿಲ್ಲದೆ . . . ಪತ್ರವ್ಯವಹಾರ ನಡೆಸುತ್ತಿದ್ದನು (ಬಂಕಿಮ. ೪೮೮). [ಸುತ್ತು₂ + ಬಳಸು₁]

**ಸುತ್ತುವೀಳೆಯ,** ಸುತ್ತುವೀಳ್ಯ (ನಾ). ೧. ಅಡಿಕೆ ಮೊದಲಾದುವುಗಳನ್ನು ಸೇರಿಸಿ ಸುತ್ತಿದ ವೀಳೆಯದೆಲೆ: ಪುರುಷೋತ್ತಮಶಾಸ್ತ್ರಿಗಳು... ಸುತ್ತುವೀಳೆಯವನ್ನು ಸ್ವೀಕರಿಸಿ ಮನೆಗೆ ಹಿಂತಿರುಗಿದರು (ಶ್ರೀರಾಯ. ೭೧). ೨. (ಸವಿಯಲು ಸಿದ್ಧವಾದ) ತಾಂಬೂಲ; ಪಾನಪಟ್ಟಿ; ಬೀಡಾ: ಪರಿಪರಿಯ ಹಣ್ಣುಹಂಪಲುಗಳೂ, ಬಣ್ಣಗಟ್ಟಿದಡಕೆಯ ಸುತ್ತುವೀಳೆಯಗಳೂ . . . ಇಂತಿವನ್ನು ಅನುಗೆಯ್ಯುಕೊಳ್ಳುತ್ತ ನೋಂತ ಭಾಗ್ಯರ ಉಪಭೋಗಕ್ಕಳವಡಿಸಿಯೊಪ್ಪಿಸುವ ತವಕಕ್ಕಾಗಿ ಪದೆಪುಗಾರ್ತಿಯರು

ಸಿದ್ಧವಾಗಿರುವರು (ಬಟ್ಟೂಅ. ೮೩-೩). **ಸುತ್ತುವೀಳ್ಯ:** ೨. ಅರಸನೆಡೆಗೆ ಅನುಪಿದಳ್ ನವಮಲ್ಲಿಗೆಯಂಬ ಸತಿಕೈಲಿ ಸುತ್ತುವೀಳ್ಯ ಫಲಗಳನಿತ್ತು ಮುದದಿಂ (ಸೌಗಂಧಿ. ೧೨೦-೧೦).

[ಸುತ್ತು$_2$ + ವೀಳೆಯ]

**ಸುತ್ತುವೀಳ್ಯ** 'ಸುತ್ತುವೀಳೆಯ' ನೋ.

**ಸುತ್ತುವೇಲಿ, ಸುತ್ತುಬೇಲಿ** (ನಾ). ಸುತ್ತಲೂ ಇರುವ ಬೇಲಿ: ಕೇತಕಿ ಸುತ್ತುವೇಲಿ ಕಕ್ಕುಂದರಿಯಾಂತ ಕೋಟೆ ಮದನಂಗೆನೆ ಕಂಗೊಳಿಸಿರ್ದುದಾ ವನಂ (ವೃಷಪ. ೪-೩೪); ಈ ಸುತ್ತುವೇಲಿಗಳನ್ನೂ ಈ ತಳಿಮೇರುವೆಗಳನ್ನೂ ಕಟ್ಟುತ್ತಿರುವ ಮುತ್ತಿಗೆಯ ಸನ್ನಾಹಗಳನ್ನು ಕಂಡು (ಬಟ್ಟೂಅ. ೬೬-೭). **ಸುತ್ತುಬೇಲಿ :** ಸುತ್ತುಬೇಲಿಯೊಳಗೆ ಕಟ್ಟುಗೊಂಡ ಕುದುರೆ ತನ್ನ ಕಾಲಡಿಯ ಹುಲ್ಲನ್ನೆಲ್ಲ . . . ತಿಂದು (ಪುನರು. ೨೮೯).

[ಸುತ್ತು$_2$ + ಬೇಲಿ]

**ಸುತ್ತೇರು** 'ಸುತ್ತೇಱು' ನೋ.

**ಸುತ್ತೇಱು, ಸುತ್ತೇರು** (ಕ್ರಿ). ಸುತ್ತುತ್ತಿರುವಾಗಲೇ (ವಾಹನವನ್ನು) ಏರು,— ಹತ್ತು: ಒಂದೆ ಮೆಯ್ಯೊಳ್ ಸೂಳಱದೇಱುವ ಸುತ್ತೇಱುವ ಬಿತ್ತರಂಬಡೆದ ವಾಹಳಿತನ (ರಾಜಶೇ. ೬-೧೧ ವ). **ಸುತ್ತೇರು :** ಜೋಡಣೆಯ ಸರದಾಟುತವೆ ಗಾಲ್ಲೂಡಿದಬ್ಬರ ಹಿರಿದು ಕಿರಿದಿನ ಗಾಡಿಯಿಂ ಸುತ್ತೇರಿ ತಿರುಪಿನ ಮರುಪಿನಂದಗಳು (ಅನಂತಾ. ೧-೧೯-೧೪). [ಸುತ್ತು$_1$ + ಏಱು$_1$(< ಏಱ್$_1$)]

**ಸುತ್ತೋಲೆ** (ನಾ). ೧. ಸುರುಳಿ ಸುತ್ತಿದ ಓಲೆ,—ಪತ್ರ: ಉಕಾರಕ್ಕೆ — ಸುತ್ತೋಲೆ, ಹತ್ತೆಂಟು (ಶಮದ. ೫೨ ಪ್ರಯೋ); ಬಸವನ ಪತಾಕೆಯಂ ಪಿಡಿದು ಸುತ್ತೋಲೆಯಂ ಒಸೆದು ಕರದೊಳಗಾಂತು (ಪಾಸೋಪು. ೪-೧೧೯). ೨. ಸಾರ್ವಜನಿಕರ ತಿಳಿವಳಿಕೆಗಾಗಿ ಸರ್ಕಾರ ಅಥವಾ ಸಂಸ್ಥೆಗಳು ಹೊರಡಿಸುವ ಅಧಿಕೃತ ಪ್ರಕಟಣೆ; ಪರಿಪತ್ರ: ಸ್ಥಳೀಯ ಆಡಳಿತಗಾರರಿಗೆ ಸುತ್ತೋಲೆಗಳ . . . ಮೂಲಕ ವಿಶದವಾಗಿ ತಿಳಿಸುತ್ತಾರೆ (ಕವಿಕೋ. I, ೨೮೭). [ಸುತ್ತು$_2$ + ಓಲೆ]

**ಸುತ್ಥಣೆ** (ನಾ). ಪದಾತಿಬಲ; ಕಾಲ್ಬಲ; ಕಾಲಾಳು: ಬಲ್ಲಾಳ ಭೂಪಾಲಕಂ ಎರಡುಂ ಲಕ್ಕಂಬರಂ ಸುತ್ಥಣೆಯರಶನಿಸನ್ನಾಹದಿಂ . . . ಎಯ್ದರೆ (ಎಕ. XI, ದಾವಣ. ೨೫-೩೦; 1224); ವರ್ಗದ್ವಿತೀಯಾಕ್ಷರಂಗಳ್ಗೆ . . . ಥಟ್ಟು, ಥಾವನೆ, ಸುತ್ಥಣೆ (ಸುತ್ಥಣೆಯಂ, ಸತ್ಥಣೆ) ಮತ್ಥವಟ್ಟಗೆ, ಕಥಾಯಂ (ಕತ್ಥಾಯಂ) (ಶಮದ. ೧೫ ವೃತ್ತಿ). [< ಸುತ್ತು$_1$ + ಅಣೆ$_2$ (< ಅಣ್$_3$)]

**ಸುತ್ರಗುತ್ತಿಗೆ, ಸುತ್ರಗುತ್ತಗೆ** (ನಾ). ಒಂದು ಬಗೆಯ ಗುತ್ತಗೆ; ನಿಶ್ಚಿತ ಅವಧಿಯ ಗುತ್ತಿಗೆ; ಪರ್ಯಾಯಗುತ್ತಿಗೆ: ಆ ಸೀಮೆಗೆ ಗದ್ದೆ ತೋಟ ಮರ ಮಗ್ಗವಣ ಕಿಱುಕುಳ ಸೂನ್ನಾದಾಯ ಸುತ್ರಗುತ್ತಿಗೆ ಯಿ ಯೊಳಗಾಗಿ (ಎಕ. VII (R), ಮಳವ. ೧೦-೧೦;1517). **ಸುತ್ರಗುತ್ತಗೆ:** ಸೀಮೆಯ ವೊಳಗಣ ಗಣ ಹಳನವು ನಿಮಗೆ ಸುತ್ರಗುತ್ತಗೆಯಗಿ ಕೊಟವಾಗಿ (ಎಕ. VII (R), ಮಳವ. ೧೧೮-೧೦; 13 ನೆಯ ಶತ).

[< ಸೂತ್ರಗುತ್ತಗೆ]

**ಸುತ್ರಾಮ** (ನಾ). ದೇವತೆಗಳ ಒಡೆಯ; ದೇವೇಂದ್ರ: ಸುತ್ರಾಮನ ಸೂತ್ರಧಾರನಾಗಿಯುಂ (ಆದಿಪು. ೬-೧೧೬ ವ); ನೀ ಮರುಳಲಾ ಶಲ್ಯ ಫಡ ಸುತ್ರಾಮನೇ ಸಮವರ್ತಿಯೇ . . . ಭೀಮನುಱುಬೆಗೆ ಖೇಡನಾದೆಯಲ (ಕುಮ್ಮಾಕ. ೧೨-೧೭).

[ಸಂ. ಸುತ್ರಾಮನ್]

**ಸುತ್ರಾಮಜಿತ** (ನಾ). ಇಂದ್ರನನ್ನು ಗೆದ್ದವನು: ಸುತ್ರಾಮಜಿತನು . . . ಕೂಡಲಸಂಗಯ್ಯನು (ಬಸವ. ೯೫೪). [ಸಂ. ಸುತ್ರಾಮಜಿತ್]

**ಸುತ್ರಗುತ್ತಗೆ** 'ಸುತ್ರಗುತ್ತಿಗೆ' ನೋ.

**ಸುತ್ವ** (ನಾ). = ಸುಕಾರ: ಹೇತುವಿನೊಳಾದ ಇಸುವಿನ ಸುಕಾರಕ್ಕೆ ಕುಂ ಪರಮಾಗೆ ಆ ಸುತ್ವಕ್ಕೆ ಲೋಪಮಕ್ಕುಂ (ಶಮದ. ೨೨೮ ವೃತ್ತಿ). [ಸಂ.]

**ಸುದತಿ** (ನಾ). ಸುಂದರವಾದ ಹಲ್ಲುಗಳನ್ನುಳ್ಳವಳು; ಚೆಲುವೆ: ನೆರೆದೀತ ನೊಳವನಿಪ ಸುಂದರನೊಳ್ ಪುಗೆ ರಾಜಗೃಹ ಗೃಹಾಳಿಗವಾಕ್ಷಾಂತರಕೃತ ಸರೋಜ ಮೆನಿಸುವ ಪುರಾಂಗನಾನಯನಸುಖಮನೊದವಿಸು ಸುದತೀ (ಶಾಂತಿಪು. ೫-೧೧೯); ಸುದತಿ ನೋಡಧಿಕ ಗುರ್ವಾಜ್ಞೆಯಂ ಮಱೆದು ಮಾಱಿದ ಫಲಂ ಕಂಡ ದುಸ್ವಪ್ನದರ್ಥಂ ಬರುತ್ತಿದೆ ಮೂರ್ತಿಗೊಂಡು (ಹಚಿಕಾ. ೮-೨); ಇದಿರು ಬಂದರು ಮಂತ್ರಿಗಳು ವರ ಸುದತಿಯರು ಸೂಸಿದರು ಸೇಸೆಯ (ಕುಮ್ಮಾವಿ. ೯-೨೪). [ಸಂ. ಸುದತೀ]

**ಸುದರುಶನ** (ನಾ). ವಿಷ್ಣುವಿನ ಕೈಯಲ್ಲಿರುವ ಆಯುಧ; ಚಕ್ರಾಯುಧ: ಕೊರಳ ತುಲಸಿಯ ಮಾಲೆಗಳ . . . ವರ ಸುದರುಶನ ಲಾಂಛನದ ಮೈಸಿರಿಯೊಳೆಲ್ಲರು ಹರಿಯ ನಾಮಸ್ಮರಣೆಯಲಿ ಮೈಮರೆದು ಕುಣಿವುತಲಿರ್ದರು (ಅನಂತಾ. ೧-೫-೪೩).

[< ಸಂ. ಸುದರ್ಶನ]

**ಸುದರ್ಶನ** (ನಾ). ೧. ಒಳ್ಳೆಯ ನೋಟ. ೨. ನೋಡಲು ಸುಂದರವಾಗಿ ರುವವನು; ಚೆಲುವ. ೩. ವಿಷ್ಣುವಿನ ಕೈಯಲ್ಲಿರುವ ಆಯುಧಗಳಲ್ಲಿ ಒಂದು; ಚಕ್ರಾಯುಧ: "ನಾರಾಯಣನ ಚಕ್ರಮಂ ಸುದರ್ಶನಮೆಂಬುದು" (ಹಲಾಯು. ೬-೨೭); ದೇವ ದನುಜಾಹತ ಸುದರ್ಶನೋದ್ಯಮನ ಜಯ (ಜಗವಿ. ೫-೧೧೩); ಧನುವ ಶಸ್ತ್ರಾಸ್ತ್ರವ ಸುದರ್ಶನ ಕನಕ ಕವಚ ಕೃಪಾಣವನು ಸ್ಯಂದನದೊಳಿಳುಹೆಂದಸುರರಿಪು ಸಾತ್ಯಕಿಗೆ ನೇಮಿಸಿದ (ಕುಮ್ಮಾಉ. ೭-೬). ೧, ೩: ಸ್ವಸ್ತಿಶ್ರೀಪ್ರಿಯನರ್ಜುನೋರ್ಜಿತಯಶಂ . . . ಸೂಕ್ತಸುದರ್ಶನಾಂಕನೆಸೆದಂ ಶ್ರೀವಿಷ್ಣು ಸಾಮ್ರಾಜ್ಯಯಂ (ಎಕ. V, ಬೇಲೂರು. ೧೧೪-೪; 1173). ೪. ರಣಹದ್ದು. ೫. ಹಂಸಧ್ವಜನ ಒಬ್ಬ ಮಗನ ಹೆಸರು: ಆತಂಗೆ . . . ಅನುಜರೇಳುಮಂದಿ ಜಾತರ್ಸುದರ್ಶನಸುಧನ್ವಸುಮನಸ್ಸುರಥರೀ ತೆಱದೆ ನಾಲ್ವರು (ಜೈಮಿಭಾ. ೧೦-೪೪). [ಸಂ.]

**ಸುದರ್ಶನಪಾಣಿ** (ನಾ). ಸುದರ್ಶನಚಕ್ರವನ್ನು ಕೈಯಲ್ಲಿ ಹಿಡಿದವನು; ವಿಷ್ಣು: ಜಾಣಪಣವಿದು ಶಿವ ಸುದರ್ಶನಪಾಣಿಗಳಿಗಹುದಮರಪತಿ ಪದದಾಣೆ ಹುಸಿಯಲ್ಲೆನುತ ಬೆಱಗಾಯ್ತು ಸುರಕಟಕ (ಕುಮ್ಮಾವಿ. ೭-೪೫); ಕ್ಷೋಣಿಪತಿ ಸುಲಲಿತ ಸುದರ್ಶನಪಾಣಿ ಪಾಂಡವರಾಜಕಾರ್ಯಧುರೀಣ . . . ರಕ್ಷಿಸು (ಹರಿಸಾ. ೧೩). [ಸಂ.]

**ಸುದರ್ಶನಬಳ್ಳಿ** (ನಾ). ಒಂದು ಬಗೆಯ ಬಳ್ಳಿ: (ಮೃಡಿಗಿ. ೭೫-೧೫೨೭).

[ಸುದರ್ಶನ$_2$ + ಬಳ್ಳಿ]

**ಸುದಾ, ಸುದ್ದಾ, ಸುದ್ಧಾ, ಸುಧ, ಸುಧಾ** (ಅ). ಸಹಿತ; ಕೂಡ; ಸಂಗಡ: ನಾವು ಕಬೂಲಾಗಿ ಕಿಲ್ಲತ್ತು ಉಡುಗರೆ ರಸ್ತುಸಹ ಸುದಾ ವೀಳ್ಯಪ್ರಸ್ತವು ಚನ್ನಾಗಿ ದಸ್ತೂರಿ ಪ್ರಕಾರ ಮಾಡಿ ಇದ್ದೇವೆ (ರಾಜೇಂದ್ರ. ೧೧೩); ಇಂಥಾ ಹೆಂಗಸು ಸುದಾ ಲೋಕದಲ್ಲಿ ಉಂಟೋ ಎಂದು ನಿಟ್ಟುಸಿರುಬಿಟ್ಟು ಸುಮ್ಮನಾದನು (ಕಥಾಮಂ. IV, ೧೫); ಅರ್ಜಿಪಟ್ಟಿ ಸುದಾ ಪರಾಂಬರಿಸಿ (ಮಹಾವಂ. II, ೭೯). **ಸುದ್ದಾ :** ಅವರನು ಯಾರನೂ ನಾ ನೋಡಿಲ್ಲ ಸುದ್ದಾ ಧಾರವಾಡನೂ ನನಗೆ ಗೊತ್ತಿಲ್ಲ (ಬೀಲಕ. ೩೦); ಅದು ರೇಶಿಮೆಯ ಹೆಸರು ಸುದ್ದಾ ಅಲ್ಲಾ ಆದರೆ ಅದು ಹುಟ್ಟಿಸುವವನ ಹೆಸರು (ಮುಂಬಮ್ಮಾ. ೨೭ ಪ್ರಸ್ತಾವನೆ). **ಸುದ್ಧಾ :** (೬). **ಸುಧ :** ಅವನು ಹುಟ್ಟಿದ ಮನೆಯಿದ್ದ ವಠಾರವನ್ನೂ ಸುಧ ನೋಡಿದ್ದೆ (ಕೆಲಸ. ೩.೨೩). **ಸುಧಾ :** (೬). [<— ಹಿಂ. ಸುದ್ಧಾ; ಮರಾ. ಸುದ್ಧಾ, ಸುದ್ಧಾಂ./ ತುಳು. ಸುದ, ಸುದಾ./ ಸಂ. ಸಹ]

**ಸುದಾಮ** (ನಾ). ೧. ಕೊಡುಗೈಯವನು; ಧಾರಾಳಿ. ೨. ಮೋಡ; ಮೇಘ. ೩. ಕಡಲು; ಸಮುದ್ರ. ೪. ಬೆಟ್ಟ; ಪರ್ವತ. ೫. ಇಂದ್ರನ ಆನೆ. ೬. ಕೃಷ್ಣನ ಬಾಲ್ಯಮಿತ್ರನಾಗಿದ್ದ ಒಬ್ಬ ಬ್ರಾಹ್ಮಣನ ಹೆಸರು: ಹರುಷವಿಮ್ಮಡಿಸಿತು ಸುದಾಮಗೆ (ಸುದಾಮ. ೨-೧೫). 'ಕುಚೇಲ' ಪರಾ. [ಸಂ. ಸುದಾಮನ್]

**ಸುದಾಯ** (ನಾ). ಮದುಮಕ್ಕಳಿಗೆ ಕೊಡುವ ಬಳುವಳಿ,—ಉಡುಗೊರೆ: "ಯೌತಕಂ, ಸುದಾಯಃ. . . ಮಗಳಿಗೂ ಅಳಿಯನಿಗೂ ಕೊಡತಕ್ಕ ಬಳವಳಿ ಮುಂತಾದ ಬಹುಮಾನಕ್ಕೆ ಹೆಸರುಗಳು" (ಸಿದ್ಧಾಂತಿ. ೨೪೩). [ಸಂ.]

**ಸುದಿನ** (ನಾ). ೧. ಒಳ್ಳೆಯ ದಿನ; ಪವಿತ್ರವಾದ ದಿವಸ. ೨. ಸಂತೋಷದ ದಿನ; ಆನಂದದ ದಿವಸ: ಇದೇ ಮಹಾಸುದಿನ (ರೂಢಿ). ೩. ಒಳ್ಳೆಯ ವಾಯುಗುಣವಿರುವ ದಿನ; ಒಳ್ಳೆಯ ಹವಾಮಾನವಿರುವ ದಿವಸ. 'ದುರ್ದಿನ' ಪರಾ. [ಸಂ.]

**ಸುದೀನ** (ನಾ). ಬಹಳ ದೀನತೆಯಲ್ಲಿರುವವನು; ಅತಿದೀನ: ದುರ್ಮತಿಗಳಂ ಸ್ಮರಿಸಿ ಸುಕೃತರಂ ಮಾಡಿ ಎಮ್ಮುವನಸಮುಮಹಿಮೋದ್ಧಾರ ಸೂರ ಸುದೀನ ಜನಧಾರ [ಪಾಠಾಂ. ಸುಧೀಜನಾಧಾರ] (ಬಸಪು. ೩.೨-೬೨). [ಸಂ.]

**ಸುದೀಪ್ತಿ** (ನಾ). ಬಹಳ ಕಾಂತಿ; ಅತಿಯಾದ ಪ್ರಭೆ: ಸೊಡರಂ ಪೊತ್ತಿಸಿದನ್ನೊಂದಂ ತದೀಯೋದಾತ್ತದೀಪ ಸುದೀಪ್ತಿಯಂ ತಾನಿದ್ದ ಮನೆಯಲ್ಲಿ (ಬಸಪು. ೩-೬). [ಸಂ.]

**ಸುದೀರ್ಘ** (ಗು). ೧. ಬಹಳ ದೀರ್ಘವಾದ; ತುಂಬ ದೊಡ್ಡದಾದ: ಊರಿನಿಂದ ಒಂದು ಸುದೀರ್ಘ ಪತ್ರ ಬಂದಿತು (ರೂಢಿ). (ನಾ). ೨. ಒಂದು ನರಕದ ಹೆಸರು: ಸುದೀರ್ಘ . . . ಸುವುನವೆಂಬೈದು ಮಂತ್ರಿನರಕಂಗಳೊಡನೆ ಭಯೋತ್ಕಟವೆಂಬರಸುನರಕವಿಹುದು (ವಿವೇಕ. ೧೫೨). [ಸಂ.]

**ಸುದುರ್ಗ** (ನಾ). ಒಳ್ಳೆಯ ಕೋಟೆ; ಭದ್ರವಾದ ದುರ್ಗ: ದೇಶಂ ಧರ್ಮೋಪಪನ್ನಂ ಶ್ರುತಬಲಮ ಬಲಂ ಕೋಶಮುದ್ಯೋಧಕೋಶಂ ಸೌಶೀಲ್ಯಂ ಸತ್ಸಹಾಯಂ ಸಚಿವನುವ ಶಮಂ ಜೈನಮಾರ್ಗಂ ಸುದುರ್ಗಂ ಭೂ ಶಸ್ತ್ರಾಗಾರಮಾದತ್ತನೆ . . . ಎಸೆದಂ ವೀರನಂದಿವ್ರತೀಂದ್ರಂ (ಚಂದ್ರಪ್ರ. ೧-೨೯). [ಸಂ.]

**ಸುದೂರ** (ನಾ). ತುಂಬ ದೂರವಾದುದು; ಬಹಳ ದೂರ: ಒಡನೊಡನೆ ಪೂರ್ವದ ಸುದೂರದ ದಿಗಂತದೆಡೆ ಕತ್ತಲೆಯ ಕಾಡಿನಂಚಿಗೆ ಬೆಂಕಿ ಹತ್ತಿತು (ಚಿತ್ರಾಂಗ. ೨೦-೫೫೩). [ಸಂ.]

**ಸುದೃಢ** (ಗು). ೧. ಬಹಳ ಗಾಢವಾದ,—ಭದ್ರವಾದ: ಸುದೃಢೋದಗ್ರಚಂತ್ರ ಮೋಹನಿಗಳಂ ವೈರಾಗ್ಯಮೆಂಬೊಂದು ಚಾಣದೆ ವಿಚ್ಛೇದಮನೆಯ್ದೆ (ಪಾರ್ಶ್ವಪು. ೬-೫೯). ೨. ಬಹಳ ಸ್ಥಿರವಾದ; ಅಚಲವಾದ: ಸುದೃಢಾಭ್ಯಾಸಪುಃಶಿಪ್ರಕಾಶ ಲಘು ವಾತಾಧಾರದಿಂ ನಿತ್ಯಸೌಖ್ಯದಶಾಲಕ್ಷ್ಮಿಯ ಚಿತ್ರಮಂ ಪಡೆವ ಮೂಱುಂ ರತ್ನಮಂ ಕೆಯ್ಸೆ ಮಾಡಿದನುಂ (ಅನಂಪು. ೪-೧೧). [ಸಂ.]

**ಸುದೃಷ್ಟಿ** (ನಾ). ಒಳ್ಳೆಯ ನೋಟ; ಉತ್ತಮವಾದ ದೃಷ್ಟಿ: ಕೆಟ್ಟ ಕುಗುಡಗೆ ಸುದೃಷ್ಟಿ ಬಂದಂತಾಯ್ತು (ಕರ್ನಾಕ. ೨೯೬). [ಸಂ.]

**ಸುದೆ** 'ಸೊದೆ' ನೋ.

**ಸುದೈವ** (ನಾ). ಒಳ್ಳೆಯ ದೈವ; ಅದೃಷ್ಟ: ಭಯಂಕರ ವಿಪತ್ತಿನಿಂದ ಪಾರಾದದ್ದು ಅವರ ಸುದೈವ (ರೂಢಿ). [ಸಂ.]

**ಸುದೈವಜ್ಞ** (ನಾ). ಉತ್ತಮ ಜ್ಯೋತಿಷಿ: "ಸುದೈವಜ್ಞನುತ್ತಮಜ್ಯೋತಿಷನೆನಿಕ್ಕು" (ಮಂಗರಾ. ೭೫-೬). [ಸಂ.]

**ಸುದ್ದ** (ಗು). ೧. ನಿರ್ಮಲವಾದ; ಶುದ್ಧವಾದ: 'ಸುದ್ದಗನ್ನಡ' ಪರಾ. (ನಾ). ೨. ಶುದ್ಧತೆ; ಚೊಕ್ಕಟತನ: 'ಸುದ್ದಯಿಸು' ಪರಾ. ೩. ಲಕ್ಷಣವಾಗಿರುವುದು; ಶುಭವಾಗಿರುವುದು: ಬಾರಮ್ಮ ಗಿರಿಜಮ್ಮ ಭಾವಾ ನೋಡ್ಯಾರಂತೆ ಅಂಗಾಲಪದ್ಮಾ ಸುಳಿಸುದ್ದಾ (ಹುಟ್ಟುಹ. ೫೬). [< ಸಂ. ಶುದ್ಧ]

**ಸುದ್ದಂವಡೆಯ** (ನಾ). ಒಬ್ಬಾತನ ಹೆಸರು: ಮಾಣಗ ಬಸುಣ್ಣ ಪೇಸುವ ಚಲಭೂಷಣನೆಬ್ಬು X ಪರಾಕ್ರಮನ ಪುಡಿದ ಕಲ್ಲು ಕೊತ್ತಟಿ ಸುದ್ದಂವಡೆಯರಂ ಮಂಗಳಂ (ಎಕ. X, ಶಿಡ್ಲಘ. ೧೨-೫; ಸು. 800). [ಸುದ್ದ? + < ಒಡೆಯ₁]

**ಸುದ್ದಗನ್ನಡ** (ನಾ). ಶುದ್ಧವಾದ ಕನ್ನಡ; ತಿಳಿಗನ್ನಡ: ಸಕ್ಕದಮಂ ಪೇಟ್ವೊಡೆ ನೆಟ್ ಸಕ್ಕದಮಂ ಪೇಟ್ಗೆ ಸುದ್ದಗನ್ನಡದೊಳ್ತಂದಿಕ್ಕುವುದೇ ಸಕ್ಕದಮಂ (ಧರ್ಮಾಮೃ. ೧-೪೨). [ಸುದ್ದ + ಕನ್ನಡ₁]

**ಸುದ್ದಗೆ, ಶುದ್ಧಗೆ** (ನಾ). ೧. [ವ್ಯಾಕ] ಮೂಲಾಕ್ಷರ; ಶುದ್ಧಾಕ್ಷರ: "ಅಕ್ಕರಮಂ ನುಡಿ ಸುದ್ದಗೆಯೆಂದು" (ಚತುಃ. ೧೧೨); ಬರೆಯದೆ ಬಂದ ಸುದ್ದಗೆ[ಯೆ] ಸೂತ್ರಮನೊಂದೆ ಮುಹೂರ್ತಮಾತ್ರದಿಂ ಬರಿಸಿದುದು (ಶಂಪಭಾ.೨-೩೪); ನೀನೋದಲ್ಲೇಟ್ಟುದು ಸುದ್ದಗೆಯಂ ಬರೆಯಿಮೆಂದೊಡೆ ಆನೀ ಕಿಱುಗೂಸುಗಳಂತೆ ಸುದ್ದಗೆಯಂ ಬರೆವೆಂ ಗಡ (ಜೀವಸಂ. ೧೬೨-೧೩); ಷಡ್ಕದನನಂ ಗದ್ದುಗೆಯೊಳಿರಿಸಿ ಸುದ್ದಗೆಯೊಳಗ್ಗದ ಬಿಣ್ಪನೋಂಕಾರಮಂ ಬರೆಯಲು (ಭಾವಚಿಂ. ೧-೩೮). **ಶುದ್ಧಗೆ:** ೧. ಪಿತೃವಿರ್ದೋದಿಸುವಂದು ಶುದ್ಧಗೆಯೊಳಾ ಸಿದ್ಧಂ ನಮೋಯೆಂಬ ವಿಶ್ರುತವರ್ಣಂಗಳನಾದೊಡಂ ಬರೆದಿರಿಲ್ಲೊಂ (ಸುಕುಮಾ. ೨-೩೬); ಕವಿಗಳ್ ಸ್ವರದಿಂ ವರ್ಗದಿನವರ್ಗದಿಂ ಯೋಗವಾಹದಿಂ ದೇಶಿಯೊಳುದ್ಭವಮಪ್ಪ ವರ್ಣದಿಂ ಪಂಚವಿಧಂ ತಾನೆಂದು ತಿಳಿಪುವರ್ ಶುದ್ಧಗೆಯಂ (ಶಮದ. ೩೦); ವಿರಹಿ ವಿಹಂಗದ ಕಾಳ್ಕಿಚ್ಚಗಳೊ ಸ್ವರಗುಣಿಸುವ ಶುದ್ಧಗೆಯೊ . . . ಕುರುಳೋಳಿಯಾ ಕೋಮಲೆಗೆ (ಶ್ರೀಪಾಲ. ೩-೬೬). ೨. (ಅಲಂ) ಅತಿಸುಲಭ: ಕನಸಂತರಕ್ಷಮಂಗಧ್ವನಿ ಕಾರೇಳು ಕಲಿಸಲಕ್ಷಣಂ ಮತ್ತಂ ಮೇದಿನಿ ಕಂಪಮೆಂಬವಷ್ಟಂಗ ನಿಮಿತ್ತಂ ಬಗೆವೊಡವರ್ಗೆ ಶುದ್ಧಗೆಯಲ್ತೆ (?) (ಧರ್ಮಾಮೃ. ೫-೧೫೪). [< ಸಂ. ಶುದ್ಧಕ]

**ಸುದ್ದಯಿಸು, ಸುದ್ದೈಸ್ಸು, ಸುದ್ದೈಸು** (ಕ್ರಿ). ನಿರ್ಮಲಗೊಳಿಸು; ಶುದ್ಧಗೊಳಿಸು: ಪೂರ್ವಕ್ಕೆ ತಾಳಾಗಿ ಉತ್ತರಕ್ಕೆ ತಲೆಯಾಗಿ ಬಿದ್ದ ವಾಗನ ತಂದು ಬುದ್ಧಿಯ ಕಾರುಕನ ಕೈಯಲ್ಲಿ ಸುಬುದ್ಧಿಸಿ ಬಂದಿ ಸುದ್ದಯಿಸಿ [ಪಾ. ಸುದ್ದೈಸಿ] (ಸರ್ವವ. ೧೦೫-೫೬೭; ಸಕವ.ಕ. III, ೪೭-೮೬ ನೋ). **ಸುದ್ದೈಸ್ಸು:** ಅಷ್ಟಕುಳಗಳ ಮೆಟ್ಟಿ ಸುಟ್ಟು ಸುದ್ದೈಸಲಾ ಬಟ್ಟ ಬಯಲಿನ ಘಟ್ಟಿ ದೃಷ್ಟವಾಗಿ (ಪದಗೋ. ೭-೯೧). **ಸುದ್ದೈಸು:** ಬುದ್ಧಿಮನಚಿತ್ತಗಳ ಸುದ್ದೈಸಿ - ಶರಣರು ತಿದ್ದಿ ಬರೆಸಿದರು ಪುರಾಣವ (ಸಿದ್ಧ. ೫೦೯-೩ ಜಯಮಂಗಳ).

[ಸುದ್ದ + - ಇಸು₃]

**ಸುದ್ದಾ** 'ಸುದಾ' ನೋ.

**ಸುದ್ದಿ, ಸುದ್ಧಿ, ಸೋದೆ** (ನಾ). ೧. ನಿರ್ಮಲವಾದುದು; ತಿಳಿಯಾದುದು; ಶುದ್ಧವಾದುದು: ಶಕಾರಕ್ಕೆ . . . ಶುದ್ಧಿ — ಸುದ್ದಿ (ಶಮದ. ೨೫೩ ಪ್ರಯೋ). ೨. ಸಂದರ್ಭಗಳ ಸರಿಯಾದ ತಿಳಿವಳಿಕೆ; ಸೂಕ್ತವಾದ ಸಾಂದರ್ಭಿಕಜ್ಞಾನ. ೩. ವಾರ್ತೆ; ಸಮಾಚಾರ: ವೇದವೆಂಬುದು ಓದಿನ ಮಾತು ಶಾಸ್ತ್ರವೆಂಬುದು ಸಂತೆಯ ಸು[ಪಾಠಾಂ. ಶು]ದ್ದಿ ಪುರಾಣವೆಂಬುದು ಪುಂಡರ ಗೋಷ್ಠಿ (ಅವಸ. ೧೦೩-೪೬೫); ವಾದಿಯ ಗೀದಿಯ ಸುದ್ದಿ ಬರ್ಪುದಿದು ಚೋದ್ಯಮಲ್ತೆ (ಪದ್ಮರಾ. ೯-೧೩); ಏನು ಸುದ್ದಿ [ಪಾಠಾಂ. ಸಿದ್ಧಿ]ಯುಪಾಧ್ಯರೆದ್ದಿರಿ (ಸಂಭಪ. ೧೦-೧೧); ಸಿದ್ಧಾಂತಯೋಗದ ಸುದ್ದಿಯನು ತಿಳುಹುವೆನು (ಸರ್ವಜ್ಞ. ೫೬೨). ೪. (ಅಲಂ) ಗೊಡವೆ; ಗೋಜು: ನನ್ನ ಸುದ್ದಿಗೆ ಬಂದರೆ ಸುಮ್ಮನೆ ಬಿಡುವುದಿಲ್ಲ (ಆಪ್ರ). ಸುದ್ಧಿ : ೩. 'ಸುದ್ಧಿಕಾಱ' ಪರಾ. **ಸೋದೆ:** ೪. ನಿತ್ಯನೈಮಿತ್ತಕರ್ಮಂಗಳಾ ಸೋದೆಯಂ ಬಿಟ್ಟು ದ್ವಿಜವೇಷದಿಂ ಸಂಚರಿಪರು (ವಂಕಾರಾ. ೫-೨೨-೧೧).

**ಸುದ್ದಿಸೂರು** = ವಾರ್ತೆ; ಸಮಾಚಾರ: ಇಂಥಲ್ಲ ಊರಿನ ಸುದ್ದಿಸೂರುಗಳ ಎಡೆಯಲ್ಲಿ ಮಹಾಯುದ್ಧದ ವಾರ್ತೆಯೂ ಸೇರಿಕೊಂಡು (ಜಾರುದಾ. ೧೧೬); ಚೆನ್ನಪ್ಪನ ಮಾತು-ಕತೆ, ಸುದ್ದಿ— ಸೂರು ಇಂದು ದಿನಕ್ಕಿಂತ ಹೆಚ್ಚಾಗಿದ್ದುವು (ಜನಜೀ. ೪೧); ವೀಳೆಯದ ಹರಿವಾಣ ಮುಂದಕ್ಕಿರಿಸಿಕೊಂಡು, ಊರಿನ ಸುದ್ದಿ-ಸೂರುಗಳ ವಿಚಾರದಲ್ಲಿ ಮಾತನಾಡುತ್ತಿದ್ದು (ಕೃಷ್ಣಕೂ. ೧೨೦).

[< ಪ್ರಾ. ಸುದ್ಧಿ./ ಸಂ. ಶುದ್ಧಿ./ ತಮಿ. ಚುತ್ತಿ; ತೆಲು. ಸುದಿ; ಕೊಂಕಣ. ಸುದ್ದಿ]

**ಸುದ್ದಿಗಾರ, ಸುದ್ಧಿಕಾಱ** (ನಾ). ವಾರ್ತೆಯನ್ನು ತರುವವನು; ದೂತ: ಸುದ್ದಿಗಾರನು ಹುಟ್ಟುಹಾಕುತ್ತಿದ್ದ (ಮಹಾಕ್ಷಾ. ೧೨೦); ಸುದ್ದಿಗಾರರಲ್ಲಿಯೂ ಇನ್ನೊಂದು ಜಾತಿ (ಘುಟ್ಟುಹು. ೯೯). **ಸುದ್ಧಿಕಾಱ:** ವೀರನೊಳಂಬಂ ವೀರಮೇಳಾಪಕರೊಳಿರ್ದ್ದು ವಾರ್ತ್ತಾಪ್ರಪಂಚಮಂ ತಂತಮ್ಮ ಸುದ್ಧಿಕಾಱಿಂ ಕೇಟ್ಟು (ಸೌಇಇ. XX, ೪೯-೨೩; 1076?).

[ಸುದ್ದಿ + - ಗಾರ (< - ಕಾಱ)]

**ಸುದ್ದಿಗೇಳ್** (ಕ್ರಿ). ವಾರ್ತೆಯನ್ನು ಕೇಳು; ಸಮಾಚಾರವನ್ನು ಆಲಿಸು: ಅರಸಿಯ ಸುದ್ದಿಗೇಳ್ದುಸಿರದಿರ್ಪುದು ಪಾಟಿಯೆ (ಶಂರಾಮಾ. ೧೦-೬೨). [ಸುದ್ದಿ + ಕೇಳ್]

**ಸುದ್ದಿಗೊಡು** (ಕ್ರಿ). ವಾರ್ತೆಯನ್ನು ಕೊಡು; ಸಮಾಚಾರವನ್ನು ನೀಡು: ನೆಟ್ಟನೆ ಚಾವಡಿಗೆ ಹೋಗಿ, ಸುದ್ದಿಗೊಟ್ಟು ಬೇಹನ್ನು ಬರೆಯಿಸದೆ . . .ನಿಂತಿರಿ! (ಚಟ್ಟಅ. ೫೧-೫೦). [ಸುದ್ದಿ + ಕೊಡು₁]

**ಸುದ್ದಿಬಡಿ** (ಕ್ರಿ). (ಅಲಂ) ವಾರ್ತೆಯು ತಲುಪು; ಸಮಾಚಾರ ಮುಟ್ಟು: ಮುಂಭಾನೆ ತಿರುಗಿ ಹೋದ ಎಂದು ಆತನಿಗೆ ಸುದ್ದಿಬಡಿಯಿತು (ಜಮಾನ್ಯಾ. ೧೪೮).

[ಸುದ್ದಿ + ಬಡಿ₁]

**ಸುದ್ದಿವಾಹಕ** (ನಾ). ವಾರ್ತೆಯನ್ನು ತೆಗೆದುಕೊಂಡು ಹೋಗುವವನು: ಒಲಂಪಿಕ್ ಆಟಗಳು ಮುಕ್ತಾಯವಾದ ಮೇಲೆ ವಿಶೇಷ ಸುದ್ದಿವಾಹಕರು ಗ್ರೀಸಿನ ಊರೂರುಗಳಲ್ಲಿ ಸಂಚರಿಸುತ್ತಿದ್ದರು (ಕಪಪು. ೬-೧೨೭). [ಸುದ್ದಿ + ವಾಹಕ]

**ಸುದ್ದೆ** (ನಾ). (ಶುದ್ಧವಾದ) ಬಿಳುಪಾದ ಮಣ್ಣು: 'ಸುದ್ದೆಮಣ್ಣು' ಪರಾ.

[< ಸಂ. ಶುದ್ಧ./ ತೆಲು. ಸುದ್ದ]

**ಸುದ್ದೆಮಣ್ಣು** (ನಾ). ಬಿಳಿಯಬಣ್ಣದ ಒಂದು ರೀತಿಯ ಮೃದುವಾದ ಮಣ್ಣು: ಅದರಲ್ಲಿ ಸುದ್ದೆಮಣ್ಣು ಬೆರೆದಿರಬಾರದು (ಶಿಲ್ಪನಾ. ೨೮೪); ಇವಳು ಕಾಲುಚಾರಿ ಕೆಸರಿನಲ್ಲಿ ಬಿದ್ದಳು. ಬಟ್ಟೆಯೆಲ್ಲ ಸುದ್ದೆಮಣ್ಣಾಯಿತು (ಹಸುಹೂ. ೨೩). [ಸುದ್ದೆ + ಮಣ್ಣು (< ಮಣ್)]

**ಸುದ್ದೈಸು** 'ಸುದ್ದಯಿಸು' ನೋ.

**ಸುದ್ಧಾ** 'ಸುದಾ' ನೋ.

**ಸುದ್ಧಿ** 'ಸುದ್ದಿ' ನೋ.

**ಸುದ್ಧಿಕಾಜಿ** 'ಸುದ್ದಿಗಾರ' ನೋ.

**ಸುದ್ಧೈಸು** 'ಸುದ್ದಯಿಸು' ನೋ.

**ಸುದ್ರಕ** (ನಾ). ಒಬ್ಬಾತನ ಹೆಸರು: ಗೊನ್ನಿಸುತರಿಂ ಪರಾಕ್ರಮನ್ ಬಲ್ಲಡೆ ಸು(ಶೂ)ದ್ರಕನ್ (ಎಇ. XXIV, ೧೯೬-೭; 892). 'ಸೂದ್ರಕಯ್ಯ' ಪರಾ. [IP ಇದು 'ಶೂದ್ರಕ' ಎಂಬ ಶಬ್ದದ ಅಪಲಿಖಿತ]

**ಸುಧ** 'ಸುದಾ' ನೋ.

**ಸುಧನ್ವ** (ನಾ). ೧. ಒಳ್ಳೆಯ ಬಿಲ್ಲುಗಾರ. ೨. ಹಂಸಧ್ವಜನ ಒಬ್ಬ ಮಗನ ಹೆಸರು: ಜಾತಸುದರ್ಶನಸುಧನ್ವಸುಮನಸ್ಸುರಥರೀ ತಜಿದ ನಾಲ್ವರಿವರೆಲ್ಲರ್ ಸಮರ್ಥರ್ (ಜೈಮಿಭಾ. ೧೦-೪೪). [ಸಂ. ಸುಧನ್ವನ್]

**ಸುಧರ್ಮ** (ನಾ). ಒಳ್ಳೆಯ ಸಂಪ್ರದಾಯ; ಉತ್ತಮವಾದ ಆಚಾರ: ತನುವನಿತನಿತುಂ ಮನವನಿತನಿತುಂ ಮೃದುಮಧುರವಚನಮನಿತನಿತುಂ ತಕ್ಕನ ತೀವಿ ಸುಧರ್ಮ ರಸಾಯನಮೊದವಿದಂದಮನಾ ನೃಪೇಂದ್ರಂ ಪೋಲ್ವಂ (ಶಾಂತಿಪು. ೧-೭೧). [ಸಂ.]

**ಸುಧರ್ಮಾಧಿಪ** (ನಾ). ಉತ್ತಮಧರ್ಮದ ಒಡೆಯ.—ಪ್ರಭು: ಏನೆಂಬ ಜಿನನ ಸೇವನಮೇನೆಂಬನುರಾಗಮೇನದೇನೆಂಬ ಜಿನಾನುಷ್ಠಾನುಕ್ರಮxxxಮೇನೇನಂ ಬಣ್ಣಿಪೆಂ ಸುಧರ್ಮಾಧಿಪನಂ (ಅಜಿಪು. ೫-೮೩). [ಸಂ.]

**ಸುಧರ್ಮಾಧಿಷ್ಠಿತ** (ನಾ). ೧. ಉತ್ತಮಧರ್ಮದಿಂದ ಕೂಡಿದವನು. ೨. 'ಸುಧರ್ಮಾ' ಎಂಬ ದೇವಸಭೆಯಲ್ಲಿ ಕುಳಿತವನು; ಇಂದ್ರ. ೧,೨: ಮಹಾ ಮಹಿಮಾರಾಶಿಯಾಗಿಯುಂ ಸುರಾಗನುಂ ಸುಧರ್ಮಾಧಿಷ್ಠಿತನಾಗಿಯುಂ ಗೋತ್ರ ಪ್ರಿಯನುಂ (ರಾಜಶೇ. ೩-೯ ವ). [ಸಂ.]

**ಸುಧರ್ಮಾನುವರ್ತಿನಿ** (ನಾ). ೧. ಒಳ್ಳೆಯ ಧರ್ಮವನ್ನು ಅನುಸರಿಸುವವಳು. ೨. 'ಸುಧರ್ಮಾ' ಎಂಬ ದೇವಸಭೆಯನ್ನು ಅನುಸರಿಸುವವಳು. ೧, ೨: ಚಾಪಲತೆಯಂತೆ ದೃಢಗುಣಸಂಧಾನೆಯುಂ ಮಹೇಂದ್ರಲೀಲೆಯಂತೆ ಸುಧರ್ಮಾನುವರ್ತಿನಿಯುಮೆನಿಪಳ್ (ಚಂದ್ರಪ್ರಭಪು. ೧೦-೧೧೦ ವ). [ಸಂ. ಸುಧರ್ಮಾನುವರ್ತಿನೀ]

**ಸುಧರ್ಮೆ** (ನಾ). ದೇವಲೋಕದ ಸಭೆ; ಸುರರ ಸಭೆ: ಮಾಡಿತಗ್ಗದ ಸಭೆ ಸುಧರ್ಮೆಯನೇಡಿಸುವ ಚೆಲುವಿನಲಿ ಪುರದಲಿ ರೂಢಿಸಿತು (ಕುಮಾರ. ೧೨-೬೩). [ಸಂ. ಸುಧರ್ಮಾ]

**ಸುಧರ್ಮೇಶ** (ನಾ). = ಸುಧರ್ಮಾಧಿಪ: ಕರ್ಮಹರ ಧರ್ಮನಗಕಾರ್ಮುಕ ಚತುರ್ಮುಖ ಸುಧರ್ಮೇಶ ಮುಖ್ಯನುತ ಧರ್ಮಜಯಪಾದ . . . ಪಾಲಿಪುದೆನ್ನ (ಪ್ರಭುಶರಾ. ೧೨-೧). [ಸಂ.]

**ಸುಧಾ** 'ಸುದಾ' ನೋ.

**ಸುಧಾಂಗ** (ನಾ). ೧. ಅಮೃತವನ್ನು ಅಂಗದಲ್ಲಿ ಹೊಂದಿರುವವನು; ಚಂದ್ರ; ಸುಧಾಕರ: ಸುಧಾಂಗನಿಂ ಪೊಂಗುವೆಳದಿಂಗಳ ತೊಡರ್ದ ಕಂಗಳ. . .ಲತಾಂಗಿಯರೆನಿಪ್ಪ ಪಣ್ಯಾಂಗನಾಜನವೆಸೆದುದು (ಹರಿಚ. ೪-೪೦). ೨. ಚಂದ್ರಮಂಡಲ: ಕಣ್ಗೊಪ್ಪಿದುದಮೃತಕಳಾಪೂರಿತಾಂಗಂ ಸುಧಾಂಗಂ (ರಾಜಶೇ. ೧೧-೫೧). [ಸಂ.]

**ಸುಧಾಂಬರ** (ನಾ). ಬಿಳಿಯ ಬಟ್ಟೆ; ಶ್ವೇತಾಂಬರ: ಗೌಳಗಜಂ ತುರುಷ್ಕ ತುರಗಂ ವರಸಿಂಹಳನಾಥಮೌಕ್ತಿಕಂ ಚೋಳಸುಧಾಂಬರಂ ಮಗಧಕಸ್ತುರಿಯಿಂ . . . ವಿಭುಸಂಕಮದೇವಭೂಪನಾ (ಎಕ. VII, ಶಿಕಾ. ೯೭-೧೫; 1170). [ಸಂ.]

**ಸುಧಾಂಶು** (ನಾ). ೧. = ಸುಧಾಂಗ ೧: "ಚಂದ್ರಮಂ ವಿಧು . . . ದ್ವಿಜರಾಜನೆನೆ ಸುಧಾಂಶುವೆನಿಕ್ಕು" (ಮಂಗರಾ. ೧೧-೪); ತನ್ನ ಜೀವಾನಂದಸಾಗರ ಸುಧಾಂಶುವಿಗೆ ಭರತದೇವಗೆ ನೆಲದ ಸಿರಿಯಕ್ಕೆ (ಶ್ರೀರಾಮಾ. ೧೨೦-೨೫). ೨. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: ಶಶಾಂಕ ಸೋಮಂ ಸುಧಾಂಶು ರಜನಿಕರಂ . . . ಒಂದಱ ನಾಮಂ (ವ್ಯವಹಾ. ೯-೧). 'ಹಿಮಾಂಶು' ಪರಾ. [ಸಂ.]

**ಸುಧಾಂಶುಬಿಂಬ** (ನಾ). ಚಂದ್ರಬಿಂಬ: ಚೆಂದನೆಂದು ನವಿಲಿಂ ಪಾಂಬೆ ಕನಲ್ದಡಸಿ ಪೊಯ್ಯೆ ಮೇಗಣ ನೆಲೆಯಿಂದಂ ಬಿರ್ದುದು ಪಚ್ಚೆಯ ಪದಕಂ ಬೀಟ್ಟಂದದೆ ಸುಧಾಂಶುಬಿಂಬದ ಕೊರಲಿಂ (ಯಶೋಚ. ೩-೪೧); ಸಲ್ಲಲಿತಾಂಗಿ ನಿಶಾವಸಾನದೊಳ್ . . . ಸುಧಾಂಶುಬಿಂಬಮಂ . . . ಕಂಡಳ್ (ಪುಷ್ಪಪು. ೯-೯೯). [ಸಂ.]

**ಸುಧಾಂಶುಲೇಖೆ** (ನಾ). ಚಂದ್ರನ ಕಲೆ: ಹಾರಮರೀಚಿಮಂಜರಿ ಸುಧಾರಸಧಾರೆ ಸುಧಾಂಶುಲೇಖೆ ಕರ್ಪೂರಶಲಾಕೆ ನೇತ್ರಸುಖದಾಯಕಂ (ಪಂಪರಾಮಾ. ೯-೧೮೨); ಲಲನೆಯ ನುಡಿಯಿಂ ಹರ್ಷಂ ನೆಲೆವೆರ್ಚೆ ಸುಧಾಂಶುಲೇಖೆಯೆಳವೆಳಗಿಂದಂ ನೆಲೆವೆರ್ಚುವ ಪಾಲ್ಗಡಲಂ ಗೆಲವಂದಂ ನೃಪಗುಣಾಶ್ರಯ ವೈಶ್ರವಣಂ (ಮಲ್ಲಿಪು. ೪-೮೮). [ಸಂ. ಸುಧಾಂಶುಲೇಖಾ]

**ಸುಧಾಂಶುವಲ್ಲಭ** (ನಾ). ಅಮೃತದಂತಹ ಕಿರಣಗಳಿಗೆ ಒಡೆಯನಾದವನು; ಚಂದ್ರ: ತನಗಿದಿರ್ವಂದು ನಿಂದ ರಜನೀವಧುವಂ . . . ಸುಧಾಂಶುವಲ್ಲಭಂ ಮನದೊಲವಿಂದೆ ತನ್ನ ವಿತತಾಂಶುಕಮಂ ಪೊದಿಸುತ್ತ ಕೂಡುತಿರ್ಪನಿತಜೊಳ್ (ರಾಜಶೇ. ೪-೧೪). [ಸಂ.]

**ಸುಧಾಕರ** (ನಾ). = ಸುಧಾಂಗ ೧: ಭೂರಿಕಳಾವಿಬೋಧಿತ ಸುಧಾಕರರೂರ್ಜಿತ . . . ಚಂದ್ರಕೀರ್ತಿಭಟ್ಟಾರಕರ್ (ಸುಕುಮಾ. ೧-೨೨); ಉದಯಾದ್ರಿಯಂ ಸುಧಾಕರನಡರ್ದಂ (ಪುಷ್ಪಪು. ೮-೧೦೩); ಮುಚಿದ ಮುತ್ತಿನ ದೇಶಿಕಾತಿಯರಾನನೇಂದುಗಳಾ ಸುಧಾಕರ ನೆನಲು ಗೆಲಿದುದು ಸಭೆ ನಭಸ್ಥಳವ (ಕುಮಾರ. ೧೩-೩೦). [ಸಂ.]

**ಸುಧಾಕರಕಾಂತ** (ನಾ). ಚಂದ್ರಪ್ರಕಾಶದಿಂದ ದ್ರವಿಸುವುದೆಂದು ಭಾವಿಸಲಾದ ಒಂದು ಬಗೆಯ ಬಿಳಿಯ ಕಲ್ಲು; ಚಂದ್ರಕಾಂತಶಿಲೆ: ಪಚ್ಚೆಯ ತೋರಣಂ ಕನಕದುಯ್ಯಲಪೂರ್ವ ಸುರೇಂದ್ರರತ್ನದಿಂದಚ್ಚರಿವಿರ್ದ ವೇದಿಕೆ ಸುಧಾಕರಕಾಂತದ ಸಜ್ಜ ಕಾಂತಿಯಂ ಬಿಚ್ಚಳಿಪಚ್ಚ ಬಜ್ಜರಗದಂ. . . ಸೂಳೆಗೇರಿಯೊಳ್ (ರಾಜಶೇ. ೨-೧೧೬). [ಸಂ.]

**ಸುಧಾಕರಕುಲ** (ನಾ). ಚಂದ್ರನು ಮೂಲಪುರುಷನಾಗಿರುವ ಕುಲ; ಚಂದ್ರವಂಶ: ರುಚಿಸೌಮ್ಯ ಪುರೂರವಚಕ್ರಿಯಾಯುಭೂವರನಹುಷಕ್ಷಿತೀಶ್ವರ ಯಯಾತಿ ನೃಪಾಳಯದೂರ್ಜಿಪಂ ಸುಧಾಕರಕುಲನಾತನಿಂ ನೆಗಳ್ದ ಯಾದವವಂಶಲಲಾಮಂ (ಎಕ. VII (R), ನಾಗಮಂ. ೭೪-೩; 1271). 'ಸೋಮಕುಲ' ಪರಾ. [ಸಂ.]

**ಸುಧಾಕರಧರ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದವನು; ಶಿವ; ಇಂದುಧರ: ಮತ್ತ ಪೊಡೆದಂ ನರನೀಶನ ವಕ್ಷಮಂ ಸುಧಾಕರಧರನಾರ್ದು ಮೇಣೆಱಗಿದಂ (ಶಬಶಂ. ೪-೮೩). [ಸಂ.]

**ಸುಧಾಕರಮೌಳಿ** (ನಾ).= ಸುಧಾಕರಧರ: ಲೋಲನಾಪರಿಕರ್ಮಿತರು ನಿರ್ಮೂಲ ನೈಕಕ್ಷಮ ಸುಧಾಕರಮೌಳಿ ಕೇಳೀಕಲಿತವಿಸ್ತರಕಥಾಂತರವ (ಕುಮಾರ. ೬-೧); ನನ್ನನಿಲ್ಲಿಗೆ ಕಳುಹಿದನ್ ಸುಧಾಕರಮೌಳಿ ನಿನ್ನ ಭಕ್ತಿಗೆ ಮೆಚ್ಚಿ (ಚತ್ರಾಂಗ. ೮೪-೨೩೦೨). [ಸಂ.]

**ಸುಧಾಕಲಿತಾನ್ನ** (ನಾ) ಹಾಲನ್ನು ಸೇರಿಸಿ ಕಲಸಿದ ಅನ್ನ: ಆ ಸುಧಾಕಲಿತಾನ್ನವೇ ಫಲರಾಸಿಯಾದುದು ಗೇಯರಸವಿನ್ಯಾಸವೇ ಮಧುಮಕ್ಷಿಕವ್ರಜ ಜಂಬುಕಧ್ವಾನ (ಕುಮಾರ. ೧-೨೬). [ಸಂ.]

**ಸುಧಾಕಾಂತ** (ನಾ). ಅಮೃತದಿಂದ ಕೂಡಿದ ಚಂದ್ರ: ಜಿತ ಪಂಚೇಷುತ್ಯದಿಂದೀಶ್ವರನೆನಿಸಿಯುಮುದ್ವೃತ್ತಸುಧಾಕಾಂತನತ್ಯೂರ್ಜಿತ ತೇಜೋಲಕ್ಷ್ಮಿಯಿಂ ತೀವ್ರಕರನೆನಿಸಿಯುಂ (ಎಕ. V, ಹಾಸನ. ೧೩೦-೮; 1147). [ಸಂ.]

**ಸುಧಾಕಿರಣ** (ನಾ). ಅಮೃತಕಿರಣಗಳುಳ್ಳವನು; ಚಂದ್ರ: ಸುಧಾಕಿರಣಂ ಕರ್ಕವಿಲಗ್ನದೊಳ್ ನಿಲೆ ಪಿಶಾಚಪ್ರಾಪ್ತನಕ್ಕುಂ ನರಂ (ಜಾತಕ. ೨೧-೧೮); ಬರ್ಹಿಯ ಸುಧಾಕಿರಣನ ದಿನಾಧಿಪನ . . . ಗುಣವಿರಬೇಕು ನೃಪರಿಗೆ (ಕುಮಾರ. ೧-೫೪); ಮೆಲ್ಲನವತರಿಸುತಿರ್ದಂ ಸುಧಾಕಿರಣಂ (ವೈಶಾಖ. ೯೧-೭೩೨). [ಸಂ.]

**ಸುಧಾಗೃಹ** (ನಾ). ಸುಣ್ಣ, ಗಾರೆ ಮೊದಲಾದುವುಗಳನ್ನು ಬಳಿದ ಮನೆ;

ಧವಳಾಗಾರ; ಸೌಧ: ಆತನನಾಗಳ್ ನೋಡುವ ಕೌತೂಹಳದಿಂ ಸುಧಾಗೃಹಾಗ್ರಂಗಳೊಳಿರ್ದಾ ತರಳೇಕ್ಷಣೆಯರ್ಕಳ್ ವಾತಗವಾಕ್ಷಂಗಳೆಡೆಗೆ ತಡೆಯದೆ ನಡೆದರ್ (ಶಾಂತಿಪು. ೬-೫); ಕುಮಾರನೊಂದು ಕೊಳದೊಳ್ ಮಿಂದು ವನಫಲಂಗಳಂ ತಿಂದು . . . ತತ್ಸಮೀಪದ ಸುಧಾಗೃಹದಿಂ ರಾಜಕನ್ಯಕಿಯರಂತಬುವರ್ ಬಂದು (ಚಾವುಂಪು. ೭೩). [ಸಂ.]

**ಸುಧಾಜಾತ** (ನಾ). ಕ್ಷೀರಸಾಗರದಲ್ಲಿ ಹುಟ್ಟಿದವನು; ಚಂದ್ರ: ದುಷ್ಟಚೇಷ್ಟ ಸುಧಾಜಾತ ಸುತಾಂಶದೊಳ್ (ಜಾತತಿ. ೨೨-೯). [ಸಂ.]

**ಸುಧಾತರ್ಪಣ** (ನಾ). (ಸತ್ತವರ ತೃಪ್ತಿಗಾಗಿ, ಉತ್ತರಕ್ರಿಯೆಯ ಸಮಯದಲ್ಲಿ) ಹಾಲು ಎರೆಯುವುದು: ರಣದಿ ಕೆಡೆದವರೊಳ್ಪುಗೆಯ್ಮೆಗಳ್ ಸಫಲಮಪ್ಪಂತೆಸಗೆ ನಾಮ್, ಅದೆ ಸುಧಾತರ್ಪಣಂ ತಾನವರಾತ್ಮತೃಷೆಗೆ ತೃಪ್ತಿಯನೀವುದಲ್ತೆ (ಶ್ರೀರಾಮಾ. ೩೭೮-೧೮೧). [ಸಂ.]

**ಸುಧಾತು** (ನಾ). ಒಳ್ಳೆಯ ಲೋಹ; ಗೈರಿಕ: ಬಾಳಮರೀಚಿಮಾಳಿಕಿರಣಾವಳಿಗಳ್ ಮೊಳೆವೀ ಸುಧಾತು ಶೈಲಾಳಿ ತಟಾಭಿಘಾತಮನೊಡಂಬಡಿಸುತ್ತಿರೆ (ಶಾಂತಿಪು. ೫-೪೧). [ಸಂ.]

**ಸುಧಾದೀಧಿತಿ** (ನಾ). = ಸುಧಾಕಿರಣ: ಷಟ್ತರ್ಕಕುಮುದಿನೀವಿಕಶನ ಸುಧಾದೀಧಿತಿ (ಸೌಇಇ. XX, ೪೭-೧೭; 1072); ರಣನೀಗಳೆ ಕಾಣಬಹುದೆಂಬಣಕಿಗರನೆಬ್ಬಿಸುವವೊಲು ಸುಳಿದಣೆದು ಹೊದಜೆದ್ದುದು ಸುಧಾದೀಧಿತಿಯ ಕರನಿಕರ (ಕುಮ್ಮಾದ್ರೋ. ೧೭-೧೩). [ಸಂ.]

**ಸುಧಾಧವಲಿತ, ಸುಧಾಧವಳಿತ** (ಗು). ೧. ಸುಣ್ಣದಿಂದ ಬಿಳುಪಾದ: ಸುಧಾಧವಳಿತ: ೧. ಪರ್ವತದ ಮೇಲೆ ಕಜಂಗಿ ಕಟ್ಟಲಿಸಿದ ಮರದುಱುಗಲ ನಡುವೆ ಸುಧಾಧವಳಿತೋತ್ತುಂಗ ರಮ್ಯಹರ್ಮ್ಯಂಗಳಂ ಕಾಣ್ಬರ್ (ಪಂಪಭಾ. ೩-೧೮ ವ); ಬೆಳಬೆಳಪ ಸುಧಾಧವಳಿತನಿಳಯಂಗಳ ಧವಳಕಾಂತಿಯಂ ಕೌಮುದಿಗೆತ್ತು (ಗಿರಿಕ. ೨-೯೭). (ನಾ). ೨. (ಸುಣ್ಣ ಬಳಿದುದರಿಂದ) ಬಿಳುಪಾಗಿರುವಂಥದು: ಸುಪ್ರದೇಶಮಪ್ಪ ಸ್ಥಾನದೊಳ್ ಸುಧಾಧವಳಿತಮಪ್ಪ ಧವಳಾಗಾರಂ (ಪಂಚತಂ. ೧೮೭-೧೦). ೩. ಸುಣ್ಣ ಬಳಿದ ಮನೆ; ಧವಳಾಗಾರ; ಸೌಧ: "ಸುಧಾಧವಳಿತಂ, ಸೌಧಂ — ಈ ೨ ಧವಳಾರಂ" (ಹಲಾಯು. ೪೮-೧೩೯). [ಸಂ.]

**ಸುಧಾಧವಳಿತ** 'ಸುಧಾಧವಲಿತ' ನೋ.

**ಸುಧಾಧಾಮ** (ನಾ). ಚಂದ್ರ: ವನದಂತಿಂದ್ರನ ಲೋಕದಂತೆ ಸುಮನೋವಾಸಂ ಸುಧಾಧಾಮನಂತಿನನಂತುತ್ಕಮಲಾಶ್ರಯಂ (ರಾಜಶೇ. ೩-೧೦). [ಸಂ.]

**ಸುಧಾಪಿಂಡ** (ನಾ). ಒಂದು ಬಗೆಯ ಭಕ್ಷ್ಯ: ಮತ್ತಮಾ ಕಣಿಕಮಂ ಗದುಗದಂದವ ಮಾಡಿಯೊತ್ತಿಯದಱೊಳಗೆ ಹಲಸವಿಯ ಹೂರಣಗಳನು ವೊತ್ತರಿಸಿ ಹುದುಗಿ ತುಪ್ಪವನು ಬಾಳೆಲೆಯೊಳಗೆ ತೊಡೆದದಱ ಹದನನಱಿದು ಹೊತ್ತದಂದದೊಳು ಪಾಕಂ ಮಾಡಿ ತೆಗದುಕೊಂಡುತ್ತಮದ ಸಿರಿಪಚ್ಚೆ ಮೊದಲಾದ ಕಂಪ ಪೊರೆಯೊತ್ತಿ ತೆಗೆದವು ಸುಧಾಪಿಂಡವೆಂದೆಂಬ ಹೆಸರಂ ಹಡೆದು ರುಚಿಯಾದವು (ಸೂಪಶಾ. ೧-೩೨). [ಸಂ.]

**ಸುಧಾಬ್ಧಿ** (ನಾ). ಹಾಲಿನ ಕಡಲು; ಕ್ಷೀರಸಾಗರ: ಪುಟ್ಟಿದಂ . . . ಸುಧಾಬ್ಧಿಗೆ ಮಹಾಹಾಳಾಹಳಂ ಕಾನನಕ್ಕೆ ದವೋಗ್ರಾಗ್ನಿ ಕಡಂಗಿ ಪುಟ್ಟಿದವೊಲಂತಾ ಕಂಸದೈತ್ಯಂ (ಜಗವಿ. ೨-೩೮); ಸೊಗಯಿಪ ಸುಧಾಬ್ಧಿ ಮೋಹದೊಳಿಂದು ಬಂದೆನ್ನ ಮಗನು ದಟ್ಟಡಿಯಿಡುವ ರಾಜಾಂಗಣವಿದೆಂದು . . . ಮೃಗಧರಂ ಕಣ್ಗೆಸೆದುದು (ಹಚಕಾ. ೩-೪೧). [ಸಂ.]

**ಸುಧಾಭವನ** (ನಾ). = ಸುಧಾಗೃಹ: ಮತ್ತೊಂದು ಸುಧಾಭವನದೊಳನವರತ ದಹ್ಯಮಾನ ಕಾಳಾಗುರುಧೂಪಧೂಮದ ಪರಿಮಳಮಯಮಪ್ಪ ನೆಲೆವನೆಯ ಮೇಗೇಕಾಗ್ರಮನಃಪರಿಗ್ರಹೆಯಾಗಿ (ಶಾಂತಿಪು. ೮-೪೯ ವ). [ಸಂ.]

**ಸುಧಾಭುಕ್ತ** (ನಾ). ಅಮೃತವನ್ನು ಕುಡಿದವನು; ದೇವತೆ: ಲಿಂಗಾರ್ಚನಾಸಕ್ತಿಯಿಂ ಬೆಳೆದ ಪುಣ್ಯದೊಳರ್ಥಮಂ ಸುಧಾಭುಕ್ತರಱಿಯಲು ಕೊಡುವೆನಾ ಹರಿಶ್ಚಂದ್ರ ಹುಸಿಯಂ ನುಡಿಯದಿರಲೆಂದನು (ಹಚಕಾ. ೨-೨೭). [ಸಂ.]

**ಸುಧಾಮ** (ನಾ). ಪುಷ್ಟವಾದ ಶರೀರವುಳ್ಳದು: ಕುಂಜರಶೈಳಂ ತನ್ನಿಂದಂ ಜಗದೊಳ್ಳಿಗಟ್ಟುದಾ ಪೆಸರಿನೆಂಬವೊಲೇಂ ರಂಜಿಸಿ ಬಳೆಯುತ್ತಿರ್ದುದೊ ಕುಂಜರಮಾ ವಜ್ರಘೋಷನಾಮಸುಧಾಮಂ (ಪಾರ್ಶ್ವಪು. ೪-೧೦೮). [ಸಂ. ಸುಧಾಮನ್]

**ಸುಧಾಮಯೂಖ** (ನಾ). = ಸುಧಾಕಿರಣ: ದಿಗ್ಭಿತ್ತಿಗಳಂ ಧವಳಿಸುತಿರ್ದ ಸುಧಾಮಯೂಖನಂ ನೀಡುಂ ನೋಡಿ (ಕಾದಂಉ. ೫೬೧); ಅಂಬುಜಪ್ರಸರದಗಲ್ಕೆಯಿಂ ನೆಗದ ತುಂಬಿಗೆ ಮಲ್ಲಿಗೆಮಾಲೆಯಾಮುದಾ ಪಸಿದ ಚಕೋರಿಗಳ್ಗೆ ಸುಧೆಯಾದುದು ಕಾಂತಿ ಸುಧಾಮಯೂಖನಾ (ರಾಜಶೇ. ೧೧-೬೫). [ಸಂ.]

**ಸುಧಾಮರೀಚಿ** (ನಾ). ಬೆಳದಿಂಗಳು; ಅಮೃತಕಿರಣ: ನಗೆಗಣ್ಣೊಸೆ ಸುಧಾಮರೀಚಿ ರುಚಿಯಂ ಘರ್ಮಾಂಭಸಂ ಪೊಣ್ಮೆ ನುಣ್ಗೊಗದೊಳ್ಚಿತ್ತದೊಳಾಗೆ ಕೌತುಕರಸಂ . . . ನಡೆನೋಡುತ್ತಿರ್ದಳಾ ಭೂಪನಂ (ರಾಜಶೇ. ೬-೨೧). [ಸಂ.]

**ಸುಧಾರಕ** (ನಾ). ಲೋಪದೋಷಗಳನ್ನು ಸರಿಪಡಿಸುವವನು,— ಸುಧಾರಿಸುವವನು: ಪೈಥಾನ್‌ನಗರದ ದೇಶಸ್ಥಬ್ರಾಹ್ಮಣಮನೆತನದಲ್ಲಿ ಹುಟ್ಟಿದ ಏಕನಾಥ ಸುಧಾರಕನಾಗಿ ಭಕ್ತನಾಗಿ ಕಂಗೊಳಿಸಿದ (ಭಾರದ. ೨೯೨). [<— ಹಿಂ. ಮರಾ. ಸುಧಾರಕ]

**ಸುಧಾರಣೆ** (ನಾ). ೧. ತಿದ್ದುವುದು; ಸಂಸ್ಕರಿಸುವುದು: ಬಡಿದು ಕೊಂದರೆ ಸುಧಾರಣೆಯಾಗುವುದೇನು? (ರಂಗರೋ. ೧೦); ಸಾಮಾಜಿಕಸುಧಾರಣೆಗಳು ಆಗದೆ ರಾಜಕೀಯಸುಧಾರಣೆಗಳಿಗೆ ನಾವು ಅರ್ಹರಲ್ಲ (ಯಕ್ಷಪ್ರ. ೪೦). ೨. ಏಳಿಗೆ; ಅಭಿವೃದ್ಧಿ: ನಮ್ಮ ದೇಶದ ಸುಧಾರಣೆಗೂ ಘನತೆಗೂ ಬಹಳ ಪ್ರತಿಬಂಧಕವಾಗಿವೆ (ಮುಂಬಯಿ. ೪-೧೮೫); ಅವನ ಸುಧಾರಣೆಯ ಎಲ್ಲ ಹೊಣೆಯನ್ನು ಅವರೇ ವಹಿಸಿಕೊಳ್ಳಬೇಕೆಂಬ ಬಯಕೆ ಅವರದಾಗಿತ್ತು (ರಂಗರೋ. ೧೨೮). ೩. ವಿಶ್ರಾಂತಿ; ಬಿಡುವು: (ಕ). ೪. ತಾಳ್ಮೆ; ಸಹನೆ: (ಕ). [<— ಹಿಂ. ಸುಧಾರನಾ; ಮರಾ. ಸುಧಾರಣಾ, ಸುಧಾರಣೇ]

**ಸುಧಾರಸ** (ನಾ). ೧. ಅಮೃತ; ಸುಧೆ: ಹಾರಮರೀಚಿಮಂಜರಿ ಸುಧಾರಸಧಾರೆ ಸುಧಾಂಶುಲೇಖೆ ಕರ್ಪೂರಶಲಾಕೆ ನೇತ್ರಸುಖದಾಯಕಂ (ಪಂರಾಮಾ. ೯-೮೨); ಸುಧಾರಸ ಉಕ್ಕಿದುರಿಯಗ್ಗಳದ ಶೀತಳವಾಯ್ತು (ಕುಮ್ಮಾಉ. ೬-೧೧); ಸುಧಾರಸವನ್ನು ಪಾನಮಾಡಿದ ಅನುಭವವಾಗುತ್ತದೆ (ಧರ್ಮಸಾ. ೮೨). ೨. ಒಂದು ಬಗೆಯ ಪಕ್ವಾನ್ನ: ಅಂದು ಮನೆಯಲ್ಲಿ ಪುರ — ಸುಧಾರಸವಾಗಿತ್ತು (ಸಮುಜೀ. ೧೦೦); ಸುಧಾರಸ ಮಾಡಲೇನು ಒಂದು ಸ್ವಲ್ಪು (ಅಪನಾ. ೧೮೩). [ಸಂ. / ಮರಾ. ಸುಧಾರಸ]

**ಸುಧಾರಿತ** (ಗು). ೧. ಮಾರ್ಪಾಡು ಮಾಡಿದ; ಸಂಸ್ಕರಿಸಿದ: ಈಚೆಗೆ ನಮ್ಮ ರೈತರು ಸುಧಾರಿತ ಬೇಸಾಯಪದ್ಧತಿಯನ್ನು ಅನುಸರಿಸುತ್ತಿದ್ದಾರೆ (ರೂಢಿ). (ನಾ). ೨. ತಿದ್ದುಪಾಡು; ಸಂಸ್ಕರಣ: ಈ ಹತೋಟಿ ಕಾರ್ಯಕ್ರಮದಿಂದ ಸಸ್ಯನಿಗಳ ಬಾಳು ಎಷ್ಟೋ ಸುಧಾರಿತವಾಯಿತು (ಮನೋನಂ. ೧೭೪). [< ಸುಧಾರಣೆ]

**ಸುಧಾರಿಸು** (ಕ್ರಿ). ೧. ನೇರಗೊಳಿಸು; ಸರಳಗೊಳಿಸು. ೨. ತಿದ್ದು; ಸಂಸ್ಕರಿಸು: ಕನ್ನಡದ ರಂಗಭೂಮಿ ಹೀಗೆ ಸುಧಾರಿಸಬೇಕು, ವಿಕಾಸಗೊಳ್ಳಬೇಕು (ಸಮಾಲೋ. ೬೭); ಈಗ ಆಗಿಹೋದುದರ ಬಗ್ಗೆ ಮಾತನಾಡಿ ಏನು ಬಂದದ್ದು. ಆದುದನ್ನು ಸುಧಾರಿಸುವ ಉಪಾಯ ತೆಗೆಯಿರಿ (ಮೂರುದಾ. ೭೬); ಕೆಲವು ಶತಾಬ್ದಗಳ ಹಿಂದಿನ ಗೌತಮ, ಬೌಧಾಯನ ಮತ್ತು ಆಪಸ್ತಂಭ ಇವರ ಧರ್ಮಶಾಸ್ತ್ರಗ್ರಂಥಗಳಿಗಿಂತ ಹೆಚ್ಚು ವಿಸ್ತಾರವಾದ ಹಾಗೂ ಸುಧಾರಿಸಿದ ಗ್ರಂಥ (ತತ್ವಪ್ರಾ. ೧೦೭). ೩. ಏಳಿಗೆಯಾಗು; ಅಭಿವೃದ್ಧಿಯಾಗು: ಸುಧಾರಿಸಿದ ರಾಷ್ಟ್ರಗಳ ಜನರು ತಮ್ಮ ಆಳುಮಕ್ಕಳ ಕೂಡ ಬಹಳ ವಿನಯದಿಂದ ನಡೆಯುತ್ತಾರೆ (ಮುಂಬಯಿ. ೪-೭೪); ಭಾರತದೇಶವು ಬಡಜನರ ಜೀವನಸ್ಥಿತಿಗಳನ್ನು ಸುಧಾರಿಸುವುದಕ್ಕಾಗಿ ಪ್ರಯತ್ನಿಸುತ್ತಿದೆ (ಅಡುಸಾ. ೩೧). ೪. ತಾಳು; ಸಹಿಸು: ಅವಸರ ಬೇಡ, ಸ್ವಲ್ಪ ಸುಧಾರಿಸಿಕೊ (ರೂಢಿ). ೫. ಚೇತರಿಸಿಕೊಳ್ಳು: ಸ್ವಲ್ಪ ಸುಧಾರಿಸಿಕೊಳ್ಳಿ ರಾಯರೆ ಎಂದು ಸಮಾಧಾನಪಡಿಸಿ ಒಂದು ಲೋಟ ಹಾಲು ಕುಡಿಸಿದೆ (ರಾಯಕ. ೨೫). ೬. ಸಮಾಧಾನಪಡಿಸು; ಸಂಬಾಳಿಸು: ಅವರ ಕಣ್ಣೀರು ಒರಿಸಿ, ಅವರಿಗೆ ಸ್ಥಳಕೊಟ್ಟು ಸುಧಾರಿಸುತ್ತಿದ್ದೆವು (ಭಾರದ. ೮). [ಸುಧಾರಣೆ + - ಇಸು]

**ಸುಧಾರುಗ್ಧರ** (ನಾ). = ಸುಧಾಕರಧರ: ಸುಧಾರುಗ್ಧರೋರುಕೃಪೆಯಿಂದೆ ಮೋಕ್ಷಸಮ್ಯಗ್ಧರಿತ್ರಿಗರಸಾಗಿ ರಂಜಿಪಂ (ವೃಷವಿ. ೯-೧೨೭). [ಸಂ.]

**ಸುಧಾರುಚಿ** (ನಾ). = ಸುಧಾಕಿರಣ: ಸುಧಾರುಚಿ ಪುಟ್ಟೆ ಪಾಲ್ಗಡಲ್ . . . ಅಭಿಷ್ಟುತಮಪ್ಪವೊಲ್ (ಪುಷ್ಪಪು. ೧೨-೧೫). [ಸಂ.]

**ಸುಧಾರೋಚಿ** (ನಾ). = ಸುಧಾಕಿರಣ: ಧರೆಗಮೃತಸಾರಮಂ ತಾನೆನಲು ಸೂರಿಗಳು ಬಣ್ಣಿಸೆ ಸುಧಾರೋಚಿ ಕಣ್ಗೆಸೆದುದು (ಹಚಕಾ. ೩-೮೭). [ಸಂ.]

**ಸುಧಾರ್ಣವ** (ನಾ). = ಸುಧಾಬ್ಧಿ: ಸುಧಾರ್ಣವಮೊಪ್ಪಿದುದುದ್ಗತಾರ್ಣವಂ (ಜಗವಿ. ೧-೪೪); ಇವರಾರೆಂದಿರ್ದಪೆ ನೀಂ ಭುವನತ್ರಯತಿಳಕರಮಳಸದ್ಬೋಧ ಸುಧಾರ್ಣವಪೂರ್ಣಚಂದ್ರರವನತದಿವಿಜನರೋರಗನನ್ನಸಾಪೂರ್ನ್ಯಗುಣರ್ (ಯಶೋಚ. ೪-೪೮). [ಸಂ.]

**ಸುಧಾರ್ಮಿಕ** (ನಾ). ಸದ್ಧರ್ಮದಲ್ಲಿ ನಡೆಯುವವನು; ಒಳ್ಳೆಯ ಧರ್ಮಿಷ್ಠ: ಈ ಧರ್ಮ್ಮರಕ್ಷಣೆಯ ಸುಧಾರ್ಮಿಕರೆಯ್ದುವರ್ಸುರೇಂದ್ರಾಸ್ಪದಮಂ (ಕ಼ಇ. IV, ೧೩-೭೮; 1165). [ಸಂ.]

**ಸುಧಾಶ** (ನಾ). ಅಮೃತವನ್ನು ಸೇವಿಸಿದವನು; ದೇವತೆ: ಉರ್ವೀಶನ ಯೋಷೆ ಸಂದಜಿತಸೇನೆ ಬಟಿಕ್ಕವರ್ಗಾ ಸುಧಾಶನಿರ್ದೇಶಿತವೇಶ್ಮನಪ್ಪಜಿತಸೇನಸಮಾಹ್ವಯ ನಾದನಾತ್ಮಜಂ (ಚಂದ್ರಪು. ೪-೮೦). [ಸಂ.]

**ಸುಧಾಶನ** (ನಾ). ೧. ಅಮೃತಾಹಾರ: ನೆನೆವರ್ ಸುಧಾಶನಮನೇಕಾಗ್ರಂ ತ್ರಯಸ್ತ್ರಿಂಶದುಕ್ತಿನಯೋಪೇತ ಸಹಸ್ರಹಾಯನದಿನಾ ಕಲ್ಪೋತ್ತರಾವಾಸಿಗಳ್ (ಶಾಂತಿಪು. ೯-೧೨೭). ೨. = ಸುಧಾಶ: ಆಯವಸರದೊಳಂಬುಜಾಂಬಕ ತೋಯಜಪ್ರಭವರು ಸುಧಾಶನನಾಯಕಾದಿ ದಿಶಾಧಿಪರು (ಬಸಪು. ೧-೪೧). [ಸಂ.]

**ಸುಧಾಸಂಭೂತ** (ನಾ). = ಸುಧಾಜಾತ: ನಿಲೆ ಸುಧಾಸಂಭೂತಂ ಕ್ರೂರದೊಳ್ . . . ಬಾಲಕಂಗೆ ಸದ್ಯೋಮರಣಂ (ಜಾತತಿ. ೬-೨). [ಸಂ.]

**ಸುಧಾಸೂಕ್ತಿ** (ನಾ). ಅಮೃತದಂತಹ ಮಾತು; ಹಿತವಚನ: ಸುಗಂಧಸುಖ ನಿಕರದ ಸುಧಾಸೂಕ್ತಿಗಳು ಸುಳಿವ ತಂಗಾಳಿಗಳು ಸೊಗಸವರಸಂಗೆ ಚಿಂತೆಯ ಕಯ್ಮೊಳು (ಹಚಕಾ. ೬-೫೧). [ಸಂ.]

**ಸುಧಾಸೂತಿ** (ನಾ). = ಸುಧಾಜಾತ: ದಿವ್ಯಾಂಬುವಿಂ ನಾಕಜನಾಥಂ ಮಜ್ಜನಕೆತ್ತಿದ ತೆಱದೆ ಸುಧಾಸೂತಿ ಕಣ್ಗೆಡ್ಡಮಾದಂ (ಆದಿಪು. ೧೨-೮); ಮಿಗೆ ಮೆಱೆದನುದಯಾಚಲದ ಚಾವಡಿಯಲಿ ಸುಧಾಸೂತಿ (ಕುವ್ಯಾದ್ರೋ. ೧೭-೧೭). [ಸಂ.]

**ಸುಧಾಸ್ಯಂದಿ** (ಗು). (ಆಲಂ) ಆನಂದವನ್ನುಂಟುಮಾಡುವ: ನಿರ್ಮಳಾಂಭ ಸ್ಸ್ವಯಂಭೂರಮಣಾಕೂಪಾರದೊಳ್ ಲೋಚನಹೃದಯಸುಧಾಸ್ಯಂದಿ ನಂದೀಶ್ವರದ್ವೀಪಮಹಾಚೈತ್ಯಾಳಿಯೊಳ್ (ಚಂದ್ರಪು. ೪-೭೬). [ಸಂ. ಸುಧಾಸ್ಯಂದಿನ್]

**ಸುಧಿ** (ನಾ). ೧. ಒಳ್ಳೆಯ ಜ್ಞಾನವನ್ನು ಹೊಂದಿರುವುದು; ಬುದ್ಧಿವಂತಿಕೆ. ೨. ಒಳ್ಳೆಯ ಜ್ಞಾನವನ್ನು ಹೊಂದಿರುವವನು; ಬುದ್ಧಿವಂತ: ಸುಧಿಯಾಗಿ ಶುದ್ಧನಡತೆಯಿಂದ ಸನ್ಮೃದುಮಧುರೋಕ್ತಿಯಿಂದಿರ್ದವಗೆ ಅಧಿಕವಾದೆಡರ್ವಂದು ಕುಳಿತಿರಲದು ವಿಧಿವಶವಲ್ತೆ ರಂಗೇಶ (ಶತಸಾಂ. ೪೯-೪೮). [ಸಂ. ಸುಧೀ]

**ಸುಧೀಮಣಿ** (ನಾ). = ಸುಧಿ ೨: ಭೋಗಿದೇವ ಸುಧೀಮಣಿಯ ಸದುಭಕ್ತಿಗಿಂಬಾಯಿತ್ತು ಕೆಂಬಾವಿ (ಬಸಪು. ೫೭-೫೪). [ಸಂ.]

**ಸುಧೀರ** (ನಾ). ಒಳ್ಳೆಯ ವೀರ; ಮಹಾಶೂರ: ಸ್ಥಿರ ಸುಧೀರಾ ಕಿನ್ನರಯ್ಯಾ ವಿರಸದೂರ ಕಿನ್ನರಯ್ಯಾ . . . ಮುನಿದೆಯೆನ್ನೊಡನೆ (ಬಸಪು. ೩೬-೪); ಮಱು ಪೂತು ಭೀಮ ಸುಧೀರನೈ ಸದುಮತ್ತರವೆ (ಕುವ್ಯಾಕ. ೧೫-೯). [ಸಂ.]

**ಸುಧೀರತೆ** (ನಾ). ಒಳ್ಳೆಯ ವೀರತನ; ಅತಿಶೌರ್ಯತನ: ಈ ಮಹಾವೀರತ್ವವೀ ಮಹಿಮಾಮಹತ್ವತೆಯಿಾ ಸುಧೀರತೆಯಿಾ ಮಧುರಮೃದುವಾಕ್ಯವೀ ಸಾಮರ್ಥ್ಯವೀ ಸತ್ವ ಭೂಮಿಯೊಳು ಕೇಳುವವೆ ಕಾಂಬೆವೆ (ಬಸಪು. ೪೭-೭೯). [ಸಂ. ಸುಧೀರತಾ]

**ಸುಧೀರಾಜ** (ನಾ). ೧. ಒಳ್ಳೆಯ ಜ್ಞಾನಕ್ಕೆ ಒಡೆಯನಾಗಿರುವವನು; ಪಂಡಿತಶ್ರೇಷ್ಠ. ೨. ಜ್ಞಾನಿಯಾದ ಬ್ರಹ್ಮ. ೧, ೨: ಆ ಮಂಟಪಂ . . . ಸತ್ಯಲೋಕದಂತೆ ಸುಧೀರಾಜಾನ್ವಿತಮುಂ ಪುರಂದರಪುರದಂತೆ ಸದಾ ರಂಭಾನ್ವಿತ ವಿಬುಧಮಿಳಿತಮುಂ (ರಾಜಶೇ. ೮-೮ ವ).

[ಸಂ.ಸುಧೀರಾಜನ್ (ಸುಧೀ + ರಾಜನ್); ಸಂ.(ಸುಧೀರ + ಅಜ)]

**ಸುಧೆ** (ನಾ). ೧. ಅಮೃತ; ಸೊದೆ: ಕುಳಿರುತ್ತಿರ್ಪಮೃತಾಂಶುಮಂಡಲದೊಳಿರ್ದಾದಂ ಸುಧಾಮೋದಮಂ ತಳೆದು (ಕಾದಂಉ. ೭೯೨); ಮದನಂ ದೇಹವ ನೀಗಿದಂ . . . ಸುಧೆಯಂ ಕೊಟ್ಟು ಸುರೇಂದ್ರ ಸೋಲ್ತ . . . ವಿಧಿಯಂ ಮಾಡುವನಾವನ್ನೆ (ಸೋಮೇಶ. ೨೭); ಕಂದನೀತನ ರಕ್ಷೆಯೊಳ್ ಪ್ರಳಯಾಗ್ನಿ ಚಕ್ರಕೇಂದ್ರದೊಳಿರ್ಪ ಸುಧೆಯವೊಲ್ ನಿತ್ಯಂ ಸುರಕ್ಷಿತಂ (ಶ್ರೀರಾಮಾ. ೩೦-೭೩). ೨. ಸುಣ್ಣ: ದಧಿ ಜವೆ ದೂರ್ವೆ ಲಾಜೆ . . . ಬಾಸಿಗಂ ಸುಧೆ ಸಿರಿಗಂಪು . . . ಎಸೆದತ್ತು ವಿವಾಹಗೃಹಾಂತರಾಳದೊಳ್ (ರಾಜಶೇ. ೮-೧೧). ೩. ಹೂವಿನ ರಸ; ಮಧು. ೪. ಹಾಲು; ಕ್ಷೀರ. ೫. ರಸ; ಪಾನೀಯ. ೬. ನೀರು; ಜಲ. ೭. ಹಾಲು ತುಂಬಿರುವ ಸಸ್ಯ. ೮. ಅಲಸಂದೆ: "ಸುಧೆಯಲಸಂದೆ" (ಮಂಗರಾ. ೧೧೦-೫). ೯. ನೆಲ್ಲಿ; ಆಮಲಕ.

**ಸುಧೆಗೊಬ್ಬುಗಳು** = (ಆಲಂ) ದೇವತೆಗಳು: ತುಬ್ಬಿಕೊಟ್ಟುದವಿದ್ಯೆಯನು ಸುಧೆಗೊಬ್ಬುಗಳ ಗಂಡಿಗರ ಗಾಢದ ಗರ್ಭವನು ಹೊಳ್ಳಿಸಿತು ಗರಳಗ್ರೀವನುಪದೇಶ (ಕುವ್ಯಾಕ. ೬-೩೧). [ಸಂ. ಸುಧಾ]

**ಸುಧೆಗೂಳ** (ನಾ). ಅಮೃತವನ್ನು ಆಹಾರವನ್ನಾಗಿ ಉಳ್ಳವನು; ದೇವತೆ.

**ಸುಧೆಗೂಳರೊಡೆಯ** = ದೇವತೆಗಳ ಒಡೆಯ; ಇಂದ್ರ: ಸುಧೆಗೂಳರೊಡೆಯ ಪಿಡಿವಸಮವಜ್ರಾಯುಧದ ಯಿದಿರ ನಡೆಯಲುಬಹುದು (ನವಮೋ. ೨೪-೭೮).

[ಸುಧೆ + ಕೂಳು$_2$ (< ಕೂಳ್$_1$) + -ಅ$_7$]

**ಸುಧೆವಿಲ್ಲ** (ನಾ). ರಸಪೂರಿತವಾದ ಕಬ್ಬನ್ನು ಬಿಲ್ಲಾಗಿ ಉಳ್ಳವನು; ಮನ್ಮಥ: ಹರಿಣಯದೆಗೆಟ್ಟು ಹಿಂಡೊಡೆದು ಚಲ್ಲವರಿದಂದದಿಂ ಸುಧೆವಿಲ್ಲನಾಜ್ಞೆಯಿಂ . . . ಮಂದಾನಿಲರಯಟ್ಟುಳಿಗಾರದೇ (ನವಮೋ. ೬-೨೩).

[ಸುಧೆ + ಬಿಲ್ಲು$_1$ (< ಬಿಲ್$_2$) + -ಅ$_7$]

**ಸುನಕ** 'ಸೊಣಗ' ನೋ.

**ಸುನಕಾಯ** (ನಾ). [ವಾಸ್ತು] ಮನೆ, ದೇವಾಲಯ ಮೊದಲಾದುವನ್ನು ಕಟ್ಟುವ ಎಂಟು ಆಯಗಳಲ್ಲಿ ಒಂದು: ವಿಸ್ತಾರವಾಗಿ ಉದ್ದ ಅಗಲವನು ಅಳಿದು ವೊಟ್ಟುಗೂಡಿ ಕೊಂಡಕೋಲು ಯೆಷ್ಟೋ ಅದನು ೩ ಹಚ್ಚಿ . . . ಅದಂ ೮ ರಿಂದ ಭಾಗಿಸಿ ಉಳಿದವು ಆಯಂಗಳೂ xxx ೪ ವುಳದರೆ ಸುನಕಾಯ (ಆಯಟೀ. ೧-೬). 'ವೃಷಭಾಯ' ಪರಾ. [< ಸಂ. ಶುನಕಾಯ]

**ಸುನಗಿ** 'ಸೂನಗೆ' ನೋ.

**ಸುನತಿ** 'ಸುಂತಿ' ನೋ.

**ಸುನಫಾಪ್ರಸೂತ** (ನಾ). [ಜ್ಯೋತಿ] ಸುನಫಾಯೋಗದಲ್ಲಿ ಹುಟ್ಟಿದವನು: ಸುನಫಾಪ್ರಸೂತ ನರನಾತ್ಮೋಪಾರ್ಜಿತೈಶ್ವರ್ಯಧೀಧನಕೀರ್ತ್ಯಾನ್ವಿತನಕ್ಕುಂ (ಜಾತತಿ. ೧೪-೩). [ಸಂ.]

**ಸುನಫಾಯೋಗ** (ನಾ). [ಜ್ಯೋತಿ] ಜನ್ಮಕಾಲದಲ್ಲಿ ಸೂರ್ಯನನ್ನು ಬಿಟ್ಟು ಉಳಿದ ಕುಜಾದಿ ಐದು ತಾರಾಗ್ರಹಗಳಲ್ಲೊಂದು ಚಂದ್ರನಿಗೆ ಎರಡನೆಯ ಸ್ಥಾನದಲ್ಲಿರುವುದು: ಇನವರ್ಜ್ಯಂ ಕ್ಷಿತಿಜಾದಿಗಳ್ ಹಿಮಮಯೂಖಿಗಂತ್ಯದೊಳ್ ಕೂಡಿದಂದನಫಾಯೋಗಮದಕ್ಕುಮೊಂದಿ ನಿಲೆ ಮತ್ತಂ ತದ್ದ್ವಿತೀಯರ್ಕ್ಷದೊಳ್ ಸುನಫಾಯೋಗಂ (ಜಾತತಿ. ೧೪-೧); ಸೂರ್ಯನನ್ನು ಬಿಟ್ಟು ಕುಜಾದಿ ಐದು ತಾರಾಗ್ರಹಗಳಲ್ಲೊಂದು ಚಂದ್ರನಿಗೆ . . . ಎರಡನೆಯ ಸ್ಥಾನದಲ್ಲಿದ್ದರೆ ಸುನಫಾಯೋಗ (ಜಾತತಿ. ೧೪-೧ ಟೀಕೆ). 'ಅನಫಾಯೋಗ' ಪರಾ. [ಸಂ.]

**ಸುನಫೆ** (ನಾ). = ಸುನಫಾಯೋಗ: ಅನಫಾ ಸುನಫಾ ದುರುಧುರಾ ಈ ಮೂರು ಯೋಗಗಳಲ್ಲೂ ಕುಜ ಯೋಗಕಾರಕನಾದರೆ ಜಾತಕನು . . . ಬಹುಕಾರ್ಯಾರಂಭಿಯಾಗುತ್ತಾನೆ (ಜಾತತಿ. ೧೪-೬ ಟೀಕೆ). [ಸಂ. ಸುನಫಾ]

**ಸುನಯ**(ನಾ). ಒಳ್ಳೆಯ ನಡತೆ; ಸುಚಾರಿತ್ರ: ಉಪನತ ಮೃತ್ಯೂದಯಂಗೆ ದುರ್ಣಯಮೆ ಸುನಯಮೆಸಿಸುಗುಮೆ ವೊಲಂ (ಚಂದ್ರಪು. ೬-೧೭). [ಸಂ.]

**ಸುನಾಕನಗ** (ನಾ). ಸ್ವರ್ಗದಲ್ಲಿರುವ ಬೆಟ್ಟ; ಮೇರುಪರ್ವತ: ಮಂದರಂ ಮಱೆಗೆವಂದ ಸುನಾಕನಗಂಬೊಲೊಪ್ಪಿ ತೀವಿದುದು ಜಿನಾಭಿಷೇಕಸಲಿಲಂ ದೆಸೆಯಂ ನಭಮಂ ಧರಿತ್ರಿಯಂ (ಮಲ್ಲಿಪು. ೧೨-೧೫೩). [ಸಂ.]

**ಸುನಾಣೆಯ** 'ಸುನಾಣ್ಯ' ನೋ.

**ಸುನಾಣ್ಯ, ಸುನಾಣೆಯ** (ನಾ). ಒಳ್ಳೆಯ ನಾಣ್ಯ; ಚಲಾವಣೆಯಲ್ಲಿರುವ

ನಾಣ್ಯ: ಹಸ್ತಪೀಠದೊಳಿಹ ವಸ್ತು ಸುನಾಣ್ಯದ ಚಿತ್ರಪಲ್ಲಟವಾಗದೆ ತಿಳಿದಡೆ (ಶಿವಗೀ. ೧೯೧-೯೫೬). **ಸುನಾಣೆಯ:** ಇದು ರತ್ನಭಂಡಾರವಿದು ಹೇಮಭಂಡಾರವಿದು ಸುನಾಣೆಯ ವರ್ಗವಿದು ಪಟ್ಟಕರ್ಮಕುಲ (ಹಚಕಾ. ೯-೩).

[ಸು$_4$- + ನಾಣ್ಯ (< ನಾಣಯ)]

**ಸುನಾದ** (ನಾ). ಒಳ್ಳೆಯ ಧ್ವನಿ; ಇಂಚರ: ಸುನಾದಬಿಂದು ಪ್ರಣವಮಂತ್ರ ಅಗ್ರದ ಕೊನೆಯಲ್ಲೈದುವುದೆ (ಬಸವ. ೮೧೫); ಬಾಲೇಂದುಮೌಳಿ ಸುನಾದರಸಲೋಲಂ ದಯಾನಿಧಿ ಮೆಚ್ಚಿ (ಬಸಪು. ೨೮-೬). [ಸಂ.]

**ಸುನಾಮವೆಱು** (ಕ್ರಿ). ಒಳ್ಳೆಯ ಹೆಸರನ್ನು ಪಡೆ: ಸುನಾಮವೆತ್ತ ತಳ್ಳಲ್ಲಂ ಗಲ್ಲಸ್ಥಳಂ ಪೆಸರು ಲತೆವಳ್ಳಿಯೆಳಲತೆ ನವಲತೆಯುಮೆಂದು ಸಂತತಂ ತೋಱುತಿರ್ಕುಂ (ಕಬ್ಬಿಕ್ಕಿ. ೯೮). [ಸುನಾಮ$_0$ + ಪೆಱು]

**ಸುನಾಯಾಸ** (ನಾ). ಆಯಾಸವಿಲ್ಲದಿರುವುದು; ಸುಲಭತೆ: ಇಂದಿನಾಹವದಿನಾ ಸುನಾ[ಪಾಠಾಂ. ನಿರಾ]ಯಾಸದಿಂ ರಿಪುಬಲಂಗಳನ್ನೊರೆಸಿ ಬಳಿಕಾ ಯುಧಿಷ್ಠಿರನ ಪಿಡಿವೆನು (ತುರಂಗ. ೫೦-೧೧); ರಾಜ್ಯದ ಈ ದೊಡ್ಡ ಹೊರೆಯನ್ನು ನಿಮ್ಮಂತೆ ಸುನಾಯಾಸವಾಗಿ ಹೊರಬಲ್ಲ ಎದೆ ಹರವಿನ ಉತ್ತರಾಧಿಕಾರಿಯನ್ನು ಕುರಿತದ್ದು (ಸವತಿ. ೨೪). [IP ಈ ಶಬ್ದವು 'ಅನಾಯಾಸ' ಎಂಬ ಶಬ್ದಸಾದೃಶ್ಯದಿಂದ ಬಳಕೆಯಾಗಿರಬಹುದು]

**ಸುನಾಯಿತ** (ನಾ). ಸೂಕ್ಷ್ಮ: ಈ ಗಿಡಗಳದು ಬಹಳ ಸುನಾಯಿತವಾದ ಒಡಲು. ಕಾಂಡ ಎಂದು ಹೇಳಬಹುದಾದ ಅಂಗವೇ ದಾರದಷ್ಟು ದಪ್ಪ (ಹಸುಹೂ. ೧೮೯).

[ದೇ. ‖ ತಮಿ. ಚುನ್ನಿತ; ತೆಲು. ಸುನ್ನಿತ]

**ಸುನಾರಖಾನೆ** (ನಾ). ಅಕ್ಕಸಾಲೆ ಕೆಲಸ ಮಾಡುವ ಸ್ಥಳ: ಖಾಸ ಚೊಕ್ಕಸದ ಲಿನ್ನಾಚಾರಿ ಕೊಮರನಾದ ಸುನಾರಖಾನೆ ರನ್ನಾಚಾರಿಯವರು ಮಾಡಿ ವಪ್ಪಿಸಿದ ತಾಣ್ಣವೇಶ್ವರ (ಎಕ. XIV, ಶ್ರೀರಂಗ. ೧೮೫-೩; 1852).

[ಸುನಾರ$_0$ (IP <— ಹಿಂ. ಸುನಾರ್) + ಖಾನೆ]

**ಸುನಾವಣೆ, ಸುಲಾವಣೆ** (ನಾ). ೧. (ಅರ್ಜಿದಾರರ ಅಹವಾಲು ಮುಂತಾದುವನ್ನು) ಓದಿ ಹೇಳುವಿಕೆ: ನಾನಾ ದೇಶಗಳಿಂದ ಬಂದ ಪತ್ರಗಳನ್ನು ಸುನಾವಣೆ ಮಾಡುತ್ತಿದ್ದುದನ್ನು ಕೇಳುತ್ತಿರುವಲ್ಲಿ (ಗುಣಸಾ. ೭೩); ಲಕ್ಕೋಟೆಯನ್ನೊಡೆದು ಸುನಾವಣೆ ಮಾಡುವ ಮುತ್ಸದ್ದಿಯೊಬ್ಬನಾಗಬೇಕಾಯಿತು (ಕಥವಿ. ೫೦೯). **ಸುಲಾವಣೆ:** ೧. ಭಕ್ಷಿಯವರು ತಂದು ಸುಲ್ತಾನರಲ್ಲಿ ಸುಲಾವಣೆ ಮಾಡಿದರು (ದೌಲತ್. ೮೧). ೨. (ಅರ್ಜಿ ಮುಂತಾದುವನ್ನು) ಓದಿಸಿ ಕೇಳುವಿಕೆ: ಅರ್ಜಿಗಳನ್ನು ಬಿನ್ನವಿಸಿಕೊಂಡರೂ ಅವುಗಳನ್ನು ಸುಲಾವಣೆ ಮಾಡಿ ಅಪ್ಪಣೆಯಾದಂತೆ ನಿರೂಪವನ್ನು ಬರೆದು . . . ನಿಬಂಧನ ಮಾಡಿದರು (ಮಹಾವಂ. I. ೧೪೬); ಒಂದು ಅರ್ಜಿ ಕೊಟ್ಟರೆ ನಾಳೀನೇ ಈ ವಿಷಯವನ್ನು ಸುಲಾವಣೆಗೆ ತೆಗೆದುಕೊಳ್ಳುತ್ತೆ (ಚಂಗಾಳ್ಳ. ೩೧೮); ಅರ್ಜಿ ಸುಲಾವಣೆ ಮುಂದುವರಿಯಿತು (ನನ್ನೂರು. ೧೬೬).

[<— ಹಿಂ. ಸುನವಾಈ; ಮರಾ. ಸುನಾವಣೀ./ ತೆಲು. ಸುನಾಮಣಿ]

**ಸುನಾಸೀರ** (ನಾ). ದೇವತೆಗಳ ಒಡೆಯ; ಇಂದ್ರ: ಪಂಚರತ್ನಚೂರ್ಣವಿರಚಿತ ರಂಗವಲ್ಲೀವಿಲಾಸವಿರಾಜಿತಸುನಾಸೀರಶರಾಸನದೊಳ್ (ಆದಿಪು.೮-೭೭ವ); ನಾಸಿರದೊಳ್ ಸುನಾಸೀರನಂತೆಸೆವ ನಿನಗೆ ಸಕಲ ಸುಭಟ ಸಾಧಾರಣ ಕಪಿಧ್ವಜಂ (ಕಕುಮಾ. ೮-೧೧). [ಸಂ.]

**ಸುನಿ** (ನಾ). ಹೆಣ್ಣುನಾಯಿ: ತೋಳ ಚಕ್ಕೊತ್ತಗೆ ಪೊಕ್ಕೆಯಂತು ಸು[ಪಾಠಾಂ, ಶು]ನಿಯಂತಿರೆ ನಿಲ್ವರೆ ಸೂಳೆ ಕೇಣಿಯೇ ಒತ್ತೆಗೆ ನಾಣ್ಣೆಯುಂ (ಲೀಲಾವ. ೨-೧೨೧); ಸುಧೆಯಂ ಬಿಟ್ಟು ಗಂಜಿಗೆ ಮನಂದಂದವೊಲು ಕಾಮಧೇನುವನುಳಿದು ಸುನಿಯ ಮೊಲೆಯ ಕರೆದುಣ್ಬಂದದೆ (ಸಿದ್ಧೇಪು. ೧೬-೨೫); ಇವನ ಕೊಲುವೆನೆಂದು ವಿಷದ ಕಜ್ಜಾಯವಂ ಕಳುಹಲು ಮಂತ್ರಿ ಸುನಿಗಿಕ್ಕಿಸಿ ರಾಯಗೆ ತೋಱಲು (ಭೈರಸೂ. I. ೨೮೬). [< ಸಂ. ಶುನೀ]

**ಸುನಿಶ್ಚಿತ** (ನಾ). ೧. ಚೆನ್ನಾಗಿ ನಿಶ್ಚಯಸಿದುದು; ದೃಢನಿರ್ಧಾರ: ಭಾಷೆಯಲ್ಲಿ ನಿರಂತರವೂ ಮತ್ತು ಸುನಿಶ್ಚಿತವೂ ಆದದ್ದು ಆ ಭಾಷೆಯ ಕೋಶವಲ್ಲ; ವ್ಯಾಕರಣ (ಭಾಷಾಶಾ. ೩೩); ಸತ್ಕಕ್ಕೇ ಅಂತಿಮವಿಜಯ ಸುನಿಶ್ಚಿತ (ಧರ್ಮಸಾ. ೩). ೨. ದೃಢವಾದ ವ್ರತ: "ಸಂಶಿತಃ, ಸುನಿಶ್ಚಿತಃ — ಈ ೨ ದೃಢವ್ರತಂ" (ಹಲಾಯು. ೬೭-೨೪೮). ೩. ನಿಶ್ಚಲವಾದ ಮನಸ್ಸುಳ್ಳವನು; ದೃಢಚಿತ್ತ: "ಶಂಸಿತನಾ ಸುನಿಶ್ಚಿತಂ ದೃಢಚಿತ್ತನೆಂದೆನಿಕ್ಕುಂ" (ಮಂಗರಾ. ೭೫-೫). [ಸಂ.]

**ಸುನಿಷ್ಕೃತಿ** (ನಾ). ಸೂಕ್ತವಾದ ಪ್ರಾಯಶ್ಚಿತ್ತ, —ಪರಿಹಾರ: ಅದಱಿಂ ನೀತನ ಪೊಯ್ದು ಕೊಂದಲ್ಲದೆ ಸುನಿಷ್ಕೃತಿಯಿಲ್ಲ ಸತ್ಕಾಭ್ಯುದಯವೇ ತನ್ನುದಯ (ಕುವ್ಯಾಕ. ೧೭-೭). [ಸಂ.]

**ಸುನೀತ$_1$** (ಗು). ೧. ಒಳ್ಳೆಯ ಚರಿತ್ರೆಯುಳ್ಳ; ಸಚ್ಚಾರಿತ್ರದ. ೨. ಒಳ್ಳೆಯ ವಿವೇಕವುಳ್ಳ. (ನಾ). ೩. ಒಳ್ಳೆಯ ಚರಿತ್ರೆ; ಸಚ್ಚಾರಿತ್ರ. ೪. ಚಾತುರ್ಯವುಳ್ಳವನು; ಚತುರ: ಊಟಉಡುಗೆಯಲ್ಲಿ ವಿನೀತರು ಓದುವಾದದಲಿ ಸುನೀತರು (ಮುಕ್ತಕ. ೫೦೧೭). [ಸಂ.]

**ಸುನೀತ$_2$** (ನಾ). = ಸಾನೆಟ್ಟು: ಅಷ್ಟಷಟ್ಪದಿಗೆ . . . 'ಚತುರ್ದಶಪದಿ', 'ಸುನೀತ' ಎಂಬ ಬೇರೆ ಹೆಸರುಗಳೂ ಕನ್ನಡದಲ್ಲಿ ರೂಢವಾಗಿವೆ (ಛಂದೋವಿ. ೩೦೦); ಇಂದಿನ ಕನ್ನಡಸಾಹಿತ್ಯದಲ್ಲೇ ಕಂಡುಬರುವ ಸುನೀತ, ಲಘುಕಥೆ . . . ಇಂಗ್ಲೀಷ್‌ದಿಂದ ಬಂದವುಗಳೇ (ಭಾಷಾಶಾ. ೧೭೩). [IP 'ಸಾನೆಟ್' ಎಂಬ ಇಂಗ್ಲಿಷ್ ಶಬ್ದದಿಂದ 'ಸುನೀತ' ಎಂಬ ಶಬ್ದವನ್ನು ಕಲ್ಪಿಸಿಕೊಳ್ಳಲಾಗಿದೆ]

**ಸುನೀತಿ** (ನಾ). ೧. ಒಳ್ಳೆಯ ನಡತೆ; ಸುಚಾರಿತ್ರ್ಯ. ೨. ಒಳ್ಳೆಯ ನೀತಿ: ಶರಣರ ಸುಭಕ್ತಿ ಸು[ಪಾಠಾಂ. ವಿ]ನೀತಿಯಂ ತಾಂ ಕೇಳಿ (ಬಸಪು. ४೦-೮೫); ಸುನೀತಿಯ ನಂದಗೆಡಿಸಿ ತದೀಯವಂಶಚ್ಛೇದಮಾರ್ಗವನು ಒಂದುಗೂಡಿ (ಕುವ್ಯಾಅ. ೮-೫೪). ೩. ಧ್ರುವನ ತಾಯಿಯ ಹೆಸರು: ಹಿರಿಯ ಪಟ್ಟದ ರಾಣಿ ನೃಪತಿಗೆ ವರ ಸುನೀತಿ ಲತಾಂಗಿ ಕಿಱಿಯಳು ಸುರುಚಿ (ನಿಭಾಗ. ४-೬-४). [ಸಂ.]

**ಸುನೀಲ** (ನಾ). ಅತಿನೀಲಿ; ಕಡುನೀಲಿ. [ಸಂ.]

**ಸುನೀಲರತ್ನ** (ನಾ). ಕಡುನೀಲಿಬಣ್ಣದ ರತ್ನ: ಸುನೀಲರತ್ನನಿಭವೇಣಿ . . . ದಯೆಯಿಂದೆಮಗೀಗೆ ವಚೋವಿಲಾಸಮಂ (ನಾನಾರ. ೨). [ಸಂ.]

**ಸುನೀವಿ** (ನಾ). ಒಳ್ಳೆಯ ನೆರಿಗೆ: ತಾವರೆಮೊಗ್ಗೆಯ ಗಂಟೆಗಳಿಂದಂ ಪಾವನಮಾದ ಸುನೀವಿಗಳಿಂದಂ ಮೆಱೆವ ಮಹಾಪುಷ್ಪಕಮೊಂದೊಲವಿಂ ಪೆಱದಲೆಯಂಗೆ ನಿಯಾಮಿಸು ತೊದವಿಂ (ಹಾಲಾಸ್ಯ. ೧-೨-೮೦ ರಗಳೆ). [ಸಂ. ಸುನೀವೀ]

**ಸುನೇತ್ರಿ** (ನಾ). ಕಣ್ಣಿನ ರೋಗದ ಉಪಶಮನಕ್ಕೆ ಬಳಸಲಾಗುವ ಒಂದು ಬಗೆಯ ಔಷಧಿ: ತ್ರಿಫಲ, ತ್ರಿಕಟುಕ . . . ತೇದು ಕಣ್ಣಿಗಿಕ್ಕಲು ಕಾಡು, ಪಟಲ, ಹಣ್ಣುಗಣ್ಣು, ನೀರುಸುರಿಯುತ್ತಿರುವುದು ಮಾಣುವುವು. ಇದು ಸುನೇತ್ರಿ (ವಿಷ್ಣವಿ. ೫೬). [?]

**ಸುನೇರಿ** (ನಾ). ಒಂದು ಬಗೆಯ ಮಿಶ್ರಲೋಹದ ತಗಡು; ಬೆಳ್ಳಿ ಅಥವಾ ಚಿನ್ನದ ಬಣ್ಣದ ತಗಡು: ಸುನೇರಿಯನ್ನು ಬಳಿದುಕೊಂಡಿದ್ದ ಕೊಂಬುಗಳು (ಭೈಲಮ. ೧೭೮); ಸುನೇರಿಬಣ್ಣದ ಕಲ್ಲು (ದಿಲ್ಲಿಪ. ೮೨).

[<— ಹಿಂ. ಸುನಹರಾ, ಸುನಹಲಾ]

**ಸುನ್ನ$_1$** 'ಸೊನ್ನೆ$_3$' ನೋ.

**ಸುನ್ನ$_2$** 'ಸೊನ್ನೆ$_4$' ನೋ.

**ಸುನ್ನತಿ** 'ಸುಂತಿ' ನೋ.

**ಸುನ್ನವೆಸ** (ನಾ). ಚಿನ್ನ ಬೆಳ್ಳಿಯ ಕೆಲಸ; ಅಕ್ಕಸಾಲೆತನ.

ಸುನ್ನವೆಸದವ = ಚಿನ್ನಬೆಳ್ಳಿ ಕೆಲಸಮಾಡುವವನು; ಅಕ್ಕಸಾಲಿ: ಸುನ್ನವೆಸದವಂಗೆ ಹಳಿಂಗಲುವೊಲದಲು ಮತ್ತರು ೧೨ (ಕಇಅ.೯-೩-೩೨೮; 1062).

[ಸುನ್ನ$_1$ (< ಸೊನ್ನೆ$_3$) + ಬೆಸ$_1$]

**ಸುನ್ನಿ** (ನಾ). ಮಹಮ್ಮದೀಯರಲ್ಲಿ ಒಂದು ಪ್ರಭೇದ: ಸುನ್ನಿಗಳು ಅಬೂಬಕರನ್ನು ಸರಿಯಾದ ಉತ್ತರಾಧಿಕಾರಿ ಎಂದು ಕಲೀಫನನ್ನಾಗಿ ಆಯ್ದರು (ಇಸ್ಲಾಂಸಂ. ೩೦).

[<— ಅರ. ಪಾರ. ಹಿಂ. ಸುನ್ನೀ ; ಮರಾ. ಸುನೀ, ಸುನ್ನೀ]

**ಸುಪಂಡಿತ** (ನಾ). ಒಳ್ಳೆಯ ವಿದ್ವಾಂಸ; ಮಹಾಪಂಡಿತ: ತನಗೆ ಮೃತ್ಯುವರವಾನಱಿದೆನ್ದು ಸುಪಣ್ಣಿತನ್ ಅನೇಕಶೀಲಗುಣಮಾಲೆಗಳಿನ್ನಗಿದೊಪ್ಪಿದೊನ್ (ಎಕ. II, ೧೧೩-೧; ಸು. 700). [ಸಂ.]

**ಸುಪಕ್ಷ** (ನಾ). ೧. ಒಳ್ಳೆಯ ರೆಕ್ಕೆ. ೨. ಶುಕ್ಲಪಕ್ಷ. ೧, ೨: ವಿಸರುಹದಂತ ಕೇಸರ ಮನಾಂತುದು . . . ಚಂದ್ರಮನಂತ ಸುಪಕ್ಷದಿಂದ ರಂಜಿಸಿದುದು ಪುಂಜನಗ್ಗದ ಸುವಸ್ತುವಿನಂತಿರ ತಟ್ಟು ಹೇಂಟೆಯೊಳ್ (ಯಶೋಚ. ೩-೭೮). ೩. ಕುಲಾಚಲಗಳಲ್ಲಿ ಒಂದು: ಶೈಲೇಂದ್ರ . . . ಸುಪಕ್ಷ . . . ಪಾರಿಜಾತವೆಂಬ ಹದಿನಾಱು ಕುಲಾಚಲಂಗಳೇ ಪೂರ್ವೋಕ್ತವಿಪುಳವೆಂಬ ಕೀಲಕಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿಹವು (ವಿವೇಕ. ೨೧೫). [ಸಂ.]

**ಸುಪಟ್ಟ** (ನಾ). ಗೌರವಸೂಚಕವಾಗಿ ಕೊಟ್ಟ ಒಳ್ಳೆಯ ಪದವಿ: ಬಸವಂ ಭಕ್ತಿಗರಸಂ ತಾನೆಯಾನುದ್ಯುಕ್ತಲಿಂಗ ಸುಪಟ್ಟಬದ್ಧನು ಬಸವ (ಬಸಪು. ೧೧-೪೨). [ಸಂ.]

**ಸುಪತಿ , ಸುಪುತಿ** (ನಾ). ಆಲಸ್ಯ; ಜಡತೆ: ವನಿತೆ ಸುಪತಿ ತುರ್ಯಪದದೊಳಡಗಿದಹ ಮನಿಸುವೆಲ್ಲಾ ವಿಷಯದ ತೋರ್ಕೆ (ಪರಮೋ. ೪-೨೦-೧೦). **ಸುಪುತಿ:** ಅಮಲಮತಿ ಕೇಳ್ ಸುಪುತಿಯಹುದಾ ತಮದ (ನಿಭಾಗ. ೧೧-೩೦-೧೬). [< ಸಂ. ಸುಪ್ತಿ]

**ಸುಪಥ** (ನಾ). ಸಚ್ಚಾರಿತ್ರದ ದಾರಿ; ಉತ್ತಮವಾದ ನಡತೆಯ ಮಾರ್ಗ: ಸುಪಥಮಂತ್ರಮುಪದೇಶವ ಕಲಿತು ಯುಕ್ತಿಗೆಟ್ಟು ನಡೆವಿರಯ್ಯಾ (ಬಸವ. ೯೧); ಎನಗಿದುತ್ತಮ ಸುಪಥವಾದುದು (ಬಸಪು. ೪೩-೫); ಸುಪಥದಲಿ ನಡೆವಂಗೆ ರಕ್ಕಸಜನ್ಮ ವೆಂತಹುದು (ಕೌಶಿರಾ. ೧೯-೨೧). [ಸಂ.]

**ಸುಪದ** (ನಾ). ಒಳ್ಳೆಯ ಪಾದ; ಸುಂದರವಾದ ಪಾದ: ಮಂದಭಕ್ತಿಯೊಳವರ ಸುಪದರವಿಂದ ಸಂಘಟರೇಣುಪಟಲಾಘಟಿತಶಿರರಾಗಿ' (ಬಸಪು. ೫೭-೭). [ಸಂ.]

**ಸುಪನಾತಿ** 'ಸುಪ್ಪನಾತಿ' ನೋ.

**ಸುಪರ್ಣ** (ಗು). ೧. ಒಳ್ಳೆಯ ರೆಕ್ಕೆಯನ್ನು ಹೊಂದಿರುವ. ೨. ಒಳ್ಳೆಯ ಎಲೆಯನ್ನು ಹೊಂದಿರುವ. (ನಾ). ೩. ಒಳ್ಳೆಯ ರೆಕ್ಕೆಯನ್ನು ಹೊಂದಿರುವವನು; ಗರುಡ: ''ವಿಹಂಗರಾಜಃ . . . ಸುಪರ್ಣಃ . . . ಕಶ್ಯಪನಂದನಃ – ಈ ೧೦ ಗರುಡನ ಪೆಸರ್'' (ಹಲಾಯು. ೬-೩೧); ಸುಪರ್ಣಂಗೀಡೆ ಕಾಕಾಳಿ (ಸೋಮೇಶ. ೧೦); ಎಲೆ ಮುನೀಶ್ವರ ನಾನು ನೆನವರ ಒಲವಿನಿಂದ ಸುಪರ್ಣ ಬಹನೇ (ಕೌಶಿರಾ. ೧೯-೫೫); ಮಿತವಚನನ ಹಿತವಚನಮನಾಕರ್ಣಿಸಿ ಸುಪರ್ಣಪರಾಕ್ರಮನಾಕರ್ಣಾಂತಮುಗಿದ ಕೂರ್ಗಣೆಯನುಪಸಂಹರಿಸಿದಾಗಳ್ (ರಾಜಶೇ. ೬-೧೧೧ ವ). ೪. ದೇವತೆಗಳ ಒಂದು ವರ್ಗ: ಸುರಗಂಧರ್ವ ಸುಪರ್ಣ ಕಿನ್ನರ ಖಗ ಸ್ತ್ರೀಸದ್ಮದೊಳ್ (ಸುಕುಮಾ. ೫-೫೮). ೫. ಜೀವ. ೬. ಪರಮಾತ್ಮ: ಪರಮಾತ್ಮನಿಗ ಸುಪರ್ಣನೆಂದು ಹೆಸರು . . . ಸುಪರ್ಣನೆಂದು ಜೀವನಿಗೂ ಹೆಸರು (ಹಸಾರ. ೭-೩೦ ತಾತ್ಪರ್ಯ). ೭. ಒಂದು ಬಗೆಯ ಮರ: ಸುಪರ್ಣಗಳು (Ferns) ಈ ಜಾತಿಯವು (ಬಾಲಪ್ರ. I. ೧೩೨). [ಸಂ.]

**ಸುಪರ್ಣಕೇತು** (ನಾ). ಧ್ವಜದಲ್ಲಿ ಗರುಡನ ಚಿಹ್ನೆಯನ್ನು ಉಳ್ಳವನು; ವಿಷ್ಣು: ''ವಿಷ್ಣುಃ, ಸುಪರ್ಣಕೇತುಃ . . . ಗದಾಧರಃ – ಈ ೪೫ ನಾರಾಯಣನ ಪೆಸರ್'' (ಹಲಾಯು. ೫-೨೩); ಅಂತು . . . ಸುಪರ್ಣಕೇತು-ಜೀಮೂತಪಥದಿಂದತಿವೇಗದಿಂ ಪೋಗೆ (ಜಗವಿ. ೧೨-೪ ವ). [ಸಂ.]

**ಸುಪರ್ಣರಥ** (ನಾ). ಗರುಡನನ್ನು ವಾಹನವಾಗಿ ಉಳ್ಳವನು; ವಿಷ್ಣು: ಸುಪರ್ಣರಥಪೂಜಿತೇ ಸುಕರಕೀರ್ತಿವಿಭ್ರಾಜಿತೇ (ವೃಷವಿ. ೪೨-೯೧). [ಸಂ.]

**ಸುಪರ್ಣಿ** (ನಾ). ಗರುಡನ ತಾಯಿ; ವಿನತೆ. [ಸಂ. ಸುಪರ್ಣೀ]

**ಸುಪರ್ಣಿಜ** (ನಾ). ವಿನತೆಯ ಮಗ; ವೈನತೇಯ; ಗರುಡ: ''ಸುಪರ್ಣಂ ಸುಪರ್ಣಿಜ ವ್ಯಾಳಾದಿ ವೈನತೇಯಂ ಸುರಪರಿಪು ಗರುತ್ಮನೆನಲ್ಕೆ ಗರುಡನಕ್ಕು'' (ಮಂಗರಾ. ೭-೨೧). [ಸಂ.]

**ಸುಪರ್ದು, ಸುಫರ್ದು, ಸುಬರ್ದು** (ನಾ). ಅಧೀನ; ವಶ: ನಿನ್ನ ಸುಪರ್ದಿನಲ್ಲಿ ಶ್ಯೆದಿಯನ್ನು . . . ಕೊಡುತ್ತೇನ (ಕಲಿನ. ೧೧೧); ನಿನ್ನ ಜ್ಞಾನ ನಿನ್ನ ಸುಪರ್ದಿನಲ್ಲಿರುವಾಗಲೇ ಬಂದುಬಿಡು (ಚೆಂಗೂಲಿ.೫). **ಸುಫರ್ದು:** ದೌಲತ್ತು ಕಂಪನಿಸರ್ಕಾರದ ಸುಫರ್ದಾಯಿತು (ಪರಾಚ. ೪೩); ದೊಡ್ಡೀದಾರನು ರಾಸುಗಳನ್ನು ತನ್ನ ಸುಫರ್ದಿಗೆ ತೆಗದುಕೊಂಡು ಅವುಗಳಿಗೆ ಮೇವು ನೀರು ಇವುಗಳ ಏರ್ಪಾಡನ್ನು ವಹಿಸಿಕೊಳ್ಳುವನು (ಗ್ರಾಮಾಕ. ೧೦೬); ಸಾಹುಕಾರನು ಒಪ್ಪದ ಹೊಲವನ್ನು ಸುಫರ್ದುಮಾಡಿಕೊಂಡನು (ಕರ್ನಾಸಂ. ೨೧). **ಸುಬರ್ದು:** ಕೋರ್ಟಿನ ಅಪ್ಪಣೆ ಮೇರೆಗೆ ಜಮೀನನ್ನು ಸುಬರ್ದಿಗೆ ತೆಗದುಕೊಂಡರು (ರೂಢಿ). [<— ಹಿಂ. ಸುಪುರ್ದ್; ಮರಾ. ಸುಪೂರ್ತ್, ಸುಪೂರ್ದ್]

**ಸುಪರ್ಬ** (ನಾ). ಸುರ; ದೇವತೆ: ತಿಳಿದು ಸಕಳಸುಪರ್ಬಜನವೆಚಗಿದುದು ಜಯಜಯ ಎನುತ ಪಶುಪತಿಗೆ (ಕುವ್ಯಾಕ. ೬-೩೧); ಒಬ್ಬವಿಹನೀಕ್ಷಿಸುಪೆನಿನ್ನು ಸುಪರ್ಬ ಲೋಕಾಧೀಶರೊಳಗನುತ್ತ (ನಿಭಾಗ. ೩-೮-೧೯). [< ಸಂ. ಸುಪರ್ವ]

**ಸುಪರ್ವ** (ನಾ). ೧. = ಸುಪರ್ಬ: ''ಸುಪರ್ವ ನಾಕಸದನರ್ ನಿಳಿಂಪ ವಿಬುಧರು ಸುಮನಸರು ಲೇಖರೆನಲು ವಿಬುಧರ್ಗೆ ನಾಮಂ'' (ಮಂಗರಾ. ೩-೮); ಸುಪರ್ವರ ಕುಜಾಹುಗಳನಜಿದಘುರರಿಪುಗಳು ಹರಿದರರಘನೆಗೆ (ಕುವ್ಯಾಅ. ೧೨-೧೪); ಸುಪರ್ವನುತಮ್ಮಭವೇ . . . ಪಾಲಿಪುದು (ರಾಜಶೇ. ೮-೧೨೭). ೨. ಒಳ್ಳೆಯ ಗಿಣ್ಣು: 'ಸುಪರ್ವಲುಲಿತ' ಪರಾ. [ಸಂ.]

**ಸುಪರ್ವಗುರು** (ನಾ). ದೇವತೆಗಳ ಗುರು; ಬೃಹಸ್ಪತಿ: ಪ್ರೀತಿಯಿನಾ ಸುಪರ್ವ ಗುರು ಬಣ್ಣಿಸಿದಂ ಧ್ರುವನಂ (ವಿಷ್ಣುಪು. ೧-೩-೧೪೯). [ಸಂ.]

**ಸುಪರ್ವನಾಥ** (ನಾ). ದೇವತೆಗಳ ಒಡೆಯ; ಇಂದ್ರ: ಮೃಡನನೋಲೈಸಲ್ಕೆ ಬಾಗಿಲ ಕಡೆಗೆ ಹೋಗಿ ಸುಪರ್ವನಾಥನು ಬಿಡದೆ ನೋಡುತಲೆವೆಯನಿಕ್ಕದ ಕಾಯ್ದುಕೊಂಡಿಹನು (ಬಸಪು.೪೩-೪೨). [ಸಂ.]

**ಸುಪರ್ವಲುಲಿತ** (ನಾ). ೧. ದೇವತೆಗಳಿಂದ ಸುತ್ತುವರಿಯಲ್ಪಟ್ಟವನು. ೨. ಗಿಣ್ಣುಗಳಿಂದ ಸುಂದರವಾದುದು. ೧, ೨: ಸುಪರ್ವಲುಲಿತಂ . . . ತೋಪಾಯ್ದುವೇಂದ್ರಂಗೆ ಮಜ್ಜನಕಂಗೀ ಮರನೆಂದು ಮಾಮರಕೆ ಕಾಮಂ ಕೊಟ್ಟ ನಾತಿಥ್ಯಮಂ (ಪುಷ್ಪಪು. ೮-೮೦). [ಸಂ. (ಸುಪರ್ವ + ಲುಲಿತ; ಸು + ಪರ್ವ + ಲುಲಿತ)]

**ಸುಪರ್ವವಧು** (ನಾ). ದೇವತಾಸ್ತ್ರೀ; ಅಪ್ಸರೆ: ಮುಡಿಸಿದಲೆಚಕದಿನೊರ್ವಳ್ ಸುಪರ್ವವಧು ನೃಪವಧುವಂ (ಪುಷ್ಪಪು. ೯-೮೦). [ಸಂ. ಸುಪರ್ವವಧೂ]

**ಸುಪರ್ವಾಗ್ರಣಿ** (ನಾ). ೧. ದೇವತೆಗಳ ಒಡೆಯ; ಇಂದ್ರ; ದೇವೇಂದ್ರ: ಸುಪರ್ವಾಗ್ರಣಿಗಾಯ್ತು ವಜ್ರಿಗಾಸನಕಂಪಂ (ಪುಷ್ಪಪು. ೯-೫೦). ೨. ದೇವತೆಗಳಲ್ಲಿ ಮುಖ್ಯನಾದವನು; ಪರಮಾತ್ಮ; ಶಿವ: ಶ್ರುತಿನಿವಹಪ್ರಣುತನೊಳಖಿಳ ಸುಪರ್ವಾಗ್ರಣಿಯೊಳ್ ಸೆಣಸಾಂತು ಮೃಡನೊಳೆಚ್ಚಾಡಿದನೇ (ಶಬಶಂ. ೪-೧೨೧). [ಸಂ. ಸುಪರ್ವಾಗ್ರಣೀ]

**ಸುಪರ್ವೇಂದ್ರ** (ನಾ). = ಸುಪರ್ವಾಗ್ರಣಿ ೧: ಸುಪರ್ವೇಂದ್ರಗೃಹಕ್ಕೆ ಮೆಚ್ಚೆಯದಾತ್ಮೀಯಕಳಾಸರ್ವಜ್ಞತೆಯಂ ಮೆಚ್ಚಿದಂ ಗೀರ್ವಾಣಸ್ಥಪತಿ ನಿಮ್ಮ ಗೃಹವಿರಚನೆಯಿಂ (ಜಗವಿ. ೯-೧೩೧). [ಸಂ.]

**ಸುಪಲಿ** (ನಾ). ಕೇರುವ ಸಾಧನ; ಮೊರ: ಅಕ್ಕಿ ಕೇರೇನಾ ಅಕ್ಕಿ ಕೇರೇನಾ ಬಣ್ಣದ ಸುಪಲೀಲಿ (ಕನ್ನಜಾ. ೩೭). [< ಸೂರ್ಪ]

**ಸುಪಾಕ** (ನಾ). ೧. ಒಳ್ಳೆಯ ಅಡುಗೆ; ಉತ್ತಮವಾದ ಪಾಕ. ೨. ಒಂದು ನರಕದ ಹೆಸರು: ಕುಂಭೀಪಾಕ, ಸುಪಾಕ . . . ಅಂಗಾರಕವೆಂಬ್ಬೆದು ಮಂತ್ರಿನರಕಂಗಳಿಂದಾವರಿಸಿ ತರಳತಾರವೆಂಬರಸುನರಕವಿಹುದು (ವಿವೇಕ. ೧೫೨). [ಸಂ.]

**ಸುಪಾಣಿ, ಸುಪ್ಪಾಣಿ** (ನಾ). ೧. ಶುಭ್ರವಾದ ನೀರಿರುವ ಮುತ್ತು; ಶ್ರೇಷ್ಠ ದರ್ಜೆಯ ಮೌಕ್ತಿಕ: ನಸುದೆಳ್‌ಯುತ್ತಮಿರ್ದ ಪೊಸಮುತ್ತಿನ ಸಿಂಪಿನ ಸಂಪುಟಂಗಳಿಂ ನುಸುಳ್ದು ಸುಪಾಣಿಯಾಗಿ ಪೊಱಪೊಣ್ಮುವ ಮುತ್ತಿನ ಮಾಲೆಯಂದದಿಂ . . . ಪೊಣ್ಮಿದುವು ಕಣ್ಬನಿಗಳ್ (ಕಾದಂಪೂ. ೩೩೧). **ಸುಪ್ಪಾಣಿ:** ೧. ಹೊಸಮುತ್ತಿನ ಸುಪ್ಪಾಣಿಯಂತೆ ಲಿಂಗೈಕ್ಯವು (ಅಪಚಂ. ೧೩೭-೭೨೪); ''ಆಭರಣವಿಶೇಷ'' (ಅಮೆಟಿ. ಕೋಶ); ಒಂದು ಚಿಪ್ಪಿನಲ್ಲಿ ಮೂಱು ಮುತ್ತು ಹುಟ್ಟಿದವು ಒಂದು ಕಟ್ಟಾಣಿ ಒಂದು ಸುಪ್ಪಾಣಿ ಒಂದು ಮಣಿ ಉದಕವಿಲ್ಲದ ಸೂತೆ (ಸಕವ. ಕ. I, ೨೬೮-೮೩); ಸರಪಣಿ ಮಣಿ ಸುಪ್ಪಾಣಿ ಸೂಸರವು ಕರವಲಯ ಉಡಿದಾರ ಕಾಲ್ಪೆಂಡೆ ಪ್ರಭೆಯು (ಪ್ರಸಭಾ. ೧೫-೬). 'ಕಟ್ಟಾಣಿ' ಪರಾ. ೨. ಒಂದು ಬಗೆಯ ಭಕ್ಷ್ಯ: ಬಿಸಿನೀರನೆಱೆದು ಕಿವಿಚಿದ ಫುಲ್ಲ ಸೊಜ್ಜಿಗೆಯ . . . ತುಪ್ಪದೊಳಗೊಂದೊಂದು ಚೊಟ್ಟೆಯಂ ಬಿಡಲು ಮಿಸುಪ ಸುಪ್ಪಾಣಿವೆಸರಂ ತಾಳಿ ವಸುಧಾವರರ್ಗೆ ಪಾವನಮಾದುದು (ಸೂಪಶಾ. ೧-೩೭). ೩. (ಆಲಂ) ಒಳ್ಳೆಯವಳು; ಶ್ರೇಷ್ಠಳಾದವಳು: ವಾಣಿ ಬೊಮ್ಮನ ರಾಣಿ . . . ಸತಿ ಸುಪ್ಪಾಣಿ ವರ್ಗಶ್ರೇಣಿ . . . ಕಾಮಿತದಾನಿ ವರವೀಯ (ಕೌಶಿರಾ. ೧-೨); ಚಂದ್ರಾಣಿ ಪುಷ್ಪಾಣಿ ಸುಪ್ಪಾಣಿ ಕಟ್ಟಾಣಿ

ಮಂದ್ರಾಣಿ ಮಧುರಾಣಿಯೆಂಬ ಚಂದ್ರನ ಷೋಡಶಕಲೆಗಳಂದದ ಪಣ್ಣಳಿಂದ್ರಾಭನಿದಿ ರೊಳಾಡಿದರು (ಭರಚ. ೧೩-೭೪); ಕ್ಷೋಣಿಯೊಳಗೆ ಸರಿಗಾಣೆನೆ ನಿನಗೆ ಸುಪ್ಪಾಣಿಯೆ (ವಿದಾಕ್ಯ. ೭೨ ಅನುಪಲ್ಲವಿ). (ಗು). ೪. ಒಳ್ಳೆಯ; ಶ್ರೇಷ್ಠವಾದ: ವಕ್ಷೋರುಹಂಗಳುಂ ಸಿರಿಕರದ ಮಕರಿಕಾಪತ್ರಮುರುಭರಮಂದು ಸುಪ್ಪಾಣಿಮಾಲಿಕೆಗಳ ಧರಿಸದಾದುದು ಗಳಂ (ಪಂಶಾರಾ. ೧೮-೧೩). 'ಆಣಿ₁' ಹೋ.

[ಸು₄ - + ಪಾಣಿ₁ (< ಪಾಣೀಯ)?. /ತೆಲು. ಸುವಾಣಿ, ಸುಪ್ಪಾಣಿ]

**ಸುಪಾತ್ರ** (ನಾ). ೧. ಒಳ್ಳೆಯದಕ್ಕೆ ಯೋಗ್ಯನಾದವನು, — ಅರ್ಹನಾದವನು. ೨. [ನಾಟ್ಯ] ಹತ್ತುಬಗೆಯ ನೃತ್ಯಭೇದಗಳಲ್ಲಿ ಒಂದು: ತಾಂಡವ . . . ಸುಪಾತ್ರ . . . ಸರ್ವತೋಭದ್ರವೆಂಬ ದಶಪಾತ್ರಂಗಳಂ ಬೀಜಿ (ವಿವೇಕ. ೩೪೯); ತಾಂಡವ ನಾಂಟ್ಯ ನೃತ್ಯ ಲಾಸ್ಯ ಗುಂಡಿ ಪಿಕ್ಕಣ ಲಚ್ಚಣ ಅಪರಿಪಾತ್ರ ಸುಪಾತ್ರ ಸರ್ವತೋಭದ್ರ ಯೆಂಬ ದಶಪಾತ್ರಂಗಳಂ ತೋರಿ (ಭುರಪು. ೧-೭೧೪). 'ಅಪರಿಪಾತ್ರ' ಪರಾ. [ಸಂ.]

**ಸುಪಾರಿ** (ನಾ). ಅಡಕೆ: ಬಾಯಲ್ಲಿ ಸುಪಾರಿಯಗಿಯುತ್ತಾ ತಮಾಷೆಯಾಗಿ ಮಾತನಾಡುತ್ತಿದ್ದರು (ಗೋಪುರ. ೧೧೨). 'ಪಾನ್‌ಸುಪಾರಿ' ಪರಾ.

[<— ಹಿಂ. ಮರಾ. ಸುಪಾರೀ]

**ಸುಪೀಕ** (ಗು). (ಉಕ) ಅತಿಶಯವಾದ; ಸಮೃದ್ಧವಾದ: ವೆಂಕಟರಮಣನ ಸುಪೀಕ ಕಲ್ಪಕಶಕ್ತಿ ಒಮ್ಮೆಲೇ ಚೇತರಿಸಿ . . . ಬಾಯಿ ಚಪ್ಪರಿಸಿದ (ಮೂರುದಾ. ೧೫೬).

ಸುಪೀಕತಲೆ = (ಆಲಂ) ಅತಿ ಬುದ್ಧಿವಂತಿಕೆ: ಜನರಿದ್ದಲ್ಲಿ ಮಾತು ಇರುವವೇ. ಅದರಲ್ಲೂ ನಮ್ಮ ಜನರಂತಹ ಸುಪೀಕತಲೆಯವರಿದ್ದರೆ ಪಕ್ಕ ಹಾರಿದರೂ ಕಾಗೆ ಹಾರಿತೆಂದು ತೋರುವುದೇ (ಮೂರುದಾ. ೧೯೧). [<— ಮರಾ. ಸುಪೀಕ್]

**ಸುಪುತಿ** 'ಸುಪತಿ' ನೋ.

**ಸುಪುತ್ರ** (ನಾ). ಒಳ್ಳೆಯ ಮಗ; ಸತ್ಪುತ್ರ: ವಿಳಸಿತ ಗುಣಗಣದಿಂ ನಿರ್ಮಳ ತನುಗಲ್ಲ ಬೀಜದಿಂ ಬೆಳಸೆಂತಗ್ಗಳಮಕ್ಕುಮಂತೆ ಗುರುಗಗ್ಗಳಮಾದನಿದೇಂ ಸುಪುತ್ರನೋ ಬಲದೇವಂ (ಶಾಂತಿಪು. ೨-೪); ಅಧಿಕಶ್ರೀನಿಳಯಂ ಸುಪುತ್ರನೊಗೆತರ್ಕುಂ (ಪುಷ್ಪದ. ೩-೬೨೨). [ಸಂ.]

**ಸುಪುರೋಡಾಶ** (ನಾ). ಯಜ್ಞಯಾಗಾದಿವಿಧಿಗಳಲ್ಲಿ ದೇವತಾಪ್ರೀತ್ಯರ್ಥವಾಗಿ ಕೊಡುವ ಒಳ್ಳೆಯ ಹವಿಸ್ಸು: ನೀ ಸಮಾಧಾನದಲಿ ಸುಪುರೋಡಾಶವಿದ ಸವಿದಾಜ್ಯಸಹಿತ ಮಹಾಸುವಿಸ್ತಾರದಲಿ ಕೊಂಬುದು ಭೀತಿ ಬೇಡೆಂದ (ಕುವ್ಯಾಅ. ೨೦-೨೫). [ಸಂ.]

**ಸುಪುಷ್ಪ** (ಗು). ಚೆನ್ನಾಗಿ ಬೆಳೆದ; ದಷ್ಟಪುಷ್ಟವಾದ: ತನ್ನ ಮುಂದೆ ಬೆಂಕಿ ಗೇಡಿಯೊಬ್ಬ ತಿರುಗಾಡಿಸುತ್ತಿದ್ದ ಸುಪುಷ್ಪಗ್ರೀವದ . . . ಹೋರಿಗುದುರೆಯನ್ನವನು ಪರೀಕ್ಷಿಸುತ್ತಿದ್ದನು (ಪುಸರು. ೪೫೦). [ಸಂ.]

**ಸುಪುಷ್ಪವೃಷ್ಟಿ** (ನಾ). ೧. ಮಂಗಳಕರವಾದ ಹೂವಿನ ಮಳೆ. ೨. [ಶಿಲ್ಪಶಾ] ದೇವತಾವಿಗ್ರಹಗಳ ಶಿರೋವೇಷ್ಟನಗಳಲ್ಲಿ ಒಂದುಬಗೆ; ಒಂದು ಬಗೆಯ ಕಿರೀಟ: ನರೇಂದ್ರರನೊತ್ತಿಕೊಂಡುಮಾತ್ಮೀಯ ಸುಪುಷ್ಪವೃಷ್ಟಿಯನೊಡಂಬಡೆ (ಪಂಪಭಾ. ೧-೧); P '' 'ಸುಪುಷ್ಪವೃಷ್ಟಿಯಂ' ಇಲ್ಲಿ ಪಾಠಕ್ಲೇಶವಿದೆ. ಇದು 'ಸುಪುಷ್ಪ[ಪಟ್ಟ]ಮಂ' ಎಂದಿರಬೇಕು . . . ಪುಷ್ಪಪಟ್ಟವೆಂಬ ಶಬ್ದ ಶಿಲ್ಪ ಶಾಸ್ತ್ರಕ್ಕೆ ಸೇರಿದ್ದು. ರಾಜರೂ ದೇವತೆಗಳೂ ಧರಿಸುವ ಶಿರೋವೇಷ್ಟನಗಳಲ್ಲಿ ಜಟಾ, ಮೌಳಿ, ಕಿರೀಟ, ಕರಂಡ, ಶಿರಸ್ತ್ರಕ, ಕುಂಡಲ, ಕೇಶಬಂಧ, ಧಮ್ಮಿಲ್ಲ, ಅಲಕ, ಚೂಡ, ಮುಕುಟ, ಪಟ್ಟ—ಎಂಬ ಹನ್ನೆರಡು ವಿಧಾನಗಳಿವೆ. ಇವುಗಳಲ್ಲಿ ಪಟ್ಟವೆಂಬುದು ಪತ್ರಪಟ್ಟ, ರತ್ನಪಟ್ಟ, ಪುಷ್ಪಪಟ್ಟ ಎಂದು ಮೂರು ಬಗೆಯಾಗಿದೆ'' (ಪಂಪಬೀ. ೧). [ಸಂ.]

**ಸುಪ್ತ** (ಗು). ೧. ನಿದ್ರೆಹೋದ; ಮಲಗಿದ: ತವುತಿರ್ದತ್ತಲ್ತೆ ತಾರಾಸಮುದಾಯ ಮಿದೂ ಪಂಪಾಸರಸ್ತೀರ ಸುಪ್ತೋತ್ತ ವಿಹಂಗಧ್ವಾನವೀ ಪೊಣ್ಮುವುದು (ಕಾದಂಬ. ೭೦೪). ೨. ಮೈಮರೆತ; ಎಚ್ಚರವಿಲ್ಲದ; ಇತರ ಬಾಹ್ಯೇಂದ್ರಿಯಗಳಿಲ್ಲ ಸುಪ್ತಸ್ಥಿತಿಯಲ್ಲಿದ್ದವು (ಶಾಂತಪಾ. ೩೬೪). (ನಾ). ೩. ಮಲಗಿದುದು; ನಿದ್ರೆಹೋದುದು: ತೃಪ್ತಿಯರಿಯದ ವಾಂಛೆ . . . ಪ್ರಾಪ್ತಿಗೊಳಿಪುದು ಜೀವಕುನ್ಮಾದತಾಪಗಳ ಸುಪ್ತವಹುದೆಂತಿಚ್ಛೆ? (ಮಂಕುತ. ೩೬೯). ೪. ಮಲಗಿದವನು; ನಿದ್ರೆಹೋದವನು: ಸುಪ್ತಂ ಪ್ರಬುದ್ಧನನೆ ಪರ್ಯಾಪ್ತಿಯನಂತರ್ಮುಹೂರ್ತದಿಂ ಪಡೆದು (ಮಲ್ಲಿಪು. ೧೧-೬೩); ಸುಪ್ತಂಗೆ ಜಾಗೃತನ ಲೋಕಮುಂ ಸುಳ್ಳೇ (ಮಂಕುತ. ೪೮೩). ೫. [ಕಾವ್ಯಮೀ] ಸಂಚಾರಿಭಾವಗಳಲ್ಲಿ ಒಂದು; ನಿದ್ರೆಯಲ್ಲಿರುವುದು; ಸುಪ್ತಿ: ಮತಿ ನಿರ್ವೇದ . . . ಆಲಸ್ಯ ಸುಪ್ತಾವ ಬೋಧ ಸ್ಮೃತಿ . . . ಸಂಚಾರಿಭಾವಂ (ಕಾವ್ಯಾವ. ೬೫೫). [ಸಂ.]

**ಸುಪ್ತಕೋಣಾಸನ** (ನಾ). [ಯೋಗ] ಯೋಗಾಸನಗಳಲ್ಲಿ ಒಂದು: ಮುಖ್ಯ ವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು ೧. ಉತ್ತಾನಾಸನ . . . ೭೪. ಸುಪ್ತಕೋಣಾಸನ (ಭಾರದ. ೧೬೭). [ಸಂ.]

**ಸುಪ್ತಚಿತ್ತ** (ನಾ). ಮಲಗಿದಂತಿರುವ ಮನಸ್ಸು, —ಒಳಚಿತ್ತ: ಸಹಸ್ರಾರು ಸಂವೇದನೆಗಳು ಪ್ರಜ್ಞೆಯ ದ್ವಾರಾ ನಮ್ಮ ಸುಪ್ತಚಿತ್ತ (Subconscious)ವನ್ನು ಪ್ರವೇಶಿಸಿ ಅಲ್ಲಿ ಹುದುಗಿರುತ್ತವೆ (ಸೌಂದಸ. ೫). [ಸಂ.]

**ಸುಪ್ತಚೇತನ** (ನಾ). ಮಲಗಿದಂತಿರುವ ಶಕ್ತಿ; ಒಳಚೇತನ: ಮನುಷ್ಯನ ಮನಸ್ಸಿನ ಮಟ್ಟಗಳಲ್ಲಿ ಮೊದಲು ಪ್ರಜ್ಞಾಮಟ್ಟ, ನಂತರ ಉಪಪ್ರಜ್ಞಾಮಟ್ಟಗಳು ಬರುತ್ತವೆ. ಇದಕ್ಕಿಂತ ಆಳದಲ್ಲಿರುವ ಮಟ್ಟವನ್ನು ಸುಪ್ತಚೇತನವೆನ್ನುತ್ತಾರೆ (ದೂರಸ. ೨೫೧). [ಸಂ.]

**ಸುಪ್ತಪಾದಾಂಗುಷ್ಠಾಸನ** (ನಾ). [ಯೋಗ] ಯೋಗಾಸನಗಳಲ್ಲಿ ಒಂದು: ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು ೧. ಉತ್ತಾನಾಸನ . . . ೨೭. ಸುಪ್ತಪಾದಾಂಗುಷ್ಠಾಸನ (ಭಾರದ. ೧೬೭). [ಸಂ.]

**ಸುಪ್ತಪಾರ್ಶ್ವಪಾದಾಂಗುಷ್ಠಾಸನ** (ನಾ). [ಯೋಗ] ಯೋಗಾಸನಗಳಲ್ಲಿ ಒಂದು: ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು ೧. ಉತ್ತಾನಾಸನ . . . ೭೫. ಸುಪ್ತಪಾರ್ಶ್ವಪಾದಾಂಗುಷ್ಠಾಸನ (ಭಾರದ. ೧೬೭). [ಸಂ.]

**ಸುಪ್ತಪ್ರಜ್ಞೆ** (ನಾ). = ಸುಪ್ತಚೇತನ: ಅಂತೆಯೆ ಸುಪ್ತಪ್ರಜ್ಞೆಯ ರಸಾತಲದಲ್ಲಿ ಹೂತುಕೊಂಡಿದ್ದ ಈ ನೆನಪುಗಳು ಹೊರಗೆ ಜಾರಿಹೋಗದಂತೆ ದ್ವಾರಪ್ರವೇಶವನ್ನು ಭದ್ರವಾಗಿ ಮುಚ್ಚಲಾಗಿತ್ತು (ಪುನರು. ೧೯೯). [ಸಂ. ಸುಪ್ತಪ್ರಜ್ಞಾ]

**ಸುಪ್ತಪ್ರಣವ** (ನಾ). (ಚೇತನದ) ಒಳಗಿರುವ ಓಂಕಾರಮಂತ್ರ: ನಡುವಣಾ ಸುಪ್ತಪ್ರಣವಕೊಂದು ಮನೆ ನಾಲ್ಕು ಕಡೆಯ ಬೀದಿಗಳೊಳ್ಕೆದ್ದೆದುಮಿಪ್ಪತ್ತಲಾ (ವೀಶೈವು. ೧-೪-೮). [< ಸಂ. ಸುಪ್ತಪ್ರಣವ]

**ಸುಪ್ತವಜ್ರಾಸನ** (ನಾ). [ಯೋಗ] ಯೋಗಾಸನಗಳಲ್ಲಿ ಒಂದು: ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು ೧. ಉತ್ತಾನಾಸನ . . . ೩೮. ಸುಪ್ತವಜ್ರಾಸನ (ಭಾರದ. ೧೬೭). [ಸಂ.]

**ಸುಪ್ತಸ್ಥಿತಿ** (ನಾ). ನಿದ್ರಾವಸ್ಥೆ: ಸಾವಿರಾರುವರ್ಷ ಸುಪ್ತಸ್ಥಿತಿಯಲ್ಲಿದ್ದ ವೈಜ್ಞಾನಿಕ ಶೋಧನೆ . . . ಸತ್ವಶಾಲಿಯಾಯಿತು (ಋಕ್ಷಾರ. ೧೫ ಪೀಠಿಕೆ). [ಸಂ.]

**ಸುಪ್ತಾವಸ್ಥೆ** (ನಾ). = ಸುಪ್ತಸ್ಥಿತಿ: ಪಂಚಕಲಶಗಳನ್ನು ಸ್ಥಾಪಿಸಿ ಸುಪ್ತಾವಸ್ಥೆಯಲ್ಲಿದ್ದ ಶಿವಕಲೆಯನ್ನು . . . ಜಾಗ್ರದವಸ್ಥೆಗೊಳಿಸಿ . . . ನೆಲೆಗೊಳಿಸುವನು (ಭಾರದ. ೨೪೯); ತಾತ್ಕಾಲಿಕವಾಗಿ ಅದು ತಣ್ಣಗಾದರೂ ಸುಪ್ತಾವಸ್ಥೆಯಲ್ಲಿ ಅಡಗಿಯೇ ಇರುತ್ತದೆ (ಶಿಕ್ಷದ. ೮೨). [ಸಂ.]

**ಸುಪ್ತಿ** (ನಾ). ೧. ಮಲಗಿರುವಿಕೆ; ನಿದ್ರೆ: ''ಅಕ್ಷಿ ಮುದ್ರಿಸೆ ಸುಪ್ತಿ'' (ಪಂಗರಾ. ೯೪-೩); ಮುನ್ನಿನ ನಿಜಲೀಲೆಯೋಲಗದ ಪರ್ಮೆಯ ಮಾತನದೊರ್ವೆ ಸುಪ್ತಿಯೊಳ್ ಕನವರಿಸುತ್ತುಮಿರ್ಪ ಹರಿ ಗೋಪಿಗೆ ವಿಸ್ಮಯಮಂ ನೆಗಟ್ಟಿದಂ (ಜಗವಿ. ೩-೫೯); ನಾಳಿನಾಹವ . . . ಅಸದಳವಚಲಬಲಗಾಂಡಿವಿಗೆ ಹರಿಯದು ಸುಪ್ತಿಯೊಳಗವನ ಉಚಿತದಲಿ ಕೊಂಡೊಯ್ಯು ರುದ್ರನ ವಚನದನುವನು ತಿಳಿವನು (ಕುವ್ಯಾದ್ರೋ. ೯-೫). ೨. ಮರೆವು; ಅಜ್ಞಾನ: ನಿರುತ ಹಮ್ಮಿದು ತಾಮಸದಲುಜೆ ಬೆರೆಯೆ ಸುಪ್ತಿ ರಜೋಗುಣದಿ ಸಂಚರಿಸೆ ಸ್ವಪ್ನವು (ಅಮೃತ. ೬-೧೧). ೩. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು: ಲಜ್ಜೆ . . . ಸುಪ್ತಿ . . . ಅಪಸ್ಮಾರಗಳೆಂಬ ಮೂವತ್ತುಮೂರು ಸಂಚಾರಿಭಾವಂಗಳಿಂ (ವಿವೇಕ. ೨೨೭); ನಿದ್ರಾಗಾಢಾವಸ್ಥೆಯೆ ಸುಪ್ತಿ (ಭಾರಮೀ. ೩೪೭). [ಸಂ.]

**ಸುಪ್ತೆ** (ನಾ). ಮಲಗಿರುವವಳು; ನಿದ್ರಿಸುತ್ತಿರುವವಳು: ಸುಪ್ತೆಯಾದ ಮಹಾಶ್ವೇತೆಯಂ ನೋಡಿ ಚಂದ್ರಾಪೀಡಂ ಪಲ್ಲವಶಯನತಳದೊಳ್ ಮಯ್ಯನಿಕ್ಕಿ ಬೀಡಂ ನೆನೆದು (ಕಾದಂಪೂ. ೯೮೪); ಆತನ ಕೀರ್ತಿಲಕ್ಷ್ಮಿಯೆ ಮೂರ್ತಿಮತಿಯಾದಂ ತಾತ್ಮೀಯ ಪ್ರಾಣೇಶ್ವರನ ಮನಕ್ಕೆ ವರೆ ಸೂಳ್ಗೆವಂದು ಸುಪ್ತೆಯಾಗೆ ಯಾಮಿನೀವಿರಾಮ ಯಾಮದೊಳ್ (ಸುಕುಮಾ. ೯-೧೧೪ ವ). [ಸಂ. ಸುಪ್ತಾ]

**ಸುಪ್ಪತಿಗೆ** 'ಸುಪ್ಪತ್ತಿಗೆ' ನೋ.

**ಸುಪ್ಪತ್ತಿಗೆ, ಸುಪ್ಪತಿಗೆ** (ನಾ). ಶ್ರೇಷ್ಠವಾದ ಹತ್ತಿಯಿಂದ ಮಾಡಿದ ಮೆತ್ತನೆಯ ಹಾಸಿಗೆ; ತಲ್ಪ: ನಾನು ಮಂಚ ಸುಪ್ಪತ್ತಿಗೆಯ ಮೇಲೆ ಮಲಗಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ (ಚನ್ನವ.ಕ. ೨೫೯-೫೫೫); ಚಿತ್ರೈಸು ಸುಪ್ಪತ್ತಿ[ಪಾಠಾಂ. ರೂಪರಿ] ಗೆಯೊಳು ಬಿಳಿದ ಪಚ್ಚಡಿಸಿ ಮುತ್ತಿಯಾ ಪರಿಜನಂ ಬೆಳಗಾಗೆ (ಸಿದ್ಧರಾ. ೯-೯). **ಸುಪ್ಪತಿಗೆ:** "ತಳ್ಪಮನೆ ತಳಿಮಮನೆ ಸುಪ್ಪತಿಗೆಗಕ್ಕು ನಾಮಂ" (ಮಂಗರಾ. ೭೦-೧೫); ನೆಲವಾಸು ತಂಬುಲಂ ಪೆರ್ಮೊಲೆಗಳ ಸಜ್ಜಿಮಿಂಡಿ ಸುಪ್ಪತಿಗೆ ಧವಳಾರಂ (ಸೂಕ್ತಿಸು. ೧೦-೨೮೯); ಸುವರ್ಣದಡ್ಡಣೆ ಸುಪ್ಪತಿಗೆ ರನ್ನವಿಟ್ಟರ ರತ್ನಗಂಬಳಿ ತಲೆಗಿಂಬ ಹೂಸ್ನಾಂ ಬರನಿತ್ತ ಮಗಗೆ (ಮೋಹತ. ೧೫-೧೭). [?./ ಮರಾ. ಸುಪತೀ, ಸುಪೇತೀ]

**ಸುಪ್ಪತ್ತಿಗೆಹಿಂಡಿಬೇರು** (ನಾ). ಒಂದು ಬಗೆಯ ಮೂಲಿಕೆ: ಹೊನ್ನಗನ್ನೆಬೇರು ಕಿರಕುಸಾಲೆಯ ಬೇರು ಸುಪ್ಪತ್ತಿಗೆಹಿಂಡಿಬೇರು . . . ಇವಂ ಕಷಾಯವಿಕ್ಕಿ . . . ಸೌತೆಯ ಬೀಜ ಇಪ್ಪನು ಅರೆದು ಕದಡಿ ಕುಡಿಯಲಾಕ್ಷಣವೆ ಮೂತ್ರಬಿಡುವುದು (ಸಕವ್ಯ. ೩೭೪).

[ಸುಪ್ಪತ್ತಿಗೆಹಿಂಡಿ + ಬೇರು (< ಬೇರ್$_1$)]

**ಸುಪ್ಪನಾತಿ, ಸುಪನಾತಿ** (ನಾ). ಬೆಡಗುಗಾತಿ; ಥಳುಕಿನವಳು: ನಿಮಗಿಷ್ಟೂ ತಿಳಿಯುವುದಿಲ್ಲವೇ? ಆ ಸುಪ್ಪನಾತಿಯೇ ಶಾಲೆಯ ವೈಷಮ್ಯದ ಮೂಲ (ತಾಯಿಕ. ೧೧೯). **ಸುಪನಾತಿ:** ಸೋಬಾನೆ ಎನ್ನುವುದಕ್ಕೆ ಕೂಡ ಕೈಲಾಗದೇನರೆ ಸುಪನಾತೀರ ನಾನೆಲ್ಲೂ ಕಾಣೆ ನಮ್ಮವ್ವ (ಮಾಮರಾ. ೬೮). [?./ ತೆಲು. ಚುಪ್ಪನಾಕ, ಚುಪ್ಪನಾತಿ, ಸುಪ್ಪನಾತಿ]

**ಸುಪ್ಪರನ, ಸೂಪರಣ** (ನಾ). ಒಳ್ಳೆಯ ರೆಕ್ಕೆಯುಳ್ಳದು; ಗರುಡ: ಅಪ್ಪಾರ ಮಹಿಮ ಅನುಪಮ್ಮಚರಿತ ಸುಪ್ಪಾರಸನ್ನ ಸುಪ್ಪರನವಾಹನ್ನ ಅಪ್ಪಾ ತಿಮ್ಮಪ್ಪ ಎನ್ನಪ್ಪ (ತೀರ್ಥಮ. ೯೩). **ಸೂಪರಣ:** ಪರಣದ್ವಾಸಿಗೆಯಲ್ಲಿ ಮಲಗಿದ ಶಿಶುವ ಸೂಪರಣಗಳು ನೋಡುತಾಗ ಕಿರಣ ಬೀಳದಲ ಸೂರ್ಯಗೆ ಮರೆಮಾಡುತ ತಮ್ಮ ರೆಕ್ಕೆ ಪಸರಿಸುತಾಗ (ಕರ್ನಾಕ. ೨೧೪). [< ಸಂ. ಸುಪರ್ಣ]

**ಸುಪ್ಪಲ್** (ನಾ). ''ಉಪ್ಪುಹಾಕಿದ ಖಾದ್ಯ; ಚಾಕಣ'' (ಪಂಪಪದೀ. ೪೯೦): ಅರಾತಿನಾಥರದಗಂ ಸುಪ್ಪಲ್ಗೆ ಕೆನ್ನೆತ್ತರಂ ಕೆನೆಗೊಂಡಾಜಿಟ ಪಾಲ್ಗೆ ದೊಂಡೆಗರುಳಂ ಕರ್ಬಿಂಗೆ ಲೆಕ್ಕಕ್ಕೆ ತಂದು (ಪಂಪಭಾ. ೧೨-೧೭೦). 'ಉಪ್ಪಡ$_2$' ಪರಾ.

[ಸುಪ್ಪು$_1$ (< ಉಪ್ಪು$_1$) + - ಅಲ್$_2$./ತುಳು. ಉಪ್ಪುಡ = ಉಪ್ಪು ಹಾಕಿದ ಮಾನು; ಕೋಲಾ. ಸುಪ್; ನಾಯ್ಕಿ. ಸುಪ್ಸ್; ಪರ್ಜಿ. ಚುಪ್; ಗಡಬ. ಸುಪ್ = ಉಪ್ಪು]

**ಸುಪ್ಪವುಗು** (ನಾ). ಒಂದು ಬಗೆಯ ಖಾರದ ಕಡುಬು: ಬಿಳಿಯ ಸೊಜ್ಜಿಗೆಯ ಹುಡಿ ಬೀಸಿದಕ್ಕಿಯ ಹಿಟ್ಟುಗಳನು ಸೋದಿಸಿಯವಂ ಸರಿಗೂಡಿ ಬಿಸಿಯುದಕದೊಳು ಕದಡಿ ಬೆಣ್ಣೆಯಂ ಜಡಿದರಿಸಿನವಯಿಕ್ಕಿ ಉಳ್ಳಿ ಸುಂಟಿಗಳ ಹಾಕಿ ಬಳಿಕ ಬೆರಳುಗಳನದ್ದಲು ಕದಿರ ತೋರದೊಳಗೆಳೆಯಾಗಲಾಯೆಳಗಳಂ ಕಾಯ್ದು ತಿಳಿದುಪ್ಪದೊಳಗೆ ನಾಲ್ಕೈದು ಸೂಳ್ ಬಿಡೆ ಗೀಜಗನ ಗೂಡಿನಂತೆ ಸುಪ್ಪವು[ಪಾಠಾಂ. ಸುಪ್ಪಯಿವ]ಗಾದುದು (ಸೂಪಶಾ. ೧-೪೨). [ಸುಪ್ಪು$_1$ (< ಉಪ್ಪು$_1$) + ಅವುಗು]

**ಸುಪ್ಪಾಣಿ** 'ಸುಪಾಣಿ' ನೋ.

**ಸುಪ್ಪಾಣಿಮಣಿ** (ನಾ). ಒಳ್ಳೆಯ ಹರಳು; ಶ್ರೇಷ್ಠವಾದ ರತ್ನ: ಚಿಪ್ಪ ನೋಡದೆ ಸುಪ್ಪಾಣಿಮಣಿಯ ನೋಡಿ (ಜನರಾ. ೧-೨೯). [ಸುಪ್ಪಾಣಿ (< ಸುಪಾಣಿ) + ಮಣಿ$_1$]

**ಸುಪ್ಪಾಣಿಮುತ್ತು** (ನಾ). ಶ್ರೇಷ್ಠವಾದ ಮುತ್ತು, — ಮೌಕ್ತಿಕ: ಸುಪ್ಪಾಣಿಮುತ್ತಿಟ್ಟು ನೋಡುವೆ (ಪುರಂದ. ೧-೮೨-೨); ಚಿಪ್ಪಿನೊಳಗೆ ಬಿದ್ದ ಸ್ವಾತಿಯ ಸೀರ್ಪನಿ ಸುಪ್ಪಾಣಿ ಮುತ್ತಾಗುವಂತೆ (ಭರಚ. ೩-೪೮); ಮಾಣಿಕವ ತೆತ್ತಿಸಿದ ರತ್ನಮಯ ಭಿತ್ತಿ ಕಟ್ಟಾಣಿ ಬಜ್ಜರಗಂಬ ಪವಳಬೋದಿಗೆಯು ಸುಪ್ಪಾಣಿಮುತ್ತಿನ ಲೋವೆ ಮರಕತದ ಪೊದಕೆ (ವಂಕಾರಾ. ೧-೨೧-೪). [ಸುಪ್ಪಾಣಿ (< ಸುಪಾಣಿ) + ಮುತ್ತು$_1$]

**ಸುಪ್ಪಾಣಿಮೌಕ್ತಿಕ** (ನಾ). = ಸುಪ್ಪಾಣಿಮುತ್ತು: ಚಿಪ್ಪೆಯ ಮೇಲೊಂದು ಸುಪ್ಪಾಣಿಮೌಕ್ತಿಕವಿಪ್ಪುದೆ ಮಗನೆ ಲೋಕದೊಳು (ಕೋಡಚ. ೩-೧೦).

[ಸುಪ್ಪಾಣಿ (< ಸುಪಾಣಿ) + ಮೌಕ್ತಿಕ]

**ಸುಪ್ರಣೀತ** (ನಾ). ಚೆನ್ನಾಗಿ ಸಂಸ್ಕಾರಗೊಳಿಸಿದ ಅಗ್ನಿ; ಉತ್ತಮವಾದ ಮಂತ್ರಾಗ್ನಿ: ಬಳಸಿದರು ಘರಿಮಧ್ಯಮಾನಾನಳನನಗ್ಗದ ಸುಪ್ರಣೀತಾನಳನ ನಾಹವನೀಯಗಾರುಹಪತ್ಯ ದಕ್ಷಿಣದ ಜ್ವಲಿತವನೆ (ಕುವ್ಯಾಸ. ೭-೩೦). [ಸಂ.]

**ಸುಪ್ರತಿಷ್ಠ** (ನಾ). [ಜೈನ] ಅರುವತ್ತುಮೂರು ಇಂದ್ರಕಗಳಲ್ಲಿ ಒಂದು: ಚಂದ್ರ ಸುಪ್ರತಿಷ್ಠಮೆಂಬ ಕೂಟಾಷ್ಟಕಂಗಳೊಳ್ ರಮಿಯಿಸುವ . . . ಎಣ್ಬರುಂ ದಿಗಂಗನೆಯರಂ ನಾಭಿರಾಜಾಂಗನೆಗೆ ಮಣಿದರ್ಪಣಮಂ ಪಿಡಿಯಲುಂ (ಆದಿಪು. ೭-೩ ವ). 'ಸುಪ್ರಬುದ್ಧ' ಪರಾ. [ಸಂ.]

**ಸುಪ್ರತಿಷ್ಠಕ** (ನಾ). [ಜೈನ] ಅಷ್ಟಮಂಗಲದ್ರವ್ಯಗಳಲ್ಲಿ ಒಂದು; ಪೂಜಾ ದ್ರವ್ಯಗಳನ್ನಿಡುವ ಒಂದು ಬಗೆಯ ಪಾತ್ರೆ: ಧ್ವಜದರ್ಪಣಚಂಚಚ್ಚಮರಜ ಮಣಿಭೃಂಗಾರಸುಪ್ರತಿಷ್ಠಿತಕಷ್ಕತತಾಳವ್ಯಜನಕಳಶಾತಪತ್ರಂ ತ್ರಿಜಗತ್ಪತಿಗಷ್ಟಮಂಗಳಂ ಸೊಗಯಿಸುಗುಂ (ಅಜಿಪು. ೪-೪೧). [ಸಂ.]

**ಸುಪ್ರತಿಷ್ಠಿತ** (ನಾ). ಒಳ್ಳೆಯ ಸ್ಥಾನಮಾನದಲ್ಲಿರುವವನು; ಉತ್ತಮವಾದ ಸ್ಥಿತಿವಂತ: ಅಭಿಜಾತರುತ್ತಮರೆನ್ನತ್ತೆಮಾವರು ಗಣ್ಯರು ಸುಪ್ರತಿಷ್ಠಿತರು (ಇಂಚಾಪ. ೩೪-೫೭). [ಸಂ.]

**ಸುಪ್ರತಿಷ್ಠೆ** (ನಾ). ೧. ಒಳ್ಳೆಯ ಇರವು; ಉತ್ತಮವಾದ ಸ್ಥಿತಿ. ೨. ಒಳ್ಳೆಯ ಯಶಸ್ಸು; ಉತ್ತಮವಾದ ಕೀರ್ತಿ. ೩. ದೇವಾಲಯದಲ್ಲಿ ದೇವತಾಮೂರ್ತಿಯನ್ನು ಸ್ಥಾಪಿಸುವುದು: ಶ್ರೀಸತೀಶನ ಸುಪ್ರತಿಷ್ಠೆಗೆ ಭೂಸುರಾಮಾತ್ಯಾದಿ ಪರಿಜನವೆಯ್ದೆ ಬಂದಿರಲು (ಬಸಪು. ೫೪-೧). ೪. [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಐದನೆಯದು; ಪ್ರತಿಪಾದದಲ್ಲಿಯೂ ಐದಕ್ಷರಗಳಿರುವ ವರ್ಣವೃತ್ತಗಳ ಸಮೂಹ: "ಉಕ್ತ ಅತ್ಯುಕ್ತ ಮಧ್ಯಮ ಪ್ರತಿಷ್ಠೆ ಸುಪ್ರತಿಷ್ಠೆ ಗಾಯತ್ರಿ . . . ಉತ್ಕೃತಿಗಳೆಂದೆನಿಪುವಿಪ್ಪತ್ತಾಱು ಛಂದಂಗಳಕ್ಕುಂ" (ಮಂಗರಾ. ೧೦೭-೧೮); ಉಕ್ತೆ ಅತ್ಯುಕ್ತೆ ಮಧ್ಯೆ ಪ್ರತಿಷ್ಠೆ ಸುಪ್ರತಿಷ್ಠೆ ಗಾಯತ್ರಿ ಉಷ್ಣಿಕ್ . . . ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೧-೪೭ ವ). [ಸಂ. ಸುಪ್ರತಿಷ್ಠಾ]

**ಸುಪ್ರತೀಕ** (ನಾ). ೧. ಒಳ್ಳೆಯ ಆಕಾರವನ್ನು ಹೊಂದಿರುವುದು; ಉತ್ತಮವಾದ ರೂಪವಿರುವುದು. ೨. ಸುಂದರನಾದವನು; ಚೆಲುವ: ಸುಪ್ರತೀಕನನಧಿಕ ಸನ್ನಾಹಪ್ರತಾಪನನಸಮರುದ್ರನಿಜಪ್ರತಿಮನಂ ತನ್ನಿ (ಬಸಪು. ೫೯-೩೪). ೩. ಎಂಟು ದಿಗ್ಗಜಗಳಲ್ಲಿ ಒಂದು; ಈಶಾನ್ಯದಿಕ್ಕಿನ ಆನೆ: "ಐರಾವತಃ, ಪುಂಡರೀಕಃ . . . ಸುಪ್ರತೀಕಃ – ಈ ೮ ಮೂಡಣಿಂ ಕ್ರಮದಿನಿರ್ದ ದೆಸೆಯಾನೆಗಳ್" (ಹಲಾಯು. ೧೮-೧೦೪); ಐರಾವತ . . . ಸುಪ್ರತೀಕವೆಂಬ ದಿಗ್ಗಜಗಳೆಂಟು (ವಿವೇಕ. ೧೭೭). ೪. ಭಗದತ್ತನ ಆನೆ: ಹರಿದುದಗ್ಗದ ಸುಪ್ರತೀಕದ್ವಿರದ ಭಗದತ್ತಾಂಕನವನಿಯೊಳುರುಳಿದನು (ಕುವ್ಯಾದ್ರೋ. ೩-೭೭). [ಸಂ.]

**ಸುಪ್ರತೀಕಪತಿ** (ನಾ). [ಜೈನ] ಈಶಾನಕಲ್ಪದ ಒಡೆಯ: ಸುಪ್ರತೀಕಪತಿ ಸಮಯಿಸಿದ ವಿಶಾಲಕ್ರೀಡಶಾಲೆಗಳೆನಿಸಿದ ಚೆಂಬೊನ್ನ ಕಲಶದ ಮಾಡಶಾಲೆಗಳುಮಂ ನೋಡಿ ಪೊಗಟ್ಟು (ಶಾಂತಿಪು. ೩-೧೯ ವ). [ಸಂ.]

**ಸುಪ್ರತೀಕಸಮನ್ವಿತೆ** (ನಾ). ೧. ಸುಪ್ರತೀಕವೆಂಬ ಆನೆಯಿಂದ ಕೂಡಿದುದು. ೨. ಒಳ್ಳೆಯ ಅವಯವಗಳಿಂದ ಕೂಡಿದವಳು. ೧, ೨: ಈಶಾನದಿಸೆಯಂತೆ ಸುಪ್ರತೀಕಸಮನ್ವಿತೆಯುಂ (ರಾಜಶೇ. ೭-೬೦ ವ). [ಸಂ. ಸುಪ್ರತೀಕಸಮನ್ವಿತಾ]

**ಸುಪ್ರಥಿತ** (ಗು). ಬಹಳ ಪ್ರಸಿದ್ಧವಾದ; ಅತಿಖ್ಯಾತಿಯುಳ್ಳ: ಪ್ರಥಮದಿಗ್ವನಿತೆಯ ಜಠರದೊಳಿರ್ದು ಸುಪ್ರಥಿತಸೂರಿಯನುದಿಪಂತೆ (ಮೋಹತ. ೧೭-೧೭). [ಸಂ.]

**ಸುಪ್ರಬಂಧ** (ನಾ). ಒಳ್ಳೆಯ ಪ್ರಬಂಧ; ಶ್ರೇಷ್ಠವಾದ ಪ್ರಬಂಧ: ತೊಂತಗವಿತೆಯ ಗುಣ್ಪೇಂ ವಿಹಿತ ನಿಜಲಲಿತ ಮಂಜುಲ ಮಹಿತಾತುಳ ಸುಪ್ರಬಂಧದೊಳ್ಪಿಂಗೆಣೆಯೇ (ಹಮ್ಮೀರ. ೧-೨೫). [ಸಂ.]

**ಸುಪ್ರಬುದ್ಧ** (ನಾ). [ಜೈನ] ಅರುವತ್ತುಮೂರು ಇಂದ್ರಕಗಳಲ್ಲಿ ಒಂದು: ತತ್ಕುಳದರಿಷ್ಟ ಪ್ರಾಗ್ವಿಗ್ದೇಶದಮೋಘ ಸುಪ್ರಬುದ್ಧ ರುಂದ್ರ ವಿಮಳ . . . ಕೂಟಾಷ್ಟಕಂಗಳೊಳ್ ರಮಿಯಿಸುವ . . . ಎಣ್ಬರುಂ ದಿಗಂಗನೆಯರಂ ನಾಭಿರಾಜಾಂಗನೆಗೆ ಮಣಿದರ್ಪಣಮಂ ಪಿಡಿಯಲುಂ (ಆದಿಪು. ೭-೩ ವ); ೧. ಋತು . . . ೫೫. ಸುಪ್ರಬುದ್ಧ . . . ಅಱುವತ್ತಮೂಱು ಇಂದ್ರಕಂಗಳ ಪೆಸರ್ಗಳ್ (ತತ್ತ್ವಪ್ರ. ೨೧೩). [ಸಂ.]

**ಸುಪ್ರಭಾತ** (ನಾ). ೧. ಪ್ರಶಸ್ತವಾದ ಬೆಳಗಿನ ಸಮಯ; ಸುಂದರವಾದ ಉಷಃಕಾಲ: ಸುಪ್ರಭಾತ ಪಠನಧ್ಯಾನವನು ವಿಪ್ರರ ಮಂತ್ರಾಶೀರ್ವಾದವನು . . . ಆಲಿಸಿ ಕೇಳೀಳಲೆ ಸುಕುಮಾರ (ಹಚಕಾ. ೧೨-೩೦ ರಗಳೆ); ಸುಪ್ರಭಾತದ ಸಮಯ ಪರಿಯಂತ ಪ್ರಹುಡನುಲಿದಾಗ ಬಸವನ ಸುಪ್ರತಿಷ್ಠೆಯಗೊಳಿಸಿದೆಲ್ಲರ ಸನ್ಮತಿಯೊಳರಸು (ಬಿಜ್ಜಪು. ೭೬-೨). ೨. ಬೆಳಗಿನ ಕಾಲದಲ್ಲಿ ಮೊದಲ ಸಾರಿ ಕಂಡಾಗ ಹೇಳುವ ಶುಭಹಾರೈಕೆ: ಹೊತ್ತಿಗೆ ಮುಂಚೆ ಎದ್ದು ಅವನಿಗೆ ಸುಪ್ರಭಾತ ಹೇಳಬಾರದೆ (ನಿಶಉ. ೪೧); ಅಲೆಕ್ಸಿ ಪರದೆಯಿಂದಾಚೆಗೆ ಬಂದು ಅವರಿಗೆ ಸುಪ್ರಭಾತ ಬಯಸಿದನು (ಯೋಧಪು. ೨೦). ೩. ಬೆಳಗಿನ ಕಾಲದಲ್ಲಿ ಮಾಡುವ ಪ್ರಾರ್ಥನೆ; ಉಷಃಕಾಲದ ಪ್ರಾರ್ಥನೆ. [ಸಂ.]

**ಸುಪ್ರಭಾತಸಮಯ** (ನಾ). ಬೆಳಗಿನ ಕಾಲ; ಉಷಃಸಮಯ: ಸುಪ್ರಭಾತ ಸಮಯದಲ್ಲಿ ಅರ್ತಿಯಲ್ಲಿ ಲಿಂಗವ ನೆನೆದರೆ ತಪ್ಪುವವು ಅಪಮೃತ್ಯು ಕಾಲಕರ್ಮಂಗಳಯ್ಯಾ (ಬಸವ. ೧೭೭); ಸುಪ್ರಭಾತಸಮಯದೊಳ್ ಶಿವಾರ್ಚನೆಯಂ ಮಾಡಿ ಸಂಗ್ರಾಮಸನ್ನದ್ಧನಾಗಿ ನಡೆಯಲ್ ಪ್ರಾರಂಭಿಸಿ (ಹಮ್ಮೀರ. ೩-೨೭ ವ). [ಸಂ.]

**ಸುಪ್ರಭೆ** (ನಾ). ೧. ತೀಕ್ಷ್ಣಪ್ರಕಾಶ; ಹೊಳಪು: ಸುಪ್ರಭೆಯಿನೆಸೆವ ಮಣಿರಚನಾ ಪ್ರಥಿತಮನುದ್ಧಜೈನಗೇಹಮನಾ ವೈಶ್ಯಪ್ರಭು ಬಲವರೆ ಕಂಡಂ (ನೇಮಿಪು. ೪-೭೮). ೨. ಅಗ್ನಿಯ ಏಳು ನಾಲಗೆಗಳಲ್ಲಿ ಒಂದು: "ಹಿರಣ್ಯಾ . . . ಸುಪ್ರಭಾ . . . ಬಹುರೂಪಾ — ಈ ೭ ಅಗ್ನಿಯ ನಾಲಗೆಗಳ್" (ಹಲಾಯು. ೧೩-೭೮). [ಸಂ. ಸುಪ್ರಭಾ]

**ಸುಪ್ರಮೇಯ** (ನಾ). ಒಳ್ಳೆಯ ಸಂದರ್ಭ; ಉತ್ತಮವಾದ ಸನ್ನಿವೇಶ: ಕೊಡುವ ಪದ್ಮಕೆ ಸುಪ್ರಮೇಯದ ಗಡಣಕಬುಜಭವಾದಿ ವಿಭುಗಳು ಬಿಡಿಸಲರಿದೆನಿಪತುಳತಾರ್ಕಿಕಜನಗಳೊಪ್ಪಿದರು (ಕುವ್ಯಾಉ. ೮-೩೮); ಅಱಿಯಲ್ಪಡುವಡೆ ನೀನಱಿ ಸುಪ್ರಮೇಯಾಖ್ಯವಱಿವಾತನಾ ಪ್ರಮಾತೃವೆನಿಕ್ಕು (ಪರಬೋ. ೩-೧೭-೪). [ಸಂ.]

**ಸುಪ್ರಯೋಗಿಸು** (ಕ್ರಿ). ಚೆನ್ನಾಗಿ ಕೂಡಿಸು, —ಹೊಂದಿಸು, —ಬೆರಸು: ಬಪ್ಪುದು ಬಹುದಲ್ಲದೆ ಮಾಣ್ಬುದೆ ಗಟ್ಟದುಪ್ಪು ಬೆಟ್ಟದ ನೆಲ್ಲಿಕಾಯ್ಗೆ ಸುಪ್ರಯೋಗಿಸಿದಂತೆ ಸುಗುಣಾನಿರುದ್ಧಗೆ ಕಪ್ಪುರಗಂಧಿ ಸೇರಿದಳು (ಮೋಹತ. ೪೧-೪೫). [ಸು$_4$ - + ಪ್ರಯೋಗಿಸು]

**ಸುಪ್ರವ್ಯಾಜರ** (ನಾ). ಮೇಲ್ವಿಚಾರಕ; ಮುಖ್ಯಸ್ಥ: ಸುಪ್ರವ್ಯಾಜರ ಸ್ಥಾನ ಪರಿಪಾಲನೆ ಮಾಡುವದಕ್ಕಾಗಿಯೂ (ರಾಜೇಂದ್ರ. ೧೦೦). [<— ಇಂ. Supervisor]

**ಸುಪ್ರಸನ್ನ** (ನಾ). ಬಹಳ ಸಂತೋಷಗೊಂಡವನು: ಅಂತು ಮೂರ್ಛೆಯಿಂದೆಂತಾನುಮೆಚ್ಚತ್ತು ಕದಡಿ ತಿಳಿದ ಮಾನಸಸರೋವರದಂತೆ ಸುಪ್ರಸನ್ನನುಂ (ಶಾಂತಿಪು. ೨-೨೫ ವ); ಸುಪ್ರಸನ್ನರು ನೀವು ನಿಮ್ಮುಭಯಪ್ರಕಟತರವಚನಪೀಯೂಷ ಪ್ರಮಥನಾಭಾವದಿಂದೀ ಶಿವಗಣಾವಳಿಯು (ಬಸಪು. ೩೭-೪೮). [ಸಂ.]

**ಸುಪ್ರಸನ್ನತೆ** (ನಾ). ಬಹಳ ಸಂತೋಷದಿಂದಿರುವುದು, —ಉಲ್ಲಾಸವಾಗಿರುವುದು: ಶ್ರೀರಾಮನೊರ್ವನೆಯೆ ತನ್ನೊಸಗೆದೇರಿಳಿದು ನಡೆದಂ ಶರತ್ಕಾಲಸುಪ್ರಸನ್ನತೆಯಂತೆವೋಲ್ (ಶ್ರೀರಾಮಾ. ೫೨-೭೭೯). [ಸಂ. ಸುಪ್ರಸನ್ನತಾ]

**ಸುಪ್ರಸಾದ** (ನಾ). ೧. ಹೆಚ್ಚಿನ ಕರುಣೆ; ಅಪಾರ ದಯೆ. ೨. [ವೀಶೈ] ಗುರು, ಲಿಂಗ, ಜಂಗಮಕ್ಕೆ ಎಡೆಮಾಡಿ ಅವರಿಂದ ಅನುಗ್ರಹವಾಗಿ ಬಂದುದೆಂದು ಸ್ವೀಕರಿಸುವ ಭೋಜ್ಯಪದಾರ್ಥ: ಹಸನಹುದು ಭಕ್ತರ ಕರುಣವುಂ ವಸುಧೆಯೊಳು ಬರೆದರ್ಗೆ ಸಂಪ್ರಾಪ್ತಿಸುವುದಾದ್ಯರ ಸುಪ್ರಸಾದಾನಂದಸಂಸಿದ್ಧಿ (ಬಸಪು. ೭೧-೪೦). [ಸಂ.]

**ಸುಪ್ರಸಾದಿ** (ನಾ). [ವೀಶೈ] ಪ್ರತಿಯೊಂದು ಭೋಗಪದಾರ್ಥವನ್ನು ಮೊದಲು ಲಿಂಗಕ್ಕೆ ಅರ್ಪಿಸಿ, ಆಮೇಲೆ ಅದನ್ನು ಭಕ್ತಿಪೂರ್ವಕವಾಗಿ ಪ್ರಸಾದರೂಪದಲ್ಲಿ ಸ್ವೀಕರಿಸುವವನು: ಚೆನ್ನಬಸವನ ಸುಪ್ರಸಾದಿಯೊ ಹೊನ್ನಿತಂದೆಯ ಕಂಬಿಕಾಱನೊ (ಬಸಪು. ೪೭-೩೭). [ಸಂ. ಸುಪ್ರಸಾದಿನ್]

**ಸುಪ್ರಸಿದ್ಧ** (ಗು). ೧. ಬಹಳ ಖ್ಯಾತಿಯಾದ; ಅತಿ ಪರಿಚಯದ: ಪೆಸರೊಳಸಂಭವಮೆನಿಸುಗುಮಸಂಭವಂ ತದ್ವಿಶೇಷಣಂ ಪೃಥಗರ್ಥಂ ಪೊಸಯಿಸೆ ಭಿನ್ನರಸಂ ಸುಪ್ರಸಿದ್ಧವಾಚ್ಯದೊಳದಲ್ತೆ ವಕ್ರೋಕ್ತಿ ಕರಂ (ಕಾವ್ಯಾವ. ೭೬೫); ಜರ್ಮನಿಯ ಸುಪ್ರಸಿದ್ಧ ದಾರ್ಶನಿಕ . . . ಉಪನಿಷತ್ತುಗಳ . . . ಪರಿಚಯಮಾಡಿಸಿದನು (ಭಾರದ.೪೬). (ನಾ). ೨. ಖ್ಯಾತಿಯಾದುದು; ಹೆಸರುವಾಸಿಯಾದುದು: ಜನಕಮಹಾರಾಜನ ನಿಷ್ಕಾಮಯೋಗ ಸುಪ್ರಸಿದ್ಧವಿದೆ (ಧರ್ಮಸಾ. ೧೩೫). ೩. ಬಹಳ ಖ್ಯಾತನಾದವನು; ಕೀರ್ತಿವಂತ: ಕುರುವಂಶಸಾಮದೊಂದರಸುಮನೆತನಮಿಹುದು ಬಲ್ಲೆಯೇಂ ಸುಪ್ರಸಿದ್ಧನು ನೀನು (ಚಿತ್ರಾಂಗ. ೧೩-೩೫೮). [ಸಂ.]

**ಸುಪ್ರಾಸುಕ** (ಗು). [ಜೈನ] ಜೀವಜಂತುಗಳಿಲ್ಲದೆ ಪ್ರಶಸ್ತವಾಗಿರುವ; ಬಹಳ ಶುದ್ಧವಾದ: ಅಂತಾ ಮಹಾನುಭಾವನಾ ಮಹಾಕಾಳದೊಳ್ ಸುಪ್ರಾಸುಕಪ್ರದೇಶಮಂ ಕಂಡು (ಸುಕುಮಾ. ೧೨-೧೮ ವ). [ಸು$_4$ - + ಪ್ರಾಸುಕ]

**ಸುಪ್ರೀತ** (ನಾ). = ಸುಪ್ರಸನ್ನ: ಸುಪ್ರೀತನಾದನಾಂ ಶೈಳಪ್ರಭು ನಿಮಗೆಂದಗಾಗ್ರದೊಳ್ ಹರಿ ನುಡಿದಂ (ಜಗವಿ. ೪-೮೩). [ಸಂ.]

**ಸುಪ್ರೀತಿ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಗರ್ಭಿಣಿಗೆ ಐದನೆಯ ತಿಂಗಳಲ್ಲಿ ಮಾಡಬೇಕಾದ ಸಂಸ್ಕಾರ: ದ್ವಾದಶಾಂಗಂಗಳೊಳ್ ಪೇೞ್ದಾದಾನ ಪ್ರೀತಿ ಸುಪ್ರೀತಿ ಧೃತಿ ಮೋದ . . . ಎಂಬ ಯ್ಯತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ); ೫ ಅಥವಾ ೭ ಎಳೆಯುಳ್ಳ ಗೋಧಿಯಿಂ ನಿರ್ಮಿತವಾದ ಸರವಂ ಆ ಗರ್ಭವತಿಯ ಉದರದ ಮೇಲೆ ಬೀಳುವಂತೆ ಕಂಠದೊಳ್ ಹಾಕಿಸುವುದೇ ಸುಪ್ರೀತಿಯೆಂಬ ಮೂರನೆಯ ಕರ್ಮ (ಪುರುಚ. ೧೯೮). [ಸಂ.]

**ಸುಪ್ರೌಢಿ** (ನಾ). ಒಳ್ಳೆಯ ನೈಪುಣ್ಯ, —ಜಾಣ್ಮೆ: ಅಡಸಿದಾಪತ್ತಿನಲಿ ಧೈರ್ಯವ ಹಿಡಿವುದೇ ಸುಪ್ರೌಢಿ (ಕುವ್ಯಾದ್ರೋ. ೭-೨೩); ಸಕಲಜನಕೆ ವ್ಯಾಪಿಸಿದ ಸುಪ್ರೌಢಿ ಮಱೆಯೆ ಕನ್ನಡದ ಭಾಷಾಪದ್ಧತಿಯೊಳ್ (ಜೈಮಭಾ. ೩೪-೩೧). [ಸಂ.]

**ಸುಫರ್ದು** 'ಸುಪರ್ದು' ನೋ.

**ಸುಫಲ** (ಗು). ೧. ಒಳ್ಳೆಯ ಫಲವನ್ನು ಹೊಂದಿರುವ. ೨. ತುಂಬ ಹಣ್ಣುಗಳಿಂದ ಕೂಡಿದ. (ನಾ). ೩. ಒಳ್ಳೆಯ ಹಣ್ಣು; ಉತ್ತಮವಾದ ಫಲ: ನಾನಾ ಜಾತೀಯವುಪ್ಪ ಸುಫಲತತಿಯುನೀಯಲ್ಕೆ ಹಸ್ತಂಗಳಂ ತನ್ನಾನಂದೋದ್ರೇಕದಿಂದೆತ್ತಿ (ಬಾಧಪು. ೧-೧೦೪). [ಸಂ.]

**ಸುಬ** (ನಾ). ಒಳ್ಳೆಯದು; ಶುಭ; ಮಂಗಳ: ಶುಭ-ಸುಬ, ಶುಂಭ—ಸುಂಬ (ಶಮದ. ೨೫೫ ಪ್ರಯೋ); ಕುಂಕುಮಗಂಧ ಸುಬದಿಂದ ತಂದೀವಿ ನಾವೆಲ್ಲರು (ಲೋಕಗೀ. ೭೭). [< ಸಂ. ಶುಭ./ ಪ್ರಾ. ಸುಭ]

**ಸುಬಂತ** (ನಾ). [ವ್ಯಾಕ] ನಾಮಪದ; ನಾಮವಾಚಕ: 'ಸುಬಂತಪದ' ಪರಾ. [ಸಂ.]

**ಸುಬಂತಪದ** (ನಾ). = ಸುಬಂತ: ಸುಬಂತಪದವು ನಾಮಪದವು, ತಿಜಂತಪದವು ಕ್ರಿಯಾಪದವು (ಹೊಸುಗ. ೫). [ಸಂ.]

**ಸುಬಕ** (ನಾ). ಕೆನ್ನೆ; ಗಲ್ಲ: ಉತ್ಸಹದಿ ಶ್ರೀಕೃಷ್ಣರಾಯ ಮೊಮ್ಮಗನ . . . ಕರಕಮಲದೀ ತತ್ಸುಬಕಮಂ ಪಿಡಿದು ಮುಂಡಾಡಿ (ನವಮೋ. ೧೫-೭೦). [< ಸಂ. ಚುಬುಕ]

**ಸುಬಗ** 'ಸೊಬಗ' ನೋ.

**ಸುಬಗು** 'ಸೊಬಗು' ನೋ.

**ಸುಬಟ್ಟಕ್ಕರ** (ನಾ). ಅಷ್ಟಾಕ್ಷರಗಳಿಂದ ಕೂಡಿದ ಶುಭಮಂತ್ರ; ನಮಸ್ಕಾರ ಮಂತ್ರ: ಸವಣಂಗೆ ಸುಬಟ್ಟಕ್ಕರಮಂ ತೋಱಿದರೆಂಬಂತೆನ್ನ ಜಾತಿಸ್ಮರಮನಱಿದು (ಧರ್ಮಾಮೃ. ೮-೪೭ ಅಡಿಟ). [ಸುಬ + ಅಟ್ಟ$_2$ (P < ಪ್ರಾ. ಅಟ್ಠ) + ಅಕ್ಕರ$_2$]

**ಸುಬದ್ಧಿಸು** (ಕ್ರಿ). ಚೆನ್ನಾಗಿ ರಚಿಸು, —ನಿರ್ಮಿಸು: ಪೂರ್ವಕ್ಕೆ ತಾಳಾಗಿ ಉತ್ತರಕ್ಕೆ ತಲೆಬಾಗಿ ಬಿದ್ದ ಮರನ ತಂದು ಬದ್ಧಿಯ ಕಾರುಕನ ಕೈಯಲ್ಲಿ ಸುಬ[ಪಾಠಾಂ. ಬು]ದ್ಧಿಸಿ

ಬಂಧಿಸಿ ಸುದ್ದುಯಿಸಿ ಅನಾದಿ ಎಂಬ ಹುಗಿಲು ತಗೆದು. (ಸರ್ವವ. ೧೦೫-೫೬೭: ಸಶವ. ಕ. III, ೪೭-೯೮ ನೋ). [?]

**ಸುಬರ್ದು** 'ಸುಪರ್ದು' ನೋ.

**ಸುಬಲ** (ನಾ). **ಬಹಳ ಶಕ್ತಿಯುತವಾದುದು; ಸಮರ್ಥವಾದುದು:** ಇದು ಸುಬಲವಿದಬಲವಿದಾಮ್ನಾಯದ ಸುನಿಶ್ಚಯ ನೀತಿಕಾರ್ಯ (ಕುವ್ಯಾಉ. ೩-೭೨). [ಸಂ.]

**ಸುಬಾದಾರ** 'ಸುಬೇದಾರ' ನೋ.

**ಸುಬಾಹು** (ನಾ). ೧. ಶಕ್ತಿಯುತವಾದ ಮತ್ತು ಸುಂದರವಾದ ತೋಳುಗಳನ್ನು ಹೊಂದಿರುವುದು. ೨. ಒಂದು ನದಿ; ಶೋಣನದಿ: "ನಿರ್ಮಲ ಹಿರಣ್ಯ ಸುಬಾಹುವನೆ ಶೋಣನದಿಗೆ ಶೋಭಿಸುವ ನಿಜನಾಮಮಕ್ಕುಂ" (ಮಂಗರಾ. ೧೨೨-೧೧). ೩. ಒಬ್ಬ ರಾಕ್ಷಸನ ಹೆಸರು: ಮಾರೀಚ ಘನವಿಕ್ರಮ ಸುಬಾಹುಗಳೆಂಬ ರಾಕ್ಷಸರಮಣರಾ ಮುನಿಮಖಕೆ ಕಂಟಕರಾದರ್ (ತೊರರಾ. ೧-೯-೧). [ಸಂ.]

**ಸುಬುದ್ಧಿ** (ನಾ). ಒಳ್ಳೆಯ ಅರಿವು; ಸುಜ್ಞಾನ: ವಿಷಯರಹಿತನ ಮಾಡಿ ಭಕ್ತಿರಸವ ದಣಿಯ ಮೇಯಿಸಿ ಸುಬುದ್ಧಿಯೆಂಬುದಕವನೆರೆದು (ಬಸವ. ೫೧); ಪುಣ್ಯಕರ್ಮದಲ್ಲಿ ಪ್ರವರ್ತಿಸುವುದು ಸುಬುದ್ಧಿ ಪಾಪಕರ್ಮಪ್ರವರ್ತಿಯೇ ದುರ್ಬುದ್ಧಿ (ಪಸಾರ. ೫-೨೫ ತಾತ್ಪರ್ಯ). [ಸಂ.]

**ಸುಬುದ್ಧಿಗೆಡು** (ಕ್ರಿ). ಒಳ್ಳೆಯ ಅರಿವು ಕೆಟ್ಟುಹೋಗು; ಸುಜ್ಞಾನವಿಲ್ಲದಂತಾಗು: ಮಾಗಿಯೊಳಾದ ಶೀತದೊದವಿಂಗಿರಲಾಱದ ಸೇದೆಗಟ್ಟು ಬೇಳಾಗಿ ಸುಬುದ್ಧಿಗಟ್ಟು ಗುರುಗುಂಜಿಗಳಂ ಮುಸುಗಳ್ಕಿನೋದದಿಂ ಪೋಗದ ರಾಶಿಮಾಡಿ ಶಿಖಿಗತ್ತುಱ ಕಾಯ್ವುವೋಲ್ (ಧರ್ಮಾಮೃ. ೭-೭೮). [ಸುಬುದ್ಧಿ + ಕೆಡು$_1$]

**ಸುಬೂದಗೂಳ?** (ನಾ). ಒಂದು ಬಗೆಯ ತೆರಿಗೆ(?): ದಣ್ಣದೋಷಂ ತವುಕುರಿ ತವುಡಾಯ ಸುಬೂದಗೂಳ ಪ್ರಾ[ಯ]ಶ್ಚಿತ್ತಂ (ಎಕ. XI, ದಾವಣ. ೧೩೯-೫೧; 1106). [?]

**ಸುಬೆ, ಸುವೆ, ಸೂಬೆ** (ನಾ). ೧. ಪ್ರಾಂತ: (೬). ೨. ಪ್ರಾಂತದ ಅಧಿಕಾರಿ: (೬). **ಸುವೆ:** ೧. ಡಿಳ್ಳಿಯ ಶಾಹನ ಸುವೆಯಂ ಜಳ್ಳೀಱಿಸುವಾರ್ಪಿದತ್ತಲಪ್ರತಿಮಾ ಕೇಳ್ (ಅಪ್ರತಿ. ೮೫-೧೩). **ಸೂಬೆ:** ೧. ಕಲ್ಬುರ್ಗಿ ಸೂಬೆಯಲ್ಲಿ ಸುರಪುರವನ್ನು ಒಂದು ಜಿಲ್ಲೆಯ ಸ್ಥಾನವನ್ನಾಗಿ ಮಾಡಲಾಯಿತು (ಕರ್ನಾಸಂ. ೨೧೪).

[← ಪಾರ. ಹಿಂ. ಸೂಬಾ; ಮರಾ. ಸುಬಾ, ಸುಭಾ]

**ಸುಬೇದಾರ್** 'ಸುಬೇದಾರ' ನೋ.

**ಸುಬೇದಾರ, ಶುಭೇದಾರ, ಶುಭೇದಾರು, ಸುಬಾದಾರ, ಸುಬೇದಾರ್, ಸುಬೇದಾರು, ಸುಭದಾರ್, ಸುಭೇದಾರ, ಸೂಬಹದಾರ್** (ನಾ). ಪ್ರಾಂತಾಧಿಕಾರಿ: ಗಡಿಯೊಂದಕ್ಕೆ ಸುಬೇದಾರ ೧, ಚಿಕ್ಕಪಾರುಪತ್ಯಗಾರ ೧ . . . ಬಂದೋಬಸ್ತಾಗಿರಲು (ಮಹಾಪಂ. I, ೧೧೭). **ಶುಭೇದಾರ:** ಚಉಟ ಮಹಾಲ ಶುಭೇದಾರ ತುಕಪನ ಹೆಸರಲಿ ನಿರೂಪವಾದ ಪ್ರಕಾರ ಸಿಲಾಸ್ಥಾಪನ ಮಾಡಿಸಿತು (ಎಕ. VIII, ಸೊರಬ. ೪೦೯-೨೨; 1744). **ಶುಭೇದಾರು:** ಬ್ರಾಂಹಣ ವೆಂಕಪ್ಪೆಯ ಶುಭೇದಾರೂ ಕೊಡಂದೇರ ಮುದ್ದಯ (ಎಕ. I (R), ೯೯-೧೮; 1857). **ಸುಬಾದಾರ:** ಅವರಂಗಜೇಬನು ಮುತ್ತಿಗೆ ಹಾಕುವನೆಂದು ಕೇಳಿ ಅದರ ರಾಜನು ಓಡಿಹೋಗುತ್ತಾನೆ; ಸುಬಾದಾರನು ಅವನನ್ನು ಸೆರೆಹಾಕುತ್ತಾನೆ (ಬಂಕಮು. ೪೯೫). **ಸುಬೇದಾರ್:** ಮಠದ ಸುಬೇದಾರ್ ತಮ್ಮಯ್ಯನವರ ಮನೆಯಲ್ಲಿ ಮಂಗಳಾರತಿಯಾಗುತ್ತಿತ್ತು (ಕಳಪು. ೩೯). **ಸುಬೇದಾರು:** ಮಾಘ ಶು ೫ ಲ್ಲು ಸುಬೇದಾರು ಮುದ್ದೂರು ಪುಟ್ಟಯ್ಯನ ತಾಯಿ ಜಯಮ್ಮನ ಶೇವೆ (ಎಕ. X (S), ಮುಳಬಾ. ೨೭೭-೫; 1866). **ಸುಭದಾರ್:** ಅಂಥಾ ಒಂದು ದೊಡ್ಡಪ್ರದೇಶಕ್ಕೆ ಸರ್‌ಸುಭ ಎಂದು ಹೆಸರು. ಅಂಥಾ ಕಡೆ ಸರ್ವಾಧಿಕಾರ ಮಾಡತಕ್ಕ ಅಧಿಕಾರಿಯೇ ಸುಭದಾರ್ (ವಾಳಗಾ. ೧೨). **ಸುಭೇದಾರ:** ಊರೂರ ಗೌಡರು ಸರದಾರ ದೇಸಾಯಿ ಹೊರಟಾರ ಕುದರಿಯ ಏರಿ ಭಕ್ತೀಲಿ ಬೆರಿಸಿ ಸುಭೇದಾರ ಮೊದಲಾಗಿ (ಸಿದ್ಧಪು. ೧೭-೮೨); ನಮ್ಮ ಕಕ್ಕ ಸುಶೀಲರಾಯನು ಲಷ್ಕರೀ ಸುಭೇದಾರನಿರುತ್ತಾನೆ (ಮೋಹಿನೀ. ೬೧). **ಸೂಬಹ್‌ದಾರ್:** (ರೈಸ್‌ಗ. IV, ೫೬೨).

[← ಪಾರ. ಸೂಬಾದಾರ್; ಹಿಂ. ಸೂಬೆದಾರ್; ಮರಾ. ಸುಬೇದಾರ್]

**ಸುಬೇದಾರಿಕೆ** (ನಾ). ಪ್ರಾಂತಾಧಿಕಾರ: ಹಿಂದಿನ ಕಾಲದ ಸುಬೇದಾರಿಕೆ ಬಹಳ ಬಂದೋಬಸ್ತಾಗಿರುತ್ತಿತ್ತು (ರೂಢಿ). [ಸುಬೇದಾರ + - ಇಕೆ]

**ಸುಬೇದಾರು** 'ಸುಬೇದಾರ' ನೋ.

**ಸುಬೋಧ** (ನಾ). ಒಳ್ಳೆಯ ಉಪದೇಶವನ್ನು ಪಡೆದವನು; ಉತ್ತಮವಾದ ಉಪದೇಶವನ್ನು ಹೊಂದಿದವನು: ಜಿನ ನಿನ್ನ ವಿರುದ್ಧಮಾರ್ಗಿಯೆಂದಾವ ಸುಬೋಧರುಂ ಪೊಗೞ್ವರೇಕೆಯೊ ಚಿತ್ರಮಿದಿಂದ್ರವಂದಿತಾ (ಪುಷ್ಪಪು. ೭-೯). [ಸಂ.]

**ಸುಬ್ಬಡರ್** 'ಸುರ್ವಡರ್' ನೋ.

**ಸುಬ್ಬನಸೂರೆ** 'ಸುಬ್ಬರಸೂಱೆ' ನೋ.

**ಸುಬ್ಬರಸೂಱೆ, ಸುಬ್ಬನಸೂರೆ, ಸುಬ್ಬಾನಸೂರೆ** (ನಾ). ಅತಿಯಾಗಿ ದೋಚುವಿಕೆ; ಬಹಳವಾದ ಸುಲಿಗೆ: ಒಗೆವ ಕೆಯ್ಯಾವುದು ತೋಱೆಂದಸಗನೆರಡು ಕೆಯ್ಯಂ ಮುಱಿದಿಕ್ಕಿದನೂರ ಸೀರೆಗಸಗಂ ತದೆವಡೆದನೆನಿಪ್ಪ ನಾಡುನುಡಿ ಪರೆವಿನಗಂ ಮುಱಿದಿಕ್ಕಿ ಸುಬ್ಬ[ಪಾಠಾಂ. ಚಿ]ರಸೂಱೆಯಾಗೆ ಮಡಿವರ್ಗಮಂ ಗೋವರ್ಕಳ್ಗೆ ಸೂಱೆಗೊಟ್ಟು (ಅರ್ಧನೇ. ೮-೮೦ ವ). **ಸುಬ್ಬನಸೂರೆ:** ಸುಬ್ಬನಸೂರೆಯಂತೆ ಪರರ ಅನ್ನವನುಂಡು ಮೊಬ್ಬಿನಲಿ ದಿನಗಳೆದ ದೀನ ಮನಸಿನಲಿ (ವಿದಾಕ್ಯ. ೧೦೪-೫). **ಸುಬ್ಬಾನಸೂರೆ** : ರಮೇಶ ತಾಳಮೇಳ ಸುಸುಖ ಸುಬ್ಬಾನಸೂರೆ (ಪ್ರಸಕೀ. ೪೪-೫).

[ಸುಬ್ಬರ? + ಸೂಱೆ./ ತೆಲು. ಚುಬ್ಬನಚೂಱ, ಸುಬ್ಬನಚೂಱ]

**ಸುಬ್ಬಲಕಾಟಿ** (ನಾ). ಅನಿಷ್ಟ ಹೆಂಗಸು(?): ಅವಳ ಹುಬ್ಬನ್ನು ನಾನು ನೋಡಿದಾಗಲೆಲ್ಲಾ ಬೇವಿನಲೆ ತಿಂದರೆ ಹೇಗೆ ಅಸಹ್ಯವಾಗುತ್ತೋ ಹಾಗೆ ಆಗುತ್ತೆ. ಅದೇನು ಸುಬ್ಬಲಕಾಟಿಯೋ (ಮಾಮರಾ. ೧೨೬). [ಸುಬ್ಬಲ$_0$ + ಕಾಟ$_4$]

**ಸುಬ್ಬಲು** 'ಸುಬ್ಬುರು' ನೋ.

**ಸುಬ್ಬಾನಸೂರೆ** 'ಸುಬ್ಬರಸೂಱೆ' ನೋ.

**ಸುಬ್ಬು** 'ಸುರ್ವು$_3$' ನೋ.

**ಸುಬ್ಬುರವಡೆ** (ಕ್ರಿ). ಸುಕ್ಕಾಗು; ಸುಕ್ಕುಗಟ್ಟು: ಹಱಿದಲೆಯ ಬೆಂಗಡರ್ದ ಮುಸುಡ ಸುಬ್ಬು[ಪಾಠಾಂ. ಬ್ಬ]ರವಡೆದ ಗಲ್ಲ ಕೊಂಕಿದ ಕೊಡಕೆಯ (ಪಚಕಾ. ೪-೨೮).

[ಸುಬ್ಬುರ$_0$ + ಪಡೆ$_1$]

**ಸುಬ್ಬುರು, ಸುಬ್ಬಲು, ಸುರ್ಬುರು** (ನಾ). ೧. ಕೂದಲು; ಕೇಶ: ಮಂಡೆಯ ಮ್ಮಯ ಸುಬ್ಬುರುಗಳು ಮುಪ್ಪಿನಿಂದ ಬಿಳಿದಾದರೆ ಫಲಿತಮೆಂಬರು (ನಾಚಿರಾ. ೧೧೯). **ಸುಬ್ಬಲು** : ೨. ಅತಿರೋಮವುಳ್ಳ ಪ್ರಾಣಿಗಳ ಚರ್ಮದ ಒರಟುತನ: (೬). **ಸುರ್ಬುರು:** ೩. ದಟ್ಟಣೆ; ನಿಬಿಡತೆ: 'ಸುರ್ಬುರುಗೊಳ್' ಪರಾ. [?]

**ಸುಬ್ಬುರುವಾಲ** (ನಾ). ಕೂದಲಿನಿಂದ ತುಂಬಿದ ಬಾಲವುಳ್ಳ ನಾಯಿಮರಿ: ಬರವೇಟ್ . . . ಭರದಿಂ ಸುಬ್ಬುರುವಾಲನಂ ಗದುಗನಂ ಮತ್ತುಳ್ಳ ಪೆರ್ನಾಯ್ಗಳಂ (ಸಳಚಂ. ೬೬). 'ಸುರ್ಬುರುಬಾಲ' ಪರಾ. [ಸುಬ್ಬುರು + ಬಾಲ$_2$]

**ಸುಬ್ರಹ್ಮಣ್ಯ** (ನಾ). ೧. ಷಣ್ಮುಖ; ಕುಮಾರಸ್ವಾಮಿ: ಕಾಯುವವನೂ ಬಿಡುವವನೂ ಆ ಸುಬ್ರಹ್ಮಣ್ಯ (ಚಿಟ್ಟಜೀ. ೨೫); ಕಲ್ಕುಡನೇ ಆದರೇನು? ಸುಬ್ರಹ್ಮಣ್ಯನ ಮುಂದೆ ಪಟಕಟ್ಟೆಯಾನೆಂದು ತಿಳಿಯುತ್ತೀಯಾ? (ಕುಡಿಕೂ. ೫೬). ೨. ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ (ಉಪ್ಪಿನಂಗಡಿ ತಾಲ್ಲೂಕಿನ) ಒಂದು ಪುಣ್ಯಕ್ಷೇತ್ರ: ಎರಡನೆಯ ದಿನ ಸಂಜೆ ಸುಬ್ರಹ್ಮಣ್ಯ ಸೇರಿದೊಡನೆಯೆ ಅವನಿಗೆ ಹೋದ ಜೀವ ಬಂದಂತಾಯಿತು (ಕುಡಿಕೂ. ೫೫). ೩. ಯಾಗ ಮುಂತಾದ ಪವಿತ್ರಕಾರ್ಯಗಳಲ್ಲಿ ಭಾಗವಹಿಸುವ ಹದಿನಾರು ಋತ್ವಿಕ್ಕುಗಳಲ್ಲಿ ಒಬ್ಬ.

ಸುಬ್ರಹ್ಮಣ್ಯ ಷಷ್ಠಿ = ಮಾರ್ಗಶಿರಮಾಸದ ಆರನೆಯ ದಿನ ಮತ್ತು ಅಂದು ಆಚರಿಸುವ ಸುಬ್ರಹ್ಮಣ್ಯವ್ರತ: ಜಾನುವಾರುಸಂತೆ ಕಳೆದು ಸುಬ್ರಹ್ಮಣ್ಯ ಷಷ್ಠಿ ಮುಗಿಯದೆ ಯಾರೂ ಮನೆಯನ್ನು ಬಿಡಲಿಕ್ಕಿಲ್ಲ (ಚಿಟ್ಟಜೀ. ೨೧). [ಸಂ.]

**ಸುಭಕ್ತಿ** (ನಾ). ಒಳ್ಳೆಯ ಭಕ್ತಿ; ನಿಜವಾದ ಭಕ್ತಿ: ಶರಣರ ಸುಭಕ್ತಿವಿನೀತಿಯಂ ತಾಂ ಕೇಳಿಯಾದಡೆ ಮನವಲರದಿಹುದೆ (ಬಸವು. ೪೦-೮೫). [ಸಂ.]

**ಸುಭಕ್ಷ** (ನಾ). ಒಳ್ಳೆಯ ಊಟ; ರುಚಿಕರವಾದ ಅನ್ನ; ಮೃಷ್ಟಾನ್ನ: ಕತ್ತೆ ಕರ್ಪೂರವ ಬಲ್ಲುದೇ . . . ನಾಯಿ ಸುಭಕ್ಷವ ಬಲ್ಲುದೇ (ಮೋಳಿಮಾ. ೨೩-೮೯). [ಸಂ.]

**ಸುಭಗ** (ಗು). ೧. ಚೆಲುವಾದ; ಸುಂದರವಾದ: ಇದು ಪೂಸಲ್ಕೆ ನೋಡಿದು . . . ಕಬ್ಬಿಗರ್ಪದದೊಲವಿಂದೆ ನಿಮಿರ್ಚುವೆನೀ ಸುಭಗಪ್ರಬಂಧಮಂ (ಶಬಶಂ. ೧-೨೬). ೨. ಗೌರವಾರ್ಹವಾದ; ಶ್ರೇಷ್ಠ: ಸುಭಗಕವಿ ಪಂಪನಿಂ ವಾಗ್ವಿಭವೋನ್ನತಿ ನೆಗಟ್ಟುದು (ಅಜಿಪು. ೧೨-೩೯); ಮಿಥ್ಯಾತ್ವಪ್ರಹರಕವಿ ಸುಭಗಕವಿ ನುತಮಹಾಕವೀಂದ್ರಂ (ಸುಕುಮಾ. ೧-೫೨). (ನಾ). ೩. ಚೆಲುವಾದುದು; ಸುಂದರವಾದುದು: ದ್ವಿಪ್ರಾಸಂ ಸುಭಗಂ ದ್ವಂದ್ವಪ್ರಾಸಂ ಕಾವ್ಯರಚನೆಗುಚಿತಮೆನಿಪ್ಪ ತ್ರಿಪ್ರಾಸಂ ಸಲೆಯಂತಾದಿಪ್ರಾಸಂ ಬೇಡೆ ನಾಲ್ಕು ತಡನಾಗಿರ್ದುಂ (ಕವಿರಾ. ೩-೨೩೨); ಮೃದುಪಾದಮಾದ ವಾಕ್ಯೀಸುಭಗಂ ಕಳಾಕಳಿತಮೆಂಬ ನೆಗಟ್ತೆಯನಾಳ್ದ ಕಬ್ಬಮಂ ಕೂಸುಮನೀವುದು (ಪಂಪಭಾ. ೧-೯). ೪. ಇಂಪಾದುದು; ಹಿತವಾದುದು: ಶ್ರವಣಸುಭಗವಾದ ಪದಗಳಿಲ್ಲದ ಸಾಹಿತ್ಯಪ್ರಕಾರಗಳು ಬಹುಕಾಲ ಬಾಳಲಾರವು (ಕಾವ್ಯಕು. ೮೬). ೫. ಚೆಲುವ; ಸುಂದರ; ಸೊಬಗ: "ಚಕ್ಷುಷ್ಯಃ ಸುಭಗಃ- ಈ ೨ ಸೊಬಗಂ" (ಹಲಾಯು. ೬೦-೨೧೨); ಮದೋನ್ಮತ್ತ ವಿಳಾಸಿನೀ ಸುಭಗನೆತ್ತಣನಯ್ಯೋ ನರೇಂದ್ರವಲ್ಲಭಂ (ವರ್ಧಮಾ. ೫-೮); ಸುಭಗ ನಿನ್ನಲ್ಲಿಗೀಬರ್ಪವಂದಶ್ರಮದಿಂ ಗೋಪೀಜನಂ ಕರ್ಮಡುವುಗ (ಜಗವಿ. ೩-೯೬). ೬. ಪುಣ್ಯವಂತ; ಅದೃಷ್ಟವಂತ: ಸುಭಗಂ . . . ಉಕ್ಕೋದ್ಭವಂ (ಜಾತತಿ. ೧೭-೨); ಶ್ರೀ ಸೂನೃತ ಸಂಪದಕ್ಕೆ ತೊಡವೆನೆ ಜಸಮಾಶಾಸುದತಿಗೆ ಸಾಹಿತ್ಯಕಳಾಸುಭಗಂ ಪಂಪುವೆತ್ತನಭಿನವಪಂಪಂ (ಪಂರಾಮಾ. ೧೩-೧). ೭. ಯಜಮಾನ; ಒಡೆಯ: ಮೃಗ ಕುಂಭಂಗಳೊಳೊಂದಿದಂದು ಭೃಗುಜಂ . . . ಸುಭಗನುಂ ಪೂಜ್ಯನಕ್ಕುಂ ನರಂ (ಜಾತತಿ. ೧೭-೩೧). ೮. [ಜೈನ] ನಾಮಪ್ರಕೃತಿಗಳಲ್ಲಿ ಒಂದು: ಶುಭಾಶುಭ ಸುಸ್ವರ ದುಸ್ವರ ಸುಭಗ ದುರ್ಭಗ . . . ಎಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೪ ವ). [ಸಂ.]

**ಸುಭಗತೆ** (ನಾ). ಚೆಲುವು; ಸೌಂದರ್ಯ; ಸೊಬಗು: "ಗಾಡಿ ಸೊಬಗನಲ್ಕಸವ ಸುಭಗತೆಯಕ್ಕು" (ಕಬ್ಬಿಕೈ. ೫೩); ಮಹಾಲಕ್ಷ್ಮಿಯ ಸುಭಗತೆ . . . ಅವನನ್ನು ಮೋಹಗೊಳಿಸಿದುವು (ಸಮಜೀ. ೬೧೨). [ಸಂ. ಸುಭಗತಾ]

**ಸುಭಗತ್ವ** (ನಾ). ೧. ಚೆಲುವು; ಸೌಂದರ್ಯ: ವಿಭವಂ ಕಾಮುಂಗಿನಿತ್ತೆತ್ತಣ ದಿವನಮರೇಂದ್ರಂ ಸುರೇಂದ್ರಂಗಮಿಂತೀ ಸುಭಗತ್ವಂ ಮತ್ತಿನಿತ್ತೆತ್ತಣದು (ಚಂದ್ರಪು. ೬-೧೫೩). ೨. ಗೌರವ; ಮನ್ನಣೆ: ಭೂಮಿ ಸುಭಗತ್ವಂ ಯುಕ್ತಿ ಮಂತ್ರಜ್ಞಮೆಂಬಿನಿತಕ್ಕುಂ . . . ಐಂದವದಶೋಕ್ತಾರೋಹಗೇಹಂಗಳೊಳ್ (ಜಾತತಿ. ೯-೨೩). [ಸಂ.]

**ಸುಭಗೆ** (ನಾ). ೧. ಚೆಲುವೆ; ಸುಂದರಿ: ಕಣ್ಗೊಳಿಸುದು[ದೋ] ಸುಭಗೆಯಾದ ಸುದತಿಯ ಗರ್ಭಂ (ಪಂಪಭಾ. ೧-೧೪೩); ನೀನೀತನೊಳ್ಪೂರ್ಪುದುಂಟೇ ಸಖಿಯೆಂದು ಬೆಸಗೊಂಡಾಳಿಯೊಡನೊರ್ವಳ್ ಸುಭಗೆ (ರಾಜಶೇ. ೧೧-೧೫೧ ವ). ೨. ಗೌರವಾನ್ವಿತ ಸ್ತ್ರೀ; ಪೂಜ್ಯೆ: ಸುಭಗೆ, ಧರ್ಮವು ಬಹು ಸೂಕ್ಷ್ಮವಾದುದು (ಭೀಷ್ಮಚ. ೧೧೯).

[ಸಂ. ಸುಭಗಾ]

**ಸುಭಟ** (ನಾ). ಶ್ರೇಷ್ಠನಾದ ಕಲಿ; ವೀರಯೋಧ: ಸುಭಟರ್ ಸುಭಟರೊಳುಂಬಿದಿಬಿದುಭಯಬಲಂ ಪೊಟ್ಟನಾದೊಡಿಂದ್ರನುಪೇಂದ್ರಂ (ಶಾಂತಿಪು. ೬-೮೨); ರಣರಂಗಭೈರವನುಭಯಬಳಸುಭಟಕೀರ್ತ್ತಿತಪ್ರತಾಪಂ (ಸೌಇಇ. XX, ೪೬-೩೪; 1072); ಸುಭಟರಹುದೋ ಜಾಗು ಜಾಗೆನುತೊಲೆದನಾ ದ್ರೋಣ (ಕುಮ್ಮಾದ್ರೋ. ೨-೧೧).

ಸುಭಟಚೂಡಾಮಣಿ = ಕಲಿಗಳಲ್ಲಿ ಶ್ರೇಷ್ಠನಾದವನು; ಒಂದು ಬಿರುದು: ವಿದ್ವಜ್ಜನಕಮಳ್ಗಾರ್ತ್ತಣ್ಡಾಂ ಸುಭಟಚೂಡಾಮಣಿ ಭೃತ್ಯಚಿನ್ತಾಮಣಿ (ಸೌಇಇ. XX, ೧೩-೧೭; 875). [ಸಂ.]

**ಸುಭಟತೆ** (ನಾ). ಅತಿಶಯವಾದ ಶೌರ್ಯ, —ಕೆಚ್ಚು: ಸಾಹಸದೊಳ್ ಸುಭಟತೆಯೊಳ್ ಗೊಜ್ಜಿಗವಲ್ಲಭನಂ ಮಿಗಲು[ರ್ವಿ] ನೃಪರನಾಂ ಕಂಡರಿಯೆಂ (ಎಇ. XIII, ೩೩೦-೯; 929). [ಸುಭಟ + - ತೆ]

**ಸುಭಟಬಾಹಿರ** (ನಾ). (ಆಲಂ) ಹೇಡಿ; ಅಂಜುಕುಳಿ: ಎಲವೊ ಸಾತ್ಯಕಿ ಸುಭಟಬಾಹಿರ ಗಳಹದಿರು ದಿಟ ವೀರನೇ ಕೂರಲಗಿನಲಿ ಮಾತಾಡು ಬಡಿಸಿನ ಭಂಡತನ (ಕುಮ್ಮಾದ್ರೋ. ೧೪-೩). [ಸಂ.]

**ಸುಭಟವೃತ್ತಿ** (ನಾ). ಒಳ್ಳೆಯ ಭಟರಿಗಾಗಿ ಕೊಡುವ ಉಂಬಳಿ; ವೀರಯೋಧರಿಗಾಗಿ ಕೊಡುವ ಮಾನ್ಯ: ಎಂದನಿತಾನುಂ ಗರ್ಜಿಸಿ ಸುಭಟವೃತ್ತಿಯನಾವರ್ಜಿಸಿ ಮಾಣೆ (ಶಾಂತಿಪು. ೩-೮೯ ವ). [ಸಂ.]

**ಸುಭಟಾಂಗ** (ನಾ). ಶೂರರ ಸೈನ್ಯ; ವೀರರ ಪಡೆ: ಕೇಳೆಲೆ ಖೂಳ ಸೂತನ ಮಗನೆ ಸುಭಟಾಂಗದಲಿ ಖರೆಯನಲ (ಕುಮ್ಮಾವಿ. ೭-೧೫); ಮರುಳೆ ಸುಭಟಾಂಗದಲಿ ನೀನತಿ ಖರೆಯನ್ನೆ (ಕಾತಿರಾ. ೨೨-೪೩). [ಸಂ.]

**ಸುಭಟಾಯತ** (ನಾ). ಪೌರುಷ; ವೀರತ್ವ: ಕಾಯದೊಳ್ ಸರ್ವರಕ್ತಂಗಳನ್ನೊರೆಸಿ ಸುಭಟಾಯತವ ಮರೆಯುತ್ತಲುರವಣಿಸಿ (ತುರಂಗ. ೭೫-೪೩). [ಸಂ.]

**ಸುಭತುಂಗದೇವ** (ನಾ). ಒಬ್ಬ ರಾಷ್ಟ್ರಕೂಟ ಅರಸನ ಹೆಸರು: ಸ್ವಸ್ತಿಶ್ರೀ ಸುಭತುಂಗದೇವ [ರಾ]ಜ ರಾಜ್ಯಾಭಿವ್ರಿ XXX (ಸೌಇಇ. XX, ೧೪-೧; 878).

[< ಸಂ. ಶುಭತುಂಗದೇವ]

**ಸುಭದಾರ್** 'ಸುಬೇದಾರ' ನೋ.

**ಸುಭದ್ರ** (ಗು). ೧. ಮಂಗಳಕರವಾದ; ಶುಭಕರವಾದ. (ನಾ). ೨. ಬಹಳ ಶುಭ ತರುವಂತಹುದು; ಅದೃಷ್ಟ. ೩. ಸುರಕ್ಷಿತವಾಗಿರುವುದು; ಶಾಶ್ವತವಾಗಿರುವುದು: ನಮ್ಮ ಸ್ಥಾನಗಳೀಗ ಸ್ಪಷ್ಟವಾಗಿ ಮತ್ತು ಸುಭದ್ರವಾಗಿರುತ್ತವೆ (ಹೇಮಂತ. ೨೪೯). ೪. ಒಂದು ಆನೆಯ ಹೆಸರು: ತನ್ನ ಸುಭದ್ರಹಸ್ತಿಯನು (ಬಸವಪು. ೫೯-೩೩). ೫. [ಸಂಗೀತ] ಒಂದು ಬಗೆಯ ತಾಳ: ಧ್ರುವ ಮಟಯ . . . ಸುಭದ್ರ ಸಂಗತ . . . ನೂಱೊಂದು ತಾಳಂಗಳ್ (ವಿವೇಕ. ೧೪೨). [ಸಂ.]

**ಸುಭದ್ರೆ** (ನಾ). ೧. ಉಪ್ಪಿನಕಾಯಿಗೆ ಬಳಸುವ ಒಂದು ಬಗೆಯ ಪದಾರ್ಥ: ಪಿಪ್ಪಲಿ ಚಲ್ಲಗಾಯ್ ಮೆಟಸು ಮಾಗುಳಿವೇರ್ಮೊಳೆಯಲ್ಲ ವೇಲೆ ಕಮ್ಮಿಪ್ಪ ಸುಭದ್ರೆ ಮಾಮಿಡಿ ಕರಂಜಿಕೆಯುಂಬಟೆ ನಿಂಬೆ ನೆಲ್ಲಿಗಾಯ್ (ಲೀಲಾವ. ೫-೬೩). ೨. ಕೃಷ್ಣನ ತಂಗಿ; ಅರ್ಜುನನ ಹೆಂಡತಿ: ನಾರಾಯಣನ ತಂಗೆ ಸುಭದ್ರೆಯೆಂಬ ಕನ್ನೆ . . . ಬಾಗಿಲೊಳ್ ನಿಂದು (ಪಂಪಭಾ. ೪-೩೯ ವ); ಪಾರ್ಥನ ಕರೆದುಪಾಯಾಂತರದೊಳೀವೆನು ಸರಸಿಜಾನನೆಯನು ಸುಭದ್ರೆಯನು (ಕುಮ್ಮಾಆ. ೧೯-೨೬). [ಸಂ. ಸುಭದ್ರಾ]

**ಸುಭಾಷಿಣಿ** (ನಾ). ಹಿತವಾಗಿ ಮಾತನಾಡುವವಳು: ಅವಳು ಸುಭಾಷಿಣಿ ಮಾತ್ರವಲ್ಲ ಸುಹಾಸಿನಿಯೂ ಹೌದು (ಬಂಕಿಮು. ೧೧೯). [ಸಂ. ಸುಭಾಷಿಣೀ]

**ಸುಭಾಷಿತ** (ಗು). ೧. ಚೆನ್ನಾಗಿ ಮಾತನಾಡುವ; ವಾಕ್ಪಟುತ್ವವುಳ್ಳ: ಇದು ಸಕಲ ಸುಭಾಷಿತ ಕೋವಿದಂ (ಕಾದಂಪೂ. ೫೫). ೨. ಒಳ್ಳೆಯ ಮಾತನಾಡಿದ. (ನಾ). ೩. ಒಳ್ಳೆಯ ಮಾತು; ಹಿತವಚನ: ಸಜ್ಜನ ಸುಭಾಷಿತದೊಳ್ ಪುದುವೊಕ್ಕು ಸೇಸೆಯಂ ಮನವೃತ್ತದಾಂತು (ಪಂರಾಮಾ. ೬-೪೮): ಸಖಿಯ ಸುಭಾಷಿತರವದಿನಡಂಗಿದುದು ದೇವಕೀಹೃತ್ತಾಪಂ (ಜಗವಿ. ೨-೭೦); ಅತಿಮಾಧುರ್ಯ ಸುಭಾಷಿತಂಗಳ ಮಹಾಸತ್ಕೀರ್ತಿಯಂ ಬಾಳ್ಕೆಯಂ ಶತಕಾರ್ಥಂ ಕೊಡದಿರ್ಪುದೇ (ಸೋಮೇಶ. ೧೦೨). [ಸಂ.]

**ಸುಭಾಷೆ** (ನಾ). ೧. ಒಳ್ಳೆಯ ಮಾತು. ೨. ಕಾಲೋಚಿತವಾದ ಪ್ರತಿಜ್ಞೆ: ಪಡಿಹಾರರಂ ಕರೆತರಸಿ ತನ್ನ ಸುಭಾಷೆಯಂ ಪತಿಕರಿಸಿ (ಬಸವಪು. ೪೪-೭೦). [ಸಂ. ಸುಭಾಷಾ]

**ಸುಭಿಕ್ಷ** (ನಾ). ೧. ಚೆನ್ನಾಗಿ ಭಿಕ್ಷೆ ಸಿಕ್ಕುವಿಕೆ; ಯಥೇಚ್ಛವಾಗಿ ಭಿಕ್ಷೆ ದೊರೆಯುವಿಕೆ. ೨. ದವಸ ಧಾನ್ಯಗಳ ಸಮೃದ್ಧಿ, ಕಾಳುಕಡ್ಡಿಗಳು ಅಗ್ಗದ ಬೆಲೆಯಲ್ಲಿ ಯಥೇಚ್ಛವಾಗಿ ದೊರೆಯುವಿಕೆ: ನಿನ್ನ ಕನ್ನಗುವರಿಯನ ಎನ್ನ ಸೇವಗೀವುದರಿಂ ನಿನಗಂ ಸೇನೆಗಂ ಸುಭಿಕ್ಷಮಕ್ಕುಂ (ರಾಮಾಶ್ವ. ೬೬-೨೮); ದಾನಿಗಳು ದೇಶದ ಎಲ್ಲೆಡೆಯಲ್ಲಿಯೂ ಇದ್ದುದರಿಂದ ಲೋಕವು ಸುಭಿಕ್ಷವಾಗಿತ್ತು (ಭಾರದ. ೧೦೫). ೩. [ಅಶ್ವಶಾ] ಕುದುರೆಗೆ ಬರುವ ಒಂದು ಬಗೆಯ ರೋಗ: ಪಸಿದಡಹಡಿಸುವ ಕುದಿರಗೆ ಬಸಿರಡವಿನ ಪೂಲ್ಲಖಾ(ಬಾ)ಣಮಂ ಕಟ್ಟಿದೊಡುಬ್ಬಸಮಾಗಿ ಬೇನೆಯೊಳ್ ಸ್ಯೆರಿಸಲಾರಿ(ಗ)ದೆ ಬೀಟ್ಟುಮದು ಸುಭಿಕ್ಷಂ ಪೆಸರಿಂ (ಅಶ್ವಶಾ. ೧೧-೩). [ಸಂ.]

**ಸುಭಿಕ್ಷತ್ವ** (ನಾ). ೧. = ಸುಭಿಕ್ಷ ೧. ೨. [ಜೈನ] ಕೇವಲಜ್ಞಾನ ಉತ್ಪತ್ತಿಯಾದಾಗ ಉಂಟಾಗುವ ಹತ್ತು ಅತಿಶಯಗಳಲ್ಲಿ ಒಂದು: ಸುಭಿಕ್ಷತ್ವಮುಂ ಪ್ರಾಣಿವಧವಿಹೀನತ್ವಮುಂ . . . ಎಂಬ ಘಾತಿಕ್ಷಣಮಪ್ಪ ದಶಗುಣಂಗಳುಂ (ಚಾಪುಂಪು. ೮೨). [ಸಂ.]

ಸುಭಿಕ್ಷಶೂಲೆ (ನಾ). = ಸುಭಿಕ್ಷ ೩: ಪಡು(ಡ)ಗುಂ ಪೊರಳ್ಗುಂ (ಸಲೆ) ಸಿಡಿಮಿಡಿಯಕ್ಕುಂ ಬೆಮರ್ತುಮುಮ್ಮಳಿಸುಗುಮಾಗಡೆ(ಳೆ) ತಲೆಯಂ ಕೆಟಗಿಡುಗುಮದಡಿಗಡಿಗೆ ಸುಭಿಕ್ಷಶೂಲೆ ಕೆರಳ್ದೊಡೆ ತುರಗಂ (ಅಶ್ವಶಾ. ೧೧-೪). [ಸುಭಿಕ್ಷ + ಶೂಲೆ]

ಸುಭಿಕ್ಷೆ (ನಾ). ಒಂದು ಬಗೆಯ ಸಸ್ಯ: (ಪಂಡಿತ. ೨೫೪). [ಸಂ. ಸುಭಿಕ್ಷಾ]

ಸುಭೇದಾರ 'ಸುಬೇದಾರ' ನೋ.

ಸುಮ (ನಾ). ಹೂವು; ಪುಷ್ಪ: ದೈವರ್ಕಳೆಲ್ಲರುಂ ದಿವ್ಯಸುಮಗಳನೆರಚಿ (ಶ್ರೀರಾಮಾ. ೧೮-೪೮೦); ಕಮಲವುದಯದೊಳರಳಿ ಸಂಜೆಯಲಿ ಮುಗುಳಾಗಿ ಸುಮವಪ್ಪುದು (ಮಂಕುಕ. ೯೧). [ಸಂ.]

ಸುಮಂಗಲ, ಸುಮಂಗಳ (ನಾ). ಒಳ್ಳೆಯದು; ಕಲ್ಯಾಣಕರವಾದುದು: "ಸುಮಂಗಲ[ಪಾಠಾಂ. ಳ] ಸಮೀಚೀನವಾದ ಶುಭ" (ನಾನಾರ. ೧೦೦ ಟೀಕೆ). ಸುಮಂಗಳ: ಶ್ರೀಗುರೂಕ್ತ ಸದಾ ಸುಮಂಗಳ ಯೋಗಯೋಗದಲಿ ಆಗಮಾರ್ಥದೊಳಗೆ ಮಾಡುವ ಯಾಗಯಾಗದಲಿ (ಪುರಂದ. ೧-೧೩೬-೨). [ಸಂ.]

ಸುಮಂಗಲಿ (ನಾ). ೧. ಅದೃಷ್ಟವಂತೆ; ಭಾಗ್ಯಶಾಲಿನಿ. ೨. ಮುತ್ತೈದೆ; ಸೌಭಾಗ್ಯವತಿ: ಮಹಾಸತಿ ಚಂದಲೆ . . . ಸುಮಂಗಲಿಯ ಅಲಂಕಾರಗಳಲ್ಲಿ ಚಿತಾಗ್ನಿಗೆ ಬಲವಂದು ಅದರಲ್ಲಿ ದುಮುಕಿ ಮಹಾಸತಿಯಾದಳು (ಶಾಂತಲಾ. ೧೭). ೩. [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ, ಹದಿನೇಳು ಅಕ್ಷರಗಳುಳ್ಳ ಅತ್ಯಷ್ಟಿಯೆಂಬ ಛಂದಸ್ಸಿನ ಒಂದು ವೃತ್ತ: ೧೭ನೆಯ ಅತ್ಯಷ್ಟಿಯಲ್ಲಿ . . . ನಜಭಜಜಂಲಗಂ ಬರೆ ಸುಮಂಗಲಿಯೆಂಬರದಂ (ಛಂದ. ೮೫). [ಸಂ. ಸುಮಂಗಲೀ]

ಸುಮಂಗಲೆ (ನಾ). = ಸುಮಂಗಲಿ ೨: ಪೂರ್ಣಕುಂಭ ಕಂಚು ಕನ್ನಡಿ ಕಲಶಗಳನ್ನು ಹೊತ್ತ ಸುಮಂಗಲೆಯರೂ ಬ್ರಾಹ್ಮಣರೂ . . . ಕಲ್ಯಾಣಮಂಟಪಕ್ಕೆ ಬಿಜಯ ಮಾಡಿಸಿದರು (ಶಾಂತಲಾ. ೧೧೨). [ಸಂ.]

ಸುಮಂಗಳ 'ಸುಮಂಗಲ' ನೋ.

ಸುಮತ (ನಾ). ೧. ಗೆಳೆತನ; ಸ್ನೇಹ. ೨. ಒಳ್ಳೆಯ ಮನಸ್ಸು: ಗುರು ಸುಮತ ಸತ್ಪ್ರಾಣವಂ . . . ನೋಡಿ (ಬಸವು. ೩೯-೫೩). ೩. ಒಳ್ಳೆಯ ತತ್ತ್ವ,—ಸಿದ್ಧಾಂತ: ಸುಮತಂ ಕುಮತಂ ವರತತ್ತ್ವಮತತ್ತ್ವಂ ಧರ್ಮಮುಂ ಕುಧರ್ಮಮೆನಿಪ್ಪೀ ಭ್ರಮೆಯಿಂ ಜೀವನೊಳುದಯಿಸಿ ಸಮಸ್ತಯೋನಿಯೊಳೆ ಬರಿಸುವುದು ಮಿಥ್ಯಾತ್ವಂ (ಶಾಂತೀಶ್ವ. ೧೩-೫೮). [ಸಂ.]

ಸುಮತಿ (ನಾ). ೧. ಒಳ್ಳೆಯ ಮನಸ್ಸು,—ಬುದ್ಧಿ: ಧೃತಿಬಿಡದೆ ರತಿಗೆಡದೆ ಭಕ್ತಿಸ್ಥಿತಿ ಮಱೆಯದೆ ಸುಮತಿ ದೊರೆಯದು (ಬಸವು. ೩೮-೩೧); ಮದನನ ಹಿಳುಕು ಸುಮತಿಯ ಸೀಳೆ ಬಳಿಕಿಂತೆಂದನವ ನಗುತ (ಕುಮಾವ್ಯಾ. ೨-೪೧). ೨. ಒಳ್ಳೆಯ ಮನಸ್ಸನ್ನು ಹೊಂದಿರುವವನು; ಸುಚಿತ್ತ: ಇದಕೆ ನೀವರ್ಥವಂ ವಿಸ್ತರಿಸಿದಡೆ ಸಾಕು ಸುಮತಿಗಳು (ಬಸವು. ೫೫-೩೯); ಭಕ್ತಿಬಲದಿಂದಧಿಕಮಿಲ್ಲೆಲೆ ಸುಮತಿ ಕೇಳೆಂದ (ಗಗತಾ. ೧೦-೧೭). ೩. ಜ್ಞಾನಿ; ಬುದ್ಧಿವಂತ: ಸುಮತಿಗತಿಸುಮತಿ ಪುನರುಕ್ತಮೆನ್ನದರೆಸುಮತಿಯೆನಿಪ ದೃಢರಥನುಮನಾ ಸುಮತಿಯೊಡನೆರಪಿದಂ ಗುರು ಸುಮತಿಯ ಮತಿ ದೃಢರಥಂಗ ಮಿರ್ಮಡಿಸುವಿನಂ (ಶಾಂತಿಪು. ೯-೪೪). ೪. [ಜೈನ] ಇಪ್ಪತ್ತುನಾಲ್ಕು ತೀರ್ಥಂಕರರಲ್ಲಿ ಐದನೆಯವನು: ಸುಮತಿ . . . ವರ್ಧಮಾನರೆಂಬಿಪ್ಪತ್ತುನಾಲ್ಕು ತೀರ್ಥಕರರ್ (ಚಾವುಂಪು. ೪೦೨). [ಸಂ.]

ಸುಮಧುರ (ಗು). ಬಹಳ ಇಂಪಾದ,—ಇನಿದಾದ: ಶಾಸ್ತ್ರಿಗಳು . . . ಕೋಕಿಲೆಯ ಕಂಠಸ್ವರವನ್ನು ಹೋಲುವ ನಯವಾದ ಸುಮಧುರ ನವಿರುನಾದಗಳನ್ನೂ ಹೊರ ಹೊಮ್ಮಿಸುತ್ತಿದ್ದರು (ಸಂಗೀತ. ೭೮). [ಸಂ.]

ಸುಮನ (ನಾ). ೧. ಚೆಲುವು; ಅಂದ. ೨. ಒಳ್ಳೆಯ ಮನಸ್ಸು. ೩. ಒಳ್ಳೆಯ ಮನಸ್ಸಿನವನು. ೪. ದೇವತೆ: ಸುಮನರ್ ಗರ್ಭಾವತಾರಂ ಮೊದಲನೆ ಬಿಡದಾರಾಧಿಸುತ್ತಿರ್ದಪರ್ (ಚಂದ್ರಪು. ೧೩-೧೦೨). ೫. ಹೂವು; ಪುಷ್ಪ: ತಿಳಕಂ ವರವನಲಕ್ಷ್ಮೀತಿಳಕಂ ದತ್ತಪ್ರಿಯಾ ಸಮನ್ವಿತಜನಸತ್ಪುಳಕಂ ಸುಮನಃಕಳಮಂಜುಳಕಂ ತಾನಾದುದತನುಕೀರ್ತ್ಯಜ್ಜ್ವಳಕಂ (ವರ್ಧಪು. ೨-೮); ಶ್ರೀಮದ್ಬ್ರಹ್ಮಾಚ್ಯುತೇಂದ್ರಾಸುರಗುರು ಸುಮನೋಮೌಳಿ ವಿನ್ಯಸ್ತಪಾದಂ (ಬಸರ. ೧-೧). ೨, ೫: ವಿಬುಧಸೇವ್ಯದಿ ವಿಸ್ತೃತಚ್ಛಾಯನಸ್ಖಳಿತೌದಾರ್ಯ ವಿಳಾಸಭಾಸಿ ಸುಮನಸ್ಸಂಪೂರ್ಣನುದ್ಯದೃಶಃಫಳದಿಂ ರೇಚಣನದಂಡನಾಥನೆಸೆದಂ ಲೋಕೈಕ ಕಲ್ಪದ್ರುಮಂ (ಎಕ. VII, ಶಿಕಾರಿ. ೧೯೭; 1181). ೪, ೫: ಶ್ರೀಮಜ್ಜನಲಲಿತಂ ಸುಮನೋಮಾಳಾರಮ್ಯಮುದ್ಭವಸ್ತುಬ್ರಜ ಶೋಭಾಮಂಡನವೆಣೆಯೆನಿಪುದು ಭೂಮಹಿಳೆಯ ಕುಂತಳಕ್ಕೆ ಕುಂತಳದೇಶಂ (ಎಇ. XV, ೩೪-೮; 1189). ೬. ಪಂಡಿತ; ವಿದ್ವಾಂಸ. ೪, ೫, ೬: ಆ ವನಂ . . . ಸುತ್ರಾಮನಂತೆ ಸುಜನನಂತೆ ಸುಮನೋಮನೋಜ್ಞಮುಂ (ರಾಜಶೇ. ೨-೭೮ ವ). ೭. ಆನಂದಪಡುವವನು. ೪,೫,೭: ಪರುಷತರಸ್ವನೋನ್ಮುಖರನಂ ಖರನಂ ಖರನಂ ಮುರಾರಿ ಸಂಹರಿಸೆ ಜಯಪ್ರಮೋದಸುಮನರ್ ಸುಮನರ್ ಸುಮನಸ್ಸುವೃಷ್ಟಿಯಂ ಸುರಿಯೆ (ಜಗವಿ. ೪-೪೨). ೮. ಒಂದು ನರಕದ ಹೆಸರು: ನಿರುಚ್ಛ್ವಾಸ ಸುದೀರ್ಘ ಕೂಟಶಾಲ್ಮಲಿ ಅರಿಷ್ಟ ಸುಮನವೆಂಬೈದು ಮಂತ್ರಿನರಕಂಗಳೊಡನೆ ಭಯೋತ್ಕಟವೆಂಬರಸುನರಕವಿಹುದು (ವಿವೇಕ. ೧೪೦). ೯. ಗೋಧಿ. ೧೦. ಸಂಪತ್ತು; ಐಶ್ವರ್ಯ. ೧೧. ಗಾಳಿ; ವಾತ: "ದೇವಪ್ರಾತಲತಾಂತವಾತ ಕಮನೀಯಸ್ವಾಂತಮೈಶ್ವರ್ಯಮೆಂಬೀ ವಾಕ್ಯಂ ಸುಮನಾಭಿಧಾನಂ" (ನಾನಾರ. ೬೯). [ಸಂ.]

ಸುಮನಶ್ಶರ (ನಾ). ಹೂವನ್ನೇ ಬಾಣವನ್ನಾಗಿ ಉಳ್ಳವನು; ಮನ್ಮಥ: ಸುಮನಶ್ಶರಂ ನಿರೀಕ್ಷಿಸಲಮಲಪ್ರಭೆ ತುಳ್ಕುವಂತೆ ರತಿ ಬೆಳಗಲ್ಕಿಬ್ರಮವಾಂತ ಮುಕುರದಂತಿರೆ ರಮಣಿಯ ನುಣ್ಗಲ್ಲವೆಸೆದುದು (ಉದ್ಭಟ. ೭-೧೦೩). [ಸಂ.]

ಸುಮನಶ್ಶೈಳ (ನಾ). ದೇವತೆಗಳ ಬೆಟ್ಟ,—ಮೇರು: ಸುಮನಶ್ಶೈಳವನಾ ಜಿನಾಭಿಷವಣ ಕ್ಷೀರಾಂಬು ಧಾರಾಳಿಯಿಂದೆ ಮುಬುಂಕಾಡಿಸಿದಂದದಿಂ (ಶಾಂತೀಶ್ವ. ೧೪-೧೭೫). [ಸಂ. ಸುಮನಶ್ಶೈಲ]

ಸುಮನಶ್ಶೇಖರ (ನಾ). ೧. ಹೂವನ್ನು ಮುಡಿದುಕೊಳ್ಳುವುದು: ರಾಮಂಗೆ ವೈದೇಹಿ ನೀರೇಜನಿಸರ್ಗಾಮೋದ ಗಂಧೋದಕಸವನಮನಿತ್ತಟ್ಟಕುಂ ಬಾಹುಮೂಲಂ ಸ್ತನಮೂಲಂ ನಾಭಿಮೂಲಂ ತ್ರಿಗುಣಿಸೆ ಸುಮನಶ್ಶೇಖರಂ ಮಾಡಿ . . . ಸೌಂದರ್ಯಮಂ ಸೂಱೆಗೊಂಡಳ್ (ಪಂಪರಾಮಾ. ೫-೯೭). ೨. ಹೂವನ್ನು ಮುಡಿದುಕೊಂಡವನು: ಸುಜಾತ ಪಾರಿಜಾತ ಸುಮನಶ್ಶೇಖರಂ . . . ಮೌಕ್ತಿಕಪದಬಂಧಂ ಆ ದೇವಂ ಶ್ರೀದೇವನಾಮಮಂ ತಾಳ್ದಿ (ಶಾಂತಿಪು. ೭-೧೩ ವ). [ಸಂ.]

ಸುಮನಸ (ನಾ). ೧. ಒಳ್ಳೆಯ ಮನಸ್ಸು: ಆರಡಿಯೆಂದು ಮುಟ್ಟದೆ ಚಂಪಕಗಳು ಸುಮನಸದಿ ಕೂಡಿಹವು (ಗೊಮ್ಮ.ಚ. ೨-೪೦). ೨. ಒಳ್ಳೆಯ ಮನಸ್ಸಿನವನು: ರಾಮಪ್ಪ ಭಾವದಿಂದಭಿರಾಮರೂಪರು . . . ಸಭ್ಯರು ಸುಮನಸರವರು (ಇಂಚಾಪ. ೩೧-೪೧). ೩. ದೇವತೆ; ಸುರ: "ವಿಬುಧರು ಸುಮನಸರು ಲೇಖರೆನಲು ವಿಬುಧರ್ಗೆ ನಾಮಂ" (ಮಂಗರಾ. ೩-೮); ಕರುಳುಮಾಲೆಯನಾಂತು ಕುಣಿವುತಿರ್ದಪು ಭೂತ ಸುರಿಯಲರಳ ಸುಮನಸರು (ಜೀವಂಸಾಂ. ೫-೭೭); ಬೊಬ್ಬೆಯಾದುದು ಬಳಿಕ ಸುಮನಸರೊಬ್ಬುಳಿಯ ಚೂಣಿಯಲಿ (ತೊರರಾ. ೧-೧೧-೯). ೪. ಹೂವು; ಪುಷ್ಪ: "ಪ್ರಸವಂ ಪ್ರಸೂನಕಂ ಸುಮನಸಂ ಪುಷ್ಪಮೆನೆ ಕುಸುಮಂ" (ಮಂಗರಾ. ೩-೨-೫); ಹಗೆ ತಣಿಯಲೆಂಬಂತೆ ಮನಸು ಸುಮನಸವಾಯ್ತು ಪರಿಕಾಂತವಾಯ್ತು (ಅಮತಂ. ೨೦-೯). ೫. ಗಾಳಿ; ವಾಯು. ೬. ಸಂಪತ್ತು; ಐಶ್ವರ್ಯ. "ಕುಸುಮಂ ನಿರ್ಮಲಮನ ದಲ್ ಸ್ಪಶನಂ ಸಿರಿ ಸುರರು ಪಂಚ ಸುಮನಸಮೆನಿಕುಂ" (ನಾನಾಕಂ. ೯೯). [ಸಂ.]

ಸುಮನಸಾರ (ನಾ). ಹೂವಿನ ರಸ; ಬಂಡು; ಮಧು: ಸುರಪ ಸುರಿದನು ಸುಮನಸಾರವ (ಕಾಶಿರಾ. ೨೭-೭೦). [ಸಂ.]

ಸುಮನಸಾವನಿ (ನಾ). ದೇವತೆಗಳ ಲೋಕ; ಸ್ವರ್ಗ: ವಿಮಲ ಸುಗತಿಯಿಂದ ಮಂದಾಕಿನಿಯೆನಿಸಿ ಸುಮನಸಾವನಿಯಲಿ ಮೆರೆದೆ ಸುರನದಿಯೆ (ವಿದಾಕ್ಯ. ೮೮-೧). [ಸಂ.]

ಸುಮನಸ್ಕಿ (ನಾ). ಒಳ್ಳೆಯ ಮನಸ್ಸಿನವನು; ಸಹೃದಯ: ಹರಿಣಧರಂ ಸೊಗಯಿಸಿದಂತಿರೆ ಕುಸುಮಿತ ಚೂತವಿತತಿ ಸೊಗಯಿಸಿತೆನಸುಂ ಸುರಭಿ ಸುಮನಸ್ಕಿ ದೋಷಾಕರವಿಲಸಿತಮಪ್ಪುದಿಂತು ಯುಕ್ತಾಯುಕ್ತಂ (ಕವಿರಾ. ೩-೩೩).
[ಸಂ. ಸುಮನಸ್ವಿನ್]

**ಸುಮನಸ್ಸಿಂಧು** (ನಾ). ದೇವಲೋಕದ ನದಿ; ದೇವಗಂಗೆ: ಸುಮನಸ್ಸಿಂಧುವ ರೂಪದಿಂ ಮಟೆಯ ಪಾಂಗಿಂದಿನ್ನುವೆಟ್ಟರ್ಪುದಂದು ಮಹಾವಾಲದ ಪೊಯ್ಲೊಳು ಚ್ಚಲಿಸಿದಾಗ ಮುನ್ನೀರ ನೀರ್ (ಜಗವಿ. ೧-೫೫). [ಸಂ.]

**ಸುಮನಸ್ಸು** (ನಾ). ೧. ಒಳ್ಳೆಯ ಮನಸ್ಸು; ನಿರ್ಮಲಚಿತ್ತ. ೨. ತೃಪ್ತಗೊಂಡ ಮನಸ್ಸು. ೩. ಸಂತೋಷ; ಆನಂದ. ೪. ದೇವತೆ; ಸುರ: "ಆದಿತ್ಯಃ, ತ್ರಿದಶಃ, ಸುರಃ, ಸುಮ(ನಾಃ)ನಸ್ . . . ದೈವತಂ – ಈ ೨೧ ದೇವರ್ಕಳ ಪೆಸರ್" (ಹಲಾಯು. ೨-೪). ೫. ಹೂವು; ಪುಷ್ಪ: "ಪುಷ್ಪಂ, ಪ್ರಸವಃ, ಕುಸುಮಂ, ಪ್ರಸೂನಕಂ, ಸುಮನಸ್-ಈ ೫ ಪೂವಿನ ಪೆಸರ್" (ಹಲಾಯು. ೩೧-೩೨). ೬. ಪಂಡಿತ; ವಿದ್ವಾಂಸ. ೭. ವೇದಗಳನ್ನು ಕಲಿಯುತ್ತಿರುವ ವಿದ್ಯಾರ್ಥಿ. ೮. ಒಂದು ಬಗೆಯ ಮಲ್ಲಿಗೆ. [ಸಂ. ಸುಮನಸ್]

**ಸುಮನಸ್ಸ್ಥಿತಿ** (ನಾ). ೧. ದೇವತೆಗಳ ಆಯುಷ್ಯ. ೨. ಹೂವಿನ ಆಯುಷ್ಯ. ೧, ೨: ಸುಮನಸ್ಸ್ಥಿತ್ಯನುಗಮದೊಳ್ ದ್ರುಮದಿಂದೆ ನೆಲಕ್ಕೆ ಬೀಟ್ಟವೋಲಾಯು ರ್ವ್ಯತ್ಯಮದೊಳ್ ನಾಕಾನೋಕಹದೆ ಮಹೀಭಾಗಕ್ಕೆ ವಂದನಂದಾ ಸುಮನಂ (ಚಂದ್ರಪ್ರ. ೯-೬೧). [ಸಂ.]

**ಸುಮನೆ** (ನಾ). ೧. ಒಳ್ಳೆಯ ಮನಸ್ಸುಳ್ಳವಳು: ಸುಮನೆಯ ಸುಖ ದೊಳಗೆ ಲಯವಹರೆಲ್ಲರು ಆ ಸುಮನನ ಭಾವವ ವಿಘಟಿಸುವ ಪರಿಯನ್ನಾವುದು (ಕೋಲಶಾಂ. ೧೬-೨); "ಜಗನ್ಮೋಹಿಯಪ್ಪ ಮಾಯೆ" (ಕೋಲಶಾಂ. ಟೀಕು). ೨. ಅತ್ಯುತ್ತಮ ಜಾತಿಯ ಮಲ್ಲಿಗೆ. [ಸಂ. ಸುಮನಾ]

**ಸುಮನೋಗಣ** (ನಾ). ೧. ದೇವತೆಗಳ ಗುಂಪು. ೨. ವಿದ್ವಾಂಸರ ಸಮೂಹ. ೧, ೨: ಭ್ರಮರಹಿತಾಮೋದ ಸುಮನೋಗಣ ಹೃದ್ಯಮ ವಿಕಲ ಸ್ವಸ್ಥ ಮುರಗ್ರಮನೋಜ್ಞ ಫಲದಮಖಿಲಾಗಮವಿನುತಂ ನೀತಿಸುರಮಹೀರುಹಮರಸಾ (ರಾಜಶೇ. ೧೩-೧೬). [ಸಂ.]

**ಸುಮನೋಗಣಿಕೆ** (ನಾ). ದೇವತೆಗಳ ವೇಶ್ಯೆ; ಅಪ್ಸರೆ: ರಂಭೆ ಕೇಳ್ ಸುಮನೋ ಗಣಿಕೆಯರೊಳತಿವಿರಾಜಿತ ಕೀರ್ತಿಯುತೆ (ಬಸವು. ४೧-೧೪). [ಸಂ. ಸುಮನೋಗಣಿಕಾ]

**ಸುಮನೋಗೋಪ** (ನಾ). ೧. ಒಳ್ಳೆಯ ಮನಸ್ಸಿನ ಗೋಪಾಲ. ೨. ಒಂದು ಬಗೆಯ ಹುಳು; ಇಂದ್ರಗೋಪ. ೧, ೨: ಸುಮನೋಗೋಪ ಸಮಾವೃತಂ ಜಲಧರಶ್ಯಾಮಂ . . . ಗೋಪಾಲಲೀಲಾಸ್ಪದಂ (ಜಗವಿ. ೪-೩೬). [ಸಂ.]

**ಸುಮನೋಜಾತ** (ನಾ). ದೇವತೆಯ ಮಗ: ಕುಬೇರ ಕಿನ್ನರ ಮಾತೃಗಣ ಕರ್ಣನಲಿ ಸುಮನೋಜಾತ ಚಿತ್ರರಥಾದಿ ಗಂಧರ್ವರು ವಿಪಕ್ಷದಲಿ (ಕುವ್ಯಾಕ. ೨೨-೮). [ಸಂ.]

**ಸುಮನೋಜ್ಞ** (ನಾ). ಸೌಮ್ಯವಾದುದು; ಪ್ರಶಾಂತತೆ: "ಕಮನಂ ಶುಭಂ ಪೇಶಲಂ ಶೋಭನಂ ಮಂಜು ಸುಮನೋಜ್ಞಂ . . . ಪ್ರವೇಕಮೆನೆ ಸೌಮ್ಯಕ್ಕೆ ನಾಮಮಕ್ಕುಂ" (ಮಂಗರಾ. ೧೨೬-೨). [ಸಂ.]

**ಸುಮನೋದಾಮ** (ನಾ). ಹೂವಿನ ಹಾರ; ಪುಷ್ಪಮಾಲೆ: ಜಳಗಂಧಾಕ್ಷತ ಪಾರಿಜಾತ ಸುಮನೋದಾಮಂಗಳಿಂ ರಾಮಕೇವಳಿಯಂ ಪೂಜಿಸಿ ಭಕ್ತಿಯಿಂದೆಱಗಿ (ಪಂರಾಮಾ. ೧೬-೭೫); ತಳೆದ ಸುಮನೋದಾಮಂ ನೀರೊಡಿ ಬಾಡಿದುದಾಗಳಾಗುಳಿಯ ನೊಳಕೆಯ್ದುತ್ತು (ಚಂದ್ರಪ್ರ. ४-೭೭). [ಸಂ. ಸುಮನೋದಾಮನ್]

**ಸುಮನೋಧರ್ಮ** (ನಾ). ೧. ಒಳ್ಳೆಯ ಸ್ವಭಾವ: ಸುಮನೋಧರ್ಮಗುಣಂ ಗಳೊಳವರ್ದವರ್ದಂ ಕಱೆವ ನೇಮಿಚಂದ್ರನ ಬಾಣಂ ಭ್ರಮರಹಿತಂ ಮೃದುಹೃದಯಂಗಮಮೆನಿಪುದಿದಾವ ಕೌತುಕಂ ಬುಧಜನದಾ (ಪಾರ್ಶ್ವಪು. ೧-೬೮). ೨. ಪುಷ್ಪಧನುಸ್ಸು. ೩. ವಿದ್ವದ್ಧರ್ಮ. ೨, ೩: ಸುಮನೋಧರ್ಮಯುತಂ ಸದಾಳಿಗುಣಯುಕ್ತಂ ಕಾವನೇಂ ಕಾಯ್ದುದಂದಮ ಬೆಂಗೊಟ್ಟ ವಿಯೋಗಿವೃಂದಕೆ (ವೃಷವಿ. ४-೫೬). [ಸಂ.]

**ಸುಮನೋನಿವೇಶ** (ನಾ). ೧. ಉತ್ತಮಹೂವುಗಳಿಗೆ ಆಶ್ರಯವಾದುದು. ೨. ಒಳ್ಳೆಯ ಮನಸ್ಸಿಗೆ ನೆಲೆಯಾದುದು. ೧, ೨: ಆ ವನಂ . . . ನಿರಂತರ ಸುಮನೋ ನಿವೇಶಮಾಗಿಯುಂ ಚೇತನತ್ವಾಭ್ಯುಪೇತಮಲ್ಲು (ಚಂದ್ರಪ್ರ. ೧೫-४೦ ವ). [ಸಂ.]

**ಸುಮನೋನುರಾಗ** (ನಾ). ೧. ಒಳ್ಳೆಯ ಪ್ರೀತಿ; ಉತ್ತಮವಾದ ಅನುರಾಗ. ೨. ಹೂವಿನ ಬಣ್ಣ; ಪುಷ್ಪವರ್ಣ: ಸುಮನಿಸಿದ ಚಂದ್ರಿಕೆಯ ಸೊಗಸುವೆಳ ಮಾದಳದ ಸುಮನೋನುರಾಗದಿಂ ಪಲವು ಬಣ್ಣಂಗಳಂ ತೆಗೆದುಟ್ಟು ರಂಜಿಸಿದರು (ಜೈಮಿಭಾ. ೩೦-೧೬). [ಸಂ.]

**ಸುಮನೋಬಾಣ** (ನಾ). ೧. ಹೂವನ್ನೇ ಬಾಣವಾಗಿ ಉಳ್ಳವನು; ಮನ್ಮಥ: ಸುಮನೋಬಾಣ ಜಯಪ್ರದಾಯಕತಮಂ ನಿನ್ನೀ ತ್ರಿಲೋಕಾಭಿರಾಮಮೆನಿಪ್ಪಾಕೃತಿ (ಕಾದಂಊ. ೫೫೨); ಉಚಿತಕ್ರಮಮಂ ಕಾಮುಕರಱಿವರೆ ಸುಮನೋಬಾಣಂಗೆ ತಕ್ಕುಗಿಡದವರುಂಟೆ (ಪಂರಾಮಾ. ೧೧-೮೨). ೨. ಒಬ್ಬ ಕವಿಯ ಹೆಸರು: ಕವಿ ಸುಮನೋಬಾಣನ ಯಾದವ ಕಟಕಾಚಾರ್ಯನೆಸೆವ ದೌಹಿತ್ರನೆ ನಾಂ ಕವಿ ಕೇಶವನೆಂ (ಶಮದ. ೨ ಪೀಠಿಕೆ). [ಸಂ.]

**ಸುಮನೋಬಾಣಕ್ರೀಡೆ** (ನಾ). ಮನ್ಮಥಕ್ರೀಡೆ: ಸುಮನೋಬಾಣಕ್ರೀಡೆಗೆ ಸುಮನೋಮಿಥುನಂಗಳೆಳಸಿ ರಮಿಯಿಪ ನಾನಾ ಸುಮನೋಲತಾಗೃಹಂಗಳ ಸುಮನಶ್ಶಯ್ಯೆಗಳಿನೊಪ್ಪುಗುಂ ಸೌಮನಸಂ (ಮಲ್ಲಿಪು. ೧೨-೬೬). [ಸಂ. ಸುಮನೋಬಾಣಕ್ರೀಡಾ]

**ಸುಮನೋಮಂಜರಿ** (ನಾ). ಹೂವಿನ ಗೊಂಚಲು; ಪುಷ್ಪಗುಚ್ಛ: ನವಸೌರಭಮಂ ರಂಜಿಸಿ ತೋಱುವ ಸುಮನೋಮಂಜರಿಯಿಂ (ಕಾದಂಪೂ. ೭೪೨); ಚಮರರುಹಗ್ರಾಹಿಣಿಯರ್ ಸುಮನೋಮಂಜರಿಯ ಭಾರದಿಂ ಬಳ್ಕುವ ಜಂಗಮಲತೆಗಳೆನೆ . . . ಬೆಡಂಗಂ ಪಡೆದರ್ (ಮಲ್ಲಿಪು. ೩-೧೦೦). [ಸಂ. ಸುಮನೋಮಂಜರೀ]

**ಸುಮನೋಮಣಿ** (ನಾ). ದೇವತೆಗಳ ಮಣಿ; ಚಿಂತಾಮಣಿ: ಸುಮನೋಮಣಿ ಸನ್ಮಣಿಹಾರದಲ್ಲಿ ಬನ್ನೊಧರಣಮಾಗಿ ನಿನ್ನ ಪರಿವನ್ನಿಜನಕ್ಕೆನಿಪೊನ್ನುದಾನ ಗಮ್ಭೀರತೆಯಾದುದೇಂ ಪೊಗಳ್ವೆ ನಾಂ (ಎಕ. VIII, ಸೊರಬ. ೨೬೧-೨೭; 1408). [ಸಂ.]

**ಸುಮನೋಮಾರ್ಗಣ** (ನಾ). = ಸುಮನೋಬಾಣ ೧: ಸುಮನೋಮಾರ್ಗಣನಿಲ್ಲಿ ನಿರ್ಮಿಸಿದ ಭೃಂಗೀಜ್ಯಾಲಸತ್ಪುಷ್ಪಚಾಪಮಿದೆಂಬಂತುಟೆ ನೀಳ್ದ ಸತ್ಕುಸುಮಮಲ್ಲೀವಲ್ಲಿ ಪರ್ಬಿರ್ಪ ವಿಭ್ರಮದಿಂದಾಮ್ರಮಹೀರುಹಂ . . . ಆಂತಿರ್ದುದು ತಾಂ ಲತಾವೃತಕ ಮಂಬಾಲಿಂಗನಪ್ರೌಢಿಯಂ (ಶಾಂತೀಶ್ವ. ೧೧-೧೦೫). [ಸಂ.]

**ಸುಮನೋಮಾಲೆ, ಸುಮನೋಮಾಳೆ** (ನಾ). = ಸುಮನೋದಾಮ: ಸುಮನೋಮಾಲೆಯುಮೊರ್ಮೆಯುಂ ಹಿಮದೊಳೇಂ ಬಾಡಿರ್ದಗಲ್ದಿರ್ಕುಮಗ್ರಿಮ ಭೂಪಾಲಶಿರೋಗ್ರಮಂ (ಶಾಂತಿಪು. ೯-೧೫೧). **ಸುಮನೋಮಾಳೆ**: ಕಲಶಂ ಜಾಗಂ ಧ್ವಜಂ ಕನ್ನಡಿ ಗುಡಿ ಸುಮನೋಮಾಳೆ (ಸುಕುಮಾ. ೫-೬೧). [ಸಂ. ಸುಮನೋಮಾಲಾ]

**ಸುಮನೋಮಾಳೆ** 'ಸುಮನೋಮಾಲೆ' ನೋ.

**ಸುಮನೋಮಿಥುನ** (ನಾ). ದೇವದಂಪತಿಗಳು; ಸುರದಂಪತಿಗಳು: ಸುಮನೋಬಾಣಕ್ರೀಡೆಗೆ ಸುಮನೋಮಿಥುನಂಗಳೆಳಸಿ ರಮಿಯಿಪ ನಾನಾ ಸುಮನೋ ಲತಾ ಗೃಹಂಗಳ ಸುಮನಶ್ಶಯ್ಯೆಗಳಿನೊಪ್ಪುಗುಂ ಸೌಮನಸಂ (ಮಲ್ಲಿಪು. ೧೨-೬೬). [ಸಂ.]

**ಸುಮನೋಮೂರ್ತಿ** (ನಾ). ದೇವತೆಗಳ ಮೂರ್ತಿ,—ಆಕಾರ: ಸುಮನೋ ಮೂರ್ತಿಗಳಪ್ರತರ್ಕ್ಯಮಹಿಮರ್ ತೇಜಸ್ವಿಗಳ್ ದಿವ್ಯಕಾಂತಿಮಯರ್ ನೋಡೆ . . . ತನ್ನಂಗಿ ಕಂಡಳ್ಕಿದಳ್ (ನಳಚಂ. ೩೯೫). [ಸಂ.]

**ಸುಮನೋರತ** (ನಾ). ೧. ಹೂವುಗಳಲ್ಲಿ ಇಷ್ಟವುಳ್ಳವನು. ೨. ದೇವರಲ್ಲಿ ಭಕ್ತಿಯುಳ್ಳವನು. ೧, ೨: ಎಲ್ಲರುಂ ಸುಮನೋರತರ್ ಮಧುವ್ರತರ್ (ಜೈಮಿಭಾ. ೨-೧೧). [ಸಂ.]

**ಸುಮನೋರಾಜ** (ನಾ). ೧. ದೇವತೆಗಳ ಒಡೆಯ; ಸುರರಾಜ. ೨. ಪಂಡಿತಜನರಿಗೆ ಒಡೆಯನಾದವನು: ಯಶಶ್ಶ್ರೀಸಮಾಜಂ ನೃಜೋನ್ಮಂತ್ರಾಬ್ಧಿ ರಾಜಂ ಸುವಿಭವಸುಮನೋರಾಜನೀ ರೇಚಿರಾಜಂ (ಎಕ. XIV, ೨೮೧-೩೫; 1181; ಶಾಪಮಂ. ೧೭४ ನೋ). [ಸಂ. ಸುಮನೋರಾಜನ್]

**ಸುಮನೋಲಲನೆ** (ನಾ). ದೇವತಾಸ್ತ್ರೀ; ಅಪ್ಸರೆ: ನಾಕವನ್ನೆದಿ ಸುಮನೋಲಲನೆ ಯರ ಕುಂತಳಕೆ ಹಾಯ್ದುದು ಬಲದ ಪದಹತಧೂಳಿ ಗೆಲಿದುದು ವಾಜಪೇಯಗಳ (ಕುವ್ಯಾಭೀ. ४-೬). [ಸಂ. ಸುಮನೋಲಲನಾ]

**ಸುಮನೋಲೋಕ** (ನಾ). ದೇವಲೋಕ; ಸ್ವರ್ಗ: ಸುಮನೋಲೋಕ ಸ್ವವಿಬುಧ ಸಮಾಖ್ಯೆಗಂ ನಾಡೆ ಮಾಡಿದಂ ಸಾರ್ಥತೆಯಂ (ಚಂದ್ರಪ್ರ. ೯-೫೬). [ಸಂ.]

**ಸುಮನೋವನ** (ನಾ). ಇಂದ್ರನ ಉದ್ಯಾನ; ನಂದನವನ: ಶರತ್ಸಮಯದಂತೆ ಸುಮನೋವನಾಭಿರಾಮಮುಂ . . . ಎಂಬ ಮಹನೀಯಮಹಿಮೆಯಂ ತಳೆದು (ಪುಷ್ಪಪು. ೯-೩೦ ವ). [ಸಂ.]

**ಸುಮನೋವರ್ಷ** (ನಾ). ಹೂವಿನ ಮಳೆ; ಪುಷ್ಪವೃಷ್ಟಿ: ಸಮನಿಸಿದತ್ತು ಜಯಶ್ರೀರಮಣಿಗೆ ಪರಿಣಯನಮಪ್ಪುದುಂ ಲಕ್ಷ್ಮಣನೊಳ್ ಸುಮನೋವರ್ಷಸಮನ್ವಿತಂ (ಪಂರಾಮಾ. ೯-೧೩೧). [ಸಂ.]

**ಸುಮನೋವಲ್ಲಭ** (ನಾ).= ಸುಮನೋರಾಜ ೧: ಸುಮನೋವಲ್ಲಭನಿವನೆಂದ ಮರಗಣಕ್ಕೆಲ್ಲಮಱಿಪುವಂತಾಕ್ಷಣದೊಳ್ ಸುಮನೋವರ್ಷಂ ಸುರಿದುದು ನಮೇರು ಮಂದಾರ ಪಾರಿಜಾತಪ್ರಭವಂ (ಪಾರ್ಶ್ವಪು. ೫-೮೮). [ಸಂ.]

**ಸುಮನೋವಾಸ** (ನಾ). ೧. ಹೂವುಗಳಿಗೆ ಆಶ್ರಯಸ್ಥಾನವಾದುದು. ೨. ಪಂಡಿತಜನಕ್ಕೆ ಆಶ್ರಯವಾಗಿರುವವನು. ೧, ೨ : ವನದಂತಿಂದ್ರನ ಲೋಕದಂತೆ ಸುಮನೋವಾಸಂ ಸುಧಾಧಾಮನಂತಿನನಂತುತ್ಕಮಲಾಶ್ರಯಂ (ರಾಜಶೇ. ೩-೧೦). [ಸಂ.]

**ಸುಮನೋವಿಶಿಖ** (ನಾ). = ಸುಮನೋಬಾಣ ೧: ಸುಮನೋವಿಶಿಖ ವಿಜಯನಂ ಸುಮನದಿನರ್ಚಿಸುವ ಭಕ್ತಿ ಮೆಯ್ಮೆರ್ಚೆ ಕರಂ ಸುಮನಸ್ಸಮಿತಿಯನಾಯ ರ್ಸುಮನಸ್ಸತಿಯರ್ತದೀಯವಲ್ಲೀವನದೊಳ್ (ಶಾಂತೀಶ್ವ. ೧೭-೪೭). [ಸಂ.]

**ಸುಮನೋಹರ** (ನಾ). ೧. ಬಹಳ ಚೆಲುವಾದುದು; ಅತಿ ಮನೋಹರವಾದುದು: ಸುಮನೋಹರಮೆನಿಪ ಸನತ್ಕುಮಾರ ಮಾಹೇಂದ್ರಕಲ್ಪ ರುದ್ರಕಲ್ಪಂಗಳ್ ಸಂದವುರ ಪಟುಪಟಹನಿನದದಿನವುರೀಜನಗೀತವಾದ್ಯದಿಂ ಕರವೆಸೆಗುಂ (ಸುಕುಮಾ. ೧೧-೬೨); ವಿಮಳ ತಚ್ಚಂದ್ರಕಾಂತದ ಶಿಲಾತಳದಲ್ಲಿ ಸುಮನೋಹರಾತಿಶಯ ವೈರಾಗ್ಯಪೀಠಿಕೆಯಿನಮಮು ಭದ್ರಾಸನದೆ ಕುಳ್ಳಿರ್ದ ವಿಲಸಿತಶ್ರೀಗುರು (ವೀಶೈಪು. ೭-೬-೪೩). ೨. ದೇವತೆಗಳನ್ನು ಸಂಹರಿಸುವವನು; ರಾಕ್ಷಸ: ಸುಮನೋಹರಾಸ್ಪದಂ ಭೂಸ್ವರ್ಗ ಮಧ್ಯಮನುಪಮಮಪ್ಪೆಮಗೆ ಸಾಟಿಯೆಂತೆನುತೆ (ಚಿಬಪು. ೪೧-೨೨). ೩. ಹೂವುಗಳನ್ನು ಕಟ್ಟುವವನು; ಮಾಲೆಗಾರ. ೧, ೨, ೩ : ನಿರುತಂ ಕುಮುದಶೋಭಿ ನೈಋತ್ಯದಂತೆ ವಾನರಸೈನ್ಯದಂತೆ ಕಮಲೋದರೋದ್ಭಾಸಿಭಾಸುರ ಶುಕ್ಲಪಕ್ಷದಂತಹಿತಲ್ಪದಂತೆ ಕವಿಸೇವಿತಂ ಗಗನದಂತೆ ಧರಣಿಪಾಲಯದಂತೆ ಸುಮನೋಹರಂ ನಿಶಾಚರವಂಶದಂತೆ ಮಾಲಾಕಾರಜನದಂತೆ . . . ತತ್ಪುರಂ ಕಂಗೊಳಿಸಿತು (ಜೈಮಿಭಾ. ೧೫-೧೧). ೪. ಶಿವ; ಈಶ್ವರ: ಸೂರಿವಿನುತ ಸುಮನೋಹರನ [ಪಾಠಾಂ. ಮನೋಹರನ] ಪದವಾರಿಯಂ ಮುನ್ನೀಂಟೆ ದಿಬ್ಯಶರೀರಿಯಾದನು (ಬಸಪು. ೧೨-೪೭). [ಸಂ.]

**ಸುಮಬಾಣ** (ನಾ). ಹೂವಿನ ಬಾಣ; ಪುಷ್ಪಚಾಪ: ಕುಸುಮಶರನೆಂದು ನಿನಗಾರ್ ಪೆಸರಿಟ್ಟರೊ ಕಾಣೆನಕಟ ಸುಮಬಾಣಮುಮಂ ಪೊಸತೆನೆ (ಶಾಕುಂತ. ೩.೨ ಅಡಿಪದ್ಯ). [ಸಂ.]

**ಸುಮಹತ್ವ** (ನಾ). ಅತಿಮುಖ್ಯವಾದುದು; ಬಹಳ ಪ್ರಮುಖವಾದುದು: ಇದು ನಿಮಿತ್ತಂ ನಿಮ್ಮ ಸುಮಹತ್ವದ ಘನತೆಯಂ ನೆನೆದು ಕರುಣಾಹೃದಯದಿಂದೆಮ್ಮೆಲ್ಲರಂ ರಕ್ಷಿಸಲು (ಬಸಪು. ೩೮-೭೪). [ಸಂ.]

**ಸುಮಾನ** 'ಸುಮ್ಮಾನ' ನೋ.

**ಸುಮಾನಗರಿ** (ನಾ). (?): ಸಾಲ್ಗುಡಿ ಮಕರಟಕ್ಕೆ ಸತ್ತಿಗೆ-ಸೀಗುರಿ ಸೂರೆಪಾನ ಕುಂಚ ಚವುರಿ ಬೀಸಣಿಗೆ ಸುಮಾನಗರಿ ಡವಕೆ ಚೆಂಬಿನ ಚೀಲ . . . ಮುಂತಾದುವನ್ನು ಹಿಡಿದು (ಚಿಕ್ಕಅ. ೩೦-೮). [?]

**ಸುಮಾನಗಾತಿ** 'ಸುಮ್ಮಾನಗಾತಿ' ನೋ.

**ಸುಮಾನುಕೊಡು** (ಕ್ರಿ). ಪುಷ್ಟಿಕೊಡು: ಆಟಗಾರರನ್ನು ಹೊಗಳುತಾ ಬರಲು, ಅವನ ಜೊತೆಗೆ ಇನ್ನೊಬ್ಬ ಪ್ರಾಯದವನು ಇನ್ನೊಂದು ಹೋಳನ್ನು ಹೊಡೆಯುತಾ ಆ ಮುದುಕನ ಹೊಗಳಿಕೆಗೆ ಸುಮಾನು ಕೊಡುತಾ ಬಂದನು (ಆದೂಟ. ೧೭೪).

[ಸುಮಾನು + ಕೊಡು]

**ಸುಮಾರ** 'ಸುಮಾರು' ನೋ.

**ಸುಮಾರು, ಸುಮಾರ** (ನಾ). ೧. ಹೆಚ್ಚುಕಡಮೆ; ಅಜಮಾಸು; ಅಂದಾಜು: ಅವು ಮಾಘಮಾಸದ ಸುಮಾರಿಗೆ ಹೂ ಬಿಡುತ್ತವೆ (ಮುಂಬಯಿ. ४-५೯); ಅದರ ಸಂಬಂಧವಾದ ಉತ್ಸವಗಳು ಸುಮಾರು ಎರಡು ತಿಂಗಳ ಕಾಲ ರಾಜಧಾನಿಯಲ್ಲಿ ನಡೆದವು (ಕೃದೇವ. ೧೫). ೨. ಸಾಧಾರಣವಾದುದು; ಸಾಮಾನ್ಯವಾದುದು: ರೇವಕ್ಕನ ಮನೆತನ ಸುಮಾರು (ಚಿಲುಮ. ೨೭). ೩. ಅಪಮಾನ; ಅಗೌರವ: ನಾಕು ಮಂದಿ ಮುಂದೆ ಸುಮಾರು ಮಾಡಬೇಡ (ರೂಢಿ). ೪. ಸಂಖ್ಯೆ; ಅಂಕಿ: (?). ಸುಮಾರ: ೧. ನಿನ್ನೆ ಮಧ್ಯರಾತ್ರಿಯ ಸುಮಾರಕ್ಕೆ ಅದು ಆಯಿತು (ಮುಂಬಯಿ. ೬. ೪-೫೨). ೨. ಕೆಳಗೆ ಬಿದ್ದ ಯಳಿಕ್ಕಿಂತ ಮೇಲೆ ಫಾಳಿಯಲ್ಲಿ ಹೋದ ಯಳಿಗಳು ಹೆಚ್ಚದ್ದರೆ ಆ ಅರಳಿಯು ಶಕ್ತಿಯಿಲ್ಲದ್ದು ಎಂದು ಹಲಕಿ ಸುಮಾರವೆಂದು ತಿಳಿಯುವುದು (ಮುಂಬವ್ಯಾ. ४೦). [<— ಪಾರ. ಹಿಂ. ಮರಾ. ಸುಮಾರ್]

**ಸುಮಾರ್ಗ** (ನಾ). ಶುದ್ಧವಾದ ಕ್ರಮ; ಉತ್ತಮವಾದ ಶೈಲಿ: ಕಾಡುವೆನೆಂಬುದಲ್ಲದೆ ಸುಮಾರ್ಗದೊಳಾಗದು ಕಾಟ್ಪೆನೆಂಬುದುಂ ತೋಡುವೆನೆಂಬುದಲ್ಲ ದಿಡಲಾಗದು ನಿಕ್ಕುವ ತೋಟ್ಪೆನೆಂಬುದಂ (ಕವಿರಾ. ೨-೧೦೩); ಹೊನ್ನನ ಹಂಪನ ಸುಜನೋತ್ತಂಸನ ಸುಮಾರ್ಗವಿದಱೊಳ್ ಲಕ್ಷ್ಯಂ (ಶಮದ. ೫ ಪೀಠಿಕೆ). [ಸಂ.]

**ಸುಮಾಲತಿ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ, ಪ್ರತಿಪಾದದಲ್ಲಿ ಎಂಟು ಅಕ್ಷರಗಳನ್ನುಳ್ಳ 'ಅನುಷ್ಟುಭ್' ಛಂದಸ್ಸಿನ ಒಂದು ವೃತ್ತ: ನರಲಗಂಗಳೊಂದಿಯಾದರದೊಳ್ದೊಡಿಂತಿದುಂ ಧರೆಯೊಳಾ ಸುನಾಮದಿಂ ಗುರುಕುಚೇ ಸುಮಾಲತೀ (ಛಂದೋಂಬು. ೨-೯೭).

[ಸಂ. ಸುಮಾಲತೀ]

**ಸುಮಾಸಾರ** (ನಾ). = ಸುಮನೋವರ್ಷ: ಕರೆದರ್ ದೇವರ್ ಸುಮಾಸಾರಮಂ (ವಿಷ್ಣುಪು. ೫-೧-೧೨೭). [ಸಂ.]

**ಸುಮಿತ್ರ** (ನಾ). ೧. ಒಳ್ಳೆಯ ಸ್ನೇಹಿತ. ೨. ಸೂರ್ಯ: 'ಸುಮಿತ್ರೋದಯ' ಪರಾ. [ಸಂ.]

**ಸುಮಿತ್ರೋದಯ** (ನಾ). ಸೂರ್ಯೋದಯ: ಅರಳ್ದುದು ಸುಧನ್ವನ ಮುಖಂ ಸುಮಿತ್ರೋದಯ[ಪಾಠಾಂ. ಮುಖಾಂಬುಜಮಿನೋದಯ]ದ ಕಮಲದಂತೆ (ಜೈಮಿಭಾ. ೧೧-೩೭). [ಸಂ.]

**ಸುಮಿಷ್ಟ** (ಗು). ೧. ಬಹಳ ಪ್ರಿಯವಾದ: ಆ ಅಪರಿಚಿತ ನಿರ್ಜನ್ಯಸ್ಥಳದಲ್ಲಿ ಆ ಸುಮಿಷ್ಟ ಸುಂದರ ಸುಕೋಮಲೆಯ ಆಕಸ್ಮಿಕ ಹಸ್ತಸ್ಪರ್ಶದಿಂದ ಅವನ ಮೈಯೆಲ್ಲ ಥರಗುಟ್ಟಿ ನಡುಗಿತು! (ಅಂಬಿಕ.೧೨೩). (ನಾ). ೨. ಇಂಪು; ಇನಿದು: ಮೃಣ್ಮಯಿಯ ಕೌತುಕಮಯ ಆ ಹಾಸ್ಯಧ್ವನಿಯು ಅದೆಷ್ಟೇ ಇಷ್ಟವಾಗಿದ್ದರೂ ಸುಮಿಷ್ಟವಾಗಿದ್ದರೂ ಅಪೂರ್ವನ ದುರ್ಭಾಗ್ಯಕ್ಕೆ ಅದು ಆಗ ಕಿಂಚಿತ್ ಕ್ಲೇಶದಾಯಕವೇ ಆಗಿತ್ತು (ಇಪ್ರಕ. ೫೭). [ಸಂ.]

**ಸುಮುಖ** (ನಾ). ೧. ಸುಂದರವಾದ ಬಾಯಿ. ೨. ಸುಂದರವಾದ ಮುಖ. ೩. ಒಳ್ಳೆಯ ವಾಕ್ಶಕ್ತಿಯನ್ನು ಹೊಂದಿರುವವನು; ಉತ್ತಮವಾಗ್ಮಿ: "ನುಡಿಯ ಜಾಣಂ ಸುಮುಖನಕ್ಕು" (ಮಂಗರಾ. ೭೧-೨೦). ೪. ಒಳ್ಳೆಯ ಮುಖವನ್ನು ಹೊಂದಿರುವುದು; ಸುಂದರವಾದುದು. ೫. ನಗುಮುಖದಿಂದ ಕೂಡಿದವನು; ಹಸನ್ಮುಖಿ: ಮಾಚಿದೇವನು ಹೊಯ್ದು ನಾದಕ್ಕೆ ಸುಮುಖರಾಗುತ್ತಾಗಳೊಂದೆಸೆ ಸಮತೆಗಟ್ಟಿ . . . ನುಡಿದರು (ಬಸಪು. ೩೭-೪೫); ಗಿರಿಜಾಯೆಯು ಬಂದಾಗ ಸುಮುಖನಾಗಿದ್ದು ಅವಳೊಡನೆ ಬೆಸ್ತರ ಮನೆಯ ಮುಂದೆ ಇದ್ದ ಕೊಳದಲ್ಲಿ ಮೃಣಾಳಿನಿಯನ್ನು ಕಂಡನು (ಬಂಕಿಮ. ೧೮೧). ೬. ಪಂಡಿತ; ವಿದ್ವಾಂಸ. ೭. ಮಗ; ಸುತ. ೮. ಗರುಡ. ೯. ದೊಡ್ಡ ರಸ್ತೆ; ಹೆದ್ದಾರಿ. ೧೦. ನಗೆ; ಹಾಸ. ೧೧. ಬೆನಕ; ಗಣಪತಿ: ಕವಿಮಧುರನ ಮಾತುಗಳೇಂ ಸವಿಯೊ ಮದಪ್ಲವಗವೊರವ ಮಱಿದುಂಬಿಗಳಂ ತವೆ ತೊಲಗಿಸಿ ತನ್ನಯ ಮೊಱಗಿವಿಯಿಂ ಮೊಗೆಮೊಗೆದು ಸುಮುಖನಾಸ್ವಾದಿಸುವಂ (ಧರ್ಮನಾ. ೦-೭೪). "ಗರುಡನಲಿ ಪುತ್ರನಲಿ ಪಣಭೇದದಲಿ ಪಂಡಿತರಲಿ ಸುಮುಖಮೆನಿಕ್ಕು" (ಮಂಗರಾ. ೧೫೩-೬೪); "ತನೂಭವಂ ಸುಪರ್ಣಂ ಪಂಡಿತ ರಾಜವೀಧಿ ಸ್ಮೇರಂ ಸುಮುಖಾಭಿಧಾನಂ" (ನಾನಾರ. ೧೨೭). [ಸಂ.]

**ಸುಮುಖವೃತ್ತಿ** (ನಾ). ಸುಪ್ರಸನ್ನತೆ: ಶ್ರೀಗೆರ್ದವತ್ತುಗೆ ವರವಾಕ್ಕ್ರೀಗೆ ನಿಜಂ ಸುಮುಖವೃತ್ತಿ ತೋಳ್ಕೆಱಗು ಜಯಶ್ರೀಗೊಲವನೀಯೆ ನೆಗಲ್ದಂ ಭೂಗಧಿಪತಿ ಜೈನಜನಮನೋಹರಚರಿತಂ (ಚಂದ್ರಪ್ರ. ೨-೧). [ಸಂ.]

**ಸುಮುಖಿ** (ನಾ). ೧. ಚೆಲುವಾದ ಮುಖವನ್ನುಳ್ಳವಳು; ಸುಂದರಿ. ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ, ಪ್ರತಿಪಾದದಲ್ಲಿ ಹನ್ನೊಂದು ಅಕ್ಷರಗಳುಳ್ಳ 'ತ್ರಿಷ್ಟುಭ್' ಛಂದಸ್ಸಿನ ಒಂದು ವೃತ್ತ: ಸುಮುಖಿ —ನಜಜಲಗಂ (ಛಂದೋಂಬು. ೨-೧೨೪ ಅಡಿಟ).

[ಸಂ. ಸುಮುಖೀ]

**ಸುಮುಹೂರ್ತ** (ನಾ). ಒಳ್ಳೆಯ ಕಾಲ; ಶುಭಗಳಿಗೆ: ಮುತ್ತು ಉದಕವಾಗದು ಉದಕ ಮುತ್ತಿನಲಾಗದು ತತ್ತ್ವ ಘಟಿಸಿದ ಸು[ಪಾಠಾಂ. ಶುಭ]ಮುಹೂರ್ತದಲ್ಲಲ್ಲದೆ ಚಿತ್ತ ವೇದ್ಯವಾಗದು (ಬಸವ. ೮೦೭); ಸುಮುಹೂರ್ತದುದಯದೊಳ್ ನಿಜಕುಮಾರಿಯಂ ಕುಡೆ ವಿವಾಹವಿಭವಂ ಲೋಕೋತ್ತಮವಮಾಗೆ (ಪುಹಾಸೀ. ೫-೨೭); ಅರಸ ಸುಮುಹೂರ್ತದಲಿ ನಿಜಮಂದಿರವ ಹೊಕ್ಕನು (ಕೌಶಿರಾ. ೪೪-೪೮). [ಸಂ.]

**ಸುಮೇರು** (ನಾ). ಶ್ರೇಷ್ಠವಾದ ಮೇರುಪರ್ವತ: "ಮೇರುಃ, ಸುರಪರ್ವತಃ, ಸುಮೇರುಃ- ಈ ಮೂಱು ಮೇರುಪರ್ವತಂ" (ಹಲಾಯು. ೨೨-೧೩೫); ಕೆಲದೊಳ್ ಬೀಳ್ವ ಪತಂಗಾಕಳಿತ ಸುಮೇರು ಪ್ರದೀಪಶಿಖಿಯೊಳ್ ಘನಕಜ್ಜಳಮಂ ಕೊಳಲ್ (ಬಾಧಪು. ೧-೭೭); ಪರ್ವತಗಳಲ್ಲೆಲ್ಲಾ ಸುಮೇರು ಉತ್ಕೃಷ್ಟವಾಗಿರುವಂತೆ . . . ಕಲೆಗಳಲ್ಲೆಲ್ಲಾ ಚಿತ್ರಕಲೆಯು ಅತ್ಯುತ್ತಮವಾದುದು (ಭಾರದ. ೫೨೪). [ಸಂ.]

**ಸುಮೇರುಮೇಖಳೆ** (ನಾ). ಮೇರುಪರ್ವತದ ತಪ್ಪಲು: ನಮೇರುಭೂಜಮಂ ತಳೆದ ಸುಮೇರುಮೇಖಳೆ ಸುಧಾರಸಮಂ ತಳೆದೋಷಧೀಶನಿರ್ಮಳಕಳೆ . . . ಎಂಬ ಲೀಲೆಯಿಂ ತಳೆದಳಿಳಾಧಿರಾಣ್ಮಹಿಳೆಯಂದು ಜನಾರ್ಭಕನಂ ಸ್ವಗರ್ಭದೊಳ್ (ಚಂದ್ರಪ್ರ. ೧೨-೨೮). [ಸಂ. ಸುಮೇರುಮೇಖಲಾ]

**ಸುಮೇಷು** (ನಾ). = ಸುಮನೋಬಾಣ ೧: ಸುಮೇಷುಸೂತ್ರಧಾರಂ ತಳೆದಾಡಿಪೊಂದು ಪೊಸಸೂತ್ರದ ಪುತ್ರಿಕೆಯಂತಿರಾಡಿದಳ್ (ರಾಜಶೇ. ೧೨-೯೫). [ಸಂ.]

**ಸುಮ್ಮಗೆ** (ಅ). ೧. ಮಾತಿಲ್ಲದೆ; ಮೌನವಾಗಿ: ಸುಮ್ಮನೆ — ಸುಮ್ಮಗೆ (ಶಮದ. ೩೦೦ ಪ್ರಯೋ); ಲೋಕಕ್ಕೆ ಧರ್ಮಾಧರ್ಮ ತೋರಿಸಲಿಕ್ಕೆ ಸುಮ್ಮಗೆ ಇದ್ದನು (ತಾತ್ಪನಿ. ೩೨-೧೨); ಕೆಲಕೆಲವು ಪ್ರಸಂಗಗಳಲ್ಲಿ ಮಾತಾಡುವುದನ್ನೇ ಬಿಟ್ಟು ಸುಮ್ಮಗೆ ಕೂಡ್ರಬೇಕು (ಮುಂಬಯಿ. ೪-೪೮). ೨. ಪ್ರತಿಫಲವಿಲ್ಲದೆ; ಉಚಿತವಾಗಿ: ಮರಿಮಗನಾದರೆ ಹರಗೋಲು ಸುಮ್ಮಗೆ ದಾಟಿಸ್ತಾನೇ? (ಗಾದೆ).

ಸುಮ್ಮಸುಮ್ಮಗೆ (ದ್ವಿರುಕ್ತಿ): (೩).

[ಸುಮ್ಮ೦ + - ಅಗೆ. / ತಮಿ. ಚುಮ್ಮ; ಮಲ. ಚುಮ್ಮ; ಕೋಲಾ. ಸುರ್ಮಿ; ನಾಯ್ಕಿ. ಸುರುಮ್]

**ಸುಮ್ಮನ** 'ಸುಮ್ಮಾನ' ನೋ.

**ಸುಮ್ಮನಿಸು** (ಕ್ರಿ). ಸುಮ್ಮನಾಗಿಸು: ದಶಾನನಂ ಸನ್ನೆಯಿಂ ಸಾರಣನ ಸುಮ್ಮನಿಸೆ ನೋಡಿದನು ಮಂಡೋದರಿಯ ಮುಖವನಿಂಗಿತಕಟಾಕ್ಷದಿಂ (ಶ್ರೀರಾಮಾ. ೬೫೭-೬೭೯).

[ಸುಮ್ಮನೆ + - ಇಸು]

**ಸುಮ್ಮನೆ** (ಅ). ೧. = ಸುಮ್ಮಗೆ ೧: ನಿ[ಮ್ಮೊ]ಡತಿಯ ಮನೆ ಯಾವುದು ಘಮ್ಮನೆ ಪೇೞೆಂದು ನೃಪತಿ ಬೆಸಗೊಳಲವಳಿತ್ತುಮ್ಮಹದಿಂ ಕಿವಿಯೆಡೆಯಂ ಸುಮ್ಮನೆ ತೋಱುತ್ತ ಪೋದಳತಿಮುದದಿಂದಂ (ಪುಣ್ಯಾಸ್ರ. ೩-೧೭); ನಾವೀ ಮುನಿಗೆ ಸುಮ್ಮನೆ ಪೋಪೆವೆನೆ ಶಾಪವೀವನು (ಕಂನವಿ. ೫-೧೭). ೨. ಉಚಿತವಾಗಿ; ಬಿಟ್ಟಿಯಾಗಿ: ಸುಮ್ಮನೀ ಸುಕ್ಷೇತ್ರವಾಸಿ ವಿಹರಿಸಿದುವೇ ಅಮ್ಮಮ್ಮ (ಪದ್ಮರಾ. ೧೩-೪೦); ಸುಮ್ಮನೆ ಬರುವುದೆ ಮುಕ್ತಿ (ಪುರಂದ. ೧-೧೪೪ ಪಲ್ಲವಿ); ತನುವ ದಂಡಿಸುತುಗ್ರತಪದೊಳಾಚರಿಸಿ ಸುಮ್ಮನೆ ಸರ್ವಶಾಸ್ತ್ರಗಳ ಪಠಿಸುವರು (ಜನಮು. ೪೩-೨೭). ೩. ಕಾರಣವಿಲ್ಲದೆ; ಅಕಾರಣವಾಗಿ: ಸುಮ್ಮನದು ತಾ ಬಂದು ಮಾಡುವ ಕರ್ಮವಾವುದು (ಸಂಭಪ. ೧೮-೨೭); ಸುಮ್ಮನಪಕೀರ್ತಿಗೊಳಗಾಗಲೇಕೆ (ಜೈಮಿಭಾ. ೧೮-೫೪); ಸುಮ್ಮನೇತಕೆ ಮುನಿಸು? (ಕವಿಪು. ೩೨-೧೯). ೪. ತೆಪ್ಪಗೆ; ನಿಷ್ಕ್ರಿಯವಾಗಿ: ಬ್ರಾಹ್ಮಣನು ಗಂಡನ್ನು ಹುಡುಕಿ ಹುಡುಕಿ ಸಾಕಾಗಿ ಸುಮ್ಮನೆ ಮನೆಯಲ್ಲಿ ಕೂತುಬಿಟ್ಟನು (ಹುಟ್ಟಿಹ. ೬೦).

ಸುಮ್ಮಸುಮ್ಮನೆ, ಸುಮ್ಮಸುಮ್ಮ (ದ್ವಿರುಕ್ತಿ): ಹೊಟ್ಟೆ ತುಂಬಿದ್ದಾಗ್ಯೂ ಸುಮ್ಮಸುಮ್ಮನೆ ಮೃಗಗಳನ್ನು ಕೊಲ್ಲುತ್ತದೆ (ಮುಂಬಯಿ. ೪-೩೭); ಬಯ್ಯಾಡುತ ಸುಮ್ಮಸುಮ್ಮ ಬಿಡ್ಡಿಹನಗೊ ಅಣ್ಣ, ತಮ್ಮ (ಮುಕ್ತಕಂ. ೬೨-೧೫). ಸುಖಾಸುಮ್ಮನೆ, ಸುಖಾಸುಮ್ಮನೆ = ಕಾರಣವಿಲ್ಲದೆ; ನಿಷ್ಕಾರಣವಾಗಿ: ನೀನು ಸುಖಾಸುಮ್ಮನೆ ಯಾಕೆ ಅಳುತ್ತೀ? (ಮಲಮ. ೭೧೦); ಸುಖಾಸುಮ್ಮನೆ ಅಕ್ಕಯ್ಯನಿಗೆ ಬೇಸರವಾಗುವುದು ಬೇಡವಷ್ಟೆ (ಹೊಸಕ್ಕಿ. ೮೦). ಸುಮ್ಮನಾಗು = ಮೌನವಾಗು; ತೆಪ್ಪಗಾಗು: ಎಮ್ಮ ಕಣ್ಗಳ ಚೆಲ್ವನೀಕೆಯ ಕಣ್ಗೆ ಪದ್ಮಜನಿತ್ತನೆಂಬುಮ್ಮಳಂ ಪಿರಿದಾಗೆ ಪುಲ್ಲೆಯ ವಿಂಡುಗಳ್ ಕಡು ಚಿಂತೆಯಿಂ ಸುಮ್ಮನಾಗಿ (ಧರ್ಮನಾಪ್ಪು. ೩-೧೭೩). ಸುಮ್ಮನಿರ್, ಸುಮ್ಮನಿರು, ಸುಮ್ಮಿರು = ಮಾತಾಡದಿರು; ಮೌನವಾಗಿರು: ಸುಮ್ಮನಿರದೆ ಪಾಳಿಯಂ ಪಾಳಿಸುವಂ ಬನ್ನ (ಪಂಚತಂ. ೧೪೪-೧೮); ಅಂಜಿದಂತೆ ಬೆದಱುತಂ ಜಾನಿಸುವಂತೆ ಸುಮ್ಮನಿರುತಂ ಮೆಚ್ಚಿದಂತೆ ನಗುತ್ತಂ ಬೆಚ್ಚಿದಂತೆ ಪರಿತಂದು (ಬಸರ. ೧೦-೧೧೯); ಸುಮ್ಮಿರು ಧೃತಿಗೆಟ್ಟು ಮಾತಾಡಬೇಡ (ಮೋಹತ. ೨೭-೫೭). ಸುಮ್ಮನಿರಿಸು = ಮಾತಾಡದಂತೆ ಮಾಡು; ಮೌನವಾಗಿರಿಸು: ಆತನಂ ಸುಮ್ಮನಿರಿಸಿ ನುಡಿದಂ ಶಂಖನೆಲೆ ಮಹೀಪಾಲ (ಜೈಮಿಭಾ. ೧೨-೩); ಅವರು ಪ್ರಭಾವತಿಯನ್ನು ಗದರಿಸಿಕೊಂಡು ಸುಮ್ಮನಿರಿಸಿದರು (ಚೆಂಗಾಳ್ವ. ೫). [ಸುಮ್ಮ೦ + - ಅನೆ]

**ಸುಮ್ಮಹಿಮ** (ನಾ). ಒಳ್ಳೆಯ ಮಹಿಮೆಯನ್ನು ಪಡೆದಿರುವವನು; ಮಹಿಮಾವಂತ: ಹಮ್ಮಿನ ತಾಯಿಯ ತೋಳ ಬಾಪುರಿಯೊ ಘಮ್ಮನೆ ಘಲ್ಲೆಂಬ ಗೆಜ್ಜೆಯ ಧ್ವನಿಯೊ ಸುಮ್ಮಹಿಮನ ಕಿವಿಯಲ್ಲಿ ಚೌಕುಲಿಯೊ ತಿಮ್ಮರಾಯನಿಟ್ಟ ಸೊಬಗಿನ ಬಗೆಯೊ (ಪುರಂದ. ೪-೪೮-೧). [< ಸಂ. ಸುಮಹಿಮನ್]

**ಸುಮ್ಮಾನ, ಸುಮಾನ, ಸುಮ್ಮನ** (ನಾ). ೧. ಸಂತೋಷ; ಹಿಗ್ಗು: ಕತ್ತಲೆಯಲ್ಲಿ ಗತಿಯ ಕಾಣದೆ ದುಮ್ಮಾನ ನೆಲೆಗೊಂಡಿತ್ತು ನೋಡಾ ಸುಮ್ಮಾನ ಹೋಯಿತ್ತು (ಅವಚಂ. ೪೦-೧೭೧); ಈ ಶಕುನ ಸುಮ್ಮಾನವಿದಕೇನಹುದು ಫಲ (ಕುಮಾಆ. ೧೪-೪); ಸುಕವಿಗಳ ಸುಮ್ಮಾನ ಸೂರಿಪ್ರಕರದಮಲಜ್ಞಾನ (ತೊರರಾ. ೧-೧-೧೧). ೨. ತಮಾಷೆ; ವಿನೋದ: ಏನಲವೊ ರಘುರಾಯರಲಿ ಸುಮ್ಮಾನವೇ ನಿನಗೆ (ತೊರರಾ. ೬-೧೮-೨೫); ಏನಿದಚ್ಚರಿಯಿಂದು ನೆರವಿಗರ್ಬಳಿಕೆ ಸುಮ್ಮಾನದೆ ಮೇಗ ನಿಟ್ಟಿಸುತ (ಕಂನವಿ. ೯-೪೯). ೩. ಅಹಂಕಾರ; ಗರ್ವ; ಕೊಬ್ಬು: ತನಗೀಗ ಬಂದೈಸಿರಿಯ ಸುಮ್ಮಾನದಿಂದ ಬೇಡುವುದೀಗ ಬಲ್ಲವರ ಸಮ್ಮತವೆ (ಸಮ್ಮಕಾ. ೮-೧೩). ೪. ಸಮೃದ್ಧಿ; ಯಥೇಚ್ಛ: ಹುಣಿಸೆಯ ಮರಗಳು ಸುಮ್ಮಾನದೆ ಬೆಳೆದಿಹವು (ಅಂಜಜ. ೨-೪೦). ಸುಮಾನ: ೧. ಶೃಂಗಾರಸಾರದ ಸದನವೋ ಸೊಬಗಿನ ಸುಮಾನದ ಸುಖದ ನೆಲೆವೀಡೋ (ಪ್ರಭುಲೀ. ೩-೨); ಓಂಕಾರವೆಂಬ ಮೇವನೆ ಮೇದು . . . ಶಿವಧ್ಯಾನವೆಂಬ ಮಲುಕಿರಿವುತ್ತ ಸುಮಾನದಿಂದಿರೆ (ಭೈರಸೂ. I, ೭೭). ೨. ತಮ್ಮತನದ ಹೆಮ್ಮೆ ಹುಮ್ಮಸ್ಸು ಸುಮಾನಗಳಿಂದ ಹೃಷ್ಟಪುಷ್ಟರಾಗುವರು (ಬಿಟ್ಟಿಆ. ೩೫-೧೭). ಸುಮ್ಮನ: ೧. ಸುಮ್ಮನದಿಂ ಸತಿಸಹಿತ ಚಂದದಿಂ ನೋಳ್ಪಂ (ಶಾಂತೀಚ. ೧-೮೨); ಅಂತರ್ಗೃಹದೀ ಸುಮ್ಮನದಿ ಮಲಗಿರ್ದ ಕೃಷ್ಣರಾಯಂ ಕೇಳ್ದು (ನವಮೋ. ೧೧-೫೦). [< ಸಂ. ಸುಮನಸ್ ?./ ತೆಲು. ಸುಮಾಳ]

**ಸುಮ್ಮಾನಂಗುಂದು** (ಕ್ರಿ). ಹರ್ಷವಿಲ್ಲದಂತಾಗು; ಸಂತೋಷ ಕುಗ್ಗು: ಸುಮ್ಮಾನಂಗುಂದಿ ದುಮ್ಮಾನಂ ಕವಿದು (ವಾಗೀರ. ದೇ. ೨೮೫-೨೪). [ಸುಮ್ಮಾನ + ಕುಂದು]

**ಸುಮ್ಮಾನಗಾತಿ, ಸುಮಾನಗಾತಿ** (ನಾ). ಒಯ್ಯಾರಿ; ಬೆಡಗಿ: ಆ ರಾಜನನ್ನು ಹಲವಾರು ಸುಮ್ಮಾನಗಾತಿಯರು ಸುತ್ತುವರಿದಿದ್ದರು (ರೂಢಿ). ಸುಮಾನಗಾತಿ: ಸುಗಂಧಮಹಾರಾಜೇಂದ್ರನು ಸುಮಾನಗಾತಿಯರಾದ ಸುಂದರಿಯರಂ ನೋಡುತ (ಸೌಗಂಧಿ. ೪೮೭-೧೭). [ಸುಮ್ಮಾನ + - ಕಾತಿ]

**ಸುಮ್ಮಾನಗೊಳ್ಳು** (ಕ್ರಿ). ಹಿಗ್ಗು; ಸಂತೋಷಿಸು: ನನ್ನ ಈ ನವನಾಗರಿಕ ಪ್ರಶ್ನೆಯನ್ನು ಕೇಳಿ ಸುಮ್ಮಾನಗೊಂಡ ಅವರು ನಕ್ಕು ಉತ್ತರವಿತ್ತರು (ಭಾರದ. ೫೭೪).

[ಸುಮ್ಮಾನ + ಕೊಳ್ಳು$_1$ (< ಕೊಳ್$_1$)]

**ಸುಮ್ಮಾನವಳಿ** (ಕ್ರಿ). = ಸುಮ್ಮಾನಂಗುಂದು: ಒಮ್ಮೆ ನಿನ್ನೊಳಗೆ ಪತಿಯ ಬಗೆ ದುಮ್ಮಾನವಾಗೆ ಸಮ್ಮತಿಸುತ ಮೊದಲು ಸುಮ್ಮಾನವಳಿಯದೆ ಸುಮ್ಮನಿಹುದು ಗುಣ (ಶಾಕುಂತ. ೫೭ ಅಡಿಟ). [ಸುಮ್ಮಾನ + ಅಳಿ$_1$ (< ಅೞಿ$_1$)]

**ಸುಮ್ಮಾನಿ$_1$** (ನಾ). ಸಂತೋಷವಾಗಿರುವವಳು; ಪ್ರಸನ್ನೆ : ಎನ್ನ ಮಗಳಿಗೆಣೆಯಿಲ್ಲ ಸುಮ್ಮಾನಿ ಸನ್ಮಾನಿಯಭಿಮಾನಿ ಕಡುನೀಟ ಕಮಲಾನನೆ (ಹಚಕಾ. ೪-೨೦); ಸೂಸಕದ ಸುಮ್ಮಾನಿ ಅಱಿವಿನ ಪರಮಾಯುಷ್ಯೆ (ಉದ್ಧೃಟ. ೫೫೩ ವ). 'ಸುಮ್ಮಾನೆ' ಪರಾ. [ಸುಮ್ಮಾನ + - ಇ$_2$]

**ಸುಮ್ಮಾನಿ$_2$** (ನಾ). ೧. ಪ್ರಸನ್ನತೆಯಿಂದಿರುವವನು; ಸಂತೋಷದಿಂದಿರುವವನು: ತನ್ನೊಳಗೆ ಹೊಣೆ ಹೊಕ್ಕು ಕುಂಬಳದ ಸೂಚಿಯ ಸುಮ್ಮಾನಿಶರಣನ ನಿಲವ ನೋಡಾ (ಚನ್ನವ.ಕ. ೬೧೯-೧೩೬). ೨. ಅನುಭಾವಿ; ಜ್ಞಾನಿ: ವೇದದ ಕಡೆ ಶಾಸ್ತ್ರದ ಮೊದಲು ಪುರಾಣದ ಸುದ್ದಿಯ ಬಲ್ಲ ಸುಮ್ಮಾನಿಗಳಲ್ಲಿ . . . ಮಹಾಜ್ಞಾನಿ (ಮೋಳಿಮಾ. ೧೦-೩೭). ೩. ಮಾನವಂತ; ಮಾನಿಷ್ಠ: ಅಪ್ಪುವರ ಪುಣ್ಯದ ಸಂಗತಿ ಅರಳೆಲೆಯ ಸುಮ್ಮಾನಿ ಸುಳಿಗುರುಳ್ಗಳಭಿಮಾನಿ ಗುರುತರ ಶಿವಧ್ಯಾನಿ (ಬಸರ. ೧-೧೪೭). [ಸುಮ್ಮಾನ + - ಇ$_3$]

**ಸುಮ್ಮಾನಿಸು** (ಕ್ರಿ). ೧. ಆನಂದಪಡು; ಸಂತೋಷಿಸು: ಸುರರು ಸುಮ್ಮಾನಿಸಿದರು (ತೊರರಾ. ೬-೪-೬೩). ೨. (ಆಲಂ) ಉಕ್ಕು; ಉಬ್ಬು: ಶರಧಿ ಸುಮ್ಮಾನಿಸಿತು (ತೊರರಾ ೬-೩೭-೬೬). [ಸುಮ್ಮಾನ + - ಇಸು$_3$]

**ಸುಮ್ಮಾನೆ** (ನಾ). = ಸುಮ್ಮಾನಿ$_1$: ಮೂಗುತಿಯ ಮುಗುಳ್ಗೆ ಅಂಜನದಮೃತಕ್ಕೆ ತಿಲಕದ ಲಲಿತೆಗೆ ಅರಳೆಲೆಯ ತರಳೆಗೆ ಸೂಸಕದ ಸುಮ್ಮಾನೆಗೆ ರುದ್ರಾಕ್ಷಿಯ ಭದ್ರಾಂಗಿಗೆ ವಿಭೂತಿಯ ವಿಳಾಸನಿಧಿಗೆ (ಗಿರಿಕ. ೩-೯೧ ವ). [ಸುಮ್ಮಾನ + - ಎ$_2$]

**ಸುಯ್$_1$**, ಸುಯಿ$_1$, ಸುಯ್ಯು$_1$ (ಕ್ರಿ). ಸುಯ್ದು (ಭೂತನ್ಯೂ), ಸುಯ್ವ (ಭವಿಕೃ). ೧. ಉಸಿರಾಡು; ಶ್ವಾಸೋಚ್ಛ್ವಾಸಮಾಡು: "ಸುಯ್-ಉಚ್ಛ್ವಾಸೇ" (ಶಮಧಾ); ಸ್ಮರಿಯಿಪಿನಿರ್ಪತ್ತಿರ್ಚಾಸಿರ ಬರಿಸಕ್ಕೊರ್ಮೆ ಮನದೊಳುಣಿಸಂ ಸುಯ್ಯಂ ಸುರಯಿಯ ಕಂಪನೆ ಗೆಲೆ ತತ್ಸುರತತಿ ಪನ್ನೊಂದು ತಿಂಗಳಿಂಗೊರ್ಮೆ ಗಡಂ (ಆದಿಪು. ೬-೧೭); ಪದಿನಾಲ್ಕುವರೆ ತಿಂಗಳಿಗೊರ್ಮೆ ಸುಯ್ವರು (ಶಾಂತೀಚ. ೪-೧೦೦). ೨. (ಚಿಂತೆ, ಆಯಾಸ ಮೊದಲಾದುವುಗಳಿಂದ) ಏದುಸಿರು ಬಿಡು; ನಿಟ್ಟುಸಿರು ಬಿಡು: ಮತ್ತೊಂದೆಸೆಯೊಳ್ ಒರ್ವಂ ವಿರಹಪರಿತಾಪತೊಳ್ ಸ್ವೈರಿಸಲಾಱದೆ ಮದನನಂ ಬಯ್ದು ಬೆಚ್ಚನೆ ಸುಯ್ದು ತನ್ನ ಕೆಳೆಯಂಗಿಂತೆಂದಂ (ಆದಿಪು. ೧೨-೩೨ ವ); ತನ್ನ ಮಡಗಿದ ಕೂಟಂ ನಾಂ ತಿಂಬುದನಱಿದು ಸುಯ್ಯುತ್ತಿರೆ (ಪಂಚತಂ. ೩೦೩-೮); ಅಗ್ಗಳೆಯರನು ಮೂದಲಿಸಿ ಬಯ್ದನು ಸುಯ್ದು ಕುರುರಾಯ (ಕುಮಾದ್ರೋ. ೫-೮೧). ೩. (ಆಲಂ) ಉರಿ; ನೋಯು: ನಿರಂತರಂ ಪೊಳೆವ ಬಾಳುಡಿ ಸುಯ್ವ ನವವ್ರಣಂಗಳೊಳ್ ಪೊಡರ (ಪಂಪಭಾ. ೧೧-೫೮). **ಸುಯಿ$_1$** : ೧. ಪನಿ ಮೂಗಿನೊಳವರೆ ಸುಯಿದನೊರ್ಮೆ ಜಿನ (ಸಾಳ್ವಭಾ. ೩೩-೬೪). ೨. ಅಱಸುತ್ತ ಅಳಲುತ್ತ ಕಾಣದೇ ಸುಯಿ[ಪಾಠಾಂ. ಳಿ]ದು ಬಂದು ಕಂಡೆ ಶರಣರ ಸಂಗದಿಂದ (ಮಹಾದೇ. ಬ. ೨೯-೬೦); ಉಮ್ಮಳಿಸುತಸುಯಿವುತಲಿರ್ದವರಾನು ತಮ್ಮ ನಾನು ಹೇಳುವೆನು (ಧನ್ಯಚ. ೩೪೪). **ಸುಯ್ಯು$_1$** : ೧. ಬೆಚ್ಚನುಸಿರು ಸುಯ್ಯುತಾ (ಕವಿಸೋ. ೨೩-೨). [ದೇ. II ತುಳು. ತುಯಿಲು, ಸುಯಿ, ಸುಯಿಲು, ಸುಯ್ಯು. ಪರ್ಜಿ. ಚುಯ್ಯ್]

**ಸುಯ್$_2$**, ಸುಯಿ$_2$, ಸುಯ್ಯು$_2$ (ನಾ). ೧. ಉಸಿರು; ಉಚ್ಛ್ವಾಸ: ಅವರ ಸುಯ್ಗಳ ಗಾಳಿಯೊಲೊಯ್ಯನೊಯ್ಯನಳ್ಳಾಡುವುದಾಯ್ತು ತತ್ಸುರತಮಂದಿರದುಜ್ವಳ ದೀಪಿಕಾಂಕುರಂ (ಪಂಪಭಾ. ೩-೮೩); ಆ ಪೀತ ಸೋಮರಸಗಂಧೋಪೇತಮೆನಿಪ್ಪ ಸುಯ್ಗೆ ಸುಳಿವಳಿನಿಕರಂ (ಕಾದಂಪೂ. ೨೩೫); ತಣ್ಪುವೆತ್ತ ವಿಜಯಾವತಿದೇವಿಯ ಮೆಯ್ಗೆ ಸುಯ್ಗೆ ಸಂಭ್ರಮದೊಳೆ ಬರ್ಪ ಷಟ್ಪದಸಮಾಜದ ಝಂಕೃತ ಮಂಗಳಾನಕಪ್ರಮುದಿತನಾದಮಾಗಿರ (ಕುಸುಮಾ. ೫-೧೨೭). ೨. ಚಿಂತೆ, ಆಯಾಸ ಮೊದಲಾದುವುಗಳಿಂದ ಬಿಡುವ ಉಸಿರು; ನಿಟ್ಟುಸಿರು: ಮನ್ಮಥಶಿಖಿಜ್ವಾಲಾಳಿ ತಳ್ತೀಱಿ ಬೇಯದೆ ಕಾಯ್ದೋಡಿನ ಜೋಳದಂತಲರ್ದೊಡಾ ಕಂಪುಂ ಮನಸ್ತಾಪಮುಂ ಪುದಿದೆತ್ತಂ ಬರೆ ಸುಯ್ ಪೊಡೆದಟ್ಟು ಬಿಸಿದುಂ ಕಮ್ಮಿತ್ತುಮಾಯ್ತೋಪಳಾ (ಕಾವ್ಯಸಾ. ೫೮೮ ಶೂದ್ರಕ); ಮುಖೇಂದು ಬಿಗುರ್ತಿರೆ ಸುಯ್ಯ ಬೆಂಕೆಯುಂ ನಿಡುಪಮಳುಂಬಮಪ್ಪಿನೆಗಂ (ಅಜಿಪು. ೬-೧೨೦); ಶ್ರಮಶ್ರಾಂತ್ಯಾಕ್ರಾಂತನಾಗಿ ಮೇಗುಸಿರ್ವಟ್ಟು ಸುಯ್ಯುಂ (ಪಂಚತಂ. ೭೩-೫). **ಸುಯಿ$_2$** : ೧. ಭೀಮಸೇನನ ದಂಡಿಯನು ದಟ್ಟಯಿಸೆ ಸುಯಿ ದಳ್ಳುರಿಯ ಚೂಣಿಯಲಿ (ಕುಮಾಗ. ೮-೨೨); ಸೋಕು ಸುಯಿ ನುಡಿ ನೋಟಮನಮೇಕೈಕಪರುಷಗಳಾಗಿ ವೇದಿಸಿ (ಪ್ರಭಲೀ. ೯-೨೯); ಸಿರಿಮೊಗವು ಬಾಡಿದೆ ಕಟಾಕ್ಷದೊಳರಳಿ ಸರಳೆಡೆಯಾಡದಿವೆ ಸುಯಿ ಸರಳವಾಗಿರೆ (ಸಾಳ್ವಭಾ. ೩-೧೮). **ಸುಯ್ಯು$_2$** : ೧. ಸೋಹಂ ಎಂದು ಸಾರುವ ಸುಯ್ಯನ್ನು ನಂಬದಾದನು (ನಾಡೋಜ. ೩೭೮).

ಸುಯ್ದಾಡು = ಆಯಾಸಗೊಳ್ಳು; ಸುಸ್ತಾಗು: ಎಲ್ಲೆಲ್ಲೂ ಸುಳಿದಾಡಿ ಸುಯ್ದಾಡಿ ಬಂದೆ (ಕರುಶ್ರಾ. ೨-೧೨). [< ಸುಯ್$_1$ / ತುಳು. ಸುಯ್ಯು]

**ಸುಯ್‌ನಡುಗು** (ಕ್ರಿ). ಉಸಿರು ನಡುಗು; ಶ್ವಾಸ ಕಂಪಿತವಾಗು: ಆ ತ್ರಿಜಟೆ ಸುಯ್ ನಡುಗುತಾಕೆಯಂ ಸಂತಯ್ಸುತಿರೆ (ಶ್ರೀರಾಮಾ. ೬೨೬-೨೪೬). [ಸುಯ್$_2$ + ನಡುಗು$_1$]

**ಸುಯಿ$_1$** 'ಸುಯ್$_1$' ನೋ.

**ಸುಯಿ$_2$** 'ಸುಯ್$_2$' ನೋ.

**ಸುಯಿಗಂಪು** 'ಸುಯ್ಗಂಪು' ನೋ.

**ಸುಯಿದಾನ**, ಸುಯಿಧಾನ, ಸುಯ್ದಾನ, ಸುವಿದಾನ (ನಾ). ೧. ಕಾವಲು ಕಾಪು; ರಕ್ಷಣೆ: ಶಿವಸಾಮರ್ಥ್ಯಮಂ ನೋಡದೆ ಸೂರುಳಂ ಸುಯಿದಾನಂ ಮಾಡದೆ (ನಂಬಿರ. ೧೪-೮೯); ಭಗೀರಥನಂದನರ ಸುಯಿದಾನ[ಪಾಠಾಂ. ಸುಯ್ದಾನ] ನಿನ್ನದು ಮುಂದನಱಿದಾಹವವನೆಸಗುವುದಣುಗ(ತೊರರಾ. ೬-೩೫-೧೭). ೨. ಎಚ್ಚರಿಕೆ; ಜಾಗರೂಕತೆ: ಭೈರವದೇವ ತಮ್ಮ ಶೀಲಕ್ಕೆ ತಿಲವ ಗಾಣವನಾಡುತ್ತಾ ಸುಯಿದಾನದಿಂದಿರೆ (ಭೈರಸೂ. I, ೮). ೩. ಕಾವಲುಗಾರ; ಪಹರೆಯವನು: ಪೂವಡಿಗರಂ ಬಾಗಿಲವರಂ ಸುಯಿದಾ[ಪಾಠಾಂ. ಧಾ] ನರಂ ಹಲವಾಳುಗಳನಾಯ್ದು (ಬಸಪು. ೧೭-೧೩). ೪. [ವೀಶೈ] ಗುರು, ಲಿಂಗ, ಜಂಗಮರಿಗೆ ಅರ್ಪಿಸುವ ನೈವೇದ್ಯ: "ಸುಯಿದಾನ – ನೈವೇದ್ಯ ಪದಾರ್ಥಗಳು" (ಶರಸಾ. ೨೪-೭); ನೀನಿಕ್ಕಿದ ಸುಯಿದಾನವನೊಲ್ಲದೆ ಬೇಱೆ ಬಯಸಿದೊಡೆಂತಹುದಯ್ಯ (ಮಹಾದೇ. ಬ. ೪೮-೧೧೩); ಶ್ವಪಚಯ್ಯನೇಕಾಂತ ದಡವಿಯೊಳಗೊಬ್ಬನೇ ತಪನನೇತ್ರಂಗೆ ಸುಯಿದಾ[ಪಾಠಾ. ಧಾ]ನ ಬೋನವ ಮಾಡೆ (ಲಶಿಚಂ. ೩೭-೧೬೦). **ಸುಯಿಧಾನ** : ೧. ಸೌಕುಮಾರ್ಯಮಂ ಸುಯಿಧಾನಂ ಮಾಳ್ಪಂತೆ ಸೊಬಗಂ ಸಂವರಿಸುವಂತೆ . . . ಪಾರ್ವತಿಯಂ ಸಲಹುತ್ತುಂ (ಗಿರಿಕ. ೩-೧೧೯ ವ); ರಾಯನ ಕೆಲಬಲದ ಸುಯಿಧಾನದಲಿ ರಿಪುವಳಯಧೂಳೀಪಟನು ಹೊಕ್ಕನು ರಣವನು (ಕುಮಾದ್ರೋ. ೪-೧೪). ೨. ಶುಚಿರುಚಿಯಪ್ಪಂತೆ ಸುಯಿಧಾನದೊಳ್ಕೆದೆ ಪಚನಗ್ಗೆವುದು ಭಾವೆಯರು (ಹದಿಬ. ೮-೨೭). ೪. ಹೂಣೆದಾತನ ಮನೆಯ ಹೊಕ್ಕು ಸುಯಿಧಾನವ ಕೊಂಡರೆ ಕುಂಭೀಪಾಕ ನಾಯಕನರಕ ತಪ್ಪದಯ್ಯ (ಆದವ. ೧೦-೧೮). ೫. ಮನಶ್ಶಾಂತಿ; ಚಿತ್ತಪ್ರಶಾಂತತೆ (?): ಸರ್ವಜೀವದೊಳಗೆ ಚೇತನಾತ್ಮಕ ಶಿವನೆಂದು ಮಾಡುವದು ಭೂತದೈವಕ್ಕಿಕ್ಕುವುದು ಸುಯಿಧಾನದ ಕೇಡು (ಚನ್ನವ. ೫೩-೧); ಚಿತ್ತದ ದೃಢನಿಷ್ಠೆಯ ಪೂಜೆಗಳಂ ಮಾಡುವದತಿ ಸುಯಿಧಾ[ಪಾಠಾಂ. ದಾ]ನಗಳಿಂದಂ ಕೂಡೆ ಭವಿಯ ತ್ಯಜಿಸುವುದಱಿಂದ (ದೀಕ್ಷಾಬೋ. ೭೭-೨೯). **ಸುಯ್ದಾನ** : ೧. ಕರೆದು ಸಾತ್ಯಕಿ ಭೀಮನನು ನೃಪವರನ ಸುಯ್ದಾನದಲಿ ನಿಲಿಸಿದನು (ಕುಮಾದ್ರೋ. ೯-೩೪); ಆಪ್ತರ್ಗೆ ರಣದ ಸುಯ್ದಾನಮಂ ಪೇಳ್ದು ನಿಜಬಲಸಹಿತ ಪಾರ್ಥಸುತನನುವಾದನು (ಜೈಮಿಭಾ. ೨೪-೨೯). ೨. ನಾನೆ ಸುಯ್ದಾನದಿಂದಂ ಬಂದು ಕಳುಪುವೆಂ (ಇಹರ. ದೇ. ೪೦-೧); ಮೋಸವೋಗದಿರೆನುತ್ತಡಿಗಡಿಗೆ ಸುಯ್ದಾನವಂ ಮಾಳ್ಪ ಭಟರು (ಚಿಬಪು. ೪೨-೧೦). ೬. (?): ಶ್ರೀಕರದ ತತ್ಸರೋವರವಮನೀಕ್ಷಿಸಿ . . . ತನ್ನ ಪ್ರತಿಬಿಂಬ ಶಶಿಯಕಾಂತ ಕಲ್ಗಳೊಳು ಮಾರ್ಪೊಳೆಯಲವನು ನೋಡುತ್ತ ಸುಯ್ದಾನದೊಡನೇ (ನವಮೋ. ೮-೩೫). **ಸುವಿದಾನ** : (೩). [< ಸಂ. ಸುವಿಧಾನ]

**ಸುಯಿದಾನಿ**, ಸುಯಿಧಾನಿ, ಸುಯ್ದಾನಿ, ಸುವಿದಾನಿ (ನಾ). ಎಚ್ಚರಿಕೆಯಿಂದಿರುವವನು; ಜಾಗರೂಕ: ಗೆಯ್ಯಬಲ್ಲಹ ಕಮ್ಮತಿಗನಲ್ಲಯ್ಯನತಿ ಸುಯಿದಾ[ಪಾಠಾಂ. ಧಾ]ನಿ ತಾ ಕಕ್ಕಯ್ಯನಂತರ್ವರ್ತಿ ಸಾಮಂತಂ ಮಲಯರಾಜಂ (ಬಸಪು. ೯-೪೭). **ಸುಯಿಧಾನಿ**: ಸರ್ವಸುಯಿಧಾನಿ ಎಂದೆನಿಸಿಕೊಳಬಲ್ಲಡೆ ಬಂದ ಕಾಮಕ್ರೋಧವ ಲಿಂಗಾರ್ಪಿತವ ಮಾಡಬೇಕು (ಅವಚಂ. ೩೯-೧೭೮). **ಸುಯ್ದಾನಿ**: ಕಮಳದ ಪರಿಮಳ ನಿಳಯನು ಸುಯ್ದಾನಿಯಾದ ಶರಣ (ಅವಚಂ. ೨೮೭-೧೨೯); ಗುಣಕಮಳ

ಕುಸುಮ ಪರಿಮಳನಿಳಯನು ಸುಳುಹು ಸುಯ್ದಾನಿ ಮಹಿಮ ಶರಣ (ಶಿವಗೀ. ೫೨-೨೫೦); ಕುಲಛಲ ಮೊದಲಾದಷ್ಟಮದಗಳ ನೀಗಿದ ಸುಯ್ದಾನಿ (ಮೈಲಾರ. ೧೪೭-೪).

**ಸುವಿದಾನಿ:** (೩). [ಸುಯಿದಾನ + - ಇ₁]

**ಸುಯಿಧಾನ** 'ಸುಯಿದಾನ' ನೋ.

**ಸುಯಿಧಾನಿ** 'ಸುಯಿದಾನಿ' ನೋ.

**ಸುಯಿಲ್, ಸುಯಿಲು** (ನಾ). ೧. ಉಸಿರು; ಶ್ವಾಸ: ಕೋಕಿಲಂ ಧ್ವನಿಗೆ ತಂಬೆಲರು ಸುಯಿಲ್ಗೊಪ್ಪುವ ಗಿಳಿ ನುಡಿಗೆ ಲತೆ ನಡುಗೆ . . . ತಳಿರು ಪದತಳಕೆ ಹುರುಡಿಸುವ ರೂಪಂ ತಾಳ್ದ ವನಿತೆಯರು ಸುಳಿದರು (ಹಚಕಾ. ೪-೪೨). **ಸುಯಿಲು:** ೨. (ಕೋಪ, ದುಃಖ ಮುಂತಾದುವುಗಳನ್ನು ವ್ಯಕ್ತಪಡಿಸುವ) ನಿಡಿದಾದ ಉಸಿರು; ನಿಟ್ಟುಸಿರು: ಮೊಗದ ಹೊಗರವಗಡಿಸೆ ಸುಯಿಲಲಿ ಹೊಗೆಯ ಹೊದೆಯಂಕುರಿಸೆ ಬಿಡುಗಣ್ಣುಗಳೊಳೊಕ್ಕುದು ಕೆಂಪು (ಕುಮಾಭಿ. ೬-೨೦); ನಿಜಾಂತಃಕರಣದತುಳವ್ಯಥೆಯ ಸುಯಿಲಿ [ಪಾಠಾಂ. ಸುಯ್ಲಿ]ನ ಶಿರದ ತೂಗಿನ ತಳ್ವವಾಚಿನಲಳಲಿದಳು ಕಾಂತೆ (ಕೊರರಾ. ೨-೩-೪೦); ಸನ್ನೆಯ ನಸುವಾತುಗಳ ನೆಗಳ್ದ ಸುಯಿಲ ನಾಚಿಕೆಯ ಗುಹನೆಸುಗೆಯಿಂ ಸೀಳ್ದ ಮೆಯ್ಗಳ ಖಳರ್ ಬಂದು (ಚಿಬಪು. ೫೦-೩); ಹಿಡಿದೊತ್ತಿ ತಡೆದಿಹ ಸುಯಿಲನು ಕಿವಿಗೊಡುತ (ಗಾಥಾಸ. ೭-೨೭). 'ಸುಯ್ಯಲ್' ಪರಾ. [ಸುಯ್₁ + - ಇಲ್₃]

**ಸುಯಿಲು** 'ಸುಯಿಲ್' ನೋ.

**ಸುಯಿಲ್ಗಂಪು** (ನಾ). ಉಸಿರಿನ ಸುಗಂಧ: ಕರಕಮಲದಿಂ ಪುಷ್ಪವಿರದೆಯೇರಿಸಿ ಸುಯಿಲ್ಗಂಪಿನುರೆ ಧೂಪ ನೇತ್ರಜ್ಯೋತಿಯಿಂ ಬೆಳಗುತೆ (ನವಮೋ. ೨೦-೬೨).
[ಸುಯಿಲ್ + ಕಂಪು]

**ಸುಯಿಲ್ಗರೆ** (ಕ್ರಿ). ನಿಟ್ಟುಸಿರು ಬಿಡು: ನೊಂದು ನೋಯದಲಿ ಮೊಗಗಂಟಿಕ್ಕಿ ತಿರುಹುತ್ತ ಸುಯಿಲ್ಗರೆವುತಿರಲಾಗಳು (ನವಮೋ. ೧೫-೧೭). [ಸುಯಿಲ್ + ಕರೆ₁]

**ಸುಯೋಗ** (ನಾ). ಒಳ್ಳೆಯ ಯೋಗ; ಅದೃಷ್ಟ: ಆರಂಭದಲ್ಲಿಯೇ ಸೂತ್ರಗಳ ಮತ್ತು ಲಕ್ಷಣಗಳ . . . ಗೋಜಿಗೆ ಹೋಗಬೇಕಾಗಿಲ್ಲವೆನ್ನುವುದು ನಮ್ಮ ಸುಯೋಗ (ಸಾಹಿಪ್ರ. ೬೨); ತೊಳೆ ಜೇನುಗಳ ಸವಿಯ ಸುಯೋಗಪ್ರಾಪ್ತಿಗಾಗಿ ಹಾತೊರೆದರು (ಹಸುಹೊ. ೫೧). [ಸಂ.]

**ಸುಯೋಧನ** (ನಾ). ೧. ಚೆನ್ನಾಗಿ ಯುದ್ಧಮಾಡುವವನು. ೨. ಧೃತರಾಷ್ಟ್ರನ ಹಿರಿಯ ಮಗ; ದುರ್ಯೋಧನ: ಗುರುಗಳಂ ಕುಲವೃದ್ಧರನಾಜಿಗುಯ್ದು ಕೆಮ್ಮಗೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ (ಪಂಪಭಾ. ೧೧-೧೭); ಸುಯೋಧನವಸುಮತೀಶನ ವೈಭವದಲಾಸ್ಥಾನ ಚೆಲುವಾಯ್ತು (ಕುಮಾಉ. ೮-೩೪).
[ಸಂ.]

**ಸುಯ್ಗಂಪು, ಸುಯಿಗಂಪು** (ನಾ). ಉಸಿರಿನ ಸುವಾಸನೆ; ಶ್ವಾಸೋಚ್ಛ್ವಾಸದ ಸುಗಂಧ: ಅಧರರಸದೆ ಸುಯ್ಗಂಪಿಂದಾಗಳ್ ಕಿವಿ ಮೆಯ್ಕಣ್ನಾಲಗೆ ವಿಳಸನ್ನಾಸಿಕಮನಲ್ಲಿ ತಣಿಪುತಿರ್ದಳ್ (ಗಿರಿಕ. ೪-೧೫೧); ನಳಿದೋಳ್ಗಳ್ ಶಾಖೆಯಂ . . . ಕುಚಂಗಳ್ ಫಲಮಂ ಸುಯ್ಗಂಪು ಕಂಪಂ ಮಿಗೆ ಸೊಗಯಿಸಿತು (ಪುಷ್ಪಪು. ೭-೨೯); ಅರವ ಚಂದನಕೆ ನಟುಸುಯ್ಗಂಪಿಗೆಱಪಳಿಗಳುರವಣೆಗೆ ಸತಿ ರನ್ನದೊಡದೋಳನೆತ್ತುತಿರೆ (ಭಾವಚಿಂ. ೨-೧೧). **ಸುಯಿಗಂಪು:** ಸಂಪಗೆಯರಲ್ಗಳ ಮಾಱಲೆಂದೊರ್ವಳು ಕೆಂಪಿನಿಂದಿರುತಿರಲವಳ ಸೊಂಪಿನ ನಾಸಾಪುಟದ ನಸು ಸುಯಿಗಂಪು ಸಂಪಗೆ ಪೂಗಂಪ ನಗಲು (ಅಂಜಚ. ೩-೫೫). [ಸುಯ್₂ + ಕಂಪು]

**ಸುಯ್ಗರೆ₁** (ಕ್ರಿ). ನಿಟ್ಟುಸಿರು ಬಿಡು: ಮಡದಿಯರ ಮೋಹರವೆ ಪೇಳೆಂದು ಚಿಂತೆಯಿಮ್ಮಡಿಯಾಗಿ ಸುಯ್ಗರೆವುತಿರಲು ಆಳಿಯರೆಲ್ಲ ಬೆಱಗಾಗಿ ಚಿಂತಿಸುತಿರೆ (ಪ್ರಾಭರಾ. ೬-೫೦). [ಸುಯ್₂ + ಕರೆ₁]

**ಸುಯ್ಗರೆ₂** (ನಾ). ಉಸುರಿನ ಸದ್ದು: ಅವಳ ಕಾಲ ಹೆಜ್ಜೆ, ಬಳೆಯ ಸಪ್ಪಳ, ಬಾಯಿಯ ಸುಯ್ಗರೆ ಎಲ್ಲವೂ ಕೇಳದಾದವು (ಕನಕ. ೧೧೭). [ಸುಯ್₂ + ಕರೆ₅]

**ಸುಯ್ತ** (ನಾ). ಉಸಿರು; ಶ್ವಾಸ: ಸುಯ್ತಂ, ಸುಯ್ತಂಗಳ್ (ಶಬ್ದಾನು. ೫೩ ಪ್ರಯೋ).
[ಸುಯ್₂ + - ತ₂]

**ಸುಯ್ದನಿ** (ನಾ). ಸುಯ್ ಎಂಬ ಧ್ವನಿ: ತೆರೆಯೆದ್ದು ತೆರೆ ಬಿದ್ದು ಬತ್ತ ಬಿತ್ತರ ಗದ್ದೆ ತೆನೆವುಲ್ಲೆ ತೆನೆಯುಜ್ಜುವುದು ಸುಯ್ದನಿಯ ಸೂಸಿ (ಚಿತ್ರಾಂಗ. ೫೩-೧೪೩೪).
[ಸುಯ್₂ + ದನಿ₁]

**ಸುಯ್ದಾನ** 'ಸುಯಿದಾನ' ನೋ.

**ಸುಯ್ದಾನಿ** 'ಸುಯಿದಾನಿ' ನೋ.

**ಸುಯ್ಯು** 'ಸುಯ್₁' ಪರಾ.

**ಸುಯ್ದೋರು** (ಕ್ರಿ). ಶಬ್ದ ಕೇಳು; ದನಿಹೊಮ್ಮು: ಕಣ್ ತೊಯ್ದುದಿರ್ಪಿನಿಂ ಸುಯ್ದೋರಿದತ್ತುಸಿರು (ಚಿತ್ರಾಂಗ. ೩೮-೧೦೩೩). [ಸುಯ್₂ + ತೋರು (< ತೋಱು)]

**ಸುಯ್ಪನಿ** (ನಾ). ನಿಟ್ಟುಸಿರಿನಿಂದ ಕೂಡಿದ ಕಣ್ಣೀರು; ಶೋಕಾಶ್ರು: ಸುಯ್ಪನಿವೆರಸಿ ಬೀಳ್ಕೊಂಡರೊರ್ವರೊರ್ವರನಳಲ್‌ವೆಂಕೆಯಿಂ ದಹಿಸಿ (ಶ್ರೀರಾಪ. ೧೭೪-೫೮೨). [ಸುಯ್₂ + ಪನಿ₂]

**ಸುಯ್ಪು** (ನಾ). ಉಸಿರು; ಶ್ವಾಸ: ಸುಯ್ಪನುಬ್ಬೇಗದಿಂ ದಾಶರಥಿ: "ನೋಳ್ಪ ಮೆಲ್ಲಿರ್ಪುದಾ ಬೀಳ್ಕೆ!" (ಶ್ರೀರಾಮಾ. ೨೯೪-೨೬೦). [ಸುಯ್₂ + - ಪು]

**ಸುಯ್ಯತಾಣ** (ನಾ). ಕಸೂತಿಬಟ್ಟೆ; ಅಲಂಕಾರದ ವಸ್ತ್ರವಿಶೇಷ: ಒಳ ದೋರಣಮಾಯ್ತು ಹಾರದ ಪಚ್ಚೆಸಾರದ ಮಾಲೆ ಸೌಧಾಳಿಯೊಳ್ನುಡಿಯಾಯ್ತು ಚೀನದ ಸುಯ್ಯತಾಣದ ಪಟ್ಟೆ ಹರ್ಮ್ಯಾಳಿದಪ್ಪದೆ ರಯ್ಯಮಾಯ್ತಸೆವಾಟಪಾಟದ ಗೀತಿ . . . ತತ್ಪುರಮಧ್ಯದೊಳ್ (ಪಂಪಭಾ. ೧೪-೧೫). **P** ಇದು 'ಸೂಯಿಯಾಣ' ಎಂದಿರಬಹುದು. [< ಸಂ. ಸೂಚೀಯಾನ?]

**ಸುಯ್ಯಲ್, ಸುಯ್ಯಲು, ಸುಯ್ಲು** (ನಾ). ೧. ಉಸಿರು; ಶ್ವಾಸ: ಸೂಳೇಱ ಸುಯ್ಯಲ್ ಚಲ್ಲಾಟಂಬೆತ್ತು ಕಾಂತಾಮಣಿಯುಗುರಿಸಿದಳ್ ತೈಲಮಂ ಬಾಲೆಗಾಗಳ್ (ಉದ್ಭಟ. ೮-೧೫). **ಸುಯ್ಯಲು :** ೧. ಸುಪ್ಪಿಗೆ ಸುಯ್ಯಲ ತಂದವಳು ನಮ ಕೃಷ್ಣನ ಹೃದಯದಿ ನಿಂದವಳು (ಗೋಕುನಿ. ,೪೨-೨೫). ೨. (ಆಯಾಸ, ದುಃಖಗಳಿಂದ ಬಿಡುವ) ನಿಡಿದಾದ ಉಸಿರು; ನಿಟ್ಟುಸಿರು: ಅವರು ನಗುವ ನಗೆಯೊಂದೇ ಬಗೆ, ದುಃಖವುಂಟಾದರೆ ಒಂದೇ ತರದ ಅಳು, ಸುಯ್ಯಲು (ರಾಮಾನ. ೧೧೪). **ಸುಯ್ಲು:** ೧. ತನುವಿನ ಕಾಯ್ಪಂ ಬೇಟದ ಮನಮಂ ಸುಯ್ಲಂ ನೆಗಳ್ಪುವರ್ಕಪಟತೆಯಿಂ (ಮದಪಿ. ೧೧-೨೦); ಉನ್ನತಚಿಂತೆ ನಟ್ಟು ನಿಲೆ ಚಿತ್ತದೊಳಾಕುಳೆ ಸುಯ್ದು ಸುಯ್ಲಿನಿಂ ತನ್ನ ಕರಾಗ್ರಪಂಕಜಮನೆಯ್ದೆ ಮುರುಂಟಿಸುತಿರ್ಪಳಾವಗಂ (ಬಾಥಪು. ೩-೮). ೨. ಸುಯ್ಲು ದುಗುಡದ ಜಾಳಿಗೆ (ಕುಮಾಅ. ೭೦೧. ೨೦-೧); ಪ್ರಾಣಕಾಂತರ ತಳ್ಕೆ ಸಡಿಲಿ ದುಃಖದಿಂದ ನಿಡುಸುಯ್ಯ ಕಾಮಿನಿಯರ ಸುಯ್ಲಿಂ ಸೀದಂತೆ ಬೆಳ್ದಿಂಗಳು ತಗ್ಗಿತು (ವಚಕಾ. ೬೩). ೩. (ರೋಷ ಅಥವಾ ಕೋಪದಿಂದ) ಬುಸುಗುಟ್ಟುವುದು: ಉರಿದವನಗ್ಗದ ರೋಷದಲಿ ಹೊಗೆ ಹೊರಳಿಗಟ್ಟಿತು ಸುಯ್ಲಿನಲಿ ಸಂವರಿಸಿಕೊಳು ಕೌಂತೇಯ ಎನುತಚ್ಚನು (ಕುಮಾಶ. ೨-೩೦). ೪. ದನಿ; ಶಬ್ದ: ಮೆಲುಗಾಳಿಯ ಸುಯ್ಲಿಗೆ ಈ ಕಣಿವೆ, ಬೆಟ್ಟಗಳೆಲ್ಲ ಸೇರಿ ಹಿರಿಯ ದೇಗುಲವೊಂದರ ಗರ್ಭಗುಡಿಯಂತೆ ಕಾಣಿಸುತ್ತದ (ಕುಡಿಕೊ. ೮೭). [ಸುಯ್₁ + - ಅಲ್₂]

**ಸುಯ್ಯಲು** 'ಸುಯ್ಯಲ್' ನೋ.

**ಸುಯ್ಯಾಣ** 'ಸೂಯಿಯಾಣ' ನೋ.

**ಸುಯ್ಯಾಣವೆಸ** (ನಾ). ಕಸೂತಿಕೆಲಸ: ಸುಯ್ಯಾ[ಪಾಠಾಂ. ಯ್ಯ]ಣವೆಸದ ಕತ್ತರಿವೆಸದ ಮಣಿವೆಸದ ಮೇಲ್ಗಟ್ಟಿನೊಳಂ (ವರ್ಧಪು. ೭-೩೭).
[ಸುಯ್ಯಾಣ (< ಸೂಯಿಯಾಣ) + ಬೆಸ₁]

**ಸುಯ್ಯಾಱು** (ಕ್ರಿ). 'ಸುಯ್' ಎಂಬ ಧ್ವನಿ ತಗ್ಗು,—ಕಡಮೆಯಾಗು: ತಿವಳಿಯೊಳ್ ಮಿಡುಕಾಱದ ಮಣ್ಣೆಂದಿಕ್ಕಿದ ಲಂಡದ ಬೆಂಕೆಯಿಂ ಕವಿವ ಕಿಟ್ಟಮದದೊಳ್ನೊನಲೊಳ್ ಸುಯ್ಯಾಱದ ಪೆರ್ನೊರೆಯಿಂ ತಗುಳ್ದ ವಿಹತಾಂಬುವ ಬಲ್ಪೊನಲಿಂದಿರ್ಪಾಱದ ಬಟ್ಟೆಯೊಳೊಕ್ಕ ಪಲ್ಲವನಿಕಾಯದಿನಂದಱಿವಂ ಕಾಡಾನೆಗಳಾಗಡೆ ಪೋದುದಂ (ಕಾವ್ಯಾವ. ೬೨೭). [ಸುಯ್₂ + ಆಱು₁]

**ಸುಯ್ಯು₁** 'ಸುಯ್₁' ನೋ.

**ಸುಯ್ಯು₂** 'ಸುಯ್₂' ನೋ.

**ಸುಯ್ಯೆಲರ್** (ನಾ). ೧. ಉಸಿರಿನ ಗಾಳಿ: ಸುಯ್ಯೆಲರಿಂ ಪಾಱಿದಪುವೆನಿಪ

ದುಕೂಲಂಗಳಂ ಪಿಡಿದು ನೆಲವನುಗ್ಗಡಿಪ ಕೇಯೂರಕನುಮೊಡವರೆ (ಕಾದಂಬ. ೧೦೫). ೨. ನಿಟ್ಟುಸಿರಿನ ಗಾಳಿ: ಮಯ್ಯ ಬಿಸುಪಿಂ ಸುಯ್ಯೆಲರ ಬೆಂಕೆಯಿಂ ವನಂ ಕೊರಗುತ್ತಮಿರೆ (ನಂಬರ. ೧೨-೧೧೯); ನೀಳ್ದೊಗೆತರ್ಪ ಸುಯ್ಯೆಲರ್ಗುಡಿದ ಗಾಳಿ ಸೋಂಕಿದವರಂ ಸುಡುತಿರ್ಪುದು (ಕಬ್ಬಿಗ. ೩೧೪); ಅಮರ್ದಪ್ಪಿ ಚುಂಬಿಸಿ ನೆರೆಯೆ ಬೆಮರ್ವನಿ ತೊಟ್ಟಿಟ್ಟು ಸು[ಪಾಠಾಂ. ಸೂ]ಯ್ಯೆಲರುಬ್ಬಿತೆಂದಮಮ ಕೋವಿದರಾಡಬಹುದೆ (ಭರಚ. ೧೦-೧೦೮). [ಸುಯ್$_2$ + ಎಲರ್]

**ಸುಯ್ಯೆಲರ್ಗಂಪು** (ನಾ). = ಸುಯ್ಗಂಪು: ಉಣ್ಮುವ ಸುಯ್ಯೆಲರ್ಗಂಪುಗಳ್ ದಳಂಗಳನಧಿವಾಸಿಸುತ್ತುಮಿರೆ ಘಟ್ಟಿಮಗುಳ್ಚುವುದಂಗನಾಜನಂ (ಚಂದ್ರಪ್ರ. ೧-೧೩೦).

[ಸುಯ್ಯೆಲರ್ + ಕಂಪು]

**ಸುಯ್ದಾಡು** (ಕ್ರಿ). ಉಸಿರಾಡು; ಶ್ವಾಸೋಚ್ಛ್ವಾಸ ಮಾಡು: ಜವಹುರದ ಪುಟುಗಳ್ಗೆ ಸುಯ್ದಾಡುವ ಜೀವದ ಗಾಳಿಯಕ್ಕುಂ (ರಾಮಾಶ್ವ. ೮೬-೧೯); (ಸುಯ್ದಾಡದೆ) ಹಾಗೇಕಾಯ್ತು? (ಚಟ್ಟಿಅ. ೬೮-೭). [ಸುಯ್ದು (< ಸುಯ್ಯಲ್) + ಆಡು$_1$]

**ಸುಯ್ದಿಡು** (ಕ್ರಿ). 'ಸುಯ್' ಎಂಬ ದನಿಮಾಡು: ಸುಯ್ದಿಡುತಿಹ ಸರ್ಪ ಸುಮ್ಮನಾದುದ ಕಂಡೆ (ಶಿವಗೀ. ೧೫೩-೭೮೯). ಕೆಸರ ಕುಂಟೆಯಲ್ಲಿಳಿದು ಮುಳುಗಿ ಮೂಗಿನ ಸೊಳ್ಳೆಯನ್ನು ಮೇಲೆತ್ತಿ ಸುಯ್ದಿಟ್ಟು ಆನಂದಪ್ರದರ್ಶನವೆಸಗುವ ಅದೊಂದು ಪ್ರಾಣಿ (ನಾಡೋಜ. ೩೬೧). [ಸುಯ್ದು (< ಸುಯ್ಯಲ್) + ಇಡು$_1$]

**ಸುಯ್ದು** 'ಸುಯ್ಯಲ್' ನೋ.

**ಸುಯ್ಪು** 'ಸುಯ್$_1$' ಪರಾ.

**ಸುಯ್ಬಿಡು** (ಕ್ರಿ). ನಿಟ್ಟುಸಿರು ಬಿಡು: ಕಣ್ಣುಗುರಿನೀರ್ಗಳಂ ಸುಯ್ಬಿಟ್ಟು ಸುಗಿದಂ (ಕಾಲೂರ. ೯೮-೧೯೭). [ಸುಯ್$_2$ + ಬಿಡು$_1$]

**ಸುಯ್ಬೆಂಕೆ** (ನಾ). (ಅಲಂ) ನಿಟ್ಟುಸಿರಿನ ತಾಪ, — ಬಿಸಿ: ಅಳಕಸಂದೋಹಮಂ ಮಾಣದಳ್ಳಾಡುವ ಸುಯ್ ಸುಯ್ಬೆಂಕೆಯಿಂದಿರ್ಪಳಿದಧರಮವಳ್ಗಿತ್ತುದಂದೊಂದು ಚೆಲ್ವಂ (ಜಗವಿ. ೧೧-೬); ವಿರಹಾವಸ್ಥೆಯನಪ್ಪುಕೆಯ್ದು ಪಿರಿದುಂ ಸುಯ್ಬೆಂಕೆಯಿಂ ಪಂಕಜೋತ್ಕರಮಂ ಕಂದಿಸುತುಂ (ಕುಸುಮಾ. ೧೦-೪). [ಸುಯ್$_2$ + ಬೆಂಕೆ]

**ಸುಯ್ಪೊಡರ್** (ಕ್ರಿ). ನಿಟ್ಟುಸಿರು ಸೂಸು, — ಹೊಮ್ಮು: ಅವಳ್ . . . ಸಾರ್ದು ಸುಯ್ಪೊ [ಪಾಠಾಂ. ಯ್ಯ]ಡರೆ ಸೀದ ಲತಾಳಿಯಿವಪ್ಪ ಬೆಂದು ಕಂದೊಗೆದೆಳಗೊಂಗಿವೆಂಬ ಕುಱುಪಂ ಪಲವಾಂತುವು ನಂದನಂಗಳೊಳ್ (ಚಂದ್ರಪ್ರ. ೫-೧೩೩).

[ಸುಯ್$_2$ + ಪೊಡರ್]

**ಸುಯ್ಸು** (ಕ್ರಿ). ನಿಟ್ಟುಸಿರುಬಿಡುವಂತೆ ಮಾಡು; ದುಃಖಪಡಿಸು: ಕೇಳ್ಳೆಲಾಸಿನಿಯನದೇಕೆ ಸುಯ್ಸಿದಪೆ ನೀನಿರದಾಱಿಸು ಕಾಮತಾಪಮಂ (ಶೃಂಗಾರ. ೪-೯).

[ಸುಯ್$_2$ + - ಸು$_1$]

**ಸುರ** (ನಾ). ೧. ಅಮೃತವನ್ನು ಕುಡಿದವನು; ದೇವತೆ: ಸುರರ ಬೇಡಿದಡಿಲ್ಲ ನರರ ಬೇಡಿದಡಿಲ್ಲ ಬಱಿದೆ ಧೃತಿಗೆಡಬೇಡ (ಬಸವ. ೨೭೭); ಸುರರ್ಗೆ ಗುರು ವಜ್ರಿ (ಜಗವಿ. ೧-೩೩) ೨. ನೇಸರು; ಸೂರ್ಯ. ೩. ಒಂದು ಬಗೆಯ ಸಸ್ಯ; ಸುರಹೊನ್ನೆ: ಸುರ — ಪರದೇಶದ್ದು . . . ಸಮುದ್ರತೀರದಲ್ಲಿ ಸರಸಾಗಿ ಬೆಳೆಯುತ್ತದೆ (ಕಭಾಗ. ೪೯). ೪. [ಗಣಿತ] ಮೂವತ್ತುಮೂರು ಎಂಬ ಸಂಖ್ಯೆಯ ಸಂಕೇತ: "ನಖಮದಿಪ್ಪತ್ತು ಸುರಮೆನಲು ಮೂವತ್ಮೂಱು" (ಮಂಗರಾ. ೧೦೪-೯). ೫. [ಛಂದ] ಒಂದು ಅಕ್ಷರಗಣ; ಮೂರು ಲಘುವಿರುವ ಅಕ್ಷರಗಣ; ನಗಣ (UUU): ಸುರರ ನೆರವಿ ನೆರೆಯೆ ಪರಮೆ (ಛಂದೋಂಬು. ೨-೬೦). [ಸಂ.]

**ಸುರಂಗ$_1$** (ನಾ). ೧. (ಕಳವು ಮೊದಲಾದುವುಗಳಿಗಾಗಿ ಗೋಡೆಯಲ್ಲಿ) ಕೊರೆಯುವ ಕಂಡಿ; ಕನ್ನ; ತೂತು: "ಸುರಂಗಮೆನೆ ಕನ್ನಂ" (ಮಂಗರಾ. ೬೬-೫). ೨. ಭೂಮಿಯಲ್ಲಿ ಕೊರೆದು ಮಾಡುವ ದಾರಿ, — ಮಾರ್ಗ: ಮಿಗೆ ಗಿರಿದುರ್ಗದ ನೆಲೆಗೋಂಟೆಗೆ ಸವೆಯೆ ಬಳಿಕ್ಕೆ ಸುರಂಗಂಗಳನೆರದಂ (ಹಮ್ಮೀರ. ೩-೨೭); ಮುಱಿದರು ತಳಿಗಳ ಮೇರುವೆಗಳ ಸುಟ್ಟು ನೆಱೆ ಸುರಂಗಗಳ ದ್ವಾರದಲಿ ಕರಿಯ ಮದ್ದನು ತುಂಬಿ ಹೊತ್ತಿಸಿ (ಕಂಠವಿ. ೧೪-೬೮); ಆ ಕೋಟೆ ಪಾಯಗಳಲ್ಲು ಸುರಂಗವನ್ನು ತೆಗೆಸುತ್ತಾ ಇದ್ದರು (ಕಾಜೇಂದ್ರ. ೬೧). ೩. ಒಳ್ಳೆಯ ಬಣ್ಣ; ಕಾಂತಿಯುತವಾದ ವರ್ಣ: ವಿಪ್ರಸಂಕುಳಕ್ಕುತ್ತಮದರ್ಪಣಂಗಳನಪೂ[ರ್ವ]ಸುರಂಗನವಾಂಬರಂಗಳಂ ವೃತ್ತಿಯನಿತ್ತು ಯಜ್ಞಮನೆ ಮಾಡೆ (ಎಇ. XIII, ೩೩೦-೧೫; 929); ಅಂಗನಾಮಣಿಗಂಗನೆಯರು ಸುರಂಗ ಮೌಕ್ತಿಕಹಾರ ಮಣಿಪದಕಂಗಳಂ ನೇವಳವನನುಸಂಧಿಸಿದರನುವಾಗಿ (ಬಸವು. ೪-೩೭); ಕೃಷ್ಣಾಗರುವಿನೊಟ್ಟಿಲ ಸುರಂಗದ[ಪಾಠಾಂ. ಗಿನ] ಪಟ್ಟೆ ಪಟ್ಟಾವಳಿಯ . . . ಒಟ್ಟಿದರು (ಕುವ್ಯಾಸ. ೫-೪೭). ೪. ಸುಂದರವಾದ ಮಂಟಪ; ಒಳ್ಳೆಯ ರಂಗಮಂದಿರ: ಮಂಗಳೋದಯವೆತ್ತ ಮುತ್ತಿನ ರಂಗವಾಲಿಗಳಿಂದ ಕಂಗೆ ಸುರಂಗವೆನಿಸಿದ ಮೇಲು ಕಟ್ಟಿನ ಕಂಬಗಟ್ಟುಗಳಿಂ . . . ಪುಷ್ಪಕನಿಳಯ . . .ರಂಜಿಸಲು (ಬಸವು. ೧೨-೧೩). ೫. ಹೆಚ್ಚಾದ ಪ್ರೀತಿ; ಅತಿಶಯವಾದ ಅನುರಾಗ: ಮಂಗಳದ ಲಿಂಗಾವತಾರದ ಸಂಗದಿಂ ಮಡಿವಳನ ಭಕ್ತಿ ಸುರಂಗಮಹಿಮೆಯನಱಿಯಲಾಱದೆ ಪಲವುರೂಪುಗಳ ಧರಿಸಿ (ಬಸವು. ೨೨-೫೮).

ಸುರಂಗಹೊಡೆ = ನೀರಿನಲ್ಲಿ ಆಳವಾಗಿ ಮುಳುಗು: ನೀರೊಳಗೆ ಸುರಂಗ ಹೊಡೆದು ಬಾವಿಯ ಆಚೆಯ ಬದಿಗೆ ಹೋದನು (ದಾಸಹು. ೧೧). [ಸಂ.]

**ಸುರಂಗ$_2$** (ನಾ). ಸಿಡಿಮದ್ದು; ಸ್ಫೋಟಕವಸ್ತು: ಕಲ್ಲುಗಳನ್ನು ದೊಡ್ಡ ಸುತ್ತಿಗೆಯಿಂದ ಚಾನಗಳಿಂದ ಅಥವಾ ಸುರಂಗದಿಂದ ಒಡೆದು (ಕೃಷಿಪ್ರ. ೪೧). [?]

**ಸುರಂಗದ್ವಾರ** (ನಾ). ಭೂಮಿಯಲ್ಲಿ ಕೊರೆದು ಮಾಡಿರುವ ಒಳದಾರಿಯ ಬಾಗಿಲು: ನೀರ ತುಂಬುವ ದಿಡ್ಡಿಯೊಳುಸುರಂಗದ್ವಾರ ತೋಱಿತು ಕಣ್ಗೆ ಕೌತುಕವ (ಕಂಠವಿ. ೧೧-೧೩೭). [ಸಂ.]

**ಸುರಂಗಮಾರ್ಗ** (ನಾ). ಭೂಮಿಯಲ್ಲಿ ಕೊರೆದು ಮಾಡಿರುವ ಒಳದಾರಿ, — ಮಾರ್ಗ: ವಿದುರನು ಕಳುಹಿಸಿದ ಕಾಮಾಟದವನ ಮುಖವಚನದಿಂದ ಅವನು ಮಾಡಿದ ಸುರಂಗಮಾರ್ಗದಿಂದ ಹೊರಟು (ಕೃವಾಳ. ೮೭); ಉದ್ಯಾನದ ಬೇಲಿಯೊಳಗೆ ಇರುವ ಸುರಂಗಮಾರ್ಗದ ಬಾಗಿಲಿಂದ ಒಬ್ಬ ವೃದ್ಧನೂ ಒಬ್ಬ ಸ್ತ್ರೀಯೂ . . . ಹೋಗುತ್ತಿದ್ದಾರೆ (ಮುದ್ರಾಮಂ. ೨೦೧). [ಸಂ.]

**ಸುರಂಗಿ** (ನಾ). ಒಳ್ಳೆಯ ವರ್ಚಸ್ಸುಳ್ಳವನು; ಕಾಂತಿಯುತನಾದವನು: ಮೋಕ್ಷದೊಳ್ ವ್ಯಕ್ತವಾಗಿಹ ಸುರಂಗಿ ಶಿವತತ್ತ್ವವುಳ್ಳವನಾಗಿ (ವೀಶ್ವಪು. ೬-೨-೬೮).

[ಸಂ. ಸುರಂಗಿನ್]

**ಸುರಂಗಿತ** (ಗು). ೧. ಚೆನ್ನಾಗಿ ಬಣ್ಣಬಳಿದ; ಮೆರುಗುಕೊಟ್ಟ. (ನಾ). ೨. ಒಳ್ಳೆಯ ಕಾಂತಿ: ಸಾಂಗವಾಗಲು ಸಿದ್ಧಮಂತ್ರ ಸುರಂಗಿತವನೊದವಿಸಿ ವಿಶುದ್ಧೋತ್ತುಂಗಚಿನ್ಮಯಸತ್ಪ್ರಭೆಯನಾತ್ಮದೊಳಗಳವಡಿಸಿ (ಬಸವು. ೪೯-೩೩). ೩. [ಸಂಗೀತ] ವೀಣಾವಾದನದಲ್ಲಿ ಒಂದು ಬಗೆ: ಸಾರಿ ಸುರೀತಿ ರಕ್ತಿ ಪದಕ್ರಮಮಂ ವಳಿ ಸುರಂಗಿತಮಾಯತಂ ಮಣಿ ಕಂಪಿತಂ . . . ಬೆಡಂಗಮರ ಬಾಜಿಸುತೆ ಚಾರುವೀಣೆಯಂ (ವೃಷಪು. ೧೧-೯). [ಸಂ.]

**ಸುರಂಗಿಸು** (ಕ್ರಿ). ಚೆನ್ನಾಗಿ ಹೊಳೆ; ಪ್ರಕಾಶಿಸು: ಗಂಗೆಯಾತನ ಕರ್ಪೂರ ಸೋಂಕಿ ಜಗಂಗಳೊಳು ಸಲೆ ತೀರ್ಥಮಾಗಿ ಸುರಂಗಿಸಿದಳು (ಬಸವು. ೧೮-೯೪); ಪರಿಮಿತಾನ್ನಂಗಳಂ ದಿನದಿನದೊಳುಂಡು ಸುರಂಗಿಸುವ ತನು ತಾನಿದಲ್ತಾ ತಿಳಿದು ನೋಡಿದಡೆ (ಬಸವು. ೪೩-೫೭). [ಸುರಂಗ$_1$ + - ಇಸು$_1$]

**ಸುರಂಗು** (ನಾ). ಒಳ್ಳೆಯ ಬಣ್ಣ; ಹೊಂಬಣ್ಣ: ಮಾಣಿಕ್ಯದೊಳಗಿಪ್ಪ ಸುರಂಗಿನಂತೆ ಚಿನ್ನದೊಳಗಿಪ್ಪ ಬಣ್ಣದಂತೆ ಭೇದವಿಲ್ಲದಚಲನಯ್ಯಾ (ಆದವ. ಮು. ೧೮೭-೩೩೯).

[ < ಸಂ. ಸುರಂಗ]

**ಸುರಂಜ** 'ಸುರಂಜಿ' ನೋ.

**ಸುರಂಜಕಡ್ಡಿ** (ನಾ). ಸುರಂಜಮರದ ಕಡ್ಡಿ: ಕಪಿಲೀಹಿಟ್ಟು ಸುರಂಜಕಡ್ಡಿ ಕಸಕಸಿ . . . ಈ ಮಾಲಿನ ಕಿಮ್ಮತ್ತು ಸೂರ್ತಿ ಚವಾಳಾಮಣದ ಮೇಲೆ ಇರುತ್ತದೆ (ಮುಂಬಪ್ರಾ. ೧೧೫). [ಸುರಂಜ (< ಸುರಂಜಿ) + ಕಡ್ಡಿ]

**ಸುರಂಜಿ, ಸುರಂಜ** (ನಾ). ಒಂದು ಬಗೆಯ ಮರ; ರಕ್ತಚಂದನದ ಮರ: ಸುರಗಿ (ಸುರಂಜ) ದೊಡ್ಡಮರ. ಕಟ್ಟಿಗೆ ಕೆಲಸದ್ದಲ್ಲ. ಹೂವಿನಿಂದ ಬಣ್ಣ ಹುಟ್ಟುತ್ತದೆ (ಕಭಾಗ. ೪೯). **ಸುರಂಜ** : ' **ಸುರಂಜಕಡ್ಡಿ** ' ಪರಾ.

[<— ಮರಾ. ಸುರಂಜ = ರಕ್ತಚಂದನದ ಕಡ್ಡಿ; ಸುರಂಜಿ]

**ಸುರಂದು** (ನಾ). ಒಂದು ಬಗೆಯ ತೆರಿಗೆ (?): ತೌದೆ ಸುರಂದು ಕವರ್ತ್ತ ಸೇಸೆ ಒಸಗೆ ವುನಕರೆ ಕೂಟಕ ಕನ್ನಿ ಬೀರವಣ (ಮೈಆರ. ೧೯೩೨, ೧೭-೨೯; 1069). [?]

**ಸುರಕನ್ನೆ** (ನಾ). ದೇವಲೋಕದ ಹುಡುಗಿ; ಅಪ್ಸರೆ: ಸುರಕನ್ನೆಯರೀ ಕನ್ನೆಯರುರು ಸೌಂದರ್ಯಕ್ಕೆ ಸೋಲ್ತು ಬೆಟ್ಟರ್ ಧರೆಯಂ (ನೇಮಿಪು. ೩-೧೭೭); ಛತ್ರಚಾಮರವ ಚನ್ನಾಗಿ ಪಿಡಿದೋಲೈಸುವರಾ ಸುರಕನ್ನೆಯರತಿರಾಗದಲಿ (ತ್ರಿಪುಸಾಂ. ೮-೮೭). [< ಸಂ. ಸುರಕನ್ಯಾ]

**ಸುರಕನ್ಯಕೆ** (ನಾ). = ಸುರಕನ್ನೆ: ಸುರಕನ್ಯಕೆ ಮನುಜಸತಿ ವರಮೂಕಾರತ್ವಮಂ ಪ್ರಯೋಗಿಸಿ (ಸುಕುಮಾ. ೫-೫೯). [ಸಂ. ಸುರಕನ್ಯಕಾ]

**ಸುರಕನ್ಯೆ** (ನಾ). = ಸುರಕನ್ನೆ: ವಳಯರವಂಗಳುಣ್ಮೆ ಸುರಕನ್ಯೆಯರಿಕ್ಕುವ ಚಾಮರಂ ತೆಱಂಬೊಳೆಯೆ (ಜಗವಿ. ೧-೬೯). [ಸಂ. ಸುರಕನ್ಯಾ]

**ಸುರಕರಿ** (ನಾ). ದೇವತೆಗಳ ಆನೆ; ಐರಾವತ: "ಚೌದಂತ ಮಿಗೆ ಸುರಕರಿ" (ಶಬ್ದಮಂ. ೧೧); ಸುರಕರಿಗೆ ಮೊಗಂ ಮೂವತ್ತೆರಡು (ಶಾಂತಿಪು. ೧೧-೧೪). [ಸಂ.]

**ಸುರಕಾಂತೆ** (ನಾ). = ಸುರಕನ್ನೆ: ಸುರಕಾಂತಾನೃತ್ಯಮೆತ್ತಂ ಪಸರಿಸಿರೆ ನಭೋರಂಗದೊಳ್ (ಆದಿಪು. ೮-೬೭); ಸುರಕಾಂತೆಯರೂರ್ವೊದಲಾದರದಿಂದಂ ಪರಸಿ ಸೇಸೆಯಿಕ್ಕಿದರ್ (ನೇಮಿಪು. ೧೨-೫೯). [ಸಂ. ಸುರಕಾಂತಾ]

**ಸುರಕಿ** 'ಸುರ್ಕಿ' ನೋ.

**ಸುರಕುಂಭಿ** (ನಾ). = ಸುರಕರಿ: ನಗೆ ಸುಧೆಯೊಳ್ ನಿಶಾರಮಣನೊಳ್ ವದನಂ ಸುರಕುಂಭಿಕುಂಭದೊಳ್ ಬಿಗಿದ ಕುಚಂ (ಎಕ. V, ಬೇಲೂರು. ೧೭೧-೩೧; 1160). [ಸಂ. ಸುರಕುಂಭಿನ್]

**ಸುರಕುಜ** (ನಾ). ೧. ದೇವಲೋಕದ ಮರ; ಕಲ್ಪವೃಕ್ಷ: ಸುರಕುಜಮಾಗಳುಂ ಬಗೆದ ವಸ್ತುವನೀಯೆ (ಧರ್ಮಾಮೃ. ೬-೧೬೪); ವನಮದು ಸುರಕುಜದಾರವೆ (ಚಂದ್ರಪು. ೭-೧೫೨). ೨. ಒಂದು ಬಗೆಯ ಮರ; ದೇವದಾರು: ಸುರಕುಜದ ಬೀಜಂ ಮದ್ಯಂ ರಜನಿ ಮಾಗಧ ಕೌಂಗು . . . ಇವಂ ಪರಿಕ್ಲಿನ್ನಂ ಮಾಡಿ (ಲೋಕೋಪ. ೬-೪೫). [ಸಂ.]

**ಸುರಕುಧರ** (ನಾ). ದೇವಲೋಕದ ಬೆಟ್ಟ; ಮೇರುಪರ್ವತ: ಸುರಕುಧರ ಮಧಿಷ್ಠಾನದ ಸಿರಿಯಂ ಪಡೆವಿನೆಗಂ (ಪಾರ್ಶ್ವಪು. ೫-೬೮). [ಸಂ.]

**ಸುರಕುಸುಮ** (ನಾ). ದೇವಲೋಕದ ಹೂವು; ಪಾರಿಜಾತ: ಸುರಕುಸುಮದ ಪೊಸವಾಸಿಗಮೆರಡುಂ ಕರತಳದೊಳೆಸೆದು ತನ್ನಯ ತೋಳೊಳ್ ದೊರೆಯೆನೆ ಬಂದತ್ತು . . . ದೇವಗಣಿಕಾನಿಕರಂ (ಆದಿಪು. ೧೧-೨೦). [ಸಂ.]

**ಸುರಕ್ಷಿತ** (ಗು). ೧. ಚೆನ್ನಾಗಿ ಕಾಪಾಡಿದ; ಉತ್ತಮವಾಗಿ ರಕ್ಷಿಸಿದ. (ನಾ). ೨. ಒಳ್ಳೆಯ ರಕ್ಷಣೆ; ಜೋಪಾನ: ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟು ಕೊಟ್ಟು ಸುರಕ್ಷಿತವ ಮಾಡುವ ಭರವ ನೋಡಾ (ಬಸವ. ೧೬೨). ೩. ಒಳ್ಳೆಯ ರಕ್ಷಣೆಯನ್ನು ಪಡೆದವನು,— ಹೊಂದಿದವನು: ಕಂದನೀತನ ರಕ್ಷೆಯೊಳ್ . . . ನಿತ್ಯಂ ಸುರಕ್ಷಿತಂ (ಶ್ರೀರಾಮಾ. ೩೦-೭೪). [ಸಂ.]

**ಸುರಖ** (ನಾ). ಕಳ್ಳತನವನ್ನು ಪತ್ತೆಮಾಡುವ ವಿದ್ಯೆ: ಈತಂ ತಳಾಜನ ಮಗನಪ್ಪುದಱಿಂ ತನಗೆ ತಕ್ಕ ಕಳ್ಳರನಾರಯ್ಯ ತೆಱನಂ ಪೇಟ್ಟು ಸುರಖಮೆಂಬೋದಂ ಕಲ್ತೊಂ (ವಡ್ಡಾರಾ. ೧೨೮-೨೫). [? / ಪಾರ. ಸುರಾಘ್; ಮರಾ. ಸುರಾಖ್]

**ಸುರಗಂಗೆ** (ನಾ). ದೇವಲೋಕದ ನದಿ; ದೇವಗಂಗೆ: ಶಿವಪಾದಭಕ್ತ ಮಹತ್ವಮಂ ಸಮ್ಮೋದದಿಂ ಸುರಗಂಗೆಯಂ ಕೇಳಲ್ಕೆ ಬಂದಂತೆ (ಬಸಪು. ೩೨-೩೫). [ಸಂ. ಸುರಗಂಗಾ]

**ಸುರಗಂಧವಾರಣ** (ನಾ). = ಸುರಕರಿ: ನೆಟ್ಟನೆ ವಾಸವಂಗಮೃತವಾರಿಧಿಯೊಳ್ ಸುರಗಂಧವಾರಣಂ ಪುಟ್ಟೆ (ಗದಾಯು. ೧-೧೧). [ಸಂ.]

**ಸುರಗಜ** (ನಾ). = ಸುರಕರಿ: ಸುರಗಜಂ ಸುರಕುಜಂ ಸುರಧೇನುಗಳು ಪುಟ್ಟೆ (ನಂಬಿರ. ೧-೭); ಸುರಗಜಮಂ ಶಚಿವೆರಸಾ ಸುರಪತಿ ನಲವಿಂದಮೇಱುತಂ (ತ್ರಿಪುವಿ. ೨೪-೩೭). [ಸಂ.]

**ಸುರಗಣಾಧಿಪ** (ನಾ). ದೇವತೆಗಳ ಒಡೆಯ; ದೇವೇಂದ್ರ: ಸುರಗಣಾಧಿಪನೋ ಫಣಿನಾಥನೋ (ಕವಿರಾ. ೧-೧೪೨). [ಸಂ.]

**ಸುರಗಣಿಕೆ** (ನಾ). ರಂಭೆ, ಊರ್ವಶಿ ಮುಂತಾದ ಅಪ್ಸರೆಯರಲ್ಲಿ ಒಬ್ಬಳು: ಸುರಗಣಿಕೆಯ ನುಡಿಗೇಳ್ದೀಶ್ವರನೊಲವಂ ಪಡೆದು (ವೃಷವಿ. ೨೮-೧೧೮). [ಸಂ. ಸುರಗಣಿಕಾ]

**ಸುರಗತಿ** (ನಾ). ದೇವತೆಗಳ ಸ್ಥಿತಿ; ಅಮರತ್ವ: ಸುರಗತಿಯುಂ ನಿರ್ವೃತಿಯುಂ ದೊರೆಕೊಳ್ವೊಡೆ ಧರ್ಮದಿಂದೆ ದೊರೆಕೊಳ್ಗೆ (ಧರ್ಮಾಮೃ. ೩-೨೦೧); ಸುರಗತಿ ಜೀವಿತಾಂತ್ಯ ಮಱುದಿಂಗಳದಿನ್ನೆನೆ ಮುನ್ನೆ ಶೋಕದಿಂ ಕೊರಗುವ ಸುಯ್ಯು ಬಾಯಱಿವ . . . ನಾರಕರೊಳ್ (ಪುಷ್ಪಪು. ೧೩-೪೦). [ಸಂ.]

**ಸುರಗಿ**$_1$, ಸುರಯಿ, ಸುರಿಗೆ$_1$ (ನಾ). (ಸುವಾಸನೆಯ ಹೂವುಗಳನ್ನು ಬಿಡುವ) ಒಂದು ಬಗೆಯ ಮರ ಮತ್ತು ಅದರ ಹೂವು: "ಪುನ್ನಾಗಃ, ಪುರುಷಃ, ತುಂಗಃ, ಕೇಸರಃ, ದೇವವಲ್ಲಭಃ — ಈ ೫ ಸುರಹೊನ್ನೆಯ ಮರ, ಸುರಗಿಯ ಮರವೆಂದೆಂಬರು" (ನಾಚಿರಾ. ೧೧೭); ಸುರಗಿ[ಪಾಠಾಂ. ಸರಿಗೆ]ಗಿವು ಲಂಬಣಕ್ಕಿವು ಬರಗಲೆಗಿವು ಮುಗುಳ್ಗಳೆಮ್ಮ ಮೇಖಲೆಗಿವು ನೂಪುರರಚನೆಗಿಂತಿವೆಂದಾವರದಿಂದಂ ಕೊಯ್ದರ್ (ಆದಿಪು. ೭-೬೯); ಸುರಗಿಯಲರ ಮುಗುಳ ಮುತ್ತಿನ ಮಾಲೆ (ಕಾದಂಬು. ೭೮೪); ಸುರಗಿ ಮಲ್ಲಿಗೆ ಜಾಜಿ ಸಂಪಿಗೆ ಮೊಲ್ಲೆ ಕೇದಗೆ ಸಂದ ಪಾದರಿಯ ಪೂಗಳನಾವಗಂ ನೆಱೆ ಸೂಱೆಗೊಂಡು (ಧರ್ಮಾಮೃ. ೨-೨೪). **ಸುರಯಿ:** ಪೊಸಮುತ್ತಿನ ಲಂಬಣದೊಳ್ ಮುಸುಕಿಂತಿದಂತಿಡಿಯೆ ಪೂತ ಸುರಯಿಯ ಮುಗುಳಂ (ಆದಿಪು. ೧೧-೯೯); ನಂದನಂಗಳೊಳ್ ಸುೞಿವ ಬಿರಯಿಯಿಂ ಕಂಪು ಕಣ್ಮಲೆಯೆ ಪೂತ ಸುರಯಿಯಿಂ (ಪಂಪಭಾ. ೩-೨೨); ಸುರಯಿಯ ಮುಗುಳ ಮುಗುಳ್ ಕಿಂಕಿರಾತ ಕುಟ್ಮಳದ ನೂಪುರಂ (ಶಾಂತಿಪು. ೮-೨೦); ನಗುವಂತಿರೆ ಬಿಱಿದುವು ಸುರಯಿ (ಜಗವಿ. ೧೪-೩೫). **ಸುರಿಗೆ**$_1$**:** ಸಿರಿಮುಡಿಯ ಸುಳಿಗುರುಳ ಸುರಿಗೆ ಸಂಪಿಗೆಯ ಬಹುಪರಿಮಳದ ಮಲ್ಲಿಗೆಯ ಮುಗುಳಿಗಂ ಸುಳಿವಳಿಯ (ತುರಂಗ. ೮೭-೨೭). [ದೇ. II ತುಳು. ಸುರುಗಿ, ಸೊರಗೆ]

**ಸುರಗಿ**$_2$, ಸುರಿಗೆ$_3$ (ನಾ). ಮದುವೆಯಲ್ಲಿ (ವಧೂವರರಿಗೆ) ಓಕುಳಿನೀರನ್ನು ಎರೆಯುವ ಒಂದು ಶಾಸ್ತ್ರ; ಮಲನೀರು ಮಿಯಯುವಿಕೆ: ಸುರಗಿ ಸುತ್ತಾರವರು ಹರದೆಯರೆಲ್ಲರು ಅರಿಸೀಣ ಹಚ್ಚಲು ನಡೆದಾರು (ಸಿದ್ಧಪು. ೧-೬೭); ಸುರಗಿಯ ಸುತ್ತುವುದು ಐರಾಣಿ ತರುವುದು ಗುಗ್ಗುಳ ಹೊರುವುದು (ಕನ್ನಜಾ. ೬೫); ವಿಳ ಕಳಸಗಿತ್ತೀ ನೀನೂ ನಡಿ ಮತ್ತ ನೀನೂ ಸುರಗಿ ಎರಕೋಬೇಕಲ್ಲಿ (ವೈಸಿ. ೯). **ಸುರಿಗೆ**$_3$**:** ಮದುವೆಯಲ್ಲಿ ಸುರಿಗೆಯಲ್ಲಿ ಹೋಗಿ ನಿಂತಿದ್ದ ರೇವಕ್ಕನನ್ನು ಮದುವೆಯ ಮನೆಯವರು ಸುರಿಗೆಯಿಂದ ಹೊರಕ್ಕೆ ನೂಕಿದರು (ಬಳುಮ. ೨೮).

ಸುರಗಿನೀರು, ಸುರಿಗೆನೀರು = ಮದುವೆಯಲ್ಲಿ (ವಧೂವರರಿಗೆ) ಎರೆಯುವ ಓಕುಳಿನೀರು; ಮಲನೀರು: ಈಗಿನ ಹುಡುಗರು. ಒಂಬತ್ತು ವರ್ಷ ಆಗೋದರಾಗ ಮುಗಿಲುದ್ದಾ ಆಗತಾವ. ಅದರಾಗ ಇಂಗ್ಲಿಷಸಾಲೆಗೆ ಹೋದರೆ ಸುರಗೀನೀರು ಎರದ್ಹಾಂಗ (ಸಮಜೀ. ೩೯); ಈಗ ಸುರಿಗೆನೀರು ಎರೆಯುವ ಶಾಸ್ತ್ರವಾಗಬೇಕು (ರೂಢಿ).

**ಸುರಗಿ**$_3$ 'ಸುರಿಗೆ$_2$' ನೋ.

**ಸುರಗಿಎಣ್ಣೆ** (ನಾ). ಸುರಗಿಯ ಹೂವಿನಿಂದ ತಯಾರಿಸಿದ ಸುವಾಸನೆಯ ಎಣ್ಣೆ: ಕೈತಾನನ ಮನೆಯಿಂದ ಗಾಣದಲ್ಲಿ ಹಿಂದುತ್ತಿದ್ದ ಸುರಗೀಎಣ್ಣೆಯ ವಾಸನೆ ಬರುತ್ತಿತ್ತು (ಮೂರುದಾ. ೨೩೩). [ಸುರಗಿ$_1$ + ಎಣ್ಣೆ]

**ಸುರಗಿಕಾಱ** (ನಾ). ಕಠಾರಿಯನ್ನು ಹಿಡಿದಿರುವವನು: ಸುರಗಿಕಾಱಂ ಚೌಡರಾಯನು (ಬಸಪು. ೯-೪೭); ಸುರಗಿಕಾಱಂ ಚೌಡಯಂ (ವೃಷವಿ. ೬-೪೧). [ಸುರಗಿ$_3$ (< ಸುರಿಗೆ$_2$) + - ಕಾಱ]

**ಸುರಗಿಗಟ್ಟು** (ಕ್ರಿ). ಕಠಾರಿಯನ್ನು ಕಟ್ಟು; ಚೂರಿಯನ್ನು ಸಿಕ್ಕಿಸಿಕೊಂಡಿರು: ಸುರಗಿಗಟ್ಟುವರಂತೆ ಅಮುಳ್ಳಡಿಗೀಱುವರಂತೆ ಕಾವಡಿಗಾಱನಂತೆ (ಧರ್ಮಾಮೃ. ೨-೪). [ಸುರಗಿ$_3$ (< ಸುರಿಗೆ$_2$) + ಕಟ್ಟು$_1$]

**ಸುರಗಿರಿ** (ನಾ). = ಸುರಕುಧರ: ಸುರಗಿರಿಯಂ ಸುರನಿಕರಂ ತರತರದಡರ್ವಾಗಳಮರ ಗಣಿಕೆಯರ ಮನಂ ವಿರುವದಲಿ ನಿಕರದೊಡನೊಡನಿರದೆಱಗಿದುವು (ಆದಿಪು. ೭-೬೮); ಸುರಗಿರಿಗೆ ಭೆಟ್ಟಂಗಳೆಣೆಯೆ (ಬಸಪು. ೫೫-೨೩). [ಸಂ.]

**ಸುರಗೀತ** (ನಾ). ದೇವತೆಗಳ ಹಾಡು,— ಗಾಯನ: ಸುರಗೀತಂ ಸುರದುಂದುಭಿಧ್ವನಿ ಸುರಸ್ತ್ರೀರಮ್ಯಸಂಗೀತಕಂ . . . ದೇವಸಭೆಯೊಳ್ (ಆದಿಪು. ೧೩-೯೨). [ಸಂ.]

**ಸುರಗೀತೆ** (ನಾ). ದೇವತೆಗಳಿಂದ ಹೊಗಳಲ್ಪಡುವವಳು: ಗಾನವಿಲೋಲೆ ಸುರಗೀತೆ ನೀನೆ ಗತಿ ಎನಗಾರೊಬ್ಬರ ಕಾಣೆ ದಾನಿ ಇಂದಿರಾದೇವಿ (ವಿದಾಕೃ. ೫೫-೩). [ಸಂ. ಸುರಗೀತಾ]

**ಸುರಗುರು** (ನಾ). ದೇವತೆಗಳ ಗುರು; ಬೃಹಸ್ಪತಿ: ಉಕ್ತಿಯಿಂ ಸುರಗುರುವಂ ಬೆಳಗಿಂ ದಿನಪನರ್ಚಿಪ ಜಡಮತಿಗಳ್ (ಆದಿಪು. ೧೪-೧೧); ಸುರಗುರುವಂ ಕಳಿಪುವುದಾದರದಿಂ ಸಂಧಾನಮಂ ನಿಮಿರ್ಚುವುದು (ಗಿರಿಕ. ೬-೧೪). [ಸಂ.]

**ಸುರಗೆಯೂರ್** (ನಾ). ಒಂದು ಊರಿನ ಹೆಸರು: ಸುರಗೆಯುರಾ ದಾಸಮ್ಮೆಜೆಯರ್ (ಎಇ. VI, ೧೬೧-೨; ಸು.765). [ಸುರಗ್ಗೆ + ಊರ್]

**ಸುರಗೆವೆಕ್ಕಣ** (ನಾ). ಕಠಾರಿ ಹಿಡಿದು ಮಾಡುವ ನೃತ್ಯ (?): ಪೊಸತೆನಿಪ ಸುರಗೆವೆಕ್ಕಣಮೆಸದಿರೆ ಕಡುಪೊಸತು ಬಣ್ಣರಸಮೆಸದಿರೆ ನಿಪ್ಪೊಸತೆನಿಪ ದೇಸ ಮಾಸಲುಮೆಸದಿರ ಸಭೆ ಮೆಚ್ಚೆ ಪೊಚ್ಚಪೊಸತಾಯ್ತು ರಸಂ (ಅಜಿಪು. ೫-೩೧). 'ಗೊಂದಳವೆಕ್ಕಣ' ಪರಾ. [ಸುರಗ್ಗೆ + ಪೆಕ್ಕಣ]

**ಸುರಗೇಯ** (ನಾ). ೧. = ಸುರಗೀತ: ಪಾಡಿ ಸುರಗೇಯ ಘೋಷಂಗಳಂ (ಶ್ರೀರಾಮಾ. ೧೮-೪೮೨). ೨. ದೇವತೆಗಳಿಂದ ಸ್ತುತಿಸಲ್ಪಡುವವನು: ಶ್ರೀಯನ್ನೀಯಲಿ ವಿರಹಿತಮಾಯಂ ಸುರಗೇಯನಪ್ರಮೇಯಂ ಸ್ಫಟಿಕಚ್ಛಾಯಂ ಭೂಧರಜಾವರ ಕಾಯಾಶ್ರಯನೊಲಿಯುತೆನಗೆ ಶ್ರೀಮಹಲಿಂಗಾ (ಪಂಚಶ. ೩-೧). [ಸಂ.]

**ಸುರಗೋ** (ನಾ). ೧. ದೇವಲೋಕದ ಹಸು; ಕಾಮಧೇನು. ೨. ಬೇಡಿದುದನ್ನು ನೀಡುವವನು; ಕಾಮಧೇನುವಿಗೆ ಸಮಾನನಾದವನು: ವಂದಿತ ಲೋಕವೃಂದ ಸುರಗೋ ರಾಜೇಂದ್ರ ಹಮ್ಮೀರ ಜೋ (ಹಮ್ಮೀ.ರ. ೨-೨೬). [ಸಂ.]

**ಸುರಗೋಪ** (ನಾ). ಮಳೆಗಾಲದಲ್ಲಿ ಕಾಣಿಸಿಕೊಳ್ಳುವ ಒಂದು ಬಗೆಯ ಕೆಂಪುಬಣ್ಣದ ಮಿಂಚುಹುಳು; ಇಂದ್ರಗೋಪ: ಸುರಗೋಪಂಗಳು ಮಾಲಿಕಲ್ಲುಮೆಳವುಲ್ಲುಂ ಕೆಂಪಿನಿಂ ಬೆಳ್ಪಿನಿಂ ಹರಿತಚ್ಛಾಯೆಯಿನಲ್ಲಿಗಲ್ಲಿಗೆಸಗುಂ (ಜಗವಿ. ೪-೨೦); ಸುರಗೋಪಚ್ಛಲದಿಂ ಧರಾರಮಣಿ ರಾಗಂಬೆತ್ತು ಮಾದ್ಯನ್ಮನೋಹರ ಮಪ್ಪಾಸನಮಂಡಳೀಮಿಷದಿನೀಗಳ್ಪರ್ತಿಸುತ್ತಿರ್ದಳ್ (ಶಾಂತೀಶ್ವ. ೧೨-೫೦). [ಸಂ.]

**ಸುರಚಾಪ** (ನಾ). ಕಾಮನ ಬಿಲ್ಲು; ಇಂದ್ರಧನುಸ್ಸು: ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ಮಿಣ್ಣುವೋಲ್ತೋಱಿ ಬೇಗಂ ಪಿರಿಗುಂ ಶ್ರೀರೂಪಲೀಲಾಧನ ವಿಭವಮಹಾರಾಶಿಗಳ್ ನಿಲ್ಲವಾರ್ಗ್ಗಂ (ಎಕ. II, ೮೮-೧; 700); ಪರಿವೇಷಂ ಸಾಡೆ ಭಯಂಕರಮಪ್ಪುದನರ್ಕಬಿಂಬದೊಳ್ ನಟ್ಟಿರುಳೊಳ್ ಸುರಚಾಪಂ ಮೂಡುವುದಂ . . . ಕಂಡು (ಪಂರಾಮಾ. ೧೪-೨೨೦); ಪ್ರಿಯನ ಪಟ್ಟಾಭಿಷೇಕೋತ್ಸವದ ಸಂಭ್ರಮಕೆ, ಸುರಚಾಪಲತೆಗಳಂ ತಿರಿತಂದು (ಶ್ರೀರಾಮಾ. ೮೬-೨೨೨). [ಸಂ.]

**ಸುರಚಾರಣ** (ನಾ). ದೇವಲೋಕದ ನಟ,— ಗಾಯಕ: ಬಂದ ಸುರಚಾರಣರ ಹಾಹಯ ತೊಡರು ಪೆಂಡೆಯ ಮೆಱೆವ ಖಳಮಲ್ಲ (ಕಾಶಿರಾ. ೩೬-೧೬). [ಸಂ.]

**ಸುರಜನ** (ನಾ). ದೇವಲೋಕದ ಜನ: ಸುರಜನಮುಂ ಪುರಜನಮುಂ ಪರಿಜನಮುಂ ಪರಮಪುರುಷಜನ್ಮೋತ್ಸವ ನಿರ್ಭರತರ ಹರ್ಷರಸಾಮೃತಶರಧಿಯೊಳೇಂ ಕೂಡೆ ಮೂಡಿ ಮುಳ್ಕಾಡಿದುದೋ (ಚಂದ್ರಪ್ರ. ೧೨-೧೭೪); ಸುರಜನಂಗಳುಂ ಪುರಜನಂಗಳುಂ ಪೊಗೞೆ (ಪುಷ್ಪಪು. ೧೨-೧೫ ವ). [ಸಂ.]

**ಸುರಜಿತ** (ನಾ). ದೇವತೆಗಳನ್ನು ಗೆದ್ದವನು: ಸುತನು ನೀನೆಂದಿದ್ದೆನಾ ಸುರಜಿತನು ಕಂಡರೆ ನಿನ್ನನುಳುಹನು . . . ಹೋಗು ಸಾಯದಿರು (ಕಾಶಿರಾ. ೧೮-೧೭). [ಸಂ. ಸುರಜಿತ್]

**ಸುರಜ್ಯೇಷ್ಠ** (ನಾ). ದೇವತೆಗಳಲ್ಲಿ ಹಿರಿಯನಾದವನು; ಬ್ರಹ್ಮ: "ಬ್ರಹ್ಮಾ . . . ಸುರಜ್ಯೇಷ್ಠಾ . . . ಕಮಲಾಸನಃ—ಈ ೨೦ ಬ್ರಹ್ಮನ ಪೆಸರ್" (ಹಲಾಯು.೨-೬); ಶ್ರೀಜಗನ್ನಾಥವಿಜಯಮಹಾಪ್ರಬಂಧದೊಳ್ ಸುರಜ್ಯೇಷ್ಠವಿಜ್ಞಾಪನಾಕರ್ಣನ . . . ವರ್ಣನಂ (ಜಗವಿ. ೧-೮೦ ವ). [ಸಂ.]

**ಸುರಟಿ₁** 'ಸುರುಟಿ₁' ನೋ.

**ಸುರಟಿ₂** (ನಾ). ಒಂದು ಬಗೆಯ ಸಸ್ಯ: ತೊರತ್ತಿ, ಸುರಟಿ, ಕಿಲ್ಲಂಗಿ, ಚೌಲ್‌ಮೂಗ್ರ, ಎಣ್ಣೆಮರ, ಹಾಲಪೆ (ಮೈಔಗಿ. ೪೫-೮೮೨). [?]

**ಸುರಟು₁** 'ಸುರುಟು₃' ನೋ.

**ಸುರಟು₂** (ನಾ). ಒಂದು ಬಗೆಯ ಆಯುಧ (?): ಸು(ರು)ರಟಿಂದಾಂತರಂ ಕೊಲ್ವಂ . . . ಎಕ್ಕಲ ಕ್ಷೋಣಿಪಾಳಂ (ಎಕ. VIII, ಸೊರಬ. ೧೩೮-೨೭; 1145). [?]

**ಸುರಡಿ** (ನಾ). ಒಂದು ಬಗೆಯ ಭೂಮಿ (?): ಕೆಳ ಸುರಡಿ ಮೇಲಸುರಿಡೀ ಸಹರೇಖೆ ಭೂಮಿ ಖಂ ೫ಳ ಕೆ (ಎಕ. VI, ಶೃಂಗೇರಿ. ೧೧-೯೨; 1652). [?]

**ಸುರತ** (ನಾ). ಸಂಭೋಗ; ಕೂಟ: ಸಮಸತ್ತ್ವಂಬಡುವಂತಿರಾಯ್ತು ಸುರತಪ್ರಾರಂಭಕೋಳಾಹಳಂ (ಕಾವ್ಯಸಾ. ೬೫೭ ಶೂದ್ರಕ); ಆಕೆಯ ಬೂದಿಯ ರೂಪನಳಿದು ಸ್ತ್ರೀರೂಪ ಮಾಡಿ ಸುರತದಲ್ಲಿರ್ದನು (ಭೈರಸೂ. I, ೮೩).

**ಸುರತದಬಿಕೆಯವಳ್** = ಸಂಭೋಗದ ಬಯಕೆಯುಳ್ಳವಳು: "ವೃಷಸ್ಯಂತೀ, ರತಾರ್ಥಿನೀ - ಈ ೨ ಸುರತದಬಿಕೆಯವಳ್" (ಹಲಾಯು. ೮೦-೩೩೦). [ಸಂ.]

**ಸುರತಕ್ರೀಡೆ** (ನಾ). ರತಿಕೇಳಿ: ಚಿತ್ರಾಸನೆ ತಚ್ಚಿತ್ರಪ್ರಿಯಂಗೇಂ ಮೆಱೆದಳೊ ಸುರತ ಕ್ರೀಡೆಯಂ ಪ್ರೌಢಿಯಿಂದಂ (ಕಾವ್ಯಸಾ. ೬೬೪); ಸುರತಕ್ರೀಡೆಗಳೊಳ್ ಸಂಗೀತ ರಚನಾಳಾಪಂಗಳೊಳ್ . . . ಪೊತ್ತುಗಳೆವಂ (ತ್ರಿಪುವಿ. ೨೬-೧೧). [ಸಂ. ಸುರತಕ್ರೀಡಾ]

**ಸುರತಧ್ವನಿ** (ನಾ). ಸಂಭೋಗದ ಸಮಯದಲ್ಲಿ ಉಂಟಾಗುವ ಶಬ್ದ: "ಅಳಸು = ಸುರತಧ್ವನಿ" (ಶಮದ. ಪಂ. ೨); "ಅಳಸೆಂದೆನಲ್ ಸುರತಧ್ವನಿ" (ಕಬ್ಬಿಕೈ. ೮೪). [ಸಂ.]

**ಸುರತರಸ** (ನಾ). ಸಂಭೋಗಕಾಲದಲ್ಲಿ ಉತ್ಪತ್ತಿಯಾಗುವ ದ್ರವ; ರೇತಸ್ಸು; ವೀರ್ಯ: "ಸುರತರಸದೊಳ್ ಕಣ್ಣಿನೊಳು ಬಳಿದಿನೊಳ್ ಕವಿಯೊಳರೆ ಶುಕ್ಲಮಕ್ಕು" (ಮಂಗರಾ. ೧೪೯-೪೪). [ಸಂ.]

**ಸುರತರಾಗ** (ನಾ). ಸಂಭೋಗಾಸಕ್ತಿ: ಬರಿಪೆಂ . . . ನಲ್ಲನಂ ತಗುಳ್ದಿರಿಪೆನನಾರತಂ ಸುರತರಾಗನಿರೂಪಣಕಾರಣಂಗಳಂ (ಕವಿರಾ. ೨-೧೧೫); ರಜನಿಸುರತರಾಗಂ ಮಹ ದ್ಬ್ರಹ್ಮಚರ್ಯಂ . . . ಅಱಿವುದೇಕಾದಶಂ ಖೇಚರೇಂದ್ರಾ (ಶಾಂತಿಪು. ೬-೫೦). [ಸಂ.]

**ಸುರತರು** (ನಾ). ೧. = ಸುರಕುಜ ೧: ಸುರತರುನಂದನಂಗಳಿರ ರತ್ನಪಿನದ್ಧವಿಮಾನಕುಟ್ಟಿಮಾಂತರ ಸುರತಾಲಯಂಗಳಿರ . . . ನೋಡುತಿರ್ಪಿರೇ (ಆದಿಪು. ೩-೪); ದೇವಕಲ್ಪಲತೆಯನೆಳಸಿರ್ಪ ಸುರತರುವಿನಂತೆ (ನಂಬಿರ. ೪-೧೭); ಔದಾರಿಯದ ಸುರತರುವ ಕುಂತೀನಾರಿ ಕಾಣಲು ಬಂದಳು (ಕುಮ್ಮಾಉ. ೧೧-೨೬). ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ, ಪಾದವೊಂದಕ್ಕೆ ನಾಲ್ಕು ಅಕ್ಷರಗಳುಳ್ಳ 'ಪ್ರತಿಷ್ಠೆ' ಎಂಬ ಛಂದಸ್ಸಿನ ಒಂದು ವೃತ್ತ: ಸುರಹರಿ ನೆರೆದಿರ ವರವಧು ಸುರತರು (ಛಂದೋಂಬು. ೨-೬೫). [ಸಂ.]

**ಸುರತರುಣಿ** (ನಾ). = ಸುರಕನ್ನೆ: ಸುರತರುಣೀಕರಾವಚಯಪಲ್ಲವಪುಷ್ಪಫಳೋಪ ಶೋಭಿಗಳ್ (ವರ್ಧಪು. ೧೫-೧೦೦); ಸುರತರುಣೀಚಳಾಳಕ ಮೃಗೋದ್ಭವರೇಣು ತಟಲ್ಲ ತಾಂತ ಸುಂದರಮಕರಂದರೇಣು (ಅನಂಪು. ೫-೪೨). [ಸಂ. ಸುರತರುಣೀ]

**ಸುರತವೆಸಗು** (ಕ್ರಿ). ಸಂಭೋಗ ಮಾಡು; ರತಿಕ್ರೀಡೆಯಾಡು: ಗಳರವ ಚುಂಬನ ಕಾತರ ದೈನ್ಯ ಸಂಕಲಿತ ಸೀತ್ಕಾರಗಳಿಂದೆ . . . ಸುರತವೆಸಗುವ ಜಾಣ (ಇಚಿಸಾಂ. ೯-೬೫). [ಸುರತ + ಎಸಗು₁]

**ಸುರತಾರವ** (ನಾ). = ಸುರತಧ್ವನಿ: ಮನ್ಮಥ ಸೂತ್ರಧಾರ ನಾಟಕರವಮುಣ್ಮುವಂತೆ ಸುರತಾರವಮುಣ್ಮಿದುದೊಂದು ಗೇಹದೊಳ್ (ಶಾಂತಿಪು. ೮-೧೧೧). [ಸಂ.]

**ಸುರತಾಲ** 'ಸುಲ್ತಾನ್' ನೋ.

**ಸುರತಾಲಯ** (ನಾ). ಸಂಭೋಗ ಸ್ಥಳ: ಸುರತರುನಂದನಂಗಳಿರ ರತ್ನಪಿನದ್ಧ ವಿಮಾನಕುಟ್ಟಿಮಾಂತರ ಸುರತಾಲಯಂಗಳಿರ ಚಾರುವಿಲೋಲಕಟಾಕ್ಷಪಾತಸೌಂದರ ಪರಿವಾರದೇವಿಯರಿರಾ ಕಡುಕೆಯ್ದು ಕೃತಾಂತನಿಂತು ನಿರ್ನ್ನೆರಮೆಱೆದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ (ಆದಿಪು. ೩-೪); ಎಸೆವ ಪವಡಿಸುವ ಮನೆ ಚಿತ್ರಸಾಲೆ ಸುರತಾಲಯಂ ಮಹೀಗೃಹಮಾರೋಗಿಸುವ ಮನೆ ಮಂಡಪಂ ಗುಣನೆಸಾಲೆಯೆಂಬಿನಿತುಂ ಗೃಹಾಂಗಂ ಕುಡುಗುಂ (ಶಾಂತಿಪು. ೬-೧೧೬). [ಸಂ.]

**ಸುರತಾಳ** 'ಸುಲ್ತಾನ್' ನೋ.

**ಸುರತಿಚೆಕ್ಕೆ** (ನಾ). ಒಂದು ಬಗೆಯ ವನಸ್ಪತಿ: ಹಾರುಗೆ, ಸುರತಿಚೆಕ್ಕೆ (ಮೈಔಗಿ. ೭೭-೧೫೭೭). [?]

**ಸುರತಿಸು** (ಕ್ರಿ). ಕೂಡು; ಸಂಭೋಗಿಸು: ಮೊಳೆಜವ್ವನದ ಮೋಹಿನಿಯ ಸುರತಿಸೆ ಗರ್ಭ ಬೆಳೆವಂತೆ ಹಸುಳೆಗೆ ಗರ್ಭ ನಿಲ್ಲುವುದೇ (ಕೃಕವ. ೫-೧-೨). [ಸುರತ + -ಇಸು]

**ಸುರತೂರ್ಯ** (ನಾ). ದೇವದುಂದುಭಿ: ಸುರತೂರ್ಯಾರಾವಮೆಂಟುಂದೆಸೆಯೊಳ್ ಮೆಸೆಯುತ್ತಿರ್ಪಿನಂ (ಅಜಿಪು. ೫-೨೮); ಸುರತೂರ್ಯಂ ತೂರ್ಯಂ ಸುರತರು ಕುಸುಮಾಸಾರಮರ್ಘ್ಯಂ (ಪಾರ್ಶ್ವಪು. ೧೬-೮೦). [ಸಂ.]

**ಸುರತೆ** (ನಾ). ೧. ಸುರತಕ್ಕೆ ಸಿದ್ಧವಾದವಳು: "ರತೆಯೆನಲು ಸುರತೆಯಕ್ಕುಂ" (ಮಂಗರಾ. ೮೯-೨). ೨. ಬೆದೆಗೆ ಬಂದಿರುವ ಹಸು; ಬೆದೆಯಾಕಳು: "ಅಚಂಡೀ, ಸುರತಾ — ಈ ೨ ಬೆದೆಯಾವು" (ಹಲಾಯು. ೪೫-೧೧೬). [ಸಂ. ಸುರತಾ]

**ಸುರತ್ರಾಣ** 'ಸುಲ್ತಾನ್' ನೋ.

**ಸುರತ್ವ** (ನಾ). ದೇವನಾಗಿರುವಿಕೆ; ಅಮರತ್ವ: ಇರುಳುಂ ಪಗಲುಂ ಜಾನಿಸಿ ಸುರತ್ವಮಂ ಕೊಟ್ಟು (ಶಾಂತಿಪು. ೪-೬೯). [ಸಂ.]

**ಸುರದಂತಿ** (ನಾ). ದೇವಲೋಕದ ಆನೆ; ಐರಾವತ: ಸುರದನ್ತಿಯ ರಜತಗಿರಿಯ ಚನ್ದ್ರನ ಬೆಳ್ಪಿಂ ಪಿರಿದು (ಎಕ. II, ೭೦-೧೫; ಸು. 1180). [ಸಂ. ಸುರದಂತಿನ್]

**ಸುರದಲ್ಲಣ** (ನಾ). ದೇವತೆಗಳನ್ನು ಭಯಗೊಳಿಸುವವನು; ರಾಕ್ಷಸ: ಬಲ್ಲಿದರ್ ತಾಗಿ ಹಿಮ್ಮೆಟ್ಟಿದರ್ ಕೆಲಬರಲ್ಲಲ್ಲಿ ನಿಂದರ್ ಕೆಲಬರಳವಳಿಯೆ ಕಂಡು ಸುರದಲ್ಲಣಂ ವೀರನಾ ಬ್ರಹ್ಮನಿದಿರೊಳ್ ನಿಂದು ನುಡಿದನು (ಚಿಬಪು. ೩೧-೪೬). [ಸುರ + ತಲ್ಲಣ (< ತಲ್ಲಟ)]

**ಸುರದಾರು** (ನಾ). ಒಂದು ಬಗೆಯ ವೃಕ್ಷ; ದೇವದಾರು: ಸುರದಾರು ಮಾಕ್ಷಿಕಂ ಶರ್ಕರೆ ಶೈಲಜಮಗುರು ಬಿಲ್ವಮಿವಱಿಂ ಪೊಗೆಗೊಳ್ ಭರಣಮನಂತದಱೊಳ್ ಪೊಯ್ದಿರಿಸೆಣ್ಣೆಯನದು ವಿಶೇಷಗಂಧಮನೀಗು (ಲೋಕೋಪ. ೭-೨೬); ಕೈಲಾಸನಗದ ಸಮ್ಮೇದಗಿರಿಯ ನಡುವಣ ಸುರದಾರುವನೋಪಕಂಠದೊಳ್ ಬೀಡಂ ಬಿಟ್ಟು (ಪಂರಾಮಾ.೧೦-೧೫೬ ವ). [ಸಂ.]

**ಸುರದಿಕ್ಕು** (ನಾ). ಇಂದ್ರನ ದಿಕ್ಕು; ಪೂರ್ವದಿಕ್ಕು; ಮೂಡಲು: ಸುರದಿಕ್ಕಾಮಿನಿ ಪೊಯ್ಯೆ ಮೇಗೊಗೆದ ಶೋಣಂ ಕಂದುಕಂ ತಾನಿದೆಂಬರ ಮಾತಿರ್ಕೆ (ಚಂದ್ರಪು. ೮-೧೧೪); ಸುರದಿಕ್ಕಾಂತೆಯೊಳೋತು ಭಾನು ನೆರೆಯಲ್ (ಕುಸುಮಾ. ೪-೭೮). [< ಸಂ. ಸುರದಿಶ್]

**ಸುರದೀರ್ಘಿಕೆ** (ನಾ). ದೇವಲೋಕದ ನದಿ; ಅಮರಗಂಗೆ: ಸುರದೀರ್ಘಿಕೆಯೊಳ್ ಕರಪುಷ್ಕರದಿಂದಭ್ರಮುವನಭ್ರಮೂಪತಿ ತಳಿವಂತಿರೆ ಜಳಯಂತ್ರದೆ ತಳಿದಂ ಸರಸಿಯೊಳರಸಂ ಶಶಿಪ್ರಭಾವಲ್ಲಭೆಯಂ (ಚಂದ್ರಪು. ೭-೧೫೯). [ಸಂ. ಸುರದೀರ್ಘಿಕಾ]

**ಸುರದುಂದುಭಿ** (ನಾ). ೧. = ಸುರತೂರ್ಯ: ಸುರದುಂದುಭಿಸ್ವನಕೆ ಮುಯ್ಯಾಂತು (ನಂಬರ. ೧೯-೫೮). ೨. [ಜೈನ] ಅಷ್ಟಮಹಾಪ್ರಾತಿಹಾರ್ಯಗಳಲ್ಲಿ ಒಂದು; ದೇವದುಂದುಭಿ: ಪ್ರಕಟಯಶೋದುಂದುಭಿ ಸಿಂಹಾಸನ ಸುರದುಂದುಭಿಪತಿಚರಣ ಕಮಲಭೃಂಗಂ ಪಂಪಂ (ಆದಿಪು. ೧-೩೩). [ಸಂ.]

**ಸುರದ್ರುಮ** (ನಾ). = ಸುರಕುಜ ೧: ಪರಮಮುನಿ ತನುವನದರ್ವುದು ಸುರದ್ರುಮಂಗೆತ್ತು ಯುವತಿರೂಪದಿನೆಂದಾದರದಿಂ ಬಿಡಿಸಿದರ್ (ಆದಿಪು. ೧೪-೧೪೩); ಸುರದ್ರುಮಕೆ ನವಪ್ರಸೂನವಿಭವಂ (ಕಾದಂಪೂ. ೪೪೨). [ಸಂ.]

**ಸುರದ್ವಿಷ** (ನಾ). ದೇವತೆಗಳ ಶತ್ರು; ರಾಕ್ಷಸ; ಅಸುರ: "ಅಸುರಾಃ, ದೈತ್ಯಾಃ . . . ಸುರದ್ವಿಷಃ, ಅಸುರನೆಂಬ ದೈತ್ಯರ ಹೆಸರುಗಳು" (ಸಿದ್ಧಾಂತಿ. ೧೫). [ಸಂ.]

**ಸುರಧನು** (ನಾ). = ಸುರಚಾಪ: ನೆನೆದ ಮನಂ ಪೆಱಗುಱಿದತ್ತನೆ ಬೆಳಗುವ ರತ್ನದೀಪ್ತಿ ಸುರಧನು ನೆಗೆದತ್ತನೆ ನೆಯ್ದಿಲ್ಗೊಳನಲರ್ದತ್ತನೆ . . . ಬಂದಂ (ಪಂಪಭಾ. ೧-೧೩೮); ಕೂಟವಾದುದು ಶರಣಸ್ಥಲ ಆ ಸ್ಥಲ ಸುರಧನುವಿನ ಕೆಲವಳಿಯಂತೆ ಮರೀಚಿಕಾಜಲದ ವಳಿಯಂತೆ (ಪ್ರೋಳಿಮಾ. ೧೧೩-೪೪೬). [ಸಂ.]

**ಸುರಧರೆ** (ನಾ). ದೇವತೆಗಳ ಲೋಕ; ಸ್ವರ್ಗ: ಸುರಧರೆಯ ಸುರಭಿ ವಸ್ತೂತ್ಕರದಾಮೋದಂಗಳಭವನಂಗಾಮೋದಂ ಪರಿಯೆ ಪರಪುದುಗಿ ಭಯದಿಂ ಶರಣ್ಗೆವಂದಂತೆ ಸುಳಿವುವಲೆವೆಲರಿಂದಂ (ಮಹಾನೇ. ೧೫-೭೪). [ಸಂ. ಸುರಧರಾ]

**ಸುರಧಾಮ** (ನಾ). = ಸುರಧರೆ: "ಸುರಧಾಮದೊಳು ಬೌದ್ಧತಪದೊಳು ಚರ್ಯವೆನಿಸಿರ್ಕು" (ಮಂಗರಾ. ೧೪೩-೨೦). [ಸಂ. ಸುರಧಾಮನ್]

**ಸುರಧೂಪ** (ನಾ). ಅಶ್ವಕರ್ಣ ಎಂಬ ಮರದ ರಾಳ,—ಅಂಟು: ಸುರಧೂಪ [ಪಾಠಾಂ. ಮ]ದ ಬಣ್ಣಂ ಮೇಣರ(ರೆ)ನೇಱಿಲ ಪಣ್ಣ ಬಣ್ಣವಾದೊಡೆ ಪುಣ್ಣಂ ಪರಿಸೇಕಿಪ್ಪುದು ವೈಶ್ವಾನರಚೂರ್ಣಮನಿಡಲ್ಕೆವೇಡ ತದನಂತರದೊಳ್ (ಅಶ್ವಶಾ. ೧೨-೧೨). [ಸಂ.]

**ಸುರಧೇನು** (ನಾ). ದೇವಲೋಕದ ಹಸು; ಕಾಮಧೇನು: "ಸುರಧೇನುಗಾ ಸಗ್ಗದುಱು" (ಶಬ್ದಮಂ. ೧೧); ಕಲ್ಪತರು ಸುರಧೇನುಗಳು ಬಂದ ಹರುಷದಿಂ . . . ಮಾಳ್ಪೆ ನಾ ಕಜ್ಜಮಂ (ತಿರುರ. ದೇ. ೧೧-೭); ಕಲ್ಲು ಪರುಷಗಳೆಲ್ಲ ಪುಟ್ಟಿದ ಹುಲ್ಲುಗಳು ರಾಜಾನ್ನ ಕೂಪವು ಯೆಲ್ಲ ಸಿದ್ಧರಸಂಗಳಾವುಗಳೆಲ್ಲ ಸುರಧೇನು (ಕಾಶಿರಾ. ೧-೨೨). [ಸಂ.]

**ಸುರನಂದನ** (ನಾ). ದೇವಲೋಕದ ಉದ್ಯಾನವನ: ಈ ಬನಂ ಸಂದ ಸುರನಂದನಮನೇಳಿಕುಂ (ರಾಮಾಶ್ವ. ೫೫-೧). [ಸಂ.]

**ಸುರನಗ** (ನಾ). ದೇವಲೋಕದ ಬೆಟ್ಟ; ಮೇರುಪರ್ವತ: ಬಹುರತ್ನಖಚಿತ ಸುರನಗಮಹಿಮೆಯನಾಳ್ದತ್ತು ವಿನತಸುರಸಂದೋಹಾ (ಜನಾಲ. ೩೩-೩೩); ಸುರನಗಮಂ ನಿಮಿರ್ಚಿ ತೆರೆಸುತ್ತಿದನಲ್ತೆ ಸರೋಜಸಂಭವಂ (ಚಂದ್ರಪು. ೧-೧೧೪). [ಸಂ.]

**ಸುರನಚ್ಚಣಿ** (ನಾ). ದೇವಲೋಕದ ನರ್ತಕಿ; ಅಪ್ಸರೆ: ಅಚ್ಚರಸಿಯರ ಮೇಳದಲಿ ಸುರನಚ್ಚಣಿಯು ಭೂಮಿಯನು ಮೆಟ್ಟದೆ ಮೆಟ್ಟುತಿರೆ (ಸಾಳ್ವಭಾ. ೩೨-೩೦). [ಸುರ + ನಚ್ಚಣಿ]

**ಸುರನದಿ** (ನಾ). ದೇವಲೋಕದ ನದಿ; ದೇವಗಂಗೆ: ಸುರನದಿಯವಗಾಹದೆ ಸಿಂಧುರವೆಲ್ಲಂ ತೊಳೆದು ಪೋಗೆ (ಕಾದಂಪೂ. ೨೮೦); ಅಬಲುಗೊಂಡಂಗೆ ಸುರನದಿಯಿರ್ಪಂತೆ (ನಂಬರ. ೧೮-೫೧). [ಸಂ. ಸುರನದೀ]

**ಸುರನದೀಜ** (ನಾ). ದೇವಗಂಗೆಯಲ್ಲಿ ಹುಟ್ಟಿದವನು; ಭೀಷ್ಮ: ಗುರುಕೃಪ ಸುರನದೀಜರು ಮುಳುಗಿದರು ಪುಳಕಾಂಬುಪೂರದಲಿ (ಕುವ್ಯಾಅ. ೭-೪೨). [ಸಂ.]

**ಸುರನಾಥೇಜ್ಯ** (ನಾ). [ಜ್ಯೋತಿ] ಗುರುಗ್ರಹ: ಸುರನಾಥೇಜ್ಯಾಂಶದೊಳ್ ಜನಿಸಿದಳ್ ಸಾಧ್ವಿ (ಜಾತತಿ. ೨೨-೩). [ಸಂ.]

**ಸುರನಾರಿ** (ನಾ). ದೇವಲೋಕದ ಹೆಂಗಸು; ಅಮರಸ್ತ್ರೀ: ಸುರನಾರಿಯರೆಲ್ಲಂ . . . ವರಷೋಡಶಕಲ್ಪದೊಳಂ ಚರಿಯಿಸುವರ್ (ಸುಕುಮಾ. ೧೧-೭೨); ಇಲ್ಲಿ ಮನುಜಸ್ತ್ರೀಯ ಮೇಳವಲ್ಲಿ ಸುರನಾರಿಯರ ರತಿ ನಿಮಗೆ (ಕುವ್ಯಾಗ. ೧-೨೧). [ಸಂ. ಸುರನಾರೀ]

**ಸುರಪ** (ನಾ). ೧. ದೇವತೆಗಳ ಒಡೆಯ; ಇಂದ್ರ: ಸುರಪಂ ಮಾಡಿದನೂನದಿವ್ಯಪರಿನಿರ್ವಾಣೋದ್ಯಕಲ್ಯಾಣವಿಸ್ತರಪೂಜಾತಿಶಯಕ್ಕಮಿಂತಿದೆನಸುಂ ಮೇಲೆಂಬಿನಂ ಮಾಡಿದಂ ಪರಮಾರ್ಹತ್ಪದಪೂಜೆಯಂ (ಪುಷ್ಪಪು. ೧೪-೫೫). ೨. [ಛಂದ]ಒಂದು ಮಾತ್ರಾಗಣ: ಸುರಪ ಶೀತಕರಾಗ್ನಿ ಮಾರುತ ಭಾನುಯುಗ್ಮಗಣಂಗಳಿಂ ಪರದೊಳೊಪ್ಪೆ . . . ತರಳಲೋಚನೆ ನಾಮದಿಂ ತರಳಂ (ಛಂದೋಂಬು. ೨-೧೭೧). [ಸಂ.]

**ಸುರಪಟಹ** (ನಾ). ದೇವಲೋಕದ, ಒಂದು ಬಗೆಯ ತಮಟೆಯಂತಹ ವಾದ್ಯ; ದೇವಪಟಹ: ಸುರಪಟಹ ಪೇಟಕಂ ಹೇಮಾಭ್ರಕ ಧ್ವತಿಯಿನಷ್ಟೆಗೆಯ್ದುದೆನಿಸೆಯುಂ (ಮಲ್ಲಿಪು. ೧೪-೨೦೨). [ಸಂ.]

**ಸುರಪತಿ** (ನಾ). ೧. = ಸುರಪ ೧: ಸುರಪತಿಯು ಪೊಗಟ್ಟಗಮಿಾ ನರನಾಥಂ ಸಚ್ಚರಿತ್ರದೊಳ್ ಭಾವಿಪೊಡುರ್ವರೆಯೊಳ್ ನೂರ್ಮಡಿ ಪಿರಿಯಂ (ಧರ್ಮಾಮೃ. ೪-೧೭೬); ಸುರಪತಿಗೆ ಕುಶಲಮೇ ಪಂಕರುಹಭವಂ ಕ್ಷೇಮಿಯೇ (ಗಿರಿಕ. ೭-೨೪). ೨. ಒಂದು ಬಗೆಯ ಪಕ್ಷಿ; ಗೂಬೆ: ಸುರಪತಿಯ ಬೆಳ್ಗಡಿಯ ರಥಚರಣದ . . . ಭಾಸುರವಾದ್ಯದ ಪೆಸರ ಖಗಕುಳಂ ಕರಮೆಸೆಗುಂ (ರಾಜಶೇ. ೫-೭೦). [ಸಂ.]

**ಸುರಪಥ** (ನಾ). ದೇವತೆಗಳು ಸಂಚರಿಸುವ ಮಾರ್ಗ; ಆಕಾಶ: ಶ್ರೀಶಿವ ಮಹೇಶ . . . ಸುರಪಥ[ಪಾಠಾಂ. ಸತ್‌ಪಥ]ಸುಕೇಶ (ಗುರುಚಾ. ೧-೧). [ಸಂ.]

**ಸುರಪದ** (ನಾ). ದೇವೇಂದ್ರನ ಪದವಿ; ಇಂದ್ರನ ಸ್ಥಾನ: ಕರುಳ ತಂತಿಯುಪದೇಶದಿಂದೆ ಅಸುರನಂದು ಹಡೆಯನೆ ಸುರಪದವ (ಬಸವ. ೬೫೬). [ಸಂ.]

**ಸುರಪದವಿ** (ನಾ). = ಸುರಪದ: ಆ ಕುಸುಮಮಂ ಪಾರ್ವತೀಶಂ ಸ್ವೀಕರಿಸಿ ತುಂಟಾದಡಾ ಪುಷ್ಪಾಕಲಿತಫಲದಿಂದ ಸುರಪದವಿಯಾ [ಪಾಠಾಂ. ಸುರಪದವಾ]ಯಿತು (ಬಸಪು. ೪೧-೧೬). [ಸಂ.]

**ಸುರಪರಿಪು** (ನಾ). ೧. ಇಂದ್ರನ ಶತ್ರು. ೨. ಗರುಡ: ''ಸುಪರ್ಣಂ . . . ವೈನತೇಯಂ ಸುರಪರಿಪು ಗರುತ್ಮನೆನಲ್ಕೆ ಗರುಡನಕ್ಕುಂ'' (ಮಂಗರಾ. ೭-೨೧). [ಸಂ.]

**ಸುರಪರ್ಣೆ** (ನಾ). ಒಂದು ಬಗೆಯ ಸಸ್ಯ; ''ಕಂಪಿಲ್ಯ'' (ಪಂಡಿತ. ೨೬೫). [ಸಂ. ಸುರಪರ್ಣೀ]

**ಸುರಪರ್ಣಿಕೆ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು; ಸುರಹೊನ್ನೆ; ಪುನ್ನಾಗ: ''ಪುನ್ನಾಗಃ, ಸುರಪರ್ಣಿಕಾ-ಈ ೨ ಸುರಹೊನ್ನೆ'' (ಹಲಾಯು. ೩೫ -೫೫). [ಸಂ. ಸುರಪರ್ಣಿಕಾ]

**ಸುರಪಾಲಕ** (ನಾ). ದೇವಲೋಕದ ಪಾಲಕ; ಇಂದ್ರ: ವಿಕಳಬಲನಿವನೇನು ಭಾಳಾಂಬಕನೊ ಬಲಿಬಂಧಕನೊ ಸುರಪಾಲಕನೊ (ಕುವ್ಯಾಕ. ೧೨-೫). [ಸಂ.]

**ಸುರಪುನ್ನಿಕೆ** (ನಾ). = ಸುರಪರ್ಣೆ: ಮಾಲತೀ ಸುರಪುನ್ನಿಕಾ ನವಮಾಲಿಕಾ ಕರವೀರ . . . ಚಂದನದ್ರುಮತತಿಯ ಸಾಲ್ವಿಡಿದು (ಬಸಪು. ೨೬-೩೬). [< ಸಂ. ಸುರಪರ್ಣಿಕಾ]

**ಸುರಪುರ** (ನಾ). ದೇವತೆಗಳ ಪಟ್ಟಣ; ಸ್ವರ್ಗ : ತಿಳಿದನಿತು ತೆಱೆಯುಮಂ ಕಾದಳಿಪಿಲ್ಲದೆ ನೆಗೞ್ದರೆಯ್ದುವಸ್ಸುರಪುರಮಂ (ಸೌಇಇ. XX , ೪೬-೩೯: 1074); ಸುರಪುರದಂತೆ ದಿವ್ಯಸುಮನೋಗಣನಂದಭಾಷಿ ದೈತ್ಯಸಂಹರ (ವೃಷವಿ. ೧೪-೫). [ಸಂ.]

**ಸುರಪುರೋಹಿತ** (ನಾ). ದೇವತೆಗಳ ಪುರೋಹಿತ; ಬೃಹಸ್ಪತಿ: ಸುರಪುರೋಹಿತನನುಜನಂಗಿರಸಸೂನು ಮುನಿವರಮೌಳಿ ಸಂವರ್ತನೆಂದೞಿದು ಬಂದು (ಜೈಮಿಭಾ. ೫-೩೨). [ಸಂ.]

**ಸುರಪೂಜ್ಯ** (ನಾ). ದೇವತೆಗಳಿಂದ ಪೂಜಿಸಲ್ಪಡುವವನು: ಸುರಪೂಜ್ಯಂಗಾಕ್ಷೇಮಂಕರಂಗೆ ಪುಟ್ಟಿದುದು ತನ್ಮನಃಪರ್ಯಾಯದಿಂದೆರಡನೆಯ ಸಮಯದೊಳ್. . . ಕೇವಳಬೋಧಂ (ಶಾಂತಿಪು. ೮-೧೫೪); ಸುರಪೂಜ್ಯಲಿಂಗತತಿ ಸಿದ್ಧಪೂಜ್ಯಭಾಸುರಲಿಂಗಪೀಠದೊಳೆ ದೇವಪೂಜ್ಯ. . .ಸೌಂದರಲಿಂಗರಾಜಿ ನೆಲಸಿರ್ದುದು (ವೃಷವಿ. ೩೯-೨೨). [ಸಂ.]

**ಸುರಭವನ** (ನಾ). ದೇವಾಲಯ; ಗುಡಿ: ಶರನಿಧಿ ತನ್ನೊಳ್ ಪಿರಿದುಂ ಮಚ್ಚರಿಪುದುದ್ದಗುಣ್ಪಿಂದವರೊತ್ತರಿಪಂ ಸುಮಂತ್ರಿವೀರಂ ಸುರಭವನತಟಾಕದಿಂದಮಿದು ಮಂತ್ರಫಳಂ (ಎಕ. V, ಬೇಲೂರು. ೧೭೫-೫; 1186). [ಸಂ.]

**ಸುರಭಿ** (ಗು). ೧. ಒಳ್ಳೆಯ ವಾಸನೆಯ; ಸುಗಂಧಯುಕ್ತವಾದ: ಸುರಭಿಕುಸುಮದಾಮಮಂ ಬಾಡಿ ನೀರೋಡೆ (ಶಾಂತಿಪು. ೭-೩೮). ೨. ಒಪ್ಪಬಹುದಾದ; ಮೆಚ್ಚಬಹುದಾದ. ೩. ಪ್ರಕಾಶಮಾನವಾದ; ಸುಂದರವಾದ. ೪. ಸ್ನೇಹದ; ಮೈತ್ರಿಯ. ೫. ಪ್ರಖ್ಯಾತವಾದ. ೬. ತಿಳಿದ; ಅರಿವುಳ್ಳ. ೭. ಒಳ್ಳೆಯ; ಉತ್ತಮವಾದ. (ನಾ). ೮. ಸುಗಂಧ; ಸುವಾಸನೆ: ಹರಿಣಧರಂ ಸೊಗಯಿಸಿದಂತಿರೆ ಕುಸುಮಿತ ಚೂತವಿತತಿ ಸೊಗಯಿಸಿತೆನಸುಂ ಸುರಭಿಸುಮನಸ್ಸಿದೋಷಾಕರವಿಲಸಿತಮಪ್ಪುದಿಂತು ಯುಕ್ತಾಯುಕ್ತಂ (ಕವಿರಾ. ೩-೩೩); ಅಭ್ಯುದಿತವಾದುದು ಸರಸಕೈರವರಾಜಿ ಕೋಮಲ ಸರಸಿರುಹವನವಾದುದಾಕ್ಷಣ ಸುರಭಿ ನಿರ್ಮುಕ್ತ (ಕುವ್ಯಾಕ. ೮-೧೫). ೯. ದೇವಲೋಕದ ಹಸು; ಕಾಮಧೇನು: ''ಸುರಭಿ ಸುರಪಶು ಧೇನುವೆನೆ ಕಾಮಧೇನುವಿಗೆ ಪೆಸರೆನಿಕ್ಕುಂ'' (ಮಂಗರಾ. ೯-೩೦); ಸುರಭಿದೇವತೆಯೆಂಬ ಕಾಪಿನ ಮಾಣ್ದುದು (ಪಂಪಭಾ. ೧-೨೯); ಪರಿವಾರಸುರಭಿಯೆನಿಸುವ ನರಸಿಂಹ ನರೇಂದ್ರಮಹಿಷಿ ಚಾಗಲೆ (ಎಕ. V, ಬೇಲೂರು. ೧೯೩-೫೬; 1160); ಪರುಷವಂಗಣದ ಕಲು ಸುರಭಿ ಕಱಹಂ ಕಲ್ಪತರು ವನಂ (ಹಚಕಾ. ೨-೧). ೧೦. ಹಸು; ಗೋವು: ''ರೋಹಿಣಿಯನಡ್ವಿಯರ್ಜುನಿ ವೃಷೆ ಗೋ ವೃಷಭವಾಹಿನಿಯೆನೆ ಹಸು ಸೌರಭೇಯಿಯೆನೆ ಸುರಭಿಯದು'' (ಮಂಗರಾ. ೫೩-೩); ಸುರಭಿಗಳ ತೊರೆದ ಮೊಲೆಗಳನುಣ್ಬವಱ ಮಱಿಗಳಂ ಪೋಗೆ ನೂಂಕಿ (ಪಂಪಭಾ. ೧-೧೧೫ ವ); ಕಱೆದ ಸುರಭಿಗಪ್ಪುದೆ ಕೊಱತೆ (ಜೈಮಿಭಾ. ೧-೭). ೧೧. ಚೆಲುವು; ಸೌಂದರ್ಯ. ೧೨. ತಿಳಿದವನು; ಜ್ಞಾನಿ. ೧೩ . ಸರಸ್ವತಿ. ೧೪ . ಒಳ್ಳೆಯ ಗುಣವಿರುವವನು. ೧೫. ವಸಂತಋತು: ಸುರಭಿಯಂದದೆ ಬಂದ ಸುರಭಿಸಮಯದ ಶ್ರೀಯ ಬರವಂ ವನಮಹತ್ತರನ ಬಿನ್ನಪದಿನಱಿತಸೇನ ಚಕ್ರವರ್ತಿಯಱಿದು (ಚಂದ್ರಪು. ೭-೬೯ ವ). ೧೬. ಕಾಮ; ಮನ್ಮಥ. ೧೭. ಹೂವು. ೧೮. ಕಾಡು. ೧೯. ಆಹಾರ. ೨೦. ಕಳ್ಳು; ಮದ್ಯ. ೨೧. ಸುವಾಸನೆಯ ಎಲೆಯುಳ್ಳ ಒಂದು ಬಗೆಯ ಸಸ್ಯ; ಮರುಗ: ''ಮರುಗವದು ಸುರಭಿ ಗಂಧವತಿಯೆನಿಸಿಕ್ಕು'' (ಮಂಗರಾ. ೩೯-೨೭). ''ಮರುಗ ಸುಗಂಧ ಭಾರತಿ ಮನೋಜ್ಞ ವಸಂತ ಲತಾಂತ ಕಂತು ಸೌಂದರ ಪಶು ಕಾಮಧೇನು ವಿಪಿನಾನ್ನ ಗುಣಾಗ್ರಣಿ ಮದ್ಯಮೆಂಬಿವು ಸುರಭಿಯೆನಿಕ್ಕು'' (ನಾನಾರ. ೩೧). [ಸಂ.]

**ಸುರಭಿಗಂಧತ್ವ** (ನಾ). ಪರಿಮಳಭರಿತವಾಗಿರುವಿಕೆ: ಸುರೂಪತೆಯುಂ ಸುರಭಿಗಂಧತ್ವಮುಂ . . . ಪ್ರಿಯ ಹಿತವಾದಿತ್ವಮುಮೆಂಬ ದಶವಿಧ ಸ್ವಭಾವಾತಿಶಯ ಸಂಪನ್ನನುಂ (ಅಜಿಪು. ೫-೯೧ ವ). [ಸಂ.]

**ಸುರಭಿಜಲ, ಸುರಭಿಜಳ** (ನಾ). ಸುವಾಸನೆಯ ನೀರು; ಪನ್ನೀರು: ಸುರಭಿಜಲಂಗಳಿಂದಮಭಿಷಿಕ್ತನನಾ ನೃಪರೂಪಚಂದ್ರನಂತರದೊಳೆ ಮಾಡಿ (ಕಾದಂಉ. ೭೮೩); ಸುರಭಿಜಲದಿಂದಮೇನಾ ತರುಣಿಯನೊಡಗೊಂಡು ಪೋಪುದು (ಪಂರಾಮಾ. ೧೪-೬೩); **ಸುರಭಿಜಳ**: ಕೋಮಳೆಯರ್ಜಳದೇವತೆಯರ ವಿಳಾಸಮಂ ತಳೆದು ಸುರಭಿಜಳಮಂ ಸುರಿದರ್ (ಕಾದಂಪೂ. ೭೬). [ಸಂ.]

**ಸುರಭಿಜಳ** 'ಸುರಭಿಜಲ' ನೋ.

**ಸುರಭಿತನ** (ನಾ). ಸುವಾಸನೆಯನ್ನು ಹೊಂದಿರುವಿಕೆ: ತರಣಿ ಪರಿಮಳಿಸಿದನು ಪವನನ ಸುರಭಿತನವಚ್ಚರಿಯೆ (ಕುವ್ಯಾವಿ. ೧೦-೮೩). [ಸುರಭಿ + - ತನ]

**ಸುರಭಿದ್ರವ್ಯ** (ನಾ). ಸುವಾಸನೆಯ ವಸ್ತು; ಸುಗಂಧದ್ರವ್ಯ: ಸುರಭಿದ್ರವ್ಯ ಪ್ರಮೋದಂಗಳೆಂಬಿವು ಸಾರ್ಗುಂ (ಜಾತತಿ. ೯-೨೭); ದಿವ್ಯಸುರಭಿದ್ರವ್ಯ ಸಮ್ಮಿಶ್ರಿತಂಗಳನಪಾರಕನಕಭೃಂಗಾರಶತಂಗಳೊಳ್ ತೀವಿ ತಂದು ಸಂಧಿಸುವುದುಂ (ಮಲ್ಲಿಪು. ೧೨-೧೫೬). [ಸಂ.]

**ಸುರಭಿದ್ರುಮ** (ನಾ). ಸುಗಂಧಪೂರಿತವಾದ ಮರ (?): ಸುರಭಿದ್ರುಮಂಗಳಿಂ ಧನಪರಿಕರದಿಂ ದಹಿಸಿ ಚಕ್ರಿಯಂ ನೀರಿೞಿದಾ ನರಪಾಲರ್ ದಹಿಸಿ ಸೀದ ಸುರಸಿಂಧು ಸುತಾದಿ ಸಕಲಮಹಿಭೃದ್ಗಣಮಂ (ಮಹಾನೇ. ೧೩-೯೩). [ಸಂ.]

**ಸುರಭಿನಿಶ್ವಾಸ** (ನಾ). ೧. ಪರಿಮಳಭರಿತವಾದ ಉಸಿರು: ಏೞುವರೆ ದಿವಸವಮುಮ ಸುರಭಿನಿಶ್ವಾಸಾವಧಿಯಾಗೆಯುಂ (ಶಾಂತಿಪು. ೭-೩೭. ವ). ೨. ಸುಗಂಧಪೂರಿತವಾದ ಉಸಿರನ್ನು ಹೊಂದಿರುವವನು: ದಶಮಾಸಾವಧಿ ನಿರ್ಯತ್ಸುರಭಿನಿಶ್ವಾಸನುಂ . . . ಆಗಿ (ಶಾಂತಿಪು. ೧೦-೯೪ ವ). [ಸಂ.]

**ಸುರಭಿನಿಶ್ವಾಸತೆ** (ನಾ). ಪರಿಮಳಭರಿತವಾದ ಉಸಿರನ್ನು ಹೊಂದಿರುವಿಕೆ: ಅತಿಶಯರೂಪತೆಯುಂ ಅತ್ಯಂತಸುರಭಿನಿಶ್ವಾಸತೆಯುಂ . . . ತನಗನುಸಂಗತಮಾಗೆ (ಶಾಂತಿಪು. ೧೦-೯೪ ವ). [ಸಂ. ಸುರಭಿನಿಶ್ವಾಸತಾ]

**ಸುರಭಿಪರಿಮಳ** (ನಾ). ಸುವಾಸನೆ; ಸುಗಂಧ: ಜಳರುಹನಾಭನ ನಾಭಿಯ ಜಳಬುದ್ಬುದದೊಳಗೆ ಸುರಭಿಪರಿಮಳ ಮಿಳಿತೋಲ್ಲುಳಿತಾಳಿಜಲ[ಜ]ಮಾಯ್ತು (ಪಂಪಭಾ. ೧-೫೯); ಮಾಲೆಗಾಱರ್ ತಂದವಟ್ಟೆಸಿದ ಸುರಭಿಪರಿಮಳಾಸವಾಸಕ್ತಭ್ರಮದ್ಭ್ರಮರಮಾಲಾವಿರಾಜಿತ ಸುಮನೋಹರ ಸುಮನೋಮಾಲೆಗಳಂ ತುಱುಂಬಿಕೊಂಡು (ಸುಕುಮಾ. ೧೧-೩೨ ವ). [ಸಂ. ಸುರಭಿಪರಿಮಲ]

**ಸುರಭಿಮೃತ್ತಿಕೆ** (ನಾ). ಸುವಾಸನೆಯ ಮಣ್ಣು (?): ಬಸಿಱ ಮುಗಂಗಿಲ್ಲಿವರಂ ವಸುಧಾತಳಮೇಕಭೋಗ್ಯಮೆಂದಱುಪುವವೊಲ್ ವಸುಧೆಯ ನಾಲ್ಕುಂ ಕಡೆಯೆಡೆಯ ಸುರಭಿಮೃತ್ತಿಕೆಯನಟ್ಟಿಯಿಂ ಸೇವಿಸುವಳ್ (ಮಲ್ಲಿಪು. ೪-೧೦೨). [ಸಂ. ಸುರಭಿಮೃತ್ತಿಕಾ]

**ಸುರಭಿಲಿತ, ಸುರಭಿಳಿತ** (ಗು). ಸುವಾಸನೆಯಿಂದ ಕೂಡಿದ: ಸುರಭಿಲಿತ ಸುಯ್ಗಂಪಿನಧರರೋಚಿಯ ತಣ್ಪ ಬೆರೆದ ನೀರೀಂಟಲೆದೆಯಾರಿಬರಲಾ ಪಥಿಕ ಬೆರಗಿಂದ ದಿಟ್ಟಿಸಿದನು (ವಂಕಾರಾ. ೧-೫-೫೬). **ಸುರಭಿಳಿತ**: ಸುರಭಿಳಿತ ನಾಸಿಕದ ಗಂಧಪರಿಯಂ ಕಂಡು ಪೆರಸಾರಿ ರೋಲಂಬತತಿಗಳಿತ್ತರಗಳಲಿ ಮರುಗುತ್ತಲಿಹವೆಂಬ ತೆರದಿ ಕುಂತಲರಾಜಿ ರಾಜಿಸುತ್ತಿರೆ (ವಂಕಾರಾ. ೧-೪-೪೮). [ಸಂ. ?]

**ಸುರಭಿಶರ** (ನಾ). ಹೂವನ್ನು ಬಾಣವಾಗಿ ಉಳ್ಳವನು; ಮನ್ಮಥ: ''ಸುರಭಿಶರಂ ಕಮ್ಮಂಗಣೆಯಂ'' (ಚತುನಿ. ೧೬). [ಸಂ.]

**ಸುರಭಿಶಾಲೆ** (ನಾ). ಸುವಾಸನೆಯ ವಸ್ತುವಿರುವ ಮನೆ: ಆ ವನಂಗಳಲ್ಲಿಯ

ಚಿತ್ರಶಾಲೆ ಚಂದ್ರಶಾಲೆ ಶಿಶಿರಶಾಲೆ ಸುರಭಿಶಾಲೆಗಳಲ್ಲಿ. . . ತರುಗಳ ತಣ್ಣೆಳಲ್ಗಳಲ್ಲಿ (ವಿವೇಕ. ೧೭೦). [ಸಂ. ಸುರಭಿಶಾಲಾ]

**ಸುರಭಿಲಿತ** 'ಸುರಭಿಲಿತ' ನೋ.

**ಸುರಭುವನ** (ನಾ). ದೇವತೆಗಳ ಲೋಕ; ಸ್ವರ್ಗ: ಸುರಭುವನಭವನಮೂಲಸ್ತಂಭಾ (ಜಿನಾಲೆ.೨೪). [ಸಂ.]

**ಸುರಭೂಜ** (ನಾ). ದೇವಲೋಕದ ವೃಕ್ಷ; ಕಲ್ಪವೃಕ್ಷ: ಅದು ಸುರಭೂಜ ವಲ್ಕವಸನದ್ವಯಂ (ಕಾದಂಪೂ. ೬೯೨); ಅತ್ಯುನ್ನತಸುರಭೂಜವನಿಲ್ಲೆ ನೆಲದಿ ಕಂಡೆನು (ಅಮತಂ. ೨೯-೧೬). [ಸಂ.]

**ಸುರಭೂಧರ** (ನಾ). ದೇವಲೋಕದ ಬೆಟ್ಟ; ಮೇರುಪರ್ವತ: ಸುರಭೂಧರಮಂ ಬೆಳ್ಳಿಯ ಗಿರಿಗಳ್ ಬಳಸಿರ್ದುವೆನಿಸಿ ಚೆಂಬೊನ್ನ ರಥೋತ್ಕರಮಂ ಸುತ್ತಿರ್ದುವು ಕರಮೊಪ್ಪಿರೆ ಖಚರರಾಜರೆಸೆವ ವಿಮಾನಂ (ಧರ್ಮಾಮೃ. ೮-೨೨೩); ವರಜಟಾಮಾರ್ಗ ದಿಂದವೆ ಧರಿಸಿದೊಡೆ ಪೋಗಿ ಸುರಭೂಧರಾಗ್ರದಿಂದವೆ ಚತುರ್ಮುಖನಾಗಿ (ವೀಶ್ವಪು. ೩-೨೩-೧೩). [ಸಂ.]

**ಸುರಭೂರುಹ** (ನಾ). ದೇವಲೋಕದ ವೃಕ್ಷ; ಕಲ್ಪವೃಕ್ಷ: ಸುರಭೂರುಹಮಿರೆ ಮತ್ತಿನ ಮರನಂ ಜಲರಾಶಿಯಿರೆ ಕುಳುಂಪೆಯ ನೆರವಂತೆ (ಆದಿಪು. ೯-೧೦೪); ಚಿಂತಾಮಣಿ ಕಾಮಧೇನು ಸುರಭೂರುಹಮೆಂಬಿವನೇಕೆ ಮಾಡಿದಂ ತಾಮರಸೋದ್ಭವಂ (ಅಜಿಪು. ೧-೬೨). [ಸಂ.]

**ಸುರಭೇರಿ** (ನಾ). ದೇವದುಂದುಭಿ; ಸುರತೂರ್ಯ: ಸುರಭೇರೀರವಮಾಶಾಂತರಮಂ ತೀವಲ್ಕೆ (ತ್ರಿಪುವಿ. ೬೨-೧೧). [ಸಂ. ಸುರಭೇರೀ]

**ಸುರಮ, ಸುರಮಾ, ಸುರುಮ, ಸುರ್ಮಾ** (ನಾ). ೧. (ಗಂಧಕದಂತಹ) ಒಂದು ಬಗೆಯ ಮೂಲಲೋಹ: ತಾಮ್ರ, ಸೀಸ, ಸತು, ಪಾಷಾಣ ಮತ್ತು ಸುರಮ (ಅಂಗಿಮೊನಿ) ಅದುರುಗಳನ್ನೂ . . . ಒಳಗೊಂಡಿದೆ (ಕವಿಕೋ. I, ೯೩೨). ೨. ಕಾಡಿಗೆ; ಅಂಜನ: ಸುಣ್ಣ, ಸುರಮ, ಅಡಕೆ ಎಲೆ ದೊರೆಯ ಮನವಿ ಸೆಳೆವ ಆಟ (ಸುನೀತ. ೩೬-೧೦). **ಸುರಮಾ:** ೨. ಸುರಮಾ ಮುಖಚೂರ್ಣ . . . ತಲೆತಲಾಂತರಗಳಿಂದ ಇಳಿದುಬಂದವು (ಸುತ್ತುಮು. ೭೪). **ಸುರುಮ:** ೧. ಸುರುಮ ಸೇರು ೧ (ಸಕಪ್ಪ. ೨೧೯). **ಸುರ್ಮಾ:** ೨. ಕಣ್ಣೊಳಗ ಹಾಕುವ ಸುರ್ಮಾ ಎಂಬ ಕರೆಪುಡಿಯು ಗಲೀನವಿರುತ್ತದೆ (ಮುಂಬಯಿ. ೪-೨೨); ದರಿಯಾಬೀಬಿಯು ಔರಂಗಜೇಬನ ಅಂತಃಪುರಕ್ಕೆ ಅತ್ತರು ಸುರ್ಮಾ ಮುಂತಾದುವುಗಳನ್ನು ಮಾರುವುದಕ್ಕೆ ಹೋಗುತ್ತ . . . ಇದ್ದಳು (ಬಂಕಿಮ. ೨೧೭). [<— ಮರಾ. ಸುರಮಾ, ಸುರ್ಮಾ]

**ಸುರಮಣಿ** (ನಾ). ದೇವಲೋಕದ ರತ್ನ; ಚಿಂತಾಮಣಿ: ಸುರಮಣಿಯಂ ಸುರ ತರುವಂ ಪರಿಶ್ರಮಂಗಳನುಮೆಚೆಯದೀವೆನೆನುತ್ತಂ ಹರಭಕ್ತರೆಜೆವ ಧನಮಂ ಪಿರಿದೀವುತ್ತಿರ್ಪನಚ್ಯುತಾಹ್ವಯಭಕ್ತಂ (ತ್ರಿಪುವಿ.೫೪-೪). [ಸಂ.]

**ಸುರಮಹೀಜ** (ನಾ). ೧. ದೇವಲೋಕದ ವೃಕ್ಷ; ಕಲ್ಪವೃಕ್ಷ. ೨. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ: (೫). [ಸಂ.]

**ಸುರಮಹೀಜನ** (ನಾ). ದೇವಲೋಕದ ಜನ; ದೇವತಾವರ್ಗ: ಸುರಮಹೀಜನ ರಾಜ ರುದ್ರರ ಚರಿತೆಗಳಿಗಿಮ್ಮಡಿಯೆನಿಸಿ ಸತ್ಪುರುಷನಿಲ್ಲಿಗೆ ಸಲಹ ಬಂದನು ಬಸವ ವಿಭುವೆನುತ (ಬಸಪು. ೫-೬೪). [ಸಂ.]

**ಸುರಮಹೀರುಹ** (ನಾ). = ಸುರಮಹೀಜ ೧: ಸುರಮಹೀರುಹದೋಳಿಯಿಂ ಸಹಕಾರಭೂಜನಿಕಾಯದಿಂ ಸರಸಿಜಾಕರದಿಂ (ಧರ್ಮಾಮೃ. ೩-೨೩೬). [ಸಂ.]

**ಸುರಮಾ** 'ಸುರಮ' ನೋ.

**ಸುರಮಾಯಿ** (ನಾ). ಒಂದು ಬಗೆಯ ಬಣ್ಣ; ಬೂದುಬಣ್ಣ: ರಾಜಿಪ ಸುರಮಾಯಿ ಹಳದಿ ಕೆಂಪುಗಳ ಬಿರುದಿನ ಪಲ್ಲವ ಸತ್ತಿಗೆ ಮೆಜೆದುವು (ಕಂಠವಿ. ೨೦-೨೧); ಸುರಮಾಯಿ ಝುಲ್ಲಿಯ ಬಿರುದಿನ ಕುದುರೆಯ ನೆರವಿಯೊಳಗೆ ಬಹನಾರ (ಕಂಠವಿ. ೨೫-೭೫). [<— ಹಿಂ. ಸುರಮಾಈ]

**ಸುರಮಾರ್ಗ** (ನಾ). ದೇವತೆಗಳ ಹಾದಿ; ಆಕಾಶ: ಸುರಮಾರ್ಗಪರಿಭ್ರಮಣ ದಿನರಿದಿನೆಸಿಕುಂ ತ್ರಿಪುರಮನಿತ ಬಹುರೂಪಗತಿಸ್ಫುರಿತಂ ಸೌಭಪುರಂ (ಜಗವಿ. ೧೪-೮೭); ಸುರನದಿಯಲ್ಲಿ ಮಿಂದು ಸುರಮಾರ್ಗಕಚೌಘಮನೆಯ್ದೆ ಬಿರ್ಚಿ. . .ನೆಜೆ ನಿಂದು ನಿಟ್ಟಿಪಳ್ (ರಾಜಶೇ. ೩-೫). [ಸಂ.]

**ಸುರಮಿಥುನ** (ನಾ). ದೇವದಂಪತಿಗಳು; ಅಮರ ದಂಪತಿಗಳು: ಸುರಮಿಥುನಂ ಸುರದ್ರುಮದ ತಣ್ನೆಟಿಲೊಳ್ ಖಚರದ್ವಯಂ ಮನೋಹರಮಣಿಕೂಟದೊಳ್ . . . ನಲಿದು (ಮಲ್ಲಿಪು. ೧೦-೧೦೯); ತೀವಿದ ತಾವರೆಗೊಳಗಳು ಪಲವಾ ಪಾವನವನದ ಮಧ್ಯದೊಳು ಆವ ದಿನವು ತೊಲಗದೆ ಸುರಮಿಥುನಕ್ಕೆ ತಾವಾವಾಸವಾಗಿಹವು (ತ್ರಿಪುಸಾಂ. ೭-೬೬). [ಸಂ.]

**ಸುರಮುನಿ** (ನಾ). ದೇವಲೋಕದ ಋಷಿ; ನಾರದ: ಸುರಮುನಿಯು ಪೇಳಿ ಪೋಗಲ್ಕೆ ನಿಶಿಯಲ್ಲಿ ಶಂಬರ ವಾಯುರೂಪದಿಂ ದ್ವಾರಕೆಯನೊಳಪೊಕ್ಕು (ಪ್ರಾಚರಾ. ೧೧-೩೦). [ಸಂ.]

**ಸುರಮ್ಯ** (ನಾ). ಚೆಲುವಾದುದು; ಮನೋಹರವಾದುದು: ಭರತಕ್ಷೇತ್ರಲಲಾಮ ಮಪ್ಪುದು ಸುರಮ್ಯಂ ನಾಡು ತತ್ಪೌದನಪುರಂ (ಶಾಂತಿಪು. ೫-೨೨). [ಸಂ.]

**ಸುರಯಿ** 'ಸುರಗಿ₁' ನೋ.

**ಸುರಯಿಕ್ಕು** (ಕ್ರಿ). (?): ಕಲ್ಲಿಂದಂ ನೀರು ಹರಿದ ಸಾಲಿಂದಂ [ಅಚ]ಳದೇವನ ಗಡಿಯಿಂದ ಸುರಯಿಕ್ಕಿದ ಕಲ್ಲಿಂದಂ ಬಡಗಲು ಪಡುವಲು ಮಕ್ಕಿಯ ಕುಂನ್ಯಂಣ್ಣ ಕೋಟಿನಾಥ ಭ[ಟ್ಟ] . . . ಯಿಕ್ಕಿದ ಕಲ್ಲಿಂದಂ (ಸೌಇಇ. IX-ii, ೪೩೦-೨೩; 1406). [?]

**ಸುರರಮಣ** (ನಾ). ದೇವತೆಗಳ ರಾಜ; ಇಂದ್ರ: ಸುರರಮಣ ನಳಕೂಬರಾಧಿಕ ಸರಸಕಾಮುಕರಂ . . . ಬಗೆಯದನುಮಿಷಸತಿಯರು ಸಹಸ್ರ ನೆರೆದು (ಬಸಪು.೪೧-೧೮). [ಸಂ.]

**ಸುರರಮಣಿ** (ನಾ). ದೇವತಾಸ್ತ್ರೀ: ಸುರರಮಣೀರಮಣೀಯಸ್ವರೂಪಮತಿ ತರಳತರಳವಿಲಸದ್ವಿದ್ಯುತ್ಸ್ಫುರಿತಮೆನೆ ಪೋಲ್ತು ಕರಗಿದುದರಗಿದು ದಹನೋಪ ತಪ್ತಮೆನೆ ತತ್‌ಕ್ಷಣದೊಳ್ (ಕಾವ್ಯಾವ.೫೪೨); ಸುರರಮಣೀಕದಂಬಕಬರೀಭರಕಾಂತಿಕಳಿಂದ ಜಾಂಬುವಿಸ್ಫುರಿತಪದಾಂಬುಜಾತ (ಶಬಶಂ.೧-೨). [ಸಂ. ಸುರರಮಣೀ]

**ಸುರರಾಜ** (ನಾ). ೧. = ಸುರರಮಣ: ನರ್ತಕಂ ಸುರರಾಜಂ ಸಭೆ ದೇವಮರ್ತ್ಯ ಸಭೆ (ಆದಿಪು.೭-೧೨೭). ೨. ಶಿವ; ಪರಮೇಶ್ವರ: ಸುರರಾಜ ವರತೇಜ ಸಿತಗಳನೆ ಯತಿಬಳನೆ (ಹಚಕಾ.೧-೫). [ಸಂ. ಸುರರಾಜನ್]

**ಸುರರಿಪು** (ನಾ). ದೇವತೆಗಳ ಶತ್ರು; ರಾಕ್ಷಸ: ಸುರರಿಪುಗಳೆನಿಪ ಮಂದೇಹ ರನಿನನಸಿಯಿಂದೆ ತಜೆಯಲಂಬರವಿರ್ದಾವರಿಸಿದರುಣಾಂಬುರುಚಿಯೆನೆ ಪಿರಿದೆಸೆದುದು ಮೂಡದೆಸೆಯ ಸಂಧ್ಯಾರಾಗಂ (ತ್ರಿಪುವಿ.೨೪-೨೫); ಸುರರಿಪುಬಾಧೆಗಳ್ಕುತೆ ಮುರಾರಿ ಪುರಾರಿಪದಾರವಿಂದಮಂ ಸರಸಿಜದಿಂ ಸಹಸ್ರದೆ ಸಮರ್ಚಿಪ ವೇಳೆಯೊಳ್ (ರಾಜಶೇ. ೩-೧೦೪). [ಸಂ.]

**ಸುರಲೋಕ** (ನಾ). = ಸುರಪುರ: ಅಕ್ಕಿ ಮಣಕ್ಕೆ ರಮ್ಯ ಸುರಲೋಕ ಸುಕಕ್ಕೆ ಭಾಗಿ (ಎಕ. II, ೨೦-೪; ಸು. 700); ತ್ರಿದಶಸುರಲೋಕವಾಸಾಸ್ಪದಮಂ ಪೆಱುಗುಂ ಮನುಷ್ಯ ಮನುಜಂ (ಕವಿರಾ. ೧-೮೫); ಸುರಲೋಕದಲ್ಲಿ ಸುಖದಿಂದಿರುತುಂ ಬರವೆಂತು ನಿಮಗೆ ದೊರೆಕೊಂಡುದು (ಗಿರಿಕ. ೧೦-೨೩). [ಸಂ.]

**ಸುರವಕ್ತ್ರ** (ನಾ). ಅಗ್ನಿ: ಸುರವಕ್ತ್ರಪಾವನ ಸದಾಚಾರಂ . . . ನಂದನಂ ಪುಟ್ಟಿದಂ (ಪುಷ್ಪಪು.೧೩-೧೦). [ಸಂ.]

**ಸುರವಧು** (ನಾ). ದೇವಲೋಕದ ಸ್ತ್ರೀ; ಅಪ್ಸರೆ: ಪರಮಜಿನಜನನಿಗೊರ್ವಳ್ ಸುರವಧು ಕೊಡೆವಿಡಿದು (ಶಾಂತಿಪು.೯-೧೭೮); ಸುರವಧುವೊರ್ವಳ್ದೇವಿಯ ಚರಣಕ್ಕೊಲಗಿಸೆ (ಶಾಂತೀಶ್ವ.೧೩-೨೧೪). [ಸಂ.ಸುರವಧೂ]

**ಸುರವನಿತೆ** (ನಾ). = ಸುರವಧು: ಸುರವನಿತಾವಿಳಾಸದಲರ್ಗೊಂಚಲನೀಕ್ಷಿಸಿ ಜೋಲ್ವ ಕೊಂಬನೊಪ್ಪಿರೆ ಮುರಿದಪ್ಪಿದಂಗಲತೆ ನಾಗಿಣಿಯಂದಮನಾಗುಮಾಡೆ (ಲೀಲಾವ. ೧೩-೬೮); ಸುರವನಿತಾಜನಂಗಳೆ ಸುರೂಪವಿಳಾಸೆಯರೆಂದು ಬೀಗಿ ಧಿಕ್ಕರಿಸುವ ನಿಂದ್ರನೆಮ್ಮುಮಂ (ಪುಷ್ಪಪು. ೧೨-೨೦). [ಸಂ. ಸುರವನಿತಾ]

**ಸುರವರ್ತ್ಮ** (ನಾ). = ಸುರಪಥ: "ಸುರವರ್ತ್ಮನ್. . . ಆಕಾಶದ ಹೆಸರುಗಳು" (ಸಿದ್ಧಾಂತಿ. ೨೬). [ಸಂ. ಸುರವರ್ತ್ಮನ್]

**ಸುರವರ್ಧಕಿ** (ನಾ). ದೇವಲೋಕದ ಬಡಗಿ; ವಿಶ್ವಕರ್ಮ: ಮಯಂ ಬೆರಲ್ಕಿಡಿಯನೇ ಸುರವರ್ಧಕಿ ರೋಮಹರ್ಷದೊಳ್ ತೊಡರನೆ (ಚಂದ್ರಪು. ೧-೧೪೪); ವಿರಚಿಪ ಬಗೆಯ ಸುರವರ್ಧಕಿಗೆ ಪೇಳಲ್ಕಗಣಿತೋಪಮ ನಿರ್ಮಿಸಿದನಾಕ್ಷಣದಿ ಪುರವ (ಕೋಗಯು. ೨-೨೪). **[ಸಂ.]**

**ಸುರವಲ್ಲಭ** (ನಾ). ೧. ದೇವತೆಗಳ ಒಡೆಯ; ಇಂದ್ರ. ೨. ಶಿವ; ಪರಮೇಶ್ವರ: ವಲ್ಲಭಂ ಸಕಳಾಗಮಸ್ತುತಿದುರ್ಲಭಂ ಸುರವಲ್ಲಭನುಮಾವಲ್ಲಭಂ (ಬಸವು. ೫೨-೩೪). **[ಸಂ.]**

**ಸುರವಲ್ಲರಿ** (ನಾ). ದೇವಲೋಕದ ಬಳ್ಳಿ; ಕಲ್ಪಲತೆ: ಸುರವಲ್ಲರಿಗಳ್ ಮುಗುಳಂ ಸುರಿತರ್ಪುವು ರಜತಶಿಖರಿಶಿಖರದೊಳೆನೆ ಖೇಚರಿಯರ್ ಮುತ್ತಿನ ಸೇಸೆಯನರಸಂಗಿಕ್ಕಿದರಪಾಂಗಮಾಲಾಸಹಿತಂ (ಪಂರಾಮಾ. ೧೨-೨೧); ಇದು ಮಧುಮಿತ್ರ ಮತ್ತಗಜರಾಜಿಯೊ ನೋಡಿದು ಪುಷ್ಪಚಾಪಸೌಖ್ಯದ ಸುರವಲ್ಲರೀತತಿಯೊ (ರಾಜಶೇ. ೧೦-೧೨). **[ಸಂ. ಸುರವಲ್ಲರೀ]**

**ಸುರವಾಚಿಕೆ** (ನಾ). ದೇವಲೋಕದಲ್ಲಿ ವಾಚನಮಾಡುವವಳು: ಸರಸಕವಿಕಾವ್ಯ ಮಧುಮತ್ತರಾಗದೊಳ್ ಪೊರೆದು ಪೊಂಗೆ ತನಿಗಂಪೊಗೆದಂತಿರೆ ನುಣ್ಪಿನಿಯಿಂ ದೋದುವ ಸುರವಾಚಿಕೆ ಸತಿಗೆ ಪುಳಕಮಂ ಪುಟ್ಟಿಸಿದಳ್ (ಚಂದ್ರಪು. ೧೧-೧೪೫). **[ಸಂ. ಸುರವಾಚಿಕಾ]**

**ಸುರವಾರಿ, ಸುರವಾಲ್, ಸುರವಾಲು, ಸುರ್ವಾಲ್** (ನಾ). ಒಂದು ಬಗೆಯ ಇಜಾರ; ಕಲ್ಲಿಯ ಇಜಾರ: ಮಹಾರಾಜರು ತಮ್ಮ ಸುರವಾರಿ ತುಮಾನವನ್ನು ಅಂದರೆ ಮೊಣಕಾಲವರೆಗೆ ಬಿಗಿಯಾಗಿದ್ದು ಮೇಲೆ ಸೈಲಾಗಿರುವ ಚಣ್ಣವನ್ನು ಹಾಕಿಕೊಂಡರು (ಕಮಲ. ೧೭೪). **ಸುರವಾಲ್**: ಉದ್ದಕ್ಕೆ ನೆರಿಗೆಗಳಿರುವ ಒಂದು ಕುರ್ತಾ, ಒಂದು ಸುರವಾಲ್ (ಆಭಾಸ್ಯ. ೮೯). **ಸುರವಾಲು**: ಕಾಲಿಗೆ ಸುರವಾಲು. ಮೇಲೆ ಢಕ್ಕಾ ಮಜಲಿನ್ನಿನ ಅಳ್ಳಕವಾದ ಅಂಗಿ. ಅದರ ಮೇಲೆ ಕಲಾಪತ್ತಿನ ಸಣ್ಣ ಲುಂಗಿ (ದೌಲತ್. ೨೩). **ಸುರ್ವಾಲ್**: ಕೆಲವರು ಯೂರೋಪಿಯನ್ ಉಡುಪು, ಇನ್ನು ಕೆಲವರು ಉತ್ತರ ಹಿಂದೂಸ್ಥಾನದ ಷೇರ್ವಾನಿ ಮತ್ತು ಸುರ್ವಾಲ್ (ದಿಲ್ಲಿಪ. ೪೪). **[<— ಮರಾ. ಸುರವಾರೀ, ಸುರವಾರ್; ಪಾರ. ಶುಲ್ವಾರ್]**

**ಸುರವಾರುಣಿ** (ನಾ). ಒಂದು ಬಗೆಯ ಸಸ್ಯ; ಹಾವುಮೆಕ್ಕೆ: ಸುರವಾರುಣಿ ಗಿಣಿ ಮೂಗೀಶ್ವರಿ ಖರಕರ್ಣಿಕೆಯೆನಿಪ್ಪಿವಂ ಕಿಱಿದಾನುಂ ಸೋರೆಯ ತಿರುಳ್ ರಸದೊಡನೆಱೆ ಗುರಗೋತ್ತರ ವಿಷಮನಲೆಯಲಿಂತಿದೆ ಸಾಲ್ಗುಂ (ಲೋಕೋಪ. ೧೦-೧೭). **[ಸಂ. ಸುರವಾರುಣೀ]**

**ಸುರವಾಲ್** 'ಸುರವಾರಿ' ನೋ.

**ಸುರವಾಲು** 'ಸುರವಾರಿ' ನೋ.

**ಸುರವಿದಾರಣ** (ನಾ). ಇಂದ್ರನನ್ನು ಸೋಲಿಸಿದವನು; ಇಂದ್ರಜಿತು: ಸುರವಿದಾರಣ ಕಟ್ಟಿ ಹೋದರೆ ಅರಸ ನೀನಜ್ಞಾನಿಯಪ್ಪುದೆ ಉರಗಕೋಲಾಹಲನ ಗರುಡನ ನೆನೆವುದು (ಕೌಶಿರಾ. ೧೯-೫೪). **[ಸಂ.]**

**ಸುರವಿಧ್ವಂಸಿ** (ನಾ). ದೇವತೆಗಳನ್ನು ನಾಶಪಡಿಸುವವನು; ಕಂಸ: ಸುರವಿಧ್ವಂಸಿಯ ಬಿಲ್ಲನೊಂದೆ ಶರದಿಂ ಗಾತ್ರತ್ರಮಂ ಕೃಷ್ಣನಾರ್ದರದಂಬಿಂ ತಱಿದಿಕ್ಕಿ . . . ತೆತ್ತಿಸಿದನತ್ಯಾಭೀಳಬಾಣಂಗಳಂ (ಜಗವಿ.೧೮-೧೦೩). **[ಸಂ. ಸುರವಿಧ್ವಂಸಿನ್]**

**ಸುರವಿಳಾಸಿನಿ** (ನಾ). ದೇವಲೋಕದ ಸ್ತ್ರೀ; ಅಪ್ಸರೆ: ಸುರವಿಳಾಸಿನಿಯರ್ ಮನೋಹರರೂಪೆಯರ್ ಗಜಯಾನೆಯರ್. . . ನೆರೆದು ಕುಳ್ಳಿರೆ (ಧರ್ಮಾಮೃ. ೪-೧೭). **[ಸಂ.ಸುರವಿಲಾಸಿನೀ]**

**ಸುರವು** 'ಸುರುವು' ನೋ.

**ಸುರವೆಣ್** (ನಾ). = ಸುರವಿಳಾಸಿನಿ: ಸುರವೆಣ್ಣಿಂದಲಿ ಪುಷ್ಪದಂತವನದೊಳ್ ತಾಂ ಕ್ರೋಡರೂಪಾಗನೇ (ಸೋಮೇಶ. ೮೯); ಭಾರತಿ ಮೊದಲಾದ ಸುರವೆಣ್ಗಳೊಳು . . . ರತಿ ಜಗನ್ಮೋಹನಮೂರುತಿ ಕಂಗೊಳಿಸಿದಳು (ಮೋಹತ. ೧೭-೨೨). **[ಸುರ + ಪೆಣ್]**

**ಸುರವೈದ್ಯ** (ನಾ). ದೇವಲೋಕದ ವೈದ್ಯ: ಸುರವೈದ್ಯನಪ್ಪ ಧನ್ವಂತರಿ ತರಿಸುವನಲ್ಲಿ ತನಗೆ ದೊರಕದ ತಂತ್ರೋತ್ಕರಮಂ (ಕುಸುಮಾ. ೨-೧೦೫). **[ಸಂ.]**

**ಸುರವೈರಿ** (ನಾ). ೧. ದೇವತೆಗಳ ಶತ್ರು; ರಾಕ್ಷಸ: "ಸುರವೈರಿಗಳು . . . ದೈತ್ಯರು" (ಮಂಗರಾ. ೩-೯). ೨. ಕಂಸ: ಸುರವೈರಿಯ ವಧದಿನದೊಳ್ ಧರೆಗುದಿರ್ದುವು ತಾರಕಂಗಳ್ (ಜಗವಿ. ೬-೪೦). **[ಸಂ. ಸುರವೈರಿನ್]**

**ಸುರವೊನ್ನೆ, ಸುರಹೊನ್ನೆ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು; ಪುನ್ನಾಗ: "ನಾಗೀ-ಸುರವೊನ್ನೆ, ಗಂಧಿ, ಅಕ್ಕಿಹಟೆ" (ಓಷಧಿ.೮೫). **ಸುರಹೊನ್ನೆ**: ಪೂಗಳೊಳೆಂ ಸುರಹೊನ್ನೆ ಚೆನ್ನನೋ (ಆದಿಪು. ೧೧-೧೧೪); ಸುರಹೊನ್ನೆಯ ರನ್ನವಟ್ಟಿಗೆಯಿಂ ರಕ್ತಾ ಶೋಕರಚಿತರತ್ನಕಟಕದಿಂ (ಕಾದಂಬ. ೭೮೪); ಪನಸಾಳಿ ಶಾಳಿ ಭಾಸುರ ಸುರಹೊನ್ನೆ ಜಂಬುಘನನಿಂಬಕುಳಂ ಬಕುಳಂ (ಗಿರಿಕ. ೨-೩೦). **[ಸುರ + ಪೊನ್ನೆ]**

**ಸುರಶತ್ರು** (ನಾ). = ಸುರವೈರಿ ೧: "ಅಸುರಃ . . . ಸುರಶತ್ರುಃ . . . ಪಾತಾಳನಿಲಯಃ (ಸ್ಮೃತಾಃ) – ಈ ೮ ಅಸುರರ ಪೆಸರ್" (ಹಲಾಯು.೨-೫). **[ಸಂ.]**

**ಸುರಶಿಖರಿ** (ನಾ). ದೇವಲೋಕದ ಬೆಟ್ಟ; ಮೇರುಪರ್ವತ: ಸುರಶಿಖರಿ ಭಾಸ್ವರಜ್ಯೋತಿರಂಗಮಂ ಜಳಧಿ ವಿಮಳಮಣಿಯಂ . . . ತಳೆದು (ಚಂದ್ರಪು. ೧೪-೮೦). **[ಸಂ. ಸುರಶಿಖರಿನ್]**

**ಸುರಶೈಲ, ಸುರಶೈಳ** (ನಾ). = ಸುರಶಿಖರಿ: ಸುರಶೈಲಂ ಪೊಟ್ಟ ಪೊಂಗಟ್ಟವೊಲಿರೆ ಸಕಲೋದನ್ವದಂತಸ್ಥಕೂರ್ಮೋತ್ಕರಮುರ್ವೀಚಕ್ರಮಂ ತಾಳ್ದಿದ ಕಮಠನವೊಲೊಪ್ಪೆ (ಚಂದ್ರಪು. ೧೦-೬೭). **ಸುರಶೈಳ**: ಪರಮಜಿನಸವನಜಲನಿರ್ಝರಮುಂ ಸುರಬಲ ಪಯೋಧಿಕಲಕಲಮುಂ ಮಾಣ್ದಿರೆ ನೋಡೆ ಬಿನ್ನನಿರ್ದುದು ಸುರಶೈಳ [ಪಾಠಾಂ. ಲ]ಮದೊಂದು ಮದುವೆಗಳಿಪಿದ ಮನೆವೊಲ್ (ಆದಿಪು. ೭-೧೦೮). **[ಸಂ.]**

**ಸುರಶೈಳ** 'ಸುರಶೈಲ' ನೋ.

**ಸುರಸ** (ಗು). ೧. ಒಳ್ಳೆಯ ವಾಸನೆಯಿಂದ ಕೂಡಿದ; ಸುಗಂಧಯುಕ್ತವಾದ. ೨. ಒಳ್ಳೆಯ ರಸದಿಂದ ಕೂಡಿದ; ರಸಾರ್ದ್ರವಾದ: ಸುರಸಪಲಾಶ ಪುಷ್ಪಚಯದೊಳ್ ವನಲಕ್ಷ್ಮಿಯ ರತ್ನನೂಪುರಸ್ವರಮೆನೆ . . . ಪೊಣ್ಮಿದತ್ತು ಮಧುರಂ ಮಧುಮತ್ತಮಧುವ್ರತಸ್ವರಂ (ಜಗವಿ. ೧೪-೪೦); ೩. ಚೆಲುವಾದ; ಸುಂದರವಾದ.(ನಾ). ೪. ಒಳ್ಳೆಯ ರಸ. ೫. ಒಂದು ಬಗೆಯ ರಾಳ. ೬. ಸುವಾಸನೆಯ ಹುಲ್ಲು. **[ಸಂ.]**

**ಸುರಸದ್ಮ** (ನಾ). ದೇವತೆಗಳ ವಾಸಸ್ಥಾನ; ಸ್ವರ್ಗ: ಗಿರಿಶಿಖರಂಗಳೊಳ್ ತರುಶಿಖಾಮುಖದೊಳ್ ಸುರಸದ್ಮಕೂಟದೊಳ್ ಪರಿಕಲಿಸಿರ್ದುವು . . . ತಮದೊಡ್ಡು (ಮಲ್ಲಿಪು. ೭-೩). **[ಸಂ. ಸುರಸದ್ಮನ್]**

**ಸುರಸಮಿತಿ** (ನಾ). ದೇವತೆಗಳ ಸಮೂಹ: ಇದೆ ಸಾರಂ ಸ್ವರ್ಗಲೋಕಕ್ಕಿದೆ ಸುರಸಮಿತಿ ಪ್ರಾರ್ಥಿತಂ ಯೌವರಾಜ್ಯಾಸ್ಪದಂ (ಶಾಂತಿಪು. ೭-೨೪). **[ಸಂ.]**

**ಸುರಸರಿತ್ತು** (ನಾ). ದೇವಲೋಕದ ನದಿ; ದೇವಗಂಗೆ: ಯುವತಿಜನಶಂಕೆಯುಂ ಮುನ್ನವಯವದೊಳೆ ಪೊಕ್ಕು ಕಳೆದು ಸುರಸರಿದಂಭಃಪ್ಲವದೊಳೆ ಚಕ್ರಧರಂ ದುಗ್ಧವಾರ್ಧಿಯೊಳ್ ನಿಂದ ಕನಕಗಿರಿಯನೆ ಪೋಲ್ತಂ (ಆದಿಪು. ೧೧-೧೩೭). **[ಸಂ. ಸುರಸರಿತ್]**

**ಸುರಸಿಂಧು** (ನಾ). = ಸುರಸರಿತ್ತು: ಸುರಸಿಂಧುಪ್ರಿಯಪುತ್ರ ಕೇಳ್. . . ಬಿಗುರ್ತೀ ಕೌರವರ್ ಕೂಡೆ ನೂರ್ವರುಮಂ ಕೊಲ್ವೆಂ (ಪಂಪಭಾ. ೭-೧೫); ಸುರಸಿಂಧೂದಕ ಯಕ್ಷ ಕರ್ದಮ ಲಸನ್ಮುಕ್ತಾಕ್ಷತಾಮೋದ ಬಂಧುರ ಮಂದಾರ ಸುಧಾರಸಾನ್ನ . . . ಫಲದಿಂ . . . ಅರ್ಚಿಸಿದಂ (ಅಜಿಪು. ೪-೭೮). **[ಸಂ.]**

**ಸುರಸಿಂಧುಜ** (ನಾ). ದೇವಗಂಗೆಯ ಮಗ; ಭೀಷ್ಮ: ಸುರಸಿಂಧುಜ ಕುಂಭಜ ದುರ್ಧರಭುಜ ಗುರುತನುಜ (ನೇಮಿಪು. ೧೧-೧೩೩); ನುಡಿಯದಿರು ನಿನ್ನ ಹವಣಿನ ಮಾನಿಸನೆ ಸುರಸಿಂಧುಜನು (ಕುಮ್ಯಾಭೀ. ೧-೩೭). **[ಸಂ.]**

**ಸುರಸುಂದರಿ** (ನಾ). ೧. = ಸುರವಿಳಾಸಿನಿ: ಜಿನಾರ್ಭಕನನೆತ್ತಿಕೊಂಡು ಬರೆ ಸುರಸುಂದರಿಯರ ತಳ್ತು ಪಿಡಿದ ವಜ್ರದ ಕೊಡೆಗಳ ನೆಟಿಲ್ಗಳೊಳಂ (ಶಾಂತಿಪು. ೧೦-೯ ವ); ೨. ಲೋಕೋತ್ತರವಾದ ಸೌಂದರ್ಯವುಳ್ಳವಳು; ಅತಿಚೆಲುವೆ: ಓರ್ವ ಸುರಸುಂದರಿ ಹೂಮಾಲೆಗಳಿಂದಲಂಕೃತವಾಗಿ . . . ವಿರಾಜಮಾನಳಾಗಿರುವಳು (ಸುತ್ತುಮು. ೭೪). **[ಸಂ. ಸುರಸುಂದರೀ]**

**ಸುರಸುರಕೆ** 'ಸುರಸುರಿಕೆ' ನೋ.

**ಸುರಸುರನೆ** (ಅ). ಬೆಂಕಿಯಲ್ಲಿ ಸುಡುವಾಗ ಉಂಟಾಗುವ ಶಬ್ದವನ್ನು ಸೂಚಿಸುವ ಒಂದು ಅನುಕರಣಾವ್ಯಯ: ಲಂಕೆಯನ್ನು ಸುರಸುರನೆ ಬಾಲದಲಿ ಸುಟ್ಟು ರಣದಿಟ್ಟ (ವಾದೀಕೀ. ೨೮-೨). [ಸುರಸುರ್ + - ಅನೆ]

**ಸುರಸುರಲಿಕೆ** 'ಸುರಸುರಿಕೆ' ನೋ.

**ಸುರಸುರಿಕೆ,** ಸುರಸುರಕೆ, ಸುರಸುರಲಿಕೆ, ಸುರುಸುರಿಕೆ, ಸುರುಸುರಿಗೆ, ಸುರುಸುರುಕೆ (ನಾ). ಒಂದು ಬಗೆಯ ಸಸ್ಯ: "ಅರುಣರಿಪು, ಸುರಸುರಿಕೆ" (ಅಕಾನಿ. ೧-೧೧); "ಗುಪ್ತಗಂಧಿ - ಸುರಸುರಿಕೆ" (ಒಷಧಿ. ೪೯). **ಸುರಸುರಕೆ:** "ಹರಿವಾಲುಕಾ - ಸುರಸುರಕೆ" (ಚಾಮುಂಡಾ. ೨೦-೧೧೨); "ಅಲೂಕಂ - ಸುರಸುರಕೆ" (ಒಷಧಿ. ೧೧); ಸುರಸುರಕೆಯ ಬೇರು ನೂರು ನೂರು ಹಲವನ್ನು ನಾಗಳನೀರಿನಲ್ಲಿ ಕಷಾಯವೆತ್ತಿ (ದ್ರಾಕ್ಷಾಚೂ. ೫-೫). **ಸುರಸುರಲಿಕೆ:** "ಕರ್ಕಶಚ್ಛದಃ — ಸುರಸುರಲಿಕೆ, ತೇರು, ಮಿಟ್ಟಲಿ, ಸೌತೆ" (ಒಷಧಿ. ೨೬). **ಸುರುಸುರಿಕೆ:** "ಅರುವಾಳಕಂ — ಸುರುಸುರಿಕೆ" (ಒಷಧಿ. ೯); ಸುರುಸುರಿಕೆ ಬೇರಿಗೂ ಇದೇ ಪ್ರಕಾರ ಆಗುವುದು (ವಿವ್ಯಪಿ. ೪). **ಸುರುಸುರಿಗೆ:** ಹಬ್ಬುಲಿ, ಕಿರುಬುಲಿ, ಸುರುಸುರಿಗೆ ಈ ಸೊಪ್ಪುಗಳ ರಸ . . . ತೊಡಿಯಲು ಮೂರುದಿನಕ್ಕೆ ಶೀತಜ್ವರಂ ಗುಣಮಕ್ಕುಂ (ಸಕವ್ಯ. ೭೦). **ಸುರುಸುರುಕೆ:** "ಕಂಬಳಃ — ಸುರುಸುರುಕೆ, ಕಂಬಳಿ" (ಒಷಧಿ. ೨೨); ತ್ರಿಫಲೆ . . . ಸುರುಸುರುಕೆಯ ಬೇರು (ವೈದ್ಯಸಾ. II. ೫೩). 'ಚುರುಚುರಕೆ ಗಿಡ' ಪರಾ. [?]

**ಸುರಸೂದನ** (ನಾ). ದೇವತೆಗಳನ್ನು ನಾಶಪಡಿಸುವವನು; ದೈತ್ಯ: ಖಳ ಸುರಸೂದನನ ತೆಗೆದಪ್ಪಿ ನಗುತ . . . ನೋಡಿದ (ಕೌಶಿರಾ. ೩೬-೨). [ಸಂ.]

**ಸುರಸೆ** (ನಾ). ತುಳಸಿಯ ಗಿಡ: "ತುಳಸಿಯದು ಸುರಸೆ [ಪಾಠಾಂ. ಸರಸಿ, ಸುರಸಿ] ಬಹುಮಂಜರಿಯೆನಿಕ್ಕು" (ಮಂಗರಾ. ೩೯-೨೭). [ಸಂ. ಸುರಸಾ]

**ಸುರಸ್ತ್ರೀ** (ನಾ). = ಸುರವಿಳಾಸಿನಿ: ಲಲಿತಾಂಗ[ವಂಗ]ವಿಷಯಾಧೀಶಂ ಸುರಸ್ತ್ರೀಜನೋದಾತ್ತಪ್ರಾರ್ಥಿತಯೌವನಂ (ಶಾಂತಿಪು. ೫-೧೧೩); ಸುರಸ್ತ್ರೀಜಾಲ ನೆರೆಯದು (ಕುವ್ಯಾಭೀ. ೬-೧೦). [ಸಂ.]

**ಸುರಹಯ** (ನಾ). ಇಂದ್ರನ ಕುದುರೆ; ಉಚ್ಚೈಶ್ರವ: "ಉಚ್ಚೈಶ್ರವಂ ಸುರ ಹಯವೆನಲ್ಕಿಂದ್ರನಶ್ವಂ" (ಮಂಗರಾ. ೧೩-೨). [ಸಂ.]

**ಸುರಹೂ** (ನಾ). ಒಂದು ಬಗೆಯ ಹೂಬಾಣ (?): ಅಲ್ಲಲ್ಲಿ ಬಾಣ ಬಿರಿಸು ಸುರಹೂಗಳು ಪಲ್ಲೈಸಿ ತುಡುಕಲಂಬರವ ಸಲ್ಲಲಿತಾಂಗ ಕಂಠೀರವನರಸ ಭೂವಲ್ಲಭನೈತಂದನಾಗ (ಕಂಠವಿ. ೨೨-೧೦೪). [ಸುರ + ಹೂ$_2$ (< ಪೂ$_2$)]

**ಸುರಹೊನ್ನೆ** 'ಸುರವೊನ್ನೆ' ನೋ.

**ಸುರಳ್** 'ಸುರುಳ್$_3$' ನೋ.

**ಸುರಳಿ** 'ಸುರುಳಿ' ನೋ.

**ಸುರಳೀತ** (ಗು). ೧. ಸರಾಗವಾದ; ಸಲೀಸಾದ: ಅವರು ಸುರಳೀತ ಬಾಳ್ವೆ ಮಾಡಲಿಲ್ಲ (ರೂಢಿ). (ನಾ). ೨. ಸರಾಗ; ಸಲೀಸು: ಹೀಗಾದರೆ ಹುಡುಗನ ಅಭ್ಯಾಸ ಸುರಳೀತವಾಗಿ ಸಾಗದು (ದೀಪಹ. I. ೨೮); ಈ ವ್ಯಾಪಾರ ಸುರಳೀತವಾಗಿ ಮುಗಿದಲ್ಲಿ . . . ಕೊಂಚವಾದರೂ ಕಮಿಶನ್ ಕೊಡದಿರಲಾರರು (ರತ್ನಗೋ. ೨೬). [<— ಮರಾ. ಸುರಳೀತ]

**ಸುರಾಂಗ** (ನಾ). [ಜೈನ] ಭೋಗಭೂಮಿಯ ಹತ್ತು ಕಲ್ಪವೃಕ್ಷಗಳಲ್ಲಿ ಒಂದು; ನಾನಾ ವಿಧವಾದ ಮಾದಕಪಾನೀಯಗಳನ್ನು ನೀಡುವ ವೃಕ್ಷ: ವಸನಾಂಗಾತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗಾನ್ನಾಂಗ ಸುರಾಂಗ ಭಾಜನಾಂಗಾವಸಥಾಂಗ ವಿಭೂಷಣಾಂಗ ದಶಕಲ್ಪಕುಜಂ ಸೊಗಯಿಸುವುವು (ಚಂದ್ರಪು. ೩-೩೪). 'ದಶಾಂಗಕಲ್ಪಕುಜ' ಪರಾ. [ಸಂ.]

**ಸುರಾಂಗನೆ** (ನಾ). ದೇವಲೋಕದ ಸ್ತ್ರೀ; ಅಪ್ಸರೆ: ಅರಿಗೆ . . . ನಿಜಾರಿಸಮಿತಿಗಳಿಂದಂ ನೆರೆದ ಜಯಂಗೊಂಡಾಗಡೆ ಸುರಾಂಗನಾಸುರತವಿಷಯಸುಖಮಂ ಕೊಟ್ಟಂ (ಕವಿರಾ. ೩-೧೫೯). [ಸಂ. ಸುರಾಂಗನಾ]

**ಸುರಾಕಾರ, ಸುರಾಖಾರ** (ನಾ). ಒಂದು ಬಗೆಯ ಉಪ್ಪು; ಪೆಟ್ಲುಪ್ಪು; ಸೋರುಪ್ಪು: (ಕ). **ಸುರಾಖಾರ:** ಜೀನಸಗಳು . . . ಸುರಾಖಾರ (ಸೋರುಪ್ಪು) (ಮುಂಬವ್ಯಾ. ೧೧೯). [<— ಮರಾ. ಸುರಾಖಾರ್]

**ಸುರಾಖಾರ** 'ಸುರಾಕಾರ' ನೋ.

**ಸುರಾಗ** (ನಾ). [ಸಂಗೀತ] ಒಳ್ಳೆಯ ರಾಗ: ಶ್ರುತಿ ಗಮಕಂಗಳಿಂ ಪುಟ್ಟಿದ ಗೀತವಮಾಡೊಡೆ ಸ್ವರ ಸುಸ್ವರ ಸುರಾಗ ಮಧುರ ಅಕ್ಷರ ಅಲಂಕಾರವೆಂಬಾಱು ಲಕ್ಷಣಂಗಳುಳ್ಳದ್ದಾಗಿಹುದು (ವಿವೇಕ. ೨೩೨). [ಸಂ.]

**ಸುರಾಘಟ** (ನಾ). ಹೆಂಡದ ಗಡಿಗೆ; ಮದ್ಯದ ಪಾತ್ರೆ: ಪಿಂತಿರುಗಿ ಬಂದಾಮೇಲೆ ನಿನಗೀವೆನಾ ಮಾಂಸಭೂತೌದನ ಸುರಾಘಟಸಹಸ್ರದಾ . . . ನೈವೇದ್ಯಮಂ (ಶ್ರೀರಾಮಾ. ೧೨೬-೪೫). [ಸಂ.]

**ಸುರಾಚಲ,** ಸುರಾಚಳ (ನಾ). ದೇವಲೋಕದ ಬೆಟ್ಟ; ಮೇರುಪರ್ವತ: ಸುರಾಚಲದಿಂ ಸುರಾರ್ಣವಂಬರಮಮರಾದ್ರಿ ನೀಳ್ದು ಗೆಲೆವಂದುದು ಜಂಗಮ ಸೇತುಬಂಧಮಂ (ಅಜಿಪು. ೪-೪೫). **ಸುರಾಚಳ:** ಈವ ನೆಗೞ್ತೆ ಕಳ್ಪಭೂಮಿರುಹದಿನಗ್ಗಳಂ ನುಡಿ ಸುರಾಚಳದಿಂದಚಳಂ (ಎಕ. II, ೧೩೩ — ೨೭; 982). [ಸಂ.]

**ಸುರಾಚಳ** 'ಸುರಾಚಲ' ನೋ.

**ಸುರಾಚಾರ್ಯ** (ನಾ). ದೇವತೆಗಳ ಗುರು; ಬೃಹಸ್ಪತಿ: "ಬೃಹಸ್ಪತಿಃ, ಸುರಾಚಾರ್ಯಃ . . . ಬೃಹಸ್ಪತಿಯ ಹೆಸರುಗಳು" (ಸಿದ್ಧಾಂತಿ. ೩೧). [ಸಂ.]

**ಸುರಾಡ** (ನಾ). ಸುಖ, ಸಂತೋಷದ ಆಧಿಕ್ಯ, — ಹೆಚ್ಚಳ: ಸುಖದ ಸುರಾಡವನು ಕೊಂಡಯರ ನುಡಿಗೆ ನಿವಾಡವನು ಮಾಡದಿರು ಕೂಡಧಿರಪಜಯಾಂಗನೆಯ (ತೊರರಾ. ೩-೭-೩೯). [? ./ ಮರಾ. ಸುರವಾಡೇ = ಸುಖ; ಅನುಕೂಲತೆ]

**ಸುರಾದ್ರಿ** (ನಾ). = ಸುರಾಚಲ: ಸುರಾದ್ರಿಯಿಂ ಸ್ಥಿರತರಂ . . . ಪುಟ್ಟುಗುಂ ನಂದನಂ (ಜಗವಿ. ೨-೮೩); ಕಲಸಿ ಸುರಾದ್ರಿಗಳ್ಬಿಸು ತೋರದೊಲೆಸೆವ ತುತ್ತುಗಳಂ ಪಿಡಿವುತಾ ರೋಗಿಸುತ್ತಿರಲು (ಬಸವು. ೭-೪೩). [ಸಂ.]

**ಸುರಾಧೀಶ** (ನಾ). ದೇವತೆಗಳ ಒಡೆಯ; ಇಂದ್ರ: ಸುರಾಧೀಶನೆಟ್ಟಂದುದಂ ಕಂಡು (ಶಾಂತಿಪು. ೧೦-೯ ವ); ಬಹುವಕ್ತ್ರಂ ಪದ್ಮಗರ್ಭಂ ದನುಜಗುರು ಗುರುದ್ವೇಷಿ ಜೀವಂ ಸುರಾಧೀಶಹಿತಾತ್ಮಂ . . . ಮನ್ತ್ರಯುದ್ಧ ಪ್ರವೀಣಂ (ಎಕ. VIII, ಸೊರಬ. ೧೪೦-೫೬; 1198). [ಸಂ.]

**ಸುರಾನಕಸ್ವನ** (ನಾ). ದೇವಲೋಕದ ಭೇರಿಯ ಧ್ವನಿ: ಏಱೆ ವಿಮಾನಮಂ ಬರ . . . ಸುರಾನಕಸ್ವನಂ ಮಿಱೆ (ಎಕ. XII, ತಿಪಟೂ. ೯೩-೩೪; 1174?). [ಸಂ.]

**ಸುರಾಪಗಾನಂದನ** (ನಾ). ದೇವಗಂಗೆಯ ಮಗ; ಭೀಷ್ಮ: ಸುರಾಪಗಾನಂದನಂ ಮಹಾಜರ್ಜರನೇ (ಗದಾಯು. ೪-೫೮). [ಸಂ.]

**ಸುರಾಪಗೆ** (ನಾ). ದೇವಗಂಗೆ: ಚಂಚಳಧವಳಕೇತನಪ್ರತಾನದಿಂ ಸಸುರಾಪಗಾಫೇನ ಸಂತಾನದಂತೆಯುಂ (ಚಂದ್ರಪು. ೧೧-೭೮ ವ); ಉಡುಪತಿ ಸುರಾಪಗೆಗಳಂ ಮುಡಿದ ಪೂ ಮಾಡಿ (ಇಷರ. ದೇ. ೩೦-೧೮). [ಸಂ. ಸುರಾಪಗಾ]

**ಸುರಾಪಾನ** (ನಾ). ಹೆಂಡವನ್ನು ಕುಡಿಯುವುದು; ಮದ್ಯಪಾನ: ಸರ್ವಪಾತಕಿ ಸುರಾಪಾನಭುಂಜಕ ಪಣ್ಯಾಂಗನಾ ಸಂಗಿ (ಮೋಳಮಾ. ೨೭-೧೧೦); ಸುರಾಪಾನಾದಿ ವ್ಯೂಹ . . . ತತ್ಸಂಯೋಗಿವ್ಯೂಹವೆಂಬೈದು ಮಹಾಪಾತಕವ್ಯೂಹಂಗಳಂ (ವಿವೇಕ. ೧೪೪). [ಸಂ.]

**ಸುರಾಭಾಂಡ** (ನಾ). ಹೆಂಡದ ಪಾತ್ರೆ: ಸುರಾಭಾಂಡಗತವಾರ್ವಿಶೇಷತೆಯಂತುಟಾಗಲ್ಕೆ ನಿಮಗೆನುತ ಶಾಪವಿತ್ತಂ ಗೌತಮಂ (ವೀಶ್ವಪು. ೪-೨-೨೬). [ಸಂ.]

**ಸುರಾಮಂಡ** (ನಾ). ೧. ಹೆಂಡದ ನೊರೆ. ೨. ಹೆಂಡದ ತಿಳಿ: "ಕಾರೋತ್ತಮಃ ಸುರಾಮಂಡಂ — ೨ ಹೆಂಡದ ಮೇಲಣ ತಿಳಿಯ ಪೆಸರುಗಳು" (ಸಿದ್ಧಾಂತಿ. ೩೯೯). [ಸಂ.]

**ಸುರಾಯು** (ನಾ). ಒಂದು ಬಗೆಯ ಆಯುಧ: ಪಟ್ಟಾಕತ್ತಿ ಸುರಾಯು ಬಾಕು ಮೊದಲಾದ ಆಯುಧಗಳು (ಕೃವಾಸ. ೧೧೮). [?]

**ಸುರಾರ್ಚಿತ** (ನಾ). ದೇವತೆಗಳಿಂದ ಪೂಜಿಸಿಕೊಳ್ಳುವವನು; ದೇವಗುರು; ಬೃಹಸ್ಪತಿ: ಇಂದು ಸುರಾರ್ಚಿತರಸ್ತಗೃಹದೊಳಿರೆ ನೃಪವಕ್ಕುಂ (ಜಾತತಿ. ೧೨-೬); ಎಡಬಲದೊಳ್ಗೆದೆ ಷಣ್ಮುಖ ಗಣಪರೋಲೈಸಿ ನಡೆಯಲಾ ಸೋಮವರ್ಣಂ ಸುರಾರ್ಚಿತ ರಮ್ಮನಡಿಯ ಸೇವಿಸುತ ಬರೆ (ವೀಶ್ವಪು. ೩-೨-೨೮). [ಸಂ.]

**ಸುರಾವನೀಜ** (ನಾ). ದೇವಲೋಕದ ಮರ; ಕಲ್ಪವೃಕ್ಷ: ಸುರಭಿಯ ತಾಯ್ಮನೆಯಾ ಸಿದ್ಧರಸದ ಬಗರಗೆ ಸುರಾವನೀಜದ ಬೀಜಂ . . . ರಾಜವರ್ಯನಸವೌದಾರ್ಯಂ (ಚಂದ್ರಪ್ರ. ೧೧-೮೬). [ಸಂ.]

**ಸುರಾಶೆ** (ನಾ). ಇಂದ್ರನ ದಿಕ್ಕು; ಪೂರ್ವದಿಕ್ಕು: ನಿರುಪಮಸಿದ್ಧಿಯನೆಯ್ದಿದ ವರಲಿಂಗಂ ಮೆಱೆಗುಮಾ ಸುರಾಶೆಯೊಳನಿಶಂ (ಹಾಲಾಸ್ಯ. ೪-೮-೩೪). [ಸಂ. ಸುರಾಶಾ]

**ಸುರಾಸನ** (ನಾ). ಇಂದ್ರನ ಪೀಠ: ಸ್ಮರಹರನುದಯಮನಱಿಪುವ ಸುರವಿಷ್ಟರ ದೊಡನ ನಡುಗಿತಲರ್ವಿಲ್ಲುಮಿದಚ್ಚರಿ ನೇಣ ಭೇದವತನುವ ಶರಾಸನಕ್ಕಂ ಸುರಾಸನಕ್ಕಮದೊಂದೇ (ಪುಷ್ಪಪು. ೧೦-೧೪). [ಸಂ.]

**ಸುರಾಸೆ** (ನಾ). = **ಸುರಾಶೆ**: ಸುರಾಸೆಯ ಬೀಸಿದ ಗಾಳಿಯ ಮುಗಿಲ ಕಾಣ್ಕೆಯಿಂ ಬಱಿನಕ್ಕುಂ (ಜಟ್ಟಮ. ೮-೧೫). [< ಸಂ. ಸುರಾಶಾ]

**ಸುರಾಹಾರ** (ನಾ). ದೇವತೆಗಳ ಆಹಾರ; ಅಮೃತ: "ಸುರಾಹಾರಮಮೃತಂ ಸುಧೆ ಯೆನಲ್ಕೆ ಪೀಯೂಷಂ" (ಮಂಗರಾ. ೯-೩೦). [ಸಂ.]

**ಸುರಾಳ** (ನಾ). ಸಾಕಾರ, ಸಗುಣ ಮುಂತಾದ ಸಕಲಕಲೆಯಿಂದ ಕೂಡಿದ ಸ್ಪಷ್ಟವಾದ ನಿಲವು: ಸರವೆಂಬ ಕುದುರೆಗೆ ವಿಷ್ಣುವೆಂಬ ಕಡಿವಾಣ ಚಂದ್ರ ಸೂರ್ಯ ರೆಂಬ ಅಂಕಣಿ ಬ್ರಹ್ಮನ ಹಲ್ಲಣ ಸುರಾಳವೆಂದಲ್ಲಿ ನಿರಾಳವಾಯಿತ್ತು ಗುಹೇಶ್ವರನೆಂಬ ರಾವುತಂಗೆ (ಅವಚಂ. ೫೯-೨೫೯); ಸುರಾಳವಿಲ್ಲದ ಪ್ರಸಾದ ನಿರಾಳವಿಲ್ಲದ ಪ್ರಸಾದ (ಅಖಂಡೇ. ೧೮೬-೭೪). 'ನಿರಾಳ' ಪರಾ.

**ಸುರಾಳನಿರಾಳ** = ಸಗುಣಾಕಾರ ಮತ್ತು ನಿರ್ಗುಣಾಕಾರ: ಆದಿಯಾಧಾರ ವಿಲ್ಲದಂದು . . . ಸುರಾಳನಿರಾಳವಿಲ್ಲದಂದು ಸಚರಾಚರವೆಲ್ಲ ರಚನೆಗೆ ಬಾರದಂದು ಗುಹೇಶ್ವರ ನಿಮ್ಮ ಶರಣನುದಯಿಸಿದನು (ಅವಚಂ. ೧-೫); ಆದಿ ಅನಾದಿ ಸುರಾಳ ನಿರಾಳವಿಲ್ಲದಂದು . . . ಮಹಾದೇವ ತಾನೊಬ್ಬನೇ ಇದ್ದನೆಂಬುದು ಕಾಣಬಂದಿತ್ತು ನೋಡಾ ಶಿವಜ್ಞಾನದೃಷ್ಟಿಗೆ (ಸಿದ್ಧೇವ. ೨೫-೬೬). [< ಸಂ. ಸುರಾವಿಲ ?]

**ಸುರಿ$_1$, ಜುರಿ$_1$** (ಕ್ರಿ). ೧. (ಮಳೆ, ನೀರು ಮುಂತಾದುವುಗಳು) ಮೇಲಿನಿಂದ ಬೀಳು; ವರ್ಷಿಸು: "ಸುರಿ — ಗಲನೇ" (ಶಮಧಾ); ನೆಗೆದ ಮುಗಿಲ್ಗಳುಂ ಸುರಿವ ಪೆರ್ಮಳೆಯುಂ ಮಿಗೆ ನುಣ್ಣನಪ್ಪ ಕೇಕಿಗಳ ಸರಂ (ಕವಿರಾ. ೧-೧೨೪); ರಸದ ತೊಱೆ ಪಱಿದುದವರ್ದಿನ ಪೊಸ ಸೋನೆಯ ಸುರಿದುದು (ಸುಕುಮಾ. ೧೦-೨೩). ೨. (ಬಾಣದಂತೆ) ಮೇಲೆ ಎರಗು; ಧಾರಾಕಾರವಾಗಿ ಬೀಳು: ಸುರಿವ ಸರಲ್ ನರಲ್ಕ ಭಟರೆತ್ತಮುರುಳ್ವ ದಟಂ (ಪಂಪಭಾ. ೯-೫೩). ೩. ಹೊರಬರು; ಹೊರಸೂಸು: ಕರುಳ್‌ಮಾಲೆಗಳ್ ನೆಲದೊಳ್ ಸುರಿಯೆ ಕುತ್ತುವುದುಂ (ವಡ್ಡಾರಾ. ೧೨೭-೧೪); ಸುರಿವ ಬಿಸುನೆತ್ತರ ಸರಿಯೊಳಮಂಬಿನ ಸರಿಯೊಳಮಂಬರಿವಿಟ್ಟು ಪಾಯ್ಕು ಮದಗಜಂಗಳ ಮದಜಲದೊಳಂ (ಪಂಪಭಾ. ೧೦-೭೦ ವ); ಸುರಿವ ಖಂಡದ ರಕ್ತಧಾರೆಗೆ ತರತರದಿ ಬಾಯ್ದೆಗೆದು (ಕುಮ್ಮಾದ್ರೋ. ೬-೪೧); ಸುರಿದುದು ಖಳನ ಗಾಯದಿ ರಕ್ತ ಕಣ್ಣೀರು ಸುರಿದುದವನ ಪೆಣ್ಣನಕೆ ಸುರಿದುದು ಪೂಮಳೆ ಕಾಮಗೆ ನೇತ್ರದೆ ಸುರಿದುದಾನಂದಾಶ್ರು ರತಿಗೆ (ಮೋಹತ. ೧೨-೬೦). ೪. ಸೋರು; ಸ್ರವಿಸು; ಹರಿ: ಮುದುಕರಂತೆ ಲೋಳೆ ಸುರಿವ ಬಾಯುಂ ಕೀವುಗಿವಿಯವರಂತೆ ಕೀವು ಸುರಿವ ಕಿವಿಯುಂ (ಧರ್ಮಾಮೃ. ೪-೭೫); ಜೊಲ್ಲು ಸುರಿವ ಮುದ್ದುಮೊಗದಲ್ಲಿ ನಗೆಯಾಂತು (ಮೋಹತ. ೧೭-೬೯). ೫. (ಬಾಣವನ್ನು) ಬಿಡು; ಎಸೆ: ಕಾರ ಸರಿವೋಲ್ ಸುರಿದಂ ಶರಸಂಕುಲಂಗಳಂ (ಧರ್ಮಾಮೃ. ೧೩-೧೪೬); ಸರಳ ಮಳೆಗಳ ಸುರಿದರಾನೆಯ ಮೇಲೆ (ಕುಮ್ಮಾದ್ರೋ. ೩-೨೬). ೬. ಹಾಕು; ಎರೆ: ಪೊಂಗಳಂ ಸುರಿವೊಡಮಾರೊ ಸ್ಮರಿಸುವರಾತನ ಪಲ್ಲಿಲಿವಾಯ ನಾತಮಂ (ಪಂಪಭಾ. ೪-೧೦೦); ಬುದ್ಧಿಸಾಗರಂ ಸಗರನ ಮೇಲೆ ಸಿತಸರ್ಷಪಂಗಳನಿಱಿಯೆ ಸುರಿವುದುಂ (ಅಜಿಪು. ೧೦-೫೩ ವ); ಮಲ್ಲಿಗೆಯನಿಲ್ಲಿ ತಾ ಸುರಗಿಯಂ ಸುರಿ (ಬಸರ. ೭-೩೪); ಖುರಕೆ ರತುನವ ಸುರಿದು ತೇರಿನ ತುರಗವನು ವಂದಿಸಿದನು (ಕುಮ್ಮಾದ್ರೋ. ೯-೩೬). ೭. ಕಾರು; ಉಗುಳು: ಹೊಗೆ ಸುತ್ತಿ ಸುಯ್ಯಲಿ ಸುರಿದುದುರಿ (ಕುಮ್ಮಾದ್ರೋ. ೧೯-೧೩); ನಿನ್ನಾಳ್ದನೆನ್ನಯ ತಪಗೆಡಿಸಿದ ಕಾರಣದಿಂದೆ ಕಿಡಿ ಸುರಿವಕ್ಷಿಯಿಂದುರುಹಿದೆ (ಮೋಹತ. ೮-೨೯೦). ೮. ಸೋರಿಸು; ಸುರಿಸು: ಕಂಪವಾತ ರೋಗಿಗಳಂತೆ ಕಂಪಿಸುವರ್ ತೊನ್ನರಂತೆ ರಸಿಗೆ ಸುರಿವರ್ (ಧರ್ಮಾಮೃ. ೩-೮೧). ೯. ಮೇಲಕ್ಕೆ ಎಬ್ಬು; ಹೊರತೆಗೆ: ಬರಿಯಂ ಸುರಿಯೆಯುಂ ಗೂಂಕೆಯಂ ನುಱಿಯೆಯುಂ (ಅಜಿಪು. ೧೧-೧೦ ವ). **ಜುರಿ$_1$**: ೪. ಜುಣಗುಗಿವಿಗಳ ಜುರಿತ ಹುಣ್ಣಿನ ಮಹಾಭೀಷಣದ . . . ರಕ್ಕಸಿ ಬಂದಳು (ತೊರರಾ. ೩-೭-೧೨).

**ಜುರಿಜುರಿ** (ದ್ವಿರುಕ್ತಿ): ಹಿರಿದು ಬಳಲಿದ ಭೀಮ ಜುರಿಜುರಿವ ರಕ್ತದಿಂ ಸರಳುಗಳ ಕಾಯದಿಂದುರುಳಿಸುತ ಕಂಪಿಸುತ (ತುರಂಗ. ೫೯-೨೮).

[ದೇ. ‖ ತಮಿ. ಮಲ. ಚೊರಿ; ಕೊಡ. ತೊರ್, ತೊರಿ; ತುಳು. ಸೋರು, ತೋರು; ತೆಲು. ತೊರಾಗು, ತೊರ್ಗು; ಕುವಿ. ತೋರ]

**ಸುರಿ$_2$** 'ಸುಱಿ$_1$' ನೋ.

**ಸುರಿಕಂಡ** (ನಾ). (ದೇಹದಿಂದ) ಈಚೆಗೆ ಬಂದ ಮಾಂಸದ ಚೂರು,— ತುಂಡು: ಗಾರುಗಾರನೆ ಸುಟ್ಟು ಸುರಿಕಂಡವನ ಮಾಡಿ ಓರಂತೆ ತಿನುತಿಹನಾಮಿಕಗಲ್ಲದೆ (ಶಿವಗೀ. ೧೪೮-೯೪೦). [ಸುರಿ$_1$ + ಕಂಡ$_1$]

**ಸುರಿಗಾಯ** (ನಾ). ಕೀತು ಸ್ರವಿಸುತ್ತಿರುವ ಗಾಯ,— ವ್ರಣ (?): ಹುಸಿದವನ ಒಡಲಿನ ಪ್ರತಿ ಮೂಡಲೆಯಂತೆ . . . ಸುರಿಗಾಯ ಸುರಿವವನ ವಿಧಿಯಂತೆ (ಮನುಗುಂ. ೭೪). [ಸುರಿ$_1$ + ಗಾಯ]

**ಸುರಿಗಿ** 'ಸುರಿಗೆ$_2$' ನೋ.

**ಸುರಿಗಿವಿಡಿ** 'ಸುರಿಗೆವಿಡಿ' ನೋ.

**ಸುರಿಗಿಱಿ** (ಕ್ರಿ). ಕತ್ತಿಯಿಂದ ಇರಿ; ಖಡ್ಗದಿಂದ ಚುಚ್ಚು: ಅರೆಬರ್ ಮೇಲ್ವಾಯ್ದು ಸುರಿಗಿಱಿದರ್ (ಪಂಪಭಾ. ೧೦-೮೮); ನೊಟಂಬರಂ ಕಾದಿ ಗೆಲ್ದು ಕಾಳೆಗದೊಳ್ . . . ಸುರಿಗಿಱಿದು ಕಾದಿ ಸತ್ತನ್ (ಎಕ. V, ಅರಸೀ. ೨೩೭-೮; 971); ಮಣಿಯದೆ ಕಿಟ್ಟೆಚ್ಚ ನಂತರಂ ಸುರಿಗಿಱಿದಂ (ನೇಮಿಪು. ೧೧-೧೫೬). [ಸುರಿಗೆ$_2$ + ಇಱಿ$_1$]

**ಸುರಿಗೆ$_1$** 'ಸುರಗಿ$_1$' ನೋ.

**ಸುರಿಗೆ$_2$, ಸುರಗಿ$_3$, ಸುರಿಗಿ** (ನಾ). ಸಣ್ಣಕತ್ತಿ; ಚೂರಿ: ಪ್ರಾಣವಲ್ಲಭನ ಸುರಿಗೆಯಂ ಕೊಂಡು ತನ್ನ ತಾನಿಱಿದು ಸತ್ತಳ್ (ವಡ್ಡಾರಾ. ೩೬-೨೮); ಕಟ್ಟಿದುದೆ ಸುರಿಗೆ ಮೆಟ್ಟಿದುದೆ ಕಳಂ (ಆದಿಪು. ೩-೭೨); ಸುರಿಗೆಯ ಮೇಲೊಱಗಿ ನಾನಿಹೆನು (ಮಹಾದೇ.ಬ. ೩೦-೬೪). **ಸುರಗಿ$_3$**: ಬೇಂಟೆವೞಿ ದೊರೆಯೊಳೊಡಂಬಟ್ಟಸಿಯ ಸುರಗಿ . . . ತನ್ನೊಳಮಱೆ (ಪಂಪಭಾ. ೫-೩೬); ಪಿರಿದಪ್ಪ ಶಕ್ತಿ ತನಗುಳ್ಳೊಡಂ ಸುರಗಿಯಲ್ಲದೆ ಪಣೆದಗುರ್ವು ಪಱಿಯದು (ಧರ್ಮಾಮೃ. ೭-೫೦); ಒಯ್ಯಾರದಲಿ ಸುರಗಿಯ ತಿರುಹುತಿರುಳೊಬ್ಬನೆ ನಿಜಾಲಯದಿಂದ ಹೊಱವಂಟ (ಕುಮ್ಮಾವಿ. ೩-೮೧). **ಸುರಿಗಿ**: ಚಕ್ರಂ ಶೂಲಂ ಸುರಿಗಿ ಮೊದಲಾಗ ಮೂವತ್ತೆರಡಾಯುಧಮಂ ಮಹೋತ್ಸವಂಬೆರಸಿನಿತಂ ನಿಲಿಸಿ ಪೂಜಿಸಿ (ಧರ್ಮಾಮೃ. ೨-೧೨೮). 'ಸೂರಿಗೆ' ಪರಾ. [< ಸಂ. ಛುರಿಕಾ]

**ಸುರಿಗೆ$_3$** 'ಸುರಗಿ$_2$' ನೋ.

**ಸುರಿಗೆಕಾರ** (ನಾ). ಕಠಾರಿಯನ್ನು ಹಿಡಿದಿರುವವನು: ರಣರಂಗದಲ್ಲಿ ಉರವಣೆ ಯಿಂದ ಇದಿರಾದ ಸುರಿಗೆಕಾರರನ್ನು ತೆರಪಿಲ್ಲದೆ ಕೊಂದು ಬೂತುಗನು ಭೂತಭೋಜನ ವನು ಮಾಡಿಸಿದನು (ಕವೀರ. ೩೪). [ಸುರಿಗೆ$_2$ + - ಕಾರ$_1$ (< - ಕಾಱ)]

**ಸುರಿಗೆಗಾಳಗ** 'ಸುರಿಗೆಗಾಳೆಗ' ನೋ.

**ಸುರಿಗೆಗಾಳೆಗ, ಸುರಿಗೆಗಾಳಗ** (ನಾ). ಕತ್ತಿಯ ಕಾಳಗ; ಖಡ್ಗಯುದ್ಧ: ಎನ್ನ ಕಾಳಗಮಂ ಸುರಿಗೆಗಾಳೆಗಮಂ ನೋಟ್ಪಂತೆ (ಪಂಪಭಾ. ೧೨-೧೧೬ ವ); ಸುರಿ [ಪಾಠಾಂ. ರಿ]ಗೆ ಗಾಳೆಗಂಗಾದುವಂಗೆ ಬಳಸಿಯುಂ ನೋಟ್ಪ ನೆರವಿ ನೆರಮ (ಜೀವಸಂ. ೪೬-೧೯). **ಸುರಿಗೆಗಾಳಗ**: ಸುರಿಗೆಗಾಳಗಮಂ ಕಾದಿ ಗೆಲುಬನ್ನ (ಎಕ. XII, ತಿಪಟೂ. ೮೧-೭; 1114); ನನ್ನ ಕಾಳಗವನ್ನು ಸುರಿಗೆಗಾಳಗವನ್ನು ನೋಡುವಂತೆ (ಭಾಮಣಿ. ೨೬). [ಸುರಿಗೆ$_2$ + ಕಾಳಗ]

**ಸುರಿಗೆಗೀಟ್** (ಕ್ರಿ). (ಒರೆಯಿಂದ) ಕತ್ತಿಯನ್ನು ಹಿರಿ,—ಎಳೆ: ಒರ್ಬ ರೊರ್ಬರಂ ಬಯ್ದಡೆ ದಣ್ಣವೆರಡು ಪಣಂ ಬಡಿದಡೆ ಪನ್ನೆರಡು ಪಣಂ ಸುರಿಗೆಗಿಟ್ಟಡೆ ಮೂಱುಗದ್ಯಾಣವಿಱಿದಡೆ ಪನ್ನೆರಡುಗದ್ಯಾಣಂ ಜಾತಿಭೇದವಱಿದು ದಣ್ಣವಂ ವಿಶೇಷಂ ಮಾಡ್ಪ[ರ್] (ಎಇ. XX, ೬-೩೭; 1012); ಒರ್ಕೆಯ್ಸಿ ಬಿಲ್ಲನಂಬು ಮನುರ್ಕಾಳ್ಗಳ್ ಸುರಿಗೆ [ಪಾಠಾಂ. ರಗಿ] ಗಿಟ್ಟು (ಕಾವ್ಯಾವ. ೫೪). [ಸುರಿಗೆ$_2$ + ಕೀಟ್]

**ಸುರಿಗೆತೇರ್** (ನಾ). (ಚಕ್ರಗಳಿಗೆ) ಕತ್ತಿ ಜೋಡಿಸಿರುವ ಬಂಡಿ, – ರಥ: ಎರಡುನೊಗದ, ಮೂರುನೊಗದ ಸುರಿಗೆತೇರನೇರಿದವರ್ (ಪಾರಸಿ. ೪-೫).

[ಸುರಿಗೆ$_2$ + ತೇರ್$_2$]

**ಸುರಿಗೆವಿಡಿ, ಸುರಿಗಿವಿಡಿ** (ಕ್ರಿ). ಕತ್ತಿಯನ್ನು ಹಿಡಿ; ಖಡ್ಗವನ್ನು ಧರಿಸು: ಸುರಿಗೆವಿಡಿದು ತೆಗೆದಾ ಮಾಸನೂರ ನೆರೆದ ತರುಣಿಯರ ಹರಣಮಂ ಕಾಯ್ದು (ಸಿದ್ಧರಾ. ೧-೩೫). **ಸುರಿಗಿವಿಡಿ**: ಕಾವಿಲ್ಲದ ಕೊಡೆವಿಡಿವೆನೆಂಬಂತೆ ಬಂದಿಗೆಯಿಲ್ಲದೆ ಸುರಿಗಿ[ಪಾಠಾಂ. ಹರಿಗೆ]ವಿಡಿವೆನೆಂಬಂತೆ (ಧರ್ಮಾಮೃ. ೪-೫೦). [ಸುರಿಗೆ$_2$ + ಪಿಡಿ$_1$]

**ಸುರಿತ** (ನಾ). ಹರಿಯುವಿಕೆ; ಸ್ರಾವ: "ಧಾರಾ – ಎಡೆವಿಡದ ಸುರಿತಂ" (ಕಾಶಕ್ಯ. ೭೫); ಮುಗ್ಗರಿಸಿ ಬಿದ್ದ ಪೆಟ್ಟಿನಿಂದ ಮೂಗಿನಲ್ಲಿ ರಕ್ತದ ಸುರಿತ ಹೆಚ್ಚಾಗಿ ಅವರು ಬಹಳ ನಿಶ್ಶಕ್ತರಾದರು (ರೂಢಿ). [ಸುರಿ$_1$ + -ತ]

**ಸುರಿತಣ್ಣ** (ನಾ). ಒಬ್ಬಾತನ ಹೆಸರು: ರೇವಂತ ನಡೆಗೌಡ ಸುರಿತಂಣ ಪಿರಿಯ ತಮ್ಮಗೌಡರು (ಎಕ. VII, ಶಿವಮೊ. ೧೧೪-೧೫; 950?). [? + ಅಣ್ಣ$_1$]

**ಸುರಿತರ್** (ಕ್ರಿ). ಹರಿದುಬರು; ಸ್ರವಿಸು: ಸಾರಸಪಹಕಾರಧಾರಾಸಾರಂ ಕೊಳದಳವೆಯಂತೆ ಸುರಿತರೆ (ಆದಿಪು. ೬-೯೫); ಸುರಿತರೆ ಬಾಷ್ಪಪೂರಮೆಮೆಯಿಕ್ಕದೆ . . . ನೋಡಿದಂ (ಕಾದಂಉ. ೫೪೯); ಸುರಿತರ್ಪ ಕಮ್ಮಲರೆ ಪೆರ್ಮಳೆಯಾಗಿಸೆ ಕಾರಲಕ್ಷ್ಮಿಯಂ ತೊಡನಡರ್ದಂಬುದಕ್ಕೆ ನೆಗೆವಚ್ಚರಿಯಚ್ಚರಿಯಂ ನಿಮಿರ್ಚಿದಳ್ (ಶಬಶಂ. ೧-೪೫).

[ಸುರಿ$_1$ + ತರ್$_1$]

**ಸುರಿತಾಣ** 'ಸುಲ್ತಾನ್' ನೋ.

**ಸುರಿತಾಳ** 'ಸುಲ್ತಾನ್' ನೋ.

**ಸುರಿತ್ರಾಣಿ** 'ಸುಲ್ತಾನ್' ನೋ.

**ಸುರಿಮಳೆ** (ನಾ). ೧. ಎಡೆಬಿಡದೆ ಸುರಿಯುವ ಮಳೆ; ಧಾರಾಕಾರವಾದ ಮಳೆ: ಕಾರಮಳೆಯೆ, ಕಪ್ಪತಮಳೆಯೆ! ಸುರಿಮಳೆಯೆ! ಸುರಿಮಳೆಯೆ! (ನೆಲಮು. ೧೫-೩); ಅವನ ಮೇಲೆ ಶೃಂಗಕದ (ಪಿಚಕಾರಿ) ಬಣ್ಣದ ನೀರಿನ ಸುರಿಮಳೆಯಾಗುತ್ತಿತ್ತು (ಬಾಣಆ. ೧೨೧). ೨. (ಆಲಂ) ಯಥೇಚ್ಛವಾಗಿರುವಿಕೆ; ಸಮೃದ್ಧತೆ: ಲೇಖನಗಳ ಸುರಿಮಳೆ ಪ್ರಾರಂಭವಾಯಿತು (ಗ್ರಂಥಾಲ. ೨೮).

[ಸುರಿ$_1$ + ಮಳೆ (< ಮೞೆ)]

**ಸುರಿಮುಳ್ಳು** (ನಾ). ಒಂದು ಬಗೆಯ ಸಸ್ಯ: (ಮ್ಯಟಿಗಿ. ೭೯-೧೭೯).

[ಸುರಿ$_1$ + ಮುಳ್ಳು (< ಮುಳ್)]

**ಸುರಿವಾಯ್** (ನಾ). ಜೊಲ್ಲು ಸುರಿಯುತ್ತಿರುವ ಬಾಯಿ: ಪಲರ್ಗೆ ಬಿರಿದಲೆ ಸುರಿವಾಯ್ ಪಲರ್ಗೆ (ಅದ್ಭುತ. ೨೫-೨೭). [ಸುರಿ$_1$ + ಬಾಯ್$_2$]

**ಸುರಿವು** (ನಾ). ಸುರಿಯುವಿಕೆ; ಧಾರೆ: ಜೇನ ಸುರಿವಿಗೆ ಪಾತ್ರೆಯಾಗುವುದರಲ್ಲೇ ಕಿವಿಗೆ ಆನಂದ (ಏಳಜೇ. ೧೫೦). [ಸುರಿ$_1$ + -ವು]

**ಸುರಿಸು** (ಕ್ರಿ). ೧. ಹರಿಯುವಂತೆ ಮಾಡು; ಸ್ರವಿಸು: ಉರಗನರಸಿಯ ಕಂಡು ತನ್ನಯ ತಿರುಪ ಮಾಣದೆ ಸೋತು ವೀರ್ಯವ ಸುರಿಸಲಾಕೆಯು ನೋಂತು ಧರಿಸಿದಳೊಬ್ಬ ಪುತ್ರನನು (ಸಂಭವ. ೨೭-೩); ತನಿಜೇನ ಸುರಿಸುಗುಂ (ಕಾಲೂರ. ೪೭-೬೪); ಪ್ರಯಾಣ ಹೊರಡುವಾಗ ಕಣ್ಣೀರು ಸುರಿಸಬಾರದು (ಚಂಗಾಳ್ಳ. ೩೦). ೨. ಕಾರು; ಸೂಸು; ಚೆಲ್ಲು: ಕಾರ್ಯದರ್ಶಿಯವರು ಕಣ್ಣಿನಿಂದ ಕೆಂಡಗಳನ್ನು ಸುರಿಸುತ್ತಾ . . . ಹೇಳಿದರು (ರಾಯಕ. ೪೭). [ಸುರಿ$_1$ + -ಇಸು$_3$]

**ಸುರು** 'ಶುರು' ನೋ.

**ಸುರುಂಟಿಸು, ಸುರುಟಿಸು** (ಕ್ರಿ). ಮುರುಟಿಹೋಗುವಂತೆ ಮಾಡು; ಉಡುಗಿಸು: ಅವರ ಅಧಿಕಾರರಂಗವನ್ನು ಕರ್ತವ್ಯವಿವರಗಳನ್ನು ಸ್ವಲ್ಪಸ್ವಲ್ಪವಾಗಿ ಕಿರಿದುಗೆಯ್ದು ತಿರುಳ್ಗಿಡಿಸಿ ಸುರುಣ್ಚಿಸಿ ಅವಸ್ತುಮಾಡಿ (ಮುತ್ತಶ. ೬೯-೨೧). **ಸುರುಟಿಸು**: ಯತಿಜನರ ಧೈರ್ಯಮಂ ಮುರುಟಿಪರ್ ಸುರುಟಿಪರ್ ನರಟಿಪರ್ ಸತಿಯರ್ (ಪತಿಲ. ೨-೬೯). [ಸುರುಂಟು + -ಇಸು$_1$]

**ಸುರುಂಟು, ಚಿರಿಟು, ಚಿರುಟು, ಸುರುಟು$_1$** (ಕ್ರಿ). ೧. ಮುದುರು; ಮುರುಟಿಕೊಳ್ಳು: "ಸುರುಂಟು – ಸಂಕೋಚನೇ" (ಶಮಧಾ); ಕೋಲ್ಮುದಿಗೊಳ್ಳ ಮೆಯ್ಯಂಡಮಂ ತಾಳಿಸೆ ಸುರುಂಟಿ ಬಗಿದಾ ಮೆಯ್ಯಂ ಸುಡೆ (ಶಾಂತಿಪು. ೭-೯೫ ವ); ಮುಂಗಾರ ಸಿಡಿಲ ಮೊಟಗಂ ಕೇಳ್ದು ಸುರುಂಟುವಣಂಬೆಯ ತಿಟ್ಟದಂತೆ (ರಾಮಾಶ್ವ. ೩೫-೪). **ಚಿರಿಟು**: ೧. ಬಾಗಿಲಲ್ಲಿ ಕರೀಡೆಬೆಯೊಂದಿತ್ತು, ಅದೀಗ ಮುದ್ದೆಯಾಗಿ ಪಕ್ಕದಲ್ಲಿ ಚಿರಿಟಿಕೊಂಡಿತ್ತು (ಕಾಬರ್ಘಾ. ೨೪). **ಚಿರುಟು**: ೨. ತಿರುಚಿ ಅಮುಕು: ಹೂವಿನ ಪಾತ್ರೆಯ ಮಣ್ಣಿಗೆ ಸುಟ್ಟ ಸಿಗರೇಟನ್ನು ಚಿರುಟಿದಳು (ತಾಯಿ. ೨೭೭). **ಸುರುಟು$_1$**: ೧. ಜಿಹ್ವೆ ಸುರುಟುವುದು ಭೂಪೋನ್ನತನೆ (ಜಿನಮು. ೬-೩೯); ಕೃತಜ್ಞತೆಯ ಭಾವನೆಯು ಮುರುಟಿ, ಸುರುಟಿ, ಕಂದಿ ಕಮರಿಹೋಗುತ್ತದೆ (ಯಕ್ಷಪ್ರ. ೧೩೨); ಕಂಡೆ ಸುರುಟಿ ಸುಂಡಿ ಹೋಗಿ ಜೋಲುಬಿದ್ದ ಮಾಂದಳಿರ (ಮಾಂದಳಿ. ೩೭-೧೭). ೩. ಸರಿಪಡಿಸು: ಜಗುಲಿದ ಮೊಲೆಗಳ ಸುರುಟಿ ಜವಕೆಯಿಂದ ಬಿಗಿದು (ಮೋಳಿಪು. ೧-೭೮). [ದೇ. ॥ ತಮಿ. ಮಲ. ಚುರುಟ್ಟು; ತುಳು. ಚಿರಂಟ್, ಸುರುಂಟು; ಕೊಡ. ತುರೀಟ್, ತುರೀಡ್]

**ಸುರುಕವಡೆ** (ನಾ). ಒಂದು ಬಗೆಯ ಕಳ್ಳು, – ಮದ್ಯ (?): ರಸವಣಿಯನುಂಡ ಗೊರವಿತಿ ಪೊಸತಾಶೀರ್ವಾದವುಳ್ಳದೊಂದೆಂದಾಗಳ್ ಬಸಿಗಳ್ಳಿಂಗೆ ಮಹೇಶರ ಪಸಾದ ಸುರುಕವಡೆ ಕವಡೆ ಹರಿವೋ ಎಂದಳ್? (ಸೂಕ್ತಿಸು. ೧೩-೨೦).

[?./ ಮರಾ. ಸುರಕವಡೀ = ಒಂದು ಆಟ]

**ಸುರುಕಿ** 'ಸುರ್ಕಿ' ನೋ.

**ಸುರುಗು$_1$** 'ಸೊರಗು$_1$' ನೋ.

**ಸುರುಗು$_2$** (ನಾ). ೧. ಒಣಗಿದ ಎಲೆ, – ಗರಿ: ರಂಗಪ್ಪಶೆಟ್ಟಿಯ ಮನೆ ಊರಿನ ಮಧ್ಯ ಇತ್ತು. ಅದನ್ನು ಸುರುಗಿನಿಂದ ಕಟ್ಟಿದ್ದನು (ಊರುಕ. ೮೧); ಸುರುಗು ಗುಡಿಸುವುದಕ್ಕೆ, ತರಗು ತೂರುವುದಕ್ಕೆ . . . ನಾಲ್ಕು ನಾಲ್ಕು ಹನಿ (ಬಾಲಪ್ರ. II, ೧೧೬೦). ೨. ಒಣಗಿದ ಬಾಳೆಯೆಲೆ: (೯). [< ಸೊರಗು$_1$?]

**ಸುರುಗುಜಾಡ್ಯ** (ನಾ). ಬತ್ತದ ಬೆಳೆಗೆ ಬರುವ ಒಂದು ಬಗೆಯ ರೋಗ: (ಏಸಮ್ಮ. XV, ೩೫). [ಸುರುಗು$_2$ + ಜಾಡ್ಯ]

**ಸುರುಗುಮಾನ್ಯ** (ನಾ). ದಾನವಾಗಿ ನೀಡಿದ ಒಣಭೂಮಿ: ಚಿನ ಅಪ್ಪಯಗೆ ಕೊಟ್ಟ ಸುರುಗುಮಾನ್ಯ (ಎಕ. IX, ಹೊಸಕೋ. ೫೮-೫; 1688?); ತೇಕಲು ಹೋಬಳಿಗೆ ಸಲುವ ಕೊಂಡರಾಜನ ಹಳ್ಳಿಗ್ರಾಮಕ್ಕೆ ಸುರುಗುಮಾಂನ್ಯ (ಎಕ. X (S), ಮಾಲೂರು. ೨೨೪-೭; 1750); ಅಪ್ಪೆಗವುಡನ ಹಳಿಸ್ತಳದ ಗವುಡ ಮರಿಯಂಣನ ಸುರುಗು ಮಾನ್ಯ ಗದ್ದೆ (ಎಕ. X, ಶಿಡ್ಲಘ. ೬೨-೪; ?). [ಸುರುಗು$_2$ + ಮಾನ್ಯ]

**ಸುರುಚಿರ** (ಗು). ೧. ಹೊಳಪಿನ; ಪ್ರಕಾಶಮಾನವಾದ: ಕಾಶೀವಿಷಯದ ಸುರುಚಿರ ಸೌಭಾಗ್ಯಂಬಡೆದೊಪ್ಪುವ ವಾರಾಣಸಿಯೆಂಬ ಪುರ (ಜಯಕಾ. ೩-೧೭); ಸುರುಚಿರ ದೇವಾಗಾರ . . . ನಗರಿ ದುರ್ಗಂಗಳಿಂ (ಹಮ್ಮೀರ. ೧-೯೯ ವ); ಗಮಿಸಿದಂ ವರ ರಾಮನಾಥ ಲಿಂಗಾಲಯಕೆ ಸುರುಚಿರೇಕೋರಾಮರತಿಭಕ್ತಿಯಿಂ (ಏಕೋಪು. ೮-೧೨). (ನಾ). ೨. ಕಾಂತಿ; ಹೊಳಪು: ವರವಕ್ಷದ ತಿಲಕವನಿಡುವುದು ಸುರುಚಿರದ ತಿಗುರನಿಕ್ಕುವುದು (ಜೀವಂಸಾ. ೯-೬೦). [ಸಂ.]

**ಸುರುಚಿರಾಂಗ** (ನಾ). ಹೊಳಪುಳ್ಳ ಮೈಯುಳ್ಳದು; ಹುಲಿ: "ವ್ಯಾಘ್ರಂ ತರಕ್ಷುವೆನಲು ಸುರುಚಿರಾಂಗಂ" (ಮಂಗರಾ. ೪೭-೭). [ಸಂ.]

**ಸುರುಟಿ$_1$, ಸುರಟಿ$_1$** (ನಾ). ೧. ಮೆರವಣಿಗೆಯಲ್ಲಿ ಹಿಡಿಯುವ ರಾಜಯೋಗ್ಯವಾದ ಸಾಧನಗಳಲ್ಲಿ ಒಂದು: ಥರಥರದೊಳು ಪರಿಪರಿ ಬಣ್ಣ ಬಿಳಿದಿನ ಸುರುಟಿ ನಿಶಾನಿ ಸತ್ತಿಗೆಯೂ ಧರೆ ತುಂಬಿ ಬರುವಂತೆ ದೊರೆ ದೊರೆಗಳ ಮುಂದೆ ಬಿರಿದೆತ್ತಿ ಪಾಟಕರ್ ಪೊಗಳೆ (ಸೌಂದಕಾ. ೬-೭೭); ಪಲ್ಲಕ್ಕಿಗಳು ಛತ್ರಿ ಚೂರಿಗಳು ಸುರುಟಿಗಳು ವಳ್ಳಿತಹ ಮಿಸುನಿ (ಕೃಷ್ಣವಿ. ೩-೧೭). ೨. [ಸಂಗೀತ] ಒಂದು ರಾಗದ ಹೆಸರು: ಸಾರಂಗ ಮೋಹನಮಿಂತು ಸಾವೇರಿ ಸುರುಟಿ ಭೈರವಿ (ವಿದಾಕ್ಯ. ೮೭-೨); ಸುರುಟಿ ೨೮ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ (ಸಂಗೀಚಂ. ೧೬೩). **ಸುರಟಿ$_1$**: ೧. ಇರುಗಡೆಯ ಸಾಲ್ವಿಡಿದ ರನ್ನದ ಸುರಟಿಗಳ ಸೌವರ್ಣಕಲಶೋತ್ಕರದ ಧವಳಚ್ಛತ್ರಗಳ . . . ಬಿರುದು ಪತಾಕೆಗಳ ಮೋಹರ ಗಳ್ಳಿತರುತಿರ್ದವು (ಆನಂರಾ. ೧-೨೪-೩೪). ೨. ಹಾಡುಗಳಿಗೆ ಕಾಂಬೋಧಿ . . . ಸುರಟಿ,

ಮಧ್ಯಮಾವತಿ, ಆನಂದಭೈರವಿರಾಗಗಳೂ ಸೂಚಿತವಾಗಿವೆ (ಯಕ್ಷಗಾ. ೩೮).
[ದೇ. ‖ ತಮಿ. ಚುರುಟ್ಟಿ; ತೆಲು. ಸುರಟಿ]

**ಸುರುಟಿ₃** 'ಸುರುಟು₂' ನೋ.

**ಸುರುಟಿಸು** 'ಸುರುಂಟಿಸು' ನೋ.

**ಸುರುಟು₁** 'ಸುರುಂಟು' ನೋ.

**ಸುರುಟು₂**, ಸುರುಟಿ₂, ಸೊರಂಟು, ಸೊರಟು (ನಾ). ೧. ಸುತ್ತಿಕೊಂಡಿರುವುದು; **ಸುರುಳಿ:** (ಶ). **ಸುರುಟಿ₂** : ೨. ಸುರುಳಿಯಾಕಾರವಾಗಿರುವುದು: ಆರ ನೋಡಲು ಸುರುಟಿಯ ಕತ್ತಿಗಳ ಹುಯ್ಲು ಧಾರೆಗಿಕ್ಕಿಡಿಯಾದವರು (ಕಂಪವಿ. ೧೫-೯೯). **ಸೊರಂಟು** : ೧. ಸೊರಂಟು, ಒಱಂಟು (ಶಮದ. ೩೭ ಪ್ರಯೋ). **ಸೊರಟು:** ೩. (ಒಣಗಿದ ಎಲೆಯಂತೆ) ಮುರುಟಿಕೊಂಡಿರುವುದು : (ಶ). ೪. ಡೊಂಕಾದುದು ; ಸೊಟ್ಟಗಿರುವುದು: 'ಸೊರಟುದಲೆ', 'ಸೊರಟುಮೂಗು' ಪರಾ. [< ಸುರುಂಟು₁./ ತಮಿ. ಚುರುಟ್ಟು]

**ಸುರುಟು₃**, ಸುರಟು₁, ಸುರ್ಟು (ನಾ). (ವಿಶೇಷೋತ್ಸವಸಂದರ್ಭಗಳಲ್ಲಿ) ಗೌರವಸೂಚಕವಾಗಿ ಗುಂಡುಹಾರಿಸುವುದು: ಅಂತರಹಿತಾಹ್ಲಾದದಿಂದ ಜನರಲ್ಲುರುಟ ನೋಡಲ್ಕೆ ಪೊರಮಟ್ಟನು (ಅರ್ಜಾವಿ. ೨೪-೧೭); ಎದೆ ಬಿರಿಯುವಂತೆ ಬೊಬ್ಬಿಡುತ್ತ ಅರ್ಧಭಾಗ ಅಂತರ್ಹಿತವಾಗಿದ್ದ ಚಂದ್ರಬಿಂಬಮುಖವಾಗಿ ಸುರುಟು ಗಳನ್ನು ಹಾರಿಸಿದರು (ಜ್ಯೋತಿರ್ವಿ. ೨೪೯); ಒಬ್ಬ ಸಿಪಾಯಿಯ ಕಳುಹುವ ಸುರುಟಿಲ್ಲ, ನಮ್ಮ ನಾಯಕನನು ಹೂಳುತಿದ್ದಾಗ (ಇಂಗೀತ. ೧೯-೩). **ಸುರಟು₁** : ಶ್ರೀ ಚಾಮರಾಜೇಂದ್ರಒಡೆಯರ್ ಬಹದೂರವರು ಸಿಂಹಾಸನಾರೂಢರಾದರು . . . ಹೊರಗಡೆ ಮೈದಾನದಲ್ಲಿ ಸುರಟು ನಡೆದು ತೋಪುಗಳು ಆದವು (ಮಹಾವಂ. II, ೧೮೪). **ಸುರ್ಟು** : (ಕಿಸಂಗ್ಲಾ. ೧೧೫). [<— ಇಂ. Salute]

**ಸುರುಟುಕಿವಿ** (ನಾ). ಕೊಂಕಿದ ಕಿವಿ; ತಿರುಚಿಕೊಂಡಿರುವ ಕಿವಿ : ಕೊಱಟು ದಲೆಯ ಕೊಳೆನಾಱುವ ಕಬ್ಬಾಯ ಸುರುಟುಕಿವಿಯ ಸುಂಠಿವೆರಲ ಕಿಱಿದು ಕಿನಿಕೆ ಹತ್ತಿದ ಹಲ್ಲುಳುಡುಗಿದೊಂದುರದ ಕುನುಂಗಿದ ಬೆನ್ನ . . . ಭೂತವೆ ನಡೆತಪ್ಪಂತೆ (ನೇಮಿಸಂ. ೭-೧೦೩). [ಸುರುಟು₁ (< ಸುರುಂಟು) + ಕಿವಿ₂]

**ಸುರುಟುಗಾಲು** (ನಾ). ಕೊಂಕಿದ ಕಾಲು; ಡೊಂಕುಗಾಲು : ತರಟುದಲೆಯು ಮುರಟುಕಿವಿಯು . . . ಸುರುಟುಗಾಲು . . . ಒರಟುಮೈಯೊಳೆಸೆವರು (ಆದಿಪ. ೪-೪). [ಸುರುಟು₁ (< ಸುರುಂಟು) + ಕಾಲು (< ಕಾಲ್₁)]

**ಸುರುತಾಳ** 'ಸುಲ್ತಾನ್' ನೋ.

**ಸುರುತಿ** (ನಾ). ಒಂದು ಬಗೆಯ ಸೀರೆ : ಕೃಷ್ಣ ನಾರಿದ್ರೌಪದಿಗೆ ವಸ್ತ್ರ ಅಕ್ಷಯ ವೆಂದನು ಸುರುತಿ ಕಂಭವತಿ ಸಣ್ಣ ಬಣ್ಣಸೀರೆಗಳು ಮೇರುವಿನ ಬೆಟ್ಟದಂತೆ ಮಹಿಮೆ ತೋಱಿದ (ಪುರಂದ. ೫-೭೨-೧೯). [?]

**ಸುರುಮ** 'ಸುರಮ' ನೋ.

**ಸುರುವಾತು** (ನಾ). ಮೊದಲು; ಪ್ರಾರಂಭ: ಸುರುವಾತಿನ ಒಂದು ಪತ್ರದಲ್ಲಿ ಸಹಜವಾಗಿ ಕಾಣಿಸಿದ್ದ (ತಳರು. ೭೪). [<— ಮರಾ. ಸುರುವಾತ್, ಸುರವಾತ್]

**ಸುರುವಾರ** (ನಾ). ಒಂದು ಬಗೆಯ ಮರ : ದ್ರಾಕ್ಷಿಯ ಮಂಟಪಗಳನ್ನು ಸುರುವಾರದ ಗಿಡಗಳನ್ನು ಪಪ್ಪಯಿಗಿಡಗಳನ್ನು . . . ಮಾಡಿಸಿ (ಕೃಷಿಪ್ರ. ೧೪೫).
[?]

**ಸುರುವು₁**, ಸುರವು₁, ಸುರುಹು (ಕ್ರಿ). ಸುರಿ; ಹೊಯ್ಯು: ಕರಗಿದ ಬೆಳ್ಳಿಯನ್ನು . . . ಮಣ್ಣಿನ ಹಲಿಗೆಗಳಲ್ಲಿ ಮಾಡಿದ ಕಾವಲಿಗಳಲ್ಲಿ ಸುರುವುವನು (ಕಭಾಗ. ೨೮೨); ಡಬ್ಬಿಗೊಡದ ಮೇಲೆ ನೀರು ಸುರುವಿದಂತೆ ಆಗುತ್ತದೆ (ಮೋಹಿನೀ. ೨೯); ಕಾಫಿಯನ್ನು ದೊಡ್ಡಕಪ್ಪಿನಲ್ಲಿ ಸುರುವಿಕೊಂಡು ಅದಕ್ಕೆ ಸಕ್ಕರೆ ಸೇರಿಸುತ್ತಿದ್ದ (ಮಹಾತ್ಮಾ. ೧೭). **ಸುರವು₁:** ಆ ಶೇಠಜಿಯ ಎದೆಗೆ ತಣ್ಣೀರು ಸುರವಿದಂತಾಗಿ ಆದನ್ನೆ ಆರಾಣಿಗೆ ಕೊಟ್ಟುಬಿಡುವುದು ಖಂಡಿತ (ಮುಂಗಾಪು. ೧೧೨). **ಸುರುಹು** : ವಿಂಧ್ಯದ ಗಿರಿಯ ಮೇಲ್ ಕಾರ್ಮೋಡಗಳು ಮಳೆಗರೆದ ತೆರದಲಿ ಸುರುಹಿ (ರಘುವಂ. ೧೩-೮).
[< ಸುರಿ₁]

**ಸುರುವು₂** 'ಶುರು' ನೋ.

**ಸುರುಸುರ್**, ಸುರುಸುರು (ನಾ). ಹೂಬಾಣದ ಪಟಾಕಿ ಮುಂತಾದುವು ಉರಿಯುವಾಗ ಉಂಟಾಗುವ ಶಬ್ದವನ್ನು ಸೂಚಿಸುವ ಒಂದು ಅನುಕರಣ ಶಬ್ದ : 'ಸುರುಸುರ್‌ಬಾಣ' ಪರಾ. **ಸುರುಸುರು** : 'ಸುರುಸುರುಬತ್ತಿ' ಪರಾ.

**ಸುರುಸುರ್‌ಬಾಣ** (ನಾ). ಸುರುಸುರ್ ಎಂದು ಶಬ್ದಮಾಡುವ ಒಂದು ಬಗೆಯ ಸಿಡಿಮದ್ದಿನ ಬಾಣ : ಭುಸುಗುಡುತ್ತ ಆಕಾಶಕ್ಕೆ ಬೆಂಕಿಯ ಬರೆಯೆಳೆದು ಕಣ್ಮರೆಯಾಗುವ ಸುರುಸುರ್‌ಬಾಣ (ಮೂರುದಾ. ೨೧೭). [ಸುರುಸುರ್ + ಬಾಣ₃]

**ಸುರುಸುರಿಕೆ** 'ಸುರಸುರಿಕೆ' ನೋ.

**ಸುರುಸುರಿಗೆ** 'ಸುರಸುರಿಕೆ' ನೋ.

**ಸುರುಸುರು** 'ಸುರುಸುರ್' ನೋ.

**ಸುರುಸುರುಕೆ** 'ಸುರಸುರಿಕೆ' ನೋ.

**ಸುರುಸುರುಬತ್ತಿ** (ನಾ). = ಸುರುಸುರ್‌ಬಾಣ : ಹುಡುಗರು ಈಗಲೇ ಪಟಾಕಿ ಪಟಾಸು ಸುರುಸುರುಬತ್ತಿಗಳನ್ನು ಹತ್ತಿಸುತ್ತಿದ್ದರು (ಹುಟ್ಟಿಹ. ೬೨).
[ಸುರುಸುರು (< ಸುರುಸುರ್) + ಬತ್ತಿ]

**ಸುರುಹು** 'ಸುರುವು₁' ನೋ.

**ಸುರುಳ್₁**, ಸುರುಳು₁ (ಕ್ರಿ). ಸುರುಳ್ದು (ಭೂತನ್ಯೂ), ಸುರುಳ್ವ (ಭವಿಕೃ). ೧. ಸುತ್ತಿಕೊಳ್ಳು ; ಸುರುಳಿಯಾಗು : ಬಾಳೆಯ ಸುರುಳ್ದೆಳೆಯೆಲೆಯಿಂ ತೆಗೆದು (ಜಯಕಾ. ೧-೫೯); ಮಣಿದುದಮರಾಚಲಂ ಬೆಳ್ಳಾಯ್ತು ರಜತಧಾರಿಣಿಧರಂ ಚಕ್ರವಾಳಂ ಸುರುಳ್ದುದು (ನಂದಿಮಾ. ೧೧-೨೭). ೨. ಮುದುಡು ; ಮುರುಟಿಕೊಳ್ಳು: "ಸುರುಳ್ – ಸಂಕೋಚನೇ" (ಶಮಧಾ); ಪೊಯ್ದೊಡೆ ಕೆಡೆದುಂ ತಿವಿದೊಡೆ ಸುರುಳ್ದು ಮೋದಿದೊಡಿರದೆಲ್ವಡಗಾಗಿ ಮಡಿದು ಬಿಟ್ಟುವು (ಪಂಪಭಾ. ೧೧-೬೮); ಅಂತೆಚ್ಚ ಕೋಲಿಂ ಮುನ್ನಮೆ ಸುರುಳ್ದುರುಳ್ದು ಹಂಸಂ ವಿಧ್ವಂಸನಮನೆಯ್ದಿತ್ತು (ಪಂಚತಂ. ೧೨೮-೮). ೩. ಸುತ್ತಿಹಿಡಿ; ತಬ್ಬಿಹಿಡಿ: ಭೂಮಿಯಂ ಸುರುಳ್ದು ಕದ್ದೊಯ್ದ ನರಕಾಸುರಂಗಾ ಮಾಧವನ ದೆಸೆಯೊಳಾಯ್ತು ಭಂಗಂ (ಭಾವಚಂ. ೬-೧೮). ೪. ಕೆಡೆ; ಬೀಳು: ನಡುವ ಸರಲ್ ಸರಲ್ಗೊಳೆ ಸುರುಳ್ವ ಹಯಂ (ಪಂಪಭಾ. ೧೦-೧೧೪); ವಿತ್ತೇಶನೀಶಂ ನಡುಕಂಗೊಳ್ವಂ ಸುರುಳ್ವಂ ಸುಗಿವನಗಿವಂ (ಜಗವಿ. ೬-೩೦); ಗರದ ಬಿಱುಹೊಯ್ಲಿಂದೆ ನರಳ್ವರಂ ಸುರುಳ್ವರಂ (ಚೆಬಪು. ೨೨-೧೮). ೫. ಭಯಪಡು; ಅಂಜು : ಧೈರ್ಯಮಂ ಪುದುಂಗೊಳಿಸಿ ಸುರುಳ್ದು ಕುರ್ಗಿದ ಕಱಂಗಿದ ಖೇಚರನಂಗಮಂ ಮೃಗಂಗಳುಮಿರದೆಯ್ದೆ ವಂದು ನಡೆ ನೋಡಿದುವು (ಆದಿಪು. ೨-೫೯); ಭೀಮಸೇನನ ಗದಾಘಾತದೊಳ್ . . . ಮಕುಟಭಂಗಮುಮಾಗೆ ಸುರುಳ್ದು ತೆರಳ್ದು ಸುಯೋಧನನಿರೆ (ಗದಾಯು. ೯-೧೭ ವ); ಸುರುಳ್ದರ್ಮಲೆಪರಹಿತಸಾಮನ್ತರಲ್ಲಾಡಿದರ್ (ಎಕ. VII, ಶಿಕಾರಿ. ೧೫೧-೪೯; 1047); ಅನೇಕಪರಾಜಿಗಳನೇಕಪರಾಜಯಮನೊಳಕೊಂಡು ಸುರುಳಿಯುಂ (ಜಗವಿ. ೧೩-೭೭ ವ). ೬. ಪರಿಹಾರವಾಗು; ಕಳೆದುಹೋಗು : ವಿಧ್ನನ್ನಿಕರಂ ಕರಂ ಮನದೆಗೊಳ್ಳಿನಮೊಂದಿದಘಂ ಸುರುಳ್ಪಿನಂ ಕನ್ನೆಯುಮಾ ಮುನೀಶ್ವರರ ಪಕ್ಕದೆ ತಾಳ್ದಿದಳಂದು ದೀಕ್ಷೆಯಂ (ಸುಕುಮಾ. ೮-೪೦). **ಸುರುಳು₁** : ೩. ಒಂದು ಕಂಟಕದೊಳು ಸುರುಳಿದುದೀ ಹಸುಳೆಗೆಂದಳಲಿ ಪೇಳ್ದರವನೀಶಗಾ ದಂಪತಿಗಳು (ಸೌಂದಪು. ೩-೪೭); ಮಱುವಟ್ಟ ಕೊಂಡಗುಱಿಯ ಹೊಡೆವ ಕಾಡುಕೋಣನ ಸುರುಳುವ ಕರುವಂಗಿಯ . . . ಕಂಡು (ದಶಾವ. ೭-೬೫). ೫. ಹರಿವುತುಂ ತೇರ್ಕೈಸುತುಂ ತೆರಳುತುರುಳುತುಂ ಹೊರಳುತುಂ ಸುರುಳುತುಂ ಮೊರೆವುತುಂ ನರಳುತುಂ (ಸಾನಂಚ. ೪-೨೦೪ ರಗಳೆ). ೭. ಗುಂಡಗೆ ಸುತ್ತು; ಸುರುಳಿಮಾಡು : ಹಪ್ಪಳದಂತೆ ಲತೆಯಿಱಿದು . . . ಆ ಹಲ್ಲೆಯಂ ಸಲೆ ಸುರುಳಿ (ಸೂಪಶಾ. ೧-೮೫); ಬೇಕಾದರಾಡಿಸಿ ಗಾಳಿಪಟವನರ್ತಿ ಸಾಕಾಗೆ ಸುರುಳುವನಂತೆ (ಭರಚ. ೮-೧೦೨).

ಸುರುಳ್ದ = ಭಯಗೊಂಡವನು ; ಅಂಜಿದವನು : "ಸೆಡೆದನೆಂದುಂ, ನಡುಕಂ ಗೊಂಡನೆಂದುಂ, ಸುರುಳ್ದನೆಂದುಂ . . . ಭಯಂಗೊಂಡವಂ" (ಕಶಸಾ. ೫೭-೨೨೫); "ಸೆಡೆದಂ ಸುಗಿದಂ ಸುರುಳ್ದಂ ನಡುಗಿದ ತಾನಗಿದನಳ್ಕಿದಂ . . . ಭಯಭರಿತನಕ್ಕು"(ಕವಿಕಂ. ೧೧೯).
[ದೇ. ‖ ತಮಿ. ಚುರುಳ್; ಮಲ. ಚೂಳು; ತೆಲು. ಸುರ್ಲ್; ಪರ್ಜಿ. ಚುರ್ಕ್]

**ಸುರುಳ್$_2$** 'ಸೂರುಳ್$_1$' ನೋ.

**ಸುರುಳ್$_3$**, ಸುರಳ್, ಸುರುಳು$_3$ (ನಾ). ೧. ಸುರುಳಿ: ಸುರುಳನೆ ಸುತ್ತಿದಂತೆ ಕೊರಲೊಳ್ಮಿಱುಗುತ್ತಿರೆ ಮೂಱು ರೇಖೆಗಳ್ (ಕಾದಂಉ. ೬೦). ೨. ಭೀತಿ; ಸಂಶಯ: ಪಿಡಿದಳ್ ಸುರುಳಿಲ್ಲದೆ ಬಂದಿವಿಡಿವವೊಲ್ಚಿನವದವಂ (ಧರ್ಮಾಮೃ. ೩-೧೯೪). ೩. ನಾಶ; ಹಾಳು: 'ಸುರುಳ್ಗೊಳಿಸು' ಪರಾ. **ಸುರಳ್**: ೪. ಬಟ್ಟೆಯ ಸುರುಳಿ; ಸಿಂಬಿ: ಘಟ್ಟಿ ಪಟ್ಟೆಯ ಸೀಳ ಸುರಳ ತಲೆಯ ಮೇಲಿಟ್ಟು ಶಂಭುಕುಮಾರ . . . ಕಣ್ಣುಗೆಗಳವಟ್ಟು ಬರಲು ಬಂದನಾಗ (ನೇಮಿಸಂ. ೨೧-೩೧). **ಸುರುಳು$_3$** : ೧. ಪಟ್ಟೆಯ ಸುರುಳು ಸೂರಿಯ ಪುಟ ಹೊಸ ಹೊನ್ನದಟ್ಟಿ ಬಿಳಿಯ ದುಕೂಲಗಳ . . . ಮಳಿಗೆಗಳು (ಕಂನವಿ. ೬-೭೦).

[< ಸುರುಳ್$_1$./ ತಮಿ. ಮಲ. ಚುರುಳ್; ತುಳು. ಸುರುಳ್]

**ಸುರುಳಿ$_1$**, ಸುರಳಿ, ಸುರುಳೆ (ನಾ). ೧. ಸುತ್ತಿಕೊಂಡಿರುವುದು; ಸಿಂಬೆ; ಇರಿಕೆ: ಶೋಕದ ಸುರುಳಿಯನು ಸುತ್ತದೆ (ತೂರರಾ. ೪-೪-೬೭); ಬಳುಕುವ ಎಳೆಯ ಬಳ್ಳಿಗಳ ಸುರುಳಿಗಳು, ಸುರುಳಿಗಳ ಮಧ್ಯದ ಜಾಗದಲ್ಲಿ . . . ಚಿತ್ರಗಳು (ನೊಳಂಬ. ೧೧೧); ಹಾಸಿಗೆಯ ಸುರುಳಿಯನ್ನು ಕಾಲಿನಿಂದ ಉರುಳಿಸಿ (ತೇಮೋಡ. ೧೦೭). ೨. (ಸ್ಥಿತಿಸ್ಥಾಪಕತೆಯುಳ್ಳ) ಲೋಹದ ಎಗರುಪಟ್ಟಿ; ಸ್ಪ್ರಿಂಗು: ಪಕ್ಕಕ್ಕೆ ಬಾಗಿಸುವ ಶಕ್ತಿಯನ್ನು ಒಂದೊಂದು ಕಂಡಿಯ ಪಕ್ಕಗಳಲ್ಲಿಯೂ ಇರುವ ಚಿಕ್ಕತಂತಿಯ ಸುರುಳಿಗಳು ಒದಗಿಸುತ್ತವೆ (ಕವಿಕೋ. I, ೬೫೫). ೩. ಒಂದು ಬಗೆಯ ಗಿಡ : ಒಬ್ಬಳ ಬಂದೆಯ ಸುರುಳಿಯ ಹೂವಿಗೆ ತೋಟದ ಈ ತುತ್ತತುದಿಗೆ (ಚಂದ್ರವೀ. ೧೧೧-೪೨). **ಸುರಳಿ** : ೧. ತಂದು ಕೊಟ್ಟರು ಬೆಳುವಟ್ಟೆಯ ಸುರಳಿಯನಂದು ರಾಯನ ಹಸ್ತದಲ್ಲಿ (ಭಶಚ. ೩-೫೧). ೨. ಈ ಸುರಳಿಗಳ (coils) ವಿನ್ಯಾಸ . . . ಬೇಕಾದ ಹಾಗೆ ಬದಲಾಗುತ್ತದೆ (ಶಿಲ್ಪನಾ. ೨೪೧). **ಸುರುಳೆ** : ೧. ಮುನ್ನಾದಿನ ಸುತ್ತಿಟ್ಟ ಸುರುಳೆಯನ್ನು ಹಾಗೇ ಉರುಳಿಸಿಬಿಟ್ಟನು (ಮುಂಬಯಿ. ೪-೧೫೦). [< ಸುರುಳ್$_1$]

**ಸುರುಳಿ$_2$** (ನಾ). ಕುಗ್ಗಿದ ವ್ಯಕ್ತಿ; ದುಃಖಿ: ಕೇಡೆ ಪೆರ್ಚಪ್ಪುದುಂ ಮಾಡೆ ಕೇಡಪ್ಪುದುಂ ಅರಸಿ ತೊಟ್ಟಪ್ಪುದುಂ ಸುರುಳಿ[ಪಾಠಾಂ. ಮ್ಮುರಳಿ] ಸುಖಿಯಪ್ಪುದುಂ (ಜೀವಸಂ. ೯೨-೩೭ ರಗಳೆ). [ಸುರುಳ್$_1$ + - ಇ$_3$]

**ಸುರುಳಿಗುರುಳ್** (ನಾ). ಸುತ್ತಿಕೊಂಡಿರುವ ಕೂದಲು ; ಗುಂಗುರುಕೂದಲು: ಮೃಗಲೋಚನೆ ಸು[ಪಾಠಾಂ. ದು]ರುಳಿಗುರುಳ ಕುಡುವುರ್ವಿನ ಕರ್ಪುಗಳ ಕಱೆಯೆಂಬಿನಂ ನಗೆಮೊಗದ ನೆಟಿಲ್ಗೆತ್ತು ನೋಡಿದಳ್ (ಅನಂಪು. ೪-೧೧೫). [ಸುರುಳಿ$_1$ + ಕುರುಳ್]

**ಸುರುಳಿಡು** 'ಸೂರುಳಿಡು' ನೋ.

**ಸುರುಳಿದೆಱೆ** (ಕ್ರಿ). ಸುರುಳಿಯನ್ನು ಬಿಚ್ಚು : ಇರಿಸಿದ ಪಟದೊಳಿದೇನು ರೂಪೆನುತಲಿ ಸುರುಳಿದೆಱೆದು ನೋಡಿದರು (ವಾಗಹು. ೩-೪). [ಸುರುಳಿ$_1$ + ತೆಱೆ$_1$]

**ಸುರುಳಿಸು** (ಕ್ರಿ). ೧. ಭಯಪಡಿಸು; ಹೆದರಿಸು: ಕುಲಿಶದುಳಿ ಕಿರಿದಾದಡೇನದು ಹಳಚದೆಡೆ ಪರ್ವತದ ಚಂಪಕದಲರು ಮೃದುತರವಾದರಳಿಸಂತತಿಯ ಸುರುಳಿಸದೇ (ಅಂಬಿಕಾ. ೨೫-೬೨). ೨. ನಾಶಪಡಿಸು; ಹಾಳುಮಾಡು : ಒಡಲ ಬಿಡದಾಪತ್ತು ಕೆಡಹಿ ಧರೆಯೊಳು ಕಾಡ ಹೊಡೆಗಿಚ್ಚಿನಂತೆನ್ನ ಸುಟ್ಟು ಸುರುಳಿಪುದು (ಕೃಕವ. ೧೭-೨).

[ಸುರುಳ್$_1$ + - ಇಸು$_3$]

**ಸುರುಳಿಸುತ್ತು** (ಕ್ರಿ). ೧. ಗುಂಡಗೆ ಸುತ್ತು; ಸಿಂಬೆಮಾಡು: ಹಾಸಿಗೆಯನ್ನು ಸುರುಳಿಸುತ್ತಿ ಇಡು (ರೂಢಿ). ೨. ಸೊನ್ನೆ ಸುತ್ತು: ಲೆಕ್ಕ ತಪ್ಪು ಮಾಡಿದ್ದುದರಿಂದ ಮೇಷ್ಟ್ರು ಸುರುಳಿ ಸುತ್ತಿದರು (ರೂಢಿ). [ಸುರುಳಿ + ಸುತ್ತು$_1$]

**ಸುರುಳು$_1$** 'ಸುರುಳ್$_1$' ನೋ.

**ಸುರುಳು$_2$** 'ಸೂರುಳ್$_2$' ನೋ.

**ಸುರುಳು$_3$** 'ಸುರುಳ್$_3$' ನೋ.

**ಸುರುಳೆ** 'ಸುರುಳಿ$_1$' ನೋ.

**ಸುರುಳ್ಕೆ** (ನಾ). ಮುದುಡಿಕೊಳ್ಳುವಿಕೆ; ಸಂಕೋಚನ : ಕುಚ . . . ಸುರುಳ್ಕೆಯೊಳಂ, ಕವಡಿನೊಳಂ, ಉರ್ಕೆಯೊಳಂ, ಒರೆತದೊಳಂ (ಕಾಶಕ್ಯ. ೧೫೦).

[ಸುರುಳ್$_1$ + -ಕೆ]

**ಸುರುಳ್ಗೊಳಿಸು** (ಕ್ರಿ). ನಾಶಪಡಿಸು; ಹಾಳುಮಾಡು : ನಿಮಗೆ ಘಾತಕ ಮೃತ್ಯುವು ಆವರಿಸುತ ಬಂದು ನಿಮ್ಮನು ದಾವಾನಲನಂತೆ ಸುಟ್ಟು ಸುರುಳ್ಗೊಳಿಸುವುದ್ಕೆ (ಹಮಚ. ೧೯೮). [ಸುರುಳ್$_2$ + ಕೊಳಿಸು]

**ಸುರುಳ್ಚು** (ಕ್ರಿ). ಕುಗ್ಗಿಸು; ಸಂಕೋಚಗೊಳಿಸು : "ಸುರುಳ್ಚು – ಸಂಕೋಚನೇ" (ಶಮಥಾ); ಅಸುರಾರಿಯ ಪೊರ್ಕುಟ ಪದ್ಮಮಂ ಖರದ್ಯೋತಿಯ ಕೆಯ್ಯ ಕಂಜಮು ನಿದೆಯ್ದೆ ಸುರುಳ್ಚುಗುಮೆಂಬಿನಂ ಜಗತ್ಕೌತುಕಮಾಯ್ತುನುಷ್ಣಮುಹಿಮಂ . . . ಹಿಮಂ (ಪುಷ್ಪಪು. ೬-೪೭); ರಿಪುಭೂಪವಧೂಮುಖಚಂದ್ರಬಿಂಬಸಂಪನ್ನತೆಯಂ ಸುರುಳ್ಚಿ (ಬಾಧಪು. ೪-೩೫). [ಸುರುಳ್$_1$ + - ಚು$_1$]

**ಸುರುಳ್ತರ್** (ಕ್ರಿ). ಕುಗ್ಗು; ಕುಸಿ : ಕರಿಪದಘಾತದಿಂದರೆ ಸುರುಳ್ತರೆ ವಾಜಿಖುರ ಪ್ರಘಾತದಿಂ ಗಿರಿ ನೆಜೆ ನುಗ್ಗೆ (ಕುಸುಮಾ. ೪-೯೩). [ಸುರುಳ್$_1$ + ತರ್]

**ಸುರುಳ್ದು** 'ಸುರುಳ್$_1$' ಪರಾ.

**ಸುರುಳ್ದೆಗೆ** (ಕ್ರಿ). ಸುರುಳಿಯನ್ನು ಬಿಚ್ಚು : ಬಳಿಕೊಂದುತ್ತಮಪಟದ ಸುರುಳ್ದೆಗೆಯುತ ಮುಖವಸ್ತ್ರವನು (ಜಯಕಾ. ೩-೭). [ಸುರುಳ್$_2$ + ತೆಗೆ$_1$]

**ಸುರುಳ್ವ** 'ಸುರುಳ್$_1$' ಪರಾ.

**ಸುರೂಪ** (ಗು). ೧. ಅಂದವಾದ; ಸುಂದರವಾದ : ಸುರೂಪ ಸುರಸುಂದರೀ ಜನಮನಸರೋಜಾಕರ್ಕೈಕರಮ್ಯನನಿಶಂ ಜಿನೇಂದ್ರಪದಪದ್ಮಸೇವಾರತಂ (ವರ್ಧಪು. ೧೩-೩೦). (ನಾ). ೨. ಒಳ್ಳೆಯ ರೂಪು , — ಚೆಲುವು. [ಸಂ.]

**ಸುರೂಪವೃತ್ತಿ** (ನಾ). ಚೆಲುವು; ಸೌಂದರ್ಯ: ಪುಷ್ಪಸಾಯಕಂಗಿಂದೊಳ ಸೋದರ್ದೇಸುವೆಸನಿಂದು ಸನಾಭಿಜನಕ್ಕೊಡರ್ಚಿತಾನಂದ . . . ಸುರೂಪವೃತ್ತಿ ದೊರೆವೆತ್ತುದು ನಾಡೆಯುಮೆಂದು ನೋಡಿದರ್ (ಚಂದ್ರಪು. ೬-೭೯). [ಸಂ.]

**ಸುರೂಪಿ** (ನಾ). ಒಳ್ಳೆಯ ರೂಪವುಳ್ಳವನು; ಸುಂದರ : ಸುರೂಪಿಗಳಲ್ಲಿಯ . . . ಚಾಗಿವೃಂದವಲ್ಲಿಯೆ ಎನೆ ಸಾರಮೆಂಬಿನೆಗಮಾ ಮಹಿ ಪೋಲ್ವುದು ಭೋಗ ಭೂಮಿಯಂ (ಪುಷ್ಪಪು. ೯-೧೭); ಆ ಗಾಡಿಯಲ್ಲಿ ಕುರೂಪಿಗಳು — ಸುರೂಪಿಗಳು ಬಡವರು — ಧನಿಕರು . . . ಕುಳಿತಿದ್ದರು (ರಾಮಾನ. ೧೧೧). [ಸಂ. ಸುರೂಪಿನ್]

**ಸುರೂಪೆ** (ನಾ). ಒಂದು ಬಗೆಯ ಮರ; ಚನ್ನಂಗಿ : ಸುರೂಪೆಯ ಪಾಣ್ಬೆಯ . . . ಕಪೋತದ ಬೊಟ್ಟಿನ . . . ಭೂರುಹಮೊಪ್ಪುಗುಮಾ ವನಾಂತದೊಳ್ (ರಾಜಶೇ. ೫-೩೭). [ಸಂ. ಸುರೂಪಾ]

**ಸುರೆ** (ನಾ). ಹೆಂಡ; ಮದ್ಯ: ಸುರೆಯಿಂ ಸೊರ್ಕಂ ಸುರೋರ್ವೀರುಹ ಕಿಸಲಯದಿಂ ರಾಗಮಂ . . . ತಾಳ್ದಿ (ಕಾದಂಪೂ. ೫೪೬); ತಾಳಮರದ ಕೆಳಗೆ ಒಂದು ಹಾಲ ಹರವಿಯಿರ್ದೊಡೆ ಅದ ಹಾಲ ಹರವಿಯೆನ್ನರು ಸುರೆಯ ಹರವಿಯೆಂಬರು (ಬಸವ. ೯೦); ನರಕಪಾಲದೊಳು ಸುರೆಯೆಱೆದು ಕುಡಿಯುತ ತೆಂಕಮುಖನಾಗಿ ಹೋಹೆಂ (ಹಚಕಾ. ೨-೨೨). [ಸಂ. ಸುರಾ]

**ಸುರೆಗುಡಿ$_1$** (ಕ್ರಿ). ಹೆಂಡವನ್ನು ಕುಡಿ; ಮದ್ಯಪಾನಮಾಡು : ಸುರೆಗುಡಿವ ಮೊಗಮದಾಗಳ್ ನಿರುತಂ ಸಲೆ ಗುಬ್ಬಿವಕ್ಕಿಯಾದುದು . . . ಧರೆಯೊಳಗಂ (ಹಾಲಾಸ್ಯ. ೧-೨-೨೪). [ಸುರೆ + ಕುಡಿ$_1$]

**ಸುರೆಗುಡಿ$_2$** (ನಾ). ಹೆಂಡ ಕುಡಿಯುವವನು; ಮದ್ಯಪಾನಿ : ಪರಾಪೇಕ್ಷಣದಿಂದ ದ್ರವ್ಯವ ತಂದು ಗುರುಲಿಂಗಜಂಗಮಕ್ಕೆ ಮಾಡಿಹೆವೆಂದು ಮಱೆಯಲ್ಲಿ ಒಡಲ ಹೊರೆವ ಸುರೆಗುಡಿಗೆ ನೆಜೆ ಭಕ್ತಿ ಏತಕ್ಕೆ (ಸರ್ವವ. ೧೯೦-೮೮೮). [< ಸುರೆಗುಡಿಹಿ]

**ಸುರೆಗುಡಿಹಿ, ಸುರೆಗುಡುಹಿ** (ನಾ). = ಸುರೆಗುಡಿ$_2$ : ಸುರೆಗುಡಿ[ಪಾಠಾಂ. ಡು]ಹಿಗಳ ಮಾತು ಮಂಜಿನ ಹಲಗೆಯ ಬಿಸಿಲಂಬು ತಾಗಿದಂತಾಯಿತ್ತು (ಕೋಲಶಾಂ. ೧೨-೫೫). **ಸುರೆಗುಡುಹಿ** : ಬಿಡು ಸೆರೆಯನವಗಡೆಯತನವೆಮ್ಮೊಡನೆ ಸಲ್ಲದು ಸೂಳೆಯರ ಸುರೆಗುಡುಹಿಗಳ ರಸವಾದಿಗಳ ಸೇರುವೆಯಲೊಪ್ಪುವುದು (ಕುವ್ಯಾಳ. ೨೦-೨೭).

[ಸುರೆ + ಕುಡಿಹಿ]

**ಸುರೆಗುಡುಹಿ** 'ಸುರೆಗುಡಿಹಿ' ನೋ.

**ಸುರೇಂದ್ರ** (ನಾ). ದೇವತೆಗಳ ಒಡೆಯ; ದೇವೇಂದ್ರ: ಸುರೇಂದ್ರಪರಿಪೂಜಿತ ಸುಗುಣರಾಜಿ ವಿಭ್ರಾಜಿತೆ (ರಾಜಶೇ. ೭-೧೦೬). [ಸಂ.]

**ಸುರೇಂದ್ರಜ** (ನಾ). ದೇವೇಂದ್ರನ ಮಗ; ಅರ್ಜುನ : ಸುರೇಂದ್ರಜ ಶರಾಸನ ಪ್ರಹತಿ ಸಾಂಖ್ಯ ಹಸ್ತಚ್ಯುತಸ್ಫುರದ್ಘನಶಿಲಾಹತಿಪ್ರತತಿಗಳ್ಕದೆ (ವೃಷವಿ. ೧೦-೧೦೦). [ಸಂ.]

**ಸುರೇಂದ್ರಜಿತ್ತು** (ನಾ). ಇಂದ್ರನನ್ನು ಗೆದ್ದವನು; ಗರುಡ : "ವಿಹಂಗರಾಜಃ . . . ಸುರೇಂದ್ರಜಿತ್ . . . ಈ ೧೦ ಗರುಡನ ಪೆಸರ್" (ಪಲಾಯು. ೬-೩೧). [ಸಂ. ಸುರೇಂದ್ರಜಿತ್]

**ಸುರೇಂದ್ರತ್ವ** (ನಾ). [ಜೈನ] ಸಪ್ತಪರಮಸ್ಥಾನಗಳಲ್ಲಿ ಒಂದು ; ಇಂದ್ರಪದವಿ: ಸಜ್ಜಾತಿ ಸದ್ಗೃಹತ್ವ ಪರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣಮೆಂಬೇಱುಂ ಪರಮಸ್ಥಾನಂ (ಆದಿಪು. ೧೫-೧೬ ವ). [ಸಂ.]

**ಸುರೇಂದ್ರಧನು** (ನಾ). ಇಂದ್ರಚಾಪ; ಕಾಮನ ಬಿಲ್ಲು : ನವರತ್ನೋತ್ಕರದಿಂ ಸುರೇಂದ್ರಧನುವಂ . . . ಮಿಗುವ ಚಾತ್ಯಶೃಂಗಳಂ (ಪುಷ್ಪಪು. ೨-೫೮). [ಸಂ.]

**ಸುರೇಂದ್ರಾರ್ಚಿತ** (ನಾ). ದೇವತೆಗಳಿಂದ ಪೂಜಿಸಲ್ಪಡುವವನು; ಬೃಹಸ್ಪತಿ : ಚಾಂದ್ರಿಯೊಳೊಡಗೂಡಿದ . . . ಸುರೇಂದ್ರಾರ್ಚಿತನಿಂದೆ ಗೀತವಿದನಕ್ಕ್ಯುಪಮ (ಜಾತತಿ. ೧೫-೪). [ಸಂ.]

**ಸುರೇಂದ್ರಾಶೆ** (ನಾ). ಇಂದ್ರನ ದಿಕ್ಕು; ಪೂರ್ವದಿಕ್ಕು : ಸಭೆಯನೆಟ್ಟಂ ತುಂಗವಂಶ ಸುರೇಂದ್ರಾಶಾದಂತಿಬಲಂ ಜಿತಾಹಿತಬಲಂ ದುರ್ವಾರ ಬಾಹಾಬಲಂ (ಪಂರಾಮಾ. ೫-೮೩); ಪುಟ್ಟೆ ಸುರೇಂದ್ರಾಶೆಗೆ ರಾಗಂ (ಪುಷ್ಪಪು. ೮-೨೩). [ಸಂ. ಸುರೇಂದ್ರಾಶಾ]

**ಸುರೇಖೆ** (ನಾ). ಚೆಲುವಿನ ಮಾಟ; ಆಕಾರಸೌಷ್ಠವ : ಗುರುಶಿಷ್ಯಸಂಬಂಧ ಲೆಕ್ಕಣಿಕೆಯೊಳಡಗಿದ ಸುರೇಖೆಯ ಭಿತ್ತಿಯಂತಿರಬೇಕು (ಮೋಳಿವಾ. ೧೫೮-೫೯೫); ಸುಲಲಿತದ ಮುಖರಸದ ಸೌಷ್ಠವದಲಸಭಾವದ ವಿಭ್ರಮದ ನಿಶ್ಚಲದ ನೋಟದ . . . ನಿಜಸುರೇಖೆಯ ಲಲನೆಯಿ ಪರಿಯಿಂದ ನೃತ್ಯವ ಸಲಿಸೆ (ಬಸವು. ೧೨-೪೫); ಸೂತರುರ ವಣೆಗಳ ಸುರೇಖೆಯ ಗತಿಯ ವಾಜಿಯ ರಥವ ನೋಡಿದರು (ಕುವ್ಯಾಉ. ೧೧-೧೬). [ಸಂ. ಸುರೇಖಾ]

**ಸುರೇಭ** (ನಾ). ಇಂದ್ರನ ಆನೆ; ಐರಾವತ: ಸುರೇಭಮನಭ್ರಮೂಗಜಸ್ತ್ರೀರಮಣೇಚ್ಛೆಯಿಂದೆಳಸುವಂತೆ (ಶಾಂತಿಪು. ೬-೨); ಸುರೇಭಕಂದರದೊಳಿರ್ದ ಸಹಸ್ರ ವಿಲೋಚನಂ ಮನಂಗೊಳಿಸಿದಂ (ಜಗವಿ. ೧-೩೯). [ಸಂ.]

**ಸುರೇಭೇಂದ್ರ** (ನಾ). = ಸುರೇಭ: ತುಹಿನಕರಸುರೇಭೇನ್ದ್ರನೀಹಾರ ತಾರಾಚಳತಾರಾನೀಕ (ಸೌಇಇ. XX, ೨೧-೩೫; 1019). [ಸಂ.]

**ಸುರೇಶ್ವರ** (ನಾ). ೧. ದೇವತೆಗಳ ಒಡೆಯ ; ದೇವೇಂದ್ರ : ನಿನ್ನಂತೆ ಸುರೇಶ್ವರನುತ್ಪನ್ನಮಹೈಶ್ವರ್ಯನೆಂಬುದುಂ (ಕವಿರಾ. ೩-೮೬); ಸುರೇಶ್ವರಂ ವಿಲೋಕನದಿಂ . . . ನೆರೆದರೇಂ ಸಲೆ ಮೇಘರಥಂ ಸಪುಣ್ಯನೋ (ಶಾಂತಿಪು. ೯-೪೩). ೨. ಶಿವ; ಈಶ್ವರ. [ಸಂ.]

**ಸುರೋರ್ವಿಜ** (ನಾ). ದೇವಲೋಕದ ಮರ; ಕಲ್ಪವೃಕ್ಷ: ತ್ರಿದಶಜನರ್ಗೆ ದೀವುದೆರೆದರ್ಥಮನ್ಕದೆ ಸುರೋರ್ವಿಜಂ ಸಮಂತಿದು ಬಿಡದೊಂದೆ ಕಾವ್ಯನವಕಲ್ಪಕುಜಂ (ರಾಜಶೇ. ೧೪-೧೬೪). [< ಸಂ. ಸುರೋರ್ವೀಜ]

**ಸುರೋರ್ವೀಜ** (ನಾ). = ಸುರೋರ್ವಿಜ : ಸುರೋರ್ವೀಜಮಂ ಶೈಲಶೃಂಗಸ್ಥಿತ ಗರ್ಜತ್ಸಿಂಹಮಂ ಸ್ವಪ್ನದೊಳತಿ ಮುದದಿಂ ದೇವಕೀದೇವಿ ಕಂಡಳ್ (ಜಗವಿ. ೨-೭೬). [ಸಂ.]

**ಸುರ್ಕಿ, ಚುರ್ಕಿ, ಸುರಕಿ, ಸುರುಕಿ** (ನಾ). ಇಟ್ಟಿಗೆ ಚೂರು ಸುಣ್ಣ ಬೆರಸಿ ಮನೆಯ ತಾರಸಿಯ ಮೇಲೆ (ನೀರು ಸೋರದಂತೆ) ಹಾಕುವ ಒಂದು ಬಗೆಯ ಗಾರೆ : ಗಾರೆಯನ್ನು ಸುಣ್ಣ ಇಲ್ಲವೇ ಸಿಮೆಂಟಿನೊಂದಿಗೆ ಸುರ್ಕಿ, ಮರಳು ಮೊದಲಾದುವನ್ನು ಬೇರೆ ಬೇರೆ ಪ್ರಮಾಣಗಳಲ್ಲಿ ಯಾಂತ್ರಿಕವಾಗಿ ಬೆರಸಿ ತಯಾರಿಸುತ್ತಾರೆ (ಶಿಲ್ಪನಾ. ೨೮೯). **ಚುರ್ಕಿ** : 'ಚುರ್ಕಿಗಾರೆ' ಪರಾ. **ಸುರಕಿ** : ಸುಣ್ಣ – ಸುರಕಿ ಇತ್ಯಾದಿಗಳ ಜಯಯಾತ್ರೆಯನ್ನು ವಸುಂಧರೆ ಯಾವೆಡೆಯೂ ತಡೆದಿಡಲಾರದೆ ಇದ್ದಾಳೆ (ನಿಬಂಧ. I, ೬೭). **ಸುರುಕಿ** : ಇಟ್ಟಿಗೆ , ಸುರುಕಿ , ಸಲಾಕಿ , ಹಲಗೆ , ಮರಳು (ನಿಬಂಧ. ೨೮೪). [← ತಮಿ. ಚುರ್ಕ್ಕಿ = ಇಟ್ಟಿಗೆಯ ಪುಡಿ]

**ಸುರ್ಕಿಗಾರೆ, ಚುರ್ಕಿಗಾರೆ** (ನಾ). = ಸುರ್ಕಿ : ಈಚೆಗೆ ಸುರ್ಕಿಗಾರೆಗೆ ಬದಲಾಗಿ ಸಿಮೆಂಟ್‌ಗಾರೆಯ ಉಪಯೋಗವು ಹೆಚ್ಚುತ್ತಿದೆ (ಶಿಲ್ಪನಾ. ೨೮೦). **ಚುರ್ಕಿಗಾರೆ** : ಮಾಳಿಗೆಗೆ ಚುರ್ಕಿಗಾರೆಯನ್ನು ಹಾಕದಿದ್ದರೆ ನೀರು ಇಳಿಯುತ್ತದೆ (ರೂಢಿ). [ಸುರ್ಕಿ + ಗಾರೆ$_1$]

**ಸುರ್ಕು$_1$, ಸುಕ್ಕು$_1$** (ಕ್ರಿ). ೧. ಕುಗ್ಗು; ಸಂಕುಚಿತವಾಗು : "ಸುರ್ಕು – ಸಂಕೋಚೇ (ಕುಗ್ಗು)" (ಶಮಧಾ). ೨. ಕೊಂಕು : ಸುರ್ಕುವ ಕುರುಳ್ (ಶಬ್ದಾನು. ೯೬ ಪ್ರಯೋ). ೩. ಅಂಜು; ಭಯಪಡು : ಹುತವಹಶಿಖಾವಳಿಗೆ ಸುಗಿದು ಸುರ್ಕುವಂತಿರೆ (ವರ್ಧಪು. ೬-೨೩ ವ); ಪಂಬಲಿಸುತುಂ ಸುರ್ಕುತುಂ ಕಂಪಿಸುತೆ . . . ಬೇಳಾದನಾ ಭಕ್ತವರ್ಯಂ (ವೃಷವಿ. ೩೦-೩೧); ಸಂಗರದೊಳ್ ಬಂಗಂಬಟ್ಟುದರ್ಕೆ ಸುರ್ಕದ (ಚಿಕವಿ. ೨-೫೪). ೪. ಮಂಕಾಗು; ನಿರುತ್ಸಾಹಗೊಳ್ಳು : ಸಾಯಕಂ ನಡೆ ನೊಂದಯ್ದೆ ಸುರುಳ್ಪುರುಳ್ದ ತುರಗಂ ಸುರ್ಕಿರ್ದ ಸೂತಂ (ಪಂಪಭಾ. ೧೦-೯೧); ಕವಿತಾನೀತಿಗೆ ಬಾಳ್ವೆವೆಂದೆ ಸುನುಜರ್ ಕೊಂಕಿಟ್ಟರಿಂತೆಂದು ಸುರ್ಕುವನಾ ಬ್ರಹ್ಮನ ತಿಟ್ಟಿ (ಸಂಸಪ. ೧೫-[illegible]). **ಸುಕ್ಕು$_1$** : ೨. ಪೊಳೆವಲರ್ಗಣ್ಣ ನೀಳ್ದ ನಿಡುಪುರ್ವಿನ ಸುಕ್ಕಿದಮರ್ಕೆವೆತ್ತ ಕುಂತಳದ . . . ಅಂಗನಾವಳಿ (ಧರ್ಮಾಮೃ. ೧೩-೧೬). ೪. ವೀರಾಭ್ಯುದಯ ಕೈಸೆಜೆಯೋಯ್ತು ಸುಕ್ಕಿತು ಮನದ ಸುಮ್ಮಾನ (ಕುವ್ಯಾಭೀ. ೧೦-೧೩); ಚರಣಂಗಳಿಂ ದರೆಯೆ ಸುಕ್ಕುವರ್ ಕಕ್ಕುವರ್ ಮೂಗಿನಿಂ ಶೋಣಿತವನು (ಚೆಬಪು. ೨೮-೨೬). ೫. ಒಣಗು; ಶುಷ್ಕವಾಗು : ಹರಶರಣರಿಗೆ ಮುಂಬರಿದು ನೀಡರುಯೆಂದು ಕೊರಗಿ ಕೋಪದಿ ಸುಕ್ಕೆ ದ್ರಾಕ್ಷಿ (ಅಮುಸಾಂ. ೭-೫೦). ೬. ಸುಕ್ಕಾಗು; ಮುರುಟಿಕೊಳ್ಳು: ಕಾಯಿ ಸುಕ್ಕದಂ[ಪಾಠಾಂ. ಸುಕುವಂ]ತೆ ಅದಕೆ ಬಾಳೆಯ ಪಟ್ಟೆಯಂ ತುಂಬಿ (ಸೂಪಶಾ. ೫-೨೫). ೭. ತೆರೆಗಟ್ಟು ; ಪದರವಾಗು : ತಲೆ ನಡುಗೆ ಸುಕ್ಕಿದ ಮೆಯ್ಯೊಳಂ ಜಗುಳ್ದುಡುಪನೆತ್ತುತೆ ಮುರುಡುಗೋಲ್ವಿಡಿದು ತಡವರಿಸಿ ನಡೆವ ಮುದುಪಂ (ಚೆಬಪು. ೧೦-೭೭). 'ಸೊರಗು$_1$' ಹೋ.

**ಸುರ್ಕಿರ್, ಸುಕ್ಕಿರ್** = ಮುರುಟಿಕೊಂಡಿರು : ಮಿಡುಕದೆ ಭೀಷ್ಮ ನೋಡುತಿರು ಕುಂಭಜ ಸುರ್ಕಿರು ಕರ್ಣ ಮಿಕ್ಕು ಮಾರ್ನುಡಿಯದೆ ಮೂಗುವಟ್ಟಿರು (ಪಂಪಭಾ. ೭-೩೩); ಅಭಿಮನ್ಯು ಮಂಜು ಪಾಯದ ತಾವರೆಯಂತೆ ಸುಕ್ಕಿರೆ (ಬಂಪುರಾ. ೯-೨೦ ವ); ಬಾಡಿ ಬಿಸುಟೆಲೆಯ ಗಳಿಗೆಯಂ ಸುಕ್ಕಿರ್ದಣಲೊಳಡಸಿ ನೆರೆದಲೆಗೆ ಮಸಿದೊಡೆದು . . . ಹಣ್ಣುಮುದುಕಿಸೂಳೆಯರೆಸೆದರು (ಚೆಬಪು. ೧೦-೭೬).

**ಸುರ್ಕು$_2$, ಸುಂಕು$_1$, ಸುಕ್ಕು$_2$** (ನಾ). ೧. ಗುಂಗುರಾದುದು; ಕೊಂಕಾದುದು: ಕರದುದು ಕಣ್ಣ ಬೆಳ್ಪನಧರಂ ಕುರುಳೋಳಿಗೆ ಸುರ್ಕನೋಲಗಂ ಪರಪುದು (ಶಮದ. ೨೨೫ ಪ್ರಯೋ). ೨. (ಶರೀರವು) ಸುಕ್ಕುಗಟ್ಟುವ ಒಂದು ಬಗೆಯ ರೋಗ: ಸುರ್ಕಲ್ತೆ ಧನುರ್ವಾತದ ತಕ್ಕನವೋಲ್ ತೆಗೆದುಮಂಗಮಂ ಪೆಱಗಣ್ಣ(ಣ್ಣು)ಂ ಪಕ್ಕದೊಳೆ ಶೂಲೆಗಳಲೆಗಳಕ್ಕುಂ ಕೆಂಪುಗುರ್ಗಳೊಳ್ ಬಸಿಱ್ ತಗೆದಿರ್ಕ್ಕುಂ (ಖಮದ. ೧೫-೪೨). ೩. ತೆರೆಗಟ್ಟಿರುವುದು ; ಪದರವಾಗಿರುವುದು. **ಸುಂಕು$_1$** : ೩. 'ಸುಂಕಿಡು' ಪರಾ. **ಸುಕ್ಕು$_2$** : ೩. ಶರೀರದಲ್ಲಿ . . . ಸುಕ್ಕುಗಳಿಲ್ಲದೆ . . . ಶಾಮವರ್ಣವಾದ ನೇತ್ರಗಳುಳ್ಳ ಗಜಗಳು ಮಂದ್ರಜಾತಿ ಗಜವೆನಿಸುವವು (ಸೌಗಂಧಿ. ೨೬೮-೧೧); ಹರಿಸಪುಕ್ಕುವ ಮೊಗಕ್ಕೆ ಸುಕ್ಕು ತೆರೆತೆರೆಯಾಗೆ . . . ಕಮಚೆನ್ನ ಹಣ್ಮುದುಕಿ ಶಬರಜ್ಜಿ ನಡುಗಿ ನಡೆದಳ್ (ಶ್ರೀರಾಮಾ. ೨೬೩-೧೦೪). ೪. ನಿರಿಗೆ ; ಪದರ : ಕಕ್ಕದುಱುಬಿನ ತೊಂಡಿಲು ಮಣಿಬಲೆ ಚೊಕ್ಕ ಬೊಟ್ಟಿಕ್ಕಿದ ಱವಕೆ ಓಕ್ಕಿ ಲಕ್ಕಿಸಿ ತಿದ್ದಿ ನಿಱಿವಿಡಿದುಡಿಸಿದ ಸುಕ್ಕಿನಂಬರದೊಳೆಸೆದರು (ಭರಚ. ೩೧-೪೧); ಶ್ರೀನಿವಾಸಯ್ಯ ಹಾಸಿಗೆಯ ಸುಕ್ಕು ಸರಿ ಮಾಡುತ್ತಿದ್ದ (ದೂಬೆಟ್ಟ. ೧೪).

**ಸುಕ್ಕಾಗು** = ಮುದುಡೆಯಾಗು; ಮುದ್ದೆಯಾಗು : ರೆಯಾನ್ ಬಟ್ಟೆಗಳು . . . ಬಟ್ಟೆ ಬೇಗ ಸುಕ್ಕಾಗುತ್ತದೆ (ಗೃಹವಿ. ೭೦). [< ಸುರ್ಕು$_1$]

**ಸುರ್ಕುಂಗುರುಳ್, ಸುಕ್ಕುಂಗುರುಳ್, ಸುಕ್ಕುಂಗುರುಳು, ಸುಕ್ಕುಗುರುಳು** (ನಾ). ಗುಂಗುರುಕೂದಲು : ಭೃಂಗಾವಳಿ ಸುಯ್ಗೆ ಸಾರ್ವ ತೆಱದಿಂ ಸುರ್ಕುಂಗುರುಳ್ಮಾಲೆ ನೀಳ್ಪುವು (ಮಲ್ಲಿಪು. ೪-೯೬); ಸುರ್ಕುಂಗುರುಳ ಸುಟಿಗುರುಳ ನಿಡುಗುರುಳುರುಳಿಗುರುಳ್ ತುಂಬಿಗುರುಳ ಗೋಪಸ್ತ್ರೀಯರ್ (ಜಗವಿ. ೪-೧೨೫); **ಗಱಾಱಂ**

ಪರಮಾದುದರ್ಕೆ — ಪುಟ್ಟುಂಗುರುಡಂ, ಸುರ್ಕುಂಗುರುಳ್ (ಶಮದ. ೧೭೦ ಪ್ರಯೋ). **ಸುಕ್ಕುಂಗುರುಳ್** : ಒಕ್ಕುಡಿತೆಗಂಗಳಬಲೆಯ ಸುಕ್ಕುಂಗುರುಳವಳ ಪಲ್ಲವಾಧರದವಳಂ . . . ತಾಂ ತಕ್ಕೈಸಲು (ಸೂಕ್ತಿಸು. ೧೦-೨೫೮); ಚಂಪಕದ ನಿಳುಮಾಲೆ ನಳಿತೋಳು ನಿಮಿರೆ ಸುಕ್ಕುಂಗುರುಳ್ ಚಳಿಸಲೆಳೆವೆಣ್ಣಳುಜ್ ದಿಟ್ಟಿನಾರತಿ ಮುತ್ತಿನಾರತಿಯನೆತ್ತಿ (ಚತುಪು. ೨-೬-೪೨). **ಸುಕ್ಕುಂಗುರುಳು** : ಸನ್ಮಾರ್ಗಸಂಪನ್ನಗಾಙಂಗೆ ಸುಕ್ಕುಂಗುರುಳ ಸತಿಯರೂಪ್ಪುವರು (ವೀಶೈಪು. ೩-೭-೩); ಮಡಕಿಳದ ಕುರುಳ ನಿಱಿಗುರುಳ ಸುಕ್ಕುಂ[ಪಾಠಾಂ. ಸೀರ್ಕುಂ]ಗುರುಳ ನಿಡಿಗುರುಳ . . . ಕೋಮಲೆಯರೆಡೆವಿಡದೊದಗಿ ಬರುತಿರ್ದರು (ಚಬಪು. ೩೭-೪೬). **ಸುಕ್ಕುಗುರುಳು**: ಇಕ್ಕೆಲದೊಳು ಚಾಮರವನು ಬೀಸುವ ಸುಕ್ಕುಗುರುಳ ನೀಱೆಯರು (ನೇಮಿಸಂ. ೩-೯೦); ಜೇನುತುಪ್ಪವನೆಱೆದು ಸುಕ್ಕುಗುರುಳೆಳೆವೆಣ್ಣು ಮೋಹದಿಂ ತುತ್ತುಮಾಡುಣಿಪ ಸವಿ ಕಿಱಿದೆನಿಸುತ (ಗುರುಚಾ. ೭-೩). [ಸುರ್ಕು$_1$ + ಕುರುಳ್]

**ಸುರ್ಕುಂಗುರುಳಿ** (ನಾ). ಗುಂಗುರುಕೂದಲುಳ್ಳವಳು : ನಿಡುಗಣ್ಣಿ, ನಿಡುವೆರಲಿ, ಸುರ್ಕುಂಗುರುಳಿ, ಕರಿಕಿ, ಬಿಳಿಕಿ, ಮುದುಕಿ (ಶಬ್ದಾನು. ೧೯೪ ಪ್ರಯೋ).
[ಸುರ್ಕುಂಗುರುಳ್ + - ಇ$_2$]

**ಸುರ್ಕುಂಬಗೆ** (ನಾ). ಕುಗ್ಗಿದ ಮನಸ್ಸು; ಸಂಕೋಚಗೊಂಡ ಮನಸ್ಸು : ಕಿಱುಮೊಗದ ಸುರ್ಕುಂಬಗೆಯ ಭಾವದಿಂ ನಿಂದಿರ್ಪುದುಂ (ರಾಮಾಶ್ವ. ೪೯-೧೬).
[ಸುರ್ಕು$_1$ + ಬಗೆ$_2$]

**ಸುರ್ಕುಗಿವಿ** (ನಾ). ಮಡಿಸಿಕೊಂಡಿರುವ ಕಿವಿ : ಸುರ್ಕುಗಿವಿ ಭೂಮಿಯೊಳಾಡಿಪ ಬಾಲಮೊಪ್ಪೆ ಘರ್ಜಿಸಿ ಮಿಗೆ ಪಾರಿ ಮೇಲ್ವರಿವ ಬಗ್ಗಮನಿಕ್ಕಿದನುಗ್ರಲುಬ್ಧಕಂ (ಶಬಶಂ. ೩-೫೩). [ಸುರ್ಕು$_1$ + ಕಿವಿ$_1$]

**ಸುರ್ಕುಗೊಳಿಸು** (ಕ್ರಿ). ಕುಗ್ಗುವಂತೆ ಮಾಡು; ಕುಗ್ಗಿಸು : ಓತು ಮಾಡುವ ಕಾಲವೇಳಾಭಾತಿಯಂ ತಪ್ಪಿಸಿದೊ ನಿತ್ಯಪುನೀತ ಶೀಲಬ್ರತಚರಿಯೆಯಂ ಸುರ್ಕು[ಪಾಠಾಂ. ಸಿಕ್ಕು]ಗೊಳಿಸಿದೆಯೊ (ಬಸಪು. ೪೭-೧೨). [ಸುರ್ಕು$_2$ + ಕೊಳ್$_1$ + - ಇಸು$_3$]

**ಸುರ್ಕುವೆಱು** (ಕ್ರಿ). ಸುಕ್ಕಾಗು; ಮುದುಡು : ಏಳುತ್ತಂ ಮೆಲ್ಲನಲ್ಲಿಂ ಮಱಿಯ ಮರ್ದಿರೆ ಕೆಳ್ಗೊಟ್ಟೆಯೊಳ್ ಸುರ್ಕುವೆತ್ತಾ ಬಾಳಂ ಮೇಣ್ಬಳ್ಕೆ (ರಾಜಶೇ. ೯-೨೯).
[ಸುರ್ಕು$_2$ + ಪೆಱು$_1$]

**ಸುರ್ಕುಸಿರ್** (ನಾ). ಕುಗ್ಗಿದ ಉಸಿರು : ಕಲಶಕುಚಂ ಕದಕ್ಕದಿಸೆ ಸುರ್ಕುಸಿರಿಂ ನಡುಗಿತ್ತು ಚಿತ್ತಂ (ಪಂಢಾಮಾ. ೧೧-೮೮). [ಸುರ್ಕು$_1$ + ಉಸಿರ್$_2$]

**ಸುರ್ಕುಱು** (ಕ್ರಿ). (ಕೂದಲಿನ) ಗುಂಗುರು ಇಲ್ಲವಾಗು : ಸುರ್ಕುಱಿದುರುಳಿಗುರುಳ್ ನಸುಸುರ್ಕಿದ ಕುಚಚೂಚುಕಂ ಬೆಳರ್ತಧರಂ . . . ಏಂ ನೃಪನ ಮನಮುನಳವಡಿಸಿದುದೋ (ಆದಿಪು. ೧೧-೧೪೫). [ಸುರ್ಕು$_2$ + ಉಱು$_1$]

**ಸುರ್ಕುರಿಕೆ** (ನಾ). ಒಂದು ಬಗೆಯ ಬಳ್ಳಿ : ಕಡಸಿಗೆ ಕಾಗೆದೊಂಡೆ ಕಹಿದೊಂಡೆ . . . ಮಾರುಡ ಮದದಾನ ಸುರ್ಕುರಿಕೆ[ಪಾಠಾಂ. ಸುಬ್ಬುಗರೆ] ಕಬ್ಬಳಿ . . . ಅಡರ್ದುವು ಬಳ್ಳಿವಳ್ಳಿ ಬನದೊಳ್ (ಸೂಕ್ತಿಸು. ೩-೨೬). [< ಸುರಸುರಿಕೆ]

**ಸುರ್ಟು** 'ಸುರುಟು$_3$' ನೋ.

**ಸುರ್ಬಡರ್** 'ಸುರ್ವಡರ್' ನೋ.

**ಸುರ್ಬು** 'ಸುರ್ವು$_3$' ನೋ.

**ಸುರ್ಬುಗೊಳ್** 'ಸುರ್ವುಗೊಳ್' ನೋ.

**ಸುರ್ಬುರು** 'ಸುಬ್ಬುರು' ನೋ.

**ಸುರ್ಬುರುಗೊಳ್** (ಕ್ರಿ). ದಟ್ಟವಾಗು; ಸೊಂಪಾಗು : ಧರೆ ಪೂಗೆಯಿಡುವೊಡೆ ಪುಲ್ ಸುರ್ಬುರುಗೊಂಡೆಳದಳಸಿ ಮೇಣ್ ತಳರ್ತಸದಿರೆ . . . ಕೆಲಗೆರಡು ಪುರುಷದೊಳ್ ನೀರಕ್ಕುಂ (ಲೋಕೋಪ. ೫-೧೨). 'ಸುರ್ವು$_3$' ಪರಾ.
[ಸುರ್ಬುರು ( < ಸುಬ್ಬುರು) + ಕೊಳ್$_1$]

**ಸುರ್ಬುರುಬಾಲ** (ನಾ). (ದಟ್ಟವಾದ) ಕೂದಲುಳ್ಳ ಬಾಲ : ಸುರ್ಬುರು ಬಾಲವಾಗೆ ಶುನಕಂ ಮಾಳ್ಕುಂ ಶುಭಪ್ರಾಪ್ತಿಯಂ (ಲೋಕೋಪ. ೧೧-೧೦೧). 'ಸುಬ್ಬುರುವಾಲ', 'ಸುರ್ವು$_3$' ಪರಾ. [ಸುರ್ಬುರು (< ಸುಬ್ಬುರು) + ಬಾಲ$_1$]

**ಸುರ್ಬುವಜ್ಜೆ** (ನಾ). ಒತ್ತೊತ್ತಾದ ಹೆಜ್ಜೆಯ ಗುರುತು : ಪಳಂಚಿ ಧೂಳಿವಿಡುತ್ತಿರೆ ಪೋಪ ಪೆರ್ಬುಲಿಗಳ ಸುರ್ಬುವಜ್ಜೆಗಳುಮಂ . . . ಕಂಡು (ಕುಸುಮಾ. ೧೪-೨೯ ವ).
[ಸುರ್ಬು (< ಸುರ್ವು$_3$) + ಪಜ್ಜೆ]

**ಸುರ್ಮಾ** 'ಸುರಮ' ನೋ.

**ಸುರ್ಮಾಡ** (ನಾ). ಒಂದು ಬಗೆಯ ತಾಳೆಮರ (?) : ಬರಗಾಲದ ಆಹಾರ . . . ಮೊಳಕೆಗಳು. – ೧ ಬಿದರಿನ ಮೊಳಕೆ, ೨ ಸುರ್ಮಾಡವೆಂಬ ತಾಳೇಮರದ ಮೊಳಕೆ (ಕಭಾಗ. ೧೧ ಪಂ). [?]

**ಸುರ್ಮಾಪದ** (ನಾ). ಒಂದು ಬಗೆಯ ಹಾಡು : ಇವನ ಮೇನಸವನ್ನು ಬೋಯಿಗಳು ಹೊತ್ತುಕೊಂಡು . . . ಪಾಡಿಕೆಯಾಗಿ ಹೇಳುವ ಬೆಸ್ತರ ಸುರ್ಮಾಪದವನ್ನು ಹೇಳಿಕೊಂಡು (ಸುಮಚ. ೩೩). [ಸುರ್ಮಾ? + ಪದ$_2$]

**ಸುರ್ರು** 'ಸುಱುಪ್' ನೋ.

**ಸುರ್ವಡರ್**, **ಸುರ್ಬಡರ್** (ಕ್ರಿ). ಒತ್ತಾಗು ; ನಿಬಿಡವಾಗು : ತದಕಿನ ತಾಳ . . . ಮರಂಗಳ ಕೊಂಬುಗಳಂಬರಂಬರಂ ಪುದಿದು ಪೊದಟ್ಟು ಸುರ್ವ[ಪಾಠಾಂ. ರ್ಬ]ಡರೆ (ಲೀಲಾವ. ೬-೨೨; ಸೂಕ್ತಿಸು. ೩-೨೫ ನೋ); ಕುವಲಯನೇತ್ರೆ ಸುರ್ವಡರ್ದ ಪೀಣ ಸುಕೋಮಳದೇಹದೀಪ್ತಿಸಂಭವೆ ವಿಲಸತ್ಪಯೋಧರಿಯೆನಿಪ್ಪುದಱಿಂ (ದಶಕು. ೧೨-೧೭೬). **ಸುರ್ಬಡರ್** : ಕಿಱುಪುವ ಕಿವಿ ಕಡುವೊಗರಂ ಪೆಱುವ ಮೊಗಂ ಸುರ್ಬಡರ್ದ ವಾಲಾಗ್ರಂ ಮುಂದುಱುವಾಯ್ದು ತವಕಮೊಪ್ಪುವ ಕುಱುಪಿನ ಕುದುರೆಗಳನಾರ್ದು ಬಿಟ್ಟರ್ ಸುಭಟರ್ (ದಶಕು. ೨-೧೮). [ಸುರ್ವು$_2$ + ಅಡರ್$_1$]

**ಸುರ್ವಾಲ್** 'ಸುರವಾರಿ' ನೋ.

**ಸುರ್ವು$_1$** (ಕ್ರಿ). ಸೊಕ್ಕು; ಅಹಂಕಾರಪಡು : ಉರ್ವಿದನೆ ಕೊರ್ವಿದನೆ ಜಗದೊಳು ಜರ್ವಿದನೆ ಸುರ್ವಿದನೆ ಚರ್ವಿತಚರ್ವಣವನೊರ್ವರೊಳು ಗರ್ವಿಸಿದನೆ ನಿಗರ್ವಿತನು (ಸಾನಂಚ. ೮-೮ ವ); ನಿಚ್ಚಗಾಳೆಗದೊಳುಬ್ಬೆಗಂಬಟ್ಟು ಸುರ್ವಿಯಱಿಪ ಪರಿಜನಂಗಳುಂ (ಪುಷ್ಪಪು. ೭-೭೭ ವ). [?]

**ಸುರ್ವು$_2$** (ಕ್ರಿ). (ಹುಲ್ಲು, ಸಸ್ಯ ಮುಂತಾದುವು) ಸೊಂಪಾಗಿ ಬೆಳೆ ; ಒತ್ತಾಗಿ ಬೆಳೆ : ಮಾವುಗಳೆಪ ರಸಾಸಾರದಿಂ ಕರ್ವುಗಳ್ ಸುರ್ವುದು ಸೊಂಕಿಂದೊರ್ಕ ಸಾಱಿಂ ಬಳೆದು (ಎಕ. VII, ಶಿಕಾರಿ. ೨೩೬-೭೩; 1174). [?]

**ಸುರ್ವು$_3$**, **ಸುರ್ಬು** (ನಾ). ೧. ದಟ್ಟಣೆ; ನಿಬಿಡತೆ: ಕಣ್ಸೆಸವೆಲೆವಳ್ಳಿಯಾಗರದಗುರ್ವು ತಮಾಳದ ಸುರ್ವು[ಪಾಠಾಂ. ರ್ಪು] ಸುತ್ತಲುಂ (ಸುಕುಮಾ. ೯-೪೮); ದಿವಕ್ಕಡರಲೇಣಿಯಂ ಸಮೆಯಲುಂ ವಲಂ ಬಾಱೆಯೆಂಬವೊಲ್ ಬೆಳೆದುನಿಂದ ಪೆರ್ವಿದಿರ ಸುರ್ವಗುರ್ವಿಲ್ಲಿಯುಂ (ಕಾವ್ಯಾವ. ೧೯೩); ಬೆಳೆದು ಪೊಂಬಸುರ್ವೆತ್ತ ಪತ್ರಂಗಳ ಸುರ್ವಿನಗುರ್ವನೊಳಕೊಂಡು (ಮಹಾನೀ. ೧೪-೧೨ ವ). **ಸುರ್ಬು** : ೧. ನಡುವೊಲಕ್ಕೆ ತೊಡವೆನಿಸಿ ಪರ್ಬಿಕೊಂಡಲುಗುವ ಸು[ಪಾಠಾಂ.ಪೆ]ರ್ಬು ಪುರ್ಬಿಕ್ಕುವಂತಿರ್ದ ಪೆರ್ಬಟ್ಟೆಯ ಪುರ್ಬಿನೊಳ್ (ಲೀಲಾವ. ೫-೫೪ ವ). ೨. ಒತ್ತು ; ರಾಶಿ: ತನ್ನನುಚಿತಾವೇಗಕ್ಕಂ ಯಥಾಯಥೋದ್ವೇಗಕ್ಕಂ ಮನದೊಳೆ ನಕ್ಕು ಕರುಳ ಸುರ್ಬಿಂ ಪುರ್ಬಿಂಗಿಱಿಪ ಬೆಮರ ಬರಿವೊನಲಂ (ಲೀಲಾವ. ೬-೧೭ ವ). [< ಸುರ್ವು$_2$]

**ಸುರ್ವುಗೆಡು** (ಕ್ರಿ). ದಟ್ಟಣೆ ಅಳಿ, — ಹಾಳಾಗು : ಒಂದೊಂದಡಯೊಳುಡಿದು ಪಲ್ಲಟಂಬಿರ್ದು ಸುರ್ವುಗೆಟ್ಟ ಪುಲ್ಲಳಿಂ ಪರ್ವಿದ ಮೆಯ್ಯ ತೀನ್ಗೆ ಪೆರ್ವುಲಿಗಳ್ ಪೊರಳ್ದು (ಚಂದ್ರಪ್ರ. ೫-೬೫ ವ). [ಸುರ್ವು$_2$ + ಕೆಡು$_1$]

**ಸುರ್ವುಗೊಳ್**, **ಸುರ್ಬುಗೊಳ್** (ಕ್ರಿ). ಒತ್ತಾಗು; ನಿಬಿಡವಾಗು: ಪರ್ವಿ ಕೊರ್ವಿ ಸುರ್ವುಗೊಂಡ ಮಾಧವಿಯ ಪೊದಱು (ಪಂಚತಂ. ೨೫೧-೭); ಸುರ್ವುಗೊಂಡಿರ್ದ ಪೆರ್ಮೆಳೆ (ಜೀವಸಂ. ೧೨೦-೧೧). **ಸುರ್ಬುಗೊಳ್** : ತರತರಂಗೊಂಡು ತುಱುಗಿ ಕವಲ್ತ ಕಿಱುಗೊಂಬುಗಳ ಪರ್ಬಿಂ ಸುರ್ಬುಗೊಂಡು (ಲೀಲಾವ. ೫-೫೯ ವ); ತಳ್ಪಂಕರ್ಗೊಳ್ಳ ಸಮಯದೊಳ್ಪುತ್ತುತ್ತುದಿವರೆಗಂ ಸುರ್ಬುಗೊಂಡು ಪರ್ಬಿದ ಕರ್ಬಳ್ಳಿಯ ಪೆರ್ಬಳ್ಳಿ (ರಾಜಶೇ. ೫-೫೫ ವ). [ಸುರ್ಬು$_3$ + ಕೊಳ್$_1$]

**ಸುಲಕ್ಷಣ** (ನಾ). ೧. ಒಳ್ಳೆಯ ಗುರುತು; ಶುಭಲಕ್ಷಣ : ವರ್ಣಶೋಭಿತದಲಂಕಾರದ ಸುಲಕ್ಷಣದ . . . ವಾಜಿಯಂ ಕಂಡು (ಜೈಮಿಭಾ. ೪-೮).

೨. ಸೊಗಸಾದುದು; ಚೆನ್ನಾದುದು: ಸುಲಕ್ಷಣವಾದ ತರಕಾರಿಗಳನ್ನೂ ಧಂಡಿಯಾಗಿ ಕೊಂಡೆವು (ಬಾಳಹೂ. ೬೦). [ಸಂ.]

**ಸುಲಗ್ನ** (ನಾ). ಒಳ್ಳೆಯ ಕಾಲ; ಸುಮುಹೂರ್ತ: 'ಸುಲಗ್ನಾಸ್ಸಾವಧಾನ, ಸುಮುಹೂರ್ತಾಸ್ಸಾವಧಾನ' ಎಂದು ಪುರೋಹಿತರೂ ಬ್ರಾಹ್ಮಣರೂ ಶಾಂತಿವಾಚನ ಮಾಡುತ್ತಿರಲು (ಶಾಂತಲಾ. ೧೦೮). [ಸಂ.]

**ಸುಲತಾನ** 'ಸುಲ್ತಾನ್' ನೋ.

**ಸುಲತಾನಿ** 'ಸುಲ್ತಾನೀ' ನೋ.

**ಸುಲತಾನಿವರಹ** (ನಾ). ಒಂದು ನಾಣ್ಯ : (ಕ).

[ಸುಲತಾನಿ (< ಸುಲ್ತಾನೀ) + ವರಹ]

**ಸುಲತಾನಿಹಣ** (ನಾ). = ಸುಲತಾನಿವರಹ : (ಕ).

[ಸುಲತಾನಿ (< ಸುಲ್ತಾನೀ) + ಹಣ (< ಪಣವು)]

**ಸುಲತಾನಿಹರದಾರಿ** (ನಾ). ಭೂಮಿಯ ಒಂದು ನಿರ್ದಿಷ್ಟವಾದ ಅಳತೆ : (ಕ).

[ಸುಲತಾನಿ (< ಸುಲ್ತಾನೀ) + ಹರದಾರಿ]

**ಸುಲದಿ** (ನಾ). (?): ಕರ್ನಾಟಕಾ ಬಂಗಾಳ ಕೈರಳ ಕಾಸ್ಮೀರ ಸಚಿರತಾರಾದಾ ಐವತ್ತಾರ್‍ರು ದೇಶಾಧೀಶ್ವರರಾದ ಅನ್ನಿಜ ಸುಲದಿ ಕಂಬುಕಂಟ ಕುಲಿಶಾವನಶಿತ್ರಾ ನಂದಿಕೋಲು (ಎಕ. XVI, ಗುಬ್ಬಿ, ೬೪-೨೦; 1672). [?]

**ಸುಲಭ** (ಗು). ೧. ಸರಾಗವಾದ; ಕಷ್ಟವಲ್ಲದ. (ನಾ). ೨. ಸಲೀಸು; ಕಷ್ಟವಲ್ಲದುದು: ಹಾವಿನ ಕೊಡನು ದೋಟಿಗೆ ಸುಲಭವೇ (ಕುವ್ಯಾದ್ರೋ. ೩-೨೮); ಎಲ ಕಂಚವೀರಾಖ್ಯ ಕೇಳೀ ಮತಂ ನಮ್ಮ ಸುಲಭವಹ ವೀರಶೈವಾಚರಣೆಯಿಲ್ಲವೈ (ವೀಶೈಪು. ೫-೩-೧೨); ಸುಲಭವಲ್ಲದ ಸ್ಥಾನವನ್ನು ಹೊಂದಿ ಜಾರಿದುದರಿಂದ ಈ ಉಂಗುರವು ದುಃಖಪಡಿಸತಕ್ಕುದಾಗಿದೆ (ಶಾಕುಂತ. ೮೬-೧೦). ೩. ಅಲ್ಪತೃಪ್ತನಾದವನು: ಸುಲಭನಲ್ಲದ ಶಿಷ್ಯನ . . . ವಿಚಾರಿಸಿ ಮಾಡದುಪದೇಶ ಅಂಧಕನ ಕಯ್ಯ ಅಂಧಕ ಹಿಡಿದಂತೆ (ದೇದಾವ. ೧೨-೧೯). ೪. ಕಷ್ಟವಿಲ್ಲದೆ ದೊರಕುವವನು : ಸುಲಭನು ನೀನೆಂದು ನಿನ್ನ ಬಳಿಗೆ ಬಳಲಿ ಬಂದೆನೊ ದೊರೆಯ ಸುಲಭ ನೀನಾದರ ಒಲಿದು ಸಲಹಬೇಕೊ (ಪುರಂದ. ೨-೧೯೯-೨). ೫. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ, ಪಾದದಲ್ಲಿ ಏಳು ಅಕ್ಷರಗಳುಳ್ಳ 'ಉಷ್ಣಿಕ್' ಛಂದಸ್ಸಿನ ಒಂದು ವೃತ್ತ : ನನಭವಯುತದಿಂ ವನರುಹವದನೇ ನಿನಗಱಿವುವ ನಾಂ ಜನನುತ ಸುಲಭಂ (ಛಂದೋಂಬು. ೨-೬೯). [ಸಂ.]

**ಸುಲಭಕೋಪ** (ನಾ). ಸ್ವಲ್ಪಕಾರಣಕ್ಕಾಗಿ ಕೋಪಗೊಳ್ಳುವವನು : ಈತನು ಸುಲಭಕೋಪನಾದ ದೂರ್ವಾಸನು! (ಶಾಕುಂತ. ೪೬-೧೨). [ಸಂ.]

**ಸುಲಭಕೋಪಿ** (ನಾ). ಸ್ವಲ್ಪಕಾರಣಕ್ಕಾಗಿ ಕೋಪಗೊಳ್ಳುವ ವ್ಯಕ್ತಿ : ಸುಲಭ ಕೋಪಿಗಳು ಉದ್ರೇಕಸ್ವಭಾವದವರು (ಪುನರು. ೫೬೦). [ಸಂ. ಸುಲಭಕೋಪಿನ್]

**ಸುಲಭಗ್ರಾಹ್ಯ** (ನಾ). ಕಷ್ಟವಿಲ್ಲದೆ ತಿಳಿಯುವಂತಹುದು: ಮಕ್ಕಳಿಗೆ ಸುಲಭಗ್ರಾಹ್ಯವಾಗಿ ಕವಿತೆಯು ಅವರ ಚಿತ್ತಕ್ಕೆ ಸಂತೋಷಕರವಾಗುವುದೆಂದು ನಾನು ತಿಳಿಯುತ್ತೇನೆ (ಕವಿಪು. ಪೀಠಿಕೆ). [ಸಂ.]

**ಸುಲಭತೆ** (ನಾ). ಕಷ್ಟವಿಲ್ಲದಿರುವುದು; ಹಗುರವಾಗಿರುವುದು: ಲಲನೆಯರ ಹೃದಯದವೊಲೀಕ್ಷಿಸೆ ನೆಲೆಯನೀಯದ ಕೃತಕಸಗನಿಯ ಸುಲಭತೆಗೆ ಸಹದೇವನಣ್ಣನು ಸೋತು ನಡೆತಂದ (ಕುವ್ಯಾಆ. ೨೩-೧೬); ಕಲಿತಱಿವರಾ ಮುನಿಯ ಶಿಕ್ಷೆಯ ಸುಲಭತೆ ಯಲಪಿಳಾಸ್ತ್ರಶಸ್ತ್ರದ ವಿಲಸದಭಿರಂಜನೆಯ (ತೊರರಾ. ೧-೧೨-೨). [ಸಂ. ಸುಲಭತಾ]

**ಸುಲಭವಲೆ** (ನಾ). ಒಂದು ಬಗೆಯ ಬಲೆ : ಸುಲಭದಲೆ ನೀರುವಲೆ ಶಶಕವಲೆ (ರುಕ್ಮಾಂಗ. ೧೦-೧೯). [ಸುಲಭ + ಬಲೆ]

**ಸುಲಭಸಾಧ್ಯ** (ನಾ). ಕಷ್ಟವಿಲ್ಲದೆ ಪಡೆಯಬಹುದಾದುದು : ಈ ಪ್ರಶ್ನೆಗಳಿಗೆ ಉತ್ತರ ಸುಲಭಸಾಧ್ಯವಾಗಿ ದೊರೆಯುವುದೂ ಇಲ್ಲ (ಪ್ರಾಪಿಪಿ. ೫೧). [ಸಂ.]

**ಸುಲಭೆ** (ನಾ). ಕಷ್ಟವಿಲ್ಲದ ದೊರಕುವವಳು : ಸುಲಭೆ ನಾ ನಿನಗಲ್ಲ ನಿನ್ನನು ಕೆಲರು ನಗುವರು ಪರದ ಸದ್ಗತಿ ತೊಲಗುವುದು ಬೇಡಕಟಯೆಂದಳು (ಕುವ್ಯಾವಿ. ೨-೧೮). [ಸಂ. ಸುಲಭಾ]

**ಸುಲಭೋಪಾಯ** (ನಾ). ಕಷ್ಟವಿಲ್ಲದ ಉಪಾಯ : ಇದನ್ನು ಪತ್ತೆಹಚ್ಚಲು ಸುಲಭೋಪಾಯವೊಂದು ಇದೆ (ಪ್ರಾಪಿಪಿ. ೩೬೯). [ಸಂ.]

**ಸುಲಲಿತ** (ಗು). ೧. ಸುಂದರವಾದ; ಮನೋಹರವಾದ : ಸುಲಲಿತವಲ್ಲನದಿಂ ಕಮಲಲೋಚನಂ ಸುಟಿದು ರಂಗದೊಳ್ (ಜಗವಿ. ೬-೭೦); ಸುಲಲಿತ ಶೃಂಗಾರಾಮೃತ ಸಲಿಲಾಕರವೇಲೆ ಮದನವಿಜಯ ಮಹಾಮಂಗಲ . . . ಸುವರ್ಣಮಾಲೆಯೆಂಬಳ್ (ಚಂದ್ರಪ್ರ. ೨-೧೩). ೨. ಹೆಚ್ಚು ಸಂತೋಷದ; ಅತಿ ಆನಂದದ. (ನಾ). ೩. ಚೆಲುವು. ೪. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ, ಪಾದದಲ್ಲಿ ಆರು ಅಕ್ಷರಗಳುಳ್ಳ 'ಗಾಯತ್ರಿ' ಛಂದಸ್ಸಿನ ಒಂದು ವೃತ್ತ : ಕುಲಿಶ ಭೂಯುಗ್ಮಂ ನೆಲಸಿದಂದಕ್ಕುಂ ಜಲಜಪತ್ರಾಕ್ಷೀ ಸುಲಲಿತಂ ವೃತ್ತಂ (ಛಂದೋಂಬು. ೨-೮೧). [ಸಂ.]

**ಸುಲಲಿತಗುಣ** (ನಾ). [ಕಾವ್ಯಮೀ] ಮಹಾಕಾವ್ಯದ ಲಕ್ಷಣಗಳಲ್ಲಿ ಒಂದು ; ಸುಕುಮಾರಗುಣ : ವಿಲಸಿತ ಸದಳಂಕಾರಾದಿ ಸಂಸಾಧಿತಾರ್ಥಂ . . . ಸುಲ [ಪಾಠಾಂ. ಳ]ಲಿತಗುಣ ನಾನಾವೃತ್ತ ಜಾತಿಪ್ರವೃತ್ತಾಸ್ಖಲಿತ ರಸವಿಶೇಷೋಪಾಶ್ರಯ ಶ್ರೀನಿವೇಶಂ (ಕವಿರಾ. ೩-೨೦೪). [ಸಂ.]

**ಸುಲಲಿತವಿದ್ಯೆ** (ನಾ). ಒಳ್ಳೆಯ ವಿದ್ಯೆ; ಉತ್ತಮವಾದ ವಿದ್ಯೆ : ಎಲ್ಲಿ ಸುಲಲಿತ ವಿದ್ಯೆ ಬಹುಗುಣವೆಲ್ಲಿ ಗಣಿಕಾನಿಕರ ಮಣಿಗಣವೆಲ್ಲಿ ಗಜ ಜಾತ್ಯಶ್ವವೆಲ್ಲಿ . . . ಅಲ್ಲಿ ತನ್ನಾಧೀನಮಾಡಲು ಬಲ್ಲವನೆ ನೃಪನು (ಕುವ್ಯಾಉ. ೩-೭೪).

[ಸಂ. ಸುಲಲಿತವಿದ್ಯಾ]

**ಸುಲಲಿತೆ** (ನಾ). ೧. ಚೆಲುವೆ; ಸುಂದರಿ: ತೋಳಬಂದಿಯ ಬಾಲಕಿಗೆ ಪುಲಿಯುಗುರ ಸುಲಲಿತೆಗೆ ನೇವಳದ ನಾಯಕಿಗೆ ರನ್ನದಾಳಿಯ ರಾಜಹಂಸೆಗೆ (ಗಿರಿಕ. ೩-೯೧ ವ). ೨. [ಸಂಗೀತ] ಒಂದು ರಾಗದ ಹೆಸರು : ಜಾಣ ವೀಣೆಯಂ ಶ್ರುತಿಗೈದು . . . ಸುಲಲಿತೆ ವರಾಳಿ ಕುಂತಳ ವಿಲಸತ್ಕಲ್ಯಾಣಿ ಶಂಕರಾಭರಣ ಸಮುಜ್ವಲವೇಣಿ ರಾಗರಂಜಿತ ಚಲಿಸದೆ ಪೊಸದೇಸಿ ಸೋಮಮುಖಿ ಬಾಜಿಸಿದಳ್ (ರಾಜಶೇ. ೧೧-೮೮). [ಸಂ. ಸುಲಲಿತಾ]

**ಸುಲಾಕಿ** 'ಸುಲಾಕು' ನೋ.

**ಸುಲಾಕು, ಸುಲಾಕಿ** (ನಾ). ಕುರುಹು; ಸೂಚನೆ : ಕಾರು ಅವಸ್ವೇ ಅವ್ರೆ ನಾನು ಸುಲಾಕು ಕೊಡ್ತೇನಿ (ಭೀಮಕಾ. ೨೨೧). **ಸುಲಾಕಿ** : ಕಳ್ಳನ ಸುಲಾಕಿ ತಿಳಿಯಲಿಲ್ಲ (ರೂಢಿ).

[<— ಮರಾ. ಸುರಾಖ್]

**ಸುಲಾಲಿತ** (ನಾ). ಅಂದ; ಸೊಗಸು: ಜವನಿಕೆಯಂ ಪಿಡಿದು ಸಮ್ಮೇಳನ ದೊಳೆಯ್ವಂದು ನಿಂದು ಸುಲಾಲಿತಂ ಮಿಗೆ ನಟಿಸಿ ಪುಷ್ಪಾಂಜಲಿಯನಿತ್ತಸೆದು (ಬಸವಪು. ೧೨-೪೪). [ಸಂ.]

**ಸುಲಾವಣೆ** 'ಸುನಾವಣೆ' ನೋ.

**ಸುಲಿ₁** (ಕ್ರಿ). ೧. (ಸಿಪ್ಪೆ, ತೊಗಟೆ, ಪೊರೆ, ಚರ್ಮ ಮೊದಲಾದುವುಗಳನ್ನು) ತೆಗೆ; ಎಡೆ; ಕಳಚು : ''ಸುಲಿ — ಅವರಣಾಪನೋದನೇ'' (ಶಮಧಾ. ನ); ಭೀಮನನಿಬರ ಸದೆವ ತಾ ಸೊಪ್ಪಾಗಿ ಶತಕರ ತಿದಿಯ ಸುಲಿವನು (ಸಂಭಪ. ೧೭-೮); ಸುಲಿದ ಬಾಳೆಯ ಹಣ್ಣಿನಂದದಿ ಲಲಿತವಹ ಕನ್ನಡದ ನುಡಿ (ಅಮೃತ. ೧-೫). ೨. (ಪೊರೆ, ಚರ್ಮ ಮೊದಲಾದುವು ತಾನಾಗಿ) ಕಳಚಿಕೊಳ್ಳು ; ಉಚ್ಚು : ದಂಡಕ ರಿಸಿಯರ ಮೆಯ್ಯ ತೊಗಲ್ ಪಾವಿನ ಪೆರೆ ಸುಲಿವಂತೆ ಸುಲಿದು ಪೋಗಿ (ವಡ್ಡಾರಾ. ೧೭೨-೨); ಘರ್ಮವ್ಯಾಜದಿನೋಸರಿಸಿದ ಪೆರೆ ಸುಲಿದ ಪಾವಿನಂತಾಕೃತಿಯಂ (ಶಾಂತಿಪು. ೪-೩೯). ೩. ಬಿರಿ; ಒಡೆ : ತಲೆಗಳ್ ಪಱಿಯೆ ಬಱಿಗಳ್ ಮುಱಿಯೆ ತೊಡೆಗಳುಡಿಯೆ ಪುಣ್ಗಳ್ ಸುಲಿಯೆ (ಪಂಪಭಾ. ೧೧-೫೭ ವ). ೪. ಬಟ್ಟೆ ಮೊದಲಾದುವುಗಳನ್ನು ಬಿಚ್ಚು, — ತೆಗೆ: ಅಬ್ಬರವ ಕೇಳಿ ತಳವಾರು ಉಟ್ಟ ಸೀರೆಯ ಸುಲಿದ (ಬಸವ. ೧೧೧); ಚಾರುಹತ್ತಸುಟ್ಟ ವಸ್ತ್ರಮಂ ತೊಟ್ಟ ತೊಡಿಗೆಯಂ ಸುಲಿದುಕೊಂಡು (ಪುಣ್ಯಾಸ್ರ. ೪-೨೦ ವ); ದುರ್ಯೋಧನನು . . . ಸಭೆಯಲಿ ಸೀರೆಯನು ಸುಲಿಯಲ್ಕೆ (ಕುವ್ಯಾಸ. ೧೪-೧೩೨). ೫. (ಚರ್ಮವು) ಕಿತ್ತುಹೋಗು ; ತರಚು ; ಗಾಯವಾಗು: ಅಂತು ಬಿಟ್ಟು ಸುಲಿದ ಮೊಟಕಾಲ್ಗಳುಂ ಕಟಲ್ದ ಪಲ್ಗಳುಂ (ಪಂಪಭಾ. ೨-೩೧ ವ);

ಮುಂಗೈ ಸುಲಿವನ್ನಂ ಕಾಮನೆಚ್ಚಂ (ಅರ್ಧನೇ. ೪-೧೪೫). ೬. (ಹಲ್ಲು ಮೊದಲಾದುವನ್ನು) ತಿಕ್ಕು; ಉಜ್ಜು; ತೊಳೆ: ತಮ್ಮ ಕೆಯ್ದುಗಳನರ್ಚಿಸಿ ದರ್ಭಶಯನಂ ಮಾಡಿ ಪಲ್ಲಂ ಸುಲಿದು ಶಸ್ತ್ರಸಂಗ್ರಹರಾಗಿ (ಪಂಪಭಾ. ೧೦-೪೪ ವ); ಪಲ್ಲಂ ಸುಲಿವೊಡಂ ಕಿವಿ ತೀಂಟೊಡೆ ತುಱಿಸುವೊಡಂ ಪುಲ್ಲಿಂದನಿತುಂ ಪ್ರಯೋಜನಮುಂಟು (ಪಂಚತಂ. ೩೪-೧೪); ಪಲ್ಲಂ ಸುಲಿಯದೆ ಮಿಾಯದೆ ಮಿಳ್ಕದೆ ಕುಲದಿಂ ಕೆಟ್ಟವರನಣ್ಣ ನೀಂ ಮನ್ನಿಪುದೇ (ಧರ್ಮಾಮೃ. ೧-೧೧೩). ೭. ಕಿತ್ತುಕೊಳ್ಳು; ವಸೂಲಿ ಮಾಡು: ಗಾಳಿಸು ಗೆಲ್ವನಂ ಹರಹು ಹೂಜೆಗನಂ ಸುಲಿ ಸುತ್ತುಗಾಱನಂ ತಾಳಿಸು ತೇವನಂ (ಲೀಲಾವ. ೨-೧೦೭); ಸುಲಿವನ್ನರಾರ್ ಅವನಿಂದೆ ಆ ರಾಜದಂಡಮನ್ (ಬದ್ಧಪ್ರ. ೪೦-೮೭೫). ೮. ಬೇರೆಯವರ ಹಣ, ಆಭರಣ ಮುಂತಾದುವನ್ನು ಬಲಾತ್ಕಾರವಾಗಿ ದೋಚು ; ದರೋಡೆ ಮಾಡು : ನಱ ಸುಲಿವ ಖಳರ ಕಳಕಳದ ಕೋಳಾಹಳ (ಸಿದ್ಧರಾ. ೮-೨೯); ಜನಪ ಪಸಾಯಿತವ ದೂತಾಳಿಗಿತ್ತನು ಸುಲಿದರವದಿರು ರಾಯನೋಲಗವ (ಕುವ್ಯಾವಿ. ೯-೯); ಕಾಲ್ಬಟ್ಟೆಯೊಳ್ ಸುಲಿದು ಪಾಂಥರ್ಕಳಂ (ದಿವ್ಯಚ. ೯-೪೦). ೯. ಉಂಟಾಗು; ಕಾಣಿಸಿಕೊಳ್ಳು : ಸುಲಿಯ ಬೆಮರೊಲೆಯೆ ನಡು ಕೊರಲುಲಿಯೆ . . . ನೆರೆದರ್ ನಲ್ಲರ್ (ಸೂಕ್ತಿಸು. ೧೪-೫೨).

[ದೇ. ‖ ತಮಿ. ಚೊಳಿ; ತುಳು. ಸುಲಿ, ತೊಲಿ]

**ಸುಲಿ$_{2}$** (ನಾ). ೧. ಬಿಚ್ಚುವಿಕೆ: 'ಸುಲಿವಡೆ' ಪರಾ. ೨. ಸುಲಿಗೆ : 'ಸುಲಿಪಡು' ಪರಾ. [< ಸುಲಿ$_{1}$]

**ಸುಲಿ$_{3}$** (ನಾ). ಹಸು; ಗೋವು: "ಸಳೆವುದಱೊಳ್ ದನದೊಳು ಸುಲಿ" (ಶಬ್ದಮಂ. ೧೦೮). [?]

**ಸುಲಿಕೆ** (ನಾ). ಸುಲಿದ ಭಾಗ; ನಾರು, ಸಿಪ್ಪೆ ಮುಂತಾದುವು: ನೆಯ್ದಿಲ ಸಣ್ಣಕಾವಿನೊಳಂ ಬಿಸತಂತುವಿನೊಳಂ ಕರ್ಬಾಳದ ಬಳ್ಳಿಯೊಳಂ ತೆಂಗಿನ ತಿರುಳೆಲೆಯ ಸುಲಿಕೆಯೊಳಂ . . . ಬೇಱವೇಱ ಸುತ್ತಿ (ಮಲ್ಲಿಪು. ೫-೪೯). [ಸುಲಿ$_{1}$ + - ಕೆ]

**ಸುಲಿಗಬ್ಬು** (ನಾ). ಸಿಪ್ಪೆತೆಗೆದ ಕಬ್ಬು : ನಾ ಪಂಚಕಂಧರನು ಲಂಕೇಶ ದಶವಕ್ತ್ರನಾ ಪುತ್ರ ವಂಶಜ ಮಹಾವೀರ ಸುಲಿಗಬ್ಬಿನೋಪಮರು ನೀವು (ಜಿನಮು. ೩೪-೩೩).

[ಸುಲಿ$_{1}$ + ಕಬ್ಬು (< ಕರ್ಬು$_{1}$)]

**ಸುಲಿಗೆ** (ನಾ). ಬೇರೆಯವರಿಂದ ಹಣ, ವಸ್ತು ಮುಂತಾದುವನ್ನು ಬಲಾತ್ಕಾರವಾಗಿ ಕಿತ್ತುಕೊಳ್ಳುವುದು ,— ದೋಚುವಿಕೆ: "ಸುಲಿಗೆಯಲ್ಲಿ ಯಾಕರುಸನ ನಖಕ್ಷತಗಳೊಳು ಜಿಹ್ವೆಯಿಂ ರಸವ ಬಿಡುವಲ್ಲಿಯುಗಿಯೆನಿಕ್ಕುಂ" (ಶಬ್ದಮಂ. ೮೨); ಬ್ರಿಟಿಷರ ಆಡಳಿತದಲ್ಲಿ ಹಿಂದಿನ ಮುಸಲ್ಮಾನರ ಕಾಲದಂತೆ ಕೊಲೆ ಸುಲಿಗೆಗಳಿಲ್ಲದೆ ದೇಶವು ಶಾಂತಿ ಸೌಖ್ಯಗಳ ತೌರೂರಾಗಿದೆ (ಯಕ್ಷಪ್ರ. ೩೯); ಕೊಲೆ ಸುಲಿಗೆ ಮೊದಲಾದ ಅನಾಚಾರ ಸ್ವೈರಾಚಾರಗಳಿಗೆ ಒಮ್ಮೆ ಆರಂಭವಾಯಿತೆಂದರೆ ಅವನ್ನು ತಡೆದು ಹಿಡಿಯುವುದು ಅಸಾಧ್ಯವಾಗುತ್ತದೆ (ಯಕ್ಷಪ್ರ. ೧೦೯).

[ಸುಲಿ$_{1}$ + - ಗೆ$_{2}$]

**ಸುಲಿಗೆಗಾರ** (ನಾ). ಬೇರೆಯವರಿಂದ ಹಣ, ವಸ್ತು ಮುಂತಾದುವನ್ನು ಬಲಾತ್ಕಾರವಾಗಿ ಕಿತ್ತುಕೊಳ್ಳುವವನು ; ದರೋಡೆಕೋರ : ಅವರ ಪ್ರಜೆಯಾದ ಕೇತಯನೆಂಬವನು ಹೆಸರುಗೊಂಡ ಸುಲಿಗೆಗಾರನೆಂಬುದು ಎಲ್ಲರಿಗೂ ಗೊತ್ತಿದೆ (ವೀರಬಂ. ೧೪). [ಸುಲಿಗೆ + - ಗಾರ (< — ಕಾಱ)]

**ಸುಲಿಗೆಗಾರಿಕೆ** (ನಾ). = ಸುಲಿಗೆ: ತಮ್ಮ ಪೂರ್ವಜರ ಸುಲಿಗೆಗಾರಿಕೆಯ ವೃತ್ತಿ ಬಾಬೂರಾಯರಲ್ಲೂ ಉಳಿದುಕೊಂಡಿದ್ದಿತು (ರತ್ನಗೋ. ೧೦). [ಸುಲಿಗೆಗಾರ + - ಇಕೆ]

**ಸುಲಿಗೆವಡೆ** (ಕ್ರಿ). ಸುಲಿಗೆಗೆ ಒಳಗಾಗು: ಧನಪತಿ ಸುಲಿಗೆವಡೆದಂತೆ . . . ಹಲವ ಹಂಬಲಿಸುತ್ತ ಹೆಂಪಳಿದಿರ್ದನಸುರೇಂದ್ರ (ಕೂರರಾ. ೭-೨೭-೭); ಖಳನೊಡಲ ಕರಚರಣಹತಿಯಲಿ ಸುಲಿಗೆವಡೆದುದು ವಿಪಿನ (ನಿಭಾಗ. ೧೦-೧೫-೩೩).

[ಸುಲಿಗೆ + ಪಡೆ$_{1}$]

**ಸುಲಿಗೆವೆಱು** (ಕ್ರಿ). = ಸುಲಿಗೆವಡೆ: ಜಯಂಧರನೋಲಗದೊಳಿರ್ದಾಸ್ಥಾನ ಮಂಟಪಕ್ಕೆ ಸುಲಿಗೆ[ಪಾಠಾಂ. ಸುಲಿ]ವೆತ್ತಂತೆ ಬಂದಿರ್ದ ಪ್ರಧಾನವರ್ಗಮಂ ನೋಡಿ (ಪುಣ್ಯಾಸ್ರ. ೭-೫೩ ವ). [ಸುಲಿಗೆ + ಪೆಱು$_{1}$]

**ಸುಲಿತಿನ್** (ಕ್ರಿ). ಸುಲಿಗೆ ಮಾಡು; ದರೋಡೆ ಮಾಡು: ಇಳೆಯಾಣ್ಮಂ ತನಗಲ್ತೆ ವೆಗ್ಗಳನೆನುತ್ತಂ ಪಾರುಪತ್ಯಂಗಳಂ ಖಳಗೀಯಲ್ ಸುಲಿತಿಂದು ರಾಜ್ಯವನಿತಂ . . . ಕಾಲಯಮನಂತತ್ಕುಗ್ರಮಂ ತಾಳ್ದಿದಾ ದಳವಾಯೇ ಬಳಿಮಾರಿಯ್ಕೆ (ಸೋಮೇಶ. ೭೪).

[ಸುಲಿ$_{1}$ + ತಿನ್]

**ಸುಲಿಪಡು** (ಕ್ರಿ). = ಸುಲಿಗೆವಡೆ: ಬಟ್ಟೆಯೊಳ್ ಬರ್ಪಲ್ಲಿ ಬೇಡರಿಂ ಸುಲಿಪಟ್ಟ[ಪಾಠಾಂ. ಸುಲಿಸಿಕೊಂಡ]ನೆಂಬಿದು . . . ಉಂಟೋ ಇಲ್ಲವೋ ಪೇೞಿಂ (ಧರ್ಮಪ. ೪-೨೨ ವ). [ಸುಲಿ$_{2}$ + ಪಡು$_{1}$]

**ಸುಲಿಪಲ್** 'ಸುಲಿವಲ್' ನೋ.

**ಸುಲಿಪಲ್ಲು** 'ಸುಲಿವಲ್' ನೋ.

**ಸುಲಿಪಲ್ಬೆಳಗು** (ನಾ). ಶುಭ್ರವಾದ ಹಲ್ಲಿನ ಹೊಳಪು; ದಂತಪ್ರಭೆ: ಮಿಸುಪ ಸುಲಿಪಲ್ಬೆಳಗೆಂಬ ಕಾರಮಿಂಚು (ಕಬ್ಬಿಗ. ೧೨೩).

[ಸುಲಿಪಲ್ (< ಸುಲಿವಲ್) + ಬೆಳಗು$_{2}$]

**ಸುಲಿಪಾಕಲು** (ನಾ). ಹೊಳೆಯುವ ಸುತ್ತುಗೋಡೆ , — ಪ್ರಾಕಾರ : ಆಕಾಶಕಡರಿ ಯುದ್ಧಕೆ ಪೋದಪನೊ ಎನಲನೇಕವಿಭವದೊಳು ಬಳಸಿದ ಪರಿಖೆಯಿಂದೆ ಸುಲಿಪಾಕಲಿಂ ದುರದ ರನ್ನದ ತೆನೆಗಳೆಸೆಯೆ ರಂಜಿಸಿ ತೋರ್ಪುದು ಪುರವರಂ (ಸಿದ್ದೇಪು. ೨-೨೨).

[ಸುಲಿ$_{1}$ + ಪಾಕಲು (< ಪಾಗಾರ)]

**ಸುಲಿಯಿಸು, ಸುಲಿಸು** (ಕ್ರಿ). ೧. ಸುಲಿದುಕೊಳ್ಳು; ಕಿತ್ತುಕೊಳ್ಳು: ಒಲಿಯದವನ ನತಿಚದುರಿಂದೊಲಿಯಿಸುವೊಲಿದ ಬಳಿಕ್ಕವನುಳ್ಳೊಡವೆಗಳಂ ಸುಲಿಯಿಸಿಕೊಂಡತಿದಾರಿದ್ರ ನುಮಾದವನಂ ನೀಂ ತಗುಳು (ಜಯಕಾ. ೧೪-೪೯). **ಸುಲಿಸು** : ೧. ಸುಲಿಸಿಕೊಳ್ಳಬಹುದು ಸುದ್ದಿ ಹೇಳಕೂಡದು (ಗಾದ). ೨. (ತೊಗಟೆ, ಸಿಪ್ಪೆ, ಚರ್ಮ ಮೊದಲಾದುವುಗಳನ್ನು) ತೆಗೆಯುವಂತೆ ಮಾಡು ; ತೆಗೆಸು : ಹರಿಯ ರಂಜಿಪ ತೊವಲನೆತ್ತಿ ಸುಲಿಸಿ ಗಿರಿಜಾವರಂ ಪೊದೆದು (ಸಾಸಂಚ. ೨-೧೭); ಎಲೆ ಪಾತಕಿ ನಿನ್ನ ದೆಸೆಯಿಂದ ಬಂದುದು ನೆಲದೊಳೆಮಗಪಕೀರ್ತಿ ಪಲವ ನುಡಿಯಲೇವುದು ನಿನ್ನ ತನುವನು ಸುಲಿಸಿದೊಡಳಲು ಹಿಂಗುವುದೆ (ಅಂಜಚ. ೩-೪೦). ೩. (ಬಟ್ಟೆ ಮೊದಲಾದುವುಗಳನ್ನು)ಬಲಾತ್ಕಾರದಿಂದ ಬಿಚ್ಚಿಸು, — ತೆಗೆಸು: ನಿರ್ಭೀತಿಯಲಿ ನಿಮ್ಮರಸಿಯುಟ್ಟುದನೀತ ಸುಲಿಸಿದನಿವನು ಸುಜನನೆ (ಕುವ್ಯಾಗ. ೫-೧೨); ಕಪಟದ ದಾಯದಲಿ ಸೋಲಿಸಿ ಯುಧಿಷ್ಠಿರರಾಯನರಸಿಯ ಸುಲಿಸಿತಕೆ ಫಲವಾಯ್ತೆ ಹೇಳು (ಕುವ್ಯಾಗ. ೮-೧೨). [ಸುಲಿ$_{1}$ + - ಇಸು$_{3}$]

**ಸುಲಿವಡೆ** (ಕ್ರಿ). ೧. ಪೋಷಾಕು ತೆಗೆ: ಕಂಡರ್ಗೆ ಕಾಕುಗಳು ತಟ್ಟುಗಳ ಘಟ್ಟೆಯರ ಹಿಂಡು ನೆರೆದುದು ನಾಡ ಮಲಧಾರಿಗಳ ಮೊತ್ತ ಸುಲಿವಡೆ[ಪಾಠಾಂ. ಡ]ದ ಮಲ್ಲರಂತೆ (ಸೋಮಚ. ೪-೪೦). ೨. ಕಳೆದುಹೋಗು ; ನಷ್ಟವಾಗು : ಜ್ವಲಿಸುವೊಡಲಿನ ಜೋಲ್ದ ಮೈಗಳ ಸುಲಿವಡೆದ ಕಾಂತಿಗಳ ಮುಸುಡಿನಲಿಳಿವ ನಯನಾಂಬುಗಳ ನೃಪರನಸುರಾರಿ ನೋಡಿ ತಲೆದೂಗಿದನು (ನಿಭಾಗ. ೧೦-೭೯-೩೭). ೩. (ಬಟ್ಟೆ ಮುಂತಾದುವನ್ನು) ಬಲಾತ್ಕಾರದಿಂದ ಬಿಚ್ಚುವಿಕೆಗೆ ಗುರಿಯಾಗು: ಕಮಲಮುಖಿ ಸುಲಿಪಡೆದು ಲಕ್ಷ್ಮೀರಮಣ . . . ಎಂದೊಱಲಿದೊಡೆ ಸಂಜಯ ನೊಂದೆ ನಾನಂದ (ಕುವ್ಯಾಉ. ೫-೭). [ಸುಲಿ$_{1}$ + ಪಡೆ$_{1}$]

**ಸುಲಿವಣ್** (ನಾ). ಸಿಪ್ಪೆಯನ್ನು ತೆಗೆದ ಹಣ್ಣು: ಅಪ್ಪ ಕೊಳ್ಳೆಲಪೂ ಅಗ್ರಜ ಕೊಳ್ಳೊ ಹಿಂಡಿಯ ಸೊಪ್ಪ ಕೋ ಸುಲಿವಣ್ಣಳಿವೆ ಕೋ (ಮೋಹತ. ೧೮-೮೮).

[ಸುಲಿ$_{1}$ + ಪಣ್$_{3}$]

**ಸುಲಿವಲ್, ಸುಲಿಪಲ್, ಸುಲಿಪಲ್ಲು, ಸುಲಿವಲ್ಲು, ಸುಲಿಹಲ್ಲು** (ನಾ). ಚೊಕ್ಕಟಗೊಳಿಸಿದ ಹಲ್ಲು; ಶುಭ್ರಗೊಳಿಸಿದ ದಂತ: ಅಲರ್ಗಣ್ ಪೊಂಗಿದ ಲೋಳೆವಾಯ್ ನಗೆಮೊಗಂ ತೊಂಗಲ್ಗುರುಳ್ ಕೆಂದಳಂ ಸುಲಿವ[ಪಾಠಾಂ. ಪ]ಲ್ ಸೋರ್ಮುಡಿ . . . ಚೆಲ್ವಾಗಿರೆ ನಿಂದ ಬೇಡಿತಿಯರಂ ಕಂಡಂ ಮಹೀವಲ್ಲಭಂ (ಕಾವ್ಯಾವ. ೨೦೭). **ಸುಲಿಪಲ್**: ಸುಲಿಪಲ್ ತಬ್ಬಲ ತಾರಕಾವಯವಮಂ ಪೀನಂ ಲಲಾಟಾಗ್ರದೊಳ್ ನೆಲೆಗೊಂಡೊಪ್ಪುವ ವೀರಪಟ್ಟಂ . . . ಪೋಲ್ತತ್ತು ತಳಪ್ರಹಾರಿಯ ಶಿರಂ ಹೇಮಾದ್ರಿಯಾಕಾರಮಂ (ಕಾವ್ಯಸಾ. ೫೨೫ ಶೂದ್ರಕ); ಸುಲಿಪಲ್ ಮಿಂಚಿನ

ಗೊಂಚಲುಟ್ಟ ದುಗುಲಂ . . . ಬೆಳ್ಪಸದನಂ ಕಣ್ಗೊಪ್ಪಿತಾ ಕಾಂತೆಯಾ (ಪಂಪಭಾ. ೧-೧೩೭); ಕಣ್ಗೊಳಿಪವು ಯುವತಿಯ ಸುಲಿಪಲ್ಲುಮೆಸೆವ ಬಿಂಬಾಧರಮುಂ (ಕಾದಂಬ. ೧೫); ಮೆಱೆವ ನಾಸಿಕದ ತೊಳಗುವ ಸುಲಿಪಲ್ಲಳ ವಿಳಾಸಮಂ ತಳೆದ ಮುಖಮಂಡಲಂ (ನಂಬಿರ. ೪-೩೨). ಸುಲಿಪಲ್ಲು: ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು ಭಿಕ್ಷಕ್ಕೆ ಮನೆಗೆ ಬಂದುದ ಕಂಡೆನವ್ವ (ಮಹಾದೇ. ಐ. ೪೦-೮೭); ಎಡಗಣ್ದೋಱುವ ಸುಲಿಪಲ್ಲು ಪೊಳೆವ ಪರ್ಜೆಡೆಯಲರ್ವಾಲೆ ಹೊಂಗೆಜ್ಜೆ ಬಿಡಯವಿಲ್ಲದ ಹೊನ್ನಂಡೆಗಾತಿಯರು (ಮೋಹತ. ೧೪-೬೧). ಸುಲಿವಲ್ಲು: ಪಲ್ಲಕ್ಕಿ ಏಱಿದವರೆಲ್ಲಿಂದ ಬಂದಿಹರು ನೆಲ್ಲಕ್ಕಿಯಂತ ಸುಲಿವಲ್ಲ ಹಿರಿಯರು ನಲ್ಲಳಿಂದಲ್ಲೆ (ಸರ್ವಜ್ಞ. ೧೬೪೭). ಸುಲಿಹಲ್ಲು : ಬೆಣ್ಣೆ ಅಂತ ಮೈಯೋಳೆ ಎಣ್ಣೆ ತುರುಬೋಳೆ ಕೊಬ್ಬಕ್ಕಿ ಅಂತಾ ಸುಲಿಹಲ್ಲಿನೋಳೆ (ಗೌರಪ. ೭).

[ಸುಲಿ$_1$ + ಪಲ್]

ಸುಲಿವಲ್ಲ (ನಾ). ಒಂದು ಬಗೆಯ ಸಸ್ಯ: "ವಿತುನ್ನಂ, ಸುನಿಷಣ್ಣಕಂ — ೨ ನೀರುಚೆಂಚಲಿ, ಸುಲಿವಲ್ಲ" (ಸಿದ್ಧಾಂತಿ. ೧೪೭). [?]

ಸುಲಿವಲ್ಲು 'ಸುಲಿವಲ್' ನೋ.

ಸುಲಿಸು 'ಸುಲಿಯಿಸು' ನೋ.

ಸುಲಿಹ (ನಾ). ಸುಲಿದುಕೊಳ್ಳುವಿಕೆ; ಕೊಳ್ಳೆ; ದರೋಡೆ: "ಸುಗಿಪುವುಮನ ಪುದಿಸುತೆಲಿಹಂ" (ರನ್ನಕಂ. ೮); "ಉಗಿಪದಂ = ಸುಲಿಹಂ" (ಶಮದ. ಪರಿ. ೨).

[ಸುಲಿ$_1$ + - ಹ$_2$ (< - ಪ$_2$)]

ಸುಲಿಹಕಾಱ (ನಾ). = ಸುಲಿಗೆಗಾರ : ಕೋನೆಕಾಱರ ಗುಡಿಗೆ ಪಣ ಸುಲಿಹಕಾಱರುಳಿಗೆ ಹಾಗ (ಬೊಂಕಶಾ. ೧೯೩೩, ಹಾವೇರಿ. ೬೦-೪೭; ?). [ಸುಲಿಹ + - ಕಾಱ]

ಸುಲಿಹಗೊಳ್ಳು (ಕ್ರಿ). = ಸುಲಿಗೆವಡೆ : ಈ ಗೌಡಂದಿರ ಸಂಪಾದನ ಸಂಚಿತಗಳನ್ನೂ ಸುಲಿಹಗೊಂಡು ಕೋಳ್ದಿರುತ್ತಿರುವನು (ಮಂತ್ರಶ. ೬೯-೧೨).

[ಸುಲಿಹ + ಕೊಳ್ಳು$_1$ (< ಕೊಳ್$_1$)]

ಸುಲಿಹಲ್ಲು 'ಸುಲಿವಲ್' ನೋ.

ಸುಲಿಹಾಳೆ (ನಾ). "ಅಡಕೆ ಹಾಳೆ" (ಸೂಪಶಾ. ಟೀಕೆ): ಬಾಳೆ ದೀಪದ್ರಾಕ್ಷೆ ಯರನೇಱಲಿಮ್ಮಾವು ದಾಳಿಂಬ ಬೇಲ ಖರ್ಜೂರ . . . ಮೇಳಗಳನಱಿದು ಸಕ್ಕರೆಯಿಕ್ಕಿ ಬಳಿಕ ಸುಲಿಹಾಳೆ[ಪಾಠಾಂ. ಸುಳಿಹಾಳ , ಸುಲಿಹಾಲೆ]ಗಳ ದೊನ್ನೆಯೊಳಗಿಟ್ಟು (ಸೂಪಶಾ. ೨-೩೨). [ಸುಲಿ$_1$ + ಹಾಳೆ$_1$ (< ಪಾಳೆ$_1$)]

ಸುಲು 'ಸುಲ್ವ' ನೋ.

ಸುಲುಗಳಸ (ನಾ). ತಾಮ್ರದ ಕಳಸ: ಜಪಾರುದ್ರಾದಿಯಾದ ಕೇಸಲದ ನಿಡುದಂಡೆಗಳು ಸುಲುಗಳಸ, ಕಿಸುಗೊಡೆ ತನಿ ಸಂಜೆವಣ್ಣದ ಪಳಯಿಗೆ ಮುಂತಾದುವು ಗಳಿಂದ ಅಲಂಕೃತವಾಗಿರುವ . . . ತುಂಗಮೂರ್ತಿ (ಮಂತ್ರಶ. ೧೯-೧೦).

[ಸುಲು (< ಸುಲ್ವ) + ಕಳಸ$_1$ (< ಕಲಸ)]

ಸುಲೋಚನ (ನಾ). ೧. ಸುಂದರವಾದ ಕಣ್ಣು. ೨. ಕಣ್ಣು : ನನ್ನ ಸುಲೋಚನಗಳು ಈ ಪ್ರೇಮಕಲಹವನ್ನು ಕಾಣಲು ಆತುರವುಳ್ಳವುಗಳಾದುವು (ಬಾಗಿನ. ೧೦೪). ೩. (ದೃಷ್ಟಿದೋಷಪರಿಹಾರಕ್ಕಾಗಿ ಹಾಕಿಕೊಳ್ಳುವ) ಕನ್ನಡಕ : ಮೂಗಿನ ಮೇಲಿನ ಸುಲೋಚನವನ್ನು ಸರಿಪಡಿಸಿಕೊಂಡು (ಕಂಕಕೂ. ೨); ವಿಲಾಯಿತಿ ಸುಲೋಚನ ಧರಿಸಿದರೂ ಕಣ್ಣಿಗೆ ಕಾಣಿಸದು (ನಿಬಂಧ. I, ೪೭೨). [ಸಂ.]

ಸುಲೋಚನಜಲ (ನಾ). ಕಣ್ಣೀರು; ಕಂಬನಿ: ಖಳಶಿರೋಮಣಿಗಳು ಮಹೀಶನ ನಿಳಯಕೈತಂದರು ಸುಲೋಚನಜಲವ ಸೆಱಗಿನೊಳೊರಸಿ ನುಡಿದರು ಖೇದವೇಕೆನುತ (ಕುಮ್ಮಾಭಿ. ೧೭-೮). [ಸಂ.]

ಸುಲೋಚನಾಂಧಕ (ನಾ). ಕಣ್ಣಿನ ದೃಷ್ಟಿಯನ್ನು ಕಳೆದುಕೊಂಡವನು; ಕುರುಡ : ಇನ್ನು ನೀನು ಸುಲೋಚನಾಂಧಕ ನಿನ್ನೊಡನೆ ಫಲವೇನು ಕದನಕೆ ಬನ್ನಿ ಮಿಡುಕುಳ್ಳವರನುತ ಗಜಱಿದನು ಸಹದೇವ (ಕುಮ್ಮಾಸ. ೮-೪೨). [ಸಂ.]

ಸುಲೋವೆ (ನಾ). ಒಳ್ಳೆಯ ಸೂರು; ಉತ್ತಮವಾದ ಛಾವಣಿ : ನೀಲದಾ ಪರತರ ಜಂತೆ ಪಚ್ಚೆಯ ಸುಲೋವೆ ವೃಷಧ್ವಜ ಗೋಪುರ ಮುತ್ತಿನಾಲಕಂ ಮೆಱೆವ ಸುವರ್ಣದ ಪೌಳಿ (ಭ್ರರಪು. ೮-೨೭). [ಸು$_4$ - + ಲೋವೆ]

ಸುಲ್ಗಿ (ನಾ). ಗೇಣಿದಾರನಿಗೆ ಸಲ್ಲುವ ಉತ್ಪನ್ನದ ಮೂರನೆಯ ಒಂದು ಭಾಗ ; ವಾರ : (ಕಸಂಗ್ಸಾ. ೯೭). [?]

ಸುಲ್ತಾನ್, ಸುರತಾಲ , ಸುರತಾಳ , ಸುರತ್ರಾಣ , ಸುರಿತಾಣ , ಸುರಿತಾಳ , ಸುರಿತ್ರಾಣ , ಸುರುತಾಳ , ಸುಲತಾನ , ಸುಲ್ತಾನ (ನಾ). ಮಹಮ್ಮದೀಯ ದೊರೆ ,— ರಾಜ: ಸುಲ್ತಾನ್‌ರವರು ಒಪ್ಪದೇ ಏನು? ಅವರನ್ನು ನಾನು ಒಪ್ಪಿಸುತ್ತೇನೆ (ದೌಲತ್. ೨೫೪). ಸುರತಾಲ: ಹಿನ್ದುರಾಯ ಸುರತಾಲ (ಮೈಆರಿ. ೧೯೨೯, ೯೦-೩೯; 1347). ಸುರತಾಳ : ಸುರೆಯ ತಾಳಿದನಾಗಿ ಸುರತಾಳನೆಂಬವಗೆ ಧರೆಯನಾಳುವ ಪಟ್ಟ ತ್ವರಿತವಾಗುವುದು (ಶರಲೀ. ೪೩೨-೭). ಸುರತ್ರಾಣ : ಧರೆ ಬೆಸಲಾದಂತೆ ಬಂದ ಸುರ[ಪಾಠಾಂ. ರು]ತ್ರಾಣನುರುಬಲಕಂಜದೆ (ಕುರಾಸಾಂ. ೧-೧೧೧). ಸುರಿತಾಣ: ಹೊಗಳುತಿರಲಾ ವಾರ್ತೆ ಸುರಿತಾಣ[ಪಾಠಾಂ. ಸುಲ್ತಾನ]ನು ಕೇಳಿ (ಗುರುಚಾ. ೧೧-೩೫); ವಿಜಯಾಪುರದ ಸುರಿತಾಣ ಮಹಮ್ಮದ ಪಾದುಶಾಹನೆಡೆಗೆ ನಡೆದು (ಚಕವಂ. ೫೭-೬). ಸುರಿತಾಳ : ದಿಳ್ಳಿಯ ಸುರಿತಾಳ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಿರೆ (ಮೈಆರಿ. ೧೯೩೧, ೧-೩; 1310?); ತುರುಕಾಣ್ಯದೊಳಗನಾವ್ಯಪ್ಪಿದೋಷಂ ಬಂದು ಪಸರಿಸೆ ಪವಾಡದಿಂದೆ ವರುಷಮಂ ಸುರಿಸಿ ಸುರಿತಾಳನಿಂ ಪೂಜೆಯಂ ಪಿರಿದಾಗಿ ಕೈಕೊಂಡು (ಚಬಪು. ೧-೧೯). ಸುರಿತ್ರಾಣ: ಡಿಳ್ಳಿಯಾ ಸುರಿತ್ರಾಣನೆಯಾತ್ಮಜಂ ಮಡಿಯಲು (ಗುರುಚಾ. ೧೧-೪೧). ಸುರುತಾಳ: ಮುಂದುಗೆಡಿಸಿ ಸುರುತಾಳ[ಪಾಠಾಂ. ಸುರುತ್ರಾಣ, ಸುರತಾಳ]ಬಲವ (ಕುರಾಸಾಂ. ೯-೭೭). ಸುಲತಾನ : ದಿಲಾವರಖಾನ್ ಸಾಹೇಬರವರು XXX ದರಗಾ ಸುಲತಾನರು ತಮ್ಮ ಝಖಾನ್‌ಸಾಹೇಬರು (ಎಕ. IX. ಹೊಸಕೋ. ೧೯-೫; 1745). ಸುಲ್ತಾನ: ಸುಲ್ತಾನನು ಕತ್ತಿಯನ್ನು ಹಿರಿದು ಬೀಸಿದನು (ದೌಲತ್. ೧೩೧); ಶ್ರೀರಂಗಪಟ್ಟ — ಹೈದರು ಮತ್ತು ಟಿಪ್ಪೂಸುಲ್ತಾನರವರ ವಾಸಸ್ಥಳವಾಗಿತ್ತು (ಭೂಗೋಳ. ೪೯). [← ಪಾರ. ಹಿಂ. ಮರಾ. ಸುಲತಾನ್]

ಸುಲ್ತಾನ 'ಸುಲ್ತಾನ್' ನೋ.

ಸುಲ್ತಾನದ್ರಾಕ್ಷಿ (ನಾ). ಬೀಜವಿಲ್ಲದ ದ್ರಾಕ್ಷಿ: ಸುಲ್ತಾನದ್ರಾಕ್ಷಿ ಬಹಳ ರುಚಿಯಾಗಿರುತ್ತದೆ (ರೂಢಿ). [ಸುಲ್ತಾನ? + ದ್ರಾಕ್ಷಿ]

ಸುಲ್ತಾನದ್ರಾಕ್ಷೆ (ನಾ). = ಸುಲ್ತಾನದ್ರಾಕ್ಷಿ: ೧ ಸಣ್ಣ ಚಮಚ ಹುಡಿಮಾಡಿದ ಯಾಲಕ್ಕಿ ಅಥವಾ ಜಾಯಿಕಾಯಿ, ೧ ದೊಡ್ಡ ಚಮಚ ಸುಲ್ತಾನದ್ರಾಕ್ಷೆ (ಅಡುಶಾ. ೯೭).

[ಸುಲ್ತಾನ ? + ದ್ರಾಕ್ಷೆ]

ಸುಲ್ತಾನಿ 'ಸುಲ್ತಾನೀ' ನೋ.

ಸುಲ್ತಾನಿಕೊಳಗ (ನಾ). (ಟಿಪ್ಪುಸುಲ್ತಾನನ ಕಾಲದಲ್ಲಿದ್ದ) ಹದಿನಾರು ಸೇರಿನ ಒಂದು ಅಳತೆ : (ಕಸಂಗ್ಸಾ. ೧೬೩). [ಸುಲ್ತಾನಿ (< ಸುಲ್ತಾನೀ) + ಕೊಳಗ]

ಸುಲ್ತಾನಿತೋಟ (ನಾ). ಬಂದೂಕಕ್ಕೆ ಉಪಯೋಗಿಸುವ ಒಂದು ಬಗೆಯ ತೋಟಾ ,— ಗುಂಡು : ಸುಲ್ತಾನಿತೋಟ ತುಂಬಿದಂತ ತೋಸ್ತಾನಿ ವಂದು, ಖಾಸಾ ಮದ್ದು ಕತ್ತಿ ಒಂದು (ರಾಜೇಂದ್ರ. ೫೭). [ಸುಲ್ತಾನಿ (< ಸುಲ್ತಾನೀ) + ತೋಟ]

ಸುಲ್ತಾನೀ, ಸುಲತಾನಿ, ಸುಲ್ತಾನಿ (ನಾ). (ಟಿಪ್ಪುಸುಲ್ತಾನನು ಹೊರಡಿಸಿದ) ಹದಿನೆಂಟು ವರಹ ತೂಕದ ಒಂದು ನಾಣ್ಯ : ಸುಲ್ತಾನೀ (ಟೀಪೂನದು) ರೂ ೪ (ಕಭಾಗ. ೨೮೦). ಸುಲತಾನಿ: 'ಸುಲತಾನಿವರಹ' ಪರಾ. ಸುಲ್ತಾನಿ: 'ಸುಲ್ತಾನಿಕೊಳಗ' ಪರಾ. [← ಪಾರ. ಹಿಂ. ಮರಾ. ಸುಲ್ತಾನೀ]

ಸುಲ್ಪ 'ಸುಲ್ವ' ನೋ.

ಸುಲ್ವ, ಸುಲು, ಸುಲ್ಪ, ಸುಲ್ವು (ನಾ). ೧. ಒಂದು ಬಗೆಯ ಲೋಹ ; ತಾಮ್ರ: "ಸುಲ್ವಂ — ಸುಲು, ಸುಲುವೆಂದು ಕಿಸುಪೊನ್" (ಶಮದ. ನ. ೨೯೨). ೨. ಪೂಜಾಸಾಮಗ್ರಿ: ಚಂದನಂ ಸ್ವಸ್ತಿಕಂ ಸುಲ್ವಮೆಂಬೀ ಮಂಗಳದ್ರವ್ಯದ ರಚನೆಯಿಂ (ಸುಕುಮಾ. ೫-೬೧). ಸುಲು : ೧ "ಸುಲುವೆಂದುಂ ಕಿಸುವೆಂದುಂ ಕೆಂಪೆಂದುಂ — ತಾಮ್ರಂ" (ಕಶಸಾ. ೫೦-೬೩). ಸುಲ್ಪ : ೧ "ಕಿಸು ಸುಲ್ಪಮುದುಂಬರಂ ತಾಮ್ರಂ" (ಮಂಗರಾ. ೩೦-೫). ಸುಲ್ವು : ೧. ಅರುಣತವೆತ್ತು ಕಿಂಶುಕದ ಪೂಪಿನ ಬಣ್ಣಮೆ ಬಣ್ಣಮಾಗೆಯುಂ ಕರಗುವ ಸುಲ್ವಿನಾಕೃತಿಯೊಳಾಗಿರೆಯುಜ್ಜಳಲಕ್ಷ್ಣನಾಗೆಯುಂ . . . ಅಭಿವೃದ್ಧಿಯಕ್ಕುಂ (ಜಟ್ಟಮ. ೭-೭೭). [< ಸಂ. ಶುಲ್ವ , ಶುಲ್ಬ]

**ಸುಲ್ಟು** 'ಸುಲ್ಟ' ನೋ.

**ಸುವಕ್ತ್ರ** (ನಾ). ಒಂದು ನರಕದ ಹೆಸರು: ವಿಕರಾಳ ಪ್ರಕಂಪ ಪದ್ಮ ಸುವಕ್ತ್ರ ಕಾಲವಂಚ್ಯದು ಮಂತ್ರಿನರಕಂಗಳಿಂ ಕೂಡಿ ಅಘೋರವೆಂಬರಸುನರಕವಿಹುದು (ವಿವೇಕ. ೧೫೨). [ಸಂ.]

**ಸುವರ್ಚಲವಣ** (ನಾ). ಒಂದು ಬಗೆಯ ಉಪ್ಪು: "ತಿಲಕಂ – ಕಾಡುವಿಟ್ಟ, ಸುವರ್ಚಲವಣ" (ಓಷಧಿ. ೬೮); ವಾಯುವಿಳಂಗ, ಸುವರ್ಚಲವಣ . . . ಸೇವಿಸಲು . . . ಸಕಲಜ್ವರಂ ಮಾಣ್ಗುಂ (ಸಕವ್ಯ. ೧೧೪). 'ಸಂವತ್ಸರಲವಣ' ಪರಾ. [ಸಂ.]

**ಸುವರ್ಣ** (ನಾ). ೧. ಒಳ್ಳೆಯ ಬಣ್ಣ ; ಉತ್ತಮವಾದ ವರ್ಣ. ೨. ಒಳ್ಳೆಯ ಅಕ್ಷರ; ಉತ್ತಮವಾದ ವರ್ಣ. ೩. ಒಳ್ಳೆಯ ಬಣ್ಣವುಳ್ಳ ಒಂದು ಲೋಹ; ಚಿನ್ನ: ಸುವರ್ಣಕಗ್ನಿಸಂಯೋಗವಹರ್ಣೋತ್ಕರ್ಷಮಂ ಪಡೆವಂತೆ (ಪಾರ್ಶ್ವಪು. ೫-೪೯ ವ). ೧, ೩: ಸಸಿಯೊಡನೊಂದಿ ರೋಹಿಣಿಯ ಮಸಕದಂತೆ ಸುವರ್ಣಯುತಮಾಗಿ ಪರದನಂತೊಪ್ಪುಗುಂ ಶಾಲಿಯ ವನಂ (ಪದ್ಮರಾ. ೮-೧೩). ೨, ೩: ಸಲೆ ನಿಲೆ ಸುಕವಿ ಸುವರ್ಣದ ನೆಲೆಯಱಿದೊರೆದೊರೆದು ನೋಡಿ ಬಗೆಯೊರೆಗಲ್ಲೊಳ್ ತಲೆದೂಗದಂತೆ ಸಭೆಯೊಳ್ ತಲೆದೂಗುವವಂ ಪರಿಕ್ಷಿಸಲ್ ಬಲ್ಲವನೇ (ಧರ್ಮನಾ. ೧-೫೩). ೪. ಸಂಪತ್ತು; ಐಶ್ವರ್ಯ: ಎನಗೆನಗೀವನಾವ ತೆಱದಿಂ ವರವಸ್ತ್ರ ಸುವರ್ಣಮಂ (ಪುಷ್ಪಪು. ೧-೭೯). ೫. ಒಂದು ಚಿನ್ನದ ನಾಣ್ಯ. ೬. ಒಂದು ನಿರ್ದಿಷ್ಟವಾದ ಪ್ರಮಾಣ: ನಾಲ್ಕು ಸುವರ್ಣಕರ್ಷಂ (ವೈದ್ಯಸಾ. ೪-೨೦); ೧ ಪಲ = ೪ ಕರ್ಷ, ೧ ಕರ್ಷ = ೪ ಸುವರ್ಣ (ಕಶಾಅ. ೩೯೫).

**ಸುವರ್ಣಗರುಡಧ್ವಜ** = ಶಿಲಾಹಾರ ರಾಜರ ಒಂದು ಬಿರುದು : ಮಹಾಸಾಮನ್ತಂ ಸುವರ್ಣ್ಣಗರುಡಧ್ವಜಂ (ಸೌಇಇ. XX, ೨೦-೪೪; 1019); ಸಮರೈಕಭೀಷಣಂ ಸುವರ್ಣ್ಣಗರುಡಧ್ವಜಂ (ಸೌಇಇ. XX, ೫೦-೧೨; 1077). [ಸಂ.]

**ಸುವರ್ಣಕ** (ನಾ). ಒಂದು ಬಗೆಯ ಸಸ್ಯ; ಕಕ್ಕೆಗಿಡ: "ಕೃತಮೂಲಃ, ಸುವರ್ಣಕಃ– ಕಕ್ಕೇಗಿಡದ ಹೆಸರು, ಕಕ್ಕೇಕಾಯಿ" (ಸಿದ್ಧಾಂತಿ. ೧೧೭). [ಸಂ.]

**ಸುವರ್ಣಕಾರ** (ನಾ). ಚಿನ್ನದ ಕೆಲಸಮಾಡುವವನು ; ಅಕ್ಕಸಾಲೆ : "ನಾಡಿಂಧಮಃ, ಕಳಾಪಃ, ಸುವರ್ಣಕಾರಃ, ಮುಷ್ಟಿಕಃ – ಈ ೪ ಅಕ್ಕಸಾಲೆ" (ಪಲಾಯು. ೯೬-೪೩೪); ಸುವರ್ಣಕಾರ . . . ತೈಲಕಾರಾದಿ . . . ತಪಶ್ಚರಣಕ್ಕೆ ಅಯೋಗ್ಯಂ (ಪಸಾರ. ೧೦೦); ಸುವರ್ಣಕಾರರ ಕೌಶಲ್ಯವನ್ನು . . . ತಿಳಿಯಬಹುದು (ಭಾರದ. ೧೪). [ಸಂ.]

**ಸುವರ್ಣಕಾಲ** (ನಾ). (ಆಲಂ) ಒಳ್ಳೆಯ ಕಾಲ ; ಸಮೃದ್ಧಿಯ ಕಾಲ : ಇಂತಹ ಸುವರ್ಣಕಾಲದಲ್ಲಿ ಸಂಸ್ಕೃತಕವಿಗಳು . . . ಇಡಿಯ ದೇಶವನ್ನು ರಸಮಯವನ್ನಾಗಿ ಮಾಡಲು ಮೊದಲು ಮಾಡಿದರು (ಭಾರದ. ೪೪೫). 'ಸುವರ್ಣಯುಗ' ಪರಾ. [ಸಂ.]

**ಸುವರ್ಣಕ್ರೌಂಚ** (ನಾ). (ನೀರುಕೊಕ್ಕರೆಯ ಆಕಾರದಲ್ಲಿ ಮಾಡಲ್ಪಟ್ಟ) ಚಿನ್ನದ ಡಬ್ಬಿ; ಸುವರ್ಣಗಿಂಡಿ (?) : ಅನುರೂಪಂ ಸ್ಫಟಿಕಾಬ್ದದೊಳ್ದಧಿ ಸುವರ್ಣಕ್ರೌಂಚದೊಳ್ ರೋಚನಂ ಘನಹಾರೀತಕಹಂಸಿಯೊಳ್ ಹರಿತದೌರ್ವಂ . . . ಏಂ ಮೆಱೆದುದೋ ಮಾಂಗಲ್ಯಸಾಕಲ್ಯಮಂ (ಪಂರಾಮಾ. ೫-೧೨೫). [ಸಂ.]

**ಸುವರ್ಣಗಡ್ಡೆ, ಸುವರ್ಣಗೆಡ್ಡೆ** (ನಾ). ಒಂದು ಬಗೆಯ ಗಡ್ಡೆ : ಶುಂಠಿ ಕೂವೆ ಸುವರ್ಣಗಡ್ಡೆ ಮೊದಲಾದವು ಈ ವರ್ಗದವು (ಬಾಲಪ್ರ. I, ೩೭೦). **ಸುವರ್ಣಗೆಡ್ಡೆ:** ಸುವರ್ಣಗಡ್ಡೆ, ಚೂರ್ಣಗಡ್ಡೆ, ಸೂರ್ಯನ ದಂಟು (ವೃಔಗಿ. ೬-೧೦೧). [< ಸೂರಣ + ಗಡ್ಡೆ]

**ಸುವರ್ಣಗೆಡ್ಡೆ** 'ಸುವರ್ಣಗಡ್ಡೆ' ನೋ.

**ಸುವರ್ಣಚೂರ್ಣ** (ನಾ). ಚಿನ್ನದ ಬಣ್ಣದ ಪುಡಿ ; ಹಳದಿಚೂರ್ಣ : ಎಸಟ್ಗಳನೆಯ್ದೆ ಕಂಡರಿಸಿ ಮುತ್ತಿನೊಳಲ್ಲಿ ಸುವರ್ಣಚೂರ್ಣಮಂ ಪಸರಿಸಿ (ಆದಿಪು. ೧೧-೧೧೨). [ಸಂ.]

**ಸುವರ್ಣತ್ವ** (ನಾ). ೧. ಒಳ್ಳೆಯ ಸ್ವರದಿಂದ ಕೂಡಿರುವುದು; ಸುಸ್ವರ. ೨. ಒಳ್ಳೆಯ ಬಣ್ಣದಿಂದ ಕೂಡಿರುವುದು; ಚಿನ್ನ. ೧, ೨ : ಪರುಷದಂತಾ ವೇದದಳತೆಗೋಲಂತೆ ನಿರ್ಜರಧೇನುವಂತೆ ಪತಿಭಕ್ತಿಯಂತಮೃತಸಾಗರದಂತೆ ಮುಟ್ಟಲೊಡನಾ ಸುವರ್ಣತ್ವದಿಂ ಶ್ರುತಿಕಾಷ್ಠ ಜೀವಾಳದಿಂ . . . ದಂಡಿಗೆವಿಡಿದು ಜಾಣಗಾಣಂ ಪಾಡಿದಂ (ಭಾವಚಿಂ. ೭-೭). [ಸಂ.]

**ಸುವರ್ಣಪಟಿ** (ನಾ). ಜರತಾರಿ ಬಟ್ಟೆ : "ದಸರಿಗಬ್ಬುಳ ನೀಲಿಗಂಧ ಸಂಧ್ಯಾರಾಗ . . . ಸುವರ್ಣಪಟಿ ಮದವಿ ಮಂಜಿಷ್ಠೆ ದೇವಾಂಗವೆಂದು ಪಟಭೇದಮಕ್ಕುಂ" (ಮಂಗರಾ. ೧೦೧-೨೮). [ಸುವರ್ಣ + ಪಟ್ಟಿ]

**ಸುವರ್ಣಪಾಷಾಣ** (ನಾ). ಚಿನ್ನದ ಕಣಗಳನ್ನು ಒಳಗೊಂಡ ಖನಿಜದ್ರವ್ಯ: ಜೀವಾ ನೀಂ ಧಾತುವಾದೋಪಾಧ್ಯಾಯನ ಕೆಯ್ಸೊವಂದ ಸುವರ್ಣಪಾಷಾಣ ಮೆಂತು ಪಿಂಡೀಬದ್ಧ ದಹನತಾಪನಕ್ರಿಯೆಗಳಿಂ ಶುದ್ಧಲೋಹಮಕ್ಕುಂ (ಜೀವಸಂ. ೪-೬). [ಸಂ.]

**ಸುವರ್ಣಮಾಧ್ಯಮ** (ನಾ). (ಆಲಂ) ಉಭಯಪಕ್ಷಗಳು ಸ್ವೀಕರಿಸಲು ತಕ್ಕುದಾದ ಮಾರ್ಗ: ಭೋಗವನ್ನು ನಿರಾಕರಿಸದೆ ಯೋಗವನ್ನು ಸಾಧಿಸುವಂಥ ಒಂದು ಸುವರ್ಣಮಾಧ್ಯಮಕ್ಕೆ ಹಾರೈಸುತ್ತಿದ್ದ (ಪರಿಶೀ. ೧೩೮). [ಸಂ.]

**ಸುವರ್ಣಮುಖಿ** (ನಾ). ಒಂದು ಬಗೆಯ ಖನಿಜದ್ರವ್ಯ (?) : ಸುವರ್ಣಮುಖಿ ಹಿರಾಕಾಸ ಇವು ಗಂಧಕ ಕೂಡಿದ ಕಬ್ಬಿಣದ ರೂಪಾಂತರಗಳುಂಟು (ಮುಂಬಯಿ. ೬-೧೮). [ಸಂ. ಸುವರ್ಣಮುಖೀ]

**ಸುವರ್ಣಮೃಗ** (ನಾ). ಚಿನ್ನದಂತೆ ಹೊಳೆಯುವ ಜಿಂಕೆ : ಕಸ್ತೂರಿಮೃಗ . . . ಸುವರ್ಣಮೃಗ . . . ಸಾಧುಪವಿತ್ರಮೃಗಜಾತಿಗಳುಂ (ವಿವೇಕ. ೨೧೨). [ಸಂ.]

**ಸುವರ್ಣಯುಗ** (ನಾ). (ಆಲಂ) ಒಳ್ಳೆಯ ಕಾಲ; ಉಚ್ಛ್ರಾಯಕಾಲ: ಗುಪ್ತರ ಕಾಲದ ಸುವರ್ಣಯುಗದಲ್ಲಿ ಭಾರತೀಯಚಿತ್ರಕಲೆ ಅಜಂತೆಯಲ್ಲಿ ಅತ್ಯುಚ್ಛ್ರಾಯ ಸ್ಥಿತಿಗೇರಿತ್ತು (ಭಾರದ. ೫೨೨); ಈ ಕಾಲವನ್ನು ನೊಳಂಬರ ಇತಿಹಾಸದ ಧರ್ಮಯುಗ, ಸುವರ್ಣಯುಗವೆಂದೂ . . . ಹೇಳಬಹುದು (ನೊಳಂಬ. ೪೪). [ಸಂ.]

**ಸುವರ್ಣವರ್ಣ** (ನಾ). ೧. ಚಿನ್ನದ ಬಣ್ಣ; ಹಳದಿವರ್ಣ: ಪಕ್ವಶಾಳಿ ಕಣಿಶಾಳೀನವ್ರಮೊಪ್ಪಿರ್ದದೇಂ ಗೆಲೆವಂದತ್ತೊ ಸುವರ್ಣವರ್ಣದಿನಿಳಾಶ್ರೀಯುಟ್ಟ ಪೊಂಬಟ್ಟೆವೋಲ್ (ಜಗವಿ. ೨-೫). ೨. ಚಿನ್ನದ ಬಣ್ಣವುಳ್ಳವನು : ಸಲಕ್ಷ ಸಂವತ್ಸರ ಸಂಖ್ಯಾಪರಮಾಯುಷ್ಯನುಮುತ್ತಪ್ತ ಸುವರ್ಣವರ್ಣನುಂ . . . ಅಪ್ಪ ಶಾಂತೀಶ್ವರನಂ (ಶಾಂತಿಪು. ೧೨-೩೯ ವ). [ಸಂ.]

**ಸುವರ್ಣವ್ಯವಹಾರ** (ನಾ). ಚಿನ್ನದ ವ್ಯಾಪಾರ ಮಾಡುವವನು: ದಿವಸೇಂದ್ರಂ . . . ತೌಳಿಯೊಳಿರೆ ಗಮನಾಸಕ್ತಚಿತ್ತಂ ಸುವರ್ಣವ್ಯವಹಾರಂ (ಜಾತತಿ. ೧೭-೧೬). [ಸಂ.]

**ಸುವರ್ಣಶಾಖಿ** (ನಾ). ಒಂದು ಬಗೆಯ ಸಸ್ಯ : "ಭೂರಿಜಃ – ಸುವರ್ಣಶಾಖಿ" (ಓಷಧಿ. ೧೧೨). [?]

**ಸುವರ್ಣಾಂಬರ** (ನಾ). ಜರತಾರಿ ಬಟ್ಟೆ; ಪೀತಾಂಬರ: ಬಿಗಿದುಟ್ಟ ಸುವರ್ಣಾಂಬರದ ಸೆಱಂಗು ನಿಶಿತಮನೆ ಕೊಂಕಿದ ನಿಜಕಂಟಕದೊಳ್ ತೊಡರ್ದು (ಶಬಶಂ. ೩-೩೫ ವ). [ಸಂ.]

**ಸುವರ್ಣಾಂಬುಜ** (ನಾ). ಚಿನ್ನದ ಬಣ್ಣದ ಕಮಲ; ಹೊಂದಾವರೆ: ಅಂಬರಮದಮರೆ ನಾಂದು ನಿರಂಬರೆಯಂತಿರ್ದ ಯುವತಿಗಿತ್ತಪಳೆನೆ ಪೀತಾಂಬರಮಂ ಸರಸಿ ಸುವರ್ಣಾಂಬುಜರಜಮಲರ ಪೊಯ್ಲುಳಿಂ ನೆಗೆದೆಸೆಗುಂ (ರಾಜಶೇ. ೧೦-೧೦೩). [ಸಂ.]

**ಸುವರ್ಣಾಕ್ಷರ** (ನಾ). (ಆಲಂ) ವಿಶೇಷಸಂದರ್ಭದಲ್ಲಿ, ವಿಶೇಷ ಘಟನೆ ಅಥವಾ ಸಾಧನೆಗಳನ್ನು ದಾಖಲಿಸುವ ಬರಹವನ್ನುಳ್ಳ ಲಿಪಿ : ಎಂತಹ ಸುವರ್ಣಾಕ್ಷರದ ಬರಹ – ಅದು ! (ವೀರಯೋ. ೯೫). [ಸಂ.]

**ಸುವರ್ಣಾದಾಯ** (ನಾ). ಚಿನ್ನದ ರೂಪದಲ್ಲಿ ಬರುವ ಆದಾಯ : ಸಕಲ ಸುಂಕ ಸುವರ್ಣ್ನಾದಾಯ ಬೆಟ್ಟು ನೀಡುವಡಕೆರೆ ಕಟ್ಟೆ ಕಾಲುವೆ (ಎಕ. III, ಮಳವ. ೯೫-೨೫; 1506); ಅಡು ಮಗ್ಗ ಮನೆವಣ ಸುವರ್ಣ್ನಾದಾಯ ಕಾಡಾರಂಭ (ಮೈಆರಿ. ೧೯೪೬, ೨೯-೧೦; 1530). [ಸಂ.]

**ಸುವರ್ಣೋತ್ಸವ** (ನಾ). ಐವತ್ತು ವರ್ಷಗಳಿಗೆ ಮಾಡುವ ಉತ್ಸವ; ಐವತ್ತನೆಯ ವಾರ್ಷಿಕೋತ್ಸವಸಮಾರಂಭ ; ಚಿನ್ನದ ಹಬ್ಬ : ಸುವರ್ಣೋತ್ಸವ . . . ಮುಂತಾದ ಸ್ಮಾರಕಗಳನ್ನಾಚರಿಸುವುದು (ಶಿಕ್ಷದ. ೩೨೦). [ಸಂ.]

**ಸುವರ್ತಕ** (ನಾ). ಪ್ರಪಂಚವನ್ನು ನಾಶಪಡಿಸುವ ಒಂದು ಬಗೆಯ ಮೋಡಗಳ ವರ್ಗ, — ಗುಂಪು: ದ್ರೋಣ ಮಹಾದ್ರೋಣ ಪುಷ್ಕಳಾವರ್ತ ಸುವರ್ತಕಂಗಳೆಂಬ ಮುಗಿಲ್ಗಳಂ ಬೆಸಸಿದಾಗಳ್ (ಪಂಪಭಾ. ೫-೯೫ ವ).

[IP ಇದು 'ಸಂವರ್ತಕ' ಎಂಬುದರ ಅಪಲಿಖಿತವಿರಬಹುದು]

**ಸುವರ್ನಾದಾಯ** (ನಾ). = ಸುವರ್ಣಾದಾಯ: ಅಡುಮನೆ ಕಳ ಕೊಟಾರ ಸುವರ್ನಾದಾಯ ಅಡ್ಡದೆರಿಗೆ ಚೌದೆರಿಗೆ (ಎಕ. III (R). ಗುಂಡ್ಲುಪೇ. ೭೫-೧೦; 1576).

[IP ಇದು 'ಸುವರ್ಣಾದಾಯ' ಎಂಬುದರ ಅಪಲಿಖಿತ]

**ಸುವರ್ಲೋಕ** (ನಾ). ಮೇಲಿನ ಏಳು ಲೋಕಗಳಲ್ಲಿ ಒಂದು: ಪಾತಾಳದಿಂ ಕೆಳಗೆ ಪಾದ ಸುವರ್ಲೋಕದಿಂ ಮೇಲೆ ಉತ್ತಮಾಂಗ (ಆದಪ. ೧-೩). [ಸಂ.]

**ಸುವಲ್ಲಿ** (ನಾ). ಒಂದು ಬಗೆಯ ಸಸ್ಯ; ಬಾಹುಜಿಗೆ: "ಅವಲ್ಗುಜಃ, ಸೋಮರಾಜೀ, ಸುವಲ್ಲೀ . . . ಬಾಹುಜಿಗೆಯ ಪೆಸರುಗಳು" (ಸಿದ್ಧಾಂತಿ. ೧೩೩). [ಸಂ. ಸುವಲ್ಲೀ]

**ಸುವಸ್ತು** (ನಾ). ಒಳ್ಳೆಯ ವಸ್ತು; ಉತ್ತಮ ವಸ್ತು: ಕೊಟಿಚಾಡೆಲ್ಲರ ಮುಂದೆ ರಚ್ಚೆಗಳೆಯುತ್ತಂ ಕಿತ್ತು ಮೆಯ್ಕಲ್ಲವಂ ಹರಿತಿಂದುಳ್ಳ ಸುವಸ್ತುವಂ . . . ಇರುವಳ್ ತಾಂ ನೆಟೆ ಸೂಳೆಯ್ಕೆ (ಸೋಮೇಶ. ೭೩); ಬರುತಮಿರ್ದುವು ದೇಶದೇಶದ ಸುವಸ್ತುಗಳು (ನಂಬಿರ. ೫-೧೭); ಜನಿಯಿಸುವಟ್ಟಿಗಲ್ಲದ ಸುವಸ್ತುಗಳಿಲ್ಲ (ಪುಷ್ಪಪು. ೩-೭೧). [ಸಂ.]

**ಸುವಹೆ** (ನಾ). ಕರೀಲಕ್ಕಿಲಿ, ಮುಂಗಿಮೇವು, ಹಂಸಪಾದಿ, ಆನೆಬೇಲ ಮತ್ತು ರಾಶ್ಮೆ ಮುಂತಾದ ಗಿಡಗಳ ಹೆಸರು: "ಶೇಫಾಲಿಕಾ, ಸುವಹಾ . . . ಕರೀಲಕ್ಕಿಲಿ" (ಸಿದ್ಧಾಂತಿ. ೧೨೮); "ಛತ್ರಾಕೀ, ಸುವಹಾ . . . ಹಾವುಕಣ್ಣಿನ ಗಿಡ, ನಂಜಾರೇಗಿಡ, ಮುಂಗಿಮೇವುಗಿಡ" (ಸಿದ್ಧಾಂತಿ. ೧೩೮); "ಗೋಧಾಪದೀ, ಸುವಹಾ — ೨ ಹಂಸಪಾದೀ ಗಿಡದ ಹೆಸರುಗಳು" (ಸಿದ್ಧಾಂತಿ. ೧೩೯); "ಗಜಭಕ್ಷ್ಯಾ, ಸುವಹಾ . . . ತದುಕಿನ ಗಿಡದ ಹೆಸರು, ಆನೇಬ್ಯಾಲ" (ಸಿದ್ಧಾಂತಿ. ೧೪೦); "ಏಲಾಪರ್ಣೀ, ಸುವಹಾ . . .೪ ಸಣ್ಣದುಂಪರಾಸ್ಮೆ, ರಾಶ್ಮೆ" (ಸಿದ್ಧಾಂತಿ. ೧೪೪). [ಸಂ. ಸುವಹಾ]

**ಸುವಾಂಛಿತ** (ನಾ). ಒಳ್ಳೆಯ ಆಸೆ ; ಉತ್ತಮವಾದ ಬಯಕೆ : ತ್ರಿಜಗಮಂ ಕಾವನ ಸುವಾಂಛಿತವನೀವನ ಹಿಮಾಂಶುಧರನ . . . ಭಜಿಸಿದಳಗಜೆ (ಜೈಮಿಭಾ. ೧೫-೭೩). [ಸಂ.]

**ಸುವಾಡ** (ನಾ). (?) : ಸಂಜಯಂ ರಣದಿ ಮುರಿದೋಡಿದಂ ನೃಪನನರಸುತಿರಲ್ ಸಾತ್ಯಕಿ ಸುವಾಡವನ್ನರಿತು ಕಡುವೇಗದೋಳ್ ಸಂಜಯನ ಪಿಡಿದನು (ತುರಂಗ. ೭೩-೮೪೪). "ಒಳ್ಳೆಯ ನೆಲ" (ತುರಂಗ. ಕೋಶ). [?]

**ಸುವಾರ, ಸುವ್ವಾರ, ಸೂವಾರ** (ನಾ). ಅಡುಗೆಯವನು; ಬಾಣಸಿಗ: ಬಳಿಕವನಟ್ಟ ಕೈಕರಣದ ಸುವಾರದ ವಿದ್ಯವೇನರಿದೊ ಕೊಟ್ಟರೀತಂಗೆಲ್ಲವನು (ಸುಪ್ಪಾಅ. ೬-೧೪); ಕೊರಳಂ ಕೊಯಿದಲ್ಲಿ ರಕ್ತಮಾಂಸವನಟ್ಟು ನರಪತಿಗಿಕ್ಕೆ ಸುವಾರರು (ನನ್ನಚಾ. ೫-೨೨). **ಸುವ್ವಾರ**: ಎಂದಿನಂದದೊಳು ಸಂಪೂರ್ಣಭೋಜನವಡೆಯ ದಂದಮಂ ಸುವ್ವಾರರೊಳ್ಪೇಳ್ವುದಂ (ಸಮ್ಯಕೌ. ೪-೧೨). **ಸೂವಾರ** : ಗಂಗೆಯ ತಡಿಯಲ್ಲಿ ತನಗೇಕಭುಕ್ತಿಗನ್ನಂಗ್ಯೆಯೆ ಸೂವಾರಗೊರೆದು ಜಂಗುಳಿ ಪರಿಸೆಯ ತೃಪ್ತಿಗುಜ್ಜುಗಿಸೆಂದು ಹಿಂಗಿಸಿದನು ಗೃಹಪತಿಯ (ಭರಚ. ೭೩-೨೭).

[< ಸಂ. ಸೂಪಕಾರ ./ ಪ್ರಾ. ಸೂವ./ ಮರಾ. ಸುವಾರ್ ]

**ಸುವಾರಾಹಿ** (ನಾ). ಸಪ್ತಮಾತೃಕೆಯರಲ್ಲಿ ಒಬ್ಬಳು: "ಬ್ರಾಹ್ಮಿ ಮಾಹೇಶ್ವರಿ ಕೌಮಾರಿ ವೈಷ್ಣವಿ ಸುವಾರಾಹಿ ಮಾಹೇಂದ್ರಿ ಚಾಮುಂಡಿಯೆನೆ ಸಪ್ತಮಾತೃಕೆಯರು" (ಮಂಗರಾ. ೫-೧೪). [ಸಂ. ಸುವಾರಾಹೀ]

**ಸುವಾರಿ** (ನಾ). ನಿರ್ಮಲವಾದ ನೀರು: ನೂತನ ಸುವಾರಿಗಳ ನಡೆಗುಡದ ದಾರಿಗಳ ಭೂತಳದ ಸಿರಿ ಮೆಱೆಯೆ . . . ವರ್ಷರ್ತು ಚೆಲ್ವಾದುದು (ಜೈಮಿಭಾ. ೧೭-೪). [ಸಂ.]

**ಸುವಾರ್ತೆ** (ನಾ). ೧. ಒಳ್ಳೆಯ ಸುದ್ದಿ; ಶುಭಸಮಾಚಾರ. ೨. (ಕ್ರಿಸ್ತನು ಉಪದೇಶಿಸಿದ) ಸಂದೇಶ: ಪುರೋಹಿತ ಸಂತ ಮಾರ್ಕನ ಸುವಾರ್ತೆಗಳನ್ನು ಸುಸ್ಪಷ್ಟವಾಗಿ ವಾಚಿಸಿದನು (ಪುನರು. ೧೭೬). [ಸಂ. ಸುವಾರ್ತಾ]

**ಸುವಾಲಿ** 'ಸುವ್ವಲಾಲೆ' ನೋ.

**ಸುವಾಸನೆ** (ನಾ). ಸುಗಂಧ; ಪರಿಮಳ: ಉಮಾಪತಿಯ ಮುಂದೆಸೆಯೊಳುದಿತ ವ್ಯಾಪಿತಾಂತರ್ಗತಸುವಾಸನೆ ರಂಜಿಸುತ್ತಿರಲು (ಬಸವು. ೩೩-೭). [ಸಂ. ಸುವಾಸನಾ]

**ಸುವಾಸಿತ** (ಗು). ೧. ಒಳ್ಳೆಯ ವಾಸನೆಯಿಂದ ಕೂಡಿದ; ಪರಿಮಳ ಯುಕ್ತವಾದ. ೨. ಸುಗಂಧದಂತೆ ವ್ಯಾಪ್ತವಾದ, — ಹರಡಿದ: ಸಕಲ ಸುರಾಸುರಗಣಂಗಳರ್ತಿ ದೇಶವಿದೇಶಸುವಾಸಿತಕೀರ್ತಿ (ಗಣೇಶ. ೨-೪೭). (ನಾ). ೩. (ಆಲಂ) ಹಿತವಾದುದು: ಫಾಲ್ಗುಣದ ಸುವಾಸಿತವಾದ ಬಿಸಿಲು ದಿನದಲ್ಲಿ ಅರಣ್ಯಮಧ್ಯದ ದಾರಿಯಲ್ಲಿ ಅವನು ಬರುತಲಿರುವನು (ಧರ್ಮಸಾ. ೮೪). [ಸಂ.]

**ಸುವಾಸಿನಿ** (ನಾ). ೧. ಗೌರವಸ್ಥ ಮನೆಯ ಹೆಣ್ಣು; ಕುಲೀನೆ. ೨. ತಂದೆಯ ಮನೆಯಲ್ಲಿಯೇ ವಾಸವಾಗಿರುವ ಮದುವೆಯಾಗದ ಅಥವಾ ಮದುವೆ ಯಾದ ಹೆಣ್ಣು. ೩. ಕನ್ಯೆ: "ಕಿಂಚಿತ್ಪ್ರೌಢಾ, ಸುವಾಸಿನೀ – ಈ ೨ ಸೋವಾಸಿಣಿ" (ಹಲಾಯು. ೭೯-೩೯). ೪. ಮುತ್ತೈದೆ; ಸುಮಂಗಲಿ: ಕಲಶಕನ್ನಡಿ ಕರಿ ತುರಗ ಗೋಕುಲ ವೃಷಭ ಬುಧನಿಚಯ ಗಿರಿಸಂಕುಳ ಸುವಾಸಿನಿ (ಕುವ್ಯಾಉ. ೩-೧೦೮); ರತಿಯ ಸುವಾಸಿನಿಕಾಂತೆಯರುಮರಿಸಿನಸುಗಂಧಪುಷ್ಪಂಗಳಿಂದಲಂಕರಿಸುತ್ತಿರಲು (ನವಮೋ. ೧೩-೫೧); ತಿಂಗಳಲ್ಲಿ ಒಂದೆರಡು ಬಾರಿಯಾದರೂ ಸುವಾಸಿನಿಯರನ್ನು ಮನೆಗೆ ಬರಮಾಡಿಕೊಂಡು ಉಡಿತುಂಬಿ ಕಳಿಸುತ್ತಿದ್ದಳು (ರಂಗರೂ. ೭೧). ೫. ಹೆಂಡತಿ; ಪತ್ನಿ: ರಾಮನ ಸುವಾಸಿನಿಯನೊರ್ಕಯ್ಯೊಳವುಂಚಿಟ್ಟು ಘೋರವಿಷವಜ್ರಾಸಿಯಂ ಕೊಂಡು ಖೇಚರಂ ಪಾಯ್ದನ್ (ಶ್ರೀರಾಮಾ. ೨೪೯-೫೭೩). [ಸಂ. ಸುವಾಸಿನೀ]

**ಸುವಿಚಾರ** (ನಾ). ಒಳ್ಳೆಯ ಯೋಚನೆ; ಯೋಗ್ಯವಾದ ವಿಚಾರ: ಸುವಿಚಾರಂ ತನಗಾಗಲೀ ನುಡಿಯುಮಂ ಸಿಂಧೂದ್ಭವಂಗಟ್ಟಿ ಪಾಂಡುವೊಳಾಳೋಚಿಸೆ ತನ್ನೃಪಂ ಕುಡುವೊಡೆ (ಮಹಾನೇ. ೩-೧೩೧); ನೇರಿತಹ ಶರಣ ಸಂಚಾರಮಾರ್ಗದೊಳು ಸುವಿಚಾರ ದಿಂದಡಿಯನಿಡದೆ ತಲೆಯೊಳು ನಡೆದಾ ಕಾರಿಕಾಲಮ್ಮ ಶರಣಾಗು (ಅಜುತ್ರಿ. ೭೨). [ಸಂ.]

**ಸುವಿಚಾರಿತ** (ನಾ). ಚೆನ್ನಾಗಿ ವಿಮರ್ಶೆಗೊಂಡುದು, — ಪರಿಶೀಲನೆ ಗೊಂಡುದು: ಇವು ದುಷ್ಕರಕಾವ್ಯಂಗಳ್ ಸವಿಶೇಷವಿವರ್ತಿಗಳ್ ಸುವಿಚಾರಿತಮಿಾ ತೋರ್ಪೆ[ನಿ]ವಱ ಲಕ್ಷ್ಯಭೇದಮಂ (ಕವಿರಾ. ೨-೧೧೩). [ಸಂ.]

**ಸುವಿತರಣ** (ನಾ). ಒಳ್ಳೆಯ ಉದಾರತೆ; ಪರಮೌದಾರ್ಯ: ಪರಮ ಮಹಿಮಾನಿದ್ರನಂ ಸುವಿತರಣಗುಣಮಣಿಗಣಸಮುದ್ರನನರಿದನತಿಬಲ ವೀರಭದ್ರ ನನಾದಿರುದ್ರನನು (ಭಸಪು. ೫-೪೭). [ಸ್ಥೂ.]

**ಸುವಿದಾನ** 'ಸುಯಿದಾನ' ನೋ.

**ಸುವಿದಾನಿ** 'ಸುಯಿದಾನಿ' ನೋ.

**ಸುವಿದಿತ** (ಗು). ಚೆನ್ನಾಗಿ ತಿಳಿದ, — ಮನವರಿಕೆಯಾದ: ಸುವಿದಿತಯತಿಭಂಗಂ ಭಿನ್ನವೃತ್ತಮೆಂದಿಂತು ವಾಕ್ಯದೋಷಮಿವಕ್ಕುಂ (ಕಾವ್ಯಾವ. ೪೫೫). [ಸಂ.]

**ಸುವಿಧಾನ** (ನಾ). ಅಚ್ಚುಕಟ್ಟು; ಸುವ್ಯವಸ್ಥೆ: ನಾಳೆ ನೇಸರ್ಮೂಡದ ಮುನ್ನಮೆ ವಿಷಾಪಹಾರಂ ಮಾಡಿದಪ್ಪೆನಿಂದಿನೊಂದು ರಾತ್ರಿಯುಮಂ ಪರೇತವನ ಸ್ಥಾನದಿಂ ತೊಲಗಲೀಯದೆ ಕಾಪಂ ಸುವಿಧಾನಮಾಗೆ ಮಾಡಿಂ (ಸುಕುಮಾ. ೭-೮ ವ). [ಸಂ.]

**ಸುವಿಧಾನಿ** 'ಸುಯಿದಾನಿ' ನೋ.

**ಸುವಿಭಕ್ತಿ** (ನಾ). ವಿಭಕ್ತಿಪ್ರತ್ಯಯಗಳ ಒಳ್ಳೆಯ ಸಮುಚಿತಪ್ರಯೋಗ: ವರರುಚಿಯ ಜಾಣ್ಮೆ ಗೋಪಾಲಿಕನ ಬೆಡಗು ಭಾಗುರಿಯ ಗೂಢತೆ ಧನಂಜಯನ ಪರ್ಯಾಯ ಮುರಹರಿಯ ಸುವಿಭಕ್ತಿ ವಿಶ್ವಪ್ರಕಾಶನ ಚದುರು ನಾಗವರ್ಮನ ಕನ್ನಡಂ (ಮಂಗರಾ. ೨-೪). [ಸಂ.]

**ಸುವಿಸಿ** (ನಾ). ಒಳ್ಳೆಯ ಬಿಸಿ., — ಶಾಖ: ವಡ್ಡಿ ಕಿರುವಲ್ಲೆಯಂ ವಡ್ಡಗಜವನಿಡಿಗಿಡ್ಡ ಪ್ರಮಾಣದಿಂ ಪಚನಿಸಿ ಕಡಗಿ ಜವದಿ ರುಡ್ಡಿನ ಸುವಿಸಿಯಿಂದ ಬಡಿಸಿ ಘೃತಮಂ ನೀಡೆ ಲಡ್ಡುಗೆಯನರ್ಪಿಸುವುದು (ಲಿಂಗಪು. ೮-೧೩). [ಸು$_4$ - + ಬಿಸಿ]

**ಸುವೃತ್ತ** (ನಾ). ೧. ಉತ್ತಮವಾದ ವೃತ್ತ: "ಸುವೃತ್ತ = ಅತಿ ವರ್ತುಲ" (ನಾಸಾರ. ೬೧ ಟೀಕು). ೨. ಒಳ್ಳೆಯ ನಡತೆ.

**ಸುವೃತ್ತರ್** (ಬಹುವ) = ೧. ಒಳ್ಳೆಯ ನಡತೆಯುಳ್ಳವರು. ೨. ಚೆನ್ನಾಗಿ ದುಂಡಾಗಿರುವ ಮೊಲೆಯುಳ್ಳವರು. ೧, ೨: ಹರನುರಿಗಣ್ ಸುಡೆ ಮಱೆ ವೊಕ್ಕರಲಂಬನ ಬಿಸುಪುಗಳೆದು ಪೊರೆದುದು ತರುಣೀಗುರುಕುಚಮಿದು ಚಳಿಗಳೆದುದು ವರಂಗೆ ಮಱೆವುಗೆ ಸುವೃತ್ತರೇಗೆಯ್ಯರೊ ಪೇಳ್ (ರಾಜಶೇ. ೯-೧೪). [ಸಂ.]

**ಸುವೃತ್ತಪ್ರಸ್ತಾರ** (ನಾ). (?) : ನಿಮ್ನನಾಭಿಯುಂ ಹ್ರಸ್ವಚೂಚುಕನುಂ ಸುವೃತ್ತ ಪ್ರಸ್ತಾರನುಂ . . . ಅಪ್ಪ ವಿಜಯಪರ್ವತಗಜೇಂದ್ರಂ ಬಂದು ಮುಂದೆ ನಿಲ್ಕುದುಂ (ಆದಿಪು. ೧೨-೫೬ ವ). [ಸಂ.]

**ಸುವೃಷ್ಟಿ** (ನಾ). ಒಳ್ಳೆಯ ಮಳೆ: ಸುವೃಷ್ಟಿ ಸೊಂಪಚ್ಚರಿಯಾಗೆ (ಪುಷ್ಪಪು. ೧-೫೦); ಪರಿಪರಿಯ ಯಜ್ಞವನು ವಿರಚಿಸಿ ಸುರಪತಿಯ ಸಂತುಷ್ಟಿಬಡಿಸಲು ಸುರಿವನವ ಸಂಪೂರ್ಣವಾಗಿ ಸುವೃಷ್ಟಿಯನು ಜಗಕೆ (ಕುಮ್ಮಾಉ. ೪-೬೦). [ಸಂ.]

**ಸುವೆ** 'ಸುಬೆ' ನೋ.

**ಸುವೇದಿಸು** (ಕ್ರಿ). ಚೆನ್ನಾಗಿ ತಿಳಿಯುವಂತಾಗು: ಮೂದಲಿಸಲುಂ ಪ್ರಾಣವಂಚಕ ನಾದವಂಗಂ ಲಿಂಗಭಕ್ತಿ ಸುವೇದಿ[ಪಾಠಾಂ. ಧಿ]ಸದು ಧನವಂಚಕಂಗೆ ಸುಸಾಧ್ಯವಾಗದದು (ಬಸವಪು. ೩೯-೧೯). [ಸು₄ - + ವೇದಿಸು]

**ಸುವ್ಯಕ್ತ** (ನಾ). ೧. ಚೆನ್ನಾಗಿ ತಿಳಿಯಲ್ಪಡುವುದು ,— ವ್ಯಕ್ತವಾಗುವುದು: ಗುಡ್ಡವ್ವೆಯ ವಿನಿರ್ಮಳಭಕ್ತಿ ಸರ್ವಜನಂಗಳೊಳು ಸುವ್ಯಕ್ತವಾಯಿತು (ಬಸವಪು. ೫೭-೬೬). ೨. ಪ್ರತ್ಯಕ್ಷವಾಗಿ ಗೋಚರಿಸುವವನು: ದನುಜರಿಪು ಸುವ್ಯಕ್ತನವ್ಯಕ್ತನನು ಸದಸದ್ರೂಪನವ್ಯಯನೆನಿಪ ವಿಷ್ಣುವ ನೆನೆದು ವಿಸ್ತರಿಸಿದನು ಕಥೆಯ (ಕುಮ್ಮಾಆ. ೨-೧೦). [ಸಂ.]

**ಸುವ್ಯವಸ್ಥಿತ** (ಗು). ೧. ಚೆನ್ನಾಗಿ ವ್ಯವಸ್ಥೆಯಾದ ,— ಏರ್ಪಾಡಾದ . (ನಾ). ೨. ಚೆನ್ನಾಗಿ ವ್ಯವಸ್ಥೆಗೊಂಡುದು ,— ವ್ಯವಸ್ಥಿತವಾದುದು: ಚಿತ್ರಕಲಾ ಪ್ರದರ್ಶನವು ಸುವ್ಯವಸ್ಥಿತವಾಗಿ ಪ್ರದರ್ಶಿಸಲ್ಪಟ್ಟಿತು (ರೂಢಿ). [ಸಂ.]

**ಸುವ್ಯವಸ್ಥೆ** (ನಾ). ಒಳ್ಳೆಯ ಏರ್ಪಾಟು; ಉತ್ತಮವಾದ ವ್ಯವಸ್ಥೆ: ವ್ಯವಸ್ಥಿತವಾಗಿ ಅಡುಗೆ ಮಾಡಿದರಷ್ಟೆ ಸಾಲದು, ಅದನ್ನು ಬಡಿಸುವುದರಲ್ಲೂ ಸುವ್ಯವಸ್ಥೆಯಿರಬೇಕು (ಅಡುಶಾ. ೧೧೯). [ಸಂ. ಸುವ್ಯವಸ್ಥಾ]

**ಸುವ್ರತ** (ನಾ). ೧. ಧಾರ್ಮಿಕವಿಧಿಯನ್ನು ಸರಿಯಾದ ರೀತಿಯಲ್ಲಿ ಆಚರಿಸುವುದು. ೨. ಒಳ್ಳೆಯ ವಿಧಿ ; ಉತ್ತಮವಾದ ನೇಮ . ೩. ಧಾರ್ಮಿಕ ವಿಧಿಯನ್ನು ಸರಿಯಾದ ರೀತಿಯಲ್ಲಿ ಆಚರಿಸುವವನು; ನೇಮಸ್ಥ. ೪. [ಜೈನ] ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಇಪ್ಪತ್ತನೆಯ ತೀರ್ಥಂಕರನ ಹೆಸರು. ೨, ೪ : ವದನಂ ಚಂದ್ರಪ್ರಭಂ ವಿಕ್ರಮಭುಜನುಜಿತಂ ಪಾಣಿ ಪದ್ಮಪ್ರಭಂ . . . ಮತಿ ಪುರುಚರಿತಂ ಶೀತಲಂ ಸುವ್ರತಂ ತಾನದಱಿಂ ಪ್ರತ್ಯಕ್ಷತೀರ್ಥೇಶ್ವರನೆನೆ ನೆಗೞ್ದಂ ಪದ್ಮನಾಭಪ್ರಧಾನಂ (ಅರ್ಧನೇ. ೧-೪೩); ಪುರುದೇವಾದಿಗಳೊಲಿಸಿದ ಪರಮ ಶ್ರೀವಧುವನೊಲಿಸಿಯುಂ ಪರವನಿತಾನಿರಪೇಕ್ಷಕನೆನಿಸಿದ ದೇವರ ದೇವಂ ಕುಡುಗೆ ಸುವ್ರತಂ ಸುವ್ರತಮಂ (ಯಶೋಚ. ೧-೧). [ಸಂ.]

**ಸುವ್ರತೆ** (ನಾ). ೧. ನೇಮವನ್ನು ನಿಷ್ಠೆಯಿಂದ ಆಚರಿಸುವವಳು. ೨. ಸಲೀಸಾಗಿ ಹಾಲು ಕೊಡುವ ಹಸು: "ಸುವ್ರತಾ, ಸುಖಸಂದೋಹ್ಯಾ — ೨ ಸುಲಭವಾಗಿ ಹಾಲು ಕರಿಯಲೀಸುವ ಆಕಳು, ಕಾಡದೇ ಕರಿಯುವ ಹಸುವು" (ಸಿದ್ಧಾಂತಿ. ೨೯೫). ೩. [ಜೈನ] ಜಿನನ ತಾಯಿಯ ಹೆಸರು. ೨, ೩ : ಶ್ರೀಮದ್ಧ್ಯಯಾಮೂಲಧರ್ಮದವೊಲ್ ವಿಶ್ರುತ ಸುವ್ರತಾಚರಿತಮೇಂ ಚೆಲ್ವಾಯ್ತೊ ಗವ್ಯಾಶ್ರಯಂ (ಲೀಲಾವ. ೫-೧೦೩). [ಸಂ. ಸುವ್ರತಾ]

**ಸುವ್ವಲಾಲೆ** , **ಸುವಾಲಿ** , **ಸುವ್ವಲೆ** , **ಸುವ್ವಾಲೆ** (ನಾ). ೧. ಶುಭಕಾರ್ಯಗಳಲ್ಲಿ ಹೆಂಗಸರು ಒಟ್ಟಿಗೆ ಹಾಡುವ ಹಾಡು; ಸೋಬಾನೆ: ಅವ್ವ ನೀವೇನನಾಡಿರಿ ಚಕ್ರವರ್ತಿಯ ಸುವ್ವಲಾಲಯನಾಡಿಸುವರು (ಭರಚ. ೫-೧೫). **ಸುವಾಲಿ**: ೨. ಒಂದು ಬಗೆಯ ಪದ,— ಹಾಡು: 'ತತ್ತ್ವಸುವಾಲಿ' ಪರಾ. **ಸುವ್ವಲೆ**: ೨. ಮೇಹುಗಾಡಿನೊಳವರ ಮೈ ಮಿಗೆ ಸೋಹಿದರೆ ಸುವ್ವಲೆಯ ಸುಬ್ಬಲೆಯಾಹವದಲೇ ತೋಳ ತೆಕ್ಕೆಯ ತೋಟಿ ತೇಗುವೊಡೆ (ಕುಮ್ಮಾಆ.೧೩-೧೭). **ಸುವ್ವಾಲೆ**: ೨. ವಾದಿರಾಜನಾಳ್ವ ಹಯವದನ ತಾನೆ ಪೇಳ್ದ ಜಗ ಬಿರುದಿನ ಸುವ್ವಾಲೆಯ ಪದವಿದು (ವಾದಿಕೀ. ೧೫೩-೩೫). ೩. [ಸಂಗೀತ] ಒಂದು ರಾಗದ ಹೆಸರು: ಶ್ರೀರಾಗ ಸಾಳಂಗ ಭೂಪಾಳಿ ಕಾಂಬೋಧಿ ಭೈರವಿದ್ವಯ ದೇಶಿ ಕಲ್ಯಾಣಿ ಸುವ್ವಾಲೆ ಮಾಧವಿ ಶ್ರೀ ಶಂಕರಾಭರಣ . . . ಬತ್ತೀಸರಾಗಮಂ ಪಾಡುತ್ತಲೊಪ್ಪಿದರ್ಗಾಯಕಜನಂ (ಸಿದ್ಧಕಾ. ೩-೫). [<— ತೆಲು. ಸುವಾಲ, ಸುವ್ವಾಲ, ಸುವ್ವಾಲು]

**ಸುವ್ವಲೆ** 'ಸುವ್ವಲಾಲೆ' ನೋ.

**ಸುವ್ವಳಿಸು** (ಕ್ರಿ). ಶಬ್ದಮಾಡು; ಕೂಗು(?) : ತೇರು ಶೃಂಗಾರವಾಗಿ ಬಾಗಿಲಿಗೆ ಬಂದಿದೆ ತಾಯಿ ನಿಮ ಪಯಣ ಕಳುವ(ಲಿ)ಬೇಕೆನುತಲೆ ಕಾಳಿ ಸುವ್ವಳಿಸಿ ಹಿಡಿದವೆ (ನಾಪದ. ೨೦೦). [? + - ಇಸು₃]

**ಸುವ್ವಾರ** 'ಸುವಾರ' ನೋ.

**ಸುವ್ವಾರಿ** (ನಾ). ಅಡುಗೆ ಮಾಡುವವಳು; ಬೋನಗಿತ್ತಿ: ಕೆತ್ತಿದ ರತ್ನಾಭರಣ ಭೂಷಿತ ಬೋನಗಿತ್ತಿಯರ್ಸುವ್ವಾರಿಗಳಿಗೆ ಅತ್ಯಧಿಕಾರದಿ ನೀನಿರ್ಪುದೆಂದು ಕೈವರ್ತಿಸಿ ಕೊಟ್ಟಳಾಯಕಗೆ (ಮೋಹತ. ೧೧-೪೨); ತದುಕಿಲ ಸುಂಡೆ . . . ಗುಳ್ಳ ತಿಂತ್ರಿಣಿಯುಪ್ಪು ಗಾಯಿಗಳೆಲ್ಲ ಸುವ್ವಾರಿಯರು ಬಡಿಸಿದರು (ಆನಂರಾ. ೬-೨೫-೩೪). [ಸುವ್ವಾರ (< ಸುವಾರ) + - ಇ₃]

**ಸುವ್ವಾಲೆ** 'ಸುವ್ವಲಾಲೆ' ನೋ.

**ಸುವ್ವಿ** (ನಾ). (ಕುಟ್ಟುವಾಗ, ಕೇರುವಾಗ ಮುಂತಾದ) ಸಂದರ್ಭಗಳಲ್ಲಿ ಹಾಡುವಾಗ ಬಳಸುವ ಹಾಡಿನ ಒಂದು ಸೊಲ್ಲು: ಚಂದನದೊರಳಲ್ಲಿ ಪೊಯ್ಯು ಬಿದಿರಕ್ಕಿಯನುನ್ಮದದಂತಿದಂತದೊಂದೊನಕೆಯನೆತ್ತಿ ಸುಣ್ಣನಿಯ ಸುವ್ವಿಯ ಗಾವರದೊಳ್ ತೊಡರ್ಚಿದೋಪನಿಗೆ ಪುಳಿಂದಿ ಪಾಡಿದಳ್ (ಲೀಲಾವ. ೮-೩೦); ಒರಲ್ಗಳೊಳಂ ಬಿದಿರಕ್ಕಿಯಿಕ್ಕಿ ನಿಚ್ಚಳಮನ ಸುವ್ವಿ ಕಾಡೊಡೆಯ ಸುವ್ವಿ ಮನೋಹರ ಸುವ್ವಿ ಸುವ್ವಿಯಂದಳವಡೆ ರಾಗದಿಂ ತಳಿಸಿದರ್ ವನದಲ್ಲಿ ಪುಳಿಂದಕಾಂತೆಯರ್ (ಗಿರಿಕ. ೧-೧೨೩); ಸುವ್ವಿ ಅಂದರೆ ತಿಳೀದೇ ಒನಕೇರಾಗ (ಗಾದೆ). 'ಸುವ್ವಾಲೆ' ಪರಾ. [<— ತೆಲು. ಸುವ್ವಿ]

**ಸುವ್ವಿಗೆಯ್** (ಕ್ರಿ). ಹಾಡು; ಪದಹೇಳು: ನನ್ನ ಭಾವನೆಯ ಕುಸುಮಗಳ ಮುದ್ದಿಟ್ಟೆ ಮೂಸಿ ಸುವ್ವಿಗೆಯ್ಯುತಲಿದ್ದೆನಾಗ ನಿನ್ನನು ಮನದ ಕುಂಚಗಳ ಬೀಸಿ (ಪಯಣ. ೬೨-೪). [ಸುವ್ವಿ + ಕೆಯ್₁]

**ಸುಶಬ್ದ** (ನಾ). ೧. ಒಳ್ಳೆಯ ಶಬ್ದ. ೨. ವ್ಯಾಕರಣಶುದ್ಧವಾದ ಶಬ್ದ. ೧, ೨: ಅಡರ್ದ ಪಿತನಂತೆ ಲಕ್ಷಣ ಸುಶಬ್ದಮನೀವುದು (ಮಂಗರಾ. ೨-೬). [ಸಂ.]

**ಸುಶಿಕ್ಷಿತ** (ಗು). ೧. ಚೆನ್ನಾಗಿ ತರಬೇತಿ ಹೊಂದಿದ ,— ಪಳಗಿದ: ಚಿತ್ರಾಲರು ಈಗಿನ ಕಾಲದ ಸುಶಿಕ್ಷಿತ ಕಲಾವಿದರು ಒಪ್ಪಲಿ, ಒಪ್ಪದಿರಲಿ ನವೀನಪ್ರಜ್ಞೆ ಅವರನ್ನು ಆವರಿಸಿದೆ (ಆಚೋಲೀ. V ಮುನ್ನುಡಿ). (ನಾ). ೨. ಚೆನ್ನಾಗಿ ತಿಳಿದವನು; ಉತ್ತಮ ಶಿಕ್ಷಣವನ್ನು ಪಡೆದವನು: "ಚತುರಂ ಪ್ರವೀಣಂ ಕುಶಲನಭಿಜ್ಞಂ ಸುಶಿಕ್ಷಿತನೆನಲ್ ದಕ್ಷಂ" (ಮಂಗರಾ. ೬೬-೩); ಅವನು ಚಮತ್ಕಾರಶೂನ್ಯನಾದ ಬಡಾಯಿಗಾರ ಮಾತ್ರವಲ್ಲ, ಸುಶಿಕ್ಷಿತನಲ್ಲದ . . . ಆಡಂಬರವ್ಯಕ್ತಿಯೆಂದು ಆಗ ಪ್ರತಿಯೊಬ್ಬರಿಗೂ ಮನದಟ್ಟಾಯಿತು (ಪುನರು. ೩೩೩). ೩. ಬಿಲ್ಲುವಿದ್ಯೆಯನ್ನು ಬಲ್ಲವನು; ಧನುರ್ವಿದ್ಯಾಪಾರಂಗತ: "ಕೃತಪುಂಖಃ, ಸುಶಿಕ್ಷಿತಃ — ಈ ೨ ಬಿಲ್ಲವಿದ್ಯೆಯಂ ಬಲ್ಲವಂ" (ಹಲಾಯು. ೭೭-೩೧೭). [ಸಂ.]

**ಸುಶಿಕ್ಷೆ** (ನಾ). ಒಳ್ಳೆಯ ಶಿಕ್ಷಣ; ಉತ್ತಮವಾದ ತರಬೇತು: ಗುರುವೆ ದೀಕ್ಷೆ ಸುಶಿಕ್ಷೆಮೋಕ್ಷ ಕಾರಣಕರ್ತ್ಯವಲ್ಲದಿನ್ನೋರ್ವರಿಲ್ಲ (ಮೈಲಾರ. ೧-೩). [ಸಂ. ಸುಶಿಕ್ಷಾ]

**ಸುಶೀಲ** (ಗು). ೧. ಒಳ್ಳೆಯ ನಡತೆಯ; ಸಚ್ಚಾರಿತ್ರದ. (ನಾ). ೨. ಒಳ್ಳೆಯ ನಡತೆ; ಸಚ್ಚಾರಿತ್ರ. ೩. ವ್ರತ; ನೇಮ: ಲೀಲೆಯಿಂ ಮಾಡುತ್ತ ಹಿಡಿದ ಸುಶೀಲವಂ ನಡೆಸಲ್ (ಬಸವಪು. ೨೭-೧೬). ೪. ಒಳ್ಳೆಯ ನಡತೆಯುಳ್ಳವನು: ಪವಿತ್ರಭಕ್ತಿ ಸುಶೀಲರಪ್ಪರು ಕೀರ್ತಿವೆತ್ತಿಹರು (ಬಸವಪು. ೫೪-೮೫); ಸಿರಿಯನುಳ್ಳವನೇ ಸುಶೀಲನು (ಕುಮ್ಮಾಉ. ೩-೩೮). [ಸಂ.]

**ಸುಶೀಲೆ (ನಾ).** ಒಳ್ಳೆಯ ನಡತೆಯುಳ್ಳವಳು; ಸಚ್ಚಾರಿತ್ರೆ: ಸಂಗನ ಬಸವಂ ಕೆಲವು ದಿನಂಗಳಂ ಕಳೆದು ಸತ್ಕುಲ ಸಾದೃಶ್ಯ ಸುಶೀಲೆಯರಪ್ಪ ಗಂಗಾದೇವಿ ಮಾಯಾದೇವಿಯರೊಡನೆ ವಿವಾಹಸಂಪದದಿಂ ಸಂತಸುಖಮಿರ್ದು (ಬಸರ. ೬-೨); ಮೇಲೆ ಬಿದ್ದು ಪೊರಳ್ದು ಭಕ್ತಿ ಸುಶೀಲೆ ಮುನಿನಾಥನ ಪದಪ್ರಕ್ಷಾಲನಂಗೆಯ್ದು (ಬಸಪು. ೫೨-೪). [ಸಂ. ಸುಶೀಲಾ]

**ಸುಶೌಚಿ (ನಾ).** ತುಂಬ ಶುಚಿಯಾಗಿರುವವನು; ಅತಿ ಶುಭ್ರತೆಯಿಂದ ಕೂಡಿರುವವನು: ಸುಶೌಚಿಗಳುಜ್ . . . ಶಿವನನೊಲಿಸಿದ ಮುನೀಶ್ವರರು ಕಣ್ಗೆಸೆದರು (ಹಚಕಾ. ೬-೩೬). [ಸಂ. ಸುಶೌಚಿನ್]

**ಸುಶ್ರಾವ್ಯ (ಗು).** ೧. ಕೇಳಲು ಹಿತಕರವಾದ: ಈತಂ ಸುಶ್ರಾವ್ಯಚರಿತ ನಖಿಳಮಂಗಳನಿಲಯಂ (ವಸ್ತುಪಂ. ೬-೪೧). **(ನಾ).** ೨. ಕಿವಿಗೆ ಇಂಪಾಗಿರುವುದು: ಕಾವ್ಯಮಿದು ಭುವನದೊಳ್ ಸಕಲಜನದಿಂದ ಸುಶ್ರಾವ್ಯಮಪ್ಪಂತೆನ್ನ ವದನಾಬ್ಜದಲ್ಲಿ ನೀನೆ ವ್ಯಾಪಿಸಿರ್ದಮಲಸುಮತಿಯಂ ತಾಯೆನಗೆ ತಾಯೆ (ಜೈಮಿಭಾ. ೧-೪). [ಸಂ.]

**ಸುಶ್ರುತ (ಗು).** ೧. ಚೆನ್ನಾಗಿ ಕೇಳಿದ. **(ನಾ).** ೨. ವೇದಪಾರಂಗತ. ೩. ಆಯುರ್ವೇದಚಿಕಿತ್ಸಾಶಾಸ್ತ್ರವನ್ನು ಬರೆದ ಒಬ್ಬ ಋಷಿಯ ಹೆಸರು. 'ಚರಕ' ಹೋ. [ಸಂ.]

**ಸುಶ್ರೋಣಿ (ನಾ).** ಸುಂದರವಾದ ನಿತಂಬವುಳ್ಳವಳು; ಚೆಲುವೆ: ವಾಣಿ ಬೊಮ್ಮನ ರಾಣಿ . . . ಸುಶ್ರೋಣಿ . . . ಕಾಮಿತದಾನಿ ವರವೀಯೆ (ಕಾಶಿರಾ. ೧-೨); ಬಂದಳಂಗಜನ ಜಯಸಿರಿ ತಾನೆನಲ್ಪ್ರಭಾವತಿಯೆನಿಪವನ ರಾಣಿ ಸುಶ್ರೋಣಿ ಸರ್ಪವೇಣಿ (ಜೈಮಿಭಾ. ೧೧-೬). [ಸಂ. ಸುಶ್ರೋಣೀ]

**ಸುಶ್ಲಕ್ಷ್ಣ (ಗು).** ಒಳ್ಳೆಯ ನಯ, ನುಣುಪುಗಳಿಂದ ಕೂಡಿದ; ಚೆನ್ನಾಗಿ ಮೆರುಗುಗೊಂಡ: ಅಸಾಧ್ಯಕ್ಕಮುಂ ದೃಶ್ಯಮುಮಾದ ಸುಶ್ಲಕ್ಷ್ಣ ಸುಧಾಭಿತ್ತಿ ಭಾಗಂಗಳಿಂದಮಪೂರ್ವಭಿತ್ತಿಯಂ ತಳೆದು (ಚಂದ್ರಪು. ೧೫-೭೦ ವ). [ಸಂ.]

**ಸುಶ್ಲೋಕ (ನಾ).** ಹೆಚ್ಚಿನ ಸ್ತುತಿಗೆ ಪಾತ್ರನಾದವನು: ಶ್ರೀಕರದಮಳದಿಗ್ಭರಿತ ಸುಶ್ಲೋಕನೆನಲೇಕಾಂತರಾಮಶಿವೈಕ್ಯನಿಪ್ಪನು (ಬಸಪು. ೪೯-೨). [ಸಂ.]

**ಸುಷಮ (ಗು).** ೧. ಸಮನಾದ; ಸಮಾನವಾದ. ೨. ಸುಂದರವಾದ; ಚೆಲುವಾದ. **(ನಾ).** ೩. ಒಳ್ಳೆಯದು; ಶುಭವಾದುದು: "ಪ್ರಾಗ್ರ್ಯಂ . . . ಸುಷಮಂ, ವಾಮಂ, ಶುಭಂ, ಪೇಶಲಂ – ಈ ೨೯ ಒಳ್ಳಿತು" (ಹಲಾಯು. ೧೧೪-೪). ೪. [ಜೈನ] ಅವಸರ್ಪಿಣಿ ಕಾಲಭೇದಗಳಲ್ಲಿ ಒಂದು; ಸುಖವುಳ್ಳ ಕಾಲ: ಮಧ್ಯಮಭೋಗಭೂಮಿಸ್ಥಿತಿಯೊಳ್ ಮೂಱುಕೋಟಾಕೋಟಿ ಸಾಗರೋಪಮಪ್ರಮಾಣಂ ಸುಷಮಮೆಂಬ ಕಾಲಮುಂ (ಆದಿಪು. ೬-೪೮ ವ); ಒಂದರೊಳಗಾರಾರು ಕಾಲವು ಸಂದು ಸುಷಸುಷ ಸುಷಮ ಸುಷದುಷ . . . ಎಂಬ ಕಾಲಗಳು (ಬಿಜ್ಜಪು. ೮-೩೨); ಅವಸರ್ಪಿಣಿಕಾಲ. ಇದನ್ನು ಆರು ವಿಭಾಗಗಳಾಗಿ ವಿಂಗಡಿಸಲಾಗಿದೆ . . . ೨. ಸುಖವುಳ್ಳದು (ಸುಷಮ) (ಭಾರದ. ೧೭೧). 'ದುಷ್ಷಮ' ಪರಾ. [ಸಂ.]

**ಸುಷಮದುಷ್ಷಮ (ನಾ).** [ಜೈನ] ಅವಸರ್ಪಿಣಿ ಕಾಲದ ಒಂದು ಭಾಗ; ಹೆಚ್ಚು ಸುಖ ಮತ್ತು ಕಡಿಮೆ ದುಃಖವುಳ್ಳ ಕಾಲ: ಜಘನ್ಯಭೋಗಭೂಮಿಸ್ಥಿತಿಯೊಳು ಎರಡು ಕೋಟಾಕೋಟಿ ಸಾಗರೋಪಪ್ರಮಾಣಂ ಸುಷಮದುಷ್ಷಮವೆಂಬ ಕಾಲಮುಂ (ಆದಿಪು. ೬-೪೮ ವ); ಎರಡನೆಯ ಸುಷಮಕಾಲದ ಪೊರೆಯೊಳ್ ಮೂಱನೆಯ ಸುಷಮದುಷ್ಷಮಕಾಲಂ (ಪಂರಾಮಾ. ೧-೫೬). [ಸಂ.]

**ಸುಷಮಸುಷಮ (ನಾ).** [ಜೈನ] ಅವಸರ್ಪಿಣಿಕಾಲದ ಒಂದು ಭಾಗ; ಅತಿಸುಖವುಳ್ಳ ಕಾಲ: ನಾಲ್ಕುಕೋಟಾಕೋಟಿ ಸಾಗರೋಪಮ ಪ್ರಮಾಣಂ ಸುಷಮಸುಷಮಮೆಂಬ ಕಾಲಮುಂ (ಆದಿಪು. ೬-೪೮ ವ); ಕಾಲಂ ಪ್ರವರ್ತಿಕುಂ ಸುಷಮಸುಷಮಮೆಂಬೀ ಪೆಸರಿಂ (ಪಂರಾಮಾ. ೧-೫೫); ಅವಸರ್ಪಿಣಿಕಾಲ. ಇದನ್ನು ಈ ಕೆಳಗೆ ಕಂಡಂತೆ ಆರು ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ೧. ಅತಿಸುಖವುಳ್ಳುದು (ಸುಷಮಸುಷಮ) (ಭಾರದ. ೧೭೧). 'ದುಷಮದುಷಮ' ಪರಾ. [ಸಂ.]

**ಸುಷಮಸುಷಮೆ (ನಾ).** = ಸುಷಮಸುಷಮ: ಅವಸರ್ಪಿಣಿಯ ಕಾಲಂ ಸುಷಮಸುಷಮೆಯುಂ ಸುಷಮದುಷ್ಷಮೆಯುಂ . . . ಅಕ್ಕುಂ (ಅಜಿಪು. ೩-೧೫ ವ); ಉತ್ಸರ್ಪಿಣಿ ಸುಷಮಸುಷಮೆಯುಂ ಸುಷಮೆಯುಂ ಸುಷಮದುಷ್ಷಮೆಯುಂ . . . ಅಕ್ಕುಂ (ಚಂದ್ರಪು. ೧೬-೧೬ ವ). [ಸಂ. ಸುಷಮಸುಷಮಾ]

**ಸುಷಮೆ (ನಾ).** ೧. ಅತ್ಯಂತ ಚೆಲುವು, — ಶೋಭೆ: "ದಾ(ಧಾ)ರಾ, ಶೋಭಾ . . . ಸುಷಮಾ – ಈ ೫ ಶೋಭೆ" (ಹಲಾಯು. ೯೩-೪೧೧). ೨. = ಸುಷಮ ೪: ಉತ್ಸರ್ಪಿಣಿ ಸುಷಮಸುಷಮೆಯುಂ ಸುಷಮೆಯುಂ ಸುಷಮದುಷ್ಷಮೆಯುಂ . . . ಅಕ್ಕುಂ (ಚಂದ್ರಪು. ೧೬-೧೬ ವ). 'ದುಷ್ಷಮೆ' ಪರಾ. [ಸಂ. ಸುಷಮಾ]

**ಸುಷಿರ (ಗು).** ೧. ತೂತಿರುವ; ರಂಧ್ರದಿಂದ ಕೂಡಿದ. **(ನಾ).** ೨. ರಂಧ್ರ; ತೂತು: "ನಿಮ್ನಂ . . . ಸುಷಿರಂ . . . ದರಃ– ಈ ೧೫ ಕುಟಿ" (ಹಲಾಯು. ೧೦೩-೨); ನಿಸ್ನಂತಸ್ಸುಷಿರದಿನುತ್ಪನ್ನಂಗಳ್ ಪ್ರಾಣವಾಯುಗಳ್ (ವಿಷ್ಣುಪು. ೧-೩-೧೨೩). ೩. ಕೊಳಲು, ನಾಗಸ್ವರ ಮೊದಲಾದ, ಬಾಯಿಂದ ಊದಿ ನುಡಿಸುವ ವಾದ್ಯವಿಶೇಷ: ತತ ಘನ ಸುಷಿರಾನದ್ಧವಾದ್ಯಂಗಳ್ (ಆದಿಪು. ೫-೩೫); ತತ ವಿತತ ಘನ ಸುಷಿರ ಭೇದದಿಂ ಚತುರ್ವಿಧಂ ವಂಶ ಶಂಖ ಕಾಹಲಾದಿ ನಿಮಿತ್ತಂ ಸುಷಿರಮೆಂಬುದಕ್ಕುಂ (ತತ್ತ್ವಪ್ರ. ೨೪೩). [ಸಂ.]

**ಸುಷಿರವಾದ್ಯ (ನಾ).** = ಸುಷಿರ ೩: ಸುಷಿರವಾದ್ಯಮೆನೆ ಮೊಳಗಿದುವಮರರ ವಿತತತತತಘನಾನಕಂ (ಶಾಂತಿಪು. ೪-೫೬). [ಸಂ.]

**ಸುಷುಪ್ತ (ಗು).** ೧. ಗಾಢವಾಗಿ ನಿದ್ರಿಸಿರುವ. **(ನಾ).** ೨. ಜಾಗ್ರತೆ, ಸ್ವಪ್ನ, ಸುಷುಪ್ತಿ ಎಂಬ ಮೂರುಅವಸ್ಥೆಗಳಲ್ಲಿ ಒಂದು; ಮೈಮರೆತ ಸ್ಥಿತಿ; ನಿದ್ರಾವಸ್ಥೆ: ಗರ್ಭಾಂಡಜ ಮೂರ್ಛಿತ ಸುಷುಪ್ತಾದ್ಯವಸ್ಥೆಗಳ್ (ತತ್ತ್ವಪ್ರ. ೯೯). [ಸಂ.]

**ಸುಷುಪ್ತಿ (ನಾ).** = ಸುಷುಪ್ತ ೨: ಜಾಗ್ರತ್‌ಸ್ವಪ್ನಸುಷುಪ್ತಿಯಲ್ಲಿ ಮತ್ತೊಂದ ನೆನೆದೊಡೆ ತಲೆದಂಡ (ಬಸವ. ೬೯೩); ಜಾಗ್ರತ್ಸ್ವಪ್ನಸುಷುಪ್ತಿಯವಸ್ಥಾತ್ರಯಂಗಳೊಳು (ಬಸರ. ೮-೧೪); ಪ್ರಾಣಿಯು ಮಲಗಿರುವಾಗ ಆಶೆ ಸ್ವಪ್ನ ಇತ್ಯಾದಿ ಯಾವುದನ್ನೂ ಅನುಭವಿಸದ ಅವಸ್ಥೆಯೇ ಸುಷುಪ್ತಿ (ಜೀವಾತ್ಮ. ೧೨೮). [ಸಂ.]

**ಸುಷುಪ್ತಿಗೊಳ್ (ಕ್ರಿ).** ಗಾಢವಾಗಿ ಅಡಗಿರು: ಪ್ರಸಾದಿಯಾದಡೆ ಪಕ್ಷಿಯಂತಿರಬೇಕು ಪ್ರಾಣಲಿಂಗಿಯಾದಡೆ ಸುಷುಪ್ತಿಗೊಂಡ ವಿಷದಂತಿರಬೇಕು (ಮೋಳಿಮಾ. ೧೪೩-೫೪೮). [ಸುಷುಪ್ತಿ + ಕೊಳ್]

**ಸುಷುಮ್ನ (ನಾ).** ಇಡಾ, ಪಿಂಗಳಾ, ಸುಷುಮ್ನಾ ಎಂಬ ದೇಹದ ಪ್ರಮುಖ ನಾಡಿಗಳಲ್ಲಿ ಒಂದು; ಬೆನ್ನುಹುರಿಯಲ್ಲಿರುವ ನಾಡಿ: "ಇಡಾ ಪಿಂಗಳ ಸುಷುಮ್ನಮಕ್ಕುಂ" (ಮಂಗರಾ. ೧೬-೧೩); ಆಸನವ ಬಲಿದಸು ಸುಷುಮ್ನದಿ ಸೂಸೆ ಸಿರದಲಿ ನಡೆಸಿ ಮೆಲ್ಲನೆ ಲೇಸೆನಿಪ ನಿಜಬ್ರಹ್ಮರಂಧ್ರದಿ ನಡೆದು (ಅಮೃತ. ೨-೯೯). [ಸಂ. ಸುಷುಮ್ನಾ]

**ಸುಷುಮ್ನನಾಳ (ನಾ).** = ಸುಷುಮ್ನ: ಮತಿಗೆ ಮಹಾಘನವಪ್ಪ ಸುಷುಮ್ನನಾಳದ ಸುಯಿಧಾನವ ಪ್ರಮಾಣಿಸಬಾರದು (ಅಪಚಂ. ೬೨-೨೬೩). [< ಸಂ. ಸುಷುಮ್ನಾನಾಲ]

**ಸುಷುಮ್ನಾನಾಡಿ (ನಾ).** = ಸುಷುಮ್ನ: ಆ ಸುಷುಮ್ನಾನಾಡಿಯಲಿ ಕಾಳಾಶಿಸಿದ ಪವನನ ಸಮಾಧಿವಿಳಾಸನೆಸೆದನು ಸೌಖ್ಯಭಾವದ ಜಡಿವ ಝೊಮ್ಮಿನಲಿ (ಕುಮ್ಮಾದ್ರೋ. ೧೮-೬೯). [ಸಂ.]

**ಸುಷುಮ್ನಾನಾಳ (ನಾ).** = ಸುಷುಮ್ನ: ಇಡಾ ಪಿಂಗಳಾ ಸುಷುಮ್ನಾನಾಳವಿಡಿದು ಅಱಿದೆಹನೆಂದಡೆ ಕೂಡಲಸಂಗಮದೇವ ಮೂಗ ಕೊಯ್ಯದೆ ಮಾಣ್ಬನೆ (ಬಸವ. ಕ. ೭೯೯). [ಸಂ. ಸುಷುಮ್ನಾನಾಲ]

**ಸುಷುಮ್ನೆ (ನಾ).** ೧. = ಸುಷುಮ್ನ: ಸುಷುಮ್ನೆಯೆಂಬ ಮಧ್ಯನಾಡಿಯೇ ಅಗ್ನಿಯೆಂದು ಸರಸ್ವತಿನದಿಯೆಂದು ಪೇಳಲ್ಪಡುವುದು (ಅಖಂಡೇ. ೨೧೮-೫೮); ಎಡದ ಹಿಂಬಡವನ್ನು ವೃಷಣ ಗುದಗಳ ಮಧ್ಯದಲ್ಲಿರುವ ಆಧಾರಚಕ್ರದಲ್ಲಿಯ ಸುಷುಮ್ನೆಗೆ ಒತ್ತಬೇಕು (ಪರಪ. ೯೪). ೨. (ಚಂದ್ರನಿಗೆ ಶಾಖವನ್ನು ಕೊಡುವುದೆಂದು ನಂಬಲಾದ) ಸೂರ್ಯನ ಏಳು ಪ್ರಮುಖ ಕಿರಣಗಳಲ್ಲಿ ಒಂದು: ಸುಷುಮ್ನೆಯೆಂಬ ಕರದಿಂ ಗಡ ಚಂದ್ರಕಲಾಕಲಾಪಮಂ ಕಾಲದೊಳಂಶುಮಾಲಿ ತೆಗೆದೀಂಟುವನೆಂಬುದಸತ್ಯಂ (ಕಾದಂಪೂ. ೭೪೪); ಸೂರ್ಯನು ಸುಷುಮ್ನೆಯೆಂಬ ಕಿರಣದಿಂದ ಪಾನವ ಮಾಡುವನು (ಪಚಕಾ. ೧೫). [ಸಂ. ಸುಷುಮ್ನಾ]

**ಸುಷೆ** (ನಾ). ತಾಯಿ; ಜನನಿ: "ಜನನಿ ಮಾತೃ ಸವಿತ್ರಿಯಂಬೆ ಸುಷೆಯೆನೆ ತಾಯಿ" (ಮಂಗರಾ. ೯೧-೯). [ಸಂ.?]

**ಸುಷೇಣಿ** (ನಾ). ಒಂದು ಬಗೆಯ ಸಸ್ಯ. [ಸಂ. ಸುಷೇಣೀ]

**ಸುಷೇಣಿಕೆ** (ನಾ). ಒಂದು ಬಗೆಯ ಸಸ್ಯ; ಕರಿಯ ತಿಗಡೆ: "ಶ್ಯಾಮಾ . . . ಸುಷೇಣಿಕಾ . . . ಕಾಲಮೇಷಿಕಾ – ೭ ಕರಿಲಾಲ್ ತಿಗಡೆ" (ಸಿದ್ಧಾಂತಿ. ೧೩೭). [ಸಂ. ಸುಷೇಣಿಕಾ]

**ಸುಷ್ಮು$_1$** (ನಾ). ೧. ತಕ್ಕವನು; ಸಮರ್ಥ: ನಮ್ಮ ಪಡೆಯಂ ಕಾವನ್ನರಿನ್ನಾರೊ ಸು[ಷ್ಟೀ]ತಂ[ಪಾಠಾಂ. ಷ್ಯುತಂ, ಷೈತಂ, ಷ್ಟೇತಂ] ಕಾವೊಡೆ ಕರ್ಣನಕ್ಕುಂ (ಪಂಪಭಾ. ೧೧-೫೨). ೨. ದಕ್ಷತೆಯಿಂದ ಕೂಡಿದುದು: ಯಾವ ಹಣದ ಪೇಟೆಯಾಗಲಿ ಸುಷ್ಮುವಾಗಿದೆಯೆ (ಹಣಪ್ರ. ೩೧೨). [ಸಂ.]

**ಸುಷ್ಮು$_2$** (ಅ). ೧. ಚೆನ್ನಾಗಿ; ಸರಿಯಾಗಿ: ಮರುತಾತ್ಮಜನನಿಂಗಿತದಿ ನೋಡಿ ನಸುನಗುತ, ಮತ್ತೆ ಮರ್ತ್ಯಕ್ಕೆಡೊಳ್ ಸುಷ್ಮು ಸಂಸ್ಥಿತನಾಗಿ ಕೇಳ್ದನ್ ಕಪೀಂದ್ರನಂ (ಶ್ರೀರಾಮಾ. ೮೧೪-೯೯). ೨. ಅಧಿಕವಾಗಿ. ೩. ಯೋಗ್ಯವಾಗಿ. ೪. ನಿಶ್ಚಯವಾಗಿ. [< ಸುಷ್ಮು$_1$]

**ಸುಸಂಗ** (ನಾ). ೧. ಒಳ್ಳೆಯ ಒಡನಾಟ, — ಸಹವಾಸ: ದೇಹ ಹುಟ್ಟುವಾಗ . . . ಕಸ್ತುರಿಯ ಶುಕ್ಲದ ತೆಱ ಕದಳಿಯ ಕರ್ಪೂರದ ತೆಱ ಬಂದುದಕ್ಕೆ ಸಂದೇಹವ ಮಾಡಲಿಲ್ಲ ನಿರಂಗ ನಿರಂತ ಸುಸಂಗ (ಪ್ರೋಳವಜಾ. ೪-೧೨). ೨. ಒಳ್ಳೆಯ ಸಮಾಜ, — ಸಂಘ: (ಕ). [ಸಂ.]

**ಸುಸಂಗಿ** (ನಾ). ಒಳ್ಳೆಯ ಸಂಗವನ್ನು ಹೊಂದಿರುವವನು: ಕುಚಿತ್ತರ ಸಂಗ ಸುಸಂಗಿಗೆ ಸಂಗಡವಿಲ್ಲ (ಬಸವ. ೬೩೭); ಲಿಂಗವು ಭಕ್ತಿಯ ಶ್ರದ್ಧೆಗೆ ವಿಶ್ವಾಸದ ಸುಸಂಗಿಗೆ ನಿಶ್ಚಯವಪ್ಪ ಲಿಂಗಿಗೆ ದೃಷ್ಟವಪ್ಪುದು (ಮದೇವ. ೨೮೧-೪೭). [ಸಂ. ಸುಸಂಗಿನ್]

**ಸುಸಂಧಿ** (ನಾ). ಒಳ್ಳೆಯ ಅವಕಾಶ, — ಸಮಯ: ನೀನು ಇಷ್ಟಬಂದ ಹಾಗೆ ಪ್ರಾಬಲ್ಯ ನಡೆಯಿಸಬಹುದು. ಇಂಥವನೇಕ ಸುಸಂಧಿಗಳನ್ನು ನೀನು ದೊರಕಿಸಿಕೊಳ್ಳ ಬಹುದು (ಹೇಮಂತ. ೨೩೪). [ಸಂ.]

**ಸುಸಂಬದ್ಧ** (ಗು). ೧. ಒಪ್ಪವಾಗಿ ಕೂಡಿಸಿದ; ಸೂಕ್ತವಾಗಿ ಜೋಡಿಸಿದ. (ನಾ). ೨. ಸರಿಯಾದ ಹೊಂದಿಕೆ, — ಜೋಡಣೆ; ತರ್ಕಶುದ್ಧವಾದುದು: ಒಂದೆರಡು ಪದಗಳಲ್ಲಿನ ಒಂದೋ ಎರಡೋ ಪ್ರಾಚೀನ ಪದಗಳಿಗೆ ಅಲ್ಪ ಸ್ವಲ್ಪ ಸಾಮ್ಯ ಅಥವಾ ಸಾದೃಶ್ಯವಿರುವಂತೆ ತೋರಿದರೂ ಅವುಗಳಲ್ಲಿ ಸುಸಂಬದ್ಧವಾದ ಕ್ರಮವಿರುವುದಿಲ್ಲ (ದ್ರಾವಿಪಿ. ೨೭೪). [ಸಂ.]

**ಸುಸಂಸ್ಕೃತ** (ಗು). ೧. ಉತ್ತಮವಾದ ಸಂಸ್ಕಾರವುಳ್ಳ: ಸುಂದರ ಸುಸಂಸ್ಕೃತ ಲತಾಂಗಿಯರ ಸಿರಿಗೈಯ ಹೊಂಗೊಡದ ಪನ್ನೀರ ತುಂತುರೆರಚುಗಳಿಂದ . . . ಮೆರೆದುದಯ್ (ಶ್ರೀರಾಮಾ. ೭-೧೭೦). (ನಾ). ೨. ಒಳ್ಳೆಯ ಸಂಸ್ಕೃತಿಯಿಂದ ಕೂಡಿದವನು: ಸುಸಂಸ್ಕೃತರು ಆತ್ಮಶಕ್ತಿಯನ್ನು ಮರೆತು ಪೂರ್ಣವಾಗಿ ದೈವವನ್ನೇ ನಂಬಬೇಕಾಯಿತು (ಜುಕ್ಕಾರ. ೧೧೧ ಪೀಠಿಕೆ). [ಸಂ.]

**ಸುಸಜ್ಜಿತ** (ಗು). ೧. ಉತ್ತಮವಾಗಿ ಸಜ್ಜಾದ. (ನಾ). ೨. ಚೆನ್ನಾಗಿ ಸಜ್ಜಾದುದು: ವಿಶೇಷ ಪರಿವಾರವೂ ಸುಸಜ್ಜಿತವಾಗಿ ಹುರಿಗೊಂಡ ಪೌಜೂ ಇಲ್ಲದೆ ಎಂದೂ ಅತ್ತ ಬಂದುದಿಲ್ಲ (ಬಿರುಗಂ. ೩೩-೨೪); ತಾನೊಂದು ಸುಸಜ್ಜಿತವಾದ ಕೊಠಡಿಯಲ್ಲಿ . . . ಮಲಗಿದ್ದಳು (ಕಮಕು. ೮೮). [ಸಂ.]

**ಸುಸಜ್ಜಿತೆ** (ನಾ). ಚೆನ್ನಾಗಿ ಶೃಂಗಾರಗೊಂಡವಳು: ಸುಂದರಿಯು ಸುಸಜ್ಜಿತೆಯಾಗಿದ್ದಳು (ದೇವೀಚೌ. ೭೮). [ಸಂ. ಸುಸಜ್ಜಿತಾ]

**ಸುಸಮಯ** (ನಾ). = ಸುಸಂಧಿ: ಮನೋಹರವಾದ ಸುಸಮಯದಲ್ಲಿ . . . ಬಂದನು (ಮಂಜುಕ. ೩). [ಸಂ.]

**ಸುಸರ$_1$** (ನಾ). ಇಂಪಾದ ಧ್ವನಿ; ಮಧುರವಾದ ಧ್ವನಿ: 'ಸುಸರಿಕೆ' ಪರಾ. [< ಸಂ. ಸುಸ್ವರ]

**ಸುಸರ$_2$** (ನಾ). ೧. ಸುಗಮ; ಸುಲಭ; ಸರಾಗ: ಆನಿವಂದಿರನಾದರಿಸಿ ಪಸರಂಗೊಟ್ಟನಪ್ಪೊಡೆನಗೆ ಸುಸರಮಾಗಿ ಬೆಸಕೆಯ್ಯಲಱಿಯರ್ (ಸುಕುಮಾ. ೨-೫೨ ವ); ತಿದ್ದುವ ಸುಂಕ ಸುಸರ (ಶಿವಗೀ. ೧೮೯-೬೪೭); ಸುಸರದಿಂದಾಧ್ಯಾತ್ಮವಿದ್ಯೆಯನಱಿಯ ಬೇಕು (ನಿಭಾಗ. ೧೧-೧೭-೪೩). ೨. ಪರಸ್ಪರ ಸ್ನೇಹ, — ಹೊಂದಾಣಿಕೆ: ಅಸಗರಿಗೆ ಸವಣರಿಗೆ ಸಂಬಂಧಿಸುವುದೇ ಕೆಳೆ ಹುಳಿಗೆ ಹಾಲಿಗೆ ಸುಸರವಹುದೆ (ಬಸಪು. ೨೮-೩೮). ೩. ಒಡನಾಡಿ; ಬಂಧು: ದಸರಸುಜನರ ಸುಸರ ಭಕ್ತಪ್ರಸರ ಸೇವಾವಸರಶಕ್ತ (ಬಸಪು. ೩೮-೫೨). [ಸಂ.?]

**ಸುಸರತನ** (ನಾ). ಧ್ವನಿಯ ಮಾಧುರ್ಯ: ವೀಣೆಯ ಕೆಳೆಯ ಕೆಳೆಯೊಳ್ಗಳವೇಱ ಉಳಿಯಿಸಿ ಪಿರಿಯ ದನಿಯೊಳ್ಪಿಸರಿಯ ಸುಸರತನಮುಂ ಮುಹರಿಯ ಮಧುರತೆಯುಂ ಬೀಣೆಯ ಬಹುಲಿಕೆಯುಂ ಎಸೆಯೆ (ವರ್ಧಪು. ೯-೩೪). [ಸುಸರ$_1$ + - ತನ]

**ಸುಸರಿಕೆ** (ನಾ). ಇಂಪಾದ ಧ್ವನಿ, — ಶಬ್ದ: ವಾಹಕರ ಪಾಣಿಪಲ್ಲವದಿಂ ನೇತ್ರವಟ್ಟೆಯ ನೇಣನೊಯ್ಯನಿಪ್ಪೆ ತೆಗೆದು ಝುಂಕಾರದ ಸುಸಿರಸರಿಕೆಯಂ ನೋಡಿ (ಶಾಂತೀಶ್ವ. ೭-೯೩ ವ). [ಸುಸರ$_1$ + - ಇಕೆ]

**ಸುಸಾಧ್ಯ** (ಗು). ೧. ಸುಲಭವಾಗಿ ಪರಿಣಾಮವನ್ನುಂಟುಮಾಡುವ. (ನಾ). ೨. ಕಷ್ಟವಿಲ್ಲದೆ ಸಾಧಿಸಬಹುದಾದುದು: ಧನವಂಚಕರಿಗೆ ಸುಸಾಧ್ಯವಾಗದುದು ಆದಿ ಜಂಗಮಭಕ್ತಿ (ಬಸಪು. ೩೪-೧೯). [ಸಂ.]

**ಸುಸಿರ** (ನಾ). ರಂಧ್ರ; ತೂತು: ಸಸಿಯ ಬೆಸದಿನಸಿಯೇಱಿಂಗೆ ಬಂದ ಸುಟ್ಟುಂಬೆಸಕಾಱನಂತಸಿದನೆ ಸುಸಿರದಿಂ ಪೊಕ್ಕು (ಚಂದ್ರಪು. ೮-೪೩ ವ). [< ಸಂ. ಸುಷಿರ]

**ಸುಸಿಲ್, ಸುಸಿಲು** (ನಾ). ೧. ಕೂಟ; ಸಂಭೋಗ: "ಸುಸಿಲ್ – ಸಂಭೋಗಂ, ಪ್ರಭಾತಕಾಲಂ" (ಶಮದ. ಪರಿ. ೨); ಅಮರ್ದಂ ಮುಕ್ಕುಳಿಪಂತುಟಪ್ಪ ಸುಸಿಲೊಂದಿಂಪುಂ ತಗುಳ್ದೊಂದು ಗೇಯಮುಂ . . . ಮನಂಗೊಂಡಿರೆ (ಪಂಪಭಾ. ೪-೩೧); ಮೆಯ್ಸೋದೆಯ ದಾಱದಿಂತು ಸುಸಿಲಿಂದಾ ಪಾಣ್ಬೆಯರ್ ಪಿಂಗಿದರ್ (ಕುಸುಮಾ. ೪-೩೭). ೨. ಬೆಳಗಿನ ಸಮಯ; ಉಷಃಕಾಲ: "ಸುಸಿಲ್ – ಸಂಭೋಗಂ; ಪ್ರಭಾತಕಾಲಂ" (ಶಮದ. ಪರಿ.೨). **ಸುಸಿಲು**: ೧. ಸವಿಸುಸಿಲನುಂಡು ವಿಲಾಸಿಗಳು ನಾನಾವಿನೋದದಿ ಸುಖದಲಿರುತಿಹರು (ಸಾಳ್ವಭಾ. ೨೩-೬೫); ಹೊಸ ಹರೆಯ ಹೊಸ ಸುಸಿಲ ಹುಚ್ಚು ಸಂಗತಿಗಳನು (ಕರುಶ್ರಾ. ೧೧-೯). ೨. "ಸುಸಿಲು ಪೊಟ್ಟಜೆಯನಲ್ಕಿವು ಪೆಸರಿಂ ಕವಿಯುದಯಕಾಲ" (ಕವಿಕಂ. ೨೮೨); ನೋಡು ಎಂತಿದೆ ಸುಸಿಲು! ಹಸುರ ಮೇಲೆಳೆಬಿಸಿಲು (ಪಾಂಚಜ. ೫೧-೧).

**ಸುಸಿಲಾಡು** (ಕ್ರಿ). (ಅಲಂ) ಸರಸವಾಡು: ನೊಸಲು ನೊಸಲಿನಲಿಂಸಿ ಸುಸಿಲಾಡುವುವು ಹೂವು ಹೊಳೆನೀರ ಬಳಿಗೆ (ಉಯ್ಯಾಲೆ. ೯-೧). [ಸುಸಿಲು (< ಸುಸಿಲ್) + ಆಡು$_1$]

**ಸುಸಿಲು** 'ಸುಸಿಲ್' ನೋ.

**ಸುಸಿಲುಣ್** (ಕ್ರಿ). ಸಂಭೋಗಸುಖವನ್ನು ಅನುಭವಿಸು; ರತಿಸುಖವನ್ನು ಪಡೆ: ತರುಣಿ ವನಜನಾಭನ ಸೂಳ್ಗೆ ಸತ್ಯೆಯ ವಿನುತರೂಪಿಂ ಪೋಗಿ ಮಿಗೆ ತಣ್ಣನೆ ತಣಿಯೆ ಸುಸಿಲುಂಡು ಮುದ್ರಿಕೆದೆಗೆಯೆ ಹರಿ ಕಂಡ (ಸಾಳ್ವಭಾ. ೩೧-೩). [ಸುಸಿಲು (< ಸುಸಿಲ್) + ಉಣ್]

**ಸುಸಿಲೆಸಗು** (ಕ್ರಿ). ಕೂಡು; ಸಂಭೋಗಿಸು: ಸುಸಿಲೆಸಗಿ ಬಳಲ್ದು ಬಸವಳಿದು (ರಾಜಶೇ. ೨-೮ ವ); ಚುಂಬಿಸಿ ನಾಣಳಿಯೆ ಸುಸಿಲೆಸಗುವ ಜಾಣ (ಇಚಸಾಂ. ೯-೬೩). [ಸುಸಿಲು (< ಸುಸಿಲ್) + ಎಸಗು$_1$]

**ಸುಸೂತ್ರ** (ಗು). ೧. ಅಡೆತಡೆಯಿಲ್ಲದ; ಸರಾಗವಾದ: ದೇಹದ ಸುಸೂತ್ರ ಕಾರ್ಯಕ್ರಮಕ್ಕೆ ಭಂಗ ತರಬಹುದು (ಮನೋಸಂ. ೨೨೦). (ನಾ). ೨. ತೊಡಕಿಲ್ಲದಿರುವುದು; ಸುಲಭ; ಸಲೀಸು: ನಿನ್ನಿಂದ ನಮಗೆ ಸುಸೂತ್ರವಹುದು (ತೂರರಾ. ೧-೯-೨೧); ಅದನ್ನು ಸುಸೂತ್ರವಾಗಿ ಸಾಧಿಸಬಹುದು (ಇಪ್ಪಕ. ೩೫೫). [ಸಂ.]

**ಸುಸ್ಕ** (ನಾ). ಶುಲ್ಕ (?): ಅಲ್ಲಿ ನುಡಿದ ಮಳೆಯೊಳಗಿಹನಿವನಾರೊ ಇಲ್ಲಿ ಸುಸ್ಕದ ಪೊರೆಯಾಕೆ ಮಲ್ಲನೆ ಮಾತನಾಡಿದನು ಸುಸ್ಕವ ತಂದಿಲ್ಲದೆ ಉಣವಿಲ್ಲವೆಮಗೆ (ನನ್ನಕಾ. ೯-೫೨). [?]

**ಸುಸ್ಕಾರ** (ನಾ). ನಿಟ್ಟುಸಿರು: ತಾಯ ಬಾಯಿಂದ ದೊಡ್ಡ ಸುಸ್ಕಾರವೊಂದು ಹೊರಟಿತು (ಮೂರುದಾ. ೧೧೭). [<— ಮರಾ. ಸುಸ್ಕಾರ, ಸುಸಕಾರ]

**ಸುಸ್ತಿ** (ನಾ). ೧. ನಿಧಾನ; ತಡಮಾಡುವಿಕೆ: ''ಸುಸ್ತಿ-ತಡ, ಆಲಸ್ಯತನ'' (ಜಾನಕೋ. ೫೦); ನೀವು ಬಹಳ ತಡಮಾಡುತ್ತೀರಿ; ಇಷ್ಟು ಸುಸ್ತಿ ಯಾಕೆ? (ಮುಂಬವ್ಯಾ. ೨೨೦). ೨. ಸಾಲ ಕಟ್ಟಲು ತಡಮಾಡಿದುದಕ್ಕಾಗಿ ಕೊಡುವ ಬಡ್ಡಿ: 'ಸುಸ್ತಿಬಡ್ಡಿ' ಪರಾ. [< ಪ್ರಾ. ಸುಸ್ತ, ಸುಸ್ತೀ; ಮರಾ. ಸುಸ್ತ, ಸುಸ್ತಾ, ಸುಸ್ತೀ, ಸುಸ್ತಾಈ]

**ಸುಸ್ತಿಗಾರ** (ನಾ). ನಿಧಾನಮಾಡುವವನು; ಆಲಸಿ: (ಕ).
[ಸುಸ್ತಿ + - ಗಾರ (< - ಕಾಱ)]

**ಸುಸ್ತಿಗೊಳ್** (ಕ್ರಿ). ಆಯಾಸ ಹೊಂದು; ದಣಿ: ಚಾಪಾರ್ಥದಿಂ ತಿರುಹಿ ಪೊಡೆಯೆ ವಜ್ರಾಯುಧದಿ ಗಿರಿಯ ಪೊಯ್ದಂತೆ ಮಸ್ತಕವಡೆದು ಸುಸ್ತಿಗೊಂಡು (ನವಮೋ. ೧೨-೮೦).
[ಸುಸ್ತಿ + ಕೊಳ್]

**ಸುಸ್ತಿಬಡ್ಡಿ** (ನಾ). ಸಾಲ ಕಟ್ಟಲು ತಡಮಾಡಿದುದಕ್ಕಾಗಿ (ಅಸಲಿನ ಮೇಲೆ) ಕೊಡುವ ಬಡ್ಡಿ: ಸುಸ್ತಿಬಡ್ಡಿಯನ್ನು ವಸೂಲಿ ಮಾಡಿಕೊಂಡು (ಗ್ರಾಮಾಕ. ೭೭).
[ಸುಸ್ತಿ + ಬಡ್ಡಿ]

**ಸುಸ್ತು** (ನಾ). ೧. ಚಲಿಸದಿರುವುದು; ಜಡತೆ; ಆಲಸ್ಯ. ೨. ಆಯಾಸ; ಬಳಲಿಕೆ; ದಣಿವು: ಪಾಪ ಅವರ ಸುಸ್ತು ಆ ಚೆಂಡು ಬಂದ ನಿಧಾನದಲ್ಲಿಯೇ ಗೊತ್ತಾಗುತ್ತಿದ್ದಿತು (ಕೊನಸ್ಕ್ಯ. ೨೦); ದ್ರುಪದನ ಬಿಲ್ಲುಪಣವನ್ನು ಗೆಲ್ಲಲು ಕ್ಷತ್ರಿಯರೆಲ್ಲಾ ಸೆಣಸಿ ಸುಸ್ತುಹೊಡೆದು ನಿಸ್ತೇಜರಾದಾಗ (ಜಗದಾ. ೨೮೭).
[<— ಪಾರ. ಹಿಂ. ಮರಾ. ಸುಸ್ತ್]

**ಸುಸ್ತೆ** (ನಾ). (?): ವಾರೆ ಹಿಡಿದು ಸುಸ್ತೆವೆ ವನ್ದುವಲು ಈಯರ್ಥಕೆ ಮಾರಿದರಾದಡೆ ಚಕ್ರವರ್ತ್ತಿ ಶ್ರೀವೀರನಾರಸಿಂಹದೇವರಸರಾಣೆ (ಎಕ. VI, ತರೀಕೆ. ೭-೭; ಸು. 1260?). [?]

**ಸುಸ್ಥ** (ಗು). ೧. ಒಳ್ಳೆಯ ಸ್ಥಿತಿಯಲ್ಲಿರುವ; ಭದ್ರವಾಗಿ ನೆಲೆಯೂರಿರುವ. ೨. ಉತ್ತಮ ಆರೋಗ್ಯದ; ಸ್ವಸ್ಥವಿರುವ: ಅದಱಿನಾಮಿನ್ನೆಂತುಮಿಂತಿಲ್ಲಿ ಸುಸ್ಥಂ ನಿತ್ತರಿಸಲಾಱೆವು (ನೇಮಿಪು. ೩-೧೩೦ ವ); ನಿತ್ಯನಿಯಮದಿಂ ನಿರವಿಸಿ ಸುಸ್ಥಮಿರಿಸಿಯುಂ (ಪುಷ್ಪಪು. ೩-೫೫ ವ). [ಸಂ.]

**ಸುಸ್ಥತೆ** (ನಾ). ೧. ಒಳ್ಳೆಯ ಸ್ಥಿತಿಯಲ್ಲಿರುವುದು; ಭದ್ರವಾಗಿ ನೆಲೆಸಿರುವುದು. ೨. ಉತ್ತಮ ಆರೋಗ್ಯ; ಸ್ವಸ್ಥತೆ: ಅಂಗನೆಯಂ ಕಂಡನಂಗಶರಪ್ರಹತಿಯಿಂ ಸುಸ್ಥತೆಗೆಟ್ಟು (ನೇಮಿಪು. ೬-೨೩ ವ); ನಿವೃತ್ತಿಪರಿಣತಿಯೊಳ್ ಪರಿಣಮಿಸಿದ ಸುಸ್ಥತೆಯಂ ವ್ಯರ್ಥಂ ಮಾಡದೆ (ಚಂದ್ರಪು. ೪-೧೮ ವ). [ಸಂ.]

**ಸುಸ್ಥಲ** (ನಾ). ಒಳ್ಳೆಯ ಜಾಗ; ಉತ್ತಮವಾದ ಸ್ಥಳ: ಶೀತೋಷ್ಣದಾಸರಿಲ್ಲದ ಸುಸ್ಥಲ[ಪಾಠಾಂ. ಳ]ಗಳಿಂ (ಜೈಮಿಭಾ. ೧೯-೪೩); ಅಕಲಂಕ ಸುಸ್ಥಲವನಱಿಯದ ಕವೀಂದ್ರರ ಕವಿತ್ವವೇತಕ್ಕೆ ಬಾರ್ತೆ (ಏಕೋಪು. ೧-೩೮). [ಸಂ.]

**ಸುಸ್ಥಿತಿ** (ನಾ). ೧. ಉತ್ತಮವಾದ ಸ್ಥಿತಿ, — ಅವಸ್ಥೆ: ಬಸವ ಶರಣನೆ ಭಕ್ತಿ ದೊರಕುಗು ಬಸವ ಶರಣನೆ ಸಾರ್ಗು ಸುಸ್ಥಿತಿ (ಬಸಪು. ೧-೨೫). ೨. ಆರೋಗ್ಯವಾಗಿರುವುದು; ಸ್ವಸ್ಥತೆ. [ಸಂ.]

**ಸುಸ್ಥಿರ** (ಗು). ೧. ಅಚಲವಾದ; ದೃಢವಾದ: ವೃಷಭನಾನಂದವಾರಾಸಿ ವರದನಾಗಿ ನಿರಂತರಂ ಸುಸ್ಥಿರಪದದೊಳಿರೆ (ಬಸಪು. ೪-೪೪); ಶಂಕರಯೋಗಧ್ಯಾನದೆ ಸುಸ್ಥಿರ ನಂದನಸಿದ್ಧಿಯಕ್ಕುಮಿದು ಸಿದ್ಧಾಂತಂ (ಪಮ್ಮಾರ. ೨-೪). (ನಾ). ೨. ಶಾಶ್ವತನಾದವನು; ಅಚಲ: ಶ್ರೀರಾಮನಾಹ್ಲಾದರೂಪಿ . . . ಸುಸ್ಥಿರಂ (ಶ್ರೀರಾಮಾ. ೫೭-೯೮); ಸಾವಿಲ್ಲ ಮುಪ್ಪಿಲ್ಲ ಸುಸ್ಥಿರನೆಂಬಂತೆ ಕಲಿವುದು ಸದ್ವಿದ್ಯೆಗಳನು (ಇಂಚಾಪ. ೧೫೮-೭೯). [ಸಂ.]

**ಸುಸ್ವಪ್ನ** (ನಾ). ಒಳ್ಳೆಯ ಕನಸು; ಶುಭಸೂಚಕವಾದ ಸ್ವಪ್ನ: ಸುಸ್ವಪ್ನಂಗಾಣುತ ಮಂಗಲಗೀತಸ್ವನಮಂ ಕೇಳ್ವ (ಜಯಕಾ. ೨-೫೫). [ಸಂ.]

**ಸುಸ್ವರ** (ನಾ). ೧. ಇಂಪಾದ ಧ್ವನಿ; ಉತ್ತಮವಾದ ಧ್ವನಿ: ಕಾಗೆ ಸಾಕಿದ ಕೋಗಿಲೆಯು ಮಱಿ ಕೂಗುವುದು ಸುಸ್ವರದೊಳಲ್ಲದೆ ಕಾಗೆಯಂದದಿ ಕಾವು ಕಾವೆಂದಱಚುವುದೆ (ಬಸಪು. ೩-೭೯); ಸ್ಫುಟ, ಸುಸ್ವರ, ಯಥಾಸ್ಥಾನ ವಾಕ್ಯಪ್ರಧಾನವಾದ . . . ಉದ್ಗ್ರಂಥಗಳು ಅನೇಕ ರಾಜ್ಯತತ್ವಗಳನ್ನು ಶಾಸ್ತ್ರರೀತಿಯಾಗಿ ಪ್ರತಿಪಾದಿಸಿವೆ (ಭಾರದ. ೩೭೯). ೨. [ಸಂಗೀತ] ರಾಗದ ಲಕ್ಷಣಗಳಲ್ಲಿ ಒಂದು: ಸ್ವರ ಶ್ರುತಿ ಗಮಕಂಗಳಿಂ ಪುಟ್ಟಿದ ಗೀತಮಾದೊಡೆ ಸ್ವರ ಸುಸ್ವರ ಸುರಾಗ ಮಧುರ ಅಕ್ಷರ ಅಲಂಕಾರವೆಂಬಾಱು ಲಕ್ಷಣಮುಳ್ಳುದಾಗಿಹುದು (ವಿವೇಕ. ೧೮೭). ೩. [ಜೈನ] ನಾಮಕರ್ಮಪ್ರಕೃತಿಗಳಲ್ಲಿ ಒಂದು: ಸ್ಥಿರಾಸ್ಥಿರ ಶುಭಾಶುಭ ಸುಸ್ವರದುಸ್ವರ . . . ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೭-೪೯ ವ); ಸುಭಗ ದುರ್ಭಗ ಸುಸ್ವರ ದುಃಸ್ವರ . . . ಗತಿನಾಮಕರ್ಮಂ ಚತುರ್ವಿಧಮಕ್ಕುಂ (ಗೊಮ್ಮಸಾ. ೩-೭). [ಸಂ.]

**ಸುಸ್ವಸ್ಥ** (ನಾ). ಚೆನ್ನಾಗಿರುವವನು; ಆರೋಗ್ಯದಿಂದಿರುವವನು: ಖಿಡ್ಗದಿಂ ಸುಸ್ವಸ್ಥರ್ ಕೆಲರೆಂಬ ಕೌತುಕಮಿದೇಂ ಪ್ರೋದ್ದಾಮನೋ ಬಾಳೆಯಂ (ಎಕ. VIII, ಸಾಗರ. ೧೫-೩೦; 1218). [ಸಂ.]

**ಸುಸ್ವಾಗತ** (ನಾ). ಬಂದವರಿಗೆ ಶುಭ ಕೋರಿ ಬರಮಾಡಿಕೊಳ್ಳುವುದು; ಸಂತೋಷದಿಂದ ಸ್ವಾಗತಿಸುವುದು: ಸನ್ಮಾನ್ಯನೆನಗೆ ನೀಂ . . . ನಾಂ ತಪಸ್ವಿನಿಯಿಲ್ಲಿ, ನಿನಗೆ ಸುಸ್ವಾಗತಂ! (ಚಿತ್ರಾಂಗ. ೩೫-೫೭). [ಸಂ.]

**ಸುಹರಿ** (ನಾ). [ಸಂಗೀತ] ಒಂದು ಬಗೆಯ ರಾಗ: ಕೌಶಿಕ ವೇಳಾವಳಿ . . . ಸುಹರಿ . . . ಮೂವತ್ತುನಾಲ್ಕು ರಾಗಂಗಳ್ (ವಿವೇಕ. ೨೩೩). [ಸಂ.]

**ಸುಹಸ್ತ** (ನಾ). ೧. ಶುಭಹಸ್ತ: ಸಂಗಮದೇವಗಳ ವಿದ್ವಾಂಸುಗಳ ಸುಹಸ್ತದ ಬರಹಂಗಳು (ಸೌಇಇ. XX, ೨೩೨-೬೩; 1412); ನೋಡಿದಳುಭಯಸುಹಸ್ತರೇಖೆಯಂ (ಮೋಹತ. ೨೭-೭). ೨. ಜಾಗ್ರತೆಯಿಂದ ಬಾಣಬಿಡುವವನು; ಬಿಲ್ವಿದ್ಯೆಯಲ್ಲಿ ಕುಶಲ: ''ಬೇಗಸುವಂ ಸುಹಸ್ತನಕ್ಕುಂ'' (ಮಂಗರಾ. ೮೮-೩೭). [ಸಂ.]

**ಸುಹಾಸಿನಿ** (ನಾ). ಮೋಹಕವಾದ ನಗೆಯುಳ್ಳವಳು: ಅವಳು ಸುಭಾಷಿಣಿ ಮಾತ್ರವಲ್ಲ, ಸುಹಾಸಿನಿಯೂ ಹೌದು (ಬಂಕಿಮ. ೧೧೯). [ಸಂ. ಸುಹಾಸಿನೀ]

**ಸುಹಾಹೆ** (ನಾ). = ಸುಹರಿ(?): ಗಹಗಹಿಕೆವಡೆದ ವಹಣೆಯ ಸು[ಪಾಠಾಂ. ಸ]ಹಾಹೆ ಝುಂಪೆಯದೊಳಮರ . . . ಮೂರ್ತಿವಡೆದುದು ರಾಗಂ (ಯಶೋಚ. ೨-೨೯). [?]

**ಸುಹಿತ** (ಗು). ೧. ಒಳ್ಳೆಯ; ಯೋಗ್ಯವಾದ. ೨. ವಂದಿಸಲು ಯೋಗ್ಯವಾದ. ೩. ಆತ್ಮೀಯವಾದ; ಗಾಢತೆಯ. ೪. ತಣಿದ; ತೃಪ್ತಿಹೊಂದಿದ. (ನಾ). ೫. ಅರ್ಹನಾದವನು; ಯೋಗ್ಯ: ಅಹಿತರಾದಡೆ ಲಿಂಗಸಂಗದೊಳಿಹಡೆ ಸುಹಿತರ ಭಾವದಿಂ ಕಂಡಿಹುದು (ಬಸಪು. ೪-೭೩). [ಸಂ.]

**ಸುಹೃಜ್ಜನ** (ನಾ). ಮಿತ್ರವರ್ಗ; ಆತ್ಮೀಯ ಜನ: ಪುಟ್ಟಿತೋ ಮತ್ಸುಹೃಜ್ಜನದಿಂ ಪೋಣ್ ತೊಡರ್ದತ್ತೊ ವಿಸ್ಮಯಮಿದೇಂ ಪೇೞೆಂಬುದುಂ (ಆದಿಪು. ೩-೨೪); ಸುಹೃಜ್ಜನದಯಿತಂ . . . ಕುಳೀರಸಂಭವಂ (ಜಾತತಿ. ೧೭-೪). [ಸಂ.]

**ಸುಹೃತ್ತು** (ನಾ). ೧. ಮಿತ್ರ; ಗೆಳೆಯ: ಪೊಲೆಲೊಳ್ ಸಂದಿರ್ದ ಭಾಸ್ವತ್ಸುಹೃದ್ವಲಕಂ ಮಾರ್ವಲಕಂ . . . ತೋಱುವಂ (ಪಂಪಭಾ. ೩-೩೩). ೨. [ಜ್ಯೋತಿ] ಲಗ್ನದಿಂದ ನಾಲ್ಕನೆಯ ಸ್ಥಾನ: ಸುಹೃದ್ಗೃಹಸ್ಥಾಯಿಯಾಗೆ ತತ್ಕಾಲದೊಳಾ ಗ್ರಹಮಂತದು ತಾತ್ಕಾಲಿಕ ಸುಹೃದ್ಗ್ರಹಂ (ಜಾತತಿ. ೨-೧೭). [ಸಂ. ಸುಹೃತ್]

**ಸುಹೃತ್ವ** (ನಾ). ಗೆಳೆತನ; ಸಖ್ಯ: ಅರುಣಾಬ್ಜಪತ್ರದೆ ತದಕ್ಷಿಸುಹೃತ್ವಮನಾಂತುದಂತದುಂ ಕುಸುಮಕಳಂಬನಂಬು ಬಗೆಗುಂದಿಸಿದತ್ತದುಮಬ್ಜಗಂಧಿಯಾ (ರಾಜಶೇ. ೧೧-೧೩೯). [ಸಂ.]

**ಸುಹೃದ** (ನಾ). ಒಳ್ಳೆಯ ಹೃದಯವುಳ್ಳವನು; ಸಹೃದಯ: ಪ್ರಳಯವು ನೀನಿರದಿರೆ; ನೀನಿದ್ದುದು ಪ್ರಣಯವಿಧೀ ಸುಹೃದನೆ ಬಾ ಉದಯಿಸು ನೀ; ನೀನೇ ಹೃದಯನಿಧೀ (ಅರಳು. ೪೨-೧೧). [ಸಂ.]

**ಸುಹೃದಯ** (ನಾ). = ಸುಹೃದ: ಶೋಕಂ ಸುಹೃದಯರಿಂದಕ್ಕುಮುಶನನವ ರೋಹಿಣಿಯೊಳ್ (ಜಾತತಿ. ೯-೨೮). [ಸಂ.]

**ಸುಹೃದ್ಯ** (ಗು). ೧. ಆತ್ಮೀಯವಾದ. (ನಾ). ೨. ಆತ್ಮೀಯವಾದುದು: ಗದ್ಯಪದ್ಯಾನಿಕರದಿಂದನವದ್ಯಕಾವ್ಯಂಗಳಿನಲರ್ದು ಸುಹೃದ್ಯಮಾಗಲು ಸತ್ಯವೀಂದ್ರರು ಕೀರ್ತಿಸುತ್ತಿರಲು (ಬಸಪು. ೨೭-೭). [ಸಂ.]

**ಸುಹೇತಿ** (ನಾ). ಬೆಂಕಿ; ಅಗ್ನಿ: ''ಅಗ್ನಿಯ ವಿಶಾಲ ಕಾಂತಿ ದ್ಯೋತಿ ಜ್ಯೋತಿಸ್ಸುಹೇತಿ ಶಿಖೆಯರ್ಚಿ ಪ್ರಭಾಖ್ಯಮಕ್ಕುಂ'' (ಮಂಗರಾ. ೧೪-೮). [ಸಂ.]

**ಸುಳರಂಬೆಱು** (ಕ್ರಿ). ಮುದುಡಿಕೊಳ್ಳು: ಪಾಂಡವರೆಂಬರೇಗಹನಮೆಂಬಾ ದರ್ಪದಂತಾಜಿಯೊಳ್ ಸುಳರಂಬೆತ್ತಿರೆ ಸತ್ತರನ್ನಿನಿಬರುಂ ತಮ್ಮಂದಿರುಂ ಮಕ್ಕಳುಂ (ಗದಾಯು. ೨-೧೨). [P ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ 'ಸುರುಳಂಬೆಱು' ಎಂಬುದರ ಅಕ್ಷರಪಲ್ಲಟ ರೂಪ]

**ಸುಳಾದಿ** 'ಸೂಳಾದಿ' ನೋ.

**ಸುಳಿ$_1$** 'ಸುೞಿ$_1$' ನೋ.

**ಸುಳಿ$_2$** 'ಸುೞಿ$_2$' ನೋ.

**ಸುಳಿಗಾಳಿ** 'ಸುೞಿಗಾಳಿ' ನೋ.

**ಸುಳಿಗುರುಳ್** 'ಸುೞಿಗುರುಳ್' ನೋ.

**ಸುಳಿಗುರುಳು** 'ಸುೞಿಗುರುಳ್' ನೋ.

**ಸುಳಿಗೊಳ್** 'ಸುೞಿಗೊಳ್' ನೋ.

**ಸುಳಿಗೊಳು** 'ಸುೞಿಗೊಳ್' ನೋ.

**ಸುಳಿಘಾಳಿ** 'ಸುೞಿಗಾಳಿ' ನೋ.

**ಸುಳಿತರ್** 'ಸುೞಿತರ್' ನೋ.

**ಸುಳಿದಿರುಗಿಸು** (ಕ್ರಿ). ಸುರುಳಿ ಸುತ್ತಿಸು: ಚಿತ್ರಭವನದನರಿದು ಭೇರುಂಡನಂ ಕಳುಹಲತ್ತನಂದತ್ತ ಪಿಡಿದೆತ್ತಿ ಗಗನಾಂಗಣದಿ ಸುತ್ತಿ ಸುಳಿದಿರುಗಿಸುತೆ ಖಗಮೃಗ ಸಮೂಹಕ್ಕೆ ತುಚ್ಛನಾಗಿಸಿ (ನವಮೋ. ೧೨-೮೫). [ಸುಳಿ$_2$ (< ಸುೞಿ$_2$) + ತಿರುಗಿಸು]

**ಸುಳಿದಿರುಗು** (ಕ್ರಿ). ಸುರುಳಿ ಸುತ್ತು: ಕಳಯೇರುತಿಹ ಕರಣವಿಳಿವಶ್ರುದಳದ ಝರಿ ಸುಳಿದಿರುಗಿ ಹೊಡೆಮುರಿವ ಪುಳಕಂ (ಕೃಕವ. ೧-೫-೪).

[ಸುಳಿ$_2$ (< ಸುೞಿ$_2$) + ತಿರುಗು$_1$]

**ಸುಳಿದೆಗೆ** (ಕ್ರಿ). ಕುಡಿಯಾಗು; ವೃದ್ಧಿಯಾಗು: ಎನ್ನವಗುಣವೆಂಬ ಕಸವ ಕಿತ್ತು ಸಲಹಯ್ಯಾ ಲಿಂಗತಂದೆ ಸುಳಿದೆಗೆದು ಬೆಳವೆನು (ಬಸವ. ೫೦); ನಳಿದೋಳಿನಾಕೆ ತಾ ಸುಳಿದೆಗೆದು ಬೆಳೆದಿಹಳು (ಸರ್ವಜ್ಞ. ೨೦೯೮). [ಸುಳಿ$_2$ (< ಸುೞಿ$_2$) + ತೆಗೆ$_1$]

**ಸುಳಿನಾಗ** (ನಾ). ನಾಗರದಲ್ಲಿ ಒಂದು ಬಗೆ: ನಾಲೀಗೇ ಮೇಲೇ ಗೆಜಲಿಕ್ಕಿ ಹುತ್ತಿಕ್ಕಿ ನಿನ್ನತ್ತಿಲ್ಕಾಡಾನೇ ಎಳೆನಾಗಾ ಸುಳಿನಾಗಾ ಮುತ್ತೀನ ನಾಮಾದಾ ಮುದಿನಾಗಾ (ಹುಟ್ಟಪ. ೬೭). [ಸುಳಿ$_2$ (< ಸುೞಿ$_2$) + ನಾಗ]

**ಸುಳಿನಾಭಿ** (ನಾ). ಸುಳಿಯಂತಿರುವ ಹೊಕ್ಕುಳು; ವರ್ತುಲಾಕಾರದ ನಾಭಿ: ಬೆಳಗಾಯ್ಮೊಲೆಯ ಬೆಳಂತಿಗೆಗಣ್ಣಳ ಸುಳಿನಾಭಿಯ . . . ಲಲನೆಯರ ವಿಲಾಸಂ (ಜಯಕಾ. ೨-೩); ರಾಮಣೀಯತೆವೆತ್ತ ಸುಳಿನಾಭಿ ಕುಚಮಧ್ಯಸೀಮೆಯನೊಲಿದೀಕ್ಷಿಸಲು (ವೋಹತ. ೨೩-೨೧). [ಸುಳಿ$_2$ (< ಸುೞಿ$_2$) + ನಾಭಿ]

**ಸುಳಿನುಡಿ** (ನಾ). ಸುತ್ತಿ ಬಳಸಿ ಆಡುವ ಮಾತು; ಬಳಸುಮಾತು: ಹಳದು ಹಂಗಿಸುವಂಥ ಹಗೆಯ ಮಾತನು ತಾಳು ಸುಳಿನುಡಿ ಕುಹಕ ಕುಮಂತ್ರವನು ತಾಳು (ಜಗದಾ. ೧೧೧). [ಸುಳಿ$_2$ (< ಸುೞಿ$_2$) + ನುಡಿ$_2$]

**ಸುಳಿಮಿಂಚು** (ನಾ). ಸುಳಿದು ಬರುವ ಮಿಂಚು: ಸುಳಿಮಿಂಚುಮಾವರಿಸೆವಪ್ಪ ವಿಟ್ಟಂತೆನ್ನ ಲಲಿತಪುತ್ತಳಿಯ ಪೊಂಬಿಸಿಲಿನೊಳಿಡಲು (ನವಮೋ. ೨-೩).

[ಸುಳಿ$_1$ (< ಸುೞಿ$_1$) + ಮಿಂಚು$_2$]

**ಸುಳಿಯೆಲೆ** 'ಸುೞಿಯೆಲೆ' ನೋ.

**ಸುಳಿಯೇಱು** 'ಸುೞಿಯೇಱು' ನೋ.

**ಸುಳಿರ್ವಾಯು** (ನಾ). ಸುಳಿಯಾಗುವಂತೆ ಸುತ್ತಿ ಬೀಸುವ ಗಾಳಿ; ಸುಂಟರಗಾಳಿ: ಶಿವನಿರ್ಪ ವನವಂ ಪೊಕ್ಕು ಸುಳಿರ್ವಾಯು ಸುತ್ತಿ ಸುರಗಣರ ಕಣುದೆರೆಯಲೀಸದೆ (ನವಮೋ. ೨೯-೬೩). [< ಸುಳಿವಾಯು]

**ಸುಳಿವಟ್ಟೆಗ** (ನಾ). (ಆಲಂ) ಮೋಸಗಾರ; ವಂಚಕ: ನಿಲ್ಲಂ ಸುಳಿವಟ್ಟೆ ಗರ್ಪಿಡೆಯೊಳ್ಗಿಲ್ಲಂ ಸತ್ತಿಗರಂ ಮಱೆದೆಂದು ಕೊಲ್ಲಂ ಜಱುಚಂ ಬಾಂದಲೆಯಂಗೀಯದೆ ನಲ್ಲಮರ್ದುಣಿಸಂ ಒಲ್ಲಂ (ಉದ್ಭಟ. ೨-೮೫). [ಸುಳಿ$_2$ (< ಸುೞಿ$_2$) + ಬಟ್ಟೆಗ$_1$]

**ಸುಳಿವಳಿ** (ನಾ). ಸುಳಿದಾಟ; ಓಡಾಟ: ಮಾನಿಸರ ಸುಳಿವಳಿಯಿಲ್ಲ (ಗುರುಚಾ. ೮-೩೪). [ಸುಳಿ$_2$ (< ಸುೞಿ$_2$) + ಬಳ್ಳಿ$_2$ (< ಬೞಿ$_3$)]

**ಸುಳಿವಾಯು** (ನಾ). = ಸುಳಿರ್ವಾಯು: ಕೆದರಿ ತರುನೀಕ ಸುಳಿವಾಯುವಿಂ ಮೊರೆದೆದ್ದು . . . ಗಗನಾಂಗಣದಿ ಸುತ್ತಿವರಿವುತಿರ್ದುವು (ನವಮೋ. ೨೯-೬೨).

[ಸುಳಿ$_2$ (< ಸುೞಿ$_2$) + ವಾಯು]

**ಸುಳಿವಾಳೆ** (ನಾ). ೧. ಸುಳಿಯೊಡೆದ ಬಾಳೆ; ಎಳೆಯ ಬಾಳೆ; P ಗೊನೆ ಹೊರಡದ ಚಿಗುರುಬಾಳೆ: ಸುಳಿವಾಳೆ ಝಳ ತಾಗಿದವೊಲುದರಜ್ವಾಲ ನೆತ್ತಿಗೆ ನಿಲುಕೆ ಹಲುಬಿದಳಬಲೆ ಬಿಸುಸುಯ್ದು (ಕುಮ್ಮಾವಿ. ೩-೫೪); ಎಳೆಯ ಬಿದಿರಿನ ಬಣ್ಣ ಸುಳಿವಾಳೆಲೆಯ ಬಣ್ಣ ಮೊಳೆಗಜ್ಜಿಕೆವಣ್ಣ ಪೊಂಬಣ್ಣ ಮೆಯ್ಯಬಲೆಯರ್ ಸುಳಿಯೆ (ಚಿಬಪು. ೩೭-೪೭). ೨. ಎಳೆಯ ಬಾಳೆಯ ಎಲೆ: ಸುಳಿವಾ[ಪಾಠಾಂ. ಹಾ]ಳೆಯಂ ಹರಹಿ ಸಂಪಳೆಯನೊದಗಾಗಿಯೆಱೆದು ಮಡಕೆಯ ಮುಚ್ಚಿಯಟ್ಟೊಡುದ್ದಿನ ಕಡುಬುವೆಸರ ಹಡೆದು ಮೃದುವಹುದು (ಸೂಪಶಾ. ೧-೭೨).

[ಸುಳಿ$_2$ (< ಸುೞಿ$_2$) + ಬಾಳೆ$_1$ (< ಬಾೞೆ)]

**ಸುಳಿವು** 'ಸುೞಿವು' ನೋ.

**ಸುಳಿವೊಕ್ಕುಳು** 'ಸುೞಿವೊರ್ಕುೞ್' ನೋ.

**ಸುಳಿಸು** 'ಸುೞಿಯಿಸು' ನೋ.

**ಸುಳಿಸುತ್ತು** (ಕ್ರಿ). ತಿರ್ರನೆ ತಿರುಗು; ವರ್ತುಲವಾಗಿ ಚಲಿಸು: ವಿಪರೀತವಾದ ನಕ್ಷತ್ರರಾಶಿ ಒಂದೆಡೆ ನೆಲಸಿ ಸುಳಿಸುತ್ತುವಂತೆ ಸುತ್ತುತ್ತಿದ್ದರೆ ನಾವು 'ತೇಜೋರಾಶಿ' ಎನ್ನುತ್ತೇವೆ (ಆಕಾಶ. ೬೩). [ಸುಳಿ$_2$ (< ಸುೞಿ$_2$) + ಸುತ್ತು$_1$]

**ಸುಳು$_1$** 'ಸುಳುವು$_2$' ನೋ.

**ಸುಳು$_2$** (ನಾ). ಜಾಡು; ಗುರುತು: 'ಸುಳುವಾತು' ಪರಾ. [< ಸುೞಿವು]

**ಸುಳುದಾರಿ** (ನಾ). ಸುಲಭವಾದ ಹಾದಿ, — ಮಾರ್ಗ: ಹೊರಜಗವನೊಳಕೊಳುವ ಸುಳುದಾರಿಯಳುನಗುವು (ಮಂಕುತಿ. ೪೩೩). [ಸುಳು$_1$ (< ಸುಳುವು$_2$) + ದಾರಿ]

**ಸುಳುಜ್ವರ** (ನಾ). ಬಿಟ್ಟುಬಿಟ್ಟು ಬರುವ ಜ್ವರ: ಬಿಟ್ಟುಬಿಟ್ಟು ಬರುವ ಜ್ವರಕ್ಕೆ:- ಬೇವಿನ ಒಳನಾರು ಶುಂಠಿ ವಿಷ್ಣುಕ್ರಾಂತಿ ಇವ ಕಷಾಯವಂ ಕಾಸಿ ಹಿಪ್ಪಲಿಯ ಪ್ರತಿಪಾಕವಿಕ್ಕಿ ಕುಡಿಯೆ ಸುಳುಜ್ವರ ಮಾಣ್ಬುಂ (ವಿಷವೈ. ೧೧೩). 'ಸೂಟ್ಜ್ವರ' ಪರಾ.

[P ಇದು 'ಸೂಳುಜ್ವರ' ಎಂಬುದರ ಅಪಲಿಖಿತ]

**ಸುಳುವಾತು** (ನಾ). ಸುಳಿವಿನ ನುಡಿ; ಗೊತ್ತುಹಚ್ಚುವ ಮಾತು: ಇವನಾರಿವ ತಳಕಾಡ ಮನ್ನೆಯ ಮತ್ತಿವನಾರು ಸೋಸಲೆಯವನು ಇವನಾರು ರಂಗಸಮುದ್ರವಾಳುವ ನೆಂದವರೊಳಾದುದು ಸುಳುವಾತು (ಕಂಠವಿ. ೨೫-೭೧). [ಸುಳು$_2$ + ಮಾತು$_1$]

**ಸುಳುವು$_1$** 'ಸುೞಿವು' ನೋ.

**ಸುಳುವು$_2$**, ಸುಳು$_1$ (ನಾ). ಸುಲಭ: (೬). **ಸುಳು$_1$**: ಸುಲಭ – ಸುಳು (ಹೊಸುಗ. ೧೧೮). ಸುಳುವಾಗಿ = ಸುಲಭವಾಗಿ: ನೂರೈವತ್ತು ಹೊನ್ನು ಬೆಲೆಯಾಗುವ ಜಾತಿಯ ಕುದುರೆಯನ್ನು ಮಂಕುಬೂದಿ ಹಾಕಿ ಎತ್ತಿಕೊಂಡು ಹೋಗುವ ಹಾಗೆ ನಾವು ಎಷ್ಟು ಸುಳುವಾಗಿ ಐದು ಹೊನ್ನಿಗೆ ತೆಗೆದುಕೊಂಡು ಹೋಗುತ್ತಿದ್ದೇವೆ (ನಗಗ. ೨೦).

[ದೇ. ‖ ತಮಿ. ಚುಳುವು; ತೆಲು. ಚುಲುಕ, ಸುಳುವು, ಸುಲುವು; ಕೋತ. ಚುಳ್]

**ಸುಳುವುಗೇಡಿ** (ನಾ). (ಆಲಂ) ದಡ್ಡ; ಬುದ್ಧಿಗೇಡಿ: ಸುಳುವುಗೇಡಿ ಕೈಯ್ಯಲ್ಲಿ ಸುಣ್ಣ ಕೊಟ್ಟರ ಬೆಣ್ಣೆಯೆಂದು ಬಾಯಲ್ಲಿ ಹಾಕಿಕೊಂಡ (ಗಾದ).

[ಸುಳುವು$_1$ (< ಸುೞಿವು) + ಕೇಡಿ$_1$]

**ಸುಳುಹು** 'ಸುೞಿವು' ನೋ.

**ಸುಳುಹುದಾರಿ** (ನಾ). ಗುರುತಿನ ದಾರಿ, — ಜಾಡು: ನೀರಿನಲ್ಲಿ ಸುಳುಹುದಾರಿಯೇ ಅವಶ್ಯವಾದಾಗ ಹೆದ್ದಾರಿಯನ್ನು ಕಾಣುವುದಾದರೂ ಸಾಧ್ಯವೆಲ್ಲಿ? (ಬಾಳಬ. ೨೫).

[ಸುಳುಹು (< ಸುೞಿವು) + ದಾರಿ]

**ಸುಳುಹುದೆಗೆ** (ಕ್ರಿ). ಸುಳಿವಿಲ್ಲದಂತಾಗು; ಮರೆಯಾಗು: ಯಾರಿಗೂ ಕಾಣದಂತ ಯಾವಾಗಲೋ ಸುಳುಹುದೆಗೆದಿದ್ದರು (ಬಳುಮ. ೨೨೧).

[ಸುಳುಹು (< ಸುೞಿವು) + ತೆಗೆ$_1$]

**ಸುಳ್ಳಾಲಗೆ** 'ಸುಳ್ಳುನಾಲಗೆ' ನೋ.

**ಸುಳ್ಳ$_1$** (ನಾ). ಸುಳ್ಳು ಹೇಳುವವನು; ಹುಸಿಕ: ಪಳ್ಳಿಯೊಳು ಕನ್ನವಿಕ್ಕಿದ

ಸುಳ್ಳನೆನಡಹಡಿಸಿ ಚಂಡಕರ್ಮಂ ಪಿಡಿದಂ (ಪುಣ್ಯಾಸ್ರ. ೯-೫೧); ಕಳ್ಳರಿಗೆ ಸುಳ್ಳರಿಗೆ . . . ಕೊಡುವವರು ಧರ್ಮಕ್ಕೆ ಎಳ್ಳಷ್ಟು ಕೊಡರು (ಸರ್ವಜ್ಞ. ೬೭೩); ಕಳ್ಳ, ಸುಳ್ಳರ ಗುರುವಾರು (ಇಂಬಾಪ. ೭೧-೪೨). [ಸುಳ್ಳು + - ಅ1]

**ಸುಳ್ಳ2** (ನಾ). ಒಂದು ಊರಿನ ಹೆಸರು: ಸುಳ್ಳಂ ಪೆರ್ಬಳ್ಳಿ ನಾಮಗ್ರಾಮಾನಾಂ ಮಧ್ಯೇ ಬೆಪ್ಪಟ್ಟಿ ನಾಮಗ್ರಾಮೋ (ಎಇ. IX, ೨೦೪-೬೦; 750). [?]

**ಸುಳ್ಳಾಡು** (ಕ್ರಿ). ಸುಳ್ಳು ಹೇಳು: ಸುಳ್ಳಾಡುವುದು ಅವನಿಗೆ ಅನ್ನ ನೀರು (ಚಕರಾ. ೧೮೪); ನೀವು ಸುಳ್ಳಾಡುವಿರಾ, ದೇವರು? (ಚಿಟ್ಟೂ. ೫೪-೨೫). [ಸುಳ್ಳು + ಆಡು1]

**ಸುಳ್ಳಿ** (ನಾ). ಸುಳ್ಳು ಹೇಳುವವಳು: ಅವಳು ಬಹಳ ಸುಳ್ಳಿ (ರೂಢಿ). [ಸುಳ್ಳು + - ಇ2]

**ಸುಳ್ಳಿಗೋಡು** (ನಾ). ಒಂದು ಊರಿನ ಹೆಸರು: ಬಲಕನಾಡ ಸುಳ್ಳಿಗೋಡಂ ದೇವಾರಕ್ಕೆ (ಎಕ. VIII, ಸಾಗರ. ೪೫-೧೦; ಸು. 950). [?]

**ಸುಳ್ಳಿಯೂರ್** (ನಾ). ಒಂದು ಊರಿನ ಹೆಸರು: ನೆಂಗಿಯೂರ್ನ್ನಪಳ್ಳಿಸಹಿತ ಸ್ಸುಳ್ಳಿಯೂರ್ನ್ನಾಮಗ್ರಾಮೋ (ಎಇ. V, ೨೦೫-೬೯; 757). [ಸುಳ್ಳಿ? + ಊರ್]

**ಸುಳ್ಳಿವರ್** (ಕ್ರಿ). (?): ಬಡಗಿಯಂತೆ ಮರಕುಟಿಗಂ ಬುಧ್ರಿಗಟ್ಟಳಂತೆ ಮರಳಿ ಸುಳ್ಳಿವಂದ ನೆರವಿಯಂತೆ ಬಱುಳಿ (ಬಂಹರಿ. ೨-೩೮ ವ). [?]

**ಸುಳ್ಳಿವೊಲೆಯ** (ನಾ). ಕ್ಷುದ್ರನಾದ ಚಂಡಾಲ (?): ಅಂತಸ್ತಮಯಮಾಗೆ ಸ್ಯಂಧವನುಮೊಳ್ಳೇಱಿದ ಸುಳ್ಳಿವೊಲೆಯ [ಪಾಠಾಂ. ಪೊಳ್ಳಿವೊಳೆಯ]ನಂತೆ ಪೊಚ್ಚಬದ್ದವಣಾಂ ಬೊಯಿಸಿದಂ (ನೇಮಿಪು. ೧೨-೫೨ ವ). [ಸುಳ್ಳಿ? + ಪೊಲೆಯ]

**ಸುಳ್ಳು** (ನಾ). ಹುಸಿ; ಅನೃತ: "ತೊದಳೆಂದುಂ ಸುಳ್ಳೆಂದುಂ ಅನೃತಂ" (ಕಶಸಾ. ೬೮-೫೪೧); ಉನ್ನತವಾದಾಭರಣವ ಕೊಡುವೆನು ನನ್ನಾಣೆ ಸುಳ್ಳ ನಾ ಪೇಳೆ (ಕಂನವಿ. ೯-೪೧); ದೆವ್ವ ಅನ್ನುವುದೇ ಸುಳ್ಳು (ಕಳಹು. ೫೮). [ದೇ. II ತುಳು. ಸುಳ್ಳು]

**ಸುಳ್ಳುಂಗಾಱ, ಸುಳ್ಳುಗಾರ** (ನಾ). ಸುಳ್ಳು ಹೇಳುವವನು; ಹುಸಿಕ: ಕಳ್ಳುಣಗೆ ತತ್ವಸಾರಂ ಸುಳ್ಳುಂಗಾಱಂಗೆ ಸವಣರೊಡನಾಟಂ (ಕವುಪಾ. ೮೨). **ಸುಳ್ಳುಗಾರ:** ಅವನೊಬ್ಬ ಸುಳ್ಳುಗಾರ (ರೂಢಿ). [ಸುಳ್ಳು + - ಕಾಱ]

**ಸುಳ್ಳುಕಾಳಗ** (ನಾ). (ಕಲಿಕೆಗಾಗಿ ಮಾಡುವ) ನಿಜವಲ್ಲದ ಯುದ್ಧ; ಹುಸಿಗಾಳಗ: ಊರ ಹೊರಗಿನ ಬಯಲಿನಲ್ಲಿ ನಡೆದಿರುವ ಸುಳ್ಳುಕಾಳಗವನ್ನು ನೋಡಹೋದನು (ಯದುರಾ. ೯೨). [ಸುಳ್ಳು + ಕಾಳಗ (< ಕಾಳೆಗ)]

**ಸುಳ್ಳುಗಾತಿ** (ನಾ). ಸುಳ್ಳು ಹೇಳುವವಳು: ಅವಳು ಮಹಾ ಸುಳ್ಳುಗಾತಿ (ರೂಢಿ). [ಸುಳ್ಳು + - ಕಾತಿ]

**ಸುಳ್ಳುಗಾರ** 'ಸುಳ್ಳುಂಗಾಱ' ನೋ.

**ಸುಳ್ಳುಗೊರವ** (ನಾ). ವೇಷಧಾರಿಯಾದ ತಪಸ್ವಿ ; ಕಳ್ಳಸಂನ್ಯಾಸಿ: ಡೊಂಬರಿಗೆ ಸುಳ್ಳುಗೊರವರಿಗೆ ಕೊಡುವವರು ಧರ್ಮಕ್ಕೆ ಎಳ್ಳಷ್ಟು ಕೊಡರು (ಸರ್ವಜ್ಞ. ೬೭೩). [ಸುಳ್ಳು + ಗೊರವ]

**ಸುಳ್ಳುತನ** (ನಾ). ನಿಜವಲ್ಲದುದು; ಕಪಟ: ಪಾಠಕ್ಕೆ ಬರುವ ರಾಕ್ಷಸರನ್ನು ತಾಳ್ಮೆಯಿಂದ ಸ್ವಾಗತಿಸುವ ಸುಳ್ಳುತನವಾದರೂ ಇದಕ್ಕೋಸ್ಕರವೇ (ಹೊಸಟ್ಟಿ. ೧೨೫). [ಸುಳ್ಳು + - ತನ]

**ಸುಳ್ಳುನಾಲಗೆ, ಸುಳ್ನಾಲಗೆ** (ನಾ). ಸುಳ್ಳಾಡುವ ನಾಲಗೆ: ಸುಳ್ಳುನಾಲಗೆಯ ನಡುಗಿಸುತರವನೂರೆಗುಂ (ಕಾಲೂರ. ೬೬-೧೪೧). **ಸುಳ್ನಾಲಗೆ :** ನಾನೂ ಅಲ್ಲಿದ್ದಿದ್ದರೆ ಅವನ ಸುಳ್ನಾಲಗೆ ಕಿತ್ತುಕೊಳ್ಳುತ್ತಿದ್ದೆ (ಸುಗುಗಂ. ೧೬೫-೧೭). [ಸುಳ್ಳು + ನಾಲಗೆ]

**ಸುಳ್ಳುಸಾಕ್ಷಿ** (ನಾ). ನಿಜವಲ್ಲದ ಪುರಾವೆ; ಮೋಸದ ಪ್ರಮಾಣ: ಅವರು ಕೇಸಿನಲ್ಲಿ ಸುಳ್ಳುಸಾಕ್ಷಿ ಹೇಳಿಸಿ ಸಿಕ್ಕಿಬಿದ್ದರು (ರೂಢಿ). [ಸುಳ್ಳು + ಸಾಕ್ಷಿ]

**ಸುಳ್ಳುಹೇಳು** (ಕ್ರಿ). ಹುಸಿ ನುಡಿ: ಆಗ್ಗ ಹಿಂದುಗಳು ಸುಳ್ಳುಹೇಳುತ್ತಿರಲಿಲ್ಲ (ಭಾರದ. ೩೮೮); ಸಾವಿರ ಸುಳ್ಳುಹೇಳಿ ಒಂದು ಮದುವೆ ಮಾಡು (ಗಾದ). [ಸುಳ್ಳು + ಹೇಳು (< ಪೇೞ್)]

**ಸುಳ್ಳೆತ್ತು** (ಕ್ರಿ). ಸುರುಳಿಯಾಗಿ ಎತ್ತು (?): ಬಾಲಮಂ ಸುಳ್ಳೆತ್ತಿಕೊಂಡು ಭೋರನೆ ಬರಲು (ಬಂಡೇರ. ದೇ. ೨೪೬-೫). [ಸುಳ್ಳು (< ಸುರುಳಿ1) + ಎತ್ತು1]

**ಸುಱಸ್, ಸುರ್ರು** (ನಾ). ಒಂದು ಅನುಕರಣ ಶಬ್ದ: ಸುಱ್ರೆಂದು ಬಾಣಗಳ್ಪಂದರಿಗಳನೆತ್ತಿ . . . ಚುಱ್ರನೆ ಕೊಂದಿಕ್ಕಿದವು (ಚಂಪ್ರಸಾಂ. ೮-೫೨). **ಸುರ್ರು :** ರಕ್ತಂಗಳಂ ಸುರ್ರು ಸುರ್ರೆಂದು ಸುರಿದು . . . ಘರ್ರೆಂದು ತೇಗಿ ಪರಸಿದವು ಶಿವದೂತರಂ (ವೀಶ್ಯಪು. ೨-೭-೪೮).

**ಸುಱ್, ಸುರಿ2, ಸೊಱ್** (ಕ್ರಿ). ಶಬ್ದವಾಗುವಂತೆ ಕುಡಿ; ಸಶಬ್ದವಾಗಿ ಹೀರು: "ಸುಱ್ – ಚೋಷಣೇ" (ಶಮಧಾ. ಮ); ಚೈಚ್ಚಿಮೃತವ ಸುಱಿಯಬೇಕು (ಶಿವಗೀ. ೧೮೬-೯೨೫); ಚಿದಮೃತಮಂ ಸುಱಿದು (ಉದ್ಭಟ. ೧೧-೫೬ ವ); ಅಹಿತನ ತಿಳಿರಕುತವನು ಸುಱಿಯೆನುತ (ಕುವ್ಯಾದ್ರೋ. ೧೭-೧೧). **ಸುರಿ2 :** ಪಾಯಸ ಚೆನ್ನಾಗಿತ್ತೆಂದು ಬಿಮ್ಮಗೆ ಸುರಿದಿದ್ದನು (ಸರಸ. ೯೨). **ಸೊಱ್ :** ಸೊಜ್ಜಿಗೆಯ ಪಾಯಸವ ಸೊಱ್[ಪಾಠಾಂ. ಸುಱ್]ದು (ಸಮ್ಮಕೌ. ೭-೨೮); ಪಂಬಲಿಸುವರು ಶಾಲ್ಯನ್ನವನೊಲ್ಲದೆ ಯಂಬಲಿಯನು ಸೊಱ್ವಂತೆ (ಕೃಷ್ಣಗೋ. ೧-೧೨). [ದೇ. II ತಮಿ. ಉಱಿಂಞ್ಚು; ಮಲ. ಉಱಿಂಜು; ತೆಲು. ಜುಱ್ರು; ಕುರುಖ್. ಸುರುಪ್ನ]

**ಸುಱಿಗ** (ನಾ). ಒಂದು ವಂಶದ ಹೆಸರು: ಸತ್ಯ ಸೌಚಾಚಾರ ಶೀಲಸಂಪನ್ನ ನಿಷ್ಪಜನವತ್ಸಲ . . . ಶ್ರೀ [ಸುಱಿಗ] ಚಾಮುಣ್ಡಂ (ಕಇ. I, ೧೬-೭; 919). [?]

**ಸುಱುಕಲ್ದನಿ** (ನಾ). (ದ್ರವ ಪದಾರ್ಥಗಳನ್ನು) ಕುಡಿಯುವಾಗ ಉಂಟಾಗುವ 'ಸೊರ್' ಎಂಬ ಧ್ವನಿ: ಬಾಯ್ವಱೆಯೊಳ್ ರಸನಾಗ್ರಪಲ್ಲವಂ ಮಱದು ಮಱಲ್ದು ಸುತ್ತಿ ಸುಱುಕಲ್ದನಿ ಪೆರ್ಚಿರೆ ನೃಪನೊಲ್ದು ನೋಡಿದಂ (ಲೀಲಾವ. ೫-೧೦೧). [ಸುಱುಕು + - ಅಲ್2 + ದನಿ1]

**ಸುಱುಕಿ** (ನಾ). ಒಂದು ಪ್ರದೇಶದ ಹೆಸರು: ಶ್ರೀ ಲೊಕ್ಕಿಗುಣ್ಡಿಯೊಳ್ಬಸದಿಯಂ ಮಾಡಿಸಿಯದಕ್ಕೆ ತಳವೃತ್ತಿಯೆಂದು ಕೊಟ್ಟ ಸುಱುಕಿಯ ಸೀಮೆ (ಸೌಇ. XI-೩, ೫೨-೫೬; ಸು. 1007). [?]

**ಸುಱುಕಿಡು** (ಕ್ರಿ). 'ಸುರುಕ್' ಎಂದು ಶಬ್ದಮಾಡು: ಕೋಣ . . . ದಿಟ್ಟಿಸುವ ಕಣು ನಟ್ಟ, ಕಿವಿ ಮರಳ್ದ ಮುಸುಡು ಸುಱುಕಿಟ್ಟು ಗುಱುಗುಱಿಪ ಮೂಗು . . . ಮಹಿಷಾಸುರನನದು ಪೋಲ್ತುದು (ಪಚಕಾ. ೫-೪೦); ಮೂಗಲರುತ್ತು ಸುಱುಕಿಟ್ಟು ಸೂಸ ನೊರೆ ಬಾಯಿಂ . . . ಪಾಯ್ದುದಿದಿರೊಳ್ ಶೈಲಪ್ರಭಂ ಸ್ಮರಭರ (ಶಬಶಂ. ३-५५). [ಸುಱುಕು + ಇಡು1]

**ಸುಱುಕು** (ನಾ). (ದ್ರವಪದಾರ್ಥಗಳನ್ನು) ಕುಡಿಯುವಾಗ ಅಥವಾ ಹೀರುವಾಗ ಉಂಟಾಗುವ ಶಬ್ದ: ಹಱುಕು ಹೋಳಿಗೆ ಲೇಸು ಮುಱುಕು ಹಪ್ಪಳ ಲೇಸು ಕುಱುಕುಱು ಕಡಲೆ ಬಲು ಲೇಸು ಪಾಯಸದ ಸುಱುಕು ಲೇಸು (ಸರ್ವಜ್ಞ. ೧೫೩೦). [< ಸುಱ್ + - ಕು]

**ಸುಱೂರ್** (ನಾ). ಒಂದು ಊರಿನ ಹೆಸರು: ಮಹೇನ್ದ್ರಮ್ ಅಜಯಿತ್ ಬಿರಿಯೂರ್ ಸುಱೂರ್ (ಷ್ಮಆಂ. ೧೯೨೧. ೧೦-೫೬; 963). [? + ಊರ್]

**ಸುಱ್ಱನೆ** (ಅ). ತಟ್ಟನೆ, ಸರಕ್ಕನೆ, ಬೇಗನೆ ಎಂಬರ್ಥದಲ್ಲಿ ಬಳಕೆಯಾಗುವ ಒಂದು ಅನುಕರಣಾವ್ಯಯ: ಭರದಿಂ ಸುಱ್ಱನೆ ಸುಯ್ಯೆ (ಲೋಕೋಪ. ೯-೨೦೩); ಬಡಗಿಯು ಸುಱ್ಱನೆ ಸುಗಿದಂಜಿ . . . ಭಯವಶದಿಂದಂ ಓಡಲಾಱದೊಂದು ಪೆರ್ಮರನನೇಱುವುದುಂ (ಧರ್ಮಾಮೃ. ೧೨-೧೫೫); ಬಿಸುನೆತ್ತರುಚ್ಚಳಿಸೆ ಸುಱ್ಱನೆ ಪಾಯಿದಡೆ (ಎಕ. VIII, ಸಾಗರ. ೪-೧೬; 1193). [ಸುಱ್ + - ಅನೆ1]

**ಸುಟಬಂಟ** (ನಾ). ಚಂಚಲಸ್ವಭಾವದ ಯೋಧ; ಹೇಡಿ (?): ಶ್ರೀ ಪಿರಿಕಱ ಮಾರುಗಬಲರ ಚಟ್ಟ ಸುಟಬಣ್ಣರ ಸುಲ (ಎಕ. II, ೬೦-೩; 1100). 'ಸೂಳೆವಂಟ' ಪಠಾ. [P ಇದು 'ಸೂಳೆಬಂಟ' ಎಂಬುದರ ಅಪಲಿಪಿತ?]

**ಸುಟ್1, ಸುಳಿ1** (ಕ್ರಿ). ೧. ಗುಂಡಾಗಿ ಸುತ್ತು; ಚಕ್ರಾಕಾರವಾಗಿ ತಿರುಗು: "ಸುಟ್, ಭ್ರಮಣೇ, ಪರಿಭ್ರಮಣೇ— ಜಲಾವರ್ತೇ ಚ" (ಶಮಧಾ); ಈ ಮುಗುಳೊಳಮಱ ಮಾಟ್ಕೆಯನಱಿಸಿ ಸುಟ್ಟುವುದಳಿ ಕಲಕಲದೊಳ್ (ಕಪಿರಾ. ೩-೧೩೭); ಲತೆಯ ಮನೆಗಳೊಳೆ ತೆಱಂಬೊಳೆವಲರ ಬಸದೆ ಸುಟ್ಟುವಳಿಗಳ ಬಳಗದ ದನಿಗೆ ಕಿನಿಸಿ ಕಿಂಕಿಱಿವೋದಳ್ (ಪಂಪಭಾ. ೫-೪). ೨. ಕಾಣಿಸಿಕೊಳ್ಳು; ಗೋಚರವಾಗು: ದಂತಿಗಳ ಶರೀರದೊಳ್ ಸುಟ್ಟಿದು ಕೆತ್ತುವ ಪುಣ್ಗಳ ಬಾಯ್ಗಳಿಂದ ಪೊಲ್ಲೊಗೆವರುಣಾಂಬುಧಾರೆಗಳ್

(ಜಗವಿ. ೭-೮೩). ೩. **ತೀಡು; ಬೀಸು:** ಮುತ್ತುಗಳಂತಿರೆ ಸೂಸಿ ಪಾಯ್ವ ಶೀಕರದೊಳೆ ನಾಂದು ಸೇಡುಗೊಳುತಂ ಸುೞಿದೂದುವ ಗಾಳಿ (ಕಾವ್ಯಸಾ. ೭೮ ಶೂದ್ರಕ); ಪೆರ್ಚಿ ಸುೞಿದತ್ತಂದೊಂದು ಜಂಝಾನಿಳಂ (ಉದ್ಭಟ. ೭-೮೨); ಸುೞಿದು ಕುರುಳ್ಗಳೊಳ್ತೊಳಗಿ (ಚಕವಿ. ೧-೧೩). ೪. ಸುತ್ತಾಡು; ತಿರುಗಾಡು: ನಂದನಂಗಳೊಳ್ ಸುೞಿವ ಬಿರಯಿಯಿಂ ಕಂಪು ಕಣ್ಮಲೆಯೆ ಪೂತ ಸುರಯಿಯಿಂ (ಪಂಪಭಾ. ೩-೨೨ ರಗಳೆ); ಭವನನಂದನದೊಳ್ ಸುೞಿಯುತ್ತಿರಲ್ಕೆ ಪಿಂತನೆ ಮಱೆಯಿಕ್ಕಿ ಬಂದು ಕಡುಗೂರ್ತವೊಲೆನ್ನಯ ಬೆನ್ನನಪ್ಪುವಂ (ಕಾದಂಊ. ೩೦೪). ೫. ಮುತ್ತು; ಆವರಿಸು; ಕವಿ: ಮಾಯೆಯಿಂದಂ ಸುೞಿಯದ ತಪಮಂ ಪೂಣ್ಕೆ ನಿರ್ಮಾಯೆಯಿಂದಂ (ಧರ್ಮಾಮೃ. ೬-೨೩೩); ನಱುಸುಯ್ಗೆ ಸುೞಿವ ತುಂಬಿಯ ಮಱಿವಕ್ಕಿಯೋ (ಪುಷ್ಪಪು. ೯-೬೫). **ಸುೞಿ$_1$** : ೧. ಸುೞುವಿನೊಳಗೆ ಸುೞಿಯುತ್ತಲಿದ್ದೇನೆ ಸಿಲುಕಿಸದಿರಯ್ಯಾ (ಬಸವ. ೪೮); ಸುೞಿಯಬಹುದಂಬುಧಿಯ ನಡುವಣ ಸುೞಿಯೊಳಗೆ (ಕುಮ್ಮಾದ್ರೋ. ೪-೩೭). ೨. ಎಲ್ಲಿ ಸುೞಿದಡೆ ಅಲ್ಲಲ್ಲಿ ಉಪಾಧಿ ಬಿಡದಯ್ಯ (ಆದವ. ೧೩-೨೭); ಸಿರಿ ನಡೆವಂತೆಯಿಂದು ನಡೆವಂತೆ ಸುಖಂ ಸುೞಿವಂತೆ (ಪಂಪಾಶ. ೪೮); ನನ್ನ ಕಣ್ಣೆದುರು ಸುೞಿದಿರಿ ಅಂದ್ರ ಪೋಲೀಸನ ಬೆನ್ನಟ್ಟಿಸ್ತೀನಿ (ನಡೆದಾ. I, ೩೫೨). ೩. ಸುೞಿದು ಬೀಸುವ ಗಾಳಿ ಉರಿಯಾಯಿತ್ತವ್ವಾ (ಮಹಾದೇ. ಬ. ೪೩-೧೦೦); ಎರಲು ಸುೞಿದುದು ದೀಪಶಿಖಿಯ ಪರಿಹರಿಸಿದತಿಬಲದಬ್ಬರದ ನಿಷ್ಠುರತೆಗಂಜದೆ (ಕುಮ್ಮಾಕ. ೮-೧೪); ಗಿರಿಜೆಯ . . . ನಾಸಾನಿಲನ ಕಂಪು ಸುೞಿಯೆ (ಚಬಪು. ೧-೨). ೫. ನಸುಮೊರೆಯುತುಂ ತುಂಬಿ ಸುೞಿದಾಡೆ ಮೞೆದುದು ಮಾಗಿಯಪಜಯಂ ಮಧುವಿನ ಜಯಂ (ಪದ್ಮರಾ. ೮-೨); ಬಡಿಸಲೊಗ್ಗರಣೆಯಿಂಗಿನ ಕಂಪು ಸುೞಿದುದು ಬಹಿಃಸ್ಥಳಕೆ (ಮೋಪತ. ೩-೫೪).

[ದೇ. ‖ ತಮಿ. ಮಲ. ಚುೞಿ; ತುಳು. ಸುೞಿ, ಸುಲಿ; ತೆಲು. ಸುಡಿ]

**ಸುೞಿ$_2$, ಸುೞಿ$_2$ (ನಾ).** ೧. ಸುತ್ತುವುದು; ತಿರುಗುವುದು. ೨. ಸಮುದ್ರ, ನದಿ, ತೊರೆಗಳಲ್ಲಿಯ ಆಳವಾದ ಕಡೆಯಲ್ಲಿರುವ ತಿರುಗಣೆ; ಜಲಾವರ್ತ: "ಸುೞಿಯೆಂದು ಜಲಾವರ್ತಂ" (ಕಶಸಾ. ೫೩-೧೪೨); ಸುೞಿಯೊಳಗಿರ್ದ ಬೆಟ್ಟು ಪೊಱ ಪೊಣ್ಮುವಿನಂ ಲವಣಾಂಬುರಾಶಿ ಕುಕ್ಕುಟಗುದಿವಲ್ಲಿ (ಪಂಪಭಾ. ೧೧-೧೫೩); ಸುೞಿಯಂ ಪೞಿದೊಪ್ಪುವ ಪೊರ್ಕುೞ್ (ಕಬ್ಬಿಕಾ. ೧೨೧); ಘುಳುಘುಳನೇೞ್ಕೆ ಬೊಬ್ಬುಳಿಯನೀ ಸುೞಿಯಂ (ಚಕವಿ. ೧-೩೭). ೩. ದೇಹದಲ್ಲಿ ಕಾಣಿಸಿಕೊಳ್ಳುವ ಕೂದಲಿನ ಸುತ್ತು, — ಆವರ್ತ: ಮುಂದಲೆಯ ಸುೞಿಯಿಂದಕ್ಕುಂ ಕಳ್ಳಂ (ಲೋಕೋಪ. ೧೧-೨೫); ಅಪ್ಪುವು ಸುೞಿಗಳ್ ನೂಱುಭೇದದಿಂದಂ ತುರಗಕ್ಕೆ (ಅಶ್ವಶಾ. ೪-೧). ೪. ತೆಂಗು, ಬಾಳೆ ಮೊದಲಾದ ಸಸ್ಯಗಳ ಕುಡಿ,— ಎಳೆಯ ಚಿಗುರು: "ಸುೞಿ – ಕೆಲಸಗಳ್ಳಂ ; ಸಸಿಯ ಸುೞಿ" (ಶಮದ. ಪರಿ. ೧); ತಿಳಿನೀರ ತುಂತುರ್ವನಿಗಳಿಂ ಪೊರೆದೆಳೆವಾೞೆಯ ಸುೞಿಯ ಬಿಜ್ಜಣಿಗೆಗಳನಡಿಗಡಿಗೆ ಬೀಸಿಯುಂ (ಕಾದಂಪೂ. ೮೫೫). ೫. ಗುರುತು; ಜಾಡು: ಮೇಳದಂಕದಂತೆ ಸುೞಿಯುೞಿದು[ಂ] ಡೊಂಬರ ಕೋಡಗದಂತಾಡಿ (ಪಂಪಭಾ. ೬-೭೨ ವ). ೬. ಸೋಮಾರಿ; ಆಲಸಿ: "ಸುೞಿ – ಕೆಲಸಗಳ್ಳಂ; ಸಸಿಯ ಸುೞಿ" (ಶಮದ. ಪರಿ. ೧). **ಸುೞಿ$_2$** : ೨. ಖಳಿಕಟಿಲ ಬಿಱುವೊಯಿಲೊ ಸಿಡಿಲಿನ ಸುೞಿಯೊ ವ್ಯೋಮಸೆಯುರುಣವಾರಿಯೊ ಮಳೆಗಳಿಲ್ಲದ ಹೊನಲೊ ರಣದಲಿ ಚಿತ್ರವಾಯ್ತು (ಕುಮ್ಮಾದ್ರೋ. ೧೪-೭); ಶರಧಿಯ ಸುೞಿಗೆಣೆಯೆನಿಸುವ ನಾಭಿ (ಅಂಜಚ. ೭-೧೮೬); ಗಳೆಯ ಡೊಂಬತಿಯಾಟದಾ ಪರಿ . . . ಸುೞಿಯ ನೀರಿನ ತಲೆಯ ಹೂಗರಿ (ಕವಪು. ೮೯-೧೫). ೩. ದನವಿನ ಬೆಂನ ಸುೞಿಯ ಮೇಲೆ ಬರೆದರೆ ಮೂಱುದು (ಎಕ. XI, ಹೊಳಲ್ಕೆ. ೯೭-೩; ?); ಸಿಂಧೂದೇಶದ ಕುದುರೆಗಳನ್ನು ಆರಿಸಿಕೊಂಡನು . . . ಲಕ್ಷಣವಾದ ಹತ್ತು ಸುೞಿಗಳುಳ್ಳವು (ಪಚಭಾ. ೧೪೦). ೪. ಸಸಿ ಬಲಿದು ಹೊಸ ಸುೞಿ ತೋಱಿದಲ್ಲಿಯಲ್ಲದೆ ಆ ತುಷ ಪರ್ಣ ಬಿಡದು (ಮೋಳಮೂ. ೧೪೧-೫೪೦); ಎಳೆಯ ಬಾಳೆಯ ಸುೞಿಗೆ ಸೀಗೆಯ ಮುಳೆಯೊಡನೆ ಸರಸವೆ (ಕುಮ್ಮಾದ್ರೋ. ೧೨-೨೯); ಎಳೆಯ ಬಾಳೆಯ ಸುೞಿಯು ಅನಲನ ಪೊಯ್ಲಲಿ ನೊಂದವೋಲ್ (ನಳಚ. ೫-೨). ೭. ಸಂತಾನ; ಸಂತತಿ: ಸತ್ತು ಹುಟ್ಟುವ ಸುೞಿಯಲ್ಲದೆ ಮತ್ತೊಂದು ಗೊತ್ತು ಇಲ್ಲದೆ ಹೋಯಿತು (ಪುರಂದ. ೧-೧೭೧-೨). ೮. [ವ್ಯಾಕ] ಋಕಾರಕ್ಕೆ ಕಾಗುಣಿತದಲ್ಲಿ ಬರುವ ಚಿಹ್ನೆ ; ವಟ್ಟಸುೞಿ (ೃ): ಇದು ಋಕಾರದ ಸುೞಿ (ಸಂಶೋಧ. ೨೬); ಒತ್ತಕ್ಷರ 'ರಕಾರವು' ಕೆಳಗೆ ಸುೞಿಯೊಂದಿಗೆ ಪ್ರತ್ಯೇಕವಾಗಿ ಬಲಬದಿಯಿಂದ ಆರಂಭವಾಗಿ ಎಡಬದಿಯಲ್ಲಿ ಮೇಲೇರುತ್ತದೆ (ನೂಳಂಬ. ೮೦). [< ಸುೞ್$_1$./ ತಮಿ. ಮಲ. ಚುೞಿ; ಕೊಡ. ಚುೞಿ; ತುಳು. ಸುೞಿ; ತೆಲು. ಸುಡಿ]

**ಸುೞಿಗಾಳಿ, ಸುಳಿಗಾಳಿ, ಸುಳಿಘಾಳಿ (ನಾ).** ೧. ಸುಂಟರಗಾಳಿ; ಸುಟ್ಟುರೆ: ಇದು ಸುೞಿಗಾಳಿಯಿಂ ನೆಗೆದು ತೋಱುವ ಕಿಂಶುಕಪುಷ್ಪಪತ್ರಂ (ಚಂದ್ರಪ್ರ. ೯-೫). ೨. ಮೆಲ್ಲನೆ ಬೀಸುವ ಗಾಳಿ; ಮಂದಮಾರುತ: ಪುಣ್ಯದೇವತಾ ದೂತನವೋಲ್ ಸುೞಿಗಾಳಿಯೊಡನೆ ಹರ್ಷದ ಮೞೆ ಬರೆ (ಪಂರಾಮಾ. ೯-೧೭); ತಣ್ಪುವೇಱಿದ ಸುೞಿಗಾಳಿ (ಪುಷ್ಪಪು. ೨-೨೦). **ಸುಳಿಗಾಳಿ :** ೧. ನರರಥ ಸುಳಿಗಾಳಿಯಂತಿರೆ ತಿರುತಿರುಗಿದುದು ವಿಶ್ವತೋಮುಖದಿ (ಕುಮ್ಮಾಕ. ೧೪-೨೬); ಆಲವುದ ಸುಳಿಗಾಳಿಗೆ ಶೈಲ (ಜೀವಂಸಾಂ. ೧೭-೮೪); ವಿಶೇಷ ಸುಳಿಗಾಳಿ ಎದ್ದಾಗ ಸ್ನಾನವ ಮಾಡಲಾಗದು (ಸಕವ್ಯ. ೩೨). ೨. ಕಂಪುಗಳ ಜಾತಿಯಂ ಬೇಱೆಬೇಱೆ ಮೈದಿಸುತೆ ಸುಳಿಗಾಳಿ ಪೂವಸರದೊಳ್ ಮೞೆದುದು (ಚಬಪು. ೧೦-೩); ಅರಳೆತು ಹೂ ಸುಳಿಗಾಳಿಯ ಕಚಗುಳಿಗೆ (ಕಲ್ಲೋಲ. ೩೨-೧೧). **ಸುಳಿಘಾಳಿ :** ೧. ಹಳಚಿದರು ಸುಳಿಘಾಳಿಯಂತಿರೆ ಸುಳಿದು ಖಗಪತಿಯಂತೆ ಹೊಯ್ಲಲಿ ಬಳಸಿ ಬಿಗಿದೆಱಗಿದರು ಬಿಡೆಯದ ಮತ್ತಗಜದಂತೆ (ಕುಮ್ಮಾಗ. ೭-೨).

[ಸುೞ್$_2$ + ಗಾಳಿ$_1$]

**ಸುೞಿಗುರುಳ್, ಸುಳಿಗುರುಳ್, ಸುಳಿಗುರುಳು (ನಾ).** ಗುಂಗುರುಕೂದಲು; ಅಲೆಅಲೆಯಾದ ಕೇಶ: ಸುೞಿಗುರುಳ್ ಸೋರ್ಮುಡಿ ನೋಡಲ್ಕಾಡೆ ಸೊಗಯಿಕುಂ ದ್ರೌಪದಿಯಾ (ಗದಾಯು. ೮-೫೧); ಮೆಱೆವರ್ ಸುರ್ಕುಂಗುರುಳ ಸುೞಿಗುರುಳ ನಿಡುಗುರುಳುರುಳಿಗುರುಳ ತುಂಬಿಗುರುಳ ಗೋಪಸ್ತ್ರೀಯರ್ (ಜಗವಿ. ೪-೧೨೫). **ಸುಳಿಗುರುಳ್:** ಸುಳಿಗುರುಳಾಡೆ ತೋಳ್ಗಳೆಡೆಯಾಡೆ ಚೆಮರ್ ಮಿಗೆ ಮೂಡೆ . . . ಗಟ್ಟಿಗಳನಂದು ಮಗುಳ್ಚಿದರ್ (ಗಿರಿಕ. ೨-೯೦); ತುಂಬಿಗಳ ಪೋಲ್ವ ಸುಳಿಗುರುಳ್ಗಳ ಪೆಣ್ಗಳಿರ್ದರು (ಚಬಪು. ೭-೧೨). **ಸುಳಿಗುರುಳು:** ಅಳಿಕುಳಂಗಳ ಕಪ್ಪನಣಕಿಪ ಸುಳಿಗುರುಳು ರಂಜಿಸುಗು ತರುಣಿಯ (ಬಸಪು. ೪-೨೯); ಸುಳಿಗುರುಳ ನಿಟ್ಟಸಳುಗಂಗಳ . . . ಬಲುಮೊಲೆಯ ಮೋಹರ ನೂಕಿತಮರೀವಾರನಾರಿಯರ (ಕುಮ್ಮಾಅ. ೭-೮೮); ಮಘಮಘಿಸುವ ಸೊಬಗಿನ ಸುಳಿಗುರುಳು (ಪುರಂದ. ೧-೮-೨). [ಸುೞ್$_2$ + ಕುರುಳ್$_1$]

**ಸುೞಿಗೊಳ್, ಸುಳಿಗೊಳ್, ಸುಳಿಗೊಳು (ಕ್ರಿ).** ೧. ತಿರ್ರನೆ ತಿರುಗು; ಗಿರ್ರನೆ ಸುತ್ತು: ಭೀತಿಯಿಂ ಮಱುಗಿ ತೆರಳ್ದು ತೂಳ್ದಿ ಸುೞಿಗೊಂಡುದು ಪಾಂಡವಸೈನ್ಯಸಾಗರಂ (ಪಂಪಭಾ. ೧೨-೧೩). ೨. ಸುತ್ತುವರಿ ; ವರ್ತುಲವಾಗು: ಘನಸ್ತನಂಗಳೊಳೆಡಪಿಯುಂ ಗಂಭೀರನಾಭಿಯೊಳ್ ಸುೞಿಗೊಂಡುಂ . . . ನಾಟ್ಯರಸಮೆ ತೀವಿ (ಆದಿಪು. ೭-೧೨೬ ವ); ಸುಟ್ಟುೞಿಗಾಳಿಯೊಳ್ ಸುೞಿಗೊಂಡು ತೞಗೆಲೆಗಳ್ ಪಾಱುವಂತೆ ದೆಸದೆಸೆಗೆ ಪಾಱುವ ಘನಾಘನಚಕ್ರದಿಂದುಳ್ಕುಲ್ಕಾಕಾರಮಾಗೆ (ಗದಾಯು. ೮-೨೦ ವ); ಸುೞಿಗೊಂಡ ನಾಭಿಕೂಪದ ಸುೞಿಯಿಂ ಪೊಱಮಡದೆ ಸುೞಿವ ನಯನಂಗಳ ಬೆಂಬೞಿವಿಡಿದು ಪರಿದು ಸುೞಿದುದು ಸುೞಿಯೊಳಗಣ ಪೞಿಗುಲಂತೆ ಪಾತಕನ ಮನಂ (ಪಂರಾಮಾ. ೯-೮೧). **ಸುಳಿಗೊಳ್:** ೩. ಕುಡಿಯನ್ನು ಹೊಂದು; ಚಿಗುರಿನಿಂದ ಕೂಡಿರು: ಅಳಿಯೞಿಗದನಿಲನಲುಗದ ರವಿಕರಂ ಪುಗದ ಸುಳಿಗೊಂಡು ದಳವೇಱ ಹಸುರಳಿದು ಬೆಳುಪೇಱಿದ ಸುರುಚಿರಮೆನಿಪ್ಪ ಮಿಾಸಲ ಮೊಗ್ಗೆಯಂ ಕೊಂಡು (ಬಸರ. ೩-೨೦). **ಸುಳಿಗೊಳು:** ೨. ಚಮರ್ ಸಿರಂ ಪರಿಯಿಡೆ ಗದ್ದವಂ ಸುಳಿಗೊಳುತ್ತಿರೆ ಕಂಪನಮುರ್ಕಿ (ಪಂಪಾಶ. ೬).

[ಸುೞ್$_2$ + ಕೊಳ್$_1$]

**ಸುೞಿತರ್, ಸುಳಿತರ್ (ಕ್ರಿ).** ೧. ಸುಳಿದು ಬೀಸು; ಸುತ್ತಿ ತೀಡು: ಸುೞಿತರ್ಪ ಅಲರಿಂದೆ ಬಿಟ್ಟ ಪೂಗಳ್ (ಕಬ್ಬಿಕಾ. ೧೨೬). **ಸುಳಿತರ್:** ೨. ತಿರುಗು; ಸಂಚರಿಸು: ಪುರದ ಪಲವು ರಾಜವೀಧಿಗಳೊಳು ಸುಳಿತಪ್ಪಾಗಳು (ಬಸರ. ೮-೭೧).

[ಸುೞ್$_1$ + ತರ್$_1$]

**ಸುೞಿದಳಿರ್ (ನಾ).** ಎಳೆಯ ಚಿಗುರು: ಸುೞಿದಳಿರಾಯ್ತು ಪೂಗಣಗೆ ಕಂಗಱ ಕೈಪೊಡೆಯಾಯ್ತು . . . ಅಶೋಕೆಯ ಕೆಂದಳಿರ್ (ಮಲ್ಲಿಪು. ೫-೨೦). [ಸುೞ್$_2$ + ತಳಿರ್$_2$]

**ಸುೞಿಯಿಸು, ಸುಳಿಸು, ಸುೞಿಸು (ಕ್ರಿ).** ೧. ಸುತ್ತುವಂತೆ ಮಾಡು; ತಿರುಗಿಸು: ಆ ಜಗತ್ಪತಿಯ ಮನೋಯಾನಪಾತ್ರಮಂ ತಮ್ಮ ತಲೋದರ ಜಲಧಿನಾಭಿಗಂಭೀರಾ

ವರ್ತದೊಳ್ ಸುೞಿಯ್ಗಿಸಿ[ಪಾಠಾಂ. ಸುೞಿಗೊಳಿಸಿ]ಯುಂ (ಆದಿಪು. ೮-೨೪ ವ); ಸುೞಿಯಿಸುತಾಜಿಯಂ ಪೊಳಯಿಸುತ್ತೊಲವಿಂದೆಡಕಂ ಬಲಕ್ಕಮಾಗಳೆ ತಿರುಪುತ್ತನೇಕ ವಿಧಮಪ್ಪ ಸುಶಿಕ್ಷೆಗಳಂ . . . ತೋಱಿದಂ (ಕುಸುಮಾ. ೮-೭೨). **ಸುಳಿಸು :** ೧. ಅತಿಕಾಯ . . . ಬಿಳಿಯ ತೇಜಿಯ ಹೇಮರಥವನು ಸುಳಿಸಿದನು (ಕಾಶಿರಾ. ೨೭-೨). ೨. ಬೀರು; ಸೂಸು: ಸುಳಿಸಿದಳು ಸುಮ್ಮಾನದಲಿ ಕಡೆಗಂಗಳನು ಸೀತೆ (ತೊರರಾ. ೧-೧೫-೩೮); ಮಗು . . . ಕಣ್ಣ ಬಿಚ್ಚಿ ಸುಳಿಸಿತೊಂದು ನಗೆಯನು (ರಾಮಾನ. ೮೭). **ಸುೞಿಸು :** ೧. ಕಾಡ ಬೇಲಿಯಂ ಮಾರ್ಕಾಡನಱಿಯಲುಂ ಮೂಡಿಗೆ ಕಕ್ಕುಂಬಂ ಸುೞಿಸಿ (ಪಂಪಭಾ. ೫-೪೧).
[ಸುೞಿ$_2$ + - ಇಸು$_3$]

**ಸುೞಿಯೆಲೆ, ಸುಳಿಯೆಲೆ** (ನಾ). ತೆಂಗು, ಬಾಳೆ ಮೊದಲಾದುವುಗಳಲ್ಲಿ ಸುರುಳಿಯಾಗಿ ಸುತ್ತಿಕೊಂಡಿರುವ ಎಲೆ: ಎಳವಾೞೆಯ ಸುೞಿಯೆಲೆಯ ತಳತಳಿಪ ಮೇಲ್ಕಟ್ಟು (ಚಂದ್ರಪ್ರ. ೭-೯೫ ವ); ಎಳವಾೞೆಯ ಸುೞಿಯೆಲೆಯನುಡಿ ಯೊಳಮರ್ಚಿಯುಂ (ಕಬ್ಬಿಕಾ. ೧೨೫). **ಸುಳಿಯೆಲೆ:** ಸುಳಿಯಲೆಯೊಳಗಿಂದ ಬಾಳೆಗೊನೆ ಹೊರಬೀಳುವಂತೆ (ಪ್ರಣಸ. ೧). [ಸುೞಿ$_2$ + ಎಲೆ$_1$]

**ಸುೞಿಯೇಱು, ಸುಳಿಯೇಱು** (ಕ್ರಿ). ಚಿಗುರು; ಸುಳಿ ಬರು: ಕೇದಗೆ ಸುೞಿಯೇಱೆ (ಜಗಎ. ೪-೪). **ಸುಳಿಯೇಱು :** ಕೇತಕೀವನಂ ಸುಳಿಯೇಱೆ (ಸಾಳ್ವಭಾ. ೨೬-೧೮).
[ಸುೞಿ$_2$ + ಏಱು$_1$ (< ಏಱ್$_1$)]

**ಸುೞಿವಡೆ** (ಕ್ರಿ). ತಿರುಗಣೆಯನ್ನು ಹೊಂದು; ಜಲಾವರ್ತವನ್ನು ಪಡೆ: ಮಿಱುಪ ಸುೞಿವಡೆದ ಸಿಂಗರದೊಱೆಯೊಳ್ ತಲೆದೋರ್ಪ ತೆರೆಗಳ್ (ಕಬ್ಬಿಕಾ. ೭೭).
[ಸುೞಿ$_2$ + ಪಡೆ$_1$]

**ಸುೞಿವರ್** (ಕ್ರಿ). ಸುತ್ತಿ ಬರು; ತಿರುಗಿ ಬರು: ಒಂದೊಂದೆಡೆಯೊಳ್ ಮರದ ಮಱೆಗಳೊಳ್ ಬೞಿದಪ್ಪಿದ ಮಱಿಯನಱಿಸಿ ಮುೞುಕದಿಂ ಸುೞಿವರ್ಪ[ಪಾಠಾಂ. ಸೂಟ್ಟಿರ್ಪ] ಖಡ್ಗಧೇನುಗಳ ತೊರೆದ ಮೊಲೆಯಿಂದಂ ಬರಿವಿಡಿದು ಸುರಿವ ಪಾಲ್ (ಚಂದ್ರಪ್ರ. ೫-೬೫ ವ). [ಸುೞಿ$_2$ + ಬರ್ (< ವರ್)]

**ಸುೞಿವು, ಸುಳಿವು, ಸುಳುವು$_1$, ಸುಳುಹು, ಸುೞುವು** (ನಾ). ೧. ಗುರುತು; ಕುರುಹು; ಜಾಡು: ಚಕ್ರವ್ಯೂಹದ ಸುೞಿವಿನೊಳಗಳಿಟ್ಟೆಡೆಯ ಕೃಪ ಕೃತ ವರ್ಮ ರೆಂಬ ನಚ್ಚಿನ ನಾಯಕರಿರ್ವರುಮೆರಟ್ಟಿಸೆಯೊಳೊಡನೆ ಬಂದು ತಾಗಿದಾಗಳ್ (ಬಂಪರಿ. ೧೨-೧೦ ವ). **ಸುಳಿವು :** ೧. ಕಂದನ ಸುಳಿವ ಕಾಣೆನು (ಕುಮ್ಮಾದ್ರೋ. ೮-೧೯); ಇಂದುಮತಿಯ ತಾಯಿಗೆ ಅದರ ಸುಳಿವು ಹತ್ತದಂತೆ ಉತ್ತರಿಸಿದ (ಅಪನಾ. ೨೪೭); ಸುಳಿವನ್ನು ಅರಿತ ರಾಜನೂ ಮಂತಣಚಾವಡಿಯನ್ನು ಸೇರಿದನು (ಸವತಿ. ೩೮). ೨. ನೀರಿನ ಸುಳಿ; ಆವರ್ತ: ಸುಳಿವಿಗೆ ಮೀನ ನಡುನೀರ ಹೊಗುವಂತೆ ಸ್ತಬ್ಧಚೇತನ (ಉಯ್ಯಾಲೆ. ೧೪-೧೦). ೩. ಬೀಸುವಿಕೆ; ತೀಡುವಿಕೆ: ಅಲರ್ವಿಜ್ಜಣದ ತಣ್ಣೆಲರ ಸುಳಿವನೊದವಿಸುತ (ಪದ್ಮರಾ. ೮-೯೩); ಸಿಂಧ ಸೆಳೆ ಸೀಗುರಿಯ ಸುಳಿವುಗಳ ಕಳಕಳಿಕೆ ಕಡುಹೇಱೆ (ಕುಮ್ಮಾಭೀ. ೮-೨೦). ೪. ಅವಕಾಶ; ಆಸ್ಪದ: ತಂದದ್ದರೊಳಗರ್ಧ ಕದ್ದಾಳೊ ತನ್ನ ಸಂದು ಸುಳಿವು ನೋಡಿ ಮದ್ದಾಳೊ (ಪುರಂದ. ೧-೧೮೨-೩). ೫. ಕುಣಿತ; ನೃತ್ಯ: ಸೋಗೆಗಳ ಸುಳಿವುಗಳ ಕಪಿಗಳ ಲಾಗುಗಳ ಲಂಘನೆಯಲೆಸೆದುದು . . . ಉದ್ಯಾನ (ತೊರರಾ. ೧-೯-೧೩). ೬. ಮಲ್ಲಯುದ್ಧದ ಒಂದು ವರಸೆ, — ಪಟ್ಟು: ಗಳಹತ್ತ ಡೊಕ್ಕರ ತಳಮೇಲು ಪೈಸರ ಸುಳಿವು ವಂಚನೆ ಪತನದಲಿ . . . ಹೋರಿದರು (ಕಂಸವಿ. ೨೧-೯೨). **ಸುಳುವು$_1$ :** ೧. ಸಾರಭೂತಾಧಿಕದ ಸುಳು[ಪಾಠಾಂ. ಳಿ]ವಿನ ಪಂಚವಾಯುಗಳ . . . ಬೇಳಂಬದಲಿ ಬೆಂಡಾದೆ ನೀನೆಂದ (ಕುಮ್ಮಾಉ. ೩-೭೫); ಕುಂಡಲಿಯ ಭೇದದ ಕಂದನಾಡಿಯ ನಡುವೆ ಮುಂಡಿಸುತಿರ್ಪ ಹಂಸನ ಹತ್ತಿರವೆ ಕಂಡಿಹುದು ಸುಳುವು (ಸರ್ವಜ್ಞ. ೪೭೪); ಇದರ ಸುಳುವು ಪುಟ್ಟಾಚಾರಿಗೂ ಹತ್ತಿತ್ತು (ಭಾರಥಿ. ೫೦). ೨. ಸುಳುವಿನೊಳಗೆ ಸುಳಿಯುತ್ತಲಿದ್ದೇನೆ ಸಿಲುಕಿಸದಿರಯ್ಯಾ (ಬಸವ. ೪೮). **ಸುಳುಹು :** ೧. ಕಾಯಕ್ಕೆ ಮಜ್ಜನ ಪ್ರಾಣಕ್ಕೆ ಓಗರ . . . ಸುಳಿವ ಸುಳುಹುಳ್ಳನ್ನಕ್ಕ ಇವ ಮಾಡಲೇಬೇಕು (ಅವಚಂ. ೨೦-೮೨); ಕಾಯದೊಳಾತ್ಮನ ಕಾಣ್ಬರು ಕಾಂತಿಯ ಕಾಯಸುಖವೆ ಸುಳುಹಾಗಿ (ಭರಚ. ೨-೭೫); ಜನಕಾತ್ಮಜೆಯ ಸುಳುಹ ಕಾಣದೆ ಬಳಲಿ (ವಂಕಾರಾ. ೫-೫-೮). ೨. ಕ್ರೋಧವೆಂಬ ಸುಳುಹಿನೊಳಗೆ ಬಿದ್ದನಂಬಿಗ ಎನ್ನ ಸೆಳೆದುಕೊಳ್ಳೋ ನೀನಂಬಿಗ (ಶಿವಗೀ. ೧೩೧-೬೫೬); ಭರದಲಿ ತಿರುಗುವ ಸುಳುಹಿನ ಅರಬಿರಿದಿನವರು ಅಯ್ಯಗಳೆ (ಮೋಳಿಮಾ. ೧೬೫-೬೧೬). **ಸುೞುವು :** ೧. ವ್ಯೂಹದ ಸುೞುವಿನಿಟ್ಟೆಡೆಯೊಳುಭಯವೀಥಿಗಳ ವಿಷಮಮಪ್ಪೆಡೆಗಳೊಳ್ . . . ಸಾರೆವಂದು (ಮಹಾನೇ. ೧೨-೧೦೩ ವ).

ಸುಳಿವು ಹಿಡಿ = ಜಾಡನ್ನು ತಿಳಿ; ಪತ್ತೆ ಹಚ್ಚು: ನೆಳಲು, ಬೆಳಕಿನ ಹಿಂದೆ ಸುಳಿವುಹಿಡಿಯುತ ಬಂತು ಕೊಳಲ ಕಣ್ಣಿಗೆ ತಾಗಿ ಮಿಂಚುವೆರಳು (ನಲಮು. ೪೩-೪). **ಸುಳುಹುಗಾಣಿಸು** = ಗುರುತು ತೋರಿಸು; ಜಾಡು ತೋರಿಸು: ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಸುಳುಹುಗಾಣಿಸಿದ ನಿಜಗುಣ ಶಿವಯೋಗಿ (ಶರೀಫ. i, ಮೊದಲಮಾತು.).
[ಸುೞಿ$_2$ + - ವು]

**ಸುೞಿವೊರ್ಕುೞ್, ಸುಳಿವೊಕ್ಕುಳು** (ನಾ). ಗುಂಡಾಗಿರುವ ಹೊಕ್ಕಳು; ಸುಳಿನಾಭಿ: ನಿಱಿಗುರುಳ್ . . . ಸುೞಿವೊರ್ಕುೞ್, ಬಟ್ಟದೊಡೆ . . . ಸೊರ್ಕುಂ ಗೋಗಿಲೆ – ಇವು ಉಪಸರ್ಗಂಬೆರಸಿದ ಶಬ್ದಂಗಳ್ (ಕಶಸಾ. ೬೩-೪೧೬); ಸುೞಿವೊರ್ಕುೞ ತಾವರೆಯಲರುಣಿಗಳ ಬಳಗದ ನೆರವಿನಿಂ ನಿಮಿರ್ದು (ಚಕವಂ. ೩೨-೮). **ಸುಳಿವೊಕ್ಕುಳು:** ಸತ್ಕಮಲಮುಖಿ ಸುಳಿವೊಕ್ಕುಳಬಲೆ . . . ಕಣ್ಣದೇನಮರ್ದಳೋ (ಚಬಪ್ರ. ೪೫-೫೧).
[ಸುೞಿ$_2$ + ಪೊರ್ಕುೞ್ (< ಪೊಕ್ಕುೞ್)]

**ಸುೞಿಸು** ‘ಸುೞಿಯಿಸು’ ನೋ.

**ಸುೞುವು** ‘ಸುೞಿವು’ ನೋ.

**ಸುಟ್ಗಿಲ್‌ನಾಡು** (ನಾ). ಒಂದು ನಾಡಿನ ಹೆಸರು: ಸುಟ್ಗಿಲ್‌ನಾಡುಂ ಪಿಟ್ಟಗೆಱ್ ಪನ್ನೆರಡು ಗಾಮುಣ್ಡ ಪ್ರಜೆ ಸಕ್ಷಿ (ಎಕ. XI, ಚಿತ್ರದು. ೨೪-೧; ಸು. 500?).
[ಸುಟ್ಗಿಲ್$_0$ + ನಾಡು]

**ಸೂಂಖ** (ನಾ). ಒಂದು ಊರಿನ ಹೆಸರು: ಶ್ರೀಮತ್ಸತ್ಸಯ್ಯಂ ಬೆಳ್ವೊಲ ಮೂನೂಱಱ ಸೂಂ[ಖ]ಮನಾಳುತ್ತು XX ನ್ದು ಕೊಂ[ಡಿಟ್ಟು] . . . ದೇಗುಲಕ್ಕಂ ಬಿಟ್ಟೋಮ್ (ಸೌಇ. XI-i, ೨೭-೮; 904). [?]

**ಸೂಂಟಗೆ** ‘ಸುಂಟಗೆ’ ನೋ.

**ಸೂಂಟಗೆಗೊಳ್** (ಕ್ರಿ). (ಸುಟ್ಟು) ಮಾಂಸವಾಗುವಂತೆ ಮಾಡು; ಧ್ವಂಸಮಾಡು: ಇಭಘಟೆಯಂ ಪಡಲ್ವಡಿಸಿ ಘೋಟಕಸಂಕುಳಮಂ ಮರಳ್ಚಿ ಪೂಣ್ದಭಿಮುಖರಾದ ವೀರಭಟರಂ ನೆಱೆ ಸೂಂಟಗೆಗೊ[ಂ]ಡು ವೈರಿಭೂಪ್ರಭುಗಳ ಮಸ್ತಕಾವಳಿಗಳಂ ಮುಳ್ಸಿಂ(ಳಿಸಿಂ) ಪೊಡಸೆಂಡುವೊಯ್ದಂ (ಕಇ. IV, ೧-೬೪; 1204).
[ಸೂಂಟಗೆ (< ಸುಂಟಗೆ) + ಕೊಳ್$_1$]

**ಸೂಂಟಿಸು** ‘ಸುಟ್ಟಿಸು’ ನೋ.

**ಸೂಂತಿಕಾಗಾರ** (ನಾ). ಬಾಣಂತಿಯ ಕೋಣೆ; ಹೆರಿಗೆಮನೆ: ಆರವೆ ಸೂಂತಿಕಾಗಾರ ಜೀರ್ಣಾಲಯಂ ದೂರದಾವೇಶ ಗೋಸಾಲೆ ಮನಕನಿದಿನ ತಾಣವೆನಿಸಿ ರಲಲ್ಲಿಗೋರ್ವನು ಬರೆ (ಭೈರವೇ. ೨-೭೩). [< ಸಂ. ಸೂತಿಕಾಗಾರ]

**ಸೂಕ** ‘ಸುಂಕು$_3$’ ನೋ.

**ಸೂಕರ** (ನಾ). ೧. ಹಂದಿ; ವರಾಹ: “ಕೋಳಃ, ಕ್ರೋಡಃ, ಸೂಕರಃ, ವರಾಹಃ . . . ಕಿರಿಃ – ಈ ೮ ಹಂದಿ” (ಹಲಾಯು. ೩೮-೭೩); ವನಾಶ್ವ ಸೂಕರಮನಿತುಂ ಮುನಿಸಂ ಪರಿಹರಿಸಿರ್ದುವು (ಆಜಿಪು. ೭-೨); ಸೂಕರನವೊಲು ಕೋಡೆತ್ತಿ ಹಾಯ್ಕಿದರು (ಕುಮ್ಮಾಭೀ. ೪-೩೫); ನಡುಂಗಿದತ್ತಡವಿ ಸೂಕರಂಗಳ ಘೋರ ಹೂಂಕಾರದಿಂದೆ (ಶ್ರೀರಾಮಾ. ೧೫೬-೧೨೯). ೨. ಒಂದು ನರಕದ ಹೆಸರು: ಸೂಕರ . . . ಅವಿಕವೆಂಬೈದು ಮಂತ್ರಿ ನರಕಂಗಳ ನಡುವೆ ಚಂಡಕೋಲಾಹಲವೆಂಬರಸುನರಕವಿಹುದು (ವಿವೇಕ. ೧೮೦). [ಸಂ.]

**ಸೂಕರಕಂದ** (ನಾ). ಒಂದು ಬಗೆಯ ಗಡ್ಡೆ; ವರಾಹಗೆಡ್ಡೆ; ವಾರಾಹಿ: “ಕುಷ್ಠನಾಶನಃ – ಸೂಕರಕಂದ, ಬಿಳಿಯ ಸಾಸಿವೆ” (ಓಷಧಿ. ೩೭). [ಸಂ.]

**ಸೂಕರಗಂಧ** (ನಾ). = ಸೂಕರಕಂದ : “ಕ್ರೋಡಾ – ಸೂಕರಗಂಧ” (ಓಷಧಿ. ೪೧).
[< ಸೂಕರಕಂದ]

**ಸೂಕರಮದ್ದವ** (ನಾ). “ಸೂಕರ ಮದ್ದವ ಎಂದರೆ ಕಾಡುಹಂದಿಯ ಒಣ ಮಾಂಸ (Dried boar's flesh) ಎಂದು ಒಮ್ಮೆ ಬಗೆಯಲ್ಪಟ್ಟಿತ್ತಾದರೂ

ಈಚೀಚೆ ಅದು ಮಾಂಸವೇ ಅಲ್ಲ, ಒಂದು ಬಗೆಯ ಅಣಬೆ (fungus) ಅತಏವ ಶಾಕ ಎಂದು ಗೊತ್ತಾಗಿದೆ'' (ವೃಶಾಖಿ. ಟಿಪ್ಪಣಿ): ನಿನ್ನ ಕಮ್ಮಾರ ಚುಂದನ ಮನೆಯೊಳಟ್ಟ ಸೂಕರಮದ್ದವವನುಂಡ ಬಳಿಕ ಬಸುಗುತ್ತ ದಿಂದಣಿಯಠಂ ಬಳಲುತಿಹೆ, ಬಸಿರು ನೋನೋಯುತಿದೆ (ವೃಶಾಖಿ. ೬೫-೭).

[<— ಪಾಲಿ. ಸೂಕರಮದ್ದವ]

**ಸೂಕರವದನ** (ನಾ). ೧. ಹಂದಿಯ ಮುಖ. ೨. ಹಂದಿಯಂತಿರುವ ಮುಖವುಳ್ಳವನು: ತುರಗಗಳಂ . . . ಸ್ಥೂಲಾಂಗಂ ಸೂಕರವದನಂ ಕರ್ಕಟಾದಿ ಮದ್ರೇಕ್ಷಾಣಂ (ಜಾತತಿ. ೧೯-೧೦). [ಸಂ.]

**ಸೂಕರಿ** (ನಾ). ಹೆಣ್ಣುಹಂದಿ: ಈ ಕರಿ ಸೂಕರಿಯಲ್ತೆ ಪತ್ತಿ ಗಂಟಲನೊಡೆಯೆತ್ತಿ ಕೊಂದಪೆಂ (ಪಂಪಭಾ. ೧೧-೭೩); ಸೂಕರಿ ಸೂಕರರೂಪವಮದಂ ಸಲೆ ಬಿಟ್ಟು ಮಹೇಂದ್ರನ ಪಟ್ಟಣಮಂ ಶ್ರೀಕರದೇವತೆಯಾಗುತೆ ಪುಷ್ಪಕವಾಸಿನಿಯೆಯ್ದುತಿರಲ್ (ಹಾಲಾಸ್ಯ. ೩-೧೩-೫೨). [ಸಂ. ಸೂಕರೀ]

**ಸೂಕಳ** (ನಾ). ತುಂಟುಕುದುರೆ; ಅಗಡುಗುದುರೆ: ''ಸಿಲ್ಕಾದ ಕುದುರೆ ಸೂಕಳನೆನಿಕ್ಕುಂ'' (ಮಂಗರಾ. ೮೨-೧೫); ಸೂಕಳಮಲ್ತಿದು ಸಕಲಗುಣಾಕಾರಮೆನೆ ವಾಹಕರಾ ಕುಟಿಲಾಶ್ವಕ್ಕೆ ಖರಖಲೀನಮನಿಟ್ಟರ್ (ಪಂರಾಮಾ. ೪-೧೧೪).

[< ಸಂ. ಶೂಕಲ]

**ಸೂಕಳತುರಂಗ** (ನಾ). ತುಂಟುಕುದುರೆ; ಸೂಕಳ: ಅಂತಾ ಸೂಕಳತುರಂಗ ಮತಿವಿಷಮಗಹನಮಂ ಪುಗುವುದುಂ (ಪಂರಾಮಾ. ೧೭-೬೫ ವ). IP ಇದು ಯಮಳ ಶಬ್ದ.

[ಸೂಕಳ + ತುರಂಗ]

**ಸೂಕಳತೆ** (ನಾ). ತುಂಟತನ; ತುಂಟಾಟ: ಮುಳಿವ ಘೋಳಿಗೆಯರ್ದ ಶಾವಿಂ ತಳರದಿರ್ಪಾ ಕಡವಗಳ ಬಿಡದಳಲಿಸುವ ಸೂಕಳತೆಯಂ ಕೈಕೊಂಡುದಾ ತುರಗಂ (ಕುಮುರಾ. ೪-೬೦). [ಸೂಕಳ + - ತೆ]

**ಸೂಕಳತ್ವ** (ನಾ). = ಸೂಕಳತೆ: ಕಟ್ಟಿರ್ದ ದುಷ್ಟವಾಜಿಯಂ ಕಂಡು . . . ದೇವ ನಿಮ್ಮಡಿಗಳ್ಬೇಚಾರಿಸುವೊಡೆ ಲೋಕದ ಸೂಕಳತ್ವಮಂ ಮೂಷೆಯೊಳಿಟ್ಟೆರೆದಂತ ದುಷ್ಟತನದ ಪಟ್ಟಮನಾಂತಿಪ್ಪುದು (ಪುಣ್ಯಾಸ್ರ. ೭-೫೦ ವ). [ಸೂಕಳ + - ತ್ವ]

**ಸೂಕಳಾಶ್ವ** (ನಾ). = ಸೂಕಳತುರಂಗ: ಸೂಕಳಾಶ್ವದಂತೆ ಶಿಕ್ಷೆಯನೆಂತುಂ ಕೈಕೊಳ್ಳದಿರೆ (ಪಂಚತಂ. ೧೯-೩); ತತ್ಪುರಮಲ್ಲಮಲ್ಲಕಲ್ಲೋಲಮಕಾಲವ್ಯತ್ಯುಭಯ ವಿಹ್ವಲಮಾದುದು ಸೂಕಳಾಶ್ವದಿಂ (ಪಂರಾಮಾ. ೪-೧೧೨). [ಸೂಕಳ + ಅಶ್ವ]

**ಸೂಕಳಿ** (ನಾ). ಖೋಟಾನಾಣ್ಯ: ''ಸೂಕಳಿ[ಪಾಠಾಂ. ಳಿ]ಯೊಳು ಭಂಡನೊಳ್ ಕೊಟ್ಟ'' (ಶಬ್ದಮಂ. ೯೦). [?]

**ಸೂಕುಳಿ** (ನಾ). ದುಷ್ಟ; ಭಂಡ; ''ಜಡತೆ'' (ಶಮದ. ನ. ೩೭ ಅಡಿಟ): ಇಳಿದಳಿಯ ನೇಳಿದಂ ಸೂಕುಳಿಯೋಕುಳಿ . . . ಇವಾದಿಯಾಗಚೆ ಕುಳನಂ (ಶಮದ. ೨೭); ಓಕುಳಿ, ಸೂಕುಳಿ, ಈಳಿಗೆ, ಮಾಳಿಗೆ . . . ನಿಸರ್ಗಸಿದ್ಧಾ ಳಕಾರಾಃ ಕುಳವ್ಯಪದೇಶಭಾಜಃ (ಶಬ್ದಾನು. ೧೪೦ ವ್ಯಾಖ್ಯಾ). [?]

**ಸೂಕ್ತ** (ಗು). ೧. ಯುಕ್ತವಾಗಿ ತಿಳಿಸಿದ; ಸರಿಯಾಗಿ ಹೇಳಿದ. ೨. ಯೋಗ್ಯವಾದ; ತಕ್ಕುದಾದ: ಕವಿಭಾವಕೃತಾನೇಕ ಪ್ರವಿಭಾಗವಿವಿಕ್ತಸೂಕ್ತಮಾರ್ಗಂ ಕಾವ್ಯಂ (ಕವಿರಾ. ೧-೨೨); ಆದಷ್ಟು ಜಾಗ್ರತೆ ಸೂಕ್ತಗೌರವದೊಡನೆ ಕಳುಹಿಸಿ ಕೊಡುವುದಾಗಿ ಭರವಸೆ ಕೊಟ್ಟ ಚಕ್ರವರ್ತಿ ಕಾಲತಳ್ಳುತ್ತಾ ಬಂದ (ಪ್ರವಾಸ. II, ೧೯೮). (ನಾ). ೩. ಒಳ್ಳೆಯ ಮಾತು; ಹಿತವಚನ: ಬಾನು ಬೆಳಕಿನ ಸೂಕ್ತ ಹಾಡಿತು ಜೊತೆಗೆ ಹಾಡಿತು ಸಾಗರ (ಸ್ವದರ್ಶಿ. ೧೩-೫). ೪. ಯೋಗ್ಯವಾದುದು; ಉಚಿತವಾದುದು: ಸೂಕ್ತಂ ಭವ್ಯಜನಪ್ರವ್ಯಕ್ತಂ ಜೈನಾಗಮೋಕ್ತಮಿಂ ನಿನಗೆ ಮದೀಯೋಕ್ತಮಿದೆರ್ದೆಯೊಳ್ ನೆಲಸುಗೆ (ಆದಿಪು. ೫-೬೧); ಪ್ರತಿಭಾಸಂಸ್ಕೃತಿಯಿಂದ ಳಂಕೃತಿಯಿನರ್ಥವ್ಯಕ್ತಿಯಿಂ ಸೂಕ್ತಮಿಾ ಕೃತಿ (ಸುಕುಮಾ. ೧-೪೫); ಇತರರು ಹೊರಿಸಿದ ಗೈಮೆಯಲ್ಲಿ ತೊಡಗುವುದು ಮಕ್ಕಳ ಬೆಳವಣಿಗೆಗೆ ಸೂಕ್ತವಲ್ಲ (ಶಿಕ್ಷದ. ೬೨೦). ೫. ಒಳ್ಳೆಯ ವ್ಯಕ್ತಿ; ಯೋಗ್ಯ: ''ಸೂಕ್ತನತಿಪ್ರಿಯವಾದಿ ಸಜ್ಜನಂ'' (ವಸ್ತುಕೋ. ೧೧೧-೧೮). ೬. ವೇದದಲ್ಲಿಯ ಸ್ತೋತ್ರಭಾಗ: ಅನಲಸೂಕ್ತಗಳಿಂದೆ ನುತಿಗೈದು ಭೂತಳಕೊಂದಿ ಸಾಷ್ಟಾಂಗದಿಂದೆರಗಿ ನಿಂದು (ಜೈಮಿಭಾ. ೮-೪೨); ಈ ಸಂಹಿತೆಯಲ್ಲಿ ಒಂದೊಂದು ಸೂಕ್ತವೂ ಸಾಧಾರಣವಾಗಿ ಒಬ್ಬ ದೇವತೆಯನ್ನು ಕುರಿತು ಮಾಡಿದ ಸ್ತೋತ್ರ (ಭಾರದ. ೨೦). [ಸಂ.]

**ಸೂಕ್ತತೆ** (ನಾ). ಯೋಗ್ಯತೆ; ಉಚಿತತೆ: ವಿವೇಚಿಸುವ ಸೂಕ್ತತೆಯನ್ನು ಅರಿತುಕೊಳ್ಳಬೇಕು (ಶಿಕ್ಷದ. ೨೦). [ಸಂ. ಸೂಕ್ತತಾ]

**ಸೂಕ್ತಸತ್ಯ** (ನಾ). ಯುಕ್ತವಾದ ಸತ್ಯವನ್ನು ನುಡಿಯುವವನು: ನಿರುಪಮತರ ಸೂತ್ರಾರ್ಥತತ್ತ್ವಪ್ರವೀಣಂ ಕೃತಕೃತ್ಯಂ ಸೂಕ್ತಸತ್ಯಂ ಪರಹಿತಚರಿತೋದಾತ್ತಕೀರ್ತಿಪ್ರಭಾವಂ (ಸುಕುಮಾ. ೨-೫೧). [ಸಂ.]

**ಸೂಕ್ತಿ** (ನಾ). ೧. ಒಳ್ಳೆಯ ಮಾತು; ಹಿತವಚನ: ತನ್ನನೊಲ್ದಾ ತ್ರಿಲೋಕ ಶ್ರೀಯೆಲ್ಲಂ ಪೂರ್ದಿದಂತೆನೊಸೆದನೂ ಮನದೊಳ್ ಸೂಕ್ತಿ ಕರ್ಣಾವತಂಸಂ ಶ್ರೇಯಾಂಸಂ (ಆದಿಪು. ೯-೧೩೨); ಓಜೆಯೊಳುದಾತ್ತತೆ ಸೂಕ್ತಿಯೊಳರ್ಥಯುಕ್ತಿ . . . ಪೊಸದೇಸೆಯೊಳೊಂದಿದ ಮಾರ್ಗಮೊಳ್ಪುವೆತ್ತಸದಿರೆ ಪೇಳ್ವು (ಸುಕುಮಾ. ೧-೪೪); ವಿನುತ ಸುಕವಿಯ ಸೂಕ್ತಿ ತಾಗಿದ ಮುನಿಗಳಂತಃಕರಣದಂತಿರೆ ಹೊನಲು ವರಿದವು ಚಂದ್ರಕಾಂತದ ಸಾಲ ಶಿಲೆ ಕರಗಿ (ಕುಮ್ಮಾದ್ರೋ. ೧೭-೧೭). ೨. ವೇದದಲ್ಲಿಯ ಸ್ತೋತ್ರಭಾಗ: ಯುಕ್ತಿಸುವಡಿದು ದಿಟವೆನುತ ಶ್ರುತಿ ಸೂಕ್ತಿ ಸಾಱುವುದಾಗಿ ನಿಶ್ಚಳ . . . ಭಕ್ತಿಗೊಲಿದಿಪ್ಪಂ ಪ್ರಸಿದ್ಧಂ ಕೇಳು (ಬಸವು. ೨೭-೪೯).

[ಸಂ.]

**ಸೂಕ್ತಿಕಾರ** (ನಾ). ಹಿತವಚನಗಳನ್ನು ಹೇಳುವವನು,— ಬಲ್ಲವನು: ನುತಗುಣರು ಭಾವುಕರು ವರಪಂಡಿತರು ಸುಜನರು ಸೂಕ್ತಿಕಾರರು ಮತಿಯನೀವುದು ವೀರನಾರಾಯಣನ ಕಿಂಕರಗೆ (ಕುಮ್ಮಾಳ. ೧-೧೭). [ಸಂ.]

**ಸೂಕ್ತಿಗರ್ಭ** (ನಾ). ಸುಭಾಷಿತಗಳನ್ನು ಒಳಗೊಂಡುದು: ಕೋಮಳ ಮತಿಸುಭಗಂ ಸುಂದರಂ ಸೂಕ್ತಿಗರ್ಭಂ . . . ಕಾವ್ಯಮೆಂದನ್ವಿತಸುಕವಿಜನಂ ಮೆಚ್ಚೆ (ಆದಿಪು. ೧-೨೭). [ಸಂ.]

**ಸೂಕ್ಷುಮ** 'ಸುಕುಮ' ನೋ.

**ಸೂಕ್ಷ್ಮ** (ಗು). ೧. ಅತ್ಯಂತ ಚಿಕ್ಕದಾದ, — ಸಣ್ಣದಾದ. ೨. ತೆಳ್ಳಗಿರುವ; ಸ್ಥೂಲವಲ್ಲದ. ೩. ಕೋಮಲವಾದ; ಮೃದುವಾದ. ೪. ಹರಿತವಾದ; ತೀಕ್ಷ್ಣವಾದ. ೫. ಕುಶಲತೆಯಿಂದ ಕೂಡಿದ. ೬. ಕರಾರುವಾಕ್ಕಾದ; ನಿರ್ದಿಷ್ಟವಾದ: ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ ಗ್ರಹಣಸಂಕ್ರಾಂತಿಯಿಂದ ವೆಗ್ಗಳ . . . ಸೂಕ್ಷ್ಮ ಶಿವಪಥವಱಿದವಂಗೆ (ಬಸವ. ೬೧೧). (ನಾ). ೭. ಅತ್ಯಂತ ಚಿಕ್ಕದಾಗಿರುವಂಥದು; ಅತಿ ಚಿಕ್ಕದಾದ ಕಣ; ಅಣು: ''ಅಣು ಸೂಕ್ಷ್ಮಂ ಲೇಶಂ ತ್ರುಟಿ ಕಣಂ. . . ಕಿಱಿದಪ್ಪುದದು'' (ವಸ್ತುಕೋ. ೧೦೭-೫೭). ೮. ಕ್ಷುದ್ರವಾದುದು; ಕ್ಷುಲ್ಲಕವಾದುದು: ''ಸೂಕ್ಷ್ಮದೊಳು ಪಾಮರಕುಲದೊಳು ಗುಳ್ಳೆಯೊಳು ಕ್ಷುಲ್ಲಕಮೆನಿಕ್ಕು'' (ಮಂಗರಾ. ೧೫೧-೫೩). ೯. ಕೋಮಲ; ನಾಜೂಕು: ಇಲ್ಲಮ್ಮ ಅಷ್ಟು ಸೂಕ್ಷ್ಮವಲ್ಲ ನಾನು. ಏನೋ ಮಾತನಾಡುತ್ತಾ ನಡೆಯತೊಡಗಿದಾಗ ಕಾಲು ನಿಧಾನವಾಯಿತು (ಕುಸುಸಂ. ೧೩೯). ೧೦. ಚತುರತೆ; ಜಾಣ್ಮೆ; ಕುಶಲತೆ: ಅವುಗಳಲ್ಲಿ ಆಧುನಿಕ ಭಾಷಾಶಾಸ್ತ್ರಜ್ಞರಿಗೂ ಆಶ್ಚರ್ಯವಾಗುವಂಥ ನುಡಿ ಸೂಕ್ಷ್ಮಗಳ ಮತ್ತು ನಯಗಳ ದರ್ಶನ ಕಂಡುಬರುತ್ತದೆ (ದ್ರಾವಿವಿ. ೧೦೮). ೧೧. ಪರಮಾತ್ಮ; ದೇವರು. ೧೨. ವಂಚನೆ; ಮೋಸ. ೧೩. ಉತ್ತಮವಾದ ನೂಲು,— ದಾರ. ೧೪. [ಕಾವ್ಯಮಿಾ] ಅರ್ಥಾಲಂಕಾರದ ಒಂದು ಭೇದ; ಹೇಳುವುದನ್ನು ಸಂಜ್ಞೆಯ ಮೂಲಕ ಚುಟುಕಾಗಿ ತಿಳಿಸುವಿಕೆ : ಜಾತಿಸಹೋಕ್ತಿ . . . ಸೂಕ್ಷ್ಮಲವ ವ್ಯತಿರೇಕ ದೀಪಕಾಖ್ಯಾತಿ ಸಮಾಹಿತಾವೃತಿ ಪರಸ್ಪರ ಸಾರ ನಿಮಿಾಲನಂಗಳೆಂದೀ ತೆಱದಿಂದ ಮೊದಿ ನೆಗಟ್ಟುಂ ನೆಱೆ ವಾಸ್ತವಭೇದವೃತ್ತಿಗಳ್ (ಕಾವ್ಯಾವ. ೬೦೭); ಇಂಗಿತ ಲಕ್ಷ್ಯಂ ಸೂಕ್ಷ್ಮಂ ಸಂಗಮವಾಗಳೆಂದು ನೋಡುವನಲ್ಲಂ (ಉದಯಾ. ೯-೪೩); ಪರರಾಶಯ ತಿಳಿವುತ್ತ ಗೂಢದಿ ಸಂಜ್ಞೆಯು ತೋಱೆ ಕರಸಿಕೊಂಬುದು ಸೂಕ್ಷ್ಮವೆಂದು (ಕುವಲ. ೧೫೩-೧). ೧೫. [ತತ್ತ್ವಶಾ] ಸ್ಥೂಲ, ಸೂಕ್ಷ್ಮ, ಪರಗಳೆಂಬ ಮೂರು ಬಗೆಯ ತತ್ತ್ವಗಳಲ್ಲಿ ಒಂದು : ಸ್ಥೂಲಸೂಕ್ಷ್ಮಪರತತ್ತ್ವವೆಂಬ ಮೂಱು ತತ್ತ್ವವೇ

ಆಱೂದ ಭೇದಮಂ ಪೇಳ್ವೆ (ಸಿದ್ಧೇವ. ೧೭೯-೫೪೫); ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗ ಇವುಗಳು ಕ್ರಮವಾಗಿ ಪರ, ಸೂಕ್ಷ್ಮ ಮತ್ತು ಸ್ಥೂಲವೆಂದು ಉಕ್ತವಾಗಿರುವುವು (ಶಿವಾಸೂ. ೩೬). ೧೬. ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಬಗೆಯ ತನು ಅಥವಾ ಶರೀರಗಳಲ್ಲಿ ಒಂದು: ಸ್ಥೂಲ ಸೂಕ್ಷ್ಮ ಕಾರಣ ಎಂದೆಂಬ ತನುತ್ರಯ ನೀನಲ್ಲ (ಸಿದ್ಧೇವ. ४६-೧೩೩). 'ಸೂಕ್ಷ್ಮತನು' ಪರಾ. ೧೭. [ಜೈನ] ನಾಮಕರ್ಮಪ್ರಕೃತಿಗಳಲ್ಲಿ ಒಂದು: ಸ್ಥಾವರ ಸೂಕ್ಷ್ಮ ಅಪರಿಯಾಪ್ತ ಸಾಧಾರಣ ಶರೀರ ಅಸ್ಥಿರ ಅಶುಭ ದುರ್ಭಗ ದುಃಸ್ವರ ಅನಾಮಧೇಯ ಅಯಶಸ್ಕೀರ್ತಿನಾಮಕರ್ಮಮೆಂದಿಂತು ನಾಮಕರ್ಮದುತ್ತರಪ್ರಕೃತಿಗಳು (ಗೊಮ್ಮಸಾ. ೪-೨). ೧೮. ಮುಕ್ತಜೀವರಿಗೆ ಇರುವ ಎಂಟು ಗುಣಗಳಲ್ಲಿ ಒಂದು: ಸಮ್ಯಜ್ಞಾನ ದರ್ಶನಾನಂತವೀರ್ಯ ಸೂಕ್ಷ್ಮಾಗುರುಲಘುತ್ವಾವಗಾಹಾವ್ಯಾಬಾಧಂಗಳೆಂಬ ಸಿದ್ಧ ಪರಮೇಷ್ಠಿಗಳಷ್ಟಗುಣಂಗಳಂ ನೆನೆಯುತ್ತಂ (ಆದಿಪು. ೧೦-೧೪ ವ). [ಸಂ.]

**ಸೂಕ್ಷ್ಮಕಾಯಯೋಗ** (ನಾ). [ಜೈನ] ಪಾಪವಿಹರಣಾತ್ಮಕಕ್ರಿಯೆಯಿಲ್ಲದೆ ಪದ್ಮಾಸನದಿಂದಲೇ ಗಮನಕ್ರಿಯೆ ಸಾಗುವಿಕೆ: ಅಂತರ್ಮುಹೂರ್ತ ನಿರುದ್ಧಾಶೇಷಮನೋವಾಗ್ಬಾದರಕಾಯಯೋಗಸೂಕ್ಷ್ಮಕಾಯಯೋಗಪರಿಣತಂ (ಆದಿಪು. ೧೬-೯೯ ವ); ಉದಗ್ರ ಮಂದಿರಶಿಖರಿಶಿಖರದೊಳ್ ಪ್ರತಿಮಾಯೋಗಂ ನಿಂದು ಸೂಕ್ಷ್ಮಕಾಯಯೋಗಯೋಗಂ . . . ದಂಡಕವಾಟಪ್ರಕರ ಲೋಕಪೂರಣಕ್ರಿಯೆಗಳಂ ಸಮಯ ಪ್ರತಿಸಮಯಂಗಳಿಂ ಮಾಡಿ (ಸುಕುಮಾ. ೯-೧ ವ); ಪ್ರತಿಮಾಯೋಗದೊಳ್ ನಿಂದು ಸೂಕ್ಷ್ಮಕಾಯಯೋಗದಿಂ . . . ಲೋಕಪೂರಣಕ್ರಿಯೆಗಳೊಳನಂತರ ಪ್ರತಿಸಮಯಂಗಳಂ ಮಾಡಿ (ವರ್ಧಮಾ. ೧೬-೧೬ ವ). [ಸಂ.]

**ಸೂಕ್ಷ್ಮಕಾರ್ಯ** (ನಾ). ನಾಜೂಕಾಗಿ ಮಾಡಬೇಕಾದ ಕೆಲಸ: ಹೆಂಗಸರಿಂದಲೇ ಮಾಡಿಸಬಹುದಾದ ಕೆಲವು ಸೂಕ್ಷ್ಮಕಾರ್ಯಗಳೂ ಇರುತ್ತವೆ (ರೂಢಿ). [ಸಂ.]

**ಸೂಕ್ಷ್ಮಕ್ರಿಯಾಪ್ರತಿಪಾತಿ** (ನಾ). [ಜೈನ] ಶುಕ್ಲಧ್ಯಾನದ ಮೂರನೆಯ ಭೇದ: ಸೂಕ್ಷ್ಮಕ್ರಿಯಾಪ್ರತಿಪಾತಿಯೆಂಬ ಚರಮ ಶುಕ್ಲಧ್ಯಾನದಿಂ . . . ದಂಡಕವಾಟಪ್ರಕರಲೋಕಪೂರಣಕ್ರಿಯೆಗಳಂ ಸಮಯ ಪ್ರತಿಸಮಯಗಳಿಂ ಮಾಡಿ (ಸುಕುಮಾ. ೯-೧ ವ); ಸೂಕ್ಷ್ಮಕ್ರಿಯಾಪ್ರತಿಪಾ[ಪಾಠಾಂ. ಜಾ]ತಿಯೆಂಬಪರXXXಘುಕರ್ಮಪರಿಪಾವನದತ್ತಿ ಸ್ವಾಭಾವ್ಯಾನಿಮಿತ್ತಂ ದಂಡಕವಾಟಪ್ರತರ [illegible]ಕಪೂರಣಕ್ರಿಯೆಗಳೊಳನಂತರ ಪ್ರತಿಸಮಯಂಗಳಂ ಮಾಡಿ (ವರ್ಧಮಾ. ೧೬-೧[illegible] [illegible] ಸೂಕ್ಷ್ಮಶರೀರಯೋಗದಿಂ ಸೂಕ್ಷ್ಮಕ್ರಿಯಾಪ್ರತಿಪಾತಿಯೆಂಬ ಪರಮಶುಕ್ಲಫಲಧ್ಯಾನದೊಳ್ ನೆಲಸಿ (ಪಂರಾಮಾ. ೧೬-೭೯ ವ). [ಸಂ.]

**ಸೂಕ್ಷ್ಮಕ್ರಿಯೆ** (ನಾ). ಗುಟ್ಟು; ರಹಸ್ಯ: ಎಲ್ಲಿಯುಮಱಿಯಿಯುಂ ದುರ್ಯೋಧನನ ರೂಪುಗಾಣದಿದೇನಾನುಮೊಂದು ಕಾರಣಮಾಗಲ್ವೇಟ್ಕುಮೆಂದು ಸೂಕ್ಷ್ಮಕ್ರಿಯೆಯಿನಂತಕತನಯಂ ಗರುಡಧ್ವಜನೊಳಾಳೋಚಿಸುವುದುಂ (ಗದಾಯು. ೬-೧೫ ವ). [ಸಂ. ಸೂಕ್ಷ್ಮಕ್ರಿಯಾ]

**ಸೂಕ್ಷ್ಮಗ್ರಾಹಿ** (ನಾ). ತೀಕ್ಷ್ಣವಾದ ಗ್ರಹಣಶಕ್ತಿಯುಳ್ಳದು: ಕುಡಿಮೀಶೆ ದ್ವಂದ್ವ, ಬಗ್ಗುತ್ತವೆ, ಸೂಕ್ಷ್ಮಗ್ರಾಹಿ. ಈ ಸ್ಪರ್ಶಾಂಗಗಳಿಂದ ಕೀಟ ಸನ್ನಿವೇಶವನ್ನು ಮುಂದಾಗಿ ಗ್ರಹಿಸುತ್ತದೆ (ಕೀಟಬ. ೧೩). [ಸಂ. ಸೂಕ್ಷ್ಮಗ್ರಾಹಿನ್]

**ಸೂಕ್ಷ್ಮತತ್ತ್ವ** (ನಾ). [ತತ್ತ್ವಶಾ] ಸೂಕ್ಷ್ಮ, ಸ್ಥೂಲ, ಪರಗಳೆಂಬ ಮೂರು ಬಗೆಯ ತತ್ತ್ವಗಳಲ್ಲಿ ಒಂದು: ಸೂಕ್ಷ್ಮತತ್ತ್ವವೂ ಪ್ರಾಣವೂ ಪರವನಪ್ಪಿ ಪರಾಪರನಾಗಿ ಪ್ರಪಂಚವನೇನುವ ಮುಟ್ಟದೆ ಪರಮಮಾಹೇಶ್ವರನಾದೆನು ಕಾಣಾ (ಸಿದ್ಧೇವ. ೧೦೧-೩೧೩). [ಸಂ.]

**ಸೂಕ್ಷ್ಮತನು** (ನಾ). [ತತ್ತ್ವಶಾ] ಸೂಕ್ಷ್ಮ, ಸ್ಥೂಲ, ಕಾರಣಗಳೆಂಬ ಮೂರು ಬಗೆಯ ಶರೀರಗಳಲ್ಲಿ ಒಂದು: ಭೂತಪ್ಪೆದಱಿಂದ ಸ್ಥೂಲತನು ಮನ ಬುದ್ಧಿ ಅಹಂಕಾರದಿಂದ ಸೂಕ್ಷ್ಮತನು (ಅಪಚಂ. ೧೬೨-೬೭೪); ಪಾಂಚಭೌತಿಕವಾದುದೇ ಸ್ಥೂಲತನು ವಾಯುಪಂಚಕ ಇಂದ್ರಿಯ ದಶಕ ಮನ ಬುದ್ಧಿಗಳೆರಡು ಇಂತೀ ಹದಿನೇಳು ಕೂಡಿದ ಲಿಂಗಭೌತಿಕವೆ ಸೂಕ್ಷ್ಮತನು (ದೀಕ್ಷಾಪೋ. ತ. ೧೬೧-೧೫); ಎನ್ನ ಸೂಕ್ಷ್ಮತನುವೆಂಬ ಕೈಲಾಸದ ಮೇಲೆ ಮನೋಮಂಟಪದಲ್ಲಿ ಕುಳ್ಳಿರ್ದ ದೃಶ್ಯಾದೃಶ್ಯದ ಲೀಲೆಯನಾಡುವಾತನು ನೀನೆ ಅಯ್ಯಾ (ಅಖಂಡೇ. ೨೪೦-೮೬). [ಸಂ.]

**ಸೂಕ್ಷ್ಮತ್ವ** (ನಾ). ೧. ತೀಕ್ಷ್ಣತೆ ; ಚುರುಕು: ಅವನ ಬುದ್ಧಿಯಲ್ಲಿ ಸೂಕ್ಷ್ಮತ್ವವೆಂಬುದಿಲ್ಲವೇ ಇಲ್ಲ (ರೂಢಿ). ೨. [ಜೈನ] ಮುಕ್ತಜೀವರಿಗೆ ಇರುವ ಎಂಟು ಗುಣಗಳಲ್ಲಿ ಒಂದು: ಕ್ಷಾಯಿಕ ಸಮ್ಯಕ್ತ್ವಮುಮನಂತಜ್ಞಾನಮುಮನಂತ ದರ್ಶನಮುಮನಂತವೀರ್ಯಮುಂ ಸೂಕ್ಷ್ಮತ್ವ(ಮು)ಮವಗಹನಮುಮವ್ಯಾಬಾಧಂಗಳೆಂಟುಗುಣಂಗಳಾತ್ಮಾಯತ್ತಮಾಗ (ಶಾಂತಿಪು. ೧೨-೫೧ ವ). [ಸಂ.]

**ಸೂಕ್ಷ್ಮದರ್ಶಕ** (ನಾ). ಸಣ್ಣವಸ್ತುಗಳನ್ನು ದೊಡ್ಡದಾಗಿ ಕಾಣಿಸುವಂತೆ ಮಾಡುವ ಒಂದು ಸಲಕರಣೆ: ಸೂಕ್ಷ್ಮದರ್ಶಕ (Microscope) ಬಿಂಬಗ್ರಾಹಕ (Photographic Camera) ಮುಂತಾದುವುಗಳಲ್ಲಿ ವರ್ಣ ಮತ್ತು ಗೋಳಪಲ್ಲಟಗಳನ್ನು ಆದಷ್ಟು ಕಡಮೆ ಮಾಡಲೋಸುಗ ಅನೇಕ ಮಸೂರಗಳನ್ನು ಜೋಡಿಸಿರುತ್ತಾರೆ (ಭೌತವಿ. ೧೮೯). [ಸಂ.]

**ಸೂಕ್ಷ್ಮದರ್ಶಿ** (ಗು). ೧. ತೀಕ್ಷ್ಣವಾದ ನೋಟದಿಂದ ಕೂಡಿದ. (ನಾ). ೨. = ಸೂಕ್ಷ್ಮದರ್ಶಕ: ಭೂತಗನ್ನಡಿಗಳನ್ನು ಉಪಯೋಗಿಸಿ ೧೫೯೦ರಲ್ಲಿಯೇ ಸೂಕ್ಷ್ಮದರ್ಶಿಯನ್ನು (Microscope)ತಯಾರು ಮಾಡಿದರು (ಶಿಲ್ಪನಾ. ೧೫೨). ೩. ತೀಕ್ಷ್ಣವಾದ ಗ್ರಹಣಶಕ್ತಿಯುಳ್ಳವನು; ಕುಶಾಗ್ರಮತಿ: ''ಕುಶಾಗ್ರೀಯಮತಿಃ, ಸೂಕ್ಷ್ಮದರ್ಶೀ – ಈ ೨ ಸೂಕ್ಷ್ಮಬುದ್ಧಿಯನುಳ್ಳವಂ'' (ಪಲಾಯು. ೬೧-೨೧೮). [ಸಂ. ಸೂಕ್ಷ್ಮದರ್ಶಿನ್]

**ಸೂಕ್ಷ್ಮದೃಷ್ಟಿ** (ನಾ). ೧. ಚುರುಕುನೋಟ; ತೀಕ್ಷ್ಣವಾದ ದೃಷ್ಟಿ: ಅವನ ಮೋರೆಯು ಮೇಲಾದ ಬದಲು ಅಕ್ಕನ ಸೂಕ್ಷ್ಮದೃಷ್ಟಿಯಿಂದ ಮರೆಯಾಗಲಿಲ್ಲ (ಮೂರುದಾ. ೧೨೮). ೨. ಚುರುಕಾದ ನೋಟವುಳ್ಳವನು; ಸೂಕ್ಷ್ಮದರ್ಶಿ: ಕರ್ಣಾಂತಾಕ್ಷರಾಗಿಯುಂ ಸೂಕ್ಷ್ಮದೃಷ್ಟಿಗಳು ಕುಲಗೋತ್ರಮಧ್ಯಸ್ಥಿತಿಗಳಾಗಿಯುಂ ಸೊಗಯಿಪೇಕಾಕಿಗಳೆನಿಸಿ ಶಿವನನೊಲಿಸಿದ ಮುನೀಶ್ವರರು ಕಣ್ಗೆಸೆದರು (ಪಚಕಾ. ೬-೩೬). [ಸಂ.]

**ಸೂಕ್ಷ್ಮಪ್ರಕೃತಿ** (ನಾ). ನಾಜೂಕಾಗಿರುವ ಸ್ವಭಾವ,– ಗುಣ: ಅವನ ಕಣ್ಣು ದಡದಡನೆ ಮಹಡಿಯಿಂದಿಳಿಯುತ್ತಿದ್ದ ಸೂಕ್ಷ್ಮಪ್ರಕೃತಿಯ ನವಿರುಮೆಯ್ಯ ಮಹಿಳೆಯನ್ನೆ ಹಿಂಬಾಲಿಸುತ್ತಿದ್ದುವು (ಪುನರು. ೩೩೬). [ಸಂ.]

**ಸೂಕ್ಷ್ಮಬಾದರ** (ನಾ). [ಜೈನ] ಪುದ್ಗಲಸ್ಕಂಧದ ಬಾದರಬಾದರ, ಬಾದರ, ಬಾದರಸೂಕ್ಷ್ಮ, ಸೂಕ್ಷ್ಮಬಾದರ, ಸೂಕ್ಷ್ಮ, ಸೂಕ್ಷ್ಮಸೂಕ್ಷ್ಮಗಳೆಂಬ ಆರು ಪ್ರಕಾರಗಳಲ್ಲಿ ಒಂದು; ಸೂಕ್ಷ್ಮವಾಗಿದ್ದರೂ ಸ್ಥೂಲದಂತೆ ತೋರುವುದು: [illegible]ತಾಂಕುರಮಪ್ಪ ಪಲ್ಲವಾದಿಗಳೇಕೇಂದ್ರಿಯಶರೀರಂಗಳವಱೊಳು ಸೂಕ್ಷ್ಮಬಾದರ[ಪಾಠಾಂ. ಬೋಧರ] ನಿರೋಧ ಪ್ರಾಣಿಗಳು ಪ್ರತಿಕ್ಷಣಮನಂತಾನಂತಂ ಸಾವುತ ಪುಟ್ಟುತಮಿರ್ಕುಂ (ಚಾವುಂಪು. ೫೨); ಪುದ್ಗಲಸ್ಕಂಧಗಳಲ್ಲಿ ಬಾದರಬಾದರ, ಬಾದರ, ಬಾದರಸೂಕ್ಷ್ಮ, ಸೂಕ್ಷ್ಮಬಾದರ, ಸೂಕ್ಷ್ಮ, ಸೂಕ್ಷ್ಮಸೂಕ್ಷ್ಮ – ಎಂದು ಆರು ಪ್ರಕಾರಗಳುಂಟು . . . ಸೂಕ್ಷ್ಮವಾಗಿದ್ದರೂ ಸ್ಥೂಲದಂತೆ ತೋರುವುವು ಸೂಕ್ಷ್ಮಬಾದರಗಳು (ಜೈನಧ. ೫೫). [ಸಂ.]

**ಸೂಕ್ಷ್ಮಬುದ್ಧಿ** (ನಾ). ಕುಶಾಗ್ರಮತಿ; ಚುರುಕುಬುದ್ಧಿ: ''ಕುಶಾಗ್ರಬುದ್ಧಿಯೆನೆ ಸೂಕ್ಷ್ಮಬುದ್ಧಿ[ಪಾಠಾಂ. ಮತಿ]ಯುಳ್ಳವನೆನಿಕ್ಕುಂ'' (ಮಂಗರಾ. ೬೨-೨೧); ಹುಡುಗನ ಸೂಕ್ಷ್ಮಬುದ್ಧಿಗೆ ಒಂದು ತೊಟ್ಟು ಸಾಕಾಗಿತ್ತು (ಸವತಿ. ೩೩). [ಸಂ.]

**ಸೂಕ್ಷ್ಮಮಧ್ಯೆ** (ನಾ). ಚಿಕ್ಕದಾದ ಸೊಂಟವುಳ್ಳವಳು: ಅದೇಂ ಪೊಡಟ್ಟು ತೋಱಿದುದೋ ಸೂಕ್ಷ್ಮಮಧ್ಯೆಯ ಮಧ್ಯಂ (ಸುಕುಮಾ. ೧೦-೧೦). [ಸಂ. ಸೂಕ್ಷ್ಮಮಧ್ಯಾ]

**ಸೂಕ್ಷ್ಮರೂಪ** (ನಾ). [ಜೈನ] ಕರ್ಮನಾಶದಿಂದ ಆತ್ಮನಿಗೆ ಉಂಟಾಗುವ ಸೂಕ್ಷ್ಮಸ್ವಭಾವ ಮತ್ತು ಆ ಸೂಕ್ಷ್ಮಸ್ವಭಾವವನ್ನು ಹೊಂದಿದ ನಂತರ ಅಮೂರ್ತಿಕಸೂಕ್ಷ್ಮನಾಗುವ ಆತ್ಮ: ಸೂಕ್ಷ್ಮರೂಪನುಮನಂತಜ್ಞಾನಾದಿ ಗುಣಸಂಪೂರ್ಣನುಂ . . . ತ್ರಿಲೋಕಶಿಖರಿಶೇಖರನುಮಪ್ಪ ಜೀವನುಂಟೆಂದು . . . ವಿದ್ವಜ್ಜನಮುಮಂ ಸಭಾಜನಮುಮಂ ತಿಳಿಪಿ (ಆದಿಪು. ೨-೧೦ ವ). [ಸಂ.]

**ಸೂಕ್ಷ್ಮಲೋಭ** (ನಾ). [ಜೈನ] "೧೦ನೆಯ ಗುಣಸ್ಥಾನದಲ್ಲಿರುವ ಬಹು ಮರಿದತರವಾದ ಲೋಭಕಷಾಯ" (ವರ್ಧಮಾ. ಕೋಶ): ಸೂಕ್ಷ್ಮಸಾಂಪರಾಯಸ್ಥಾನಪ್ರವಿಷ್ಟಕ್ಷಪಕಂ ಯಥೋಕ್ತಪರಿಣಾಮದಿಂ ಸೂಕ್ಷ್ಮಲೋಭಕ್ಕೆ ವಿಳಯಮಂ ಮಾಡಿ (ವರ್ಧಮಾ. ೧೩-೩೨ ವ). [ಸಂ.]

**ಸೂಕ್ಷ್ಮವಸ್ತು** (ನಾ). ಬಾಹ್ಯಕಣ್ಣುಗಳಿಗೆ ಗೋಚರಿಸದೆ ಇರುವಂಥ ಪದಾರ್ಥ: ಜ್ಞಾನವನೂ ಮೀಱಿ ತೋಱುವ ನಿರಂಜನ ಸೂಕ್ಷ್ಮವಸ್ತುವೆಂದು ಭಾವಿಸುವದೆಂದನಯ್ಯ (ಸಿದ್ಧೇವ. ೩೩-೮೩). [ಸಂ.]

**ಸೂಕ್ಷ್ಮಶರೀರ** (ನಾ). = ಸೂಕ್ಷ್ಮತನು: ಮನ, ಬುದ್ಧಿ ಇವುಗಳುಳ್ಳುದೇ ಸೂಕ್ಷ್ಮಶರೀರವು (ಶಿವಾಕೋ. ೩); ವಿಜ್ಞಾನಮಯಕೋಶವು ಮನೋಮಯಕೋಶವು ಪ್ರಾಣಮಯಕೋಶವು ಕೂಡಿ ಸೂಕ್ಷ್ಮಶರೀರವೆಂದು ಹೇಳಲ್ಪಡುವುದು (ತತ್ವಸ್ವ. ೧೫-೧೩). [ಸಂ.]

**ಸೂಕ್ಷ್ಮಸಾಂಪರಾಯ** (ನಾ). [ಜೈನ] ಗುಣಸ್ಥಾನಗಳಲ್ಲಿ ಒಂದು; ಹತ್ತನೆಯ ಗುಣಸ್ಥಾನ: ಅದು ಸಾಮಾಯಿಕಚ್ಛೇದೋಪಸ್ಥಾಪನಾ ಪರಿಹಾರಶುದ್ಧಿ ಸೂಕ್ಷ್ಮಸಾಂಪರಾಯ ಯಥಾಖ್ಯಾತಚಾರಿತ್ರಭೇದದಿಂ ಪಂಚವಿಧಂ (ಆದಿಪು. ೧೦-೬೩ ವ); ಸ್ಥಾವರಕಾಯಂ ಮೊದಲ್ಗೊಂಡು . . . ಚತುರ್ಥಭಾಗಪರ್ಯಂತಂ ಮಾಯಮುಂ ಸೂಕ್ಷ್ಮಸಾಂಪರಾಯಪರ್ಯಂತ ಲೋಭಕಷಾಯಮುಕ್ಕುಂ (ಪಸಾರ. ೫೬೭); ಕಷಾಯಗಳು ನಷ್ಟವಾದಾಗ ಅವನು ಹತ್ತನೆಯ ಗುಣಸ್ಥಾನಕ್ಕೆ ಏರುವನು. ಅದೇ ಸೂಕ್ಷ್ಮಸಾಂಪರಾಯವು (ಜೈನಪ. ೫೦೦). [ಸಂ.]

**ಸೂಕ್ಷ್ಮಸಾಂಪರಾಯಕೃಷ್ಟಿ** (ನಾ). [ಜೈನ] ಹತ್ತನೆಯ ಗುಣಸ್ಥಾನಕ್ಕೆ ಏರಿದ ನಂತರ ಉಳಿಯುವ ಸೂಕ್ಷ್ಮಸಂಜ್ವಲನಲೋಭವೆಂಬ ಕಷಾಯವನ್ನು ನಾಶಮಾಡುವುದು, - ಶಕ್ತಿಹೀನಗೊಳಿಸುವುದು: ಸೂಕ್ಷ್ಮಸಾಂಪರಾಯಕ್ಷಪಕನಾಗಿ ಯಥೋಕ್ತಪರಿಣಾಮದಿಂ ಸೂಕ್ಷ್ಮಸಾಂಪರಾಯಕೃಷ್ಟಿಗಳಂ ಮಾಡುತ್ತುಂ (ಆದಿಪು. ೧೦-೧೪ ವ); ಸೂಕ್ಷ್ಮಸಾಂಪರಾಯಕೃಷ್ಟಿವಿಧಾನಾನಂತರಂ ಬಾದರಲೋಭಸಂಜ್ವಳನಮಂ ನಿಶ್ಶೇಷಂಗೆಯ್ದು (ಶಾಂತಿಪು. ೧೧-೧೧೧ ವ). [ಸಂ.]

**ಸೂಕ್ಷ್ಮಸಾಂಪರಾಯಕ್ಷಪಕ** (ನಾ). [ಜೈನ] ಕ್ಷಪಕಶ್ರೇಣಿಯನ್ನು ಏರಿ ಹತ್ತನೆಯ ಗುಣಸ್ಥಾನದಲ್ಲಿರುವ ಆತ್ಮ: ಸೂಕ್ಷ್ಮಸಾಂಪರಾಯಸಮನ್ವಿತ ಸೂಕ್ಷ್ಮಸಾಂಪರಾಯಕ್ಷಪಕನಾಗಿ ಯಥೋಕ್ತಪರಿಣಾಮದಿಂ ಸೂಕ್ಷ್ಮಸಾಂಪರಾಯಕೃಷ್ಟಿಗಳಂ ಮಾಡುತ್ತುಂ (ಆದಿಪು. ೧೦-೧೪ ವ). [ಸಂ.]

**ಸೂಕ್ಷ್ಮಸಾಂಪರಾಯಸ್ಥಿತ** (ನಾ). = ಸೂಕ್ಷ್ಮಸಾಂಪರಾಯಕ್ಷಪಕ: ಯತಿ ಸೂಕ್ಷ್ಮಸಾಂಪರಾಯಸ್ಥಿತಂ ಯಥೋಕ್ತ ಪ್ರಶಸ್ತ ಪರಿಣಾಮಗದಾಹತಿಯಿಂದೆ ಸೂಕ್ಷ್ಮಲೋಭಪ್ರತಿಪಕ್ಷಕ್ಷಯಮನಿತ್ತುಂ (ಮಲ್ಲಿಪು. ೧೪-೮೭). [ಸಂ.]

**ಸೂಕ್ಷ್ಮಸೂಕ್ಷ್ಮ** (ನಾ). [ಜೈನ] ಪುದ್ಗಲಸ್ಕಂಧದ ಬಾದರಬಾದರ, ಬಾದರ, ಬಾದರಸೂಕ್ಷ್ಮ, ಸೂಕ್ಷ್ಮಬಾದರ, ಸೂಕ್ಷ್ಮ, ಸೂಕ್ಷ್ಮಸೂಕ್ಷ್ಮಗಳೆಂಬ ಆರು ಪ್ರಕಾರಗಳಲ್ಲಿ ಒಂದು; ಸೂಕ್ಷ್ಮ ಅಥವಾ ಕರ್ಮವರ್ಗಣೆಗಿಂತ ಸೂಕ್ಷ್ಮವಾದುದು: ಪುದ್ಗಲಸ್ಕಂಧಗಳಲ್ಲಿ ಬಾದರಬಾದರ, ಬಾದರ, ಬಾದರಸೂಕ್ಷ್ಮ, ಸೂಕ್ಷ್ಮಬಾದರ, ಸೂಕ್ಷ್ಮ, ಸೂಕ್ಷ್ಮಸೂಕ್ಷ್ಮ ಎಂದು ಆರು ಪ್ರಕಾರಗಳುಂಟು . . . ಕರ್ಮವರ್ಗಣೆಗಿಂತ ಸೂಕ್ಷ್ಮವಾದವುಗಳಿಗೆ ಸೂಕ್ಷ್ಮಸೂಕ್ಷ್ಮ ಎಂಬ ಹೆಸರು (ಜೈನಧ. ೫೫). [ಸಂ.]

**ಸೂಕ್ಷ್ಮಾಮುಗತಾಲಂಕಾರ** (ನಾ). [ಕಾವ್ಯಮೀ] ಅಲಂಕಾರಗಳಲ್ಲಿ ಒಂದು; ಮನಸ್ಸಿನ ರಹಸ್ಯವಾದ ಆಲೋಚನೆ ಮುಂತಾದುವನ್ನು ಇಂಗಿತ, ಚೇಷ್ಟೆ ಮುಂತಾದ ಸೂಕ್ಷ್ಮಸಂಜ್ಞೆಗಳ ಮೂಲಕ ಸೂಚಿಸುವುದು: ಬಗೆದಿಂಗಿತಚೇಷ್ಟಾಕಾರಗತಂಗಳಿನಂತರಂಗದೊಳ್ ಮಱಸಿದುದಂ ಮಿಗೆ ಸೂಚಿಸುವುದು ಸೂಕ್ಷ್ಮಾನುಗತಾಲಂಕಾರಂ (ಕವಿರಾ. ೩-೧೧೭). [ಸಂ.ಸೂಕ್ಷ್ಮಾನುಗತಾಲಂಕಾರ]

**ಸೂಕ್ಷ್ಮಿತ** (ನಾ). [ಸಂಗೀತ] ಇಪ್ಪತ್ತೆರಡು ಬಗೆಯ ಶ್ರುತಿಗಮಕಗಳಲ್ಲಿ ಒಂದು: ಸ್ಫುರಿತ ಪ್ರಮಿತ ದೀರ್ಘ ಲಲಿತೋಚ್ಛದ . . . ಸೂಕ್ಷ್ಮಿತ . . . ಕೋಮಲವೆಂಬಿಪ್ಪತ್ತೆರಡೇ ಶ್ರುತಿಗಮಕಂಗಳು (ವಿವೇಕ. ೧೮೭). [ಸಂ.]

**ಸೂಗಲಿ** (ನಾ). ಒಂದು ಬಗೆಯ ಆಯುಧ: ಹಿಡಿಯಂಬು ಶೂಲ ಭಲ್ಲೆಯು ಪ್ರಬಲ ಸೂಗಲಿ ಒಡನೆ ನಾರಾಚತೋಡಗಳ (ದೇವಾಂಪು. ೩-೨೦೩). [?]

**ಸೂಗುದಿ** (ನಾ). (?) : ಸೋಗೆಮುಡಿಯವಳ ಚೆಲ್ವಂ ಸೂಗುದಿಯಂ ಹಾವಭಾವಮಂ ಕಂಡಾತಂ ಬೇಗುದಿಗೊಂಡವ್ವಳಿಸುತ್ತಾಗಳ್ಸೇವಸವಸಾಂತು ತಳವೆಳಗಾದಂ (ಏರವಿ. ೬-೪೭). [?]

**ಸೂಗುರಿಸು$_1$** (ಕ್ರಿ). ೧. ಬೆದರು; ಗಾಬರಿಗೊಳ್ಳು: "ಸೂ[ಪಾಠಾಂ. ಸೀ]ಗುರಿಸಿತೆನಲ್ಕೆ ವಿಭ್ರಮಾರ್ಥಮದಕ್ಕುಂ" (ಚತುನಿ. ೯೧); ಉರಗಪ್ರತಾನಮಾತುರಿಸಿ ಬಿಗುರ್ತು ನಿಂದು ಶಿವಧೋ ಶಿವಧೋ ಎನುತುಂ ಸುರುಳ್ದು ಸೂಗುರಿಸಿ ತೆರಳ್ದು ತಲ್ಲಣಿಸಿ ಮಲ್ಲಳಿಗೊಂಡುದು ಮೇರುಭಾಗದೊಳ್ (ಗಿರಿಚ. ೬-೬); ಸೂಗುರಿಸಿ ಝೊಮ್ಮಿನಲಿ ಮುಂದಕೆ ಬಾಗಿ ಬಿದ್ದನು ಸಾರಥಿಯ ಕೈಲಾಗಿನಲಿ ತಿರುಗಿದನು ನಕುಳನು ರಾಜಮೋಹರಕೆ (ಕುಮ್ಮಾಕ. ೪-೧೫). ೨. ತಬ್ಬಿಬ್ಬುಗೊಳಿಸು; ದಿಗ್ಭ್ರಮೆಗೊಳಿಸು: ನಿಹಾರದಲಿ ಸೂಗುರಿಸಿ ತುದಿವಾಲವಮರರ ಕೂಗುಗಳ ಕಹಳೆಗಳ ಹಱೆಗಳ ತಾಗುಗಳ ತನಿಹರುಷದಲಿ ಹಾಱಿದನು ಹನುಮಂತ (ತೊರರಾ. ೪-೧೨-೩೩). ೩. (ಗಾಬರಿಯಿಂದ) ಕೂದಲು ಕೆದರಿ ಉಬ್ಬೇಳು: ತನು ತನಿಗತ್ತ ಚಂಚು ಮಿಡುಕುತ್ತಿರೆ ಪೊತ್ತೆಳೆಗೊಂಬನುಳ್ಳುಗುರ್ ಸೊನೆವಿಡೆ ತಾಗಿ ಸೂಗುರಿಸೆ ಕಂಠದ ತುಪ್ಪುಳಪಾಂಗಕಾಂತಿ ಕೆಂಪಿನ ಪಸರಕ್ಕೆ ಪಕ್ಕುಗುಡೆ ಪಕ್ಕದಿನೊತ್ತುತೆ ಮೀಱಿ ಪಾಯ್ವ ಕಣ್ಣನಿಗಳ ನಾಗಕೇಸರಿಗೆ ಸಾರಿಗೆ ಸಾರಿಗೆಯಾಯ್ತು ಕೋಪದಿಂ (ಲೀಲಾವ. ೬-೯೯). [? + - ಇಸು]

**ಸೂಗುರಿಸು$_2$** 'ಜೂಗರಿಸು' ನೋ.

**ಸೂಚ** (ನಾ). ಹುಲ್ಲುಗರಿಕೆಯ ಚೂಪಾದ ತುದಿ; ಹುಲ್ಲಿನ ಊಬು: ಸೂಚಮನುರ್ಚಿ ಪುಲ್ಲೆಗಾಟಿಸಿ ಮಲೆತರ್ಪರಲೆಯ ಸೋಲಮನಟ್ಟಿಯೊಳರಿಕೇಸರಿ ನಿಂದು ನೋಟ್ಟುದೊಂದರಸಲ್ತೇ (ಪಂಪಭಾ. ೫-೪೪). [ಸಂ.]

**ಸೂಚಕ** (ಗು). ೧. ಸೂಚನೆಯನ್ನು ಕೊಡುವ; ಸೂಚಿಸುವ: 'ಅರೆ' ಎಂಬ ಆಶ್ಚರ್ಯಸೂಚಕಉದ್ಗಾರವು ತಂತಾನೆ ಹೊರಟಿತು (ಆಚೋಲಿ. ೮೭). ೨. ಸುಳಿವನ್ನು ಕೊಡುವ; ಜಾಡನ್ನು ತಿಳಿಸುವ. (ನಾ). ೩. ತಿಳಿಸುವಿಕೆ; ಸೂಚಿಸುವಿಕೆ. ೪. ಸೂಚನೆಯನ್ನು ಕೊಡುವ ವಸ್ತು, - ಸಾಧನ: ಇದನ್ನು ಆಮ್ಲ ಪ್ರತ್ಯಾಮ್ಲಗಳ ಗಾತ್ರನಿರ್ಧರಣೆಯಲ್ಲಿ ಒಂದು ಸೂಚಕದಂತೆ (ಇಂಡಿಕೇಟರ್) ಬಳಸುತ್ತಾರೆ (ಕವಿಕೋ. I, ೭೦೮). ೫. ಸೂಚನೆ; ಸುಳಿವು: ಹಂಸಕೇತು ನೀಲಧ್ವಜಾದಿಗಳೆಲ್ಲರುಂ ಸವಿಸ್ಮಯರಾಗಿ ಚಿಂತಿಸಿ ಕರಗಿದರತಿಕರುಣರಸಭಾವದಿಂದೇನೆಂಬೆನಪಕೃತದ ಸೂಚಕವನು(ಜೈಮಿಭಾ.೧೭-೫೦); ಅಕ್ಕ ಬಂದರೆ ತುಂಬ ಸಹಾಯವಾಗುವುದು ಎಂದು ಸೂಚಕವಾಗಿಯೇ ಬರೆದಿದ್ದ (ಮೂರುದಾ. ೧೧೭). ೬.ಸೂಚನೆಯನ್ನು ಕೊಡುವವನು; ಬೇಹುಗಾರ; ಗೂಢಚಾರ: ಎಲ್ಲ ಸೂಚಕನೆ, ಎಲ್ಲವನ್ನೂ ಕ್ರಮವಾಗಿ ಹೇಳಲಿ, ಅಷ್ಟರೊಳಗೆ ಇವನನ್ನು ಪ್ರತಿಬಂಧಪಡಿಸಬೇಡ (ಶಾಕುಂತ. ೭೫-೧೨). ೭. ಚಾಡಿಹೇಳುವವನು; ಪಿಸುಣ: "ನೀಚಂ ಕ್ಷುದ್ರಂ ಪಿಶುನಂ ಸೂಚಕನೆಂದಱಿದುಕೊಳ್ಗೆ ಕರ್ಣೇಜಪನಂ"(ವಸ್ತುಕೋ. ೧೦೦-೧೩). ೮. ಬೋಧಕ; ಉಪಾಧ್ಯಾಯ. ೯. ಒಂದು ಸಂಸ್ಥೆಯ ಕಾರ್ಯನಿರ್ವಾಹಕ. ೧೦. ಜ್ಞಾನಿ. ೧೧. ಸಿದ್ಧಿಯನ್ನು ಪಡೆದವನು; ಸಿದ್ಧ. ೧೨. ದುಷ್ಟ. ೧೩. ಪಿಶಾಚಿ. ೧೪. ನಾಯಿ. ೧೫. ಕಾಗೆ. ೧೬. ಬೆಕ್ಕು. ೧೭. ಒಂದು ಬಗೆಯ ಉತ್ತಮವಾದ ಅಕ್ಕಿ. ೧೮. ತೋರಣ. ೧೯. ಕಾಡು. ೨೦. ಅಸ್ತಿ. ೨೧. ಕಪಿ. ೨೨. ಶಿವ. "ಕಪಿಯೊಳು ಬೆಕ್ಕಿನೊಳು ಶುನಕನೊಳು ವನದೊಳು ವಿತ್ತದೊಳು ಬೋಧಕನೊಳೀಶನೊಳು ಸೂಚಕಂ ವರ್ತಿಸಿಕ್ಕು" (ಮಂಗರಾ. ೧೫೩-೬೨); "ಕಪಿ ಶುನಕ ಬಿಡಾಲಂ ವನಂ ಪೇಳ್ವನುಂ ತೋರಣಮುಂ ತ್ರ್ಯನೇತ್ರನುಂ ಸೂಚಕಮೆನಿಕು" (ನಾನಾರ. ೧೨೩). [ಸಂ.]

**ಸೂಚಕಾಭರಣರಸ** (ನಾ). [ವೈದ್ಯಶಾ] ಸನ್ನಿಪಾತಜ್ವರ, ತ್ರಿದೋಷಜ್ವರ ಮುಂತಾದುವುಗಳ ಉಪಶಮನಕ್ಕೆ ಕೊಡುವ ಒಂದು ಬಗೆಯ ಔಷಧಿ: ಸನ್ನಿಪಾತಜ್ವರ, ತ್ರಿದೋಷಜ್ವರದಿಂದ ಕೈಕಾಲು ತಣ್ಣಗೆ ಆಗಿ ಕಣ್ಣುಮುಚ್ಚಿ ನಾಡಿ ನಿಂತು ಹಲ್ಲುಹಲ್ಲಿಗೆ ಗಟ್ಟಿಯಾಗಿ ಕಚ್ಚಿಹೋಗಿರುವಂತಹವನಿಗೆ ಕಾಲಿನ ಹೆಬ್ಬೆರಳನ

ಉಂಗುಷ್ಠದಲ್ಲಿ ಸೂಜಿಯಂ ಸ್ಥೊಯ್ದು ಆ ಸ್ಥಾನದಲ್ಲಿ ಸೂಜಿಯ ಮೊನೆಯಲ್ಲೂ ಆ ತಳಿಗೆಯ ರಸವಂ ತೆಗೆದು "ಉ ಬೆರಳಿಂದ ಆ ಸ್ಥಾನವನ್ನೊರಸುವುದು . . . ಇದು ಸೂಚಕಾಭರಣರಸ (ವಿವೈವಿ. ೫೭). [P ಇದು 'ಸೂಚಿಕಾಭರಣರಸ' ಎಂದಿರಬಹುದು]

**ಸೂಚನ** (ನಾ). ೧. ತೂತುಕೊರೆಯುವಿಕೆ; ರಂಧ್ರಮಾಡುವಿಕೆ. ೨. ನಿರ್ದೇಶಿಸುವಿಕೆ. ೩. ತಿಳಿವಳಿಕೆ; ಸೂಚನೆ: ಪತ್ರವ್ಯವಹಾರದ ೨ನೇ ಸೂಚನವೇನೆಂದರೆ (ಮುಂಬವ್ಯಾ. ೩೦ ಪ್ರಸ್ತಾವನೆ). ೪. **ಚಾಡಿ ಹೇಳುವುದು; ಚಾಡಿ** ಕೋರತನ. ೫. ಸಂಜ್ಞೆ ಅಥವಾ ಸನ್ನೆಗಳ ಮೂಲಕ ಸೂಚಿಸುವುದು ,— ತಿಳಿಸುವುದು. ೬. ಗುಪ್ತವಾಗಿ ಕೊಡುವ ಸಲಹೆ , — ಸುಳಿವು. ೭. ಹೇಳುವುದು; ತಿಳಿಸುವುದು. ೮. ಸುದ್ದಿ; ಸಮಾಚಾರ. ೯. ಬೋಧಿಸುವುದು; ಬೋಧನೆ. ೧೦. ಬೇಹುಗಾರಿಕೆ. ೧೧. ದುಷ್ಟತನ; ಕೆಟ್ಟತನ. [ಸಂ.]

**ಸೂಚನೆ** (ನಾ). ೧. ತಿಳಿಸುವಿಕೆ ; ನಿರ್ದೇಶಿಸುವಿಕೆ. ೨. ನಿರ್ದೇಶನ : ವೇದವಿಪ್ರರ ವಿಚಾರಿಸಿ ನೋಡಲು ಉಪದೇಶಪರೀಕ್ಷೆ ನಾಯಕನರಕ ಎಂದುದು ಕೂಡಲಸಂಗನ ವಚನದ ಸೂಚನೆ (ಬಸವ. ೯೧). ೩. ಸಂಜ್ಞೆಗಳ ಮೂಲಕ ತಿಳಿಯಪಡಿಸುವಿಕೆ: ಅವಳು ಕಣ್ಣು ಮಿಟುಕಿಸಿ ಮಾಡಿದ ಸೂಚನೆಯನ್ನು ತಿಳಿಯಲಾಗಲಿಲ್ಲ (ರೂಢಿ). ೪. ಗುರುತು; ಸುಳಿವು; ಜಾಡು: ಬೆಲೆ ಏರುತ್ತಿರುವ ಅಥವಾ ಬೀಳುತ್ತಿರುವ ಸೂಚನೆಯನ್ನು ಅನುಸರಿಸಿ ಹೆಚ್ಚು ಹಣವನ್ನೊ ಕಡಿಮೆಯನ್ನೊ ಚಲಾವಣೆಗೆ ತರಬಹುದು (ಹಣಪ್ರ. ೧೯). ೫. ಸುದ್ದಿ; ಸಮಾಚಾರ: ಅವರು ಬರೆದಿರುವ ಪತ್ರದಲ್ಲಿ ಸದ್ಯದಲ್ಲಿ ಬರುವ ಸೂಚನೆಯೇನೂ ಇಲ್ಲ (ರೂಢಿ). ೬. ಎಚ್ಚರಿಕೆ: ಮನೆಯವರಿಗೆ ಸೂಚನೆ ಎಂಬಂತೆ ದಿಬ್ಬಣದ ವಾದ್ಯವಾಯಿತು (ಕಾಲೂರ. ಕಥಾಸಾರ. ೧೪). ೭. [ಕಾವ್ಯಮಿ] ದೇಶೀಕಾವ್ಯದ ಪ್ರತಿ ಸಂಧಿ ಅಥವಾ ಅಧ್ಯಾಯಗಳ ಪ್ರಾರಂಭದಲ್ಲಿ ಬರುವ ಸಾಮಾನ್ಯವಾಗಿ ಅಧ್ಯಾಯದ ಇಡೀ ಸಾರಾಂಶವನ್ನು ಸೂಚಿಸುವ ಪದ್ಯ; ಸೂಚನಾಪದ್ಯ: ಸೂಚನೆ: ಇಂದುಧರನನುಮತದೊಳಾದಿಯ ನಂದಿನಾಥನು ಬಸವನಾಮದಿ ಬಂದಪಂ ಶಿವಭಕ್ತಿಯಂ ವಸುಮತಿಗೆ ಪಸರಿಸಲು (ಬಸಪು. ೨. ಸೂಚನೆ). [ಸಂ. ಸೂಚನಾ]

**ಸೂಚನೆಗೆಯ್, ಸೂಚನೆಗೈ** (ಕ್ರಿ). ೧. ಸೂಚನೆ ನೀಡು; ಸೂಚಿಸು: ಪ್ರತಿಬುದ್ಧರಂ ಕುಜಿತ್ತೀ ಸ್ಥಿತಿಯಿಂದಂ ಕಿಡಿದು ಮಾರ್ಗಸೂಚನೆಗೆಯ್ದಂ (ಕಾವ್ಯಾವ. ೪೨೧); ಸಕಲಪರಿಮಳದ್ರವ್ಯಂಗಳ ಗಂಧೋದಕದಲ್ಲಿ ಹದಮಾಡಲೊಡನೆ ವಿಕಸಿತಕಮಲದಳಾಕ್ಷ ತನ್ನಯ ವಧೂನಿಕರಕೆ ಸೂಚನೆಗೆಯ್ದ (ಮೋಹತ. ೧೪-೩೮). **ಸೂಚನೆಗೈ** : ೧. ಎನಗಮರಾತಿಗಳೊಳರೆಂಬಿನಿತು ಪರಾಭವಮನೀಗಳೀ ಚಕ್ರಂ ಸೂಚನೆಗೈದುದು (ಆದಿಪು. ೧೪-೯). ೨. ಸಂಜ್ಞೆಯ ಮೂಲಕ ತಿಳಿಸು; ಸಂಜ್ಞೆ ಮಾಡು: ಲೋಚನಯುಗ್ಮದಿಂದೆಡಬಲಂಗಳನೀಕ್ಷಿಸಿ ತನ್ನ ನಲ್ಲನಂ ಸೂಚನೆಗೈದು ಕೂಡೆ ಕರೆದೊಯ್ಯನೆ . . . ಒಡಗೂಡಿದಳತ್ಯಧಿಕಪ್ರಮೋದದಿಂ (ಉದ್ಭಟ. ೨-೮೦). [ಸೂಚನೆ + ಕೆಯ್$_1$]

**ಸೂಚನೆಗೈ** 'ಸೂಚನೆಗೆಯ್' ನೋ.

**ಸೂಚಿ** (ನಾ). ೧. ತೂತು ಕೊರೆಯುವಿಕೆ ; ರಂಧ್ರಮಾಡುವಿಕೆ. ೨. ಚೂಪಾದ ತುದಿಯಿಂದ ಕೂಡಿದ, ಮೇಲ್ಭಾಗದಲ್ಲಿ ದಾರವನ್ನು ತೂರಿಸಲು ಅನುಕೂಲವಾಗುವಂತೆ ಸಣ್ಣರಂಧ್ರವನ್ನುಳ್ಳ, ಬಟ್ಟೆ ಹೊಲಿಯುವ ಒಂದು ಲೋಹದ ಸಾಧನ; ಸೂಜಿ: ''ಸೂಚಿಯು ಸೂಜಿಯುಮೆನಿಕ್ಕು'' (ಕವಿಕಂ. ೨೫೮); ಪೊಲ್ಲದಂ ಮಾಡಿದ ಸೂಚಿಯಂತೆ ನಿಂದೆಯೊಳಂ ಬಡಿಹದ ಮಕ್ಕಳಂತೆ ಅಟಲ್ವೆಯೊಳಂ ನೀರ್ ಮುಟ್ಟಿದ ಕೆಂಡದಂತುಪಶಮದೊಳಂ . . . ನೆರೆದಿರ್ಪುದುಂ (ಧರ್ಮಾಮೃ. ೫-೧೨೫); ಮೊನೆಯಪ್ಪ ಸೂಚಿಯಂ ಕೀಲಿಸಿದ ವೇದನೆಯ (ಲಶಿಚಂ. ೩೯-೩೯). ೩. (ಹುಲ್ಲು, ಹೂವಿನ ಮೊಗ್ಗು, ಗರಿ ಮುಂತಾದುವುಗಳ) ಚೂಪಾದ ತುದಿ. ೪. ಸೈನ್ಯದ ಒಂದು ಬಗೆಯ ರಚನೆ; ಬಟ್ಟೆಯನ್ನು ಹೊಲಿಯುವಾಗ ಸೂಜಿಯು ಸಾಗುವ ಹಾಗೆ, ಸೈನ್ಯವು ಸಾಲಾಗಿ ನಿಲ್ಲುವಂತೆ ರಚಿಸುವ ಸೇನಾವ್ಯೂಹ. ೫. ಮೂರು ಅಥವಾ ಹೆಚ್ಚು ಭುಜಗಳ ತಳಹದಿಯುಳ್ಳ, ಗೋಪುರಾಕಾರದ ಘನಾಕೃತಿ. ೬. ಸಂಜ್ಞೆಯ ಮೂಲಕ ತಿಳಿಸುವಿಕೆ; ಸಂಜ್ಞೆಮಾಡುವಿಕೆ. ೭. ಅಭಿನಯ; ನಟನೆ. ೮. ಅಕಾರಾದಿಯಾಗಿ ಅಥವಾ ವಿಷಯಾನುಕ್ರಮವಾಗಿ ರಚಿಸುವ ಪಟ್ಟಿ: ಪ್ರತಿ ಗ್ರಂಥಕ್ಕೆ ಅನಾವಶ್ಯಕವಾದ ಆರೆಂಟು ಪತ್ರಕಗಳನ್ನು ಬರೆಯುತ್ತ ಹೋದರೆ ಸೂಚಿಯ ಆಕಾರ ಅಂಕೆ ಮೀರಿ ಬೆಳೆಯುವುದರಲ್ಲಿ ಸಂಶಯವಿಲ್ಲ (ಗ್ರಂಥಾಲ. ೩೭). ೯. ಕಬ್ಬಿಣವನ್ನು ಸೆಳೆಯುವ ಶಕ್ತಿಯುಳ್ಳ ಕಲ್ಲು; ಅಯಸ್ಕಾಂತ: 'ಸೂಚಿಕಲ್' ಪರಾ. ೧೦. [ನಾಟ್ಯ] ಹದಿನಾರು **ಬಗೆಯ ಮಾರ್ಗಆಕಾಶಚಾರಿಗಳಲ್ಲಿ ಒಂದು; P** ''ಒಂದು ಕಾಲನ್ನು ಕುಂಚಿತ ಮಾಡಿ ಎತ್ತಿ, ಮೊಣಕಾಲಿನಿಂದ ತೊಡೆಯವರೆಗೂ ಮೊಣಕಾಲಿನಿಂದ ಮೇಲಕ್ಕೆ ಚಲಿಸಿ, ಮುಂದೆ ತುದಿಗಾಲಿನಿಂದ ನೆಲವನ್ನು ತಟ್ಟುವುದು'' (ಲಾಸ್ಯರಂ. ೩೧೯ ಗದ್ಯಾನುವಾದ): ಪಿರಿದೆಸೆವ ಸೂಚಿಯುಂ ನೂಪುರಪಾದಿಕೆ ಡೋಲಪಾದ ದಂಡಪದಂಗಳ್ (ಲಾಸ್ಯರಂ. ೬-೬).

ಸೂಚಿಯಗ್ರಪ್ರಮಿತ = (ಆಲಂ) ಸೂಜಿಯ ಮೊನೆಯ ಅಳತೆಯಷ್ಟು: ಸೂಚಿಯಗ್ರಪ್ರಮಿತಧಾರುಣಿಯ ಕೂಡೆ ನೀ ಕೊಡೆನೆಂದು ದರ್ಪವ ಮಾಡಿ ಸಕಲ ಮಹೀತಳವ ಹೋಗಾಡಿ ಹೊಕ್ಕೈ ಜಲವನು (ಕುವ್ಯಾಗ. ೫-೧೬). ಸೂಚಿಯಾನೆ, ಸೂಚೀಯಾನೆ = ಸೇನೆಯ ಮುಂಭಾಗದಲ್ಲಿರುವ ಆನೆ; ಮಾರ್ಗದರ್ಶಕ ಆನೆ: ತನ್ನಯ ಸೂಚಿಯಾನೆ ತೊಟ್ಟಗೆ ಸಮರಾಗ್ರದೊಳ್ಪರಿಯೆ ಪಿಂತನೆ ಸಂದುವು ರಾಜಪುತ್ರರಾನೆಗಳ್ (ಗದಾಯು. ೧-೧೭); ಅವರ ಮುಂದೆ ಸಾಹಣೌಘದೊಳಗಿರಿಸುವ ಪಂಚಕಲ್ಯಾಣದ ಸೂಚೀಯಾನೆಗಳ್ಗೆಂದು ನಿಱಿಸಿದ ನಡೆಮಾಡಸಾಲೆಗಳಿಂದಂ (ಶಾಂತಿಪು. ೧೦-೧೪೭ ವ). [ಸಂ.]

**ಸೂಚಿಕ** (ನಾ). ಬಟ್ಟೆಗಳನ್ನು ಹೊಲಿಯುವವನು; ಸಿಂಪಿಗ; ದರ್ಜಿ: ''ಚಿಪ್ಪಿಗನು ಚೇಳಿಕಂ ಸೂಚಿಕಂ ತುನ್ನವಾಯನೆನಿಕ್ಕು'' (ಮಂಗರಾ. ೧೧೧-೨). [ಸಂ.]

**ಸೂಚಿಕಲ್, ಸೂಚಿಕಲ್ಲು$_1$** (ನಾ). ಕಬ್ಬಿಣವನ್ನು ಸೆಳೆಯುವ ಶಕ್ತಿಯುಳ್ಳ ಕಲ್ಲು; ಅಯಸ್ಕಾಂತ; ಸೂಜಿಗಲ್ಲು: (ಚತುನಿ. ೬. I, ೧೧೭). **ಸೂಚಿಕಲ್ಲು$_1$** : ''ಆ ಕರ್ಬೊನ್ನಲ್ ಸಲೆ ಸೂಚಿ[ಪಾಠಾಂ. ಜಿ]ಕಲ್ಲುಮೆನಿಕುಂ'' (ಕವಿಕಂ. ೫೧). [ಸೂಚಿ + ಕಲ್$_3$]

**ಸೂಚಿಕಲ್ಲು$_1$** 'ಸೂಚಿಕಲ್' ನೋ.

**ಸೂಚಿಕಲ್ಲು$_2$** (ನಾ). ಒಂದು ಬಗೆಯ ಖನಿಜ; ಔಷಧಿಸಾಮಗ್ರಿ: ಕೆಂದೆಂಗಿನ ಎಳನೀರಿನಲ್ಲಿ ಸೂಚಿಕಲ್ಲು ಬೇವಿನ ಹಗಿನು ಇವೆರಡನ್ನೂ ತೆಗೆದುಕೊಳ್ಳಲು ಹೆನ್ನೆತ್ತರು ಬಿಡುವುದು (ಸಕವ್ಯ. ೧೯೭). [ಸೂಚಿ$_1$ + ಕಲ್ಲು (< ಕಲ್$_3$)]

**ಸೂಚಿಕಾರೋಗ** (ನಾ). ವಾಂತಿಭೇದಿ ರೋಗ; ಕಾಲರ: ಆ ಅರಸಿನ ಸತಿಯು ಸೂಚಿಕಾರೋಗದಿಂದ ಪರಲೋಕವನ್ನೈದಲು (ಶಿವದ. ೨೮೬-೧೬). [ಸಂ.]

**ಸೂಚಿತ** (ಗು). ೧. ಚುಚ್ಚಿದ; ತೂತು ಕೊರೆದ. ೨. ತಿಳಿಸಿದ; ಹೇಳಿದ. ೩. ಸಂಜ್ಞೆಯ ಮೂಲಕ ತಿಳಿಸಿದ, — ಹೇಳಿದ. ೪. ಗುರುತಿಸಿದ; ಕಂಡುಹಿಡಿದ. ೫. ತಲೆದೋರಿದ; ಗೋಚರವಾದ; ವ್ಯಕ್ತವಾದ: ಹಯವರಸಮಾರೂಢನಾಗಿ ಸೇವಕಚತುಷ್ಟಯದೊಡನೆ ಸೂಚಿತ ಶುಭೋದಯದ ಶಕುನಾವಳಿಯನಾಲಿಸುತ ಬಟ್ಟೆವಿಡಿದು . . . ಬರಲು (ಜೈಮಿಭಾ. ೨೯-೪೪).

ಸೂಚಿತವಾಗು = ೧. ತಿಳಿಸು; ಹೇಳು: ನಾಗರಿಕತೆಯ ಅವಶೇಷಗಳು ಮೇಲೆ ಸೂಚಿತವಾಗಿರುವಂತೆ . . . ನಿರ್ಧಾರವಾಗಿದೆ (ಭಾರದ. ೩೮೦). ೨. ಗೋಚರವಾಗು; ವ್ಯಕ್ತವಾಗು: ಅವಶೇಷಗಳಿಂದ ಸೂಚಿತವಾಗುವ ಸಾಮಾಜಿಕ ಜೀವನ (ಭಾರದ. ೩೭೮). ೩. ಹೊಳೆ; ಸ್ಫುರಿಸು: ನನಗೆ ಕವಿತೆ ಸೂಚಿತವಾಗುವುದು ವಿಶೇಷವಾಗಿ ರಾತ್ರಿಯ ಕಾಳಿಮೆಯಲ್ಲಿ (ಸ್ಮೃತಿಚಿ. ೩೮೦). [ಸಂ.]

**ಸೂಚಿಪರ್ಣ** (ನಾ). ಚೂಪಾದ ತುದಿಯುಳ್ಳ ಎಲೆ: ಸೂಚಿಪರ್ಣದ ಪೈರು ಹೆಣೆದಿವೆ ಹಸಿರು ರೇಶಿಮೆ ಸೀರೆಯ (ಚಿಂತನ. ೪೮-೧೭); ಸೂಚಿಪರ್ಣ ಸಂಪಿಗೆ ಕೇದಗಿ ತೆಗೆದುಕೊಂಡು ಏನು ಮಾಡುವುದು? (ಸುತ್ತುಮು. ೯೧). [ಸಂ.]

**ಸೂಚಿಮುಖ** (ನಾ). ಸೂಜಿಯ ಚೂಪಾದ ತುದಿ , – ಮೊನೆ: ನೀಲಗಪ್ಪಡ ದುಡಿಗೆ . . . ಒಂದಟ್ಟೆಯ ಕೆರಹು ನಾಯಿಗಳ ಬಾಯ್ಕಟ್ಟು ಓಳಿಯಿಂದಿವು ಮೆಱೆಯೆ ನಡೆದಾಭೀಳ ವಸೆಯಲು ಸೂಚಿ[ಪಾಠಾಂ. ಜಿ]ಮುಖಮಂ ಕೀಲಿಸುವದಱಿದೆನಿಸಿದುಱೆ ಕತ್ತಲೆಯ ಮೊತ್ತದೊಳು (ಬಸಪು. ೩೧-೪). [ಸಂ.]

**ಸೂಚಿಶಕ್ತಿ** (ನಾ). ಸೇನಾವ್ಯೂಹರಚನೆಯ ಸಾಮರ್ಥ್ಯ, — ಬಲ: ಸಮರಾಗ್ರದೊಳ್ . . . ಸೂಚಿಶಕ್ತಿಗೆ ನೃಪರಾನೆ ದಾರದವೊಲಾದುವು ರಾಜಕುಮಾರ ರಾನೆಗಳ್ (ಗದಾಯು. ೧-೧೬). [ಸಂ.]

**ಸೂಚಿಸು** (ಕ್ರಿ). ೧. ತೋರಿಸಿ ಕೊಡು ; ತೋರಿಸು ; ಸುಳಿವು ನೀಡು : ಮುಂತೆ ಬಂದು ನೀನೆನಗೆ ವಸಂತನಾಗಮನಮಂ ನೆಱೆ ಸೂಚಿಸಿ ಕೊಟ್ಟೆಯೆಂದು . . . ಇತ್ತ ಪಸಾಯದಚ್ಚಮುತ್ತಿನ ಪೊಸಪಚ್ಚಮಂ ತಳೆದವೋಲದಿರ್ಮುತ್ತೆ ಮುಗುಳ್ತುದು (ಚಂದ್ರಪ್ರ. ೭-೪೧); ಮನುಕುಲಲಲಾಮರ ಮುಂದೆ ಸೂಚಿಸಿ ಸುಳಿದಳ್ಳೆ ಹರಿಣಾಳಿ ಸೀತೆಯನೊಯ್ದು ಪಥವಿಡಿದು (ತೊರರಾ. ೩-೧೨-೨); ನಿಶೆ ವ್ಯರ್ಥಮೆನೆ ಪೋಯಿತು ಧರಣೀತನೂಭವೆಯ ಕುರುಹ ಸೂಚಿಸದಾದುದು (ವಂಕಾರಾ. ೫-೫-೪). ೨. ತಿಳಿಸು; ಹೇಳು: ಗಂಧೇಭಚರ್ಮಂಗಳಂ ಪಸರಂಗೆಯ್ದನೊ ಶಂಭುವೆಂಬ ಬಗೆಯಿಂ ತಳ್ಪೊಯ್ದು ಕಟ್ಟೇಱಿ ಸೂಚಿಸಲಾರ್ಗಂ [ವಶ]ಮಾಗದಂತು ಕವಿದತ್ತುದ್ದಾಮಭೀಮಂ ತಮಂ (ಪಂಪಭಾ. ೪-೪೯); ಸೂಚಿಸುವೆನಾ ಅಯ್ಯನಾಡಿದ ವಾಚನಂಗಳಂ (ಬಸವು. ೩೭-೧೪); ಕೆಲವು ಹೆಗ್ಗುರುತುಗಳನ್ನು ಮಾತ್ರ ಇಲ್ಲಿ ಸೂಚಿಸಬಹುದು (ಶಿಕ್ಷದ. ೧೭೪). ೩. ಸಂಜ್ಞೆಗಳ ಮೂಲಕ ತಿಳಿಯಪಡಿಸು ,— ಹೇಳು: ಅಂತರಂಗದೊಳ್ ಮಱಸಿದುದಂ ಮಿಗೆ ಸೂಚಿಸುವುದು ಸೂಕ್ಷ್ಮಾನುಗತಾಳಂಕಾರಂ (ಕವಿರಾ. ೩-೧೧೭); ಕಣ್ಣಿಂದಲೆ 'ಗುಟ್ಟಾಗಿರಬೇಕಾದುದನ್ನು ಇತರರೆದುರು ಕೇಳಬ್ಯಾಡ!' ಎಂದು ಸೂಚಿಸಿದ್ದನು (ಮಲಮ. ೫೯೬). ೪. ವ್ಯಕ್ತಪಡಿಸು; ಪ್ರಕಟಿಸು: ಕನಸುಗಳಿವು . . . ಆದಿದೇವಂ ಪಲಬರ್ ಮುನಿಪತಿಗಳ್ಪೆರಸದರ್ಪನನಶ್ವರಾಸ್ಪದಮನೆಂಬುದಂ ಸೂಚಿಸುಗುಂ (ಆದಿಪು. ೧೬-೪೯); ಮಾತು ತಾನೇ ಮನದೊಳಗೆ ಸೂಚಿಸುವುದೆಂದಾತ ನೆನೆದನೆದೆಯೊಳಗೆ (ಭರಚ. ೨-೮೮). ೫. ವ್ಯಕ್ತಗೊಳ್ಳು; ಪ್ರಕಟವಾಗು: ದಕ್ಷಿಣಾಕ್ಷಿಸ್ಪಂದನದೊಳಂ ಸೂಚಿಸುವ ಶುಭಸೂಚನೆಯೊಳಂ ನಾರಾಯಣನುದಾತ್ತ ನಾರಾಯಣನ ಬರವನಱಿದು (ಪಂಪಭಾ. ೪-೩೩ ವ). ೬. ನಿರ್ದೇಶಿಸು; ಮಾರ್ಗದರ್ಶನಮಾಡು: ತೂಗುವ ಮಕುಟದೊಲಹಿನ ಬೆರಳ ಕುಡಿ ಚಿಮ್ಮಟಿಗೆಯಲಿ ಸೂಚಿಸಿದ ನರ್ಜುನಗೆ (ಕುವ್ಯಾಕ. ೧೪-೮); ಭೋಗಿಭೂಷನ ಜಯಿಸುವೊಡುಪಾದೇವಿಯೊಳ್ ಪೋಗಿ ತಾ ಕೈಮಾಡಲೆನುತೆ ವಾಗೀಶನೊಡಹುಟ್ಟಿದಂಗೆ ಸೂಚಿಸುವಂತೆ ಕೂಗಿತು ಕಲಕಂಠನಿಚಯ (ಪೋಹತ. ೨೪-೫೯). [ಸೂಚನ + - ಇಸು]

**ಸೂಚೀಕರಣ** (ನಾ). (ಗ್ರಂಥಾಲಯಗಳಲ್ಲಿ) ಗ್ರಂಥಗಳ ಬಗ್ಗೆ ಸೂಚಿಕೆಗಳನ್ನು ಬರೆದು ಕ್ರಮಬದ್ಧವಾಗಿ ಗ್ರಂಥಗಳು ದೊರಕುವಂತೆ ಮಾಡುವ ಕಾರ್ಯ: ವರ್ಗೀಕರಣದ ನಂತರ ಗ್ರಂಥದ ಬಗ್ಗೆ ಬರೆಯುವ ಪ್ರಾಮುಖ್ಯವಾದ ವಿಧಾನ, ಸೂಚೀಕರಣ (ಗ್ರಂಥಾಲ. ೩೩). [ಸಂ.]

**ಸೂಚೀಕರ್ಮ** (ನಾ). ಹೊಲಿಗೆಯ ಕೆಲಸ: 'ಸೂಚೀಕರ್ಮಾಯ್ತೆ' ಪರಾ. [ಸಂ. ಸೂಚೀಕರ್ಮನ್]

**ಸೂಚೀಕರ್ಮಾಯ್ತೆ** (ನಾ). ಹೊಲಿಗೆಯ ಕೆಲಸವನ್ನು ಬಲ್ಲವಳು , — ತಿಳಿದಿರುವವಳು: ಅನಪತ್ಯೆ ಪತಿವ್ರತೆ . . . ಸೂಚೀಕರ್ಮಾಯ್ತೆ [ಪಾಠಾಂ.ಶುಚಿ ಕರ್ಮಾಇತೆಯೆ, ಶುಚಿಕರ್ಮ್ಮಾಯಿತೆ] ನಿಪುಣೆ ಮಿಥುನಾಲಯಾದಿಮದ್ರೇಕ್ಕಾಣಂ (ಜಾತತಿ. ೧೯-೭). [ಸೂಚೀಕರ್ಮ + - ಆಯ್ತೆ]

**ಸೂಚೀಘಾತ** (ನಾ). (ಚೂಪಾದ ತುದಿಯನ್ನು ಹೊಂದಿರುವ) ಅಂಕುಶದಿಂದ (ಆನೆಗೆ) ಕೊಡುವ ಹೊಡೆತ, — ಪೆಟ್ಟು: ಸೊಂಡಿಲ ಮಧ್ಯಪ್ರದೇಶದಲ್ಲಿ ತಿಮಿಯೋಣವೆ ಸೂಚೀಘಾತವೆನಿಸಿಕೊಳ್ಳುವದು (ಸೌಗಂಧಿ. ೨೭೮-೧೩). [ಸಂ.]

**ಸೂಚೀನಾಟ್ಯ** (ನಾ). [ನಾಟ್ಯ] ಒಂದು ಬಗೆಯ ನೃತ್ಯ; P ನೆಲದಲ್ಲಿ ಒಂದು ಕ್ರಮವಾಗಿ ಹಲವಾರು ವಿಷಪೂರಿತವಾದ ಮೊನೆಗಳುಳ್ಳ ಸೂಜಿಗಳನ್ನು ನೆಟ್ಟಿರುತ್ತಾರೆ. ನರ್ತಕಿಯು ಬಹಳ ಎಚ್ಚರಿಕೆಯಿಂದ, ಚಮತ್ಕಾರದಿಂದ ಆ ಸೂಜಿಗಳನ್ನು ಮೆಟ್ಟದ ಹಾಗೆ ಮಾಡುವ ನರ್ತನ: ಮತ್ತಂ ಕೆಲರ್ ನೋಡಿ ಸೂಚೀನಾಟ್ಯಂಗಳನಾಡಿದರ್ ಖರನಖಪ್ರಾಂತಂಗಳೊಳ್ ಶಕ್ರನಾ (ಆದಿಪು. ೭-೧೨೪). [ಸಂ.]

**ಸೂಚೀಮುಖ** (ನಾ). ೧. ಸೂಜಿಯ ಚೂಪಾದ ತುದಿ, — ಮೊನೆ. ೨. ಸೂಜಿಯ ಮೊನೆಯಂತೆ ಚೂಪಾದ ಮುಖವನ್ನುಳ್ಳದು: ಸಮರಾಂಗಣ ಮುಮನುಲೂಕನಿಕರಸೂಚೀಮುಖಚಂಚುಚರಣಪಕ್ಷಘಾತಕ್ಕದಿರದದಿರಾಂತು ಕಾದಿ ಸತ್ತ ವಾಯಸವೀರನಿಕಾಯಮುಮ್ಮಂ (ಪಂಚತಂ. ೮. ೧೪೯-೨೫); ಕಾಗೆಯ ಹಾಗೆ ಸೂಚೀಮುಖವಾಗಿರಬಾರದು ಕರಾಳಿಯಾಗಬಾರದು (ಅಶ್ವಟೀ. ೧೭-೯). ೩. ಸೂಚೀವ್ಯೂಹದಂತೆ ರಚಿಸಿದ ಸೇನೆಯ ಮುಂಭಾಗ: ಆ ಸೂಚೀಮುಖದಲ್ಲಿ ಕೃತವರ್ಮ, ಕಾಂಭೋಜ . . . ಅವರ ಹಿಂದೆ ಜಯದ್ರಥನನ್ನು ನಿಲ್ಲಿಸಿದನು (ವಚಭಾ. ೨೮೬). ೪. [ನಾಟ್ಯ] ಅಸಂಯುತಹಸ್ತಗಳಲ್ಲಿ ಒಂದು : ಉರಗಶಿರಂಗಳ್ ಪೆರ್ಬೆರಲುರುತರ ಮಧ್ಯಮೆಯನೊಂದಿ ಚತುರಸ್ರದೆ ಮೇಣ್ ತಿರುಗಲ್ ತರ್ಜನಿ ಪಲವುಂ ಪರಿಯಿಂ ತಿರುಗಲ್ಕೆ ತಿಳಿಗೆ ಸೂಚೀಮುಖಮಂ (ಲಾಸ್ಯರಂ. ೨-೫೨); ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತಹಸ್ತಗಳು ಯಾವುವೆಂದರೆ ೧. ಪತಾಕ, ೨. ತ್ರಿಪತಾಕ . . . ೧೧. ಸೂಚೀಮುಖ . . . ೨೪. ತಾಮ್ರಚೂಡ (ಅಭಾನ್ನ. ೪೮). [ಸಂ.]

**ಸೂಚೀಮುಖರಸ** (ನಾ). [ವೈದ್ಯಶಾ] ಧನುರ್ವಾತ, ವಾಯು, ಅಪಸ್ಮಾರ, ಸನ್ನಿಪಾತ ಮುಂತಾದ ರೋಗಗಳ ಉಪಶಮನಕ್ಕೆ ಕೊಡುವ ಔಷಧಿ: ರಸ, ಗಂಧಕ, ತಾಳಕ . . . ಇವನ್ನು . . . ಗಾಜಿನ ಕುಪ್ಪಿಗೆಯಲ್ಲಿ ತುಂಬಿ ಬ್ರಹ್ಮಸ್ಥಾನದಲ್ಲಿ ಸೂಜಿಯಂ ಹೊಯ್ದು ಗುಂಜಿಯ ತೂಕವಿಕ್ಕಿ ಉರಿಸಲು ವಾಡೆಬಂಧ . . . ಹದಿಮೂಱು ಪ್ರಕಾರದ ಸನ್ನಿಪಾತ ಹರ, ಶೈತ್ಯೋಪಚಾರ ಮಾಡುವುದು. ಇದು ಸೂಚೀಮುಖರಸ (ವಿವೈವಿ. ೫೭). [ಸಂ.]

**ಸೂಚೀವಿದ್ಧ** (ನಾ). ೧. [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು: ಅರೆಸೂಚೀ ವಿಕ್ಷಿಪ್ತಂ ಪಿರಿದಾವರ್ತಂ ನಿಕುಟ್ಟವೂರೂದ್ವೃತ್ತಂ ಶಿರದಾಕ್ಷಿಪ್ತಾಹ್ವಯಮುಂ ಪರಿಕಿಸಲಿಂತುರದ ಮಂಡಲಂ ಕರಿಹಸ್ತಂ ಮಿಗೆ ಕಟೀಛಿನ್ನಮಂ ಕೇಳ್ ನಗವೊಗದಳೆ ಮಾಡಿ ತೋಱೆ ಸೂಚೀವಿದ್ಧದ ನೆಗಳ್ದಂಗಹಾರವೆನಿಕುಂ (ಲಾಸ್ಯರಂ. ೫-೧೩). ೨. ನೂರೆಂಟು ಕರಣಗಳಲ್ಲಿ ಒಂದು: ತಲಪುಷ್ಪಪುಟ, ಲೀನ, ವಿವರ್ತಿತ . . . ಸೂಚೀವಿದ್ಧ, ಹರಿಣಪ್ಲುತ . . . ಗಂಗಾವತರಣ – ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). [ಸಂ.]

**ಸೂಚೀವ್ಯೂಹ** (ನಾ). = ಸೂಚಿ ೪: ಆ ಮಹಾಬಾಹುಕನನಶ್ವತ್ಥಾಮನನು ಕೃತವರ್ಮಕರೆನಿಪ ಸನಾಮರನು ನಿಲಿಸಿದನು ಸೂಚೀವ್ಯೂಹವಳಯದಲಿ (ಕುವ್ಯಾದ್ರೋ. ೯-೨೩); ಅವನು ಕೌರವಸೇನೆಯನ್ನು ಶಕಟವ್ಯೂಹವಾಗಿ ರಚಿಸಿ ಅದರ ಹಿಂದೆ ಪದ್ಮವ್ಯೂಹವನ್ನು ಮಾಡಿ ಅದರೊಳಗೆ ಸೂಚೀವ್ಯೂಹವನ್ನು ಗರ್ಭೀಕರಿಸಿದನು (ವಚಭಾ. ೨೬೭). [ಸಂ.]

**ಸೂಚೀಹಸ್ತ** (ನಾ). [ನಾಟ್ಯ] ನಿರ್ದಿಷ್ಟವಿಷಯವನ್ನು ಅನುಮೋದಿಸಲು ಬಳಸುವ ಒಂದು ಹಸ್ತಮುದ್ರೆ: ನಾಗರಕಂ ವಿನೋದವಿಲಾಸಂಗೆ ನೀನೆಂದಂತೆ ದರ್ಪಕನ ದರ್ಪಂ ಬೆಂಗೆಯಿತ್ತಲಭಿವ್ಯಂಜಕಮಾದಪ್ಪುದೆಂದು ಸೂಚೀಹಸ್ತದಿಂ ಸೂಚಿಸಿ ತೋಱೆ (ಅನಂಪು. ೭-೯ ವ). 'ಸೂಚ್ಯಾಸ್ಯ' ಪರಾ. [ಸಂ.]

**ಸೂಚ್ಯ** (ಗು). ೧. ತಿಳಿಯುವಂತೆ ಮಾಡುವ; ತಿಳಿಸುವ. (ನಾ). ೨. ತಿಳಿಯಪಡಿಸುವುದು; ಸೂಚಿಸುವುದು. ೩. ಪ್ರಕಟಪಡಿಸುವುದು; ವ್ಯಕ್ತತೆ : ಪ್ರಿಯಾಗಿಯಿಂದ ತಿಳಿದ ಸುದ್ದಿಯನ್ನು ಸೂಚ್ಯವಾಗಿಯೇ ತಿಳಿಸಿದ್ದೇನೆ (ಮೂರುದಾ. ೧೩೬); ಬೇರೆ ಅರ್ಥಗಳು ವಾಚ್ಯಾರ್ಥಗಳಿಂದ 'ಸೂಚ್ಯ'ವಾಗಿ ಲಕ್ಷ್ಯಾರ್ಥವೆನಿಸುವುವು (ಕೈಪಿಡಿ. ೧೭೬). [ಸಂ.]

**ಸೂಚ್ಯಗ್ರ** (ಗು). ೧. ತುದಿಯು ಮೊನಚಾಗಿರುವ; ಚೂಪಾದ ತುದಿಯಿಂದ ಕೂಡಿದ. (ನಾ). ೨. ಸೂಜಿಯ ತುದಿ , — ಮೊನೆ: ಊರ ಬೇಡಿದಡೈದ ನಾವೆರಡೂರುಗಳನೇ ಕೊಂಡೆವ್ಯೆ ನಿಜಧಾರುಣಿಯ ಕೊಡೆನೆಂದಲ್ಲೆ ಸೂಚ್ಯಗ್ರಸಮ್ಮತವ (ಕುವ್ಯಾಗ. ೮-೮). ೩. ಮುಳ್ಳು. [ಸಂ.]

**ಸೂಚ್ಯಾಸ್ಯ** (ನಾ). [ನಾಟ್ಯ] ಮೂವತ್ತು ಬಗೆಯ ನೃತ್ತಹಸ್ತಗಳಲ್ಲಿ ಒಂದು; ಹಾಗೆಯೇ ಸರಿ ಎಂದು ತೋರಿಸುವ ಸಂಕೇತ: ಚತುರಸ್ರ, ಉದ್ವೃತ್ತ, ತಲಮುಖ, ಸ್ವಸ್ತಿಕ, ವಿಪ್ರಕೀರ್ಣ, ಅರಾಳಕಟಕಾಮುಖ, ಅವಿದ್ಧವಕ್ತ್ರ, ಸೂಚ್ಯಾಸ್ಯ . . . ಲಲಿತ – ಈ ಮೂವತ್ತು ನೃತ್ತಹಸ್ತಂಗಳ್ (ಲಾಸ್ಯರಂ. ೨-೪೪ ವ). [ಸಂ.]

**ಸೂಜಿ** (ನಾ). ೧. ಚೂಪಾದ ತುದಿಯಿಂದ ಕೂಡಿದ, ಮೇಲ್ಭಾಗದಲ್ಲಿ ದಾರವನ್ನು ತೂರಿಸಲು ಅನುಕೂಲವಾಗುವಂತೆ ಸಣ್ಣರಂಧ್ರವನ್ನು ಉಳ್ಳ, ಬಟ್ಟೆಯನ್ನು ಹೊಲಿಯುವ ಲೋಹದ ಸಾಧನ; ಸೀವನಿ: ''ಸೂಜಿಯದು ವಸನಬಂಧಿನಿಯಕ್ಕು'' (ಮಂಗರಾ. ೬೧-೧೯); ಕಾಯ್ದು ಕರ್ಬೊನ್ನ ಸೂಜಿಗಳಂ ಬೆರಲ್ಗಳೊಳ್ ಬೆಟ್ಟುವರುಂ (ಆದಿಪು. ೫-೮೫ ವ); ಸೂಜಿ ಹಿಂದ ಧಾರಧಾಂಗ ಕೊಳ್ಳದೊಳಗ ಜಾರಿಧಾಂಗ (ಗಂಗಾತ. ೭೨-೧೨); ಬಂಗಾರದ ಸೂಜಿಯೆಂದು ಹಿಂಗದ ಕಣ್ಣು ಚುಚ್ಚಿಕೊಳ್ಳಬಹುದೇ? (ಗಾದೆ). ೨. ಚೂಪು ; ತೀಕ್ಷ್ಣತೆ: 'ಸೂಜಿಗೊಂಬು' ಪರಾ.೩. ಅಯಸ್ಕಾಂತ: 'ಸೂಜಿಗಲ್' ಪರಾ.೪. [ಅಶ್ವಶಾ] (ಕುದುರೆಯ) ನಾಲಿಗೆಯ ಕೆಳಭಾಗ (?): ತಾಲುಗೆಯಿಂ ಕೆಳಗೆ ಸೂಜಿ(ಚಿ) ಯೆಂಬ ಪೆಸರಕ್ಕುಂ (ಅಶ್ವಶಾ. ೮೭-೫). [< ಸಂ. ಸೂಚಿ, ಸೂಚೀ]

**ಸೂಜಿಕಲ್** 'ಸೂಜಿಗಲ್' ನೋ.

**ಸೂಜಿಕಲ್ಲು** 'ಸೂಜಿಗಲ್' ನೋ.

**ಸೂಜಿಕಾಯಕ** (ನಾ). ಬಟ್ಟೆ ಹೊಲಿಯುವ ಕೆಲಸ, – ಕಸುಬು: ಶಂಕರದಾಸಯ್ಯನಂತೆ ಸೂಜಿಕಾಯಕವಂ ಮಾಡಿ ಜಂಗಮಾರ್ಚನೆಯ ಮಾಡಬೇಕೆಂದು (ಭೈರಸೂ. I, ೧೧); ಸೂಜಿಕಾಯಕದ ಕುಶಲಕರ್ಮವು ಚುಚ್ಚುಮದ್ದಿನಂತೆ ಚುಟುಕಿಯ ಕೆಲಸವಲ್ಲ (ನಲಮು. vii, ನಾಲ್ಕುಮಾತು). [ಸೂಜಿ + ಕಾಯಕ]

**ಸೂಜಿಗ** (ನಾ). ಒಂದು ಬಗೆಯ ಮೀನು: ಸೂಜಿಗ ನಗಲು ಹಲ್ಲರಂ . . . ಬೋಟೆ ಗಿಚಿಲುಗಳೆಂಬ ಹೊಳವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಚಿಕಾ. ೫-೪೬). [ಸೂಜಿ + -ಗ₂]

**ಸೂಜಿಗಣ್ಣು** (ನಾ). (ದಾರವನ್ನು ಪೋಣಿಸಲು ಅನುಕೂಲವಾಗುವಂತೆ) ಸೂಜಿಯ ಮೇಲ್ಭಾಗದಲ್ಲಿರುವ ಅತಿಸಣ್ಣರಂಧ್ರ: ''ಸೂಜಿಗಣ್ಣು ; ಅತಿ ಸಣ್ಣ ರಂಧ್ರ'' (Needle's eye. ಇಂಕನಿ). [ಸೂಜಿ + ಕಣ್ಣು (< ಕಣ್)]

**ಸೂಜಿಗಲ್, ಸೂಜಿಕಲ್, ಸೂಜಿಕಲ್ಲು, ಸೂಜಿಗಲ್ಲು** (ನಾ). ೧. ಕಬ್ಬಿಣವನ್ನು ಸೆಳೆಯುವ ಶಕ್ತಿಯುಳ್ಳ ಕಲ್ಲು; ಅಯಸ್ಕಾಂತ: ''ಕರ್ಬೊನ್ನಲ್ಲಿಂದು ಸೂಜಿಗಲ್'' (ಚತುನಿ. ೧೧೦). ೨. ಒಂದು ಊರಿನ ಹೆಸರು : ಅಯ್ಯಪಗಾವುಣ್ಣನ ತಮ್ಮಂ ಚಂಗಗಾವುಣ್ಣಂ ಪುಸಿಗೆ ಪೇಸುವೊಂ ಪಿಸುಣ್ಗೆ ಕಾಯ್ವ ಸೂಜಿಗಲ್ಲ ಪಡುವಣ ದೆಸೆಯೊಳ್ . . . ಒಂದು ತೋಂಟವುವಂ ವಿದ್ಯಾದಾನ ಸತ್ರವಾಗೆ ಮಠಕ್ಕೆ ಕೊಟ್ಟಂ (ಸೌಇಇ. IX-i, ೬೭-೧೦; 984). **ಸೂಜಿಕಲ್** : ೧. ''ಕರ್ಬೊನ್ನಲ್ಲಿಂದು ಸೂಜಿಕಲ್'' (ಕಶಸಾ. ೫೦-೫೬). **ಸೂಜಿಕಲ್ಲು** : ೧. ಸೂಜಿಕಲ್ಲು ಸೂಜಿಯನೆಳಸುವಂತೆ ಉಭಯಕ್ಕೆ ಬಾಯಿಲ್ಲದೆ ಕಚ್ಚುವ ತೆಱನ ನೋಡಾ (ಸಕವ. ೫. I, ೧೧೨-೪೨೨); ಓರ್ವರೊರ್ವರ ಮನದಿಚ್ಛೆಗಿರದೊದಗುವ ದೇಹದಾಟ ಕರಮೆಸೆದುದು ಸೂಜಿ[ಪಾಠಾಂ. ಚಿ]ಕಲ್ಲ ಪುತ್ಥಳಿಗಂಡ ಕರುವಿನ ಕರ್ಬೊನ್ನ ತೆಱದಿ (ಶ್ರೀಪಾಲ. ೨-೫೮); ಎರಡು ಸೂಜಿಕಲ್ಲುಗಳನ್ನು ತೂಗುಹಾಕಿ ಒಂದರ ಉತ್ತರಧ್ರುವವನ್ನು ಇನ್ನೊಂದು ಉತ್ತರ ಧ್ರುವದ ಬಳಿಗೆ ಒಯ್ದರೆ ಅದು ತಿರುಗಿಕೊಂಡು ದೂರ ಹೋಗುತ್ತದೆ (ಶಿಲ್ಪಸಾ. ೨೨೨). ೩. ಒಂದು ಬಗೆಯ ಔಷಧಸಾಮಗ್ರಿ: ಆವರಿಕೆಕಡ್ಡಿಯಸು ಸಣ್ಣನಾಗಿ ಕತ್ತರಿಸಿ ಜಜ್ಜುಗುಟ್ಟಿ . . . ಆ ಕಷಾಯದಲ್ಲಿ . . . ಕಲ್ಲನಾರು, ಸೂಜಿಕಲ್ಲು ಇವು ಪ್ರತ್ಯೇಕ ಗ ೪ ತೂಕವಂ ಚೂರ್ಣಿಸಿ ಹಾಕಿ (ಸಕಪ್ಪ. ೩೬೪); ಸೂಜಿಕಲ್ಲಂ ಸಿಂದೂರ ಮಾಡುವ ಕ್ರಮ – ಸೂಜೀ ಹಿಡಿಯುವಂತಹ ಸೂಜೀಕಲ್ಲನ್ನು ಮೂಱುದಿವಸ ನೆನೆಯಿಕ್ಕಿ (ಗವ್ಯವಿ. ೫೭). **ಸೂಜಿಗಲ್ಲು** : ೧. ಸೂಜಿಗಲ್ಲಿದಿರ ಕಾರ್ಬೊನ್ನಂತೆ ತಿರುಗಿದೆಡೆಗಾ ಜವದೊಳೊಡದಿರುಗಿ ಬೆಂಡಾಗಿ ನಾರೀಸವಮಾಜಮೆಸೆದುದು (ಚೆಬಪು. ೨೦-೨೧); ಶ್ರೀಮಹಾದೇವನ ಚರಣಾರವಿಂದಗಳಲ್ಲಿ ಸೂಜಿಗಲ್ಲಿನಂತೆ ಏರಕತ್ವವನುಳ್ಳಂತಹದೇ ಮಹಾತ್ಮನೆಂಬ ಶಬ್ದಕ್ಕರ್ಥ (ವಚಶಾ. II, ೧೮೫); ಲೋಹ ಚುಂಬಕಧರ್ಮವು ಒಂದು ಜಾತಿಯ ಕಬ್ಬಿಣದಲ್ಲಿರುತ್ತದೆ . . . ಈ ಜಾತಿಯ ಕಬ್ಬಿಣವು ಬೇರೆ ಕಬ್ಬಿಣದಂತೆ ಕಲ್ಲುಗಳಿಂದ ಹುಟ್ಟುತ್ತದೆ. ಆ ಕಲ್ಲುಗಳಿಗೆ ಸೂಜಿಗಲ್ಲೆಂದೆನ್ನುತ್ತಾರೆ (ಮುಂಬಯಿ. ೫-೨೨೯). [ಸೂಜಿ + ಕಲ್₁]

**ಸೂಜಿಗಲ್ಲು** 'ಸೂಜಿಗಲ್' ನೋ.

**ಸೂಜಿಗೊಂಬು** (ನಾ). (ಸೂಜಿಯ ಹಾಗೆ) ಚೂಪಾಗಿರುವ ಕೊಂಬು, – ಕೋಡು: ಬಸಿದಸಿಯ ದಸಿಯನನುಕರಿಪ ಸೂಜಿಗೊಂಬುರ್ಚಿ ಸೀಳ್ದು ಬಸುಱಿಂ ನಿಸದಂ ಬಿಸುನೆತ್ತರ ಪೊನಲುಂ ಕರುಳ ಸೋಗೆಯುಂ ಕವಿದುವವನಿಗಾ ಯತಿಪತಿಯಾ (ವರ್ಧಪು. ೩-೭). [ಸೂಜಿ + ಕೊಂಬು₁]

**ಸೂಜಿಗೊಳ್** (ಕ್ರಿ). ಸೂಜಿಯಿಂದ ಚುಚ್ಚಲ್ಪಡು: ಸೂಜಿಗೊಂಡ ಪುಣ್ಣನಂತೆ ಕಣ್ಣ ಶೂಲೆಯಂತೆ ನಾಲಗೆಯ ಪುಗುಳಂತೆ . . . ಮಮ್ಮಲ ಮಱುಗಿಸುವ ಮಕ್ಕಳುಮಂ (ಧರ್ಮಾಮೃ. ೯-೨೩). [ಸೂಜಿ + ಕೊಳ್₁]

**ಸೂಜಿಚುಚ್ಚು** (ಕ್ರಿ). ೧. ಸೂಜಿಯನ್ನು ನಾಟಿಸು : ಸತ್ತ ಮೇಲೂ ಸಹ ಅವುಗಳಿಗೆ ಸೂಜಿ ಚುಚ್ಚುವುದು ಬಹು ಕಷ್ಟ (ಕೀಟಜ. ೬). ೨. ಸೂಜಿಯ ಮೂಲಕ ಔಷಧಿಯನ್ನು ಶರೀರದ ಒಳಹೊಗಿಸು; ಸೂಜಿಮದ್ದು ಹಾಕು: ಡಾಕ್ಟರನ್ನು ಕಂಡಕೂಡಲೆ ಸೂಜಿಚುಚ್ಚುವರೆಂದು ತಿಳಿದು ಮಗು ರಂಪಮಾಡಿತು (ರೂಢಿ). [ಸೂಜಿ + ಚುಚ್ಚು₁ (< ಚುರ್ಚು₁)]

**ಸೂಜಿಮದ್ದು** (ನಾ). ದೇಹಕ್ಕೆ ಸೂಜಿಯ ಮೂಲಕ ಕೊಡುವ ಔಷಧ; ಚುಚ್ಚುಮದ್ದು; ಇಂಜೆಕ್ಷನ್ನು: ಮನೆಯ ಹುಡುಗರೆಲ್ಲರು ಮತ್ತೊಮ್ಮೆ ಸೂಜಿಮದ್ದು ಮಾಡಿಸಿಕೊಂಡರು (ಊರುಕೆ. ೬೮); ಎಲ್ಲಕ್ಕೂ ಸೂಜಿಮದ್ದು ಚುಚ್ಚುವಂತೆ ಇದಕ್ಕೂ ಚುಚ್ಚಿ ಚರ್ಮದ ರಂಧ್ರಗಳನ್ನು ಹೆಚ್ಚಿಸುವ ವಿಧಾನವೂ ಅಲ್ಲಲ್ಲಿ ಬಳಕೆಗೆ ಬಂದಿದೆ (ನಂಟರು. ೩೯). [ಸೂಜಿ + ಮದ್ದು (< ಮರ್ದು)]

**ಸೂಜಿಮಲ್ಲಿಗೆ** (ನಾ). ಸಣ್ಣ ಆಕಾರದ, ಸೂಜಿಯ ಮೊನೆಯಂತೆ ಚೂಪಾಗಿರುವ ತುದಿಯುಳ್ಳ, ಒಂದು ಬಗೆಯ ಮಲ್ಲಿಗೆ: ''ನವವಲ್ಲೀ – ಸೂಜಿಮಲ್ಲಿಗೆ, ಕುಟಜ'' (ಒಷಧಿ. ೮೪); ದೇವದಾರಚಕ್ಕೆ . . . ಬಿಳಿ ಸೂಜಿಮಲ್ಲಿಗೆ ಬೇರು, ಗೋರೋಜನ, ಸುಜ್ಜಲ ಬೀಜ, ಹಸುರುಹಾವು – ಇವು ಪ್ರತ್ಯೇಕ ಗ ೧ ತೂಕವಂ ಕಲ್ಕವಂ ಮಾಡಿ ಹಾಕಿ ಕರಪಾಕದಿಂದಿಳುಹಿ ಸರ್ವಾಂಗಲೇಪಂಗೈಯಲು . . . ಸಕಲ ಸನ್ನಿಪಾತವೂ ಗುಣವಕ್ಕುಂ (ಸಕಪ್ಪ. ೧೫೩). [ಸೂಜಿ + ಮಲ್ಲಿಗೆ]

**ಸೂಜಿವಳೆಗಾಱ** (ನಾ). ಸೂಜಿ, ಬಳೆ ಮುಂತಾದುವನ್ನು ಮಾರುವವನು: ಉಜ್ಜುಗಿಗರಂ ಗುರಿಗರುಪ್ಪಿಗರುಪ್ಪಾಣಿಗರುಸೂಜಿವಳೆಗಾಱರು ಬೆಜ್ಜವುರ್ರಾಣ ಪುರು ಷೋತ್ತಮರು ನೆರೆದಿರ್ಪ ಗುಜ್ಜರಿಯ ನಿಟ್ಟಿಸುತ್ತೆ್ಯೆದಿದಳ್ಮಹದೇವಿ (ಮದೇಪು. ೨೮-೭). [ಸೂಜಿ + ಬಳೆಗಾಱ]

**ಸೂಜಿವಾಲ** (ನಾ). ಸೂಜಿಯಂತೆ ಚೂಪಾಗಿರುವ ಬಾಲ: ಹಿಡಿಕೆಯ ನಡು ಸೂಜಿವಾಲವಗ್ಗದಕೋಪಂ ಸಿಡಿಲರವವಸಿಯ ಮೋಱೆಗಳಡಿಮುಂಚುವ ನಾಯ್ಗಳಂ ನೃಪಾಲಂ ಕಂಡಂ (ನಳಚಂ. ೬೭). [ಸೂಜಿ + ಬಾಲ₁]

**ಸೂಜಿವಾಲಿಗ** (ನಾ). ಸೂಜಿಯಂತೆ ಚೂಪಾದ ಬಾಲವುಳ್ಳದು : ಸಾಳುವನಭಂಗಂ ಚಾಯಿಲಂ ಸೂಜಿವಾಲಿಗಂ . . . ವೇಗಾಯ್ತುನೆಂದೆಂಬ ಕುನ್ನಿಗಳಂ ಹಾಸದೊಳಟ್ಟು ಕಾಡೊಡೆಯರಂದೆಯ್ದಿತ್ತು ಕಾಂತಾರಮಂ (ದಶಕು. ೨-೧೧೬). [ಸೂಜಿವಾಲ + -ಇಗ]

**ಸೂಜಿವೆಳಗು** (ನಾ). (ಸೂಜಿಯಂತೆ) ತೀಕ್ಷ್ಣವಾಗಿ ಹೊಳೆಯುವ ಬೆಳಕು; ಕಣ್ಣು ಚುಚ್ಚುವ ಹೊಳಪು: ತೊರೆ ಹಾಡುತಿರೆ ಚುಕ್ಕಿ ಸೂಜಿವೆಳಗಿಂ ಚುಚ್ಚಿ ಮನಕೆ ಬಗೆಬಗೆ ಭಾವಗಳ ಹಚ್ಚೆಯೊತ್ತೆ (ಮಲದೇ. ೨೬-೧). [ಸೂಜಿ + ಬೆಳಗು₂]

**ಸೂಜ್ಞ** (ನಾ). ಚೆನ್ನಾಗಿ ತಿಳಿದವನು; ಬುದ್ಧಿವಂತ: ಈ ಪ್ರಶ್ನೆಯ ಅರ್ಥವನ್ನು ಸೂಜ್ಞರಿಗೆ ವಿಸ್ತರಿಸಿ ಬರೆಯುವ ಕಾರಣವಿಲ್ಲ (ಗಂಮಾಯಿ. ೨೧೧). [< ಸಂ. ಸುಜ್ಞ]

**ಸೂಟಿ₁, ಚುಟಿ, ಚೂಟಿ₁, ಚೂಟು₂, ಚೂಡಿ₂, ಸುಟಿ, ಸೂಟು₁, ಸೂರಿ** (ನಾ). ೧. ವೇಗ; ರಭಸ: ''ಸೂಟಿಯೆನೆ ವೇಗಾರ್ಥಂ'' (ಭಾರನಿ. ೩೩); ಕಟ್ಟಿದ ಗೆಜ್ಜೆಯ ಸೂಟಿಯ ರವದ ಪೊರ್ಕುಳ ಗಂಟೆಯ . . . ಚಾರುತರ ಭೂಷಣಂ ಭೀಷಣಮಾಗೆ . . . ಗಗನಮನಡರ್ವ ಚಾತ್ಕಶ್ಚಂಗಳ ವಳಯಮಂ (ಗಿರಿಕ. ೬-೫೫ ವ); ಸುರನಿವಹ ಸುಡಲಾಹವವನನುತ್ಕೈದಿದರು ಸೂಟಿಯಲಿ (ಕುಮ್ಮಾಅ. ೧೮-೩೯); ಸಾರತಿಗೆಯ್ಮೆಯೊಂದು ಚಾಣ್ಕಯಿಂ ಸೂಟಿಯಿಂ ನೂಂಕೆ ಪಾಱ್ ನಾಡಿಂ ನಾಡಿಂಗೆ ಧೀಂಕಟ್ಟುವೋ ಎನೆ ಪವನಜವಮಂ ಮುಂಚಿ ವಾಜಿಗಳೋಟಂಗೊಂಡುವು (ರಾಮಾಶ್ವ. ೩೦-೧). ೨. ಚುರುಕು; ಲವಲವಿಕೆ: ನೋಡು, ಎಷ್ಟು ಸೂಟಿಯಾಗಿದ್ದಾನೆ ಹುಡುಗ! (ನಿಶಉ. ೩೯); ತಂದೆಗೆ

ತನ್ನ ನಡತೆಯಿಂದ ಅಸಮಾಧಾನವಾಯಿತೇನೋ ಎಂದು ಕುಗ್ಗಿದ ವೆಂಕಟಸುಬ್ಬಯ್ಯ ಮತ್ತ ಸೂಟಿಯಾಗಿರುವನು (ಹಂಗೀತ. ೮೩). ೩. ಉಪಾಯ ; ಯುಕ್ತಿ : ತೋಟಿಯರ್ ತಱಿದಿಕ್ಕಿದಿರಾಂಪ ದೃತ್ಯವಧೂಟಿಯ ಕರೆದು ತನ್ನೊಡನೆ ಸೂಟಿಯೊಳ್ ಸಾವಂತೆ ಕೆಯ್ಯ ಖಡ್ಗವನಿಕ್ಕಿ ದಾಟಿಸಿಕೊಂಡಳೆಲ್ಲರನು (ಮೋಹತ. ೩೩-೩೮); ಸೂಟಿಯರಿದಡಿಗಡಿಗೆ ಸೂಚಿಸುವ ಮಾತುಗಳೊ ಸುಧೆಯ ಜೈವಾತವಗಳೊ . . . ಎಂದು ವಿಟಜನರು ಮೆಚ್ಚುವೊಲು (ವಂಕಾರಾ. ೫-೬-೩೪); ಇಂದು ಸೂಟಿ ತಪ್ಪಿ, ಸಿಕ್ಕಿಬಿದ್ದು ಸಪ್ಪಗಾಗಿ ಮನೆಗೆ ಬಂದಿದ್ದರು (ಬಳುಮ. ೧೬). ೪. ಚಳಕ ; ಕೌಶಲ : ಸರಳಸೂಟಿಯ ತೋಱಿಸಿದಡಬ್ಬರಿಸಿ ಫಲುಗುಣನೈದುಬಾಣದಲರಿಭಟನ ಚಾಪವನು ಕಡಿ ಮೂಱಾಗಿ ಖಂಡಿಸಿದ (ಕುವ್ಯಾಭೀ. ೯-೪೬). ೫. ಹರಿತವಾದುದು; ತೀಕ್ಷ್ಣವಾದುದು: ಕೋಟೆಯ ತೆನೆಯೆಡೆಗಂಡಿಯೊಳ್ ತಲೆಯಿಟ್ಟು ನೀಟಲಿ ನೋಡುವರುಗಳ ಸೂಟಿಯ ಬಾಣಗಳಿಂದಿಟ್ಟು ಜೀವವ ದಾಟಿಸಿದರು ಯಮಪುರಿಗೆ (ಕಂಸವ. ೧೮-೭೭). ಚುಟಿ : ೫. ಇವತ್ತಿನ ಬಿಸಿಲು ತುಂಬಾ ಚುಟಿಯಾಗಿದೆಯಲ್ಲಾ? (ಗಂಗಾವ. ೧೩೯). ಚೊಟಿ$_1$ : ೨. ಚೊಟಿಯಲಿ ಉದರದಾ ಯಾತ್ರೆಯೇ ಮಹಾಯಾತ್ರ ಬೂಟಕಾತನದಿ ಅನ್ಯತ ಪೇಳ್ವುದೇ ಮಂತ್ರಾ (ವಾದಿಕೀ. ೧೨-೩); ಈಗ ಮಾತ್ರ ನೀವು ಚೊಟಿಯಾಗಿ ಓಡಾಡಬೇಕು (ಪುನರು. ೨೦೫); ಮಗು ಅಸಾಧ್ಯ ಚೊಟಿ (ತಾಯಿಕ. ೧೦೩). ಚೊಟ್ಟು$_2$ : (೬). ಚೊಡ್ಡಿ$_2$: ೧. ಚೂಡಿಯೊಳ್ಪಿಡಲು ಪೊಂದೇರು ಸತ್ವರದಿ ಹಾರಿ ಥಾಟಿಯಿಂದ್ಯೆತಂದು (ವಂಕಾರಾ. ೬-೩೯-೯). ಸುಟಿ : ೧. ಅಖಂಡಿತ ಬಲಂಬೆರಸು ಬಿಟ್ಟ ಸುಟಿ[ಪಾಠಾಂ. ೠ]ಯಲ್ಲಿ ಬಿಡುದಾಣಮಂ ಬಿಡಲೊಲ್ಲದೆ (ಸಮ್ಯಕೌ. ೮-೨೬); ಲಘು ಲಕ್ಷ ಸು[ಪಾಠಾಂ. ಶೂ]ಟಿಯೊಳೊದಗಿ ಪೊಕ್ಕು ಪೊಡದಿಟಿದೊಗೆದು ಸಂಗ್ರಾಮಮುಖದೊಳು ಬಗೆಗುಂದಿಸುವನು (ಭ್ಯರವೇ. ೩-೧೧). ೨. ಕುಟಿಲಾಳಕಿಯರ . . . ಮೆಯ್ಯುವಿರ ಸುಟಿಯಿಂದ ಗುಡಿಗಟ್ಟಿಸುವ ಮಾಗಿಯ ಹಿಮ ವಿಟನಂತೆ ಕಣ್ಗೆ ರಂಜಿಸಿತು (ಮೋಹತ. ೪-೪೫); ಹುಡುಗ ಬಹಳ ಸುಟಿಯಾಗಿದ್ದಾನೆ (ಅಲಮ. ೬೬); ಚಿಗರೆಯ ಸುಟಿ, ಹಾವಿನ ನಯ, ಗರುಡನ ಠೀವಿ . . . ಇಂಥ ಯಾವ ಬೆಲೆ ಯಾವ ಗುಣ ಇದೆ ಮನುಷ್ಯನಲ್ಲಿ? (ವಿಚಾವಾ. ೧೧). ೬. ತ್ವರಿತ; ಶೀಘ್ರ: ನನ್ನ ಸೋದರಳಿಯ ಚಿ. ಶಂಕರನು 'ನೆಲ – ಮುಗಿಲಿ'ನ ಮುಖಪುಟವನ್ನು ಸುಟಿಯಾಗಿ ರೇಖಿಸಿಕೊಟ್ಟನು (ನೆಲಮು. XI, ನನಕಿಯ ನುಡಿ). ೭. ಕುರುಹು; ಚಿಹ್ನೆ; ಲಕ್ಷಣ: ವಿಟ ವಿದೂಷಕ ನಾಗರಿಕ ಪೀಠಮರ್ದನ ಪಟುವಹ ನಾಲ್ಕು ಜಾತಕದ ಸುಟಿಯುಳ್ಳ ಶೃಂಗಾರಪುರುಷರು ಹರುಷೋತ್ಕಟದೊಳಗೈತಂದರಾಗ (ಕಂಸವ. ೨೦-೭೨); ಕಠಿಣಧೂಮವು ಪುರದೊಳೆಸಗಲು ಲಟಕಟಸಿ ಜನನಿವಹಗೂಳೆಯ ಸುಟಿಯಳಿದು ತಮತಮಗೆ ಪೊತ್ತಿದು ದಿಗುದಿಗಾಂತರಕೆ (ಅಂಬಿಕಾ. ೪೪-೩೬). ಸೂಟ್ಟಿ$_1$ : ೮. ಸುಳಿವು: ತಂಗಾಳಿಯ ಸೂಟಿನಿಂದ ನೀರಿನ ಸ್ಥಳದ ಕಡೆಗೆ ಕುದುರೆಯು ಧಾವಿಸಿ ಕೆರೆಯ ದಂಡೆಯನ್ನು ಹತ್ತಿ ಹಾಗೇ ಕೆಳಗೆ ಇಳಿಯಹತ್ತಿತು (ಬಳಭಾ. ೪೪). ಸೂಠಿ : ೧. ಗರುಡಿಯೊಳಂಕದೋಜೆಗಳ ತೋಳ ಲಯಂಗಳ ಸೂಠಿ ವಾಹಳೀತುರಗಖುರ ಪ್ರಹಾರಗತಿಯೊಳ್ (ಅನಂಪು. ೧-೮೯); ತೆರಳಿದನು ನಿನ್ನಾತ ಸೂಠಿಯೊಳುರವಣಿಸಿತಾ ತೇರು (ಕುವ್ಯಾದ್ರೋ. ೯-೪೦); ಬಿಟ್ಟ ಸೂಠಿಯೊಳಾ ನೇಮಿಯ ಬಲ ಬೆಂಗೊಟ್ಟೋಡೆ ರಾಮನ ಭಟರು ತಟ್ಟುಗೆಡಹಿ ರಾವುತರ ಹಿಡಿದರು (ಕುರಾಸಾಂ. ೨೦-೭೧).

ಸೂಟಾಸೂಟಿ, ಸುಟಿಸುಟಿ, ಸುಟುಸುಟಿ, ಸುಟ್ಟಾಸುಟ್ಟಿ, ಸೂಠಾಸೂಠಿ (ದ್ವಿರುಕ್ತಿ): ೧. ವೇಗ; ರಭಸ: ತೇರುಗಳ ಸೂಟಾಸೂಟಿಯಲಿ ಮಿಗೆ ಚಾರಿವರಿಸುತ ಹೊಕ್ಕ ಮೈಯಲಿ ಕಾರಮಳೆ ಕವಿವಂತೆ ರಕ್ಕಸ ರಥಿಕರುರವಣಿಸಿ (ತೊರರಾ. ೬-೨೧-೧೫). ೨. ಚುರುಕು; ಲವಲವಿಕೆ: ನೀಳಕಾಯನಾದ ಸುಟಿಸುಟಿಯಾದ ತಳ್ಳಗಿನ ಒಬ್ಬ ಸಾಧುವನ್ನು ತಮ್ಮ ಮುಂದಿರಿಸಿಕೊಂಡು . . . ಭಕ್ತರು ಭಜನೆ ಮಾಡುತ್ತ ಬಂದರು (ಅಳನ. ೬); ಒಡನೊಯ್ಯನೆ ಗಜವೇಡೆಯದೊಳಗದ ಬಿಡದಬ್ಬಿಸಿಕೊಂಡು ಬಂದು ತಡೆಯದೆ ಸುಟ್ಟಾಸುಟ್ಟಿ[ಪಾಠಾಂ. ಸೂಠಾಸೂಠಿ]ಯೊಳಗೆ ಬಿಟ್ಟು ಪೊಡವಿಯ ಬರೆದ ಬೆರಲೊಳು (ಕುರಾಸಾಂ. ೯-೯೪); ಸೂಠಾಸೂಠಿಯಲಿ ಕೈದೋಱಿದನು ಪಾರ್ಥ (ಕುವ್ಯಾಕ. ೨೩-೧೨). ೩. ಓರಣ; ಅಚ್ಚುಕಟ್ಟು: ಅನಂತಕೃಷ್ಣ ಸುಟುಸುಟಿ ಉಡುಗೆಯಲ್ಲಿ ಪ್ರತ್ಯಕ್ಷನಾದ (ಒಂಟಿದ. ೧೭೯). ಸೂಟಿಮಾಡು = ಈಡುಮಾಡು; ಗುರಿಮಾಡು: ರನ್ನದ ಕಾಲುಂಗುರರವಗಳಿಂದ ರಾಜೇಂದ್ರನನ್ನು ರತಿಪತಿಯಾದ ಕುಸುಮಶರನ ಕುಸುಮಬಾಣಗಳಿಗೆ ಸೂಟಿಮಾಡುತ್ತ (ಸೌಗಂಧಿ. ೪೮೮-೨). [ದೇ. ‖ ತಮಿ. ಚುಟ್ಟಿ = ಬುದ್ಧಿವಂತ; ಚೊಟ್ಟಿಕ್ಕೆ; ಮಲ. ಚುಟ್ಟಿ; ತುಳು. ಚುಟಿ, ಸುಟಿ; ತೆಲು. ಸೂಟಿ]

ಸೂಟ್ಟಿ$_2$, ಚೊಟ್ಟಿ$_3$, ಸೂಟ್ಟು$_2$ (ನಾ). ೧. ರಜೆ; ಬಿಡುವು: ನಾಳೆಯಿಂದ ಸಾಲೆಗೆ ಸೂಟಿಯಲ್ಲವೆ? (ಮೂರುದಾ. ೧೨೮); ಇಂದು ಸಾಲೆಗೆ ಸೂಟಿ (ಜಯಂತ. ೨); ಮೇ ತಿಂಗಳ ಸೂಟಿಯಲ್ಲಿ ನಾನು ಪರೀಕ್ಷೆಯನ್ನು ತೀರಿಸಿಕೊಂಡು ಊರಿಗೆ ಬಂದ (ಚಲುನಿ. ೩೦). ಚೊಟ್ಟಿ$_3$ : ೨. (ಸಾಲ, ದಂಡ ಮೊದಲಾದುವನ್ನು) ಬಿಟ್ಟು ಬಿಡುವುದು; ಸೋಡಿ ಬಿಡುವುದು: (೬). ಸೂಟ್ಟು$_2$ : ೨. ರೈತಗು ಅವನಿಗೆ ಹೆದರಿ ಲಾವಣಿಯಲ್ಲಿ ಸೂಟು ಕೂಡ ಬೇಡುತ್ತಿರಲಿಲ್ಲ (ಗಂವವಾಯು. ೫೪); ಅವನು ದಯಾಳುವಾದ್ದರಿಂದ ಎಷ್ಟೋ ಕುಳಗಳಿಗೆ ಸೂಟುಬಿಟ್ಟನು (ಗುರುಪ್ರ. ೬). 'ಸೋಡಿ' ಪರಾ. [← ಹಿಂ. ಛುಟ್ಟೀ; ಮರಾ. ಸುಟೀ, ಸೂಟ್]

ಸೂಟಿವರ್ (ಕ್ರಿ). ಚುರುಕಾಗಿ ಬರು; ಲವಲವಿಕೆಯಿಂದ ಬರು: ಭೂಪಾಳ ಲೋಳ ದೃಗ್ಮೀನಂ ತನ್ನ ಲಾವಣ್ಯದ ತಿಳಿಗಡಲೊಳ್ಸೂಟಿ[ಪಾಠಾಂ. ಳು]ವಂದಾಡೆ ಬಂದಳ್ . . . ಕಾಂತೆಯೊರ್ಬಳ್ (ಲೀಲಾವ. ೬-೫೦). [ಸೂಟಿ$_1$ + ವರ್]

ಸೂಟು$_1$ 'ಸೂಟಿ$_1$' ನೋ.

ಸೂಟು$_2$ 'ಸೂಟಿ$_2$' ನೋ.

ಸೂಟೆ, ಚೂಡಿ$_1$, ಸೂಡಿ$_1$ (ನಾ). ೧. (ಒಣಗಿದ ತೆಂಗಿನ ಗರಿ ಮೊದಲಾದುವುಗಳಿಂದ ಮಾಡಿದ) ದೀವಟಿಗೆ; ದೊಂದಿ; ಪಂಜು: ಗೊರವಯ ಕಟ್ಟೆ ಸೂಟೆಗಳು ಉರುವುತಿಹವು (ಜ್ಞಾನಚ. ೧೨-೧೦೮); ಬೇಗ ಬೇಗನೆ ತೆಂಗಿನ ಮಡಲಿನ ಸೂಟೆಯೊಂದನ್ನು ಉರಿಸಿಕೊಂಡು ರಾತ್ರೋರಾತ್ರಿ ಹೊರಟೇ ಬಿಟ್ಟಿದ್ದರು (ಚಿಗುಬು. ೬೧); ಬೆಳಗಿನ ಮೂರು ಗಂಟೆಗೇನೆ ನಾವು ಕೈಯಲ್ಲಿ ಸೂಟೆ ಹಿಡಿದು ಹೊರಟೆವು (ಮ್ಯಲಿಮಾ. ೧೧). ೨. ಪಂಜಿಗಾಗಿ ಉಪಯೋಗಿಸುವ ತೆಂಗಿನ ಗರಿಯ ಮೇಲ್ಭಾಗ: ಒಂದು ಐದಾರು ತೆಪ್ಪರಿಗೆಯ ಸೂಟೆಯನ್ನೂ ಒಯ್ಯುವ (ಕೃಮಾಂಸ. ೫೪). ಚೂಡಿ$_1$: ೧. ಕಗ್ಗತ್ತಲೆಯಲ್ಲಿ ಕೈಯೊಳಗೆ ಉರಿಯುವ ಚೂಡಿಗಳನ್ನು ಹಿಡುಕೊಂಡು ಡವಿಗೆಯ ಮೇಲೆಯೇರಿ ಹುಟ್ಟುಗಳನ್ನು ಸಮಾಪಿಸುವರು (ಕಭಾಗ. ೬೬). ಸೂಡಿ$_1$ : ೧. ಸಮ್ಮಲಿ ಥಾಳೀವ – ಸೂಡಿಪೊತ್ತಿಸಪಟ್ಟನಂತೆ . . . ಬೇಯುತ್ತಿರ್ದೊನಾಗಿ (ವಡ್ಡಾರಾ. ೧೩೬-೬); ಗುರುದತ್ತಮುನೀಶ್ವರನಂ ಕರಮಲ್ಲದ ಮುನಿದು ಸೂಡಿ ಪೊತ್ತಿಸಿ ಸುಟ್ಟಂ (ಧರ್ಮಾಮೃ. ೮-೯೦); ಒಂದು ಸೂಡಿ ಹಿಡಿದು ನಿಮ್ಮನ್ನು ನಮ್ಮ ಭಟ್ಟರ ಮನೆಯವರೆಗೆ ಮುಟ್ಟಿಸಿ ಬರುತ್ತೇನೆ (ಚಿಟ್ಟಜೀ. ೪); ಅವರಿಬ್ಬರೂ ಹಿಡಿದ ಸೂಡಿಯ ಬೆಳಕಿನಲ್ಲಿ ನಮ್ಮ ಪಯಣ ಮುಂದುವರಿಯಿತು (ಮೂಕಜ್ಜ. ೬೧).

[ದೇ. ‖ ತಮಿ. ಚೂಟ್ಟು; ಮಲ. ಚೂಟ್ಟ, ಚೂಟ್ಟು; ತುಳು. ಚೂಟಿ, ತೂಟಿ. / ಪ್ರಾ. ಚುಡುಲೀ./ ಮರಾ. ಚುಡಾ, ಚುಡೀ, ಸೂಂಡೆ]

ಸೂಠಿ 'ಸೂಟಿ$_1$' ನೋ.

ಸೂಡ$_1$ (ನಾ). ಧರಿಸಿರುವವನು: ಪಿತ್ತನೆ ಪಡೆಸೂಡನೆ . . . ಸತ್ಯನೆ ಜಯವೆಂದು ನಂಬಿ ಪಾಡಿದನಾಗಳ್ (ತ್ರಿಪುವ. ೨-೧೦೯). [ಸೂಡು$_1$ + -ಅ]

ಸೂಡ$_2$ (ನಾ). [ಸಂಗೀತ] ಹಾಡು; ಗೀತ: ಸೂಡ ಎಂಬ ಈ ದೇಶೀಶಬ್ದವು ಹಾಡನ್ನು ನಿರ್ದೇಶಿಸುತ್ತದೆ (ಚತುಪ್ರ. ೬೦). [ದೇ. ‖ ತೆಲು. ಸೂಳ]

Δ ಸೂಡಂಗ 'ಸೂಡಗ' ನೋ.

ಸೂಡಗ, ಸೂಡಂಗ (ನಾ). ಒಂದು ಬಗೆಯ ಬಳೆ, – ಕಡಗ (?) : ನೇವುರದ ಭಾವಕಿಗೆ ಸೂ[ಪಾಠಾಂ. ಪಾ]ಡಗದ ಪರುಷಕ್ಕೆ ಉಡಿಗೆಯ ಮೃಡಾಣಿಗೆ (ಗಿರಿಕ. ೩-೯೧ ವ); ಬಿಗಿದು ಕಾಂಚೀದಾಮಮಂ ಲಲನೆಗೆ ಮಿಸುಪ ಭುಜವಳೆಯ ಭುಜಕೀರ್ತಿಗಳನಂಕಿಸಿ ಕಡಗ ಕಂಕಣ ಸೂಡಗವನಿಕ್ಕಿ (ಬಸವು. ೪-೩೬); ಉಡಿದು ಬಿದ್ದವು ಸೂಡಗವು ಬಿಗುಪಡಗಿ ಕಳೆದವು ತೋಳಬಂದಿಗಳು (ಕುವ್ಯಾಗ. ೧೧-೧೯). Δ ಸೂಡಂಗ : ದಾಡಿಮದ ಸೂಡಂಗದೊಳಂ ಕರ್ಣಕಾರದ ಪೂರದೊಳಂ ಪದ್ಮಕರ್ಣಿಕೆಯ ಮುದ್ರಿಕೆಯೊಳಂ (ನಾಗಕು. ೩೦-೮೭ ವ); ಹೂವಿನ ಸೂಡಂಗ ಮೊದಲಾದ ತೊಡಿಗೆಯ ಭೂವರನಿಗೆ ತೊಡಿಸಿದರು (ಇಚಸಾಂ. ೮-೧೧೫). 'ಚೊಡಕ' ಪರಾ. [ದೇ. ‖ ತಮಿ. ಚೂಟಕಮ್; ತೆಲು. ಸೂಡಿಗ; ತುಳು. ಚೂಡ, ಚೂಡಗ./ ಪ್ರಾ. ಚೂಡ./ ಸಂ. ಚೂಡಾ]

**ಸೂಡಿ$_1$** 'ಸೂಟೆ' ನೋ.

**ಸೂಡಿ$_2$** 'ಸೂಡು$_2$' ನೋ.

**ಸೂಡಿಕಟ್ಟು** 'ಸೂಡುಕಟ್ಟು' ನೋ.

**ಸೂಡಿಗ** (ನಾ). (?): ಶ್ರೀವಿಮಲಚಿತ್ತಂಬ ಲೆಕ್ಕಣಿಕೆಯಂ ಕೊಳ್ಳುತೀ ವಿಶೇಷದ ಜಗತ್ತಂಬ ಚಿತ್ತವನೊಲ್ದುಹೋ ವಿರಚಿಸುತ್ತ ಕಂದೆಱಿವ ಸೂಡಿಗನು ತಾನೆಂಬ ಸಮದೃಷ್ಟಿ ಪ್ರಭೆ (ವೀಶೈಪು. ೫-೮-೮). [ಸೂಡು$_1$ + - ಇಗ]

**ಸೂಡಿಗಂಟು** (ನಾ). (?) : ಸೂಡಿಗಂಟು , ಕೋಡಿನೀರ್ (ಶಬ್ದಾನು. ೮೨ ಪ್ರಯೋ).
[ಸೂಡಿ$_2$ + ಗಂಟು]

**ಸೂಡಿಸು** (ಕ್ರಿ). ೧. ತೊಡಿಸು ; ಧಾರಣೆ ಮಾಡಿಸು : ತನಗೊಲ್ದು ಮಾಲೆಯಂ ಸೂಡಿಸಿದಾತನೀತಂ (ಪಂರಾಮಾ. ೩-೬೧). ೨. (ಛತ್ರಿಯನ್ನು ಬಿಚ್ಚಿ) ಹಿಡಿದು ಕೊಳ್ಳು : ಗಾಡಿ ನಿಂತಿತು, ಹಿಂಭಾಗದಿಂದ ದೇವಯ್ಯನೂ ಮುಕುಂದಯ್ಯನೂ ಕೊಡೆ ಸೂಡಿಸಿಕೊಳ್ಳುತ್ತಲೆ ಹಾರಿದರು (ಮಲೆಮ. ೫೪೬). [ಸೂಡು$_1$ + - ಇಸು$_3$]

**ಸೂಡು$_1$** (ಕ್ರಿ). ೧. (ಹೂವು ಮುಂತಾದುವುಗಳನ್ನು) ಮುಡಿ ; ಧರಿಸು; ತಾಳು : ''ಸೂಡು – ಪುಷ್ಪಧಾರಣೇ, ತೃಣಾದಿ ಪೂರೇ ಚ (ಹುಲ್ಲು ಮೊದಲಾದವುಗಳ ಕಂತೆ)'' (ಶಮಧಾ); ಸೂಡುವೆನೆಂಬುದಲ್ಲದಣಮಾಗದು ಸೂಟ್ಪಿನಮೋಘಮೆಂಬುದುಂ (ಕವಿರಾ. ೨-೧೦೩); ಮಗಮಗಿಸುವ ನವಮೃಗಮದದಗುರುವ ಮಳಯಜದ ಕಂಪುಮಂ ಸೂಡಿದ ಬಾಸಿಗದ ಪೊಸಗಂಪುವುಂ ನೆಱೆದುಗಿಬಗಿಮಾಡಿದುವು ಚಮರರುಹ ಪವನಂಗಳ್ (ಆದಿಪು. ೯-೪). ೨. ಇಟ್ಟುಕೊಳ್ಳು; ಇರಿಸಿಕೊಳ್ಳು: ಮುಸೆ ಮುಟ್ಟದ ಮಹಂತನ ಬೇಡುವೆನಾತನ ಕರುಣವನು ಪಾದವ ನೊಸಲಲ್ಲಿ ಸೂಡುವೆ (ಅವಚಂ. ೨೫೧-೧೧೪೫); ಮುಕುಳಿತಕರಾಬ್ಜಮಂ ಮಸ್ತಕದಿ ಸೂಡಿ ನಡೆಯಡಿಗಳಿಂ ಬರೆ ಬರುತ್ತೆ (ನವಮೋ. ೨೧-೫೮). ೩. (ಮಾಲೆ, ಹಾರ ಮೊದಲಾದುವನ್ನು) ತೊಡಿಸು; ಹಾಕು: ಬಡವಂಗೇನುಮಲ್ಲದೊಂಗೆ ಮಾಲೆಯಂ ಸೂಡಿದಳೆಂದು ಸಭಾಕ್ಷೋಭಮಾಗಿ (ವಡ್ಡಾರಾ. ೪೧-೬); ಚೆಲ್ವಿಡಿದಿರ್ದ ರೂಪು ದೃಷ್ಟಿಗೆ ವರೆ ಪಾಂಡು ರಾಜನನೆ ಕುಂತಿ ಮನಂಬುಗೆ ಮಾಲೆಸೂಡಿದಳ್ (ಪಂಪಭಾ. ೧-೧೦೬); ಹೂಮಾಲೆ ಸೂಡುವೆವು ಕೊರಳಿಂಗೆ (ಕೋಗಿಲೆ. ೪೧-೧೯). ೪. ಹೊಂದು; ಪಡೆ : ನಿರ್ವ್ವಿನೀತರಾ ಕಿಱಿಯಾ ಮಗನ್ದಿರ್ಕಾಡುವಟ್ಟೆಯರಿನ್ದವು ವಲ್ಲವಂಸರಿಂದಂ ಕೊಂಗೊಣಿ ಪಟ ಸೂಡಿದೋರ್ (ಎಕ. VI, ಚಿಕ್ಕಮ. ೫೦-೨; ಸು. 480?); ಅಮೃತಕಲೆಯ ಸೂಡಿದವನಂಬಲಿ ಯನುಂಬನೇ (ಅವಚಂ. ೧೯೬-೮೯೦); ದೈನ್ಯಮಂ ಸೂಡದೆ ಪರವಧುವಂ ನೋಡದೇ ನೊಂದುಮಂ ಬೇಡದೆ (ರಕ್ಷಾಶ. ೬೨); ಗಣಪರ್ವಮಂ ರಚಿಸಿ ಸೂಡಿದರು ಸತ್ಕೀರ್ತಿಯ (ಭಾವಚಿಂ. ೫-೨೬). ೫. ಹೊತ್ತುಕೊಳ್ಳು; ಹೊರು: ಈಡಿಱಿದ ಪಕ್ಕದಲಿ ಸೇನೆಯ ಸೂಡಿ ತಂದಿಳುಹಿದನು ನಾಯಕವಾಡಿಗಳುಸಹಿತುಬ್ಬರಿವ ಸಾಗರದ ತೀರದಲಿ (ತೊರರಾ. ೪-೧೧-೨೧). ೬. ಗಂಟು ಕಟ್ಟು; ಸೇರಿಸಿ ಕಟ್ಟು : ಅಂತು ಕಾಡುಗುಮೆ ಲೋಕಮನಿಂದ್ರಂಗಂತು ಮಾಡುಗುಮೆ ಬನ್ನಮನೋವೋ ಅಂತು ಸೂಡುಗುಮೆ ಕೇಸುರಿಯಂ ಪೇಱಿಂತು ಕೂಡುಗುಮೆ ಬೀರಮದಾರ್ಗಂ (ಕಾವ್ಯಾವ. ೩೬೧); ಸೂಡುತಲಿ ಬಿಡುಜಡೆಗಳನು . . . ಜಪತಪಸಮಾಧಿಯ ಮಾಡುವವರಾ ಮಾಯೆ ಬರಲೆದ್ದೋಡಿದರು ಹುಲಿಗಂಡ ಹುಲ್ಲೆಗಳಂತೆ (ಪ್ರಭುಲೀ. ೭-೪೫). ೭. (ಛತ್ರಿಯನ್ನು ಬಿಚ್ಚಿ) ಹಿಡಿ : ಬಿಸಿಲಿನ ಡಾವರ ಅತಿಯಾಗಿದ್ದರೂ ಆತನು ತಲೆಗೆ ಟೋಪಿಯನ್ನೂ ಹಾಕಿರಲಿಲ್ಲ ; ಕೊಡೆಯನ್ನೂ ಸೂಡಿರಲಿಲ್ಲ (ಕಾನೂರು. ೧). ೮. ಮೂಡು; ಕಾಣಿಸಿಕೊಳ್ಳು: ಸೂಡಲುದಯಾದ್ರಿಯೊಳ್ ಸೂರ್ಯ ಕತ್ತಲೆಮೊತ್ತಮೋಡಲಾ ಕೌರವಂ ಸರ್ವಸನ್ನಾಹದಿಂ ನಾಡೆರೆಯರೆಲ್ಲರಂ ಬರಿಸಿ ಪೇರೊಡ್ಡೋಲಗವನಿತ್ತನು (ಲಕ್ಷ್ಮೀಭಾ. ೫-೩-೨೩); ನೆನೆವೆ ಹಕ್ಕಿ ಹಾಡೆ ಇರುಳು ಚುಕ್ಕಿ ಸೂಡೆ ಹೊನಲು ದನಿಗೈಯೆ ಹಳುವು ಮರ್ಮರಿಸೆ ಸುಗ್ಗಿ ಗಾಳಿಯಾಡೆ (ಗೋಕುನಿ. ೫೨-೨೨).

[ದೇ. ‖ ತಮಿ. ಚೂಟು, ಚೂಟ್ಟು; ಮಲ. ಚೂಟುಕ; ಕೊಡ. ಚುಡ್; ಪರ್ಜಿ. ಚೂಂಡೆ]

**ಸೂಡು$_2$, ಸೂಡಿ$_2$** (ನಾ). ೧. ಕಂತೆ ; ಕಟ್ಟು ; ಹೊರೆ : ನಕುಳಸಹದೇವರುಮಂ ಶಲ್ಯಂ ವಿರಥರ್ಮಾಡಿ ಪಿಡಿದುಕೊಂಡು ಪುಲ್ಲ ಸೂಡನೀಡಾಡುವಂತೆ ತನ್ನಳಿಯಂದಿರಿ ರ್ವರುಮನೀಡಾಡಿ (ಪಂಪಭಾ. ೧೩-೪೧); ಎಳೆಯ ಕೀರೆಯ ಸೊಪ್ಪಂ ಕೊಯ್ದು ಸೂಡಂ ಕಟ್ಟಿ ಕೈಯೊಳ್ ಪಿಡಿದು (ತ್ರಿಪುವಿ. ೮-೫೭ ವ); ಆ ಮೂರ್ತಿಯ ಕೈಯಲ್ಲಿ ಬತ್ತದ ಸೂಡು ಇರುತ್ತದೆ (ಕನ್ನಬಾ. ೧೬೧). ೨. ಗುಂಪು ; ಸಮೂಹ : ಮೋಡಗಳ ನಡುವಿಂದ ಮಿಂಚಿನ ಸೂಡುಗಳ ಮಾಳ್ಕೆಯೊಳು ಮತ್ತಾ ಕಾಡಿನೆಡೆಯಿಂದೋಡಿ ಮರೆಯಾ ದಚ್ಚರಸಿಯರನು (ಸೌನಂದ. ೧೦-೩೯). **ಸೂಡಿ$_2$** : ೧. ವೆಂಕಮ್ಮ . . . ಮೊದಲು ಹುಲ್ಲುಕುತ್ತರೆಯನ್ನು ನೋಡಿದರು. ಪುಣ್ಯಕ್ಕೆ ಯಾರೂ ಸೂಡಿಗಳನ್ನು ಕದ್ದಿರಲಿಲ್ಲ (ಪದ್ಮಸ. ೨೩೩); ಮೂವರು ಹೆಂಗಸರು, ಮಳೆಯಲ್ಲಿ ನೆನೆಯುತ್ತ ಅಗೆಯನ್ನು ಕಿತ್ತರು. ಸೂಡಿ ಮಾಡಿ ಎಸೆದರು (ಮರಮ. ೩೭). ೩. (ತಲೆಯ ಕೂದಲುಗಳನ್ನು) ಸೇರಿಸಿ ಕಟ್ಟುವ ಗಂಟು: ತಲೆ ಸೂಡಿ ಬಿಚ್ಚಿ ಒಮ್ಮೆ ಕೊಡವಿ ಸೆರಗಿನಿಂದಲೇ ಚೆನ್ನಾಗಿ ಒರೆಸಿಕೊಂಡಳು (ಹೊಸಕ್ಕಿ. ೪೭). 'ಸಿವುಡು' ಪರಾ.

[< ಸೂಡು$_1$./ ತಮಿ. ಚೂಟು; ಮಲ. ಚೂಟ್ಟು; ತುಳು. ಚೂಡಿ, ಸೂಡಿ]

**ಸೂಡು$_3$** (ನಾ). ೧. ಸುಡುವಿಕೆ; ದಹನ: ಪುಷ್ಪಕವಿಮಾನದ ರತ್ನವಿಚಿತ್ರ ಪುತ್ರಿಕಾಸಂಕುಳಮಟ್ಟೊಡಟ್ಟುವು ಬೆಮರ್ತೊಡೆ ಕೂಡೆ ಬೆಮರ್ತುವಾಗಳಾ ಲಂಕೆಯ ಸೂಡನುನ್ನತಿಯ ಕೇಡನವಂಗೆ ನಿವೇದಿಪಂತೆವೋಲ್ (ಪಂರಾಮಾ. ೯-೧೦೯); ಪೊಸಸುಣ್ಣ ಸೂಡು ಬಾಡಿರೆ ಬಸಮೞಿದು ಬೞಿಲ್ದು ನೆಱಿಲ ಕಳವಳದಿಂ ಪೊಕ್ಕಸಿಪತ್ರವನದ ಕೂರೆಲೆ ಕುಸುಮದ ಕೊನೆಕೊಯ್ದು ಕೊಱೆದು ಕುಱಿದಱಿಯಪ್ಪರ್ (ಅನಂಪು. ೯-೩೩). ೨. ಬೆಂಕಿ; ಉರಿ: ರಾಜಕುಮಾರರ ಮನದೊಳ್ ಸೂಡೆ[ಪಾಠಾಂ. ಡಿ]ರ್ದಂತಾಗೆ . . . ವಸುದೇವನ ಮೇಲೆ ರಾಜಕುಮಾರರೊಡ್ಡು ಕವಿದು ಮುಸುಱಿ ಮುತ್ತಿದಾಗಳ್ (ಅರ್ಧನೇ. ೬-೪೦ ವ); ಎತ್ತಂ ಬಿಸಿಲ್ ಕಾಯೆ ಸೂಡೊಳಬಿರ್ದಂತೆ ಬೞಲ್ದೆಬಲ್ದು ನಡೆದರ್ (ಬಂಪರಿ. ೧೪-೨೮); ಎಷ್ಟು ವರುಷವಾಯ್ತು, ನನ್ನ ಜೀವಕ್ಕೆ ಬೆಂಕಿಯಿಟ್ಟು? ಇನ್ನೂ ಉರಿಯುತ್ತಿದೆಯಲ್ಲಾ ಆ ಸೂಡು! (ಮಲೆಮ. ೫೧೩). ೩. ಉಷ್ಣ ; ಕಾವು ; ತಾಪ : ಬಕವೇಸಿತನದಿಂದೊಡಲ ಸೂಡಿಂಗಿರಲಾಱದೆ ಪುಸಿಗೂರ್ಮೆಯಿಂದೋಪಳನಪ್ಪಿಕೊಂಡು ಮೆಲ್ಲನಿಂತೆಂದಂ (ಧರ್ಮಾಪ್ಯ. ೩-೩೫); ಗರುಡಿಯಲಾಡಿದಂತಿರದಾಜಿರಂಗದ ಸೂಡು ತಾನದು ಬೇರೆ (ಕೋಗಯ. ೨೨-೨೦); ಗ್ರೀಷ್ಮರಾಜಂ ತಲೆದೋಱಿದಂ . . . ನಾಡುಂ ಕಾಡುಂ ಬೀಡುಂ ಸೂಡಿಂ ಸೀಕರಿವೋಯ್ತು (ರಾಮಾಶ್ವ. ೫೨-೨). ೪. ಚಿತೆ : ನೀ ಸತ್ತು ಸೂಡಿನಲಿ ಹೆಣ ಬೂದಿಯಾದಂದು ನಿನಗೆ ಇಂದ್ರಿಯಜಯವು (ಕೋಗಿಲೆ. ೬೫-೮); ನನ್ನ ದಿಬ್ಬಣವವರ ಭುಜದಲಿ ಮಸಣ ಸೂಡಿಗೆ ನಡೆಯಲಿ (ಅನುಕ. ೪೫). ೫. ಕಬ್ಬಿಣ, ಬಳೆಯ ಚೂರು ಮುಂತಾದುವನ್ನು ಕಾಯಿಸಿ ಎಳೆಯುವ ಬರೆ ; ಚಿಟಿಕೆ : ಆಲಿಗೆ ಸನ್ನಿ ಮಾರಿದರೆ ಗೈಬುಗೆ ಸೂಡಿಟ್ಟರು (ಗಾದ).

**ಸೂಡಿನ ಕಾಳಗ = ಪಂಜಿನ ಯುದ್ಧ** : ಸೂಡಿನ ಕಾಳಗದವರ ಕೊಱಿತೆ ವಾತನಾಡೆ ವಹಿಸಿ ಕಾದುವರ ಪಾಡಿನ ಕಾಳಗದವರ ಕೋಳಾಹಳವೀಡಿಱಿದುದು ದೆಸೆಗಳನು (ಕುರಾಸಾಂ. ೪-೭೭). 'ಸೂಟೆ' ಪರಾ. [< ಸುಡು$_1$]

**ಸೂಡುಕಟ್ಟು, ಸೂಡಿಕಟ್ಟು** (ಕ್ರಿ). ೧. (ಹಲ್ಲು ಮೊದಲಾದುವನ್ನು) ಸೇರಿಸಿ ಕಂತೆ ಕಟ್ಟು : ನೀಲಿಯ ಗಿಡಗಳಿಗೆ ಹೂವಾದ ಕೂಡಲೆ ಆ ಗಿಡಗಳನ್ನು ಕೊಯಿದು ಸೂಡುಕಟ್ಟುತ್ತಾರೆ (ಮುಂಬಯಿ. ೪-೫೫). **ಸೂಡಿಕಟ್ಟು** : ೧. ಅನಂತರ ಅಗೆ ಕಿತ್ತಳು ; ಸೂಡಿಕಟ್ಟಿದಳು (ಜಾನಗೀ. ೯೦). ೨. (ಕೂದಲನ್ನು ಒಟ್ಟಿಗೆ ಸೇರಿಸಿ) ಗಂಟು ಕಟ್ಟು; ಗಂಟುಹಾಕು : ಮೀನಿನ ಕುಕ್ಕೆಯಿಂದ ಕೆಳಗಿಳಿದ ಉಪ್ಪುನೀರು ಪಾಳೆಯನ್ನು (ಅಡಕೆಯ ಸೋಗೆಯ ಬುಡ) ದಾಟಿ ಸೂಡಿಕಟ್ಟಿದ್ದ ತಲೆಕೂದಲನ್ನು ನೆನೆಯಿಸಿ, ಬೆವರಿನ ಜೊತೆ ಸೇರಿ ಮೀನಿನ ಆಹ್ಲಾದಕರವಾಸನೆಯ ಮಧ್ಯೆ ಕಮರುನಾತವನ್ನು ಹುಟ್ಟಿಸಿತ್ತು (ಹೊಸಕ್ಕಿ. ೪೭). [ಸೂಡು$_2$ + ಕಟ್ಟು$_1$]

**ಸೂಡುಗಾದು** (ಕ್ರಿ). (ಉತ್ಸಾಹದ) ಕಾವಿನಿಂದ ಹೋರಾಡು; ಪೌರುಷದಿಂದ ಕಾದು (?) : ಹರನೊಳು ಸೂಡುಗಾದು[ಪಾಠಾಂ. ಡು]ವೆನೆಂದು ಮನಸಿಜ ಭರದಿ ಕೂಡಿದ ಬಲದಂತೆ ನೆರೆದಿರ್ದ ಪೆಣ್ಗಳ ಬಳಗದ ನಡುವೆಸೆವರಮಗಳೊಡ್ಡೋಲಗಕೆ (ಚಂಪ್ರಸಾಂ. ೯-೩೩). [ಸೂಡು$_3$ + ಕಾದು$_1$]

**ಸೂಡುಗುಯ್ಯಲ್** (ನಾ). ಒಂದು ಬಗೆಯ ಗದ್ದೆ : ಧರ್ಮ್ಮಕೊಳಗ ಮೇಂಟೆಯ ಸೂಡುಗುಯ್ಯಲ ಭತ್ತ ಒನ್ದು ಪೊXXXರೆಯಿಂ ನಡಸುವರು (ಸೌಇಇ. IX-i, ೧೮೪-೪; 1111). [ಸೂಡು? + ಗುಯ್ಯಲ್]

**ಸೂಡುದಱಿ** (ಕ್ರಿ). ಕಂತೆಯನ್ನು ಕತ್ತರಿಸುವಂತೆ ಕತ್ತರಿಸಿ ಹಾಕು; ಕೊಲ್ಲು: ನೋಡುತಿರಲೀ ಬಲವೆರಡು ಹೋಗಾಡು ನಮ್ಮನು ಮೇಣ್ ನಿನ್ನನು ಸೂಡುದಱಿವೆನು ಸತ್ವದಳತೆಯ ಕಾಣಲಹುದು (ಕುವ್ಯಾಕ. ೧೯-೩೦). [ಸೂಡು$_2$ + ತಱಿ$_1$]

**ಸೂಡುಪಾಡು** (ನಾ). ನಾಶಮಾಡುವ ಪ್ರತಿಜ್ಞೆ; ಕೊಲ್ಲುವ ಶಪಥ: ಪೊರೆಯೇಱಲಡಿಗಡಿಗತಿಖಾನಖಾನರು ನೆರದು ಸರಳ ಸರಿವಳೆಯ ಸುರಿದರು ಸೂಡುಪಾಡಿಂದ ರಾಮನ ಮೇಲೆ (ಕುರಾಸಾಂ. ೪೫-೯೧); ಮೃಡನೊಳು ಸೂಡುಪಾಡಿಗೆ ಕಾದಲೆಂದಾ ಕುಟುವಿಲ್ಲ ರತ್ನದಿಂ ಸಮದು ಪಿಡಿದ ಖೆಡೆಯುವೆಂಬಂತೆಸೆಬುದು ಮೂಡಗಡೆಯ ಮೂಡುವ ಚಂದ್ರಬಿಂಬ (ರಾಮವಿ. ೧೦-೧೬): ಅವರ ಪಾಳೆಯಮಂ ದಟದುಟವಾಯ್ತು ಸೂಡುಪಾಡಂ ಮರಲ್ಚುವೆವು (ಚಿಕವಂ. ೪೫-೩).
[ಸೂಡು$_3$ + ಪಾಡು$_3$]

**ಸೂಡುಬೆಂಕಿ** (ನಾ). ಶ್ಮಶಾನದಲ್ಲಿ ಹೆಣವನ್ನು ಸುಟ್ಟು ಉರಿಯುವ ಬೆಂಕಿ, — ಉರಿ; ಚಿತೆಯ ಬೆಂಕಿ: ಸುಡುಗಾಡಿನಲ್ಲಿ ಧಗಧಗಿಸುತ್ತಿದ್ದ ಸೂಡುಬೆಂಕಿಯನ್ನು ಕಂಡ ಅವನಿಗೆ ತನ್ನ ಸುತ್ತಲೂ ದೆವ್ವಗಳು ನಿಂತು ತನ್ನನ್ನೇ ಅಳಿಯಾಸೆಯಿಂದ ನೋಡುತ್ತಿದ್ದಂತೆ ಭಾಸವಾಯಿತು (ಕಾನೂರು. ೧೦೮). [ಸೂಡು$_3$ + ಬೆಂಕಿ (< ಬೆಂಕೆ)]

**ಸೂತ** (ಗು). ೧. ಹೆತ್ತ; ಪ್ರಸವಿಸಿದ. ೨. ಮುಂದಕ್ಕೆ ದೂಡಿದ; ಪ್ರಚೋದಿಸಿದ. ೩. ಹೊರಟುಹೋದ; ಅಗಲಿದ. (ನಾ). ೪. ರಥವನ್ನು ನಡೆಸುವವನು; ಸಾರಥಿ: ತಱಿದು ಸೂತನಸಾತನ ವಾಜಿಯುಂ ಮಹೀಶಂ ತೆಗೆದೆಚ್ಚಂ (ಪಂಪಭಾ. ೧೦-೯೮); ಸೂತರುಗವಣೆಗಳ ಸುರೇಖೆಯ ಗತಿಯ ವಾಜಿಯ ರಥವ ನೋಡಿದರು (ಕುವ್ಯಾಉ. ೧೧-೧೭); ಸೇನೆಸಹಿತವೆ ಕನಕಸತ್ತಿಗೆ ಮುಱಿದು ಬಿದ್ದುದು ಸೂತನುರುಳಿದನು (ಕಾಶಿರಾ. ೨೦-೩೭). ೫. ಕ್ಷತ್ರಿಯನಿಗೆ ಬ್ರಾಹ್ಮಣ ಸ್ತ್ರೀಯಲ್ಲಿ ಹುಟ್ಟಿದ ಮಗ; ℙ ಸಾರಥಿತನವನ್ನು ವೃತ್ತಿಯಾಗಿ ಉಳ್ಳವನು: ವಂದಿಗಳ್ ನಿಂದ್ಯಮೆನೆ ಮಾಗಧರಾಗದೆನೆ ಸೂತರನೀತಿಯೆನೆ . . . ಪಾಸಱೆಯೊಳ್ ಕೂಸನಪ್ಪಳಿಸಿ (ಜಗವಿ. ೨-೫೩ ವ); ಬ್ರಾಹ್ಮಣಸ್ತ್ರೀಯಲ್ಲಿ ಕ್ಷತ್ರಿಯನ ದೆಸೆಯಿಂದ ಹುಟ್ಟಿದವನು ಸೂತನೆನಿಸಿಕೊಂಬುವನು (ಕೃವಾವಿ. ೩೪); ಬ್ರಾಹ್ಮಣಗಳ ಕಾಲದಿಂದಲೂ ಸೂತರು ರಾಜವಂಶಗಳ ನಿಕಟಸಂಬಂಧವನ್ನು ಹೊಂದಿದ್ದರಲ್ಲದೆ ಅವುಗಳ ವಿಷಯವೆಲ್ಲವನ್ನೂ ಚೆನ್ನಾಗಿ ಬಲ್ಲವರಾಗಿದ್ದರು (ಭಾರದ. ೧೩೮). ೬. ವೈಶ್ಯನಿಗೆ ಕ್ಷತ್ರಿಯಸ್ತ್ರೀಯಲ್ಲಿ ಹುಟ್ಟಿದ ಮಗ; ℙ ವಂದಿಮಾಗಧವೃತ್ತಿಯನ್ನು ಅವಲಂಬಿಸಿರುವವನು. ೭. ಹೊಗಳುಭಟ್ಟ; ವಂದಿಮಾಗಧ : ಸೂತ ನಟ ವಂದಿಮಾಗಧ . . . ಪುಣ್ಯಪಾಠಕವಿಪ್ರೋದ್ಘೂತರವಮೆಸೆಯೆ (ಪಂಪಭಾ. ೧೨-೧೦೬); ಅಸುರಪತಿಯುಪ್ಪವಡಿಸಿದನಿದ್ದೆಸೆಯ ಮಂಗಳರವದ ಪಾಠಕ ಸೂತ ಮಾಗಧರುಗಳ ಸೂಕ್ತಿಯಲಿ (ತೊರರಾ. ೬-೨೦-೧೧). ೮. ಮರಗೆಲಸ ಮಾಡುವವನು; ಬಡಗಿ. ೯. ರವಿ; ಸೂರ್ಯ. ೧೦. ನೈಮಿಷಾರಣ್ಯದಲ್ಲಿ ಮುನಿಸಮೂಹಕ್ಕೆ ಪುರಾಣೇತಿಹಾಸಗಳನ್ನು ಹೇಳಿದ ಒಬ್ಬ ಮಹರ್ಷಿ; ವ್ಯಾಸಮಹರ್ಷಿಯ ಶಿಷ್ಯ: ಸುಮೇಘಪರ್ವತದಲಿ ಅತ್ರಿ . . . ಸೂತ . . . ಉಪಮನ್ಯು ಮೊದಲಾದ ಅಷ್ಟಾಶೀತಿಸಹಸ್ರಋಷಿಗಳನಂತಾಶ್ರಯಂಗಳುಂ (ವಿವೇಕ. ೨೧೬); ಸಕಲ ಋಷಿಗಳ ಮತದಿ ಶೌನಕ ಪ್ರಕಟದಲಿ ಸೂತಂಗೆ ವಂದಿಸಿ ಭಕುತಿಯೊಳು ಕೇಳಿದನು ಕೃಷ್ಣಾರ್ಜುನರ ಕಾಳಗವ (ಕೃಷ್ಣಾಕಾ. ೨ ಸೂಚನ). ೭ , ೧೦ : ಪರಮ ಮೈತ್ರೇಯರಿಂ ಪುಂಡರೀಕಾಕ್ಷಿಯರ ತರದಿಂದೆ ಸೂತರಿಂ . . . ಸುರಪತಿಯ ಸಭೆಯಂತೆ ಮೆಱೆದುದಾ ರಾಯನೊಡ್ಡೋಲಗಂ (ಭಾವಚಿಂ. ೭-೫). ೧೧. ರಥದಲ್ಲಿ ಕುಳಿತು ಯುದ್ಧಮಾಡುವವನು; ರಥಿಕ. ೧೨. ಪಾದರಸ. ೧೩. ತಿಳಿಯುವಂತೆ ಮಾಡುವುದು; ತಿಳಿಸುವುದು. ೧೪. ಶಕ್ತಿ; ಸಾಮರ್ಥ್ಯ. ೧೫. ಮೀನುಹಿಡಿಯುವವನು; ಬೆಸ್ತ : ಗಂಗೆಗೆ ಕೆಯ್ಯೆಡೆಯೆಂದುತ್ತುಂಗಸ್ತನಿ ಕೊಟ್ಟು ಪೋಗೆ ಸೂತಂ ಕಂಡಾತ್ಮಾಂಗನೆಗೆ ರಾಧೆಗಿತ್ತು (ಪಂಪಭಾ. ೯-೬೫); ಕೈಗಳ ಕೊಡಹಿ ಭೋಯೆಂದೊದಱುತಿರ್ದನು ಶಿಶುಗಳರಸನು . . . ಇದನು ಕಂಡನು ಸೂತನೊಬ್ಬನು (ಕುವ್ಯಾಆ. ೩-೨೩). ೧೬. ಯುದ್ಧ ಭೇದಗಳಲ್ಲಿ ಒಂದು : "ರಸದಲ್ಲಿ ಹಡೆವಲ್ಲಿ ವಂದಿಯಲಿ ಸಾರಥಿಯ ಅಱುಹುವಲ್ಲಿ ಕ್ರಮದಿಂದ ಸೂತಮೆನಿಸಿಕ್ಕು" (ಮಂಗರಾ. ೧೫೪-೬೫); ರಥಿಯೋಳ್ ಸೂತದೊಳಾಹವಂಗಳೊಳು ವಂದಿವ್ರಾತದೋಳ್ ಚಾಲಿ ಸಾರಥಿ ಪೌರಾಣಿಕ ಶಕ್ತಿ ಸಂಭವದೊಳುಂ ಸೂತಾಖ್ಯ" (ನಾನಾರ. ೩೩). ೧೭. ಕರ್ಣ : ಸೀತೆಯಿಂ ಹೆಣ್ಣಿಲ್ಲ ಸೂತನಿಂದಾಳಿಲ್ಲ (ಸರ್ವಜ್ಞ. ೧೦೦೭). ೧೮. ಒಂದು ಬಗೆಯ ಸಸ್ಯ : ದಿವ್ಯರಸಃ-ಸೂತ" (ಓಷಧಿ. ೭೫).
[ಸಂ.]

**ಸೂತಕ** (ನಾ). ೧. ಹುಟ್ಟು; ಜನನ : ಎತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡಾಕೆ ರಾಗಿಸಿ ಸುತನ ಸೂತಕಮಂ ಕೊಂಡಾ[ಡೆ] (ಪಂಪಭಾ. ೧-೯೬ ವ); ಎನ್ನ ಲಿಂಗವಂ ಕೆಗೆ ಸೂತಕ ಮಾಸ ತಡದಲ್ಲಿ ಗರ್ಭವೆಂಬುದು ತಲೆದೋಱಿದಲ್ಲಿಯೆ (ಏಲೇಶ್ವ. ೮೧). ೨. ಹೊಲೆ; ಮೈಲಿಗೆ: ಸುಖವೆ ಪರಬ್ರಹ್ಮಾನಂದವಾಗಿ ಶೂನ್ಯತೃಪ್ತಿಗೆ ಸೂತಕವಿಲ್ಲ (ಅವಚಂ. ೨೫೭-೧೧೬೯); ಕಣ್ಣಾಳ ಸೂತಕ ಹೋಯಿತ್ತು ಸದ್ಭಕ್ತರ ಕಂಡೆನಾಗಿ (ಬಸಹ. ೨೪); ಋಣವೆಂಬ ಸೂತಕವು ಬಾಧಿಸುತ್ತಿದೆ (ಕವಪು. ೨೨-೧೫). ೩. ಜನನ , ಮರಣಗಳಿಂದುಂಟಾಗುವ ಮೈಲಿಗೆ, — ಅಶೌಚ : ಪ್ರಾಯಶ್ಚಿತ್ತ ಪ್ರಸೂತಿಕ ವೈವಾಹಿಕ ಮಾರಣಾಂತಿಕದೊಳು ಮಾದ ಸೂತಕ ಭಾವಸಲ್ಲೇಖನೆಯೆಂಬುದು (ಪಸಾರ. ೭೦೫); ಮೃತಮೆನಿಪ ಸೂತಕಕೆ ಮನೆಯಾಗತಿರುಚೆಯ ಶರಧಿಯೊಳು ಮುಳುಗುವನ್ನತ ನಿಜಸ್ಥಿತಿಯಾಂತುದೀ ದೇಹಂ ತ್ರಿಕಾಲದಲಿ (ವಿವೇಛ. ೪-೮); ಹೆತ್ತ ಸೂತಕ ಹತ್ತು ದಿನಗಳಿಗೆ ಪರಿಹಾರ. ಮೃತ್ಯು ಸೂತಕವು ಹನ್ನೊಂದುದಿನಕೆ (ಕವಪು. ೨೩-೯). ೪. ಮುಟ್ಟು; ರಜಸ್ಸು : "ಮುಟ್ಟುವೆ ಮಾಣಿಕವೆನುತುಂ ಮುಟ್ಟಲುಮೆನೆ ಸೂತಕಾಭಿಧಾನಂ" (ಕವಿಕಂ. ೨೩೦); ಇನ್ನೇತಕಾದವು ನಿನ್ನ ತಾಯಿಗೆ ಸೂತಕಂಗಳು (ಸುಭ್ಯಾಚಿಂ. ೩-೯); ಸಪ್ಪೆದುಪ್ಪ, ಅನ್ನ, ಹಸುವಿನ ಹಾಲು ಈ ಪ್ರಕಾರ ಪಥ್ಯದಿಂದ ೩ ಸಾರಿ ಸೂತಕವಾಗಿ ಸ್ನಾನವಾದ ಕೂಡಲೆ ತೆಗೆದುಕೊಳ್ಳೆ ಸ್ತ್ರೀಯರಿಗೆ ಸೂತಕದಲ್ಲಿ ರಕ್ತ ನಿಲ್ಲುವುದು (ಸಕವ್ಯ. ೧೯೮). ೫. ಪಾದರಸ: ರಸಪಾರದ ಸೂತಕ ಚಪಲ[ಸಂ]ಜ್ಞಿತಂ ಗಿರಿಶವೀರ್ಯಮದು ಪಾದರಸಂ" (ವಸ್ತುಕೋ. ೯೪-೧೩). ೬. ದೋಷ; ರುಚೆ : ಕೊಡಸಿಗೆ, ಅತಿಬಚೆ . . . ಎಂಬಿವುಗಳ ಕಷಾಯವಂ ಕಾಸಿ ಕುಡಿಯಲು ನೆತ್ತರು, ಹಲವುಕಾಲದ ಅತಿಸಾರ, ಎಲ್ಲಾ ಬಸಿಱು ಸೂತಕಂಗಳಿಗೂ ಒಳ್ಳೆಯದು (ವಿಷ್ಯವಿ. ೧೯). [ಸಂ.]

**ಸೂತಕನಿವಾರಣೆ** (ನಾ). ಮೈಲಿಗೆಯ ಪರಿಹಾರ : ಸೂತಕನಿವಾರಣೆಯಾಗುವವರೆಗೆ ಪರಊರಲ್ಲಿರಲಿಕ್ಕೆ ಮನಸ್ಸಿಲ್ಲದೆ ಅವನು ಬೈಸಾರಿ ಸಮಯ ಗುರುದರ್ಶನಕ್ಕೆ ಹೊರಟನು (ವಾಗ್ವೇವಿ. ೬೪). [ಸಂ. ಸೂತಕನಿವಾರಣ]

**ಸೂತಕರ್ಮಾಭ್ಯಾಸಿ** (ನಾ). ಸಾರಥಿತನದ ಅಭ್ಯಾಸವುಳ್ಳವನು ; ಅತಿಶಯವಾದ ಸಾಮರ್ಥ್ಯದಿಂದ ಕೂಡಿದ ಸಾರಥಿ : ಈ ಸಮಸ್ತ ನೃಪಾಲವರ್ಗದೊಳಾಸೆಯಾರಲಿ ಸೂತಕರ್ಮಾಭ್ಯಾಸಿಯನು ಜೋಡಿಸುವೆನೆಂದನು ಕೌರವರ ರಾಯ (ಕುವ್ಯಾಕ. ೫-೯).
[ಸಂ. ಸೂತಕರ್ಮಾಭ್ಯಾಸಿನ್]

**ಸೂತಕಾರಿ** (ನಾ). [ಸಂಗೀತ] "ಉಸ್ ಎಂದು ನಿಟ್ಟುಸಿರಿನಿಂದ ಹಾಡುವವನು": (ಸಂಗೀಚಂ. ೧೦೩); ℙ ಸಂಗೀತದಲ್ಲಿ ಹೀಗೆ ಹಾಡುವುದು ಒಂದು ದೋಷ .
[ಸಂ. ಸೂತಕಾರಿನ್]

**ಸೂತಕಿ$_1$** (ನಾ). ೧. ಹೆತ್ತವಳು; ಬಾಣಂತಿ. ೨. ಮುಟ್ಟಾದವಳು ; ರಜಸ್ವಲೆ: ನರ್ತಕಿಯ ನಾಪಿತೆಯ . . . ಸೂತಕಿಯ ಸೈರಂಧ್ರಿಯ ಕರ್ತವ್ಯದಿಂದಿನಿಬರೊಡನಾಡಿದೊಡೆ ಬಾಲೆಯರ್ತವೆ ದುರಾಚಾರಮಂ ಕಲಿವರು (ಜೈಮಿಭಾ. ೫-೫೮). ೩. ಹೆರಿಗೆಯನ್ನು ಮಾಡಿಸುವವಳು; ಸೂಲಗಿತ್ತಿ: ಕಂದರ್ಪನಂಗನೆಗೆ ಯಳಿಬ್ಯಾನೆ ಸೂಚಿಸಲು . . . ಸಂದುಯಾಳಿಯರರಿದು ನೆರೆದು ಸೂತಕಿಯ ಕರೆತಂದು (ನವಮೋ. ೧೫-೧೩).
[< ಸಂ. ಸೂತಕಾ, ಸೂತಿಕಾ ]

**ಸೂತಕಿ$_2$** (ನಾ). ಮೈಲಿಗೆಯಿಂದ ಕೂಡಿದವನು; ಕಳಂಕಿತನಾದವನು: ಗುಹೇಶ್ವರನೊಬ್ಬನೆ ಅಚಳ ಉಳಿದವರೆಲ್ಲರೂ ಸೂತಕಿಗಳು (ಅವಚಂ. ೩೪-೧೪೬); ಭವಕ್ಕೆ ಹುಟ್ಟುವನಲ್ಲ ಸಂದೇಹಿ ಸೂತಕಿಯಲ್ಲ ಆಕಾರ ನಿರಾಕಾರನಲ್ಲ ನೋಡಯ್ಯಾ (ಬಸವ. ೮೭೪); ಸರ್ವಾಂಗಲಿಂಗಸಂಬಂಧವಹ ಭೇದವನಱಿಯದೆ ಬಹಿರಂಗದಲ್ಲಿ ದುಸ್ಸೀಲ ಹಿಡಿದವರೆಲ್ಲಾ ಸೂತಕಿಗಳಾದರು (ಪದಗೋ. ೫೭-೨೦೬). [ಸಂ. ಸೂತಕಿನ್]

**ಸೂತಕುಲ** (ನಾ). ೧. ಸಾರಥಿತನವನ್ನು ಮಾಡುವವರ ಕುಲ, — ವಂಶ.

೨. ಅಂಬಿಗರ ಜಾತಿ; ಬೆಸ್ತರ ಜಾತಿ: ಸೂತಕುಲಸಂಭವನೆ ಭುವನಖ್ಯಾತ ಕರ್ಣನು ಸಾಕಿದಾತನು ಸೂತನಾದಡೆ ಮಾವ ಕೇಳನ್ನಯಕೆ ಹಳಿವುಂಟೆ (ಕುವ್ಯಾಕ. ೮-೩). [ಸಂ.]

**ಸೂತಕೃತೆ** (ನಾ). ಹೆರಿಗೆಯನ್ನು ಮಾಡಿಸುವವಳು ; ಸೂಲಗಿತ್ತಿ: "ಸೂತಕೃತ [ಪಾಠಾಂ. ಸೂತಿಕೃತಿ]ಯೆನೆ ಸೂಲಗಿತ್ತಿಯಕ್ಕುಂ" (ಮಂಗರಾ. ೯೧-೮). [ಸಂ. ಸೂತಕೃತಾ]

**ಸೂತಗ** (ನಾ). ಸಂತಾನ: ಸಹಳಿಯ ಬೊಂಮದೇವಹೆಗ್ಗಡೆ XX ಮನಾಯಕ ಅರಸ XXX ಣಗೆ ತೃತೀಯ ಸೂತಗದ ಬಲಾಡಿ ಗಉಂಡ . . . ಮಲ್ಲಿನಾಥಭಟ್ಟರ ಮಕ್ಕಳು (ಎಕ. VIII. ತೀರ್ಥಹ. ೧೦೭-೮; 1419). [< ಸೂತಕ ]

**ಸೂತಜ** (ನಾ). ೧. ಸೂತಕುಲದಲ್ಲಿ ಜನಿಸಿದವನು: ಗಂಗೆಗೆ ಕೆಯ್ಕೊಡೆಯೆಂದುತ್ತುಂಗಸ್ತನಿ ಕೊಟ್ಟು ಪೋಗೆ ಸೂತಂ ಕಂಡಾತ್ಮಾಂಗನೆಗೆ ರಾಧೆಗಿತ್ತು ಮನಂಗೊಳೆ ರಾಧೇಯನೆನಿಸಿ ಸೂತಜನಾದ್ಯೆ (ಪಂಪಭಾ. ೯-೬೫); ಗಗನಸ್ಥಳಕೆ ರಥವನು ಬಿಸುಡೆ ಯೋಜನದಳವಿಯಲಿ ಲಂಘಿಸಿತು ಹಯತತಿ ಸೂತಜರು ಸಹಿತ (ಕುವ್ಯಾದ್ರೋ. ೧೩-೧೭). ೨. ಕರ್ಣ: ಸೂತಜನ ರಥದ ಗಾಲಿಗೆ ಸಿಲ್ಕನಿಕ್ಕಿದ ಮಹೀತಳದೊಳೆಡರಿಲ್ಲಿ ವಂಗೆನಾಂ ಮುಳಿದೊಡೆ (ಜೈಮಿಭಾ. ೨೭-೪೨). [ಸಂ.]

**ಸೂತಜಾತಿ** (ನಾ). = ಸೂತಕುಲ ೨ : ಸೂತಜಾತಿಯೊಳೀ ಧನುರ್ವೇದಾತಿಶಯವೆಂತಾಯ್ತು (ಕುವ್ಯಾಕ. ೨೨-೨೨). [ಸಂ.]

**ಸೂತತನ** (ನಾ). ಸಾರಥಿಯಾಗಿರುವಿಕೆ; ಸಾರಥಿತನ: ಮುರಾಂತಕ ಸೂತತನಕಲಸಿದರೆ ಕಾದಲಿ ಕೌರವನ ಕೂಡೆ (ಕುವ್ಯಾದ್ರೋ. ೩-೬೨). [ಸೂತ + -ತನ]

**ಸೂತತ್ವ** (ನಾ). = ಸೂತತನ : ಬೊಮ್ಮಂಗಾಯಿತೇ ಸೂತತ್ವವಾದಡೆ ರಾಯ ಹೇಳ್ಕೆ ತ್ರಿಪುರದಹನದ ಕಥೆಯ (ಕುವ್ಯಾಕ. ೫-೩೭). [ಸಂ.]

**ಸೂತನಂದನ** (ನಾ). ೧. ಸೂತಕುಲದಲ್ಲಿ ಜನಿಸಿದವನು. ೨. ಕರ್ಣ : ಪೂತು ಮಝುರೇ ಸೈರಿಸಾದಡೆ ಸೂತನಂದನ ಎನುತ ಬಾಣವ್ರಾತದಲಿ ಹೊದಿಸಿದನು ಕರ್ಣನ ರಥವನಾ ಪಾರ್ಥ (ಕುವ್ಯಾಕ. ೨೨-೨೨). [ಸಂ.]

**ಸೂತಸುತ** (ನಾ). ೧. ಸೂತನ ಮಗ. ೨. ಕರ್ಣ : ಬೀರವಟ್ಟಮನಾನಿರೆ ನೀನೀ ಸೂತಸುತಂಗೆಡಗೊಂಡು ಕೈವಾರದಿಂದೊಸೆದಿತ್ತೊಡಮೇನಾಯ್ತು (ಪಂಪಭಾ. ೧೨-೪೩); ಪೂತುರೇ ಕಲಿ ಪಾರ್ಥ . . . ದ್ರೋಣನ ಸೂತಸುತ ಕೃಪ ಗುರುತನೂಜರ ಗೆಲಿದೆ ಬಳಿಕೇನು (ಕುವ್ಯಾವಿ. ೮-೫೨). [ಸಂ.]

**ಸೂತಿ** (ನಾ). ೧. ಹುಟ್ಟು ; ಜನನ : "ಜನನಂ ಜನ್ಮಂ ಪ್ರಸವಂ ಜನಿಜನರುತ್ಪತ್ತಿ ಸೂತಿಯೇಕಾರ್ಥಮಿವಿಂತಿನಿತುಂ" (ವಸ್ತುಕೋ. ೧೮-೩); ಸೂತಿಯಿಂ ಕಪ್ಪಾದ ಹಲ್ಲುಗಳು ಮೆಱೆವುತಿರ್ಪಾತನೇ ಮುನ್ನ ಸುರೆಯಂ ಕುಡಿದನೆಂದಱಿವುದು (ವೀಕ್ಷಿಪು. ೪-೨೨-೪). ೨. ಹೆರಿಗೆ ; ಪ್ರಸವ. ೩. ಮಗು; ಕೂಸು : "ಸೂತಿ ತಾನೆನಿಕುಮಪತ್ಯಶಬ್ದಮದು ಕೇವಲಮಾತ್ಮಜವರ್ಗವಾಚಕಂ" (ವಸ್ತುಕೋ. ೫೪-೧೭). [ಸಂ.]

**ಸೂತಿಕಸೂಲೆ** (ನಾ). ಹೆರಿಗೆಯ ಕಾಲದಲ್ಲಿ ಉಂಟಾಗುವ ನೋವು; ಪ್ರಸವವೇದನೆ : ಅತುಳ ಸೂತಿಕಸೂಲೆ ಪೆಗ್ಗಳಿಸಿ (ನವಮೋ. ೧೫-೧೪). [ಸೂತಿಕ್ಕ + ಸೂಲೆ]

**ಸೂತಿಕಾಗೃಹ** (ನಾ). ಬಾಣಂತಿಯ ಕೋಣೆ; ಹೆರಿಗೆಮನೆ : ಎಸೆವ ಸೂತಿಕಾಗೃಹಮಂ ತಾರಾಪೀಡನರೇಂದ್ರಂ ಪುಗುವುದುಂ (ಕಾದಂಪೂ. ೪೧೩); ಕಂಸಂ ತದೀಯ ಬಾಲಹಿಂಸಾಪರನಾಗಿ ಸೂತಿಕಾಗೃಹ[ಪಾಠಾಂ. ಸದನ]ಮಂ ಪೊಕ್ಕು (ಜಗವಿ. ೨-೫೩ ವ). [ಸಂ.]

**ಸೂತಿಕಾಗೇಹ** (ನಾ). = ಸೂತಿಕಾಗೃಹ: ರಂಜಿಸುವ ಸೂತಿಕಾಗೇಹದೊಳು ಭೂಪನ ಕುಮಾರನೆಸೆದಂ (ಭಾವಚಿಂ. ೩-೫೮). [ಸಂ.]

**ಸೂತಿಕಾಮಂದಿರ** (ನಾ). = ಸೂತಿಕಾಗೃಹ: ವಿನಯನಿಭೃತೆ ಪೊಕ್ಕಿಂದ್ರಾಣಿ ಸೂತಿಕಾಮಂದಿರಮಂ (ಪುಷ್ಪಪು. ೧೦-೧೫). [ಸಂ.]

**ಸೂತಿಕಾಮರುತ** (ನಾ). ಹೆರಿಗೆಯ ಸಮಯದಲ್ಲಿ ಉಂಟಾಗುವ ಒತ್ತಡ; ಪ್ರಸೂತಿಕಾಲದ ವಾಯು : ಸೂತಿಕಾಮರುತ ಬೀಸಿದಾತುರಕೆ ಬೆಸಸುವ ಯಾತನೆಗೆ ಕಾಣೆ ಲೆಖ್ಖ (ವಿದಾಕ್ಯ. ೫೪-೪). [ಸಂ.]

**ಸೂತಿಕಾರೋಗ** (ನಾ). ಹೆರಿಗೆಯ ನಂತರ ಉಂಟಾಗುವ ರೋಗ ; ಬಾಣಂತಿ ಖಾಯಿಲೆ : ಕುಂಡಲಾದಿ(ಘೃತ)ಲೇಹ್ಯ . . . ಸೇವಿಸಲು ಐದು ಬಗೆಯ ಕಾಸಗಳು . . . ಕೃತ್ರಿಮವಿಷಗಳು, ಸೂತಿಕಾರೋಗಗಳು . . . ಇವೆಲ್ಲಾ ಮಾಣುವುವು (ಸಕವ್ಯ. ೪೪೨ ಪ೦). [ಸಂ.]

**ಸೂತಿಕಾವಾಯು** (ನಾ). ೧. = ಸೂತಿಕಾಮರುತ : ಒರಳಿನೊಳಗಡಸಿ ಹಿಂಡುವ ಕಬ್ಬಿನಂತೆಳ್ಳ ಭರದಿ ಗಾಣದೊಳಿಟ್ಟು ತಿರುಪುವವೊಲಿಡಿದಡಿಸಿ ಹುರಿಗಳಂ ಬಿಗಿದು ಡಾಣೆಯಲೆಱಗುವಂತೊಗೆವ ಸೂತಿಕಾವಾಯುವಿಂದ ಇರದೆ ತಲೆಕೆಳಗಾಗಿ ಬಿದ್ದು (ಲಶಿಚಂ. ೩೯-೪೧). ೨. ಹೆರಿಗೆಯ ನಂತರ ಉಂಟಾಗುವ ನೋವು ; ಬಾಣಂತಿ ಖಾಯಿಲೆ: ವಿಷಖದ್ದಿಬೇರು, ಈಶ್ವರೀಬೇರು . . . ಇವನ್ನೆಲ್ಲಾ ಸಮಭಾಗ ಹಾಕಿ ಚೂರ್ಣ ಮಾಡಿ ಬಿಸಿನೀರಿನಲ್ಲಿ ಕೊಟ್ಟರೆ ಸನ್ನಿಪಾತಗಳು . . . ಸೂತಿಕಾವಾಯುಗಳು . . . ಇವೆಲ್ಲಾ ಗುಣವಾಗುವುವು (ಸಕವ್ಯ. ೪೨೧ ಪ೦). [ಸಂ.]

**ಸೂತಿಕಾಸದನ** (ನಾ). = ಸೂತಿಕಾಗೃಹ : ದಶರಥಂ ಸುತಮುಖದರ್ಶನೋತ್ಸುಕಂ . . . ಸುಮಿತ್ರಾದೇವಿಯ ಸೂತಿಕಾಸದನಮಂ ಪೊಕ್ಕು (ಪಂರಾಮಾ. ೩-೧೩೪ ವ); ಕಂಸಂ . . . ಸೂತಿಕಾಸದನಮಂ ಪೊಕ್ಕು (ಜಗವಿ. ೩-೧೩ ವ). [ಸಂ.]

**ಸೂತಿಕೆ** (ನಾ). ಹಡೆದವಳು; ಬಾಣಂತಿ: ಉದಯಮಜಾಳಿ ತೌಳಿ ಘಟ ಕರ್ಕಟಕಾಲಯವಾಗೆ ಮೂಡಲಿರ್ದುದು . . . ದಂಪತಿ ಮೀನಚೌಪಭೃತ್ಯನ್ನ ದತಿಗಳಾಗೆಯುಂ ಬಡಗಲಿರ್ದುದು ಸೂತಿಕೆಯಿರ್ದ ಗೇಹದೊಳ್ (ಜಾತತಿ. ೪-೧೭). [ಸಂ. ಸೂತಿಕಾ]

**ಸೂತಿಮಸಗು** (ಕ್ರಿ). ಹೆರಿಗೆಯ ನೋವು ಹೆಚ್ಚಾಗು: ಮಱುಗಿದೆನೋವೊ ಸೂತಿಮಸಗಿತ್ತೆನಲಂತವಳೊರ್ವಳಿರ್ದು ಕೂರ್ತಿರದೆ ಕುಕಿಲ್ದು (ಪದ್ಮಸಾ. II, ೮೨೪). [ಸೂತಿ + ಮಸಗು]

**ಸೂತಿಮಾಸ** (ನಾ). ಗರ್ಭಿಣಿಗೆ ತಿಂಗಳು ತುಂಬುವುದು; ಪ್ರಸವವು ಸನ್ನಿಹಿತವಾದ ತಿಂಗಳು: "ಸೂತಿಮಾಸಃ, ವೈಜನನಃ — ಈ ೨ ಪೊಟ್ಟು (ಹೊತ್ತು) ತೀವುವುದು", (ಹಲಾಯು. ೮೨-೩೪೫); "ಸೂತಿಮಾಸಂ ಹೊತ್ತಿನೊಳಗಕ್ಕು" (ಮಂಗರಾ. ೯೧-೮). [ಸಂ.]

**ಸೂತೀಜನ** (ನಾ). ಹೆರಿಗೆಯನ್ನು ಮಾಡಿಸಬಲ್ಲ ಸ್ತ್ರೀಯರು; ಸೂಲಗಿತ್ತಿಯರು: ವನಿತೆಯ ತನುರಕ್ಷೆಗೆ ತಕ್ಕನುಚರಜನ . . . ಸೂತೀಜನ ಸಖಿಜನಮನಿತ ನಿತುಮನವನಿಪತಿ ನಿಯೋಜಿಸಿ ತಳರ್ದಂ (ಪುಷ್ಪಪು. ೪-೧೪). [ಸಂ.]

**ಸೂತ್ಕೃತ** (ನಾ). ೧. [ನಾಟ್ಯ] ಉಸಿರಾಡುವುದರಲ್ಲಿ ಒಂದು ಬಗೆ; "ವೇದನೆಯನ್ನು ತೋರಿಸುವಂತೆ ಉಸುರು ಬಿಡುವುದು" (ಲಾಸ್ಯರಂ. ೨೭೮ ಗದ್ಯಾನುವಾದ): ಸಮಮುಂ ಭ್ರಾಂತವಿಲೀನಂ ಕ್ರಮದಾಂದೋಳಿತಮುಮೆಸವ ಕಂಪಿತಮುಂ ಸಂಭ್ರ[ಮ]ದ ಸ್ತಂಭಿತಮುಚ್ಛ್ವಾಸಮುಮುಱೆ ನಿಃಶ್ವಾಸ ಸೂತ್ಕೃತಂ ಸೀತ್ಕೃತಮುಂ (ಲಾಸ್ಯರಂ. ೩-೭೭). ೨. [ಕಾಮಶಾ] ರತಿಕ್ರೀಡೆಯಲ್ಲಿ ಉಂಟಾಗುವ ಒಂದು ಬಗೆಯ ಧ್ವನಿ: ಬಿದಿರಗಣ್ಣೊಡೆದ ದನಿಯದು ಸೂತ್ಕೃತಂ (ಜನವ. ೧೦-೨೩). [ಸಂ.]

**ಸೂತ್ತುಂಗ** (ಗು). ೧. ಉಬ್ಬಿದ; ಉಬ್ಬಿರುವ. (ನಾ). ೨. ಉಬ್ಬಿರುವುದು: ಶರದೊಡನ ಗಭೀರಂ ಬಂಧುರಂ ನಾಭಿನೇತ್ರಾಂಬುರುಹದೊಡನೆ ದೀರ್ಘಂ ಬಾಹು ಸೂತ್ತುಂಗಮಾಗಿಪ್ಪುರದೊಡನೆ ವಿಶಾಳಂಬೆತ್ತುಮಾರಕ್ತಭಾಸ್ವತ್ಕರಜದೊಡನೆ ಸುಸ್ನಿಗ್ಧಂ ಕನತ್ಕಾಂತಿದಂತಂ (ವರ್ಧಮಾ. ೬-೬೫). [ಸಂ.]

**ಸೂತ್ರ** (ನಾ). ೧. ದಾರ; ನೂಲು : "ತಂತು ಗುಣಂ ಸೂತ್ರಂ" (ವಸ್ತುಕೋ. ೬೬-೮೭); ಮಣಿಗಳ ಸೂತ್ರದಂತೆ ತ್ರಿನಯನ ನೀನಿಪ್ಪೆಯಯ್ಯ (ದೇದಾವ. ೨-೩); ಮಾಲೆಯ ಮಣಿಗಳಲ್ಲಿ ಸೂತ್ರವು ಸೇರಿಕೊಂಡಿರುವಂತೆ . . . ಆ ಸ್ಥಿರತತ್ತ್ವವು ಜ್ಞಾನಧಾರೆಗಳಲ್ಲಿ ಓತಪ್ರೋತವಾಗಿ ಹಾಸುಹೊಕ್ಕಿನಂತೆ ಹೊಂದಿಕೊಂಡಿರುತ್ತದೆ (ಜೀವಾತ್ಮ. ೪೩). ೨. ಜನಿವಾರ; ಯಜ್ಞೋಪವೀತ. ೩. ಬೊಂಬೆಯನ್ನು ಹಿಡಿದೆಳೆದು ಆಡಿಸಲು ಉಪಯೋಗಿಸುವ ದಾರ. ೪. ಸಾರವತ್ತಾದ ನಾನಾರ್ಥಕವಾದ ಅರ್ಥಗಳನ್ನು ಹೊಂದಿರುವ ಸಂಕ್ಷಿಪ್ತಹೇಳಿಕೆ : ಅಲ್ಪಾಕ್ಷರಮುಂ ಅಸಂದೇಹಮುಂ ಸಾರಮುಳ್ಳುದುಂ ಪಲವುಂ ಪದಾರ್ಥಂಗಳನೊಳಕೊಂಡುಂ . . . ಅರ್ಥೋತ್ಪತ್ತಿ

ನಿಮಿತ್ತಮುಮಂ ಅಪ್ಪುದು ಸೂತ್ರಮೆಂಬುದು (ತತ್ತ್ವಪ್ರ ೩); ವೃತ್ತಿವ್ಯಾಸಂ ತದ್ವ್ಯಾಕುಲಮಂದಾ ಸೂತ್ರಕ್ಕರ್ಥವೃತ್ತಿ ವರ್ತಿಸೆ ಪೇಳ್ದಿಂ (ಶಮದ. ನ. ೬); ಸೂತ್ರಗಳನ್ನು ಕಂದಪದ್ಯರೂಪವಾಗಿಯೂ ವೃತ್ತಿಗಳನ್ನು ಗದ್ಯರೂಪವಾಗಿಯೂ ಬರೆದಿದೆ (ಕೈಪಿಡಿ. ೨). ೫. ವಿಧಿ; ನಿಯಮ; ಕಟ್ಟಳೆ. ೬. ಸೂತ್ರರೂಪದಲ್ಲಿರುವ ಸಂಕ್ಷಿಪ್ತವಾದ ಹೇಳಿಕೆಯ ಅರ್ಥ,— ಸಾರಾಂಶ : ನಿರುಪಮತರ ಸೂತ್ರಾರ್ಥತತ್ತ್ವಪ್ರವೀಣಂ (ಸುಕುಮಾ. ೨-೫೧). ೭. (ಆಲಂ) ಹಿಡಿತ; ಹತೋಟಿ : ನಿನ್ನ ಸೂತ್ರದೊಳಾಡುವುವು ಚೈತನ್ಯ ಸಚರಾಚರಗಳೆಲ್ಲವು (ಹಂಸಾ. ೬೯); ವಾದ್ಯಕಾರರ ಸೂತ್ರ ಗಾಯಕನ ಕೈಯಲ್ಲಿ, ಗಾಯಕ ವಾದಕರೆಲ್ಲರ ಸೂತ್ರ, ತಂಬೂರಿಯ ಕೈಯಲ್ಲಿ (ಭಾರದ. ೫೩೫). ೮. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಯಮನಯನ ಕರ್ಣ . . . ನೇತ್ರಂ ಸೂತ್ರಂ ಕ್ರಮ ಚರಣಂ ಪದ ಯುಗಳಂ ಸಮ ಉಭಯಂ ಬಾಹು ಕಿವಿಗಳೆರಡಱ ನಾಮಂ (ವ್ಯವಹಾ. ೯-೨). ೯. [ಶೈವ] ವೈದಿಕಧರ್ಮದ ಕಟ್ಟಳೆಗಳನ್ನು ವಿಧಿಸುವ ಸೂತ್ರಶೈಲಿಯ ರಚನೆ (?): ಶೈವಾಗಮಾನುಷ್ಠಾನ ಮಾಡಲು . . . ದೀಕ್ಷಾಕ್ರಮವು ಶಾಖಾ, ಸೂತ್ರ, ಗೋತ್ರಪರಂಪರೆಯಲ್ಲಿ . . . ವಿವಿಧರೂಪಗಳಿಂದ ನಿರೂಪಿತವಾಗಿದೆ (ಭಾರದ.೭೩).

**ಸೂತ್ರದ ಗೊಂಬೆ, ಸೂತ್ರದ ಬೊಂಬೆ** = ೧. ದಾರವನ್ನು ಕಟ್ಟಿ ಮರೆಯಲ್ಲಿ ಹಿಡಿದೆಳೆಯುತ್ತ ಆಡಿಸುವ ಗೊಂಬೆ, — ಬೊಂಬೆ : ಸೂತ್ರದ ಗೊಂಬೆಯ ಆಟ ನೋಡಲು ಹೋಗಿದ್ದವು (ರೂಢಿ); ಸೂತ್ರದ ಬೊಂಬೆಯಂದದಿ ಕೆಡೆದರದಟರು (ಸಾಳ್ವಭಾ. ೨೩-೨೪); ವೆಂಗಡಾಚಾರ್ಯನೆಂಬವನು ಸೂತ್ರದ ಬೊಂಬೆಯಂತಾಡಿಸಿ ದೂಡಂತೆ ಭುವಿಯೊಳಾಡಿದ (ತಿರುಶ. ೧-೨೪೩). ೨. ಬೇರೆಯವರು ಹೇಳಿದಂತೆ ನಡೆಯುವವನು; ಅಸ್ವತಂತ್ರ: ಅವರ ನಡುವ ತಾನೊಂದು ಸೂತ್ರದ ಬೊಂಬ (ಮೂಪ್ರೇಮ. ೧೭೨). [ಸಂ.]

**ಸೂತ್ರಕೃತ** (ನಾ). [ಜೈನ] ಜೈನರ ದ್ವಾದಶಾಂಗವೇದಗಳಲ್ಲಿ ಒಂದು: ಆಚಾರ, ಸೂತ್ರಕೃತ, ಸ್ಥಾನ, ಸಮವಾಯ, ವ್ಯಾಖ್ಯಾಪ್ರಜ್ಞಪ್ತಿ, ಜ್ಞಾತೃಧರ್ಮಕಥಾ, ಉಪಾಸಕಾಧ್ಯಯನ, ಅಂತಕೃದ್ದಶ, ಔಪಪಾದಿಕದಶ, ಪ್ರಶ್ನವ್ಯಾಕರಣ, ವಿಪಾಕಸೂತ್ರ, ದೃಷ್ಟಿವಾದ ಎಂಬುವು ಹನ್ನೆರಡು ಅಂಗಗಳು (ಭಾತತ್ತ್ವ. ೨೨೮); ಅಂಗಶ್ರುತಜ್ಞಾನವು ಆಚಾರ, ಸೂತ್ರಕೃತ, ಸ್ಥಾನ . . . ವಿಪಾಕಸೂತ್ರ, ದೃಷ್ಟಿವಾದ ಎಂದು ಹನ್ನೆರಡು ಬಗೆಯಾಗಿದೆ (ಜೈನಧ. ೧೦೪). [ಸಂ.]

**ಸೂತ್ರಕೃತಾಂಗ** (ನಾ). = ಸೂತ್ರಕೃತ; ℙ "ಶ್ರುತಾಂಗಗಳಲ್ಲಿ ಒಂದು — ಇದರಲ್ಲಿ ಜ್ಞಾನವಿನಯ ಪ್ರಜ್ಞಾಪನಾ, ಕಲ್ಪಾಕಲ್ಪ್ಯಛೇದೋಪಸ್ಥಾಪನಾ ಮತ್ತು ವ್ಯವಹಾರಧರ್ಮಕ್ರಿಯೆಗಳ ನಿರೂಪಣೆ ಇದೆ. ಇದಲ್ಲದೆ ಜೈನಶಾಸ್ತ್ರ ಮತ್ತು ಅನ್ಯಶಾಸ್ತ್ರಗಳ ನಿರೂಪಣೆಯೂ ಸಮಾವೇಶವಾಗಿದೆ. ಇದು ಮೂವತ್ತಾರುಸಾವಿರ ಪದಗಳುಳ್ಳದು" (ಜೈನಕೋ. ೨೭೯): ಈ ವೇದಗಳಿಗೆ ಆಚಾರಾಂಗ, ಸೂತ್ರಕೃತಾಂಗ, ಸ್ಥಾನಾಂಗ, ಸಮವಾಯಾಂಗ, ವ್ಯಾಖ್ಯಾ ಪ್ರಜ್ಞಪ್ತ್ಯಂಗ, ಜ್ಞಾತೃಕಥಾಂಗ, ಉಪಾಸಕಾಧ್ಯಯನಾಂಗ, ಅಂತಕೃದ್ದಶಾಂಗ, ಔಪಪಾದಕದಶಾಂಗ, ಪ್ರಶ್ನವ್ಯಾಕರಣಾಂಗ, ವಿಪಾಕಸೂತ್ರಾಂಗ, ದೃಷ್ಟಿವಾದಾಂಗಗಳೆಂಬ ಹನ್ನೆರಡು ಅಂಗಗಳಿವೆ (ಭಾರದ.೧೭೯); (೧) ಆಚಾರಾಂಗ (ಚಾರಿತ್ರ್ಯ ಯಾವ ರೀತಿ ಇರಬೇಕೆಂದು ಹೇಳುವ ಶಾಸ್ತ್ರದ ವಿಭಾಗ), (೨) ಸೂತ್ರಕೃತಾಂಗ (ಶಾಸ್ತ್ರದ ಸೂತ್ರ ರಚಿಸುವಿಕೆ) . . . ಇವಲ್ಲದೆ ಉಪಾಧ್ಯಾಯರಿಗೆ ಹದಿನಾಲ್ಕು 'ಪೂರ್ವ'ಗಳ ಜ್ಞಾನವಿರುತ್ತದೆ (ಜೈನಪ. ೪೯೮). [ಸಂ.]

**ಸೂತ್ರಕ್ಷೇತ್ರ** (ನಾ). (ಕಟ್ಟಡಕ್ಕೆಂದು) ದಾರದಿಂದ ಅಳೆದು ಗೊತ್ತುಪಡಿಸಿದ ಸ್ಥಳ (?): ದ್ವಾರಶಾಖೆಯ ಕಾಳಾಗರುಧೂಪಧೂಮವಿಸರದ್ವ್ಯಂಗೀನಿಸ್ಸ್ವಾರ್ಥ ದೂತಿಯರಂ ಸೃಷ್ಟಿಸುತಿರ್ಪುದಾ ಪುರದ ಸೂತ್ರಕ್ಷೇತ್ರದೊಳ್ ಕೇರಿಕೇರಿಯ ಸೌಧೋತ್ತರ ಭೂಮಿಕಾಪ್ರಕರಬಿಭ್ರತ್ಪತ್ರಿಕಾವಿಭ್ರಮಂ (ಅನಂಪು. ೩-೧೭). [ಸಂ.]

**ಸೂತ್ರಗಿಂಡಿ** (ನಾ). ದಾರದಿಂದ ಸುತ್ತಿದ ಕಳಶ: ಚತುರ್ಮುಖತನು ಹೇಮದಂಡಕುಂಡಲಸೃಷ್ಟಿ ಚತುರ್ಭುಜ ಸೂತ್ರಗಿಂಡಿಗಳು (ದೇವಾಂಪು. ೨-೬೩). [ಸೂತ್ರ? + ಗಿಂಡಿ?]

**ಸೂತ್ರಗುತ್ತಗೆ** (ನಾ). ನಿಗದಿಯಾಗಿ ಪಡೆದ ಭೂಮಿ: ನರಸಂಣನಯಕರು ಯೆಱಮನಯಕರು ಗಣಚಾರಿ ಲಿಂಗಯಿಗೆ ಸೂತ್ರಗುತ್ತಗೆ ಗ ೩೦ ಯಿ ಹುಣಸಹಳ್ಳಿ ಚತ್ರುಸೀಮೆ ಒಳಗಾಗಿ (ಎಕ.III (R), ಹಗ್ಗಡ. ೭೭-೭: 1497). 'ಕಟ್ಟುಗುತ್ತಗೆ', 'ಸ್ರೋತ್ರಗುತ್ತಿಗೆ' ಪರಾ. [ಸೂತ್ರ + ಗುತ್ತಗೆ]

**ಸೂತ್ರಗುತ್ತಿ** (ನಾ). = ಸೂತ್ರಗುತ್ತಗೆ: ಚೆಂನ್ನಿಗಯ್ಯನವರ ತಂಮ ಸಣ್ಣಪ ಗವುಡನವರು ತಂಮ ಸೂತ್ರಗುತ್ತಿಯ ಗ್ರಾಮಕ್ಕೆ ಸಲುವ ಕಪ್ಪಿನ ಮೂಲೆಯ ಹೊಲನ್ನು ಅತಿತಿಪಾಲ್ಲಕ್ಕೆ ಕೊಟ್ಟ ಕೊಡಗೆ (ಮೈಆರಿ. ೧೯೩೧, ೫೫-೯; 1656). [ಸೂತ್ರ + ಗುತ್ತಿ₂]

**ಸೂತ್ರಗೊಂಬೆ** (ನಾ). ದಾರವನ್ನು ಕಟ್ಟಿ (ತೆರೆಯ ಮರೆಯಲ್ಲಿ ನಿಂತು ಹಿಡಿದೆಳೆಯುತ್ತ) ಆಡಿಸುವ ಬೊಂಬೆ ; ಮಂಥರ ಸೀತ ರಾಮರಾವಣರಲ್ಲರುಂ ಸೂತ್ರಗೊಂಬೆಗಳಲ್ತೆ ಆ ವಿಧಿಯ ಹಸ್ತದಲಿ ? (ಶ್ರೀರಾಮಾ. ೫೯-೧೩೫). 'ಸೂತ್ರಬೊಂಬೆ' ಪರಾ. [ಸೂತ್ರ + ಗೊಂಬೆ₁]

**ಸೂತ್ರಗೋಲು** (ನಾ). ಹುರಿಯನ್ನು ಸೇರಿಸಿ ಕಟ್ಟಿರುವ ಕೋಲು; ಚಾಟಿ: ಕಕ್ಕಸದ ಕಡಿಯಾಣವನು ತಂದಿಕ್ಕಿದರು ಮುಝು ಸೂತ್ರಗೋಲೊಳುಯಕ್ಕಸದ ಜಂಜಿರಿಯ ಕಡಿಯಲು ಕಂಡು ಹೆಬ್ಬರಗ ಪೊಕ್ಕ ಬೋನಿಂ ಪೊರಡುವಂದದಿಯಿಕ್ಕಡಿಯ ಮಾಡುತ್ತ ಹೊರಟಿತು (ನಾಗಪ. ೮-೧೧). [ಸೂತ್ರ + ಕೋಲು₁ (< ಕೋಲ್₁)]

**ಸೂತ್ರಧರ** (ನಾ). (ಆಲಂ) ಜಗತ್ತಿನ ಸೂತ್ರಧಾರ; ಪರಮಾತ್ಮ: ಸೂತ್ರಪಸಲುಗಿದೊಡೆ ತತ್ಪುಣ್ಯ ಪಾಪಾವಳಿಗಳಾ ಹಾಹೆಗಳಿಗುಂಟೇ ಸೂತ್ರಧರನಿರಲು (ಕುವ್ಯಾಉ. ೯-೭೨). [ಸಂ.]

**ಸೂತ್ರಧಾರ** (ನಾ). ೧. ನಾಟಕದ ನಿರೂಪಕ, ನಿರ್ದೇಶಕ, ವ್ಯವಸ್ಥಾಪಕ ಅಥವಾ ನಟ: ಯುವತೀವ್ರಾತಮನೇಕಭೇದರಸಭಾವಂಗಳ್ ಪೊದಳ್ದುಣ್ಮೆ ಪೊಣ್ಮುವಿನಂ ನರ್ತಿಸೆ ಸೂತ್ರಧಾರವಿಧಿಯಿಂ ಸುತ್ರಾಮನಂದಿಂತು ತಾಂಡವಲಾಸ್ಯಂಗಳ ಚೆಲ್ವನೂರ್ಮೆಯೆ ತದೀಯಾಸ್ಥಾನದೊಳ್ ತೋಱಿದಂ (ಆದಿಪು. ೭-೧೨೬); ಅಂಗಜನೆ ಸೂತ್ರಧಾರಂ ಶೃಂಗಾರಮೆ ನಾಟಕಂ ತದಂಕಂಗಳ್ ನಾಲ್ಕಂಗಂಗಳಾಗೆ ಕಾಮಿಜನಂಗಳ್ ವರ್ಗಿಗರ ತೆಱದೆ ನಟಿಯಿಸುತಿರ್ದರ್ (ಚಂದ್ರಪು. ೮-೯೨); ಸೂತ್ರಧಾರ —ವಿದೂಷಕ — ಕೆಲವು ನೀಚಪಾತ್ರಗಳು . . . ರಂಗಭೂಮಿಯ ಮೇಲೆ ನಡೆಯದೆ ಇದ್ದ ವಿವರಗಳನ್ನು ಪ್ರೇಕ್ಷಕರಿಗೆ ಹೇಳಿಕೊಡುತ್ತಿದ್ದರು (ಭಾರದ. ೫೭೩). ೨. ಬೊಂಬೆಗಳಿಗೆ ದಾರವನ್ನು ಕಟ್ಟಿ ತೆರೆಯ ಮರೆಯಲ್ಲಿ ನಿಂತು ಆಡಿಸುವವನು: ಸೂತ್ರಧಾರನಿಲ್ಲದೆ ಬೊಂಬೆಯಾಟ ನಿಂತಿತು (ರೂಢಿ). ೩. ದೇವಾಲಯ, ಸೌಧ ಮೊದಲಾದ ಕಟ್ಟಡಗಳಿಗೆ ರೇಖಾವಿನ್ಯಾಸವನ್ನು ಹಾಕಿ ನಿರ್ದೇಶನವನ್ನು ನೀಡುವ ವಾಸ್ತುಶಿಲ್ಪಿ: ಸುರಪತಿ ಸೂತ್ರಧಾರನಮರಾವಳಿ ಶಿಲ್ಪಿಗಣಂ (ಶಾಂತಿಪು. ೯-೧೫೪); ಮುಖ್ಯ ಸೂತ್ರಧಾರನು ದೇವಾಲಯದ ವಿನ್ಯಾಸವನ್ನು ಬರೆದು ಪ್ರತಿಯೊಂದು ಭಾಗದ ಅಳತೆಯನ್ನೂ ನಿರ್ಧರಿಸಿದ ಮೇಲೆ . . . ಓಜರು . . . ತಮ್ಮ ಚಿಹ್ನೆಗಳನ್ನು ಹಾಕುತ್ತಿದ್ದರು (ಹೊಯ್ಸವಾ. ೧೪). ೪. ಇಂದ್ರ. ೫.(ಆಲಂ) ಸೂತ್ರವನ್ನು ಹಿಡಿದಿರುವವನು; ಮೊದಲಿಗ : ಕೃತಯುಗಾರಂಭಸೂತ್ರಧಾರನೆನಿಸಿದಾದಿಬ್ರಹ್ಮಂಗೆ ರಾಜ್ಯಾಭಿಷೇಕಂಗೆಯ್ವ ಬಗೆಯಂ ಬಗೆದು (ಆದಿಪು. ೮-೬೬ ವ). ೬. ಜಗತ್ತಿನ ಜೀವರನ್ನು ಬೊಂಬೆಗಳಂತೆ ಆಡಿಸುವವನು; ಪರಮಾತ್ಮ : ಶಿವಶಿವ ಸಲ್ಲುದೇ ಸಮರಮಿಂತೆನಗೆ . . . ಜಗದ ಜೀವರನಾಡಿಪ ಸೂತ್ರಧಾರನೊಳ್ (ಶಬಶಂ.೪-೧೨೩). [ಸಂ.]

**ಸೂತ್ರಧಾರಕ** (ನಾ). = ಸೂತ್ರಧಾರ ೬ : ಸುತ್ತುವನು ನಾನಾತೆಱದಲಿ ವಿಚಿತ್ರಚರಿತನು ಕಪಟನಾಟಕಸೂತ್ರಧಾರಕನೆಂದಱಿತು ಸುಖಿಯಾಗು ನೀನು (ಕುವ್ಯಾಉ. ೪-೩೭). [ಸಂ.]

**ಸೂತ್ರಧಾರಿ** (ನಾ). = ಸೂತ್ರಧಾರ ೬ : ಸಂಸಾರನಾಟಕಸೂತ್ರಧಾರಿ ಮುರಾರಿ ಕೈವಱೆಗಾಡಿದಂ (ಜಗವಿ.೩-೫೩); ಎಷ್ಟಾದರೂ ನೀನು ಕಪಟನಾಟಕಸೂತ್ರಧಾರಿ ಯಲ್ಲವೇ! (ಹೇಮಕೂ. ೩). [ಸಂ. ಸೂತ್ರಧಾರಿನ್]

**ಸೂತ್ರಧಾರಿತನ** (ನಾ). ದೇವಾಲಯದ ಕಟ್ಟಡಕ್ಕೆ ನಿರ್ದೇಶನ ನೀಡುವ ಹೊಣೆಯನ್ನು ವಹಿಸಿಕೊಂಡಿರುವಿಕೆ : ಉಬ್ಬೋಜನ ಮಗ ಅಬ್ಬೋಜಗೆ ಮತ್ತ ಕಟ್ಟXಕೆಱೆಯ ಕೆಳಗೆ ಸೂತ್ರಧಾರಿತನಕ್ಕೆ ಕೊಟ್ಟ ಗದ್ದೆ ಮತ್ತರೊನ್ನು ಬೆರ್ದ್ದಲೆ ಮತ್ತರು ಪನ್ನೆರಡು (ಎಕ. XI, ಜಗಳೂ. ೧೦-೩೪; 1054). [ಸೂತ್ರಧಾರಿ + - ತನ]

**ಸೂತ್ರನಾಡಿ** (ನಾ). ಶರೀರದ ನಾಡಿಗಳಲ್ಲಿ ಒಂದು : ಮಯೂರನಾಡಿ . . . ಸೂತ್ರನಾಡಿ . . . ಸಂತೋಷನಾಡಿ ಇಂತೀ ಪ್ರಥಮನಾಡಿಯೊಳಗಾದ ಶರೀರದಲ್ಲಿ ತೋಱುವ ನಾಡಿ ಜೀರ್ಣಪರ್ಣದಂತೆ (ಸರ್ವಪ. ೨೦-೯೮). [ಸಂ.]

**ಸೂತ್ರನಾಭಿ** (ನಾ). ಒಂದು ಬಗೆಯ ಸಸ್ಯ; ಸರ್ಪಗಂಧಿ: ಸೂತ್ರನಾಭಿ, ಸರ್ಪಗಂಧಿ, ಪಾತಾಳಗಂಧಿ, ಶಿವನಾಭಿಬಳ್ಳಿ (ವೈದ್ಯನಿ. ೬೬-೧೩೪೧). [?]

**ಸೂತ್ರಪಿಟಕ** (ನಾ). [ಬೌದ್ಧ] ಮೂರು ಪಿಟಕಗಳಲ್ಲಿ ಒಂದು; ಸೂತ್ರ ರೂಪದಲ್ಲಿರುವ ಗ್ರಂಥಗಳ ರಾಶಿ: ಸೂತ್ರಪಿಟಕ, ವಿನಯಪಿಟಕ, ಅಭಿಧರ್ಮ ಪಿಟಕ ಎಂದು ಮೂರುಪಿಟಕಗಳು (ಒಂದಸಾ. ೨೪). [ಸಂ.]

**ಸೂತ್ರಪ್ರಾಯ** (ನಾ). ಪರಂಪರಾಗತವಾದ ಶಾಸ್ತ್ರಸ್ವರೂಪನಾದವನು: ಸದಸದ್ವೇದಂಗಳಂ ಪೇಟ್ಟುವರ್ಸೂತ್ರಪ್ರಾಯರಜೇಯರೀಗೆಮಗುಪಾಧ್ಯಾಯರ್ಸುಖೋಪಾಯಮಂ (ಪಂರಾಮಾ. ೧-೪). [ಸಂ.]

**ಸೂತ್ರಬದ್ಧತೆ** (ನಾ). ನಿಯಮಬದ್ಧತೆ ; ಹೊಂದಾಣಿಕೆ : ಮಾಸ್ತರರ ಕತೆಯಲ್ಲಿ ಒಂದು ರೀತಿಯ ಸೂತ್ರಬದ್ಧತೆ ತೋರಹತ್ತಿತು (ಮೂರುದಾ. ೬೭). [ಸಂ. ಸೂತ್ರಬದ್ಧತಾ]

**ಸೂತ್ರಬಳ್ಳಿ** (ನಾ). ಪ್ರಾಣಿಗಳ ಬೇಟೆಯಾಡಲು ಶಿಸ್ತು, ಕಟ್ಟು, ಕ್ರಮವನ್ನನುಸರಿಸುವಾಗ ಮೃಗವು ಬರುವ ದಾರಿಗೆ ಅಡ್ಡವಾಗಿ ಕಟ್ಟುವ ಒಂದು ಬಗೆಯ ಬಳ್ಳಿ: ಕೋವಿಯ ಬಾಯಿ ಮೃಗಗಳು ಬರುವ ದಾರಿಯ ಕಡೆಗಿರುವಂತೆ ಮಾಡಿ, ಕೋವಿಯನ್ನು ಗೂಟಗಳ ಮೇಲಿಟ್ಟು ಬಳ್ಳಿಗಳಿಂದ ಅದನ್ನು ಕಟ್ಟಿ ಕೋವಿಯ ಬಿಲ್ಲಿಗೆ ಸಂಪರ್ಕವಿರುವಂತೆ ಮೃಗ ಬರುವ ದಾರಿಗೆ ಅಡ್ಡಲಾಗಿ ಉದ್ದವಾದ ಸೂತ್ರಬಳ್ಳಿಯೊಂದನ್ನು ಕಟ್ಟುತ್ತಾರೆ (ಪಂಜಪಾಂ. ೨೨). [ಸೂತ್ರ + ಬಳ್ಳಿ]

**ಸೂತ್ರಬೊಂಬೆ** (ನಾ). = ಸೂತ್ರಗೊಂಬೆ : ಚಿತ್ತಜನ ಸೂತ್ರಬೊಂಬೆಗಳಂತೆ ನಾರಿಯರು ವೂಳಿಗಮನಾಂತಿರ್ದರು (ಕವಮೋ. ೩-೨೪). [ಸೂತ್ರ + ಬೊಂಬೆ]

**ಸೂತ್ರಮಾರ್ಗ** (ನಾ). ಸಂಕ್ಷಿಪ್ತವಾದುದರಲ್ಲಿ ಸಂಪೂರ್ಣ ಹೇಳಿಕೆಯನ್ನು ನೀಡುವ ರೀತಿ : ಸೂತ್ರಮಾರ್ಗದೊಳೊರೆದನಾಂಜನೇಯಂ ಕಿರಿದುಬೇಗದಿ ತನ್ನ ಪರಿಚಯವನ್ (ಶ್ರೀರಾಮಾ. ೪೩೦-೨೭೭). [ಸಂ.]

**ಸೂತ್ರರತ್ನ** (ನಾ). ಹಾರದಲ್ಲಿ ಇರುವ ಮಣಿಯಂತಿರುವವನು: ವನಿತಾನಾಯಕರತ್ನಂ ತನೂದರೀಕನಕಸೂತ್ರರತ್ನಂ . . . ಎನಿಸಿದಂ ಕವಿರತ್ನಂ (ಗದಾಯು. ೧-೪೬). [ಸಂ.]

**ಸೂತ್ರರುಚಿ** (ನಾ). [ಜೈನ] ಹತ್ತು ಪ್ರಕಾರದ ದರ್ಶನಾರ್ಯರಲ್ಲಿ ಒಬ್ಬನು; ಸಮ್ಯಗ್ದರ್ಶನದ ಆಚಾರಗಳನ್ನು ಮುನಿಗಳ ಮೂಲಕ ಸೂತ್ರರೂಪದಲ್ಲಿ ಕೇಳಿ ಅರಿತು, ಶ್ರವಣಮಾತ್ರದಿಂದಲೇ ಸಮ್ಯಗ್ದರ್ಶನಾಧಿಕಾರವನ್ನು ಪಡೆಯಬಲ್ಲವನು: ದರ್ಶನಾರ್ಯರ್ ಆಜ್ಞಾಮಾರ್ಗೋಪದೇಶ ಸೂತ್ರಬೀಜ ಸಂಕ್ಷೇಪ ವಿಸ್ತಾರಾರ್ಥ ಅವಗಾಢಪರಮಾವಗಾಢರುಚಿಭೇದದಿಂ ದಶವಿಧಂ . . . ಮುನಿಚರಣವಿಧಾನ ಸೂಚಕಾಚಾರಾದಿ ಸೂತ್ರಶ್ರವಣಮಾತ್ರೋದ್ಭೂತ ಸಮ್ಯಗ್ದರ್ಶನೋಪೇತರ್ ಸೂತ್ರರುಚಿಗಳೆಂಬರ್ (ತತ್ತ್ವಪ್ರ. ೧೭೩). [ಸಂ.]

**ಸೂತ್ರವೇಷ್ಟನ** (ನಾ). ನೆಯ್ಗೆಯವರ ಲಾಳಿ : "ತ್ರಸರಃ, ಸೂತ್ರವೇಷ್ಟನಂ - ೨ ನೇಯಿಗೆಯವರು ನೂಲು ಸುತ್ತುವ ಅರಟ" (ಸಿದ್ಧಾಂತಿ. ೩೬೪). [ಸಂ.]

**ಸೂತ್ರಾಭ್ರ** (ನಾ). ರಂಗಸ್ಥಳದ ಮೇಲೆ ದಾರಕ್ಕೆ ಅಳವಡಿಸಿದ ಕೃತ್ರಿಮವಾದ ಮೋಡ,— ಮುಗಿಲು: ಗಿರಿಸುತ ಶಚಿಶಾರದೆಯರಂಗನೆಯರ ಬಿರುದಿನ ಪಾತ್ರಕ್ಕೆ ಮೆಚ್ಚಿ ಕರೆವ ಪೂಮಳೆಯೆನೆ ಸೂತ್ರಾಭ್ರಗಳಿಂದ ಪರಿಮಳಪುಷ್ಪ ಸೂಸಿದುವು (ಕಂಸಪ. ೮-೬೭). [ಸಂ.]

**ಸೂತ್ರಾರ್ಥಂಬೆಱು** (ಕ್ರಿ). ಸೂತ್ರದ ಅರ್ಥವನ್ನು ಪಡೆ,— ಹೊಂದು : ಧಾತ್ರೀಚಂದ್ರೇಂದುಧರಂ ಸೂತ್ರಾರ್ಥಂಬೆತ್ತ ಗಣಂ ಧಾತ್ರೀಪೂಜ್ಯಂ (ಛಂದೋಂಬು. ೨-೮೬). [ಸೂತ್ರಾರ್ಥ + ಪೆಱು]

**ಸೂತ್ರಾವೇಷ್ಟಿತ** (ನಾ). ದಾರದಿಂದ ಸುತ್ತಿದುದು,— ಕಟ್ಟಿದುದು: ಕರ್ಪೂರಗಂಧ ಶಾಲ್ಯಕ್ಷತಂಗಳಂ ಮುನ್ನಿನ ದಿವಸಮಮ್ಮ ಗೃಹೋದ್ಯಾನವನದ ಕನಕ ಸರೋರುಹಂಗಳೆಸಳ್ಗಳೊಳಗೆ ತೀವಿ ಪೊಯ್ದು ಸೂತ್ರಾವೇಷ್ಟಿತಮಾತ್ರಂಗಳಾಗಿ ಮಾಡಿ . . . ಕಂಪಿಸಲ್ ಪೊಂಪುಳಿವೋಗುತ್ತಿರ್ದ ತಂಡುಲಂಗಳಂ ಕಳೆದುಕೊಂಡು ಬಾಗಿದೋಗರಮನಾರೋಗಿಸುವಂ (ಸುಕುಮಾ. ೧೧-೩೫ ವ). [ಸಂ.]

**ಸೂತ್ರಿಕ** (ನಾ). ಸೂತ್ರವನ್ನು ಹಿಡಿದು ಆಡಿಸುವವನು; ಸೂತ್ರಧಾರ : ಬೊಮ್ಮನೆನಿಸುವ ಸೂತ್ರಿಕಂ ದೇವತೆಗಳೆಱಹ ಹಂಸೆಗಳನಾಡಿಪ ಕಂಭಮೋ (ಭಾವಚಿಂ. ೧-೨೪); ಕಾಷ್ಠದಲ್ಲಿ ಬೊಂಬೆಯ ಮಾಡಿ ಪಟ್ಟುನೂಲ ಸೂತ್ರವ ಹೂಡಿ ತೆರಯ ಮಱೆಯಲ್ಲಿ ನಿಂದು ಸೂತ್ರಿಕನು ಕುಣಿಸಿದಡೆ ಕುಣಿಯುತಿರ್ಪುದು (ಅಪಂಡೇ. ೩೦೭-೯೧). [ಸಂ.]

**ಸೂತ್ರಿಕೆ** (ನಾ). ೧. ದಾರ; ನೂಲು: ಉಡಿದ ಮಿಣಿ ಮೊಗರಂಬ ಗದ್ದುಗೆ ಬಡಿಗೆಗಳ ಸೂತ್ರಿಕೆಯ ಕಬ್ಬಿಯ ಕಡಿಯಣದ ಕುಸುರಿಗಳಲೆಸೆದುದು ಕೂಡೆ ರಣಭೂಮಿ (ಕುವ್ಯಾತ. ೧೫-೩೧). ೨. ಒಂದು ಬಗೆಯ ಖಾದ್ಯ; ಶಾವಿಗೆ. [ಸಂ. ಸೂತ್ರಿಕಾ]

**ಸೂತ್ರಿಸು** (ಕ್ರಿ). ೧. ಅಳತೆಗಾಗಿ ನೂಲನ್ನು (ನೇರವಾಗಿ) ಇಡು: "ಸೂತ್ರಿಸು - ಮಾನಸೂತ್ರಸ್ಥಾಪನೇ (ಅಳೆಯುವ ನೂಲನ್ನು ಇಡು)" (ಶಮಧಾ). ೨. ಗೆರೆಯನ್ನು ಎಳೆ : ಚಿತ್ರಿಸಬಾರದವನ ರೂಪು ಕರುವಿಟ್ಟು ಸೂತ್ರಿಸಿಯೆರೆಯಲಶಕ್ಯ (ಭರಚ. ೧-೪೯). ೩. ಪೋಣಿಸು; ಸೇರಿಸಿ ಕಟ್ಟು: ಸರಳ ಸೂತ್ರದಲಹಿತವೀರರ ಶಿರವ ಸೂತ್ರಿಸಿ ಕಾಲಕಂಠನ ಕೊರಳಲಿಕ್ಕುವೆನೆನುತ ಬಿಲುದುಡುಕಿದನು (ತೊರರಾ. ೩-೫-೧೨). ೪. ಜೋಡಿಸು; ಸೇರಿಸು: ತಳಿರ್ತ ಕಲ್ಪಲತೆಯ ಕಾವಣದಂತಿರ್ದ ವಿತರಣಮಣಿಮಂಡಪದಿಂ ಸೂತ್ರಿಸಿದ ಚಿತ್ರಪುತ್ರಿಕೆಯ ಲಾವಣ್ಯರಸವೊಸರ್ವಂತೆ ಚಾಮರದೆಲರಲಪಿನೊಟ್ಟೈಱುವ ಸಣ್ಣಧಾರೆಯಂ ಸೂಸುವ ಧಾರಾಗೃಹದಿಂ (ಮಲ್ಲಿಪು. ೨-೭೪); ಸೂತ್ರಿಸಿದ ನೇತ್ರಾವಳಿಯ [ಪಾಠಾಂ. ಪೊಣ್ಮಿದ ಪುಷ್ಪಾವಳಿಯ] ಹವಣಿಸಿದ ಹಂಸಾವಳಿಯ ಸಕಲಸೌಂದರ್ಯಮನೊಳಕೊಂಡ ಮೇಲ್ಕಟ್ಟನ ಬೆರಕೆವೆಳಗು ಮಂಟಪದೊಳಗಂ ಪೊಱಗಂ ತಕ್ಕನೆ ತೀವೆ (ಗಿರಿಕ. ೧೦-೨೮ ವ); ಬೆಳಸಿ ನಿಜಬಾಲವನು ಶರಧಿಯ ವಲಯದಿತ್ತಡಿಗಳನು ಸೂತ್ರಿಸಿ ಅಳಿದನಗ್ಗದ ವೀರರೆಲ್ಲರು ಕಂಡು ಬೆಱಗಾಗೆ (ಕೌಶಿರಾ. ೧೬-೬). ೫. ಸೂತ್ರವನ್ನು ರಚಿಸಿ ಹೇಳು ; ಸೂತ್ರರೂಪದಲ್ಲಿ ಹೇಳು: ಅಂತು ಸೂತ್ರಿಸಿದ ಸೂತ್ರ[ದ] ವೃತ್ತಿ ನಿಜಾತ್ಮವೃತ್ತಿವೋಲ್ ಪರಿಣಮಿಸಿತ್ತು (ಪಂಪಭಾ. ೨-೭೪); ಸೂತ್ರಮನೆ ಮುನ್ನ ಪಾಣಿನಿ ಸೂತ್ರಿಸೆ ಜೈನೇಂದ್ರಬುದ್ಧಿ ಮಾಡಿದಂ (ಸಮಪ. ೨-೭೮). ೬. ಅಪ್ಪಣೆಮಾಡು; ನಿರ್ದೇಶಿಸು: ಕೃಷ್ಣ ನೃತ್ಯಮಂ ಸೂತ್ರಿಸುವುದುಮೊಲವಿಂ ಪಾಡುತುಂ ಗೋಪಿಯರ್ ನರ್ತಿಸಿದರ್ ಚೈತ್ರಾನಿಳಂ ಸೂತ್ರಿಸೆ ವನಲತೆಗಳ್ ನರ್ತಿಪೊಂದಂದದಿಂದಂ (ಜಗವಿ. ೫-೭); ಪತ್ರಮನಿದನವನೀಪತಿ ಸೂತ್ರಿಸಿದಪೊಲುತ್ತಮಾಂಗದೊಳ್ ತಾಳ್ದಿ ಭವದ್ಧಾತ್ರಿಯನಾಳಲ್ಕದೊಡಸಿಪತ್ರಂ ನಿಜಮಸ್ತಕಕ್ಕೆ ತಡೆಯದೆ ಬರ್ಕುಂ (ಪಾರ್ಶ್ವಪು. ೨-೭೮). ೭. ತೀರ್ಮಾನಿಸು; ನಿಶ್ಚಯಿಸು: ಪುತ್ರಕಳತ್ರಪರಿಗ್ರಹಗಾತ್ರಧನೈಶ್ವರ್ಯಮೆಂಬಿವಾರ್ಗಮನಿತ್ಯಂ ಧಾತ್ರಿಯೊಳೆಂಬುದನೀಗಳ್ ಸೂತ್ರಿಸಿತೆನ್ನರ್ದೆಯೊಳುಳ್ಕೆ ಬಿಟ್ಟೀಯುಳ್ಕಂ (ಪುಷ್ಪಪು. ೧೫-೨೭). ೮. ಧರಿಸು; ತಳೆ: ಧೈರ್ಯದೊಳು ಕ್ಷತ್ರಿಯಕಾಂತೆಯರಲ್ಲವೆ ಬಿಸುಟರು ಸೂತ್ರಿಸಿದಖಿಲಭೂಷಣವ (ಭರಚ. ೭೭-೧೨೨). [ಸೂತ್ರ + - ಇಸು]

**ಸೂತ್ರೀಕರಿಸು** (ಕ್ರಿ). ಒಟ್ಟುಗೂಡಿಸು; ಸಂಯೋಜಿಸು: ಭಿನ್ನಭಿನ್ನ ಕಡೆಗೆ ವಿಭಕ್ತರಾದ ಭಾರತೀಯರನ್ನು ಏಕತ್ರ ಸೂತ್ರೀಕರಿಸುತ್ತ ಜಗದಗಲವನ್ನು ಕಿರಿದುಗೊಳಿಸಿ (ಮುಂಗಾಪು. ೩೧); ಸಮನ್ವಯಸಿದ್ಧಾಂತವನ್ನೇ . . . ಪ್ರತಿಷ್ಠಾಪಿಸುವ ಭಗವದ್ವಾಣಿ ಮೊದಲ ಮಾತಿನಲ್ಲಿಯೇ ಧರ್ಮಕರ್ಮಗಳನ್ನು ಸಮನ್ವಯಿಸಿ ಸೂತ್ರೀಕರಿಸಿರುವುದನ್ನು ಕಾಣುತ್ತೇವೆ (ಭಾರದ. ೧೧೧). [ಸೂತ್ರೀಕರಣ + - ಇಸು]

**ಸೂತ್ರೆಯ** (ನಾ). ವೇದಾಧ್ಯಯನ ಮಾಡಿದ ಬ್ರಾಹ್ಮಣನಿಗೆ ತೆರಿಗೆಯಿಲ್ಲದೆ ಕೊಡುವ ಭೂಮಿ (?): ಹುರದ ಚೆಂನೊಡೆಯರು ಮಲ್ಲರಾಜೊಡೆಯರು ಮಯಿಸೂರ ತಿಂಮರಾಜವಡೆಯರಿಗೆ ನಂಮ ಸಂನ್ನಿಗಹಳ್ಳಿ ಮಿಂಣನ ಹಳ್ಳಿಯ ಗ್ರಾಮ ೨ ನೂ ನಿಮಗೆ ಸೂತ್ರೆಯವಾಗಿ ಕಲ್ಲ ನೆಡಿಸಿ ಕೊಟ್ಟೆವಾಗಿ (ಎಕ. V (R), ಮೈಸೂರು. ೨೦೦-೭; ಸು. 17 ನೆಯ ಶತ). [< ಸಂ. ಶ್ರೋತ್ರಿಯ?]

**ಸೂತ್ಸವ** (ನಾ). ಒಳ್ಳೆಯ ಉತ್ಸವ; ಶ್ರೇಷ್ಠವಾದ ಉತ್ಸವ: ಬಳೆಯ ಸರ್ವವಿಭೂಷಣಕ್ಕೆ ಮೊದಲ್ಗೆ ಪುತ್ರೋತ್ಸವಂ ಸೂತ್ಸವಂ (ಸೋಮೇಶ. ೧೪). [ಸಂ.]

**ಸೂದ** (ನಾ). ೧. ನಾಶ; ಧ್ವಂಸ. ೨. ಅಡುಗೆಯನ್ನು ಮಾಡುವುದು : (ಕ).

೩. ಅಡುಗೆಯನ್ನು ಮಾಡುವವನು; ಬಾಣಸಿಗ: "ಆರಾಳಿಕಃ, ಸೂಪಕಾರಃ, ಸೂದಃ, ವಲ್ಲವಃ- ಈ ೪ ಬಾಣಸಿಗಂ" (ಹಲಾಯು. ೭೧-೨೬೬). ೪. ಅನ್ನದೊಂದಿಗೆ ಕಲಸಿಕೊಳ್ಳುವ ವ್ಯಂಜನಪದಾರ್ಥ; ಮೇಲೋಗರ: "ಸೂದ ೧. ಅನ್ನದ ಪರಿಕರ, ಅಡಿಗೆಯವನು ೨"(ಸಿದ್ಧಾಂತಿ. ೩೯೮). ೫. ಪಕ್ವವಾದ ಯಾವುದೇ ಬಗೆಯ ಭಕ್ಷ್ಯ. ೬. ಕೆಸರು; ಕೊಚ್ಚೆ. ೭. ಪಾಪ; ಕಳಂಕ. ೮. ಒಂದು ಬಗೆಯ **ಔಷಧದ್ರವ್ಯ:** ಸರ್ವರೋಗಕ್ಕೆ:- ಶುದ್ಧರಸ, ಬಿಳುಗಾರ, ಗಂಧಕ, ಸೂದ, ಸಾಂಬೆ . . . ಕೊಡಲು ಸರ್ವರೋಗಹರ (ವಿವೈವಿ. ೯೬). [ಸಂ.]

**ಸೂದಕರ್ಮ** (ನಾ). ಅಡುಗೆಯನ್ನು ಮಾಡುವುದು; ಬಾಣಸಿಗನ ಕೆಲಸ.
[ಸಂ. ಸೂದಕರ್ಮನ್]

**ಸೂದಕರ್ಮಜ್ಞ** (ನಾ). ಅಡುಗೆಯ ಕೆಲಸವನ್ನು ಬಲ್ಲವನು; ಬಾಣಸಿಗನ ಕೆಲಸವನ್ನು ಅರಿತಿರುವವನು: ಪೊರೆಯೊಳಿಹ ಸೂದಕರ್ಮಜ್ಞರೊಡನೆ ಪೊತ್ತು ಕಳೆಯದೆ ತನ್ನ ತನುವನೆರಡಾಗಿ ಮಸೆವೆತ್ತ ಕರಪತ್ರದಿಂ ಸೀಳ್ವುದೆಂದಾಜ್ಞಾಪಿಸುತ್ತಿರೆ (ಜೈಮಿಭಾ. ೨೬-೫೫). [ಸಂ.]

**ಸೂದನ** (ನಾ). ೧. ವಿನಾಶಗೊಳಿಸುವಿಕೆ; ಧ್ವಂಸಗೊಳಿಸುವಿಕೆ. ೨. ಕೊಲ್ಲುವಿಕೆ; ಕೊಲೆ: "ವಿಶಸನ ಮಾರಣ ವಿಶರಣ ನಿಶುಂಭನ ಕ್ಷಣನ ಸೂದನ . . . ಹಿಂಸಾರ್ಥಕಂ ವಧಂ ತಾನಕ್ಕುಂ" (ವಸ್ತುಕೋ. ೮೨-೪). ೩. ಕೊಲ್ಲುವವನು; ಹಗೆ; ವೈರಿ : ಬಳಸೂದನ ಸದನನಪ್ಪೆನಗೆ ನಂದನಂದನನೊಳ್ ಸಂಧಾನಂ ನೀತಿನಿಂದಿತಮುಂ (ಜಗವಿ. ೫-೬೧ ವ); ಖರಸೂದನಂ ಕಂದನಾ ಕಡಿದ ಪೆರ್ಮರನ ತೆರನ ಜಟಾಯುಖಗವರನ (ಶ್ರೀರಾಮಾ. ೨೫೯-೮೪೫). [ಸಂ.]

**ಸೂದಾಧ್ಯಕ್ಷ** (ನಾ). ಅಡುಗೆಯ ಕಾರ್ಯದ ಮುಖ್ಯಸ್ಥ: "ಪೌರೋಗವಃ, ಸೂದಾಧ್ಯಕ್ಷಃ- ಈ ೨ ಬಾಣಸುವೆಗ್ಗಡೆ" (ಹಲಾಯು. ೭೧-೨೬೬). [ಸಂ.]

**ಸೂದೂಱು** (ನಾ). ಒಂದು ಊರಿನ ಹೆಸರು : ಇದುವೆ ಸೂದೂಱು ಸೊಯ್ಯವಾಲರ ಯ್ಯಂಮನ್ಗೆ ಧರ್ಮ್ಮ ತೂಂಬುಂ ಕೊಟ್ಟರ್ (ಎಕ.XIV, ತಿರುಮ. ೨೫೩-೧೧; ಸು. 800).
[ ? + ಊಱು ? (< ಊರ್)]

**ಸೂದ್ರಕಯ್ಯ** (ನಾ). ಒಬ್ಬಾತನ ಹೆಸರು: ಶ್ರೀಮಾತ್ ಸೂದ್ರಕಯ್ಯಕರಮ್ಬಳಿಗೆ ಸಾಯಿರಮುಮನ್ . . . ಸುಖದಿನಾಳುತ್ತಿರೆ (ಎಕ. XI, ಹೊಳಲ್ಕೆ. ೨೩-೮; 968). 'ಸುದ್ರಕ' ಪರಾ. [ಸೂದ್ರಕ$_0$ + ಅಯ್ಯ$_1$]

**ಸೂದ್ರಿತಿ** (ನಾ). ಶೂದ್ರರ ಹೆಂಗಸು: ಬೆಂದ ಮನೆಬಾಗಿಲಿಗೆ ಮುಂದೆ ತೋರಣವೇಕೆ ಸಂದ ಸೂದ್ರಿ[ಪಾಠಾಂ. ಶೂದ್ರ]ತಿಯು ಒಡನುಂಬ ಹಾರುವಗೆ ಮಿಂದೂಟವೇಕೆ (ಸರ್ವಜ್ಞ. ೯೧೯). [ಸೂದ್ರ$_0$ + - ಇತಿ$_1$ (< - ಇತ್ತಿ)]

**ಸೂನ** (ಗು). ೧. ಹುಟ್ಟಿದ; ಉತ್ಪತ್ತಿಯಾದ. ೨. ಅರಳಿದ; ವಿಕಸಿಸಿದ. ೩. ಹಡೆದ; ಪ್ರಸವಿಸಿದ. (ನಾ). ೪. ಅರಳಿದ ಹೂವು,— ಪುಷ್ಪ: ಸೂನದ ತಾಳವೃಂತದಿಂ ಬೀಸು (ನರಚ. ೧೧೫-೩೧೦). [ಸಂ.]

**ಸೂನಂಗಿ$_1$** 'ಸೂನಗೆ' ನೋ.

**ಸೂನಂಗಿ$_2$** 'ಸೂಲಂಗಿ$_2$' ನೋ.

**ಸೂನಗಿ** 'ಸೂನಗೆ' ನೋ.

**ಸೂನಗಿಗಟ್ಟು** (ಕ್ರಿ). ಕಠಾರಿಯನ್ನು ಕಟ್ಟು: ಕೊರಳ ಜೊತ್ತಗೆ ಸುರುಚಿರ ಬೆನ್ನ ಮಿಣಿ ಮತ್ತುರದೊಳು ಪೊನ್ನಘಂಟೆಗಳು ನಿರುಪಮವಾದ ಸೂನಗಿಗಟ್ಟಿ ಬಂದವು ಧರೆ ತೆಱಪಿಲ್ಲವೆಂಬಂತೆ (ಅಂಜಚ. ೬-೯೮). [ಸೂನಗಿ (< ಸೂನಗೆ) + ಕಟ್ಟು$_1$]

**ಸೂನಗಿಗತ್ತಿ** (ನಾ). ಒಂದು ಬಗೆಯ ಕತ್ತಿ,— ಕಠಾರಿ : ಕೋಡ ಮೊನೆಯೊಳ್ತಗುಳ್ಚಿದ ಸೂನಗಿಗತ್ತಿಯ [ಪಾಠಾಂ. ಸೂನಗತ್ತಿಯ, ಸೂನುಗಿಗತ್ತಿಯ] ಕೊನೆಗೊಡಂಕೆಯೊಳ್ ತೊನೆವ ಬಿಳಿಯ ಚಾಮರದ . . . ಗಂಧಸಿಂಧುರಸಂದೋಹದಿಂ (ರಾಜಶೇ. ೬-೧೧ ವ). [ಸೂನಗಿ (< ಸೂನಗೆ) + ಕತ್ತಿ]

**ಸೂನಗಿಬಿಲ್ಲು** 'ಸೂನಗಿವಿಲ್ಲು' ನೋ.

**ಸೂನಗಿವಿಲ್ಲು, ಸೂನಗಿಬಿಲ್ಲು, ಸೂನಿಗೆವಿಲ್ಲು** (ನಾ). ಕಠಾರಿಯಂತೆ ಚೂಪಾದ ಅಂಚನ್ನು ಉಳ್ಳ ಬಿಲ್ಲು: ಪಿಡಿದಂಬುಗಳು ತೀರೆ ಸೂನಗಿವಿಲ್ಲಿಂದುಡಿಯಲುಡಿಯ ಸುರಗಿಯೊಳು ಬಿಡದಿಱಿದಾಡಿ ಬಿಲ್ವಡೆ ಮಡಿದುದು (ಕುರಾಸಾಂ. ೧೨-೬೦). **ಸೂನಗಿಬಿಲ್ಲು** : ಕಣೆಗಳು ತೀರೆ ಸೂನಗಿಬಿಲ್ಲುಗಳಿಂದೆಣಿಸದೆ ಪೊಕ್ಕಿಱಿದಾಡಿ (ಕುರಾಸಾಂ. ೧೨-೫೯). **ಸೂನಿಗೆವಿಲ್ಲು:** ತರಕಸ ಸಿಂಗಾಡಿ . . . ಸುರಗಿ ಸೂನಿಗೆ[ಪಾಠಾಂ. ನಗಿ]ವಿಲ್ಲು ಪರಿಗೆ ಪಕ್ಕರೆಗಳಿಂ ಕರಮೆಸೆದುದು ರಣಭೂಮಿ (ಕುರಾಸಾಂ. ೪೦-೪೨). [ಸೂನಗಿ (< ಸೂನಗೆ) + ಬಿಲ್ಲು$_1$ (< ಬಿಲ್$_2$)]

**ಸೂನಗೆ, ಶೂಲಿಗೆ, ಸುನಗಿ, ಸೂನಂಗಿ$_1$, ಸೂನಗಿ, ಸೂನಿಗೆ, ಸೂಲಂಗಿ$_1$, ಸೂಲಗಿ, ಸೂಲಿಗೆ** (ನಾ). ೧. ಒಂದು ಬಗೆಯ **ಆಯುಧ:** ಪಚ್ಚಡಮಂ ದುಂಡನಾಗಿ ದಂಡೆಯಂ ಸುತ್ತಿ ಸೂನ[ಪಾಠಾಂ. ನಿ]ಗೆಯನೆತ್ತಿ ಪರಿವ ತೆತ್ತಿಗೆವೀರರುಮಂ (ಲೀಲಾವ. ೫-೧೧ ವ); ಬೀಸುನೇಣಿನ ಸೆಳೆವ ನೇಗಿಲ ಸೂಸುಗಣೆಗಳ ಕಡಿವ ಕೊಡಲಿಯ ಕೈ ಸುರಗಿ ಸೂನಗೆಯ ನಾನಾಯುಧದ ಗಡಣೆಗಳ (ಕುವ್ಯಾಭೀ. ೪-೬೨). **ಶೂಲಿಗೆ:** ೧. ತೂಕಿ ತಾಗುವ ಶೂಲಿಗೆಯ ತುಂಡಿಸುವ ಪಂಕಿಯ ನೆಡುವ ಬಲ್ಲೆಹದ ಸೀಳುವಿಟ್ಟಿಯ . . . ಧಾಳಾಧೂಳಿ ಮಸಗಿತು ಮತ್ತೆ ಕರ್ಣನ ರಥದ ಬಳಸಿನಲಿ (ಕುವ್ಯಾಕ. ೧೧-೯); ನಿಲಿಸಿದನು ಶೂಲಿಗೆ[ಪಾಠಾಂ. ಸೂನಿಗೆ]ಯ ಬಂಡಿಯ (ತೊರರಾ.೬-೧೯-೧೮). **ಸುನಗಿ** : ೨. **ಜಯಸೂಚಕ ಪತಾಕೆ:** ರಥದಲಿ ತೆತ್ತಿಸಿದ ಸುನಗಿಯಾ ಸೀಗುರಿ ಪತಾಕೆಗಳಾ . . . ಕಾಲಾಳೊತ್ತರಿಸಿ ಬರೆ ಕಮಟ ಕೂರ್ಮರ ನೆತ್ತಿನೆಗ್ಗಲು ನಡೆದುದಗಣಿತಸೇನೆ ವಹಿಲದಲಿ (ರಾಮಚ. ೮೭). **ಸೂನಂಗಿ$_1$** : ೧. ಕಾಯ್ದು ಕಡು ಕೆಂಚಾದ ಹಿರಿಯ ಸೂನಂಗಿಗಳ ಹಾರೆಯಂ ನೆತ್ತಿತನಕಂ ಹಾಯಿಸಿ (ವೀಶೈಪು. ೪-೧೯-೫೩); ಕೊರಳ ರತುನದ ದಂಡೆಗಳ ಮೊಗಸಿರಿಯ ಹಲ್ಲಣ ಹಕ್ಕರಿಕೆಗಳ ಶಿರದ ಸೂನಂಗಿಗಳ . . . ತುರಗಗಳ ಜೋಡಣೆಯ ಕುಣಿಕುಣಿಸಿದರು ರಾವುತರು (ಆನಂರಾ. ೬-೨-೧೬). **ಸೂನಗಿ** : ೧. ಕೋಡುಗಳಿಗೆ ಸೂನಗಿಗಳ ಸೇರಿಸಿ ಜೋಡಿಸಿ ಪಣೆಗೆ ಕೂರಲಗ ಕೂಡೆ ಕಾದಿಸುವರು ಕೋಣಗಳನು (ಕುರಾಸಾಂ. ೪-೭೮); ಸುರಗಿ ಸೂನಗಿ ಶಕ್ತಿ ಕರವಾಳು . . . ತೋಮರ ಮಾರಿವದನ ಮುದ್ಗರ ಮೊದಲಾದಾಯುಧದೊಳು (ಭೈರವೇ. ೩-೯). **ಸೂನಿಗೆ** : ೧. ಕಂಡೆನೊಂದು ನೆಟ್ಟ ಶೂಲದ ಮೊದಲೊಂದು ತುದಿ ಮೂಱು ಆ ಮೂಱರ ತುದಿಯಲ್ಲಿ ಆಱು ಸೂನಿಗೆ ಆಱು ಸೂನಿಗೆಯ ಮೇಲೆ ಇಪ್ಪತ್ತೈದು ಹಣ (ಮೋಳಮಾ. ೨೨೪-೭೭೭); ಹೊಗರೊಗುವ ಸೂನಿಗೆಯ ಸುಪತಾಕೆಗಳ ಸಿಂಧದ ಹೊಳೆವ ಹೊಂಗಂಬುಗೆಯ ಹೂಡಿದ ಹಯದ ಸೂತರ ಗಳದ ಗರ್ಜನೆಯ (ಕುವ್ಯಾಭೀ. ೩-೧೯). **ಸೂಲಂಗಿ$_1$** : ೧. ಒಡ್ಡಿದ ಸೂಲಂಗಿಗಳಿಂದೊಡ್ಡಿಹ ಡೆಂಕಣಿಯ ಮೇಲೆ ಆಲುವ ಹಣ (ನನ್ನಚಾ. ೪-೧೭೨); ಕೊಂಬಿಗೆ ಸೂಲಂಗಿ ಸುಂಡಿಲ ಪಟ್ಟೆ ಮೈತುಂಬಿದ ಱಂಚಿಕೆಯಾನೆ ಮುಂಬರಿದೊತ್ತಿ (ನಾಗಕು. ೧೭-೭೪). ೩. **ಮೊಲ** : ಆನೆ ಹೊಟ್ಟೆಯಲ್ಲಿ ಸೂಲಂಗಿ ಹುಟ್ಟಿದ ಹಾಗೆ ಅಂತಾರಲ್ಲಾ ಹಾಗೆ ತಾತನ ಹೆಸರು ಹಾಳು ಮಾಡೋದಕ್ಕೆ ಹುಟ್ಟಿದಳು ನಮ್ಮ ಅತ್ತೆ (ಮರಳಿ.೯೧). **ಸೂಲಗಿ** : ೧. ಬಾಳರಚಸೆಯ ಸುತ್ತ ಹೊದಿಸಿದ ಸೂಲಗಿಯ ಕಡಿತಲೆಯನವನೀಪಾಲ ಸುತರಗ್ರದಲಿ ನಿಲಿಸಿದ ನೂರ್ವರು ಕುಮಾರಕರ (ಕುವ್ಯಾದ್ರೋ. ಒರಿಇ. ೪-೧೮ರ ಅಧಿಕಪದ್ಯ). **ಸೂಲಿಗೆ** : ೧. ಕುದುರೆಯ ಮೇಲೆ ಬಿಲ್ಪರಸು ಸೂಲಿಗೆ ತೀರಿಕೆ ಭಿಣ್ಡಿವಾಳಮತ್ತಿದ ಕರವಾಳ (ಎಕ.VII, ಶಿಕಾರಿ. ೧೩೬-೨೮; 1063). ೪. **ಶೂಲ:** ಥಳಥಳಿಪ ಸೂಲಿ[ಪಾಠಾಂ. ನಿ]ಗೆಯ ಮುಮ್ಮೊನೆಗಳ ರಥಾಂಗದ ಮೇಲುಪಸರದ ಪಳಹರದ ಖುರಗತಿಯ ಜೋಡ ಜವಾಯ್ಲ ಕುದುರೆಗಳ (ಕುವ್ಯಾಉ. ೧೧-೧೭). 'ಸೂಲಿಗೆಗೊಳ್' ಪರಾ.

ಸೂಲಿಗೆಯ ಭೈರವ = ೧. ಶೂಲವನ್ನು ಧರಿಸಿರುವವನು; ರುದ್ರ. ೨. ಒಂದು ಬಿರುದು : ಕಲಿಗಳಾಭರಣಂ ಸೂಲಿಗೆಯ ಭೈರವಂ (ಎಕ. VI, ಕಡೂರು. ೩೪-೧೮; 1148).
[ಸಂ. ಶೂಲಿಕ, ಶೂಲಿಕಾ]

**ಸೂನಿ** (ನಾ). ಮಾಂಸವನ್ನು ಮಾರುವವನು; ಕಸಾಯಿಗಾರ : ಕೀವು ನೆತ್ತರು ಸುರಿಪ ನಾಯ ತೊಗಲನು ಕಚ್ಚಿ ಜೀವನರಕಿಗಳು ಅಱಿವಱಿತು ಮೈಮಱಿದು ತಾವು ತಿರುಗುವರು ಸೂನಿಯಾಗಿ (ಗುರುಬೋ. ೧೧-೧೧೪). [ಸಂ. ಸೂನಿನ್]

**ಸೂನಿಗೆ** 'ಸೂನಗೆ' ನೋ.

**ಸೂನಿಗೆವಿಲ್ಲು** 'ಸೂನಗಿವಿಲ್ಲು' ನೋ.

**ಸೂನಿಗೆವೆಱು** (ಕ್ರಿ). ಕಠಾರಿಯನ್ನು ಹಿಡಿ,— **ಹೊಂದು:** ಸುಂಡಿಲವಾಳ್

ಸೂನಿಗವೆತ್ತ ಶೃಂಗ ವೇತಂಡಗಳುರವಣಿಸಲ್ಕೆ ಖಂಡಚಂದಿರಬಾಣದಿಂದಚ್ಚು ಕಡಿದ ಕೋದಂಡಶಿಕ್ಷಾದೀಕ್ಷಿತನು (ಮೋಹತ. ೩೪-೬೯). [ಸೂನಿಗೆ (< ಸೂನಗೆ) + ಪೆಱು]

**ಸೂನಿತವಸನ** (ನಾ). ಮಗುವಿನ ಜನನಕಾಲದಲ್ಲಿ ಉಪಯೋಗಿಸುವ ಬಟ್ಟೆ, — ವಸ್ತ್ರ (?): ಜಾನಿಸಿ ನೋಡು ನೀವೆಲ್ಲ ಮಾತೃಕೆಯರ ಯೋನಿಯೊಳ್ ಪೊಱಮಟ್ಟು ಬರುತೆ ಸೂನಿತವಸನದಿಂದೇಕೆ ಬಂದಪವಹಮಾನಿಕೆಗಳ ನೋಡಿದಪಿರಿ (ಮೋಹತ. ೩೯-೫). [ಸಂ.]

**ಸೂನು** (ನಾ). ೧. ಮಗ; ಪುತ್ರ: ಸೂನುಗಳಱಿವಂ ಪ್ರಿಯಮಿತ್ರಾನುಜರಱಿವಂ ವಿಧಾತ್ರ ನೀಂ ಕಾಣಿಸಿಯಿನ್ನೇನಂ ಕಾಣಿಸಲಿರ್ದಪೆ (ಗದಾಯು. ೫-೨೯); ನೀರೇಜಾಂಬಕ ನೊಲ್ದು ರಾಜಧರನಿಂದಂ ಸೂನುವಂ . . . ಪಡೆದಂ (ಹಮ್ಮಿ.ರ. ೨-೬). ೨. ಮಗು; ಕೂಸು. ೩. ಮಗಳ ಮಗ; ಮೊಮ್ಮಗ. ೪. ಕಿರಿಯ ಸಹೋದರ; ತಮ್ಮ. ೫. ರವಿ; ಸೂರ್ಯ. ೬. ಪುತ್ರಿ; ಮಗಳು. [ಸಂ.]

**ಸೂನುತೆ** (ನಾ). ಮಗನಾಗಿರುವಿಕೆ; ತನಯನಾಗಿರುವಿಕೆ: ಕಾನನದಾಶ್ರಮದೊಳ್ ವೈಖಾನಸ ಕುಲಪತಿ ಮಹಾಜಟಂ ತಂದೆ ಜಯಾಮಾನಿನಿ ತಾಯ್ ತನ್ಮಿಥುನದ ಸೂನುತೆಗೆ ವಿಶಾಖನಂದಿ ಭಾಜನನಾದೊಂ (ಶಾಂತಿಪು. ೭-೬೩). [ಸಂ. ಸೂನುತಾ]

**ಸೂನೃತ** (ಗು). ೧. ಒಪ್ಪುವಂಥ; ಸತ್ಯವಾಗಿಯೂ ಪ್ರಿಯವಾಗಿಯೂ ಇರುವ. (ನಾ). ೨. ಒಪ್ಪುವಂಥ ನುಡಿ ; ಪ್ರಿಯವಾಗಿಯೂ ಸತ್ಯವಾಗಿಯೂ ಇರುವ ಮಾತು : ಶ್ರೀಸುಕೃತಕ್ಷಾತ್ಮವಚಃಶ್ರೀಸೂನೃತಸಂಪದಕ್ಕೆ ತೊಡವೆನೆ ಜಸವಾಶಾಸುದತಿಗೆ ಸಾಹಿತ್ಯಕಲಾಸುಭಗಂ ಪೆಂಪುವೆತ್ತನಭಿನವಪಂಪಂ (ಪಂರಾಪು. ೧೩-೧); ಸೂನೃತವನಾಡನದೇಕೆ ಪರೋಪಕಾರಮಂ ಮಾಡನದೇಕೆ (ತಂಕತ. ೪೧). ೩. [ಜೈನ] ಸಮ್ಯಕ್ಚಾರಿತ್ರದ ಐದುಪ್ರಕಾರಗಳಲ್ಲಿ ಒಂದು; ಮನಸ್ಸಿಗೆ ಹಿತವಾಗುವಂತೆ ಸತ್ಯವನ್ನು ನುಡಿಯುವುದು, — ಹೇಳುವುದು: ಸಮ್ಯಕ್ಚಾರಿತ್ರವೆಂಬುದು ಅಹಿಂಸೆ, ಸೂನೃತ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹವೆಂದು ಮುಖ್ಯವಾಗಿ ಐದು ವಿಧ . . . ಸೂನೃತವೆಂದರೆ ಮನಸ್ಸಿಗೆ ಹಿತವನ್ನೂ ಪರ್ಯವಸಾನದಲ್ಲಿ ಸುಖವನ್ನೂ ಉಂಟುಮಾಡುವ ಮಾತಾಡುವುದು (ಭಾತತ್ತ್ವ. ೨೫೫). [ಸಂ.]

**ಸೂನೃತಚರಿತ** (ನಾ). ಸತ್ಯವಾಗಿ ನಡೆದುಕೊಳ್ಳುವವನು; ಪ್ರಾಮಾಣಿಕ : ಅರಸ ನಾಗಧಿರಾಜನಾಗೂರ್ವರೆಗೆ ಪತಿಯಾಗಧಿಕಸೂನೃತಚರಿತನಾಗು (ತೊರರಾ. ೨-೨-೧೮). [ಸಂ.]

**ಸೂನೃತಭಾಷಣ** (ನಾ). ಸತ್ಯವನ್ನು ಪ್ರಿಯವಾದ ರೀತಿಯಲ್ಲಿ ಹೇಳುವವನು: ವರಗುಣಭೂಷಣ ಸೂನೃತಭಾಷಣ ದುರಿತಕರ್ದಮಶೋಷಣನೆ (ಇಚಸಾಂ. ೧೭-೬೭). [ಸಂ.]

**ಸೂನೃತವಚನ** (ನಾ). ಸತ್ಯವೂ ಮನೋಹರವೂ ಆದ ಮಾತು, — ನುಡಿ: ಎಮಗಂ ಸಮ್ಮೋಹನಮಾದುದಕ್ಕುಮಂದಣ್ಣನ ಸೂನೃತವಚನಮೆಂಬ ಮಂತ್ರಾಕ್ಷರದಿಂ (ಗದಾಯು. ೧-೬೨). [ಸಂ.]

**ಸೂನೆ** (ನಾ). ೧. ಪ್ರಾಣಿಗಳನ್ನು ಕೊಲ್ಲುವ ಸ್ಥಳ ; ಕಸಾಯಿಖಾನೆ. ೨. ಕಟುಕತನ; ಕ್ರೂರತೆ : ಕೊಂಗರ ಹೇಡಿಯಾಟ ಇದು - ಈ ಸೂನೆಯ ಕೊಲೆ! (ಮಂತ್ರಶ. ೧೧೩-೧೦). ೩. ಕಿರುನಾಲಗೆ; ಮೃದುತಾಲು. ೪. ಮಗಳು; ಪುತ್ರಿ. ೫. ಪ್ರಾಣಿಹಿಂಸೆಗೆ ಕಾರಣವಾಗುವ, ಗೃಹಸ್ಥನು ಮನೆಯಲ್ಲಿ ಪ್ರತಿನಿತ್ಯವೂ ವಿಧಿಯಿಲ್ಲದೆ ಮಾಡಲೇಬೇಕಾದ (ಐದು) ಕ್ರಿಯೆಗಳು. 'ಪಂಚಸೂನ', 'ಪಂಚಸೂನಾದೋಷ' ಪರಾ. [ಸಂ. ಸೂನಾ]

**ಸೂನೆಗಾಱ** (ನಾ). ೧. ಕೊಲ್ಲುವವನು; ಮಾಂಸವನ್ನು ಮಾರಾಟ ಮಾಡುವವನು; ಕಟುಕ: ಮಿಗೆ ಬಸನದಿಂದ ಕೊಲೆ ಕೊಂದು ಗಡಂ ಸಗ್ಗಕ್ಕೆ ಪಾಪಿ ಸಲುವಡೆ ಮತ್ತೀ ಜಗದೊಳ್ಪೆಱತಿಕ್ಕಿಮ ಸೂನೆಗಾಱನುಂ ಚಾಲಗಾಱನುಂ ಮಾಣ್ಬಪರೇ (ಸಮಪ. ೧೪-೮೭); ಹಲವು ಕಾಲ ಕೊಂದ ಸೂನೆಗಾಱನ ಕತ್ತಿಯಾದರೇನು ಪರುಷ ಮುಟ್ಟಲಿಕೆ ಹೊನ್ನಾಗದೆ ಅಯ್ಯಾ (ಬಸವ. ೭೩); ಕಂಡು ಮಱುಗದೆ ಸೂನೆಗಾಱನ ದಂಡಿಯಲಿ ಮಗನಂ ವಧಿಸಿ . . . ತಂಡತಂಡದ ನವ್ಯಶಾಕಂಗಳನೊಲಿದು ಮಾಡಿ (ಬಸಪು. ೨೪-೨೦); ಅಡಗು ಮೆಱೆದುದು ಸೂನೆಗಾಱರ ಹಸರದಂದದಲಿ (ಕುಮ್ಮಾಕ.೧೯-೯೦). ೨. ಘಾತಕಿ; ಮೋಸಗಾರ : ಭಕ್ತರೆಂಬವರೆಲ್ಲರು ಲೆಕ್ಕಕ್ಕೆ ಹಾಯ್ದು ದೃಷ್ಟವಪ್ಪ ಜಂಗಮದ ಕೈಯಲು ಕಷ್ಟತನವಹ ಊಳಿಗವ . . . ಕೊಂಡುಂಬ ಚಿಕ್ಕ ಸೂನೆಗಾಱರ ನೋಡಾ (ಪ್ರೋಲಿಮಾ. ೪೨-೧೭೪). [ಸೂನ + - ಕಾಱ]

**ಸೂನ್ಯಾಸ** (ನಾ). ಒಳ್ಳೆಯ ರಚನೆ : ಅಪೂರ್ವಮಪ್ಪ ಶ್ಲೋಕ ಸೂನ್ಯಾಸ ಸಮಾಸ ಸಂಸಾರವಚನರಚನೆಗಳಿನತಿಬಳನುಮಂ ತತ್ಸಭಾಜನನುಮುಮಂ ಮನಂಗೊಳಿಸಿ (ಸುಕುಮಾ. ೨-೧೪ ವ). [< ಸಂ. ಸುನ್ಯಾಸ]

**ಸೂಪ1** (ನಾ). ೧. ಅನ್ನದೊಂದಿಗೆ ಕಲಸಿಕೊಳ್ಳುವ ವ್ಯಂಜನಪದಾರ್ಥ; ಸಾರು, ತೊವ್ವೆ ಮುಂತಾದ ಮೇಲೋಗರ : ಸುಡು ಸೂಪಂ ಘೃತಮಿಲ್ಲದೂಟವ (ಸೋಮೇಶ. ೨೦); ಬಹು ಭಕ್ಷ್ಯ ಪರಡಿಪಾಯಸ ಮೋದಕಾಜ್ಯ ದಧಿ ಶಾಲ್ಯನ್ನ ಸೂಪಂಗಳಿಂದೆ . . . ಭೂಮಿಪಂ ಗಿರಿಜಾಧವನನರ್ಚಿಪನಿತಱೊಳ್ (ಚಬಪು. ೫೧-೨೨); ಮಿಸುನಿಯವಣ್ಣದ ತೊಗರಿಯ ಬೇಳೆಯ ಕುಶಲದ ಸೂಪಶಾಕಗಳ ಶಶಿಮುಖಿಯರು ಸಂತೋಷದೆ ಬಡಿಸಿದರೊಸೆದು ಭೂಪಾಲನಿಗಾಗ (ಕಂಜಪಿ. ೮-೮೬). ೨. ಭಕ್ಷ್ಯ; ಪಕ್ವಾನ್ನ: "ಸೂಪಂ ಪೂಪಸಮಾಯತದ ಪಕ್ವಾನ್ನಮಕ್ಕು" (ಮಂಗರಾ.೬೪-೨). ೩. ಅಡುಗೆಮಾಡುವವನು; ಬಾಣಸಿಗ. ೪. ಒಡೆದ ಬಟಾಣಿ. [ಸಂ.]

**ಸೂಪ2** (ನಾ). ತೋಪು; ಉಪವನ (?): ಮೇರುವಿನ ನಡುಗಂಕಣದಿ ಶಿವನದಿಕ್ಕಿನ ಪರುಷ ಗವಿಯ ಮುಂಬಿನೊಳು ಕಲ್ಪದ್ರುಮದ ಸೂಪವಿಹುದೌ ಆ ಸೂಪ ಮಧ್ಯದೊಳು ನವರತ್ನ ತೆತ್ತಿಸಿದ ಭಾಸುರದ ಕುಟ್ಟಿಮಂ (ಪ್ರಭುಪು. ೫-೧೩೫); ಮತ್ತೂರ್ವ ವೈಷ್ಣವಂ ಚೋಳನ ಸುಭಟರುಂ ಚಿತ್ರಜಾರಿಯ ಸೂಪವಮಂ ಕೆಡಿಸ (ಪ್ರಭುಪು. ೭-೯೩). [?]

**ಸೂಪಕ1** (ನಾ). ಅಡುಗೆಯವನು; ಬಾಣಸಿಗ : ಜಿನದತ್ತರಾಯನ ಬೀಳ್ಕೊಂಡು ಶಬರಿಯು ತನಯನ ನಿಂಬೆಯ ಹಣ್ಣ ಕೊಂಡು ಘನವೇಗದೊಳು ಬಂದು ಸೂಪಕಗೀಯಲು ಅನುಮಾನವಿಲ್ಲದೆ ಕೊಂದು (ಪದ್ಮಾಚ. ೫-೭೧). [ಸಂ.]

**ಸೂಪಕ2** (ನಾ). ಮೊರ; ಶೂರ್ಪ : ಬಾಲಚಿಂತಾಮಣಿಯ ಮೈದೊಳೆದು ಮಡಿಯೋದಿಸಿ ಲೀಲೆಯಿಂ ಘಂಟಾರವದಿ ಸೂಪಕದೊಳಿರಿಸಿ ಲೋಲಲೋಚನೆ ರತಿಗೆ . . . ಸಲ್ಲೀಲೆಯಿಂದಾಗ ಸಕಲೋಪಚಾರಂಗಳಂ ಗೈವುತಿರ್ದರು ತವಕದಿ (ನವಮೋ. ೧೫-೧೯). [< ಸಂ. ಶೂರ್ಪ?]

**ಸೂಪಕಾತಿ** (ನಾ). ಅಡುಗೆಯವಳು ; ಬಾಣಸಗಿತ್ತಿ : ಕಾತ್ಯೂಷ ಮುದುಕಿಯರನ್ನು ಮಲಗಿಸಿ, ಸೂಪಕಾತಿಯ ಸಣ್ಣ ಹುಡುಗಿ ಮಾಷ್ಕಾಳನ್ನು ಜೊತೆಯಲ್ಲಿ ಬರುವಂತೆ ಒಡಂಬಡಿಸಿ . . . ಸ್ಟೇಷನ್ನಿನ ಕಡೆಗೆ ಓಡಿದಳು (ಪುನರು. ೧೭೯). [ಸೂಪ + - ಕಾತಿ]

**ಸೂಪಕಾರ** (ನಾ). ಅಡುಗೆಯವನು; ಬಾಣಸಿಗ : ಬುಧಜನಪಾರಿಜಾತನಾಗಿ ಯುವಪಾರಿಜಾತನುಂ ವನ್ದಿಜನಸೂಪಕಾರನಾಗಿ ಯುವಸೂಪಕಾರಭೂತನುಂ (ಎಕ. VI, ಚಿಕ್ಕಮ. ೧೩೭-೫೦; 1130); ಇರವ ಕಂಡರು ಪಾಕದಲಿ ಕೈ ಕರಣವನು ನೆಜ ಸೂಪಕಾರನ ಪರಿಯ ಹೊಗಳುತ ಬಂದು ಬಿನ್ನೈಸಿದರು ಭಾಮಿನಿಗೆ (ನಳಚ. ೮-೪೫). [ಸಂ.]

**ಸೂಪಕಾರಕಿ** (ನಾ). ಒಂದು ಬಗೆಯ ಸಸ್ಯ : "ಕೊಂಡಸು ಸೂಪಕಾರಕಿ [ಪಾಠಾಂ. ಸೂಪ ತಾಳಿರಕಿ]ಯೆನಿಕ್ಕು" (ಮಂಗರಾ. ೩೭-೧೯). [ಸಂ.]

**ಸೂಪಕಾರತೆ** (ನಾ). ಅಡುಗೆಯ ಕೆಲಸ; ಬಾಣಸಿಗವೃತ್ತಿ: ಪತಿಹಿತನ ಷಡುರಸವಿಶೇಷಾನ್ವಿತನನಿತರಾಲಯವಿದೂರ ಪತಿಕರಿಸುವುದು ಸೂಪಕಾರತೆಗೆ (ಕುಮ್ಮಾಉ.೩-೯೨). [ಸೂಪಕಾರ + - ತೆ]

**ಸೂಪಧೂಪನ** (ನಾ). ಇಂಗು; ಹಿಂಗು. [ಸಂ.]

**ಸೂಪರಣ** 'ಸುಪ್ಪರನ' ನೋ.

**ಸೂಪಶಾಸ್ತ್ರ** (ನಾ). ೧. ಅಡುಗೆ ಮಾಡುವ ವಿದ್ಯೆ, — ಕಲೆ; ಪಾಕಶಾಸ್ತ್ರ : ವರಸೂಪಶಾಸ್ತ್ರ ಭೃಗು ಚಿತ್ರ ರಸಾಳಂಕಾರ ಗಣಿತ ಗಜಹಯವೈದ್ಯಂ . . . ಕಳಾವಿದನನಿಪ್ಪುದತಿಚದುರವಿಟಂ (ಮದತಿ. ೧೦-೧೮); ಹಯಶಾಸ್ತ್ರಂ ಸೂಪಶಾಸ್ತ್ರಂ . . . ಎಂಬಿನಿತಱೊಳಂ ಪಡೆದನತಿಕೌಶಲಮಂ (ಪುಷ್ಪಪು.೪-೫೯); ಪಿತೃಪಿತಾಮಹಾ ಸೂಪಶಾಸ್ತ್ರಪ್ರತತಿ ಕೈಕರಣೆಗಳೊಳಧಿಕನ . . . ಪತಿಕರಿಸುವುದು ಸೂಪಕಾರತೆಗೆ

(ಕುವ್ಯಾಸ. ೭೦೯. ೧-೮೪). ೨. ಮಂಗರಸ ಎಂಬುವನಿಂದ ಪಾಕಶಾಸ್ತ್ರದ ಮೇಲೆ ರಚಿತವಾದ ಒಂದು ಗ್ರಂಥದ ಹೆಸರು : ಕೋಗಿಲೆಯ ನವಪಂಚಮಂಬೊರೆದ ದನಿಯಂತೆ ಸೊಗಯಿಸಿತು ಸೂಪಶಾಸ್ತ್ರದ ಕವಿತೆಯೊಳ್ನುಡಿಗಳು (ಸೂಪಶಾ. ೮ ಪೀಠಿಕೆ). [ಸಂ.]

**ಸೂಪು** (ನಾ). ಒಂದು ಬಗೆಯ ಕಂಬಳಿ: ಮೇಲುತರದ ಪಟ್ಟೆ ವರಸೂಪು ಸಕಲಾತಿ ಜೂಲುಗಳಿಂದೆ ರಂಜಿಸುವ ಕಾಲುವೇಗದ ಕುನಿವಿಡಿದ ಕಿರಾತರು ಸಾಲಿಟ್ಟು ನಡೆದರೊಗ್ಗಿನಲಿ (ಮೋಹತ. ೧೯-೧೦); ಸೂಪು ಸಕಲಾತಿ ಕುತ್ತಿಗಳ ಗದ್ದುಗೆಗೆ ಒಪ್ಪುವ ರತ್ನಗಂಬಳಿಗಳ . . . ಸಾಗಿಸಿದನು (ಶರಲೀ. ೫೧೬). [ದೇ. ‖ ?./ ಹಿಂ. ಸೂಫ್; ಮರಾ. ಸೂಫವತೀ = ಗಾದಿ; ಹಾಸುಗೆ]

**ಸೂಫಿ** (ನಾ). ೧. ಮುಸಲ್ಮಾನ ಅನುಭಾವಿಗಳ ಒಂದು ಪಂಥ: ಸೂಫೀತತ್ತ್ವ ಇಸ್ಲಾಮಿಗೆ ಪರ್ಷಿಯದ ಕಾಣಿಕೆ ಇರಬಹುದೆ (ಭಾರದ. ೪೦೭). ೨. ಸೂಫಿಪಂಥವನ್ನು ಅನುಸರಿಸುವವನು; ಸೂಫಿಧರ್ಮದ ಅನುಯಾಯಿ: ಈತನ ತತ್ತ್ವಗಳ ಮೇಲೆ ರಾಮಾನಂದನ ತತ್ತ್ವಗಳೂ ಮುಸಲ್ಮಾನ ಸೂಫಿಗಳ ತತ್ತ್ವಗಳೂ ಪ್ರಭಾವವನ್ನು ಬೀರಿವೆ (ಭಾರದ.೩೦೨); ಇವರನ್ನೇ ಪರ್ಷಿಯದ ಜನತೆ ಸೂಫಿಗಳು - ಎಂದು ಕರೆಯುವುದು (ಭಾರದ. ೪೬೦). [<- ಅರ. ಹಿಂ. ಸೂಫೀ]

**ಸೂಬಹ್‌ದಾರ್** 'ಸುಬೇದಾರ್' ನೋ.

**ಸೂಬೆ** 'ಸುಬೆ' ನೋ.

**ಸೂಯಣ$_1$** 'ಸೂಯಾಣ$_1$' ನೋ.

**ಸೂಯಣ$_2$** 'ಸೂಯಿಯಾಣ' ನೋ.

**ಸೂಯಾಣ$_1$, ಸೂಯಣ$_1$** (ನಾ). ಅಡುಗೆ ಮಾಡುವ ಸ್ಥಳ; ಪಾಕಶಾಲೆ: ಸೂಯಾಣಂ ಸೂಪಸ್ಥಾನಂ (ಶಬ್ದಾನು. ೩೭೮ ವ್ಯಾಖ್ಯಾ). **ಸೂಯಣ$_1$**: ''ಸೂಯಣ-ಸೂಪಸ್ಥಾನ'' (ತದ್ಭಕೋ.೪೬). [< ಸಂ. ಸೂಪಸ್ಥಾನ]

**ಸೂಯಾಣ$_2$** 'ಸೂಯಿಯಾಣ' ನೋ.

**ಸೂಯಿಯಾಣ, ಸುಯ್ಯಾಣ, ಸೂಯಣ$_2$, ಸೂಯಾಣ$_2$** (ನಾ). ೧. ಸೂಜಿಯಿಂದ ಮಾಡುವ ಕೆಲಸ; ಕಸೂತಿಕೆಲಸ: ತಾಪ್ರಕೃಷ್ಣ ಪೀತಸಿತಶ್ರೀಧೃತಮಾಗಿ ಸೂಯಿಯಾಣದ ವಿತಾನಮಂ ಪೋಲ್ತುದಖಿಳಧರಣೀಮಾರ್ಗಂ (ಶಾಂತಿಪು. ೧೦-೨೨). **ಸುಯ್ಯಾಣ** : ೧. ಕಂಬಗಳೊಳೆಲ್ಲಂ ಸುಯ್ಯಾಣದ ಚಿನ್ನದ ಪಟ್ಟೆಯ ಸಕಳವಟ್ಟಿಗಳಂ ಸುತ್ತಿಸಿ (ಪಂಪಭಾ.೩-೪೦ ವ); ಸುಟ್ಟುರೆಗಾಳಿಗೆ ಸುಯ್ಯಾಣದ ತೆರೆಯಂ ಹೊತ್ತೆತ್ತಿ ಬಿಟ್ಟದಂತಿರೆ ನಭದೊಳ್ (ಅನಂಪು. ೫-೩೭). **ಸೂಯಣ$_2$**: ೧. ಮಂಗಲಾಪಾತ್ರ ಚೂಡಾಮಣಿಯೆಂಬ ನರ್ತಕಿ ಉಟ್ಟ ಚಲ್ಲಣದ ತೊಟ್ಟ ಸೂಯಣದ ಕಂಚುಳಿಕೆಯಿಟ್ಟ ಕಸ್ತುರಿಯ ತಿಲಕ (ಧರ್ಮಾ. ೨-೨೭). **ಸೂಯಾಣ$_2$**: ೧. ಕಟ್ಟಿದ ಸೂಯಾಣದ ಮೇಲ್ಗಟ್ಟೋ ನವಪದದ ಮಣಿವಿತಾನಮೊ . . . ಎನೆ ದಿಟ್ಟಿಗೆ ಚೆಲ್ವಾಯ್ತು ನಭದೊಳಮರಾಗಮನಂ (ಚಂದ್ರಪು. ೧೨-೪೭); ಹಸುರ್ವಂದರವ ಮುಸುಕಿ ನೆಗದ ಮೇಲ್ಕಟ್ಟುಗಳ ಸೂಯಾಣ ಪಂಚವರ್ಣದ ಚೂಳಿಕೆಗಳೊಪ್ಪಲು . . . ವಿವಾಹಗೃಹವೆಸೆಯಿತ್ತು (ಸಿದ್ದರಾ. ೮-೫೩); ಕುಲಸತಿಯರು . . . ನಗರದ ಬೀದಿಯೊಳಡಿದಳಿರಿಡುವೆಡೆಯೊಳು ಸೂಯಾಣದ ಬೆಳುಪದವಿಯ ಪಾಸಿ (ಜ್ಞಾ...ಚ. ೬-೭೧). ೨. ಸೂಜಿಯಲ್ಲಿ ಪೋಣಿಸಿದಂತೆ ಸಾಲಾಗಿ ಸಾಗುವ ಸೈನ್ಯ: ಸೂಚಿಯಾನ — ಸೂಯಾಣ (ಶಮದ. ೨೯೪ ಪ್ರಯೋ). [ಸಂ. ಸೂಚೀಯಾನ]

**ಸೂರ್, ಚೂರ್ರು$_2$, ಸೂರ್ರು$_2$** (ನಾ). ೧. (ಮನೆಯ) ಮೇಲಿನ ಛಾವಣಿ ಮತ್ತು ಅದರ ಇಳಿಜಾರಾದ ಪಕ್ಕ,— ಭಾಗ : ''ನೀವ್ರಂ, ವಳೀಕಂ (ಪಟಲಾಂತಂ) - ಈ ೨ ಸೂ(ಜು)ರು'' (ಹಲಾಯು. ೫೧-೧೪೪); ನೇರ್ಗಳ್ ಸೀರ್ಗಳ್ ತಾರ್ಗಳ್ ಸೂರ್ಗಳ್ ಕಾರ್ಗಳ್ ಗುರೂಪಧಾರ್ಥಮೆನಿಕ್ಕುಂ (ಶಮದ. ೪೧); ಪೊಱಮಡುವ ಸಡಗರದಿಂ ಸೂರ್ತಾಗೆ ಸುಲಿದ ನೊಸಲೊಳ್ ನೆಲಸೆಕಮನಿಕ್ಕಿ ಪೆಂಡಿರ್ ಪಿಡಿಯೆ ಪಿಡಿಯೆ ಪರಿಪೊಱಂಟರುಮಮ (ಲೀಲಾವ. ೫-೧೧೪ ವ). ೨. (?): ಕರಪಲ್ಲವಂ ಬಿರುಗೆ ಬಾಸಿನ ಸೂರ್ ನನೆಮೊಗ್ಗೆ ಜಾಗರಲ್ ಪಸರಿಸಿ ಕೊಯ್ದು ಮಲ್ಲಿಗೆಯೊಳರ್ಚಿಸಿದಳ್ ಸಹಕಾರಪಾದಮಮ (ಅನಂಪು. ೬-೧೨). **ಚೂರ್ರು$_2$** : ೧. ''ವಲೀಕಂ, ನೀವ್ರಂ, ಪಟಲಪ್ರಾಂತಂ —೩ ಒಪ್ಪಾರದ ಚೂರು, ಲೋವೆಚೂರು . . . ಇವನ್ನು ಸೂರ್ಕಿತಲೂ ಅನ್ನುವರು'' (ಸಿದ್ದಾಂತಿ. ೧೦೩). **ಸೂರ್ರು$_2$**: ೧. ಸುರಪಥನು ಸೂರ ಮುಂಬನಿ ಯಾಲಿಕಲ್ಲು ಬಹುತರಮಾದ ಗಂಧರ್ವನಗರಮುಂ ಸುಳಿಗಾಳಿ ಚರಿಪ ವಾಯುವಿನಿದಿರ ದೀಪಮುಂ ಬೊಬ್ಬುಳಿಕೆಯಂತನಿತ್ಯತೆಯಂ ಪಡೆದಾ ನೆಜ್ ಹೇಸಿಕೆಯ . . . ಕಳೇವರವದುಂ ತಾನಲ್ಲ ತನ್ನದಲ್ಲ (ಸಿದ್ಧೇಪು. ೨೨-೧೩); ಆಕೆ ತಲೆಯಂ ಬಾಚಿಕೊಂಡ ಕೂದಲು ಸೂರೊಳು ಸಿಕ್ಕಿರಲು ಗೋವು ಆ ಸೂರ ಹುಲ್ಲು ಹಿರಿದು ಮೇವಲ್ಲಿ (ಭೃರಸೂ. I. ೧೬೧); ಹಸಿದ ಹೊಟ್ಟೆಯ ಮೇಲೆ ಉಟ್ಟ ಚಿಂದಿಯ ಮೇಲೆ ಮುರಿದ ಸೂರು (ಶಿಲಾಲ. ೮೬-೧೨). [ದೇ. ‖ ತುಳು. ಸೂರಿ ; ತೆಲು. ಚೂರು]

**ಸೂರ$_1$** (ನಾ). ೧. ವೀರ; ಶೂರ; ಪರಾಕ್ರಮಿ : ಯದುಕುಲೋತ್ತಮ . . . ಮದನಾಪರಾವತಾರಂ ಸೂರಸಮುದಾರನಧಿಕಬಲಭಂತ ದಾಸಾರ್ಹನೆಂದೆಂಬ ಕಿಱುವರೆಯದವನೀನಾಥನು (ರಾಘಚ. ೧೦-೧೪); ವೀರಗಾಸೆಯ ಸೊಗಸಿಂದಲಿಳಿಯ ಬಿಟ್ಟು ಸೂರ ಚಿಮ್ಮುರಿ ಸುತ್ತಿ ಶಿರಕೆ (ಜ್ಞಾನಚ. ೪-೪); ಅರಯೆ ವಿಷಯಾವಳಿಯೊಳ್ ವೈರಾಗ್ಯಸುಲಭಮೊಳ್ಪನಚಿವರ್ಗಂದಾ ಸೂರವಡೆ ಸೂಜೆಗಾಱಿಂ ಸಾರಸಭವಸನ್ನುತಂಗೆ ಬಿನ್ನತಿಗೆಯ್ವಂ (ಚಿಕಬ. ೪೦). ೨. ಕಾಡುಹಂದಿ: ಕಂಠೀರವಂ . . . ಭಲ್ಲೂಕ ಜಂಬುಕಂ ಚೀಳ್ಕಗೆ ಸೂರ ಕೆನ್ನಾಯಿ ತೋಳಂ . . . ಜಿಲ್ಲಿಮಿಗಗಳಿಂದಾ ವಿಪಿನ ಜಸವೆತ್ತುದು (ವಿಕೋಪು. ೧೦-೩೦). [< ಪ್ರಾ. ಸೂರ./ ಸಂ. ಶೂರ]

**ಸೂರ$_2$** (ನಾ). ನೇಸರು; ಸೂರ್ಯ: ''ರವಿ ಮಾರ್ತಾಂಡಂ . . . ಸೂರನರ್ಕಂ ತರಣಿ ಸಪ್ತಾಶ್ವನಾದಿತ್ಯನಕ್ಕುಂ'' (ವಸ್ತುಕೋ. ೧೧-೬೪); ವಹ್ನಿರಹಿತಂ ಧೂಮಾರ್ಚಿಗಳ್ ದ್ಯುಮಣಿ ಪುಟ್ಟೆ, ಮೇಣ್ ಸೂರೇಂದುದ್ಯುತಿಗಳ್ ಕಪಲ್ತಿರೆ (ಲೋಕೋಪ. ೪-೭೩); ಸೂರನಾ ಪುರದವರಂತೆ ರಾಗದೊದವಂ ತಳೆದೆಯ್ದಿದನಸ್ತಶೈಲಮಂ (ನೇಮಿಪು. ೯-೭೭). [ಸಂ.]

**ಸೂರಂಬಡೆ** (ಕ್ರಿ). ವಿರಮಿಸು (?) : ಆ ಸಹಸ್ರಾಮ್ರವನಮಧ್ಯದೊಳ್ಸೂರಂಬಡೆಯೆ ಶಚೀದೇವಿ ವಿರಚಿಸಿದ ವಿಚಿತ್ರವರ್ಣಪೂರಪುಷ್ಪೋಪಹಾರಭೃಂಗಾರಾದಿಮಂಗಳದ್ರವ್ಯ ಶೋಭಾಂಗಸಂಗತಿವೆತ್ತ ವಿಶಾಳಶಶಿಕಾಂತಶಿಲಾತಳದೊಳ್ಮಿಬಿಕೆಯಂ ತೆಱದಿಟ್ಟಿಪಿ (ಶಾಂತೀಶ್ವ. ೧೬-೪ ವ). [ಸೂರ್? + ಪಡೆ$_1$]

**ಸೂರಕತ್ತಿಗೆ** (ನಾ). ಒಂದು ಬಗೆಯ ಆಯುಧ ; ಚಿಕ್ಕದಾದ ಚೂರಿ : ಕಡಿತಲೆ ಕಠಾರಿ ಬಲಭದ್ರ ಚಕ್ರಂ ಮದ್ದು ನಿಡುಸುರಗಿ ಸೂರ[ಪಾಠಾಂ. ಶೂಲ]ಕತ್ತಿಗೆಯೆಂಬ ಕೈದುವಂ ಹಿಡಿದು ಕಾಲಾಳ್ಗಳೋವದೆ ನೆರೆದುದು (ಸೋಮಚ. ೫-೨೭). 'ಸೂರಕತ್ತಿ' ಪರಾ. [ಸೂರ$_0$ (< ಸೂರ್ರು$_3$) + ಕತ್ತಿಗೆ./ ತೆಲು. ಸೂರಕತ್ತಿ = ಚಿಕ್ಕಚೂರಿ]

**ಸೂರಣ** (ನಾ). ತರಕಾರಿಯಾಗಿಯೂ ಔಷಧವಾಗಿಯೂ ಉಪಯೋಗಿಸುವ ಒಂದು ಬಗೆಯ ಗಡ್ಡೆ; ಸುವರ್ಣಗೆಡ್ಡೆ: ''ಸೂರಣಾಹ್ವಯಂ ಕಂದಂ'' (ವಸ್ತುಕೋ. ೩೭-೨೭); ತಗರಂ ಕೊಳ್ಕುಳಿ ನುಗ್ಗಿ ಕಗ್ಗೊಱಲೆ ಶೊಟ್ಟಿಲ್ ಸೂರಣಂ ಶುಂಠಿ . . . ಈ ಪೇಟ್ಟ ಮರ್ದುಗಳಂ ಪುತ್ತಿನ ಮಣ್ಣುಮಂ ಕದಡಿ ಕಾಸಿಟ್ಟೆಯ್ದೆ ಪೊಯ್ಯುವ ಬಾವುಗಳುಂ ತೀರ್ಚುಗುಂ (ಲೋಕೋಪ. ೯-೨೪೦); ಈ ಚೂರ್ಣಕ್ಕೆ ಸೂರಣದ ಗೆಡ್ಡೆಯ ಚೂರ್ಣವಂ ಕೂಡಿಸಿ ಹನ್ನೆರಡುದಿವಸ ಸೇವಿಸಿದಲ್ಲಿ ಮೂಲವ್ಯಾಧಿಯು ಪರಿಹಾರ ವಾಗುವುದು (ಸಕವೈ. ೧೧೩). [ಸಂ.]

**ಸೂರಣಕಂದ** (ನಾ). = ಸೂರಣ : ''ವೀರಃ— ಸೂರಣಕಂದ, ಕಿಱುನೆಲ್ಲಿ, ಕಳವಿ, ವೃಷಭಕ, ವಡಮರ, ಕಣಿಗಿಲು'' (ಓಷಧಿ. ೧೫೪). [ಸಂ.]

**ಸೂರಣಗಡ್ಡೆ** (ನಾ).= ಸೂರಣ: ಶಾವೆಗಡ್ಡೆ, ಸೂರಣಗಡ್ಡೆಗಳನ್ನು ಕುಚ್ಚಿ ತಿನ್ನಬಹುದು (ಕುಂಹಿಂ. ೫೧). [ಸೂರಣ + ಗಡ್ಡೆ]

**ಸೂರಬಿಂಬ** (ನಾ). ಸೂರ್ಯನ ಬಿಂಬ,— ಮಂಡಲ : ಸೂರಬಿಂಬವೆ ಪೋಪ ವೀರಾರಿ ಸಗ್ಗದ ದಾರಿ ಗಡೆಂದದ ಬಿಟ್ಟು ನಾರಿಯೊಳ್ ಮಲಗಿ ಮೋಹದ ಚಂದ್ರಬಿಂಬದ ಪಾರಿಯ ತೆಗೆದೆಯಿದೆಂತೊ (ವರ್ಧಚ. ೮-೩೭). [ಸಂ.]

**ಸೂರಲು** (ನಾ). ನೀರಿನ ಚಿಲುಮೆ : ಇಷ್ಟೊಂದು ಮಾತುಗಳು ಅವಳ ಬಾಯಿಂದ ಸೂರಲುನೀರಿನಂತೆ ಧಾರೆಯಾಗಿ ಬಂದುವು (ಮುರಡು. ೬೫). 'ತೂರಲು' ಪರಾ. [ಸೂರ್ರು$_1$ + - ಅಲು (< - ಅಲ್$_2$)]

**ಸೂರಳಿಡು** 'ಸೂರುಳಿಡು' ನೋ.

**ಸೂರಳು** 'ಸೂರುಳ್$_2$' ನೋ.

**ಸೂರಾಡು** 'ಸೂಱೆಯಾಡು' ನೋ.

**ಸೂರಾಪತ್ಯ** (ನಾ). [ಜ್ಯೋತಿ] ಸೂರ್ಯಪುತ್ರ; ಶನಿ: ಸಿತಂ ಧಾತ್ರೀ ತನೂಜಾತನಂ ಸೂರಾ[ಪಾಠಾಂ. ಸುರಾ, ಸೂರ್ಯಾ]ಪತ್ಯನನಕ್ಕೆ ವೀಕ್ಷಿಸೆ ಪರಸ್ತ್ರೀ ಲೋಲನಾ ಮಾನವಂ (ಜಾತತಿ. ೨೧-೬). [ಸಂ.]

**ಸೂರಿ$_1$** (ನಾ). ೧. ಪಂಡಿತ; ವಿದ್ವಾಂಸ : "ಸೂರಿ ಮೇಧಾವಿ . . . ಭಾರತಿಯೆನಲ್ಕೆ ವಿದ್ವಾಂಸನೆನಿಸಿಕ್ಕು" (ಮಂಗರಾ. ೬೬-೨); ತಾರೇಶಂ ನಿಲೆ ಮೇಷದೊಳಾರಂ ಮೊದಲಾಗೆ ಷಡ್ಗ್ರಹಂ ನೋಡೆ ನೃಪಂ ಸೂರಿನ್ನೃಪಪ್ರತಿಮಗುಣಂ ಚೋರಂ ನಿರ್ಧನನೆನಿಕ್ಕುಮಾತಂ ಕ್ರಮದಿಂ (ಜಾತತಿ. ೨೦-೧); ಸೂರಿಗಳು ಬಣ್ಣಿಸೆ ಸುಧಾರೋಚಿ ಕಣ್ಣಸೆದುದು (ಹಚಕಾ. ೩-೮೭); ವೀರನಾರಾಯಣನ ಕವಿ ಲಿಪಿಕಾಱ ಕುವರವ್ಯಾಸ ಕೇಳುವ ಸೂರಿಗಳು ಸನಕಾದಿಗಳು ಜಂಗಮಜನಾರ್ದನರು (ಕುವ್ಯಾಆ. ೧-೭). ೨. [ಜೈನ] ಮುನಿಗಳನ್ನು ಗೌರವಸೂಚಕವಾಗಿ ಸಂಬೋಧಿಸುವ ನುಡಿ : ವೀರಸೇನಾಚಾರ್ಯರೊಪ್ಪುವ ಸೂರಿ ಜಿನಸೇನರ ಜಿನಾಗಮಸಾರಸಿದ್ಧಾಂತಿಗಳೆನಿಪ ವರನೇಮಿಚಂದ್ರಮರ . . . ಪದಕೆ ನಮೋ (ಸಾಳ್ವಭಾ. ೧-೧೭). [ಸಂ.]

**ಸೂರಿ$_2$** (ನಾ). ಬೀಡಿ, ಸಿಗರೇಟು ಮೊದಲಾದುವುಗಳ ಹೊಗೆಯನ್ನು ದೀರ್ಘವಾಗಿ ಎಳೆದುಕೊಳ್ಳುವಿಕೆ : ಸೋಹಮ್ಮುಯೆಂದೆಂಬ ಕೊಳವಿಯನ ಹಚ್ಚಿ ಬಾಹಪೂರಕ ಸೂರಿಯನೆ ಸೇದುತಾ ಆಹ ರೇಚಕವೆಂಬ ಹೊಗೆಯನೆ ಬಿಡುವುತಮಾಹ ಕುಂಭಕವೆಂಬವುಸುರನೆ ಹಿಡಿವುತ್ತ (ಚಿದಾವ. ೫೮-೯). [< ಜುರ್ರಿ$_2$]

**ಸೂರಿಗೆ** (ನಾ). ಸಣ್ಣ ಕತ್ತಿ; ಚೂರಿ : ಪುಡಿ ಬಾಣ ಸೂರಿಗೆ ಕೋಲೀಟಿಯು ಜಮದಂಡೆ ವುಡಿಸಸ್ತ್ರ ಹೊಗೆ ಬಾಣವುರಿಯಾ (ದೇವಾಂಪು. ೩-೨೦೩); ಸುರಿಗೆ ಸೂರಿಗೆ ಸಬಳ ಸಬಳಿಗರುಬ್ಬಿ ಸರಿಬೆಸನದಿ ಹೊಯಿದಾಡಿದರು (ದೇವಪು. ೪-೪೯). 'ಸುರಿಗೆ' ಪರಾ. [< ಸಂ. ಛೂರಿಕಾ./ ತೆಲು. ಸೂರಿ]

**ಸೂರಿಜನ** (ನಾ). ವಿದ್ವಾಂಸರಾದ ಜನ; ಪಂಡಿತಜನ: ರಾರಾಜಿಸಿದತ್ತಾ ರಾಜಸಭೆಗೆ ನಿರುಪಮಸೂರಿಜನಂ ಪರಸೆ ಧರ್ಮವೃದ್ಧಿಯ ಘೋಷಂ (ಪುಷ್ಪರ್ಪು. ೯-೬). [ಸಂ.]

**ಸೂರಿದ** 'ಸೂರಿಯ' ನೋ.

**ಸೂರಿಪಾನ** 'ಸೂರೆಪಾನ$_1$' ನೋ.

**ಸೂರಿಪಾನಿ** 'ಸೂರೆಪಾನ$_1$' ನೋ.

**ಸೂರಿಪಾನೆ** 'ಸೂರೆಪಾನ$_1$' ನೋ.

**ಸೂರಿಯ, ಸೂರಿದ** (ನಾ). ನೇಸರು; ಸೂರ್ಯ: ಮಿಂಚುಬುಳುವಿನ ಕಿರಣವೆತ್ತಲು ಹೊಳಹಿದೆತ್ತಲು ಕೋಟಿಸೂರಿಯರ (ಕುವ್ಯಾಭೀ. ೩-೭೦); ನೀರಡಿಸಿದ ಕುದುರೆಗೆ ನೀರ್ಗುಡಿಸಲು ಸೂರಿಯನಂಬುಧಿಗಿಳಿದ (ವೋಹತ. ೨೮-೪೦); ಇಂದುಧರನ ಎಡಬಲದಲ್ಲಿ ಸೂರಿಯಚಂದ್ರರು ಮೆರೆದು ರಾಜಿಪರು (ಕಪೋತ. ೫). **ಸೂರಿದ** : ಹರಿಯಾಗು ಹರನಾಗು ಕರಿಮುಖನಂತಾಗು ಸುರಪ ಸೂರಿದನಂದವಾಗು (ಅಮುಸಾಂ. ೩-೯೩); ವನಲೋಕಜನನಿ ಸೂರಿದನೆಂಬ ದೇವಗೆ ಅನುದಿನ ಬೆಳಗುವಾರತಿಯೋ ಎನಲೊಪ್ಪುವ ಸಂಪಿಗೆಯ ಪೂದೊಂಬೆಯ (ಬ್ಯಾನಚ. ೨೫-೭೦). [< ಸಂ. ಸೂರ್ಯ]

**ಸೂರಿಯಕಾಂತಿ** (ನಾ). ಒಂದು ಬಗೆಯ ಆಭರಣ: ಜಡೆಸರ ಸೂರಿಯಕಾಂತಿ ಮೌಕ್ತಿಕಗಳ ಮುಡಿವಲೆ ಮೆಱೆವ ಬಾವುಲಿಯ ನಿಡುಗುರುಳಿನ ಮುತ್ತಿನ ಕುಚ್ಚನಿಂದ ಬಲ್ಪೆಡಗಾಗಿ ಮೆಱೆದರು (ಕಂಠವಿ. ೨೪-೪೨). [< ಸಂ. ಸೂರ್ಯಕಾಂತಿ]

**ಸೂರಿಯಗ್ರಹಣ** (ನಾ). ಸೂರ್ಯಗ್ರಹಣ : ಪ್ರಜೋತ್ಪತ್ತಿಸಂವತ್ಸರದ ಚಯಿತ್ರ ಬ ೩೦ ಲು ಸೂರಿಯಗ್ರಹಣದಲು . . . ಕೊಟ್ಟ ದಾನಶಿಲಾಶಾಸನ (ಎಕ. IV (R), ಕೊಳ್ಳೇಗಾ. ೬೩-೧೩೧; 1392). [< ಸಂ. ಸೂರ್ಯಗ್ರಹಣ]

**ಸೂರಿಯಪುಟ, ಸೂರ್ಯಪುಟ$_1$** (ನಾ). ಒಂದು ಬಗೆಯ ಬಟ್ಟೆ; ಮಕಮಲ್ಲು : ಪಟ್ಟೆಯ ಸುರುಳು ಸೂರಿಯಪುಟ ಹೊಸ ಹೊನ್ನ ದಟ್ಟಿ ಬಿಳಿಯ ದುಕೂಲಗಳ ಪೆಟ್ಟಿಗೆಗಳ ಚಲುವಾಂತ ಮಳಿಗೆಗಳು (ಕಂಠವಿ. ೬-೭೦). **ಸೂರ್ಯಪುಟ$_1$** : ಸೂರ್ಯಪುಟಾದಿ ಛತ್ರವನ್ನುಪಯೋಗಿಸುವುದರಿಂದ . . . ಮನಸ್ಸಿನ ವಿಲಾಸಕ್ಕೆ ಸ್ನೇಹಗೂಡಿರುವುದು (ಸಕವ್ಯ. ೫೬); ಪೊಸಮುತ್ತಿನೊಚ್ಚರದ ಜಲ್ಲರಿಗಳಿಂದೆ ಶೋಭಿಸುವ ಸೂರ್ಯಪುಟದ ಮೇಲುಕಟ್ಟಿಮ್ಮೆರೆಯೆ (ನವಮೋ. ೧೪-೧೭); ಊಳಿಗದ ಹೆಣ್ಣುಗಳು ತಂದು ಮಡಗಿದ ಸೂರ್ಯಪುಟದ ಸುಪ್ಪತ್ತಿಗೆಯಲ್ಲಿ ಚಂದ್ರಾಪೀಡನು ಕುಳಿತುಕೊಂಡನು (ವಚಕಾ. ೫೭).

**ಸೂರೀಪುಟದ ಹುಳು** = (ಆಲಂ) ಹೊಳಪಿನಿಂದ ಕೂಡಿರುವ ಹುಳು : ಸೂರೀಪುಟದ ಹುಳುವಿನ ವರ್ಣವಾಗಿಯಿರುವ ವಜ್ರಗಳಿಗೆ ಸೂರ್ಯನೆ ದೇವತೆ (ಸೌಗಂಧಿ. ೩೭೪-೪). [< ಸಂ. ಸೂರ್ಯಪಟ?./ ತೆಲು. ಸೂರೆಪುಟ, ಸೂರ್ಯಪಟ]

**ಸೂರಿಯಸೂನು** (ನಾ). ೧. ಸೂರ್ಯನ ಮಗ. ೨. ಸುಗ್ರೀವ : ಏನನೆಂಬೆನು ಸುರಪ ಸೂರಿಯ[ಪಾಠಾಂ. ಸೂರ್ಯರ]ಸೂನುಗಳ ಸಂಗರದ ಸಮಯದನೂನ ಸಾಹಸವನು (ತೊರರಾ. ೪-೪-೧೭). [< ಸಂ. ಸೂರ್ಯಸೂನು]

**ಸೂರಿಸು** (ಕ್ರಿ). ಸೂರೆಮಾಡು (?) : ಹಾರಿ ತುರವೀರ ತತ್ತರಿಸೆ ಕರಚರಣ ಮನ ಸೂರಿಸಿತು ಸಲ್ಬುದಹಿಜಾತನೆಂಬಾಖ್ಯಂ (ಜಿನಮು. ೪-೫೦). [ಸೂರ (< ಸೂಱೆ)? + -ಇಸು$_3$]

**ಸೂರಿಹಣ್ಣು** (ನಾ). ಒಂದು ಬಗೆಯ ಹಣ್ಣು : ಕಾರಿಹಣ್ಣು ಸೂರಿಹಣ್ಣು ಕಿಸ್ಕಾರದ ಹಣ್ಣು ನೇರಳೆಹಣ್ಣುಗಳಿವೆ (ಸ್ವಪ್ನಪೂ. ೧೩). [ಸೂರಿ$_1$ + ಹಣ್ಣು$_3$ (< ಪಣ್$_3$)]

**ಸೂರು$_1$** (ಕ್ರಿ). ಹರಡು; ಸಾರು; ಪ್ರಚಾರಮಾಡು : ಸುದ್ದೀ ಸೂರುವವರು ಸುದ್ದೀ ಹುಟ್ಟಿಸುವವರಷ್ಟೇ ಕೆಟ್ಟವರು (ಪೋಹಿನೀ. ೮); ಅಂತರಂಗದಧಿನಾಯಕನು ಸುದ್ದಿಯನು ಸೂರುವೊಲು ಬುದ್ಧಿಯನು ಮಾರುವೊಲು ಎದ್ದು ಹೇಳಿದನೊ (ಗಬ. ೧೪-೪). [< ಸಾಱು?]

**ಸೂರು$_2$** 'ಸೂರ್' ನೋ.

**ಸೂರು$_3$** (ನಾ). ಸಣ್ಣ ಕೈಗತ್ತಿ : 'ಸೂರುಕತ್ತಿ' ಪರಾ. [< ಸಂ. ಛೂರೀ]

**ಸೂರು$_4$** (ನಾ). ೧. ಧ್ವನಿ; ಉಲಿ; ಸ್ವರ : ಅವರಲ್ಲಿ ಮುಂದಿನವರಿಬ್ಬರಿಗೆ ಹಾಡುಗರೆಂದು ಹೇಳಿದರೆ ಹಿಂದಿನವನಿಗೆ 'ಜೀ' ಅಥವಾ 'ಗೀಗೀ'ಯವನೆಂದೋ ಸೂರಿನವನೆಂದೋ ಹೇಳುವರು (ಸುವರ್ಣ. ೪೧). ೨. ಒಂದು ಬಗೆಯ ವಾದ್ಯ: ಎಲ್ಲಮ್ಮದೇವತೆಯ ಭಕ್ತರು 'ಜಗ' ಹೊತ್ತು ಮಲಗವಾಡಿ, ಚೌಡಕಿ, ತುಂತುಣಿ, ಸೂರು, ಗೆಜ್ಜೆ, ತಾಳ ಮೊದಲಾದುವುಗಳ ಸಂಗ ಜೋಡಣೆಯೊಡನೆ ಹಾಡಿ (ಕನ್ನಜಾ.೩೧). 'ಸರ$_2$' ಪರಾ. [<- ಮರಾ. ಸೂರ್./ ಸಂ. ಸ್ವರ]

**ಸೂರು$_5$** (ನಾ). ಶಿಷ್ಯ; ಛಾತ್ರ (?) : ಹರಿತವಿಟ್ಠಾವಜ್ಜರ ಕೂಚಗಳು ಹರಿತವಿಟ್ಠಾವಜ್ಜರ ಸೂರುಗಳು . . . ಕಪಿನೂಕನವಜ್ಜರ ಅಣ್ಣಮದೇವರು ಜಾಮದಗ್ನ ಪಿಲ್ಲಾಗಳ ಕೇಶವದೀಕ್ಷಿತರು (ಎಕ.V (R), ತಿರುಮ.೧೭-೪೯; 1397). [?]

**ಸೂರುಕತ್ತಿ** (ನಾ). = ಸೂರು$_3$ : "ಶಸ್ತ್ರೀ, ಅಸಿಪುತ್ರೀ, ಛುರಿಕಾ, ಅಸಿಧೇನುಕಾ- ಳ ಸುರಿಯ ಕತ್ತಿ, ಸೂರುಕತ್ತಿ, ಚೂರಿ, ಚಾಕು, ಸುರಿಗಿಕತ್ತಿ" (ಸಿದ್ಧಾಂತಿ. ೨೬೬). 'ಸೂರಕತ್ತಿಗೆ' ಪರಾ. [ಸೂರು$_3$ + ಕತ್ತಿ]

**ಸೂರುಗಲ್ಲು** (ನಾ). ಮೇಲ್ಛಾವಣಿಯ ಇಳಿಜಾರಾದ ಭಾಗಕ್ಕೆ ಉಪಯೋಗಿಸುವ ಕಲ್ಲು; ಲೋವೆಗಲ್ಲು : ಕರ್ನಾಟಕರೀತಿಯ ಶಿಲ್ಪಿಗಳು ಎರಡು ತರದ ಸೂರುಗಲ್ಲನ್ನು (ಲೋವೆಕಲ್ಲನ್ನು) ಉಪಯೋಗಿಸಿರುತ್ತಾರೆ (ಮೈವಾಸ್ತು. ೪೦). [ಸೂರು$_2$ (< ಸೂರ್) + ಕಲ್ಲು (< ಕಲ್$_3$)]

**ಸೂರುಳ್$_1$, ಸುರುಳ್$_2$** (ಕ್ರಿ). ಸೂರುಳ್ತು, ಸೂರುಳ್ದು(ಭೂತನ್ಯೂ) ಆಣೆಯಿಡು ; ಶಪಥಮಾಡು: "ಸೂರುಳ್ - ಶಪಥೇ (ಪ್ರತಿಜ್ಞೆಮಾಡು)" (ಶಮಧಾ); ನೀನೆನಗೆ ಸೂರುಳ್ತು ಪೋಗನೆ ಪಂಚಮಹಾಪಾತಕದೊಳಗಾಪುದಂ ಸೂರುಳ್ವೊಡೆ ನಂಬುವೆಯೆಂದೊಡೆ (ಚಾವುಂಪು. ೨೫೭); ತನ್ನ ಮೇಲೆ ಸೂರುಳ್ದು ಮಾರ್ನುಡಿಯದಂತು ಮಾಡಿ (ಪಂರಾಮಾ. ೧೫-೭೧ ವ); ನೊಂದ ಮನದ ಕಂದಂ ಕಳೆಯಲೆಂದು ಸೂರುಳ್ದು ಕಾಲ್ಗಿಡಿವ ಕಾದಲಂಗಟಲ್ದು (ಅನಂಪು. ೮-೧೬ ವ). **ಸುರುಳ್$_2$** : ಮದನಂ

ತಂಗೆಯನೀವೆನೆಂದು ಸುರುಳ್ದಂ (ಚಂದ್ರಭ್ಯು.೧೫-೭೦).

[ದೇ. ‖ ತಮಿ. ಚೂಳ್, ಚೂಳುಱು; ಮಲ. ಚುಟಲು; ತುಳು. ಸೂಲು = ಪ್ರತಿಜ್ಞೆ ಮಾಡುವಿಕೆ; ಆಣೆಯಿಡುವಿಕೆ]

**ಸೂರುಳ್$_2$**, ಸುರುಳ್ಳು$_2$, ಸೂರಳು, ಸೂರುಳು (ನಾ). ಆಣೆ; ಶಪಥ; ಪ್ರತಿಜ್ಞೆ: ''ಶಪಥಂ ಸೂರುಳ್'' (ವಸ್ತುಕೋ.೮೦-೩೪); ತೊಱೆ ತೊಱೆಯೆಂಬ ಮಾತನನಿತಿಲ್ಲದೊಡಾಂ ತೊಱೆವೆಂ ದಲೆಂದೊಡಾ ತೊಱೆಯೊಳೆ ಪೋಯ್ತು ಸೂರುಳಿನೆ ಸೂರುಳವೇವುವೊ ನಂಬೆನೆಂಬುದುಂ (ಪಂಪಭಾ. ೭-೭೫); ಸೂರುಳಂ ಸೂರುಳಿಡು ಬೇಗ ಕಾಡದೆ ಕಳುಹಿದಪೆನೆಂದನು (ಹಚಕಾ. ೮-೫೭). **ಸುರುಳ್ಳು$_2$** : ''ಶಪನಂ, ಶಪಥಃ . . . ಸುರುಳಿನ ಪೆಸರು'' (ನಾಚಿರಾ. ೯೫). 'ಸುರುಳಿಡು' ಪರಾ. **ಸೂರಳು** : ತಾಪಸೋತ್ತಮ ಮೂಱುರ್ಖಾವದಯ್ಯನ ನೇಮವೇ ಪರಣವಾಗಿ ಗಮನಿಸದಂತೆಯಾಗಸದಿ ಗೋಪನಿಂದಂ ಹರೀಶ್ವರನಿಟ್ಟ ಸೂರಳಂ ಮಾಱ ಲಸಮರ್ಥನಾಗಿ (ರಾಘಚ. ೧೪-೫೩). **ಸೂರುಳು** : ಎನಗುಱಿದ ನಲ್ಲರೆಂಬರ್ ತನುಜಾನುಜರಗ್ರಜನ್ಮರಪ್ಪರ್ ಕೇಳೆಂದೆನುತಂ . . . ಸೂರುಳನಿತ್ತಳ್ (ಪುಣ್ಯಾಸ್ರ. ೪-೨೦); ಇವರ್ಗೆ ತಿರುವಾರೂರೊಳೊರ್ವ ವರವನಿತೆಯುಂಟವಳತ್ತ ಪೋಗೆನೆಂದೆಮಗೆ ಸೂರುಳನಿಟ್ಟು ಶಿವಸನ್ನಿಧಿಯೊಳು ಸಂಕಿಲೆಯ ಪರಿಣಯನವಹುದು (ಸೌಂದಪು. ೧೩-೨೨); ನಿಮ್ಮೊಳು ನೂಱುನಾಲ್ವರು ಆ ಕುಮಾರರು ಬೇಱೆ ನೀನಿಹುದೊಬ್ಬ ಬೇಱೆಂದು ನೂಕಿ ಸೂರುಳುಮಾಡಿಬಿಟ್ಟರೆ ನಾಕುಜಾವದೊಳಿಹರು ಮಱುದಿನವಾ ಕುಮಾರರು ತಮ್ಮೊಳೊಂದಾಗಿಹರು ಗೆಳೆಯಾಗಿ (ಕುಮ್ಮಾಇ. ೬-೭). [< ಸೂರುಳ್$_1$]

**ಸೂರುಳಿಡಿಸು** (ಕ್ರಿ). ಆಣೆ ಇಡಿಸು ; ಪ್ರತಿಜ್ಞೆ ಮಾಡಿಸು : ಸುಂದರಿ ನವೇಂದುಮಣಿ ಮುಕುರಂದಳೆದೊತ್ತಿರ್ದಳುರದೊಳಿನ್ನುದಯಂಗೆಯ್ಯಂದೆನ್ನ ಕೊಂದೆ ನೀನೆಂದಿಂದುವಿ ನಿರ್ದಯಂಟಿ ಸೂರುಳಿಡಿಸುವ ತೆಱದಿಂ (ಕಾದಂಉ. ೨೨೯). [ಸೂರುಳಿಡು + - ಇಸು$_3$]

**ಸೂರುಳಿಡು, ಸುರುಳಿಡು, ಸೂರಳಿಡು** (ಕ್ರಿ). ಆಣೆಯಿಡು; ಪ್ರತಿಜ್ಞೆ ಮಾಡು: ಸೂರುಳಿಟ್ಟು ಪುಸಿಯಲ್ ಭಾಷಾಪರಿಪಾಲಕಂ . . . ದುಷ್ಕಲಂ ಧನಿಕಂ ಸತ್ಕುಲಜಾತನೆ (ಸೋಮೇಶ. ೫೨); ಇಲ್ಲದ ದೋಷಮಂ ಬಱಿದೆ ಕಲ್ಪಿಪನಲ್ಲಮೆನಿಪ್ಪ ತಪ್ಪನೊಲ್ದೆಲ್ಲರೊಳಾಡುವಂ . . . ಸೂರುಳಿಟ್ಟಲ್ಲದೆ ನಂಬದೀ ದುರುಳನಂ ನೆಱೆ ನೀಗುವೆನೆಂದು ಪೇಳ್ ಸಖೀ (ರಾಜಶೇ. ೧೧-೧೬೭); ತೂಂಕಡಿಸುತೆ ಸುಯ್ಯುತಾಗುಳಿಸುತಂಜುತ ಸೂರುಳಿಡುತ್ತ . . . ಶಂಕರ ಶಂಕರಾಯೆನಲ್ಬಡೆಯದು ಜಿಹ್ವೆ (ಶಂಕಶ. ೨೭). **ಸುರುಳಿಡು**: ಈ ಪಡೆಯ ನಾಯಕರೆಂದಹಿತೆಂಬೆಡಹುಕಲ್ಗಳ ಶೇಷವನು ಕಿತ್ತಡಿಗೆಯೊಪ್ಪಿಸದಿರಲು ನಾವಲ್ಲೆಂದು ಸುರುಳಿಡಲು (ಜೈರಾಮಾ. ೮೫೪-೭). **ಸೂರಳಿಡು**: ವೈರಮಂ ಬಿಟ್ಟೀ ಮಹಾಲಿಂಗದಡಿಮುಡಿಯನಾರು ಕಂಡವರಧಿಕವೆಂದು ಹರಿವಿಧಿಗಳುಂ ಸೂರಳಿಟ್ಟುಂ (ಗುರುಬಾ. ೪-೪೨). [ಸೂರುಳ್$_2$ + ಇಡು$_1$]

**ಸೂರುಳಿಸು** (ಕ್ರಿ). ೧. ಆಣೆಯಿಡುವಂತೆ ಮಾಡು; ಆಣೆಯಿಡಿಸು : ಮುಂ ಕಾಣದುದರ್ಕೆ ಕಾರಣಮಮಂ ಪೇೞೆಂದು ಬೆಸಗೊಂಡಳ್ಗೆ ಕಾರಣಮಂ ನಿನಗೆ ಪೇೞ್ವಪ್ಪೆಂ ನೀನಾರ್ಗಂ ಪೇೞೆಯಪ್ಪೊಡೆಂದು ಸೂರುಳಿಸಿ ಇಂತೆಂದು ಪೇೞ್ದಳ್ (ವಡ್ಡಾರಾ. ೪೪-೧೧); ಸೂರುಳಿಸಿ ನೆಱೆ ಬಾಯ ಕಟ್ಟೆ ಹಣವಂ ಕೊಳಲು ಕಲಿವುದೆಂದೊಬ್ಬ ಕುಂಟಣಿ ಮಗಳ ಬೋಧಿಸಿದಳು (ಸೋಮಚ. ೨-೪೦); ಮಿಗೆ ಕನಲುತರ್ಜುನನಱಿದನಾ ದ್ರೌಪದಿಯ ಸೂರುಳಿಸಿ (ಕುಮ್ಮಾವಿ. ೯-೩೫). ೨. ಆಣೆಯಿಡು; ಪ್ರತಿಜ್ಞೆ ಮಾಡು : ಇನಿತಾನುಂ ಸೂಟುಟ್ ಸೂರುಳಿಸಿ ನಿರ್ಭಯಂ ಕೊಂಡು ಬಿಲ್ಲನಪ್ರತಿಮಲ್ಲಂ ಏಱಿಸಿ ನೀವಿ ಜೇವೊಡೆಯೆ (ಶಾಂತಿಪು. ೪-೩); ಬೇಗದಿಂದೀ ಗುಂಡದೊಳು ಮುಳುಗಿ ಸೂರುಳಿಸಲಾಗಿ ಬಿಟ್ಟಪೆವು (ಸಿದ್ಧೇಪು. ೧೪-೪೦); ನಾರಿ ನಿನಗೆ ಕೂರ್ಪೆನೆಂದು ಸೂರುಳಿಪುದು ಕೂಡೆ [ಪಾಠಾಂ. ಸುರುಳಿಡಿವುದಾಕೆ] ಪೊಯ್ಮೆ ದೂರ ಪೋಪುದೊಡನೆ ಬರ್ಪುದಪ್ಪಿಕೊಳ್ಳುದು (ಜನವ. ೧೧-೫೩). [ಸೂರುಳ್$_2$ + - ಇಸು$_3$]

**ಸೂರುಳು** 'ಸೂರುಳ್$_2$' ನೋ.

**ಸೂರುಳುಗೆಯ್** (ಕ್ರಿ). ಪ್ರತಿಜ್ಞೆ ಮಾಡು; ಆಣೆಯಿಡು : ಅಡಗಂ ತಿಂಬವರುಂ ಕೆಲವೆಡೆಯೊಳ್ಗೋಮಾಂಸಮೆಂದು ಸೂರುಳುಗೆಯ್ವರ್ (ಸಮಪ. ೬-೧೯).

[ಸೂರುಳು (< ಸೂರುಳ್$_2$) + ಕೆಯ್$_1$]

**ಸೂರುಳ್ಗೊಳ್** (ಕ್ರಿ). ಪ್ರತಿಜ್ಞೆ ಮಾಡಿಸು; ಆಣೆಯಿಡಿಸು : ಎಮ್ಮ ಪಿರಿದಪ್ಪ ಭೋಗಕ್ಕಂತರಾಯಮಕ್ಕುಮದಱಿಂ ಮುನ್ನಮ ಪೇೞ್ವೆನೆಂದು ಕೈಯಂ ಮುಗಿದು ಸೂರುಳ್ಗೊಂಡೊಡಂಬಡಿಸಿ (ಧರ್ಮಾಮೃ. ೩-೧೬೬). [ಸೂರುಳ್$_2$ + ಕೊಳ್$_1$]

**ಸೂರುಳ್ತು** 'ಸೂರುಳ್$_1$' ಪರಾ.

**ಸೂರುಳ್ದು** 'ಸೂರುಳ್$_1$' ಪರಾ.

**ಸೂರೂರ್** (ನಾ). ಒಂದು ಊರಿನ ಹೆಸರು : ನೊಳಮ್ಬಾಧಿರಾಜಬಿನ್ನಪದಿನ್ದ ನೀತಿಮಾರ್ಗ್ಗ ಪೆರ್ಮ್ಮಾನಡಿಗಳು ನೊಳಮ್ಬಾಧಿರಾಜರು ಸೂರೂರಂ ಬಾಳ್ಗಳ್ಚಿಗೊಟ್ಟರ್ (ಎಕ. X, ಕೋಲಾರ.೭೯-೧೩; ಸು. 890). [? + ಊರ್]

**ಸೂರೆ** 'ಸೂಱೆ' ನೋ.

**ಸೂರೆಕಾರ** 'ಸೂಱೆಗಾಱ' ನೋ.

**ಸೂರೆಕೊಳ್** 'ಸೂಱೆಗೊಳ್' ನೋ.

**ಸೂರೆಗ** 'ಸೂಱೆಗ' ನೋ.

**ಸೂರೆಗಳ್ಳ** (ನಾ).ಸುಲಿಗೆ ಮಾಡುವವನು: ದುರಾಶೆಯ ದುರುದುಂಬಿಗಳಲ್ಲ ಸೂರೆಗಳ್ಳರಲ್ಲ (ಬಿಟ್ಟಅ. ೭೪-೨೭). [ಸೂರೆ (< ಸೂಱೆ) + ಕಳ್ಳ$_1$]

**ಸೂರೆಗೈ** 'ಸೂಱೆಗೈ' ನೋ.

**ಸೂರೆಗೊಡು** 'ಸೂಱೆಗೊಡು' ನೋ.

**ಸೂರೆಗೊಳ್** 'ಸೂಱೆಗೊಳ್' ನೋ.

**ಸೂರೆಗೊಳಿಸು** (ಕ್ರಿ). ೧. ಲೂಟಿಯಾಗುವಂತೆ ಮಾಡು. ೨. (ಅಲಂ) ವಿಶೇಷವಾಗಿ ಪ್ರದರ್ಶಿಸು : 'ಕೈಗಣ್ಣ ಪೊಣ್ಣ' . . . 'ಮಾಂಜಿಯಂಜಿ' ಇಂಥ ತುಣುಕುನುಡಿಗಳು ಅವೆಷ್ಟೋ ಅಂದವಾಗಿ ಬಂದಿವೆ, ಕನ್ನಡಗದ್ಯಪ್ರತಿಭೆ ಕುಣಿಕುಣಿಯುತ್ತ ತನ್ನ ಬೆಡಗಿನ ಬಿಂಕವನ್ನೆಲ್ಲ ಸೂರೆಗೊಳಿಸುತ್ತಿರುವಳೇನೊ ಎಂಬಂತೆ (ತವಎ. ೧೭೯).

[ಸೂರೆಗೊಳ್ (< ಸೂಱೆಗೊಳ್) + - ಇಸು$_3$]

**ಸೂರೆಗೊಳ್ಳು** 'ಸೂಱೆಗೊಳ್' ನೋ.

**ಸೂರೆಪಾನ$_1$**, ಸೂರಿಪಾನ, ಸೂರಿಪಾನಿ, ಸೂರಿಪಾನೆ, ಸೂರ್ಯಪಾನ$_1$ (ನಾ). ದೇವರ ಅಥವಾ ರಾಜರ ಮೆರವಣಿಗೆಯಲ್ಲಿ ಗೌರವಾರ್ಥವಾಗಿ ಕೊಂಡೊಯ್ಯುವ ಒಂದು ಬಗೆಯ ಫಲಕ ಅಥವಾ ಚಾಮರ : ಸತ್ತಿಗೆ ಸೂರೆಪಾನ ಚಾಮರ ಮೊದಲಾದ ಬಿರುದುಗಳಿಂದಲೂ ಒಡಗೂಡಿ ಅರಮನೆಯಿಂದ ಹೊರಟು ಕೆಮ್ಮಣ್ಣುಮಟ್ಟೆಯಲ್ಲಿ ದೊರೆಗಳವರಿಗೆ ನಮಸ್ಕರಿಸಿ (ಮಹಾವಂ. I, ೩೫). **ಸೂರಿಪಾನ**: (೩). **ಸೂರಿಪಾನಿ**: ಪಲ್ಲಕ್ಕಿ ಛತ್ರಿ ಚೌರಿ ಸೂರಿಪಾನಿ ಮೋರ್ಚಾಲ್ ಬೆಳ್ಳೀಕೈಬಸವ ಬಣ್ಣದ ಆನೆ ಕುದುರೆ . . . ಅನೇಕ ವಾಹನಗಳನ್ನು ಒಪ್ಪಿಸಿದರು (ಚಾಮವಂ. ೨೮೦). **ಸೂರಿಪಾನೆ** : ಉದ್ವರಣೆ ದೊಣ್ಣೆ ಕಲಾಬತ್ತು ಛತ್ರ ಚೌರಿ ಸೂರಿಪಾನೆ ಪಲ್ಲಕ್ಕಿ ಆನೆ ಕುದುರೆ ಅಂಬಾರಿ ಹಿತ್ತಾಳೆ ತಾಂಬ್ರಗಳಿಂದ ಮಾಡಿದ ಅನೇಕ ಪದಾರ್ಥಗಳು (ಚಾಮವಂ. ೩೧೨); ರಥೋತ್ಸವಕ್ಕೆ ಬೊಂಬೆಯ ರಥವನ್ನೂ . . . ಪಲ್ಲಕ್ಕಿ, ಛತ್ರ, ಚಾಮರ, ಸೂರಿಪಾನೆ ಮುಂತಾದ ಸೇವೋಪಕರಣಗಳನ್ನೂ ಒಪ್ಪಿಸಿದರು (ಮಹಾವಂ. II, ೧೪೪). **ಸೂರ್ಯಪಾನ$_1$** : ಸುವರ್ಣವಾದ ಗದ್ದಿಗೆ ಮಂಟಪ ಕೆತ್ತಿಗೆ ಸೂರ್ಯಪಾನ . . . ನಾನಾಪರಿ ವಾದ್ಯ ದುಂದುಭಿ ನೌಬತ್ತು ನಾ ಮುಂದೆ ಹೊಯ್ಸಿದ್ದೆ (ಪುರಂದ. ೫-೭೯-೮). [ದೇ. ‖ ತೆಲು. ಸೂರೇಪಾನು, ಸೂರ್ಯಪಾನು]

**ಸೂರೆಪಾನ$_2$** (ನಾ). ಒಂದು ಬಗೆಯ ಹೂವು; ಸೂರ್ಯಕಾಂತಿಪುಷ್ಪ: ಸೂರೆಪಾನದ ಹೂವ ಪುಷ್ಪಕವಿಮಾನದಲಿ ಕುಳಿತು ಬಾಂದಳದಲ್ಲಿ ಏರಬಹುದು (ಭಾವಜೀ. ೨೮-೫೪೪). [< ಸೂರ್ಯಪಾನ$_2$]

**ಸೂರೆಹೋಗು** 'ಸೂಱೆವೋಗು' ನೋ.

**ಸೂರ್ಚು** (ಕ್ರಿ). ಚುಚ್ಚು; ನಾಟು : ಅವಳೆರಡು ಕರ್ಣರಂಧ್ರದಿ ತಪ್ತಸರಲುಯುಗಳ ಸೂರ್ಚಿದಂತೆ (ನವಮೋ. ೬-೫೨). [< ಚುರ್ಚು$_1$]

**ಸೂರ್ತಿಖಾರ** (ನಾ). ಒಂದು ಬಗೆಯ ಕ್ಷಾರ: ಸೂರ್ತಿ ಚವಾಳಾಮಣದ ಮೇಲೆ ಕಿಮ್ಮತ್ತು ಇರತಕ್ಕ ಜೀನಸುಗಳು ೧ ಅಕ್ಕಲಖಾರ, ಹಲಕಿ (ಸಂಬಂಧ) . . . ೫೮ ಸೂರ್ತಿಖಾರ (ಮುಂಬಯ್ಯಾ.೧೨೫). [ಸೂರ್ತಿ$_0$ + ಖಾರ$_1$ (< ಕಾರ$_2$)]

**ಸೂರ್ತಿಭಾರ** (ನಾ). ಅಳತೆಯ ಒಂದು ಪ್ರಮಾಣ: ಆ ಗುಜರಾತಿ ಪುಸ್ತಕದಲ್ಲಿ ತೂಕ ಮತ್ತು ಅಳತೆಯ ವಿಷಯಕ್ಕೆ ಎಷ್ಟು ಮಾಹಿತಿ ಅದೆ, ಅದರಲ್ಲಿ ತೂಕವು ಎಷ್ಟು ಸೂರ್ತಿಭಾರ ಇರುತ್ತದೆ (ಮುಂಬವ್ಯಾ.೧೩ ಪ್ರಸ್ತಾವನೆ). [ಸೂರ್ತಿ₀ + ಭಾರ]

**ಸೂರ್ತಿಮುತ್ತು** (ನಾ). ಒಂದು ಬಗೆಯ ಶ್ರೇಷ್ಠವಾದ ಮುತ್ತು; ಸೂರತ್ ದೇಶದ ಮುತ್ತು: ನವರತ್ನಖಚಿತಮಕುಟಾಗ್ರದೊಳ್ಭ್ರಾಜಿಸುವ ಸೂರ್ತಿ ಮುತ್ತಿನ ತುರಾಯಿಗಳ ಕಾಂತಿಗಳ್ ತವೆ ಗುಂಪುಗೂಡಿ . . . ರಾಜಿಸುವವು (ಅರ್ಜಾವಿ. ೨೪-೨೭). [ಸೂರ್ತಿ₀ + ಮುತ್ತು₁]

**ಸೂರ್ತಿರೂಪಾಯಿ** (ನಾ). ಸೂರತ್‌ದೇಶದ ನಾಣ್ಯ: ಆ ಖಂಡುಗ ಎಷ್ಟು ಸೂರ್ತಿ ರೂಪಾಯಿ ತೂಕ (ಇಂಗ್ರೇಜಿ ರೂಪಾಯಿ ತೂಕ) ಇರುತ್ತದೆ? (ಮುಂಬವ್ಯಾ.೮ ಪ್ರಸ್ತಾವನೆ). [ಸೂರ್ತಿ₀ + ರೂಪಾಯಿ]

**ಸೂರ್ತಿವರಹ** (ನಾ). = ಸೂರ್ತಿರೂಪಾಯಿ: ಇದು ಸೂರ್ತಿವರಹ,ಇದು ಸೂರ್ತಿಹಣ . . . ಇದರ ಸಂಗಡ ಕಂಠಿರಾಯವರಹಾ, ಹಣ ಸಹಾ ಸೇರಿಕೊಂಡಿದೆ (ಅದೂಟ.೧೦). [ಸೂರ್ತಿ₀ + ವರಹ]

**ಸೂರ್ತಿಹಣ** (ನಾ). = ಸೂರ್ತಿರೂಪಾಯಿ: ಇದು ಸೂರ್ತಿವರಹ, ಇದು ಸೂರ್ತಿಹಣ . . . ಇದರ ಸಂಗಡ ಕಂಠಿರಾಯವರಹಾ, ಹಣ ಸಹಾ ಸೇರಿಕೊಂಡಿದೆ (ಅದೂಟ. ೧೦). [ಸೂರ್ತಿ₀ + ಹಣ (< ಪಣವು₁)]

**ಸೂರ್ಪ** (ನಾ). ಕೇರುವ ಸಾಧನ; ಮೊರ: ಬಸವಭೃತ್ಯಂ ದಲೆನಿಸಿಂತು ರಾಜಿಸುತಿರ್ಪ ಕುಸುಮಶರಹರಭಕ್ತ ಮೋಚಿನ ಪೇಮಾರ್ಯನುಲ್ಲಸದೆ ಸೂರ್ಪಂಗಳಂ ತಾಂ ವಿರಚಿಸುತ್ತುಂ (ಆರಾಚ.೨-೧೩-೫). [< ಸಂ. ಶೂರ್ಪ]

**ಸೂರ್ಪುಲ್ಲಡ್ಡಿ** (ನಾ). ಸೂರಿನಲ್ಲಿ ಬೆಳೆದ ಹುಲ್ಲಿನ ಕಡ್ಡಿ : ಓರ್ವಳು ಚೀಟಿ ಭಕ್ತೆ ನಿರ್ಧರಿಸಿ ತರಿಸಿದಳು ಸೂರ್ಪುಲ್ಲಡ್ಡಿಯ (ವೀಶ್ವಪು.೮-೨-೨೭). [ಸೂರ್ + ಪುಲ್ + ಕಡ್ಡಿ]

**ಸೂರ್ಮಿ** (ನಾ). ಲೋಹದ ಪ್ರತಿಮೆ: "ಸೂರ್ಮಿ ಸ್ಥೂಣಮೆಂದೆನಲು ಲೋಹದಾ ಪ್ರತಿಮೆಯಕ್ಕು" (ಮಂಗರಾ.–೨೮). [ಸಂ.]

**ಸೂರ್ಯ** (ನಾ). ೧. ನೇಸರು; ರವಿ: ಸೂರ್ಯನುದಯ ತಾವರೆಗೆ ಜೀವಾಳ (ಬಸವ.೩೬೬); ಪೃಥಿವಿ – ಅಪ್ಪು– ತೇಜಸ್ಸು – ವಾಯು – ಆಕಾಶ– ಸೂರ್ಯ ಚಂದ್ರ – ಜೀವಾತ್ಮ ಇವು ಅವನ ಎಂಟು ಅವಯವಗಳು (ಶಕ್ತಿವಿ.೩೩); ಸೂರ್ಯನ ಮೇಲೆ ಮಣ್ಣು ತೂರಿದರೆ ಮೋರೆ ಮೇಲೆ ಬೀಳುವುದು (ಗಾದೆ). ೨. ಬಿಳಿಯ ಎಕ್ಕದ ಗಿಡ; ಅರ್ಕ: "ಅರ್ಕಃ– ಎಕ್ಕೆ; ಸೂರ್ಯಕಾಂತ; ಸೂರ್ಯ" (ಓಷಧಿ. ೧). ೩. ಮಹಾಮಂತ್ರಗಳಲ್ಲಿ ಒಂದು: ಬ್ರಹ್ಮ ವಿಷ್ಣು ಸೂರ್ಯ ಭೈರವಾದಿ ಮಹಾಮಂತ್ರಂಗಳಂ (ವಿವೇಕ.೭೫). ೪. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ. ೫. [ಜ್ಯೋತಿ] ಆಕಾಶದಲ್ಲಿ ಕಾಣುವ ಗ್ರಹಗಳಲ್ಲಿ ಒಂದು: ಆಕಾಶದಲ್ಲಿ ಕಾಣುವ ಗ್ರಹಗಳಲ್ಲೆಲ್ಲಾ ಗಾತ್ರದಲ್ಲಿ, ಪ್ರಕಾಶದಲ್ಲಿ, ಸೂರ್ಯನೇ ಅತ್ಯಂತ ಹಿರಿಯ ಗ್ರಹ (ಆಕಾಶ.೯). ೬. [ಛಂದ] ಒಂದು ಅಂಶಗಣದ ಹೆಸರು; ಎರಡಂಶದ ಬ್ರಹ್ಮಗಣ: ಮಹಾಕ್ಕರದ ಪ್ರತಿಚರಣದ ಮೊದಲಲ್ಲಿ ಒಬ್ಬ ಸೂರ್ಯ (ಒಂದು ಬ್ರಹ್ಮಗಣ) . . . ಕೊನೆಯಲ್ಲಿ ಒಬ್ಬ ಚಂದ್ರ (ಒಂದು ರುದ್ರ) ಹೀಗೆ ಗಣಗಳು ಬರುತ್ತವೆ (ಛಂದೋವಿ.೧೩೩); ಇವಕ್ಕೆ ತೆಲುಗಿನಲ್ಲಿ ಕ್ರಮವಾಗಿ ಸೂರ್ಯ ಇಂದ್ರ ಚಂದ್ರಗಣಗಳೆಂದು ಹೆಸರು ಕೊಟ್ಟಿದ್ದಾರೆ (ಕೃಪಿಡಿ. ೧೧೮). [ಸಂ.]

**ಸೂರ್ಯಕಾಂತ** (ನಾ). ಬಿಸಿಲಿಗೆ ಕಿಡಿ ಕಾರುವುದೆಂದು ನಂಬಲಾದ ಒಂದು ಬಗೆಯ ಕಲ್ಲು; ಅರ್ಕಾಶ್ಮ: ಖರಕಿರಣಸ್ಫುರಿತಕ್ಕಿದಿರುರಿವಂತಿರೆ ಸೂರ್ಯಕಾಂತ ಮುನ್ನೀ ತೇಜಸ್ಫುರಿತಕ್ಕೆ ಸೆಣಸಿನೊಳ್ ಮಾಱುರಿಗುಂ ಸ್ಫುರಿಸಿದು ತೇಜವಾ ಭುಜಬಲಿಯಾ (ಆದಿಪು.೧೪-೪೨); ಸೂರ್ಯಕಾಂತದ ಶಿಲೆಯಲ್ಲಿ ಅಗ್ನಿಯಿಲ್ಲದನ್ನಕ್ಕ ಉಷ್ಣವ ತೋಱುವ ಪರಿಯಿನ್ನೆಂತೊ (ಬಸವ.೮೦೮); ಮಿಂಚಿನ ಬಗೆಯ ಸೆಕ್ಕೆಯೊ ಸೂರ್ಯಕಾಂತಚ್ಛವಿಯ ತೆಕ್ಕೆಗಳೊ (ಕುವ್ಯಾಭೀ.೧-೪೭). 'ಚಂದ್ರಕಾಂತ' ಪರಾ. [ಸಂ.]

**ಸೂರ್ಯಕಾಂತಮಣಿ** (ನಾ). = ಸೂರ್ಯಕಾಂತ : ಅಲ್ಲಿಂಮೇಲೆ ದಶಯೋಜನಾಂತರದೊಳ್ ಕಿಂಚಿನ್ನ್ಯೂನಯೋಜನವಳಯದಿಂ ಸೂರ್ಯಕಾಂತಮಣಿಮಯಮಾಗಿ ಸೂರ್ಯವಿಮಾನಮುಂ (ಸುಕುಮಾ.೧೧-೫೯ ವ). [ಸಂ.]

**ಸೂರ್ಯಕಾಂತಶಿಲೆ** (ನಾ). = ಸೂರ್ಯಕಾಂತ: "ತಪನಮಣಿಃ-ಸೂರ್ಯಕಾಂತಶಿಲೆ" (ಓಷಧಿ. ೬೬); ಅದು ಹಗಲು ಸೂರ್ಯಕಾಂತಶಿಲೆ. ರಾತ್ರಿ ಚಂದ್ರಕಾಂತಶಿಲೆ (ಜಯಂತ.೧೫೭). 'ಚಂದ್ರಕಾಂತಶಿಲೆ' ಪರಾ. [ಸಂ. ಸೂರ್ಯಕಾಂತಶಿಲಾ]

**ಸೂರ್ಯಕಾಂತಿ** (ನಾ). ೧. ರವಿಯ ಬೆಳಕು,– ಕಾಂತಿ. ೨. ರವಿಯ ಬೆಳಕಿಗನುಗುಣವಾಗಿ ತಿರುಗುವ ಸ್ವಭಾವವನ್ನುಳ್ಳ ಅಥವಾ ಸೂರ್ಯನ ಕಡೆ ಮುಖಮಾಡಿ ನಿಲ್ಲುವ ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ಮತ್ತು ಅದರ ಹೂವು: ಸೂರ್ಯಕಾಂತಿ, ಹೊತ್ತು ತಿರುಗ ಹೂ, ಅರ್ಕಪುಷ್ಪ (ವೃಟಿಗಿ. ೪೨-೮೯); ಅಲ್ಲಿ ಪಂಕ್ತಿ, ಸೂರ್ಯಕಾಂತಿ; ಇಲ್ಲಿ ಪನ್ನೇರಿಳೆ, ಅಲ್ಲಿ ಹೊಂಗುಲಾಬಿ ಹಂತಿ ; ಇಲ್ಲಿ ಚಿನ್ನಪೂಮಳೆ (ಅನಿಕೇ.೨೦-೯). [ಸಂ.]

**ಸೂರ್ಯಕುಲ** (ನಾ). ಸೂರ್ಯನು ಮೂಲಪುರುಷನೆಂದು ಭಾವಿಸಲಾದ ಒಂದು ವಂಶ: ಸೂರ್ಯಕುಲಪ್ರಸೂತರಾದ ಪೆನುಗೊಂಡ ಚಕ್ರೇಸ್ವರಾದ್ಯನೇಕ ಬಿರಿದ ಪ್ರಸಸ್ತರಾದ ಸಕಲರಾಜಾಧಿಪತಿಗಳಾದ ದೇಪಂಣವೊಡೆಯರ ಕುಮಾರರು (ಎಕ.III (R), ಗುಂಡ್ಲುಪೇ.೨೭–೧೩;1506); ನಿಡುಗಲ್ಲ ಚೋಳರಸರು ತಾವು "ಸೂರ್ಯಕುಲ"ದವರೆಂದು ಶಾಸನಗಳಲ್ಲಿ ಹೇಳಿಕೊಳ್ಳುವರು (ಕರ್ನಾಸಂ.೨೩೮). [ಸಂ.]

**ಸೂರ್ಯಗ್ರಹಣ** (ನಾ). (ಅಮಾವಾಸ್ಯೆಯ ದಿನಗಳಲ್ಲಿ) ಚಂದ್ರನು ಸೂರ್ಯ ಮತ್ತು ಭೂಮಿಗಳ ಮಧ್ಯೆ ಬರುವಿಕೆ; ಭೂಮಿಯ ಮೇಲೆ ಚಂದ್ರನ ನೆರಳು ಬೀಳುವಿಕೆ; ಉಪರಾಗ: ೧೦೦೧ ಸಿದ್ಧಾರ್ತ್ಥಿಸಂವತ್ಸರದ ಮಾರ್ಗಸಿರಮಾಸದ ಅಮಾವಾಸ್ಯೆಯುಂ ಶಂಕ್ರಾನ್ತಿಯುಂ ಸೂರ್ಯ್ಯಗ್ರಹಣದನ್ದು . . . ಬಿಟ್ಟ ದತ್ತಿ (ಎಕ. III (R), ಹೆಗ್ಗಡ.೧೨೩–೨೩; 1079); ಇಂದು ಪಿತೃದಿನವಿಂದು ಸಂಕ್ರಮಣಂದು ಸೂರ್ಯಗ್ರಹಣ ಹರಿದಿನವಿಂದು ಯಜ್ಞಾರಂಭದಿನ ವಡ್ಡಂತಿ ಲೇಸೆಂದು (ಕುವ್ಯಾವಿ.೭-೧೩); ಸೂರ್ಯಗ್ರಹಣ ಆಗುವುದು ಅಮಾವಾಸ್ಯೆಯ ದಿನಗಳಲ್ಲಿ ಮಾತ್ರ, ಕಾರಣ ಚಂದ್ರ, ಸೂರ್ಯ– ಭೂಮಿಗಳ ಮಧ್ಯೆ ಬರುವುದು ಆ ದಿವಸಗಳಲ್ಲಿ ಮಾತ್ರ, ಸಾಧ್ಯ (ಆಕಾಶ.೪೨). 'ಚಂದ್ರಗ್ರಹಣ' ಪರಾ. [ಸಂ.]

**ಸೂರ್ಯಜ್ಯೋತಿ** (ನಾ). ರವಿಯ ಪ್ರಕಾಶವನ್ನು ಹೊಂದಿರುವ ದೀವಟಿಗೆ,– ಹಿಲಾಲು: ಕರದ ದಿವಟಿ ಹಿಲಾಲುಗಳ ಭಾಸುರ ಜಗಂಜ್ಯೋತಿಗಳ ಕಾಂತಿಸ್ಫುರಿತ ಸೂರ್ಯಜ್ಯೋತಿಗಳ ಸಾಲುಗಳು ಬೆಳಬೆಳಗೆ (ಆನಂರಾ.೧-೨೪-೩೫). [ಸಂ. ಸೂರ್ಯಜ್ಯೋತಿಸ್]

**ಸೂರ್ಯತನಯ** (ನಾ). ೧. ಆದಿತ್ಯನ ಪುತ್ರ. ೨. ಶನಿ. ೩. ಯಮ. ೪. ಕರ್ಣ. ೫. ಸುಗ್ರೀವ. ೬. ವರುಣ. [ಸಂ.]

**ಸೂರ್ಯತನಯೆ** (ನಾ).೧. ಆದಿತ್ಯನ ಪುತ್ರಿ. ೨. ಯಮುನಾನದಿ; ಯಮುನೆ: ಸೂರ್ಯತನಯೆಯನುತ್ತರಿಸಿ ಮತ್ತೆ ದಾಂಟಿ ಸುರನಿಮ್ನಗೆಯನಾ ಶೃಂಗಿಬೇರಮಂ ಪೊಕ್ಕು (ಶ್ರೀರಾಮಾ.೧೭೪-೬೦೪). [ಸಂ. ಸೂರ್ಯತನಯಾ]

**ಸೂರ್ಯನಕ್ಷತ್ರ** (ನಾ). ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಸೂರ್ಯನು ಇರಬೇಕಾಗಿದ್ದ ನಕ್ಷತ್ರರಾಶಿ. [ಸಂ.]

**ಸೂರ್ಯನಮಸ್ಕಾರ** (ನಾ). (ಆದಿತ್ಯವಾರದಂದು, ಉದಯವಾಗುತ್ತಿರುವ) ಸೂರ್ಯನಿಗೆ ಮಾಡುವ ಸಾಷ್ಟಾಂಗನಮಸ್ಕಾರ: ಮುಂಜಾನೆ ಕುಸ್ತಿಯಾಡುವವರ ಗುಂಪುಗಳೂ ಸೂರ್ಯನಮಸ್ಕಾರ ಹಾಕುವವರೂ ಅಲ್ಲಲ್ಲಿ ಕಾಣಸಿಗುವರು (ಬಟ್ಟಪೊ. ೧). [ಸಂ.]

**ಸೂರ್ಯನಾಡಿ** (ನಾ). ಶರೀರದ ಒಂದು ನಾಡಿ: ದಕ್ಷಿಣಭಾಗದ ಪಿಂಗಳನಾಡಿಯೇ ಸೂರ್ಯನಾಡಿಯೆಂದು ಗಂಗಾನದಿಯೆಂದು ಪೇಳಲ್ಪಡುವುದು (ಅಮಿಂಪೇ.೨೧೮-೫೮). [ಸಂ.]

**ಸೂರ್ಯಪಾನ₁** 'ಸೂರೆಪಾನ₁' ನೋ.

**ಸೂರ್ಯಪಾನ₂** (ನಾ). ೧. ಬಿಸಿಲನ್ನು ಅನುಭವಿಸುವುದು. ೨. = ಸೂರ್ಯಕಾಂತಿ ೨ : ಸೂರ್ಯಪಾನವೆಂಬ ಪುಷ್ಪವು ಸೂರ್ಯೋದಯವಾದ ಕೂಡಲೆ ಪೂರ್ವಕ್ಕೆ

ತಿರುಗಿ ಸೂರ್ಯನ ಸಂಗಡ ಸಾಯಂಕಾಲದವರೆಗೆ ತಾನೂ ತಿರುಗುತ್ತದೆ (ಮುಂಬಯಿ. ೬-೨೭೪); ಆ ಕೋಣನ ಮುಂಡದ ಮೇಲೆ ಸೂರ್ಯಪಾನ ಹೂವಿನಂತೆ ಬಿಳಿ ಹಳದಿ ಕೂದಲಿನ ದೊಡ್ಡ ದಾಸೆ(ಮಚ್ಚೆ)ಯಿತ್ತು (ಕಂಬಹು.೪೫); ಸೂರ್ಯಪಾನವ ನೋಡು ಹೇಗೆ ನಿಂತಿಹುದು (ಸೂರ್ಯಪಾ.೧-೯). [ಸಂ.]

**ಸೂರ್ಯಪುಟ₁** 'ಸೂರಿಯಪುಟ' ನೋ.

**ಸೂರ್ಯಪುಟ₂** (ನಾ). ಸೂರ್ಯನ ಕಿರಣಗಳಿಂದ ಕಾಯಿಸುವುದು: ಕಗ್ಗಲಿ ಬೇರು, ಉಳ್ಳಿ, ಬಜೆ . . . ಜಜ್ಜಿ, ಕುಟ್ಟಿ, ಎಳ್ಳೆಣ್ಣೆ, ಇಪ್ಪೆಯೆಣ್ಣೆ . . . ಒಂದು ಸೊಲಿಗೆಯಲ್ಲಿ ಕೂಡಿಸಿ . . . ಸೂರ್ಯಪುಟದಲ್ಲಿಟ್ಟು ಮೈಗೆ ಲೇಪನ ಮಾಡಲು ಸನ್ನಿಪಾತ ಗುಣಮಕ್ಕುಂ (ಸಕವ್ಯ.೧೭೮); ಆಯತದಿಂ ಗಂಗುಂಗೇಕಾಯಂ ತಾ ತಂದು ಸೂರ್ಯಪುಟದೊಳ್ ಸಪ್ತೋಪಾಯದಿ ತೆಗೆದೆಣ್ಣೆಯನು (ಕರ್ನಾಕ. ೫೭). [ಸಂ.]

**ಸೂರ್ಯಪುತ್ರ** (ನಾ). ೧. ಆದಿತ್ಯನ ಮಗ. ೨. ಶನಿ. ೩. ಯಮ. ೪. ಕರ್ಣ. ೫. ಸುಗ್ರೀವ. ೬. ವರುಣ. [ಸಂ.]

**ಸೂರ್ಯಪ್ರದಕ್ಷಿಣೆ** (ನಾ). ರವಿಯನ್ನು ಸುತ್ತುಹಾಕುವಿಕೆ; ಸೂರ್ಯನ ಸುತ್ತಲೂ ಚಲಿಸುವಿಕೆ: ಅದರಿಂದ ಭೂಮಿ ಸೂರ್ಯನನ್ನು ಸುತ್ತುತ್ತಲೇ ಇದೆ. ಸೂರ್ಯಪ್ರದಕ್ಷಿಣೆ ಮಾಡುತ್ತಿದೆ (ಆಕಾಶ.೪೪). [ಸಂ. ಸೂರ್ಯಪ್ರದಕ್ಷಿಣ]

**ಸೂರ್ಯಬಂಧು** (ನಾ). ಒಂದು ಬಗೆಯ ಕೆಂಪುಹೂವು; ಸೂರ್ಯಕಾಂತಿ ಪುಷ್ಪ: "ರಾಗಪುಷ್ಪಃ— ಸೂರ್ಯಬಂಧು" (ಓಷಧಿ.೧೩೮). [ಸಂ.]

**ಸೂರ್ಯಬಿಂಬ** (ನಾ). ರವಿಯ ಆಕೃತಿ,– ಬಿಂಬ: 'ಚಂದ್ರಬಿಂಬ' ಪರಾ. [ಸಂ.]

**ಸೂರ್ಯಭಕ್ತ** (ನಾ). ೧. ಆದಿತ್ಯನನ್ನು ಪೂಜಿಸುವವನು; ಸೂರ್ಯನ ಭಕ್ತ. ೨. ಒಂದು ಬಗೆಯ ಔಷಧೀಮೂಲಿಕೆ: "ಬ್ರಾಹ್ಮೀ- ಹೊನ್ನಗನ್ನೆ, ಒಂದೆಲಗ, ಸೂರ್ಯಭಕ್ತ, ಗಂಧರ್ವದೂರ್ವೆ" (ಓಷಧಿ.೧೦೮); ಅವರೆಯ ಬೇರು . . . ಸೂರ್ಯಭಕ್ತನ ಬೇರು ಶುಂಠಿ ಮೆಣಸು ಹಿಪ್ಪಲಿ ಎಂಬ ತ್ರಿಕಟುಕ ಇವುಗಳಲ್ಲಾವುದಾದರೊಂದನು ಹಾಲಿಂದ ಅರೆದು ಪಾನ ಲೇಪನಂಗಳ ಮಾಡಿಸಲು ಕಳ್ಳಿಯ ಹಾಲ ವಿಷ ಪರಿಹರವಹುದು (ವೈದ್ಯಸಾ.II, ೨೨೭). [ಸಂ.]

**ಸೂರ್ಯಭೇದನ** (ನಾ). ೧. [ಯೋಗ] ಎಂಟು ವಿಧವಾದ ಕುಂಭಕಗಳಲ್ಲಿ ಒಂದು: ಸೂರ್ಯಭೇದನ ಉಜ್ಜಾಯಿ ಸೀತ್ಕಾರಿ ಶೀತಳಿ ಭಸ್ತ್ರಿಕೆ ಭ್ರಾಮರಿ ಮೂರ್ಛೆ ಕೇವಲಮೆಂಬಷ್ಟಕುಂಭಕಪ್ರಕಾರಂಗಳುಂ (ವಿವೇಕ.೧೩೨). ೨. ಒಂದು ಬಗೆಯ ಆಸನ: ಸೂರ್ಯಭೇದನ ವ್ಯಾಯಾಮದಲ್ಲಿ ೧೫ ಪ್ರಕಾರ ಆಸನಗಳಿರುತ್ತವೆ (ಬ್ರಹ್ಮಜೀ.೨೧೫). [ಸಂ.]

**ಸೂರ್ಯಮಂಡಲ** (ನಾ). ರವಿಯ ವರ್ತುಲ; ಸೂರ್ಯಬಿಂಬ: ತ್ರಿಕೋಣಮಂಡಲವು ಅಗ್ನಿಮಂಡಲವೆಂತಲೂ ಷಟ್ಕೋಣ ವಾಯುಮಂಡಲವೆಂತಲೂ ದ್ವಾದಶಕೋಣ ಸೂರ್ಯಮಂಡಲವೆಂತಲೂ . . . ಹೀಗೆ ೬ ಮಂಡಲಗಳೂ ಇರುವುವು (ಹಸಾರ.೮-೪ ತಾತ್ಪರ್ಯ). [ಸಂ.]

**ಸೂರ್ಯಲೋಕ** (ನಾ). ಆದಿತ್ಯನ ಪ್ರಭುತ್ವದಲ್ಲಿ ಇರುವ, ರವಿಯ ಸುತ್ತ ಆವೃತ್ತವಾದ ಪ್ರದೇಶದಲ್ಲಿರುವುದೆಂದು ನಂಬಲಾದ ಸ್ವರ್ಗಲೋಕ. 'ಚಂದ್ರಲೋಕ' ಪರಾ. [ಸಂ.]

**ಸೂರ್ಯವಂಶ** (ನಾ).= ಸೂರ್ಯಕುಲ: ಸೂರ್ಯ್ಯವಂಶದ ಕ್ಷತ್ರಿಯಂ ದಿಳೀಪನಾತನ ಮಗಂ ರಘು (ಕೊಲ್ಹಾಶಾ. ೧೫-೩೨; 1186); ಉದಯಪುರದ ಮಹಾರಾಜನು ಸೂರ್ಯವಂಶದವನೆಂದು . . . ಎಣಿಸಲ್ಪಟ್ಟಿದ್ದಾನೆ (ಭೂಗೋಳ. ೬೪). 'ಚಂದ್ರವಂಶ' ಪರಾ. [ಸಂ.]

**ಸೂರ್ಯವಾದ್ಯ** (ನಾ). ೧. (ತಮಟೆ ಅಥವಾ ಮದ್ದಲೆಯಂಥ) ಒಂದು ಬಗೆಯ ಚರ್ಮವಾದ್ಯ. ೨. ಒಂದು ಬಗೆಯ ಧ್ವಜ: ಬಿಳಿ, ಕೆಂಪು, ಹಸುರು ಮತ್ತು ಹಳದಿ ಛತ್ರಿಗಳು, ಸೂರ್ಯವಾದ್ಯ, ಚಂದ್ರವಾದ್ಯ, ಒಂಟೆ ಮೇಲೆ ನಿಶಾನಿ (ಗುರುದ.೧೦). 'ಚಂದ್ರವಾದ್ಯ' ಪರಾ. [ಸಂ./ ತೆಲು. ಸೂರ್ಯವಾದ್ಯ]

**ಸೂರ್ಯವಿಮಾನ** (ನಾ). [ಜೈನ] ಸ್ವರ್ಗಗಳಲ್ಲಿ ಒಂದು: ಅಲ್ಲಿಂ ಮೇಲೆ ದಶಯೋಜನಾಂತರದೊಳ್ ಕಿಂಚಿನ್ನೂನಯೋಜನವಳಯದಿಂ ಸೂರ್ಯಕಾಂತ ಮಣಿಮಯಮಾಗಿ ಸೂರ್ಯವಿಮಾನಮುಂ . . . ಇರ್ಕುಂ (ಸುಕುಮಾ.೧೧-೫೯ ವ). 'ಚಂದ್ರವಿಮಾನ' ಪರಾ. [ಸಂ.]

**ಸೂರ್ಯವೀಥಿ** (ನಾ). ಪಟ್ಟಣದ ಪೂರ್ವದಿಂದ ಪಶ್ಚಿಮದಿಕ್ಕಿಗೆ ಹೋಗುವ ಹೆದ್ದಾರಿ: ಇದಿರ್ಗೊಂಡು ಕೊಂಡುಬರುತಿರೆ ನಂಬಿಯಣ್ಣನಂ . . . ಎಸೆದು ರವಿಯೋಲ್ಕೆಪ ಸೂರ್ಯವೀಥಿಯ ನಡುವೆ (ಸಂಬಿರ. ೯-೮೬); ಸೂರ್ಯವೀಥಿಯೊಳವಂ ತಳ್ವದೈತರುತ್ತಮಿರೆಯಿರೆ (ರಾಜಶೇ.೧೪-೬೧ ವ); ಅಲ್ಲಿಂದ ಮುಂದಕ್ಕೆ ಹೋಗಿ ಸೂರ್ಯವೀಥಿಯ ಕಂಡು ಪೊಕ್ಕು (ಅಖಂಡೇ.೨೦೭-೪೬). [ಸಂ.]

**ಸೂರ್ಯವೀಧಿ** (ನಾ). = ಸೂರ್ಯವೀಥಿ: ತಳರ್ವಳವೆಣ್ಗಳ ನಯನಾಂಚಳರುಚಿ ಚಂದ್ರಿಕೆಯನಾಂತು ಪೊಂದೊಡಿಗೆಗಳುಜ್ವಳಕಿರಣಮೆಂಬ ಬಿಸಿಲಂ ತಳೆದಲ್ಲಿಯ ಸೋಮಸೂರ್ಯವೀಧಿ[ಪಾಠಾಂ. ಥಿ]ಗಳೆಸಗುಂ (ರಾಜಶೇ.೨-೯೦). 'ಚಂದ್ರವೀಧಿ' ಪರಾ. [ಸಂ.]

**ಸೂರ್ಯವೃಕ್ಷ** (ನಾ). ಎಕ್ಕದ ಗಿಡ; ಅರ್ಕ: "ಅರ್ಕಾಹ್ವಃ, ವಸುಕಃ . . . ಅರ್ಕಪರ್ಣಃ–೭ ಎಕ್ಕಗಿಡ, ಯಕ್ಕೇಗಿಡ, ಸೂರ್ಯವೃಕ್ಷ" (ಸಿದ್ಧಾಂತಿ.೧೩೧). [ಸಂ.]

**ಸೂರ್ಯಸಿದ್ಧಾಂತ** (ನಾ). ಪ್ರಸಿದ್ಧವಾದ ಒಂದು ಜ್ಯೋತಿಶ್ಶಾಸ್ತ್ರಗ್ರಂಥ. [ಸಂ.]

**ಸೂರ್ಯಸುತ** (ನಾ). ೧. ಆದಿತ್ಯನ ಪುತ್ರ. ೨. ಶನಿ. ೩. ಯಮ: ಸೂರ್ಯಸುತಂ . . . ಇವರ್ ಮುಕ್ತರಪ್ಪರ್. ಸಂದೆಯಂ ಬೇಡಮೆಂದಂ (ರಾಮಾಶ್ವ.೧೦೭-೨). ೪. ಕರ್ಣ. ೫. ಸುಗ್ರೀವ. ೬. ವರುಣ. [ಸಂ.]

**ಸೂರ್ಯಸ್ನಾನ** (ನಾ). (ರೋಗಚಿಕಿತ್ಸೆಗಾಗಿ) ಬಿಸಿಲಿಗೆ ಮೈಯೊಡ್ಡುವುದು: ಸೂರ್ಯಸ್ನಾನ ಮಾಡುವುದರಿಂದ ಶರೀರದ ತ್ವಚೆಯು ಕಾಯ್ದು ರಕ್ತಶುದ್ಧಿ ಮತ್ತು ವೃದ್ಧಿಯಾಗುತ್ತದೆ (ಬ್ರಹ್ಮಜೀ.೧೭೮). [ಸಂ.]

**ಸೂರ್ಯಸ್ವರ** (ನಾ). [ಯೋಗ] ಮೂಗಿನ ಬಲಹೊರಳೆಯಲ್ಲಿರುವ ಸೂರ್ಯ ಎಂಬ ವಾಯುವಿನ ಸಂಚಾರ: ದೂರಪ್ರಯಾಣಕ್ಕೆ ಚಂದ್ರಸ್ವರ ಸಮೀಪಪ್ರಯಾಣಕ್ಕೆ ಸೂರ್ಯಸ್ವರ . . . ಮೊದಲಾದುವುಗಳಂ ತಿಳಿದು (ವಿವೇಕ.೧೪೩). 'ಚಂದ್ರಸ್ವರ' ಪರಾ. [ಸಂ.]

**ಸೂರ್ಯಾಗ್ನಿ** (ನಾ). ಪಂಚಾಗ್ನಿಗಳಲ್ಲಿ ಒಂದು; ಸೂರ್ಯನಿಂದ ಉಂಟಾಗುವ ಉಷ್ಣತೆ; ಬಿಸಿಲು: ಕಾಲಾಗ್ನಿ ಬಾಡಬಾಗ್ನಿ ಪಾಷಾಣಾಗ್ನಿ ವೈದ್ಯುತಾಗ್ನಿ ಸೂರ್ಯಾಗ್ನಿ ಎಂಬ ಸೂಕ್ಷ್ಮಬಿಂದುರೂಪ ಪಂಚಾಗ್ನಿಧ್ಯಾನಯುಕ್ತನಾಗಿ (ವಿವೇಕ.೧೨೭). [ಸಂ.]

**ಸೂರ್ಯಾತಪ** (ನಾ). ರವಿಯ ಶಾಖ ; ಬಿಸಿಲು: " ಬಿಸಿಲೆಂದು ಸೂರ್ಯಾತಪಂ" (ಶಬ್ದಮಂ.೧೬); ರಾಕ್ಷಸರುಧಿರಸಿಕ್ತವಲ್ಕಲವನಾರಿಸಲ್ಕೆಲ್ಲಿ ಪೇಳ್ ಸೂರ್ಯಾತಪಂ? (ಶ್ರೀರಾಮಾ.೨೫೦-೬೩). [ಸಂ.]

**ಸೂರ್ಯಾವರ್ತನ** (ನಾ). ಒಂದು ಬಗೆಯ ಸನ್ನಿಪಾತರೋಗ: ತಲೆ ಅತ್ಯಂತ ಬಾವುದುಂ . . . ಹಣೆಗಣ್ಣು ಹಾರುವುದುಂ, ಇನಿತು ಸನ್ನಿಪಾತರೋಗಲಕ್ಷಣಂ. ಇದನ್ನು ಸೂರ್ಯಾವರ್ತನವೆಂಬುವರು (ವಿಷ್ಣುವಿ. ೧೯೦). 'ಚಂದ್ರಾವರ್ತ' ಪರಾ. [ಸಂ.]

**ಸೂರ್ಯಾಶ್ವ** (ನಾ). ಆದಿತ್ಯನ ಕುದುರೆ : ಪವಮಾನಾತ್ಮಜನಂ ಜವಪ್ರಸರದಿಂ ಸೂರ್ಯಾಶ್ವಮಂ ಶಕ್ರವಾಹವನಕ್ಷ್ಣುಣಗುಣಂಗಳಿಂ ಮಿಗುವ ಜಾತ್ಯಶ್ವಂಗಳಂ (ಪುಷ್ಪಪು. ೨-೫೮). [ಸಂ.]

**ಸೂರ್ಯಾಸ್ತ** (ನಾ). ಹೊತ್ತು ಮುಳುಗುವುದು; ರವಿಯು ಅಸ್ತನಾಗುವಿಕೆ: ಮಧ್ಯಬಿಂದುವ ಮರೆತು ತಿರುಗದಿರಲೀ ಚಕ್ರ . . . ಶಿಶುಪಾಲವಧೆಗಿರಲಿ, ಸೂರ್ಯಾಸ್ತ ಒದಗಿರಲಿ ಪಾರ್ಥಪ್ರತಿಜ್ಞೆಗಿದು ಮರುಗದಿರಲಿ (ನಲಮು. ೨೩-೧೫). [ಸಂ.]

**ಸೂರ್ಯಾಸ್ತಸಮಯ** (ನಾ). ರವಿಯು ಮುಳುಗುವ ಹೊತ್ತು ; ಸಾಯಂಕಾಲ; ಸಂಜೆ: ಅಶ್ವತ್ಥಾಮ ಕೃಪ ಕೃತವರ್ಮರು . . . ಸೂರ್ಯಾಸ್ತಸಮಯಕ್ಕೆ ಹತ್ತಿರದಲ್ಲಿದ್ದ ಒಂದು ಕಾಡನ್ನು ಸೇರಿದರು (ವಚಭಾ.೩೦೪). [ಸಂ.]

**ಸೂರ್ಯೋದಯ** (ನಾ). (ಪೂರ್ವದಿಕ್ಕಿನಲ್ಲಿ) ರವಿಯು ಕಾಣಿಸಿಕೊಳ್ಳುವುದು; ಹೊತ್ತುಮೂಡುವುದು; ಬೆಳಗು : ಪೂರ್ಣಶಶಿಶುಚಿಗೆಳಸುವ ಚಕೋರಕುಲದವೊಲು

ಸೂರ್ಯೋದಯಕೆ ಮನವಲರ್ವ ಚಕ್ರಂಗಳವೊಲಾಗಳಖಿಳ ಶಿವೈಕ್ಯರು ನಿನ್ನ ಬರವಂ ಬಯಸುವರು (ಬಸವು.೩೭-೫೪); ಪರಿವಾಸರದ ಸೂರ್ಯೋದಯದೊಳಲ್ಲಿಂದ ಯಾದವರ ದಂಡು ನಡೆದುದು ಪಥದೊಳು (ಜೈಮಿಭಾ. ೭-೧೨). 'ಚಂದ್ರೋದಯ' ಪರಾ. [ಸಂ.]

**ಸೂರ್ಯೋಪರಾಗ** (ನಾ). = ಸೂರ್ಯಗ್ರಹಣ: ತಾ[ಉ] ಶ್ರಾವಣ ಬ ೩೦ ಸ್ಥಿರವಾರ ಸೂರ್ಯೋಪರಾಗವರ್ವಣಿ ಪುಣ್ಯಕಾಲದಲ್ಲಿ . . . ರುದ್ರಮುನಿದೇವಾರಾಧ್ಯರ ವಶಕ್ಕೆ ಬರಶಿ ಕೊಟ ಶಾಸನಕ್ರಮವೆಂತೆಂದರೆ (ಎಕ. VII (R), ಮಳವ. ೧೨೪-೧೪;1673); ಸೂರ್ಯೋಪರಾಗವೇನಿಂದು ಹುಣ್ಣಿಮೆಯೊಳೆನೆ ನಕ್ಷತ್ರವೊಂದಿಲ್ಲ (ಗೊಲ್ಲೊಥಾ. ೧೨-೩೧೮). [ಸಂ.]

**ಸೂರ್ಯೋಪಲ** (ನಾ). = ಸೂರ್ಯಕಾಂತ: ವಿಭವಶರಧಿ ಚಂದ್ರೋದ್ಗಮಂ ಶೌರ್ಯಸೂರ್ಯೋಪಲಭಾಸ್ವತ್ಸಂಪದಂ ತನ್ನೃಪತನಯನೊಳೊಂದಿ ಚಿತ್ರಕ್ಕೆ ಮಾಡಿತ್ತೂಲವಂ (ಚಂದ್ರಪು.೪-೬). [ಸಂ.]

**ಸೂಲ್, ಸೂಲ$_1$, ಸೂಲು$_1$** (ನಾ). ೧. (ಪ್ರಾಣಿಗಳು) ಗರ್ಭಧಾರಣೆ ಮಾಡುವುದು,– ಗಬ್ಬವಾಗುವಿಕೆ: 'ಸೂಲಾಕಳು', 'ಸೂಲಾವು' ಪರಾ. ೨. ಹೆರಿಗೆ; ಪ್ರಸವ: 'ಸೂಲಳಲ್', 'ಸೂಲ್ಮುಲುಕು' ಪರಾ. ೩. ಸಂತತಿ; ಸಂತಾನ: ತೋಳ ವಾಯಸದ ಮೊಲದ ಕರಡಿಯಾ ಸೂಲದೊಂದಿರದ ಬೆಂದ ಮೊರಡಿಯ . . . ಪೋಲ್ವ ಮುಗಿಲ ಕಣ್ಣ ಮಟೆಯನಾ(ಲಾ)ರ್ಪೊಡಂ ಕಲ್ಪದುಸ್ಸ್ಥಿತಿಯ ಮೇಘರೂಪಮಂ (ಅಟ್ಟಮು.೮-೧೨). **ಸೂಲ$_1$** : ೨. ಬಾಳೆಯು ಒಂದೇ ಸೂಲ, ಒಂದೇ ಗೊನೆ ಈಯುತ್ತದೆ (ಮುಂಬಯಿ. ೨-೪೭); ಒಂದು ಸೂಲದ ಹೈನವು ಸುಮಾರು ಒಂದು ವರ್ಷ ನಡೆಯುತ್ತದೆ (ವಿಜ್ಞಾಭೂ.೨೪). 'ಸೂಲಗಿತ್ತಿ', 'ಸೂಲಮನೆ' ಪರಾ. ೩. ಬಯಕೆಗಳು ಬಸಿರುಗಳು ಹಡೆದದ್ದು ಹಿಂಗಿದ್ದು ಮೂವತ್ತುಮೂರುಕೋಟಿ! ಸೂಲಗಳು ಮೂವತ್ತುಮೂರುಕೋಟಿ! (ಗಂ.೫೦-೧೧). **ಸೂಲು$_1$**: ೧. "ಸೂಲು = ಆಕಳ ಗಬ್ಬ" (ಜಾನಕೋ.೫೦); ಸೂಲು ತಪ್ಪಿದರೆ ಗೊಡ್ಡೇ? (ಗಾದ). ೨. ವನಿತೆಯ್ಯೆದಾಱು ಸೂಲಂ ಗೆಲಿದಳುಱ್ ತನ್ನ ತನುವಿನ್ನೆದಾಱವಗುಣಂಗಳಂ ಗೆಲಿದಂತೆ (ಸಿದ್ಧರಾ.೧-೩೪); ಒಳ್ಬಸಿರ ಕಾಲಕ್ಕೆ ಸೊಗದ ಸೂಲನು ನಡಸಿ ಕಲ್ಲ ಬಾಯನು ನುಡಿವ ಕಲೆಯೊಪ್ಪಿಗೆ (ದ್ರಾಕ್ಷದಾ.೭೦-೧). [ದೇ. ‖ತಮಿ. ಮಲ. ಚೂಲ್; ತೆಲು. ಚೂಲು]

**ಸೂಲ$_1$** 'ಸೂಲ್' ನೋ.

**ಸೂಲ$_2$, ಸೂಳ** (ನಾ). ಚೂಪಾದ ತುದಿಯಿಂದ ಕೂಡಿದ ಒಂದು ಬಗೆಯ ಆಯುಧ; ಶೂಲ: ಮಹಿಷಾಸುರನಂತೆ ಸೂಲದೊಳ್ ನೊಂದು ನರಳ್ವ ಕಳ್ಳರಿಂ (ಕಾವ್ಯಸಾ. ೫೯೯ ಶೂದ್ರಕ); ಅರಸಂ ಶ್ಮಶಾನದ ಸೂಲದೊಳ್ ಯಮದಂಡನನಿಕ್ಕಿ ಮೆಂದಾಳ್ಗಳ್ಗೆ ಬೆಸವೇಟ್ಟೊಡೆ (ವಡ್ಡಾರಾ. ೧೨೪-೨೮); ಇಂತೀಗಳೆ ಪಿಡಿದುಯ್ದು ಸೂಲದೊಳೊತ್ತಿಂ ಪೋಟ್ಟುಂ . . . ಕೊಳನೆಳವುಱುಗಳ್ಗೆ ತಿನಬಡಿಸುವೆವು (ರಾಮಾಶ್ವ.೮೦-೧೨); ತಾಟಗಿತ್ತಿ ತಿರುಮಲದೇವಿ . . . ನಿಮ್ಮ ಸೂಲಕೆ ಹಾಕಿಸುತಾಳೆ (ನಾಪದ. ೧೬೩). **ಸೂಳ**: ಕಡಿತಲೆಯ ಸುರಗಿಯ ಕೊಂತದ ಸೂಳದ ಬಿಲ್ಗಣೆಯ ಮೂಡಿಗೆಯ ಭಟರ ದೆಖ್ಖಾಳಂ ನೇರಮಾಗೆ (ರಾಮಾಶ್ವ.೫೦-೭). [< ಸಂ. ಶೂಲ]

**ಸೂಲಂಗಿ$_1$** 'ಸೂನಗೆ' ನೋ.

**ಸೂಲಂಗಿ$_2$, ಸೂನಂಗಿ$_2$** (ನಾ). ಕಬ್ಬಿನ ಹೂವು: ಪ್ರಕೃತಿಪೂಜೆಗೆ ಹಿಡಿದ ಚಾಮರಗಳಂತೆ ಕಬ್ಬಿನ ಸೂಲಂಗಿ(ಹೂವು)ಗಳು ಬೀಸಾಡುತ್ತಿದ್ದವು (ಅವತಂ.೧೨); ಕಬ್ಬಿನಲ್ಲಿ ಸೂಲಂಗಿ ಹೊರಟ ಹಾಗೆ (ಗಾದ). **ಸೂನಂಗಿ$_2$** : ಮಹಿತಾಮೃತೋಪಮಾದ್ಭುತ ಇಕ್ಷುದಂಡದೋಳ್ ಪ್ರಬಲ ಸೂನಂಗಿ ಸಂಭವಿಸಿದಂತೆ (ಹನುಮ.೭೮). [?]

**ಸೂಲಗಾತಿ** (ನಾ). ಹೆರಿಗೆಯನ್ನು ಮಾಡಿಸುವವಳು; ಮಗುವಿನ ಜನನಕ್ಕೆ ಸಹಾಯ ಮಾಡುವ ಹೆಂಗಸು; ಸೂಲಗಿತ್ತಿ: (೬).

[ಸೂಲ$_1$ (< ಸೂಲ್)+ - ಕಾತಿ$_5$]

**ಸೂಲಗಿ** 'ಸೂನಗೆ' ನೋ.

**ಸೂಲಗಿತಿ** 'ಸೂಲಗಿತ್ತಿ' ನೋ.

**ಸೂಲಗಿತ್ತಿ, ಸೂಲಗಿತಿ** (ನಾ).= ಸೂಲಗಾತಿ: "ಸೂತಕೃತಯೆನೆ ಸೂಲಗಿತ್ತಿಯಕ್ಕುಂ" (ಮಂಗರಾ. ೯೧-೮); ಸಂಗಸಂಯೋಗವಿಲ್ಲದೆ ಬಸುಱಾಯಿತ್ತು ಕೂಸೆದ್ದು ಕುಣಿದಾಡಿ ಸೂಲಗಿತ್ತಿಯನವಗ್ರಹಿಸಿತ್ತು (ಅವಚಂ.೧೩೭-೬೨೮); ಬಾಲಗೆ ಬೆಚ್ಚುನೀರಂ ಸೂಸಿ . . . ಸೂಲಗಿತ್ತಿಯರು ಪೊಕ್ಕುಳ್ಗೊಯಿದು ಮೇಲೆ ನಿವಾಳಿಸಿದರು ರತ್ನದಾರತಿಗಳ (ಸೂಬಸೋ.೪-೧೮); ಅಲ್ಲಿಂದ ನೇರವಾಗಿ ಹಳ್ಳಿಯ ಸೂಲಗಿತ್ತಿಯೊಬ್ಬಳ ಮನೆಗೆ ಹೋದಳು (ಪುನರು.೮). **ಸೂಲಗಿತಿ**: ಸೂಲಗಿತಿಯರುತ್ಸವದಿಂದ ಮಿಂದು ದುಕೂಲವ ನಿಱಿವಿಡಿದುಡಲು (ಮೋಹತ.೧೭-೨೫).

[ಸೂಲ$_1$ (< ಸೂಲ್) + - ಗಿತ್ತಿ./ ತುಳು. ಸೂಲಗಿತ್ತಿ]

**ಸೂಲಪಾಣಿ, ಸೂಳಪಾಣಿ** (ನಾ). ಶೂಲವನ್ನು ಹಿಡಿದಿರುವವನು; ಶಿವ. **ಸೂಳಪಾಣಿ**: ಪೂರ್ವಪದಂ ತದ್ಭವಮಾದುದರ್ಕೆ — ಶೂಲಪಾಣಿ — ಸೂಳಪಾಣಿ (ಶಮದ.೨೮೯ ಪ್ರಯೋ). [< ಸಂ. ಶೂಲಪಾಣಿನ್]

**ಸೂಲಮನೆ** (ನಾ). ಹೆರಿಗೆಯ ಕೋಣೆ; ಸೂತಿಕಾಗೃಹ: ರಾಯಂ ಮಿತಪರಿಜನದೊಡನಂತಃಪುರಮಂ ಪೊಕ್ಕು ಸೂಲಮನೆವಾಗಿಲ ಪೊಱಜಗಲಿಯೊಳ್ ಮಿಸುಪ ಮಿಸುನಿಮಂಚದೊಳ್ ಕುಳ್ಳಿರ್ಪಿನಂ (ಚಕವಿ.೪-೬೧).

[ಸೂಲ$_1$(< ಸೂಲ್) + ಮನೆ]

**ಸೂಲವೇಱು** (ಕ್ರಿ). ಶೂಲವನ್ನು ಏರು: ಸೂಲವೇಱಿದನಂತೆ ಕಾಲಂ ನೀಡುತ್ತುಂ (ಧರ್ಮಾಮೃ. ೧-೧೪೪). [ಸೂಲ$_2$ + ಏಱು$_1$ (< ಏಱ್$_1$)]

**ಸೂಲಳಲ್** (ನಾ). ಹೆರಿಗೆಯಾಗುವಾಗ ಉಂಟಾಗುವ ನೋವು; ಪ್ರಸವ ವೇದನೆ: ತಿಳಿದಪರೆ ಬಂಜೆಯರ್ ಸೂಲಳಲಂ (ನೀತಿಮಂ.೧-೧೩೭).

[ಸೂಲ್ + ಅಳಲ್$_2$ (< ಅೞಲ್)]

**ಸೂಲಾಕಳು** (ನಾ). ಗಬ್ಬವಾದ ಹಸು; ಗಬ್ಬ ಕಟ್ಟಿದ ದನ: "ಹಲವು ಸೂಲಾ [ಪಾಠಾಂ. ಳಾ]ಕಳು ವರೇಷ್ಟಿಕೆಯೆನಿಕ್ಕು" (ಮಂಗರಾ.೫೪-೪).

[ಸೂಲ್ + ಆಕಳು (< ಆಕಳ್)]

**ಸೂಲಾವು** (ನಾ). = ಸೂಲಾಕಳು: "ವರೇಷ್ಟುಕಾ, ಪ್ರಚುರಪ್ರಸೂತಿಃ - ಈ ೨ ಹಲವು ಸೂಲಾವು" (ಹಲಾಯು.೪೫-೧೧೭). [ಸೂಲ್ + ಆವು]

**ಸೂಲಿ$_1$, ಸೂಳಿ$_2$** (ನಾ). ತ್ರಿಶೂಲವನ್ನು ಹಿಡಿದಿರುವವನು; ಶಿವ: ಹತ್ತೈದು ಗಣನಾಥರ್ವೆರಸಿ ತನ್ನ ಪಟ್ಟದಂಗನೆ ಸಹಿತ ಸುಖದ ಸುಗ್ಗಿಯ ಮೇಲೆ ಸೂ[ಪಾಠಾಂ. ಶೂ]ಲಿ ಪರಿಣಾಮವಿರಲು (ಸೋಮಚ.೧-೩೪); ಕಡೆಗಾಲದ ಸೂಲಿ ತೆಱೆದ ನೊಸಲ ಕಣ್ಣ ಕಡುಗಿಚ್ಚಿನಂತೆ ಭೂತಳವ ಸುಡುವ ಬೇಸಿಗೆಯೊಳು ಕಾದ ಕಲ್ಲಿನ ಮೇಲೆ ಯಡಿದೆಗೆಯನು ಮುನಿವರನು (ನೇಮಿಸಂ.೩-೧೦೩). **ಸೂಳಿ$_2$**: ಚೋಳನರಮನೆಯೊಳೆತ್ತಿದ ಕಳನೊಳಗೆ ಪೊಕ್ಕು ಸೂಳಿಯಣುಗಂ ಭುಜಾಸ್ಫಾಳದಿಂ ಕಯ್ಮಿಕ್ಕು (ಏನಾರ. ದೇ. ೧೧೭-೨೨). [< ಸಂ. ಶೂಲಿನ್]

**ಸೂಲಿ$_2$** (ನಾ). ಬಿಳಿಯ ಕಾಯಿಗಳನ್ನು ಬಿಡುವ ಒಂದು ಬಗೆಯ ಗಿಡ: ಸೂಲಿ, ಹೂಲಿ (ವೃಔಗಿ. ೩೭-೭೪೪). 'ಬಿಳಿಸೂಲಿ' ಪರಾ. [?]

**ಸೂಲಿಗೆ** 'ಸೂನಗೆ' ನೋ.

**ಸೂಲಿಗೆಗೊಳ್** (ಕ್ರಿ). ಶೂಲವನ್ನು ಹಿಡಿ: ಅಹಿತೋದ್ಯದ್ಭಳಜಾಳಕಂ ಕದನದೊಳ್ಮಾಱಾನ್ತು ತಾಗಲ್ಮಹಾಮಹಿಮಂ ಸೂಲಿಗೆಗೊಣ್ಡು ಕೋಪದೊದವಿಂ ಕೊಂದಿಕ್ಕೆ . . . ಎಸೆವಂ ಶ್ರೀ ಸಿಂದವಂಶೋದ್ಭವಂ (ಎ೯. XX, ೧೧೫-೧೧; 1167).

[ಸೂಲಿಗೆ (< ಸೂನಗೆ) + ಕೊಳ್$_1$]

**ಸೂಲಿಸು** (ಕ್ರಿ). ೧. ಹೆರಿಗೆಯಾಗು; ಪ್ರಸವವಾಗು: ತಟಭೂಜದೊಳೊಂದು ಕರೇಣು ಸೂಲಿಸುತ್ತೇನಣವಲ್ಲಿ ಮಾಡಿದುದೊ ಬೇಡರೊಳಂ ಕರುಣಾನುಭವಮಂ (ಪುಷ್ಪಪು.೫-೮೨). ೨. ಹೆರಿಗೆಯಾಗುವುದಕ್ಕೆ ಸಹಾಯವನ್ನು ಮಾಡು; ಹೆರಿಗೆ ಮಾಡಿಸು: ಸೂಲಿಸುವ ಬಗ್ಗಿಸುವ ನೋಯಿಸುವ ನುಲಿವ ಮರ್ಮಸ್ಥಾನಮಂ ನಿಗುಚುವ ಬಾಲೆಯರ ಹಂಗಿಲ್ಲ (ಸಿದ್ಧರಾ.೧-೫೫). [ಸೂಲ್ + - ಇಸು$_3$]

**ಸೂಲು$_1$** 'ಸೂಲ್$_1$' ನೋ.

**ಸೂಲು$_2$** (ನಾ). ಅಭ್ಯಾಸ; ರೀತಿ; ಕ್ರಮ: ಈವರೆಗೆ . . . ದೀರ್ಘಕಾವ್ಯಗಳನ್ನು . . . .ರಚಿಸಿಲ್ಲದುದರಿಂದ ಅವನ್ನು ಬರೆಯತಕ್ಕ ಸೂಲಷ್ಟೇ ತಪ್ಪಿದೆಯೊ ಅಲ್ಲ ಕೆಯ್ಯಾಡವೂ ಬರಡಾಗಿದೆಯೊ ನೋಡೋಣ (ಹಚ್ಚರ.೫, ಮುನ್ನುಡಿ). [< ಸೂಱ್?]

ಸೂಲೆ (ನಾ). ತೀವ್ರವಾದ ನೋವು, — ಯಾತನೆ: ಪಸಿವು ನೀರಳ್ಕೆ ದಾಹ ವಾತಂ ಸೂಲೆ ಮೊದಲಾಗೊಡೆಯ ವೇದನೆಗಳಂ ಸ್ಮರಿಸಿ (ವಡ್ಡಾರಾ.೫೨-೯); ಸೂಲೆಯುಳ್ಳವನಂತೆ ಕವಿದು ಬೀಱುತ್ತುಂ (ಧರ್ಮಾಮೃ.೧-೧೪೪); ಎನ್ನ ಪೊಟ್ಟೆಯೊಳ್ ಪಿರಿದಪ್ಪ ಸೂಲೆ ಪುಟ್ಟಿರ್ದಪುದು (ಪುಣ್ಯಾಸ್ರ.೪-೨೪). [< ಸಂ. ಶೂಲಾ]

**ಸೂಲೆಯೇೞ್ (ಕ್ರಿ). ನೋವುಂಟಾಗು; ಶೂಲೆಯೇಳು : ಅಲ್ಲಿಯ ಜನಾಲಯದ** ಪರಸ್ಥಿತಭದ್ರದೊಳ್ ಭೋಂಕಲ್ ಸೂಲೆಯೆತ್ತಿದಂತೆ ಪಟ್ಟಿರ್ದು (ನೇಮಿಪು.೪-೭೭ ವ). [ಸೂಲೆ + ಏೞ್]

ಸೂಲೆವೆಱು (ಕ್ರಿ). ನೋವನ್ನು ಹೊಂದು; ಯಾತನೆಗೆ ಸಿಲುಕು: ಸೂಲೆವೆತ್ತರಂತೆ ಪೊರಳುತ್ತುಂ ಕಳ್ಳುಡಿದರಂತೆ ಮತಿಗಿಡುತ್ತುಂ (ಧರ್ಮಾಮೃ. ೧-೧೬೦). [ಸೂಲೆ + ಪೆಱು$_1$]

ಸೂಲ್ಮುಲುಕು (ನಾ). ಹೆರಿಗೆಯ ನೋವು, —ಯಾತನೆ ; ಪ್ರಸವವೇದನೆ: ನಿನ್ನ ತಾಯ್ ಸೂಲ್‌ಮುಲುಕು ಮಱೆದು ನಿನ್ನನ್ ಪರಸಿ ಬಾೞ್ ನೂಱನ್ ಅಣುಗ ಪಿರಿಯ ಪೆಸರಾಗೆಂದು ಮುತ್ತಿಟ್ಟು ನಡೆದಳ್ (ಅಶ್ವತ್ಥಾ.೨೧-೪೧೭); ಸೂಲ್‌ಮುಲುಕು ಮಾಯ್ವಂತೆ ಕಂದನಾನಂದವನು ಕಾಣಿಸದ ಪಾಪಿ ನಾನಮ್ಮ (ನಡೆದಾ.1, ೪೫೮). [ಸೂಲ್ + ಮುಲುಕು$_2$]

ಸೂಲ್ಲಿ (ನಾ). ಒಂದು ಬಗೆಯ ಆಯುಧ; ಮೊನಚಾಗಿರುವ ಕಬ್ಬಿಣದ ಅಸ್ತ್ರ: ನಾರಾಚ ಗದೆ ಸೂಲ್ಲಿ ಚಕ್ರ ವಂಕ್ಕಿ ಚೂರ್ರಿ ಜಯಬಾಡಿ ಶ್ರುಂಗಾರ ತೊಡುಪೂ ಸಂಣ ಚಂದ್ರಾಯುಧಾ ಚಿಲುತಲಿ (ಎಕ. XVI, ಗುಬ್ಬಿ.೩೪-೨೨; ಸು. 1672). [?./ ಸಂ. ಶೂಲ]

ಸೂವ (ನಾ). ಅನ್ನದೊಂದಿಗೆ ಕಲಸಿಕೊಳ್ಳುವ ವ್ಯಂಜನಪದಾರ್ಥ; ಮೇಲೋಗರ ; ಸೂಪ : ವಾಪಿ-ಬಾವಿ, ಸೂಪ-ಸೂವ (ಶಮದ.೨೫೮ ಪ್ರಯೋ). [< ಸಂ. ಸೂಪ]

ಸೂವಾರ 'ಸುವಾರ' ನೋ.

ಸೂವಾರವಿದ್ಯೆ (ನಾ). ಅಡಿಗೆಯನ್ನು ಮಾಡುವ ವಿದ್ಯೆ; ಪಾಕಕಲೆ: ಆರಲಱಿದನೊ ಭೀಮನೀ ಸೂವಾರವಿದ್ಯೆಯ(ಕುಮ್ಮಾವ್ಯಾ.ವಿ.೩-೩೮); ರಕ್ಕಸನ ತಮ್ಮಂ ಮನುಜರೂಪನಾಂತು ಭರದೆ ಬಂದು ಸೂವಾರವಿದ್ಯೆಯ ಬಲ್ಲನೆನಲು (ಪಾಸೋಪು.೧೩-೪೨). [ಸೂವಾರ (< ಸುವಾರ) + ವಿದ್ಯೆ]

ಸೂಸಕ, ಚೂಚಕ$_1$, ಸೂಸುಕ (ನಾ). ೧. ಒಂದು ಬಗೆಯ ಆಭರಣ; ಬೈತಲೆಮಣಿ; ಬೈತಲೆಬೊಟ್ಟು: ಹೊನ್ನೋಲೆಯ ಚೆನ್ನಗೆ ಮೂಗುತಿಯ ಮುಗುಳ್ಗೆ . . . ಸೂಸಕದ ಸುಮ್ಮಾನೆಗೆ ರುದ್ರಾಕ್ಷಿಯ ಭದ್ರಾಂಗಿಗೆ (ಗಿಂಕ.೩-೯೧ ವ); ಬೈತಲೆಯನೂಡನಮರ್ಚಿ ಪೊಳೆವ ಸೂಸಕಮನೊಪ್ಪಗೊಳಿಸಿ (ಪದ್ಮರಾ.೩-೪೭); ಪ್ರಕಟಿಸುತಿರ್ಪ ತಾರಕಿ ನಿಶಾಂಗನೆಯ ಸೂಸಕಮೆನಿಪಂತೆ ರಾಜಿಪವು (ಭ್ರಮರಸೂ.I, ೨೯೧). ೨. ಗೊಂಡೆ; ಕುಚ್ಚು; ಗೊಂಚಲು: ದೇವಾಂಗವಸ್ತ್ರದುಳ್ಳುಡೆಯೊಳುಲಿವ ಸೂಸಕದ ನೂಲ ತೊಂಗಲ್ಕೆರಸೆಟಲ್ಕ ಮುಂದಣ ಸೋಗೆ ಕಾರ್ಗಾಲದ ಸೋಗೆಯಂತೆ ಸೊಗಯಿಸೆ (ಪಂಪಭಾ.೨-೯೧ ವ); ಸೂಸಕದ ಮುತ್ತುಗಳು ತಾರಾರಾಶಿಗಳ ಹಬ್ಬುಗೆಯ ನೀಲದ ಹಾಸಲೆಗಳು ಹೋಲುತಿದ್ದವು ಗಗನಮಂಡಲವ (ಕುಮ್ಮಾಸ.೧೫-೩೦); ಹಿಡಿದ ಮುತ್ತಿನ ಸೂಸಕದ ಬೆಳುಗೊಡೆಯ . . . ರಾಜಕುಮಾರಕರು ನಡೆತಂದರೊಲವಿನಲಿ (ತೊರರಾ.೧-೧೭-೪೧). **ಚೂಚಕ$_1$** : ೩ . ಗೊನೆ; ಗುದಿ: ಚೂಚಕಂಗಳ ಭರದಿ ನೊಂದಿನಿಸು ತೂಗುತುಂ . . . ಕಣ್ಗೆ ಮಂಗಳವಾದ ತೆಂಗುಗಳ ಸಾಲ್ಗಳಿಂ (ಉದ್ಭಟ.೩-೮೭). **ಸೂಸುಕ** : ೨. ನವಕಿಸಲಯ ಲೋವೆಯ ಸುಂದರದಿಂ ದವನದ ಸೂಸುಕಗಳ ಬಂಧುರದಿಂ (ಉದ್ಭಟ.೫-೨೧); ಎಸೆವ ಮಾಣಿಕಂಗಳ ಲೋವೆ ; ಮುತ್ತುಗಳ ಸೂಸುಕಂ (ಚಂದ್ರಸ.೬೫). [ದೇ. ॥ ತೆಲು. ಸೂಸಕ]

ಸೂಸಕಂಬಿಡಿ (ಕ್ರಿ). ಹಣೆಯ ಮೇಲಿನ ಆಭರಣವನ್ನು ಹಿಡಿದುಕೊಳ್ಳು : ಪತ್ತ ಸಾರ್ದು ಸೂಸಕಂಬಿಡಿದೊಂದು ಮುಟ್ಟಿಯೊಳಗೆ ಬೆಂಗವಾಯ್ದು (ಚಂದ್ರಪ್ರು.೯-೯೪ ವ). [ಸೂಸಕ + ಪಿಡಿ$_1$]

ಸೂಸಲ್, ಸೂಸಲು (ನಾ). ೧. (ನಗೆ ಮುಂತಾದುವು) ಕಾಣಿಸಿಕೊಳ್ಳುವುದು; ಗೋಚರಿಸುವಿಕೆ: (೬). ೨. ಎಳ್ಳು, ಕಡಲೆ ಮುಂತಾದುವನ್ನು ಸೇರಿಸಿ ಮಾಡಿದ ಒಂದು ಬಗೆಯ ಖಾದ್ಯ, — ತಿಂಡಿ: "ತಿಲೌದನ ಎನ್ನಡೆ ಎಳ್ಳ ಹುಗ್ಗೆ; ಸೂಸಲೆಂದೂ ಎಂಬರು" (ನಾಚಿರಾ. ೬); ಸವಳದ ಸಿತಘೃತಮಿಶ್ರಿತಮಪ್ಪುಂಗುರುಂ ಸೂಸಲಂಬಿವಂ ಸೇವಿಸೆ ಪುಷ್ಟಿವಿವರ್ಧನಮಕ್ಕುಂ (ಲೋಕೋಪ.೯-೭); ಈಂದಿರ್ದ ಗೋವು ಮಾಸಂ ತಿಂದೊಡೆ ಕಲಸಿಕ್ಕುಗೆ ಸೂಸಲಂ ಬೆಲ್ಲಮುಮಂ (ಲೋಕೋಪ.೯-೧೯೩). ೩. **ಸಿಂಚನ; ಸೇಚನ: ಶಿಖಂಡಶನದ್ಯುತಿಯ ಬೆಳ್ಳಗೆಯ ಸೂಸಲನೆ ನಖರುಚಿಯ ತೆರಳಿಕೆಯ ಹೊರಳಿಯೆನೆ . . . ಚೆಲ್ವ ತಿಳಿನೀರ** ತುಂತುರ್ವನಿಗಳೆಸೆದಿರ್ದುವು (ಜೈಮಿಭಾ.೩೦-೧೧). **ಸೂಸಲು** : ೨. ವ್ಯಾಧನು ಸೂಸಲ ಚೆಲ್ಲಿ ಜಂತ್ರವ ಹಣ್ಣ ಅಡಿಗಲ್ಲನೊಡ್ಡಿ ಹೋದ ಬಳಿಕ ಸೂಸಲ ತಂಪಿಗೆ ಹೆಗ್ಗಣ ಬಂದು ಬಿದ್ದಂತೆ **ಬಿದ್ದಿರಲ್ಲಾ ಮಾಯದ ಬಲೆಯಲ್ಲಿ** (ಅವಚಂ.೧೫೯-೭೨); ಬಲವಿದನು ನೀವ್ ನಚ್ಚಿ ರಿಪುವನು ಗೆಲ ಸಮರ್ಥರೆ ಸೂಸಲಿನ ಪರಿಮಳಕೆ ಸಿಕ್ಕಿರ್ದಿಲಿಯ ತೆಱನಪುದೆಂದರರಸಂಗೆ (ತೊರರಾ.೬-೬-೩೪); ಅರಳಂ ಸೂಸಲುಮಂ . . . ಕಡಲೆಯಂ ನಾನಾ ಪರೀ ಚೀಲಮಂ ಬೆರಸುಂ ಮದ್ಯವ ಮಾಱುವರ್ ಪ್ರತಿದಿನಂ (ದಶಾವ.೫-೬೨). ೩. ಮಾಗಿ ಮುಗಿಯೆ ಮೊದಲ ಮಳೆಗೆ ಸೂಸಿ ಬರುವ ಸೂಸಲಿನೊಲು (ಅಹಲ್ಯ.೧೨೦-೧೮); ಮಿಾಸಲ ತೊರೆಯಾಗಿ ಈ ಸಲ ಬಂದಿದೆ ಸೂಸಲ ನೆರೆಯಲ್ಲಿ ರಾಮಾರಾಮಾ (ಸೂರ್ಯಪಾ.೮೫-೬); ಆ ಭಾವವೂ ಶೈಲಿಯಲ್ಲೇ, ನೆಲದೊಳಗಿನ ಒಸರಿನಂತೆ ಸೂಸುತ್ತಿದೆ . . . ಆ ಸೂಸಲನ್ನುಳಿದು, ಹರಿವ ಹೊನಲಾದೊಡನೆ ಅದು 'ರಸ'ವೆನ್ನಿಸುತ್ತದೆ (ಸಾಹೋಜ.೩೪೦). ೪. ಎರಚುವಿಕೆ; ಚಿಮ್ಮುವಿಕೆ : 'ಸೂಸಲಾಡು' ಪರಾ.

ಸೂಸಲ ಕಡುಬು = ಅಕ್ಕಿಯ ಹಿಟ್ಟಿನ ಪದರದೊಳಗೆ ಸೂಸಲು ಅಥವಾ ಎಳ್ಳುಪುಡಿಯ ಹೂರಣವನ್ನಿಟ್ಟು ಹಬೆಯಲ್ಲಿ ಬೇಯಿಸಿ ಮಾಡುವ ಒಂದು ಬಗೆಯ ಕಡುಬು: ದೋಷದೂರನ ನಾಮ ಸೂಸಲ ಕಡುಬು (ಪುರಂದ.೨-೯೯-೨). [ಸೂಸು$_1$ + - ಅಲ್$_2$]

ಸೂಸಲಾಡು (ಕ್ರಿ). ಎರಚಾಡು; ಚೆಲ್ಲಾಡು: ನೋಱುವರ್ ಪೂಡುವರ್ ಜಂತ್ರಮಂ ನೀರ್ ಸೂಸಲಾಡುವರ್ ತೀಡುವರ್ ನಗೆಯನಗಜೆಗೆ (ಚಬಪು.೪೫-೫೯). [ಸೂಸಲು (< ಸೂಸಲ್) + ಆಡು$_1$]

ಸೂಸಲು 'ಸೂಸಲ್' ನೋ.

ಸೂಸಲುಂಡಲಿಗೆ (ನಾ). ಎಳ್ಳಿನ ಪುಡಿಯ ಹೂರಣ ಅಥವಾ ಸೂಸಲನ್ನು ಇಟ್ಟು ಮಾಡಿದ ಕಡುಬು; ಸೂಸಲ ಕಡುಬು: ಸೂಸಲುಂಡಲಿಗೆ ಪಾಲೌಗು ಪಾಯಸ ಬೆಣ್ಣೆಗಾಸಿದ ತುಪ್ಪ (ಕುರಾಸಾಂ.೨೬-೨); ಹುಗ್ಗಿ ಕಿಚ್ಚಡಿಯೆರೆಯಪ್ಪ ಸೇವಗೆ ಹಿಂಡಿ ಗುಗ್ಗುರಿ ಸೂಸಲುಂಡಲಿಗೆ . . . ದೋಸೆಯ ಸಬ್ಬಲಗ್ಗೆಯಾಹುತಿಯೊಪ್ಪಿತಲ್ಲಿ (ಭರಚ.೨೦-೧೨೭); ಹುಗ್ಗಿ ಅಶನ ಸೂಸಲುಂಡಲಿಗೆ ಹೋಳಿಗೆ ಅಚ್ಚಂಬಲಿ ಕೆಂಪಿನ ಪುಷ್ಪ . . . ನಿವಾಳಿಸಿ (ಬಾಲಚ. ೧೨೮-೯). [ಸೂಸಲು (< ಸೂಸಲ್) + ಉಂಡಲಿಗೆ]

ಸೂಸಲುಸಕ್ಕರೆ (ನಾ). ೧. "ಪೂರಿ ಮೊದಲಾದ ರವೆ ಪದಾರ್ಥಗಳ ಮೇಲೆ ಸವರುವ ಪುಡಿಸಕ್ಕರೆ" (ಸೂಪಶಾ. ಕೋಶ). ೨. ಒಂದು ಬಗೆಯ ಭಕ್ಷ್ಯ: ಹದನಾಗಿ ಕಾಯ್ದ ಹಾಲಿನ ಗಟ್ಟಿಕೆನೆದೆಗೆವುತ . . . ತುಱುವೆಯ ಬೇರಿನಿಂ ತೊಳಸೆ ಮುದ್ದೆಯಹುದು ಅದನಾ ತಳಿಗೆಯೊಳಗೆ ಹರಹಿಕೊಂಡರ್ಧಮಂ ಮಿದುಡಿ ಕಚ್ಚಾಯಮಂ ಮಾಡುವುದು ಮತ್ತೆಯುಳಿದುದ ಗಾಳಿಗಿರಿಸಿ ಸಕ್ಕರೆ ಹುಯಿದದಕೆ ಸೂಸಲುಸಕ್ಕರೆವೆಸರಿಡುವುದು (ಸೂಪಶಾ.೧-೫೯). [ಸೂಸಲು (< ಸೂಸಲ್) + ಸಕ್ಕರೆ]

ಸೂಸಾಟ (ನಾ). ಎರಚುವುದು; ಚೆಲ್ಲಾಟ: "ಸೀಱುಂಬುಳುಯೆಂದು ಕವಿಗಳಿಂ ಸೂಸಾಟಂ" (ಕವಿಕಂ.೨೨೫). [ಸೂಸು$_1$ + ಆಟ]

ಸೂಸಿ (ನಾ). ಹೆಂಗಸರ ಸಾಮಾನ್ಯ ಉಡುಪು(?): ಸರಕಾರೀ ತುರಂಗದಲ್ಲಿ ಮೇಲಾದ ಜಮ್ಮಖಾನೆಗಳೂ ನಾನಾ ಪ್ರಕಾರದ ಸೂಸಿಗಳೂ, ಖುರ್ಚಿ, ಮೇಜು, ಪೆಟ್ಟಿಗೆ, ಮುಂತಾದ ಕಟ್ಟಿಗೆಯ ಸಾಮಾನುಗಳೂ ಹುಟ್ಟುತ್ತವೆ (ಕಭಾಗ.೪೫೨). [<— ತುಳು. ಸೂಸಿ]

ಸೂಸಿಕೆ (ನಾ). ಎರಚಾಟಚ ಚೆಲ್ಲಾಡುವುದು: ಸುಳಿದವಾರತಿ ಕರ್ಪೂರದ ಪ್ರಜ್ವಲಿಪ ಮಾಣಿಕದೀಪ್ತಿಗಳ ಪಸ್ರುಗಳವೆಗೂಳಿನ ಬಳುವೆಗಳಲುಪ್ಪುಗಳ ಸೂಸಿಕೆಯು (ತೊರರಾ.೬-೫೫-೧೭). [ಸೂಸು$_1$ + - ಇಕೆ]

**ಸೂಸಿಸು** (ಕ್ರಿ). ತಿಳಿಸು; ಸೂಚಿಸು: ಆ ವಿದುರನೊಳು ಸೂಸಿಸಿದೆನೀ ಹದನ (ಜನಭಾ. ೧೩-೬೭). 'ಸೂಚಿಸು' ಪರಾ. [ಸೂಸು₁? + -ಇಸು₁]

**ಸೂಸು₁** (ಕ್ರಿ). ೧. ಎರಚು; ಚೆಲ್ಲು: "ಸೂಸು — ಪರಿತ್ಯಾಗೇ" (ಶಮಧಾ); ಕವಿವರರುಂ ಪೆಂಡವಾಸದೊಳ್ಪೆಂಡಿರ್ಕಳುಂ ವಿಮಾನಂಗಳ ಮುಂದಾಡುತ್ತುಂ ದಮ್ಮಮುಮಂ ಪೊನ್ನುಮಂ ಕೇಳಿ ಮಾಡಿ ಮುಂದೆ ಸೂಸುತ್ತಮೊಯ್ಯುದಂ . . . ಕಂಡು (ವಡ್ಡಾರಾ. ೮೪-೩); ದಿಕ್ಕನ್ನಿಕೆಯರ ಸೂಸುವ ಲಾಜಾಂಜಳಿನಿಚಯಮೆನಿಸುವ ಮದಕರಿಕರ ಶೀಕರನಿಕರಮುಮಂ (ಆದಿಪು. ೧೩-೪೪ ವ); ಚಾಮರದೆಲರಲಲಪಿನೊಳ್ತೂಳುವ ಸಣ್ಣಧಾರೆಯಂ ಸೂಸುವ ಧಾರಾಗೃಹದಿಂ (ಮಲ್ಲಿಪು. ೨-೭೪); ದರ್ಪದಾಭರಣಕ್ಕೆ ಸೂಸಿದ ಪೊಪ್ಪ ಸಲಿಗೆಗಳೆನಲು ಗಜಿಗಳು ಚಪ್ಪರಿಸಿ ತುಳುಗಿದವು ರಿಪುಸೇನಾಸಮುದ್ರದಲಿ (ಕುವ್ಯಾದ್ರೋ. ೨-೫೩). ೨. ಚಿಮ್ಮು; ಸಿಡಿ: ಸೂಸಿ ಪಾಯ್ವ ಶೀಕರದೊಳೆ ನಾಂದು ಸೇಡುಗೊಳುತಂ ಸುಳಿದೂದುವ ಗಾಳಿ ಬರ್ಪ ದೇವರ ವರಕಾಂತೆಯರ್ಕಳ ಪರಿಶ್ರಮಮಂ ಕಳೆದತ್ತು ವಾರ್ಧಿಯೊಳ್ (ಕಾವ್ಯಸಾ. ೭೮ಶೂದ್ರಕ); ತಣ್ಣಾಳಿಯ ಸೋಂಕಿಂ ವಿರಳಮಾಗಿ ಸೂಸುವ ತುಷಾರವರ್ಷದೊಳಂ (ಮಲ್ಲಿಪು. ೬-೧೦೧); ಕರ್ಣ ಶಕುನಿಗಳೊಲಿದು ತಂಬುಲ ಸೂಸೆ ನಕ್ಕರು ಹೊಯ್ದು ಕರತಳವ (ಕುವ್ಯಾಆ. ೧೭-೮). ೩. ಎಸೆ; ಬಿಸುಡು: ಮಧುವುಂ ಮನೋಭವನುಮಟ್ಟಿಯೊಳಾಡುವ ಪೊನ್ನ ಬಟ್ಟನೊರ್ಮೊದಲೆ ಮನೋಜಕಾಂತೆ ಮುಳಿಸಿಂ ದೆಸೆಗೋವದೆ ಸೂಸುವಂದಮಂ (ಶಾಂತಿಪು. ೧-೫೩); ಪಲರುಂ ಚೀಯೆಂಬಿನಂ ಸೂಸಿದೆಂಜಲವುಟ್ಟಿಳನಾವಗಂ ಬೆದಕಿ ತಿಂದು (ಸುಕುಮಾ. ೪-೫೭); ಹಿಡಿದ ಕನ್ನಡಿ ಕಳಸಗಳ ಕೆಲಕಿಡುತ ಹೊಂದಳಿಗೆಯ ನಿವಾಳಿಯ ಸೊಡರ ಸೂಸುತ ಬಿಸುಡುತಮಲಾಕ್ಷತೆಯ ದೆಸೆದೆಸೆಗೆ (ತೊರರಾ. ೨-೩-೨); ಈಶಪ್ರಸಾದವನು ಸೂಸದಲೆ ತಾ ಕೊಳ್ಳೆ ಶಾಶ್ವತವಪ್ಪ ಪದವಕ್ಕು (ಸರ್ವಜ್ಞ. ೧೬೨). ೪. ಕೊಡು; ನೀಡು: ಮಣಿಮಯಭಾಜನಂಗಳೊಳ್ತೆಕ್ಕನೆ ತೀವಿದ ಪಂಚರತ್ನದ [ಕೇಸರಿಯ] ಕತ್ತುರಿಯ ಕೊಳತದ ಕಪ್ಪುರದ ಪಳಕಿನ ಬಾಯಿನಂಗಳಂ ಬೀಜಿ . . . ಕಕ್ಕರವಟಿಯಗೆಯ ಚಿತ್ರಾವಟಿಯ ಪಟಿವೆಡೆಯ ತುಟಿವೆಡೆಯ ನೆಳಲ ಪಾಣಿಯ ಬಣ್ಣದ ಕಣದ ಬಣ್ಣವಣ್ಣಿಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪-೭೪ ವ); ಬೆಸಕಂಗಿಕ್ಕಿದೊಡಂ ಭೂತನಿಕಾಯಕ್ಕೊಯ್ದು ಬಲಿಯುಮಂ ಸೂಸಿದೊಡಂ [ಪಾಠಾಂ. ಸರುಗಮಂ ಪೂಸಿದೊಡಂ] . . . ಘನಮಾಗದು ಬೆಳಸು ನಿಯತಮೆಂಬರುಮೊಳರ (ಸಮುಪ. ೯-೪೧); ನರನ ತೋಜಿಸಿದವಗೆ ಶತಸಾಸಿರವ ಸೂಸುವೆನು (ಕುವ್ಯಾಕ. ೯-೯). ೫. ಹರಿ; ಪ್ರವಹಿಸು: ಗಗನಂ ಘನೀಭೂತಮಾದುದೆಂಬಂದದಿಂ ಮಿಗೆ ತೀವಿ ಸೂಸಿದುವು ಸಲಿಲಮುಕ್ತಾಹದಿಂ (ಇಳರ. ದೇ. ೫೧-೨೪); ಸೂಸುವ ನದಿಯಲ್ಲಿ ಬಿದ್ದು ಮುಂದೆ ಈಸಲಾಜದೆ ಮುಳುಗೆದ್ದು (ಪುರಂದ. ೧-೧೯-೨). ೬. ರಭಸದಿಂದ ನುಗ್ಗು, — ಹರಿ: ಬಿಟ್ಟ ಭರದಿಂದೆ ವಾರಿಯೆರಟ್ಟೆಸೆಗಂ ಪಚ್ಚು ಸೂಸೆ ಕೊಳದೊಳಗೆ ಬಯಲ್ ಬಿಟ್ಟುದು ತದ್ರಭಸಕ್ಕುರ್ಚಿಟ್ಟು ಕಡಂಗಿದುವು ಜಳಚರಪ್ರಕರಂಗಳ್ (ಚಂದ್ರಪ್ರ. ೫-೯೩); ಕರಿಘಟೆಯ ಕೆಲಬಲಕೆ ಸೂಸುವ ತುರಗರಾಜಿಯು (ಕುವ್ಯಾದ್ರೋ. ೨-೨೪). ೭. ಕೆದರು; ಚೆಲ್ಲಾಪಿಲ್ಲಿಯಾಗು; ಇಟ್ಟಾಡು: ಒಡವಂದಂಕದ ಕೌರವರ್ ದ್ರುಪದನಂ ಬೇಜಿಂಗೆ ಮೆಯ್ಯೊತ್ತದೊಡ್ಡೊಡೆದೋಡುತ್ತಿರೆ ಸೂಸೆ ಬೀಟ್ಟ ತಲೆಗಳ್ (ಪಂಪಭಾ. ೨-೬೨); ವಿರಚಿಸು ಹಾರಮಂ ಪಜಿದು ಸೂಸಿದು ದೊಯ್ಯನೆ ಸೈತು ಮಾಡಿವಂ ಪರೆದ ಕುರುಳ್ಗಳಂ (ಶೃಂಗಾರ. ೬-೫೨); ಬೊಬ್ಬೆಗಳ ಪಟಹದ ಮೃದಂಗದ ಸರ್ಬಲಗ್ಗೆಯ ಸೋಹಿನಲಿ ಸುಳಿವಬ್ಬರಕೆ ಹಿಂಡೊಡೆದು ಹಾಯ್ದವು ಸೂಸಿದವು ದೆಸೆಗೆ (ಕುವ್ಯಾಆ. ೧೩-೨೫). ೮. ಬಿಚ್ಚಿಕೊಳ್ಳು; ಸಡಿಲವಾಗು: ಕದನದೊಳಾರ್ದು ಸಾರ್ದಿಸೆ ಮಹಾರಥದಚ್ಚು ಸಿಡಿಲ್ದುದೀಸು ಸೂಸಿದುದರಗೀಲ್ ಕಟಲ್ದುದು (ಪಂರಾಮಾ. ೧೩-೭೯); ತರುಣಿಯ ಮಾಸಿದಂಗಲತೆ ಸೂಸಿದ ಕುಂತಳಂ . . . ಜಾಡ್ಯದ ಮೆಯ್ ಕಡುಲಜ್ಜೆ ಕಜ್ಜಳಂ ಪರೆದಲರ್ಗಣ್ಣಳೆಂಬಿನಿತು ಪೇಟವೆ ಮಾಣಿಕವಾಂತ ಭಾವಮಂ (ದಶಕು. ೧-೬೦); ಬಿಟ್ಟ ಕಂಗಳ್ಬಿಗಿದ ಪುರ್ಬುಗಳ್ಬೆಜೆನೊಸಲ ಬಟ್ಟು ಸೂಸಿದ ಕುರುಳ ಥಳಥಳಿಪ ಕುಂಡಲಂ (ಜೈಮಿಭಾ. ೨೩-೨೭). ೯. ತೂಗು; ಓಲೆ: ಗಗನಂಬರಂ ನೆಗೆದು ಸೂಸದೆ ಬಾಹುಪರಿಭ್ರಮಂಗಳೊಳ್ ಬೆದಜದೆ ಶಕ್ರನೃತ್ಯದೊಳೊಡಂಬಡೆ ನರ್ತಿಸುವಲ್ಲಿ ಜತ್ತವಟ್ಟದ ಮಣಿಯಂತದೇಂ ಪದುಳಮಾದುದೊ ದಿವ್ಯವಧೂಕದಂಬಕಂ (ಆದಿಪು. ೭-೧೨೫); ಹೆದಜು ಹಿಂಗಿದು ನೆಲಕೆ ಮಾಜುದ್ದಿದನು ಕರವನು ಸೂಸಿ ಹಾಜಿದ ಗದೆಯ ಕೊಂಡನು (ಕುವ್ಯಾಗ. ೭-೧೧). ೧೦. ಅಸ್ಥಿರವಾಗು; ಚಂಚಲಗೊಳ್ಳು; ಹೊಯ್ದಾಡು: ಶಿವಜ್ಞಾನಾರೂಢನುಮಾಗಿ ನಿಲಿಸಿ ಮನವ ಲಿಂಗದಲ್ಲಿ ಅತ್ತಲಿತ್ತ ಸೂಸಲೀಯದೆ (ಶಿವಗೀ. ೨೭-೧೨೦); ಕೃತಪರ್ಯಂಕಾಸನಂ ಸೂಸದೆ ನಿಲೆ ಕರಮುತ್ತಾನಕ ಸ್ವಸ್ತಿಕಂ ನಾಭಿತಟನ್ಯಸ್ತಂ ಬೆಡಂಗಾಗಿರೆ (ಚಂದ್ರಪ್ರ. ೧೪-೫೯); ಸೂಸಲೀಯದೆ ಮನವನೀಶನಾಪ ದೊಳಿರಿಸಿ ಬೇಸಜಾಗದೆ ಚಿತ್ತವಂ ವಿಶಾಸಲಾಗಿರಿಸಿ (ದೀಕ್ಷಾಬೋ. ೧೭-೯). ೧೧. ನಿವಾರಣೆಯಾಗು; ಪರಿಹಾರವಾಗು: ಏಸನೀಂಟಿದಡೆನ್ನ ಬಳಲಿಕೆ ಸೂಸದೆನುತಂ ಕೊಪ್ಪರಿಗೆಗಳಗೋ ಸರಿಸದುಲ್ಲಂಘಿಸುತ ಕೈಕೊಳ್ಳಿ ನೀವೆನುತ (ಬಸಪು. ೫೫-೧೫). ೧೨. ದೊರೆ; ಲಭಿಸು; ಪ್ರಾಪ್ತವಾಗು: ಅಜುಹಿಲ್ಲವಾಗಿ ಸುಜ್ಞಾನವಿಲ್ಲ ಸುಜ್ಞಾನವಿಲ್ಲವಾಗಿ ಪಾರಮಾರ್ಥ ಸೂಸದು (ಆದವ. ೨೮-೮೧); ಮಾಸೂರ ಬಸವರಸ ಕೂಸನೀಶನ ಕೇಳೆ ಕಾಶಿಯ ಅಭವನೊಳು ಪಡೆದ ವರವದುವೆ ಸೂಸಿತೆಂತೆನಲು (ಸರ್ವಜ್ಞ. ೬). ೧೩. ದೃಷ್ಟಿ ತೆಗೆ; ನಿವಾಳಿಸು: ಆರತಿಯನೆತ್ತಿದರು ತಂದುಪ್ಪಾರತಿಯ ಸೂಸಿದರು ನೃಪಪರಿವಾರವೆಲ್ಲವು ಬಂದು ಕಂಡುದು ಕಾಣಿಕೆಯ ನೀಡಿ (ಕುವ್ಯಾಭೀ. ೧-೬೨); ಈ ಪುರದೊಳು ತನ್ನ ಮಗಳಿಗೆ ಸಮವಹ ರೂಪಜೀವೆಯರಿಲ್ಲೆಂದು ಚಾಪಳೆ ಮನೆಗೆ ಬಂದಿಹ ವಿಟನೊಳು ಪೇಳಿ ತೂಪಿಜಿದುಪ್ಪ ಸೂಸುವಳು (ಅಂಜಚ. ೬-೧೪೫). ೧೪. ಅರ್ಘ್ಯಕೊಡು; ಅರ್ಪಿಸು: ನಿನ್ನ ನೀನಾದಿತ್ಯಂಗೆ ನೀರಂ ಸೂಸಿ ಪೊಡೆಮಡುವಾಗಳಾ ನೀರ್ವೆರಸು ಸೂಸಿ ತಾಮರೆಗೆಜೆಯೊಳಗೆ ಮುಟುಗಿರ್ದ ಮುಗುಳ ಮೇಗೆ ತಗುಳ್ದಿರ್ದುದು (ವಡ್ಡಾರಾ. ೫-೧೪); ಸೂರ್ಯಜಂ ಸೂರ್ಯಮಂತ್ರಂಗಳನೋದಿ ನೀರಂ ಸೂಸಿ (ಪಂಪಭಾ. ೯-೭೨ ವ); ಹೊಳೆವ ಹೊಂಬಟ್ಟಲಲಿ ಸೂಸಿದನರ್ಘ್ಯಜಲವನು ಜನಕನಿದಿರಿನಲಿ (ಕುವ್ಯಾಕ. ೮-೧೭). ೧೫. ಹೇಳು; ತಿಳಿಸು; ನಿರೂಪಿಸು: ವಾಸಿಗಳ ಪೈಸರವನೆನ್ನಲಿ ಸೂಸಬಾರದೆ ನಿನ್ನ ಹರುಷಕೆ ಪೈಸರವದೇನೆಂದು ಬೆಸಗೊಂಡನು ಸುಯೋಧನನ (ಕುವ್ಯಾಸ. ೧೨-೨೮); ಸಾಸಿರವಗೆಯ ಬೋಳಿಯ ಮಾತ ಕಿವಿಯೊಳು ಸೂಸಿ (ಮೋಹತ. ೧೦-೨೦); ಏನು ಪೇಳಲಯ್ಯೋ ನಾನು ಸೂಸಿದಂಥ ನುಡಿಯ ಪಿಡಿದು ಮೋಸವಮಾಡುತೆನ್ನ ಮುನಿರಾಯ ಓ ಲಕ್ಷ್ಮೀಕಾಂತ ಘಾಸಿಪಡಿಸಿದನು (ಹಮಚ. ೧೩೧). ೧೬. ಕಳೆ; ತೀರು; ಮುಗಿ: ಆಸುರದ ಸಂಗ್ರಾಮವಾದುದು ಭಾಸುರದಿ ಹದಿನೆಂಟುವತ್ಸರ ಸೂಸಿದವು ಯುದ್ಧದಲಿ (ಸಂಭಪ. ೬-೨೭). ೧೭. ಬಾಡು; ಕಂದು: ಪಂದಿಯಿಂ ಕೆದಜಿದುತ್ಪಳಮುಂ ವನದಂತಿಯಿಂ ನೊಂದು ಸೂಸಿದ ಸರೋಜಮುಮೊಯ್ಯನೆ ನೀರುಣಲ್ ಬಂದು ಪೋದ ಮೃಗದಗ್ರಖುರಚ್ಯುತವಾರಿಯಿಂ ನಾಂದು (ಕಾವ್ಯಾವ. ೬೨೬); ಸೆಡೆದನುಡುಗಿದಂ ಮಾಸಿದಂ ಸೂಸಿದಂ ಕಿರ್ಗಯ್ಯಾದಂ ಕಂದಿದಂ (ರಕ್ಷಾಶ. ೨೫). ೧೮. ಚಲಿಸು; ಬೀಸು: ಹೊಳೆವಡಾಯುಧ ಹೊಡಕೆಗಳ ಸತ್ತಿಗೆಯ ಸೂಸುವ ಚಮರ ಸೀಗುರಿಯ (ಕುವ್ಯಾದ್ರೋ. ೧೦-೫೯); ಹಸಿರ ಗಿಡದಾಸರಕೆ ಹೋದೇನು ನನ ದೇವ ಸೂಸುವ ಗಾಳಿಗೆ ಕುಳಿತಿಹನೆ (ಸಿದ್ಧಪು. ೪-೫). ೧೯. ಕಾಣಿಸು; ತೋರಿಸು: ಖುರಮಂ ನಾಸಿಕೆ ಸೂಸುವಂದದೆ ಬೆಡಂಗಂ ತ್ರಾಸಿನೊಳ್ತೂಗಿದಂತಿರೆ . . . ಮೆಜೆದರ್ ವಾಹಂಗಳಂ ವಾಹಕರ್ (ಆನಂಪು. ೨-೬೧). ೨೦. ಚಿಮುಕಿಸು; ತಳಿ; ಪ್ರೋಕ್ಷಿಸು: ನವವಿರಹ ಶಿಖಿಗೆ ಹವಿಯಾದುವಲ್ಲದಳುರ್ವಂಗತಾಪಮಂ ಮಳ್ಗಿಸಲಾಜವೆ ತಳಿವ ಮಲಯಜಂ ಸೂಸುವಾಲಿನೀರ್ ಮೇಲೆ ಸುರಿವ ಕಪ್ಪುರದ ರಜಂ (ವರ್ಧಪು. ೪-೪೭); ಅವಿರಳ ವಾದುದಂತವುರದೊಳ್ ಕಡೆಯಿಕ್ಕುವ ತೋರಮುತ್ತು ಸೂಸುವ ಪಟವಾಸಮಾವರಿಪ ಪೂವಲಿ ಪೊಣ್ಮುವ ಮಂಗಳೋಕ್ತಿ (ಪುಷ್ಪಪು. ೪-೨೫); ಸೂಸಿದುವು ಸಾರಸಂಗಳ್ ತಮ್ಮ ಗಜಿಗಳಂ ತೋದು ತಂದಂಬುಗಳನು (ಜೈಮಿಭಾ. ೧೯-೬೪). ೨೧. ತುಂಬಿ ತುಳುಕು; ಹೊರಚೆಲ್ಲು: "ಸೂಸಿದುದೆನೆ ತುಳ್ಕಿತೆಂಬುದುಂ" (ರನ್ನಕಂ. ೭); ದಾಸಿಯ ಕೊಡದಂತೆ ಸೂಸದಿಪ್ಪುದೆ ಯೋಗ ದಾಸಿ ಸಾಸಿರದ ನುಡಿ ಹಾಡುತಾ ಕೊಡನೊಳಾಸ ಇಪ್ಪಂತೆ (ಸರ್ವಜ್ಞ. ೪೬೯). ೨೨. ಹೆಚ್ಚಾಗು; ಅತಿಶಯವಾಗು: ಕಾಶಿ ಪ್ರಯಾಗೆ ಗಯಾಕ್ಷೇತ್ರವೊಡ್ಡಿಯ ಭಾಸುರ ತ್ರಿಜಗತ್ಪ್ರತಿಯ ಸೂಸುವ ಹರುಷದ ಸೇವಿಸಿ ಶ್ರೀರಂಗೇಶನ ಪುರಕೈತಂದ (ಕಂಸವಿ. ೫-೨೧). ೨೩. ಕೆದರಿಸು; ಚೆಲ್ಲಾಪಿಲ್ಲಿಮಾಡು: ಮೃಗಾಜಿನಾಸ್ತರಣಮಂ ಕೊಡೆಯಂ ಮುಜಿದಿಕ್ಕಿ ಸೂಸಿ ನೀವಾರದ ರಾಶಿಯಂ ಬಿಡದೆ ಕಾಡಿದುದಾ ಕಪಿ ತಾಪಸರ್ಕಳಂ (ಪಂಚತಂ. ೨೬೧-೩). ೨೪. (ಆಲಂ) ಮರುಗು; ವ್ಯಥೆಪಡು: ಅವರ ದುಃಖ ತಡೆಯಲಿಲ್ಲ. ಹೃದಯ ಸೂಸಿತು (ಮುಗಿಮು. ೬೧).

**ಸೂಸು$_2$** (ನಾ). ೧. ಎರಚುವಿಕೆ; ಚೆಲ್ಲುವಿಕೆ: ಇಳಿದರಾನೆಯನಬಲೆಯರ ಹೊಂದಳಿಗೆಗಳ ಪಸ್ರುಗೂಳ ದೀಪಾವಳಿಯ ಸಾಲಿನ ಸೇಸೆಗಳ ಸೂಸುಗಳ ಸೊಗಸಿನಲಿ [ಪಾಠಾಂ. ಹರಕೆಗಳ ಕೈಕೊಳುತ, ಸೊಗಸಿನಲಿ ರಂಜಿಸುತ] . . . ಹೊಕ್ಕರು ನಿಳಯವನು (ತೊರರಾ. ೧-೧೬-೪೪). ೨. (ನೀರನ್ನು) ಚಿಮುಕಿಸುವುದು; ತಳಿಯುವಿಕೆ: "ಜಲಸೇಚನನೆಗೆ ಸೂಸೆನಿಕ್ಕುಂ" (ಶಶರ. ೧೧೦). ೩. ಚೆಲ್ಲಾಪಿಲ್ಲಿಯಾಗಿರುವಿಕೆ; ಚೆದರಿರುವಿಕೆ; "ಪರಿಕೀರ್ಣ" (ಚತುಃ.ಕಿ. I,೮೩). ೪. ತೋರಿಕೆ; ಪ್ರದರ್ಶನ: (ಕ). [< ಸೂಸು$_1$]

**ಸೂಸುಕ** 'ಸೂಸಕ' ನೋ.

**ಸೂಸುಗಣೆ** (ನಾ). ಚಿಮ್ಮಿ ಬರುವ ಬಾಣ: ಸೂಸುಗಣೆಗಳ ಸೊಗಡು ಹೊಯ್ದು ಪಹಾಸಕೊಳಗಾದರು (ಕುಮಾದ್ರೋ. ೧೮-೨೨); ಸೂಸುಗಣೆಗಳ ಸೊಗಡಿನೊಳ್ಮಲಗೆ ಕರ್ಣ ಕೈವೀಸಿದನು (ತುರಂಗ. ೬೨-೪೯). [ಸೂಸು$_1$ + ಕಣೆ$_1$]

**ಸೂಸುಗಲ್ಲು** (ನಾ). ಎಸೆಯುವ ಸಣ್ಣಗಾತ್ರದ ಕಲ್ಲು: ಎತ್ತುಗಲ್ಲು ಕವಣೆಯ ಕಲ್ಲು ಸೂಸುಗ [ಪಾಠಾಂ. ಕ]ಲ್ಲು (ಗುಭಚ. ೧-೬೧). [ಸೂಸು$_1$ + ಕಲ್ಲು (< ಕಲ್$_3$)]

**ಸೂಸುಗಿಡಿ** (ನಾ). ಚಿಮ್ಮುವ ಅಥವಾ ಸಿಡಿಯುವ ಕಿಡಿ: ಮುರಿಮುರಿದು ಕಬ್ಬೊಗೆಯ ಹೊದಜಿನ ಹೊರಳಿ ಹರದುದು ಸೂಸುಗಿಡಿಗಳ ನೆರವಿ ನಸಿದುದು ನಿಮಿರ್ದ ಹೊಂಗಜಿಯಿಂಬು ಹೊಳೆಹೊಳೆದು (ಕುಮಾದ್ರೋ. ೧೯-೫೦). [ಸೂಸು$_1$ + ಕಿಡಿ]

**ಸೂಸುಗುರುಳ್, ಸೂಸುಗುರುಳು** (ನಾ). ಕೆದರಿದ ಕೂದಲು,—ಮುಡಿ: ನೊಸಲೊಳಮರ್ಕವೆತ್ತಲೆವ ಸೂಸುಗುರುಳ್ ನಿಡುಸುಯ್ ಕಟಲ್ದ ಮೆಯ್ ಪೊಸ ದಲರಂತೆ ಬಾಡಿದ ಮೊಗಂ (ಧರ್ಮನಾ. ೩-೧೨೭). **ಸೂಸುಗುರುಳು:** ಸೂಸುಗುರುಳನುಗು ರ್ಗೂನೆಗಳಿಂದೊಯ್ಯನೆ ಬಾಸಣಿಸುತ (ಕುರಾಸಾಂ. ೩೪-೬೬). [ಸೂಸು$_1$ + ಕುರುಳ್$_1$]

**ಸೂಸುಗುರುಳು** 'ಸೂಸುಗುರುಳ್' ನೋ.

**ಸೂಸುಗೂಳ್** (ನಾ). ಚೆಲ್ಲುವ ಅಥವಾ ಎರಚುವ ಅನ್ನ: ನಿರೀಕ್ಷಿಸಿ ತಾಣ ಮಜಿದು ಪರೀಕ್ಷಿಸಿ ಸೂಸುಗೂಳಂ ತಳಿದು ತಳ್ಪದೆ ಬರ್ಪ ಭರಮನಜಿದು . . . ಪಲವುಂ ಬಗೆಯ ಗಾಣಂಗಳಂ . . . ಬಿರ್ಚಿ ಬೀಸಿದಾಗಳ್ (ರಾಜಶೇ. ೫-೧೧೪ ವ).

[ಸೂಸು$_1$ + ಕೂಳ್ (< ಕೂಟ್$_1$)]

**ಸೂಸುಜವ್ವನ** (ನಾ). ಉಕ್ಕೇರುವ ಪ್ರಾಯ; ಏರುಜವ್ವನ: ಆ ಸಿಂಧುರಾವತಿ ಬಂಧುರಾವತಿಯರ ಸೂಸುಜವ್ವನದ ಸೊಕ್ಕಜಿದು ಆಸೆ ತೀರ್ವಂತೆ ಕೂಡಿದನು (ಭರಚ. ೬೨-೫೫). [ಸೂಸು$_1$ + ಜವ್ವನ]

**ಸೂಸುಡೆಂಕಣಿ** (ನಾ). ಕೋಟೆಯ ಬುರುಜಿನ ಮೇಲೆ, ಕಲ್ಲುಗುಂಡುಗಳನ್ನು ತೂರುವುದಕ್ಕಾಗಿ ಇಡುವ ಒಂದು ಯಂತ್ರ: ಎತ್ತುಗಲ್ಬಿರಿಯ ಡೆಂಕಣಿ ಸೂಸುಡೆಂಕಣಿ . . . ಪೆಟಲುಪ್ಪು ಗುಂಡುದಸಿ ಬಿತ್ತರಿಸಲೇಂ ಮರುಳ ಕಯ್ಯವಣೆಯಿಡುಗಲ್ಲ ಮೊತ್ತವಾ ಪುರದೊಳು (ಪದ್ಮರಾ. ೩-೨೧); ನಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ತೋಜಿದೆಡೆಗೆ ಸಿಡಿವ ಡೆಂಕಣಿ ರಾಯಡೆಂಕಣಿಗಳ ಸಾಲು ಬಿಡದೊಪ್ಪಿದವು ದುರ್ಗದೊಳು (ಕುರಾಸಾಂ. ४೨-೬೯). 'ನಡೆಡೆಂಕಣಿ' ಪರಾ. [ಸೂಸು$_1$ + ಡೆಂಕಣಿ]

**ಸೂಸುನೀರ್** (ನಾ). ಚಿಮುಕಿಸುವ ನೀರು; ಸಿಂಪಡಿಸುವ ನೀರು: ತರುಣಿಯರಾ ವಿಲಾಸ ಕುಸುಮಾಸ್ತ್ರನನೀಕ್ಷಿಸೆ ಕಾಮತಾಪದಿಂ . . . ಮೃಣಾಳನಾಳಿಕೆಗೆ ಚಂದನದಣ್ಣೆಗೆ ತಣ್ಬುಟಿಲ್ಗೆ ತಣ್ಣರಗದ ಸೂಸುನೀರ್ಗೆ ಕೊಳವೇರ್ಗೊಡಲಂ ಗುಜಿಯಾಗೆ ಮಾಡುವರ್ (ಮಲ್ಲಿಪು. ೩-೨೮); ವಿಯೋಗಮಂ ಮಾಡಿದ ವಾಮಲೋಚನೆಯರಂಗದೊಳಾಲಿಯ ಸೂಸುನೀರ್ಗಳಟ್ಟಾಡದೆ ತಂದು (ಚಂದ್ರಪು. ೨-೨೫). [ಸೂಸು$_1$ + ನೀರ್]

**ಸೂಸುಮಣ್ಣು** (ನಾ). ಕಲ್ಲುಹರಳುಗಳು ಇಲ್ಲದ ನಯವಾದ ಮತ್ತು ಹಗುರವಾದ ಮಣ್ಣು: ಚಳಿಯಿಂದ ಮಣ್ಣನೊಳಗಿನ ಸಣ್ಣ ಹರಳುಗಳು ಸೋಸಿದ ಹಾಗಾಗಿ ಬುಡಕ್ಕೆ ಕೂತು ಸೂಸುಮಣ್ಣು ಮಾತ್ರ ಉಳಿಯುತ್ತದೆ (ಮುಂಬಯಿ. ೬-೧೬೩); ನನ್ನ ಪರಮಮಿತ್ರರೊಬ್ಬರು . . . ಎಲ್ಲಿಯೂ ನಸ್ಯ ದೊರಕದೆ ಮೂಗಿನಲ್ಲಿ ಸೂಸುಮಣ್ಣು ಸೇದಿ ಸಮಾಧಾನ ಪಟ್ಟುಕೊಳ್ಳುವುದನ್ನು . . . ಕಂಡಿದ್ದೇನೆ (ಮುಂಗಾಪು. ೬೬).

[ಸೂಸು$_1$ + ಮಣ್ಣು (< ಮಣ್)]

**ಸೂಸುಮೋಹನ** (ನಾ). ತುಂಬಿದ ಚೆಲುವು; ಎದ್ದುಕಾಣುವ ಸೌಂದರ್ಯ: ಸೂಸುಮೋಹನದ ಸಿಂಗರದೊಟ್ಟು ತನ್ನ ವಿಲಾಸಿನಿಯರ ಬಳಸಿನೊಳು ಪೊಸರಲನ ಪುಣ್ಯದೇವತೆಯಂತಿರ್ದ ಭಾಸುರಾಂಗಿಯ ಕಂಡರಾಗ (ಭರಚ. ೪೦-೪೪).

[ಸೂಸು$_1$ + ಮೋಹನ]

**ಸೂಸುವಲೆ** (ನಾ). ಒಂದು ಬಗೆಯ ಬಲೆ; ಚಿಮ್ಮಿ ಬೀಸುವ ಬಲೆ: ಸೂಸುವಲೆಗಳಿಂದೆ ಬೇಂಟೆಯ ಜನರಲ್ಲಿ ಘಾಸಿಮಾಡುವರು ಮೃಗಗಳ (ರಾಮವಿ. ೧೫-೬೫). [ಸೂಸು$_1$ + ಬಲೆ$_1$]

**ಸೂಸುವೆಳಗು** (ನಾ). ಹೊರಚೆಲ್ಲುವ ಕಾಂತಿ: ಬಿಂಬಾಧರದ ಕೆಂಬೆಳಗು ಸುಲಿಪಲ್ಲ ಸೂಸುವೆಳಗಿನೊಳವೆರದು ವದನವಿಧುಮಂಡಳದ ಪಾಟಲದ್ಯುತಿಯಂತೆ ಪಸರಿಸಿ ಬೀದಿವರಿಯೆ (ರಾಜಶೇ. ೫-೧೯ ವ). [ಸೂಸು$_1$ + ಬೆಳಗು$_2$]

**ಸೂಸುವೆಳ್ಪು** (ನಾ). = ಸೂಸುವೆಳಗು: ಸುಲಿಪಲ್ಗಳ ಸೂಸುವೆಳ್ಪಿನಿಂದೆಸೆವ ದುಕೂಲ ದೊಂದುಡೆಯಿನಂದಮೃತಾಂಶುಮರೀಚಿಯಿಂದೆ ನಿರ್ಮಿಸಿದಪ್ಪೊಲೊಪ್ಪಿದಳ್ ಧವಳಲೋಚನೆ ವಾಸವದತ್ತೆ ದೇಸೆಯಿಂ (ಲೀಲಾವ. ೧೧-೬೭). [ಸೂಸು$_1$ + ಬೆಳ್ಪು$_1$]

**ಸೂಸೂಕರಿಸು** (ಕ್ರಿ). ಸೂ ಎಂದು ಶಬ್ದ ಮಾಡು; ಸುಯ್ಯೆನ್ನು: ಬುಸುಗುಟ್ಟುವ ಪಾತಾಳದ ಹಾವೊ? . . . ಹೊಸತಿದು ಕಾಲನ ಕೋಣನ — ಓವೊ! ಉಸಿರಿನ ಸುಯ್ಯೋ? — ಸೂಸೂಕರಿಸುತ ಬರುವುದು! (ಕಪಪು. ೨೭-೧). [? + - ಇಸು$_3$]

**ಸೂಳ್$_1$** 'ಸೂಟ್' ನೋ.

**ಸೂಳ್$_2$**, ಸೂಳು$_2$ (ನಾ). ೧. ಜೋರಾದ ಧ್ವನಿ; ಆರ್ಭಟ; ಬೊಬ್ಬೆ: ಮೊಳಗಿತು ಸೂಳಡರಿ ಸನ್ನಾಹ ಪುದುಭೇರಿ (ಸಾಳ್ವಭಾ. ೧೮-೬೬). **ಸೂಳು$_2$**: ೧. ಸೂಳು ಮಿಗೆ ಗರ್ಜಿಸುವ ಘನನಿಸ್ಸಾಳಕೋಟಿಯ ಗಡಣದೊಳು ಕೆಂಗೋಲ ಮಳೆಗಜೆಯುತ್ತ ಗಂಗಾಸುತನ ಕೆಣಕಿದರು (ಕುಮಾಭೀ. ೫-೧೮); ಸೂಳು ಮಿಗೆ ಸಂಗರದ ರವ ದುಬ್ಬಾಳಿಸಲಿ ತಿರುಹಿಟ್ಟನರುಣಜಲಾಳಿ ಝೋರಿಡೆ ಋಷ್ಯಮೂಕಮಹಾಮಹೀಧರಕೆ (ತೊರರಾ. ४-೨-೬೭). ೨. ಆಧಿಕ್ಯ; ಹೆಚ್ಚಳ: "ಕಣನೊಳಂ ಪೆರ್ಚುಗೆಯೊಳಂ ಸೂಳೆನಿಕ್ಕು" (ಶಶರ. ೧೧೦); ಪರಿಗತವಾದ ಲಜ್ಜೆಯ ಸುಯ್ಲ ಸೂಳಿನಲಿ ಬೆಕ್ಕಸಂಬಡುತ ಸುರಪತಿ ತನ್ನಿಕ್ಕೆಲದ ಕರತಳದ ಮುಸುಕಿನ ದುಕ್ಕಡಿಯ ದುಮ್ಮಾನದಲಿ ಹೊಕ್ಕನು ವನಾಂತರವ (ತೊರರಾ. ೬-೨೬-೨). [?]

**ಸೂಳ** 'ಸೂಲ$_2$' ನೋ.

**ಸೂಳಗಿ** (ಕ್ರಿ). ೧. ಶಬ್ದಮಾಡು; ಅಬ್ಬರಿಸು: ರಣದ ಮುಂಗುಡಿಗಹಳೆಗಳ ಸಂದಣಿಯ ಸೂಳಗಿವಖಿಳಲಗ್ಗೆಯ ರಣವಜೆಯನೊಡೆಬಡಿದು ಬೆರಸಿದರರಿವರೂಥಿನಿಯ (ತೊರರಾ. ೬-೨೧-४); ಸೂಳಗಿವ ಕಹಳೆಗಳ ರವ ನಿಸ್ಸಾಳಭೇರೀಶಂಖ ರವ ದಿಗುಜಾಲವನು ಬಿಡೆ (ನಿಭಾಗ. ೧೦-೫೯-೬೫). ೨. ತೀವ್ರವಾಗು; ಅಧಿಕವಾಗು: ಸೂಳಗಿವ ಬಲು ಚಿಂತೆಯಲಿ ಭೂಪಾಲ ಮರಣದ ಮೇಲೆ . . . ಅವನೀಪಾಲಪದವಿಗೆ ಕೈಕೆಯ ಕ್ಷಿತಿಪಾಲಕನ ಮೊಮ್ಮಗನ ಕರೆಸಲು ಮಾಡಿದರು ಮನವ (ತೊರರಾ. ೨-೫-೩೨).

[ಸೂಳು$_2$ (< ಸೂಳ್$_2$) + ಅಗಿ$_1$]

**ಸೂಳಡಸು** (ಕ್ರಿ). ಶಬ್ದವು ಆವರಿಸು, — ತುಂಬು: ನಡೆದುದುರುಸನ್ನಾಹದಲಿ ಸೂಳಡಸಿ ಮೊಜೆವ ಗಭೀರಭೇರಿಯ . . . ತೇರಿನ ನಿಡುವರಿಯ ಕಾಲಾಳ ಕಳಕಳವಾಯ್ತು ರಣದೊಳಗೆ (ಕುಮಾದ್ರೋ. ೯-೧೨); ಸೂಳಡಸಿ ಪೊಡೆವ ಬಹುವಿಧವಾದ್ಯದ ಮುದದಿ ಮುಂದುಲಿವ ಕಂಚುಕಿಯ ಕಳಕಳದಲೆಯ್ದಿದನು . . . ಸೌಂದರಭೂಪನು (ಸೌಂದಪು. ४-೮೦). [ಸೂಳು$_2$ (< ಸೂಳ್$_2$) + ಅಡಸು]

**ಸೂಳಪಾಣಿ** 'ಸೂಲಪಾಣಿ' ನೋ.

**ಸೂಳಯಿಸು, ಸೂಳಯ್ಸು, ಸೂಳವಿಸು, ಸೂಳೈಸು** (ಕ್ರಿ). ೧. (ಕೆಲವು ವಾದ್ಯಗಳಂತೆ) ಜೋರಾದ ಧ್ವನಿ ಮಾಡು; ಭೋರಿಡು; ಅಬ್ಬರಿಸು: ಸೂಳಯಿಸಲ್ ನಿಸ್ಸಾಳಮನದಟಾಭೀಳಧ್ವನಿ ಸರ್ವೋರ್ವೀತಳಮಂ ತಾಳಿದನಾ ನರನಾರಾಯಣನೊಜಿಗಿದ ಹಕ್ಕೆಯ ಹಾವ (ಜಯಕಾ. ೬-೧೪); ಊಳಿದುವು ಪೇರ್ಗಹಳೆಗಳು ನಿಸ್ಸಾಳ ದುಂದುಭಿ ಮೊಳಗೆ ಪೆರ್ಬಜೆ ಸೂಳಯಿಸಿದುವು ಘಂಟೆ ಜಯಘಂಟೆಗಳುಲಿದವಾಗ (ಶಂಕದಾ. ೨-೫೩). ೨. ಕಿರಿಚಿಕೊಳ್ಳು; ಕೂಗು: ಸೀಳುತಿಹ ದನಿಯನೀ ಸಣ್ಣೊಡಲಿನ ಆಳದಿಂದೆಳೆಯುತ್ತ ಸೂಳಯಿಸುತಿಹುದೆನ್ನ ಚಾಳಿಯನು ನೆಮ್ಮಲಾರದೆ ಅಳಲಿದು (ಅರುಣ. ೧೩-೧೦). ೩. ಶಬ್ದವಾಗುವಂತೆ ಮಾಡು; ಧ್ವನಿಯನ್ನುಂಟುಮಾಡು: ದಾರಿಯಲ್ಲಿ ಸಾಲಾಗಿ ಇರಿಸಿದ್ದ ಮೃದಂಗ ಭೇರಿ ನಗಾರಿಗಳ ಕುಡುಹುಗಳನ್ನು ಹಿಡಿದು ನೋಡಿ, ಮೆಲ್ಲಗೆ ಬಡಿದು

ಸೂಳಯಿಸಿ ಆಲಿಸಿ ಕೇಳಿದಳು (ಸವತಿ. ೮೪). ೪. **ಹೊಡೆ;** ಬಡಿ; ತಟ್ಟು: ''ಸೂಳಯಿಸಿತೆನಲ್ ಪೊಯ್ದುದು'' (ಭಾರಸ. ೪೦). **ಸೂಳಯ್ಸು :** ೧. ಪೊಡೆವ ಭೇರಿಯ ಸೂಳಯ್ಪ ನಿಸ್ಸಾಳದ ಪೂರಯಿಪ ಶಂಖದ ಬಿರುದೆತ್ತಿ ಕರೆವ ಕಹಳೆಗಳ (ಗಿರಿಕ. ೧೦-೭೯ ವ); ಸೂಳಯ್ಸಿ [ಪಾಠಾಂ. ಳೈಸಿ] ದವು ನಿಸ್ಸಾಳಕೋಟಿಗಳು (ಕುವ್ಯಾಸ. ೩-೬೭). **ಸೂಳವಿಸು:** ೧. ಸೂಳವಿಸಿದುವು ಲಗ್ಗೆಯಲಿ ನಿಸ್ಸಾಳ ಕೋಟಿಗಳು (ಕುವ್ಯಾಭೀ. ೧-೪೩); ಹೇಳಲಳವಿಯೆನು ಭೇರಿ ನಿಸ್ಸಳ ಸೂಳವಿಸಿದವನಂತರಾಯರ ಮೌಳಿಮಣಿಗಣಖಚಿತ ಪಾದಪಯೋಜಪೂಪ್ಪಿದುದು (ಕೌಶಿರಾ. ೨-೬೦). ೪. ಬೋಳವಿಸಿದನು ಶಲ್ಯನನು ಮಿಗೆ ಸೂಳವಿಸಿದನು ಭುಜವನು . . . ಅಹಿತನ ಪಾಳಿಸುವಡಂಬಿದೆಯೆನುತ ತೂಗಿದನು ಮಾರ್ಗಣೆಯ (ಕುವ್ಯಾಕ. ೨೪-೪೯); ಬಾಲೆಯರ ನಿಡುಮುಡಿಯ ನೀರೂಳಿಪಾಲಿಗಳ ಕರತಳದಿ ಜಠರವ ಸೂಳವಿಪ ಹಾಹಾರವದ ಕಳಕಳದ ಕಳವಳವ ಕೇಳಿ (ತೊರರಾ. ೫-೮-೬೭).

**ಸೂಳೈಸು:** ೧. ಪಟಿದುಲಿವ ಕಹಳೆ ಮಿಳ್ಳಿಪ ಪಟಯಿಗೆ ಸೂಳೈಪ ತಮ್ಮಟಂ (ವರ್ಧಪು. ೮-೪೮); ಸೂಳೈಸಿದವು ನಿಸ್ಸಾಳ ಬಿರಿದುದಾ ಗಿರಿ . . . ಕುರುಗಳೆದೆ ಜರ್ಝರಿತವಾಯ್ತಬ್ಬರಕೆ (ಕುವ್ಯಾಸ. ೩-೬೨). ೪. ಕಟ್ಟವೇಟ್ಕುದುರೆಯಂ ಸೂಳೈಸವೇಟ್ಪೇರಿಯಂ (ಅರ್ಧನೇ. ೨-೫೩). ೫. ನೀಡು; ಚಾಚು (?): ಕಾಳಿಂಗಸರ್ಪ . . . ಅಡಿಗಡಿಗೆ ನಾಲಿಗೆಯ ಸೂಳೈಸಿ ತಗತೆಗದು ಬಲುಬೇಗದಿಂ ಹರಿದು ಬೆನ್ನಟ್ಟಿ ಬರಲು (ನಿಜಶ. ೯೪). [ಸೂಳು$_2$ (< ಸೂಳ್$_2$) + -ಇಸು$_3$]

**ಸೂಳಯ್ಸು** 'ಸೂಳಯಿಸು' ನೋ.

**ಸೂಳವಿಸು** 'ಸೂಳಯಿಸು' ನೋ.

**ಸೂಳಟಿ** 'ಸೂಟಟಿ' ನೋ.

**ಸೂಳಾಡು** (ಕ್ರಿ). ಶಬ್ದವಾಗುವಂತೆ ಮಾಡು(?): ಕಾಳಂಜಿವಿಡಿದು ಕೈಗುದಕವನೆಳೆಯೆ ಪಾಂಚಾಳಿಕೆ ಮೊದಲ ತಂಬುಲವಾ ಸೂಳಾಡಿಯುಗುಳ್ದು ವೀಳೆಯಗೊಂಡು ಗಾನದೊಳೋಲಾಡುತಿದ್ದರೇನೆಂಬೆ (ಭರಚ. ೧೧-೫೭).

[ಸೂಳ್$_2$ ? + ಆಡು$_1$]

**ಸೂಳಾದಿ, ಸುಳಾದಿ** (ನಾ). ೧. [ಸಂಗೀತ] ಹಾಡಿನ ಒಂದು ಪ್ರಕಾರ. ೨. ಈಗ ಪ್ರಚಾರದಲ್ಲಿರುವ ಏಳು ತಾಳಗಳಲ್ಲಿ ಪ್ರತಿಯೊಂದು: ಪುರಂದರದಾಸರು . . . ಅಲಂಕಾರಗಳನ್ನೂ ಗೀತಗಳನ್ನೂ ಕೀರ್ತನೆಗಳನ್ನೂ ಸುಳಾದಿಗಳನ್ನೂ ರಚಿಸಿದ್ದಾರೆ, ಈ ಕಾರಣ ಈಗ ಪ್ರಚಾರದಲ್ಲಿರುವ ಸಪ್ತತಾಳಗಳಿಗೆ ಸೂಳಾದಿತಾಳಗಳೆಂದು ಹೆಸರು ಬಂದಿದೆ (ಸಂಗೀಚಂ. ೫೯). ೩. ಒಂದು ರಾಗದ ಹೆಸರು(?): ಸೌರಾಷ್ಟ್ರ ಗುಂಡಕ್ರಿಯಾ ಲಲಿತ ಸೂಳಾದಿಯಲಿ ನಾಮಕೀರ್ತನೆಗಳ ಪಾಡಿ (ಕನಕ. ಧಾ. ೧೬೯-೫). **ಸುಳಾದಿ :** ೧. ಕೀರ್ತನೆಗಳು, ಉಗಾಭೋಗ, ಸುಳಾದಿ, ಪಿಳ್ಳಾರಿಗೀತೆಗಳು ಎಂದು ನಾಲ್ಕು ರೂಪಗಳು ಕಾಣಿಸುತ್ತವೆ (ಹೇಮಕೂ. ೧೦೪); ಶ್ರೀಪಾದರಾಯರು ಕನ್ನಡದಲ್ಲಿ ನೂರಾರು ಸುಳಾದಿಗಳನ್ನೂ ದೇವರನಾಮಗಳನ್ನೂ . . . ರಚಿಸಿದ್ದಾರೆ (ಸಂಗೀಚಂ. ೩೨೪). ೨. ನರಸಿಂಹಸ್ತುತಿ ಗೀತಪ್ರಬಂಧವ ಪಿಡಿದು ಸುಳಾದಿತಾಳದಲಿ ಕರದಭಿನಯುಗೂಡಿ ಕಡುಕುಶಲದ ನಾಟ್ಯದಿರವ ಮೆರೆದರಂಗನೆಯರು (ಕಂನವಿ. ೮-೬೨). [?]

**ಸೂಳಾಯತ** 'ಸೂಟಾಯ್ತ' ನೋ.

**ಸೂಳಾಯಿತ** 'ಸೂಟಾಯ್ತ' ನೋ.

**ಸುಳಾಯಿತ್ತ** 'ಸೂಟಾಯ್ತ' ನೋ.

**ಸೂಳಾಯ್ತ** 'ಸೂಟಾಯ್ತ' ನೋ.

**ಸೂಳಾಳ್ಕೆ** (ನಾ). ಆಳ್ವಿಕೆಯ ಸರದಿ, — ಪಾಳಿ: ಪಾಳಿಯಿಂದೋರೊರ್ವರೆಯ್ತಂದು ತಂತಮ್ಮ ಸೂಳಾಳ್ಕೆಗಮರ್ದಸವಳದ . . . ಆವಾವವಸ್ಥೆಗಳ್ಗೆಂತೆಂತು ಪಕ್ಕಾಗಿ (ಸಂಸಪ. ೨೮-೧೫). [ಸೂಳ್$_1$ (< ಸೂಟ್) + ಆಳ್ಕೆ]

**ಸೂಳಿ$_1$** (ನಾ). ಬಾಳೆಯ ಗಿಡದಲ್ಲಿ ಸುರುಳಿಯಾಗಿ ಸುತ್ತಿಕೊಂಡಿರುವ ಚಿಗುರೆಲೆ: ಬಾಳಮೃಣಾಳಹಾರಲತೆ ಬಾಟೆಯ ಸೂಳಿಯ ತಾಲವೃಂತಂ (ಆನಂಪು. ೭-೨೩).

[IP ಇದು 'ಸುಟಿ' ಎಂದಿರಬಹುದೆ?]

**ಸೂಳಿ$_2$** 'ಸೂಲಿ$_1$' ನೋ.

**ಸೂಳಿಭಕ್ತ** (ನಾ). ಶಿವನ ಭಕ್ತ: ಚೋಳದೇಶಪ್ರಾಂತಮಂ ಹರುಷದಿಂ ಪೊಕ್ಕು ಸೂಳಿಭಕ್ತರ ಮನಂ ನೋಡಲ್ ಮನಂ ಮಿಕ್ಕು (ಇಳಿರ. ದೇ. ೫೦-೧೨). [ಸೂಳಿ$_2$ (< ಸೂಲಿ$_1$) + ಭಕ್ತ]

**ಸೂಳಿವರ್** (ಕ್ರಿ). ಸುತ್ತಿಬರು; ತಿರುಗಿಬರು: ದೊಡ್ಡ ಬಿಲಂಗಳೊಳೋಡಿ ಪೊಕ್ಕು ಮೃಗರೆವುದು ಸೂಳಿವಪ್ಪ ಮೊಲಗಳ್ ನೆರೆದೊಪ್ಪಿದುವಲ್ಲಿ ಬೇಂಟೆಯೊಳ್ (ಸೂಕ್ತಿಸು. ೩-೧೧೯). [IP ಇದು 'ಸುಟಿವರ್' ಎಂದಿರಬಹುದೇ?]

**ಸೂಳು$_1$** 'ಸೂಟ್' ನೋ.

**ಸೂಳು$_2$** 'ಸೂಳ್$_2$' ನೋ.

**ಸೂಳು$_3$** (ನಾ). ಒಂದು ಬಗೆಯ ವ್ರಣ, —ಗಾಯ(?): ಮಣಸಿಲ . . . ನಲಅರಳ ಪುಡಿಯನ್ನು ಜೇನುತುಪ್ಪದಲ್ಲಿ ಕಲಸಿ ನಕ್ಕಲು ಛಳಿ ಹೆಚ್ಚಾದ ಜ್ವರದಸ್ಥಿಯಂ ಹಲವು ಸೂಳುಗಳಂ ಕೆಡಿಸುಗುಂ (ವಿಪ್ರವಿ. ೧೫೮). 'ಸೂಳುಕಿವಿ' ಪರಾ. [?]

**ಸೂಳುಂಡೆ** (ನಾ). ಒಂದು ಸಲಕ್ಕೆ ಕೊಪ್ಪರಿಗೆಯಿಂದ ಸಿದ್ಧವಾಗುವ (ಬೆಲ್ಲದ) ಉಂಡೆ: ಆಲೇಮನೆ ಸೂಳುಂಡೆ ದಿನ ೧ಕ್ಕೆ ಕಡಿಗೆ ಬೆಲ್ಲ ೫೦೦ ಹಾಲೇಮನೆ ೧ಕ್ಕೆ ವರ್ತನೆ ಗ ೧೧೦ (ಎಕ. XI, ಹಿರಿಯೂ.೮೮-೨೧; 1589). [ಸೂಳ್$_1$ (< ಸೂಟ್) + ಉಂಡೆ]

**ಸೂಳುಕಿವಿ** (ನಾ). ಹುಣ್ಣಾಗಿರುವ ಕಿವಿ: ಚಿತ್ರಮೂಲ, ಸಮುದ್ರಫಲ . . . ತುಪ್ಪಮಂ ಬಿಸಿ ಮಾಡಿ ಸೂಳುಕಿವಿಯಲೆರೆದು ಕಿವಿಗೆ ಅರಳೆಯಂ ಮುಚ್ಚಿ ಗಾಳಿ ಹೋಗದ ಹಾಗೆ ಅರಳೆಯನಿಕ್ಕಿ ತುಪ್ಪಮಂ ಬಿಡಲು . . . ಕೀವುರಸಿಗೆ ಸುರಿಯುವುದು ಮಾಣ್ಗುಂ (ವಿಪ್ರವಿ. ೨೦೩). [ಸೂಳು$_3$ + ಕಿವಿ$_3$]

**ಸೂಳುಗಂಕಣ** (ನಾ). (ಕಿಣಕಿಣಿಯೆಂದು) ಶಬ್ದವನ್ನುಂಟುಮಾಡುವ ಬಳೆ, — ಕಂಕಣ: ಕೇಳಿದಳು ಬಿನ್ನಹವನಾ ಸಿರಿಲೋಲ ಮಾಧವರಾಣಿ ಸಭೆಯಲಿ ಸೂಳುಗಂಕಣ ಕಡಗಹಸ್ತದಲಭಯವನು ಕೊಡುತ (ಕವಿಚ. II, ೪೧೨ ತುಲಸೀಮಹಾತ್ಮ್ಯ).

[ಸೂಳು$_2$ (< ಸೂಳ್$_2$) + ಕಂಕಣ]

**ಸೂಳುಗರೆ** 'ಸೂಟ್ಗರೆ' ನೋ.

**ಸೂಳುಗಹಳೆ** 'ಸೂಟುಗಾಳೆ' ನೋ.

**ಸೂಳುಗಾಜ** (ನಾ). ಸರದಿಯ ಪ್ರಕಾರ ಕೆಲಸ ಮಾಡುವವನು: ಚಿತ್ರವೆಂಬ ಸೂಳುಗಾಜ ಒಪ್ಪದ ಚೀಟ ತೋಚಿಯೆಂದಲ್ಲಿ ಸಿಕ್ಕಿದ ಜೀವವೆಂಬ ಸೆಟ್ಟಿ (ಸಕವ. ಕ. II, ೬೫೪-೨೪). [ಸೂಳು$_1$ (< ಸೂಟ್) + - ಕಾಜ]

**ಸೂಳುಚಿಂತೆ** (ನಾ). ಒಂದರ ಹಿಂದೆ ಒಂದು ಬರುವ ನಿರಂತರವಾದ ಯೋಚನೆ, —ಚಿಂತೆ: ಹೂಳಿದುಬ್ಬಿನ ಹುದಿದ ಮೋನದ ಸೂಳುಚಿಂತೆಯ ಬಲಿದ ಭೀತಿಯ ಮೇಲುದುಗುಡದ ದಡಿಯ ವದನದಲಿದ್ದುದಖಿಳಜನ (ಕುವ್ಯಾಗ. ೧೦-೧).

[ಸೂಳು$_1$ (< ಸೂಟ್) + ಚಿಂತೆ]

**ಸೂಳುತ್ತರ** (ನಾ). ಪ್ರತಿಯಾಗಿ ಕೊಡುವ ಉತ್ತರ; ಪ್ರತ್ಯುತ್ತರ: ತಾಳ ಮೇಳದ ಕೆಳೆಯರ ಮೇಳಾಪದೊಳ್ ಸೂಳುತ್ತರಂಗುಡುತ್ತಂ . . . ಪಚ್ಚೆಯಿಡುವ ಬಿಜ್ಜೋದರಿಯರಂ ಪಳಿವಚ್ಚರಿಯ ನಚ್ಚಣಿಯರಿಂ (ರಾಜಶೇ. ೧೨-೧೦೭ ವ).

[ಸೂಳ್$_1$ (< ಸೂಟ್) + ಉತ್ತರ]

**ಸೂಳುನಗೆ** (ನಾ). ಜೋರಾದ ನಗು; ಅಟ್ಟಹಾಸ: ಸೂಳುನಗೆ ಬಿಳಿನಗೆಯಲಡಿಗಡಿಗಾಳೆ ಮುಸುಗುಬ್ಬಸದಲಿದ್ದು ಕರಾಳಮತಿ ಸಂತೈಸಿ ನಜೆ ತನ್ನವರಿಗಿಂತೆಂದ (ಕುವ್ಯಾಸ. ೨-೭೭). [ಸೂಳು$_2$ (< ಸೂಳ್$_2$) + ನಗೆ]

**ಸೂಳುನುಡಿ** 'ಸೂಳ್ನುಡಿ$_1$' ನೋ.

**ಸೂಳುನೆನಹು** (ನಾ). = ಸೂಳುಚಿಂತೆ: ಸೂಳುನೆನಹಿನ ಸುಳಿಮನದ ಸಮಪಾಳಿ ಕೋಪದಲಳಿದ ಮೌನದ ಮೇಲುಬುದ್ಧಿಯ ಜೋಡಿ ಬೇಟೊಂದಾಯ್ತು ಭಾವದಲಿ (ಕುವ್ಯಾಸ. ೧೦-೧). [ಸೂಳು$_1$ (< ಸೂಟ್) + ನೆನಹು (< ನೆನವು)]

**ಸೂಳುಪಾಡು** 'ಸೂಟ್ಪಾಡು' ನೋ.

**ಸೂಳುಪಾಳಿ** (ನಾ). (ಒಂದು ಕ್ರಮಕ್ಕೆ ಅಳವಟ್ಟ) ಸರದಿ, —ಪಾಳಿ: ಜಾಣನ ಮೇಳದುದ್ದಂಡೆಯರು ಜೊತ್ತಿನ ಸೂಳುಪಾಳಿಯೊಳಂಗನೆಯರ್ಕೈದಿದರು ಗೋಪತಿಯ (ಅಕ್ರೂಚ. ೪-೧೫). 'ಸೂಟ್ಪಾಡು' ಪರಾ.

[ಸೂಳು$_1$ (< ಸೂಟ್) + ಪಾಳಿ$_3$ (< ಪಾಟಿ$_2$)]

**ಸೂಳುಪಾಳು** (ನಾ). = ಸೂಳುಪಾಳಿ: ಕರಡಿಯಲಿ ಕಪಿಗಳನು ಕಪಿಯಲಿ ಕರಡಿಗಳನಾ ಕರಡಿ ಕೋಡಗವೆರಡಬಿಲಿ ಮುಸು ಸಿಂಗಳೀಕವ ಸೂಳುಪಾಳಿನಲಿ ತಿರುಹಿಡುತ

(ತೊರಾ. ೬-೩೦-೭); ತರುಬಿ ಸುರಗಿಗಳಿಂದೆ ಶಿರಗಳ ತರಿದು ಚಂಡಾಡಿದರು ಶೂಲದೊಳಿರಿದು ಕೊಂದರು ಸೂಳುಪಾಳಿಂದಾಗ ಹುರಿಕಟಿಸಿ (ಅಂಬಿಕಾ. ೫-೨೫). [<ಸೂಟ್ಟುಡು]

**ಸೂಳುಪಾಳೆಯ** (ನಾ). ಸರದಿಯ ಪ್ರಕಾರ ಹೂಡುವ ಬಿಡಾರ: ತರುಣ ದಿಟ ಕೇಳಿಂದುಮೊದಲಾಗರಸಿ ನೀ ನಾಲ್ವರಿಗೆ ನಾವೆಡೆಮುಱಿದವರು ಬಿಟ್ಟವರು ನಿನ್ನಯ ಸೂಳುಪಾಳಯವ (ಬಪ್ಪಾವಿ. ೬-೫೩). [ಸೂಳು$_1$ (< ಸೂಟ್) + ಪಾಳೆಯ]

**ಸೂಳುಬಂಟ** (ನಾ). ಸರದಿಯ ಪ್ರಕಾರ ಕೆಲಸ ಮಾಡುವ ಸೇವಕ; ಸರದಿಯಾಳು: ನೆರೆದುದಲ್ಲಿಯದಲ್ಲಿ ಸೂಱೆಗೆ ಹರಿದುದಲ್ಲಿಯದಲ್ಲಿ ಮನ ಮತ್ಸರದ ಜಗಳಕೆ ಸೂಳುಬಂಟರು ಹೊಯ್ದರೊಳಗೊಳಗೆ (ಕುಪ್ಪಾಕ. ೧-೭).

[ಸೂಳು$_1$ (< ಸೂಟ್) + ಬಂಟ$_1$]

**ಸೂಳುಭಂಟಿಕೆ** (ನಾ). ವೇಶ್ಯಾಸಾಹಚರ್ಯಕ್ಕಾಗಿ ಮಾಡುವ ಸ್ಪರ್ಧೆ,— ಹೋರಾಟ: ಉಬ್ಬುನಗೆಯಲಿ ಮಾಯೆ ಹುಬ್ಬಿನೊಳಿಬ್ಬರಿಗು ಸನ್ನೆಯನು ಮಾಡುತ ಹಬ್ಬಿಸಿದಳವರವರಿಗುನ್ನತ ಸೂಳುಭಂಟಿಕೆಯ (ಅಂಬಿಕಾ. ೩೪-೯೧).

[☞ ಇದು 'ಸೂಳೆಬಂಟಿಕೆ' ಎಂಬುದರ ಅಪಲಿಖಿತವಿರಬಹುದು]

**ಸೂಳುಮಿಹ** (ನಾ). ಸರದಿಯ ಪ್ರಕಾರ ಮಾಡಿಸುವ ಸ್ನಾನ: ನಿನ್ನ ಕತ್ತಿಯನ್ನೂ ಆ ಬಲಿಮರವನ್ನೂ ತಮ್ಮ ನೊರೆನೆತ್ತರ ಸೂಳುಮಿಹದಿಂದ ತೊಳೆತೊಳೆದು ಸಿದ್ಧಮಾಡಿರಲಿ! (ಮಂತ್ರಶ. ೧೧೨-೧೯). [ಸೂಳು$_1$ (< ಸೂಟ್) + ಮಿಹ]

**ಸೂಳುರಿ** (ನಾ). ಅಧಿಕವಾದ ತಾಪ; ಅತಿಶಯವಾದ ಸಂತಾಪ: ಸೂಳುರಿಯ ನಿಡುಸುಯ್ಲು ಕಬ್ಬೊಗೆ ಜಾಳಿಗೆಯಲೇಕಾವಳಿಯ ಮುಕ್ತಾಳಿ ಕಂದಿತು ಖಿತಿಯ ಮೊನೆಯಲಿ ಮಸಗಿದನು ಭೀಮ (ಕುಪ್ಪಾಸ. ೧೦-೨೩). [ಸೂಳು$_2$ (< ಸೂಳ್$_2$) + ಉರಿ$_2$]

**ಸೂಳುವಚನ** (ನಾ). ಸರದಿಯ ಪ್ರಕಾರ ಆಡುವ ಮಾತು; ಸಂಭಾಷಣೆ: ಅಂತಾಡಿದ ಗಿಳಿಯ ಸೂಳುವಚನಮಂ ಮದನವಿಜಯರಾಯಂ ಸಕಲಪ್ರಾಣಿಗಳ ನುಡಿಯಂ ಕಲಿತು ಬಲ್ಲುದಱಿಂದಿಂತೆಂದಂ (ನನ್ನಚಾ. ೪-೨೩೫ ವ). 'ಸೂಳ್ನುಡಿ$_2$' ಪರಾ.

[ಸೂಳು$_1$(< ಸೂಟ್) + ವಚನ]

**ಸೂಳುವರು** 'ಸೂಟ್ಟರು' ನೋ.

**ಸೂಳುವಾತು** 'ಸೂಟ್ಮಾತು' ನೋ.

**ಸೂಳುವೀಳೆಯ** (ನಾ). ಸರದಿಯ ಪ್ರಕಾರ ಕೊಡುವ ತಾಂಬೂಲ,— ವೀಳೆಯ: ಘನಶೀತಳೋಪಚಾರಗಳ ಅನುಭವಿಸುತ ಸೂಳುವೀಳೆಯಗೊಳುತ ಮೋಹನಶೀಲರಿದ್ದರೇನೆಂಬೆ (ಭರಚ. ೧೧-೧೧೬). [ಸೂಳು$_1$(< ಸೂಟ್) + ವೀಳೆಯ]

**ಸೂಳುವೊಯಿಲು** (ನಾ). (ವಾದ್ಯಗಳ) ಕ್ರಮವಾದ ಹೊಡೆತ,— ಬಡಿತ: ಲಗ್ಗೆ ಮಸಗಿತು ಸೂಳುವೊಯಿಲಿನ ಬೊಗ್ಗಿನಲಿ ಮುಂಕೊಂಡು ಮೋಹರವೊಗ್ಗೊಡೆದು ಹೆಣಗಿದುದು ಕೇಶಾಕೇಶಿಯುದ್ಧದಲಿ (ಕುಪ್ಪಾಭೀ. ೪-೯).

[ಸೂಳು$_1$ (< ಸೂಟ್)+ ಪೊಯಿಲು(< ಪೊಯಿಲ್)]

**ಸೂಳುವೊಯ್ಲು** (ನಾ). = ಸೂಳುವೊಯಿಲು: ಒದಱೆ ಮೇಲಿಕ್ಕಿದರು ನಿಸ್ಸಾಳದ ನಿರಂತರ ಸೂಳುವೊಯ್ಲಿನ ಹೊದಱುಗಳ ಹೊಸಮಸೆಯಡಾವ್ವದ ಸಾಲ ಸಂದಣಿಯ ಸದರವೀ ಹೊತ್ತೆನುತ (ಕುಪ್ಪಾದ್ರೋ. ೧೦-೩೦).

[ಸೂಳು$_1$ (< ಸೂಟ್) + ಪೊಯ್ಲು(< ಪೊಯಲ್)]

**ಸೂಳುಸುಯ್ಲು** (ನಾ). ದೀರ್ಘವಾದ ಉಸಿರು; ಮೇಲಿಂದ ಮೇಲೆ ಬರುವ ನಿಟ್ಟುಸಿರು: ಮೇಲುದುಗುಡದ ಮುಖದ ಚಿಂತೆಯ ಜಾಳಿಗೆಯ ಜಡಮನದಲಿದ್ದರು ಸೂಳುಸುಯ್ಲಿನ ಹೊಯ್ಲು ನಾಸಾಪುಟದ ಬೆರಳಿನಲಿ (ಕುಪ್ಪಾಅ. ೧೭-೧).

[ಸೂಳು$_2$ (< ಸೂಳ್$_2$) + ಸುಯ್ಲು (< ಸುಯ್ಯಲ್)]

**ಸೂಳೆ$_1$** (ನಾ). ವ್ಯಭಿಚಾರವನ್ನು ಮಾಡುವವಳು; ಹಾದರಗಿತ್ತಿ: "ವಾರಸ್ತ್ರೀ, ಗಣಿಕಾ, ವೇಶ್ಯಾ, ರೂಪಾಜೀವಾ — ಈ ೪ ಸೂಳೆ" (ನಾಚಿರಾ. ೧೧೭); ಚೋ(ಲೋ)ಕಮಹಾದೇವಿಯರ ದೇಗುಲದ ಸೂಳೆ ಗೋಯಿನ್ದಪೊಡ್ಡಿಯ ಮಗಳು (ಇಇ. XI, ೧೨೫-೪; 778); ಸೋಂಬನಂ ಮೆಚ್ಚಿ ಬೇಱೂರ್ಗೆ ಪೋದ ಸೂಳೆಯಂತೆ (ಕಾವ್ಯಸಾ. ೫೨೯ ಶೂದ್ರಕ); ಸೂಳೆಗೆ ಹುಟ್ಟಿದ ಕೂಸಿನಂತೆ ಆರನಾದಡೆಯೂ ಅಯ್ಯಾ ಅಯ್ಯಾ ಎನಲಾಱೆ (ಬಸವ. ೩೪೭); ದೇವತೆಯಾಗಿ ಸೂಳೆಯಾಗಿರುವುದಕ್ಕಿಂತ ಮಾನವಿಯಾಗಿ ಸತಿಯಾಗಿರುವುದೇ ನನಗೆ ಹಿತ (ಮಹಾಣ. ೨೯೦); ಸೂಳೆ ಮುಪ್ಪಾಗಿ ಜೋಗಿತಿಯಾದಳು (ಗಾದೆ). [<— ತಮಿ. ಚೂಳ್ಳೆ; ಮಲ. ಚೂಳ; ತುಳು. ಸೂಳೆ; ಕೊಡ. ಚುಳೆ; ಕೋತ. ಚುಳ್]

**ಸೂಳೆ$_2$** (ನಾ). ಒಂದು ಬಗೆಯ ಸಸ್ಯ: (ಮೃಜಿಗ. ೬-೪೬). [?]

**ಸೂಳೆಕೇರಿ** 'ಸೂಳೆಗೇರಿ' ನೋ.

**ಸೂಳೆಗ** (ನಾ). ಜಾರ; ವ್ಯಭಿಚಾರಿ: ಸೂಳೆ ಪಲರ್ಪಿಟರೊಳ್ಳಿರರ್ದುಂ ದಾಳಿಪರೊಲ್ವವೊಲಲ್ಲರುಮಂ ಭೂಪಾಲನುಮಂತೆ ನಿಜಾಂಗನೆಯರ್ಗುಂ ಸೂಳೆಗನಾಗೆ ಸುಖಂ ದೊರೆಕೊಳ್ಗುಂ (ಮದಕ. ೮-೬೦); ಭಂಡಾರದರ್ಥಮಂ ಸೂಳೆಗಂಗಿತ್ತು ಮುಂಕೊಂಡದರ್ಕೊಂದು ಬಗೆಯಂ ಬೇಱೆ ನೆಗಳದುದ್ದಂಡವೃತ್ತಿಯೊಳಿಳಾಪತಿಯನಿನಿಸುಂ ಲೆಕ್ಕಿಕ್ಕದೆ (ಪದ್ಮರಾ. ೬-೩). [ಸೂಳೆ$_1$ + -ಗ$_2$]

**ಸೂಳೆಗಾರ** 'ಸೂಳೆಗಾಱ' ನೋ.

**ಸೂಳೆಗಾರಿಕೆ** (ನಾ). ವೇಶ್ಯಾವೃತ್ತಿ; ವ್ಯಭಿಚಾರ: ಕಾತ್ಯೂಷ ತನ್ನ ಬಂಧನಕ್ಕಾಗಿ ಲಜ್ಜೆಗೊಂಡಿದ್ದಳೇ ಹೊರತು ಸೂಳೆಗಾರಿಕೆಗಲ್ಲ (ಪುನರು. ೧೯೭); ನಮ್ಮ ಸಮಾಜದಲ್ಲಿ ಗಂಡಸು ಕೆಟ್ಟರೂ ಚಿಂತೆಯಿಲ್ಲ . . . ಸೂಳೆಗಾರಿಕೆ ನಡೆಸಿ ಒಳ್ಳೆಯವನಾಗಿ ಸನ್ಯಾಸ ತೆಗೆದು ದೇವರಾಗುತ್ತಾನೆ (ಆಲಹೂ. ೧೧೦). [ಸೂಳೆಗಾರ(< ಸೂಳೆಗಾಱ) + -ಇಕೆ]

**ಸೂಳೆಗಾಱ, ಸೂಳೆಗಾರ** (ನಾ). = ಸೂಳೆಗ: ಸೂಳೆಗಾಱನಿಗೆ ತುಳಸಿಮಾಲೆಯ ಶೃಂಗಾರವೇಕೊ (ಪುರಂದ. ಧಾ. ೨-೧೧೦-೪); ನಂಬೆ ನಾಂ ಬಲಗಯ್ಯ ಕೊಡು ಸೂಳೆಗಾಱಗೆತ್ತಣ ಸತ್ಯ (ಚೀರಮ. ೮-೧); ಸೂಳೆಗಾಱಂಗೆ ಸೊಗಸಕ್ಕೆ (ಚಕವಿ. ೬-೧೭೨).

**ಸೂಳೆಗಾರ**: 'ಸೂಳೆಗಾರಿಕೆ' ಪರಾ. [ಸೂಳೆ$_1$ + -ಕಾಱ]

**ಸೂಳೆಗೆಯ್** (ಕ್ರಿ). ಜಾರತನವನ್ನು ಮಾಡು; ವ್ಯಭಿಚಾರ ಮಾಡು: ಜಾತಿಭೇದವಱಿದು ದಣ್ಡಂ ವಿಶೇಷಂ ಮಾಟ್ಪರ್ ಮಾಣ ಸೂಳೆಗೇದಡೆ ಮೂಱು ಗದ್ಯಾಣಂ ಪ್ರಾಯಶ್ಚಿತ್ತಂಗೊಳ್ವನ್ನು (ಎಇ. XX, ೬-೩೮; 1012); ಪಣವುಂಡಂ ಬಂದಿಯೊಳ್ಪಾಲಕನೆ ಪಲಗೆಜೂಜಾಡಿದಂ ಸೂಳೆಗೆಯ್ದಂ (ಅರ್ಧನೇ. ೫-೩೭); ಸೂಳೆಗೆಯ್ವಾ ವೇಶದ ಸೂಂದಿಗೆ ನಾನು ಕೇವಲ ತನ್ನಿ (ಮಂತ್ರಶ. ೩೩-೨೫). [ಸೂಳೆ$_1$ + ಕೆಯ್$_1$]

**ಸೂಳೆಗೆಯ್ತ** (ನಾ). ಸೂಳೆಗಾರಿಕೆ ನಡೆಸುವುದು; ಹಾದರ; ವ್ಯಭಿಚಾರ: ಮುಗ್ಧಸಂಗಯ್ಯಂ . . . ಆನುಂ ಸೂಳೆಗೆಯ್ತಕ್ಕೆ ಪೋದಪನೆನ್ನಂ ಕಳುಪಲ್ವೇಳ್ಕುಮೆನೆ ಕೇಳ್ದು ಬಸವಂ ತನ್ನುಗ್ಧತೆಗೆ ಮುಗುಳ್ನಗೆ ನಕ್ಕು (ವೃಷವಿ. ೯-೩ ವ); ಸೂಳೆಗೆಯ್ತಕ್ಕೆ ಪೋಪೆನೆನ್ನಂ ಕಳುಪು ನೀಂ (ಕುಮಾಪು. ೪-೨೬೩). [ಸೂಳೆ$_1$ + ಕೆಯ್ತ$_1$]

**ಸೂಳೆಗೇರಿ, ಸೂಳೆಕೇರಿ** (ನಾ). ಗಣಿಕೆಯರು ವಾಸಿಸುವ ಸ್ಥಳ; ವೇಶ್ಯಾವಾಟಿಕೆ: "ವೇಶ: —ಸೂಳೆಗೇರಿಯ ಹೆಸರು" (ನಾಚಿರಾ. ೧೦೩); ಪಿರಿದೊಂದು ಪೊಟಲುಂ ಧವಳಾರಂಗಳುಂ ನೆಲೆಯ ಮಾಡಂಗಳುಂ ಸೂಳೆಗೇರಿಗಳುಂ . . .ಮಾನಸರ ಬರುವುಮಂ ಪೋಗುಮಂ ಕಂಡು (ವಡ್ಡಾರಾ. ೮೮-೨೧); ಮೇಳದ ನಾಗರಿಕ ವಿಟ ವಿದೂಷಕ ಪೀಠಮರ್ದಕರ್ಕಳ್ವೆರಸು ಕಾಮದೇವನೋಲಗಕ್ಕೆ ಬರ್ಪಂತೆ ಸೂಳೆಗೇರಿಯೊಳಗನೆ ಬರ್ಪುದುಂ (ಪಂಪಭಾ. ೪-೭೮ ವ); ಸುಮನೋಪಾಲನಗರದ ಸೊಗಸಿನಗ್ಗದ ಸೂಳೆಗೇರಿಯ ನಡುವೆ ಬಿದ್ದಳು ಬೆದಱೆ ಪೌರಜನ (ತೊರಾ. ೫-೧-೪). **ಸೂಳೆಕೇರಿ**: ಪುರುಷನಿಧಿಯೆನಿಪನನ್ತಂ ಧರೆ ನಿಲ್ಲಿನಮಿಾ ಸ್ವಯಂಭು ಸೋಮೇಶ್ವರ ದೇವರ ಮುನ್ದೆ ಭಕ್ತಿಯಿಂದಚ್ಚರಿಯಾಗಿರೆ ಸೂಳೆಕೇರಿಯಂ ಮಾಡಿಸಿದ (ಸೌಇಇ. XX, ೭೪-೨೭; 1112). [ಸೂಳೆ$_1$ + ಕೇರಿ]

**ಸೂಳೆಗೊಟ್ಟಿ** (ನಾ). ವೇಶ್ಯೆಯರ ಗುಂಪು,—ಗೋಷ್ಠಿ: ಮತ್ತಮೊರ್ವಳ್ ಸೂಳೆಗೊಟ್ಟಿಯೊಳ್ ಬೊಜಂಗವಾತಾಗಿ ತನ್ನ ಕೆಳದಿಗಿಂತೆಂದಳ್ (ಲೀಲಾವ. ೨-೭೯ ವ).

[ಸೂಳೆ$_1$ + ಗೊಟ್ಟಿ$_1$]

**ಸೂಳೆತನ** (ನಾ). ವೇಶ್ಯೆಯಾಗಿರುವಿಕೆ; ವ್ಯಭಿಚಾರ: ನುಡಿದುದು ಫಲಿಸಲಱೆಯದು ದೈವಗತಿಯಲಿ ಫಲಿಸಿತಾದಡೆ ರಾಜ್ಯಲಕ್ಷ್ಮಿಗೆ ಸೂಳೆತನವಹುದೆ (ಕುಪ್ಪಾಕ. ೫-೧೦); ಎಳವರೆಯದೊಳಗೆ ಧನಮಂ ಗಳಿಸದ ಸೂಳೆತನದಂಗದಿಂದೇಂ ಫಲಂ (ಚಿಬಪು. ೧೦-೬೯).

[ಸೂಳೆ$_1$ + -ತನ]

**ಸೂಳೆದೆಱೆ** (ನಾ). ವೇಶ್ಯಾವೃತ್ತಿಯ ಮೇಲೆ ಹಾಕುತ್ತಿದ್ದ ತೆರಿಗೆ,— ಸುಂಕ: ಮತ್ತಂ ದೇವರ್ಗ್ಗೊರ್ಮ್ಮೆ ಧ್ಯದೊಳೆ ನಡೆವೆತ್ತುಗಾಣವೊನ್ನು ಕೈಗಾಣವೊನ್ನು ಸೂಳೆದೆಱೆ ನಾಲ್ಕುಂ ಮಾನ್ಯ (ಎಕ. IX. ದಾವಣ. ೧೩೩-೨೫; 1071). [ಸೂಳೆ$_1$ + ತೆಱೆ]

**ಸೂಳೆಬಂಟ** 'ಸೂಳೆವಂಟ' ನೋ.

**ಸೂಳೆಬಂಟಿಕೆ** (ನಾ). ವೇಶ್ಯೆಯರ ಸಾಹಚರ್ಯಕ್ಕಾಗಿ ಮಾಡುವ ಸ್ಪರ್ಧೆ,— ಹೋರಾಟ: ಮೇಲೆಮೇಲ್ಕೆತಪ್ಪ ವೀರಭಟಾಳಿಯೊಡನಲ್ಲಿಂದ ಸುಭಟರು ಸೂಳೆಬಂಟಿಕೆಯಿಂದ ಹೊಯ್ದಾಡಿದರು ನಾಕದಲಿ (ಕುಮಾ.ಭೀ. ೫-೨೦); ಸಗ್ಗದ ಸೂಳೆಬಂಟಿಕೆ ಮಿಗಿಲಾದುದೆಂದು (ಕುರಾಸಾಂ. ೧೩-೧೧೯); ಜೂಜಾಟಕೆ ಸೂಳೆಬಂಟಿಕೆ ರುಣದ ಸಂವಾಜ . . . ವಾಜದು ನಿತ್ಯಕೃತ್ಯದಲಿ (ಪ್ರೋಹತ. ೨೦-೨೬); **ತೊಟ್ಟು** ಪೂಗಣೆಗಳಂ ಮನಸಿಜಂ ಹೊಂಚಿ ನಿಲೆ ಮುಟ್ಟಿ ತಮ್ಮೊಳ್ ವಿಟರ್ ಸೂಳೆಬಂಟಿಕೆಗೆ ನಿಲೆ (ಚಿಬಪು. ೧೦-೧೮). [ಸೂಳೆಬಂಟ (< ಸೂಳೆವಂಟ) + -ಇಕೆ]

**ಸೂಳೆಬಾಟಿಕೆ** (ನಾ). = ಸೂಳೆಬಂಟಿಕೆ: ಸೂಳೆಬಾಟಿಕೆಯ ಜಗಳಕಾಗ ರತಿಶಾಸ್ತ್ರ ದಾಳಾಪದ ನ್ಯಾಯಗಳ ಹೇಳಿ ಬಿಡಿಸಿ ಕಲಹವ ನಿಲಿಸುವರ ಸಮ್ಮೇಳದ ಬೀದಿಯೊಪ್ಪಿದುದು (ಕಂನವಿ. ೬-೧೯೬). [< ಸೂಳೆಬಂಟಿಕೆ]

**ಸೂಳೆಬೊಟ್ಟುಗಿಡ** (ನಾ). ಒಂದು ಬಗೆಯ ಗಿಡ: ಪಾಪಟೆ, ಪಾವಟೆ, ತರಣಿ, ಸೂಳೆಬೊಟ್ಟುಗಿಡ (ಮೈಡಿಗ್ರಿ.೬೦-೧೨೦೩). [? + ಗಿಡ (< ಗಿಡು)]

**ಸೂಳೆಮನೆ** 'ಸೂಳೆವನೆ' ನೋ.

**ಸೂಳೆಮಾತು** (ನಾ). (ಆಲಂ) ಬೆಡಗಿನ ನುಡಿ; ಒಯ್ಯಾರದ ಮಾತು: ಪಂಜರ ದೊಳ್ ಗಿಳಿಯನಿರಿಸಿ ನಾನಾ ಪ್ರಕಾರದ ಸೂಳೆಮಾತುಗಳಂ ಶೃಂಗಾರ ವೃತ್ತಂಗಳುಮಂ ಕಲಿಸುತ್ತುಂ ಪೊನ್ನ ಪರಮಸ್ನೇಹದಿಂ (ಧರ್ಮಾಮೃ. ೧೨-೧೪೯).

[ಸೂಳೆ$_1$ + ಮಾತು$_1$]

**ಸೂಳೆಯ** (ನಾ). ಹಾದರವನ್ನು ಮಾಡುವವನು; ವ್ಯಭಿಚಾರಿ: ತಮ್ಮ ಸೆಟ್ಟಿಯ ತಮ್ಮ ರುದ್ರದತ್ತನೆಂಬೊಂ ಕರಂ ವ್ಯಾಳನುಂ ಸೂಳೆಯನುಮಾಗಿಪ್ಪೊನಾತನಂ ಕರೆದಿಂತೆಂದಳ್ (ಬಂಹರಿ. ೩-೨೯ ವ). [ಸೂಳೆ$_1$ + -ಅ$_7$]

**ಸೂಳೆಯಾಡು** (ಕ್ರಿ). ಜಾರತನ ನಡೆಸು; ವ್ಯಭಿಚಾರ ಮಾಡು (?): ಇಲಿ ಮೇಗೆ ಬಿದ್ದುದು ಕಪ್ಪೆಯೆಂದು ನಾಯ್ಗಳಿಗೆ ಪೋ ಜೋಗಮ್ಮ ಬಾಳುಬಾಳೆನುತದೊರ್ವಳ್ ಕುಡಿಚಿ ಸೂಳೆಯಾಡುತ್ತಿದ್ದಳು (ಚಿಬಪು. ೧೧-೭೮). [ಸೂಳೆ$_1$ + ಆಡು$_1$]

**ಸೂಳೆವಂಟ, ಸೂಳೆಬಂಟ** (ನಾ). ವೇಶ್ಯೆಯರ ನಿರ್ವಾಹಕ,— ಮೇಲ್ವಿಚಾರಕ: ಬಿರುದರ ಬಿಂಕಮಂ ಪೊಗಟ್ಟ ಕೂಂಟಣಿತೋಳ್ಗೆಳಸಿರ್ಪ ಸೂಳೆವಂಟರ ಸೊಬಗಿಂಗೆ ಮೈಮಱೆದು ಮೆಚ್ಚುವ ಬಿಂಕದ ಬರ್ದೆಗೆಯ್ವದೊಳ್ (ಲೀಲಾವ. ೨-೭೨). **ಸೂಳೆಬಂಟ:** ಪಂದಿ ಕೆಯ್ಯಂ ತಿಂದೊಡೆ ಕತ್ತೆಯ ಕಿವಿಯಂ ಕೊಯ್ದರೆಂಬಂತೆ ಸೂಳೆಬಂಟಂಗಾಱದೆ ಶಂಖದ ಗೊರವನಂ ಬಡಿದರೆಂಬಂತೆ (ಧರ್ಮಾಮೃ. ೬-೬೩). [ಸೂಳೆ$_1$ + ಬಂಟ$_1$]

**ಸೂಳೆವನೆ, ಸೂಳೆಮನೆ** (ನಾ). ವ್ಯಭಿಚಾರ ನಡೆಸುವವಳ ಮನೆ ; ವೇಶ್ಯಾಗೃಹ: ಲತಾಗೃಹಮಿಲ್ಲದ ಗೊಟ್ಟಿಗಾಣರಿಲ್ಲದ ಕಡೆಪಟ್ಟ ಸೂಳೆವನೆಯಿಲ್ಲದವಿಲ್ಲವು ಸೂಳೆಗೇರಿಯೊಳ್ (ಮಲ್ಲಿಪು. ೨-೫೭). **ಸೂಳೆಮನೆ:** ಅರಮನೆಗಲ್ತು ಸೂಳೆಮನೆ ಗಲ್ತು ಸವಣ್ಣನೆಗಲ್ತು ಕೂಡೆ ಬಲ್ಲರ ಬಗೆಗಲ್ತು ವಸ್ತುಕೃತಿಯಂ ಸಲೆ ಪೇಟ್ಟುದು (ಸೂಕ್ತಿಸು. ೧-೬೧); ಸುರರಿಂ ವಂದ್ಯನ ಸುತ್ತದ ಕಾಲು ಸೂಳೆಮನೆ ಮಂಚದ ಕಾಲು (ಪುರಂದ. ೨-೧೭೫-೧). [ಸೂಳೆ$_1$ + ಮನೆ]

**ಸೂಳೆವಳ, ಸೂಳೆವಳ್ಳ, ಸೂಳೆವಾಳ** (ನಾ). (ದೇವಸ್ಥಾನದ) ಸೂಳೆಯರ ಮೇಲ್ವಿಚಾರಕ; ಗಣಿಕೆಯರ ಗೃಹಕಾರ್ಯನಿರ್ವಾಹಕ: ತಪೋಧನಸತ್ರಕ್ಕಂ ಪ(೦)ನ್ನಿರ್ವ್ವರ್ಸ್ಸೂಳೆಯರ್ಗ್ಗಂ ಸ್ಸೂಳೆವಳಗಂ ವಂಚಿಗಂಗಂ ಪಱೆಕಾಱರ್ಗ್ಗಂ ಪಾತ್ರಕ್ಕಂ . . . ಸರ್ವ್ವನಮಸ್ಯಮಾಗೆ ಕುಡೆ (ಸೌಇಇ. IX-i, ೮೦-೧೫; 1018); ಕಳೆ ಕರ್ಪೂರದ ಕಸವಂ ತಳಿ ಕತ್ತುರಿನೀರನಿಕ್ಕು ಮುತ್ತಿನ ಕಡೆಯಂ ಬೆಳಗು ಮಣಿದೀಪಮಂ ಪೊಗೆಗೊಳಿಸಗರುವೆನೆಂಬರಲ್ಲಿ ಸೂಳೆವಳರ್ಕಳ್ (ಜಗವಿ. ೯-೧೦೦); ಪಡೆಯ ಮೇಲ್ವಿಚಾರಕ 'ಪಡೆವಳ' ಇದ್ದಂತೆ, ದೇವಸ್ಥಾನದ ಸೂಳೆಯರ ಮೇಲ್ವಿಚಾರಕ ಸೂಳೆವಳ ಇರಬಹುದು (ಕಶಾಅ. ೧೮೩). **ಸೂಳೆವಳ್ಳ:** ಆತಂಗಂ ನಡಮಣ್ಣೆ ಪನ್ನಿರ್ಮ್ಮತ್ತರ್ನ್ನಲ್ಲ ಮಣ್ಣೆ ಖ XXX ವಕ ಸೂಳೆವಳ್ಳ XX ಟು ಇದನಟಿದ ಪಳ್ಳುಮಹಾಪಾ XXX ಬೆಸಗೆಯ್ದವನ್ (ಎಕ. XI, ದಾವಣ. ೧೯-೮; 930); ಸಂಘ = ಸೂಳೆವಳ್ಳರು ಮೊದಲಾಗೊಡೆಯವರ್ಗಳಾ ನೆರವಿಗಳುಂ (ನೀತಿವಾ. ೨೦-೧೪). **ಸೂಳೆವಾಳ:** ಸೂಳೆವಾಳಂಗೆ ಮತ್ತರ್ಪ್ಪನ್ನೆರಡು (ಸೌಇಇ. IX-i, ೧೧೧-೫೦; 1045); ಸೂಳೆವಾಳ ಮಾರಮಯ್ಯ ಶ್ರೀಮನ್ಮಹಾಮಣ್ಡಳೇಶ್ವರಂ ಬಿಜ್ಜಳದೇವಗ್ಗೆ[ಗೆ] ಬಿನ್ನಪಂಗೆಯ್ದು (ಸೌಇಇ. VI, ೫೭೫-೧೩; 1064); ಕುಳ್ಳಿರ್ದರಂದೋಳಿಗಳಿಂ ದಂಡಾಧಿಪರ್ . . . ನಗೆಕಾಱರ್ ವಾದ್ಯಕರ್ ಚಿತ್ರಕರಣುಗಿನವರ್ ಸೂಳೆವಾಳರ್ ಪಯಾಳರ್ (ಅನಂಪು. ೨-೨೬).

[ಸೂಳೆ$_1$ + -ವಳ]

**ಸೂಳೆವಳ್ಳ** 'ಸೂಳೆವಳ' ನೋ.

**ಸೂಳೆವಾದ** (ನಾ). ವೇಶ್ಯೆಯರನ್ನು ಕುರಿತ ವಿವರಣೆ,—ವ್ಯಾಖ್ಯಾನ: ಚಟುಲತರಘಟಚೇಟೀವಿಚೇಷ್ಟಿತಂಗಳಂ ಪೆಱತಪ್ಪ ಸೂಳೆವಾದದ ನಾಟ್ಯಾಡುಗಳೊಳ್ ಕೇಳ್ದು (ಚಿಕವಿ. ೬-೧೫೭ ವ, ಪುಟ ೧೭೭). [ಸೂಳೆ$_1$ + ವಾದ]

**ಸೂಳೆವಾಳ** 'ಸೂಳೆವಳ' ನೋ.

**ಸೂಳೆವಿಜ್ಜೆ** (ನಾ). ಹಾದರದ ವಿದ್ಯೆ; ವ್ಯಭಿಚಾರ: ನಗೆ ಬಗೆಯೊಲ್ಮೆ ನಲ್ಮೆ ಪೊಸಜಾಣ್ನುಡಿ ನಾಣ್ನುಡಿ . . . ಎಂಬಗಣಿತ ಚೇಷ್ಟೆಗಳ್ ಮೆಱೆದಿರಲ್ ತಱಿಸಲ್ಕುದು ಸೂಳೆವಿಜ್ಜೆಯೊಳ್ (ದಶಕು. ೮-೨೨). [ಸೂಳೆ$_1$ + ಬಿಜ್ಜೆ]

**ಸೂಳೆವಿನ್ನಣ** 'ಸೂಳೆವಿನ್ನಾಣ' ನೋ.

**ಸೂಳೆವಿನ್ನಾಣ, ಸೂಳೆವಿನ್ನಣ** (ನಾ). ವೇಶ್ಯೆಯ ಒನಪು,— ಒಯ್ಯಾರ: ಬೆಱಗು ಚುಂಬನವಪ್ಪು ಸೀತ್ಕೃತವೆಱಗ ಜಾಣ್ನುಡಿ ನೋಟ ಬೇಟವು ನೆಱೆ ಸೊಬಗಿಯೇ ಸೂಳೆವಿನ್ನಾ[ಪಾಠಾಂ. ನ್ನ]ಣದೋಱೆ ಸಿಲುಕಿದನು (ಸಾಳ್ವಭಾ. ೧೭-೨೭). **ಸೂಳೆವಿನ್ನಣ:** ಸುಂದರಿಯರು ಕುಳ್ಳಿರ್ದು ಛಂದಛಂದದ ಸೂಳೆವಿನ್ನಣಗಳನಿಂತೆಂದು ಬಿತ್ತರಿಸಿದರಲ್ಲಿ (ಚಂಪ್ರಸಾಂ. ೧೮-೧೨೯). [ಸೂಳೆ$_1$ + ಬಿನ್ನಾಣ]

**ಸೂಳೆವೆಂಡತಿ** (ನಾ). ಹಾದರಗಿತ್ತಿ; ಸೂಳೆ: ಸೂಳೆವೆಂಡತಿಯಂತೊಲ್ದೊಲಿಸದೆ ಗ್ರಹದಂತೆ ಬೇಡಿಕೊಂಡುಣ್ಣದೆ (ಧರ್ಮಾಮೃ. ೫-೯೯). [ಸೂಳೆ$_1$ + ಪೆಂಡತಿ (< ಪೆಂಡಿತಿ)]

**ಸೂಳೆವೆಣ್** (ನಾ). = ಸೂಳೆವೆಂಡತಿ: ಈ ಮನೆಯ ಸೂಳೆವೆಣ್ಗಳ್ ಸಾಂಗತ್ಯಮಂ ಪಾಡುವರ್ (ಚಿಕವಿ. ೬-೧೫೪ ವ).

**ಸೂಳೆವೆಂಡಿರ್** (ಬಹುವ): ಸೂಳೆವೆಂಡಿರ ಸಂಗದೊಳಗಿರ್ಪ ಧರಣಿಪತಿಯಂ ಹಿಂಗದಿರ್ಪಳೇ ಜಯಲಕ್ಷ್ಮಿ (ಚಿಬಪು. ೮-೧೮). [ಸೂಳೆ$_1$ + ಪೆಣ್]

**ಸೂಳೆವೇಂಟ** (ನಾ). ಹಾದರದ ಕಾಮಾತುರತೆ: ವೇಶ್ಯಾಗೃಹದಲ್ಲಿ ನಿಶ್ಶಂಕೆಯಿಂದ ನಿದ್ರಿಸುತ್ತಿರುವಾತನು ಸೂಳೆವೇಂಟದ ಅಂತಹ ಗ್ರಾಮ್ಯಪಾಮರಚೇಷ್ಟೆಯನ್ನೇ ಆದರೂ ಆಕ್ಷೇಪಿಸುವ ಅಧಿಕಾರವುಳ್ಳವನಲ್ಲ (ಮಂತ್ರಶ. ೯೪-೧೭). [ಸೂಳೆ$_1$ + ಬೇಂಟ]

**ಸೂಳೆಸೊಪ್ಪು** (ನಾ). ಒಂದು ಬಗೆಯ ಸಸ್ಯ: ಅಂಟುಹಣ್ಣುಗಿಡ, ಸೂಳೆಸೊಪ್ಪು (ಮೈಡಿಗ್ರಿ. ೬೨-೧೨೫೫). [ಸೂಳೆ$_2$ + ಸೊಪ್ಪು$_2$]

**ಸೂಳೇಳು** (ಕ್ರಿ). ಮೇಲೆ ಏಳು (?): ಬಿಗಿದ ಕಚ್ಚಲ ತೊರೆದುಗುವ ಹಾಲುಗಳ ಮಿಗೆ ಸೂಳೆದ್ದ ಬಾಲದ ಮೊಗ ನೆಗಹಿ ದೆಸೆದೆಸೆಯ ನೋಡುತ . . . ಗೋವರು ತೆಗೆದ ಪಥದಲಿ ತೆಕ್ಕೆವರಿದವು ಹಿಂಡುಹಿಂಡಿನಲಿ (ಕುವ್ಯಾವಿ. ೭-೫೦). [ಸೂಳ್$_?$ + ಏಳು$_1$ (< ಏೞ್$_1$)]

**ಸೂಳೇೞು$_1$** (ಕ್ರಿ). ಅಧಿಕವಾಗು; ಹೆಚ್ಚಾಗು: ಕೇಶಪಾಶಂ ಸಿತಜಲಧರದೊಳ್ಪೆರ್ಚೆ ಸೂಳೇೞೆ ಸುಯ್ಯಲ್ ಚೆಲ್ವಾಟಂಬೆತ್ತು ಕಾಂತಾಮಣಿಯುಗುರಿಸಿದಳ್ ತೈಲಮಂ ಬಾಲೆಗಾಗಳ್ (ಉದ್ಭಟ. ೮-೧೫). [ಸೂಳ್$_2$ + ಏೞು$_1$(< ಏೞ್$_1$)]

**ಸೂಳೇೞು$_2$** (ನಾ). ಸರದಿಯ ಮೇರೆಗೆ ಮಾಡುವ ಯುದ್ಧ: ಕವಿದುರ್ಗ್ಗಂ ಚಾತುರಂಗಂ ಬವಸ ದಳವುಳಂ ಧಾಳಿ ಸೂಳೇೞೆನಿಪ್ಪಾಹವದೊಳ್ಕಾಳುಕ್ಕರಾಮಂ (ಎಕ. VII, ಶಿಕಾರಿ. ೧೩೬-೨೭; 1068). [ಸೂಳ್$_1$ (< ಸೂೞ್) + ಏೞು$_5$ (< ಏೞ್$_5$)]

**ಸೂಳೈಸು** 'ಸೂಳಯಿಸು' ನೋ.

**ಸೂಳ್ಕಟ್ಟು** (ಕ್ರಿ). ಕ್ರಮವಾಗಿ ಹೊಂದಿಸು; ಸಂಯೋಜಿಸು: ಆ ಲೀಕ್ಷ್ಯಗಳೆಲ್ಲ ಮಿಪ್ಪತ್ತಾಱುಭೇದಮಕ್ಕುಮವಱೊಳು ಮಧ್ಯಮಂಗಳೆಂಟು ಆಯುಷ್ಯಬಂಧಯೋಗ್ಯ ಗಳೆಂಟು ಸೂಳ್ಕಟ್ಟುವಲ್ಲಿಯೊಳವಪ್ಪು ಉಳಿದ ಪದಿನೆಂಟು (ಶಾಸ್ತ್ರಟೀ. ೧೨೧-೭).

[ಸೂಳ್$_1$(< ಸೂೞ್) + ಕಟ್ಟು$_1$]

**ಸೂಳ್ಗರೆ** (ಕ್ರಿ). ಅಧಿಕವಾದ ಶಬ್ದವನ್ನುಂಟುಮಾಡು; ಜೋರಾದ ಧ್ವನಿಯನ್ನು ಉಂಟುಮಾಡು: (ಮಹಾರಾಜವಾದ್ಯಗಳೂ ಫಿರಂಗಿಗಳೂ ಸೂಳ್ಗರೆವುವು) (ಬಟ್ಟಿಅ. ೪೨-೧೩). [ಸೂಳ್$_2$ + ಕರೆ$_1$]

**ಸೂಳ್ಕೈ** (ಕ್ರಿ). = ಸೂಳ್ಗರೆ: ಸೂಳ್ಕೈದುವಾಗ ತಂಬಟಭೇರಿನಿಸ್ಸಾಳಕಹಳಾದಿ ವಾದ್ಯಂಗಳು (ಜೈಮಿಭಾ. ೧೨-೫). [ಸೂಳ್$_2$ + ಕೈ$_1$ (< ಕೆಯ್$_1$)]

**ಸೂಳ್ನುಡಿ$_1$**, ಸೂಳುನುಡಿ (ಕ್ರಿ). ಸರದಿಯ ಪ್ರಕಾರ ಮಾತನಾಡು; ಸಂಭಾಷಿಸು: ಗಿಡವರ ನಡೆ ಬಲ್ಲಿದಗರ್ಗೊಪ್ಪನೆಂದು ಸೂಳ್ನುಡಿದರವರು ಭಾವನೊಡನೆ (ಭರಚ. ೫೮-೬೨). **ಸೂಳುನುಡಿ:** ನೀನೀ ಗಿಳಿಯೊಡನೆ ಸೂಳುನುಡಿವುತಿರೆ ಬಂದೆನಾ ನುಡಿಗಳ ಕೇಳಲೆನಗೆ ಪ್ರೀತಿಯಾಗಿ (ಭರಚ. ೭-೫೪). [ಸೂಳ್$_1$ (< ಸೂಟ್) + ನುಡಿ$_1$]

**ಸೂಳ್ನುಡಿ$_2$** 'ಸೂಟ್ನುಡಿ' ನೋ.

**ಸೂಳ್ನುಡಿಗೊಡು** (ಕ್ರಿ). ಪರಸ್ಪರ ಜವಾಬು ಕೊಡು; ಪ್ರತ್ಯುತ್ತರ ಕೊಡು: ದಾನಿಗಳ ಬಲ್ಲಹನು ಮುನಿಯೊಡನೆ ಸೂಳ್ನುಡಿಗೊಟ್ಟನು (ಹಚಕಾ. ೮-೬೬).

[ಸೂಳ್ನುಡಿ$_2$ (< ಸೂಟ್ನುಡಿ) + ಕೊಡು$_1$]

**ಸೂಳ್ಪೆರ್ಚು** (ಕ್ರಿ). ಸರದಿಯು ಹೆಚ್ಚಾಗು; ಒಂದರ ಮೇಲೊಂದು ಬರು: ವೀರನೆಚ್ಚಂಬುಗಳ್ ಸೂಳ್ಪೆರ್ಚಿ ಸೂತಾಶ್ವಮಂ ಕೊಚ್ಚಿ ವಿಧಿಕಾಯದೊಳ್ ಪೊಕ್ಕು ತಟ್ಟುಚ್ಚಲು (ಚಬಪು. ೬೧-೪೯). [ಸೂಳ್$_1$ (< ಸೂಟ್) + ಪೆರ್ಚು$_1$ (< ಪೆರ್ಚು$_1$)]

**ಸೂಳ್ಮೊಱೆ** (ಕ್ರಿ). ಜೋರುಧ್ವನಿಯಲ್ಲಿ ಕೂಗು; ಆರ್ಭಟಿಸು: ಸೂಳ್ಮೊಱೆಯ ನಿಸ್ಸಾಳಕೋಟಿ ಕಲಿಯೌವನಾಶ್ವಕ್ಷಿತಿಪನೈತಂದನು (ಜೈಮಿಭಾ. ೪-೬೦).

[ಸೂಳ್$_2$ + ಮೊಱೆ$_1$]

**ಸೂಳ್ವರಿ** 'ಸೂಟ್ವರಿ' ನೋ.

**ಸೂಳ್ಮಳೆ** (ನಾ). ಸರದಿಯ ಪ್ರಕಾರ ಬೀಳುವ ಮಳೆ: ಸುರಿದುದಲರ ಸೂಳ್ಮಳೆ ಬಿಡದೆಱಗಿತು ಬಿರಿಮೊಗ್ಗೆಯ ತಂದಲು ನನೆಗಳ ಬೆಳ್ಸರಿ ಬಿಳ್ದುದು (ಜಯನೃ. ೧೬-೬೫).

[ಸೂಳ್$_1$ (< ಸೂಟ್) + ಮಳೆ (< ಮೞೆ)]

**ಸೂಳ್ಸರಿ** 'ಸೂಟ್ಸರಿ' ನೋ.

**ಸೂಳ್ಳಿಗೆರೆ** (ನಾ). ಒಂದು ಊರಿನ ಹೆಸರು: ಸೂಳ್ಳಿಗೆರೆಗಾಳೊಳ್ರಾಜಮಾನಂ ಪನ್ನಿರ್ಮ್ಮತ್ತಲ್ಕೆಯ್ಯುವುರಿಚ್ಚಿ X ತಿಯದು (ಎಕ. XI, ಚಳ್ಳಕೆ. ೩೪-೪೧; ಸು 815).

[? + ಕೆರೆ$_2$ (< ಕೆಱೆ)]

**ಸೂಱಾಡು** 'ಸೂಱೆಯಾಡು' ನೋ.

**ಸೂಱಾಳ್ಗ** (ನಾ). ಒಂದು ಸ್ಥಳದ ಹೆಸರು: ಗಾವುಣ್ಡುಗಳೆ ಸೀಮೆದೋಱಿದ ಕ್ರಮ ತ್ರೋಳಂಚೆಯದ ವೆರ್ಗ್ಗೆಯ್ಯಾಡಿಯ ಸೂಱಾಳ್ಗದ ಪೆಂಬಿದಿರಿನ (ಎಕ. XII, ನಂಜನ. ೨೭೯-೯೧; 904). [?]

**ಸೂಱೆ**, ಸೂರೆ (ನಾ). ೧. ಕೊಳ್ಳೆ; ಲೂಟಿ; ಸುಲಿಗೆ: ಸೂಱೆ ಲೇಸು ಪೂಜೆಯರಿ ದೆಂಬಂತೆ ಪ್ರತಾಪಂ ಲೇಸು ನಿತ್ತರಿಸಲರಿದೆಂಬಂತೆ (ಧರ್ಮಾಮೃ. ೮-೮೦); ನೆತ್ತರ ಸೂಱೆ ಶಾಕಿನಿಯರಿಗೆ ನಿಮಗುಱೆ ಸೂಱೆಯೋ ಭಂಡಾರ (ಕುವ್ಯಾಕ. ೮-೩೭); ಊರೊಳಗಣ ಭಟರ್ಕೆತಂದು ಮಧುರೆಯ ಧಾರಿಣೀಶ್ವರನ ಪಾಳೆಯವ ಸೂಱೆಯನಾಡಿ ಗೂಡಾರಗಳನು ಕಿತ್ತು ಜಾರಿಸಿದರು ದೆಸೆದೆಸೆಗೆ (ಕಂನವಿ. ೧೭-೮೦). ೨. (ಆಲಂ) ಅತಿಶಯ; ಆಧಿಕ್ಯ: ಆಹ ದೆಸೆದೆಸೆಗೆ ಬೀಱುವ ಸುಗಂಧದ ಸೂಱೆ ಆಹ ಕೇತಕಿ ನಿನ್ನ ಪರಿಮಳದ ಪರಿ ಬೇಱೆ (ಪುಷ್ಪರ. ೯-೧೭); ಬಿಗಿದ ಭೀತಿಯ ಸೂಱೆಗಳೊ ಸವಿವಾತುಗಳ ಸೋನೆಯ ಸೊಗಸುಕಾಱರು ನಿಂದ ನಿಲವನು ಕರ್ಣ ನೋಡೆಂದ (ಕುವ್ಯಾದ್ರೋ. ೧೭-೨೪); ಪಾಳೆಯ ಪಾಳೆಯದೊಳಗೆ ಚೆಲ್ಲಿತು ಸೂಱೆ ವೀಳೆಯ ಹಿಡಿಹೊನ್ನುವರಹ (ಮೋಹತ. ೧೭-೩೮). **ಸೂರೆ:** ೧. ಪೂರ್ದಿರ್ಪ ಬೆಳ್ಳಿ ಕಣಜದ ತಿರುಳ ಸೂರೆಯಿಂ ಮೆದ್ದು ಪೋಗುವೆನೆಂದು ನೆಗೆಯೆ ಬಲೆ ಬಿಗಿಯೆ (ಕಾಬೂರ. ೬೮-೧೨೦); ಸಂಗಡಿಗರೊಡನೆ ಸೂರೆ ಸುಲಿಗೆ ಮಾಡಿ ಅದೇ ಕಾಡಿಗೆ ಅವಿತುಕೊಳ್ಳುವುದಕ್ಕಾಗಿ ಬಂದೆ (ನಡದಾ. I, ೫೪೭). [ದೇ. ॥ ತಮಿ. ಚೂಱೈ ; ತೊದ. ಸುರಿ ; ತುಳು. ಸೂರೆ; ತೆಲು. ಚೂಱ]

**ಸೂಱೆಕಾಱ** 'ಸೂಱೆಗಾಱ' ನೋ.

**ಸೂಱೆಗ**, ಸೂರೆಗ (ನಾ). ಲೂಟಿ ಹೊಡೆಯುವವನು; ದರೋಡೆಗಾರ: ಕೇರಿಕೇರಿಗೆ ಕೈದುಕಾಱರು ನೆರೆದು ನಿಂದರು ಸೂಱೆಗರ ಕೆಡಹಿ (ಕುವ್ಯಾಕ. ೧-೧೦); ಸಾಱುತಿಹ ಕಹಳೆಗಳ ಗರ್ಜನೆಗೆ ಪರಿಪರಿವ ಸೂಱೆಗರ್ ಕೈಗುಂದಲಂಧಾಸುರಂ ತೇರನೇಱಿ ನಡೆದಂ ವಿಲಯಕಾಲದಂತಕನಂತೆ (ಚಬಪು. ೫೦-೨೯). **ಸೂರೆಗ :** ದುಡುಕಿದಾ ಸೂರೆಗರ ಹಾವಳಿಗೆ ನೊಂದೆ ! (ಕವಪು. ೬೨-೪). [ಸೂಱೆ + -ಗ$_2$]

**ಸೂಱೆಗಳೆ** (ಕ್ರಿ). ಇಲ್ಲದಂತೆ ಮಾಡು; ಅಪಹರಿಸು: ಜವ್ವನಮಂ ಜಾಱಿಸಿ ಸುಖಮಂ ಸೂಱೆಗಳೆದು ರೂಪಂ ರೂಪುಗೆಡಿಸಿ . . . ಹೋದಂ (ನಂಚರಿ. ೧೬-೨೮).

[ಸೂಱೆ + ಕಳೆ$_1$]

**ಸೂಱೆಗಾಱ** , ಚೂಱಕಾಱ, ಸೂರೆಕಾರ, ಸೂಱೆಕಾಱ (ನಾ). ಲೂಟಿ ಮಾಡುವವನು; ಕೊಳ್ಳೆಹೊಡೆಯುವವನು; ದರೋಡೆಗಾರ: ಸೂಱೆಗಾಱನಂತೆ ಪೆಱರಂ ಕ್ಲೇಶಂಗೊಳಿಸದೆ (ಧರ್ಮಾಮೃ. ೫-೯೯); ಏಱುವಡೆದವರನು ಪಲಾಯನ ಸೂಱೆಗಾ [ಪಾಠಾಂ. ಕಾ]ಱರನವರ ದಳದಲಿ ತೋಱಿ ಹೇಳುವರೆನ್ನ ಹವಣೇ (ಕುವ್ಯಾದ್ರೋ. ೧೭-೨೮); ಎಱಗಿ ಮುಂಬಱಿವ ಸೂಱೆಗಾಱನಂ ಶಕ್ತ್ಯಾಯುಧದಿನಿಟ್ಟಂ (ರಾವಾಶ್ವ. ೯೭-೨೩). **ಚೂಱಕಾಱ:** ಕದನಪ್ರಚಂಡ ಗಂಡಮಾರ್ತ್ತಂಡ ನುಡಿದಂತೆ ಗಂಡ ಅತಿಗರ್ವ್ವವ ನುಡಿವ ಮಂಡಳಿಕರ ಗರ್ಬಸರ್ವ್ವಸ್ವಚೂಱಕಾಱ (ಸೌಇಇ. IX-i, ೩೬೭-೯; 1225). **ಸೂರೆಕಾರ:** ಲಂಚಗೊಳ್ಳುವ ಸೂರೆಕಾರರ ನ್ಯಾಯನೀತಿಗಳೇ ಹೀಗೆ ! (ಮುತ್ತಶ. ೮೪-೨೧). **ಸೂಱೆಕಾಱ :** ಸೂಱೆಕಾಱ ಕಾದಿಯಣ್ಣಂಗೆ ಕೊಟ್ಟೊಡೆ (ಎಕ. X, ಮುಳಬಾ. ೨೦೮-೧೨; 1000); ವಿತರಣವಿನೋದಂ ಮಾವನಂಕಕಾಱಂ ವನಗಜ ಸೂಱೆಕಾಱಂ (ಸೌಇಇ. IX-i, ೨೮೭-೮; 1200); ರಾಯದಳದುಳಕಾಱ ಕೌರವರಾಯಸೇನಾಸೂಱೆಕಾಱನಜೇಯನೋ ಕಲಿಭೀಮ (ಕುವ್ಯಾಕ. ೧೨ ಸೂಚನ); ಮೂಱುದಿಕ್ಕಿನಲಮರವೈಭವಸೂಱೆಕಾಱನನಱಸಿ ಕಾಣದೆ ಬೇಱೆ ಬೇಱೈತಂದು ಬಿನ್ನೈಸಿದರು ರಘುಪತಿಗೆ (ತೊರರಾ. ೪-೯ ಸೂಚನ). [ಸೂಱೆ + - ಕಾಱ]

**ಸೂಱೆಗೂಳು** (ನಾ). ೧. ಲೂಟಿ ಮಾಡಿದ ಆಹಾರ; ಕೊಳ್ಳೆಹೊಡೆದ ಕೂಳು: ರಣದ ಬೀರರ ಹಾಗೆ ಬಾಚಿಸಿಕೊಂಡು ಕೊಂಬಷ್ಟು ಕೊಂಡು ಬಿಡುವಷ್ಟ ಬಿಟ್ಟು ಸೂಱೆಗೂಳಾಗಿ ಚೆಲ್ಲಿಯಾಡುವುದು ಇದಾವ (ಇದಾರ) ಪ್ರಸಾದ ಹೇಳಾ (ಸಿದ್ಧೇವ. ೧೭೫-೫೩೩). ೨. (ಆಲಂ) (ತಿಂದು ಬಿಸಾಡಿದ) ಆಹಾರ: ಸಾರ್ವ ಭೂಪಾಲನ ಸೂನು ಎನಿಸಿದವಗೆ ಸೂಱೆಗೂಳಿನ ತಿರುಕೆ (ಪುರಂದ. ೧-೫೫-೨).

[ಸೂಱೆ + ಕೂಳ್$_2$ (< ಕೂಟ್$_1$)]

**ಸೂಱೆಗೈ**, ಸೂರೆಗೈ (ಕ್ರಿ). ೧. ಲೂಟಿಹೊಡೆ; ಕೊಳ್ಳೆಹೊಡೆ; ದರೋಡೆಮಾಡು: 'ಸೂಱೆಗೈಸು' ಪರಾ. **ಸೂರೆಗೈ:** ೧. ಸಿಡಿಲ ಪಳಗಿಸುವರಿವು ರವಿಯ ಸೆರೆಹಿಡಿವರಿವು ಸಾಗರದ ತಳಮಗುಚಿ ಸೂರೆಗೈವರಿವು (ಮಲೆದೇ. ೪೮-೨). ೨. ಯಥೇಚ್ಛವಾಗಿ ಪಡೆ, —ಹೊಂದು: ರಾಜರಾಜೇಶ್ವರರ ಸಿರಿಯನಿಳೆಕೆಗೈದು ಕವಿಯ ಋಷಿಯ ಆಶೀರ್ವಾದಗಳ ಸೂರೆಗೈದು . . . ಬಾಳರಳಿದರೆ ಧನ್ಯನಲ್ತೆ ! (ಅನಿಕೇ. ೨೩-೧೭).

[ಸೂಱೆ + ಕೈ$_1$ (< ಕೆಯ್$_1$)]

**ಸೂಱೆಗೈಸು** (ಕ್ರಿ). ಲೂಟಿ ಮಾಡಿಸು; ದರೋಡೆ ಮಾಡಿಸು: ಒಂದು ದಿನದ ಜಕ್ಕಮನ್ನೆಯ ಬಲಗೂಡಿ ಬಂದಾಗ ಹಂಚೆಯದೊಳಗೆ ನಿಂದಾಗ ಸೂಱೆಗೈಸುತಲಿರೆ ಬಲ ಬೇಹು ಸಂದುದು ನೃಪನಿಗಾಕ್ಷಣದೆ (ಕಂನವಿ. ೬-೬೨). [ಸೂಱೆ + ಕೈಸು (< ಕೆಯ್ಸು)]

**ಸೂಱೆಗೊಡು**, ಸೂರೆಗೊಡು (ಕ್ರಿ). ೧. ಯಥೇಚ್ಛವಾಗಿ ಕೊಡು; ಧಾರಾಳವಾಗಿ ನೀಡು: ಸಮಸ್ತವಸ್ತುಗಳಂ ದೀನಾನಾಥಜನಂಗಳ್ಗೆ ಸೂಱೆಗೊಟ್ಟು (ಪಂಪಭಾ. ೧-೧೧೪ ವ); ಸಮಸ್ತವಸ್ತುವಾಹನಂಗಳಂ ತನ್ನೊಡನಾಡಿಗಳಪ್ಪ ಭಂಡಮಂಡಲಿಗೆ ಸೂಱೆಗೊಟ್ಟು (ಪಂಚತಂ. ೨೮-೧೫); ಸೂಱೆಗೊಟ್ಟಂದದೆ ಪರಳ್ಪಾಯ ಮುಂತಾದ ತಾಱಿಕಿ ನೆಲಕುದುರಿದುವು (ಮೋಹತ. ೪-೪೩). ೨. ಅರ್ಪಣೆಮಾಡು; ಅರ್ಪಿಸು: ನಿಮಗೆನ್ನಂ ಸೂಱೆಗೊಟ್ಟೆಂ (ರಕ್ಷಾಶ. ೭೮): ಮನವನಂಬಿಕಾವರಂಗೆ ಸೂಱೆಗೊಟ್ಟು (ನಮುಃರ. ದೇ. ೧೧-೧೯೬). **ಸೂರೆಗೊಡು:** ೧. ಲಾವಣ್ಯಧನವನ್ನು ಸೂರೆಗೊಟ್ಟೆನೆಸದೆಯೆ ಪಿರಿದಾದ ಶ್ರಮವನ್ನು ತಾನೆ ಕೈಕೊಂಡು ಸ್ವೇಚ್ಛೆಯಿಂ ಸುಖವಾಗಿ ತಾವಿದ್ದ ಜನಕೆಲ್ಲ ಚಿಂತಾಗ್ನಿ ಹೊತ್ತಿಕೊಂಡುರಿವಂತೆ ಮಾಡಿ (ಧ್ವನ್ಯಾಲೋ. ೨೨೨). ೨. ಈಜಿಪ್ಟಿನ ಚಕ್ರವರ್ತಿ ಪ್ರತಿನಿಧಿಗಳು ಸುಲ್ತಾನನಿಂದ ಅನೇಕ ಅಧಿಕಾರಗಳನ್ನು ಗಳಿಸುತ್ತ ಬಂದರು. ಆದರೂ ಇವೆಲ್ಲವನ್ನೂ ಫ್ರಾನ್ಸ್ ಮತ್ತು ಇಂಗ್ಲೆಂಡಿಗೆ ಸೂರೆಗೊಟ್ಟರು (ಇಸ್ಲಾಂಸಂ. ೫೮). ೩. ಆಕರ್ಷಿಸು; ಸೆಳೆ: ಹೃದಯವನ್ನು ಸೂರೆಗೊಳ್ಳುವಂತಹ ಪ್ರಾಕೃತಗಾಥೆಗಳಲ್ಲಿ ಕೂಡ ಇವುಗಳನ್ನು ಬರೆದವರು ಷಟ್‌ಪ್ರಜ್ಞರು ಅಥವಾ ಅಪಾರವಾದ ಅನುಭವವುಳ್ಳವರು (ಧ್ವನ್ಯಾಲೋ. ೩೨೯). [ಸೂಱೆ + ಕೊಡು$_1$]

**ಸೂಱೆಗೊಳ್**, ಸೂರೆಕೊಳ್, ಸೂರೆಗೊಳ್, ಸೂರೆಗೊಳ್ಳು, ಸೂಱೆಗೊಳು (ಕ್ರಿ). ೧. ಲೂಟಿ ಮಾಡು; ಕೊಳ್ಳೆಹೊಡೆ: ಪ್ರದ್ಯೋತಂ ಮುಳಿದವರ ನಾಡಂ

ಸೂಱೆಗೊಳುತ್ತಂ ಸುಡುತ್ತಂ ಕಿಡಿಸುತ್ತಂ ಉಪಶ್ರೇಣಿಕನ ಮೇಗೆ ಪೋಗೆ (ವಡ್ಡಾರಾ. ೧೬೫-೧೮); ಚಂದ್ರಮತೀಮಹಾದೇವಿಯ ಕೀಲಾರದ ಧೇನುಗಳಂ ಸೂಱೆಗೊಳ್ವಂತೆ ಕೊಂಡು ಪೋದೊಡೆ (ಸುಕುಮಾ. ೭-೩೫ ವ); ಧನಪನ ಪುರವನಾತನ ನವನಿಧಿಗಳನು ಸೂಱೆಗೊಂಡು (ತೊರರಾ. ೬-೨೦-೬೯). ೨. (ಆಲಂ) ಆಕರ್ಷಿಸು; ವಶಪಡಿಸಿಕೊಳ್ಳು: ಎನ್ನ ಮನವ ಮಾಱುಗೊಂಡನವ್ವ ಎನ್ನ ತನುವ ಸೂಱೆಗೊಂಡನವ್ವ (ಮಹಾದೇ. ಬ. ೪೧-೮೮). ೩. ಎತ್ತಿಹಿಡಿ; ಪಟ್ಟುಹಿಡಿ: ಏಱನೆ ಸೂಱೆಗೊಂಡು ನುಡಿವೀ ನುಡಿಯಲ್ಲದೆ ಮತ್ತಮಾಸನಂದೋಱುವ ಬಲ್ಪುದೋಱುವೆರ್ದೆದೋಱುವ ಕಯ್ಪುಸರಂಗಳೆಮ್ಮನುಂತೇಱುವು (ಪಂಪಭಾ. ೮-೨೦). **ಸೂರೆಕೊಳ್:** ೧. ವೀರಪದೇವರು ಊರ ತುಱುವಂ ಸೂರೆಕೊಳ್ವಾಗ ಪಲರನಿದಿರ್ಚ್ಚಿ ಕೊನ್ದು (ಮೈಆರ. ೧೯೨೯,೪೨-೨;?). **ಸೂರೆಗೊಳ್:** ೧. ಇದು ಕಣಾ ಪುರುಷಾರ್ಥಮೆಂಬುದು ಇದುವೆ ಪರಮಂ ಸೂರೆಗೊಂಬುದು (ಗಗತಾ. ೧೭-೪೮). **ಸೂರೆಗೊಳ್ಳು:** ೧. ಪ್ರೇಮನಿಧಿ ಪ್ರಾಣೇಶ ಸೂರೆಗೊಳ್ಳೆನ್ನ ಸರ್ವಸ್ವಮಂ ಮೇಣೆನ್ನನಿಲ್ಲಗೈ (ಚತ್ರಾಂಗ. ೪೧-೧೧೧೦); ಕಂಪಿಲರಾಜ್ಯದಲ್ಲಿ ದೊರೆತ ಎಲ್ಲಾ ವಸ್ತುಗಳನ್ನೂ ಸೂರೆಗೊಂಡ ಸುಲ್ತಾನನ ಸೈನ್ಯ ವಿಜಯೋತ್ಸಾಹದಿಂದ ದೆಹಲಿಗೆ ಹಿಂತಿರುಗಿತು (ನಡೆದಾ. II, ೯೯೫). **ಸೂಱೆಗೊಳು:** ೧. ಬೇಱೆ ತಮಗೊಂದಾಳುತನವುರಿ ಸೂಱೆಗೊಳುತಿದೆ ಜಗವನಿತ್ತಲು ಕೌಱಿಡುವ ಕಾಲಾಗ್ನಿಯಿದೆ ಕಬ್ಬೊಗೆಯ ಕವಚದಲಿ (ಕುವ್ಯಾದ್ರೋ. ೧೯-೩೧); ರಾಜ್ಯವ ಸೂಱೆಗೊಳುತ ಸಡಗರದೊಳು ಬಂದು ಕಂಡನು ಬಹು ರಮ್ಯವಡೆದಿರ್ದ ಭಾಗೀರಥಿಯ (ಮೋಹತ. ೬-೩೧). [ಸೂಱೆ + ಕೊಳ್$_1$]

**ಸೂಱೆಗೊಳು** 'ಸೂಱೆಗೊಳ್' ನೋ.

**ಸೂಱೆಚಾಗ** (ನಾ). ಧಾರಾಳವಾದ ತ್ಯಾಗ; ಯಥೇಚ್ಛವಾದ ದಾನ: ಅವರವರಂಗವನಱಿದು ವಿದ್ಯಾಧಿಕನಿವಹಕೆ ಸೂಱೆಚಾಗವನು ನವನಿಧಿಯಾಗಿ ಕೊಟ್ಟನು (ಭರತೇ. ೨೦-೪೭). [ಸೂಱೆ + ಚಾಗ$_2$]

**ಸೂಱೆಯಾಡು, ಸೂರಾಡು, ಸೂಱಾಡು** (ಕ್ರಿ). ಲೂಟಿ ಹೊಡೆ; ಕೊಳ್ಳೆಹೊಡೆ: ಊರು ಕೆಟ್ಟು ಸೂಱೆಯಾಡುವಲ್ಲಿ ಆರಿಗಾರೂ ಇಲ್ಲ (ಮೋಳಿಪು. ೧೧೪-೪೪೮); ಇಂದುಮಂಡಲದ ಸಿರಿಯಂ ಸೂಱೆಯಾಡಿದರ್ (ಜೈಮಿಭಾ. ೧೦-೫೩); ನಿಲ್ಲದೈತಂದು ಸತ್ಯಾಗಾಲದ ಪಾಳ್ಯವೆಲ್ಲವ ಸೂಱೆಯಾಡಿದನು (ಕಂನವಿ. ೩-೫೬). **ಸೂರಾಡು:** ಧನವ ಸೂರಾಡುವರೆ ಇಚ್ಛಾನುರಾಗದಿಂದೊಲಿಸಿ ಗಣಿಕನಾರಿಯರಾಲಯದಲಿ (ಜನಮು. ೪೯-೩೮). **ಸೂಱಾಡು:** ಸುಲಭದಿಂದ ಸ್ವರ್ಗ ಸೂಱಾಡಬೇಕು (ಪುರಂದ. ಧಾ. ೨-೫೩-೧); ತುರುಕರೈತಂದು ಸೆಱೆಗಳ ಪಿಡಿದು ಸೂಱಾಡಿ ಭರದಿಂದೆ ಸಕಲರಂ ಸಂಹರಿಪರು (ಚೆಬಪು. ೬೩-೬೦). [ಸೂಱೆ + ಆಡು$_1$]

**ಸೂಱೆವಿಡು** (ಕ್ರಿ). (ಆಲಂ) ಅತಿಶಯವಾಗಿ ಕೊಡು; ಧಾರಾಳವಾಗಿ ನೀಡು: ಈ ಧರೆ ಬಣ್ಣಿಸೆ ಸೂಱೆವಿಟ್ಟನರ್ಥಾರ್ಥಿಗೆ ಪೊನ್ನ ಪುಟ್ಟಿಗೆಯ ರನ್ನದ ರಾಶಿಗಳಂ ಮಹೀಭುಜಂ (ಪುಷ್ಪಪು. ೪-೪೩); ತುಂಬಿಗಳ ದಳಕೆ ಕಮ್ಮಲರ್ಗಳಂ ಸೂಱೆವಿಡುತೆ (ಜೈಮಿಭಾ. ೮-೩). [ಸೂಱೆ + ಬಿಡು$_1$]

**ಸೂಱೆವೋಗು, ಸೂರೆಹೋಗು, ಸೂಱೆಹೋಗು** (ಕ್ರಿ). ೧. ಲೂಟಿಯಾಗು; ಕೊಳ್ಳೆಯಾಗು: ಈ ಜ್ಞಾನನಿಧಿ ಸೂಱೆವೋದಪುದಾನಿನ್ನೇಗೆಯ್ವೆನೆಂದು ತಳವೆಳಗಾದಂ (ಕಾದಂಪೂ. ೮೩೮); ಸೂಱೆವೋಯಿತು [ಪಾಠಾಂ. ಯೋದುದು, ಹೋದುದು] ಸುರಪತಿಯ ಭಂಡಾರ ಹೆಂಡಿರುಸಹಿತ (ಕುವ್ಯಾಕ. ೬-೧೧); ಕೇರಿ ರನ್ನಂಗಳ ಪಡೆದು ಬರೆ ತಾರಲೊತ್ತಿನ ಶಬರರಿಂದದು ಸೂಱೆವೋದುದು ದ್ರವ್ಯವಾರಿಗೆ ಕೆಡದು (ಸಾಳ್ವಭಾ. ೧೭-೪೧). ೨. ಧ್ವಂಸವಾಗು; ನಾಶವಾಗು: ಪಸುಗೆವೋಗದ ಶೌರ್ಯಮುಮಂ ಸೂಱೆವೋಗ ದೇಱುಮಂ . . . ಪೊಗಳಿಸುವೆನೆಂದು ತಱಿಸಂದು (ಶಾಂತಿಪು. ೪-೩೬ ವ). **ಸೂರೆಹೋಗು:** ೧. ಎಚ್ಚರೆಚ್ಚರು! ಏಳು! ನಿದ್ದೆಹೋಗದಿರೆಚ್ಚರ, ಸೂರೆಹೋದೀತೆಲ್ಲ! (ಅರಳು. ೧೫೭-೩.); ಹೋಗದಿದ್ದರೆ ಏನು ಸೂರೆಹೋಗುತ್ತಿದ್ದುದು? (ಕುಸುಸಂ. ೧೯೦); ಸೂರೆ ಹೋದರೂ ಮಾರಿ ಬಿಡಲಿಲ್ಲ (ಗಾದ). **ಸೂಱೆಹೋಗು:** ೧. ಮೂಱುಲೋಕವೆಲ್ಲವು ಬಱಿ ಸೂಱೆಹೋ [ಪಾಠಾಂ. ವೋ]ಯಿತ್ತು (ಅವಚಂ. ೮-೩೦); ತೋಱುವ ಕುಲಗಿರಿಯನೇಱಿ ತಪದೊಳಗಿದ್ದು ಬೇಱೊಂದ ಮನವು ನೆನೆದಿಹರೆ ಬೆಳೆದ ಹೊಲ ಸೂಱೆಹೋದಂತೆ (ಸರ್ವಜ್ಞ. ೫೭೯). ೨. ತುರಗದಳದಸು ಸೂಱೆಹೋದುದು ಸಮರದಲಿ ಹದಿನೆಂಟು ಸಾವಿರವು (ಕುವ್ಯಾಭೀ. ೮-೪೮). ೩. ಅರ್ಪಣೆಯಾಗು; ಅರ್ಪಿತವಾಗು: ಸೂಱೆ ಹೋದುದು ನಿನ್ನ ಮನವೆಲ್ಲವಾ ಗಾಡಿಕಾಱಗೆ ಭರತೇಶಗಕ್ಕ (ಭರಚ. ೭-೪೨).

[ಸೂಱೆ + ಪೋಗು$_1$ (< ಪೋ$_1$)]

**ಸೂಱೆಹೋಗು** 'ಸೂಱೆವೋಗು' ನೋ.

**ಸೂೞ್, ಸೂಳ್$_1$, ಸೂಳು$_1$, ಸೂಱು** (ನಾ). ೧. ಹೊತ್ತು; ಸಮಯ: ಒರ್ವ ಸೋರ್ಕಿದ ತೊಟ್ಟು ತೊಟ್ಟುಗೆಲಸಕ್ಕರಮನೆಯಂ ಪುಗುವ ಪೊಱಮಡುವ ಸೂೞೊಳೆಲ್ಲಂ ಒಂದು ತಗರಂ ಬಗೆಯದೆ ಬಡಿಯುತ್ತುಮಿರ್ಪುದುಂ (ಪಂಚತಂ. ೧೭೯-೫). ೨. ಆವೃತ್ತಿ; ಬಾರಿ: "ಸೂೞೆಂದು ಬಾರಿ" (ಕಶಸಾ. ೭೧-೬೧೧); ಒಳ್ಳಿತ್ತಪ್ಪ ವಸ್ತು ನಿನಗಕ್ಕುಮೆಂದೊಡೆ ಅರಸನೆನಗಕ್ಕುಂ ಬಲಮೆಂದು ಮೂಱು ಸೂೞ್ವರಂ ಸಾಱಿ ನುಡಿದೊಡಂಬಡಿಸಿ (ವಡ್ಡಾರಾ. ೧೧೬-೬); ಮೂಱು ಸೂೞ್ ಬಲವಂದು ಪೊಡಮಟ್ಟು (ಪಂಪಭಾ. ೩-೫೮ ವ); ದೇವಿಯರಂ ಮೂಱುಂ ಸೂೞ್ ಬಲವಂದು ಮಣಿದು ಇತ್ತುದಂ ಮಹಾಪ್ರಸಾದಮೆಂದು ಭಕ್ತಿಯಿಂ ಸ್ವೀಕರಿಸಿದಂ (ರಾಮಾಶ್ವ. ೩೨-೧). ೩. (ರತಿಸುಖದ) ಸರದಿ; ಸಮಯ: ಎನಗಿಂದಿನೊಂದು ಸೂೞುಮನಿನಿಯಂ ದಯೆಗೆಯ್ದನೆನ್ನ ಸೂೞಂ ನಿನಗಾನೆನಿತಾದೊಡಮೀವೆನೆ (ಪಂಪಭಾ. ೨-೨೬); ಬಂದಳಾ ಜಗತೀನಾಥನ ಸೂೞ್ಗೆ ತತ್ಸುದತಿ ಹಂಸೀಯಾನೆ ಸಾನಂದದಿಂ (ನೇಮಿಪು. ೧-೧೩೨); ರಮಣಿ ರಂಜಿಸಿ ಭೂಪನ ಸೂೞ್ಗೆವಂದಪಳ್ (ಪುಷ್ಪಪು. ೯-೯೫). ೪. ಗತಿ; ಲಯ: ಮೊದಲೊಳ್ ಮೆಲ್ಲನೆ ಸೆಂಡನಿಟ್ಟು ನೆಗೆಯಲ್ ಮೆಲ್ಪಿಂದವಳ್ ಪೊಯ್ದು ಪೊಣ್ಮಿದ ಸೆಂಡಂ ನಖದೀಪ್ತಿ ರಂಜಿಸುವಿನಂ ಮೇಗೆಯ್ಯೆಳಾಂತು . . . ತಾಳದ ಸೂೞಂ ತಿಳಿದಾಡಿದಳ್ (ದಶಕು. ೧೨-೨೯). ೫. ಯೋಗ್ಯವಾದ ಮಾರ್ಗ; ಉಚಿತವಾದ ಕ್ರಮ: ಎಮ್ಮ ದಾಯಾದನುಂ ಕೋಪದಿನೆನ್ನೊಳ್ ಕಾದಲೆಂದುಬ್ಬರಿಸಿದ ಸಮರಾಟೋಪದಿಂ ನಿಂದೊಡಂ ಮಾಣ್ಬುದು ಸೂೞಲ್ತು (ಆದಿಪು. ೧೪-೮೫); ನಮಗಾವುದು ಸೂೞಕ್ಕ ಪೇೞಿಮಿನ್ನೇಗೆಯ್ವಂ (ಅಜಿಪು. ೬-೯೯). ೬. ಗಾತ್ರ; ಪ್ರಮಾಣ: ಏೞ್ ಧನು ಮೂಱುಮೊೞನಿಂ ಪೇೞ್ ಷಡಂಗುಲಮೆ ಮೊದಲ ನಾರಕರೊಡಲಂತೇೞುವರಂ ತದ್ವಿಗುಣಮೆ ಸೂೞೊಳ್ ನಾರಕರ ಕಠಿನದೇಹೋತ್ಸೇಧಂ (ಆದಿಪು. ೫-೯೨). ೭. ವರ್ಷ; ಸಂವತ್ಸರ: ಈ ಸೂೞೆಂದು ವರ್ತಮಾನವರ್ಷಂ (ಶಮದ. ನ. ೧೧೮ ಪ್ರಯೋ. ಅಡಿಟ). ೮. ಕದನ; ಯುದ್ಧ: 'ಸೂೞ್ಗರೆ' ಪರಾ. ೯. ಗಮನ; ಲಕ್ಷ್ಯ: ದಿಟ್ಟಿ ಸೂೞಿಕ್ಕಿ ಕೆಕ್ಕಳಿಪನ್ನಂ ಕಿವಿಸೋಂಕಿನಿಂ ಕೊಣಕಿಡುತ್ತುಂ ಬರ್ಪಿನಂ . . . ಕಾಳಿಂದಿಯೊಳ್ ತಿಳಿನೀರೂಡಿ ಮುರಾರಿ ವತ್ಸಕುಲಮಂ ಕಾದಂ ಮಹೋತ್ಸಾಹದಿಂ (ಜಗವಿ. ೩-೭೧). ೧೦. (ಕುಸ್ತಿಯ) ಒಂದು ಪಟ್ಟು,— ವರಸೆ: ಮಲ್ಲಮಲ್ಲಿಯ ಸೂೞನೆಲ್ಲರ ಪೊಗೞ್ವನ್ನು ಮಲ್ಲಗಾಯದೊಳ್ ಪಿಡಿದೊತ್ತಿ ಕಟ್ಟಲ್ಕೆ ಬಲ್ಲನೀ ಖಚರಚೂಡಾಮಣಿ (ಎಕ. VI, ಚಿಕ್ಕಮ. ೯೪-೨೧; ಸು. 1060?). **ಸೂಳ್$_1$:** ೧. ಶ್ರೀಮತ್ ಸಕಲೇಸ್ವರದೇವರ್ಗ್ಗೆ ನಕರಂ ಕೊಟ್ಟ ಸೊಂಟಿಗೆಯೊನ್ದು ವೇೞುವೊಕ್ಕಲು ಪೇೞೆ ಬನ್ದ ಸೂಳೊಳ್ ಒಕ್ಕಲಲು ಬಳ್ಳವೊನ್ದು (ಸೌಇಇ. XI-i, ೧೧೨-೧೨; 1072). ೨. "ಸೂಳೆಂದು ಬಾರಿ" (ಕವಿಕಂ. ೨೪೧); ಅಖಿಳ ಧರೆ ಗತಕ್ಷತ್ರಮಪ್ಪನ್ನು ಧಾತ್ರೀಶರನಿರ್ಪ್ಪತೊನ್ದು ಸೂಳ್ ಕೊನ್ದನ ಚಲಮೆ ಚಲಂ (ಮೈಆರ. ೧೯೨೯, ೬೫-೨೪; 1025); ತೋಳ್ಗಳ್ ನೆನೆವರ ಚಿತ್ತದ ಬಾಳ್ಗಳ್ ಪರವೀಯಲೆಂದು ಮಿಗೆ ಮತ್ಸರಿಪಾ ಸೂಳ್ಗಳ್ ರುದ್ರನ ನಚ್ಚಿನ ಬಾಳ್ಗಳ್ ಗಿರಿರಾಜಪುತ್ರಿಯಪ್ಪಿಂಗಾಳ್ಗಳ್ (ಗಿರಿಕ. ೧೦-೫೫). ೩. ಪಳುಕಿನಲಿ ಮನಸಿಜ ಸಮೆದ ಪುತ್ಥಳಿಯೊಯನೆ ಬೆಳಗುವ ಸದನದ ತನಿವೆಳಗಿನಲಿ ಶಿವದೇವಿ ಬಂದಳು ಸೂಳ್ಗೆ ನಿಜಪತಿಯ (ಸಾಳ್ವಭಾ. ೩೨-೪೫). **ಸೂಳು$_1$:** ೨. ಬವರಮುಖದಲಿ ಹಿಂಗಿದನು ಹದಿನೆಂಟು ಸೂಳಿನಲಿ (ಕುವ್ಯಾದ್ರೋ. ೧೩-೫೦); ಹದಿನಾಲ್ಕು ಸೂಳಲಿ ಸುಳಿದು ಸುರರಲಿ ಸಂದುದರಿಸೇನೆ (ತೊರರಾ. ೬-೩೫-೩೫); ಬೋಕಿಮಯ್ಯ ಪ್ರಭುಗಳಲ್ಲಿಗೆ ಬಂದು ಅಡ್ಡಬಿದ್ದು, ಬಳಿಕ ರಣರಂಗಕ್ಕೆ ಮೂರು ಸೂಳು ಬಲವಂದು, ಬಲವಾಗಿ ಕೇಕೆ ಹಾಕಿದ (ಶಾಂತಲಾ. ೧೪೮). ೩. ಮೂವರಿಗಾದ ಸೂಳೆ ಸೂಳ ಕೊಡುವ ಪರಿಯಿನ್ನೆಂತೊ (ಗುಪ್ತಮಂ. ಕ. ೨೨೯-೭೪); ಸವಿವ ಬಾಯುಗಿಯಡಗೆ ಮೈ ಮಿಗೆ ಬೆವರೆ ಸೂಳೋಸರಿಸೆ ಕೆಡಪಿದ ಜವಳಿಜಂತ್ರದ ಬೊಂಬೆಯೆನಲೀರ್ವರು ಮಱೆದರೊಡಲ (ಸಾಳ್ವಭಾ. ೧೮-೩೭). ೮. 'ಸೂಳುಗರೆ' ಪರಾ. **ಸೂೞು:** ೧. 'ಸೂೞುಗಾಳೆ' ಪರಾ. ೨. 'ಸೂೞುನುಡಿ' ಪರಾ. ೮. 'ಸೂೞುಗರೆ' ಪರಾ.

**ಸೂಟ್ಸೊಟ್, ಸೂಳುಸೂಳು, ಸೂಟುಸೂಟು** (ದ್ವಿರುಕ್ತಿ): ೧. ಬಾರಿಬಾರಿ; ಸಲಸಲ: ಪೊಟಲಂ ಪುಗಿಸಿ ಮುನ್ನಮ ಸಮೆದ ಬೀಡುಗಳೊಳ್ ಬೀಡಂ ಬಿಡಿಸಿ ಸೂಟ್ಸೊಟೊಳ್ ಬಿರ್ದನಿಕ್ಕಿ (ಪಂಪಭಾ. ೯-೫ ವ); ನೂಱುನೂಱು ಲೋಹ ಭಾರವಂತೆ ಸೂಳುಸೂಳಿಗೊಮ್ಮೆ ನಡುವನಱಿಯೆ ನೂಱುಯೋಜನಾಂತವಾಡೆ ತೂಗಿತಮ್ಮ (ಸಾನಂಚ. ೬-೧ ರಗಳೆ, ಸಾಲು೭). ೨. ಅನುಕ್ರಮ: ಮುರರಿಪುಗೆ ಸೂಟುಸೂಟೊಳೆ ಬರೆ ಕರದೊಳು ಶಂಖಚಕ್ರಮುದ್ಗರ ಪದ್ಮಂ ಪರಿವಡಿಯಿಂ ಪೆಸರ್ಗಳ್ಪನ್ನೆರಡಾದವು ಮೂರ್ತಿಭೇದಮಾ ವೈಷ್ಣವರೊಳ್ (ಸಮಪ. ೮-೧೩೮). **ಸೂಟಿಪಾಟಿ** = (ರತಿಸುಖದ) ಸರದಿ; ಸಮಯ: ಪ್ರಾಣೇಶ್ವರನೊಳ್ ಮನ್ನಣೆಗಾಣೆಗೆ ಗೋಸನೆಗೆ ಸೂಟಿಪಾಟಿಗೆ ನಮ್ಮೊಳ್ ಮಾಣದೆ ಮಚ್ಚರಿಪಂತಿರೆ ಹೂಣೆಸಿ ಮುಂಚಲ್ಕೆವೇಟ್ಕುಮೊರ್ವರಿನೊರ್ವರ್ (ಅನಂಪು. ೧೨-೧೫). **ಸೂಟಿಸುಂದು** = ೧. ಸರದಿಯ ಪ್ರಕಾರ ನಡೆಸುವ ರತಿಕ್ರೀಡೆ. ೨. (ಯುದ್ಧದಲ್ಲಿ) ಬಾರಿಬಾರಿಗೆ ಮೈಮರೆಯುವಿಕೆ. ೧, ೨: ಮಚ್ಚರದ ಸೂಟಿಸುಂದಿನ ಪೊಚ್ಚರನಾಂತಿರ್ದ ಬಿರುದಿನೆಸಕದ ಪೆಱವುಂ ಕಚ್ಚಕಳಿಗಳ ತೊಡರ್ಪಿನ ಮೆಚ್ಚವಣಿಗೆಯಂಕಮುಂ ಮಹೀಶಂ ನೋೞ್ಕುಂ (ಕಾವ್ಯಾವ. ೪೪೯). **ಸೂಟಿಸೂಟಿದೆ, ಸೂಟುಸೂಟಿದೆ** = ೧. ಬಾರಿಬಾರಿಗೂ: ಸೂಟಿಸೂಟಿದೇಂ ಸವಿದುವೊ ಬಣ್ಣವಣ್ಣಿಗೆಯ ಪೂಗಳ ಸೌರಭಮಂ ಮದಾಳಿಗಳ್ (ಆದಿಪು. ೧೧-೧೨೬). ೨. ಕ್ರಮಕ್ರಮವಾಗಿ; ಅನುಕ್ರಮವಾಗಿ: ತ್ರಿದಶೇಂದ್ರಂಗೆ ಯುಧಿಷ್ಠಿರಾಧ್ವರದ ಮಾಸಾಮರ್ಥ್ಯಮಂ ಸೂಟುಸೂಟಿದೆ ಪೇೞಲ್ ಪರಿವಂತೆ ಪೊಣ್ಮೆ ಪಲವುಂ ಧೂಮಂಗಳ್ (ಪಂಪಭಾ. ೬-೩೮). **ಸೂಟ್ತಡಂಬರ್** = ಸರದಿ ತಪ್ಪಿ ಬರು; ಕ್ರಮ ತಪ್ಪಿ ಬರು: ಮತ್ತೊಂದಿರುಳುಂ ನೃಪಂ ಪೆಱರ ಸೂಟಿ ದಿನಂ ಮಱೆದಿರ್ದು ಸೂಟ್ತಡಂಬಂದಳ ಸೂಟ್ಗೆ ಬಂದು ಬಿಡೆ (ಮಲ್ಲಿಪು. ೩-೪೫). **ಸೂಟ್ತಡಮಾಗು** = ಸರದಿ ತಡವಾಗು; ಕ್ರಮ ತಪ್ಪು: ಮರಣಕೆನ್ನಿಂದೆ ನೀಂ ಮುಂಚಿದಯ್ ಮೊನೆಯೊಳ್ಸೂಟ್ತಡಮಾಯ್ತುದೊಂದೆಡೆಯೊಳಂ ಹಾ ವತ್ಸ ದುಶ್ಶಾಸನಾ (ಗದಾಯು. ೫-೭). [ದೇ. ‖ ತಮಿ. ಊಟಿ; ಮಲ. ಊಟ, ಚುಟಱು]

**ಸೂಟಿ** (ನಾ). (ಜಾರತನದ) ಸರದಿಯನ್ನು ಪಡೆಯುವವನು; ಜಾರ: ಮನುಕುಲದೆ ಪುಟ್ಟಿ ನಿಟ್ಟುರದ ಬೊಡ್ಡಿತನಮಿಂತೇಂ ಸೂಟಿನನಾಯ್ತು ಬಾೞ್ದೆ ನೀಂ ಮಗಳೇ! (ರಾಮಾಶ್ವ. ೭೦-೩). [ಸೂಟ್ + - ಅ$_7$]

**ಸೂಟಿನೆ** (ಅ). "ಸೂಳ್ ಎಂದು ಶಬ್ದಮಾಡುತ್ತ" (ಪಂಪದೀ. ೨೦೮): ಮಘವಂ ಶಚಿಪೂತ ಚೂತಮಂ ನೆರ್ಮಿರ್ದಶೋಕವಲ್ಲರಿಯ ಪಲ್ಲವಮೊಂದನೆ ಕೊಯ್ದು ರಾಗದಿಂ ಸೋರ್ಮುಡಿಯೊಳ್ ತಗುಳ್ಚಿದೊಡೆ ಸೂಟಿನೆ ಬಾರಿಸಿದಂ (ಪಂಪಭಾ. ೫-೮೨). "ಆಗಲೇ, ಆ ಸಲವೇ" (ಪಂಪಭಾ. ಕೋಶ). [IP ಇದು 'ಸೌಳನೆ' ಎಂದಿರಬಹುದೇ?]

**ಸೂಟಿರಸಿ** (ನಾ). (ರತಿಸುಖದ) ಸರದಿಯನ್ನು ಪಡೆದ ರಾಣಿ; ಸರದಿಯ ಅರಸಿ: ಕಪಿಲಾಕರೇಣುವೆರಸಿ ಪುಂಡರೀಕಗಜಮೇೞ್ಪಂತೆ ಸೂಟಿರಸಿವೆರಸು ಸೆಜ್ಜೆಯಿನೆೞ್ದು (ಶಾಂತಿಪು. ೫-೯೨ ವ); ಧವಳಧಾಮಶಯನದೊಳಮರ್ದಿರೆ ಸೂಟಿರಸಿವೆರಸು (ಪುಷ್ಪಪು. ೮-೧೭). [ಸೂಟ್ + ಅರಸಿ]

**ಸೂಟಱಿ, ಸೂಳಱಿ** (ಕ್ರಿ). ೧. (ಸರಿಯಾದ) ಸಮಯವನ್ನು ತಿಳಿ; ಹೊತ್ತನ್ನು ತಿಳಿ: ಪ್ರಮದೆಯರಂ ಮನೋಭವನೆ ಸೂಟಱಿದೆಚ್ಚಪನಗ್ನಿಬಾಣದಿಂ ಹಿಮಕರಬಾಣದಿಂ ತಿಮಿರಬಾಣದಿನೆಂಬಿನಂ (ಚಂದ್ರಪು. ೭-೧೩೩); ವಾರಿಜೋದ್ಭವನಲ್ಲಿ ಸೂಟಱಿತು ಪೊಗೞುತಿರೆ ವೇದಸೂಕ್ತಂಗಳಿಂದ (ಶ್ರೀರಾಮ. ೪೫-೫೪). ೨. ಸರದಿಯನ್ನು ತಿಳಿ; ಕ್ರಮವನ್ನು ಅರಿ: ನಱುಸುಯ್ಗಂ ಮಾಲೆಗಂ ಸೂಟಱಿದೆಱಗುವಿನಂ ತುಂಬಿಗಳ್ (ಪಂರಾಮಾ. ೧-೧೨೦). **ಸೂಳಱಿ**: ೧. ಅಡ್ಡಂಬರಿಯಿಪ ವಾಘೆಯೊಳ್ಸರಿಸಂಗೊಂಡೊಂದೆ ಮೆಯ್ಯೊಳ್ಸೂಳಱಿದೇಱುವ . . . ಘೋಳಾಯಿಲರ್ ನೆರೆದು (ರಾಜಶೇ. ೬-೧೧ ವ). ೨. ಕಂಕಣಝಣಝಣತ್ಕಾರದಿಂ ಸಭೆಯ ಕಿವಿಗೆ ಸವಿಗಳಂ ಸಾಲಿಡೆ ಸೂಳಱಿದಿಕ್ಕುವ ಚಾಮರಗ್ರಾಹಿಣಿಯರೊಳಂ (ಗಿರಿಕ. ೨-೧೦೫ ವ); ಸೂಳಱಿದು ತೋಳಂ ನೆಗಪಿ ಚಾಮರಮಂ ಬೀಸುವ ಚಾಮರಗ್ರಾಹಿಣಿಯರಿಂ (ರಾಜಶೇ. ೫-೧೯ ವ). [ಸೂಟ್ + ಅಱಿ]

**ಸೂಟಾಯಿತ** 'ಸೂಟಾಯ್ತ' ನೋ.

**ಸೂಟಾಯ್ತ, ಚೂಳಾಯ್ತ, ಸೂಳಾಯತ, ಸೂಳಾಯಿತ, ಸೂಳಾಯಿತ್ತ, ಸೂಳಾಯ್ತ, ಸೂಟಾಯಿತ** (ನಾ). ೧. ಸರದಿಯ ಪ್ರಕಾರ ಕೂಗುವವನು, — ಸಾರುವವನು: ಕರಗದವರಂತೆ ಸೂಟಾಯ್ತರಂತೆ . . . ಮೇಳದವರಂತೆ ನೆರೆದೋಲಗಿಕುಂ (ಶಾಂತಿಪು. ೬-೧೧೯); ಇರದೊಗೆದುದಲ್ಲಿ ಸೂಟಾಯ್ತರ ಕಳಕಳಂ (ಜಗವಿ. ೧೧-೭೩). ೨. ಮಂಗಳಪಾಠಕ; ವಂದಿ: ಸೂಟಾಯ್ತರ ಕರೆಹಮಂ ಸನ್ನೆಗೆಯ್ವಂತೆ ರಾಜಾಂಗಣದೊಳಗೆ ಮಂಗಳಾಚಾರಸಂಗೀತಕಮಂ ನೆಗೞ್ಚಿ ಮುಖರೀಗಾಣರ ತಾಳವಾದ್ಯಕೋಳಾಹಳದೊಳಂ (ಅನಂಪು. ೫-೫ ವ). ೩. ಯುದ್ಧಕ್ಕೆ ಕರೆಯುವವನು: "ಸೂಟಾಯ್ತರೆನಲ್ಕೆ ಸೂಟ್ಗೆ ಕರೆವರೊಳಪ್ಪರ್" (ಕರ್ಣಾನಿ. ೩೪); "ಸೂಟಾಯ್ತಂ = ಸೂಟ್ಗರೆವಂ" ಶಮದ. ಪರಿ. ೧). **ಚೂಳಾಯ್ತ**: ೧. "ಚೂಳಾಯ್ತ = ಪರಿಚಾರಕ" (ಪ್ರಭಣ್ಣ). **ಸೂಳಾಯತ**: ೧. ಸೂಳೆಗೇರಿಯೋಲಗದ ವೇಳೆಯನಱಿತು ಕರವೆತ್ತಿ ಕರೆವ ಸೂಳಾಯತದವರ ದನಿಗೇಳುತ್ತ (ವಿರೂಪಾ. ೬೨ ವ). ೨. ಪಾಯವಧಾರು ಸೂಳಾಯತರ ಮಂಗಳವಚನದ್ಯೆದೆಯರ ದೂರದಲಿ ನಿಲಿಸಿದನು (ಕುವ್ಯಾಸ. ೧೨-೨). ೪. ದೂತಕಾರ್ಯ; ದೂತಕೆಲಸ: ಹೇಳಬಹುದೆ ಸುರೇಂದ್ರಭವನದ ಸೂಳೆಯರ ಸೂಳಾಯತದ ವಾಚಾಳತನವೇ ನೆರವೆ ನಟರಿಗೆ ಮುಖ್ಯವಿದ್ಯೆಯಲ (ಕುವ್ಯಾಆ. ೧೯-೧೯). **ಸೂಳಾಯಿತ**: ೫. ಓಲೆಕಾರ; ಹರಿಕಾರ: ಸಮಸ್ತ ಪ್ರಜೆಗಾವುಣ್ಡುಗಳುಂ ಸೂಳಾಯಿತ ಬಲಯನ ಕಾಲದಲು . . . ಬಿಟ್ಟದು (ಎಕ. XVI, ಚಿಕ್ಕನಾ. ೬೯-೩೭; 1177); ಅರಮನೆಯ ಸೂಳಾಯಿತನು ಬಂದ ಸುದ್ದಿ ಊರ್ವಶಿಗೆ ಅರಿಕೆಯಾಯಿತು (ಭಾಮಣಿ. ೧೧೯). **ಸೂಳಾಯಿತ್ತ**: ೬. ಖಡ್ಗಯುದ್ಧದ ಒಂದು ವರಸೆ: ವೈರಿಯ ಮೇಲೆ ಹನ್ನೆರಡು ಪೆಟ್ಟಿನಿಂದಲು ವಂದೆ ಬಾರಿ ಸಾಧನೆಯನ್ನು ಮಾಡುವನಾದರೆ ಅದು ಸೂಳಾಯಿತ್ತಯೆಂದು ನುಡಿಯಲ್ಪಡುವುದು (ಖಡ್ಗಟೀ. ೫-೭೧). **ಸೂಳಾಯ್ತ**: ೧. ಶ್ರೀಮನ್ಮಹಾಪಸಾಯಿತಂ ಸೂಳಾಯ್ತರಾಧಿಷ್ಠಾಯಕಂ (ಎಇ. XXVII, ೭೩-೫೦; 1114); ಗೋಳಾಯ್ತ ಸೂಳಾಯ್ತ . . . ಕಂಚುಗಾಱರ ಕೇರಿ ಮೆಱೆದಿಹವು (ಸಾಳ್ವಭಾ. ೨-೮). ೨. ಎಚ್ಚರಿಸಿ ಸಿದ್ಧಂ ಮಾಳ್ಪರ್ ಸೂಳಾಯ್ತರುದಯರಾಗವ ಪಾಡುತುಂ (ಸಂಸಪ. ೮-೧೭). **ಸೂಟಾಯಿತ**: ೧. ಪರಸುವಜ್ಞರುಂ ಪರಿದುರುಳ್ವ ಗುಜ್ಜರುಂ ಸುೞಿವ ಸೂಟಾಯಿತರುಂ (ಲೀಲಾವ. ೭-೬೮ ವ). [ಸೂಟ್ + - ಆಯ್ತ]

**ಸೂಟಾಯ್ತೆ** (ನಾ). ಸೇವಕಿ; ದಾಸಿ; ಪರಿಚಾರಿಕೆ: ವರಮಂ ಬೇಡೆಂದಂಬಿಕೆಗೆ ಪೇೞ್ದೊಡಾಕೆಯುಂ ವ್ಯಾಸಭಟ್ಟಾರಕನಲ್ಲಿಗೆ ಪೋಗಲಲಸಿ ತನ್ನ ಸೂಟಾಯ್ತೆಯಂ ತನ್ನವೊಲೆ ಕಯ್ಗೆಯ್ದು ಬರವಂ ಬೇಡಲಟ್ಟಿದೊಡೆ (ಪಂಪಭಾ. ೧-೮೫ ವ). [ಸೂಟಾಯ್ತ + - ಎ$_2$]

**ಸೂಟೆಱಿ** (ಕ್ರಿ). ಮತ್ತೆ ಮತ್ತೆ ಕಾದಾಡು; ಪುನಃ ಪುನಃ ಹೋರಾಡು: ಪರಿವಡಿಯಂಕದಂತೆ ಪೊಱಮಟ್ಟದೆ ಸೂಟೆಱಿವೊಳ್ಮಿದುಳ್ ಸಿಡಿಲ್ತರೆ ಪೊಱಸಾರ್ದು ಸನ್ನೆದಗರಂದದೆ ತಾಗುವ ಝುಟ್ಟಿಮಲ್ಲರಂತಿರೆ . . . ಪೋರ್ದುವಾನೆಗಳ್ (ವರ್ಧಪು. ೮-೫೩).
[ಸೂಟ್ + ಇಱಿ$_1$]

**ಸೂಟು** 'ಸೂಟ್' ನೋ.

**ಸೂಟುಗರೆ** 'ಸೂಟ್ಗರೆ' ನೋ.

**ಸೂಟುಗಾಳೆ, ಸೂಳುಗಹಳೆ** (ನಾ). ಸೂಚನೆಯನ್ನು ಕೊಡಲು ಊದುವ ಕಹಳೆ: ನಿಶಾವಸಾನಸಮಯದೊಳ್ ಪಯಣದ ಸೂಟುಗಾಳೆಗಳಂ ಪಿಡಿದು ಬೀಡೆತ್ತಲುದ್ಯೋಗಂಗೆಯ್ವುದಂ ಕಂಡು (ಪಂಚತಂ. ೧೨೬-೧೨). **ಸೂಳುಗಹಳೆ**: ಕೇಳುತವೆ ಹರಿಬಲರ ಸನ್ನೆಯ ಸೂಳುಗಹ[ಪಾಠಾಂ. ಗಾ]ಳೆಯ ದನಿಯನಾ ಗೋಪಾಲಬಾಲವ್ರಾತ ಹೊಱವಂಟುದು ತತುಕ್ಷಣಕೆ (ನಿಭಾಗ. ೧೦-೧೨-೩). [ಸೂಟು(< ಸೂಟ್) + ಕಾಳೆ(< ಕಹಳೆ)]

**ಸೂಟುನುಡಿ** 'ಸೂಟ್ನುಡಿ' ನೋ.

**ಸೂಟುಲಿಗೆಲೆ** (ಕ್ರಿ). ಪರಸ್ಪರ ಮಾತನಾಡು; ಹರಟು: ಸೂಟುಲಿಗೆಲೆಯುತ್ತು ಮಿರ್ಪ ತರುಣೀಜನಮಂ ನೃಪನೊಲ್ದು ನೋಡಿದಂ (ಲೀಲಾವ. ೫-೧೦೧).
[ಸೂಟ್ + ಉಲಿ$_2$ + ಕೆಲೆ]

**ಸೂಟುವರಿ** 'ಸೂಟ್ವರಿ' ನೋ.

**ಸೂಟುವಾಳ** 'ಸೂಟ್ವಳ' ನೋ.

**ಸೂಟೇಸು** (ನಾ). ಮತ್ತೆ ಮತ್ತೆ ಮಾಡುವ ಬಾಣಪ್ರಹಾರ; ಬಾರಿಬಾರಿ ಬೀಳುವ ಅಂಬಿನ ಹೊಡೆತ: ಪಾಯ್ವರಾತಿಯ ಮೆಯ್ಯ ನೆತ್ತರಂ ಕಂಡು ಸೂಟೇಸಿನೊಳಿವನ ನೆತ್ತರೊಕ್ಕೊಡಂ ತನಗೆ ಬಸಿಱಾಱೆ ಕುಡಿಯಲುಂ ದ್ರೌಪದಿಯ ಕೇಶಪಾಶಮಂ ತೊಯ್ದು ಮುಡಿಯಲುಂ ನೆಱೆಯದೆಂದು (ಪಂಪಭಾ. ೧೨-೧೪೮ ವ). [ಸೂಟ್ + ಏಸು$_2$]

**ಸೂಟ್ಕೈಸು** (ಕ್ರಿ). ಸರದಿಯಂತಾಗು; ಕ್ರಮವಾಗು: ಸೂಟ್ಕೈಸೆಚ್ಚೆಚ್ಚು ಬಿಲ್ಲಂ ರಥದ ಕುದುರೆಯಂ ಸೂತನಂ . . . ಪಾರ್ದಾರ್ದುಱದಿಸೆ ಮುಳಿಸಿಂ ನೂರ್ವರುಂ ಪೊನ್ನ ತಾಟ್ಗಳ್ ಸೂಟೊಳ್ ಬೀಳ್ವಂತೆ ಬಿಟ್ಟರ್ (ಪಂಪಭಾ. ೧೧-೯೫). [< ಸೂಟ್ + -ಇಸು$_3$]

**ಸೂಟ್ಗರೆ**, ಸೂಳುಗರೆ, ಸೂಟುಗರೆ (ಕ್ರಿ). ೧. ಸುದ್ದಿಯನ್ನು ಒಯ್ಯು; ದೂತಕಾರ್ಯವನ್ನು ಮಾಡು: "ಸೂಟ್ಗರೆವನನಲ್ಕೆ ದೂದವಂ" (ಚತುಸಿ. ೬. I. ೪೫). ೨. ಯುದ್ಧವನ್ನು ಘೋಷಿಸು; ಕದನಕ್ಕೆ ಕರೆ: ಸೂಟಾಯ್ತಂ = ಸೂಟ್ಗರೆವಂ (ಶಮದ. ಪರಿ. ೧). **ಸೂಳುಗರೆ**: ೨. "ರಣಕೆ ಕರೆವವನಕ್ಕು ಸೂಳುಗರೆವವನೆನಲ್" (ಕಶರ. ೧೧೦). **ಸೂಟುಗರೆ**: ೨. "ಪುಯ್ಯಲ್ಗೆ ಕರೆವವಂ ಸೂಟುಗರೆವವನೆನಿಕು" (ಶಬ್ದಮಂ. ೪೬). [ಸೂಟ್ + ಕರೆ$_1$]

**ಸೂಟ್ಗಲ್** (ನಾ). ಒಂದು ಊರಿನ ಹೆಸರು: ಪಟವೃಕ್ಷಂ ಪ್ರಾಪ್ತ: ಅಪರೋಗ್ರಾಮಃ ಸೂಟ್ಗಲ್ ಸಪ್ತತ್ಯಭ್ಯನ್ತರೆ ನಿಗುಂಬೂರು ನಾಮಗ್ರಾಮಃ ಸ್ವಕೀಯನಾಮಾಂಕಿತ ರಾಜಾದಿತ್ಯ ಮಂಗಳಮಿತಿ (ಮೈಆರಿ. ೧೯೬೫, ೪೦-೬೬; 951?). [ಸೂಟ್ ? + ಕಲ್$_3$]

**ಸೂಟ್ಗಿಡು** (ಕ್ರಿ). ಕ್ರಮತಪ್ಪು; ರೀತಿಗೆಡು: ಎಯ್ದೆ ಸೂಟ್ಗಿಡದೆ ಪಂಚಪದಂ ಗಳನೋದುತಿರ್ಪ ನಾಲಗೆ ಗಡಮೇಂ ಸಮಾಧಿವಿಧಿಯಂ ನೆಱೆ ತಾಳ್ದಿದನೋ ಮಹಾಬಲಂ (ಆದಿಪು. ೨-೬೦). [ಸೂಟ್ + ಕಿಡು (< ಕೆಡು$_1$)]

**ಸೂಟ್ಗೆಯ್** (ನಾ). ಒಂದರ ನಂತರ ಒಂದು ಸರದಿಯಂತೆ ಚಲಿಸುವ ಕೈ: ತುಡುವ ಬಿಡುವ ಸೂಟ್ಗೆಯ್ಯ ಬೇಗಂಗಳಂ ನಿಟ್ಟಿಸಲಾರ್ಗಂ ಬಾರದಂತಾಗಸದಳಮಿಸೆ ತದ್ರಾಜಚಕ್ರಂ ಪೊದಟ್ಟ[ಬಿ]ಸಿದತ್ತು (ಪಂಪಭಾ. ೧೨-೨೦). [ಸೂಟ್ + ಕೆಯ್$_2$]

**ಸೂಟ್ಗೊಳ್** (ಕ್ರಿ). ಸರದಿಯನ್ನು ಹೊಂದು,—ಪಡೆ: ಈ ಸೂಳೆವಾಡಂ ನೀಮುಮಾಮುಂ ಸೂಟ್ಗೊಂಡು ಪಾಡುವಂ (ಚಿಕವಿ. ೬-೧೫೪ ವ). [ಸೂಟ್ + ಕೊಳ್$_1$]

**ಸೂಟ್ಜ್ವರ** (ನಾ). ಅವಧಿ ಮುಗಿಯುವವರೆಗೂ ಬಿಡದಿರುವ ಜ್ವರ; ಗಡುವಿನ ಜ್ವರ: ಪೆಡೆಯಕ್ಕಿಯ ಬೇರಂ ಕಟ್ಟಿಡುವುದು ಕರ್ಣದೊಳೆ ಪಿಂಗುಗುಂ ಸೂಟ್ಜ್ವರಮುಂ (ಲೋಕೋಪ. ೯-೨೬); ಕೂಡಿ[ರೆ]ಚಾಯಾಶುಷ್ಕಂ ಮಾಡಿ ನೃಮೂತ್ರದೊಳೆ ನಸ್ಯಲೇಪನ ವಿಧಿಯಿಂ ಪೀಡಿಸುವಖಿಲವಿಷಂ ಬಿಟ್ಟೋಡುಗುಮಾ ಸೂಟ್ಜ್ವ[ಪಾಠಾಂ. ಸೂಳ್ವ, ಸೂದ್ವಿ] ರಂಗಳನಿತುಂ (ಖಮದ. ೮-೫). [ಸೂಟ್ + ಜ್ವರ]

**ಸೂಟ್ನುಡಿ**, ಸೂಳ್ನುಡಿ$_2$, ಸೂಟುನುಡಿ (ನಾ). ಸರದಿಯ ಪ್ರಕಾರ ಆಡುವ ಮಾತು; ಸಂಭಾಷಣೆ: ಜಾರರಂ ಸೆಱೆಯಿಡುವಾನನಂ ಪದಿರನಾಡುವ ಸೂಟ್ನುಡಿ ದುಷ್ಟಚೇಷ್ಟೆಯಂ ಮೆಱೆಯಿಪ ತಮ್ಮ ಭಂಗಿ . . . ರಜನಿರಂಜನಮಾದುದು ಬಂಧಕೀಜನಂ (ಸೂಕ್ತಿಸು. ೮-೮೫). **ಸೂಳ್ನುಡಿ$_2$**: ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತ ಕಾಣಾ ರಾಮನಾಥಾ (ದೇದಾವ. ೧-೧); ಚಂಡವೇಗದಿನೊರ್ವ ಪಾಂಥನೆಯ್ತರುತೆ ಸಱಿವಿಂಡಿಯಾಗೆಸೆವ ಗೋಪಿಯನಿಕ್ಷುವಾಟಿಯೊಳ್ ಕಂಡೊಂದೆರಳ್ನೂಱು ಸೂಳ್ನುಡಿ ಗಳಿಂದೊಲಿಸಿಕೊಂಡು (ಪದ್ಮರಾ. ೮-೧೯); ಮಱೆನುಡಿ ಯಾವಾಗ ಸೂಳ್ನುಡಿ ಯಾವಾಗ . . . ಮುದ್ದುನುಡಿಗಾವ ಹೊತ್ತೆಂದು ಕಿಱುನುಡಿಯಿಂದ ಪಾಡಿದಳು (ಭರಚ. ೧೧-೬೨); ಅವನ ಪರಿಪಕ್ವವಾದ ಅನುಭವರಸಾಮೃತಪೂರಿತವಾದ ಸೂಳ್ನುಡಿಗಳು . . . ಹತ್ತನೆಯ ಶತಮಾನದ ಸಾಲಿಗೆ ಬಂದಿದ್ದಿರಬಹುದೆಂಬುದರಲ್ಲಿ ಸಂದೇಹವಿಲ್ಲ (ಸಾಹಿಸ. ೩೬). **ಸೂಟುನುಡಿ**: "ಸೂಟುನುಡಿ ಸಲ್ಲಾಪವೆಂಬುದು" (ಹಲಾಯು. ೨೪-೧೪೯); "ವ್ಯಾಪಿಸುವ ಸೂಟುನುಡಿ ಸಲ್ಲಾಪಮಕ್ಕುಂ" (ಮಂಗರಾ. ೨೭-೫). [ಸೂಟ್ + ನುಡಿ$_2$]

**ಸೂಟ್ಪಡು** (ಕ್ರಿ). ಸರದಿಯನ್ನು ಹೊಂದು, — ಪಡೆ: ಸೂಟ್ಪಟ್ಟ [ಪಾಠಾಂ. ಕೈಪಟ್ಟ] ನಾಗಳ್ ಜವಂ ಪಿಡಿದೀಡಾಡುವ ಮಾಟ್ಕೆಯಂತೆ ಪಲರಂ ಕೊಂದಿಕ್ಕಿ . . . ಉರುಳ್ಚಿ ಕಟ್ಟಿ ರಿಪುವಂ ಮುಂದಿಕ್ಕಿದಂ ದ್ರೋಣನಾ (ಪಂಪಭಾ. ೨-೬೨). [ಸೂಟ್ + ಪಡು$_1$]

**ಸೂಟ್ಪಡೆ** 'ಸೂಟ್ಬಡೆ' ನೋ.

**ಸೂಟ್ಪಾಡು**, ಸೂಳುಪಾಡು (ನಾ). (ಒಂದು ಕ್ರಮ ಅಥವಾ ಏರ್ಪಾಡಿಗೆ ಅಳವಟ್ಟ) ಸರದಿ,— ಪಾಳಿ: ಬಿಡದುರವಣಿಸುವ ಬಿಱುಬನೊಳಿನಿಯನ ಮಿಡುಕ ಸ್ಮರಿಸದೆ ಮೇಲ್ಮೆಯೊಳು ಪಡಿಬರಿಸುತ ಸೂಟ್ಪಾಡುವಿಡಿದು ಪಾಯ್ದೊಡನೆ ಪಲ್ಲಟ ಕುಜ್ಜುಗಿಪುದು (ಚಿಕವಿ. ೬-೧೫೭ ಸಾಂಗತ್ಯ ೬೦). **ಸೂಳುಪಾಡು**: ಒಡೆದರಿಱಿದರು . . . ಕೋಳಾಹಳದ ಬಲುಗಡಿಯ ಭಟರಬ್ಬರಿಸಿ ಸದೆದರು ಸೂಳುಪಾಡಿನ [ಪಾಠಾಂ. ಳಿನ]ಲಿ (ತೊರರಾ. ೫-೭-೨); ಡೋಳು ತಮ್ಮಟದಿಂದ ಸೂಳುಪಾಡಿನಲೂದುತಿಹ ಹೆಗ್ಗಾಳೆಯಿಂದಲಿ (ದೇವೀಮ. ೩-೫೩). 'ಸೂಳುಪಾಳಿ', 'ಸೂಳುಪಾಳು' ಪರಾ. [ಸೂಟ್ + ಪಾಡು$_3$]

**ಸೂಟ್ಪೊಯ್** (ನಾ). ಸರದಿಯ ಪ್ರಕಾರ ಪರಸ್ಪರ ಹೊಡೆಯುವ ಏಟು,— ಹೊಡೆತ: ಯುದ್ಧಕೇಳಿಧುರೀಣರ್ ದನುಜಾರಿಯುಂ ದನುಜನುಂ ಸೂಟ್ಪೊಯ್ಯುಳಿಂ . . . ಪೊಯ್ದರ್ ಗದಾದಂಡದಿಂ (ಜಗವಿ. ೯-೭೫). [ಸೂಟ್ + ಪೊಯ್$_2$]

**ಸೂಟ್ಮಾತು**, ಸೂಳುವಾತು (ನಾ). ಸರದಿಯ ಪ್ರಕಾರ ಆಡುವ ಮಾತು; ಪರಸ್ಪರಾಲಾಪ; ಸಂಭಾಷಣೆ: ಇರ್ವರ್ ಪದಿರಿನಿಂ ನುಡಿವ ಸೂಟ್ಮಾತುಗಳಂ ಕಾಪಿನವರುಂ ಪೊಟಲ ಜನಮುಂ ಕೇಳ್ದು (ವಡ್ಡಾರಾ. ೧೨೫-೧೦); ಸೂಟ್ಮಾತನಾಡಿ ಸೋಲ್ತು ಕಂದರ್ಪದೇವಕಟಾಕ್ಷಪ್ರೇಷಿತ ಪೀಠಮರ್ದಕನಿಂದರ್ಧಚಂದ್ರನಂ ಪಡೆವುದುಂ (ಲೀಲಾವ. ೨-೧೨೪ ವ). **ಸೂಳುವಾತು**: ಸೂಳುವಾತಿನ ಹಂಬಲಿಯ ಹೀಹಾಳಿಕೆಯ ಹೇವಗಳ ಮನದುಬ್ಬಾಳಿನಿಂದೆಬ್ಬಾಡಿದರು ಮೆಚ್ಚಲು ಸುರವ್ರಾತ (ತೊರರಾ. ೬-೫೦-೧೨). [ಸೂಟ್ + ಮಾತು$_1$]

**ಸೂಟ್ಮೆಟ್ಟು** (ನಾ). ಸರದಿಯ ಪ್ರಕಾರ ತುಳಿಯುವ ತುಳಿತ: ಮೆಟ್ಟಿದ ಸೂಟ್ಮೆಟ್ಟು ಗಳಿಂದೆ ಬೆಟ್ಟು ಕಟಿಲಲ್ಕಳ್ಳಾಡೆ ಭೂಭಾಗಮಾದುದು ದುರ್ಯೋಧನ ಭೀಮಸೇನರ ಗದಾಯುದ್ಧಂ ಮಹಾಭೈರವಂ (ಪಂಪಭಾ. ೧೩-೯೪). [ಸೂಟ್ + ಮೆಟ್ಟು$_1$]

**ಸೂಟ್ಬಗೆ** (ನಾ). ಎದುರಾಳಿತನ; ಪ್ರತಿಸ್ಪರ್ಧೆ: ಆತಂ ಮನದೊಳ್ ಮಚ್ಚರಿಪನೆಂಬ ಸೂಟ್ಬಗೆ [ಪಾಠಾಂ. ಪುಳ್ವಗೆ, ಹಳವಗೆ] ಬಗೆಯೊಳ್ ನನೆಕೊನೆವೋದಂತಿರೆ ನಿಡುನನೆಗಳ ನಾಯ್ದುಕೊಂಡು ಮನಸಿಜನೆಚ್ಚಂ (ಲೀಲಾವ. ೩-೫೧). [ಸೂಟ್ + ಪಗೆ$_2$]

**ಸೂಟ್ಬಡೆ**, ಸೂಟ್ಪಡೆ (ಕ್ರಿ). ೧. ಸರದಿಯನ್ನು ಪಡೆ,—ಹೊಂದು. ೨. ಅವಕಾಶವನ್ನು ಪಡೆ,—ಹೊಂದು: ಸೂಟ್ಬಡೆದ ಕೂಟಂ ಪಲ್ಲಟಂಬಾಯ್ತು ಬಾಯ್ಮುಱುಕಂ ತಾಂಗಿಗಟಲ್ಕ ನಾಣಲಿತನಂ ಬೆಂಡೇಟ್ಟ ಕಣ್ . . . ಕೂಟದೊಳ್ ನಲ್ಲರಾ (ಚಂದ್ರಪ್ರ. ೮-೬೮). **ಸೂಟ್ಪಡೆ**: ೧. ಭಾರತಂ ಕಲಹಮಿದಿರ್ಚುವಂ ಹರಿಗನಪ್ಪೊಡೆ ಮೊಕ್ಕಳಮೇಕೆ ನೀಂ ಪಳಂಚಲೆದಪೆಯಣ್ಣ ಸೂಟ್ಪ[ಪಾಠಾಂ. ಟ್ಬ]ಡೆಯಲಪ್ಪುದು ಕಾಣ ಮಹಾಜಿರಂಗದೊಳ್ (ಪಂಪಭಾ. ೧೦-೨೩). ೨. ಪಲದಿವಸಂ ಸೂಟ್ಪಡೆಯದೆ ಕರೆವುದ ರ್ಕಾಸೆವಟ್ಟು ಮಾತಟ್ಟಿದ ಕೆಳೆಯನನೆಮ್ಮಬ್ಬೆಯನೊಡಂಬಡಿಸಲಕ್ಕೆನೆಂದು ಪೋಗಲ್ವೇಟ್ಟು (ಶಾಂತಿಪು. ೮-೭೭ ವ); ಏಕೆಂದೊಡೆಂದುಮೇನ್ ತಿರಿತರ್ಪಟಲ್ ತನ್ನಿಚ್ಛೆಯಿನ್ ಸೂಟ್ಪಡೆದು ಬಂದಪುದು ಎಲ್ಲ ಏರ್ದೆಗಳ್ಗಂ (ಬಧ್ರಪ್ರ. ೧೬-೩೨). [ಸೂಟ್ + ಪಡೆ$_1$]

**ಸೂಟ್ಬನೆ** (ನಾ). ಒಂದಾದನಂತರ ಒಂದಿರುವ ತಾಳೆವೃಕ್ಷ; ಕ್ರಮವಾಗಿರುವ ತಾಳೆಮರ: ಪಲವುಂ ಬಿಲ್ವಿಲ್ಲಳೊಳ್ ಬಲ್ಲನೊಂದನೆ ಕೊಂಡೇಱಿಸಿ ನೀವಿ ಜೇವೊಡೆದ ಡುರ್ತೊಂದಂಬಿನಿಂದೊಂದು ಸೂಟ್ಬನೆಯಂ ಪಾವಿನ ಬೆನ್ನೊಳಾದುವನತಿಪ್ರಾರಂಭ ದಿಂದೆಟುಮಂ ಜನಕಾಧೀಶತನೂಜೆಯಾಣ್ಮನಿಸುವಂತೆಚ್ಚಂ ಮಹೇಂದ್ರಾಂತಕಂ (ಕಾವ್ಯಾವ. ೩೫೦). [ಸೂಟ್ + ಪನೆ]

**ಸೂಟ್ಬರಿ**, ಸೂಳ್ವರಿ, ಸೂಟುವರಿ (ಕ್ರಿ). ಸರದಿಯ ಪ್ರಕಾರ ಓಡು,— ಧಾವಿಸು: ಕೆನ್ನೆತ್ತರೊಳೊರ್ವರೊರ್ವರಂ ತಳ್ಕಱಿದುಂ ಬೊಬ್ಬಿಱಿದುಂ . . . ಸೂಟ್ಬರಿದುಮಾಡುವಾಗಳ್ (ಪಂಪಭಾ. ೧೨-೧೫೮ ವ). **ಸೂಳ್ವರಿ**: ಬಂಗಾರದ ಕಾವಿನ ಚಾಮರಗಳನ್ನು ಹಿಡಿದು ಸೂಳ್ವರಿದು ತೋಳುಗಳನ್ನು ನೆಗಹಿ ಢಾಳಿಸುತ್ತಿದ್ದರು (ಮುಂಬಯಿ. ೫-೨೯೯). **ಸೂಟುವರಿ**: ಸೂಟಿEಟುತೆವರಿವಾಗಳ್ ಕಣ್ಗಳ ಬೆಳಂತಿಗೆ ಬೆಳ್ಪು ಪರಿಮಳಂ ಪರಿವರಲ್ಗೊಂಚಲ್ಗೆ ದುಕೂಲಚೇಲವಂ ಬಾಸಣಿಸೆಯುಂ (ಅನಂತಪು. ೭-೧೧ ವ). [ಸೂಟ್ + ಪರಿ$_2$]

**ಸೂಟ್ಬರು**, ಸೂಳುವರು (ಕ್ರಿ). ಮತ್ತೆ ಮತ್ತೆ ಬರು: ಪೂಗೆ ಸೂಟ್ಬರುತಿರೆ ತುಂಬಿ ಕಣ್ ಮನಸಿಜಾತನ ಶಾತಶರಾಧಿದೇವತಾಪರಿಕರದಂತಿರಿರ್ದರಲರೋಳಿಯನೆತ್ತಿದ ಮಾಲೆಗಾರ್ತಿಯರ್ (ಕುಸುಮಾ. ೨-೧೮೯). **ಸೂಳುವರು**: ೨. (ರತಿಸುಖದ ಸರದಿಗಾಗಿ) ಕಾಂತನ ಬಳಿ ಬರು: ಅಂತು ಬೆಳುವಸದನವನಳ್ತಿಯೊಳಾಂತು ಕಾಂತನ ಸೂಳು [ಪಾಠಾಂ. ಳೆ]ವಂದಾ ಕಂತುಕೇಳಿಸುಖಸುಧಾರಸಕಡಲೊಳೋಲಾಡೆ (ಸಾಳ್ವಭಾ. ೩-೬೭). [ಸೂಟ್ + ಬರು$_1$ (< ವರ್)]

**ಸೂಟ್ಟಿಳ, ಸೂಟುವಾಳ** (ನಾ). (ಓಲಗದಲ್ಲಿ) ಸಮಯ ಸಂದರ್ಭಗಳನ್ನು ಸಾರುವವನು,– ಘೋಷಿಸುವವನು: ಮಧುದೂತಿ ನಾಗಲತೆ ಮಲ್ಲಿಗೆ ಮಾಲತಿ ಬನ್ನಿಮೆಂದು ಸೂಟ್ಟಿಳನವೊಲೆತ್ತಲುಂ ಕರೆಗುಮಾ ಬನದೊಳ್ ಕಿಸುಗಣ್ಣೆ ಕೋಕಿಲಂ (ಅನಂಪು. ೩-೧೧). **ಸೂಟುವಾಳ:** ಪುರಜನಪರಿಜನವಾಪ್ತಜನಂಬೆರಸು ಒಡ್ಡೋಲಗಂಗೊಟ್ಟು ಕುಳಿತೀ ಸಮಯಂಬಾರ್ದು ಕರೆವ ಸೂಟುವಾಳ[ಪಾಠಾಂ. ಸೂಳೆವಳ್ಳ]ರ ಕೊರಳ ಸರದ ಬಳಿವಿಡಿದು ನೂತ್ನರತ್ನದಂತೆ ಬಂದೋಲಗದೊಳು . . . ವಿರಾಜಿಸುತ್ತಿರಲು (ಧರ್ಮಪ. ೨-೧೮ ವ). [ಸೂಟ್ + -ವಳ]

**ಸೂಟ್ಸರಿ, ಸೂಳ್ಸರಿ** (ನಾ). ಕಾಲಕಾಲಕ್ಕನುಗುಣವಾಗಿ ಬರುವ ಮಳೆ: ಬೇಸಗೆಯ ನೇಸಱ ಸೂಡೆನ್ನದೆ . . . ಕಱೆವ ಕಾರ ಸೂಟ್ಸರಿಯ ಜಿನುಂಗೆನ್ನದೆ ಮರವಟ್ಟು ಮೋನದಿಂ ಪುರ್ಚುಗೊಂಡನಂತುಮಿರ್ಪ ಕಾಡಾಡಿ ರಾಯನೊಂದು ಗೆಯ್ಮೆಯಂ! (ರಾಮಾಶ್ವ. ೬೦-೨). **ಸೂಳ್ಸರಿ** : ಮಲ್ಸರಿ ಸೂಳ್ಸರಿ . . . ಬಲ್ಸರಿ ಕಾಲ್ಸರಿ ಸಾಲ್ಸರಿ ಸಲೆ ಸುರಿದು ಕಱೆದುವಿರುಳುಂ ಪಗಲುಂ (ರಾಜಶೇ. ೮-೧೧೨); ಸಾಲ್ಸರಿ ಸೂಳ್ಸರಿ ಕಾಲ್ಸರಿ ಸುರಿದವು (ಕ್ರೌಂಚಧ್ವ. ೫೨-೧೬). [ಸೂಟ್ + ಸರಿ]

**ಸೃಕ್ಚಂದನ** (ನಾ). ಹೂವಿನ ಹಾರ ಮತ್ತು ಸುಗಂಧ: ಘನಸಾರ ತಾಂಬೂಲ ಸೃಕ್ಚಂದನಾದಿಗಳನನುಗೊಳಿಸಿ (ದುರಪು. ೨೬-೮); ಇಹಲೋಕದ ಸೃಕ್ಚಂದನ ವನಿತಾದಿ ಸಕಲವಿಷಯಭೋಗಗಳು ಕರ್ಮಜನ್ಯವಾಗಿ ಅನಿತ್ಯವಾಯಿತು (ಈಶ್ವಸ್ವ. ೯-೧೪). [ಸಂ.]

**ಸೃಕ್ವ** (ನಾ). ಬಾಯಿಯ ಕೊನೆ; ಕಟವಾಯಿ: "ಸೃಕ್ವವೆಂಬುದು ಕಡೆವಾಯ್" (ಹಲಾಯು. ೮೬-೩೬೬); ಆ ಬಾಲಶಾರ್ದೂಲಮುಖರೋಮಕರಾಲಸೃಕ್ವೋಪಾಂತ ಪ್ರರೂಢಶ್ಮಶ್ರುಜಾಲಂ (ಆದಿಪು. ೧೩-೪೫ ವ); ಮೃಗಶಿಶುಗೆ ನಗಾಂತರದಲ್ಲಿ ಹರಿಣನಿತ್ತುದು ಕರುಣಿಸಿ ನಿಜಸೃಕ್ವದೂರ್ವೆಯಂ (ಜಗವಿ. ೪-೨೩); ವಿತತ ಸೃಕ್ವದ ಲೋಳಿಗಳ ಸಂಸ್ಕೃತ ಜಠರಜ ಸ್ವೇದಜಲಲಾಲಿತಹಯಾವಳಿ ಕಳನ ಗೆಲಿದುವು ಹರಿಯ ನೇಮದಲಿ (ಕುಮ್ಮಾಭೀ. ೩-೪). [ಸಂ.]

**ಸೃಕ್ಕಿಣಿ** (ನಾ). [ಅಶ್ವಶಾ] ಕುದುರೆಯ ಕಟವಾಯಿಯ ಸಂದು: ಕಟವಾಯಂ ಸಂಧಿಗಳಂ ಘಟಿಯಿಸುಗುಂ ಸೃಕ್ಕಿಣಿಯದೆಂಬ ಪೆಸರುಂ (ಅಶ್ವಶಾ. ೯-೪); ಕಟವಾಯ ಸಂದುಗಳಿಗೆ ಸೃಕ್ಕಿಣಿಯೆಂಬ ಹೆಸರು (ಅಶ್ವಟೀ. ೫೮-೭). [ಸಂ. ಸೃಕ್ಕಿಣೀ]

**ಸೃಗಾಲ, ಸೃಗಾಳ** (ನಾ). ನರಿ; ಜಂಬುಕ: ಕಾಕೋಳೂಕ ಸೃಗಾಲ ಶಾರ್ದೂಲೋಷ್ಟ್ರ ಖರಮುಖಂಗಳನನುಕರಿಸುವ ಮಹಾಬೀಭತ್ಸಕುತ್ಸಿತೋತ್ಪತ್ತಿಸ್ಥಾನಂಗಳೊಳ್ (ಸುಕುಮಾ. ೧೧-೪೧ ವ); ಸಂಗೀತದ ರಸದ ಮಧುವಿಂಗಾಂತ ಕಿವಿ ವಾಯಸ ಸೃಗಾಲಧ್ವನಿಗೆ ಸೊಗಸಿತೆ ತಂದೆ (ಕುಮ್ಮಾಗ. ೩-೨೦). **ಸೃಗಾಳ:** "ಫೇರವಂ . . . ಫೇರು ಸೃಗಾಳ ಮಾಕ್ರೋಷ್ಟುವೆನೆ ನರಿಯಕ್ಕು" (ಮಂಗರಾ. ೪೮-೧೦); ಆ ಬಿಲಂಗಳ ಮೇಗಣಟ್ಟುಗಳೊಳ್ ತಲೆಕೆಳಗಾಗಿರ್ದ ಖರಕರಭ ಸೃಗಾಳ ಸಾರಮೇಯಾಕಾರಂಗಳಪ್ಪುತ್ಪತ್ತಿಸ್ಥಾನಂಗಳೊಳ್ ಪುಟ್ಟಿ (ಶಾಂತಿಪು. ೭-೮೮ ವ). [ಸಂ.]

**ಸೃಗಾಳ** 'ಸೃಗಾಲ' ನೋ.

**ಸೃಜನ** (ನಾ). ಉತ್ಪತ್ತಿ; ಹುಟ್ಟು: ಕಾಣ್ಬುದು ದಿವ್ಯೋದ್ದೇಶದ ಪೂರಣನವಸೃಷ್ಟಿಯ ಜನನ ನವಶೋಭೆಯ ಸೃಜನ (ಕರುಶ್ರಾ. ೯೩-೮). [< ಸಂ. ಸೃಜ್]

**ಸೃಜನಶಕ್ತಿ** (ನಾ). ಉತ್ಪತ್ತಿಮಾಡುವ ಶಕ್ತಿ; ಸೃಷ್ಟಿಶಕ್ತಿ: ಮಾನವೀಯಪ್ರಜ್ಞೆಯ ಸೃಜನಶಕ್ತಿಯ (Creative) ಆವಿರ್ಭಾವವನ್ನು ಇಲ್ಲಿ ಕಾಣಬಹುದಾಗಿದೆ (ಕರ್ಣಾಟ. ೫೪೨). [ಸೃಜನ + ಶಕ್ತಿ]

**ಸೃಜನಶೀಲ** (ಗು). ೧. ಉತ್ಪತ್ತಿ ಮಾಡುವ ಗುಣವುಳ್ಳ. (ನಾ). ೨. ಉತ್ಪತ್ತಿ ಮಾಡುವ ಗುಣವುಳ್ಳುದು; ಸೃಷ್ಟಿಸುವ ಸ್ವಭಾವವನ್ನು ಹೊಂದಿರುವುದು: ಸಾಮಾನ್ಯವಾಗಿ ಮಗುವಿನಲ್ಲಿ ಸೃಜನಶೀಲವಾದ ಕಲ್ಪನಾಶಕ್ತಿಯು ಸಮೃದ್ಧವಾಗಿರುವುದೆಂದು ಭಾವಿಸುವುದು ತಪ್ಪು (ಕಥಕ. ೯೩). [ಸೃಜನ + ಶೀಲ]

**ಸೃಜನಾತ್ಮಕ** (ಗು). (ಹೊಸದಾಗಿ) ಸೃಷ್ಟಿಯಾದ; ಕ್ರಿಯಾತ್ಮಕವಾದ: ವ್ಯಾಖ್ಯಾನಗಳ ಅಡಿಯಲ್ಲಿ ಸಿಕ್ಕಿ ಸೃಜನಾತ್ಮಕಸಾಹಿತ್ಯವು ಸಮಾಧಿಯಾಗುವಂತಹ ಅಪಾಯವಿರುವ ಈ ಯುಗದಲ್ಲಿ, ಅವುಗಳಿಗೆ ನಿಶ್ಚಯವಾಗಿಯೂ ತಕ್ಕ ಬೆಲೆ ಕೊಡಬೇಕು (ಸಾಹಿಪ್ರ. ೨೫೮). [ಸೃಜನ + ಆತ್ಮಕ]

**ಸೃಜಯಿಸು** 'ಸೃಜಿಸು' ನೋ.

**ಸೃಜಿಯಿಸು** 'ಸೃಜಿಸು' ನೋ.

**ಸೃಜಿಸು, ಸೃಜಯಿಸು, ಸೃಜಿಯಿಸು** (ಕ್ರಿ). ೧. ಉಂಟುಮಾಡು; ಉತ್ಪತ್ತಿ ಮಾಡು; ಸೃಷ್ಟಿಸು: ಇನಿವಿರಿದವಸ್ತುಗಳ ನೀನನಿಮಿತ್ತಂ ಸೃಜಿಸಿಯುಂ ನಿಜಂ ನಿಷ್ಕರುಣಾತ್ಮನೆಯಾಗಿ (ಕಾದಂಉ. ೩೪೩); ಒಮ್ಮೆ ಸಂಹರಿಸುವನು ಸೃಜಿಸುವನೊಮ್ಮೆ (ಕಾಶಿರಾ. ೨೩-೧೭); ಅಜನ ರೂಪಿಂದಖಿಳಲೋಕವ ಸೃಜಿಸುವನು (ತೊರರಾ. ೧-೯-೩೬). ೨. ರಚಿಸು; ನಿರ್ಮಿಸು: ಬಂಡೆಯ ಕೊರೆದು ವರಶಿಲ್ಪಿ ಭುವನಸುಂದರಕಲಾಲಕ್ಷ್ಮಿಯಂ ಸೃಜಿಪಂತೆ (ಶ್ರೀರಾಮಾ. ೨೫-೬೭೫); ಋಷ್ಯಾಶ್ರಮದ ಶಾಂತಿಯ ಆವರಣವನ್ನು ಸೃಜಿಸಲೂಬಹುದು (ಸಾಂದಸ. ೩೩೩). **ಸೃಜಯಿಸು:** ೧. ಸೃಜಯಿಸೆ ನನಮುಂ ಮಾಧ್ಯದ್ಗಜಪತಿಗಮನೇ ವೃತ್ತಂ . . . ಭುಜಗ ಶಿಶುಸೃತಂ ನಾಮಂ (ಛಂದೋಂಬು. ೨-೧೦೪). **ಸೃಜಿಯಿಸು:** ೧. ಧರೆಯೊಳ್ ಧರ್ಮಾರ್ಥದಿಂ ನೀಂ ಸೃಜಿಯಿಸಿ ನೆಗಳ್ದೀ ವಿಪ್ರಸಂತಾನದೊಂದಾಚರಣಂ ನೀನಂದ ಪಾಂಗಿಂ ಕೃತಯುಗ ದೊಳೆ ದಲ್ಲಲ್ಲುಂ (ಆದಿಪು. ೧೫-೨೬); ನಿನ್ನೀ ಶರೀರದಿಂ ಮಕ್ಕಳಂ ಪಡೆದು ಸೃಜಿಯಿಸುವು ದೆಂದೊರೆದು ನಿರವಯನಾಗಲು (ಚೆಬಪು. ೧೩-೧೨). [< ಸಂ. ಸೃಜ್ + -ಇಸು]

**ಸೃಜ್ಯ** (ನಾ). ಹುಟ್ಟಿದುದು; ಉತ್ಪತ್ತಿಯಾದುದು: ಎರಡು ವಿಧದಲಿ ಲೋಕದೊಳು ಜೀವರುಗಳಿಪ್ಪರು ಸಂತತ ಕ್ಷರಾಕ್ಷರ ವಿಲಿಂಗ ಸಲಿಂಗ ಸೃಜ್ಯಾಸೃಜ್ಯಭೇದದಲಿ (ಹಸಾರ. ೧೪-೨೩). [ಸಂ.]

**ಸೃಜ್ಯಾಪ್ರಪಂಚ** (ನಾ). (ಅಲಂ) ಸೃಷ್ಟಿಯ ಆಗುಹೋಗು: ಎನ್ನ ಕೃಪೆಯಲಿ ಕಾಂಬೆ ಸಕಲವ ನಿನ್ನೊಳಗೆ ಸೃಜ್ಯಾಪ್ರಪಂಚವ ಭಿನ್ನನಾಗಿದಿರಿಲ್ಲ ರಾಜಸಗುಣದ ಭಯವೆಂದ (ನಿಭಾಗ. ೩-೯-೪೨). [ಸಂ.]

**ಸೃಣಿ** (ನಾ). ಆನೆಯನ್ನು ಅಂಕೆಯಲ್ಲಿಡಲು ಉಪಯೋಗಿಸುವ ಲೋಹದ ಸಾಧನ; ಅಂಕುಶ: ಮಹಾಮಾತ್ರವರ್ತನಂ ಸೃಣಿಯೊಳಲ್ಲದಿಲ್ಲಮಲ್ಲಿಯುಂ (ಚಂದ್ರಪು. ೩-೯ ವ); ಘನಶುಂಡಾದಂಡಪಾತಚ್ಯುತಖರಕರಬಿಂಬಂಬೊಲಿಂಬಾಗೆ ಶುಂಭತ್ಕನದುದ್ಯದ್ದರ್ಪಣಂ ಫಾಲದೊಳೆ ಸೃಣಿ ಚಲತ್ಕುಂಭಕೂಟಾಗ್ರಸಂಘಟ್ಟನದಿಂ ಬಿಳ್ದರ್ಧಚಂದ್ರಂಬೊಲಿರೆ . . . ಕಣ್ಗೊಪ್ಪಿ ಬಂದತ್ತಿಭೇಂದ್ರಂ (ರಾಜಶೇ. ೬-೮೧). [ಸಂ.]

**ಸೃಷ್ಟ** (ಗು). ೧. ಸೃಷ್ಟಿಸಿದ; ಉತ್ಪತ್ತಿ ಮಾಡಿದ. ೨. ಹೊರಚೆಲ್ಲಿದ. ೩. ಸಡಿಲ ಬಿಟ್ಟ. ೪. ಬಿಟ್ಟುಬಿಟ್ಟ; ತ್ಯಜಿಸಿದ. ೫. ತೆಗೆದುಹಾಕಿದ; ವಜಾಮಾಡಿದ. ೬. ಗೊತ್ತುಮಾಡಿದ; ನಿಶ್ಚಯಿಸಿದ. ೭. ಕೂಡಿಸಿದ; ಸೇರಿಸಿದ. ೮. ಬಹಳವಾದ; ಹೆಚ್ಚಾದ. ೯. ಅಲಂಕೃತವಾದ; ಸಿಂಗಾರಗೊಂಡ. (ನಾ). ೧೦. ಸೃಷ್ಟಿಯಾದುದು; ಉತ್ಪತ್ತಿಯಾದುದು: ರೂಪ ರಸ ಗಂಧ ಸ್ಪರ್ಶಗಳೆಲ್ಲವೂ ದೇವಸೃಷ್ಟಗಳೇ (ಬಂಕಿವು. ೨೬೭). [ಸಂ.]

**ಸೃಷ್ಟನೆ** (ನಾ). ೧. ಕೃತಕಕಲ್ಪನೆ; ಖೋಟಾ ತಯಾರಿಕೆ. ೨. ಕಳ್ಳರುಜು ಹಾಕುವುದು; ಸುಳ್ಳುಪತ್ರ ತಯಾರಿಸುವುದು: 'ಸೃಷ್ಟನೆಪತ್ರ' ಪರಾ. [< ಸೃಷ್ಟಿ]

**ಸೃಷ್ಟನೆಪತ್ರ** (ನಾ). ಕಳ್ಳರುಜು ಹಾಕಿದ ಪತ್ರ; ಕೃತಕದಾಖಲೆ: (೬). [ಸೃಷ್ಟನೆ + ಪತ್ರ]

**ಸೃಷ್ಟನೆಸಾಕ್ಷಿ** (ನಾ). ಕಳ್ಳಸಾಕ್ಷಿ; ಸುಳ್ಳುಸಾಕ್ಷಿ: (೬). [ಸೃಷ್ಟನೆ + ಸಾಕ್ಷಿ]

**ಸೃಷ್ಟಿ** (ನಾ). ೧. ಉತ್ಪತ್ತಿ; ಹುಟ್ಟು: ಸೃಷ್ಟಿಸಮಯದೊಳಿದರ್ಕಿದು ಚೇಷ್ಟಿತಮೆಂದಖಿಳಜಾತಿಯೊಳ್ ಕಲ್ಪಿಸೆ (ಜಗವಿ. ೩-೧೧೩); ಜಲಶಯನನಿನ್ನೊಂದು ಕರುಣದ ಬಲದಿ ಸೃಷ್ಟಿಯನುಂಟುಮಾಡಿದೆ ಹಳೆಯ ಹೆಮ್ಮಗ ನಾನು ನಿಮಗೆಲೆ ತಂದೆ (ಕಾಶಿರಾ. ೪೩-೪೪); ನಿಂದುದ ಹರಿವ ಕಾಲಮಂತೆ ನಿಂದುದು ಸೃಷ್ಟಿ (ಚತ್ರಾಂಗ. ೪೦-೧೧೧೪). ೨. ರಚನೆ; ನಿರ್ಮಾಣ. ೩. ಜಗತ್ತು; ಪ್ರಪಂಚ: ಇಟ್ಟಿಯ ಹಣ್ಣು ನರಿ ತಿಂದು ಸೃಷ್ಟಿ ತಿರುಗಿತ್ತೆಂಬಂತೆ ಮಟ್ಟಿಯನಿಟ್ಟ ದ್ವಿಜರ ಮಾತದೇಕೆ (ಬಸವ. ೫೭೮); ಸೃಷ್ಟಿಯ ಪ್ರತಿಯೊಂದು ಅಣು ಚಲಿಸಬೇಕಾದರೂ ಪರಮಾತ್ಮನ ಆಣತಿ ಬೇಕು (ಧರ್ಮಸಾ. ೧೦೭). ೪. ನೆಲ; ಭೂಮಿ: ಇಷ್ಟಲಿಂಗನಿದ್ರೆಯಲ್ಲಿ ಸೃಷ್ಟಿಯ ಮೇಲೆ ಬಿದ್ದು ಹೊರಳುವಾಗ ನಿಷ್ಠವಂತ ರೆಂತಾದಿರೋ (ವೋಳಿವಾ. ೧೮-೭೧). ೫. ನಿಸರ್ಗ; ಪ್ರಕೃತಿ. [ಸಂ.]

**ಸೃಷ್ಟಿಕರ್ತ** (ನಾ). ಸೃಷ್ಟಿ ಮಾಡುವವನು; ಪರಮಾತ್ಮ; ಬ್ರಹ್ಮ: ಎಷ್ಟು ವರ್ಣಿಪೆನು ಸೃಷ್ಟಿಕರ್ತನ ಮಹಿಮೆ (ಪುರಂದ. ೩-೯೧-೨). [ಸಂ.]

**ಸೃಷ್ಟಿಕ್ಷಮ** (ನಾ). ನಿರ್ಮಾಣಕಾರ್ಯದಲ್ಲಿ ಸಮರ್ಥನಾದವನು; ಸೃಷ್ಟಿಸುವ ಸಾಮರ್ಥ್ಯವುಳ್ಳವನು: ಜಗತ್ತ್ರಯಸೃಷ್ಟಿಕ್ಷಮನಾದ ಕೃಷ್ಣನ ಮಹತ್ತ್ವಕ್ಕೇ ನಿದಾಶ್ಚರ್ಯಮೇ (ಜಗವಿ. ೩-೬೮). [ಸಂ.]

**ಸೃಷ್ಟಿಪತಿ** (ನಾ). ೧. ಸೃಷ್ಟಿಯ ಒಡೆಯ; ಜಗತ್ತಿನ ಅಧಿಪತಿ; ಬ್ರಹ್ಮ. ೨. ಭೂಮಿಯ ಒಡೆಯ; ರಾಜ; ದೊರೆ: ಆಟ್ಟೆಗಳು ಹೊಳಲೇಳಿ ಪಡೆ ನಡೆಗೆಟ್ಟು ಕಾದುವ ಭರವು ನಿಂದುದು ಸೃಷ್ಟಿಪತಿ ಮನಗುಂದೆ ಬಿದ್ದುದು ಬಹಳ ಮರ್ಕಟರು (ಕೌಶಿರಾ. ೩೪-೯); ಸೃಷ್ಟಿಪತಿ ವ್ಯಾಕುಲಂಬಡುತಿರಲ್ಕರಿದು ಶ್ರೀಕೃಷ್ಣದೇವರು ಮುನಿಗಳಂ ಮೊಗವ ನೋಡಿ ನಾವೆಷ್ಟು ಪೇಳ್ದರು ರಾಯ ಕೇಳನವ ನೀವಾದಡಂ ಬುದ್ಧಿಗಲಿಸಿರೆನಲು (ತುರಂಗ. ೭೯-೭). [ಸಂ.]

**ಸೃಷ್ಟಿವಿರಿಂಚ** (ನಾ). ಸೃಷ್ಟಿಗೆ ಕಾರಣಭೂತನಾದವನು; ಸೃಷ್ಟಿಕರ್ತ; ಬ್ರಹ್ಮ: ವಿಕಳರುಳಿದಿರಲಾಗದೀ ಸಾಯಕದ ಸೃಷ್ಟಿವಿರಿಂಚ ಸುಭಟಪ್ರಕರದೊಳು ತಾನೆನುತ ತೆಗೆದೆಚ್ಚನು ವೃಕೋದರನ (ಕುವ್ಯಾಕ. ೨೦-೧೬). [ಸಂ.]

**ಸೃಷ್ಟಿಶೀಲ** (ಗು). ೧. ಸೃಷ್ಟಿಸುವ ಗುಣವುಳ್ಳ; ಸೃಜನಶೀಲವಾದ. (ನಾ). ೨. ಸೃಷ್ಟಿಸುವ ಗುಣವುಳ್ಳುದು; ಸೃಜನಶೀಲವಾದುದು: ಯಾವುದು ಈ ಸೃಷ್ಟಿಯಾಗಿ ಅಭಿವ್ಯಕ್ತವಾಗಿದೆಯೋ ಅದೆಲ್ಲವೂ ಸಚ್ಚಿದಾನಂದವೆ. ಅದು ಸ್ವರೂಪತಃ ಸೃಷ್ಟಿಶೀಲವಾದುದು (ಸೌಂದಸ. ೧೦೧). [ಸಂ.]

**ಸೃಷ್ಟಿಸು** (ಕ್ರಿ). ೧. ಉತ್ಪತ್ತಿ ಮಾಡು; ಹುಟ್ಟಿಸು: ಸೃಷ್ಟಿಸುವ ರಕ್ಷಿಸುವ ಕೆಡಿಸುವ . . . ದೃಷ್ಟವಾಗದವಂ ಸವಿಗಳಂ ಬಿಟ್ಟಡೊಲಿವವನು (ಬಸವು. ೫೦-೯೯); ಸೃಷ್ಟಿಸುವ ಪಾಲಿಸುವ ಪೊಂದಿಸುವಿಷ್ಟದೈವವು ನಮ್ಮ ಮತವನು ಮುಟ್ಟಿ ನಿಂದಿದೆ ನಿಮಗೆ ಸ್ವಲ್ಪವೆ ನಮ್ಮ ಮಾತುಗಳು (ಕೃಷ್ಣಾಕಾ. ೨೫-೧೪); ಭಗವಂತ ಸೃಷ್ಟಿಸಿದ ಈ ಸುಂದರವಾದ ಭೂತಲದ ಮೇಲೆ . . . ಮಸಿಯ ಒಂದು ಕರ್ಕಶಮಚ್ಚೆಯಂತಿದ್ದ ! (ವೀರಯೋ. ೫೩). ೨. ಹೊಸದಾಗಿ ಬಳಕೆಗೆ ತರು,—ಬಳಸು: ನವೋಪಮೆಗಳಂ ತನ್ನೊಳಾಪನಿತ ಸೃಷ್ಟಿಸುತ್ತಿರವೇಳ್ಕುಂ ಬಾಣೋಚ್ಚಿಷ್ಟಮೆಂಬ ಜಗತ್ರಯದೊಳೀ ಕಷ್ಟಮೇ ಸಾಲದೆ ವಿಚಾರಿಸ ಸತ್ಕವೀಂದ್ರರಿಗೆ (ಬಸವು. ೧-೧೩). [ಸೃಷ್ಟಿ + - ಇಸು]

**ಸೃಷ್ಟೀಶ** (ನಾ). ಜಗತ್ತಿನ ಒಡೆಯ; ಪರಮಾತ್ಮ: ಸೃಷ್ಟೀಶ ಪುರಂದರವಿಟ್ಠಲನ ನೆನೆನೆನೆದು ಮುಟ್ಟಿ ಭಜಿಸುವುದು ಈ ಮುದ್ದು ಅರಗಿಣಿಯ (ಪುರಂದ. ೪-೯೫-೩). [ಸಂ.]

**ಸೆಂಕಣಿ** (ನಾ). ಒಂದು ಬಗೆಯ ಮರ: ಸೆಂಕಣಿ (ಸೋನಗರ್ಭಿ) - ಮಧ್ಯಮ ಆಕಾರದ್ದು. ನೀರಿನ ಆಸರಕ್ಕೆ ಹುಟ್ಟುತ್ತದೆ (ಕಭಾಗ. ೪೯). [?]

**ಸೆಂಗೆನಿ** (ನಾ). ಒಂದು ಬಗೆಯ ಸಸ್ಯ: ಹೊಳೆಲಕ್ಕಿ, ಸೆಂಗೆನಿ (ಮೃಡಿಗಿ. ೭೮-೧೫೯೭). 'ಸೆಂಕಣಿ' ಪರಾ. [?]

**ಸೆಂಡಾಟ, ಚೆಂಡಾಟ** (ನಾ). ಚೆಂಡಿನ ಆಟ: ಒಪ್ಪುವ ಮಲ್ಲಿಗೆದುಱುಬಿನ ಮಡದಿಯರೊಪ್ಪುವ ಸೆಂಡಾಟವನಾಡಲ್ (ಅತಿರ. ೧೪೯-೧೪). **ಚೆಂಡಾಟ:** ಹುಡುಗರು ಬಯಲಿನಲ್ಲಿ ಚೆಂಡಾಟವಾಡುತ್ತಿದ್ದಾರೆ (ರೂಢಿ). [ಸೆಂಡು + ಆಟ]

**ಸೆಂಡಾಡಿಸು** (ಕ್ರಿ). ಚೆಂಡಿನಿಂದ ಆಟವಾಡುವಂತೆ ಆಡಿಸು: ಬ್ರಹ್ಮಾಂಡವಂ ಸೆಂಡಾಡಿಸಲು ಶಿಷ್ಯರುಗಳಂ ಕೃಪೆಮಾಡಿ ಸಲಹಲು (ಬಸವು. ೩೬-೮೩). [ಸೆಂಡು + ಆಡಿಸು]

**ಸೆಂಡಾಡು, ಚಂಡಾಡು, ಚೆಂಡಾಡು** (ಕ್ರಿ). ೧. ಚೆಂಡಿನ ಆಟವನ್ನು ಆಡು; ಕಂದುಕ ಕ್ರೀಡೆಯಾಡು: ಸೆಂಡಾಡುವ ತಟಿಯುಮಾನೆಯನೇಱುವ ವಿನೋದಂ ಮೊದಲಾಗೊಡೆಯ ವಿನೋದ ಸ್ಥಾನಂಗಳೆಲ್ಲಮಂ ಮಾಡಿಸಿ (ವಡ್ಡಾರಾ. ೪೫-೨೧); ಸೆಂಡಾಡುತಿರೆಯುಮಾನೆಯನೇಱುತ್ತಿರೆಯುಂ . . . ಬಿನ್ನವಿಸಲಾಗದು (ಪಂಚತಂ. ೩೨-೨); ಸಮ್ಮೋದದ ಸೆಂಡಾಡುವ ಪೊಟ್ಟು (ದಶಕು. ೧೨-೧೮೧). ೨. (ಅಲಂ) ಕತ್ತರಿಸಿ ಎಸೆದಾಡು: ದಣ್ಣಾಧಿನಾಥಂ ತಲೆಯಂ ಸೆಣ್ಣಾಡುಗುಂ (ಮೈಅರಿ. ೧೯೨೯, ೬೫-೪೪ ; 1081); ಕೌರವಕುಲದ ತಲೆ ಸೆಂಡಾಡಿದವ ನೀನೋ ಮದಗ್ರಜನೋ (ಕುವ್ಯಾಗ. ೨-೨೭); ಚಕ್ರಶಕ್ತಿಯಿಂದಸುರಚಮೂಪರ ಶಿರವ ಸೆಂಡಾಡಿ (ಮೋಹತ. ೨೯-೩೧). **ಚೆಂಡಾಡು:** ೨. ಕುಲಯುತರ ಕೊಂಡಾಡುವಾ ರಿಪುಬಲದ ತಲೆ ಚಂ [ಪಾಠಾಂ. ಚೆಂ]ಡಾಡುವಾ (ಕುವ್ಯಾಸ. ೧-೬೦); ಹರಿಬಕೊದಗಿದ ದೂಷಣಾದ್ಯರ ಶಿರವ ಚೆಂಡಾಡಿದನು (ತೊರರಾ. ೫-೩-೫೮).

**ಚೆಂಡಾಡು:** ೧. ಓಯಾರದಿಂ ಚೆಂಡಾಡುವ ತಾಣಕೆ ರಾಯಕುವರನೆಯ್ದಿದನು (ಕುರಾಸಾಂ. ೩೧-೨೭). ೨. ಮಱೆವೊಕ್ಕರ ಕಾವ ತನಗಿದಿರ ಆೞಯಱ ತಲೆಯ ಚೆಂಡಾಡುವ ಕುದುರೆವೆಂಡಳಿವ . . . ಕುಮಾರ ಜಯ (ಸೌಇಇ. IX-i, ೩೬೬-೧೧ ; 1225); ಅಮರಾರಿಗಳ ಖಂಡಿಸಿ ತಲೆಯ ಚೆಂಡಾಡಿ (ಕುವ್ಯಾಸ. ೧೪-೧೧೨); ಬೆಳಗಾಗುವುದರೊಳಗಾಗಿ ಅವನ ತಲೆಯನ್ನು ಚೆಂಡಾಡಿ ಬರುವೆನು (ಪಿಶಾಪ. ೨೭). [ಸೆಂಡು + ಆಡು]

**ಸೆಂಡು, ಚಂಡು, ಚೆಂಡು, ಸೆಂದು** (ನಾ). ೧. ಆಟವಾಡುವ ಗುಂಡನೆಯ ಒಂದು ವಸ್ತು; ಕಂದುಕ: ಬಟ್ಟುಳಿಸೆಂಡುಂ ಪೊಡೆಸೆಂಡೆಂಬಿವನಾಡುತ್ತೊಡವಳಿದರ್ (ಪಂಪಭಾ. ೨-೬೦); ರಂಜಿಪ ಸೆಂಡನಿಟ್ಟಳಿದಿರೊಳ್ ತತ್ಕಾಂತೆ ತನ್ನೋಪನಾ (ದಶಕು. ೧೨-೧೪೪); ವಿರಹಿಜನದೆರ್ದೆಯ ಲಗ್ಗೆಯನಿಡುವ ಮನಸಿಜನ ಕರದ ಮೌಕ್ತಿಕದ ಸೆಂಡೊ (ಸಮ್ಯಕೌ. ೧-೩೯); ಪೂವಿನ ಸೆಂಡಿಂಗೆ ಬಯಸಿ ಪಾಯ್ವ ಪೂವಳಿಗಳ್ (ಚಿಕವಿ. ೬-೪೪). ೨. ತಲೆ; ಶಿರಸ್ಸು: 'ಸೆಂಡಾಡು' ಪರಾ. **ಚಂಡು:** ೧. ಪಟ್ಟೆಯಂ ಪಱಿದು ಚಂಡಂ ಮಾಡುವ ಕಟ್ಟೆಗ್ಗರಂತೆ (ಧರ್ಮಾಮೃ. ೯-೧೬೨); ಚಿತ್ತಜಸುಕುಮಾರ ನಲಿದಿಟ್ಟಾಡುವ ಮುತ್ತಿನ ಚಂಡುಗಳೆನಲು ಅತ್ಯುನ್ನತದೊಳು ರಾಜಿಸಿ ತರುಣಿಯ ವೃತ್ತಕುಚಗಳೊಪ್ಪಿದುವು (ಕಂನವಿ. ೯-೨೭). ೨. ಭರದಿಂದ ಹಿಡಿದು ಕೊಳ್ಳಿಯ ಬೀಸಿದಂತಾಯಿತುರವಣಿಸಿ ಗಜವೇಧೆಯಂ ಮಾಡಲಾ ಚಂ[ಪಾಠಾಂ. ಚೆಂ]ಡನುರುಭರದಿ ಹೊಯ್ಯೆ ತೆಱನಾಗೆ (ಸಮ್ಯಕೌ. ೧೧-೩೪); ಚಂಡು ಕಳಕೊಂಡ ಮರಿ ಅರಸ (ಕನ್ನಜಾ. ೨೫೩). ೩. ಜೋಳ, ನವಣೆ, ಮೊದಲಾದುವುಗಳ ತೆನೆ. ೪. ಕತ್ತಿನ ಹಿಂಭಾಗ; ಹೆಕ್ಕತ್ತು: ಅವನ ಚಂಡು ಹಿಡಿದು ಹೊರಗೆ ದಬ್ಬಲಿಕ್ಕೆ ಹೋಗುತ್ತಿದ್ದರು (ಮುಂಬಯಿ. ೪-೧೫೨); ಚಂಡಿಗೆ ಕೈಕೊಟ್ಟು . . . ಅವನನ್ನು ನುಗಿಸಿದನು (ರಕ್ತಧ್ವ. ೧೯೨). ೫. ಭಾರ ಹೊರಲು ತಲೆಯ ಮೇಲಿಟ್ಟುಕೊಳ್ಳುವ ಸುರುಳಿ; ಸಿಂಬೆ: ತನ್ನ ಕುಕ್ಕೆಯನ್ನು ನಿಧಾನವಾಗಿ ಮಂಡೆಯ ಮೇಲಿನ ಚಂಡಿನ ಮೇಲೆ ಪೇರಿಕೊಂಡಳು (ಹೊಸಕ್ಕ. ೫೩). **ಚೆಂಡು** : ೧. "ಸೆಂದುಕಃ, ಕಂದುಕಃ - ಈ ೨ ಚೆಂಡು" (ನಾಚಿರಾ. ೧೨೫); ಚೆಂಡಿನ ಹೊಣಕೆ ಚಿಣಿಕೋಲಾಳು ಗೊತ್ತಿನ ದಂಡೆಯನೆ ನಾನಾವಿನೋದದಲಿ . . . ಆಡಿದರು ಪಂಗಡದಲ್ಕೆವರು ನೂರ್ವರಿವರಿತ್ತಂಡವೊಂದಾಗಿ (ಕುವ್ಯಾಆ. ೬-೧);ಕಂಡೆಯ ಪಂಡಿತೆ ಕುಸುಮಾಜಿ ಕುಸುಮದ ಚೆಂಡಿನಂತೆದ್ದ ಲಂಘನವ (ಭರಚ. ೬-೧೮); ಇಂದುಮಂಡಲ ಚೆಂಡ ಭಾವಜ ಪಿಡಿದಾಡುವಂತೆ (ಕಂನವಿ. ೧೦-೪೨). ೨. ಭೂತಪಿಶಾಚಿಕೋಟಿಯುಂ ನೆಱೆ ತಣಿಯುಣ್ಣು ಚೆಣ್ಣುಮರಲ್ದಿನ್ನುಮದಕ್ಕಿಸಲಾಱೆ ವೆನ್ನೊಡೇನಱಿಯಿರೇ ವಿಕ್ರಮಮಂ (ಎಕ. XVI, ಚಿಕ್ಕನಾ. ೯೩-೨೬; 1169); ಅರಸುಗಿರಸುಗಳ ಚೆಂಡು ಕಳೆದ ಗಾಂಡೀವಧನ್ವ (ಮೇಘದೂ. ೧೩-೪೮). **ಸೆಂದು:** ೧. ಭಾಸ್ಕರನಂ ಮಾಯದ ಮಾಣಿ ಸೆಂದೊಡೆದನಂ [ಪಾಠಾಂ. ಸೆಂಡೊಡೆದನಾ, ಸೇರ್ದೊಡೆದನೇ] ಇಲ್ಲೆಂಬಿಸಂ ನೀಡಿದಂತರದಿಂ ಪಾದಮನುರ್ವಿ ಕೊರ್ವಿ ಬಲಿಯಂ ಗೆಲ್ದಾ ಮನಂ ವಾಮನಂ (ಅರ್ಧನೇ. ೬-೨೫).

ಸೆಂಡಿನ ವಾಹಳಿ = ಕುದುರೆಯ ಮೇಲೆ ಕುಳಿತು ಆಡುವ ಚೆಂಡಿನ ಆಟ: ಸರ್ವ್ವಬಾಧಾಪರಿಹಾರವಾಗೆ ನವುಸ್ಕಂಬಿಟ್ಟಾ ಸೆಣ್ಣಿನ ವಾಹಳಿಯ ಕೆಯಿ (ಸೌಇಇ. XI-i, ೧೧೧-೧೪; 1070). [ದೇ. ‖ ತಮಿ. ಚೆಣ್ಣು; ಮಲ. ಚೆಂಟು; ಕೋತ. ಚೆಂಡ್; ತೊದ. ಸೆಡ್; ತುಳು. ಚೆಂಡ್, ಚಂಡು; ತೆಲು. ಚೆಂಡು]

**ಸೆಂಡುಕೋಲ್** 'ಸೆಂಡುಗೋಲ್' ನೋ.

**ಸೆಂಡುಗೋಲ್, ಸೆಂಡುಕೋಲ್, ಸೆಂದುಕೋಲ್** (ನಾ). ಒಂದು ಬಗೆಯ ಆಯುಧ: ಸೆಂಡುಗೋಲನುಡಿಗಟ್ಟುವ ಪೀಲಿಗಳಿಂ ತರಂಗಮಂ ಪೊಸೆಯಿಪ . . . ಪುಳಿಂದಸಂಕುಳದ ಪೆರ್ಗಣಿದಿಂದೆಸೆದತ್ತು ಪಕ್ಕಣಂ (ಚಂದ್ರಪ್ರ. ೫-೫೪).

**ಸೆಂಡುಕೋಲ್:** ಬಡಿಕೋಲ ತೋಮರದ ಚಕ್ರದ ಕೊಂತದ ಸೆಂಡುಕೋಲ ಶಕ್ತಿಯ ಸರಿಯಂ ಶರಾನಿಳ ವಿಘಾತದೆ ತೂಳ್ದಿದಂ (ವರ್ಧಪು. ೮-೫೮); ಅಳವಿ ಯೊಳಿರ್ದ ಪೆರ್ಮೊಲನನಾ ನೃಪನಿಟ್ಟೊಡೆ ಸೆಂಡುಕೋಲ ಬೆಳ್ಪೊಳಗೊಳಪೊಯ್ದು ಸುತ್ತುವೆಡೆಯೊಳ್ (ಸೂಕ್ತಿಸು. ೩-೧೨೨); ಶರಾಳಿಗಳಿಂದಿಡೆ ಸೆಂಡುಕೋಲ್ಗಳಿಂದಿಡೆ (ಧರ್ಮಪ. ೫-೨೬). **ಸೆಂದುಕೋಲ್:** ಜಾಲಮಂ ಬಿಸಿಲೊಳಿಕ್ಕುವ ಬೆಂಕಿಯೊಳೊಡ್ಡಿ ಕಾಸಿಕೊಂಡಾಳಿಸಿ ಸೆಂದುಕೋಲನುಡಿಗಟ್ಟುವ . . . ಶಬರರ್ಕಳಿನಿಂತೆಸೆದತ್ತು ಪಕ್ಕಣಂ (ಶಾಂತೀಶ್ವ. ೩-೭೪).

[ಸೆಂಡು₁ + ಕೋಲ್₂]

**ಸೆಂಡುವೊಯ್** (ಕ್ರಿ). ಚೆಂಡನ್ನು ಹೊಡೆ; ಚೆಂಡು ಒಗೆ: ಕರವಾಳಿಂ ಪೊಯ್ಯೆ ಮಾಣಾಂತಹಿತರ ತಲೆಗಳು ಸೆಂಡುವೊಯ್ವಂತೆ ಪಾರುತ್ತಿರೆ (ಎಕ. VIII, ಸೊರಬ. ೧೩೮-೨೭; 1145). [ಸೆಂಡು + ಪೊಯ್$_1$]

**ಸೆಂದರ** 'ಸೆಂದುರ' ನೋ.

**ಸೆಂದವ** (ನಾ). ಒಂದು ಜಾತಿಯ ಕುದುರೆ: "ಸ್ಯಂಧವ - ಸೆಂದವ" (ಶಮದ. ೨೬೦ ಪ್ರಯೋ). [< ಸಂ. ಸ್ಯಂಧವ]

**ಸೆಂದು$_1$**, ಸಿಂದು (ಕ್ರಿ). ತಿಕ್ಕು; ಒರಸು; ಉಜ್ಜು: "ಒರಸೆಂದು ಸೆಂದಕ್ಕು" (ಶಬ್ದಮಂ. ೫೨). **ಸಿಂದು:** ಜವನಾಳಂತಪ್ಪ ಕಣೆ ರೋಮರೋಮಂದಪ್ಪದೆ ನಾಂಟದುವು ಸಿಂದಿ[ಪಾಠಾಂ. ಸೀಂಟಿ]ದುವು ವಿಧಿಲಿಪಿಯಂ (ಪಂಗಾಮಾ. ೧೩-೭೦); ಹಯವಮಂ ಬಂದಿಗೊಂಡೊಂದಟಿಗೆಯ್ಮೆಯೆ ಸಿಂದಿದಂದಕ್ಕುಂ (ರಾಮಾಶ್ವ. ೯೧-೧೫).

**ಸೆಂದು$_2$** (ನಾ). ೧. ಉಜ್ಜಿ ಹಾಕುವುದು: (ಕಿ). ೨. ನಾಶಪಡಿಸುವುದು: (ಕಿ). ೩. ಕೊಲೆ: (ಕಿ). ೪. ಕಾಟ; ಹಿಂಸೆ; ಉಪದ್ರವ: "ಒರಸೆಂದು ಸೆಂದುವೆಂದೊಡೆ ಹಿಂಸೆಯಕ್ಕು" (ಕಬ್ಬಿಕೈ. ೭೭). [< ಸೆಂದು$_1$]

**ಸೆಂದು$_3$** 'ಸೆಂಡು' ನೋ.

**ಸೆಂದುಕೋಲ್** 'ಸೆಂಡುಗೋಲ್' ನೋ.

**ಸೆಂದುರ**, ಚಂದಿರ$_1$, ಚಂದ್ರ$_1$, ಸಿಂದುರ$_1$, ಸಿಂಧೂರ, ಸೆಂದರ (ನಾ). ೧. (ಮಂಗಳದ್ರವ್ಯವಾಗಿ ಬಳಸುವ) ಒಂದು ಬಗೆಯ ಕೆಂಪುಬಣ್ಣದ ಪುಡಿ; ಸಿಂದೂರ: "ಸಿಂದೂರದೊಳ್ ಸೆಂದುರಂ" (ಕರ್ಣಾನಿ. ೫); ಸೆಂ[ಪಾಠಾಂ. ಸಿಂ]ದುರದ ಬೊಟ್ಟು ನುಣ್ಣನೆ ಮಿಂದರಿಸಿನಂ (ಲೀಲಾವ. ೪-೮೭); ಸಿಂದೂರ — ಸೆಂದುರ (ಶಮದ. ೨೬೦ ಪ್ರಯೋ); ಲಲಾಮಕವನ್ನೋಸರಿಸಿ ಸೆಂದುರದ ಚೂಳಯವನ್ನು ತಿದ್ದಿ (ಮಂತ್ರಶ. ೧೪೨-೨). ೨. ಕೆಂಪುಬಣ್ಣ; ಸಿಂದೂರವರ್ಣ: ಪ್ರೀತಿಯನೀವ ಸೆಂದುರದ ವಸ್ತ್ರಮನೊಲ್ದದೊಂದು ವಸ್ತ್ರಮಂ ಶ್ವೇತಮನುಟ್ಟಳ್ (ಜಗವಿ. ೧೨-೭೭). **ಚಂದಿರ$_1$:** ೨. 'ಚಂದಿರವಟ್ಟು' ಪರಾ. **ಚಂದ್ರ$_1$:** ೧. ಚಂದ್ರ, ಹಿಂಗುಲ, ಅರಿದಾಳ ಮುಂತಾದುವುಗಳಿಂದ ಬಣ್ಣದ ಮಸಿಗಳಾಗುತ್ತಿದ್ದುವು (ಕನ್ನಸಂ. ೪೪). **ಸಿಂದುರ$_1$:** ೩. ಕೆಂಪುಬಣ್ಣದ ಒಂದು ಬಗೆಯ ಕಲ್ಲು; ಗೈರಿಕಶಿಲೆ: ನವರುಧಿರ ಜಳಚಳತ್ಸೇಚನದೊಳ್ ಘಟ್ಟಿಸಿ ಸಿಂದು[ಪಾಠಾಂ. ಧು]ರದೊಳ್ ನೆಲಗಟ್ಟಿಸಿದಂತಿರ್ದ ರಂಗಭೂಮಿಯೊಳ್ . . . ಕಾದುವಾಗಳ್ (ಪಂಪಭಾ. ೧೦-೭೦ ವ). **ಸಿಂಧೂರ:** ೧. ವರದಿಗಂಗನೆಯರಿಗೆ ಬೈತಲೆಗೆಸೆವ ಸಿಂಧೂರ . . . ಎನಲುರವಣಿಸಿ ಕೆಂದೂಳಿ ನಭಕುಪ್ಪರಿಸೆ ಹೊಯ್ದಾಡಿದರುಭಯ ಚತುರಂಗಬಲ ಹಳಚಿ (ಕುವ್ಯಾಭೀ. ೪-೭); ಆ ಸಿಂಧೂರ ೧ ಹಣ ತೂಕ . . . ಅಳಲೆಕಾಯ ಕರುಕು ಸಹ . . . ತೆಗೆದುಕೊಳ್ಳಲು ಬಹುಮೂತ್ರಂ ನಿಲ್ಲುವುದು (ಸಕವ್ವ. ೩೮೭); ನೀಲಪರ್ವತಂ . . . ಸಿಂಧೂರ ವಿಲಿಪ್ತಮದಸಿಂಧುರಗಂಡಮಂಡಲದೊಂದು ಪಾಂಗಿನಿಂ ತೋರ್ಪ ತಲ್ಪಲಿಂ . . . ಮನೋಜ್ಞಂ (ರಾಮಾಶ್ವ. ೭೨-೨೦). **ಸೆಂದರ:** ೧. ಶಿರಂ ಸೆಂದರದುಂಡಿಗೆ ಧರೆಗೆನಿಸಿ ಮುಂದೆ ಬಿಟ್ಟುದು ಹರಿಯಾ (ಶಾಂತಿಪು. ೫-೬೩).

ಸೆಂದೂರಲಾಂಛನ = ಸಿಂದೂರವನ್ನು ಲಾಂಛನವಾಗಿ ಉಳ್ಳವನು; ಒಂದು ಬಿರುದು: ರಟ್ಟಕುಳಭೂಷಣಂ ಸೆನ್ದೂರಲಾಞ್ಛನಂ ವಿವೇಕವಿರಿಂಚನಂ (ಸೌಇಇ. XX, ೬೨-೪; 1098). [< ಸಂ. ಸಿಂದೂರ]

**ಸೆಂಬ** (ನಾ). ಕುದುರೆಗೆ ಬರುವ ಒಂದು ಬಗೆಯ ರೋಗ : ಮೂಗಿನೊಳನಿಲಪಿತ್ತಕಫ ಸಂಜನಿತಂ ತುರಗಕ್ಕೆ ಸೆಂಬಮೆಂಬುದದಕ್ಕುಂ (ಲೋಕೋಪ. ೯-೨೨೩). 'ಶಂಭ' ಪರಾ.

[?]

**ಸೆಂಬಕ** (ನಾ). ಒಂದು ಬಗೆಯ ಚರ್ಮವಾದ್ಯ: ಕೊಂಬು ಡಮರುಗ ಡೌಡೆ ಸೆಂಬಕ ಕಹಳೆ ಢಕ್ಕೆ (ಕುಮುರಾ. ೭-೫೭). [< ಚಂಬಕ]

**ಸೆಂಬಕ್ಕ** (ನಾ). ಒಬ್ಬಾಕೆಯ ಹೆಸರು: ಪೊರವಕ್ಕನುಂ ಸೆಮ್ಬಕ್ಕನುಂ ಪಾಟಿಯಕ್ಕನ ಕೆಳದಿಯೆ ಮಟೆಯಣ್ಣನ್ (ಎಕ. VIII, ನಗರ. ೪೫-೧೩; ಸು. 950). [? + ಅಕ್ಕ$_1$]

**ಸೆಂಬನೂರ್** (ನಾ). ಒಂದು ಊರಿನ ಹೆಸರು: ಸೆಂಬನೂರ ನಾಗಣನ್ನ ಪಿರಿಯಯ್ಯಂಗಳುಂ (ಎಕ. XI, ಚಿತ್ರದು. ೭೪-೩೦; 968). [? + ಊರ್]

**ಸೆಂಬಳತ್ತೂರ್** (ನಾ). ಒಂದು ಊರಿನ ಹೆಸರು: ಮೂಡ ಸೆಮ್ಬಳತ್ತೂರ ಬೆಟ್ಟದ [ಕೆ]ಳಗಣ ಪೆರೆಟ್ಟಿನ ತೆಂಕಣ ಕುಱುಕಿ (ಎಇ. X, ೬೬-೫೩; 892). [? + ಊರ್]

**ಸೆಂಬಳಿ** 'ಸಂಬಳಿ$_1$' ನೋ.

**ಸೆಂಬಳಿಗೋಲ್** 'ಸಂಬಳಿಗೋಲ್' ನೋ.

**ಸೆಂಬುಳಿ** 'ಸಂಬಳಿ$_1$' ನೋ.

**ಸೆಂಬುಳಿಗೋಲ್** 'ಸಂಬಳಿಗೋಲ್' ನೋ.

**ಸೆಂಬೆ$_1$**, ಚಂಬೆ$_1$ (ನಾ). ಉಪ್ಪಿನಕಾಯಿಗೆ ಉಪಯೋಗಿಸುವ ಒಂದು ಬಗೆಯ ಕಾಯಿ: ಮಾಮಿಡಿ ಕರಂಜಿಗೆಯಂಬಟೆ ಸೆಂ[ಪಾಠಾಂ. ನಿಂ]ಬೆ ನೆಲ್ಲಿಗಾಯ್ . . . ಆದಿಯಾದುಪ್ಪಿನ ಕಾಯ್ಗಳಂ ಮಗಮಗಿಪ್ಪುವನಿಕ್ಕಿದನಬ್ಜಪತ್ರದೊಳ್ (ಲೀಲಾವ. ೫-೬೩). **ಚಂಬೆ$_1$** : ಗೆಣಸು ಶಾವೆಯ ದಂಟು ಗುಳ್ಳದ ಕಾಯಂ ಚಂಬೆ ಕೂಗುರಿ ಕೊತ್ತುಂಬರಿಯ ನೀಡಿ (ಶರಲೀ. ೫೧೯); ಪಲಸು ತಡುಗುಣಿ ಬಾಳೆ ಚಪ್ಪರದವರೆ ಚಂಬೆಗಳ . . . ಘಮಘಮಿಸಲಿಕೆ ಬಡಿಸಿದರು (ಅನಂರಾ. ೬-೨೫-೩೯).

**ಸೆಂಬೆ$_2$** 'ಸಂಬೆ$_1$' ನೋ.

**ಸೆಂಬೆಬತ್ತ** (ನಾ). ಒಂದು ಬಗೆಯ ಉತ್ತಮಜಾತಿಯ ಬತ್ತ: ಕೋಳಿಸಾರು ಮಾಡಿ ಸೆಂಬೆಬತ್ತದ ಸಣ್ಣಕ್ಕಿ ಅನ್ನ ಬಸಿದು . . . ಊಟ ಮಾಡಿದರು (ನನ್ನೂರು. ೨೦೯). 'ಸಂಬೆನೆಲ್ಲು' ಪರಾ. [ಸೆಂಬೆ$_2$ (< ಸಂಬೆ$_1$) + ಬತ್ತ]

**ಸೆಂಬೊಳಲು** (ನಾ). ಒಂದು ಊರಿನ ಹೆಸರು: ನಗರಾದ್ದಕ್ಷಿಣಸ್ಯಾಂದಿಶಿ ಸೆಂಬೊಳಲ ನಾಮಗ್ರಾಮಂ (ಸೌಇಇ. XX, ೬-೨೭; 723). [ಸೆಂಬ? + ಪೊಳಲು (< ಪೊಟಲ್)]

**ಸೆಕಳಿ** 'ಸೆಗಳಿ' ನೋ.

**ಸೆಕಳೆ** 'ಸೆಗಳಿ' ನೋ.

**ಸೆಕುಕಡಮೆ** (ನಾ). ಒಂದು ಬಗೆಯ ತೆರಿಗೆ; ಎಣ್ಣೆ ಅಂಗಡಿಗಳ ಮೇಲೆ ಹಾಕುವ ತೆರಿಗೆ: ಪಾಲುವರಿ ಸೆಕುಕಡಮೆ ತಱಿಕಡಮೆ . . . ಉಂಟಾವ ಹಲ ಉಪಾಧಿಗಳೂ ಸಹ ಸೇರ್ಸಿಕೊಟ್ಟೆವು (ಸೌಇಇ. IX-ii, ೪೬೩-೮; 1470). [<— ತಮಿ. ಚೆಕ್ಕುಕ್ಕಟಮೈ]

**ಸೆಕೆ, ಶಖೆ, ಸೆಖೆ, ಸೆಗೆ** (ನಾ). ೧. ಬಿಸುಪು; ಶಾಖ; ಕಾವು: ಹರಿದ ಮೃಗಗಳ ಸೆಕೆಯ ಸುಯ್ಗಳ . . . ಕಳಕಳವ ಕೇಳಿದನು ಕಲಿಪಾರ್ಥ (ಕುವ್ಯಾಆ. ೧೯-೨); ಸೆಕೆಯಿಲ್ಲದಾವಗಮುರಿವ ಕೆಂಗಿಡಿಯ ಮಾಲಿಕೆಯಂತೆ (ಪೋಹಚ. ೨೩-೪೭); ರಜತಗಿರಿ ತ್ರಿಪುರದಹನ ಸೆಕೆಯಿಂ ಕರಗಿ ರಸಮಾಗಿ ಪರಿದುದೋ (ಸಂದಿಮಾ. ೧೦-೨೪); ಅಗಲ್ಕೆಗಿರ್ಚಿನ ಸೆಕೆ ಪತ್ತೆ ತಾಳಲಳವಲ್ಲದೆ ವಾಸರಲಕ್ಷ್ಮಿ ಕಣ್ಣ ನೀರ್ಪನಿಗಳನಯ್ದೆ ಸೆಳ್ಳುಗುರ್ಗಳಿಂ ಮಿಡಿಯಲ್ (ರಾಜಶೇ. ೧೧-೪೧). ೨. ಬೇಸಗೆ; ಗ್ರೀಷ್ಮ: ಮುಸುಱಿದ ಕುಳಿರೊಳ್ ದೆಸೆಯಾಗಸಮಿಳೆ ಬೆಟ್ಟಡವಿಯೆಂಬಿವೆಂತಾನುಂ ಕಾಣಿಸಲಾರ್ತುವಿಲ್ಲವೆಂಬ ಮಾಮುಸಗಿರ್ದುದು ಮಾಗೆ ಮಾಗೆ ಸೆಕೆವೆಸರಿಳೆಯೊಳ್ (ಶಬ್ದಾನು. ೬೫ ಪ್ರಯೋ). ೩. ಬೇಸಗೆಯ ಝಳ,— ಧಗೆ: ಧಗಧಗಿತ ಶಿಖಿ ಸೆಕೆಯ ಕೊಳೆ (೪ಇ. XX, ೭೦-೧೯; 9ನೆಯ ಶತ); ಸೂರ್ಯಾತಪದ ಸೆಕೆಯಂ ಸೈರಿಸಲಾರದೆ (ಮುದ್ರಾಮಂ. ೫೨); ಇಂದು ಸ್ವಲ್ಪ ಸೆಕೆಯಲ್ಲವೆ? (ಆದೋಲೀ. ೨೬). ೪. ಹಬೆ; ಆವಿ: ಸಂದಿನಲಿ ಸೆಕೆ ಹೋಗದ ಹಾಗೆ ಹಿಟ್ಟಾಗಲಿ ಕಣಕವಾಗಲಿ ಮೆತ್ತಿ, ಆ ಇಡ್ಡಲಿಗೆ ಚೆಂದ ಹದದಲಿ ತೆಗೆದು ನೋಡಲಾಗಿ (ಭೀವುಸೂ. ೨೦). **ಶಖೆ** : ೧. ಉರಿ, ಶಖೆ, ತಾಪ; ಹೊರಗೆ ರಣರಣಬಿಸಿಲು (ಚಂಡಮ. ೩-೪). ೩. ಗಾಡಿಯಲ್ಲಿದ್ದ ಪ್ರಯಾಣಿಕನಿಗೆ ಶಖೆಯಾಯಿತು (ಮಲನಾ. ೬). **ಸೆಖೆ:** ೧. ಬಿಱುವರಿಯ ಸೆಖೆ[ಪಾಠಾಂ. ಶಿಖಿ]ಗೆ ತಾರಗೆ ತಱತಱಿಸುತಮಿರ್ದುವು (ಬಂಹರಿ. ೧೧-೪೦); ಚೂಣೆಯ ಕೊಳುಗಿಡಿಯ ಸೆಖೆ ತಾಗಿ ಸುಭಟಾವಳಿಯ ಮಾಸೆಗಳುರಿಯೆ (ಕುವ್ಯಾದ್ರೋ. ೧೯-೩೫). ೪. ಒಲೆಯೊಳಿಟ್ಟು ಸೆಖೆ[ಪಾಠಾಂ. ಕೆ]ಯಳಗೆಯೊಳು ಗಂಗಳವನಿರಿಸಿ (ಸೂಪಶಾ. ೨-೩). **ಸೆಗೆ:** ೧. ಮಟೆಗೊದವಿದ ದಿವಸಂ ಪಿರಿದು ಸೆಗೆಯನೊದರಿಪ ತೆಱದೊಳ್ (ಮಿತ್ರಗೋ. ೫೭). 'ಸೇಕ$_1$' ಪರಾ.

[ದೇ. ‖ ತೆಲು. ಸೆಕ, ಸೆಗ; ತುಳು. ಶಿಕೆ, ಶಿಖೆ, ಸಿಕೆ, ಸೆಕೆ./ ಸಂ. ಶಿಖಾ]

**ಸೆಕೆಕಡುಬು** (ನಾ). ಹಬೆಯಲ್ಲಿ ಬೇಯಿಸಿದ ಕಡುಬು: ತಿಂಡಿಗಳಲ್ಲಿನ ವೈವಿಧ್ಯಗಳು . . . ಕಾಯಿಕಡುಬು, ಸೆಕೆಕಡುಬು (ಕಸಂಸ್ಕೃ. ೨೯೫). [ಸೆಕೆ + ಕಡುಬು(< ಕಡುಂಬು)]

**ಸೆಕೆಗಾಲ, ಸೆಖೆಕಾಲ** (ನಾ). ಬೇಸಗೆಯ ಕಾಲ: ಸೆಕೆಗಾಲದ ರಾತ್ರಿಯಲ್ಲಿ ಕೋಳಿಕೂಗು

ಹೊತ್ತಿಗೆ ಮುಂಚೆಯೇ ಆರಂಭವಾಗುತ್ತದೆ (ಪುನರು. ೨೯೭). **ಸೆಖೆಕಾಲ:** ಸೆಖೆಕಾಲದ ಸುಡುತ್ತಿರುವ ಬಿಸಿಲಲ್ಲಿ ಮತ್ತು ಗಾಳಿಯಲ್ಲಿ ತಿರುತಿರುಗಿ ಹಳ್ಳಿಗರನ್ನು ನೋಡಿದ್ದೇನೆ (ಪ್ರಕಾಶ. ೧೩೭). [ಸೆಕೆ + ಕಾಲ]

**ಸೆಕೆಯುಸಿರ್** (ನಾ). ಬಿಸಿಯುಸಿರು; ನಿಟ್ಟುಸಿರು: ಕೊಳನಂ ಪುಗಿಸೆ ಮೆಯ್ಯ ಬೆಂಕಿಯಿಂ ಚುಯ್ಯೆಂದು ನೊರೆಗಟ್ಟಿ ಬಿಸಿಯ ತೆರೆ ತಾರ್ಮುಟ್ಟಿ ಸೆಕೆಯುಸಿರ್ ಭುಗಿಲನೊಗೆದು (ಗಿರಿಕ. ೪-೧೧೮ ವ). [ಸೆಕೆ + ಉಸಿರ್$_2$]

**ಸೆಕ್ಕಿಡು** (ಕ್ರಿ). ಅಳವಡಿಸು; ಸಿಕ್ಕಿಸು: ತಲೆಯಂ ಬೋಳಿಸಿ ಪೂಗಳಂ ಕಿವಿಗಳೊಳ್ ಸೆಕ್ಕಿಟ್ಟು ಕಣ್ಗಳ್ಗೆ ಕಜ್ಜಳಮಂ ತೀವಿ (ದಶಕು. ೮-೫೯). [ಸೆಕ್ಕು$_1$ (< ಸೆರ್ಕು$_1$) + ಇಡು$_1$]

**ಸೆಕ್ಕಿಸು** (ಕ್ರಿ). = ಸೆಕ್ಕಿಡು: ಉದಧಿಯ ಹೊಕ್ಕು ಮಂದರಗಿರಿಯ ಬೆನ್ನಲಿ ಸೆಕ್ಕಿಸುವುದೆಲೆ ಕೂರ್ಮಮಹಿಮೆಯನಾರು ಹೊಗಳುವರು (ಸಂಭಪ. ೭-೫೩); ಎಲ್ಲರ ಕೈಯಲ್ಲೂ ದವನ ಸೆಕ್ಕಿಸಿದ ಬಾಳೆಯ ಹಣ್ಣು (ಅಲಮ. ೧೫೯). [ಸೆಕ್ಕು$_1$ (< ಸೆರ್ಕು$_1$) + - ಇಸು$_3$]

**ಸೆಕ್ಕು$_1$** 'ಸೆರ್ಕು$_1$' ನೋ.

**ಸೆಕ್ಕು$_2$** 'ಸೆರ್ಕು$_2$' ನೋ.

**ಸೆಕ್ಕುಂದುಱುಂಬು, ಸೆಕ್ಕುಂದುಱುಬು** (ನಾ). ಒಂದು ಬಗೆಯ ಕೇಶಾಲಂಕಾರ; ಕೂದಲನ್ನು ವಿಶಿಷ್ಟವಾಗಿ ಸಿಕ್ಕಿಸಿ ಅಲಂಕರಿಸಿದ ತುರುಬು: ನಾಡೆ ಕಡುಚೆಲ್ವು ಮಿಕ್ಕು ಪೊಗರುಗುವ ಹೊಂಬಣ್ಣ ಪೊಲೆಯಾಯತದ ಸೆಕ್ಕುಂದುಱುಂಬಿನ . . . ಪೆಣ್ಮಕ್ಕಳೆಯ್ತಂದರೊಸೆದು (ಪದ್ಮರಾ. ೩-೭೭). **ಸೆಕ್ಕುಂದುಱುಬು:** ಸೆಕ್ಕುಂದುಱುಬಿನ ಸೆರಗ್ಗೆಗಣ್ಗಳ ಕಕ್ಕಸಮೊಲೆಯ . . . ಪೆಣ್ಮಕ್ಕಳ ತಂಡಂ ನಡೆತಂದುದು (ಜಯಕಾ. ೫-೩೭); ಸೆಳೆನಡು ಬಳುಕೆ ಸೆಕ್ಕುಂದುಱುಬಿಳಿದೊಯ್ಯನೆಳಲೆ ಬೆನ್ನೊಳಗೆ (ಕುರಾಸಾಂ. ೪೦-೭೫).

[ಸೆಕ್ಕು$_1$ (< ಸೆರ್ಕು$_1$) + ತುಱುಂಬು$_2$]

**ಸೆಕ್ಕುಂದುಱುಬು** 'ಸೆಕ್ಕುಂದುಱುಂಬು' ನೋ.

**ಸೆಕ್ಕೆ$_1$, ಚಕ್ಕು$_2$, ಚಕ್ಕೆ, ಚೆಕ್ಕು$_1$, ಚೆಕ್ಕೆ, ಸೆರ್ಕೆ** (ನಾ). ೧. ಮರದ ಅಥವಾ ಕಲ್ಲಿನ ತೆಳ್ಳಗಿನ ಚೂರು; ಸಿಪ್ಪೆ: ಸಿಡಿಲ ಸೆಕ್ಕೆಗಳನೊಂದಾಗಿ ಕೂಡಿದ ತೆಱದಿ ಘುಡುಘುಡಿಪ ಫಳಕಮಂ ಕೊಂಡು (ಏಕಾರ. ದೇ. ೧೧೭-೧೩); ಪರಿಮಳಿಪ ಮಲಯರುಹವೃಕ್ಷಂಗಳಂ ಕಂಡು ಹೊಳಚಿತಂದಾ ಸೆ[ಪಾಠಾಂ. ಸಿ]ಕ್ಕೆಗಳನೊಳಗೊಳಗೆ ಶೋಧಿಸಿ (ಬಸಪು. ೪೩-೨೫); ಹಗಲ ತಗಡೋ ಮೇಣು ಮಿಂಚಿನ ಬಗೆಯ ಸೆಕ್ಕೆಯೊ ಸೂರ್ಯಕಾಂತಚ್ಛವಿಯ ತೆಕ್ಕೆಗಳೊ (ಕುವ್ಯಾಭೀ. ೧-೪೭); ಸಿರಿಕಂಡಸೆಕ್ಕೆಯ ಸವುದೆಯ ಕಮರಿಂ ಪೊರೆದಲ್ಲೆಡೆಯೊಳೆತ್ತಂ ಪಳಂಚುವೆಲರಿಂ (ರಾಮಾಶ್ವ. ೬೪-೪). **ಚಕ್ಕು$_2$:** ೧. ಮೆಣಸೇಲೆಯಕ್ಕಿವುಡಿ ಚಕ್ಕಾದಲ್ಲಮುಪ್ಪೊಂದೆ ಕಟ್ಟಿದುದಂ ಕಾಮಿನಿ ತಂದು ನೀಡೆ ಕಲಸುಂಗೂಟಂ ಕರಂ ರಾಗದಿಂ (ಮಹಾನೇ. ೧೭-೪೯). **ಚಕ್ಕೆ:** ೧. ಬಿಲ್ವದ ಚಕ್ಕೆಯಲ್ಲಿ ಗಂಧವಂ ತೆಗೆದು (ಸೌಗಂಧಿ. ೩೭೯-೧೧); ಸುಕ್ಕುಸುಕ್ಕಾಗಿ ಚಕ್ಕೆಯನು ಹೋಲುತಿಹ ಚರ್ಮ (ನನ್ನರ. ೬). ೨. ಒಂದು ಬಗೆಯ ಸಂಬಾರಪದಾರ್ಥ; ದಾಲ್ಚಿನ್ನಿ: ಪಲಾವ್ ಮಾಡಲು ಚಕ್ಕೆ, ಲವಂಗ ಮುಂತಾದ ಮಸಾಲೆಗಳನ್ನು ಬಳಸುತ್ತಾರೆ (ರೂಢಿ). ೩. ಗಾರೆಯನ್ನು ಗೋಡೆಗೆ ಬಳಿಯಲು ಉಪಯೋಗಿಸುವ ಚೌಕವಾಗಿರುವ, ಹಿಡಿಯುಳ್ಳ ತೆಳ್ಳನೆಯ ಮಣೆ; ಗಾರೆಮಣೆ: ಚಕ್ಕೆ ಬಿಟ್ಟು ಬಂದು ಗಾರೆಕೆಲಸ ನಿಂತುಹೋಯಿತು (ರೂಢಿ). **ಚೆಕ್ಕು:** ೧. 'ಚೆಕ್ಕುದಱಿ' ಪರಾ. **ಚೆಕ್ಕೆ:** ೧. ಹಂದರದಾಗ ಚಂದುಳ್ಳ ಒಲಿಹೂಡಿ ಗಂಧದ ಚೆಕ್ಕೆ ಪಟುಮಾಡಿ (ಲೋಕಗೀ. ೪೨). Δ **ಸೆರ್ಕೆ:** ೧. ನೆಱೆ ಬಳೆವೋಗಿ ಮೇಗೊಗೆವ ಕೋಟ್ಟಳ ಸೆರ್ಕೆಗಳರ್ಕಬಿಂಬಮಂ ಮಱೆಯಿಸಿ (ವರ್ಧಪು. ೭-೪೯).

[< ಪ್ರಾ. ಸಕ್ಕ ./ ಸಂ. ಶಲ್ಕ]

**ಸೆಕ್ಕೆ$_2$** (ನಾ). ಒಂದು ಮರದ ಹೆಸರು: "ಚಬುಕಂ – ಹುಣಿಸೆ, ಸೆಕ್ಕೆ , ಗುಳ್ಳ" (ಓಷಧಿ. ೫೭). [?]

**ಸೆಕ್ಕೆಗಂಡ** (ನಾ). ಮಾಂಸದ ತುಂಡು,— ತುಣುಕು: ದೆಸೆದೆಸೆಯೊಳ್ತರಂ ಬಿಡಿದು ಪಾಱುವ ವೀರರ ಸೆಕ್ಕೆಗಂಡದಿಂ (ಎಕ. VII, ಶಿಕಾರಿ. ೨೪೨-೨೨; 1163).

[ಸೆಕ್ಕೆ$_1$ + ಕಂಡ$_1$]

**ಸೆಕ್ಕೆಗಳೆ** (ಕ್ರಿ). ಚಕ್ಕೆ ಎಬ್ಬಿಸು; ಸೀಳಿ ಚೂರುಮಾಡು: ಬಳವೆತ್ತ ಬೆಟ್ಟವ ಸೀಳ್ದು ಸೆಕ್ಕೆಗಳೆವುತ್ತ (ಹಚಕಾ. ೧೦-೫). [ಸೆಕ್ಕೆ$_1$ + ಕಳೆ$_1$]

**ಸೆಕ್ಕೆವೋಗು** (ಕ್ರಿ). ಚಕ್ಕೆ ಏಳು; ಚೂರಾಗು: ನೆತ್ತರ್ ಸುರ್ರೆನುತ್ತುಂ ನಿಮಿರೆ ಕೆದಱೆ ಖಂಡಂ ಕೊರಲ್ ಸೆಕ್ಕೆವೋಗುತ್ತಿರೆ ತೋಳ್ ಬೇಱಾಗೆ (ಜಗವಿ. ೭-೫೭).

[ಸೆಕ್ಕೆ$_1$ + ಪೋಗು$_1$ (< ಪೋ$_1$)]

**ಸೆಕ್ಕೆಹಾಱು** (ಕ್ರಿ). ಚಕ್ಕೆ ಹಾರು; ಸಿಡಿ: ಗಿರಿ ಸಿಡಿದು ಸೆಕ್ಕೆಹಾಱಿದುವು [ಪಾಠಾಂ. ಸೆಟೆಗಾವರಿಸಿದವು] (ಸೋಮಚ. ೨-೭೧). [ಸೆಕ್ಕೆ$_1$ + ಹಾಱು$_1$ (< ಪಾಱು$_1$)]

**ಸೆಖೆ** 'ಸೆಕೆ' ನೋ.

**ಸೆಖೆಕಾಲ** 'ಸೆಕೆಗಾಲ' ನೋ.

**ಸೆಗಣ** 'ಸಗಣ$_1$' ನೋ.

**ಸೆಗಣಿ** 'ಸಗಣ$_1$' ನೋ.

**ಸೆಗಣಿನೀರು** 'ಸಗಣನೀರ್' ನೋ.

**ಸೆಗಳಿ, ಸೆಕಳಿ, ಸೆಕಳೆ** (ನಾ). ಉಷ್ಣ; ಬಿಸುಪು; ಕಾವು: "ಕಾವಿಂತುಷ್ಣಕ್ಕೆ ಸೆಗಳಿ ಜಳಮುಮ್ಮೆಂದುಂ" (ಕವಿಕಂ. ೪೧); ಬಿಱುಬಿಸಿಲ ಬೇಗೆಯ ಸೆಗಳಿ ಹೊಡೆಯಲುರಿಯೆತ್ತಿ ಬಾಯ್ ಬತ್ತಿ ಡಗೆ ಸುತ್ತಿ ಸಾವಡಸುತಿದೆ (ಹಚಕಾ. ೭-೯); ಹಿಮಕೆ ಹಿಮವಂಜುವದೆ ವಹ್ನಿಗೆ ಶ್ರಮವ ಕೊಡುವುದೆ ಸೆ [ಪಾಠಾಂ. ಶೆ]ಗಳಿ (ನಿಭಾಗ. ೧೧-೨೯-೪೪). **ಸೆಕಳಿ:** ಪರಸಮಯಿಗಳ ಕುಲಕೆ ಸೆಕಳಿ[ಪಾಠಾಂ. ಸೆಖಳಿ, ಸಕಳಿ, ಸೆಕಳೆ]ಒಪ್ಪಂತೆ ಬೇಸಗೆ ಮೊಳೆತು ತಲೆದೋಱಿತು (ಸೋಮಚ. ೨-೭೧); ಆ ಸೊಡರ ಸೆಕಳಿ [ಪಾಠಾಂ. ಬೆಳಗಿ, ಸಖಳಿ]ಗಾ ಚಂದ್ರನೊಳಗಿಪ್ಪೆರಳೆ ಬೇಸತ್ತು ಬೆಂಬಿರ್ದು ಧರೆಗಿಳಿದು ಬಂದು (ಸಿದ್ಧರಾ. ೪-೨೮). **ಸೆಕಳೆ:** "ಪೇಳಲುಷ್ಣಂ ಬಾಷ್ಪಮೆನೆ ಸೆಕಳೆ[ಪಾಠಾಂ. ಸೆಗಳಿ]ಯಕ್ಕು" (ಮಂಗರಾ. ೧೪-೮); ಕೀಱಿದುವು ಸೆಕಳೆಯಿಂ [ಪಾಠಾಂ. ಶಕೆಗಳಿಂ ಸಿಕಳಿ] ಭೂತಂಗಳು (ಚೆಬಪು. ೨೫-೨೩). [< ಸೆಕೆ]

**ಸೆಗಳಿಕೆ, ಸೆಗಳಿಗೆ, ಸಿಗಳಿಗೆ** (ನಾ). = ಸೆಗಳಿ: ಸೆಗಳಿಕೆ[ಪಾಠಾಂ. ಗೆ] ಪೆಂಡಿರ ಮೊಲೆ ಕಿಚ್ಚಗರುವ ಪೊಗೆ ಕುಂಕುಮಾಂಕಮೋವರಿ ನೆಲವಾಳಿಗೆ ದಡ್ಡಿ (ಪುಷ್ಪಪು. ೬-೫೩); ಮುನಿಯುಗ್ರದೋಷದ ಸೆಗಳಿಕೆಗೆ ಪಾಂಡವರು ಸವಿದುತ್ತಾದರು (ಕುವ್ಯಾಅ. ೧೭-೯); ತೆಗೆದು ನಿಂದುದು ರಾವಣನ ಮೈ ಸೆಗಳಿಕೆಗೆ ನಿಮ್ಮವರ ಬಲ (ತೊರರಾ. ೬-೨೦-೩೮); ಝಳದ ಸೆಗಳಿಕೆ ಧಾತುಗಿಡಿಸಿತು (ಉತ್ತರಾ. ೧೫-೪೭). **ಸೆಗಳಿಗೆ:** "ಸೆಗಳಿಗೆ ಜಳಮೆಂದೆನೆ ಪಿಂಗದುಷ್ಣಗೆ" (ಕಬ್ಬಿಕ್ಕೆ. ೧೧); ಬಗೆಗೆ ಬೆಱಗೀವುತೀ ತೆಱದೊಳ್ ನಿದಾಘರುತು ಸೆಗಳಿಗೆಯ ಸಸಿಯನಾಗಿಸೆ (ನಂದಿಮಾ. ೧೫-೧೨). **ಸಿಗಳಿಗೆ:** ಪೆರ್ಮೊಲೆಗಳ ಸಱಿಮಿಂಡಿ ಸುಪ್ಪತ್ತಿಗೆ ಧವಳಾರಂ ಕೆಲದ ಸಿಗಳಿಗೆಯಿನಿಂಬಿಂ ಸಲೆ ಸವಿವೊಡೆ ಮಾಗಿಗೀಗಿಯೇಗೆಯ್ದಪುದೋ (ಸೂಕ್ತಿಸು. ೧೦-೨೫೯). ☞ ಇದು 'ಸೆಗಳಿಗೆ' ಎಂಬುದರ ಅಪಲಿಖಿತ. [< ಸೆಗಳಿ]

**ಸೆಗಳಿಗದಿರ** (ನಾ). ಬಿಸಿಯ ಕಿರಣಗಳುಳ್ಳವನು; ಬಿಸಿಗದಿರ; ಸೂರ್ಯ: "ಜಗದಿಟ್ಟೆ . . . ಸೆ[ಪಾಠಾಂ. ಶೆ]ಗಳಿಗದಿರ ಬೆಂಗದಿರ ಪಗಲೆಱೆಯ . . . ಸೂರ್ಯ ನಾಮಂ" (ಶಬ್ದಮಂ. ೧೫); ಮೂಡಿವರ್ಪ ಸೆಗಳಿಗದಿರನ ತೇಜವಮಂ ಪಡಿತಳಿಸಿ (ರಾಮಾಶ್ವ. ೭೫-೧೮). [ಸೆಗಳಿ + ಕದಿರ್$_2$ + - ಅ$_7$]

**ಸೆಗಳಿಗೆ** 'ಸೆಗಳಿಕೆ' ನೋ.

**ಸೆಗುಣ್ಣ** (ನಾ). ಒಬ್ಬಾತನ ಹೆಸರು: ಇರ್ಪತ್ತಾ ಏಟೂನ ವರ್ಷದುಳ್ ಪುಲಿಕಲ್ಲದಿ ಆತ್ತದ ಪಾರ್ಕೆಲುಳ್ ಸೆಗುಣ್ಣನೊಳ್ ಏಱಿದುವಿಟ್ಟೊ (ಎಕ. X (S), ಕೋಲಾರ. ೭೮-೩; ಸು. 752). 'ಸೇಗುಣ' ಪರಾ. [?]

**ಸೆಗೆ** 'ಸೆಕೆ' ನೋ.

**ಸೆಜೋಜ** (ನಾ). ಒಬ್ಬಾತನ ಹೆಸರು: ಸೆಜೋಜನ ಲಿಖಿತಮ್ (ಇಆ. VI, ೧೦೩-೧೨; 887). [?]

**ಸೆಜ್ಜರ** 'ಸೆಜ್ಜಾರ' ನೋ.

**ಸೆಜ್ಜಾಗೃಹ** (ನಾ). ಮಲಗುವ ಮನೆ; ಶಯ್ಯಾಗಾರ: ಮತ್ತಿದು ಸೆಜ್ಜಾಗೃಹ ಇದು ವಿರೂಪಾಕ್ಷನ ಗುಡಿಯು (ಹಂಸಾಂ. ೪೩-೨). [< ಸಂ. ಶಯ್ಯಾಗೃಹ]

**ಸೆಜ್ಜಾನಿಳಯ** (ನಾ). = ಸೆಜ್ಜಾಗೃಹ: ತಳುವದೆಯ್ದಿಸಲು ನಿಟ್ಟಿಸಿದನು ಸೆಜ್ಜಾನಿಳಯದ ಶೃಂಗಾರವನು (ಜೀವಂಸಾಂ. ೨-೭೮). [< ಸಂ. ಶಯ್ಯಾನಿಲಯ]

**ಸೆಜ್ಜಾರ, ಸಜ್ಜರ, ಸಜ್ಜಾರ, ಸೆಜ್ಜರ, ಸೆಜ್ಜೆರ** (ನಾ). ೧. ಮಲಗುವ ಮನೆ; ಶಯ್ಯಾಗಾರ. ೨. ಹಾಸಿಗೆ; ಶಯ್ಯೆ. ೩. ಆನೆಯನ್ನು ಕಟ್ಟುವ ಸ್ಥಳ; ಕರೋಟಿ (?):

ಸೆಜ್ಜಾರದಿಂದೇಟ್ಟಿ ಮಾದ್ಯಚ್ಚುಂಡಾಳೋಚ್ಛುಂಖಳಾಶಿಂಜಿತವನೆಡೆಗೆ ಪೊಯ್ದುಣ್ಮಿ ಪೊಣ್ಮಿತ್ತು . . . ತೂರ್ಯಪ್ರಣಾದಂ (ಲೀಲಾವ. ೩-೫೮); ಗುರುಪಯೋಧರಮಧ್ಯ ಸೆಜ್ಜಾರದಿಂದೆ ಮದಭರಿತಮಾರುತಕರಿಯ ಸ್ಮರಜೋದಮಾಂದ್ಯದಿಂ ಸ್ಫುರಿಪ ಸನ್ನಾಭಿಕಾ ಸಾರಕ್ಕೆದಿಸಲು ಹಿಂಗಾಲ್ಗೆ ಸನ್ನೀಲಮಣಿಯ ಸರಪಣಿಯಮರ್ಚಲು (ನಂದಿಮಾ. ೮-೨೫). **ಸೆಜ್ಜರ:** ೩. ದಿವಿಜಗಜಂ ಸಜ್ಜ[ಪಾಠಾಂ. ಜ್ಜೆ]ರದಿಂದವೆಟ್ಟುವೆನೆ ಕಾಣಲದ್ರಿಯಾ ದಂತಿಗೆ ಕಟ್ಟುವ ಚೆಮ್ಮೊಗವಡಮೆನೆ ಚೆಲ್ವುವೆತ್ತುದಂದುದಯಸಮಯಸಂಧ್ಯಾರಾಗಂ (ಜಗವಿ. ೧೬-೧೩೮). **ಸಜ್ಜಾರ:** ೩. ಆನೆಯ ಸಜ್ಜಾರ ನಡುಕೇರಿಯೊಳಗೊಪ್ಪುತಿಹುದು (ಕಂಸವಿ. ೬-೩೨); ಭೂಮಿಯೊಳನಂಗವೀರನ ಶಸ್ತ್ರದಾಲಯವೊ ನಾಮವೆತ್ತಿರ್ದ ಪ್ರದ್ಯುಮ್ನರಾಜನ ಪಟ್ಟದಾನೆಗಳ ಸಜ್ಜಾರವೊ (ಚತುಪು. ೧-೭-೭). **ಸೆಜ್ಜರ:** ೩. ದಿಗಿಭವ್ರಜಕ್ಕೆ ಸೆಜ್ಜರದ ಬೆಡಂಗನೀವ ಕಟಕಂ (ಜಗವಿ.೮-೨೨); ಅಮೃತಮತಿಸಹಿತಮಾ ಚಂದ್ರಮತಿಯ ಸುತನೆಯ್ದೆ ಮೆಚೆವ ದವಳಾರದೊಳಭ್ರಮುವೆರಸಭ್ರಗಜಂ ವಿಭ್ರಮದಿಂದಂ ಸೆಜ್ಜರಕ್ಕೆ ಬಂದವೊಲೆಸೆಗುಂ (ಯಶೋಚ. ೨-೨೧); ಮೇಳಿಸಿದ ಸೆಜ್ಜರದಿನೇಟಲುಜ್ಜುಗಂಗೆಯ್ವ ವಿಜಯಕುಂಜರದ ಮಂಜೀರಸಿಂಜಿತಕ್ಕೆ ಪಕ್ಕಾಗಿಯುಂ (ಪುಷ್ಪಪು. ೮-೧೯ ವ); ಮನಸಿಜನ ಶಸ್ತ್ರಾಸ್ತ್ರಶಾಲೆಯೋ ಕಾವದೇವನ ಪಟ್ಟದಾನೆಗಳ ಸೆಜ್ಜರವೊ . . . ಎನಲೆಸೆದುದಾ ಸೂಳೆಗೇರಿ (ಚಬಪು. ೧೦-೮). **ಸೆಜ್ಜೆರ:** ೩. ಸೆಜ್ಜೆ [ಪಾಠಾಂ. ಜ್ಜ] ರದಿಂ ಗಜರಾಜಿಯಶ್ಶಮೆಟ್ಟುಟಿ ದನಿದೋಟಿದಾ (ಸೂಕ್ತಿಸು. ೯-೫೯).

[< ಪ್ರಾ. ಸಜ್ಜಾಹರ./ ತೆಲು. ಸಜ್ಜಾರ./ ಸಂ. ಶಯ್ಯಾಗಾರ]

**ಸೆಜ್ಜೆ$_1$, ಸಜ್ಜೆ$_1$ (ನಾ).** ಒಂದು ಬಗೆಯ ತೃಣಧಾನ್ಯ: "ಧಾನ್ಯದೊಳ್ ಶಯ್ಯೆಯಲ್ಲೀ ಪೆಸರಕ್ಕು ಸಜ್ಜೆಯೆಂಬುದಕ್ಕೆ" (ಶಬ್ದಮಂ. ೮೮); ಸೆಜ್ಜೆಯನ್ನು ಸ್ವಲ್ಪ ಜೋಳವನ್ನು ಕೂಡಿಸಿ ಬಿತ್ತಬೇಕು (ಕೃಷಿಪ್ರ. ೬೩). **ಸಜ್ಜೆ$_1$:** ರಾಗಿ ಗೋಧಿ ಜೋಳ ಸಜ್ಜೆಯ ಬೀಸ್ಕಾರ (ಸಿದ್ಧಪು. ೧೭-೭೭); ಸಾಮೆ, ನವಣೆ, ಸಜ್ಜೆ, ಹಾರಕ – ಇವು ಹೆಚ್ಚು ಆದಾಯಕರವಾದ ಪೈರುಗಳಲ್ಲ (ವ್ಯವಮ. ೪೪). [ದೇ. || ತೆಲು. ಸಜ್ಜ]

**ಸೆಜ್ಜೆ$_2$, ಸಜ್ಜೆ$_2$ (ನಾ).** ೧. ಹಾಸಿಗೆ; ತಲ್ಪ: "ಪಟ್ಕೆ ಸೆಜ್ಜೆಯೆನಲಾದರಿಪ ಶಯ್ಯೆಗೊಪ್ಪುವ ಪೆಸರ್" (ಅಭ್ಯಕ್ಷ. ೨೯); ಮೃತಕ ಸೆಜ್ಜೆಯೊಳಿರ್ದು . . . ಧ್ಯಾನಿಸುತಿರ್ಪನ್ನೆಗಂ (ವಡ್ಡಾರಾ. ೨೯-೧); ಪಿರಿಯ ಮರಂಗಳೆ ಮಾಡಮಾಗೆ ಪೊಳೆವೆಳದಳಿರ್ಗಳೆ ಸೆಜ್ಜೆಯಾಗೆ (ಪಂಪಭಾ. ೭-೨೮). ೨. ಮಲಗುವ ಮನೆ; ಶಯ್ಯಾಗೃಹ: ಜಿನಜನನಿಯ ಸೆಜ್ಜೆಯನುಜ್ವಲಂ ಮಾಡಲುಂ (ಆದಿಪು. ೭-೨೧ ವ); ಸೆಜ್ಜೆಯ ಕಾಪಿನವರ್ ಪರಿತಂದು ಶೋಧಿಸಿ ನೋಡಿ (ಪಂಚತಂ. ೧೩೦-೧೪); ತಿಂಗಳ ಪೆತ್ತ ತಂದೆ ವಾಡವಶಿಖಿಗಂ ನಿವಾಸಮಸುರಾರಿಯ ಸೆಜ್ಜೆ ಶುಭಂ ಮಹಾರ್ಣವಂ (ಸೂಕ್ತಿಸು. ೨-೩೮). ೩. ಮನೆಯ ಮಹಡಿಯಲ್ಲಿ ಮುಂದಕ್ಕೆ ಚಾಚಿರುವಂತೆ ಕಟ್ಟಿರುವ ಭಾಗ; ಉಪ್ಪರಿಗೆಯ ಮೊಗಸಾಲೆ: ಪ್ರೇಮದೊಳೆಸೆದುವು ನಾಟಕಶಾಲೆಯ ಕಾಮಿನಿಯರ ಸಜ್ಜೆಗಳು (ಕಂಸವಿ. ೨೦-೩೮); ಸೆಜ್ಜೆಯಲ್ಲಿ ಹೆಂಗಸರು ನಿಂತು ನೋಡುತ್ತಿದ್ದರು (ಚಂಗಾಳ್ಯ. ೫೫೮). ೪. ಆಧಾರ; ಆನಿಕೆ: 'ಸೆಜ್ಜೆಗೊಡು' ಪರಾ. ೫. "ಸಂನ್ಯಾಸಿಯ ಉಪಕರಣ [ಕಂತೆ – ಕೌದಿ]" (ಜೀವಸಂ. ಕೋಶ): ವೇಷದೋಜೆಯ(ಯಿ)ಂ ಕೆಯ್ಕೊಂಡು ಸೆಜ್ಜೆಯಂ ಪಿಡಿದು ಪೊಟಲಂ ಪೊಜಿಮಟ್ಟು (ಜೀವಸಂ. ೪೯-೩೨ ವ). ೬. [ವೀಶೈ] ಇಷ್ಟಲಿಂಗವನ್ನು ಇಡುವ ಭರಣಿ; ಕರಡಿಗೆ; ಲಿಂಗವತ್ತಿಗೆ: ಸೆಜ್ಜೆ ಉಪ್ಪರಿಸಿ ಶಿವಲಿಂಗ ಕರಸ್ಥಲಕ್ಕೆ ಬರೆ (ಮಹಾದೇ. ಬ. ೧೦೬-೨೪೦); ಮಾರಾರಿ ಲಿಂಗಮಂ ಕಾಶಿಯೊಳು ಸಜ್ಜೆಯೊಳು ದಾರಂಗಳಿಂ ಹೊಲಿದು ಕಂಠದೊಳು ವಸ್ತ್ರದೊಳು . . . ಧರಿಸಿ (ಗುರುಬಾ. ೩-೪೯). **ಸಜ್ಜೆ$_2$:** ೧. ಏಂ ಮೆಜೆದಿರ್ದುದೊ ಸಜ್ಜೆಯಾಲಯಂ (ದಶಕು. ೮-೨೯೨); ಮೈಮರೆತಳಡವಿಯಾ ತೊಯ್ದ ನೆಲವುಲ್ಲಿನಾ ತರಗು ಸಜ್ಜೆಯಲಿ (ಚಿತ್ರಾಂಗ. ೫೫-೨೮); ಅಲರ ಸಜ್ಜೆಯೊಳೊರಗಿ ತಂಗಾಳಿಗೆದೆಯೊಡ್ಡಿ . . . ಹಾಡಿ ಗೋಳಾಡುತಿಹೆ! (ಕವಿಕಾ. ೯-೧). ೨. ಸಜ್ಜೆಯ ಕಾಪಿನ ಬೆಸನಂ ಕುಡೆ ಪಡೆದು (ಪಂಚತಂ. ೧೯೪-೧೮); ಈಸುದಿನ ಪರಿಯಂತ ವಿಭವದ ವಾಸ ಸೊಬಗಿನ ಸಜ್ಜೆ (ತೊರರಾ. ೨-೨-೩೫). ೩. ಭೋಜನಶಾಲೆ ಮಂತಣಗೃಹ ಚೆಲ್ವಿಂದ ರಾಜಿಪ ಸಜ್ಜೆಯ ಸದನ (ಕಂಸವಿ. ೨-೮೦); ತುಡುಕಿ ಸಜ್ಜೆಗಳಡರಿ . . . ವಾತಾಯನದ ಮಾರ್ಗವಿಡಿದು ಪೊರಮಟ್ಟನು (ವಂಕಾರಾ. ೫-೩-೨೩); ಆ ಪಟ್ಟಣವು . . . ಮನೆಗಳು, ಉಪ್ಪರಿಗೆಗಳು, ಸಜ್ಜೆಗಳು ಉಳ್ಳದ್ದಾಗಿ (ಕೃವಾಹಿ. ೨೦೩). ೬. ಉರದ ಸಜ್ಜೆಯಲ್ಲಿ ಲಿಂಗವ ಧರಿಸಿದ ಮತ್ತೆ ಪರಸ್ತ್ರೀಯರ ಸಂಗವ ಬಿಡಬೇಕು (ಮೋಳಿಮ್ಮಾ. ೧೩೫-೫೦೨); ಶಿವದಾರ ಸಜ್ಜೆಗಳಳವಡುವೊಡೆ (ಪ್ರಭುಲೀ. ೧೬-೨೩); ಸಜ್ಜೆಯಲಿ ಶಿವನ ಧರಿಸಿಪ್ಪ ಶರಣರ ಹೆಜ್ಜೆಯಲಿ ನಡೆಯೊ (ಸರ್ವಜ್ಞ. ೨೮೬). ೭. ಮನೆಯ ಗೋಡೆಯ ಹೊರಭಾಗದಲ್ಲಿ ಮುಂಚಾಚಿದಂತೆ ಕಟ್ಟಿದ ಭಾಗ: ಸಜ್ಜೆ ಕೋಣೆಗೆ ಚೆಂದ ಗೆಜ್ಜೆ ಕುಣಿತಕೆ ಚೆಂದ (ಇಂಚಾಪ. ೯೪-೫೬). [< ಪ್ರಾ. ಸೆಜ್ಜಾ, ಸಿಜ್ಜಾ./ ಸಂ. ಶಯ್ಯಾ]

**ಸಜ್ಜೆಗದ್ದೆ (ನಾ).** ಸಜ್ಜೆಯನ್ನು ಬೆಳೆಯುವ ಗದ್ದೆ: ನಿವೇದ್ಯಕ್ಕೆ ಸಜ್ಜೆಗದ್ದೆ ಒನ್ದು ಮತ್ತಲು (ಎಕ. VIII, ಸೊರಬ. ೪೭೭-೧೬; 939); ಕೆಜೆಯ ಕೆಳಗೆ ಗುಣಿಗೆಗಳೆಯೊಳ್ಕಮ್ಮ ೫೦ ಸಜ್ಜೆಗದ್ದೆ ಮತ್ತ ೧ ಕಮ್ಮ ೨೫ (ಎಕ. VIII, ಸೊರಬ.೧೮೪-೨೩; 1033).

[ಸಜ್ಜೆ$_1$ + ಗದ್ದೆ (< ಗಜ್ಜೆ)]

**ಸಜ್ಜೆಗೊಡು (ಕ್ರಿ).** ಆಧಾರವಾಗಿಸು; ಆನಿಸು: ಚಿತ್ರಮಂ ವಿಸ್ಮಯಮಯರಸದಿಂ ನಾಂದುತುಂ ಸಜ್ಜೆಗೊಟ್ಟಂಗಯ್ಯಂ ಗಲ್ಲಕ್ಕೆ (ಲೀಲಾವ. ೩-೭೧). [ಸೆಜ್ಜೆ$_2$ + ಕೊಡು$_1$]

**ಸೆಜ್ಜೆಗೊಳಿಸು, ಸಜ್ಜೆಗೊಳಿಸು$_1$ (ಕ್ರಿ).** ಮಲಗಿಸು; ನಿದ್ರೆಮಾಡಿಸು: ಆ ಪರಮನನು ಮಜ್ಜನಗೊಳಿಸುವರು ಸಜ್ಜೆಗೊಳಿಸುವರು (ಸಾಳ್ವಭಾ. ೩೩-೧೧೫). **ಸಜ್ಜೆಗೊಳಿಸು$_1$:** ಚತುರೆ ನಿಜಸಖಿ ಸಜ್ಜೆಗೊಳಿಸಿ ಸಮಸ್ತರನು ತೇದು (ಸಾಳ್ವಭಾ. ೨೯-೪).

[ಸೆಜ್ಜೆ$_2$ + ಕೊಳ್$_1$ + -ಇಸು$_1$]

**ಸೆಜ್ಜೆದುಂಬು (ಕ್ರಿ).** ಕರಡಿಗೆ ತುಂಬು; ಲಿಂಗದ ಭರಣಿಯಲ್ಲಿ ಸೇರಿಸು: ನವಪರಿಮಳದ ಬಿರಿಮುಗುಳ್ಗಳನವಿಕಳಾತ್ಮನು ಸೆಜ್ಜೆದುಂಬಲು ತವಕದಿಂ ತವೆ ಕೊಯ್ದುಕೊಂಡಾ ಮದಕರಿಯ ಮುಂದೆ (ಬಸವು. ೨೨-೯). [ಸೆಜ್ಜೆ$_2$ + ತುಂಬು$_1$]

**ಸೆಜ್ಜೆಮನೆ** 'ಸೆಜ್ಜೆವನೆ' ನೋ.

**ಸೆಜ್ಜೆಮಾಡ** 'ಸೆಜ್ಜೆವಾಡ' ನೋ.

**ಸೆಜ್ಜೆಯೋವರಿ (ನಾ).** ಮಲಗುವ ಕೋಣೆ; ಶಯ್ಯಾಗೃಹ: ಎಮ್ಮ ಸೆಜ್ಜೆಯೋವರಿಯಲಿ ಕಳ್ಳಂ ಪೊಕ್ಕು ಪುಡಿಕೆಯಂ ತೆಗೆದು (ವಡ್ಡಾರಾ. ೧೨೩-೧೯); ಮಿಣ್ಣನೆ ಹೊಕ್ಕನಾತನ ಸೆಜ್ಜೆಯೋವರಿಯ (ಕುಮಾಗ. ೯-೨೭). [ಸೆಜ್ಜೆ$_2$ + ಓವರಿ]

**ಸೆಜ್ಜೆರ** 'ಸೆಜ್ಜಾರ' ನೋ.

**ಸೆಜ್ಜೆವನೆ, ಸಜ್ಜೆಮನೆ, ಸಜ್ಜೆವನೆ, ಸೆಜ್ಜೆಮನೆ (ನಾ).** ಮಲಗುವ ಮನೆ; ಶಯ್ಯಾಗೃಹ: "ಸೆಜ್ಜೆವನೆ, ಪಟ್ಕೆವನೆ – ಈ ೨ ಶಯ್ಯಾಗೃಹಂ" (ಕಶಸಾ. ೬೦-೩೧೭); ಪುಷ್ಕಳಾವತಿಯೆಂಬ ಸೆಜ್ಜೆವನೆಯಿಂದಂ ಜೀಮೂತಮೆಂಬ ಮಜ್ಜನನಿಕೇತನದಿಂದಂ (ಶಾಂತಿಪು. ೧೧-೮೪ ವ); ಅಮೃತಾಂಭೋನಿಧಿಯೆಪ್ಪ ಸೆಜ್ಜೆವನೆಯೊಳ್. . . ಕಮಳಾವಲ್ಲಭನಿರ್ದ್ದ (ಎಕ. XI, ದಾವಣ. ೩೫-೪; ಸು. 1160); ಪರಿತಂದು ಸೆಜ್ಜೆವನೆಯ ಸಿರಿಮಂಚದೊಳ್ ಕುಳ್ಳಿರ್ದು (ಗಿರಿಕ. ೨-೧೦೫ ವ). **ಸಜ್ಜೆಮನೆ:** ಪವಡಿಸು ಪರಮಾತ್ಮನೆ . . . ಕುಂದಣದಿ ರಚಿಸಿದ ಸಜ್ಜೆಮನೆಯಲ್ಲಿ (ಪುರಂದ. ೩-೧೩೦-೧); ಉಪ್ಪರಿಗೆಗಳು, ಸಜ್ಜೆಮನೆಗಳು . . . ಹಜಾರಗಳು (ಕೃವಾಹಿ. ೧೬೪). **ಸಜ್ಜೆವನೆ:** ನಿಮ್ಮಡಿಗಳಂ ನೋಡಲಾಸ್ಥಾನಮಂಟಪಕ್ಕೆ ಬಂದು ಕಾಣದೆ ಸಜ್ಜೆವನೆಯಂ ನೋಡಿಯಲ್ಲಿಯು ಕಾಣದೆ (ದಶಕು. ೪-೧೪ ವ); ನುಣ್ಣರದ ತಾಯ್ಮನೆಯೆನಿಸಿದುದು ಸಜ್ಜೆವನೆಯಿಂದು (ಸಾಳ್ವಭಾ. ೩-೬೭); ಆರೋಳಮೇನುಮನಾಡದೆ ನೋಡದೆ ಸಜ್ಜೆವನೆಗಾಗಿ ಪೋಪುದುಂ (ರಾಮಾಶ್ವ. ೧೯-೧೧). **ಸೆಜ್ಜೆಮನೆ:** "ಸೆಜ್ಜೆ[ಪಾಠಾಂ. ಶಯ್ಯೆ]ಮನೆಗಳೊಳ್ ಪಕ್ಕೆ" (ಶಬ್ದಮಂ. ೮೦). [ಸೆಜ್ಜೆ$_2$ + ಮನೆ]

**ಸೆಜ್ಜೆವಳ, ಸಜ್ಜೆವಳ, ಸೆಜ್ಜೆವಳ್ಳ, ಸೆಜ್ಜೆವಾಳ (ನಾ).** ೧. ಮಲಗುವ ಮನೆಯ ಮೇಲ್ವಿಚಾರಕ; ಶಯ್ಯಾಗಾರದ ಪರಿಚಾರಕ: "ಸೆಜ್ಜೆವಳನೆಂದು ಶಯ್ಯಾಗೃಹ ರಕ್ಷಕಂ" (ಕಶಸಾ. ೬೦-೩೪೮); ಸೂರ್ಯಕಾಂತದ ಧೂಪಗುಂಡಿಗೆಯೊಳಳವಜಿಯದೆ ಸೆಜ್ಜೆವಳನಿಕ್ಕಿದ ಕೇಶಸಂಸ್ಕಾರ ಕಾಲಾಗರುಧೂಪಂ (ಆದಿಪು. ೫-೨೨ ವ); ಸೆಜ್ಜೆವಳರ್ ಬಾಣಸಿಗರ್ ಮಜ್ಜನವಳರ್ (ಪುಷ್ಪಪು. ೧೨-೫೬); ಸಜ್ಜೆವಳರಂ . . . ಮಧುರೋಕ್ತಿಗಳಿಂ ಸಂತಸವಡಿಸುತ್ತ (ಚಿಕವಂ. ೭೪-೮). **ಸಜ್ಜೆವಳ:** ೧. "ಸಜ್ಜೆವಳಂ ಶಯನಗೃಹವ ರಕ್ಷಿಸುವಾತಂ" (ಕವಿಕಂ. ೧೫೭); ಪಡೆವಳರ ಸ[ಪಾಠಾಂ. ಸೆ]ಜ್ಜೆವಳ ಗಂಧಿಗ . . . ಕಂಚುಗಾಜಿರ ಕೇರಿ ಮೆಜೆದಿಹವು (ಸಾಳ್ವಭಾ. ೨-೮). **ಸೆಜ್ಜೆವಳ್ಳ:** ೧. ಪಡೆವಳ್ಳಂ ಮಡಿವಳ್ಳಂ ಸೆಜ್ಜೆವಳ್ಳಂ (ಕಾವ್ಯಾವ. ೩೨೬); ಸೆಜ್ಜೆವಳಂ, ಸೆಜ್ಜೆವಳ್ಳಂ (ಶಬ್ದಾನು. ೪೨೬ ಪ್ರಯೋ).

೨. ಒಂದು ಮನೆತನದ ಹೆಸರು: ಮಹಾಪ್ರಧಾನ ಸಜ್ಜೆವಳ್ಳ ಪದ್ಮನಾಭದೇವ (ಅರ್ಥವೇ. ೧-೧೨೦ ವ). **ಸೆಜ್ಜೆವಾಳ:** 'ಸೆಜ್ಜೆವಾಳುಕ' ಪರಾ. [ಸಜ್ಜೆ$_2$ + - ವಳ]

**ಸೆಜ್ಜೆವಳಿಗೆ** (ನಾ). = **ಸೆಜ್ಜೆವನೆ:** ಪುರವನಿತೆಯರು ನೋಳ್ಪೊಡೆ ಸಜ್ಜೆವಳಿಗೆ ಮಂದಿರಗಳ ಮಚ್ಚನೇಱಿದರು (ಕಂಸವಿ. ೨೨-೧೦೦). [ಸೆಜ್ಜೆ$_2$ + ಮಳಿಗೆ (< ಮೞಿಗೆ)]

**ಸೆಜ್ಜೆವಳ್ತಿ** (ನಾ). ಮಲಗುವ ಮನೆಯ ಸೇವಕಿ; ಶಯ್ಯಾಗೃಹದ ರಕ್ಷಕಿ: **ಘಟ್ಟವಳ್ತಿ, ಸಜ್ಜೆವಳ್ತಿ** (ಶಮದ. ೨೦೮ ಪ್ರಯೋ); **ಸೇವಿಸುತ್ತಿರೆ ಸೆ** [ಪಾಠಾಂ. ಸ]**ಜ್ಜೆವಳ್ತಿಯರ್** ಕೆಲಬಲದೊಳ್ (ಶಾಂತಪು. ೧೫-೪೯). [< ಸಜ್ಜೆವಳ + - ತಿ$_1$ (< - ಇತ್ತಿ)]

**ಸೆಜ್ಜೆವಳ್ಳ** 'ಸೆಜ್ಜೆವಳ' ನೋ.

**ಸೆಜ್ಜೆವಾಡ, ಸಜ್ಜೆಮಾಡ** (ನಾ). ಮೊಗಸಾಲೆಯಿರುವ ಮಹಡಿಮನೆ: ದೀಪಕಾಂತಿಗ ತನುಕಾಂತಿ ಮಾರ್ಮಲೆಯೆ ಪೊಕ್ಕಳಿಳಾನುತೆ ಸಜ್ಜೆವಾಡಮಂ[ಪಾಠಾಂ. ಶಯ್ಯೆಗೇಹಮಂ] (ಜಗವಿ. ೨-೭೩). **ಸೆಜ್ಜೆಮಾಡ:** ಪೌರನಾರಿಯರ್ ಗಡಣದೆ ಸಜ್ಜೆಮಾಡದೆಡೆಗೆಯ್ದಿ ವೃಷೇಂದ್ರನನಂದು ನೋಡಿದರ್ (ವೃಷವಿ. ೫-೮). [ಸಜ್ಜೆ$_2$ + ಮಾಡ$_1$]

**ಸೆಜ್ಜೆವಾಳ** 'ಸೆಜ್ಜೆವಳ' ನೋ.

**ಸೆಜ್ಜೆವಾಳುಕ** (ನಾ). = **ಸೆಜ್ಜೆವಳ:** ಮಜ್ಜನಿಗನವಸರಿಗ . . . ಸಜ್ಜೆವಾಳುಕನುಭಯ ಭಾಸಿಕ (ಕೊಲ್ಲಾಚಿ. ೨೦೦). [ಸಜ್ಜೆವಾಳ (< ಸಜ್ಜೆವಳ) + - ಉಕ (<- ಉಗ)]

**ಸೆಟಕೊಳ್ಳು** 'ಸೆಟೆಗೊಳ್ಳು' ನೋ.

**ಸೆಟಗೊಳ್ಳು** 'ಸೆಟೆಗೊಳ್ಳು' ನೋ.

**ಸೆಟವಿ$_1$** (ನಾ). ಸೆಟೆಯುವ ಸ್ವಭಾವದವಳು; ಜಂಭಗಾರ್ತಿ; ದುರಹಂಕಾರಿ: ಅಷ್ಟು ತಿಳೀಬಾರದು ಆ ಸೆಟವಿಗೆ (ಜವಾರಿ. ೧೭). [< ಸೆಡೆ$_1$]

**ಸೆಟವಿ$_2$, ಶಟವಿ, ಸಟವಾಯಿ** (ನಾ). ೧. ಮಕ್ಕಳು ಹುಟ್ಟಿದ ಆರನೆಯ ದಿನ ಪೂಜಿಸುವ ದೇವತೆ; ಮಾನವರ ಹಣೆಯ ಬರಹವನ್ನು ಬರೆಯುವವಳೆಂದು ನಂಬಲಾದ ಒಬ್ಬ ಗ್ರಾಮದೇವತೆ: ಸೆಟವಿದೇವಿಯ ನೆನೆದು ಮುಡಿಪು ಕಟ್ಟಿದಳೆಂದು (ಕನ್ನಜಾ. ೧೯೦); ಸೆಟವಿಯ ಬರಹಕ್ಕಿಂತ ಅದರಲ್ಲಿಯ ಸಾಹೇಬರ ಬರಹವು ಬಹಳೇ ಜೋರಾಗಿರುವುದೆಂದು ಆತನ ನಂಬುಗೆ (ಜೀವಪ್ರ. ೧೮). **ಶಟವಿ:** ೧. ಅದೃಷ್ಟವನ್ನು ಬದಲಾಯಿಸಿದ ಹಾಗೆ ಈ ಕೆಲಸ 'ಶಟವಿ'ಯ ಬರವಣಿಗೆಯನ್ನೇ ಅಳುಕಿಸಿದ ಹಾಗೆ ಈ ಕೆಲಸ (ಬಸಸ. ೧೨೦); ತೆಲಗು ಬ್ರಾಹ್ಮಣರು . . . ಇವರೊಳಗೆ ಹಡೆದ ಮೇಲೆ ಕೂಸಿನ ಹೊಕ್ಕಳ ಹುರಿಯನ್ನು ಹುಗಿಯದೆ ಬಾಣಂತಿಯ ಕೋಣೆಯಲ್ಲಿ ಪೊಣಗಿಸುವರು. ಐದನೇ ದಿವಸ ಮಧ್ಯಾಹ್ನದಲ್ಲಿ ನೆಲದ ಮೇಲೆ ಬೀಸುವ ಕಲ್ಲು ಇಟ್ಟು ಶಟವಿಯ ಪ್ರತಿಮೆಯನ್ನೂ ಹೊಕ್ಕಳ ಹುರಿಯನ್ನೂ ಇರಿಸಿ ಪೂಜಿಸುವರು (ಕಭಾಗ. ೮೩). ೨. ಒಂದು ಕ್ಷುದ್ರದೇವತೆ: ಜೋಕುಮಾರ ಕರಿಯಾ ಶೀರಿಯಾ ಶಟವಿ ಗುಳ್ಳಕೆ ಪೊಳಕಾಯಿ ಅಗಸರ ಮನೆ ಕೊಡತಿ ಹೊಲ್ಲಿ . . . ಜಂಪೆ ಜಡದೈವ (ವಿಸಾಸು. ೫೮-೨). **ಸಟವಾಯಿ:** ೧. ಅಥಣಿಯ ಪಶ್ಚಿಮಕ್ಕೆ . . . ಬ್ರಹ್ಮನಾಥ, ಸಟವಾಯಿಯೆಂಬೆರಡು ಗುಡಿಗಳುಂಟು . . . ಸಟವಾಯಿಯನ್ನು ಮಕ್ಕಳು ಹುಟ್ಟಿದ ಬಳಿಕ ಮೂರು ತಿಂಗಳಿನವರೆಗೆ ಪೂಜಿಸುವರು (ಕಭಾಗ. ೫೦೨). [<— ಮರಾ. ಸಟವಾಈ, ಸಟವಿ/ಸಂ. ಷಷ್ಠೀ]

**ಸೆಟಿಸು** (ಕ್ರಿ). ಸೆಟೆಯುವಂತೆ ಮಾಡು; ನೇರಗೊಳಿಸು: ಎದೆ ಸೆಟಿಸಿ ನೋಡುತ್ತ . . . ಬಾಗಿಲು ಬಡಿಯುವನು (ಪ್ರತಿಬಿಂ. ೩). [ಸೆಟೆ$_1$ (< ಸೆಡೆ$_1$) + - ಇಸು$_3$]

**ಸೆಟೆ$_1$** 'ಸೆಡೆ$_1$' ನೋ.

**ಸೆಟೆ$_2$** 'ಸೆಡೆ$_2$' ನೋ.

**ಸೆಟೆಗೊಳ್ಳು, ಸೆಟಕೊಳ್ಳು, ಸೆಟಗೊಳ್ಳು** (ಕ್ರಿ). ೧. ನಿಮಿರು; ನೆಟ್ಟಗಾಗು: ಚಳಿಗೆ ಕೈಕಾಲುಗಳ ರೋಮಗಳೆಲ್ಲ ಸೆಟೆಗೊಂಡಿವೆ (ರೂಢಿ). **ಸೆಟಕೊಳ್ಳು:** ೨. ಸಿಟ್ಟಾಗು; ಕೋಪಗೊಳ್ಳು: ಅದಕ್ಕೇನು ಅಷ್ಟು ಸಿಟ್ಟು . . . ಅಲ್ಲಿ ಹೋಗಿ ಸೆಟಕೊಂಡು ಕೂತಿದೆಯಲ್ಲಾ! (ಗಂಗಾವ. ೪). ೩. ಬೀಗು; ಗರ್ವಿಸು: ತನ್ನ ಪ್ರಶಂಸೆ ಕೇಳಿ ಕಾಗೆಯು ತಾನು ಯಾರು ಎಂಬ ಎಚ್ಚರ ಮರೆತು ಸೆಟಕೊಂಡು . . . ಗಾಯನಕ್ಕೆ ಆರಂಭಮಾಡಿತು (ಮುಲಬಯಿ. ೩-೧೨). **ಸೆಟಗೊಳ್ಳು:** ೨. ಏನೋ ನಿಮಿತ್ತದ ಮೂಲಕ ಸೆಟಗೊಂಡ ಗಂಡ (ಕನ್ನಜಾ. ೧೨೨); ಸೆಟ್ಟರ ಹುಡುಗ ಸೆಟಗೊಂಡ್ಯೋದಾ (ಸಜಲೋ. ೯೩-೮).

[ಸೆಟೆ$_1$ ( < ಸೆಡೆ$_1$) + ಕೊಳ್ಳು$_1$ (< ಕೊಳ್$_1$)]

**ಸೆಟೆಬೇನೆ** (ನಾ). ಸ್ನಾಯುಗಳು ಸೆಡೆತುಕೊಳ್ಳುವ ಒಂದು ಬಗೆಯ ರೋಗ; ಧನುರ್ವಾಯು: ಚೀರಿ ಮೈಸೆಟಿಸಿ ಕಳೆಗುಂದಿ ಸೆಟೆಬೇನೆ ತೋರಿಸಿತು (ಕನ್ನಜಾ. ೧೮೯); ಇವನಿಗೆ ಸೆಟೆಬೇನೆ (ಧನುರ್ವಾಯು) ಬರಲಿ ಎಂದು ಅಳತೊಡಗಿದಳು (ಬೀರಬ. ೪೭).

[ಸೆಟೆ$_1$ (< ಸೆಡೆ$_1$) + ಬೇನೆ]

**ಸೆಟೆಮಾತು** (ನಾ). ಅಹಂಕಾರದ ಮಾತು; ಗರ್ವದ ನುಡಿ: ನಟರಾಯ ತಾನೆಂದು ಕಟುಮದವು ಅಚ್ಯುತಗೆ ಸೆಟೆಮಾತು ಕೇಳಿ ಚೌಡಯ್ಯ . . . ಕುಣಿದು ತೋರಿಸಲು (ಕನ್ನಜಾ. ೨೯೧). [ಸೆಟೆ$_1$ (< ಸೆಡೆ$_1$) + ಮಾತು$_1$]

**ಸೆಟೆಯ** (ನಾ). ಸೆಡೆತುಕೊಂಡವನು; ಅಹಂಕಾರಿ; ಗರ್ವಿಷ್ಠ: ಅವರ ಶಾಂತಮುಖಮುದ್ರೆಯನ್ನೂ ಸಾತ್ವಿಕಗುಣವನ್ನೂ ಕಂಡು ಎಂತಹ ಸೆಟೆಯನಾದರೂ ಮಣಿಯಲೇಬೇಕು (ಬಳುಮು. ೩೦). [ಸೆಟೆ$_1$ (< ಸೆಡೆ$_1$) + - ಅ$_7$]

**ಸೆಟೆರೋಗ** (ನಾ). = **ಸೆಟೆಬೇನೆ:** ಸೆಟೆರೋಗವು ಕ್ಲಾಸ್ಟ್ರಿಡಿಯಂ ಟೆಟಾನಿ ಎಂಬ ರೋಗಾಣುವಿನಿಂದ ಬರುತ್ತದೆ (ಕೆಲರೋ. ೩೨). [ಸೆಟೆ$_1$ (< ಸೆಡೆ$_1$) + ರೋಗ]

**ಸೆಟ್ಟಪಯ್ಯ** (ನಾ). ಒಬ್ಬಾತನ ಹೆಸರು: ಸೆಟ್ಟಪಯ್ಯ (ಎಕ. II, ೪೦೪; 950).

[ಸೆಟ್ಟಪ$_2$ + ಅಯ್ಯ$_1$]

**ಸೆಟ್ಟಿ, ಶೆಟ್ಟಿ** (ನಾ). ೧. ವ್ಯಾಪಾರಿ; ಶ್ರೇಷ್ಠಿ: ಆ ನಾಡೊಳ್ ಸಾರ್ಥಾಧಿಪತಿ ನಂದಿಮಿತ್ರನೆಂಬೊಂ ಸೆಟ್ಟಿ ಸಾರ್ಥಂಬೆರಸು ಪರದಿಂಗ ಪೋಗುತ್ತ (ವಡ್ಡಾರಾ. ೧೬೩-೨೧); ಸೆಟ್ಟಿಯ ಬಳ್ಳಂ ಕಿಱಿದು (ಪಂಪಭಾ. ೧೨-೧೭೫); ಹೇರಿನ ಸೆಟ್ಟಿಗಳು ತಾನೊಬ್ಬರೊಬ್ಬರನು ಕರೆದು (ಬಸವಪು. ೯-೮); ಪಟ್ಟೆಚೀನಾಂಬರಗಳನು ಸೃಷ್ಟೀಶನ ಮೈಭೋಗಕೆ ತಂದೀವ ಸೆಟ್ಟಿಗಳು (ಕಂಸವಿ. ೨೫-೧೦೧). ೨. ಮುಖಂಡ; ಮುಖ್ಯಸ್ಥ: ನಾನು ನಿನ್ನೆಮೊನ್ನೆಯ ಸೆಟ್ಟಿಯನ್ನು ರಾಜಾಧಿರಾಜನೆಂದು ಓಲೈಸುವೆನೆಂದು ಬಗೆದಿದ್ದೀಯಾ? (ಬಾಣಾಪಿ. ೩೨೮). **ಶೆಟ್ಟಿ:** ೧. ದಲಾಲೀವ್ಯಾಪಾರಸ್ಥರಾದ ಓರ್ವ ಶೆಟ್ಟರ ಗುರುತಾಗಿತ್ತು (ಗಂಮಾಯಿ. ೧೨೭); ನಾನಾತರದ ಜನರು ಬ್ರಾಹ್ಮಣರು, ಶೆಟ್ಟರು, ಗೌಡರು (ರಾವಮಾನೆ. ೧೧೦); ಶೆಟ್ಟಿ ಬಿಟ್ಟಲ್ಲೇ ಪಟ್ಟಣ (ಗಾದೆ). [< ಸಂ. ಶ್ರೇಷ್ಠಿನ್]

**ಸೆಟ್ಟಿಕಾತಿ** (ನಾ). ಸೆಟ್ಟರ ಹೆಂಗಸು; ವೈಶ್ಯಸ್ತ್ರೀ: ದೊಡ್ಡ ಸೆಟ್ಟಿಕಾತಿಯ ಪಟ್ಟವಳಿಯ ಬೇಕು (ಶಿವಗೀ. ೧೪೭-೯೨೮). [ಸೆಟ್ಟಿ + - ಕಾತಿ$_5$]

**ಸೆಟ್ಟಿಕಾರ** 'ಸೆಟ್ಟಿಕಾಱ' ನೋ.

**ಸೆಟ್ಟಿಕಾಱ, ಶೆಟ್ಟಿಗಾರ, ಸೆಟ್ಟಿಕಾರ** (ನಾ). = **ಸೆಟ್ಟಿ** ೧: ಬಸುರೂರ ಸೆಟ್ಟಿಕಾಱ ಮಾದಣಸೆಟ್ಟಿ ಕೊಟ್ಟ ಶಿಲಾ ಶಾಸನದ ಕ್ರಮ (ಸೌಇಇ. IX-ii, ೪೨೩-೧೧; 1400); ನಖರದವೊಳಗೆ ಸೆಟ್ಟಿಕಾಱ ಮಾಣಕಣಸೆಟ್ಟಿ . . . ಯಿಂತಿವರು ಧರ್ಮ್ಮಸಾಕ್ಷಿಗಳು (ಕಇ. I, ೫೮-೨೩; 1446). **ಶೆಟ್ಟಿಗಾರ:** ಎಲೆ ಶೆಟ್ಟಿಗಾರನೆ ನಿನ್ನ ಅಭೀಷ್ಟೆಯಂತೆ ಋಣವಂ ತೀರಿಸಿಕೊ (ಶರಲೀ. ೧೮೫). **ಸೆಟ್ಟಿಕಾರ:** ಈ ಧರ್ಮಕ್ಕೆ ಪ್ರಭು ಪಂಚಮಠಿ ಸ್ಥಾನ ನಗರ ನಾಲ್ಪತ್ತೊಕ್ಕಲುಂ ನಾಲ್ಕೂರ ಸೆಟ್ಟಿಕಾರರು (ಕಇಅ. ೧೯-೧-೭೭; 1127); ಬಟ್ಟಕಳದ ಸೆಟ್ಟಿಕಾರರೊಳು ಮುಖ್ಯ (ಎಕ. VIII, ಸಾಗರ. ೫೫-೮೫; 1560). [ಸೆಟ್ಟಿ + - ಕಾಱ]

**ಸೆಟ್ಟಿಕಾಱಿತಿ** (ನಾ). ಸೆಟ್ಟರ ಹೆಂಗಸು; ವೈಶ್ಯಸ್ತ್ರೀ: ಪಟ್ಟಣದ ಪಾಳೆಯದೊಳಗೆ ವ್ಯವಹರಿಸುತಿರ್ಪ ಸೆಟ್ಟಿಕಾಱಿತಿಗೆ ಒಬ್ಬ ಹುಟ್ಟುಗುರುಡನು ಗಂಡನಾಗಿದ್ದನು (ಸಿದ್ಧವ. ೪೬-೧೨೦). [ಸೆಟ್ಟಿಕಾಱ + - ಇತಿ$_1$ (< - ಇತ್ತಿ)]

**ಸೆಟ್ಟಿಗ** (ನಾ). ವ್ಯಾಪಾರಿ; ಸೆಟ್ಟಿ : ಏಜಸೆಟ್ಟಿಗರಾ ದಮ್ಮನಾಯ್ಗನ್ (ಎಇ. IX, ೨೩-೧೩; 800); ಜಟ್ಟಿಗ ಗೀತಪಾಠಕರು ಸೆಟ್ಟಿಗ ಬಲುಚಿನ್ನವರದರು (ಮೋಹತ. ೩೭-೪೩).

[ಸೆಟ್ಟಿ + - ಗ$_2$]

**ಸೆಟ್ಟಿಗುತ್ತ** (ನಾ). ವ್ಯಾಪಾರೀಸಂಘ ಮತ್ತು ಅದರ ಸದಸ್ಯ: ವರಿಷಪ್ರತಿ ಕುಡುವರಾಗಿ ಇದಾಗವಜೆ ಗದ್ದೆ ಸೆಟ್ಟಿಗುತ್ತ ನಾಡಗಾವುಣ್ಡನು ಎತ್ತಿಕೊಳುವರ್ (ಎಕ. III (R), ನಂಜನ. ೨೪೧-೧೫; 1027); ಎರಡಱನೂಱಱುಂಟುಂ ಪಟ್ಟಣದ ಸೆಟ್ಟಿಗುತ್ತರುಂ (ಕೊಲ್ಲಾಶಾ. ೧೫-೮೫; 1186); ಶಶಾಂಕನೊಲವಿಂದಂ ರಾಜಯಕ್ಷ್ಮಕ್ಕೆ ಮಾಡಿದ ಮರ್ದಂ ಪಡೆವುಬ್ಬುಗಂದಳೆವರಂತಾ ಸೆಟ್ಟಿಗುತ್ತರ್ಕಳೊಳ್ (ದಶಕು. ೧-೩೯). [ಸೆಟ್ಟಿ + ಗುತ್ತ?]

**ಸೆಟ್ಟಿಗೆಜೆ** (ನಾ). ಒಂದು ಊರಿನ ಹೆಸರು: ಸೀಮಾನ್ತರಂ ಪಡುವಾಯ್ಯಾವೇರಿಯ ಸೆಟ್ಟಿಗೆಱೆ (ಎಕ. IV, ಶ್ರೀರಂಗ. ೧೬೦-೨೩; ಸು. 800). [ಸೆಟ್ಟಿ + ಕೆಱೆ]

**ಸೆಟ್ಟಿತಿ** 'ಸೆಟ್ಟಿತ್ತಿ' ನೋ.

**ಸೆಟ್ಟಿತ್ತಿ, ಸೆಟ್ಟಿತಿ, ಸೆಟ್ಟಿತ್ತಿ** (ನಾ). ೧. = ಸೆಟ್ಟಿಕಾಱಿತಿ: ಬಸ್ವುದತ್ತನು ಸೆಟ್ಟಿತ್ತಿದೆವಿಯಬ್ಬೆಯು ನಿಱಿಸಿ (ಎಕ. VI, ಮೂಡಗೆ. ೧೯-೯; 1025?). **ಸೆಟ್ಟಿತಿ** : ೧. ನೋಡಾ ಎಮ್ಮ ಸೆಟ್ಟಿತಿ ಜಯಾವತಿ ಬೆಸಲೆಯಾದಳ್ (ವಡ್ಡಾರಾ. ೪೪-೧೨); ಚಂದನೆಯ ಚೆಂದಮಂ **ಸೆಟ್ಟಿತಿ ದಿಟ್ಟಿಸಿ ನೋಡಿ** (ವರ್ಧಪು. ೧೫-೫೩ ವ). **೨. ಸೆಟ್ಟಿಯ ಹೆಂಡತಿ: ಗಂಡುಕೂಸಂ** ಕಂಡೆತ್ತಿಕೊಂಡು ಪೋಗಿ ತನ್ನ ಸೆಟ್ಟಿತಿಗೆ ಕೊಟ್ಟೊಡೆ (ಜೀವಸಂ. ೬೦-೬). **ಸೆಟ್ಟಿತ್ತಿ**: ೧. ಕಾದಿ ಸತ್ತು ದಿವನೇಱಿದಾ ಸೆಟ್ಟಿತ್ತಿಯು ನಗಳ ಗಣ್ಣ (ಎಕ. II, ೩೯೯-೧೩; ೩೩೫?). [ಸೆಟ್ಟಿ + - ಇತ್ತಿ]

**ಸೆಟ್ಟಿವಟ್ಟ** (ನಾ). ವ್ಯಾಪಾರಸ್ಥರ ಮುಖಂಡನ ಪದವಿ; ರಾಜಶ್ರೇಷ್ಠಿಯ ಪಟ್ಟ: ಸೆಟ್ಟಿವಟ್ಟಮಂ ಕಟ್ಟಿಸಿಕೊಂಡಲ್ಲಿಯೆ ರಾಜಶ್ರೇಷ್ಠಿಯಾಗಿ (ಜೀವಸಂ. ೫೯-೧೭); ಈ ನೆಲದೊಳ್ ಮುನ್ನಿನ ಸೆಟ್ಟಿವಟ್ಟಮನೆ ಕಣ್ಣಂಬಾದಂ (ಎಕ. V, ಅರಸೀ. ೨೧-೨೨; 1254).

**ಸೆಟ್ಟಿವಟ್ಟದನ್** = ಸೆಟ್ಟಿಪಟ್ಟವನ್ನು ಹೊಂದಿದವನು; ರಾಜಶ್ರೇಷ್ಠಿ: ಕಿಱುಬರೆಲ್ಲಂ ಪಂಡಿತರ್ ಸೆಟ್ಟಿವಟ್ಟ [ಪಾಠಾಂ. ಲ್ಲಿ]ದರೆಲ್ಲಂ ಕಡುಬಾಗಿಗಳ್ (ಆನಂಪು. ೧೧-೧೨). [ಸೆಟ್ಟಿ + ಪಟ್ಟ]

**ಸೆಟ್ಟಿವಟ್ಟಂಗಟ್ಟು** (ಕ್ರಿ). ರಾಜಶ್ರೇಷ್ಠಿಯ ಪಟ್ಟವನ್ನು ಕಟ್ಟು: ಕೂಸಿಂಗ ಸೆಟ್ಟಿವಟ್ಟಂಗಟ್ಟಿ ಪರಸಿ ಸೇಸೆಯನಿಕ್ಕಿ (ವಡ್ಡಾರಾ. ೪೪-೨೫); ನಿರ್ವೇಗಮಾಗಿ ಕುಬೇರಕಾಂತಂಗೆ ಸೆಟ್ಟಿವಟ್ಟಂಗಟ್ಟಿ . . . ಬೀೞ್ಕೊಂಡು (ಚಾವುಂಪು. ೬೧). [ಸೆಟ್ಟಿವಟ್ಟ + ಕಟ್ಟು₁]

**ಸೆಟ್ಟಿವಾಳ** (ನಾ). = ಸೆಟ್ಟಿಗುತ್ತ: ಕಿಸುವ ಹಲಮಾ ಸೆಟ್ಟಿವಾಳರು [೦] ಕಲಿದೇವಸೆಟ್ಟಿಯುಂ (ಎಇ. XIX, ೧೮೬-೨೯; 1134). [ಸೆಟ್ಟಿ + - ವಾಳ₃ (<- ವಳ)]

**ಸೆಟ್ಟಿವಾಱು** (ನಾ). = ಸೆಟ್ಟಿವಟ್ಟ (?): ತನ್ನ ಮಗಳುಮಂ ಸರ್ವಸ್ವಮುಮಂ ಸೆಟ್ಟಿವಾಱುಮಂ ಜಿತಶತ್ರುಗೆ ಕೊಟ್ಟು (ಚಾವುಂಪು. ೮೦).
[ಸೆಟ್ಟಿ + ಬಾಱು₀ (< ಬಾೞ್)]

**ಸೆಟ್ಟಿವಾೞ್ಕೆ** (ನಾ). = ಸೆಟ್ಟಿವಟ್ಟ (?): ಭದ್ರಮಿತ್ರಂಗೆ ಸತ್ಯಘೋಷನೆಂಬ ಪೆಸರುಮಂ ಸೆಟ್ಟಿವಾೞ್ಕೆಯುಮಂ ಕೊಟ್ಟು (ಚಾವುಂಪು. ೧೫೬). [ಸೆಟ್ಟಿ + ಬಾೞ್ಕೆ]

**ಸೆಟ್ಟು₁** 'ಸಟ್ಟುಗ₁' ನೋ.

**ಸೆಟ್ಟು₂** (ನಾ). ಬೀಜ ತೆಗೆದು ಒಣಗಿಸಿಟ್ಟ ಕಾಯಿ; ಚಟ್ಟು: ನೆಲ್ಲಿಯ ಸೆಟ್ಟು ಬಾಳಮಸಿತಾಂಜನ ವೊಳ್ಳಿಹ ಮುಸ್ತೆ (ಅಟ್ಟಮ.೧೧-೬೩). [< ಚಟ್ಟು]

**ಸೆಟ್ಟೆ** (ನಾ). ೧. ಮೆಕ್ಕಲುಮಣ್ಣು; ಗೊಬ್ಬರ: ನಮ್ಮ ಗದ್ದೆಗಳಿಗೆ ನಾವು ಸೆಟ್ಟೆಹೊತ್ತರೆ ಅವಮಾನವೇನಿಲ್ಲ (ಸ್ವಪ್ನಹೊ.೧೫೪); ಸೆಟ್ಟೆಗಳನ್ನು ಹೊತ್ತು ತಂದು . . . ಮಡಿಗದ್ದೆಗಳಿಗೆ ಹಾಕಬಹುದು (ಮರಮ. ೧೨). ೨. (ಆಲಂ) ವ್ಯರ್ಥವಾದ ಮಾತು: ಕೊಬ್ಬುಮಾತಿನ ಸೆಟ್ಟೆ ಸಾಕು ನಿಲ್ಲಿಸು (ಕೋಟಿಚನ್ನ. ೧೦೨).
[ದೇ. II ತಮಿ. ಚೆಟ್ಟೈ; ಮಲ. ಚಟ್ಟ; ತುಳು. ಸದ; ತೆಲು. ಚಟ್ಟ]

**ಸೆಟ್ಟಿತ್ತಿ** 'ಸೆಟ್ಟಿತ್ತಿ' ನೋ.

**ಸೆಡಕು** (ನಾ). ೧. ಸೆಟೆದುಕೊಂಡುದು; ಸೆಟೆದಿರುವುದು: ಸೆಡಕಾದ ಕಾಲವಳು ಮುಖವಿಕಾರತೆಯವಳು (ವೀಶೈಪು. ೪-೨೩-೩೪). ೨. ಗರ್ವ; ಅಹಂಕಾರ; ಜಂಭ: ಜನ್ನಕ್ಕೆಡರಂ ತರ್ಪೊಂದು ಸೆಡಕಿಂ ದುಡುಕಿಂ ಪೋಪ ಹಯಮಂ (ರಾಮಾಶ್ವ. ೯೧-೧೫); ಭಿಕ್ಷಾನ್ನದ ಹುಡುಗನಿಗೂ ಎಷ್ಟೊಂದು ಸೆಡಕು (ಧರ್ಮಶ್ರೀ.೩೭). ೨. ಮುನಿಸು; ಕೋಪ: ಬಿಡೆಯ ಮಾಯೆಯ ಸೆಡಕಿನೊಳು ಸಿಲುಕಿ (ಮದೇಪು.೨೭-೪); ಎಂದಿಗೂ ಮಾಡೋನಲ್ಲ ಎಂದು ಸೆಡಕಾಗಿ ಹೇಳಿದಳು (ಮುನಿಮಾ. ೨೦೧); ಕಿಡಿಗಣ್ಣಳಂ ತೂರಿ ಹಸಿವಿನಿಂ ಬರ್ಪ ಸೆಡಕ ಕಂಡಳ್ಕಿದುವು (ಕಾಲೂರ. ೧೫೭-೬೬೭). [ಸೆಡೆ₁ + - ಕು]

**ಸೆಡಕುಗಾತಿ** (ನಾ). ಸೊಕ್ಕಿನವಳು; ಗರ್ವಿಷ್ಠೆ: ಸೆಡಕುಗಾತಿಯಾದ ಈ ಐಶ್ವರ್ಯವಂತಳ ಮನೆಯಿಂದ ಇವಳಿಗೆ ಔತಣ ಬಂತು (ನೀತಿಚಿಂ. ೧೪). [ಸೆಡಕು + - ಕಾತಿ₅]

**ಸೆಡಕುಗಾರ್ತಿ** (ನಾ). = ಸೆಡಕುಗಾತಿ: ಮಿಡುಕಿನ ಸೆಡಕುಗಾರ್ತಿ (ರಾಮಾಶ್ವ.೧೧೩-೨).
[ಸೆಡಕು + - ಕಾಱ + - ತಿ₁ ( <- ಇತ್ತಿ)]

**ಸೆಡಕುನೋಟ** (ನಾ). ಬಿಂಕದ ನೋಟ; ಓರೆದೃಷ್ಟಿ: ಕಣ್ಣುಮಾಡುವ ಮಧುರೆ ಹೆಂಗಳ ಸೆಡಕುನೋಟವ ಸೊಕ್ಕಿಸಿ (ಗೋಕುನಿ.೪೬-೧೭). [ಸೆಡಕು + ನೋಟ]

**ಸೆಡಕುವಗ್ಗ** (ನಾ). ಅಲಂಕಾರದ ಹಗ್ಗ; ಕುಚ್ಚುಗಳಿರುವ ಹಗ್ಗ (?): ಸಿಡಿಲುವಕ್ಕಿಗೆ ಜವಿಯ ಬಲೆಯೆ ಮದ್ದಾನೆಗಂ ಸೆಡಕುವಗ್ಗವೆ . . . ಸಿಂಹಕ್ಕೆ ಸಿಡಿಯ (ನಂದಮಾ.೯-೬೫). [ಸೆಡಕು? + ಹಗ್ಗ (< ಪಗ್ಗ)]

**ಸೆಡಪು** (ಕ್ರಿ). ಸೆಡೆದುಕೊಳ್ಳು; ಮುದುರಿಕೊಳ್ಳು: ಮೆಯ್ ಸೆಡಪಿ, ನೆತ್ತರ್ ಕುಳಿರ್ವ ಕಟ್ಟೆಸಕಕ್ಕೆ ನೀನ್ ಬೆಂಕೆಯರ್ದಯಯ್ (ಅಂತಿಗೂ.೪-೭೩). [ಸೆಡೆ₁ + - ಪು₁]

**ಸೆಡವು** (ನಾ). ೧. ಗರ್ವ; ಅಹಂಕಾರ: ಬಳಿಕ್ಕೆಡವಲದೊಳುರುಬುವಹಿತರ ಸೆಡವಂ ಮುರಿದಾ ಧರಿತ್ರಿಯಂ ಸಾಧಿಸಿದಂ (ಕಳನ್ನ.೩-೮೬); ಆನಂದನೂ ಅಷ್ಟೇ ಸೆಡವಿನಲ್ಲಿ ಹೇಳಿದ (ಮರಳ. ೭೭). ೨. ಬಿಗಿ; ಬಿಗುವು: ರಾಯಪ್ಪನ ದೇಹದ ಈ ಸೆಡವು ಹೇಗೆ ಸಾಧ್ಯ (ಬಳಭಾ.೯೬). ೩. ಮುನಿಸು; ಕೋಪ: ಸೆಡವು ಬಂದರೆ ಸುತ್ತಿ ಬೀಸುವ ಪ್ರಭಂಜನ! (ನೆಲಮು.೫-೨೨); ಸೆಡವು ಬಂದು ಹೊರಟುಹೋದ ಊರ್ವಶಿ ಶಾಪಗ್ರಸ್ತಲತಿಕೆಯಾಗಿ (ಗಾಳಿಪ. ೯). ೪. ತಂಟೆ; ಹಟಮಾರಿತನ: ಸಿಟ್ಟೆಷ್ಟೊ ಸೆಡವೆಷ್ಟೊ (ಸಖೀಗೀ. ೧೧-೯); ಅಕ್ಕರತೆಯಿಂದ ಬೆಳೆಸಿದರೆ ಅದಕ್ಕೆ ಪ್ರತಿಫಲವಾಗಿ ಈ ಸೊಕ್ಕು – ಈ ಸೆಡವು (ಜನನಾ. ೪೯). ೫. ಬಿಗುಮಾನ; ಬಿಂಕ: ಏನು ಆ ಹುಡುಗಿಯ ಸೆಡವು (ಪುಟಸ.೫); ಗಂಗಾಸಾನಿಯ ಮಾತಿನ ಸೆಡವು ಹೆಚ್ಚಿತು (ಗಂಗಾಸಾ. ೧೪೦). [ಸೆಡೆ₁ + - ವು]

**ಸೆಡಹು** (ನಾ). ೧. ಗರ್ವ; ಅಹಂಕಾರ: ಸೆಡಹಿಂಗೆ ಕತ್ತರಿ ತುಱುಬಿಂಗೆ ಬೆಳೆದುದಕ್ಕೆ ಕೊಱಗುರಳ (ಸರ್ವವ.೧೨೫-೬೩೭). ೨. ಬಿಗುಹು; ಬಲ್ಮೆ: ತರುಣಿಯರ ಗುರುಕುಚಂಗಳೊಳು ಸೆಡಹುಂಟು (ಸೌಂದಪು.೨-೭); ನೀವು ತಪದ ಸೆಡಹಿನೊಳು ಮನಶ್ಶಾಂತಿಯ್ಕೆದದೆ ಇರಲು (ಪ್ರಭುಪು.೮-೧೮೯). [ಸೆಡೆ₁ + - ಹು₂ (<- ಪು₂)]

**ಸೆಡು** (ಕ್ರಿ). ಬಟ್ಟೆ ಮೊದಲಾದುವನ್ನು ಹೊಲಿ; ಹೊಲಿಗೆಹಾಕು: "ಸೆಡು — ಸ್ಯೂತೇ, (ಹೊಲಿ, ಪೋಣಿಸು)" (ಶಮಧಾ).

**ಸೆಟ್ಟೆಲೆ** = ಕಡ್ಡಿಯನ್ನು ಚುಚ್ಚಿ ಜೋಡಿಸಿದ ಎಲೆ; ಹಚ್ಚಿದ ಎಲೆ: ಲಕ್ಷ್ಮಣಂ ನೆರೆಯೊಳೊಟ್ಟುವರ್ಬಿಯ ನೀರಂ ಸೆಟ್ಟೆಲೆಯೊಳ್ ತಂದು (ರಾಮಾಶ್ವ.೬೫-೯). [?]

**ಸೆಡೆ₁, ಸೆಟೆ₁** (ಕ್ರಿ). ೧. ದಪ್ಪಗಾಗು; ಸ್ಥೂಲವಾಗು: "ಸೆಡ-ಆಸ್ಥೌಲ್ಯೇ, (ಹೆಚ್ಚು), ರಸಧಾನ್ಯಾಕರ್ಷಣ ಪಾತ್ರೇ ಚ" (ಶಮಧಾ). ೨. ಗರ್ವಿಸು; ಅಹಂಕರಿಸು: ದೀಕ್ಷೆಗೊಂಡೀಗಳ್ . . . ಸೆಡೆದು ಬಂದೊಡೆ (ಸುಕುಮಾ. ೧೨-೫೭ ವ); ನೀನುಂ ವಿಕ್ರಾಂತದಿಂದಂ ನನೆಯ ಸೆಡೆದು ನಿಂದಿರ್ಪುದಲ್ಲು (ನೇಮಿಪು. ೧೨-೧೭೩); ಕುಡಲು ಬಲ್ಲಿದನೆಂದು ಸೆಡೆದು ಬಂದವನೊಳು ನಡೆದು ಯುದ್ಧಮನೊಡರಿಸಲು (ಅಂಜಚ. ೬-೨೦೦). ೩. ನಿಗುರು; ನೆಟ್ಟಗಾಗು: ಅಯ್ಯೋ! ಕಿವಿಯಲ್ಲಿ ಕೇಳಲಾರೆನಲ್ಲ! ಎಂದು ಸರೋಜ ಸೆಡೆತು ನಿಂತುಬಿಟ್ಟಳು (ಮಹಾಗ. ೨೭೦); ಅತಿ ಸೆಡೆತು ಮಣೆಯವಾ ಏರ್ದೆಗಳ್ (ಅಂತಿಗೂ. ೨೨-೪೫೭); ಒಂದು ನಾಗರಹಾವು ಹೆಡೆಯೆತ್ತಿದೆ . . . ಕಾಲಯಮನ ಬಲ್ಲಿನಂತೆ ಸೆಡೆದು ನಿಂತಿದೆ! (ಸುವಸಂ. ೧೭). **ಸೆಟೆ₁**: ೨. ತಲೆ ದಿಮ್ಮು ಇಳಿಸೀತು ಸುಮ್ಮನೇ ನೀ ಸೆಟೆದರೆ ತಾಗಿ ಎಲ್ಲೋ ಕ್ಷುದ್ರತ್ವಾಗಿ (ಅರಳು. ೪೧೪). ೪. ನಿಗುರಿಸು: ಕಟೀಲು ಕುಳಿತಲ್ಲಿಂದಲೇ ಕೈ ಸೆಟೆದಳು (ರಕ್ತರೂ. ೮೦).

**ಸೆಟೆಸೆಟೆ** (ದ್ವಿರುಕ್ತಿ): ಸೆಟೆಸೆಟೆದು ನೀ ಹೋಗಿ ಅಡ್ಡಬೀಳುವೆ (ಕನ್ನಜಾ.೫೭).

**ಸೆಟೆದುಕೊಳ್ಳು** = ೧. ನೆಟ್ಟಗಾಗಿರು; ನಿಗುರು: ಅವರು ಎಂದಿಗಿಂತ ಇನ್ನೂ ಹೆಚ್ಚು ಧೈರ್ಯವಾಗಿ ಸೆಟೆದುಕೊಂಡು ನಡೆಯುತ್ತಾರೆ (ಬಂಕಿಮ.೧೫೪); ತನ್ನಷ್ಟಕ್ಕೆ ತಾನೇ ಮೈ ಸೆಟೆದುಕೊಂಡಿತು (ರೂಪಸ. ೨೭). ೨. (ಕೋಪ, ಅಸಮಾಧಾನಗಳಿಂದ) ಬೀಗಿರು; ಗಂಭೀರವಾಗಿರು: ಸೂಸೈಟ ಇನ್‌ಸ್ಪೆಕ್ಟರು ಸೆಟೆದುಕೊಂಡೇ ಹೇಳಿದರು (ಮರಳ. ೧೧೧); ಮಧ್ಯಾಹ್ನ ಸಿಕ್ಕಿದಾಗ ಅವನು ಯಾಕೋ ಮತ್ತೆ ಸೆಟೆದುಕೊಂಡಿದ್ದ (ಅಲಹೂ. ೫೫).

**ಸೆಟೆದು ನಿಲ್ಲು** = ಪ್ರತಿಭಟಿಸಿ ನಿಲ್ಲು; ಎದುರಿಸು: ಮೃತ್ಯುವಿನ ಎದುರಲಿ ಸೆಟೆದು ನಿಂತಿರೋ ಆಸಾಮಿಯನ ಇದುವರೆಗೆ ನೋಡಲೇ ಇಲ್ಲ (ವೀರಯೋ. ೧೨); ಇಂಥ ಯತ್ನಶೀಲನಿಗೆ ಪ್ರತಿಭೆ ಬಹುಕಾಲ ಸೆಟೆದು ನಿಲ್ಲದು (ಕಾವ್ಯಕು. ೧೬).

**ಸೆಟೆದು ನುಡಿ** = ಕೋಪದಿಂದ ಮಾತನಾಡು; ಬೀಗಿಕೊಂಡು ಹೇಳು: ಕೊತವಾಲನು ಗರ್ವದಿಂದ ಸೆಟೆದು ನುಡಿದ (ಕೊತಕಾ. ೫೫); ನನಗಂತೂ ಇವರೊಡನೆ ಬಾಳ್ವೆಮಾಡಿ ಸಾಕಾಗಿದೆ ಎಂದು ಸೆಟೆದು ನುಡಿದಳು (ಕುಡಿಕೂ. ೫೦).

**ಸೆಡೆ₂, ಸೆಟೆ₂** (ಕ್ರಿ). ೧. ಕುಗ್ಗು; ವಕ್ರವಾಗು: ಒಡೆಯಲಜಾಂಡ ಕೆಡೆಯ ಕುಲಗಿರಿಗಳು

ಸೆಡೆಯೆ ದಿಶಾದಂತಿಗಳು (ಕುರಾಸಾಂ. ೪೧-೭೦); ಪಾದಘಟ್ಟಣೆಗೆ ನೆಲನೊಡೆಯೆ ಫಣಿಗಳ್ ಸೆಡೆಯೆ (ಚೆಬಪು. ೧೭-೧೪); ಕಣ್ಣೋಟಂ ಕುಡಿವರಿಯೆ ಕುಡಿವುರ್ಬು ಸೆಡೆಯೆ (ರಾಮಾಶ್ವ. ೭೩-೯). ೨. ಸಂಕೋಚಗೊಳ್ಳು; ಮುದುಡು: ಸೆಜ್ಜೆಯನೇಱೆ ಸೆಡೆದಿರ್ದ ನಲ್ಲಳಂ ನೋಡಿ (ಪಂಪಭಾ. ೩-೮೧ ವ); ಉನ್ನತಿಕೆಯನು ಕಂಡು ನಾಚಿ ಸಿಗ್ಗಾಗಿ ಸೆಡೆದು ಮರನಾಯ್ತು ಚಂದನಂ (ಹಚಕಾ. ೧-೪೩). ೩. ನಡುಗು; ಅದುರು: ಭುಗಿಲೆಂಬ ರಭಸಕಂಬರತಳಂ ಸೆಡೆವುತಿರೆ (ವೀರರ. ಹ. ೪೯೧-೪); ಪೊಡವೀಶಬ್ಬೀರ್ತಿಯಿಂದಂ ಸೆಡೆವರಡಗುವರ್ಕ್ಕೋಡುವರ್ಕೊಂಕಿ ಬಿಂಕಂಗೆಡುವರ್ (ಎಕ. XI. ಚಿತ್ರದು. ೨-೮; 1355). ೪. ಬಳುಕು; ತೊನೆ: ಸೆಡೆವ ನಡೆ ತೊಡೆಯ ತಡೆಗಾಲ್ . . . ಸೊಗಯಿಸಿತ್ತು ಪಂಕಜಮುಖಿಯೊಳ್ (ಗಿರಿಕ. ೩-೨೨); ಘನನಿತಂಬಂ ಜಡಿಯೆ ತನುಮಧ್ಯಮದು ಸೆಡೆಯೆ (ರಾಜಶೇ. ೨-೧೧೭ ವ). ೫. ಹೆದರು; ಭಯಪಡು: "ಸೆಡೆದನೆಂದುಂ . . . ತೆಮರ್ತನೆಂದುಂ — ಈ ೮ ಭಯಂಗೊಂಡವಂ"(ಕಶಸಾ. ೫೬-೨೨೫); ಎನ್ನ ದೋರ್ವಳದಳವಿಂಗಮಿಂ ಸೆಡೆದಿರಲ್ ದೊರೆಯಲ್ತೆನಗೆಂದು (ಪಂಪಭಾ. ೧೧-೧೪೯); ಶ್ರೀವಿಷ್ಣುಭೂಪಾಳನಾರ್ದ್ದೆಬ್ಬಟ್ಟಲ್ ಸೆಡೆದೋಡಿ ಪೋಗಿ (ಎಕ. VI, ಕಡೂರು. ೧೬-೩೦; 1171); ಸರಳಿನುಬ್ಬೆಗೆ ಸೆಡೆದು ಸಮರಕೆ ತಿರುಗಿ ನಿಂದುದು (ಕುವ್ಯಾಅ. ೨೦-೨೧). ೬. ಹಿಂಜರಿ; ಹಿಮ್ಮೆಟ್ಟು: ಸಂಸಾರಂ ಶಾಶ್ವತಮಲ್ಲಂ ಸೆಡೆಯದೆ ತಪದೊಳಾದ ಕಡುಚೆಲ್ವಿಂದಂ ತಾಂ ಸಂದಘುಮಂ ಹರಿಸಿ (ಧರ್ಮಾಮೃ. ೬-೩೨). ಸೆಟೆ$_{2}$: ೧. ಛಳಿಯಿಂದ ಸೆಟೆದ ನವಿಲುಗಳ ಕೊರಗಿನ ಕೂಗು (ಮುರುಕು. ೧). ೩. ಸುಳಿಗಾಳಿ ಅವರನ್ನು ಸೆಟೆಯುವಂತೆ ಮಾಡುತ್ತಲಿದ್ದಿತು (ಕೃತಕೃ. ೨).

[ದೇ. ‖ ತಮಿ. ಮಲ. ಚಿಱುಗು; ತೆಲು. ತೆಟುಕು]

**ಸೆಡೆ$_{3}$** (ನಾ). ಧಾನ್ಯ ಅಥವಾ ದ್ರವವನ್ನು ಅಳೆಯುವ ಸಾಧನ; ಅಳತೆಪಾತ್ರೆ: ಬಡಗಳಲುವೊಂದೊಂದು ಸೆಡೆ ಹಸುಬೆಗೆ ಹತ್ತಡಕೆ ತೆಂಗಿನಕಾಯೊಂದು . . . ಧಾರಾಪೂರ್ವ್ವಕಮ್ಮಾಡಿಕೊಟ್ಟರು (ಎಕ. XV, ಬೇಲೂರು. ೩೩೫-೬; 1138); ತೆಲಿಗರು ಸೆಡೆಯಂ ಬಿಟ್ಟರು ನಖರ ಸೆಡೆಯಂ ಬಿಟ್ಟರು (ಎಕ. V, ಬೇಲೂರು. ೧೭೬-೨೮; 1162).

**ಸೆಡೆ$_{4}$** 'ಸೆಳೆ$_{4}$' ನೋ.

**ಸೆಡೆ$_{5}$**, ಸೇಡೆ (ನಾ). ಭಾಗ; ಸೀಳು: ಒಂದು ಸೆಡೆ ಹಲಸಿನ ಹಣ್ಣಿನಲ್ಲಿ ಮೂರೇ ತೊಳೆಯಿದ್ದವು (ರೂಢಿ). **ಸೇಡೆ:** ಭಾಗಮಾಡಿದ್ದ ಹಲಸಿನ ಕಡಿಗಳನ್ನೂ ಸೇಡೆಗಳಾಗಿ ಕತ್ತರಿಸಿ (ಬಾಳಿವೃ. ೨೧೪); ಒಗೆದಿದ್ದ ಹಲಸಿನ ಸೇಡೆಗಳು (ಪ್ರಶ್ನೆ. ೩೫). [<— ಮರಾ. ಶೇಡ್]

**ಸೆಡೆ$_{6}$** (ನಾ). ಒಂದು ಬಗೆಯ ಮರ: "ಓಡೆಯನೆ ಸೆ[ಪಾಠಾಂ. ಸ]ಡೆಯಕ್ಕು" (ಮಂಗರಾ. ೪೦-೩೨); ಬಾಳೆ ಚಳ್ಳಿಪ್ಪೆಯರುಟಾಳ ಸೆಡೆ ಗೇರಾಲ ತಾರೆ . . . ಹೊನ್ನೆಯಿಂದಾ ಬನಂ ಕಣ್ಗೆಸೆದುದು (ನಂದಿಮಾ. ೩-೧೮). [?]

**ಸೆಡೆಪು** (ನಾ). ನಡುಗುವಿಕೆ; ಕಂಪನ: "ತೊನೆ, ಒಲೆ, ತೂಗು, ಸೆಡೆಪು [ಪಾಠಾಂ. ಕೆಡಪು], ಅಲ್ಲಾಡು, ನಡುಕಂ — ಈ ೬ ಕಂಪನಂ" (ಕಶಸಾ. ೭೨-೬೫೦).

[ಸೆಡೆ$_{2}$ + - ಪು$_{1}$]

**ಸೆಡೆಮೂಗು** (ನಾ). ದಪ್ಪಮೂಗು: ಗುಟಿಗಣ್ ಕೆಲರ್ಗೆ, ಸೆಡೆಮೂಗು ಕೆಲರ್ಗೆ, ಪಲರ್ಗೆ ಬರಿದಲೆ (ಅದ್ಭುತ. ೨೫-೨೬). [ಸೆಡೆ$_{1}$ + ಮೂಗು]

**ಸೆಡೆವಿಡು** (ಕ್ರಿ). ವಕ್ರತೆಯನ್ನು ಬಿಡು; ನೆಟ್ಟಗಾಗು: ಅಂಗಜದೇವನ ವಾಮಹಸ್ತದೊಳಿಪ್ಪ ಸಿಂಗಾಡಿ ಸೆಡೆವಿಡಲೊಡನೆ ತುಂಗಕಜ್ಜಲವ ಲೇಪಿಸಿದಂತೆ ಕಾಶ್ಮೀರ ಮಂಗಳತಿಲಕವಿಕ್ಕಿದರು (ಮೋಹತ. ೨೩-೩೨). [ಸೆಡೆ$_{2}$ + ಬಿಡು$_{1}$]

**ಸೆಡ್ಡು$_{1}$** (ಕ್ರಿ). (ಉಕ) ಕುಡಿ; ಹೀರು; ಪಾನಮಾಡು: ಹಿಟ್ಟುಮುಕ್ಕುವುದು, ತಂಬಿಗೆರಡು ತಂಬಿಗೆ ನೀರು ಸೆಡ್ಡುವುದು (ಸಪುಜೀ. ೬೭); ಅರ್ಧರ್ಧ ತಂಬಿಗೆ ಹಾಲು ಸೆಡ್ಡಿ ಮತ್ತೆ ಹರಟೆಗೆ ತಯಾರಾದರು (ದೀಪಹ. II, ೧೧೫); ಬರೆ ಚಹಾ ಸೆಡ್ಡಿ ಮೋಜು ನೋಡಲಿಕ್ಕೆ ಬರತೀವಿ ಅಂತ ತಿಳದಾರೇನು? (ವೃನಿ. ೨೩೩). [< ಸೇದು$_{1}$?]

**ಸೆಡ್ಡು$_{2}$** 'ಸಡ್ಡು$_{1}$' ನೋ.

**ಸೆಡ್ಡುಹೊಡೆ** 'ಸಡ್ಡುಹೊಡೆ' ನೋ.

**ಸೆಡ್ಡೆ** 'ಸಡ್ಡೆ$_{2}$' ನೋ.

**ಸೆಣಂಬು** 'ಸಣಂಬು' ನೋ.

**ಸೆಣಬು** 'ಸಣಂಬು' ನೋ.

**ಸೆಣಸಾಟ** (ನಾ). ೧. ಸ್ಪರ್ಧೆ; ಮೇಲಾಟ; ಪೈಪೋಟಿ: ಬುದ್ಧಿಯ ಸೆಣಸಾಟ ಮೇಲುಗೈ ಆಗಿ ವಾಸ್ತವಿಕ ನಿಲವಿನಿಂದ ದೂರಸರಿಯುವರು (ದ್ರಾವಿವಿ. ೭೬); ಹುಲೀ ಕೂಡ ನರಿಗೆ ಸೆಣಸಾಟವೇ? (ಗಾದ). ೨. ಹೋರಾಟ; ಜಗಳ: ಸೆಣಸಾಟವನ್ನು ಮಾಡಿಕೊಳುತ್ತಲಾಗ ಕೋಪಿಸಿಕೊಂಡು ನುಡಿದಳು (ತುರಂಗ. ೮-೨೨); ಹೆಜ್ಜೆ ಹೆಜ್ಜೆಗೂ ತಮ್ಮ ಸೆಣಸಾಟವನ್ನು ನಡೆಸಿದ್ದವು (ಕಮನ. ೨೨). [ಸೆಣಸು$_{1}$ + ಆಟ]

**ಸೆಣಸಾಡು** (ಕ್ರಿ). ೧. ಸ್ಪರ್ಧೆಮಾಡು; ಪೈಪೋಟಿಮಾಡು: ಕಡಲೊಡನೆ ಸೆಣಸಾಡಿ ಮೀನಿನ ರಾಶಿಯನ್ನೇ ದಿನ ಸಂಜೆ ಮನೆಗೆ ತರುತ್ತಿದ್ದರು (ಮುಂಗಾಮು. ೭೮). ೨. ಜಗಳವಾಡು; ಕಿತ್ತಾಡು: ಬಿಡುಗಣ್ಣವರ್ ಮಬ್ಬಿಗರ ನೂಂಕಿ ಸೆಣಸಾಡಿ (ಕಾಲೂರ. ೧೪೦-೩೦೬); ಸಾಕಿದ ದನಕರುಗಳು ಒಮ್ಮೊಮ್ಮೆ ಅಡವಿಯ ದನಗಳೊಡನೆ ಸೆಣಸಾಡುವ ಪ್ರಸಂಗಗಳೂ ಬರುತ್ತಿದ್ದವು (ಬಂಗಾಹ. ೧೬). [ಸೆಣಸು$_{1}$ + ಆಡು$_{1}$]

**ಸೆಣಸಿಕೆ** (ನಾ). ಹೋರಾಟ; ಕಾದಾಟ: ತಿರಸ್ಕಾರವು, ಕಟ್ಟಣಕವು, ಸೆಣಸಿಕೆಯು, ಕೊರಚಾಟವು, ಬಯ್ಗಳು (ಚಟ್ಟುಅ. ೧೩-೬). [ಸೆಣಸು$_{2}$ + - ಇಕೆ]

**ಸೆಣಸು$_{1}$**, ಸೆಳಸು$_{1}$ (ಕ್ರಿ). ೧. ಸ್ಪರ್ಧಿಸು; ಪೈಪೋಟಿಮಾಡು: ಇದಱ ದನಿ ಮದವದಲಿಕಲಮೃದುನಿನದದೊಳಂ ಮನೋಜಕಾರ್ಮುಕ ಗುಣನಾದದೊಳಂ ಸೆಣಸುವುದು (ಆದಿಪು. ೭-೨೦); ಬೆಳ್ದಿಂಗಳ ಬೆಳಗುಂ ಕಣ್ಗಳ ಬೆಳಗುಂ ತಮ್ಮೊಳ್ ಸೆಣಸೆ (ನಂಬಿರ. ೧೦-೬೫): ಸುಮುಕ್ತಾಫಲಕೆ ಸೆಣಸುವ ದಂತಪಂಕ್ತಿಗಳ್ (ಕುವ್ಯಾಭೀ. ೩-೭೭); ಸೆಣಸುವುದು ಸುವ್ಯಾಕರಣ ಪರಿಗಣಿತಶಾಸ್ತ್ರಜ್ಞರಲಿ (ತೊರರಾ. ೧-೧೭-೯). ೨. ಕಾದಾಡು; ಹೋರಾಡು: ಅಂತಿರ್ವರುಮೊರ್ವರೊರ್ವರೊಳ್ ಸೆಣಸಿ ಬಹುಪ್ರಯೋಗ ಗದಾಕೌಶಲಮಂ ತೋಱಲ್ (ಪಂಪಭಾ. ೨-೭೨ ವ); ಸೆಣಸುವ ಸಾಹಣಿ ಸರಭಭೇರುಣ್ಡನುಂ (ಸೌಇಇ. XI- I; ೧೦೭-೧೧; 1068); ಮದಗಜವು ಸಿಂಹದೊಳು ಸೆಣಸಿ ಬದುಕುವುದುಂಟೆ (ಪಾಂಡಚ. ೨೮-೧೦). ೩. ಕೋಪಗೊಳ್ಳು; ಸಿಡಿಮಿಡಿಗೊಳ್ಳು: ಭವಿಯ ಸೋಂಕಿದ ಭಕ್ತನಂತೆ ಸೆಣಸುವಳ್ (ಸೌಂದಪು. ೧೫-೧೯); ಬಲ್ಲಿದರೊಡನೆ ಸೆಣಸಿ ಮಾತಾಡಿದರೆ ಅಲ್ಲಿಯೇ ಕೇಡು (ನೀತಿಚಂ. IV, ೧೬). ೪. ಹೊಟ್ಟೆಕಿಚ್ಚು ಪಡು; ಕರುಬು: "ಸೆಣಸು — ಈರ್ಷ್ಯಾಯಾಂ" (ಶಮಧಾ); ತನ್ನಯ ರೂಪಿಂಗೆ ಸೆಣಸುವ ಸತಿಯರ ಬೆನ್ನ ಪಟ್ಟೆಯನೆತ್ತುವಂತೆ (ಮೋಹತ. ೧೬-೩೨). **ಸೆಳಸು$_{1}$:** ೨. ಹೊಳಲ ಹೊಱಶೂಲದಲಿ ರಿಪುಗಳ ಸೆಳಸುವೆನು (ಕುವ್ಯಾಭೀ. ೧-೭); ಪಾರ್ಥಿಯಂ ಬಳಸಿದರ್ಸೆಳಸಿದರು (ಜೈಮಿಭಾ. ೨೨-೩೫).

**ಸೆಣಸು$_{2}$**, ಸೆಳಸು$_{2}$ (ನಾ). ೧. ಸ್ಪರ್ಧೆ; ಮೇಲಾಟ: ಅತಿಶಯವಿಶದ ಕಲಾಪರಿಣತಿಯೊಳ್ ಸೆಣಸಾಗೆ ನೆರೆವವೊಲ್ ಯೌವನದುನ್ನತಿ ನೆರೆಯೆ (ಶಾಂತಿಪು. ೫-೧೪); ಸರಸಿಜಸನ್ನಿಭನಯನೆಯ ಬೆರಳ್ಗೆ ಮನುಮಥ ಸರಳ್ಗೆ ಸೆಣಸಾಗಿ ಸಮಂಬರಲುಂ ನೆಱೆಯದೆ (ಬಂಹರಿ. ೭-೩೫). ೨. ವಿರೋಧ; ಪ್ರತಿಭಟನೆ: ಸೆಣಸ ಮಾಡಿದೆ ದೈವದಲಿ (ಕುವ್ಯಾಗ. ೩-೧೯); ಹರನ ಚಾಪವ ಮುಱಿದು ಗೆಲಿದನ . . . ಅಬ್ಧಿಯ ಬಿಗಿದ ರಾಮನ ಸೆಣಸು ಬೇಡ (ಕೌಶಿರಾ. ೧೮-೩೪); ಸೆಣಸಿಂಗೆ ಸೆಣಸು ಮೂದಲೆಗೆ ಮೂದಲೆ (ಚೆಬಪು. ೪೯-೪೩). ೩. ಕೋಪ; ಸಿಟ್ಟು: "ಕಿಸುಗಣ್ಣು, ಕಿನಿಸು . . . ಸೆಣಸು – ಈ ೮ ಕೋಪಂ" (ಕಶಸಾ. ೬೫-೪೪೬); ಕೆಳಲ್ದು ಜಗಳವಾಡುವ ಸೆಣಸಿಂ ಸಲೆ ಬಯ್ವ [ಪಾಠಾಂ. ಕೆರಳ್ದು ಜಗಳವಾಡುವನುಂ ತಾಂ ಸಲೆ ಬೈಸಿಸಿಕೊಳ್ವಂ] (ಸಮಪ. ೩-೫೬); ಅದೇನೋ ಸಂಕಟ, ಅದೇನೋ ಸೆಣಸು (ಹಸುಹೂ. ೩೮೧). ೪. ಮತ್ಸರ; ಈರ್ಷ್ಯೆ; ಅಸೂಯೆ: ಗಳವರ್ ಪವಣಱಿಯದೆ ಬೆಸಗೊಳೆ ಸೆಣಸಿಂ (ಚಂದ್ರಪು. ೧-೫೭); ಸೆಣಸು ಮಿಗಲೊಳಗೊಳಗೆ ಖತಿಯಲಿ ಕೆಣಕಿ ಬೈದಾಡಿದರು (ಕುವ್ಯಾಕ. ೯ ಸೂಚನ). **ಸೆಳಸು$_{2}$:** ೩. ಬಱಿದೆಯೆನ್ನೊಳು ಸೆಳಸಿದೇಕೆ (ಜೀವಂಚ. ೫-೧೭). [< ಸೆಣಸು$_{1}$]

**ಸೆಣಸುಕಾಱ** (ನಾ). ಹೋರಾಡುವವನು; ಯೋಧ: ಕುಣಿದವಿಬ್ಬರ ಕುದುರೆ ಸಮರಾಂಗಣದ ಸೌರಂಭದ ಸಗಾಢದ ಸೆಣಸುಕಾ[ಪಾಠಾಂ. ಗಾ]ಱರ ಸೂತರೋಜೆಯಲಾಜಿರಂಗದಲಿ (ತೊರರಾ. ೬-೫೦-೩). [ಸೆಣಸು$_{1}$ + - ಕಾಱ]

**ಸೆಣಸುಗ** (ನಾ). ಸ್ಪರ್ಧಿಸುವವನು; ಹುರುಡಿಸುವವನು: "ಸ್ಪರ್ಧಮಾನಃ = ಸೆಣಸುಗಂ"(ಕಾಶಕ್ಕ. ೮೧). ೨. ಕೋಪಿಸುವವನು; ರೇಗುವವನು: ರೋಷ್ಯಾ (ರೋಷ್ಯಾ) = ಸೆಣಸುಗಂ" (ಕಾಶಕ್ಕ. ೫೮). [ಸೆಣಸು$_{1}$ + - ಗ$_{2}$]

**ಸೆಣೆಯ ಹುಲ್ಲು** (ನಾ). ಒಂದು ಬಗೆಯ ಸಸ್ಯ: " ಶ್ರೇಣಿಕಾ - ಸೆಣೆಯ ಹುಲ್ಲು (ಚೇಣೆಯ ಹುಲ್ಲು?)" (ಓಷಧಿ. ೧೭೦). [ ? + ಹುಲ್ಲು (< ಪುಲ್)]

**ಸೆಣೆ$_1$** (ಕ್ರಿ).ಕೋಪಗೊಳ್ಳು; ಸಿಟ್ಟಾಗು: "ಸಣೆ - ಕ್ರೋಧೇ" (ಶಮಧಾ); ಲೋಗರೇನಾನುಮನೊಂದಣಕದಿನೆಂದೊಡೆ ಮನದೊಳ್ ಸೆಣೆಯದಿರೊಳ್ಪಪ ದೊಳರ್ತಿಗುಂದದಿರಿನಿಸುಂ (ಧರ್ಮಾಮೃ. ೫-೧೫೪); ಸೆಣೆಯದಿರು ತಾತ ಗುರುದೇವನಲಿ (ಹಚ್ಚರ. ೬೬-೧೬); ಕಿನಿಸಿನಿಂ ಹಿರಿಯರೇನೋ ತೋರ್ಪರಿನಿತಂ ಮುಡಿಕಟ್ಟಿ ಮೇಣು ಮರ್ದನಲ್ಕೊಬ್ಬನಂ ಸೆಣೆದು ಮುಡಿಪಿಕ್ಕದೇಂ ಬೇಡಮೆಂದನಿನ್ನೊಬ್ಬಂ (ಕಾಲೂರ. ೧೫೪-೩೪೦).

**ಸೆಣೆ$_2$** 'ಸೆಳೆ$_2$' ನೋ.

**ಸೆತ್ತೆ, ಸತ್ತೆ$_1$, ಸದೆ$_3$, ಸೆದೆ** (ನಾ). ೧. ಒಣಗಿದ ಕಸ; ತರಗು: ಊರ ದೇವತೆಗಳನಾರಾಧಿಸಲು ನಿತ್ಯ ನೀರೊಳು ಯಜ್ಞವ ಮಾಡಿದ ತೆರನಂತೆ ಆರನು ಹೊಂದದೆ ಹಾರಿ ಹೋಗುವದ್ಯೆಯ ನೀರಾಡಿ ಸೆತ್ತೆಯ ವಾರೆ ತೋಡಿದಂತೆ (ವಿದಾಕ್ಯ. ೧೦೬-೭). ೨. (ಪ್ರಾಣಿಗಳ) ಗರ್ಭದಲ್ಲಿರುವ ಕೂಸಿನ ಚೀಲ; ಮಾಸು: ಸೆತ್ತೆ ಹೊಟ್ಟೆಯೊಳಗೇ ಉಳಿದು ಹಸು ಸತ್ತಿತು (ರೂಢಿ). ೩. ಪಾಪ; ದೋಷ: ತ್ರಿವಿಧಸೆತ್ತೆಯ ಸರ್ವೇಂದ್ರಿಯ ಬೆಳೆದ ಪಾಂಸೆಯ ಮಱೆಯಲಿ ತಪ್ಪಿಹೋಯಿತ್ತು ಮತ್ಸ್ಯ (ಸರ್ವವ. ೬೦-೩೧೬). **ಸತ್ತೆ$_1$**: ೪. ಪೊದೆ; ಮೆಳೆ: ಗಿಡಗೆಂಡೆಸತ್ತೆ ದಟ್ಟವಾಗಿ ಬೆಳೆದಿದ್ದ . . . ದಾರಿಯ ಮೂಲಕ ಅವಳು ಬರುತ್ತಿದ್ದಳು (ಪುನರು. ೨೭೫). **ಸದೆ$_3$**: ೧. ಹುಲುಕಡ್ಡಿ ಮೊದಲಹ ಕಸವು ಸದೆಯೆಲೆ ಸೊಪ್ಪುಸೊಡಗುವಿನಿಸುವಱಿಸಿ ಕಾಣದೆ (ಬಸವು. ೧೬-೨೨). ೩. ಆ ಸಸಿಯ ಮುಟ್ಟುವ ಸಪ್ತವರ್ಣದ ಸದೆಯನು ಕಳದು (ಸರ್ವವ. ೧೦೬-೫೬೮). ೪. ಆ ಸದೆಯಲ್ಲಿ ಎಲ್ಲಿಯಾದರೂ ಅಡಗಿದ್ದ ಹಾವುಗೀವು ಕಚ್ಚಿತೂ (ಮಲೆಮ. ೮೪೦). ೫. ಅನಗತ್ಯವಾಗಿ ಬೆಳೆದ ಪೈರು; ಕಳೆ: ಕೆಯಿ ಬೆಳೆವಲ್ಲಿ ಸದೆಗೆ ಮುನಿವರಲ್ಲದೆ ಬೆಳೆಗೆ ಮುನಿದವರುಂಟೆ (ಸಕವ ಕ. I, ೧೭೩-೨೭೫); ಅವು ಜಾಗರೂಕತೆಯಿಂದ ಆ ಹುಲ್ಲಿನ ಸುತ್ತಮುತ್ತಲಿನ ಸದೆ ತೆಗೆಯುತ್ತವೆ (ಮತಂಪ. ೫೬). ೬. ಹಿಪ್ಪೆ; ಚರಟ: ಸಿಹಿಗಬ್ಬಿನ ರಸಗೊಂಡಾ ಸದೆಯಂ ಬಿಸುಡುವಂತೆ (ನೀತಿಸಾ. ೨೭೭). **ಸೆದೆ**: ೧. ಗುರುತು ಕಾಣದಂತೆ ಮೇಲೆ ಕಡ್ಡಿಗಳನ್ನು ಹಾಸಿ ಸೊಪ್ಪುಸೆದೆಗಳಿಂದ ಮುಚ್ಚುತ್ತಾರೆ (ಪ್ರವಾ. I, ೩೪೩). ೭. ಗೂದೆ: ಪದೇ ಪದೇ ಮುಕ್ಕರಿಸುವುದರಿಂದ ಆಸನದ ಸೆದೆಯು ಹೊರಗೆ ಹೊರಟುಕೊಳ್ಳುವುದು (ಗ್ರಾಮಾಕ. ೧೬೯).

**ಸದೆಸಟ್ಟು** = ಸೊಪ್ಪುಸದೆ; ಕಸ; ಗೊಬ್ಬರ: ವಾಯವಾಯ್ತುಹಿಪಾಶ ಪದ್ಮಜ ಸಾಯಕವು ಸಱಿಯಾಯ್ತು ಸದೆಸಟ್ಟಾಯಿತನುಜನ ಬಿಣ್ಪು (ತೊರರಾ. ೭-೪೧-೩); ಕಲ್ಕೊರಡು ಸದೆಸಟ್ಟು ಪುಲ್ಕೊರೆಗಳಾಂತವರ್ ನಿಲ್ಕಿದರ್ ಪುರದಗಳನು (ಚೆಬಪು. ೪೨-೨೯). **ಸದೆಸೊಪ್ಪು** = ಸದೆಸಟ್ಟು: ಬಿಗಿದೆವೆಯುದಿರ್ದ ಕಣ್ಗೆ ಕಾಡಿಗೆಯೆಚ್ಚಿ ಸದೆಸೊಪ್ಪನಣಲೊಳಡಸಿ . . . ಮುದುಪಾಱಿರ್ದಳು (ಹಚಕಾ.೪-೨೭).

[ದೇ. ‖ ತಮಿ. ಚೆತ್ತೈ, ಚೆತ್ತಲ್, ಚೆತುಕು; ಮಲ. ಚೆತ್ತ, ಚೆಟ್ಟ; ತುಳು. ಸೆದೆ; ತೆಲು. ಚೆತ್ತ]

**ಸೆದಗೆ** (ನಾ). = ಸೆತ್ತೆ ೧: ಕುಡಿವಾಗಳಮೃತಶರಧಿಯನೆಡೆಸಿಲ್ಕಿರೆ ಸೆದಗೆಯಂತೆ ಕೊರಲೊಳ್ (ವೃಷವಿ. ೩೭-೯೨). [< ಸೆತ್ತೆ]

**ಸೆದೆ** 'ಸೆತ್ತೆ' ನೋ.

**ಸೆನಿಗ** (ನಾ). ಒಂದು ಬಗೆಯ ಸಸ್ಯ: (ಪ್ಮೈಔಗಿ. ೬೩-೧೨೮೮). [?]

**ಸೆಬೆ, ಶಬೆ** (ನಾ). ಒಂದು ಬಗೆಯ ಉರುಳು; ಬೇಟೆಯ ಒಂದು ಸಾಧನ: ಸೆಬೆ ಒಡ್ಡಿ ಕಾಡುಕೋಳಿ, ಚಿಟ್ಟುಕೋಳಿ ಹಿಡಿಯುವುದು (ಮಲೆಮ. ೯೩); ಹೋಗಿ ನೋಡುತ್ತಾರೆ, ಸೆಬೆಗೆ ಹಕ್ಕಿ ಸಿಕ್ಕಿಬಿದ್ದಿದೆ (ಕಾನೂರು. ೬೪). **ಶಬೆ**: ಕೋವಿಯ ಬಿಲ್ಲಿಗೆ ಸಂಪರ್ಕವಿರುವಂತೆ ಮೃಗ ಬರುವ ದಾರಿಗೆ ಅಡ್ಡಲಾಗಿ ಉದ್ದವಾದ ಸೂತ್ರಬಳ್ಳಿಯೊಂದನ್ನು ಕಟ್ಟುತ್ತಾರೆ. ಸೂತ್ರದ ಬಳ್ಳಿಯನ್ನು ಮೃಗ ಎಡವಿದೊಡನೆ ಶಬೆ ಸಿಡಿದು ಬಿಲ್ಲು ತನ್ನಷ್ಟಕ್ಕೆ ತಾನೆ ಅಮುಕುವಂತಾಗುವ ವ್ಯವಸ್ಥೆ ಮಾಡುತ್ತಾರೆ (ಪಂಜಪಂ. ೨೨). [?]

**ಸೆಬೆಯೊಡ್ಡು** (ಕ್ರಿ). (ಹಕ್ಕಿಗಳನ್ನು ಹಿಡಿಯಲು) ಬಲೆ, ಉರುಳು ಮೊದಲಾದುವನ್ನು ಅಳವಡಿಸು: ಗಂಗ ಸೆಬೆಯೊಡ್ಡತೊಡಗಿದನು. ಸೆಬೆಯೊಡ್ಡಿ ಪೂರೈಸಿತೆಂದು ತಿಳಿದು ವಾಸು ಕೈಬಿಟ್ಟಕೂಡಲೆ ಅಕಸ್ಮಾತ್ತಾಗಿ ಕಣೆಯ ಕಡ್ಡಿ ಸಿಡಿಯಿತು (ಕಾನೂರು. ೬೫). [ಸೆಬೆ + ಒಡ್ಡು$_1$]

**ಸೆಬ್ಬಿ, ಸೆಬ್ಬೆ$_1$** (ನಾ). ಒಂದು ನಾಡಿನ ಹೆಸರು: ಸೆಬ್ಬಿ ಮೂವತ್ತನಾಳುತ್ತಂ (ಇಅ. XII, ೨೫೬-೧೪; 971). **ಸೆಬ್ಬೆ$_1$**: ಸ್ವಸ್ತಿಶ್ರೀ ಸೆಬ್ಬೆಣ್ನಾಡ ಮಾಜನ (ಎಕ. X (S), ಮುಳಬಾ. ೧೫೬-೧; 8 ನೆಯ ಶತ). [?]

**ಸೆಬ್ಬೆ$_1$** 'ಸೆಬ್ಬಿ' ನೋ.

**ಸೆಬ್ಬೆ$_2$** 'ಶಬ್ಬಿ' ನೋ.

**ಸೆಮ್ಮು** (ನಾ). ಆಸ್ತಿ; ಸ್ವತ್ತು: ಅಂತಯ್ದು ಸ್ಥಳಂಗಳಾಗಿ ಬೀಚರಸಯ್ಯಂಗಳು ತ(ಂ)ಮ್ಮ ಸೆಮ್ಮಿನ ಒಂದು ವೃತ್ತಿಗೆ ಆ ದಶಕದ ಮಹಾಜನಂಗಳನೊಡಂಬಡಿಸಿ ಹಸುಗೆಯಂ ಧ್ರುವಉಂಡಿಗೆಯಾಗಿ ಹಿಡಿದ ದೋ X ಯ ಗದ್ದೆ ಕಂಬಂ ನೂಱಯಿವತ್ತುಮಂ . . . ಕೊಟ್ಟರು (ಸೌಇ. IX - i, ೨೯೫-೨೫; 1172).

[P ಇದು 'ಸೊಮ್ಮು' ಎಂಬುದರ ಅಪಲಿಖಿತವಿರಬಹುದೆ?]

**ಸೆರಗು$_1$** 'ಸೆಱಂಗು' ನೋ.

**ಸೆರಗು$_2$** (ನಾ). ೧. ಅಪಾಯದಶಂಕೆ; ಭೀತಿ: ಎಮ್ಮರಸರ ನಚ್ಚಿನೆಚ್ಚ ಶರಮಂ ಸೆರಗಿಲ್ಲದೆ ಕೊಂಡು ಬರ್ಪರೇ (ಪಂಪಭಾ. ೮-೧೭); ಸೆರಗುಮಂ ಬೆರಗುಮಂ ಬಗೆಯದೆ ಸದ್ರತ್ನಮಂ ಕೊಳ್ವೆಂ (ಧರ್ಮಾಮೃ. ೭-೭೮); ಭೋಗಂ ನಿರ್ವೇಗಮಂ ಪುಟ್ಟಿಸೆ ಸೆರಗನಣಂ ಪಾರದೆ (ವರ್ಧಮಾ. ೧೦-೫೭); ಸೆರಗುಂ ಬೆರಗಿಲ್ಲದ ವೀರವೆಮ್ಮಬಮ್ಮರ್ಂಗೆ ನಿಜಂ (ಎಕ.XI, ದಾವಣ. ೪೨-೫೯; ಸು. 1162). ೨. ಅಪರಾಧ; ಪಾಪ: ಸೆರಗಕ್ಕುಂ ಮೆಯ್ಗರೆದಾ ನಿರಲೆಂದು ನಿಜಸ್ವರೂಪಮಂ ತೋಱುವುದುಂ (ಪಂರಾಮಾ. ೧೧-೯೨).

**ಸೆರಗಂ ಪಾರು, ಸೆರಗುವಾರು** = ಅಪಾಯವನ್ನು ನಿರೀಕ್ಷಿಸು: ಸೆರಗಂ ಪಾರದೆ ಮತಿ ಮಱೆದಿರದೆ . . . ಖಚರಶ್ರೀಯನುಱಿದನಾ ಜಿನಚಂದ್ರಂ (ಶಾಂತಿಪು. ೭-೬೯); ಸೆರಗುವಾರದೆ ಚಕ್ಕನೆ ಬಿಟ್ಟು ರಾಜ್ಯಮಂ (ಧರ್ಮಾಮೃ. ೧೧-೧೯೭). **ಸೆರಗಂ ಬೆರಗಂ ಪಾರು** = ಅಪಾಯ, ಉಪಾಯಗಳನ್ನು ನಿರೀಕ್ಷಿಸು: ಅಗುರ್ವಿಸುವ ಸೆರಗಂ ಬೆರಗಂ ಪಾರದ ಬಲ್ಸೆಯ ಬಂಟರ ಪೆರ್ವಡೆಯಂ ಜರ್ವಿ ಕೆತ್ತಿಸುತುಂ (ರಾಮಾಶ್ವ. ೯೦-೨೬). **ಸೆರಗಂ ಬೆರಗಂ ಬಗೆ** = ಅಪಾಯ, ಉಪಾಯಗಳನ್ನು ಎಣಿಸು, — ಆಲೋಚಿಸು: ಇಲ್ಲಿ ಸೆರಗಂ ಬೆರಗಂ ಬಗೆಯೆಂ ದ್ವಿಜೋತ್ತಮಾ (ಪಂಪಭಾ ೩-೬); ಸೆರಗಂ ಬೆರಗಂ ಬಗೆಯದೆ . . . ಕರಿಯ ದಂಡೆಯಂ ತೂಂಕಿದವೊಲ್ (ಗದಾಯು. ೨-೨೨); ಸೆರಗಂ ಬೆರಗಂ ಬಗೆಯದೆ ಪುರಮಂ ಪೊಱಮಟ್ಟು (ಪಂರಾಮಾ. ೧೦-೧೯). [ದೇ. ‖ ತೆಲು. ಸೆರಗು]

**ಸೆರಗುವಾಱ್?** (ಕ್ರಿ). (?) : ನರಪತಿ ಬೆನ್ನೊಳಿಟ್ಟೊನಿದಿರಾನ್ತುದು ವೈರಿಸಮೂಹಮಿಲ್ಲಿ ಮಚ್ಚರಿಸುವರೆಲ್ಲರುಂ ಸೆರಗುವಾಟ್ದುಪೊರ್ (ಎಕ. III, ಮಂಡ್ಯ. ೪೧-೧೭; 950).

[P ಇದು 'ಸೆರಗುವಾರ್' ಎಂಬುದರ ಅಪಲಿಖಿತವಿರಬಹುದು]

**ಸೆರಗುಹಿಡಿ** 'ಸೆಱಗುವಿಡಿ' ನೋ.

**ಸೆರಗೊಡ್ಡು** 'ಸೆಱಗೊಡ್ಡು' ನೋ.

**ಸೆರಪು** 'ಸೆಱಪು' ನೋ.

**ಸೆರವಟ್ಟಣೆ** (ನಾ). ಮಲ್ಲಯುದ್ಧದ ಒಂದು ಪಟ್ಟು: ಅಂ ಪಿಡಿದುದೆ ಕತ್ತರಂ ಕರವಳಂ ಸೆರವಟ್ಟಣೆ ಹತ್ತೆ ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದಣುವಟ್ಟೆ ಪಟ್ಟಿಸಂ (ಅನಂಪು. ೨-೨೭). 'ಸಿರಣವಟ್ಟೆ' ಪಠಾ. [?]

**ಸೆರೆ$_1$** (ಕ್ರಿ). ತುರಿ; ಹೆರೆ: ಉಂಡೆಗುಂಬಳಕಾಯ ಮೇಲಣ ಹಸುರ ಕೆತ್ತಿಕೊಂಡು . . . ಬಿತ್ತಮಂ ಸೆ[ಪಾಠಾಂ. ನೆ]ರೆದದಱೊಳಿನಿಸಿಲ್ಲದಂತೆ ತೆಗೆದು (ಸೂಪಶಾ. ೫-೨೩); ತೆಂಗಿನ ಹಣ್ಣುಕಾಯ ಸಣ್ಣನಾಗಿ ಸೆರೆದು ತನಿರಸವ ತೆಗೆದುಕೊಂಡು . . . ಅಣಿಲೆಕಾಯ ಚೂರ್ಣವ ಹಾಕಿ ತೆಗೆದುಕೊಳ್ಳಲು ಸರ್ವಾತಿಸಾರ ಹರ (ವೈದ್ಯಸಾ. I, ೨೧೩). [< ಹೆರೆ$_2$]

**ಸೆರೆ$_2$** 'ಸೇರೆ$_1$' ನೋ.

**ಸೆರೆ$_3$** 'ಸೆಱೆ$_2$' ನೋ.

**ಸೆರೆ$_4$, ಸೆಲೆ$_7$** (ನಾ).೧. ನರ; ರಕ್ತನಾಳ: "ನಾಳೀಪತ್ರಂ, ಸಿರಾ-ಈ ೨ ಸೆರೆ" (ಪಲಾಯು. ೧೨೯-೯೮); ಕೊರಳ ಸೆರೆ ಹಿಗ್ಗಿದವು . . . ಪಾರ್ಥಂಗೆ (ಕುಮ್ಮಾದ್ರೋ. ೮-೭); ಗಂಟಲ ಸೆರೆಗಳುಬ್ಬಿ ಕೇಳುವ ಸಂಕಟ (ಪುರಂದ. ೧-೧೬೪-೨); ಎರಡೂ ಗಂಡಸ್ಥಲಗಳ ಮೇಲಿನ ಸೆರೆಗಳು ಉಬ್ಬಿ ಪಟಪಟನೆ ಹಾರಿಕೊಳ್ಳುತ್ತಿದ್ದವು (ಆಚೋಲೀ. ೯೦). ೨. ಮರ್ಮ; ಆಯ: ಸೆರೆ ನೋಡಿ ಕೀಲು ಹೊಡೆದ (ಒಡ್ಡಉ. ೮೦). **ಸೆಲೆ$_7$**: ೧. ಆಚಾರ್ಯರ ನೆನಪಾಗಿ ದಾಸರ ಕುತ್ತಿಗೆಯ ಸೆಲೆ ಬಿಗಿದುಬಂದಿತು (ರೂಪಸ.೧೬). ೩. ಗ್ರಂಥಿ:

ಧೂಪಹಾಕಿದರೂ ಮೀನಿನ ವಾಸನೆ ಮನೆಯಿಂದ ಹೋಗಿಲ್ಲ. ಅದರ ಹತ್ತಿರಕ್ಕೆ ಹೋದರೆ ಮೂಗಿನ ಸೆಲೆ ಒಡೆದುಹೋಗುತ್ತದೆ (ಶಿವರಾ.೧೮); ದುರ್ನಾತದ ಗಾಳಿ ಅವನ ಮೂಗಿನ ಸೆಲೆಗೇರಿತು (ಪುನರು. ೫೧೫).

**ಸೆರೆಯಂ ಬಿಡಿಸು** = ರಕ್ತನಾಳವನ್ನು ಕತ್ತರಿಸು: ನಡೆ ನಾರಾಚದ ನೋವಿನ ನಡುಕಂ ಪಿರಿದಾಯ್ತು ಸ[ರ್ಪಯೋನಿ]ಯ ಸೆರೆಯಂ ಬಿಡಿಸಿದವೊಲೆಚ್ಚು ಪಾಯ್ದ ತ್ತೊಡನೊಡನೆ ಕದುಷ್ಣಕೃಷ್ಣರುಧಿರಜಲೌಘಂ (ಪಂಪಭಾ. ೧೨-೬೧). **ಸೆರೆಯಂ ಬಿಡು** = **ಸೆರೆಯಂ ಬಿಡಿಸು**: ಅನುಕ್ರಮದಿಂ ಸೆರೆಯಂ ಬಿಡುವುದು ಕುಷ್ಠರೋಗಮಿವಱಿಂ ಕಿಡುಗುಂ (ಲೋಕೋಪ. ೯-೧೧೧). [< ಸಂ. ಶಿರಾ]

**ಸೆರೆ$_6$, ಸೇರೆ$_2$** (ನಾ). ಒಟ್ಟಿಲು; ರಾಶಿ(?): ಅದಱ ತದನನ್ತರ ಕಗ್ಗಲ್ಲ ಸೆರೆಯ ನಿಟ್ಟಱ ಅದಱ ತದನಾನ್ತರ ಕುಂಟೆಯ ತಡಗೋಡ ಮೇಕೆಱೆಯಾಲ (ಸೌಇಇ. IX-i ೪೧-೨೪; 11ನೆಯ ಶತ). **ಸೇರೆ$_2$**: ಅನ್ತು ಬಲೆ ಕೋಲೇರಿಯ ಪಡುವಣದೆಸೆಯ ಕಲ್ಲುಸೇರ (ಸೌಇಇ. IX-i ೪೧-೧೯; 11 ನೆಯ ಶತ). [< ಸರ್ಬಿ]

**ಸೆರೆ$_8$, ಶರೆ** (ನಾ). ಹೆಂಡ; ಮದ್ಯ: ಕಾಮಭಕ್ಷ ಶಹಾಜಾದರು ಹಗಲೆಲ್ಲ ಸೆರೆಯ ಗುಂಗಿನಲ್ಲಿರುತ್ತಾರೆ (ಹಂಸಾ. ೧೩೧); ಸೆರೆಯ ಮಬ್ಬಿನಲ್ಲಿ ಮನುಷ್ಯ ಏನೇನೋ ಒದರಾಡುತ್ತಾನೆ (ಹೊಸಬ. ೧೦); ಮಾಡದಲಿ ಈಗ ಸೆರೆಯ ಬರಿದಾದ ಬಾಟಲಿಗಳು ಅವುಗಳ ಬೂಚುಗಳು ಮಲಗಿವೆ (ಹೂಲಮ. ೨೫). **ಶರೆ**: ತಿರಿಕನನು ಕರತಂದು ಧರಣಿಯ ಚರಿತದೊಳಗಿರಿಸಿದರೆ ಮರ್ಕಟ ಶರೆಯ ಸೇವಿಸಿದಂತೆ ಕುಣಿವರೆ (ಬಿಜ್ಜಪು. ೬೨-೫೪); (ಇಪ್ಪೆ) . . . ಇದರ ಹೂವಿನಿಂದ ಶರೆಯನ್ನು ಮಾಡುವರು (ಕಭಾಗ. ೬೬). [< ಸಂ. ಸುರಾ?]

**ಸೆರೆಗಣ್ಣು** 'ಸೇರೆಗಣ್' ನೋ.

**ಸೆರೆಗತ್ತಿ** (ನಾ). ಹೆರೆಯುವ ಕತ್ತಿ,—ಚೂರಿ: ತೋಡಿ ಗುಂಡಿಯಂ ಮಾಡಿ ಸೆರೆಗತ್ತಿಯೊಳು ಮತ್ತದಱ ದಿಂಡುಮಂ ಪೂರಿಸಿದ ಬಿತ್ತಮಂ ಸೆರೆದದಱೊಳಿನಿಸಿಲ್ಲದಂತೆ ತೆಗೆದು (ಸೂಪಶಾ. ೫-೨೬). [ಸರ್$_1$ + ಕತ್ತಿ]

**ಸೆರೆಗಾಲ್** (ನಾ). ನರಗಳು ಉಬ್ಬಿರುವ ಕಾಲು: ಕರಿಗೂರಡನುಡುವಡರ್ದಿವೆನಿಪ ಸೆರೆಗಾಲ್ಗಳಿಂ ಬಿಡದೆ ಪೊಡೆವಡೆ (ಕಾದಂಉ. ೨೭೦). [ಸರ್$_4$ + ಕಾಲ್$_1$]

**ಸೆರೆಗಾವಲು** (ನಾ). ಸೆರೆಯಾಳುಗಳನ್ನು ಕಾಯುವಿಕೆ: ತಾವು ಆತನಿಗೆ ಸೆರೆಗಾವಲ ಬಂದಿಕಾರರೆಂಬುದನ್ನು ಎಂತೂ ಬಿಟ್ಟುಕುಡದಿರಬೇಕು (ಬಿಟ್ಟಿಅ. ೧೩೬-೧೭).

[ಸರ್$_3$ (< ಸೞ್$_2$) + ಕಾವಲು (< ಕಾವಲ್$_1$)]

**ಸೆರೆಗುಡುಕ** (ನಾ) ಮದ್ಯಪಾನ ಮಾಡುವವನು; ಹೆಂಡಕುಡುಕ: ಸೆರೆಗುಡುಕರ ಪರಿಭಾಷೆ ಸಹ ಅವನಿಗೆ ಪರಿಚಿತವಾಗಿದೆ (ತವಸಿ. ೯೪); ನನ್ನ ತಂದೆ ಸೆರೆಗುಡುಕ (ಆಶ್ರಮ. ೫೮). [ಸರ್$_6$ + ಕುಡುಕ (< ಕುಡಿಕ)]

**ಸೆರೆಗೈ$_1$** 'ಸೆಱೆಗೆಯ್' ನೋ.

**ಸೆರೆಗೈ$_2$** 'ಸೇರೆಗೆಯ್' ನೋ.

**ಸೆರೆಗೈಗಣ್** (ನಾ). ಬೊಗಸೆಗಣ್ಣು; ದೊಡ್ಡಕಣ್ಣು: ಸೆಕ್ಕುಂದುಱುಬಿನ ಸೆರೆಗೈಗಣ್ಗಳ . . . ಪೆಣ್ಮಕ್ಕಳ ತಂಡಂ ನಡೆತಂದುದು (ಜಯಕಾ. ೫-೩೭).

[ಸರ್ಗೈ$_2$ (< ಸೇರೆಗೆಯ್) + ಕಣ್]

**ಸೆರೆತುಂಬು** (ಕ್ರಿ). ಬೊಗಸೆ ಭರ್ತಿಯಾಗು; ಅಂಗೈತುಂಬು: ಬಿದ್ದಕ್ಕಿಗಳ ಸೆರೆತುಂಬಲಾಯ್ತು ತಂದು (ಗುರುಚಾ. ೮-೭೪). [ಸರ್$_2$ (< ಸೇರೆ$_1$) + ತುಂಬು$_1$]

**ಸೆರೆತುಪ್ಪ** 'ಸೆರೆದುಪ್ಪ' ನೋ.

**ಸೆರೆದುಪ್ಪ, ಸೆರೆತುಪ್ಪ** (ನಾ). ಒಂದು ಬೊಗಸೆ ತುಂಬುವಷ್ಟು ತುಪ್ಪ: ಹೀರಯೆಳೆಗಾಯ ಕುಯಿದಾಕ್ಷಣದಿ ತಂದದಱ ಧಾರೆಯಂ ಕೆತ್ತಿ ಸಂಬಳಿಸಿ ಸೆರೆದುಪ್ಪ ಸರೆನೀರು[ಪ್ಪು] ನೀರುಳ್ಳಿ ಕರಿಬೇವು ಕೊತ್ತುಂಬರಿಯನಿಕ್ಕಿ (ಸೂಪಶಾ. ೫-೧). **ಸೆರೆತುಪ್ಪ**: ನೆಲ್ಲಕ್ಕಿ ಅನ್ನ ಸೆರೆತುಪ್ಪ ಉಂಡೋಗ್ರಿ (ಗಾರಪ .೫-೧). [ಸರ್$_2$ (< ಸೇರೆ$_1$) + ತುಪ್ಪ]

**ಸೆರೆದುಱುಗಲ್** (ನಾ). ನರಗಳ ಸಮೂಹ; ರಕ್ತನಾಳಗಳ ಗುಚ್ಛ: ಸೆರದುಱುಗಲ್ಗೆಯ್ಯೆಲ್ಲಮನಿರದಡರೆ ಜರಲ್ಲತಾವಿತಾನದಿನೆತ್ತಂ ಪರಿವೇಷ್ಟಿಸಿರ್ದ ಪರಿಣತ ಸುರತರುವಂ ಪೋಲ್ತು ಸೊಗಯಿಸಿರ್ದಂ ಮುನಿಪಂ (ಕಾದಂಪೂ. ೨೪೩). [ಸರ್$_4$ + ತುಱುಗಲ್]

**ಸೆರೆದೆಗೆ** (ಕ್ರಿ). ನರ ಸೆಳೆದುಕೊಳ್ಳು: ಕೆಮ್ಮನಿಟ್ಟಗೆಗಳಿಂದಿಡಲುಡಿದ ಕಯ್ಗಳಿಂ ಸೆರೆದೆಗೆಯೆ ಸೂಜಿಯಿಂ ಪೊಲ್ದಿರ್ದ ಕಯ್ಗಳಿಂ ಅಱಿಯದಸಗಿದ ರಸಾಯನದ ಸೇವನೆಯಿಂದ (ಕಾದಂಉ. ೨೭೦). [ಸರ್$_4$ + ತೆಗೆ$_1$]

**ಸೆರೆನಾಡು** (ನಾ). ಒಂದು ಪ್ರದೇಶದ ಹೆಸರು: ಅರಸ ಸೆರೆನಾಡೊಳ್ ಬೆಳಚವ್ವಾಡಿಯ ಮಹಾಜನಕ್ಕೆ ನೆಲ್ಲಕ್ಕಿಯ ಬಿಟ್ಟನ್ (ಎಕ. IV, ಗುಂಡ್ಲುಪೇ. ೨೦-೫; 720). [ಸರ್$_7$ + ನಾಡು]

**ಸೆರೆನೆಗೆ** (ಕ್ರಿ). ನರ ಉಬ್ಬು; ರಕ್ತನಾಳ ದಪ್ಪವಾಗು: ಕೆಲಬಲನ ನೋಡಿ ಬೆಚ್ಚುವ ದೃಷ್ಟಿ ಸೆರೆನೆಗೆದ ಗಂಟಲ್. . . ಕೂಡೆ ತೋಱಲು (ಹಚಕಾ. ೬-೫೩). [ಸರ್$_4$ + ನೆಗೆ$_1$]

**ಸೆರೆಬಡಕ** (ನಾ). ಹೆಂಡದ ಗೀಳು ಹಿಡಿದವನು; ಹೆಂಡಗುಡುಕ: ಕರುಣಾವು ಸೆರೆಬಡಕರ ಹೆಂಡರುಮಕ್ಕಳ ಕಣ್ಣೊಳಗಡಗಿಕೊಂಡಿತ್ತು (ಸಾಹಿಸಂ. ೧೭೬).

[ಸರ್$_6$ + -ಬಡಕ$_2$ (< -ಬಡಿಕ$_2$)]

**ಸೆರೆಬಿಗಿ** (ಕ್ರಿ). (ಕೊರಳಿನ) ನರಗಳು ಎಳೆದುಕೊಳ್ಳು,—ಸೇದಿಕೊಳ್ಳು: ಶೋಕಜಲಬಿಂದು ತೆರಳೆ ಸೆರೆಬಿಗಿದು ಗದುಗದಿಸಿ ಬಿಕ್ಕುತೆ ಬಿದ್ದು (ಬಸರ. ೫-೧೯); ಆನಂದಾಶ್ರು ಕಣ್ಗಳೋಳ್ಧಳಧಳನೆ ಸುರಿಯೆ ನುಣ್ಗೊರಳ ಸೆರೆಬಿಗಿಯೆ (ಪದ್ಮರಾ. ೬-೨೮); ದೃಗುಯುಗಳ ನೀರೇಱಿದವು ಸೆರೆಬಿಗಿದು ಹಲುಬಿದನಕಟ (ಕುಮ್ಯಾದ್ಯೊ. ೧೨-೧). [ಸರ್$_4$ + ಬಿಗಿ$_1$]

**ಸೆರೆಬಿಡಿಸು** (ಕ್ರಿ). ಬಂಧನದಿಂದ ಮುಕ್ತಿಗೊಳಿಸು; ಸೆರೆತಪ್ಪಿಸು: ಪಾಪಿಗಳ ಸೆರಬಿಡಿಸಿದ ಶರಣಾಗತವಜ್ರಪಂಜರ ಪರಶಿವನೆ (ಸೌಂದಕಾ. ೩-೨); ಒಲಿದೊಮ್ಮೆ ಸೆರೆಬಿಡಿಸು, ನಿಲದೋಡುವೆನು (ಕವಪು. ೩೩-೩). [ಸರ್$_3$ (< ಸೞ್$_2$) + ಬಿಡಿಸು]

**ಸೆರೆಬಿಡು** (ಕ್ರಿ). ಬಿರುಕುಬಿಡು; ಸೀಳು: ಸಾವಿರಾರು ವರುಷಗಳ ಬಿಸಿಲು ಮಳೆಗಳಿಂದ ಹವೆಯ ಬದಲಾವಣೆಯಿಂದ ಈ ಬಂಡೆಗಳು ಸೆರೆಬಿಟ್ಟುವು (ಬಾಲಪ್ರ. I, ೨೪೯).

[ಸರ್$_7$ + ಬಿಡು$_1$]

**ಸೆರೆಮನೆ** 'ಸೆಱೆವನೆ' ನೋ.

**ಸೆರೆಯಂಗಡಿ** (ನಾ). ಹೆಂಡ ಮಾರುವ ಅಂಗಡಿ; ಪಡಖಾನೆ: ಸೆರೆಯಂಗಡಿಯ ಉನ್ಮತ್ತ ಪರಿವೇಷದಲ್ಲಿ ಪರ್ಣದ್ವೇಷದ ಅಮಾನುಷಚಿತ್ರ ಅವನಿಗೆ ಕಾಣುತ್ತದೆ (ಹೊಸಕ್ಕ.-೨೯೦). [ಸರ್$_6$ + ಅಂಗಡಿ (< ಅಂಗಾಡಿ)]

**ಸೆರೆಯಾಳ್, ಸೆರೆಯಾಳು** (ನಾ). ಬಂಧನಕ್ಕೆ ಸಿಕ್ಕಿದ ವ್ಯಕ್ತಿ; ಬಂದಿ; ಖೈದಿ: ದೇವರು ಸೆರೆಯಾಳ್, ದೇಗುಲ ಸೆರೆಮನೆ, ಕಾವಲು ಪೂಜಾರಿ (ಕೋಗಿಲೆ. ೭೬-೧). **ಸೆರೆಯಾಳು**: ಹೆಣ್ಣಾಗಿ ಹುಟ್ಟಬಾರದು ಹುಟ್ಟಿದರೂ ಗಂಡಿನ ಸೆರೆಯಾಳಾಗಬಾರದು (ಕಾಪೇಂ. ೧೯೪); ಈ ರೋಗವು ತನ್ನ ಸೆರೆಯಾಳಿಗೆ ಇತರರಿಂದ ಸಹಾನುಭೂತಿಯನ್ನು ಆಮಂತ್ರಿಸುತ್ತದೆ (ದೇಕನ್ನ. ೨೫). [ಸರ್$_3$ (< ಸೞ್$_2$) + ಆಳ್$_3$]

**ಸೆರೆಯಾಳು** 'ಸೆರೆಯಾಳ್' ನೋ.

**ಸೆರೆಯಿಂಗು** (ನಾ). ಒಂದು ಬಗೆಯ ಇಂಗು: ಪುರವಿಂಗು . . . ಪಂಚಭಾಗಮೇರಂಡಫಳಂ ದೊರೆಕೊಳೆ ಭಾಗಕ್ಷೀರದೊಳರೆದಾಸವದಿಂದಂ ಪೊರೆಯೆ ಸೆರೆಯಿಂಗಕ್ಕುಂ (ಲೋಕೋಪ. ೭-೭೯). "ಅಡುಗೆಯ ಇಂಗು" (ಲೋಕೋಪ. ಟೀಕೆ).

[ಸರ್$_7$ + ಇಂಗು$_3$]

**ಸೆರೆವಿಡಿ** 'ಸೆಱೆವಿಡಿ' ನೋ.

**ಸೆರೆವಿಡು** (ಕ್ರಿ). ನರವನ್ನು ಕತ್ತರಿಸು: ಉರಗಂ ಕೊಂಡಲ್ಲೀ ನಾಲ್ಕೆರಲನಿತಂ ಕಳೆದು ಕಟ್ಟಿ ಮೇಗಂ ಬೇಗಂ ಸೆರೆವಿಡುಗೆ ಸುಡುಗೆ (ಕಾವ್ಯಾವ. ೨೬೮); ಸುಡುವೊಡಮೆತ್ತಾನುಂ ಸೆರೆವಿಡುವೊಡಮೇಗೆ(ಗಿ)ಟ್ಟುದೆಂದು ನೆಗಟ್ಟುದಯುಕ್ತಂ (ಅಶ್ವಶಾ. ೧೦-೩೦).

[ಸರ್$_4$ + ಬಿಡು$_1$]

**ಸೆರೆವೀಗು** (ಕ್ರಿ). = **ಸೆರೆಬಿಗಿ**: ಘನಸಂಕ್ಲೇಶಕಲಾಪಮೆಯ್ದೆ ಸೆರೆವೀಗಲ್ಕಂತದಿಂ ವಿಹ್ವಲಸ್ವನಮೆಯ್ದಿರ್ದುದು (ಕುಸುಮಾ. ೧-೪೩). [ಸರ್$_4$ + ಬೀಗು$_2$]

**ಸೆರೆಹಿಡಿ** 'ಸೆಱೆವಿಡಿ' ನೋ.

**ಸೆರ್ಕು$_1$, ಸೆಕ್ಕು$_1$** (ಕ್ರಿ). ೧. ಒಳಸೇರಿಸು; ಸಿಕ್ಕಿಸು; ತುರುಕು: "ಸೆರ್ಕು—ವಸ್ತ್ವಾಂತರಪ್ರವೇಶೇ (ಸೆಕ್ಕು)" (ಶಮಧಾ); ನಿಱಿಯಂ ತತ್ಕಾಂಚಿಯೊಳ್ ಸೆರ್ಕಿ . . . ನಿಂದೊಪ್ಪಿದರ್ (ಶಾಂತೀಶ್ವ. ೪-೨೨೧). **ಸೆಕ್ಕು$_1$**: ೧. ಮುಂಜೆಱಗನೊಯ್ಯನೆ ಸೆಕ್ಕಿ (ದಶಕು. ೧೨-೨೭); ಮೊನೆಮುಂಜೆಱಗನಳವಡೆ ಸೆಕ್ಕಿ ಸುತ್ತಿನೊಳಿಱುಕಿ (ಕುಮ್ಯಾದ್ಯೊ. ೧೭-೧೯). ೨. ನೆಡು; ನಾಟು: ಆ ಬಸವನೊಂದು ದಿನಂ ಸೋಮಶರ್ಮನ ಮನೆಯ

ಬಾಗಿಲೊಳ್ಪೊಂದಿರೆ . . . ಪಿಡಿತಂದವಱ ಕೋಡೊಳ್ ಸೆಕ್ಕಲಂದಿನ ದಿನಂ [ಪಾಠಾಂ. ಸಿಕ್ಕೆಲದಿನದಿಂ] ಮೊದಲಾಗಿ (ಪುಣ್ಯಾಸ್ರ. ೩-೭೮ ವ); ಸರಳ ಪುನರಪಿ ಸವರಿ ಸೆಕ್ಕಿದ ನೊಡಲೊಳಂಬುಗಳ (ಕುವ್ಯಾದ್ರೋ. ೧೮-೨೭); ಉರದೊಳಗೆ ಸೆಕ್ಕಿದಂ [ಪಾಠಾಂ. ಸೇರಿಸಿದ] ಸರಳ್ಗಳಂ (ಚಬಪು. ೩೯-೮); ರಾವುತರ ಮೈಯಲಿ ಬಲು ಸುರಗಿಗಳನು ಸೆಕ್ಕಿದರು (ಕಂನವಿ. ೩-೭೮). ೩. ಹೊಂದಿಸು; ಜೋಡಿಸು: ನನೆಯಂಬಂ ಬಿಸುಟಿಕ್ಷುಚಾಪಲತೆಯಂ ಬಾಟ್ಮೊಂಪದೊಳ್ಸೆಕ್ಕಿ (ಅನಂಪು. ೩-೫೧); ತೇರಿಗೆ ಕಾಡುಪೂ ತಂದು ಸೆಕ್ಕಿದರೆ ಚೆನ್ನ (ಪಂಚಾಮ್ಯ. ೧). ೪. ಸಿಕ್ಕಿಕೊಳ್ಳು; ತೊಡರು: ಅಲದ ಬೀಳಲೊಳ್ ಸೆಕ್ಕಿದ ಗಾಲಿಯಂ ತೆಗೆದು (ದಶಕು. ೨-೬೧ ವ). ೫. ಹಿಡಿದೆಳೆ; ಜೀರು: ಜುಣುಗಿದಾಹವ ಸತಿ[ಪಾಠಾಂ. ಸಿರಿ]ಯ ಹಾರದ ಕುಣಿಕೆಯನು ಸೆಕ್ಕುವುದು ಸ್ವಾಮಿಯ ಋಣವ ತಿದ್ದುವುದು (ತೊರರಾ. ೬-೪೫-೪೩).

[ದೇ. ‖ ತಮಿ. ಚೆರುಕು, ಚೊರುಕು; ಮಲ. ಚೆರುತು; ತುಳು. ಚುಚ್ಚು; ತೆಲು. ಚೆಕ್ಕು]

**ಸೆರ್ಕು$_2$, ಸೆಕ್ಕು$_2$** (ನಾ). ಒಳಸೇರುವಿಕೆ; ಕುಗ್ಗುವಿಕೆ: ಎಮ್ಮ ಲವನಂ ಕೊಂಡುಯ್ದವನಂ ಸೊರ್ಕು ಸೆರ್ಕಪ್ಪನೆಗಂ ಬಡಿದು ಪಿಡಿದಸುವೆರಸು ನಿನ್ನಡಿಗೊಪ್ಪಿಸದಿರೆ ನಿನ್ನ ಮುದ್ದಿನ ಕಂದನೆ! (ರಾಮಾಶ್ವ. ೧೫೬-೪). **ಸೆಕ್ಕು$_2$**: ಹೊಕ್ಕುದಾ ಸಮಯದಲಿ ಸುಂಡಿಲ ಸೆಕ್ಕುಗಳ ಖಂಡೆಯದ ಗಜದಳ ಬಿಕ್ಕಲಿಳೆ ಬೆರಸಿದುದು ರಣರಥರಾಜಿ ಲೌಡೆಗಳ (ತೊರರಾ. ೫-೬-೧೩). [< ಸೆರ್ಕು$_1$]

Δ**ಸೆರ್ಕೆ** 'ಸೆಕ್ಕೆ' ನೋ.

**ಸೆಲ** (ನಾ). (?): ತನುವಿನ ಸ್ವಲ್ಪಸುಖಕೆ ಸೆಲ ನುಡಿದಿಂತನುಸಾರಿಯುಹರೆ ಪಾತಕಕೆ (ಜೀವಂಸಾಂ. ೧೪-೫೫); ಸಲೆ ಕನ್ಯಾಭಿಕ್ಷಕೆ ಸೆಲ ನಾವಿಲ್ಲಿಗೊಲಿದಯಿದಿದೆವು (ಜೀವಂಸಾಂ. ೧೬-೩೫); ಉಡೆನೂಲಂ ಘಳಿಲನೆ ಪಱಿವ ಸೆಲಂ ಬೇಡುವ ಭುಜಬಲಶಾಲಿಗಳುಗ್ರತೆಯಿನುಲಿವ ಕಲಕಲಮುಭಯವ್ಯೂಹದ ದೊರೆದೊರೆಗಳ ಬಳಸಿನೊಳುಣ್ಮಿದುದು (ಜಯಕಾ. ೬-೨೭). [?]

**ಸೆಲಂದಿ, ಚೆಲದಿ, ಶಲದಿ$_1$, ಸೆಲದಿ** (ನಾ). ಜೇಡರ ಹುಳು; ಜೇಡ: ಸೆಲಂದಿ ಪೊಸ ನೂಲಿಂ ನೆಯ್ದ ಪೊಂಬಟ್ಟೆಯಂ ತರ್ಕುಂ (ಶಬಶಂ. ೨-೭೩); ತಲ್ಲಿಂಗಾಗ್ರದೊಳ್ಪತ್ತಿ ಮೇಣ್ ಪರಿತರ್ಪೊಂದು ಸೆಲಂದಿಯಂ ಜವದಿನಾಗಳ್ಕಂಡು (ವೃಷವಿ. ೯-೫೭). **ಚೆಲದಿ**: ಆ ಲಿಂಗದ ಮೇಲೆ ಕಸ ಬೀಳದಿರುವಂತೆ ಒಂದು ಚೆಲದಿ ಹುಳುವು ನೂಲಿನಿಂದ ಹಂದರವನ್ನು ನಿರ್ಮಿಸಿತು (ಪುರಾವಿ. ೨೩೩). **ಶಲದಿ$_1$**: ವರಶಲದಿಯಾಗಿ ಶಂಕರಪೂಜೆಗೈದು ಭಾಸುರಗಣನಿಕಾಯದೊಳು ಸಂದ ಕಳಚೆಂಗಪೆರುಮಾಳೆಯೆನಗೆ ಕೃಪೆದೋಱು (ಅಱುಪು. ೪೦); ಶಿವನಿಗೆ ಪುಣ್ಣೆಂದು ಶಲದಿಯ ಮಂತ್ರಿಸಿದವ ನೆಱ ನಕ್ಕನಯನಾಱು (ಮೋಳಿಪು. ೨-೨೧೭); ಲಿಂಗದಂಗಡೊಳು ಶಲದಿಗಳು ವ್ಯಾಪಿಸಲೆನ್ನ ಕಂಗಳೀಕ್ಷಿಸಲಾದವೇ ಶಿವಶಿವಾ (ಮಲ್ಲಚ. ೧೮-೯). **ಸೆಲದಿ** : ಸೆಲದಿಯ ಹೃದಯದಲ್ಲಿಯೇ ನೂಲುಂಟು (ಸರ್ವವ. ೫೦-೨೭೦); ಸೆಲದಿ ಈ ಪರಿಯಲಿ ತ್ರಿಕಾಲದೊಳೊಲಿದು ಭಜಿಸುತಮಿರಲು (ಬಸಪು. ೧೮-೪೦); ಲಿಂಗದಡದಂಗದೊಳ್ ಸೆಲದಿ ತತ್ತಿಯನಿಕ್ಕೆ (ಲಶಿಚಂ. ೩೫-೨೭).

[ದೇ. ‖ ತಮಿ. ಚಲನ್ನಿ; ಮಲ. ಚಿಲನ್ನಿ; ತೆಲು. ಚೆಲಂದಿ, ಚೆಲದಿ, ಚೆಲಿದಿ, ಚೆಲ್ದಿ]

**ಸೆಲಂಬೆ , ಸೆಲಬೆ, ಸೆಲಿಬೆ** (ನಾ). ೧. = ಸೆಲಂದಿ: ತಿಲಸಂಯುಕ್ತಮನಾಗಳೆ . . . ಪೂಸಲೊಡಂ ತಾಂ ತೊಲಗುಗುಮಂತಾಕ್ಷಣದೊಳ್ ಸೆಲಂಬೆ(ದೆ) [ಪಾಠಾಂ. ಶಲಂಬೆ, ಸೀಲಂಬೆ]ಗಳ ವಿಷಕುಲಂ (ಖಮದ. ೧೩-೧೧೮). **ಸೆಲಬೆ** : ೨. ಜೇಡರಹುಳುವಿನ ಬಲೆ: ಕೆಲ ಕಾಯ ಸೆ [ಪಾಠಾಂ. ಸಿ]ಲಬೆಯ ತೆಱದಿ ತೆಳುವಾಗಿ ಕೆತ್ತಿ (ಸೂಪಶಾ. ೨-೩೯). **ಸೆಲಿಬೆ**: ೨. ಮನೆಯ ತುಂಬಾ ಎಲ್ಲೆಲ್ಲೂ ಸೆಲಿಬೆ ಕಟ್ಟಿದೆ (ರೂಢಿ).

[< ಸೆಲಂದಿ./ ತಮಿ. ಚಲಮ್ಬಿ]

**ಸೆಲಗು** (ನಾ). ಶಲಾಕೆಯ ಆಕಾರದ ಬಾಣ (?): ಮನ್ಮಥಂ ಚಿತ್ರಿತಶಾಖಾಲೇಖೆಯೊಳ್ಕೀಲಿಸಿದ ಸೆಲಗಿನಂಬಂ ಗೆಲಲ್ವಾಲ್ವುದಾಗಳ್ (ಮಲ್ಲಿಪು. ೬-೧೧೭); ಕುಸುಮ ಕಾರ್ಮುಕನ ಪೊಡೆಗೆ ಪದವಡಿಸಿ ಕಾಸಿ ಕಂದಿಸಿದ ಸೆಲಗಿನಂಬಿನಲಗುಗಳೆನಿಸಿ ಕಡುಗಂದಿ ಸೂಸಿದ ಪಾಸಿದೆಳೆದಳಿರ್ಗಳುಂ (ವರ್ಧಪು. ೫-೬೩ ವ). [?]

**ಸೆಲದಿ** 'ಸೆಲಂದಿ' ನೋ.

**ಸೆಲದಿನೂಲ್** (ನಾ). ಜೇಡರ ಬಲೆಯ ಎಳೆ: ತವೆ ಸೆಲದಿನೂಲಿಂದಮರ್ಚಿದಭವನ ಮೇಲಣ ಪೂಜೆಯಂ ಕಳೆದು (ಬಸಪು. ೪೩-೩೮). [ಸೆಲದಿ (< ಸೆಲಂದಿ) + ನೂಲ್]

**ಸೆಲದಿಪುಳು** (ನಾ). ಜೇಡರಹುಳು: ಒಲಿದು ಶಿವನಂ ಪೂಜಿಪೆಡೆಯಲಿ ಸೆಲದಿಪುಳುವಾ ಲಿಂಗತನುವಂ ಪರ್ಬುತಿರಲು (ಬಸಪು. ೧೩-೧೯).

[ಸೆಲದಿ (< ಸೆಲಂದಿ) + ಪುಳು (< ಪುೞು)]

**ಸೆಲಬೆ** 'ಸೆಲಂಬೆ' ನೋ.

**ಸೆಲವಿಕ್ಕು** (ಕ್ರಿ). ಅಪ್ಪಣೆಮಾಡು; ಆಜ್ಞೆನೀಡು: ಸುರರೋಡುತಿರೆ ಕಂಡು ಕಾಮಹರನಿರದೊಡನೆ ಹರಗಣಕೆ ಸೆಲವಿಕ್ಕೆ ಮುಂಕೊಂಡರಾಕ್ಷಣದೊಳು (ಚಬಪು. ೨೭-೨೦); ಲಕ್ಕಕುದುರೆಯನೆನ್ನೊಂದೆ ಲೌಡಿಗೆ ಸೆ[ಪಾಠಾಂ. ಶ]ಲವಿಕ್ಕೆಂದು ನೃಪತಿಯೊಳ್ನುಡಿವ ಎಕ್ಕಲರಾವುತ ಪೊಱಮಟ್ಟನು (ಕುರಾಸಾಂ. ೧೧-೬೦). [ಸೆಲವು$_1$ (< ಸಲವು$_2$) + ಇಕ್ಕು]

**ಸೆಲವೀ** (ಕ್ರಿ). ಅನುಮತಿಕೊಡು; ಅಪ್ಪಣೆ ನೀಡು: ಸುಗ್ಗಿಯುಮಾ ತೆಂಗಾಳಿಯುಮಿರ್ವರುಂ ಸಜ್ಜುವಂ ಪಡೆದು ಚೌವಂದದ ದಟಕಂ ಸೆಲವಿತ್ತೊದಗೊಂಡು ಬರೆ (ಕಬ್ಬಿಕಾ. ೧೯೭); ದಿಕ್ಪಾಲಕರ್ ಮುಖ್ಯರಾದ ದೊರೆದೊರೆಗಳಂ ಕರೆದು ಸೆಲವಿತ್ತು ತ್ರಿಪುರಮಂ ಪರಿದೈದಿ ಮುತ್ತಿದೊಳ್ಗೋಂಟೆಯಂ ಕೊಂಬುದೆನೆ (ಚಬಪು. ೪೨-೨೩); ಬಳಿಕನಿಬರೆಲ್ಲರಂ ಕರೆಸಿ ಹಂಸಧ್ವಜಂ ಸೆಲವಿತ್ತು ಫಲುಗುಣನ ತುರಗಮಂ ಪಿಡಿತಂದು (ಜೈಮಿಭಾ. ೧೦-೪೭). [ಸೆಲವು$_1$ (< ಸಲವು$_2$) + ಈ$_2$]

**ಸೆಲವು$_1$** 'ಸಲವು$_2$' ನೋ.

**ಸೆಲವು$_2$** (ನಾ). ಸೆಲೆ; ನೀರು ಒಸರುವಿಕೆ , — ಜಿನುಗುವಿಕೆ: ತುಂಬಿದೊಲುಮೆಯ ಬಾವಿ . . . ಬತ್ತದಿರಬಹುದು ಸೆಲವೇನು? (ಇಂಗೀತ. ೮೩-೧೫). [ಸೆಲೆ$_4$ + - ವು]

**ಸೆಲವುಗೊಳ್** (ಕ್ರಿ). ಅಪ್ಪಣೆ ಪಡೆದುಕೊಳ್ಳು: ಸಲೆ ಬಡಿದು ಪಡೆಗಳಂ ಕೆಡಹುತಿರೆ ನಡೆತಂದು ಸೆಲವುಗೊಂಡೂರ್ಮಿಳಾಕಾಂತನಂ ಪೆಱಗಿಕ್ಕಿ (ಜೈಮಿಭಾ. ೨೦-೫೭).

[ಸೆಲವು$_1$ (< ಸಲವು$_2$) + ಕೊಳ್$_1$]

**ಸೆಲಿಬೆ** 'ಸೆಲಂಬೆ' ನೋ.

**ಸೆಲುವಾರದಮರ** (ನಾ). ಒಂದು ಬಗೆಯ ಮರ: ಸೆಲುವಾರದ ಮರ, ಕರಿಬಸುರಿ (ಮೃಔಗಿ. ೩೭-೭೨೮). [? + ಮರ$_1$]

**ಸೆಲೆ$_1$** (ಕ್ರಿ). ಪ್ರತಿಧ್ವನಿಯಾಗು; ಮರುಧ್ವನಿಯುಂಟಾಗು: ತುಕಾರಾಮ ನಾಮದೇವರಿಲ್ಲಿ ಕುಣಿದ ರಂಗಸಿಲೆಯಿಂ ಸೆಲೆವಲ್ಲಿ ನಿನ್ನ ನಾಮಮೆದೆಯೊತ್ತುವೆನಲ್ಲಿ (ಗೀವಿಂ. ೭೩-೬); ಸೆಲೆಯುವುದು ಹುದುವನೊಳಗೊಂಡು ತಾನೆ ತಿಳಿಯಾಗಿ ಗುಂಭವಾಗಿ (ಹೃದಸ. ೫-೮). [ದೇ. ‖ ತಮಿ. ಚಿಲ್ಮೆ; ಮಲ. ಚಿಲೆ; ತೆಲು. ಚೆಲಾಗು]

**ಸೆಲೆ$_2$** (ಕ್ರಿ). ತೇವದಿಂದ ಚರ್ಮ ಕೊಳೆತಂತಾಗು: ಅವನ ಪಾದ ನೀರಿನಲ್ಲಿ ಇದ್ದೂ ಇದ್ದೂ ಕಾಲೆಲ್ಲ ಸೆಲೆತರೂ . . . ಅವನಿಗೆ ಎಚ್ಚರಿಕೆಯಿರುತ್ತಿರಲಿಲ್ಲ (ಫಲಸಂ. ೧೭). [?]

**ಸೆಲೆ$_3$** (ನಾ). ೧. ಶಬ್ದ; ಧ್ವನಿ: ನಗೆಯಮೃತದ ಜೇಯಾ ಕೇಳ್ನಿರಾಶೆಯಾ ಸೆಲೆಯಾ (ಗೀವಿಂ. ೩೩-೧೨); ಅದರ ತಲೆಯೆ ಕಾಣದೆ! ಅದರ ಸೆಲೆಯೆ ಕೇಳದೆ! (ಪಾರಸಿ. ೨-೨೭). ೨. ಪ್ರತಿಧ್ವನಿ; ಮಾರ್ದನಿ: "ಪ್ರತಿ ಶ್ರುತ್, ಪ್ರತಿಧ್ವಾನಃ - ೨ ಪ್ರತಿಧ್ವನಿಯ ಹೆಸರುಗಳು, ಅಂದರೆ ಶಬ್ದದಿಂದ ಹುಟ್ಟುವ ಸೆಲೆ" (ಸಿದ್ಧಾಂತಿ. ೫೭); ನಿನ್ನಯ ಸೊಲ್ಲ ಸೆಲೆಯಿಂದ ಹಾಡುಲಿಯ ಬಲ್ಲುದೇನೆನ್ನ? (ಗೀವಿಂ. ೨೭-೬.). [< ಸೆಲೆ$_1$]

**ಸೆಲೆ$_4$, ಶಲೆ, ಶೆಲೆ** (ನಾ). ೧.(ನೀರು) ಒಸರುವಿಕೆ; ಜಿನುಗುವಿಕೆ: ಮೂಡಲ್ ಧಾರೆಯತ್ತಲ್ ಬರ್ಪ ಪಚ್ಚನೆ ಸೆಲೆಯಾ ಸೆಲೆಯಿಂ ಬಡಗಲ್ (ಅಟ್ಟಮ. ೧೧-೧೭); ನೀರ ಸೆಲೆ[ಪಾಠಾಂ. ಸಿಲೆ, ಸೆರೆ]ಯಿದಱ ಮೇಲೆ ವಿಚಾರಿಸದೆ ನೃಪೇಂದ್ರ ಶಸ್ತ್ರವಿಕ್ಕಿದಡೆ (ಪುಣ್ಯಾಸ್ರ. ೨-೬೮); ಕಳನೊಳುದಕದ ಸೈವಳೆಯ ಸೆಲೆಯಱಿದು ಚೌಕಕೆ ಸೀಳಿದನು ನೆಲನ (ಕುವ್ಯಾದ್ರೋ. ೧೦-೨೮); ತಲೆಯೊಡೆದು ಬಲು ಸೆಲೆಯಾಗಿ ನೆತ್ತರು ಸೂಸೆ (ಉತ್ತರಾ. ೩೧-೧೦). ೨. ಮೂಲ; ಆಶ್ರಯ: ನಲುಮೆಯಾ ಸೆಲೆಯೆಲ್ಲ ಬತ್ತಿ ಹೋಗೆ (ಏಪಾಸ. ೩೯-೧೯); ಎಂಕು ಅವನ ಪ್ರೋತ್ಸಾಹದ ಸೆಲೆಯಾಗಿದ್ದಳು (ಒಡ್ಡಿಲು. ೧೭); ಅವುಗಳ ಅರ್ಥದ ಸೆಲೆಯನ್ನು ಶೋಧಿಸುವುದಕ್ಕೆ ಈ ಭಾಷೆಯ ಪರಿಜ್ಞಾನವು ಸಹಾಯಕವಾಗುವುದು (ಸಂಶೋಧ.೧೮೨). ೩. ಆಕರ; ಮೂಲ: ಅವರ ಕಾರ್ಯಸಾಹಸಗಳು ಮುಂದಿನವರಿಗೆ . . . ಸೆಲೆಗಳಾದವು (ಪ್ರಬಂಧ.೭೭); ಸಂತಸದ ಸೆಲೆಯ ತಾರ (ಮಾನಸ. ೨೫-೧೨).

೪. ಗುರುತು; ಕುರುಹು: ನಾನಾಗಲಿ ನಮ್ಮ ಹೆಣ್ಣಾಗಲಿ ಅದರ ಸೆಲೆ ಹೇಗೆ ಇದೆಯೋ ಕಾಣೆವು (ಮಾಮರಾ. ೧೦೩); ಅಯ್ಯೊ ದೊರೆಯೆ, ನಾನು ಇವರ ಒಂಟೆಯ ಸೆಲೆಯನ್ನೇ ಕಾಣೆ (ನೀತಿಚಂ. III, ೭). ೫. ಪ್ರವಾಹ; ಝರಿ: ಅಮೃತದ ಸೆಲೆಯಂತೆ ಅವನ ಉತ್ತರ ಹೊರಹೊಮ್ಮಿತು (ಶರಚ. ೩೦೫). ೬. ದನಗಳಿಗೆ ಬರುವ ಒಂದು ಬಗೆಯ ಬಾಯಿಹುಣ್ಣು: ಆ ಕರುವಿಗೆ ಸೆಲೆ ಆಗಿದೆ (ರೂಢಿ). **ಶೆಲೆ:** ೧. ಯಾವ ಭೂಮಿಯಂ ತೋಡಲು ಪಾತಾಳದಿಂ ಎಂಟು ದಿಕ್ಕಿನಲ್ಲಿಯೂ ನೀರು ಬರುವ ಶೆಲೆಗಳು ಕಾಣುತಲಿವೆಯೊ ಆ ಸ್ಥಳದಲ್ಲಿ ಕೊಳವಂ ತೋಡಿಸಬೇಕು (ಸೌಗಂಧಿ. ೪೩೦-೧೧); ನೀರು ಬಹಳವಾಗಿ ನೆಲದೊಳಗೆ ಇಂಗಿ ಶೆಲೆಗಳ ಮಾರ್ಗದಿಂದ ಮತ್ತೆ ಹೊರಗೆ ಬರುತ್ತದೆ (ಮುಂಬಯಿ. ೬-೧೬೭); ಈ ಹಳ್ಳಗಳ ದಂಡೆಗುಂಟ ಬಾವಿಗಳನ್ನು ತೋಡಿಸಿದರೆ ಸ್ವಲ್ಪ ಅಂತರದಲ್ಲಿಯೇ ಶಾಶ್ವತವಾದ ನೀರಿನ ಶೆಲೆಗಳು ಹತ್ತುವವು (ವಿಜಾಭೂ. ೧೬). ೫. ಎತ್ತರವಾದ ಗುಡ್ಡದೊಳಗಿಂದ ಗುರುತರವಾದದ್ದೊಂದು ಶೆಲೆಯು ಹರಿದು ಬಂದು ಕುಂಡದೊಳಗೆ ಬೀಳುತ್ತದೆ (ಕಭಾಗ. ೫೭೪). **ಶೆಲೆ:** ೧. ನಮ್ಮ ರಾಯರ ಬಾವಿಗೆ ಕೃಷ್ಣಾನದಿಯ ಶೆಲೆಯೇ ಇರುವಾಗ ನದೀತೀರಕ್ಕೆ ಹೋಗಬೇಕೆಂಬ ಹಟವೇಕೆ? (ಹಬ್ಬಬ. ೩೦); ಎಲ್ಲಿಂದಲೋ ಆನಂದದ ಶೆಲೆಯೊಂದು ಹರಿದುಬಂದು ಹೃದಯದಲ್ಲಿ ಮಡುವುಗೊಂಡಂತೆ ಭಾಸವಾಗುತ್ತಿತ್ತು (ಮೇದಿಮ. ೧೬೫). ೬. ಕೆಲವು ಕಾಲಗಳಲ್ಲಿ ದನಕರುಗಳಿಗೆ ದೊಡ್ಡಜಾಡ್ಯ . . . ನರಡಿ ಶೆಲೆ ವಗೈರೆ ಅಂಟು ಜಾಡ್ಯಗಳು ವ್ಯಾಪಿಸಿರುವುದುಂಟು (ಗ್ರಾಮಾಕ. ೧೧೫). [< ಸೆಲೆ$_2$./ ತೆಲು. ಜಿಲೆ, ಸೆಲೆ]

**ಸೆಲೆ$_5$** 'ಸಿಲೆ$_1$' ನೋ.

**ಸೆಲೆ$_6$** 'ಸಿಲೆ$_2$' ನೋ.

**ಸೆಲೆ$_7$** 'ಸೆರೆ$_4$' ನೋ.

**ಸೆಲೆಕೊಡು** (ಕ್ರಿ). ಪ್ರತಿಧ್ವನಿಸು; ಮಾರ್ದನಿಕೊಡು: ಆ ಮಾತು ಅವನ ಮನಸ್ಸಿನ ಗುಹೆಯಲ್ಲಿ ಸೆಲೆಕೊಟ್ಟಿತು (ರೂಪಸ.೪). [ಸೆಲೆ$_3$ + ಕೊಡು$_1$]

**ಸೆಲೆಯಾಡು** (ಕ್ರಿ). ಒಸರು; ಸ್ರವಿಸು: ರೋಮರೋಮಗಳಲ್ಲಿ ಸವಿಜೇನು ಸೆಲೆಯಾಡುತ್ತಿದ್ದಿತು (ಅಪವಾ. ೧೭೭). [ಸೆಲೆ$_4$ + ಆಡು$_1$]

**ಸೆಲೆಯೊಡೆ, ಸೆಲೆವೊಡೆ** (ಕ್ರಿ). ೧. ಒಸರು; ಸ್ರವಿಸು: ತಿಳಿವಿನ ಶೀತಲಜಲವು ಸೆಲೆಯೊಡೆದುಗುತಂದು ಮನವೆಂಬ ಕೊಳದೊಳು ತುಂಬುವುದು (ಇಂಚಾಪ. ೫-೫೩). ೨. ಮೂಡು; ಕಾಣಿಸಿಕೊಳ್ಳು: ಅನಿರ್ವಚನೀಯವಾದ ಪ್ರೀತಿ ಅವನ ಹೃದಯದ ಆಳದಲ್ಲಿ ಸೆಲೆಯೊಡೆಯಿತು (ಮೂರುದಾ. ೧೧೧); ಮಧ್ವಾಚಾರ್ಯರು ಕೃಷ್ಣನನ್ನು ಉಡುಪಿಯಲ್ಲಿ ನಿಲ್ಲಿಸಿದ ಮೇಲೆ ಭಕ್ತಿಪಂಥ ಸೆಲೆಯೊಡೆದು . . . ವ್ಯಾಪಿಸಿತು (ಭಾರದ. ೨೮೭). **ಸೆಲೆವೊಡೆ:** ೧. ಎಡೆವಿಡದೆ ನೇತ್ರಾಶ್ರುಗಳು ಸೆಲೆವೊ[ಪಾಠಾಂ. ಯೊ]ಡದೊಗುತ್ತಿರೆ (ಬಸಪು. ೧೮-೬೩). ೨. ಇರವಿನತ್ಯುಚ್ಚದೊಳು ಸೆಲೆವೊಡೆವುದಾನಂದ (ಮಲೆದೇ. ೨೩-೧). [ಸೆಲೆ$_4$ + ಒಡೆ$_1$]

**ಸೆಲೆವೇಱು** (ಕ್ರಿ). ಒತ್ತಾಗಿರು; ದಟ್ಟವಾಗಿರು (?): ಮೂಡಿಗೆಯಂತೆ ಕೂಡೆ ಕಣೆ ನಟ್ಟ ಭಟರ್ ಸೆಲೆವೇಱಿದಂತೆ ಕೋಲ್ಕೂಡೆ ನಡಲ್ಕೆ ಬಿಟ್ಟ ಹಯಂ (ಮಹಾನೇ. ೧೨-೧೯೦).

[ಸೆಲೆ$_?$ + ಏಱು$_1$ (< ಏಱ್$_1$]

**ಸೆಲೆವೊಡೆ** 'ಸೆಲೆಯೊಡೆ' ನೋ.

**ಸೆಲ್ಯ** 'ಸೆಲ್ಲೆಹ' ನೋ.

**ಸೆಲ್ಲ** 'ಸೆಲ್ಲೆಹ' ನೋ.

**ಸೆಲ್ಲಹ** 'ಸೆಲ್ಲೆಹ' ನೋ.

**ಸೆಲ್ಲಿಸು** (ಕ್ರಿ). (?): ಮೇಲೆವಾಯ್ವ ಪಂಟಿಸುವ ಕೆಲಕ್ಕೆ ಸಾರ್ವ ಖುರದಿಂ ಪೊಡೆದೆತ್ತುವ ಚಪ್ಪರಿಪ ಸೆಲ್ಲಿಸುವ ತಱುಂಬುವಬ್ಬುಳಿಪ . . . ದುಷ್ಟಮಪ್ಪ ಹಯಮಂ ಕುಡಲುಂ ಪಡೆದೀಯೆ (ಧರ್ಮಪ.೮-೧೩); ರಾವುತರು ಸೆಲ್ಲಿಸಿದರಗ್ಗದ ಮಾವುತರನಾನೆಗಳ ತುಡುಕಿ ಹಯಾವಳಿಯ ಬೀಸಿದರು (ಕುವ್ಯಾಶ. ೨-೧೫). [ಸೆಲ್ಲು$_0$ + - ಇಸು$_3$]

**ಸೆಲ್ಲೆ** 'ಶಲ್ಯ$_1$' ನೋ.

**ಸೆಲ್ಲೆಯ$_1$** 'ಶಲ್ಯ$_1$' ನೋ.

**ಸೆಲ್ಲೆಯ$_2$** 'ಸೆಲ್ಲೆಹ' ನೋ.

**ಸೆಲ್ಲೆವನೆ** (ನಾ). (?): ಉತ್ಪಲದುಪಗೃಹಂಗಳಿಂ ಸೇವಂತಿಗೆಯ ಸೆಲ್ಲೆವನೆಗಳಿಂ . . . ಕಂಪಿನ ಕಡಾರಮುಂ ತಣ್ಪಿನ ತಾಣಮುಮೆನಿಸಿರ್ಪ ಲತಾಮಂಟಪಮಂ ಪೊಕ್ಕು (ಕುಸುಮಾ. ೧೨-೧೫೭ ವ). [ಸೆಲ್ಲೆ$_?$ + ಮನೆ]

**ಸೆಲ್ಲೆಹ, ಚಲ್ಲೆಹ, ಚೆಲ್ಲೆಯ, ಚೆಲ್ಲೆಹ, ಶಲ್ಲೆಯ, ಶಲ್ಲೆಹ, ಶೆಲ್ಲೆಹ, ಸಲ್ಲೆಯ, ಸಲ್ಲೆಹ, ಸಳ್ಯ, ಸೆಲ್ಯ, ಸೆಲ್ಲ, ಸೆಲ್ಲಹ, ಸೆಲ್ಲೆಯ$_2$** (ನಾ). ಒಂದು ಬಗೆಯ ಆಯುಧ; ಈಟಿ; ಶಲ್ಯ: ಲತಾವಳಿಯ ಸೆಲ್ಲೆಹಂಗಳ ಪೊಸಪಾದರಿಗಳ ಬಲ್ಲೆಹ ದೆಸವಂಕುರವೀಧಿಯ ವಜ್ರಮುಷ್ಟಿಯಂಗನೆಯರ್ಕಳ್ (ಗಿಂಕ. ೭-೫೪); ತೋಮರ ಪರಶು ಸಲ್ಲೆಹ ಚಕ್ರ ಸಬಳ ಮುಸುಂಡಿ ಲೌಡಗಳ . . . ಹೇರಾಳದಲಿ ರಂಜಿಸಿತು ರಣಭೂಮಿ (ಕುವ್ಯಾಕ. ೧೫-೩೨). **ಚಲ್ಲೆಹ:** ಚಲ್ಲೆಹ . . . ಜವದಾಡೆಗಳೆಂಬ ಬತ್ತೀಸಾಯುಧಗಳಿಂ (ವಿವೇಕ. ೨೬೨). **ಚೆಲ್ಲೆಯ :** ಚೆಲ್ಲೆಯದಿಂ ಕದುಕೇಱನಿಱಿದು (ಜಯಕಾ. ೧೩-೪೧). **ಚೆಲ್ಲೆಹ:** ಚಾಪ ಚೆ[ಪಾಠಾಂ. ಸೆ]ಲ್ಲೆಹ ಬಲ್ಲೆಹ ಕತ್ತಿಗೆ ಕಠಾರಾದಿಯಾದ . . . ಪಲವುಂ ತೆಱದ ಕೈದುಗಳಿಂದಿಱಿವ (ಧರ್ಮಪ. ೧-೮೭ ವ); ಕಕ್ಕಡ ಸಬಳ ಚೆಲ್ಲೆಹಂ ಸುರಗಿಯಿಂದ . . . ಪೋರ್ದರಾ ದನುಜಪತಿ ಹರಿಗಳು (ವೀಶೈಪು. ೨-೧೨-೪೦). **ಶಲ್ಲೆಯ:** ಶಲ್ಲೆಯ ಕೃಪಾಣ ತೋಮರ . . . ಮುಸಲಾದಿ ಪರಿಪರಿಯ ಕೈದುಗಳಿಂದೆ ಸುರಸೇನೆಯಂ ಪೊಕ್ಕು ಸವಱಿದರ್ (ಚೆಬಪು. ೪೩-೩೪). **ಶಲ್ಲೆಹ:** ಜಡಿವ ಕಕ್ಕಡೆ ಶ[ಪಾಠಾಂ. ಸ]ಲ್ಲೆಹ ಬಲ್ಲೆಯಂಗಳತ್ಯುತ್ಕಟಮಾಗೆ ಬಂದು (ಪುಣ್ಯಾಸ್ರ. ೨-೫೬ ); ಸರಳ ಸರಿ ಶಲ್ಲೆಹ[ಪಾಠಾಂ. ಯ]ದ ಮಳೆ ಮುದ್ಗರದ ವೃಷ್ಟಿ (ತೊರರಾ. ೩-೬-೯); ಹರಿಗೆ ಪಟ್ಟೆಯ ಶೂಲ ಶಲ್ಲೆಹ ಭಲ್ಲೆಯ ಬಲವಂತೆಯರ ಎಲ್ಲರ ತಱುಬಿ (ಮೋಹತ . ೩೩-೩೯). **ಶೆಲ್ಲೆಹ :** ಕೊಂತ ಕೋದಂಡ ಶೆಲ್ಲೆಹ (ರುಕ್ಮಾಂಗ. ೧೩-೩೧). **ಸಲ್ಲೆಯ :** ಸಾರೆ ಬರೆ ಬರೆ ಕಂಡನಲ್ಲಿ . . . ಹೊದೆಯಂಬು ಚಾಪ ಕಠಾರಿ ಸಲ್ಲೆಯ[ಪಾಠಾಂ. ಹ] ಸಬಳಗಳ (ಕುವ್ಯಾಅ. ಒಂಇ. ೧೧-೪೬). **ಸಲ್ಲೆಹ:** ಕವಣೆ ಕಡಿತಲೆ ಸಲ್ಲೆಹವು ವರಶೂಲ ಪಟ್ಟಸದಿಂದಲಿಡುತಿರಲು (ಕೌಶಿರಾ. ೪೨-೧); ಠೆಕ್ಕೆಯು ಬೀಳೆ ಕತ್ತರಿಸಿ ಧಿಕ್ಕನೆ ತೂಗಿ ಸಲ್ಲೆಹದೊಳಿಟ್ಟನು (ನಾಗಕು. ೧೫ -೭೮). **ಸಳ್ಯ :** 'ಅಭಿಮಾನಸಳ್ಯ' ಪರಾ. **ಸೆಲ್ಯ :** ಹಲಗೆ ತೋಮರ ಸೆಲ್ಯ ಕರವಾಳು (ದೇವಾಂಪು. ೩-೨೦೧). **ಸೆಲ್ಲ :** ಕರಯುಗ್ಮದಿಂ ಕಱ ದ ಭಲ್ಲದ ಸೆಲ್ಲದ ಪಿಂಡಿವಾಳದ . . . ಸರಿಯಂ ಶರಾನಿಳವಿಘಾತದೆ ತೂಳ್ದಿದಂ (ವರ್ಧಪು. ೮-೫೮); ಗದಾದಂಡ ಸೆಲ್ಲ ಸಬಳ ಕುಂತ ಕಕ್ಕಡೆ ಕಟಾರಿ . . . ಪಟ್ಟೆಯ ಪ್ರಮುಖ ಬತ್ತೀಸಾಯುಧಭಯಂಕರರ್ ಪರಿತಂದು (ಮಹಾನೇ. ೧೨-೨೩ ವ). **ಸೆಲ್ಲಹ:** ಸಬಳದ ಸೆಲ್ಲಹದ ಕುಂತದ . . . ಭಿಂನಣದೊಳು (ಸೌಇಇ. IX - i, ೩೪೩-೨೦; 1226); ಸಕುತಿ ಸೆಲ್ಲಹ ಪರಶು ಕವಿದವು (ಕುವ್ಯಾದ್ರೋ. ೫-೮); ಸುರಗಿ ಸೆಲ್ಲಹ ಚಕ್ರ . . . ಗದಾಘಾತಂಗಳಿಂ ಗಾಯಂಬಡೆದು (ಸಕವ್ಯ. ೨). **ಸೆಲ್ಲೆಯ$_2$:** ಭರದೆಸೆವ ಹೊಗರಂಬಿನಿಂದಿಡುವ ಸೆಲ್ಲೆಯದಿ ಶಿರವುಡಿಯೆ (ಸಾಳ್ವಭಾ. ೨೫-೧೩); ಸೆಲ್ಲೆಯ ಬಲ್ಲೆಯ . . . ಬಾಣಾದಿ ರಾಜಿಸುವ ಬತ್ತೀಸಾಯುಧಂಗಳಿಂದಿಱಿದು (ಚೆಬಪು. ೫೬-೪೩).

**ಸೆಲ್ಲೆಹವಾಗು** = (ಆಲಂ) ಈಟಿಯಿಂದ ಚುಚ್ಚಿದಂತೆ ಕಠಿನವಾಗು: ಧರ್ಮಪುತ್ರನ ಕಿವಿಗೆ ಸೆಲ್ಲೆಹವಾಯ್ತು ರಣರೌರವದೊಳು (ಕುವ್ಯಾದ್ರೋ. ೧೧-೧).

[< ಸಂ. ಶಲ್ಯ]

**ಸೆವೆ** (ನಾ). (?): ಭಣ್ಡಿಗೆ ದಣ್ಡಿಗೆ ವೊಂದು ಸೆವೆಯಯ್ದು ಹತೆಯೆರಡಕ್ಕಂ ದಣ್ಡಿಗೆ ವೊಂಡು[ದು] ಸೆವೆಯೆರಡು (ಎಇ. XIX, ೩೪-೩೨; 1135). [?]

**ಸೆಳಕಿ** 'ಸಲಗೆ$_2$' ನೋ.

**ಸೆಳಕು** (ನಾ). ೧. ಎಳೆತ; ಆಕರ್ಷಣೆ: ನಿನ್ನ ದಾರಿಯಲೆಲ್ಲ ಕಾರ್ತಿಕೋತ್ಸವವಿರಲು ಬಗೆಬಗೆಯ ರಾಗದಲಿ ಸುಳಿದಿತ್ತು ಸೆಳಕು (ಪಿಪಾಸ. ೪-೧೦); ಅಂತಃಕರಣದ ಮೊದಲ ಸೆಳಕು ಒಮ್ಮೆ ಇಳಿದ ಮೇಲೆ ತನ್ನ ಕುರಿಮರಿ ಇಷ್ಟು ಚಿಕ್ಕದು ಹೇಗಾಯಿತು ? ಎಂದು ಕೇಳೋಣವೆನ್ನಿಸಿತು (ನಡೆದಾ. II, ೮೯೨); ಇಂತು ನಿಸ್ವಾರ್ಥಹೃದಯಿಯಾಗಿ ದುಡಿಯುತ್ತಿರುವಾಗ ಈಗ ಈ ಸ್ವಾರ್ಥದ ಸೆಳಕು ಹುಯಿಲೆಬ್ಬಿಸಬೇಕು ? (ರಕ್ತಧ್ವ. ೯೩). ೨. ಮಿಂಚಿನಂತೆ ಹೊಳೆಯುವ ಕಿರಣ: ಎದ್ದು ತಿಂಗಳಿನ ಸೆಳಕುಗಳನ್ನು ಹೊರಗೆ ದಬ್ಬಿ ಕಿಡಕಿಯ ಬಾಗಿಲುಗಳನ್ನು ಹಾಕಿಕೊಂಡು ಮಲಗಿದೆ (ಚಿಂದುಟ.೧೮) ೩. ಕೋಲಿನಂತೆ ಮೂಡಿ ಒಂದು ಕ್ಷಣ ಕಣ್ಣು ಕೋರೈಸುವಿಕೆ: ಒಂದೊಂದು ಘನವಾದ ವಿಚಾರ

ಮಿಂಚಿನ ಸೆಳಕಿನಂತೆ ಹೊಳೆಯುತ್ತದೆ (ಕಲ್ಲೋಲ. ii,ಮುನ್ನುಡಿ). ೪. ಒಂದು ಸಲಕ್ಕೆ ಆಗುವಷ್ಟು; ಒಂದು ಹದ: ಆಗಲೆ ಒಂದು ಮಳೆಯ ಸೆಳಕು ಹೊಡೆದು ಹೋಗಿತ್ತು (ರತ್ನಧ್ವ. ೧೧); ಒಂದೆರಡು ಸೆಳಕು ಮಳೆ ಬಿತ್ತು (ಮಣ್ಣುಹ. ೧೫೯); ಬಲುಕಿ ಬಾಗುವ ಮಳೆಯ ಸೆಳಕುಗಳ ಸೇವಿಗೆಯ ಸಿವುಡು ಕಟ್ಟಿಡು (ನಲಮು. ೧೬-೪). ೫. ಸ್ಪರ್ಶ; ಸೋಂಕು: ತಪ್ಪು ಮಾತಿನಲ್ಲಿ ಎಲ್ಲಿಯೂ ಅವಿನಯದ ಸೆಳಕಿಲ್ಲವೆಂಬ ಅರಿವಿದ್ದರೂ . . . ಅಳುಕಿ (ಚತಂಬಾ. ೫). ೬. ಹೊಡೆತ; ಪೆಟ್ಟು: ಕೊಡು ಇವನಿಗೆ ನಾಲ್ಕು ಬಾರಕೋಲಿನ ಸೆಳಕು (ಮೀದಿಮ. ೧೦). ೭. ಪರಿಣಾಮ: ಆಕೆ ಕೂಗಿಕೊಂಡಳು; ಮಂದಿ ಕೂಡಿತು; ಓಡಿಹೋದರು. ಇದರ ಸೆಳಕು ಮರುದಿನ ಬಡಿದುಕೊಂಡಿತು (ಪ್ರೇಮಾಶ್ರ. ೨೦೧). ೮. ಶೀತದಿಂದ ಉಂಟಾಗುವ ಸ್ನಾಯುವಿನ ಬಿಗಿತ: ಆಕಾಶವೆಲ್ಲವೂ ಹನಿ ಮೋಡಗಳಿಂದ ಮುಚ್ಚಿ ಗಾಳಿಯನ್ನು ಮಂಜಿನಿಂದ ತುಂಬಿಬಿಟ್ಟಿತು. ಚಳಿ ಸೆಳಕುಗಳು ಮೈಗೆ ಉಗ್ಗಹತ್ತಿದವು (ರತ್ನಧ್ವ. ೧೩೨). [< ಸೆಳಿ$_1$]

**ಸೆಳಕೆ** 'ಸಲಗೆ$_2$' ನೋ.

**ಸೆಳಕೊಳ್ಳು** 'ಸೆಳೆಗೊಳ್' ನೋ.

**ಸೆಳತ** 'ಸೆಳೆತ$_1$' ನೋ.

**ಸೆಳಪು** (ನಾ). ಸೆಳೆಯುವಿಕೆ; ಸೆಳೆತ: ಸುಂದರವಾದ ಆಕರ್ಷಕ ಮತ್ತು ಸೆಳಪುಳ್ಳ ವ್ಯಕ್ತಿತ್ವವಿದ್ದ . . . ಆದರ್ಶವ್ಯಕ್ತಿಯಾಗಿದ್ದರು (ಸಂಗೀತ. ೧೨೦). [ಸೆಳಿ$_1$ + -ಪು$_2$]

**ಸೆಳಮೆ** (ನಾ). = ಸೆಳಪು: ಕಾವಾಗಿ ಬೆಳಕಾಗಿ ಮಿಂಚಾಗಿ ಸೆಳಮೆಯಲಿ ತಾನು ವಿಶ್ವಂಕರ್ಷ ಪವನವಾಗಿ (ಹೃದಸ. ೪೮-೫). [ಸೆಳಿ$_1$ + -ಮೆ$_1$]

**ಸೆಳವಲ** (ನಾ). ಒಂದು ಊರಿನ ಹೆಸರು: ಸ್ವಸ್ತಿಶ್ರೀ ಸೆಳವಲದ ಶಾಲೆಯುಂ ಸೊಡರುಂ ಕೊಟ್ಟುದು ಆಚನ್ದ್ರತಾರಕ್ಕಂ ಕಾವೊನ್ (ಎಕ. VII, ಶಿಕಾರಿ. ೪೫-೩; 890). [?]

**ಸೆಳವು** (ನಾ). ೧. ಪ್ರವಾಹದ ಎಳೆತ,— ಸೆಳೆತ: ಅವನು ಸೆಳವಿಗೆ ಸಿಕ್ಕಿ ಹರಿದು ಹೋಗಿ ತಿರುಗಣೀ ಮಡುವಿಗೆ ಬಿದ್ದನು (ಮುಂಬಯಿ. ೪-೩೮); ಹೊನಲಿನಲಿ ಸಿಕ್ಕಿ ಸೆಳವಿನಲಿ ಸುಕ್ಕಿ (ಪಾಂಚಜ. ೨೫-೭); ಹೇಮಾವತೀನದಿಯಲ್ಲಿ ಸೆಳವು ಬಹಳ ಹೆಚ್ಚು (ತುರಾಯಿ. ೯೨). ೨. ಆಕರ್ಷಣೆ; ಸೆಳೆತ: ಆಕೆಗೆ ತೌರುಮನೆಯ ಸೆಳವು ಜಾಸ್ತಿ (ರೂಢಿ). ೩. ಶೀತದಿಂದ ಉಂಟಾಗುವ ನರಗಳ ಬಿಗಿತ,— ಸ್ನಾಯುಸಂಕೋಚನ: ನರ ಮಂಡಲದಲ್ಲೆಲ್ಲಾ ಸೆಳವು ಉಂಟಾಗಿ ಅವು ನಿಸ್ಸತ್ತ್ವವಾಗಿ ಸಾಯುತ್ತವೆ (ವಿಜ್ಞಾವಿ. ೧೩೮). ೪. ಒಂದು ಬಗೆಯ ರೋಗ; ಸೆಟೆರೋಗ: ಮಕ್ಕಳಲ್ಲಿ ಸೆಳವು (ಕನ್‌ವಲ್ಷನ್) ಇದರ ಮುನ್ಸೂಚಕವಾಗಿ ಬರಬಹುದು (ಕವಿಕೋ. I, ೬೨೭). [ಸೆಳಿ$_1$ + -ವು]

**ಸೆಳವುರೋಗ** (ನಾ).= ಸೆಳವು ೪: ಎಳೆಯ ಮಕ್ಕಳಿಗೆ ಶೀತ ಹೆಚ್ಚಾದರೆ ಸಾಮಾನ್ಯವಾಗಿ ಸೆಳವುರೋಗ ಬರುವುದುಂಟು (ರೂಢಿ). [ಸೆಳವು + ರೋಗ]

**ಸೆಳವೆ** (ನಾ). ಬೆತ್ತ; ಕೋಲು: 'ಕೈಸೆಳವೆ' ಪರಾ. [< ಸೆಳೆ$_4$]

**ಸೆಳಸು$_1$** 'ಸೆಣಸು$_1$' ನೋ.

**ಸೆಳಸು$_2$** 'ಸೆಣಸು$_2$' ನೋ.

**ಸೆಳಹು** (ನಾ). ಪ್ರವಾಹದ ಸೆಳೆತ,— ಎಳೆತ: ಹೊಳೆಯ ಬರವ ನೋಡಂಬಿಗ ಸೆಳಹು ಬಹಳ ಕಾಣಂಬಿಗ (ಶಿವಗೀ. ೧೩೧-೭೫). [ಸೆಳಿ$_1$ + -ಹು$_2$(< -ಪು$_2$)]

**ಸೆಳಾಚಿ** 'ಸಿಯಳಾಚಿ' ನೋ.

**ಸೆಳಿಕೆ** 'ಸಲಗೆ$_2$' ನೋ.

**ಸೆಳಿ$_1$** (ಕ್ರಿ). ೧. ಜಗ್ಗು; ಎಳೆ: ಕುಸುಮಸಂಕುಳಂ ಸುರಿಯೆ ಸೆಳೆವ ಸೆಳೆಗೊಂಬುಗಳಿಂ (ಆದಿಪು. ೯-೯೬); ಬೆನ್ನನೇಱಿ ಮಂಡೆಯ ಚಂಡಿಕೆಯಂ ಕರ್ಚಿ ಸೆಳೆವ ಸೋಗೆಯ ಮಱಿಯ ಮುದ್ದುತನಮಂ (ಅರ್ಜುನೇ. ೧-೯೨ ವ); ಬಳಿಕ ತಿರುವಿಟ್ಟಾಗಲಸ್ತ್ರವ ಸೆಳೆದು ಬಿಲುವಿದ್ಯಾಚಮತ್ಕೃತಿಯಳವ ತೋಱಿದಡೆ (ಕುಮಾರವ್ಯಾ. ಆದಿ. ೯-೯). ೨. ಆಕರ್ಷಿಸು: ''ಸೆಳೆ — ಆಕರ್ಷಣೇ, ಬಾಲಶಿಕ್ಷಾದಂಡೇ ಚ'' (ಶಮಧಾ); ಸೆಳೆದು ನೋಡಿದ ದಿಟ್ಟಿ ತೆಮಬ್ಬನ್ನೆಗಂ ನುಣ್ಪಂ ತಿಣ್ಣುಮನೊಳಕೊಂಡು (ಶಾಂತಿಪು. ೯-೧೮೩. ವ); ಸಿಂಗರದತ್ತ ಮನಂ ಸೆಳೆದಾಭರಣಂಗಳ ಪೆಟ್ಟಿಗೆಯಂ ತರಿಸಿ (ಬಸರ. ೮-೧೭); ನಿನ್ನಂತೆ ಪರಕವಿಯ ನಾಲಗೆ ಕವಿಮನಂಗಳಂ ಸೆಳೆವವಂ ಕವಿಯಲ್ತೆ ಭೂತಳದೊಳು (ಚಿಬಪು. ೧-೨೭). ೩. ಕೀಳು; ಹೊರತೆಗೆ: ಕೋಪಿಸುತೆದ್ದು ಸೆಳೆದು ಸಟ್ಟನೆ ಸೀಳೆ (ನಂಬಿರ. ೭-೮೫); ಕೆಲದ ಖಡ್ಗವ ಸೆಳೆದು . . . ಕಟ್ಟಳವಿಯಲಿ ಹೊಕ್ಕನು ಭೀಮ (ಕುಮಾರವ್ಯಾ. ದ್ರೋ. ೧೩-೧೨); ಗಾಳಿ ಮೇಲುದ ಸೆಳೆಯಲಮ್ಮುದು (ಸಾಳ್ವಭಾ. ೪-೧೬). ೪. ವಶಪಡಿಸಿಕೊಳ್ಳು: ತಳಕಾಡಂ ಸೆಳೆದನ್ತ ಕೊಂಗನೊಳಕೊಣ್ಡ (ಎಕ. II, ೩೮೪-೧೯; ಸು. 1135); ಹಯ ವೃಷಭಂಗಳಂ ಸೆಳೆದು ತಹನು ತತ್ತಡೆ ಹರಿಶ್ಚಂದ್ರನೃಪನು (ಹರಿಚ. ೧-೪೪); ವೀರಸುತಸೋಮಾದಿ ನಿಖಿಳ ಕುಮಾರ ರಂಘವಣೆಗಳ ಸೆಳೆದುದು ಭೀತಿರಸಜಲಧಿ (ಕುಮಾರವ್ಯಾ. ಕ. ೨೦-೨೨); ಸಿಕ್ಕಲು ಸೆಳೆವರು ಸೆಳೆದೊಳಹುಗುವರು (ಮೋಹತ. ೩೮-೨೯).

**ಸೆಳಸೆಳೆ** (ದ್ವಿರುಕ್ತಿ): ಸಿಂಗಾಡಿಗಳ ತುಂಡಿಸಿ ನೇಜೆಯಗಳ ಲಂಗಿಸಿ ಸೆಳಸೆಳೆದಿಡುತ (ಕಂಸವಿ. ೧೫-೪೭). **ಸೆಳೆದುಕೊಳ್, ಸೆಳೆದುಕೊಳ್ಳು** = ೧. ಎಳೆದುಕೊಳ್ಳು: ಈ ನೀರಂ ನೀಂ ಸೆಳೆದುಕೊಳೆ ವಿಚಾರಮದುಂಟೇ (ಉದ್ಭಟ. ೩-೩೦). ೨. ಸ್ವಾಧೀನಪಡಿಸಿಕೊಳ್ಳು; ವಶಪಡಿಸಿಕೊಳ್ಳು: ಕರ್ನಾಟಕರಾಜ್ಯವನ್ನು ಸೆಳೆದುಕೊಂಡನು (ನಾಡೋಜ. ೨೨).

[ದೇ. ॥ ತೆಲು. ಚೆಲುಕು]

**ಸೆಳೆ$_2$, ಸೆಣೆ$_2$** (ಕ್ರಿ). ೧. ಕೋಲಿನಿಂದ ಹೊಡೆ; ಥಳಿಸು: ಎಷ್ಟೊಂದು ಹೇಳಿದರ ಹಟವ ನೀ ಬಿಡವಲ್ಲಿ ನಾಗಬೆತ್ತದಲಿ ಸೆಳೆದಾನ (ಲೋಕಗೀ. ೧೩೨); ಒಂದು ಕೋಲಿನ ತುಂಡು ತಕ್ಕೊಂಡು . . . ಮೂರು ನಾಲ್ಕು ಪೆಟ್ಟು ಸೆಳೆದಳು (ಉತ್ತರ್ಗ. ೪೧). ೨. ಬಟ್ಟೆ ಮೊದಲಾದುವನ್ನು ಒಗೆ ,— ತೊಳೆ: ಕೆಲಜನರ ದೋತರಗಳನ್ನು ಸೆಳೆಯುತ್ತಿದ್ದಳು (ರತ್ನಧ್ವ. ೪೪); ಹಾವೊಂದು ಮೇಲಿನಿಂದ ತೂರಿಬಂದು ಅವಳ ಮುಂಗೈಗೆ ತಡೆಹಾಯುತ್ತಾ ಸೆಳೆಯುವ ಸೀರೆಯ ಮೇಲೆ ಬಿದ್ದಿತು (ಹೇಮಂತ. ೧೪೪). ೩. ಬಳುಕು; ನಡುಗು: ಅಳುಕುವ ನಡು ಘನಕುಚಯುಗನೊಳು ನಸುಸೆಳೆಯುತ್ತಮಿರ್ಪನಂ... ನೋಡಿದಳೊಲ್ದು ರೂಪವಿದ್ಯಾಧರನಂ (ಸುಕುಮಾ. ೧೧-೧೩). ೪. ಉಳುಕು; ನರ ಹೊರಳು: ಒಳದೊಡೆ ಸೆಳೆದೊಡೆ ಸಂದುಗಳುಳಿದೊಡೆ . . . ಶೀತಳಜಳಮಿಶ್ರಿತವಸ್ತ್ರವನಳವಟ್ಟರೆ ಸುತ್ತಲಿನಿಸು ಬೇನೆಗಳಟಿಗುಂ (ಲೋಕೋಪ. ೯-೧೭೬). ೫. [ಗಣಿತ] ಭಾಗಿಸು; ಭಾಗಾಹಾರಮಾಡು: ತವಿಸು, ಭಾಗಿಸು . . . ಸೆಳೆ, ಉಚ್ಛಿಂ ಇಂತಿನಿತುಂ ಭಾಗಂಗೊಂಬುದಕ್ಕೆ ಪೆಸರು (ವ್ಯವಹಾ. ೧೨). **ಸೆಣೆ$_2$**: ೨. ಕೆರೆಯಲ್ಲಿ ಸ್ನಾನಮಾಡಿ ಪಂಚೆ ಸೆಣೆದುಕೊಂಡು ಬರುವುದು ಇಷ್ಟು ಹೊತ್ತಾಯಿತೆಂದೆ (ಚಂಗಾಳ್ವ. ೨೯೨); ಸೀರೆ ಸೆಣೆದು ಸೂರಿಗೆ ಕಟ್ಟಿದ್ದೆ (ಕಜಕಾ. ೧೮೧). ೩. ಬೀಸು; ಎಸೆ: ಅವಿರಳಮಾದ ತುಂಗಕುಚಭಾರದೆ ತೋಳ್ಸೆಣೆದಿಟ್ಟ ತಕ್ಕಿನೊಳ್ ಕವಣೆಯ ಗುಂಡು ಪಾಯವು (ಅನಂಪು. ೧-೬೨). [?]

**ಸೆಳೆ$_3$** (ನಾ). ೧. ಎಳೆತ; ಸೆಳೆತ: ಥಳಥಳಿಸುವ ಕಂಬು ಕಂಜಕುಟ್ಮಲ ಬಲುಸುಳಿ ಸೆಳೆ ತೆರೆ ತಿಳಿನೀರ ತಳೆದು . . . ಸರಸಿಯಂತಿಹರು (ಕಂಸವಿ. ೨೪-೧೯). ೨. ಆಕರ್ಷಣೆ: ಟಾಂಗ ರಿಕ್ಷಾಗಳ ಸೆಳೆಗೊಳಗಾಗದೆ ನಿಂತೆ, ತಾಸಿನ ತಪಗೈದೆ (ಇಂಚಾಪ. ೧೦೩-೫). ೩. ಬೇಟೆಯಲ್ಲಿ ಪ್ರಾಣಿಗಳನ್ನು ಆಕರ್ಷಿಸಿ ಹಿಡಿಯಲು ತರಪೇತು ಕೊಟ್ಟಿರುವ ಪ್ರಾಣಿ: ದೀಹದ ಪ್ರಾಣ ಸಿಡಿ ಸೆಳೆ ಗಾಣ ಬೆಳ್ವಾರ ತಡಿಕೆ ದೀವದ ಖಗಮೃಗಸಂತತಿಗೂಡಿ ನಡೆತಂದನಾ ವನಚರನು (ನೇಮಿಸಂ. ೨-೩೮). ೪. ದೋಚುವಿಕೆ; ಲೂಟಿ: ಒತ್ತಾಯದಿಂದೆ ದುರ್ಗಂಗಳ ಕೈಕೊಂಡರೊದಗಿದರ್ಸೆಳೆ ಸೂಱೆಗಾತುರದೊಳು (ಜೈಮಿಭಾ. ೧೦-೫೩). [< ಸೆಳಿ$_1$]

**ಸೆಳೆ$_4$, ಚೆಳೆ$_3$, ಸೆಡೆ$_4$** (ನಾ). ೧. ಕಂಬಿ; ಸರಳು; ಸಲಾಕೆ: ಕತ್ತುರಿಯ ಸೆಳೆಯನಳ್ಳಾಡಿದೊಂದಂದದಿಂ ವಾಸನೆಯಾದತ್ತೆಂಬಿನಂ (ಜಗವಿ. ೫-೮); ಗಿಳಿಯಂ ಸೆಳೆಯಲೆನುತ್ತವರೆತ್ತಿದ ತೆಳುವಳುಕಿನ ಸೆಳೆಯೋ (ಜಯಕಾ. ೧-೪೧); ಲಲನೆಯಾಕ್ಷಿಸೆ ಕಟಾಕ್ಷದ ರುಚಿ ಪಳುಕಿನ ಸೆಳೆಯೆತ್ತಿ ಶೀವಿದಂತಾಯ್ತು (ಅನಂಚ. ೧-೮೦); ಅವನ ಕೈಯೊಳಗೆ ಬಂಗಾರದ ಸೆಳೆಗಳಿಂದ ಮಾಡಿದಂಥಾದೊಂದು ಪಂಜರವಿತ್ತು (ಮುಂಬಯಿ. ೫-೩೦೦). ೨. (ಮಕ್ಕಳನ್ನು ವಿದ್ಯಾಭ್ಯಾಸಕಾಲದಲ್ಲಿ ದಂಡಿಸುವ) ಬೆತ್ತ; ಕೋಲು: ಪೊಂಬೆತ್ತದ ಸೆಳೆಗೆ ತಳಿಮರ್ೂಡಿದಂತಾಗೆ (ಲೀಲಾವ. ೪-೭೬); ಸಿದ್ಧಂ ದಯೆಯಿಂದೆ ಕೊಟ್ಟ ಸೆಳೆಯಿಂ ಪುಲಿಯಂ ಮಿಗೆ ಪೊಯ್ಸುಳೆಂದೊಡೆ (ಸೌಇಇ. IX - i, ೩೨೯-೧೨; 1209); ತುಱುಗಿ ತೂಳುವ ಸಿಂಧ ಸೆಳೆ ಮಡಲಿಱಿವ ಝಲ್ಲರಿ (ಕುಮಾರವ್ಯಾ. ೩-೧೩); ಅಲರ್ವಿಲ್ಲನ ಪಡಿಯಱತಿಯ ಕೈಯೊಳಗೊಪ್ಪುವ ಸೆಳೆಯಂತೆ ವಿರಾಜಿಸಿತು (ಜಯಕಾ. ೨-೪೭); ಸೆಳೆಗೆ ಹೆದರದ ಮಗು ಬಳೆಗೆ ಹೆದರೀತೆ? (ಗಾದ).

೩. ಸಣ್ಣರಂಬೆ: ವಕುಳದ ಪೂತ ಸೆಳೆಯ ಸೆಳೆವಿಲ್ಲಂ ಗೊಲೆಗೊತ್ತಿ ಪೊಸನನೆಯ ಪುಳುಂಬಂ ಪೊಸೆದು ಸಲಿಸಿ (ಅರ್ಧನೇ. ೫-೫೫ ವ); ಸೆಳೆಗೆ ಸೆಡೆವುದ ಭದ್ರಮದದಂತಿ (ಕುವ್ಯಾ.ಆ. ೨೦೧. ೧-೩೩); ಎಸೆಯೆ ಕರದೊಳು ಮಾಧವೀಲತೆಯಸಿಯ ಸೆಳೆ (ಕುಮುರಾ. ೨-೬೬). (ಗು). ೪. ತೆಳುವಾದ; ತೆಳ್ಳಗಿರುವ: ನುಣ್ಪೊಗೆದ ಕದಂಪು ನೀಳ್ದಸಿಯ ಕಣ್ ಸೆಳೆಯೊಳ್ನಡು . . . ಕರಮೊಪ್ಪಿರೆ (ಲೀಲಾವ. ೪-೭೭). **ಚಳ್ಳೆ:** ೧. ಇನ್ನೇನು ಗಾಳದ ಚಳಯನ್ನು ಎಳೆದರೆ ಸ್ವೆಮೀನು ದಡಕ್ಕೆ ಬಿದ್ದು ಕೈಸೇರುತ್ತದೆ (ಕಾನೂರು. ೫೧೦). **ಸೆಡೆ:** ೨. ನಾಯ ಬಾಲ ಸೆಡೆಯಂ ಕಟ್ಟಲ್ಕೆ ಚೆನ್ನಪ್ಪುದೇ (ಸೋಮೇಶ. ೪೭). [< ಸೆಳ್$_2$]

**ಸೆಳೆಕೊಳ್** 'ಸೆಳೆಗೊಳ್' ನೋ.

**ಸೆಳೆಖಾನೆ** (ನಾ). ಮೇಜು, ಪೆಟಾರಿ ಮೊದಲಾದುವುಗಳಲ್ಲಿ ಸಾಮಾನುಗಳನ್ನು ಇಡಲು ಮಾಡಿರುವ, ಮುಂದೆ ಹಿಂದೆ ಸರಿಸಬಹುದಾದ ಖಾನೆ: ಅದರ ತಳಭಾಗದಲ್ಲಿದ್ದ ಸೆಳೆಖಾನೆಯಲ್ಲಿ ಹಲವು ಕಾಗದ ಪತ್ರಗಳಿದ್ದವು (ಪುನರು. ೩೦೮); ಮೇಜಿನ ಎಲ್ಲ ಸೆಳೆಖಾನೆಗಳನ್ನೂ ಹುಡುಕಿ ಮೋಂಬತ್ತಿಗಳನ್ನು ತೆಗೆದು . . . ಹೊತ್ತಿಸಿದಳು (ಎಲಜೀ. ೭೨). [ಸೆಳ್$_1$ + ಖಾನೆ]

**ಸೆಳೆಗತ್ತಿ** (ನಾ). ಒಂದು ಬಗೆಯ ಕತ್ತಿ; ಒರೆಯಲ್ಲಿಟ್ಟು ತೆಗೆಯಬಹುದಾದ ಖಡ್ಗ: ಮೊಳೆಗತ್ತಿ ಕೊಲ್ಗತ್ತಿ ಕೊಂಕಣ ಬಿಡೆಗತ್ತಿ ಸೆಳೆಗತ್ತಿ (ದೇವಾಂಪು. ೩-೨೦೦); ಖಡ್ಗಂ ಕರಾಚೂರಿ ಕಕ್ಕಡಂ ಸಬಳ ಸೆಳೆಗತ್ತಿ ಕಡುಗತ್ತಿ . . . ಮೂವತ್ತೆರಡು ಪರಿಯ ಶಸ್ತ್ರಗಳಾಂತು (ಚತುಪು. ೫-೨-೪೩). [ಸೆಳ್$_1$ + ಕತ್ತಿ]

**ಸೆಳೆಗಾಲ** (ನಾ). ಕಾಲನ್ನು ಎಳೆದೆಳೆದು ಹೆಜ್ಜೆಯಿಡುವವನು; ಕುಂಟ: "ಕುಂಟಃ — ಸೆಳೆಗಾಲಂ" (ಕಾಶಕ್ಕ. ೧೭). [ಸೆಳ್$_1$ + ಕಾಲ್$_1$ +- ಅ$_7$]

**ಸೆಳೆಗೊಂಬು** (ನಾ). ತೆಳುವಾದ ಕೊಂಬೆ; ಸಣ್ಣರೆಂಬೆ: ನಳಿತೋಳಿಂ ಸೆಳೆಗೊಂಬಂ ತೆಗೆದೊರ್ವಳ್ ವಿಳಾಸವತಿ ತಿಱಿದಳಾಮ್ರನವಕಿಸಲಯಮಂ (ಆದಿಪು. ೧೧-೧೦೧); ಮೆಲ್ಲಲರ್ಗೊಲವ ಸೆಳೆಗೊಂಬುಗಳ್ (ಉದ್ಭಟ. ೩-೮೯); ಸೆಳೆಗೊಂಬು ಸೊಂಡಿಲ್ ಕವಲ್ಗೊಂಬು ಕೊಂಬುಗಳ್ ಬಳೆದ ಗ್ರಂಥಿಗಳೆಸೆವ ಕುಂಭಸ್ಥಳಂ . . . ಆಗ ಕಂಗೊಳಿಸಿತಾ ಮಾಮರಂ ಸ್ಮರನ ಸೊಕ್ಕಾನೆಯೆಂಬಂತೆ (ಚಬಪು. ೪೬-೩); ಏನೀ ಮಾಮರದ ಸೆಳೆಗೊಂಬಿನೊಳ್ ಮೂಗುವಟ್ಟಿರ್ಪಯ್ (ರಾಮಾಶ್ವ. ೨-೧). [ಸೆಳ್$_4$ + ಕೊಂಬು$_1$]

**ಸೆಳೆಗೊಕ್ಕೆ** (ನಾ). ಮರಗಿಡಗಳ ಕೊಂಬೆಗಳನ್ನು ಬಗ್ಗಿಸಲು ಬಳಸುವ ಕೊಕ್ಕೆ: ಭಾವೆಯೊರ್ವಳು ಸಣ್ಣ ಸೆಳೆಗೊಕ್ಕೆಯಿಂ ಕೊಯ್ಯ ಪೂವುದರಲು ಮುಂದಲೆಗ (ಶ್ರೀಪಾಲ. ೫-೩೧). [ಸೆಳ್$_1$ + ಕೊಕ್ಕೆ$_1$]

**ಸೆಳೆಗೊಡು** (ಕ್ರಿ). ಬೆತ್ತವನ್ನು ಕೊಡು; ಕೋಲನ್ನು ನೀಡು: ಜಗದ ಹಂಗಳ ಮಾಣಿಕವು ಸಿರಿಮಿಗುವ ಮಾಣಿಕಗಂಡಳೆಂಬುದ ಬಗೆದು ಸಖಿ ಸೆಳೆಗೊಟ್ಟಳು (ಸಾಳ್ವಭಾ. ೩-೩೩). [ಸೆಳ್$_4$ + ಕೊಡು$_1$]

**ಸೆಳೆಗೊನೆ** (ನಾ). = ಸೆಳೆಗೊಂಬು: ಅದರು ಹೋ ಹೋ ನಿಲ್ಲು ಸೆಳೆಗೊನೆ ಪಿಡಿಯೆ ಮೇಲ್ಗೊನೆಗಳನು ಹಿಮ್ಮೆಟ್ಟು . . . ಎಂಬ ಪೆಣ್ಗಳ ನುಡಿ ಪೊಣ್ಮೆ ತಲ್ಲಣದಯ ವನಗಳ ಸುತ್ತುವಳಸಿನೊಳು (ನಾಗಷ. ೩೦-೬೦). [ಸೆಳ್$_4$ + ಕೊನೆ$_2$]

**ಸೆಳೆಗೊಳ್, ಸೆಳಕೊಳ್ಳು, ಸೆಳೆಕೊಳ್** (ಕ್ರಿ). ೧. ಆಕರ್ಷಿಸಲ್ಪಡು: ಎಮ್ಮಯ ನಣ್ಪಂದಾನ್ ಸೆಳೆಗೊಂಡೆನ್ (ಬಿದ್ಧಪ್ರ. ೧೭-೩೪೦). **ಸೆಳಕೊಳ್ಳು:** ೨. ವಶಪಡಿಸಿಕೊಳ್ಳು: ಒಂದುಗೂಡಿದರೆ ಪ್ರಾಣವನು ಸೆಳಕೊಂಬುದು (ಕವಿಪು. ೨೧-೧). **ಸೆಳೆಕೊಳ್:** ೨. ಅಸಮಾಸ್ತ್ರ ತಾಯ ಮಗ್ಗುಲೊಳೊಱಗಿರಲು ರಕ್ಕಸ ಮಾಯದಲಿ ಸೆಳೆಕೊಂಡ (ಮೋಹತ. ೧೧-೨೪); ಮುದ್ದುಮಾತಿಂ ಪೊನ್ನ ಸೆಳೆಕೊಂಡು ಜಾಳಿಗೆಯನು ಕಟ್ಟು ಮಗಳೆ (ಕಂಸವಿ. ೬-೧೪೯). ೩. ಎಳೆದುಕೊಳ್ಳು: ಶಾಲೆಯ ಸೆಳೆಕೊಂಡು ಪೇಳದೋಡಿದ ಕೃಷ್ಣ (ಪುರಂದ. ೧-೯೧-೧); ತಲೆಯೆತ್ತೆ ಕೂದಲ ಸೆಳೆಕೊಳ್ಳ ಮುಳ್ಳು (ಕಂಸವಿ. ೧೮-೪೭).

[ಸೆಳ್$_1$ + ಕೊಳ್$_1$]

**ಸೆಳೆಗೋಲು** (ನಾ). ತೆಳುವಾದ ಕೋಲು; ಬೆತ್ತ: ಗುರೂಪದೇಶವಂಬ ನೇಗಿಲಂ ಹಿಡಿದು ಅಂತಃಕರಣಚತುಷ್ಟಯವೆಂಬ ಪಶುವಂ ಕಟ್ಟಿ ಓಂಕಾರನಾದವೆಂಬ ಸೆಳೆಗೋಲಂ ಪಿಡಿದು (ಸರ್ವವ. ೧೧೫-೫೬೮); ಸೆಳೆಗೋಲು ಒಂದಟ್ಟೆಯ ಕೆರಹು ನಾಯಿಗಳ ಬಾಯ್ಕಟ್ಟು ಒಳಯಿಂದಿವು ಮೆಚೆಯ (ಬಸವು. ೩೧-೪). [ಸೆಳ್$_4$ + ಕೋಲ್$_1$ (< ಕೋಲ್$_1$)]

**ಸೆಳೆತ$_1$, ಸೆಳತ** (ನಾ). ೧. ಎಳೆಯುವಿಕೆ; ಎಳೆತ. ೨. ನೀರಿನ ಪ್ರವಾಹದ ವೇಗ: ನದಿಯ ಮಧ್ಯಭಾಗದಲ್ಲಿ ನೀರಿನ ಸೆಳೆತ ಹೆಚ್ಚಾಗಿದೆ (ರೂಢಿ). ೩. ಆಕರ್ಷಣೆ: ನನಗೆ ಸೌಂದರ್ಯದ ಸೆಳೆತವಿದೆಯೆಂದೇ ನಾನದನ್ನು ನಿಷ್ಠೆಯಿಂದ ಪ್ರೀತಿಸುತ್ತೇನೆ (ಸ್ಮೃತಿಚಿ. ೪೪೫); ಸ್ವಾಮಿಗೆ ಆಕೆಯ ಮೇಲೆ ಯಾವ ಬಗೆಯ ಸೆಳೆತವಿರದಿದ್ದರೂ ಮತ್ಸರವಿರಲಿಲ್ಲ (ಭೂಮಿಕಾ. ೯). ೪. **ಕಣ್ಣನ್ನು ಕೋರೈಸುವ ಕಾಂತಿ,** —ಹೊಳಪು: ಬಲಬದಿಯಿಂದ ಮಿಂಚಿನ ಸೆಳೆತಗಳು ಚಿಮ್ಮುವುವು. ಕ್ರಮೇಣ ಈ ಸೆಳೆತಗಳ ಪ್ರಕಾಶವನ್ನು ಹೆಚ್ಚಿಸುತ್ತ ಹೋಗಬೇಕು (ಅಶ್ವಮೇ. ೨೮). **ಸೆಳತ:** ೩. ಅವನಿಗೆ ಕುಡಿತದ ಸೆಳತ ಜಾಸ್ತಿಯಾಗಿದೆ (ರೂಢಿ). [ಸೆಳ್$_1$ + - ತ$_2$]

**ಸೆಳೆತ$_2$** (ನಾ). ಹೊಡೆತ; ಪೆಟ್ಟು; ಏಟು: "ತರ್ಜನಂ-ಸೆಳೆತಂ" (ಕಾಶಕ್ಕ. ೧೪); ಮನೆಗೆ ತಡಮಾಡಿ ಹೋದರೆ ಬೆನ್ನ ಮೇಲೆ ಸೆಳೆತ (ನಿರಾಭ. ೪೯). [ಸೆಳ್$_2$ + - ತ$_2$]

**ಸೆಳೆತರು** (ಕ್ರಿ). ಎಳೆದು ತರು; ಹಿಡಿದು ತರು: ಆನೆಯ ಕೆಯ್ಯ ಕಬ್ಬಿನ ಕೋಲ ಸೆಳೆತಂದು (ಮೋಹತ. ೨೨-೫೪); ಧುರದೊಳು ವೈರಿಭೂಪಾಲರ ಖಂಡಿಸಿ ಹರುಷದಿಂದಲಿ ಸೆಳೆತಂದ ಬಿರುದಿನ ತುರಗಗಳನು (ಕಂಸವಿ. ೬-೨೫); ಮುನ್ನಡೆದ ಸುಕೃತದ ಫಲದ ಪಾಶವೆ ಪಿಡಿದು ಸೆಳೆತಂದಂತೆ ಬಂದನು ಕಡುವಿರಾಗತೆಯಿಂ (ಗಗತಾ. ೨-೧೯).

[ಸೆಳ್$_1$ + ತರು$_1$ (< ತರ್)]

**ಸೆಳೆತೆಗೆ** (ಕ್ರಿ). ಎಳೆದು ತೆಗೆ; ಕಿತ್ತುಹಾಕು: ಕಾವಲರ ದಳವೆಲ್ಲ ಸುತ್ತುನಿಂದಿರಲವನ ಬಟ್ಟೆ ಸೆಳೆತೆಗೆದು, ಕಿಸುಸೇಲೆಯಂ ಹೊದಿಸಿ (ಗೊಲ್ಲೊಥಾ. ೯-೨೪೩). [ಸೆಳ್$_1$ + ತೆಗ್$_1$]

**ಸೆಳೆನಡು** (ನಾ). ತೆಳುವಾದ ಸೊಂಟ,: ಆಕೆಯ ಸೆಳೆನಡು ನೋಡಿದರ ಮನ ಮನಲ್ಲಾಡಿಸುಗುಂ (ಮಲ್ಲಿಪು. ೩-೬೫); ನೀಳ್ದ ಕಣ್ಗಳುಂ ಸೆಳೆನಡುವಿನಲ್ಲಾಟಮಂ ಕಂಡು ಪೋಱವಾಱೆಂದೇಱಲಾರ್ತುವಿಲ್ಲ (ಕಬ್ಬಿಕಾ. ೭೮); ಮಡದಿಯ ಸೆಳೆನಡು ತನ್ನಯ ಬಡತನದಿಂ ಹರಿಯ ಮಧ್ಯಮಂ ನಯದಿಂ ಕೀಳ್ಪಡಿಸುತ್ತಿರ್ಪುದು (ದಶಕು. ೬-೩೭).

[ಸೆಳ್$_4$ + ನಡು$_2$]

**ಸೆಳೆನೀರು** (ನಾ). ರಭಸವಾಗಿ ಹರಿಯುವ ನೀರು: ವೃತ್ತಸ್ತನದುನ್ನತ ಗುಣಭೂಷಣೆ ಪತ್ರಿಯವನ ಪರ್ಯಂಕಮನಡರ್ದೊಲವೆತ್ತು ನಿರೀಕ್ಷಿಸಲಾ ಮಡುವಿನ ಸೆಳೆನೀರೀ ತೆಱನಾಯ್ತು (ಜಯಕಾ. ೯-೩೨); ಸೆಳೆನೀರಿನ ಕುಲ್ಲೆಯೊಳೊಂದೇ ಭಲ್ಲೆಯೊಳೆಳೆ ಸಸಿಲೆಯ ನಿಕ್ಕಡಿಗೆಯ್ವೆ (ಹಚ್ಚರ. ೧-೧೯). [ಸೆಳ್$_1$ + ನೀರು$_1$ (< ನೀರ್)]

**ಸೆಳೆಬೆತ್ತ** (ನಾ). ತೆಳುವಾದ ಕೋಲು, —ಬೆತ್ತ: ಗಳರವವೆಂಬ ಮಂತ್ರದ ಮಂತ್ರಿಸಿ ಜಡೆ ಸೆಳೆಬೆತ್ತದಲಿ ಮಿಗೆ ಬಡಿದು (ಕಂಸವಿ. ೨-೧೦೦೦). [ಸೆಳ್$_4$ + ಬೆತ್ತ]

**ಸೆಳೆಮಂಚ** (ನಾ). ಉಯ್ಯಾಲೆಮಂಚ; ತೂಗುಮಂಚ: ರಂಜಿಪ ರನ್ನದ ಸೆಳೆಮಂಚದ ಮೇಲೆ ಲೀಲೆಯಿಂ ಕುಳ್ಳಿರ್ದಳ್ (ಪಂಚಾಮಾ. ೩-೭೫); ಕೊಡಗ ಬಲ್ಲುದೆ ಸೆಳೆಮಂಚದ ಸುಖವ (ಬಸವ. ೯೮); ಸೆಳೆಮಂಚದ ಕಳನಿನದಂ ಬಳಸಿದ ಶಕುನಿಗಳ ನುಣ್ಚರಂ (ಗಿರಿಕ. ೪-೧೪೯); ರಮ್ಯಮಂದಿರದ ಸೆಳೆಮಂಚದೊಳ್ ಮಲಂಗಿರ (ಚಬಪು. ೪೬-೧). [ಸೆಳ್$_1$ + ಮಂಚ]

**ಸೆಳೆಮಾವು** (ನಾ). ಮಾವಿನ ಮರದ ರೆಂಬೆ (?): ಸೆಳೆಮಾವಂ ನೆಮ್ಮಿ ಪೂಗಂಪಿನೊಳ್ ಪೊರೆದಲ್ಲಾಡುವ ತುಂಬಿವಾಡನೊಲವಿಂ ಕೇಳ್ವಂದದಿಂ ನಿಂದು (ಕಬ್ಬಿಕಾ. ೬೯).

[ಸೆಳ್$_4$? + ಮಾವು]

**ಸೆಳೆಮಿಂಚು** (ನಾ). ಕೋಲಿನಂತೆ ಮೂಡಿ, ಕಣ್ಣು ಕೋರೈಸುವ ಮಿಂಚು; ಕೋಲ್ಮಿಂಚು: ಪಳಚ್ಚನೆ ಸೆಳೆಮಿಂಚು ಕಣ್ಬೊಣರೊಳುಳ್ಕೆ (ಶಬಶಂ. ೧-೪೬); ಮಳೆವಿಲ್ಲ ಹಿಡಿದುಡುಗಿ ಸೆಳೆಮಿಂಚ ಮಸೆಮಸೆದು (ಕಾಲೂರ. ೪೫-೬೦). [ಸೆಳ್$_4$ + ಮಿಂಚು$_2$]

**ಸೆಳೆರೂಪು** (ನಾ). ಆಕರ್ಷಿಸುವ ಚೆಲುವು; ಮನಮೋಹಿಸುವ ಸೌಂದರ್ಯ: ಹರೆಯದಳಹೊಗರಿಂದ ಕಳೆತೀವಿ ಇಹರು ಸೆಳೆರೂಪಿನಿವರಿಂಗಾರೊಲಿಯದಿಹರು (ಗೋಕುನಿ. ೧೩-೨೭). [ಸೆಳ್$_1$ + ರೂಪು]

**ಸೆಳೆವಲೆ** (ನಾ). ಪ್ರಾಣಿಗಳನ್ನು ಆಕರ್ಷಿಸಿ ಹಿಡಿಯುವುದಕ್ಕೆ ಅನುಕೂಲವಾಗುವಂತೆ ಪದಾರ್ಥಗಳನ್ನು ಅಥವಾ ಜಂತುಗಳನ್ನು ಅಳವಡಿಸಿರುವ ಬಲೆ: ಪಿಡಿವಲೆ ಸೆಳೆವಲೆ ಕಾಲ್ವಲೆ . . . ಬಲುವಲೆಗಾಱರು ಕೂಗಿ ಬೊಬ್ಬಿಡುತಲೈದಿದರು (ಮೋಹತ. ೧೯-೧೭). [ಸೆಳ್$_1$ + ಬಲೆ$_1$]

**ಸೆಳೆವಿಡಿ** (ಕ್ರಿ). ಕೋಲನ್ನು ಹಿಡಿ; ಬೆತ್ತವನ್ನು ಹಿಡಿ: ಅಬ್ಜನಾಳಮಂ ಸೆಳೆವಿಡಿದಂಗ ಜನ್ಮ ಜಯಲಕ್ಷ್ಮಿಯ ಲಾಸಿಕೆಯಾಕೆಯೆಂಬಿನಂ (ಮಲ್ಲಿಪು. ೮-೫೨); ಸೆಳೆವಿಡಿದು ತುಱುಗಾಹಿ ಪಶುಸಂಕುಲವ ತೆವಱುವವೋಲು (ಕುಮಾರ್ರಾಮ. ೩-೨೪); ಮಾಧವೀಲತೆಯ ಸೆಳೆವಿಡಿದ ಕೈ . . . ಸಿಂಗರಕೆ ಮಿಗಿಲಾಯ್ತುವನಿಸುತೆಗೆ ಋತುಮತಿಯಾಗಲು (ಜೈಮಿಭಾ. ೧೮-೨೫).
[ಸೆಳ್‌$_4$ + ಪಿಡಿ$_1$]

**ಸೆಳೆಸೀರೆ** (ನಾ). ಸೀರೆಯನ್ನು ಹಿಡಿದು ಎಳೆದಿದ್ದ ಸ್ಥಿತಿ: ಮಱೆದಿರ್ದ್ದ ಸೆಳೆಸೀರೆಯಲಿ ಸತಿಯೊಱಲಲಕ್ಷ್ಯಯವಿತ್ತು ತನ್ನನು ಮಱೆದ ಮಹಿಮಾರ್ಣವನ ಭಜಿಸುವುದು (ಕುಮಾ.ಅ. ೧೭-೧೮). [ಸೆಳ್‌$_1$ + ಸೀರೆ]

**ಸೆಳೆಸುಂದು** (ನಾ). (?): [ಸು]ದ[ಗ್ಗ]ನುಱಿದೋ(ಂ) ಸೆಳೆಸುನ್ದುಟಿ[ವೋ]ಂ ತನ್ದೆಯ ತಾಯ್ಕಿರಾ ಸನ್ತಾನಮ(ಂ)ನುಳಿದು ಬಿಸುಟೋ (ಸೌಇಇ. XI-i, ೧೧-೫; 865). [?]

**ಸೆಳ್ಳ**, ಚಲ್ಲ$_2$, ಚಳ್ಳ, ಚಳ್ಳೆ, ಚೆಲ್ಲ$_2$, ಚೆಳ್ಳ, ಚೆಳ್ಳು$_1$, ಚೆಳ್ಳೆ, ಚೊಳ್ಳೆ, ಸೆಳ್ಳು$_1$, ಸೆಳ್ಳೆ, ಸೊಳ್ಳೆ$_3$ (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ: ಸೆಳ್ಳ ತಮಾಳದ ಪಾರಿವಾಳದ . . . ಕಾನನವೆತ್ತ ನೋಟ್ಕೊಡಂ (ಲೀಲಾವ. ೬-೨೧); ತಱಿದರೆದು ಸೆಳ್ಳತಿಗುಡಂ ಕಿಱುಕುಸಾಲೆಯ ಬೇರುಮಂ (ಅಶ್ವಶಾ. ೧೬-೫). **ಚೆಲ್ಲ$_2$**: ಮರಗಳು . . . ಗೋರಂಟಿ, ಚಲ್ಲ, ಮರುವ (ನಮ್ಮನು. ೨೫೬). **ಚಳ್ಳ**: ಚಳ್ಳ (ಭೋಕರ) – ಮಧ್ಯಮ ತರದ ವೃಕ್ಷ . . . ತೊಗಟೆ, ಬೇರು, ಹಣ್ಣುಗಳು ಔಷಧಕ್ಕೆ ಬರುತ್ತವೆ (ಕಭಾಗಿ. ೩೯). **ಚಳ್ಳೆ**: ಸಾರತರಮೆನಿಪ ಬೇಳೆ (ಚಳ್ಳೆ)ಯ ಬೇರಂ . . . ಪೂಸೆ (ಖಮದ. ೧೨-೪೦); ಅಂಬಟೆ ಯರನೆಲ್ಲಿ ಚಳ್ಳೆ ಬಿಲ್ವದ ಮರ . . . ತಮಾಲಗಳ್ತುಂಬಿಹುವಾರಾಮದೊಳಗೆ (ಕಂಸವಿ. ೫-೮೯); ಚಳ್ಳೆ ಸುರಹೊನ್ನೆ ಕಿಂಶುಕ ಗೋಣಿ (ಸಿದ್ಧಕಾ. ೬-೧೭). **ಚೆಲ್ಲ$_2$**: ಚೆಲ್ಲ, ಚೆಳ್ಳ, ಮರು ವಾಚೆಲು ಮರ, ಹೊಳೆದಾಸವಾಳ (ಮೃಜಿ. ೪೯-೯೭೩). **ಚೆಳ್ಳ**: ಬೇರೊಳ್ ಚೆಳ್ಳ ಮುಳ್ಳನೂಱುಗೆ (ಲೋಕೋಪ. ೬-೫೮). **ಚೆಳ್ಳು$_1$**: "ಶ್ಲೇಷ್ಮಾತಕಂ ಜಾತಿ ಚೆಳ್ಳಕ್ಕು [ಪಾಠಾಂ. ಜಳ್ಳಕ್ಕು, ಜೇಳಕ್ಕು]" (ಮಂಗರಾ. ೩೭-೨೨); ಚೆಳ್ಳು ತಿಲಕವಶೋಕೆ . . . ಕದಳಿಗಳಿಲ್ಲಿ ನೋಡಿವೆ (ತೊರರಾ. ೩-೧-೨೯). **ಚೆಳ್ಳೆ**: ಚೆಳ್ಳೆಯಾ ಕಾಯಿ ನಿಂಬೆಯ ಹುಳಿಹಣ್ಣನು . . . ತಂದು ತಳೋದರಿಯರಿಕ್ಕಿದರು (ಜ್ಞಾನಚ. ೨-೧೫೫). **ಚೊಳ್ಳೆ**: ಚೊಳ್ಳೆಯ ಹಣ್ಣಿನ ಬೇರು ಔಷಧಕ್ಕೆ ಉಪಯೋಗವಾಗುತ್ತದೆ (ರೂಢಿ). **ಸೆಳ್ಳು$_1$**: ಅಮರ್ದುವಳ್ಳಿ ಸೆಳ್ಳಂಬಿವೞೊಳ್ ಭಾವಿಪ ಗುಡಂ . . . ಅಡಸಿ ಮೆಲೆ ವಿಷಾಪಹಮಕ್ಕುಂ (ಖಮದ. ೧೭-೫೧); ಬೇವತ್ತಿ ಸೆಳ್ಳಲವಂ ಸಂಪಗೆ . . . ಎಂಬೀ ಮರದಱುಗಲಿಱುಂಬಿನಿಂದತಿಗಹನ ಮೆನಿಪ ಗಹನಾಂತರದೊಳಗೆ (ಪಾರ್ಶ್ವಪು. ೧೨-೫೮); ಅಂಬಟೆ ತುಂಬುರು ಬೇಲ ಸೆ[ಪಾಠಾಂ. ಸಿ]ಳ್ಳು ಸೀಗುರಿ . . . ಪಾದರಿಯಾದಿಯಾದ ಪೆರ್ಮರಗಳ ಕಾಡೊಳ್ಕೆತರುತಮಿರ್ದರು (ಪುಣ್ಯಾಸ್ರ. ೩-೭೩). **ಸೆಳ್ಳೆ**: ಶಿವಧರ್ಮದೊಳು ಮದ್ಯ ಮಾಂಸವೆಂದುಳ್ಳ ನುಗ್ಗೆಗಳು ಸೆಳ್ಳೆ ಆ ಬಣಗೆನಿಪ ಹಂದಿ ಕೋಳಿಗಳು . . . ಇವಯೋಗ್ಯವೈ (ವೀಶೈಪು. ೭-೧೭-೨೩). **ಸೊಳ್ಳೆ$_3$**: ಮರಗಳು . . . ದಿಂಡಿಗ, ಬೂರಗ, ಹುರಗಲು, ಸೊಳ್ಳೆ (ನಮ್ಮನು. ೨೫೬).

**ಚಳ್ಳೆಹಣ್ಣು ತಿನ್ನಿಸು** = ೧. (ಆಲಂ) ಮೋಸಮಾಡು; ವಂಚಿಸು: ಸಮಯ ನೋಡಿ ಪೋಲಿಸರಿಗೆ ಚಳ್ಳೆಹಣ್ಣು ತಿನ್ನಿಸಿ ಪರಾರಿಯಾದರು (ರೂಢಿ). ೨. ಸತಾಯಿಸು; ಹಿಂಸಿಸು: ನಿನಗೆ ಚಳ್ಳೆಹಣ್ಣು ತಿನ್ನಿಸಿಬಿಟ್ಟೇನು, ಜೋಕೆ (ರೂಢಿ).

**ಸೆಳ್ಳಂಬಟೆ** (ನಾ). ಚೆಳ್ಳು ಮತ್ತು ಅಮಟೆಕಾಯಿ: ಉಪ್ಪು ಸಾಸವೆಯ ಮಾಗಾಯ ಸೆಳ್ಳಂಬಟೆಯ [ಪಾಠಾಂ. ಸೆಳಬಟ್ಟೆಯ] ಹಪ್ಪಳಂ ಕುಂಬಳದ ಸಂಡಗೆಯ ಸೇವಗೆಯೆನಿಪ್ಪವಿವು ಮೊದಲಾಗಿ ನೊರೆಸಂಡಗೆಯನು ಹುರಿಸಂಡಗೆಯ ಬಾಳಕವನು . . . ಸಂವರಿಸಿ (ಸಿದ್ಧರಾ. ೮-೫೨). [ಸೆಳ್ಳ + ಅಂಬಟೆ]

**ಸೆಳ್ಳಗೊಂಬು**, ಸೆಳ್ಳೆಗೊಂಬು (ನಾ). ತುದಿಯ ಕೊಂಬೆ: ತೂಱಲ ಸೆಳ್ಳ [ಪಾಠಾಂ. ಳ್ಳೆ]ಗೊಂಬುವರಂ ನನೆ ಪೇಱಿದ ಮಾವು ಮೊಗ್ಗೆಯಿಂ ಪೇಱಿದ ಮಲ್ಲಿಕಾಲತೆ (ಅನಂಪು. ೧-೭೮). **ಸೆಳ್ಳೆಗೊಂಬು**: ಮಲೆವ ಮಲೆಯ ಪವನನಿಂದಮಲುಪ ಸೆಳ್ಳೆಗೊಂಬಿನಿಂದಮುದಿರ್ದ ಕುಸುಮರಜದ ಧೂಳಿ (ಅಜಿಪು. ೨-೭ ರಗಳೆ).
[< ಸೆಳ್ಳು$_2$ + ಕೊಂಬು$_1$]

**ಸೆಳ್ಳು$_1$** 'ಸೆಳ್ಳ' ನೋ.

**ಸೆಳ್ಳು$_2$**, ಚಲ್ಲು$_2$, ಚಳ್ಳು, ಚೆಳ್ಳು (ನಾ). ೧. ತೀಕ್ಷ್ಣವಾದುದು; ಮೊನಚಾದುದು: 'ಸೆಳ್ಳುಗುರ್' ಪರಾ. ೨. ಉದ್ದವಾದ ತೆಳುರೆಂಬೆ. ೩. ವ್ಯವಸಾಯದ ಒಂದು ಉಪಕರಣ: ಸೆಳ್ಳು, ರಾಫೋಲು, ಜಂತೆ, ಗುಂಟೆ, ಹತಿಗಣೆ, ಮೆಟ್ಟು (ಕನ್ನಜಾ. ೨೫). **ಚಲ್ಲು$_2$**: ೨. ನಾಯಿಗೆ ಚಲ್ಲು, ಕಾಗೆಗೆ ಕಲ್ಲು (ಗಾದೆ). **ಚಳ್ಳು**: ೧. 'ಚಳ್ಳುಗುರ್' ಪರಾ. **ಚೆಳ್ಳು**: ೧. 'ಚೆಳ್ಳುಗುರ್' ಪರಾ.
[ದೇ. ‖ ತಮಿ. ಚವಳ್; ಮಲ. ಚವಳು; ಕೊಡ. ಜಳೆ; ತೆಲು. ಸೆಲ]

**ಸೆಳ್ಳುಗುರ್**, ಚಳ್ಳುಗುರ್, ಚಳ್ಳುಗುರು, ಚೆಳ್ಳುಗುರ್, ಚೆಳ್ಳುಗುರು, ಸಳ್ಳುಗುರು, ಸೆಳ್ಳುಗುರು (ನಾ). ಉದ್ದವೂ ಚೂಪೂ ಆದ ಉಗುರು; ಮೊನಚಾದ ಉಗುರು: ಮೊಗಮಂ ತಾವರೆ ಕಣ್ಣನುತ್ಪಲದಲಂ ಧಮ್ಮಿಲ್ಲಮಂ ಸೋಗೆ ಸೆಳ್ಳುಗುರಂ ಕೇದಗೆ . . . ಪೋಲ್ತು (ಆದಿಪು. ೬-೮೫); ಕಿಱುವೆರಯದ ಸೆಳ್ಳುಗುರ್ವೆರಲ ಗಣಿಕೆಯರೆಸೆದರಲ್ಲಿ (ಪದ್ಮರಾ. ೮-೯೯); ಬೆಡಂಗಿನ ಬಾಲೆಯೊರ್ವಳ್ ತನ್ನ ಕಿಱುವೆರಲ ಸೆಳ್ಳುಗುರ್ಗೊನೆಯಿಂ ಮುಂಗುರುಳನೇಱೊತ್ತುತುಂ (ಗಾಮಾಪ್ರ. ೪೮-೨೫). **ಚಳ್ಳುಗುರ್**: ಚಳ್ಳುಗುರ್ಗಳುಂ ಬೆಳಗನೀಯೆ (ಪ್ರಭುಪು. ೫-೨೮). **ಚಳ್ಳುಗುರು**: ಬಿಲ್ಲು ಮುರಿದ ಹಸ್ತ ಚಳ್ಳುಗುರಿನ ಹಸ್ತ (ತೀರ್ಥಮ. ೧೫೫); ಕಂಬನಿಯ ತುದಿಯ ಚಳ್ಳುಗುರಿನಿಂ ಚಿಮ್ಮುತ್ತ (ನವಮೋ. ೬-೬೨). **ಚೆಳ್ಳುಗುರ್**: ನಳಿತೋಳ ಸಿರಿಸಮಂ ಚೆ[ಪಾಠಾಂ. ಸೆ]ಳ್ಳುಗುರ ಕೇತಕಿಯನಾನನದ ತಾವರೆಯನು . . . ಅವಯವದೊಳಳವಡಿಸಿ (ಜೈಮಿಭಾ. ೮-೨೧); ವಲ್ಲಕಿಯ ಚೆಳ್ಳುಗುರ್ಗೊನೆಗಳಿಂ ತಾಗಿಸುತೆ (ಪರಶು. ೭-೧೯). **ಚೆಳ್ಳುಗುರು**: ಕೇತಕಿಯೆಸಳ ಜಱಿವ ಚೆಳ್ಳುಗುರಿಂದ (ಕಂಸವಿ. ೯-೧೯೩); ವಾಕಾರವನೆ ಚೆಳ್ಳುಗುರಿಂದಲಿ ತಿದ್ದಿ ಏಕಾರವನೆ ಮಾಡಿದಳು (ಚಂದ್ರಹಾ. ೩-೩೪). **ಸಳ್ಳುಗುರು**: ಸನುಮತದೊಳಿರಲು ಸಳ್ಳುಗುರಿಂದಲವಳುರದ ಮೊನೆಜು ಚದನಿರಿದು ಕಬರಿಯ ಪಿಡಿದು ಬಾಯ ಚುಂಬನ ಗೈದ ಬಳಿಕ (ನವಮೋ. ೯-೪೨). **ಸೆಳ್ಳುಗುರು**: ಸೆಳೆನಡುವ ಸೆಳ್ಳುಗುರ ಬೆಡಗಿನ ಕಾಂತೆ ರಂಜಿಸುತಿರ್ಪಳಾ ಪುರದಿ (ನಳಚ. ೨-೨೪); ನಳಿತೋಳ ಸೆಳ್ಳುಗುರ ತೆಳುವಸುಱಿ . . . ಶಬರಿಯರು ಕಾಳರಾತ್ರಿಯ ಸಿರಿಗಳೆನಿಸಿದರು (ಸಾಳ್ವಭಾ. ೧೭-೭); ಮೆಲ್ಲೆದೆಗನುಲೇಪನವ ಸೆಳ್ಳುಗುರೊಳು ತೀಡಿ (ಕಂಸವಿ. ೨೫-೧೫೫). [ಸೆಳ್ಳು + ಉಗುರ್$_1$]

**ಸೆಳ್ಳುಗುರು** 'ಸೆಳ್ಳುಗುರ್' ನೋ.

**ಸೆಳ್ಳೆ** 'ಸೆಳ್ಳ' ನೋ.

**ಸೆಳ್ಳೆಗೊಂಬು** 'ಸೆಳ್ಳಗೊಂಬು' ನೋ.

**ಸೆಱಂಗು**, ಸೆರಗು$_1$, ಸೆಱಗು (ನಾ). ೧. ಸೀರೆಯಲ್ಲಿ ಹೊದೆಯುವ ಭಾಗ; ಸೀರೆಯ ಮೇಲುಹೊದಿಕೆಯ ಅಂಚು, — ತುದಿ: "ಸೆಱಂಗೆಂದು ಚೇಲಾಂಚಲಂ" (ಕಶಸಾ. ೬೩-೩೯೭); ನಱುಸುಯ್ಯೆಲರಿಂಗೆಱಗುವ ಮಱಿದುಂಬಿಗಳಂ ಸೆಱಂಗಿನಿಂ ಸೋವುತಂ (ಕಾದಂಉ. ೧೨೯); ಆ ಗೃಹಸ್ಥನ ಪೆಂಡತಿ ಮುಖದೊಳ್ ಸೆಱಂಗ[ಪಾಠಾಂ. ಸೀರೆಯ] ನಿಕ್ಕಿಕೊಂಡು ಮಗಂಗೆ ಮೊಲೆಯೂಡುವುದಂ ಕಂಡು (ಪಂಚತಂ. ೨೨೯-೨); ತೆಂಗಾಳಿಯಿನಂಶುಕದ ಸೆಱಂಗು ತೆಱಂಬೊಳೆಯೆ ಪಿಡಿಯಿನಿೞಿದಳದೊರ್ವಳ್ (ಜಗಪಿ. ೧೪-೫೭). ೨. ಉತ್ತರೀಯ ಮುಂತಾದ ಮೇಲುಹೊದಿಕೆಯ ಅಂಚು, —ತುದಿ: ತನ್ನ ಮೇಲುದಱ ಸೆಱಂಗಿಂದಾತನ ತಲೆಯ ಮೇಲೆ ಕೆದಱಿರ್ದ ಭೀಮ ಸೇನನ ಚರಣರಜಮಂ ತೊಡೆದು (ಗದಾಯು. ೯-೨೨ ವ); ಉತ್ತರಿಗೆಯ ಸೆಱಂಗಿನಿಂ ಕಣ್ಣೀರ್ದೊಡೆದು (ಚಕವ. ೬-೧೪೨ ವ). ೩. ಕೊನೆ; ಕಡೆ; ತುದಿ: ಪುದಿದೆಳಗಾಯ್ ಬಸಂತದ ಮೊದಲ್ ನೆಟೆದೊಪ್ಪುವ ದೋರೆಗಾಯ್ ಬಸಂತದ ನಡು ಪಣ್ ಬಸಂತದ ಸೆಱಂಗೆನೆ (ಶಾಂತಿಪು. ೨-೧೪೩). **ಸೆರಗು$_1$**: ೧. ಕಣ್ಣಿನಲ್ಲಿರುವ ಬಿಸಿನೀರನ್ನು ತನ್ನ ಸೆರಗಿನಿಂದ ಒರಸಿದಳು (ವಾರಾಕ್ಕ. ೪೧). ೨. ಪಂಥ ಮಿಗಲಾ ಖಳರು ಸೆರಗಿನಲಾಂತು ವೀಳೆಯಗಳನು (ದೇವೀಸು. ೩-೩). ೩. ಮೇಲಕ್ಕೆ ಹತ್ತಿ . . . ನಿಡಿದಾದ ಕಾಡಿನ ಸೆರಗಿಗೆ ಬಂದರು (ಯೋಧಪು. ೬೩); ಘಟ್ಟದ ಸೆರಗಾದುದರಿಂದ ಒಳ್ಳೆಯ ಮಳೆ ಬೀಳುತ್ತಿದ್ದಾಗಲೆಲ್ಲ (ವಾತ್ಸಲ್ಯ. ೧೩೦). ೪. ಸಹಾಯ; ಆಶ್ರಯ: ನಿನ್ನ ಸೆರಗನೆ ಹಿಡಿವಾಂ ಬಿಡೆ ನಿನ್ನ (ಗೀವಿಂ. ೧೪-೫೮). ೫. ಭಾಗ; ಶಾಖೆ: ಭಾರತಕ್ಕೆ ಈ ಸೆರಗಿನಿಂದ ಬಂದ ಜನರಲ್ಲಿ ಕ್ರೂರಿಗಳೂ ಇದ್ದರು, ಸಭ್ಯರೂ ಇದ್ದರು (ಭಾರದ. ೪೧೫); ಹೂಗ್ಲಿ . . . ಗಂಗಾನದಿಯದೇ ಒಂದು ಸೆರಗು (ಆಲನ. ೧೧೬). **ಸೆಱಗು**: ೧. "ಸೆಱಗೆ ಚೇಲಾಂಚಲಂ" (ಕವಿಕಂ. ೧೭೫);

ಸೊಗಯಿಪ ದುಗುಲದ ಸೆಱಗಂ ಮೊಗಕ್ಕೆ ತೆಗೆದಾಗಳಿರದೆ ಗೋಳಿಟ್ಟಟ್ಟಿಳ್ (ಕಾದಂಪೂ. ೯೫೮); ಉಟ್ಟ ಸೆಱಗು ಸೋಂಕಲು ನಿನ್ನ ಮುಟ್ಟು ಭೇದಿಸಿತು (ದೀಕ್ಷಾಬೋ. ೧೧೭-೭). ೨. ಉತ್ತರೀಯವಸನದ ಸೆಱಗಿನಿಂ ಸುರಿವ ಬಾಷ್ಪೋದಕದ ಬಿಂದು ಸಂದೋಹಮಂ ತೊಡೆದು (ಪುಣ್ಯಾಸ್ರ. ೧-೭೨ ವ); ಖಿಳಶಿರೋಮಣಿಗಳು . . . ಸುಲೋಚನಜಲವ ಸೆಱಗಿನೊಳೊರಸಿ ನುಡಿದರು (ಕುಮಾ.ಅ. ೧೭-೮); ಪೊಂಬಟ್ಟೆಸೆಱಗಿನಿಂ ತೊಡೆದ ಲೋಚನವ (ಮೋಹತ. ೪-೮೭). ೪. ಅಱಿವು ಮಱೆದಪಕೀರ್ತಿನಾರಿಯ ಸೆಱಗ ಹಿಡಿದರು (ಕುಮಾದ್ರೋ. ೬-೨೭); ಜಸವೆಣ್ಣು ನಮ್ಮ ಸೆಱಗ ಪಿಡಿವಳೆಂದು ನುಡಿದು (ಕಂನವಿ. ೧೫-೨೮). ೫. ಶ್ರೀಖಂಡಾವನೀಮಂಡಲದೊಳ್ ನೆಲದೊಂದು ಸೆಱಗಿನೊಳಪ್ಪೊಡಂ ಕೇಳಲಾಗದಪವಾದಮಿಂದು . . . ಕಾಣಲಾದುದು (ಶಾಂತಿಪು. ೩-೬೦ ವ).

**ಸೆಱಗಂ ಗಂಟಿಕ್ಕಿಕೊಳ್, ಸೆರಗಿಗೆ ಗಂಟುಹಾಕಿಕೊಳ್ಳು** = (ಆಲಂ) ನೆನಪಿನಲ್ಲಿಟ್ಟು ಕೊಳ್ಳು: ತನ್ನ ಬಗೆ ತೀರ್ದುದೆಂದು ರಾಗಿಸಿ ಶಕುನಮೆಂದು ಸೆಱಗಂ ಗಂಟಿಕ್ಕಿ ಕೊಂಡು ಮಾಳವೇಶ್ವರಂಗಿಂತೆಂದಳ್ (ಧರ್ಮಾಮೃ. ೪-೨೦೧); ಈ ಮಾತನ್ನು ಅವನು ಸೆರಗಿಗೆ ಗಂಟುಹಾಕಿಕೊಂಡು ಕುಳಿತುಬಿಟ್ಟನು (ಇಪ್ಪತ. ೩೫೮). **ಸೆರಗುಹಾಸು** = (ಆಲಂ) ಹಾದರ ಮಾಡು; ವ್ಯಭಿಚಾರಕ್ಕೆ ಇಳಿ: ಕಂಡವರಿಗೆ ಸೆರಗುಹಾಸುವ ಹೆಣ್ಣನ್ನು ಬಯಸುವ ಹೆಗಡೆ ನಾನಲ್ಲ (ದೇವಹಂ. ೨೦೨).

[ದೇ. ‖ ತುಳು. ಸೆರಂಗು; ತೆಲು. ಚೆಱಗು]

**ಸೆಱಗು** 'ಸೆಱಂಗು' ನೋ.

**ಸೆಱಗುವಿಡಿ, ಸೆರಗುಹಿಡಿ** (ಕ್ರಿ). ೧. (ವಸ್ತ್ರದ) ಅಂಚನ್ನು ಹಿಡಿ; (ಬಟ್ಟೆಯ) ತುದಿಯನ್ನು ಹಿಡಿ: ಚಲಿಸುವ ರಥಧ್ವಜದ ಸೆಱಗುವಿಡಿದೆಳೆದು (ಚಬಪು. ೪೩-೨೭); ಸೆಱಗುವಿಡಿಯೆ ಸಾರ್ಸಾರೆಂಬ ಕರವನು ಭರದೆ ತುಡುಕಲೊಡೆಮುರಿವ . . . ತರಳೆವೆಣ್ಣು ಗಳೊಪ್ಪಿದರು (ಕಂನವಿ. ೬-೧೭೫). ೨. ಪಕ್ಕದಿಂದ ಆರಂಭಿಸು; ಬದಿಯಿಂದ ತೊಡಗು: ಅಲ್ಲಿನ್ನಂಕಲು ಹೆಬ್ಬೆಟ್ಟದ ಸೆಱಗುವಿಡಿದು ಹೆಬ್ಬಳ್ಳವ ಪೋಗಿ (ಎಕ. XIV, ಮಂಡ್ಯ. ೩೦-೪೪; 1261). **ಸೆರಗುಹಿಡಿ**: ೩. ಆಶ್ರಯಿಸು: ಪ್ರಿಯನಾಥಬಾಬು ಬನಾರಸ ನಗರಸಭೆಯ ಸೆರಗುಹಿಡಿದರು (ಪ್ರೇಮಾತ್ರ. ೨೪೯). [ಸೆಱಗು (< ಸೆಱಂಗು) + ಪಿಡಿ$_1$]

**ಸೆಱಗುಸೋಂಕು** (ಕ್ರಿ). (ಆಲಂ) ಪ್ರಭಾವ ತಾಕು: ವಿಜಯಲಕ್ಷ್ಮಿಯ ಸೆಱಗು ಸೋಂಕಿತು (ಕುಮಾ.ಕ. ೧೪-೭). [ಸೆಱಗು (< ಸೆಱಂಗು) + ಸೋಂಕು$_1$]

**ಸೆಱಗೊಡ್ಡು, ಸೆರಗೊಡ್ಡು** (ಕ್ರಿ). ೧. ಸೆರಗನ್ನು ಮುಂದೆ ಹಿಡಿ. ೨. (ಆಲಂ) ಬೇಡು; ಯಾಚಿಸು. **ಸೆರಗೊಡ್ಡು**: ೨. ತಮ್ಮಲ್ಲಿ ಸೆರಗೊಡ್ಡಿ ಪತಿಭಿಕ್ಷೆಯನ್ನು ಬೇಡುವವಳಾಗಿರುವೆನು (ಚನ್ನಬೇ. ೭೦); ಸೆರಗೊಡ್ಡಿ ಅವರನ್ನು ಪ್ರಾರ್ಥಿಸಿಕೊಳ್ಳು (ಪ್ರಬಂಧ. ೫೫); ಮಣಿದ ಮೊಳಕಾಲಿನಲ್ಲಿ ಸೆರಗೊಡ್ಡಿ ಶರಣಾರ್ಥಿಯಾಗಿರುವನರ್ಜುನಂ (ಚಿತ್ರಾಂಗ. ೩೮ - ೧೧೨೪).

**ಸೆಱಗೊಡ್ಡಿ ಬೇಡು, ಸೆರಗೊಡ್ಡಿ ಬೇಡು** = ಅತ್ಯಂತ ದೈನ್ಯದಿಂದ ಬೇಡು,— ಯಾಚಿಸು: ಎಂತಾದೊಡಮೆನ್ನ ಕೆಳೆಯನಸುವಂ ಪಿಡಿವುದು ಸೆಱಗೊಡ್ಡಿ ಬೇಡಿದೆಂ ಮೃಗನಯನೇ (ಕಾದಂಪೂ. ೮೭೮); ನಿಮ್ಮ ಚರಣವ ನೆನೆವಂತೆ ಕರುಣಿಸು ಸೆಱಗೊಡ್ಡಿ ಬೇಡುವೆ ನಿಮ್ಮ ಧರ್ಮ (ಬಸವ. ೩೪); ದೇವರ ಬಳಿ ತಾಯಿ ಸೆರಗೊಡ್ಡಿ ಬೇಡಿಕೊಂಡಳು (ಶ್ಯಾಮತಾ. ೧೫). [ಸೆಱಗು (< ಸೆಱಂಗು) + ಒಡ್ಡು$_1$]

**ಸೆಱಪು** , ಚರಪು, ಚರುಪು, ಚೆಱಪು, ಚಿರಪು, ಚೆರಪು, ಚೆಱಪು, ಸೆರಪು (ನಾ). ೧. ಆತಿಥ್ಯ; ಸತ್ಕಾರ; ಉಪಚಾರ: ವಿಖ್ಯಾತಂಗೆ ನರಂಗೆ ಸೆಱಪುಗೆಯ್ದನನಂತಂ (ಪಂಪಭಾ. ೪-೪೪); ತನ್ನ ಸೆಱಪೇ ಸೆಱಪು, ತನ್ನ ತೇಜಮೆ ತೇಜಮ್ ಎನೆ ಬೆಳಪ ಪಂಪನ್ (ಹೊಂಗಳು. ೩೯-೫). ೨. ಉತ್ಸವ; ಹಬ್ಬ. ೩. ನೈವೇದ್ಯ; ಪ್ರಸಾದ. **ಚರಪು**: ೨. ದೀಪಾರಾಧನೆ ಪುತ್ಸಾಹ ಚರಪು ಸಹಾ (ಮೈಆರಿ. ೧೯೪೩, ೫೦-೨೭; 1082). ೩. ಶನಿವಾರ ಸಂಜೆಯ ಭಜನೆಯೇ ನಿಜವಾದ ಸಾರವತ್ತಾದ ಭಜನೆ. ಅಂದೇ ಚರಪು ಸಿಕ್ಕುತ್ತಿದ್ದುದು (ಸಂಧ್ಯಾರಾ. ೩೦). **ಚರುಪು**: ೨. ಪರಿಪರಿ ಚರುಪ ಚರಿಸಿದೆ ಹರಿಯಾಚರಿಸು (ಪ್ರಸಕೀ. ೪೭-೪). ೩. ಜನ ತುಂಬಿಸಲಿಕ್ಕೆ ಚರುಪೇ ರಾಜಮಾರ್ಗವೆಂದು . . . ದೊಡ್ಡದಾಗಿ ಚರುಪು ಕಡಲೇಗುಗ್ಗುರಿ ಎಂದು ಬರೆದ (ವೃದ್ಧವಿ. ೧೦೦); ಚರುಪು ಹಂಚುವ ವೇಳೆಗೆ ನನ್ನನ್ನು ಹೊರಹಾಕುತ್ತಿರುವುದು ಸರಿಯೆ? (ದಾನಚಿಂ. ೨೧). **ಚೆಱಪು**: ೨. ತೆಪ್ಪ ತಿರುನಾಳು ಚೆಱಪು ತಿರುನನ್ನಾವನ ಮೊದಲಾದ ಕೈಂಕರ್ಯದ ಶೆಲವಾಗಿ (ಎಕ. XIV, ಶ್ರೀರಂಗ. ೯೫-೨; 1535). **ಚಿರಪು** : ೨. ಚಿರಪು ಪುಳುಗಾಮೆಗೆ ಸಮರ್ಪಿಸಿದ ಚಿತ್ರ ಗ ೧೫೦ (ಸೌಇಇ. IX- ii, ೫೪೭-೩; 1532). **ಚೆರಪು** : ೨. ಉತ್ಸವ ಚೆರಪು ಮುಂತಾದ್ದ ಮಾಡುವ ವಿವರ (ಮೈಆರಿ. ೧೯೪೩, ೨-೨೩; 1708). **ಚೆಱಪು** : ೨. ಚೆಱಪಿನ ಕಟ್ಟಳೆ ದಿನ ೧೪ಕ್ಕಂ ಅಕ್ಕಿ ಮಣವ ೧ (ಎಕ. XV, ಬೇಲೂರು. ೭೦-೩೧; 1485). **ಸೆರಪು** : ೧. ಸೆರಪಿನಿಂ ಬೀಳ್ಕೊಡುವ ಕಾಡೊಳ್ಸನುಂಡಂ (ಕಾಲೂರ. ೭೦-೯೯). [ದೇ. ‖ ತಮಿ. ಚಿಱಪ್ಪು; ತುಳು. ಚರಿಪು, ಚರ್ಪು; ತೆಲು. ಚರುವು./ ಸಂ. ಚರು]

**ಸೆಱೆ$_1$** (ಕ್ರಿ). ಸೆಡೆ; ಸಂಕೋಚಗೊಳ್ಳು; ಕುಗ್ಗು: ತೆಱೆದ ಬಾಯ್ಗಿಗೆ ಸೆಱೆ [ಪಾಠಾಂ. ಪೆಱ]ತ ಕಂಗಳ ಕೆದರ್ದ ಕೇಶದ ಶಬವ ಕಂಡು (ಸನತ್ಕು. ೧೧-೧೦); ಗೌಡದೇಶದ ರಾಯನಿವನೆನೆ ಹಳ್ಳಿಯ ಗೌಡನೆಂದೆಣಿಸಿ ಸಾಗಿದಳು ಔಡುಗಚ್ಚಿದನವ ಸೆಱೆತು ನೋಡಿದ ತನ್ನ ಗೌಡಿಯೊ ಬೆದಱಿ ಬಹಾಗ (ಭರಚ. ೫೫-೯೩). 'ಸೆಡೆ$_2$' ಪರಾ.

[ದೇ. ‖ ತಮಿ. ಮಲ. ಚೆಱಿ, ಚೆಱು]

**ಸೆಱೆ$_2$, ಸೆರೆ$_2$** (ನಾ). ೧. ಬಂಧನ; ಕಟ್ಟು: ಪಿಡಿದುಯ್ಯುದು ಗಂಧರ್ವರ ಪಡೆ ಗಡ ನಿಮ್ಮಣ್ಣನಂ . . . ಬೇಗಂ ಬಿಡಿಸಿ ತರ್ಪುದಾತನ ಸೆಱೆಯಂ (ಪಂಪಭಾ. ೨-೨೨); ಮದವತ್ಕರಿ ಸೆಱೆಯಂ ಪೆಱೆದೊದವಿದ ಮುಳಿಸಿಂದೆ ಭೋರನೆಯ್ತಂದೊಡೆ (ಸೌಇಇ. IX - i. ೫೨-೨೦; 1007); ಧನವನಾರ್ಜಿಸಿ ತಂದು ಸೆಱೆಯ ಬಿಡಿಸುವೆಂ (ಹಚಕಾ. ೧೨-೪೭); ರಕ್ಕಸಕೋಟಿ ಜೀಯೆನುತ ಸಿಡಿಲ ಸೆಱೆ ಬಿಟ್ಟಂತೆ ಭುಜವನು ಹೊಡೆದು ಮುಂಚಿತು (ಕುಮಾದ್ರೋ. ೧೫-೪೭). ೨. ಬಂಧಿಸಿಡುವ ಸ್ಥಳ,—ಜಾಗ; ಕಾರಾಗೃಹ: ಸೆಱೆಯೊಳ್ ಮತ್ತೇಕಿಕ್ಕಿದಳ್ (ಕಾದಂಉ. ೭೭೧); ಅರಸನಾತನ ಕೈಯೊಳಿರ್ದ ವಸ್ತುಗಳೆಲ್ಲಮಂ ಕೊಂಡು ಬಱಿಕ್ಕೆ ಸೆಱೆಯೊಳಿಕ್ಕೆ (ಪಂಚತಂ. ೧೨೨-೧೮); ರಸದೊಱತೆಯ ಸೆಱೆಯಂತಿರ್ಪ ಪಣ್ಣ ಸೆರೆಯಂ ಕಂಡು ಕಣ್ಗೊಳಾಲಿಂಗಿಸುತೆ ಸವಿಸವಿದು ನೋಡಿ (ಗಿರಿಕ. ೩-೧೧೩ ವ). ೩. ಸೆರೆಯಾಳು; ಬಂದಿ; ಖೈದಿ: ಕೊಳ್ ನಿನ್ನ ನಚ್ಚಿನ ಸೆಱೆಯನೆಂದು ಬಿಸುಟ್ಟೊಡ (ಪಂಪಭಾ. ೭-೩೮ ವ); ಪರಿತಂದು ಶಿವಭೂತಿಯಂ ಸೆಱೆಯಂ ಬಿಟ್ಟೊಡಗೊಂಡು ಪೋಪುದುಂ (ಪಂಚತಂ. ೧೧೩-೧೭); ಸೆಱೆಸಹಿತ ತಾನ್ನೆಯ್ದುವನು ನಿಜಪುರಿಗೆ (ಕುಮಾ.ಅ. ೬೦೧. ೨೪-೨೭). ೪. (ಆಲಂ) ಪಗಡೆಯಾಟದಲ್ಲಿ ಕಾಯಿಗಳನ್ನು ಜೊತೆಕಟ್ಟುವುದು: ಸೆಱೆಯುಮೇಱುಂ ನೆತ್ತಮಾಡುವರೊಳ್ (ಎಇ. XIII, ೩೩೨-೪೪; 929); ಸಮರದ್ಯೂತ ಕೇಳಿಯಲಿ ಹಲಗೆಯ್ದೆ ಕುರುಭೂಮಿ ಕೌರವಕುಲದ ತಲೆ ಸಾರಿಗಳು ಸೆಱೆಯಲಿ ಗೆಲಲು ಬಂದೆನು ಕೊಳ್ಳು ಹಾಸಂಗಿಗಳನೆನುತೆಚ್ಚ (ಕುಮಾದ್ರೋ. ೧೦-೪೯). **ಸೆರೆ$_2$**: ೧. ತುಂಬುಗಣ್ಣೊಳವನ ರಾಮು ಸೆರೆಯ ಕೊಳುವನು (ರಾಮಾನ. ೮೯). ೨. ಕಳ್ಳನನ್ನು ಸೆರೆಯಲ್ಲಿಟ್ಟಿದ್ದಾರೆ (ರೂಢಿ). ೩. ರಾಜೇಂದ್ರನು ಸೆರೆಯಂ ಪಿಡಿಸಿ ತಂದನೆಂದು ಕೇಳಿ (ಸೌಗಂಧಿ. ೩೬೦-೨೧).

**ಸೆಱೆಯಾಗು, ಸೆರೆಯಾಗು** = ಬಂಧನಕ್ಕೆ ಸಿಗು; ಬಂಧನಕ್ಕೊಳಗಾಗು: ಅರವಿಂದ ದಲಗರ್ಗಳೊಳ್ಸೆಱೆಯಾದುವಾಱಡಿಗಳು (ಜೈಮಿಭಾ. ೧೭-೭೦): ಕಾಡುತಿಹ ಹಸಿವಿಂದ ಬೇಡುತಿದೆ ಕಿರುಕಂದ ಹೂಡಿದ್ದ ಚಕ್ಕುಲಿಗೆ ಸೆರೆಯಾದೆನಮ್ಮ (ಕವಪು. ೩೨-೧೭).

[ದೇ. ‖ ತಮಿ. ಚಿಱೈ; ಕೋಲಾ. ಚೆರ್; ತೊದ. ಸೆರ್; ತುಳು. ಸೆರೆ; ತೆಲು. ಚೆಱ]

**ಸೆಱೆಕೊಳ್ಳು** (ನಾ). ಬಂಧನ ಮತ್ತು ಹಿಡಿತ: ವಿಪತ್ತಿಯಿಲ್ಲ ರುಜೆಯಿಲ್ಲು ತ್ಪಾತಮಿಲ್ಲಾವಗಂ ಸೆಱೆಕೊಳ್ಳಿಲ್ಲ ನಿರೋಧಮಿಲ್ಲ ಪಿಡಿಕಟ್ಟಿಲ್ಲ (ಬಾಧಪು. ೪-೭).

[ಸೆಱೆ$_2$ + ಕೊಳ್ಳು$_0$ (< ಕೋಳ್)]

**ಸೆಱೆಕೋಲ್$_1$** 'ಸೆಱೆಗೋಲ್' ನೋ.

**ಸೆಱೆಕೋಲ್$_2$** (ನಾ). ಯತಿಗಳ ದಂಡ (?): ಉಱದಾನ್ತೀ ಶಿವಸಕ್ತಿಯ ಸೆಱೆಕೋಲಿಂ ಗಳ್ಕೆ ಮನ್ಮಥಂ . . . ಸೆಱೆಯೊಳಡಂಗಿದನಿದೇಂ ಕರಂ ವಿಸ್ಮಯಮೋ (ಎಕ. XII, ಚಿಕ್ಕನಾ. ೩೦-೨೭; 1149). [ಸೆಱೆ$_2$ + ಕೋಲ್$_1$]

**ಸೆಱೆಗಟ್ಟು** (ಕ್ರಿ). ಸೆರೆಹಿಡಿ; ಬಂಧಿಸು: ಮಹೀಕಾಂತವರೇಣ್ಯ ಮಾಣ್ಬುದೆನಗೀ ಬೆಸನಂ ಸೆಱೆಗಟ್ಟಿ ತಂದಪೆಂ (ರಾಜಶೇ. ೫-೧೫೦). [ಸೆಱೆ$_2$ + ಕಟ್ಟು$_1$]

**ಸೆಱೆಗೆಯ್, ಸೆರಗೈ** (ಕ್ರಿ). = **ಸೆಱೆಗಟ್ಟು**: ಕಾರ್ಮುಕಾಚಾರ್ಯನನುಱೆ ಸೆಱೆಗೆಯ್ಯದೆ ವಿನಯಾಸ್ತ್ರಮನೆಚ್ಚು . . . ಪೊಡೆಮಟ್ಟು (ಪಂಪಭಾ. ೧೧-೧೩೩ ವ);

ವಿಶ್ರಮಸ್ಥಾನಮನಾ ಮಹೀಭುಜನ ಮೆಯ್ಸಿರಿಯಂ ಸೆಱೆಗೆಯ್ಕೆ (ಪಂಪರಾಮಾ. ೩-೪೪); ವಾನರಾಳಿ ನಡುಗುತ್ತಿರ್ದತ್ತು ಶಾಖಾಗ್ರದೊಳ್ ಸೆಱೆಗೆಯ್ದುಂದದೆ (ಕುಸುಮಾ. ೭-೧೩). **ಸೆರೆಗೈ:** ಸುಮ್ಮನೆ ಮನಸ್ಸನ್ನು ಸೆರೆಗೈದರೆ, ಕರಗಿಸಿದರೆ ಸಾಲದು, ಅವು ನಮ್ಮನ್ನು ರಸವಶತೆಗೆ ಒಯ್ಯಬೇಕು (ಸೌಂದಸ. ೭೫). [ಸೆಱೆ$_2$ + ಕೆಯ್$_1$]

**ಸೆಱೆಗೊಳ್** (ಕ್ರಿ). ೧. ಬಂಧನಕ್ಕೊಳಪಡಿಸು; **ಸೆರೆಹಿಡಿ:** ಗಲ್ಲು ನಾಕದ ನರಲೋಕದೊಳ್ಪನದು ಪೇಟು ಸೆಱೆಗೊಂಡುದೊ ಸೂಱೆಗೊಂಡುದೊ (ಶಾಂತಿಪು. ೧-೬೬); ಮನೋಹರಿಯಿವಳ್ಪೆಱೆಗೊಂಡಳೋ ನೆಱೆ ಸೂಱೆಗೊಂಡಳೋ ಪೇೞಿದಂ (ಧರ್ಮಾಮೃ. ೩-೪೩); ಪತಿಚಿತ್ತದಿರವ ಸೆಱೆಗೊಂಡು (ಹದಿಬ. ೪-೭). ೨. ಮುಚ್ಚಿಕೊಳ್ಳು: ತಣ್ಣೆಲರ ಸೊಗಸಿಂದೆ ಕಣ್ಣೆವೆಗಳು ಸೆಱೆಗೊಂಡವು (ಜೈಮಿಭಾ. ೨೯-೪೯). [ಸೆಱೆ$_2$ + ಕೊಳ್$_1$]

**ಸೆಱೆಗೋಲ್, ಸೆಱೆಕೋಲ್$_1$** (ನಾ). (ಸೈನ್ಯದ) ಮಗ್ಗುಲು; ಪಾರ್ಶ್ವ; ಪಕ್ಕ: ಅಂತುಭಯಬಲದ ಸೆಱೆ[ಪಾಠಾಂ.ರೆ]ಗೋಲ್ಗಳೊಂದೊಂದಂ ಮುಟ್ಟುವಿನಂ (ಆದಿಪು. ೧೪-೯೪ ವ). **ಸೆಱೆಕೋಲ್$_1$:** ಸೆಱೆಕೋಲ್ ಸೆಱೆಕೋಲಿಂ ಪತ್ತಱುಗಾವುದ ಬಲದ ಪವಣನನಿತಿನಿತೆಂದಾನಱಿಯೆಂ (ಪಂಪಭಾ. ೧೦-೫೯). [<—ತಮಿ. ಚಿಱೈಕ್ಕೋಲ್]

**ಸೆಱೆತುಱು** (ನಾ). ಸೆರೆಹಿಡಿದ ಪಶು: ಸೆಱೆತುಱುಸಹಿತ ಸೋಸಲೆಯ ಕಡುವ ದಾಟ (ಕಂಠವಿ. ೩-೫೭). [ಸೆಱೆ$_2$ + ತುಱು]

**ಸೆಱೆದನ** (ನಾ). = ಸೆಱೆತುಱು: ಕುಪ್ಪಟೂರಗ್ರಹಾರವನಿಱಿದು ಸೆಱೆದನವ ಕೊಣ್ಣು (ಎಕ. VIII, ಸೊರಬ. ೨೮೪-೬; 1283). [ಸೆಱೆ$_2$ + ದನ]

**ಸೆಱೆಮನೆ** 'ಸೆಱೆವನೆ' ನೋ.

**ಸೆಱೆಯಾಳ್** (ಕ್ರಿ). ಬಂದಿಯಾಗಿಟ್ಟುಕೊಳ್ಳು; ಸೆರೆಗೊಳ್ಳು: ಶ್ರೀಪರಮೇಶನ ಸೆಱೆಯಾಳ್ದ ಶರಣಂಗೆ ತಾಪತ್ರಯವೇಕೆ (ಮೋಹತ. ೩೩-೨೭). [ಸೆಱೆ$_2$ + ಆಳ್$_1$]

**ಸೆಱೆಯಿಕ್ಕು** (ಕ್ರಿ). ಬಂಧನದಲ್ಲಿಡು: ಅನ್ನಗಮಿಮಾಗಳ್ಸೆಱೆಯಿಕ್ಕಿಯಿಂ ನಿಲಿಪುದೆಂದೆನ್ನಲ್ಲಿ ಗಿಂತಟ್ಟದಂ (ಕಾದಂಉ. ೭೭೪); ಅವರರಸಿಯರನೆಲ್ಲರನೆಳೆತರಿಸಿ ಸೆಱೆಯಿಕ್ಕಿ (ಸಂಭವ. ೨೫-೪೦). [ಸೆಱೆ$_2$ + ಇಕ್ಕು]

**ಸೆಱೆಯಿಡು** (ಕ್ರಿ). = ಸೆಱೆಯಿಕ್ಕು: ಪ್ರದ್ಯೋತಂ ಕಾಳಿಗಮಂ ಗಲ್ವೊದ್ದಾಯನನಂ ಪಿಡಿದು ಕಟ್ಟಿ ಸೆಱೆಯಿಟ್ಟಂ (ವಡ್ಡಾರಾ. ೧೬೫-೧೫); ಸ ಳಿವ ನೀಲಮೇಘಾವಳಿಯಂತರದಿಂ ಸೆಱೆಯಿಟ್ಟಂತೆ (ಗಿರಿಕ. ೨-೭೫); ಧುರದಿ ನಿನ್ನನು ಕಾರ್ತವೀರ್ಯನು ಹಿಂದೆ ಸೆಱೆಯಿಡಲು (ಕೌಶಿರಾ. ೧೪-೨೦). [ಸೆಱೆ$_2$ + ಇಡು$_1$]

**ಸೆಱೆಯಿರ್** (ಕ್ರಿ). ಬಂಧನದಲ್ಲಿರು; ಸೆರೆಯಲ್ಲಿರು: ವೈರಿ ಜಯಶ್ರೀ ಸೆಱೆಯಿರ ಭೂರಿಭುಜಾಂತರದೊಳ್ (ಶಾಂತಿಪು. ೩-೩೫); ಸೆಱೆಯಿರ್ದ ಸೀತೆಯಂ ಪಾವಕನ ಮುಖದಿಂ ಪರಿಗ್ರಹಿಸಿ (ಜೈಮಿಭಾ. ೧೮-೮). [ಸೆಱೆ$_2$ + ಇರ್$_1$]

**ಸೆಱೆಯೋಗು** (ಕ್ರಿ). ಬಂಧನಕ್ಕೆ ಸಿಲುಕು; ಸೆರೆಸಿಕ್ಕು: ನಿಮ್ಮಣ್ಣನಾಡಿ ದುಹಾರದಲಿ ಸೆಱೆಯೋದನಾತನ ಹರಿಬವೇ ನಿಮಗೆ (ಕುಮ್ಮಾರ. ೨೦-೧೩). [ಸೆಱೆ$_2$ + ಪೋಗು$_1$(< ಪೋ$_1$)]

**ಸೆಱೆವನೆ, ಸೆರೆಮನೆ, ಸೆಱೆಮನೆ** (ನಾ). ಕಾರಾಗೃಹ; ಬಂದೀಖಾನೆ; ಜೈಲು: ಸೆಱೆವನೆಯಿಂದಂ ಭೋಂಕನೆ ಪೊಱಮಟ್ಟು (ಆದಿಪು. ೧೩-೫೪); ಸುನಂದಾ ದೇವಿಯಿರ್ದ ಸೆಱೆವನೆಗೆ ತಾನೆ ವಂದು (ಅನಂಪು. ೧೨-೨); ಭೋಂಕನೆ ಹೊಕ್ಕರು ಸೆಱೆವನೆಯೊಳು ಹೊನ್ನ ಸಂಕಲೆವಡೆದ ಬಾಲಕನ ಸಂಕಟವನು ಕಂಡು (ಮೋಹತ. ೪೧-೨೯). **ಸೆರೆಮನೆ:** ಈ ಅರಮನೆಯ ಸೋಗಿನ ಜೀವನ ಅವನಿಗೆ ಸೆರೆಮನೆಯೇ ಆಯಿತು (ಮಣಸ. ೪೨); ವಂಚಕರನ್ನು ವಿಚಾರಣೆಯಿಲ್ಲದೆ ಸೆರಮನೆಗೆ ತಳ್ಳಿರಿ (ರೂಪಸಂ. ೨೫). **ಸೆಱೆಮನೆ:** ಕುಳಿಂದನಂ ದಂಡಿಸಿದನಾ ದುಷ್ಟಬುದ್ಧಿ . . . ಸೆಱೆಮನೆಗಿಕ್ಕಿ ನಿಗಳಮಂ ಕಾಲ್ಗೆ ಪೂಡಿ (ಜೈಮಿಭಾ. ೩೧-೨೭). [ಸೆಱೆ$_2$ + ಮನೆ]

**ಸೆಱೆವಿಂಡು** (ನಾ). ಸೆರೆಯಾಳುಗಳ ಸಮೂಹ; ಬಂದಿಗಳ ಗುಂಪು: ಸುರರ ಸೆಱೆವಿಂಡುಗಳನಾಳ್ದನೆ ಸುರಪನಭಿಮಾನವನು ಕೊಂಡನೆ (ಕೌಶಿರಾ. ೩೭-೯). [ಸೆಱೆ$_2$ + ಪಿಂಡು$_2$]

**ಸೆಱೆವಿಡಿ, ಸೆರವಿಡಿ, ಸೆರೆಹಿಡಿ** (ಕ್ರಿ). ೧. = ಸೆಱೆಗೊಳ್ ೧: ಶಿವಶಿವಾ ನಿರ್ಬಂಧವಿದು ಕೌರವನಲಾಯಿತೆ ಮದ್ಯಮಯಗಂಧವನು ಕುಡಿಸುವ ಪರಿಯಱಲಾ ತುಂಬಿಗಳ ಸೆಱೆವಿಡಿದು (ಕುಮ್ಮಾರ. ೫-೩೭); ತುಱುವನು ಸೆಱೆವಿಡಿದು . . . ಮುಂದಕ್ಕೆ ತೆರಳಿದನಾ ಖಾನನು (ಕಂಠವಿ. ೧೦-೫೭). ೨. ಆಕರ್ಷಿಸು; **ಸೆಳೆ:** ತನ್ನ ಮನಮುಮನೆರ್ದೆಯುಮನುಱೆ ಸೆಱೆವಿಡಿದಿರ್ದಪೂರ್ವರೂಪೆಯ ರೂಪಮಂ ಮನದೊಳ್ ಬಗೆದು ಭಾವಿಸಿ (ಪಂಪಭಾ. ೪-೭೦ ವ); ಆಕೆಯ ಪರಭಾಗಂ ಪತಿಯ ಮನಮನುಱೆ ಸೆಱೆವಿಡಿಗುಂ (ಜಗವಿ. ೧೦-೪೭); ಮನವ ಸೆಱೆವಿಡಿದು ಸೋಲಿಪ ವಿದಗ್ಧೆಯರು . . . ನಡೆತಂದರು (ಸೌಂದಪು. ೭-೬೯). **ಸೆರವಿಡಿ:** ೨. ಸಾರಿದರೆ ನೂರಾಗಿ ಹರಿದೋಡುತಿಹನು ಸೇರಿದರೆ ಸೆರವಿಡಿದು ಮರಳಿ ಪೋಗೊಡನು (ಕವಪು. ೧೧-೭). **ಸೆರೆಹಿಡಿ:** ೧. ಸಿಡಿಲ ಪಳಗಿಸುವರಿವು, ರವಿಯ ಸೆರೆಹಿಡಿವರಿವು (ಮಲರೇ. ೪೮-೧); ಅಬ್ಬಾ! ಸುಖಾರು ಶೂರನೇ ಸರಿ, ಮೇಘರಾಜನನ್ನು ಸೆರೆಹಿಡಿದಿರುವವನಲ್ಲ! (ಮಣಸ. ೫೭). ೨. ಮಕ್ಕಳ ಮನಸ್ಸನ್ನು ಸೆರೆಹಿಡಿಯಬೇಕಾದರೆ ಕಥೆಯನ್ನು ಸಮಿಚೀನವಾಗಿ ಹೇಳಬೇಕಾಗುವುದು (ಕಥಕ. ಅಂಕ); ನಿಮ್ಮ ಸಹಾನುಭೂತಿ ನನ್ನನ್ನು ಸೆರೆಹಿಡಿಯಿತು (ಕಮನ. ೨೩೪). ೩. ಸಂಗ್ರಹಿಸು; ಕಲೆಹಾಕು: ನಿಸರ್ಗದಲ್ಲಿರುವ ಆಕಾರವನ್ನು ವರ್ಣಗಳನ್ನೂ ಅವನು ಸೆರೆಹಿಡಿಯುತ್ತಾನೆ (ದೂರಸ. ೫೯); ಕಾವ್ಯಮಾರ್ಗದ ಹದಿನೆಂಟು ವರ್ಣನೆಗಳನ್ನೂ ಹಲವು ರಸಗಳನ್ನೂ ಕನಕದಾಸರು ತಮ್ಮ ಸಂಗ್ರಹಾಲಯದಲ್ಲಿ ಸೆರೆಹಿಡಿಯಲು ಹವಣಿಸಿದ್ದಾರೆ (ತವನ. ೧೬೭). [ಸೆಱೆ$_2$ + ಪಿಡಿ$_1$]

**ಸೆಱೆವೊಯ್** (ಕ್ರಿ). ಬಂಧಿಸಿ ಒಯ್ಯು; ಸೆರೆಹಿಡಿದು ಕರೆದುಕೊಂಡು ಹೋಗು: ಭೂಪಾಲಂ ನಮ್ಮೆಲ್ಲರುಮಂ ಸೆಱೆವೊಯ್ದಪನ್ (ಧರ್ಮಾಮೃ. ೨-೫೦). [ಸೆಱೆ$_2$ + ಒಯ್$_1$]

**ಸೆಱೆವೋಗು** (ಕ್ರಿ). ಬಂಧನ ಕಳಚು: ವಾಯದಲಿ ಕೌರವನ ವಿಜಯಶ್ರೀಯ ಸೆಱೆವೋಯಿತ್ತು (ಕುಮ್ಮಾರ. ೧೩-೪೭). [ಸೆಱೆ$_2$ + ಪೋಗು$_1$ (< ಪೋ)]

**ಸೆಱೆಸಾಲೆ** (ನಾ). = ಸೆಱೆವನೆ: ಸಿಕ್ಕಿದ ಚಿತ್ರವೆಂಬ ಸೆಟ್ಟಿ ಭವದ ತಕ್ಕೆಯ ಸೆಱೆಸಾಲೆ [ಪಾಠಾಂ. ಲಿ]ಯಲಿ ಕೆಟ್ಟಿತ್ತು ಸುಂಕ (ಸಕವ. ಕ. II, ೭೫೪-೨೪). [ಸೆಱೆ$_2$ + ಸಾಲೆ$_4$]

**ಸೆಱೆಸಿಕ್ಕು$_1$** (ಕ್ರಿ). ಬಂಧನಕ್ಕೊಳಪಡು; ಬಂದಿಯಾಗು: ಸೆಱೆಸಿಕ್ಕಿದನಂತುಮ್ಮಳಿಸಿ ನೆರವಿಲ್ಲದನಂತೆ ಕುಂದಿ (ಧರ್ಮಾಮೃ. ೧-೧೬೮). [ಸೆಱೆ$_2$ + ಸಿಕ್ಕು$_1$ (< ಸಿಲ್ಕು$_1$)]

**ಸೆಱೆಸಿಕ್ಕು$_2$** (ನಾ). ಸೆರೆಯಾಗಿ ಸಿಕ್ಕಿರುವುದು: ಸೆಱೆಸಿಕ್ಕಿಂ ಪಿಡಿತಂದ ದೇಸಿಗಿತಿಯಂ ಭೋಗೋಪಭೋಗಂಗಳಂ ಮಱೆದುಂ ಕಾಣದನಾಥೆಯಂ ನುಡಿವವೊಲ್ನಿನ್ನೊಂದು ಸಂಪತ್ತಿಯಿಂ ಜಱಚುತ್ತಿರ್ದಪೆ (ಅನಂಪು. ೧೧-೯೦). [ಸೆಱೆ$_2$ + ಸಿಕ್ಕು$_2$ (< ಸಿಲ್ಕು$_2$)]

**ಸೆಱೆಸೂಱೆ** (ನಾ). ಬಂಧನ ಮತ್ತು ಕೊಳ್ಳೆ: ಈ ಸುದ್ದಿ ಪಟ್ಟಣ ಸೆಱೆಸೂಱೆ ಹೋದೀತು ಹುಯ್ಯಲೊ ಡಂಗುರವ (ಎಬಜಾ. ೧೯೯-೧); ಧಾಳಿಮಾಡುವರಕಟಕಟ ಸೆಱೆಸೂಱೆಗಳ ಪಿಡಿದು ಹಾಳುಮಾಡುವರು (ಹರಿಸಾ. ೯೦). [ಸೆಱೆ$_2$ + ಸೂಱೆ]

**ಸೆಱಿವೆಣ್ಣೆ** (ನಾ). ಒಂದು ಊರಿನ ಹೆಸರು: ಉತ್ತರತಃ ನೇಸಱುಪಳ್ಳಂ ಸೆಱಿವೆಣ್ಣೆ ಕಿಱುಬಳ್ಳಿಯುರ್ಕ್ಕಿಱಿ ಸೆಳ್ಳಕೆಱೆ ನಿಡುವೆತ್ತ ಕೆಱೆ (ಎಕ. III, ಮಂಡ್ಯ. ೧೧೩-೫೯; 713). [?]

**ಸೇಂಗ** 'ಶೇಂಗಾ' ನೋ.

**ಸೇಂಗಾ** 'ಶೇಂಗಾ' ನೋ.

**ಸೇಂದಿ** 'ಸಿಂದಿ' ನೋ.

**ಸೇಂದು, ಸೇದು** (ಕ್ರಿ). ೧. ಬಾವಿ ಮೊದಲಾದವುಗಳಿಂದ ನೀರನ್ನು ಮೇಲಕ್ಕೆ ಎತ್ತು: ''ಸೇಂದು – ಜಲನಿಷ್ಕ್ರಮಣೇ'' (ಶಮಧಾ); ನಿಜಕಾಂತೆಯುಮಾ ಪೆರಿಯ ನಂಬಿಯಬಲೆಯುಮಿರ್ವರ್ ನೀರಂ ಸೇಂದುತ್ತಿರೆ (ದಿವ್ಯಚ. ೧೧-೪೦). ೨. ಉಸಿರನ್ನು ಒಳಗೆ ಎಳೆದುಕೊಳ್ಳು: ನಿತ್ಯಬಿಂದುಗೆ . . . ಸೇಂದು ನಾಂದು (ಶಮದ. ೩೬ ಪ್ರಯೋ). ೩. ದ್ರವಪದಾರ್ಥವನ್ನು ಹೀರಿಕೊಳ್ಳು; ಕುಡಿ: ಪೆರ್ಬಿದಿರನಾಳಿಯನಾರ್ಪಿನೆ ಕಟ್ಟಿ ಮೆಲ್ಲನಲ್ಲಿಯ ಲಲಿತಾಂಬುವಂ ಪದೆದು ಸೇಂದಿದೆನಾಗಳ್ (ದಶಕು. ೧೪-೧೫ ವಿಶ್ವಲಾಪ್ಯಕ). ೪. ಎಳೆ; ಜಗ್ಗು: ನೇಣಂ ಸಾರ್ಚಿ ಮತ್ತಾತನಂ ಸೇಂದುವ ವೇಳೆಯೊಳ್ (ದಿವ್ಯಚ. ೯-೭೪). **ಸೇದು:** ೧. ನೀರಂ ಸೇದಿಕೊಂಡು ಬಂದು (ವಡ್ಡಾರಾ. ೧೧೧-೩); ನೀರಂ ಸೇದಲೆಂದು ಬಾವಿಯೊಳಗಿಕ್ಕುವುದುಂ (ಧರ್ಮಾಮೃ. ೧೨-೧೭೦); ಸುರಿಸುರಿದು ಸೇದುವ ಜಱಾಟಳಂಗಳ (ಕುಮ್ಮಾಸ. ೭-೧೮). ೩. ಭದ್ರಗಜ ನೀರ ಸೇದಿ ಸೊಂಡಿಲೊಳೀವ

ತೆಱೆದೆ (ಮೋಹತ. ೧೪-೬೬); ಒಡೆದು ಬ್ರಹ್ಮಾಂಡಮಾ ಮೇಲಣ ಜಲಂ ಚುಯ್ಯನಡಿಗಡಿಗೆ ಸೇದಿಂಗುತಿರ್ದುದೇಂ ವರ್ಣಿಸುವೆನು (ಚಿಬಪು. ೪೬-೨೫); ಹರಿನಂದನನು ನಿನ್ನ ಸುತನಂ ಸೀಳಿ ರಕ್ತಮಂ ಸೇದಿದಂ ಮನದಣಿಯಲು (ತುರಂಗ. ೬೬-೨೦). ೪. ಸೆಳೆವ ಸೇದುವ ಬೀಸುವೊಗವ . . . ಖಳರ ಕಳಕಳದ ಕೋಳಾಹಳದೊಳು (ಸಿದ್ಧರಾ. ೮-೨೯); ಸವಡಿವೆರಳಲಿ ಸೇದುವಂಬಿನ ತವಕಿಗರು ತಱಬಿದರು (ಕುಮ್ಮಾ.ಗ. ೧-೬); ಹೂಡಿದ ಸರಳ ಕೆನ್ನೆಗೆ ಸೇದಿ ಬಿಡೆ ಕತ್ತರಿಸಿ ಬಿಸುಟುದು (ನಳಚ. ೯-೨೯). ೫. ಮುದುಡು; ಸಂಕೋಚಗೊಳ್ಳು: ನಿಜೋಷ್ಠ ಸ್ಪಂದನಸ್ಫೂರ್ತಿ ಮಾಣದೆ ಮೆಯ್ಸೇದೆ (ಕುಸುಮಾ. ೪-೩೭); ಒಗುವ ಕಂಬನಿಗಳಲಿ ಕಂಠದ ಬಿಗಿದ ಸೆರೆ[ಪಾಠಾಂ. ಲೆ]ಗಳ ಸೇದುವಕ್ಕೆಯ ವಿಗತಪರಿತೋಷಿತನು (ತೊರರಾ. ೧-೪-೭); ನಾಲಗೆ ಸೇದಿತ್ತು (ಗ್ರಾಮಾಯ. ೧೨೯). ೬. ಬೀಡಿ, ಸಿಗರೇಟು ಮೊದಲಾದವುಗಳ ಹೊಗೆಯನ್ನು ಎಳೆದುಕೊಳ್ಳು: ಕೆಲವರು ಅದನ್ನು ತಂಬಾಕ ಸೇದುವ ಹಾಗೆ ಸೇದುತ್ತಾರೆ (ಮುಂಬಯಿ. ೪-೪೦); ಅವರ ಬೆನ್ನಹಿಂದೆ ಸಿಗರೇಟು ಸೇದುತ್ತಾರೆ (ಕುಂಹಿಂ. ೨). ೭. ಸೆಳೆ; ದೋಚು: ಧನಾಢ್ಯರ ಮುರಿದು ಸೆರೆವಿಡಿದು ಸೇದಿದನು ಕನಕಂಗಳ (ತುರಂಗ. ೧೯-೩೨).

**ಸೇದಿಕೊಳ್**, **ಸೇದಿಕೊಳು**, **ಸೇದಿಕೊಳ್ಳು** = ೧. ಸೆಳೆದುಕೊಳ್ಳು; ತೆಗೆದುಕೊಳ್ಳು: ಕಸ್ತೂರಿಗಂಧಿಯರ್ ಬನದೊಳು ಬಹುವಿಧ ವಸ್ತುಗಳನು ಸೇಂದಿಕೊಂಡು (ಮೋಹತ. ೪-೬೦). ೨. ಎಳೆದುಕೊಳ್ಳು; ಜಗ್ಗಿಕೊಳ್ಳು: ರಜ್ಜುವಂ ಪೊಸೆದು ಕೊರಲ್ಗೆ ಸೇಂದಿಕೊಳುತಿರ್ಪ. . . ಬಲಾಢ್ಯನೊರ್ಬನಿರಲು (ದಶಕು. ೯-೧೪); ಬಳ್ಳಿಗೆ ಪುದುಗಿ ನೀಡಲು ಸೇದಿಕೊಂಬೆನು ಮುದದಿ ಹಗ್ಗವನಿಳುಹಿ ನಿನ್ನನು ಸೇದಿತಹೆ ಬಳಿಕ (ಸಾಳ್ವಭಾ. ೧೭-೬೨). **ಸೇದಿಹೋಗು** = ಸೆಟೆದುಕೊಳ್ಳು; ಜಡವಾಗು: ಏನೋ ಹೇಳಬೇಕೆಂದಳು, ನಾಲಿಗೆ ಸೇದಿಹೋಯಿತು (ಕೊತಕಾ. ೪೯); ನನ್ನ ಕೈಕಾಲು ಸೇದಿಹೋಗಿಲ್ಲ (ವಚಭಾ. ೨೪೩). [ದೇ. ‖ ತಮಿ. ಚೇನ್ದು; ತೆಲು. ಚೇದು]

**ಸೇಂದ್ರಕ** (ನಾ). ಒಂದು ರಾಜವಂಶದ ಹೆಸರು: ಸೇನ್ದ್ರಕಬಣೋಭಯದೇಶದಾ ವಿೞಾಪುರಷ ಸಮಕ್ಷದೆ (ಮೈಆರಿ. ೧೯೩೬, ೧೭-೧೧ ; 450). [?]

**ಸೇಂದ್ರಿಯ** (ಗು). ಇಂದ್ರಿಯಗಳಿಂದ ಕೂಡಿದ; ಇಂದ್ರಿಯಸಹಿತವಾದ: ಸೇಂದ್ರಿಯ ಸೃಷ್ಟಿಯಲ್ಲಿ ಮನುಷ್ಯಪ್ರಾಣಿಯೆ ಎಲ್ಲಕ್ಕೂ ಹೆಚ್ಚಿನವನು (ವಚರ. ೧೫). [ಸಂ.]

**ಸೇಕ$_1$**, **ಶಾಕ$_1$**, **ಶಾಖ$_1$**, **ಶೇಕ** (ನಾ). ಕಾವು; ಬಿಸುಪು; ತಾಪ: ಕೆಂದಳಿರ್ವಾಸ ಸೇಕ[ಪಾಠಾಂ. ಸೆರ್ಕ]ದ ತೊವಲ್ಗೆಣೆಯಾಯ್ತು . . . ಇದೇಂ ಬಿಸಿದೊ ಬೇಟದ ಬೆಂಕೆ (ಪಂಪಭಾ. ೫-೭); ತುರಗದ ಸೋಬ(ಫ)ಕ್ಕೆ ಮಳಲ ಸೇಕಂ ಯೋಗ್ಯಂ (ಅಶ್ವಶಾ. ೧೦-೨೨); ಶೀತವೇರಿದ ರಾಮನೆದೆಗೆ ಬೆಚ್ಚನೆ ಸೇಕವನ್ನೊತ್ತಿದಂತಾಯಿತು (ಪಾರ್ತಿಸು. ೬೮). **ಶಾಕ$_1$**: ಶಾಕವಿಲ್ಲದೆ ಪಾಕವ ಮಾಡಿ ತಮ್ಮ ಗಂಡರಿಗಿಕ್ಕಿ ತಾವು ಮೆಲುವರಯ್ಯ (ಶಿವಗೀ. ೭೦-೩೪). **ಶಾಖ$_1$**: ಸೂರ್ಯನೇ ಅತ್ಯಂತ ಹಿರಿಯ ಗ್ರಹ . . . ಅದರಿಂದ ಶಾಖ ಹಾಗೂ ಬೆಳಕು ದೊರೆಯುತ್ತವೆ (ಆಕಾಶ. ೯); ಸ್ವಲ್ಪ ಬಿಸಿನೀರಿನ ಶಾಖ ಕೊಡಲೇ ? (ದೀಪದ .೧೯೯). **ಶೇಕ**: ಮಾನವನ ಬರಿಯಡಗು ಶೇಕದಿ ಬೇನ ಮಾಣುವುದು (ಸಾಳ್ವಭಾ. ೧೭-೫೪).

**ಸೇಕಂಮಾಡು** = **ಶಾಖಕೊಡು**: ಮನುಷ್ಯರ ತೊಡೆಯ ಮಾಂಸದಿಂ ಸೇಕಂ ಮಾಡೆ ಮಾಣ್ಬುದು (ಪುಣ್ಯಾಸ್ರ. ೪-೨೪ ವ). [ದೇ. ‖ ತುಳು. ಸೆಕೆ, ಸಿಕೆ, ಶಿಕೆ, ಶಿಖೆ]

**ಸೇಕ$_2$** (ನಾ). ಚಿಮುಕಿಸುವಿಕೆ; ಸಿಂಪಡಿಸುವಿಕೆ; ಸೇಚನ: ಮಾಣ್ಬುದು ಸೇಕಮನಕ್ಷಿ ಶೂಲೆಯಿರದುಪಶಮಿಕುಂ (ಲೋಕೋಪ. ೯-೭೦); ಇನ್ನಾರ್ಮಧುಬಿಂದು ಸೇಕದೊಳೆ ಕೇಸರದೊಳ್ ಪಡೆವರ್ ವಿಕಾಸಮಂ (ಪಂರಾಮಾ. ೧೪-೧೯೫); ಈ ಕಮಲಲೋಚನೆಯ ಸೆಱಗಿಗೆ ಸೇಕವಾಯಿತು ರಕುತ (ಕುಮ್ಮಾವಿ. ೯-೩೭). [ಸಂ.]

**ಸೇಕಂಗೆಯ್**, **ಸೇಕಗೆಯ್** (ಕ್ರಿ). ಶಾಖಕೊಡು: ಪುರಿವುದು ಕಡುಬಿಸಿಯಪ್ಪಂತಿರೆ ಮಳಲಂ ನಾಂದ ಸೀರೆಯೊಳ್ ಪೊಯಿದು ನಯಂಬೆರಸಿರೆ ಸೇಕಂಗೆಯ್ವುದು ತುರಗದ ಸೋಬ(ಫ)ಕ್ಕೆ ಮಳಲ ಸೇಕಂ ಯೋಗ(ಗ್ಯ)ಂ (ಅಶ್ವಶಾ. ೧೦-೨೨). **ಸೇಕಗೆಯ್**: ಮುಳ್ಳು ಸಿಪುರುಗಳುಂ ನಟ್ಟಲ್ಲಿಯ ಪೊಱವಂಡದಿರ್ದು ಬಾತೊಡೆ ಮತ್ತಂ ಕಲ್ಲೊತ್ತೆಗರ್ಕ ದುಗ್ಧವ ಮೆಳ್ಳಿಸಿಯೊಲೆಗಲ್ಲ ಸೇಕಗೆಯ್ಕಲ್ ಮಾಣ್ಗುಂ (ಲೋಕೋಪ. ೯-೧೬೫).

[ಸೇಕ$_1$ + ಕೆಯ್$_1$]

**ಸೇಕಂಗೊಳ್** (ಕ್ರಿ). ಶಾಖವನ್ನು ತೆಗೆದುಕೊಳ್ಳು; ಕಾವು ಹೊಂದು: ಈ ವೇದನೆ . . . ಸೇಕಂಗೊಳೆ ಪೋಕುಂ (ನೇಮಿಪು. ೪-೭೯ ವ). [ಸೇಕ$_1$ + ಕೊಳ್$_1$]

**ಸೇಕಗೆಯ್** 'ಸೇಕಂಗೆಯ್' ನೋ.

**ಸೇಕಡಾ** 'ಶೇಕಡಾ' ನೋ.

**ಸೇಕಪಾತ್ರ** (ನಾ). ನೀರು ಹೊಯ್ಯಲು (ಅಥವಾ ತುಂಬಿಡಲು) ಬಳಸುವ ಪಾತ್ರೆ: (ಶ). [ಸಂ.]

**ಸೇಕರ** (ನಾ). = ಶೇಖರ: 'ಜಾಣಸೇಕರ' ಪರಾ. [< ಸಂ. ಶೇಖರ]

**ಸೇಕಾಗು** (ಕ್ರಿ). (?): ಮೊಲೆಗಳ್ ಬಿಟ್ಟೊಡಿರುಳ್ ಬಟಲ್ದೊಡೆ ಪಗಲ್ ಸೇಕಾಗೆ ಮಧ್ಯಾಹ್ನಮಿರ್ಕೆಲದೊಳ್ ಪಾರ್ದೊಡೆ ಬಯ್ಗು ಮೆಯ್ನೆರ(ಱ)ದ ಪೊಟ್ಟೆಂದಂತದಂ ಪೇಟೆ ನೋಡಲೊಡಂ ನಕ್ಕೊಡೆ ಬೆಳ್ಪು ನಾಣ್ಚಿದೊಡೆ ಕರಿದೇನಂ ಮುಟ್ಟೆಯುಂ ಕೆಂಪು ಕೇವಲಮಕ್ಕಂತವಳಟ್ಟು ಪುಟ್ಟಿಗೆಯ ಬಣ್ಣಂ ಮಿಶ್ರದಿಂ ಮಿಶ್ರಕಂ (ಲೋಕೋಪ. ೨-೨೩); "ಚೆನ್ನಾಗಿ ನಿಲ್ಲು" (ಲೋಕೋಪ. ಟೀಕೆ). [ಸೇಕ$_1$ + ಆಗು$_1$]

**ಸೇಕಿಸು$_1$** (ಕ್ರಿ). = ಸೇಕಂಗೆಯ್: ಕಡುಮಳೆಯೊಳ್ ಕಡುಗಾಳಿಯೊಳೆಡೆಯುಡುಗದೆ ಸುರಿವ ಸೋನೆಯೊಳ್ ಕಪ್ಪುರ(ದಿ)ಮಂ ಸುಡುವುದು ತುರಗಂ ಬಾಹಾದೆಡೆಯೊಳ್ ಸೇಕಿಸುಗೆ (ಅಶ್ವಶಾ. ೧೦-೨೩). [ಸೇಕ$_1$ + -ಇಸು$_3$]

**ಸೇಕಿಸು$_2$** (ಕ್ರಿ). ಸಿಂಪಡಿಸು; ಚಿಮುಕಿಸು: ಮರನ ಮೊದಲೊಳದಂ ಸೇಕಿಸುವುದು ಮೇಣಜಮಾಂಸದ ರಸಮಂ ತಳಿವುದು (ಲೋಕೋಪ. ೬-೧೪). [ಸೇಕ$_2$ + -ಇಸು$_3$]

**ಸೇಗು** (ನಾ). ೧. ಕೆಚ್ಚು; ಸತ್ತ್ವ: ಮಾರುತಿ . . . ಈರೇಳುಂ ಭುವನಂಗಳನಾರಯ್ಯದೆ ತರ್ಗವೊಯ್ಯ ಸೇಗಿಂ[ಪಾಠಾಂ. ಸಿಗ್ಗಿರ, ಸೋಗಿಂ]ದಿರ್ದಂ (ನೇಮಿಪು. ೧೦-೯೫). ೨. ಜಂಬ; ಅಹಂಕಾರ: ಮಬ್ಬು ಹರಿದರು ಹರಿಯದಿದರ ಸರಪಣಿಕೂಗು, ಸೇಗು (ಚಂಡಮ. ೩೭-೬). [< ಚೇಗು$_2$]

**ಸೇಗುಡಿತೆ**, **ಸೇಗುಡುತೆ** (ನಾ). ಒಂದು ಬಗೆಯ ಔಷಧೀಸಸ್ಯ: ಒಡಲೊದವಿ ಬಾತು ತೋರ್ಪೊಡೆ . . . ಸೇ[ಪಾಠಾಂ. ಸೆ]ಗುಡಿತೆಯಾಡಿನ ಪಾಲಂ . . . ತೊವರಿಯಶನಮ ಪಥ್ಯ (ಲೋಕೋಪ. ೯-೧೬೪); ಸೇ[ಪಾಠಾಂ. ಸೀ]ಗುಡಿತೆಯೊಪ್ಪು ವಂಬಿಲದಿಂದಂ ಭರದಿಂ ಕುಡಿಸಲ್ಕುರಗೋತ್ಕರದ ವಿಷಂ ಪಱಗುಂ (ಖಮದ. ೫-೮೬). **ಸೇಗುಡುತೆ**: "ತ್ರಿಗ್ನೀವಿ ಸೇಗುಡುತೆ[ಪಾಠಾಂ. ಡಿತೆ]" (ಮಂಗರಾ. ೪೨-೩೭). [?]

**ಸೇಗುಡುತೆ** 'ಸೇಗುಡಿತೆ' ನೋ.

**ಸೇಗುಣ** 'ಸೇವುಣ' ನೋ.

**ಸೇಚನ** (ನಾ). = ಸೇಕ$_2$: ನವರುಧಿರಜಳಚಳಚ್ಛೇಚನ [ಪಾಠಾಂ. ಪಾಟಣ]ದೊಳ್ ಘಟ್ಟಿಸಿ (ಪಂಪಭಾ. ೧೦-೭೦ ವ); ಸಲೀಲಸೇಚನದಿಂ . . . ವಲ್ಲರಿ ಫಲಿತಮಾದುದು (ಜಗವಿ. ೨-೫೨ ವ); ದೇವರೀತನ ಲಲಿತವಚನಸುಧಾಪಸೇಚನದಿಂದ ಭಟರುಜ್ ಜೀವಿಸುವುದೇನರಿದೆ (ಕುಮ್ಮಾದ್ರೋ. ೧೫-೪೦). [ಸಂ.]

**ಸೇಚನಂಗೆಯ್** (ಕ್ರಿ). ಚಿಮುಕಿಸು; ಸಿಂಪಡಿಸು: ಪುಣ್ಯಸಲಿಲದೊಳ್ಸೇಚನಂಗೆಯ್ದೆಸೆವ ಯೂಪದೊಳ್ಕಟ್ಟಿ ಪೂಜಿಸಿದರಮಲಾಶ್ವಮಂ (ಜೈಮಿಭಾ. ೩೪-೫).

[ಸೇಚನ + ಗೆಯ್ (< ಕೆಯ್$_1$)]

**ಸೇಚನಘಟ** (ನಾ). (ಗಿಡಗಳಿಗೆ) ನೀರು ಹೊಯ್ಯಲು ಬಳಸುವ ಪಾತ್ರೆ: ತಪಸ್ವಿಕನ್ಯೆಯರು ತಮ್ಮ ತಮ್ಮ ಪ್ರಮಾಣಕ್ಕೆ ತಕ್ಕ ಸೇಚನಘಟಗಳಿಂದ ಎಳಸಸಿಗಳಿಗೆ ನೀರೆರೆಯುವುದಕ್ಕೆ ಇಲ್ಲೇ ಸಂಚರಿಸುತ್ತಿರುವರು (ಶಾಕುಂತ. ೮-೪). [ಸಂ.]

**ಸೇಚನೆ** (ನಾ). = ಸೇಕ$_2$: ಪಸರಿಸುವ ಗರ್ಭ ಸಂಪ್ರಾಪ್ತಿಸುಧಾಸೇಚನೆಯ ಹೃದಯ ಶೋಕಾಗ್ನಿಯ ನಂದಿಸೆ (ಕಾದಂಪೂ. ೪೦೨); ಈ ಸೇಚನೆಯಿಂದ ಕಲ್ಪನೆಗಳು ಬಳ್ಳಿವರಿದು ಧ್ಯಾತ ವಿಷಯಗಳನ್ನೂ ಸೃಷ್ಟಿಸುವ ಕ್ರಮ (ಕಾವ್ಯಕು. ೧೧೦). [ಸಂ. ಸೇಚನ]

**ಸೇಚಿಸು** (ಕ್ರಿ). = ಸೇಚನಂಗೆಯ್: ಜಲವನ್ನು ಸೇಚಿಸುತ್ತಿದ್ದಾಗ ಅವನ ಚಿತ್ತದಲ್ಲಿ ಪೂವಿಯ ಆಲೋಚನೆ ಸುಳಿದಿತು (ಹುಲಿಹಾ. ೨೬೬). [ಸೇಚನ + -ಇಸು$_3$]

**ಸೇಡ** (ನಾ). (?): ಏಡಂ ಪೊಕ್ಕೊಡೆ ಚಿತ್ರವೃಷ್ಟಿ ಕುರುಡಂ ಮುಂ ಪೊಕ್ಕೊಡರ್ಘಕ್ಷಯಂ ಸೇಡಂ ಪೊಕ್ಕೊಡೆ ಡಾವರಂ . . . ಕಡೆ ಫಲಂ ಕೆಂದಂ ಪುಗಲ್ ಸತ್ಫಲಂ (ಅಟ್ಟಮ. ೪-೭). [?]

**ಸೇಡಿಡಿ** (ಕ್ರಿ). ಸೆಡೆತುಕೊಳ್ಳು; ಜಡವಾಗು: ಕರಚರಣಮ್ಮೆಕಿಲದಿ ನಾಂದು ಸೇಡಿಡಿದು ಮುಂದಿರುವ ಮರನಂ ಪತ್ತಲಾರದೆ (ಮಹಾವಿ. ೨೮-೧೩). [ಸೇಡು + ಇಡಿ$_1$]

**ಸೇಡು$_1$** (ಕ್ರಿ). ಕೆದರು; ಚೆದರು (?): ನೀಳ್ದ ನಖವ್ರಣವೀಳ್ಪು ಪೊಯ್ಮೆ ಸೇಡಿದ ತಲೆ ತನ್ನೊಳೊಪ್ಪೆ ಸುರತಾಂತದೊಳೆನ್ನಯ ಮುಂದೆ ನಿಂದು ಮೇಲುದಜೊಳೆ ಬೀಸುತುಂ ಬೆಮರನಾಱಿಸುವೋಪಳನೆಲ್ಲಿ ಕಾಣ್ಬೆನೋ (ಶೃಂಗಾರ. ೨-೭೩). [?]

**ಸೇಡು$_2$** (ನಾ). ೧. ಸೆಡೆಯುವಿಕೆ; ಮುದುಡುವಿಕೆ: ತಳಿರ ಜೊಂಪಂ ಕೂಡೆ ಸೇಡಾಗಿರಲ್ ಕೆಯ್ ಕೊಳೆ ಕುಳಿರ್ವುವು (ಶಾಂತಿಪು. ೮-೧೪); ಕೊಳದೊಳ್ ಮುೞುಗಿ ರ್ದಕ್ಕಟಾ ಕೋಡ ಸೇಡಿಂಗೊಳಗಾದ್ಯ (ಗದಾಯು. ೩-೧೩); ಓಡಲೊಡರಿಸುವೊಡಂ ತೊಡೆ ಸೇಡೊಡರಿಸಿದಪ್ಪುದು (ಪಂರಾಮಾ. ೪-೬೯); ನಡುಕದ ಮೆಯ್ಯ ಕಡು ಸೇಡುಗಳ ಶೀತದ ಸಕಲ ಜನ ಹುದುಗಿದುದರಣ್ಯದಲಿ (ಕುವ್ಯಾಅ. ೧೯-೨೪). ೨. ಬಾಗಿರುವಿಕೆ; ವಕ್ರತೆ: 'ಸೇಡುಗೋಲ್' ಪರಾ.

**ಸೇಡುಹಿಡಿ** = ಚಳಿಯಿಂದ ಜಡವಾಗು; ಜೋಮುಹಿಡಿ: ಪ್ರಚಂಡವಾದ ಮಳೆಯ ಹೊಡೆತದಿಂದ ಅವಳ ಮೈಕೈಗಳು ಸೇಡುಹಿಡಿದುದರಿಂದ . . . ಶ್ರಮವು ಅವಳಿಗಾಯಿತು (ಅಂಬಿಕ. ೪). [< ಸೆಡೆ$_1$]

**ಸೇಡು$_3$** (ನಾ). ೧. ವೈರ; ಹಗೆ; ಮತ್ಸರ: ಖರದೂಷಣರ ಸಂಹರಿಸಿದಾ ಸೇಡ ತೀರ್ಚದಿರೆ . . . ಫಲಮಿಲ್ಲೆಂದಳು (ಭರಚ. ೫-೯೭); ನೊಸಲ ಬರೆಹದ ಸೇಡಿನಿಂದಾಯ್ತು ಮಾಳ್ಪುದೇಂ (ಕಾಲೂರ. ೧೬೨-೩೯). ೨. ಪ್ರತೀಕಾರ; ಮುಯ್ಯಿ: ಹುಸೇನಿಯಿಂದ ಒದೆಗಳನ್ನು ತಿಂದ ಗುಂಡನಲ್ಲಿ ಸೇಡಿನ ಬುದ್ಧಿ ಕಳಕಳಿಸಿ ನಿಂತಿತು (ರಂಗರೋ. ೧೮೨); ಪ್ರಪಂಚಕ್ಕೆಲ್ಲಾ ತಿಳಿಯುವಂತೆ ನನ್ನ ಸೇಡು ತೀರಿಸಿಕೊಳ್ಳುತ್ತೇನೆ (ಆರ್ಯಕ. ೫೫). [?]

**ಸೇಡುಂಗೊಳ್, ಸೇಡುಗೊಳ್** (ಕ್ರಿ). (ಚಳಿಯಿಂದ) ಸೆಡೆತುಕೊಳ್ಳು; ಮುದುಡಿಕೊಳ್ಳು: ಗಱಿಗೆದಱಿ ಬಿದಿರ್ದು ಕೊಕ್ಕಿಂದಿಱಿದಿಱಿದೆಳೆವಿಸಿಲನೆಳಸಿ ಸೇಡುಂ ಗೊಂಡೇಂ ತುಱುಗಿರ್ದುವೊ ತುದಿಗೋಡೊಳ್ಮಱಿ ಬೆಱೆತಿರೆ ನೋಡಿ ಬಾಡುತಂ ವಿಹಗಂಗಳ್ (ರಾಜಶೇ. ೯-೨೯). **ಸೇಡುಗೊಳ್:** ಮುತ್ತುಗಳಂತಿರೆ ಸೂಸಿ ಪಾಯ್ವ ಶೀಕರದೊಳೆ ನಾಂದು ಸೇಡುಗೊಳುತಂ (ಕಾವ್ಯಸಾ. ೭೮ ಶೂದ್ರಕ); ಕ್ರೀಡಾನಿಮಿತ್ತಂ ಪೋಗಿ ಅಕಾಲವೃಷ್ಟಿಯಾಗೆ ಸೇಡುಗೊಂಡು ಸಿಂಹದ ಬಿಲನಂ ಪುಗೆ (ಪುಣ್ಯಾಸ್ರ. ೧೨-೫ ವ); ಮಹಾವೃಷ್ಟಿಯಿಂ ನನೆದು ಸೇಡುಗೊಂಡಂ ನಡೆದು ಪೋಗಲಾಱಿ (ಚಬಪು. ೫೨-೪೯). [ಸೇಡು$_2$ + ಕೊಳ್$_1$]

**ಸೇಡುಗೊಳ್** 'ಸೇಡುಂಗೊಳ್' ನೋ.

**ಸೇಡುಗೋಲ್** (ನಾ). ಬಾಗಿರುವ ಕೋಲು; ವಕ್ರವಾದ ಕೋಲು: ಮೊಲನಂ ಸೇಡುಗೋಲಿಂದಲಂಬಿಂ ಬಿಡು ಸಾರಂಗಕ್ಕೆ ಜೊಪ್ಪಂಬುಗಲೆಡೆಗೊಡದಿರ್ (ಸೂಕ್ತಿಸು. ೩-೧೧೮); ನೊಸಲೊಳಗಿಟ್ಟ ಚೆಲ್ವ ತಿಲಕಂ ಪಿಡಿದಗ್ಗದ ಸೇಡುಗೋಲ್ ವಿಲಂಬಿಸು ವುಪವೀತಂ (ದಶಕು. ೩-೧೧). [ಸೇಡು$_3$ + ಕೋಲ್$_1$]

**ಸೇಡುತೀರಿಸು** (ಕ್ರಿ). ಪ್ರತೀಕಾರಮಾಡು; ದ್ವೇಷಸಾಧಿಸು: ಅವನ ಮೇಲೆ ಸೇಡು ತೀರಿಸಿಕೊಳ್ಳಲೆಂಬಂತೆ ಮೊಕದ್ದಮೆ ಬಹು ದೀರ್ಘಕಾಲ ಎಳೆಯಿತು (ಪುನರು. ೮೭); ನಮ್ಮ ಅಣ್ಣನಿಗಾಗಿ ನಾನು ಸೇಡುತೀರಿಸಿಕೊಳ್ಳುತ್ತೇನೆ (ಯೋಧಪು. ೧೭). [ಸೇಡು$_3$ + ತೀರಿಸು]

**ಸೇಡುಪಡು** 'ಸೇಡುವಡು' ನೋ.

**ಸೇಡುವಡು, ಸೇಡುಪಡು** (ಕ್ರಿ). = ಸೇಡುಂಗೊಳ್: ಕೋಡಿಸುವ ಚಂದ್ರಕಾಂತದ ಕೋಡುಂಗಲ್ಗಳಿನೊಸರ್ವ ರಸದ ಪೊನಲ್ಗಳ್ ಸೇಡುವಡೆ ಕವಿಯೆ . . . ನನೆದು ಹಿಮಕರನಾದಂ (ಸೂಕ್ತಿಸು. ೩-೧೫). **ಸೇಡುಪಡು:** ಸೇಡುಪಟ್ಟಂ, ಸೇಟ್ಪಟ್ಟಂ (ಶಮದ. ೧೯ ಪ್ರಯೋ). 'ಸೇಟ್ಪಿಡು' ಪರಾ. [ಸೇಡು$_2$ + ಪಡು$_1$]

**ಸೇಡುವಡೆ** (ಕ್ರಿ). = ಸೇಡುಂಗೊಳ್: ಇಳೆ ಮಳೆಯಿಂ ನಾಂದು ಸೇಡುವಡೆದಿರೆ (ರಾಜಶೇ. ೮-೧೨೫). [ಸೇಡು$_2$ + ಪಡೆ$_1$]

**ಸೇಡೆ** 'ಸಡೆ$_5$' ನೋ.

**ಸೇಣಿ** (ನಾ). ೧. ಗುಂಪು; ಸಮೂಹ: "ಬಂಬಲ್ . . . ಸೇಣಿ, ತಂಡಂ . . . ಗೊಂದಲ್ (ಉಂದಲ್)–ಈ ೪೦ ಸಮೂಹಂ" (ಕಶಸಾ. ೫೭-೨೨೨); ಚರಿಪ ಚಂದಳಿರಂ ಕರ್ದುಂಕುವ ಕೋಕಿಲಂಗಳ ಸೇಣಿಯಿಂ . . . ವನಮೊಪ್ಪಿರಲ್ (ಹಾಲಾಸ್ಯ. ೧-೧೧-೪); ಪರಮೆಗಳ ಸೇಣಿ ಹರಿನೀಲಮಣಿತೋರಣದ ಸಿರಿವಡೆಯೆ (ಶೇಷರಾ. ೭-೩೧). ೨. ಸಾಲು; ಪಂಕ್ತಿ: 'ಸೇಣಿಗೊಳ್' ಪರಾ. ೩. ಕಸುಬುದಾರರ ಮುಖ್ಯಸ್ಥರು ಸೇರಿ ನಡೆಸುವ ಸಭೆ: ಅ[ಪು]ತ್ರ ಧನಮೆನ್ನೊದು ತಾನೆ ಇಲ್ಲಿ ಸ[ೇ]ಣಿಗೆ ಕಾರ್ತಿಕ ಮಾಸದುಳ್ ಕೊಡುವದು (ಎಇ. XIV, ೧೯೧-೨೧; 725); ಸೇಣಿಗೆ ಮಲೆವರ ಗಂಡಂ . . . ಸೇಣಿಗೆ ಕೂರ್ಪರ ನಂಟಂ (ಎಕ. V, ಚನ್ನರಾ. ೨೦೯-೩೩; 1178).

**ಸೇಣಿಗ** (ನಾ). ವ್ಯಾಪಾರಿ; ವರ್ತಕ: ದೀಪಾವಳಿಯ ಪರ್ವ್ವದಲು ಬೆಳಗುವ ಸೊಡರಣ್ಣೆಗೆ ಉ(ಊ)ರೊಳಗಣ ಸೇಣಿಗರು . . . ಬಿಟ್ಟ ಹಾಗವೊಂದು (ಎಇ. XIX, ೩೮-೩೩; 1144); ಕುರುಬ ಸೇಣಿಗ ದಾಸಗೌಡ ಸಿವಸಕ್ತಿಗುರುಗಳುಂ ಸಮಸ್ತ ಕೊತ್ತಳಿಗಳುಂ (ಸೌಇ. XV, ೧೬೯-೧೩; 1223); ಸರವ ತಿದ್ದಿಡುವ ಸರವಂದಿಗರ ಗಂದಿಗರ ಪಿರಿದು ತ್ಯಲವ ತೆಗೆವ ಗಾಣಿಗರ ಸೇ[ಪಾಠಾಂ. ಶ್ರೇ]ಣಿಗರ . . . ಪಸರಮಸಗುಂ (ಗುರುಚಾ. ೧-೩೪). [< ಸಂ. ಶ್ರೇಣಿಕ]

**ಸೇಣಿಗೊಳ್** (ಕ್ರಿ). ಸಾಲುಗೊಳ್ಳು; ಪಂಕ್ತಿಗೊಳ್ಳು: ಚತುರಂಗಬಲಂ . . . ಸೇಣಿಗೊಂಡು ಮೆಲ್ಲಮೆಲ್ಲನೆಯ್ದುತಿರೆಯುಂ (ಮರಾಚ. ೧೨-೮೪). [ಸೇಣಿ + ಕೊಳ್$_1$]

**ಸೇಣಿಪತಿ** (ನಾ). ಗುಂಪಿನ ನಾಯಕ,—ಒಡೆಯ: ಶ್ರೀಮನ್ಮಹಾಪ್ರಧಾನಂ ಸೇಣಿಪತಿ ಕಡಿತವೆರ್ಗ್ಗಡೆ ಕನ್ನಡಸಂಧಿವಿಗ್ರ[ಹಿ] . . . . [ದಾನಂ]ಗಳಂ ಮಾಡಿ (ಸೌಇ. XV, ೩೧-೪೦; 1146). [< ಸಂ. ಶ್ರೇಣಿಪತಿ]

**ಸೇಣೆ** 'ಸೇನ$_1$' ನೋ.

**ಸೇತ** (ನಾ). ಬಿಳುಪು; ಶ್ವೇತ: ವತ್ವಲೋಪಕ್ಕೆ . . . ಶ್ವೇತ – ಸೇತ, ಸರಸ್ವತಿ— ಸರಸತಿ (ಶಮದ. ೨೮೧ ಪ್ರಯೋ). [< ಸಂ. ಶ್ವೇತ]

**ಸೇತಮಾಲೆ** (ನಾ). ಬಿಳಿಯ ಬಣ್ಣದ ಸರ; ಮುತ್ತಿನ ಹಾರ: ಅದೊಂದು ಬೆಡಂಗಿನ ಸೇತ[ಪಾಠಾಂ. ಶ್ವೇತ, ಸೇತು]ಮಾಲೆ ಪಟ್ಟಿಗೆ ಕಟಿಸೂತ್ರಮೆಂಬಿವು ಮನಂಗೊಳೆ (ಆದಿಪು. ೧೨-೧೨); ಸ[ರಿ]ಗೆಗೆ ಸೇತಮಾಲೆಗೆ ಬೆಡಂಗಿನ ಕನ್ನವುರಕ್ಕೆ . . . ಇವು ತಕ್ಕವು (ವರ್ಧಮಾ. ೮-೬೯). [ಸೇತ + ಮಾಲೆ]

**ಸೇತು** (ನಾ). ೧. ನದಿ, ಹಳ್ಳ ಮುಂತಾದುವನ್ನು ದಾಟಲು ನಿರ್ಮಿಸುವ ಕಟ್ಟೆ; ಸೇತುವೆ; ಸಂಕ: ವಿಷಯಸುಖಸುಧಾರಸಕ್ಕೆ ಸೇತುವುಂ . . . ಎನಿಪ ಪುರವರದ ಸೂಳೆಗೇರಿಯೊಳ್ (ಮಲ್ಲಿಪು. ೨-೫೪); ಬಹುಖೇದಜಲಧಿಗೆ ಸೇತುವಾದೆಲೆ ನೀನು (ಕುವ್ಯಾಸ. ೧೫-೫೪); ಕವಿರಸಾನುಭವದ ಸೇತುವಿಂ ಪ್ರವಾಹವಿಳಿದು ಬನ್ನಿ (ಅನಿಕೇ. ೨೧-೧೦). ೨. ಅಣೆಕಟ್ಟು; ಒಡ್ಡು: "ವಾರಣಂ ಸೇತುವೆನೆ ಕಟ್ಟೆಯೆನಿಸಿರ್ಕು" (ಮಂಗರಾ. ೧೨-೧೩). ೩. (ಹೊಲ, ಗದ್ದೆಗಳಲ್ಲಿರುವ) ಮಣ್ಣಿನ ಕಟ್ಟೆ; ಬದು. ೪. ರಾಮೇಶ್ವರ ದಿಂದ ಲಂಕೆಗೆ ಹನುಮಂತನು ಕಟ್ಟಿದನೆಂದುಭಾವಿಸಲಾಗುವ ಪವಿತ್ರಸೇತುವೆ: ಉದಯಾಸ್ತೋನ್ನತಶೈಲಸೇತು ಹಿಮವತ್ಕುತ್ಕೀಳಪರ್ಯಂತ ಸಂಪದೆಯಂ . . . ಸಾಧಿಸಿ (ಕಾವ್ಯಾವ. ೧೭೩). ೫. ಒಂದು ಬಗೆಯ ಮರ: "ವರುಣಃ, ವರಣಃ, ಸೇತುಃ, ತಿಕ್ತಶಾಕಃ, ಕುಮಾರಕಃ — ೫ ವಸಲೇಗಿಡ" (ಸಿದ್ಧಾಂತಿ. ೧೧೭). [ಸಂ.]

**ಸೇತುಗಟ್ಟು$_1$** (ಕ್ರಿ). ೧. ಸೇತುವೆಯನ್ನು ನಿರ್ಮಿಸು: ಅನಲಂ ಸ್ವರ್ಗಕ್ಕೆ ಸೇತು ಗಟ್ಟಿದನೆನೆ ಪಾವನಹೋಮಧೂಮವೊಗೆಯಲ್ (ಕಾದಂಪೂ. ೨೧೨); ತ್ರಿದಶಸ್ತ್ರೀಜನ ಹಸ್ತಪಾತ್ರಮಣಿಮಾಳಾದೀಪಧೂಪಾಂಶುಜಾಲದೊಳಂ . . . ಅಮರಾಗಮಕ್ಕೆ ಸುರಚಾಪ ಶ್ರೇಣಿಯಂ ಸೇತುಗಟ್ಟಿದವೊಲಾಯ್ತೆಲರ್ವಟ್ಟೆ ಶಕ್ರಪುರದಿಂದಂ ಧೂಳಿಶಾಳಂಬರಂ (ಅನಂಪು. ೧೦-೧೪); ಸೇತುಗಟ್ಟಲುಬೇಕು ಶರಧಿ ದಾಟಲುಬೇಕು (ಪುರಂದ. ೧-೧೭೦-೧). ೨. (ಆಲಂ) ಒಂದೆಡೆ ಸೇರು; ಒಟ್ಟಾಗು: ಭಕ್ತಿರಸಂ ಸೇತುಗಟ್ಟೆ ಸತ್ಯದ ನುಡಿ ಕೆಚ್ಚುಗಟ್ಟೆ (ನಂಬಿರ. ೮-೫೮). [ಸೇತು + ಕಟ್ಟು$_1$]

**ಸೇತುಗಟ್ಟು$_2$** (ನಾ). ಸೇತುವೆ; ಸಂಕ: ನಡೆದು ಗಂಗಾನದಿಯೊತ್ತಿನೊಳ್ಪಾಳೆಯ ಬಿಡಿಸಿದನಾ ಚಕ್ರವರ್ತಿ ಹಿಡಿದುದುಲುಪೆ ಸೇತುಗಟ್ಟಾಗಿ ಭಾವನ ಪಡೆಯನಾ ಸುಖಿ ತಣಿಸಿದನು (ಭರಚ. ೩೭-೨೮). [ಸೇತು + ಕಟ್ಟು$_2$]

**ಸೇತುಬಂಧ** (ನಾ). ೧. ಅಣೆಕಟ್ಟು; ಒಡ್ಡು: ರಿಪುದರ್ಪಾರ್ಣವಸೇತುಬಂಧವಂ ನೃಪಂ ನಿರ್ಮಿಸಿದಂ (ಪುಷ್ಪಪು. ೪-೮೩). ೨. = ಸೇತು ೪: ಸೇತುಬಂಧಮಂ ತಾಗೆ ಗಂಗಾನದಿಯ ತೆಂಕಣ ಪಡುವಣ ನೆಲನಂ ನೀ ಮಾಳ್ಪುದು (ಪಂಪಭಾ. ೪-೮ ವ). [ಸಂ.]

**ಸೇತುಬಂಧನ** (ನಾ). = ಸೇತುಬಂಧ ೧: ನಿರ್ಜಿತವಿಶ್ರುತ ಹಸ್ತಿಮಸ್ತಮನಂಗ ಸಾಗರಸಪೂರ ಸುನಿರ್ಭರ ಸೇತುಬಂಧನಂ ಮಾಸರಮೊಪ್ಪಿ ತೋಱುವುದು ಸಿಂಹಕಟೀ ತಟಮಾ ನೃಸಿಂಹನಾ (ವರ್ಧಮಾ. ೩-೧೩). [ಸಂ.]

**ಸೇತುಬಂಧಾಸನ** (ನಾ). [ಯೋಗ] ಒಂದು ಬಗೆಯ ಆಸನ; ℙ "ದೇಹವನ್ನು ಕಮಾನಿನಂತೆ ಬಗ್ಗಿಸಿ, ಅದಕ್ಕೆ ಹೆಗಲುಗಳು, ಅಂಗಾಲು, ಹಿಮ್ಮಡಿ ಇವುಗಳ ಆಧಾರ ಕೊಟ್ಟು, ಅದನ್ನು ನಿಲ್ಲಿಸುವುದು" (ಯೋಗದೀ. ೧೭೧): ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು. ೧. ಉತ್ತಾನಾಸನ . . . ೪೮. ಸೇತುಬಂಧಾಸನ (ಭಾರದ. ೧೩೭). [ಸಂ.]

**ಸೇತುಮಾರ್ಗ** (ನಾ). ಸೇತುವೆಯ ಮೇಲಿನ ದಾರಿ: ಸ್ಥಪತಿರತ್ನಪ್ರಯತ್ನನಿರ್ಮಿತ ಸೇತುಮಾರ್ಗಂಗಳೊಳ್ ಜಂಗಮಗಿರಿದುರ್ಗಂಬೆರಸು ನಡೆದಂತೆ ಕರಿಕರೇಣುಪರೀತಂ ಚಕ್ರವರ್ತಿ ನಡೆವುದುಂ (ಶಾಂತಿಪು. ೧೧-೫೦ ವ). [ಸಂ.]

**ಸೇತುವೆ** (ನಾ). ೧. = ಸೇತು ೧: ಅದರ ಮೇಲೆ ದೊಡ್ಡ ದೊಡ್ಡ ಕಲ್ಲುಗಳಿಂದ ಕತ್ತರಿಸಿ ಒಂದು ಸೇತುವೆಯಂತೆ ಮಾಡಿದ್ದರು (ಬಾಣಾಳಿ. ೩೮೭); ಸೇತುವೆಯಲ್ಲಿ ಜನರಿಗಾಗಿ ಹಾದು ಹೋಗಲು ಪ್ರತ್ಯೇಕ ಕಾಲುದಾರಿ ಇದೆ (ನಾಚಿಕೆ. ೧). ೨. (ಅಲಂ) ಸಂಬಂಧವನ್ನು ಕಲ್ಪಿಸುವ ಸಾಧನ; ಸಂಪರ್ಕಸಾಧನ: ಕವಿ, ಸಾಮಾನ್ಯಜೀವಿಗೂ ಅನುಭಾವಿಗೂ ನಡುವಿರುವ ಸೇತುವೆ (ಧರ್ಮಸಾ. ೯೭). [ಸೇತು + - ವೆ]

**ಸೇತುಸ್ನಾನ** (ನಾ). ರಾಮೇಶ್ವರದಲ್ಲಿರುವ ಪ್ರಸಿದ್ಧತೀರ್ಥಘಟ್ಟದಲ್ಲಿ ಮಾಡುವ ಸ್ನಾನ: ಅವರು ಮೂರುಸಾರಿ ಸೇತುಸ್ನಾನವನ್ನೂ, ಇಪ್ಪತ್ತೇಳುಸಾರಿ ಭೂಮ್ಯೈಕುಂಠವಾದ ತಿರುಪತಿಯಾತ್ರೆಯನ್ನೂ ಮಾಡಿದರು (ವಿದಾಕ್ಯ. ೪ ಮುನ್ನುಡಿ). [ಸಂ.]

**ಸೇದಿಕಲ್ಲು** (ನಾ). ಕೆಂಪುಕಲ್ಲು; ಜಾದು: ಮಂಟಪದ ಎದುರಿನ ಕಟ್ಟೆಯ ಮೇಲೆ ಎರಡು ಕಲ್ಲುಗಳಿವೆ. ಇವು ಕೆಂಪುಜಾತಿಯ ಅರೆಗಲ್ಲುಗಳು (ಇತ್ತಕಡೆಯ ಜನರು ಸೇದಿಕಲ್ಲು ಎನ್ನುವರು) (ಕರ್ನಾಸಂ. ೨೫೪).

[ಸೇದಿ$_0$ (ℙ ⟵ ತಮಿ. ಚೇತು, ಚೇತ್ತು) + ಕಲ್ಲು (< ಕಲ್$_3$)]

**ಸೇದು** 'ಸೇಂದು' ನೋ.

**ಸೇದುಬತ್ತಿ** (ನಾ). ಹೊಗೆಯನ್ನು ಒಳಗೆ ಎಳೆದುಕೊಳ್ಳುವ ಬೀಡಿ, ಚುಟ್ಟ ಮೊದಲಾದುವು: ಸೇದುಬತ್ತಿಯನ್ನು ಸೆಳೆಯುತ್ತಿದ್ದ ಮನೆಯ ಮುದುಕನ ಹೊದರುಗಡ್ಡಕ್ಕೆ ಹೇಗೋ ಬೆಂಕಿ ತಗಲಿ ಜ್ವಲಿಸಲಾರಂಭಿಸಿತು (ವೀರಬಂ. ೫೦).

[ಸೇದು (< ಸೇಂದು) + ಬತ್ತಿ]

**ಸೇದುಬಾವಿ** (ನಾ). ನೀರನ್ನು ಮೇಲಕ್ಕೆತ್ತಿ ತೆಗೆಯಲು ಅನುಕೂಲವಾಗಿರುವ ಬಾವಿ: ಸೇದುಬಾವಿ ಕಂಡು ನಾಯಿ ಸಂತೋಷಪಟ್ಟು ಹಾಗೆ (ಗಾದೆ).

[ಸೇದು (< ಸೇಂದು) + ಬಾವಿ]

**ಸೇದುವಕ್ಕೆ** (ನಾ). ಸೆಳೆದುಕೊಳ್ಳುವ ಪಕ್ಕೆ: ಒಗುವ ಕಂಬನಿಗಳಲಿ ಕಂಠವ ಬಿಗಿದ ಸರಗಳ ಸೇದುವಕ್ಕೆಯ ವಿಗತಪರಿತೋಷಿತನು (ತೊರರಾ. ೧-೪-೭).

[ಸೇದು (< ಸೇಂದು) + ಪಕ್ಕೆ$_1$ (< ಪಕ್ಕ)]

**ಸೇದೆ$_1$** (ನಾ). ೧. ಜಗ್ಗುವಂಥದು; ಸೇದುವಂಥದು: ಹಲವುಬಣ್ಣದ ನೂಲ ಹುರಿಮಡಿ ತವೆ ಕಾವಿನೊಳಗೊಂದಮೃತದ ಸೇದೆಯ ಬಾವಿ ತೊಲಗಲೀಯದು ಜಾಲ ಗಾಜಿನನು (ಶೂನ್ಯಸಂ. ೩೮೨-೪); ಸೇದೆಯ ನೇಣಂ ಕರಗಮನೊಲ್ದಿತ್ತು ಸೇದಿ ನೀರ್ಗುಡಿಯೆಂದಲ್ (ದಶಕು. ೧೨-೮೧). ೨. ಸೇದುವ ಸಾಧನ; ಹಗ್ಗ: ಬಾವಿಯೊಳಗೆ ಸೇದೆಯನಿಕ್ಕಲ್ (ಧರ್ಮಾಮೃ. ೧೨-೧೩೪). [ಸೇದು (< ಸೇಂದು) + - ಎ$_1$]

**ಸೇದೆ$_2$** (ನಾ). ದಣಿವು; ಆಯಾಸ; ಬಳಲಿಕೆ: ಇಂದಿನ ದಿವಸಮಿಲ್ಲಿರ್ದು ಚರಿಗೆವೊಕ್ಕು ಸೇದೆಯನಾಱಿಸಿ ನಾಳೆ ಪೋಕೆಂದೊಡೆ (ವಡ್ಡಾರಾ. ೯೦-೨೮); ಭಯಂಕರಾಟವಿಯೊಳಿನ್ನವರಂ ನೆಲಸಿರ್ದ ಸೇದೆ ನೀಂ ಕರುಣಿಸಿದಾಗಳಲ್ಲದವರ್ಗಾಱದು (ಪಂಪಭಾ. ೯-೪೨); ಇವರ್ಕತಿಭಾರದೊಳಾದ ಸೇದೆಯಂ ಕಿಡಿಸಿ ತನೂಜ ನೀಂ ತಳೆವುದೀ ನೆಲನಂ ನಿಜಬಾಹುದಂಡದೊಳ್ (ಪಂರಾಮಾ. ೭-೮೩); ಕೂಡುವ ನಲ್ಲರ ನೀಳ್ದ ಸೇದೆಯ ಸಳದಲರಲ್ಲಿ ತೀಡುವದು ಮೆಲ್ಲನೆ ಮೆಲ್ಲನೆ (ಕಬ್ಬಿಕಾ. ೩೩).

[ದೇ. ॥ ತೆಲು. ಸೇದ./ ಪ್ರಾ. ಸೇಅ, ಸೇದ./ ಸಂ. ಸ್ವೇದ]

**ಸೇದೆಗಳೆ** (ಕ್ರಿ). ಆಯಾಸವನ್ನು ನೀಗು; ದಣಿವಾರಿಸಿಕೊಳ್ಳು: ಪದ್ಮಿನಿಯೊಳ್ ತುಂಬಿ ಮಲಂಗಿ ಸೇದೆಗಳೆ[ಪಾಠಾಂ. ೪]ಗುಂ (ಅನಂಪು. ೩-೧೧). [ಸೇದೆ$_2$ + ಕಳೆ$_1$]

**ಸೇದೆಗಿಡು** 'ಸೇದೆಗಡು' ನೋ.

**ಸೇದೆಗೆಡಿಸು** (ಕ್ರಿ). ಆಯಾಸದಿಂದ ಬಳಲಿಸು: ಆನೆಯಂ ಸೇದೆಗೆಡಿಸಿ ತನ್ನ ಬಸಕ್ಕೆ ಮಾಡಿ (ವಡ್ಡಾರಾ. ೩೪-೧೫). [ಸೇದೆಗೆಡು + - ಇಸು$_3$]

**ಸೇದೆಗೆಡು, ಸೇದೆಗಿಡು** (ಕ್ರಿ). ಆಯಾಸದಿಂದ ಬಳಲು; ಅಶಕ್ತವಾಗು: ಕಾಷ್ಠಕೂಟಂ ಸೇದೆಗೆಟ್ಟು ಪುಳ್ಳಿಯ ಪೊರೆಯನಿಟ್ಟಿಪಿ ಪಟ್ಟಿರ್ದೊಡೆ (ವಡ್ಡಾರಾ. ೭೭-೨೫); ಬಟ್ಟೆವೋಪ ಕುತ್ತಂಗುಳಿಯಂತೆ ಸೇದೆಗೆಟ್ಟು (ಧರ್ಮಾಮೃ. ೧೩-೯೯); ಖರಾಂಶು ತಂನೊಡಲನಾವರಿಸಲು ಸೆಡೆ ಸೇದೆಗೆಟ್ಟು (ಕನ್ನ. I, ೨೫-೨೭; 1186 ?). **ಸೇದೆಗಿಡು**: ಪರಲೋಕ ಸುಖಾರ್ಥ ಮಾತ್ಮಾಸ್ತಿತ್ವಾಭಿನಿವೇಶದಿಂ ತನುಧನನಿಧನಂಮಾಡಿ ಸೇದೆಗಿಡಲ್ವೇಡ (ಆದಿಪು. ೨-೯೭); ಪಾಯ್ವು ಕರಿಯುಂ ಹರಿಯುಂ ಪೊಸ ಪೋರ್ತಮನಱಿಯಮ ಪುಟ್ಟಿಸೆ ನೆಲಿಲೊಳ್ ಪೋರ್ದು ಸೇದೆಗಿಡುವುವು ನಗದೊಳ್ (ಶಾಂತಿಪು. ೨-೧೦೩); ಅವನೊಳ್ ಕರಮ ಚಲಂಗೆಯ್ದು [ಸೇದೆ][ಪಾಠಾಂ. ಸಡೆ]ಗಿಡದಿರು ಮರುಳೇ (ಬಂಪುರಿ. ೪-೧೮). [ಸೇದೆ$_2$ + ಕೆಡು$_1$]

**ಸೇದೆದಳೆ** (ಕ್ರಿ). ದಣಿವುಹೊಂದು; ಬಳಲು: ಸುಸಿಲಿಸಗುತ್ತ ಸೇದೆದಳೆದಾಗಳೆ ಭಿಲ್ಲಿಯುಮಲ್ಲಿ ಭಿಲ್ಲನುಂ (ರಾಜಶೇ. ೫-೧೧೧). [ಸೇದೆ$_2$ + ತಳೆ$_1$]

**ಸೇದೆನೀರ್, ಸೇದೆನೀರು** (ನಾ). ಆಯಾಸದಿಂದ ದೇಹದಲ್ಲಿ ಉಂಟಾಗುವ ನೀರು; ಬೆವರು: ರಕ್ಕಸನ ಸಹಸ್ರಮುಖಂಗಳೊಳಂ ಸೇದೆನೀರ್ ಪುಟ್ಟಿತ್ತು (ಅದ್ಭುತ. ೫೦-೬). **ಸೇದೆನೀರು**: ಏದುತ್ತೇದುತ್ತ ಸೇದೆನೀರಲ್ಲಿ ಮಿಂದ ಚೆಮ್ಮೊಗವನ್ನು ಚೇಲಾಂಚಲದಿಂದ ತೊಡೆದುಕೊಂಡು (ಮಂತ್ರಶ. ೭೪-೧೫). [ಸೇದೆ$_2$ + ನೀರ್]

**ಸೇದೆನೀರು** 'ಸೇದೆನೀರ್' ನೋ.

**ಸೇದೆವಡು** (ಕ್ರಿ). = ಸೇದೆಗೆಡು: ಭಟಾರಾ ನಿನ್ನ ಬಟ್ಟೆವಂದುಪವಾಸಂಗೆಯ್ದು ಸೇದೆವಟ್ಟಿರ್ (ವಡ್ಡಾರಾ. ೯೦-೨೭); ಪಱಿವಱಿಯಾಗಿ ಬಿರ್ದು ಸೇದೆವಟ್ಟ ನವನಾರಕರಂ ಪುರಾಣನಾರಕರ್ಕಂಡು (ಸುಕುಮಾ. ೧೧-೪೧ ವ); ಲತಾಮಂಟಪಂಗಳೊಳ್ಪೆರೆದು ಸೇದೆವಟ್ಟ ಕಾದಲರ ಸುಯ್ಯೆಲರ ನಱುಗಂಪಿನೊಡವೆರೆದು . . . ಬರ್ಪ ಮಂದಾನಿಲಂಗೆ ಕರುಣಿಸಿ (ರಾಜಶೇ. ೨-೭೭ ವ). [ಸೇದೆ$_2$ + ಪಡು$_1$]

**ಸೇದೆವಡೆ** (ಕ್ರಿ). ಆಯಾಸಗೊಳ್ಳು; ದಣಿ: ಬಳೆದೊಟ್ಟಂ, ಸೇದೆವಡೆದಂ (ಭಾಷಾಭೂ. ೧೩೩ ಉದಾ); ಸೇದೆವಡೆದಂಗೆ ತಂಗಾಳಿ . . . ದೊರಕೊಂಡೊಲಾಯ್ತುಮಗೆ ಶಿವನಡಿಗಳಂ ಕಾಣಲೊಡನೆ (ಚೆಬಸಪು. ೩೭-೧೨). [ಸೇದೆ$_2$ + ಪಡೆ$_1$]

**ಸೇದೆವುಗು** (ಕ್ರಿ). ಆಯಾಸವುಂಟಾಗು: ಆಟಂ ಬಗೆದೋಱೆ ಸೇದೆವುಗೆ ತಾಂ ಸೋಂಕಿ (ಕಮಮಾ. ೨-೧೫೦). [ಸೇದೆ$_2$ + ಪುಗು (< ಪೊಗು)]

**ಸೇನ$_1$, ಸೇಣ** (ನಾ). ಗಿಡುಗ; ಡೇಗೆ: ಕಾಗೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಕುಂದಂ ಬಲಾಕೆ ಲಾವುಗೆ ಸೇನಂ (ಕಾವ್ಯಸಾ. ೧೦೪೪ ಶೂದ್ರಕ). **ಸೇಣ**: ಅಂಟು ಸಾಳುವ ಸೇಣ ತಡಿಕೆ ಗಾಣಗಳಿಂದ ಉಂಟಾಗಿ ನಡೆಸಂದ ರಾಯ (ಹಂಸಾಂ. ೧-೬೧).

[< ಸಂ. ಶ್ಯೇನ./ ಪ್ರಾ. ಸೇಣ]

**ಸೇನ$_2$** (ನಾ). 'ಕೆಲವು' ಅಂಕಿತನಾಮಗಳ ಕೊನೆಯಲ್ಲಿ ಸೇರುವ ಶಬ್ದ: 'ಮಾಸೇನ' ಪರಾ. [ಸಂ.]

**ಸೇನಬೋಕೆ** 'ಸೇನಬೋಇಯಿಕೆ' ನೋ.

**ಸೇನಬೋಗ** 'ಸೇನಬೋವ' ನೋ

**ಸೇನಬೋಇಯಿಕೆ, ಶಾನುಭೋಗಿಕೆ, ಶೇನಭಾವಿಕೆ, ಸೇನಬೋಕೆ** (ನಾ). ಗ್ರಾಮದ ವ್ಯವಹಾರಗಳಿಗೆ ಸಂಬಂಧಿಸಿದ ಲೆಕ್ಕಪತ್ರಗಳನ್ನು ಬರೆಯುವ ವೃತ್ತಿ; ಶ್ಯಾನುಭೋಗಪದವಿ: ಅಧಿಕಾರಿಯ ಉಡುಗೊಱೆ ಸೇನಬೋಇಯಿಕೆ ಬಾದಿನ ವರ್ತನೆ . . . ನೀಉು ಆಗುಮಾಡಿಕೊಂಡು (ಸೌಇಇ. IX -ii, ೪೪೦-೨೭; 1419). **ಶಾನುಭೋಗಿಕೆ**: ಶಾನುಭೋಗಿಕೆ ಮುಂತಾದುವುಗಳಿಂದ ಹೊಟ್ಟೆಹೊರೆದುಕೊಳ್ಳುತ್ತಿದ್ದವರ ಅರ್ಜಿಗಳನ್ನು ಜಾಗ್ರತೆಯಾಗಿ ಮಂಜೂರುಮಾಡಲಾಯಿತು (ಘೂರಾಣಿ. ೧೫೭); ಆಮಿಷವನ್ನು ಒಡ್ಡುವುದು ಶಾನುಭೋಗಿಕೆಯಾಗಿದೆ (ರಂಗರೂ. ೮೧). **ಶೇನಭಾವಿಕೆ**: ಕೆಳದಿಸ್ಥಳದ ಶೇನಭಾವಿಕೆ ವರ್ತನಿ ಸಮ್ಮಳ (ಮ್ಯಆರಿ. ೧೯೨೮,೬೫-೨೪; 1509). **ಸೇನಬೋಕೆ**: ನಾಡ ಸೇನಬೋಕೆಯನೂ

ಆಚಂದ್ರಾರ್ಕಸ್ತಾಯಿಯಾಗಿ XXX ನಡಸಿ ಬಹುದು (ಸೌಇಇ. IX-ii, ೪೩೩-೭೫; 1408); ಉಭಯಂಸ್ಥಳ ಸೇನಬೋಕೆಯ ಸಂಪ್ರತಿ ಎರಡು (ಸೌಇಇ. IV, ೨೫೪-೧೦೬; 1513).

[ಸೇನಬೋವ + - ಇಕೆ]

**ಸೇನಬೋವ, ಶಾನಬಾಗ, ಶಾನಬಾವ, ಶಾನಬೋವ, ಶಾನಭಾಗ, ಶಾನಭೋಗ, ಶಾನಭೋವ, ಶಾನುಭಾಗ, ಶಾನುಭಾವ, ಶಾನುಭೋಗ, ಶೇನಭೋಗ, ಶ್ಯಾನಭಾಗ, ಶ್ಯಾನಭಾವ, ಶ್ಯಾನಭೋಗ, ಶ್ಯಾನುಭಾಗ, ಶ್ಯಾನುಭೋಗ, ಸೇನಬೋಗ, ಸೇನಭಾಗ, ಸೇನಭೋಗ, ಸೇನಭೋವ, ಸೇನುಬೋವ, ಸೇನುಭೋಗ** (ನಾ). ಗ್ರಾಮದ ವ್ಯವಹಾರಗಳಿಗೆ ಸಂಬಂಧಿಸಿದ ಲೆಕ್ಕಪತ್ರಗಳನ್ನು ಬರೆಯುವವನು: ''ಕಾಯಸ್ಥಃ, ಅಕ್ಷರಜೀವಕಃ—ಈ ೨ ಸೇನಬೋವಂ'' (ಹಲಾಯು. ೯೬-೪೩೨); ಸೇನಬೋವಂ ಗುಣವರ್ಮ್ಮಂ ಬರೆದಂ (ಎಇ. X. ೧೫೨-೬೬; 915); ಗುಣಮಣಿಸುವುದೆ ಸೇನಬೋವ [ಪಾಠಾಂ. ಶೈವಬೋಧ]ರೊಳೆಂತುಂ (ಸಮಪ. ೧೪-೨೩); ವರವವಂಗೆ ಕುಟುಂಬರಕ್ಕಾಕರಣಕಾರಣವಾದ ಹಿಂಸಾಚರಣೆಯೆಂದೇ ಬರಹ ಧರ್ಮನ ಸೇನಬೋವನಲಿ (ಕುವ್ಯಾಕ. ೧೭-೧೯). **ಶಾನಬಾಗ:** ಶಾನಬಾಗನ ಹಗ ಕಳ್ಳರ್ಕಡೆಯಲೂಳಿಗವಿಂತಿದು ಸ್ವತುಪೋವತೆಪ್ಪುದೇ (ನೀತಿಸಾ. ೧೪೧). **ಶಾನಬಾವ:** ಕಡಬೂರಗ್ರಾಮ ಶಾನಬಾವರು ಸೂರಿಗರ ಕಾಡಪರವರಿಗೆ ಕೊಟ್ಟ ಗ್ರಾಮ (ಎಕ. X. ಗೌರಿಬಿ. ೬೩ ಶ; ?). **ಶಾನಬೋವ:** ತ್ರಿಕರಣವೆಂಬ ಪ್ರಧಾನಿ ವಶೀಕರಣವೆಂಬ ಶಾನಬೋವ (ಚಸ್ನವ. ೭೫-೧೫); ಶಾನಬೋವ ತಿಂಮರಸರ ಮಗ ಲಕ್ಕೆಯನು (ಸೌಇಇ. VIII, ೩೭೨-೩; 1507). **ಶಾನಭಾಗ:** ಶಾನಭಾಗರ ಕಡಿತಕ್ಕೆ ಬರಸಿ (ಮೈಆರಿ. ೧೯೩೦; ೪೪-೯; 1768). **ಶಾನಭೋಗ:** (ರೈಸ್‌ಗ. II, ೫೭೧); ಶಾನಭೋಗನ ಸಂಬಳ ಸಂತೋ ಎಂದು ಕೇಳಬೇಡ, ಹೆಂಡತಿ ದೆಸೆಯವರು ಉಂಡರೋ ಎಂದು ಕೇಳಬೇಡ (ಗಾದ). **ಶಾನಭೋವ:** ಸ್ಥಳದ ಗೌಡ ಶಾನಭೋವ ಮೊದಲಾದವರ ಸನ್ಮತದಲ್ಲು ಶಿಲಾಶಾಸನಕ್ಕೆ ಪಾಲ್ಸಿಕ್ಕೊಣ್ಣೆಊ (ಎಕ. XI, ಹೊಳಲ್ಕೆ. ೯೮-೧೧; 1672). **ಶಾನುಭಾಗ:** ಒಕ್ಕಲ್ಗತಿಪ್ರೀತಿಪಾತ್ರನಿಳ ಮೆಚ್ಚಲ್ ಶಾನುಭಾಗಾಖ್ಯ ನೀ ಮಹಿವಾರಾಣಸಿಯಪ್ಪೆ (ಸೋಮೇಶ. ೬೨); ಶಾನುಭಾಗರು ಸುರಪನೋಲೆಯನೋದಿದರು (ಸಂಭಪ. ೨೦-೭೦). **ಶಾನುಭಾವ:** ಶಾನುಭಾವ ಹಳ್ಳಿತಿಂಮಪಗೆ ಗೌಡ ಚೌಗ್ಗಯ್ಯ ತಳವಾರ ಚಿಂಣಗೆ ಸಹ ತಾಕಿತಿಮಾಡಿಸಿ (ಮೈಆರಿ. ೧೯೫೯, ೭-೨೩; 1673). **ಶಾನುಭೋಗ:** ಶೇಕ್ದಾರ ಶಾನುಭೋಗರನು ಕರದುಕೊಂಡು (ಅರ್ಜಾವಿ. ೩೦-೪೦); ಅವರು ಶಾನುಭೋಗರ ಮನೆಗೆ ಬಂದರು (ಕಳಹು. ೯). **ಶೇನಭೋಗ:** ಮೂಲದ ಭೂಮಿ ಸ್ಥಳದ ಶೇನಭೋಗ ಬರಕೊಟ್ಟ ಪಟ್ಟೆಪ್ರಮಾಣ (ಮೈಆರಿ. ೧೯೩೪, ೯-೭; 1690). **ಶ್ಯಾನಭಾಗ:** ವಿಚಾರದ ಚಾವಡಿ ಶ್ಯಾನಭಾಗ ಸ್ಥಳದ ಶ್ಯಾನಭಾಗ ಸಹ ಬರದುಕೊಣ್ಣು ಬನ್ನ ಲಖ ಪ್ರಕಾರ (ಮೈಆರಿ. ೧೯೨೮, ೪೫-೧೩; 1761); ಪಣ್ಯದ ಅಂಗಡಿಗೆ ಶ್ಯಾನಭಾಗನನ್ನೂ ವ್ಯಾಪಾರ ಮಾಡುವದಕ್ಕೆ ಗೊಲ್ಲನನ್ನೂ . . . ನೇಮಕ ಮಾಡಿಸಿ (ಮಹಾವಂ. I, ೨೭). **ಶ್ಯಾನಭಾವ:** ಶ್ಯಾನಭಾವ [ಪಾಠಾಂ. ಸೇನಬೋಪ]ರುಗಳಿಂ ಸೇರುವಗಾಣಿರಿಂ . . . ಮನ್ನಣೆವಡೆದುದಂದಾ ನರನಾಥನಾಸ್ಥಾನ (ರಾಮವಿ. ೧೦-೮೦). **ಶ್ಯಾನಭೋಗ:** ಊರು ಮೇಲೆ ಊರು ಬಿದ್ದರೆ ಶ್ಯಾನಭೋಗನಿಗೆ ಕೆಟ್ಟದ್ದೇನು? (ಗಾದ). **ಶ್ಯಾನುಭಾಗ:** ಆ ಶ್ಯಾನುಭಾಗರ ಹಾಗೆ ಆಸ್ತಿಕರು ಮಾಸ್ತಿಯನ್ನು ಬರಿಯ ಬನವಾಗಿ ಎಣಿಸುವಂತಿಲ್ಲ (ಸರಸ. ೭). **ಶ್ಯಾನುಭೋಗ:** ಶ್ಯಾನುಭೋಗ ಅಥವಾ ಮನನ್ ಎಂಬುದನ್ನು ಬೊಂಬೈಪ್ರಾಂತ್ಯದಲ್ಲಿ ದೇಶಾಯಿ, ದೇಶಪಾಂಡೆಯಂತಲೂ ಗ್ರಾಮದ ಅಕೌಂಟೆಂಟನ ಹೆಸರುಂಟು (ಗ್ರಾಪಾಕ. ೧). **ಸೇನಬೋಗ:** ಸಾಸನವ ಬರದ ಸೇನಬೋಗ ದಯಣಂಗೆ ವೃತ್ತಿ (ನಾಂದೇಡ್. ೩೯-೧೫; 12ನೆಯ ಶತ). **ಸೇನಭಾಗ:** ಮಂಡಿಸಿದರು ಮಂತ್ರಿಗಳು ಸೇನಭಾಗರು ಪಂಡಿತ ಪಂಚಾಂಗಿಗಳು (ಮೋಹತ. ೩೭-೪೧). **ಸೇನಭೋಗ:** ಯಾ ಸ್ಥಳದ ಸೇನಭೋಗ ಸಿಂಗಪೆರುಮಾಳ (ಎಕ. V, ಬೇಲೂರು. ೨೧-೩; 1180); ತದಗ್ರಹಾರಸ್ಥರ್ ದುರೋದರರ್ ಸೇನಭೋಗರ್ ಮಲ್ಲರಾಮನಾಮಾಂಕಿತರ್ ಸಹಜಾತರು (ಮಹಾವಿ. ೫-೬). **ಸೇನಭೋವ:** ಈ ಕಾಗದವ ಸೇನಭೋವರ ಕಡಿತಕೆ ಬರಿಸಿ (ಎಕ. VIII, ಶಿವಮೊ. ೧೭-೧೫; 1696). **ಸೇನುಬೋವ:** ಸೇನುಬೋವ ಸ XXX . . . ಮಗ ಸೇನಬೋವ ಬಿಟ್ಟಯ (ಎಕ. XVI, ಚಿಕ್ಕನಾ. ೫೯-೩೬; ?); ಲೆಕ್ಕಿಗ ಎಂದರೆ ಸೇನುಬೋವ (ಇಂದಿನ 'ಶಾನುಭೋಗ') ನೆಂದು ತಿಳಿಯುವುದಕ್ಕಿಂತ ಪಂಡಿತನೆಂದು ತಿಳಿಯುವುದು ಅವನ ವ್ಯಕ್ತಿತ್ವದ ಚಿತ್ರಕ್ಕೆ ಹೆಚ್ಚು ಒಪ್ಪುತ್ತದೆ (ತವನ. ೧೨೧). **ಸೇನುಭೋಗ:** ಆ ಸೇನುಭೋಗರ ಸಮ್ಮತಿಯಿಂದ ನಡೆದುಕೊಳ್ಳುವುದೆಂದು ನೇಮಕಮಾಡಿದ್ದೂ ಅಲ್ಲದೆ (ಚಿತ್ರಪಾ. ೮).

**ಸೇನಭಾಗ** 'ಸೇನಬೋವ' ನೋ.

**ಸೇನಭೋಗ** 'ಸೇನಬೋವ' ನೋ.

**ಸೇನಭೋಗತನ, ಶಾನಭೋಗತನ** (ನಾ). = ಸೇನಬೋಯಿಕೆ: ೧೬ ಗ್ರಾಮದ ಸೇನಭೋಗತನಕ್ಕೆ ಪರಶುರಾಮಪ್ಪನನ್ನು ನೇಮಿಸಿ (ಚಿತ್ರಪಾ. ೮). **ಶಾನಭೋಗತನ:** (೬).

[ಸೇನಭೋಗ (< ಸೇನಬೋವ) + - ತನ]

**ಸೇನಭೋವ** 'ಸೇನಬೋವ' ನೋ.

**ಸೇನವರಸ** (ನಾ). ಒಬ್ಬಾತನ ಹೆಸರು: ಅರ್ಚ್ಚಕಮ್ಮೆನ್ತಿಯೆಕಿ ಕೊಟ್ಟ ಸೇನವರಸರುಂ ಧರ್ಮ್ಮಗರಣೆಗರುಂ (ಎಕ. VI, ಕೊಪ್ಪ. ೩೭-೧೦; ಸು 675 ?). [? + ಅರಸ]

**ಸೇನಾಗ್ರಗಣ್ಯ** (ನಾ). ಸೈನ್ಯದ ಮುಖ್ಯಸ್ಥ; ದಳವಾಯಿ; ಸೇನಾಧಿಪತಿ: ಸಂಭ್ರಮಾಕುಳನುಮವನತೋತ್ತಮಾಂಗನುಮಾಗಿ ಬಂದು ಮುಂದೆ ನಿಂದು ಸೇನಾಗ್ರಗಣ್ಯಂ ಬೆಸನಂ ಪಾರುತ್ತುಮಿರೆ (ಶಾಂತಿಪು. ೫-೪೫ ವ). [ಸಂ.]

**ಸೇನಾಚಕ್ರ** (ನಾ). ಸೇನೆಯ ಗುಂಪು; ಸೈನ್ಯಸಮೂಹ: ತ್ರಿದಶಾಧೀಶನ ಮುಂದೆ ಸಿಂಧುರಘಟಾಸಂದೋಹದಿಂ . . . ಗಂಧರ್ವಸಂದೋಹದಿಂದಿದು ಸಪ್ತಾಬ್ಧಿಯೆನಲ್ಕೆ ಸಪ್ತವಿಧಸೇನಾಚಕ್ರಮೇನೊಪ್ಪಿತೋ (ಪುಷ್ಪಪು. ೧೪-೪೬). [ಸಂ.]

**ಸೇನಾಧವ** (ನಾ). = ಸೇನಾಗ್ರಗಣ್ಯ: ಕವಿ ಗಮಕಿ ವಾದಿ ವಾಗ್ಮಿಯು ಭುವನಪತಿಗಳು ಮಂತ್ರಿ ಸೇನಾಧವರು ನಾಟಕವೇತ್ರಗೀತರು . . . ಒಪ್ಪಿಹುದು (ಬಿಜ್ಜಪು. ೨-೩೪). [ಸಂ.]

**ಸೇನಾಧಿನಾಥ** (ನಾ). = ಸೇನಾಗ್ರಗಣ್ಯ: ಅಂತು ಕೃತಕಚತುರ್ದ್ವಾರಮುಮಂತರ್ಭಾಗದೊಳ್ ಸೇನಾಧಿನಾಥರಕ್ಷಿತಮುಮಪ್ಪ ಕಟಕಕ್ಕೆ ವಜ್ರಪ್ರಾಕಾರರೂಪನಾಗಿ . . . ಜಯಕುಮಾರಂ . . . ಕಾದುವಾಗಳ್ (ಆದಿಪು. ೧೩-೭೦ ವ). [ಸಂ.]

**ಸೇನಾಧಿಪ** (ನಾ). = ಸೇನಾಗ್ರಗಣ್ಯ: ಉದಾತ್ತಮತಿ ಕರೆದು ಬೆಸಸೆ ಸೇನಾಧಿಪನಂ (ಶಾಂತಿಪು. ೩-೯೪). [ಸಂ.]

**ಸೇನಾಧಿಪತಿ** (ನಾ). = ಸೇನಾಗ್ರಗಣ್ಯ: ಭಾರತಯುದ್ಧದ ಹದಿನೆಂಟನೆಯ ದಿನದ ಸೇನಾಧಿಪತಿ ಶಲ್ಯನಾಗುತ್ತಾನೆ (ಭಾರದ. ೯೯). [ಸಂ.]

**ಸೇನಾನಾಯಕ** (ನಾ). = ಸೇನಾಗ್ರಗಣ್ಯ: ಸೇನಾನಾಯಕಂ ಶೂರಪದಾತಿ . . . ಹಯೋತ್ಕರಂ ನೆರೆದು ನಿಲ್ಪಿನವೊಡ್ಡಿ ನಿಜೇಶನಾಜ್ಞೆಯಂ ಪಾರುತುಮಿರ್ದಂ (ಶಾಂತಿಪು. ೩-೧೧೩ ವ); ಅಮರೇಜ್ಯಂ ಕುಜಗೇಹದೊಳ್ ನಿಲೆ . . . ಸುಭೃತ್ಯಪತಿ ಸೇನಾ[ಪಾಠಾಂ. ಪರಸೇವಾ]ನಾಯಕಂ (ಜಾತತಿ. ೧೭-೨೩). [ಸಂ.]

**ಸೇನಾನಿ** (ನಾ). ೧. = ಸೇನಾಗ್ರಗಣ್ಯ: ಅದಱಿಂ ಮುನ್ನಂ ಸೇನಾನಿ ದಂಡರತ್ನಂ ನಿಜಾಗ್ರದೊಳ್ ಬರೆ (ಶಾಂತಿಪು. ೧೦-೧೫೨); ನೀಂ ಬಣ್ಣಿಸಿದ ಬಲಸಮುದ್ರರಾ ಸೇನಾನಿಗಳ ನೇಹಮಿರ್ದೊಡಂ . . . ವಾಲಿಯೇಂ ಪಾಪದಿಂ ಕಲಿಯಾದನೇಂ ? (ಶ್ರೀರಾಮಾ. ೫೧೦-೧೫೦). ೨. ಷಣ್ಮುಖ; ಕಾರ್ತಿಕೇಯ: ಶಿವಮಹೋಕ್ಷ್ಮಾವೀರಸೇನಾನಿ ನಿರ್ವಾಯ ಯುವತಿ ಯಭಿಮಾನವನು ಕಾಯ್ದುದು (ಪ್ರೌಢರಾ. ೮-೬೬). [ಸಂ. ಸೇನಾನೀ]

**ಸೇನಾನಿರತ್ನ** (ನಾ). [ಜೈನ] ಏಳುಬಗೆಯ ಜೀವರತ್ನಗಳಲ್ಲಿ ಒಂದು; ''ಚಕ್ರವರ್ತಿಯ ಸೇನಾಪತಿ. ಆರ್ಯಖಂಡವನ್ನೂ ಉತ್ತಮ ಮಧ್ಯಮ ಮ್ಲೇಚ್ಛಖಂಡ ಹೊರತಾಗಿ ಉಳಿದ ದಿಗ್ವಿಷ್ಠರನ್ನು ಸಾಧಿಸುವವನು'' (ಜೈನಕೋ. ೨೮೯): ಷಡ್ವಿಧಸೇನಾನಾಯಕಪರಾಯಣನುಮಪ್ಪಯೋಧ್ಯನೆಂಬ ಸೇನಾನಿ [ಪಾಠಾಂ. ಸೇನಾಪತಿ]ರತ್ನಮುಂ (ಆದಿಪು. ೧೧-೩ ವ). [ಸಂ.]

**ಸೇನಾಪ** (ನಾ). = ಸೇನಾಗ್ರಗಣ್ಯ: ಶಶಿ ಕನ್ನೆಯೊಳಿರೆ ವೀಕ್ಷಿಸೆ ಶಶಾಂಕಜಾದಿತ್ರಯಂ ನೃಪಂ ಸೇನಾಪಂ ಕುಶಲನೆನಿಕ್ಕುಂ (ಜಾತತಿ. ೨೦-೬). [ಸಂ.]

**ಸೇನಾಪಟ್ಟ** (ನಾ). ಸೈನ್ಯಾಧಿಕಾರಿಯ ಪದವಿ: ರಾಯಕಟಕಾಚಾರ್ಯನಾತಜುವಾಯ ಸೇನಾಪಟ್ಟವನು ರಾಧೇಯನಲಿ ರಚಿಸಿದನು (ಕುವ್ಯಾಕ. ೧ ಸೂಚನ). [ಸಂ.]

**ಸೇನಾಪತಿ** (ನಾ). = ಸೇನಾಗ್ರಗಣ್ಯ: ''ಪಡೆವಳನೆಂದು ಸೇನಾಪತಿ'' (ಕಶಸಾ. ೬೧-೩೪೫); ಪತಿಹಿಂತನ ಸಂಗರಸದಾರನನೂರ್ಧ್ವರೋಮನನಿರದೆ ಸೇನಾಪತಿಯ ಮಾಡುವುದು (ಕುವ್ಯಾಉ. ೩-೮೮); [ಸಂ.]

**ಸೇನಾಪತಿರತ್ನ** (ನಾ). = ಸೇನಾನಿರತ್ನ: ಆವ ದಿಶಾಭಾಗಕ್ಕಟ್ಟಿದೊಡ ಆ ದಿಶಾ ಭಾಗದೊಳ್ ಎಂತಪ್ಪ ಕಲೆಯಂ ಬಲ್ಲಾಳುಮಂ ಸಾಧ್ಯಂ ಮಾಡಿ ತರ್ಪ ಸೇನಾಪತಿ ರತ್ನಮುಂ (ಜೀವಸಂ. ೧೭-೨೨). [ಸಂ.]

**ಸೇನಾಪತ್ಯ** (ನಾ). = ಸೇನಾಪಟ್ಟ: ಕರೆಸಿ ಧೃಷ್ಟದ್ಯುಮ್ನನನು ಸಂಗರದ ಸೇನಾ ಪತ್ಯವನು ವಿಸ್ತರಿಸಲಳವಡಿಸಿದರು (ಕುಮ್ಮಾಉ. ೧೧-೩೩); ಅಶ್ವತ್ಥಾಮನಿಗೆ ಸೇನಾಪತ್ಯದಲ್ಲಿ ಅಭಿಷೇಕಮಾಡು (ವಚಭಾ. ೩೧೩). [ಸಂ.]

**ಸೇನಾಭಂಗ** (ನಾ). ಸೈನ್ಯದ ಸೋಲು: ಮುನ್ನ ಬಂದೀತನೆನಗೆ ಸೇನಾಭಂಗಮುಂ ಮನೋಭಂಗಮುಮಪ್ಪಂತು ಪುಸಿವಾರ್ತೆಯಂ ಪೇಟ್ದಂ (ಸುಕುಮಾ. ೭-೫ ವ). [ಸಂ.]

**ಸೇನಾಮುಖ** (ನಾ). ೧. ಸೈನ್ಯದ ಎದುರು, — ಸಮ್ಮುಖ: ಸೇನಾಮುಖದೊಳ್ ಭಂಗಮನಾನೆಯ್ದಿದನೆಂದು ವಿಶ್ರುತಂ ವೈಶ್ರವಣಂ . . . ಜೈನದೀಕ್ಷೆಯಂ ಕೈಕೊಂಡಂ (ಪಂರಾಮಾ. ೧೦-೧೫೫). ೨. ಮೂರು ಆನೆಗಳು, ಮೂರು ರಥಗಳು, ಒಂಬತ್ತು ಕುದುರೆಗಳು ಮತ್ತು ಹದಿನೈದು ಜನ ಕಾಲಾಳುಗಳಿಂದ ಕೂಡಿದ ಸೇನೆಯ ಒಂದು ವಿಭಾಗ: ಆನೆ ೩ ರಥ ೩ ಕುದುರೆ ೯ ಕಾಲಾಳು ೧೫ ಇದು ಸೇನಾಮುಖವೆಂಬ ಬಲವಹುದು (ವ್ಯವಹಾ. ಅನುಬಂಧ. I. ೯): ಮೊಗಲಸರಾಯಿ ಎಂಬುದು ಎರಡನೆಯ ಸೇನಾಮುಖವೆಂದು ಬಗೆಯಲಾಯಿತು (ಪರಪ. ೩೭). [ಸಂ.]

**ಸೇನಾಯ** 'ಶಾನಾಯ' ನೋ.

**ಸೇನಾಯಮುದ್ರೆ** 'ಶಾನಾಯಮುದ್ರೆ' ನೋ.

**ಸೇನಾರಕ್ಷ** (ನಾ). ಸೈನ್ಯವನ್ನು ಕಾಯುವವನು. [ಸಂ.]

**ಸೇನುಬೋವ** 'ಸೇನಬೋವ' ನೋ.

**ಸೇನುಭೋಗ** 'ಸೇನಬೋವ' ನೋ.

**ಸೇನೆ** (ನಾ). ೧. ಪಡೆ; ದಂಡು: ನರಪತಿತ್ಯೆಲಪಂ ಬೆಸಸೆ ಘೂರ್ಜರಸೇನೆಗೆ ಸೂಚಿಯಾನೆಯಂ ಪರಿಯಿಸಿ ಗೆಲ್ದಂ (ಗದಾಯು. ೨-೪೭); ಅದಟಲಿ ತುಟುಗಿ ಬಿಟ್ಟಿತು ಸೇನೆ (ಕುವ್ಯಾಸ. ೩-೬೨): ಪುರೋದ್ಯಾನವೀಧಿಯೊಳ್ ಪಾಳೆಯಂಬಿಟ್ಟುದರ್ಜುನನ ಸೇನೆ (ಚಿತ್ರಾಂಗ. ೬೨-೧೯೬೫). ೨. = ಸೇನಾಮುಖ ೨: ಮತ್ತಗಜವೊಂದೊಂದೆ ರಥದೆಡೆಯುತ್ತಮಾಶ್ವವು ಮೂರು ಆಳೈದತ್ತ ಕೂಡಲು ಪತ್ತಿಯೆನಿಸುವುದರಸ ಚಿತ್ತೈಸು ಅದನು ತ್ರಿಗುಣಿಸೆ ಸೇನೆಯಕ್ಕು (ಜರಾಮಾ. ೪೩೭-೧೭). [ಸಂ. ಸೇನಾ]

**ಸೇನೆದಿವಾನ** (ನಾ). ಸೈನ್ಯದ ಆಡಳಿತಾಧಿಕಾರಿ: ಸೇನೆದಿವಾನ ಪುಟ್ಟಣ್ಣಂ ಮುಂತಾದ ಕುಹಕಿಜನರ್ಕುಮಂತ್ರಮಂ ನೆನೆಯಲ್ (ಕಳನ್ನ. ೭-೩೭).

[ಸೇನೆ + ದಿವಾನ (< ದಿವಾಣ)]

**ಸೇನೆವಳ, ಸೇನೆವಳ್ಳ** (ನಾ). ಸೇನಾಪತಿ; ಪಡೆವಳ: ಪಡೆಯೊಳಧಿಕೃತಂ, ಪಡೆವಳಂ, ಪಡೆವಳ್ಳಂ . . . ಸೇನೆವಳಂ, ಸೇನೆವಳ್ಳಂ (ಶಬ್ದಾನು. ೪೨೭ ಪ್ರಯೋ). **ಸೇನೆವಳ್ಳ**: ಮೇಲಿನ ಪ್ರಯೋಗವನ್ನು ನೋಡಿ. [ಸೇನೆ + - ವಳ]

**ಸೇನೆವಳ್ಳ** 'ಸೇನೆವಳ' ನೋ.

**ಸೇಪು** 'ಚೇಪು$_2$' ನೋ.

**ಸೇಪುಬಿಡು** 'ಚೇಪುಬಿಡು' ನೋ.

**ಸೇಬು, ಸೇವು$_1$** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು: ಖರ್ಜೂರ ದ್ರಾಕ್ಷಿ ಸೇಬಿನಿದಪ್ಪೆಲಚಿ (ಮದೇಪು. ೬-೩); ಬೇಲಿಯ ಪಕ್ಕದಲ್ಲಿ ಚೆರಿ ಮತ್ತು ಸೇಬಿನ ಮರಗಳನ್ನೂ . . . ಕಾಣಬಹುದಿತ್ತು (ಪುನರು. ೨೬೩). **ಸೇವು$_1$**: ಸೇವು, ಆಪಲ್ (ಮ್ಯಾಡಿಗಿ. ೬೫-೧೩.೨೮). [<— ಪಾರ. ಹಿಂ. ಸೇಬ್; ಮರಾ. ಸೇವ್]

**ಸೇಬೆ, ಶಾವೆ** (ನಾ). ಕೈಂಕರ್ಯ; ಸೇವೆ: ವೆಡಿರುನ್ ಸ್ವರ್ಗ್ಗತ್ತಿಟೆಯ ಮರಿಯಾದಿ ಕೊಟ್ಟಾನ್ ಸೇಬೆಗೆ ವಿಟ್ಟಾರ್ (ಎಕ. IV. ಹಗ್ಗಡ. ೮೭-೪: ಸು. 700 ?). **ಶಾವೆ**: ನೀರಿಲೆಯಲಿ ಬಂಡಿದೇವರ ಶಾವೆಗೆ ಸಲಿಸುವಂಥ ಕಡಲೆಗ್ರಾಮ (ಮೈಆರಿ. ೧೯೪೭, ೨೫-೭; 1495); ಕಳಲೆ ಕಾಂತಯ್ಯ ಕೊಮಾರ ನಂಜರಾಜೈಯ್ಯನವರ ಶಾವೆ (ಮೈಆರಿ. ೧೯೪೭,೩೩-೨; 1650); ದೇವರ ಶಾವೆ ಅಂತ ಮಾಡಿದೆ (ಚಿಕರಾ. ೧೮೯). [< ಸಂ. ಸೇವಾ]

**ಸೇಬ್ಯ** (ನಾ). ಸೇವೆಗೆ ಅರ್ಹವಾದುದು; ಪೂಜಾಯೋಗ್ಯವಾದುದು: ಅದು ಟಬ್ಯಮದು ಸೇಬ್ಯಮದು ಸೌಮ್ಯಮದು ರಮ್ಯಂ (ಸುಕುಮಾ. ೧೨-೫೦). [< ಸಂ. ಸೇವ್ಯ]

**ಸೇಮ** (ನಾ). ಸುಖ; ಸಂತೋಷ: ಕ್ಷೇಮ - ಸೇಮ (ಶಮದ. ೨೬೨ ಪ್ರಯೋ): ಎಮ್ಮಯ ತಾಯ್ತಂದೆಗಳ್ಗೆ ಸೇಮದೆ ಸೊಗಮೇ (ಚಂಗ್ರಭ್ಯು. ೧೩-೧೨): ಮರದಿ ನನೆ ನೈಜದಿಂದರಳೆ ಸೊಗವಲ್ಲಗ್ಗ ಸೆರಮನೆಯ ಸೇಮವೇಂ? (ಮಂಕುಕ. ೮೪೫). 'ಕೇಮ$_2$' ಪರಾ.

[< ಸಂ. ಕ್ಷೇಮ]

**ಸೇಮಿಗೆ** 'ಸೇವಗೆ' ನೋ.

**ಸೇಯ** (ನಾ). ನೀಳ; ನಿಡಿದು: ಕಡುಸೇಯಮಾಗಿ ಮಾಂಸದಿನಿಡಿದೊಪ್ಪುವ ಕಿವಿಗಳರ್ಧ ಚಂದ್ರಾಕೃತಿಯಂ ಪಡೆದಿರ್ದರ್ಧನೊಸಲ್ . . . ಶುಭದಂ (ಲೋಕೋಪ. ೧೧-೨೨).

[<— ತಮಿ. ಚೇಯ್]

**ಸೇಯು** (ಕ್ರಿ). ಸೇದು; ಎಳೆದುಕೊಳ್ಳು: ಸಾವಧಾನವಾಗಿ ನಶ್ಯ ಸೇಯುವ ಬಹಿಃಕ್ರಿಯೆಯಲ್ಲಿ ತೊಡಗಿದ್ದಂತೆ ತೋರುತ್ತಿದ್ದರೂ ಗೌಡರ ಮನಸ್ಸು ತನ್ನ ಅಂತರ್ಮುಖ ಪ್ರಪಂಚದಲ್ಲಿ ಅಲೆಯತೊಡಗಿತ್ತು (ಮಲೆಮ. ೧೪೧). [< ಸೇಂದು]

**ಸೇರ್, ಸೇರು$_1$** (ಕ್ರಿ). ೧. ತಲುಪು; ಮುಟ್ಟು; ಸಮೀಪಿಸು: ಮಂತ್ರಿ ನಿಜ ಸದನಮಂ ಸೇರ್ದು ಹೊನ್ನಂದಣಮನಿಳಿದಾತ್ಮಜಾತನಂ ನೋಡಿ (ಜೈಮಿಭಾ. ೩೧-೩೦). ೨. ಕೂಡು; ಬೆರೆ: (ಕಿ). ೩. ಹೊಂದಿಕೊಳ್ಳು; ಜೊತೆಯಾಗು: (ಕಿ). ೪. ಒಂದಾಗು; ಒಟ್ಟುಗೂಡು: (ಕಿ). ೫. ಸಂಗ್ರಹವಾಗು; ಕೂಡಿಕೊಳ್ಳು: ಅತಿಲೋಭಿಗಳ್ಗೆ ವಸ್ತು ಸೇರುವುದು (ಪಂಚತಂ. ೧೩೭-೮). ೬. ಒಗ್ಗು; ಹಿಡಿಸು: "ಸೇರ್—ಸಾನುಮತೇ (ಅನುಮತಿಸು)" (ಶಮಧಾ). **ಸೇರು$_1$**: ೧. ಜಯಮುಖದಿಂದ ಲಂಕಾಪುರಿಗೆ ಸೇರಿತು ಮಂದಿ (ತೊರರಾ. ೧-೮-೪೧); ಎಚ್ಚ ಕೋಲ್ಗಳ ಸೇರಲೀಸದೆ ಕಡಿದು (ಮೋಹತ. ೩೪-೨೭); ಮಾರ್ಗದಲ್ಲಿ ಜನರಿಲ್ಲದಂಥ ಒಂದು ನಡುಗಡ್ಡೆಗೆ ಸೇರಿ (ಮುಂಬಯಿ. ೪-೫೯). ೨. ಗ್ರಹ ಗೃಹಂ ಚೆನ್ನಾಗಿರಲ್ ಸೇರದೇಂ (ಸೋಮೇಶ. ೧೮); ಇರುಳುಗಳ್ಳನ ಕೂಡೆ ಸೇರಿದ ಮರುಳಿನಂತಿರೆ ನೀವು ರಣದಲಿ ತಟಿಸಿಕೊಂಬಿರಿ (ಕುವ್ಯಾದ್ರೋ. ೧೭-೩೨); ನಮ್ಮ ಪುರಂದರವಿಠಲನ ಸೇರೋ ಸೇರೋ (ಪುರಂದ. ೧-೧೫೪-೩). ೩. ಸುವಿಚಾರಕ್ರೊರ್ಮೆಯುಂ ಸೇರದು ನಡೆಯಿಪುದತ್ಯಾಗ್ರಹವ್ಯಾಪ್ತಿಯಿಂ (ರಕ್ಷಾಶ. ೧೫): ಎನಿತು ಬಾರಿ ಪಲಾಯನದ ಸಿರಿ ನಿನಗೆ ಸೇರಿತು ವೀರ (ಕುವ್ಯಾದ್ರೋ. ೧೮-೪೩). ೪. ನೇಮಿಯ ಕನ್ನಡದೊಳ್ಳಭಿನವಪಂಪನ ಬಗೆಯನ್ನೀ ಪೇಳ್ದ ಕೃತಿಗೆ ಪಿರಿದುಂ ಸೇರುಗೆ ನಿರ್ವಿಘ್ನತೆಯಿಂ (ಜಯಕಾ. ೧-೧೧); ಶಿವನೆ ದೈವವೆನುತ್ತೆ ಪೂಜಾದಿಗಳ ಮಾಡುವರೀಶತತ್ತ್ವದಿ. ಜವದಿ ಸೇರುವರು (ಗಗತಾ. ೮-೬೬). ೬. ಗರಳಾಂಬುಜದ ಪರಿಮಳಕೆ ಗರುಡನು ತುಂಬಿಯಾದರೆ ಸೇರುವುದಲೇ (ಕುವ್ಯಾದ್ರೋ. ೯-೪೪). ೭. ನೆಲಸು; ನಿಲ್ಲು: ವಾರಿಜಭವ ಶಕ್ರಾದಿದೇವತೆಗಳು ನಾರಿಯ ಕುಚಮಂಡಲವ ಸೇರಿ ಬರ್ದುಕಲಿ (ಮೋಹತ. ೭-೧೫); ಕ್ಷೀರಾಂಬುನಿಧಿ ತನ್ನ ಮಗಳೀ ಪುರದೊಳು ಸೇರಿಹಳ್ನೋಡಬೇಕೆಂದು ಕಾರುಣ್ಯದಿಂ ಬಂದಂತಿರೆ ಧವಳಿಮಚಾರು ಮಂದಿರಗಳೊಪ್ಪುವುವು (ಕಂನವಿ. ೨-೭೦). ೮. ಪ್ರವೇಶ ಪಡೆ; ದಾಖಲಾಗು: ನಾವು ಕಾಲೇಜಿಗೆ ಸೇರುವಾಗ ಯಾವ ಯಾವ ವಿಷಯ (Subject) ತೆಗೆದುಕೊಳ್ಳಬೇಕೆಂದು ಚರ್ಚೆ ನಡೆಸುತ್ತಿದ್ದೆವು (ಆಲಹೂ. ೯೧). ೯. ಸಂಬಂಧಿಸಿರು; ಸಂಬಂಧಪಟ್ಟಿರು: ಕೃಷ್ಣದೇವರಾಯನು ತುಳುವಸಂತತಿಗೆ ಸೇರಿದವನು (ಕೃದೇವ. ೨). ೧೦. ಇಷ್ಟವಾಗು; ಪ್ರಿಯವಾಗು: ಎನಗೆ ಭಸಿತವನಿಡದ ಹಣೆ ಕಣ್ಗೆ ಸೇರದೈ (ಇಟಿರ. ದೇ. ೧೦೯-೧೮); ಎರಡನೆಯವರು ನಮಗೆ ಸೇರದಿದ್ದರೆ ನಾವೂ ಎರಡನೆಯವರಿಗೆ ಸೇರುವದಿಲ್ಲ (ಮುಂಬಯಿ. ಕಿ. ೩-೧೦೫); ಸೇರದ ಗಂಡನಿಗೆ ಮೊಸರಲ್ಲಿ ಕಲ್ಲು (ಗಾದ).

**ಸೇರಿಕೊಳ್ಳು** = ದಾಖಲಾಗು; ಪ್ರವೇಶಪಡೆ: ಚರಮಶ್ಲೋಕಗಳಲ್ಲಿ ಪ್ರತಾಪಕುಮಾರಿಯ ಹೆಸರೂ ಸೇರಿಕೊಳ್ಳಲಿ (ಆರ್ಯಕ. ೯೮); ಆ ದೊರೆಯ ಅರಮನೆಯಲ್ಲಿ ಚಾಕರಿಗೆ ಸೇರಿಕೊಂಡರು (ನೀತಿಚಂ. IX, ೫). [ದೇ. ‖ ತಮಿ. ಕೋತ. ಚೇರ್; ಮಲ. ಚೇರು; ತುಳು. ಶೇರು; ಕೊಡ. ಸೇರ್; ತೆಲು. ಚೇರು; ನಾಯ್ಕಿ. ಶೇರ್]

**ಸೇರಣೆ** (ನಾ). ಜೋಡಣೆ: ಬಿಲ್ಲನೊರೆ ಕೂರಂಬ ಮಸೆ ಕೊಂಕನನುಮಾಡಿ ಗಣೆಗೆ ಗಟಿಗಳನು ಹಸನಾಗಿ ಕಟ್ಟು ಸೇರಣೆಯ ಮಾಡು (ಸಮ್ಯಕಾ. ೧೦-೩೨).

[ಸೇರು$_1$ (< ಸೇರ್) + - ಅಣೆ$_4$]

**ಸೇರಿಕೆ, ಸೇರ್ಕೆ** (ನಾ). ೧. ಹೊಂದಿಕೆ; ಮೇಳ: ಆವ ಸೇರಿಕೆ[ಪಾಠಾಂ. ರುವೆ] ಜಪಕೆ ಚಾಪಶರಾವಳಿಗೆ (ಕುವ್ಯಾಅ. ೪-೪೫). ೨. ಕೂಡಿದುದು; ಸೇರ್ವಡೆ: ಮಹಾಭಾರತದ

ಇತರ ಭಾಗಗಳಂತೆ . . . ಗೀತೆಯೂ ಸಹ ಹೊಸ ಸೇರಿಕೆಗಳಿಗೆ ಎಡೆಕೊಟ್ಟಿರಬಹುದು (ತತ್ವಪ್ರಾ. ೯೨). ೩. ಇಷ್ಟ; ಹಿತ: ನಮ್ಮ ಜೀವನ ಆಸೆ, ಸೇರಿಕೆ, ಹೇಸಿಕೆ, ರಸಿಕತೆ, ಮೋಹ, ಬೆಡಗು – ಎಲ್ಲವೂ ಕನ್ನಡದಲ್ಲಿದೆ (ವಿಚಾಮಂ. ೬); ಮನುಷ್ಯನಿಗೆ ಒಳ್ಳೆಯದನ್ನು ಮಾಡುವುದು ದೇವರಿಗೆ ಅತ್ಯಂತ ಸೇರಿಕೆಯಾಗುವಂಥ ಸೇವೆಯಾಗಿರುತ್ತದೆ (ಬೆಂಜನ್. ೧೫೩). **ಸೇರ್ಕೆ: 'ಸೇರ್ಕೆಗೊಳ್ಳು' ಪರಾ.**

[ಸೇರು$_1$ (< ಸೇರ್) + - ಇಕೆ./ ತಮಿ. ಚೇರ್ಕೈ; ತುಳು. ಶೇರಿಗೆ; ತೆಲು. ಚೇರಿಕ]

**ಸೇರಿಗೆ** 'ಸೇರುಗೆ' ನೋ.

**ಸೇರಿಸು, ಚೇರಿಸು (ಕ್ರಿ).** ೧. ತಲಪಿಸು; ಮುಟ್ಟಿಸು: ಎಂದೋ ಮಹೇಶರ್ಗೆ ಸೇರಿಸುವೆನಿಂತಿದಂ (ಬಸರ. ೫-೧೫೯); ಘೋರಪಾಪಗಳನು ನೀಗಿ ಸೇರಿಪುದುತ್ತಮಗತಿಗೆ (ಕಂಸವಿ. ೫-೨೭). ೨. ಬೆರಸು; ಕೂಡಿಸು: ನಾರಿಯರ ರೂಹುಗಳನಂಜನರಜದಿ ಪುಟವಿಟ್ಟು ಕಾರಮಿಂಚುಮನವರ ಕಣ್ಣೊಳು ಸೇರಿಸಿದನೆನೆ . . . ಮೆಚೆದರಲ್ಲಿ ಪುಳಿಂದರು (ಸಾಳ್ವಭಾ. ೫-೭). ೩. ಹೊಂದಿಸು; ಅಳವಡಿಸು; ಜೋಡಿಸು: ಒಡಲೊಳುಳಿಗಳಂ ಸೇರಿಸಿಯುಂ ನಾಲಗೆಯಂ ಪೆಡತಲೆಯೊಳುರ್ಚಿಯುಂ (ಧರ್ಮಾಮೃ. ೩-೭೩); ವರ ಭೂಷಣಂಗಳ ತೊಡು ದುಕೂಲವನುಡು ಸುಮಾಲ್ಯವ ಮುಡಿಗೆ ಸೇರಿಸು ತರುಣಿ (ನಳಚ. ೫-೫೭); ನೀಲಕುಂತಳಗಳ ತಿದ್ದುತ ಮೊಲೆಗಳ ಮೇಲುದು ಜಾಜೆ ಸೇರಿಸುತ . . . ಲೋಲಲೋಚನೆಯೈದಿದಳು (ಕಂಸವಿ. ೯-೮೪). ೪. ಒಪ್ಪಿಸು; ವಹಿಸು: ಬಲುಗಾಳಗವ ಭೀಮಂಗೆ ಸೇರಿಸಿ ಪಾಳೆಯಕೆ ತಿರುಗಿದರು ಕೃಷ್ಣಾರ್ಜುನರು (ಕುವ್ಯಾಕ. ೧೬-೧). ೫. ದಾಖಲುಮಾಡು: ನಮ್ಮ ಮಗುವನ್ನು ಶಾಲೆಗೆ ಸೇರಿಸಬೇಕು (ರೂಢಿ). **ಚೇರಿಸು:** ೨. ಶಿವನೊಳು ಸುವ್ಯಕ್ತದಿ ಚೇರಿಸುವ ಕಾರಣವಿದು ಯೋಗಾಂಗವಿಭೂಷಣವು (ಯೋಗಾಂವಿ. ೬-೨೮).

**ಸೇರಿಸಿಕೊಳ್ಳು** = ತನ್ನದನ್ನಾಗಿ ಮಾಡಿಕೊಳ್ಳು: ಸೇರಿಸಿಕೊಂಡವನೊಡವೆಯ ನಗುತ ಪಕೀರನ ಮಾಡಿ ಬಿಡುವರು (ಕಂಸವಿ. ೨-೯೮). [ಸೇರ್$_1$ + - ಇಸು$_3$]

**ಸೇರು$_1$** 'ಸೇರ್' ನೋ.

**ಸೇರು$_2$** 'ಸೀಱು$_3$' ನೋ.

**ಸೇರು$_3$ (ನಾ).** ನಾಲ್ಕು ಪಾವುಗಳ ಒಂದು ಅಳತೆ ಮತ್ತು ಅದನ್ನು ಅಳೆಯುವ ಒಂದು ಸಾಧನ : ಸೇರಿಂಗಂ ಪಾವು ನಾಲ್ಕು ತಪ್ಪದು ನಿರುತಂ (ವ್ಯವಹಾ. ಅನುಬಂಧ. I, ೨); ಕಂಡೆ . . . ಇಪ್ಪತ್ತು ದುಡ್ಡಿಗೆ ಸೇರು ತೀರ್ಥವ ಒಪ್ಪದಲಿ ಕ್ರಯಮಾಡಿ ಕೊಡಿಸುವ . . . ವೇಂಕಟರಮಣನಂಪ್ರಿಯ (ಪುರಂದ. ೧-೧೯೯-೨); ಶ್ರೀರಾಮದೇವರಿಗೆ ಚುನ್ನನಗಣ್ಣಿಗೆ ಮಿರಳೆ ಮೋರಿ ಲಕ್ಷ್ಮಣ ಸೇವೆ ತೂ ೪೦ ಸೇರು (ಎಕ. XIV. ಎಡತೂ. ೭೦-೩; ?).

**ಸೇರಿಗೆ ಸವ್ವಾಸೇರು** = (ಆಲಂ) ಒಂದು ವಸ್ತು ಅಥವಾ ವ್ಯಕ್ತಿಯನ್ನು ಮೀರಿಸಿದ ಮತ್ತೊಂದು ವಸ್ತು ಅಥವಾ ವ್ಯಕ್ತಿ: ನಾರಾಯಣರಾಯರು ಸೇರಿಗೆ ಸವ್ವಾಸೇರು! (ಮನವಜ. ೩೪). [ದೇ. ‖ ತಮಿ. ಚೇರ್; ತುಳು.ಸೇರ್; ತೆಲು. ಸೇರು./ ಹಿಂ. ಸೇರ್; ಮರಾ. ಶೀರ್./ ಸಂ. ಸೇರ]

**ಸೇರುಗಾರ** 'ಸೇರುವೆಗಾಱ' ನೋ.

**ಸೇರುಗೆ, ಸೇರಿಗೆ (ನಾ).** ೧. ಸಹವಾಸ; ಸಂಗ: ಕೌರವನ ಜಯವಧುವಿನೊಡನೆಯ ಸೇರುಗೆಯ ಕೂಟಣೆಯೊ ಶರವಿನ್ನಾರಿಗೊಱಲುವೆವಕಟೆನುತ ತಲ್ಲಣಿಸಿತರಿಸೇನೆ (ಕುವ್ಯಾಕ. ೨೫-೨೫). **ಸೇರಿಗೆ:** ೨. ಹತ್ತಿರ ಬರುವಿಕೆ; ಸಮೀಪಿಸುವಿಕೆ: "ಉಪಸನ್ನಮುಪನತಮುಪಸ್ಥಿತಂ ಸೇರಿಗೆಯದು" (ಮಂಗರಾ. ೧೩೪-೩೫).

[ಸೇರು$_1$ (< ಸೇರ್) + - ಗೆ]

**ಸೇರುಪಡಿ (ನಾ).** ಒಂದುಗೂಡುವಿಕೆ; ಜೊತೆಗೂಡುವಿಕೆ: ವಾನರರ ಸೇರುಪಡಿ ತಾನೆತ್ತ ದೈವಪ್ರೇರಣೆಯದ್ಯಸಲ್ಲದಿದು ನಾವಾರು ಮಾಡುವುದಲ್ಲ (ತೊರರಾ. ೬-೫೦-೮೪). 'ಸೇರ್ಪಡೆ' ಪರಾ. [ಸೇರು$_1$ (< ಸೇರ್) + - ಪಡಿ$_6$]

**ಸೇರುಮಣ್ಣು** 'ಸೀಱುಮಣ್ಣು' ನೋ.

**ಸೇರುವೆ (ನಾ).** ೧. ಹೊಂದಿಕೆ; ಮೇಳ: ಶೈವಕಥಾವಿತಾನದೊಳ್ ಕುಂದಿನಿತಿಲ್ಲ ಸೇರುವೆ ಚಮತ್ಕೃತಿಯಾದುದು (ಸಾನಂಚ. ೧೭ ಕಥಾಗರ್ಭಸಂಧಿ); ಭಸ್ಮಾವಲೇಪನ ಚಂದನಂಗಳಿಗಾವ ಸೇರುವೆ (ನಿಭಾಗ. ೪-೫-೪೧); ಬಾಲಕಿಯರಲ್ಲಿ ಪರಿಶೋಭಿಸಿದರೆಸೆವ ನಕ್ಷತ್ರಗಣದಂತೆ ಮೊಗಸಸಿಯ ಸೇರುವೆಯೊಳು (ಜೈಮಿಭಾ. ೬-೨೨). ೨. ಸಹವಾಸ; ಒಡನಾಟ: ಕಾತರಿಸಿ ಕವಿವ ಬಲದ ಬಿರುದರಿಗಮರನಾರಿಯರೊಳಗೆ ಸೇರುವೆಯಾಯ್ತು (ಕುವ್ಯಾದ್ರೋ. ೬-೫); ಜಳನಿಧಿಸುತೆಯ ಸೇರುವೆಯಿಂದೊಪ್ಪುವ ನಳಿನಾಕ್ಷಗೆ ನಮಿಸುವೆನು (ಕರ್ಣಪ್ರ. ೧-೨೪). ೩. ಗುಂಪು; ಸಮೂಹ: ಬಿಡು ಸೆಜೆಯನವಗಡೆಯುತನವೆಮ್ಮೊಡನೆ ಸಲ್ಲದು ಸೂಳೆಯರ ಸುರೆಗುಡುಹಿಗಳ ಸರವಾದಿಗಳ ಸೇರುವೆಯಲೊಪ್ಪುವುದು ಫಡ (ಕುವ್ಯಾಆ. ೨೦-೨೭); ಕಾಲಾಳು ಮೇಲಾಳು ಸೇರುವೆಯ ಪಾಲೆಕಾರರು (ಇಚಿಸಾಂ. ೧೩-೩). ೪. ಹಸುಗಳ ಮಂದೆ,— ಹಿಂಡು: 'ಸೇರುವೆಗಾರ' ಪರಾ.

[ಸೇರು$_1$ (< ಸೇರ್) + - ವೆ./ ತಮಿ. ಚೇರ್ವೈ; ಮಲ. ಚೇರ್ವ್ವ; ತುಳು. ಶೇರ್ವೆ]

**ಸೇರುವೆಗಾರ** 'ಸೇರುವೆಗಾಱ' ನೋ.

**ಸೇರುವೆಗಾಱ, ಸೇರುಗಾರ, ಸೇರುವೆಗಾರ, ಸೇರೆಗಾರ, ಸೇರ್ವೆಗಾರ (ನಾ).** ೧. ಮುಖ್ಯಸ್ಥ; ಮೇಲ್ವಿಚಾರಕ; ಮುಖಂಡ: ಎಕ್ಕಟಿಗರ ಪಡಕಣದ ಸೇರುವೆಗಾಱರುಕ್ಕಡ ತಲೆಗಾವಲುಗಳ ತಕ್ಕಿನ ತಳವಾಱರ ತಿಂಥಿಣಿ ಕಟಕಕ್ಕೆ ರಕ್ಷಣೆಯಾಗಲು (ಶ್ರೀಪಾಲ. ೧೩-೧೧೨); ಆಳಿಸಗಿದೂಳಿಗಮನರಸಂಗಂ ಅರಸನಿತ್ತ ಜೀವನಮನಾಳ್ಗಮೊಪ್ಪಿಸುವ ಸೇರುವೆಗಾಱನಂತೆ (ಚಕಬ. ೨೫). **ಸೇರುಗಾರ:** ೨. ಹಸುಗಳ ಮಂದೆಯನ್ನು ಪೋಷಿಸುವ ಕಚೇರಿಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದ ಸ್ಥಳೀಯ ಅಧಿಕಾರಿ: ಅರಮನೆಯ ಬಾಗಿಲ ಬಳಿಗೆ ಬಂದು, ಕಾವಲ ಕಾದಿರುವ ಗೊಲ್ಲರ ಸೇರುಗಾರನಂ ಕರೆದು (ಚಿತ್ರೀಸ. ೩೯). **ಸೇರುವೆಗಾರ:** ೨. ಅಮೃತಮಹಲ್ ಆಡಳಿತದ ಕಡತಗಳನ್ನು ತೆರೆದರೆ ಅದರ ಸೇರುವೆಗಾರರು ತಮ್ಮ ಮಂದೆಗಳ ಹಸುಗಳಿಗೆ ಕೊಡುತ್ತಿದ್ದ ನಾನೂರು ಹೆಸರು ದೊರೆಯುತ್ತವೆ (ನಮ್ಮನು. ೨೫). **ಸೇರೆಗಾರ:** ೩. ಕಟ್ಟಡ ನಿರ್ಮಾಣದ ಮೇಲ್ವಿಚಾರಕ; ಮೇಸ್ತ್ರಿ: ದಕ್ಷಿಣಕನ್ನಡಜಿಲ್ಲೆಯಿಂದ ಬರುವ ಮೇಸ್ತ್ರಿಗಳನ್ನು ಸೇರೆಗಾರರೆಂದು ಕರೆಯುತ್ತಾರೆ (ಕಾನೂರು. ೪೫); ತುಕ್ರನು . . . ತನ್ನ ಊರಿಗೆ ಓಡಿಹೋಗಿರಬೇಕೆಂದು ಅವನ ಸೇರೆಗಾರರು ಭಾವಿಸಿದರು (ಪಂಜಪಂ. ೨೫). **ಸೇರ್ವೆಗಾರ:** ೧. ಸಾಮಂತ, ಸೇರ್ವೆಗಾರ (ತುಳುನಾ. ೧೭೧).

[ಸೇರುವೆ + - ಕಾಱ./ ತಮಿ. ಚೇರ್ವೈಕಾರನ್, ಚೇರ್ವೈಕ್ಕಾರನ್; ತುಳು. ಶೇರಿಗಾರ, ಶೇರುಗಾರ, ಸೇರಿಗಾರ, ಸೇರೆಗಾರ]

**ಸೇರುವೆಗೆಯ್ (ಕ್ರಿ).** ಒಂದುಗೂಡು; ಜೊತೆಯಾಗು: ಬಿರಿದ ಪೊಂಬಾಳೆ ನೆಗಪಿ ಸೇರುವೆಗೆಯ್ದು ಬಾಳ್ಗಳೀಳ್ಗೆಯ ಬೀಜೆ (ಪದ್ಮರಾ. ೮-೩೪). [ಸೇರುವೆ + ಕೆಯ್$_1$]

**ಸೇರುವೆದಪ್ಪು (ಕ್ರಿ).** ಹೊಂದಾಣಿಕೆ ಇಲ್ಲವಾಗು; ಮೇಳತಪ್ಪು: ಬಲುಭಾರಿಯ ಗುಡಿಗಳ ಸಾಲು ಸೇರುವೆದಪ್ಪದೆತ್ತಿದವು (ಕುರಾಸಾಂ. ೪೨-೫೮). [ಸೇರುವೆ + - ತಪ್ಪು$_1$]

**ಸೇರೆ$_1$, ಶಾರೆ, ಸಾರೆ$_3$, ಸೆರೆ$_2$ (ನಾ).** ೧. ಬೊಗಸೆ; ಅಂಜಲಿ: ಎರಡು ಸೇರೆಯ ತುಂಬಿ ರತ್ನವ ಸುರಿದು ಮೈಯಿಕ್ಕಿದನು ಭೂಪತಿ (ಕುವ್ಯಾವಿ. ೧೧-೫೬); ಜನಮಱಿಯೆ ಪೆರ್ಗವತೆ ಸೇರೆ ಪಿಡಿ ಕರಭಂಗಳೆನಿಪವರೊಳಭಿನಯಿಸಿ ತೋಱಿಸಲ್ (ಜೈಮಿಭಾ. ೬-೨೧); ಸೂತ್ರಧಾರಂ ಸೇರೆಯೊಳ್ ಪೂರ್ಯಿಸಿದ ಕುಸುಮಂಗಳಂ ರಂಗದೊಳ್ಚಲ್ಲಿ (ಮಿತ್ರಗೋ. ೧-೫). ೨. ಬೊಗಸೆಯಲ್ಲಿ ತುಂಬುವಷ್ಟು ಅಳತೆ: ಕಬ್ಬಿನ ಕಟ್ಟಿಗೆಯ ಪುಡಿಯೊಂದು ಸೇರೆಯನು [ಪಾಠಾಂ. ಸೆರೆಯೆನಲು, ಸೆರೆಯದನು] ದೇವರಿಗೆ ಕೊಟ್ಟು (ಬಸವ್ರು. ೧೨-೨೮); ಅದರ ಮಾಲೆಯಲೆಗಳನ್ನೂ, ಉರುಳಿ ಹೊರಳಿ ಅವು ಒಂದರೊಡನೊಂದು ಹೋರಾಡುತ್ತ ನೊರೆಯ ಸೇರೆಗಳನ್ನೆತ್ತಿ ಎಸೆಯುತ್ತ ಬರುವುದನ್ನು ನೋಡಿದರೆ (ಪಂಯಾತ್ರ. ೩೨). **ಶಾರೆ:** ೧. ಬಲಗೈಯಿಂದ ಒಂದು ಶಾರೆ ಎಣ್ಣೆಯನ್ನು ಅವರ ತಲೆಯ ಮೇಲೆ ಹಾಕಿ ತಿಕ್ಕಲು ಆರಂಭಿಸಿದ್ದಾಳೆ (ವಂಶವೃ. ೧೬). 'ಶಾರೆಗಣ್ಣು' ಪರಾ. ೨. ಶಾರೆ ಹೊನ್ನಿಗೆ ಭತ್ತ ಶಾರೆಯಾದರೆ ಏನು (ವಿದಾಕ್ಯ. ೧೩೫-೨). **ಸಾರೆ$_3$:** ೩. ಬೊಗಸೆಯಷ್ಟು ವಿಶಾಲವಾದುದು: ಸತ್ತ ಮಗುವಿನ ಕಣ್ಣು ಸಾರೆ (ಗಾದೆ). **ಸೆರೆ$_2$:** ೧. ಎಳೆಯ ಬದನೆಯ ಕಾಯ ಕೊಯಿದು . . . ಸೆರೆನೀರು ಸೆರೆತುಪ್ಪವಿಳುಹಿ ನೀರುಳ್ಳಿ ಹಸಿಯಲ್ಲಮಂ ಹಾಕಿ ಬೇಯ್ಸುವುದು (ಸೂಪಶಾ. ೪-೨); ಒಂದು ಸೆರೆ ತಾರೆಕಾಯಿರಸದಲ್ಲಿ ಕಲಸಿ (ಸಕವ್ರ. ೪೫). ೨. ಕೆರೆಯೊಂದ ಕಟ್ಟಿಸ್ಯಾನು ಸೆರೆಮುಕ್ಕ ನೀರಿಲ್ಲ (ಕನ್ನಬಾ. ೭೯). 'ಮುಚ್ಚೆರೆ' ಪರಾ.

[ದೇ. ‖ ತಮಿ. ಚೇರ್ಕೈ; ತುಳು. ಸೇರೆ, ಸೆರೆ; ತೆಲು. ಚೇರ; ಕೊಡ. ಸೇರ; ತೊದ. ತೆಱ್]

ಇತರ ಭಾಗಗಳಂತೆ . . . ಗೀತೆಯೂ ಸಹ ಹೊಸ ಸೇರಿಕೆಗಳಿಗೆ ಎಡೆಕೊಟ್ಟಿರಬಹುದು (ತತ್ವಪ್ರಾ. ೯೨). ೩. ಇಷ್ಟ; ಹಿತ: ನಮ್ಮ ಜೀವನ ಆಸೆ, ಸೇರಿಕೆ, ಹೇಸಿಕೆ, ರಸಿಕತೆ, ಮೋಹ, ಬೆಡಗು — ಎಲ್ಲವೂ ಕನ್ನಡದಲ್ಲಿದೆ (ವಿಚಾಮಂ. ೬); ಮನುಷ್ಯನಿಗೆ ಒಳ್ಳೆಯದನ್ನು ಮಾಡುವುದು ದೇವರಿಗೆ ಅತ್ಯಂತ ಸೇರಿಕೆಯಾಗುವಂಥ ಸೇವೆಯಾಗಿರುತ್ತದೆ (ಜೀಜನ್. ೧೫೩). **ಸೇರ್ಕೆ: 'ಸೇರ್ಕೆಗೊಳ್ಳು' ಪರಾ.**

[ಸೇರು₁ (< ಸೇರ್) + - ಇಕೆ./ ತಮಿ. ಚೇರ್ಕ್ಕೈ; ತುಳು. ಶೇರಿಗೆ; ತೆಲು. ಚೇರಿಕ]

**ಸೇರಿಗೆ** 'ಸೇರುಗೆ' ನೋ.

**ಸೇರಿಸು, ಚೇರಿಸು** (ಕ್ರಿ). ೧. ತಲಪಿಸು; ಮುಟ್ಟಿಸು: ಎಂದೋ ಮಹೇಶರ್ಗೆ ಸೇರಿಸುವೆನಿಂತಿದಂ (ಬಸರ. ೫-೧೫೯); ಘೋರಪಾಪಗಳನು ನೀಗಿ ಸೇರಿಪುದುತ್ತಮಗತಿಗೆ (ಕಂಸವಿ. ೫-೨೭). ೨. ಬೆರಸು; ಕೂಡಿಸು: ನಾರಿಯರ ರೂಹುಗಳನಂಜನರಜದಿ ಪುಟವಿಟ್ಟು ಕಾರಮಿಂಚುಮನವರ ಕಣ್ಣೊಳು ಸೇರಿಸಿದನೆನೆ . . . ಮಜೆದರಲ್ಲಿ ಪುಳಿಂದರು (ಸಾಳ್ವಭಾ. ೫-೭). ೩. ಹೊಂದಿಸು; ಅಳವಡಿಸು; ಜೋಡಿಸು: ಒಡಲೊಳುಳಿಗಳಂ ಸೇರಿಸಿಯುಂ ನಾಲಗೆಯಂ ಪೆಡತಲೆಯೊಳುರ್ಚಿಯುಂ (ಧರ್ಮಾಮೃ. ೩-೭೩); ವರ ಭೂಷಣಂಗಳ ತೊಡು ದುಕೂಲವನುಡು ಸುಮಾಲ್ಯವ ಮುಡಿಗೆ ಸೇರಿಸು ತರುಣಿ (ನಳಚ. ೫-೫೭); ನೀಲಕುಂತಳಗಳ ತಿದ್ದುತ ಮೊಲೆಗಳ ಮೇಲುದು ಜಾಜಿ ಸೇರಿಸುತ . . . ಲೋಲಲೋಚನೆಯೈದಿದಳು (ಕಂಸವಿ. ೯-೮೪). ೪. ಒಪ್ಪಿಸು; ವಹಿಸು: ಬಲುಗಾಳಗವ ಭೀಮಂಗೆ ಸೇರಿಸಿ ಪಾಳೆಯಕೆ ತಿರುಗಿದರು ಕೃಷ್ಣಾರ್ಜುನರು (ಕುಮಾಭ. ೧೬-೧). ೫. ದಾಖಲುಮಾಡು: ನಮ್ಮ ಮಗುವನ್ನು ಶಾಲೆಗೆ ಸೇರಿಸಬೇಕು (ರೂಢಿ). **ಚೇರಿಸು:** ೨. ಶಿವನೊಳು ಸುವ್ಯಕ್ತದಿ ಚೇರಿಸುವ ಕಾರಣವಿದು ಯೋಗಾಂಗವಿಭೂಷಣವು (ಯೋಗಾಂವಿ. ೬-೨೮).

**ಸೇರಿಸಿಕೊಳ್ಳು** = ತನ್ನದನ್ನಾಗಿ ಮಾಡಿಕೊಳ್ಳು: ಸೇರಿಸಿಕೊಂಡವನೊಡವೆಯ ನಗುತ ಪಕೀರನ ಮಾಡಿ ಬಿಡುವರು (ಕಂಸವಿ. ೨-೯೮). [ಸೇರ್₁ + - ಇಸು₃]

**ಸೇರು₁** 'ಸೇರ್' ನೋ.

**ಸೇರು₂** 'ಸೀಱು₃' ನೋ.

**ಸೇರು₃** (ನಾ). ನಾಲ್ಕು ಪಾವುಗಳ ಒಂದು ಅಳತೆ ಮತ್ತು ಅದನ್ನು ಅಳೆಯುವ ಒಂದು ಸಾಧನ : ಸೇರಿಂಗಂ ಪಾವು ನಾಲ್ಕು ತಪ್ಪದು ನಿರುತಂ (ವ್ಯವಹಾ. ಅನುಬಂಧ. I, ೨); ಕಂಡೆ . . . ಇಪ್ಪತ್ತು ದುಡ್ಡಿಗೆ ಸೇರು ತೀರ್ಥವ ಒಪ್ಪದಲಿ ಕ್ರಯಮಾಡಿ ಕೊಡಿಸುವ . . . ವೇಂಕಟರಮಣನಂಪ್ರಿಯ (ಪುರಂದ. ೧-೧೧೯-೨); ಶ್ರೀರಾಮದೇವರಿಗೆ ಚುನ್ನನಗಣ್ಣಗೆ ಮಿರಳೆ ಮೋರಿ ಲಕ್ಷ್ಮಣ ಸೇವೆ ತೂ ೪೦ ಸೇರು (ಎಕ. XIV. ಎಡತೊ. ೭೦-೩; ?).

**ಸೇರಿಗೆ ಸವ್ವಾಸೇರು** = (ಅಲಂ) ಒಂದು ವಸ್ತು ಅಥವಾ ವ್ಯಕ್ತಿಯನ್ನು ಮೀರಿಸಿದ ಮತ್ತೊಂದು ವಸ್ತು ಅಥವಾ ವ್ಯಕ್ತಿ: ನಾರಾಯಣರಾಯರು ಸೇರಿಗೆ ಸವ್ವಾಸೇರು! (ಮನಚ. ೩೪). [ದೇ. II ತಮಿ. ಚೇರ್; ತುಳು.ಸೇರ್; ತೆಲು. ಸೇರು./ ಹಿಂ. ಸೇರ್; ಮರಾ. ಶೀರ್./ ಸಂ. ಸೇರ]

**ಸೇರುಗಾರ** 'ಸೇರುವೆಗಾಱ' ನೋ.

**ಸೇರುಗೆ, ಸೇರಿಗೆ** (ನಾ). ೧. ಸಹವಾಸ; ಸಂಗ: ಕೌರವನ ಜಯವಧುವಿನೊಡನೆಯ ಸೇರುಗೆಯ ಕೂಟಣೆಯೊ ಶರವಿನ್ನಾರಿಗೊಱಲುವೆವಕಟೆನುತ ತಲ್ಲಣಿಸಿತರಿಸೇನೆ (ಕುಮಾಭ. ೨೫-೨೫). **ಸೇರಿಗೆ:** ೨. ಹತ್ತಿರ ಬರುವಿಕೆ; ಸಮೀಪಿಸುವಿಕೆ: "ಉಪಸನ್ನಮುಪನತಮುಪಸ್ಥಿತಂ ಸೇರಿಗೆಯದು" (ಮಂಗರಾ. ೧೩೪-೩೫).

[ಸೇರು₁ (< ಸೇರ್) + - ಗೆ]

**ಸೇರುಪಡಿ** (ನಾ). ಒಂದುಗೂಡುವಿಕೆ; ಜೊತೆಗೂಡುವಿಕೆ: ವಾನರರ ಸೇರುಪಡಿ ತಾನೆತ್ತ ದೈವಪ್ರೇರಣೆಯದ್ದೆಸಲ್ಲದಿದು ನಾವಾರು ಮಾಡುವುದಲ್ಲ (ತೊರರಾ. ೬-೫೦-೮೪). **'ಸೇರ್ಪಡೆ' ಪರಾ.** [ಸೇರು₁ (< ಸೇರ್) + - ಪಡಿ₁]

**ಸೇರುಮಣ್ಣು** 'ಸೀಱುಮಣ್ಣು' ನೋ.

**ಸೇರುವೆ** (ನಾ). ೧. ಹೊಂದಿಕೆ; ಮೇಳ: ಶೈವಕಥಾವಿತಾನದೊಳ್ ಕುಂದಿನಿತಿಲ್ಲ ಸೇರುವೆ ಚಮತ್ಕೃತಿಯಾದುದು (ಸಾನಂಚ. ೧೭ ಕಥಾಗರ್ಭಸಂಧಿ); ಭಸ್ಮಾವಲೇಪನ ಚಂದನಂಗಳಿಗಾವ ಸೇರುವೆ (ನಿಭಾಗ. ೪-೫-೪೦); ಬಾಲಕಿಯರಲ್ಲಿ ಪರಿಶೋಭಿಸಿದರಸವ ನಕ್ಷತ್ರಗಣದಂತೆ ಮೊಗಸಸಿಯ ಸೇರುವೆಯೊಳು (ಜೈಮಿಭಾ. ೬-೨೨). ೨. ಸಹವಾಸ; ಒಡನಾಟ: ಕಾತರಿಸಿ ಕವಿವ ಬಲದ ಬಿರುದರಿಗಮರನಾರಿಯರೊಳಗೆ ಸೇರುವೆಯಾಯ್ತು (ಕುಮಾದ್ರೋ. ೬-೫); ಜಳನಿಧಿಸುತೆಯ ಸೇರುವೆಯಿಂದೊಪ್ಪುವ ನಳಿನಾಕ್ಷಗೆ ನಮಿಸುವೆನು (ಕರ್ಣಾಪ್ರ. ೧-೨೪). ೩. ಗುಂಪು; ಸಮೂಹ: ಬಿಡು ಸಟೆಯೆನವಗಡೆಯತನವಮ್ಮೊಡನೆ ಸಲ್ಲದು ಸೂಳೆಯರ ಸುರೆಗುಡುಹಿಗಳ ಸರವಾದಿಗಳ ಸೇರುವೆಯಲೊಪ್ಪುವುದು ಘಡ (ಕುಮಾಆ. ೨೦-೨೭); ಕಾಲಾಳು ಮೇಲಾಳು ಸೇರುವೆಯ ವಾಲಕಾರರು (ಇಚಸಾಂ. ೧೩-೩). ೪. ಹಸುಗಳ ಮಂದೆ,— ಹಿಂದು: 'ಸೇರುವೆಗಾರ' ಪರಾ.

[ಸೇರು₁ (< ಸೇರ್) + - ವೆ./ ತಮಿ. ಚೇರ್ವೈ; ಮಲ. ಚೇರ್ವ್ವ; ತುಳು. ಶೇರ್ವೆ]

**ಸೇರುವೆಗಾರ** 'ಸೇರುವೆಗಾಱ' ನೋ.

**ಸೇರುವೆಗಾಱ, ಸೇರುಗಾರ, ಸೇರುವೆಗಾರ, ಸೇರೆಗಾರ, ಸೇರ್ವೆಗಾರ** (ನಾ). ೧. ಮುಖ್ಯಸ್ಥ; ಮೇಲ್ವಿಚಾರಕ; ಮುಖಂಡ: ಎಕ್ಕಟಿಗರ ಪಡಕಣದ ಸೇರುವೆಗಾಱರುಕ್ಕಡ ತಲೆಗಾವಲುಗಳ ತಕ್ಕಿನ ತಳವಾಱರ ತಿಂಥಿಣಿ ಕಟಕಕ್ಕೆ ರಕ್ಷಣೆಯಾಗಲು (ಶ್ರೀಪಾಲ. ೧೩-೧೧೨); ಆಳೆಸಗಿದೊಳಿಗಮನರಸಂಗಂ ಅರಸನಿತ್ತ ಜೀವನಮನಾಳ್ವ ಮೊಪ್ಪಿಸುವ ಸೇರುವೆಗಾಱನಂತೆ (ಚಿಕಬಿ. ೨೫). **ಸೇರುಗಾರ:** ೨. ಹಸುಗಳ ಮಂದೆಯನ್ನು ಪೋಷಿಸುವ ಕಚೇರಿಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದ ಸ್ಥಳೀಯ ಅಧಿಕಾರಿ: ಅರಮನೆಯ ಬಾಗಿಲ ಬಳಿಗೆ ಬಂದು, ಕಾವಲ ಕಾದಿರುವ ಗೊಲ್ಲರ ಸೇರುಗಾರನಂ ಕರೆದು (ಬಿತ್ತೀಸ. ೩೯). **ಸೇರುವೆಗಾರ:** ೨. ಅಮೃತಮಹಲ್ ಆಡಳಿತದ ಕವತಗಳನ್ನು ತೆರೆದರೆ ಅದರ ಸೇರುವೆಗಾರರು ತಮ್ಮ ಮಂದೆಗಳ ಹಸುಗಳಿಗೆ ಕೊಡುತ್ತಿದ್ದ ನಾನೂರು ಹೆಸರು ದೊರೆಯುತ್ತವೆ (ನಮ್ಮನು. ೨೩೫). **ಸೇರೆಗಾರ:** ೩. ಕಟ್ಟಡ ನಿರ್ಮಾಣದ ಮೇಲ್ವಿಚಾರಕ; ಮೇಸ್ತ್ರಿ: ದಕ್ಷಿಣಕನ್ನಡಜಿಲ್ಲೆಯಿಂದ ಬರುವ ಮೇಸ್ತ್ರಿಗಳನ್ನು ಸೇರೆಗಾರರೆಂದು ಕರೆಯುತ್ತಾರೆ (ಕಾನೂರು. ೪೫); ತುಕ್ರನು . . . ತನ್ನ ಊರಿಗೆ ಓಡಿಹೋಗಿರಬೇಕೆಂದು ಅವನ ಸೇರೆಗಾರರು ಭಾವಿಸಿದರು (ಪಂಜಪಂ. ೨೫). **ಸೇರ್ವೆಗಾರ:** ೧. ಸಾಮಂತ, ಸೇರ್ವೆಗಾರ (ತುಳುಸಾ. ೧೭೦).

[ಸೇರುವೆ + - ಕಾಱ./ ತಮಿ. ಚೇರ್ವೈಕಾರನ್, ಚೇರ್ವೈಕ್ಕಾರನ್; ತುಳು. ಶೇರಿಗಾರ, ಶೇರುಗಾರ, ಸೇರಿಗಾರ, ಸೇರೆಗಾರ]

**ಸೇರುವೆಗೆಯ್** (ಕ್ರಿ). ಒಂದುಗೂಡು; ಜೊತೆಯಾಗು: ಬಿರಿದ ಪೊಂಬಾಳೆ ನೆಗಪಿ ಸೇರುವೆಗೆಯ್ದು ಬಾಳ್ಗಳೆಲ್ಗಳೆಯ ಬೀಜೆ (ಪದ್ಮರಾ. ೮-೩೪). [ಸೇರುವೆ + ಕೆಯ್₁]

**ಸೇರುವೆದಪ್ಪು** (ಕ್ರಿ). ಹೊಂದಾಣಿಕೆ ಇಲ್ಲವಾಗು; ಮೇಳತಪ್ಪು: ಬಲುಭಾರಿಯ ಗುಡಿಗಳ ಸಾಲು ಸೇರುವೆದಪ್ಪದೆತ್ತಿದವು (ಕುರಾಸಾಂ. ೪೨-೫೬). [ಸೇರುವೆ + - ತಪ್ಪು₁]

**ಸೇರೆ₁, ಶಾರೆ, ಸಾರೆ₃, ಸೆರೆ₂** (ನಾ). ೧. ಬೊಗಸೆ; ಅಂಜಲಿ: ಎರಡು ಸೇರೆಯ ತುಂಬಿ ರತ್ನವ ಸುರಿದು ಮೈಯಿಕ್ಕಿದನು ಭೂಪತಿ (ಕುಮಾವಿ. ೧೧-೫೭); ಜನಮುಱಿಯೆ ಪೆರ್ಗವತೆ ಸೇರೆ ಪಿಡಿ ಕರಭಂಗಳೆನಿಪವರೊಳಭಿನಯಿಸಿ ತೋಱಿಸಲ್ (ಜೈಮಿಭಾ. ೬-೨೦); ಸೂತ್ರಧಾರಂ ಸೇರೆಯೊಳ್ ಪೂರೈಸಿದ ಕುಸುಮಂಗಳಂ ರಂಗದೊಳ್ಚಲ್ಲಿ (ಮಿತ್ರಗೋ. ೧-೫). ೨. ಬೊಗಸೆಯಲ್ಲಿ ತುಂಬುವಷ್ಟು ಅಳತೆ: ಕಬ್ಬಿನ ಕಟ್ಟಿಗೆಯ ಪುಡಿಯೊಂದು ಸೇರೆಯನು [ಪಾಠಾಂ. ಸೆರೆಯೆನಲು, ಸೆರೆಯದನು] ದೇವರಿಗೆ ಕೊಟ್ಟು (ಬಸವು. ೧೨-೨೮); ಅದರ ಮಾಲೆಯಲೆಗಳನ್ನೂ, ಉರುಳಿ ಹೊರಳಿ ಅವು ಒಂದರೊಡನೊಂದು ಹೋರಾಡುತ್ತ ನೊರೆಯ ಸೇರೆಗಳನ್ನೆತ್ತಿ ಎಸೆಯುತ್ತ ಬರುವುದನ್ನು ನೋಡಿದರೆ (ಪಂಯಾತ್ರ. ೩೨). **ಶಾರೆ:** ೧. ಬಲಗೈಯಿಂದ ಒಂದು ಶಾರೆ ಎಣ್ಣೆಯನ್ನು ಅವರ ತಲೆಯ ಮೇಲೆ ಹಾಕಿ ತಿಕ್ಕಲು ಆರಂಭಿಸಿದ್ದಾಳೆ (ವಂಶವೃ. ೧೬). **'ಶಾರೆಗಣ್ಣು' ಪರಾ.** ೨. ಶಾರೆ ಹೊನ್ನಿಗೆ ಭತ್ತ ಶಾರೆಯಾದರೆ ಏನು (ವಿದಾತ್ಯ. ೧೩೫-೨). **ಸಾರೆ₃:** ೩. ಬೊಗಸೆಯಷ್ಟು ವಿಶಾಲವಾದುದು: ಸತ್ತ ಮಗುವಿನ ಕಣ್ಣು ಸಾರೆ (ಗಾದೆ). **ಸೆರೆ₂:** ೧. ಎಳೆಯ ಬದನೆಯ ಕಾಯ ಕೊಯಿದು . . . ಸೆರನೀರು ಸೆರೆತುಪ್ಪವಿಳುಹಿ ನೀರುಳ್ಳಿ ಹಸಿಯಲ್ಲಮಂ ಹಾಕಿ ಬೇಯ್ಸುವುದು (ಸೂಪಶಾ. ೪-೨); ಒಂದು ಸೆರೆ ತಾರೆಕಾಯಿರಸದಲ್ಲಿ ಕಲಸಿ (ಸಕವೃ. ೪೯೫). ೨. ಕೆರೆಯೊಂದ ಕಟ್ಟಿಸ್ಯಾನು ಸೆರೆಮುಕ್ಕ ನೀರಿಲ್ಲ (ಕನ್ನಬಾ. ೭೯). **'ಮುಚ್ಚೆರೆ' ಪರಾ.**

[ದೇ. II ತಮಿ. ಚೇರ್ಕೈ; ತುಳು. ಸೇರೆ, ಸೆರೆ; ತೆಲು. ಚೇರ; ಕೊಡ. ಸೇರ; ತೊದ. ತೆಱ್]

ಹಾಲೋಗರೊಡೆ ಸಣ್ಣಸೇವಗೆಗಳಲ್ಲಲ್ಲಿ (ಬಸರ. ೭-೧೨). **ಶಾವಿಗೆ:** ೧. ಪರಡಿಯ ಶಾವಿಗೆಯ ಪರಿಪರಿಯ ಪಾಯಸದ ಪುಳ್ಳಿಗೆಯ ತತ್ಸವಿಯ ಮಂಡಿಗೆಯಲ್ಲಿ . . . ನೋಡಲಿ ನಮ್ಮನು (ಕುಮ್ಮಾಅ. ೧೫-೭); ಪರಿಪರಿಯ ಪರಮಾನ್ನ ಪರಡಿ ಶಾವಿಗೆಗಳಿಂದ (ಪರಶು. ೮-೨೭). ೨. ಹನುಮಂತರಾಯ ಹಗ್ಗ ತಿನ್ನುವಾಗ ಪೂಜಾರಯ್ಯ ಶಾವಿಗೆ ಬೇಡಿದ (ಗಾದೆ). **ಸೇಮಿಗೆ:** ೨. ಗಂಗಕ್ಕ ಚಿಕ್ಕಪ್ಪನಲ್ಲಿಗೆ ಹೊರಟುದು ಸೇಮಿಗೆಯ ಮಣೆ ತರುವುದಕ್ಕಾಗಿ (ಒಡ್ಡಿಲು. ೨). **ಸೇವಿಗೆ:** ೧. ಬಳುಕಿ ಬಾಗುವ ಮಳೆಯ ಸೆಳಕುಗಳ ಸೇವಿಗೆಯ ಸಿವುದು ಕಟ್ಟಿದು (ನಲಮು. ೧೭-೫).

**ಸೇವಗೆಯೊರಳು** = ಸೇವಗೆಯನ್ನು ಒತ್ತುವ ಒಂದು ಬಗೆಯ ಸಾಧನ: ಗಗನವಂದಂಬ ಸೇವಗೆಯೊರಳಿಂದ ಸೇವಗೆಯಿಳಿವೊಲು ಮಳೆಯಾಯ್ತು (ಭರಚ. ೩೪-೫೮). [ದೇ. ‖ತಮಿ. ಚೇಮಿಕ್ಕೆ,ಚೇಮಿಯಾ; ತುಳು. ಸೇಮೆ; ತೆಲು. ಸೇವಿಯ./ ಸಂ. ಸೇವಿಕಾ./ ಗ್ರೀಕ್. Seo]

**ಸೇವತಿಗೆ** 'ಸೇವಂತಿಗೆ' ನೋ.

**ಸೇವನ** (ನಾ). ೧. ಶುಶ್ರೂಷೆ; ಉಪಚಾರ: "ಸೇವನಂ . . . ಸ್ಯಮ್ಯಂ - ಈ ೭ ಬಳಿಗೆಲಸಂ" (ಶಾಶಕ್ಕ. ೧೧೫). ೨. ಹೊಲಿಯುವಿಕೆ. [ಸಂ.]

**ಸೇವನೆ** (ನಾ). ೧. = ಸೇವನ ೧. ೨. ಪೂಜೆ; ಉಪಾಸನೆ: ಸಾಲದೆ ಮುಕ್ತ್ಯಂಗನೆಯಂ ಸೋಲಿಸುವಡೆ ಜಿನಪದಾಬ್ಜಸೇವನೆ (ಸಮುಪ. ೧-೧೨೮). ೩. ತಿನ್ನುವಿಕೆ: 'ಸೇವನೆಗೆಯ್' ಪರಾ. ೪. ಕುಡಿಯುವಿಕೆ; ಪಾನ: ಜನನೀಸ್ತನ್ಯಾಮೃತಸೇವನೆ ಮಾಣ್ದ ಬಟಿಕ್ಕಮಖಿಳವಿದ್ಯಾಮೃತಸೇವನೆಯೊಳೆ ಯೋಜಿಪು ದುಚಿತಂ ತನಯನಂ (ಚಂದ್ರಪ್ರ. ४-३); ಕಾವೇರಿಯ ದರ್ಶನವು ಕೃತಯುಗದಲ್ಲಿ . . . ಕಲಿಯುಗದಲ್ಲಿ ಸೇವನೆಯು ಪುಣ್ಯಪ್ರದ (ಕಾವೇಮಾ. ೮-೧೪). ೫. ಅನುಭವಿಸುವಿಕೆ; ಸಂಗಮಾಡುವಿಕೆ: ವನಿತಾಸೇವನೆ ರೂಕ್ಷಮಕ್ಕೆ ಪಸಿವಾಗುಬ್ ಚಿಂತೆ ವಿಣ್ಮೂತ್ರವೇಗ ನಿರೋಧಂ . . . ಇವಱಿಂ . . . ಮಾರುತಂ ಜನಿಯಿಕ್ಕುಂ (ಲೋಕೋಪ. ೯-४). [ಸಂ. ಸೇವನ]

**ಸೇವನೆಗೆಯ್** (ಕ್ರಿ). ತಿನ್ನು; ಸೇವಿಸು: ಆಯಶ್ಚೂರ್ಣ ಸೇವನೆಗೆಯ್ವಾ ಫಲದಿಂದ ಪೆತ್ತ ತನಯಂಗಸ್ತ್ರಾಘುಮೇನಾರ್ಕುಮೇ (ಜಗವಿ. ೯-೩೮). [ಸೇವನೆ + ಕೆಯ್₁]

**ಸೇವರಿಸು** (ಕ್ರಿ). ಕವಿ; ಮುತ್ತು (?): ಇಷುಗಳಂ ಖಂಡಿಸುತ ತುಂಡಿಸುತ ಗಹಿಸಿ ಬಹ ಸೇನೆಗಂ ಆವರಿಸಿ ಸೇವರಿಸಿ ಸಹಸದೋಲಂಗಾಂಗ ತಾಟಿಸುತ ತೂಟಿಸುತ (ಜಿನಮು. ೨೭-೨೨). [? + - ಇಸು₃]

**ಸೇವಳ** 'ಸೇವಾಳ' ನೋ.

**ಸೇವಳರೇಕೆ** (ನಾ). ಹಾವಸೆಯ ಸಾಲು; ಪಾಚಿಯ ಸಾಲು: ಪೊಣರ್ವಕ್ಕಿ ಪಯೋಧರದ್ವಯಂ ಸೇವಳರೇಕೆ ಬಾಸೆ ಪುಳಿನಂ ಜಘನಂ (ಜಗವಿ. ೧४-೯೧).

[ಸೇವಳ (< ಸೇವಾಳ) + ರೇಕೆ]

**ಸೇವಾಕಾಂಕ್ಷೆ** (ನಾ). ಸೇವೆ ಮಾಡುವ ಇಚ್ಛೆ: ಏನಾಯ್ತು ನಿನ್ನ ಪವಿತ್ರ ಸೇವಾಕಾಂಕ್ಷೆ? (ನಿಶಉ. ೧೨೫). [ಸಂ. ಸೇವಾಕಾಂಕ್ಷಾ]

**ಸೇವಾರತಿ** (ನಾ). = ಸೇವಾಕಾಂಕ್ಷೆ: ಸಮುಚಿತಸೇವಾರತಿಯೊಳ್ ನಡೆದು ನೆಗೞೆ ನಿರವಿಸಿ (ಪುಷ್ಪಪು. ೧೨-೫೫). [ಸಂ.]

**ಸೇವಾಲ** 'ಸೇವಾಳ' ನೋ.

**ಸೇವಾವಿಚಕ್ಷಣ** (ನಾ). ಸೇವೆಮಾಡುವುದರಲ್ಲಿ ಚತುರನಾದವನು: ಲೋಕಜ್ಞರುಂ ಸೇವಾವಿಚಕ್ಷಣರುಮಪ್ಪುದಱಿಂದಮಾ ಕುಕ್ಕುಟಯುದ್ಧನಿರೀಕ್ಷಣರಸಕ್ಕೆ ಭಂಗಂ ಮಾಡದೆ (ಶಾಂತಿಪು. ೯-೫೫ ವ). [ಸಂ.]

**ಸೇವಾವಿದ** (ನಾ). = ಸೇವಾವಿಚಕ್ಷಣ: ಸೇವಾವಿದಂ . . . ಮಾನಾನ್ವಿತಂ ಮೇಷಜಂ (ಜಾತತಿ. ೧೭-೧). [ಸಂ. ಸೇವಾವಿದ್]

**ಸೇವಾಳ, ಸೇವಳ, ಸೇವಾಲ** (ನಾ). ಪಾಚಿ; ಹಾವಸೆ: "ಸೇವಾಳಮೆಂದು ಹಾವಸ ಪುಷ್ಪನಾಮಂ" (ಕಶಸಾ. ೫೩-೧೭೧); ಕುಸುಂಬೆಯ ಪೊಸಪೂವಂ . . . ಖದಿರದ ಸೇವಾಳದ ರಸದೊಳ್ ಕುದಿಯಿಸೆ (ಲೋಕೋಪ. ೭-೬೨). **ಸೇವಳ:** 'ಸೇವಳರೇಕೆ' ಪರಾ. **ಸೇವಾಲ:** ಸೇವಾ[ಪಾಠಾಂ. ವ]ಲದೊಳು ಸಿಕ್ಕಿ ನಿಲುವುದೆ ಮದದಂತಾವಲ (ರಾಮವಿ. ೧೮-೧४೮). [< ಸಂ. ಶೈವಾಲ]

**ಸೇವಾಳಂಬೊರೆ** (ಕ್ರಿ). ಹಾವಸೆಯು ಆವರಿಸು, — ಹಬ್ಬು: ಮರಕತಮಣಿಕುಂಡಲ ರಶ್ಮಿರೇಖೆಯಿಂ ಗಂಡಮಂಡಳಂ ಸೇವಾಳಂಬೊರೆದ ಸಿತಕಮಲದಂತಿರೆ ಕರಮೆಸೆದಿರ್ದ ನೃಪಕುಮಾರಚೂಡಾರತ್ನಂ (ಪಂರಾಮಾ. ೫-೧೩४). [ಸೇವಾಳ + ಪೊರೆ₂]

**ಸೇವಾಳಿ** (ನಾ). ಸೇವೆಮಾಡುವವಳು; ಪರಿಚಾರಿಕೆ: ಪಿಂದು ಮುಂದೆಡಬಲದೊಳಮರ್ದ ಸೇವಾಳೀಜನಂಗಳ್ ನಿಲೆ (ಚೆಬಪು. ೧೧-೧೮). [ಸಂ. ಸೇವಾಲೀ]

**ಸೇವಿಕೆ** (ನಾ). ಸೇವಕಿ; ದಾಸಿ: ತರುಣಿ . . . ಬೆಸಸಿದಳಲ್ಲಿಗನಿತರೊಳ್ ಬೇಗನುಬ್ಬೇಗದಿಂ ಬಂದೊರ್ವ ಸೇವಿಕೆಗೆ ತನ್ನ ಕಂದನ ತಂದೆಯಂ ಕರೆದುತರುವಂತೆ (ಶ್ರೀರಾಮಾ. ४೫೦-೧४೫).

[ಸಂ. ಸೇವಿಕಾ]

**ಸೇವಿಗೆ** 'ಸೇವಗೆ' ನೋ.

**ಸೇವಿತ** (ನಾ). ಸೇವಿಸುವಂಥದು: ಸುರಪತಿಪೂಜಿತಂ ನೃಪತಿಸೇವಿತಂ (ಅಜಿಪು. ೧-೭); ಕುಮುದ್ವತಿ ಗಂಧವತಿ ಭೋಗವತಿ ಅಭಯವತಿ ಎಂಬ ಹೆಸರುಳ್ಳ ತಪ್ಪಲುಗಳು ನಾಲ್ಕುದಿಕ್ಕುಗಳಲ್ಲಿಯೂ ದೇವಋಷಿಗಳಿಂದ ಸೇವಿತಮಾಗಿರುವುವು (ಕಕುಮಾ. ೨४४-೮).

[ಸಂ.]

**ಸೇವಿಸು** (ಕ್ರಿ). ೧. ಸೇವೆಮಾಡು; ಶುಶ್ರೂಷೆಮಾಡು: ಜೈನಾಗಮವಿದರಂ ಸಾರದೆ ಪೋಗಿ ಕುಲಿಂಗಿಗಳನೀ ಜನಂ ಸೇವಿಸುಗುಂ (ಆದಿಪು. ೧೫-೩೮); ಮಾಹೇಶ್ವರರ ಚರಣಾಬ್ಜಮಂ ಭಾವಶುದ್ಧಿಯಿಂ ಸೇವಿಸುತೆ . . . ಶರಣಾನುಭವಸೌಖ್ಯದಿಂದೊಪ್ಪುತಿರಲ್ (ಪದ್ಮರಾ. ४-೨೭); ಕ್ಷೋಣೀಶನಂ . . . ಮಣಿಮಕುಟವರ್ಧನರು ಸೇವಿಸುತಿರ್ಪರ್ (ಭಾವಚಿಂ. ೫-೨೩). ೨. ತಿನ್ನು; ಸೇವನೆಮಾಡು: ಬೇಂಟೆಯಾಡುವರುಂ ಮಧುಮದ್ಯಮಾಂಸಂಗಳಂ ಸೇವಿಸುವರುಂ . . . ನಾರಕರಾಗಿ ಪುಟ್ಟಿ (ವಡ್ಡಾರಾ. ೯೬-೨೨); ಆ ವಿಕಚಾಂಬುಜ ಸೌರಭವನೊಸೆದು ಸೇವಿಸುವಾ ಪೆಣ್ದುಂಬಿಗಳ ಸರಮನೆತ್ತಿ ತಱುಂಬುತ್ತುಂ ಬಂದುದಾ ಪ್ರಭಾತಸಮೀರಂ (ಪಂಪಭಾ. ೧೨-೧೦೫); ಮಧುರಸುಗಂಧದಿಂ ತಿಳಿದು ಸೇವಿಸಿದಳ್ ಮಧುವಂ ನಿಜೇಚ್ಛೆಯಿಂ (ಕಾವ್ಯಸಾ. ೯೬೩).

[ಸೇವನ + - ಇಸು₃]

**ಸೇವು₁** 'ಸೇಬು' ನೋ.

**ಸೇವು₂** 'ಸೇವೆ₂' ನೋ.

**ಸೇವುಣ, ಸೇಗುಣ, ಸೇಹುಣ** (ನಾ). ಒಂದು ರಾಜವಂಶದ ಹೆಸರು; ಯಾದವವಂಶ: ಇದಿರಾನ್ತುದ್ಧತ ಸೇವುಣಾಧಿಪನ ಸೇನಾನಾಥರಂ ಕಂಡು (ಎಕ. VI, ಚಿಕ್ಕಮ. ೨೦-೧೩: 1249); ಸೇವುಣರು ಹೊಯ್ಸಳರಾಜ್ಯದ ಮೇಲೆ ಅಭಿಯೋಗವನ್ನು ನಡೆಸುವ ಹಂಚಿಕೆಯನ್ನು ಕೈಗೊಂಡರು (ಹಾಹುತ್ತ. ೫४). **ಸೇಗುಣ:** ಸೇಗುಣಧ್ವಂಸಕಂ ಚೇರಭಯಭ್ರಾನ್ತಿಪ್ರದಂ (ಎಇ. XV. ೮೮-೧೫: 1060); ಸೇಗುಣಭೀಮಂ ಸಂಗ್ರಾಮಪರಶುರಾಮಂ (ಸೌಇಇ. XI-ii,೧೬೫-೧೦: 1113). **ಸೇಹುಣ:** ತುರಗಂ ಸೇಹುಣಮಾದಿಯಾಗಲಿನಿತುಂ ಕ್ಷೇತ್ರಂಗಳೊಳ್ ಪುಟ್ಟುಗುಂ (ಅಶ್ವಶಾ. ೭-೭೭). [?]

**ಸೇವೆ₁** (ನಾ). ೧. ಊಳಿಗ; ಚಾಕರಿ: ಸೊಗಯಿಪ ದೃಕ್ಚಕೋರಚಯಸೇವೆಗೆ ಮೆಚ್ಚಿ ಮುಖೇಂದುಮಂಡಲಂ ಮಿಗೆ ಮುದದಿಂದೆ ಜೊನ್ನದ ಪಸಾಯಮನಿತ್ತಪುದೆಂಬವೊಲ್ ಮುಗುಳ್ನಗೆ ಪದೆಪಿಂ ಪೊದಱ್ದುದು (ಕುಸುಮಾ. ೭-೧೨೩); ನೀವು ನಮಿಸಲು ನಿಮಗೆ ಮುನ್ನವೆ ಸೇವೆಯಂ ಮಾಡುವನು (ಬಸಪು. ४೮-೨೩); ಎನಗೆಲ್ಲ ಬಂದುದು ನೀಚ ಮಾಡುವ ಸೇವೆಯಿಂದೆ (ಕಾಶಿರಾ. ४४-४). ೨. ಉಪಚಾರ; ಶುಶ್ರೂಷೆ: ಪಾವಷ ವ್ರತ ನಿಜಪುರಂಧ್ರಿಯ ಸೇವೆ ಸತ್ಯಾಸ್ತೇಯಶೌಚಗುಣಾವಳಿಗಳುಳ್ಳಾತ ಗೃಹಪತಿ (ಕುಮ್ಮಾಅ. ಓರಿಇ. ೧೫-४೬); ಪುರ್ಬುಗಂಟಿಕ್ಕದೆ ಪುಸಿಯದೆ ಸೇರಿ ಸೇವೆಯನೆಸಗುವುದು (ಪದಿಬ. ೩-೨೫); ಸೇವೆಗಿಲ್ಲದ ಬಂಟ, ಭಾವಕ್ಕಿಲ್ಲದ ಭಕ್ತಿ (ಗಾದೆ). ೩. ಪೂಜೆ; ಉಪಾಸನೆ: ಐದು ಕ್ಷೇತ್ರಗಳಲ್ಲಿ ಹರಿಯ ಸೇವೆಯಂ ಹರನು ಮಾಡುವನು (ತೀರ್ಥಮ. ೨೦೭); ಮಂತ್ರಾಲಯಕ್ಕೆ ಹೋಗಿ ರಾಯರ ಸೇವೆ ಮಾಡಿ ಬರ್ರಿ (ಹೊಸಕ್ಕಿ. ೧೮४). ४. ಕುಡಿಯುವಿಕೆ; ಸೇವಿಸುವಿಕೆ: 'ಸೇವೆಗೆಯ್' ಪರಾ. [ಸಂ. ಸೇವಾ]

**ಸೇವೆ₂, ಸೇವು₂** (ನಾ). ಅಕ್ಕಿಹಿಟ್ಟು, ಕಡಲೆಹಿಟ್ಟು ಮುಂತಾದುವಕ್ಕೆ ಉಪ್ಪು, ಕಾರ ಮುಂತಾದುವನ್ನು ಸೇರಿಸಿ ನೀರಲ್ಲಿ ಕಲಸಿ, ಎಳೆಎಳೆಯಾಗಿ ಸೇವಗೆಯಂತೆ ಒತ್ತಿ ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ತಿನಿಸು:

'ಕಲ್ಯಾಣಸೇವೆ', 'ಕಾರಾಸೇವೆ' ಪರಾ. **ಸೇವು$_2$**: ಒಂದು ತಟ್ಟೆಯಲ್ಲಿ ಪೇಡ, ಸೇವು ತಂದಿಟ್ಟಳು (ರೂಢಿ). [< ಸೇವಗೆ./ ಮರಾ. ಶೇವ್]

**ಸೇವೆಗಾಯ್** (ಕ್ರಿ). ಸೇವೆಯನ್ನು ಮಾಡಲು ಸಮಯ ಕಾಯು, —ನಿರೀಕ್ಷೆಯಲ್ಲಿರು: ಪೊಂಬಡೆದ ಸೂಳೆಯಂತೆ ಸೇವೆಗಾದುವೂಕ್ಕ ಬಂದಿಗಾಜಿನಂತೆ . . . ಚಿತ್ರದೊಳಾನಂದಂ ಬೆರಸಿರ್ಪುದು (ಧರ್ಮಾಮೃ. ೯-೩). [ಸೇವೆ$_1$ + ಕಾಯ್$_1$ (< ಕಾ$_1$)]

**ಸೇವೆಗೆಯ್, ಸೇವೆಗೆಯ್ಯು, ಸೇವೆಗೈ** (ಕ್ರಿ). ೧. ಪೂಜಿಸು; ಆರಾಧಿಸು: ಪದಕಮಲಂ ಪದುಳಂಗೊಳಿಪುದು ನಲ್ಮೆಯಿನೊಲ್ದು ಸೇವೆಗೆಯ್ವರ್ಗೆ (ವಸ್ತುಪು. ೧-೬). ೨. ಕುಡಿ; ಪಾನಮಾಡು: ಆಯುಷ್ಯಂ ಪೆಚ್ಚುಗುಮಂದಾಯೌಷಧ ಸೇವೆಗೆಯ್ವರ್ (ಸಮಪ. ೧೨-೨೦). **ಸೇವೆಗೆಯ್ಯು**: ೧. ಸುವಿಲಾಸದ ವಿಷ್ಣುಪದ ಸೇವೆಗೆಯ್ಯುತ ತವೆ ಪಾಲ್ಗಡಲೊಪ್ಪಿದುದು (ಕಂಸವಿ. ೪-೨೨). **ಸೇವೆಗೈ**: ೧. ವರಪುಣ್ಯನದಿಯ ಕಾಲಂ ಚಿರಕಾಲಂ ಸೇವೆಗೈದ ಪುಣ್ಯದ ಪೋಪಂತಿರೆ ಸಗ್ಗಕೆ ಗರ್ದೆಗಳಂಬರಕೊಗೆದಾಡುವ ಶುಕಾಳಿಯೇನೊಪ್ಪಿದುದೋ (ವೃಷವಿ. ೪-೧೭). ೩. ಉಪಚರಿಸು: ಮುನಿದೊಡೆ ಕಡುತವಕದಿಂ ತಿಳಪುವಂ ಸೇವೆಗೈವಂ (ಚಬಪು. ೧೦-೨೯). [ಸೇವೆ$_1$ + ಕೆಯ್$_1$]

**ಸೇವೆಗೆಯ್ಯು** 'ಸೇವೆಗೆಯ್' ನೋ.

**ಸೇವೆಗೈ** 'ಸೇವೆಗೆಯ್' ನೋ.

**ಸೇವ್ಯ** (ಗು). ೧. ಪೂಜಿಸಲು ಯೋಗ್ಯವಾದ. ೨. ಅನುಭವಿಸಲು ಅರ್ಹವಾದ. (ನಾ). ೩. ಪೂಜಿಸಲು ಯೋಗ್ಯವಾದುದು, —ತಕ್ಕುದು: ಸೇವ್ಯನ್ನವ್ಯಂ ಭೂತಳಕಿದು ಪೂಜ್ಯಂ (ಛಂದೋಂಬು. ೨-೧೧೯). ೪. ಅನುಭವಿಸಲು ಯೋಗ್ಯವಾದುದು: ಬೆಳೆದೋರಂತೆಬಿಗಿರ್ದ ಶಾಳಿವನದಿಂ ಸೇವ್ಯಂ ನಗೋಪತ್ಯಕಂ (ಆದಿಪು. ೧-೬೪). ೫. ಊಳಿಗ; ಕೆಲಸ: "ಸೇವನಂ, ಸೇವನೀಯಂ . . . ಸೇವ್ಯಂ, ಸ್ಯವ್ಯಂ — ಈ ೬ ಬಳಿಗೆಲಸಂ" (ಕಾಶಕ್ಕ. ೧೧೫). ೬. ಪೂಜ್ಯನಾದವನು; ಪೂಜ್ಯ: ಸೇವ್ಯರಸೇವ್ಯ ಮನೆ . . . ಕೈಕೊಳ್ಳದೆ . . . ಪಾಸಜೆಯೊಳ್ ಕೂಸನಪ್ಪಳಿಸಿ (ಜಗವಿ. ೨-೫೩ ವ). [ಸಂ.]

**ಸೇವ್ಯತೆ** (ನಾ). ಸೇವೆ; ಉಪಚಾರ: ಸಕಲಮಹೀಚರಖೇಚರನಿಕಾಯಸೇವ್ಯತೆಗೆ ವೃದ್ಧಸೇವಿತ್ವಮೆ ಯೋಜಕಮಾದುದು (ಶಾಂತಿಪು. ೨-೩೯). [ಸಂ. ಸೇವ್ಯತಾ]

**ಸೇವ್ಯತ್ವ** (ನಾ). ಅನುಭವಿಸುವಂಥದು; ಹಿತಕರವಾಗಿರುವಂಥದು: ಶರದಿಂದು ಪ್ರಭೆಯೊಳ್ ಪ್ರಕಾಶನಮುಮಾ ಸೇವ್ಯತ್ವಮುಂ . . . ತೋರ್ಪೊಂದಂದದಿಂ ನಾಡೆ ಬಂಧುರವಮಾಯ್ತಾ ನೃಪಕಾಂತೆಯೊಳ್ ಬಹುಕಲಾನ್ವಿಪುಣ್ಯಮುಂ ಪುಣ್ಯಮುಂ (ಚಂದ್ರಪು. ೩-೨೭). [ಸಂ.]

**ಸೇಶ್ವರಸಾಂಖ್ಯ** (ನಾ). ಈಶ್ವರನ ಅಸ್ತಿತ್ವವನ್ನು ಒಪ್ಪುವ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು: ಈ ಯೋಗದರ್ಶನವು ಈಶ್ವರನನ್ನು ಒಪ್ಪುವುದರಿಂದ . . . ಇದನ್ನು 'ಸೇಶ್ವರಸಾಂಖ್ಯ' ವೆಂದೂ ಕರೆದಿದ್ದಾರೆ (ಭಾರದ. ೧೨೭); ಇವರಲ್ಲಿ ಕೆಲವರು ಶಾಶ್ವತವಾದ ಈಶ್ವರನನ್ನು ಅಂಗೀಕರಿಸಿರುವುದರಿಂದ ಸೇಶ್ವರಸಾಂಖ್ಯರೆಂದು ಅವರಿಗೆ ಪ್ರಸಿದ್ಧಿ (ಹಿಂದಸಾ. ೪೯). [ಸಂ.]

**ಸೇಸ** (ನಾ). ೧. ಉಳಿಕೆ; ಬಾಕಿ: ಶೇಷ – ಸೇಸ, ಶೇಷೆ – ಸೇಸೆ (ಶಮದ. ೨೫೩ ಪ್ರಯೋ). ೨. ಆದಿಶೇಷ: ವಿಸವಂತಂ ಸೇಸಂ, ಜೆಕ್ಕೆವಂತಂ ಗರುಡಂ (ಶಬ್ದಾನು. ೪೦೨ ಪ್ರಯೋ); ರಾಮರಾಜ್ಯವಂ ಸೇಸಂ ಬಣ್ಣಿಸಲಾರ್ತನಿಲ್ಲಂ (ರಾಮಾಶ್ವ. ೮-೪). [< ಸಂ. ಶೇಷ]

**ಸೇಸಕ್ಕಿ** (ನಾ). ಮಂಗಳಕಾರ್ಯಗಳಲ್ಲಿ ಉಪಯೋಗಿಸುವ ಅಕ್ಷತೆ; ಮಂತ್ರಾಕ್ಷತೆ: ಬೈತಲೆಯೊಳ್ ಕುಂದದ ಸೇಸಕ್ಕಿ ಸೊಗಯಿಕುಂ ಜೋಗಿಣಿಯಾ (ಲೀಲಾವ.೪-೭೮); ದೆಸೆವಲಿಗೊಟ್ಟು ದಿಗ್ಬಂಧನವನ ಮಾಡಿ ಎಸೆವ ನೀರ್ಗಂಪು ಸೇಸಕ್ಕಿ . . . ಹೊಸಹಣ್ಣಳಿಂದರ್ಚಿಸಿದನು (ಶ್ರೀಪಾಲ. ೮-೪೦). [ಸೇಸೆ$_1$ + ಅಕ್ಕಿ$_1$]

**ಸೇಸಿಕ್ಕು** 'ಸೇಸೆಯಿಕ್ಕು' ನೋ.

**ಸೇಸೆ$_1$, ಶಾಸೆ** (ನಾ). ಮಂಗಳಾಕ್ಷತೆ; ಮಂತ್ರಾಕ್ಷತೆ: ಪೊಡೆವಟ್ಟು ಸೇಸೆಗಳನಿಕ್ಕಿದ ಬಟಿಕ್ಕೆ (ವಡ್ಡಾರಾ. ೧೩೧-೧೯); ಮುತ್ತಿನ ಸೇಸೆಗಳನಿಕ್ಕಿದರ್ ಮಾನಿನಿಯರ್ (ಪಂರಾಮಾ. ೫-೯೨); ಪರಮಹರುಷದಿ ಶಂಭುಗಾ ದಿನ ಸುರರು ಸೇಸೆಯನಿಕ್ಕಿ . . . ತುತಿಸಲ್ಕೆ (ಸಂಭವ. ೧೦-೨೯); ನೆಟ್ಟನೆ ರಣವ ಜಯಿಸು ಎಂದು ಸೇಸೆಯನಿಟ್ಟಳು ಸಿರಿಮುಡಿಯಲ್ಲಿ (ಮೋಹತ. ೩೩-೬೧); ಮದುವೆಗೆ ತಂದ ಅಕ್ಕಿ ಸೇಸೆಗೆ ತೀರಿ ಹೋಯಿತು (ಗಾದ). **ಶಾಸೆ**: ಇರದ ಬಿಡಿಮುತ್ತುಗಳ ಶಾಸೆಯಂ ಸೂಸುವೊಲ್ (ನವಮೋ. ೧೩-೨೩); ನವರತ್ನದಾರತಿಯಂ ಬೆಳಗಿ ಮುತ್ತಿನ ಶಾಸೆಯನಿಟ್ಟು (ಹಮಚ. ೨೪೯). [< ಸಂ. ಶೇಷಾ]

**ಸೇಸೆ$_2$** (ನಾ). ಒಂದು ಬಗೆಯ ತೆರಿಗೆ: ಅರಸರ್ಗೆ ಸೇಸೆಯೆನ್ದರಸರ ಕಾಣಿಕೆಯೆನ್ದು ದಾಯುಧಭಮ್ಮರ್ಗದ ತೆಜೆಯೆನ್ದು (ಎಇ. XV, ೩೪೧-೪೨; 1071); ತೆಜೆಕಾಣಿಕೆ ಸೇಸೆಯಾಸಗಳ್ಮೊನಯ ವಾಯದಾಯಮಿವು ಸಲ್ಲವು (ಕಇ. II, ೧೨-೫೭; 1114); ಪಾಳುಮೆಂಟೆ ಸೇಸೆ ಸಿದ್ಧಾಯ ಹೊದಕೆ ಹದಿಕೆ . . . ನೊ[ದ]ಲಾಗಿ ಆವುದೊಂದು ಯಿಲ್ಲದೆ (ಸೌಇಇ. IX-ii, ೨೦೮-೩೦; 1364). [?]

**ಸೇಸೆಗಜೆ** (ಕ್ರಿ). ಮಂಗಳಾಕ್ಷತೆಯನ್ನು ತಳಿ: ಮೊಜೆದವು ಮಂಗಳವಾದ್ಯ ಮುತ್ತಿನ ಸೇಸೆಗಜೆದರಂಗನೆಯರರ್ತಿಯಲಿ (ಕಂಸವಿ. ೪-೬೩). [ಸೇಸೆ$_1$ + ಕಜೆ$_1$]

**ಸೇಸೆಗೊಡು** (ಕ್ರಿ). ಅಕ್ಷತೆಯನ್ನು ಹಾಕು: ಅಲ್ಲಿಗೆ ಮಿಗೆ ಪರಿತಂದು ಸೇಸೆಗೊಟ್ಟು (ಸಮುಪ. ೧೪-೧೭೮). [ಸೇಸೆ$_1$ + ಕೊಡು$_1$]

**ಸೇಸೆಗೊಳ್** (ಕ್ರಿ). ಮಂಗಳಾಕ್ಷತೆಯನ್ನು ಪಡೆ, —ಸ್ವೀಕರಿಸು: ಶೇಷಾಕ್ಷತಂಗಳ ನೀಶ್ವರನ[ಂ] ಗಲ್ದ ಗಲ್ಲಕ್ಕೆ ಸೇಸೆಗೊಳ್ವಂತೆ ಸೇಸೆಗೊಳುತ್ತುಂ (ಪಂಪಭಾ. ೮-೨೭ ವ); ಅರ್ತಿಯಿಂ ಸೇಸೆಗೊಣ್ದು ಬಲಂಗೊಣ್ದು ಸಮನ್ತು ಪೋದಂ (ಸೌಇಇ. XI-i, ೫೨-೬೫; 1007). [ಸೇಸೆ$_1$ + ಕೊಳ್$_1$]

**ಸೇಸೆದಳಿ** (ಕ್ರಿ). = ಸೇಸೆಗಜೆ: ಅವನಿಪತಿ ನೀ ಸೇಸೆದಳಿ (ಕುವ್ಯಾಗ. ೪-೩೭); ಭೀಮನೃಪ ಸಂತೋಷದಲಿ ಕರಸಿದನು ಮುನಿಗಳ ಸೇಸೆದಳಿದರು ಸತಿಪತಿಯರಿಗೆ ಹರಸಿ ಅಕ್ಷತೆಯ (ನಳಚ. ೩-೬೮); ಹೊಳೆವ ಮುತ್ತಿನ ಸೇಸೆದಳಿದು (ಕಂಸವಿ. ೪-೭೦). [ಸೇಸೆ$_1$ + ತಳಿ$_1$]

**ಸೇಸೆಯಿಕ್ಕು, ಸೇಸಿಕ್ಕು** (ಕ್ರಿ). ಅಕ್ಷತೆಯನ್ನು ಹಾಕು; ಮಂತ್ರಾಕ್ಷತೆಯನ್ನು ತಳಿ: ಇದಿರ್ಗೊಣ್ದು ರಿಪುನ್ರಿಪಶ್ರೀ ಮುದದಿಂದಂ ಸೇಸೆಯಿಕ್ಕೆ ಪರಸೆ (ಸೌಇಇ. XX, ೪೯-೨೨; 1076 ?); ಆ ರಘುತನೂಭವನೇಟ್ಟರೆ ಸೇಸೆಯಿಕ್ಕಿದಂತಿರ ತರಗೈಯೊಳುಚ್ಚಳಿಸಿ ಸೂಸಿದುವಬ್ಧಿಯ ತೋರಮುತ್ತುಗಳ್ (ಪಂರಾಮಾ. ೧೨-೯೭); ಗಗನಶ್ರೀದೇವಿ ತಾಂ ಸೇಸೆಯಿಕ್ಕಿದಳೆಂಬಂತೆ ನಿರಂತರಂ ತನೆಗಳೊಳ್ ತಳ್ತೊಪ್ಪುಗುಂ ತಾರೆಗಳ್ (ಕುಸುಮಾ. ೨-೮೫). **ಸೇಸಿಕ್ಕು**: ಮಾಗಧನಂ ಗೆಲ್ದೊಸಗೆಗೆ ರಾಗಿಸಿ ಜಲರಾಶಿ ನಿನಗೆ ಸೇಸಿಕ್ಕುವವೋಲ್ ಈಗಳ್ ಸೊಗಯಿಸಿದುದು (ಆದಿಪು. ೧೨-೧೨೧); ದೈವದಗಣ್ಯ ಪುಣ್ಯವಧುವರ್ ಸೇಸಿಕ್ಕಿ ಬಂದಾಡಿದರ್ (ಕಾವ್ಯಾವ. ೧೭೨); ರಾಗದೆ ಸೇಸಿಕ್ಕಿ ಪರಸೆ ವಾರಾಂಗನೆಯರ್ (ನೇಮಿಪು. ೧೨-೧೫೧). [ಸೇಸೆ$_1$ + ಇಕ್ಕು$_1$]

**ಸೇಸೆಯಿಡು** (ಕ್ರಿ). = ಸೇಸೆಯಿಕ್ಕು: ಮದನವಾಣೆಗಳು ಪರಸಿ ಮುತ್ತಿನ ಸೇಸೆಯಿಟ್ಟರು (ಹಚಕಾ. ೩-೩೦). [ಸೇಸೆ$_1$ + ಇಡು$_1$]

**ಸೇಸೆವಿಡಿ** (ಕ್ರಿ). ಮಂಗಳಾಕ್ಷತೆಯನ್ನು ಕೈಯಲ್ಲಿ ಹಿಡಿ: ಮಂಗಳಾರತಿವಿಡಿದು ಸೇಸೆವಿಡಿದಮರಕಾಮಿನಿಯರ್ಯದೆ (ಸಿದ್ಧರಾ. ೧-೫೬). [ಸೇಸೆ$_1$ + ಪಿಡಿ$_1$]

**ಸೇಹುಣ** 'ಸೇವುಣ' ನೋ.

**ಸೇಳೆ** (ನಾ). (ಕರಾ) ಬೆಡಗು; ಒಯ್ಯಾರ; ಬಿನ್ನಾಣ: ಅವಳು ಸೇಳೆಮಾಡಿ ಹೊರಟುಹೋದಳು (ಪರಮ. ೧೧೮); ಮುಟ್ಟನಿಂದ ಮಾತಾಡಿಸಿದರೆ ಇದೇನು ನಿನ್ನ ಸೇಳೆ (ಪ್ರಶ್ನೆ. ೯೪); ನಮ್ಮ ಹುಡುಗಿಯರೋ ? ಅವರ ನಾಚಿಕೆಯೇನು, ಅವರ ಸೇಳೆಯೇನು ? (ಹೊಸಕ್ಕ. ೨೧೮). [<— ತುಳು. ಶೇಲೆ, ಸೇಳೆ]

**ಸೇಱು** 'ಸೀಱು$_1$' ನೋ.

**ಸೇಟ್ಪಿಡು** (ಕ್ರಿ). ಸೆಟೆ; ಸೆಡೆದುಕೊಳ್ಳು: "ಸೇಡುಪಟ್ಟಂಗೆ ಸೇಟ್ಪಟ್ಟನೆಂಬುದು" (ಸಂಜೀವ. ೨೨); ಡಕಾರಕ್ಕಾದೇಶಮಾದ ಟಕ್ಕಂ ಪ್ರಯೋಗಂ – ಕಾಟ್ಕಿಟ್ಟು . . . ಸೆ[ೀ]ಟ್ಪಟ್ಟಂ, ನೀರಟ್ಕೆ (ಶಮದ. ನ. ೨೯ ಪ್ರಯೋ). [< ಸೇಡುವಡು]

**ಸೈ$_1$** 'ಸಯ್$_2$' ನೋ.

**ಸೈ$_2$** 'ಸಹಿ' ನೋ.

**ಸೈ$_3$** 'ಸಯ್$_3$' ನೋ.

**ಸೈಂದವ** (ನಾ). ಸಿಂಧುದೇಶಕ್ಕೆ ಸಂಬಂಧಿಸಿದುದು: ಧಕಾರಕ್ಕೆ ದಕಾರಂ . . . ಸೈಂಧವ – ಸೈಂದವ (ಶಮದ. ೨೫೫ ಪ್ರಯೋ). [< ಸಂ. ಸೈಂಧವ]

**ಸೈಂದುಪ್ಪು** (ನಾ). ಒಂದು ಬಗೆಯ ಉಪ್ಪು: ಇವಕ್ಕೆ ಮಜ್ಜಿಗೆ ಮತ್ತು ಚೂರು

ಸೈಂದುಪ್ಪು ಹಾಕಿ ಹಸಿವೆಗೆ ತಕ್ಕಷ್ಟು ಕೊಡುವುದು ಲೇಸು (ಮನಮ. ೧೭).
[< ಸೈಂದವ + ಉಪ್ಪು₁]

**ಸೈಂಧವ** (ಗು). ೧. ಸಮುದ್ರಕ್ಕೆ ಸೇರಿದ; ಕಡಲಿನ. ೨. ಸಿಂಧುದೇಶಕ್ಕೆ ಸಂಬಂಧಪಟ್ಟ: ಸೈಂಧವ ಸಂಸ್ಕೃತಿಯೆಂಬುದು . . . ಎರಡು ಮಹಾನಗರಗಳಲ್ಲಿ ...ತ್ತು (ದ್ರಾವಿ. ೨೨). (ನಾ). ೩. ಒಂದು ಬಗೆಯ ಉಪ್ಪು: ಭವದೀಯ ವನಾಯುಜ ಹಯನಿವಹಂ ಕೇಳ್ ಮೂರಿವಿಟ್ಟು ನಿಶ್ವಾಸಂ ಸೈಂಧವಮಂ ಮಾಸಿಸೆ ಸೊಗಯಿಸಿತು (ಶಾಂತಿಪು. ೫-೯೨); ಲೊಕ್ಕಿಚಿಗುರು, ಸೈಂಧವ, ಮೆಣಸು ಈ ಮೂರನ್ನೂ ಸಮಭಾಗವಾಗಿ ಅರೆದು ಬಿಸಿನೀರಿನಿಂದ ಕೊಡಲು ವಾತಜ್ವರ ಪರಿಹಾರವಾಗುವುದು (ಸಕವೈ.೬೩). ೪. ಸಿಂಧೂದೇಶ ಮತ್ತು ಅಲ್ಲಿಯ ಜನ: ಸೈಂಧವರ ಲಾವಣ್ಯ ಮನ್ನಣಸು (ಸೂರ್ಯಪಾ. ೪೯-೧೭). ೫. ಸಿಂಧುದೇಶದ ಕುದುರೆ: ಬಿಸ ಕಾಂಭೋಜಕ ಬಾಹ್ಲೀಕ ಸೈಂಧವಾರಟ್ಟ ತೈತಿಲಂ ವಾನೇಯಂ ಪೆಸರ ಕ್ಷೇತ್ರದ ಹಯಕಾ ಪೆಸರ ಪೆಸರ್ (ಅಶ್ವಶಾ. ೬-೭೬); ಸಂಜೋಗದಮಳಸೈಂಧವಗಳಂ ಪಿಡಿದರಿಕ್ಕೆಲದಲ್ಲಿ (ಭಾವಚಿಂ. ೮-೩). ೬. ಮಹಾಭಾರತದ ಒಬ್ಬ ವೀರ; ಜಯದ್ರಥ: ತನತನಗೆ ಸೈಂಧವನ ಬೆಂಗಾಹಿನ ಭಟರು ಭಾರಣೆಯಲೊದಗಿದರು (ಕುಮಾ.ಅ. ೨೨-೩೧). ೭. ಚಂದ್ರ; ತಿಂಗಳು. ೮. ಗಿಳಿ; ಶುಕ. ೯. ವಿಷ: "ಲವಣಂ ರಾಕೇಂದು ವಿಷ ತುರಂಗಂ ತಾ ಕೀರಕ್ಕಿದು ಸಲುವ ಸೈಂಧವಶಬ್ದಂ" (ನಾನಾಕಂ. ೨೩). ೧೦. ಒಂದು ಬಗೆಯ ಸಸ್ಯ: "ನದೀಜಃ- ತೊಜೆಗಣಿಗಿಲು, ಮತ್ತಿ, ಸೈಂಧವ, ಕಡವ" (ಒಷಧಿ. ೮೩). ೧೧. (ಆಲಂ) ದಷ್ಟಪುಷ್ಟವಾಗಿ ಎತ್ತರವಾಗಿರುವವನು; ಆಜಾನುಬಾಹು: ಅವನಿಗೇನು ಒಳ್ಳೆಯ ಸೈಂಧವನಾಗಿ ಬೆಳೆದಿದ್ದಾನೆ (ರೂಢಿ). [ಸಂ.]

**ಸೈಂಧವಲವಣ** (ನಾ). ಒಂದು ಬಗೆಯ ಉಪ್ಪು: ಆಡುಸೋಗೆ - ಈ ಚಿಗುರಂ ಸೈಂಧವಲವಣ ಸಹ ಅರೆದು ನುಂಗಲು ಶ್ಲೇಷ್ಮ ಕಳೆದು ಬೀಳುವುದು (ವಿವೈ.ವಿ. ೧). [ಸಂ.]

**ಸೈಂಧವಿ** (ನಾ). [ಸಂಗೀತ] ಒಂದು ರಾಗದ ಹೆಸರು: ಠಕ್ಕ ಸೈಂಧವಿ . . . ಉಪಾಂಗವೆಂಬೆಂಟು ಷಟ್‌ಸ್ವರಜಾತಿಯಿಂದಾದ ರಾಗಂಗಳು (ವಿವೇಕ. ೧೮೭). [ಸಂ. ಸೈಂಧವೀ]

**ಸೈಂಹಿಕೇಯ** (ನಾ). ಸಿಂಹಿಕೆಯ ಮಗ; ರಾಹು: ಅಂತು ನೀಡ ನೀರನೀಂಟ ಶಶಿಕಳೆಗಳಂ ಮಲ್ಲ ಸೈಂಹಿಕೇಯನಂತೆ (ಕಾದಂಪೂ. ೧೭೪); ದಶಮುಖಂ . . . ಜನಕಸುತೆಯಂ . . . ಶಶಿಕಲೆಯಂ ಸೈಂಹಿಕೇಯನುಯ್ವಂತುಯ್ದಂ (ಪಂರಾಮಾ. ೯-೧೦೨). [ಸಂ.]

**ಸೈಕ** 'ಸಯ್ಕ' ನೋ.

**ಸೈಕತ** (ಗು). ೧. ಮರಳಿನಿಂದ ತುಂಬಿದ; ಉಸುಕಿನ: ಆ ವಾರಿಧಿಯ ತೀರದಲ್ಲಿ ಆ ಸೈಕತಭೂಮಿಯಲ್ಲಿ . . . ಆ ಮೂರ್ತಿಯು ನಿಂತಿತ್ತು (ಕಪಾಕುಂ. ೧೮). (ನಾ). ೨. ಮರಳು; ಉಸುಕು: ಸೈಕತದ ಲಿಂಗಮನೆಯ್ದೆ ಭರದೆ ಪೂಜಿಸಿ (ಆರಾಚ. ೪-೨೫); ಎಣಿಸಬಹುದಾಗಸದ ತಾರಾಗಣಗಳನು ತ್ರಿಭುವನದೊಳಗಿಹ ತೃಣಗಳನು ಬಹುನದಿಯ ಸೈಕತಗಳನು (ಉತ್ತರ.೩೩-೧೨). ೩. ನೀರಿನ ಮಧ್ಯದ ಮರಳಿನ ದಿಣ್ಣೆ: "ಫುಳಿನಮೆನೆ ಸೈಕತಮೆನಲು ದ್ವೀಪಮೆಂದೆನಲು ಮಳಲೊಟ್ಟಲಕ್ಕು" (ಮಂಗರಾ. ೧೨೨-೧೧). [ಸಂ.]

**ಸೈಕತಮಣಿ** (ನಾ). ಮರಳಿನ ಕಣ: ಎಣಿಸಬಹುದೂರ್ವರೆಯ ಸೈಕತಮಣಿಯ ನೊಯ್ಯಾರದಲಿ (ಕುಮಾಉ. ೪-೫೨) [ಸಂ.]

**ಸೈಕತಸ್ಥಳ** (ನಾ). ಮರಳಿನಿಂದ ತುಂಬಿದ ಸ್ಥಳ: ತೊಜೆಯ ಸೈಕತಸ್ಥಳದೊಳ್ ರತ್ನಮಂಟಪಮನೆತ್ತಿಸಿ (ಪಂರಾಮಾ. ೧೦-೧೭೯ ವ). [ಸಂ. ಸೈಕತಸ್ಥಲ]

**ಸೈಕತೋದ್ದೇಶ** (ನಾ). = ಸೈಕತಸ್ಥಳ: ಅತಿಮನೋಹರತರ ಸೈಕತೋದ್ದೇಶದೊಳರಸಿಯರುಂ ತಾನುಂ ಕುಳ್ಳಿರ್ದು (ಶಾಂತಿಪು. ೯-೭೯ ವ). [ಸಂ.]

**ಸೈಕನೆ** 'ಸಯ್ಕನೆ' ನೋ.

**ಸೈಕಲ್** 'ಸೈಕಲ್ಲು' ನೋ.

**ಸೈಕಲ್‌ಕಚ್ಚೆ** (ನಾ). ಸೈಕಲ್ಲು ಹತ್ತಲು ಅನುಕೂಲವಾಗುವಂತೆ ಹಾಕಿಕೊಳ್ಳುವ ಕಚ್ಚೆ: ಹಳಬರಲ್ಲಿ ಕೆಲವರು ಈಗಲೂ ಸೈಕಲ್‌ಕಚ್ಚೆ ಹಾಕಿಯೇ ಸೈಕಲ್ ತುಳಿಯುತ್ತಾರೆ (ರೂಢಿ). [ಸೈಕಲ್ (< ಸೈಕಲ್ಲು) + ಕಚ್ಚೆ]

**ಸೈಕಲ್‌ರಿಕ್ಷಾ** (ನಾ). ಸೈಕಲ್ಲಿನಂತೆ ಪೆಡಲು ತುಳಿಯುವುದರಿಂದ ಮುಂದೆ ಹೋಗುವ, ಹಿಂಭಾಗದಲ್ಲಿ ಸಾಮಾನುಗಳನ್ನಿಡಲು ಅಥವಾ ಜನರು ಕೂರಲು ಅನುಕೂಲವಿರುವ, ಮೂರುಚಕ್ರಗಳುಳ್ಳ ಒಂದು ಬಗೆಯ ವಾಹನ: ಕಂಡಕ್ಟರ್ ಸೂರಪ್ಪ . . . ಹೊರಟ, ಒಂದು ಸೈಕಲ್‌ರಿಕ್ಷಾ ತರಿಸಿಕೊಂಡು (ಬಂಗಬ. ೭). [ಸೈಕಲ್ (< ಸೈಕಲ್ಲು) + ರಿಕ್ಷಾ]

**ಸೈಕಲ್ಲು, ಸೈಕಲ್** (ನಾ). ಕಾಲುಗಳನ್ನು ಪೆಡಲುಗಳ ಮೇಲೆ ಒತ್ತಿ ನಡೆಸುವ ಎರಡು ಚಕ್ರಗಳ ವಾಹನ; ಬೈಸಿಕಲ್ಲು: ಸೈಕಲ್ಲು ಕೂಡ ಏನೋ ಕೆಟ್ಟುಹೋಗಿತ್ತು (ಅಲಪೂ. ೪೯). ಸೈಕಲ್: ಸೈಕಲ್‌ನಲ್ಲಿ ಹೋಗಿ ಬನ್ನಿ (ರೂಪಸಂ. ೭). [<— ಇಂ. cycle]

**ಸೈಕಾಗ್ರಮನಸ್ಕ** (ನಾ). ಒಂದೇ ವಿಷಯದಲ್ಲಿ ಮನಸ್ಸನ್ನು ಕೇಂದ್ರೀಕರಿಸಿದವನು; ಏಕಾಗ್ರಚಿತ್ತದಿಂದಿರುವವನು: ಕೈಕಾಲ್ ಸುರುಳ್ದು ನಡುಗದೆ ಸೈಕಾಗ್ರಮನಸ್ಕನಾಗಿ ಭರವಸದಿಂ ಬಪ್ಪಯ್ಯಿಲ್ಲಳ್ಳದೆ ಪಲ್ಯಂಕೈಕಾಸನದಿರ್ಪ ಸಾಹಸಂ ಪೆಜರ್ಗುಂಟೇ (ಸುಕುಮಾ. ೪-೧೨). [ಸಂ.]

**ಸೈಗರೆ** 'ಸಯ್ಗಜೆ' ನೋ.

**ಸೈಗಜೆ** 'ಸಯ್ಗಜೆ' ನೋ.

**ಸೈಗುಟ್ಟು** (ಕ್ರಿ). ಸರಿಯೆಂದು ಹೇಳು; ಒಪ್ಪು: ಊರಿಗೆ ಹೋಗುವುದೇ ಒಳ್ಳೇದು ಎಂದು ಸೈಗುಟ್ಟಿಬಿಟ್ಟರು (ಪತಿ. ೧೦); ವ್ಯಾಪಾರದ ಯೋಚನೆಗೆ ಸಾಂಬನೆಂದುದಕ್ಕೆ ಸೈಗುಟ್ಟಿದ (ತ್ಯಾಗಮ. ೭೭). [ಸೈ₁ (< ಸಯ್₂) + ಕುಟ್ಟು₁]

**ಸೈಗುಡು** (ಕ್ರಿ). ಒಪ್ಪಿಗೆ ನೀಡು; ಸಮ್ಮತಿಸು: ತಪಿಪ ಕಾಮನ ಕರೆಗೆ ಸೈಗುಡುವ ಳಂತೆ! (ನಡಿದಾ. I, ೪೦೬). [ಸೈ₁ (< ಸಯ್₂) + ಕುಡು₁ (< ಕೊಡು₁)]

**ಸೈಗೆ** 'ಸಯ್ಗೆ' ನೋ.

**ಸೈಗೆಡಪು** 'ಸಯ್ಗೆಡಪು' ನೋ.

**ಸೈಗೆಡಹು** 'ಸಯ್ಗೆಡಪು' ನೋ.

**ಸೈಗೆಡೆ** 'ಸಯ್ಗೆಡ' ನೋ.

**ಸೈಗೆವಾತು** (ನಾ). ಸನ್ನೆಮಾತು: ತನ್ನ ದನಿಯಲಿ ಕರೆದು ಹತ್ತಿರ ಸಾರಿ ಎನ್ನಲಿ ತನ್ನ ಆ ಸೈಗೆವಾತಲಿ ಒರದ; ಬಲ್ಲೆನು ನಾನು ಅವನಾ ಸನ್ನೆಯ (ಮೂಕಮ. ೮). [ಸೈಗೆ (< ಸಯ್ಗೆ) + ಮಾತು₁]

**ಸೈಗೈ** (ಕ್ರಿ). ಸರಿಮಾಡು; ಋಜುಗೊಳಿಸು: ಇನಿತಿನಿತು ದೋಷಂಗಳಿರೆ ಸಾಧನಗಳಿಂ ಸೈಗೈದು ಸತ್ಕೃತಿಯೆನಿಸಿ ಘನತೆಯ ಮೆರೆವ ಬುಧಕವಿಗಳಿಗೆ ವಂದಿಸುವೆ (ಅನಂರಾ. ೧-೧-೮). [ಸೈ₁ (< ಸಯ್₂) + ಕೈ₁ (< ಕೆಯ್₁)]

**ಸೈಗೊಟ್ಟ, ಸಯಿಗೊಟ್ಟ** (ನಾ). ಗಂಗವಂಶದ ಒಬ್ಬ ರಾಜನ ಹೆಸರು; ೯ ಸು.೮೦೦ರಲ್ಲಿದ್ದು ಶಿವಮಾರಮತವೆಂಬ ಗಜಶಾಸ್ತ್ರವನ್ನು ಬರೆದ ಶಿವಮಾರನ ಇನ್ನೊಂದು ಹೆಸರು: ಶ್ರೀಶಿವಮಾರದೇವ ಪ್ರಥಮನಾಮಧೇಯಃ ಸೈಗೊಟ್ಟಾ ಪರ ನಾಮಾ ಕನೀಯಾನ್ ವಿಜಯಾದಿತ್ಯಃ (ಮೈಆರಿ. ೧೯೨೧, ೧೦-೪೧; 963); ವೀರಮಾರ್ತಂಡದೇವನೆನಿಸಿದಾತನ ಮಗಂ ಶಿವಮಾರದೇವಂ ಸೈಗೊಟ್ಟನೆಂಬೆರಡನೆಯ ಪೆಸರಂ ತಾಳ್ದಿ ಶಿವಮಾರಮತಮೆಂದು ಗಜಶಾಸ್ತ್ರಮಂ ಮಾಡಿ (ಎಕ. VIII, ನಗರ. ೩೫-೩೩; 1077). ಸಯಿಗೊಟ್ಟ: ಶ್ರೀಪುರುಷಂ ಶಿವಮಾರಂ ಭೂಪಾಳ ಕೃತಾಂತಭೂಪನಾ ಸಯಿಗೊಟ್ಟಂ (ಎಕ. VII, ಶಿಕಾರಿ. ೫೭-೮; 1115). [?]

**ಸೈಗೋಡು** 'ಸಯ್ಗೋಡು' ನೋ.

**ಸೈಗೋಲ್** 'ಸಯಿಗೋಲ್' ನೋ.

**ಸೈಗೋಲ** (ನಾ). ನಿಪುಣನಾದ ಬಿಲ್ಲಾರ: ತಗದಿಸೆ ಸೈಗೋಲರ್ ಸಣಿಗೋಲುಂ ಪೆಣನುಮೊಡನೆ ಕೆಡೆದುವು (ಪಾರ್ಶ್ವಪು. ೩-೧೧೫).

ಸೈಗೋಲ ಪಾರ್ಥ = ಬಾಣಪ್ರಯೋಗದಲ್ಲಿ ಅರ್ಜುನನಂತೆ ನಿಪುಣನಾದವನು; ಒಂದು ಬಿರುದು: ಸೈಗೋಲ ಪಾರ್ಥ ಎಸುವರಾ ದಿವ್ಯತೇ ಭಾವ ಸಂವಚ್ಛರೇ ಜ್ಯೇಷ್ಠಮಾಸೇ . . . ದತ್ತಮ್ (ಇಆ. XIV, ೧೪೧-೧೯; 12ನೆಯ ಶತ).
[ಸೈಗೋಲ್ (< ಸಯಿಗೋಲ್) + -ಅ₇]

**ಸೈಟು** (ನಾ). ಮನೆಕಟ್ಟುವ ನಿವೇಶನ: ಖಾಲಿ ನಿವೇಶನವನ್ನು ಯಾರೋ ಕೊಂಡು ಸೈಟುಗಳಾಗಿ ವಿಂಗಡಿಸುತ್ತಿದ್ದರು (ತಾಯಿಕ. ೨೦೧). [<— ಇಂ. Site]

**ಸೈತಕ್ಕರ** (ನಾ). [ಛಂದ] ನೇರವಾದ ಗೆರೆಯ ಚಿಹ್ನೆ (ಲಘುಚಿಹ್ನೆ)ಯುಳ್ಳ ಅಕ್ಷರ; ಲಘು ಅಕ್ಷರ: P ಇಂಗ್ಲಿಷ್ ಸಾಹಿತ್ಯವು ನಮ್ಮಲ್ಲಿ ಪ್ರಚಲಿತವಾಗುವುದಕ್ಕೆ ಮೊದಲು, ಕನ್ನಡಛಂದಸ್ಸಿನಲ್ಲಿ ಗುರುವಿಗೆ U ಚಿಹ್ನೆಯು, ಲಘುವಿಗೆ I ಚಿಹ್ನೆಯು ಬಳಕೆಯಲ್ಲಿ ಇತ್ತು: ಗುರುವಕ್ಕುಂ ಮುಂತೊತ್ತಕ್ಕರಮಾಗಿರೆ ಪಿಂತೆನಿಂದ ಸೈತಕ್ಕರಮುಂ ಗುರುವೊತ್ತುಗಳಿಂದಕ್ಕುಂ ಪರಮಾರ್ಥಂ (ಛಂದೋಂಬು. ೧-೩೪). [ಸೈತು$_1$ (< ಸಯ್ತು$_1$) + ಅಕ್ಕರ$_2$]

**ಸೈತನೆ** 'ಸಯ್ತನೆ' ನೋ.

**ಸೈತಾನ್** 'ಸೈತಾನ' ನೋ.

**ಸೈತಾನ, ಸೈತಾನ್** (ಗು). ೧. ದುಷ್ಟತನದ; ನೀಚಸ್ವಭಾವದ: ಈ ಸೈತಾನ ಮಂಗೋಲರನ್ನು ಯೂರೋಪಿಯನರು ಟಾರ್ಟರರೆಂದು ಕರೆದರು (ಪ್ರವಾ. II, ೧); ಹೆಣ್ಣಾದವಳು ಸೈತಾನವಂಶಕ್ಕೆ ಸೇರಿದರೂ ಚಿಂತೆಯಿಲ್ಲ (ಕಾವೇರಿ. ೧೯೪). (ನಾ). ೨. ಭೂತ, ಪಿಶಾಚಿ ಮುಂತಾದ ದುಷ್ಟಶಕ್ತಿ; ಪಾಪಪ್ರೇರಕಶಕ್ತಿ: ಮನಸ್ಸೆಂದರೆ ಸೈತಾನನ ಕಾರಖಾನೆ (ನಾಪೂಲೀ. ೨೭೧). ೩. ಕ್ರೈಸ್ತಧರ್ಮದ ಪ್ರಕಾರ ಮನುಷ್ಯನನ್ನು ಪಾಪಕ್ಕೆ ಪ್ರೇರಿಸಿ ದೈವಭಕ್ತಿಯನ್ನು ತಪ್ಪಿಸಿ ಭ್ರಷ್ಟನನ್ನಾಗಿ ಮಾಡುವ ಭಗವದ್ವೈರಿ; ಪಾಪಪುರುಷ: ಸೈತಾನನ (Satan) ಶೋಧನೆಗೆ ಒಳಗಾಗಿ ಅದರಲ್ಲಿ ಗೆದ್ದು ಬಂದನು (ಗೊಲ್ಗೊಥಾ. iv, ಮುನ್ನುಡಿ). ೪. ದುಷ್ಟವ್ಯಕ್ತಿ; ನೀಚಸ್ವಭಾವದ ವ್ಯಕ್ತಿ: ಅವನೊಬ್ಬ ಸೈತಾನ, ಯಾವ ಕೆಟ್ಟ ಕೆಲಸಕ್ಕೂ ಹೇಸುವುದಿಲ್ಲ (ರೂಢಿ). **ಸೈತಾನ್:** ೨. ಕಲ್ಲು ಮಣ್ಣೂ ಪೂಜಿಪ ಜನರ ಸಭ್ಯರ ಮಾಡಲು ಒಟ್ಟಿಗೆ ಮಾಡಲು ದೇವರು ಯೋಚಿಸಿ ಹೊರಟನು ಮುಂದೆ ಒಡನೆಯೆ ಸೈತಾನ್ ಹೊರಟನು ಹಿಂದೆ (ಕವಿಸೂ. ೫-೮). ೪. ಅಯ್ಯೋ! ನರಸಿಂಹನಾಯಕ . . . ಸೈತಾನ್, ಸೈತಾನ್ (ರಾಜಯೋ. ೧೪೧). [<— ಅರ. ಹಿಂ. ಶೈತಾನ್; ಮರಾ. ಸೈತಾನ್. / ಇಂ. Satan]

**ಸೈತಾನಿ** (ಗು). ೧. = ಸೈತಾನ್ ೧: ಸೈತಾನಿಶಕ್ತಿಗಳ ಸಂಪೂರ್ಣ ಸದೆಬಡಿದು (ಮಾನಸ. ೫೭-೧); ವಿಷ್ಣುನಿಗಾಗುವ ಪರಿತಾಪ ಹಾಗೂ ಕುಡಚಿಯ ಸೈತಾನೀ ನಗೆ (ಸಮಜೀ. ೩೯. ಪೀಠಿಕೆ). (ನಾ). ೨. = ಸೈತಾನ ೨: ಗಂಭೀರಸ್ವರದಿಂದ ಅರಚುತ್ತ ಹಾ! ಸೈತಾನಿ (ಪಿಶಾಚಿಯೆ) ಎಂದು ಕೂಗಿದನು (ಕೋಹಿನೂ. ೭೭). [<— ಹಿಂ. ಶೈತಾನೀ]

**ಸೈತಿಕ್ಕು** (ಕ್ರಿ). ನೇರಮಾಡು; ಸರಿಯಾಗಿಡು: ಮಹಾಶ್ವೇತ . . . ಷಟ್ಚರಣ ವ್ಯಾಲೋಲಕರ್ಣೋತ್ಪಲಮನಮರೆ ಸೈತಿಕ್ಕುತಂ (ಕಾದಂಬ. ೪೯); ಯೋಗಪಟ್ಟೋದರಮಂ ಸೈತಿಕ್ಕುತುಂ . . . ಬಂದು ಪೊಕ್ಕಂ ನೃಪಸಭೆಯನಹಂಕಾರಿ ಮಾಯಾಭುಜಂಗಂ (ಕಾವ್ಯಸಾ. ೪೦೩). [ಸೈತು$_2$ (< ಸಯ್ತು$_2$) + ಇಕ್ಕು]

**ಸೈತಿಡು** 'ಸಯ್ತಿಡು' ನೋ.

**ಸೈತಿರ್** 'ಸಯ್ತಿರ್' ನೋ.

**ಸೈತಿರಿಸು** 'ಸಯ್ತಿರಿಸು' ನೋ.

**ಸೈತಿರು** 'ಸಯ್ತಿರ್' ನೋ.

**ಸೈತು$_1$** 'ಸಯ್ತು$_1$' ನೋ.

**ಸೈತು$_2$** 'ಸಯ್ತು$_2$' ನೋ.

**ಸೈತುವೋಗು** (ಕ್ರಿ). ನಿರರ್ಥಕವಾಗು; ವ್ಯರ್ಥವಾಗು.

ಸೈತುವೋದನ್ = ಅಪ್ರಯೋಜಕನಾದವನು: ಕವಿಕುಲ ಜಾತಿಗೀತಿಯ ನೀಕ್ಷಿಸುವುದೆ ಮಾತಂಗಿಯನಭಿವರ್ಣಿಸಿದಾ ಬಾಣ ಸೈತುವೋದನೆ ಕೇಳ್ವಟಿಯ (ಕುರಾಸಾಂ. ೧-೯೭). [ಸೈತು$_2$ (< ಸಯ್ತು$_2$) + ಪೋಗು$_1$ (< ಪೋ$_1$)]

**ಸೈತೊರಗು** (ಕ್ರಿ). ನೇರವಾಗಿ ಬೀಳು: ಪೊರಗೆ ಮಂಡೆಯ ಬಾಗಿ ಕಳಮಯ ಪೈರು ಸೈತೊರಗಿಹುದಲ್ಲಿ ನೋಡಿದರು (ಗೊಮ್ಮಟ. ೧-೨೧). [ಸೈತು$_2$ (< ಸಯ್ತು$_2$) + ಒರಗು$_1$ (< ಒಱಂಗು)]

**ಸೈದಾಣೆ, ಸೈದಾನ$_1$** (ನಾ). (ಉಕ) ಪಾಯಸ ಮುಂತಾದುವನ್ನು ತಯಾರಿಸಲು ಬಳಸುವ ಒಂದು ಬಗೆಯ ಕಾಳು; ಸೀಮೆಅಕ್ಕಿ; ಸಾಬೂದಾಣಾ: ಶಾವಿಗೆ ಸೈದಾಣೆ ಸೌತಿಬೀಜ ಉಗರೊತ್ತು ಬೇವಿನ ಹೂ ಪರಡೀಯ ಮಾಡಿದರು ನವಯುವತಿಯರು ಸಂಭ್ರಮದಿ (ಸಿದ್ಧವೃ. ೧೭-೩೧). **ಸೈದಾನ$_1$:** ಶಾಂವೀಗಿ ಸೈದಾನ ಮಾವಿನುಪ್ಪಿನಕಾಯಿ ಮ್ಯಾಲ ಕುರಡೀಯ ಇಡವೂದ (ಮಲ್ಲಿಗೆ. ೬೩). 'ಸಾಬೂದಾಣೆ' ಪರಾ. [<— ಮರಾ. ಸಾಗೂದಾಣಾ, ಸಾಬೂದಾಣಾ]

**ಸೈದಾನ$_1$** 'ಸೈದಾಣೆ' ನೋ.

**ಸೈದಾನ$_2$** 'ಸಯದಾನ' ನೋ.

**ಸೈದಾರಿ** (ನಾ). ನೇರವಾದ ದಾರಿ; ಸರಿಯಾದ ಮಾರ್ಗ: 'ಸೈದಾರಿದೆಗೆ' ಪರಾ. [ಸೈ$_1$ (< ಸಯ್$_2$) + ದಾರಿ]

**ಸೈದಾರಿದೆಗೆ** (ಕ್ರಿ). ನೇರವಾದದಾರಿಯಲ್ಲಿ ಹೊರಡು; ನೆಟ್ಟಗೆ ಹೋಗು: ಮುರಾರಿವದನವನೀಕ್ಷಿಸದೆ ಸೈದಾರಿದೆಗೆದನು ನಿಳಯದತ್ತಲು (ನಿಭಾಗ. ೧೦-೭೧-೪೪). [ಸೈದಾರಿ + ತೆಗ್$_1$]

**ಸೈದ್ಧಾಂತಿ** (ನಾ). ಸಿದ್ಧಾಂತಗಳನ್ನು ಪ್ರತಿಪಾದಿಸುವವನು: ತ್ರೈವಿದ್ಯಾಸ್ಪದರಂದೀ ಧರೆ ಬಣ್ಣಿಪುದು ದಿವಾಕರನಂದಿದೇವಸ್ಸೈದ್ಧಾಂತಿಗಳಂ (ಸುಕುಮಾ. ೧-೨೮). [ಸಂ.]

**ಸೈದ್ಧಾಂತಿಕ** (ಗು). ೧. ಸಿದ್ಧಾಂತಕ್ಕೆ ಸಂಬಂಧಿಸಿದ. (ನಾ). ೨. = ಸೈದ್ಧಾಂತಿ: ಮಿಕ್ಕರನೆಣೆಯೆಂಬುದೆ ವೀರಣಂದಿಸೈದ್ಧಾಂತಿಕರೊಳ್ (ಪಂಪರಾಮಾ. ೧-೨೬). [ಸಂ.]

**ಸೈದ್ಧಾಂತಿಕಚಕ್ರವರ್ತಿ** (ನಾ). [ಜೈನ] ಷಟ್‌ಖಂಡಾಗಮವನ್ನು ಪೂರ್ಣವಾಗಿ ಅಭ್ಯಾಸಮಾಡಿದವನು; ಜೈನಸಿದ್ಧಾಂತದಲ್ಲಿ ಸ್ವಾಮಿತ್ವವನ್ನು ಪಡೆದವನು: ಸೈದ್ಧಾಂತಿಕಚಕ್ರವರ್ತಿ ಮುನಿಚಂದ್ರಮುನೀಂದ್ರನ್ ವಂದ್ಯನುರ್ವಿಯೊಳ್ (ಚಂದ್ರಪ್ರ. ೧-೨೭). [ಸಂ. ಸೈದ್ಧಾಂತಿ ಚಕ್ರವರ್ತಿನ್]

**ಸೈದ್ಯ** (ನಾ). ಸಾಗುವಳಿ; ಜಮೀನನ್ನು ಹಸನುಮಾಡುವುದು: ಈ ೧೦೦ ಎಕರೆ ಇರುವ ಹೊಲ ನನ್ನದು. ನಾನೇ ಈ ಭೂಮಿ ಸೈದ್ಯಮಾಡುತ್ತೇನೆ (ವಿಜಯ. ೨೧೯). [<— ತೆಲು. ಸೇದ್ಯ]

**ಸೈಧನ** 'ಸಯದಾನ' ನೋ.

**ಸೈಧಾನ** 'ಸಯದಾನ' ನೋ.

**ಸೈಧಾರೆ** (ನಾ). ಧಾರಾಕಾರವಾಗಿ ಸುರಿಯುವ ಮಳೆ: ಸರಳ ಸೈ[ಪಾಠಾಂ. ಚೌ] ಧಾರೆಯಲಿ ಹಾಯ್ದುವು ಕರುಳು ಕಬ್ಬುನ ಕೋಲಿನಲಿ ಕತ್ತರಿಸಿದವು ಕಾಲುಗಳು (ಕುಮಾವ್ಯಾಭೀ. ೮-೧೭). [ಸೈ$_1$ (< ಸಯ್$_2$) + ಧಾರೆ]

**ಸೈನಡೆ** (ಕ್ರಿ). ನೇರವಾಗಿ ಸಾಗು; ನೆಟ್ಟಗೆ ಹೋಗು: ಬಳಿಕುತ್ತರೋತ್ತರಸರಣಿಯಲಿ ಸೈನಡೆದು ಹೊಕ್ಕನು . . . ಮಹಾವನಾಂತರವ (ಕುಮಾವ್ಯಾಅ. ೫-೩೫); ಹಲಧರನ ಮೂರ್ತಿಯನು ಹಗಲಲಿ ಧರಿಸಿ ಸೈನಡೆಯೆ (ನಿಭಾಗ. ೧೦-೧೮-೨೮). [ಸೈ$_3$ (< ಸಯ್$_3$) + ನಡೆ$_1$]

**ಸೈನಿಕ** (ಗು). ೧. ಸೇನೆಗೆ ಸಂಬಂಧಿಸಿದ. (ನಾ). ೨. ಸೈನ್ಯ; ಪಡೆ: ಚರಿಸಿದಂ ಸೈನಿಕವನಾಕ್ಷಣಂ ನಾಲ್ದೆಸೆಯ ಧರಣಿ ತಗ್ಗಲು (ತುರಂಗ. ೮೨-೧೫). ೩. ಸೈನ್ಯದ ಆಳು; ಭಟ; ಯೋಧ: ಸೈನಿಕನೊಬ್ಬನು ಹಾಲಿನ ಹರವಿಯನ್ನು ಹೊರುತ್ತಿದ್ದನು (ಜೀವಾತ್ಮ. ೨೦೫). ೪. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ, ಪಾದವೊಂದಕ್ಕೆ ಹನ್ನೊಂದು ಅಕ್ಷರಗಳುಳ್ಳ 'ತ್ರಿಷ್ಟುಪ್' ಛಂದಸ್ಸಿನ ಒಂದು ವೃತ್ತದ ಹೆಸರು: ಪಾದಪಾಶನಾರ್ಕಪಾವಕಂ ಲಗಂ . . . ನಿಂದೊಡಾಮೋದಗಂಧಿ ಕೇಳಿದೊಂದು ಸೈನಿಕಂ (ಛಂದೋಂಬು. ೨-೧೧೫). [ಸಂ.]

**ಸೈನಿಮಿರು** (ಕ್ರಿ). ನೆಟ್ಟಗೆ ನಿಲ್ಲು; ಸೆಟೆದು ನಿಲ್ಲು: ದಳ್ಳುರಿದಿರುಳನಕ್ಕಿಗಳೊಳಗೆ ಪಸರಿಸಿ ಘುಡುಘುಡಿಸಿ ರೋಮಾಳಿ ಸೈನಿಮಿರೆ ಹಲುಮೊರೆದು (ಕುಮಾವ್ಯಾದ್ರೋ. ೧೩-೫೧); ಸಣ್ಣ ನಡು ಸೈನಿಮಿರೆ ತೋಳ ಮೊದಲೊಳ್ಪೆಸೆಯೆ (ಜೈಮಿಭಾ. ೮-೧೮). [ಸೈ$_3$ (< ಸಯ್$_3$) + ನಿಮಿರು$_1$ (< ನಿಮಿರ್$_1$)]

**ಸೈನೆಗಳ್** (ಕ್ರಿ). ಸರಿಯಾಗಿ ಮಾಡು; ಸಮರ್ಪಕವಾಗಿ ನೆರವೇರಿಸು: ವೈಷ್ಣವಸಮುಚಿತದಿವ್ಯಪ್ರಬಂಧಂಗಳಂ ಸೈನೆಗಳ್ದಾ ಪನ್ನಿರ್ವರಾಳ್ವಾರ್ಗಳ ಚರಿತೆಯ ನಾರ್ಕರ್ಪೊಳ್ವಾಗ (ದಿವ್ಯಸೂ. ೧-೯೦). [ಸೈ$_3$ (< ಸಯ್$_3$) + ನೆಗಳ್$_1$ (< ನೆಗೞ್$_1$)]

**ಸೈನೆಗೆ** (ಕ್ರಿ). ೧. ನೇರವಾಗಿ ಹಾರು: ಅಭ್ರವ ತೋಡಿ ನಿಲಿಸಿದವೊಲು ಗಗನಾಂಗಣಕೆ ಸೈ[ಪಾಠಾಂ. ತನಿ]ನೆಗೆದು ಓಡುವಸುರನ ಭೀಕರಾಂಗವ ನೋಡಿ (ನಿಭಾಗ. ೧೦-೧೮-೨೯). ೨. = ಸೈನಿಮಿರು: ಹಗಲ ಕೊಯ್ಲಿನ ತಗ್ಗಿನಲಿ ಸೈನೆಗೆದ ರೋಮದ ವಿಕ್ರಮಾಗ್ನಿಯ ತಗಹು ಬಿಡದಭಿಮನ್ಯು ಮೆಚಿದನು ಶಸ್ತ್ರಶಯನದಲಿ (ಕುವ್ಯಾದ್ರೋ. ೬-೬೨). [ಸೈ (< ಸಯ್₃) + ನೆಗೆ₁]

**ಸೈನ್ಯ** (ನಾ). ೧. ರಾಜನ ಸಪ್ತಾಂಗಗಳಲ್ಲಿ ಒಂದು; ಸೇನೆ; ಪಡೆ: "ಪೃತನಾ, ಸೇನಾ . . . ಸೈನ್ಯಂ . . . ಅನೀಕಂ — ಈ ೧೦ ಪಡೆ" (ಹಲಾಯು. ೭೫-೩೦೬); ಉಭಯಸೈನ್ಯಂಗಳಂ ಕಂಡತ್ತ . . . ಕೆಯ್ವೀಸಿದಾಗಳ್ (ಪಂಪಭಾ. ೧೦-೬೫ ವ); ಕಾದಿದನು ಬಳಿಕಣ್ಣಾನಲಿ ಗತವಾದುದಾತನ ಸೈನ್ಯ (ತೊರರಾ. ೧-೮-೩೦). ೨. ಭಟ; ಸೈನಿಕ. [ಸಂ.]

**ಸೈನ್ಯಗುಪ್ತಿ** (ನಾ). ಸೈನ್ಯದ ರಹಸ್ಯ: ಸೈನ್ಯಗುಪ್ತಿಯನರಿಯಲಾಟಿಪನ್ (ಶ್ರೀರಾಮಾ. ೬೨೧-೧೦೦). [ಸಂ.]

**ಸೈನ್ಯಘಾತ** (ನಾ). ಸೈನ್ಯದಿಂದ ಉಂಟಾದ ಘಾತ; ಪಡೆಯ ಹೊಡೆತ: ನಿಜಮೇರುವನಿಂದ್ರನೆಗೆತ್ತು ಬೆಟ್ಟುಗಳ್ ನೆಲದೊಳಡಂಗುವಂತೆ ನೆಲದೊಳ್ ಸಮನಾದುವು ಸೈನ್ಯಘಾತದಿಂ (ಕಾವ್ಯಸಾ. ೪೬೪). [ಸಂ.]

**ಸೈನ್ಯಜ** (ನಾ). ಐದು ಬಗೆಯ ಉತ್ಪಾತಗಳಲ್ಲಿ ಒಂದು; ಸೈನ್ಯದಲ್ಲಿ ಕಾಣಿಸಿಕೊಳ್ಳುವ ಅಪಶಕುನ: ಅಂತು ವೈಹಾಯಸ ಭೌಮ ದಿಗ್ಭವ ಸೈನ್ಯಜ ಗೃಹೋದ್ಭೂತಂಗಳಯ್ದು ತೆಱದುತ್ಪಾತಂಗಳೊಡನೊಡನೆ ನೆಗೆದುವಾಗಳ್ (ಶಾಂತಿಪು. ೩-೧೦೬ ವ). [ಸಂ.]

**ಸೈನ್ಯಾಧಿನಾಥ** (ನಾ). ಸೇನೆಯ ಅಧಿಪತಿ; ಸೇನಾನಿ: ಆಗಳ್ ಸೈನ್ಯಾ[ಪಾಠಾಂ. ಸೇನಾ]ಧಿನಾಥನಧಿನಾಥನ ಕೆಲದೊಳ್ ಪಕ್ಕಗಚಾಧಿರೂಢನಾಗಿ (ಆದಿಪು. ೧೩-೪೫ ವ). [ಸಂ.]

**ಸೈನ್ಯಾಧಿಪತಿ** (ನಾ). = ಸೈನ್ಯಾಧಿನಾಥ: ಆದರೆ ಸೈನ್ಯಾಧಿಪತಿಗಿಂತ ಅವನು ಹೆಚ್ಚು ಮುಖ್ಯನಾದವನು (ಮಲನಾ. ೬೮). [ಸಂ.]

**ಸೈಪರೆ** (ಕ್ರಿ). ನೇರವಾಗಿ ಹರಡು: ತೆರೆಗಳಿಲ್ಲದ ಮಡುಗಳೊಲು ಸೈಪರೆದು ಚಲಿಸದೆ ಪರಮಹರ್ಷದೆ ಬೆರಸುತಪರೋಕ್ಷವನದರಿನಾಕ್ಷಣದೊಳೈದಿದರು (ಕಾವೇಮಾ. ೫೩-೨೦). [ಸೈ₃ (< ಸಯ್₃) + ಪರೆ₁]

**ಸೈಪು** 'ಸಯ್ಪು' ನೋ.

**ಸೈಪುಗಜ಼್** (ಕ್ರಿ). ಸೊಗಸನ್ನು ಹರಡು; ಸೊಬಗನ್ನು ಸೂಸು: ಚೋಳಭೂಪತಿಯ ಸುಕುಮಾರರೈತರ್ಪೆಡೆಯೊಳಾ ಸೈಪುಗಜ಼ೆದು ಸಿಂಗರವ ಮೆಱೆದು (ಭಾವಚಿಂ. ೬-೨೦). [ಸೈಪು (< ಸಯ್ಪು) + ಕಜ಼್₁]

**ಸೈಪುಗಾಱ** (ನಾ). ಪ್ರಾಮಾಣಿಕನಾದವನು: ಧರೆ ಲೇಸೆಂಬಾಸೆಗಾಱಂ ಪರಪುರುಷ ಗುಣಾನ್ವೇಷಣದೊಳ್ ಸೈಪುಗಾಱಂ ಸಿರಿಯೊಳ್ ಕಟ್ಟಣ್ಮುಕಾಱಂ ವಿತತ ವಿತರಣೋತ್ಸಾಹ ದೊಳ್ ಗಲ್ಲಗಾಱಂ (ಅರ್ಥನೀ. ೧-೩೭). [ಸೈಪು (< ಸಯ್ಪು) + - ಕಾಱ]

**ಸೈಪುದಳೆ** (ಕ್ರಿ). ಪುಣ್ಯವನ್ನು ಪಡೆ: ಮನ್ನಿಸಿ ಬೇಡಿ ಸೈಪುದಳೆವೆನು (ಅಜುತ್ರಿ. ೨೨). [ಸೈಪು (< ಸಯ್ಪು) + ತಳೆ₁]

**ಸೈಪುದಾಣ** (ನಾ). ಪುಣ್ಯಸ್ಥಳ: ಪಡೆದರಾ ಸೈಪುದಾಣಮಂ (ರೇವಣ. ೭೧-೪೯). [ಸೈಪು (< ಸಯ್ಪು) + ತಾಣ]

**ಸೈಪುದೋಱು** (ಕ್ರಿ). ಬೆಡಗನ್ನು ತೋರು; ಬಿನ್ನಾಣವನ್ನು ಪ್ರದರ್ಶಿಸು: ಕಱುಬು ಕುಹಕದ ಕಣಜ ಈಡುಪಾಡಿನ ಪಸರ ಕರವ ಕೊಸರುವ ವೈಪು ಸೈಪುದೋಱುವ ಸೂಳೆಗೇರಿ ಸೊಗಸಾದುದಲ್ಲಿ (ನಂದಿವಾ. ೨೪-೧೭). [ಸೈಪು (< ಸಯ್ಪು) + ತೋಱು]

**ಸೈಮಱುಗು** (ಕ್ರಿ). ಅತಿಶಯವಾಗಿ ಸಂತಾಪಿಸು; ಹೆಚ್ಚಾಗಿ ಕಳವಳಪಡು: ಕುಱುಪಿನಜನನು ಕಾಣದ ಸೈಮಱುಗಿದಾ ಮುನ್ನಿನ ಜಗಂಗಳ ನಿಱುಗೆಯನು ಲೇಸಾಗಿ . . . ಕಂಡ (ನಿಭಾಗ. ೧೨-೨-೩೦). [ಸೈ₃ (< ಸಯ್₃) + ಮಱುಗು]

**ಸೈಮಿನಿ** (ನಾ). ಯಮನ ಪಟ್ಟಣ; ಯಮಪುರ: ಬಂಡಣದೊಳನಿಬರಂ ಸೈಮಿನಿಗಟ್ಟಿದುದು (ರಾಮಾಶ್ವ. ೧೪-೧೧); ಖಳರ ಸೈಮಿನಿಗಟ್ಟಿ (ಶ್ರೀರಾಮ. ೮-೧೦). [< ಸಂ. ಸಂಯಮನೀ]

**ಸೈಯಡಿ, ಸಯ್ಯಡಿ** (ನಾ). ಒಂದು ಸ್ಥಳದ ಹೆಸರು; ℙ ಈಗಿನ ಧಾರವಾಡಜಿಲ್ಲೆಯ ರೋಣತಾಲ್ಲೂಕಿನ ಸವಡಿ ಎಂಬ ಊರು: ತಸ್ಯ ಸೀಮಾ ಸಮಾಖ್ಯಾಯತೇ ಪೂರ್ವಸ್ಯಾನ್ದಿಶಿ ಕುರಡಿಗೆ ಗ್ರಾಮತ್ ಸ್ಯಯ್ಯಡಿಗ್ರಾಮ (ಸೌಇಇ. XX, ೪-೧೨: 683). ಸಯ್ಯಡಿ: ಬಿಂದು ವಿಸರ್ಗಂ ವ್ಯಂಜನಮೊಂದಿದ ದಡ್ಡಕ್ಕರಂ ಪದಾಂತ್ಯಂ ದೀರ್ಘಂ ಬಂದೊಡಱ . . . ಗುರುವೆಂದುಂ ಸಯ್ಯ[ಪಾಠಾಂ. ಸೈಯ]ಡಿಯ ನಾಗವರ್ಮನ ಮತದಿಂ (ಛಂದೋಂಬು. ೧-೩೫); ಆ ನಾಡೊಳಗ್ರಹಾರಂ . . . ಶ್ರೀನಿಳಯ ಮೆನಿಸಿ ಸಯ್ಯಡಿ ನಾನಾವಸ್ತೂತ್ಕರಾಕರಂ ಕರಮೆಸೆಗುಂ (ಪಂಚತಂ. ಅ. ೭-೪೩). [?]

**ಸೈರಂಧ್ರಿ** (ನಾ). ೧. ಅರಮನೆಯ ಅಂತಃಪುರದ ದಾಸಿ; ರಾಣೀವಾಸದ ಸೇವಕಿ: ಪಾಂಚಾಳರಾಜತನೂಜೆಯುಂ ರೂಪುಗರೆದು ಸೈರಂಧ್ರೀವೇಷದೊಳ್ ಪೋಗಿ (ಪಂಪಭಾ. ೮-೫೫ ವ); ಸುಗಂಧವಸ್ತುಸಂದೋಹಮಂ ಪಿಡಿದು . . . ಕುಬ್ಜೆಯೆಂಬ ಸೈರಂಧ್ರಿ ನಡೆತರ (ಜಗವಿ. ೬-೧೮ ವ); ಲಲನೆ ಬಿನ್ನಹ ಮಾಡಿದಳು ಸೈರಂಧ್ರಿವೇಷವನು (ಕುವ್ಯಾವಿ. ೧-೭). ೨. ದ್ರೌಪದಿಯು ಅಜ್ಞಾತವಾಸಸಮಯದಲ್ಲಿ ಧರಿಸಿದ್ದ ವೇಷ ಮತ್ತು ಹೆಸರು: ಸೈರಂಧ್ರಿಯಂ ನೋಡಿ ಸೈರಿಸಲಾಱದೆ ಸಿಂಹಬಲಂ . . . ತಮ್ಮಕ್ಕನನೀಕೆ ಯಾರ್ಗೆಂದು ಬೆಸಗೊಂಡೊಡೆ (ಪಂಪಭಾ. ೮-೬೩ ವ); ಎನ್ನವೊಲ ನಿಮಿಷರೊಳಾರುಂಟು ಚೆಲುವರು ಮನುಜರೆನ್ನನು ಹೋಲುವರೆ ಸೈರಂಧ್ರಿ (ಕುವ್ಯಾವಿ. ೩-೮೩). ೩. ಗಂಧವನ್ನು ಅರೆಯುವವಳು; ಸುಗಂಧವಸ್ತುಗಳನ್ನು ಸಿದ್ಧಪಡಿಸುವವಳು: "ಸೈರಂಧ್ರೀ, ಗಂಧಕಾರಿಕಾ — ಈ ೨ ಘಟ್ಟವಟ್ಟಿ" (ಹಲಾಯು. ೬೧-೩೩೮). [ಸಂ. ಸೈರಂಧ್ರೀ]

**ಸೈರಂಧ್ರಿತನ** (ನಾ). ಸೇವಕಿತನ; ದಾಸಿಯಾಗಿರುವಿಕೆ: ಆಕೆಯ ಮನೆಯೊಳಿರು ಸೈರಂಧ್ರಿತನದಿಂದನವರತ ನೀನೆಂದು ನೇಮಿಸಿ ಕಳುಹಿದಳು ಮನೆಗೆ (ನಳಚ. ೫-೫೯). [ಸೈರಂಧ್ರಿ + - ತನ]

**ಸೈರಣೆ** (ನಾ). ತಾಳ್ಮೆ; ಸಹನೆ; ಸಂಯಮ: ಆ ಕಾಂತೆಯಂ ವಿಧಾತ್ರಂ ಮಾಡುವಂದು . . . ರತಿಯ ಸೌಭಾಗ್ಯಮುಮಂ ಸೀತೆಯ ಸೈರಣೆಯುಮಂ . . . ಕಾಮದೇವ ನಯ್ದಲರಂಬಿನ ಶಕ್ತಿಗಳುಮನೊಂದುಮಾಡಿ ಲೋಕಮೆಲ್ಲಮಂ ಮರುಳ್ಮಾಡಲೆಂದು ಪೆಣ್ಮಾಡಿದನಕ್ಕುಂ (ಪಂಪಭಾ. ೪-೭೫ ವ); ಪಸರಿತತುಳಶೋಕದ ಜಲಧಿ ಭೂಪಾಲಕನ ಸೈರಣೆಗಾಯ್ತು ಮಹನವಮಿ (ಕುವ್ಯಾದ್ರೋ. ೭-೮); ಕೋಪ ಬಂದಾಗ ಸೈರಣೆ ಬಿಡದಿರಬೇಕು (ಪುರಂದ. ೧-೧೮೪-೩). [ಸೈರಿಸು + - ಅಣೆ₁]

**ಸೈರಣೆಗುಂದು** (ಕ್ರಿ). ಸಹನೆಯನ್ನು ಕಳೆದುಕೊಳ್ಳು; ತಾಳ್ಮೆಗೆಡು: ಅಟವೀಸಂಗದಲಿ ಸೈವರಿದು ಸೈರಣೆಗುಂದಿದನು ರಾಮ (ತೊರರಾ. ೩-೮-೬೮). [ಸೈರಣೆ + ಕುಂದು₁]

**ಸೈರಣೆಗೆಡು** (ಕ್ರಿ). = ಸೈರಣೆಗುಂದು: ತಳಮಳಗಾಗಿ ಸೈರಣೆಗೆಟ್ಟು ಬಾಯಟಿದಟುತುಂ (ಶಾಂತಿಪು. ೧-೯೪ ವ): ಕಂಡಕಂಡರಂ ಸೈರಣೆಗೆಟ್ಟು ಬೇಡದೆ (ಧರ್ಮಾಮೃ. ೪-೮೮). [ಸೈರಣೆ + ಕೆಡು₁]

**ಸೈರಣೆಗೊಳ್** (ಕ್ರಿ). ತಾಳ್ಮೆಯನ್ನು ಹೊಂದು; ಸಹನೆಯನ್ನು ಪಡೆ: ನೊಂದು ಸೈರಣೆಗೊಂಡುದಿಲ್ಲ ಕೇಳೀಶ್ವರ ಕಂದರ್ಪನನೆಂತು ಮುಟಿದೆ (ಮೋಹತ. ೮-೩೦). [ಸೈರಣೆ + ಕೊಳ್₁]

**ಸೈರಣೆವಂತ** (ನಾ). ತಾಳ್ಮೆಯುಳ್ಳವನು; ಸಹನಶೀಲ: ಕನಲ್ದುಂ ಸೈರಣೆವಂತನುದ್ಗುಣಯುತಂ ತಾಂ ನಿರ್ಗುಣಂ ದುಷ್ಕುಲಂ ಧನಿಕಂ ಸತ್ಕುಲಜಾತನೈ (ಸೋಮೇಶ. ೫೨). [ಸೈರಣೆ + - ವಂತ]

**ಸೈರಿಭ** (ನಾ). ಕೋಣ; ಮಹಿಷ: ತೋಱಿತ್ತು ಮದಾಂಧಸೈರಿಭ ಖುರಪ್ರೋದ್ಭೂತ ರೇಣುವ್ರಜಂ (ಕಾದಂಪೂ. ೧೫೫); ಸೈರಿಭಮನಂಬುಜಮಿತ್ರಸುತಂ . . . ವೃಷಭನಂ ಹರನೇಱಿ ನಭಕ್ಕೆ ಸಲ್ವುದುಂ (ಜಗವಿ. ೧-೩೬); ತಾಗಲಿದಿರ್ಚಿ ಕೋಡುಡಿದ ಕಾಲನ ಸೈರಿಭದಂತೆ ಬರ್ಪಿನಂ (ರಾಜಶೇ. ೫-೯೦). [ಸಂ.]

**ಸೈರಿಸು** (ಕ್ರಿ). ತಾಳು; ಸಹಿಸು: "ಸೈರಿಸು — ಸಹನೇ" (ಶಮಧಾ); ಪರೀಷಹಂಗಳಂ ಸೈರಿಸಿ (ವಡ್ಡಾರಾ. ೯೪-೨); ನಿನ್ನ ಕಣ್ಣೊಳ್ ಪಸರಿಸೆ ಕಡುಗಂಪು ನೋಡಿಯುಂ ಸೈರಿಪೆವೇ (ಆದಿಪು. ೧೨-೯೪); ಚಪ್ಪರಣೆಯೊಳಾದೊಡಂ ಪಣ್ಣೆಂಬುದಂ ಸೈರಿಸಂ (ಕಬ್ಬಿಕಾ. ೧೪೮); ಮಹಾರಥರೆಸುಗೆಯನು ನೀನೆಂತು ಸೈರಿಸಲಾದೆ (ಕುವ್ಯಾದ್ರೋ. ೪-೩೬). [? + - ಇಸು₃]

**ಸೈಲ** 'ಸೈಲು' ನೋ.

**ಸೈಲಂಗಿ** (ನಾ). ಸಡಿಲವಾದ ಅಂಗಿ: ಮೈಯಲಿ ಹಳದಿಯ ಸೈಲಂಗಿಯನ್ನು ಹಾಕಿಕೊಂಡು ಡೊಗ್ಗಾಲೂರಿ ನಡೆಯುವ ರಾಮನ ರೂಪ (ತುಳಸೀ. ೫೮). [ಸೈಲು + ಅಂಗಿ₂]

**ಸೈಲಿಸು** (ಕ್ರಿ). ಸರಿಪಡಿಸು; ಸಂವರಿಸು (?): ಬಿಡುಮುಡಿಯ ಬಂಧಿಸದೆ ಮೇಲುದನು ಪೊದೆಯದ ಸಡಿಲ್ದುಡಿಗೆ ಸೈಲಿಸದೆ (ಪಂಪಮೋ. ೬-೬). [? + - ಇಸು₁]

**ಸೈಲು, ಸೈಲ** (ನಾ). ೧. ಸಡಿಲ; ದೊಗಲೆ; ಅಳ್ಳಕ: ಸಣ್ಣವನು ತೊಟ್ಟುಕೊಂಡಿದ್ದು ಅವನಿಗೆ ಬಹಳ ಸೈಲು ಆಗುತ್ತಿತ್ತು (ಮುಂಬಯಿ. ೪-೮೮). ೨. ಬಿಗುವಿಲ್ಲದಿರುವಿಕೆ; ಸದರ; ಸಲಿಗೆ: ಆಳಿಕೆಯಲ್ಲಿ ವಿರುದ್ಧಪಕ್ಷದವರಿಗೆ ಸೈಲುಸಿಕ್ಕಿತು (ಇಂಗ್ಲಂಡ ೧೯). **ಸೈಲ**: ೧. ಅವರು ಮೆಲ್ಲನೆ ಕಾಲು ತಿಕ್ಕಿಕೊಂಡು ಸೈಲಮಾಡಿಕೊಳ್ಳುತ್ತ . . . ಸಂಬಾಳಿಸಿ ಮೇಲಕ್ಕೆದ್ದರು (ಕಲಿಕು. ೮೮);

**ಸೈಲ ಬಿಡು** = ಸಡಿಲಬಿಡು: ದುಡ್ಡಿನ ವಿಷಯದಾಗ ಸೈಲಬಿಟ್ಟು ಉಪಯೋಗವಿಲ್ಲ (ಗಂಮಾಯಿ. ೧೯೨). **ಸೈಲಾಗು** = ಸಡಿಲವಾಗು: ಅನುವಾಗಿ ತಿಕ್ಕಿ ಒರಿಸುವದರಿಂದ ಯೂವತ್ತೂ ನರಗಳು ಸೈಲಾಗಿ ಸಮಧಾತು ಬರುವದು (ಕೃಷಿಪ್ರ. ೧೯); ಮೊಣಕಾಲವರೆಗೆ ಬಿಗಿಯಾಗಿದ್ದು ಮೇಲೆ ಸೈಲಾಗಿರುವ ಚಣ್ಣವನ್ನು ಹಾಕಿಕೊಂಡರು (ಕಮಲ. ೧೭೫). **ಸೈಲುಬೀಳು, ಸೈಲಬೀಳು** = ಸಡಿಲವಾಗು; ಜೋತುಬೀಳು: ತೂಗುತ್ತಿರುವ ರಶ್ಮಿಯದು ಸೈಲುಬೀಳಲು ಭೀತಿಯಿಂದುರೆ ನೀಲವೇಣಿಯರಾಗ ತಮ್ಮಯ ತೋಳು ಗಳನು ನೃಪನ ಕಂಠಕೆ ಸುತ್ತಿಬಿಟ್ಟರು (ರಘುವಂ. ೨೨೭); ಒಂದರ ಘಳಿಗೀ ಅನ್ನವಿಲ್ಲದಿರೆ ಸೈಲ ಬೀಳತೈತ್ಕೋ ಈ ತೊಗಲಾ (ಬರಕೋ. ೨೪೮-೧೨). [<- ಮರಾ. ಸೈಲ]

**ಸೈಲುಗೈ** (ಕ್ರಿ). ಸಡಿಲಗೊಳಿಸು; ಅಳ್ಳಕಮಾಡು: ಬಾಲೆಯರು ಜೋಕಾಲಿಯಾಡುವ ಕಾಲದಲಿ ತಮ್ಮಿನಿಯರನು ಕಣ್ಣಾಲಿಯಿಂ ನೆರೆ ನೋಡಿ ಪ್ರಿಯತಮರನ್ನು ತಕ್ಕೆಯ್ದೊಲೆ ನೇಣುಗಳನ್ನು ಧರಿಸಿದ ಲೋಲಹಸ್ತಗಳನ್ನು ಬೇಗನೆ ಸೈಲುಗೈದಂತಾಗ ನಟಿಸಿದರೇನು ಪೇಳುವೆನು (ರಘುವಂ. ೯೫-೪೬). [ಸೈಲು + ಕೈ₁ (< ಕೆಯ್₁)]

**ಸೈಲೆ** (ನಾ). (?): ಕ್ದರ್ುಗಿನ ಪೊಲದ ಮೇರೆಯ ದಾಸನ ಸೈಲೆ ತೆಂಕ ಕರ್ದುಗಿನ ಪೊಲದ ಕಟ್ಟೆಲೆವಾಡದ ಪೊಲದ . . . [ಮ]ತ್ತುರೊಳಗಣ ಸೈಲೆ ಇನ್ತೀ ಮುಗುದ್ದೆಯಾಗೆ ಕೊಟ್ಟದು (ಸೌಇಇ.XI-i,೪೮-೧೪; 1002). [?]

**ಸೈವ** (ನಾ). ಶಿವನಿಗೆ ಸಂಬಂಧಿಸಿದುದು: ಭೈರವ-ಬೈರವ; ಶೈವ —ಸೈವ (ಶಮದ. ೨೭೧ ಪ್ರಯೋ). [< ಸಂ. ಶೈವ]

**ಸೈವಟ್ಟೆ** (ನಾ). ಸರಿಯಾದ ದಾರಿ; ಯೋಗ್ಯವಾದ ಮಾರ್ಗ: ತೋರಿದಂ ಶಿವನಲ್ಲಿಗುಯ್ವ ಸೈವಟ್ಟೆಯಂ (ಆಪ್ರಭು. ೧೧೬). [ಸೈ₁ (< ಸಯ್₂) + ಬಟ್ಟೆ₁]

**ಸೈವರಿ** 'ಸಯ್ವರಿ' ನೋ.

**ಸೈವಳಿ** 'ಸಯ್ವಳಿ' ನೋ.

**ಸೈವಳಿವಿಡಿ** (ಕ್ರಿ). ಸರಿಯಾದ ದಾರಿಯನ್ನು ಹಿಡಿ: ವಿಮಲ ಗಂಗಾಸಾಗರದ ಸಂಗಮದ ಸೈವಳಿವಿಡಿದು (ತೊರರಾ. ೪-೧೦-೨). [ಸೈವಳಿ (< ಸಯ್ವಳಿ) + ಪಿಡಿ₁]

**ಸೈವಳೆ** (ನಾ). ಧಾರಾಕಾರವಾದ ಮಳೆ: 'ಸೈವಳೆಗಱೆ' ಪರಾ. [ಸೈ₁ (< ಸಯ್₂) + ಮಳೆ (< ಮೞೆ)]

**ಸೈವಳೆಗಱೆ** (ಕ್ರಿ). ಮಳೆಯಂತೆ ಧಾರಾಕಾರವಾಗಿ ಸುರಿಸು ; ವರ್ಷಧಾರೆಯಂತೆ ಬೀಳಿಸು: ಸರಳ ಸೈವಳೆಗಱೆವುತ ಮೂದಲಿಸುತ . . . ಕೆರಳಿಸಿದರು ರಾಮನನು (ಕುರಾಸಾಂ. ೪೪-೧೩೦); ವಿವಿಧಗುಣಗಣನಿಳಯೆ ಸೊಬಗಿನ ಸವಿಯ ಸೈವಳೆಗಱೆವ ಮತ್ಕೃತಿ ಚದುರರ ಮನವನಿರ್ಕುಳಿಗೊಳುವುದಚ್ಚರಿಯೇ (ಸಾಳ್ವಭಾ. ೧-೪೪). [ಸೈವಳೆ + ಕಱೆ₁]

**ಸೈವಿಡಿಸು** (ಕ್ರಿ). ಸಂತೈಸು; ಸಮಾಧಾನಪಡಿಸು: ಅನಿಲನಂದನ ಕೌರವಾನುಜರ ನೊದೆದು ರಕುತವ ಹಿಂಡಿ ಹೀಱುತ ಸುದತಿಯಳ ಸೈವಿಡಿಸಿ ಕದನದೊಳದಟವೆಱೆದನು (ಕೃಷ್ಣಾಭಾ. ೨೯-೨೨). [ಸೈವಿಡು + - ಇಸು₁]

**ಸೈವಿಡು** (ಕ್ರಿ). ೧. ಹತೋಟಿಯಲ್ಲಿಡು; ಅಂಕೆಯಲ್ಲಿರಿಸು: ಮದನಪಿತ ನಸುನಗುತ ಮುನಿಸನು ಹದುಳಮಿಗೆ ಸೈವಿಟ್ಟು (ಕುಪ್ನಾಅ. ಓ೧೯. ೪-೫೧). ೨. ಸರಿ ಎನ್ನು; ಒಪ್ಪಿಗೆಯನ್ನು ಸೂಚಿಸು: ನರ ವೃಕೋದರರ ನಕುಲ ಸಹದೇವರಂ ಭೂಪ ಕರೆದು ಕೇಳಲ್ಕವರು ಸೈವಿಡಲು ಪಾಳೆಯಂ ಮರಳಿ ತಿರುಗಿತು ಹಸ್ತಿನಾಪುರಿಗೆ (ತುರಂಗ. ೨೫-೪೩). [ಸೈ₃ (< ಸಯ್₃) + ಬಿಡು₁]

**ಸೈವೆರಗು** 'ಸಯ್ವೆಱಗು' ನೋ.

**ಸೈವೆಳಗು** (ಕ್ರಿ). ಚೆನ್ನಾಗಿ ಪ್ರಕಾಶಿಸು: ಭುವನಭವನದ ಸೊಂಪು ಸೈವೆಳಗಿತ್ತು ನೃಪ ಕೃಷ್ಣಾವತಾರದಲಿ (ನಿಭಾಗ. ೧೦-೬-೩೩). [ಸೈ₃ (< ಸಯ್₃) + ಬೆಳಗು]

**ಸೈವೆಱಗು** 'ಸಯ್ವೆಱಗು' ನೋ.

**ಸೈವೆಱಗುವಡು** (ಕ್ರಿ). ಅತ್ಯಾಶ್ಚರ್ಯವನ್ನು ಹೊಂದು: ಸೊಗಸಿನ ಸೊಕ್ಕುಮಿಕ್ಕು ಹೊಱಗಂ ಮಱೆದು ಸೈವೆಱಗುವಟ್ಟು (ಸಿದ್ಧರಾ. ೨-೬೭). [ಸೈವೆಱಗು (< ಸಯ್ವೆಱಗು) + ಪಡು₁]

**ಸೈಸು** 'ಸಯಿಸು' ನೋ.

**ಸೈಳಾಕ್ಷರ** (ನಾ). ಶಿಲೆಯ ಮೇಲೆ ಕೆತ್ತಿದ ಅಕ್ಷರ; ಶಿಲಾಶಾಸನ: ಯಿದಂ ಕಾಯದೆ ಕೊಯ್ವ ಪಾಪಿಗೆ . . . ಕವಿಲೆಯಂ ವೇದಾಢ್ಯರಂ ಕೊಂದದೊಂದಯಸಂ ಪೊರ್ದುಗುಯೆಂದು ಸಾಱಿದಪುವೀ ಸೈಳಾಕ್ಷರಂ ಧಾತ್ರಿಯೊಳು (ಕಇ.V, ೪೨-೧೨೪; 1239). [< ಸಂ. ಶೈಲಾಕ್ಷರ]

**ಸೈಳೇಂದ್ರಿ** (ನಾ). = ಸೈರಂಧ್ರಿ ೧: ನೃಪಸಭೆಯೊಳಿದ್ದತಂದಳಾ ಸೈಳೇಂದ್ರಿವೇಷದ ಮಾಯೆ ವಹಿಲದಲಿ (ತೊರರಾ. ೨-೧-೨೩); ಭಾವಮೈದುನತನದ ಕೃತ್ಯದಿಂದಚ್ಯುತಂ ಸೂಚಿಸಲ್ಕದೆದಳೌಚಿತ್ಯಮಲ್ಲೊಳಪುಗುವೊಡಾರೋಗಣೆಯ ಸಮಯಮೆಂದು ಸೈಳೇಂದ್ರಿ ಬಂದು (ಜೈಮಿಭಾ. ೬-೫೦). [< ಸಂ. ಸೈರಂಧ್ರೀ./ ತುಳು. ಸೈಲೇಂದ್ರಿ, ಸೈಳೇಂದ್ರಿ]

**ಸೊಂಕು** 'ಸೋಂಕು₂' ನೋ.

**ಸೊಂಕುರೋಗ** 'ಸೋಂಕುರೋಗ' ನೋ.

**ಸೊಂಗ** (ನಾ). ಒಂದು ಬಗೆಯ ಪಕ್ಷಿ: ಆ ವನಂಗಳೊಳು ಶುಕ ಪಿಕ ಕೇಕಿ . . . ಗೀಜುಗ ಸೊಂಗ ಬೈರಗ . . . ವಾಸಕ ಮೊದಲಾದ ಚಿತ್ರರೂಪಶಕ್ತಿಗಳುಳ್ಳ ಪಕ್ಷಿಕುಲಂಗಳುಂ (ವಿವೇಕ. ೨೧೨). [?]

**ಸೊಂಚಳ** (ನಾ). (?): ಕರದಿ ಸೊಂಚಳವಿಡಿದು ಪದದೊಳು ಧರಿಸಿ ಪಾವುಗೆಗಳನು ಪೊಕ್ಕು ಧರಣಿಯೊಳು ನೆಲವಾಸಿನಲಿ ನಿದ್ರಿಸುತ (ಉತ್ತರ. ೪೦-೪೮). [?]

**ಸೊಂಟ** (ನಾ). ದೇಹದ ಮಧ್ಯಭಾಗ; ಟೊಂಕ; ನಡು: ಸೊಂಟದ ಮುಪ್ಪಿಡಿಯನು ಕಿತ್ತುಕೊಂಡು ದರ್ಪಕನೆರ್ದೆಯಲ್ಲಿ ತಿವಿದು ರಕ್ಕಸ ಬಹುದರ್ಪವಡೆದು ನಿಂದಿರ್ದ (ಮೋಹತ. ೧೨-೬೬); ಅವನು ತಾನು ಉಟ್ಟಿದ್ದ ಧೋತ್ರವನ್ನು ಸೊಂಟದ ವರೆಗೂ ಎತ್ತಿ ನಡುವಿಗೆ ಸಿಕ್ಕಿಸಿಕೊಂಡಿದ್ದನು (ನಡಿದಾ. II. ೯೦೦); ಬಲಗೈಯನ್ನು ಸೊಂಟದ ಮೇಲಿಟ್ಟು ಅವಳನ್ನು ದಿಟ್ಟಿಸುತ್ತ ನಿಲ್ಲುವನು (ಕಮ್ಮಟ. ೨). [ದೇ. ‖ ತುಳು. ಸೊಂಟ; ತೆಲು. ತುಂಟ, ತೊಂಟಿ]

**ಸೊಂಟಕಟ್ಟು** 'ಸೊಂಟಗಟ್ಟು' ನೋ.

**ಸೊಂಟಗಟ್ಟು, ಸೊಂಟಕಟ್ಟು** (ಕ್ರಿ). ೧. (ಆಲಂ) ಅಣಿಯಾಗು; ಸನ್ನದ್ಧಗೊಳ್ಳು; ಕಾರ್ಯಪ್ರವೃತ್ತವಾಗು: ಮಂತ್ರಿಗಳು ಸ್ವಯಂಬುದ್ಧನ ಹೇಳಿಕೆಗಳನ್ನೆಲ್ಲ ಖಂಡಿಸಲು ಸೊಂಟಗಟ್ಟಿದರು (ನಾಡೋಜ. ೩೬೦). **ಸೊಂಟಕಟ್ಟು**: ೧. ಒಂಟೆ ಕುದುರೆ ಆನೆ ತರಿಸೋದು ರೊಕ್ಕ ಸೊಂಟಕಟ್ಟಿ ಮುಂದೆ ನಿಲಿಸೋದು ರೊಕ್ಕ (ಪುರಂದ. ೨-೪೮-೪); ಅಜ್ಞಾನವನ್ನು ತೊಲಗಿಸಲು ಸೊಂಟಕಟ್ಟಿದನು (ಪ್ರಮಹ. ೧೮). ೨. ಪೈಪೋಟಿಮಾಡು; ಹುರುಡಿಸು; ಸ್ಪರ್ಧಿಸು: ಸಮರ್ಥರ ಮೇಲೆ ಸೊಂಟಕಟ್ಟಿದರೆ ಬಡವರಿಗೆ ಎಂದಾದರೂ ಜಯ ಸಿಕ್ಕುವುದುಂಟೆ (ವಾಗ್ವೈವಿ. ೧೦೩).

**ಸೊಂಟಕಟ್ಟಿ ನಿಲ್ಲು** = ಸಿದ್ಧವಾಗಿರು; ಕಂಕಣಬದ್ಧವಾಗು: ಕೈಗಾರಿಕೆಗಳನ್ನು ಅಭಿವೃದ್ಧಿಗೊಳಿಸುವುದಕ್ಕಾಗಿ ಸೊಂಟಕಟ್ಟಿ ನಿಂತು ಅಹೋರಾತ್ರಿ ದುಡಿದ (ಭಾಗ್ಯಶಿ. ೪೫). [ಸೊಂಟ + ಕಟ್ಟು₁]

**ಸೊಂಟದಟ್ಟಿ** (ನಾ). ನಡುವಿಗೆ ಸುತ್ತುವ ಬಟ್ಟೆ ,— ವಸ್ತ್ರ: ಸೊಂಟದಟ್ಟಿಯ ಬಿಗಿದು ಕಟ್ಟಿ, ತೋಳ್ತೊಡೆಗಳಂ ಚಪ್ಪರಿಸಿ ನೆಲನಡುಗೆ ಕಾಲ್ ಕುಟ್ಟಿ ತಾಗಿದತ್ತೆಮ್ಮ ಸ್ಯನ್ಯದ ಸಿಡಿಲ್ (ಶ್ರೀರಾಮಾ. ೩೭೧-೨೮೨). [ಸೊಂಟ + ದಟ್ಟಿ₁]

**ಸೊಂಟಪಟ್ಟಿ** (ನಾ). ನಡುವಿಗೆ ಕಟ್ಟುವ ಬಟ್ಟೆ, ಚರ್ಮ, ಲೋಹ

ಮುಂತಾದುವುಗಳ ಪಟ್ಟಿ; ನಡುಪಟ್ಟಿ: ವಿಮಾನವು ಏರುವಾಗಲೂ ಇಳಿಯುವಾಗಲೂ ಕುಳಿತವರು ಅಲುಗಾಡಿ ಬಿದ್ದುಬಿಡದಂತೆ ಕಟ್ಟಿಕೊಳ್ಳಲು ಸೊಂಟಪಟ್ಟಿಗಳನ್ನು ಕುರ್ಚಿಗಳಿಗೆ ತಗಲಿಹಾಕಿರುತ್ತಾರೆ (ಕವಪು. ೬-೧೦೪).

[ಸೊಂಟ + ಪಟ್ಟಿ$_2$]

**ಸೊಂಟಮುರಿ$_1$** (ಕ್ರಿ). (ವೃದ್ಧಾಪ್ಯದಿಂದ) ನಡುವು ಬಗ್ಗಿಹೋಗು; ಟೊಂಕವು ಬಾಗು: ಸೊಂಟಮುರಿದ ಮೇಲೆ ನೆಂಟನಿಲ್ಲ, ಗಂಟ್ಲುಮುರಿದ ಮೇಲೆ ರಾಗವಿಲ್ಲ (ಗಾದ).

[ಸೊಂಟ + ಮುರಿ$_1$]

**ಸೊಂಟಮುರಿ$_2$** (ಕ್ರಿ). ೧. ಟೊಂಕವನ್ನು ಮುರಿದು ಹಾಕು. ೨. (ಆಲಂ) ಸದೆ; ಬಗ್ಗುಬಡಿ: ಬಣವೆ ಸುಟ್ಟರೆ ಸೊಂಟಮುರಿದರಾಯಿತು (ಜೀವಪ್ರ. ೯೮).

[ಸೊಂಟ + ಮುರಿ$_2$ (< ಮುಱಿ$_1$)]

**ಸೊಂಟಿ** 'ಸುಂಟಿ' ನೋ.

**ಸೊಂಟಿಗೆ, ಸೊಟಗೆ$_1$, ಸೊಟಿಗೆ, ಸೊಟ್ಟಿಗೆ, ಸ್ಯೋಂಟಿಗೆ, ಸೋಟಿಗೆ$_2$, ಸೌಟಿಗೆ** (ನಾ). ಧಾನ್ಯ ಅಥವಾ ದ್ರವಗಳನ್ನು ಅಳೆಯುವ ಒಂದು ನಿರ್ದಿಷ್ಟ ಪ್ರಮಾಣ, –ಅಳತೆ: ಒಂದು ಗಾಣದುಳ್ ಒಸ್ಸು ಸೊಂಟಿಗೆ ತೇ(ತ್ಯ)ಲಮಾಗೆ (ಇಆ. VIII, ೨೪೫-೪: 706); ತೆಲ್ಲಿಗರಯ್ಯತ್ತೊಕ್ಕಲುಗಳು . . . ಒಂದು ಸೊಂಟಿಗೆಯೆಣ್ಣೆಯಂ ಪ್ರತಿದಿನಮಾಚಂದ್ರಾರ್ಕತಾರಂ ಕೊಟ್ಟರು (ಸೌಇಇ. XX, ೧೯೧-೨೫; 1215). **ಸೊಟಗೆ$_1$:** ಮಣಿಗುಂದಗೆಯ ತೆಲ್ಲಿಗರು ಐವತ್ತೊಕ್ಕಲು ಗಾಣಕೆ ಸೊಟಗೆಯೆಂಣೆಯಂ . . . ಕೊಟ್ಟರು (ಕಇ. V, ೩೨-೬೦; 1215). **ಸೊಟಿಗೆ:** ಅಯ್ನೂರ್ವ್ವರುಮಿಟ್ಟು ಪಸುಂಬೆಯ ಸೇಸೆಯಲು ಪಾಗುಮುಮಂ ಅಂಗಡಿಯಲು ಸೊಟಿಗೆ ಭತ್ತಮ ಬಿಟ್ಟರ್ (ಸೌಇಇ. IX-i, ೧೩೯-೪೦; 1074); ಶ್ರೀಮದಯಿನೂರ್ಬ್ಬರು . . . ಸಮಸ್ತ [ಮನ್ನ] ಕ್ಕೆ [ಖಂಡುಗ]ಕ್ಕೆ ವೊಂದು ಸೊಟಿಗೆಯಂ ಕೊಟ್ಟರು (ಸೌಇಇ. XX, ೧೩೦-೧೩; 1187); ತೆಲಿಗರ್ಕೈವತ್ತೊಕ್ಕಲುಂ ಗಾಣಕೊಂದು ಸೊಟಿಗೆಯೆಣ್ಣೆಯಂ ಬಿಟ್ಟರು (ಎಕ. VI, ಕಡೂರು. ೯೫-೬೮; 1224). **ಸೊಟ್ಟಿಗೆ:** ಗಾಣಗೊಟ್ಟಿಗೆಯ್ಯುಂ ಊರೊಳಗಣ ಗಾಣಗಳ ಸೊಟ್ಟಿಗೆ ಯಣ್ಣೆಯ್ಯುಂ ಇನ್ತಿನಿತುಮಂ (ಕಇ. V, ೬೪-೩೨; 1173). **ಸ್ಯೋಂಟಿಗೆ:** ಅಯ್ಯತ್ತೊಕ್ಕಲುಮಿಟ್ಟು ದೇವರ ನಂದಾದಿವಿಗೆಗಂ ಮಠದ ಸೊಡರಿಂಗಂ ಗಾಣಂಗಳೊಳೆಣ್ಣೆ ಸ್ಯೋಂಟಿಗೆ ೧ . . . ಕೊಟ್ಟರ್ (ಇಆ. V, ೩೪೩-೩೬; 1093). **ಸೋಟಿಗೆ$_2$:** ಅಲ್ಲಿಯ ತೆಲ್ಲಿಗರು ಬಿಟ್ಟ ಧರ್ಮವೆಂತೆಂದಡೆ ತಾವು ಕೊಂಡ ಹೊಂಗೆ ಇಮ್ಮಾನೆಳ್ಳಂ ಬಿಟ್ಟರು ಸೋಟಿಗೆಯೆಣ್ಣೆಯಂ ಬಿಟ್ಟರು (ಎಕ. VIII (S), ಶಿಕಾರಿ. ೩೩೪-೨೮; ಸು. 1100); ಗಾಣಂಗಳಲ್ ಸೋಟಿಗೆಯೆಣ್ಣೆ (ಮುಂಬರಾ. ೨೪೯-೭೫; 1219). **ಸೌಟಿಗೆ:** ಹೇಱಿಂಗೊಬ್ಬಳುಪ್ಪು ಗಾಣದ ೧ ಸೌಟಿಗೆಣ್ಣೆ ಇನ್ತೀ ಧರ್ಮ್ಮಮಂ ಮಾಡಿ (ಎಕ. VI, ತರೀಕೆ. ೧೯-೬೯; 1158). 'ಸಟ್ಟುಗ$_2$', 'ಸೊಲ್ಲಗೆ$_1$' ಪರಾ.

**ಸೊಂಡಗೆ** 'ಸಂಡಗೆ' ನೋ.

**ಸೊಂಡಿಗೆ** 'ಸಂಡಗೆ' ನೋ.

**ಸೊಂಡಿಲ್** 'ಸುಂಡಿಲ್' ನೋ.

**ಸೊಂಡಿಲು** 'ಸುಂಡಿಲ್' ನೋ.

**ಸೊಂಡು** 'ಸುಂಡು$_2$' ನೋ.

**ಸೊಂಡೆ$_1$** 'ಸುಂಡೆ$_1$' ನೋ.

**ಸೊಂಡೆ$_2$** 'ಸುಂಡೆ$_2$' ನೋ.

**ಸೊಂಡೆಕಾಯಿ** (ನಾ). ತರಕಾರಿಯಾಗಿ ಬಳಸುವ ಒಂದು ಬಗೆಯ ಕಾಯಿ: ಸೊಂಡೆಕಾಯಿಗ ಸಣ್ಣಮಗುವ ಹಿಡಿತಕ್ಕಿನಿತು ಬಲಮ್ಮಾಕೆ (ನವಮೋ. ೧೨-೪೨).

[ಸೊಂಡೆ$_1$ (< ಸುಂಡೆ$_1$) + ಕಾಯಿ$_4$ (< ಕಾಯ್$_4$)]

**ಸೊಂಡೆಗಿಡ** (ನಾ). ಒಂದು ಬಗೆಯ ಸಸ್ಯ: ತೊಂಡೆ ತೊಟ್ಟಿಯು ಸೊಂಡೆಗಿಡ . . . ತಂಡತಂಡದಿ ಮೆರೆದುವು (ಗೋಹಾಡು. ೨-೭). [ಸೊಂಡೆ$_1$(< ಸುಂಡೆ$_1$) + ಗಿಡ(< ಗಿಡು)]

**ಸೊಂಡ್ಲಗಿಡ, ಸೊಂಡ್ಲಿಗಿಡ** (ನಾ). ಒಂದು ಬಗೆಯ ಸಸ್ಯ : "ಬಂಗೆ . . . ಪುರಗಿ, ಸೊಂಡ್ಲಗಿಡ, ಕನ್ನೇರಿ" (ಸಸ್ಯನಿ. ೧೩೮). **ಸೊಂಡ್ಲಿಗಿಡ :** ಸುರಿಮುಳ್ಳು, ಸೊಂಡ್ಲಿಗಿಡ (ಮೃಜಿಗಿ. ೭೯-೧೬೨೯). [? + ಗಿಡ (< ಗಿಡು)]

**ಸೊಂಡ್ಲಿಗಿಡ** 'ಸೊಂಡ್ಲಗಿಡ' ನೋ.

**ಸೊಂತ** 'ಸ್ವಂತ$_1$' ನೋ.

**ಸೊಂದಿ** (ನಾ). ೧. ಜಾರಸ್ವಭಾವವುಳ್ಳ ವ್ಯಕ್ತಿ: "ಸೊಂದಿ = ಸಿತಗಂ" (ಶಮದ. ಪರಿ. ೨); ನಾಣಿಲಿ, ಮಾತಾಳಿ, ಸೊಂದಿ (ಭಾಷಾಭೂ. ೧೯೧ ಉದಾ); ತಿರೆವೆಣ್ಗೆ ಮುಗಿಲ್ವೊಂದಿಯೊಳ್ ಬಳ್ಳಿವರಿವ ನೇಹದಿಂ ಬೆಳ್ಳಂಗಡವ ಸೊಗದಾಲಿನೀರೆನೆ ಪೊಚ್ಚಂ ಪೆರ್ಚಿ ಪರಿದುದು (ರಾಮಾಶ್ವ. ೩-೧೩). 'ಕಡುಸೊಂದಿ' ಪರಾ. ೨. ತುಂಟ ; ತಂಟೆಕೋರ: ಸೊಂದಿಯವನೆನ್ನ ಮಗನಲ್ಲಂ ದೇವರ ಪಾದದಾಣೆ ಬಿನ್ನಪಮಾ ಕಾಳಿಂದಿಯೊಳಿರ್ದೀ ಕಂಚಿನ ಮುಂದಸಿನೊಳ್ ಪುಟ್ಟಿ ಕಂಸವೆಸರಂ ಪಡೆದಂ (ಅರ್ಧನೇ. ೬-೭೦); "ಸೊಂದಿಯವನ್ = ವ್ಯಭಿಚಾರದಿಂದ ಹುಟ್ಟಿದವನು" (ಅರ್ಧನೇ. ಕೋಶ). (ಗು). ೩. ತುಂಟ ತನದ; ತಂಟೆಕೋರಸ್ವಭಾವದ: 'ಸೊಂದಿಗೋಡಗ' ಪರಾ.

**ಸೊಂದಿಗಿಳಿ** (ನಾ). ತುಂಟಗಿಳಿ: ಪರಿವಿಡಿಗೆಯ್ಯೆ ಸೊಂದಿಗಿಳಿ ತಂದೆಯ ತಾಯ ಸಮೀಪದೊಳ್ ತನೂದರಿಯ ರತೋಪಯುಕ್ತರುತಮಂ (ಶಾಂತಿಪು. ೮-೮೫); ಸುಸಿಲೆಳ್ದ ಸೊಂಡಿEದಿ3ಗಿಳಿಗಳ ರಸಿಕಾಳಾಪಂಗಳುಣ್ಮೆ ಪೊಣ್ಮಿದವು (ವರ್ಧಮಾ. ೮-೯೯).

[ಸೊಂದಿ + ಗಿಳಿ]

**ಸೊಂದಿಗೋಗಿಲೆ** (ನಾ). ತುಂಟಕೋಗಿಲೆ: ನಲಿದಪೆಯೆನ್ನ ನಲ್ಲಳ ಕಲಧ್ವನಿ ನಂದಿದುದಾಗಿ ಸೊಂದಿಗೋಗಿಲೆ ಬಗ ನಿನ್ನ ದರ್ಪಮನಡಂಗಿಪೆನೀಗಳೆ (ಲೀಲಾವ. ೧೪-೭೫). [ಸೊಂದಿ + ಕೋಗಿಲೆ]

**ಸೊಂದಿಗೋಡಗ** (ನಾ). ೧. ತುಂಟಕೋತಿ: ಸೊಂದಿಗೋಡಗಂಗಳ ಕಾಲಾಟ ದಿನಲೊಕ್ಕಲರಿನುದಿರ್ದ ದೂಳಿಗಳನಮರ್ಚೆಯುಂ (ಕಬ್ಬಿಕಾ. ೫೪). ೨. ಒಂದು ಜಾತಿಯ ಕೋತಿ: "ಪೇರಣಿಲೆನೆ ಸೊಂದಿಗೋಡಗಂ" (ಚತುನಿ. ೭೬). [ಸೊಂದಿ + ಕೋಡಗ]

**ಸೊಂದಿತನ** (ನಾ). ಹಾದರ; ವ್ಯಭಿಚಾರ: ಕುಲಟಾಭಿಸರಣಮಂ ಸೊಬಗೆಂದುಂ ಸೊಂದಿತನಮಂ ಪ್ರಗಲ್ಭ[ತೆ]ಯೆಂದುಂ ಮುಯ್ಯಾಂತು ದೆಸಗೆ ಬಿಲ್ವೆಸವೆಸುವೊಂ (ವರ್ಧಮಾ. ೨-೨೭). [ಸೊಂದಿ + - ತನ]

**ಸೊಂಪಡಗು** (ಕ್ರಿ). ಕಳೆಗುಂದು; ಕಾಂತಿಯಿಲ್ಲದಾಗು: ಕಂಬನಿಗಳಾಲಿ ಯೊಳೀಡಿಱಿದು ಸೋರಿದವು ಸೊಂಪಡಗಿತು ಮುಖಾಂಬುಜದ (ಕುಮ್ಮಾರ. ೧-೮).

[ಸೊಂಪು$_1$ + ಅಡಗು$_1$ (< ಅಡಂಗು$_1$)]

**ಸೊಂಪಲು, ಸೊಂಪ್ಲು** (ನಾ). ಅತ್ಯಂತ ಕಿರಿದಾದ ಹಾದಿ; "ಎರಡು ಬೇಲಿಗಳ ಮಧ್ಯೆ ಅಥವಾ ಗೋಡೆಗಳ ಮಧ್ಯೆ ಹೋಗುವ ಕಿರುದಾರಿ" (ನಮ್ಮೂರು. ಟಿಪ್ಪಣಿ): ಇದ್ದುದರಲ್ಲಿ ಇದೇ ಚೆನ್ನಾದ ಬೀದಿ ಎನ್ನಬಹುದು. ಉಳಿದವುಗಳನ್ನು ಹಟ್ಟಿ , ಸೊಂಪಲು, ಓಣಿ ಮತ್ತು ಗಲ್ಲಿಗಳೆಂದು ಕರೆಯಬಹುದು (ನಮ್ಮೂರು. ೭). **ಸೊಂಪ್ಲು:** ನಮ್ಮನೇ ಗಡ್ಡ ಆಗ್ಲೇ ಓಣೋಣಿ, ಸೊಂಪ್ಲು ಸೊಂಪ್ಲು ಹುಡ್ಕಾಡ್ತಾನೆ (ಹುಟ್ಟಿಹ. ೧೫೪).

**ಸೊಂಪಿಗ** (ನಾ). ನಿಧಿಯನ್ನು ಹೊಂದಿದವನು; ಶ್ರೀಮಂತ: ಭಕ್ತಾನುಕಂಪಿ ಭಕ್ತಿಯ ಸಿರಿಯ ಸೊಂಪಿಗಂ ಭಕ್ತಲೋಲಂ ತ್ರಿವಿಧಭಕ್ತಿಪರಿಪಾಲಕಂ (ಕೊಟ್ಟೂಬ. ೧-೭೪).

[ಸೊಂಪು + - ಇಗ]

**ಸೊಂಪಿಡಿ** (ಕ್ರಿ). ಅತಿಶಯವಾಗು; ಮೇಲ್ಮೆಯಿಂದ ತುಂಬಿರು: ದೇವಕುಸುಮ ಗಳಿಂದೆ ಕಂಪಿಡಿದು, ಸೊಂಪಿಡಿದು, ಮರ್ತ್ಯದಿಂ ಸ್ವರ್ಗಕ್ಕೆ ಕೊಂಡೊಯ್ಯುವೊಂದು ಬೃಂದಾರಕವಿಮಾನವೆನೆ, ಚಿತೆ ಹೂಡಿ ನಿಂದುದು (ಚಿತ್ರಾಂಗ. ೮೯-೨೪೫೭).

[ಸೊಂಪು + ಇಡಿ$_2$]

**ಸೊಂಪು, ಸಂಪು$_1$** (ನಾ). ೧. ಸೊಗಸು; ಚೆಲುವು; ಮನೋಹರತೆ: ಕತ್ತುರಿಯ ಕಂಪಿನಿಂ ಸೊಂಪಂ ತಳೆದ ಮಲಯಜವಿಲೇಪನಮುಮನರಸಂಗೆ ತೋಱಿ (ಕಾದಂಉ. ೧೬೮); ಸಂಪೂರ್ಣಮಾದ ವಿಧುಬಿಂಬಂ ಪೂರ್ವದಿಗಂಗನಾಲಲಾಟದೊಳಿಟ್ಟಾ ಸೊಂಪಿನ ಚಂದನತಿಲಕದ ಪೆಂಪಂ ತಳೆದಿರ್ದುದು (ಬಾಧಪು. ೫-೬); ಮುಗಮುಗಿವ ಹೊಂದೊಡರ ಹಾರಾದಿಗಳಲೊಪ್ಪಂಬಡೆದು ನಸುನಗೆಮೊಗದ ಸೊಂಪಿನಲಾಹವಕ್ಕನು ವಾದನಭಿಮನ್ಯು (ಕುಮ್ಮಾದ್ರೋ. ೪-೪೯). ೨. ಕಾಂತಿ; ಹೊಳಪು; ತೇಜಸ್ಸು: ಇನಬಿಂಬಂ ಕಣ್ಣಲುಂಬಂ ತೊಳಗಿ ಬೆಳಗೆ ಬಾಲಾತಪಂ ಸುತ್ತಲುಂ ಕಂಪಿನ ಸೊಂಪಂ

ಬೀಱೆ (ಕಾದಂಪೂ. ೩೫೪); ಮಾತೆಯ ಮನೋರಾಜ್ಯ ಪಿತನ ಕಣ್ಣಳ ಸೊಂಪು ಆತುರದೆ ಪಾಡುತ್ತಲಿಹರ ಜೋಗುಳ ಜೊಂಪು (ಬಸರ. ೧-೧೩೬); ಶ್ರೀಗಿರಿಜೆಯಾಸ್ಯಕಮಳದ ಸೊಂಪು ಪೊಳೆಯೆ (ಚಬಪು. ೧-೨). ೩. ಹುಲುಸು; ಹೊರವು; ಸಮೃದ್ಧಿ: ಸೊಂಪಿನಿಂ ಕಂಪಿಡುವ ಸಂಪಗೆಗಳಂ ಕೊಂಡು (ಬಸರ. ೩-೨೩); ಪೆಜೆನೊಸಲಿನ ಸುಳಿಗುರುಳ ಸೊಂಪಿನ ಚೆಲುವರಳುಗಣ್ಣ ಬಲೆಯೊಪ್ಪಿದಳು (ಕಂಸವಿ. ೯-೩೭); ತೆಂಕಣದೆಲರ ತಂಪು ಪೊಸಮಾಂದಳಿರ ಸೊಂಪು (ಚಿತ್ರಾಂಗ. ೨೯-೮೦೮). ೪. ಹೆಚ್ಚಳ; ಅತಿಶಯ; ಆಧಿಕ್ಯ: ಕೃತವರ್ಮನು ಕೃಪಾಚಾರ್ಯಾದಿಗಳು ಮಸಗಿ ಘೃತಸಮುದ್ರದ ಸೆಱಗ ಸೋಂಕಿದ ಹುತವಹನ ಸೊಂಪಿನಲಿ ವೈರಿಪ್ರತತಿಯನು ತಱುಬಿದರು (ಕುವ್ಯಾಶ. ೩-೩). ೫. ಹಿಗ್ಗು; ಸಂತೋಷ: ಹರನಿಂದುರ್ವಿಗೆ ದೈವವೇ ಕಿರಣಕಿಂದುಂ ಬಿಟ್ಟು ಸೊಂಪುಂಟೆ (ಸೋಮೇಶ. ೬); ಸೊಂಪಿನ ನಗೆ ಸರೋರುಹಕೊಗೆಯೆ . . . ರವಿಯುದಯಾಚಳಕೆ ಬಂದ (ಕುವ್ಯಾ. ೨-೧); ಬುಧಜನಮನದಿಂಪು ಭಾವಜ್ಞರ ಸೊಂಪು ಸದಮಲನುಡಿಗಳ ತಂಪು ಒದವಿ ರಂಜಿಪ ಜೀವಂಧರಕೃತಿ (ಜೀವಂಸಾಂ. ೩-೫೪). ೬. ಇಂಪು; ಇನಿದು; ಮಧುರವಾದುದು: 'ಸೊಂಪೆಸೆ' ಪರಾ. ೭. ನಿಧಿ; ಐಶ್ವರ್ಯ: ಎನಗೆ ಸುಗತಿ ಸುಮತಿ ಸೊಂಪು ಬಿಣ್ಪು ನುಣ್ಪುತಣ್ಪು ನೀನೆ (ಹಂಪರ. ಹ. ೫೧೨-೨೨). ೮. ದಷ್ಟಪುಷ್ಟತೆ; ಕಟ್ಟುಮಸ್ತು: ದೇಹದಲ್ಲಿ ಪ್ರೋಟೀನುಗಳು ಮಾಡುವ ಕೆಲಸಗಳು : ೧) ದೇಹವನ್ನು ಸೊಂಪಾಗಿ ಬೆಳೆಸುವುದು (ಗೃಹವಿ. ೧೧). ೯. ಸತ್ತ್ವ; ಶಕ್ತಿ; ತ್ರಾಣ: ನಾವು ಹಲವು ರಾಜ್ಯವ ತಿರುಗಿ ದೇಹವೆಲ್ಲವು ಸುಟ್ಟು ಸೊಂಪಿಲ್ಲಯನಗೆ (ಕೊಲ್ಲಿಪಾ. ೫೯-೧). ೧೦. [ಸಂಗೀತ] (?): ಗತಿ ಗಹಗಹಿಸಲ್ ಕಳಸೋನ್ನತಿ ಗಮಕಂ . . . ನೇವಣ ಮಿಗೆ ಸೊಂಪಾಹತ ಕಂಪಿತಮುಣ್ಕೆ ಪಾಡಿದಂ ಮುನಿಋಷಭಂ (ವೀರವಿ. ೬-೯೦). ಸಂಪು₂ : ೧. ಮಂದಗಮನೆಯರ ಬಲು ಸೋಲಿಸುವ ಸಂಪಿನಲಿ ಒಂದೊಂದು ಬೆರಗಿನ ಸ್ವರಮಣಿನ ಕಂಡೆನಾ (ತೀರ್ಥಮ. ೧೨೯); ಸಂಪೀಗಿ ಈ ಹೂವು ಸಂಪು ಇದ್ದರೇನ ಸಂಪನ್ನ ಶಿವನ ನೆನಿಯಾದ ಸೋಬಾನ ನಿಂತು ಹಾಡಿದ ಫಲವೇನ (ಲೋಕಗೀ. ೧೧). ೩. ಕೊಳದ ತೀರದೊಳಿರ್ದ ಪಲ್ಲವಾನ್ವಿತದ ತಣ್ಣೆಳಲ ತಂಪಿನ ಸಂಪಿನಿಂ ಕಂಗೊಳಿಸುವ (ನವಮೋ. ೮-೪೭). ೧೧. ಭರ್ಜರಿಯಾದುದು; ಪೊಗದಸ್ತು: ಅಂದು ಸಂಪು ಮೇಜವಾನಿಯ ಭೋಜನಕ್ಕೆ ನಿಲ್ಲಬೇಕಾಯಿತು (ದೀಪಹ. II, ೧೨೨). ೧೨. ಸೊಕ್ಕು; ಗರ್ವ: ಲಂಪಟದೊಳು ಬಿದ್ದು ಓಡ್ಯಾಡುವಿ ಎಂದು ಸಂಪಿನಲ್ಲಿ ನಗುವದು ಜಾಣತನವೊ (ವಿಸಾಸು. ೪೭-೧); ರಾವಣಾಸುರಗತ್ತ ದೂಷಿಸಿದರೆಲೆಯಾಳ್ವನೇ ಸಂಪಿನಿಂ ಕಾರ್ತವೀರ್ಯಾರ್ಜುನನದೆಂಬರಂ (ಪರಶು. ೧೩-೩೩). ೧೩. (?): ರತಿಪತಿಗಳನು ಸೋಲಿಸುವಾ ಗಾಡಿ ಬೆಡಗಿನ ಬಿಂಕಪಂಕವ ಗೂಡಿಸುತ ಮಿತ್ರಾದಿ ಸಂಪೊಡಗೂಡಿದರೆ ಆ ದೇಶದಗಲದಿ ನೋಡೆ ನಗರಗಳಾ (ಬಿಜ್ಜಪು. ೧೭-೬).

**ಸೊಂಪಾಗು** = ೧. ಹುಲುಸಾಗು; ಹೊರವಾಗಿ ಬೆಳೆ: ಸೊಂಪಾಗುತ್ತಂಕುರಿ ಸುತ್ತುಂ . . . ನೆಜೆದಿಂಪಿಂ ನಳನಳಿಸಿ ಶಾಲಿವನಮೆಸೆದಿರ್ಕುಂ (ಗಿರಿಕ. ೨-೧೩). ೨. ಹಿಗ್ಗು; ಆನಂದಪಡು: ಮೇಲುರತದಲಿ ಪರಿಮಳದ ವೈಹಾಳಿಯಲಿ ಸಲೆ ಬೀದಿವರಿದು ಚಡಾಳಿಸುವ ಸೊಗಸಿನಲಿ ಸೊಂಪಾದಳು ಸರೋಜಮುಖಿ (ಕುವ್ಯಾಆ. ೧೦-೪).

[ದೇ. II ತಮಿ. ಚೊಮ್ಪು ; ತುಳು. ಸಂಪು, ಸೊಂಪು; ತೆಲು. ಸೊಂಪು]

**ಸೊಂಪುಂಗಾಱ, ಸೊಂಪುಗಾಱ (ನಾ). ಚೆಲುವ; ಸೊಗಸುಗಾರ:** ಸೊಂಪುಗಾಱಂ, ಸೊಂಪುಂಗಾಱಂ (ಭಾಷಾಭೂ. ೧೯೨ ಪ್ರಯೋ). **ಸೊಂಪುಗಾಱ** : ಮೇಲಿನ ಪ್ರಯೋಗವನ್ನು ನೋಡಿ. [ಸೊಂಪು + - ಕಾಱ]

**ಸೊಂಪುಗಜೆ (ಕ್ರಿ). ಚೆಲುವನ್ನು ಬೀರು; ಸೊಗಸಾಗಿರು:** ಅಲರ್ವುಡಿಯಂ ಸೂಸುವ ಕನಕರುಚಿನಿಚಿತಸುಮನೋಗಣದಿನಲಂಕೃತಿವೆತ್ತು ಸೊಂಪುಗಜೆವ ಚಂಪಕ ಪ್ರತಾನಮುಂ . . . ಕಣ್ಗೊಳಿಸಿರ್ದುದು (ಶಬಶಂ. ೨-೪೨ ವ). [ಸೊಂಪು + ಕಜೆ₁]

**ಸೊಂಪುಗಾಱ** 'ಸೊಂಪುಂಗಾಱ' ನೋ.

**ಸೊಂಪುಗೆಡು (ಕ್ರಿ). ೧. ಅಂದಗೆಡು; ಹಾಳಾಗು:** ದಂಪತಿಗಳ ಪಗೆತನದಿಂದಿರ್ವರ ಪೆಂಪಿನ ಬೇರು ಪರಿವುದು ಸೊಂಪುಗೆಡುವುದು ಸೊಬಗು (ಹದಿಬ. ೬-೮). ೨. ಕಾಂತಿಯಿಲ್ಲದಾಗು; ಕಳಾಹೀನವಾಗು: ಸೊಂಪುಗೆಟ್ಟುದು ಸಿರಿವದನ ಮನದಿಂಪು ಬೀತುದು ಭಕ್ತಮೋಹದಲಂಪು ಮಸುಳಿತು (ಕುವ್ಯಾಭೀ. ೬-೨೭). [ಸೊಂಪು + ಕೆಡು₁]

**ಸೊಂಪುಗೊಳ್ (ಕ್ರಿ). ೧. ಚೆನ್ನಾಗು; ಸೊಗಸಿನಿಂದ ಕೂಡು:** ನಯಂಬಡೆವ ನಿಡಿದೆನಿಸುವ ಸೊಂಪುಗೊಳ್ಳ ಪೆಂಪುವಡೆವ ಜೀವಸ್ವರಂಗಳೊಳ್ ನಿಂದು ನಿಂದು ನೆರೆವೇಱುವ ಸೊಗಸು ನಿರವಿಸಲರಿದು (ಚಿಕವಂ. ೧೬೦-೧). ೨. ಹಿಗ್ಗು; ಸಂತೋಷಿಸು: ಹುವ್ವುಗಳು ತಗುಲಿದಾಗೆಲ್ಲ ಅವರ ಮೈಗಳಂ ಸೊಂಕಿದಂತೆ ಸೊಂಪುಗೊಂಡು (ಸೌಗಂಧಿ. ೨೩೦-೧೫). [ಸೊಂಪು + ಕೊಳ್]

**ಸೊಂಪುಡಿ (ನಾ). ಒಂದು ಬಗೆಯ ವಾದ್ಯ (?):** ನಿಡುಸರದ ಸೊಂಪುಡಿಯ ಶಂಖದ ಮಣಿಯ ಭೂಷಣದ ಬಿಡದೆ ಬೀಸುವ ನವಿಲ ಚಾಮರದಡಿಕೆಗಳ ಬಿಚ್ಚೋಲೆ ರಾಗಟೆಗೆಡೆದ ಭೋರೆಂದೆಂಬ ನಿಡುನೆರವಿಗಳನೀಕ್ಷಿಸಿದ (ಮೈರಾಕಾ. ೨-೩೭). [?]

**ಸೊಂಪುತನ (ನಾ). ಚೆಲುವು; ಸೊಬಗು:** ಜವ್ವನಂ ಗರಗರನಪ್ಪ ಸೊಂಪುತನವುಳ್ಳವ ಳಾದೊಡೆ ಬಂದು ಮುಂದೆ ಸಂಚರಿಸುಗೆ (ಸೂಕ್ತಿಸು. ೮-೪೧೭). [ಸೊಂಪು + - ತನ]

**ಸೊಂಪುದೋಱಿಸು (ಕ್ರಿ). ಚೆಲುವನ್ನು ಪ್ರದರ್ಶಿಸು; ಸೊಬಗನ್ನು ತೋರ್ಪಡಿಸು:** ಒಸೆದು ಕೋಮಲದ ತನುವಲ್ಲರಿಯ ಸೊಂಪಿಂದೆ ಸೊಂಪು ದೋಱಿಸುತಿರ್ಪರು (ಚೈಮಿಭಾ. ೬-೧೯). [ಸೊಂಪು + ತೋಱಿಸು]

**ಸೊಂಪುನಡೆ (ನಾ). ಅಂದವಾದ ನಡಗೆ; ಒಯ್ಯಾರದ ಗತಿ,—ಚಲನೆ:** ಒಳ್ನಡೆಯ ಸಲೆ ಸೊಂಪುನಡೆಯ ಸೋಲ್ನಡೆಯ ಸೊಬಗಿಯರಿರದೆ ತಳರ್ದರ್ (ಚಬಪು. ೩೭-೧). [ಸೊಂಪು + ನಡೆ₂]

**ಸೊಂಪುವಡೆ (ಕ್ರಿ). ಹುಲುಸಾಗಿರು; ಹೊರವಾಗಿರು:** ಸೊಂಪುವಡೆದ ಪಾದರಿಗಳು ಕಂಪ ಬೀಱುವ ಬಕುಳದ ಕುಜಸಂಕುಳ ಸಂಪತ್ತಿನಲಿ ಬೆಳೆದಿಹವು (ಅಂಜಚ. ೨-೪೭); ಅದಱ ಪರಿಸರದೊಳ್ಸೊಂಪುವಡೆದಲರ್ದ ಚಂಪಕಮಂ ತೋಱೆ (ರಾಜಶೇ. ೧೦-೨೯ ವ).

[ಸೊಂಪು + ಪಡೆ₁]

**ಸೊಂಪುವೆರು** 'ಸೊಂಪುವೇಱು' ನೋ.

**ಸೊಂಪುವೇಱು, ಸೊಂಪುವೆರು (ಕ್ರಿ). ೧. ಸೊಗಸಿನಿಂದ ಕೂಡಿರು; ಮನೋಹರವಾಗಿರು:** ಪದವಿನ್ಯಾಸವಿಶೇಷದೊಳ್ ಪದವಿಲಾಸಂ ಸೊಂ[ಪಾಠಾಂ. ಪೆಂ] ಪುವೆತ್ತಿರ್ದ ಕಾವ್ಯದ ಮೆಯ್ಯೊಳ್ ಸಮುದಾಯಶೋಭೆ (ಅನಂಪು. ೧-೮); ನಗರಿದುರ್ಗಂಗಳಿಂ ಸೊಂಪುವೆತ್ತ ಪೆಂಪಿನ ಕುಂಭಿನಿಯೊಳ್ ಮುಖ್ಯವಾದ ಶಾಳಿವನವಿರ್ದುದು (ಹಮ್ಮೀರ. ೧-೪೯ ವ). ೨. ಅಧಿಕವಾಗು; ಹೆಚ್ಚಳವನ್ನು ಹೊಂದು: ದೇವ ದ್ವಿಜನ್ಮೋತ್ಕಾರಾರ್ಚ್ಚನದಿಂದಂ ಸಲೆ ಸೊಂ[ಪು][ವೆತ್ತ] ವಿಭವಂ (ಎಇ. XXVIII, ೩೪-೨೦: 1082). **ಸೊಂಪುವೆರು:** ೧. ಇದು ಸೊಂಪುವೆತ್ತೆಸೆದರ್ಥ (ಇಚಸಾಂ. ೧-೮೯).

[ಸೊಂಪು + ಪೆಱು₁]

**ಸೊಂಪುಱಿ (ನಾ). (?):** ಸೊಂಪುಱಿ, ಪೊಂಪುಱಿ (ಶಬ್ದಾನು. ೧೪೦ ವ್ಯಾಖ್ಯಾ). [?]

**ಸೊಂಪೆರೆ (ಕ್ರಿ). ಕಾಂತಿಯನ್ನು ಸೂಸು,—ಚೆಲ್ಲು:** ಶಾಂತಲೆ, ನಿನ್ನ ಮುಖ ಸೊಂಪೆರೆಯುತ್ತದೆ (ಶಾಂತಲಾ. ೬). [ಸೊಂಪು + ಎರೆ₁ (< ಎಱೆ₁)]

**ಸೊಂಪೆಸೆ (ಕ್ರಿ). ೧. ಚೆಲುವಾಗಿರು; ಸೊಗಸನ್ನು ಬೀರು:** ಸೊಂಪೆಸೆವ ಕಿಂಪುರುಷನಿತಂಬಿನಿಯ ಸಡಿಲ್ದೆಳಲ್ಕ ಕಡುನಿಡಿದಾದ ಕೇಶಪಾಶದಿಂ ತೊಡರ್ದು (ಶಬಶಂ. ೩-೩೫ ವ). ೨. ಮಾಧುರ್ಯದಿಂದ ಶೋಭಿಸು; ಇಂಪಾಗಿರು: ಸೊಂಪೆಸೆವ ಕೋಗಿಲೆಯ ಸರ . . . ವನದ ಸೊಗಸಿನ ಸೊಂಪು ಸೆಳೆದುದು ಮನವನು (ಕುವ್ಯಾಆ. ४-३೭). [ಸೊಂಪು + ಎಸೆ₂]

**ಸೊಂಪೇರು** 'ಸೊಂಪೇಱು' ನೋ.

**ಸೊಂಪೇಳು (ಕ್ರಿ). ಹಿಗ್ಗು; ಸಂತೋಷದಿಂದ ಉಬ್ಬು:** ಕೇಳವನಿಬರ ಮಾತು ಕಿವಿ ಕಣ್ಣಾಲಿಗಳು ಕಡೆಗಣಿಸಲೆಳಸವು . . . ನಾಲಗೆಗೆ ನುಡಿ ಹೊಗದು ತನು ಸೊಂಪೇಳದಿನ್ನುಳಿದಿಂದ್ರಿಯದ ಸಮ್ಮೇಳವೇತಕಱು (ತೊರರಾ. ೫-೩-೩೮).

[ಸೊಂಪು + ಏಳು₁ (< ಎೞ್₁)]

**ಸೊಂಪೇಱು, ಸೊಂಪೇರು (ಕ್ರಿ). ೧. ಅತಿಶಯವಾಗು:** ಪಾರಿವಗಳ ದನಿ ಕೊಳರ್ವಕ್ಕಿಯ ಲಲ್ಲೆ . . . ಸಾರಿ ಮದನಮೋಹಿನಿ ಜಯಂತರೊಳು ಸೊಂಪೇಱಿದುವು (ಕಂಸವಿ. ೧೦-೪೩). ೨. ಹುಲುಸಾಗು; ಹೊರವಾಗಿರು: ಬಗ್ಗಿಸುತ್ತಿರ್ದುವುಗ್ಗಡದಿಂ ಕೋಗಿಲೆ ಮೊಗ್ಗೆಯಿಂ ಮಿಡಿಗಳಂ ಸೊಂಪೇಱಿದಿವ್ಮಾವಿನೊಳ್ (ಕಬ್ಬಕಾ. ೫೫);

ಬಳ್ಳಿವೂದರ್ವಡಲ್ಗು ಸೊಂಪೇಱಿದುದು (ರಾಮಾಶ್ವ. ೩-೧೬). ೩. ಹಿಗ್ಗು; ಸಂತೋಷಿಸು: ಗಿರಿಜೆಗೆ ಶಿವಲಿಂಗಮನಧಿಕಮನಃಪ್ರಮೋದದಿಂ ತೋಱುವುದುಂ . . . ಸೊಂಪೇಱಿದಳಭವನೊಳಗೆ ಪೇರೂಱಿದಳ್ (ಗಿರಿಕ. ೩-೫೪); ಸುರತರು ಸುಗಂಧದ ತವರ್ಮನೆಯದೆಂದೆನಿಪ ಪೂದೋಟಮಂ ದೂರದಿಂ ಕಂಡು ಸೊಂಪೇಱಿ (ಪುಷ್ಪರ. ಪ. ೫೭೩-೨೩). **ಸೊಂಪೇರು :** ೪. ಚೆಲುವಾಗು; ಸೊಗಸಾಗು: ಸೂರ್ಯನ ಶಶಿಬೀದಿ ಕೇರಿ ಬಾಗಿಲವಾಡ ಕೇರಿ ಸೊಂಪೇರಿ ಮೆರೆದವು (ಗುಂಡುಸು. ೨-೨).

[ಸೊಂಪು + ಏಱು$_1$ (< ಏಱ್$_1$)]

**ಸೊಂಪೊಗೆ** (ಕ್ರಿ). ಅಧಿಕಗೊಳ್ಳು; ಅತಿಶಯವಾಗು: ಆ ಮುದ್ರಿಕೆಯ ಶಿರದಲಿ . . . ಕುಚಮಧ್ಯದಲಿ ಸೊಂಪೊಗೆವ[ಪಾಠಾಂ. ಪಗಿವ] ಸಂತೋಷದಲಿ ಸೇರಿಸಿ (ತೊರರಾ. ೫-೩-೯೪). [ಸೊಂಪು + ಒಗೆ$_1$]

**ಸೊಂಪ್ಲು** 'ಸೊಂಪಲು' ನೋ.

**ಸೊಕ** 'ಸೊಗ' ನೋ.

**ಸೊಕಗೊಳಿಸು** (ಕ್ರಿ). ಸಂತೋಷಪಡಿಸು: ಸಕಲ ಜೀವರ್ಕಳೆಲ್ಲರನು ದುರ್ವಿಷಯದೆ ಸೊಕಗೊಳಿಸಿದ ಪಾಪವೆನಗೆ ಪ್ರಕಟಿತವಾಗಿರ್ದು ಪೋಪುದು (ಮೋಹತ. ೬-೪೩).

[ಸೊಕ (< ಸೊಗ) + ಕೊಳ್$_1$ + - ಇಸು$_3$]

**ಸೊಕಮಿರು** 'ಸೊಗಮಿರ್' ನೋ.

**ಸೊಕವಡೆ** 'ಸೊಗಂಬಡೆ' ನೋ.

**ಸೊಕ್ಕಱಿ** 'ಸೊರ್ಕಱಿ' ನೋ.

**ಸೊಕ್ಕಾನ್** 'ಸೊರ್ಕಾನ್' ನೋ.

**ಸೊಕ್ಕಾನೆ** 'ಸೊರ್ಕಾನೆ' ನೋ.

**ಸೊಕ್ಕಾನೆದಲೆಗ** (ನಾ). ಮದಿಸಿದ ಆನೆಯ ತಲೆಯನ್ನು ಉಳ್ಳವನು; ಗಜಾನನ; ಗಣಪತಿ: ಇಕ್ಕಡಿವಡೆದ ಕಾರ್ಮುಕವ ನಿವಾರಿಸಿ ತಕ್ಕೊಂಡು ಭಾರಿಯ ಹಲವ ಒಕ್ಕಯ್ಯೊಳಾಂತ ಪೇರೊನಕೆಯಿಂದಿಕ್ಕಿದ ಸೊಕ್ಕಾನೆದಲೆಗನ ಮೇಲೆ (ಮೋಹತ. ೩೮-೫೯). [ಸೊಕ್ಕಾನೆ (< ಸೊರ್ಕಾನೆ) + ತಲೆ$_1$ + - ಗ$_2$]

**ಸೊಕ್ಕಾನೆನಡೆ** (ನಾ). ಮತ್ತಗಜದ ನಡಗೆಯಂತಹ ನಿಧಾನವಾದ ನಡೆ: 'ಸೊಕ್ಕಾನೆನಡೆವೆಱು' ಪರಾ.

**ಸೊಕ್ಕಾನೆನಡೆಯುವರ್** (ಬಹುವ) = ಮತ್ತಗಜದಂತೆ ನಡೆಯುವವರು; ಮಂದಗಮನೆಯರು: ಪೊಂಬಾಳೆದೂಡೆಯ ಪೊಸ ಪೊಂಗೊಡದ ಪೊಱವಾಱ ಸೊಕ್ಕಾನೆನಡೆಯವರ್ ನಡೆತಂದರು (ಚಿಬಪು. ೪೫-೩೩).

[ಸೊಕ್ಕಾನೆ (< ಸೊರ್ಕಾನೆ) + ನಡೆ$_2$]

**ಸೊಕ್ಕಾನೆನಡೆವೆಱು** (ಕ್ರಿ). ಮದಿಸಿದ ಆನೆಯಂತೆ ಚಲಿಸು; ಮಂದಗತಿಯಲ್ಲಿ ಸಾಗು: ಸೊಕ್ಕಾನೆನಡೆವೆತ್ತ ಸೊಬಗಿಯರ್ ವಿಟರೆರ್ದೆ ಬಿಕ್ಕನೆ ಬಿರಿಯು ವಂದದಲಿ ಅಕ್ಕಱಿಂದಾಲೋಕನಗೆಯ್ದು ಮದನನ ಮೊಕ್ಕಳಕೊಳಗುಮಾಡಿದರು (ಮೋಹತ. ೨೪-೧೬). [ಸೊಕ್ಕಾನೆನಡೆ + ಪೆಱು$_1$]

**ಸೊಕ್ಕಾಹಾರ** (ನಾ). ಮತ್ತುಬರಿಸುವ ಆಹಾರಪದಾರ್ಥ; ಮೈಮರೆಯುವಂತೆ ಮಾಡುವ ಉಣಿಸು: ಒಂದು ದಿವಸಂ ವಸಂತಮಾಲೆಯವರಿರ್ವರ್ಗಂ ಪಿರಿದಪ್ಪ ನಿದ್ರೆಯಪ್ಪ ಸೊಕ್ಕಾಹಾರಮನಿಕ್ಕಿ ಮೈಯಱಿಯದವಸರದೊಳು (ಪುಣ್ಯಾಸ್ರ. ೪-೨೦ ವ).

[ಸೊಕ್ಕು$_2$ (< ಸೊರ್ಕು$_2$) + ಆಹಾರ]

**ಸೊಕ್ಕಿನಗಿಡ** (ನಾ). ಒಂದು ಬಗೆಯ ಸಸ್ಯ: ಇಂಗಳದ ಮರ, ಇಂಗಳೀಕ, ಮಾನುಮರ, ಸೊಕ್ಕಿನ ಗಿಡ (ಮೈಜಿಗಿ. ೧೧-೧೯೦). [? + ಗಿಡ (< ಗಿಡು)]

**ಸೊಕ್ಕಿಸು** 'ಸೊರ್ಕಿಸು' ನೋ.

**ಸೊಕ್ಕಿಸೆಟ್ಟಿ** (ನಾ). ಒಬ್ಬಾತನ ಹೆಸರು: ಸೊಕ್ಕಿಸೆಟ್ಟಿ ಪದುಮುಸೆಟ್ಟಿ (ಎಕ. VII, ಶಿವಮೊ. ೧೧೪-೧೯; 950?). [? + ಸೆಟ್ಟಿ]

**ಸೊಕ್ಕು$_1$** 'ಸೊರ್ಕು$_1$' ನೋ.

**ಸೊಕ್ಕು$_2$** 'ಸೊರ್ಕು$_2$' ನೋ.

**ಸೊಕ್ಕುಂಜವ್ವನ** 'ಸೊರ್ಕುಂಜವ್ವನ' ನೋ.

**ಸೊಕ್ಕುಂಜವ್ವನೆ, ಸೊಕ್ಕುಜವ್ವನೆ** (ನಾ). ಉಕ್ಕುತ್ತಿರುವ ಹರೆಯವುಳ್ಳವಳು; ನವತರುಣಿ: ಸೊಕ್ಕುಂಜವ್ವನೆಯರ ತಕ್ಕೆಗೆ ನೂತ್ನಯೌವನಿಗರಂ ಚಕ್ಕನ ಸಿಲ್ಕಿಸಿ ಮಿಕ್ಕು ಮನಂಗೊಳಿಪ ಹೇಮಂತದೊಳ್ (ಉದ್ಭಟ. ೪-೩೬ ವ); ಘಟ್ಟಿಮುಗುಳ್ಮುತ್ತಿರ್ದೆರ್ ಸೊಕ್ಕುಂಜವ್ವನೆಯರು ಮುದದಿಂ (ಉದ್ಭದೇ. ೨-೩೫). **ಸೊಕ್ಕುಜವ್ವನೆ :** ಸೊಕ್ಕುಜವ್ವನೆಯ ತಕ್ಕೆಯ ಸವಿಯಂದದೆ . . . ಕೇಳುವರಿಗತಿಹರುಷವ ಮಿಕ್ಕೆಸಗುವುದೀ ಕಾವ್ಯ (ಕಂಸವ. ೧-೧೬); ಮನ್ಮಥನ ಸಾಣೆವಿಡಿದಲಗಿನಂತಲ್ಲಲ್ಲಿ ಮೆರೆದೊರಗಿದ ಸೊಕ್ಕು ಜವ್ವನೆಯರೋ ಶೃಂಗಾರರಸಮೂರ್ತಿ ಇಕ್ಕೆಗೈದುದೊ ಭೂತಳದೊಳೆಂಬೊಲಿರೆ (ವಂಕಾರಾ. ೫-೪-೧೯). [ಸೊಕ್ಕುಂಜವ್ವನ (< ಸೊರ್ಕುಂಜವ್ವನ) + - ಎ$_2$]

**ಸೊಕ್ಕುಗಣ್** 'ಸೊರ್ಕುಂಗಣ್' ನೋ.

**ಸೊಕ್ಕುಗತ್ತಲೆ** (ನಾ). ಗಾಢಾಂಧಕಾರ: ಸೊಕ್ಕುಗತ್ತಲೆಯೊಳಗೆ ಜಾರೆಯರ್ ತಮತಮಗೆ ತಕ್ಕರೆಡೆಗೈದುವೆಡೆಯೊಳ್ (ಚಿಬಪು. ೯-೧೪).

[ಸೊಕ್ಕು$_2$ (< ಸೊರ್ಕು$_2$) + ಕತ್ತಲೆ$_1$ (< ಕಱ್ತಲೆ)]

**ಸೊಕ್ಕುಗಳ್** (ನಾ). ಅಮಲೇರಿಸುವ ಮದ್ಯ; ತೀಕ್ಷ್ಣವಾದ ಕಳ್ಳು: ಸೊಕ್ಕಿಸಿ ನೋಟ್ಪುಮೆಂಬ ನೆವದಿಂ ಸೊಕ್ಕುಗಳ್ಳನೆಱೆಯಿಸಿ ಪಲವುಂ ಭಕ್ಷ್ಯಸಮೇತಮುಣಲಿಕ್ಕಿಸಿ . . . ಅವಂದಿರ್ ಪರವಶತೆಯಿಂ ನಿದ್ರೆಗೆಯ್ಯುದುಂ (ಮಹಾನೇ. ೯-೫೪ ವ).

[ಸೊಕ್ಕು$_2$ (< ಸೊರ್ಕು$_2$) + ಕಳ್$_3$]

**ಸೊಕ್ಕುಗೋಗಿಲೆ** 'ಸೊರ್ಕುಂಗೋಗಿಲೆ' ನೋ.

**ಸೊಕ್ಕುಜವ್ವನ** 'ಸೊರ್ಕುಂಜವ್ವನ' ನೋ.

**ಸೊಕ್ಕುಜವ್ವನೆ** 'ಸೊಕ್ಕುಂಜವ್ವನೆ' ನೋ.

**ಸೊಕ್ಕುದಕ್ಕೆ** 'ಸೊಕ್ಕುದಳ್ಕೆ' ನೋ.

**ಸೊಕ್ಕುದಳ್ಕೆ, ಸೊಕ್ಕುದಕ್ಕೆ** (ನಾ). ಮೈಮರೆಸುವಂತಹ ಅಪ್ಪುಗೆ; ಗಾಢಾಲಿಂಗನ: ಉರುವ ಕಾಂತೆಯರ ಕೂಟದ ಸೊಕ್ಕುದಳ್ಕೆಯೊಳ್ಮಿಱುಗುವಧರಾಮೃತವ ನೀಂಟ ಸೊಗಸುವ ಸುಖಿಗಳುಱೆ ಜಱಿವ ತನಿವೇಸಗೆಯ ದಿನದೊಳಧ್ವರಾಶ್ವದ ಕೂಡೆ ಪಡೆ ನಡೆದುದು (ಜೈಮಿಭಾ. ೧೫-೫). **ಸೊಕ್ಕುದಕ್ಕೆ:** ಸೊಕ್ಕುದ[ಪಾಠಾಂ. ತ]ಕ್ಕೆಯ ಸೊಗಸುವಡೆದಳಾ ಕಾಂತೆ ಪ್ರಿಯನಂಗದೊಳ್ಮೋಹನೋತ್ಸಂಗದೊಳ್ (ಜೈಮಿಭಾ. ೧೧-೧೭). [ಸೊಕ್ಕು$_2$ (< ಸೊರ್ಕು$_2$) + ತಳ್ಕೆ (< ತಳ್ಕೆ)]

**ಸೊಕ್ಕುನಡೆ** (ನಾ). ಗರ್ವದಿಂದ ಕೂಡಿದ ನಡತೆ; ಅಹಂಕಾರದ ಸ್ವಭಾವ: ಸೊಕ್ಕುನಡೆಯ ಸಣ್ಣತನದ ಮೇಲಧಿಕಾರಿಗೂ ತನಗೂ ಆಗಾಗ್ಗೆ ನಡೆಯುತ್ತಿದ್ದ ತಿಕ್ಕಾಟದಿಂದ ಅವನ ಅತೃಪ್ತಿ ತೀವ್ರಗೊಂಡಿತು (ಪುನರು. ೩೩೦).

[ಸೊಕ್ಕು$_2$ (< ಸೊರ್ಕು$_2$) + ನಡೆ$_2$]

**ಸೊಕ್ಕುಮದ್ದು** 'ಸೊರ್ಕುಮದ್ದು' ನೋ.

**ಸೊಕ್ಕುಮುರಿ** 'ಸೊಕ್ಕುಮುಱಿ' ನೋ.

**ಸೊಕ್ಕುಮುಱಿ, ಸೊಕ್ಕುಮುರಿ** (ಕ್ರಿ). ಜಂಬವನ್ನು ಇಳಿಸು; ಗರ್ವಭಂಗಮಾಡು: ಸಿರಿವುದದೊಳಗಿಹುದಿಲ್ಲಿ ಸೊಕ್ಕುಮುಱಿದು ನಿನ್ನ ಹಲ್ಲ ಕಳಚುವರಲ್ಲಿ (ಪುರಂದ. ೨-೩೯-೫). **ಸೊಕ್ಕುಮುರಿ :** ಅವನ ಸೊಕ್ಕುಮುರಿಯಲು ಮಿಕ್ಕವರು ಕಾದಿದ್ದರು (ರೂಢಿ). [ಸೊಕ್ಕು$_2$ (< ಸೊರ್ಕು$_2$) + ಮುಱಿ$_1$]

**ಸೊಕ್ಕುವಾರಿ** (ನಾ). ಉಕ್ಕಿ ಹರಿಯುವ (ರಕ್ತದ) ಧಾರೆ,—ಪ್ರವಾಹ: ತೋರಿಯ ಹಯ ಹಸ್ತಿ ಕುಱಿ ಕೋಣಗಳ ಸೊಕ್ಕುವಾರಿ ರೋಹಿತ ಮಿದುಳುಗಳು ಭೂರಿಭೇತಾಳಾದಿ ಗಳುಂಡು . . . ನರ್ತಿಸಿತು (ಮೋಹತ. ೪೦-೯೯). [ಸೊಕ್ಕು$_2$ (< ಸೊರ್ಕು$_2$) + ವಾರಿ$_2$]

**ಸೊಕ್ಕುಹ** (ನಾ). ಸೊಕ್ಕುವಿಕೆ; ಮತ್ತೇರುವಿಕೆ: " ಮಾದ, ಮದ-ಸೊಕ್ಕುಹ" (ನಾಚಿರಾ. ೬.) [ಸೊಕ್ಕು$_2$ (< ಸೊರ್ಕು$_2$) + - ಹ$_2$ (< - ಪ$_2$)]

**ಸೊಕ್ಕೂಡು** (ಕ್ರಿ) . ಎಚ್ಚರ ತಪ್ಪಿಸುವ ಮದ್ದನ್ನು ನೀಡು; ಸೊಕ್ಕುಮದ್ದನ್ನು ಉಣಿಸು : ಎಳನೀರಿನೊಳು ಸೊಕ್ಕೂಡಿ ಗಣಿಕೆಯಟ್ಟಲು ಚಾರುದತ್ತನು ಎಣಿಸದೊಲಿದು ವಸಂತತಿಲಕೆಯು ತಣಿಯೆ ಪೀರ್ದೊಱಗಿದರು ಮೃದುಶಯ್ಯೆಯಲಿ ಮದಭರದಿ (ಸಾಳ್ವಭಾ. ೧೭-೩೨). [ಸೊಕ್ಕು$_2$ (< ಸೊರ್ಕು$_2$) + ಊಡು$_1$]

**ಸೊಕ್ಕೇರು** 'ಸೊರ್ಕೇಱು' ನೋ.

**ಸೊಕ್ಕೇಱು** 'ಸೊರ್ಕೇಱು' ನೋ.

**ಸೊಖನಾಸಿ** 'ಸುಖನಾಸಿ' ನೋ.

**ಸೊಗ, ಸುಕ್ಕ, ಸೊಕ (ನಾ).** ೧. ದೈಹಿಕವಾಗಿ ಮತ್ತು ಮಾನಸಿಕವಾಗಿ ಪಡೆಯುವ ಆನಂದಾನುಭವ; ಸುಖ; ಸಂತೋಷ: "ಸೊಕಮೆಂದುಂ ಸೊಗಮೆಂದುಂ ಸುಖಂ" (ಶಶಸಾ. ೬೪-೪೨೧); ಪೊಡೆಮುಟ್ಟೋಲೈಸದೆ ನಿಚ್ಚವಯಣಮಿಲ್ಲದೆ ತನ್ನಿರ್ದಾಲಯದೊಳಿರ್ದು ಬಾೞ್ವುದೆ ಭೂಲೋಕಮನಾಳ್ವ ಸೊಗದಿನಗ್ಗಳಮಲ್ತೇ (ಪಂಚತಂ. ೪೪-೨೩); ಅರಮೆಯ್ವಣ್ಣರಭೋಗಮಲ್ಲ ಸೊಗಮುಂ ವೇಶ್ಯಾಜನಕ್ಕೆಕ್ಕಿಸಲ್ ದೊರೆಗಳ್ಗೆತ್ತಣ ನೀತಿಯ್ಕೆ (ಸೋಮೇಶ. ೬೦); ಭಾವಿಸೆ ಸೊಗದ ಸುಗ್ಗಿಯು ತನಿಸೊಕ್ಕನ್ನನಾವರಿಪುದು ಮತ್ತೀವೆ (ಹರಿಬ. ೧-೪೩). ೨. ಕ್ಷೇಮ; ಸೌಖ್ಯ; ಕುಶಲ: ಚೆಂದವೇ ಅಯ್ಯ . . . ನೀವು ಸೊಗವೆ? (ಸವತಿ. ೭೩). **ಸುಕ್ಕ** : ೧. ಈ ಮಹಾಪರೂತದುಳ್ ಅಕ್ಷಯಕೀರ್ತ್ತಿತುನ್ತಕದ ವಾರ್ದ್ಧಿಯ್ಯ ಮೇಲದು ಸೋನ್ಮು ಭಕ್ತಿಯಿಂ ಅಕ್ಷಿಮಣಕ್ಕೆ ರಮ್ಯ ಸುರಲೋಕಸುಕಕ್ಕೆ ಭಾಗಿ (ಎಕ. II, ೨೧-೪: ಸು. 700); ಸುಕದ ಕಣಿಯೆನಿಸಿ ಮಾಪುಬ್ಬಕೋಟಿವರವಾಯು ನಾಭಿನಾಮಮುಮಾಯ್ತುರ್ಭಕನಿಕರ ನಾಭಿನಾಳಪ್ರಕರನಿಕರ್ತನಮನಱಿಯೆ ಪೇೞ್ವುದಱಿಂದಂ (ಆದಿಪು. ೬-೬೭); ದೇವರಾಯರು ಸುಕದಿಂ ರಾಜ್ಯಂಗೆಯ್ಯುತ್ತಿರ್ದ್ದಲ್ಲು (ಎಇ. XXIII. ೧೮೫-೩: 1407). **ಸೊಕ:** ೧. ಸುಖ-ಸೊಕ, ಸೊಗ (ಶಮದ. ೨೭೦ ಪ್ರಯೋ); ಸೊಕಮಿರ್ಕಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ (ಗದಾಯು. ೩-೩೪); ಸೋಂಕಿನ ಸೊಕದ ಸೀತ್ಕಾರಮೆ ವೇದನಾಸೀತ್ಕಾರಮೆಂಬ ಸಂದೆಗಮನೀವ ಪುರಸೌಂದರಿಯರ ಪಂದೆವೊಗದ ಮುದ್ದುಗೆಯ್ವಕ್ಕೆ . . . ಸಹಾಯನಾಗಿಯುಂ (ಲೀಲಾವ. ೩-೨೦ ವ); ಮಂದಾನಿಳಂ ಸೊಕಮಂ ಮಾಡುತೆ ತೀಡೆ ನೀಡುಮೆಸೆವತ್ತಾಸ್ಥಾನಭೂಮಂಡಳಂ (ಪಾರ್ಶ್ವಪು. ೧೨-೧೭). ೨. ಶುಕ ನೀಂ ಸೊಕಮೇ ರಜನಿ[illegible], ಸ್ವಪಿಂದಮೆ ಬಂದಿರೇ (ಅಜಿಪು. ೬-೧೪).

**ಸೊಗವಾಗು** = ಸುಖವಾಗಿರು; ಸಂತೋಷದಿಂದ ಕೂಡಿರು: ಎಲ್ಲರ್ ಸೊಗವಾಗೆ ನಂಬುಗೆಗಪೋಹಂ ಬಾರದಂತಾಳೆ ತಾಂ ಬಲುಭಾಗ್ಯಂ ದೊರೆಗಪ್ಪುದ್ಕೆ (ಸೋಮೇಶ. ೫೭).

[< ಸಂ. ಸುಖ ./ IP ಈ ಶಬ್ದವು ದೇಶ್ಯಮೂಲವಾಗಿರುವ ಸಾಧ್ಯತೆಯೂ ಇದೆ]

**ಸೊಗಂಬಡಿಸು, ಸೊಗವಡಿಸು (ಕ್ರಿ).** ಸಂತೋಷಪಡಿಸು; ಹಿಗ್ಗುವಂತೆ ಮಾಡು: ಮನಮಂ ಸೋಲಿಸಿ ಸೊರಗಿಸಿ ಸೊರ್ಕೇಱಿಸಿ ಸೊಗಂಬಡಿಸಿ (ಚಿಕವಂ. ೧೬೦-೯). **ಸೊಗವಡಿಸು:** ಕೊಳಲ ದನಿಯಿಂದ ಗೋವಳಗುವರಿಯರ . . . ಕೆಳೆಯೊಡಂಬಡ ರಾಸಕೇಳಿಯೊಳು ಸೊಗವಡಿಸಿ (ಗೀತಗೋ. ೩-೫). [ಸೊಗಂಬಡು + - ಇಸು]

**ಸೊಗಂಬಡು, ಸೊಗಪಡು, ಸೊಗವಡು (ಕ್ರಿ).** ಹಿಗ್ಗು; ಆನಂದಿಸು; ಸುಖಿಸು: ಮಣಿವ ಮನಗರಗುವ . . . ಸೊರ್ಕುವ ಸೊಗಂಬಡುವ ಭಕ್ತರನುಗೆಯ್ತಂಗಳಿಂ ಭಕ್ತಿಮಯಮುಂ (ಚಿಕವಂ. ೧೨೨-೧೧). **ಸೊಗಪಡು:** ಅರಿವರಿತು ತೀರದಿಹ ಸೊಗಪಟ್ಟು ತೀರದಿಹ ಅಳಲ ತಾಳುತ (ಮಲದೇ. ೧೧-೩). **ಸೊಗವಡು:** ಶ್ರೀಶನ ಪಾದಪದ್ಮವ ಕೂರ್ತು ಕೃತಿವೇಳು ನಾ ಸೊಗವಟ್ಟು ಲಾಲಿಸುವೆ (ಮೋಹತ. ೩೭-೧); ಸೊಗವಟ್ಟು ಸೊರಗಿ ಮಲರ್ಗಣ್ ಮುಗಿವನ್ನಂ ಬನ್ನವಡಿಸಿ . . . ಬಗೆವಂದುದು ಬಿರುದು ಬೊಜಗನಂತೆ ಸಮೀರಂ (ಚಿಕವಿ. ೬-೩೫). [ಸೊಗ + ಪಡು]

**ಸೊಗಂಬಡೆ, ಸೊಕವಡೆ (ಕ್ರಿ).** ೧. = ಸೊಗಂಬಡು: ಶಿವನೊಳಪೊಕ್ಕು ಮಿಕ್ಕಲರ್ದು ಸೊರ್ಕಿ ಸೊಗಂಬಡೆದು . . . ಸುಖಿಮಿರ್ದನೊಱಲ್ಲು ವೃಷಾಧಿನಾಯಕಂ (ವೃಷವಿ. ೨೩-೮). ೨. ಸಂತೋಷದಿಂದ ಅರಳು ,— ಅಗಲವಾಗು: ಸಂಚು ನೋಟದಿಂ ಮಿಸುಪ ಮೊಗಂ ಸೊಗಂಬಡೆಯೆ (ಚಿಕವಿ. ೬-೫೩). **ಸೊಕವಡೆ:** ೧. ವಿಕಸಿತವದನಾಂಭೋರುಹಭರಿತ ಸನ್ಮಕರಂದಜಲವ ಚೇತ್ಕರಿಸಿ ಸೊಕವಡೆದಲರ್ವಕ್ಕಿ ಗಳಂತೆ ನೀಲಾಳಕವಿರ್ದುದವಳ ಮಸ್ತಕದಿ (ಮೋಹತ. ೨೩-೨೮). [ಸೊಗ + ಪಡೆ]

**ಸೊಗಂಬರಿ (ಕ್ರಿ).** ಸಂತೋಷದಿಂದ ಸಾಗು, —ಮುನ್ನಡೆ: ಆಕೆ ಪೆರ್ಚುತ ಸೊಗಂಬರಿದು ತಮ್ಮಿರ್ವರನಿತುಮಂ ಕರೆಕರೆದು ಪಸುಗೆ ತೊಡಗಿದಳಮಿತಸಂಭ್ರಮದಿ! (ಶ್ರೀರಾಮಾ. ೯೦-೩೮೮). [ಸೊಗ + ಪರಿ]

**ಸೊಗಗಂಬನಿ (ನಾ).** ಸಂತೋಷದಿಂದ ಬರುವ ಕಣ್ಣೀರು; ಆನಂದಬಾಷ್ಪ: ಪೊಗಟ್ಟನೊಲ್ದು ಕಳೆವಂ ಸೊಗಗಂಬನಿಯಂ ಮನೋಬ್ಜದೊಳ್ಪುಪ್ಪುರಿಗೊಂಡ ಭಕ್ತಿಭರನೋಹಿಲಂ (ಉದ್ಭಟ. ೧೧-೬೪). [ಸೊಗ + ಕಂಬನಿ (< ಕಣ್ಪನಿ)]

**ಸೊಗಡಗಿಲು (ನಾ).** ಅಗಿಲುಮರದಲ್ಲಿ ಒಂದು ಬಗೆ; ಅತ್ಯಂತ ಸುಗಂಧವುಳ್ಳ ಅಗಿಲುಮರ: ಬನ್ನಿ ಹೊನ್ನೆ ಸೊಗಡಗಿಲು . . . ತುಂಬುರಿಂಗಾಲಯವೆನಿಪ್ಪ ನಾನಾ ಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಹಚಿಕಾ. ೫-೧೫).

[ಸೊಗಡು (< ಸೊವಡು) + ಅಗಿಲು (< ಅಗಿಲ್)]

**ಸೊಗಡಿಸು (ಕ್ರಿ).** ಉದಾಸೀನ ಮಾಡು; ಆಲಸ್ಯ ತೋರು; ಹಿಂಜರಿ: ಸೊಗಸಿ ಶಿವನ ಮಂತ್ರವನ್ನು ನೆಗಳುವದಕೆಯೆನ್ನ ಜಿಹ್ವೆ ಸೊಗಡಿಸುವುದು ಕೀಳುನುಡಿಯೆ ಒಲಿವುದು (ಸುಸಾರ. ೫೨-೨); ಅವಳೊಳ್ ಮುನ್ನು ತನಗೊಗೆದು ಪೊಸಜವ್ವನದೊಳೊಪ್ಪುವ ಮಿನಾಕ್ಷಿಯರ ಕೂಡಿದಂ ಸುತಯರಿವರೆಂದು ತಾನಂಜಲಿಲ್ಲ ಸೊಗಡಿಸಲಿಲ್ಲ (ಮಲ್ಲಚ. ೯-೨೭). [ಸೊಗಡು (< ಸೊವಡು) + - ಇಸು]

**ಸೊಗಡು** 'ಸೊವಡು' ನೋ.

**ಸೊಗಡುಗಂಪು (ನಾ).** ೧. ಸುವಾಸನೆ; ನರುಗಂಪು: ಆರು ನೀನೆಲೆ ಹರುಷ ಮೂರುತಿ . . . ಸೊಗಡುಗಂಪವನು ಸುರಿಯುತ, ಹಸಿದ ಜೇನಿನ ಹೊರೆಯ ಕಳ್ಗರ ಸೊಕ್ಕಿಸಿಡುವ ಗುಲಾಬಿಯೋ! (೧ಂಗೀತ. ೧೩-೯). ೨. ಮಾದಕವಾದ ವಾಸನೆ: ಮೊದವಿ ಮೂಡಿದ ಮೊಗಂ ಸೊಗಡುಗಂಪೊಗದ ಮೈ . . . ಕುಡಿವರಿದ ಲಚ್ಚೆ ಸಿಂಗರಕೆ ಮಿಗಿಲಾಯ್ತವನಿಸುತೆಗೆ ಋತುಮತಿಯಾಗಲು (ಜೈಮಿಭಾ. ೧೮-೨೫).

[ಸೊಗಡು (< ಸೊವಡು) + ಕಂಪು]

**ಸೊಗಡುಗೂಡು (ಕ್ರಿ).** ಮಾದಕವಾದ ವಾಸನೆಯಿಂದ ಕೂಡಿರು: ಬಡವಿಡಿದ ವಿಮಲಾಂಗ ಸೊಗಡುಗೂಡಿದ ಕಕ್ಷ . . . ಎಡೆವಱಿತವಿಲ್ಲದಿಹ ಬಾಯಿದೆಱೆಯಿಂದ ಗರ್ಭಿಣಿ ಮಿಗೆ ವಿರಾಜಿಸಿದಳು (ವಿಕೋಪು. ೬-೩೯). [ಸೊಗಡು (< ಸೊವಡು) + ಕೂಡು]

**ಸೊಗಡುಗೊಳ್ಳು (ಕ್ರಿ).** ಆಲಸ್ಯಗೊಳ್ಳು; ದಣಿ: ಶ್ರೀತಳೋದರಿಯಯಾತ್ಮದಿ ಸೊಗಡುಗೊಂಡು ಸೊಗಸಂದಪ್ಪಿಯರುಮರುಹಿನಿಂ ಚೇತನಂಗುಂದಿ ಭ್ರಮಣೆಯೊಳೊಂದಿ ಮಲಗುತ್ತೆ (ನವಮೋ. ೧೫-೬). [ಸೊಗಡು (< ಸೊವಡು) + ಕೊಳ್ಳು (< ಕೊಳ್)]

**ಸೊಗಡುತಗಚೆ, ಸೊಗಡುತಗಸಿ (ನಾ).** ಒಂದು ಬಗೆಯ ಸಸ್ಯ: ಮಲೆಯಾವರಿಕೆ, ಸೊಗಡುತಗಚೆ (ವ್ಯಜಿಗಿ. ೭೦-೧೮೪). **ಸೊಗಡುತಗಸಿ:** "ದೊಡ್ಡ ತಗಚೆ, ಸೊಗಡುತಗಸಿ" (ಸಸ್ಯನಿ. ೩೦). [ಸೊಗಡು (< ಸೊವಡು) + ತಗಚೆ]

**ಸೊಗಡುತಗಸಿ** 'ಸೊಗಡುತಗಚೆ' ನೋ.

**ಸೊಗಡುದೋರು (ಕ್ರಿ).** ಅನಾದರ ಮಾಡು; ಹೀಗಳೆ: ದುಗುಡದಿಂ ಗುರುಸೂನು ಕೌರವೇಶ್ವರನ ಸಿರಿ ಸೊಗಡುದೋರಿತ್ತೆನುತ ಪಾಳ್ಗಕಂ ಸರಿಯೆ (ತುರಂಗ. ೫೮-೭೧).

[ಸೊಗಡು (< ಸೊವಡು) + ತೋರು (< ತೋಱು)]

**ಸೊಗಡೇಱು (ಕ್ರಿ).** ಮತ್ತು ಬರು; ಅಮಲೇರು: ಏರಂಡಮಂ ಮೆಯ್ದು ಸೊಗಡೇಱಿ ಸತ್ತೊಂದು ಹೋರಿ ಬಿದ್ದಿರಲು (ಗುರುಬಾ. ೮-೪೦).

[ಸೊಗಡು (< ಸೊವಡು) + ಏಱು (< ಏಱ್)]

**ಸೊಗದಾಣ (ನಾ).** ಸುಖದ ನೆಲೆ; ಸಂತೋಷದ ಆಕರ: ಸರಸ ಬೊಜಂಗರ ಸೊಗದಾಣಮೆನಿಸುತೆ ಕರಮೆಸೆದುದು ಸೂಳೆಗೇರಿ (ಇಚಿಸಾಂ. ೯-೩೭). [ಸೊಗ + ತಾಣ]

**ಸೊಗದೆ (ನಾ).** ಒಂದು ಬಗೆಯ ಸಸ್ಯ ಮತ್ತು ಔಷಧೀಯಗುಣವುಳ್ಳ, ಸುವಾಸನಾಯುಕ್ತವಾದ ಅದರ ಬೇರು; ಅಶ್ವಗಂಧಿ(?): ಕೋಳಿಕುಟುಮನ ಗೆಣಸು, ಇಲಿಕಿವಿಯ ಬೇರು, ಸೊಗದೆಬೇರು, ಹಾವುಮೆಕ್ಕೆಯ ಬೇರು ಇವಿಷ್ಟನ್ನು ಸಮಾಂಶವಾಗಿ ನೀರಲ್ಲಿ ಅರೆದು ಲೇಪಿಸಲು ಶ್ಲೇಷ್ಮದಿಂದ ಹುಟ್ಟಿದ ಉಪದಂಶ ಶಮನವಹುದು (ವೈದ್ಯಸಾ. II, ೧೬೭); ಸೊಗದೆ:- ಈ ಬೇರಂ ಹಾಲಲ್ಲಿ ಅರೆದು . . . ತೆಗೆದುಕೊಳ್ಳೆ ದಿನ ೧೫ಕ್ಕೆ ಸ್ತನವೃದ್ಧಿಯಾಗುವುದು (ವಿಷ್ಣವಿ. ೭). [< ಸಂ. ಸುಗಂಧಿ?]

**ಸೊಗದೋಱು (ಕ್ರಿ).** ಸುಖವನ್ನುಂಟುಮಾಡು: ಕ್ಷಣಮಾತ್ರಂ ನಿಜನಾಮ ನಾಲಗೆಗೆ ಬಂದಂಗಕ್ಕುಮಿಂದ್ರತ್ವ ಮತ್ತಣುಮಾತ್ರಂ ಸೊಗದೋಱಿ ಪೋಕುಮದಱಿಂ ನಾನೊಲ್ಲೆನ್ನೆ ಶ್ರೀಯನು (ಶಾಂತೀಚ. ೧೧-೧೧ ವೃತ್ತ-೨). [ಸೊಗ + ತೋಱು]

**ಸೊಗಪಡು** 'ಸೊಗಂಬಡು' ನೋ.

**ಸೊಗಬಾಳ್** 'ಸೊಗವಾಟ್' ನೋ.

**ಸೊಗಮಿರ್, ಸುಕಮಿರ್, ಸೊಕಮಿರು** (ಕ್ರಿ). ಸಂತೋಷದಿಂದಿರು; ಸುಖವಾಗಿರು: ಅವರಿಂದೆ ಸತ್ಕೃತನಾಗಿ ಮುಂದಳರ್ದು ರಾಜಧಾನಿಯಂ ಸೇರ್ದು ಸೊಗಮಿರ್ಪಾಗಳ್ (ಮರಾಚ. ೬-೬೬ ವ). **ಸುಕಮಿರ್:** ಕೂಸಿಂಗೆ ದುರ್ಯೋಧನನೆಂದು ಪೆಸರನಿಟ್ಟು . . . ಪರಕೆಯಂ ಕೊಟ್ಟು ಸುಕಮಿರ್ಪನ್ನೆಗಂ (ಪಂಪಭಾ. ೧-೧೩೪); ರಾಗದಿನೆನ್ನೊಳ್ ಸುಕಮಿರ್ಪುದು (ಪಂಪಭಾ. ೮-೬೬). **ಸೊಕಮಿರು:** ವರದುರ್ಗಿ ಪಿಷ್ಟಮಯಲಿಂಗಮಂ ತಾಳ್ದು ಭಾಸುರಪೂಜೆಗೆಯ್ದು ನಿಜಪದವಿಯಂ ಪಡೆದು ಸೊ[ಪಾಠಾಂ. ಸು]ಕಮಿರುತಸೆದಳು (ಆರಾಚ. ೧-೪-೨೫). [ಸೊಗ + ಇರ್]

**ಸೊಗಮುಣ್** (ಕ್ರಿ). ಸಂತೋಷವನ್ನು ಅನುಭವಿಸು: ಆ ಸೌಮನಸ ವಿಮಾನದೊಳು ಲೇಸಾಗಿ ಇಪ್ಪತ್ತೊಂಬತ್ತುಸಾಗರ ತಾ ಸೊಗಮುಂಡು (ಶಾಂತೀಚ. ೫-೩). [ಸೊಗ + ಉಣ್]

**ಸೊಗಯಿಸು, ಸೊಗಸು₁** (ಕ್ರಿ). ೧. ಅಂದವಾಗಿ ಕಾಣು; ಒಪ್ಪು ; ಶೋಭಿಸು: ''ಸೊಗಯಿಸು - ಶೋಭಾಯಾಂ'' (ಶಮಧಾ); ನೆಗಳ್ದಿರ್ದ ಕನ್ನಡಂಗಳೊಳಗಣಿತಗುಣ ವಿದಿತಸಂಸ್ಕೃತೋಕ್ತಕ್ರಮಮಂ ಬಗೆದೊಂದುಮಾಡಿ ಪೇಳ್ದೊಡೆ ಸೊಗಯಿಸುಗುಂ ಕಾವ್ಯಬಂಧಂ (ಕವಿರಾ. ೧-೫೭); ಸೊಗಯಿಸಿ ಬಂದ ಮಾಮರನ ತಳ್ತಲೆವಳ್ಳಿಯ ಪೂತ ಜಾತಿಸಂಪಗೆಯ . . . ನೋೞ್ಪೊಡಾವ ಬೆಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಪಂಪಭಾ. ೪-೨೮); ಕಂದಂಗಳ್ . . . ತನಿರಸದುಕ್ಕಂದಂಗಳ್ ಸೊಗಯಿಸಿರ್ಪುವೀ ಸತ್ಕೃತಿಯೊಳ್ (ಗಿರಿಕ. ೧-೧೨). ೨. ಸಂತೋಷಗೊಳ್ಳು; ಹಿಗ್ಗು: ಪಲತೆಱದ ಪುಷ್ಪದಿಂ ನಾನಾಪತ್ರಗಳಿಂ ಪೂಜಿಸಿ ನಿಚ್ಚಂ ಸೊಗಯಿಸಿ ಮೆಯ್ಯಿಕ್ಕಿ ನಾಡೆ ಬಡವಾದಪರೋ (ಧರ್ಮಾಮೃ. ೧-೧೧೭). ೩. ಸುಖವನ್ನುಂಟುಮಾಡು; ಆನಂದಪಡಿಸು: ಸೊಗಯಿಸುವ ಕಬ್ಬಮಂ ಕಬ್ಬಿಗರಲ್ಲದೆ ಮೆಚ್ಚರುೞಿದರೇನಱಿವರ (ಕಬ್ಬಿಗಕಾ. ೮). ೪. ಇಷ್ಟವಾಗು; ರುಚಿಸು: ಜ್ವರಿತಂಗೆ ದುಗ್ಧಪಾನಂ ಪಿಂದುಂ ಸೊಗಯಿಸದ ತೆಱದೆ ಮಿಥ್ಯಾತ್ವಮಹಾಜ್ವರಿತಂಗೆ ಸುಧಾಪ್ರತಿಮಂ ಪರಮಜಿನೇಂದ್ರಾಗಮೋಕ್ತಿ ಸೊಗಯಿಸದೆಂತುಂ (ಸಮಪ. ೩-೬೫); ಸೊಗಯಿಸಲ್ ತೊಡಗಿತ್ತು ಪರಿಮಳಂ ನಾಸಿಕಕೆ ಬಗೆಗೊಳಿಸತೊಡಗಿತ್ತು ಮಿಗೆ ರೂಪು ಲೋಚನಕೆ (ನಂಬಿರ. ೩-೯). ೫. ನೆಮ್ಮದಿಯಿಂದಿರು; ಸುಖಕರವಾಗಿರು: ಮನೆಗೆ ಅವಳೇ ರಾಣಿಯಾದರೂ ಹೆಂಡತಿ ಚನ್ನಿ ಇದ್ದುದರಿಂದ ಅವಳ ಬಾಳು ಅಷ್ಟು ಸೊಗಯಿಸಲಿಲ್ಲ (ಕುಡಿಕೂ. ೧೬೩). **ಸೊಗಸು₁:** ೧. ನವಕೇಯೂರಂ ಸೊಗಸಿತು ನಭಶ್ಚರೇಂದ್ರನ ತೋಳೊಳ್ (ಶಾಂತಿಪು. ೩-೩೫); ಕೋಗಿಲೆಗಳ ಕಹಳೆಯನವಿಳಪಕ್ಷಿರವವಾದ್ಯದಿಂ ಸೊಗಸಿ ವನಲಕ್ಷ್ಮಿ ಗುರುವರನನಿದಿರ್ಗೊಂಡಪಳೊ (ಪದ್ಮರಾ. ೮-೨೩); ಸುಕೋದರರ ಕೋಲ ಮೊನೆಯಲಿ ಕೊಂಡು ನೆತ್ತರಗೂಳನುಂಬವೊಲಖಿಳರಾಜ್ಯದ ಮೇಲೆ ಸೊಗಸುವ ಸಿರಿಯನೊಲ್ಲೆನು (ಕುಮ್ಮಾಭೀ. ೩-೪೨). ೨. ಮಗನೆ ನಿನ್ನಯ ಮನದ ನಿಷ್ಠೆಗೆ ಸೊಗಸಿದೆನು (ಕುಮ್ಮಾಅ. ೪-೪೭). ೪. ಕಳ್ಳಂಗೆ ಬೆಳ್ದಿಂಗಳ್ ಸೊಗಸದು (ಧರ್ಮಾಮೃ. ೨-೧೨೪); ನಿನಗರೋಚಕವೆಮ್ಮ ಮಾತುಗಳನಿಬರಿಗೆ ಸೊಗಸುವುದು (ಕುಮ್ಮಾಭೀ. ೧೦-೩೦); ಜ್ಞಾನವೇ ಅಧಿಕವೆಂಬ ದಡ್ಡವೇದಾಂತಿಗಳ ಮಾತು ಸೊಗಸದಯ್ಯ ಎನಗೆ (ಅಮಿಂದೇ. ೧೧೧-೫೪). ೬. ಬಯಸು; ಇಷ್ಟಪಡು: ಸೊಗಸಿದೆನೆ ನಾ ನನ್ನ ಕೀರ್ತಿಗೆ (ಬಸಪು. ೪೫-೧೯); ದೂರದಲಿ ರಾಜೀವಗಂಧಸಮೀರಣನ ಸಂಭಾವನೆಗೆ ಸೊಗಸಿದಳು ಸತಿಯಾಕೆಯ ವಚಸ್ಸಿನಲಿ ತಾವರೆಯ ತಹೆನು (ಕುಮ್ಮಾಅ. ೧೦-೧೫). ೭. ರುಚಿಕಟ್ಟಾಗಿರು; ಸವಿಯಾಗಿರು: ಸೊಗಸುವ ಬೋನಮಂ ಸಮೆವ ಕಾರ್ಯದೊಳಂ ಕಲಂ . . . ಮಾದೇವಿಯಪ್ಪೆಸಿದಳ್ (ಬಾಧಪು. ೬-೬೪). ೮. ಮಧುರಧ್ವನಿಯಿಂದ ಕೂಡಿರು; ಇಂಪಾಗಿರು: ಗಿಳಿಯಂತ ಸೊಗಸಿ ನುಡಿವಳೆ (ಛಂದೋಂಬು. ೧-೪೯ ವ ಅಡಿಪದ್ಯ).

[ಸೊಗ + - ಇಸು₃ / ತುಳು. ಸೊಗಸು, ಸೊಗಪು ; ತೆಲು. ಸೊಗಯಿಂಚು, ಸೊಗಿಯು]

**ಸೊಗಪಡಿಸು** 'ಸೊಗಂಬಡಿಸು' ನೋ.

**ಸೊಗಪಡು** 'ಸೊಗಂಬಡು' ನೋ.

**ಸೊಗವಾಳು** 'ಸೊಗವಾಟ್' ನೋ.

**ಸೊಗವಾಳ್ತೆ** (ನಾ). ಸುಖವಾದ ಬದುಕು; ಸಂತೋಷವಾದ ಜೀವನ: ಆರಿಂದಲಾದೊಡಂ ಕೇಡಡಸದೊಲ್ ಸೊಗವಾಳ್ತೆಗೆ . . . ನಾಮೆಳ್ಪರಿಂ ನಡೆವುದುತ್ತಮಂ (ಶ್ರೀರಾಮಾ. ೫೭೩-೫೮೪). [ಸೊಗ + ಬಾಳ್ತೆ (< ಬಾಳ್ತೆ)]

**ಸೊಗವಾಟ್, ಸುಕಂಬಾಟ್, ಸುಕಬಾಳು, ಸೊಗಬಾಳ್, ಸೊಗವಾಳು** (ಕ್ರಿ). ಸಂತೋಷದಿಂದ ಬದುಕು; ಸುಖವಾಗಿ ಜೀವಿಸು: ಚಿಕದೇವನೃಪನಂದು ಮಿಗೆ ಪೆರ್ಜಸಮನೊಂದಿ ಸೊಗವಾಟ್ಟಂ (ಅಪ್ರತಿ. ೧-೨೧); ನೀನುಂ ಮಡದಿ ಮಕ್ಕಳ್ವೆರಸು ಕಟ್ಟೆಸಿರಿಯೊಳ್ ನೂಱುಂ ಬರಿಸಂ ಸೊಗವಾಟ್ (ಚಿಕವಂ. ೪೮-೧೫). **ಸುಕಂಬಾಟ್:** ಶ್ರೀನೊಳಂಬಮ್ಮಾಧಿರಾಜಂ ಸುಕಂಬಾಟುತ್ತಿರೆ (ಎಕ. X, ಮುಳಬಾ. ೨೪೮-೨; ಸು. 860?). **ಸುಕಬಾಳು** : ಸಕಲಭೂಮಿಪಾಲಕನಾಗಿ ಬಹುಶತ್ರುನಿಕರವ ಜಯಿಸಿ ಸಂತಸದೆ . . . ಸುಕಬಾಳುವನು (ಕಂಸವಿ. ೪-೫೭). **ಸೊಗಬಾಳ್** : ಅಂದಮಿಲ್ಲದ ಗೃಹಂ ಗೃಹದಿ ಸೊಗಬಾಳ್ವ ಬಹುಮಂದಿಯಿಲ್ಲದ ಪುರಂ . . . ಇಲ್ಲದಾ ಠಾವಿಲ್ಲಮಾ ನಾಡೊಳು (ಭರಚ. ೧-೬). **ಸೊಗವಾಳು** : ದ್ವಿತೀಯಾವತಾರದ ಶ್ರೀದೇವಿ ನೀನು ಓರಂತೆ ಸೊಗವಾಳುವುದು (ಮೋಹತ. ೧೩-೮೨); ಲಕ್ಷ್ಮೀಮತಿಯ ಕಲ್ಯಾಣುರುತರದ ವೈಭವ ವನೊರೆವೆನು ಪರಮಪುರುಷರು ಕೇಳಿ ಹರುಷವ ತಾಳಿ ಸೊಗವಾಳಿ (ನಾಗಪ. ೨೭ ಸೂಚನೆ); ಚಂದ್ರಾರ್ಕತಾರೆಗಳುಳ್ಳನ್ನೆಗಂ ಸೊಗವಾಳು (ಕರ್ಣಾಕಾ. ೨೨೧). [ಸೊಗ + ಬಾಟ್₁]

**ಸೊಗಸಿಕೆ** (ನಾ). ಅಂದ; ಚೆಲುವು: ದೆಯ್ಯಬಲಂ ಸೊಗಸಿಕೆ[ಪಾಠಾಂ. ಯಿಕೆ, ಯಿಸೆ] ಮುಂಗೆಯ್ಯ ಬಲಂ ಬಾಳಕಾಲದೊಳ್ ತೊಡರ್ದ ಪೊಡರ್ದಯ್ಯರ ಬಾಲಕ್ರಿಯೆಯುಂ ಮುಯ್ಯಂ ನೋಡಿಸಿತು ತಾಯುಮಂ ತಂದೆಯುಮಂ (ಪಂಪಭಾ. ೨-೧೧); ತನ್ನಲಿ ಪಾಪಕರ್ಮದಲಿ ನಗುವರನ್ನರನುತ್ತ ಮನದಲಿ ಸೊಗಸಿಕೆಯ ಬಿಡೆ ಲಜ್ಜೆ ತಾನತಿ ದುಗುಡ ಮುಖದಲಿ ಪರರ ಯಾಚಿಸದಿಹುದೆ ಸಿರಿ (ನಿಭಾಗ. ೧೧-೨೬-೪೧). [ಸೊಗಸು₂ + - ಇಕೆ]

**ಸೊಗಸಿತು** (ನಾ). ಅಂದವಾಗಿರುವುದು; ಚೆನ್ನಾದುದು: ಒಳ್ಪಿತಂ ಸೊಗಸಿತಂ ಶಿವನ ಭಕ್ತರ್ಗೀವಂ (೫೪ರ. ದೇ. ೪೯-೯). [< ಸೊಗಸು₁]

**ಸೊಗಸು₁** 'ಸೊಗಯಿಸು' ನೋ.

**ಸೊಗಸು₂** (ನಾ). ೧. ಚೆಲುವು; ಅಂದ: ಮೊಗಮಬ್ಜಂ . . . ಅಂಘ್ರಿ ಪ್ರವಾಳಂ ಸೊಗಸಿಂ ತಾವಾಗೆ ತನ್ನಂದನವ ಘನವನಸ್ತ್ರೀಗೆ ರೂಪಾಗೆ ತೋರ್ಕುಂ (ಗಿರಿಕ. ೨-೬೨); ಎಲ್ಲರಕ್ಷಿಗೆ ಸೊಗಸಂ ತುಳುಂಕುತಮವಳ್ ನಡೆತಂದಳ್ (ನಳಚಂ. ೩.೫೯); ಅಲರ್ದ ಬಯಲ್ದಾವರೆಗಳ್ . . . ಸತ್ತಿಗೆಗಳ ತೆಱದಿಂ ಕಣ್ಗೆ ಸೊಗಸನೀವುವವೆಂದುಂ (ಬಾಧಪು. ೧-೮೮). ೨. ವಿಲಾಸ; ಒನಪು: ಮಾಯಾಸತಿಯ ಸೊಬಗಿನ ಸೊಗಸು [ಪಾಠಾಂ. ಡು ] ಸೋಂಕದ ಸಕಲ ಸೌಮ್ಯಜ್ಞಾನಿಗಳ ಮತಿಯ . . . ದೇವರ ದೇವನಿದ್ದನು (ತೊರರಾ. ೧-೨-೧). ೩. ಸಂತೋಷ; ಸುಖ: ಸಹಜಾಮೋದಂ ಸೊಗಸನೀಯೆ ನೀಡಾಗದೆ ಗಾಢಾಲಿಂಗನಕ್ಕಾತುರಿಸುವಲ್ಲಿ (ಗಿರಿಕ. ೩-೨೭ ವ); ಜಗಕತಿಶಯವಹ ಮೋಹವಾರಿಧಿಯಲಿ ಸೊಗಸಿನಲೋಲಾಡಿದರು (ಕಂಸವಿ. ೧೦-೫೪); ಬಹು ಸೊಗಸಿನಿಂದ ಕಾಲ ಕಳೆದೆನು (ಮುಂಬಯಿ. ೪-೨). ೪. ಮೆಚ್ಚುಗೆಗೆ ಪಾತ್ರವಾದುದು; ಇಷ್ಟವಾದುದು: ತ್ರಿಕಟುಕದ ಕಷ್ಟಾಯವಿದು ಬಾಲಕರ ಸೊಗಸೇ (ಕುಮ್ಮಾಕ. ೧೨-೧೮). ೫. ಒಲವು; ಪ್ರೀತಿ: ಚಾಪಲನೇತ್ರೆಯೊರ್ವಳುಪವಲ್ಲಭನೊಳ್ ಸೊಗಸುಣ್ಗೆ ಕೂಡಿದಳ್ (ಉದ್ಧಟ. ೧೦-೧೦೭); ಅರಸಗೆ ಸೊಗಸು ಬನದಲಿ ಬೞಿಯ ಮನವೀ ಕದನಕೇಳಿಯಲಿ (ಕುಮ್ಮಾಭೀ. ೭-೧೨). ೬. ರುಚಿ; ಸವಿ: ಸಣ್ಣಕ್ಕಿಯೋಗರವು ಸೊಗಸಾದ ಕೆನೆವೊಸರು ಬಣ್ಣಿಸುತ ನಾನುಣಿಸೆ ಒಲ್ಲದಾಯ್ತು (ಪುರಂದ.೧-೮೯-೪). ೭. ಇಂಪು; ಹಿತ: ಹಾಡಿದರು ಚೆನ್ನಾಯ್ತು ಸೊಬಗಾಯ್ತು ಸೊಗಸಾಯ್ತು ಲೇಸು ಲೇಸಿನ್ನೊಮ್ಮೆಯೆಂದು ಕೇಳ್ವಂತೆ (ಭರಚ. ೧-೮೪). ೮. ನೆಮ್ಮದಿ; ಸ್ವಾಸ್ಥ್ಯ: ಮನಸ್ಸಿನಲ್ಲಿ ಸೊಗಸು ಇಲ್ಲವಯ್ಯಾ (ಕುಹಿಂ. ೨); ವಾಸಂತಿಯ ಮನಸ್ಸಿಗೆ ಸೊಗಸಿಲ್ಲ (ತೇವೊಡ. ೧೧೧). ೯. ಆಧಿಕ್ಯ; ಹೆಚ್ಚಳ: ನೆರೆದಿರ್ದ ಹರನ ಸಭೆ ಸುಖದ ಸೊಗಸಿನ ಜೊಮ್ಮುವಿಡಿದು ಮೆಱೆದಿರಲು (ಸಿದ್ಧರಾ. ೧-೨೩); ಜಗದ ಹುಯ್ಯಲು ಜಡಿಯಲಭ್ರದಲಗಿದು ಕೌರವಸೇನೆ ಹರುಷದ ಸೊಗಸಿನಲಿ ಪ್ಯೆಮುಱಿಯೆ (ಕುಮ್ಮಾದ್ರೋ. ೧೯-೩೩). ೧೦. ಹುರುಡು; ಮೇಲಾಟ; ಸ್ಪರ್ಧೆ(?): ತೆಗೆವೆನೇ ಸಾರಿಗಳ . . . ಸೊಗಸು ಬೀಯದು ರವಣವಿಲ್ಲದ ಬೆಗಡು ನೋಯದು

ಕ್ಷತ್ರಧರ್ಮದ ತಗಹು ಸಾಯದು ನಿನಗೆನುತ ಗಹಗಹಿಸಿದನು ಶಕುನಿ (ಕುವ್ಯಾಸ. ೧೪-೨).
[< ಸೊಗಸು$_1$./ ತಮಿ. ಚೊಕುಚು; ತುಳು. ಸೊಗಸ್, ಸೊಗಸು; ತೆಲು. ಸೊಗಸು]

**ಸೊಗಸುಕಾಱ** 'ಸೊಗಸುಗಾಱ' ನೋ.

**ಸೊಗಸುಗಡಲ್** (ನಾ). (ಆಲಂ) ಇಂಗಡಲು; ಕ್ಷೀರಸಾಗರ: ಸೊಗಸುಗಡಲೊಳು ದೇವಕರಿ ಪೂರ್ವದಿಗಧೀಶನೆಡೆಗೆಯ್ದುವಂತೆ ಅಗಣಿತಮಹಿಮನ ಬಳಿಗಾವನಕರಿ ಮಿಗೆ ಹರುಷದಿ ಬಂದುದಾಗ (ಶ್ರೀಪಾಲ. ೧೩-೧೧). [ಸೊಗಸು$_2$ + ಕಡಲ್$_2$]

**ಸೊಗಸುಗಾತಿ** (ನಾ). ಅಂದಗಾತಿ; ಚೆಲುವೆ: ಹದಿನಾಱುಸಾವಿರ ಸೊಗಸುಗಾತಿಯವರವರ ಮೋಹದ ಬಲೆಗೆ ವಿಟನಾಗಿ . . . ಮೆಱೆದು (ಹರಿಸಾ. ೩೯); ಒಗುಮಿಗೆ ಹರುಷದ ಸೊಗಸುಗಾತಿಯರಾಗ ನಗುತ ಕೋಲಾಟಕ್ಕೆದಿದರು (ಕಂಸವಿ. ೨೧-೧೦೮); ಕಾಡಿನಲ್ಲಿ ಮೃಗದಂತೆ ಏನನು ಅರಿಯದ ಇವನೆಲ್ಲಿ, ನೆರೆ ಸೊಗಸುಗಾತಿಯಾದ ಈ ಗಂಧರ್ವರಾಜನ ಮಗಳೆಲ್ಲಿ (ವಚಕಾ. ೨೯). [ಸೊಗಸು$_2$ + - ಕಾತ್ತಿ]

**ಸೊಗಸುಗಾರ** 'ಸೊಗಸುಗಾಱ' ನೋ.

**ಸೊಗಸುಗಾರಿಕೆ** (ನಾ). ಸುಖ; ಸಂತೋಷ: ನನ್ನ ಮನ ಸಂತೈಸಲೆಂದು ಬಗೆವವಳು ನೀನು ನಾನದನೆ ಬಯಸುತಿಹ ಸೊಗಸುಗಾರಿಕೆಯವನೆ ನಾನೆದೆಯ ಕಟುಕನೇನು? (ಗರಿ. ೭೦-೭). [ಸೊಗಸುಗಾರ (< ಸೊಗಸುಗಾಱ) + - ಇಕೆ]

**ಸೊಗಸುಗಾರ್ತಿ** (ನಾ). = ಸೊಗಸುಗಾತಿ: ಸೊಗಸುಗಾರ್ತಿಯರೊಡನೆ ಬೇಸಗೆಗಳೆವ ಭೋಗಿಜನವಾ ವನದೊಳೆಸೆದುದು (ಪದ್ಮರಾ. ೮-೨೭); ಬರುತಿರ್ದರತಿ ಸೊಗಸುಗಾರ್ತಿಯರ್ ಮದನಶರಮೂರ್ತಿಯರ್ ತವಕದಿಂದೆ (ಚಿಬಪು. ೩೭-೫೦).
[ಸೊಗಸುಗಾಱ + - ತಿ$_1$ (< - ಇತ್ತಿ)]

**ಸೊಗಸುಗಾಱ, ಸೊಗಸುಕಾಱ, ಸೊಗಸುಗಾರ** (ನಾ). ೧. ಚೆಲುವ; ಅಂದಗಾರ. ೨. ರಸಿಕ: ಬಗೆಬಗೆಯಲಿ ಸಿಂಗರಿಸಿಯಾ ಬೀದಿಯೊಳ್ ಸೊಗಸುಗಾಱರು ಚರಿಸುವರು (ಕಂಸವಿ. ೭-೧೯೭). **ಸೊಗಸುಕಾಱ:** ೧. ಸವಿವಾತುಗಳ ಸೋನೆಯ ಸೊಗಸುಕಾಱರು ನಿಂದ ನಿಲವನು ಕರ್ಣ ನೋಡು (ಕುವ್ಯಾದ್ರೋ. ೧೭-೨೪). **ಸೊಗಸುಗಾರ:** ೧. ಕಳಾಸಾಂದ್ರನಾದ ಚಂದ್ರನು ಹುಟ್ಟು ಸೊಗಸುಗಾರ (ಸೌಗಂಧಿ. ೧೮೦-೭).

**ಸೊಗಸುಗಾರ ಪುಟ್ಟಸ್ವಾಮಿ** = ಉಡುಗೆ ತೊಡುಗೆಗಳ ವಿಷಯದಲ್ಲಿ ಬಹಳ ಆಸಕ್ತಿಯಿರುವವನು: ಏನು ಬರುಬರುತ್ತಾ ಸೊಗಸುಗಾರ ಪುಟ್ಟಸ್ವಾಮಿಯಾಗುತ್ತಾ ಇದ್ದೀಯೆ? (ಮಾರ್ಗದ. ೯೩.). [ಸೊಗಸು$_2$ + - ಕಾಱ]

**ಸೊಗಸುಗುಂದು** (ಕ್ರಿ). ಸಂತೋಷವನ್ನು ಕಳೆದುಕೊಳ್ಳು: ಚೆಂದುಟಿಯ ಬಾಯ್ದೆಱೆಯನ್ನದೆ ಚುಂಬಿಸಿ ಸೊಗಸುಗುಂದದಾಯೆಂದು ಪಂಚೇಂದ್ರಿಯಪ್ರೀತಿಯಂ ಪಡೆವರಿನ್ನಾವಕೃತರೊ (ಜೈಮಿಭಾ. ೧೮-೨೦). [ಸೊಗಸು$_2$ + ಕುಂದು$_1$]

**ಸೊಗಸುಗೊಳಿಸು** (ಕ್ರಿ). ೧. ಸಂತೋಷಪಡಿಸು: ಮಿಥಿಳೇಂದ್ರಸುತೆಯ ಸಂಭೋಗದಿಂ ರಘುಕುಲಲಲಾಮನೆಸೆದಂ . . . ಸಕಲರತಿಕಲೆಗಳಿಂಪಾಗಲ್ಪರಸ್ಪರ ವಿಚಾರವಂ ಮಱೆದೈಕ್ಯಭಾವದಿಂ ಸೊಗಸುಗೊಳಿಸಿ (ಜೈಮಿಭಾ. ೧೮-೩೧). ೨. ಇಂಪಾಗಿಸು; ಮಧುರಗೊಳಿಸು: ಪೂರಾಯತ ಸುತಾನಂಗಳಂ ತಾರಮಧ್ಯ ಮಂದ್ರಗಳಿಂದೆ ಸೊಗಸುಗೊಳಿಸಿ ಗೇಯರಸಮೊಸರೆ ಪಾಡಿದರ್ (ಜೈಮಿಭಾ. ೨೧-೫೮); ಕೀರ್ತನೆಗಳನ್ನು ಸೊಗಸುಗೊಳಿಸಿ ವಿಸ್ತರಿಸಿ ಹಾಡುವುದರಲ್ಲಿ ನಿಮ್ಮ ಸಮಾನರಿಲ್ಲ (ಸಂಗೀತ. ೩೧). [ಸೊಗಸು$_2$ + ಕೊಳ್$_1$ + - ಇಸು$_3$]

**ಸೊಗಸುದಂಬುಲ** (ನಾ). ಸವಿಯಾದ ತಾಂಬೂಲ: ಚುಬುಕಾಗ್ರಮನೊಯ್ಯನೆ ಪಿಡಿದಲುಗಿಸಿ ಕಬಳಂಗೊಂಡು ಸೊಗಸುದಂಬುಲಮಂ (ಜಯಕಾ. ೮-೪೭).
[ಸೊಗಸು$_2$ + ತಂಬುಲ]

**ಸೊಗಸುದೊಡವು** (ನಾ). ಅಂದವಾದ ಒಡವೆ; ಶೋಭಿಸುವ ಆಭರಣ: ಸೊಗಸುದೊಡವ[ಪಾಠಾಂ. ಗೊಡುವ] ಸಂತಸದಿಂ ಬಗೆಮಿಗೆದೊಟ್ಟ ರನ್ನದ ರಮಣಿಯವೊಲು ಮುಗುದೆ ಬಂದಳು ರಾಯನೆಡೆಗೆ (ಶ್ರೀಪಾಲ. ೨-೭೪). [ಸೊಗಸು$_2$ + ತೊಡವು]

**ಸೊಗಸುದೋಱು** (ಕ್ರಿ). ೧. ಸಂತೋಷವನ್ನುಂಟುಮಾಡು; ಆನಂದಗೊಳಿಸು: ಈ ಕಕುತ್ಸ್ಥಜನೃಪನ ಕಂಗಳಿಗೆ ಸೊಗಸುದೋಱುವೆನು (ತೊರರಾ. ೭-೩೦-೧೯). ೨. ಒಪ್ಪು; ಶೋಭಿಸು: ಸೊಗಸುದೋಱುವ ಭಟರ ನೆಱೆ ಕೈದುಗಳ ಹೊಳಹಿನ ನೃಪರ ಬಳಿಯಲಿ ನೆಗಹಿ ಬೀಸುವ ಚೌರಿಗಳ ಸಂಭ್ರಮದೊಳೊದಗಿದರು (ನಳಚ. ೯-೫೭). [ಸೊಗಸು$_2$ + ತೋಱು]

**ಸೊಗಸುನುಡಿ** (ನಾ). ಇಂಪಾದ ಮಾತು; ಮಧುರವಾದ ನುಡಿ: ಸೊಗಸುನುಡಿಯಂಗನೆಯರ್ ಮೆಲ್ಲಡಿಯ ಚೆಲ್ಲೆಗಂಗಳ ಚೆಲ್ಲಗಾರ್ತಿಯರ್ . . . ಅಲ್ಲಿಗಲ್ಲಿಗೆ ಸಂಚರಿಸಿ (ರಾಮಾಶ್ವ. ೧೨೨-೨೫). [ಸೊಗಸು$_2$ + ನುಡಿ$_2$]

**ಸೊಗಸುನೋಟ** (ನಾ). ಆಕರ್ಷಕವಾದ ನೋಟ: ಅವನನೊಡಂಬಡಿಪುದರ್ಕೆ ನೀನಾವ ಬಗೆಯ ಸೊಗಸುನೋಟಂಗಳಂ . . . ಎಸಗುವೆಯೋ (ಚಿಕವಂ. ೧೧೭-೧೦).
[ಸೊಗಸು$_2$ + ನೋಟ]

**ಸೊಗಸುವಡೆ** (ಕ್ರಿ). ೧. ಶೋಭೆಯನ್ನು ಹೊಂದು; ಚೆಲುವಾಗು: ಬಲು ಸೊಗಸುವಡೆದು ಅತಿಮನೋಹರವಾದ ಯುಗ್ಮನಕ್ಷತ್ರಗಳು ಗಗನಾಂಗಣಮಧ್ಯದಲ್ಲಿ . . . ಗಿರಿಗಿರಿ ಸುತ್ತುತ್ತಲಿರುವುವು (ಜ್ಯೋತಿರ್ವಿ. ೬೫). ೨. ಸಂತೋಷವನ್ನು ಹೊಂದು; ಸುಖಿಸು: ಸೊಕ್ಕುದಕ್ಕೆಯ ಸೊಗಸುವಡೆದಳಾ ಕಾಂತೆ ಪ್ರಿಯನಂಗದೊಳ್ಮೋಹನೋತ್ತುಂಗದೊಳ್ಪಗೆಗೊಳಿಸುತೆ (ಜೈಮಿಭಾ. ೧೧-೧೭). [ಸೊಗಸು$_2$ + ಪಡೆ$_1$]

**ಸೊಗಸುವಾಯ್ದೆಱೆ** (ಕ್ರಿ). ಅಂದವಾದ ಬಾಯನ್ನು ಬಿಡು ,—ತೆರೆ: ಸುಗುಣೆಯ ಮುಕ್ತಿಯ ದೂತಿಯೆಂಬ ಶಾರದೆಯವಳಗಣಿತಗುಣವನಾ ನೃಪಗೆ ಸೊಗಸುವಾಯ್ದೆಱೆ ದಾಡುವಂತೆ ಸರಂಗೊಟ್ಟು ತೆಗೆದವು ಪಡಿ ದೇಗುಲದ (ಶ್ರೀಪಾಲ. ೬-೬೬).
[ಸೊಗಸು$_2$ + ಬಾಯ್ದೆಱೆ$_1$]

**ಸೊಗಸುವಾೞ್ತೆ** (ನಾ). ಸುಖವಾದ ಜೀವನ: ಬಗೆದು ನೇಹಿಗರೊಳು ಭಾವಿಸಿ ನೇಹವ ಪಗೆವರೊಡನೆ ಪಗೆಗೊಂಡು . . . ಸೊಗಸುವಾೞ್ತೆಯೊಳು ಸೊರ್ಕುವುದು (ಚಿಕವಿ. ೬-೧೫೭ ಸಾಂಗತ್ಯ ೨೪). [ಸೊಗಸು$_2$ + ಬಾೞ್ತೆ]

**ಸೊಗಸುವೆಣ್** (ನಾ). ಚೆಲುವೆ; ಸುಂದರಿ.

**ಸೊಗಸುವೆಂಗಳ್** (ಬಹುವ): ಅಲಸಿದ ತನ್ನ ಸೊಗಸುವೆಂಗಳ ಮನಕರ್ತಿ ಮಾಡಿದನೇನು ಸುಗುಣನೊ ಭರತರಾಜೇಂದ್ರ (ಭರಚ. ೩೫-೩). [ಸೊಗಸು$_2$ + ಪೆಣ್]

**ಸೊಗಸುವೆರು** 'ಸೊಗಸುವೆಱು' ನೋ.

**ಸೊಗಸುವೆಱು, ಸೊಗಸುವೆರು** (ಕ್ರಿ). ಚೆಲುವನ್ನು ಹೊಂದು; ಶೋಭೆಯನ್ನು ಪಡೆ: ಮುಗಮುಗಿಸುವ ಪೊಸಮಲ್ಲಿಗೆಯರಳಿನ ಸೊಗಸುವೆತ್ತೆಸೆವ ಪೂಸರವ ಮಿಗೆ ಶಿಖೆಗಮರಿಸಿ (ಕಂಸವಿ. ೧೦-೧೮). **ಸೊಗಸುವೆರು:** ಕನಕಮಯ ಪಡಗದಂದದಿ ಸೊಗಸುವೆತ್ತು . . . ಧಾರುಣಿಗೆವುಭಯ ವೈಕುಂಠಮಿದೆಯೆನಿಸಿ (ನವಮೋ. ೧೦-೮).
[ಸೊಗಸು$_2$ + ಪೆಱು$_1$]

**ಸೊಗಸೇರ್, ಸೊಗಸೇರು** (ಕ್ರಿ). ೧. ಸಂತೋಷವು ಹೆಚ್ಚಾಗು ,—ಮೀರು: ನಗುತ ಮಾತಾಡುತಿಹ ನುಡಿಯ ಕಿವಿಯಿಂ ಕೇಳಿ ಸೊಗಸೇರ್ದು ಕರಸೆ (ಕೃಷ್ಣವಿ. ೧-೧೫). **ಸೊಗಸೇರು:** ೨. ಶೋಭಿಸು; ಮೆರೆ: ಬುಧರ ವಿದ್ಯಾಬುದ್ಧಿ ಸೊಗಸೇರುವಂದದೆ ವೇದ್ಯತತ್ವಾವಬೋಧದೊಳು ಕಳೆಗೊಂಡು ಮೆರೆವುವು ಉಚಿತ ವಿಚಾರದೆ ಕವಿಗಣರಚಿತಸೂಕ್ತಿಗಳು (ಇಂಚಾಪ. ೧೪೩-೨). [ಸೊಗಸು$_2$ + ಏರ್$_0$ (< ಏಱು$_1$)]

**ಸೊಗಸೇರು** 'ಸೊಗಸೇರ್' ನೋ.

**ಸೊಗುಳಿ, ಸೋಗಳೆ, ಸೋಗುಳಿ** (ನಾ). ಪಣವನ್ನೊಡ್ಡಿ ಆಡುವ ಒಂದು ಬಗೆಯ ಆಟ: ನೆತ್ತ ಚದುರಂಗ ಪಗಡೆಯು ಚತ್ತಾಯಂಬೈದು ದಾಯ ಬಿಡಿಬಿಲ್ ಸೊಗುಳಿಯುತ್ತುಮರಾದರು ಆಡಲ್ ಬತ್ತಲೆಯ ಭಂಗ ಬಪ್ಪನೆಂಬುದು ಪುಸಿಯೇ (ನೀತಿಸಾ. ೮೧೦). **ಸೋಗಳೆ:** ಜಾಣಜಾಣೆಯರಾಟವೆಂಬುದು ಚದುರಂಗದಾಟ ದಂತಿಹುದು ಬದಗರ ಲೀಲೆಯಹುದು ಚೊಳ್ಳಿಗವಡೆಯ ಕಿದರ್ವ ಸೋಗಳೆಯಾಟದಂತೆ (ಭರಚ. ೧೦-೧೯). **ಸೋಗುಳಿ** : ಪಗಡೆ ಸೋಗುಳಿ ನೆತ್ತ ಚದುರಂಗ ಸೊಳ್ಳಿ ದೊಂಪಗಳಾಟಕಾಱರೊಪ್ಪಿಹರು (ಮೋಳಪು. ೧-೫೨).
[ದೇ. ॥ ತಮಿ. ಚೊಕ್ಕಟಾನ್; ಮಲ. ಚೊಕ್ಕಟ್ಟಾಙ್ಕಳಿ; ತೆಲು. ಸೊಗಟ]

**ಸೊಚ್ಚಯ** (ನಾ). (?): ಮಚ್ಚರವಿಲ್ಲದ ಕಲಹಂ ಕಣ್ಣಂ ಮುಚ್ಚದ ತಿಳುನಿದ್ರೆ ಬೆಚ್ಚದ ನಡುಕಂ ಕುಂದೊಂದದ ಕಿವಿ ಸೊಚ್ಚಯವಿಲ್ಲದ ದೈನ್ಯಂ ತನುವಂ ಮುಚ್ಚಿಯು ಮುಚ್ಚದ ದಣಿವಿಂದೆಸೆವಳ್ ಸುಸಿಲೊಳ್ಳರಳಾಕ್ಷಿ (ಉದ್ಭದೇ. ೨-೭೪). [?]

**ಸೊಜ್ಜ$_1$** (ನಾ). ಒಂದು ಬಗೆಯ ಸುಂಕ(?): ಹಾಂಬುಳಿಗೆಯ ದಾರಿಯಲಿ ೬೦ ಮತ್ತರು ಕೆಯ್ಯುಮಂ ಅಡಕೆಯಲ್ಲಿ ಸೊಜ್ಜಮುಮಂ ಎಲೆ ಹೇಱಿಂಗೆ ೧೦೦ ಮಂ . . . **ಕೊಟ್ಟರ್** (ಸೌಇಇ. IX-i, ೨೬೮-೨೯; 1169); ನೆಲವರ್ತ್ತಿಗೆ ಸಾಸಿರಕ್ಕೆ ಪನ್ನೊಂದಡಕೆಯ ಸೊಜ್ಜಮುಮಂ ಚಂಡಾವುರಂ ಬೆಲೆ ಮೊದಲಾಗುಳಿದಡಕೆಗಳ್ಗೆಲ್ಲಂ ಸಾಸಿರಕ್ಕೆ ಇರ್ಪ್ಪತ್ತೊಂದಡಕೆಯ ಸೊಜ್ಜಮುಮಂ . . . ಬಿಟ್ಟಾರ್ (ಎಇ. XVIII. ೯೨-೩೪; 1186). [?./ ತಮಿ. ಚೊಜ್ಜಮ್ = ಉಳಿಕೆ, ಬಡ್ಡಿ]

**ಸೊಜ್ಜ$_2$** (ನಾ). ಆಧಿಕ್ಯ; ಅತಿಶಯ(?): ಅಜ್ಜರಾಯರ ಖ್ಯಾತಿಯೊಳು ಮಿಗೆ ಸೊಜ್ಜವೆನಿಸಿತು ನಿಮ್ಮ ಖ್ಯಾತಿಯು (ಕೊಲ್ಲಾಚ. ೧೪೨). [?./ ತೆಲು. ಸೊಜ್ಜ]

**ಸೊಜ್ಜಿಗೆ** 'ಸಜ್ಜಿಗೆ' ನೋ.

**ಸೊಜ್ಜಿಗೆವೆರೆ** (ಕ್ರಿ). ರವೆಯಿಂದ ಕೂಡಿರು: ಸೊಜ್ಜಿಗೆವೆರೆದ ಸಕ್ಕರೆಯ ಪಾಯಸವ . . . ಸರಸಿಜಾಕ್ಷಿಯರು ನೀಡಿದರು (ಕಂನವ. ೮-೯೦). [ಸೊಜ್ಜಿಗೆ (< ಸಜ್ಜಿಗೆ) + ಬೆರ$_1$]

**ಸೊಟಕ** 'ಸಟ್ಟುಗ$_1$' ನೋ.

**ಸೊಟಗ** 'ಸಟ್ಟುಗ$_1$' ನೋ.

**ಸೊಟಗೆ$_1$** 'ಸೊಂಟಿಗೆ' ನೋ.

**ಸೊಟಗೆ$_2$** (ನಾ). ಒಂದುಬಗೆಯ ಸಸ್ಯ: ಸೊಟಗೆ, ಬಾಳೆ (ವ್ಯಜಿಗಿ. ೫೮-೧೧೬೩). [?]

**ಸೊಟಗೆ** 'ಸೊಂಟಿಗೆ' ನೋ.

**ಸೊಟ್ಟ, ಚೊಂಟ, ಚೊಟ್ಟ, ಚೊಟ್ಟೆ$_1$** (ನಾ). ೧. ಓರೆ; ಡೊಂಕು; ವಕ್ರತೆ: ಸೊಟ್ಟವಾಗಿದ್ದುದೊಂದನ್ನು ನೆಟ್ಟಗಾಗಿಸಿದ ಆನಂದವು ಅವನಲ್ಲಿ ಮೂಡಿದ್ದಿತು (ಮುನಿಮಾ. ೧೭೩); ಮುಖವು ತ್ರಿಕೋಣಾಕೃತಿಯಲ್ಲಾಗಲಿ, ಸೊಟ್ಟವಾಗಾಗಲಿ, ಅಂಡಾಕೃತಿ, ವೃತ್ತಾಕೃತಿಗಳಲ್ಲಾಗಲಿ ಇರಬಾರದು (ಭಾಚಿತ್ರ. ೨೦). ೨. ಅಂಗವಿಕಲ; ಹೆಳವ: "ಕುಣಿಃ = ಸೊಟ್ಟಂ" (ಕಾಶಕೃ. ೨೭೧). (ಗು). ೩. ಓರೆಯಾದ; ಡೊಂಕಾದ: 'ಸೊಟ್ಟಗಾಲು' ಪರಾ. ೪. (ಆಲಂ) ಕೆಲಸಕ್ಕೆ ಬಾರದ; ತುಚ್ಛವಾದ : ಈ ನಿನ್ನ ಸೊಟ್ಟ ಮೆಣಶಿನಕಾಯಿ ಮಾರಿದರ ಬರೂದೆಷ್ಟೋ ಮೂಳಾ! (ಮಣ್ಣುಹ. ೮೮); ಈ ಸೌಸವವನ್ನು ಸೇವಿಸಿದ ಭೃಂಗ ಸೊಟ್ಟ ಕಮಲದ ಹೂವಿಗೆ ಏಕೆ ತಿರುಗಿ ಹೋದೀತು? (ಗಾಳಿಪ. ೨೧೦). **ಚೊಂಟ**: ೨. ಒಕ್ಕಲಿಲ್ಲದ ಊರಿಗೆ ಬಂದರು ಮೂವರು ಕುಂಬಾರರು ಇಬ್ಬರು ಚೊಂಟರು ಒಬ್ಬಗೆ ಕೈಯೆ ಇಲ್ಲ (ಪುರಂದ. ೩-೨೭-೨). **ಚೊಟ್ಟೆ** : ೨. ತಿರುಕರು ತೊನ್ನರು ಮೋಂಟರು ಚೊಟ್ಟರು ಕರಿಕಾಂಗರು ದುರ್ಗಂಧಿಗಳು (ಜ್ಞಾನಚ. ೪೪-೧೧೫). **ಚೊಟ್ಟೆ$_1$** : (೩). [ದೇ. ॥ ತಮಿ. ಚೊಟ್ಟೈ; ತುಳು. ಸೊಟ್ಟ, ಚೊಟ್ಟ , ಚೊಟ್ಟೆ; ತೆಲು. ಚೊಟ್ಟ, ಸೊಟ್ಟ]

**ಸೊಟ್ಟಕಾಲು** 'ಸೊಟ್ಟಗಾಲು' ನೋ.

**ಸೊಟ್ಟಕ್ಕೆ** 'ಸೊಟ್ಟಗೆಯ್' ನೋ.

**ಸೊಟ್ಟಗ** 'ಸಟ್ಟುಗ$_1$' ನೋ.

**ಸೊಟ್ಟಗಣ್ಣು** (ನಾ). ೧. ಮೆಳ್ಳಗಣ್ಣು; ಕೋಸುಗಣ್ಣು; ವರಸೆಗಣ್ಣು: ಸೊಟ್ಟಗಣ್ಣನ್ನು ಶಸ್ತ್ರಚಿಕಿತ್ಸೆಯಿಂದ ನೆಟ್ಟಗೆ ನೋಡುವಂತೆ ಮಾಡಿದರೂ ದೃಷ್ಟಿಯು ಮಟ್ಟಿಗೆ ಹಿಂದಿರುಗಲಾರದು (ನಿಮ್ಮದೃ. ೬೨). ೨. (ಆಲಂ) ಅಮಂಗಳಕರವಾದ ದೃಷ್ಟಿ; ವಕ್ರದೃಷ್ಟಿ: ಅವನ ಸೊಟ್ಟಗಣ್ಣು ಬಿದ್ದರೆ ಆಗುವ ಕೆಲಸವೂ ಹಾಳಾಗುತ್ತದೆ (ರೂಢಿ). [ಸೊಟ್ಟ + ಕಣ್ಣು (< ಕಣ್)]

**ಸೊಟ್ಟಗಾಲು, ಚೊಟ್ಟಗಾಲು, ಸೊಟ್ಟಕಾಲು** (ನಾ). ಡೊಂಕಾಗಿರುವ ಕಾಲು: ಆತ ತನ್ನ ಸೊಟ್ಟಗಾಲನ್ನು ನಿಧಾನವಾಗಿ ಎಳೆದುಹಾಕುತ್ತಾ ಬರುತ್ತಿದ್ದಾನೆ (ರೂಢಿ). **ಚೊಟ್ಟಗಾಲು**: (೩). **ಸೊಟ್ಟಕಾಲು** : ಕುಂಟು ಕೆಲವಕ್ಕೆ . . . ಉಳಿದವಕ್ಕೆ ಸೊಟ್ಟಕ್ಕೆ, ಸೊಟ್ಟಕಾಲು (ಏಳಜೀ. ೩). [ಸೊಟ್ಟ + ಕಾಲು$_1$ (< ಕಾಲ್$_1$)]

**ಸೊಟ್ಟಗೆ** (ಅ). ಓರೆಯಾಗಿ; ಡೊಂಕಾಗಿ: ಪುಡಿ ಹಾಕುವಾಗ ಚಮಚ ಸೊಟ್ಟಗೆ ಹಿಡಿದುಕೊಂಡರೆ ಕಾಫಿ ಗತಿ ಏನು? (ರಾಯಕ. ೯೮); ಸುಂದರಮ್ಮ ಒಳಗೆ ಬಂದು ಮಗಳ ಪಕ್ಕದಲ್ಲಿ ಕುಳಿತು . . . ಸೊಟ್ಟಗಿದ್ದ ಹೂವು ಸರಿಮಾಡಿದರು (ದೂಚಟ್ಟ. ೨೪).

**ಸೊಟ್ಟಸೊಟ್ಟಗೆ** (ದ್ವಿರುಕ್ತಿ): ನಿನ್ನ ಅಕ್ಷರವೇಕೆ ಹೀಗಿದೆ? ನೋಡು ಎಷ್ಟು ಸೊಟ್ಟಸೊಟ್ಟಗೆ ಬರೆದಿದ್ದೀಯೆ? (ಶಾಲೆಮ. ೧೯೩). [ಸೊಟ್ಟ + - ಅಗೆ$_3$]

**ಸೊಟ್ಟಗೆಯ್, ಚೊಟ್ಟಗೆಯ್, ಸೊಟ್ಟಕ್ಕೆ, ಸೊಟ್ಟಗೈ** (ನಾ). ತಿರುಚಿಕೊಂಡಿರುವ ಕೈ; ಡೊಂಕಾಗಿರುವ ಕೈ: (೩). **ಚೊಟ್ಟಗೆಯ್**: (೩). **ಸೊಟ್ಟಕ್ಕೆ** : ಕುಂಟು ಕೆಲವಕ್ಕೆ . . . ಉಳಿದವಕ್ಕೆ ಸೊಟ್ಟಕ್ಕೆ, ಸೊಟ್ಟಕಾಲು (ಏಳಜೀ. ೩). **ಸೊಟ್ಟಗೈ** : ಅವನು ತನ್ನ ಸೊಟ್ಟಗೈಯನ್ನು ನೀಡಿ ಭಿಕ್ಷೆ ಬೇಡುತ್ತಿದ್ದನು (ರೂಢಿ).

**ಸೊಟ್ಟಗೈ ಇಡು** = (ಆಲಂ) ಯಾವುದೇ ವಿಚಾರದಲ್ಲಿ ಅನಾವಶ್ಯಕವಾಗಿ ಪ್ರವೇಶಿಸು: ಅವನು ಎಲ್ಲರ ವ್ಯವಹಾರಗಳಲ್ಲಿ ತನ್ನ ಸೊಟ್ಟಗೈ ಇಡುವ ಅಧಿಕ ಪ್ರಸಂಗತನ ಮಾಡುತ್ತಾನೆ (ರೂಢಿ). [ಸೊಟ್ಟ + ಕೆಯ್$_2$]

**ಸೊಟ್ಟಗೆಯ್ಯ, ಚೊಟ್ಟಗೆಯ್ಯ** (ನಾ). ವಕ್ರವಾದ ಕೈಯುಳ್ಳವನು: "ಕುಣಃ = ಸೊಟ್ಟಗೆಯ್ಯಂ"(ಕಾಶಕೃ.೩೪). **ಚೊಟ್ಟಗೆಯ್ಯ** : "ಕುಕರ, ಕುಣಿ-ಚೊಟ್ಟಗೆಯ್ಯ" (ನಾಚಿರಾ. ೬). [ಸೊಟ್ಟಗೆಯ್ + - ಅ$_7$]

**ಸೊಟ್ಟಗೈ** 'ಸೊಟ್ಟಗೆಯ್' ನೋ.

**ಸೊಟ್ಟಮಾತು** (ನಾ). (ಆಲಂ) ಕೊಂಕುನುಡಿ; ಚುಚ್ಚುಮಾತು: ಈ ಕಹಿನೆನಪುಗಳು ಬಗೆಗಣ್ಣಿನ ಮುಂದೆ ಬಂದು ನಿಲ್ಲುತ್ತವೆ. ಅದರಲ್ಲಿಯೂ ಉಗಾದಿದಿನದ ಸೊಟ್ಟಮಾತಿನ ಕೂರಂಬುಗಳು (ಬೆಳುಮ. ೯). [ಸೊಟ್ಟ + ಮಾತು$_1$]

**ಸೊಟ್ಟಮುಖ** (ನಾ). (ಬೇಸರ, ಕೋಪ, ಅಸಹನೆ ಮುಂತಾದುವುಗಳಿಂದ) ತಿರುಚಿಕೊಂಡಿರುವ ಮುಖ; ವಕ್ರವಾದ ಮುಖ: ಆತನು ಹೇಳಿದ ಹಾಗೆ ಕುಣಿಯುತ್ತಾ ಬಂದರೆ ನಮ್ಮ ಪಾಡು ನಾಯಪಾಡಾಗುವುದರಲ್ಲಿ ಅವ ಸಂಶಯವೂ ಇರುವದಿಲ್ಲ, ಎಂದು ಸೊಟ್ಟಮುಖದಿಂದ ಮಾತನಾಡಿದನು (ಚೆನ್ನಬೇ. ೫೮). [ಸೊಟ್ಟ + ಮುಖ]

**ಸೊಟ್ಟಮೋರೆ** (ನಾ). ೧. = ಸೊಟ್ಟಮುಖ: ಈಗೇನು ಮಾಡುವದು ಉಪಾಯವಿಲ್ಲ ಎಂದು ಸೊಟ್ಟಮೋರೆ ಮಾಡಿ ರಾಯರಂದರು (ದಾಸಹು. ೬೫). ೨. (ಆಲಂ) ಅಮಂಗಳಕರವಾದ ಮುಖ: ಯಾರ ಸೊಟ್ಟಮೋರೆಯನ್ನು ಕಂಡೆನೊ ಹೊತ್ತಾರೆಯನ್ನ? (ಗೀವಿಂ. ೭೭-೧೭). [ಸೊಟ್ಟ + ಮೋರೆ (< ಮೋಱೆ)]

**ಸೊಟ್ಟಹೆಜ್ಜೆ** (ನಾ). (ಆಲಂ) ತಪ್ಪುದಾರಿಯಲ್ಲಿ ಇಡುವ ಹೆಜ್ಜೆ ; ತಪ್ಪಾದ ನಡವಳಿಕೆ: ಸೊಟ್ಟಹೆಜ್ಜೆಯಿಡತೊಡಗಿರುವಿರೆಂದು ಯಾರೋ ಸುರೇಂದ್ರರಾಯನಿಗೆ ಹೇಳಿರುವರು (ಸ್ಕೂಲಮಿ. ೧೭೭). [ಸೊಟ್ಟ + ಹೆಜ್ಜೆ (< ಪಜ್ಜೆ)]

**ಸೊಟ್ಟಿಗೆ** 'ಸೊಂಟಿಗೆ' ನೋ.

**ಸೊಟ್ಟು$_1$** (ಕ್ರಿ). (?): ಪುದಿದುಪಧಾನ ತಳ್ತ ರುಚಿ ಪಾಸಿನ ಬೆಳ್ಪುಗಳೊಳ್ ಪಳಂಚಿ ಮಂಚದ ಕಡುಗಪ್ಪಿನೊಳ್ ಬೆರಸಿ ಮಿಂಚುವ ಸೊಟ್ಟಿ[ಪಾಠಾಂ. ಚ್ಚಿ]ದ ಸಜ್ಜೆಯೊಳೆ ವಿನೋದದೆ ಗುಡಿಗಟ್ಟಿ ದೇವಿಯರನೂನಜಿನಾಂಬಿಕೆ ಸೂಕ್ತಿ ಕಂ[ಡ]ಳಭ್ಯುದಯಕರಂಗಳಪ್ಪ ಕನಸಂ ಪದಿನಾಱುಮನಂದು ಬೈಗಿನೊಳ್ (ಸೂಕ್ತಿಸು. ೭-೩೫). [?]

**ಸೊಟ್ಟು$_2$, ಚೊಟ್ಟು** (ನಾ). ೧. ಡೊಂಕು; ನೇರವಲ್ಲದುದು: ಕೆಲವು ಜನರ ಕೆಯ್‌ಕಾಲು ಸೊಟ್ಟಾಗುತ್ತವೆ (ಮುಂಬಯಿ. ೬. ೪-೨೩೫); ಒಲೆ ಸೊಟ್ಟಾದರೆ ಬದನೆಕಾಯಿ ಬೇಯದೇ? (ಗಾದ). ೨. (ಆಲಂ) ತಪ್ಪು; ದೋಷ: ಮಾರ್‌ಸಾದಕನು ಸುಲ್ತಾನರ ಗೆಳೆಯ, ಅವರ ಸೊಟ್ಟು ಗುಟ್ಟುಗಳನ್ನು ಬಲ್ಲವನು (ದೌಲತ್. ೨೮); ಸೊಟ್ಟನ್ನು ಸರಿಪಡಿಸಿದರೆ ಕೆಲವರು ಕೋಪ ಮಾಡಿಕೊಂಡು 'ಇದೇನು ಇವನ ಪ್ರತಿಷ್ಠೆ' ಎನ್ನುತ್ತಾರೆ (ಕನ್ನನು. I, ೫). **ಚೊಟ್ಟು** : ೧. ಚೊಟ್ಟು ಕಾಲ್ಮೆ ಕೊರಟುದಲೆ ಬಸುರ್ವಟ್ಟೆ ಬಾಗಿದ ಬೆನ್ನು (ಆದಿಪ. ೨೨-೭); ಗಾಣ್ಣತ್ತಿ ಕೈ ಹುಟ್ಟೋವಾಗಲೇ ಚೊಟ್ಟು (ಹುಟ್ಟಿಹ. ೧೩೬).

**ಸೊಟ್ಟುಸೊಟ್ಟು** (ದ್ವಿರುಕ್ತಿ): ಅವನ ಅಭ್ಯಾಸಗಳು ಆರಂಭದಲ್ಲಿ ಅಂದವಾಗಿ ಬರೆಯಲ್ಪಟ್ಟು ಕೊನೆಕೊನೆಗೆ ಸೊಟ್ಟುಸೊಟ್ಟಾಗಿ ಕುಡಿದು ಮತ್ತೇರಿದವರಂತೆ ತೂರಾಡುತ್ತಿದ್ದವು (ಶಾಲೆಮ. ೧೯೪). [ಸೊಟ್ಟ + - ಉ$_4$./ ತುಳು. ಚೊಟ್ಟು]

**ಸೊಟ್ಟುಹೊರಿಸು** (ಕ್ರಿ). ದೋಷಾರೋಪಣೆ ಮಾಡು; ತಪ್ಪುಹಾಕು: ನಿಮ್ಮ ಮೇಲೆ ಸೊಟ್ಟುಹೊರಿಸಿ ವೈರಿಗಳನ್ನು ಕೂಡಿ ಸರ್ವಥಾ ನಿಮಗೆ ಕೇಡುಬಗೆಯುವುದಿಲ್ಲ (ಕುಮುದಿ. ೧೧೫). [ಸೊಟ್ಟು$_2$ + ಹೊರಿಸು$_1$ (< ಪೊಱಿಸು)]

**ಸೊಟ್ಟೆ** 'ಚೊಟ್ಟೆ$_1$' ನೋ.

**ಸೊಡಗೆ** 'ಸೋಡಗೆ' ನೋ.

**ಸೊಡಬಲಿ** (ನಾ). ಹೆಣಗಳನ್ನು ಸುಡುವ ಸ್ಥಳ; ಸುಡುಗಾಡು; ಶ್ಮಶಾನ: ''ಸೊಡಬಲಿಯೆಂದು ಮಸಣವಟ್ಟಿಗೆ'' (ಶಮದ. ಪರಿ. ೨); ''ಸೊಡಬಲಿಯೆಂದು ಶ್ಮಶಾನಂ'' (ಕಶಸಾ. ೬೭-೫೧೮); ಮುಸಕದಿಂದ ಸೊಡಬಲಿಯೊಳೇತರ್ಕೆ ನಟಿಸಿದಂ ಸಸಿಧರಂ (ಆರಾಚ. ೩-೧೮-೨); ಆ ಶಿವಂ ಬ್ರಹ್ಮಾಂಡಕೋಟಿಗಳ ಚೆನ್ನಾಗಿ ಸಂಹರಿಸಿ ತದ್ಭಸಿತಮಂ ತೆಗೆದು ತನ್ನ ಮೆಯ್ಯೊಳ್ಪೂಸಿಯಾಗಳಾ ಸೊಡಬಲಿಯೊಳ್ . . . ತಾಂಡವಕುಣ್ಣುಗಿಸೆ (ಪಾಸೋಪು. ೧೧-೯೩). 'ಸೊಡಲೆ' ಪರಾ. [< ಸುಡು?]

**ಸೊಡಬಲಿವನೆಯ** (ನಾ). ಸುಡುಗಾಡನ್ನೇ ಮನೆಯನ್ನಾಗಿ ಉಳ್ಳವನು; ಶಿವ: ''ಎಣ್ಮಯ್ಯಂ . . . ಸೊಡಬಲಿವನೆಯಂ . . . ಅಯ್ಯೊಗಂ . . . ಈ ೩೩ ಈಶ್ವರಂಗೆ ಪೆಸರ್'' (ಕಶಸಾ. ೪೭-೧). [ಸೊಡಬಲಿ + ಮನೆ + -ಅ]

**ಸೊಡರ್, ಸೊಡರು, ಸೊಡಲು, ಸೊಡಱ್, ಸೊಡಿಲು** (ನಾ). ೧. ದೀವಿಗೆ; ದೀಪ: ಸೊಡರ ಬೆಳಗಿಂಗೆ ಸ್ಮರಿಸದೆ ಕಣ್ಣ ನೀರ್ ಬರ್ಕುಂ (ವಡ್ಡಾರಾ. ೨೭-೫); ಪರಸೈನ್ಯಭೈರವನ ಬರವಿಂಗಳ್ಕಿ ಗಾಳಿಗೊಡ್ಡಿದ ಸೊಡರಂತೆ ನಡನಡನಡುಗುವ ಕುರುಧ್ವಜಿನಿಯಂ ಕಂಡು (ಪಂಪಭಾ. ೮-೧೧೧ ವ); ಬೆಳಗುವ ಸೊಡರೊಳ್ ಸೊಡರಂ ಬೆಳಗಿ ಪಲಕೊರ್ಂಡುಪೂಗೆಯುಂ ಕುಂದದೆ ಪಜ್ವಳಿಸುವವೋಲ್ ಜಗಮೆಲ್ಲಂ ಕೊಳಲುಂ ತವದಿತ್ತು ಮೆಚ್ಚೆವನಿಱಿವಬೆಡಂಗಂ (ಗದಾಯು. ೧-೩೦). **ಸೊಡರು**: ೧. ಸಂಸಾರವೆಂಬುದೊಂದು ಗಾಳಿಯ ಸೊಡರು . . . ಇದ ನೆಚ್ಚಿ ಕೆಡಬೇಡ (ಬಸವ. ೧೭೪); ಬಡವರ ಮನೆಯ ಸೊಡರು ಕುಂದುವುದೆ (ಹಚಕಾ. ೧-೨೧); ಎನ್ನ ಪುಣ್ಯವು ಗಾಳಿಗೊಡ್ಡಿದ ಸೊಡರೊಲಾದುದು ನೃಪನ ಮರಣದಲಿ (ಸಂಭಪ. ೨೦-೩೦). **ಸೊಡಲು** : ೧. ಎಳೆಯ ಬೆಳಕನು ಮೊಗೆದು ಹೊತ್ತರೆ ಬೆಳ್ಳಗೆತ್ತಲು ತುಳುಕಲು ಕಳೆಯ ಸೊಡಲನು ಕುಗ್ಗುತಡಗುವ ಬೆಳ್ಳಿಬಿಂಬದ ಬಗೆಯೊಳು (ಇಂಗೀತ. ೧೨-೩). Δ **ಸೊಡಱ್** : ೧. ಅಪ್ಪಗೌಡನ ಮಗ ಚೋಳರಾಮನಾಥಂಗೆ ಸೊಡಱಗಳಿಗೆ . . . ಎಣ್ಣೆಯ xಡುವಲ್ಲಿಗ ಹುಯ್ಯಿದ ಗಾಣ (ಎಕ. III (R), ಗುಂಡ್ಲು. ಪೇ. ೧೨೮-೪; ?). **ಸೊಡಿಲು** : ೨. ದೀಪವನ್ನು ಹಚ್ಚುವ ಕಂಬ: ಅರ್ಚಕರು ಆ ಆರತಿಯಲ್ಲಿ ಎರಡು ಚಿನ್ನದ ಸೊಡಿಲುಗಳಲ್ಲಿ ದೀಪವನ್ನು ಹಚ್ಚಿದರು (ಶ್ರೀರಾಯ. ೩೪೮). [ದೇ. II ತಮಿ. ಚುಟರ್, ಚುಟಲ್; ಮಲ. ಚುಟರ್; ತುಳು. ಸುಡರು, ತುಡರ್, ತುಡಾರ]

**ಸೊಡರಿ, ಸೊಡಲಿ₁, ಸೋಡಲಿ** (ನಾ). ಒಂದು ಬಗೆಯ ಔಷಧೀಸಸ್ಯ: ''ಕಾಂತವೃಕ್ಷಾ- ಯುಕ್ತಾ, ಸೊಡರಿ'' (ಓಷಧಿ.೩೦); ಸೊಡ[ಪಾಠಾಂ. ಸೋದ]ರಿಯ ಬೇರರುತಾಳಂ ಗುಡೂಚಿಯಾಡುಳಿಚಮೆಂಬಿವಂ ಕಟಿಯಿಂದಂ ಕುಡಿಯಿಸಲಹಿ ವಿಷಮಟಿಗುಂ (ಖಮದ. ೫-೬೭). **ಸೊಡಲಿ₁** : ''ಕಟಾಲಃ - ಸೊಡಲಿ'' (ಓಷಧಿ. ೨೩); ಸೊಡಲಿ ಬೆಂಡುಗ ಸೀಗೆ . . . ಕೆಂಜಿಗೆಯ ಗಿಡುಮುಳ್ಳುವೆಳೆಗಳ ಗಡಣದಿಂದಾ ಕಾಡು ಕಡುಗುರ್ವುಪಡೆದು ರಾಜಿಪುದು (ರಾಮವಿ. ೧೫-೬೦). **ಸೋಡಲಿ** : ಆ ಪಡುವ ಸೋಡಲಿಯ ಮೇಲೆಯಲ್ಲಿ ನಟ್ಟ ಕಲ್ಲು (ಎಕ. III, ತಿರುಮ. ೬೪-೯೪; 1397). [?]

**ಸೊಡರಿಡು** (ಕ್ರಿ). ದೀಪವನ್ನು ಹಚ್ಚು; ದೀವಿಗೆಯನ್ನಿಡು: ಆದಿತ್ಯಂಗೆ ಸೊಡರಿಡಲುಮಿಂದ್ರಂಗೆ ದೇವಲೋಕಮಂ ಬಣ್ಣಿಸುವಂತೆಯುಂ ನಿನಗೇನೆಂದು ಕಜ್ಜಂಬೇಟ್ಟುಮ (ಪಂಪಭಾ. ೯-೧೮ ವ); ಭಾನುಬಿಂಬಕೆ ಸೊಡರಿಡುವರೆ ಜಗದೊಳು (ಅಂಜಚ. ೭-೩). [ಸೊಡರ್ + ಇಡು₁]

**ಸೊಡರು** 'ಸೊಡರ್' ನೋ.

**ಸೊಡರುರಿ** (ನಾ). ದೀಪದ ಕುಡಿ ,— ಜ್ವಾಲೆ: ಬಲವರಸಿ ಪರಭೂಮಿಶರಂ ತಾಗೆ ಸೊಡರುರಿಯ ಮೇಲೆ ಬಿಱುಗಾಳಿ ಬೀಸಿದವೊಲಹುದು (ಸಮ್ಯಕ್ತಾ. ೮-೨೪).

[ಸೊಡರ್ + ಉರಿ₂]

**ಸೊಡರುಹಬ್ಬ** (ನಾ). ದೀಪಗಳ ಹಬ್ಬ; ದೀಪಾವಳಿ: ಪಟ್ಟಣದಲ್ಲಿ ಬಂಡಿಬಂಡಿ ಯಿಂದ ಸಕ್ಕರೆ ಹಂಚಿದರು. ಊರಲ್ಲೆಲ್ಲ ಸೊಡರುಹಬ್ಬವಾಯಿತು (ಬೀರಬ.೫೭).

[ಸೊಡರು (< ಸೊಡರ್) + ಹಬ್ಬ (< ಪರ್ಬ)]

**ಸೊಡರೆಣ್ಣೆ** (ನಾ). ದೀಪವನ್ನು ಉರಿಸುವುದಕ್ಕಾಗಿ ಹಾಕುವ ಎಣ್ಣೆ: ನನ್ದಾದೀವಿಗೆಗೆ ಸೊಡರೆಣ್ಣೆಗೆ ಘಾಣ ೧ (ಸೌಇಇ. XX . ೨೬-೧೮; 1040); ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಸುರಿಯಿಹರೆ (ಸರ್ವಜ್ಞ. ೬೩೭). [ಸೊಡರ್ + ಎಣ್ಣೆ]

**ಸೊಡರೆತ್ತು** (ಕ್ರಿ). ಆರತಿ ಮಾಡು; ನೀರಾಜನವೆತ್ತು: ಸಂಗತಜನಧರ್ಮಮತಿಗೆ ನಾಂಗಳ್ ನಿಜಿಯ ತೆಜಿಯೆ ಬಣ್ಣಿಸೆಮಾದಿತ್ಯಂಗೆ ಸೊಡರೆತ್ತುವೀ ಗಾಂಪಿಂಗಾಗರಮಾಗಿ ತೋಜೆಗೆ ನೀರಡುಕುವವೋಲ್ (ಅಜಿಪು. ೬-೭೯); ಭೂತಳಾಧಿಪತಿಗೆ ಯಮಜಾತನಿಗೆ ಸಹಿತ ಸೊಡರೆತ್ತಿತು ಸುವಾಸಿನಿಯರು (ತುರಂಗ. ೮೦-೪೮). [ಸೊಡರ್ + ಎತ್ತು₁]

**ಸೊಡರ್ಕುಡಿ** 'ಸೊಡರ್ಗುಡಿ' ನೋ.

**ಸೊಡರ್ಗಂಬ** 'ಸೊಡರ್ಗಂಭ' ನೋ.

**ಸೊಡರ್ಗಂಭ, ಸೊಡರ್ಗಂಬ** (ನಾ). ದೀಪದ ಕಂಬ; ಸೊಡಲು: ನಾರಿಯರು . . . ಸಹಸ್ರ ಸೊಡರ್ಗಂಭಗಳ ನಿಲಿಸಿ (ನವವೋ. ೧೮-೪೧). **ಸೊಡರ್ಗಂಬ**: ನೋಟಕಚ್ಚರಿವೆತ್ತ ಸೊಡರ್ಗಂಬದಲ್ಲಿ ವಿರಾಟದೀಪ್ತಿಗಳೊಪ್ಪಿದುವು (ಮೋಹತ. ೨೧-೪).

[ಸೊಡರ್ + ಕಂಭ]

**ಸೊಡರ್ಗುಡಿ, ಸೊಡರ್ಕುಡಿ** (ನಾ). ಉರಿಯುತ್ತಿರುವ ದೀಪದ ತುದಿ,— ಜ್ವಾಲೆ: ತುಂಗಗಿರಿಶಿಖರದಿಂದಂ ಲಂಗಿಸಿ . . . ಪೊಂಗಿ ಸೊಡರ್ಗುಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಕಾವ್ಯಸಾ. ೧೧೧೪ ಶೂದ್ರಕ); ಬೆಳಗುವ ಸೊಡರ್ಗುಡಿ ಕಿಡೆ ಮನೆಯೊಳಗೆ ತಮಂ ಪರ್ವುವಂತೆ ಜೀವಂ ತನುವಿಂ ತಳರಲೊಡಂ ವಿಚ್ಛಾಯತೆಗೊಳಗಾದುವು ತೊಳಗುವವರ ಸೌಂದರತನುಗಳ್ (ಆದಿಪು. ೫-೨೭); ಪೊನ್ನೆಂದೊಡೆ . . . ಮರಂಗಳುಂ ಸೊಡರ್ಗುಡಿಯುಂ ತಾನ್ನಿರುತಮೆಱುಗುಗುಂ (ಪಂಚತಂ. ೧೫೭- ೪೫೫). **ಸೊಡರ್ಕುಡಿ** : ಕಣ್ಣೇನೆಯಿರ್ಪವನಿದಿರ್ ಸೊಡರ್ಕುಡಿವಿಡಿಯದಿರ್! (ಶ್ರೀರಾಮಾ. ೮೪೩-೪೫೫). [ಸೊಡರ್ + ಕುಡಿ₂]

**ಸೊಡರ್ಗುಡಿಕಪ್ಪು** (ನಾ). ದೀಪದ ಕುಡಿಯಿಂದ ಹೊರಡುವ ಹೊಗೆಯ ಕಪ್ಪು,— ಮಸಿ; ಕಾಡಿಗೆ: ಕುಡಿವೆರಳೊಳಂಟುವಕ್ಕಿಂದಿಡುವರ್ ಬಾಳಗ್ಗೆಯಾ ಸೊಡರ್ಗುಡಿಕಪ್ಪಂ (ಸೂಕ್ತಿಸು. ೮-೧೮೮). [ಸೊಡರ್ಗುಡಿ + ಕಪ್ಪು₄ (< ಕರ್ಪು₁)]

**ಸೊಡರ್ಗೆಡು** (ಕ್ರಿ). ದೀಪವು ನಂದಿಹೋಗು; ಕತ್ತಲಾಗು: ಅಂಗಡ ಸೊಡರ್ಗೆಟ್ಟ ದೇಗುಲದೆಡೆಯ ದುಸ್ಸಂಗದಂಪತಿಗಳೊಪ್ಪಿದರು (ಮೋಹತ. ೧೮-೨೩).

[ಸೊಡರ್ + ಕೆಡು₁]

**ಸೊಡರ್ಗೊಳ್** (ಕ್ರಿ). ದೀಪವನ್ನು ಹಿಡಿದುಕೊಳ್ಳು: ಲೀಲೆಯನಿರ್ದಮ್ಮೆಱೆಯನ ನದೇಕೆ ಸೊಡರ್ಗೊಂಡಱಸುತ್ತುಂ ಬಂದು ಕೊಂದೆಯಕಟ ವಿಧಾತ್ರಾ (ಜಗವಿ. ೭-೧೧೦).

[ಸೊಡರ್ + ಕೊಳ್₁]

**ಸೊಡರ್ಮಡ್ಡಿ** (ನಾ). ಒಂದು ಬಗೆಯ ಬೇಟೆಯ ಸಾಧನ (?) ; ''ಸೊಡರ್ = ಭ್ರಾಂತಿಯನ್ನುಂಟುಮಾಡುವ ದೀವಿಗೆ'' (ಶಬಶಂ. ಟೀಕು): ಗಾಳಂ ಕಿಱುಗೂಳಿ ಬೀಸುವಲೆ ಬೆಳ್ಳಾರಂ ಸೊಡರ್ಮಡ್ಡಿ ಕರ್ಪಡಂ . . . ಪೇರಡಿ ಖಿಡ್ಡಂ ಬಡಿಕೋಲ್ಗಳೊಪ್ಪೆ ಜವದಿಂದೆಲ್ತಂದರಾ ಧೀವರರ್ (ಶಬಶಂ. ೩-೨೩). [ಸೊಡರ್ + ಮಡ್ಡಿ₂]

**ಸೊಡರ್ವಕ್ಕು** (ನಾ). = ಸೊಡರ್ಗುಡಿಕಪ್ಪು: ಲಲಾಟದೊಳ್ ತಿಲಕಮಂ ಸೊಡರ್ವಕ್ಕಿನೊಳಿಟ್ಟು (ವಾಲ್ಲಿಪು. ೩-೧೧೩); ಸೊಡರ್ವಕ್ಕು ನೊಸಲೊಳೆಸೆದಿರೆ . . . ಮಗಂ ಜಗುಱುತ್ತಿಂದೊ ತೊಟ್ಟಿಲಂ ಪಟ್ಟೊದೆವಂ (ಪುಷ್ಪಪು. ೩-೯೧); ಸೊಡರ್ವಕ್ಕಿನ ಬೊಟ್ಟ ಸುತನ ಪಣೆಯೊಳಗೆ ಇಟ್ಟು ತೂಪಿಱಿದು (ಚಂಪ್ರಸಾ. ೩-೧೧೪).

**ಸೊಡರ್ವಕ್ಕನಿಡು** = (ದೃಷ್ಟಿದೋಷಪರಿಹಾರಕ್ಕಾಗಿ ಮಕ್ಕಳಿಗೆ) ದೀಪದ ಮಸಿಯಿಂದ ಬೊಟ್ಟನ್ನಿಡು; ರಕ್ಷೆ ಇಡು: ಪುಟ್ಟಿದುದೀ ಶುಕಶಾಬಂ . . . ನಿವಳಿಸಾದರದಿಂ ಸೊಡರ್ವಕ್ಕನಿ[ಪಾಠಾಂ. ರಕ್ಕೆಯಿ]ಟ್ಟು ತೂಪಿಱಿ (ಲೀಲಾವ. ೧೪-೧೨೦).

[ಸೊಡರ್ + ಪಕ್ಕು₁]

**ಸೊಡರ್ವಟ್ಟು** (ನಾ). ದೀಪದ ಕಾಡಿಗೆಯಿಂದ ಹಣೆಗೆ ಇಡುವ ಬೊಟ್ಟು: ಕಣ್ಣಿಗೆ ಕಜ್ಜಳವೆಚ್ಚಿ ಬಣ್ಣಿಸಿ ಸೊಡರ್ವಟ್ಟನಿಟ್ಟು ಪಾಲೆಱೆದೋವಿ ಚಿಣ್ಣನ ಪಕ್ಕೆಗೈಸಿದಳು (ಮೋಹತ. ೪-೭೪). [ಸೊಡರ್ + ಬಟ್ಟು]

**ಸೊಡರ್ವಾವು** (ನಾ). ದೀಪವನ್ನು ತಲೆಯಲ್ಲಿ ಧರಿಸಿರುವಂತೆ ಕಾಣುವ ಹಾವು; ಹೆಡೆಯಲ್ಲಿ ರತ್ನವಿರುವ ಹಾವು: ಸೊಡರ್ವಾವೆನಿಪ್ಪ ಪೆಡೆವಣಿಯ ಸರ್ವಾಂಗಳಿಂದಾರಾಧ್ಯಮಾನೆಯವೊಲಂತೆಸೆದು ತೋರ್ಪಳಂ . . . ಚಂಡಿಕಾದೇವಿಯಂ ಕಂಡನುರ್ವೀಶ್ವರಂ (ಕಾದಂಉ. ೨೭೦). [ಸೊಡರ್ + ಪಾವು₁]

**ಸೊಡರ್ವಿಡಿ** (ಕ್ರಿ). ದೀಪವನ್ನು ಹಿಡಿ: ಇತ್ತ ಬಿಡೊಳು ನಿಂದಿಹ ಜೀವರನ್ನದ ಪುತ್ತಳಿಗಳು ಸೊಡರ್ವಿಡಿದು . . . ಚಿತ್ರಯಿಸಿರುವಲ್ಲಲ್ಲಿ (ಪೋಹತ. ೨೨-೯).
[ಸೊಡರ್ + ಪಿಡಿ₁]

**ಸೊಡರ್ವೆಳಗು** (ನಾ). ದೀಪದ ಬೆಳಕು,— ಕಾಂತಿ: ಸೊಡರ್ವೆಳಗಂ ಮುಸುಕಿದನಾಗಡೆ ತನ್ನಯ ತನು ತಮಾಳರುಚಿಯಿಂದಂ (ಅರ್ಧನೇ. ೬-೪೪); ಸೊಡರ್ವೆಳಗ ನೀಕ್ಷಿಸಿ ನಗುವನಮಲಚಿತ್ರಕಾಶಂ (ಪದ್ಮರಾ. ೨-೬೭); ಸೂಸಿದರಲ ನಿಕುರುಂಬಂಗಳೇ ಮಾಱುವಾಲಿವರಲು ಆರತಿಯ ಸೊಡರ್ವೆಳಗು ಬಳ್ಳಿಮಿಂಚು (ಸೌಂದಪು. ೧೨-೩೫).
[ಸೊಡರ್ + ಬೆಳಗು₂]

**ಸೊಡಲಿ₁** 'ಸೊಡರಿ' ನೋ.

**ಸೊಡಲಿ₂** (ನಾ). ದೀಪದ ಕಂಬ; ಸೊಡಲು(?): ರತ್ನಾವಲಿ ಮಾಡಿಸಿ ನನ್ದಿಯೊಳ್ ಶಿವಾಲಯಂ ಕೊಟ್ಟುದು ದೇವಭೋಗಂ ಸೊಡಲಿಯಮನಾ ವೈಶಾಖಪೌರ್ಣ್ಣಮಿಯೊಳ್ (ಎಕ. X (S), ಚಿಕ್ಕಬ. ೬೬-೧೫; ಸು. 850). [< ಸೊಡರ್?]

**ಸೊಡಲು** 'ಸೊಡರ್' ನೋ.

**ಸೊಡಲೆ** (ನಾ). ಹೆಣಗಳನ್ನು ಸುಡುವ ಸ್ಥಳ; ಸುಡುಗಾಡು: 'ಸೊಡಲೆಸಿದ್ಧ' ಪರಾ. [ದೇ. ‖ ತಮಿ. ಚುಟಲೈ; ಮಲ. ಚುಟಲ, ಸುಡಲೆ = ಹೆಣವನ್ನು ಸುಡುವುದು]

**ಸೊಡಲೆಗುಡ್ಡೆ** (ನಾ). (ಕರಾ) ಶ್ಮಶಾನ. [ಸೊಡಲೆ + ಗುಡ್ಡೆ (< ಗುಡ್ಡ₂)]

**ಸೊಡಲೆಸಿದ್ಧ** (ನಾ). ಶ್ಮಶಾನದಲ್ಲಿ ವಾಸಿಸುವ ಸಿದ್ಧ; ಭೈರಾಗಿ: ಬರಿಯ ಜಾತಕದ ಬೆನ್ನುಹತ್ತಿ ಈ ಸೊಡಲೆಸಿದ್ಧನ ಕೊರಳಿಗೆ ಕಟ್ಟಿದರು (ಮೂರುದಾ. ೬೫).
[ಸೊಡಲ + ಸಿದ್ಧ]

**ಸೊಡಸಿ** 'ಸೊಳಸಿ' ನೋ.

**∆ ಸೊಡಱ್** 'ಸೊಡರ್' ನೋ.

**ಸೊಡಿಗೆ** 'ಸೋಡಿಗೆ' ನೋ.

**ಸೊಡಿಲು** 'ಸೊಡರ್' ನೋ.

**ಸೊಡೆ** (ನಾ). ಕಾವು; ಬಿಸುಪು; ಶಾಖ: ಬೇಗೆಯ ಅಳವಿನಲಿ ಹೂಕ್ಕು ಮತ್ತೆ ಸೊಡೆಗಂಜಲೇಕೆ (ಮೋಲಮಾ. ೫೦-೨೦೭). [< ಸೂಡು₃?]

**ಸೊಡ್ಡಳ** (ನಾ). ಶಿವ: (೩). [?]

**ಸೊಡ್ಡು₁** (ಗು). ವಿಕಾರವಾದ; ನ್ಯೂನತೆಯಿಂದ ಕೂಡಿದ: ಗುಜ್ಜುಗೊರಲಿನ ಸೊ[ಪಾಠಾಂ. ಗಿ]ಡ್ಡುರೂಪಿನ ಹಱುಕುಗಡ್ಡದ ಹಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ (ನಳಚ. ೬-೧೪). [<— ತೆಲು. ಸೊಡ್ಡು = ನ್ಯೂನತೆ, ಕೊರತೆ]

**ಸೊಡ್ಡು₂** 'ಸಡ್ಡು₁' ನೋ.

**ಸೊಡ್ಡು₃** (ನಾ). ಮುಖ; ಮೋರೆ; ಮುಸುಡಿ: ದೇವರು ನನ್ನ ಮಗಳಿಗೆ ದುಂಡಗಿನ ಸೊಡ್ಡನ್ನು ಕೊಡುವ ಬದಲು ದುಡ್ಡಿನ ಸೊಡ್ಡನ್ನು ಕೊಡಬಾರದಿತ್ತೇಕೆ? (ಹಸಿವು. ೭೦); ಇದು ತನ್ನ ಸೊಡ್ಡಿನಿಂದ ಯಾವುದಾದರೂ ಪ್ರಾಣಿಯನ್ನು ಸೊಣೆಯಿತೆಂದರೆ, ದೊಡ್ಡ ಸುತ್ತಿಗೆಯ ಏಟಿಗಿಂತಲೂ ಬಲವಾದ ಏಟು ಬೀಳುವುದು (ಬಾಲಪ್ರ. I, ೧೯); ತಗ್ಗಿಸಿದ ಸೊಡ್ಡು ನೋಡಿ 'ಭೇಷ್' ಎನ್ನಬೇಕೆನಿಸಿತು (ಪ್ರಶ್ನೆ. ೨೫). [< ಸೊಂಡೆ₂]

**ಸೊಣಕ** 'ಸೊಣಗ' ನೋ.

**ಸೊಣಗ, ಸುನಕ, ಸೊಣಕ** (ನಾ). ನಾಯಿ; ಶ್ವಾನ: "ಪೇರಡಿ, ಸೊಣಗಂ, ಜಾಯಿಲಂ — ಈ ೩ ಕುಕ್ಕುರಂ" (ಕಶಸಾ. ೫೦-೧೦೮); ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆನ್ನ ಬಾಳುವೆ (ಬಸವ. ೩೫); ಇವನೀ ವಿಧಿಯೊಳು ಸೊಣಗನುಣಿಸಾದನಲ್ಲಾ (ಸಮ್ಯಕಾ. ೪-೩೨). **ಸುನಕ** : ಮುಂಗುರಿ ಬೆಕ್ಕು ಸುನಕ[ಪಾಠಾಂ. ಮಾರ್ಜಾರಂ, ಸಾರಂಗಂ] . . . ಗಿಡಿಗನೆಂಬಿವ ದಳ್ಳೀವಂಗಳ್ಗೆ ಬಾಧೆ ಮಾಣ್ಬುವು (ಸಮಪ.೫-೧೩). **ಸೊಣಕ**: ಶಾರ್ದೂಲಮಂ ತೋರೆ . . . ಬೆಂಬತ್ತಿ ಪಿಡಿದರ್ಪ ಸೊಣಕಗಳ ಸಂತೆಗಳ್ ಕಂಗೊಳಿಪುವು (ವೆಂಕಾರಾ. ೩-೬-೪೧). ಸೊಣಕನು ಬೆದಕುತೆ ಮೊಲವನು ಕಂಡು ರೋಷದಿಂ ಬಿಡದಟ್ಟಿ ತರನು (ಇಚಿಸಾಂ. ೬-೭೦). [< ಪ್ರಾ. ಸುಣಗ, ಸುಣಯ./ ಸಂ. ಶುನಕ./ ಪಾಲಿ. ಸುನಖ]

**ಸೊಣಱು, ಸೊನರು** (ನಾ). ೧. "ಪೃಷ್ಠಭಾಗ" (ಯಶೋಚ. ೩-೬೯ ಟೀಕು): ಸೊಣಱಿಂ[ಪಾಠಾಂ. ಡರಿಂ] ಮುಡುಪಿಂದಂ ಪಿಂತಣ ಮುಂತಣ ಕಾಲ್ಗಳಲ್ಲಿ ಬೆಟ್ಟಿಸಿ ದಸಿಯಂ ನೆಣಮುರ್ಕೆ ಬೆಂಕಿಯಿಂ ಕೆಟಗಣ ಮೆಯ್ಯಿಂದುರುಪಿ ಬರಿಯ ಬಾಡಂ ತೆಗೆದಂ (ಯಶೋಚ. ೩-೬೯); ತೃಣಕೆ ಲೆಕ್ಕಿಸದಸುರನವನನು ಸೊಣಱು[ಪಾಠಾಂ. ಸು,ಲು] ಮುಱಿಯಲು ತಿವಿದನಾಯುಧದಣಸಿನಲಿ (ತೊರರಾ.೬-೨೭-೪೭). **ಸೊನರು** : ೨. (ಕರಾ) ಸೊಂಟ. [?]

**ಸೊಣೆ₁** (ಕ್ರಿ). ೧. ಮುಷ್ಟಿಯಿಂದ ಹೊಡೆ,— ಪೊಟ್ಟು: "ಸೊಣೆ - ಅಂಗುಲಿಪ್ರಹರಣೇ" (ಶಮದಾ); ಕರತಳದಿಂದೆ ತಡಕಿ ಕಂಡನ್ನ ತಲೆಯಂ ಸೊಣೆದುದಕವ ಪೊಣಿಸಿದನಾತನು (ಪಾಸೋಪು. ೧೧-೨೯); ನೆತ್ತಿಯನು ಸೊಣೆದೆಲ್ಲಿಯವ ಹರಿ ಚಿತ್ತವಿಟ್ಟೋದೆಂದು . . . ಬರಸುತಲಿರ್ದನಾಚಾರ್ಯ (ಪ್ರಹ್ಲಾಚ. ೬-೪೪). ೨. ಹೊಡೆದುಕೊಳ್ಳು; ಚಚ್ಚಿಕೊಳ್ಳು: ದುರುಳರಕ್ಕಸರೆಲ್ಲ ಪರಿದ ಶಿರ ಕಾಲ್ಗಳಿಂದುರುಳಿರಲು ಧರಣಿಯೊಳು ಕಂಡವರ ಸತಿಯರುಂ ತಲೆಗೆದರಿ ತಲೆಯ ಸೊಣದು ತರತರದೊಳಳುತಳುತ (ವೆಂಕಾರಾ. ೫-೯-೨೮). ೩. ಇರಿ; ತಿವಿ; ಚುಚ್ಚು: ನಿದ್ರಿಸುವ ಮೃತ್ಯುವಂ ಸೊಣೆದೆಬ್ಬಿಸಿದ ರೀತಿಯಾಯ್ತು (ವೆಂಕಾರಾ. ೬-೨೯-೧೭); ಶಲ್ಯ ಕಡುಗೋಪದಿಂ ತೂರಿದಂ ಶರಗಳಂ . . . ಭಟರ ಹೃದಯಂಗಳಂ ಸೊಣದು ಹಾಯ್ದುವು (ತುರಂಗ. ೭೧-೬೫); ಮಾವಯ್ಯ ಎಮ್ಮೆ ಸೊಣೆದಾವೂ (ಹಳ್ಳಿಪ. ೧೦೯). ೪. ಕುಟುಕು; ಕುಕ್ಕು: ಸಿಟ್ಟು ಬಂದಾಗ ಅದು ತನ್ನ ಹಡೆಯಿಂದ ಇತರ ಪ್ರಾಣಿಗಳ ಮೈಯನ್ನು ಸೊಣೆದು ಬಿಡುವುದು. ಆಗ ಅದರ ಮುಂದಿನ ದವಡೆಯ ಮೊನಚಾದ ಎರಡು ಹಲ್ಲುಗಳು ಗಾಯಮಾಡುವುವು (ಬಾಲಪ್ರ. I, ೧೭). ೫. ತೋರುಬೆರಳುಗಳೆರಡನ್ನು ಸೋಟೆಯಲ್ಲಿಟ್ಟುಕೊಂಡು ಅವುಗಳಿಂದ ಯಾರನ್ನಾದರೂ ನಿರ್ದೇಶಿಸಿ ಅಣಕಿಸು,— ಹಾಸ್ಯಮಾಡು: (೩). ೬. ನೂಕು; ತಳ್ಳು: ಕಣೆಕಾಲಿಡುವಡಿಯಿಂ ಸೊಣಗಂಗಳ ಸೊಣವುತ ಮರುಳ್ಗಣಗುಗಳು ಒಣದಲೆವೋಡ ಹಿಡಿದು ರಕ್ಕಸರುಂಬ ಹೆಣನ ಭಿಕ್ಷವ ಬೇಡುತಿಹುವು (ಶ್ರೀಪಾಲ. ೮-೧೭).

**ಸೊಣೆ₂** (ನಾ). (ಬೆಟ್ಟದ ಮೇಲಿರುವ) ಸ್ವಾಭಾವಿಕವಾದ ಹೊಂಡ; ದೊಣೆ: ಕೊಲಿಗನ್ಮೇಲ ಹಾರಜೆವ ಇಟ್ಟಗೆ ಸೊಣೆ ಎ ಬಡಗ್ಗ ನಿಟ್ಟರುಳಿ ಎ ಕರದಿ ಗುಱುಕಿ ಮೇಲ ಕೋಡುಬ್ಬಲ್ ಮೂಡ್ಯ ನೋಡಿ (ಎಕ. X (S), ಚಿಕ್ಕಬ. ೬೬-೨೦; ಸು. 850); ಆ ಪಳ್ಳದಿಂ ಮೂಡಣ ಕಿಱುವಟ ತೆಂಕ ಬಣ್ಣಾಲ್ಕಱಲ ಸೊಣೆ (ಎಇ. X, ೬೬-೯೩; 892). 'ದೊಣೆ₁' ಪರಾ. [ದೇ. ‖ ತಮಿ. ಚುಣೈ, ಚುನೈ; ತೆಲು. ಸೊನ]

**ಸೊಣೆಗಲ್ಲು** (ನಾ). ಕಲ್ಲನ್ನು ಮೇಲಕ್ಕೆ ಎಸೆದು ಹಿಡಿಯುವ ಒಂದು ಬಗೆಯ ಆಟ(?): ಎಳೆವೆಣ್ಣುಗಳು ಕಣುಮನ ದಣಿವಂತು ಸೊಣೆಗಲ್ಲು ಮೊದಲಾಗೆಸವ ಗಣನೆಗಳಿಯೊಳೊಂದಿ ಸುಖದೊಳಗಂಜನೆಯಿರುತಿರಲು (ಅಂಜಚ. ೪-೫೮). 'ಅಣ್ಣೆಕಲ್₁' ಪರಾ. [ಸೊಣೆ₁? (IP <— ತಮಿ. ಚುಣ್ಣು = ಗೋಲಿ ಮುಂತಾದುವನ್ನು ಬೆರಳಿನಿಂದ ಎಸೆ,- ಚಿಮ್ಮು) + ಕಲ್ಲು (< ಕಲ್₃)]

**ಸೊತೆ** 'ಸೊದೆ' ನೋ.

**ಸೊತೆವಳಿ** 'ಸೊದೆವಟಿ' ನೋ.

**ಸೊತೆವಳಿಯಿಸು** (ಕ್ರಿ). ಸುಣ್ಣಹಚ್ಚಿಸು,— ಬಳಿಸು: ಮುದದೆ ವಿರೂಪಾಕ್ಷಗೃಹಕ್ಕೆ . . . ಭೈರವಗೃಹಕ್ಕುದಾರಿ ಚೌಡಯ್ಯನೆಸೆಯೆ ಸೊತೆವಳಿಯಿಸಿದಂ (ಸೌಇಇ. IV, ೨೮೦-೬೪; 1199). [ಸೊತೆವಳಿ (< ಸೊದೆವಟಿ) + - ಇಸು₃]

**ಸೊತ್ತ, ಚೊತ್ತ** (ನಾ). ಸೊಟ್ಟ ಕೈಕಾಲುಳ್ಳವನು; ಅಂಗಹೀನ: ಕುರುಡನು ಕಿವುಡನು ಸೊತ್ತನು (ಹೊಸುಗ. ೯೯); ಹಲ್ಲಿಲ್ಲದ ಮನುಷ್ಯನೊಬ್ಬ . . . ಉದ್ದನೆಯ ಬಿಳಿಯ ಸೊತ್ತ ಮತ್ತೊಬ್ಬ (ಪುನರು. ೩೦೧). **ಚೊತ್ತ** : (೩).
[ಸೊತ್ತು₁ + - ಅ₇]

**ಸೊತ್ತಿ, ಚೊತ್ತಿ** (ನಾ). ಸೊಟ್ಟ ಕೈಕಾಲುಳ್ಳವಳು; ಅಂಗಹೀನೆ: ಕುರುಡಿ ಕಿವುಡಿ ಸೊತ್ತಿ (ಹೊಸುಗ. ೯೯). **ಚೊತ್ತಿ** : (೩). [ಸೊತ್ತ + - ಇ₂]

**ಸೊತ್ತಿಯೂರ್** (ನಾ). ಒಂದು ಸ್ಥಳದ ಹೆಸರು: ಸೊತ್ತಿಯೂರರೆಯಮ ದಮ್ಮಯ್ಯನ ಮಗ ಶ್ರೀವರ್ಮ್ಮಯ್ಯ ಕಣ್ಣಮಬ್ಬಲದೊಳ್ ಬಸದಿ ಮಾಡಿಸಿ (ಎಕ. X, ಕೋಲಾರ. ೯೦-೮೮; 903). [? + ಊರ್]

**ಸೊತ್ತು₁, ಚೊತ್ತು** (ನಾ). ಕೈಕಾಲು ಸೊಟ್ಟಗಿರುವುದು; ಅಂಗವಿಕಲತೆ:

ಕುಂಟು ಕುರುಡು ಕಿವುಡು ಸೊತ್ತು (ಹೊನುಗ. ೯೯); ಓಡು ಒಡಕು ಹುರುಳಿ ಪೋಟೆ ಹುರಿವಾಕೆಯ ಕೈ ಸೊತ್ತು (ಘನವ. ೩೫-೨೭). **ಚೊತ್ತು** : ಅವನ ಕೈ ಚೊತ್ತಾಗಿದೆ (ರೂಢಿ). 'ಸೊಟ್ಟು$_2$' ಪರಾ. [ದೇ. ‖ ತಮಿ. ಚೊತ್ತು, ಚೊತ್ತಿ, ಚೊತ್ತೈ]

**ಸೊತ್ತು$_2$, ಸ್ವತ್ತು** (ನಾ). ಸ್ವಂತ ಆಸ್ತಿ,– ಸಂಪತ್ತು,– ಐಶ್ವರ್ಯ: ಕನಸಿ ನೋಳ್ಪೊನ್ನ ರಾಶಿಯಂ ಚನ್ನಾಗಿ ಕಂಡುದಾ ಸೊತ್ತದೆಂದಳಲುವರೆ (ತುರಂಗ. ೯೭-೨); ದೇವಾಲಯಗಳು ವ್ಯಕ್ತಿಯ ಆಸ್ತಿಗಳಲ್ಲ. ಸಮಾಜದ ಸೊತ್ತು (ಹಬ್ಬಬ. ೨೭). **ಸ್ವತ್ತು**: ಇವಿಷ್ಟು ಅಮರನಾಯಕನ ಸ್ವತ್ತು (ವೀರಯೋ. ೨೦); ಉತ್ತಮಶಿಕ್ಷಣ ವ್ಯಕ್ತಿಯ ವೈಯಕ್ತಿಕಜೀವನದ ದಾರಿದೀಪವಾಗಿ ನಾಡಿಗೆ, ನುಡಿಗೆ ಸ್ವತ್ತಾಗುತ್ತದೆ (ನೊಳಂಬ. ೯೫).

[< ಸಂ. ಸ್ವವತ್./ ತಮಿ. ಚೊತ್ತೈ, ಚೊತ್ತು, ಸೊತ್ತು; ತುಳು. ತೆಲು. ಸೊತ್ತು]

**ಸೊತ್ತುಗಾರ** (ನಾ). ಆಸ್ತಿಯ ಯಜಮಾನ: ಡ್ರೈವರಿಗೆ ಅದರ ಸೊತ್ತುಗಾರನ ನೆನಪು ಬಂದಿತು (ಹಸುಹೊ. ೧೪೩). [ಸೊತ್ತು$_2$ + -. ಗಾರ (< – ಕಾಱ)]

**ಸೊತ್ರ, ಶೊತ್ರ** (ನಾ). ವೇದಾಧ್ಯಯನ ಮಾಡಿದ ಬ್ರಾಹ್ಮಣರಿಗೆ ತೆರಿಗೆಯಿಲ್ಲದೆ ದಾನವಾಗಿ ಕೊಡುವ ಭೂಮಿ: ಶ್ರೀಸಿದ್ಧಸೋಮನಾಥದೇವರಿಗೆ ೫೦ ಚತ್ರಕ್ಕೆ XX ಯಿಹದೆ ಸೊತ್ರವ ಕೊಟ ಅಯಿವರು (ಸೌಇಇ. IX-i, ೩೭೦-೧೧; 1255). **ಶೊತ್ರ**: ವುತ್ತವೂರ ಮಲ್ಲಿಕಾರ್ಜುನದೇವರ ಶೊತ್ರವನು ಅಂಗಭೋಗ ಅಮ್ರಿತವಡಿಗೆ ಲಿಂಗದೇವರಾಣೆಯನ ನಿರೂಪದಿಂ ಶ್ರೀಮತು ಸರ್ವ್ವಾಧಿಕಾರ ಜಕ್ಕರಸರು . . . ಕೊಟ್ಟರು (ಸೌಇಇ. IX-i, ೩೮೩-೩; 1286).

[< ಸಂ. ಶೋತ್ರಿಯಸ್ವಮ್./ ತಮಿ. ಚೋತ್ತಿರಿಯಮ್, ಚುರೋತ್ತಿರಿಯಮ್]

**ಸೊಥೆ$_1$** 'ಸತ$_4$' ನೋ.

**ಸೊಥೆ$_2$** 'ಸೊದೆ' ನೋ.

**ಸೊಥೆವೊಯ್** (ಕ್ರಿ). ಗಾಯವಾಗುವಂತೆ ಪೆಟ್ಟುಕೊಡು: ಸತ್ತವನಿವನೆಂಬ ಪದದೊಳ್ ನೆತ್ತಿಯೊಳಂ ಶಸ್ತ್ರದಿಂದೆ ಸೊದೆEಥೆ3ವೊಯ್ದಡೆ [ಪಾಠಾಂ. ಶತೆವೊಯಿದೆಡೆ] ಯೊಳ್ ನೆತ್ತರುಮುಣ್ಮೆನಮದನಿರದೊತ್ತುಗೆ (ಖಮುದ. ೮-೫೪); ಸೊದೆEಥೆ3 [ಪಾಠಾಂ. ಶತೆ]ವೊಯ್ದಾಮ್ರಸಮೇತಂ ವ್ಯಥಿತನ ನೆತ್ತಿಯೊಳಮೊತ್ತಲಂತಾ ವಿಷಮುಂ ವ್ಯಥೆಯಾಗಿಯೆ ಪೋಕುಂ (ಖಮುದ. ೮-೫೭); ಸತ್ತನಹಿಕೊಂಡುದೆಂದಾ ಪೊತ್ತೊಯ್ದು ಚಿತಾಗ್ನಿಯಲ್ಲಿ ಸಂಧಿಸುವೆಡೆಯೊಳ್ ಮತ್ತನಿಸದೊಂದು ನಯಮಂ ಬಿತ್ತರಿಸುವೆನವನ ತಲೆಗೆ ಸೊಥೆ[ಪಾಠಾಂ. ಶತೆ]ವೊಯ್ದೊಲವಿಂ (ಖಮುದ. ೮-೬೦).

[ಸೊಥೆ$_1$ (< ಸತ$_4$) + ಪೊಯ್$_1$]

**ಸೊದೆ, ಶೋತೆ, ಸುದೆ, ಸೊತೆ, ಸೊಥೆ$_2$, ಸೋತೆ** (ನಾ). ೧. ಅಮೃತ; ಪೀಯೂಷ: "ಅಮರ್ದು, ಸೊದೆ, ಇನಿದು, ಉಣ್ಣದರ ಬೀಯಂ– ಈ ೪ ಅಮೃತಂ"(ಕಶಸಾ. ೪೮-೧೮); ಪೊಸಸೊದೆ ಕೌಮುದಿಯಂ ಪಸರಿಸೆ . . . ತರತರದಿಂದಂ ರಾಜಿಸುತಿರ್ಪುವು ಸೋಮಸೂರ್ಯವೀಥಿಗಳದಱೊಳ್ (ಗಿರಿಕ. ೨-೮೨); ಲಭಿಸಿದ ಸೊದೆಯಂ ಮಾಣ್ದೊಷರಾಂಬುವಂ ಕಾಮಿಪರೇ (ವಿಷ್ಣುಪು. ೧-೧-೧೫); ಸೊದೆಯಂ ಸಪ್ಪೆಯೆನಿಪ್ಪ ತಾನದಿರವಂ ಕೇಳ್ದಾ ರಸಾವೇಶದೊಳ್ ಪದಪಿಂ ಮೆಯ್ಯೊಡೆಗೆಲ್ಲ ಮಣ್ಪಡಲುಂ ಮಗುಟ್ದೀಂಟಲುಂ . . . ಪೂಣ್ದಪರ್ (ಚಕವಿ. ೪-೧೨೮). ೨. ಹಾಲು; ಕ್ಷೀರ: "ಸೊದೆ ಪಾಲೊಳ್" (ಕರ್ಣಾನಿ. ೧೧); ಸೊದೆಯನೀಂಟುವ ರಾಜಹಂಸನ ಮಱಿಗೆ ಮೇವಿದೆಯ ತೋಱಿದಡೆ ಪೀರ್ದಪುದೆ (ಮೋಹತ. ೩೦-೨೧). ೩. ಸುಣ್ಣ, ಗಾರೆ, ಗಚ್ಚು ಮುಂತಾದ ಲೇಪನವಸ್ತು: "ಸೊದೆ ಲೇಪಂ" (ವಸ್ತುಕೋ. ೧೨೦-೧೪); ಪರ್ವ್ವಪರ್ವ್ವಕ್ಕೆಯಿಕ್ಕುವ ಸೊದೆವೊಳಗಾದ ಜೀರ್ನ್ನೋದ್ಧಾರಕ್ಕೆ ಗ ೫ ಕ್ಕೆ ತೆಱುವ ವ್ರಿತ್ತಿ ೨ ( ಎಕ. XV, ಹೊಳೆನ. ೧೧೨-೬೧; 1282); ಬಳಿದ ಸೊದೆಗಳ ಬಾವಿ ನೂಱಱ ವಳಯ ತುಂಬಿತು ತೈಲ ಘೃತ ಮಧುಗಳಲಿ (ಕುವ್ಯಾಸ. ೬-೧೭). **ಶೋತೆ** : ೩. ಅಯ್ದುವರಿಸ ಕಂಮ್ಮ ಶೋತೆ ಇಕ್ಕದೆ ಸ್ಥಾನಮನಾಳ್ದೊರು . . . ಪಞ್ಚಮಹಾಪಾತಕರಪ್ಪೊರ್ (ಎಕ. XIV, ಮಂಡ್ಯ. ೧೩-೧೪; 895). **ಸುದೆ**: ೩. "ಸೊದೆ (ಸುದೆ)– ಸುಧಾ = ಸುಣ್ಣ, ಗಾರೆ" (ತದ್ಭಕೋ. ೪೭). ೪. ಜೇನು; ಮಕರಂದ: 'ಸುದೆವೆರೆ' ಪರಾ. **ಸೊತೆ**: ೩. ಇದಕ್ಕೆ ಸುಣ್ಣಕ್ಕೆ ಸೊತೆಗಮಲ್ಲದುಣ್ಡಾತ ವಾರಣಾಸಿಯುಂ ಕವಿಲೆಯನಟಿದ ಕೆಱೆಯ ಬಿತ್ತುವಾಟಮುಂ ಕೆಱೆಗೆ ಕೊಡದುಣ್ಣಮನುಮನ್ತೆ (ಮ್ಯಆರಿ. ೧೯೩೮, ೬೭-೧೦; ಸು. 848); ಸೋಮೇಸ್ವರದೇವರ ದೇಗುಲವ [ಅ]ಳಿವಂ [ಸೋ]ದಿಸಿ ಸೊತೆಯನಿಕ್ಕಿಸಲ್ (ಎಇ. V, ೨೦೭-೧೧; 1048); ದೇವರ ಅಂಗಭೋಗ [ಸೊ]ತೆ ಸುಣ್ಣಕ್ಕೆ ಕೊಟ್ಟರು (ಸೌಇಇ. XI-ii, ೧೯೪-೬; 1120). **ಸೊಥೆ$_2$** : ೩. ರಂಗಮಂಟಪವನೂ ಮರವೆಸನಾಗಿ ಮಾಡಿಸಿ ಸೊಥೆಯನಿಕ್ಕಿಸಿ (ಎಕ. V, ಅರಸೀ.೮-೩೯; 1286). **ಸೋತೆ**: ೩. 'ಸೋತೆವೆಸ' ಪರಾ.

[< ಸಂ. ಸುಧಾ]

**ಸೊದೆಗಡಲ್** (ನಾ). ಹಾಲಿನ ಕಡಲು; ಕ್ಷೀರಸಾಗರ: ಸುರರ್ ಸೊದೆ [ಪಾಠಾಂ. ಸುಧೆ]ಗಡಲಂ ಕರಂ ಕಡೆಯೆ ಪೇಟ್ ವಿಷಮೇಟದೆ (ಅರ್ಜನೇ. ೬-೧೭); ಸಿರಿರಾಣಿಯ ಪೆತ್ತ ಸೊದೆಗಡಲಿಳೆಯ ತಾ ತ್ವರಿಯದಿ ನೋಡಬಂದಂತೆ . . . ಪರಿದಳು ತುಂಗಬೆಳ್ಗಂಗೆ (ಮೋಹತ. ೬-೩೫). [ಸೊದೆ + ಕಡಲ್$_2$]

**ಸೊದೆಗಡಲ್ಗಡೆ** (ಕ್ರಿ). ಕ್ಷೀರಸಮುದ್ರವನ್ನು ಮಥಿಸು ,— ಕಡೆ: ಸೊದೆಗಡಲ್ಗಡೆಯ ಮಂದರಗಿರಿ ಮುಳುಗಿದಡೆ ಕಚ್ಛಪರೂಪಿನಿಂದ್ಧ ಬೆಂಗೊಟ್ಟಾತನೀತ (ಮೋಹತ. ೩೭-೨೩).

[ಸೊದೆಗಡಲ್ + ಕಡೆ$_1$]

**ಸೊದೆಗದಿರ** (ನಾ). ಅಮೃತಕಿರಣಗಳನ್ನು ಹೊಂದಿದವನು; ಸುಧಾಕರ; ಚಂದ್ರ: "ತಣ್ಗದಿರನೆನಲ್ಕೆ ಚಂದಿರಂ ಸೊದೆಗದಿರಂ" (ಕರ್ಣಾನಿ. ೯).

[ಸೊದೆ + ಕದಿರ್$_2$ + - ಅ$_7$]

**ಸೊದೆಗರೆ** (ಕ್ರಿ). ೧. ಅಮೃತವನ್ನು ಸುರಿಸು ,— ವರ್ಷಿಸು: ಎದೆಯೆತ್ತರ ಬೆಳೆ ಬೆಳೆಯಲಿ ತೆನೆ ತೂಗಲಿ ತುಂಬಿ ಸೊದೆಗರೆಯಲಿ ಹೊನ್ನಿನ ಬೆಳೆ ತುಳುಕಲಿ ಕೈತುಂಬಿ (ವಿಜದ. ೩೮-೨೦). ೨. (ಆಲಂ) ಇಂಪನ್ನು ಸೂಸು: ಸೊದೆಗರೆವ ಕಂಠಮಾಧುರ್ಯ ಉಳ್ಳ ಅಪ್ಸರೆಯರೂ ಗಂಧರ್ವರೂ ದನಿಗೂಡಿಸಿ ಹಾಡಿದರು (ಶಾಂತಲಾ. ೨೫೩).

[ಸೊದೆ + ಕರೆ$_2$ (< ಕಱೆ$_1$)]

**ಸೊದೆಗೂಳು** (ನಾ). ಅಮೃತದ ಆಹಾರ; ಅಮೃತಾನ್ನ: ನಿರ್ಜರರ ಹೊಡೆಗೋಲಿನಿಂದೆ ಮನ್ಮಥನೆಚ್ಚ ಮಾತ್ರದೆ ಸೊದೆಗೂಳು ಶೋಧಿಸಿತವಗೆ (ಮೋಹತ. ೨೫-೩೯). [ಸೊದೆ + ಕೂಳು$_2$ (< ಕೂೞ್$_1$)]

**ಸೊದೆಗೆಯ್** (ಕ್ರಿ). ಸುಣ್ಣವನ್ನು ಹಚ್ಚು ,— ಬಳಿ: ವೀಳೆಗೆಯ ಚರ್ವಣಂಗೆಯ್ವುತನು ವಿನಿಂ ಕೇರ್ಗೆ ಕೈಪತ್ತಿರ್ದ ಸುಣ್ಣಮಂ ತೊಡೆಯೆ ಸೊದೆಗೆಯ್ದಪEವೊ3ಲವು ಆದುದು (ಪಾಸೋಪು. ೩-೮೩). [ಸೊದೆ + ಕೆಯ್$_1$]

**ಸೊದೆಗೆಲಸ** (ನಾ). ಅಮೃತವನ್ನು ಪಡೆಯಲು ಮಾಡಿದ ಕಾರ್ಯ: ತೆತ್ತೀಸಕೋಟಿ ವೃಂದಾರಕರುಗಳ ನೆಗ್ಗೊತ್ತಿದ ಸೊದೆಗೆಲಸದಲಿ ಅತ್ಯಂತ ಬಲವಂತ ಖಗರಾಜನೊಡನೆ ಈ ಹೊತ್ತಿಗೆ ಸಮರ ಸಾಕು (ಮೋಹತ. ೩೮-೩೯). [ಸೊದೆ + ಕೆಲಸ]

**ಸೊದೆಗೊಡು** (ಕ್ರಿ). ಅಮೃತವನ್ನು ನೀಡು ,— ಕೊಡು: ಮರಣೋನ್ಮುಖಂಗೆ ಸೊದೆಗೊಟ್ಟು ಕಾವಂತೆ ನುಡಿಸೊದೆಯೊಳೆನ್ನಂ ಪೊರೆಯಲುಜ್ಜುಗಿಪೆ ನೀನಾವನ್ಯೆ (ಶ್ರೀರಾಮ. ೪-೨). [ಸೊದೆ + ಕೊಡು$_1$]

**ಸೊದೆಗೊಳ್** (ಕ್ರಿ). ಅಮೃತವನ್ನು ಪಡೆ ,— ಹೊಂದು: ಕಡಲಂ ಕಡೆದು ಸೊದೆಗೊಂಬಂತೆ ಶಾಸ್ತ್ರದೊಳ್ . . . ಮೂಲಮಂತ್ರದರ್ಥಂಗಳಂ ಸಂಗ್ರಹಿಸಿ (ಚಕವಂ. ೭೬-೧೮). [ಸೊದೆ + ಕೊಳ್$_1$]

**ಸೊದೆಯುಣ್** (ಕ್ರಿ). ಅಮೃತವನ್ನು ಪಾನಮಾಡು ,— ಸೇವಿಸು: ಸೊದೆಯುಂಡು ಸೊಕ್ಕುವ ಜೊನ್ನವಕ್ಕಿಗೆ ಬಿಸುಗದಿರನೂದುವ ಗೈಮೆಯಂತೆ (ಹದಿಬ. ೬-೨೫); ಇದೆ ಬಂದನರಸನೆಂಬೀ ನುಡಿಗೇಳಿ . . . ಸೊದೆಯುಂಡವೊಲು ಗಾಳಿ ಸೊಂಕಿದವೊಲು . . . ಮುದದ ಮುನ್ನೀರೊಳು ಮುಱುಗಿ ತೇಲುತಿದೆ (ಗೀತಗೋ. ೩೨-೧).

[ಸೊದೆ + ಉಣ್]

**ಸೊದೆಯುಣಿ** (ನಾ). ಅಮೃತಪಾನ ಮಾಡುವವನು; ದೇವತೆ: ಸೊದೆಯ ನುಪ್ಪೆಸರ್ಗೆತ್ತು ಸೊದೆಯುಣಿಗಳಂ ಗಣಿಸದಿರ್ಪೆಂ (ಚಕವಂ. ೧೧೭-೩).

[ಸೊದೆಯುಣ್ + - ಇ$_3$]

**ಸೊದೆವನೆ** (ನಾ). ಸುಣ್ಣವನ್ನು ಬಳಿದ ಮನೆ; ಧವಳಾಗಾರ; ಸೌಧ: ಅಸುರನ ಗದೆ ಭೂತಪಿಶಾಚಸಮಿತಿಗೆ . . . ತೆತ್ತಿಸಿದೆಲ್ಪಿನ ಸೊದೆವನೆ (ಜಗವಿ. ೯-೬೦).

[ಸೊದೆ + ಮನೆ]

**ಸೊದೆವಟಿ, ಸೊತೆವಳಿ** (ಕ್ರಿ). (ಗೋಡೆ ಮೊದಲಾದುವುಗಳಿಗೆ) ಸುಣ್ಣವನ್ನು ಹಚ್ಚು, — **ಬಳಿ:** ಮದಜಳನಿರ್ಝರವಾರಣದಿಂ ಸೊದೆವಟಿದರಮನೆಯಂ ಬಳಸಿದಾನೆಸಾಲೆಗಳೆಸೆಗುಂ (ಮಲ್ಲಿಪು. ೨-೬೫); ಸೊದೆವಟಿದ ಭಿತ್ತಿ . . . ರನ್ನದ ದೀವಿಗೆಯಿವಱಿಂದಮೃತದ ಕಡಲಂ ಪೋಲ್ತುದನ್ನವಾಸವಿಳಾಸಂ (ಪಾರ್ಶ್ವಪು. ೮-೪೯). **ಸೊತೆವಳಿ:** 'ಸೊತೆವಳಿಯಿಸು' ಪರಾ. [ಸೊದೆ + ಬಟಿ₁]

**ಸೊದೆವೆಳಗು** (ನಾ). ಸುಣ್ಣ ಬಳಿದುದರಿಂದುಂಟಾದ ಹೊಳಪು, — **ಬಿಳುಪು:** ಪಗಲುಂ ಬೆಳ್ದಿಂಗಳಂ ಬೀಱುವ ಸೊದೆವೆಳಗಂ ತಾಳ್ದು ನೀಳ್ಪಿಂದಮೆತ್ತಂ ಮುಗಿಲಂ ಪೊತ್ತಿರ್ಪ ಕೂಟಪ್ರಕಾರದಿಂ (ಚಂದ್ರಪು. ೩-೮೧); ಸೊ[ಪಾಠಾಂ. ಸು]ದೆವೆಳಗಂ ಸುಧೆಗೆತ್ತಾ ಬದಿಯ ಮರಾಳಂ ಸರಾಗಮುರುತರ ಸೌಧಾಗ್ರದೆ ನಿಂದುವು (ರಾಜಶೇ. ೨-೧೩೯).
[ಸೊದೆ+ ಬೆಳಗು₂]

**ಸೊನ, ಸನ** (ನಾ). ೧. ಸಪ್ಪುಳು; ಶಬ್ದ; **ನಾದ:** ವರಕಂಕಣಂಗಳ ಸೊನಂ [ಪಾಠಾಂ. ನೂಪುರ ಕಂಕಣಸ್ವನಂ] ದೆಸೆಗಳೊಳ್ ಪೋಣ್ಮೆ . . . ಬರುತಿರ್ದರಖಿಳ ಸ್ತ್ರೀಯರು (ಚಿಬಪು. ೫-೧೨). ೨. ಕಂಠಧ್ವನಿ; **ಸ್ವರ:** ಜನಕನಂದಿನಿತನಯರೀರ್ವರು ಘನಮನೋಹರಸೊನದೆ ಪಾಡುವ ಧ್ವನಿಯ ಕೇಳುತ್ತ (ರಘುವಂ. ೧೭೧-೩೭). **ಸನ:** ೨. ಕವಿಯೊಳಿಡಿದಾಸಟಂ ಕಳೆಯದ ಸನಂಗಳಂ . . . ಅಱಿಸಲಾಂ ಕಾಣೆನಾ ಮಹೀಮಂಡಲದೊಳು (ಜೈಮಿಭಾ. ೩-೪). [< ಸಂ. ಸ್ವನ]

**ಸೊನಗಾರ** 'ಸೊನ್ನೆಗಾಱ' ನೋ.

**ಸೊನಯಿ, ಸನಾದಿ, ಸನಾಯಿ, ಸನ್ನಾಯಿ, ಸೋನಾಯ, ಸ್ವನಾಯ, ಸ್ವನಾಯಿ** (ನಾ). ನಾಗಸ್ವರದಂತೆ ಊದುವ ಒಂದು ಬಗೆಯ ವಾದ್ಯ; **ಶಹನಾಯಿ:** ಸಾಱುವ ಕಹಳೆ ಸೊನಯಿಯ . . . ನಾದ ಭೋರನೆ ಕೇಳಿ (ಅಖಂಡೇ. ೩೪೮-೪). **ಸನಾದಿ:** ಪಲ್ಲಕ್ಕಿಯ ಮುಂದೆ ಕರಡಿಮೇಳದವರೂ ಸನಾದಿಯವರೂ ತಮ್ಮ ತಮ್ಮ ವಾದ್ಯಗಳನ್ನು ಬಾರಿಸುತ್ತ ಹೊರಡುವರು (ಕಪಪು. ೬-೧೭); ಸಾಲ ಸನಾದಿ ನೌಬತ್ತು ಹಂದರಕ ಮೊಳಗ್ಯಾವ (ಲೋಕಗೀ. ೬೩). **ಸನಾಯಿ:** ಹೂಗಾರ ಬಸ್ಸಣ್ಣನು ಸನಾಯಿ ನುಡಿಸುತ್ತಿದ್ದಾನೆ (ಅಬಲಾ. ೯); ಆ ಹಳ್ಳಿಯ ಕಲಾವಿದರು 'ಹಲಿಗೆ', ಸನಾಯಿವಾದ್ಯಗಳನ್ನು ಬಾರಿಸುತ್ತಿದ್ದರು (ಬರಹಾ. ೧೮೭); ಬ್ಯಾಂಡಿನವರು, ಸನಾಯಿಯವರು, ಕರಡೀಮಜಲಿನವರು ಕೂಡಿದರು (ಅನಂತ. ೩). **ಸನ್ನಾಯಿ:** ರಂಧ್ರಗಳಲ್ಲಿ ವಾಯುಸಂಚಾರದ ಮೂಲಕ ನಾದವನ್ನು ಸೃಷ್ಟಿಸುವವು . . . ಕೊಳಲು, ಸನ್ನಾಯಿ, ಮುಖವೀಣೆ ಮೊದಲಾದವು (ಗಾನಕ. ೯೫). **ಸೋನಾಯ:** ಶಂಖ ಸೋನಾಯುವು . . . ಹೆಗ್ಗಾಳೆ ಮುಂಕೊಂಡು ಧ್ವನಿದೋಱಿ (ಕರಬಾ. ೬-೬೩). **ಸ್ವನಾಯ:** ಸ್ವರಗೈವ ನಾಗಸ್ವರ ಕೊಳಲು ಸ್ವನಾಯದ ನಾದ (ಅಖಂಡೇ. ೨೦೬-೪೭); ಶಂಖ ಸ್ವನಾಯ . . . ಚಂದ್ರಕಾಳೆ ಮೊದಲಾದ ಶಬ್ದಗಳು (ನಿರಾಗೋ. ೭-೨೦). **ಸ್ವನಾಯಿ:** ತಾಳ ಕಂಸಾಳ ಗಂಟೆ ಕಹಳೆ ಕರ್ನೆ ನಫೂರಿ ಸ್ವನಾಯಿ (ವಚಸಂ. ೪೧೫-೮೯). [<— ಪಾರ. ಸುನಾಈ; ಮರಾ. ಸನಈ, ಸನಯ, ಸನಯಿ]

**ಸೊನರು** 'ಸೊಣಱು' ನೋ.

**ಸೊನೆ** (ನಾ). ೧. ವಿಶೇಷವಾಗಿ ಮಾವಿನ ಕಾಯಿ, ಹೂವು ಮುಂತಾದುವುಗಳ ತೊಟ್ಟಿನಿಂದ ಸುರಿಯುವ ಅಂಟುಳ್ಳ **ರಸ:** ಅಂತಃಪುರಸ್ತ್ರೀಯರಿಮ್ಮಾವಿನ ಸೊನೆಯ ಘೋನೆಯೊಳ್ ತಳದೆಳದಳಿರ ಜೊಂಪಂಗಳೊಳಂ . . . ವಿಶ್ರಮಿಸಿ (ಆದಿಪು. ೧೧-೭೨ ವ); ಕಾಯ ಸೊನೆಯಱತಲ್ಲದೆ ಹಣ್ಣಿನ ರಸ ಚಿಪ್ಪದೋಱದು (ಸಿದ್ಧವ. ಕ. ೩೧೯-೭೧೯); ಪಿಕಾಳಿ ಕುಟುಕಲ್ ಸೊನೆ ಬಿಂದುಗಳೊಪ್ಪುವಾಮ್ರಧಾತ್ರೀಜದಿಂ . . . ಮೆಱೆಗುಂ ಪುರದಾ ಬಹಿರ್ವನಂ (ದಶಕು. ೬-೮). ೨. ಕೆಲವು ಮರಗಳ ತೊಗಟೆಗಳಿಂದ ಸುರಿಯುವ ಹಾಲು, — **ರಸ:** ರಬ್ಬರು ಕೆಲವು ಜಾತಿಯ ಮರಗಳ ತೊಗಟೆಗಳಿಂದ ಸಿಗುವ ಸೊನೆ (ಬಾಲಪ್ರ. I, ೪೮). ೩. ಆನೆಯ ಕುಂಭಸ್ಥಳದಿಂದ ಸುರಿಯುವ ದ್ರವ; **ಮದೋದಕ:** ಮನಸಿಜಕರೀಂದ್ರಕಟದೊಳ್ ಸೊನೆ ತೊಟ್ಟನೆ ಪುಟ್ಟುವಂತೆ ವಕುಳಕ್ಕೆ ಪಸುರ್ಸನೆ ಪುಟ್ಟೆ (ಮಲ್ಲಿಪು. ೫-೧೭). ೪. ಹುಣ್ಣು, ಗಾಯಗಳಿಂದ ಒಸರುವ **ನೀರು;** **ರಸಿಕೆ:** ಈ ರೋಗಾಣುಗಳು . . . ಗಾಯದಿಂದ ಹೊರಬರಬಹುದಾದ ಸೊನೆಯಿಂದ ಒಬ್ಬರಿಗೊಬ್ಬರಿಗೆ ಹರಡಬಹುದು (ಕಲರೋ. ೧೫).
[ದೇ. ‖ ಮಲ. ಚುನ, ಚುನೆ = ಸ್ರವಿಸು ; ತುಳು. ಸುನೆ; ತೆಲು. ಸೊನ]

**ಸೊನೆಗಣ್ಣು** (ನಾ). ಯಾವಾಗಲೂ ನೀರು ಸೋರುವ **ಕಣ್ಣು:** ಸೊನೆಗಣ್ಣ ಸೊಣ್ಣಕ್ಕ ಮನೆಗಳ್ಳ ಮಾಚಕ್ಕ (ಕಂಕ. ೯೪-೧೦). [ಸೊನೆ + ಕಣ್ಣು (< ಕಣ್)]

**ಸೊನೆಗಳೆ** (ಕ್ರಿ). ಕಾಯಿ, ಹಣ್ಣು ಮುಂತಾದುವುಗಳಿಂದ ಜಿನುಗುವ ಸೊನೆಯನ್ನು **ತೆಗದುಹಾಕು:** ಸೊನೆಗಳೆದ ನಿಂಬೆಹುಳಿ ಕೆಲವಕ್ಕೆ ಸಕ್ಕರೆಯ ನನುವೞಿದು ಕೂಡಿ (ಸೂಪಶಾ.೨-೩೩). [ಸೊನೆ + ಕಳೆ₁]

**ಸೊನೆಗಾರ** 'ಸೊನ್ನೆಗಾಱ' ನೋ.

**ಸೊನೆಪಟ್ಟು** (ನಾ). ಒಂದು ಬಗೆಯ **ಸಸ್ಯ:** ಪಟಗಣೆ, ಸೊನೆಪಟ್ಟು, ತಿಗುಡು (ವೃಟಿಗಿ. ೫೪-೧೧೬೪). [?]

**ಸೊನೆಬೆಮರ್** 'ಸೊನೆವೆಮರ್' ನೋ.

**ಸೊನೆವನಿ** (ನಾ). ಹಣ್ಣು, ಹೂವು ಮುಂತಾದುವುಗಳ ಸೊನೆಯ **ತುಂತುರು:** ಸೊನೆವನಿ ಚಂಚುವಿಂ ಪನಿಯೆ ಮಾಂಗೊನರಂ ನಸುಗರ್ಚಿ . . . ಪುಗಲೆಂದುದು ಕೋಕಿಲವ್ರಜಂ (ಜಗವಿ. ೧೪-೩೮); ಪಿಕ ಕರ್ದುಕಿದ ಕೋರಕದಿ ಸುರಿವ ಸೊನೆವನಿ ಮಳೆಯದಾಗೆ (ನಂದಿಮಾ.೩-೨೦). [ಸೊನೆ + ಪನಿ₂]

**ಸೊನೆವಿಡು** (ಕ್ರಿ). ಹೂವು, ಕಾಯಿಗಳ ತೊಟ್ಟಿನಿಂದ ಸೊನೆಯು **ಸೂಸು:** ಪೊತ್ತಳಗೊಂಬನುಳ್ಕುಗುರ್ ಸೊ[ಪಾಠಾಂ. ಗೊ]ನೆವಿಡೆ ತಾಗಿ ಸೂಗುರಿಸೆ (ಲೀಲಾವ. ೬-೯೯). [ಸೊನೆ + ಬಿಡು₁]

**ಸೊನೆವೆಮರ್, ಸೊನೆಬೆಮರ್** (ನಾ). ವಾಸನೆಯಿಂದ ಕೂಡಿದ ಜಿಗುಟಾದ ಬೆವರು; ಸೊಗಡಿನಿಂದ ಕೂಡಿದ **ಬೆವರು:** ಸೊನೆವೆಮರಾಂತು ಕತ್ತುರಿಗಂಧಿ ಬರೆದಳು ನನೆಯಂಬನ ಚಿತ್ರಪಠವ (ಮೋಹತ. ೨೯-೫೩). **ಸೊನೆಬೆಮರ್:** ಮೊಡವಿಯ ಪೊಳೆಯನೊತ್ತುತ ಕಕ್ಷ ಸೊನೆಬೆಮರ್ವಡೆದ ಸೊಗಡ ವಾಸಿಸುತ . . . ಪುಷ್ಪಿಣಿಯರೊಪ್ಪಿದರು (ಮೋಹತ. ೧೮-೫೨). [ಸೊನೆ + ಬೆಮರ್₁]

**ಸೊನೆಹುಣ್ಣು** (ನಾ). ಹೂವು, ಕಾಯಿಗಳ ತೊಟ್ಟಿನಿಂದ ಒಸರುವ ರಸದ ಸಂಪರ್ಕದಿಂದಾಗುವ ಹುಣ್ಣು, — **ವ್ರಣ:** ಸೊನೆಹುಣ್ಣಿಗೆ:- ಮುರುದಾರಶೃಂಗಿಯಂ ತಂದು ನಿಂಬೇಹುಳಿಯಲ್ಲಿ ತೇದು ತೊಡೆಯಲು ಎನಿತಪ್ಪ ಸೊನೆಹುಣ್ಣು ಮಾಣ್ಬುಂ (ವಿಷ್ಣುವಿ. ೭೭); ಈ ವರ್ಣವು ಕೈಕಾಲು ತಣ್ಣಗಾಗುವ ವಿಸರ್ಪಿ, ಮೈನವೆ, ಸೊನೆಹುಣ್ಣು, ತಲೆಯ ಕೂದಲು ಉದುರುವುದು . . . ಇಂಥವುಗಳಲ್ಲಿ ತುಂಬ ಪ್ರಯೋಜನ (ಬಚಿಕಿ.೪).
[ಸೊನೆ + ಹುಣ್ಣು (< ಪುಣ್)]

**ಸೊನ್ನ** 'ಸೊನ್ನೆ₃' ನೋ.

**ಸೊನ್ನಗದಿರ** (ನಾ). ಚಿನ್ನದಂತೆ ಹೊಳೆಯುವ ಕಿರಣಗಳುಳ್ಳವನು; **ಸೂರ್ಯ:** ಭಕ್ಷದೊಳು ಸೊನ್ನಗದಿರನು ಮಾಧವನು ಶ್ರುತಿಸನ್ನುತ ಶ್ರೀ ಲಕ್ಷ್ಮೀಯುತದೊಳು ಮಾನ್ಯ ಗೋವಿಂದಾಭಿಧನು ಇರುತಿಪ್ಪನೆಂದೆಂದು (ಹಸಾರ. ೩೧-೧೪).
[ಸೊನ್ನ (< ಸೊನ್ನೆ₃)+ ಕದಿರ್₂ + - ಅ₇]

**ಸೊನ್ನಗಾರ** 'ಸೊನ್ನೆಗಾಱ' ನೋ.

**ಸೊನ್ನಗಾರಿಕೆ** (ನಾ). ಚಿನ್ನದ ಕೆಲಸ; ಅಕ್ಕಸಾಲಿಯ ಕೆಲಸ,— **ಕಸುಬು:** ಶೀಲವಂತರ ಸಂಖ್ಯೆಯು ಬಹು ಸ್ವಲ್ಪವಿರುತ್ತದೆ. ಇವರು ಅಂಗಡಿಯ ವ್ಯಾಪಾರ, ಸೊನ್ನಗಾರಿಕೆ ಮುಂತಾದ ಹೋರೆಗಳನ್ನು ಮಾಡುವರು (ಕಭಾಗ. ೯೫).
[ಸೊನ್ನಗಾರ (< ಸೊನ್ನೆಗಾಱ) + - ಇಕೆ]

**ಸೊನ್ನಗೇದಗೆ** 'ಸೊನ್ನೆಗೇದಗೆ' ನೋ.

**ಸೊನ್ನರ** 'ಸೊನ್ನಾರ₂' ನೋ.

**ಸೊನ್ನಲಿಗೆ, ಸನ್ನಲಿಗೆ** (ನಾ). ೧. ದುಂಡಗೆ ಇರುವುದು; ವೃತ್ತಾಕಾರವಾಗಿ ಇರುವುದು: "ಸೊನ್ನಲಿಗೆಯೆನೆ ಬಟ್ಟಿತಕ್ಕು" (ಕಬ್ಬಕೈ. ೪೭). ೨. ದುಂಡಾಗಿರುವ ಬಟ್ಟಲು, ಕಲಶ ಮುಂತಾದುವು: "ಸೊ[ಪಾಠಾಂ. ಸ]ನ್ನಲಿಗೆಯೆಂದು ಬಟ್ಟಲ್" (ಕಶಸಾ. ೬೫-೪೫೫); ನೆಲೆಮೊಲೆ ಪೊನ್ನ ಸೊನ್ನಲಿ[ಪಾಠಾಂ. ರಿ]ಗೆಯಾಗೆ ಮೊಗಂ ಸರಸೀಜವಾಗೆ . . . ದರಹಾಸಮೆ ಸೂಸುವ ಲಾಜೆಯಾಗೆ ಕೋಮಲ ಲಲಿತಾಂಗಿಯರ್ ನೆರೆದು (ಕಾವ್ಯಾವ. ೬೮೭); ಪೊಳೆಪೊಳೆವ ನುಣ್ಪಳುಕಿನ ಸೊನ್ನಲಿಗೆಗಳಂ ಪಿಡಿದಲರ್ಗಂಪಿನ ಸವಿಗಳ್ಳಂ ಕುಡಿದು (ಮರಾಚ. ೭-೬ ವ). ೩. ದೇವಾಲಯದ

ಗೋಪುರದಲ್ಲಿರುವ ಲೋಹದ ಗುಂಡನೆಯ ಶಿಖರ; ಕಲಶ : ತ್ರಿದಶಶರಾಸನಂ ತಳಿರ ತೋರಣವಾಗಿರೆ ಕುಕ್ಕಿನೋಳಿ ಚೆಲ್ವಿದಿರ್ಗೊಳೆ ಬರ್ಪ ಸೊನ್ನಲಿಗೆಯಾಗೆ (ಆದಿಪು. ೬-೭೧); ಹರಿನ್ನೀಲದ ಬಜ್ಜರದಿಂ ಮರಕತಸೊನ್ನಲಿಗೆಯ ಸಾಲಿಂ ಚೆನ್ನೆಸೆದವು . . . ಶ್ರೀನಿಲಯಂ ಕರುಮಾಡಂ (ಉದ್ಭದೇ. ೨-೩೩). **ಸನ್ನಲಿಗೆ :** ೧. "ಸನ್ನಲಿಗೆಯೆಂದು ಬಟ್ಟಿತು" (ಕಪಿಂ. ೧೯೮). [< ಸೊನ್ನೆ?]

**ಸೊನ್ನಾದಾಯ** (ನಾ). ಚಿನ್ನದ ರೂಪದಲ್ಲಿ ಕೊಡುವ ಒಂದು ಬಗೆಯ ತೆರಿಗೆ; ಸುವರ್ಣಾದಾಯ: ಮಗ್ಗವಣ ಕಿಱುಕುಳ ಸೊನ್ನಾದಾಯ ಸುತ್ರಗುತ್ತಿಗೆ ಯಿಯೊಳಗಾಗಿ ೯ ವರಹ ತೆತ್ತು ಸುಖದಲಿಯಿಹುದು (ಎಕ. VII(R), ಮಳವ. ೧೦-೧೦; 1517).

[ಸೊನ್ನ (< ಸೊನ್ನೆ$_3$) + ಆದಾಯ./ ಸಂ. ಸುವರ್ಣಾದಾಯ]

**ಸೊನ್ನಾರ$_1$** (ನಾ). ಚಿನ್ನದ ಕೆಲಸ ಮಾಡುವವನು; ಅಕ್ಕಸಾಲಿ; ಚಿನಿವಾರ: ಸ್ಮರನೆಂಬಾ ಸೊನ್ನಾರಂ ಕೀಲಿಸಲಿರದೊಪ್ಪುವ ಪೊಸ ಚಿನ್ನದ ತಗಡೆನೆ ಕರಮೆಸೆದುದು ಮೆಯ್ಯೆಳಗು . . . ನಂದನೆಗೆ (ಜಯಕಾ. ೩-೫೩); ರಾರಾಜಿಪ ರತ್ನಭೂಷಣಂಗೆಯ್ಯ ಸೊನ್ನಾರರಂಗಡಿಗಳೊಪ್ಪಿದುವು (ಮೋಹತ. ೩-೨೫).

[< ಸಂ. ಸ್ವರ್ಣಕಾರ./ ಹಿಂ. ಸುನಾರ್, ಸೋನಾರ್; ಮರಾ. ಸೋನಾರ]

**ಸೊನ್ನಾರ$_2$, ಸೊನ್ನರ** (ನಾ). ಬಿಂಕ; ಬಿನ್ನಾಣ; ಒಯ್ಯಾರ: ತೋರವಲ್ಲಸಿದಲ್ಲದ ವಳನಾ ಚದುರ ಸೊನ್ನಾರದೊಳಪ್ಪಿ ನೆರೆದನು (ಭರಚ. ೧೫-೮೫); ಎನ್ನಿಂದ ನೀ ಬಂದೆ ನಿನ್ನಿಂದ ನಾ ಬಂದೆ ಚನ್ನಬಸವ ಶ್ರೀಪಾದವ ಬಿನ್ನಾಣದಿ ಕಟ್ಟಿಕೊ ಸೊನ್ನಾರ ಬೇಡೆಂದು ಮನ್ನಿಸಿ ಮಣಿಸಿ ಕುಣಿಸಿದ (ಕೋಡಚ. ೩-೫೧); ಚೆನ್ನಿಗ ಲೀಲಾಮಾತ್ರದೊಳು ಸೊನ್ನಾರದಿಂದ ಶಬ್ದಾಗಮನಯವ ಪ್ರಸನ್ನಹೃದಯ ಪಠಿಸಿದನು (ಜ್ಞಾನಚ. ೩-೧೭೧). **ಸೊನ್ನರ:** ಚೆನ್ನೆ ಚೆನ್ನರು ನೆರೆದರು ತಮ್ಮ ತನುವಿನ ಸೊನ್ನರ ಸೊಬಗಿಗರ್ಶಿಸುತ (ಭರಚ. ೪೧-೧೩೧). [?]

**ಸೊನ್ನಾರಗೆಲಸ** (ನಾ). ಚಿನ್ನದ ಕುಸುರಿಗೆಲಸ: ಸೊನ್ನಾರಗೆಲಸ ಶೋಭಿಸುತಿಪ್ಪ ಕಡೆಯಾಣ ಚಿನ್ನದ ಕೋಟೆ ರಂಜಿಸಿತು (ಮೋಹತ. ೨೪-೩೦). [ಸೊನ್ನಾರ$_1$ + ಕೆಲಸ]

**ಸೊನ್ನಾರವಿದ್ಯೆ** (ನಾ). ಚಿನ್ನದ ಕೆಲಸ ಮಾಡುವ ಕಲೆ; ಅಕ್ಕಸಾಲಿಗನ ಕೆಲಸ: ಹೂಸಿಕದ ಹೂಣಿಗತನವ ಸೊನ್ನಾರವಿದ್ಯೆಯ ಸಾಹಸೋನ್ನತಿಯ ಸೊಗಸ ಹುಟ್ಟಿಸಿ ಸುಲಿವ ರಸವಾದಿಗಳನಿವರ . . . ನೋಡು (ಕುಮಾವ್ಯಾ. ೧೭-೨೫).

[ಸೊನ್ನಾರ$_1$ + ವಿದ್ಯೆ]

**ಸೊನ್ನಾರಿ$_1$** (ನಾ).= ಸೊನ್ನಾರ$_1$: ಹೊಂಬೆಸವEದತಿ ಸೊನ್ನಾರಿಗಳ ಸಾಲುಸಾಲೆಗಳ ಸಕಗಳಂ ನೋಡುತ್ತೆಳ್ತಂದ (ಮದೇಪು. ೨೦-೧೯); ಸೊನ್ನಾರಿಯಂತೆ ಕೊಟ್ಟೊಡವೆಯಂ ಛಿದ್ರಿಸುತ (ಲಿಂಗಪು. ೨೫-೫). [ಸೊನ್ನಾರ$_1$ + -ಇ$_3$./ ಸಂ. ಸ್ವರ್ಣಕಾರಿನ್]

**ಸೊನ್ನಾರಿ$_2$** (ನಾ). ಬಿನ್ನಾಣಗಿತ್ತಿ: ಅಣ್ಣಾನ ಗಿರಿ ಮೇಲೆ ಎಣ್ಣೀಯ ಜಾರೀಕೆ ಸೊನ್ನಾರೀ ನೆರುಗೇ ಬಿಗಿದೂಡೇ ಸೈಯ (ಹುಟ್ಟಹ. ೪೫). [ಸೊನ್ನಾರ$_2$ + -ಇ$_2$]

**ಸೊನ್ನೆ$_1$** 'ಸನ್ನೆ$_1$' ನೋ.

**ಸೊನ್ನೆ$_2$** 'ಸನ್ನೆ$_2$' ನೋ.

**ಸೊನ್ನೆ$_3$, ಸನೆ, ಸುನ್ನ$_1$, ಸೊನ್ನ, ಸೋನ$_2$** (ನಾ). ಚಿನ್ನ; ಬಂಗಾರ: "ಸೊನ್ನೆ, ಕಸವರಂ, ಚೆಂಬೊನ್, ಮಿಸುನಿ- ಈ ೪ ಸುವರ್ಣಂ" (ಕಶಸಾ.೫೦-೭೧); ಸ್ವರ್ಣ-ಸೊನ್ನೆ (ಶಮದ. ೨೭೦ ಪ್ರಯೋ); ಪುಟವಿಳಿದ ಸೊನ್ನೆಯ ತಿರಸ್ಕರಿಪ ಚೆನ್ನೆಯರ್ (ನಂದಿಮಾ. ೬-೪). **ಸನೆ:** 'ಸನೆಗಾರ' ಪರಾ. **ಸುನ್ನ$_1$:** 'ಸುನ್ನವೆಸ' ಪರಾ. **ಸೊನ್ನ:** ಕನ್ನೀರು ಮೌಕ್ತಿಕ ಸೊನ್ನ ರಮಣೀಯವಾಗಿ ಉನ್ನತಹರ್ಮ್ಯವೊಪ್ಪಿಹುದು (ಕೋಡಚ. ೧-೫೨); ಸೊನ್ನದಂಡಣ ಇಳಿದು . . . ಶರಣೆಂದು ಬಾಗಿಹರು ಸನ್ನುತ ಶಿವರೇವಣಸಿದ್ಧರು (ಸಿದ್ಧಪು. ೨-೬೫). **ಸೋನ$_2$:** 'ಸೋನಗಾರ' ಪರಾ.

[< ಸಂ. ಸ್ವರ್ಣ./ ಪ್ರಾ. ಸೋಣ್ಣ]

**ಸೊನ್ನೆ$_4$, ಸುನ್ನ$_2$** (ಗು). ೧. ಬರಿದಾದ; ಖಾಲಿಯಾದ. (ನಾ). ೨. ಏನೂ ಇಲ್ಲದಿರುವಿಕೆ; ಬರಿದು; ಶೂನ್ಯ: "ಶೂನ್ಯಕ್ಕೆ ಸೊನ್ನೆಯುಮೆನಿಕ್ಕುಂ" (ಶಬ್ದಮಂ. ೧೮); ಇನ್ನೂ ತಿರುಗಿ ಬೆಳೆಯಿಸಿದ್ದು ಯಾಕೆ? ನಮ್ಮ ಋಣ ಸೊನ್ನೆಯೆಂದು ತಿಳಿದ ಮೇಲೆಯೂ? (ಬಟ್ಟಜೀ. ೧೪೯); ಸಂಬಳ ಮಾತ್ರ ಸೊನ್ನೆ! (ದೀಪದ. ೧೭೭). ೩. [ವ್ಯಾಕ] ಯೋಗವಾಹಗಳಲ್ಲಿ ಒಂದಾದ ಬಿಂದುವಿನ ಚಿಹ್ನೆಯಿಂದ ಗುರುತಿಸುವ ವರ್ಣ; ಅನುಸ್ವಾರ: "ಮುಚ್ಚಳೆಂದುಂ, ಸೊನ್ನೆಯೆಂದುಂ ಶೂನ್ಯಂ" (ಕಶಸಾ. ೫೯-೨೮೭); ಒತ್ತದಲ್ಲಿ ತೆಗೆದು ಒತ್ತದಲ್ಲಿ ಒಡಗೂಡಿ ಕುರುಕಿನಲ್ಲಿ ಸುಳಿದು ಸೊನ್ನೆಯಲಿ ಸಂಜ್ಞೆಗೊಟ್ಟು ಸೂಜಿಯ ಮೊನೆಯೊಡಗೂಡುದಕ್ಕೆ ಎರಡಿಲ್ಲ (ಸಕವ. ೩. III, ೩೨೭-೭೦೭); ಬಿಂದುವನುಸ್ವಾರಂ ತಾನೆಂದಕ್ಕುಂ ಸೊನ್ನೆ ಮುತ್ತು ಪೋಲ್ ವೃತ್ತತೆಯಿಂ ಸಂದಿರ್ಪುದು (ಶಮದ. ೧೧). ೪. [ಗಣಿತ] ಪೂಜ್ಯ; ಶೂನ್ಯ: ಎಂಡು ಸಮವಾದ ಮತ್ತು ವಿರೋಧವಾದ ಸಂಖ್ಯೆಗಳ ಮೊತ್ತ ಸೊನ್ನೆ (ತತ್ವಪ್ರಾ. ೪೬೮); ಭಾರತೀಯರು ಸೊನ್ನೆಯನ್ನೂ ದಶಮಾಂಶಪದ್ಧತಿಯೇ ಮುಂತಾದುವುಗಳನ್ನೂ ಕಂಡು ಹಿಡಿದುದರಿಂದ . . . ಇಂದಿನ ಮೇಧಾವಿಶ್ರೇಷ್ಠರು ಕೂಡ ಕೊಂಡಾಡುತ್ತಿದ್ದಾರೆ (ಭಾರದ. 385). **ಸುನ್ನ$_2$:** ೧. ವೆಂಕಣ್ಣಮಾಸ್ತರರು ಸುನ್ನಮನಸ್ಥಿತಿಯಲ್ಲಿಯೇ ಬಾಯಿಲೆಕ್ಕದ ರಿಂಗಮಾಷ್ಟರ ಆಗಿ ಸರ್ಕಸ್ ಸುರುವು ಮಾಡಿದರು (ದೀಪಹ. I, ೪೮). ೨. ಕ್ಲಾಸಿನಲ್ಲಿ ಕೂತಾಗ ತಲೆಯಲ್ಲ ಸುನ್ನವಾಗಿತ್ತು (ಮೂರುದಾ. ೨೮೩). ೩. "ಸುನ್ನಂ = ಶೂನ್ಯಂ" (ಶಮದ. ಪರಿ. ೨).

**ಸೊನ್ನೆಬೀಳು = ಇಲ್ಲವಾಗು; ಅಭಾವವುಂಟಾಗು:** ಹುಲ್ಲುಗಾವಲಿಗೆ ಭಾರಿ ನಷ್ಟವಾಗಿದೆ. ನಾನೀಗ ತಪ್ಪು ವಸೂಲು ಮಾಡದಿದ್ದರೆ ನಾಳೆ ಒಣಮೇವಿಗೆ ಸೊನ್ನೆ ಬೀಳುತ್ತದೆ (ಪುನರು. ೨೮೭). **ಸೊನ್ನೆ ಸುತ್ತು = ೧.** ಏನೂ ಅಂಕಗಳನ್ನು ಕೊಡದೆ ಪೂಜ್ಯವನ್ನು ಕೊಡು; **ಸೊನ್ನೆಹಾಕು:** ಯಾವ ಪ್ರಶ್ನೆಗೂ ಅವನು ಉತ್ತರಿಸದಿದ್ದುದರಿಂದ ಅವನ ಉತ್ತರ ಪತ್ರಿಕೆಯಲ್ಲಿ ಉಪಾಧ್ಯಾಯರು ಸೊನ್ನೆಸುತ್ತಿದ್ದರು (ರೂಢಿ). ೨. (ಆಲಂ) ಇಲ್ಲದಂತೆ ಮಾಡು; ಮೋಸಗೊಳಿಸು: ಶಿಷ್ಯನು ಗುರುದಕ್ಷಿಣೆಗೆ ಸೊನ್ನೇಸುತ್ತುವ ಯೋಚನೆಯನ್ನೆಂದಿಗೂ ಮಾಡಬಾರದು (ಸೀಗಟ್ಟು. ೪೪). **ಸೊನ್ನೇಬಾಣ =**"ಬಿಟ್ಟ ಕೂಡಲೇ ಸುತ್ತಿಕೊಂಡು ಸುತ್ತಿಕೊಂಡು ಹೋಗಿ ಹೆಚ್ಚಾದ ಅಪಾಯವನ್ನುಂಟುಮಾಡುವ ಬಾಣ" (ಚಿತ್ರಪಾ. ಅನುಬಂಧ.೨): ದೊರೆಯು . . . ಆನೆಯನ್ನೇರಿ ಸೊನ್ನೇಬಾಣಗಳನ್ನು ಹೊಡೆಯಿಸಿ ಸ್ವಾರಿಫಿರಂಗಿ ಹೊಡೆದು ಎದುರುದಂಡಿನ ಮೇಲೆ ಬಿದ್ದು ಕಡಿಯಲಾಗಿ (ಚಿತ್ರಪಾ. ೫೫).

[< ಸಂ. ಶೂನ್ಯ./ ಪ್ರಾ. ಸುಣ್ಣ; ಪಾಲಿ. ಸುಞ್ಞ]

**ಸೊನ್ನೆಕೋಲು** 'ಸನ್ನೆಗೋಲು' ನೋ.

**ಸೊನ್ನೆಗಾರ** 'ಸೊನ್ನೆಗಾಱ' ನೋ.

**ಸೊನ್ನೆಗಾಱ, ಸನೆಗಾರ, ಸೊನಗಾರ, ಸೊನೆಗಾರ, ಸೊನ್ನಗಾರ, ಸೊನ್ನೆಗಾರ, ಸೋನಗಾರ** (ನಾ). ಚಿನ್ನದ ಕೆಲಸ ಮಾಡುವವನು; ಅಕ್ಕಸಾಲಿ; ಚಿನಿವಾರ: ಕೊಟ್ಟಂ ಕಟ್ಟನೆಂಬೊಂದು ಸನ್ನೆಯ ಸಬುದಮೊಗೆವಂತಿರೆ ಬಡಿಪ ಸೊನ್ನೆಗಾಱರ ಸಾಲೆಯಿಂ . . . ಪುರಂ ಕಣ್ಗಿಂಬಾದುದು (ರಾಮಾಶ್ವ. ೧೦೩-೨೨). **ಸನೆಗಾರ:** ಇವರು ನಮ್ಮ ಬಳೆಗಾರರು, ಇವರು ನಮ್ಮ ಸನೆಗಾರರು (ಬೆಳಭಾ. ೧೩೭). **ಸೊನಗಾರ:** ಸಹಸ್ರಾವಧಿ ಸೊನಗಾರರು ವಿವಿಧ ಕಲಾಕುಶಲರಾಗಿ ಆಯಾವೃತ್ತಿಗಳಿಂದ ಜೀವನ ಮಾಡುತ್ತಿದ್ದರು (ಕಥವಿ. ೧೨೯); ಎಂಟುವರ್ಷ ಸೊನಗಾರ ಶಂಕರಪ್ಪನಿಗೆ ಬಾಡಿಗೆ ಕೊಟ್ಟು ನೂರಾರು ರೂಪಾಯಿ ಬಾಡಿಗೆಯನ್ನೂ ಎತ್ತಿಕೊಂಡೆ (ಬೆಳುಮ. ೧೫೨); ಎಡಕ್ಕೆ ಸೊನಗಾರರು ಗಾಣಿಗರ ಕೇರಿಗಳು (ಮೂರುದಾ. ೯೦). **ಸೊನೆಗಾರ:** ನಾಲ್ಕು ಗುಡಿಗಾರರ ಮನೆಗಳಿವೆ; ಸೊನೆಗಾರರ ಮನೆಗಳಿವೆ (ಜಾರುದಾ. ೨೯); ನಾನೊಬ್ಬ ಸೊನೆಗಾರನನ್ನು ನೋಡಬೇಕು (ಸಂಸ್ಕಾರ. ೧೨೫). **ಸೊನ್ನಗಾರ:** ಬೆಳ್ಳಿ ಬಂಗಾರಗಳ ಪೆಟ್ಟಿಗೆಯನು ತಕ್ಕೊಂಡವನ ವಂಶದವರೇ ಸೊನ್ನಗಾರರಾದರು (ಕಭಾಗ. ೧೫೦); ಅರಸನು ಒಬ್ಬ ಸೊನ್ನಗಾರನ ಕೈಯಿಂದ ತನಗಾಗಿ ಒಂದು ಮೇಲಾದ ಚಿನ್ನದ ಕಿರೀಟವನ್ನು ಮಾಡಿಸಿದನು (ಮುಂಬಯಿ. ೫-೬೫). **ಸೊನ್ನೆಗಾರ:** "ಸೊನ್ನೆಗಾರ (ಸೊನ್ನಗಾರ, ಸೊನಗಾರ, ಸೋನಾರ)= ಸ್ವರ್ಣಕಾರ" (ತದ್ಭಕೋ. ೪೭). **ಸೋನಗಾರ:** ಹೊಸದಾಗಿ ಮದುವೆಯಾಗಿದ್ದ ದಂಪತಿಗಳು - ಸೋನಗಾರರಂತೆ! (ಮಲಮ. ೬೧೭). 'ಸೊನ್ನಾರ$_1$' ಪರಾ. [ಸೊನ್ನೆ$_3$ + -ಕಾಱ]

**ಸೊನ್ನೆಗೇದಗೆ, ಸೊನ್ನಗೇದಗೆ** (ನಾ). ಚಿನ್ನದ ಬಣ್ಣದ ಕೇದಗೆ, ಹೊಂಗೇದಗೆ: ಘಮಘಮಿಸುವ ಸೊನ್ನೆಗೇದಗೆಯೆಸಳೆಂಬ ಜವದಾಡೆಯವಳೊಪ್ಪಿದಳು (ಮೋಹತ.೫-೩೮). **ಸೊನ್ನಗೇದಗೆ:** ರತಿದೇವಿಯುಳಿಗೆ ಸೊನ್ನಗೇದಗೆಯ ಪೂವೊಡೆಯಂತೆ ಬಸಿಱಿನ ಚೆನ್ನೆದೋಱಿದುದು ಮೆಯ್ಯೊಳಗೆ (ಮೋಹತ. ೧೭-೨). [ಸೊನ್ನೆ$_3$ + ಕೇದಗೆ]

**ಸೊನ್ನೆಟೆಂಕೆ** (ನಾ). ಚಿನ್ನದ ನಾಣ್ಯ; ಸುವರ್ಣದ ವರಹ: ಸೊನ್ನೆಟೆಂಕೆಯೊಳು ಹಿತ್ತಾಳೆಯಂ ಬೆರಸಲುಂ ಚಿನ್ನವೆಂತುಂ ಕೆಡುವುದು (ಪ್ರಭುಪು. ೯-೧೧೬).
[ಸೊನ್ನ$_3$ + ಟೆಂಕೆ (< ಟಂಕ$_2$)]

**ಸೊನ್ನೆನೂಲ್** (ನಾ). ಚಿನ್ನದ ಉಡಿದಾರ: ಪಕ್ಕಮಂ ಕೆಳಗೊಳೆ ಸಿಕ್ಕಿದೊತ್ತರದ ಬಜ್ಜರವಂಕಿ ತೊಡಂಕುಸೊನ್ನೆನೂಲ್ (ಚಕವಿ. ೩-೯೦). [ಸೊನ್ನ$_3$ + ನೂಲ್$_1$]

**ಸೊನ್ನೆವರದ** (ನಾ). ಚಿನ್ನದ ವ್ಯಾಪಾರಿ; ಸರಾಫ: "ಸೊನ್ನವರದನೆಂದುಂ, ಪೊಂಬರದನೆಂದುಂ, ಚಿನ್ನವರದಂ" (ಕಶಸಾ. ೬೦-೩೩೫). [ಸೊನ್ನ$_3$ + ಪರದ$_1$]

**ಸೊನ್ನೆವೆಟ್ಟು** (ನಾ). ಚಿನ್ನದ ಬೆಟ್ಟ; ಮೇರುಪರ್ವತ: "ಸಗ್ಗಿಗವೆಟ್ಟೆಂದುಂ, ಸೊನ್ನವೆಟ್ಟೆಂದುಂ, ಮೇರುಗಿರಿ" (ಕಶಸಾ. ೪೯-೪೪); ಎಂತಾನುಂ ನಿಲ್ವೊಡೆ ಸೊನ್ನೆ ವೆಟ್ಟನಡರಲ್ಕೇಟ್ಟುಂ (ಗೀತಗೋ. ೪೭-೫); ಪಂತಂದೊಟ್ಟೊಡೆ ಮೆಟ್ಟುವಂ ನೆಲದೊಳಿಟ್ಟಾ ಸೊನ್ನೆವೆಟ್ಟಾದೊಡಂ (ಚಕವಿ. ೫-೭೯).

**ಸೊನ್ನೆವೆಟ್ಟುವಿಲ್ಲ** = ಮೇರುಪರ್ವತವನ್ನೇ ಬಿಲ್ಲಾಗಿ ಉಳ್ಳವನು; ಶಿವ: "ಗೊರವಂ . . . ಬಾಣ್ಣವಿರ ಸೊನ್ನೆವೆಟ್ಟುವಿಲ್ಲಂ . . . ಬೆಳ್ಳಡಿಯನೆನೆ ಶಿವಗೆ ಪೆಸರ್" (ಕಬ್ಬಕೈ. ೪). [ಸೊನ್ನ$_3$ + ಬೆಟ್ಟು$_2$ (< ಬೆಟ್ಟ)]

**ಸೊನ್ನೆಸಾರ** (ನಾ). ಚಿನ್ನದ ಎಳೆ; ಬಂಗಾರದ ಸರಿಗೆ: ಪೀತಾಂಬರನೆಂಬ ತನ್ನ ಪೆಸರಂ ನನ್ನಿಮಾಡುವಂತೆ ಚೆನ್ನನಪ್ಪ ಸೊನ್ನೆಸಾರದಂ[ಪಾಠಾಂ. ವಂ]ಗಿಗೆಯಂ ತೊಟ್ಟು (ಪಾರ್ಶ್ವಪು. ೧೨-೬ ವ). [ಸೊನ್ನ$_3$ + ಸಾರ$_1$]

**ಸೊಪಚ** (ನಾ). ತೀರ ಕೀಳುಜಾತಿಯವನು; ಚಂಡಾಲ: ಈ ಸೊ[ಪಾಠಾಂ. ಶ್ವ] ಪಚನಿಂತಡುವುಡದಗಕಟಾ ದುರುಳನೆಮ್ಮಂ ಕಾಣುತವೆ ಕಾಲ್ಗೆರಹಿನಲಿ ಮುಚ್ಚಿದನು ಮಾಂಸವಂ (ಬಸವಪು. ೫೭-೨). [< ಸಂ. ಶ್ವಪಚ]

**ಸೊಪನ** (ನಾ). ಕನಸು; ಸ್ವಪ್ನ: ಸೊಪನಂ ನಿಜವೆದಾಯಿತೆಂದು ಒಗುಮಿಗೆಯೊಳು ಕಣ್ದೆಱೆದು ನೋಡಿ (ಸಿದ್ದೇಪು. ೭-೬೮). [< ಸಂ. ಸ್ವಪ್ನ]

**ಸೊಪೆ** (ನಾ). ಪೈರಿನ ಕೂಳೆ(?): ಬಾಣರಾವಿ ಕಸಬೇ ಗ್ರಾಮಾನುಗ್ರಾಮುಗಳ ಆಯ ಬೆಳಿಸಿ ಮದೆ ಹೊರೆ ಸೊಪೆ ಆಳಿತ್ತಿ ಕಾಳು ಹಳಿಗಳ ಪಳಗೆಯಿದನ್ನೆ ಮಾನ್ಯಗಳು (ಎಕ. XI, ಮೊಳಕಾ. ೨೫-೧೨೬; 1665).
[P ಇದು 'ಸೊಪ್ಪೆ' ಎಂಬುದರ ಅಪಲಿಖಿತವಿರಬಹುದು]

**ಸೊಪ್ಪಡಗು$_1$** (ಕ್ರಿ). ೧. ನಿಶ್ಶಕ್ತಿಯುಂಟಾಗು; ಶಕ್ತಿಗುಂದು; ಕುಗ್ಗು: ಸೊಪ್ಪಡಗಿರ್ದ ಕಾದಲನ ತಳ್ಪನ ಕಾಳೆಸಗಾಟೆ ಪೊಕ್ಕ ಮೆಯ್ಯೊಪ್ಪಿರೆ (ಲೀಲಾವ. ೧೩-೧೭); ಎಂಟು ಬಂಟರು ಕಂಟಕನಾಶವಾದರು ಇಪ್ಪತ್ತೈದು ಮಂದಿ ಸೊಪ್ಪಡಗಿದರು (ಮೋಳಿಮಾ. ೨೩೦-೬೮೩); ಕರ್ಪೂರದ ಹೆಣ್ಣಗ್ನಿಪುರುಷನನಪ್ಪಿದಾಕ್ಷಣ ನೋಡಲೊಡಲುಂ ಸೊಪ್ಪಡಗಿ ಸಂದಳಿದು ನಿರ್ವಯಲಪ್ಪ ತೆಱನಂತೆ (ಸದ್ಗುರು. ೧-೯). ೨. ಸತ್ವದಿಂದ ಕೂಡಿರು (?): ಚಪ್ಪನ್ನದೇಶದ ಶೃಂಗಾರವಿದಱ ಮುಂದೊಪ್ಪಲಱಿಯದೆಂದವಳು ಒಪ್ಪಿದಳಾ ಕರ್ನಾಟಶೃಂಗಾರದ ಸೊಪ್ಪಡಗಿದ ಸೊಂಪಿನಿರವ (ಕುರಾಸಾಂ. ೪೧-೯೯).
[ಸೊಪ್ಪು$_3$ + ಅಡಗು$_1$ (< ಅಡಂಗು$_1$)]

**ಸೊಪ್ಪಡಗು$_2$** (ಕ್ರಿ). [ವೀಶೈ] ಸೊಕ್ಕು ಇಲ್ಲವಾಗು; ಅಹಂಕಾರವಳಿ (?): ಸೊಪ್ಪಡಗಿದ ಸುಮ್ಮಾನಿಗಳವರಲ್ಲಿ ಗತಿಯನಱಿಸುವರೆ ಅವರಲ್ಲಿ ಮತಿಯನಱಿಸುವರೆ (ಅವಚಂ. ೧೫೦-೬೮೪); "ಸಮಾಧಾನದಿಂದಿರು; ಶಾಂತವಾಗಿರು; ಉತ್ಸುಕವಾಗಿರು" (ಅವಚಂ. ಕೋಶ); ಇಂತೀ ಉಭಯದಾಟದ ಕಾಟ ಸ್ವಸ್ಥಲವಾಗಿ ಭಕ್ತಂಗೆ ಸೊಪ್ಪಡಗಿ ವಿರಕ್ತಂಗೆ ಹೆಚ್ಚು ಕುಂದೆಂಬ ಉಭಯ ನಿಶ್ಚಯವಾದಲ್ಲಿ ಆತ ನಿಃಕಳಂಕ ನಿರತ ಸರ್ವನಿರ್ವಾಣಿ ನಿಃಕಳಂಕ (ಮೋಳಿಮಾ. ೪೭-೧೯೫); ನಿಜೇಂದ್ರಿಯವಾಗಿಯರ್ಪಣದೊಳರ್ಪಣದ ವಿವರಾರ್ಪಿತದ ಭೇದವಱಿದು ಸೊಪ್ಪಡಗಿರ್ದನವ ನಿಷ್ಪತಿಯ ಇರವದೆಂತು (ವೀಶೈಪು. ೮-೧೮-೨೮). [ಸೊಪ್ಪು$_4$ + ಅಡಗು$_1$ (< ಅಡಂಗು$_1$)]

**ಸೊಪ್ಪಡಸು** (ಕ್ರಿ). ನಿಶ್ಶಕ್ತಗೊಳ್ಳು; ಸತ್ತ್ವಹೀನವಾಗು: ನಡೆಗೆಟ್ಟು ಸುಯ್ಯುತ . . . ತಲ್ಲಣಿಸಿ ಸೊಪ್ಪಡಸಿ ಕೆಡೆಯಲೊಡನೆ (ನವಮೋ. ೭-೬); ತರಹರದಿ ಕರಚರಣ ಸೊಪ್ಪಡಸಿ ತಮ್ಮ ತಮ್ಮ ಮೈಯನುರೆ ಮರೆದು (ನವಮೋ. ೨೭-೮೦).
[ಸೊಪ್ಪು$_3$ + ಅಡಸು]

**ಸೊಪ್ಪನೆ** (ಅ). ಒಂದು ಅನುಕರಣಾವ್ಯಯ.

**ಸೊಪ್ಪುಸೊಪ್ಪನೆ** (ದ್ವಿರುಕ್ತಿ): ದೊಪ್ಪುದೊಪ್ಪನೆ ಪಚ್ಚೆಯಿಡುವಳು ದುಗುಡವ ಸೊಪ್ಪುಸೊಪ್ಪನೆ ತುಳಿವಂತೆ (ಭರಚ. ೧೩-೬೫). [ಸೊಪ್ಪು$_2$ + - ಅನೆ$_1$]

**ಸೊಪ್ಪರಿ** (ನಾ). ಒಂದು ಬಗೆಯ ಆಯುಧ: ಬಿಲ್ಲು ತೀರು . . . ಸೊಪ್ಪರಿ . . . ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿ ಸಾಧನವಿಶೇಷಂಗಳಿಂದಲೂ (ವಿವೇಕ. ೨೬೩). [?]

**ಸೊಪ್ಪರೆ** (ಕ್ರಿ). (ಆಲಂ) ನಾಶಮಾಡು; ಧ್ವಂಸಗೊಳಿಸು: ಪರದಳವನೊಳಪೊಕ್ಕು ಸುಭಟರಂ ಸದೆದು ಸೊಪ್ಪರೆದಳವಳಿಸಲು (ಜೈಮಿಭಾ. ೨೨-೨೫); ದೊಪ್ಪ ನೀ ಬಿಡು ಬಿಡು ಚಿಂತೆಯ ರಿಪುಗಳ ಸೊಪ್ಪರಿEರೆತೆವೆನು (ಅಭಿಕಾ. ೬). [ಸೊಪ್ಪು$_1$ + ಅರೆ$_1$]

**ಸೊಪ್ಪಳಿ** (ಕ್ರಿ). ಅಹಂಕಾರವು ನಾಶವಾಗು; ಸೊಕ್ಕು ಇಲ್ಲವಾಗು(?): ಗೊಹೇಶ್ವರ ನಿಮ್ಮ ಶರಣ ಶಿವಯೋಗಿ ಸಿದ್ಧರಾಮಯ್ಯನನಪ್ಪಿ ಸೊಪ್ಪಳಿದು [ಪಾಠಾಂ. ಸೊಪ್ಪಡಗಿ] ನಮೋ ನಮೋ ಎನುತಿರ್ದೆನು (ಅವಚಂ. ೨೦೭-೯೮೩).
[ಸೊಪ್ಪು$_4$ + ಅಳಿ$_1$ (< ಅಱಿ$_1$)]

**ಸೊಪ್ಪಾಗು$_1$** 'ಸೊಪ್ಪು$_3$' ಪರಾ.

**ಸೊಪ್ಪಾಗು$_2$** 'ಸೊಪ್ಪು$_4$' ಪರಾ.

**ಸೊಪ್ಪಿ** 'ಸೊಪ್ಪೆ' ನೋ.

**ಸೊಪ್ಪಿಸು$_1$** (ಕ್ರಿ). ೧. ಪುಡಿಮಾಡು; ಚೂರ್ಣಿಸು: ಸೊಪ್ಪಿಸಿದ ಮೆಣಸುಳ್ಳಿ ಶುಂಠಿಯನಿಟ್ಟು ಹೂರಣವನು ಬಿಳಿಯುದ್ದಿನಿಂದ ಚಾರಿಸಿಕೊಂಡ ಸಣ್ಣಸಂಪಳಿಯೊಳಗೆ ತುಂಬಿ (ಸೂಪಶಾ. ೧-೬೫). ೨. (ಆಲಂ) ನಾಶಮಾಡು; ಹುಡಿಯೆಬ್ಬಿಸು: ಅವನಟ್ಟ ತೋಳ್ಗಳಂ ಚಪ್ಪರಿಸಿಕೊಂಡೆದ್ದು . . . ಮೆಟ್ಟಿ ಸೊಪ್ಪಿಸಿ ಪೊರಳ್ದರೆದು ತೆವರಿ ಪರಿದರೆಯಟ್ಟಿ ಚಿಪ್ಪುಚೀರಾಗಿಸಿತು ಸಕಲಪರಿವಾರಮಂ (ಜೈಮಿಭಾ. ೧೩-೫೦).
[ಸೊಪ್ಪು$_1$ + - ಇಸು$_3$]

**ಸೊಪ್ಪಿಸು$_2$** (ಕ್ರಿ). ಶಕ್ತಿಗುಂದಿಸು; ಮೆತ್ತಗಾಗುವಂತೆ ಮಾಡು: ಪೊಂಗಿಸಿದಂ, ಸೊಪ್ಪಿಸಿದಂ (ಶಮದ. ೨೩೦ ಪ್ರಯೋ); ಮುಪ್ಪಿರದೆ ತೋಱಿ ಮೆಯ್ಯಂ ಸೊಪ್ಪಿಸಿದಂತಾಗೆ (ಬಾಧಪು. ೫-೩೧); ಸೊಕ್ಕಾನೆಗಳ ಸುಂಡಿಲ ಸೊಪ್ಪಿಸಲು ರಾಮ ದಿಕ್ಕರಿಗಳಿಗವು ಮೊಱೆಯ ಇಕ್ಕುವಂದದೊಳು ಕಣ್ಗೆಟ್ಟೋಡಿದವು (ಕುರಾಸಾಂ. ೪೩-೧೧೧).
[ಸೊಪ್ಪು$_3$ + - ಇಸು$_3$]

**ಸೊಪ್ಪು$_1$** (ಕ್ರಿ). ೧. ತಡೆ; ನಿವಾರಿಸು; ಅಡ್ಡಿಪಡಿಸು: "ಸೊಪ್ಪು- ನಿವಾರಣೇ" (ಶಮಧಾ). ೨. ಸದೆಬಡಿ; ನಾಶಗೊಳಿಸು: ರಾವಣಂ ಮುಂತಪ್ಪ ದೆಸೆಮುಟ್ಟಿನ ಜಸದ ದೈತ್ಯರಂ ಚೆಪ್ಪಿ ಸೊಪ್ಪಿ ಸೋವಿದ ಶ್ರೀರಾಮಂ ಬೇಳ್ವ ಜನ್ನದ ಹಸುವಂ ಕಳ್ದುಯ್ದುಂ ಬಾಳ್ವೆನೆಂದು ಬಗೆವ ನೀನಾವೊಂ? (ರಾಮಾಶ್ವ. ೧೧೨-೨೦).
[ದೇ. ॥ ತಮಿ. ಚೋಪ್ಪು]

**ಸೊಪ್ಪು$_2$** (ನಾ). ೧. ಎಲೆ; ತೊಪ್ಪಲು; ಪರ್ಣ: ಅಱುಹು ಕುಱುಹ ನುಂಗಿ ಕುಱುಹು ಅಱುವಿನಲ್ಲಿ ಲೇಪವಾಗಬೇಕು . . . ಸೊಪ್ಪನೊಳಕೊಂಡ ಬಿತ್ತಿನಂತೆ ಕರ್ಪೂರವನೊಳಕೊಂಡ ಕಿಚ್ಚಿನಂತೆ (ಪೋಳಿಮಾ. ೪೪-೩೩೦); ದಿವಸಕರಾಪಸಾರಣದೊಳ್ಕದಿಸಿ ಚೆನ್ನನೆ ಬರ್ಪ ಪೆರ್ವಲಕ್ಕವತಮಸ ಪ್ರಚಂಡಚರರಿಕ್ಕಿದ ಸೊಪ್ಪನೆ ಚೆಂದಱುಂಬಿನೊಳ್ ಕವಿಲ ಬಿಸಿಲ್ಗಳೇಂ ಮಱಿಸಲಾರ್ತುವೊ (ಅನಂಪು. ೭-೬೦); ಜೀವವುಳ್ಳಡೆ ತಂದು ಕಾರೆಯ ಸೊಪ್ಪನಾದಡೆ ತಿಂದು ಬದುಕಲು ಬಹುದಲಾ (ಬಸಪು. ೫೮-೪೩); ಅಱಿಸಿದರು ನಟ್ಟಡವಿಯಲಿ ಮುಂದುಱುಬಿದರು ಬೆಳ್ವಾರಬಲೆಗಳ ಹರಹಿ ಸೊಪ್ಪಿನ ತೋಹಿನಲಿ ಸಿಲುಕಿಸಿದರಾ ಮೃಗವ (ಕುಮ್ಮಾಳ. ೨೩-೧೧). ೨. ತರಕಾರಿಯಾಗಿ ಬಳಸುವ ಚಕ್ಕೋತ, ದಂಟು ಮುಂತಾದ ಸಸ್ಯ: ಎಲೆಯ ಹೇಱಿಂಗೆ ಬೇಳೆ . . . ಹೊತ್ತಳಕ್ಕೆ ವೀಸಂ ಕಾಣೆ ಸೊಪ್ಪಿಂಗೆ ಅರವೀಸ (ಸೌಇಇ. XI-ii, ೧೨೨-೧೩; 1072); ಕೀರೆ ನಱುವಲು ಚಕ್ಕವತ್ತ ಸೊಳೆ ಸಬ್ಬಸೀಗೆ ಮೊದಲಾದ ಸೊಪ್ಪುಗಳ ಬೇಱಿಬೇಱುಕ್ಕರಿಸಿದುದುರೆಯಂ . . . ತಾಳಿಸಿದೊಡಂ (ಸೂಪಶಾ. ೪-೧೭). 'ಸೊಪ್ಪುಗುಟ್ಟು$_1$' ಪರಾ.

**ಸೊಪ್ಪುಸೊಪ್ಪು** (ದ್ವಿರುಕ್ತಿ): ಸೊಪ್ಪುಸೊಪ್ಪುಗಳ ಮೆಳೆಮೆಳೆಗಳಂ ಸೋವುತ್ತೆ . . . ಮೃಗಮೃಗಂಗಳಂ ಕೆಡಹಿದರ್ (ಜೈಮಿಭಾ. ೨೮-೪೧). **ಸೊಪ್ಪಿನ ಬೆಟ್ಟ** = ಎಲೆ, ಕೊಳೆತ

ಗಿಡ ಮುಂತಾದುವುಗಳಿಂದ ರೈತರು ತಮ್ಮ ಭೂಮಿಗೆ ಗೊಬ್ಬರ ಮಾಡಿಕೊಳ್ಳುವುದಕ್ಕಾಗಿ ಬಳಸುವ ಹಾಗು ಕಂದಾಯವನ್ನು ತೆರಬೇಕಾಗಿಲ್ಲದಿರುವ ಭೂಮಿ : (ಮೃಗಜ, IV, ೭೮೬); ಪಕ್ಕದಲ್ಲೂ ಹಿಂದುಗಡೆಗೂ ಸೊಪ್ಪಿನ ಬೆಟ್ಟ (ತುಂಬಿಕೊ. ೮೨). **ಸೊಪ್ಪುನಾರಾಗಿ ಬಡಿ** = ಸೊಪ್ಪು ನಾರುಗಳನ್ನು ಬಡಿಯುವಂತೆ ಹೊಡೆ; ನಿತ್ರಾಣಗೊಳ್ಳುವಂತೆ ಹೊಡೆ: ಮುಳಿದು ಮನೆಗೆ ವೋಗಿ . . . ಪೆಂಡತಿಯಂ ಸೊಪ್ಪುನಾರಾಗಿ ಬಡಿಯೆ (ವಡ್ಡಾರಾ. ೧೫೩-೨). **ಸೊಪ್ಪುಸದೆ, ಸೊಪ್ಪುಸವದಿ, ಸೊಪ್ಪುಸೆದೆ** = ಎಲೆ, ತರಗು, ಬೇರು ಮುಂತಾದುವು: ಒಂದು ದೊಡ್ಡ ಹೋತವು ಸೊಪ್ಪುಸದೆ ತಿನ್ನುತ್ತಿತ್ತು (ಪ್ರತಾಪ. ೨೧); ಒಣಎಲೆ ಹುಡಿ- ಮಣ್ಣು ಸೊಪ್ಪು- ಸವದಿಗಳೆಲ್ಲ ಮೋಡಗಳಾಡುವ ಎಡೆ ಕಂಡವು (ಸಹೀಗೀ. ೩೦-೫೫೫); ಗೌಡಿತಿಯು ಹೋಗಿ ಸೊಪ್ಪುಸೆದೆ ತಂದು ಕಷಾಯಮಾಡಿಕೊಟ್ಟಳು (ದೇಶಾಂಕ. ೮೧). **ಸೊಪ್ಪು ಸೊಗಡು** = ಸೊಪ್ಪುಸದೆ : ನೇತ್ರಕಪಾಲದಲ್ಲಿ ಕಾಳಿಕೆ ಹೊದ್ದದೆ ಶ್ರೋತ್ರಕಪಾಲದಲ್ಲಿ ಸೊಪ್ಪುಸೊಗಡು ಹೊದ್ದದೆ (ಚನ್ನವ. ಕ. ೫೭೬-೧೨೪೪); ಚಂದಚಂದದ ಸೊಪ್ಪುಸೊಗಡಂ ಹಲವು ಸಕ್ಕಿಗಳ ಹೊತ್ತುಕೊಂಡೈತಹನು (ಬಸವು. ೪೩-೩೬). **ಸೊಪ್ಪುಹಾಕು** = ೧. (ಕರಾ) ಲೊಕ್ಕಿಸೊಪ್ಪಿನಿಂದ ಮಂತ್ರಪೂರ್ವಕವಾಗಿ ಭೂತೋಚ್ಚಾಟನೆ ಮಾಡು. ೨. (ಆಲಂ) ಬೆಲೆಕೊಡು; ಲಕ್ಷ್ಯವಿಡು: ನೂರಜಹಾನಳು ಈ ವಿಚಾರಗಳ ಕಡೆಗೆ ಸೊಪ್ಪುಹಾಕುತ್ತಿರಲಿಲ್ಲ (ನೂರಜ. ೩೪); ಮೋಹಿನಿಗೆ ಮಾರುಹೋದ ಆ ಗಂಡ ಯಾರ ಮಾತಿಗೂ ಸೊಪ್ಪುಹಾಕುವ ಮನಃಸ್ಥಿತಿಯಲ್ಲಿರಲಿಲ್ಲ (ಕಮನೆ. ೧೦೨).

[ದೇ. ‖ ತಮಿ. ಚುಪ್ಪಲ್, ಚುಪ್ಪಿ = ಒಣಗಿದ ಎಲೆ, ಪುಳ್ಳಿ; ಮಲ. ಚಪ್ಪು; ತುಳು. ಸೊಪ್ಪು, ಚೊಪ್ಪು; ಕೊಡ. ಚಪ್ಪಲ]

**ಸೊಪ್ಪು₃** (ನಾ). ೧. ನಿಶ್ಶಕ್ತಿ; ಆಲಸ್ಯ; ಕುಗ್ಗಿದ ಸ್ಥಿತಿ: (೬). ೨. (ಚಿಂತೆ, ಮುಪ್ಪು ಮುಂತಾದುವುಗಳಿಂದ) ಮುಖದ ಮೇಲೆ ಉಂಟಾಗುವ ಗೆರೆ, —ಸುಕ್ಕು: (ಚತುನಿ.೬. I, ೭೭).

**ಸೊಪ್ಪಾಗು₁** = ೧. ಕುಗ್ಗು; ಶಕ್ತಿಗುಂದು; ಸೊರಗು: ಒಪ್ಪಿಸಿ ಮನಮಂ ಮಾನಿನಿಗೊಪ್ಪಿಸಿ ತನುವಂ ತಪಕ್ಕೆ ಮುನಿ ಮನಸಿಜನಿಂ ಸೊಪ್ಪಾಗಿರ್ದು (ಪಂರಾವಾ. ೪-೧೩); ಪವನವ್ಯಾಘಾತದಿಂದುಗ್ರಭೀಮವ್ಯಗವ್ಯೂಹದಿನಪ್ಪಾಯಚಯದಿಂ ಸೊಪ್ಪಾಗೆಯುಂ ದೇಹಂ . . . ನಿಂದನಶ್ರಮದಿಂ ಯೋಗದಿಂ (ನೇಮಿಪು. ೨-೭೫). ೨. ಅಸ್ತವ್ಯಸ್ತವಾಗು; ಕೆದರು; ಚೆಲ್ಲಾಪಿಲ್ಲಿಯಾಗಿರು: ನರಿ ಬಂದು ಬಾಗಿಲೊಳ್ ನಿಂದು ಪುಲಿಯ ಪಜ್ಜೆಯುಮಂ ಸೊಪ್ಪಾದ ಬಿಲಸುಮಂ ಕಂಡು (ಪಂಚತಂ. ೩೮-೫); ಮುಡಿ ಸೊಪ್ಪಾಗದು ನೀವಿ ಬಿರ್ಚದು (ಜಗವಿ. ೧೭-೧೨೭); ಸೊಪ್ಪಾದ ತಿಲಕದ ಕೆದರ್ದ ಕಾಡಿಗೆಯ . . . ಕೋಮಲೆಯರ್ (ಜೈಮಿಭಾ. ೧೦-೫೦). ೩. (ಬಟ್ಟೆ, ಕಾಗದ ಮುಂತಾದುವುಗಳಂತೆ) ಮುದುಡು; ಸುಕ್ಕಾಗು: ಗಂಜಿಮಡಿಯಂ ಸೊಪ್ಪಾಗದಂತುಟ್ಟು (ಸಮಪ. ೬-೩೭). ೪. ಬಾಡು; ಕಂದು: ನಸುಸೊಪ್ಪಾದಧರಂ ಸಡಿಲ್ದ ವಸನಂ (ಅನುಮು. ೬೯); ಅಳಿದ ತಿಲಕಂ ಪರೆದ ಕುರುಳ್ವೊಪ್ಪಾದಧರಮೊಪ್ಪಿತಾ ಕಾಂತೆಗೆ (ಜೈಮಿಭಾ. ೧೧-೨೫). ೫. ನುಗ್ಗಾಗು; ಶಿಥಿಲಗೊಳ್ಳು: ಕುಂತದ ಧಾರೆಗಳ ಧಾಳಿಸುವ ನೆಜೆ ಸೊಪ್ಪಾದ ಹಿಳುಕಿನ ಗಜೆಯ ಕೀಲಿಸುವ . . . ವೀರಭಟರೊಪ್ಪಿದರು (ಕುಮ್ಮಾಭೀ. ೫-೩೮); **ಉಜೆ ಸೊಪ್ಪಾದ ಶಕಟನಿಕಾಯವನು** ಪೂರಾಯದೇಜೆನ ನಾಯಕರ ಕರೆಕರೆದು ಬವರಕೆ ಕಳುಹಿದನು ದ್ರೋಣ (ಕುಮ್ಮಾದ್ರೋ. ೧೫-೧೭). ೬. ಮಂಕಾಗು; ಹೊಳಪಿಲ್ಲದಿರು: ಸೊಪ್ಪಾದ ಪೊನ್ನುಮಂ ಕಪ್ಪಾದ ರತ್ನಮುಮಂ . . . ಲೋಕಂ ಕೈಕೊಳ್ಳರ್ (ಧರ್ಮಾಮೃ. ೯-೧೦೮); ತಪ್ಪಿನಿಸುಮಿಲ್ಲದೆಲ್ಲರುಮೊಪ್ಪಿದ ಕೃತಿಯಂ ಕುತರ್ಕೆ ಪಟಿದೊಡೆ ತನಗೇನುಪ್ಪಾದುದೆ ಸೊಪ್ಪಾದುದೆ (ಧರ್ಮನಾ. ೧-೬೦). **ಸೊಪ್ಪುಸೊಪ್ಪಾಗು** = ೧. ತುಳಿತದಿಂದ ಸವೆದುಹೋಗು: ಪುರುದೇವಂ ಮೊದಲೊಳ್ ನೀನೆರಡನೆಯೊಳ್ ನಡೆಯೆ ಸೊಪ್ಪುಸೊಪ್ಪಾದ ಪದಾಂತರದೊಳ್ ನಡೆದಿಪ್ಪತ್ತಿರ್ವರು ಮಿನ್ನಾ ಶಂಭವಾದಿಗಳ್ ತೀರ್ಥಕರರ್ (ಅಜಿಪು. ೬-೮೩). ೨. ಮೆತ್ತಗಾಗು; ಮೆದುವಾಗು: ಅಂತು ಪಿಟಿಯೆ ಕಕ್ಕ[ಟ]ಗಟಲ್ದು ಸೊಪ್ಪುಸೊಪ್ಪಪ್ಪೆಲ್ವಂ ಕುದಿಯಿಸೆ ತತ್ತಟಗುದಿದು . . . ಜೀವನ್ಮೃತಾವಸ್ಥೆಯೊಳಲ್ಲಿಂದಂ ತೆಗೆದು (ಶಾಂತಿಪು. ೭-೯೫ ವ). **ಸೊಪ್ಪುಸೊವಡಾಗು** = ೧. ನಜ್ಜುಗುಜ್ಜಾಗು; ನುಗ್ಗಾಗು: ಗಡೆಗಳ್ ಸೊಪ್ಪುಸೊವಡಪ್ಪಿನಂ ಸೂಟ್ಟಿಪ್ಪದೆ ಕಡುಕೆಯ್ದು ಪೊಯ್ದುರೊರ್ವರನೊರ್ವರ್ (ಗದಾಯು. ೮-೧೧); ವೈಶ್ಯಜಂ ಮುನಿಕುಂಜರನಂ . . . ಪುಳ್ಳಿಗಳಂ ಕೊಂಡು ಸೊಪ್ಪುಸೊವಡಪ್ಪಿನಮಟ್ಟೆ ಬಡಿಯೆ (ಧರ್ಮಾಮೃ. ೧೨-೨೨೦). ೨. ಸೋತುಹೋಗು: ತಪ್ಪದೆಲೆ ನಾಳೆ ಮೃತಿ ನಿನಗಪ್ಪುದು ಪೋಗೆನೆ ನೃಪಾತ್ಮಜಂ ಕೇಳ್ದು ಮನಂ ಸೊಪ್ಪುಸೊವಡಾಗೆ (ವೃಷವಿ. ೩೧-೧೯). [ದೇ. ‖ ತಮಿ. ಚೊಪ್ಪ, ಚೋಪ]

**ಸೊಪ್ಪು₄** (ನಾ). ಸಪ್ಪುಳ; ಶಬ್ದ: ನಡೆವಡಿಗಳ ಸೊಪ್ಪುಣ್ಮದ ತೆಱದಿ ಪಡಿಯಂ ದನಿಗೊಡದಂತೆ ತೆಜೆದು ಪೊಱಮಡುತ (ಜಯಕಾ. ೧೩-೭೦).

**ಸೊಪ್ಪಾಗು₂** = ಸದ್ದಾಗು; ಶಬ್ದವುಂಟಾಗು: ತಾಗದ ಚುಂಬನಮುಚೆ ಸೊಪ್ಪಾಗದ ಕರಘಾತಮಗಲದಿರ್ಪನುಭವದೊಳ್ ಸಾಗಿಸುವ ಸರಭಸಂ ಮಿಗೆ ರಾಗಿಸುವ ಮನಂ ಮನೋಹರಂ ಜಾರೆಯರೊಳ್ (ಗಿರಿಕ. ೪-೮೩). [< ಸಪ್ಪುಳ್]

**ಸೊಪ್ಪು₅** (ನಾ). [ವೀಶ್ಕೆ] ಸೊಕ್ಕು; ಗರ್ವ; ಅಹಂಕಾರ: 'ಸೊಪ್ಪಡಗು₂', 'ಸೊಪ್ಪಳಿ' ಪರಾ. [?]

**ಸೊಪ್ಪುಕುರಿ** 'ಸೊಪ್ಪುಗುರಿ' ನೋ.

**ಸೊಪ್ಪುಗತ್ತಿ** (ನಾ). ಸೊಪ್ಪು ಕೊಯ್ಯಲು ಬಳಸುವ ಕತ್ತಿ: ಗೌಡರು . . . ಕೈಯ್ಯಲ್ಲೊಂದು ಸೊಪ್ಪುಗತ್ತಿಯನ್ನು ಹಿಡಿದುಕೊಂಡು, ತೋಟಕ್ಕೆ ಹೋಗುವ ದಾರಿಯಲ್ಲಿ ಹೊರಟರು (ಪಂಜಪಂ. ೨೯). [ಸೊಪ್ಪು₂ + ಕತ್ತಿ]

**ಸೊಪ್ಪುಗಾಣ್** (ಕ್ರಿ). (ಆಲಂ) ನಿಸ್ಸಾರವಾಗಿ ಕಾಣು; ಹುರುಳಿಲ್ಲವೆಂದು ಭಾವಿಸು: ಇಂದ್ರಿಯವ್ಯದಱ ಸೋಂಕಿಲ್ಲವಾಗ ಸುರೇಂದ್ರಸುಖವ ಸೊಪ್ಪುಗಂಡು ತಂದ್ರವಳಿದು ಝುಮ್ಮಝುಮ್ಮನೆ ರಾಯುಗತೀಂದ್ರಿಯಸುಖದೋಱುತಿಹುದು (ಭರಚ. ೧೮-೫೮). [ಸೊಪ್ಪು₃ + ಕಾಣ್]

**ಸೊಪ್ಪುಗಿಳಿ** (ನಾ). ಒಂದು ಬಗೆಯ ಗಿಣಿ: ಇವುಗಳಲ್ಲಿ ತೀರ ಪುಟ್ಟದಾದ ಒಂದು ಜಾತಿಯನ್ನು 'ಸೊಪ್ಪುಗಿಳಿ' ಯೆಂದು ಕರೆಯುತ್ತಾರೆ (ಬಾಲಪ್ರ. III, ೧೪೩೪).

[ಸೊಪ್ಪು₂+ ಗಿಳಿ]

**ಸೊಪ್ಪುಗುಟ್ಟು₁** (ಕ್ರಿ). ಬೇಟೆಯಲ್ಲಿ ಪೊದೆಗಳನ್ನು ಬಡಿದು ಬೇಟೆಯ ಪ್ರಾಣಿಯು ಹೊರಗೆ ಬರುವಂತೆ ಮಾಡು, —ಎಬ್ಬಿಸು; ಸೋವು: "ಪಪ್ಪುಕವೆಂದೆನೆಲ್ ಸೊಪ್ಪುಗುಟ್ಟುವುದಕಮರ್ದ ನಾಮಂ" (ಶಬ್ದಮಂ. ೩೧).

[ಸೊಪ್ಪು₂ + ಕುಟ್ಟು₁]

**ಸೊಪ್ಪುಗುಟ್ಟು₂** (ಕ್ರಿ). ಸೊಪ್ಪನ್ನು ಜಜ್ಜುವಂತೆ ಕುಟ್ಟು, — ಚಚ್ಚು, — ತದೆ: ಅಂದುಗೆಯಂತೆ ಮೇಗಾಲಂ ಪತ್ತಿ ಸೊಪ್ಪುಗುಟ್ಟುವರ್ (ಧರ್ಮಾಮೃ. ೩-೭೩); ಕೋಟಿವಾವಾಗಿ ಪುಟ್ಟಿದೊಡಾತನ ಕಂಡು ಸೊಪ್ಪುಗುಟ್ಟಿದೊಡೆ ಮಿಡುಮಿಡುಕಿ ಸತ್ತು (ಬಂಪರಾ. ೧೩-೩೪ ವ); ಕೆಲರಂ ಬೃಹತ್ತ್ರಂ ಸೊಪ್ಪುಗುಟ್ಟುತಂತರೆಬರಂ ಕುಡಿಯಳ್ಳೆಗಳನಿಱಿದು (ವೀಶ್ಮಪು. ೪-೧೮-೩೨). [ಸೊಪ್ಪು₂ + ಕುಟ್ಟು₁]

**ಸೊಪ್ಪುಗುಟ್ಟುಹ** (ನಾ). ಬೇಟೆಯಲ್ಲಿ ಪ್ರಾಣಿಗಳನ್ನು ಎಬ್ಬಿಸಲು ಪೊದೆಗಳನ್ನು ಬಡಿಯುವುದು; ಸೋವುವುದು: "ಪೊಪ್ಪುಕಂ — ಸೊಪ್ಪುಗುಟ್ಟುಹಂ" (ಶಮಡ. ಪರಿ. ೨). [ಸೊಪ್ಪುಗುಟ್ಟು₁ + - ಹ₂ (< - ವ₂)]

**ಸೊಪ್ಪುಗುರಿ, ಸೊಪ್ಪುಕುರಿ** (ನಾ). ಒಂದು ಜಾತಿಯ ಕುರಿ: ಅವರು ಚರ್ಮ ಸುಲಿಯುತ್ತಿದ್ದ ಕುರಿಯ ತಲೆಯಿಂದ ಅದು 'ಸೊಪ್ಪುಗುರಿ' ಎಂದೂ ಗೊತ್ತಾಗುವಂತಿತ್ತು (ಮಲೆಮ. ೪೪೭). **ಸೊಪ್ಪುಕುರಿ** : ಅವನ ರೊಪ್ಪದಲ್ಲಿ ಸೊಪ್ಪುಕುರಿಗಳಿವೆ (ರೂಢ).

[ಸೊಪ್ಪು₇ + ಕುರಿ₂ (< ಕುಱಿ₃)]

**ಸೊಪ್ಪುಗೊಲೆ** (ನಾ). ಸೊಪ್ಪು ಕತ್ತರಿಸುವಂತೆ ಕಡಿಯುವಿಕೆ: ಸೊಪ್ಪುಗೊಲೆ ಗೊಲ್ಲೆನೀಗಳೆ (ಚಿಕವಿ. ೬-೨೮೧). [ಸೊಪ್ಪು₂ + ಕೊಲೆ₂]

**ಸೊಪ್ಪುಡಿಗೆ** (ನಾ). ಎಲೆಗಳಿಂದ ಮಾಡಿದ ಉಡುಪು.

**ಸೊಪ್ಪುಡಿಗೆಯರ್** (ಬಹುವ) = ಎಲೆಗಳಿಂದ ಮಾಡಿದ ಉಡುಪನ್ನು ಧರಿಸಿದವರು: ಪೀಲಿಯುಡಿಗೆಯರ್ ಕೆಲರ್ ಸೊಪ್ಪುಡಿಗೆಯರ್ ಕೆಲರ್ (ಅಬ್ಬಲೂ. ೩-೨೯). [ಸೊಪ್ಪು₂ + ಉಡಿಗೆ₁ (< ಉಡುಗೆ)]

**ಸೊಪ್ಪುವಡು** (ಕ್ರಿ). (ಆಲಂ) ಸಾರವಿಲ್ಲದಾಗು; ನೀರಸವಾಗಿರು: ಪ್ರವಿದಿತಸಾಹ

ಸೋರ್ಜಿತ ಮಹಾಪುರುಷೋದ್ಧತರಾ ರಸಂಗಳಂ ಸವಿಗಿಡೆ ಸೊಪ್ಪುವಟ್ಟು ಬಗೆಯಿಂದಲಿ ಗನ್ನಡಗಬ್ಬದೊಳ್ ತಗುಳ್ಳುವ ಬೆಸನೇಕೆ (ಬಂಹರಿ. ೧-೧೨). [ಸೊಪ್ಪು₃ + ಪಡು₁]

**ಸೊಪ್ಪುಳ್** 'ಸಪ್ಪುಳ್' ನೋ.

**ಸೊಪ್ಪುಳ** 'ಸಪ್ಪುಳ' ನೋ.

**ಸೊಪ್ಪುಳಾಲಿಸು** (ಕ್ರಿ). ಸದ್ದನ್ನು ಕೇಳು; ಶಬ್ದವನ್ನು ಆಲಿಸು: ಚಿತ್ತಮುಳ್ಳ ರಾಲಯಂಗಳಲ್ಲಿ ರಾಗಿಸುತ್ತ ಸಾರ್ದು ಸೊಪ್ಪುಳಾಲಿಸುತ್ತ ನೋಡಿ (ವೃಷವಿ. ೨೦-೭). [ಸೊಪ್ಪುಳ್ (< ಸಪ್ಪುಳ್) + ಆಲಿಸು₁]

**ಸೊಪ್ಪುಳಿಡು** (ಕ್ರಿ). ಸದ್ದು ಮಾಡು; ಶಬ್ದಮಾಡು: ಕಾಲ್ಗಳ ಸೊಪ್ಪುಳಿಡದಂದವೆ ನಡೆತಂದು (ಶ್ರೀಪಾಲ. ೮-೪೪). [ಸೊಪ್ಪುಳ್ (< ಸಪ್ಪುಳ್) + ಇಡು₁]

**ಸೊಪ್ಪುಳ್ತೋಱು** (ಕ್ರಿ). = ಸೊಪ್ಪುಳಿಡು: ಅಡಿ ಸೊಪ್ಪುಳ್ತೋಱದಂತೊಯ್ಯನೆ ಕಡೆವೆಡೆಯೊಳ್ ಕಂದಲಂ ಸಾರ್ದು (ಚಿಕವಿ. ೩-೫೫). [ಸೊಪ್ಪುಳ್ (< ಸಪ್ಪುಳ್) + ತೋಱು]

**ಸೊಪ್ಪೆ, ಸೊಪ್ಪಿ, ಸೋಪಿ** (ನಾ). ೧. ಜೋಳ ಮುಂತಾದ ತೆನೆಗಳನ್ನು ಕೊಯ್ದ ಮೇಲೆ ಉಳಿಯುವ ಗಿಡದ ಭಾಗ; ದನಗಳಿಗೆ ಮೇವಿನಂತೆ ಉಪಯೋಗಿಸುವ ದಂಟು: ಏಸವ ಬಾಜಾರದೊಳಂ ಸೊಪ್ಪೆಯ[...]ಮಲ್ಲಿ ಬಸವಣ್ಣಯ್ಯಂ ಕುಳಿತು ಸೊಪ್ಪೆಯಂ ವಿಕ್ರಯಿಸಿ ಪಶುಗಳ್ಗೆ ಕೊಡುತಿರಲು (ಗುರುಬಾ. ೧೧-೩೪); ಸಾರಂಗವು . . . ದನದ ಹಕ್ಕೆಯೊಳಗೆ ಒಟ್ಟಿದ ಸೊಪ್ಪೆಯ ಮರೆಗೆ ಅಡಗಿಕೊಂಡಿತು (ಮುಂಬಯಿ. ೪-೪೨); ಈ ಸೊಪ್ಪೆಯ ಸೂಡಿನಂತಹ ಕಾಗದವನ್ನು ಓದಲು ನನಗೆ ಅವಕಾಶವಿಲ್ಲ (ಪ್ರೇಮವಿ. ೩೩). **ಸೊಪ್ಪಿ** : ೧. ಸೊಪ್ಪಿಯಂ ಕೊಂಡು ದಿನಚರಿಯದಿಂ ಬಸವಂಗೆ ಹಾಯ್ಕುತಿರ (ಚೆಬಪು. ೬೨-೭೧). ೨. ನಿಸ್ಸಾರವಾದ ಭಾಗ; ಜೊಳ್ಳು: ಕಾಳುಗಳೊಳಗೆ ಶೆಂಗದ ಸೊಪ್ಪಿ ಕೂಡಿದ್ದಿರಬಾರದು (ಮುಂಬವ್ಯಾ. ೩೬). ೩. ನಾರು; ಜುಂಗು: ಸುಂಠಿಯ ಮೇಲೆ, ನಿರಗಿಗಳಿರುತ್ತವೆ. ಕುಟ್ಟಿ ನೋಡಿದರೆ . . . ಧಾರಧಾರದ ಸೊಪ್ಪಿಗಳು ಉಳಿಯುತ್ತವೆ (ಮುಂಬವ್ಯಾ. ೫೯). **ಸೋಪಿ** : ೩. ಇವರು . . . ತೆಂಗಿನಕಾಯಿಯ ಮೇಲಿನ ಸೋಪಿಯನ್ನು ತೆಗಿಯುವದು ಮುಂತಾದ ಬೇರೆ ಹೋರೆಗಳನ್ನು ಮಾಡುವರು (ಕಭಾಗ. ೧೭೭). [ದೇ. ॥ ತೆಲು. ಕೋಲಾ. ಚೊಪ್ಪ./ ಮರಾ. ಸೋಪ್ = ಬಾಳೆಯ ಪಟ್ಟೆ]

**ಸೊಬಂಗ** 'ಸೊಬಗ' ನೋ.

**ಸೊಬಗ, ಸುಬಗ, ಸೊಬಂಗ** (ನಾ). ೧. ಚೆಲುವ; ಸುಂದರ: "ನೀಱರೆನಲ್ ಸೊಬಗರ್" (ಕವಿಕಂ. ೧೯೫); ಸೊಬಗಂ ಮಹಿಮಾನ್ವಿತನತಿಧನ್ಯಂ (ಲೋಕೋಪ. ೧೧-೩೭); ಎಲೆ ಸೊಬಗ ನಿನ್ನಂ . . . ಅಂದೊರ್ಮೆ ಕಂಡೆನೆಂದು ಮೊದಲ್ನೊಂಡಲರಂಬನೆನ್ನನುಱೆ ಕೋಟಲೆಗೊಳಿಸುತ್ತಿರ್ಪಂ (ದಶಕು.೪-೯೮). **ಸುಬಗ** : ೨. ಒಬ್ಬಾತನ ಹೆಸರು: ಶ್ರೀಕುಮಾರ ಕೀರ್ತಿದೇವರ ಗುಡ್ಡಂ ಸುಬಗಂ ಬರೆದಂ (ಎಕ. XI, ಚಿತ್ರದು.೭೪-೩೯; 968). **ಸೊಬಂಗ** : ೧. ಮಂಗಳಾರ್ಥಾಂಗ ತ್ರಿಗುಣಂಗಳುತ್ತುಂಗ ನೇತ್ರಂಗಳ ಸೊಬಂಗ (ಚೆಬಪು.೩೭-೧). **P** ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. [ಸೊಬಗು + - ಅ₇]

**ಸೊಬಗಿ** (ನಾ). ಚೆಲುವೆ; ಸುಂದರಿ : ನೃಪನ ವ್ಯಗ್ರತೆಯಿನಿತರ ವನಿತೆಯರಾಗ್ರಹಮಂ ಬಿಟ್ಟನೇನವರ್ಧ್ ಸೊಬಗಿಯರೋ (ಶಾಂತಿಪು. ೧-೬೩); ಸೊಬಗಿಯ ಗಾಂಪಿನಂತೆ ಸುಡಿ ಜಾಣನ ಮೋನದಂತೆ . . . ಕಡುಲೇಸಪ್ಪ ಸನ್ಮಾರ್ಗಮಂ ಬಿಟ್ಟು (ಧರ್ಮಾಮೃ. ೮-೯೪); ಸೂಕ್ಯಾನೆನಡೆವೆತ್ತ ಸೊಬಗಿಯರ್ ವಿಟರೆರ್ದೆ ಬಿಕ್ಕನೆ ಬಿರಿಯುವಂದದಲಿ ಅಕ್ಕಟೆಂದಾ ಲೋಕನಗೆಯ್ದು (ಮೋಹತ. ೨೪-೧೭). [ಸೊಬಗು + - ಇ₂]

**ಸೊಬಗು, ಸುಬಗು** (ನಾ). ೧. ಅಂದ; ಚೆಲುವು: ಸುಕುಮಾರಸ್ವಾಮಿಯ ರೂಪಮಂ . . . ಸಂಪತ್ತಂ ಸೊಬಗಂ ಒಲ್ಮೆಯಂ . . . ನೆನೆನೆನೆದು (ವಡ್ಡಾರಾ. ೩೦-೧೦); ಎಲ್ಲಿಂದಂ ವಿನೋದದ ಮೊದಲಲ್ಲಿಂದಂ ಸೊಬಗಿನಾಗರಂ (ಆದಿಪು. ೩-೧೫); ನೀವು ಸೊಬಗಿನ ನಿಧಿಯಲೇ (ಕುವ್ಯಾ. ೧೫-೨೭). ೨. ಅತಿಶಯ; ಹೆಚ್ಚುಗಾರಿಕೆ: ಹೊಟೆಸಿಕೊಂಡು ಹೋದ ನಾಯಿ ಮೊಲನೇನ ಹಿಡಿಯುವುದಯ್ಯಾ ಇಱಿಯದ ವೀರ ಇಲ್ಲದ ಸೊಬಗುವ ಹೇಳುವುದೇ ನಾಚಿಗೆ (ಬಸವ. ೩೦೪). **ಸುಬಗು**: ೩. ಸಂಪತ್ತು; ಐಶ್ವರ್ಯ: ದಾನಪ್ರಿಯೆಗಂ ಜಯಾಪ್ರವುದೆಗಂ ದೋರ್ವ್ಮ್ಂಡಳಂ ತಾನೆನಲ್ ನೆಲೆಯಾದಂ ಸುಬಗಿಂಗಮುಜ್ವಳಯಶಶ್ರೀಕಾಂತೆಗಂ ಕೇಶವ[ಂ] (ಸೌಇಇ. XI-ii, ೧೬೯-೧೨; 1119). [< ಸಂ. ಸುಭಗ./ ತುಳು. ಸೊಬಗ್; ತೆಲು. ಸೊಬಗು]

**ಸೊಬಗುಗಾತಿ** (ನಾ). = ಸೊಬಗಿ: ಕಡುಚೆಲ್ವುವಡೆದ ಸೊಬಗುಗಾತಿ ಮೆಲ್ಲನೆ ನಡೆತಂದಳಾ ನೃಪನೆಡೆಗೆ (ನೇಮಿಸಂ. ೧೨-೫೧). [ಸೊಬಗು + - ಕಾತಿ₁]

**ಸೊಬಗುಗಾರ** (ನಾ). = ಸೊಬಗ ೧: ಅಹಹ! ಹುಟ್ಟಾ ಗೆಲ್ಲಬಲ್ಲ ಸೋಲದ ಸೊಬಗುಗಾರ! (ಉಯ್ಯಾಲೆ. ೧೦೦-೯). [ಸೊಬಗು + - ಗಾರ (< - ಕಾಱ)]

**ಸೊಬಗುವಡು** (ಕ್ರಿ). ಅಂದವಾಗು; ಶೋಭೆಯನ್ನು ಹೊಂದು: ತೊಡವೆಲ್ಲಮಂ ತೊಟ್ಟು ಪಣೆಗೆ ತಿಲಕಮನಿಟ್ಟು ತಿಗುರಿಂದೆ ಸೊಬಗುವಟ್ಟು . . . ಸೊಗಯಿಸಿದರು (ಜೈಮಿಭಾ. ೩೦-೧೭). [ಸೊಬಗು + ಪಡು₁]

**ಸೊಬಗುವಡೆ** (ಕ್ರಿ). = ಸೊಬಗುವಡು: ಸತ್ಕೃತಿ . . . ಕರ್ಣಾಟದೊಳಂ ಸತ್ಕವಿ ನಿವಹಂ ಪೊಗೞೆ ಚಮತ್ಕೃತಿಯಂ ಪಡೆದು ಸೊಬಗುವಡೆದತ್ತೀಗಳ್ (ಕಾದಂಪೂ. ೫); ತನಿ ಸೊಬಗುವಡೆದ ಸನ್ಮೋಹನದ ಕಣೆಯೆ ಬಾ (ಜೈಮಿಭಾ. ೬-೨೫). [ಸೊಬಗು + ಪಡೆ₁]

**ಸೊಬಗುವೆಱು** (ಕ್ರಿ). = ಸೊಬಗುವಡು: ವಿಳಾಸವಾಂತ ನಿತ್ಯವ್ರತಮಾಕೆಯೊಳ್ ಸೊಬಗುವೆತ್ತ ಗುಣವ್ರತಮಂ ಜಗಂ ವಿಳಾಸವ್ರತಿ ಕೊಂಡದೇ ಸವಿರತಿವ್ರತಮಾ ನೃಪನೆತ್ತಿದೇಕಪತ್ನೀವ್ರತಮೆಯ್ದೆ ಸೂಚಿಸವೆ ಕಾಂತೆಯ ರೂಪಿನ ಪೆಂಪಿನೊಲ್ಮೆಯಂ (ಅರ್ಧನೇ. ೧-೭೬); ಸಿಂಗರದೊಳ್ ಸೊಬಗುವೆತ್ತು ವಿಳಾಸದೊಳ್ ವಿವೇಕಂಬಡೆದು ನಡೆದು ಬಂದು (ಗಿರಿಕ. ೨-೧೦೫ ವ); ಧರಣಿ . . . ಸೊಬಗುವೆತ್ತಳು ಸತಿಯ ಕಣುಸನ್ನೆಯಲೆ ನಡೆದು (ಬಸಪು. ೧೧-೪೦). [ಸೊಬಗು + ಪೆಱು₁]

**ಸೊಬಗೆ** (ನಾ). ಚೆಲುವೆ; ಸುಂದರಿ: ತದುರ್ವೀಪಾಲಕಂಗಿಪ್ಪಸುಂದರಿಯರ್ ಸುಂದರರೂಪೆಯರ್ ಸೊಬಗೆಯರ್ ಕೂರ್ತಿರ್ಪರ್ (ಶಾಂತಿಪು. ೫-೨೨); ಸೊಬಗೆಯಾದಳ್ ಜಾಣೆಯಾದಳ್ ಸರಸ್ವತಿ (ಅನಂಪು. ೧-೫೧). [ಸೊಬಗ + - ಎ₁]

**ಸೊಬಾರ** (ನಾ). (?): ಕಂಡು ಸೊಬಾರ ಕಾರ್ಬೊಗೆಯ ಪೋಲ್ತೊಡಲಿಂಗಳ ಕೆಂಡಂಗಳಾ ತುಂಡದ ಕೋರೆವಲ್ಗಳ . . . ಸೋರೆಮೂಗಿನ ಭೂತಗಣೇಂದ್ರನಂ (ಹಾಲಾಸ್ಯ.೧-೮-೧೦); ಕಬಂಧಯುತಜಿಹ್ವೆ ಶಿಶ್ನಮಿದು ಪುಷ್ಪಜಂಘಾದ್ಯಯಂ ಸೊ[ಪಾಠಾಂ. ಸೋ]ಬಾರಮಿವು ನಾಲ್ಕು ಹ್ರಸ್ವಗತಲಕ್ಷಣಂಗಳ್ ಕರಂ (ಹಾಲಾಸ್ಯ. ೧-೧೨-೩೭); ದೇವರ ದೇವ ನೀನೆನ್ನ ತಪ್ಪನಿದಂ ಸೊಬಾ[ಪಾಠಾಂ. ಸಭಾ]ರಮನೀಗ ಸೈರಿಪುದೆಂದೆನಲ್ (ಹಾಲಾಸ್ಯ. ೨-೩-೩೪); ಆಗಳನೇಕಹೇಮಸುಮಮೌಕ್ತಿಕವೃಷ್ಟಿಗಳಂ ಸೊಬಾರಮಂ ಭೋಗಿಗಳೆಯ್ದೆ ತಮ್ಮೊಳುಱೆ ಸೂಸೆ (ಹಾಲಾಸ್ಯ. ೩-೩-೧೦). [?]

**ಸೊಬ್ಬಣ** (ನಾ). ಒಂದು ಬಗೆಯ ತೆರಿಗೆ: ಇ ಮರಿಯಾದೆಯಲು ಸೊಬ್ಬಣ ಬನವೆ ಪಂಡಿ XX ಹಳ್ಳಿ ಹಳ್ಳವೂ ತಿಂಗಳ ಮಂನ್ನೆಯ ನಿಬಂಧ ಮುಂತಾದ ಎಲ್ಲಾ ಕಿಱುಕು XXX ಳನು (ಪ್ಯಆರಿ.೧೯೪೨,೨೭-೮; ಸು. 1270). 'ಸೋವಣ' ಪರಾ. [?]

**ಸೊಮ್ಮಳಿಸು** (ಕ್ರಿ). ನೋಯು; ಹಿಂಸೆಪಡು(?): ಕಮ್ಮಿ ಹೆಗ್ಗೂರಿಟ್ಟು ಸುಯಿವುತ ದಿಮ್ಮುವಿಡಿದಂತುಸುರುವಿಡುವುತ ಸೊಮ್ಮಳಿಸುತೊರೊರ್ಮೆ ನೆರವಿಯ ಬಱಿದೆ ಬೈವುತ್ತೆ (ಮದೇಪು. ೭-೫೫). [ಸೊಮ್ಮಳ್₀ + - ಇಸು₃]

**ಸೊಮ್ಮೞಿ** (ಕ್ರಿ). ಸೊಕ್ಕಡಗು; ಗರ್ವವು ನಾಶವಾಗು: ಇಂತಿರೊಂದು ಬಿಱುನುಡಿಗ ಸೊಮ್ಮೞಿದು ಮೆಯ್ಸೆಟ್ಟು ಪಾರ್ವಂ . . . ನಿಮ್ಮ ಕುದುರೆಯಂ ನಡೆಗಿಡಿಸಿದಂ (ರಾಮಾಶ್ವ. ೧೩೮-೫). [ಸೊಮ್ಮು₄ + ಅೞಿ₁]

**ಸೊಮ್ಮು₁** (ಕ್ರಿ). ಸೇರಿಸಿ ಹೊಲಿ; ಕೂಡಿಸಿ ಹೊಲಿ: ಆ ತೊವಲುಗಳ ಒತ್ತಿ ಮಗುಚಿ ತಿದಿಯನು ಮಾಡಿಯಾ ಚಾರುದತ್ತನನದಱೊಳು ಹೊಗಿಸಿ ಅದಱ ಬಾಯನು ಸೊಮ್ಮಿ ಬಳಿಕುಳಿದಾಡಿನ ತಿದಿಯೊಳಗಿರುವರು ಹೊಕ್ಕು (ನೇಮಿಸಂ. ೧೦-೨೮೧). [?]

**ಸೊಮ್ಮು₂** (ನಾ). ೧. ಸಂಬಂಧ; ನೆಂಟಸ್ತಿಕೆ; ಬಂಧುತ್ವ: ರಾಯನ ಸೊಮ್ಮಿನವರಲಿ ಸೀಳಿದನು ಹದಿನೆಂಟುಸಾವಿರವ (ಕುವ್ಯಾಕ.೧೦-೨೯); ಈ ಲೋಕದಱೆಕೆಯೊಳು ನಿಮ್ಮೊಡೆಯನೀಗ ವಿವರಿಸಿ ನೋಡಿದೊಡೆ ನಮ್ಮ ರವಿಕುಲದ ಸೋಮಕುಲದ ಸೊಮ್ಮಿನವನಲ್ಲ (ಸಮ್ಮುಕೌ.೮-೧೭). ೨. ಸೇರಿದುದು; ಸಂಬಂಧಪಟ್ಟುದು: ನೀಂ ಮಗುಳೆ ಹೀನದಶಯೋನಿಗಳೊಳೊಗೆದವಱ ಸೊಮ್ಮೆನಿಸುವಾಹಾರಮಂ ಕೊಂಡು ಜೀವಿಸು (ಪದ್ಮರಾ. ೧೦-೧೨೭).

**ಸೊಮ್ಮುಸಂಬಂಧ** = ಬಂಧುತ್ವ; ನಂಟುತನ: ಸಾಮಾನ್ಯ ಸಂದೇಹಕ್ಕೆ ಕರ್ತೃಭೃತ್ಯತ್ವವಲ್ಲದ ಜ್ಞಾನಾತ್ಮಂಗೆ ಸೊಮ್ಮುಸಂಬಂಧವ ಭಾವಿಸಲಿಲ್ಲ (ಮೋಳಿಮಾ. ೪೦-೧೬೬); ನಮಗೆಯು ನಿಮಗೆಯು ಸೊಮ್ಮುಸಂಬಂಧವಿಲ್ಲ ನೀವೆಲ್ಲಂ ನಿಮ್ಮರಸ ನಲ್ಲಿಗಿರದೆ ಪೋಪುದು (ನಂಬಿರ. ೮-೮). [< ಸೊಮ್ಮು$_1$?]

**ಸೊಮ್ಮು$_3$** (ನಾ). ೧. ಸೊತ್ತು; ಸಂಪತ್ತು: ಶಿವನ ಸೊಮ್ಮು ಶಿವಂಗೆ ಮಾಡದೆ ಅನ್ಯಕ್ಕೆ ಮಾಡಿದೊಡೆ ತನ್ನ ಭಕ್ತಿ ತನ್ನನೆ ಕೆಡಿಸುವುದು (ಬಸವ. ೨೧೩); ಸುಮ್ಮನಿವನಲಿ ನಮ್ಮ ವಿದ್ಯೆಯ ಸೊಮ್ಮು ತುಂಬಿಡಬೇಕು (ಸಂಭವ. ೧೮-೨೭); ಸಮ್ಮಾನಕೆಂದು ಕರೆದರೆ ಮನೆಯೊಳಿದ್ದ ಸೊಮ್ಮು ಕದ್ದೊಯ್ಯುವರಂದದೊಳು (ಭರತ. ೧೧-೬೬). ೨. ಹಣ, ಒಡವೆ ಮುಂತಾದ ವಸ್ತು: ಸತಿ . . . ಇದಿರ್ವಂದು ಪಾದಯುಗಕ್ಕೆಱಗಿ ಕನ್ನದಗಳಿಯವಂ ಕೈಯ ಸೊಮ್ಮುಗಳ ಈಸಿಕೊಳುತ (ಬಸಪು. ೩೧-೨೯). ೩. ಒಂದು ಬಗೆಯ ತೆರಿಗೆ: ತೋಟ ತುಡಿಕೆ ಮಗ್ಗ ಮನೆಹಣ ಸುಂಕ ಸೊಂಮು ಸುವರ್ನಾದಾಯ ಮೊದಲಾದ್ದು (ಎಕ. XIV, ಚಾಮರಾ. ೨೬೮-೨೪; ಸು. 1397). [ದೇ. || ತಮಿ. ಚೊಮ್; ತೆಲು. ಸೊಮ್ಮು]

**ಸೊಮ್ಮು$_4$** (ನಾ). ೧. ಠೀವಿ; ಗತ್ತು: ನಮ್ಮನೊಬ್ಬರನು ನೋಡದೆ ಕಣ್ಣ ಮುಚ್ಚಿಹ ಸೊಮ್ಮೇನು (ಭರತ. ೪೩-೫೮); ಮಹಾಸ್ವಾಮಿಯವರ ಸೊಮ್ಮಿನ ಸಯ್ಪಿನ ಬಿರುದು ಕುಬೇರನನ್ನೂ . . . ಚಿನ್ತಾಮಣಿಗಳನ್ನೂ ನಾಚಿಸುತ್ತ ಪುರುಳ್ಗೊಂಡಿರುವುದು (ಚಿಕ್ಕಉ. ೪೨-೫). ೨. ಸೊಕ್ಕು; ಗರ್ವ: ನಮ್ಮ ಬೆಂಬಲವಿಡಿದು ಪಾರ್ಥನ ಸೊಮ್ಮು ಮುಱಿವೆನೆನುತ್ತ ಬಂದಿಹ ಕರ್ಮಿ ಕೌರವಕುನ್ನಿಗಾವೇನೆಂಬೆವು (ಕೃಷ್ಣಾಕಾ. ೧೯-೪೨); ಸುರ್ಕಿಯುಮಿಱಿದುಮುಱಿದುಂ ಪೋಪೀ ಮೆಯ್ಯಂ ನಿಚ್ಚಮೆಂದೆ ನಂಬಿ ಸೊಮ್ಮಿಂ ಫಿರ್ಕಳಿಸುವಂ ಗಾಂಪನಲೇ! (ರಾಮಾಶ್ವ. ೭೫-೭). ೩. ಅಂದ; ಸೊಗಸು: ಸ್ವರಮ ನಱಿಗೆ ತಾಂ ಭರತಜ್ಞನಂದದಿಂ . . . ಸದ್ವಿಟಂ ಸೊಮ್ಮನಱಿಗೆವೋದಾಳಿಯಂತೆ (ಮದನ. ೧೧-೬೬); ಶಿಲ್ಪಿಗಳ ಒಮ್ಮೆಗಂ ಕರೆಸಲ್ಲರಂ ಯಾಗಶಾಲೆಗಳ ಸೊಮ್ಮಿನಿಂ ರಚಿಸಲೀಕ್ಷಣ (ತುರಂಗ. ೮೩-೧೩). ೪. ಮೇಲ್ಮೆ; ಅತಿಶಯ; ಆಧಿಕ್ಯ: ಉಮ್ಮಳಿಸುವರು ಸುರರ ಸಭೆಯೊಳಗೆಮ್ಮ ರಾಯರು ಪಿತನ ಸತ್ಯದ ಸೊಮ್ಮನಳಿದರೆ ಬಳಿಕ ಬಹುದಪಕೀರ್ತಿ (ತೊರರಾ. ೨-೩-೧೧); ನಮ್ಮ ವಿಧಿಯಿಂತಾಯ್ತು . . . ಹೋಗಲಿಂದಿಗೆ ನಮ್ಮ ಜೀವವೆನುತ್ತ ದುಃಖದ ಸೊಮ್ಮಿನಳಲುರಿಯೇಱಿ ನುಡಿದರು (ಕೃಷ್ಣಾಕಾ. ೧೭-೩೩). ೫. ಹಿಗ್ಗು; ಸಂತೋಷ: ಬ್ರಹ್ಮಯೋಗವು ಪುಟ್ಟಿಸಿದು ದಱಿಂದಪ್ಪ ಸೊಮ್ಮನದೇನ ಬಣ್ಣಿಪೆನು (ಅಂಜನ. ೧೧-೧೯೩); ತಮ್ಮ ತಮ್ಮಿಂದತ್ತಲಳಿದರು ಹಗೆಯರೆಂದೆನಿಸಿ ಧರ್ಮವುಳ್ಳವ ಕುರುನೃಪತಿ ಹಗೆ ನಿರ್ಮಯವದಾಯ್ತೆಂದು ಜಗವತಿ ಸೊಮ್ಮಿನಿಂದಾಡುವದು (ಕೃಷ್ಣಾಕಾ. ೧೭-೩೧). [?]

**ಸೊಮ್ಮುಗಿಡಿಸು** (ಕ್ರಿ). ಸಂತೋಷವನ್ನು ಹಾಳುಮಾಡು ; ಕುಗ್ಗಿಸು : ಸೋದರರಂ ಸೊಮ್ಮುಗಿಡಿಸಿದುದು, ಅಗಸ್ತ್ಯನಂ ನಲೆದಪ್ಪಿಸಿದುದು ; ಸಾಜಮಲ್ತೇ ಪತಿಪತ್ನಿಗಳೊಳ್ ವಿಯೋಗದುಃಖಂ (ರಾಮಾಶ್ವ. ೪೬-೧೯). [ಸೊಮ್ಮು$_4$ + ಕಿಡಿಸು(< ಕೆಡಿಸು$_1$)]

**ಸೊಮ್ಮುಗೊಳ್** (ಕ್ರಿ). ಸೊಗಸಿನಿಂದ ಕೂಡಿರು; ಚೆಲುವಾಗು: ಸೊಮ್ಮು ಗೊಂಡಿಹ ಪಾಕಶಾಲೆ ಸಜ್ಜಾದ್ವಾರ ಪೆರ್ಮೆಯಿಂದೊಪ್ಪುಗೊಂಡಿಹವು (ಗೂಮ್ಮಟ. ೨-೨೪).
[ಸೊಮ್ಮು$_4$ + ಕೊಳ್$_1$]

**ಸೊಮ್ಮುವೆರ್ಚು** (ಕ್ರಿ). ಸಂತೋಷವು ಹೆಚ್ಚಾಗು; ಉತ್ಸಾಹ ಹೆಚ್ಚಾಗು: ಹಯಂ ತಾಂ ತನಗೆ ತೂಪಿಱಿದ ಕೂರ್ಪಿನ ಪೆರ್ಮೆಯಿಂ ಸೊಮ್ಮುವೆರ್ಚಿ ದೊಮ್ಮಳಿಸಿ . . . ಪೊಱೆಯಂ ಮಿಕ್ಕು ಪೊಕ್ಕು ದಿಕ್ಕುಗೆಟ್ಟು ಮುಟುಂಗಿ ಕಣ್ಮಾಯಮಾಯ್ತು (ರಾಮಾಶ್ವ. ೧೨೦-೨೨). [ಸೊಮ್ಮು$_4$ + ಪೆರ್ಚು$_1$]

**ಸೊಯ** 'ಸಯ್ಯ$_1$' ನೋ.

**ಸೊಯಂದಪ್ಪು** (ಕ್ರಿ). ಸ್ವಾಧೀನವನ್ನು ಕಳೆದುಕೊಳ್ಳು; ಮೈಮರೆ; ವಿವಶಗೊಳ್ಳು: ಏಂ ಕಾಣೆನೆ? ಸೊಯಂದಪ್ಪಿದೆನೆ? (ರಾಮಾಶ್ವ. ೮೭-೧೨).
[ಸೊಯ (< ಸಯ್ಯ$_1$) + ತಪ್ಪು$_1$]

**ಸೊಯಂಬರ, ಸಯ್ಯಂಬರ, ಸೊಯಂವರ, ಸ್ವಯಂಬರ** (ನಾ). ಒಂದು ವ್ಯವಸ್ಥಿತವಾದ ಸಂದರ್ಭದಲ್ಲಿ (ಕ್ಷತ್ರಿಯ)ವಧುವು ತನ್ನ ಪತಿಯನ್ನು ತಾನೇ ಆರಿಸಿಕೊಳ್ಳುವಿಕೆ; ಸ್ವಯಂವರ: ಸುರಕುಸುಮದ ಪೊಸವಾಸಿಗಮೆರಡುಂ ಕರತಳದೊಳಿಸೆದು ತನ್ನಯ ತೋಳೊಳ್ ದೊರೆಯೆನೆ ಬಂದತ್ತು ಸೊ[ಪಾಠಾಂ. ಸ್ವ]ಯಂಬರಕ್ಕೆ ಬರ್ಪಂತೆ ದೇವಗಣಿಕಾನಿಕರಂ (ಆದಿಪು. ೧೧-೨೧); ನಾಳೆ ಸೊಯಂಬರಂ ಕರಂ ನಿರುತಮನುತ್ತೆ ಸಾಱೆ (ನೇಮಿಪು. ೯-೭೭); ತನ್ನ ತನುಜೆಯ ಸೊ[ಪಾಠಾಂ. ಸ್ವ]ಯಂಬರಕೆ ಸಕಲರಸುಗಳು ಬಹುದು (ಜೀವಂಚ. ೭ ಸೂಚನ). **ಸಯಂಬರ** : ಆ ಕೂಸಿಂಗೆ ಸ[ಪಾಠಾಂ. ಸ್ವ]ಯಂಬರಮಂ ಮಾಡಲೆಂದು ನೆಲದೊಳುಳ್ಳರಸುಮಕ್ಕಳೆಲ್ಲರ್ಗಂ ಬಟ್ಟಿಯನಟ್ಟಿದೊಡೆ (ಪಂಪಭಾ. ೩-೩೨ ವ); ದೃಷ್ಟದ್ಯುಮ್ನಪರೊಳೊಂದುಮಚ್ಚರಸೆಯರ್ಗೆ ಸಯಂಬರಮಾಗ (ಎಕ. VII, ಶಿಕಾ. ೧೯೭-೩೪; 1181); ಜನಕನರೇಂದ್ರ ಸೀತೆಯ ಸಯಂಬರ ಕಾವುದು ಯುಕ್ತಿಯೆಂದು ಚಿಂತನೆಯ ಮಾಡುತಿರ್ಪ ಸಮನಂತರದೊಳ್ (ದಶಾವ. ೮-೧೪೯). **ಸೊಯಂವರ**: ಸೊ[ಪಾಠಾಂ. ಸ್ವ]ಯಂವರಕಮಿತಬಲನೃಪರ್ಕಿದಿ ಬರುತಿದೆ ಧರಣಿಯಗಲದಲಿ (ನಳಚ. ೩-೧೨). **ಸ್ವಯಂಬರ**: ಕೂಸಿಂಗೆ ಸ್ವಯಂಬರಮಂ ಪಣ್ಣುವಂ (ವಡ್ಡಾರಾ. ೪೦-೨೬); ಇತ್ತಲ್ ಕುಂತಿಗವರ ಮಾವನಪ್ಪ ಕುಂತಿಭೋಜನುಂ ಸ್ವಯಂಬರಂ ಮಾಡೆ (ಪಂಪಭಾ. ೧-೧೦೫ ವ). [< ಸಂ. ಸ್ವಯಂವರ]

**ಸೊಯಂಬರಸಾಲೆ, ಸಯಂಬರಸಾಲೆ, ಸ್ವಯಂಬರಸಾಲೆ** (ನಾ). (ಕ್ಷತ್ರಿಯ)ವಧುವು ತನ್ನ ಪತಿಯನ್ನು ತಾನೇ ಆರಿಸಿಕೊಳ್ಳುವುದಕ್ಕಾಗಿ ರಚಿತವಾದ ಮಂಟಪ; ಸ್ವಯಂವರಮಂಟಪ: ಭೂಲಲನಾಧೀಶನಂದು ಕಂಡಂ ಮಣಿಮಾಳಾಲಲಿತಮಂ ಸೊಯಂಬರಸಾಲೆಯಂ (ನೇಮಿಪು. ೪-೧೬). **ಸಯಂಬರಸಾಲೆ:** ನೆರೆದ ಸಮಸ್ತರಾಜಕಮನಾದರದಿಂದಿದಿರ್ಗೊಂಡನೇಕರತ್ನರಚಿತಮಾಗೆ ಮಾಡಿಸಿ ಸ[ಪಾಠಾಂ. ಸ್ವ]ಯಂಬರಸಾ[ಪಾಠಾಂ. ಶಾ]ಲೆಯಂ (ಪಂಪಭಾ. ೩-೪೦); ನರಪಾಲಕನಂದನ ವಿತತಿ ಸಯಂಬರಸಾಲೆಯೊಳಿರಲ್ (ಜಯಕು. ೫-೧). **ಸ್ವಯಂಬರಸಾಲೆ:** ಸ್ವಯಂಬರ ಸಾಲೆಯಂ ಮಾಡಿಸಿ ಅರಸುಗಳ್ಗೆಲ್ಲಂ ಬಟ್ಟಿಯನಟ್ಟಿ ಬರಿಸೆ (ವಡ್ಡಾರಾ. ೪೦-೨೮).
[< ಸಂ. ಸ್ವಯಂವರಶಾಲಾ]

**ಸೊಯಂಬರಸೇಸೆ** (ನಾ). ಸ್ವಯಂವರಕಾಲದಲ್ಲಿ ವಧೂವರರಿಗೆ ತಳಿಯುವ ಅಕ್ಷತೆ: ದಶರಥಂ . . . ಬೀರಸೇನೆಯೊಡನೆ ಸೊ[ಪಾಠಾಂ. ಸ್ವ]ಯಂಬರ ಸೇಸೆಯನಾಂತು ಪೌರಜನದ ಮನದೊಡನೆ ಕೌತುಕಮಂಗಳಪುರಮಂ ಪುಗುವಾಗಳ್ (ಪಂರಾಮಾ. ೩-೬೦ ವ). [ಸೊಯಂಬರ + ಸೇಸೆ$_1$]

**ಸೊಯಂವರ** 'ಸೊಯಂಬರ' ನೋ.

**ಸೊಯಗೆಡು** (ಕ್ರಿ). ಸ್ವಾಧೀನವನ್ನು ಕಳೆದುಕೊಳ್ಳು; ಮೈಮರೆ: ಆಚೀಚಿನ ಮರಗಳು ಕುಡಿದು ಸೊಯ ಗೆಟ್ಟವುಗಳಂತೆ ತಲೆದೂಗುತ್ತಿದ್ದುವು (ಮೂಕಜ್ಜಿ. ೧೪೯).
[ಸೊಯ (< ಸಯ್ಯ$_1$) + ಕೆಡು$_1$]

**ಸೊರ** 'ಸೊರ್$_2$' ನೋ.

**ಸೊರಂಟು** 'ಸುರುಟು$_2$' ನೋ.

**ಸೊರಗು$_1$, ಸುರುಗು$_1$, ಸೊರಹು$_1$** (ಕ್ರಿ). ೧. ಬಾಡು; ಒಣಗು; ಬತ್ತು: ವೃಕ್ಷಲತೆಗಳ್ಬಾಡಿ ಸೊರಗುತಿರ್ದುವು ಶೋಕಭಾರದಿಂ (ಜೈಮಿಭಾ. ೧೯-೩೨); ಕಿತ್ತೆಸೆದ ಲತೆಯಂತೆ ಅತ್ತಿಮಬ್ಬೆ ಸೊರಗಿದಳು (ದಾನಚಿಂ. ೧೫೧). ೨. ಸಣ್ಣಗಾಗು; ಕೃಶವಾಗು; ಕ್ಷೀಣಗೊಳ್ಳು: ಸೊರಗಿ ಸಾಯಲಾಗಿದ್ದಾರೆ (ಪ್ರಣಸ. ೭೪). ೩. ಬಸವಳಿ; ಕಂಗಾಲಾಗು; ಕಂಗೆಡು: ಕಡು ಸೊರಗಿ ಮೂರ್ಛಿಸುವ ಸುಧೆಯುಂಡುದರಿನುಸುರ್ ಮಿಡುಕುತಿಹ ಗಳಗತಪ್ರಾಣೆಯರ್ . . . ಕಣ್ದೆಸೆದರು (ಚೆಬಪು. ೧೯-೩೧); ಅವನು ಕಷ್ಟಕ್ಕೆ ಸಿಕ್ಕಿ ಸೊರಗದಂತೆ ನೋಡಿಕೋ! (ವಚಭಾ. ೧೯೮). **ಸುರುಗು$_1$** : ೧. ಹುಬ್ಬುಗಂಟಿನಿಂದ ಸುರುಗಿದ ಮುಖದ ಮೇಲೆ ತಲೆಯ ಜಟೆಗಳು ಕವಿದುಕೊಂಡಿದ್ದವು (ಕೋಹಿನೂ. ೮೮). **ಸೊರಹು$_1$** : ೩. ಗುರುವು ಹೇಳಿದ ತೆರದಿಯಿಂದ್ರಿಗಳಿರಲು ಜೀವನದ ಸೊರಹಬಹುದೇ (ಜ್ಞಾನಸಿಂ. ೧೨-೪೪).

**ಸೊರಗಿ ಹೋಗು** = ಬಡವಾಗು; ಇಳಿದು ಹೋಗು: ನೀವು ಬಹಳ ಸೊರಗಿ ಹೋಗಿದ್ದೀರಲ್ಲಮ್ಮ (ತ್ಯಾಗಮ. ೫೪). 'ಸುರ್ಕು$_1$' ನೋ.

[ದೇ. || ತಮಿ. ಮಲ.ಚುರುಙ್ಙು, ಚುರುಕ್ಕು, ಚುಕ್ಕು; ತುಳು. ಸುರುಗು; ತೆಲು. ಸೊರುಗು, ಸುರುಂಗು]

**ಸೊರಗು$_2$** 'ಸೊರ್ಕು$_1$' ನೋ.

**ಸೊರಟ, ಸೋರಾಟ** (ನಾ). ೧. ಒಂದು ಸ್ಥಳದ ಹೆಸರು; ಸೌರಾಷ್ಟ್ರ: ಪಾಣ್ಡ್ಯ ಸಿಳಾಮೇಘ ಕೇರಳ ಸೊರಟ . . . ಮಹೀಪಾಳರಾಸ್ಥಾನದಲೆ ಕೇಳ ತನ್ನನೆ ನಟವನ್ನಿ ಮಾಗಧರ್ ಕೈಕೊಣ್ಡು ಪೊಗಟಲ್ಕೆ (ಎಕ. III (R), ಹಗ್ಗಡ. ೬೦-೮; 1057); ಸೌರಾಷ್ಟ್ರ-ಸೊರಟ (ಶಮದ. ೨೪೩ ಪ್ರಯೋ); ಕನ್ನಡ ಹುರುಮುಂಜಿ ಸೊರಟ ಗುಜ್ಜರಾದಿ ನಾಡಿನೊಳು (ಭರಚ. ೫೯-೭). **ಸೋರಾಟ** : ೨. ಸೌರಾಷ್ಟ್ರದೇಶದ ದೊರೆ: ಲಾಟ ಪರವಶನಾದ . . . ವರ ಸೋರಾಟ ಸೆಡೆದನು (ಜೀವಂಚ. ೧೫-೨೪).

[< ಸಂ. ಸೌರಾಷ್ಟ್ರ/ ಪ್ರಾ. ಸೋರಟ್ಠ]

**ಸೊರಟ₁** (ನಾ). ಹಳವಿ; ಚೊತ್ತಿ: ನಾಣಿಲಿ ಸೊಂದಿ ಸೊರಟ ಮಾತಾಳಿ (ಭಾಷಾಭೂ. ೧೯೭ ಪ್ರಯೋ). 'ಸೊತ್ತಿ', 'ಸೊರಟು' ನೋ. [ಸೊರಟ್ಟ + - ಇ₂]

**ಸೊರಟ₂** (ನಾ). ಒಂದು ಬಗೆಯ ಆಯುಧ(?): ಒರೆಗಳನುಗಿದ ಖಂಡೆಯ ಕೈಸುರಗಿಯ ಸೊರಟಿಯ ಕತ್ತಿ ಬಾಕುಗಳ ಪರಿವಿಡಿಗಾಜಿರು ಪುರದಾಳುವೇರಿಯೊಳ್ ಚರಿಸುತಿರ್ದರು (ಕಂನವಿ. ೧೧-೧೪೭). [?]

**ಸೊರಟು** 'ಸುರುಟ್ಟು₂' ನೋ.

**ಸೊರಟುದಲೆ** (ನಾ). ಸೊಟ್ಟ ತಲೆ: ಸೊರಟುದಲೆಯ ತಿರುವೃತ್ತಗಣ್ಣಿನ ಹೆಣ್ಣು ತುರಗಮುಖಿಯ ದೊಡ್ಡಮೂಗ (ಪೂಜ್ಯಚ.೮-೩೭). [ಸೊರಟು(< ಸುರುಟ್ಟು₂) + ತಲೆ₁]

**ಸೊರಟುಮೂಗು** (ನಾ). ಡೊಂಕಾದ ಮೂಗು; ಸೊಟ್ಟಮೂಗು: ತರಟುದಲೆ ಬಿರಿತ ಮೈ ಸೊರಟುಮೂಗಿನ ಜಾಣೆ (ಶರಲೀ. ೩೭೩-೩).

[ಸೊರಟು (< ಸುರುಟ್ಟು₂) + ಮೂಗು]

**ಸೊರಟೆ** (ನಾ). ಒಂದು ಬಗೆಯ ಸಸ್ಯ: "ಗರಳೆಯೆನೆ ಸೊರಟೆ" (ಮಂಗರಾ. ೫೦-೩೩); ಸೊರಟೆ ಟೆತೆಯ ಮೊರಟಿಯ ಹರಡಿ . . . ಲಿಂಗಕ್ಕೆ ಮಜ್ಜನಕ್ಕೆಜೆಯ ಬೇಕೆಂಬಿರಿ . . . ಈ ಹರಡಿಕೊಂಡಿರುವ ಸೊರಟೆ ಮೊರಟೆಗಳೆ ದೇವರೋ (ವಚಸಂ. ೧೯೩-೩೮); ಸೊರೆ ರತೆಟಿಯ ಬೀಜ, ಹುಲಿಗಿಲ ಬೀಜ . . . ಕೊಂಡು ಚೂರ್ಣವಂ ಮಾಡಿ (ಏಪ್ಪವಿ. ೯೨). [ದೇ. ॥ ತುಳು. ಸೋರಂಟೆ]

**ಸೊರಬಾಣ** (ನಾ). ಒಂದು ಬಗೆಯ ಬಾಣ: ಬಲ್ಲು ತೀರು . . . ಸೊರಬಾಣ . . . ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿ ಸಾಧನವಿಶೇಷಂಗಳಿಂದಲುಂ (ವಿವೇಕ. ೨೭೩). 'ಸುರುಸುರ್‌ಬಾಣ' ಪರಾ. [? + ಬಾಣ₃]

**ಸೊರಬಿಡು** 'ಸೊರೆಬಿಡು' ನೋ.

**ಸೊರಲ್ಮೊರಡಿ** (ನಾ). ಒಂದು ಪ್ರದೇಶ ಹೆಸರು: ಬಾಚೊಟ್ಪ್ಪೆವಿ ಸನ್ನು ಸೊರಲ್‌ಮೊರಡಿವಿ ಅನ್ಸೆ ಬನ್ನು . . . ಕೂಡಿತ್ತು ಸೀಮೆ (ಮೈಆರಿ.೧೯೨೭, ೧೧೮-೯೯; 726).

[ಸೊರಲ್₇ + ಮೊರಡಿ₁ (< ಮೊರಡ್ಡು₂)]

**ಸೊರವು** (ಕ್ರಿ). ಸುರಿ; ವರ್ಷಿಸು: ನೀನು ಮಕ್ಕಳೊಡನೆ ಆಡಿ ಮನೆಗೆ ಬರೆ ನಿನಗೆ ಅರ್ಘ್ಯಮಂ ಕೊಡುವವೊಲು ಸೊರವುತ್ತಿದ್ದಾವು (ಕಾಶೀಮ. ೯೯-೫).

[ಸೊರೆ₁ + - ವು]

**ಸೊರಸು** (ಕ್ರಿ). ಕೆಚ್ಚಲಿನಿಂದ ಹಾಲನ್ನು ಸ್ರವಿಸು; ಸೊರೆಬಿಡು: ಕರುವ್ಯತರೆ ಅಕ್ಕರೆಗುಕ್ಕಿ ಹಾಲ್ ಸೊರಸುವ ಸುರಭಿಯ ತೆರದಿ, ಸಂಭವಿಸಿತು ರಸಸತ್ವಂ ಆ ಮರದಿ! (ಅನಿಕೇ. ೨೭-೧೦). [ಸೊರೆ₁ + - ಸು₁]

**ಸೊರಹ** (ನಾ). ಹೆಚ್ಚು ಮಾತನಾಡುವವನು; ಮಾತುಗಾರ; ವಾಚಾಳಿ: ಎಲೆಯಿಲೆ ಸೊರಹರರಸನೆ ಕಾಯ್ದಿಲಾ ಸಂಕರುಷಣಾಚ್ಯುತ ಕಾಮ ತತ್ಸುತರಲ್ಲ ನೀನಲ್ಲ (ನಿಭಾಗ. ೧೦-೯೯-೩೫). [ಸೊರಹು₂ + - ಅ₇]

**ಸೊರಹು₁** 'ಸೊರಗು₁' ನೋ.

**ಸೊರಹು₂** (ಕ್ರಿ). ಅತಿಯಾಗಿ ಮಾತನಾಡು; ಗಳಹು: ಬೇಸಬಿದೆ ಕೇಳ್ಳ ದೇವೇಂದ್ರ ನುಂಟೆಂದಿಂತು ನೀಂ ಹೇಸದಕಟಕಟ ಸೊರಹುವರೆ (ಹಚಕಾ. ೨-೯); ದ್ವಿಮೂರ್ತಿ ತ್ರಿಮೂರ್ತಿವಾದಿಗಳಿರಾ ಸೊರಹದಿರಿಂ (ಪದ್ಮರಾ. ೧೧-೧೯೭); ವನಜಮುಖಿಯರ ಮುಂದೆ ಸೊರಹಿದೆ ಬಾಯ್ಗೆ ಬಂದಂತೆ (ಕುಪ್ಪಾವಿ. ೬-೧೯). [?]

**ಸೊರಹು₃** (ನಾ). ಮಾತುಗಾರಿಕೆ; ಗಳಹುವಿಕೆ: ತನುಜನ ಮರಣ ಹುಸಿಯೋ ದಿಟವೋ ಭೀಮನ ಸೊರಹ ನಂಬೆನು (ಕುಮ್ಮಾದ್ರೋ. ೧೮-೬೧). [< ಸೊರಹು₂]

**ಸೊರಹು₄** (ನಾ). ಕೆಚ್ಚಲಿನಲ್ಲಿ ಹಾಲು ತುಂಬಿಕೊಳ್ಳುವಿಕೆ: ಎಳೆಗಱು ತುಡುಕೆ ಕೆಚ್ಚಲ ಚಾಚಿ ನೆಕ್ಕುತಲಿಳುಪಿ ಸೊರಹನು . . . ಮಱುಕದೊಳಿಳೆಗಂದಿಯದೆ ನೋಡು (ವರ್ಧಚ. ೩-೨೦); ಕಪಿಲೆಯೊಂದು ಕಱೆಯದೆ ಕಱುವಿಗಂ ಕೊಡದೆ ಸೊರಹನಿಱುಕಿ ಮುದದಿಂದೆ ಬಂದು ಪುತ್ತುವಿನಗ್ರದೊಳು . . . ಕಱೆವುತ (ಸಿದ್ಧೇಪು. ೯-೩೭).

[ಸೊರೆ₁ + - ಹು₂ (< - ಪು₂)]

**ಸೊರಹುಗಾಱ** (ನಾ). ಮಾತುಗಾರ; ವಾಚಾಳಿ: (ಚತುನಿ. ಕಿ. I, ೫೯).

[ಸೊರಹು₃ + - ಕಾಱ]

**ಸೊರಿಗ** (ನಾ). ಒಂದು ಅಳತೆಯ ಪ್ರಮಾಣ: ಅಯ್ಯತ್ತೊಕ್ಕಲು ಬಿಟ್ಟ ಸೊರಿಗವೊಂದು ೧ ಮತ್ತಂ (ಎಕ. VII, ಶಿಕಾ೦.೨೩೭-೮೪; 1174). [?]

**ಸೊರು** 'ಸೊರೆ₂' ನೋ.

**ಸೊರುಬಿಡು** 'ಸೊರೆಬಿಡು' ನೋ.

**ಸೊರೂಪ** 'ಸರೂಪ₁'ನೋ.

**ಸೊರೆ₁** (ಕ್ರಿ). ೧. ಕೆಚ್ಚಲಿನಲ್ಲಿ ಹಾಲು ತುಂಬಿಕೊಳ್ಳು: ಎಮ್ಮೆಯ ತರಲೆಂದು ಮಾರಿದನೋಲೆಯ ಸೊರೆದಿಲ್ಲ ಕರೆದಿಲ್ಲ ಹಾಲು (೧೦೦ಚಾಪ. ೧೪೮-೨೮). ೨. (ಆಲಂ) ಹೆಚ್ಚು; ಅಧಿಕವಾಗು: ಇಂತು ಸೊರೆದಿರೆ ಆಸೆ, ತಾವರೆಯ ನೀರಂತೆ (ಗೌಮಲ್ಲಿ. ೧೪). 'ತೊರೆ₂' ಪರಾ. [ದೇ. ॥ ತಮಿ. ಚುರ; ಮಲ. ಚೊರಿಯು, ಚುರ]

**ಸೊರೆ₂, ಸೊರ, ಸೊರು, ಸೋರ್ರು₂** (ನಾ). (ಹಸು, ಎಮ್ಮೆ ಮುಂತಾದುವು) ಕೆಚ್ಚಲಿನಿಂದ ಹಾಲನ್ನು ಇಳಿಯಬಿಡುವಿಕೆ: ಸೊರೆ ಗೋತ್ರವ ಸುರಿದೆತ್ತಿ ಬಾಲವ ತಮ್ಮ ಕಱುಗಳ ನೆಕ್ಕಿ ಮೊಲೆಗಳ ಹರುಷದೊಳಿವ ಸುರಭಿಗಳ ನಿಟ್ಟಿಸುತಿರುತಿರ್ದ ಜೀವಂಧರನು (ಜೀವಂಸಾ. ೮-೭೭). **ಸೊರ**: ಎಮ್ಮೆಗೆ ಸೊರವನ್ನು ಇರುಕಿಸುವ ಅಭ್ಯಾಸವೇ ಇಲ್ಲ. ಹಸುವಾದರೋ ಸೊರವನ್ನು ಇರುಕಿಸಿ ತನ್ನ ಕರುವನ್ನು ಸಾಕಿಕೊಳ್ಳುವುದು (ಚಂಗಾಳ್ಳ. ೧೭). **ಸೊರು**: 'ಸೊರುಬಿಡು' ಪರಾ. **ಸೋರ್ರು₂**: 'ಸೋರುಬಿಡು' ಪರಾ. [< ಸೊರೆ₁]

**ಸೊರೆ₃, ಸೋರೆ₁** (ನಾ). ೧. ತರಕಾರಿಯಾಗಿ ಬಳಸುವ ಒಂದು ಬಗೆಯ ಕಾಯಿ ಮತ್ತು ಅದರ ಬಳ್ಳಿ: ಅರೆದಿಡುಗೆ ಕೀತ ಪುಣ್ಗೊಳ್ ಸೊರೆಯೆಲೆಯಂ ಮೂಱು ನಾಲ್ಕುದೆವಸಂ . . . ನಾಳಿವುಣ್ಗಳ್ ಕೆಡುಗುಂ (ಅಶ್ವಶಾ. ೧೨-೨೫). ೨. ತಿರುಳನ್ನು ತೆಗೆದು ಒಣಗಿಸಿದ ಸೋರೆಯ ಕಾಯಿ; ಸೋರೆಬುರುಡೆ: ತಮ್ಮಂ ನಂಬಿದರಂ ಸೊರೆಯ ಕಾಯ್ ಮುಂತಾಗಿ ನದಿಯ ತಡಿಯಂ ಸಾರ್ಚುವುದು (ಪಂಚತಂ. ೮೪-೧೪); ಸೊರೆಯೊಳಗೆ ತೀವಿ ಮಣ್ಣಂ ಸರದಿಯೊಳಿಕ್ಕಿದೊಡೆ ನೆಗೆಯಲಾರ್ಪುದೆ (ಧರ್ಮಾಮೃ. ೯-೧೨೫); ಕುಂದಾಗೆ ಗುಣಕೆ . . . ಕೆಱಹಂ ಸೊರೆಯಂ ತಂದಾ ಚೆಂಡಿಕೆಯೊಳ್ ತರದಿಂದಮವಂಗುಚಿತಮೆನಿಸೆ ಕಟ್ಟಿದರ್ (ಪಾರ್ಶ್ವಪು. ೪-೨೪). ೩. ವೀಣೆ, ತಂಬೂರಿ ಮೊದಲಾದುವುಗಳ ಬುರುಡೆ: ಊಱ ಕುಚಾಗ್ರದೊಳ್ ಸೊರೆಯನೆತ್ತಿದ ಕೆಂದಳದಿಂದಮೌಂಕಿ ಪೊಯ್ವೇಱ ವೆರಲ್ಗಳಿಂದಿಟಿಯೆ ತಂತಿಗಳಂ ಮಿಡಿದು . . . ಧಾತು ಮೈದೋಱದ ಮಯ್ಯೊಳಾ ಲವಣಿಯಿಂ ವನಜಾನನೆ ಬಾಜಿಸೆ (ಲೀಲಾವ.೨-೩೧); ಬೀಣೆಯಂ ಮಿಡಿದು ನೋಡಿ ತಂತಿಯೊಳ್ತನುರೋಮಮುಮಂ ಸೊ[ಪಾಠಾಂ. ಸೋ]ರೆಯೊಳ್ ಶಲ್ಯಮಂ ಪ್ರವಾಳದೊಳ್ಪಾಷಾಣಮಂ ತೋಱ ಕುಡುವಡೆ ನಿರ್ದೋಷಮಪ್ಪ ವೀಣೆಯಂ ಕುಡಿಮೆನೆ (ಆರ್ಧನೇ. ೬-೧೮ ವ); ಅರಿಭೂಪಾಳ ಸಿರಂಗಳಿಂದೆ ಸೊರೆಯಂ ತದ್ವಾಹು ಸಂದೋಹದಿಂ ಕರೆಯಂ ದಂಡಿಗೆ ಮಾಡಿ (ಎಕ. VI, ಕಡೂರು. ೧೫೬-೩೭; ಸು.1191). ೪. ಸೋರೆಬುರುಡೆಯಿಂದ ಮಾಡಿದ ಅಥವಾ ಸೋರೆಕಾಯಿ ಆಕಾರದ ಪಾತ್ರೆ: ಕೊಂಡನವಂ ತಪಮಂ ಗೆಡೆಗೊಂಡಿರೆ ದಂಡು ಬೂದಿ ಸೊರೆರುದ್ರಾಕ್ಷಂ (ಪಾರ್ಶ್ವಪು. ೪-೩೭); ಗುಜುಱುಮಂಡೆಯ ತಿರಿವ ಸೊರೆಗಳಿಟ್ಟಗೆಯ ಹಂಡಿಯಂ ಪೂಸಿದಂಗದ . . . ಜೋಗಿಗಳ್ಗಳಂತಸದೊಳು . . . ಸಿದ್ಧಲಿಂಗೇಶ್ವರನ ಕಂಡು (ಸಿದ್ಧೇಪು. ೫-೭). **ಸೋರೆ₁** : ೧. "ತುಂಬೀ, ಅಲಾಬೂಃ, ದುಗ್ಧಿಕಾ- ಈ ೩ ಸೋರೆ" (ಹಲಾಯು. ೩೫-೫೭); ನಡುವಿರ್ದ ನರಿ ಕರಿ ಮೆಟ್ಟಿದ ಸೋರೆಯ ಕಾಯಂತೆ ಜಿಗಿಜಿಗಿಯಾಗಿ ಸತ್ತೊಡೆ (ಪಂಚತಂ. ೭೨-೧೭); ಜೊತೆಗೆ ಮೆಣಸಿನಕಾಯಿ, ಸೋರೆ, ಸಾಸುವೆ, ಬಾಳೆ ಮುಂತಾದುವನ್ನೂ ಬೆಳೆಯುತ್ತಾರೆ (ಕವಿಕೋ. I, ೭೭೦). ೨. ಕರ್ಮಕ್ಕೆ

ಕರ್ಮವನಿತ್ತು ತಾ ಪರ್ಮಿಗನಾಗಬಲ್ಲಡೆ ಹೊಳೆಯಲ್ಲಿ ಹಾಕಿದ ಸೋರೆಯಂತೆ (ಪೋಳವಾ. ೧೯೭-೭೩೩); ಆ ಕೂಪಾಂತರದೊಳೊಂದು ಪಿರಿದಪ್ಪ ಮಿಳಿಯೊಳ್ ಚೀರುದತ್ತನಂ ತೊಡರ್ಚಿ ಸೋರೆಯ ಕಾಯಂ ಕೊಟ್ಟು ಬಾವಿಯೊಳಗೆ ಜೋಲುವಿಡೆ (ಪುಣ್ಯಾಸ್ರ. ೪-೨೫ ವ). ೩. ಎನ್ನ ಕಾಯವ ದಂಡಿಗೆಯ ಮಾಡಯ್ಯ ಎನ್ನ ಸಿರವ ಸೋರೆಯ ಮಾಡಯ್ಯ (ಬಸವ. ೫೦೦); ಅಲ್ಲಿ ಪೆಱಿಲೊರ್ವಳ್ ಜಾಣೆ ವೀಣೆಯಂ ಶ್ರುತಿಗೆಯ್ದು ಸೋರೆಯಂ ಸ್ತನಾಗ್ರದೊಳೌಂಕಿ ಸರಳತರಕರಾಂಗುಲಿಯನಿಟ್ಟು (ರಾಜಶೇ. ೧೧-೮೭ ವ). ೪. ಆಂ ಪೊನ್ನ ಲೋಭದಿಂದಂ ಬಾವಿಯಂ ಪೊಕ್ಕು ರಸಮಂ ಸೋರೆಯಿಂ ತೀವಿ ಬೆಟ್ಟನಿತುಮಂ ಮೊಗೆದು ಕೊಟ್ಟೊಡೆ (ವಡ್ಡಾರಾ. ೧೮೭-೧೩); ಶಿವನೇ ನಿಮ್ಮನಱಿಯದ ಮನುಜನ ಒಡಲೆಂಬುದು ಹೊಲೆಜೋಗಿಯ ಕೆಯ್ಯ ಒಡೆದ ಸೋರೆ ಕಾಣಾ (ಮಡಿವಾ. ೧೩-೧೭); ಹಿಡಿದ ಚಕ್ರದ ಗುಜುಬುದಲೆಯ ಶಂಖದ ಮಣಿಯ ತೊಡಿಗೆಗಳ ತಿರಿವ ಸೋರೆಯ ಹೂಸಿದಿಟ್ಟಿಗೆಯ . . . ನಾನಾ ಜೋಗಿವಡೆವೆರಸು ಖರ್ಪರಂ ಶಿವಸಿದ್ಧರಾಮಯ್ಯನೆಡೆಗೆ ಬಂದಂ (ಸಿದ್ಧರಾ. ೭-೨೭). ೫. (ಸೋರೆಯ ಬುರುಡೆ ಯಿಂದ ಮಾಡಿದ) ಹಾವಾಡಿಗನ ವಾದ್ಯ; ಪುಂಗಿ: ಸಾಲದೇಂ ಕಂಡ ಹಾವಿನ ಬಿಲದ ಬಳಿಗಯ್ದಿ ಸೋರೆಯನೂದಿದುದೆ? (ಹಚ್ಚರ. ೨೭-೭).

ಸೋರೆಯ ಗುಂಡಿ = ಸೋರೆಬುರುಡೆಯಿಂದ ಮಾಡಿದ ಪಾತ್ರೆ: ಈ ನೇಣಂ ಪಿಡಿದೆಱಿದು ಬೞಿಕೀ ಸೋರೆಯ ಗುಂಡಿ[ಪಾಠಾಂ. ಸೋರೆಯ ಗುಂಡಿಗೆ]ಯೊಳ್ ರಸಮಂ ಮುಟ್ಟದೋಸರಿಸಿ ನೀಡುವುದು (ನೇಮಿಪು. ೪-೮೭ ವ). ಸೋರೆಯ ಗುಂಡಿಗೆ = ಸೋರೆಯ ಗುಂಡಿ: ಆ ರಸವನು ಸೋರೆಯ ಗುಂಡಿಗೆಯೊಳು ತುಂಬಿ ಭರದಿಂದಾ ಹಗ್ಗದ ತುದಿಯೊಳು ಕಟ್ಟಿ ಪಿರಿದಾಗಿಯಲುಗಾಡಿಸಿದನು (ನೇಮಿಸಂ. ೧೧-೨೧೪). ಸೋರೆಯ ಬಟ್ಟಲು = ಸೋರೆಯ ಗುಂಡಿ: ಸೋರೆಯ ಬಟ್ಟಲಂ ನಂಬಿ ಕಂಚಿನ ಬಟ್ಟಲನೊಡೆವ ಗೊರವನುಮಂ (ಧರ್ಮಾಮೃ. ೮-೫೧). ಸೋರೆಯ ಮಣಿ = (ಅಲಂ) ಬೆಲೆಯಿಲ್ಲದ ಮಣಿ: ಆಱುಖಂಡವ ಗೆಲ್ದರೇನಾಯ್ತು ಕರ್ಮದ ಮೂಱು ಕಾಂಡವ ಗೆಲ್ಲದೆನಗೆ ಮೂಱು ರನ್ನವೆ ಜೀವಹಿತವೆನ್ನೆಸೆ ಹದಿನಾಲ್ಕು ಸೋರೆಯ ಮಣಿಯೊಳೇನೆಂದ (ಭರತೇ. ೭೭-೩೭). [ದೇ. ‖ ತಮಿ. ಚುರೈ; ಮಲ. ಚುರ; ತುಳು. ತುರೆ, ಸುರೆ; ತೆಲು. ಸೊರ, ಸೊರ್ರ, ಸೋರ; ಕೊಡ. ತೊರೆ]

**ಸೊರೆ$_4$** 'ಸೋರೆ$_2$' ನೋ.

**ಸೊರೆಕಾಯಿ** 'ಸೊರೆಗಾಯ್' ನೋ.

**ಸೊರೆಗಟ್ಟು** (ಕ್ರಿ). (ವೀಣೆಗೆ) ಸೋರೆಬುರುಡೆಯನ್ನು ಕಟ್ಟುವಂತೆ ಕಟ್ಟು, - ಜೋಡಿಸು: ಕರಿಯ ರದನಂಗಳ್ಗೆ ತಲೆಯೊಡ ಸೊರೆಗಟ್ಟಿ ನರದ ತಂತ್ರಿಯ ಪೂಡಿ ದಂಡಿಗೆವಿಡಿದು ಪಾಡಿದುವು ಕೆಲವು . . . ಮರುಳ್ಗಳ್ (ಜೈಮಿಭಾ. ೨೨-೨೪).

[ಸೊರೆ$_3$ + ಕಟ್ಟು$_1$]

**ಸೊರೆಗಾಯ್, ಸೊರೆಕಾಯಿ, ಸೋರೆಕಾಯಿ, ಸೋರೆಗಾಯಿ** (ನಾ). ೧. ತರಕಾರಿಯಾಗಿ ಉಪಯೋಗಿಸುವ ಒಂದು ಬಗೆಯ ಕಾಯಿ: ಅವನಿಪಬಾಹುಪೀಠ ಜಯಲಕ್ಷ್ಮಿಯನೀಡ್ಗೆಳವಾಗಳಂತವೇವುವೊ . . . ಸೊರೆಗಾಯ ಬಂಬಲಲ್ಲವೆ ತಲೆ ಪತ್ತನುತ್ತೆ ದಶಕಂಠನನಂಡಲೆವಂ ನಿಶಾಚರಂ (ಜಗವಿ. ೧೪-೮೩). ಸೊರೆಕಾಯಿ : ೧. ಸೊರೆಕಾಯಿ, ಬಾಳೆಹಣ್ಣು, ಹಲಸಿನ ಹಣ್ಣು . . . ಹೊಸಅಕ್ಕಿ ಅನ್ನ, ಇವು ಜ್ವರದವರಿಗೆ ಅಪಥ್ಯ (ವೈದ್ಯಸಾ. I, ೫೭). ೨. ವೀಣೆ, ತಂಬೂರಿ ಮೊದಲಾದುವುಗಳ (ಸೋರೆ)ಬುರುಡೆ: ಬೆರಲ ಬಿರಿಡೆಯು . . . ಮೊಲೆಯು ಸೊರೆಕಾಯಿ ನರ ತಂತಿಯಾಗಿ ಬಾಜಿಸಿದನು (ಗುರುಜಾ. ೨-೧೭). ಸೋರೆಕಾಯಿ : ೧. ಕಯ್ ಸೋರೆಕಾಯ ಕಾಶಿಯ ಹೊಳೆಯೊಳಗದ್ದೆ ಸ್ವಯವಲ್ಲದಮೃತವಾಗುವುದೆ (ಅಮುಸಾಂ. ೪-೮೭); ಪಿಹಿತಿಂಡಿಗಳಿಗೂ ಪ್ರಯೋಜನಕಾರಿ ಸೋರೆಕಾಯಿ (ತರಚಿ. ೨೭). ಸೋರೆಗಾಯಿ: ೧. ಲಲನೆ ಪೇಳ್ವೆರುಳಿಗವನ ತಾರದಿರೆಯವು ಮೊಲೆಯಲ್ಲ ಮುದಿಸೋರೆಗಾಯಿ (ಕಂನವಿ. ೯-೧೭೨). [ಸೊರೆ$_3$ + ಕಾಯಿ$_4$ (< ಕಾಯ್$_4$)]

**ಸೊರೆಬಿಡು, ಸೊರಬಿಡು, ಸೊರುಬಿಡು, ಸೋರುಬಿಡು** (ಕ್ರಿ). ಕೆಚ್ಚಲು ತುಂಬಿ ಹಾಲನ್ನು ಸುರಿಸು; ತೊರೆಬಿಡು: ಸೊರಬಿಡದಾಕಳು ಕಡೆಗೆ ಮೈಯ ಕೆಚ್ಚಲುಗಳ ಮುಟ್ಟಿ ಕೈಯಾಡಿಸೆ ಕರೆದಳು ಕೊಡಹಾಲನ್ನೆಸೆ (ಗಾಥಾಸ. ೭-೩೭). ಸೊರಬಿಡು: ದೊಡ್ಡೆಮ್ಮೆಯ ಕರು ಬಿಟ್ಟಿದ್ದರು. ಎಮ್ಮೆಯು ಸೊರಬಿಟ್ಟಿತ್ತು (ಚಂಗಾಳ್ಯ. ೧೭). ಸೊರುಬಿಡು : ಹಸು 'ಸೊರು' ಬಿಟ್ಟ ಹಾಗಾಯಿತು – ಇನ್ನು ಎಷ್ಟು ಹಾಲು ಕರೆದರೂ ಬರುವುದು (ಶ್ರೀಕಥೆ. ೮೪); ಶಾಮಾಚಾರ್ರ ಎಮ್ಮೆ ಸೊರುಬಿಡಲಿಲ್ಲ (ಬೆಸ್ತಕ. ೪೫). ಸೋರುಬಿಡು : ಐದನೆಯದರ 'ಹಾಲು ನೀರು, ಅದರಲ್ಲಿ ಬನಿಯಿಲ್ಲ' – ಆರನೆಯದು 'ಸೋರುಬಿಡುವುದು ಬಹಳ ನಿಧಾನ' (ಶಿವರಾ. ೧೮). 'ತೊರೆಬಿಡು' ಪರಾ.

[ಸೊರ್$_2$ + ಬಿಡು$_1$]

**ಸೊರೆವಾತು** (ನಾ). ಸೋರೆಬುರುಡೆಯಿಂದ ಹೊರಡುವ ಧ್ವನಿ: ಶ್ರುತಿಕಾಷ್ಠ ಜೀವಾಳದಿಂ ಸೊರೆವಾತಿನಿಂ . . . ರಂಜಿಸುವ ಕರಮಾ ಪ್ರವಾಳದಿಂದೆಸೆವ ದಂಡಿಗೆವಿಡಿದು ಚಾಣಗಾಣಂ ಪಾಡಿದಂ (ಭಾವಚಿಂ. ೭-೭). [ಸೊರೆ$_3$ + ಮಾತು$_1$]

**ಸೊರೆವೊಱು** (ಕ್ರಿ). ಸೋರೆಬುರುಡೆಯನ್ನು ಹೊತ್ತುಕೊಳ್ಳು: ಅವನ ನಿನ್ನ ಹೊರಗೆಯ್ದುಸದಿರ್ದೊಡಾನು ಸೊರೆವೊ[ಪಾಠಾಂ. ಹೊ]ತ್ತೆನಲ್ಲದೆ ಮೊಲೆವೊತ್ತುದಿಲ್ಲ (ಕುರಾಸಾಂ. ೨೫-೧೧೪). [ಸೊರೆ$_3$ + ಪೊಱು]

**ಸೊರ್ಕಗಾಮುಂಡ** (ನಾ). ಒಬ್ಬಾತನ ಹೆಸರು: ಆಲವಳ್ಳಿಯರಾ ರವಿಚನ್ನನುಂ ಸೊರ್ಕಗಾಮುಣ್ಡರುಂ ಎದೆಯ ಗಾಮುಣ್ಡರುಂ . . . ಪ್ರಸಾದಂ ಕೆಯ್ವಾರ್ (ಇಆ. XIX. ೧೪೪-೮; 696). [ಸೊರ್ಕ$_0$ + ಗಾಮುಂಡ]

**ಸೊರ್ಕಳಿ** 'ಸೊರ್ಕಱಿ' ನೋ.

**ಸೊರ್ಕಱಿ, ಸೊಕ್ಕಱಿ, ಸೊರ್ಕಳಿ** (ಕ್ರಿ). ೧. ಶಕ್ತಿಯನ್ನು ಕಳೆದುಕೊಳ್ಳು; ಕುಗ್ಗು: ಸಿಂಗದುಲಿಗೇಳ್ದು ಬೆರ್ಚಿ ಬೀದಿವರಿದಿರ್ದಡಗಿ ಸೊರ್ಕಱಿದು . . . ಬಸವೞಿದಿರ್ಪಾನೆ . . . ತಾವರೆವಡುವಂ ಕಂಡೊಡನದಂ ಪೊಕ್ಕು (ಚಕವಂ. ೯೦-೭). ಸೊಕ್ಕಱಿ : ೨. ಗರ್ವವಿಳಿ; ಸೊಕ್ಕು ಇಲ್ಲವಾಗು: ಆ ಕಾವನ ಬರವಱಿದ ಬೞಿಕ್ಕಾವನ ಸೊಕ್ಕಱಿಯದಿನಿಸುಮೇನಿರ್ದಪುದೇ (ಕಬ್ಬಿಕಾ. ೧೭೩). ಸೊರ್ಕಳಿ : ೨. ತ್ರಿದಶರ್ . . . ಅನುಗೆಟ್ಟರಳ್ಕಿದರ್ ಸೊರ್ಕ[ಪಾಠಾಂ. ರ್ಕಿ]ಳಿದರ್ (ಗಿರಿಕ. ೭-೭೯).

[ಸೊರ್ಕು$_2$ + ಅಱಿ$_1$]

**ಸೊರ್ಕಾಟ** (ನಾ). ಸಂತೋಷದಿಂದಾಡುವ ಕುಣಿತ: ಸೋಗೆಯ ಸೊರ್ಕಾ[ಪಾಠಾಂ. ಕ್ಕಾ]ಟದ ಸೊಂಪಿಂಗನುರಾಗಿಸುತ . . .ನಿಂದವೆಂಬಂತೆಸೆದಿಹವಭ್ರಪೂಗವಾ ಗಿರಿದುರ್ಗದೊಳಗೆ (ಕುರಾಸಾಂ. ೪-೨೦). [ಸೊರ್ಕು$_2$ + ಆಟ]

**ಸೊರ್ಕಾನ್, ಸೊಕ್ಕಾನ್** (ಕ್ರಿ). ೧. ಮದವೇರು; ಮದಿಸು: ತಪೋವಿಘ್ನವೇ ಮೂರ್ತಿವೆತ್ತಂತಿರೆ ಸೊರ್ಕಾಂತಾನೆಯ್ಯೆತಂದಪುದು (ಶಾಕುಂತ. ೧೭-೨೩). ಸೊಕ್ಕಾನ್: ೨. ಅಧಿಕ್ಯದಿಂದ ಕೂಡಿರು; ಅತಿಶಯದಿಂದ ಕೂಡಿರು: ಮುಕ್ಕುಳಿಸುವ ಜೊಲ್ಲುವಾಯಿಗೆ ಕಡುನೇಹ ಸೊಕ್ಕಾಂತು ಮುತ್ತನಿಕ್ಕುವಳು (ಮೋಹತ. ೧೭-೭೭).

[ಸೊರ್ಕು$_2$ + ಆನ್$_1$]

**ಸೊರ್ಕಾನೆ, ಸೊಕ್ಕಾನೆ** (ನಾ). ಮದಿಸಿದ ಆನೆ; ಮತ್ತಗಜ: ಕೋಡಗವೇಱಿರ್ದ ಸೊರ್ಕಾನೆಯುಮಂ ಕಸಕುಪ್ಪೆಯೊಳ್ ತಾವರೆ ಮೂಡಿದುದಂ . . . ಕಂಡಂ (ವಡ್ಡಾರಾ. ೮೫-೨೯); ಗಿಱ್ಱನೆಯ್ದುವ ಸೊರ್ಕಾನೆಗಳ ಕಾಲ ಸಂಕಲೆಯ ಗೋಸದೊಳಂ (ಕಬ್ಬಿಕಾ. ೪೪). ಸೊಕ್ಕಾನೆ: ಪಿರಿದುಂ ತೀಂಟಿತ್ತಿ ಗಂಡಸ್ಥಳಮನನುದಿನಂ ಕಾದ ಸೊಕ್ಕಾನೆಗಳ್ ಬಂದೊರಸಲ್ (ಕಾದಂಪೂ. ೧೨೨); ಸೊಕ್ಕಾನೆ ಕುದುರೆಯ ವೈಹಾಳಿಯಂಕಣದಿಕ್ಕೆ ಕಣ್ಣಾನಕೆ ರಂಜಿಸಿತು (ಮೋಹತ. ೨-೫೫). [ಸೊರ್ಕು$_2$ + ಆನೆ$_1$]

**ಸೊರ್ಕಾಳ್ತನ** (ನಾ). ಅತಿಶಯವಾದ ಪರಾಕ್ರಮ, — ಶೌರ್ಯ: ಆಗಳುರ್ಕಿನ ಸೊರ್ಕಾಳ್ತನದಿಂ ನೀಳ್ದಂಗದಂಗದಂ . . . ದೂದೈದಿವಂದು ರಾಯಂಗೆ ಕಾಣಿಸಿಕೊಂಡು (ರಾಮಾಶ್ವ. ೧೪೨-೫). [ಸೊರ್ಕು$_2$ + ಆಳ್ತನ]

**ಸೊರ್ಕಿಸು, ಸೊಕ್ಕಿಸು** (ಕ್ರಿ). ೧. ಮತ್ತುಬರಿಸು; ಮದವೇರಿಸು: ಕುಡಿದೊಡೆ ಸೊರ್ಕಿಸದವು ನಾಣ್ಗೆಡಿಸದವು ಮನಕ್ಕಲಂಪನೀವುವು (ಆದಿಪು. ೫-೩೨); ಸಮಸ್ತಜನಮಂ ಪುಷ್ಪಾಸವಾಸಾರದುರ್ದಿನದಿಂ ಸೊರ್ಕಿಸುತಂ ಪೊದಱ್ದುದು ಜಗತ್ಕಾಂತಂ ವಸಂತಾಗಮಂ (ಕಾದಂಅ. ೭೭೯). ಸೊಕ್ಕಿಸು: ೧. ನಿನ್ನಧರಾಮೃತಪಾನ ಸೊಕ್ಕಿಸದೆ ಮಾಣ್ಬಪುದೇ (ಮೋಹತ. ೧೮-೯೧). ೨. ಬೀಗುವಂತೆ ಮಾಡು; ಗರ್ವಿಸುವಂತೆ ಮಾಡು: ಐಶ್ವರ್ಯವೆಂತಹನನುಂ ಸೊಕ್ಕಿಸುವುದು (ಪಂಚತಂ. ೧೭೮-೧೦); ನರರ ಸೊಕ್ಕಿಸುವ

ಸೌಭಾಗ್ಯ ಸೊಕ್ಕಿಸಿತಿಲ್ಲ ಹರೆಯ ಸೊಕ್ಕಿಸಿತಿಲ್ಲ ನಿನ್ನ (ಭರಚ. ೩-೧೧೮). ೩. ಎಚ್ಚರ ತಪ್ಪಿಸು; ಮೈಮರೆಯುವಂತೆ ಮಾಡು : ಆತನವಳಂ ತತ್ಪುತ್ರರ್ಮೈವರ್ವರಸು **ಪಾಂಡವಲಾವಾಸಕ್ಕೆ ತಂದು ವಿನೋದದಿಂ ಸೊಕ್ಕಿಸಿ ನೋೞ್ಪೆವೆಂಬ ನೆವದಿಂ** ಸೊಕ್ಕುಗಳ್ಳನೆಱೆಯಿಸಿ . . . ಅವಂದಿರ್ ಪರವಶತೆಯಿಂ ನಿದ್ರೆಗೆಯ್ವುದುಂ (ಮಹಾನೇ. ೯-೫೪ ವ); ಕೂಟದಿ ನಾಗರಿಕನ ಮಱೆದೊಱಗಿಸಿ ಪೀಠಮರ್ದನನ ಸೊಕ್ಕಿಪರು (ಮೋಹತ. ೧೮-೪೮). ೪. ಸಂತೋಷಗೊಳಿಸು: ಷೋಡಶವಿಧದ ದಾನಂಗಳ ಕುಡುವ ಕೈವಾಡ ಭೂಸುರರ ಸೊಕ್ಕಿಸಿತು (ಮೋಹತ. ೧೭-೩೫). [ಸೊರ್ಕು$_2$ + – ಇಸು$_3$]

**ಸೊರ್ಕು$_1$, ಸೊಕ್ಕು$_1$, ಸೊರಗು$_2$ (ಕ್ರಿ).** ೧. ಅಮಲೇರು; ಮತ್ತುಬರು; ಉನ್ಮತ್ತಗೊಳ್ಳು: "ಸೊರ್ಕು - ಉನ್ಮಾದೇ" (ಶಮಧಾ); ಎನ್ನ ನಿನ್ನ ಪತ್ತುಗೆಯ ತೊಡರ್ಪದಿಂದು ಪಟಿದತ್ತು ಮನಂ ಬಟಿಕೆಯ್ದೆ ಸೊರ್ಕಿದಾನೆಗೆ ಪಱಿವಂತಿರಿಂದು ಪಱಿದತ್ತೆನಗಂ ನಿನಗಂ (ಆದಿಪು. ೧೨-೩೭). ೨. ಬೀಗು; ಗರ್ವಿಸು: ಮಲೆಮಲೆದುರ್ಕಿ ಸೊರ್ಕಿ ಸಭೆಯೊಳ್ ಕುಲಪಾಂಸುಲನೀ ಶಿರೀಷಕೋಮಲೆಯ ವಿಲೋಲನೀಲಕಬರೀ ಭರಮಂ ತೆಗೆವಾಗಳ್ (ಪಂಪಭಾ. ೭-೫೭); ಪಿರಿಯರಿವರ್ ಸರ್ವಜ್ಞರ ದೊರೆಯೆನ್ನದೆ ಸೊರ್ಕಿ ಮೂರ್ಖತನದಿಂ ಕಾಣಂ (ಧರ್ಮಾಮೃ. ೯-೧೩೩). ೩. ಮೈಮರೆ; ಎಚ್ಚರವಿಲ್ಲದಿರು; ವಿಸ್ಮೃತಿಗೊಳ್ಳು: ಅಗರುವ ಧೂಪಧೂಮದೊಳೆ ಸೊರ್ಕಿದ ಸೊರ್ಕುಗಳಾಗಳಲ್ಲಿ ತೊಟ್ಟಗೆ ತಿಳಿದಂತೆ (ಆದಿಪು. ೫-೪೩). ೪. ಜಡವಾಗು; ಆಲಸ್ಯಹೊಂದು: ತುಂಗಭದ್ರನೆಂಬ ಪೋಡುಂಗಾಱಿಂ ಸೊರ್ಕಿ ತೂಂಕಡಿಂದಿರುಳ್ ಕಟ್ಟಿಂಗಳ್ ಕಡುಗತ್ತಲೆಯೊಳ್ ಬಂದು ಕಿಚ್ಚಂ ತಗುಳ್ಚಿ ಪೋದೊಂ (ವಡ್ಡಾರಾ. ೧೫೭-೯); **ಪಗೆಗೊಳೆ ಸೊರ್ಕೆ** . . . ನೆರೆದೆಡೆಯೊಳ್ ಕಾ(ನಾ)ಡೆ ಪಾವು ಕೊಳ್ಗುಂ ನರನಂ (ಲೋಕೋಪ. ೧೦-೨). ೫. ಸಂತೋಷಗೊಳ್ಳು; ಉಬ್ಬು: ಸೋಗೆ ಮುಗಿಲ ಕಂಡು ಸೊರ್ಕುವಂದದೊಳು (ಹದಿಬ. ೩-೧೪). **ಸೊಕ್ಕು$_1$** : ೧. ಕಮಳಮಧುಪಾನದಿಂ ಸೊಕ್ಕಿದ ಮುತ್ತುಂಬಿಯ ಧ್ವನಿಗಳಂತೆ ಜರ್ಝರವಾದ ಪೊಂಗೆಜ್ಜೆಗಳ ಮೆಲ್ನುಲಿಯೊಳಂ (ಕಾದಂಪೂ. ೭೭); ಸೊಕ್ಕಿದಿಭಂ ಮೃಗಾಧಿಪತಿಯಿರ್ಕೆಗೆ ಬಂದವೊಲಾಂತು ಸೀೞ್ದು ಪೋೞ್ದಿಕ್ಕದೆ ಮಾಣ್ಬನೇ (ದಶಕು. ೨-೮); ರಾವುತರು ಗಜಱ ಮಸ್ತಕ ಹಿಳಿಯಲಂಕುಶವಿಕ್ಕಿ ಬಿಟ್ಟರು ಸೊಕ್ಕಿದಾನೆಗಳ (ಕುಮ್ಮಾದ್ರೋ. ೨-೨೭). ೨. ಮಾಱಾನ್ತ ವಿದ್ವಿಷ್ಟರನದಟಲೆ ಯಲ್ಲಣ್ಡಸಲ್ಬಣ್ಡಸಲ್ಲ[ಕ್ಕ]ನ ಚಕ್ರಂ ಸೊಕ್ಕೆ (ಸೌಇಇ. XX, ೩೧-೨೬;1044); ಮಹಾಪರಾಧದಲುಕ್ಕಿ ಸೊಕ್ಕುವ ಪಾಪಿಗಹುದೇ ಭಕ್ತಿಯೆಂಬುದು (ಪ್ರಭುಲೀ. ೧೬-೩೯); ಸೊಕ್ಕಿದ ಕುಂಭಾಂಡ ರಣದೊಳು . . . ಸಿಕ್ಕಿದನೆನಲಾಗಿ ಜುಣುಗಿ ಮೆಯ್ಯಿಕ್ಕಿದ ಗಗನಸ್ಥಳಕೆ (ಮೋಹತ. ೪೦-೭೨). ೩. ಮದ್ದುಗಳಂ ಕೂಟಿೊಳ್ ಬೆರಸಿ ಕೆಯ್ಕಲಿಕ್ಕುವುದುಂ ಶ್ರೀಧರಮುನಿನಾಥನವರ ಕಪಟವೃತ್ತಿಯನಱಿಯದುಂಡು ಸೊಕ್ಕಿ . . . ನಿದ್ರೆಗೆಯ್ವುದುಂ (ಧರ್ಮಾಮೃ. ೧೧-೧೨೭); ಏನರಿಪುವೆಂ ಧರಣಿಜೆಯ ಕಾಣೆನೆನಲು ಸೊಕ್ಕುತ (ವೆಂಕಾರಾ. ೫-೫-೧೩). ೪. ತವಕಿಸಿ ಹಂಸಮಂಡಳಿ ಮೃಣಾಳದ ಕೋಮಳದಂಡಕಾಂಡಮಂ ಸವಿದುಱೆ ಸೊಕ್ಕಿದತ್ತು (ಬಾಧಪು. ೪-೭೭); ಭಕ್ಷ್ಯಗಳ ಬಡ್ಡಿಸಿಕೊಳುತುಂಡರು ನೆಱೆ ಸೊಕ್ಕುವನಕ (ಮೋಹತ. ೧೮-೩೭). ೬. ಉಲ್ಬಣಿಸು; ಹೆಚ್ಚಾಗು; ತೀವ್ರವಾಗು : ಇಕ್ಕೆಲನ ನೋಡಿ ನಡೆಯಲು ಸೊಕ್ಕಿದುದಾ ಗಾಯ (ನನ್ನಚಾ. ೬-೧೪೯). ೭. ಚಿಮ್ಮು; ಉಕ್ಕು; ನೆಗೆ: ಅಂಬನಗಲಿಸುತೆದ್ದನಬುಧಿಯ ಸುಱಿದು ಸೊಕ್ಕುವ ಶಿಖಿಯವೊಲು ನೀಲ (ತೊರರಾ. ೬-೧೯-೫೬). **ಸೊರಗು$_2$** : ೬. ಸದಮಲಗುಣಿ ತನ್ನ ಬರಿಯ ಪದೆದು ತಿವಿದುಕೊಂಡಾ ತನ್ನ ರಕ್ತಮನದಿರದೆ ಬಲಿಗೊಟ್ಟನಾಗ ಆ ವೇಳೆಯೊಳಾ ಗಾಯ ಸೊರಗಿ ಮೂರ್ಛೆಯಾವರಿಸಲು ನೆಲಕೊಱಗಿ (ನೇಮಿಸಂ. ೧೦-೧೯೯).

[ದೇ. ‖ ತಮಿ. ಚೊಕ್ಕು, ಚೆರುಕ್ಕು, ಚೊರುಕು; ಮಲ. ಚೊರುಕು; ತುಳು. ಸೊರ್ಕು, ಸೊಕ್ಕು; ತೆಲು. ಸೊಕ್ಕು, ಚೊಕ್ಕು]

**ಸೊರ್ಕು$_2$, ಸೊಕ್ಕು$_2$ (ನಾ).** ೧. ಅಮಲು; ಮತ್ತು; ಮದ: ಪಾಲ್ಗಡಲೊಳಮಮರ್ದಿನೊಳಂ ಪುಟ್ಟಿದ ಕಳ್ಪ ಸೊರ್ಕಿನೊಳಮುಂತೆ ನಡುಗುವ ಬಡನಡುಗಳ್ಗೆ ನಡುಕಮುಮಂ . . . ನುಡಿಗಳ್ಗೆ ತೊದಳುಮನೆಕ್ಕೆಯಿಂ ತಳೆಯೆ (ಪಂಪಭಾ. ೭-೮೧ ವ); ಕಳ್ಗೊಡನೆ ಪುಟ್ಟಿದುದಱಿಂ ಸೊರ್ಕುಂ ಅಚ್ಚರಸಿಯರೊಡನೆ **ಪುಟ್ಟಿದುದಱಿಂ ಪಾಱುಗೆಯ್ತಮುಂ ನಿನಗೆ ಸಹಜಮಾಗಿರ್ದುವು** (ಗದಾಯು. ೯-೭ ವ). ೨. ಹೆಮ್ಮೆ; ಕೊಬ್ಬು; ಗರ್ವ: ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು . . . ಕರ್ಣ ನಿನಗುಳ್ಳನಿತೇನೆನಗುಂಟೆ (ಪಂಪಭಾ. ೧೦-೨೩); ಕೌಂತೇಯರಂ **ಮಚ್ಚರದಿಂ ಕಾಂತಾರದೊಳ್ತಿಟ್ಟನೆ ತಿರಿಪಿದ ಸೊರ್ಕೀಗಳೇನಾದುದು** (ಗದಾಯು. ೭-೧೪). ೩. ಮೈಮರವು; ವಿಸ್ಮೃತಿ: ಅವರ್ಗೆಲ್ಲಮುಣಿಸಂ ಮಾಡಿ ಸೊರ್ಕಪ್ಪಾಹಾರಮನೂಡಿ (ವಡ್ಡಾರಾ. ೧೯೦-೪); ಅಗರುವ ಧೂಪಧೂಮದೊಳ್ ಸೊರ್ಕಿದ ಸೊರ್ಕುಗಳಾಗಳಲ್ಲಿ ತೊಟ್ಟಗೆ ತಿಳಿದಂತೆ (ಆದಿಪು. ೫-೪೩). ೪. ಮತ್ತುಬರಿಸುವ ಔಷಧ; ಸೊಕ್ಕುಮದ್ದು: ಗೇಯದೊಳೀಕೆ ಸೊರ್ಕನಿಕ್ಕಿದಳೆನೆ ಕಳ್ಗೆ ಚಕ್ಕಣಮೆನಿಪ್ಪುದು (ಪಂಪಭಾ. ೭-೯೦); ಕಾಡೊಡೆಯಂ ತೋಡಿಲ್ಲದ ತೊಱೆವೇಂಟೆಯಾಡಲೆಳಸುತಿಱಿಗೂಳಿ ಹಂಜರಗೂಳಿಡುಗಾಣಂ ಸೊರ್ಕು . . . ಸೂಸುಗೊಳ್ಗಳೆಂಬಿವಂ ಕೊಂಡು . . . ಪೆರ್ದೊಱೆಗೆಯ್ದು (ರಾಜಶೇ. ೫-೧೧೪ ವ) ೫. ಮದೋದಕ; ಮದಜಲ: ಬಿಡುತಂದುಗ್ರದ್ವಿಪಂ ಬಂದು ತಾಂಗುವುದೆಂಬಂದೆಳಮಾವಿನೊಳ್ ದ್ವಿಪಮೆ ಗೆತ್ತೇಂ ಸೊರ್ಕು ಸ್ಯೆತಿರ್ಕುಮೇ (ಶಾಂತಿಪು. ೯-೧೪೨); ಅಡಸಿದರಿಕರಿಯ ಘಟೆಯಂ ಪೊಡೆದೊಡೆ ಬಿಡದಳಿಗಳಡರೆ ಸೊರ್ಕಿನ ಸೊವಡಿಂದಡಕಿಲಿಡೆ ಪಣ್ತು ನೇಱಿಲ ನಿಡುಗೊಂಬೆನಿಸಿದುದು ತೋಳ ಬಾಳ್ ತ್ತೈಲಪನಾ (ಕಾವ್ಯಸಾ. ೨೪೭). ೬. ಸಂತೋಷ; ಹಿಗ್ಗು: ಪಿಕಕುಲದ ಸೊರ್ಕು ಮಧುಕರನಿಕರದ ಮದವರಗಿಳಿಗಳ ಗರ್ವಂ (ಗಿರಿಕ. ೨-೪೫). ೭. ಠೀವಿ; ಗತ್ತು: ಮದೋತ್ಸವದೆ ಕೋಗಿಲೆವೆಣ್ ಗಟಪಂ ನೆಗೞ್ಚುವಂತನುವಿಪ ಸೊರ್ಕಿನಿಂ ಪಿಕನಿನಾದೆ ಪೆಱಳ್ ಗಟಪಂ ನೆಗೞ್ಚಿದಳ್ (ಕಾವ್ಯಸಾ. ೯೭೪). ೮. ಅತಿಶಯ; ಹೆಚ್ಚಳ: ಮೃಡನಿಂ ಬೀಳ್ಕೊಳುತ್ತೆ ತತ್ಸುಖದ ಸೊರ್ಕಿಂ ದಿವಿಜಕುಜಮಡಿಯಿಡುವ ತೆಱದಿನಲ್ಲಿಂ ತಳರ್ದು (ಪದ್ಮರಾ. ೨-೬೧). ೯. ಶಕ್ತಿ; ಕಸುವು: 'ಸೊರ್ಕಟಿ' ಪರಾ. **ಸೊಕ್ಕು$_2$**: ೧. ಚರಿಯಿಪ ವನದೇವತೆಯರ ಚರಣಾಲಕ್ತಕದೆ ಪೂರೆದುವೆನಿಪುವು ಮಧುವಿಂದುಱೆ ಸೊಕ್ಕನಾಳ್ದ ಕೇರಳಿಯರ ಕದಪಿನ ಬಣ್ಣಮುಪ್ಪ ಚೆಂದಳಿರ್ದುಱುಗಲ್ (ಕಾದಂಪೂ. ೯೭); ತಲೆಗೇಱಿ ಸೊಕ್ಕು ತೊನೆವರ್ (ಸೋಮೇಶ. ೪೮). ೨. ರಾಜ್ಯದ ಸೊಕ್ಕಿನಲಿ ನೆಱೆ ಬಂದು ಬ್ರಾಹ್ಮಣರ ಮಕ್ಕಳಾಟಿಕೆಯಾಡಿ (ಸಂಭಪ. ೨೬-೧೧೫); ಕಡುಗುದುರೆಯ ಸೊಕ್ಕ ಮುಱಿಯೆಂದು ಚದುರಂಗದಡಿಯ ಮೇಲ್ವಾಯ ಪೇಳಿದಳು (ಕಂನವಿ. ೬-೧೨೦); ಇಷ್ಟು ಸೊಕ್ಕು ಒಳ್ಳೆಯದಕ್ಕಲ್ಲ (ತೇವೋಡ. ೯೯). ೩. ಸೊಕ್ಕು ಮುಕ್ಕುಳಿಸಿದಂತಿರ್ದಿರವುಂ ಬಱಲ್ದಂತೆ ಜೋಲ್ದಂದಮುಂ . . . ಎಂತು ದೊರೆಕೊಳ್ಗುಂ (ಕಾದಂಪೂ. ೭೫೯); ನಿನ್ನವಗೆ ತಿಳಿದುದು ಸೊಕ್ಕು ಚಿತ್ತದ ಬವಣೆ ಬೀತುದು (ಕುಮ್ಮಾಕ. ೨೦-೧). ೪. ತ್ರಿವಿಧ ಸೋಂಕ ತಂದು ಆ ಮಡುವಿನ ಉದಕದಲ್ಲಿ ಒಡಗೂಡಿದಡೆ ಆ ಸೊಕ್ಕು (ಸೋಂಕು) ಮತ್ಸ್ಯವ ಮುಟ್ಟಿದುದಿಲ್ಲ (ಸರ್ವವ. ೫೯-೩೧೩); ನೀನಿಂತು ತಲೆಕೆಳಗಾಗಿ ನಡೆಯುತಿಹೆ . . . ಮಱಹುಗಳ ಸೊಕ್ಕನಿಕ್ಕಿಸಿ ಸುಗುಡತನ ಮೆಱೆದು (ಬಸವು. ೪೨-೧೭); ನಿನಗೆ ವಿಷ ತಿನ್ನಿಸೋದಕ್ಕೆ, ಸೊಕ್ಕು ತಿನ್ನಿಸೋದಕ್ಕೆ ನೀನು ಯಾರಿಗೆ ಏನು ಮಾಡಿದ್ದೆ ನಂದಿ? (ಚಳುಮ. ೧೯೫). ೫. ಸೊಕ್ಕು ಸರಿಯೆ ಕುಂಭಸ್ಥಲ ಬಿರಿಯಲಂಕುಶದ ಹೊಯಿಲಿಂದ ಬರಿಸುತಿಹರು ಸಾಧನೆಯನಂಕದ ಮದಕರಿಗಳಿಗಲ್ಲಿ ಕೋವಿದರು (ಕುರಾಸಾಂ. ೪-೭೦); ಮೆಯ್ಗೊಱೆದಾನೆ ಸೊಕ್ಕು ಮಾವಿನ ಪಚ್ಚೆಲೆದುಪ್ಪಟಿಯುಡಿಗೆಯೊಳಾ ವನಚರಿಯ ರೊಪ್ಪಿದರು (ಶ್ರೀಪಾಲ. ೭-೩೬). ೬. ಸೊಗಸಿನ ಸೊಕ್ಕು ಮಿಕ್ಕು ಹೊಱಗಂ ಮಱೆದು (ಸಿದ್ಧರಾ. ೨-೭೭); ಕಮಳದ ಸೊಕ್ಕು ಸೋರೆ . . . ಭಾನು ಪಶ್ಚಿಮಪಯೋಧಿಯೊಳೊಯ್ಯನೆ ಮೆಯ್ಯನಿಕ್ಕಿದಂ (ಪುಣ್ಯಾಸ್ರ. ೧-೧೧೫). ೮. ನಿಮ್ಮ ಜವ್ವನದ ಸೊಕ್ಕು ರೂಪಿನ ಗಾಡಿ ಜಾಣತನದೊಪ್ಪವೇತಕ್ಕೆ ಯೋಗ್ಯಂ ರಮಿಸಿದವರುಂಟೆ (ಹಚಕಾ. ೭-೧೮); ಲಾವಣ್ಯಲಹರಿಯ ಸೊಕ್ಕುಗಳ ಸುರಸೂಳೆಗೇರಿಗಳೊಳಗೆ ನಡೆತಂದ (ಕುಮ್ಮಾಅ. ೭-೮೨). ೧೦. ಮೈಮರೆಸುವ ಸಾಮರ್ಥ್ಯ; ಮೂರ್ಛೆಗೊಳಿಸುವ ಶಕ್ತಿ: ಸರಳ ಸೊಕ್ಕವಗಡಿಸೆ ಕೃಪ ಮೈಮಱೆದನತ್ತಲು ದ್ರೋಣನಿತ್ತಲು ಪರಮನಿದ್ರಾಸಕ್ತನಾದನು (ಕುಮ್ಮಾವಿ. ಓರಿಇ. ೯-೮೭). ೧೧. ಒಂದು ಬಗೆಯ ಸುಗಂಧದ್ರವ್ಯ: 'ಮಿಗಸೊಕ್ಕು' ಪರಾ.

[< ಸೊರ್ಕು$_1$./ತಮಿ. ಚೆರುಕ್ಕು, ಚೊಕ್ಕು; ಮಲ. ಚೊರುಕ್ಕು; ತುಳು. ಸೊರ್ಕ್, ಸೊರ್ಕು; ತೆಲು. ಚೊಕ್ಕು, ಸೊಕ್ಕು; ಕೊಡ. ಚೊಕ್]

**ಸೊರ್ಕುಂಗಣ್, ಸೊಕ್ಕುಗಣ್ (ನಾ).** ಮಾದಕವಾದ ಕಣ್ಣು: ಸೊಗಯಿಪ ಸೊರ್ಕುಂಗಣ್ಗಳ ಸುದತಿಯರೀಕ್ಷಿಸಿದರ್ ನೃಪನ (ಜಯಕಾ. ೧೦-೫೪). **ಸೊಕ್ಕುಗಣ್:**

ಸುಕ್ಕುಗುರುಳ ನೀಱೆಯರ ಸೊಕ್ಕುಗಂಗಳ ರುಚಿ ಸೂಸಲು ನೃಪ ಮುತ್ತನಿಕ್ಕಿದಂದದಿ ನೊಪ್ಪಿದನು (ನೇಮಿಸಂ. ೩-೯೦). [ಸೊರ್ಕು$_1$ + ಕಣ್]

**ಸೊರ್ಕುಂಗೋಗಿಲೆ, ಸೊಕ್ಕುಗೋಗಿಲೆ, ಸೊರ್ಕುಕೋಗಿಲೆ, ಸೊರ್ಕುಗೋಗಿಲೆ** (ನಾ). ಮದಿಸಿದ ಕೋಗಿಲೆ; ಮತ್ತವಾದ ಕೋಗಿಲೆ: ತುಂಬಿಲರ್, ಎಳಮಾವು, ಸೊರ್ಕುಂಗೋಗಿಲೆ – ಇವು ಉಪಸರ್ಗಂ ಬೆರಸಿದ ಶಬ್ದಂಗಳ್ (ಕಶಸಾ. ೬೨-೪೧೬). **ಸೊಕ್ಕುಗೋಗಿಲೆ:** (೩). **ಸೊರ್ಕುಕೋಗಿಲೆ:** ಸೊರ್ಕುಕೋಗಿಲೆಯೆಂದುಂ . . . ಕೆಂಬಾಯ್ ತೆಳ್ಗದಂಪೆನಲ್ಕೆ ತಾಮಿವುಪಸರ್ಗಂಗಳ್ (ಕವಿಕ. ೧೮೩). **ಸೊರ್ಕುಗೋಗಿಲೆ:** ಎಳಲತೆಯಮ್ಮಾವು ಸೊರ್ಕುಗೋಗಿಲೆಯೆಂದಿಂತಳವಡಲುಪಸರ್ಗಾಖ್ಯಂ (ಚತುನಿ. ೭೨). [ಸೊರ್ಕು$_1$ + ಕೋಗಿಲೆ]

**ಸೊರ್ಕುಂಜವ್ವನ, ಸೊಕ್ಕುಂಜವ್ವನ, ಸೊಕ್ಕುಜವ್ವನ, ಸೊರ್ಕುಜವ್ವನ** (ನಾ). ಉಕ್ಕುತ್ತಿರುವ ಹರೆಯ; ನವತಾರುಣ್ಯ: ಈತನಂತವುರದ ಸೊರ್ಕುಂಜವ್ವನದ ಕನ್ನೆವೆಣ್ಣಳೊಡವೆರದು ವನವಿಹಾರದೊಳಿರ್ದಂ (ರಾಮಾಶ್ವ. ೧೨೨-೨೧). **ಸೊಕ್ಕುಂಜವ್ವನ:** 'ಸೊಕ್ಕುಂಜವ್ವನೆ' ಪರಾ. **ಸೊಕ್ಕುಜವ್ವನ:** ಚಿಕ್ಕಪ್ರಾಯದ ಚೆನ್ನೆ ಸೊಕ್ಕುಜವ್ವನ ರನ್ನೆ (ನವಮೋ. ೩-೪); ಸೊಕ್ಕುಜವ್ವನದ ರಾತ್ರಿರಾಣಿ ಮುಸುಗುಡಿಸೆ ಆಯ್ತು ಹಗಲು (ಸೂರ್ಯಪಾ. ೩೪-೧೪). **ಸೊರ್ಕುಜವ್ವನ:** ನಿನ್ನ ಸೊರ್ಕುಜವ್ವನದ ಸೊಬಗನ್ನೊಡ್ಡಿ ಹೀಗೆ ಬೀಸಿರುವ ಕೆಣಕುಕಣ್ಣುಳ್ಳವನನ್ನು ಎರ್ದೆಗಲಂಕಿ ಗಾಳುಂಗಂಡಿಕೆಗುಬ್ಬಿಸುತ್ತಿದೆ (ಚಿಟ್ಟಚಿ. ೧೦-೧೮). [ಸೊರ್ಕು$_1$ + ಜವ್ವನ]

**ಸೊರ್ಕುಂಜೆರ್ಕು** (ನಾ). ಗರ್ವದ ನಾಶ; ದರ್ಪವು ಭಂಗವಾಗುವಿಕೆ: ಇಂತಪ್ಪುದುಮುರ್ಕಿನ ಕೇಣಿಯ ಚೂಣಿ ಸೊರ್ಕುಂಜೆರ್ಕಾಗಲೊಡಂ ಕಂಡು ಮಿಂಡೆಟ್ಟ ಪಡಿವಳರ್ . . . ಜವಹುರದ ಪಡಿವಳರಾದರ್ (ರಾಮಾಶ್ವ. ೧೪೩-೨೭). [ಸೊರ್ಕು$_2$ + ಜೆರ್ಕು$_3$]

**ಸೊರ್ಕುಕದಡು** (ನಾ). ಮದಜಲದ ಕದಡು,– ಬಗ್ಗಡ : ಆ ವಾರಣದ . . . ಉಭಯಕಟತಟದ ಸೊರ್ಕುಕದಡಿನ ತೆರ್ಕೆಗಡಲ್ಗಳೊಕ್ಕೆಸಿ ಜಗಮನಿಕ್ಕಲೆಂದು ಮಹಾವ್ರತಮನೆತ್ತಿಕೊಂಡ ಕಲ್ಪಾಂತಕಾಳನ ಕೂರ್ಚಜಾಳಂ ಪೆರ್ಚಿಕ್ಕಿ ಬೇಱೆ ಬೆರ್ಚವಂತಿರ್ಪುದು (ಅನಂಪು. ೧೩-೨೧ ವ). [ಸೊರ್ಕು$_2$ + ಕದಡು$_2$]

**ಸೊರ್ಕುಕೋಗಿಲೆ** 'ಸೊರ್ಕುಂಗೋಗಿಲೆ' ನೋ.

**ಸೊರ್ಕುಗಂಪು** (ನಾ). ಮತ್ತೇರಿಸುವಂಥ ಸುವಾಸನೆ: ಅದಿರ್ಗಂತಿಯ ಸೊರ್ಕುಗಂಪು . . . ಕೇತಕಿಯ ಕೆಂಪೆಸೆಗುಂ ಸಲೆ ಪುಷ್ಪವಾಟಿಯೊಳ್ (ಗಿರಿಕ. ೨-೬೧); ಸುರಯಿಯ ಸೊರ್ಕುಗಂಪು . . . ಚೂತವಲ್ಲರಿಯಲರಚ್ಚಗಂಪು ಬಗೆಗೊಂಡುದು ತದ್ವನದೊಳ್ (ರಾಜಶೇ. ೧೦-೧೯). [ಸೊರ್ಕು$_1$ + ಕಂಪು]

**ಸೊರ್ಕುಗೋಗಿಲೆ** 'ಸೊರ್ಕುಗೋಗಿಲೆ' ನೋ.

**ಸೊರ್ಕುಜವ್ವನ** 'ಸೊರ್ಕುಂಜವ್ವನ' ನೋ.

**ಸೊರ್ಕುಜವ್ವನಿಗ** (ನಾ). ಕೊಬ್ಬಿದ ಯುವಕ; ಉದ್ಧತನಾದ ತರುಣ: ಮಿಕ್ಕುಱಿದ ನಿಮ್ಮ ಸೊರ್ಕುಜವ್ವನಿಗರಂ ತಿಕ್ಕಿ ತೆಕ್ಕೆಯಾಡುವೆಂ (ರಾಮಾಶ್ವ. ೧೪೨-೨೭). [ಸೊರ್ಕುಜವ್ವನ (< ಸೊರ್ಕುಂಜವ್ವನ) + - ಇಗ]

**ಸೊರ್ಕುದವಕ** (ನಾ). ಹೆಚ್ಚಾದ ವೇಗ,– ತ್ವರೆ; ಅತಿಶಯವಾದ ರಭಸ: ದ್ಯುಮಣಿಯಸ್ತಾಂಬುಧಿಯೊಳಳ್ದುವಾ ಮೊದಲೆ ನಾಂ ದೈತ್ಯಲಂಕಾದ್ವೀಪತಟಗೆ ಸೇರ್ದಪೆನೆಂದು ಸೊರ್ಕುದವಕದೊಳೆಯ್ದುತಿರೆ (ಶ್ರೀರಾಮಾ. ೪೧೪-೩೭೪). [ಸೊರ್ಕು$_2$ + ತವಕ$_1$]

**ಸೊರ್ಕುನೀರ್** (ನಾ). ೧. ಮದಜಲ; ಮದೋದಕ: "ಸೊರ್ಕುನೀರೆಂದು ಮದಜಲಂ" (ಕಶಸಾ. ೫೧-೮೩); ಗಲ್ಲದ ಸೊರ್ಕುನೀರ ಪೊನಲಿಂ ನೆಲೆವೆರ್ಚೆ ಕಡಲ್ ತುಳುಂಕೆ . . . ಜಲ್ಲನೆ ತುಂಬಿಗಳ್ ಕೆದಱೆ ಬಂದುವು ಬಿಂಕದಿನಂಕದಾನೆಗಳ್ (ಚಿಬ್ಬಿಕಾ. ೨೦೩). ೨. ಹೆಚ್ಚಾದ ನೀರು; ಯಥೇಚ್ಛವಾದ ನೀರು: ಆ ನಳಿನಾಕ್ಷಿಯ ಲಾವಣ್ಯಾಮೃತಪಾನದಿಂ ಜನದ ಕಣ್ಬಳಗ ಏನೆಂಬೆ ಸೊರ್ಕು[ಪಾಠಾಂ. ಕ್ಕು]ನೀರುಂಡ ಬಾಳೆಗಳ ಸಂತಾನದಂತುಱೆ ಮೈಮಱೆದವು (ಕುರಾಸಾಂ. ೨೧-೬೪). [ಸೊರ್ಕು$_2$ + ನೀರ್]

**ಸೊರ್ಕುನುಡಿ** (ನಾ). ಗರ್ವದ ಮಾತು; ಸೊರ್ಕಿನ ನುಡಿ: ದೈವದೊಳ್ ಸೊರ್ಕುನುಡಿ ನುಡಿಯದಿರ್ (ಅಶ್ವಶಾ. ೬-೧೧೩); ಗರ್ವದಿಂದುರ್ಬಿ ಸೊರ್ಕುನುಡಿ ಯಾಡುವಯ್ (ಬದ್ಧಪ್ರ. ೫೦-೧೧೯೭). [ಸೊರ್ಕು$_2$ + ನುಡಿ$_2$]

**ಸೊರ್ಕುಮರ್ದು, ಸೊಕ್ಕುಮದ್ದು** (ನಾ). (ದತ್ತೂರಿ ಮುಂತಾದುವುಗಳ) ಮೈಮರೆಯುವಂತೆ ಮಾಡುವ ಮದ್ದು, – ವಿಸ್ಮೃತಿಯನ್ನುಂಟುಮಾಡುವ ಔಷಧ: ಬಿಡುವಲೆ ಸೊರ್ಕುಮರ್ದು . . . ಗಿಡಗಮೆನಿಪ್ಪಿವಂ ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದಿದರ್ (ರಾಜಶೇ. ೫-೫೨). **ಸೊಕ್ಕುಮದ್ದು:** ಕುಕ್ಕುಟಗಳ ಕಾಲ್ಗೆ ಚೀಲಾಯುಧವಿಕ್ಕಿ ಸೊಕ್ಕುಮದ್ದಿನ ಗುಟುಕಿತ್ತು ಉಕ್ಕಂದದೆ ಕಾದಿಪರಸುಮಕ್ಕಳ ಮೊತ್ತ ಕಿಕ್ಕಿಱಿದೆಸೆದುದು (ಕಂನವಿ. ೭-೧೨). [ಸೊರ್ಕು$_2$ + ಮರ್ದು]

**ಸೊರ್ಕುವೆಱು** (ಕ್ರಿ). ಅಮಲೇರುವಂತೆ ಮಾಡು; ಮತ್ತೇರಿಸು: ಕಡುಗಾಡಿವೆತ್ತಲೆವ ತೆಂಕಣಗಾಳಿಯ ಸೋಂಕು ಸೊರ್ಕುವೆತ್ತುದು (ಧರ್ಮನಾ. ೧-೭೨). [ಸೊರ್ಕು$_2$ + ಪೆಱು$_1$]

**ಸೊರ್ಕೇಱಿಸು** (ಕ್ರಿ). ಪರವಶಗೊಳಿಸು; ಮೈಮರೆಸು: ತಂತಿಯನಲೆಗೆಯ್ದ ಬೆರಲ್ಗಳ್ . . . ಮನಮಂ ಸೋಲಿಸಿ ಸೊರಗಿಸಿ ಸೊರ್ಕೇಱಿಸಿ ಸೊಗಂಬಡಿಸೆ (ಚಿಕವಂ. ೧೬೦-೯). [ಸೊರ್ಕು$_2$ + ಏಱಿಸು]

**ಸೊರ್ಕೇಱು, ಸೊಕ್ಕೇರು, ಸೊಕ್ಕೇಱು** (ಕ್ರಿ). ೧. ಅಮಲೇರು; ಮದಿಸು; ಮತ್ತವಾಗು: ಅಲರ್ವಂಡನುಂಡು ಸೊರ್ಕೇಱಿಯೊಂದಿನಿಸು ಮೆಲ್ಲುಲಿ ನುಣ್ಗೊರಲೊಳುಣ್ಮಲಿಂಚರಂಗೆಯ್ಯುತಿರ್ಪಲರ್ವಕ್ಕಿವಳಗದಿಂ . . . ಕೊಳಂಗಳ್ ಮೆಱೆದುವು (ಪದ್ಮರಾ. ೬-೩೯); ಅಮರ್ದಂ ಪೀರ್ದು ಪೊದಟ್ಟ ಕಾರ್ಮುಗಿಲೊ ಮೇಣ್ ಸೊರ್ಕೇಱೆ ಬಂದಾನೆಯೋ (ಚಿಕವಿ. ೩-೮೪). **ಸೊಕ್ಕೇರು:** ೨. ಗರ್ವವು ಹೆಚ್ಚಾಗು; ಅಹಂಕಾರ ಹೆಚ್ಚಾಗು: ನಿನಗೆ ಈಚೆಗೆ ತುಂಬಾ ಸೊಕ್ಕೇರಿದೆ (ರೂಢಿ). **ಸೊಕ್ಕೇಱು:** ೧. ಮನ್ಮಥಗಜಂ ಸೊಕ್ಕೇಱೆ . . . ಬಂದುದು ವಸಂತಂ (ಧರ್ಮಾಮೃ. ೧೩-೧೦); ಸೊಕ್ಕೇಱುವ ಚೇತನಂ ಮಱೆವ ಮೈ ನಸುದೇಲ್ವ ವಿಲೋಲಲೋಚನಂ (ಉದ್ಭಟ. ೫-೮೦). ೨. ಚಕ್ರಪಾಣಿಯ ದಂಡು ಸೊಕ್ಕೇಱೆ ಬರುವಾಗ ರಕ್ಕಸರು ಕರಿಯನೊಡಗೂಡಿ ದೊರೆಯನ್ನು ತಿಕ್ಕಿಬಿಟ್ಟಾರು (ಸರ್ವಜ್ಞ. ೧೧೭೦). ೩. ಅತಿಯಾಗಿ ಸಂತೋಷಗೊಳ್ಳು,– ಹಿಗ್ಗು: ಲಿಂಗದಂಘ್ರಿಯ ಮುಂದೆ ತುರಗದಿಂದೊಲಿದಿಳಿದು ತಕ್ಕೆಸಿ ಮುಂಡಾಡಿ ಸೊಕ್ಕೇಱೆ ನೋಡುತಂ (ಮಱರ. ದೇ. ೭೩-೫). [ಸೊರ್ಕು$_2$ + ಏಱು$_1$ (< ಏಱ್$_1$)]

**ಸೊರ್ಗೊಗೆ** (ಕ್ರಿ). ಉಬ್ಬು; ಹೆಚ್ಚು: ಸೊರ್ಗೊಗೆದಬ್ಧಿಯ ಮಧ್ಯದೊಳುರ್ಕಿದ ಸಿಂಹಳನ ಮದಕಿದೌಷಧಮೆಸಿಕುಂ (ರಾಜಶೇ. ೫-೧೨೮). [ಸೊರ್ಕು$_2$ + ಒಗೆ$_1$]

**ಸೊಲ್$_1$, ಸೊಲ್ಲು$_1$** (ಕ್ರಿ). ೧. ಹೇಳು; ನುಡಿ; ಮಾತಾಡು: ಬಱುಬಱುಬಱನೆ ಸೊಲ್ಲಂ ಸೊಲ್ವುದು ನಿನಗೇಂ ಮೊಗ್ಗೆ (ಉದ್ಭವೇ. ೩-೭೧); ಚೆಲ್ವ ಶಿಶು . . . ಸೊಲ್ವ ಮಾತುಗಳನಾಲಿಸಿ ಮುದ್ದಿಸುವರ್ (ಜೈಮಿಭಾ. ೨೮-೨೦). ೨. ವರ್ಣಿಸು; ವಿವರಿಸು: ಭಾಳನಯನನಾತುಳಾಮಳಲೀಲೆಗಳಂ ಸೊಲ್ವೆನೊಲ್ದು ಚೌಷಷ್ಟಿಗಳಂ (ಹಾಲಾಸ್ಯ. ೧-೧-೮೮). ೩. ಪರಸ್ಪರ ಸಂಭಾಷಿಸು: ಕೆಳದಿಯರೊಳ್ ಸೊಲ್ಲದೇಕಾಂತದೊಳ್ ನಿಲ್ಲದಿರ್ (ಜಗವಿ. ೧೭-೧೨೭). ೪. ಹೊಗಳು; ಕೊಂಡಾಡು: ಆ ವಿಕ್ರಮಮಂ ಸೊಲ್ವಿನಮಾವರ್ಜಿಸಿದಂ ನಾಲ್ಕುತ್ತೆರಡಱಿಕೆಗಾಳೆಗಂಗಳೊಳೀತಂ (ಪಂಪಭಾ. ೧-೨೫). **ಸೊಲ್ಲು$_1$:** ೧. ಸೊಲ್ಲಬೇಕಿನಿತೊಂದನೆನ್ನಂ ಭುಲ್ಲವಿಸಿ ಮರ್ತ್ಯಕೆ ಜಗತ್ತ್ರಯ ವಲ್ಲಭನೆ ನೀವಲ್ಲದೊರ್ಬನು ಕರ್ತನಿದ್ದಹನೆ (ಬಸವು. ೨-೪೦); ಬಲ್ಲಿದರುಂಟು ಮುಂಗುಲಿದೇವನೊಳಗೆಂದು ಸೊಲ್ಲಿದರವರಸುರನಿಗೆ (ಕುರಾಸಾಂ. ೧೮-೫೯). [ದೇ. ॥ ತಮಿ. ಚೊಲ್; ಮಲ. ಚೊಲ್ಲು; ಪರ್ಜಿ. ಚುಲ್]

**ಸೊಲ್$_2$, ಸೊಲ್ಲು$_2$** (ನಾ). ೧. ಮಾತು; ನುಡಿ: ನೀವೇ ಬಲ್ಲಿರಿ ನಾನಱಿಯೆನಯ್ಯಾ ಸೊಲ್ಲಿಂಗತೀತನ ಕಲ್ಲಿಂದಾಹನೆಂಬಯ್ಯಾ (ಮೋಳಿಮಾ. ೫-೧೮); ನೀವುಂ ನಿರ್ಲಜ್ಜರಪ್ಪ ಸವಣರ ಸೊಲ್ಲಿಂಗೊಳಗಾದುದಕ್ಕೆ ನಾಂ ಬೆಱಗಾದೆಂ (ಧರ್ಮಾಮೃ. ೧-೧೧೧); ಪಾತಕಿಗೆ ನುಡಿದ ಸೊಲ್ ಪುಸಿಯಹುದು (ಜೈಮಿಭಾ. ೪-೪). ೨. ಕಟ್ಟಳೆ; ಅಪ್ಪಣೆ: ಲಕ್ಷ್ಮಣನದಾವೆಡೆಯೊಳೆನ್ನ ಸೊಲ್ಪಲಿಸುವನದಾವೆಡೆಯೊಳು ಹಳುವಿನೊಳ್ತನಗಾಗಿ ನವೆದನುಜನಾವೆಡೆಯೊಳಳಿದನೇ ಸೌಮಿತ್ರಿ (ಜೈಮಿಭಾ. ೨೧-೪). **ಸೊಲ್ಲು$_2$:** ೧. ನಲ್ಲನವ ಕೇಳಿಂದ ವಲ್ಲಭೆಗೆ ಶಿವನೊರೆದ ಸೊಲ್ಲನಾ ಶಿವರಹಸ್ಯಾದಿಗಳೊಳಂ (ಸಾನಂಚ. ೩-೫೭);

ಇಲ್ಲಿಹನು ಅಲ್ಲಿಲ್ಲವೆಂಬೀ ಸೊಲ್ಲು ಸಲ್ಲದು (ಹರಿಸಾ. ೪೭). ೨. ಫುಲ್ಲಶರಾತ್ಮಸಂಭವ ಕೇಳ್ದು ಗುರುಗಳ ಸೊಲ್ಲನುಲ್ಲಂಘಿಸದೊಡನೆ ಸಲ್ಲಲಿತಾಂಗಿಯ ವರಪಾಣಿವಿಡಿದು ಪೊಂಬಲ್ಲಕ್ಕಿಯೊಳಗೆ ಮಂಡಿಸಿದ (ಮೋಹತ. ೧೧-೩೪). ೩. ನಾದ; ಧ್ವನಿ: ವಾಸಂತಿಕಾ ದೇವಿಯ ಆಲಯದಿಂದ ಪ್ರಭಾತಸೂಚಕ ಮಂಗಳವಾದ್ಯಗಳ ಸೊಲ್ಲು ಕೇಳಬಂದಿತು (ಶಾಂತಲಾ. ೧೦೨); ಸೊಲ್ಲು ಎಂಬುದು ನಾದ, ಭಾವದಲ್ಲಿದೆ ಸ್ವಾದ (ಅರಳು. ೪೦೧-೯). ೪. ಶಬ್ದ; ಪದ: ಒಲಿದೊಮ್ಮೆ ಶಿವ ಶರಣೆನ್ನಿರಯ್ಯಾ ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ (ಬಸವ. ೧೮೦); ಸೌಂದರಪುರಾಣದೊಳಗಣೊಂದೊಂದು ಸೊಲ್ಲ ಕ್ರಮದೊಳಾವ ವನೊರ್ವನಾಲಿಸಿದೊಡಾತಂಗೆ . . . ಮೋಕ್ಷ ಸಮನಿಪುದು (ಸೌಂದಪು. ೧೩-೫೭). ೫. ಹೊಗಳಿಕೆ; ಪ್ರಶಂಸೆ: ಸೊಲ್ಲಿಗೆ ತಕ್ಕವನಿಳೆಗೊಬ್ಬ ಭರತೇಶನಲ್ಲವೆ ಹೇಳ ರಗಿಳಿಯೆ (ಭರಚ. ೬-೯೩). ೬. ಕೂಗುವಿಕೆ; ಕರೆ: ಜಗನ್ನಾಥವಿಠಲ ಸೊಲ್ಲನಾಲಿಸಿ ಕಂಬದಿಂದಲಿ ಬಂದ ಭಕುತನಿಗೆ (ಜಗದಾ. ೨೩೯). ೭. ವಿಷಯ; ಸಂಗತಿ: ಅರ್ಜುನನ ವೋಲೆಯ ಸೊಲ್ಲುಗಳನವಧರಿಸು (ಸಂಭಪ. ೨೦-೫೧). ೮. ಜನಪದಗೀತೆ, ದಾಸರ ಕೀರ್ತನೆ ಮೊದಲಾದ ಹಾಡಿನ ಒಂದು ನುಡಿ: ಅರಸನಾದ ದಾವೀದನ ಒಂದು ಕೀರ್ತನೆಯ ಮೊದಲನೆಯ ಸೊಲ್ಲು (ಗೂಲ್ಡೊಥಾ. ೫೪ ಟಿಪ್ಪಣಿ); ಜನಪದ ಹಾಡಿಗೆ ಪಲ್ಲವಿ ಅಥವಾ ಸೊಲ್ಲು ಅನಿವಾರ್ಯ (ಕಜಜಾ. ೧೭ ಪ್ರಸ್ತಾವನೆ).

**ಸೊಲ್ಲುಸೊಲ್ಲು** (ದ್ವಿರುಕ್ತಿ) : ಸೊಲ್ಲು ಸೊಲ್ಲಿಗೆ ಮತ್ಸರಿಸಿ . . . ಬೆಚೆತು ಬೀಗುವ ಖುಲ್ಲಗಹುದೇ ಭಕ್ತಿಯೆಂಬುದು (ಪ್ರಭುಲೀ. ೧೭-೩೮); ತಂತಮ್ಮ ಸೊಲ್ಲುಸೊಲ್ಲುಗಳೊಳಿನಿದೊಸರೆ . . . ಅಬಲೆಯರ್ ಕಣ್ಣೆಸೆದರು (ಚೆಬಪು. ೧೧-೩೯).

**ಸೊಲ್ಲುಕರೆ** = ಕೂಗು ಹಾಕು; ಬೊಬ್ಬೆ ಹಾಕು: ಬೈರ ಹೊರಅಂಗಳದಿಂದ 'ಅಯ್ಯಾ, ಅಯ್ಯಾ' ! ಎಂದು ಎರಡು ಮೂರು ಸೊಲ್ಲು ಕರೆದನು (ಕಾನೂರು. ೪೫೮).

[< ಸೊಲ್$_1$./ ತಮಿ. ಮಲ. ಕೊತ. ಚೊಲ್; ಕೊಡ. ಚೊಲ್]

**ಸೊಲಗೆ** 'ಸೊಲ್ಲಗೆ$_1$' ನೋ.

**ಸೊಲಪು** (ನಾ). ೧. ಒಯ್ಯಾರ; ಬೆಡಗು: ಒರೆದುರುಬಿನ ಒಲಪು ಸೊಲಪಿಗೆ ಯಾರು ಮನವಿಡರು (ಶರಲೀ. ೩೭೩-೫); ಯಾವ ಸೊಲಪಿನ ಸೊಂಪು . . . ಆವ ದೇಸಿಯ ಮಾರ್ಗವೆಂದು ಗಿಳಿ ವಿಸ್ತರಿಸಿ ಕೋವಿದೆಯ ಕೊಂಡಾಡಲು (ಲಿಂಗಪು. ೨೫-೩೪). ೨. ಸೋತು ಹೋಗುವಿಕೆ (?): 'ಕಾಲ್ಸೊಲಪು' ಪರಾ. [?]

**ಸೊಲಿಗೆ** 'ಸೊಲ್ಲಗೆ$_1$' ನೋ.

**ಸೊಲ್ಲ** 'ಸೋಲ' ನೋ.

**ಸೊಲ್ಲಗೆ$_1$**, ಸಲಗ$_1$, ಸಲಿಗೆ$_2$, ಸಲುಕೆ, ಸಲೆಗೆ, ಸಲ್ಲಗೆ, ಸೊಲಗೆ, ಸೊಲಿಗೆ, ಸೊಲ್ಲಿಗೆ, ಸೊಲ್ಲೆಗ, ಸೊಳಗ (ನಾ). ೧. ಧಾನ್ಯ, ದ್ರವಪದಾರ್ಥ ಮುಂತಾದುವನ್ನು ಅಳೆಯುವ ಒಂದು ಅಳತೆಯ ಪ್ರಮಾಣ; ಮಾನದ ನಾಲ್ಕನೆಯ ಒಂದು ಭಾಗ: "ನಾಲ್ಕು ಸೊಲ್ಲಗೆಗೆ ಮಾನಂ" (ಮಂಗರಾ. ೧೦೪-೧೧); ಎಚೆಯರ್ ನೆಲ್ಲಕ್ಕಿ ಸೊಲ್ಲಗೆವಿಟ್ಟು [ಬಿ]ದಿರೂರ್ಸ್ವರ್ಗಸ್ತೆಚೆಯ ಮರಿಯಾಗಿ ಕೊಟ್ಟರ್ (ಎಕ. III (R), ನಂಜನ. ೧೭೯-೩; 8ನೆಯ ಶತ). ೨. ಒಂದು ಬಗೆಯ ತೆರಿಗೆ(?): ಗ್ರಾಮವೆಚ ಬಿಟ ಬಿರಾಡ ಸೊಲ್ಲಗೆ ಆಱುದೂ ಯಿಲ್ಲ (ಎಕ. X. ಮುಳಬಾ. ೧೭೨-೧೫; 1496); ಬಂಕದೆಚೆ ಸಿದ್ದಾಯ ಬಿಟ್ಟೆ ಕೊಟ್ಟಣವನುಪ ಸುಂಕ ಮಲವದಿಕೆ ಸೊಲ್ಲಗೆ . . . ದಂಡ ವುಂಡಿಗೆಗಳು (ಸಿಂಗಿರಾ. ೨೨-೨೭). **ಸಲಗೆ$_1$** : ೧. ಕಮ್ಮಂ ನಾಲ್ವತ್ತಕ್ಕಂ ಬೀಜಂ ಸಲಗ ಯೊಂದಱ ಲೆಕ್ಕದಿಂ ವಿಟ್ಟ ಗದ್ದೆ ಸಲಿಗೆಯಪ್ಪತ್ತು (ಎಕ. VI, ಕಡೂರು. ೯೭-೭೨ ; 1141). ೩. ಒಂದು ಸೊಲಗೆಯಷ್ಟು ಬೀಜವರಿಯುಳ್ಳ ಭೂಮಿ: ಕೆಱೆಯ ಕೆಳಗಣ ಕೆಟನುಂ ಮೇಲುಮಕ್ಕಿಯುಂ ಸಲಗೆ ಎರಡು ಕೊಳಗ ಹತು ಅಲ್ಲಿಂ ತೆಂಕ ಮಣಲ ಗದೆ ಸಲಗೆ ಮೂಱು (ಎಕ.VI, ಕಡೂರು. ೨-೧೮ ; ಸು. 1070?); ಮೊದಲೇರಿಯ ತೋಟಮಂ ಯಾಱು ಸಲಗೆ ಗದ್ದೆಯುಂ (ಎಕ. II,೩೩೫-೫೪ ; 1195). ೪. ಅಳತೆ ; ಪ್ರಮಾಣ(?): ಎಲೆ ಬಲದೇವ ನೀನೆ ವಲಮಿಾತನನೀ ತಱದಿಂದಮಿಲ್ಲಿ ತಂದ ಲಸದತೀತ ಕಾಲನಿವಹಂಗಳೊಳಿಂತೆ ಸುಡಲ್ಕೆ ಲೆಕ್ಕದಿಂ ಸಲಗೆಯಿದಾದುದು (ನೇಮಿಪು. ೧೪-೧೦೭). **ಸಲಿಗೆ$_2$**: ೧. ಹೆಱುಹೇ ಕೆಱೆಯ ಕೆಳಗೆ ಸಲಿಗೆ ೯ (ಎಕ. XII, ಗುಬ್ಬಿ. ೧೧-೪೪; 1226). **ಸಲುಕೆ**: ೪. ನಿಲುಕಡೆಯೊಳವಟ್ಟೆಸುವ ಸಲುಕೆಗಳಂತರ್ಗ ಮೊದಲೊಳಂತ್ಯದರಿಕೆಯ ಸಲುಕೆಗಳರ್ಥಮಂ ನಡುವಿರೆ ಸಲುಕೆಯ ವಟಕ್ಕೆ ದೊಡರಾಜನನುಮತದಿಂ (ಭಾಸ್ಕರ. ೩೩-೩). **ಸಲೆಗೆ**: ೪. ಕೃಷ್ಣಶಬಮಂ ಪಿಡಿದೆತ್ತಿಕೊಂಡು . . . ಸಂಸ್ಕರಿಸುವಾಗಳ್ ಈಯಂದದೆ ಮುನ್ನಂ ನೀನೀಯೆಡೆಯೊಳೆ ಸುಟ್ಟೆಯೊಂದು ಸಲೆಗೆ ವರಂ ನಾರಾಯಣರ ನೆಂದುದಂ . . . ಬಲಭದ್ರಂ ಕೇಳ್ದು (ಮಹಾನೇ. ೧೭-೭೭). **ಸಲ್ಲಗೆ**: ೧. ತೋಟಸ್ಥಳಗೂಡಿದ ಗದ್ದೆ ಸಲ್ಲಗೆ ಆಱು (ಎಕ. V, ಹಾಸನ. ೩-೧೧; 1294). **ಸೊಲಗೆ**: ೧. ಯೆಂಣ್ಣೆಯ ಸೊಡರು ಅತ್ತಿ ಸೊಲಗೆ ಎಂಣ್ಣೆ (ಎಕ. VI, ತರೀಕೆ. ೮೧-೨೯; 1278); ಮಲಹರನ ಬೋನಕ್ಕೆ ನಿಚ್ಚಂ ಹಲಗೆಗಳ ಮೇಲಾಯ್ದು ಕೊಡುವವು ಹಳೆಯ ರಾಜನದಕ್ಕಿಯೇ ಮುನ್ನೂರದಱುವತ್ತು ಸೊಲಗೆ (ಬಸಪು. ೩೩-೧೩). ೨. ಮನೆವಣ ಸೊಲಗೆ ಬಿಟಿ ಯಿನ್ನಿಷ್ಟು ಸರ್ವ್ವಮಾನ್ಯವಾಗಿ ಸ್ವರುಚಿಯಿನ್ದ ಕೊಟ್ಟರು (ಎಕ. IX, ಕೊಡಗು. ೫೪-೮; ಸು. 1280). **ಸೊಲಿಗೆ**: ೧. ಲಿಂಗಕ್ಕೆ ಹನ್ನೆರಡು ಸಾವಿರ ಸೊಲಿ[ಪಾಠಾಂ. ಸಲ]ಗೆ ತುಪ್ಪವಂ ನೆರಪಿ ತಂದು (ಸಿದ್ಧರಾ. ೮-೩೯) ; ಒಂದು ಸೊಲಿಗೆ ಮೆಣಸನ್ನು ಅರೆಪಡಿ ನೀರೊಳಗೆ ಹಾಕಿ ಸೊಲಿಗೆಯಾಗುವ ಹಾಗೆ ಕಾಸಿ (ಸಕವೈ. ೩೭೦); ಒಂದು ಸೊಲಿಗೆ ಅಕ್ಕಿಯಾದರು ಇಲ್ಲ (ಶಿವದ. ೨೦೭-೬). ೨. ಅಱುವಣ ಮನೆವಣ ಬಿಟ್ಟ ಸೊಲಿಗೆ ಖಾಣ . . . . ತೆತ್ತು ಪರಿಹರಿಸಿ ಕೊಟ್ಟು . . . ಯಿಾ ಧರ್ಮವ ನಡೆಸಿ ಕೊಡುವರು (ಎಕ. III, ತಿರುಮ. ೨೭-೪೭; 1290). **ಸೊಲ್ಲಿಗೆ** : ೧. ಅಧಿಕಾರಿ ಸಜ್ಜನರು ರಾಯರುಂ ಕಂಡುಗ ಕೊಳಗ ಬಳ್ಳ ಸೊಲ್ಲಿಗೆಯನಿತು ಮೊದಲಾಗಿ ಸ್ನಪನಕೆಂದು ಕೊಂಡು ಬಂದು (ಸಿದ್ಧರಾ. ೮-೭೧); ಎಣ್ಣೆಯನು ಗಾಣಕ್ಕೆ ನಿಚ್ಚಲು ಅರ್ಧ ಸೊಲ್ಲಿಗೆಯನು ಆದಿತಕ್ಕೆ ಎಚೆವರು (ಸೌಇಇ. IX-i , ೩೩೬-೨೭; 1219). ೨. ಕಾಣಿಕೆಯು ಸೊಲ್ಲಿಗೆ ಪಟ್ಟವಾಸೆಯ ಸುಂಕ ಸೋದಿಗೆ ಖಾಣ ಕಡ್ಡಾಯ ಕೊಟ್ಟ ಗುತ್ತಗೆ ವಾರವುಂಟೆಂದು (ಬಸಪು. ೨೭-೫೨). **ಸೊಲ್ಲೆಗ**: ೧. ಸೊಲ್ಲೆಗಕ್ಕೆ ಮಾರಣ್ಣನುಂ ಜಂಗಮಕೆ ವೃಷ್ಟಾನ್ನವಿಕ್ಕಲು (ಚೆಬಪು . ೫೭-೨೯). **ಸೊಳಗ** : ೧. ಎಂಣ್ಣೆಯ ಕೊಡಕ್ಕಂ ಸೊಳಗವೆರಡು (ಎಕ. VI, ಕಡೂರು. ೯೭-೭೭; 1141). 'ಸಟ್ಟುಗ$_2$', 'ಸೊಂಟಿಗೆ', 'ಸೊಳಸಿಗೆ' ಪರಾ.

[ದೇ. II ತಮಿ. ಚಲಕ್ಕೆ; ತೆಲು. ಸಲಕ; ಕೊತ. ಸಲ್ಗ್]

**ಸೊಲ್ಲಗೆ$_2$** (ನಾ). ಪಗಡೆಯ ದಾಳ: ಕರದ ದಂತದ ಸೊಲ್ಲಗೆಯಲಿ ಯಿಡಲು ಭೂತಳಾಧಿಪನ ನೊಸಲೊಡೆದು ಕೆನ್ನೀರ್ಸೂಸೆ (ಲಕ್ಷ್ಮಭಾ. ೪-೩೭). 'ಸೊಲ್ಲೆಹ' ಪರಾ.

[?]

**ಸೊಲ್ಲಡಗು** (ಕ್ರಿ). ಮಾತು ನಿಂತುಹೋಗು: ನಿಮ್ಮ ಸೊಲ್ಲಡಗದೇ ಕೆಡದುಕೊಳ್ಳಿ (ಚೆಬಪು. ೬-೨೦); ಫುಲ್ಲಮಣಿಯು ಕೂಗಿ ಕೂಗಿ ಗಂಟ್ಲು ಕುಗ್ಗಿ ಸೊಲ್ಲಡಗಿ ಅಳುವುದಕ್ಕೆ ತೊಡಗಿದಳು (ದೇವೀಚಾ. ೪೦). [ಸೊಲ್$_2$ + ಅಡಗು$_1$ (< ಅಡಂಗು$_1$)]

**ಸೊಲ್ಲಣ** (ನಾ). ಬೊಬ್ಬೆ; ಕೂಗಾಟ: ತಡಬಡಿಪ ಕಿನ್ನರರ ತಲ್ಲಣದ ಸೊಲ್ಲಣದ ಪಡೆಗಳ ಪಲಾಯನದ ಪರವಶದ (ಲಕ್ಷ್ಮಭಾ. ೭-೧೯). [ಸೊಲ್$_2$ + - ಅಣ]

**ಸೊಲ್ಲಣಗು** (ಕ್ರಿ). = ಸೊಲ್ಲಡಗು: ಬೆರಗಾಗಿಪುವವಲ್ಲ ಪಿರಿತನದ ನೋಟಗಳು ಬೆರಗೆ, ಮೈಮರವೆ, ಸೊಲ್ಲಣಗುವುದೆ ಸೊಗಸು (ಮಂಕುಕ. ೪೯೭).

[ಸೊಲ್$_2$ + ಅಣಗು]

**ಸೊಲ್ಲಣಗೆ** (ನಾ). ಮಾತು; ನುಡಿ: ರಾಜೇಂದ್ರಸುತೆ ಚಲ್ಲಗಣ್ಣಬಲೆ ದಣ್ಣನೆ ದಣಿದು ಸೊಲ್ಲಣಗೆಯುಳಿದು ಬೇಸರದಿ ನಿಲಲು (ಚತುಪು. ೨-೬-೬೩). [ಸೊಲ್$_2$ + - ಅಣಗೆ$_1$]

**ಸೊಲ್ಲಮೆ** (ನಾ). ಮಾತನಾಡದಿರುವಿಕೆ ; ಮೌನ : ನಯವಿರದುವಂ ಸೊಲ್ಲೊಡಂ ಸೊಲ್ಲೆ ಸಂಪನ್ನರ್ ಫಲವಿರದುವಂ ಸೊಲ್ಲಮೆಯೆ ಲೇಸು (ಕುಱಳ್. ೧-೨೦-೭).

[ಸೊಲ್$_1$ + - ಅಮೆ$_2$]

**ಸೊಲ್ಲಱಿ** (ಕ್ರಿ). ಮಾತನ್ನು ಅರ್ಥಮಾಡಿಕೊಳ್ಳು ; ಪ್ರಾರ್ಥನೆಯನ್ನು ಆಲಿಸು: ಸೊಲ್ಲಱಿವ ಶಿವನ ಬೇಡಿದಡೆ ಬಯಸಿದುದೆಲ್ಲವನು ಕೊಡುವ (ಸರ್ವಜ್ಞ. ೨೪೧).

[ಸೊಲ್$_2$ + ಅಱಿ]

**ಸೊಲ್ಲಿಗೆ** 'ಸೊಲ್ಲಗೆ$_1$' ನೋ.

**ಸೊಲ್ಲಿಡು** (ಕ್ರಿ). ಹೇಳು; ನುಡಿ: ಎಲ್ಲಿಯ ಶಾಸನಮಿನಿತುಮನಿಲ್ಲದುದಂ ಬರೆದರೆಂದು ಧರ್ಮ್ಮದ ಕೇಡಂ ಸೊಲ್ಲಿಡುವ ಪಾಪಿ ಪುಳುಗಳವ XX ಗೆ ಬಾಯೊಳಗೆ ಸತ್ತು ನರಕಕ್ಕಿಳುಗುಂ (ಸೌಇಇ. IX - i, ೨೪೯-೧೦೨;1147); ಸೊಲ್ಲಿಡಬಾರದ ಪವಣಿಸೆ

ನಿಲ್ಲದ . . . ಸಲ್ಲಲಿತಶಿವೈಕ್ಯಸೌಖ್ಯಮಂ ತಾಳ್ದಿದನೋ (ವೃಷವಿ. ೨೩-೨೮).

[ಸೊಲ್$_2$ + ಇಡು$_1$]

**ಸೊಲ್ಲಿಸು** (ಕ್ರಿ). ೧. ಹೇಳು; ನುಡಿ; ಮಾತನಾಡು: ವಿಷಮಶರನದಟಲದ ಗೆಲ್ಲಂ ನಿನ್ನೊಳಲ್ಲದೆ ಸಲ್ಲದೆಂದು ಸೊಲ್ಲಿಸಲ್ ಪೋಪಂತೆ . . . ಜಿನಾಲಯಕ್ಕೆ ಪೋಗಿ (ಲೀಲಾವ. ೩-೭೮ ವ); ಜೊಲ್ಲು ಸುರಿವ ಮುದ್ದುಮೊಗದಲ್ಲಿ ನಗೆಯಾಂತು ಸೊಲ್ಲಿಸುವನು ತೊದಳ್ನುಡಿಯ (ಮೋಹತ. ೧೭-೬೯). ೨. ಹೇಳುವಂತೆ ಮಾಡು; ಹೇಳಿಸು: (೬). ೩. ವಾಚನಮಾಡು; ಪಠನಮಾಡು: ಅತ್ಯಂತ ಜಾಣಗಾತಿಯರು ಸೊಲ್ಲಿಸುವ ಸಾಹಿತ್ಯಪಾಠಕಪ್ರಮದೆಯರು ನೃತ್ಯದವರು ತಾಳಮೇಳಸಹಿತ ಬಂತು ಮತ್ತೇಭಗಮನೆ ಯಿರ್ದೆಡೆಗೆ (ಮೋಹತ. ೨೭-೧೦). [ಸೊಲ್$_2$ + -ಇಸು$_1$]

**ಸೊಲ್ಲು$_1$** 'ಸೊಲ್$_1$' ನೋ.

**ಸೊಲ್ಲು$_2$** 'ಸೊಲ್$_2$' ನೋ.

**ಸೊಲ್ಲುಕಟ್ಟು** (ನಾ). ಸಂಗೀತ, ನೃತ್ಯಗಳಲ್ಲಿ ಗೀತೆಗಳೊಂದಿಗೆ ಹೇಳುವ (ಥಕಥೈ ಮುಂತಾದ) ಶಬ್ದಸಮೂಹ, — ನುಡಿಗಟ್ಟು: ಸುಗಂಧರಾಜೇಂದ್ರ ನೊಬ್ಬನ ದೊರೆಯೆಂದು ಬಿರುದುವುಳ್ಳ ಪದಪಲ್ಲವಿಗಳ ಸೊಲ್ಲುಕಟ್ಟಿನಿಂ ಕೂಡಿ (ಸೌಗಂಧಿ. ೬೭೭-೧೭).

[ಸೊಲ್ಲು$_2$ (< ಸೊಲ್$_2$) + ಕಟ್ಟು$_2$./ ತಮಿ. ಚೊಱ್‌ಕಟ್ಟು; ತೆಲು. ಸೋಲ್ಕಟ್ಟು]

**ಸೊಲ್ಲುಗಾತಿ** (ನಾ). ಬಹಳ ಮಾತನಾಡುವವಳು; ವಾಚಾಳಿ: ಬಱಿ ಸೊಲ್ಲುಗಾತಿ ಯೆಂದೆನ್ನ ಮಾತಿಗೆ ಚಿತ್ತ ಕರಗದೆ ಬಾರದಿರ್ದಪೆಯೋ (ಮೋಹತ. ೨೭-೪೯).

[ಸೊಲ್ಲು$_2$ (< ಸೊಲ್$_2$) + -ಕಾತಿ$_1$]

**ಸೊಲ್ಲುಗೊಡು** (ಕ್ರಿ). ಹೇಳು; ತಿಳಿಯಪಡಿಸು: ಬಲ್ಲವಿಕೆಯಿಂದಿದನು ಅಱಿಯೆ ಸೊಲ್ಲುಗೊಡಲಿಕಶಕ್ಯಂ (ಜ್ಞಾನಸಿಂ. ೧೫-೧೭); ನೀನರಿತೆಯಾದಡೆ ಕಾಲಹರ ನೀನಾಗ್ಯೆ ಕೇಳ್ಕೆ ಸೊಲ್ಲುಗೊಡಲಿಕೆಯಿಲ್ಲ (ತಾರಾ. ೬-೭). [ಸೊಲ್ಲು$_2$ (< ಸೊಲ್$_2$) + ಕೊಡು$_1$]

**ಸೊಲ್ಲುಜಾಣ** (ನಾ). ಮಾತನ್ನು ತಿಳಿದವನು; ವಾಗ್ಮಿ: ಸೊಲ್ಲುಜಾಣರು ಭಾಗ್ಯವಂತರು ವಿವೇಕಿಗಳು (ಪ್ರಾಭಾರಾ. ೧-೩೮). [ಸೊಲ್ಲು$_2$ (< ಸೊಲ್$_2$) + ಜಾಣ]

**ಸೊಲ್ಲುದೋಱು** (ಕ್ರಿ). = ಸೊಲ್ಲುಗೊಡು: ಇಂಬಿನ ಕೃತಿಗಳ ನೋಡಲೀ ಕೃತಿ . . . ಪೊಂಬೆಟ್ಟದೊತ್ತಿನ ಪರುಷದ ಕಣಿ.ತಾನೆಂಬಂತೆ ಸೊಲ್ಲುದೋಱುವೆನು (ನಾಗಕು. ೧-೭೦).

[ಸೊಲ್ಲು$_2$ (< ಸೊಲ್$_2$) + ತೋಱು$_1$]

**ಸೊಲ್ಲೆಗ** 'ಸೊಲ್ಲಗೆ$_1$' ನೋ.

**ಸೊಲ್ಲೆತ್ತು** (ಕ್ರಿ). ಸ್ವರವೆತ್ತು; ದನಿಯೇರಿಸು: ನನ್ನ ಕಣ್ಣಿಗೆ ಬೀಳು ಬಾ! ನೀನು ಮತ್ತೆ ಸೊಲ್ಲೆತ್ತದಂತೆ ಮಾಡುತ್ತೇನೆ! (ವಚಭಾ. ೧೭೯); ನಾಡೊಳಗೆ ಸೊಲ್ಲೆತ್ತಿ ಜನವು ಹಾಡುವರು (ಕನ್ನಜಾ. ೨೩೫). [ಸೊಲ್$_2$ + ಎತ್ತು$_1$]

**ಸೊಲ್ಲೆಹ** (ನಾ). ಒಂದು ಬಗೆಯ ಕ್ರೀಡೆ; ಜೂಜಾಟ: ಪಗಡೆ ರಾಯ ಬೊಗರಿ ಸೊಲ್ಲೆಹ ಬಾರುಗುತ್ತದೊಪ್ಪಿಯ ಸರಿಬೆಸದಿ ವಿತ್ತನಾಶವ ಮಾಡುವ ಜೂದುಗಾಱರ ಮೊತ್ತವಿರ್ದುದು (ಮೋಹತ. ೨೦-೨೫). 'ಸೊಲ್ಲಗೆ$_2$' ಪರಾ. [?]

**ಸೊಲ್ವಿಡಿ** (ಕ್ರಿ). ಮಾತನ್ನು ಅನುಸರಿಸು; ಮಾತಿಗೆ ಗಮನಕೊಡು: ಸೊಲ್ವಿಡಿದು ಕೇಳ್ ಮುನಿಪ (ಶ್ರೀರಾಮ. ೪-೪೦). [ಸೊಲ್$_2$ + ಪಿಡಿ$_1$]

**ಸೊಲ್ವೆಣ್** (ನಾ). ಮಾತಿನ ಅಧಿದೇವತೆ; ಸರಸ್ವತಿ: "ನುಡಿವೆಣ್, ಬಾಸೆವೆಣ್, ಸೊಲ್ವೆಣ್ [ಪಾಠಾಂ. ಸೊಲ್ಲುವೆಣ್ಣು] . . . ಸರಸತಿ – ಈ ೭ ಸರಸ್ವತಿಗೆ ಪೆಸರ್" (ಕಶಸಾ. ೪೮-೧೭).

ಸೊಲ್ವೆಣ್ಣನಾಣ್ಮ = ಸರಸ್ವತಿಯ ಒಡೆಯ; ಬ್ರಹ್ಮ: ಸೊಲ್ವೆಣ್ಣನಾಣ್ಮ ನಮರ್ದುಣಿಯೆಱೆಯನುಂ ಕರ್ವುವಿಲ್ಲೊತ್ತನ್ನೆಯ ಮೊದಲಾದ ಸಗ್ಗಿಗರ್ಮೆದೆ ಸಾಲ್ವಿಡಿದು ನಿಂದೋಲಗಂ(ಭಾವಚಂ. ೧-೩೦). ಸೊಲ್ವೆಣ್ಣೆರೆಯ = ಸೊಲ್ವೆಣ್ಣನಾಣ್ಮ: ಬಾಂಬೊಳೆದಲೆಯ ಕಾರೊಡಲ ಕೆಳೆಯ ಸೊಲ್ವೆಣ್ಣೆರೆಯ . . . ಪೊರೆಗೆಮ್ಮನು (ನವಮೋ. ೩೨-೧). [ಸೊಲ್$_2$ + ಪೆಣ್]

**ಸೊವಡು, ಸವಡು$_1$, ಸೊಗಡು** (ನಾ). ೧. ಕಂಪು; ವಾಸನೆ: ನಿಂದು ನಿಂದು ನೆಲದ ಸೊವಡನಾರಯ್ದು ಮಸಗಿ ದೆಸೆದೆಸೆಗೆ ವಿಸಟಂಬರಿದು . . . ಗಿಟ್ಟನೆಯ್ದುವ ಸೊರ್ಕಾನೆಗಳ ಕಾಲ ಸಂಕಲೆಯ ಗೋಸದೊಳಂ (ಕಬ್ಬಿಗಕಾ. ೪೪); ಇವಱ ದನಿಯೊಳೆ ಕಿವಿಗಳನಿವಱ ಸೊವಡೊಳೆ ಮೂಗಂ . . . ಇವಱ ಸವಿಯೊಳೆ ರಸನೆಯಂ ಸವಿಗಾಣಿಸಿ (ಚಿಕವಂ. ೯-೬). ೨. ಕಟುವಾದ ವಾಸನೆ; ತೀಕ್ಷ್ಣಗಂಧ: ಅದಱ ಪೊಱವೊಟಲ ಸಪ್ತಚ್ಛದಗಂಧವ ಸೊವಡು ಮುಟ್ಟೆ ಮದಕರಿಕುಳಮೋವದೆ . . . ಮರವಾಯ್ದುರ್ಕಿಂ (ಶಾಂತಿಪು. ೯-೧೪೦); ವನಗಜವೊಕ್ಕವೋಲ್ಮದದ ಕೋಟ್ಸೆಸಱೊಳ್ ಕೆಸಱಾಟವಾಡಿ ಸೊರ್ಕಿನ ಸೊವಡಿಂಗೆ ಮುತ್ತಿ ಮಱಿದುಂಬಿಗಳಿಂಬಿಸೆ (ಅರ್ಧನೇ. ೩-೬೫). ೩. ಸುವಾಸನೆ; ಸುಗಂಧ: "ಸೌಸವಂ, ನಱು, ಕಮ್ಮಿತು, ಸೊವಡು, ಕಂಪು, ನಾತಂ, ಮಗಮಗಿಸು – ಈ ೭ ಪರಿಮಳಕ್ಕೆ ಪೆಸರ್" (ಕಶಸಾ. ೫೪-೧೬೭); ಕತ್ತುರಿಯ ತಗುಳ್ದು ಪೊಯ್ಯ ಸೊವಡಾ ಸೊವಡೊಳ್ ಕಡುಸೊರ್ಕು ಸೊರ್ಕಿಗಾವರಿಸುವ ತುಂಬಿ (ಆದಿಪು. ೨-೫); ತುಂಬಿ ಮಲ್ಲಿಗೆಗೆ ಕೂರ್ಪವೊಲೊಪ್ಪೆ ವಿಚಿತ್ರಬಂಧದಿಂದೆಸೆದಿರೆ ಕಟ್ಟಿ ತಂದು ಸೊವಡಿಲ್ಲದ ಮಾಲೆಗೆ ಕೂಡಲಾರ್ಕುಮೇ (ಅರ್ಧನೇ. ೩-೧೦೪). ೪. ದುರ್ವಾಸನೆ; ದುರ್ಗಂಧ: "ಸೊವಡೆನಲ್ಕೆ ಸೊಗಡೆನಲ್ ದುರ್ವಾಸನೆಯು" (ಕಶರ. ೧೧೧); ಆ ನಾಗಪತಿ ತುಚ್ಛಸಾಮಜ ಪೂಗದೆ ತಾಂ ಸೊವಡು ನಾರ್ದು ಚರಿಸುತ್ತಿರೆ (ಹಾಲಾಸ್ಯ. ೧-೩-೧೪). ೫. ಬೆವರು ಮುಂತಾದುವುಗಳಿಂದ ಬೆರೆತು ದೇಹದಿಂದ ಹೊಮ್ಮುವ ವಾಸನೆ: ಪೊಸನಸೆಯ ಸೊವಡನಾಘ್ರಾಣಿಸಿ ಮಣಿಕದ ಮಿಡುಕು ಗಟ್ಟಿಯೊಳ್ ಮೊಗವೆತ್ತುತ್ತೆಸೆದುದು ವೃಷಮ (ಲೀಲಾವ. ೫-೯೩); ತರುಣಿಯ ಮಾಸಿದಂಗಲತೆ . . . ಅಚ್ಚರಿಯೆನಿಪ್ಪಂಗದಾ ಸೊವಡು ಜಾಡ್ಯದ ಮೈ . . . ಪೇಟವೆ ಮಾಣಿಕವಾಂತ ಭಾವಮಂ (ದಶಕು. ೧-೬೦). ೬. (ಆಲಂ) ಸುಳಿವು; ಕುರುಹು; ಜಾಡು: ಸಾಮಜದ ಸೊವಡು ಮುಟ್ಟದ ಸಾಮಜಶತ್ರುವಿನ ತೆಱದೆ ಗದೆಯಂ ಭರದಿಂ ಭೀಮನಳವಡಿಸಿ ಪಿಡಿದು ಮಹಾಮಾಸಕದಿನೆಯ್ದವರ್ಪುದುಂ (ಮಹಾನೇ. ೧೩-೨೧); ಸೊವಡನಾಲಿಸಿ ಬೆರ್ಚಿ ಬಿಗುರ್ತು ಬೇಗದಿಂ ಸರಳಿಸಿ ಮತ್ತೆ ನಿಂದು ಪೆಱಗಂ ನಡೆ ನೋಟ್ಟುತಿಭೀತಿ ತಮ್ಮೊಳಚ್ಚರಿವಡೆದಿರ್ಪ ಪುಲ್ಲೆಗಳನೀಕ್ಷಿಸಿದಂ ಭುವನಾಧಿನಾಯಕಂ (ದಶಕು. ೨-೧೧೧). ೭. ನೆನಪು; ಸ್ಮರಣೆ: ಹಳುವೊಳು ಹೊಳಲಿನ ಸೊವಡನು ತರುವೀ ಹರಿಣದೊಳಾಯ್ತೆ ಮನ (ಹಂಸದ. ೭೩). ೮. ಕಲ್ಮಷ; ಕಳಂಕ: ವಿಗಡರಜದೊಳಿದ್ದು ಸೊವಡು ತಗಲದ ಮನ ನಿನ್ನದೊ (ಅಮತಂ. ೨೮-೫). ೯. ಅನಾದರ; ಉದಾಸೀನ: ಒರ್ವಂಗಂ ಮನಮಿಕ್ಕದಿರ್ ಸೊವಡನೆಂದುಂ ಮಾಡದಿರ್ಕೂಟದೊಳ್ (ರಾಜಶೇ. ೧೧-೧೧೯). ೧೦. ಗೀಳು; ವ್ಯಸನ: ಮೃಗಭಕ್ಷಣಂಗೆಯ್ದು ಸೊವಡಿನಿಂದಂ ಪಿರಿದು ನಾಲಗೆತೀಂಟೆ ಮಸಗೆ ಬಸವಣ್ಣನಂ ಹರಿಸದಿಂ ನುಂಗಿದೆಯೊ (ಆರಾಚ. ೪-೧೦-೩೯).

**ಸವಡು$_1$:** ೩. ವಿಕಸಿತಕೇತಕೀಕುಸುಮದೊಳ್ಸವಡಿಂಗೆಳೆದುಂಬಿ ಪಾರೆ (ಶ್ರೀಮಹಾ. ೧-೯೩).

**ಸೊಗಡು:** ೧. ಅಡಿಗಡಿಗೆ ಮಾನಿಸರ ಸೊಗಡವಗಡಿಸುತಿದೆ (ಕುವ್ಯಾಅ. ೧-೨೭). ೨. ಮಡುವಿಡುವ ಮದಸಮುದ್ರದ ಸೊಗಡ ಸೊನೆಗೆ ತಲೆಗೊಡಹಿ ಕೊಕ್ಕರಿಸಿ (ಹಚಕಾ. ೫-೩೭); ಸೊರ್ಕಾನೆಗಳ ಸೊಗಡನುರ್ವಕತ್ತುರಿಯ ಮೃಗದಿಕ್ಕೆಗಳಂ . . . ಅಱಸುವ ಕಿರಾತರ್ (ಭೈಮಿಭಾ. ೨೮-೪೩). ೪. "ಸೊವಡೆನಲ್ಕೆ ಸೊಗಡೆನಲ್ ದುರ್ವಾಸನೆಯು" (ಕಶರ. ೧೧೧); ಹೀನಸ್ವರದಿಂದಱುಗುಂ . . . ಸೊಗಡು ನಾಱುಗುಂ ಪೊಟ್ಟೆಯುಬ್ಬರಿಸುಗುಂ (ಬಾಲಚಿ. ೧೨೭-೪). ೫. ಅವನಿಜೇಶನ ಸೊಗಡನಾಸ್ವಾದಿಸುವುದಂಜುವುದನಿಲದುಱುಬೆಯಲಿ (ತೊರರಾ. ೩-೮-೬೫); ಒಗಡಿಪ ಗಂಧಮುಂ ಸೊಗಡು ನಾಱೆ ರಜಸ್ವಲೆಯಪ್ಪ ಭಾವಮಂ ಬಗೆಗೊಳುತಿರ್ಪ ಭಾವಕಿಯಂ ಬಣ್ಣಿಸಿದಂ (ಕಾವ್ಯಸಾ. ೩೩೯). ೬. ಕರಿಯ ಸೊಗಡಿನ ಮೃಗಪತಿಗೆ . . . ನೊಂದ ಹಾವಿಂಗರಸ ಮೈಚಾಚಿದೆಯಲಾ ನೀನು (ಕುವ್ಯಾಸ. ೧೭-೪); ಹುಲಿಯಿದ್ದಾಗ ಗಾಳಿ ಅದರ ಮೇಲಿಂದ ಹಸುವಿನ ಕಡೆಗೆ ಬೀಸುತ್ತದೆ. ಇದರಿಂದ ಹಸುವಿಗೆ ಹುಲಿಯ ಸೊಗಡು ಗೊತ್ತಾಗಿ ಅದು ಓಡಿಹೋಗಬಹುದು (ಶಬ್ದವಿ. ೮). ೮. ರಾಜಕುಲದ ನೃಪರ ಸಾಧುಚಾರಿತ್ರಮೆನ್ನಿಂದೆ ಸೊಗಡಾಗದಂತಾದರಿಸಿ ನೀವೆ ಕಾರುಣ್ಯದಿಂ ಮಾಳ್ಪುದು (ಭೈಮಿಭಾ. ೨-೨೪). ೯. ಈ ಇಷ್ಟಸಿದ್ಧಿಯಂ ಭರವಸದಿ ಮಾಡಿಕೊಡುವೀ ಫಲಕ್ಕೆಲೆ ಸೊಗಡು ಮಾಳ್ಪುದೆ (ಸಮ್ಯಕಾ. ೧೦-೫೦). ೧೦. ಬಗೆಯನವ ಶಕುನವ ಮೃಗವ್ಯದ ಸೊಗಡಿ[ಪಾಠಾಂ. ಸಿ]ನಲಿ ಸಿಲುಕಿದ ಮನೋವೃತ್ತಿಗಳೊಳುಂಟೆ ವಿವೇಕಧರ್ಮವಿಚಾರವಿಸ್ತಾರ (ಕುವ್ಯಾಅ. ೧೩-೨೨). ೧೧. ತಾಜಾ ಅವರೆಕಾಯಿಯ ಸೊನೆಯ ಕಂಪು: ಅವರೆಯ ಕಾಯ ಸೊಗಡು ಎನ್ನುವಲ್ಲಿ ಇದರ ಮೂಲ ಅರ್ಥ

ಉಳಿದಿದೆ (ನಮ್ಮನು. ೧೩೭); ಸೊನೆ ಅವರೇಕಾಯಿಯ ಸೊಗಡು ಅಲ್ಲಿಯ ಗಾಳಿಯಲ್ಲೆಲ್ಲಾ ಹರಡಿತ್ತು (ಇನನೋ. ೧೩). ೧೨. ಬನಿ; ಸಾರ; ಸತ್ತ್ವ: ಮೂಲದ ಸೊಗಸು ಸೊಗಡುಗಳು ಆವಿಯಾಗಿ ತೇಲಿಹೋಗದಂತೆ . . . ಈ ಕಾರ್ಯವನ್ನು ಸಾಂಗಗೊಳಿಸಿ ಸಫಲರಾಗಿದ್ದಾರೆ (ಸಾಏಪ್ರ. XIII, ಪ್ರಸ್ತಾವನೆ); ಆಡುನುಡಿಯ ಸೊಗಡನ್ನು ಹೊತ್ತ ಈ ಸಾಹಿತ್ಯ ಎಷ್ಟು ಪ್ರಾಚೀನ ? (ದ್ರಾವಿ. ೭೭). ೧೩. ಸೋಂಕು; ಸಂಪರ್ಕ: ಮೋಹಕೆ ತೆಱಪಿಲ್ಲ ಮದದ ಸೊಗಡು ಪೊದ್ದದು ಮತ್ಸರಕ್ಕೆಂಬಿಲ್ಲ (ಚಿಕಾ. ೯-೫೬); ಕರ್ಮಂಗಳ ಸೊಗಡಳಿದು ನಿತ್ಯಸುಖ ಸಂಭವಿಪುದದರಿಂದ ಜಗದೀಶನಂ ಬಿಡದೆ ನೆನೆ ಮನವ (ವಂಕಾರಾ. ೨-೧೯-೪೨). ೧೪. ಗಾಢತೆ; ತೀವ್ರತೆ; ಆಧಿಕ್ಯ: ದುರಿತದ ಸೊಗಡಿಗಂಜಿ ದರೋ ಪೃಥಾಸುತರ್ (ಕುವ್ಯಾಸ. ೧೫-೪೭); ಅಷ್ಟಮದಗಳ ಸೊಗಡ ಸೊಕ್ಕಿನ ದಷ್ಟ ವಿಲ್ಲದ ಮೂಱವಸ್ಥೆಯ . . . ಖಂಡಿಸಿದ (ಪ್ರಭುಲೀ. ೨೩-೫೨); ಸಿಟ್ಟು ಸಿಡುಕಿನ ಸೊಗಡು ತಾಕಿ ತಾಕಿ ಬಹಳಾಯ್ತು ನನಗೆ (ಕನಕ. ೧೦೨). ೧೫. ಪ್ರಖರತೆ; ತೀಕ್ಷ್ಣತೆ: ಬಾಯಂ ತೆಗೆಯೆ ಭುಗಿಲಿಡುವ ರೌದ್ರತೆಗೆ ಬಳಸಿ ಕವಿದು ಮುಂದುಗೆಡಸುವ ಸೊಗಡ ಸೋಂಕಿಂಗೆ . . . ಹೆದಱಿ (ಸಿದ್ಧರಾ. ೫-೧೫); ಬಿಗಿದ ತಿಮಿರದ ಕೆಚ್ಚು ಸೂರ್ಯನ ಸೊಗಡು ಹೊಯ್ದರೆ ಮುರಿಯದೇ (ಕುವ್ಯಾಕ. ೧-೨೨). ೧೬. ಶೌರ್ಯ; ಬಲ: ಮದನಹರ ಶ್ರೀಕಾಂತ ಬ್ರಹ್ಮರು ಹುದುಗಿ ಕೆಡದವರೆಮ್ಮ ಸೊಗಡಿಗೆ (ಅಂಬಿಕಾ. ೧೮-೨೦). ೧೭. ಬಿಂಕ; ಬಿಗುಮಾನ: ಬೇಸಱಿದೆ ಬೆಂಬಡದೆ ಕಂಗೆಟ್ಟೋಸರಿಸದೊಲು ಸೊಗಡು ಮಾಡದೆ (ಸದ್ಗುರು. ೩-೧); ಜನಪನಾಗುತ ನೀನು ಶೌರ್ಯ ಮಾತಾಡದೆನ್ನೊಳಗೆ ಸೊಗಡು ಏನು (ಹಮುಚ. ೧೬೯). [ದೇ. ‖ ತಮಿ. ಚುವಟು; ಮಲ. ಚುವಡು]

**ಸೊವದುವಸೆ** (ನಾ). ವಾಸನೆಯುಳ್ಳ ಕೊಬ್ಬು ,– ನೆಣ: ಕಿಮುಟ್ಟಿ ಸೊವದುವಸೆಯಂ ಪಿಂಡಿ ಜವನೆರ್ಮೆವೋರಿಗೆಱೆತಂಗುಡುವವು (ರಾಮಾಶ್ವ. ೮೪-೧೫). [ಸೊವದು + ಬಸೆ]

**ಸೊಸಣೆ** (ನಾ). ಒಂದು ಕ್ಷುದ್ರದೇವತೆಯ ಹೆಸರು: ಮಾರಿ ಮಸಣಿ ಸೊಸಣೆ ಮೊದಲಾದ ದೈತ್ಯರುಂ ಪರಮನೀಗುಮೆಂಬಾಸೆಯೊಳ್ ಓರ್ವರಂ ಕಂಡೊರ್ವರೆಱಗುವುದುಂ . . . ದೇವತಾಮೂಢಂ (ಪದ್ಮಸಾ. II, ೮೨೦ ವ). [?]

**ಸೊಸನಕಬ್ಬೆ** (ನಾ). ಒಂದು ಕ್ಷುದ್ರದೇವತೆಯ ಹೆಸರು: ಮಾರಿಕಬ್ಬೆ ಮಸಣಕಬ್ಬೆ ಸೊಸನಕಬ್ಬೆ ಮೊದಲಾದ ವ್ಯಂತರಂಗಳುಂ (ಶ್ರಾವಕಾ. ೧೧೪-೨೨). ‘ಸೊಸಣೆ’ ಪರಾ. [? + ಅಬ್ಬೆ]

**ಸೊಸಿವಿಸೆ** (ನಾ).(?): ಸೋಜಿಗಮಾಗಿದೆ ಸೊಸಿವಿಸೆ ಮೂಜಗದೊಳಮಿಲ್ಲವೆಮ್ಮ ಪಿರಿಯರಮನೆಯೊಳ್ ರಾಜರಸರ ಮುದುಪರಸರ ತೇಜದ ರಾಣಿಯರೊಳಿಲ್ಲವೀಪರಿ ಪದುಳಂ (ಚಿಕವಿ. ೪-೩೧); ‘‘ಹೆರಿಗೆ’’ (ಪ್ರಭಣ್ಣ). [?]

**ಸೊಸೆ** (ನಾ). ಮಗನ ಹೆಂಡತಿ: ‘‘ಸ್ನುಷಾ, ಜನೀ, ಪುತ್ರವಧೂಃ, ವಧೂಃ – ಈ ೪ ಸೊಸೆ’’ (ಹಲಾಯು. ೮೩-೩೫೦); ರತ್ನಕಂಬಳಂಗಳಂ . . . ಮೂವತ್ತೆರಡು ಖಂಡಂಗಳಂ ಮಾಡಿ ಮೂವತ್ತಿರ್ವರ್ ಸೊಸೆವಿರ್ಕಳ್ಗೆ ಪಚ್ಚುಗೊಟ್ಟೊಡೆ (ವಡ್ಡಾರಾ. ೨೫-೨೮); ನಿಮ್ಮ ಸೊಸ ಸಾಕ್ಷಾತ್ ಲಕ್ಷ್ಮಿಯ ಹಾಗಿದಾಳಮ್ಮ (ದೂಟಟ್ಟ. ೫೭); ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ (ಗಾದ).

ಸೊಸೆಮುದ್ದು = ಪ್ರೀತಿಯ ಸೊಸೆ: ಅತ್ತೆಯ ಸೊಸೆಮುದ್ದು ಚೊಚ್ಚಲ ಬಸಿರಿ ನೀ ಎದೆ ತರದೆ (ಸಹೀಗೀ. ೯-೭೯). [< ಸಂ. ಸ್ನುಷಾ]

**ಸೊಸೆತನ** (ನಾ). ಸೊಸೆಯಾಗಿರುವಿಕೆ: ದ್ರೌಪದಿ . . . ಕುಂತಿಯ ಬಳಿಯ ಕುಳಿತುಚ ಕಾಲನೂತ್ತಿದಳಾಗ ಸೊಸೆತನದಿ (ಸಂಭಪ. ೩೨-೧೮).

ಸೊಸೆತನ ಮಾಡು = ಸೊಸೆಯಾಗಿ ಬಾಳು; ಸೊಸೆಯಾಗಿರು: ತಂದೋರ ಮನೇಲಿ ಚೆನ್ನಾಗಿ ಸೊಸೆತನ ಮಾಡುತ್ತಿ (ಚಂಗಾಳ್ಯ. ೨೩೦). [ಸೊಸೆ + - ತನ]

**ಸೊಸ್ತ** (ನಾ). ನೆಮ್ಮದಿ; ಸುಖ: ಸೊಸ್ತದೊಳೂಟವ ಮಾಡಿ ಕೈದೊಳೆವನ್ನಕಸ್ತ ಮಿಸಿದ ಕರ್ಮಸಾಕ್ಷಿ (ಮೋಹತ. ೨೨-೩). [< ಸಂ. ಸ್ವಸ್ಥ]

**ಸೊಸ್ತಿ** (ನಾ). ಒಳ್ಳೆಯದು, ಕ್ಷೇಮ, ಮಂಗಳ ಮುಂತಾದ ಶುಭವನ್ನು ಸೂಚಿಸುವ ಮಾತು: ಸೊಸ್ತಿ ಶ್ರೀ[ಮ]ತು . . . ಶ್ರೀವೀರಕುಲಶೇಖರದೇವರಸರು (ಕಇ. III, ೫-೧; 1346); ಸೊಸ್ತಿಯಲ್ಲಿ ಕೇಳುವನು ಕಲ್ಲುನು ಕಟ್ಟಿದ್ದು ನಿಲ್ಲಿಸಿ (ಎಕ.VII, ಶಿವಮೊ.೧೦೮-೨೨; 1558). [< ಸಂ. ಸ್ವಸ್ತಿ./ ಪ್ರಾ. ಸತ್ಥಿ, ಸೋತ್ಥಿ]

**ಸೊಸ್ಥಿರ** (ನಾ). ಶಾಶ್ವತವಾದುದು; ನಿರಂತರವಾದುದು: ಈ ಸುಖವು ನಮಗೇನು ಸೊಸ್ಥಿರ ಮೋಸವಿದು ನಂಬಲ್ಕಿದಾಗದು (ಯಚೋರ. ೧೨೩). [< ಸಂ. ಸುಸ್ಥಿರ]

**ಸೊಳಕ** ‘ತೊಳಂಕು’ ನೋ.

**ಸೊಳಗ** ‘ಸೊಲ್ಲಗೆ$_1$’ ನೋ.

**ಸೊಳಸ** ‘ಸೊಳಸಿ’ ನೋ.

**ಸೊಳಸಗೆ** ‘ಸೊಳಸಿಗೆ’ ನೋ.

**ಸೊಳಸಿ, ಸೊಡಸಿ, ಸೊಳಸ** (ನಾ). ಒಂದು ಅಳತೆಯ ಪ್ರಮಾಣ : ನಂದಾದೀವಿಗೆಗೆ ಸೊಳಸಿಯ ಪ್ರಮಾಣದ ಸೊಂಟಗೆಯ ಗಾಣದಲೊಂದು ಸೊಂಟಗೆಯೆಣ್ಣೆಯಂ . . . ಕೊಟ್ಟರ್ (ಸೌಇಇ. XI-ii , ೧೪೪-೧೭; 1098); ಕೋಟೀಶ್ವರದೇವರ ನಈವೇದ್ಯಕ್ಕೆ ದಿನ ಒಂದಕ್ಕಂ ಅಕ್ಕಿ ನಾಡ ಹಾನಿ ಮೂಱು ಲೆಕ್ಕದಲು ತುಪ್ಪ ಸೊಳಸಿ (ಸೌಇಇ. IX- ii, ೪೧೭-೨೫; 1377). **ಸೊಡಸಿ** : ತುಪ್ಪ ದಿನ ಒಂದಕ್ಕಂ ಸೊಡಸಿಯ ಲೆಕ್ಕದಲು ವರ್ಷ ಒಂದಕೆ ತುಪ್ಪ ತೆಂಗು ತೊಂಬತ್ತಕ್ಕಂ ಕಾಟಿ ಗದ್ಯಾಣ ಅಇದು (ಸೌಇಇ. IX-ii , ೪೧೭-೨೭; 1377). **ಸೊಳಸ**: ಕೇದಾರದೇವರ ನಂದಾದೀವಿಗೆಗೆ ಗಾಣದೊಳು ಸೊಳಸ ೧ ಯೆಣ್ಣೆ ಯೆಲ್ಲಾ ಕಾಲಕಂ ನಡೆವಂತಾಗಿ ಬಿಟ್ಟರು (ಸೌಇಇ, XX ,೪೪-೨೪; ಸು. 1069); ಎಣ್ಣೆಯ ಕೊಡಕ್ಕೆ ಸೊಳಸವೆರಡು ತುಪ್ಪದ ಕೊಡಕ್ಕೆ ಸೊ[ಳಸ]ವೆರಡು (ಎಇ. XIX, ೨೮-೨೫;1144); ಸಮಸ್ತ ದವಸದಲುಂ ಕೊಟ್ಟಲ್ಲಿ ಹೊಂಗೆ ಸೊಳಸ ೨ ಕೊಂಡಲ್ಲಿ ಸೊಳಸ ೨ (ಸೌಇಇ. IX-i , ೨೯೭-೫೭; 1177). [?]

**ಸೊಳಸಿಂಗೆ** ‘ಸೊಳಸಿಗೆ’ ನೋ.

**ಸೊಳಸಿಗೆ, ಸೊಳಸಗೆ, ಸೊಳಸಿಂಗೆ** (ನಾ). = ಸೊಳಸಿ : [ಮ]ಹಾಜನಮುಮಿರ್ದ್ದು ಮ್ಮೂಱು ಸೊಳಸಿಗೆ ಗೊ XXX (ಸೌಇಇ. XI- i, ೭೨-೭೨; 1037); ಗಾಣದಲು ಸೊಳಸಿಗೆ ಯೆಂಣೆಯಂ ಸಲಿಸುವರು (ಎಕ. VII, ಸೊರಬ. ೨೪೯-೪೭; 1065); ಗಾಣದಲೆಣ್ಣೆಸೊಳಸಿಗೆ ೧ ಮೂಲಸ್ಥಾನದೇವರಿಗೆ ಗದ್ದೆ ಖಂಡುಗ ೧ (ಸೌಇಇ. IX- i, ೨೩೩-೬೩; 1139). **ಸೊಳಸಗೆ** : ಸೋಮವಾರದಲಿ ನಿವಾಳಿಗೆ ಗಾಣಕ್ಕೆ ಯೆಣ್ಣೆ ಸೊಳಸಗೆ ಯೆರಡು (ಮುಂಬರಾ. XII, ೧೫-೪೭;1223). **ಸೊಳಸಿಂಗೆ** : ನಖರೇಸ್ವರದೇವರ ನನ್ದಾದೀವಿಗೆಗ [ಊ]ರಲು ಮೂಱು ಗಾಣ [ಪೊರಗಾಗೆ]ನಿತು ಗಾಣಮಾಡೊಡೆ ಗಾಣದಲೆಣ್ಣೆ ಸೊಳಸಿಂಗೆವೊನ್ದು (ಸೌಇಇ. IX-i, ೧೧೨-೨೦; 1072). ‘ಸೊಲ್ಲಗೆ$_1$’ ಪರಾ. [< ಸೊಳಸಿ]

**ಸೊಳೆ$_1$** ‘ಸೊಳ್ಳೆ$_1$’ ನೋ.

**ಸೊಳೆ$_2$** ‘ತೊಳೆ$_2$’ ನೋ.

**ಸೊಳ್ಳೆ$_1$, ತೊಳ್ಳೆ$_3$, ಸೊಳೆ$_1$** (ನಾ). ೧. ಮೂಗಿನ ಹೊರಳೆ,– ಹೊಳ್ಳೆ; ನಾಸಾರಂಧ್ರ: ಕೋಪದಿಂದ ಕಬಳಿಸುವಂತೆ ಮೂಗು ಸೊಳ್ಳೆಗಳಿಂದ ಉಸುರುಗಳಂ ಬಿಟ್ಟು (ಸೌಗಂಧಿ. ೨೦೦-೯೦); ದುಃಖಾವೇಶದಿಂದ . . . ಮೂಗಿನ ಸೊಳ್ಳೆಗಳು ದೊಡ್ಡ ವಾದವು (ಸುಂದರಿ. ೭). **ತೊಳ್ಳೆ$_3$** : ೧. ನರವಾಸನೆಯಿಂದ ನನ್ನ ಮೂಗಿನ ತೊಳೆ ಒಡೆದು ಹೋಗುತ್ತಿದೆ (ವಚಭಾ. ೩೭). ೨. ತೂತು; ರಂಧ್ರ: (೬). **ಸೊಳೆ$_1$** : ೧. ಮೂಗಿನ ಸೊಳೆ, ಹೊಳ್ಳೆ (ಮುಂಬಯಿ. ೬. ೪-೮೩). [ದೇ. ‖ ತಮಿ. ತೊಳ್ಳೈ; ಕೊಡ. ಚೊಳ್ಳೆ]

**ಸೊಳ್ಳೆ$_2$** (ನಾ). ಒಂದು ಬಗೆಯ ಕೀಟ; ಮಶಕ: ತಗುಣೆ, ಸೊಳ್ಳೆ ಮೊದಲಾದುವು ನಿದ್ರೋಪಾಸಕರನ್ನು ಚೆನ್ನಾಗಿಯೇ ಬಾಧಿಸುತ್ತಿದ್ದಿರಬೇಕು (ನಂಟರು. ೪೨); ತಿಲಕರು . . . ಚರ್ಚೆ ನಡೆಯಿಸುತ್ತಿದ್ದರೆಂದರೆ, ಅವರಿಗೆ ಜೈಲಿನಲ್ಲಿದ್ದ ತಿಗಣೆ, ಸೊಳ್ಳೆಗಳ ಕಾಟ ಗೊತ್ತಾಗುತ್ತಲೆ ಇರಲಿಲ್ಲ (ಸ್ವಾವೀರ. ೫೨).

ಸೊಳ್ಳೆಯ ಪರದೆ = ಸೊಳ್ಳೆಪರದೆ: ಶುಭ್ರವಾದ ಸೊಳ್ಳೆಯ ಪರದೆ (ರಂಗಕ. ೬೦). [← ತಮಿ . ಚುಳ್ಳಾನ್ = ಒಂಗು ಬಗೆಯ ಸೊಳ್ಳೆ]

**ಸೊಳ್ಳೆ$_3$** ‘ಸೆಳ್ಳ’ ನೋ.

**ಸೊಳ್ಳೆ$_4$** (ನಾ). ಒಂದು ಬಗೆಯ ಆಟ: ಪಗಡ ಸೋಗುಳಿ ನೆತ್ತ ಚದುರಂಗ ಸೊಳ್ಳೆ ಡೊಂಪೆಗಳಾಟಕಾಱರೊಪ್ಪಿಹರು (ಮೋಳಿಫ. ೧-೫೨). [?]

**ಸೊಳ್ಳೆಪರದೆ** (ನಾ). ಸೊಳ್ಳೆಗಳನ್ನು ನಿವಾರಿಸಲು ಹಾಸಿಗೆಯ ಸುತ್ತಲೂ ಕಟ್ಟುವ, ಸಣ್ಣಸಣ್ಣ ರಂಧ್ರಗಳಿಂದ ಕೂಡಿರುವ ಪರದೆ; ಮಚ್ಚರದಾನಿ:

ರಾತ್ರಿವೇಳೆಯಲ್ಲಿ ಸೊಳ್ಳೆಪರದೆ ಕಟ್ಟಿಕೊಂಡು ಮಲಗಬೇಕು (ಗೃಹವಿ. ೧೮೭); ಆಳು ಬಂದು ಒಂದು ಮಂಚದ ಮೇಲೆ ದಪ್ಪನ್ನ ಗಾದಿ ಹಾಕಿ . . . ಸೊಳ್ಳೆಪರದೆ ಕಟ್ಟಿ ಸಿದ್ಧ ಮಾಡಿದ್ದಾನೆ (ಅನ್ನ. ೨೪೩). [ಸೊಳ್ಳೆ₂ + ಪರದೆ]

**ಸೊಜ್** 'ಸುಜ್' ನೋ.

**ಸೋ₁, ಸೋಯು, ಸೋವು₁, ಸೋಹು₁** (ಕ್ರಿ). ಸೋದು (ಭೂತನ್ಯೂ). ೧. ಅಟ್ಟು; ಓಡಿಸು; ನಿವಾರಿಸು: "ಸೋದುದ ಸೋಹಿದುದು" (ಚತುಃ. ೧೧೫); ಲೀಲಾಕಮಲಮನೆ ಲೀಲೆಯಿಂ ತಿರಿಪಿದಾಗಲ್ ತಿರಿವೆಸಟ್ಟಳ್ ಮುಸುಱುವ ಮಧುಕರಂಗಳಂ ಸೋಯೆ (ಆದಿಪು. ೪-೭೦); ಪಥಿಕರ್ ಗಿಳಿ ಸೋವಬಲಾಜನಂಗಳಂ ಕಣ್ಣೆಮೆಯಿಕ್ಕದೀಕ್ಷಿಸೆ (ಸುರಾಮಾ. ೧-೧೦೭); ಮರಾಳಿಯನೋಪದೆ ಸೋವುತುಂ (ಪುಷ್ಪವು. ೧೦-೭೭). ೨. (ಬೇಟೆಗಾಗಿ ಪ್ರಾಣಿಗಳನ್ನು) ಅಡಗಿರುವ ಪೊದೆ ಇತ್ಯಾದಿ ಸ್ಥಳಗಳಿಂದ ಎಬ್ಬಿಸಿ ಹೊರಡಿಸು: ಅಗಲ್ದಿದಪನೆನ್ನಂ ಧಾತ್ರನವ್ಯಾಜದಿಂ ಮೃಗಮಂ ಸೋಯೆ ಬಟಲ್ವುವಂತೆ ಮೃಗತೃಷ್ಣಾದರ್ಶನವ್ಯಾಜದಿಂ (ಲೀಲಾವ. ೫-೬); ಅಬ್ಬರದ ಕಾಂತಾರ ದೊಳಗಿವರಬ್ಬರಿಸುತ್ತೆಯಿದರು ಸೋವು[ಪಾಠಾಂ. ಹು]ತ ಸಕಲಮೃಗಕುಲವ (ತೊರರಾ. ೩-೧೬). ೩. ಕಳೆ; ಹೋಗಲಾಡಿಸು: ಶರಣೆಂದು ಕಂಡರಂ ಕರುಣದಿಂ ಕಾವರುಂ ಬಿರುದಿಂಗೆ ಬೀಗುವರ ಹರಣಮಂ ಸೋವರುಂ (ಸೌಇಇ. IX-i, ೨೯೬-೨೩; 1176); ತೀವಿದಾ ಧ್ವಾಂತಮಂ ಸೋವಿದಂ ಮೂಡಿ ಚಂದ್ರಂ (ಉದ್ಭಟ. ೫-೧೪). **ಸೋಯು:** ೨. ಹುಲಿಯನ್ನು ಸೋಯುವವರು ಬಿಲ್ಲಿನವರ ಕಡೆಗೆ ಅದನ್ನು ಅಟ್ಟುವುದೆಂದೂ . . . ಸೋಯುವವರ ರಕ್ಷಣೆಗಾಗಿ ಕೋವಿಯಿದ್ದವರು ಕೆಲವರು ಅವರನ್ನು ಹಿಂಬಾಲಿಸಬೇಕೆಂದೂ ತೀರ್ಮಾನ ಮಾಡಿದರು (ಪಂಜಪಂ. ೬೨). **ಸೋವು₁:** ೧. ಬಾಲಚಂದ್ರನೆಂಬ ಕವಣೆಯಂ ಪಿಡಿದು ಪ್ರಪಂಚುವೆಂಬ ಹಕ್ಕಿಯಂ ಸೋವಿ (ಸರ್ವವ. ೧೦೭-೫೭೮); ತನುಗಂಪಿಗೆಳಸಿ ಬಂದೆಱಗುವಳಿತತಿಯ ಕರವನಜದೊಳ್ಪಿಡಿದ ನೀಲಾಬ್ಜದಿಂ ಸೋವುತ (ಚಿಬಪು. ೭-೧೪). ೨. ಕುತ್ತುಱಂ ಸೋವಿ[ಪಾಠಾಂ. ದಿ] ಸೆಱಗೆದಱು ಬೆಳ್ವಾರ ಬಿಗಿ (ಸೋಮಚ. ೩-೭); ಬಂದುದು ಶಬರಸೇನ ಬಳಿಕ ಸೊಪ್ಪುಸೊಪ್ಪುಗಳ ಮಳೆಮಳೆಗಳಂ ಸೋವುತ್ತೆ . . . ಮೃಗಮೃಗಂಗಳಂ ಕೆಡಹಿದರ್ಕಾನನದೊಳ್ (ಪ್ರಮಿಭಾ. ೨೮-೪೧). ೩. ಶಲಭ ಸೋವು ವರಾರೂ ದೀಪ ಬೆಳಗುವರಾರೂ (ಕರುಶ್ರಾ. ೮೫-೩). **ಸೋಹು₁:** ೧. ಗೊಲ್ಲವೆಣ್ಣುಗಳು ಕಡುಗಾಡಿಯಿಂ ಬಂದು ಸೋಹುತಿಹರು ನೆಲ್ಲ ಮಡಿಗಳಗಿಳಿವ ಗಿಳಿಗಳ (ಕುರಾಸಾಂ. ೨-೩೭); ಪಾಮರಿ ಗಿಳಿಗಳ ಸೋಹಲು ನಖಗಳ ಕೋಮಲಕಿರಣ ಪಸರಿಸೆ ತಾಮರಸದ ಬಳ್ಳಿಯೆಂದಂತೆವಟೆಗಳು ತಾ ಮುಸುಕಿದವು ಕೆಯ್ಗೊಲದಿ (ವರ್ಧಚ. ೧-೫೫). ೨. ತೊಪ್ಪತೊಪ್ಪನೆ ಪಿಂಡು ಕಲ್ಲೊಳು ತಪ್ಪಲಿಡುತಂ ಸೋಹುತಂ ಹರಿತಪ್ಪ ಕೆಲವಾಡುಗಳನು . . ಹೊಡೆದು (ಬಸವು. ೨೦ ೧೪); ಮೇಹುಗಾಡಿನೊಳವರ ಮೈ ಮಿಗೆ ಸೋಹಿದರೆ ಸುಷ್ಟಲೆಯ ಸುಬ್ಬಲೆಯಾಹವದಲೇ ತೋಳ ತಕ್ಕಯ ತೋಟಿ ತೇಗುವರೆ (ಕುವ್ಯಾಅ. ೧೩-೧೭); ಅಪ್ಪವಿಸಿ ಸೋಹಿದರು ಕೋಣನ ದೊಡ್ಡುಗಳ ದಂತಿಗಳ (ತೊರರಾ. ೩-೩-೧೨). ೪. ತಿರುಗಿಸು; ಓಡುವಂತೆ ಮಾಡು: ತಜ್ಜಗದ ಜೀವದ ಸುಕೃತ ದುಷ್ಕೃತವ ಓಹರಿಕೆಯಲಿ ತಂಗು ಭವದಲಿ ಸೋಹಿ ಸುಳಿಸುವನೀ ಚರಾಚರ ಜೋಹವಿದು ನಿಜಲೀಲೆಯಿ ಹರಿಗೆಂದನಾ ಭೀಷ್ಮ (ಕುವ್ಯಾಸ. ೯-೯). ೮. ತಿಳಿ; ಅರಿ: ಆ ಹರಿಯ ಪರಮಹಿಮೆಯಾದುದು ಸೋಹಿ ಮುನಿಕುಲ ಸ್ತುತಿಸಲಱಿಯದು (ಸಂಭಪ. ೪-೩೧).

[ದೇ. ‖ ತೆಲು. ಚೋಪು; ಪರ್ಜಿ. ಚೊದ್ಪ್; ಗದಬ. ಚೋಯ್]

**ಸೋ₂** (ನಾ). ೧. ಸೋಬಾನೆ ಎಂಬ ನುಡಿಯ ಸಂಕ್ಷಿಪ್ತರೂಪ; ಸೋಬಾನೆಪದಗಳ ಕೊನೆಯಲ್ಲಿ ಗುಂಪಾಗಿ ಹೇಳುವ ಮಾತು: ಮಲ್ಲಿಗಿ ಈ ಹೂವು ಎಲ್ಲಿದ್ದು ಬೆಳೆದರೇನ ಮಲ್ಲಿಕಾರ್ಜುನನ ಸೆನೆಯಾದ ಸೋ! (ಲೋಕಗೀ. ೧೧); ನವ್ಮು ದನಿ ಮುತ್ತೀನ ಸರವ ತೆಗೆದಂತ ಸೋ (ಸನ್ನೂರು. ೬೫). ೨. (ಆಲಂ) ಒಪ್ಪಿಗೆ; ಅನುಮತಿ: 'ಸೋಗೊಡು' ಪರಾ.

**ಸೋ ಅನ್ನು** = (ಆಲಂ) ಅನುಮತಿಸು; ದನಿಗೂಡಿಸು: ನಾನೂ ದನಿಗೂಟ್ಟು ಸೋ ಅಂದೆ (ಸುವಸಂ. ೧೧).

**ಸೋಂಕಿತ** (ನಾ). ಮುಟ್ಟಿದುದು; ಸ್ಪರ್ಶವಾದುದು: ಸೋಂಕಿ[ಪಾಠಾಂ. ಶೋಭಿ]ತವೇನೊ ಅಸೋಂಕಿತವೇನೊ ಹುಟ್ಟುವುದಿಲ್ಲಾಗಿ ಹೊಂದುವುದಿಲ್ಲ (ಆವಚಂ.ಕ. ೨೦೭-೫೭೫); ಆ ಪರಿಮಳಗಳೆನ್ನ ನಾಸಿಕವ ಮುಟ್ಟಿದವು ಏಪರಿಯಲ ರ್ಪಿಸಲು ಬಹುದಂಗ ಸೋಂಕಿದವು ಅಂಗ ಸೋಂ[ಪಾಠಾಂ. ಸೊಂ]ಕಿತ ಲಿಂಗ ನೊಲ್ಲನರ್ಪಿತವಹುದೆ (ದೀಕ್ಷಾಬೋ. ೯೯-೨೬). [< ಸೋಂಕು₁]

**ಸೋಂಕಿಲ್, ಸೋಗಲು, ಸೋಗಿಲ್, ಸೋಗಿಲು, ಸೋವಿಲು** (ನಾ). ೧. ಮಡಿಲು; ಉಡಿ: ಜಯಾವತಿ ತನ್ನ ಸೋಂಕಿಲ ಮೇಗಿಟ್ಟಾಡಿಸುತಿರ್ಪ ಕೂಸಂ . . . ಕಂಡು (ವಡ್ಡಾರಾ. ೪೪-೨೧); ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡೆ (ಪಂಪಭಾ. ೧-೯೭ ವ). ೨. ಉಟ್ಟ ಸೀರೆ, ಪಂಚೆ ಮೊದಲಾದುವುಗಳ ಮುಂಭಾಗದಲ್ಲಿ ಚೀಲದಂತೆ ಮಾಡಿದ ಸೆರಗಿನ ಭಾಗ: ಆಲದ ಪಣ್ಣಳಂ ತಾನೆಯಾಯ್ದು ಸೋಂಕಿಲಂ ತೀವಿಕೊಂಡಾಗಳ್ (ವಡ್ಡಾರಾ. ೧೫೯-೯); ಅವರೆಯ ಪಂದಳಿರ್ಗಳ್ಗಡೆಗೆಡು ಮಾಡೆ ಸೋಂಕಿಲ ಕೊಟೆತೀವಿ ಕಟ್ಟೆ (ಲೀಲಾವ. ೫-೧೦೦). **ಸೋಗಲು:** ೧. ಪಾಪಿ ಹೊಟ್ಟೆಯಲ್ಲಿ ಬೆಳೆಯುವುದು ಪುಣ್ಯಾತಗಿತ್ತಿ ಸೋಗಲಲ್ಲಿ ಬೆಳೆಯಲಿ (ಗಾದೆ). **ಸೋಗಿಲ್:** ೧."ತೆರಪೊಡೆಯೆಂದುಂ ಸೋಗಿಲೆಂದುಂ ಮಡಿಲ್" (ಕಶಸಾ. ೬೩-೩೯೬); ಒಂದು ಬಾಳರವಿ ತನ್ನಯ ಸೋಗಿಲ ಮೇಗೆ ರಾಗದಿಂ ಪೊಡರ್ವುದಂ . . . ಸತಿ ಕಂಡೊಸೆದಳ್ ನಿಶಾಂತದೊಳ್ (ಪಂಪಭಾ. ೧-೧೪೦). ೩. ನಡು; ಟೊಂಕ: ಮುನ್ನಿನಂತೋಲೆಯಂ ಮುದ್ರಿಸಿ ಧನಕೀರ್ತಿಯ ಸೋಗಿಲೊಳಿಕ್ಕಿ ತನ್ನ ವಾಸಕ್ಕೆ ಪೋದಲ್ (ಧರ್ಮಾಮೃ. ೧೦-೧೭೦). **ಸೋಗಿಲು:** ೧. ಶಿಶುವ ಸೋಗಿಲೊಳಿಟ್ಟು ಮಾತೆಯ ಬಲಗೊಂಡಳೊಸದು ಮೂವಳಸಂ (ಶಾಂತೀಚ. ೭-೬೮); ಶಿಶುವನಾ ತಾಯ್ ಸೋಗಿಲಿಗೆ ಸೇರಿಸುವವೋಲು ತಕ್ಕೈಸಿ ತಂದನು (ತೊರರಾ. ೭-೨೪-೪೭). ೩. ಸೋಗಿಲಿನ ಈ ಸಬಳದಿಂದ ಗೋಣನ್ನು ಕರಕರನೆ ನಾನೆ ಕೊಯ್ದುಕೊಂಡು ದಂಡನೆಯನ್ನು ವಿಧಿಸಿಕೊಂಡೇನು? (ಸಪತಿ. ೧೯೭). **ಸೋವಿಲು:** ೧. ಸೋವಿಲೊಳಿರ್ದ ಮಗುವ ಕಾಣದಾ ಸತಿ . . . ಶೋಕಾವೇಶದೊಳಗಿರುತಿರಲು (ನೇಮಿಸಂ. ೧೮-೨೩). ೨. ಆ ರತ್ನಸಮಿತಿಯಿಲ್ಲಿಗೆ ತರಲ್ಕಿಂತುರಿವ ಕೆಂಡವಾಯ್ತೆನಲವಂ ಕುಡೆ ಮುನ್ನಿನಂತವನ ಸೋವಿಲೊಳು ದೇದೀಪ್ಯಮಾನಮಂ ಪಡೆದ ರತ್ನಗಳಾದುವು (ಸಮ್ಯಕೌ. ೭-೩೯).

**ಸೋಂಕಿಲ ಕಿಡಿ** = (ಆಲಂ) ಮಡಿಲಿನಲ್ಲಿರುವ ಬೆಂಕಿ; ಸೆರಗಿನ ಕೆಂಡ; ಸಮೀಪದಲ್ಲೇ ಇರುವ ಆಪತ್ತು: ಎನಗೆ ವಸುದೇವಂ . . . ಸೋಂಕಿಲ ಕಿಡಿ ನಣ್ಪಿನ ಮೃತ್ಯು (ಜಗವಿ. ೫-೭೦).

**ಸೋಂಕು₁, ಸೋಕು₁** (ಕ್ರಿ). ೧. ತಾಗು; ಮುಟ್ಟು; ಸ್ಪರ್ಶಿಸು: ಆಂ ಸಂಧ್ಯಾರಾಗದೊಳಱಿಯದೆ ಮದವಾರಣಮಂ ಸೋಂಕಿ ಕೆಲದೊಳೊಯ್ಯನೆ ಪೋದೆಂ (ಕವಿರಾ. ೩-೯೩); ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಂ . . . ನೆನೆವುದೆನ್ನ ಮನಂ ವನವಾಸಿದೇಶಮಂ (ಪಂಪಭಾ. ೪-೩೦). ೨. ಹಾಯು; ಅಪ್ಪಳಿಸು; ಬಡಿ: ಆ ಶೃಂಗಿಯಿಂ ಶ್ರಿಂಗಿಯಂ ಸೋಕುವಂತ ಸೋಂಕಿ ಪೋಪಾಗಳ್ (ಕಇ. I, ೨೫೨-೨೩; 1186); ಸಿಡಿಲು ಸೋಂಕಿ ಬರ್ದುಂಕಿದ ಮೊಲ್ಲೆಯ ಮುಗುಳೆ (ಸಂಬಿರ. ೨-೫೮). ೩. ಮೆಟ್ಟು; ಹಿಡಿ; ತಗುಲಿಕೊಳ್ಳು: ಪಿಡಿದುದು ಪುಲಿ ಗಾಳಿ ಸೋಂಕಿದತ್ತು ಪಿಶಾಚಂ ತೊಡರ್ದುದು . . . ಎನೆ ಸಿರಿಯೊಳರಸುಗಳ್ ಮೆಯ್ಮಱೆಯರ್ (ಕಾಂದಪೂ. ೫೭೩); ತೆಱಿಪುವಡೆದಡಸಿ ರುಜೆ ಮೆಯ್ಮುಱುಗುವಿನಮವುಂಕಿ ಸೋಂಕಿ ನೀಕರುಣತೆಯಿಂ (ಸುಕುಮಾ. ೨-೧೧). ೪. ನಡೆ; ಸಂಚರಿಸು: ಆ ಬಾಲಕಂ ಬಾಲದುಡಿಗೆಗಳಂ ತೊಟ್ಟು ನಡೆಗಲ್ತೊಂದು ದಿವಸಂ ಗೋವ್ರಜಂಗಳೊಳ್ ಸೋಂಕುವುದನಾಂ ಕಂಡು (ಪಂಚತಂ. ೧೮೭-೯); ಎಡದತ್ತ ಸಲ್ವೊಡದು ನಾಡಿಯೊಳಂ ಕೆಟಗೊತ್ತಿ ಸೋಂಕಿ ಮಧ್ಯದೊಳೆಸಗುತ್ತಮಿರ್ಪೊಡೆ ಶುಭಾವಹಂ (ಲೋಕೋಪ. ೧೧-೭). ೫. ಕೂಡು; ಸಂಭೋಗಿಸು: ಬೆಂಕಿದ ಕುಚ ತೋಳುಗಳ ಗಲ್ಲದೆಡೆಯ ನಖಾಂಕಿತ ಪಲ್ಲರ್ಚಿದುವೇ ಸೋಂಕಿದ ಖೂಳನದಾವನೊ ತೋಱೆಂದು ಗುಂಕಿಸಿದಳು ತಾಯಿ ಮಗಳ (ಮೋಹತ. ೧೮-೭೭). **ಸೋಕು₁:** ೧. ಚರಣ ಸೋಕಲು ಸತಿಯಹಲ್ಯೆಯನಿರದೆ ಕಾಯ್ದೆ (ಕುವ್ಯಾಸ. ಓ೧೩.೭-೨೭); ಕೆಂಡಗಣ್ಣು ನೊಸಲೊಳಗಿಟ್ಟ ನಮ್ಮ ಶಿವ ಕಂಡವ ಸೋಕಲು ಅಳುವ್ಯಲ್ಲೊ ಖೋಡಿ (ಪುರಂದ. ೧-೧೮೭-೪); ಸೋಕಿ ದವರ ದುರಿತವ ಪರಿಹರಿಸುತ ಶ್ರೀಕಾವೇರಿಯೊಪ್ಪಿಹಳು (ಕಂನವಿ. ೨-೧೭). ೨. ಆ ಶೃಂಗಿಯಿಂ ಶ್ರಿಂಗಿಯಂ ಸೋಕುವಂತೆ ಸೋಂಕಿ ಪೋಪಾಗಳ್ (ಕಇ I, ೨೫೨-೨೩; 1186). ೩. ನಿನ್ನ ನಾವನು ಪೂರ್ವಕಾಲದಲಿ ನೆನೆದ ಮನುಜನ ಮನದ ತಾ ಕಲಿ ತನಗೆ ಸೋಕದೆ ಪೋಗಲಿ

(ಸಂಭವ. ೫-೬೨); ಮಾನಿನಿ ಒಬ್ಬ ಸಂನ್ಯಾಸಿಯ ಕಂಡು ಧೇನಿಸಿ ಕೂಸೆಂದೆತ್ತ ಬರಲು ಏನು ಗಾಳಿ ಅವರಿಗೆ ಸೋಕಿತೆ ಎಂದು ಪುರಂದರವಿಠಲ ತನ್ನೊಳು ನಗುತಿದ್ದನು (ಪುರಂದ. ೧-೧೧೧-೯). **೬. ಉಂಟಾಗು; ಒದಗು:** ಸೋಕುವುದು ಮಯ್ಯಲಿವೆ ಮಱೆಯ ನೋಕರಿಸುವುದು ಚಿತ್ತವೃತ್ತಿ (ಕುವ್ಯಾಆ. ೯-೮); ಏಕಪತ್ನೀವ್ರತ ಸುಭಾಷಿತ ಸೋಕಿಹುದು ನಮ್ಮವನು (ತೊರರಾ. ೩-೪-೧೩).

[ದೇ. ‖ ತುಳು. ಸೋಂಕು, ಸೋಕು; ತೆಲು. ಸೋಂಕು, ಚೋಂಕು; ಪರ್ಜಿ. ಚೊಕ್]

**ಸೋಂಕು₂, ಸುಂಕು₂, ಸೊಂಕು, ಸೋಕ್ಕು₂ (ನಾ). ೧. ಸ್ಪರ್ಶ ಮುಟ್ಟುವಿಕೆ:** ಸೋಂಕಿಸೂಳ್ ನಲಿವ ನಲ್ಲಳಲಂಪನೊಡರ್ಚೆ (ಆದಿಪು. ೨-೪೧); ಕಾಬರಿಗೆ ಕಂಗಳಿಗೆ **ಅಸಾಧ್ಯ ಮುಟ್ಟುವರೆ ಸೋಂಕಿಂಗಸಾಧ್ಯ** (ಶೂನ್ಯಸಂ. ೯೫-೧೨); **ಹಾಡನೊಲಿದಾಲಿಸಿದ** ಕಿವಿಗೆ ಹೊಲೆಯಿಲ್ಲ . . . ಸೋಂಕಿಂಗೆ ಹೊಲೆಯುಂಟಾಯ್ತೆ (ಹಚಕಾ. ೭-೧೯). **೨. (ದೆವ್ವ ಮುಂತಾದುವು) ಹಿಡಿಯುವಿಕೆ; ಮೆಟ್ಟುವಿಕೆ:** ದರ್ಪಕನಂದೆನಿಸುವ ಗ್ರಹ ಸೋಂಕಿಂದಲೊಪ್ಪವಡಗಿ ಧೃತಿಗುಂದಿ ಕರ್ಪುರಗಂಧಿಯಿರಲು (ಅಂಜಚ. ೫-೧೯೮). **೩. ಒಡನಾಟ; ಸಂಪರ್ಕ:** ತಮಗೇಕೆ ರಂಭಾದಿಗಳ ಸೋಂಕೆಂದುದು ಸುರಸ್ತೋಮ (ಕುವ್ಯಾಆ. ೭-೮೭); ಆ ತರುಣಿಯರ ತನುಪರಿಮಳದ ಸೋಂಕಿನಲಿ ಸುತ್ತಲು ಪರಿಮಳಿಸಿದುದು ತರು (ತೊರರಾ. ೧-೫-೭೫); ನನ್ನೂರು ಯಾವ ಹೊರಗಡೆಯ ಸೋಂಕೂ ಇಲ್ಲದೆ . . . ಸ್ವಾತಂತ್ರ್ಯಾನಂತರದ ಮಹಾಮಾರ್ಪಾಟಿಗಾಗಿ ಕಾಯುತ್ತಾ ನಿಂತಿದೆ (ನನ್ನೂರು. ೭). **೪. ಗಾಳಿ, ನೀರು ಮುಂತಾದುವುಗಳ ಮೂಲಕ ಹರಡುವ ರೋಗದ ಸಂಸರ್ಗ,— ಅಂಟು:** ಸ್ವನ್ನಕ್ಕೆ ರೋಗದ ಸೋಂಕು ತಗುಲಿತು (ಶ್ರೀರಾಯ. ೩೭೩); ಸೋಂಕಿನ ತಾಣವನ್ನು ಗುರುತಿಸಲು 'ಕ್ಷ' ಕಿರಣಗಳು ಮಹತ್ತರವಾಗಿ ಸಹಾಯಮಾಡುತ್ತವೆ (ಕಲರೂ. ೮೭). **೫. ಒಂದು ವಸ್ತು ಅಥವಾ ಒಬ್ಬ ವ್ಯಕ್ತಿಯಿಂದ ಮಿಕ್ಕವುಗಳಿಗೆ ಹರಡುವ ರೋಗ; ಸಾಂಕ್ರಾಮಿಕ ರೋಗ; ಅಂಟುಜಾಡ್ಯ:** ಮೊಟ್ಟೆಗಳಿರುವ ಮಣ್ಣು ತಿನ್ನುವುದರಿಂದಲೂ ಕೊಳಕುನೀರನ್ನು ಕುಡಿಯುವುದರಿಂದಲೂ ಸೋಂಕು ಹರಡುತ್ತದೆ (ಪ್ರಾಣಿಶಾ. ೧೭೦); ದ್ವಾರಕಾನಾಥನಿಗೆ ಏನೋ ಸೋಂಕಿನಂತಾಗಿದೆ (ವಿಧಿವ. ೧೯೩). **೬. ಮುಟ್ಟುವಷ್ಟು ಹತ್ತಿರ; ಅತ್ಯಂತ ಸಮೀಪ:** ತಾಯ್ಮಿಡಿಯು ಸೋಂಕಿನೊಳೊಯ್ಯನೆ ಸೋಂಕಿ ನಿಲ್ಲ ಮುದ್ದೊರ್ಮೆಯುಮೊಪ್ಪಿ ತೋಱೆ ಕಲಭವ್ರಜಮಿರ್ದುದು (ಜಗವಿ. ೧೭-೧೧). **ಸುಂಕು₂: ೪.** ಕ್ಷಯರೋಗದ ಸುಂಕು ವಾಯುನಾಳಗಳ ಮೂಲಕವಾಗಲೀ . . . ದೇಹವನ್ನು ಸೇರುವುದು (ವಿಜ್ಞಾನ. ೧೭೫). **೫.** ''ಸುಂಕು - ಮಾರಿಕಾ ಉಪದ್ರವ '' (ಗುವಿಮೋ. ೧೭೩). **೭. ಪ್ರಭಾವ; ಪರಿಣಾಮ:** ಕವಿಯ ಪ್ರತೀತಿಯ ಸುಂಕು ಸಹೃದಯನಿಗೆ ತಗಲದೆ ಹೋಗುವದಿಲ್ಲ (ಸಾಹಿವಿ. ೫೨). **ಸೊಂಕು₂: ೧.** ಶಿವಪಾದಾಬ್ಜದ ಸೊಂಕಿನಿಂ ವಿಮಳತೇಜಃಸ್ಫೂರ್ತಿ ಮೆಯ್ಯೆಯ್ದೆ (ಶಬಶಂ. ೫-೫೪); ಸೊಂಕಿಗೆ ಹೇಸುವ ದ್ವೈವಭಕ್ತರ ಕಿಂಕರ ನಾನು ಎನುತಿಹನಗ್ಗಿ (ಚೆಲುವು. ೫೧-೮). **೨.** ಚಿತ್ತಭವಗ್ರಹದ ಸೊಂಕೆ ಸುಜನೋತ್ತಂಸಾ (ಶಮದ. ೧೩೪ ಪ್ರಯೋ). **೩.** ಏನೂ ತಪ್ಪಿಲ್ಲದಿದ್ದರೆ ಅಪವಾದದ ಸೊಂಕೇ ಇಲ್ಲ (ದೌಲತ್. ೧೧೫). **೪.** ಆಮಶಂಕೆಯಲ್ಲಿ . . . ಸೊಂಕು ತುಸುವಾಗಿದ್ದರ ಯಾವ ರೋಗಲಕ್ಷಣಗಳೂ ಹೊರದೋರದೆ ಇರಬಹುದು (ಕವಿಕೋ. I. ೮೨೭). **ಸೋಕ್ಕು₂: ೧.** ಸರಳಿನ ಸೋಕುಗಳ ಸ್ಮರಣೆಯಲಿದ್ದನು ಗಣಿಸದರಿಬಲವ (ತೊರರಾ. ೫-೫-೧೮). **೩.** ಲೋಕದೂಷಣವನ್ನಪಾರಿಯ ಸೋಕು (ತೊರರಾ. ೬-೪೫-೩೭).

[< ಸೋಂಕು₁ / ತುಳು. ತೆಲು. ಸೋಂಕು. ಚೋಂಕು]

**ಸೋಂಕುರೋಗ, ಸುಂಕುರೋಗ, ಸೊಂಕುರೋಗ (ನಾ). ೧. ಒಂದು ವಸ್ತು ಅಥವಾ ಒಬ್ಬ ವ್ಯಕ್ತಿಯಿಂದ ಮಿಕ್ಕವುಗಳಿಗೆ ಹರಡುವ ರೋಗ; ಸಾಂಕ್ರಾಮಿಕ ರೋಗ; ಅಂಟುಜಾಡ್ಯ:** ಮನೆಯಲ್ಲಿ ಒಬ್ಬರಿಗೆ ಸೋಂಕುರೋಗ ಕಾಣಿಸಿಕೊಂಡರೆ ಉಳಿದವರು ಕೂಡಲೆ ವೈದ್ಯಪರೀಕ್ಷೆ ಮಾಡಿಸಿಕೊಳ್ಳಬೇಕು (ರೂಢಿ). **ಸುಂಕುರೋಗ : ೨. (ಆಲಂ) ಸಾಂಕ್ರಾಮಿಕವಾಗಿ ಹಬ್ಬುವ ದುಷ್ಟಪ್ರವೃತ್ತಿ:** ಇದು ಮೂರ್ತಿಭಂಜಕರೊಳಗಿನದೇ ಸುಂಕುರೋಗ, ತಿಳಿಯಿತೇ? (ಹೊಸಂಸಾ. ೧೦). **ಸೊಂಕುರೋಗ : ೧.** ಮಾನವನಲ್ಲೂ ಪ್ರಾಣಿಗಳಲ್ಲೂ ಐವತ್ತಕ್ಕೂ ಮಿಾರಿದ ಬಗೆಗಳ ಅಣಬೆ (ಬೂಜು, ಬೂಷ್ಟು, ಶಿಲೀಂದ್ರ)ಗಳಿಂದ ಸೊಂಕುರೋಗಗಳು ಕಾಣಿಸಿಕೊಳ್ಳುತ್ತವೆ (ಕವಿಕೋ. I, ೨೨೭). [ಸೋಂಕು₂ + ರೋಗ]

**ಸೋಂಕುವಡೆ (ಕ್ರಿ). ಸ್ಪರ್ಶವನ್ನು ಹೊಂದು; ಮುಟ್ಟು:** ಅಜ್ಞಾನದಿಂ ಸೋಂಕುವಡೆದಾತ ಸುರನಿತ್ತುದೇ ನಿಧಿ ನಿರೀಕ್ಷಿಸಿತ ಪೊಡವಿ ಪಾವನಂ (ಸಿದ್ಧರಾ. ೨-೨೧). [ಸೋಂಕು₂ + ಪಡೆ₁]

**ಸೋಂಗು** 'ಸೋಗು' ನೋ.

**ಸೋಂಟಿಗೆ 'ಸೂಂಟಿಗೆ' ನೋ.**

**ಸೋಂಟೆ** 'ಸೋಟೆ₁' ನೋ.

**ಸೋಂಪು, ಸೋಪ್ಪು₁ (ನಾ). ಒಂದು ಬಗೆಯ ಸಸ್ಯ ಮತ್ತು ಸುವಾಸನೆಯಿಂದ ಕೂಡಿದ ಅದರ ಬೀಜ;** ☞ ಈ ಬೀಜವು ಜೀರಿಗೆಯಾಕಾರದಲ್ಲಿದ್ದು, ಸಾಂಬಾರ **ಪದಾರ್ಥವಾಗಿಯೂ ಅಡಕೆಯಂತೆ ತಾಂಬೂಲದೊಂದಿಗೆ ಸೇವಿಸಲೂ** ಬಳಕೆಯಾಗುತ್ತದೆ: ''ಸೋಂಪುಗಿಡ, ಸಂಪು, ಶತಪುಷ್ಪಿ'' (ಸಸ್ಯನಿ. ೧೦೫). **ಸೋಪ್ಪು₁:** ಇಂಥ ತಂಪು ಎರೆಗಳಲ್ಲಿ ಜೀರಿಗಿ . . . ಸೋಪು ಗಜರೀಬೀಜಗಳನ್ನಾದರೂ ಬಿತ್ತಿದರೂ ಬರುತ್ತದೆ (ಕೃಷಿಪ್ರ. ೭೩). [ದೇ. ‖ ತಮಿ. ಚೋಮ್ಬು; ತೆಲು. ಸೋಪು]

**ಸೋಂಬ, ಜೋಬ, ಶುಂಭ, ಸಾಂಬ₁ (ನಾ). ೧. ಮೈಗಳ್ಳ; ಆಲಸಿ; ಸೋಮಾರಿ:** ''ಆಲಸಃ . . . ಮಂಥರಃ - ಈ ೭ ಸೋಂಬಂ'' (ಹಲಾಯು. ೭೪-೨೫೩); ಸೋಂಬನಂ ಮೆಚ್ಚಿ ಬೇಱೂರ್ಗೆ ಪೋದ ಸೂಳೆಯಂತೆ (ಕಾವ್ಯಸಾ. ೫೫೯ ಶೂದ್ರಕ); ಸೋಂಬರಭವ್ಯರಸ್ಯ ವನಿತಾಸಕ್ತರ್ . . . ನೋಳ್ಪಡಮಿಲ್ಲ (ವರ್ಧಮಾ. ೧-೪೭). **೨. ಮೂರ್ಖ; ದಡ್ಡ:** ಕಂತೆಗಳವಡ್ಡತನರುಳ್ಳ ಕವನಂ ದಿಗ್ಭ್ರಾಂತಿಕರಮೆಂಬವನೊಳೇಂ? ತನತೆ ಕಾಲಕ್ಕುಂತ ಕರುಬಿಂ ಜರೆದು ಕೀಳ್ಪಡಿಪ ಸೋಂಬಂ (ಸಂಸಪ. ೭-೧೩). **ಜೋಬ: ೧.** ''ಆಲಸಂ ಜಡಂ ಮಂಥರಂ ಜಿಂಹ್ಮನೆನೆ ಜೋಬ [ಪಾಠಾಂ. ಜೋಪ, ಸೋಂಬ] ನಕ್ಕುಂ'' (ಮಂಗರಾ. ೭೩-೨೪); ಈಗ ಇಮ್ಮಡಿ ಜೋಬನಾಗಿದ್ದೇನೆ . . . ಮಾಡಬೇಕಾಗಿದ್ದ ಎಷ್ಟೋ ಕೆಲಸ ಮಾಡದೆ ಹೋಯಿತು (ಕಂಠಾಸಾ. ೧೩). **ಶುಂಭ: ೧.** ತನ್ನ ಗಂಡನಾದವನು ಶುಂಭನಂತೆ ಕಾಲಹಾಕುವುದನ್ನು ಅವಳು ನೋಡದಾದಳು (ಮಣ್ಣಮ. ೧೭). **೨.** ಅಂಬರಕೆ ಹೋದ ಹೊಗೆ ಕುಂಭಿನಿಗೆ ಮರಳುವುದೆ ಶುಂಭಮಾನವನೆ ಕೇಳು (ಮೈಲಾರ. ೮-೮). **ಸಾಂಬ₁ : ೨.** ನೀನಂದರ ಏನೂ ಅರೀದ ಸಾಂಬನಂಗ ಅಂತ ಮಾಡಿದ್ದಿನಿ ನಾ (ಮಣ್ಣುಹ. ೧೧೩).

[ಸೋಂಬು + - ಅ₇]

**ಸೋಂಬತನ (ನಾ). ಸೋಮಾರಿತನ; ಜಡತೆ:** ಸಿದ್ಧಾಂತಮನಱಿಯದ ಪಿರಿದುದ್ಧತೆಯಿಂ ಸೂಂEಸೋಂಬತನದಿನಧ್ಯಾತ್ಮಮುಮಂ ಶ್ರದ್ಧೆಯಿನೋದುವ ಕಡುನಿರ್ಬುದ್ಧಿ ಮಹಾಸುಖಮನ್ನೆದಲಾಱಂ ಕಡೆಯೊಳ್ (ಧರ್ಮಾಮೃ. ೬-೧೦೦); ಪೇಱಿ ಬಟಲ್ಪಿರ್ಪರವಿಂ ಪೇಱಿದ ಪಣ್ಣೊನೆಯನಿಱಿಪಲೊಡನೆ ನಿಮಿತ್ತಂ ಬೇಱುಂಟೆ ಫಲಕೆ ಮೈವರಲಾಱದ ಕಡುಸೋಂಬ [ಪಾಠಾಂ. ಸೊಬಗು] ತನಕೆ ಪೊಂಬಾಟಿಗಳೊಳ್ (ಲೀಲಾವ. ೬-೧೨೧). [ಸೋಂಬ + - ತನ]

**ಸೋಂಬತೆ (ನಾ). ಆಲಸ್ಯ; ಸೋಮಾರಿತನ:** ಮೈ ಸೋಂಬತೆಯ [ಪಾಠಾಂ. ಸೋಂಭತೆಯ, ಶೋಭತೆಯ] ದೆಸೆಯಿಂದ . . . ಭಿಕ್ಷಾಂದೇಹಿಯಾದ ಸಂದೇಹಿಗಳ ಶಿವನೊಲ್ಲನು (ಶಿವಗೀ. ೫೫-೨೮೧). [ಸೋಂಬ + - ತೆ]

**ಸೋಂಬು (ನಾ). ೧. ಆಲಸ್ಯ; ಮೈಗಳ್ಳತನ:** ಆ ಗ್ರಾಮದೊಳ್ ಸೋಂಬಂ ಬಿಟ್ಟತಿದಕ್ಷನಪ್ಪ ಪರದಂ ಯಕ್ಷಾಂಕಂ (ನೇಮಿಪು. ೧೪-೨೨). **೨. ನಿಧಾನ; ತಡೆ; ಸಾವಕಾಶ:** ತುಂಬಿದ ಸೇನೆಯಿಂದಗಲಿ ವೃಷಭರಾಜ ಸೋಂಬಿಲ್ಲದತ್ತ ಸಾಗಿದನು (ಭರತ. ೩೦-೬೦). **೩. ನವುರಾಗಿರುವುದು; ಸೂಕ್ಷ್ಮ; ಹಗುರ:** ಚೌಮೂಲೆಗಳಲ್ಲಿಯೂ ಸೋಂಬಿನಿಂದ ಪಲವಾಕೃತಿಗಳಿಂದ ತೆಳ್ಳೂಗೆಯ ಸಂಪದವನ್ನೊಯ್ಯನೆ ಏರಿಸಿ ಕುಡುತ್ತಿರುವ ಅಗುರು ದಶಾಂಗ (ಚಿಬ್ಬಿಆ. ೮೨-೧೭). [ದೇ. ‖ ತಮಿ. ಚೋಮ್ಬು, ಚೋಮ್ಬಲ್]

**ಸೋಂಬೆ (ನಾ). ದಡ್ಡ ಹೆಂಗಸು:** ನಲಿಗಟ್ಟು ಕಟ್ಟ ಕುಡಿಯಾಗಡೆಯಾಳನೆ ಸೀಳ್ದು ಸಿಱುಂಬುಳಾಡದಂಟದೆ ನೆಱನೆಂದು ಭಾವದೊಳೆ ಬಳ್ಳುವ ಸೋಂಬೆಯನಿಕ್ಕು ಕಿಚ್ಚನೊಳ್ (?) (ಸೂಕ್ತಿಸು. ೮-೪೩೪). [ಸೋಂಬ + - ಎ₂]

**ಸೋಂಬೇರಿ (ನಾ). ಜಡಸ್ವಭಾವದ ವ್ಯಕ್ತಿ; ಆಲಸಿ:** ಆ ನಗರದಲ್ಲಿಯ ಒಕ್ಕಲಿಗರ ಕೇರಿಯಲ್ಲಿರುವವರೆಲ್ಲ ಬರಿಯೆ ಸೋಂಬೇರಿಗಳಾಗಿ ವೇಳೆಗಳೆಯುವವರಲ್ಲ (ಕರ್ನಾಜ. ೧೫೭). 'ಸೋಮಾರಿ' ಪರಾ.

**ಸೋಂಬೇರಿಯಾಗು** = ಜಡವಾಗು; ನಿಷ್ಕ್ರಿಯವಾಗು: ಐಕಿಲಿಂ ಕುರ್ಗಿರಲೊಂದಲ್ಲಾನು ಕೂರ್ಚಂ ಸೆಡೆದು ಮಲಗಿ ಸೋಂಬೇರಿಯಾದತ್ತು ಲೋಕಂ (ಚಂದ್ರಪ್ರ. ೬-೪೫). [ದೇ. ‖ ತಮಿ. ಚೋಮ್ಬೇರಿ]

**ಸೋಕ** (ನಾ). ದುಃಖ; ಸಂಕಟ: ಸೋಗೆಯ ಸೋಕಕ್ಕೆಂದುಂ ಪೋಗದ ಬಹುರತ್ನ ರುಚಿರರುಚಿ ಸುರಚಾಪಶ್ರೀಗಂ ಬಯಸಿರ್ಪಂತೆವೊಲಾಗಳುಮಗಲವು ಮುಗಿಲ್ಗಳಾ ನಗತಟಮಂ (ಲೀಲಾವ. ೯-೩೨); ಸಾರಂಗವೆಲ್ಲಾ ಸೋಕಾ ಮಾಡಿದವೂ (ಹುಟ್ಟಿಹ. ೪೮). [< ಸಂ. ಶೋಕ]

**ಸೋಕಿಸು** (ಕ್ರಿ). ಸ್ಪರ್ಶಮಾಡಿಸು; ಮುಟ್ಟಿಸು: ಪಠದ ಕಟ್ಟಿಗೆ ಸೋಕಿಸಿದನು (ಮುನಿಮಾ. ೨೪).

**ಸೋಕಿಸಿಕೊಳ್ಳು** = ಮುಟ್ಟಿಸಿಕೊಳ್ಳು: ಪ್ರಭುಗಳು ಅದನ್ನೂ ಕಣ್ಣಿಗೆ ಸೋಕಿಸಿಕೊಂಡು, ಅನಂತರ ಕುಡಿದರು (ಶಾಂತಲಾ. ೧೭೭). [ಸೋಕು$_2$ (< ಸೋಂಕು$_2$) + - ಇಸು$_3$]

**ಸೋಕು$_1$** 'ಸೋಂಕು$_1$' ನೋ.

**ಸೋಕು$_2$** 'ಸೋಂಕು$_2$' ನೋ.

**ಸೋಕುವರೆಯ** (ನಾ). ಆಗತಾನೇ ಕಾಣಿಸಿಕೊಂಡ ಪ್ರಾಯ: ಕಿರುವರೆಯದಿಂ ಸಂತತಮ್ಮಿಂಡಿವರೆಯದ ಸೋಕುವರೆಯ ನಡುವರೆಯದವರು . . . ಸಲೆ ಸೊಗಸುತಿರಲು (ನವಮೋ. ೨೪-೧೯). [ಸೋಕು$_2$ (< ಸೋಂಕು$_2$) + ಪರೆಯ$_2$ (< ಪರಯ)]

**ಸೋಕುಳಿ** (ನಾ). ಆಲಸ್ಯ; ನಿರುತ್ಸಾಹ: ''ಜಡತೆ ಸೋಕುಳಿ'' (ಸಂಜೀವ. ೨೫). [< ಸೋಂಬು + - ಕುಳಿ$_3$]

**ಸೋಕ್ಷಮೋಕ್ಷ** (ನಾ). ೧. ಇತ್ಯರ್ಥ; ತೀರ್ಮಾನ; ನಿರ್ಣಯ: ಈ ವಿಷಯದ ಸೋಕ್ಷ-ಮೋಕ್ಷ ಇಂದು ಆಗಿಯೇ ತೀರಬೇಕು (ಮೂರುದಾ. ೩೭). ೨. ಪರಿಣಾಮ; ಫಲ: ಅಂತೂ ಸೋಕ್ಷಮೋಕ್ಷದ ವಿಚಾರ ಮಾಡಿ ಕೊನೆಗೆ ಒಬ್ಬನೇ ಹೋಗಬೇಕೆಂದೂ ನಿಶ್ಚಯಿಸಿಕೊಂಡನು (ಗಂಮಾಯಿ. ೧೦೧). ೩. ನೆಲೆ; ಅಸ್ತಿತ್ವ: ಅಗ್ನಿದಿವ್ಯದೊಳಗಿಂದ ಹಾಯ್ದ ವ್ಯಕ್ತಿಗಳು ಇಲ್ಲಿ ತಮ್ಮ ಸೋಕ್ಷಮೋಕ್ಷಗಳನ್ನು ಕಂಡುಕೊಳ್ಳುತ್ತಾರೆ (ಸಮಜೀ. ೨೦ ಪೀಠಿಕೆ). ೪. ಕೊನೆ; ಅಂತ್ಯ: ಇಂಥ ಮಹತ್ವವುಳ್ಳ ಅವಧಿಯಲ್ಲಿ ಅನೇಕ ಬಾಲಬಾಲಿಕೆಯರು ತಮ್ಮ ಸೋಕ್ಷಮೋಕ್ಷಗಳನ್ನು ಮಾಡಿಕೊಂಡುಬಿಡುವರು (ಬ್ರಹ್ಮಚೀ. ೫೯). [← ಮರಾ. ಸೋಕ್ಷಮೋಕ್ಷ]

**ಸೋಗಲಕ್ಕಿ** 'ಸೋಗಿಲಕ್ಕಿ' ನೋ.

**ಸೋಗಲಾಡಿ** (ನಾ). ೧. ಸೋಗು ಮಾಡುವವಳು; ಒಯ್ಯಾರಿ; ಒನಪುಗಾತಿ: ಈ ಸೋಗಿನ ಮಾತುಗಳನ್ನು ಸೋಗಲಾಡಿಯರ ಮುಂದೆ ಹೇಳಿದಂತೆ ನನ್ನ ಮುಂದೆಯೂ ಹೇಳಬೇಡ (ಮಣ್ಣಮ. ೨೬೭); ನೀನು ಪಾರಾಗಿ ಮುಂದೆ ಹೋದ ಮೇಲೆ ಆ ಸೋಗಲಾಡಿ-ಮಾಟಗಾತಿಯರ ರೂಪವು ಬಯಲಿಗೆ ಬೀಳುವದು (ಧರ್ಮಸ. ೧೧). (ಗು) ೨. ಬೆಡಗಿನ; ಒಯ್ಯಾರದ: ಆ ಸೋಗಲಾಡಿ ಉಷೆಯಿದ್ದರೆ ಇಲ್ಲಿಗೆ ಬರಬೇಕಲ್ಲವೇ? (ಸುದರ್ಶ. ೧೧೦); ಅನಿಷ್ಟ ಸೋಗಲಾಡಿ ಹುಡುಗಿ (ಪಂಕ್ಷಿ. ೩೧). [< ಸೋಗು + - ಆಡಿ$_1$]

**ಸೋಗಲು** 'ಸೋಂಕಿಲ್' ನೋ.

**ಸೋಗಲುದುಂಬು, ಸೋವಿಲುದುಂಬು** (ಕ್ರಿ). ಮಡಿಲಲ್ಲಿ ಸೋಗಲಕ್ಕಿಯನ್ನು ತುಂಬು: ಸೋಗಲುದುಂಬಿ ಪುಟ್ಟಿವಾಳಿಗೇಲಿ ಇರು ಗೌರಿ (ಕಜಕಾ. ೧೩೩).

**ಸೋವಿಲುದುಂಬು**: ವರಮುತ್ತಿನಕ್ಷತೆಯನ್ನು ಸೋವಿಲುದುಂಬಿ (ಜ್ಞಾನಚ. ೩-೧೫೭). [ಸೋಗಲು (< ಸೋಂಕಿಲ್) + ತುಂಬು$_1$]

**ಸೋಗಳಿ** 'ಸೊಗುಳಿ' ನೋ.

**ಸೋಗಿಗ** (ನಾ). ವೇಷ ಹಾಕುವವನು; ವೇಷಧಾರಿ: ಜಗದೊಳಗಣ ಮನುಜರು ಸೋಗಿಗನಂತಿಪ್ಪರು ಸೋಗಿಗನಾಡಿಸುವರ ಪೂಜೆ ಬೇಚ್ಕೆ (ದೇದಾವ. ೭೦-೧೪೫). [ಸೋಗು + - ಇಗ]

**ಸೋಗಿಲ್** 'ಸೋಂಕಿಲ್' ನೋ.

**ಸೋಗಿಲಕ್ಕಿ, ಸವಲಕ್ಕಿ, ಸೋಗಲಕ್ಕಿ, ಸೋಬಲಕ್ಕಿ, ಸೌಲಕ್ಕಿ** (ನಾ). ಮನೆಯ ಹೆಣ್ಣುಮಕ್ಕಳನ್ನು ಕಳುಹಿಸಿಕೊಡುವಾಗ ಅಥವಾ ಗೌರಿಹಬ್ಬ ಮುಂತಾದ ಸಂಧರ್ಭಗಳಲ್ಲಿ ದೇವರಿಗೆ, ಮಡಿಲನ್ನು ತುಂಬುವ ಅಕ್ಕಿ, ಬೆಲ್ಲ, ತೆಂಗಿನಕಾಯಿ, ಕುಪ್ಪುಸದ ಬಟ್ಟೆ, ಎಲೆಯಡಿಕೆ, ಅರಿಸಿನಕುಂಕುಮ ಮುಂತಾದುವು; ಮಡಿಲಕ್ಕಿ; ಉಡಿಯಕ್ಕಿ: ಆಕೆ ಮಗಳಿಗೆ ಸೋಗಿಲಕ್ಕಿಯನ್ನು ಹಾಕಿ ಗಂಡನ ಮನೆಗೆ ಕಳುಹಿಸಿಕೊಟ್ಟರು (ರೂಢಿ). **ಸವಲಕ್ಕಿ**: ತನ್ನ ಕೈಯಲಿದ್ದ ಸವಲಕ್ಕಿಯ ಮರವನ್ನಲ್ಲಿರಿಸಿ ಅಲ್ಲಿಂದೊಮ್ಮೆಯೇ ಚಿಮ್ಮಿದ್ದಳು (ಬಂಗಾಡಾ. ೧೪). **ಸೋಗಲಕ್ಕಿ**: ಎಲ್ಲರಿಂದಲೂ ಸೋಗಲಕ್ಕಿ ಇಡಿಸಿಕೊಂಡ ಗೌರಮ್ಮನ ಹಂಗೆ ನಿಮ್ಮ ಹಿಂದೆ ಬಂದುಬಿಡುತೇನಿ (ಮಲ್ಲಿ. ೨೮೩). **ಸೋಬಲಕ್ಕಿ**: ಹೆಣ್ಣುಮಕ್ಕಳನ್ನು ತೌರಿನಿಂದ ಕಳುಹಿಸಿಕೊಡುವಾಗ ಸೋಬಲಕ್ಕಿ ಹಾಕುವುದು ಒಂದು ಸಂಪ್ರದಾಯ (ರೂಢಿ). **ಸೌಲಕ್ಕಿ**: ಅಗ್ರಹಾರದ ಸುಮಂಗಲಿಸ್ತ್ರೀಯರಿಗೆ ಸೌಲಕ್ಕಿಗಾಗಿ ಕೊಡಲು ಇಪ್ಪತ್ತೈದು ರೇಶ್ಮೆಕಣ ಗಳನ್ನು ತೆಗೆಯಲಾಯಿತು (ಮೂಲಾನ. ೧೧೩). [ಸೋಗಿಲು (< ಸೋಂಕಿಲ್) + ಅಕ್ಕಿ$_1$]

**ಸೋಗಿಲು** 'ಸೋಂಕಿಲ್' ನೋ.

**ಸೋಗು, ಸೋಂಗು, ಸೋಗೆ$_2$** (ನಾ). ೧. ತೋರಿಕೆಯ ರೂಪ; ವೇಷ: ನನಗೆ ಬಹಳೇ ವ್ಯಸನವಾಗಿ . . . ಬೇನೆಯವನ ಸೋಗು ತೆಗೆದುಕೊಂಡಿದ್ದೇನೆ (ಮುಂಬಯಿ. ೪-೭೭); ಈ ಎರಡನೆಯ ಕಾರ್ಯವನ್ನು ನೆರವೇರಿಸಲು ಈ ಹುಚ್ಚನ ಸೋಗೇ ಸರಿ (ರಾವಿಜ. ೧೬). ೨. ಛದ್ಮವೇಷ; ಮಾರುವೇಷ: ಬೋಯರ ಸೋಗಿಂದ ಮೇಣಗಳನ್ನು ಎತ್ತಿಕೊಂಡು ಹೋಗಹತ್ತಿದರು (ಮುಂಬಯಿ. ೬. ೫-೪೦). ೩. ನಟನೆ; ತೋರಿಕೆ: ನಾನು ಸೋಗಿನ ನಿದ್ದೆಯಲ್ಲೇ ಬಡಬಡಿಸಿದೆ (ಸ್ಮೃತಿಚಿ. ೧೧೪); ಎಲ್ಲವೂ ಅಂತರ್ಯಾಮಿಯ ಸೋಗಿನ ರೂಪದಂತೆ ತೋರುತ್ತದೆ (ಸಾಂದಸ. ೩೬). ೪. ನೆವ; ನೆಪ: ಸ್ವಾರ್ಥಬುದ್ಧಿಯು . . . ಲೋಕಸೇವೆಯ ಸೋಗಿನಲ್ಲಿ ಅದು ತನ್ನ ಕಾಯಕವನ್ನು ನಡಿಸಿಯೇ ಇದೆ (ಯಕ್ಷಪ್ರ. ೩೭); ಪ್ರೇಮಯೆನ್ನುವ ಸೋಗಿನಲ್ಲಿ ಕಂಡಕಂಡ ಹೆಣ್ಣುಗಳ ಮೇಲೆ ಕಣ್ಣು ಹಾಕುವ ಕಾಮಿ (ಆಲಹೂ. ೧೪೯). ೫. ಪಾತ್ರ; ಪಾತ್ರಧಾರಿ; ವೇಷಕಟ್ಟುವ ವ್ಯಕ್ತಿ: ಮೊದಮೊದಲು ಸೋಗು ಆಗಲಿಕ್ಕೆ ನಾಚಿ ಒಲ್ಲೆನೆಂದನು (ಚಿಟ್ಟಹೊ. ೧೬); ನನ್ನ ನಾಟಕದಲ್ಲಿ ಕುಣಿಸಿರುವೆ ಇಂತಹ ಸಾವಿರಾರು ಸೋಗುಗಳನ್ನು (ವೃದ್ಧರಾ. ೩). **ಸೋಂಗು**: ೧. ಬಾಂಬೊಲದಲ್ಲಿ ಹುಂಬಗಾಳಿಗುರುಬ ತರುಬಿದುಣ್ಣೆ ಕುಂಮರಿಗಳ ಕಿರಿಹಿಂದು:- ಇದೂ ಒಂದು ಸೋಂಗು! (ದ್ಯಾವಾಪೃ. ೧-೮). **ಸೋಗೆ$_2$**: ೩. ಕೋಮಟಿಶೆಟ್ಟಿ ಯುಕ್ತಿಯುಳ್ಳವನಾದ್ದರಿಂದ ಕಳ್ಳನ ಸೋಗೆ ತಿಳಿದು . . . ಮೋಸಹೋಗದೆ ಇದ್ದನು (ಕಥಾಮಂ. IV, ೨೬).

**ಸೋಗಿನವನು** = ತೋರಿಕೆಯ ವೇಷಕಟ್ಟುವವನು: ಸರಸಭಾಷಿಗೆ ಮೋಸಗಾರ ನೆಂಬುವರಮಲತರ ವಸ್ತ್ರಭೂಷಿತಗೆ ಸೋಗಿನವನೆಂಬುವರು (ಮಲ್ಲಚ. ೨-೧೮). [← ಮರಾ. ಸೊಂಗ್ ./ ಸಂ. ಯೋಗ]

**ಸೋಗುಗಾರ** (ನಾ). ತೋರಿಕೆಯ ವೇಷಹಾಕುವವನು: ''(ಮೋಸ ಮಾಡಲು) ಇನ್ನೊಬ್ಬನಂತೆ ವೇಷತಾಳಿದವನು . . . ಸೋಗುಗಾರ; ಠಕ್ಕ; ಮೋಸಗಾರ'' (Imposter. ಇಂಕನ). [ಸೋಗು + - ಗಾರ (<- ಕಾಱ)]

**ಸೋಗುಡು** 'ಸೋಗೊಡು' ನೋ.

**ಸೋಗುಳಿ** 'ಸೊಗುಳಿ' ನೋ.

**ಸೋಗೆ$_1$, ತೋಕೆ** (ನಾ). ೧. (ಸಾಮಾನ್ಯವಾಗಿ ಗಂಡು) ನವಿಲು; ಮಯೂರ: ''ಮೋರವೆಂದುಂ ಸೋಗೆಯೆಂದುಂ ನವಿಲ್'' (ಕಶಸಾ. ೫೧-೯೬); ಕಾರ್ಗಾಲಮಂ ಸೋಗೆ . . . ನೆನೆವಂತಾಂ ನೆನೆವೆಂ ಸರೋಜಮುಖಿಯಂ (ಆದಿಪು. ೧೨-೩೧); ಪಾಡುವ ಹಂಸ ರಾಗದಿಂದಾಡುವ ಸೋಗೆ (ಸೌಇಇ. IX-i, ೧೧೮-೨೪; 1057); ಸೋಗೆಗಳ ಸುಳಿವುಗಳ ಕಪಿಗಳ ಲಾಗುಗಳ ಲಂಘನೆಯಲೆಸೆದುದು . . . ತತ್ಪುರೋದ್ಯಾನ (ತೊರರಾ. ೧-೯-೧೩). ೨. ನವಿಲಿನ ನೀಳವಾದ ಪುಚ್ಛ; ಬರ್ಹ: ''ಕಳಾಪಃ, ಬರ್ಹಃ - ಈ ೨ ಸೋಗೆ'' (ಹಲಾಯು. ೪೧-೮೯); ಕೋಮಳತನುಯಷ್ಟಿ ಕಲ್ಪಲತಿಕಾಂಕುರವೊಳ್ಮಿಡಿ ಸೋಗೆ ಮನ್ಮಥಾನಳಶಿಖಿ ಬೇಗೆಯಾಗೆ ಮದನಾಟವಿಯಂತೆವೊಲೊಪ್ಪಿ ತೋಱಿದಳ್ (ಕಾವ್ಯಸಾ. ೬೧೨ ಶೂದ್ರಕ); ಪೊಳೆವಿನಕಿರಣಂ ಮೆಯ್ಗಳನಳುರೆ ಕನಲ್ದಾಗಿದು ಸೋಗೆಯಂ ಪರಪಿ ನೆಟಿಲ್ಗಳನಾಸೆವಡೆ ಶಿಖಾವಳಿಕುಳತಾಂಡವಮೆಸೆದುದಾ ಶರತ್ಸಮಯದೊಳಂ (ಆದಿಪು. ೧೧-೪೯). ೩. ತಾಳೆ, ತೆಂಗು, ಅಡಕೆ ಮುಂತಾದ ಮರಗಳ ಎಲೆ; ಗರಿ: ಎಸೆವ ಸೋಗೆಗಳ ಸೀಗುರಿಗಳಿಂ ಮಿಗೆ ಮೆಱೆವ ತೆಂಗುಗಳ ಸತ್ತಿಗೆಗಳಿಂ . . .

ವನಮೆಸೆದುದು (ಪದ್ಮರಾ. ೮-೨೩); ಮೂಲೆಮೂಲೆಗೂ ತುಂಬುವ ಹಾಗೆ ಸೋಗೆಯನ್ನೆಲ್ಲಾ ಹರಡಿದ್ದಲ್ಲದೆ ಅಂಗಳವೆಲ್ಲಾ ಕಸ ಮಾಡಿಬಿಟ್ಟನು (ಕಥಾಮಂ. IV,೧೩). ೪. ಕಬ್ಬಿನ ಬುಡ ಹಾಗೂ ತುದಿಯಲ್ಲಿ ಪೊರೆಯಂತೆ ಚೂಪಾಗಿರುವ ಎಲೆ: ನೀಳ್ದುಜ್ ಬೆಳೆದ ರಸದಾಳಿಗರ್ವುಗಳ ಸೋಗೆಗಳ ಪಸುರುವೊಗರಾಗಸಕೆ ಪರ್ವುತಿಹುದು (ಚೈಮಿಭಾ. ೩-೫); ಗಗನದೆ ಚರಿಸುವ ಗಿಳಿಯ ದೇಹಚ್ಛವಿ ಮಿಗೆ ನಮ್ಮ ಪಸುರ್ಗಣೆಯಹುವೆ ನಗವ್ಕೆರಿ ನೋಡೆಂದು ತೋರ್ಪೊಲಿಕ್ಕುವ ಸೋಗೆ ಸೊಗಸಲುನ್ನತವಾಗಿಹುದು (ಕಂಸವಿ. ೫-೭೫). ೫. ಉಟ್ಟ ಸೀರೆಯ ಉದ್ದವಾದ ನೆರಿಗೆ : ಒಳ್ನಿಱಿಯಸಡದ ತೋಳ್ ಸೋಗೆಯಂ ನೂಲ ತೊಂಗಲ್ . . . ಉರಮಂ ಸಂಚಳತ್ತಾರಹಾರಂ ಪಸರಂಬೆತ್ತೆತ್ತಮೋರಂತಲೆಯೆ ಭರತನಂ ನೋಡಲ್ಕೆತಂದಳೊರ್ವಳ್ (ಆದಿಪು. ೧೧-೧೭); ಅಚ್ಚರಸೆಯ ಕನಕಕಾಂಚೀಕಲಾಪ ದೊಳ್ ತೊಡರ್ದ ದೇವಾಂಗವಸ್ತ್ರದುಳ್ಳುಡೆಯೊಳುಲಿವ ಸೂಸಕದ ನೂಲ ತೊಂಗಲ್ವೆ ರಸೆಬಲ್ಲ ಮುಂದಣ ಸೋಗೆ ಕಾರ್ಗಾಲದ ಸೋಗೆಯಂತೆ ಸೊಗಯಿಸೆ (ಪಂಪಭಾ. ೨-೪೧ವ). ೬. ಉದ್ದ; ನೀಳ: 'ಸೋಗೆಮೊಗ' ಪರಾ. ೭. (ಸೀರೆಯನ್ನು ಉಡುವಾಗ) ನಿರಿಗೆಗಳನ್ನು ಬಾಳೆಕಾಯಿಯ ಆಕಾರದಲ್ಲಿ ಮೇಲಕ್ಕೆ ತಿರುವಿ, ಸೊಂಟದಲ್ಲಿ ಮಡಿಸಿ ಸಿಕ್ಕಿಸಿದ ಸೀರೆಯ ಅಂಚು; ಬಾಳೆಕಾಯಿ: "ನೀವಿಯುಚ್ಚಯಂ ಸೋಗೆಯಕ್ಕು" (ಮಂಗರಾ.೧೦೧-೨೯). ೮. "ಕೊರಳಿನಲ್ಲಿ ಶಾಲಿನಂತೆ ಹಾಕಿಕೊಳ್ಳುವುದು. ಇದು ಉಡಿಗೆಯೊಳಗಿನದು" (ಪಾರ್ತಿಸು. ೪೭). ೯. ಕಣ್ಣಿನ ತುದಿ ,– ಕುಡಿ; ಕಡೆಗಣ್ಣು : ಬೆಳತಿಗೆಗಣ್ಣೆರಡಱ ಸೋಗೆಗಳಿಂದಿಳಿತಹ ನವಜಲಧಾರಾ ದ್ವಿತಯಂ ತೊಳಗಿದುವಲರ್ಗಣೆಯನ ಮಿಡಿವಿಲ್ಲಮಳ್ಳೆದೆಯೆಂಬಂದದೊಳು (ಜಯಕಾ. ೪-೨೯). ೧೦. ಕಣ್ಣಿನ ತುದಿಗೆ ತಿದ್ದುವ ಕಾಡಿಗೆಯ ರೇಖೆ, – ಗೆರೆ : ಕೆಲವರು ಕಣ್ಣಿನ ತುದಿಗೆ ಸೋಗೆಯನ್ನು ಎಳೆಯುತ್ತಾರೆ (ರೂಢಿ). ೧೧. ಹಡಗಿನ ತುದಿ,– ಚೂಣಿ: "ಅಂತ್ರಂ, ಕೋಟಿಪತ್ರಂ – ಈ ೨ ನಾವೆಯ ಸೋಗೆ" (ಹಲಾಯು. ೧೧೧-೫೦). ೧೨. ಒಳಭಾಗ; ಮಡಿಲು: ತಾಯ ಸೋಂಕಿಲೊಳ್ ಸಿತಕಾಯಂ ಶುಕ್ತಿಕೆಯ ಸೋಗೆಯೊಳ್ ನವಮುಕ್ತಾಫಲದಂತೆ ತೊಳಗುತಿರ್ದಂ ತನಯಂ (ಅನಂಪು. ೧೨-೮೦). ೧೩. ಜೊಂಪೆ; ಗೊಂಚಲು: ಉರ್ಚಿ ಸೀಟ್ದ ಬಸುಱಿಂ ನಿಸದಂ ಬಿಸುನೆತ್ತರ ಪೊನಲುಂ ಕರುಳ ಸೋಗೆಯುಂ ಕವಿದವವನಿಗಾ ಯತಿಪತಿಯಾ (ವರ್ಧಪು. ೩-೭). ೧೪. ಒಂದು ಬಗೆಯ ಮರ ಮತ್ತು ಅದರ ತಳಿರು: ಮತ್ತೊಂದೆಡೆಯೊಳ್ಸೋಗೆ ಮಾವು ಮೊದಲಾದ ತಳಿರ್ದೊಂಬೆಗಳಿಂ ಮತ್ತೊಂದೆಡೆಯೊಳ್ ರನ್ನವೊನ್ನಳಿಂ ಸಮೆದ ಸಜ್ಜೆವನೆಗಳುಮಂ . . . ಭಾವಿಸಿದಂ (ಚಿಕವಂ. ೮೫-೩). ೧೫. (?) : ನೋಡಿರೆ ಸೋಗೆ ಹಗನಂ ಹಿಡಿದಾಡಿಸಿ ಪರಿಗೊಳುವ ನರರ ಭಂಗಿಯೆ ಕೆಲಬರ್ಮಾಡುವ ತಪಮುಂ ಶ್ರುತಮುಂ ಕೂಡವು ವಿದ್ವಜ್ಜನಕ್ಕೆ ಪೊಕ್ಕಾರಯ್ಕಲ್ (ಪಸಾರ. ೫೦೨). ತೋಕೆ: ೨. ಭಾರದ ತೋಕೆಯನಾವ ಪುರುಷಾರ್ಥಕೆ ಹೊತ್ತು ನವಿಲಿಂತು ನೋವುದೊ (೧೦ಬಾಪು. ೧೫೦-೩೭). ೪. ಕಾಕುತ್ಸ್ಥಕುಲನ ಕೈ ಸೋಕಿದೊಡೆ ಸಾಕೆಲಾ ಈ ಕೋಲು ಕಬ್ಬಿನ ತೋಕೆಯೆನಿಸುವುದ್ಭೆಸೆ (ಹಂಸದ. ೨೯೩). ೧೬. ಗಿಣಿ ಮುಂತಾದ ಪಕ್ಷಿಗಳಿಗಿರುವ ಬಾಲದಂತೆ ಉದ್ದವಾದ ಪುಚ್ಛ: ಚಿಕ್ಕ ಮ್ಮಗೆ ಸ್ವಲ್ಪ ಹಿರಿದು; ಚಿಕ್ಕದಲ್ಲ ತೋಕೆ ಕೂಡ; ಹಕ್ಕಿ ನಿನಗೆ ಕೋಪ ಬೇಡ ನಿಜವ ನುಡಿದರೆ (ತಾವರ. ೫೧-೧೧); ಹಕ್ಕಿಗಿಂತಲು ತೋಕೆ ಮಿಕ್ಕಿತು (ನವರಾ. ೭೯-೪). ೧೭. ತುದಿ; ಕೊನೆ: ಮುಗಿಲ ತುಡುಕುವ ತಲೆಯ ತೋಕೆ [ಪಾಠಾಂ.ಚೋಕೆ, ತೆಕ್ಕೆ]ಯ ತೋರಹತ್ತನ ಕಂಡು ಕುರುಸೇನೆ ಕಳವಳಿಸಿದರು (ಕುವ್ಯಾದ್ರೋ. ೧೫-೫೧).

[ದೇ. ‖ ತಮಿ. ತೋಕ್ಕೈ; ಮಲ. ತೆಲು. ನಾಯ್ಕಾ. ಪರ್ಜಿ. ತೋಕ; ತುಳು. ಸೋಗೆ, ಚೋಗೆ; ಗೊಂಡಿ. ತೊಕಾ ./ ಮರಾ. ಸೋಗಾ]

**ಸೋಗೆ$_2$** 'ಸೋಗು' ನೋ.

**ಸೋಗೆಕಣ್ಣು** 'ಸೋಗೆಗಣ್' ನೋ.

**ಸೋಗೆಗಣ್, ಸೋಗೆಕಣ್ಣು, ಸೋಗೆಗಣ್ಣು** (ನಾ). (ನವಿಲಿನ ಗರಿಯ ಕಣ್ಣಿನಂತೆ) ನೀಳವಾದ ಕಣ್ಣು; ಚೆಲುವಾದ ಕಣ್ಣು: ಬಾಗಿಲಲಿ ಬಾಗಿಲಲಿ ನಿಂದರು ಸೋಗೆಗಣ್ಣಬಲೆಯರು (ಕುವ್ಯಾಅ. ೮-೧೪); ಸೋಗೆಗಣ್ಣಬಲೆ ಸಂತೋಷವಪ್ಪುದಳು ಭೂಭಾಗವೆಲ್ಲವನಾಳಿದಂತೆ (ಭರಚ. ೩೫-೮೩). **ಸೋಗೆಕಣ್ಣು:** ಸೋಗೆಮೊಗದ ಸೋಗೆಕಣ್ಣಿನ ಚೆಲುವೆ ಶಾಂತಲೆ (ಶಾಂತಲಾ. ೭೯). **ಸೋಗೆಗಣ್ಣು :** ಸೋಗೆಗಣ್ಣುಗಳ ಹೆಂಗಳ ಸಾಲು ಟೀವಿಯ ತೋಱುತೊಪ್ಪಿದುದು (ಕಂಸವಿ. ೬-೧೧೨); ಚೆಂದುಟಿಯ . . . ಬೆಳಗುವ ಸೋಗೆಗಣ್ಣುಗಳ ಮಂದಹಾಸದಲಿಂದು ಸೌಖ್ಯವಿದೆಂದು ಕೊಱಚಾಡುವರು (ಅಮೃತ. ೨-೭೯). [ಸೋಗೆ$_1$ + ಕಣ್]

**ಸೋಗೆಗಣ್ಕೊನೆ** (ನಾ). ನೀಳವಾದ ಕಣ್ಣಿನ ಕುಡಿ , – ತುದಿ: ಸೋಗೆಗಣ್ಕೊನೆಯ ಬೆಳಗು ಕುಡಿವರಿದುದೆಳೆಮುತ್ತಿನ ಕೀಲಣದ ಕನಕಪೂರಕಗಳಂ ಕೆಳೆಗೊಳಿಸಿ (ಸೌಂದಪು. ೭-೨೪). [ಸೋಗೆಗಣ್ + ಕೊನೆ$_2$]

**ಸೋಗೆಗಣ್ಣು** 'ಸೋಗೆಗಣ್' ನೋ.

**ಸೋಗೆಗರಿ** (ನಾ). ತೆಂಗು, ತಾಳೆ, ಅಡಕೆ ಮೊದಲಾದ ಮರಗಳ ಎಲೆ,– ಗರಿ: ಅಡಕೆಯ ಸೋಗೆಗರಿ ಹೊದಿಸಿದ್ದ ಮಾಡಿನಿಂದ ಇರಿಚಲು ಬೀಸಿದಾಗ ಅಭ್ಯಾಸಬಲದಿಂದ ಸ್ವಲ್ಪ ದೂರ ಸರಿದು ಕುಳಿತಿದ್ದರೇ ವಿನಾ (ಮಲಮ. ೯). [ಸೋಗೆ$_1$ + ಗರಿ (< ಗಱಿ)]

**ಸೋಗೆದುರುಂಬು** 'ಸೋಗೆದುಱುಬು' ನೋ.

**ಸೋಗೆದುರುಬು** 'ಸೋಗೆದುಱುಬು' ನೋ.

**ಸೋಗೆದುಱುಬು, ಸೋಗೆದುರುಂಬು, ಸೋಗೆದುರುಬು** (ನಾ). ೧. ನವಿಲಿನ ಸೋಗೆಯಂತೆ ಜೋಲಾಡುವ ಮುಡಿ; ಸಡಿಲವಾಗಿ ಕಟ್ಟಿದ ಮುಡಿ: ಸೋಗೆದುಱುಬಿನ ಸರಸವಚನದ . . . ಸುರರ ಸೂಳೆಯರಿರ್ದರು (ತೊರರಾ. ೬-೧೦-೧೧); ಸೋಗೆದುಱುಬಿನ ಶೃಂಗಾರದಾಭರಣದ . . . ಪೂಗಣೆಯನ ಮಸೆದಲಗಿನಂತೆಸೆದಳು ನಾಗಮಂಗಲದ ಚೆಲ್ವಾಜಿ (ಕಂಸವಿ. ೨೧-೬೯). **ಸೋಗೆದುರುಂಬು: ೨.** ನವಿಲುಗರಿಗಳಿಂದ ಅಲಂಕರಿಸಿದ ಮುಡಿ: (೩). **ಸೋಗೆದುರುಬು:** ೧. ತೊಳಗುವ ಫಣಿವೇಣಿಯ ಸೋಗೆದುರುಬಿನ ಲಲನೆ (ಇಚಸಾಂ. ೮-೯೯).

[ಸೋಗೆ$_1$ + ತುಱುಬು$_2$ (< ತುಱುಂಬು$_2$)]

**ಸೋಗೆನವಿಲ್, ಸೋಗೆನವಿಲು** (ನಾ). ನೀಳವಾದ ಪುಚ್ಛವನ್ನು ಹೊಂದಿರುವ ನವಿಲು; ಗಂಡುನವಿಲು: ವಿದಗ್ಧೆ . . . ನರ್ತಕೀಲೀಲೆಯಿಂದದೊಂದು ಪೊಸಗಾರ ಸೋಗೆನವಿಲಾಟಮಂ ತಾಳ್ದಿದಳ್ (ಆದಿಪು. ೧೨-೧೪); ಮಣಿಭವನಂಗಳ ರುಚಿಗಳ್ ಪೆಣೆದು ನಭೋಂಗಣದೊಳಮರಚಾಪವಿಳಾಸಕ್ಕೆಣೆಯಾಗಿರೆ ಬಹುವಿಧದಿಂ ಕುಣಿವುವು ಕಾರ್ಗೆತ್ತು ಕೇಗಿ ಸೋಗೆನವಿಲ್ಗಳ್ (ಕಾವ್ಯಾವ. ೫೦೪). **ಸೋಗೆನವಿಲು:** ರಕ್ತಪ್ರವಾಹದ ಕಡುವಳೆಯ ನೃತ್ಯತ್ಕಬಂಧದ ಸೋಗೆನವಿಲುಗಳ . . . ನವಖಂಡದೊಳು ಹೆಣನಡವಿ ತಳಿತಿರೆ ಮೆಱೆದುದೈ ಸಂಗ್ರಾಮಕಾರ್ಗಾಲ (ಕುವ್ಯಾಭೀ. ೪-೩೭); ಸೋಗೆನವಿಲು ಬಣ್ಣ ಗೋಗಿಲೆ ಹರಿ ರಥಾಂಗದ ಪ್ರತಿಮೆಗಳು ಮೆಱೆದುವು (ಕಂಸವಿ. ೭-೨೮); ಎಲೆಲೆ ಸೋಗೆನವಿಲೆ! ಏಂ ನಲಿವೈ! (ರಾಮಾಶ್ವ. ೧-೮). [ಸೋಗೆ$_1$ + ನವಿಲ್]

**ಸೋಗೆನವಿಲು** 'ಸೋಗೆನವಿಲ್' ನೋ.

**ಸೋಗೆನಿಱಿ** (ನಾ). ಉಟ್ಟ ಸೀರೆಯ ಉದ್ದವಾದ ನಿರಿಗೆ: ಸಳಿದು ಮರಳ್ಚಿ ಸೋಗೆನಿಱಿಯಂ ಮೃದುಜಂಘೆಯನೊಯ್ಯನಂಟಿ . . . ಮಳಯಸಮೀರಣಂ ಸರಸವಾಡಿದನಗ್ಗದ ಪೆಂಡವಾಸಮಂ (ಅನಂಪು. ೭-೩೩). [ಸೋಗೆ$_1$ + ನಿಱಿ$_2$]

**ಸೋಗೆಪಣ** (ನಾ). ನವಿಲಿನ ಮುದ್ರೆಯಿರುವ ನಾಣ್ಯ(?): ಶ್ರೀಭೋಗೇಶ್ವರ ದೇವರಂಗಭೋಗಕೆ ಆ ದೇವರ ತೋಟದ ದರಿಸಿನ ಸೋಗೆಪಣವನಾಚಂದ್ರಾರ್ಕ ತಾರಂಬರಂ ಬಿಟ್ಟರು (ಸೌಇಇ. XV, ೨೫-೧೭; 1144). [ಸೋಗೆ$_1$ + ಪಣ$_3$]

**ಸೋಗೆಮುಡಿ** (ನಾ). = ಸೋಗೆದುಱುಬು ೧: ಸೋಗೆಮುಡಿಗೆ ಸೋಲ್ತೊಡನೆ ನವಿಲೋಲಗಿಸಿ ಬರೆ (ಚಿಬಪು. ೧೯-೨೩); ಆಗಸದೊಳು ಚರಿಸುವ ಸುರಸತಿಯರ ಸೋಗೆಮುಡಿಗೆ ಪೂಜ್ಯವಾಗಿ ಆಗರಳಿದ ಕಸ್ತೂರಿ ಹೊಂಬಾಳೆಯ ಪೂಗವೃಕ್ಷ ಗಳೊಪ್ಪುತಿಹುವು (ಕಂಸವಿ. ೨-೪೧). [ಸೋಗೆ$_1$ + ಮುಡಿ$_2$]

**ಸೋಗೆಮೊಗ** (ನಾ). ನೀಳವಾದ ಮುಖ; ಉದ್ದನೆಯ ಮುಖ: ಸೋಗೆಮೊಗದ ಸೋಗೆಕಣ್ಣಿನ ಚೆಲುವೆ ಶಾಂತಲೆ (ಶಾಂತಲಾ. ೭೯). [ಸೋಗೆ$_1$ + ಮೊಗ]

**ಸೋಗೆವಸುರ್** (ನಾ). ಕಬ್ಬಿನ ಜಲ್ಲೆಯ ತುದಿಯಲ್ಲಿರುವ ಎಲೆಯ ಹಸುರುಬಣ್ಣ: ಸುಕೋದಂಡರೂಪಿಂ ಸ್ವಾಮಿಹಿತಕಿನ್ನು ತಮ್ಮೊಳುದ್ದಂಡತೆಯ ಬಿರುದೆತ್ತಿತೆನೆ ಸೋಗೆವಸುರ ಕಬ್ಬಿನ ಕೊರ್ಬು ಕಣ್ಸೆಸೆದುದು (ಚಿಬಪು. ೧೧-೧೧).

[ಸೋಗೆ$_1$ + ಪಸುರ್$_2$]

**ಸೋಗೆವಿಂಡು** (ನಾ). ನವಿಲುಗಳ ಗುಂಪು,– ಸಮೂಹ: ಅಂಚೆವಿಂಡಿಂ ಗಿಳಿವಿಂಡಿಂ ಸೋಗೆವಿಂಡಿಂ ಸೊಗಯಿಸಲೆಸೆಗುಂ ತತ್ಪುರೋದ್ಯಾನಮೆಂದುಂ (ಕಾವ್ಯಸಾ. ೧೪೦). [ಸೋಗೆ$_1$ + ಪಿಂಡು$_2$]

**ಸೋಗೆವಿರ್ಚು** (ಕ್ರಿ). (ನವಿಲು) ಗರಿಯನ್ನು ಹರಡು,– ಅಗಲ ಮಾಡು: ಮುನಿಬಾಲಿಕೆಯರ್ ಮಧ್ಯಂದಿನದೊಳ್ ಬಂದರ್ಘ್ಯಜಲಮನುಯ್ಯೆಡೆಯೊಳ್ ಮೇಲೆ ನೆಟಲ್ ಪುದಿದೊದವಿರೆ ಸೋಗೆನವಿಲ್ಗಳ್ ಸೋಗೆವಿರ್ಚಿ ಬರ್ಪುವು ನಭದೊಳ್ (ಜಗವಿ. ೧೭-೫೨). [ಸೋಗೆ$_1$ + ಬಿರ್ಚು]

**ಸೋಗೆವೀಲಿ** (ನಾ). ನವಿಲುಗರಿ: ಸೋಗೆವೀಲಿಯಂ ಬಿಗಿದು ಬಸಂತಂ ನಟ್ಟ ಕಾವನ ಗೆಲ್ಲಗಂಬಮೆನೆ ಕಾಯ್ಗೊನೆ ಪಣ್ಗೊನೆಯಿಂ ಕಣ್ಗೆಡ್ಡಮಾಗಿರ್ಕುಂ ಕೌಂಗುದೋಂಟಂ (ರಾಮಾಶ್ವ. ೮-೨೩). [ಸೋಗೆ$_1$ + ಪೀಲಿ]

**ಸೋಗೆವೆಣ್** (ನಾ). ಹೆಣ್ಣುನವಿಲು: ವಿರಿಂಚನಂಚೆಯಂ ಪಳಂಚಲೆಯದಂಚೆಯಿಲ್ಲ ಕುಮಾರನ ಮಯೂರಮಂ ಕೂರಿಸದ ಸೋಗೆವೆಣ್ಣಿಲ್ಲ (ಪುಷ್ಪಪು. ೯-೨೧ ವ). [ಸೋಗೆ$_1$ + ಪೆಣ್]

**ಸೋಗೆವೊದಱ್** (ನಾ). ನವಿಲಿನ ಸೋಗೆಗಳ ಸಮೂಹ,– ಮೊತ್ತ: ಓಡುವುದು ಸೋಗೆ ಸೋಗೆವೊದಱಿಂ ನೆಟಲಂ ಜರತಾಪಸರ್ಗೆ (ಸೂಕ್ತಿಸು. ೩-೧೭೩). [ಸೋಗೆ$_1$ + ಪೊದಱ್]

**ಸೋಗೊಡು, ಸೋಗುಡು** (ಕ್ರಿ). ೧. (ಹಾಡುವವರೊಂದಿಗೆ) 'ಸೋ' ಎಂದು ದನಿಗೂಡಿಸು; ಸೋ ಎನ್ನು: ಸೋಬಾನೆಪದ ಹೇಳುತ್ತಿದ್ದವಳೊಂದಿಗೆ ಉಳಿದವರೂ ಸೇರಿ ಸೋಗೊಡುತ್ತಿದ್ದರು (ರೂಢಿ). ೨. (ಅಲಂ) ಒಪ್ಪು; ಸಮ್ಮತಿಸು: ಒಂದು ವ್ಯಕ್ತಿಯೇ ಆಗಲಿ, ಸಮಾಜವೇ ಆಗಲಿ . . . ಪಂಥವಾಗಲಿ – ಈ ಕಲ್ಪಿನ ಕಥೆಗೆ ಸೋಗೊಡುತ್ತದೆ (ಮೂರ್ತಿಕಾ. ೫-೧೧). **ಸೋಗುಡು:** ೧. ಚುಚ್ಚುವ ಸೂಜಿಯ ನೋವು ಮರೆಯಲೆಂದು ಅವಳು ಹಾಗೆ ಸೋಗುಡುವುದು ಮತ್ತು ಹಾಡುವುದು (ಸರ್ವಮಂ. ೭೧). [ಸೋ$_2$ + ಕೊಡು$_1$]

**ಸೋಗೋಲು** (ನಾ). ಪಶು, ಪ್ರಾಣಿಗಳನ್ನು ಓಡಿಸುವ ಕೋಲು: ಬಾಗಿದ ಬೆನ್ನು . . . ಸೋಗೋಲು ಕಂಪಿಸುತಿರಲು ತೂಗುವ ತಲೆಯೆಸದಿರೆ ಹಣ್ಣುಮುದುಕರು ಸಾಗುತಿದ್ದರು (ನಾಗಕು. ೧೫-೫೨). [ಸೋ$_1$ + ಕೋಲು$_1$ (< ಕೋಲ್$_1$)]

**ಸೋಚಿ** (ನಾ). ಪವಿತ್ರನಾದವನು: ಚಾಗಕ್ಕೆ ಮುಯ್ಯಾಂಪರೀವಡೆ ಪಲ್ಗಚ್ಚುವರಾಮೆ ಸೋಚಿಗಳೆಮ್ಮೆನ್ದಿರ್ಪ್ಪರ್ (ಎಕ. II, ೧೩೩-೭೮; 982). [< ಸಂ. ಶೌಚಿನ್]

**ಸೋಚ್ಛ್ವಾಸ** (ನಾ). [ನಾಟ್ಯ] ''ಸುವಾಸನೆಯನ್ನು ಆಘ್ರಾಣಿಸುವಂತೆ ಅಥವಾ ನಿರ್ವೇದ[ಖೇದ]ಭಾವವನ್ನು ತೋರಿಸುವಂತೆ ಉಸುರನ್ನು ಒಳಕ್ಕೆ ಎಳೆಯುವುದು'' (ಲಾಸ್ಯರಂ. ೨೭೭ ಗದ್ಯಾನುವಾದ): ಪರಿಮಳಮಂ ತೆಗೆವುದಱಿಂ ಉರುತರ ನಿರ್ವೇದಭಾವದಿಂ ಪುಟ್ಟಿದುಸುರ್ ತರುಣೀ ಸೋಚ್ಛ್ವಾ[ಸಾ]ಖ್ಯವ ಧರಿಸುವ ನಾಸಿಕಮದಾಱು ತೆಱನೆನಿಸಿರ್ಕುಂ (ಲಾಸ್ಯರಂ. ೩-೭೫). [ಸಂ.]

**ಸೋಜಿ** (ನಾ). ರವೆ; ಸಜ್ಜಿಗೆ: (ಕ). [← ಮರಾ. ಸೋಜೀ; ಹಿಂ. ಸೂಜೀ]

**ಸೋಜಿಗ** 'ಚೋಜಿಗ' ನೋ.

**ಸೋಜಿಗಗೊಳ್ಳು** (ಕ್ರಿ). ಆಶ್ಚರ್ಯಪಡು; ವಿಸ್ಮಯಗೊಳ್ಳು: ಮಾರ್ಗದರ್ಶಿಯ ಕೂಡೆ ನಡೆದು ಮುಂದೆ ಕಂಡು ಸೋಜಿಗಗೊಂಡು ನಾನೆಂದೆ (ಕೋಗಿಲೆ. ೨-೩೭). [ಸೋಜಿಗ (< ಚೋಜಿಗ) + ಕೊಳ್ಳು$_1$ (< ಕೊಳ್$_1$)]

**ಸೋಜಿಗಪಡು** 'ಚೋಜಿಗಂಬಡು' ನೋ.

**ಸೋಜಿಗವಡು** 'ಚೋಜಿಗಂಬಡು' ನೋ.

**ಸೋಜಿಗವಡೆ** (ಕ್ರಿ). ಆಶ್ಚರ್ಯಕರವಾಗಿರು; ವಿಸ್ಮಯವಾಗಿರು: ಸೋಜಿಗವಡೆದ ಸುಗಂಧದಂಗಡಿಗಳು ರಾಜಿಸುತಿರ್ದುವಿಕ್ಕೆಲದಿ (ಮೋಹತ. ೩-೧೮). [ಸೋಜಿಗ (< ಚೋಜಿಗ) + ಪಡೆ$_1$]

**ಸೋಜಿಗೆ** 'ಸೋಡಿಗೆ' ನೋ.

**ಸೋಜ್ಯ** (ನಾ). ಶೌರ್ಯ; ಪರಾಕ್ರಮ: ಭೋಜ್ಯವಸ್ತುಗಳೊಳು ಮುಖ್ಯವಾದುದು ಲಲಿತಾಜ್ಯನಿರ್ಜರಜನರೊಳಗೆ ಸೋಜ್ಯಗುಣಾವಲಂಬನ [ಪಾಠಾಂ. ಸುಖಾಢ್ಯ ಪಾಲಕ] ಕೃಷ್ಣ ಸುಖಸಾಮ್ರಾಜ್ಯವನಾಳಿದ ಮುದದೆ (ಮೋಹತ. ೪೨-೭೫). 'ಸೌರಿಯ' ಪರಾ. [< ಪ್ರಾ. ಸೋಜ್ಜ./ ಸಂ. ಶೌರ್ಯ]

**ಸೋಟ** 'ಸೋಟೆ$_1$' ನೋ.

**ಸೋಟಕ** 'ಸಟ್ಟುಗ$_1$' ನೋ.

**ಸೋಟಾ** 'ಸೋಟೆ$_1$' ನೋ.

**ಸೋಟಾಜಮಾದಾರ** (ನಾ). (ಕೈಯಲ್ಲಿ ಲಾಠಿ ಹಿಡಿದಿರುವ) ಪೋಲೀಸು ಖಾತೆಯ ಒಬ್ಬ ಅಧಿಕಾರಿ: ಸೋಟಾಜಮಾದಾರನು ಮರ್ಯಾದೆಯಾಗಿ ಜನಸಂದಣಿಯನ್ನು ಬಿಡಿಸಿಕೊಂಡು ಹೊರಟನು (ಮಲ್ಲಿ. ೯೯). [ಸೋಟಾ (< ಸೋಟೆ$_1$) + ಜಮಾದಾರ]

**ಸೋಟಾಧಾರಿ** (ನಾ). ಕೈಯಲ್ಲಿ ದೊಣ್ಣೆಯನ್ನು ಹಿಡಿದಿರುವವನು: ಸೋಟಾಧಾರಿ ಜಡಿಯಪ್ಪ ಎತ್ತರವಾದ ಬಲಶಾಲಿಯಾದ ಆಳು (ಜರತಾ. ೧೧೧). [ಸೋಟಾ (< ಸೋಟೆ$_1$) + - ಧಾರಿ]

**ಸೋಟಿಗೆ$_1$** 'ಸಟ್ಟುಗ$_1$' ನೋ.

**ಸೋಟಿಗೆ$_2$** 'ಸೋಂಟಿಗೆ' ನೋ.

**ಸೋಟೆ$_1$**, ಸೋಂಟೆ, ಸೋಟ, ಸೋಟಾ (ಗು). ೧. ಹೊಣೆಯಿಲ್ಲದ; ಉಡಾಳತನದ. (ನಾ). ೨. ದಪ್ಪವಾದ ಮರದ ತುಂಡು: ಕರಿಮರದ ಸೋಟೆಯ ಹಾಗೆ ಇದ್ದಾನೆ ಆಳು (ಹಹಸ. ೭೪); ಅವರದು ಕರಿಯ ಸೋಟೆಯಂತಹ ದೇಹ (ಸ್ವಪ್ನಹೂ. ೬೬). ೩. ದೊಣ್ಣೆ; ಬಡಿಗೆ: ಇರುಳ ಚಕ್ರವ್ಯೂಹದಲ್ಲಿ ಬೀಸುತ್ತಲಿದೆ ಕರ್ಣಕ್ಕೆ ಕುರುಡು ಸೋಟೆ (ಚಂಡೆಮ. ೧೮-೧೧). **ಸೋಂಟೆ:** ೪. (ಕರಾ) ಉರುವಲು; ಕಟ್ಟಿಗೆ: ನೂರು ಸೋಂಟೆಗಳಿಗೆ ಇಪ್ಪತ್ತೈದು ರೂಪಾಯಿಗಳು (ರೂಢಿ). **ಸೋಟ:** ೧. ಊರ ಸೋಟ ಪಟಿಂಗರ ಸಲುವಾಗಿ ನನ್ನಲ್ಲಿ ಅನ್ನವಿಲ್ಲ (ಪವನ. ೭); ವಿರುದ್ಧಪಕ್ಷದವರನ್ನು ಮೆತ್ತಗೆ ಮಾಡುವ ಮಸಲತ್ತು, ಅದಕ್ಕಾಗಿ ಸೋಟಜನರಿಗೆ ಆಶ್ರಯ, ಹೀಗಾಗಿ ಊರಲ್ಲಿಯ ಉಂಡಾಡಿಗರಿಗೆ ಒಳ್ಳೆಕೆಲಸ ಸಿಕ್ಕಂತಾಯಿತು (ಮನಜಿ. ೨೧). ೩. ಸೋಟ ಹಿಡಿದು ಬೀಸಾಡಿಯೇ ಬೀಸಾಡುತ್ತಿದ್ದಳು . . . ಅವಳ ಒಂದೂ ಏಟು ಬಾಡುವಿಗೆ ತಗುಲಲೇ ಇಲ್ಲ (ದಂಬನಾ. ೭೯). ೫. ಹೊಣೆಗೇಡಿ; ಉಡಾಳ: ಊರಾಗಿನ ಸೋಟರಿಗೆಲ್ಲ ಪಡದಪ್ಪನ ಮಠಾನ ಆಶ್ರಯ (ಗ್ರಾಮಾಯ. ೨೯೧); ಒಬ್ಬರೇ ಇದ್ದಿಭಟ್ಟರಯವರ ಹತ್ರ ಹೋಗಬೇಡ್ರಿ. ಮೊದಲ ಕೆಟ್ಟ ಜನಾ, ಸೋಟರು (ನಡದಾ. II. ೧೧೫೯). **ಸೋಟಾ:** ೩. ಕೈಹಿಡಿದ ಹೆಂಡತಿಯನ್ನು ಸೋಟಾದಿಂದ ಥಳಿಸಿ ಕೊಂದನಂತೆ (ಜರತಾ. ೧೪೨); ಆಗ ವಸಂತರಾಯರು ಎದುರಿಗ ಸಿಗಬೇಕಾಗಿತ್ತು; ಅಂದರ ಅಪ್ಪನ ಸೋಟಾಕ್ಕ ತುತ್ತಾಗ್ತಿದ್ದರು (ಜೂಜು. ೧೮). ೬. ಮರದಿಂದ ಮಾಡುವ ಒಂದು ಬಗೆಯ ವಾದ್ಯ: ಜಾಕಾಯಿಪೆಟ್ಟಿಯಲ್ಲಿ ಮಾಡಿದ ಸೋಟಾ ಎಂಬ ಒಂದು ತರಹ ತಂಬೂರಿ ಪ್ರಚಾರಕ್ಕೆ ಬಂತು (ಕಲಾವಿ. ೧೧೮). ೭. (ಗೌರವಸೂಚಕವಾಗಿ ಹಿಡಿಯುವ ಚಿನ್ನ, ಬೆಳ್ಳಿ ಮುಂತಾದುವುಗಳಿಂದ ಮಾಡಿದ) ದಂಡ: ಕೈಯಲ್ಲಿ ಚಿನ್ನದ ಸೋಟಾಗಳನ್ನು ಹಿಡಿದುಕೊಂಡು ಮರ್ಯಾದೆಯಿಂದ ಕಾಯುತ್ತಿದ್ದರು (ಶ್ರೀರಾಯ. ೧೪೫).

**ಸೋಟೆಯವರು** (ಬಹುವ) = ದಂಡವನ್ನು ಹಿಡಿದಿರುವವರು; ವೇತ್ರಧಾರಿಗಳು: ಚಿನ್ನ ಬೆಳ್ಳಿ ಸೋಟೆಯವರು, ಓಲಗದವರು . . . ಇವರಿಗೆಲ್ಲಾ ಗೊತ್ತುಗಾರರನ್ನೂ ಶಾನುಭೋಗರನ್ನೂ ನೇಮಕಮಾಡಿದರು (ಮಹಾವಂ. I. ೧೨೭). [← ಹಿಂ. ಸೋಂಟಾ; ಮರಾ. ಸೋಟಾ, ಸೋಂಟಾ]

**ಸೋಟೆ$_2$** (ನಾ). ಬಾಯಿಯ ಕೊನೆಭಾಗ; ಕಟಬಾಯಿ: ಮುಳಿದು ಸೋಟ ಎಡೆತೆಗೆ ತಿವಿದು . . . ನೂಕಿದರು ಕಾಮಿನಿಯರತಿರಭಸದಿಂ ಮುದುಕಯತಿಯ (ಸುಲ್ಲಟ. ೩-೨೨); ಅವನ ಸೋಟೆಯನ್ನು ಅದುಮಿ ಹಿಡಿದು ಕನ್ನಡಿಗೆ ಅಡ್ಡವಾಗಿ ತಾನೆ ನಿಲ್ಲುತ್ತಾನೆ (ದೇಕನ್ನ. ೬೯).

**ಸೋಟೆ ತಿವಿ** = ೧. ಮೂತಿಯನ್ನು ತಿವಿ: ಕೋಪದ ಭರದಲ್ಲಿ ಆಕೆ ಮಗುವಿನ ಸೋಟೆ ತಿವಿದಳು (ರೂಢಿ). ೨. (ಅಲಂ) ಮುಖಭಂಗ ಮಾಡು; ಅವಮಾನಿಸು: ನಾಲ್ಕಾರು ಜನರ ಮುಂದೆ ಅವನು ಮಾಡಿದ ಕೆಲಸಕ್ಕೆ ಸೋಟೆ ತಿವಿದರು (ರೂಢಿ).

**ಸೋಟೆ ಸಿಗಿ** = ಸೋಟೆತಿವಿ ೧ : ಈಗ ಅದೆಲ್ಲವನ್ನೂ ಗುಡಿಸಿ ಎತ್ತು. ಇಲ್ಲದಿದ್ದರೆ

ಚೆನ್ನಾಗಿ ಸೋಟೆ ಸಿಗಿದು ಬಿಟ್ಟೇನು (ಮಾಮರಾ. ೮೧). **ಸೋಟೆ ಹಿಂಡು** = ಸೋಟೆತಿವಿ ೧: ಅವ್ವ ಅಬ್ಬರಿಸಿ ಜಯಣ್ಣನ ಸೋಟೆ ಹಿಂಡಿದಳು (ವೈನಿ. ೪೫). [?]

**ಸೋಡ, ಸೋಡಾ** (ನಾ). ೧. ಅಡುಗೆಗೆ ಉಪಯೋಗಿಸುವ ಒಂದು ಬಗೆಯ ಕ್ಷಾರ: ಅಡುಗೆಯಲ್ಲಿ ಸೋಡದ ಉಪಯೋಗವನ್ನು ಆದಷ್ಟು ಕಡಿಮೆ ಮಾಡಬೇಕು (ಅಡುಸೌ.೮೮). ೨. ''ಇಂಗಾಲಾಮ್ಲ ಅನಿಲವನ್ನು ಹುದುಗಿಸಿ ನೊರೆಯುಕ್ಕುವಂತೆ ಮಾಡಿದ ಪಾನೀಯ'' (soda. ೯೦೫೩). ೩. ಬಟ್ಟೆಯನ್ನು ಒಗೆಯಲು ಉಪಯೋಗಿಸುವ ಒಂದು ಬಗೆಯ ಕ್ಷಾರ: ಬಟ್ಟೆ ಒಗೆಯುವಾಗ ಸೋಪಿನೊಂದಿಗೆ ಸೋಡ ಬೆರಸಿ ಒಗೆದರೆ ಹೆಚ್ಚು ಶುಭ್ರವಾಗುತ್ತದೆ (ರೂಢಿ). **ಸೋಡಾ:** ೨. ಪುಟ್ಟನಿಗೊಂದು ಸೋಡಾ - ಅಂಗಡಿ ಕಂಡದ್ದೆ . . . ಎಂದ (ಸಂಸ್ಕಾರ . ೧೨೧); ಸೋಡಾ, ಬೀಡಾ, ಕಳ್ಳ, ಶರಾಬು - ಇವೆಲ್ಲ ಬರುತ್ತವೆ (ನನ್ನೂರು. ೩೧೩). [← ಇಂ. Soda]

**ಸೋಡಂಬಾಡ** 'ಸೋಡಂಬಾಡಂ₂' ನೋ.

**ಸೋಡಂಬಾಡಂ₁** (ನಾ). ೧. ಹಿರಿದು; ದೊಡ್ಡದು: ''ಸೋಡಂಬಾಡಂ-ಪಿರಿದು'' (ಶಮದ.ಪರಿ ೨); ''ನೀಡು ಸೋಡಂಬಾಡಮೆಂದುಣ್ಣವಳಿಯದೆನೆ ಪಿರಿದೆನಿಪ್ಪರ್ಥಮಕ್ಕು'' (ಕಬ್ಬಿಕ್ಕೈ. ೮೮). (ಗು). ೨. ಅತಿಶಯವಾದ: ಮುದದಿಂ ಸೋಡಂ ಬಾಡಮಲಂಪಿನ ಪೆಂಪಿನ ಗಾಡಿಯನಾಂತೆಸೆದುದಂದು ಗಣಿಕಾನಿವಹಂ (ಉದ್ಭಟ. ೧೦-೪೪). [?]

**ಸೋಡಂಬಾಡಂ₂, ಸೋಡಂಬಾಡ** (ಅ). ೧. ಅತಿಶಯವಾಗಿ : [ಸೋಡಂಬಾಡಂ] ಕರಿಯ ಮುಗಿ[ಲಂ] ದಂತಿಗಳ್ಗೆತ್ತು (ವರ್ಧಮಾ ೯-೫); ಕೊಂಡಾಡುತುಬ್ಬಿ ಕೊಬ್ಬುತ್ತೆ ರತಿ ಮೂಡಿ ಸೋಡಂಬಾಡಮೆನೆ ತೇನತೇನಮುೞ್ ಕೂಡೆ ಪೊಗಳುತ್ತಿರ್ದನಾದಿ ವೃಷಭೇಶ (ಪಾಸೋಪು. ೩-೧೮). **ಸೋಡಂಬಾಡ:** ೨. ತೀವ್ರವಾಗಿ; ರಭಸವಾಗಿ: 'ಸೋಡಂಬಾಡನೆ' ಪರಾ. [< ಸೋಡಂಬಾಡಂ₁]

**ಸೋಡಂಬಾಡನೆ** (ಅ). ತೀವ್ರವಾಗಿ; ರಭಸವಾಗಿ: ಸೋಡಂಬಾಡನೆ ಬಂದು ಕಾಲ್ಪಿಡಿವುದುಂ ಪೂಮಾಲೆಯಿಂ ನಲ್ಲನಂ ನೀಡುಂ ಮೋದಿ ಕನಲ್ದು . . . ರತಪ್ರಾಗಲ್ಭ್ಯಮಂ ಬೀೞಿದಳ್ (ಮಲ್ಲಿಪು. ೭-೮೨).

[ಸೋಡಂಬಾಡ (< ಸೋಡಂಬಾಡಂ₂) + - ಅನೆ₁]

**ಸೋಡಗೆ, ಸೊಡಗೆ** (ನಾ). ೧. ತರಕಾರಿಯಾಗಿ ಬಳಸುವ ಹುರುಳಿಕಾಯಿ, ಅಲಸಂದೆ ಮುಂತಾದುವುಗಳನ್ನು ಹೋಲುವ ಒಂದು ಬಗೆಯ ಕಾಯಿ: ಇಂದು ಅವರ ಮನೆಯಲ್ಲಿ ಸೋಡಗೆಯ ಹುಳಿ ಮಾಡಿದ್ದರು (ರೂಢಿ). ೨. ಸೋಡಗೆಯಿಂದ ತಯಾರಿಸುವ ಒಂದು ಬಗೆಯ ಮೇಲೋಗರ: ಬಿಸಿಬಿಸಿಯೋಗರಂ ಕಲದ ಸೋಡಗೆ ತೆಳ್ಪೊಳುದುಪ್ಪಂ . . . ತಾವೆ ಬಗ್ಗಿಸದೆ ಹಿಮಾಗವೋಕ್ತಿಕಜಡೋದಯಮಂ ಸುಕೃತಾತ್ಮರಪ್ಪರಾ (ಸೂಕ್ತಿಸು.೧೦-೨೭೫). **ಸೊಡಗೆ:** ೧. ಹೂಲದವರೆಯ ನೆಟ್ಟು ಸೊಡಗೆಯ ಸುಲಿದಲ್ಲಿ ತಳಲು ಬಲಿದು ಒಡೆದುದಿಲ್ಲ (ಮೋಳಿಮಾ. ೨೭೫-೮೧೭). ೨. ಇಮ್ಮನದ ಸೊಡಗೆಯ ಮೆದ್ದು ಕರ್ಮಕ್ಕೀಡಾದವರ ನುಡಿಯೆಂದಡ ಎನ್ನ ಹಮ್ಮಿಗನೆಂಬರು (ಮೋಳಿಮಾ. ೨೭೫-೮೧೭); ಕಡುನೇಹದಿಂ ಸೊಗಡಿಸುವ ಪಾಂಗಿನಿಂ ಸೊಡಗೆಯನಿಕ್ಕುತಂ (ಲಿಂಗಪು. ೩೧-೪೩).

**ಸೋಡಚೀಟಿ, ಸೋಡಚೀಟು** (ನಾ). ೧. ಗಂಡಹೆಂಡಿರ ನಡುವಿನ ವೈವಾಹಿಕಸಂಬಂಧವನ್ನು ಕಡಿದುಹಾಕುವ ಪತ್ರ; ವಿವಾಹವಿಚ್ಛೇದನದ ಪತ್ರ: ಗಂಡನ ಸಂಗಾತ ಸಂಸಾರ ಮಾಡೂದು ಬ್ಯಾಡಾಗಿದ್ದರ ಎಲ್ಲಾರ ಹಂಗ ಸೋಡಚೀಟಿ ತಗೊಂಡ ಇನ್ನೊಬ್ಬನ್ನ ಮಾಡಿಕೊಂಡು ಹೋಗೂದು ಚಲೋ ಅಲ್ವೇನ? (ಮಣ್ಣುಹ. ೧೦೧); ಮೊದಲೇ ಹಾದಿ ತಪ್ಪಿ ತವರವರೇ ಹೆಣ್ಣಿನಿಂದ 'ಸೋಡಚೀಟಿ' ಯನ್ನು ಕೊಡಿಸಿದ್ದೂ ಉಂಟು (ಕನ್ನಚಾ. ೧೦೮). **ಸೋಡಚೀಟು :** ೧. ಮದುವೆಯ ಸೋಡಚೀಟಲ್ಲವೆ ಇದು? (ಧೂಮಕೇ. ೫೭). ೨. ತಮ್ಮ ವಶದಲ್ಲಿರುವ ವಸ್ತುವಿನ ಹಕ್ಕನ್ನು ಬಿಟ್ಟುಕೊಡುವುದನ್ನು ಸೂಚಿಸುವ ದಾಖಲೆ,– ಪತ್ರ: (ಕ).

**ಸೋಡಚೀಟಿ ಕೊಡು** = ೧. ಬಿಡು; ತ್ಯಜಿಸು: ಬಹುದಿನಗಳ ಹಿಂದೆಯೆ ಅದಕ್ಕೆ ಸೋಡಚೀಟಿ ಕೊಟ್ಟುಬಿಟ್ಟುದರಿಂದ ಪುನರ್ವಿವಾಹಕ್ಕೆ ಮನಸ್ಸು ಒಗ್ಗದಾಗಿದೆ (ಗಾಳಿಪ. ೧೩೧). ೨. ಗಂಡಹೆಂಡಿರ ನಡುವಿನ ವಿವಾಹಸಂಬಂಧವನ್ನು ಕಡಿದುಕೊಳ್ಳು; ಘಟಸ್ಫೋಟ ಮಾಡಿಕೊಳ್ಳು: ಲಲಿತೆಯು ತನ್ನ ಮೊದಲಿನ ಗಂಡನಿಗೆ ಸೋಡಚೀಟಿ ಕೊಡುವ ವಿಚಾರದಿಂದ ಕೋರ್ಟ ಕಛೇರಿ ಹತ್ತಬೇಕೆಂದಿದ್ದಾಳೆ (ಬೇಟಿನಾ. ೨೨೨). [← ಮರಾ. ಸೋಡಚಿಠ್ಠೀ]

**ಸೋಡಚೀಟು** 'ಸೋಡಚೀಟಿ' ನೋ.

**ಸೋಡಪತ್ರ** (ನಾ). ವಿವಾಹವಿಚ್ಛೇದನ; ಘಟಸ್ಫೋಟ: ಸೋಡಪತ್ರಗಳ ಖಟ್ಲೆಯಲ್ಲಂತೂ ಅವನು ಎತ್ತಿದ ಕೈ (ಮೊಪಾಸಾ. ೪೧); ಸೋಡಪತ್ರವನ್ನು ಕೊಡಿಸಿ ರೆಂದು ಸರಕಾರಕ್ಕೆ ಮೊರೆಹೋಗಿ ಬೇಡಿಕೊಂಡಳು (ಹೂಬಿಸಿ. ೮೭).

[← ಮರಾ. ಸೋಡಪತ್ರ, ಸ್ಫೋಟಪತ್ರ]

**ಸೋಡಮುಂಜಿ, ಸೋಡಮುಂಜಿವಿ, ಸೋಡಮುಂಜೆ** (ನಾ). ಮದುವೆಗೆ ಮುಂಚೆ ಮೌಂಜಿಯನ್ನು ಬಿಟ್ಟುಬಿಡುವುದರೊಂದಿಗೆ ಬ್ರಹ್ಮಚರ್ಯದ ಸಮಾಪನೆ ಯನ್ನು ಮಾಡುವ ವಿಧಿ, – ವೈದಿಕಕ್ರಿಯೆ; ಸಮಾವರ್ತನ: ಸ್ನಾತಕ - ಸೋಡ ಮುಂಜಿಯಾದ ಬ್ರಹ್ಮಚಾರಿ (ಗಂಗಾಮ. ಕ). **ಸೋಡಮುಂಜಿವಿ:** ಸೋಡಮುಂಜಿವಿಯಲ್ಲಿ ಮಾಮಾನ ಆಗ್ರಹದಿಂದ ಕಾಶೀಯಾತ್ರೆಯನ್ನು ರದ್ದುಪಡಿಸಿದಂತಾಯಿತು ನನ್ನ ಪಾಡು (ಸ್ಮತಿಚಿ . ೨೧೨). **ಸೋಡಮುಂಜೆ:** ಸೋಡಮುಂಜೆ ದೇವರೂಟಗಳನ್ನು ತೀರಿಸಿಕೊಂಡು ನಿಬ್ಬಣವು . . . ನಾಲ್ಕುಗಂಟೆಗೆ ಬಂದು ತಲುಪಿತು (ಅನಂತ. ೪).

[← ಮರಾ. ಸೋಡಮುಂಜ]

**ಸೋಡಮುಂಜಿವಿ** 'ಸೋಡಮುಂಜಿ' ನೋ.

**ಸೋಡಮುಂಜೆ** 'ಸೋಡಮುಂಜಿ' ನೋ.

**ಸೋಡಲಿ** 'ಸೊಡರಿ' ನೋ.

**ಸೋಡಾ** 'ಸೋಡ' ನೋ.

**ಸೋಡಿ₁** (ನಾ). ೧. ವಸೂಲಾಗಬೇಕಿರುವ ಮೊಬಲಗಿನಲ್ಲಿ ತೋರಿಸುವ ರಿಯಾಯಿತಿ; ತಳ್ಳುಪಡಿ: ಆ ಶಾಂತಿಗ್ರಾಮದ ಸಿದ್ದಾಯದ ಮೊದಲ ಹೊಂನೊಳಗೆ ಅಯ್ದುಹೊಂನನು ಅವಱ ಸಮಸ್ತ ಬಳಿವಟ ಸೋಡಿ ಬಲಹಕುಮಾನೆ ಬಂದ . . . ಬಳಿಯ ಹೊನ್ನು ಸಹಿತ (ಮೈಆರಿ. ೧೯೪೦, ೩-೨೪; 1215). ೨. ನಿರ್ಬಂಧದಿಂದ ಬಿಡುಗಡೆ ಮಾಡುವುದು: (ಕ). 'ಸೂಟ್ಟಿ₂' ಪರಾ. [← ಮರಾ. ಸೋಡ್]

**ಸೋಡಿ₂** (ನಾ). ಒಂದು ಬಗೆಯ ಆಟ: ಉತ್ಸಾಹಿತರುಣರು ಗುಡಿಯ ಮಗ್ಗುಲ ತುಣುಕುಮೈದಾನಿನಲ್ಲಿ - ಸೋಡಿ, ಕಾಲ್ಚೆಂಡುಗಳ ಆಟವಾಡುತ್ತಿರುತ್ತಾರೆ (ಜಾರುದಾ. ೩೭).

[?]

**ಸೋಡಿಗೆ, ಸೊಡಿಗೆ, ಸೊದಿಗೆ, ಸೋಜಿಗೆ, ಸೋದಿಗೆ₁** (ನಾ). ೧. ಒಂದು ಅಳತೆಯ ಪ್ರಮಾಣ: ಹಸುಬೆಗ ಅಡಿಕೆ ೨ ಭತ್ತಕೆ ಸೋಡಿಗೆ ಭತಂ (ಎಕ. VII, ಹೊನ್ನಾಳಿ. ೧೦೮-೫೭;1203). ೨. ಒಂದು ಬಗೆಯ ತೆರಿಗೆ: ಸಭೆಯ ಸಂಖೆಯ ಚಿಲುವಾನ ಸುಂಕ ಸೋಡಿಗೆ ಇವು ಮೊದಲು ಸರ್ವ್ವಮಾನ್ಯವಾಗಿ . . . ದಾನಸಾಸನ ಪ್ರತಿಷ್ಟೆಯನು ಮಾಡಿದರು (ಎಕ. V, ಹಾಸನ. ೨-೧೮; 1563). **ಸೊಡಿಗೆ:** ೨. ಮಣುದೆರೆ ಮಗ್ಗದೆರೆ ಸುಂಕ ಸೊಡಿಗೆ . . . ಧಾರೆಯನೆರದು ಕೊಟ್ಟ (ಎಕ. X, ಕೋಲಾರ. ೨೪೭-೨೮; 1637?). **ಸೊದಿಗೆ:** ೨. ಮಠ ಮನೆವಣ ಸುಂಕ ಸೊದಿಗೆ ಸೋವಣ ಸಂದೂ ಸಕಲಸ್ವಾಮ್ಯವನು ಅನುಭವಿಸಿಕೊಂಬಿರಿ (ಎಕ. III (R), ಗುಂಡ್ಲುಪೇ. ೫೪-೬; 16ನೆಯ ಶತ); ತೆಱ ಹೊಱಸುಂಕ ಸೊದಿಗೆ ಕಾಣಿಕೆ ಕಡ್ಡಾಯ (ಭೈರಸೂ. I. ೨೦೩). **ಸೋಜಿಗೆ:** ೧. ಸೋಜಿಗೆ ಭತ್ತ ಹಡಿಕದ ಬಂಡಿಯಲೊಕುಳ ಭತ್ತ (ಎಕ. XI, ಚಳ್ಳಕೆ. ೨೧-೩೯; 1087). ೨. ಬಿಟ್ಟಿ ಬಿಡಾರ ಸೊಲ್ಲಗೆ ಮಲಿಗೆ ಸುಂಕ ಸೋಜಿಗೆ (ಎಕ. IV (R), ಚಾಮರಾ. ೧೬೦-೮; 1517). **ಸೋದಿಗೆ₁:** ೨. ತೆಱ ಹೊಱ ಸೋದಿಗೆ ನರರ್ಗಿವು ಷೂನ್ಯಗಳೈಸೆ (ಶಂಕಶ. ೯೮). [?]

**ಸೋಡ್ತಿ** (ನಾ). ೧. ಹಣ ಕೊಟ್ಟು ಪಡೆದ ಟಿಕೆಟ್ಟುಗಳ ಮೂಲಕ ಕೇವಲ ಅದೃಷ್ಟದಿಂದ ಬಹುಮಾನ ದೊರೆಯುವಂತೆ ಏರ್ಪಡಿಸುವ ಅದೃಷ್ಟದ ಆಯ್ಕೆ; ಲಾಟರಿ: ಧರಮ್‌ಸಿಂಗಪ್ರಭುಜೀವಿದ್ಯಾಲಯಕ್ಕಾಗಿ ನಡೆಯಿಸುತ್ತಿದ್ದ ಸೋಡ್ತಿ ಅದು! ಅದರ ಪ್ರಥಮಬಹುಮಾನವೇ ಐವತ್ತುಸಾವಿರ (ಔದಾಉ. ೫೨೦); ಸೋಡ್ತಿಯಲ್ಲಿ ಏನಾದರೂ ಇನಾಮು ದೊರೆಯಿತೇ? (ಬಾಲಪ್ರ. II, ೭೪೦). ೨. ಅದೃಷ್ಟ; ವಿಧಿ: ಯಾರು ಉಳಿದರು, ಯಾರು ಅಳಿದರು ಅದು ಸೋಡ್ತಿಯ ಮಾತು (ಹರಿಕೋ. ೪೨). ೩. ''ಒಂದು ವಸ್ತುವಿನ ಮಾರಾಟಕ್ಕಾಗಿ ಹಲವರಿಂದ ಸ್ವಲ್ಪ

ಮೊತ್ತದ ಪ್ರವೇಶಧನ ಪಡೆದು, ಚೀಟಿ ಹಾಕುವುದರ (ಲಾಟರಿಯ) ಮೂಲಕ ಬರುವ ಅವರಲ್ಲೊಬ್ಬರಿಗೆ ಆ ವಸ್ತುವನ್ನು ಕೊಡುವುದು: ಅದೃಷ್ಟದ ಚೀಟಿಯ ಮಾರಾಟ; ಸೋಡಿ್ತ'' (Raffle. ೩೦೫೫). [← ಮರಾ. ಸೋಡತ]

**ಸೋಣ** 'ಸಾವಣ' ನೋ.

**ಸೋಣತಿಂಗಳು** 'ಸೋಣೆತಿಂಗಳು' ನೋ.

**ಸೋಣಿ$_1$** (ನಾ). ಜಘನ; ನಿತಂಬ: ಶ್ರೋಣಿ - ಸೋಣಿ (ಶಮದ. ೨೬೧ ಪ್ರಯೋ). [< ಪ್ರಾ. ಸೋಣಿ./ಸಂ. ಶ್ರೋಣಿ]

**ಸೋಣಿ$_2$** 'ಸಾವಣ' ನೋ.

**ಸೋಣೆ** 'ಸಾವಣ' ನೋ.

**ಸೋಣೆತಿಂಗಳು, ಸೋಣತಿಂಗಳು** (ನಾ). ಶ್ರಾವಣಮಾಸ : ಆಸಾಡಿ, ಸೋಣೆತಿಂಗಳ ಕಾಲಗಳು ಹೇಗೆ ಕಳೆದವು ಎಂಬುದು ಅವರಿಗೆ ತಿಳಿಯಲೇ ಇಲ್ಲ (ಮರಮ. ೩೯); ಸೋಣೆತಿಂಗಳಲ್ಲಿ ನಮ್ಮ ಮನೆಯದೆ ರಂಗಪೂಜೆಯಿದೆ (ದೇವಹಂ. ೧೧೭). **ಸೋಣ ತಿಂಗಳು:** ಕಳೆದ ಸೋಣತಿಂಗಳಿಗೆ ಮೂವತ್ತೆರಡೂ, ಮೂವತ್ತೂರೂ ಕಳೆದ ಜ್ಞಾಪಕ (ಹೊಸಕ್ಕ. ೫೧). [ಸೋಣೆ (< ಸಾವಣ) + ತಿಂಗಳು (< ತಿಂಗಳ್)]

**ಸೋಣೆಧರ್ಮ** (ನಾ). ಶ್ರಾವಣಮಾಸದಲ್ಲಿ ಮಾಡುವ ದಾನ ,– ದತ್ತಿ: ನಿತ್ಯಚಿತ್ರ ಸೋಣೆಧರ್ಮ ಹಗ್ಗುವಿನ ಧರ್ಮ (ಸೌಇ. ೧೯೩೨, ಉಡುಪಿ. ೩೪೦-೮; ?). [ಸೋಣೆ (< ಸಾವಣ) + ಧರ್ಮ]

**ಸೋಣೆಮರಿಯಾದೆ, ಸೋನೆಮರಿಯಾದೆ** (ನಾ). ದೇವಸ್ಥಾನಗಳಲ್ಲಿ ಶ್ರಾವಣಮಾಸದಲ್ಲಿ ನಡೆಸುವ ಪೂಜೆ, ಉತ್ಸವ ಮುಂತಾದ ಕಟ್ಟಳೆ: ನಖರೇಶ್ವರದ ಶ್ರೀಮಹಾದೇವರಿಗೆ . . . ಸೋಣೆಮರಿಯಾದೆಯ ಬಗೆಯ ಹೊನು ಕಾಟಿ ಗ ೧೦ (ಸೌಇಇ. IX-ii, ೪೫೭-೧೦; 1451). **ಸೋನೆಮರಿಯಾದೆ :** ಸೋನೆಯ ತಿಂಗಳಲಿ ಸೋನೆಮರಿಯಾದೆ ಸಲುವುದು (ಸೌಇ. ೧೯೩೧, ಕೊಂಡಾಪುರ. ೩೫೭-೧೫; 1306). [ಸೋಣೆ (< ಸಾವಣ) + ಮರಿಯಾದೆ]

**ಸೋಣೆಯಾರತಿ** (ನಾ). ಶ್ರಾವಣಮಾಸದಲ್ಲಿ ದೇವರಿಗೆ ಎತ್ತುವ ವಿಶೇಷವಾದ ಮಂಗಳಾರತಿ: ಊರಿನ ದೇವಾಲಯದಲ್ಲಿ ಸೋಣೆಯಾರತಿ ವೇಳೆಯಲ್ಲಿ ಹತ್ತಾರು ಘಂಟೆಗಳನ್ನು ಪೂಜೆ ಮುಗಿಯುವ ತನಕವೂ ಬಾರಿಸಿದಂತಾಗುತ್ತದೆ (ಸ್ವಪ್ನಪೂ. ೯೯). [ಸೋಣೆ (< ಸಾವಣ) + ಆರತಿ]

**ಸೋತ** 'ಸೋಲ್' ಪರಾ.

**ಸೋತು** 'ಸೋಲ್' ಪರಾ.

**ಸೋತುವಲ್ಲಿ** (ನಾ). ಒಂದು ಬಗೆಯ ಬಳ್ಳಿ: ''ಋಕ್ಷಸಂಕಿಕಾ - ಸೋತುವಲ್ಲಿ'' (ಓಷಧಿ. ೧೮). [?]

**ಸೋತೆ** 'ಸೊದೆ' ನೋ.

**ಸೋತೆವೆಸ** (ನಾ). ಸುಣ್ಣಬಳಿಯುವ ಕೆಲಸ; ಸುಣ್ಣ ತೊಡೆಯುವಿಕೆ: ದಿವಾಕರೇಶ್ವರದೇವರಂಗಭೋಗಕ್ಕವಿಟ್ಟಗೆ ಸೋತೆವೆಸದ ಖಂಡಸ್ಫುಟಿತಂಗಳಂ ಮಾಡಲುಂ ಬಿಟ್ಟ ಮಾಣಿಕೇಶ್ವರದ ಮತ್ತರಱುವತ್ತು (ಸೌಇಇ. XX. ೯೩-೫೭; ?). [ಸೋತೆ (< ಸೊದೆ) + ಬೆಸ]

**ಸೋತ್ಕಂಠ** (ಗು). ೧. ಕಾತರದಿಂದ ಕೂಡಿರುವ. (ನಾ). ೨. ಕಾತರತೆಯುಳ್ಳ ವ್ಯಕ್ತಿ: ''ಸೋತ್ಕಂಠಂ ಕರಮುನ್ಮನನುತ್ಕಂ ವಿಮನಸ್ಕನುತ್ತಪಳನವನಕ್ಕುಂ'' (ವಸ್ತುಕೋ. ೧೧೪-೨೩). [ಸಂ.].

**ಸೋತ್ಸಾದನ** (ನಾ). ಬಳಿಯುವುದು; ಲೇಪಿಸುವುದು : ''ಉದ್ವರ್ತನಂ, ಉನ್ಮರ್ದನಂ, ಸೋತ್ಸಾದನಂ, ಛುರಿತಂ - ಈ ೪ ತಿಮಿರುವುದು'' (ಹಲಾಯು. ೧೨೧-೪೭). [ಸಂ.]

**ಸೋತ್ರಗುತ್ತಿಗೆ** (ನಾ). ವೇದಾಧ್ಯಯನ ಮಾಡಿದ ಬ್ರಾಹ್ಮಣರಿಗೆ ತೆರಿಗೆಯಿಲ್ಲದಂತೆ ಕೊಟ್ಟ ಭೂಮಿಯ ಗೊತ್ತುವಳಿ ,– ಕರಾರು; ಶ್ರೋತ್ರಗುತ್ತಗೆ: ದತ್ತಿವಾಳಗ್ರಾಮವನೂ ನಿಮಗೆ ಸೋತ್ರಗುತ್ತಿಗೆಯಾಗಿ ಕೊಟ್ಟ ಸಂಮಂದ . . . ಸಾಮ್ಯವನು ಆಗುಮಾಡಿಕೊಂಡು (ಮೈಅರಿ. ೧೯೪೦, ೪೮-೭; 1502). 'ಶ್ರೋತ್ರಿಯಗುತ್ತಗೆ' ಪರಾ. [< ಶ್ರೋತ್ರಗುತ್ತಗೆ]

**ಸೋತ್ಪ್ರಾಸ** (ಗು). ೧. ಅತಿಶಯೋಕ್ತಿಯಿಂದ ಕೂಡಿದ. (ನಾ). ೨. ವ್ಯಂಗ್ಯ; ಅಣಕ: ''ಸೋಲ್ಲುಂಠಃ, ಸೋತ್ಪ್ರಾಸಃ, ಸೋಪಹಾಸಃ - ಈ ಮೂಱು ಚುನ್ನಂ'' (ಹಲಾಯು. ೨೪-೧೪೮). ೩. ಅಬ್ಬರದ ನಗು; ಅಟ್ಟಹಾಸ. [ಸಂ.]

**ಸೋದ** (ನಾ.) ೧. ಹತ್ತಿಯನ್ನು ಶುದ್ಧಪಡಿಸುವ ಕೋಲು; ಕುಡುಹು: 'ಪಿಚುಸೋದ' ಪರಾ. ೨. ಪರಿಶೋಧನೆ: ವಾದದಿಂ ಖೇದದಿಂ ಸೋದದಿಂ ಭೇದಿಸುವ ತಂತ್ರಮಂತ್ರಗಳಿಂದಲಿ (ಜನಮು. ೨೭-೧೯). [< ಸಂ. ಶೋಧ]

**ಸೋದನ, ಸೋದನೆ, ಸೋಧನೆ** (ನಾ). ೧. ಹುಡುಕುವಿಕೆ; ಶೋಧನೆ: 'ಸೋದನದೀವಿಗೆ' ಪರಾ. **ಸೋದನೆ:** ೧. ''ಸೋದನ - ಶೋಧನ = ಹುಡುಕುವಿಕೆ'' (ತದ್ಭಕೋ. ೪೭). **ಸೋಧನೆ:** ೨. ಪರಿಶುದ್ಧತೆ; ಶುದ್ಧಿ: 'ಸೋಧನೆವೋಗು' ಪರಾ. [< ಸಂ. ಶೋಧನ]

**ಸೋದನದೀವಿಗೆ** (ನಾ). ಹುಡುಕುವುದಕ್ಕಾಗಿ ಬಳಸುವ ದೀಪ: ಮದನನ ಸೋದನದೀವಿಗೆಯೆನೆ ತೊಳಗಿ ಬೆಳಗಿದಂ ತುಹಿನಕರಂ (ಪಂಪಭಾ. ४-೫೨). [ಸೋದನ + ದೀವಿಗೆ]

**ಸೋದನೆ** 'ಸೋದನ' ನೋ.

**ಸೋದರ** (ಗು). ೧. ಒಂದೇ ಗರ್ಭದಿಂದ ಹುಟ್ಟಿದ; ಒಡಹುಟ್ಟಿದ: 'ಸೋದರತಂಗೆ', 'ಸೋದರತಮ್ಮ' ಪರಾ. (ನಾ). ೨. ಒಡಹುಟ್ಟು: ಹಗೆಯೇಱಿದಿವನಲಿ ಸೇರುವುದು ಸೋದರದ ಸಂಬಂಧ (ಕುವ್ಯಾಕ. ೨೭-೨೯). ೩. ಒಡಹುಟ್ಟಿದುದು; ಜೊತೆಯಲ್ಲಿರುವುದು : ಕರಭದ ರೇಖೆ ಸೋದರದ ರೇಖೆ ಕನಿಷ್ಠಿಕೆಯಾದಿರೇಖೆ ಸೌಂದರಿಯರ ರೇಖೆ (ಲೋಕೋಪ. ೧೧-೧೫); ಆದುದಾವಿರ್ಭಾವ ಸಿಡಿಲಿನ ಸೋದರದ ಕಣ್ಣುಗಳ ಭಾಳದ ಬೀದಿಗಿಚ್ಚಿನ ರೌದ್ರದಲಿ ನರಸಿಂಹರೂಪಾಗಿ (ಕುವ್ಯಾಸ. ೯-೪೩). ೪. ಒಡಹುಟ್ಟಿದ ತಮ್ಮ ಅಥವಾ ಅಣ್ಣ; ಸಹೋದರ: ಕಾದದೆ ಪನ್ನಗಧ್ವಜನಿಳಾತಳಮಂ ಕುಡನಾನುಮಿರ್ಪುದುಂ ಸೋದರರೆಂದು ನಾಣ್ಚಿ ಸೆಡೆದಿರ್ದಪೆಂ (ಪಂಪಭಾ. ೯-೧೮); ಇಱಿಯಿಸುವ್ವೆ ಸೋದರರ್ಕಳಂ . . . ಅಱಗುಲಿ ನಿನ್ನಿಂ ನಿಕೃಷ್ಟರಾದರುಮೊಳರೇ (ಗದಾಯು. ೯-೭).

**ಸೋದರದತ್ತಿಗೆ** = ಸೋದರಸಂಬಂಧದ ಅತ್ತಿಗೆ; ನಾನೊತ್ತೆಸೂಳೆಯೊ ನಿನಗೆ ಸೋದರದತ್ತಿಗೆಯೊ ನಾದುನಿಯೊ (ಬಸಪು. ४೦-४೭). **ಸೋದರದಳಿಯ** = ಒಬ್ಬನ ಅಕ್ಕ ಅಥವಾ ತಂಗಿಯ ಮಗ; ಒಬ್ಬಳ ಅಣ್ಣ ಅಥವಾ ತಮ್ಮನ ಮಗ: ಎನ್ನ ತಂಗೆಯ ಮಗನಯ್ ಸೋದರದಳಿಯನಯ್ (ವಡ್ಡಾರಾ. ೧೩೧-೨); ಕರೆಸಿ ಸೋದರದಳಿಯನನು ಕುಳ್ಳಿರಿಸಿಕೊಂಡನು ಸಿಂಹಪೀಠದಿ (ಕಾಶಿರಾ. ೩೯-೧೭). [ಸಂ.]

**ಸೋದರಅತ್ತೆ** 'ಸೋದರತ್ತೆ' ನೋ.

**ಸೋದರಅಳಿಯ** 'ಸೋದರಳಿಯ' ನೋ.

**ಸೋದರತಂಗೆ** (ನಾ). ಒಡಹುಟ್ಟಿದ ತಂಗಿ: ಸಮುದ್ರವಿಜಯನೆಂಬೊಂ ರಾಜಶ್ರೇಷ್ಠಿಯಾತಂಗೆ ಸಾಗರಸೆಟ್ಟಿಯ ಸೋದರತಂಗೆ ಸುಮತಿಯೆಂಬೊಳಂ ಕೊಟ್ಟರ್ (ವಡ್ಡಾರಾ. ४೨-೨೭). [ಸೋದರ + ತಂಗೆ]

**ಸೋದರತಮ್ಮ** (ನಾ). ಒಡಹುಟ್ಟಿದ ತಮ್ಮ: ವಿದ್ಯುಲ್ಲತೆಯ ಸೋದರತಮ್ಮಂ ಮೇಘಕೂಟಾಧಿಪತಿ ಮೇಘಮಾಳಿಯೆಂಬೊಂ ವಿದ್ಯಾಧರಂ (ವಡ್ಡಾರಾ. ४೦-೨೨). [ಸೋದರ + ತಮ್ಮ]

**ಸೋದರತ್ತೆ, ಸೋದರಅತ್ತೆ** (ನಾ). ತಂದೆಯ ಒಡಹುಟ್ಟಿದವಳು; ತಂದೆಯ ಸೋದರಿ: ನಿಮ್ಮ ಸೋದರತ್ತೆಯಾದ ನಮ್ಮ ತಾಯಿಯನ್ನು ಕಂಡು (ಕೃವಾಙು. ೧४೦); ಸೋದರತ್ತೆಯ ಮಕ್ಕಳೆಂದು ಅನಾದಿಸ್ನೇಹವ ಮಾಡಿದೆನು (ಕೃಷ್ಣಾಕಾ. ೧४-೨४). **ಸೋದರಅತ್ತೆ :** (೬). [ಸೋದರ + ಅತ್ತೆ]

**ಸೋದರಭಾವ** (ನಾ). ಹೆಂಡತಿಯ ಸಹೋದರ: ಯದುಗಳನ್ವಯದಾತ ನಮಗೊಳ್ಳಿದನು ಸೋದರಭಾವನೆಂದೇ ಮುದಮುಖದಿ ಕಡುಗೇಡ ಕಟ್ಟಿನು (ಕುವ್ಯಾಭೀ. ೩-೭೮). [ಸಂ.]

**ಸೋದರಮಯ್ದುನ** (ನಾ). ಸೋದರಿಕೆಯ ಸಂಬಂಧದ ಮೈದುನ: ಬರಿಸಿದೊಂ ಸೋದರಮಯ್ದುನನಮಿತತೇಜನಂ ಶ್ರೀ ವಿಜಯಂ (ಶಾಂತಿಪು. ೫-೭೭). [ಸೋದರ + ಮಯ್ದುನ (< ಮೆಯ್ದುನ)]

**ಸೋದರಮಾವ** (ನಾ). ತಾಯಿಯ ಒಡಹುಟ್ಟಿದವನು; ಮಾತುಲ: ''ಮಾತುಳನೆನಲ್ಕೆ ಸೋದರಮಾವನಕ್ಕು'' (ಮಂಗರಾ. ೯೨-೧೩); ಮೇಘಮಾಳಿಯೆಂಬೊಂ ವಿದ್ಯಾಧರಂ ನಿನ್ನ ಸೋದರಮಾವಂ (ವಡ್ಡಾರಾ. ೪೨-೪); ಸೋದರಮಾವನ ಮಗಳೆನೆ ನಾದುನಿಯೆಂಬಂದು ನಿನ್ನನಾಂ ಚಾಡಿದೆಂ (ಸುಕುಮಾ. ೭-೨೩); ದಂಡಿನಲ್ಲಿಯೂ ಸೋದರಮಾವನೇ ? (ಗಾದ). [ಸೋದರ + ಮಾವ (< ಮಾಮ)]

**ಸೋದರಸೊಸೆ** (ನಾ). ಒಬ್ಬನ ಅಕ್ಕ ಅಥವಾ ತಂಗಿಯ ಮಗಳು; ಒಬ್ಬಳ ಅಣ್ಣ ಅಥವಾ ತಮ್ಮನ ಮಗಳು: ಬೇಡುವೆ ಯತಿಯ ಪುರಂದರವಿಠಲನ ಸೋದರಸೊಸೆಯ (ಪುರಂದ. ೫-೬-೨); ಸೋದೆರಸೊಸೆಗೆ ಒಂದಿಲ್ಲೊಂದು ಇನಾಮು ದಿನಾಲು ಇದ್ದುದೇ (ಹೂಬಿಸಿ. ೧೦). [ಸೋದರ + ಸೊಸೆ]

**ಸೋದರಸ್ನೇಹ** (ನಾ). ಒಡಹುಟ್ಟಿದ ಸಂಬಂಧ; ಭ್ರಾತೃಭಾವ: ಈ ವೃಕ್ಷಗಳಲ್ಲಿ ನನಗೂ ಸೋದರಸ್ನೇಹವಿರುವುದು (ಶಾಕುಂತ. ೮-೨೦). [ಸಂ.]

**ಸೋದರಳಿಯ, ಸೋದರಅಳಿಯ** (ನಾ). ಒಬ್ಬನ ಅಕ್ಕ ಅಥವಾ ತಂಗಿಯ ಮಗ; ಒಬ್ಬಳ ಅಣ್ಣ ಅಥವಾ ತಮ್ಮನ ಮಗ: ''ಭಗಿನಿಜಂ ಸ್ವಸ್ರೀಯ ಸೋದರಳಿಯಂ'' (ಮಂಗರಾ. ೯೩-೧೪); ಅನಂತವೀರ್ಯನುಮೆನ್ನ ಮುನ್ನಿನ ತಂದೆಗೆ ಸೋದರಳಿಯಂ ಶ್ರೀವಿಜಯನೆಂಬೊನಾದಂ (ಶಾಂತಿಪು. ೨-೨೭ ವ); ಮಗಳಂ . . . ತನ್ನ ಸೋದರಳಿಯಂ ಶ್ರುತಸಾಗರಂಗೆ ಕುಡಲ್ವೇಡಿ (ಧರ್ಮಾಮೃ. ೩-೨೫೦). **ಸೋದರಅಳಿಯ**: ಆ ಮದ್ರಪತಿಯು ತನ್ನ ಸೋದರಅಳಿಯಂದರ ಪರಾಕ್ರಮಾತಿಶಯಗಳಿಗೆ ಸಂತೋಷಪಡುತ (ಕೃವಾಭೀ. ೧೨೮). [ಸೋದರ + ಅಳಿಯ]

**ಸೋದರಿ** (ನಾ). ಒಡಹುಟ್ಟಿದ ಅಕ್ಕ ಅಥವಾ ತಂಗಿ; ಸಹೋದರಿ: ಎನ್ನ ಶಿವಸೋದರಿಯ ಮಠದಲಿ ಚೆನ್ನಪಾಯಸವುಂಟು (ಬಸವು. ೧೪-೩). [ಸಂ.ಸೋದರೀ]

**ಸೋದರಿಕೆ** (ನಾ). ಒಡಹುಟ್ಟಿದುದರಿಂದುಂಟಾದ ಬಾಂಧವ್ಯ ,– ನಂಟು : ಎನಿತಱಿಯದಿರ್ದೊಡಂ ಸೋದರಿಕೆಯೆ ಮಿಕ್ಕು ಬರ್ಕುಂ (ಪಂಪಭಾ. ೧೨-೨೦೭ ವ); ದುಷ್ಟಸ್ವಭಾವದವಳಾಗಿದ್ದರೆ ಸೋದರಿಕೆಯಾದರೂ ತಾನದಕ್ಕೆ ಅಂಗೀಕರಿಸುತ್ತಿದ್ದನೆ ? (ಲಕ್ಷ್ಮೀಪ್ರ. ೭೨).

ಸೋದರಿಕೆಯವನು = ವಾವೆಯಲ್ಲಿ ಸೋದರಸಂಬಂಧವನ್ನು ಹೊಂದಿದವನು : ಇವರಿಗೆ ವಾವೆಯಲ್ಲಿ ಮಹಾರಾಜನು ಸೋದರಿಕೆಯವನು (ಸವತಿ. ೧೩೭). [ಸೋದರ + - ಇಕೆ]

**ಸೋದರಿಗ** (ನಾ). ಒಡಹುಟ್ಟಿದವನು; ಸೋದರಿಕೆಯುಳ್ಳವನು: ಆಕೆಯಾ ಶ್ರೇಣಿಯ ನಂದಪುರಮನಾಳ್ವ ತಮ್ಮ ಸೋದರಿಗನಪ್ಪ ಹರಿಷೇಣಂಗಂ ಶ್ರೀಕಾಂತೆಗಂ ಪುಟ್ಟಿದ ಹರಿವಾಹನಂಗೆ ಮಾಲೆಯಂ ಸೂಡೆ (ಮಹಾನೇ. ೧೫-೧೪೧ ವ); ಕ್ರೋಧವನ್ನು ಬೆಳೆಸುವ ಸೋದರಿಗರಿದ್ದರೇನು (ಪುರಂದ. ೨-೧೮೩-೧). [ಸೋದರ + - ಇಗ]

**ಸೋದರೀಭಾವ** (ನಾ). ತನ್ನ ಒಡಹುಟ್ಟಿದವಳು ಎಂಬ ಭಾವನೆ: ವೆಂಕಣ್ಣ ಲಲಿತೆಯನ್ನು ಎಂಥ ಸೋದರೀಭಾವದಿಂದ ಕಾಣುತ್ತಾನೆ! (ನಿಶಉ. ೪೭). [ಸಂ.]

**ಸೋದರ್ಯ** (ಗು). ೧. ಒಡಹುಟ್ಟಿದುದರಿಂದುಂಟಾದ: ಸೋದರ್ಯವಿಮೋಹ ಮಾರ್ಗಮೇನಾಗಿಸದೋ (ಸುಕುಮಾ. ೪-೭೨). (ನಾ). ೨. ಒಡಹುಟ್ಟಿದವನು; ಸಹೋದರ: ''ಸಮಾನೋದರ್ಯಃ, ಸೋದರ್ಯಃ, ಸಗರ್ಭ್ಯಃ, ಸೋದರಃ – ಈ ೪ ಒಡಹುಟ್ಟಿದಂ'' (ಹಲಾಯು. ೮೪-೩೫೪). ೩. ಸಹೋದರತ್ವ; ಸೋದರಿಕೆ: ಜಗತ್ತಿಗೆಲ್ಲ 'ಸ್ವಾತಂತ್ರ್ಯ, ಸಮಾನತೆ ಮತ್ತು ಸೋದರ್ಯ!' ಎಂಬ ಸ್ವಾತಂತ್ರ್ಯ ಮಂತ್ರವನ್ನು ಪಾಠ ಹೇಳಿದ ಫ್ರಾನ್ಸ್‌ದೇಶವೇ ವಿಯೆಟಮಿನದ ನೆತ್ತರು ಹೀರುವುದರಲ್ಲಿ ಮಗ್ನವಾಯಿತು (ವಿಶಿಸಂ . ೨೦). [ಸಂ.]

**ಸೋದರ್ಯೆ** (ನಾ). ಅಕ್ಕ ಅಥವಾ ತಂಗಿ; ಸೋದರಿ: ತನ್ನ ಸತಿಯುಂ ತನ್ನ ಸೋದರ್ಯೆಯುಂ ತಾನುಮೊಲವಿನಿಂದಂ ನಡೆತಂದು (ಆರಾಚ. ೧-೧೩-೧೧). [ಸಂ. ಸೋದರ್ಯಾ]

**ಸೋದಲಿಸು** (ಕ್ರಿ). (?): ಮೂದಲಿಸಿ ಸೋದಲಿಸಿ ತದ್ವಿಮಾನದ ಸುತ್ತ ಹೊದ್ದಿಸುತ ಬದ್ದಿಸುತಲುದ್ದಾದ ದಿಕ್ಚಕ್ರ ತೋರದೊಳ್ ಖಚರೇಂದ್ರ ಹಿಳುಕನಾವರಿಸಿ ವರಿಸೆ (ಜಿನಮು. ೨೯-೩೩). [? + - ಇಸು₃]

**ಸೋದಾಹರಣ** (ಗು). ೧. ಉದಾಹರಣೆಯಿಂದ ಕೂಡಿದ; ಉದಾಹರಣೆ ಸಹಿತವಾದ. (ನಾ). ೨. ಉದಾಹರಣೆಯಿಂದ ಕೂಡಿದುದು: ನೋಡಿದ ಹಿಡಿತಗಳನ್ನೂ ಡಾವು – ಪೇಚುಗಳನ್ನೂ ಬಣ್ಣಿಸುವ ರಭಸದಲ್ಲಿ ಎದುರಿಗಿದ್ದವನನ್ನು ಎಳೆದು ಸೋದಾಹರಣವಾಗಿ ಅವನನ್ನು ನೆಲಕ್ಕೆ ಅಪ್ಪಳಿಸುವರು (ಗಾಳಿಪ. ೭೫). [ಸಂ.]

**ಸೋದಿಗೆ₁** 'ಸೋಡಿಗೆ' ನೋ.

**ಸೋದಿಗೆ₂** (ನಾ). ಒಂದು ಬಗೆಯ ಭಕ್ಷ್ಯ: ಪೂರಿಗೆಯಿಡ್ಡಲಿಗೆ ಸೋದಿ [ಪಾಠಾಂ. ಸೊಂದಿ]ಗೆ ಲಾವಣಿಗೆ ಘೃತಪೂರಂ ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ . . . ಬಡ್ಡಿಸಿದೊಡೆ (ವಡ್ಡಾರಾ. ೭೮-೧೭). [?]

**ಸೋದಿಸು** (ಕ್ರಿ). ೧. ಹುಡುಕು; ಅರಸು; ಪತ್ತೆಹಚ್ಚು: ನಾಮಿದನಱಿಯದಂತು ಬೇಂಟೆಯ ನೆವದೊಳ್ ಬಟ್ಟೆಗಳಂ ಸೋದಿಸುವಂ (ಪಂಪಭಾ. ೩-೪ ವ); ಕುಱಿತುದ ಕುಱುಹಿಡುವನ್ನಕ್ಕ ಭೇದವಿವರವ ಸೋದಿಸಬೇಕು (ಸರ್ವಜ್ಞ. ೮೦-೧೪೩); ಬಟ್ಟವೆಱೆಯ ಬೆಳ್ದಿಂಗಳ ಹೊಂದಾವರೆವಟ್ಟಲೊಳ್ ಸೋದಿಪರುಂಟೇ (ಮೋಹತ. ೧-೨೪). ೨. ಹುಡುಕಿ ತೆಗೆ; ಹೆಕ್ಕು; ಆರಿಸು: ಆ ಮಣಲೆಲ್ಲಮಂ ಮಗುೞ್ ಪಾರಾವಾರದೊಳ್ ಪೊಯ್ದು ಮತ್ತಮದಂ ಸೋದಿಸಿ ಕಾಣ್ಬವೊಲ್ (ಸುಕುಮಾ. ೫-೩೩); ಸೋದಿಸಿದ ಪರಿಮಳದ ಪದ್ಮಳಿಗಳಂ ಕೊಂಡು (ಬಸರ. ೩-೨೮). ೩. ಪರೀಕ್ಷಿಸು; ಪರಿಶೀಲಿಸು; ಬೆದಕು: ತನ್ನ ನಿಷ್ಠುರಚರಣಸಂಘಟ್ಟದೊಳ್ ಪಡಲ್ವಟ್ಟ ವೀರಭಟರ ಮಕುಟಂಗಳೊಳ್ ತ್ತಲೆಗರೆದಿರ್ದನೆಗೆತ್ತು ಸೋದಿಸಿ ನೋಡಿಯುಂ (ಗದಾಯು. ೬-೨೮ ವ); ನೀನಿಪ್ಪ ಸದನಮಂ ಸೋದಿಸಿ ನೋೞ್ಪಂ (ಲೀಲಾವ. ೧೪-೭೯ ವ). ೪. ಗಮನಿಸು; ಎಚ್ಚರವಹಿಸು: ಗಡಣಹೆಣದೆಱಹುಗಳೊಳಗೆ ಕಾಲಿಡುತ ಸೋದಿಸಿ ಮುಂದೆ ಹೆಜ್ಜೆಯನಿಡುತ (ಕುವ್ಯಾಗ. ೩-೧೩). ೫. ಹಸನುಮಾಡು; ಸ್ವಚ್ಛಗೊಳಿಸು: ನೀಂ ಪರಿಕಿಸಿ ಸೋದಿಸಿ ಬಡ್ಡಿಸು ವರಮುನಿಪರ್ಗೆ (ನೇಮಿಪು. ೧೪-೧೨೧); ಚೆನ್ನವಪ್ಪುಳ್ಳಿಗಳ ಮೇಲೋಗರಕ್ಕೆಂದು ತರಿಸಿ ಸುಖಮುಖದಿಂದ ಸೋದಿಸುತ್ತಿರ್ಪಲ್ಲಿ (ಬಸರ. ೧೧-೪೧); ಬೆಳತಿಗಕ್ಕಿಯ ಸಣ್ಣ ಹಿಟ್ಟ ಸೋದಿಸಿ ಹುರಿದುಕೊಳುತ ಬೆಲ್ಲದ ಪಾಕದೊಳು ಹಾಕಿ (ಸೂಪಶಾ. ೧-೨೪). ೬. ಕಸ, ಕಡ್ಡಿ ಮುಂತಾದುವುಗಳನ್ನು ತೆಗೆದುಹಾಕು; ಚೊಕ್ಕಟಮಾಡು: ಪೊೞಲೊಳುತ್ತರದಿಶಾಭಾಗದೊಳೆ ಸಮಚತುರಸ್ರಮಾಗೆ ನೆಲನನಳೆದು ಕಲ್ಲಂ ಪುಲ್ಲುಮಂ ಸೋದಿಸಿ (ಪಂಪಭಾ. ೨-೬೫ ವ); ಅಸವಸದಿಂ ಪಟಗೆಯ್ಯಂ ಕಸಮಂ ಸೋದಿಸದೆ ಬಿತ್ತಿದೊಕ್ಕಲಿಗನವೋಲ್ (ಕಾವ್ಯಾವ. ೪೫೪). ೭. ಗಷ್ಟು ಉಳಿದು ದ್ರವವು ತಿಳಿಯಾಗುವಂತೆ ಮಾಡು; ಶೋಧಿಸು; ಸೋಸು: ರಸಮಂ ಸೋದಿಸೆಯುರ್ಕಿನ ಪುಡಿಯೆನಿಪಾ ದುಷ್ಕವಿತೆಗಳನೆಣಿಸಲೇಕೀ ಕೃತಿಯೊಳ್ (ಗಿರಿಕ. ೧-೨೨); ಪೊಸತಪ್ಪ ಸುಣ್ಣಮಂ ಸೋದಿಸಿ (ಅಶ್ವಶಾ. ೧೨-೬); ಪೊಸ ಮೊಸರಿನೊಳು ಹದನನಱಿದುಪ್ಪುಳ್ಳಿ ಯಾಲಕ್ಕಿಯೆಂಬವಂ ಸದಗುಟ್ಟಿಹಾಕಿ ಸೋದಿಸಿ (ಸೂಪಶಾ. ೩-೨೭). ೮. ನಿರ್ಮಲಗೊಳಿಸು; ಶುದ್ಧಿಗೊಳಿಸು: ಪರಿಮಳೋದಕದಿಂ ಮಜ್ಜನಂ ಮಾಡಿ ಸೋದಿಸಿದ ಸುಖಂ ಪೊಱಮಡುವಂತೆ ಪೊಱಮಟ್ಟು (ನಂಬಿರ. ೧೦-೩೩). ೯. ಪುಟವಿಡು; ಮೆರುಗು ಕೊಡು: ಬೆಳಗೆ ಕನ್ನಡಿ ಸೋದಿಸೆ ಪೊನ್ ವಿರಾಜಿಪಂತೆಸದು ಬಟಿಕ್ಕೆ ಮತ್ಕೃತಿ ಚಮತ್ಕೃತಿಯಂ ಧರೆಗುಂಟುಮಾಡುಗುಂ (ಜಗವಿ. ೧-೧೫). ೧೦. ತಿದ್ದು; ಸರಿಪಡಿಸು: ಪೆಱರಿಂದಂ ಸೋದಿಸದ ಪೆಱಂಗಿನಿಸೆಡೆಗುಡದ ಸಹಾಯಕವೀಶ್ವರಂ ಕುರುಳ್ಗಳ ಸವಣಂ (ಶಾಂತಿಪು. ೧೨-೭೫). ೧೧. ಜೀರ್ಣೋದ್ಧಾರ ಮಾಡು; ದುರಸ್ತಿಗೊಳಿಸು: ಹೊಸ ಕೆಱೆಯ ಕಟ್ಟಿಸಿ ತೂಬನಿಕ್ಕಿಸಿ . . . ಸೋಮೇಸ್ವರದೇವರ ದೇಗುಲವ ಅಳಿವಂ ಸೋದಿಸಿ ಸೊತೆಯನಿಕ್ಕಿಸಲ್ (ಎಕ. X. ಚಿಂತಾಮ. ೩೦-೧೧; 1047). ೧೨. (ಅಲಂ) ಸಿಕ್ಕುಬಿಡಿಸು; ಹಿಕ್ಕು: ಸೋದು ಕರಾಬ್ಜದಿಂ ಮುಗಿದ ಕಣ್ಮಲರಂ ಕಚಭಾರಬಂಧಮಂ ಸೋದಿಸಿ ಮೇಲುದಂ ಬಿದಿರ್ದು (ಸೂಕ್ತಿಸು. ೧೧-೪೦). ೧೩. [ಗಣಿತ] (?): ಮತ್ತರು ಪಸಲಾಗಿರೆ ವಂಭತ್ತುಂ

ಶತಕಂಭವನಿಪುದಳತೆಯೊಳಿಲ್ಲಂ ಭಿತ್ತರದಿಂ ಸೋದಿಸಿಕೊಳು (ಭಾಸ್ಕರ. ೨೮-೧). 'ಸೋಸು₁' ಪರಾ. [ಸೋದಿಸ + - ಇಸು₁]

**ಸೋದು** 'ಸೋ₁' ಪರಾ.

**ಸೋದೆ** 'ಸುದ್ದಿ' ನೋ.

**ಸೋಧನೆ** 'ಸೋದನ' ನೋ.

**ಸೋಧನೆವೋಗು** (ಕ್ರಿ). ಪರಿಶುದ್ಧವಾಗು; ಶುದ್ಧಿಗೊಳ್ಳು: ಪತಿಬ್ರತದುನ್ನತಿಕ್ಕೆ ತಾಂ ಸೋಧನವೋಯ್ತು ಘುಂ ನೆಗಳ್ದಬುಂದತಿಯೊಳ್ (ಎಕ. V, ಬೇಲೂರು. ೧೧೨-೪೮: ಸು. 1220 ?). [ಸೋಧನ (< ಸೋದನ) + ಪೋಗು₁ (< ಪೋ₁)]

**ಸೋನ₁** 'ಸಾನ₁' ನೋ.

**ಸೋನ₂** 'ಸೊನ್ನೆ₃' ನೋ.

**ಸೋನಗಾರ** 'ಸೊನ್ನಗಾಱ' ನೋ.

**ಸೋನಾಮುಖಿ** (ನಾ). ಒಂದು ಬಗೆಯ ಗಿಡ ಮತ್ತು ವಿರೇಚನಕ್ಕಾಗಿ ಬಳಸುವ ಅದರ ಎಲೆ: ಸೋನಾಮುಖಿ, ನೆಲಾವರಿಕೆ (ಮೈಔಗಿ. ೧೮-೩೫); ಕಪಾಟನಲ್ಲಿಯ ಸೋನಾಮುಖಿಸೊಪ್ಪಿನಿಂದ ಕಾಡೆ ಮಾಡಿಕೊಡಿರಿ (ಸ್ವತಿಚಿ. ೨೭೫). [← ಮರಾ. ಸೋನಾಮುಖೀ]

**ಸೋನಾಯ** 'ಸೊನಯಿ' ನೋ.

**ಸೋನೆ₁** (ನಾ). ೧. ಮಳೆ; ವೃಷ್ಟಿ: "ಸಲೆ ಸೋನೆಯೆನಲ್ಕೆ ವೃಷ್ಟಿಯೊಳ್" (ಕರ್ಣಾನಿ. ೮೩); ರಸಂಗಳಂ ತಳೆದ ಪಣ್ಗೊಲೆಯಂ ಗಿಳಿವಿಣ್ಣು ಚುಂಚುವಿಂದಿಱಿದಡೆ ಸೋರೆ ಸೋನೆಯೊಳೆ ದಾಂಗುಡಿ ಮಿನ್ನೆಸೆದಿರ್ಪುವು (ಎಕ. XIII, ೩೩೦-೨೯; 929); ಅಮರ್ದಿನ ಸೋನೆಯೆ ಸುರಿದತ್ತು ರಸದ ತೊಱೆ ಪರಿದತ್ತೆಂಬೀ ನುಡಿಯನೆ ನುಡಿಯಿಸಿದತ್ತಾ ನಾಕಸ್ತ್ರೀಯ ಗೇಯಂ (ಆದಿಪು. ೭-೧೭); ಆನೆಗಳ ಮೇಲೆ ಕುವರಿಯ ರಿರ್ದು ಮುತ್ತುಗಳ ಸೋನೆಗಳನಡಿಗಡಿಗೆ ಸೂಸುತಿರೆ (ಜೈಮಿಭಾ. ೩೩-೪೫). ೨. ಎಡೆಬಿಡದೆ ಸುರಿಯುವ ಸಣ್ಣಹನಿಗಳ ಮಳೆ; ಜಿನುಗುಮಳೆ; ಜಡಿಮಳೆ: "ಸೋನೆಯೊಳ್ ತಂದಲಕ್ಕುಂ" (ಕರ್ಣಾನಿ. ೫೧); ತುಂತುಱ ತಿಂತಿಣಿಗಂ ಸೋನೆಗಳ ಜಿನುಂಗಿಗಂ ಬಿಱುಗಾಳಿಯ ಗಾಸಿಗಂ . . . ಬೆಚ್ಚದೆ ಬೆದಱದೆ . . . ಮಹಾವಟವೃಕ್ಷದ ಕೆಳಗೆ ವಿಪುಳತಪದಿಂದಪರ್ಣಿಯೊಪ್ಪುತ್ತುಮಿರೆಯಿರೆ (ಗಿರಿಕ. ೯-೫೮ ವ). ೩. ಹೂವು, ಹಣ್ಣು ಮುಂತಾದುವುಗಳ ತೊಟ್ಟಿನಿಂದ ಸುರಿಯುವ ರಸ; ಸೊನೆ: ಕಾಯ್ಗಳಿಂದಮಿಂಬಾಗಿರೆ ಸೋರ್ವ ಸೋನೆ ಮದಮಾಗಿರೆ ಮಾವಿನ ಬಂದಕೋಡೆ ಕೋಡಾಗಿರೆ ಕೋಡುಗೊಂಡು ಪರಿದತ್ತು ವಸಂತಗಜಂ ವಿಯೋಗಿಯಂ (ಪಂಪಭಾ. ೨-೧೫); ಬಿರಿದೊಗುವ ಬಂಬಲಿನ ಸೋನೆಯ ಪರಿಯ ಪಕ್ವಫಲಾಳಿಗಳ ಬಂಧುರತರಸಾಳ ಪ್ರಮುಖಭೂಜದಿನೆಸೆದುದುದ್ಯಾನ (ತೊರಾರಾ. ೧-೯-೧೨); ಉರುಪಿಕಚಂಚೂಹತಿಯಿಂದೊಗುವ ಮಾಮರದ ಸೋನೆಯ ಸೋನೆ ಯೊಳಗೆ ಇರಲಾಱದೆ ಪಣ್ಣ ಬಕ್ಕೆವಲಸಿಗೇಳ್ದ ಪುರುಳಿಗಳೆಸೆದವು (ಕುರಾಸಾಂ. ೪-೯೯). 'ಸೊನೆ' ಪರಾ. [ದೇ. II ತಮಿ. ಚೊನ್ನೈ; ತೆಲು. ಸೋನ]

**ಸೋನೆ₂** 'ಸಾವಣ' ನೋ.

**ಸೋನೆಗರೆ** 'ಸೋನೆಗಱೆ' ನೋ.

**ಸೋನೆಗಱೆ, ಸೋನೆಗರೆ** (ಕ್ರಿ). ೧. ಸೊನೆಯನ್ನು ಸುರಿಸು; ರಸವನ್ನು ಸೂಸು: ರಸದಾಳಿ ಪಣ್ತೊಡೆದು ಸೋನೆಗಱೆವಂತೆ ಪಾಡಿದರು . . . ಮಾನಿನಿ ಯರುಗಳು (ಸೌಂದಪು. ೮-೪). **ಸೋನೆಗರೆ**: ೨. ಮಳೆ ಸುರಿಸು; ವರ್ಷಿಸು: ಪೊಳಲ ಮೇಲೆ ಮಂಜುಳಕೃಪಾಮೃತದ ಸೋನೆಗರೆಯನೆ (ಚತುಪು. ೨-೪-೨೩). [ಸೋನೆ₁ + ಕಱೆ₁]

**ಸೋನೆಗಾಲ** (ನಾ). ಜಡಿಮಳೆ ಬರುವ ಕಾಲ; ವರ್ಷಾಕಾಲ: ತಾನೆ ಗುರು ವೆಂದೆನಿಸಿ ತೋಱಿದನಾ ನಿಖಿಳನಾರಿಯರ ಮೋಹಕ ಸೋನೆಗಾಲದ ಮುಗಿಲ ನೇಱಿದ ಪರುಷರುತುವಂತೆ (ಕೃಷ್ಣಾಕಾ. ೫-೩೦). [ಸೋನೆ₁ + ಕಾಲ]

**ಸೋನೆಮರಿಯಾದೆ** 'ಸೋಣೆಮರಿಯಾದೆ' ನೋ.

**ಸೋನೆಮಳೆ** 'ಸೋನೆವಳೆ' ನೋ.

**ಸೋನೆವಳೆ, ಸೋನೆಮಳೆ** (ನಾ). ೧. ಎಡೆಬಿಡದೆ ಸುರಿಯುವ ಮಳೆ; ಜಡಿಮಳೆ: ಸೋನೆವಳೆ ಸುರಿವಂದು ನೀರ್ವೊನಲು ಹರಿವಂದು ಬಿಸಿಲುಮಳೆಯಂದವನು ಕಾಣಬೇಕು (ಭಾವಜೀ. ೨೦-೪೦೩). **ಸೋನೆಮಳೆ**: ೧. ಈ ಸೋನೆಮಳೆಯಲ್ಲಿ ಹೊರಗಡೆ ಹೋಗಿ ಏನು ಕೆಲಸ ಮಾಡುವುದೂ ಸಾಧ್ಯವಿಲ್ಲ (ರೂಢಿ). ೨. (ಆಲಂ) ನಿರಂತರವಾದ ಚರ್ಚೆ; ಎಡೆಬಿಡದ ವಾಗ್ವಾದ: ಯಾರು ಸರಿ ಯಾರು ತಪ್ಪು ಎನ್ನುವ ಸೋನೆಮಳೆ ಸುರಿಯುತ್ತಲೇ ಇತ್ತು (ಹಸುಹೊ. ೩೧೫). [ಸೋನೆ₁ + ಮಳೆ (< ಮೞೆ)]

**ಸೋನೇರಿ** (ನಾ). ೧. ಚಿನ್ನದ ಬಣ್ಣದ ಕಾಗದ; ಗುನ್ನಾಂಪಟ್ಟಿ: ಕಾಗದ, ಹೊಸವು, ಎಲ್ಲಾ ಪ್ರಕಾರದವು ಅಂದರೆ ಫ್ರೆಂಚ . . . ಸೋನೇರಿ, ರುಪೇರಿ, ವಿಲಾಯತಿ ಕಾಗದ ಮುಂತಾದವು (ಮುಂಬವ್ಯಾ. ೧೯೯). (ಗು). ೨. ಚಿನ್ನದ ಬಣ್ಣದ: ಆ ತೋಟಗಳಲ್ಲಿ ಸೋನೇರಿ ರುಪೇರೀ ಕೆಲಸಗಳಿಂದ ವಿಚಿತ್ರವಾದ . . . ದಿವಾನಖಾನೆ ಯನ್ನೂ ಕಟ್ಟಿಸಿದರು (ಮಹಾವಂ. I, ೨೨೬). 'ಸುನೇರಿ' ಪರಾ. [← ಮರಾ. ಸೋನೇರೀ]

**ಸೋಪದ್ರವ** (ನಾ). ಸಂಕಟದಿಂದ ಕೂಡಿದುದು; ವಿಪತ್ತನ್ನು ಹೊಂದಿದುದು: ಸುರಪದವಿ ಸೋಪದ್ರವದ ನಿಷ್ಠುರವಿದೆಂದು ರಹಸ್ಯದಲಿ ನನಗೆಂಡನಮರೇಂದ್ರ (ಕುವ್ಯಾಅ. ೧೨-೨). [ಸಂ.]

**ಸೋಪನ** (ನಾ). ಮೆಟ್ಟಿಲು; ಪಾವಟಿಗೆ: ಸತ್ಯವೊಂದೇ ಸೋಪನವು ಸಗ್ಗಕ್ಕೆ ಜನ್ಮದ ಕೂಪರಕ್ಕಿದು ನಾವೆಯಾಗಿಹುದು (ಕುವ್ಯಾಉ. ೩-೯). [< ಸಂ. ಸೋಪಾನ./ IP ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ]

**ಸೋಪಸ್ಕರ** (ನಾ). ೧. ಅವಶ್ಯಕವಾದ ಸಾಮಗ್ರಿ; ಅಗತ್ಯವಸ್ತು: ವೀಧಿವೀಧಿ ಯೊಳು ಕಂಗೊಳಿಸುವ ಸೋಪಸ್ಕರ ವ್ಯವಹಾರದಂಗಡಿ ಮೆಱೆದುವಿಕ್ಕೆಲದಿ (ಮೋಹತ. ೩೬-೭೧); ಹಣ ಮುಟ್ಟದ ಸೋಪಸ್ಕರವನ್ನು ತರಿಸಿಕೊಟ್ಟು ರಥೋತ್ಸವವನ್ನು ಸಮ್ಮುಖವಾಗಿ ಆಗಮಾಡಿಸುವದು (ಮೈಆರಿ. ೧೯೨೮, ೪೬-೭; 1711); ಮಂದಿರಗಳನಿತ್ತು ಸೋಪಸ್ಕರವನಂದು[ತಂದು] ಕೊಟ್ಟು ದಣಿಸಿದರು (ತರ್ಕಕಾ. ೨-೪೮). ೨. ಗೃಹೋಪ ಕರಣ: ನಿಮಗೆ ವಾಸ್ತವ್ಯಕ್ಕೆ ಯೋಗ್ಯವಾದ ಒಂದು ದೊಡ್ಡ ಮನೆಯನ್ನು ಸೋಪಸ್ಕರಗಳ ಸಮೇತ ಲವಕಾಲದಲ್ಲಿ ಸಿದ್ಧಪಡಿಸುವೆನು (ವಾಗ್ಲೇವಿ. ೧೭); ಆ ಕೊಟ್ಟಡಿಯ . . . ಸೋಪಸ್ಕರಗಳನ್ನೂ ರಚನೆಯ ರೀತಿಯನ್ನೂ ನೋಡಿ ಇಬ್ಬರೂ ಆನಂದ ಪರವಶರಾಗಿದ್ದಾಗ . . . ಬಾಗಿಲನ್ನು ಮುಚ್ಚಿದನು (ರಾಜಾಮು. ೨೪೪). ೩. ಅಡುಗೆಗೆ ಬೇಕಾಗುವ ಅಕ್ಕಿ, ಬೇಳೆ, ಉಪ್ಪು, ಮೆಣಸು ಮೊದಲಾದ ಪರಿಕರ; ಸಂಭಾರವಸ್ತು. ೪. ಧನ, ಧಾನ್ಯಾದಿ ಸಂಪತ್ತು: ಪರರ ಪೀಡನೆಗೈದು ಸೋಪಸ್ಕರವನಾರ್ಜಿಸುತಾವನಿಂದೀ ಧರಣಿಯೊಳು ಸತ್ಕರ್ಮಮೆಸಗಲು ವ್ಯರ್ಥವಾಗುವುದು (ಕಾವೇಮ. ೨೫). ೫. ಗೃಹೋಪಯೋಗಿಯಾದ ದ್ರವ್ಯ: ಸೋಪಸ್ಕರವನು ಒಂದು ಮಾಡದೆ ಎಲ್ಲ ಗೋಪಾಲಕೃಷ್ಣಗೆ ಅರ್ಪಿಸದೆ ಪಾಪಕರ್ಮಕ್ಕೆ ನಾ ಗುಱಿಯಾದೆ (ಪುರಂದ. ೧-೧೭೭-೯); ಗೋ ಮಹಿಷಿ ಮುಂತಾದವುಗಳನ್ನೂ ಮುಂದಿನ ಫಲ ಬರುವವರೆಗೆ ಪರಾಪೇಕ್ಷೆಯಿಲ್ಲದಂತೆ ಸೋಪಸ್ಕರವಾಗಿ ಕೊಟ್ಟರು (ಮಹಾವಂ. II, ೧೫೩). [ಸಂ.]

**ಸೋಪಸ್ಕರವೆಱು** (ಕ್ರಿ). ಅಗತ್ಯವಸ್ತುಗಳನ್ನು ಪಡೆದಿರು: ಆ ಪರ್ವತದ ದಕ್ಷಿಣ ಭಾಗದೊಳು ಜಂಬೂದ್ವೀಪದ ಮಧ್ಯದೊಳಿರ್ದು ಸೋಪಸ್ಕರವೆತ್ತ ನಿಖಿಲ ದೇಶಂಗಳ ಸ್ವರೂಪವನೇವಣ್ಣಿಸುವೆನು (ಮೋಹತ. ೨-೧೩). [ಸೋಪಸ್ಕರ + ಪೆಱು₁]

**ಸೋಪಸ್ಕಾರ** (ನಾ). ೧. = ಸೋಪಸ್ಕರ ೧: ಪರಿಚಾರಕರುಮಿಂತುಗೈವುತಿಥಲಿತ್ರಲಾ ವರಮಂತ್ರಿ ಸಕಲ ಸೋಪಸ್ಕಾರವನೊದಗಿಸುತ (ನವಮೋ. ೩೩-೧೨); ಆರು ಮೂರು ವಿಧದ ಸೋಪಸ್ಕಾರ ಒಂದಾದರೂ ಇಲ್ಲ (ಕಭವಿ. ೪೩೪). ೨. = ಸೋಪಸ್ಕರ ೩: ಭೀಮರಾಜನು ದ್ರುಮವಂತ ಹೇಳಿದ ಹಾಗೆ ಬ್ರಂದರಸುಗಳಿಗೆ ಸೋಪಸ್ಕಾರವ ಕೊಡಿಸಿ ಕಟ್ಟಿಗೆಯ ಕೊಡದೆ ನಮ್ಮ ಕೇಳಿದಲ್ಲದೆ ಬೆಂಕಿಯ ಹೊತ್ತಿಸಬೇಡ ಎನಲು (ಭೈರಸೂ. I, ೭೫). ೩. ಪೂರಕವಾದುದು; ಸಾಧನವಾದುದು: ನಿಸರ್ಗಂ ಸ್ವಭಾವ ಮೆಂಬುದು ಅಧಿಗಮಂ ಅರ್ಥಾವಬೋಧಮೆಂಬುದು ತದ್ದ್ವಿತಯಕ್ಕಂ ಹೇತುತ್ವದಿಂ ಸೂತ್ರಂಗಳ್ ಸೋಪಸ್ಕಾರಂಗಳಪ್ಪುದಱಿಂ ಕ್ರಿಯಾಧ್ಯಾಹಾರನಿರ್ದೇಶಮಕ್ಕುಂ

(ತತ್ತ್ವಪ್ರ. ೭). ೪. ಅಣೆ; ಸಜ್ಜು; ಸಿದ್ಧತೆ: ಶಿವದಾಸಿ ಮುದದಿಯನೇಕ ಸೋಪಸ್ಕಾರಮಂ ಸುವಿವೇಕದಿಂ ಮಾಡಿದಳು (ಶಂಕದಾ. ೧೭-೩೭). [ಸಂ.]

**ಸೋಪಹಾಸ** (ಗು). ೧. ಪರಿಹಾಸ್ಯದ ; ಅಣಕದಿಂದ ಕೂಡಿದ. ೨. ತಿರಸ್ಕಾರದ; ಅವಹೇಳನದಿಂದ ಕೂಡಿದ. (ನಾ). ೩. ಅಣಕ; ಅಪಹಾಸ್ಯ: "ಸೋಲ್ಲುಂಠಃ, ಸೋತ್ಪ್ರಾಸಃ, ಸೋಪಹಾಸಃ – ಈ ಮೂಱು ಚುನ್ನಂ" (ಹಲಾಯು. ೨೪-೧೪೮). [ಸಂ.]

**ಸೋಪಾಧಿರಹಿತ** (ನಾ). ಯಾವ ನಿರ್ಬಂಧಕ್ಕೂ ಒಳಪಡದವನು; ಸರ್ವಸ್ವತಂತ್ರ: ಶ್ರೀಪಾರ್ವತೀನಾಥ. . . ಸೋಪಾಧಿರಹಿತ . . . ಪಾಲಿಸ್ಯೆ (ವೀಶೈಪು. ೭-೧-೧). [ಸಂ.]

**ಸೋಪಾನ** (ನಾ). ೧. ಮೆಟ್ಟಿಲು; ಪಾವಟಿಗೆ: "ಆರೋಹಣಂ, ಸೋಪಾನಂ – ಈ ೨ ಸೋಪಾನಂ" (ಹಲಾಯು. ೫೦-೧೪೭); ಆನಂದವೆಂಬ ಜಲವ ತುಂಬಿ ಸ್ವಾನುಭಾವವೆಂಬ ಸೋಪಾನವ ಹೂಡಬೇಕಯ್ಯ (ವಚಸಂ. ೪೦೮-೭೪): ತಾಪದಲಿ ಸಂಸಾರಕೂಪದಲಿ ಬಿದ್ದವರು ಆಪತ್ತನಳಿದು ಪೊಱಮಡಲು ಗುರುಪಾದ ಸೋಪಾನವಯ್ಯ (ಸರ್ವಜ್ಞ. ೯೭). ೨. ಹಂತ; ಮಜಲು; ಘಟ್ಟ: ಪೀಠಿಕೆ, ವಿಷಯಪ್ರದರ್ಶನ, ಹೋಲಿಕೆ, ನಿಯಮನಿರೂಪಣೆ ಮತ್ತು ಪ್ರಯೋಗ ಇವುಗಳೇ ಆ ಐದು ಸೋಪಾನಗಳು (ಶಿಕ್ಷದ. ೨೨೧). [ಸಂ.]

**ಸೋಪಾನಂಗಟ್ಟು** (ಕ್ರಿ). ಮೆಟ್ಟಿಲನ್ನು ಕಟ್ಟು; ಪಾವಟಿಗೆಯನ್ನು ಹಾಕು: ದಿವಕ್ಕೆ ಪೋಪ ಬಟ್ಟೆಗೆ ಸೋಪಾನಂಗಟ್ಟಿದಂತೆ ತೆಱತೆಱದಿಂ ನೆಗದೊಗೆವ ಪೊಗೆಯ ಕಂಡು (ಪಂಚತಂ. ಅ. ೮೮-೧೦). [ಸೋಪಾನ + ಕಟ್ಟು$_1$]

**ಸೋಪಾನಪಂಕ್ತಿ** (ನಾ). ಮೆಟ್ಟಿಲುಗಳ ಸಾಲು ,– ಶ್ರೇಣಿ: ಸೋಪಾನಪಂಕ್ತಿಯನ್ನೇರಿ . . . ಪ್ರವೇಶಿಸಿದನು (ಪುನರು. ೩೫೮). [ಸಂ.]

**ಸೋಪಾನಮಾನೆ** (ನಾ). ಮೆಟ್ಟಿಲುಗಳ ನಿರ್ಮಾಣಕ್ಕಾಗಿ ಕೊಡುವ ಉಂಬಳಿ: ದೀಪಮಾನೆಯ ಕೊಟ್ಟ ಧೂಪಮಾನೆಯ ಕೊಟ್ಟ ಸೋಪಾನಕಟ್ಟ ಭೀಮೆಯೊಳು ಇಳಿಯುವುದಕೆ ಸೋಪಾನಮಾನೆ ವತನಿತ್ತ (ಶರಚ. ೩೩೨).

[ಸೋಪಾನ + ಮಾನ್ಯ$_0$ (< ಮನ್ನೆಯ)]

**ಸೋಪಿ** 'ಸೊಪ್ಪೆ' ನೋ.

**ಸೋಪಿತ** (ನಾ). (?): ಊಟವಿನ್ಯಾತಕೆ ವಲಪಿನೊಳಿಲ್ಲದೆ ಪಾಟಿಪ ಮುಪ್ಪಿಗಾರುಂಟು ಕೋಟಲೆಕೊರಳನು ಕಿತ್ತು ಹಾಳುಗೂಡಿನ ಗೋಟೆಗೆ ಸೋಪಿತವಾದೆ (ಕಪೋತ. ೧೨-೪೧). [?]

**ಸೋಪು$_1$, ಸೋವು$_2$, ಸೋವೆ$_1$, ಸೋಹು$_2$, ಸೋಹೆ** (ನಾ). ೧. ಪ್ರಾಣಿಗಳನ್ನು ಪೊದೆಗಳಿಂದ ಎಬ್ಬಿಸಿ ಆಡುವ ಒಂದು ಬಗೆಯ ಬೇಟೆ: ಸೋಪಿನ ತೋಪಿನ ಪಳಹದ ಕೋಪಿನ ಪಾಳಿವದ ಗೋಟವೇಂಟೆಗೆ ಮತ್ತಂ ಚಾಪಪ್ರವೀಣದುದ್ದತಕೋಪರ್ನಡೆತಂದರಲ್ಲಿ ಮುಂದೆ ಪುಳಿಂದರ್ (ಸೂಕ್ತಿಸು. ೮-೧೦೪). **ಸೋವು$_2$**: ೨. (ಕರಾ) ಕಾಡಿನಲ್ಲಿ ಪ್ರಾಣಿಗಳು ನಡೆದಾಡುವುದರಿಂದ ಉಂಟಾದ ದಾರಿ; ಜಾಡು: ಈ ಸೋವಿನಲ್ಲೇ ಹುಲಿ ಹೋಗಿರಬೇಕು (ರೂಢಿ). ೩. ಸೂಚನೆ; ಸಂಕೇತ: ಪಗೆಯ ಸುಱಿವನಱಿವೊಡಂದು ಬಿಸುಗ್ಗೆಯನಟ್ಟಿದ ಬೇಹುಕಾಱರ ಸೋವೆನಲಾಗಸದೊಳೆಡೆಯೆಡೆಯೊಳಱಿಲುಂ, ಭೂಮುಖದ ಮನೆಮನೆಯೊಳ್ ಸೂಡರುಮೆಸೆದುವು (ರಾಮಾಶ್ವ. ೨೨-೭೯). ೪. ಸುಳಿವು; ಸೂಕ್ಷ್ಮ: ತನ್ನ ಮನೆಯ ಮೇಲೆ ಅತ್ಯಾಚಾರ ನಡೆಯುವುದೆಂಬ ಸೋವು ಗೊತ್ತಾಗಿ, ವಿಶ್ವನಾಥಪಂತರು ತಮ್ಮ ಹೆಂಡತಿಯನ್ನೂ . . . ಕಳುಹಿಸಿದ್ದರು (ವಿಧಿವ್ಯ. ೨೪); ಸಾಂಬನಿಗೂ ಸೋವುಸಿಕ್ಕಿತು. ಬದಿಯಲ್ಲೇ ಮಡಗಿವ ಹಿಡಿಸೂಡಿಯನ್ನೆತ್ತಿಕೊಂಡ (ತ್ಯಾಗಮ. ೭೭). ೫. ಗಮನ; ಲಕ್ಷ್ಯ: ವರ್ಷದಲ್ಲಿ ಹತ್ತಾರು ಮಂದಿಯಾದರೂ ಕಾವಲುಗಾರರ ಸೋವನ್ನು ತಪ್ಪಿಸಿ ಪಲಾಯನ ಮಾಡುತ್ತಿದ್ದುದನ್ನು ಮರೆಯಲಾರದ ಸೆರೆಮನೆ ಅಧಿಕಾರಿ (ಓಂಕತೆ. ೮೪). ೬. (ಬೇಟೆಗಾರನಿಗೆ ಸಿಗುವ) ಶಿಕಾರಿ; ಬೇಟೆ: ಕೋಟಿ ಕೋಟಿ ಜನ, ಪರ್ವದ ಪೂವು, ತುರುಗಿತು ಜವರಾಯನ ಬಾಯ್ ಸೋವು! (ಪಾಂಚಿ. ೩೫-೮೦೦). **ಸೋವೆ$_1$**: ೪. ಆ ನಾಯಿ ಅದರಲ್ಲಿರುವ ಮೊಸಳೆಯ ಸೋವೆಯನ್ನರಿತು ನೀರಿನಲ್ಲಿಳಿಯಬೇಡವೆಂದು ಆತನನ್ನು ಸನ್ನೆ ಮಾಡಿತು (ಕಥಾಮಂ. IV, ೭೪). ೭. (?): ಅರ್ಧಜನರಲ್ಲಲ್ಲಿ ಸೋವೆಗಳ ತಿಳಿದಾಗ ಪರ್ದು ಮಾಡಿತ್ತೆಂಬರಗ್ನಿಸತಿಗೈದಿರವನಾರ್ಥರೆಯೊಳಱಿಯದಿರಿ (ಲಕ್ಷ್ಮೀಭಾ. ೩-೨೩-೩೩). **ಸೋಹು$_2$** : ೧. ಸೋಹಿನಲಿ ಬೆನ್ನಟ್ಟಿ ಪಾರ್ಥಕುಮಾರ ಸದೆದನು ವೈರಿಮೃಗಕುಲವ (ಕುವ್ಯಾದ್ರೋ. ೫-೭೪); ಸರಳ ಸೊಂಪಿನ ಸೋಹಿನಲಿ ನಿಱಿಗೆರುಳ ದಾವಣಿವಲೆಗಳಲಿ . . . ಸಮರದೊಳರಿಮೃಗವ್ರಾತವನು ಭೀಮಕಿರಾತ ಕೈಕೊಂಡ (ಕುವ್ಯಾದ್ರೋ. ೧೨-೩೧). ೮. ಪ್ರಾಣಿಗಳನ್ನು ಅಡಗಿರುವ ಸ್ಥಳದಿಂದ ಎಬ್ಬಿಸಿ ಬೇಟೆಯಾಡುವ ಸ್ಥಳ: ನಿಂದು ಬೇಡರ ತೋಹುಸೋಹುಗಳ ಸಂದಿಯೊಳು ಪರಿದು ತಿರುಕಾಳತ್ತಿಮಲೆಯ ತಪ್ಪಲೊಳಿಲ್ಲ (ಕಣ್ಣರ. ದೇ. ೧೨೭-೨೦); ವನಾಂತರದೊಳ್ತೆರೆಯ ತೋಪಿನ ಸೋಹಿನ ನೀರಬೇಂಟೆಗಳುರ್ವರೆಗಳನೀಕ್ಷಿಸುತ್ತ ಬರೆ (ಅನಂಪು. ೧೧-೪೦). ೯. ಪ್ರಾಣಿಗಳನ್ನು ಅಡಗಿರುವ ಸ್ಥಳಗಳಿಂದ ಎಬ್ಬಿಸಿ ಬೇಟೆಗಾರರು ಹಾಕುವ ಕೂಗು,– ಬೊಬ್ಬೆ: ಬಲೆಗಾನಿರ ಸೋಹೆನಿಪ್ಪ ತತ್ಕಳಕಳಮುಣ್ಕೆ ಬೇಡವಡೆ ಬೊಬ್ಬಿಱಿದಾಡಿದುದಂದು ಬೇಂಟೆಯಂ (ದಶಕು. ೨-೧೧೪): ಸೋಹಿನ ಮಂತ್ರಮಯಸಂತತಿಯ ಸೊಂಪಿನ ವಿವಿಧ ಜಪಯಜ್ಞಾದಿಗಳ ಬಲೆಯ . . . ಯೋಗಸ್ಥಿತಿಯ ಸರಳಿನ ಶಬರರೈದಿತು (ಕುವ್ಯಾಅ. ೫-೩೪). ೧೦. ಆಶ್ರಯ; ರಕ್ಷಣೆ: ಕಾಯಿ ಹೃದಯಾಕಾಶದ ಸೋಹಿನೊಳಿರುತಿಹ ಚಿತ್ಸಪೆ (ಗುರುಬ. ೪-೪). ೧೧. ಕಾವಲು; ಪಹರೆ: ಸಾಹಸದಿಂ ಪಡಲ್ವಡಿಸಿ ಬೆಂಕೊಳಿಸಿದ ಸೋಹಿಲ್ಲದಂತೆಂಟು ಪೇಳೆ (ಗೊಮ್ಮಚ. ೭-೧೧೨). **ಸೋಹೆ**: ೪. ಊಹೆಯಲ್ಲಿ ತಡವರಿಸಿ ಹೆಜ್ಜೆಯ ಗಾಹುಗತಕದೊಳಿಡುತ ಕಾಂತಿಯ ಸೋಹೆಯಱಿಯದೆ ಬೀದಿಯಲಿ ಕಂಡೆನು ಸರೋವರವ (ಕುವ್ಯಾಸ. ೧೨-೩೪). ೧೦. ದೊರಕಿದಾತಂ ಸವಿಯಬೇಹುದೇ ಮತ್ತಾರ್ಗೆ ದೊರೆಕೊಳುವುಪಾಯಕ್ಕೆ ಸೋಹೆಯಂ ಕೊಡಲಾಗದೇ ಜಗಜ್ಜನದ ಕೃಪೆಗೆ (ಸಿದ್ಧರಾ. ೯-೪೧).

**ಸೋಹೆ ಸೋಹೆ** (ದ್ವಿರುಕ್ತಿ): ಭೂಭುಜನಾತ್ಮಹಿತವ ಸೂಸಿದನು . . . ಸೋಹೆಸೋಹೆಯೊಳಾಡಿ ಹೋಗುತಿರ್ದನು (ಭರಚ. ೭೦-೫). **ಸೋವಿನ ಕಾಕು** = ಬೇಟೆಗಾರರು ಬೇಟೆಯಾಡುವುದಕ್ಕಾಗಿ ಪ್ರಾಣಿಗಳನ್ನು ಎಬ್ಬಿಸಲು ಹಾಕುವ ಕೂಗು ,– ಬೊಬ್ಬೆ : ಎಲ್ಲರೂ ಸೋವಿನ ಕಾಕು ಹಾಕುತ್ತಾರೆ (ಚಂದ್ರಸ. ೨೮-೧೫). **ಸೋವು ಬೇವು ಮಡಗು** = ಪಹರೆಯವರು ಮತ್ತು ಗೂಢಚಾರರನ್ನು ನೇಮಿಸು: ಚತುರೋಪಾಯದಿಂದಾ ಸೋವು ಬೇವು ಮಡಗಿ . . . ತುಂಟರನ್ನು ಹಿಡಿಮು ಕಳುಹುತ್ತೇನೆ (ರಾಜೇಂದ್ರ. ೨೮೭). **ಸೋವು ಹಿಡಿ** = ಸುಳಿವನ್ನು ಹಿಂಬಾಲಿಸು: ಅವನು ಚಮತ್ಕಾರದಿಂದ ಸೋವು ಹಿಡಿದು ಪ್ರಕರಣ ತಲಾಷು ಮಾಡಿದ್ದಕ್ಕಾಗಿ . . . ವಾಗ್ದೇವಿಯ ಮತ್ತು ಚಂಚಲನೇತ್ರರ ಕೃತಜ್ಞತೆಗೂ ಭಾಗಿಯಾದನು (ವಾಗ್ದೇವಿ. ೧೪೭). **ಸೋಹಿನ ಬೇಂಟೆ** = ಮೃಗಗಳನ್ನು ಬೆನ್ನಟ್ಟಿ ಆಡುವ ಬೇಟೆ: ನಾರೀಜನ ಮೆಯ್ವಿತು ಮನಸಿಜಮಧುಮಾರುತರಾಡುವ ಸೋಹಿನ ಬೇಂಟೆಗೆ ಭೀರುತೆಯಿಂದೊಳಗಾಗಿ ನಡೆವ ಮೃಗಗಣವೆಂಬಂದದೊಳು (ಜಯಕಾ. ೫-೩೧).

[ಸೋ$_1$ + - ಪು$_2$./ತುಳು. ಸೋವು, ತೋವು]

**ಸೋಪು$_2$** 'ಸೋಂಪು' ನೋ.

**ಸೋಪು$_3$** (ನಾ). ಸಾಬೂನು; ಸಬಕಾರ: ಸೋಪು, ವ್ಯಾಸಲೈನ್. . . ಮೋಟರು ಎಲ್ಲ ಬಹುವಾಗಿ ಪರದೇಶದವು (ಹಣಪ್ರ. ೧೦); ಪ್ರಾರ್ಥನೆ ತೊಡೆವುದು ಮನದ ಕಿಲ್ಬಿಷವನು ಆ ಸೋಪು ಸೀಗೆಗಳಂತೆ (ಚಂದ್ರವೀ. ೧೧೪-೫೭). [← ಇಂ. Soap]

**ಸೋಬತಿ, ಸೋಬತು, ಸೋಬತೆ, ಸೋಬತ್ತು** (ನಾ). (ಉಕ) ೧. ಅಧೀನ; ವಶವರ್ತಿಯಾದ ವ್ಯಕ್ತಿ: ಆತನ ಚಿಕ್ಕದಂಡಿನೊಳಗಿನ ಕೆಲವರು ಪ್ರಾಣಕ್ಕೆ ಎರವಾಗಿ, ಕೆಲವರು ಸೆರೆಮನೆಯ ಸೋಬತಿಯಾದದ್ದನ್ನು ಅವರೇನು ಬಲ್ಲರು? (ಕುಮುದಿ. ೫೪); ಸೂಳೆಯ ಸೋಬತಿಯಾದ ಗಂಡನ ನೆನಸಿ ಫಲವೇನು (ಕನ್ನಜಾ. ೧೨೮). ೨. ಒಡನಾಟ; ಸಂಗ; ಸಹವಾಸ: ಈ ಸುಂದರಿಯ ಜನ್ಮದ ಸೋಬತಿಯು ತನಗಾದರೆ ಧನ್ಯನಾದೇನು (ಕನ್ನಡಿ. ೧೩೧); ಶ್ಯಾಮರಾಯನ ಸೋಬತೀ ಬಿಟ್ಟರ ಸಾಕಂತ (ದೀಪಹ. II, ೧೬೧); ಗಂಡಸು ಸೂಳೆಯ ಸೋಬತಿ(ಸಹವಾಸ) ಮಾಡಿರುವವನು (ಕನ್ನಜಾ. ೧೧೨). ೩. ಒಡನಾಡಿ; ಸಂಗಾತಿ: ಆ ಸುಕುಮಾರ ಮಂಜುಘೋಷೆಯು ಇನ್ನು ಎಂಟು

ಹತ್ತು ದಿನ ಸೋಬತಿಯಾಗಿದ್ದಾಳೆ (ಮಂಜುಕ. ೧೦೭). ೪. ಈಡು; ಗುರಿ: ನಾನೀಗ ಯಾವ ಮುಖದಿಂದ ನಗರಕ್ಕೆ ಹೋಗಲಿ . . . ಇನ್ನೇನು ಒಂದು ಹಾಳುಬಾವಿಗೆ ಸೋಬತಿಯಾಗಲೆ? (ಸ್ಮೃತಿಚಿ. ೩೨೪). ೫. ತಂಗುವಿಕೆ; ವಾಸ್ತವ್ಯ; ವಾಸ: ಅವರ ಸೆರೆಮನೆಯ ಸೋಬತಿಯಿಂದ ನಮಗೇನಾದರೂ ಸಂತಾಪವಾಗಿದ್ದರೆ ಅದನ್ನು ಕಾರ್ಯತಃ ನಾವು ತೋರಿಸೋಣ (ಮಾಧವ. II, ೨೦೨). ೬. ಗುಂಪು; ಸಮೂಹ: ನಾಗಮಂಗಲದ ಭಟರು ಸೋಬತಿಯ ಕಟ್ಟಿ ಬೇಗದಿಜಿದು ತುರುಕರನು ಬೇಗದೆ ಮೂಜುಸಾಸಿರ ಮೂಗರಿದಾಗ ರಾಗದೆ ಜಸವ ಬೀಜಿದರು (ಕಂಠವಿ. ೧೩-೫೯).

**ಸೋಬತು:** ೨. ಅದೇನು ಇವತ್ತಿನ ಸೋಬತೇ, ಬಿಡಾಕೆ? (ಹೂಸಂಸಾ. ೧೪).

**ಸೋಬತೆ:** ೨. ಇದು ಒಳ್ಳೆಯ ಸೋಬತೆಯಲ್ಲ ಶಾಮಾ! (ರಂಗರೋ. ೧೦೯); ಹಳ್ಳೀ ಊರ ಸೋಬತೇನ ಬಿಡತಿರಲಿಲ್ಲ (ದೀಪಹ. I, ೧೪). **ಸೋಬತ್ತು:** ೨. ಈ ಚೇಲೇರ ಸೋಬತ್ತಿನಲ್ಲಿ ಇದ್ದ ಎರಡುಜನಕ್ಕೆ ತಾವು ಚೆನ್ನಾಗಿ ಶಿಕ್ಷೆಮಾಡಿದಂಥಾದ್ದು, ಲೋಕದ ಯಾವತ್ತು ಜನರು ತಿಳಿದು ಇದ್ದಾರೆ (ರಾಜೇಂದ್ರ. ೧೧೧).

[← ಅರ. ಹಿಂ. ಸೋಹಬತ್; ಮರಾ. ಸೋಬತ್, ಸೋಬತೀ, ಸೋಭತ್]

**ಸೋಬತು** 'ಸೋಬತಿ' ನೋ.

**ಸೋಬತೆ** 'ಸೋಬತಿ' ನೋ.

**ಸೋಬತ್ತು** 'ಸೋಬತಿ' ನೋ.

**ಸೋಬನ** 'ಸೋಬಾನೆ' ನೋ.

**ಸೋಬನವಾಡು, ಸೋಬಾನಹಾಡು** (ನಾ). ಮದುವೆ ಮುಂತಾದ ಮಂಗಳ ಪ್ರಸಂಗಗಳಲ್ಲಿ (ಸಾಮಾನ್ಯವಾಗಿ ಒಟ್ಟಾಗಿ) ಹಾಡುವ ಹಾಡು; ಸೋಬಾನೆ: ಬಣ್ಣಗೊರಲ್ಗೆದೆಯರ್ ಸೋಬನವಾಡಂ ಪಾಡುಗೆ (ಚಿಕವಂ. ೧೪೮-೭). **ಸೋಬಾನಹಾಡು:** ಲಗ್ನ ಮುಹೂರ್ತಗಳಲ್ಲಿ ಸೋಬಾನಹಾಡು, ಶಿವರಾತ್ರಿ ಯುಗಾದಿಗಳಲ್ಲಿ ಕಂಬಿಯ ಹಾಡು . . . ಮೊದಲಾದುವುಗಳನ್ನು ಕಾಣಬಹುದು (ಕನ್ನಜಾ. X, ಪ್ರಸ್ತಾವನ). [ಸೋಬನ (< ಸೋಬಾನೆ) + ಹಾಡು₂ (< ಪಾಡು₂)]

**ಸೋಬಲಕ್ಕಿ** 'ಸೋಗಿಲಕ್ಕಿ' ನೋ.

**ಸೋಬಸ್ಕರ, ಶೋಭಸ್ಕರ, ಸೋಯಸ್ಕರ, ಸೋಯಿಸ್ಕರ** (ಗು). ೧. ಅಗತ್ಯವಾದ; ಅವಶ್ಯಕವಾದ. (ನಾ). ೨. = ಸೋಪಸ್ಕರ ೧: ಆ ಋತ್ವಿಕ್ಕುಗಳನಖಿಳಸೋಬಸ್ಕರಂಗಳಂ ಕೂಡಿ ಬಳಿಕ ಕ್ರತುವನೊಡರಿಚಿದನಾ ಪಾಪಿ (ವೀಶ್ವಪು. ೩-೨-೧೭); ಜೋಡಿಸುವೆ ಸೋಬಸ್ಕರಂಗಳ ಮಾಡಿಸಲು ಮದುವೆಯನು (ಅರ್ಚಾವಿ. ೧೮-೨೭); ಮನೆಯಲ್ಲಿ ತೃಣಕಾಷ್ಠಜಲಾದಿ ಸಕಲ ಸೋಬಸ್ಕರಗಳುಂ ತುಂಬಿಯೇಯಿಹವು (ಶುಕಸ. ೮). ೩. = ಸೋಪಸ್ಕರ ೩: ಅಕ್ಕಿ ಬೇಳೆ ಮೊದಲಾದ ಸೋಬಸ್ಕರಂಗಳ ಕೊಡುವೆವು (ಕಕುಮಾ. ೧೦೮-೧೦); ದೊರೆಯು ಇವಳ ತೊಟ್ಟಿಗೆ ಕೊಡುತಾ ಇದ್ದ ಖಾಸಾ ಸೋಬಸ್ಕರವನ್ನು ದಿನಕ್ರಮೇಣ ಕಡಿಮೆ ಮಾಡುತಾ ಕಡೆಗೆ ಕಗ್ಗಲ ರಾಗಿ ಮುಗ್ಗಲ ಹುರುಳಿಗೆ ಇಳಿಸಿದನು (ಪೇಟೀಮಾ. ೧೭). ೪. ಅನುಕೂಲ; ಸೌಲಭ್ಯ. **ಶೋಭಸ್ಕರ:** ೩. ಪ್ರಾಕುದೊರೆಗಳು ಶಿಕಾರಿಗೆ ಬಂದು ಇದ್ದಾಗ್ಗೆ, ಅಡಿಗೆ ಶೋಭಸ್ಕರ ಕೊಟ್ಟು ಉಪಕಾರ ಮಾಡಿ ಇದ್ದೀರಿ (ರಾಜೇಂದ್ರ. ೬೧). **ಸೋಯಸ್ಕರ:** ೧. ಖರೀದಿ ಬಂದ ವೇಳೆಯಲ್ಲಿ ಬಹಳ ರಿಕಾಣಿ ತಿರುಗಬೇಕಾಗುತ್ತದೆ, ಇದರ ಹೊರ್ತು ಮನಸ್ಸಿನಂತೆ ಸೋಯಸ್ಕರಮಾಲು ಸಿಗುವುದಿಲ್ಲ (ಮುಂಬವ್ಯಾ. ೧೯೭). **ಸೋಯಿಸ್ಕರ:** ೪. ವ್ಯಾಪಾರಿ ಜನರಿಗೆ ಸೋಯಿಸ್ಕರ ಆಗಬೇಕೆಂದು ನಮ್ಮ ಇಚ್ಛೆಯು ಬಹಳ ಇರುವುದರಿಂದ (ಮುಂಬವ್ಯಾ. ೨೫೨). [< ಸಂ. ಸೋಪಸ್ಕರ]

**ಸೋಬಾನ** 'ಸೋಬಾನೆ' ನೋ.

**ಸೋಬಾನಹಾಡು** 'ಸೋಬನವಾಡು' ನೋ.

**ಸೋಬಾನೆ, ಶೋಬಾನ, ಶೋಭಾನ, ಶೋಭಾನೆ, ಸೋಬನ, ಸೋಬಾನ, ಸೋಭಾನ, ಸೋಭಾನೆ, ಸೋವನ** (ನಾ). ೧. = ಸೋಬನವಾಡು: ಚಾರುಮುತ್ತೈದೆಯರೆಲ್ಲಾ ಸೇರಿ ಸೋಬಾನೆಯ ಪಾಡುತ ಬಂದಲ್ಲಿ ಆರತಿಗಳನು ಯತ್ತಿದರು (ಸೌಗಂಪ. ೧೧-೪೩); ಕಲರವದೊಳು ಯಮುನೆ ಹರಿಯೆ ಸೋಬಾನೆಯ ತರುಗಳುಲಿಯೆ (ಗೋಕುನಿ. ೨೯-೨). ೨. ಶುಭ, ಮಂಗಳ ಎಂಬಂತೆ ಹಾಡಿನ ಅಥವಾ ಹಾಡಿನ ಸಾಲಿನ ಕೊನೆಯಲ್ಲಿ ಸೇರಿಸುವ ಒಂದು ಶಬ್ದ: ಸೋಬಾನೆ ಎನ್ನುವುದಕ್ಕೆ ಕೂಡ ಕೈಲಾಗದೇನರ, ಸುಪನಾತೀರ? (ಮಾಮರಾ. ೬೪). **ಶೋಬಾನ:** ೧. ಹಾಡ್ನ ಶೋಬಾನಕ್ಕೆ ಬಹಳದಿ ಕಾಡ್ನ ತುಡುಸಾಧನಕೆಯಂತ್ರೆ ಚೋಡುಗಟ್ಟಲುಬಹುದೆ (ಜ್ಞಾನಸಿಂ. ೨೩-೨೫). **ಶೋಭಾನ:** ೩. ಮಂಗಳಕರವಾದ ಗೀತೆ ,– ಪದ : 'ಶೋಭಾನಪಾಠಕ' ಪರಾ. **ಶೋಭಾನೆ:** ೧. ಶೋಭಾನೆಗಳ ಸೊಲ್ಲುಗಳಲ್ಲಿಯೂ . . . ಗುರುಲಘು ಅಕ್ಷರನಿಯಮಕ್ಕೆ ತುಂಬ ಅಪವಾದಗಳು ಕಾಣಿಸುತ್ತಿವೆ (ಸಂಶೋಧ. ೧೧೦). ೪. ಮದುವೆ, ಮುಂಜಿ ಮುಂತಾದ ಶುಭಸಮಾರಂಭ ,– ಮಂಗಳಕಾರ್ಯ: ರಾಗಿ ಬೀಸುವ ಹಾಡೋ ಶೋಭಾನೆಯ ಹಾಡೋ ವೃತ್ತಿಯಾಗದೆ ಹೋಗಿಲ್ಲವೇ ? (ಜಾನಗೀ. ೧೦). **ಸೋಬನ:** ೧. ಸೋಬನಮನ್ನೆದೆಯರಾದರದಿಂದೆ ಪಾಡುಗೆ (ಚಿಕವಿ. ೪-೩೪). ೪. ನೀಲವರಣ ಬಳಿಯವರ್ಯಾ ನಮ್ಮವಗಳಿರ್ಯಾ ಬೇಗ ಸೋಬನಕ ಬರಬೇಕು (ಹಳ್ಳಿಯ. ೧೩೨). ೫. ನಿಷೇಕ; ಪ್ರಸ್ತ: ನೆನ್ನೆ ಮದುವೆಯಾದ ದಂಪತಿಗಳಿಗೆ ಇಂದು ಅವರ ಮನೆಯಲ್ಲಿ ಸೋಬನ ಇಟ್ಟುಕೊಂಡಿದ್ದಾರೆ (ರೂಢಿ). **ಸೋಬಾನ:** ೧. ಅಲ್ಲಿದ್ದವರಲ್ಲಿ ಅನೇಕರು ಸೋಬಾನದಲ್ಲಿ ಪದವೀಧರೆಯರು. ಆದರೂ ಯಾರೂ ಬಾಯಿ ಬಿಡಲೊಲ್ಲರು! (ಸುವಸಂ. ೫೦); ಹಾಡುತಿಹವೆ ಸೋಬಾನಹಕ್ಕಿ? – ಇಲ್ಲ– ಇದು ಮರದುಲಿ (ಹೂಹಾದಿ. ೮-೨೫); ಗೂಬೆ ಕೈಯಲ್ಲಿ ಸೋಬಾನ ಹಾಡಿಸಿದ ಹಾಗೆ (ಗಾದ). ೪. ಸೊಸೆ ಸತ್ತ ಮನೆಯಲ್ಲಿ ಸೋಬಾನ (ಅಲ್ಲಪಿ. ೪೧). **ಸೋಭಾನ:** ೪. ನೆಟ್ಟನೆ ಭೇರಿ ಸೂಳೈಸಿತಾಗಳೆ ಗುಡಿಯಿಟ್ಟುದೊಯ್ಯರದಿ ಸೋಭಾನ (ನಾಗಕು. ೨೭-೯೪). **ಸೋಭಾನೆ:** ೧. ಸೋಭಾನೆ ತಿಳಿಯದವಳು ಶೋಭನ ಮಾಡಲೋ (ಗಾದ). **ಸೋವನ:** ೪. ಜಿನಪತಿ ದೇವದೇವ . . . ಖಿಳಕರ್ಮಕಂಚುಕಗಳಂ ಪೆಱಪಿಂಗಿಸಿ ತೋಱಲಿರ್ದ ಸೋವನಮಿದಿರ್ವಂದು ನಿನ್ನ ಪದಪದ್ಮತಿಗಾಣಿಸಿತಂಜೆನಂಜೆನಿಂ (ಅನಂಪು. ೩-೪೪).

[< ಸಂ. ಶೋಭನ./ ತಮಿ. ಚೋವಾನ್ನ; ತುಳು. ತೆಲು. ಸೋಬಾನ]

**ಸೋಬೆ, ಸೋಭೆ** (ನಾ). ಕಾಂತಿ; ಬೆಳಕು; ಪ್ರಕಾಶ: ಶೋಭೆ - ಸೋಬೆ (ಶಬ್ದಾನು. ೧೪೩ ಪ್ರಯೋ.). **ಸೋಭೆ:** 'ಸೋಭಿಸು' ಪರಾ. [< ಸಂ. ಶೋಭಾ]

**ಸೋಭಾನ** 'ಸೋಬಾನೆ' ನೋ.

**ಸೋಭಾನೆ** 'ಸೋಬಾನೆ' ನೋ.

**ಸೋಭಿಸು** (ನಾ). ರಂಜಿಸು; ಶೋಭಿಸು: ಸೋಮೇಶಂ ಬಂದು ನಿಲ್ಲಲು [ರೂಢಿ] ಪುಲಿ[ಗೆ]ಯೂರೊಡೆಯ ಸೋಮಂ ಕಣ್ಣು ಮಾಡಿದ ದೆವಾಲ್ಯ್ಯಂ ಸೋಭಿಸುಗು (ಕಇಇ. ೭೮-೧೩-೨೧; 1088). [ಸೋಭೆ (< ಸೋಬೆ) + - ಇಸು₁]

**ಸೋಭೆ** 'ಸೋಬೆ' ನೋ.

**ಸೋಮ** (ನಾ). ೧. ಒಂದು ಬಗೆಯ ಸಸ್ಯ; ಕೋಡಂಬಳ್ಳಿ: "ಸೋಮ ಮಮರ್ದುವಳ್ಳಿಯಕ್ಕುಂ" (ಮಂಗರಾ. ೪೩-೪೩). ೨. ಸೋಮಸಸ್ಯದ ತಾಳು ಅಥವಾ ಕಾಂಡದಿಂದ ತೆಗೆದ ರಸ; IP ಮತ್ತುಬರಿಸುವ ಈ ರಸವು ಯಜ್ಞ ಯಾಗಾದಿಗಳಲ್ಲಿ ದೇವತೆಗಳ ಪ್ರೀತ್ಯರ್ಥವಾಗಿ ಅರ್ಪಿಸುವ ಬಹು ಮುಖ್ಯವಾದ ವಸ್ತುಗಳಲ್ಲಿ ಒಂದು ಎಂಬ ನಂಬಿಕೆಯಿದೆ: ಭಾಂಡ ಭಾಂಡ ಸೋಮವು ಸಿದ್ಧವಾಗಿದೆ (ಮಹಾಣ. ೧೦೪). 'ಸೋಮಪಾನ', 'ಸೋಮಯಾಗ' ಪರಾ. ೩. ಅಮೃತ; ಸುಧೆ. ೪. ಚಂದ್ರ: "ಇಂದುಃ, ಚಂದ್ರಃ, ಚಂದ್ರಮಾಃ, ಓಷಧೀಶಃ, ಸೋಮಃ . . . ದಾಕ್ಷಾಯಣೀರಮಣಃ – ಈ ೨೧ ಚಂದ್ರನ ಪೆಸರ್" (ಹಲಾಯು. ೮-೪೨); ಸುಧಾಧವಳಧಾಮಂ ಸೋಮನೊಳ್ . . . ಸಮಾನಮೆನಿಕುಂ ಪ್ರೋತ್ತುಂಗಚೈತ್ಯಾಲಯಂ (ಪುಷ್ಪಪು. ೨-೭೫); ರಾಮನಡಿಯಿಟ್ಟ ನೆಲ . . . ಸೋಮನಂ ಪೆತ್ತ ಕಡಲೀ ಪುರಾತನಗಳಿರೆ ನಾಮೆಂತು ಹೊಸಬರೆಲೊ (ಮಂಕುಕ. ೧೩೦). ೫. ಕರ್ಪೂರ. ೬. ನೀರು; ಜಲ. ೭. ಗಾಳಿ; ವಾಯು. ೮. ಶಿವನ ಹೆಸರುಗಳಲ್ಲಿ ಒಂದು: ಸೋಮ ಸೋಮವಿಭೂಷ . . . ಪಂಪಾಧಿಪತಿ ವಿರೂಪಾಕ್ಷ ಕರುಣಿಸುವುದೆಮಗೆ (ಪಚಿಕಾ. ೧-೩); ನುತಿಪಂ ವಿಶ್ರುತ ವೀರಶೈವಶರಧಿ ಶ್ರೀಸೋಮನಂ ಸೋಮನಂ (ರಾಜಶೇ. ೧-೧೮). ೯. ಮುನಿಗಳ ಗುಂಪು. ೧೦. ಯಮ. "ಸೋಮನೊಳು ಸುಧೆಯೊಳಂತಕನೊಳು ಸಮೀರನೊಳು

ಸೋಮಧರನೊಳು ವಾರಿಯೊಳು ವಹ್ನಿಯೊಳು ಮುನಿಸ್ತೋಮದೊಳು ಕರ್ಪೂರದೊಳು ಸೋಮವೆನಿಸಿರ್ಪ'' (ಮಂಗರಾ. ೧೪೮-೪೨). ೧೧. ಕದಿರು; ಕಿರಣ. ೧೨. ಕುಬೇರನ ಹೆಸರುಗಳಲ್ಲಿ ಒಂದು. ೧೩. ಸುಗ್ರೀವ. ೧೪. ಕೋಶಿ; ಮಂಗ. ೧೫. ಅಷ್ಟವಸುಗಳಲ್ಲಿ ಒಬ್ಬ. ೧೬. ವಾರದ ಎರಡನೆಯ ದಿನ; ಭಾನುವಾರದ ಮರುದಿನ. ೧೭. ಅಕ್ಕಿಗಂಜಿ; ಅಂಬಲಿ: ''ಅಭಿಷವಂ, ಅವಂತಿ, ಸೋಮಂ, ಶುಷೋದಕಂ, ಶುಕ್ಲಂ - ಈ ೫ ಅಕ್ಕಿಗರ್ಚು'' (ಹಲಾಯು. ೫೩-೧೭೩). ೧೮. ಆಕಾಶ. ೧೯. ಸ್ವರ್ಗ. ೨೦. ಯುಗದ ಆದಿಯ ದೊರೆ. ೨೧. ಒಬ್ಬಾತನ ಹೆಸರು: ಪುಲಿ[ಗೆ]ಯೂರೊಡೆಯ ಸೋಮಂ ಕಣ್ಣು ಮಾಡಿದ ದೇವಾಲ್ಯಂ ಸೋಭಿಸುಗು (ಕಇಅ. ೭೮-೧೩-೨೧; 1088). ೨೨. ದೇಹದಲ್ಲಿರುವ ಒಂದು ನಾಡಿ; ಇಡಾನಾಡಿ: ಅಲ್ಲಿಪ್ಪ ಮಹಾಲಿಂಗಮಂ ಶರಣಮಂತ್ರಮಾಲೆಯಂ ಮಾಡಿ ಮನದಲ್ಲಿ ಧರಿಸಿ ಸೋಮಸೂರ್ಯರ ಕಾಲಾಟಮಂ ನಿಲಿಸಿ (ಘನವ. ೫೦-೪೫). ೨೩. [ಶೈವ] ಶೈವಪಂಥಗಳಲ್ಲಿ ಒಂದು: ಶೈವ ಪಾಶುಪತ ಸೋಮ ಲಾಕುಳ ಮೆಂಬ ಶಾಸ್ತ್ರಾಂತರಂಗಳ್ಗೆ ಶುದ್ಧ ತಾಂತ್ರಿಕ ಪ್ರತಿಪಾದಕಂಗಳು (ವಿವೇಕ. ೧೨೯). ೨೪. [ಗಣಿತ] ಒಂದು ಎಂಬುದರ ಸಂಕೇತ : ಶಶಿ . . . ಸೋಮಂ ಸುಧಾಂಶು . . . ಇಳೆ ರೂಪವ್ಯೆಕಮೊಂದಱ ನಾಮಂ (ವ್ಯವಹಾ. ೯-೧). ೨೫. [ಛಂದ] ಒಂದು ಗಣದ ಹೆಸರು: ಸೋಮ ಹರಿಯುಂ ಕಾಮಹರನುಂ ತಾಮಿರೆ ಪೆಸರ್ ಪ್ರೇಮಂ (ಛಂದೋಂಬು. ೨-೭೨).

**ಸೋಮನ ಕುಣಿತ** = ಗ್ರಾಮದೇವತೆಯ ಅಂಗರಕ್ಷಕ ದೇವತೆಯನ್ನು ಕುರಿತು ಮಾಡುವ ಒಂದು ಬಗೆಯ ನೃತ್ಯ: ಸೋಮನನ್ನು ಗ್ರಾಮದೇವತೆಯ ಅಂಗರಕ್ಷಕನೆಂದರೂ ಒಪ್ಪುತ್ತದೆ. ಈ ಜಾತ್ರೆ ಉತ್ಸವಸಂದರ್ಭಗಳಲ್ಲಿ ಸೋಮನ ಕುಣಿತ ಪ್ರಧಾನವಾದ ದೃಶ್ಯ (ಕಜಾಕ. ೧೭೯). [ಸಂ.]

**ಸೋಮಕಾಯಿಕ** (ನಾ). [ವೀಶೈ] ಅರವತ್ತುಮೂರು ಬಗೆಯ ಕಾಯಕಗಳಲ್ಲಿ ಒಂದು : ಸಂತೆಕಾಯಿಕ ಸೋಮಕಾಯಿಕ ಕಂತೆಕಾಯಿಕ ಇರುಳಕಾಯಿಕವೆಂತವಕೆ ಪೆಸರಿಟ್ಟು ಅರುವತ್ತೂರು ಕಾಯಿಕವನಂತು ವಿರಚಿಸಿ (ಬಿಜ್ಜಪು. ೪೮-೫೨). [ಸಂ.]

**ಸೋಮಕುಲ** (ನಾ). ಚಂದ್ರನು ಮೂಲಪುರುಷನಾಗಿರುವ ಕುಲ; ಚಂದ್ರವಂಶ: ಈ ಸೋಮಕುಲವೆರಡಾಯ್ತು ಯದು ಪೂರುಗಳ ದೆಸೆಯಿಂದ (ಕುವ್ಯಾಆ. ೨-೧೭). 'ಸೋಮಕುಲಜ' ಪರಾ. [ಸಂ.]

**ಸೋಮಕುಲಜ** (ನಾ). ಚಂದ್ರವಂಶದಲ್ಲಿ ಹುಟ್ಟಿದವನು: ಆ ಮಹಾಮೋಹರವ ನೊಡೆಯಲು ಸೋಮಕುಲಜರು ಭೀತರಾದರು (ಕುವ್ಯಾದ್ರೋ. ४-೩೩). [ಸಂ.]

**ಸೋಮಗಾವುಂಡ** (ನಾ). ಒಬ್ಬಾತನ ಹೆಸರು: ಸೋಮಗಾವುಂಡನ ಮಗಂ ಬಮ್ಮಗಾವುಂಡನುಂ . . . ಮೆಚ್ಚಿ (ಎಕ. IV(R), ಚಾಮರಾ. ೧೨೩-೫; ಸು. 10ನೆಯ ಶತ).

[ಸೋಮ + ಗಾವುಂಡ (< ಗಾಮುಂಡ)]

**ಸೋಮಗ್ರಹಣ** (ನಾ). ಚಂದ್ರನ ಮೇಲೆ ಭೂಮಿಯ ನೆರಳು ಬೀಳುವಿಕೆ; ಚಂದ್ರಗ್ರಹಣ; ಉಪರಾಗ: ಸಾಮ್ಯವೆಲ್ಲವಂ . . . ಸೋಮಗ್ರಹಣದೊಳ್ ಕಾಲಂ ಕರ್ಚ್ಚಿ ಧಾರೆಯೆಱುದು ಕೊಟ್ಟರ್ (ಎಕ. III(R), ನಂಜನ. ೨೪೪-೮; 977); ಬರೆ ಸೋಮಗ್ರಹಣಂ ವಿಲಗ್ನದೊಳಿನಾಪತ್ಯೇಂದುಗಳ್ ಛಿದ್ರದೊಳ್ ಧರಣೀಸಂದನ ಕೂಡೆ ತಾಯ್ವೆರಸು ಕಂದಂ ಪೊಂದುಗುಂ (ಜಾತತಿ. ೭-೫೦). [ಸಂ.]

**ಸೋಮಘುಂಟಿ** (ನಾ). ಒಂದು ಬಗೆಯ ಸಸ್ಯ: ''ಇಲಿವಾಳಮದು ಸೋಮ [ಪಾಠಾಂ. ನು]ಘುಂಟಾನಾಮಮಕ್ಕು'' (ಮಂಗರಾ. ४४-४೭). [ಸಂ. ಸೋಮಘುಂಟಾ]

**ಸೋಮಜ** (ನಾ). ಚಂದ್ರನ ಮಗ; ಬುಧ. [ಸಂ.]

**ಸೋಮಡಿಗ** (ನಾ). ಒಬ್ಬಾತನ ಹೆಸರು: ಅಮಿತಭಟ್ಟಡಿಗಳ್ಗೆ ಕೆಸಿಲ್ಮನೆ ಒಡೆಒರ್ಗ್ಗೆಲ್ಲ ತಮ್ಮ ಕೆಱೆಯ ಕೆಱಗೆ ಕಲನಿಮಕ್ ಅವರ ಮಗನ್ಸಿರ್ಸೋಮಡಿಗ ಕೊಟ್ಟರ್ (ಎಕ. III(R), ನಂಜನ. ೧೮೭-४; 8ನೆಯ ಶತ). [ಸೋಮ + ಅಡಿಗ$_1$]

**ಸೋಮಣ** (ನಾ). ಒಬ್ಬಾತನ ಹೆಸರು: ಭುವನಸಿಂಗಿಯರ ಮಗ ಸೋಮಣಂ . . . ಪಲರುಮನೊಡಿಸಿ (ಎಕ. X, ಕೋಲಾರ. ೨೩೨-೨; ಸು. 750). [ಸೋಮ + < ಅಣ್ಣ$_1$]

**ಸೋಮತ್ವ** (ನಾ). ಚಂದ್ರತ್ವವನ್ನು ಹೊಂದಿರುವಿಕೆ; ಚಂದ್ರನಾಗಿರುವಿಕೆ: ಸುರುಚಿರಮೆನಿಪ್ಪ ಮುತ್ತಿನ ಲಿಂಗಮಂ ಚಂದ್ರನಿರದೆ ಸದ್ಭಕ್ತಿಯಿಂದಂ ದೇಹದೊಳೆ ತಾಳ್ದು . . . ಸೋಮತ್ವಮಂ ಪಡೆದಿರ್ಪಂ (ಆರಾಚ. ೧-४-೧೯). [ಸಂ.]

**ಸೋಮಧರ** (ನಾ). ಚಂದ್ರನನ್ನು ಧರಿಸಿದವನು; ಶಿವ: ವಿಪುಳಶ್ರೀಯ ಪದ್ಮಜ ಸೋಮಧರ ನಾರಾಯಣರು ಕೊಡಲಿ (ಕುವ್ಯಾಆ. ೧೦-४೦).

**ಸೋಮಧರನ ದಿನ** = ಶಿವನನ್ನು ಪೂಜಿಸುವ ದಿನ; ಸೋಮವಾರ: ಸೋಮಧರನ ದಿನದಲ್ಲಿ . . . ಆತನನ್ನೆ ಧ್ಯಾನಿಸುತ್ತ ಬೆಟ್ಟವನ್ನು ಹತ್ತುತ್ತಿದ್ದಳು ಶಾಂತಲೆ (ಶಾಂತಲಾ. ೨೯೭). [ಸಂ.]

**ಸೋಮಧರಮಾರ್ಗಣ** (ನಾ). ಶೈವಾಸ್ತ್ರ; ಈಶಾನಾಸ್ತ್ರ: ಆ ಮಹಾಸ್ತ್ರದ ಹಾನಿರೋಷದ ತಾಮಸಾಗ್ನಿಯನೂಡಿ ಬಿಡಲುದ್ದಾಮನರ್ಜುನ ಕೊಂದನಗ್ಗದ ಜಾEಶಾತತಮನ್ಮುವನು ಆ ಮಹಾಬಾಣಾಭಿಮುಖದಲಿ ಸೋಮಧರಮಾರ್ಗಣವನಿಂತೀ ಭೀಮವಿಕ್ರಮ ಕರ್ಣನೆಚ್ಚನು (ಕುವ್ಯಾಕ. ೨೩-४೭). [ಸಂ.]

**ಸೋಮಧಾರಿ** (ನಾ). = ಸೋಮಧರ : ಅದಱಿ ಉದಕವಾದಡೆ ಸೋಮಧಾರಿಗೆ ಮಜ್ಜನಕ್ಕೆಂದಲ್ಲದೆಮ್ಮಯ್ಯ ತಾ ಮುಸುಡನೆತ್ತೀಗ ಭಾಷಿಸನೋ (ಬಸಪು. ४೭-೧೧).

[ಸಂ. ಸೋಮಧಾರಿನ್]

**ಸೋಮನಾಥ** (ನಾ). ಶಿವ: ಸೋಮನಾಥದೇವರ ಅಮೃತಪಡಿಗೆ ಮರುಜನಂಗಳು . . . ಕೆಱೆಯ ಕೊಟ್ಟವು (ಎಕ. VI(R), ಕೃಷ್ಣರಾ. ೮-೯; 1306). [ಸಂ.]

**ಸೋಮಪ** (ನಾ). ಸೋಮರಸವನ್ನು ಕುಡಿಯುವವನು; ಬ್ರಾಹ್ಮಣ: ''ಬ್ರಾಹ್ಮಣಂ . . . ಸೋಮಪಂ ವಿಪ್ರನೆಂದೆನಲು ಬ್ರಾಹ್ಮಣನ ಪೆಸರಕ್ಕು'' (ಮಂಗರಾ. ೭೩-೧). [ಸಂ.]

**ಸೋಮಪಾನ** (ನಾ). ಸೋಮರಸವನ್ನು ಕುಡಿಯುವುದು: ಅಗ್ನಿಪೂಜೆ ಮತ್ತು ಸೋಮಪಾನ ಆರ್ಯರು ಭರತಖಂಡಕ್ಕೆ ಬರುವುದಕ್ಕೆ ಮುಂಚೆಯೇ ಅವರ ಧರ್ಮದ ಅಂಗವಾಗಿತ್ತು (ಭಾರದ. ೨೦). [ಸಂ.]

**ಸೋಮಮಣಿ** (ನಾ). ಚಂದ್ರಕಾಂತಶಿಲೆ : ದಾಮೋದರನಂಗಸಂಗದೊಳಾ ಸತಿಯರ್ ಕಾಮಾಮೃತಮಂ ತಳೆದರ್ ಸೋಮಮಣಿಸ್ಥಳಿಗಳೊಸರ್ವವೋಲ್ ಶಶಿರುಚಿಯಿಂ (ಜಗವಿ. ೩-೭४). [ಸಂ.]

**ಸೋಮಯಜ್ಞ** (ನಾ). ಸೋಮರಸವನ್ನು ಆಹುತಿಯನ್ನಾಗಿ ದೇವತೆಗಳಿಗೆ ಅರ್ಪಿಸಿ ಮಾಡುವ ಯಾಗ. [ಸಂ.]

**ಸೋಮಯಾಗ** (ನಾ). = ಸೋಮಯಜ್ಞ : ಸಾಮವೇದಸಂಹಿತೆಯಲ್ಲಿ ಬರುವ ಮಂತ್ರಗಳೆಲ್ಲವೂ ಮುಖ್ಯವಾಗಿ ಋಗ್ವೇದದಿಂದ ಆರಿಸಿ ಸೋಮಯಾಗದ ಉಪಯೋಗಕ್ಕಾಗಿ ಸಿದ್ಧಪಡಿಸಿದಂಥವು (ಭಾರದ. ೨೦); ಮೂರು ವರ್ಷಗಳಿಗೆ ಬೇಕಾದಷ್ಟು ಜೀವನದ್ರವ್ಯವಿದ್ದರೆ ಸೋಮಯಾಗ ಮಾಡಬೇಕೆಂದೂ ಅದಕ್ಕಿಂತ ಎಷ್ಟೆಷ್ಟು ಕಡಮೆಯಾದ ಐಶ್ವರ್ಯವಿದ್ದರೆ ಅಷ್ಟಷ್ಟು ಚಿಕ್ಕ ಚಿಕ್ಕ ಯಾಗಗಳನ್ನು ಮಾಡಬೇಕೆಂದೂ ಶಾಸ್ತ್ರವಿರುವುದು (ಹಿಂದಸಾ. ೨೫೮). [ಸಂ.]

**ಸೋಮಯಾಜಿ** (ನಾ). ಸೋಮಯಾಗವನ್ನು ಮಾಡಿದವನು: ಆ ಹೊನ್ನ ಧೇನುವನು ಕಡಿವುತಂ ಕೈವೊಯ್ದು ತಮ್ಮೊಳು ನುಡಿವುತಂ ಹಣೆ ಸೋಮಯಾಜಿಗೆ ಕೊಡುವ ಭಾಗಂ . . . ಎನುತ (ಬಸಪು. ೫೫-೧೬); ಅವರ ತೂತ್ತಿರ ಹೊಱಗೆಲಸದವದಿರ ಪಸಾಯಿತೆಯರಿಗೆ ಪಡಿಗವ ನೀಡಸಲ್ಲರು ಸೋಮಯಾಜಿಗಳು (ಕುವ್ಯಾಆ. ೮-೯); ಆ ಸೋಮಯಾಜಿ ಹೋಮವ ಮಾಡುತಿಹನನುದಿನಂ (ಪತಿಲ. ೨-೩೭).

[ಸಂ. ಸೋಮಯಾಜಿನ್]

**ಸೋಮಯ್ಯರಸ** (ನಾ). ಒಬ್ಬಾತನ ಹೆಸರು : ಆತ್ರೇಯಗೋತ್ರರ್ ಶ್ರೀಮತ್ ಸೋಮಯ್ಯರಸರ ಮಗನೆಱೆಯಮಯ್ಯನ್ (ಎಕ. XI, ಚಿತ್ರದು. ४೯-೭४; 947).

[ಸೋಮ + ಅಯ್ಯ$_1$ + ಅರಸ$_1$]

**ಸೋಮರಸ** (ನಾ). ಸೋಮಲತೆಯ ದೇಟುಗಳಿಂದ ತೆಗೆದ ರಸ : ಸೋಮರಸವು ಮಾಧುರ್ಯೋಪೇತವೂ ರಸವತ್ತಾದುದೂ . . . ಆಗಿದೆ (ಋಕ್ಸಾರ. ४೩); ಸೋಮರಸವು ಔಷಧಿವರ್ಗದಲ್ಲಿ ಕಾಣಿಸಿಕೊಂಡಾಗ ಸೋಮಲತೆಯಾಗುವುದು (ಮಹಾಪಾ. ೧೫೭). [ಸಂ.]

**ಸೋಮರಾಗ** (ನಾ). [ಸಂಗೀತ] ಒಂದು ರಾಗದ ಹೆಸರು : ಮಧುಮಾಧವಿ . . . ಗುಜ್ಜರಿ ಸೋಮರಾಗ . . . ಕರ್ನಾಟಕಬಂಗಾಳಮೆಂಬಿಪ್ಪತ್ತೇ ರಾಗಾಂಗ ದಿಂದಾದ ರಾಗಂಗಳು (ವಿವೇಕ. ೧೮೮). [ಸಂ.]

**ಸೋಮರಾಜಿ** (ನಾ). ಒಂದು ಬಗೆಯ ಗಿಡ : "ಅವಲ್ಗುಜಃ, ಸೋಮರಾಜೀ . . . ಪೂತಿಫಲೀ – ೮ ಬಾಹುಜಿಗೆಯ ಪೆಸರುಗಳು" (ಸಿದ್ಧಾಂತಿ. ೧೫೩). [ಸಂ. ಸೋಮರಾಜೀ]

**ಸೋಮರಾಸಿ** (ನಾ). ಒಬ್ಬಾತನ ಹೆಸರು : ಶ್ರೀ ಸೋಮರಾಸಿಗಳ ಪ್ರತಿಷ್ಠೆ (ಎಕ. III(R), ಗುಂಡ್ಲುಪೇ. ೧೦೪-೧; 10ನಯ ಶತ). [ಸೋಮ + ರಾಸಿ]

**ಸೋಮರೋಗ** (ನಾ). ೧. ಹೆಂಗಸರಿಗೆ ಬರುವ ಒಂದು ಬಗೆಯ ರೋಗ : ಪಾದರಿಬೇರಿನ ತೊಕ್ಕನ್ನು ಹಾಲಲ್ಲರೆದು ಕದಡಿ ೨ ದಿನ ಸೇವಿಸಲು ಪ್ರದರ, ಅಸ್ಥಿಸ್ರಾವ, ಪಾಂಡುರೋಗ, ಸೋಮರೋಗ ಸಹ ಬಿಡುಗಡೆಯಹುದು (ಸಕವೈ. ೧೯೭). ೨. ಮಧುಮೇಹ; ಸಕ್ಕರೆಕಾಯಿಲೆ : ಆದಿತ್ಯಭಕ್ತನ ಬೇರು, ಹಿರಿಮದ್ದಿನ ಬೇರು . . . ಚೂರ್ಣಿಸಿ ಉತ್ತರಣಿ ಬೇರು, ಹಿಪ್ಪಲಿ ಹಾಕಿ ಹದದಲ್ಲಿಳುಹಿಕೊಂಡು ಸೇವಿಸಲು ಕಲ್ಲುಕಟ್ಟು, ಮೂತ್ರಕೃಚ್ಛ್ರ, ಸೋಮರೋಗ ಸಹ ಪರಿಹಾರ (ಸಕವೈ. ೩೮೩). [ಸಂ.]

**ಸೋಮಲ** (ನಾ). ಒಂದು ಬಗೆಯ ಧಾತು; ಅರಿದಾಳ; ಶಂಖಪಾಷಾಣ: ತವರಿನೊಳಗೆ ಗಂಧಕ, ಸೋಮಲ ಮುಂತಾದ ಪದಾರ್ಥಗಳು ಕೂಡಿರುತ್ತವೆ (ಮುಂಬಯಿ. ೬-೨೧); ಸೋಮಲದ ವಿಷಪರಿಣಾಮವನ್ನು ಅನುಭವಿಸಿದ ಹಿರಿಯನೊಬ್ಬ, 'ಸೋಮಲವನ್ನು ತಿನ್ನಬೇಡಿರಿ' ಎಂದು ಹೇಳಿದರೆ (ಜನಜೀ. ೩೪).

[← ಅರ. ಸುಂಬುಲ; ಹಿಂ. ಮರಾ. ಸೋಮಲ./ಸಂ. ಸೋಮಾಲಕ]

**ಸೋಮಲಕಾರ, ಸುಂಬಳಕಾರ** (ನಾ). = ಸೋಮಲ: ಕಬ್ಬಿಣವು ಬಹುತರ ವಾಗಿ ಆಮ್ಲಜ, ಗಂಧಕ, ಸೋಮಲಕಾರ ಇವುಗಳಲ್ಲಿ ಮಿಶ್ರವಾಗಿರುತ್ತದೆ (ಮುಂಬಯಿ. ೬-೧೮). **ಸುಂಬಳಕಾರ:** ಸುಂಬಳಕಾರ ಸುಡುವಲ್ಲಿ ಕೂತವನು ತತ್ಕಾಲವೇ ಮೂರ್ಛೆಗ್ಯೆಯುತ್ತಾನೆ (ಮುಂಬಯಿ. ೫-೧೫೦). [← ಮರಾ. ಸೋಮಲಖಾರ್]

**ಸೋಮಲತೆ** (ನಾ). = ಸೋಮ ೧ : ಸೋಮರಸವು ಔಷಧಿವರ್ಗದಲ್ಲಿ ಕಾಣಿಸಿಕೊಂಡಾಗ ಸೋಮಲತೆಯಾಗುವುದು (ಮಹಾಣ. ೧೫೭); ಸೋಮಲತೆ ಯಿಲ್ಲದಿದ್ದರೆ ಬೇರೆ ಸೊಪ್ಪನ್ನು ಉಪಯೋಗಿಸಿ ಯಾಗವನ್ನು ಮುಗಿಸುವರು (ವ್ಯಾಸಚಿ. ೧೮೩). [ಸಂ. ಸೋಮಲತಾ]

**ಸೋಮಲಾಂಛನ** (ನಾ). ಚಂದ್ರನನ್ನು ಲಾಂಛನವನ್ನಾಗಿ ತಲೆಯಲ್ಲಿ ಧರಿಸಿರುವವನು; ಶಿವ.

**ಸೋಮಲಾಂಛನಲಾಂಛನರು** = ಶಿವನನ್ನೆ ಚಿಹ್ನೆಯಾಗುಳ್ಳವರು; ಶಿವಭಕ್ತರು: ಸೋಮಲಾಂಛನಲಾಂಛನರು ಪರಿಣಾಮವಂಕುರಿಸಲ್ಕೆ . . . ಮಾತುಗಳನಾಡುತ್ತ (ಬಸಪು. ೨೫-೨). [ಸಂ.]

**ಸೋಮವಂಶ** (ನಾ). = ಸೋಮಕುಲ : ಆ ಸೋಮವಂಶಲಲಾಮನಪ್ಪ ಪ್ರಿಯಮೂರ್ತಿ . . . ಮನಂಗೊಳಿಸಿದಂ (ಶಾಂತಿಪು. ೧೧-೮೮ ವ); ಈಯವಸ್ಥೆಗೆ ಸೋಮವಂಶದ ರಾಯತನವೆಂತಹುದು ಹೇಳೌ ತಾಯೆ (ಕುವ್ಯಾಆ. ೯-೬). [ಸಂ.]

**ಸೋಮವರ್ತಿಶರ** (ನಾ). ಒಂದು ಬಗೆಯ ಬಾಣ; ಈಶಾನಾಸ್ತ್ರ : ಆತನಲಿ ನೈರುತ್ಯವಿತ್ತಲು ಸೋಮವರ್ತಿಶರ ಆತನಲಿ ಸಾಮುದ್ರರೋಷಣವೀತನಲಿ ವಡಬಾಸ್ತ್ರ (ಕುವ್ಯಾಕ. ೨೩-೪೮). [ಸಂ.]

**ಸೋಮವಲ್ಕ** (ನಾ). ೧. ಒಂದು ಬಗೆಯ ಮರ; ಕಗ್ಗಲಿ : "ಕದರಃ. ಸೋಮವಲ್ಕಃ – ೨ ಬಿಳೀ ಕಗ್ಗಲೀಮರದ ಹೆಸರು" (ಸಿದ್ಧಾಂತಿ. ೧೨೩). ೨. ಒಂದು ಬಗೆಯ ಮರ; ಕಟ್ಫಲ. ೩. ಒಂದು ಬಗೆಯ ಸಸ್ಯ : "ಸೋಮವಲ್ಕಃ – ಕುಂಬಳದ ಗಿಡ, ಬಿಳಿತಾರೇಗಿಡ" (ಸಿದ್ಧಾಂತಿ. ೩೭೩). [ಸಂ.]

**ಸೋಮವಲ್ಲರಿ** (ನಾ). ೧. ಒಂದು ಬಗೆಯ ಸೊಪ್ಪಿನ ಗಿಡ : "ಬ್ರಾಹ್ಮೀ, ಮತ್ಸ್ಯಾಕ್ಷೀ, ವಯಸ್ಥಾ, ಸೋಮವಲ್ಲರೀ – ೪ ಹೊನಗೊನೇ ಸೊಪ್ಪು" (ಸಿದ್ಧಾಂತಿ. ೧೪೪). ೨. ಒಂದು ಬಗೆಯ ಗಿಡ ; "ಸೀಮೆಸದಾಪು" (ಸಸ್ಯಸಿ. ೧೧೫). [ಸಂ. ಸೋಮವಲ್ಲರೀ]

**ಸೋಮವಲ್ಲಿ** (ನಾ). ೧. = ಸೋಮ ೧ : "ಯಜ್ಞವಲ್ಲೀ, ಯಜ್ಞಶ್ರೇಷ್ಠಃ – ಈ ಯೆರಡುಂ ಸೋಮವಲ್ಲಿ" (ಔಷಧಿ. ೧೩೧); ಸೋಮವಲ್ಲಿಯ ಮುಸಲದ ವಿಹರಿಸುವ ದರ್ಭಾಸ್ತರಣದ ಚಮಸಾದಿಗಳ ಬಹುಸಾಧನಂಗಳಿಂ . . . ಮಖಶಾಲೆ ಕಣ್ಗೆಸೆದುದು (ಜೈಮಿಭಾ. ೩೩-೩೮). ೨. ಒಂದು ಬಗೆಯ ಸಸ್ಯ : "ಸೋಮವಲ್ಲಿ ವಾಕುಚಿಯಕ್ಕುಂ" (ವಸ್ತುಕೋ. ೩೭-೨೮). [ಸಂ. ಸೋಮವಲ್ಲೀ]

**ಸೋಮವಾರ** (ನಾ). ವಾರದ ಏಳು ದಿನಗಳಲ್ಲಿ ಎರಡನೆಯದು; ಚಂದ್ರನು ಅಧಿಪತಿಯಾಗಿರುವ ದಿನ : ಈಸ್ವರಸಂವತ್ಸರಸ್ರವಣಬಹುಳ ಅಷ್ಟಮಿಯಾ ಸೋಮವಾರ ಶ್ರೀಮನ್ಮಹಾಮಣ್ಡಳೇಸ್ವರ ಕುಲೋತುಂಗ ಚೋಳ ಚೆಂಗಾಳ್ವ ಒಡೆಯಾದಿತ್ಯದೇವರು ರಾಜ್ಯಂಗೆಯುತ್ತಿರಲು (ಎಕ. IV, ಹುಣಸೂ. ೫೭-೩; 1097 ?); ಸೋಮವಾರಮದಾದಿ ಯಾದೊಂಬತ್ತುದೇವಸಂ ವೇದಿತೋತ್ಸುಖವೃತ್ತಿಯಿಂ ಸಲೆ ನೋಂತು (ಬಸಪು. ೨-೫೧). [ಸಂ.]

**ಸೋಮವಾಹನ** (ನಾ). ಶಿವನ ವಾಹನ; ನಂದಿ : ವಾಮಾಂಗ ಸೋಮವಾಹನ . . . ಬಸವೇಶ ನಮೋ (ಹಮ್ಮಿರ. ೫-೬). [ಸಂ.]

**ಸೋಮವೀಥಿ** (ನಾ). ಪಟ್ಟಣಗಳಲ್ಲಿ ದಕ್ಷಿಣೋತ್ತರವಾಗಿ ನಿರ್ಮಿಸಿದ ಮಾರ್ಗ,– ಬೀದಿ : ಅಲ್ಲಿಂದ ಮುಂದಕ್ಕೆ ಹೋಗಿ ಸೋಮವೀಥಿಯ ಕಂಡು ಪೊಕ್ಕು (ಅಭಿಂಚೇ. ೨೦೬-೪೬). 'ಸೂರ್ಯವೀಥಿ' ಪರಾ. [ಸಂ. ಸೋಮವೀಥೀ]

**ಸೋಮವೀಧಿ** (ನಾ). = ಸೋಮವೀಥಿ : ಓರಣದ ಹೂಂಗೆಲಸದಖಿಳಾಗಾರ ಪಂಕ್ತಿಯ ಸೋಮವೀಧಿಯ ಸೂರವೀಧಿಯ ರಚನೆಯಲಿ ರಚಿಸಿದರು ಪಟ್ಟಣವ (ಕುವ್ಯಾಆ. ೧೨-೮). 'ಸೂರ್ಯವೀಧಿ' ಪರಾ. [< ಸಂ. ಸೋಮವೀಥೀ]

**ಸೋಮಶಾಲಿ** (ನಾ). ಒಂದು ಬಗೆಯ ಬತ್ತ: ಸೋಮಶಾಲಿಯ . . . ರಾಮಣೀಯಕವಾದ ಪುಷ್ಪಮಂಜರಿಯ ಸನಾಮದ ತೆನೆಗಳೊಪ್ಪಿಹುವು (ಕಂಸವಿ. ೫-೬೯). [ಸಂ.]

**ಸೋಮಸಾಲೆ** (ನಾ). ಮೊಗಸಾಲೆ; ಚಂದ್ರಸಾಲೆ : ಕೃಷ್ಣ . . . ಸೋಮಸಾಲೆ ಯೊಳು ಚಂದದಿಮ್ಮಣಿಮಯದ ಪೀಠದೊಳ್ಪತ್ನಿಯರ್ವೆರಸಿ ಸನ್ಮೂರ್ತಿಗೊಂಡು (ನವಮೋ. ೧೧-೬). [< ಸಂ. ಸೋಮಶಾಲಾ]

**ಸೋಮಾಂಕ** (ನಾ). ಚಂದ್ರನನ್ನು ಗುರುತಾಗಿ ಉಳ್ಳವನು; ಶಿವ : ಸೋಮಾಂಕಂ . . . ಪೊರೆಗೆ ಸುಖಕರಂ ದಕ್ಷಿಣಾಮೂರ್ತಿಲಿಂಗಂ (ವೃಷವಿ. ೪೨-೮೮). [ಸಂ.]

**ಸೋಮಾನ್ವಯ** (ನಾ). = ಸೋಮಕುಲ : ಅಂದಂಬಡೆದ ಪೊಱವೀಡಂ ಸೋಮಾನ್ವಯಪ್ರದೀಪಂ ಪುಗುವಾಗಳ್ (ಶಾಂತಿಪು. ೧೧-೧೪೭ ವ). [ಸಂ.]

**ಸೋಮಾರಿ** (ನಾ). ಮೈಗಳ್ಳ; ಆಲಸಿ; ಸೋಂಬೇರಿ : ಸೋಮಾರಿ ಗಳಾಗಿದ್ದ ಪ್ರೇಕ್ಷಕರಿಗೆ . . . ವ್ಯಥೆಯಾಗುತ್ತಿತ್ತು (ರಾವಿಜ. ೧೨); ನೀನು ಶುದ್ಧ ಸೋಮಾರಿ (ಬಾಣಾಆ. ೫). 'ಸೋಂಬೇರಿ' ಪರಾ.

**ಸೋಮಾರಿಕಟ್ಟೆ** = ಮೈಗಳ್ಳರು ಸಮಯ ಕಳೆಯಲು ಹರಟುತ್ತಾ ಕೂರುವ ಸ್ಥಳ : ಈ ಊರಿಗೆ ಬಂದು ವರ್ಷವಾದರೂ ನೀನು ಹೇಳಿದ ಸೋಮಾರಿಕಟ್ಟೆ ಯಾವುದೆಂಬುದು ನನಗೆ ಗೊತ್ತೇ ಇಲ್ಲ (ಮರಳಿ. ೫೮).

[ದೇ. ‖ ತಮಿ. ಚೋಮಾಚಿ; ಮಲ. ತುಳು. ಸೋಮಾರಿ; ತೆಲು. ಸೋಮಾರಿ, ಸೋಮರಿ; ಕೋತ. ಚೋಮಾರಿ]

**ಸೋಮಾರಿತನ** (ನಾ). ಮೈಗಳ್ಳತನ; ಜಡತ್ವ : ಎಷ್ಟೋ ಜನರು . . . ಅಮೂಲ್ಯವಾದ ವೇಳೆಯನ್ನು ಸೋಮಾರಿತನದಲ್ಲಿ ವ್ಯರ್ಥವಾಗಿ ಕಳೆಯುತ್ತಾರೆ (ಮುಂಬಯಿ. ೪-೧೯೦); ಮನೆಯಲ್ಲಿ ಕುಳಿತು ಆಲಸ್ಯ ಮತ್ತು ಸೋಮಾರಿತನಗಳನ್ನು ಕಲಿಯುವುದಕ್ಕಿಂತ . . . ದುಡಿಯುವುದು ಮೇಲು (ವಾತ್ಸಲ್ಯ. ೯೬).

[ಸೋಮಾರಿ + - ತನ]

**ಸೋಮಾಶ್ಮ** (ನಾ). ಚಂದ್ರಕಾಂತಶಿಲೆ : ಸೋಮಾಶ್ಮದ ವೇದಿಕಾಗ್ರದೊಳ್ ನಿಂದವಳುದ್ದಾಮನಯನಾಂಶು ಪಸರಿಸೆ . . . ಈಕ್ಷಿಸಿದಳ್ (ರಾಜಶೇ. ೭-೧೮). [ಸಂ.]

**ಸೋಮಿ$_1$** 'ಸಾಮಿ$_1$' ನೋ.

**ಸೋಮಿ$_2$** (ನಾ). ಸೋಮಯಾಗವನ್ನು ಮಾಡುವವನು. [ಸಂ. ಸೋಮಿನ್]

**ಸೋಮಿ$_3$** (ನಾ). ಒಂದು ಬಗೆಯ ಮರ : 'ಸೋಮಿಚಕ್ಕೆ' ಪರಾ. [?]

**ಸೋಮಿಚಕ್ಕೆ** (ನಾ). ಔಷಧಿಗಾಗಿ ಬಳಸುವ ಒಂದು ಬಗೆಯ ಮರದ ತೊಗಟೆ,– ಚಕ್ಕೆ : ಸ್ಯಂಧವಲವಣ . . . ಓವು, ಸೋಮಿಚಕ್ಕೆ ಸಹ ಚೂರ್ಣವಂ ಮಾಡಿ (ಸಕವೈ. ೩೦೩). [ಸೋಮಿ$_3$ + ಚಕ್ಕೆ (< ಸೆಕ್ಕೆ$_1$)]

**ಸೋಮೆ** (ನಾ). ಒಂದು ಬಗೆಯ ಮರ : ತಾರೆ ಗೊರವೆ ಸೋಮೆ ಬಾಗೆ ಹಿಪ್ಪೆಯ ತರು ಗೇರ ಮರಗಳು ಅಲ್ಲಿಹವು (ಮಾದೇಸಾಂ. ೧-೫೭); ಸ್ವಾಮಿಮರ, ಕೆಮ್ಮರ, ಸೋಮೇಮರ (ಮೃಔಗಿ. ೭೦-೧೪೫೭). [?/ ಸಂ. ಸೋಮಾ]

**ಸೋಮೇಶ** (ನಾ). ಶಿವ : ಆದಯ್ಯಗಳ ಭಕ್ತಿಗೆ ಸುಲಭನಾಗಯಿತಂದು ಹುಲಿಗೆಜೆಯಲಿ ಬಿಡದೆ ನೆಲಸಿದನಲಾ ಸೋಮೇಶನು (ಬಸವು. ೫೩-೨೧). [ಸಂ.]

**ಸೋಮೇಶ್ವರ** (ನಾ). ೧. = ಸೋಮೇಶ : ಸೋವಣ್ಣಗೊಲಿದನು ಲೀಲೆಯಿಂ ಸೋಮೇಶ್ವರಂ (ಬಸವು. ೫೧-೮೨). ೨. [ಛಂದ] ಗುರುವಿನ ಚಿಹ್ನೆ : ವ್ಯೋಮೇಂದು ಭಾನುಗಣಯುಗ್ಮದಿನತ್ರಲಕ್ಕುಂ ಸೋಮೇಶ್ವರದ್ವಿತಯಮಂತರಜೊಳ್ವಿರಾಮಂ (ಛಂದೋಂಬು. ೨-೧೪೬). [ಸಂ.]

**ಸೋಮೋಪರಾಗ** (ನಾ). ಚಂದ್ರಗ್ರಹಣ : ಸ್ವಸ್ತಿಶ್ರೀಜಯಾಭ್ಯುದಯ ಶಾಲಿವಾಹನ ಶಕವರುಷ ೧೫೨೧ನೆಯ ವಿಳಂಬಿ ಸಂ ಶ್ರಾವಣ ಶು ೧೫ [ಆ] ಸೋಮೋಪರಾಗ ಪುಣ್ಯಕಾಲದಲು (ಸೌಇಇ. XX . ೨೫೩-೬; 1598). [ಸಂ.]

**ಸೋಯಗ** (ನಾ). ಹಿರಿಮೆ; ಆಧಿಕ್ಯ (?): ಛಾಯವಡೆದನರಣ್ಯದೊಳು ವೈತೇಯಪತಿ ತನ್ನಯ ಪ್ರತಾಪದ ಸೋಯಗವ ಮೂದಲಿಸಲೆಲವೋ ತಾನವಸ್ಥೆಯಲಿ ನೋಯಲೀಕ್ಷಿಸಿ ಜರದೆ ಮುಂದೆ ಮದೀಯಕುಲಸಂಭವರು ನಿನ್ನನು ಸಾಯಕದಿ ಸಿರವರಿವರೆಂದ್ಯೆದಿದನು ಸದ್ಗತಿಗೆ (ಆನಂರಾ. ೧-೧೦-೫). [?]

**ಸೋಯಸ್ಕರ** 'ಸೋಬಸ್ಕರ' ನೋ.

**ಸೋಯಿ** 'ಸೋವಿ' ನೋ.

**ಸೋಯಿದರ** 'ಸೋವಿದರ' ನೋ.

**ಸೋಯಿಸು** (ಕ್ರಿ). ಶೋಧಿಸು; ಬಟ್ಟೆಇಳಿಸು (?) : ಪರಿವ ನೀರಂ ಪಜೆಯೆ ಪೊಯ್ಯಲುಮುರಿಯನಿಟ್ಟೇರ್ವಡಿಸಲುಂ ರಸಮಂ ಸೋಯಿಸಲುಂ ನಮ್ಮಂ ನೋಯಿಸಲುಂ ಇನ್ನುಮೊರ್ವಂ ಪುಟ್ಟುವನುಂಟಕ್ಕುಂ (ಅರ್ಥಸೀ. ೮-೪ ವ). [< ಸೋವಿಸು ?]

**ಸೋಯಿಸ್ಕರ** 'ಸೋಬಸ್ಕರ' ನೋ.

**ಸೋಯು** 'ಸೋ$_1$' ನೋ.

**ಸೋರ್$_1$, ಜೋರು$_1$, ಸೋರು$_1$** (ಕ್ರಿ). ೧. ಜಿನುಗು; ಸೋನೆಯಿಡು; ಹನಿ: "ಸೋರ್ - ಗಲನೇ, ಗರ್ವಹೀನೇ ಚ" (ಶಮಧಾ); ರಸಂಗಳಂ ತಳೆದ ಪಣ್ಗೊಲೆಯಂ ಗಿಳಿವಿಣ್ಣು ಚುಂಚುವಿಂದಿಟಿದಡೆ ಸೋರೆ ಸೋನೆಯೊಳಿ ದಾಂಗುಡಿ ಮಿನ್ನೆಸೆದಿರ್ಪ್ಪುವು (ಎಇ. XIII, ೩೩೦-೨೯; 929); ಜಿನುಗುವ ತುಂಬಿಯಿಂಚರಮ ಗಾಣರ ಕಾಕಳಿ ಕೂಡೆ ಸೋರ್ವ ಮಾವಿನ ಸೊನೆ ಗಂಧಸಿಂಧುರಮದಂ . . . ಆಗೆ (ಆದಿಪು. ೧೩-೬); ಗವಾಕ್ಷದ ಚಂದ್ರಕಾಂತದಿಂದುಡುಗದೆ ಸೋರ್ವ ನೀರ್ವನಿಗಳುಣ್ಮಿದ ನರ್ತನಘರ್ಮವಾರಿಯೊಳ್ ತಡತಡಮಾಗೆ (ಮಲ್ಲಿಪು. ೨-೭೦). ೨. ಸುರಿ; ಧಾರೆಯಾಗಿ ಬೀಳು : ಸೋರ್ವ ವಸುಧಾರೆಯಿಂ ಕೆಯ್ಯಾರ್ವ ನಿಧಾನಮುಮನಿಟಿಸಿ ತನ್ನೀವಳವಿಂ ಪಾರ್ವಂಗಮಳಿಪಿ ಬೇಡಿದ ಪಾರ್ವಂಗಂ ಪಿರಿದನಿತ್ತನಂಗಮಹೀಶಂ (ಪಂಪಭಾ. ೯-೭೨); ಅನಿಮಿತ್ತಂ ಮರನೊಂದು ಕೊಂಬುಡಿವೊಡಂ ಮೇಣ್ ಲೋಹಿತಂ ಸೋರ್ವೊಡಂ ಜನಿಯಿಕ್ಕುಂ ಕದನಂ (ಲೋಕೋಪ. ೪-೫೨); ಉರ್ವಿ ಬೆಳೆದಿರ್ಪ ತರುಗಳ್ ಕಲ್ಪತರುಗಳಲ್ಲಲ್ಲಿ ಗಿರಿಸಾನುವಿಂದೆ ಸೋರ್ವ ನಿರ್ಝರರಸಂ ಸಿದ್ಧರಸಂ . . . ಎನಲು ಕೈಲಾಸಪರ್ವತಂ ಕಣ್ಗೆಸೆದುದು (ಚೆಬಪು. ೨-೧೧). ೩. (ಪಾತ್ರೆ, ಹಂಚು ಮೊದಲಾದುವು ತೂತಾಗಿ) ನೀರು ಮುಂತಾದ ದ್ರವಪದಾರ್ಥವು,– ಹರಿದು ಹೋಗು,- ಹರಿದು ಹೊರಬರು : ತತ್ಪ್ರಶಸ್ತಿಗಳೊಳಂತವನೊಯ್ಯನೊಯ್ಯನೆ ನೋಡಿ ನೋಡಿ ಸೋರ್ದುದು ಕೊಳಗೊಂಡ ಗರ್ವರಸಮಾ ಭರತೇಶ್ವರಚಕ್ರವರ್ತಿಯಾ (ಆದಿಪು. ೧೩-೭೦). ೪. ಇಲ್ಲವಾಗು; ನೀಗು; ಕಳೆದುಹೋಗು : ಎಱಿಂಕೆಯ ಗಾಳಿ ಮುಟ್ಟೆ ಕಂದುವುವೆಸಟೊರ್ಮೆ ಪೀರಲೊಡಮಾಗಳೆ ಸೋರ್ವುವು ಕಂಪು (ಆದಿಪು. ೧೧-೧೨೦); ನೆಗಟ್ಟ ತಪದೊಂದು ಮಹೋದ್ಯೋಗದ ಸುಧ್ಯಾನಂ ನಿಂದಾಗಡೆ ಸೋರಲ್ ತಗುಳ್ದುಮಘವಿಷಯಂಗಳ್ (ಜೀವಸಂ. ೧೭೩-೨೦); ಎಱಗುವ ತುಂಬಿವಿಂಡಗಿಯೆ . . . ಬಾಂಡೊಟೆದಲೆಯಂ ಕನಲ್ದು ನಡೆತಂದು ಬಸಂತನ ಸೊರ್ಕು ಸೋರ್ವಿನಂ ಮುಂದೆ ನಿಂದು (ಕಬ್ಬಿಕಾ. ೩೧೧). ೫. ಜೋಲು; ಜೋತುಬೀಳು; ನೇಲು : "ನನೆವಲ್ಲಿ ಜೋಲ್ದುದೆಜೊಳಂ . . . ಸೋರೆಂಬ ಶಬ್ದ" (ಶಬ್ದಮಂ. ೧೧೪); ಸೋರ್ಮುಡಿ ಸೋರ್ದು ಪಿಂದಲೆಯ (ಕಾವ್ಯಾವ. ೮೨೩). ೬. (ಸಡಿಲವಾಗಿ) ಜಾರು; ಕಳಚಿ ಕೊಳ್ಳು : ಕೊಂತಂಗಳಿಂದಮಿಟ್ಟಿಗಳಿಂದಂ ಕರುಳ್ಗಳಂ ಸೋರೆ [ಪಾಠಾಂ. ಸುರಿಯೆ] ಕುತ್ತುವುದುಂ (ವಡ್ಡಾರಾ. ೯೬-೨೮); ಅರೆಗಟ್ಟ ತುರಿಪದಿಂ ಪರಿತರೆ ಮೇಖಲೆ ಸೋರ್ದು ಕಾಲ್ಗೆವರೆ (ಶಾಂತಿಪು. ೬-೧೧); ಸೋಂಕಲೊಡಂ ನಿಶಾತರುಣಿಯಂ ಶಶಿ ಸೋರ್ದುದು ಸಂಜೆ ಸೀರೆವೋಲ್ (ಲೀಲಾವ. ೨-೩). ೭. ಸೊಕ್ಕು ಇಲ್ಲವಾಗು; ಮದವು ಅಡಗಿ ಹೋಗು : "ಸೋರ್ - ಗಲನೇ, ಗರ್ವಹೀನೇ ಚ" (ಶಮಧಾ). **ಜೋರು$_1$** : ೨. ಜೋರುತ್ತಿರುವ ನೆತ್ತರಿನಲ್ಲಿ ಜೋಡುಗಳು ನೆನೆದವು (ಮುಂಬಯಿ. ೬-೨೯೮). **ಸೋರು$_1$**: ೧. ಶೃಂಗಾರದ ಸುಧೆ ಸುರಿಸುವಂತಾ ಕುಚಾಗ್ರಂಗಳಿಂ ನುಣ್ಪನಿಪಂದಲ್ ಸೋರೆ (ಕುಸುಮಾ. ೫-೧೫೮); ಚಾರಿವರಿದು ಚಂದ್ರಸುರಧೇನು ಕೂರ್ತು ಚಕೋರವತ್ಸಗೆ ಮೊಲೆಗುಡಲು ಪೂರಿಸಿ ಕಡೆವಾಯೊಳಿಳಿವ ತಣ್ಪಾಲನೆ ಸೋರಿತು ಬೆಳ್ದಿಂಗಳಿಳೆಗೆ (ಪೋಹತ. ೧೬-೫೫); ಆನಂದಾಮೃತರಸ ಸೋರೆ ನರ್ತಿಸು, ತಾಯೆ (ಅನಿಕೇ. ೧-೬). ೨. ಚಂಡಪಿಳ್ಳೆಯ ಮೆಯ್ಯನಕ್ಕಱಿಂ ನೆಕ್ಕುತ್ತೆ . . . ಕಡೆದವಲ್ಲಿ ಲಿಂಗದ ಸಾರೆ ಮೃಡಭಕ್ತಿರಸಧಾರೆ ಎಂಬಂದದಿಂ ಸೋರೆ (ಚಂಡೇಶ. ೩೪೬-೧೨); ಕಂಬನಿಗಳಾಲಿ ಯೊಳೀಡಾಡಿದು ಸೋರಿದವು (ಕುವ್ಯಾಕ. ೧೪-೧೧); ಸೋರುವಾನಂದಾಶ್ರುಪುಳಕದ ಪೂರಣದಲೆತ್ತಿದನು ಪವನಕುಮಾರಕನ ಮಸ್ತಕವ ನಲಿದೊಲಿದಬುಜಭವಸೂನು (ತೊರರಾ. ೫-೯-೮). ೩. ಸೋರುತಿಹುದು ಮನೆಯ ಮಾಳಿಗಿ ದಾರು ಗಟ್ಟಿ ಮಾಳ್ಪರಿಲ್ಲ (ಶರೀಫ. ೧೯-೩); ಪೆಟ್ಟಿಗೆ ಒಡದು ಡಬ್ಬಿಗಳಿಗೆ ಧಕ್ಕೆ ಹತ್ತುತ್ತದೆ ಮತ್ತು ಎಣ್ಣೆಯು ಸೋರಹತ್ತಲು ರೇಲುವೆಕಂಪನಿಯವರು ತಕ್ಕೊಳ್ಳುವದಿಲ್ಲ (ಮುಂಬವ್ಯಾ. ೫ ಪ್ರಸ್ತಾವನೆ). ೪. ಕಮಳದ ಸೊಕ್ಕು ಸೋರೆ . . . ಭಾನು ಪಶ್ಚಿಮಪಯೋಧಿಯೊಳೊಯ್ಯನೆ ಮೆಯ್ಯನಿಕ್ಕಿದಂ (ಪುಣ್ಯಾಸ್ರ. ೧-೧೧೫); ಭೂರಿಚಿಂತೆಯ ಬಿಟ್ಟು ತನ್ನ ತಾ ನೋಳ್ಪಾಗ ಸೋರುತಿರ್ದುದು ಕರ್ಮರಜಸು (ಭರಚ. ೧೫-೧೨೦); ಹಗಲೇರಿ ಹಗಲಿಳಿಯುತಿರುಳಾ ಗಿರುಳು ಹೋಗಿ ಕಾಲಜೀವನ ಸೋರಿದುದು (ಚಿತ್ರಾಂಗ. ೬೪-೧೭೫೩). ೮. ಕುಗ್ಗು; ಕುಸಿ: ಕಲಹ ಜಯಿಸದೆಂದು ಕಂಡೆದೆಯೊಳು ಸೋರಿ ತಲೆಗುಸಿದನು (ಭರಚ. ೨೪-೭೦). 'ಜೋಲ್$_1$' ಪರಾ.

**ಸೋರಿ ಬರು** = ಗುಟ್ಟು ಮುಂತಾದುವು ಹೊರಬೀಳು ,– ಹೊರಬರು: ಬ್ರಿಟಿಷರು ತಮ್ಮ ಮಿಲಿಟರಿಬಲದಿಂದ ಆ ಯೋಜನೆಗೆ ಸಹಿ ಹಾಕುವಂತೆ ಸುಲ್ತಾನರನ್ನು ಒತ್ತಾಯಗೊಳಿಸಿರುವರೆಂದೂ ಸುದ್ದಿ ಸೋರಿ ಬಂದಿದೆ (ಎಲಗ್ಯೀ. ೧೧೧). **ಸೋರುಹಾಕು** = (ನೆನೆಹಾಕಿದ ಧಾನ್ಯ, ಬಟ್ಟೆ ಮುಂತಾದುವುಗಳ) ನೀರು ಸೋರಿಹೋಗುವಂತೆ ಮಾಡು : ನೆನೆ ಹಾಕಿರುವ ಕಡಲೇಬೇಳೆಯನ್ನು ಮೊದಲು ಸೋರುಹಾಕು, ಆಮೇಲೆ ತಿರುವಿ ಕೊಡುತ್ತೇನೆ (ರೂಢಿ).

[ದೇ.॥ ತಮಿ. ಪರ್ಜ. ಗಡಬ. ಚೋರ್; ಮಲ. ಚೋರ್, ಚೋರು; ತುಳು. ಸೋರು, ತೋರು; ಕೊಡ. ತೊರಿ; ತೆಲು. ತೊರಗು, ತೊರುಗು]

**ಸೋರ್$_2$, ಜೋರು$_2$** (ನಾ). ೧. ಹನಿಯುವಿಕೆ; ತೊಟ್ಟಿಕ್ಕುವಿಕೆ: (ಕಿ). ೨. (ದ್ರವ ಮುಂತಾದವು ತೂತಿನ ಮೂಲಕ) ಹರಿದು ಹೋಗುವಿಕೆ: (ಕಿ). **ಜೋರು$_2$** : ೩. (ರಕ್ತ, ಕಣ್ಣೀರು ಮುಂತಾದುವುಗಳ) ಸುರಿತ; ಧಾರೆ: ಹಾಜಿಬವು ಗಜಿಸಹಿತ ದೇಹವ ಡೋಜುಗಳೆದಂಬುಗಳು ನೆತ್ತರ ಜೋರು ಮಸಗಿತು ಕೂಡೆ ಜಾಜಿನ ಗಿರಿಯ ರೌಕುಳದ (ಕುವ್ಯಾದ್ರೋ. ೧೬-೩೬). ಐರಿತ ಕಿವಿಗಳಲ್ಲಿ ಗುಗ್ಗೆವೊಜಿತ ಕಣ್ಣಿನಲ್ಲಿ ಜೋರು (ಸುಸಾರ. ೬೨-೩); ಆಡೆ ವಿತರ್ಕೋ ಕಂದ ? ಜೋರು ನಿತ್ತಿತೆ ? (ಹಬ್ಬರ. ೪೩-೧೭೮). ೪. ಹೊರಬರುವಿಕೆ; ಹೊರಸೂಸುವಿಕೆ : ಹಾಯ್ದು ಕರುಳಿನ ಮಿದುಳ ಜೋರಿನ ತೊಯ್ದು ರಕ್ತಾಂಬರದಿ ತಾನಿರಲು (ಕುವ್ಯಾಕ. ೮-೪೧);

ಗದೆಯ ಹೊಯ್ಲಲಿ ನರಳ್ವ ವೀರರ ಮಿದುಳ ಜೋರಿನ ಜೊಂಡೆ ಜೋಡಣೆಯ . . . ಝೋಂಪಿಸಿ ಕೆರಳ್ವ ಭಟರಟ್ಟೆಗಳಲೆಸೆದುದು ಕೂಡೆ ರಣಭೂಮಿ (ಕುಮ್ಹಾಕ. ೧೫-೩೩).

[< ಸೋರ್$_1$]

**ಸೋರಣ** (ನಾ). ಸೋರುವಿಕೆ : ''ಸೋರಣಂ . . . ಹುಣ್ಣು ಸೋರ್ತೆಯುಂ'' (ಕಾಶಕ್ಕ. ೨೨೩); ನಿತ್ಯ ಸೋರಣ ಸುರಿವುದಕಾರದೆಯೆರಡು ಹೊತ್ತು ಮೈದೊಳೆಯುತ್ತಲಿರಲು (ಬಿಜ್ಜಲರಾ. ೭-೧೪). [ಸೋರು$_1$ (< ಸೋರ್$_1$) + - ಅಣ]

**ಸೋರಾಟ** 'ಸೊರಟ' ನೋ.

**ಸೋರಿಕೆ** (ನಾ). ೧. (ದ್ರವ, ಅನಿಲ ಮೊದಲಾದುವು) ಸೋರಿಹೋಗುವಿಕೆ : ಅಡಿಗೆ ಅನಿಲಗಳ ಸೋರಿಕೆಯಿಂದ ಅನೇಕ ಅಪಘಾತಗಳು ಸಂಭವಿಸುತ್ತವೆ (ರೂಢಿ). ೨. (ಆಲಂ) (ಹಣ ಮುಂತಾದುವು) ಅಪವ್ಯಯವಾಗುವಿಕೆ: ಉನ್ನತಮಟ್ಟದಲ್ಲಿ ನಡೆಯುವ ಹಣದ ಸೋರಿಕೆಯನ್ನು ತಡೆಗಟ್ಟುವವರೆಗೆ ನಮ್ಮ ದೇಶದ ಆರ್ಥಿಕಮಟ್ಟ ಸುಧಾರಿಸಲು ಸಾಧ್ಯವಿಲ್ಲ (ರೂಢಿ).

[ಸೋರು$_1$ (< ಸೋರ್$_1$) + - ಇಕೆ]

**ಸೋರಿಸು, ಜೋರಿಸು** (ಕ್ರಿ). ೧. ಸುರಿಸು; ಬೀಳುವಂತೆ ಮಾಡು: ಬಾನ್ನಡರ್ದನಾ ಮುನಿ ಮತ್ತಂ ಧಾರಾಕಾರದೆ ನೀರಂ ಸೋರಿಸಿದಂ ಸುತ್ತಲಲ್ಲಿಯಾಶ್ರಮಪದದೊಳ್ (ಸೌನಂದ . ೧-೩೧). ೨. ಇಲ್ಲವಾಗಿಸು; ಹೊರಟು ಹೋಗುವಂತೆ ಮಾಡು: ನೀರು ಬೆಟ್ಟವ ಕೊಚ್ಚುವಂತೆ ರಾಯನ ಧ್ಯಾನವಾರಿ ಭೇದಿಸಿ ಕರ್ಮಗಿರಿಯಾ ಸೋರಿಸುತಿರ್ದುದು (ಭರಚ. ೧೮-೪೧). **ಜೋರಿಸು** : ೧. ಸೋರಿಸುತ ರುಧಿರಮಂ ಜೋರಿಸುತ ಕರುಳನಸುರಾರಿ ಶರಪಾತಘಾತ . . . ಮೈಗರೆದು ಖಿಡಿಖಂಡಗಳನುತ್ತರಿಸಿ ಬಿತ್ತರಿಸುತ (ಜಿನಮು. ೨೯-೩೦). [ಸೋರ್$_1$ + - ಇಸು$_3$]

**ಸೋರು$_1$** 'ಸೋರ್$_1$' ನೋ.

**ಸೋರು$_2$** 'ಸೊರ್ಕೆ$_2$' ನೋ.

**ಸೋರುಗಂಡಿ** (ನಾ). (ಕೊಳಚೆಯ) ನೀರು ಹರಿದು ಹೋಗಲು ಮಾಡಿರುವ ರಂಧ್ರ ,- ತೂತು : ಮುಂದ್ಮೆದಿ ತುಡುಕಿ ಸಜ್ಜೆಗಳಡರಿ ಸೋರುಗಂಡಿಯೊಳಿಳಿದು ಮಲಗಿ ನಿದ್ರೆಯೊಳಿರ್ಪರ ಸಡಗರಂಗಳ ನೋಡಿ . . . ವಾತಾಯನದ ಮಾರ್ಗವಿಡಿದು ಪೊರಮಟ್ಟನು (ವಂಕಾರಾ. ೫-೩-೨೩); ಮೂವರು ಖೈದಿಗಳು ಸೋರುಗಂಡಿಯ ಗಬ್ಬುನಾತ ಹೊಡೆಯುತ್ತಿದ್ದ ಮರದ ತೊಟ್ಟಿಯ ಮಗ್ಗುಲಲ್ಲಿದ್ದ ಮುಂಗೋಣೆಯಲ್ಲಿ ಬಿದ್ದಿದ್ದರು (ಪುನರು. ೫೪೯). [ಸೋರು$_1$ (< ಸೋರ್$_1$) + ಕಂಡಿ$_1$]

**ಸೋರುಗಣ್ಣು** (ನಾ). ೧. ನೀರು ಸುರಿಸುವ ಕಣ್ಣು: ಹಾರುವೆರಡೆತ್ತಾಗಿ ಹೋರುವ ಮಗನಾಗಿ ಸೋರುಗಣ್ಣಾಕೆ ಸೊಸೆಯಾದರಾ ಮನೆಗೆ ತೂರುವರು ಮಣ್ಣ (ಸರ್ವಜ್ಞ. ೧೭೫೩). ೨. ಕಣ್ಣಿನಲ್ಲಿ ನೀರು ಸುರಿಯುವ ಒಂದು ಬಗೆಯ ರೋಗ: ಈಗ ಬಂದಿರುವ ಡಾಕ್ಟರು ಸೋರುಗಣ್ಣಿಗೆ ಒಳ್ಳೆಯ ಚಿಕಿತ್ಸೆಯನ್ನು ಮಾಡುತ್ತಾರೆ (ರೂಢಿ). [ಸೋರು$_1$ (< ಸೋರ್$_1$) + ಕಣ್ಣು (< ಕಣ್)]

**ಸೋರುಪ್ಪು** (ನಾ). ಒಂದು ಬಗೆಯ ಖನಿಜ — ಕ್ಷಾರ; ಪೆಟ್ಲುಪ್ಪು : ''ಅಕ್ಷ - ರುಚಕ = ಸೋರುಪ್ಪು'' (ಗಂಗಾಮ. ೨೧); ನೆಲದೊಳಗೆ ಸುಂಬಳಕಾರ ತುತ್ಥ ಇಂಗಳೀಕ ನವಸಾಗರ ಸೋರುಪ್ಪು ಗಂಧಕ ಮುಂತಾದ ವಿಷರೂಪ ಕ್ಷಾರಾದಿಗಳಿರುತ್ತವೆ (ಮುಂಬಯಿ. ೫-೧೫೭). [ಸೋರು$_0$ (IP ← ಪಾರ. ಶೋರಾ; ಹಿಂ. ಶೋರಾ, ಸೋರಾ; ಮರಾ. ಸೋರಾ./ತೆಲು. ಸೋರು, ಸೋರುಪ್ಪು) + ಉಪ್ಪು$_1$]

**ಸೋರುಬಿಡು** 'ಸೊರೆಬಿಡು' ನೋ.

**ಸೋರುಮುಡಿ** 'ಸೋರ್ಮುಡಿ' ನೋ.

**ಸೋರೆ$_1$** 'ಸೊರೆ$_3$' ನೋ.

**ಸೋರೆ$_2$, ಚೋರೆ$_1$, ಸೊರೆ$_4$** (ನಾ). ಒಂದು ಬಗೆಯ ಹಕ್ಕಿ : ಶಕುನಿ ಕಂಕಂ ತೊಂಡಿಗಂ ಸೋರೆ ತಿತ್ತಿರಿ ಕೋಕಂ ಪಿಕಳಂ ಬಕಂ ಶಿಖಿ ಶುಕಂ (ರಾಜಶೇ. ೫-೫೯); ಗರುಡಂ ಗೀಜಗನಂಚೆ ಸೋರೆ ಪಿಕಳಂ (ಯಾದಚಂ. ೪-೪೭); ಹಂಗ ಟಿಟ್ಟಿಭ ಸೋರೆ ಘೂಕ ಗೊರವಂಕ (ರುಕ್ಮಾಂಗ. ೧೦-೫). **ಚೋರೆ$_1$** : ಗದ್ದೆಯಲ್ಲಿ ಕುಳಿತಿದ್ದ ಕೆಲವು ಚೋರೆ ಹಕ್ಕಿಗಳು ಹಾರಿದುವು (ಕಾನೂರು. ೮೯); ಹೋರೆ ಗುಬ್ಬಳಿಸಿತ್ತು ಅತ್ತ ಕೆಂಬೂತಂ ಪಾರಿತು ಪೊದೆಯಿಂದಿತ್ತ (ಅನಿಕೇ. ೪೯-೭). **ಸೊರೆ$_4$**: ''ಭೀಷಣಃ - ಕುಂದುರುಷ್ಕ, ಸೊರೆಯ ಹಕ್ಕಿ'' (ಓಷಧಿ. ೧೧೧).

**ಸೋರೆಕಾಯಿ** 'ಸೊರೆಗಾಯ್' ನೋ.

**ಸೋರೆಗಾಯಿ** 'ಸೊರೆಗಾಯ್' ನೋ.

**ಸೋರೆಗುಂಡಿಗೆ** (ನಾ). ಸೋರೆಬುರುಡೆಯ ಪಾತ್ರೆ: ಸುರುಚಿರಮಪ್ಪಾ ಸಿದ್ಧರಸಮನೀ ಸೋರೆಗುಂಡಿಗೆಯೊಳು ತುಂಬಿ ಕರತಳವ ಸೋಂಕಿಸದೀ ಹಗ್ಗಕೆ ಭರದಿಂದ ಕಟ್ಟಿಯಲುಗಲು (ನೇಮಿಸಂ. ೧೦-೨೧೧). [ಸೋರೆ$_1$ (< ಸೊರೆ$_3$) + ಗುಂಡಿಗೆ$_2$]

**ಸೋರೆಬುರುಡೆ** (ನಾ). ತಿರುಳನ್ನು ತೆಗೆದು ಒಣಗಿಸಿದ ಸೋರೆಕಾಯಿ; IP ಗಿಡದಲ್ಲಿ ಬಿಟ್ಟ ಸೋರೆಯ ಕಾಯಿಗಳನ್ನು ಕೀಳದೆ ಹಾಗೆಯೇ ಬಿಟ್ಟರೆ ಬಲಿತು ಬುರುಡೆಗಳಾಗುತ್ತವೆ. ಈ ಬುರುಡೆಗಳನ್ನು ಭಾಗಮಾಡಿ (ಭಿಕ್ಷಾ) ಪಾತ್ರೆಯಂತೆ ಉಪಯೋಗಿಸುತ್ತಾರೆ. ಹಗುರವಾಗಿದ್ದು ತೇಲುವುದರಿಂದ ದುಂಡುಕಾಯಿಗಳ ಬುರುಡೆಗಳ ಸಹಾಯದಿಂದ ಈಜು ಕಲಿಯುತ್ತಾರೆ. ದುಂಡು, ಚಪ್ಪಟೆ ಬುರುಡೆಗಳನ್ನು ಏಕನಾದ, ಕಿನ್ನರಿ, ವೀಣೆ ಮೊದಲಾದ ವಾದ್ಯಗಳಿಗೂ ಉಪಯೋಗಿಸುತ್ತಾರೆ : ಮರದ ಪಾತ್ರೆ . . . ಸೋರೆಬುರುಡೆ, ತೆಂಗಿನ ಕರಟ ಮುಂತಾದ ಪಾತ್ರೆಗಳಲ್ಲಿ ಭೋಜನವನ್ನು ಮಾಡಿದರೆ ದಾರಿದ್ರ್ಯ ಉಂಟಾಗುವುದು (ಸಕಪ್ಪ. ೪೯); ಆ ವನದ ಆಚೆ ಒಂದು ಸೋರೆಬುರುಡೆಯಲ್ಲಿ ಹಾಲು ಇಟ್ಟಿರುವುದು (ದೇಶಾಂಕ. ೧೪) ; ಕೆರೆಯ ನೀರಿನಲ್ಲಿ ದಾರಿಕಾಣುವುದಕ್ಕಾಗಿ ದೀಪಗಳನ್ನು ಸೋರೆಬುರುಡೆಗಳಲ್ಲಿ ಹತ್ತಿಸಿಕೊಂಡು ಬರುತಾ ಇದಾರೆ (ಪೇಟೆಮಾ. ೫೨).

[ಸೋರೆ$_1$ (< ಸೊರೆ$_3$) + ಬುರುಡೆ]

**ಸೋರೆಬುರುಡೆಮರ** (ನಾ). ಒಂದು ಬಗೆಯ ಮರ : ಸೋರೆಬುರುಡೆಮರ, ಸನ್ಯಾಸಿಬಕ್ಕರೆ (ಮೈಔಗಿ. ೨೫-೪೭೭). [ಸೋರೆಬುರುಡೆ + ಮರ$_1$]

**ಸೋರೆಮಟಿ** 'ಸೋರೆಮಡಿ' ನೋ.

**ಸೋರೆಮಡಿ, ಸೋರೆಮಟಿ** (ನಾ). ಒಂದು ಸ್ಥಳದ ಹೆಸರು : ಸೋರೆಮಡಿಯ ಕಾಳಿಗದೊಳ್ . . . ಪಲವುಂ ಕುದುರೆಯಂ ಮಾನಸರುಮಾನಿಱಿದು ಬಿಟ್ಟೊಡೆ (ಸೌಇಇ. IX-i, ೧೧-೬; ಸು. 9ನೆಯ ಶತ). **ಸೋರೆಮಟಿ** : ಮಹಾರಾಜರು[ಂ] ಬಾಣರಸರುಂ ಸೋರೆಮಟಿ ಕೋ[ಟ್ಟೆ]ಂ(ಕೋಟ್ಟೆ)ಯಿಟ್ಟಲ್ಲಿ . . . ಪಾಱ್ವರ ಅಣ್ಣಕ್ಕಱ್ ಪುನ್ನಣಮಾಣೆಯಿಱಿದು ಬೀಟ್ಟನ್ (ಎಇ. XXIV, ೧೯೧-೫; ಸು. 885). [?]

**ಸೋರೆಮೊಗ** (ನಾ). (ಆಲಂ) ಸೊಟ್ಟಮುಖದವನು; ವಿಕೃತಸ್ವರೂಪದವನು: ಯಮನೆಂಬ ಸೋರೆಮೊಗಂ ಬಂದು ಮುಳುಗಿಸಲ್ಕನ್ಯಜಳಧಿಯೊಳ್ ದೇಹಬಹಿತ್ರಮದೊಡೆಯೆ (ಸಮುಪ. ೧೩-೭೩) [ಸೋರೆ$_1$ ? + ಮೊಗ]

**ಸೋರೊಡೆ** (ಕ್ರಿ). (?) : ಸೋರೊಡೆದ ಕೈಯಿದನೆ ಕುಚಭಾರಂ ಬಿಟ್ಟೆಬ್ ಬಾಟ್ ಪೊಂಬಾಟೆಗೆ ತಳ್ತೋರಂತಡರ್ದಡಕೆಯ ಸಸಿ ಸೀರೆಯನಭಿನಯಿಸುವಂತಿರೇ ನೊಪ್ಪಿದುದೋ (ಲೀಲಾವ. ೧೩-೭೩). [? + ಒಡೆ$_1$]

**ಸೋರೋಡು** (ನಾ). ತೂತುಗಳಿಂದ ಕೂಡಿದ ದೋಣಿ: ತೋರವಹ ಬಲುದೆಪ್ಪವಿರೆ ಮನ ಹಾರಿ ಸೋರೋಡಂ[ಪಾಠಾಂ. ಸೊರೆಯೋಡಂ] ಪಿಡಿದು ತಾಂ ಪಾರವೆಯ್ದುವೆನೆಂಬ ವನವೊಲು (ಬಸವು. ೬೦-೪೭). [ಸೋರು (< ಸೋರ್$_1$) + ಓಡು$_3$ (< ಓಡ)]

**ಸೋರ್ಗುರುಳು** (ನಾ). ಸಡಿಲವಾಗಿ ಕಟ್ಟಿದ ತುರುಬು; ಅಳ್ಳಕವಾದ ಮುಡಿ: ಸುಳಿಗುರುಳು ಸೋರ್ಗುರುಳು . . . ಅಳಿಗುರುಳು ನಿರಿಗುರುಳು ಸುಕ್ಕು ಸೊಗಯಿಪಗುರುಳು (ನವಮೋ. ೨೪-೧೮). [ಸೋರ್$_2$ + ಕುರುಳು$_1$ (< ಕುರುಳ್$_1$)]

**ಸೋರ್ಚು** (ಕ್ರಿ). ೧. ಸೋರಿಹೋಗುವಂತೆ ಮಾಡು; ಸೋರಿಸು : ''ಸೋರ್ಚುಗಲನೇ (ಸೋರಿಸು)'' (ಶಮಧಾ); ಕೈಗೆ ತೊವಲುಟೆಯಿಯಲಗುರ್ವಿಸಿದುದು ತೀವಿದ ಗುಳ್ಳೆಯ ಪಸುಂಬೆಯಂ [ಸೋ][ಪಾಠಾಂ. ಸಾ]ರ್ಚಿದಂತೆ ತನು ಕೀಚಕನಾ (ಪಂಪಭಾ. ೮-೭೭). ೨. ಹೊರಬರುವಂತೆ ಮಾಡು : ಉರ್ಚಿ ಕೆಲಬರನುತ್ತುರಾಗ್ರಹತಿಯಿಂ ಕರುಳ ಸೋರ್ಚಿ ಕೆಲಬರನು . . . ವಾಲಾಗ್ರದಿಂದಿರದೆ ಬಾರ್ಚಿ ಕೆಲಬರನಿಂತು ಪುಂಗವಂ ಭಂಗವಂ ಮಾಡುತ್ತೈತರುತಿರ್ದನು (ಚಿಬಪು. ೪೪-೧೯).

[ಸೋರ್$_1$ + - ಚು$_1$]

**ಸೋರ್ಮುಡಿ, ಸೋರುಮುಡಿ** (ನಾ). ಸಡಿಲವಾದ ಮುಡಿ; ಅಳ್ಳಕವಾದ ತುರುಬು : ಬಾಡಿದ ಪೂಮಾಲೆಯೊಡನೆ ಬಟಲ್ದ ಸೋರ್ಮುಡಿಯುಂ ಅಡಿಗಡಿಗೆ ತತತಡವಪ್ಪ ನಡೆಗಳುಂಬೆರಸು . . . ವನಜಾನನೆಯರ್ ಬಳಾಸವನಮಂ ಪೊಕ್ಕರ್ (ಆದಿಪು. ೧೧-೭೦ ವ); ಸುಟಿಗುರುಳ್ಗೋರ್ಮುಡಿ ನೋಡಲ್ಕಾಡೆ ಸೊಗಯಿಕುಂ ದ್ರೌಪದಿಯಾ (ಗದಾಯು. ೮-೫೧); ಸುದತಿಯಾನನಸಂಶ್ರೀ ಮೇಲ್ಮುಡಿಗಧರ ಸೋರ್ಮುಡಿಗುನ್ನತಸ್ತನ . . . ರದನಗಳಿಗುತ್ತುಂಗಕಟ ನೆಟಿ ಹೆದಟಿದಪುವು (ಜೀವಂಚ. ೨-೬೨). **ಸೋರುಮುಡಿ:** ಸೋರುಮುಡಿಯಾಕೆ ಗೊರವನ ನೆರೆದಳು (ಅವಚಂ. ೨೬-೧೧೧); ಒಪ್ಪಿಡಿನಡುವಿನ ಸೋರುಮುಡಿಯ . . . ಜಡಿವ ಜಘನದ ಮೆಲ್ಲಡಿಯರಾರತಿಗಳ ಪಿಡಿದು ನಿವಾಳಿಸಲು (ಭೈರವೇ. ೨-೬೫); ಅಡ್ಡಮುಡಿಯ ಸೋರುಮುಡಿಯ ಸೊನ್ನಾರದ ದೊಡ್ಡಮುಡಿಯ ತೆಕ್ಕೆದುರುಬು ಒಡ್ಡುದೋಱದೆ ಬಿಟ್ಟು ಬೇಸಟು ಮುಡಿಗಟ್ಟಿ ಬಿನ್ನಳಿದೆಯ್ತುಂದರೊಸೆದು (ಭರತೇ. ೧೬-೨೪).

[ಸೋರ್, + ಮುಡಿ]

**ಸೋರ್ಮೊನೆ** (ನಾ). ೧. (ಕುಚದ) ಸೋರುವ ತುದಿ, – ತೊಟ್ಟು : ಎಲ್ಲು ಪೊಜಪೊಣ್ಮಿದ ಸೋರ್ಮೊನೆಯುಪ್ಪ ಜೋಲ್ದು ಮೇಗೊತ್ತಿದ ಕೊಟ್ಟಚಂಗಿದ ಕುಚಂಬಡೆದಂದದಶುಭಂ ನಿರಂತರಂ (ಲೋಕೋಪ. ೧೧-೫೫). ೨. (?) : ಬನಪತಿಯಿರ್ದ ಲಕ್ಕೆಗಳಿನಿರ್ಕಲನುಂ ಕುರುಡತ್ತ ನಾಲ್ಕುವೊಯ್ಮನೆ ನಡುವಿರ್ದ ಪನ್ನೆರಡು(ವೊ) ಬಳ್ಳಿದುವ(ವ)ಲ್ಲವಣ್ಣ ಸೋರ್ಮೊನೆಗಳ ಸೂಲದಗ್ರದಬು(ರಿ)ಕ್ಷಮುಮೆಂದಱಿದಿರ್ದು ಬಿತ್ತು(ತ್ತಿ)ನೊ(ವೊ)ಳ್ಗಿನ ಕಣೆಯುಪ್ಪ ಬಿಟ್ಟುಗನ ಮಾಡಿದ ಸೂತ್ರದ ಸೂರ್ಯಸೂಲದೊಳ್ (ಬಿಟ್ಟಮ. ೯-೧). [ಸೋರ್, + ಮೊನೆ]

**ಸೋರ್ಮೊಲೆ** (ನಾ). ಜೋತು ಬಿದ್ದ ಮೊಲೆ : ಅತಿ ಭೀತಿಯಾದಪುದು ಸೂಳೆಯ ಸೋರ್ವರ್ರ[ಪಾಠಾಂ. ಬೀಟ್ಮೊ]ಲೆಗಂಡು ಭೂಪತೀ (ಲೀಲಾವ. ೨-೧೧೮).

[ಸೋರ್, + ಮೊಲೆ]

**ಸೋರ್ವಿ** (ನಾ). ಸೋರುಪಿಕೆ : ಸುಖದ ಸೂರ್ಕಿನ ಸೋರ್ವಿಯೆನಲ್ಕೆ ಪಾಡಿ . . . ಬಾಜಿಸುವ ಮರುದ್ವರಾವಿವಿಧವಾದ್ಯವಿಶಾರದ ವಾದಕರ್ಕಳುಂ (ಮಹಾನೇ. ೨-೪೮); ರಂಗರಕ್ತಿಯೊಳ್ ಕೂಡಿ ಸುಧಾರಸದ ಸೋನೆಯುಂ ಸುಖದ ಸೂರ್ಕೆ ಉಸೂರ್ಕಿನತ ಸೋರ್ವಿಯುಮೆಂಬಂತೆ ಸೊಗಯಿಸೆ ಪಾಡಿ (ಮಹಾನೇ. ೪-೫೪ ವ).

[ಸೋರ್, + -ವಿ]

**ಸೋಲ್, ಸೋಲು₁** (ಕ್ರಿ). ಸೋತ, ಸೋಲ್ತ (ಭೂತಕೃ), ಸೋತು, ಸೋಲಿದು, ಸೋಲ್ತು, ಸೋಲ್ದು (ಭೂತನ್ಯೂ), ಸೋಲ್ವ (ಭವಿಕೃ). ೧. ಅಪಜಯ ಹೊಂದು; ಪರಾಜಯಗೊಳ್ಳು: "ಸೋಲ್ - ಪರಾಜಯೇ" (ಶಮಧಾ); ನಿಶ್ಚಲಪಕ್ಷ್ಮಂ ಸ್ತಿಮಿತತಾರಕಂ ಭುಜಬಲಿ ಕಣ್ಣಳೊಳೆ ತವೆ ಪೀರ್ವವೊಲ್ನಿಶ್ಚಳತನು ನಡೆನೋಡೆ ಭರತರಾಜಂ ಸೋಲ್ತಂ (ಆದಿಪು. ೧೪-೧೦೫); ಹರಿ ಸೋಲ್ತಂ ಕರಿಗೆಂಬಿನಂ ಬವರದಿಂ ಗಲ್ದಂತೆ ಪೋರ್ದಾನೆಗಂ ಹರಿಗಂ ನೋಡೆ ಸಮಾನಮೆಂಬಿನೆಗಂ . . . ಮೆಱೆದಂ ಕೃಷ್ಣಂ ಬಲಾಟೋಪಮಂ (ಜಗವಿ. ೬-೫೪); ತಾರಕಾಸುರನ ಬಾಧೆಗಾಱದ ಹರಿಬ್ರಹ್ಮೇಂದ್ರಾದಿ ದೇವರ್ಕಳ್ ಕಾದಿ ಸೋಲ್ತು (ಗಿರಿಕ. ೨ ಕಥಾಗರ್ಭಂ). ೨. ಪರವಶವಾಗು; ಮೋಹಗೊಳ್ಳು; ಮರುಳಾಗು : ಅಲ್ಲಿಯ ಕಣ್ ಪಳಂಚಿ ಮನಮಲ್ಲಿಯ ಕೀಲಿಸೆ ನೆಚ್ಚು ಮೆಚ್ಚು ತಳ್ತಲ್ಲಿಯೆ ಸೋಲ್ತು ಪತ್ತೆ (ಆದಿಪು. ೨-೪೨); ಚಂಡಶಾಸನನೆಂಬೊಂ ಮಿತ್ರತ್ವದಿಂ ಪೌದನಪುರಕ್ಕೆ ವಂಪಾತಂ ಪ್ರಿಯನಂದೆಯಂ ಕಂಡು ಸೋಲ್ತು ಉಪಾಯಾಂತರದಿಂ ಆಕೆಯಂ ಕೊಂಡು ಪೋಗೆ (ಚಾವುಂಪು. ೧೬೯); ನೀರೆಱೆವೆಳವೆಣ್ಣಿನೆಗೊರ್ವ ಪಥಿಕಂ ಸೋಲ್ತು (ಉದ್ಭಟ. ೩-೫೯ ವ). ೩. (ಜೂಜಿನಲ್ಲಿ ಒಡ್ಡಿದ ಪಣವನ್ನು) ಕಳೆದುಕೊಳ್ಳು : ನಿತ್ತಮನಾಡಿ ಭಾನುಮತಿ ಸೋಲ್ದೊಡೆ ಸೋಲಮನೀವುದೆಂದು ಕಾಡುತ್ತಿರೆ ಲಂಬಣಂ ಪಱಿಯೆ (ಪಂಪಭಾ. ೯-೬೮); ಧಾತ್ರಿಯುಮನೀ ಹುತಾಶನಪುತ್ರಿಯುಮಂ ಬಱಿದೆ ಸೋಲ್ತನಲ್ಲಂ ಜೂದಿಂ ಕ್ಷತ್ರಿಯ ತೇಜಮುಮಂ ಯಮಪುತ್ರಂ ರಿಪುಗಂದೆ ಸೋಲ್ತಂ (ಗದಾಯು. ೧-೭೦); ತಾಂ ಜೂಜನಾಡಿ ಸವುಂತು ಸೋಲ್ದು ಸುವರ್ಣಮಿಾಯದೆ ಪೋಗಲ್ (ಉದ್ಭಟ. ೧೨-೯೩). ೪. ಸಾಮರ್ಥ್ಯವನ್ನು ಕಳೆದುಕೊಳ್ಳು; ದುರ್ಬಲವಾಗು: ಅಪರಾಜಿತಂ ತೇಜೋರೂಪಪಾವಕಂ ಕಣ್ಣೊಳುಳ್ಕೆ ಕಾಡದೆ ಸೋಲ್ತುಂದುಪಸಂಹರಿಸುತೆ (ಶಾಂತಿಪು. ೪-೧೧); ಮದನಂಗಂಜುವ ಯೋಗಿಯೇ . . . ನಟನದೊಳ್ ಸೋತೋಡುವಳ್ ಸೂಳೆಯೇ (ಸೋಮೇಶ. ೭೮). ೫. ಕಡಮೆಯಾಗು; ಕುಂದು : ಎನಸುಂ ಮಿಾನೇಕ್ಷಣಂ ಸೋಲದ ರಸದೊದವಿಂ ಸೂರ್ಕೆ ಬೆಂದೇೞ್ಪಿನಂ ನೆಚ್ಚಿನ ಮುಗ್ಧಾಲಾಪವಿಂಪಂ ಕಱೆದು (ಕಾದಂಬ. ೫೨೬). **ಸೋಲು₁** : ೧. ಸೋತ ಬಲ ಸಂವರಿಸಿಕೊಂಡುದು ಪೂತುರೇ (ಕುಮಾದ್ರೋ. ೧೫-೨೫); ತುಂಗ ಚಂಗಳ್ವಾಧಿಪನು ಕದನದೆ ಸೋತು ಕಂಗೆಟ್ಟು ಕಾಣಿಕೆಯಿತ್ತ ಮಂಗಳಗಜಶಾಲೆ . . . ಒಪ್ಪಿದುದು (ಕಂಸವಿ. ೬-೩೦); ಪಾಲಿಸುವ ಹರಿಯು ತಾ ಸೋಲನೆಂದೆನಬೇಡ ಶೂಲಿ ತಾ ಮಗನ ತಲೆ ಜಿಗುಟೆ ಹರಿಯೇಕೆ ಪಾಲಿಸದೆ ಹೋದ (ಸರ್ವಜ್ಞ. ೨೧೫). ೨. ಉನ್ನತಾಸನವಿತ್ತನಬಲಾಜನಂ ಸೋಲೆ (ನಂಬಿರ. ೩-೭೪); ನಟ್ಟ ದೃಷ್ಟಿಯ ತೆಗೆಯಲಾಱದೆ ಸೋತು ಕೀಚಕ ಪಾತಕವ ನೆನೆದ (ಕುಮಾವಿ. ೨-೯); ಮಾನವನ ಮನಸ್ಸು ಸೋಲುವುದು ಸೌಂದರ್ಯಕ್ಕೆ ಬಹುಬೇಗ (ಭಾರದ. ೮೦). ೩. ಭೂಪತಿತಿಲಕ ತನ್ನನು ಮುನ್ನ ಸೋಲಿದು ಬಳಿಕ ತನ್ನನು ಸೋತನೇ ಹೇಳೆಂದಳಿಂದುಮುಖಿ (ಕುಮಾಸ. ೧೪-೫೫); ಜೂಜಿನಲ್ಲಿ ಪುಷ್ಕರಗೆ ರಾಜ್ಯವ ಸೋತು ನಳಭೂವರನು ನಿಜಸತಿ ಸಹಿತ ಹೊಱವಂಟನು ದೇಶಾಂತರಕೆ (ನಳಚ. ೪ ಸೂಚನೆ). ೪. ದುಡಿದು ಮೈ ಸೋತಿತೆಂದೆನುವಾಗ ಮನ ಪೆರ್ಚುವುದು ನೆನೆದಾತನ ನುಡಿಯ (ಇಂಚಾಪ. ೫೫-೬೫); ಸೋತ ದೇಹವನ್ನು ಸ್ವಲ್ಪ ಸಾವರಿಸಿಕೊಂಡರು (ಹೊಸಕ್ಕ. ೪೫). ೬. ದಣಿ; ಸಾಕಾಗು: ಒತ್ತರಿಪ ನಿಬ್ಬಣಿಗರೆಲ್ಲರುಂ ಕಣ್ಸೋಲೆ ಭಕ್ತರಂ ಸಾರೆ ನಿಂದಿರಿಸಿ (ಮಾನರ. ದೇ. ೧೬೮-೨೪); ಭೀಷ್ಠ ಬಿಗಿದುದು ದಿಟ್ಟತನದನು ಧಾತುಗೆಟ್ಟುದು ನೋಡಿ ಕಂಗಳು ಸೋತು ಮರಳಿದನು (ಕುಮಾಕ. ೩-೨೫).

**ಸೋಂತರು, ಸೋತವರು** = ಅಪಜಯ ಹೊಂದಿದವರು; ಪರಾಜಿತರಾದವರು : ಸತ್ಕವಿ ರಾಮಲಕ್ಷ್ಮನಿಗೆ ಸರಿಯೆಂಬ ಕನ್ನಡಕವಿಗಳು ವಾದಿಸಿ ಸೋಂತರಂತಾಗಿ ಮುನ್ನಿನರೊಲು (ಲಕ್ಷ್ಮಭಾ. ೧-೧೭); ಕೃಷ್ಣನ ಸೋಲವದು ಪಾಂಡವರು ಸೋತವರಲ್ಲ (ಕುಮಾದ್ರೋ. ೬-೬೭). **ಸೋತ ಪುರುಕ** = **ಸೋತವಳು** : ಸೋತ ಪುರುಕಿಗೆ ಸೋರೆಕಾಯಿ ಗೆದ್ದ ಪುರುಕಿಗೆ ಸಕ್ಕರೆಕಾಯಿ (ಗಾದೆ). **ಸೋತಾಳಿ** = ನಿತ್ರಾಣಗೊಂಡವಳು; ಬಳಲಿದವಳು (?) : ಶೀತಾಳು ಕವುಲೋಪವೀತವುನಿಸಲಾ ವೊಗಂ ವೇತಾಳಸೋಂಕನನುಕರಿಸಿ ಬರೆ ಶುಭರದಂ ಸೋತಾಳಿಯಂದದೊಳ್ಕೆಡದಳಪ್ರಿಯವಾಣಿ ಶ್ರುತಿಕಲಿತಮೆಂದೆನಿಸಲು (ವಂಕಾರಾ. ೨-೯-೨). **ಸೋತು ನುಡಿ** = ಮಣಿದು ಮಾತನಾಡು; ಸಗ್ಗಿ ನುಡಿ : ಸೋತು ನುಡಿವಾ ಹಿರಿಯರಲಿ ಸಂಪ್ರೀತಿಯನು ಸುಜನರಲಿ ನಿರ್ಮಲನೀತಿಯನು . . . ವೈರಿವ್ರಾತದಲಿ ಪೌರುಷವನಧಿಕಜ್ಞಾನಿಗಳಲೆಚ್ಚಱಿಕೆಯುಂಟೇ ರಾಯ ನಿನಗೆಂದ (ಕುಮಾಸ. ೬೦೧. ೧-೪೯). **ಸೋತು ಸುಣ್ಣವಾಗು** = ವಿಪರೀತವಾಗಿ ಬಳಲು : ಕೆಲವೇ ಮಂದಿ ಶ್ರೀಮಂತರ ಕೈಕೆಳಗೆ ದುಡಿದೂ ದುಡಿದೂ ನೀವು ಸೋತು ಸುಣ್ಣವಾಗಿದ್ದೀರಿ (ಮುಂಗಾಮು. ೧೧೮); ನರ್ಸುಗಳೂ ಕಾಂಪೌಂಡರರೂ ದುಡಿದು ಸೋತು ಸುಣ್ಣವಾದರು (ದೀಪದ. ೯೯). **ಸೋತು ಹೋಗು** = ೧. ಅಪಜಯವನ್ನು ಹೊಂದು : ಜೈನರು . . . ಸಾಮಾಜಿಕ ರಂಗದಲ್ಲಿ ಸೋತು ಹೋಗಿದ್ದರು (ಸಾಹಿಸ. ೧೩೬). ೨. ಮಣಿ; ಸಗ್ಗು : ಮಾತು ಬಂದಾಗ ಸೋತು ಹೋದವನೇ ಜಾಣ (ಗಾದೆ).

[ದೇ. ‖ ತಮಿ. ತೋಲ್, ತೋರ್; ಮಲ. ತೋಲ್; ಕೊಡ. ಕೋತ. ಚೊಲ್; ತುಳು. ಶೋಲ್ಪು, ಸೋದು, ಸೋಲು, ಸೋಲಾವು]

**ಸೋಲ, ಸೊಲ್ಲ, ಸೋಲು₂** (ನಾ). ೧. ಅಪಜಯ; ಪರಾಜಯ : ದೊರೆವೆತ್ತ ಕಾಳೆಗದ ಗೆಲ್ಲದ ಸೋಲದ ಮಾತು ನಿನ್ನೊಳಂ ನರನೊಳಮಿರ್ದುದು (ಪಂಪಭಾ. ೧೨-೧೧೮); ಗೆಲ್ಲ ಸೋಲವದೇಕೆ ಸೇವಿಸು ಮೆಲ್ಲಮೆಲ್ಲನೆ ನೀವೆನುತ್ತಂ (ಬಸಪು. ೫೯-೧೧); ಸೋಲವುಂಟೇ ವೀರನಾರಾಯಣನ ಭಕ್ತರಿಗೆ (ಕುಮಾದ್ರೋ. ೬-೬೭). ೨. ಆಸಕ್ತಿ; ಮೋಹ; ಪ್ರೀತಿ: ಒಂದೊಂದೆ ರಸದ ಸೋಲಮದೊಂದೊಂದನೆ ಕೊಲ್ಲುಂ (ಆದಿಪು. ೪-೭೩); ಸುದತೀರತ್ನದ ರೂಪಮೆನ್ನ ಬಗೆಗಾದಂ ಸೋಲಮಂ ತಂದು ತಂದುದು ಕೂರ್ಪಂ (ಜಗವಿ. ೧೦-೭೨); ಕಾಲವಱಿದು ಕಲೆಯಱಿದಂತರಂಗದ ಸೋಲವಱಿದು . . . ರಸಿಕನನಗಲಿ ಮದಾಲಸಾಂಗಿಯರು ಜೀವಿಪರೆ

(ಕುರಾಸಾಂ. ೨೩-೨೮). ೩. ತಣಿವು; ತೃಪ್ತಿ: ಕಣ್ಗೆತ್ತಂ ಸೋಲಮನೀವ ರನ್ನವಸರಂ ಚೆಲ್ವಾದುದು (ಕಬ್ಬಿಕಾ. ೩೭). ೪. ಜೂಜು, ಪಂದ್ಯ ಮೊದಲಾದುವುಗಳಲ್ಲಿ ಒಡ್ಡಿದ ಪಣ: ವರಸೇನನೆಂಬೊಂ ಜೂದಾಡಿ ಯಕ್ಷಧೂರ್ತನೆಂಬೊಂಗೆ ಸಾಸಿರ ದೀನಾರಮಂ ಸೋಲ್ತು ಸೋಲಮಂ ಕುಡಲಾರದೆ (ವಡ್ಡಾರಾ. ೧೪-೫); ನೆತ್ತಮನಾಡಿ ಭಾನುಮತಿ ಸೋಲ್ದೊಡೆ ಸೋಲಮನೀವುದೆಂದು ಕಾಡುತ್ತಿರೆ (ಪಂಪಭಾ. ೯-೬೯); ಹೇಳಲೇನರ್ಜುನನ ಭೀಮನ ಸೋಲವದು ತಾ ಮೃತ್ಯುವು (ಕುಮಾದ್ರೋ. ೧೮-೩೦). ೫. ನಷ್ಟ; ಹಾನಿ: ನಿನಗೆ ಸಾಲಮುಂ ಸೋಲಮುಮುಂಟಪ್ಪುದು (ಜೀವಸಂ. ೧೩೦-೨೨ ವ). ೬. ದಣಿವು; ಆಯಾಸ: ಸುರತದ ಸೋಲಗಳೇಸು ಸೋಲದಿ ಮೈಮರೆಹೇನು ಅಬಿಕೆಯನಟಿವವಳಾರೆ ಶಿವರತಿಕೇಳಿಯಲ್ಲಿ (ಶಿವಗೀ. ೧೭೭-೮೦೧). ಸೋಲ್ಲ: ೨. ಕುಸುಮಾವಳಿದೇವಿಯ ಕೋಮಲಾಂಗದೊಳ್ ನೆಗೆದುವು ನಾಡೆ ಘರ್ಮಜಲಬಿಂದುಗಳೊಳ್ ಪೊದಟ್ಟು[ದಮಾ ಮುದ]ಶ್ರುಗಳಿರದುಣ್ಮಿದಾ ಮನದ ಸೋಲ್ಲಮನಾಗಳೆ ಸೂಚಿಪಂದದಿಂ (ಕುಸುಮಾ. ೧೨-೯೩). ಸೋಲು$_2$ : ೧. ಇಂದುಧರಗಾಗಯಿಸತೀರದು ಬಂದು ಕೌತುಕದಾಳು ನೆರೆದುದು ಇಂದು ಗೆಲಿದರೆ ಮುಂದು ಜಗದಲಿ ಸೋಲೆ ನಿಮಗಿಲ್ಲ (ಕೌಶಿರಾ. ೩೩-೧೧); ಆ ಚಿಣ್ಣ ನಿನ್ನ ಹಲವು ವಿದ್ಯೆಯ ಗರುಡಿಯ ಹೊಕ್ಕು ಕಲಿತನು ಗೆಲವುಂಟು ಸೋಲು[ಪಾಠಾಂ. ಲ] ಕೇಳ್ ಎನಗೆ (ಮೋಹತ. ೧೨-೮); ಗೆಲ್ಲು ಸೋಲಿಂಗೆ ಹೋರುವವನಲ್ಲ ಶರಣ (ಅಪುಂಡೇ. ೧೩೨-೧೦೩). ೬. ಧೈಯಮಿನ್‌ನ ಅಭಾವದಿಂದ . . . ಯಾವ ಕೆಲಸ ಮಾಡಬೇಕಾದರೂ ಸೋಲು, ಬೇಗ ಸಿಡುಕು, ಕೋಪ, ಅತೃಪ್ತಿಯಿಂದ ಜೀವನ ಬೇಸರವಾಗುತ್ತದೆ (ಗೃಹವಿ. ೩೪).

ಸೋಲವನೆತ್ತು = ಪರಾಜಯಗೊಳಿಸು; ಸೋಲಿಸು : ನವಿಲ ಸೋಲವನೆತ್ತುವೆ ನೆಂದು ಬಂದೆನ್ನ ತಿವಿದ ಸಾಹಸಿಯ ನೋಡೆನುತ ವಿವಿಧ ವಿಚಾರದಿಂದೆಚಿಕೆಯೊಳಿಕ್ಕಲು ಕವಿದು ಬಿದ್ದುದು ಭೂಮಿಯಲಿ (ಮೋಹತ. ೩೮-೩೨).

[< ಸೋಲ್./ ತಮಿ. ತೋಲ್, ತೋರ್; ಮಲ. ತೋಲಿ; ತುಳು. ಸೋಲ, ಸೋಪು, ಸೋಲ್ಪು]

**ಸೋಲಂಬಡೆ, ಸೋಲುವಡೆ** (ಕ್ರಿ). ೧. ಮೋಹಗೊಳಿಸು; ಪರವಶಗೊಳಿಸು: ಚುಂಬನಮೊರ್ಮೆಗೊರ್ಮೆ ತನಿವರ್ಚುವುದು . . . ನುಣ್ಣುಡಿಯುಂ ಕಿವಿಗೊರ್ಮೆಗೊರ್ಮೆ ಸೋಲಂಬಡೆಯುತ್ತುಮಿರ್ಪುದವರ್ಗಳ್ಗವಕಾಶಮದುಂಟೆ ಬೇಟದೊಳ್ (ಚಂದ್ರಪ್ರ. ೬-೮೪). ಸೋಲುವಡೆ: ೨. ಅಪಜಯವನ್ನು ಹೊಂದು; ಪರಾಜಯಗೊಳ್ಳು: ಕೃಷ್ಣನ ಪರಾಕ್ರಮದಿಂದ ಸೋಲುವಡೆಯದ ರಾಜನಾರೂ ಇಲ್ಲಿ ಕಂಡುಬರುವುದಿಲ್ಲ (ವಚಭಾ. ೮೨). [ಸೋಲ + ಪಡೆ$_1$]

**ಸೋಲಕಾರ್ತಿ** (ನಾ). ಮೋಹವನ್ನುಂಟು ಮಾಡುವವಳು: ಸೋಲಕಾರ್ತಿಯರ್ ಕಣ್ಸೋಲಮಂ ಕಾಣ್ಕೆಗೊಟ್ಟು ಮನಮಂ ಮೆಚ್ಚುಗುಡೆಯುಂ (ಅರ್ಧನೇ. ೫-೨ ವ). [ಸೋಲ + - ಕಾರ$_1$ (<- ಕಾಱ) + - ತಿ$_1$ (< - ಇತ್ತಿ)]

**ಸೋಲಗಿತಿ** (ನಾ). = ಸೋಲಕಾರ್ತಿ: ಎಲಗೇ ನಿಲ್ ತಲೆವಾಲದಾಕೆ ಪಲವಣ್ಣಂಗೊಂಡ ನುಣ್ಣಲ್ಲಿದೇ ನೆಲದೊಳ್ಪುಟ್ಟುಗುಮಾವ ಬೇನೆಗೊಡಲೊಳ್ ತೊಟ್ಟಿರ್ಪ ನೀನುಟ್ಟ ಪೇರಲೆಯೇವಾಳಿಯದೆಂದು ಸೋಲಗಿತಿಯರ್ಕೇಳ್ಪನ್ನೆಗಂ (ಅಪ್ರತಿ. ೨೫-೧೭). [ಸೋಲ + - ಗಿತ್ತಿ (<- ಗಿತ್ತಿ)]

**ಸೋಲಿಗ** (ನಾ). ಗುಡ್ಡಗಾಡುಪ್ರದೇಶದಲ್ಲಿ ವಾಸಿಸುವ ಒಂದು ಜನಾಂಗ: ಆನೆಯನ್ನು ಗಾಯಗೊಳಿಸಿ ತಮ್ಮ ವಶಮಾಡಿಕೊಳ್ಳುವ ಸೋಲಿಗರಂತೆ . . . ನನ್ನನ್ನು ವಶಮಾಡಿಕೊಳ್ಳಲೆತ್ನಿಸುತ್ತಿದ್ದಾನೆ! (ನಿಶಲು. ೨೦೪); ಆನೆಗಳ ಹಿಂಡನ್ನು ಅಟ್ಟಿಕೊಂಡು ಬಂದು ಒಂದು ಆವರಣದಲ್ಲಿ ಸೋಲಿಗರು ಸೇರಿಸುವರು (ಮಲ್ಲಿ. ೩೪); ಒಂದು ಕಾಲದಲ್ಲಿ ರಂಗನಿಗೆ ಒಬ್ಬ ಸೋಲಿಗ ಹುಡುಗಿಯ ಮೇಲೆ ಪ್ರೀತಿಯಾಯಿತು (ಸಣ್ಣಕ. IX, ೨). [?]

**ಸೋಲಿದು** 'ಸೋಲ್' ಪರಾ.

**ಸೋಲಿಸು** (ಕ್ರಿ). ೧. ಪರಾಜಯಗೊಳಿಸು; ಅಪಜಯ ಹೊಂದುವಂತೆ ಮಾಡು: 'ಸೋಲಿಸು - ಅಪಜಯೇ'' (ಶಮಧಾ); ಕುತರ್ಕದಿಂ ಮತ್ಸರಿಪ ಪರವಾದಿಗಳನೊಮ್ಮೆಯು ಸೋಲಿಸುವ ಭಾಷೆ (ಬಸವು. ೬-೪); ಅಳುವವರ ನಗಿಸುವುದು ನಗುವವರನಳಿಸುವುದು ಗೆಲಿದವರ ಸೋಲಿಸಿ ಗೆಲಿಸುವುದು ಸೋತವರನೀ ವಿಪರೀತಗತಿ ವಿಧಿಗೆ (ಕುಮಾಕ. ೧೨-೩); ಹಂಸಧ್ವಜನ ಗೆಲ್ದು ಸೋಲಿಸಿ ಪ್ರಮಿಳೆಯಂ (ಚಿತ್ರಾಂಗ. ೭೨-೧೯೭೦). ೨. ಆಸಕ್ತಿಹೊಂದುವಂತೆ ಮಾಡು; ಮೋಹಗೊಳಿಸು; ಮರುಳಾಗಿಸು: ಪೊಸತಲರ್ದ ಪದದೊಳುಣ್ಮುವ ಪೊಸಗಂಪಂ ಪಡೆದು ಪೊಟ್ಟಿಜೊಳ್ ಜನಮಂ ಸೋಲಿಸುಗುಂ (ಆದಿಪು. ೧೧-೧೦೮); ಆಡುವ ಕೇಕಿಯ ಭಂಗಿ ಲೋಕಮಂ ಸೋಲಿಸುಗುಂ (ಯಶೋಚ. ೩-೩೭); ಹೆಂಗಳ ರೂಪು ಗಂಡರಿಗೆ ಗಂಡರ ರೂಪು ಹೆಂಗಳ ಸೋಲಿಪುದೆಂಬ ಪಾಂಗಲ್ಲವವನ ಚೆಲ್ವಿಕೆ ಗಂಡುಪೆಣ್ಗಳ ಕಂಗಳ ಸೆಱೆವಿಡಿದಿಹುದು (ಭರತ. ೧-೫೦). ೧, ೨: ಪಗೆಗಳುಮಂ ಪೆಂಡಿರುಮಂ ಮಿಗೆ ಸೋಲಿಪುವವನ ಬೀರಮುಂ ಗಾಡಿಯುಂ (ಕಬ್ಬಿಕಾ. ೪೮). ೩. ತಣಿಸು; ದಣಿಸು: ಸೋಲಿಸಿತೆ ಕರ್ಣಾಮೃತದ ಮಳೆಗಾಲ ನಿನ್ನಯ ಕಿವಿಗಳನು (ಕುಮಾದ್ರೋ. ೧-೧).

[ಸೋಲ್ + - ಇಸು$_3$]

**ಸೋಲು$_1$** 'ಸೋಲ್' ನೋ.

**ಸೋಲು$_2$** 'ಸೋಲ' ನೋ.

**ಸೋಲು$_3$** (ನಾ). ಒಂದು ಬಗೆಯ ಸುಗಂಧದ್ರವ್ಯ ಮತ್ತು ಅದರ ಗಿಡ: ಪುಷ್ಪವನದಲ್ಲಿ ಲಾಮಂಚ ಸೋಲು ಕಮರಕ ಸುರವಾರ ಬೂಂದು ಚಹಾ ಕಾಫೀಬೀಜ ಪಚ್ಛದವನ ಮುಂತಾದವುಗಳನ್ನು ಹಾಕಬೇಕು (ಕೃಷಿಪ್ರ. ೧೪೦). [?]

**ಸೋಲುಮುಡಿ** 'ಸೋಲ್ಮುಡಿ' ನೋ.

**ಸೋಲುವಡೆ** 'ಸೋಲಂಬಡೆ' ನೋ.

**ಸೋಲುವೆ** (ನಾ). ೧. ಅಪಜಯ; ಪರಾಜಯ; ಪರಾಭವ: ಆಳುಮೇಳದಲ್ಲಿ ವಿದಿತನಾಗಿ ಇಹಾಗ ಸೂಳೆಯ ಮನೆಯ ಆಳೇ ಬಾಲರಾಳಿಯ ಜೂಜಿನ ಸೋಲುವೆಯೇ (ಮೋಳಮಾ. ೧೨-೩೫). ೨. ಕ್ರಿಯಾಹೀನವಾಗುವಿಕೆ; ನಿಷ್ಕ್ರಿಯತೆ: ಮೈಯಲ್ಲಿನ ಬಹುಪಾಲು ನೀರು ಕಳೆದುಹೋಗಿ, ನೇರವಾಗೋ ಮೂತ್ರಪಿಂಡಗಳ ಸೋಲುವೆಯಿಂದಲೋ ರೋಗಿ ಸಾಯಬಹುದು (ಕವಿಕೋ. I. ೮೨೭).

[ಸೋಲು$_1$ (< ಸೋಲ್) + - ವೆ]

**ಸೋಲೆ** (ನಾ). ೧. (ಕಾಳು, ಬೇಳೆ, ಈರುಳ್ಳಿ ಮೊದಲಾದುವುಗಳ) ಹೊರಪದರ; ಸಿಪ್ಪೆ: 'ಸೋಲೆಗಳೆ' ಪರಾ. ೨. (ಹಾವಿನ) ಪೊರೆ: ಸರ್ಪನಂ ಪುದಿದಿರ್ದ ಸೋಲೆಯಂ ಹೆರೆಗಳೆದೊಡೇನು (ವೀಶೈವು. ೪-೪-೮); ಪಾವಿನ ಸೋಲೆಯಂ ಪಸುವಿನ ತುಪ್ಪಮಂ ಸಾಮ್ರಾಣಿಯೊಳ್ ಬೆರಸಿ ಪೊಗೆಗೊಳಿಪುದೆಂದುಂ (ಚಿಕವಂ. ೧೪೮-೩); ಹಾವು ಸತ್ತ ಮೇಲೆ ಸೋಲೆ ಹಂಗೇನು? (ಗಾದೆ). ೩. ಹಲಸಿನ ಹಣ್ಣಿನಲ್ಲಿ ತೊಳೆಯ ಸುತ್ತಲೂ ಇರುವ ನಾರು: ಹಲಸಿನ ಹಣ್ಣನ್ನು ಕುಡಲಿನಿಂದ ಕೊಯ್ದು ಸೋಲೆ ತೆಗೆದು, ಬಿತ್ತ ಬಿಡಿಸಿ, ತೊಳೆಗಳನ್ನು ಲಕ್ಷಣವಾಗಿ ತಟ್ಟೆಯಲ್ಲಿಟ್ಟು ಕೊಡುವುದು ಸಾಮಾನ್ಯ ರೀತಿ (ನನ್ನೂರು. ೧೩ ಪೀಠಿಕೆ).

[ದೇ. ॥ ತಮಿ. ಚೊಲಿ = ಮರದ ತೊಗಟೆ; ತುಳು. ಚೂಲಿ, ಚೋಲಿ, ತೂಲಿ, ಸೂಲಿ, ಸೋಲಿ./ಮರಾ. ಸೋಲಣೇಂ = ಸಿಪ್ಪೆಸುಲಿ]

**ಸೋಲೆಗಳೆ** (ಕ್ರಿ). ೧. ಸಿಪ್ಪೆಯನ್ನು ಸುಲಿ ,– ತೆಗೆ: ಸೋಲೆಗಳೆದ ಉಳ್ಳಿಯ ಬೇಳೆಯ ಅರೆಮಾನ ಹಸುವಿನ ಹಾಲಲ್ಲಿ . . . ಕಾಸಿ ಕೊಡಲು ವಾತಗುಲ್ಮ, ಉದಾವರ್ತ . . . ಕ್ಷಯ, ಇಷ್ಟನು ಪರಿಹರಿಸುವುದು (ವೃದ್ಯಸಾ. I. ೨೯೬). ೨. (ಹಾವು) ಪೊರೆಯನ್ನು ಕಳಚು,– ಬಿಡು: ಆಱುತಿಂಗಳಿಗೆ ಒಂದು ವೇಳೆ ಸೋಲೆಗಳೆಯುವುವು. ಸೋಲೆಗಳೆವಾಗ ಮರಣಾವಸ್ಥೆಯಲ್ಲಿ ಉಂಟಾದಷ್ಟು ಪ್ರಯಾಸ ಪಡುವುವು (ವೃದ್ಯಸಾ. II. ೧೮೪). [ಸೋಲೆ$_1$ + ಕಳೆ$_1$]

**ಸೋಲ್ಕೆ** (ನಾ). ಅಪಜಯ ಹೊಂದುವಿಕೆ; ಸೋಲುವಿಕೆ: ನೇಲ್ಕೆ, ಪೋಲ್ಕೆ, ಸೋಲ್ಕೆ, ಕವಲ್ಕೆ (ಶಬ್ದಾನು. ೫೫೭ ಪ್ರಯೋ). [ಸೋಲ್ + - ಕೆ]

**ಸೋಲ್ತು** 'ಸೋಲ್' ಪರಾ.

**ಸೋಲ್ಮಯಿಸು** (ಕ್ರಿ). ಸೋಲನ್ನು ಉಂಟುಮಾಡು; ಪರಾಜಯಗೊಳಿಸು: ಜನರಂಜನಂಗೆ ಚಳಲೋಚನಯುಗಳಂ ಕಾಣಲೊಡನೆ ಸೋಲ್ಮಯಿಸಿದ ಶಾಸನಮಂ ಬರೆದಂತೆ ಕದಂಪಿನ ಮೃಗಮದಪತ್ರಭಂಗಮೊಪ್ಪಿದುದವಳಾ (ಲೀಲಾವ. ೧೨-೭೪).

[< ಸೋಲ್ + - ಇಸು$_3$]

**ಸೋಲ್ತು** 'ಸೋಲ್' ಪರಾ.

**ಸೋಲ್ದು** 'ಸೋಲ್' ಪರಾ.

**ಸೋಲ್ನಡೆ** (ನಾ). ನಿಧಾನವಾದ ನಡಗೆ; ಮೆಲ್ನಡೆ; ಮಂದಗಮನ: ಕಳಹಂಸಗಳ ನಡೆಯ ಕಳಭಂಗಳೊಲ್ನಡೆಯ ಸಲೆ ಸೊಂಪುನಡೆಯ ಸೋಲ್ನಡೆಯ ಸೊಬಗಿಯರಿರದೆ ತಳರ್ದರು (ಚಿಬಪು. ೩೭-೪೧). [ಸೋಲ್ + ನಡೆ$_1$]

**ಸೋಲ್ಮುಡಿ, ಸೋಲುಮುಡಿ** (ನಾ) ಸಡಿಲವಾದ ಮುಡಿ: ಅಳ್ಳಕವಾದ ತುರುಬು : ಬಳಲುಮುಡಿ ಬಲ್ಮುಡಿಯು ಸೋಲ್ಮುಡಿಯು ಜೋಲ್ಮುಡಿಯು (ಶಿವಪೂ. ೨೪-೧೮); ಪೊಗರುಕುಚ ನಗೆಮುಖವು ಸೋಲ್ಮುಡಿ ಸೊಗಪ ಸೊಬಗಿನ ಸೋನ ವರ್ಣಸಲ್ ಜಗದೊಳಾವನು (ಆದಿಪ. ೩೦-೩); ಆ ಪೆಂಪಿನ ಸಂಪಗೆಯನ್ನು ಮುಡಿದಿರುವ ಸೋಲ್ಮುಡಿಯ ಸೊಬಗಿ? (ತುಂಗಭ. ೬೫). **ಸೋಲುಮುಡಿ** : ಸೋಲುಮುಡಿಯ ಪೂವ ಸಿರಿದೇವಿಯ ನಿಜಮಾಲೆ ಕೌಸ್ತುಭಹಾರ ಉರ ವಿಶಾಲನ ಕಂಡೆ (ಶೀರ್ಥಮ. ೧೧೮).

[< ಸೋರ್ಮುಡಿ]

**ಸೋಲ್ವು** 'ಸೋಲ್' ಪರಾ.

**ಸೋಲ್ಬಾಯಿನ** (ನಾ). ಮೋಹಗೊಳಿಸುವಂತಹ ಬಾಗಿನ: ಸಖೀಜನಕೆ ಸಂತಸದ ಸೋಲ್ಬಾಯಿನಮುಮಂ ತುಂಬಿಗಾಣಿತಿಯರ್ಗೆ ಬಾಯ್ಗಂಪಿನ ಬಾಯಿನಮಂ ಬೀಱುತ್ತುಮಲ್ಲಿಂ ತಳರ್ದು (ಲೀಲಾವ. ೧೧-೫೭ ವ).

[ಸೋಲ್ + ಬಾಯಿನ (< ಬಾಯನ)]

**ಸೋವಗಾವುಂಡ** (ನಾ). ಒಬ್ಬಾತನ ಹೆಸರು: ಸೂವಗಾವುಣ್ಣ XXX ದೇವರಾ ಸೊಡರ್ಗ್ಗಂ ನಿವೇದ್ಯಕ್ಕಮ್ XXX ಮನ್ನಸಮುದ್ರ XXX ಗಂಡುಗನ್ ಕಳನಿ XXX ಗೆಯ್ದು (ಮೈಲರಿ. ೧೯೩೭. ೧೨೫-೨; 955). [ಸೋವ$_1$ + ಗಾವುಂಡ (< ಗಾಮುಂಡ)]

**ಸೋವಡಿ** (ನಾ). ಏನೂ ತಿಳಿಯದವನು; ಮುಗ್ಧ: ನೆರೆದಾಸ್ಥಾನದೊಳಿರ್ದು ರುಕ್ಮಿಣಿಯ ಮುಂದೆನ್ನೊಂದು ಸೌಭಾಗ್ಯಮಂ ಪರಿಹಾಸಂಗೆಯುತಿರ್ಪ ನಾರದನ ಮಾತಂ ಪ್ರೀತಿಯಿಂ ಕೇಳ್ದಿಳಾವರ ನೀಂ ಸೋವಡಿಯಂತಿರೀಗ ನುಡಿವಯ್ (ಜಗವ. ೧೨-೧೦೭).

[?]

**ಸೋವಣ** (ನಾ). ಒಂದು ಬಗೆಯ ತೆರಿಗೆ: ಸುಂಕ ಸೊದಿಗೆ ಸೋವಣ ಸಂದೂ ಸಕಲಸ್ವಾಮ್ಯವನು ಅನುಭವಿಸಿಕೊಂಬಿರಿ (ಎಕ. III (R), ಗುಂಡ್ಲುಪೇ. ೫೪-೬; 16ನೆಯ ಶತ). 'ಸೊಬ್ಬಣ' ಪರಾ. [?]

**ಸೋವತ** (ನಾ). ಬಲಿ; ಅರ್ಪಣೆ; ಆಹುತಿ: ಅಂತಕನ ಬಾರಿಗೆ ಸೋವತಮಾದ (ಪಂಪರಾಮಾ. ೧೪-೨೦೧); ಅವನ ಕಣ್ಣೆಸೆಯದೆ ನಿಷ್ಪಾವನಮಾ ವಿಘುವಿಯೋಗ ಪದದ್ಮೊಳ್ ತೊಡರ್ಟೇಂ ಕಾವಲನಿರವಿಂಗಾದುದು ಸೋವತಮೇ ಪೇೞ್ವುದಣ್ಣ ವಿಧಿವಿಳಸನಮಂ (ವರ್ಧಪು. ೨-೪೦); ಸೋವತಮಂ ಮಾಡುವೆನಂತಕವದನಾವಾಸಕೆ ತಾಗಿದನಾಡೊಡ ಮೇಣ ವಯಸದೇಂ ಪಿಡಿತಪ್ಪಂ ನಿಂದಡೆ ಕೋಡಗಗಟ್ಟಂ ತೊಟ್ಟನೆ ಕಟ್ಟಿ (ಕುಮುರಾ. ೧೫-೨).

**ಸೋವತಂ ಮಾಡು** = ಬಲಿಯಾಗಿ ಕೊಡು ,– ಅರ್ಪಿಸು: ಶತಬಿಂದುವಿನ ಮಕ್ಕಳಪ್ಪಯ್ಯರಂ ಗಾಳಿಗೊಡ್ಡಿದ ಪುಲ್ಲ ಬಿಂದುಗಳಂತ ನಕುಲಂ ನೆಲಕ್ಕ ಸೋವತಂ ಮಾಡಿದಂ (ಪಂಪಭಾ. ೧೩-೪೧ ವ). **ಸೋವತಮಾಗು** = ಆಹುತಿಯಾಗು; ತುತ್ತಾಗು; ಬಲಿಯಾಗು: ಅಂತು ಪಲಂಬರಲ್ಲಮೋಡಿ ಪೋಗೆಯುಮೆಮ್ಮ ವರೆಲ್ಲಂ ಜವನ ಬಾ(ವಾ)ರಿಗೆ ಸೋವತಮಾಗಯುಂ ಆಗಲಾನೊರ್ವಳೆ ಪಟುವಿನೊಳ ಗಾದಂ (ಜೀವಸಂ. ೫೫-೨೪ ವ); ಗುರುಗುಣಮಂ ಪೊರಳ್ಚಿ ಪುಲಿವಿಂಡುಗಳಂ ಪಿಡಿದಟ್ಟಿ ಕೊಂದು . . . ದಿಟ್ಟಿಗೆ ಸೋವತಮಾದುದಲ್ಲವಂ ಪರಿಯಿಸೆ ಸೊಕ್ಕಿದಾನೆ ನೆಜ್ ಕೊಂದುದು ಬೀಡಿನ ಮಂಟಯೆಲ್ಲಮಂ (ಪುಣ್ಯಾಸ್ರ. ४-೪೫).

[?./ ಪ್ರಾ. ಸೋವತ್ಥ = ೧. ಉಪಕಾರ. ೨. ಉಪಭೋಗ್ಯ]

**ಸೋವದಿಕೆ** (ನಾ). ನಿವೇದನೆ; ಉಪಹಾರ; ಬಲಿ: ವಸುಷೇಣನೆ ಪತಿಯೆನಗೆಂದು ಸುನಂದೆ ಪಿಡಿಲ್ಚಿ ಮಾಟ್ಟಿ ಸೋವದಿ[ಪಾಠಾಂ. ಡಿ]ಕೆಯನೀ ಬಸಿವ ತಲೆಗೆಸುತು ಮಾಡಾಡಿಸಿದಂ ಮಾಯಾವಿ ಪತಿಯ ಮಾಯದ ಶಿರವಂ (ಅನಂಪು. ೧೨-೩).

[< ಸೋವತ + - ಇಕೆ]

**ಸೋವನ** 'ಸೋಬಾನೆ' ನೋ.

**ಸೋವನಿಗ** (ನಾ). ಚಿನ್ನದ ಕೆಲಸ ಮಾಡುವವನು; ಅಕ್ಕಸಾಲಿಗ: ತಂಬುಲಿಗರು ವಿಟ್ಟುವೊರ್ಕಲೊಳ್ಕೆ ೨೫ ಪೆ XX ದ್ರೋಣಮುಮಂ ಕೊಟ್ಟರು ಸೋವನಿಗರು ಕೊಟ್ಟ ವಿ ೫ ಅಕ್ಕಸಾಲಿ XX ಸು ವಿ ೫ (ಎಕ. VII, ಶಿಕಾ. ೧೧೧-೨೮; 1080). [< ಸಂ. ಸೌವರ್ಣಿಕ]

**ಸೋವಳಿ** (ನಾ). ಅಟ್ಟುವಿಕೆ; ಓಡಿಸುವಿಕೆ: ನೆಲನಂ ನಿಱುಗೆಯಂ ನಡೆವೊಂದು ಪದಮುಮಂ ಸೋವಳಿ ಮೇವಳಿ ಬಿಸುವಳಿಯಂ ಬಲಮಂ ಶಕುನಮನೊಳ್ಪುತ್ತುಪಾಯಮಂ ಓಡಿವಂಗು . . . ಸಿಲೆಯ ಮೇಲಾದೊಡಂ ಶಕುನಮಂ ನಿೞಿಪಂತೆ ನಿೞಿಸುವೆಂ ಪಂಬಿಯಿಂ ನೀಂ ಮೆಚ್ಚಲುಂ (ಪಂಪಭಾ. ೫-೪೭). [ಸೋ$_1$ + - ವಳಿ$_1$]

**ಸೋವಾಸಿಣಿ** (ನಾ). ಮುತ್ತೈದೆ; ಸುಮಂಗಲಿ: ''ಕಿಂಚಿತ್ಪ್ರ್ಯುಷಾ, ಸುವಾಸಿನೀ-ಈ ೨ ಸೋವಾಸಿಣಿ'' (ಹಲಾಯು. ೭೯-೬೯); ಸುವಾಸಿನಿ – ಸೋವಾಸಿಣಿ, ಸೋವಾಸಿನಿ (ಶಮದ. ೨೭೦ ಪ್ರಯೋ); ಸೋಮದೇಶಿಕನ ಪಟ್ಟರಿಸಿ ಬಿನದದಿಂ ಸೋವಾಸಿಣಿಯರೊಗ್ಗು ಗೂಡಿ ಜೋಗುಳವಾಡಿದರ್ಗಾಡಿಯಿಂ (ಬಾಸೋಪು. ೨-೩೯).

[< ಪ್ರಾ. ಸೋವಾಸಿಣೀ, ಸುವಾಸಣೀ, ಸುವಾಸಿಣೀ./ಸಂ. ಸುವಾಸಿನೀ]

**ಸೋವಿ, ಸೋಯಿ** (ನಾ). (ಉಕ) ೧. ಅನುಕೂಲ; ಸುಲಭ: ಬಸ್ಸು ಸೋವಿ ಆಗಿತ್ತು. ಟಾಂಗಾ ಮಾಡುವ ಗೋಜೂ ಇಲ್ಲ (ವೃನ. ೨೦೨); ಫ್ರಾನ್ಸಕ್ಕೆ ಹೋಗಲು ಮೂರು ಮಾರ್ಗಗಳು . . . ಮೂರನೆಯದು ಸ್ವಲ್ಪ ಸೋವಿಯಾಗುವುದಲ್ಲದೆ ಪ್ರವಾಸವೂ ಹೆಚ್ಚು ವೇಳೆಯವರೆಗೆ ಆಗುವುದು (ಶ್ರೀರಂಗ. ೮೪). ೨. ಕಡಮೆಯ ಬೆಲೆ; ಅಗ್ಗದ ದರ: ಅನಾವಶ್ಯಕವಾದ ಯಾವುದನ್ನೂ ಸೋವಿಯೆಂಬ ಕಾರಣದಿಂದ ಕೊಳ್ಳತಕ್ಕದ್ದಲ್ಲ (ಮಿತವ್ಯ. ೨೩); ಏನೋ ಪೇಟೆಗ್ಗೆ ಹೋಗಿದ್ದೆ, ಕಾಯಿಪಲ್ಲೆ ಸೋವಿ ಕಂಡಿತು, ತಂದೆ (ಮುಂಗಾಪು. ೧೧೪). **ಸೋಯಿ:** ೧. ಒಂದು ಗಾಡಿಯ ಭರತೀಯ ಮಾಲು ಇದ್ದರೆ . . . ಪರಭಾರೆ ಸ್ಟೇಶನ ಮೇಲೆ ಕಳುಹಿಸಲಿಕ್ಕೆ ಸೋಯಿ ಆಗುತ್ತದೆ (ಮುಂಬಸ್ವಾ. ೧೪೭). ೨. ''ಸೋಯಿ = ಅಗ್ಗ'' (ಬಾಸಕೋ. ೫೧); ಸಹಜ ಸೋಯಿ ಕಂಡಿತು ತಂದೆ (ಅಶೋಕ. ೭೧).

[← ಮರಾ. ಸೋಈ, ಸೋಯ್]

**ಸೋವಿದರ, ಸೋಯಿದರ** (ನಾ). = ಸೋವಿ ೨: ಇಂತಹ ಪ್ರಸಂಗಗಳಲ್ಲಿ ಅಲ್ಲಿಯ ಪತ್ರಿಕೆಗಳು ಈ ಜನರಿಗೆ ಸೋವಿದರದ ಕಾಮಧೇನು (ಗಾಂಧಿ. ೩೩). **ಸೋಯಿದರ** : ಇಲ್ಲಿ ಬನಾರಸಿ ಪೀತಾಂಬರ, ಪತ್ತಲ ಸೀರೆ ಒಂದೇ ಸೋಯಿದರದಲ್ಲಿ ದೊರೆಯುವುವು (ಸುತ್ತುಮು. ೩). [ಸೋವಿ + ದರ$_3$]

**ಸೋವಿಲು** 'ಸೋಂಕಿಲ್' ನೋ.

**ಸೋವಿಲುದುಂಬು** 'ಸೋಗಲುದುಂಬು' ನೋ.

**ಸೋವಿಸು** (ಕ್ರಿ). ೧. ಅಟ್ಟು; ಓಡಿಸು: ಮೃಗಂಪಿಗಂದೆರಗಿ ಬರುವಳಿಯ ನಿಕರಮಂ ಬೇಗದಿಂದಾಳಿಯರ ಕೈಗಳಿಂ ಸೋವಿಸುತಲಾಗ (ಸಿದ್ಧಕಾ. ೩-೧೩). ೨. ಪರಾಜಯ ಗೊಳಿಸು; ಸೋಲಿಸು: ಮುಖಶಶಿಯಿಂ ಶಶಾಂಕನನಟ್ಟಿ ಜಘನದಲಿ ಕುಲಗಿರಿಯ ಸೋವಿಸಿ ಘನಸ್ತನಗಳಲಿ ದಿಗ್ಗಜಕುಂಭಗಳ ಸೆಳೆದೊಲೆದು ನಲಿದುಯ್ಯಲೆಯನಾಡಿದರಾ ಮೃಗಾಕ್ಷಿಯರು (ಜೀವಂಚ. ೧೭-೭೧). [ಸೋವು$_1$ (< ಸೋ$_1$) + - ಇಸು$_3$]

**ಸೋವು$_1$** 'ಸೋ$_1$' ನೋ.

**ಸೋವು$_2$** 'ಸೋಪು$_1$' ನೋ.

**ಸೋವುಗ** (ನಾ). ಬೇಟೆಗಾಗಿ ಕಾಡಿನ ಪ್ರಾಣಿಗಳನ್ನು ಎಬ್ಬಿಸಿ ಹೊರಡಿಸುವವನು: ತಡೆಯ ದೊಡ್ಡಾಪಂಧಿ ಮಿಗಗಳ ನಿಡುವಲೆಯ ನೋಡ್ಕೆದ ತೋಹುಗರೆಡೆಗವಂ ಸೋವುಗರು ಜಡಿತರೆ (ಸಾಳ್ವಭಾ. ೫-೨೫). [ಸೋವು$_1$ (< ಸೋ$_1$) + - ಗ$_2$]

**ಸೋವುಗಟ್ಟಿಗೆ** (ನಾ). (ಬೇಟೆಯ ಪ್ರಾಣಿಗಳನ್ನು ತಿವಿದೆಬ್ಬಿಸಿ) ಓಡಿಸಲು ಉಪಯೋಗಿಸುವ ಕೋಲು: ಗಿಡುಗ ಸಾಳುವ . . . ಹಕ್ಕಿಗಳನವರು ಪಿಡಿದು ಮುಂಗೈಗದ್ದುಗೆಯೊಳಿಕ್ಕಲದೊಳಿಲೆವಾ ಸೋವುಗಟ್ಟಿಗೆ ಸಡಗರದಿ ಸೌರಂಭವೆಸೆದುದು ವಿಂಧ್ಯಕನ ಕೂಡೆ (ಸಾಳ್ವಭಾ. ೫-೨೦). [ಸೋವು$_1$ (< ಸೋ$_1$) + ಕಟ್ಟಿಗೆ$_1$]

**ಸೋವೆ$_1$** 'ಸೋಪು$_1$' ನೋ.

**ಸೋವೆ$_2$** (ನಾ). ಒಂದು ಬಗೆಯ ಮರ : ಕಡವು ಶಾಲ್ಮಲಿ ಸೋವೆ . . . ಕರ್ಣಕಾರದ ಮೊತ್ತವಿದೆ (ತೊರರಾ. ೩-೧-೨೭); ಬೀಳಲಿಬ್ಬೀಡೆ ಘನ ಸೋವೆವರ್ಗ (ರುಕ್ಮಾಂಗ. ೧೦-೩); ಸೋವೆ ನಗರೆ . . . ತುರುಗಳಲ್ಲಿಹವು (ಇಟಸಾಂ. ೬-೨೮). [?]

**ಸೋಶೀರ** (ನಾ). ಸುವಾಸನೆಯುಳ್ಳ ಬೇರನ್ನು ಹೊಂದಿರುವ ಒಂದು ಬಗೆಯ ಸಸ್ಯ; ಲಾಮಂಚ: ಆ ರಜಕರೊಳೊರ್ವಂ ಸೋಶೀರ ಶ್ರೀಚಂದನಂ ಪ್ರವಾಹದೆ ಬಂದಾ ತೀರಮನೆಯ್ದುಲ್ ತೆಗೆದದನಾರಯ್ಯದೆ ಕಾಷ್ಠಮೆಂದು ಕಡಿವವಸರದೊಳ್ (ಪದ್ಯಸಾ. II, ೫೭೫). [ಸಂ.]

**ಸೋಷ್ಣ** (ಗು). ಉಷ್ಣತೆಯಿಂದ ಕೂಡಿದ; ಬಿಸಿಯಾದ: ಬೀಸಿದುದಸದೃಶ ಸೋಷ್ಣಪ್ರಭಂಜನಂ ಬೇಸಗೆಯೊಳ್ (ರಾಜಶೇ. ೫-೩೨). [ಸಂ.]

**ಸೋಸ** 'ಸಾಸ$_2$' ನೋ.

**ಸೋಸಲು** (ನಾ). ಒಂದು ಬಗೆಯ ಮೀನು: ಆ ಪೊಟ್ಟಣದಲ್ಲಿ ಕೆಲವು ಬೆಳ್ಳೇಡಿ, ಸೋಸಲು, ತೊಳ್ಳೆಮೀನುಗಳಿದ್ದು ಒಂದು ತೊಳ್ಳೆಮೀನಿಗೆ ಇನ್ನೂ ಜೀವವಿದ್ದುದರಿಂದ ಚಿಮ್ಮಿ ಹಾರಿ ಒಲೆಯ ಬೂದಿಗೇ ಬಿದ್ದಿತು (ಮಲೆಮ. ೫೮೮). [?]

**ಸೋಸು$_1$** (ಕ್ರಿ). ಅಟ್ಟು; ಓಡಿಸು: ಸೋರ್ವ್ವ ಕರುಳಾ ಕರುಳ್ಗಾಟಿಪ ಬಳ್ಳು ಬಳ್ಳುಮಂ ಸೋಸುವ ವೀರರಟ್ಟೆ ಭಟರಟ್ಟೆಯನಟ್ಟುವ ಭೂತಕೋಟಿಯಿಂದಾಸುರಮಾಯ್ತು . . . ಆಹವಾರಣಂ (ಎಕ. VIII. ಸಾಗರ. ೧೫-೪೮; 1218). [ಸೋ$_1$ + -ಸು$_1$]

**ಸೋಸು$_2$** (ಕ್ರಿ). ೧. (ದ್ರವಪದಾರ್ಥಗಳ) ಕಲ್ಮಷಭಾಗವನ್ನು ಶೋಧಿಸಿ ತೆಗೆ,— ಬೇರ್ಪಡಿಸು; ಶೋಧಿಸು: ಬಳಿಕ ಅದರೊಳಗೆ ಸೇರಿಗೆ ಎರಡೂವರೆ ತೊಲೆಯಂತೆ ತಿಳಿಸುಣ್ಣ ಕೂಡಿಸಿ ಸೋಸಿ ತೆಗೆಯುವರು (ಮುಂಬಯಿ. ४-೭೧); ಚಹಾ ಕಾಸೋದು ಸೋಸೋದು ನಡೆದೇ ಇತ್ತು (ವೃಪ. ೧೧). ೨. ಜರಡಿ ಹಿಡಿ; ವಂದರಿಯಾಡು: ಊರನ್ನೆಲ್ಲ ವಂದರಿಯಲ್ಲಿ ಸೋಸಿದಂತೆ ಹುಡುಕಿಬಿಟ್ಟರು (ಪಂಚಾಮ್ಯ. ೭). ೩. ಆರಿಸಿ ತೆಗೆ; ಹೆಕ್ಕು: ಈ ಕೃತಿಯೊಳಿಹ ದೋಷಂಗಳ ಸೋಸುತ್ತ ಮಿಗೆ ತಿದ್ದಲಿಕ್ಕೆನಗೆ ಸನ್ಮತಿಯ ಕೈ ಸಾರಿಸು (ಪರಶು. ೧-೬); ಅಪ್ಪಿ ತಪ್ಪಿ ಬಿದ್ದಿರಬಹುದಾದ ಕಲ್ಲುಗಳನ್ನೂ ಚೆನ್ನಾಗಿ ಸೋಸಿ ಒಂದೂ ಬಿಡದಂತೆ ಹೊರತೆಗೆದು ಮಣ್ಣಿನಲ್ಲಿ ಹೂಳುವರು (ಬೋರದೇ. ೪೯) ೪. ಶುದ್ಧಾಶುದ್ಧಗಳನ್ನು ಬೇರ್ಪಡಿಸು; ಸ್ವಚ್ಛಗೊಳಿಸು: ಕೈಯಲ್ಲಿದ್ದ ತರಕಾರಿಯ ಬುಟ್ಟಿಯನ್ನು ಎದುರಾಗಿ ಇಟ್ಟುಕೊಂಡು, ಹರುವೆಯ ಸೊಪ್ಪನ್ನು 'ಸೋಸ' ತೊಡಗಿದಳು (ಕಾನೂರು. ೨೨೦) ೫. ಹುಡುಕು; ಅರಸು: ನಿನ್ನ ತನುವೆಂತು? ದನಿಯೆಂತು? ಮನೆಯೆಂತು? ದೆಸೆದೆಸೆಯ ಸೋಸಿ ನಾ ಸೋತೆ! (ಗೆಳೆಪ. ೪೮-೭); ಒಂದು ದಿನ ವಿಪಿನಕ್ಕೆ ಹೊರಟ ಕೇತಯ್ಯ ಚಂದದಿಂ ಬಿದಿರನುಂ ಸೋಸಿ ತರುವುದಕೆ (ಶರಲೀ. ೧೭೨). ೬. ತನಿಖೆ ಮಾಡು; ಪರೀಕ್ಷಿಸು: ಆ ಶಿರ ಆತನ ಪಿತನ ಕರದೊಳು ಸೂಸುವ ರಕ್ತವ ಬೀಳುತಿರೆ ಸೋಸಿ ನೋಡದೆ ಗುಂಡ ಬಿಸುಡಲವನ ಶಿರ ಸಾಸಿರ ಮಾಡಿದಾಟವೆಲ್ಲಿ ಕಲಿತೆಯ್ಯ (ಪುರಂದ. ೧-೯೭-೧೨); ನನ್ನ ಮೇಜಿನಲ್ಲಿ ಏನಿದೆ ಎಂದು ಸೋಸುವದೇ ಅವಳ ಕೆಲಸ (ಇಣಿನೋ. ೫೨). ೭. ವಿಚಾರ ಮಾಡು; ವಿಮರ್ಶಿಸು; ಪರಿಶೀಲಿಸು: ಮಿದುಳು ತಾನು ಕೇಳಿದ ವಿಚಾರಗಳನ್ನು ಸೋಸುತ್ತದೆ (ಮೂಕಜ್ಜಿ. ೨೫೦); ಕೂಲಂಕಷವಾಗಿ ಮೇಲಿನ ಮಾತುಗಳನ್ನು ಸೋಸಿ ನೋಡಿದರೆ, ಆ ಮಾತುಗಳ ಹಿಂದೆ ಆಗಿ ಹೋದ ಐತಿಹಾಸಿಕ ಭವ್ಯಸಂಗತಿಯು ತಲೆಯೆತ್ತಿ ಕುಣಿದಾಡುತ್ತಿರುವುದು ಕಂಡುಬರುವುದು (ಕನ್ನಜಾ. ४೩). [P ಇದು 'ಶೋಧಿಸು' ಎಂಬ ರೂಪದ ದಕಾರವು ಲೋಪವಾಗಿ ಉಂಟಾದ ಶಬ್ದರೂಪವಿರಬಹುದು.]

**ಸೋಸು$_3$** (ಕ್ರಿ). (ಉಕ) ಅನುಭವಿಸು; ಸಹಿಸು: ಅಂತೂ ತುಂಬಾ ಕಷ್ಟ ಸೋಸಿದ್ದೀರಿ (ಮರಳಿ. ೩४); ಈ ಎಂಟು ವರ್ಷ ಗಂಗವ್ವ ಸೋಸಿದ ಬವಣೆ ಅವಳಿಗೇ ಗೊತ್ತು (ಗಂಮಾಯಿ. ೧). [< ಸಹಿಸು]

**ಸೋಸು$_4$** (ನಾ). ೧. ಚಂದ; ಸೊಗಸು: ದಾಶಾರ್ಹರುಣ ಬನ್ನರೆ ಸಂಭ್ರಮದಿಂದ ಸೋಸಿನಿಂ ವ್ರಜನಾಥ ಮಾಸಲ ಪಾಯಸ (ಪ್ರಸಭಾ. ೨೨-೨); ವಯಸ್ಸಿಗೆ ಬಂದ ಮೇಲೆ ನೆರೆಯೂರಿನ ನಿಂಗನಿಗೆ ಸೋಸಿನಿಂದ ಮದುವೆ ಮಾಡಿಕೊಟ್ಟರು (ಅನ್ನ. ೧೮೧). ೨. ಉತ್ಸಾಹ; ಆಸಕ್ತಿ: ತಕ್ಕ ಕಾರಣದ ಹೊರ್ತು ಸುಮ್ಮಸುಮ್ಮನೆ ಹುಡುಗರಿಗೆ ಇನಾಮು ಕೊಡಹತ್ತಿದರೆ . . . ಅವರಿಗೆ ಸೋಸು ಹುಟ್ಟಬೇಕೆಂದು ಇನಾಮು ಕೊಡುವ ಉದ್ದೇಶವು ನಿಷ್ಫಲವಾಗಿ ಅವರಿಗೆ ಆ ಇನಾಮಿನ ಮಹತ್ವವು ತೋರದ ಹಾಗಾಗುತ್ತದೆ (ಮುಂಬಯಿ. ೫-४४). [< ಸೊಗಸು$_2$]

**ಸೋಹ** (ನಾ). [ತತ್ತ್ವಶಾ] ನಾನೇ ಪರಮಾತ್ಮನೆಂಬ ಭಾವನೆ: ಸೋಹ ದಾಸೋಹವೆಂಬೆರಡಜತು ಸಹಜ ನಿರ್ದೇಹಿಯಾಗಿಪ್ಪ . . . ಶಿವಭಾವಭರಿತಾನಂದ ಸುಖಿಪ್ಪನೀಯೆನಗೆ ಕರುಣಾಬ್ಧಿ ಸೊಡ್ಡಳಲಿಂಗವೆ (ಶಿವಗೀ. ೧೭-೬४); ಸೋಹದಿಂ ತನ್ನನುವಳಿದು ದಾಸೋಹಭಾವನ ಸತ್ಕಿ ಸೂತ್ರಗ್ರಾಹಕವನೊಂದಿಸಿ ಅಜಸ್ರೋದಾತ್ತ ಚಿತ್ತದಲಿ (ಬಸಪು. ೬-೫೭). [< ಸಂ. ಸೋಹಂ]

**ಸೋಹಂ** (ನಾ). = ಸೋಹ: ಜನ್ಮಜನ್ಮಕ್ಕೆ ಹೋಗಲೀಯದೆ ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯ (ಬಸವ. ४೭೩); ಬ್ರಹ್ಮ ತಾನೆಂದೆಂಬುದೇ ಸೋಹಮ್ಮೆನಿಪ ನಿಜಮುದ್ರೆಯದು ಶ್ರುತಿಸಮ್ಮತವು ಲೋಕಾನುಮತವು (ಅಮೃತ. ೩-೯). [ಸಂ]

**ಸೋಹಗೊಳ್ಳು** (ಕ್ರಿ). ತಾನೇ ಪರಮಾತ್ಮ ಎಂಬ ಭಾವವನ್ನು ಹೊಂದು; ಸೋಹಂಭಾವವನ್ನು ಪಡೆ: ದಾಸೋಹವೆಂಬ ಸೋಹ[ಪಾಠಾಂ. ಗೆ, ಹೆ]ಗೊಂಡು ಹೋಗಿ ಗುರುವ ಕಂಡೆ ಲಿಂಗವ ಕಂಡೆ (ಬಸವ. ೭೭೮).

[ಸೋಹ + ಕೊಳ್ಳು$_1$ (< ಕೊಳ್$_1$)]

**ಸೋಹನಿ** (ನಾ). [ಸಂಗೀತ] ಒಂದು ರಾಗದ ಹೆಸರು: ಸೋಹನಿ, ತೋಡಿ, ಭೈರವಿರಾಗಗಳು ತಲೆತಿರುಗುವುದನ್ನೂ . . . ಹೀಗೆಯೇ ಇತರ ರಾಗಗಳು ಇನ್ನೂ ಹಲವು ರೋಗಗಳನ್ನೂ ಗುಣಪಡಿಸುವುದೆಂಬ ಭಾವನೆ ಉತ್ತರಭಾರತದಲ್ಲಿದೆ (ಭಾರದ. ೫४४).

[← ಮರಾ. ಸೋಹನೀ]

**ಸೋಹಿ$_1$** (ನಾ). ನಾನೇ ಪರಮಾತ್ಮನೆಂಬ ಭಾವವುಳ್ಳವನು; ಸೋಹಂಭಾವವುಳ್ಳವನು: ಸೋಹಿ ದಾಸೋಹಿ ನೀನಾಗಿ ಭಕ್ತರಿಗೆ ಇಹಪರದ ಸುಖವನ್ನು ತೋಱದ ಗುರುವೆ (ಶೂನ್ಯಸಂ. ४೦೦-೨೦). [ಸೋಹ + -ಇ$_1$]

**ಸೋಹಿ$_2$** (ನಾ). (?): ತೋಡಿಯೊಳು ನಾಟಿಯೊಳು ಸನ್ನಾಹ ಸಾಳಂಗರಾಗದೊಳು ಸೋಹಿಸೋಹಿಯ ತೋಱ ರಾಗಿಸಿ ಸಭೆಗೆ ಸಮ್ಮೋಹನರಸವ ಸೂಸಿದರು (ಭರಚ. ೧೨-४೩). [?]

**ಸೋಹು$_1$** 'ಸೋ$_1$' ನೋ.

**ಸೋಹು$_2$** 'ಸೋಪ್ಪು$_1$' ನೋ.

**ಸೋಹುಮೃಗ** (ನಾ). ಬೇಟೆಯಲ್ಲಿ ಪ್ರಾಣಿಗಳನ್ನು ಹಿಡಿಯಲು ಬಳಸುವ ಪ್ರಾಣಿ; ದೀಹದ ಮೃಗ: 'ಅಟ್ಟುಳಿಯೆನಲು ಸೋಹುಮೃಗ'' (ಮಂಗರಾ. ೧೧೨-೫).

[ಸೋಹು$_1$ (< ಸೋ$_1$) + ಮೃಗ]

**ಸೋಹುಲಿ** (ನಾ). ತೆನೆಗಳಿಗೆರಗುವ ಪಕ್ಷಿಗಳನ್ನು ಓಡಿಸುವಾಗ ಉಂಟುಮಾಡುವ ಧ್ವನಿ: ಹೊಲಕಾಯುವ ಹೆಣ್ಣಿನ ಸೋಹುಲಿಯನ್ನು ಕೇಳಿ ಹಾರಿ ಹೋಗುವ ಹಕ್ಕಿಗಳಂತೆ (ಚೆತಂಬಾ. ४೨). [ಸೋಹು$_1$ (< ಸೋ$_1$) + ಉಲಿ$_2$]

**ಸೋಹುವೇಂಟೆ** (ನಾ). ಮೃಗಗಳನ್ನು ಅಟ್ಟಿಕೊಂಡು ಹೋಗಿ ಮಾಡುವ ಬೇಟೆ: ಅಂತು ಜಲವೇಂಟೆ ತೋಹಿನ ಬೇಂಟೆ ಘನಸೋಹುವೇಂಟೆಗಳೆನಿಪ್ಪ ಹೆಸರಂ ಹೊತ್ತು ಮಱೆವುತಿಪ್ಪೆಂಟುತೆಱದುಚಿತವೇಂಟೆಯನಾಡಿದಂ ಹರಿಶ್ಚಂದ್ರವಸುಧಾಧೀಶನು (ಹಚಕಾ. ೫-४೯); ಪಳಹದ ಬೇಂಟೆ . . . ಸಂಗಳಿಸಿದ ನೀರವೇಂಟೆ ಘನ ಸೋಹು [ಪಾಠಾಂ. ಸೋಹಿನ] ವೇಂಟೆಯೆನಿಪ್ಪ ನಾಮಮಂ ತಳೆದೆಸೆವೆಂಟುಬೇಂಟೆಗಳನಾಡಿದನರ್ಥಿಯೊಳಂದು ಕಣ್ಣಪಂ (ಶ್ರಿಪುವಿ. ೨೭-೬೨). [ಸೋಹು$_1$ (< ಸೋ$_1$) + ಬೇಂಟೆ]

**ಸೋಹೆ** 'ಸೋಪ್ಪು$_1$' ನೋ.

**ಸೋಳ** 'ಸೋಳಹ' ನೋ.

**ಸೋಳಹ, ಸೋಳ** (ನಾ). ಒಂದು ಸಂಖ್ಯೆ; ಹದಿನಾರು: ಘನಸೋಳಹಖಂಡದ ಹಕ್ಕರಿಕ್ಕೆ ಝುಲ್ಲರಿ ತುಡಿಸಿರ್ದ ಪಟ್ಟ ಗುಣವಂ ಬೆರಸೊಪ್ಪುವ ಗಂಧಸಿಂಧುರೋತ್ಕರಮ ನಡರ್ದು ಜೋದರತಿವೇಗನಿಸಾಜಿಗೆ ಬಂದುದು (ಶ್ರಿಪುವಿ. ೨४-೨೯೩); ಕಳೆದ ಪಲ್ಲಳ ಕವಡೆಯ ಗುಪ್ಪೆಯ ಮಾಡಿ ಬಳಿಕ ಸೋಳಹದೊಂಪೆಯನು ಅಲಸದಾಡುವ ಜೂಜುಂಗಾಟ ಮರುಳ್ಗಳ ಬಳಗವಲ್ಲಲ್ಲಿಯೊಪ್ಪಿದುದು (ನೇಮಿಸಂ. ೮-೯३). **ಸೋಳ** : ಮಂಗಳಂ ಜಯಮಂಗಳಂ . . . ಸೋಳಸಾಸಿರ ಸುದತಿಯರೆಲ್ಲರ ಆಳಿದ ವಸುದೇವಾತ್ಮಜಗೆ (ಪುರಂದ. ೧-೨೩೨-೨); ಸೋಳಸಾಸಿರಗೋಪಿಸಹಿತ ಜಲದಲಾಡಿ ಪೋದನೆ (ವಾದಿಕ. ೭೧-೩).

[← ಹಿಂ. ಸೋಲಹ್; ಮರಾ. ಸೋಳಾ./ಸಂ. ಷೋಡಶನ್]

**ಸೋಳೆ** 'ತೊಳ್ಳೆ$_2$' ನೋ.

**ಸೌಂತೆ** 'ಸವುಂತೆ' ನೋ.

**ಸೌಂದರ** (ಗು). ೧. ಸುಂದರವಾದ; ಚೆಲುವಾದ: 'ಸೌಂದರಗ್ರೀವ' ಪರಾ. (ನಾ). ೨. ಸೊಬಗು; ಚೆಲುವು: ಪುಣ್ಯಾಂಗನಾನೀಕಸೌಂದರವಂ ಕಂಡೆಡೆಯಲ್ಲಿ . . . ಶುಚಿ (ಇಆ. XII, ೯೭-೨೧; 1187); ನವ್ಯಸೌಂದರವರಮೂರ್ತಿ ಶರ್ವನ ಸುಕೀರ್ತಿ ಮಹೇಶ್ವರನರ್ತಿ ಬಂದಳೊಪ್ಪಿರೆ ಗಿರಿಜಾತೆ (ಗಿರಿಕ. ೪-೪೩); ಜಳಧಿ ಜಂಬೂದ್ವೀಪಮಂ ಸುತ್ತಿ ಸೌಂದರಮಾಗಿರ್ಪವೊಲ್ (ಪುಷ್ಪಪು. ೨-೭೨). ೩. ಸುಂದರನಾದವನು; ಚೆಲುವ: ಗಗನಚರಸೌಂದರೀಮನೋನಯನಸೌಂದರನಾಗಿ ವಿದ್ಯಾಧರಶ್ರೀಯಂ ಅನುಭವಿಸಿ (ಆದಿಪು. ೧-೮೧ ವ). ೪. ನವರತ್ನಗಳಲ್ಲಿ ಒಂದು; ವೈಡೂರ್ಯ: "ಸೌಂದರವಾಳವಾಯಜಂ ವೈಡೂರ್ಯವಕ್ಕು" (ಮಂಗರಾ. ೩೧-೬). ೫. [ಛಂದ] ಒಂದು ವೃತ್ತದ ಹೆಸರು: ಭಭರಸಲಗಂ ವಿಶ್ರಮಣಂ ಅಗೇಂದ್ರದೊಳ್ ಗುಣಸೌಂದರಂ (ಛಂದೋಂಬು. ೨-೧೫೦ ಅಡಿಟಿ); ನಾಲ್ಕನೆಯ ಪ್ರತಿಷ್ಠೆಯೆಂಬ ಛಂದಸ್ಸಿನ ಪ್ರತಿಪಾದದಲ್ಲಿಯೂ ಭಗಣ ಮತ್ತು ಒಂದು ಗುರುವುಳ್ಳ ಪದ್ಯವು ಸೌಂದರವೃತ್ತವೆನಿಸುವುದು (ಕೈಪಿಡಿ. ೭೯). [ಸಂ.]

**ಸೌಂದರಗ್ರೀವ** (ನಾ). ಚೆಲುವಾದ ಕೊರಳು: ಕಂಠಮಾಲೆಯಿಂ ಮೆಱೆವ ಸೌಂದರಗ್ರೀವದ . . . ಇಂತೊಪ್ಪುವ ರೂಪು ಸೌಂದರ್ಯದಿಂ ಶಿವಪೂಜೆಗೆ ನವಯೌವನವಾದಂತೆ ಮೆಱೆವ ಷೋಡಶಪ್ರಾಯಂ (ಬಸರ. ೨-೨೮). [ಸಂ.]

**ಸೌಂದರತೆ** (ನಾ). ಸುಂದರವಾಗಿರುವಿಕೆ; ಚೆಲುವಿಕೆ: ಮೂಱೇಖೆಯಲಿ ಸೌಂದರತೆಯನಾಂತ ಭುಜಯುಗಳವ ತೋಱು (ಮೋಹತ. ೮-೧೨). [< ಸಂ. ಸುಂದರತಾ]

**ಸೌಂದರವೆಣ್ಣು** (ನಾ). ಚೆಲುವಾದ ಹೆಣ್ಣು; ಸುಂದರಿ: ಈ ಪಾಟಿಯ ಸೌಂದರವೆಣ್ಣು ಕಮನೀಯ ರೂಪಸ್ಥ ನಿನಗಲ್ಲದುಳಿದ ಕಾಪುರುಷರ್ಗೆ ಕೈಸಾರಿದುದಿಲ್ಲ (ಮೋಹತ. ೪೧-೪೪). [ಸೌಂದರ + ಪೆಣ್ಣು (< ಪೆಣ್)]

**ಸೌಂದರಿ** (ನಾ). ೧. = ಸೌಂದರವೆಣ್ಣು: ಸ್ಮರಸುಖಮಂ ಸಲಿಸುವ ಸೌಂದರಿಯರೊಳೊಡಗೂಡಿ (ಧರ್ಮಾಮೃ. ೬-೧೫೨); ಸರಸತಾಂಬೂಲಮಂ ಸವಿದಿರುಸು ಬಾಯ್ದುಪರಿ ಸುರತದಲಸಂ ಪರಿಹರಿಸು ಪಾದಕೆಂಬ ಸೌಂದರಿಯ ನುಡಿಯಿಂದಿವಳ್ ಸ್ವಾಧೀನಪತಿಕೆಯೆಂದಱಿದು (ಚೆಬಪು. ೧೦-೩೦). ೨. ಶ್ರೀಗಂಧ; ಚಂದನ: "ಸೌಂದರಿಯೆನಲು ಚಂದನಂ" (ಮಂಗರಾ. ೩೫-೧೫). [< ಸಂ. ಸುಂದರೀ]

**ಸೌಂದರಿಯ** (ನಾ). ಚೆಲುವು; ಅಂದ; ಸೌಂದರ್ಯ: ಮದನನ ರೂಪರೇಖೆಯ ಹಳಿವುದಾ ನಳನೃಪನ ಘನಸೌಂದರಿಯು ಲೋಕದಲಿ [ಪಾಠಾಂ. ನಿಜ ಸೌಂದರ್ಯದಾಟೋಪ] (ನಳಚ. ೨-೩೬); ಬಡನಡುವಿನ ಬಟ್ಟಕುಚದ ಸೌಂದರಿಯದ ಕೊಡಗಿತಿಯರು ರಾಜಿಸಿದರು (ಕಂನವಿ. ೨೧-೮೬). [< ಸಂ. ಸೌಂದರ್ಯ]

**ಸೌಂದರ್ಯ** (ನಾ). = ಸೌಂದರಿಯ: ತನ್ನ ದೇಹಸೌಂದರ್ಯಮಂ ಮಹಾತಪದೊಳ್(ದಿಂ) ಕ್ಷಪಿಯಿಸಿದೊಡೆ ದಿವ್ಯವಿಜಯಪರಮಸೌಂದರ್ಯಮಂ ಪಡೆಯಲಕ್ಕುಂ (ಚಾವುಂಪು. ೨೨೯); ಸೌಂದರ್ಯಕಂದದೊಳ್ ಸಮಸಂದುಣ್ಮಿದ ಕುಡಿಗಳಂತಿರೆಸೆದುವು ಪೊಟೆಪಿಂದೊಂದಿ ಕುಸುಮಾವಳಿಯ . . . ಲಲಿತಾಂಗುಳಿಗಳ್ (ಕುಸುಮಾ. ೧೨-೪೬).
**ಸೌಂದರ್ಯವಿಲಾಸದ ತೊಟ್ಟಿ** = ಮೈಸೂರು ಅರಮನೆಯ ಒಂದು ಭಾಗ: ಕುಲದೇವತೆಯಾದ ಅಮಲದೇವತೆಯಂ . . . ಅರಮನೆಯ ಸೌಂದರ್ಯವಿಲಾಸದ ತೊಟ್ಟಿಯ ಹಜಾರದ ಪುಷ್ಪಮಂಟಪದಲ್ಲಿರಿಸಿ (ಮಹಾವಂ. I, ೩೮). [ಸಂ.]

**ಸೌಂದರ್ಯತನುತ್ವ** (ನಾ). ಚೆಲುವಾದ ದೇಹವನ್ನು ಹೊಂದಿರುವಿಕೆ: ಯೌವನಾನ್ವಿತಸೌಂದರ್ಯತನುತ್ವಮುಂ ಗಡ ಬಳಿಕ್ಕಂತಾದೊಡಂ ತನ್ನ ಜೀವಿತಮಿಾವಂ ಗಡ (ರಾಜಶೇ. ೧೪-೪೪). [ಸಂ.]

**ಸೌಂದರ್ಯನಿಳಯ** (ನಾ). ಚೆಲುವಿನ ಆವಾಸಸ್ಥಾನ,– ನಿಲಯ: ವಿಲಸಿತ ಪ್ರತಿಮೆಗಳಿಂದಾಗ ಸೌಂದರ್ಯನಿಳಯ ರಾಜಿಸಿದುದರ್ತಿಯಲಿ (ಕಂನವಿ. ೭-೪೦). [ಸಂ. ಸೌಂದರ್ಯನಿಲಯ]

**ಸೌಂದರ್ಯಪ್ರಜ್ಞೆ** (ನಾ). ಚೆಲುವಿನ ಬಗೆಗಿನ ಸೂಕ್ಷ್ಮಬುದ್ಧಿ: ನಮ್ಮ ಕನ್ನಡ ಕವಿಗಳ ಸೌಂದರ್ಯಪ್ರಜ್ಞೆ . . . ಇಡೀ ಭಾರತೀಯ ಸೌಂದರ್ಯವಿಚಾರಗಳ ಕಡೆಗೆ ಎಳೆದುಕೊಂಡು ಹೋಯಿತು (ಸೌಂದಸ. i, ಮೊದಲ ಮಾತು). [ಸಂ. ಸೌಂದರ್ಯಪ್ರಜ್ಞಾ]

**ಸೌಂದರ್ಯಪ್ರಸಾಧನ** (ನಾ). ಚೆಲುವನ್ನು ಹೆಚ್ಚಿಸಲು ಬಳಸುವ ಅಲಂಕಾರ ಸಾಮಗ್ರಿ: ಮುಂದುಗಡೆ ಒಂದು ಟೇಬಲು, ದೊಡ್ಡ ಕನ್ನಡಿ, ಹತ್ತಿರವೇ ಸೌಂದರ್ಯಪ್ರಸಾಧನಕ್ಕಾಗಿ ಸುಗಂಧದ್ರವ್ಯಗಳು (ಜಯಂತ. ೩೫೨). [ಸಂ.]

**ಸೌಂದರ್ಯಪ್ರಿಯತೆ** (ನಾ). ಚೆಲುವಿನಲ್ಲಿ ಆಸಕ್ತಿ; ಸೌಂದರ್ಯಾಭಿರುಚಿ: ವೇದಋಷಿಗಳಿಗೆ ಸೌಂದರ್ಯಪ್ರಿಯತೆ ಇರಲಿಲ್ಲವೆನ್ನುವುದು . . . ಸತ್ಯದೂರವಾದ ಸಂಗತಿ (ಸೌಂದಸ. ೧೧೯). [ಸಂ. ಸೌಂದರ್ಯಪ್ರಿಯತಾ]

**ಸೌಂದರ್ಯಮಿಾಮಾಂಸೆ** (ನಾ). ಸೌಂದರ್ಯತತ್ತ್ವದ ವಿಷಯದಲ್ಲಿ ಮಾಡುವ ವಿಚಾರ,– ಜಿಜ್ಞಾಸೆ: ಸೌಂದರ್ಯದ ಸ್ವರೂಪವನ್ನು ವಿಚಾರ ಮಾಡುವ ಸೌಂದರ್ಯ ಮಿಾಮಾಂಸೆ (ಭಾರಮೀ. ೮). [ಸಂ. ಸೌಂದರ್ಯಮಿಾಮಾಂಸಾ]

**ಸೌಂದರ್ಯಯೋನಿ** (ನಾ). ಚೆಲುವಿನ ಜನ್ಮಸ್ಥಳ; ಸೌಂದರ್ಯದ ಉತ್ಪತ್ತಿಸ್ಥಾನ: ಸಕಳಸೌಂದರ್ಯಯೋನಿಯುಂ ರಾಜಧಾನಿಯುಮೆನಿಸಿ . . . ಪುರಮೆಸೆದಿರ್ಪುದು (ಪುಷ್ಪಪು. ೨-೩೧ ವ). [ಸಂ.]

**ಸೌಂದರ್ಯವೃತ್ತಿ** (ನಾ). ಚೆಲುವಿನ ಸ್ವಭಾವ,– ಧರ್ಮ: ಇಂತನೇಕ ಜನಮನೋಹಾರಿ ಸೌಂದರ್ಯವೃತ್ತಿಗವಕಾಶಮಾದ ವಿವಿಧಪ್ರದೇಶದಿಂದೊಳಗೆ (ಪುಷ್ಪಪು. ೨-೬೧ ವ). [ಸಂ.]

**ಸೌಂದರ್ಯಶಾಲಿ** (ನಾ). ಸೊಬಗಿನಿಂದ ಕೂಡಿದವನು; ಚೆಲುವ: ನಾವು ನೋಡಿದ ಹುಡುಗ ತುಂಬಾ ಸೌಂದರ್ಯಶಾಲಿಯಾಗಿದ್ದಾನೆ (ರೂಢಿ) [ಸಂ. ಸೌಂದರ್ಯಶಾಲಿನ್]

**ಸೌಂದರ್ಯಶಾಲಿನಿ** (ನಾ). ಚೆಲುವಿನಿಂದ ಶೋಭಿಸುವವಳು: ತರಿಸಿದಂ ಬೇಕಾದ ವಸ್ತುಗಳನು ಸರಸಗುಣ ಸೌಂದರ್ಯಶಾಲಿನಿಗೆ ಮಾಲಿನಿಗೆ (ಜೈಮಿಭಾ. ೨೭-೨೨); ಜಾರ್ಜಿಯಾ ದೇಶದ ಹೆಂಗಸರು ಬಹು ಸೌಂದರ್ಯಶಾಲಿನಿಯರು (ಭೂಗೋಳ. ೧೧೦). [ಸಂ. ಸೌಂದರ್ಯಶಾಲಿನೀ]

**ಸೌಂದರ್ಯಶಾಸ್ತ್ರ** (ನಾ). ರಸಾಭಿಜ್ಞತೆಯನ್ನು ಕುರಿತು ತಿಳಿಸುವ ಶಾಸ್ತ್ರ; ಸೌಂದರ್ಯತತ್ತ್ವವನ್ನು ಕುರಿತು ವಿವರಿಸುವ ಜ್ಞಾನ: ಸೌಂದರ್ಯಶಾಸ್ತ್ರಕ್ಕೆ ಅರಿಸ್ಟಾಟಲನು ಇತ್ತಿರುವ ಕಾಣಿಕೆಗಳಲ್ಲೆಲ್ಲಾ ಅತ್ಯಮೂಲ್ಯವಾದುದು ಅವನು ಕಾವ್ಯಾನುಕರಣವನ್ನು ವಿವರಿಸಿರುವ ವಿಧಾನ (ಅಂಕಾ. ೧೫೩). [ಸಂ.]

**ಸೌಂದರ್ಯಸಂವೇದನೆ** (ನಾ). ಚೆಲುವಿನ ಅನುಭವ: ಈ ಕಾರಣದಿಂದ ಸೌಂದರ್ಯಸಂವೇದನೆ . . . ಸದಾ ಸುಖಾನುಭವರೂಪವಾದುದು (ಸೌಂದಸ. ೬). [ಸಂ. ಸೌಂದರ್ಯಸಂವೇದನಾ]

**ಸೌಂದರ್ಯಸಾರ** (ನಾ). ಚೆಲುವಾದ ವಸ್ತುಗಳ ಉತ್ಕೃಷ್ಟಅಂಶ: ಪ್ರಾಣಂಬೊಯ್ದನೊ ಚಿತ್ರಿಸುತ್ತುಮವಳಂ ಸೌಂದರ್ಯಸಾರಂಗಳಿಂ (ಶಾಕುಂತ. ೨೫-೪೪). [ಸಂ.]

**ಸೌಂದರ್ಯಾನುಭವ** (ನಾ). = ಸೌಂದರ್ಯಸಂವೇದನೆ: ತಾದಾತ್ಮ್ಯವಿಲ್ಲದೆ ಸೌಂದರ್ಯಾನುಭವವು ಜನಿಸಲಾರದು (ನವ್ಯಕಾ. ೬೯). [ಸಂ.]

**ಸೌಂದರ್ಯಾಭಿರುಚಿ** (ನಾ). ಚೆಲುವಿನಲ್ಲಿ ಇರುವ ವಿಶೇಷಾಸಕ್ತಿ: ತನ್ನ ಸೌಂದರ್ಯಾಭಿರುಚಿ ವಿಕಾಸಗೊಂಡಂತೆಲ್ಲ ಆತ್ಮಪ್ರತ್ಯಯ ಕುಂದುತ್ತಿದೆಯೆಂದು ಅವನು ಭಾವಿಸಿದ್ದನು (ಪುನರು. ೨೦). [ಸಂ.]

**ಸೌಂದರ್ಯೋಪಾಸಕ** (ನಾ). ಚೆಲುವಿನ ಆರಾಧಕ; ಸೊಬಗನ್ನು ಕಂಡು ಮೆಚ್ಚಿ ಪೂಜಿಸುವವನು: ನಮ್ಮ ಹಿಂದಿನ ಕವಿಗಳು ಸೌಂದರ್ಯೋಪಾಸಕರಾಗಿದ್ದರು (ರೂಢಿ). [ಸಂ.]

**ಸೌಂದರ್ಯೋಪಾಸನೆ** (ನಾ). ಚೆಲುವನ್ನು ಆರಾಧಿಸುವುದು: ಅಜಂತ, ಎಲ್ಲೋರಗುಹಾಲಯಗಳು . . . ದಕ್ಷಿಣಭಾರತದ ಸೌಂದರ್ಯೋಪಾಸನೆ, ದೈವಭಕ್ತಿ, ಶಿಲ್ಪಕಲಾನೈಪುಣ್ಯಗಳ ಭವ್ಯಪ್ರತೀಕಗಳಾಗಿವೆ (ಭಾರದ. ೪೦೪). [ಸಂ. ಸೌಂದರ್ಯೋಪಾಸನಾ]

**ಸೌಕರ್ಯ** (ನಾ). ೧. ಸೂಕರದ ಸ್ವಭಾವ. ೨. ವಿಷ್ಣುವಿನ ದಶಾವತಾರಗಳಲ್ಲಿ ಒಂದು; ವರಾಹಾವತಾರ: ಸುಚರಿತ ಕೂರ್ಮೋದಯಂ ಸಾರಸೌಕರ್ಯವಿಳಾಸಂ . . . ಪ್ರಾಭವ ಪ್ರೌಢತೇಜಂ (ಎಕ. VIII, ಸೊರಬ. ೧೪೦-೫ ; 1198). ೩. ಅನುಕೂಲತೆ;

ಸೌಲಭ್ಯ: ಜಗತ್ತಿನ ಜನರಿಗೆಲ್ಲ ತಾವು ಕುಳಿತಿರುವ ಕಡೆ ಬೇಕಾದ ಸೌಕರ್ಯ ದೊರೆಯುವಂತೆ (ಹಣಪ್ರ. ೯) ; ಬೇಸಾಯಗಾರರಾದ ನನ್ನೂರಿನವರಿಗೆ ಹೆಚ್ಚು ಸೌಕರ್ಯ ಒದಗಿಸಬೇಕು ನಿಜ (ನನ್ನೂರು. ೩೧೭). [ಸಂ.]

**ಸೌಕುಮಾರ್ಯ** (ನಾ). ೧. ಸುಕುಮಾರತೆ; ಮೃದುತ್ವ; ಕೋಮಲತೆ: 'ಸೌಕುಮಾರ್ಯಂಬೆಱು' ಪರಾ. ೨. [ಕಾವ್ಯಮೀ] ಕಾವ್ಯದ ಹತ್ತು ಗುಣಗಳಲ್ಲಿ ಒಂದು; ಮೃದುವರ್ಣಗಳಿಂದ ಕೂಡಿರುವಿಕೆ ಮತ್ತು ಅಹಿತವಾದ ವಿಷಯವನ್ನು ನಯವಾಗಿ ತಿಳಿಸುವುದು: ಮೃದುವಾದ ವರ್ಣ ರಚನೆಯೂ ಅಹಿತವಾದ ವಿಷಯವನ್ನು ನಯವಾಗಿ ಹೇಳುವುದೂ ಸೌಕುಮಾರ್ಯ ಗುಣವೆನಿಸಿಕೊಳ್ಳುತ್ತದೆ (ಭಾರಮೀ. ೪೨). [ಸಂ.]

**ಸೌಕುಮಾರ್ಯಂಬೆಱು** (ಕ್ರಿ). ಸುಕುಮಾರತೆಯನ್ನು ಪಡೆ; ಮೃದುತ್ವವನ್ನು ಹೊಂದು: ಅಲ್ಲಿ ಸೌಕುಮಾರ್ಯಂಬೆತ್ತೊಪ್ಪುವ ನಿರುಪಮ ನಿಜಶಿವಲಿಂಗಕ್ಕೆ ಕರತಳಾಸ್ತರಣಂ ಬೆಟ್ಟಿತಕ್ಕುಮೆಂದು ಬಿಟ್ಟು (ವೃಷವಿ. ೨೩-೧೪ ವ). [ಸೌಕುಮಾರ್ಯ + ಪೆಱು$_1$]

**ಸೌಖ್ಯ** (ನಾ). ೧. ನೆಮ್ಮದಿ ; ಸುಖ; ನಿಶ್ಚಿಂತೆ. ೨. ಸಂತೋಷ; ಹರ್ಷ: ನಾನಾವಿಧ ಸೌಖ್ಯಭಾಜನನುಪಾರ್ಜಿತ ಖೇಚರರಾಜ ಹೃದ್ಯವಿದ್ಯಾವಿಭವಂ (ಆದಿಪು. ೧-೬೩). [ಸಂ.]

**ಸೌಖ್ಯಕಾರಕ** (ನಾ). ಸುಖವನ್ನುಂಟುಮಾಡುವವನು: ಮನಸಿಜನೆ ತಾಪಕಾರಣನೆನಿಸಿದನೆನಗವನೆ ಸೌಖ್ಯಕಾರಕನಾದಂ (ಶಾಕುಂತ. ೩೭-೬೩). [ಸಂ.]

**ಸೌಖ್ಯಪ್ರಣವ** (ನಾ). ಪಂಚಪ್ರಣವಮಂತ್ರಗಳಲ್ಲಿ ಒಂದು: ಸಾಕಲ್ಯಪ್ರಣವ ಶಾಂಭವಪ್ರಣವ ಸೌಖ್ಯಪ್ರಣವ ಸಾವಶ್ಯಪ್ರಣವ ಸಾಯುಜ್ಯಪ್ರಣವವೆಂಬ ಪಂಚಪ್ರಣವಮಂತ್ರಂಗಳಂ (ವಿವೇಕ. ೮೧). [ಸಂ.]

**ಸೌಖ್ಯರತ** (ನಾ). ಸುಖಾಸಕ್ತನಾದವನು: ನರಯುಗ್ಮೋದಯದೊಳ್ ಬುಧಂ ನೆಲಸೆ ವಾಚಾಳಂ ಕಲಾವೇದಿ ಸೌಖ್ಯರತಂ (ಜಾತತಿ. ೧೭-೨೩). [ಸಂ.]

**ಸೌಖ್ಯಾನುರಕ್ತ** (ನಾ). = ಸೌಖ್ಯರತ: ದಿವಿಜೇಜ್ಯಂ ನಿಲೆ . . . ಮೂಱಱೊಳ್ . . . ಸೌಖ್ಯಾನುರಕ್ತಂ (ಜಾತತಿ. ೧೮-೧೧). [ಸಂ.]

**ಸೌಖ್ಯಾವಹ** (ನಾ). ಸುಖವನ್ನುಂಟು ಮಾಡುವಂಥದ್ದು: ಸೌಖ್ಯಾವಹಮಾಕೆಗಕ್ಕೆಯನುಕೂಲಸಮೀರಣಮಾಗಿ ಮೇಣ್ ಪಥಂ (ಶಾಕುಂತ. ೫೩-೮೯). [ಸಂ.]

**ಸೌಗಂಧ** (ನಾ). ಪರಿಮಳ; ಸುವಾಸನೆ: ಸೌಗಂಧಮಂ ಕೂಡೆ ಪಸರಿಸುವ (ಎಕ. VII. ಶಿವಮೊ. ४-೩೭; 1122); ಗಂಧವಾಹಂಗೆ ಸೌಗಂಧವ . . . ಅಡರಿಸುಗುಂ (ಜಗವಿ. ೪-೬೫); ಉಳ್ಳಿಯೆಲ ಸೌಗಂಧವಪ್ಪುದೆ ಮುಳ್ಳು ಕೈದುವೆ (ಕಾಶಿರಾ. ೨೨-೪೧). [ಸಂ.]

**ಸೌಗಂಧಿ** (ನಾ). ೧. ಮನೋಹರವಾದ ವಾಸನೆಯುಳ್ಳದು. ೨. ಶ್ರೀಗಂಧ; ಚಂದನ. [ಸಂ. ಸೌಗಂಧೀ]

**ಸೌಗಂಧಿಕ** (ನಾ). ೧. ಪರಿಮಳದಿಂದ ಕೂಡಿದುದು ; ಸುವಾಸನೆಯುಳ್ಳದು: ಬಂಧುರತರ ಜಿನಸವನಸುಗಂಧೋದಕದಿಂದೆ ನಾಂದು ತದ್ಗುಣದೊಳ್ ಸಂಬಂಧಿಸಿ ಪೆಸರ್ವಡೆದುವು ಸೌಗಂಧಿಕವೆಂದು . . . ಕಿಸುಗಲ್ಗಳ್ (ಚಂದ್ರಪು. ೧೨-೯೯). ೨. ಸುಗಂಧದ್ರವ್ಯಗಳನ್ನು ಮಾರುವವನು. ೩. ಒಂದು ಬಗೆಯ ಹೂವು; ಚೆನ್ನೆಯ್ದಿಲೆ: "ಸೌಗಂಧಿಕಾ, ಕಲ್ಹಾರಂ-ಈ ೨ ಚೆನ್ನೆಯ್ದಿಲ್'' (ಹಲಾಯು. ೧೧೨-೫೯). ೪. ಒಂದು ಬಗೆಯ ಸುವಾಸನೆಯ ಹುಲ್ಲು. ೫. ಕಸ್ತೂರಿಮೃಗ: "ಸೌಗಂಧಿಕಂ ಕತ್ತುರಿಮಿಗಂ'' (ಮಂಗರಾ. ೪೮-೮). ೬. ಒಂದು ಬಗೆಯ ಖನಿಜ; ಗಂಧಕ. ೭. ಒಂದು ರತ್ನದ ಹೆಸರು; ಪದ್ಮರಾಗ: ಸೌಗಂಧಿಕವೆಂಬ ರತ್ನವು ವೈಶ್ಯ ಜಾತಿಯು (ಸೌಗಂಧಿ. ೩೭೭-೩೩). [ಸಂ.]

**ಸೌಗಂಧಿಕಾಕುಸುಮ** (ನಾ). ಒಂದು ಬಗೆಯ ಹೂವು: ಆ ಭೀಮ ತಂದ ಸೌಗಂಧಿಕಾಕುಸುಮ ಇದಕೆ ಅಸಮ ! (ಅನಿಕೇ. ೨೩-೮). [ಸಂ.]

**ಸೌಗಂಧಿಸು** (ಕ್ರಿ). ಒಳ್ಳೆಯ ಸುವಾಸನೆಯನ್ನು ಸೂಸು: ರಸಯುತವಾಗೆ ಸೌಗಂಧಿಸುವ ಮಾಂಸವನಟ್ಟು (ಬಸಪು. ೫೭-೩೭). [ಸೌಗಂಧ + - ಇಸು$_3$]

**ಸೌಗಂಧ್ಯ** (ನಾ). ಸುಗಂಧದಿಂದ ಕೂಡಿರುವಿಕೆ; ಪರಿಮಳಸಹಿತವಾದುದು: ಜಳದಿಂದಂ ಬಳಮಂ ಸುಗಂಧರಸದಿಂ ಸೌಗಂಧ್ಯಮಂ ಪುಷ್ಪಸಂಕುಳದಿಂ ಪೂಜ್ಯತೆಯಂ . . . ಮಾಡುಗುಂ (ಶಾಂತಿಪು. ೧೦-೫೫). [ಸಂ.]

**ಸೌಗತ** (ಗು). ೧. ಬುದ್ಧನಿಗೆ ಸಂಬಂಧಿಸಿದ; ಬುದ್ಧನ ಅಭಿಪ್ರಾಯಕ್ಕೆ ಅನುಸಾರವಾದ: 'ಸೌಗತಸಿದ್ಧಾಂತ' ಪರಾ. (ನಾ). ೨. ಬುದ್ಧನ ಅನುಯಾಯಿ; ಬೌದ್ಧಧರ್ಮವನ್ನವಲಂಬಿಸಿದವನು: ವೈಶೇಷಿಕರೂ ಸೌಗತರೂ (ಬೌದ್ಧರೂ) ಶಬ್ದವು ಅನುಮಾನದಲ್ಲಿ ಅಂತರ್ಭೂತವಾಗುವುದು ಎಂದು ಹೇಳುವರು (ಭಾತತ್ತ್ವ. ೩೯೫). [ಸಂ.]

**ಸೌಗತಸಿದ್ಧಾಂತ** (ನಾ). ಬೌದ್ಧಮತದ ಸಿದ್ಧಾಂತ: ವೈದಿಕರು ಪ್ರತಿಕಕ್ಷಿಯರ ಅದ್ಭುತಗಳನ್ನು ಖಂಡಿಸಿ ಸಿದ್ಧಾಂತವನ್ನು ನಿರಾಕರಿಸುತ್ತಾರೆ. ಪ್ರಾಯಶಃ ಈ ವಿಚಾರವು ಸೌಗತಸಿದ್ಧಾಂತದಲ್ಲಿ ಅಧಿಕವಾಗಿ ಬರುವುದು (ಹಿಂದಸಾ. ೭). [ಸಂ.]

**ಸೌಚ**, ಸವುಚ (ನಾ). ಶುಚಿತ್ವ; ಸುಶೀಲಗುಣ: ಪರಬಳವೆಯ್ದಿ ಕಯ್ದುವೆಡೆಯಾಡುವ ತಾಣದೊಳಲ್ಲಿ ಬೀರಮಂ ಪರವಧು ವಟ್ಟೆಳಾತರೆಡೆಯಾಡುವ ತಾಣದೊಳಲ್ಲಿ ಸೌಚಮಂ ಪರಿಕಿಸಿ (ಎಕ. II, ೧೩೪-೪೨; ಸು. 982). **ಸವುಚ** : ತೋರು ಅವರೆಡೆಯೊಳಗೆ ಪರಿಗ್ರಹದಾರಿ ಏನಾನುಂಟೆ ಸವುಚಕ್ಕಾರಣದ ಗುಂಡಿಗೆಯು ಚೀಮೆಗಳಾವಿರಕ್ಷಣೆಗ (ಬಿಜ್ಜಪು. ೮೩-೩೪). [< ಸಂ. ಶೌಚ]

**ಸೌಚಾಚಾರ** (ನಾ). ೧. ಶುಚಿಯಾದ ನಡವಳಿಕೆ; ಸುಶೀಲನಡತೆ. ೨. ಶುಚಿಯಾದ ನಡವಳಿಕೆಯುಳ್ಳ ವ್ಯಕ್ತಿ: ಅನೇಕ ಗುಣಗಣಾಲಂಕೃತ ಸತ್ಯ ಸೌಚಾ [ಚಾರ] ಚಾರುಚಾರಿತ್ರ ನಯವಿನಯವಿಜ್ಞಾನವೀರಬಳಂಜಧರ್ಮ್ಮಪ್ರತಿಪಾಳಕರುಂ (ಕಇಆ. ೪೪-೬೩-೧೧; 1229). [< ಸಂ. ಶೌಚಾಚಾರ]

**ಸೌಚಿಕ** (ನಾ). ಸೂಜಿಯಿಂದ ಕೆಲಸ ಮಾಡುವವನು; ಚಿಪ್ಪಿಗ: "ತುನ್ನವಾಯಃ, ಸೌಚಿಕಃ - ಈ ೨ ಚಿಪ್ಪಿಗಂ'' (ಹಲಾಯು. ೯೭-೪೩೭); ಸೀಲಮಂ ಬಿಡದಿರ್ಪ ಪಾರ್ವರ ಜಾಲಮಾರ್ಯರ ಗೊಂದಣಂ ಸೌದ್ಧಾಲಿಕಚಯಂ ಸೌಚಿಕರ ಸಂದಣಿ ಕುಲಾಲತತಿ (ವಿವೇಭ. ೪-೬೫). [ಸಂ.]

**ಸೌಜನ್ಯ** (ನಾ). ೧. ಒಳ್ಳೆಯತನ; ವಿನಯ; ಸಜ್ಜನಿಕೆ: ಮಾತಿನಲ್ಲಿ ಮಾಧುರ್ಯವಿತ್ತು . . . ಸೌಜನ್ಯವಿತ್ತು (ಮಹಾಣ. ೧೬೫); ಯಾರೂ ಮಾನವಸಂಸ್ಕೃತಿಯ ಸೌಜನ್ಯವನ್ನು ಮೀರರು (ಕನ್ನಜಾ. ೫೧). ೨. ಉದಾರತ್ವ ; ಔದಾರ್ಯ: ಒಂದೇ ಒಂದು ಉಪಚಾರದ ಮಾತು ಕೂಡ ಆಡುವಷ್ಟು ಸೌಜನ್ಯ ಆ ತಾಯಿ ಮಗ ಇಬ್ಬರಿಗೂ ಇರಲಿಲ್ಲ (ಹೊಸಕ್ಷಿ. ೪೫); ಕರುಣೆಯಲಿ ನಯವಿನಯಗಳಲಿ ಮೇಣದಟಿನಲಿ ಸಂಸ್ಕೃತಿಯ ಸೌಜನ್ಯಭಕ್ತಿಯಲಿ . . . ಸಮನಿಲ್ಲ (ಚಿತ್ರಾಂಗ. ೭೨-೧೯೮೪).

**ಸೌಜನ್ಯಕಂದಾಂಕುರ** = ಅತ್ಯಂತ ವಿನಯಶಾಲಿ; ಒಂದು ಬಿರುದು: ಸೌಜನ್ಯಕಂದಾಂಕುರಂಗರ್ಚಿಸಿ ದೂತನಂ ವಿಸರ್ಜಿಸಿ (ಶಾಂತಿಪು. ೩-೯೩ ವ). **ಸೌಜನ್ಯತೀರ್ಥ** = ಒಂದು ಬಿರುದು: ಕೋದಣ್ಡಪಾರ್ತ್ಥಂ ಸೌಜನ್ಯತೀರ್ತ್ಥಂ ಮಣ್ಡಳಿಕಕಣ್ಠೀರವಂ (ಸೌಇಇ. XX, ४೭-೯; 1074). **ಸೌಜನ್ಯರತ್ನಾಕರ** = ಒಂದು ಬಿರುದು: ಕಲಿಕಾಲಮೇರುವಿಬುಧಂ ಸೌಜನ್ಯರತ್ನಾಕರಂ ಬಲವನ್ತಂ ಪ್ರಭು [ಶಾನ್ತಿ ಸೆ]ಟ್ಟಿ (ಸೌಇಇ. XX, ೫೫-೩೫; 1082). [ಸಂ.]

**ಸೌಜನ್ಯವಿದೂರ** (ನಾ). ವಿನಯಗುಣದಿಂದ ಬಹುದೂರನಾದವನು; ಕ್ರೂರಿ; ಅಸಂಸ್ಕೃತ: ಮದನುಗ್ರಹಾರ್ಥಮಾ ಮಾನ್ಯಮಹೇಶ್ವರಂ ಮಱೆಯೊಳಿರ್ದುದಂ ತಿಳಿದಾತನಲ್ತು ಸೌಜನ್ಯವಿದೂರನಾದೆನಕಟೆನ್ನವೊಲಾವನೊ ಗಾಂಪನುರ್ವಿಯೊಳ್ (ಶಬಶಂ. ೪-೧೨೭). [ಸಂ.]

**ಸೌಜ್ಣೆ** 'ಸನ್ನೆ' ನೋ.

**ಸೌಜ್ಞೆಗೆಯ್** 'ಸನ್ನೆಗೆಯ್' ನೋ.

**ಸೌಟಿಗೆ** 'ಸೊಂಟಿಗೆ' ನೋ.

**ಸೌಟು$_1$**, ಸವಟು$_2$, ಸವುಟು (ನಾ). ಅಡಿಗೆ ಮಾಡುವಾಗ ಕೂಡಿಸಲು, ತೋಡಲು ಹಾಗೂ ಬಡಿಸಲು ಬಳಸುವ ಒಂದು ಸಾಧನ; ಸಟ್ಟುಗ: "ಕಂಚಿಕವೆನಲ್ ಸೌ[ಪಾಠಾಂ. ಸವು]ಟೆನಿಕ್ಕುಂ'' (ಮಂಗರಾ. ೬೧-೮); ವನಿತೆ ಸೌಟನೊಳಕ್ಕಿಯ ತೊಳೆಸಿ (ಪುರಂದ. ೧-೧೧೧-೩); ಒಲೆಯೊಳೊಗ್ಗರಣೆಗೆ ಸೌಟಿಟ್ಟು ಎಣ್ಣೆಗೆ ಗಾಣಿಗನೆಡೆಗೋಡಿದಂತೆ (ಇಂಚಾಪ. ೮೯-೩೪). **ಸವಟು$_2$** : ಅದನ್ನು ಸವಟುಗಳಿಂದ ತೆಗೆದು ಚೆಲ್ಲುತ್ತಾರೆ (ಮುಂಬಯಿ. ೩-೪೫). **ಸವುಟು**: ಅರಿಯನು ಸವುಟನೋಪಾದಿಯಲ್ಲಿ

ವೇದಶಾಸ್ತ್ರವವೋದಿದ ಶ್ರಮಮಾತ್ರವೆ (ಉತ್ತಟೀ. ೪೫-೧೩); ಸವುಟು ಕೈಯಲ್ಲಿ ಇದ್ದಾಗ ಅವುಟು ಮಾಡಿದ್ದೇ ಬಂತು (ಗಾದ). [ದೇ. ‖ ತುಳು. ಸೌಂಟು, ಸೌಟು]

**ಸೌಡಂಗೀಗಿಡ** (ನಾ). ಒಂದು ಬಗೆಯ ಸಸ್ಯ: ಸೌಡಂಗೀಗಿಡ, ಕಾಡುಸುಂಡೆ (ಮೈಔಗಿ. ೭೧-೧೪೫೦). 'ಚವುಡಂಗಿ' ಪರಾ. [ಸೌಡಂಗಿ + ಗಿಡ (< ಗಿಡು)]

**ಸೌಡಿ, ಸವಡಿ₃** (ನಾ). ಗದ್ದೆ, ತೋಟಗಳಿಗೆ ನೀರು ಬಿಡಲು ನೇಮಕನಾದ ಗ್ರಾಮನೌಕರ; ನೀರುಗಂಟಿ: ರಾತ್ರಿಯ ಹೊತ್ತು ಸೌಡಿಗಳನ್ನು ವಜಾಯಿಸಿಯೋ ಸರಿಮಾಡಿಕೊಂಡೋ ನೀರನ್ನು ಬಿಟ್ಟುಕೊಂಡರು (ಕಲನ ೧೬೩). **ಸವಡಿ₃** : (ಕ). [?]

**ಸೌಡೀರ** (ಗು). ವೀರರಸಪ್ರಧಾನವಾದ; ಪೌರುಷಯುಕ್ತವಾದ: ಧವಳ ಚಮರರುಹೋಪವೀಜ್ಯಮಾನನು ಸೌಡೀರಸರಸವೀರಕಥಾಕರ್ಣ್ನನೋತ್ತೀರ್ಣ್ನ ಹರ್ಷಪುಳಕಸಂತಾನನುಂ (ಎಕ. V, ಬೇಲೂರು. ೭೧-೯೪; 1117). [< ಸಂ. ಶೌಂಡೀರ]

**ಸೌಡು** 'ಸವಡು₃' ನೋ.

**ಸೌತಿ** 'ಸವತಿ' ನೋ.

**ಸೌತೆ** 'ಸವುಂತೆ' ನೋ.

**ಸೌತೆಕಾಯಿ** 'ಸವುತೆಕಾಯಿ' ನೋ.

**ಸೌದರಿ** 'ಸೌದರೆ' ನೋ.

**ಸೌದರೆ, ಸೌದರಿ** (ನಾ). ಒಂದು ಗ್ರಾಮ ಅಥವಾ ಸಮಾಜದ ಮುಖ್ಯಸ್ಥ; ಚೌಧುರಿ(?) : ಈ ಭೀಮೇಶ್ವರದೇವರಿಗೆ ಸೆಟ್ಟಿಯ ಕೆಱೆಯ ಸೌದರೆ ಬಾದಯ ಮುದ್ದಡ ವಂಕಣ ಮುದುದಿಮಂ ಕೊಟ್ಟ ಎಱೆ ಹೊಲ (ಕಇಅ. ೩೭-೫೦-೧೧; 1042). **ಸೌದರಿ:** ಚಿನಿವರದ ಸೆಟ್ಟಿ ಸೌದರಿಯರುಂ ಬಹುಧಾನ್ಯವನು ಮಾರುವರು (ನವಮೋ. ೨೯-೫೬). 'ಚೌಧುರಿ' ಪರಾ. [?]

**ಸೌದರ್ಯ** (ನಾ). ಸೋದರಭಾವ; ಅಣ್ಣತಮ್ಮಂದಿರ ಪ್ರೀತಿ; ಭ್ರಾತೃ ವಾತ್ಸಲ್ಯ: ಎಮ್ಮಯ್ವರುಂ ಬೆಸಕೆಯ್ಯುತ್ತಿರೆ ನೀನೆ ಮೇಣರಸುಗೆಯ್ ಸೋ[ಪಾಠಾಂ. ಸಾಂ]Eಸೌತೆದರ್ಯದಿಂದೊಳ್ಪಿತೇ ವಸುಧಾಮಂಡಳಮಿಂಬುಕೆಯ್ಯುದಿದನು (ಪಂಪಭಾ. ೧೩-೮೫); ಕರ್ಣಂಗೆಯುರ್ವರೆಯಂ ಕೊಟ್ಟವನಾಳ್ವನಾಗೆ ಬಟೆಕಾವಾಳಾಗಿ ಸೌದರ್ಯ ದಾಯಿರವಂ ಪೊಲ್ಲದುಗೆಯ್ವರೆಂದು ಜಡಿದರ್ ಕುಂತೀಸುತರ್ಕೊಂತಿಯಂ (ಗದಾಯು. ೧೦-೨೦); ಅಮರಸೌದರ್ಯಮಿದು ಸಾಜಂ? (ಗಿಳಿವಿಂ. ೪೫-೨೦). [ಸಂ.]

**ಸೌದಾಗಾರ** (ನಾ). ವರ್ತಕ; ವ್ಯಾಪಾರಿ: ಬಳಿಕ ಬರಿಸಿ ಕುದುರೆಯ ಸೌದಾಗಾಱEರತೆ [ಪಾಠಾಂ. ಸಾದಗಾಱ, ಸಾದಕರ, ಸೌದೆಗಾಱ, ಸೌಧಾಗಾಜ]ನ ಬೆಲೆಯೇನೀ ವಾಜಿಗೆನಲು (ಕುರಾಸಾಂ. ೯-೧೦೬); ಅವಳ ಇಪ್ಪತ್ತನೇ ವರುಷದಲ್ಲಿ ಲಂಡನದ ಜೋಸಫನೆಂಬ ಸೌದಾಗಾರನಿಗೆ ಮದುವೆ ಮಾಡಿಕೊಟ್ಟರು (ಗರತಿ. ೧೫೮).
[← ಪಾರ. ಹಿಂ. ಮರಾ. ಸೌದಾಗರ್]

**ಸೌದಾಮನಿ** (ನಾ). ೧. ಮಿಂಚು; ವಿದ್ಯುತ್ತು: "ಶಂಪಾ . . . ವಿದ್ಯುತ್, ಸೌದಾಮನೀ . . . ಐರಾವತೀ - ಈ ೧೧ ಮಿಂಚು" (ಹಲಾಯು. ೧೧-೬೦). ೨. ಇಂದ್ರನ ಆಸ್ಥಾನದ ಒಬ್ಬ ಅಪ್ಸರೆಯ ಹೆಸರು. [ಸಂ. ಸೌದಾಮನೀ]

**ಸೌದಾಮಿನಿ** (ನಾ). ೧. ಮಿಂಚು; ವಿದ್ಯುತ್ತು: ಸೌದಾಮಿನಿಯವೊಲ್ ಭೋಂಕೆನೆ ಸುರಕಾಮಿನಿ ರಂಗದೊಳದೃಶ್ಯೆಯಪ್ಪುದುಮಾಗಳ್ (ಆದಿಪು. ೯-೪೧); ಭಗವದ್ಭಕ್ತಿ ಕಾದಂಬಿನಿ ಹೇಮದ್ಯೋತಿ ಸೌದಾಮಿನಿ . . . ಎನಿಸ (ಪುಷ್ಪಪು. ೯-೫೨); ಕಡೆಗಣ್ಣಡಿವೆಳಗಿಂ ಸೌದಾಮಿನಿಯನ್ನೇಳಿಸುತೆಸೆದಿರ್ಪಾ ಕಾಮಿನಿ (ಉದ್ಭದಃ. ೨-೫೮). ೨. ಸಿಡಿಲು: ಅಂತಲ್ಲದಂದೀ ತರು ಕಡೆವುದೆ ಸೌದಾಮಿನೀಪಾತದಿಂದಂ (ಮಲ್ಲಿಪು. ೯-೫೭).
[ಸಂ. ಸೌದಾಮಿನೀ]

**ಸೌದೆ₁, ಸವದೆ₁, ಸವಿದೆ, ಸವಿಧೆ, ಸವುದೆ** (ನಾ). ಕಟ್ಟಿಗೆ; ಉರುವಲು: ವರ್ಷಂಪ್ರತಿ ಹಾಲು ಸೌದೆಗವಾಗಿ ಸಹವಾಸಿಯ ಹಳ್ಳಿಯ ನಡುಬಯಲಲಿ . . . ಕೊಟ್ಟ ಗದ್ದೆ (ಮೈಅಂ. ೧೯೪೩, ೧೯-೨೯; 1221); ಕಾಡಿನಲ್ಲಿ ಸೌದೆಗೆ ಕಡಿಮೆಯಾಗಿರಲಿಲ್ಲ (ದೇವೀಚೌ. ೩೭); ಮಹಮ್ಮದನು ಸೌದೆಯನ್ನೊದಗಿಸುವ ಕೆಲಸವನೊಪ್ಪಿಕೊಂಡನು (ಪ್ರಮಹ. ೭೧). **ಸವದೆ₁:** ಸಾಲಗಾರನ ಮನೆಗೆ ಸವದೆ ಹೊತ್ತರೆ ಮೇಲಣ ಬಡ್ಡಿಗೆ ಸಮವಾಯಿತು (ಗಾದ). **ಸವಿದೆ :** ಆ ಪೊನ್ನೆಲ್ಲಮಂ ಕೊಟ್ಟಾ ಸವಿದೆಯ ಭಂಡಿಯಂ ಕೊಂಡು (ಜೀವಸಂ. ೧೯೭-೨೮ ವ); ದಿವಿಜಪತಿ ಮರಮಳೆಯಂ ಕಱೆವುತ್ತಿರೆ ತತ್ಪುರದೊಳ್ ನೆಱೆ ಸವಿದೆಗಳಿಲ್ಲದಂತುಟಾಯಿತ್ತಾಗಳ್ (ತ್ರಿಪುವಿ. ೧೦-೨೭). **ಸವಿಧೆ:** ಸತ್ರದಡುಗೆಯ ಸವಿಧೆಗೆ ಮೊದಲ್ಗೊಟ್ಟ ಗದ್ಯಾಣಮೆರಡು (ಸೌಇಇ. XI-i, ೯೨-೩೫; 1054). **ಸವುದೆ:** ಶಿಲೆಗಳು ಭೇದವಂ ಹೊಂದಿದ್ದರೆ ಮುತ್ತುಗದ ಸವುದೆಗಳಿಂದ . . . ಸುಟ್ಟು (ಸೌಗಂಧ. ೪೩೩-೧೭); ಮುಟ್ತಿಯ ಮುಟ್ತುಗದರಳಿಯ ಸವುದೆಗಳನಳತೆಯೊಳ್ ಕೊಯ್ದಿರ್ಪನಾರಿಂ ತಲೆವೊಱೆಗಟ್ಟಿ ತರ್ಪ ವಟುಗಳಿಂದೆಯುಂ (ರಾವಾಶ್ವ. ೪೩-೧೫); ಗಂಡನು ಕೊಡಲಿಯನ್ನು ಹೆಗಲಿಗೆ ಹಾಕಿಕೊಂಡು ಸವುದೆಯನ್ನು ತರುವುದಕ್ಕೆ ಕಾಡಿಗೆ ಹೊರಟನು (ನೀತಿಬಂ. IX, ೧೯). 'ಸಮಿತ್ತು' ಪರಾ. [< ಸಂ. ಸಮಿಧ್]

**ಸೌದೆ₂, ಸವದೆ₂** (ನಾ). ವ್ಯಾಪಾರ; ವಹಿವಾಟು: ಕೆಲವು ಪ್ರಮಾಣಕ್ಕೆ ಒಮ್ಮೆ ಸೌದೆ (Transaction)ಯು ಪೂರ್ಣವಾಯಿತೆಂದರೆ ಅದನ್ನು ಪಾಲಿಸುವ ಸಾಮರ್ಥ್ಯವು ತನ್ನ ಸಂಸ್ಥೆಗಿದೆ ಎಂಬುದನ್ನು ಪ್ರಚಾರಕನು ಬಲ್ಲವನಾಗಿರಬೇಕು (ತಕ್ಕಡಿ. ೧೦೪). **ಸವದೆ₂ :** ಮಾಲವು ವೇಳೆಯಲ್ಲಿ ಬರದೆ ಇದ್ದ ಕಾರಣ ಸವದೆಯನ್ನು ತಕ್ಕೊಳ್ಳುವವರ ಮತ್ತು ನಮ್ಮ ವಿಚಾರದಿಂದ . . . ಒಡಂಬಟ್ಟು (ಮುಂಬವ್ಯಾ. ೨೧೩).

ಸವದೆ ಮಾಡು = ವ್ಯಾಪಾರ ಮಾಡು; ವಹಿವಾಟು ನಡೆಸು: ಬರೆದ ಪ್ರಕಾರ ಸವದ ಮಾಡುವುದು ಅಥವಾ ಮಾಡದೆ ಇರುವುದು ನಮ್ಮ ಖುಶಿಯ ಮೇಲೆ ಇರುತ್ತದೆ (ಮುಂಬವ್ಯಾ. ೨೬೪). [← ಹಿಂ. ಮರಾ. ಸೌದಾ]

**ಸೌಧ** (ನಾ). ೧. ಸುಣ್ಣ ಬಳಿದ ಮನೆ; ಧವಳಾರ: "ಸುಧಾಧವಳಿತಂ, ಸೌಧಂ - ಈ ೨ ದವಳಾರಂ" (ಹಲಾಯು. ೪೯-೧೩೯). ೨. ಅರಮನೆ ಅಥವಾ ಉಪ್ಪರಿಗೆ; ಭವನ: ನಾಟಕಶಾಲೆಗಳ ವಿವಿಧ ಸೌಧಂಗಳ ಕೊಂಡಾಟವಮನೆ ಮೆಱೆದು (ಆದಿಪು. ೫-೩೭); ಸೌಧಮೂರ್ಧಂಗಳೊಳ್ ಚಕೋರಮಿಥುನದಂತೆ ಚಾರು ಚಂದ್ರಿಕಾಸೇವನೆಯಂ ಸಂಭಾವಿಸಿಯುಂ (ಚಂದ್ರಪು. ೩-೨೮ ವ); ಮಿಱುಗುವ ಸೌಧಂಗಳಿಂ ರಂಜಿಸಿ . . . ತೋರ್ಪ ಕಾಂಚೀಪುರಮುಂಟು (ರಾಮಾಶ್ವ. ೭೪-೧೮). ೩. ಬೆಳ್ಳಗಿರುವುದು; ಬಿಳಿಯದು. ೪. ಅಮೃತ. ೫. ಕೆಸರು; ಪಂಕ. ೬. ಹುಲ್ಲು; ತೃಣ. ೭. ಸತ್ಯ; ನಿಜ. "ನಿರುತಾಮೃತಂ ಪಂಕಮುಪ್ಪರಿಗೆ ಸಿತಂ ಪುಲ್ಲಿವಾಱುಂ ಸೌಧವೆಸರ್" (ನಾನಾಕಂ. ೧೨೧); "ಹರ್ಮ್ಯ ಪೀಯೂಷಮುಂ ನಿರುತಂ ಪಂಕ ತೃಣಂ ಸಿತಂಗಳಿವು ಸೌಧಾಖ್ಯ" (ನಾನಾರ. ೯೫). [ಸಂ.]

**ಸೌಧಗೃಹ** (ನಾ). ಉಪ್ಪರಿಗೆಮನೆ: ಪದ್ಮರಾಗ ಜಿನಗೇಹದ ಸೌಧಗೃಹಂಗಳಂಶು ಮಂಡಳಿ ನೆಗೆದಲ್ಲಿ ಮಂಡಳಿಸೆ (ಪುಷ್ಪಪು. ೯-೨೭). [ಸಂ.]

**ಸೌಧರ್ಮ** (ನಾ). [ಜೈನ] ಹದಿನಾರು ಸ್ವರ್ಗಗಳಲ್ಲಿ ಮೊದಲನೆಯದು: ಸೌಧರ್ಮಂ ಕಲ್ಪಮಿಾ ಶ್ರೀನಿಲಯವಿದು ವಿಮಾನೋತ್ತಮಂ . . . ತಾತ್ಪರ್ಯದಿಂದಂ ಬಗೆವುದಱಿವುದುಂ (ಶಾಂತಿಪು. ೭-೨೧); ಸೌಧರ್ಮದೊಳಮರತ್ವಶ್ರೀಧಾರಿಣಿಯಾಗಿ ಮತ್ತೆ ಬಂದೀಗಳ್ ದುರ್ಯೋಧನಸುತೆಯುಂ ಭವದವರೋಧಜನಾಗ್ರಣಿಯುಮಾದಳ್ (ಚಂದ್ರಪು. ೩-೭೮). [ಸಂ.]

**ಸೌಧರ್ಮಕಲ್ಪ** (ನಾ). = ಸೌಧರ್ಮ : ಉಗ್ರೋಗ್ರತಪಂಗೆಯ್ದನಿಬರುಂ ಸೌಧರ್ಮಕಲ್ಪಂ ಮೊದಲಾಗೊಡೆಯ ಕಲ್ಪಂಗಳೊಳ್ ಪುಟ್ಟಿದರ್ (ಪದ್ಮರಾ. ೩೦-೧೭); ಅಸುವಂ ವಿಸರ್ಜಿಸಿ ಸೌಧರ್ಮಕಲ್ಪದೊಳ್ ದೇವನಾಗಿ (ಆದಿಪು. ೨-೧೭ ವ). [ಸಂ.]

**ಸೌಧರ್ಮಿಕೆ** (ನಾ). ಒಳ್ಳೆಯತನ; ಸೌಜನ್ಯ : ಅತಿಭವ ಸೌಧರ್ಮಿಕೆಯ ಕೂರ್ಮೆಯ ಭರದಿಂದಱಿಗುವಂತೆಱಿಗಿ ಪೊಡವಡುವುದುಂ (ಶಾಂತಿಪು. ೫-೬ ವ); ನಿನ್ನಂ ಕೊಂದಂ ಗಡಮೊಳನಿನ್ನುಂ ಕೊಂದವನನೀಕ್ಷಿ ಕೊಲ್ಲದೆ ಮಾಣ್ದಾನಿನ್ನುಮೊಳೆಂ ಗಡ ಸಾಲದೆ ನಿನ್ನಯ ಕೂರ್ಮೆಗಮದನ್ನ ಸೌಧರ್ಮಿಕೆಗಂ (ಗದಾಯು. ೫-೬). [ಸೌಧರ್ಮ + - ಇಕೆ]

**ಸೌಧರ್ಮೇಂದ್ರ** (ನಾ). [ಜೈನ] ಸೌಧರ್ಮವೆಂಬ ಸ್ವರ್ಗಲೋಕದ ಅಧಿಪತಿ ; ಹದಿನಾರು ಜನ ಇಂದ್ರರಲ್ಲಿ ಒಬ್ಬ: ವಿಲಾಸಂ ಮಿಗೆ ಸೌಧರ್ಮೇಂದ್ರನಂದಾ ಶಚಿವೆರಸು ಮಹೋತ್ಸಾಹದಿಂ ಬಂದನಾಗಳ್ (ಆದಿಪು. ೭-೪೫); ಸೌಧರ್ಮೇಂದ್ರನಾ ದೇಶದಿಂ ಧನದಂ ನಿರ್ಮಿಸಿದಂ ಸಭಾಸದನಮಂ (ಮಲ್ಲಿಪು. ೧೪-೧೧೩). [ಸಂ.]

**ಸೌನಂದಕ** (ನಾ). [ಜೈನ] ಚಕ್ರವರ್ತಿಗೆ ಇರಬೇಕಾದ ಹದಿನಾಲ್ಕು ರತ್ನಗಳಲ್ಲಿ ಒಂದು; ಏಳು ಅಜೀವರತ್ನಗಳಲ್ಲಿ ಒಂದು; ಒಂದು ಖಡ್ಗದ ಹೆಸರು:

ಸೌ[ಪಾಠಾಂ. ಸಾ]ನಂದಕಮೆಂಬ ಖಡ್ಗರತ್ನಮುಂ (ಆದಿಪು. ೧೧-೩ ವ) ; ಅತಿ ನಿಶಿತಂ ಬಲಗೆಯ್ಯೊಳ್ ಶತಹ್ರದಾಕೃತಿಯನಾಂತ ಸೌನಂದಕದತ್ಯತಿಶಯರುಚಿ ತದ್ದೂತದ್ವಿತಯದ ಕಣ್ಗೊಳ್ ಸಿಮಿರ್ದುದು (ಮಹಾನೇ. ೧೧-೧೨೨). [ಸಂ.]

**ಸೌನಿಕ** (ನಾ). ಕಟುಕ ; ಕಸಾಯಿಗಾರ : "ವೈತಂಸಿಕಃ, ಸೌನಿಕಃ, ಕೌಟಿಕಃ, ಮಾಂಸವಿಕ್ರಯಾ – ಈ ೪ ಸೊನೆಗಾಱಂ" (ಹಲಾಯು. ೯೭-೪೪೧); ಮಾನವರೊ ದಾನವರೊ ಭೂವ್ಯಾಘ್ರನೆಯನು ತಣಿಸ ಶೋಣಿತವನೆರೆಯುವರು ಬಾಷ್ಪ ಸಲುವುದಿರೆ . . . ಯೀ ಧರಣಿ ಸೌನಿಕನ ಕಟ್ಟೆಯೇಂ? (ಮಂಕುಕ. ೧೨). [ಸಂ.]

**ಸೌಪರ್ಣ** (ನಾ). ಗರುಡ; ಸುಪರ್ಣ: ವೈರಿಫಣೀಂದ್ರಸೌಪರ್ಣಂ (ಗದಾಯು. ೭-೭ ವ); ಸೌಪರ್ಣನಹಿಕುಲಕೆ ಮುನಿದೆಱಗಿ ಕೊಲುವಂತೆ (ಹಚಕಾ. ೬-೧೩); ಅಸುರೇಂದ್ರ ಕಟ್ಟಿದ ನಾಗಪಾಶವನು ನುಂಗಿದನು ಸೌಪರ್ಣ (ಕಾಶಿರಾ. ೧೯-೭೫). [ಸಂ.]

**ಸೌಪ್ತಿಕ** (ಗು). ೧. ನಿದ್ರೆಗೆ ಸಂಬಂಧಿಸಿದ. (ನಾ). ೨. ನಿದ್ರಿಸುತ್ತಿರುವವರ ಮೇಲೆ ಬಿದ್ದು ನಡೆಸುವ ಕಾಳಗ; ಕಳ್ಳೇರುಕದನ: "ಸೌಪ್ತಿಕಮೆಂಬುದು ಕಪಿಯೇಱು" (ಹಲಾಯು. ೭೪-೨೯೮). [ಸಂ.]

**ಸೌಭದ್ರೇಯ** (ನಾ). ಸುಭದ್ರೆಯ ಮಗ; ಅಭಿಮನ್ಯು: ತನಿಸೊಕ್ಕಿ ದೆಸೆಪಟ ದುಳಿದು ಸೌಭದ್ರೇಯಭೃಂಗನ ಬಿಲುದನಿಯ ಭರವಂಜಿಸಿತು ಜಯಯುವತಿ ವಿರಹಿಗಳ (ಕುವ್ಯಾದ್ರೋ. ೬-೩೧). [ಸಂ.]

**ಸೌಭಾಗ್ಯ** (ನಾ). ೧. ಶುಭ; ಮಂಗಳಕರವಾದುದು: ಸೌಭಾಗ್ಯದಿಂದಮಳಿಯಂ ಗುಣದಿಂದಳಿಯಂ ವಿತರಣಗುಣದಿಂದಳಿಯನೆನಿಪ್ಪಂಗೆ ಕುಡುಗೆ ಕೃತಿಕನ್ನಿಕೆಯಂ (ಪುಷ್ಪಪು. ೧-೭೦); ಸೌಭಾಗ್ಯಕೀರ್ತಿವಿಜ್ಞಾನಂಗಳ್ . . . ನಾಟ್ಯಮಾರ್ಗದೊಳೊಂದಿದವಂ ಗಲ್ಲದಜ್ಞನೊಳ್ ಸಮನಿಪವೇ (ಲಾಸ್ಯರಂ. ೧-೨೫). ೨. ಸುದೈವ; ಅದೃಷ್ಟ: ವಿನಯಂ ರೂಪು ವಿವೇಕಮನ್ವಯದ ಪೆಂಪೊಳ್ಪಾರ್ಪು ಸೌಭಾಗ್ಯಮೆಂಬಿನಿತುಂ ರಾಣಿಯರ್ಗೆಲ್ಲಮುಳ್ಳೊಡಂ (ಪುಷ್ಪಪು. ೧೩-೯); ತಮ್ಮಿರ್ವರ ಸಮಾನುರಾಗ ಸೌಭಾಗ್ಯವಿಭ್ರಮಮಂ ಸಂಭ್ರಮಂ ಮಿಗೆ ಸಮದ ಸರಸೋಕ್ತಿಗಳಿಂ ಬಣ್ಣಿಸುತ್ತಿರ್ಪಿನಂ (ರಾಜಶೇ. ೧೧-೧೩೧ ವ): ನಿನ್ನಯ ಸರಂಗೇಳ್ದ ಸೌಭಾಗ್ಯವೊಂದದುವೆ ಸಾಲ್ಗೆನಗೆ (ಶ್ರೀರಾಮಾ. ೮೮-೨೮೧). ೩. ಮುತ್ತೈದೆತನ; ಸೌಮಂಗಲ್ಯ: ರತಿಯಿಂ ಸೌಂದರ್ಯ ಸೌಭಾಗ್ಯಮಂ . . . ಈಟಿಕೊಂಡು (ಪುಷ್ಪಪು. ೩-೨೫); ಅವಳಿಗೆ ಅಖಂಡಸೌಭಾಗ್ಯದ ವಾತ್ಸಲ್ಯಹಸ್ತ ನೇವರಿಸಿ ಆಶೀರ್ವದಿಸುತ್ತಿದ್ದರು (ದೀಪಹ. II, ೯೧). ೪. ಆಸ್ತಿ; ಸಂಪತ್ತು: ನಮಗಿರುವ ಸೌಭಾಗ್ಯವೆಲ್ಲ ಇವಳೊಬ್ಬಳೇ (ಶಾಂತಲಾ. ೯). ೫. ಚೆಲುವು; ಸೌಂದರ್ಯ: ಅತ್ಯಂತರೂಪಲಾವಣ್ಯಸೌಭಾಗ್ಯಕಾಂತಿಹಾವಭಾವವಿಲಾಸ ವಿಭ್ರಮಂಗಳನೊಡೆಯೊಳಂ . . . ತನ್ನಲ್ಲಿಗೆ ವಂದೊಳನೇಕಾಂತಂ ಸಮನಿಸಿದೊಡಾಕೆಗಳಿಪದೆ (ವಡ್ಡಾರಾ. ೧೭-೧೧). ೬. ಸಿಂದೂರ ; ಚಂದ್ರ . ೭. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಒಂದು; ನಾಲ್ಕನೆಯ ಯೋಗ: ವಿಷ್ಕಂಭ ಪ್ರೀತಿ ಆಯುಷ್ಮಾನ್ ಸೌಭಾಗ್ಯ . . . ವೈಧೃತಿಗಳೆಂಬ ಇಪ್ಪತ್ತೇಳು ಯೋಗಂಗಳುಂ (ವಿವೇಕ. ೨೬೨). ೮. [ತತ್ತ್ವಶಾ] ಪದಾರ್ಥನಿರೂಪಣ ದಲ್ಲಿ ಬರುವ ನಲವತ್ತು ವಿಧ ಗುಣಗಳಲ್ಲಿ ಒಂದು: ರೂಪರಸಗಂಧ . . . ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಓಂದಸಾ. ೨೭೬). [ಸಂ.]

**ಸೌಭಾಗ್ಯಂದಳೆ** (ಕ್ರಿ). ಶುಭವನ್ನು ಹೊಂದು; ಮಂಗಳವನ್ನು ಪಡೆ: ಮುನ್ನಂ ಮಾಡಿದ ಪುಣ್ಯದ ಫಲದಿಂದುನ್ನತಿಕೆಯ ಸೌಭಾಗ್ಯಂದಳೆದೈ (ಜಯಕಾ. ೩-೭೨).

[ಸೌಭಾಗ್ಯ + ತಳೆ]

**ಸೌಭಾಗ್ಯವತಿ** (ನಾ). ಮುತ್ತೈದೆ; ಸುಮಂಗಲಿ: ಸೌಭಾಗ್ಯವತಿ . . . ಮೊದಲಾದ ಶಬ್ದಗಳನ್ನು . . . ಪತ್ರ ಸ್ವೀಕರಿಸತಕ್ಕವರ ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯ ಉಂಟು (ಮುಂಬಯಿ. ೪-೮೪). [ಸಂ. ಸೌಭಾಗ್ಯವತೀ]

**ಸೌಭಾಗ್ಯಶಾಲಿ, ಸೌಭಾಗ್ಯಶಾಳಿ** (ನಾ). ಅದೃಷ್ಟವಿರುವ ವ್ಯಕ್ತಿ; ಅದೃಷ್ಟಶಾಲಿ: ಅವಳು ತುಂಬ ಸೌಭಾಗ್ಯಶಾಲಿ, ಸುಖವಾಗಿದ್ದಾಳೆ (ರೂಢಿ). **ಸೌಭಾಗ್ಯಶಾಳಿ:** ಅದರ್ಕೆ ಪಾರಯ್ಸಿ ಸೌಭಾಗ್ಯಶಾಳಿ ವಿಟನಿಂತೆಂದಂ (ಶಾಂತಿಪು. ೮-೯೫ ವ). [ಸಂ. ಸೌಭಾಗ್ಯಶಾಲಿನ್]

**ಸೌಭಾಗ್ಯಶಾಳಿ** 'ಸೌಭಾಗ್ಯಶಾಲಿ' ನೋ.

**ಸೌಭಾಗ್ಯಸಂಪನ್ನೆ** (ನಾ). ಚೆಲುವನ್ನೆ ಸಂಪತ್ತಾಗಿ ಉಳ್ಳವಳು; ಅತ್ಯಂತ ಸುಂದರಿ: ಲಕ್ಷ್ಮೀಮಹಾದೇವಿ ಧಾತ್ರೀಪತಿಯಂ ಸರ್ವಾಂಗಸೌಂದರ್ಯದಿನೆಱಗಿಸಿ ಸೌಭಾಗ್ಯಸಂಪನ್ನೆಯಾದಳ್ (ಮಲ್ಲಿಪು. ೩-೮೬). [ಸಂ. ಸೌಭಾಗ್ಯಸಂಪನ್ನಾ]

**ಸೌಭಾಗ್ಯಸದನೆ** (ನಾ). ಸೌಂದರ್ಯದ ನೆಲೆಯಾಗಿರುವವಳು; ಅತ್ಯಂತ ಸುಂದರಿ: [ಚಂದ್ರ]ವದನೆ ಸೌಭಾಗ್ಯಸದನೆ ರಾಯಜಳಪ್ಪಕಲ್ಪಾವನೀಜ ಸಮಾಲಿಂದ (ಗಿತ) ಜಂಗಮಲತೆ (ಎಕ. XXVIII, ೩೫-೩೯; ಪ. 1082).

[ಸಂ. ಸೌಭಾಗ್ಯಸದನಾ (ಸೌಭಾಗ್ಯ + ಸದನ + - )]

**ಸೌಭಾಗ್ಯಸಾರ** (ನಾ). ಅತಿಶಯವಾದ ಸೌಂದರ್ಯದಿಂದ ಕೂಡಿದುದು: ನಾರೀನಯನೋತ್ಪಲಹೃನ್ನೀರೇಜವುನೊಡನಲರ್ಚೆ ಶಶಿಸೂರ್ಯಸಮಾಹಾರ ದಿನಾದವೊಲತುಳಾಕಾರಂ ಸೌಭಾಗ್ಯಸಾರಮಾಯ್ತಗ್ಗಳನಾ (ಚಂದ್ರಪು. ೧-೫೬). [ಸಂ.]

**ಸೌಮಂಗಲ್ಯ** (ನಾ). ೧. ಮಂಗಳಕರವಾದುದು; ಶುಭಕರವಾದುದು. ೨.ಸುಮಂಗಲಿಯಾಗಿರುವಿಕೆ; ಮುತ್ತೈದೆತನ: ಅರಸಾಳ್ವಗ ಧರಣಿಯುಂ ತರುಣಿಯುಂ ಶಾಲಿಸುಂದರವಾಗಿರದೊಡೆ ಸೌಮಂಗಲ್ಯ[ಪಾಠಾಂ. ಳ್ಯ]ವಾಗಿಯುಂ ಮೇಲೆಯುನ್ನತಿಯಪ್ಪುದೆ (ಜೈಮಿಭಾ. ೫-೫೩). [ಸಂ.]

**ಸೌಮನಸ** (ನಾ). ೧. ಒಳ್ಳೆಯ ಮನಸ್ಸನ್ನು ಹೊಂದಿರುವಿಕೆ. ೨. ಒಳ್ಳೆಯ ಮನಸ್ಸುಳ್ಳವನು: ವಿಗತಸೌಮನಸರುಂ ವಿಪರೀತಚರಿತರುಂ (ನಿವೇದ. ೪೧-೧೫). ೩. [ಜೈನ] ಸುಮೇರುಪರ್ವತದ ಮೇಲಿರುವ ನಾಲ್ಕು ವನಗಳಲ್ಲಿ ಮೂರನೆಯದು: ಆ ಜಂಬೂದ್ವೀಪದ ನಟ್ಟನಡುವೆ . . . ಭದ್ರಶಾಲನಂದನ ಸೌಮನಸ ಪಾಂಡುಕವನ ವಿರಾಜಿತಮುಂ . . . ಆಗಿ (ಆದಿಪು. ೧-೪೯ ವ) ; ಬೇಗದೊಳ್ ಸೌಮನಸಕ್ಕೆ ತಗುಳ್ದು ಮತ್ತೆ ಸೌಮನಸದಿನೆಯ್ದಿ ಪಾಂಡುಕವನಕಡರ್ದತ್ತು ಸುರೇಂದ್ರವಾರಣಂ (ಚಂದ್ರಪು. ೧೨-೧೦೬). ೪. ಅರುವತ್ತಮೂರು ಇಂದ್ರಕಗಳಲ್ಲಿ ಒಂದು: ನಿಜ ಜೀವಿತಾವಸಾನದೊಳ್ ಸೌಮನಸಮೆಂಬೂರ್ಧ್ವಮಧ್ಯಮದ ನವಗ್ರೈವೇಯಕ ದೊಳಹಮಿಂದ್ರನಾಗಿ (ಆದಿಪು. ೩-೭೮ ವ). [ಸಂ.]

**ಸೌಮನಸವನ** (ನಾ). = ಸೌಮನಸ ೩: ಜಿನಮಜ್ಜನಾಂಬು ಪಾಂಡುಕವನದಿಂ ಸೌಮನಸವನಕೆ ತದ್ವನದಿಂ ನಂದನವನಕೆ ಪರಿದುದು (ಅಜಿಪು. ೪-೬೨). [ಸಂ.]

**ಸೌಮನಸ್ಯ** (ನಾ). ೧. ಒಳ್ಳೆಯ ಮನಸ್ಸಿನಿಂದ ಕೂಡಿರುವಿಕೆ: ಇವರು . . . ಸೌಮನಸ್ಯದಲಿಳೆಯ ಪಾಲಿಸುತಿರ್ದರು (ಕುವ್ಯಾಸ. ೧-೪೨); ಗೌರವ್ವೆಯವರು . . . ಒಬ್ಬೊಬ್ಬರನ್ನೂ ಸೌಮನಸ್ಯದಿಂದ ಕುಶಲ ಕೇಳಿ ಕಷ್ಟಸುಖಗಳನ್ನು ವಿಚಾರಿಸಿ ಕಳಿಸಿಕೊಡುತ್ತಿದ್ದಾಗ (ಶಾಂತಲಾ. ೫೨). ೨. ಸಂತೋಷ. [ಸಂ.]

**ಸೌಮನಸ್ಸು** (ನಾ). ಒಳ್ಳೆಯ ಮನಸ್ಸು ; ಶುದ್ಧ ಚಿತ್ತ : ಸೌಮನಸ್ಸು ವೈಮನಸ್ಸುಗಳು ಕಣ್ಣಿಗೆ ಕಾಣಸುವದಿಲ್ಲ (ವಿಚಾಮಂ. ೨೬). [ಸಂ. ಸೌಮನಸ್]

**ಸೌಮಿತ್ರಿ** (ನಾ). ಸುಮಿತ್ರೆಯ ಮಗ; ಲಕ್ಷ್ಮಣ: ಸೌಮಿತ್ರಿಯ ನಿರತಿಶಯ ಪ್ರೇಮಮನದನಂತುಟಂತುಟೆಂಬಂತುಟೆ ನಿದ್ರಾಮುದ್ರಿತಲೋಚನನಿರೆ ರಾಮಂ ರಕ್ಷಾನಿಮಿತ್ತಮೆಚ್ಚತ್ತಿರ್ದಂ (ಪಂರಾಮಾ. ೮-೪); ಏಕೆ ನಿಂದಿಹೆ ಪೋಗು ಸೌಮಿತ್ರಿ ಕೋಪಿಸನೆ ಕಾಕುತ್‌ಸ್ಥನಿಲ್ಲಿ ತಳುವಿದೊಡೆ (ಜೈಮಿಭಾ. ೧೯-೨೫). [ಸಂ.]

**ಸೌಮುದಿ** (ನಾ). (?) : ಕಳಕಳಿಪ ದರಹಾಸ ಕೌಮುದಿಯ ಸೌಮುದಿಯ ಪೊಳೆಪೊಳೆವ ಬಿಂಬೋಷ್ಠಪಲ್ಲವದ ವಲ್ಲವದ ನಲವಿನಿಂ ನೋಳ್ಪ ಯತಿತತಿಯ ಸುರತತಿಯ ಸಂತತಿಗೆ ಹರಿಯೈತರೆ (ವೆಂಕಾರಾ. ೧-೮-೨೬). [?]

**ಸೌಮ್ಯ** (ಗು). ೧. ಚಂದ್ರನಿಗೆ ಸಂಬಂಧಿಸಿದ. ೨. ಚೆಲುವಾದ; ಸುಂದರವಾದ: ಸೌಮ್ಯದೇಹೋರ್ಧ್ವಕೇಶಂ ಸುಕೇಶಂ (ಆರಾಚ. ೪-೪-೩೩). ೩. ತಾಳ್ಮೆಯಿಂದ ಕೂಡಿದ; ಶಾಂತವಾದ. ೪. ತೀಕ್ಷ್ಣವಲ್ಲದ. ೫. ತಂಪಾದ; ಹಿತವಾದ. (ನಾ). ೬. ತೀಕ್ಷ್ಣವಲ್ಲದುದು: ತಡಿಗಳೊಳ್ ಬೆಳೆದ ಕುಜಪಂಕ್ತಿ ಸೌಮ್ಯಚ್ಛಾಯೆ ಯಿಂದ . . . ದಿನದೆಣಿಕೆಯಂತೆ ಚೆಲ್ವಳವಟ್ಟು ಕಾಣಿಸಿದುದಾ ಕೊಳಂ (ನಂದಿಮಾ. ೬-೨೫). ೭. ಚೆಲುವು; ಅಂದ: "ಉತ್ತಮಂ ಪ್ರಿಯ ಸಾಧು ರಮಂ ರಮಣ್ಯಂ ರಮ್ಯರುಚಿರಂ ಪ್ರವೇಕಮೆನೆ ಸೌಮ್ಯಕ್ಕೆ ನಾಮಮಕ್ಕುಂ" (ಮಂಗರಾ. ೧೨೬-೨). ೮. ಚೆಲುವ; ಸುಂದರ: ವಜ್ರವೃಷಭನಾರಾಚ ಶರೀರಸಂಹನನಸೌಮ್ಯನುಂ (ಆದಿಪು. ೧೫-೩ ವ) ; ತನ್ನಾ ಸೌಮ್ಯನಂ ಕಂಡರಿತಳಾ ಮಂದಹಸಿತ ಮುಖಕಮಲದೊಳ್ ! (ಶ್ರೀರಾಮಾ. ೨೭೩-೨೭೧).

೯. ಸ್ಥಿರಣೆಯುಳ್ಳವನು; ಶಾಂತಸ್ವಭಾವದ ವ್ಯಕ್ತಿ: ಸೌಮ್ಯನಾಗಿಯುಮಶೇಷ ಜಗದ್ಗುರು . . . ಆದನಾ ನೃಪಂ (ಪುಷ್ಪಪು. ೧೩-೭). ೧೦. ಒಳ್ಳೆಯದು; ಶುಭವಾದುದು: "ಪ್ರಾಗ್ರ್ಯಂ . . . ಸುಂದರಂ, ಸೌಮ್ಯಂ . . . ಈ ೨೬ ಒಳ್ಳಿತು" (ಹಲಾಯು. ೧೧೪-೪). ೧೧. ಅರುವತ್ತು ಸಂವತ್ಸರಗಳಲ್ಲಿ ನಲವತ್ತುಮೂರನೆಯದು : ಆ ವರ್ಷವೇ ಪ್ರಭವ . . . ಸೌಮ್ಯ . . . ಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೫೬೩). ೧೨. ಒಂದು ಬಗೆಯ ಸಸ್ಯ: "ಕಾಂಡ - ಶಾಖಾ - ಸೌಮ್ಯ" (ಓಷಧಿ. ೩೧). ೧೩. [ಜ್ಯೋತಿ] ನವಗ್ರಹಗಳಲ್ಲಿ ಒಂದು; ಬುಧ: "ರೌಹಿಣೇಯಃ, ಬುಧಃ, ಸೌಮ್ಯಃ, ಚಾಂದ್ರಮಸಾಯನಃ - ಈ ೪ ಬುಧನ ಪೆಸರ್" (ಹಲಾಯು. ೯-೪೭); ಗುರುವಿನೊಳೊಂದಿ ಸೌಮ್ಯನೊಡನಿರ್ಕೆ ನವೇಂದುಗೆ ರುದ್ರ (೧೧) ಸಂಖ್ಯೆಯೊಳ್ . . . ಗ್ರಹಮೆಯ್ದುವಲ್ಲಿ (ಅಟ್ಟಮ. ೮-೧೮೨). ೧೪. ಉಗ್ರವಲ್ಲದ ಗ್ರಹ; ಶುಭಗ್ರಹ: ಇರೆ ನೀಚಗೃಹದಿ ಸೌಮ್ಯರ್ ಮರಮೊದಲೊಳ್ ಸಾಲಮೂಲದೊಳ್ ಜನನಂ (ಜಾತತಿ. ೪-೨೨). [ಸಂ.]

**ಸೌಮ್ಯಕ** (ನಾ). ದೇವತಾಪ್ರತಿಮೆಗಳನ್ನು ಪ್ರತಿಷ್ಠಾಪಿಸುವ ಐದು ಬಗೆಯ ಪೀಠಗಳಲ್ಲಿ ಒಂದು: 'ಮಯಮತ'ವೆಂಬ ಗ್ರಂಥದಲ್ಲಿ ಪ್ರತಿಮೆಗಳಿಗೆ ಬೇಕಾದ ಪೀಠಗಳು ಅನೇಕ ವಿಧವೆಂದೂ ಅವುಗಳಲ್ಲಿ ಮುಖ್ಯವಾದವು ಭದ್ರಪೀಠ, ಪದ್ಮಪೀಠ, ವಜ್ರಪೀಠ, ಸೌಮ್ಯಕ, ಶ್ರೀಕಾಮ್ಯವೆಂದೂ ಹೇಳಿದೆ (ಭಾರದ. ೫೧೭). [ಸಂ.]

**ಸೌಮ್ಯದೃಷ್ಟಿ** (ನಾ). ಶಾಂತವಾದ ನೋಟ; ಪ್ರಸನ್ನದೃಷ್ಟಿ: ನ್ಯೂನವಾಗಿ ವ್ಯಗಾಂಶೆಯೊಳು ಶನಿನ್ಯೂನವಿಲ್ಲದ ಸೌಮ್ಯದೃಷ್ಟಿಯು ತಾನೆತಾಳಲು ಬಾಳುತಿಹ ದಶವರುಷದೊಳು ಮನುಜಾ (ಕೇರಪ್ರ. ೨-೧೪). [ಸಂ.]

**ಸೌಮ್ಯರೂಪ** (ನಾ). ಮನೋಹರವಾದ ಆಕಾರ; ಸುಂದರವಾದ ರೂಪ. [ಸಂ.]

**ಸೌಮ್ಯವಾರ** (ನಾ). ಒಂದು ವಾರದ ಏಳುದಿನಗಳಲ್ಲಿ ನಾಲ್ಕನೆಯದು; ಬುಧನು ಅಧಿಪತಿಯಾಗಿರುವ ದಿನ; ಬುಧವಾರ. [ಸಂ.]

**ಸೌಮ್ಯವೇಷ** (ನಾ). ಕಣ್ಣಿಗೆ ಹಿತವಾದ ಉಡುಗೆ; ಆಡಂಬರರಹಿತವಾದ ವೇಷ: ತಪೋವನಗಳು ಸೌಮ್ಯವೇಷದಿಂದ ಪ್ರವೇಶಿಸುವುದಕ್ಕೆ ಯೋಗ್ಯಗಳು (ಶಾಕುಂತ. ೭-೧೦). [ಸಂ.]

**ಸೌಮ್ಯೋಕ್ತಿ** (ನಾ). ೧. ತೀಕ್ಷ್ಣವಲ್ಲದ ನುಡಿ; ಮೃದುವಾದ ಮಾತು. ೨. (ಆಲಂ) "ಕಠಿನ ಅಥವಾ ಒರಟಾದ ಶಬ್ದಗಳನ್ನು ಪ್ರಯೋಗಿಸ ಬೇಕಾಗುವಲ್ಲಿ ಅವಕ್ಕೆ ಬದಲಾಗಿ ನಯ ಅಥವಾ ಅಸ್ಪಷ್ಟ ಪದಪ್ರಯೋಗ ಮಾಡುವುದು; ನಯನುಡಿ; ಸೌಮ್ಯೋಕ್ತಿ" (Euphemism. ೧೦೮೬): ಹುಡುಗಿ ಕಪ್ಪು. ಹಾಗೆನ್ನಲು ಇಷ್ಟವಿಲ್ಲ. ಎಣ್ಣೆಗೆಂಪು ಎನ್ನುವುದು ಸೌಮ್ಯೋಕ್ತಿ (ನಮ್ಮನು. ೫೫೭). [ಸಂ.]

**ಸೌರ** (ಗು). ೧. ಸೂರ್ಯನಿಗೆ ಸಂಬಂಧಿಸಿದ. ೨. ಸುರರಿಗೆ ಸಂಬಂಧಿಸಿದ; ದೇವತೆಗಳಿಗೆ ಸೇರಿದ. (ನಾ). ೩. ಸೂರ್ಯನಿಗೆ ಸಂಬಂಧಿಸಿದುದು: ನಡೆದುದು ಸೌರಂ ರಥಮುತ್ತರಾಯಣಕ್ರಮದಿಂದಂ (ಚಂದ್ರಪ್ರ. ೭-೭೭). ೪. ಸೂರ್ಯನ ಮಗ. ೫. ಶನಿ. ೬. ಯಮ. ೭. ಸೂರ್ಯನನ್ನು ಪೂಜಿಸುವವನು; ಸೂರ್ಯೋಪಾಸಕ: ಭಜಿಸುವರು ಸೌರರು ರವಿಯ (ಗಗತಾ. ೫-೭); ಸೌರರು ಸೂರ್ಯನ ಹಾಗೆ ಹಣೆಯ ಮೇಲೆ ಚಂದನದ ಬೊಟ್ಟನ್ನು ಇಟ್ಟುಕೊಳ್ಳುವರು (ಮುಂಬಯಿ. ೬-೧೧೨). ೮. ಸೂರ್ಯನ ಗತಿಯನ್ನು ಅನುಸರಿಸಿ ದಿನ ಮತ್ತು ಮಾಸಗಳನ್ನು ಲೆಕ್ಕ ಮಾಡುವ ಕ್ರಮ; ಸೌರಮಾನ: ಆ ಸಂವತ್ಸರವೇ ಸೌರ . . . ಸಾವನ ಭೇದದಿಂದೈದು ತೆಱನಾಗಿರ್ಪುದು (ವಿವೇಕ. ೩೨೧); ಶ್ರೀಪರಮಾತ್ಮನು ಮೇಲೆ ಹೇಳಿದ ಪ್ರಕಾರ ಬಾರ್ಹಸ್ಪತ್ಯ, ಸೌರ, ಅನುಸಾರ, ನಾಕ್ಷತ್ರ, ಚಾಂದ್ರಮಾನಗಳೆಂಬ ಐದು ಬಗೆಯಾಗಿ ಗಣಿಸುವ ಪರಿವತ್ಸರಾದಿ ಐದು ಹೆಸರುಗಳನ್ನು ಧರಿಸಿರುವನು (ಹಸಾರ. ೫-೪೦ ತಾತ್ಪರ್ಯ). ೯. [ಜ್ಯೋತಿ] ಶನಿಗ್ರಹ. [ಸಂ.]

**ಸೌರಂಭ** (ನಾ). ಸಂಭ್ರಮ; ಸಡಗರ: "ಸೌರಂಭಮೆಂದೆನಲು ಸಂಭ್ರಮಮಂ" (ಮಂಗರಾ. ೧೩೦-೧೭); ಲಹರಿಯ ಸಾಗರದ ಸೌರಂಭದಂತಿರೆ ಮಸಗಿತಾಸ್ಥಾನ (ಕುಮ್ಮಾದ್ಯೋ. ೧-೩೭); ಸಕಲಸೌರಂಭದಲ್ಲಿ ಸೂಗಸಿಹುದಲ್ಲಿ ಬನವಸೆಯೆಂಬ ಪಟ್ಟಣವು (ಪ್ರಭುಲೀ. ೩-೨). [< ಸಂ. ಸಂರಂಭ]

**ಸೌರಚಾಪ** (ನಾ). ಸುರಧನಸ್ಸು; ಇಂದ್ರಚಾಪ: ಸೌರಚಾಪವು ಹೊಳೆವುತಿದೆ ನಭದಲ್ಲಿ (ಕೌಶಿರಾ. ೩೮-೨೯). [ಸಂ.]

**ಸೌರಣೆ** 'ಸಂವರಣೆ₁' ನೋ.

**ಸೌರಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು; ಸೂರ್ಯನಿಗೆ ಸಂಬಂಧಿಸಿದ ಪುರಾಣ: ಸನತ್ಕುಮಾರಪುರಾಣ . . . ಸೌರಪುರಾಣ . . . ಭಾರ್ಗವಪುರಾಣವೆಂಬವೆ ಆಯಾಯ ನಾಮಧೇಯಮುಳ್ಳವಱಿಂ ನಿರೂಪಿತಂಗಳಾದ ಹದಿನೆಂಟು ಉಪಪುರಾಣಂಗಳು (ವಿವೇಕ. ೯). [ಸಂ.]

**ಸೌರಭ** (ನಾ). ಸುವಾಸನೆ; ಪರಿಮಳ; ಸುಗಂಧ: ನಿಡುಸುಯ್ವ ನಲ್ಲಳ ಮುಖಾಂಬುಜ ಸೌರಭದೊಳ್ ಪೊದಟ್ಟು (ಪಂಪಭಾ. ೪-೧೦೭); ಸುರಕುಜಕುಸುಮಸೌರಭಂ ಬಂದಪುದು (ನಂಬಿರ. ೧೫-೧೭೮); ಗಗನದ ಪರಮಸೌರಭ ಕಲಸಿಕೊಂಡುದು ಸಕಲ ಸುರಕುಲವ (ಕುಮ್ಮಾವಿ. ೧೦-೮೩). [ಸಂ.]

**ಸೌರಭಂಗೆಡು** (ಕ್ರಿ). ಸುವಾಸನೆಯು ಹಾಳಾಗು: ಏಸಱಿಂ ಮುಟ್ಟಲೊಡಂ ತನ್ನ ಸೌರಭಂಗೆಟ್ಟು ನೆಗೞ್ದ ಕತ್ತುರಿವಣ್ಣಂ ಮಸಿಗಮೆಣೆಯಪ್ಪುದು (ಆದಿಪು. ೧೧-೧೧೭). [ಸೌರಭ + ಕೆಡು₁]

**ಸೌರಭಕುಸುಮ** (ನಾ). ಪರಿಮಳದಿಂದ ಕೂಡಿದ ಹೂವು: ಸೌರಭಕುಸುಮ ವಿಹಾರಂ . . . ಸುಟಿವುದಲ್ಲಿ ಚಾರುಸಮೀರಂ (ಜಗವಿ. ೨-೨೫). [ಸಂ.]

**ಸೌರಭನಿಧಿ** (ನಾ). ಸುವಾಸನೆಯ ಆವಾಸ; ಸುಗಂಧದ ನೆಲೆ: ಸೌರಭನಿಧಿ ತೀರ್ಥಕರ ಕುಮಾರಕನೆಂದಱಿದುಮಾ ಜಗತ್ಪತಿಗಿಂದ್ರಂ ಸಾರಸುಗಂಧಿವಿಳೇಪನಭೂರಿ ಜಳಸ್ನಪನವಿಧಿಗೊಡರ್ಚಿದನಾಗಳ್ (ಶಾಂತಿಪು. ೧೦-೫೨). [ಸಂ.]

**ಸೌರಭವೆಱು** (ಕ್ರಿ). ಸುವಾಸನೆಯನ್ನು ಹೊಂದು; ಪರಿಮಳದಿಂದ ಕೂಡಿರು: ಹೊನ್ನ ಹೊಳೆಗಳಿಂದ ಸೌರಭವೆತ್ತ ಕುಡಿನೀರ ಕುಡಲೀಂಟಿದರು (ಮೋಹತ. ೧೪-೧೫). [ಸೌರಭ + ಪೆಱು₁]

**ಸೌರಭೇಯ** (ನಾ). ಎತ್ತು; ಬಸವ: "ಉಕ್ಷಾ . . . ಸೌರಭೇಯಃ . . . ಶಾಕ್ವರಃ - ಈ ೧೧ ಎತ್ತು" (ಹಲಾಯು. ೪೪-೧೦೮). [ಸಂ.]

**ಸೌರಭ್ಯ** (ನಾ). ೧. ಸುವಾಸನೆ; ಕಂಪು: ತನುಲತೆ ಸೌರಭ್ಯಮಂ ಬೀಱೆ (ಜಗವಿ. ೨-೭೮); ಮುಡಿ ಪುಷ್ಪಂಗಳ ಸೂಸೆ ಕಡುಸೌರಭ್ಯವ ತನು ಬೀಱೆ (ಜೀವಂಸಾಂ. ೧೮-೭೫). ೨. ಕಾರ, ಕಹಿ, ಹುಳಿ, ಒಗರು ಮೊದಲಾದ ರುಚಿಗಳು: "ಕಟುತಿಕ್ತ ಕಷಾಯಮೆಂಬಿವು ಸೌರಭ್ಯದಲ್ಲಿಯುಂ . . . ವರ್ತಿಸುಗುಂ" (ಹಲಾಯು. ೧೩೫-೨೭). ೩. ಗೋವು; ಹಸು: "ಷಡುರಸ ಪರಿಮಳ ಗೋವು ಮೂಱು ಸೌರಭ್ಯಾಖ್ಯಂ" (ನಾನಾಕಂ. ೧೪೧). [ಸಂ.]

**ಸೌರಭ್ಯವಡು** (ಕ್ರಿ). ಪರಿಮಳವನ್ನು ಸೂಸು: ಸೌರಭ್ಯವಟ್ಟರ್ದ ಪೂಮಾಲೆಗಳನು ಬಟ್ಟವಡೆದ ರತ್ನಪವಳ ಮುತ್ತುಗಳ ಮೇಲ್ಕಟ್ಟು ಕಣ್ಮನಕೆ ರಂಜಿಸಿತು (ಮೋಹತ. ೨೭-೧೪). [ಸೌರಭ್ಯ + ಪಡು₁]

**ಸೌರಭ್ಯವಡೆ** (ಕ್ರಿ). = ಸೌರಭವೆಱು: ಮುಡಿವಾಳ ದವನ ಪಚ್ಚೆಯ ತೆನೆ ಸೌರಭ್ಯವಡೆದ ಪೊಂಬಾಳೆ ಪೂದಂಡೆ (ಮೋಹತ. ೧೪-೩೧). [ಸಂ.]

**ಸೌರಮಾನ** (ನಾ). ಸೂರ್ಯನ ಗತಿಯ ಆಧಾರದ ಮೇಲೆ ಮಾಡುವ ಕಾಲಗಣನೆ. [ಸಂ.]

**ಸೌರಮಾಸ** (ನಾ). ಸೌರಮಾನದ ತಿಂಗಳು: ಸೂರ್ಯನ ಗತಿ ಸಂಬಂಧದಿಂದ ಕಲ್ಪಿಸಿದ ತಿಂಗಳುಗಳು ಸೌರಮಾಸಗಳೆಂದೆನಿಸಿಕೊಳ್ಳುತ್ತವೆ (ಮುಂಬಯಿ. ೭-೬೯). [ಸಂ.]

**ಸೌರವರ್ಷ** (ನಾ). ಸೂರ್ಯನ ಚಲನೆಯ ಆಧಾರದಿಂದ ಲೆಕ್ಕಹಾಕಿದ ವರ್ಷ: ಈ ಅವಧಿಯನ್ನು ನಾವು ಸೌರವರ್ಷವೆಂದು ಕರೆಯುತ್ತೇವೆ (ನಕ್ಷತ್ರ. ೪೦). [ಸಂ.]

**ಸೌರವ್ಯೂಹ** (ನಾ). ಸೂರ್ಯನನ್ನು ಸುತ್ತುಗಟ್ಟಿರುವ ಗ್ರಹಗಳ ಸಮೂಹ: ಸೂರ್ಯಸೌರವ್ಯೂಹದ ಕೇಂದ್ರ (ಭೂಹುಟ್ಟು. ೪); ಸೌರವ್ಯೂಹ (ಸೂರ್ಯನ ಸಂಸಾರ) ನಮ್ಮ ತೇಜೋರಾಶಿಗೆ ಸೇರಿದ್ದು (ಆಕಾಶ. ೬೩). [ಸಂ.]

**ಸೌರಸ** (ನಾ). ಅನುಮತಿ; ಅಪ್ಪಣೆ: ಶ್ರೀ ಮನ್ಮಹಾಮಂಡಳೇಶ್ವರಂ ಕುಮಾರಂ ಬಿಜ್ಜಲದೇವರಸರ ಸೌರಸದಿಂ ಪತ್ತಳೆಸಹಿತಂ ಪಡೆದು ಬರೆದ ಶಾಸನಂ (ಕೊಲ್ಲಾಶಾ. ೮-೩೯; 1147). [?]

**ಸೌರಸಂಕ್ರಾಂತಿ** (ನಾ). ಸೂರ್ಯನು ಒಂದು ರಾಶಿಯನ್ನು ಬಿಟ್ಟು ಇನ್ನೊಂದು ರಾಶಿಗೆ ಪ್ರವೇಶಿಸುವುದು; ಸೂರ್ಯಸಂಕ್ರಮಣ. [ಸಂ.]

**ಸೌರಾಜ್ಯಗುಣ** (ನಾ). ಒಳ್ಳೆಯ ರಾಜ್ಯಭಾರ ಮಾಡುವ ಗುಣ: ಶ್ರೀ ಜಾಯಾಪತಿ ಧರೆಯಂ ರಾಜನ್ವತಿ ಮಾಡಿ ತನ್ನ ಸೌರಾಜ್ಯಗುಣಂ ರಾಜಿಸೆ ನೆಗಳ್ದಂ (ಚಂದ್ರಪ್ರ. ೭-೧). [ಸಂ.]

**ಸೌರಾಷ್ಟ್ರ** (ನಾ). ೧. ಒಂದು ದೇಶದ ಹೆಸರು; IP ಈಗಿನ ಗುಜರಾತ್ ರಾಜ್ಯದ ಸೂರತ್‌ಪ್ರಾಂತ: ಒಸೆದು ಸೌರಾಷ್ಟ್ರಕ್ಕೆ ಪೋಗಿ (ಬಸವು. ೫೩-೧೧); ಬಳಿಕ ಸೌರಾಷ್ಟ್ರದಿಂದ ಸುತ್ರಾಮಸುತ . . . ನಡೆತರುತಿರ್ದನು (ಜೈಮಿಭಾ. ೨೮-೧). ೨. [ಸಂಗೀತ] ಒಂದು ರಾಗದ ಹೆಸರು: 'ಸೌರಾಷ್ಟ್ರ . . . ಶಯ ಸಹೋದರಿ ಯೆಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದವು (ವಿವೇಕ. ೨೩೩); ಸೌರಾಷ್ಟ್ರ- ಪ್ರಾಚೀನರಾಗ. ಅಸಂಪೂರ್ಣಮೇಳಪದ್ಧತಿಯಲ್ಲಿ ಈ ರಾಗ ೧೫ನೇ ಮೇಳಕರ್ತವಾದ ಮಾಯಾಮಾಳವಗೌಳದಲ್ಲಿ ಜನ್ಯವಾಗಿತ್ತು (ಸಂಗೀಚಂ. ೧೭೧). [ಸಂ.]

**ಸೌರಾಷ್ಟ್ರಕ** (ನಾ). ೧. ಒಂದು ಬಗೆಯ ಲೋಹ; ಕಂಚು: "ಕಾಂಸ್ಯಂ, ಸೌರಾ(ಷ್ಟ್ರಿ)ಷ್ಟ್ರಕಂ – ಈ ೨ ಕಂಚು" (ಹಲಾಯು. ೨೮-೧೭). ೨. ಒಂದು ಬಗೆಯ ವಿಷ: "ಬ್ರಹ್ಮಪುತ್ರಃ . . . ಸೌರಾ(ಷ್ಟ್ರಿ)ಷ್ಟ್ರಕಃ, ಕ್ಷ್ವೇಡಃ, ತೀಕ್ಷ್ಣಃ, ವಿಷಂ – ಈ ೯ ವಿಷಂ" (ಹಲಾಯು. ೧೧೭-೨೪). [ಸಂ.]

**ಸೌರಾಷ್ಟ್ರಿ** (ನಾ). ೧. ಸೌರಾಷ್ಟ್ರದಲ್ಲಿ ದೊರಕುವ ಒಂದು ಬಗೆಯ ಸುವಾಸನೆಯ ಮಣ್ಣು. ೨. ಒಂದು ಬಗೆಯ ಸಸ್ಯ: "ಸೌರಾಷ್ಟ್ರಿಯೆನೆ ಹಿಂಡು" (ಮಂಗರಾ. ೪೪-೪೫). [ಸಂ.]

**ಸೌರಿ₁** (ನಾ). ವಿಷ್ಣು ಅಥವಾ ಕೃಷ್ಣ: "ಅರಲ್ಗೊಡೆಯಂ . . . ಸೌರಿ . . . ಕಾವನಯ್ಯಂ – ಈ ೧೨ ವಿಷ್ಣುಗೆ ಹೆಸರು" (ಕಶಸಾ. ೧-೯); ಸೌರಿಯಿತ್ತ ಪೊಂಬಟ್ಟೆಯ ನಿಂದುಡು ಸಸಿಯಟ್ಟಿದ ಪೂವಂ ಮುಡಿ (ಕಬ್ಬಿಕಾ. ೩೭). [< ಸಂ. ಶೌರಿ]

**ಸೌರಿ₂** (ನಾ). ೧. ಸೂರ್ಯನ ಮಗ. ೨. ಶನಿ: "ಪಂಗು ಸೌರಿ ಕ್ರೋಡನರ್ಕಜಂ ಮಂದನಸಿತನೆನಲ್ ಶನಿಯೆನಿಕ್ಕುಂ" (ಮಂಗರಾ. ೧೨-೭). ೩. [ಜ್ಯೋತಿ] ನವಗ್ರಹಗಳಲ್ಲಿ ಒಂದು; ಶನಿಗ್ರಹ: ಒಂದೆ ಗೃಹದೊಳ್ ನಿಂದಂದು ಸೌರೀಂ [ಪಾಠಾಂ. ಸೂರ್ಯೇಂ]ದುಗಳ್ . . . ಮನುಜಂಗಳ್ಕುಂ ಕ್ಷಯವ್ಯಾಧಿ (ಜಾತತಿ. ೨೧-೨೩). [ಸಂ.]

**ಸೌರಿಕ** (ಗು). ೧. ಸ್ವರ್ಗೀಯವಾದ; ದೇವಲೋಕದ; ದಿವ್ಯ. (ನಾ). ೨. ದೇವಲೋಕ; ಸ್ವರ್ಗ. ೩. ಶನಿಗ್ರಹ. ೪. ಮಾದಕಪಾನೀಯ; ಸುರೆ. ೫. ಸುರೆಯನ್ನು ಮಾರುವವನು. [ಸಂ.]

**ಸೌರಿಯ, ಶೌರಿಯ, ಸೌರ್ಯ₁** (ನಾ). ೧. ಸಾಹಸಿ; ಪರಾಕ್ರಮಿ: ಕನಕಧಾರಾ ವರುಷನಿಸ್ಸೀಮಸೌರಿಯನುಂ ಕಾದಮ್ಮರಾಯಸ್ಥಾಪನಾಚಾರಿಯನು . . . ಸುಚರಿತ ಚರಿತನುಮಪ್ಪ ಸಮಸ್ತ ಸೈನ್ಯಾಧಿಪತಿ ನಿಸ್ಸಂಕಪ್ರತಾಪ ಶ್ರೀ ಸಾಲೆಯ ಲೆಕ್ಕಮದೇವ ರಾಣೆಯರು (ಎಕ. XI, ದಾವಣ. ೫೯-೫೧; 1280). **ಶೌರಿಯ:** ೨. ಸಾಹಸ; ಪರಾಕ್ರಮ: ಶೌರಿಯದಲಿದಿರಿಲ್ಲ ಕುಲದಲಿ ಸೂರಿಯನ ಮಗ . . . ನಿನ್ನ ವಿಭವಕೆ ಆರು ಸರಿಯೈ ಕರ್ಣ (ಕುಮ್ಯಾಉ. ೧೦-೧೧); ಸೋರುವಶ್ರುಗಳಿಂದ ಸೀತಾಚೋರನಲಿ ತಾ ತಾಗಿ ತೊಲಗಿದ ಶೌರಿಯದ ಸಂಗತಿಯ ಹೇಳಿದು ಮುಗಿದನಕ್ಷಿಗಳ (ತೊರರಾ. ೩-೧೨-೮). **ಸೌರ್ಯ₁:** ೨. ಸುಭಟಾರಿಭೀಕರಂ ಪತಿಹಿತಾಂಜನೇಯಂ ಸೌರ್ಯಗಾಂಗೇಯಂ . . . ಶ್ರೀಮನ್ನಕುಲರಸರ್ (ಮೈಆರಿ.೧೯೩೧, ೭೪-೭೭;1053); ನೀತಿಪಾರಾಯಣಂ ಸೌರ್ಯನಾರಾಯಣಂ . . . ಶ್ರೀ ಮದ್ಭುವನೈಕಮಲ್ಲದೇವರ್ (ಸೌಇಇ. XX, ೪೭-೩೪; 1072). [< ಸಂ. ಶೌರ್ಯ]

**ಸೌರಿವಾರ** (ನಾ). ಶನಿವಾರ: ಸಾಸಿರದ ನೂರ ಹನ್ನೊನ್ದು ಸಕ ನೃಪವತ್ಸರಂ ಸಲಲು . . . ಸಿತತದಿಗ ಸೌರಿವಾರದೊಲೊಲವಿಂ ವಿಭವಂ ನೆರಪಿ (ಎಕ. VIII, ಸೊರಬ. ೧೭೯-೬೪; 1189). [ಸಂ.]

**ಸೌರಿಸು** 'ಸಂವರಿಸು₁' ನೋ.

**ಸೌರ್ಯ₁** 'ಸೌರಿಯ' ನೋ.

**ಸೌರ್ಯ₂** (ಗು). ೧. ಸೂರ್ಯನಿಗೆ ಸಂಬಂಧಿಸಿದ. (ನಾ). ೨. ಸೂರ್ಯನಿಗೆ ಸಂಬಂಧಿಸಿದುದು. ೩. ಸೂರ್ಯನ ಮಗ. [ಸಂ.]

**ಸೌರ್ಯಶಾಳಿ** (ನಾ). ಪರಾಕ್ರಮಿ; ಶೂರ: ಗಭಸ್ತಿಮಾಳಿಯತುಳಬಳ ಸೌರ್ಯಶಾಳಿ (ಮೈಆರಿ. ೧೯೩೧, ೭೪-೧೭; 1053); **ಅಣ್ಣನಂಘ್ರಿಯೊಳೆರಗಿಸುಗುಂ ಸೌರ್ಯಶಾಳಿ** ವೀರನೊಳಂಬಂ (ಸೌಇಇ. XX, ೫೫-೧೧; 1082). [< ಸಂ. ಶೌರ್ಯಶಾಲಿನ್]

**ಸೌಲಕ್ಕಿ** 'ಸೋಗಿಲಕ್ಕಿ' ನೋ.

**ಸೌಲತ್ತು** 'ಸವಲತ್ತು' ನೋ.

**ಸೌಲಭ್ಯ** (ನಾ). ಅನುಕೂಲ; ಸೌಕರ್ಯ: ಈ ಸೌಲಭ್ಯಗಳಿಂದಲೇ ಗಂಗಾತೀರದಲ್ಲಿ ದೊಡ್ಡದೊಡ್ಡ ಗಿರಣಿಗಳುಳ್ಳ ಜನಭರಿತಪಟ್ಟಣಗಳು ಬೆಳೆಯಲು ಕಾರಣ (ನನದಿ. ೨೨). [ಸಂ.]

**ಸೌಲಭ್ಯಾಕಾಂಕ್ಷೆ** (ನಾ). ಅನುಕೂಲವಾಗಿರಬೇಕೆಂಬ ಅಪೇಕ್ಷೆ; ಸೌಕರ್ಯಗಳ ಬಯಕೆ: ಮಾನವಸಾಮಾನ್ಯವಾದ ಸೌಲಭ್ಯಾಕಾಂಕ್ಷೆಯೂ ವೈಯಕ್ತಿಕವಾದ ಉಚ್ಚಾರಣಭೇದವೂ . . . ನೈಸರ್ಗಿಕಕಾರಣಗಳಾಗಿರುತ್ತವೆ (ಕೃಪಿಡಿ. ೨೯೫). [ಸಂ.]

**ಸೌವತ್ಸರ** 'ಸಂವಚ್ಛರ' ನೋ.

**ಸೌವನೆ** (ಅ). ಸೀಳುವ ಶಬ್ದದ ಒಂದು ಅನುಕರಣಾವ್ಯಯ: ಕಣೆಗಳ್ ಮೊನೆಯಿಂ ಪಿಳ್ಳುವರಂ ಸೌವನೆ ಸೀಳ್ವಂತುರ್ಚಿಪೋದುವಚ್ಯುತನಿಷುಗಳ್ (ಜಗವಿ. ೧೮-೯೧). [? + - ಅನೆ₁]

**ಸೌವರಣೆ** 'ಸಂವರಣೆ₁' ನೋ.

**ಸೌವರಿಸು** 'ಸಂವರಿಸು₁' ನೋ.

**ಸೌವರ್ಚಲ, ಸೌವರ್ಚಳ** (ನಾ). ೧. ಒಂದು ಬಗೆಯ ಲವಣ; ಸಜ್ಜುಕಾರ: "ಸರ್ಜಕಾಕ್ಷಾರಃ, ಕಾಪೋತಃ, ಸುಖವರ್ಚಕಃ, ಸೌವರ್ಚಲಂ, ರುಚಕಂ – ೫ ಸದ್ಯಕ್ಷಾರದ ಹೆಸರುಗಳು" (ಸಿದ್ಧಾಂತಿ. ೩೦೭). ೨. ನೆಲ್ಲಿಕಾಯಿ ಮತ್ತು ಉಪ್ಪು ಸೇರಿಸಿ ತಯಾರಿಸಿದ ಒಂದು ಬಗೆಯ ಕ್ಷಾರ: (೬). **ಸೌವರ್ಚಳ:** ೧. "ಸೌವರ್ಚಳಃ, ರುಚಕಃ – ಈ ೨ ಸೌವರ್ಚಳಂ" (ಹಲಾಯು. ೧೧೧-೪೬೩). [ಸಂ.]

**ಸೌವರ್ಚಲವಣ** (ನಾ). = ಸೌವರ್ಚಲ ೧: "ಸೌವರ್ಚಲವಣಂ ರುಚಕಮಕ್ಕುಂ" (ಮಂಗರಾ. ೪೩-೪೪); ಇಂಗು, ಸೌವರ್ಚಲವಣ, ಶುಂಠಿ, ಮೆಣಸು . . . ಚೂರ್ಣಿಸಿ (ವೈದ್ಯಸಾ. II, ೫೧). [ಸಂ.]

**ಸೌವರ್ಚಳ** 'ಸೌವರ್ಚಲ' ನೋ.

**ಸೌವರ್ಣ** (ಗು). ೧. ಚಿನ್ನದಿಂದ ಮಾಡಿದ; ಸುವರ್ಣದಿಂದ ರಚಿತವಾದ: ದಿವಾಕರಂ ತ್ರೈಲೋಕ್ಯಸೌಂದರ್ಯ ಸೌವರ್ಣಕಲಶಮೆನೆ ಮೈದೋರಿ (ಶ್ರೀರಾಮಾ. ೨೮೫-೧೭). ೨. ಚಿನ್ನ; ಸುವರ್ಣ. [ಸಂ.]

**ಸೌವರ್ಣಿ** (ನಾ). ಒಂದು ಬಗೆಯ ಸಸ್ಯ: ಮೆಣಸಿಗೆಸೊಪ್ಪು ಸೌವರ್ಣಿಯ ಸೊಪ್ಪು (ವೈದ್ಯಸಾ. I, ೭೨೮). [ಸಂ.]

**ಸೌವಸ್ತಿಕ** (ಗು). ೧. ಸ್ವಸ್ತಿಕವಾದ; ಶುಭಕರ; ಮಂಗಳಕರ. (ನಾ). ೨. ಪುರೋಹಿತ: ಒಸೆದಾಶೀರ್ವಾದಮಂ ಸಾದರದೊಳೆ ಕುಡೆ ಸೌವಸ್ತಿಕಂ ಸೂಕ್ತಿಯಿಂ ಚೋಯಿಸಿಗಂ ತಾನಾತಿಥಿ[ಶ್ರಾ]ವಣೆಗೆಯ (ವರ್ಧಮಾ. ೮-೧೦೫). [ಸಂ.]

**ಸೌವಾಗ್ಯ, ಸವುಭಾಗ್ಯ** (ನಾ). = ಸೌಭಾಗ್ಯ ೧: ಶ್ರೀ ವೀರಶ್ರೀ ಕೀರ್ತಿಶ್ರೀ ವಾಕ್‌ಶ್ರೀ ಯೆಂಬ ಪೆಂಡಿರಗಲದೆ ತನ್ನೊಳ್ ಭಾವಿಸಿದ ಪೆಂಡಿರೆನಿಸಿದ ಸೌವಾ[ಪಾಠಾಂ. ಭಾ]ಗ್ಯದ ಹರಿಗನೆಮ್ಮನೇನೊಲ್ಲನೋ (ಪಂಪಭಾ. ೫-೧); ಸೋಲ್ಸೌವಾಗ್ಯಕೆಡೆಯಲಿಂದೀವರ ಲೋಚನೆ . . . ಪದ್ಮಾವತಿ ವರದೆಯಮಗಕ್ಕೆ (ಲೀಲಾವ. ೧೦-೩). **ಸವುಭಾಗ್ಯ:** ಭೂಸವುಭಾಗ್ಯನಿಧಾನ ನೂರ್ಜಿತಭಳಂ ಶ್ರೀನಾರಸಿಂಹ್ಯೋಜಯಾವಾಸವತೇಜಂ (ಎಕ. XI, ಚಿತ್ರದು. ೧-೧೨; 1310); ವಿಷ್ಣುಪ್ರದಕ್ಷಿಣಸವುಭಾಗ್ಯವನ್ನು ಮಹಾತ್ಮರಿಗೆ ಸಮಸ್ಕರಿಸಿದ ವಿಶೇಷವನ್ನು (ಶೇಷಧ. ೧-೧). [< ಸಂ. ಸೌಭಾಗ್ಯ]

**ಸೌವಾದ** (ನಾ). ಸಂಪೂರ್ಣ ಸಮ್ಮತಿ; ಪೂರ್ಣ ಒಪ್ಪಿಗೆ: ಯಿಡುಗುಂದಿಯ ಮಹಾಪ್ರ[ಭು] ನಾರಾಯಣಸರ್ವಾತಿತ್ಕರು . . . ತಂನ ಕಿಱುತಂದೆಯರ ತಂನ

ವೊಡವುಟ್ಟಿದ ಪ್ರಜೆಯ ಯಿಂತಿದವರ ಸೌವಾದದಿಂದ ಧರ್ಮಪ್ರತಿಷ್ಠೆಯ ಮಾಡಿದ ಲದಕಿದ ಕ್ರಮವೆಂತೆಂದಡೆ (ಕಕ. III-i, ೭-೯;1348). [< ಸಂ. ಸಂವಾದ]

**ಸೌವಿದ** (ನಾ). ಅಂತಃಪುರದ ಕಾವಲುಗಾರ; ಕಂಚುಕಿ: ಭೀತಿಗದ್ಗದಕಂಠಂ ತುದಿಗೆಯ್ದೆ ಬಿನ್ನವಿಸಿದಂ ವಾಕ್ಕೋವಿದಂ ಸೌವಿದಂ (ಶಾಂತಿಪು. ೩-೬೫); ತಾಗಿದರ್ ವಿಹಿತರಕ್ಷಾಕೋವಿದರ್ ಸೌವಿದರ್ (ಪುಷ್ಪಪು. ೧೩-೧೦೧). [ಸಂ.]

**ಸೌವಿದಲ್ಲ** (ನಾ). = ಸೌವಿದ: ಕಪಿಂಜಳನಾಗಲಾ ಜರಾನಿರ್ಮಳನೆನಿಸಿದ ಸೌವಿದಲ್ಲನೊಡವರುತಿರ್ದಂ (ಕಾದಂಪೂ. ೮೧೩). [ಸಂ.]

**ಸೌವೀರ** (ನಾ). ೧. ಗಂಜಿ; ಅಂಬಲಿ: ಬಿತ್ತುಗಳನರೆದು ಸೌವೀರ ಸಮನ್ವಿತಮಾಗಿ ಕುಡಿಯೆ (ಲೋಕೋಪ. ೯-೪೪). ೨. ಬೋರೆ; ಎಲಚಿ: "ಬೋರೆ ಸೌ[ಪಾಠಾಂ. ಸಂ] ವೀರಮಕ್ಕುಂ" (ಮಂಗರಾ. ೩೭-೧೮). ೩. ಒಂದು ದೇಶದ ಹೆಸರು; ಭಾರತದ ಪಶ್ಚಿಮದಿಕ್ಕಿನಲ್ಲಿರುವ ಸಿಂಧೂ ಮತ್ತು ಜೀಲಂ ನದಿಗಳ ನಡುವಣ ಪ್ರದೇಶ: ಸೌವೀರಮಚ್ಚಬಂಗಾಳ . . . ಕಾಂಬೋಜದೇಶದ ಸಕಲಶರಣರ್ಭ್ಯತರುತಿರ್ದರು (ಚೆಬಪು. ೬-೪೯). ೪. ಸೌವೀರದೇಶದವನು: ಸೌವೀರವಲ್ಲಭ ಶರಭಭೇರುಂಡ ಪರಾಕು (ಯಾದಚಂ. ೩-೧ ವ). ೫. ಭಿದುರತೆಯುಳ್ಳ ಒಂದು ಬಗೆಯ ಲೋಹ. ೬. [ಸಂಗೀತ] ಒಂದು ರಾಗದ ಹೆಸರು: ಷಡಾರ . . . ಸೌವೀರ . . . ಹಿಂದೋಳಮೆಂಬೆಂಟು ರಾಗಂಗಳುಂ (ವಿವೇಕ. ೫೩). [ಸಂ.]

**ಸೌವೀರಾಂಜನ** (ನಾ). (ಕಣ್ಣಿನ ಕಾಡಿಗೆಗಾಗಿ ಬಳಸುವ) ಒಂದು ಬಗೆಯ ಮೂಲಲೋಹ; ಸ್ರೋತಾಂಜನ: "ನೇತ್ರಭೂಷಂ – ಸ್ರೋತಾಂಜನ, ಸೌವೀರಾಂಜನ" (ಓಷಧಿ. ೮೯); ನೆಗ್ಗಿಲಬೇರು, ಮಾವಿನಬೇರು . . . ಸೌವೀರಾಂಜನ – ಇವು ಪ್ರತ್ಯೇಕ ೧ ಹಲವುಂ ಚೂರ್ಣಿಸಿ ಹಾಕಿ ಲೇಹ್ಯಪಾಕದಲ್ಲಿಳುಹಿ (ಸಕಪ್ಪ. ೩೯೧). [ಸಂ.]

**ಸೌವೀರಿ** (ನಾ). [ಸಂಗೀತ] ಒಂದು ರಾಗದ ಹೆಸರು: ಭರತಖಂಡದ ಹಲವು ಒಳನಾಡುಗಳಲ್ಲಿಯೂ ಭಿನ್ನವಾದ ಗಾನಪದ್ಧತಿಯಿತ್ತೆಂಬುದಕ್ಕೆ ಆಂಧ್ರಿ, ದ್ರಾವಿಡಿ, ಸೌವೀರಿ ಮುಂತಾದ ಪ್ರಾಚೀನ ಜಾತಿರಾಗಗಳ ಹೆಸರುಗಳೇ ಸಾಕ್ಷಿಯಾಗಿವೆ (ಗಾನಕ. ೪೬). [ಸಂ. ಸೌವೀರೀ]

**ಸೌಶೀಲ್ಯ** (ನಾ). ಒಳ್ಳೆಯ ನಡತೆ; ಸದಾಚಾರ: ಬಲದೇವ ವಾಸುದೇವರ್ . . . ಸೌಶೀಲ್ಯಕ್ಕುತ್ಪತ್ತಿಸ್ಥಾನಮುಮಾಗಿ (ಶಾಂತಿಪು. ೧-೮೦ ವ); ಪತ್ನಿಯರ ಸೌಶೀಲ್ಯ ಶುಚಿ ರುಚಿ ಆಚಾರ ವಿಚಾರಗಳಿಂದ ಪ್ರಭುಗಳಿಗೆ ಒಳಿತಾಗುತ್ತ ಬಂದಿತು (ಶಾಂತಲಾ. ೧೨೧). [ಸಂ.]

**ಸೌಷಿರ** (ನಾ). ಜೊಲ್ಲು ವಿಶೇಷವಾಗಿ ಬರುವಂತಹ ಒಂದು ಬಗೆಯ ಬಾಯಿರೋಗ: ಬಾಯಲ್ಲಿ ವಿಶೇಷವಾಗಿ ಜೊಲ್ಲು ಸುರಿವದು – ಈ ರೀತಿಯಲ್ಲಿದ್ದುದು ಸೌಷಿರ ಎನಿಸಿಕೊಂಬುದು (ವೈದ್ಯಸಾ. II. ೧೨೪). [ಸಂ.]

**ಸೌಷ್ಠವ** (ನಾ). ೧. ಶ್ರೇಷ್ಠತೆ; ಉತ್ಕೃಷ್ಟತೆ. ೨. ಸೊಗಸು; ಅಂದ: ಆನೆಯ ನೇಱ್ ಸೌಷ್ಠವದೆ ಬರ್ಬರಿಕೇಸರಿಯೊಂದು ಗಾಡಿಯುದ್ದಾನಿ ತಗುಳ್ದು (ಪಂಪಭಾ. ೪-೫೮); ಪೇೞ್ದಂ ಪಂಪನತ್ಯಂತ ಸೌಷ್ಠವದಿಂದಾದಿಪುರಾಣಮಂ (ಸುಕುಮಾ. ೧-೩೭); ಮದ್ದಾನೆಯ ಸೊಂಡಿಲ ಸೌಷ್ಠವವನ್ನು ಗೆಲ್ಲುವ ಬಾಹುಯುಗ್ಮ (ಶಾಂತಲಾ. ೩೪). ೩. ಆಧಿಕ್ಯ; ಅತಿಶಯತೆ: ಸುಚರಿತ್ರತೆಯಿಂ ಸಮಸಂದ ಸೌಷ್ಠವಂ (ಚಂದ್ರಪು. ೫-೧೨೨). ೪. ಸಾಮರ್ಥ್ಯ; ದಕ್ಷತೆ: ಬೆಡಂಗಿಂಗೆ ಪಾಂಗಾದ ದೇಸಿಗಂ ಮಾಸರಿಕೆಗೆಕ್ಕಲಾವಣಮಾದ ಸೌಷ್ಠವಕ್ಕಂ . . . ಬೆಕ್ಕಸಂಬಟ್ಟು (ಶಾಂತಿಪು. ೩-೫೩ ವ); ಎಲೆ ಕೃಷ್ಣ ನಿನ್ನ ರೂಪಮಂ ಸೌಷ್ಠವ ಪ್ರತಿಷ್ಠೆಯಂ . . ನೋಡಲ್ (ಜಗವಿ. ೪-೭೯ ವ). ೫. ಒಳ್ಳೆಯದು; ಲೇಸಾಗಿರುವುದು: "ಸೌಷ್ಠವಂ, ಅ(ವ)ಷ್ಟಂಭಃ– ಈ ೨ ಲೇಸಾಗಿರ್ಪುದು" (ಹಲಾಯು. ೧೨೫-೭೪). ೬. ಚುರುಕಾಗಿರುವಿಕೆ; ಶೀಘ್ರಗುಣ. ೭. ಶುದ್ಧವಾಗಿರುವಿಕೆ; ಸಾಧುತ್ವ: ಶಬ್ದಸೌಷ್ಠವ ಅಲಂಕಾರಸೌಷ್ಠವಗಳ ವಿವೇಚನೆ (ಜೀವಸಾ. ೨೦೦). [ಸಂ.]

**ಸೌಸವ** (ನಾ). ಕಂಪು; ಸುವಾಸನೆ; ಸುಗಂಧ: "ಸೌಸವಮೆಂದು ಕಂಪು" (ಶಮದ. ಪರಿ. ೨); ಸಾಂದಿನ ಸೌಸವದ ಕುಂಕುಮದ ಕತ್ತುರಿಯ ಕದಡಂ ಕದಡಿ (ಪಂಪಭಾ. ೫-೭೦ ವ); ಉಗುವ ಸೊನೆಯ ಸೌಸವದಿಂ ನೆರೆದದಿರ್ಗಂತಿಯಂ ತಾಟಿ (ರಾಮಾಶ್ವ. ೫೪-೧). [ಸಂ.]

**ಸೌಸವಗೋಲ** (ನಾ). ಸುವಾಸನೆಯ ಹೂವುಗಳನ್ನು ಬಾಣವಾಗಿ ಉಳ್ಳವನು; ಮನ್ಮಥ: "ಸೌಸವಗೋಲ ಗಿಳಿದೇರ . . . ಮನ್ಮಥನ ನಾಮಮಕ್ಕುಂ" (ಕಬ್ಬಿಗ. ೮). [ಸೌಸವ + ಕೋಲ್₁ + - ಅ₇]

**ಸೌಸ್ಥಿತ್ಯ** (ನಾ). ಚಲಿಸದಿರುವಿಕೆ; ಸ್ಥಿರವಾಗಿರುವಿಕೆ: ದಿಕ್ಕರಿಗಳ್ . . . ನಿಷ್ಕಂಪಕರ್ಣಂಗಳಾಗಿರೆ ಗಂಡಸ್ಥಳದಾನಲೀನಮಧುಪಂ ತಾಳ್ದಿತ್ತು ಸೌಸ್ಥಿತ್ಯಮಂ (ಪುಷ್ಪಪು. ೪-೨೪). [ಸಂ.]

**ಸೌಸ್ನಾತಿಕ** (ನಾ). (ಶಾಸ್ತ್ರೋಕ್ತವಾದ) ಸ್ನಾನವಾಯಿತೆ ಎಂದು ಕುಶಲ ಪ್ರಶ್ನೆಮಾಡುವವನು: ಮುಖಮಂಡಳಜ್ಯೋತಿಃಪ್ರಭೆಯೊಂದು ಲೀಲಾಲಕ್ಷ್ಮಿ ಗಾವಾಸಮಾಗಿರೆ ಸೌಸ್ನಾತಿಕರುಂ ಬಂಧುಸಹಿತಂ ಶ್ರೀವಿಜಯನುಂ ಪುರಂಧ್ರೀವರ್ಗಮುಂ ಬಂದು (ಶಾಂತಿಪು. ೭-೧೮ ವ). [ಸಂ.]

**ಸೌಹಾರ್ದ** (ನಾ). ಸಹೃದಯತೆ; ಸೌಜನ್ಯ: ಇದು ಭವದಮಳಿನ ಸೌಹಾರ್ದದುದಯಮಲ್ಲದೆ ಮದೀಯಮಹಿಮೋನ್ನತಿಯಲ್ತು (ಶಾಂತಿಪು. ೪-೧೦೧); ಅರಸ ತೊಡು ಕವಚವನು . . . ಪತಿಕರಿಸೆನುತ ಪೆಟ್ಟಿಗೆಯ ಮುಚ್ಚಳ ತೆಱೆದು ಮುಂದಿರಿಸಿದನು ಸೌಹಾರ್ದದಲಿ ಯಮಸೂನು (ಕುವ್ಯಾಗ. ೫-೩೯). [ಸಂ.]

**ಸೌಹಿತ್ಯ** (ನಾ). ಪೂರ್ಣತೃಪ್ತಿ; ಸಮಾಧಾನ: "ಪರ್ಯಾಪ್ತಂ, ಉಪಸಂಪನ್ನಂ, ತೃಪ್ತಿಃ, ಸೌಹಿತ್ಯಂ – ಈ ೪ ತ(ಣಿ)ಣುವು" (ಹಲಾಯು. ೫೪-೧೭೧). [ಸಂ.]

**ಸೌಹೃದ** (ನಾ). ಗೆಳೆತನ; ಮೈತ್ರಿ: "ಸಖ್ಯಂ, ಸಾಪ್ತಪದೀನಂ, ಸೌಹಾರ್ದಂ, ಸೌಹೃದಂ . . . ಸಭಾಜನಂ – ಈ ೯ ಕೆಳೆ" (ಹಲಾಯು. ೧೧೭-೨೧); ಜಲಧಿ ಯುಬ್ಬಿದವೊಲು ಸಭಾಮಂಡಲಿಯ ಸೌಹೃದ ವಾಗ್ವಿವಾದದ ಕಳಕಳಿಕೆ ದಿಗುತಟವ ಗಬ್ಬರಿಸಿದುದು (ಕುವ್ಯಾಭೀ. ೧-೪೨). [ಸಂ.]

**ಸೌಳಕಾರ** 'ಸವುಳು₁' ಪರಾ.

**ಸೌಳಗೆ** (ಅ). ಸೀಳುವಾಗಿನ ಶಬ್ದವನ್ನು ಸೂಚಿಸುವ ಒಂದು ಅನುಕರಣ ಅವ್ಯಯ: ತೆಗೆದೆಚ್ಚರ್ಜುನನಂಬು ತೀವೆ ತುದಿಯಿಂ ಬಾಲಂಬರಂ ಪಂದಿ ಸೌಳಗೆ ವೋಪಂತಿರೆ ನೋಡ ಸಂಬಳಿಗೆವೋಯ್ತು (ಪಂಪಭಾ. ೮-೧೭). [? + - ಅಗೆ₁]

**ಸೌಳನೆ** (ಅ). = ಸೌಳಗೆ: ಮುಳಿದೆಚ್ಚೊಡೆ ಸೌಳನೆ ಸೀಳ್ದು ಪಚ್ಚವೋಲಾದುದು (ಪಂಪಭಾ. ೧೨-೮೭); ಮದೇಭ ಕುಮ್ಭಯುಗಮಂ ಬಿಡೆ ಸೌಳನೆ ಸೀಳದಿರ್ದ್ದಡಂ (ಎಕ. V, ಹಾಸನ. ೫೩-೪೪; 1170); ನಿನ್ನ ಜೀವಾಹಿಯಂ ಸೌಳನೆ ಸೀಳ್ವಂ (ಶಾಂತೀಶ್ವ. ೫-೨೦೨). [? + - ಅನೆ₁]

**ಸೌಳು** 'ಸವುಳು₁' ನೋ.

**ಸೌಳುಗಿಡ** (ನಾ). ಒಂದು ಬಗೆಯ ಸಸ್ಯ: ಅಡವೀಕತ್ತೆಗಳು ಸೌಳುಗಿಡಗಳನ್ನು ಕಹಿಗಿಡಗಳನ್ನು ಬಿರಸುಹುಲ್ಲನ್ನು ತಿನ್ನುತ್ತವೆ (ಮುಂಬಯಿ. ೩-೪೮). [ಸೌಳು (< ಸವುಳು₁) + ಗಿಡ (< ಗಿಡು)]

**ಸೌಳುನೀರು** 'ಸವುಳುನೀರು' ನೋ.

**ಸೌಳುನೆಲ** 'ಸವುಳುನೆಲ' ನೋ.

**ಸೌಳುಪ್ಪು** 'ಸವುಳುಪ್ಪು' ನೋ.

**ಸೌಳುಮಣ್ಣು** 'ಸವುಳುಮಣ್ಣು' ನೋ.

**ಸೌಳುವಣ್ಣು** 'ಸವುಳುಮಣ್ಣು' ನೋ.

**ಸೌಳ್ನೆಲ** 'ಸವುಳುನೆಲ' ನೋ.

**ಸ್ಕಂದ** (ನಾ). ೧. ಷಣ್ಮುಖ: "ಗೌರೀಪುತ್ರಃ . . . ಸ್ಕಂದಃ, ಸ್ವಾಮಿ . . . ಶರಜನ್ಮಾ – ಈ ೨೦ ಕಾರ್ತಿಕೇಯನ ಪೆಸರ್" (ಹಲಾಯು. ೫-೨೦). 'ಸ್ಕಂದಪಿತ' ಪರಾ. ೨. ಈಶ್ವರ; ಶಿವ. ೩. ರಾಜ; ದೊರೆ. ೪. ಶರೀರ; ದೇಹ. ೫. ನದಿಯ ದಡ,– ತೀರ. ೬. ಮಕ್ಕಳಿಗೆ ಬರುವ ಒಂದುಬಗೆಯ ರೋಗ; ಬಾಲಗ್ರಹ. ೭. ಬುದ್ಧಿವಂತ; ಜಾಣ. ೮. ಪಾದರಸ. ೯. ನೆಗೆಯುವುದು; ಏಗರುವುದು. [ಸಂ.]

**ಸ್ಕಂದಪಿತ** (ನಾ). ಷಣ್ಮುಖನ ತಂದೆ; ಶಿವ: ತ್ರಿವಿಕ್ರಮನ ಓಂದಣೆಲುವಂ ಮುಱಿದು ಪಿಡಿದನು ಸ್ಕಂದಪಿತನು (ಬಸವು. ೫೭-೨೩). [ಸಂ. ಸ್ಕಂದಪಿತೃ]

**ಸ್ಕಂಧ** (ನಾ). ೧. ಹೆಗಲು; ಭುಜಾಗ್ರ: ತಾಂಬೂಲ ಕರಂಕವಾಹಿನೀಸ್ಕಂಧ ವಿನ್ಯಸ್ತಹಸ್ತನುಮಾಗಿ (ಕಾದಂಪೂ. ೭೯); ಆಗಳಾ ಮಹಾಕಾಯದೈತ್ಯಸ್ಕಂಧದೊಳಿರ್ದ ಸಂಕರ್ಷಣಂ ಕಿಂಕರ್ತವ್ಯತಾಮೂಢನಾಗಿ ಪೋಗುತ್ತುಮಿರೆ (ಜಗವಿ. ೪-೫೪ ವ). ೨. ಮರದ ಕಾಂಡ; ಬುಡದಿಂದ ಗೆಲ್ಲು ಬಿಡುವವರೆಗಿನ ದಿಂಡು: ಅಮೇಯಸ್ಕಂಧಮುಂ ಸಂದಿಸೆ ಜರಠ ಮಹಾಶಾಲ್ಮಲೀವೃಕ್ಷಮಿರ್ಕುಂ (ಕಾದಂಪೂ. ೧೨೦). ೩. ಆನೆ, ಕುದುರೆ, ಕಾಲಾಳುಗಳ ಸಮೂಹ: "ಆನೆ ಕುದುರೆ ಮಾನಿಸರ ಸಂಘಾತಮಂ ಸ್ಕಂಧಮೆಂಬುದು" (ಮಂಗರಾ. ೧೪೧-೧೨). ೪. ಆನೆಯ ಹೆಗಲು: "ಸ್ಕಂಧಃ, ಆಸನಂ – ಈ ೨ ಆನೆಯ ಪೆಗಲ್" (ಹಲಾಯು. ೩೬-೭೪); ಬೇಗದಿಂದಿಳಿದು ವಾರಣಸ್ಕಂಧದಿಂ (ಪಂಪಾಮಾ. ೨-೨೦). ೫. ಗ್ರಂಥದ ಪರಿಚ್ಛೇದ,– ಪ್ರಕರಣ: ನಾಲ್ಕನೇ ಸ್ಕಂಧ ಸಂಪೂರ್ಣಂ (ನಿಭಾಗ. ೪-೧೯-೪೩ ವಚನ). ೬. ಸಮೂಹ; ಸಮುದಾಯ. ೭. ಸೈನ್ಯದ ವಿಭಾಗ; ತುಕಡಿ. ೮. ವರ್ಗ; ಗುಂಪು. ೯. ಅರಸು; ರಾಜ. ೧೦. ಜ್ಞಾನಿ; ಪಂಡಿತ. ೧೧. [ಛಂಧ] ಅರುವತ್ತುನಾಲ್ಕು ಮಾತ್ರೆಯ ಒಂದು ಮಾತ್ರಾವೃತ್ತ. ೧೨. [ಬೌದ್ಧ] ಲೌಕಿಕಜ್ಞಾನದ ಐದು ಬಗೆ: ರೂಪ ವೇದನಾ ವಿಜ್ಞಾನ ಸಂಜ್ಞಾನ ಸಂಸ್ಕಾ(ಸ್ಕಾ)ರಂಗಳೆಂಬಯ್ದುಂ ಸ್ಕಂಧಂಗಳ್ . . . ಕ್ಷಣವಿಳಂಬಿಗಳ್ (ಶಾಂತಿಪು. ೮-೧೯೨ ವ). [ಸಂ.]

**ಸ್ಕಂಧಕ** (ನಾ). = ಸ್ಕಂಧ ೧೧: ಸಂಸ್ಕೃತದ ಆರ್ಯಾ ಅಥವಾ ಗಾಥಾವೃತ್ತವು ಪ್ರಾಕೃತ ದಲ್ಲಿ ಆರ್ಯಗೀತ ಅಥವಾ ಸ್ಕಂಧಕವೆಂಬ ೬೪ ಮಾತ್ರೆಯ ವೃತ್ತವಾಗಿ ಕನ್ನಡದಲ್ಲಿ ಮತ್ತು ತೆಲುಗಿನಲ್ಲಿ ವಿಶೇಷವಾಗಿ ಕಂದ ಎಂಬ ಹೆಸರಿನಲ್ಲಿ ಪ್ರಚಾರದಲ್ಲಿದೆ (ಕೃಪಿಡಿ. ೧೧೨). [ಸಂ.]

**ಸ್ಕಂಧವಾಹಕ** (ನಾ). ಗಾಡಿ, ನೊಗ ಮುಂತಾದ ಭಾರದ ವಸ್ತುಗಳನ್ನು ಹೆಗಲಿನ ಮೇಲೆ ಹೊರುವುದಕ್ಕಾಗಿ ಪಳಗಿಸಿದ ಎತ್ತು: "ಸ್ಕಂಧಕಂ, ಸ್ಕಂದವಾಹಕಃ – ಈ ೨ ಹೂಡುವೆತ್ತು" (ಹಲಾಯು. ೪೪-೧೧೧). [ಸಂ.]

**ಸ್ಕಂಧಶಾಖೆ** (ನಾ). ಮರದ ದೊಡ್ಡ ರೆಂಬೆ,– ಹೆಗ್ಗೊಂಬು: "ಸ್ಕಂಧಶಾಖಾಃ, ಶಾಲಾಃ– ಈ ೨ ಮರದ ಹೆಗ್ಗೊಂಬು" (ಹಲಾಯು. ೩೦-೨೮). [ಸಂ. ಸ್ಕಂಧಶಾಖಾ]

**ಸ್ಕಂಧಸಂಧಿ** (ನಾ). ಹೆಗಲು; ಭುಜಾಗ್ರ: ಉಂಗುಟಮನಂಕವಣೆಗೆ ಕರಾಂಗುಳಿಯಂ ಸ್ಕಂಧಸಂಧಿಗುಯ್ದೇಱಿದನುತ್ತುಂಗತುರಂಗಮಮಂ ನೃಪತುಂಗಂ (ಪಂಪಾಮಾ. ೪-೧೨೦). [ಸಂ.]

**ಸ್ಕಂಧಾವಾರ** (ನಾ). ೧. ಸೈನ್ಯ ಅಥವಾ ಸೈನ್ಯದ ತುಕಡಿ: ವೇಲಾಂಧ ಪುರೋಪ ಕಂಠಮಂ ಸಾರ್ದುದು ಭೂಪಾಲಸ್ಕಂಧಾವಾರಂ (ಪಂಪಾಮಾ. ೧೨-೩೬). ೨. ಸೈನ್ಯ ಬೀಡುಬಿಟ್ಟ ಸ್ಥಳ; ಸೇನಾಶಿಬಿರ; ಪಾಳಯ: ಅಚ್ಛೋದಸರೋವರದ ತೀರದೊಳಿಂದ್ರಾಯುಧದ ಪಚ್ಚೆವಿಡಿದು ಬಂದು ಬಿಟ್ಟಿರ್ದ ನಿಜಸ್ಕಂಧಾವಾರಮಂ ಕಂಡು (ಕಾದಂಉ. ೧೮೨). ೩. ರಾಜಧಾನಿ: "ಸ್ಕಂಧಾವಾರಃ, ರಾಜಧಾನೀ – ಈ ೨ ರಾಜಧಾನಿ" (ಹಲಾಯು. ೪೮-೧೩೧). [ಸಂ.]

**ಸ್ಕಂಧೋಪನಯ** (ನಾ). [ರಾಜನೀ] ಒಂದು ಬಗೆಯ ಸಂಧಿಕಾರ್ಯ; ಶರಣಾ ಗತಿಯ ಸಂಕೇತವಾಗಿ ಹಣ್ಣು ಅಥವಾ ಧಾನ್ಯಗಳನ್ನು ಕೊಟ್ಟು ಮಾಡಿಕೊಳ್ಳುವ ಸಂಧಿ: ನುಡಿದ ದ್ರವ್ಯಮಂ ಕಂದಾಯದೊಳ್ ಕುಡುವುದು ಸ್ಕಂಧೋಪನಯ ಸಂಧಿಯೆಂಬುದಕ್ಕುಂ (ಪಂಚತಂ. ೨೨೧-೩). [< ಸಂ. ಸ್ಕಂಧೋಪಾನೇಯ]

**ಸ್ಕಂಭ** (ನಾ). ೧. ಆಧಾರ; ಊರೆ. ೨. ಕಂಬ. ೩. ಪರಮಾತ್ಮ. [ಸಂ.]

**ಸ್ಕನ್ನ** (ಗು). ೧. ಜಾರಿಬಿದ್ದ; ಕಳಚಿಬಿದ್ದ. ೨. ಸ್ರವಿಸಿದ; ಸೋರಿದ. ೩. ಒಣಗಿದ; ಶುಷ್ಕವಾದ. ೪. ಹೊರಟುಹೋದ. ೫. ಚಿಮುಕಿಸಿದ. (ನಾ). ೬. ಜಾರಿಹೋದುದು; ಬಿದ್ದುದು: "**ಸ್ಕನ್ನಂ** ಗಳಿತಂ ಭ್ರಷ್ಟಂ" (ವಸ್ತುಕೋ. ೧೦೬-೪೮). [ಸಂ.]

**ಸ್ಕಾಂದ** (ಗು). ಷಣ್ಮುಖನಿಗೆ ಸಂಬಂಧಪಟ್ಟ: 'ಸ್ಕಾಂದಪುರಾಣ' ಪರಾ. [ಸಂ.]

**ಸ್ಕಾಂದಪುರಾಣ** (ನಾ). ಹದಿನೆಂಟು ಮಹಾಪುರಾಣಗಳಲ್ಲಿ ಒಂದು: ಬ್ರಹ್ಮಪುರಾಣ ಪದ್ಮಪುರಾಣ . . . ಸ್ಕಾಂದಪುರಾಣ . . . ಎಂಬಿವೇ ಶಿವಪ್ರಸಾದದಿಂದ ವ್ಯಾಸಮುನೀಶ್ವರೋಕ್ತಮಪ್ಪ ನಾಲ್ಕುಲಕ್ಷಗ್ರಂಥಸಂಖ್ಯೆಯುಳ್ಳ ಹದಿನೆಂಟು ಮೂಲ ಪುರಾಣಗಳು (ವಿವೇಕ. ೭). [ಸಂ.]

**ಸ್ಕೂಲು** (ನಾ). ಪಾಠಶಾಲೆ: ಭಾವಮೈದುನನ ಜತೆಯಲ್ಲಿ ಮ್ಯಾಚಿನ ಮಾತು, ಸ್ಕೂಲಿನ ಮಾತು ಆಡುತ್ತಿದ್ದಾಗ ಅಡಿಗೆಯವನು ಬಂದು 'ಎಲೆ ಹಾಕಿದೆ' ಎಂದು ತಿಳಿಸಿದನು (ಮಹಾಗ. ೧೬). [← ಇಂ. School]

**ಸ್ಖಲನ, ಸ್ಖಳನ** (ನಾ). ೧. ಎಡಹುವಿಕೆ; ಮುಗ್ಗರಿಸುವಿಕೆ. ೨. ಜಾರಿ ಬೀಳುವಿಕೆ; ಕಳಚಿಬೀಳುವಿಕೆ: ಅವನೀಕಂಪನಮಬ್ಧಿಶೋಷಣಮರಣ್ಯೋ ನ್ಮೂಲನಂ ಭೂಮಿಭೃನ್ನಿವಹಕ್ಷೇಪಣಮಿಂದ್ವಿನಸ್ಖಲನಮಭ್ರಾಲೋಡನಂ . . . ಆಯ್ತುಸ್ಮದ್ಭಲಾಟೋಪದಿಂ (ಜಗವಿ. ೭-೪೫). ೩. ಸೋಲು; ಅಪಜಯ. ೪. ನಿಂತು ಹೋಗುವಿಕೆ; ತಡೆಗೊಳ್ಳುವಿಕೆ: ಈಗ ನಮ್ಮ ರಾಜಧಾನಿಯ ಬಳಿಯೆ ಇದರ ಗತಿ ಸ್ಖಲನವಾಗಲು ಏನು ಕಾರಣವೊ? (ಶಕಾರ. ೧೯೮). ೫. ತಪ್ಪು; ಪ್ರಮಾದ. ೬. ಹಾದಿ ತಪ್ಪಿ ನಡೆಯುವಿಕೆ: ಮನುಷ್ಯನ ಸ್ಖಲನ ಹೆಚ್ಚಹೆಚ್ಚಗೂ ಉಂಟಾಗುತ್ತದೆ (ನಿಬಂಧ. I, ೨೦೭). ೭. ಅಂಬೆಗಾಲಿಕ್ಕುವಿಕೆ: "ಸ್ಖಲನ . . . ಹುಡುಗರು ಅಂಬೆಗಾಲು ಹಚ್ಚ ನಡೆಯೋಣ" (ಗಂಗಾಮು. ೩೩೮). **ಸ್ಖಳನ:** ೧. 'ಪದಸ್ಖಳನ' ಪರಾ. [ಸಂ.]

**ಸ್ಖಲಿತ, ಸ್ಖಳಿತ** (ಗು). ೧. ಕೆಳಗೆ ಬಿದ್ದಿರುವ. ೨. ಜಾರಿಬಿದ್ದ; ಕಳಚಿಬಿದ್ದಿರುವ. ೩. ನಡುಗುವ. ೪. ತಪ್ಪಾದ. ೫. ಅನುಮಾನಿಸುತ್ತಿರುವ; ಹಿಂದೆಮುಂದೆ ನೋಡುವ. ೬. ತೊಟ್ಟಿಕ್ಕಿದ; ಸ್ರವಿಸಿದ. ೭. ತಡೆಗೆ ಒಳಗಾದ; ಪ್ರತಿಬದ್ಧ. ೮. ಹಾದಿತಪ್ಪಿದ. (ನಾ). ೯. ತಪ್ಪು; ಅಪರಾಧ: ತಾವೇ ಖಳರು ನೀವೇ ಸುಜನರೆಮ್ಮಿ ಸ್ಖಲಿತವನು ನೀವಿನ್ನು ಸೈರಿಸಿ ತಾಯೆ (ಕುವ್ಯಾಗ. ೧೧-೬೨). ೧೦. ಮೋಸ; ವಂಚನೆ. ೧೧. ಕಪಟೋಪಾಯ; ಕುತಂತ್ರ. ೧೨. (ಭಯದಿಂದ) ನಡುಗುವವನು; ತತ್ತರಿಸುವವನು: "ಪ್ರಸ್ಕಂದಃ, ಸ್ಖಲಿ[ಪಾಠಾಂ. ಳಿ] ತಃ – ಈ ೨ ನಡುಗುವವಂ" (ಹಲಾಯು. ೭೯-೩೫). ೧೩. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು: ಮಿಗೆ ಹಂಸಪಕ್ಷಕರಮವು ಸೊಗಯಿಸುತಿರೆ ಡೋಲಪಾದಸಂಚರದಿಮ್ಮೆಯ್ ನೆಗಟ್ಟಿರಲ್ ಸ್ಖಲಿತಮೆಂದುಂ ಬಗೆವತ್ತುದು ಭರತದಲ್ಲಿ (ಲಾಸ್ಯರಂ. ೪-೧೪೯). ೧೪. ದುಃಖದಿಂದ ಉಸಿರು ಬಿಡುವುದು: ಸ್ಪಷ್ಟ್ರಚಲ . . . ಸ್ಖಲಿತ, ಪ್ರಸೃತ – ಈ ಒಂಬತ್ತೂ ಕೋಹಳನ ಮತದಂತೆ ಗಾಳಿಯ ಭೇದಂಗಳ್ (ಲಾಸ್ಯರಂ. ೩-೭೫ ವ). **ಸ್ಖಳಿತ:** ೯. ಅಳಕೋತ್ಸಾರಿತಕೇಶಸಂಚಯಮನೀವೀಬಂಧನಾವಿಷ್ಕೃತಸ್ಖಳಿ[ಪಾಠಾಂ. ಲಿ]ತಂ . . . ನೆರದತ್ತತ್ತಂ ಪುರಸ್ತ್ರೀಜನಂ (ಆದಿಪು. ೪-೭೦). [ಸಂ.]

**ಸ್ಖಲಿತಗತಿ** (ನಾ). ೧. ತಡವರಿಸುತ್ತಿರುವ ನಡಗೆ. ೨. ನಡಗೆಯನ್ನು ನಿಲ್ಲಿಸಿದ ವ್ಯಕ್ತಿ; ನಿಂತ ವ್ಯಕ್ತಿ: ಸ್ಖಲಿತಗತಿ ಲಲಿತಕುಂತಲೆ ವಲಿತನಿಜಗ್ರೀವೆ ಮುಗುಟ್ಟು ನೋಡಿದಳೊರ್ವಳ್ . . . ಲಲಿತಾಂಗನನೊಲ್ದು ಸಗರಚಕ್ರೇಶ್ವರನಂ (ಅಜಪು. ೯-೩೮). [ಸಂ.]

**ಸ್ಖಲಿತಚಲನ** (ನಾ). ತಪ್ಪುಹೆಜ್ಜೆಯ ನಡಗೆ: ಬಾಲಕನ ಪಿಶಂಗತಲಂ ಬಾಲಕನ ಸ್ಖಲಿತಚಲನವಿನ್ಯಾಸದ ಲೀಲಾಲಸಮಂ ಕಾಣದ ದುರ್ಲೀಲಮೆನಿಪ್ಪೊಂದು ಜೀವನಂ ಜೀವನಮೇ (ಮಲ್ಲಿಪು.೩-೧೧೬). [ಸಂ.]

**ಸ್ಖಲಿತವಚನ** (ನಾ). ೧. ಕೊಟ್ಟ ಭಾಷೆಗೆ ತಪ್ಪುವುದು; ವಚನಭಂಗ. ೨. ಕೊಟ್ಟ ಭಾಷೆಗೆ ತಪ್ಪಿದವನು; ವಚನಭಂಗ ಮಾಡಿದವನು: ಸ್ಖಲಿತವಚನನ ಯೋಗಿನಿಂದಾಕುಳನ ವಿಕಳವ್ರತನ ಲೋಕಾವಳಿಗಳಾಗಲಿ ಕೊಲ್ಲದಿದ್ದರ ನಾಳೆ ಸ್ಕಂಧವನ (ಕುವ್ಯಾದ್ರೋ. ೮-೩೮). [ಸಂ.]

**ಸ್ಖಲಿತಾಂತರಂಗ** (ನಾ). ಮನಸ್ಸಿಗೆ ಘಾಸಿಯಾದವನು: ಇನಜಂ . . . ಒಂದಿ ನಿಲೆ ಸೌಮ್ಯಕ್ಷೇತ್ರದೊಳ್ ದುಃಖಿತಂ ಧನಹೀನಂ ಸ್ಖಲಿತಾಂತರಂಗನಸುತಂ ನಿರ್ಲಜ್ಜಕಂ ರಕ್ಷಕಂ (ಜಾತತಿ. ೧೭-೩೨). [ಸಂ.]

**ಸ್ಖಳನ** 'ಸ್ಖಲನ' ನೋ.

**ಸ್ಖಳಿತ** 'ಸ್ಖಲಿತ' ನೋ.

**ಸ್ಖಾಲಿತ್ಯ** (ನಾ). ೧. ಜಾರಿಬೀಳುವಿಕೆ. ೨. ಸರಿಯಾದ ಮಾರ್ಗವನ್ನು ಬಿಟ್ಟು ಹೋಗುವಿಕೆ. ೩. ತಪ್ಪು; ಪ್ರಮಾದ: ಇದುವರೆಗೆ ಕನ್ನಡದ ಹಸ್ತಪ್ರತಿಗಳಲ್ಲಿ ಕಂಡುಬರುವ ಲಿಪಿಕಾರಸ್ಖಾಲಿತ್ಯಗಳ ಸ್ವರೂಪವನ್ನು . . . ವಿವರಿಸಿದೆ (ಕನ್ನಸಂ. ೧೩೫). [ಸಂ.]

**-ಸ್ತ** (ಪ್ರ). ಒಂದು ತದ್ಧಿತಪ್ರತ್ಯಯ : 'ದೊಡ್ಡಸ್ತ' ಪರಾ. [<-ಸ್ಥ]

**ಸ್ತಂಬ** (ನಾ). ೧. ಹುಲ್ಲಿನ ಮೆದೆ. ೨. ಗೊಂಚಲು; ಗುಚ್ಛ. ೩. ಪೊದೆ; ಕಂಟಿ. ೪. ಆನೆಯನ್ನು ಕಟ್ಟುವ ಕಂಬ; ಆಲಾನ. ೫. ಕಂಬ. ೬. ಬೆಟ್ಟ; ಗಿರಿ. [ಸಂ.]

**ಸ್ತಂಬಕರಿ** (ನಾ). ೧. ಧಾನ್ಯ: "ಧಾನ್ಯಂ, ವ್ರೀಹಿಃ, ಸ್ತಂಬಕರಿಃ- ೩ ಸಾಧಾರಣವಾಗಿ ಧಾನ್ಯದ ಹೆಸರುಗಳು" (ಸಿದ್ಧಾಂತಿ.೨೮). ೨. ನೆಲ್ಲು; ಭತ್ತ: ಸ್ತಂಬಕರ್ಯಾದಿ ನಾನಾವಿಧಧಾನ್ಯಂಗಳಂ ಪದನಱಿದುಡುಗುವ ಕಳಂ ಮಾಡುವ . . . ಉಪಾಯಂ ಗಳುಮಂ . . . ಅಱಿಯೆ ಪೇೞ್ದು (ಆದಿಪು.೬-೭೭ ವ). [ಸಂ.]

**ಸ್ತಂಬೇರಮ** (ನಾ). ಆನೆ : ನೆರೆದು ನೋಡಿದರಮರಸ್ತಂಬೇರಮಮಂ ಮುತ್ತಿನ ಲಂಬಣಮೆಂದಮರರಮರನಾಯಕಯುತಮಂ (ಅಜಿಪು.೫-೭೫); ಸ್ತಂಬೇರಮದೊಳ್ ಪೊಣರ್ದಂ . . . ಸಮಾನಬಲನೆನೆ ಕೃಷ್ಣಂ (ಜಗವಿ.೬-೫೩). [ಸಂ.]

**ಸ್ತಂಭ** (ನಾ). ೧. ಸ್ಥಿರವಾಗಿರುವಿಕೆ; ನಿಶ್ಚಲತೆ. ೨. ತಡೆ; ನಿರೋಧ; ಪ್ರತಿಬಂಧ: ವಿಷಮಂ ಸ್ತಂಭಿಸುವುದೆ ತಾಂ ಸ್ತಂಭಂ (ಖಮದ.೩-೭). ೩. ನಿಗ್ರಹ; ಹತೋಟಿ. ೪. ಕಂಬ: ಭಿತ್ತಿಸ್ತಂಭೋಜ್ಜ್ವಳ ಮುಕ್ತಿಕಾವಿತಾನಂ ಥಳಥಳಿಪುವು ಪುರದ ನಿಳಯನಿಳಯದೊಳೆಲ್ಲಂ (ಜಗವಿ. ೨-೨೪). ೫. ಕಾಂಡ; ತಾಳು. ೬. ಆಧಾರ; ಊರೆ: ಸುರಿಯೆ ಚತುಃಕುಂಭಂಗಳ್ ಭೂಭುವನಸ್ತಂಭಂ [ಪಾಠಾಂ. ಸ್ತಂಭನ] ಮಜ್ಜನಮನೆಯ್ದೆ ನಿರ್ವರ್ತಿಸಿದಂ (ಆದಿಪು.೮-೭೧). ೭. ಯಂತ್ರಮಂತ್ರ ಗಳಿಂದಾಗಲಿ, ಮಾಟದಿಂದಾಗಲಿ ಭಾವನೆಯನ್ನು ಅಥವಾ ಶಕ್ತಿಯನ್ನು ಹತ್ತಿಕ್ಕುವಿಕೆ: ಉಚ್ಚಾಟನ ಸ್ತಂಭಾದಿ ವಿದ್ಯೆಗಳು ಕ್ಷಿತಿಪ ಕೇಳ್ಕೆ ಕರ್ಣನತ್ತಲು (ಕುವ್ಯಾಕ. ೨೨-೫). ೮. ಪತ್ರಿಕೆಯಲ್ಲಿಯ ಅಂಕಣ : ಸಮಾಚಾರಪತ್ರಿಕೆಯ ಸ್ತಂಭ (column) ಗಳನ್ನೇರಿ (ನಿಬಂಧ. I. ೪೮೭). ೯. [ಕಾವ್ಯಮೀ] ಎಂಟು ಬಗೆಯ ಸಾತ್ವಿಕಭಾವಗಳಲ್ಲಿ ಒಂದು; ಮೂರ್ಛೆ: ಸ್ತಂಭ, ಸ್ವೇದ . . . ಪ್ರಳಯ ಗಳೆಂಬಷ್ಟವಿಧ ಸಾತ್ವಿಕಭಾವಂಗಳಿಂ (ವಿವೇಕ. ೨೨೭); ಮರವಟ್ಟುದೇ ಸ್ತಂಭಂ (ರಸರ. ೪-೨೫೯ ವ). [ಸಂ.]

**ಸ್ತಂಭಕ** (ಗು). ೧. ತಡೆಹಿಡಿಯುವ; ನಿರೋಧಿಸುವ. (ನಾ). ೨. = ಸ್ತಂಭ ೯: ಮನೋವ್ಯೆಕಲ್ಯ ರೋಮಾಂಚಕ ಸ್ತಂಭಕ ಕಂಪ . . . ಮೂರ್ಛಾದಿ ನಾನಾವಿಕಾರಂಗಳೊಡನೆ ತೋಱುವುದುಂ (ಪಂಪಭಾ. ೪-೫೯ ವ). [ಸಂ.]

**ಸ್ತಂಭಕ್ರೀಡಿತ** (ನಾ). [ನಾಟ್ಯ] ಮೂವತ್ತೈದು ದೇಶೀಯ ಭೌಮಚಾರಿ ಗಳಲ್ಲಿ ಒಂದು; ಒಂದು ಕಾಲನ್ನು ಅಡ್ಡಲಾಗಿ ನೀಡಿ, ಇದರ ಪಾರ್ಶ್ವಕ್ಕೆ ಇನ್ನೊಂದು ಕಾಲಿನ ಅಂಗಾಲನ್ನು ಅನೇಕಾವರ್ತಿ ತಂದು ಮುಟ್ಟಿಸುವುದು: ರಥಚಕ್ರ . . . ಸ್ತಂಭಕ್ರೀಡಿತ . . . ಸಮಸ್ಖಲಿತ ಈ ಮೂವತ್ತೈದು ದೇಶೀಯಸಂಬಂಧದ ಭೌಮಚಾರಿಗಳು (ಲಾಸ್ಯರಂ. ೬-೧೭ ವ). [ಸಂ.]

**ಸ್ತಂಭದೀಪಿಕೆ** (ನಾ). ಕಂಬದ ಮೇಲೆ ನಿಲ್ಲಿಸುವ ದೀಪ; ಠಾಣದೀವಿಗೆ: ಪಡುವಣಶೈಲವಿಪುಲಸ್ತಂಭದೀಪಿಕೆಯಂತೆ ರವಿ ಮೆಱೆದ (ಕುವ್ಯಾಭೀ. ೧೧-೪೨). [ಸಂ. ಸ್ತಂಭದೀಪಿಕಾ]

**ಸ್ತಂಭನ** (ನಾ). ೧. ತಡೆ; ನಿರೋಧ; ಪ್ರತಿಬಂಧ. ೨. ನಿಶ್ಶಕ್ತಗೊಳಿಸುವಿಕೆ; ನಿಷ್ಕ್ರಿಯಗೊಳಿಸುವಿಕೆ. ೩. ಶಮನ; ಶಾಂತಗೊಳಿಸುವಿಕೆ. ೪. ಭದ್ರಗೊಳಿಸು ವಿಕೆ; ಸ್ಥಿರಗೊಳಿಸುವಿಕೆ. ೫. ಊರೆಕೊಟ್ಟು ನಿಲ್ಲಿಸುವಿಕೆ. ೬. ರಕ್ತಪ್ರವಾಹ ವನ್ನು ಅಥವಾ ಸ್ರಾವವನ್ನು ನಿಲ್ಲಿಸುವಿಕೆ. ೭. ಮನ್ಮಥನ ಪಂಚಬಾಣಗಳಲ್ಲಿ ಒಂದು. ೮. ಮಾಟದ ವಿದ್ಯೆ: ಆಭಿಚಾರಿಕಕರ್ಮಗಳೂ ಉಂಟು - ಮಾರಣ, ವಶೀಕರಣ, ಮೋಹನ, ಸ್ತಂಭನ, ಉಚ್ಚಾಟನ ಇತ್ಯಾದಿ (ಭಾರದ.೨೮). ೯. = ಸ್ತಂಭ ೯. ೧೦. [ಸಂಗೀತ] ಧ್ವನಿಭೇದ: ಮಂದ, ಮಧ್ಯ, ವೇದ, ಕುಂಚನ, ಉಚ್ಛೂನನ, ಸ್ತಂಭನ, ದೀರ್ಘಭೇದಂಗಳಿಂ . . . ರವವಿಕಲ್ಪಗಳಂ ತೋಱಿ (ವಿವೇಕ. ೨೩೭). [ಸಂ.]

**ಸ್ತಂಭನಗೈ** (ಕ್ರಿ). ನಿಲ್ಲಿಸು: ಬಾಂದಳವನಳ್ಳಿರಿವ ಖಗದಧಿಪಗರುಡಾಂಕಿತಧ್ವಜವ ಸ್ತಂಭನಗೈದು ಪೇರ್ಗುಡಾರವ ನಿರ್ಮಿಸೆ (ನವಮೋ. ೨೯-೭೫). [ಸ್ತಂಭನ + ಗೈ (< ಕೆಯ್)]

**ಸ್ತಂಭನಾಕ್ಷರ** (ನಾ). (ಶತ್ರುವನ್ನು) ನಿಷ್ಕ್ರಿಯಗೊಳಿಸುವ ಮಂತ್ರಾಕ್ಷರ: ವಿಪಕ್ಷ ಶರಾಸಾರ ಮೋಕ್ಷ ಹೂಂಕಾರ ಸ್ತಂಭನಾಕ್ಷರಸ್ತಂಭಿತಹೃದಯರಾಗಿ . . . ನಿಮ್ಮ ಬಗೆವ ಕಾರ್ಯಮಂ ಬಗೆಯಿಂ (ಆದಿಪು. ೧೪-೮೪ ವ). [ಸಂ.]

**ಸ್ತಂಭನೆ** (ನಾ). ನಿರೋಧ; ತಡೆ : ಗ್ರಹಣಿಗೆ:- ಜಾಯಿಕಾಯಿ, ಹಿಪ್ಪಲಿ . . ಚೂರ್ಣಿಸಿ ಭಂಗಿಸೊಪ್ಪಿನ ರಸದಲ್ಲಿ ಅರೆದು ಗುಂಜಾಪ್ರಮಾಣದಲ್ಲಿ ಗುಳಿಗೆಯಂ ಮಾಡಿ ಸಕ್ಕರೆ, ಜೇನುತುಪ್ಪದಲ್ಲಿ ಕೊಳ್ಳೆ ಸ್ತಂಭನೆ (ವಿಷ್ಣವಿ. ೬೮). [ಸಂ. ಸ್ತಂಭನ]

**ಸ್ತಂಭಿತ** (ಗು). ೧. ತಡೆಗೆ ಒಳಗಾದ; ನಿರೋಧಿಸಲ್ಪಟ್ಟ. ೨. ನಿಷ್ಕ್ರಿಯ ಗೊಳಿಸಲ್ಪಟ್ಟ; ನಿಶ್ಚೇತನವಾದ. (ನಾ). ೩. [ನಾಟ್ಯ] ಉಸಿರಾಡುವ ಒಂದು ಕ್ರಮ; "ಶಸ್ತ್ರಪ್ರಯೋಗ ಮಾಡುವವನಂತೆ ಉಸುರಾಡುವುದು" (ಲಾಸ್ಯರಂ. ೨೭೮ ಗದ್ಯಾನುವಾದ); ಸಮ, ಭ್ರಾಂತ, ವಿಲೀನ, ಆಂದೋಳಿತ, ಕಂಪಿತ, ಸ್ತಂಭಿತ . . . ಸೀತ್ಕೃತ - ಈ ಹತ್ತು ಮೊದಲ ಒಂಬತ್ತುಗೂಡಿ ಒಟ್ಟು ಹತ್ತೊಂಬತ್ತು ಭೇದಂ ಗಳ್ (ಲಾಸ್ಯ ರಂ. ೩-೭೮ ವ). [ಸಂ.]

**ಸ್ತಂಭಿಸು** (ಕ್ರಿ). ೧. ಕಂಬವನ್ನು ನೆಡು. ೨. ಬಿಗಿಗೊಳಿಸು; ಭದ್ರಗೊಳಿಸು. ೩. ನಿಶ್ಚೇಷ್ಟಗೊಳಿಸು; ನಿಷ್ಕ್ರಿಯಗೊಳಿಸು: ಮಿಥ್ಯಾಜ್ಞಾನಿಯ ಮಾನಮಂ ಸ್ತಂಭಿಸುವ ಮಾನಸ್ತಂಭಂಗಳಿಂ (ಅಜಿಪು. ೭-೨೦ ವ); ಉಮಾಧಿಪನಂ ಸ್ತಂಭಿಸಿ ತಾಳ್ದಿದಂ ಜಯಮನೇಂ ಕೃಷ್ಣಂ ಜಗದೀಶ್ವರನೋ (ಜಗವಿ.೧೪-೩೨). ೪. ನಿಲ್ಲಿಸು; ತಡೆ: ಜೃಂಭಾಸ್ತ್ರದಿಂ ಮುಕುಂದಂ ಸ್ತಂಭಿಸಿ ರಥಮಂ ರಥಾಶ್ವಮಂ ಸಾರಥಿಯಂ ಸ್ತಂಭಿಸಿದಂ ಶಲ್ಯನ ದೋಸ್ತಂಭಮಂ (ಜಗವಿ. ೭-೪೭); ಈ ಮಹಾಸತಿ . . . ಎಮಗಭಯವಿತ್ತೆಮ್ಮನಟ್ಟಿ ಬರ್ಪಮರರಂ ಸ್ತಂಭಿಸಲ್ಕೆ (ಚೆಬಪು.೨೧-೩೪). ೫. ಭಯ, ಆಶ್ಚರ್ಯ ಮೊದಲಾದುವುಗಳ ಆಧಿಕ್ಯದಿಂದ ಸ್ಥಗಿತಗೊಳ್ಳು; ನಿಶ್ಚೇತನವಾಗು : ಎರಡು ನಿಮಿಷಕಾಲ ಕುಳಿತಲ್ಲಿಯೆ ಸ್ತಂಭಿಸಿಹೋದರು ಪ್ರಭುಗಳು (ಶಾಂತಲಾ. ೩೦೭). [ಸ್ತಂಭನ + - ಇಸು]

**ಸ್ತಂಭೀಭೂತ** (ಗು). ೧. ಆಶ್ಚರ್ಯ, ಭಯ ಮುಂತಾದ ಮನೋಭಾವ ಗಳ ಆಧಿಕ್ಯದಿಂದ ಅಥವಾ ರೋಗಾತಿಶಯದಿಂದ ಸಂಪೂರ್ಣವಾಗಿ ನಿಶ್ಚೇತನವಾದ; ಮರವಟ್ಟ. (ನಾ). ೨. ನಿಶ್ಚೇತನಹೊಂದಿದ ವ್ಯಕ್ತಿ; ಮರವಟ್ಟವನು: ಡಾಕ್ಟರರು ಅಚ್ಚರಿಯಿಂದ ಸ್ತಂಭೀಭೂತರಾದರು (ಫಲಸಂ. ೩೩). [ಸಂ.]

**ಸ್ತನ** (ನಾ). ೧. ಮೊಲೆ; ಕುಚ: ತನುಜಂ . . . ತಣಿಯುಂಡು ಬಳೆವೊಡೀ ಪೀನಘನಸ್ತನಮ ಪಯೋಧರಂ (ಪುಷ್ಪಪು.೩-೯೨); ಕಾಂತಿಮತಿಗೆ ನಮಸ್ಕಾರಮಂ ಮಾಡಲೊಡಂ ಸ್ತನದಿಂ ಚುಮ್ಮೆಂದು ಪಾಲ್ಗಳ್ ಸುರಿಯೆ (ದಶಕು. ೯-೧೦೫). ೨. ಮೊಲೆಯ ತೊಟ್ಟು. ೩. ಕೆಚ್ಚಲು. [ಸಂ.]

**ಸ್ತನಂಧಯ** (ನಾ). ಸ್ತನ್ಯಪಾನ ಮಾಡುವ ಮಗು; ಹಸುಗೂಸು: ಎನ್ನ ಬಯಕೆ ಯಪ್ಪುದು ಸಂಧ್ಯಾಸ್ತನಂಧಯಸಮಾಗಮಸಮಾನಂ (ಆದಿಪು. ೩-೪೩ ವ). [ಸಂ.]

**ಸ್ತನಪಯೋಗಂಧಿ** (ನಾ). ನೆಲಬೇವು: "ಸ್ತನಪಯೋಗಂಧಿಯೆನೆ ನಲಬೇವು" (ಮಂಗರಾ.೪೦-೩೩). [ಸಂ.]

**ಸ್ತನಪಾನ** (ನಾ). ಮೊಲೆಯುಣ್ಣುವಿಕೆ: ಸ್ತನಪಾನಂ ಮಾಡುತ್ತಂ ವನಿತೆಯ ನವಸೂತ್ರಮಣಿಗಳಂ ಪಿಡಿದೊಲವಿಂ . . . ಎಣಿಸುವ ಮುದ್ದುಮಗನದೆಂದಾದಪನೋ (ತ್ರಿಪುವಿ.೧೭-೮೭). [ಸಂ.]

**ಸ್ತನಪಾನಗುಡು** (ಕ್ರಿ). ಮೊಲೆಹಾಲುಣಿಸು; ಮೊಲೆಯೂಡು: ಸ್ತನಪಾನ ಗುಡುವ ಹೆಂಗಳಿಗೆ ಪೇಳ್ವೆಳು ಹತ್ತುದಿನದೆಡೆಸಂದಿನ ರಾತ್ರಿ ಘನ ಜೋಪಾನದೊಳೀಡೇಱ ಬೇಕೆಂದು (ಮೋಹತ. ೪-೭೭). [ಸ್ತನಪಾನ + ಕುಡು (< ಕೊಡು)]

**ಸ್ತನಭರ** (ನಾ). ಮೊಲೆಗಳ ಭಾರ: ಗುರುಜಘನ ಸ್ತನಭರಮಂಥರಲೀಲಾಲಸ ವಿಲಾಸಿನೀಚಳಿತಂಬೊಲ್ (ಕವಿರಾ. ೧-೭೭); ಗುರುಕಬರೀಭರ ಸ್ತನಭರೋರು ಭರಸ್ಥಿತಿಯಿಂ . . . ಆದ ಗಮನಾಲಸವೃತ್ತಿಯನೇನನೆಂದಪೆಂ (ಜಗವಿ. ೨-೯೭). [ಸಂ.]

**ಸ್ತನಯಿತ್ನು** (ನಾ). ೧. ಮೋಡ; ಮೇಘ: "ಸ್ತನಯಿತ್ನು ವಾರಿವಾಹಂ . . . ಜೀಮೂತಂ" (ವಸ್ತುಕೋ. ೧೦-೫೩). ೨. ಗುಡುಗು; ಮೇಘಧ್ವನಿ. [ಸಂ.]

**ಸ್ತನಾಂತರ** (ನಾ). ೧. ಹೃದಯ. ೨. ಮೊಲೆಗಳ ನಡುವಿನ ಅಂತರ: ಸಮಸುವಿಭಕ್ತ ಸ್ತನಾಂತರನಂ . . . ಅನಿಮ್ನನಾಭಿಯಂ (ಶಾಂತಿಪು. ೧೦-೧೪೨ ವ). [ಸಂ.]

**ಸ್ತನಾಲಿಂಗನ** (ನಾ). [ಕಾಮಶಾ] ಹನ್ನೆರಡು ಬಗೆಯ ಆಲಿಂಗನ ಪ್ರಕಾರಗಳಲ್ಲಿ ಒಂದು; ಗಾಢಾಲಿಂಗನ: ಸ್ತ್ರೀ ಉನ್ನತ ಸ್ಥಾನದೊಳಿರ್ದು ಪ್ರಿಯನ ಎದೆಯಲ್ಲಿ ಪ್ರಿಯದಿಂ ಮೊಲೆಗಳೊಡಲಂ ಪೊಗುವಂತೆ ಗಾಢಾಲಿಂಗನಂಗೆಯ್ವುದು ಸ್ತನಾಲಿಂಗನ ವೆಂಬಾಲಿಂಗನ (ಕಾಮಶಾ. ೨೨೪). [ಸಂ.]

**ಸ್ತನಾಶ್ಲೇಷ** (ನಾ). = ಸ್ತನಾಲಿಂಗನ: ಅನುವಿಂ ಪಸೆಯೊಳ್ ಕುಳ್ಳಿರ್ದಿನಿಯನ ತೊಡೆಯೇಱಿ ಕಾಂತೆ ವಕ್ಷಸ್ಥಳಮಂ ಘನಕುಚದಿನೊಂಕಿಯಾಲಿಂಗನಮಂ ಮಾಡುತ್ತಿರಲ್ ಸ್ತನಾಶ್ಲೇಷಾಖ್ಯಂ (ಮನ್ಮವಿ. ೧೧-೭). [ಸಂ.]

**ಸ್ತನಿಕ** 'ಸ್ತಾನೀಕ' ನೋ.

**ಸ್ತನಿತ** (ಗು). ೧. ಧ್ವನಿ ಮಾಡಿದ. ೨. ಗುಡುಗುವ; ಗರ್ಜಿಸುವ. (ನಾ). ೩. ಗುಡುಗು; ಮೇಘಗರ್ಜನೆ: ಸ್ತನಿತಧನುರ್ಗುಣಧ್ವನಿ ಶತಹ್ರದಶಸ್ತ್ರಮರೀಚಿ . . . ಕೊಂಡುದಾಗಳಂಬಿನ ಮಱೆ (ಪಂರಾಮಾ. ೧೩-೯೯); ಸ್ತನಿತಘನಬೃಂಹಿತಂ ದುರ್ದಿನಮದಪೂರಂ ಪಯೋದಗಜಘಟೆ ಸುಱಿದತ್ತು (ಚಂದ್ರಪ್ರ. ೪-೩೨). ೪. ದೊಡ್ಡ ಶಬ್ದ; ನಿನಾದ; ಕಲಕಲ. ೫. ಕೈಚಪ್ಪಾಳೆಯ ಸದ್ದು. ೬. ಬಿಲ್ಲಿನ ಹೆದೆಯ ಠೇಂಕಾರ. ೭. [ಜೈನ] ಹತ್ತುಬಗೆಯ ಭವನಾಮರರಲ್ಲಿ ಒಂದು ವರ್ಗ: ಅಲ್ಲಿಯ ಸುರ ನಾಗ ವಿದ್ಯುತ್ಸುಪರ್ಣಾಗ್ನಿವಾತ ಸ್ತನಿತೋದಧಿ ದ್ವೀಪ ದಿಕ್ಕುಮಾರರೆಂದು ಭವನಾಮರರ್ ದಶವಿಕಲ್ಪಮಪ್ಪರ್ (ಸುಕುಮಾ. ೧೧-೪೧ ವ). [ಸಂ.]

**ಸ್ತನಿತಾಮರ** (ನಾ). = ಸ್ತನಿತ ೭: ಆ ದಿವಿಜಾದಿನಾಥಮತದಿಂ ಸ್ತನಿತಾಮರ ಬೃಂದಮುಂದು ಗಂಧೋದಕವೃಷ್ಟಿಯಂ ಸುರಿವರೊಯ್ಯನೆ ತಣ್ಣಗೆ ತಮ್ಮನಾಗೆ ಮೇಲಾದನಿಲಾಮರರ್ ಸುಱಿದು ಬೀಸುವರ್ (ಶಾಂತಿಪು. ೧೨-೨೨). [ಸಂ.]

**ಸ್ತನ್ಯ** (ನಾ). ಮೊಲೆಹಾಲು: ಜನನೀಸ್ತನ್ಯಮನುಂಡೆ ನಾಂ ಬಳಿಕ ನೀಂ . . . ಬಾಲತ್ವದಿಂದೆಲ್ಲಿಯುಂ ವಿನಯೋಲ್ಲಂಘನಮಾದುದಿಲ್ಲ (ಗದಾಯು. ೫-೭); ಪಂಚಭೂತಂಗಳ್ಗಂ ನಿಮಗಂ ಪ್ರತ್ಯುಪಕಾರಕ್ಷಮರಾರ್ ದೇಹಿಗಳೊಳಂಬಿಕಾಸ್ತನ್ಯಕ್ಕಂ (ಪಂರಾಮಾ. ೧೧-೩೯). [ಸಂ.]

**ಸ್ತನ್ಯಪಾನ** (ನಾ). ಮೊಲೆಹಾಲನ್ನು ಕುಡಿಯುವುದು; ಸ್ತನಪಾನ: ಸ್ತನ್ಯಪಾನದ ಸವಿಯ ಚೆನ್ನರಱಿಕುವಂತೆ ಮಣ್ಣುಬೊಂಬೆಯು ಬಲ್ಲುದೆ (ಪುರಂದ. ೪-೭೭-೧). [ಸಂ.]

**ಸ್ತಬಕ** (ನಾ). ೧. ಹೂವು ಮೊದಲಾದುವುಗಳ ಗೊಂಚಲು,– ಗುಚ್ಛ: ಬಳಸುವೆಳದುಂಬಿಗಳ ನಾದಕ್ಕೆ ಬೆರ್ಚಿ ಬಿಸುಟ ಕರ್ಣಪೂರ ಪಾರಿಜಾತ ಸ್ತಬಕಂಗಳುಮಂ (ಪಂರಾಮಾ. ೨-೧೩ ವ); ತಳಿರ ತೊಂಗಲುಗಳನು ನವ್ಯಕುಸುಮಸ್ತಬಕ ತುಳವ ಫಳಮಂಜರಿಯ ಮಾಲೆಯಂ ನೀಡಿ (ಹಚಕಾ. ೩-೧೭). ೨. ಸಮುದಾಯ; ಸಮೂಹ: ಸೌಮಿತ್ರಿ . . . ಬಂದಂ ವಿಮಾನಗಭಸ್ತಿಸ್ತಬಕಂ ಪಳಂಚಲೆವಿನಂ ಜ್ವಾಲಾಸಹಸ್ರಂಗಳಂ (ಪಂರಾಮಾ. ೧೨-೯೪). ೩. ನವಿಲುಗರಿ. ೪. ಕುಚ್ಚು; ಗೊಂಡೆ. ೫. ಗ್ರಂಥದ ಅಧ್ಯಾಯ; ಆಶ್ವಾಸ. [ಸಂ.]

**ಸ್ತಬ್ಧ** (ಗು). ೧. ಸ್ಥಿರವಾದ; ನಿರುದ್ಧವಾದ. ೨. ನಿಷ್ಕ್ರಿಯವಾದ; ಅಲುಗಾಡದ: ಕಿಱಿದುಬೇಗಕ್ಕಾಕೆ ಕಣ್ಣಾಳಂ ತೆಱೆದು ಲಜ್ಜಿತೆಯಾದಂತೆಯುಂ ವಿಸ್ಮಯಸ್ತಬ್ಧ ದೃಷ್ಟಿಯಾಗಿ . . . ಅಲ್ಲಿಂದೆಬ್ಬು (ಕಾದಂಉ. ೩೭೫). ೩. ತಿಳಿವಳಿಕೆಯಿಲ್ಲದ; ದಡ್ಡತನದ. (ನಾ). ೪. ಹಠವಾದಿ; ಕಲ್ಲೆದೆಯವನು: ಅರಸಂ ಸ್ತಬ್ಧಂ ಪೆರ್ಗಡೆ ಮರುಳಂ ತದ್ಭರ್ತೃ ಪಿಸುಣನಾಪ್ತಂ ಪುಸಿವಂ (ಮುದತಿ. ೧೦-೫೧). ೫. [ನಾಟ್ಯ] ನರ್ತನದಲ್ಲಿ ಕಂಪಿತ, ವಲಿತ, ಸ್ತಬ್ಧ, ಉದ್ವರ್ತಿತ, ನಿವರ್ತಿತ ಎಂಬ ಐದು ಬಗೆಯ ತೊಡೆಯ ನಿಲವುಗಳಲ್ಲೊಂದು; ಆ "ತೊಡೆಗಳನ್ನು ಅಲ್ಲಾಡಿಸದಂತೆ ನಿಲ್ಲಿಸುವುದು. ಹೆದರಿಕೆ, ವಿಷಾದ ಇವುಗಳನ್ನು ಅಭಿನಯಿಸುವಾಗ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೨೬೩ ಗದ್ಯಾನುವಾದ): ಬೆಱಗಿಂ ನಿಲಲ್ಕೆ ತೊಡೆಗಳ್ ಮಱೆನಿಂತು ಸ್ತಬ್ಧಂ (ಲಾಸ್ಯರಂ. ೨-೧೪೦). [ಸಂ.]

**ಸ್ತಬ್ಧತ್ವ** (ನಾ). ೧. ನಿಶ್ಚಲತೆ; ಅಚಲವಾಗಿರುವಿಕೆ. ೨. ನಿಶ್ಚೇಷ್ಟತೆ. ೩. ಹಟಮಾರಿತನ; ಮೊಂಡುತನ. ೪. ಬಿರುಸು; ಒರಟುತನ. [ಸಂ.]

**ಸ್ತರ** (ಗು). ೧. ಹರಡುವ; ವಿಸ್ತರಿಸುವ. (ನಾ). ೨. ಹರಡಿದುದು; ಹಾಸಿದುದು. ೩. ಹಾಸಿಗೆ; ತಲ್ಪ. ೪. (ಭೂಮಿಯ) ಪದರ; ಪಾತಳಿ: ಅದರ ಬೆಳಕು ಒಳಗೆಲ್ಲ ಸೂಸಿದಂತೆ ಮನಸ್ಸಿನ ಮೇಲಿನ ಉನ್ನತದ ಸ್ತರಗಳು ಒಂದೊಂದೇ ನಿಚ್ಚಳವಾಗಿ ಗೋಚರವಾಗುತ್ತಿದ್ದವು (ಸಮಜೀ. ೯೨೭). ೫. ಮಟ್ಟ; ಹಂತ: ಯಾವ ಸ್ತರದ ಬೌದ್ಧಿಕ ಹಾಗೂ ಭಾವನಾಮಯ ಸಂಕೀರ್ಣತೆಗೆ ಒಂದು ಕಲಾಕೃತಿಯು ಒಯ್ಯಬಲ್ಲುದೋ ಆ ಸ್ತರದ ಮೇಲಿಂದ ಅದರ ಯೋಗ್ಯತೆಯು ನಿರ್ಣಯವಾಗುತ್ತದೆ (ನವ್ಯಕಾ. ೬೨). ೬. ವರ್ಗ; ವಿಭಾಗ: ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ನಾಲ್ಕು ಸ್ತರಗಳಲ್ಲಿ ಅಂದಿನ ಸಮಾಜವನ್ನು ವಿಭಾಗಿಸಲಾಗಿತ್ತು (ಧರ್ಮಸಾ. ೧೧೪). [ಸಂ.]

**ಸ್ತವ** (ನಾ). ೧. ಸ್ತುತಿಸುವುದು; ಹೊಗಳುವುದು. ೨. ಸ್ತುತಿ; ಸ್ತೋತ್ರ: ಸ್ತವಭೇಷಜದಿಂದಘ ಕರಗುವುದಲ್ತೆ (ಜನಾಲ. ೨೨-೨೨); ಸ್ತವ ಸ್ತೋತ್ರ ಪಠಣಪ್ರಕರದ . . . ಸಂಭ್ರಮಕೆ ಬೆಱಗಾದನು ಹರಿಶ್ಚಂದ್ರನು (ಹಚಕಾ. ೬-೩೯); ವಂದಿಮಾಗಧಸ್ತವರವ ಮುಖ್ಯ ಬಂದನೆಸೆವೋಲಗಶಾಲೆಗಿಳಾಧಿನಾಯಕಂ (ರಾಜಶೇ. ೧೨-೪೧). [ಸಂ.]

**ಸ್ತವಂಗೆಯ್** (ಕ್ರಿ). ಸ್ತುತಿಸು; ಸ್ತೋತ್ರಮಾಡು: ಮೊದಲೊಳ್ ಸಂಭಾಷಣಂಗೆಯ್ವುದೆ ವಲಮಿಳಿಕೆಯ್ವಂದಮೆಂದಾದರಂಗೆಯ್ವುದಹಂಕಾರಂ ಸ್ತವಂಗೆಯ್ವುದೆವೆಮಗೆ ದಲ್ಗೌರವಂ (ಕಾದಂಉ. ೧೧೨); ದೇವವರಂ ಸ್ತವಂಗೆಯೆ ವರಂಗೊಟ್ಟಾ ಮಹೇಂದ್ರಂಗೆ . . . ದುರ್ಗಿ ಬಱಿಕ್ಕೆ ತಾಂ ನೆಲಸಿ ನಿಂದಳ್ (ಜಗವಿ. ೩-೧೭). [ಸ್ತವ + ಕೆಯ್]

**ಸ್ತವಕ** (ನಾ). ೧. ಹೂಗೊಂಚಲು: ಫಲಿನೀಫಲದ ಗುಚ್ಛಮಿವು ಚೂತಫಲಸ್ತವಕಂ ದಲೆಂದು ತೋಱಿದನವನೀಪಾಲಂಗೆ ಲೀಲೆಯಿಂ ವನಪಾಲಂ (ಚಂದ್ರಪ್ರ. ೨-೭೬). ೨. ಗ್ರಂಥದ ಭಾಗ,– ಪ್ರಕರಣ; ಆಶ್ವಾಸ. ೩. ಸಮುದಾಯ; ಸಮೂಹ. ೪. ಹೊಗಳಿಕೆ; ಸ್ತುತಿ. ೫. ಹೊಗಳುವವನು; ಸ್ತುತಿಪಾಠಕ. [ಸಂ.]

**ಸ್ತವನ** (ನಾ). ೧. = ಸ್ತವ ೨: ಸವನಾರ್ಚನ ಸ್ತವನ ಸಮಯಾನಂತರಂ (ಆದಿಪು. ೭-೧೦೬ ವ); ಜಿನಸ್ತವವಾದೊಡನೆ ವಿಷ್ಣುವಿನ ಸ್ತವನವು ಬರುವುದು (ಸಾಹಿಸ. ೧೨). ೨. [ಜೈನ] ಮೂಲಗುಣಗಳಲ್ಲಿ ಒಂದು: ವಸ್ತುರೂಪಗುಣಂಗಳಿಂ ಚತುರ್ವಿಂಶತಿ ಅರ್ಹತ್ಪರಮೇಷ್ಠಿಗಳಂ ಸ್ತುತಿಯಿಸುವುದು ಸ್ತವನಮೆಂಬ ಹದಿನೇಳನೆಯ ಮೂಲಗುಣಂ (ಶ್ರಾವಕಾ. ೮೨-೨೦). [ಸಂ.]

**ಸ್ತವನೀಯ** (ಗು). ೧. ಹೊಗಳಲು ಯೋಗ್ಯವಾದ; ಸ್ತುತ್ಯ; ಸ್ತೋತ್ರಾರ್ಹವಾದ. (ನಾ). ೨. ಸ್ತುತ್ಯವಾದುದು; ಶ್ಲಾಘ್ಯವಾದುದು: ಮುನೀಂದ್ರಸೇವ್ಯಂ ಭವ್ಯಸ್ತವನೀಯಮೆನಿಸಿದಾಚಾಮ್ಲವರ್ಧನಂ ಪುಣ್ಯವರ್ಧನಂ ಕೇವಲಮೇ (ಸುಕುಮಾ. ೯-೧೩); ಕವಿತಾಪ್ರೌಢಿಯೊಳಬ್ಬಸಂಭವನೆ ಕರ್ತಾರಂ ಕ್ರಿಯಾಕೌಶಲಂ ಸ್ತವನೀಯಂ (ಶಮದ. ೨೫೧ ಪ್ರಯೋ). [ಸಂ.]

**ಸ್ತಳನಿಬಂಧಿ** (ನಾ). ಪ್ರಾದೇಶಿಕವಾದ ತೆರಿಗೆ; ಸ್ಥಳೀಯವಾದ ಸುಂಕ: ಬೆಳಗಲಿಯ ವೊಳಸುಂಕ ಹೊಱಸುಂಕ ಸ್ತಳನಿಬಂಧಿಯಾಗಿ (ಎಕ. VII, ಶಿವಮೊ. ೭೮-೭೭; 1291). [< ಸಂ. ಸ್ಥಲನಿಬಂಧಿನ್]

**ಸ್ತಾನ, ಸಾನ$_2$** (ನಾ). ೧. ಸ್ಥಾನ; ಪದವಿ: (೬). ೨. ಸ್ಥಳೀಯ; ಮೂಲಿಗ: ಅಱುವತ್ತು ಗೌಡುಂ ನೂಱಿಪ್ಪತ್ತು ಸ್ತಾನಮುಂ ಮುಂತಾಗಿ (ಎಕ. VII, ಶಿವಮೊ. ೬೯-೨೪; 1320). **ಸಾನ$_2$**: ೩. ಭೂತದ ಗುಡಿ: ಆ ಗುಡಿಗಳಲ್ಲಿ ವರ್ಷಕ್ಕೊಮ್ಮೆ ಬಂಡಿ ಇರುವ 'ಸಾನ' (= ಸ್ಥಾನ ಅಂದರೆ ಭೂತದ ಗುಡಿ)ಗಳಲ್ಲಿ ಬಂಡಿ ಎಳೆಯುವ, ಇಲ್ಲದಲ್ಲಿ ಸಾಮಾನ್ಯವಾದ 'ಆಯನ' (= ಉತ್ಸವ)ಗಳು ಆಗುವುದುಂಟು (ತುಳುನಾ. ೨೫೨); ಅಲ್ಲೆ ಒಂದು ಸಣ್ಣ ಭೂತಾಲಯ, ಸಾನ (ಒಡ್ಡಿಉ. ೩). 'ತಾಣ' ಪರಾ. [< ಸಂ. ಸ್ಥಾನ./ತುಳು. ಸಾನ]

**ಸ್ತಾನೀಕ, ಸಾಂತಿಗ, ಸಾನಿಗ, ಸ್ತನಿಕ** (ನಾ). ದೇವಸ್ಥಾನದ ಆಡಳಿತಾಧಿಕಾರಿ; ಸ್ಥಾನಿಕ: 'ಸ್ತಾನೀಕತನ' ಪರಾ. **ಸಾಂತಿಗ**: ಕೋಳೂರು ನಖರೇಶ್ವರದೇವಳದ ಅರ್ಚಕ ಪರಮೇಶ್ವರ ಸಾಂದೇವ ಸಾಂತಿಗ (ಕ್ರಿ. ಶ. ೮೮೫ – ಸಾಂತಿಗವೆಂಬುದು ಸ್ಥಾನಿಕದ

ಅಪೂರ್ವ ಪ್ರಭೇದವೆಂದು ಪರಿಗಣಿಸಲ್ಪಟ್ಟಿದೆ) (ತುಳುನಾ. ೧೨೪). **ಸಾನಿಗ:** ದೇವರಿಗೆ ತಂತಮ್ಮ ಕರ್ಮ್ಮಾನ್ತರದ ಬೆಸಂಗಳಂ ಮಾಡಿ ಮೂ(೦)ನೂರ್ವ್ವರು ಸಾನಿಗರುಂ . . . ನಿಬದ್ಧಕಾಱರುಂ ಸುಖವಿರ್ಪ್ಪರು (ಸೌಇಇ. VI, ೧೧೩-೪; ಸು. 1200 ?). **ಸ್ತನಿಕ:** ಸೀರೆಯ ಬಯಿರೇದೇವರ ಸ್ತನಿಕ ಯೋಚಂಣನಿಗೆ ಭೈರೇದೇವರ ಶ್ರೀಪತಿಯ ಪಾದವೆ ಗತಿ (ಎಕ. X(S), ಕೋಲಾರ. ೩೦೭-೭; 17ನೆಯ ಶತ). [< ಸಂ. ಸ್ಥಾನಿಕ]

**ಸ್ಥಾನೀಕತನ** (ನಾ). ಸ್ಥಾನಿಕನ ವೃತ್ತಿ: ಅಮ್ಮಗೌಡ ಏರ್ಬಾಗಿಲ ಸ್ಥಾನೀಕತನ ಮುಖ್ಯವಾಗಿ ನಡ್ಸಿ (ಎಕ. XIV, ತಿರುಮ. ೧೪೫-೩ ; 1090). [ಸ್ಥಾನೀಕ + - ತನ]

**ಸ್ತ್ಯಾನಕ** (ನಾ). ಹೊಗಳುವವನು; ಸ್ತುತಿಸುವವನು: ದೈತ್ಯಸ್ತ್ಯಾ[ಪಾಠಾಂ. ಸ್ಥಾ]ನಕರು ನಾವೆಂದರಾ ವೈತಾಳಿಕರು (ನಿಭಾಗ. ೭-೮-೨೯). [ಸಂ.]

**ಸ್ತಿಮಿತ** (ಗು). ೧. ಒದ್ದೆಯಾದ; ತೊಯ್ದ. ೨. ನಿಶ್ಚಲವಾದ; ಶಾಂತವಾದ. ೩. ಬಿಗಿಯಾಗಿ ನೆಲಸಿದ; ಭದ್ರವಾಗಿ ಊರಿದ. ೪. ಮುಚ್ಚಿದ. ೫. ನಿಷ್ಕ್ರಿಯಗೊಂಡ; ಮರವಟ್ಟ. ೬. ಮೃದುವಾದ; ಕೋಮಲವಾದ. ೭. ಸಂತುಷ್ಟವಾದ; ಸಂತೃಪ್ತವಾದ. (ನಾ). ೮. ಭದ್ರವಾದ ನೆಲೆ; ಸ್ಥಿರತೆ: ಕಟ್ಟಿಯ ಜೀವನ ಒಂದು ಸ್ತಿಮಿತಕ್ಕೆ ಬಂದಿತು (ಗಂಮಾಯಿ. ೨೯೫); ಇತರ ಬಗೆಯಲ್ಲಿ ಪೇಟೆಯ ವ್ಯವಸ್ಥೆ ಮಾಡಿ ಎಲ್ಲವನ್ನೂ ಸ್ತಿಮಿತಕ್ಕೆ ತರಬೇಕಾಗುವುದು (ಹಣಪ್ರ. ೧೮೯). [ಸಂ.]

**ಸ್ತಿಮಿತಕಾಯ** (ನಾ). ನಿಶ್ಚಲವಾದ ದೇಹವುಳ್ಳವನು; ಅಲುಗಾಡದೆ ಕುಳಿತವನು: ಕೈಲಾಸಾದ್ರಿಯಲಿ . . . ಭೂಯಸ್ತಿಮಿತಕಾಯನ ಕಂಡನಬುಜಭವ (ಕುವ್ಯಾಕ. ೬-೧೫). [ಸಂ.]

**ಸ್ತಿಮಿತಗಾತ್ರೆ** (ನಾ). ನಿಶ್ಚೇಷ್ಟಳಾದವಳು; ಭಾವಾಧಿಕ್ಯದಿಂದ ಮರವಟ್ಟವಳು: ಆಕ್ರಾಂತಚಿಂತಾಭರಸ್ತಿಮಿತಗಾತ್ರೆಯುಂ . . . ಆಗಿರ್ಪಿನಂ (ಚಂದ್ರಪ್ರ. ೩-೫೦ ವ). [ಸಂ. ಸ್ತಿಮಿತಗಾತ್ರಾ]

**ಸ್ತಿಮಿತತಾರಕ** (ನಾ). ಕಣ್ಣಾಲಿಗಳನ್ನು ಸ್ಥಿರವಾಗಿ ಒಂದೆಡೆಗೆ ನಿಲ್ಲಿಸಿದವನು; ಸ್ಥಿರದೃಷ್ಟಿಯಾದವನು: ನಿಶ್ಚಲಪಕ್ಷ್ಮಂ ಸ್ತಿಮಿತತಾರಕಂ ಭುಜಬಲಿ ಕಣ್ಗೊಳಿ ತವೆ ಪೀರ್ವವೊಲ್ ನಿಶ್ಚಳತನು ನಡೆನೋಡೆ ಭರತರಾಜಂ ಸೋಲ್ತಂ (ಆದಿಪು. ೧೪-೧೧೫). [ಸಂ.]

**ಸ್ತಿಮಿತದೃಷ್ಟಿ** (ನಾ). = ಸ್ತಿಮಿತತಾರಕ: ಧ್ಯಾನಾಧೀನೈಕ ಸಮಾಧಾನಮನಂ ಸ್ತಿಮಿತದೃಷ್ಟಿ ಪೋಲ್ತಂ ಮುನಿ . . . ಅಮಳ ಕಮಳಾಕರಮಂ (ಪುಷ್ಪಪು. ೧೪-೩೨). [ಸಂ.]

**ಸ್ತಿಮಿತಾಕ್ಷ** (ನಾ). ಸ್ಥಿರವಾದ ದೃಷ್ಟಿಯುಳ್ಳುದು: ಮದನಂ ಸ್ತಿಮಿತಾಕ್ಷಂ ಶ್ಲಿಷ್ಟದಂತ ಮಷ್ಟಾಂಗಪಾತಮಭ್ರೂಭಂಗಾಸ್ಪದಮೆಸೆದುದು ಯೋಗನಿಯೋಗದೊಳಜಿತ ಮಹಾಮುನೀಂದ್ರವೃಂದಾರಕನಾ (ಅಜಿಪು. ೭-೧೧). [ಸಂ.]

**ಸ್ತಿರವಾರ** (ನಾ). ಶನಿವಾರ; ಮಂದವಾರ: ಸ್ತಿರವಾರ ಮಹಾಪರ್ವಕಾಲದಲ್ಲು (ಎಕ. IX, ದೇವನ. ೧೫-೯; 1698). [< ಸಂ. ಸ್ಥಿರವಾರ]

**ಸ್ತಿರಾದಾಯ** (ನಾ). ಸ್ಥಿರಾಸ್ತಿಯಿಂದ ಬರುವ ಆದಾಯ; ಗದ್ದೆ ಹೊಲ ತೋಟ ಮೊದಲಾದುವುಗಳಿಂದ ಬರುವ ಆದಾಯ: ಚಿರಾದಾಯ ಸ್ತಿರಾದಾಯ ಅಕ್ಷೀಣಿ ಅಗಾಮಿ . . . ಸಿದ್ಧಸಾಧ್ಯಂಗಳ್ (ಮ್ಯಆರಿ. ೧೯೩೦, ೯೩-೩೦; 1605). [< ಸಂ. ಸ್ಥಿರಾದಾಯ]

**ಸ್ತುತ** (ಗು). ೧. ಹೊಗಳಲ್ಪಟ್ಟ; ಸ್ತುತಿಸಲ್ಪಟ್ಟ. ೨. ಹೊಗಳಿಕೆಗೆ ಯೋಗ್ಯವಾದ; ಶ್ಲಾಘ್ಯ. (ನಾ). ೩. ಹೊಗಳಿಕೆ; ಸ್ತೋತ್ರ. ೪. ಶಿವನ ಒಂದು ಹೆಸರು. [ಸಂ.]

**ಸ್ತುತಿ** (ನಾ). ೧. ಕೊಂಡಾಟ; ಹೊಗಳಿಕೆ: ಸ್ತುತಿನಿಂದೆಗಳಿಂ ಸವಿವಕ್ಷಿತಗುಣದೊಳ್ ಸದೃಶಮಾಗಿ ಪೇಱ್ಟುದು ಪೆಱತಂ ನುತ, ಸದೃಶಯೋಗಿತಾಲಂಕೃತಿಲಕ್ಷಣಮಕ್ಕುಂ (ಕವಿರಾ. ೩-೯೫); ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದರೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು (ಮಹಾದೇ. ಬ. ೪೫-೧೦೭). ೨. ಸ್ತೋತ್ರ; ಸ್ತುತಿಪದ್ಯ. ೩. ಮುಖಸ್ತುತಿ; ತೋರಿಕೆಯ ಹೊಗಳಿಕೆ. [ಸಂ.]

**ಸ್ತುತಿಗೆಯ್, ಸ್ತುತಿಗೈ** (ಕ್ರಿ). ಸ್ತುತಿಸು; ಹೊಗಳಿಹಾಡು: ಯಥಾರ್ಥಂ ಸ್ತುತಿಗೆಯ್ದು . . . ದಂತಿಯ ಮೇಗಿರ್ದು ವಿನಮ್ರನಾಗೆ ದಿವಿಜೇಂದ್ರಂ (ಶಾಂತಿಪು. ೧೦-೧೦); ಮೃಡಗುಣಸ್ತುತಿಗೆಯ್ವ ಘೋಷಣವಡಗೆ ಸಾನಂದಾಶ್ರುಗಳಿನೆಡೆವಿಡದೆ ನೋಡುವ ನಯನಗಳು ಹೊಳೆದಾವರಿಸುತಿರಲು (ಬಸವಪು. ೩೫-೫). **ಸ್ತುತಿಗೈ:** ಹರಿಯ ಕಂಡಾಕ್ಷಣ ಗೌತಮ ಮುನಿಪತಿ ನೆಱೆ ಸ್ತುತಿಗೈದನಂದಾಗ (ಕಂನವಿ. ೫-೩೨). [ಸ್ತುತಿ + ಕೆಯ್]

**ಸ್ತುತಿಗೈ** 'ಸ್ತುತಿಗೆಯ್' ನೋ.

**ಸ್ತುತಿಪಾಠಕ** (ನಾ). ಹೊಗಳುಭಟ್ಟ; ಭಟ್ಟಂಗಿ; ವಂದಿ: "ವೈತಾಳಿಕ ಪ್ರಬೋಧಕ ಸೂತ ಸ್ತುತಿಪಾಠಕಾಖ್ಯೆ ವಂದಿಯೊಳಕ್ಕುಂ" (ವಸ್ತುಕೋಶ. ೬೫-೭೮); ಸ್ತುತಿಪಾಠಕರ ಮುಜರೆ ಕೇಳಿಸತೊಡಗಿದವು (ತುಳಸೀ. ೧೧೭). [ಸಂ.]

**ಸ್ತುತಿಯಿಸು** 'ಸ್ತುತಿಸು' ನೋ.

**ಸ್ತುತಿವೆಱು** (ಕ್ರಿ). ಹೊಗಳಿಕೆಗೆ ಪಾತ್ರವಾಗು; ಶ್ಲಾಘ್ಯವಾಗು: ಮಂಗಳಸ್ತುತಿವೆತ್ತು ಮೆಱೆದುದು ಜಂಗಮದ ಕೈಯೆರಡು (ಬಸವಪು. ೩೮-೪೭). [ಸ್ತುತಿ + ಪೆಱು]

**ಸ್ತುತಿಸು, ಸ್ತುತಿಯಿಸು** (ಕ್ರಿ). ಹೊಗಳು; ಕೊಂಡಾಡು; ಸ್ತೋತ್ರಮಾಡು: ವಚನ ರಚನೆಗಳಿಂ ಸ್ತುತಿಸಿ . . . ಮುಕುಂದನಂ ದ್ವಾರಾವತಿಗೆ ಕಳಿಪಿ (ಗದಾಯು. ೧೦-೨೭ ವ); ದೇವದೇವನನನೇಕಪ್ರಕಾರದಿಂ ಸ್ತುತಿಸಿ ಸಾಷ್ಟಾಂಗವೆಱಗಿ ಪೊಡೆಮಟ್ಟು (ಪಂಚತಂ. ೧೬೩-೩). **ಸ್ತುತಿಯಿಸು:** ಮುಂದೆ ನಿಂದು ಸ್ತುತಿಶತಸಹಸ್ರಂಗಳಿಂ ಸ್ತುತಿಯಿಸಿ ಬಂದಿಸಿ (ವಡ್ಡಾರಾ. ೧೫೯-೨೪); ತ್ರಿಕರಣಶುದ್ಧಿಯೊಳಾ ರಾಜಕುಮಾರಂ ಮಾರಮಥನನಂ ಸ್ತುತಿಯಿಸಿ (ಆದಿಪು. ೪-೨). [ಸ್ತುತಿ + - ಇಸು]

**ಸ್ತುತ್ಯ** (ಗು). ೧. ಹೊಗಳಲು ಯೋಗ್ಯವಾದ; ಸ್ತೋತ್ರಾರ್ಹವಾದ. (ನಾ). ೨. ಹೊಗಳಿಕೆಗೆ ಪಾತ್ರನಾದವನು; ಸ್ತೋತ್ರಾರ್ಹ: ಸ್ತುತ್ಯರೊಳಾರ್ ಸ್ತೋತ್ರಭಾವಮಂ ತಾಳ್ದದವರ್ (ಚಂದ್ರಪ್ರ. ೭-೬); ಶೂಲಖಡ್ಗಕಪಾಲಹಸ್ತಂ . . . ಸರ್ವನಿಗಮಸ್ತುತ್ಯನನುಪಮನು (ಬಸವಪು. ೧೭-೧೨). [ಸಂ.]

**ಸ್ತೂಪ** (ನಾ). ೧. (ಮಣ್ಣು) ಗುಡ್ಡೆ; ದಿಣ್ಣೆ. ೨. ಚಿತೆ. ೩. ಶಕ್ತಿ; ಬಲ. ೪. ರಾಶಿ; ಒಟ್ಟಿಲು. ೫. ಕುದುರೆಯ ಹಣೆ ,– ನೊಸಲು: ಸ್ತೂಪ [ಪಾಠಾಂ. ಸ್ತುಪ್ಪ]ದ ಪುರ್ಬೆಡೆ ನೋಡಲ್ಕೊಪ್ಪುವುದು ಲಲಾಟಮೆಂಬ ಪೆಸರಿಂದಕ್ಕುಂ ತಪ್ಪದೆ ಲಲಾಟಮೆಂಗುಂ ಬರ್ಪುದು ತಾಂ ಸ್ತೂಪಮೆಂಬ ಪೆಸರಂತಕ್ಕುಂ (ಅಶ್ವಶಾ. ೯-೨೦). ೬. ಬೌದ್ಧರ ಸಮಾಧಿಯ ಆಕಾರದಲ್ಲಿ ನಿರ್ಮಿಸಿದ ಸ್ಮಾರಕ: ಕಟ್ಟಿದರಜಸ್ರಂ ಸಹಸ್ರಶಿಲ್ಪಿಗಳಲ್ಲಿ ಸ್ಮಾರಕನಿಕೇತನಸ್ತೂಪಮಂ! (ಚಿತ್ರಾಂಗ. ೯೦-೨೯೯೩). ೭. [ಬೌದ್ಧ] ದಿಣ್ಣೆಯಾಕಾರದಲ್ಲಿ ರಚಿಸಿದ ಸಮಾಧಿ: ಸ್ತೂಪವೆಂದರೆ ಮರಣ ಹೊಂದಿದವರ ಜ್ಞಾಪಕಾರ್ಥವಾಗಿ ಕಟ್ಟಿರುವ ಕಟ್ಟಡ. ಇವು ಬೌದ್ಧಮತಕ್ಕೆ ಸಂಬಂಧಿಸಿದ್ದು (ಮೃವಾಸ್ತು. ೨೫). ೮. ಬೌದ್ಧಸಂನ್ಯಾಸಿಗಳಿಗೆ ಸೇರಿದ ಪೂಜ್ಯವಸ್ತುಗಳನ್ನು ಕಾದಿರಿಸಿದ ಸ್ಥಳ. [ಸಂ.]

**ಸ್ತೂಪಿತ** (ಗು). ರಾಶಿಯಾಗಿ ಒಟ್ಟಿದ; ಗುಡ್ಡೆಹಾಕಿದ: ಅನ್ಯೋರ್ವೀಶ್ವರ ವ್ರಾತದೂತಕುಳಸ್ತೂಪಿತರತ್ನರುಕ್ಪಟಳಿತಂ . . . ರಾಜಗೇಹಾಜಿರಂ (ಚಂದ್ರಪ್ರ. ೧-೧೫೦). [ಸಂ.]

**ಸ್ತೇನ** (ನಾ). ಕಳ್ಳ; ತಸ್ಕರ: "ಜಯ . . . ವೇದಪುಸ್ತಕಸ್ತೇನದುರ್ದಮ ತಮೋದೈತ್ಯ ಮದಭಂಜನ (ಜಗವಿ. ೧೨-೫೭ ವ). [ಸಂ.]

**ಸ್ತೇನಪ್ರಯೋಗ** (ನಾ). ೧. ಕಳವಿನ ಪ್ರಯತ್ನ. ೨. [ಜೈನ] ಅಸ್ತೇಯವ್ರತದ ಅತಿಚಾರಗಳಲ್ಲಿ ಒಂದು; ಯಾರಿಗಾದರೂ ತಾನೇ ಕಳವಿನ ಪ್ರೇರಣೆ ಕೊಡುವುದು ಅಥವಾ ಬೇರೆಯವರಿಂದ ಪ್ರೇರಿಸುವುದು ಅಥವಾ ಕಳವಿಗೆ ಅನುಮೋದನೆ ನೀಡುವುದು: ಹೀನಾಧಿಕ ವಿನಿಮಾನ ಸ್ತೇನಾ[ಹೃತ] ದಾನಸದೃಶ ಮಿಶ್ರವಿಲೋಪ ಸ್ತೇನಪ್ರಯೋಗವೆಂದಿವು ತಾನಸ್ತೇಯವ್ರತಕ್ಕತಿಕ್ರಮವುಮಕ್ಕುಂ (ಸುಕುಮಾ. ೬-೧೫). [ಸಂ.]

**ಸ್ತೇಯ** (ನಾ). ೧. ಕಳವು; ಕಳ್ಳತನ: ವಿಕಲಮತಿಯಾದ ಮೃದುಮತಿ ಸ್ತೇಯಮೆ ತನಗೆ ಜೀವನೋಪಾಯಮಾಗೆ . . . ನೆಗಱುತ್ತುಂ (ಪಂರಾಮಾ. ೧೫-೪೭ ವ); ಸ್ತೇಯ ಯೋಗಾಚಾರ್ಯರಿವರಿದಿರು (ನಿಭಾಗ. ೧೦-೮-೨೪); ಸ್ತೇಯಕ್ಕೆ ಸಮಾನಮಾಗಿ ಪೆಱತಾವ ಪಾಪಮುಂ ಮೂಲೋಕದೊಳಂ ತೋರ್ಕೆವಡೆಯಲಾಱವು (ಭಾರಶಾಂ. ೧೫೪-೨೪).

೨. ಕಳವು ಮಾಡಿದ ಅಥವಾ ಕಳವಾಗಬಹುದಾದ ವಸ್ತು: ಈಯೆ ತರವೇಟ್ಟು ದಬಲೆಯನೀಯದೆ ತಂದಂದು ತನಗದತ್ತಾದಾನಂ ಸ್ತೇಯಂ (ಪಂರಾಮಾ. ೪-೧೦೦); ಸ್ತೇಯಮದತ್ತಾದಾನಂ ಹೇಯಂ (ಉಸಾರ. ೯೭). [ಸಂ.]

**ಸ್ತೇಯಾನಂದ** (ನಾ). [ಜೈನ] ಹಿಂಸಾನಂದ, ಮೃಷಾನಂದ, ಸ್ತೇಯಾನಂದ ಮತ್ತು ಸಂರಕ್ಷಣಾನಂದವೆಂಬ ನಾಲ್ಕು ಬಗೆಯ ರೌದ್ರಧ್ಯಾನಗಳಲ್ಲಿ ಒಂದು; ಪರಸ್ವಾಪಹರಣದ ಚಿಂತನೆಯಲ್ಲಿ ನಿರತವಾಗುವಿಕೆ: ದ್ವಿತೀಯ ರೌದ್ರಧ್ಯಾನಂ ಬಲ್ಲಾಳ್ತನದೊಳಕ್ಕೆ ಮೇಣ್ ತೆಱಪಂ ಪಾರ್ದಕ್ಕೆ ಅಪಹರಣದೊಳಪ್ಪ ಸಂಕಲ್ಪಾಧ್ಯವಸಾನಂ ಸ್ತೇಯಾನಂದಮೆಂಬುದಕ್ಕುಂ (ಅಜಪು. ೮-೨೮ ವ). [ಸಂ.]

**ಸ್ತೋಕ** (ಗು). ೧. ಚಿಕ್ಕದಾದ; ಸಣ್ಣದಾದ. ೨. ಅಲ್ಪಕಾಲಿಕವಾದ; ಅಚಿರವಾದ: ಮಾನಿಸರೊಳ್ಪುಂ ಬಾಱುವುದೇಂ . . . ದಿನಮದೇಂ ಸ್ತೋಕಸುಖಮದೇನಧ್ರುವಮೋ (ಶಾಂತಿಪು. ೯-೧೦೨). ೩. ಕೀಳಾದ; ಕನಿಷ್ಠವಾದ. (ನಾ). ೪. ಕಿರಿದಾದುದು; ಅಲ್ಪವಾದುದು: "ಅಲ್ಪಂ ಲೇಶಮಣು . . . ತನು ಸ್ತೋಕಮೆನೆ ಕಿಱಿದೆನಿಕ್ಕು" (ಮಂಗರಾ. ೧೨೭-೫). ೫. ಅಲ್ಪಕಾಲಿಕವಾದುದು: ಬೆಸಸುವುದವ್ಯಾಕುಳಮೆಮ್ಮಾಯುಷ್ಯಸ್ತೋಕಬಹುತ್ವಮನಗಾಧಬೋಧಪಯೋಧೀ (ಶಾಂತಿಪು. ೭-೬೮); ಸ್ತೋಕದಿಂದಲೆ ನುಡಿದು ಸಭೆಯೊಳನೇಕಜನವನು ಮೆಚ್ಚಿಸುವ ಸುಭವಾಕ್ಯದಿಂದೊಡರಿಸುವ ತನ್ನಯ ಮೃದುಮಧುರವದಿಂ (ಕೊಲ್ಹಾಚ. ೧೪). ೬. (ನೀರಿನ) ಹನಿ; ಬಿಂದು. ೭. ಕಿಡಿ; ಸ್ಫುಲಿಂಗ. ೮. ಚಾತಕಪಕ್ಷಿ: "ಸ್ತೋಕಾಹ್ವಯಂ ಚಾದಗೆ" (ವಸ್ತುಕೋ. ೪೨-೧೭). ೯. ಒಂದು ಬಗೆಯ ಶರೀರ; ಶರೀರದ ಭೇದ. ೧೦. ಬಾಲ. ೧೧. ಮಕ್ಕಳು. ೧೨. ತಪಸ್ಸು. "ಅಲ್ಪ ತನುಭೇದ ಪುಚ್ಛಮುಂ ಪುತ್ರರುಂ ತಪಮುಂ ಸ್ತೋಕಸಮಾಖ್ಯೆ" (ನಾನಾರ. ೧೫೨). ೧೩. [ಜೈನ] ಕಾಲವನ್ನು ಅಳೆಯುವ ಒಂದು ಸಣ್ಣ ಪರಿಮಾಣ; ಸುಮಾರು ಐದೂಕಾಲು ಸೆಕೆಂಡಿನ ಅವಧಿ; ℙ ಒಂದು ಅಣು ಇನ್ನೊಂದು ಅಣುವನ್ನು ದಾಟುವ ಕಾಲಾವಧಿಗೆ ಸಮಯವೆಂದು ಹೆಸರು. ಅಸಂಖ್ಯಾತಸಮಯಗಳಿಗೆ ಒಂದು ಆವಳಿ ; ಅಸಂಖ್ಯಾತ ಆವಳಿಗಳಿಗೆ ಒಂದು ಉಚ್ಛ್ವಾಸ; ಏಳು ಉಚ್ಛ್ವಾಸಗಳಿಗೆ ಒಂದು ಸ್ತೋಕ: ಅದು ಸಮಯಾವಲಿ ಕೋಚ್ಛ್ವಾಸಸ್ತೋಕನಿಮೇಷನಾಡಿಕಾಮುಹೂರ್ತದಿವಸಪಕ್ಷಮಾಸರ್ತ್ವಯನ ಸಂವತ್ಸರಾದಿಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು (ಆದಿಪು. ೬-೬೮ ವ); ಸ್ತೋಕಮಕ್ಕುಮೇಳುಚ್ಛ್ವಾಸಂ (ಪಂರಾಮಾ. ೧-೪೯). [ಸಂ.]

**ಸ್ತೋಕಪುಣ್ಯ** (ನಾ). ಅಲ್ಪಪುಣ್ಯನಾದವನು: ನಾಕಾಸ್ತೋಕಪುಣ್ಯರ ಮಾತದೇತಕೆ ಗುರುನದೀಸುತರ್ (ಕುವ್ಯಾಕ. ೧-೨೫). [ಸಂ.]

**ಸ್ತೋತ್ರ** (ನಾ). ೧. ಸ್ತುತಿ; ಕೊಂಡಾಟ: "ನುತಿ ಸಂಸ್ತವನಂ ಸ್ತೋತ್ರಂ ಸ್ತುತಿ ವಂದನಮಿಡೆ" (ವಸ್ತುಕೋ. ೮೦-೩೫); ನಾರದಂ . . . ತಾಯೇ ಚಂಡಾಂಶು ವ್ರಾತತೋಜೋನಿಧಿ ಶರಣೆನುತಂ ಸ್ತೋತ್ರಮಂ ಮಾಡುತಿರ್ದಂ (ಗಿರಿಕ. ೪-೪೫). ೨. ಸ್ತುತಿಪದ್ಯ; ಶ್ಲೋಕ. [ಸಂ.]

**ಸ್ತೋತ್ರಂಗೆಯ್** (ಕ್ರಿ). ಸ್ತುತಿಸು; ಕೊಂಡಾಡು: ಸ್ತೋತ್ರಂಗೆಯ್ಯೆ ಕೇಳ್ದು ಕೌತುಕಂದಾಳ್ದು . . . ನುಡಿಯೆ (ಗಿರಿಕ. ೪-೪೮ ವ). [ಸ್ತೋತ್ರ + ಕೆಯ್]

**ಸ್ತೋಭ** (ನಾ). ೧. ತಡೆ; ನಿರೋಧ. ೨. ನಿಲುಗಡೆ; ವಿರಾಮ. ೩. ಅಗೌರವ; ತಿರಸ್ಕಾರ. ೪. ಹೊಗಳಿಕೆ; ಸ್ತುತಿ: ಪೂರ್ವಪಕ್ಷೋಪನ್ಯಾಸದೊಳ್ ಮಿಥ್ಯಾವಾದಮುಂ ಸ್ತೋಭದೊಳನರ್ಥಕವಚನಮುಂ . . . ಸಮನಿಸಿರ್ಕುಂ (ಚಿಕವಂ. ೧೦೭-೧೮). ೫. ನಾಮವೇದದ ಒಂದು ವಿಭಾಗ. ೬. ಆವೇಶವನ್ನು ತುಂಬುವಿಕೆ: ದಷ್ಟಂಗಾವೇಶಮುಮಂ ಸ್ಪಷ್ಟಮೆನಲ್ ತಂದು ನುಡಿಸುವುದೆ ತಾಂ ಸ್ತೋಭಂ (ಖಮದ. ೩-೬). [ಸಂ.]

**ಸ್ತೋಭಂಗೊಳ್** (ಕ್ರಿ). ವಿವಶವಾಗು: ಅಂತು ಮನಸಿಜನಾವೇಶಮಂತ್ರದಿಂ ಸ್ತೋಭಂಗೊಂಡಂತೆ ಪುರಪುರಂಧ್ರೀಕ್ಷೋಭಮಾಗೆ (ಆದಿಪು. ೧೧-೨೩ ವ); ಆಲೋಕನ ಕುತೂಹಳದಿಂ ಮನೋಜ ರಾಜಾವೇಶಮಂತ್ರದಿಂ ಸ್ತೋಭಂಗೊಂಡಂತೆ ಪುರಕ್ಷೋಭಮಾಗೆ (ಸುಕುಮಾ. ೧೧-೭ ವ). [ಸ್ತೋಭ + ಕೊಳ್]

**ಸ್ತೋಭನಕಾರಿ** (ನಾ). ಮನಸ್ಸನ್ನು ಹಿಡಿದಿಡುವಂತಹುದು,– ಮರುಳು ಗೊಳಿಸುವಂತಹುದು: ವಸ್ತುಸ್ವಭಾವಕಥನಂ ವಾಸ್ತವಮುಪಮಾದ್ಯಶೇಷ ವಕ್ರೋಕ್ತಿ ವಿಪರ್ಯಸ್ತಂ ಸಮಸ್ತಲೋಕಮನಸ್ತೋಭನಕಾರಿ ಚಾರುತರಪುರುಷಾರ್ಥಂ (ಕಾವ್ಯಾವ. ೬೦೭). [ಸಂ. ಸ್ತೋಭನಕಾರಿನ್]

**ಸ್ತೋಭನಾಕ್ಷರ** (ನಾ). ಎದುರಿನ ವ್ಯಕ್ತಿ ಅಥವಾ ಶಕ್ತಿಯನ್ನು ತಡೆಗಟ್ಟುವ ಮಂತ್ರಾಕ್ಷರ: ವಿಪಕ್ಷವಿಶಿಖವೋಕ್ಷಟಂಕಾರಮನೆ ಜಗದುದಗ್ರ ನಿಜವೀರಗ್ರಹ ಸ್ತೋಭನಾಕ್ಷರಮೆಂದುಂ ಬಗೆದು (ಆದಿಪು. ೧೪-೯೮ ವ). [ಸಂ.]

**ಸ್ತೋಮ** (ನಾ). ೧. ಸ್ತುತಿ; ಸ್ತೋತ್ರ. ೨. ಯಜ್ಞ; ಯಾಗ: "ಯಾಗಃ, ಯಜ್ಞಃ, ಕ್ರತುಃ, ಸ್ತೋಮಃ . . . ಸತ್ರಂ – ಈ ೧೨ ಯಾಗಂ" (ಹಲಾಯು. ೬೮-೨೬೦). ೩. ಗುಂಪು; ಸಮೂಹ: ಮಹಾಗಾಧಬೋಧ ಬೋಧಿತ ಭವ್ಯಸ್ತೋಮಂ (ಸುಕುಮಾ. ೪-೧); ಎಲ್ಲಾ ಕಲಾಪ್ರೌಢಿಸದ್ಗುಣಸ್ತೋಮವೆಲ್ಲಂ ನೆರೆದು ರೂಪಾದುದೆನಿಸುವ ಮಹಾಮಹಿಮ ಹಂಪೆಯ ಹರೀಶ್ವರನ ಮೂರ್ತಿ ನೆಲಸಿರ್ಕೆನ್ನ ಚಿತ್ತದೊಳಗೆ (ಹಚಕಾ. ೧-೧೨). ೪. ಅಧಿಕಪ್ರಮಾಣ; ಆಧಿಕ್ಯ. ೫. ತಲೆ; ಶಿರಸ್ಸು. ೬. ಐಶ್ವರ್ಯ; ಸಂಪತ್ತು. ೭. ಧಾನ್ಯ. ೮. ಕಬ್ಬಿಣದ ಮೊನೆಯುಳ್ಳ ದಂಡ,– ಕೋಲು. ೯. (?): ಬಹುವರ್ಣದ ಧಾತ್ರಿಯಲ್ಲಿ ಅವರವರ ವರ್ಣಛಾಯ ನಿಂದಿತ್ತು ಕೂಡೆ ವೇಧಿಸಿ ವಿಚಾರಿಸಲಾಗಿ ಒಂದೇಗುಣ ನಿಂದಿತ್ತು ಅದು ತಟಾಕದಲ್ಲಿ ಆಶ್ರಯಿಸಲಾಗಿ ಸ್ತೋಮ ವಾಯಿತ್ತು (ಮೋಳಮಾ. ೬-೧೯); "ಗುಂಪು , ಜಲಾಶಯ" (ಮೋಳಮಾ. ಕೋಶ).
[ಸಂ.]

**ಸ್ತೌತ್ಯ** (ನಾ). ಸ್ತುತಿ; ಸ್ತೋತ್ರ: ಎಮಗೇನುವುಂ ತತ್ವನೆಮ್ಮಾಗೆಯ ಹೇಳದೆ ಸ್ತೌತ್ಯಮಂ ಮಾಡಿ ಕಳೆದೆ (ಸಿದ್ಧರಾ. ೯-೫೦); ಯಮನಂದನಂ . . . ನಾನಾಬಗೆ ಗಳಿಂದ ಸ್ತೌತ್ಯಂಗಳಂ ಬಲ್ಲಿದಂ ಮಾಡಲ್ ಮುರಾಂತಕಂ ಬಿಗಿಯಪ್ಪಿ ಮುಂಡಾಡಿದಂ ಕೃಪೆಯೊಳು (ತುರಂಗ. ೯೬-೩೧). [ಸಂ.]

**ಸ್ತ್ಯಾನ** (ಗು). ೧. ಒಟ್ಟಿಗೆ ಸೇರಿ ಸಮೂಹವಾದ. ೨. ದಪ್ಪವಾದ; ಗಾತ್ರವಾದ. ೩. ಮೆದುವಾದ; ನುಣುಪಾದ. ೪. ಹೆಪ್ಪುಗೊಂಡ; ಗಟ್ಟಿಗೊಂಡ. (ನಾ). ೫. ಹೆತ್ತ ತುಪ್ಪ: "ಶೀನಂ, ಸ್ತ್ಯಾನಂ – ಈ ೨ ಹೆತ್ತ ತುಪ್ಪ" (ಹಲಾಯು. ೪೬-೧೨೧). ೬. ದಪ್ಪ; ತೋರ. ೭. ಅಮೃತ. ೮. ಆಲಸ್ಯ; ಜಡತೆ. ೯. ಮರುಧ್ವನಿ; ಪ್ರತಿಧ್ವನಿ. ೧೦. ಅಸಮರ್ಥತೆ: ಕರ್ಮವನ್ನಾಚರಿಸಲು ಯೋಗ್ಯತೆ ಇಲ್ಲದಿರುವುದಕ್ಕೆ ಸ್ತ್ಯಾನ ಎಂದು ಹೆಸರು (ಭಾತತ್ತ್ವ. ೩೩೭). [ಸಂ.]

**ಸ್ತ್ಯಾನಗೃದ್ಧಿ** (ನಾ). [ಜೈನ] ದರ್ಶನಾವರಣೀಯ ಕರ್ಮದ ಒಂಬತ್ತು ಪ್ರಕಾರಗಳಲ್ಲಿ ಒಂದು; ℙ ಇದು ನಿದ್ದೆಯ ಐದು ಪ್ರಕಾರಗಳಲ್ಲಿ ಕೊನೆಯ ದಾಗಿದ್ದು ಇದರಿಂದ ಸ್ವಪ್ನದಲ್ಲಿ ವೀರ್ಯದೀಪ್ತವಾಗಿ ರೌದ್ರಕರ್ಮಗಳಿಗೆ ಪ್ರೇರಿಸುತ್ತದೆ: ಅಂತರ್ಮುಹೂರ್ತದಿಂ ನಿದ್ರಾನಿದ್ರಾಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ . . . ಎಂಬ ಪದಿನಾಱು ಕರ್ಮಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು.. ೧೦-೧೪ ವ).
[ಸಂ.]

**ಸ್ತ್ರೀ** (ನಾ). ೧. ಹೆಂಗಸು; ಹೆಣ್ಣು: ಸ್ತ್ರೀಯೆಂಬನಾಥೆಯೆಂಬನ್ಯಾಯದ ಕೊಲೆಯೆಂಬ ದುರ್ಬಲಸ್ಯ ಬಲಂ ರಾಜಾಯೆಂಬ ವಾಕ್ಯಮಂ ಮಱದೀ ಯುವತಿಗೆ ಬಾಳನಿಂತು ಕೀಟ್ಬುದೆ ಮರುಳೇ (ಕಾವ್ಯಾವ. ೪೦); ತದ್ದ್ವಾರಾಪುರಸ್ತ್ರೀಯರಂ ತೊಟ್ಟಿವರ್ಮಾಡಿದಂ (ಶಮದ. ೯೭ ಪ್ರಯೋ); ಪುರುಹೂತತನಯನಮೋಲು ಭುವನಖ್ಯಾತನೆಂದಾ ಸ್ತ್ರೀಕಟಕ ಕೊಂಡಾಡಿತರ್ಜುನನ (ಕುವ್ಯಾಸ. ೩-೫೯). ೨. (ಯಾವುದಾದರೂ ಪ್ರಾಣಿಯಲ್ಲಿ) ಹೆಣ್ಣು; ಹೆಣ್ಣುಜೀವಿ. ೩. ಹೆಂಡತಿ; ಪತ್ನಿ. ೪. ಬಿಳಿ ಇರುವೆ; ಒರಲೆ: "ಸ್ತ್ರೀಯೆನಲ್ಕೊಱಲೆಯಕ್ಕು" (ಮಂಗರಾ. ೪೯-೧೩). ೫. ಪ್ರಿಯಂಗುಲತೆ. ೬. [ವ್ಯಾಕ] ಹೆಣ್ಣನ್ನು ಕುರಿತು ಹೇಳುವ ಲಿಂಗ; ಸ್ತ್ರೀಲಿಂಗ: ಸ್ತ್ರೀಪುಂಸವ್ಯತ್ಯಯಮಕ್ಕುಂ ಕರುಣೋಪತ್ಯಕೆಗಳೊಳಂ ವಧಾಭಿಲಾಷಾದಿ ಯೊಳಂ (ಕಾವ್ಯಾವ. ೧೬೦); ನೀನಱಿ ಕರ್ನಾಟಕದೊಳ್ ಪೀನಂ ಸ್ತ್ರೀಪುಂನಪುಂಸಕೋಭಯ ಪುಂ ಸ್ತ್ರೀ ಸ್ತ್ರೀನಸ್ಸಮಸ್ತ ವಾಚ್ಯಾನ್ಯೂನಾವ್ಯಯಮೆಂದು ಲಿಂಗಮೊಂಬತ್ತು ತೆಱಂ (ಶಮದ. ೮೮). [ಸಂ.]

**ಸ್ತ್ರೀತ್ವ** (ನಾ). ೧. ಹೆಣ್ಣುತನ; ಹೆಂಗಸಾಗಿರುವಿಕೆ: ಸ್ತ್ರೀತ್ವವನ್ನು ದೇವತ್ವಕ್ಕೆ ಏರಿಸಿದ ದೇಶವು . . . ಭಾರತವೊಂದೇ (ಭಾರದ. ೩೯೦). ೨. ಹೆಂಗುಸಿನ ಸ್ವಭಾವ: ಈ ದುಷ್ಕೃತಮಂ ಸ್ತ್ರೀತ್ವದ ಜಡತ್ವದಿಂದೊಡರಿಸಿದೆಂ (ಪಂರಾಮಾ. ೭-೧೪). ೩. ಪತ್ನೀತ್ವ; ಸತೀತ್ವ. [ಸಂ.]

**ಸ್ತ್ರೀದಾನ** (ನಾ). ಹೆಣ್ಣನ್ನು ದಾನವಾಗಿ ಕೊಡುವಿಕೆ; ಕನ್ಯಾದಾನ: ಆದರದಿಂ ಗೋದಾನಂ ಸ್ತ್ರೀದಾನಂ ವಸ್ತ್ರದಾನಮಿಭಕುಲದಾನಂ ಭೂದಾನಂ ಶ್ರೀದಾನಂ ಗುಡುತುವೊಪ್ಪಿದಂ ಗಿರಿರಾಜಂ (ಗಿರಿಕ. ೩-೭೩). [ಸಂ.]

**ಸ್ತ್ರೀದ್ರವ್ಯ** (ನಾ). ೧. ಕನ್ಯೆಗಾಗಿ ಕೊಡುವ ತೆರ; ಕನ್ಯಾಶುಲ್ಕ: "ಶಂಬಿದೊಳು ಸ್ತ್ರೀದ್ರವ್ಯದೊಳು ಶುಲ್ಕಮೆಂಬಾಭಿಧಾನಮಕ್ಕುಂ" (ಮಂಗರಾ. ೧೪೩-೨೦). ೨. ಸ್ತ್ರೀಯರಿಗೆ ಸೇರಿದ ಧನ; ಸ್ತ್ರೀಧನ. [ಸಂ.]

**ಸ್ತ್ರೀದ್ವೇಷಿ** (ನಾ). ಹೆಂಗಸರನ್ನು ಕಂಡರೆ ಆಗದವನು; ಸ್ತ್ರೀಯರನ್ನು ದ್ವೇಷಿಸುವವನು: ಅವನೊಬ್ಬ ಸ್ತ್ರೀದ್ವೇಷಿಯಾಗಿದ್ದಾನೆ (ರೂಢಿ). [ಸಂ. ಸ್ತ್ರೀದ್ವೇಷಿನ್]

**ಸ್ತ್ರೀಧನ** (ನಾ). ಹೆಂಗಸಿನ ಸಂಪೂರ್ಣಅಧಿಕಾರಕ್ಕೆ ಸೇರಿದ ಧನ; ☞ ಸಾಮಾನ್ಯವಾಗಿ ತಂದೆ, ತಾಯಿ, ಸಹೋದರ, ಗಂಡ ಮೊದಲಾದ ಸಂಬಂಧಿಕರಿಂದ ಬಳಿವಳಿಯಾಗಿ ಬಂದ ಹಣ: ಕಾತ್ಯಾಯನಸ್ಮೃತಿ . . . ಸ್ತ್ರೀಧನದ ಆರು ವಿಭಾಗಗಳನ್ನು ಈತ ಹೇಳಿದ್ದಾನೆ (ಭಾರದ. ೭೪). [ಸಂ.]

**ಸ್ತ್ರೀಧರ್ಮ** (ನಾ). ೧. ಹೆಂಗಸು ಪಾಲಿಸಬೇಕಾದ ಕರ್ತವ್ಯ. ೨. ಹೆಂಡತಿಯ ಕರ್ತವ್ಯ; ಸತೀಧರ್ಮ. ೩. ಹೆಂಗಸರಿಗೆ ಅನ್ವಯವಾಗುವ ನಿಯಮ. ೪. ಮುಟ್ಟು; ಋತುಸ್ರಾವ. [ಸಂ.]

**ಸ್ತ್ರೀನಾಡಿ** (ನಾ). ದೇಹದಲ್ಲಿ ಎಡಭಾಗದ ನಾಡಿ: ಎಡಭಾಗದ ನಾಡಿಗಳು ಸ್ತ್ರೀನಾಡಿಗಳೆಂತಲೂ ಬಲಭಾಗದ ನಾಡಿಗಳಿಗೆ ಪುರುಷನಾಡಿಗಳೆಂತಲೂ ಹೆಸರು (ಹಸಾರ. ೪-೩ ತಾತ್ಪರ್ಯ). [ಸಂ.]

**ಸ್ತ್ರೀಪಕ್ಷಿಗ್ರಹ** (ನಾ). ಎಳೆಯ ಮಕ್ಕಳಿಗೆ ಬರುವ ಒಂದು ರೋಗ: ಸ್ತ್ರೀಪಕ್ಷಿಗ್ರಹ ಹಿಡಿದಿದ್ದರೆ ಶಿಶುವಿಗೆ ಸರ್ವಾಂಗವೂ ಕಂಪಿಸುವುದು. ತಾಪ , ಬಾಯರಿಕೆ , ಉಚ್ಚುವುದು ಇವಿಷ್ಟು ಉಂಟಾಗಿಹವು. ಮೊಲೆಯನೊಲ್ಲದು. ಇದು ಸ್ತ್ರೀಪಕ್ಷಿಗ್ರಹಶಂಕೆ ಎಂದಱಿವುದು (ವೈದ್ಯಸಾ. II. ೧೩). [ಸಂ.]

**ಸ್ತ್ರೀಪಾತ್ರ** (ನಾ). ನಾಟಕ ಕಥೆ ಕಾದಂಬರಿಗಳಲ್ಲಿ ಬರುವ ಸ್ತ್ರೀವ್ಯಕ್ತಿ: ಈ ಸ್ತ್ರೀಪಾತ್ರಗಳ ರೀತಿಯೆ ಬೇರೆ, ಶಕುಂತಲೆಯ ರೀತಿಯೆ ಬೇರೆ (ಧರ್ಮಸಾ. ೭೭). [ಸಂ.]

**ಸ್ತ್ರೀಪ್ರತಿಬದ್ಧ** (ನಾ). ಹೆಣ್ಣಿಗೆ ಸಂಬಂಧಿಸಿದುದು; ಹೆಣ್ಣಿನ ದೆಸೆಯಿಂದ ಉಂಟಾದುದು: ತಿರ್ಯಗ್ಜಾತಿಗಳ್ಗಮಿನಿವಿರಿದು ಸ್ತ್ರೀಪ್ರತಿಬದ್ಧಂ ಮುಳಿಸೆಂದೊಡೆ ಮಾನಿಸರ್ ಸಾಮರ್ಥ್ಯಮುಳ್ಳೊಡೆ ಕಿಱಿದಱೊಳ್ ಮಾಣರ್ (ಶಾಂತಿಪು. ೯-೧೩ ವ). [ಸಂ.]

**ಸ್ತ್ರೀಯುಗಕರಣ** (ನಾ). [ಕಾಮಶಾ] ಎರಡು ಹೆಣ್ಣುಗಳನ್ನು ಏಕಕಾಲದಲ್ಲಿ ರಮಿಸುವುದು: ಅತಿ ಕಾಮುಕನಾದ ಪುರುಷಂ ಈರ್ವರು ಸ್ತ್ರೀಯರನೊಮ್ಮೆ ಕೂಡಲುಪಾಯಂ ಓರ್ವಳ ಯೋನಿಯೊಳು ಲಿಂಗಮನಿಕ್ಕಿ ಓರ್ವಳ ಯೋನಿಯೊಳು ನಾಲಗೆಯಿಕ್ಕಿ ರಮಿಸಲ್ಕದು ಸ್ತ್ರೀಯುಗಕರಣಂ (ಕಾಮಶಾ. ೨೩೭). [ಸಂ.]

**ಸ್ತ್ರೀಯುಗಲ, ಸ್ತ್ರೀಯುಗಳ** (ನಾ). ೧. ಸ್ತ್ರೀಯ ಜೋಡಿ; ಇಬ್ಬರು ಹೆಂಗಸರು. ೨. = ಸ್ತ್ರೀಯುಗಕರಣ: ಮಣಿದಿರ್ವರೊಳೊರ್ವರನುರವಣೆಯಿಂ ನೆರೆಯುತ್ತುಮೊರ್ವ ಕಾಂತೆಯ ಭಗಮಂ ಪ್ರಣಯದೆ ತುದಿನಾಲಗೆಯಿಂ ದಣಿದಣಿಯದೆ ಸೊಗಸುಗೆಯ್ವನಂ ಸ್ತ್ರೀಯುಗಲಂ (ಮನ್ಮವಿ. ೧೪-೩೭). ಸ್ತ್ರೀಯುಗಳ: 'ಸ್ತ್ರೀಯುಗಳಕರಣ' ಪರಾ. [ಸಂ.]

**ಸ್ತ್ರೀಯುಗಳ** 'ಸ್ತ್ರೀಯುಗಲ' ನೋ.

**ಸ್ತ್ರೀಯುಗಳಕರಣ** (ನಾ). = ಸ್ತ್ರೀಯುಗಕರಣ: ಪುರುಷನತಿಕಾಮದಿಂ ತರುಣಿಯೊರ್ವಳ ಲಜ್ಜೆಯೆರೆದೆಡೆಯೊಳೀ ಧ್ವಜವನಿಟ್ಟುಮವಳ ಸ್ಮರಗೃಹದೊಳಗೆ ಲಲ್ಲೆವೆರಸಿ ನಾಲಗೆಯಿಟ್ಟು ನೆರೆಯಲದು ಕೇಳ್ ಸ್ತ್ರೀಯುಗಳಕರಣವು (ಜನವ. ೯-೫೫). [ಸಂ. ಸ್ತ್ರೀಯುಗಲಕರಣ]

**ಸ್ತ್ರೀರತ್ನ** (ನಾ). ೧. ಉತ್ತಮಳಾದ ಸ್ತ್ರೀ; ಸ್ತ್ರೀಯರಲ್ಲಿ ಮಿಗಿಲಾದವಳು: ಪುರುಷರತ್ನಕ್ಕೆ ಸ್ತ್ರೀರತ್ನಮಲ್ಲದೆ ಸಾಮಾನ್ಯಮಣಿಯುಂ ಪಸುರ್ಮಣಿಯುಂ ದೊರೆಯಲ್ಲಂ (ಶಾಂತಿಪು. ೪-೮೪ ವ); ಕ್ಷೋಣೀಭಾಗದೆ ಬೇರೆ ತೋರ್ಕುಮೆನಗಾ ಸ್ತ್ರೀರತ್ನಸೃಷ್ಟಿಕ್ರಮಂ (ಶಾಕುಂತ. ೨೫-೪೪). ೨. ಲಕ್ಷ್ಮಿ ೧. ೩. [ಜೈನ] ಚಕ್ರವರ್ತಿಗೆ ದೊರೆಯುವ ಏಳು ಜೀವರತ್ನಗಳಲ್ಲಿ ಒಂದೆನಿಸಿದ ಪರಮಸುಂದರಿಯಾದ ಸ್ತ್ರೀ: ಸಾನಂದಕಮೆಂಬ ಖಡ್ಗರತ್ನಮುಂ . . . ಮನೋಹರಮುಮಪ್ಪ ಸ್ತ್ರೀರತ್ನಮುಮೆಂದಿಂತು ಜೀವಾಜೀವರತ್ನಂಗಳಂ . . . ಪೂಜಿಸಿ (ಆದಿಪು. ೧೧-೩ ವ); ಸೇನಾಪತಿಸ್ಥಪತಿಗೃಹಪತಿಪುರೋಹಿತಗಜವಾಜಿಸ್ತ್ರೀರತ್ನಂಗಳೆಂಬೇೞುಂ ಜೀವರತ್ನಂಗಳುಮಂ . . . ಅನುಕ್ರಮದೊಳರ್ಚಿಸಿ (ಚಂದ್ರಪ್ರ. ೬-೧೦೦ ವ). [ಸಂ.]

**ಸ್ತ್ರೀರಾಗ** (ನಾ). ೧. ಹೆಣ್ಣಿನ ಅನುರಾಗ: ಸ್ತ್ರೀರಾಗಕಥಾಶ್ರವಣತ್ಯಾಗಃ - ಸ್ತ್ರೀರಾಗವಿಷಯಕ್ಕೆ ಕಾರಣಮಪ್ಪ ಕಥೆಗಳ ಕೇಳ್ವೆಯಂ ತೊಱೆವುದುಂ (ತತ್ತ್ವಾಪ್ರ. ೨೭೦). ೨. [ಸಂಗೀತ] ರಾಗಗಳಲ್ಲಿ ಒಂದು ವರ್ಗ; ರಾಗಿಣಿ; ☞ ಇಪ್ಪತ್ತುನಾಲ್ಕು ಸ್ತ್ರೀರಾಗಗಳಿವೆ: ರೇವಗುಪ್ತಿಯು ಭೈರವಿದ್ವಯಮಾ ವಸಂತಿಮಿವಾದಿಯಾದನು ಭಾವಿಸಲು ಸ್ತ್ರೀ[ಪಾಠಾಂ. ಶ್ರೀ]ರಾಗ ಪುರುಷರಾಗವಿತತಿಗಳು (ಬಸವು. ೧೯-೧೮); ಸ್ತ್ರೀರಾಗ ಚತುರ್ವಿಂಶತಿ ಸೌರಾಷ್ಟ್ರ ಗಭೀರ ಪುರುಷರಾಗಂಗಳವಂ ವಾರಿಜಮುಖಿಯರ್ ಪಾಡಿದರ್ (ಹಮ್ಮೀರ. ೨-೯೫). 'ಪುರುಷರಾಗ' ಪರಾ. [ಸಂ.]

**ಸ್ತ್ರೀರಾಜ್ಯ** (ನಾ). ಹೆಂಗಸರದೇ ಪ್ರಾಬಲ್ಯ ಅಥವಾ ಅಧಿಕಾರವಿರುವ ರಾಜ್ಯ: ಮನದಿಂ ಸೆಱೆಗೆಯ್ದುಂ ಲೋಚನಂಗಳಿಂ ಬಂದಿವಿಡಿಗುಮೆಂದುಂ ವನಿತಾಜನಮದಱಿಂದಂ ಸ್ತ್ರೀರಾಜ್ಯ ನಗರಮಿಾ ನಗರಮೆನೆ ಕರಂ ರಮಣೀಯಂ (ಶಾಂತಿಪು. ೩-೧೧); ಸ್ತ್ರೀರಾಜ್ಯದೊಳ್ ಪ್ರಮಿಳೆಯನೊಡಂಬಡಿಸಿ . . . ಫಲುಗುಣಂ ಮಣಿಪುರಕೆ ನಡೆತಂದನು (ಜೈಮಿಭಾ. ೧೭ ಸೂಚನೆ). [ಸಂ.]

**ಸ್ತ್ರೀರೂಪ** (ನಾ). ಹೆಣ್ಣಿನ ರೂಪ: ಸ್ತ್ರೀರೂಪಮೆ ರೂಪಂ ಶೃಂಗಾರಮೆ ರಸಂ (ಲೀಲಾವ. ೧೨-೮); ಜಗತ್ತಿನ ಸೃಷ್ಟಿಗಿಂತಲೂ ಪೂರ್ವದಲ್ಲಿ ಅಗ್ನಿಯೆ ಪುರೂಪದಲ್ಲಿಯೂ ಸ್ತ್ರೀರೂಪದಲ್ಲಿಯೂ ಇದ್ದನು (ಋಕ್ಸಾರ. ೪೨). [ಸಂ.]

**ಸ್ತ್ರೀಲಿಂಗ** (ನಾ). ೧. ಸ್ತ್ರೀಯ ಜನನಾಂಗ; ಯೋನಿ. ೨. ಸ್ತ್ರೀಯರಿಗೆ ವಿಶಿಷ್ಟವಾದ ಮೊಲೆ ಮೊದಲಾದ ಉಪಾಂಗ. ೩. [ವ್ಯಾಕ] ಹೆಂಗಸರನ್ನು ಸೂಚಿಸುವ ಲಿಂಗ; ಸ್ತ್ರೀವಾಚಕಲಿಂಗ : ಸ್ತ್ರೀಯರೆ ತಾಂ ಸ್ತ್ರೀಲಿಂಗಂ (ಶಮದ. ೯೧); ಗಂಡಸರನ್ನು ಹೇಳುವ ಪದಗಳಿಗೆ ಪುಲ್ಲಿಂಗವೆಂದೂ ಹೆಂಗಸರನ್ನು ಹೇಳುವ ಪದಗಳಿಗೆ ಸ್ತ್ರೀಲಿಂಗವೆಂದೂ ಹೆಸರು (ಮಧ್ಯಮ. ೩೧). [ಸಂ.]

**ಸ್ತ್ರೀವಶ್ಯ** (ನಾ). ೧. ಹೆಂಗಸನ್ನು ವಶಪಡಿಸಿಕೊಳ್ಳುವಂತಹುದು: ನಾನಾ ಬಗೆಯ ಬಣ್ಣಗಳಿರುವ ವಸ್ತ್ರದ ಗುಣ- ನೋಡುವುದಕ್ಕೆ ಮಹಾಪ್ರೀತಿಕರವಾಗಿಯೂ ಸ್ತ್ರೀವಶ್ಯವಾಗಿಯೂ . . . ಇರುವುದು (ಸಕವ್ಯ. ೨೪). ೨. ಸ್ತ್ರೀಯ ಒಲವನ್ನು ಪಡೆದುಕೊಳ್ಳುವಿಕೆ; ಸ್ತ್ರೀವಶೀಕರಣ: ಮರುಳುಮ್ಮತ್ತದ ಬೀಜ, ನಾಗಕರ್ಣಿಕಬೇರು, ಬೀಜ ಮೂತ್ರದಲ್ಲಿ ಅರೆದು ಕಡಲೆಗಾತ್ರ ಗುಳಿಗೆಯಂ ಮಾಡಿ ದೇಹಕ್ಕೆ ಇಕ್ಕೆ ಸ್ತ್ರೀವಶ್ಯ (ವಿಷ್ಣವಿ. ೨೧೧). [ಸಂ.]

**ಸ್ತ್ರೀವಾಚಕ** (ನಾ). [ವ್ಯಾಕ] ಸ್ತ್ರೀಲಿಂಗಸೂಚಕವಾದ ಪದ: ಅಪತ್ಯ, ಕಳತ್ರ- ಎಂಬ ಶಬ್ದಂಗಳ್ ಸ್ತ್ರೀವಾಚಕವಾಗಿಯುಂ ನಪುಂಸಕಂ (ಶಮದ. ೧೫೫ ಪ್ರಯೋ); ಸ್ತ್ರೀಲಿಂಗದ ರೂಪಗಳನ್ನು ಸಿದ್ಧಪಡಿಸುವ ಪ್ರತ್ಯಯಗಳಿಗೆ ಸ್ತ್ರೀವಾಚಕಪ್ರತ್ಯಯಗಳೆಂದು ಹೆಸರು (ಮಧ್ಯಮ. ೩೩). [ಸಂ.]

**ಸ್ತ್ರೀವೇದ** (ನಾ). [ಜೈನ] ಒಂದು ಬಗೆಯ ನೋಕಷಾಯ; ಹೆಣ್ಣಿಗೆ ಗಂಡಿನ ಮೋಹವನ್ನುಂಟುಮಾಡುವ ಕರ್ಮ: ಮತ್ತಂ ಕಿಱಿದುಬೇಗದಿಂ ಕ್ರಮಕ್ರಮದೊಳ್ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ . . . ಘಾತಿಸಿ (ಆದಿಪು. ೧೦-೧೪ ವ); ಸ್ತ್ರೀವೇದಂ ಪುರುಷಾಭಿಲಾಷೆಯಂ ಮಾಟ್ಪುದು (ಪಸಾರ. ೧೨). [ಸಂ.]

**ಸ್ತ್ರೀವೇಷಧರ** (ನಾ). ಹೆಣ್ಣುವೇಷವನ್ನು ಧರಿಸಿದ ನಟ; ಸ್ತ್ರೀಪಾತ್ರವನ್ನು ವಹಿಸಿದ ನಟ: "ಸ್ತ್ರೀವೇಷಧರಂ ಭ್ರುಕುಂಸನೆನೆಯುಂ ಭ್ರುಕುಂಸನೆನೆಯುಂ ನೆಗಟ್ಟುಂ" (ವಸ್ತುಕೋ. ೭೪-೭೫). [ಸಂ.]

**ಸ್ತ್ರೀವ್ಯಸನ** (ನಾ). ಹತ್ತು ಬಗೆಯ ವ್ಯಸನಗಳಲ್ಲಿ ಒಂದು; ಹೆಣ್ಣಿನ ಗೀಳು: ತನುವ್ಯಸನ ರಾಜ್ಯವ್ಯಸನ ವಿಶ್ವವ್ಯಸನ ಸ್ತ್ರೀವ್ಯಸನ ಧಾನ್ಯವ್ಯಸನ ದ್ರವ್ಯವ್ಯಸನ ವಿದ್ಯಾವ್ಯಸನ ಉತ್ಸಾಹಕವ್ಯಸನ ಸೇವಕವ್ಯಸನ ಕಾಷ್ಠವ್ಯಸನಗಳೆಂಬ ದಶವ್ಯಸನಗಳಿಂ ಹಸಗೆಟ್ಟು (ವಿವೇಕ. ೨೧೭). [ಸಂ.]

**ಸ್ತ್ರೀಶಿಲೆ** (ನಾ). [ಶಿಲ್ಪಶಾ] ಸ್ತ್ರೀವಿಗ್ರಹಗಳನ್ನು ಮಾಡಲು ಯೋಗ್ಯವಾದ ಕಲ್ಲು: ಶಿಲೆಯಲ್ಲಿ ಪುಂಶಿಲೆ, ಸ್ತ್ರೀಶಿಲೆ, ನಪುಂಸಕಶಿಲೆಯೆಂಬ ಮೂರು ವಿಧ . . . ಘಂಟಾನಾದ ದಂತೆ ಧ್ವನಿತವಾಗುವ ಶಿಲೆಯು 'ಸ್ತ್ರೀಶಿಲೆ' ಯೆಂದೂ . . . ಉಕ್ತಿ ಇದೆ. ಪುರುಷದೇವತಾ ವಿಗ್ರಹಗಳನ್ನು ಪುಂಶಿಲೆಯಿಂದಲೂ ಸ್ತ್ರೀದೇವತಾವಿಗ್ರಹಗಳನ್ನು ಸ್ತ್ರೀಶಿಲೆಯಿಂದಲೂ . . . ಮಾಡಬೇಕೆಂದು ವಿಧಿಸಿದೆ (ಭಾರದ. ೭೭). [ಸಂ. ಸ್ತ್ರೀಶಿಲಾ]

**ಸ್ತ್ರೀಸಂಗ** (ನಾ). ಹೆಂಗಸಿನ ಸಹವಾಸ ,– ಕೂಟ: ಯಾವ ಸ್ತ್ರೀಸಂಗದಿಂ ದೋಷ ಹುಟ್ಟುವುದೂ ಆ ಸ್ತ್ರೀಯ ತೊಡೆಯ ರಕ್ತದಲ್ಲಿ ಹಿಪ್ಪಲಿಯ ತೇದು ಕಣ್ಣಗೆಚ್ಚಲು ಆ ಕ್ಷಣವೇ ಸುಖಸನ್ನಿ ಗುಣಮಕ್ಕುಂ (ಸಕವ್ಯ. ೧೭೨). [ಸಂ.]

**ಸ್ತ್ರೀಸಂಗಸನ್ನಿ** (ನಾ). ಏಳು ದಿವಸಗಳವರೆಗೆ ಇರುವ, ತರುಣಜ್ವರವಿದ್ದಾಗ ಸ್ತ್ರೀಸಂಗ ಮಾಡುವುದರಿಂದ ಉಂಟಾಗುವ ಸನ್ನಿಪಾತ: ಸ್ತ್ರೀಸಂಗಸನ್ನಿಯ ದೋಷಲಕ್ಷಣಗಳು – ಸಂದು ಸಂದಿನ ಮುಡುಹುಗಳಲ್ಲಿ ಕತ್ತಿಯಲ್ಲಿ ಕಡಿದಂತೆ ಉಂಟಾದ ಬಹಳವೇದನೆಯು . . . ಮುಂತಾದ ಲಕ್ಷಣಗಳೊಡನೆ ಕೂಡಿರ್ಪುದೆ ತರುಣಜ್ವರ ದಲ್ಲಿಯುಂಟಾದ ಸ್ತ್ರೀಸಂಗದಿಂದಾದ ಸನ್ನಿದೋಷಂ. ಇದನ್ನೆ ಸುಖಸನ್ನಿ ಎಂದು ಹೇಳುವರು (ಸಕವ್ಯ. ೧೭೦). [ಸ್ತ್ರೀಸಂಗ + ಸನ್ನಿ]

**ಸ್ತ್ರೀಸವನ** (ನಾ). ೧. ಹೆಂಗಸಿನ ಸ್ನಾನ. ೨. ಹೆಂಗಸರು (ಮುಟ್ಟಾದ) ನಾಲ್ಕನೆಯ ದಿನ ಶುದ್ಧಿಗಾಗಿ ಹಾಕಿಕೊಳ್ಳುವ ನೀರು; ನಾಲ್ನೀರು. ೧ , ೨: ಸುವಿದಿತಮಿನಿತುದಿನಂ ಸ್ತ್ರೀಸವನಂ ನಿನಗಿಂದು ಕಾಂತೆ ಪುಂಸವನಂ ಮಾಡುವುದೊಂದ ರ್ಥಾಂತರದಿಂದವನೀಶಂ ಸರಸವಾಡಿ ಕಾಡುಗುಮಂದೋ (ಪುಷ್ಪಪು. ೩-೮೮). [ಸಂ.]

**ಸ್ತ್ರೀಹತ್ಯ** (ನಾ). ಹೆಂಗಸನ್ನು ಕೊಲೆಮಾಡುವಿಕೆ; ಸ್ತ್ರೀವಧೆ: ಸ್ತ್ರೀಹತ್ಯವು ಬಹಳ ದೊಡ್ಡ ಘಾತಕ (ನೀತಿಚಿಂ. IX. ೧೧); ನನ್ನ ಸ್ವಾಮಿಯ ಸೇವೆ ಮಾಡುವ ಭಾಗ್ಯ ತಪ್ಪಿಸಿ ಸ್ತ್ರೀಹತ್ಯ ಮಾಡಿದನಲ್ಲ (ದೇವಹಂ. ೪೪). [ಸಂ.]

**ಸ್ತ್ರೈಣ** (ಗು). ೧. ಹೆಂಗಸಿಗೆ ಸಂಬಂಧಿಸಿದ; ಸ್ತ್ರೀವಿಷಯಕವಾದ. ೨. ಹೆಣ್ತನದ; ಸ್ತ್ರೀಸ್ವಭಾವದ: ಅಂತಲ್ಲದಿರೆ ಅನ್ಯರ್ಗೆ ದಲ್ ಆ ಸ್ತ್ರೈಣಚಾರುತ ಸುಲಭಮಲ್ತು (ಶ್ರೀರಾಮಾ. ೫೭೮-೪೪೮). ೩. ಸ್ತ್ರೀಯರಲ್ಲಿ ಆಸಕ್ತಿಯುಳ್ಳ; ಸ್ತ್ರೀಲಂಪಟವಾದ. ೪. ಸ್ತ್ರೀಯರಿಗೆ ಅಧೀನನಾದ; ಸ್ತ್ರೀವಶನಾದ. (ನಾ). ೫. ಸ್ತ್ರೀಲಂಪಟ; ಸ್ತ್ರೀವಶನಾದವನು: ಸ್ತ್ರೀಸ್ತ್ರೈಣನಾದಗೆ ಕೇಡು ಬಪ್ಪುದು ಮಾಣದು (ಕೌಶಿರಾ. ೧೯-೫). ೬. ಸ್ತ್ರೀಲೋಲುಪತೆ; ಸ್ತ್ರೀಲಂಪಟತೆ: ಸ್ತ್ರೈಣದಿಂ ಮುನ್ನುಚ್ ಬನ್ನಂಬೆತ್ತನಂ ಪುಷ್ಪಲಪುರದ ಹಯಗ್ರೀವನಂ ಕರ್ಮದಿಂದಂ ಮಱೆದಾಂ ಮೆಯ್ಯಿಟ್ಟು ನಿದ್ರಾಸುಖದಿನಟಲೆ (ಪುಷ್ಪಪು. ೭-೩); ಸ್ತ್ರೈಣಚೇಷ್ಟಿತನೆಂದು ಕೆಲಬರು ಕಾಣೆವರಸನೆಂದು ಕೆಲರು (ಕುಮ್ಸಾಸ. ೧೨-೭). ೭. ಸ್ತ್ರೀಸ್ವಭಾವ. ೮. ಹೆಣ್ಣುಜಾತಿ; ಸ್ತ್ರೀಜಾತಿ. ೯. ಸ್ತ್ರೀಸಮೂಹ. ೧೦. [ವ್ಯಾಕ] ಸ್ತ್ರೀಲಿಂಗ: ಅವನಾತನೆಂಬ ಮಾತುಗಳವು ಪುಲ್ಲಿಂಗಪ್ರಯೋಗದೊಳ್ ಸ್ತ್ರೈಣದೊಳಿನ್ನವಳಾಕೆಯೆಂಬ ನುಡಿ ಸಂಭವಿಕುಂ (ಕಾವ್ಯಾವ. ೧೫೭). [ಸಂ.]

**ಸ್ತ್ರೈಣಸುಖ** (ನಾ). ಸ್ತ್ರೀಸಂಗಸುಖ; ಹೆಣ್ಣಿನ ಸುಖ: ಆ ನೃಪಂಗೆ ಮನದೊಳ್ ತೃಣವಲ್ಲಘುವಾದುದಾವಗಂ ಸ್ತ್ರೈಣಸುಖಂ (ಕಾದಂಪೂ. ೧೯). [ಸಂ.]

**-ಸ್ಥ** (ಪ್ರ). ಸಂಸ್ಕೃತದ 'ಸ್ಥ' ಶಬ್ದದಿಂದ ಬಂದಿರುವ, ದೇಶ್ಯಶಬ್ದಗಳಿಗೆ ಸೇರುವ ಒಂದು ತದ್ಧಿತ ಪ್ರತ್ಯಯ: 'ತಪ್ಪಿತಸ್ಥ', 'ದುಡ್ಡಸ್ಥ' ಪರಾ.

[IP ಸಂಸ್ಕೃತದಲ್ಲಿ "ಸ್ಥ' ಎಂಬುದು ಪ್ರತ್ಯಯವಲ್ಲ]

**ಸ್ಥಂಡಿಲ** (ನಾ). ೧. ಯಜ್ಞಕ್ಕಾಗಿ ಮಂತ್ರದಿಂದ ಸಂಸ್ಕರಿಸಿದ ಸಮತಟ್ಟಾದ ಭೂಮಿ; ಯಜ್ಞವೇದಿಕೆ: "ಲೇಸುಮಾಡಿದ ಭೂಮಿಯಂ ಸ್ಥಂಡಿಲಮೆಂಬುದು" (ಹಲಾಯು. ೧೨೫-೭೭); ಸ್ಥಂಡಿಲ ಪರಿಸ್ತರಣ ಪರಿವೇಷಣ ಅಲಂಕರಣ ಅಭಿಮುಖೀಕರಣ ಮುಖಾಹುತ್ಯಾದಿಗಳಿಂ ಸಮರ್ಚಿತನಾಗಿ (ವಿವೇಕ. ೧೩೭). ೨. ಬರಡುಭೂಮಿ; ಬೀಳುನೆಲ. ೩. ಹೆಂಟೆಗಳ ರಾಶಿ. ೪. ಸೀಮೆ; ಸರಹದ್ದು. ೫. ನೆಲ; ಭೂಮಿ: ಸ್ಥಂಡಿಲದಲ್ಲಿ ಶಯನವು ಜಪವು ಪೂಜೆಯೂ ಭೋಜನವು ಮಾಡಬಾರದು (ಶೇಷಧ. ೨೦). [ಸಂ.]

**ಸ್ಥಗಿತ** (ಗು). ೧. ಮುಚ್ಚಿಡಲ್ಪಟ್ಟ; ಬಚ್ಚಿಟ್ಟ. ೨. ಆವರಿಸಿದ; ಆಕ್ರಮಿಸಿದ: ಇದಱೊಳ್ ಶ್ವೇತಾತಪತ್ರಸ್ಥಗಿತದಶದಿಶಾಮಂಡಲಂ ರಾಜಚಕ್ರಂ ಪುದಿದಿದ್ದುದಿತ್ತು (ಪಂಪಭಾ. ೧೨-೧೫೭); ಉದ್ಧತ್ ಸೀಕರೌಘಸ್ಥಗಿತಗಗನದಿಗ್ಮಂಡಳಂ (ಎಕ. XI, ದಾವಣ. ೪೩-೪; 1164). ೩. ತಡೆಗೊಂಡ; ನಿಲ್ಲಿಸಲ್ಪಟ್ಟ. (ನಾ). ೪. ಮುಚ್ಚಿದುದು: "ಅಪವಾರಿತಂ, ಪಿಹಿತಂ, ಸಂವೀತಂ, ಸಂವೃತಂ, ಸ್ಥಗಿತಂ – ಈ ೫ ಮುಚ್ಚಿದುದು" (ಹಲಾಯು. ೧೨೨-೫೮). ೫. ಆವರಿಸಿದುದು; ತುಂಬಿದುದು : ವಿಗತಮಳಮುಪಾತ್ರರಾತಿ [ಸಾ] ರ್ಥಾರ್ಥವೀರಂ ಸ್ಥಗಿತಮಮಿತ ಸಾನಾಶಬ್ದವೀಚಿಪ್ರ [ಪಂ]ಚಂ . . . ಸಾಗರಂಬೋಲ್ ಸೊಗಯಿಸಿ ಧರಣಿ [ಚಕ್ರಾಂಬ]ರಾಕ್ರಾಂತಮಕ್ಕುಂ (ಕವಿರಾ. ೩-೨೧೭). ೬. ನಿಂತು ಹೋದುದು; ತಡೆಯಲ್ಪಟ್ಟುದು: ಅವರ ಎಲ್ಲ ಕೆಲಸಗಳೂ ಸ್ಥಗಿತವಾಗಿದ್ದುವು (ವಂಶವೃ. ೨೯). [ಸಂ.]

**ಸ್ಥಗಿತಗೊಳಿಸು** (ಕ್ರಿ). ತಡೆಹಿಡಿದು ನಿಲ್ಲಿಸು: ಗಣಪೂರ್ತಿ ಸಂಖ್ಯೆಯ ಸದಸ್ಯರು ಸಭೆಯಲ್ಲಿಲ್ಲದಿದ್ದರೆ ಸಭೆಯನ್ನು ಸ್ಥಗಿತಗೊಳಿಸುವುದು (ಭಾಧಾನ. ೪೮); ಅವನ ಮಾತು ಗಳಿಂದ ನೀಲನು ತನ್ನ ಬಂದೂಕಿನ ಉಪಯೋಗವನ್ನು ಸ್ಥಗಿತಗೊಳಿಸಿ (ಬಂಗಾಹ. ೫೦).

[ಸಂ.]

**ಸ್ಥಪತಿ** (ಗು). ೧. ಪ್ರಮುಖವಾದ; ಮುಖ್ಯವಾದ. (ನಾ). ೨. ದೊರೆ; ರಾಜ. ೩. ವಾಸ್ತುಶಿಲ್ಪಿ; ಶಿಲ್ಪಶಾಸ್ತ್ರಜ್ಞ: ಸಂಭಿನ್ನವಿದ್ಯೆಯಿಂ ಸ್ಥಪತಿ ಮಾಡಿಕೊಟ್ಟಂ ಬೀಡಂ (ಪಂರಾಮಾ. ೧೨-೯೭); ದೇವಸ್ಥಪತಿ ನಿಜಾಜ್ಞೆಯಿಂದೆ ನಿರ್ಮಿಸುಗುಂ . . . ಪುರಮಂ (ಜಗವಿ. ೯-೨೫). ೪. ಶ್ರೇಷ್ಠನಾದ ಬಡಗಿ: "ಸ್ಥಪತಿ ಧ್ವನಿ ವರ್ಧಕಿಯೊಳ್" (ವಸ್ತುಕೋ. ೧೩೮-೧೨೧). ೫. ಅಂತಃಪುರದ ಕಾವಲುಗಾರ; ಕಂಚುಕಿ. ೬. ಯಾಗ ಮಾಡುವವನು: "ಯಾಗಗೆಯ್ವಂ ಸ್ಥ[ಪಾಠಾಂ. ಸ್ತ]ಪತಿ" (ಮಂಗರಾ. ೭೭-೧೪). ೭. ಬೃಹಸ್ಪತಿಯಾಗವನ್ನು ಮಾಡಿದವನು: "ಬೃಹಸ್ಪತಿಯಾಗವಂ ಮಾಡಿದವನಂ ಸ್ಥಾEಸ್ಥತಿಪತಿಯೆಂಬುದು" (ಹಲಾಯು. ೬೯-೨೬೪). ೮. ಕುಬೇರನ ಹೆಸರುಗಳಲ್ಲಿ ಒಂದು. ೯. [ಜೈನ] ಚಕ್ರವರ್ತಿಗೆ ತಾವಾಗಿ ದೊರೆಯುವ ಏಳು ಜೀವರತ್ನ ಗಳಲ್ಲಿ ಒಂದು; ಉತ್ತಮನಾದ ವಾಸ್ತುಶಿಲ್ಪಿ: ಹಸ್ತಿನಪುರಸಂಭೂತಂಗಳಪ್ಪ ಸೇನಾಪತಿ ಗೃಹಪತಿ ಸ್ಥಪತಿ ಪುರೋಹಿತರತ್ನಂಗಳಿಂದಂ (ಶಾಂತಿಪು. ೧೧-೮೪ ವ); ಸೇನಾಪತಿ ಸ್ಥಪತಿ ಗೃಹಪತಿ . . . ಸ್ತ್ರೀರತ್ನಂಗಳೆಂಬೇಳುಂ ಜೀವರತ್ನಂಗಳುಮಂ (ಚಂದ್ರಪು. ೭-೧೧೧ ವ). [ಸಂ.]

**ಸ್ಥಪತಿರತ್ನ** (ನಾ). = ಸ್ಥಪತಿ ೯: ವಿವಾಹಮಂಟಪಮಂ ಸ್ಥಪತಿರತ್ನಕ್ಕೆ ವಿರಚಿಸೆಂದು ಬೆಸಸಿದಾಗಳ್ (ಆದಿಪು. ೪-೩೦ ವ); ಅನೇಕ ಚೈತ್ಯಾಲಯಂಗಳಂ ಸ್ಥಪತಿರತ್ನಂಗಳಿಂ ಮಾಡಿಸಿ (ಅಜಿಪು. ೯-೩೫ ವ). [ಸಂ.]

**ಸ್ಥಪುಟಿತ** (ಗು). ಏರುತಗ್ಗಾಗಿ ಮಾಡಲ್ಪಟ್ಟ; ತಗ್ಗುದಿಣ್ಣೆಗಳುಂಟಾದ: ವಾಜಿಮಿರಾಹತಿಸ್ಥಪುಟಿತಗ್ರಾವಸ್ಥಲಂ (ಆದಿಪು. ೧೩-೭೫). [ಸಂ.]

**ಸ್ಥಲ, ಸ್ಥಳ** (ನಾ). ೧. ಭೂಮಿ; ಕ್ಷೇತ್ರ; ನೆಲ: "ನೆಲಂ ಸ್ಥಲಂ ಸ್ಥಲಿ" (ವಸ್ತುಕೋ. ೨೭-೫). ೨. ಸ್ಥಿರವಾದ ನೆಲ; ಗಟ್ಟಿಯಾದ ಒಣನೆಲ. ೩. ದಡ; ತೀರ. ೪. ಜಾಗ; ಪ್ರದೇಶ. ೫. ಎತ್ತರವಾದ ಜಾಗ; ದಿನ್ನೆ. ೬. ನೆಲೆ; ಇರುವ ಸ್ಥಾನ. ೭. ಚರ್ಚೆಯ ಅಥವಾ ನಿರೂಪಣೆಯ ವಿಷಯ,– ವಸ್ತು. ೮. ಗ್ರಂಥದ ಭಾಗ,– ಪ್ರಕರಣ. ೯. ಡೇರೆ; ಗುಡಾರ. ೧೦. ಸಾಂಪ್ರದಾಯಿಕವಾದ ಕಾವ್ಯಾಂಗ: ಪದಿನೆಂಟುಂ ಸ್ಥಲವರ್ಣನಮಿದರ್ಕೆ ಮೆಯ್ಯಚ್ಚಮೆನಿಸಿ ಪೇೞ್ದಂ (ಶಮದ. ಸ. ೨೦೩ ಪ್ರಯೋ). ೧೧. [ವೀಶೈ] ಭಕ್ತನ ಸಾಧನೆಯ ಮುಖ್ಯ ಹಂತ: ಇಂತೀ ನೂಱೆಂಟುಸ್ಥಲದಲ್ಲಿ ನಿಪುಣನಾಗಿ . . . ಏಕಸ್ಥಲವಾಗಿ ಸ್ಥಲನಿಃಸ್ಥಲವನ್ನೆದಿ ಸೌರಾಷ್ಟ್ರ ಸೋಮೇಶ್ವರಲಿಂಗ ತಾನು ತಾನಾಗಿರಬೇಕು (ಆದವ. ೮-೧೨). 'ಏಕೋತ್ತರಶತಸ್ಥಲ', 'ಷಟ್ಸ್ಥಲ' ಪರಾ. ೧೨. ಪರಬ್ರಹ್ಮ: ಸ್ಥಲವೆಂದರೆ ಅಂಗ ನೆಲೆಯಾದರೆ ಪ್ರಾಣ (ವಚಸಂ. ೧೪೩-೩೩) ; ಏಕವೆಂದೆನಿಸಿದ ಪರಬ್ರಹ್ಮವಿರಲು ತಾನೆ ಸ್ಥಲ (ಬಶಿಚಿಂ. ೪೮-೫).

**ಸ್ಥಳ :** ೪. "ಸ್ಥಳಂ ಸ್ಥಳಿಯೆನಲ್ಕೆ ಸರ್ವಸ್ಥಳಕ್ಕೆ ನಾಮಮಕ್ಕುಂ" (ಮಂಗರಾ. ೨೮-೨). ೬. ನಮ್ಮ ಸ್ಥಳ ಬೆಂಗಳೂರು (ರೂಢಿ). ೧೧.ತಿಳುಪಿ ಜಂಗಮಲಿಂಗ ಭಕ್ತಿಸ್ಥಳಮನಾ ತ್ರಿವಿಧಪ್ರಸಾದಸ್ಥಳಮನಮಳಾಚಾರಪದಮಂ ತೋಱಿದಡೆ (ಬಸಪು. ೨೬-೬೫). ೧೩. ಒಂದು ನೂರು ಗ್ರಾಮಗಳನ್ನುಳ್ಳ, ಒಂದು ವಿಭಾಗ,– ಪ್ರದೇಶ : (ಆಂಕಸ. ೨೨). ೧೪. ಭೂಮಿಯನ್ನು ಅಳೆಯುವ ಒಂದು ಪರಿಮಾಣ : ಕೆಲವು ಕಡೆಯಲ್ಲಿ ಒಂದು ಕೂರಿಗೆ ಭೂಮಿಗೆ ಸ್ಥಳವೆಂದೆನ್ನುವರು (ಕಭಾಗ. ೩೬೫). ೧೫. [ಗಣಿತ] ಹದಿನೆಂಟು ಎಂಬ ಸಂಖ್ಯೆಯ ಸಂಕೇತ : "ಜಾತಿ ಸ್ಥಳಂ ಪದಿನೆಂಟು" (ಮಂಗರಾ. ೧೧೪-೯). [ಸಂ.]

**ಸ್ಥಲಕಟ್ಟು**, (ನಾ). [ವೀಶೈ] ಷಟ್‌ಸ್ಥಲಗಳ ಕ್ರಮ,– ನಿಯಮ : ಕೆಲವರು ವಚನಗಳಿಗೆ ಟೀಕೆಗಳನ್ನು ಬರೆದರು. ಕೆಲವರು ಅವುಗಳನ್ನು ಸ್ಥಲಕಟ್ಟುಗಳಂತೆ ವ್ಯವಸ್ಥೆಗೊಳಿಸಿದರು (ಮೋಳಿಮಾ. ಮುನ್ನುಡಿ. ೧) ; ಒಳ್ಳೊಳ್ಳೆಯ ವಚನಗಳನ್ನು ಷಟ್ಸ್ಥಲದ ತತ್ತ್ವಾನುಭವಕ್ಕನುಗುಣವಾಗಿ ಸ್ಥಲಕಟ್ಟಿಗೆ ಸೇರಿಸಿ . . . ಕೀರ್ತಿ ಗಳಿಸಿದ್ದಾನೆ (ಶಂಕಕಂ. X,೫೮೬). [ಸ್ಥಲ + ಕಟ್ಟು₂]

**ಸ್ಥಲಕಮಳ** (ನಾ). ನೆಲದಾವರೆ; ಬೆಟ್ಟದಾವರೆ: ಜಳಕಮಳಂ ಮೇಣ್ ಸ್ಥಲಕಮಳಮಲ್ತು ಗಗನಸ್ಥಲಕಮಳಮಿದೆನಿಸೆ ಪಿಡಿದ ಧವಳಚ್ಛತ್ರಂ (ಮಲ್ಲಿಪು. ೯-೧೧೪).
[ಸಂ. ಸ್ಥಲಕಮಲ]

**ಸ್ಥಲಕುಳ, ಸ್ಥಳಕುಳ** (ನಾ). [ವೀಶೈ] ಸ್ಥಳ ಮತ್ತು ವಂಶ(?) : ವಿಶ್ವಾಸದ ಹರವರಿಯಲ್ಲಿ ವಿಶ್ವಮಯ ಸ್ಥಲಕುಳಂಗಳಾದವು (ಮೋಳಿಮಾ. ೨೦೦-೭೫೫). **ಸ್ಥಳಕುಳ :** ಅಱಿವನ್ನುಬರ ಸ್ಥಳಕುಳಂಗಳ ಹೊಲದ ಹೊಲಬ ತಿಳಿದಲ್ಲಿ . . . ಆತ ನಿಶ್ಚಿಂತ ನೋಡಾ (ಸರ್ವವ. ೧೩೭-೭೭೯). [ಸಂ. ಸ್ಥಲಕುಲ]

**ಸ್ಥಲಚರ, ಸ್ಥಳಚರ** (ನಾ). ನೆಲದ ಮೇಲೆ ಚಲಿಸುವ ಜೀವಿ: ನೀರಿಲ್ಲದಲ್ಲಿ ಜಲಚರಗಳು ಹ್ಯಾಗೆ ಬದುಕಿರಲಾರವೋ ಹಾಗೆ ಹವೆ ಇಲ್ಲದಲ್ಲಿ ಮನುಷ್ಯ ಮುಂತಾದ ಸ್ಥಲಚರಗಳು ಬದುಕಲಾರವು (ಮುಂಬಯಿ. ೫-೧೫೦); **ಸ್ಥಳಚರ** : ಅವಱೊಳ್ ಪಂಚೇಂದ್ರಿಯಂಗಳ್ ಜಳಚರ ಸ್ಥಳಚರ ಗಗನಚರಪ್ರಕಾರದಿಂ ಮೂದೆಱನಕ್ಕುಂ (ಶಾಂತಿಪು. ೧೨-೧೧ ಪ). [ಸಂ.]

**ಸ್ಥಲಜ್ಞ, ಸ್ಥಳಜ್ಞ** (ನಾ). ೧. ಪ್ರದೇಶವನ್ನು ಬಲ್ಲವನು; ಸ್ಥಳವನ್ನು ತಿಳಿದವನು. ೨. [ವೀಶೈ] ಷಟ್‌ಸ್ಥಲ, ಏಕೋತ್ತರಶತಸ್ಥಲ ಮುಂತಾದ ಆಧ್ಯಾತ್ಮಿಕಹಂತಗಳನ್ನು ತಿಳಿದವನು: ಅನಾಚಾರದಲ್ಲಿ ಆಚಾರವಡಗಿ ಭಕ್ತನಲ್ಲದೆ ಭವಿಯಾಗಿ . . . ಆಱುಕುಳದಲ್ಲಿ ಬಲ್ಲವನಲ್ಲದೆ ಇಂತವಱೊಳಗಾದ ನೂಱೊಂದು ಕುಳಕ್ಕೆ ಸ್ಥಲಜ್ಞನಲ್ಲ (ಮೋಳಿಮಾ. ೧೭೫-೬೬೧). **ಸ್ಥಳಜ್ಞ :** ೧. ಆ ದೇವಾಲಯವು ಸಮುದ್ರಗರ್ಭದಲ್ಲಿ ಲೀನವಾದಂತೆ ಸ್ಥಳಜ್ಞರು ಹೇಳುವರು (ಲಕ್ಷ್ಮೀಪು. ೧). [ಸಂ.]

**ಸ್ಥಲಪಲ್ಲಟ, ಸ್ಥಳಪಲ್ಲಟ** (ನಾ). ಸ್ಥಾನಾಂತರ; ಒಂದು ಜಾಗದಿಂದ ಇನ್ನೊಂದು ಜಾಗಕ್ಕೆ ಬದಲಾಯಿಸುವಿಕೆ; ವರ್ಗಾವಣೆ: (೬). **ಸ್ಥಳಪಲ್ಲಟ :** ಮನೆಯಲ್ಲಿ ದಿನನಿತ್ಯ ಬೇಕಾಗುವ ಪದಾರ್ಥಗಳನ್ನು ಸ್ಥಳಪಲ್ಲಟಮಾಡದೆ ನಿರ್ದಿಷ್ಟ ಸ್ಥಳದಲ್ಲಿಡುವುದರಿಂದ ಕೆಲಸ ಸುಲಭವಾಗುತ್ತದೆ (ರೂಢಿ). [ಸ್ಥಲ + ಪಲ್ಲಟ]

**ಸ್ಥಲವಂದಿಗ, ಸ್ಥಳವಂದಿಗ** (ನಾ). ಆ ಸ್ಥಳಕ್ಕೆ ಸೇರಿದ ವ್ಯಕ್ತಿ; ಅದೇ ಜಾಗಕ್ಕೆ ಸೇರಿದವನು : (೬). **ಸ್ಥಳವಂದಿಗ:** ಅಲ್ಲಿಯ ಸ್ಥಳವಂದಿಗರು ಆ ಊರಿನ ಹೆಸರಿನ ಬಗೆಗೆ ಒಂದು ದಂತಕಥೆಯನ್ನು ಹೇಳುತ್ತಾರೆ (ರೂಢಿ). [ಸ್ಥಲ + ಒಂದಿಗ]

**ಸ್ಥಲಶೃಂಗಾಟ, ಸ್ಥಳಶೃಂಗಾಟ** (ನಾ). ಒಂದು ಬಗೆಯ ಸಸ್ಯ; ನೆಗ್ಗಿಲು. **ಸ್ಥಳಶೃಂಗಾಟ:** "ಗೋಕ್ಷುರಃ, ಸ್ಥಳಶೃಂಗಾಟಃ, ಶ್ವದಂಷ್ಟ್ರಾ, ತ್ರಿಕಂಟಕಃ- ಈ ೪ ನೆಗ್ಗಿಲು" (ಹಲಾಯು. ೩೩-೪೮). [ಸಂ.]

**ಸ್ಥಲಿ, ಸ್ಥಳಿ** (ನಾ). ೧. ಗಟ್ಟಿನೆಲ ; ಒಣನೆಲ. ೨. ನೈಸರ್ಗಿಕವಾದ (ಕಾಡು, ವನ ಮೊದಲಾದ) ಸ್ಥಳ. ೩. ಪ್ರದೇಶ; ಜಾಗ: "ನೆಲಂ ಸ್ಥಲಂ ಸ್ಥಲಿ" (ವಸ್ತುಕೋ. ೨೬-೫). ೪. ಸ್ಥಳದೇವತೆ ; ಸ್ಥಳದ ದೇವರು. **ಸ್ಥಳಿ:** ೩. "ಸ್ಥಳಂ, ಸ್ಥಳೀ- ಈ ೨ ಸ್ಥಳಂ" (ಹಲಾಯು. ೨೬-೩). [ಸಂ. ಸ್ಥಲೀ]

**ಸ್ಥಳೀಕ₁, ಸ್ಥಳೀಕ** (ನಾ). ೧. ಸ್ಥಳದ ನಿವಾಸಿ : (೬). **ಸ್ಥಳೀಕ:** ೨. ಒಂದು ನಿರ್ದಿಷ್ಟ ಸ್ಥಳಕ್ಕೆ ಸಂಬಂಧಿಸಿದುದು ,– ಸೀಮಿತವಾದುದು: ಈಗೀಗ ಈ ತೆರನಾದ ಸ್ಥಳೀಕವಾದ ರಕ್ತದ ಒತ್ತಡದ ವಿಷಯದಲ್ಲಿ ಹಲವಾರು ನೂತನ ವಿಧಾನದ ಪ್ರಯೋಗಗಳು ಬಳಕೆಗೆ ಬಂದಿವೆ (ಮನೋಸಂ. ೧೧೧). [< ಸಂ. ಸ್ಥಲಿಕ]

**ಸ್ಥಳೀಕ₂** (ನಾ). ನೆಲಗಟ್ಟು : ನೀಲಬದ್ಧಸ್ಥಳೀಕಂ ಮರಕತಜಗತೀಮಂಡಲಂ ಸ್ಫಾಟಿಕಸ್ತಂಭಾಲಂಬಂ . . . ದ್ವಾರಾಲಂಕಾರಂಗಳಿಂ ಕಣ್ಗೆಸೆದುದನುಪಮಂ ತತ್ಕೃತೋದ್ಯಾಪಗೇಹಂ (ಜಂಗ್ರಪು. ೬-೪೪). [ಸಂ.]

**ಸ್ಥವಿರ** (ಗು). ೧. ಸ್ಥಿರವಾದ; ದೃಢವಾದ. ೨. ವಯಸ್ಸಾದ; ಮುಪ್ಪಾದ (ನಾ). ೩. ಮುದುಕ; ವೃದ್ಧ: ಪುರುಷ ಸ್ತ್ರೀ ಬಾಲ ವೃದ್ಧ ಸ್ಥವಿರ ಯುವ ಜನಾತಂಕಶಂಕಾತಿರೇಕಂ ಪುರದೊಳ್ಪೊಣ್ಮಿತ್ತು . . . ಘೋರಪ್ರಳಾಪಂ (ಪಂಠಾವಾ. ೪-೧೧೧). ೪. ಬ್ರಹ್ಮ. ೫. ಭಿಕ್ಷುಕ. ೬. [ಜೈನ] ಒಂದೇ ಕಡೆಗೆ ನಿಲ್ಲುವ ಶ್ರಮಣ: ಗುರುಸ್ಥವಿರಾದಿ ನಿರೂಪಿತ ಮಾರ್ಗಾಚರಣಮುಂ . . . ಎಂದಿವು ಮೊದಲಾಗೊ ಡೆಯಱಿಂ ತನಗೆ ತಕ್ಕಂತು ನಗಚ್ಚುದು (ತತ್ತ್ವಪ್ರ. ೩೪೩); ಅಂಗಬಾಹ್ಯಗ್ರಂಥಗಳನ್ನು ಆ ಕಾಲದ ಸ್ಥವಿರರು (ಒಂದೇ ಕಡೆಗೆ ನಿಲ್ಲುವ ಶ್ರಮಣರು) ರಚಿಸಿದ್ದಾರೆ (ಜೈನಸಪ. ೧೬೪). ೭. [ಬೌದ್ಧ] ಹಿರಿಯನಾದ ಬೌದ್ಧಮತಾನುಯಾಯಿ: ಅವರು ಏನಾದರೂ ಮರೆತುಬಿಟ್ಟು ಹೋಗಿರುವುದುಂಟೋ ಎಂದು ನೋಡುವುದು ಸ್ಥವಿರ ಆನಂದನ ಪದ್ಧತಿ (ಹತ್ತುಮ. ೪೭); ಸಂಘಪಿತರೂ ಸಂಘಪರಿನಾಯಕರೂ ಆಗಿ ಅನುಭವಿಕರಾದ ಸ್ಥವಿರರಿಗೆ ವಿಶೇಷವಾದ ಪೂಜೆಯನ್ನು ಕೊಡದ ಭಿಕ್ಷುವು ಧರ್ಮವಿನಯಗಳಲ್ಲಿ ವೃದ್ಧಿ . . . ಪಡೆಯಲು ಶಕ್ತನಲ್ಲ (ತೀರ್ಥಕ. ೧೫); ಆಗ ಸ್ಥವಿರನು ಎಲ್ಲಾ ದುಃಖಸ್ಕಂಧಗಳಿಗೂ ಸ್ಕಂಧಗಳು ಬೀಜಗಳೆಂದು ವೃಕ್ಷದ ಉಪಮಾನವನ್ನು ಹೇಳಿದನು (ಬುದ್ಧಪ. ಮಿಲಿಂದ. ೭೨).
[ಸಂ.]

**ಸ್ಥವಿರವಾದ** (ನಾ). [ಬೌದ್ಧ] ಸುತ್ತ , ವಿನಯ ಮತ್ತು ಅಭಿಧಮ್ಮ ಎಂಬ ಮೂರು ಬೌದ್ಧಗ್ರಂಥಗಳಲ್ಲಿ ನಿರೂಪಿತವಾಗಿರುವ ಧರ್ಮ; ಹೀನಯಾನ ಬೌದ್ಧಧರ್ಮ: ಹೀನಯಾನವೆಂಬ ಸ್ಥವಿರವಾದವನ್ನು "ಬುದ್ಧನ ಧರ್ಮ" ಎಂದೂ . . . ಅರ್ಥಮಾಡಿಕೊಳ್ಳಬಹುದು (ಭಾರಧ. ೨೦೫). [ಸಂ.]

**ಸ್ಥವಿರೆ** (ನಾ). ಮುದುಕಿ; ವೃದ್ಧೆ: ಅಸ್ಥಿಪಂಜರದಂತಪ್ಪೋಲಸ್ಥಿರಸ್ಥವಿರೆಯಂ ಕಂಡು (ಶ್ರೀರಾಮಾ. ೨೧-೫೫೩). [ಸಂ. ಸ್ಥವಿರಾ]

**ಸ್ಥಳ** 'ಸ್ಥಲ' ನೋ.

**ಸ್ಥಳಕುಳ** 'ಸ್ಥಲಕುಳ' ನೋ.

**ಸ್ಥಳಚರ** 'ಸ್ಥಲಚರ' ನೋ.

**ಸ್ಥಳಜ್ಞ** 'ಸ್ಥಲಜ್ಞ' ನೋ.

**ಸ್ಥಳಪಲ್ಲಟ** 'ಸ್ಥಲಪಲ್ಲಟ' ನೋ.

**ಸ್ಥಳಮನೆ** (ನಾ). ಸ್ಥಳೀಯ ಅಧಿಕಾರಿಗಳ ಮನೆ: (೬).

**ಸ್ಥಳಮನೆ ಸಾಗು** = ಸ್ಥಳೀಯ ಅಧಿಕಾರಿಗಳ ಮನೆಯ ಕೆಲಸಗಳನ್ನು ಸಾಗಿಸುವುದು,– ವ್ಯವಹಾರಗಳನ್ನು ನೋಡಿಕೊಳ್ಳುವುದು (?): ಅರಮನೆ ಕೆಲಸ, ಸ್ಥಳಮನೆಸಾಗು, ಸಂತು, ಏತ್ತುವಳಿ ಮೊದಲಾದ ಕೆಲಸಗಳನ್ನು ಮಾಡುತಾ ಸೇನುಭೋಗರ ಸಮ್ಮತಿಯಿಂದ ನಡೆದುಕೊಳ್ಳುವುದೆಂದು ನೇಮಕ ಮಾಡಿದ್ದೂ ಅಲ್ಲದೆ (ಚಿತ್ರಪಾ. ೮). [ಸ್ಥಳ (= ಸ್ಥಲ) + ಮನೆ]

**ಸ್ಥಳಮರ್ಯಾದೆ** (ನಾ). ಸ್ಥಳದ ನಿಯಮ,– ಕಟ್ಟುಪಾಡು : ತಪ್ಪು ಸ್ಥಳಮರ್ಯಾದೆ ಮಹಿಮೆಯಪ್ಪುದು (ಎಕ. VII, ಹೊನ್ನಾಳಿ. ೯೦-೩೭; 1185).
[ಸಂ. ಸ್ಥಲಮರ್ಯಾದಾ]

**ಸ್ಥಳಯಾತ್ರೆ** (ನಾ). (ವ್ಯಾಪಾರದ ಕಾರಣಕ್ಕಾಗಿ) ಭೂಮಾರ್ಗವಾದ ಪಯಣ: ದತ್ತನುಂ ನಂದಿಷೇಣನುಂ ಎಂಬರ್ . . . ಸೋದರಮಾವಂ ಭದ್ರಮಿತ್ರನಲ್ಲಿ ಮೊದಲ್ಗೊಂಡು ಸ್ಥಳಯಾತ್ರೆಗೆ ಪೋಗಿ ಸಂಖ್ಯಾತೀತಸಾರಧನಮಂ ಪಡೆದು ಬರ್ಪೆಡೆಯೊಳ್ (ಶಾಂತಿಪು. ೯-೯೦ ಪ). [ಸಂ. ಸ್ಥಲಯಾತ್ರಾ]

**ಸ್ಥಳವಂದಿಗ** 'ಸ್ಥಲವಂದಿಗ' ನೋ.

**ಸ್ಥಳವಿಪರ್ಯಾಯ** (ನಾ). ಸ್ಥಳದ ಬದಲಾವಣೆ ; ಸ್ಥಾನಾಂತರ ; ವರ್ಗಾವಣೆ: ನಿತ್ಯಪರೀಕ್ಷಣ ಸ್ಥಳವಿಪರ್ಯಾಯ ಪ್ರತಿಪತ್ತಿದಾನಂಗಳಿಂ ನಿಯೋಗಿಗಳಂ ಕಾಮದುಘರ್ ಮಾಡಿಯುಂ (ಚಂದ್ರಪ್ರ. ೨-೬೧). [ಸಂ. ಸ್ಥಲವಿಪರ್ಯಾಯ]

**ಸ್ಥಳಶೃಂಗಾಟ** 'ಸ್ಥಲಶೃಂಗಾಟ' ನೋ.

**ಸ್ಥಳಸಂಕೋಚ** (ನಾ). ಜಾಗ ಕಡಿಮೆಯಾಗಿರುವಿಕೆ ; ಸ್ಥಳ ಸಾಲದಾಗುವಿಕೆ : ಸ್ಥಳಸಂಕೋಚದಿಂದ . . . ಮಹತ್ವದ ವಿಷಯಗಳನ್ನು ಬಿಡಬೇಕಾಯಿತು (ಭಾರದ. i. ಮುನ್ನುಡಿ). [ಸಂ. ಸ್ಥಲಸಂಕೋಚ]

**ಸ್ಥಳಸುಂಕ** (ನಾ). ಸ್ಥಳೀಯ ತೆರಿಗೆ; ಸ್ಥಳದಲ್ಲಿ ಕೊಡಬೇಕಾದ ತೆರಿಗೆ: ಗ್ರಾಮಗಳ ಸ್ಥಳಸುಂಕ ಮಗ್ಗಮನೆ ಬೆಲ್ಲಸುಂಕ ಅಡೆದೆಱೆ ಮಾದಾಱಿಕೆ ವೋಜನ ವರಿ (ಎಕ. XIV, ಗುಂಡ್ಲುಪೇ. ೧೨೯-೯೮; 1521); ಇದರಲ್ಲಿ . . . ಗದ್ದೆ, ಬೆದ್ದಲು, ಕಾಡಾರಂಬ, ಮಾರ್ಗಸುಂಕ, ಸ್ಥಳಸುಂಕ, ಹುಲ್ಲುಬನ್ನಿ . . . ಇವೇ ಮೊದಲಾದುವುಗಳು ಸೇರಿದ್ದವು (ಚಿತ್ರಪಾ. ೪ ಉಪೋದ್ಘಾತ). [ಸ್ಥಳ (= ಸ್ಥಲ) + ಸುಂಕ$_1$]

**ಸ್ಥಳಹೇಱು** (ನಾ). ಪ್ರಾದೇಶಿಕವಾಗಿ ಚಾಲ್ತಿಯಲ್ಲಿರುವ ಹೇರು,– ಹೊರೆ (?): ಸ್ಥ[ಳ]ಹೇಱಿಂಗೆ ಕಾಣೋದೇಸಿಯ ಹೇಱಿಂಗೆ ಅರವನೆ ಕೊಳಗ ದಾಯ ಕೊಟ್ಟಲ್ಲಿ (ಕಇಆ. ೩೧-೪೨-೧೮; 1116). [ಸ್ಥಳ (= ಸ್ಥಲ) + ಹೇಱು$_2$ (< ಪೇಱು$_2$)]

**ಸ್ಥಳಾಂತರ** (ನಾ). ೧. ಇನ್ನೊಂದು ಸ್ಥಳ ; ಬೇರೆಯ ಜಾಗ: ನನ್ನ ಮಗನಾದ ಭರತನನ್ನು ಸೋದರಮಾವನ ಮನೆಗೆ ಕಳುಹಿಸುವ ನೆವದಿಂದ ಸ್ಥಳಾಂತರಕ್ಕೆ ಹೊರಡಿಸಿದನು (ಕಗವಿ. ೬೪). ೨. ಬೇರೆಯ ಸ್ಥಳಕ್ಕೆ ವರ್ಗಾವಣೆ ಮಾಡುವಿಕೆ; ಸ್ಥಾನಾಂತರ ಮಾಡುವಿಕೆ: ಅನರೀಕ್ಷಿತವಾಗಿ ಸ್ಥಳಾಂತರಶಿಕ್ಷೆಯನ್ನು ಕೊಟ್ಟು ಅಧಿಕಾರಿಗಳನ್ನು ಮನಸ್ಸಿನಲ್ಲಿಯೇ ನಿಂದಿಸುತ್ತ . . . ರೈಲನ್ನು ಹತ್ತಿದೆ (ರಾಯಕ. ೨). [ಸಂ. ಸ್ಥಲಾಂತರ]

**ಸ್ಥಳಾಂತರಗೊಳ್ಳು** (ಕ್ರಿ). ಬೇರೆಯ ಸ್ಥಳಕ್ಕೆ ಸಾಗಿಸಲ್ಪಡು; ವರ್ಗಾವಣೆ ಹೊಂದು: ಅಸಂಖ್ಯಾತಜನರು ಬಂದು, ಇದ್ದು, ವಲಸೆಹೋಗಿ ಸ್ಥಳಾಂತರಗೊಂಡು . . . ತಮ್ಮ ಜೀವನನಾಟಕವನ್ನು ನಡೆಯಿಸಿದರು (ಯಕ್ಷಬ. ೨).
[ಸ್ಥಳಾಂತರ + ಕೊಳ್ಳು$_1$ (< ಕೊಳ್$_1$)]

**ಸ್ಥಳಾವಕಾಶ** (ನಾ). ಜಾಗ ಇರುವ ಸೌಲಭ್ಯ; ಸ್ಥಾನಾವಕಾಶ: ಚಿತ್ರಗಳಲ್ಲಿ ಸ್ಥಳಾವಕಾಶಪರಿಜ್ಞಾನ, ಆಕೃತಿಗಳ ಒಪ್ಪ ಕೂಡ ಕಾಣದು (ಭಾರದ. ೫೨೬).
[ಸಂ. ಸ್ಥಲಾವಕಾಶ]

**ಸ್ಥಳಿ** 'ಸ್ಥಲಿ' ನೋ.

**ಸ್ಥಳಿಕ** (ಗು). ಸ್ಥಳದಲ್ಲಿರುವ; ಸ್ಥಾನೀಯ; ಅದೇ ಊರಿನ: ಸ್ಥಳಿಕ ಕೆಲವು ಹೆಸರುಗಳು ಅವಸಲ್ಲಿ ಕುತೂಹಲವನ್ನೇ ಕೆರಳಿಸಿದ್ದವು (ರಂಗರೋ. ೩೪); ಗಜಪುರದ ಸಾಲಿಗ್ರಾಮ ನರಸಿಂಹನಿಗೂ ಇನ್ನೂ ಒಂದೆರಡು ಸ್ಥಳಿಕ ದೇವರುಗಳಿಗೂ ಪ್ರತ್ಯೇಕವಾದ ಸ್ತುತಿಗಳು ಇಲ್ಲಿ ಸಂದುದನ್ನು ಕಾಣಬಹುದು (ಯಕ್ಷಬ. ೫೮). [ಸಂ. ಸ್ಥಲಿಕ]

**ಸ್ಥಳೀಕ** 'ಸ್ಥಲೀಕ$_1$' ನೋ.

**ಸ್ಥಳೀಯ** (ಗು). ಸ್ಥಳಕ್ಕೆ ಸೇರಿದ; ಸ್ಥಳಕ್ಕೆ ವಿಶಿಷ್ಟವಾದ: ಉಬ್ಬರವಿಳಿತಗಳು, ನೀರು ಆವಿಯಾಗುವ ವೇಗದಲ್ಲಿ ವ್ಯತ್ಯಾಸ, ಲವಣತೆಯಲ್ಲಿ ಭೇದ ಇವುಗಳಿಂದ ಅಲ್ಲಲ್ಲಿ ಸ್ಥಳೀಯ ಉದಕಪ್ರವಾಹಗಳಾಗುತ್ತವೆ (ಭೂವಿವ. ೯೧).

ಸ್ಥಳೀಯಕಾಲಮಾನ = ಒಂದು ಸ್ಥಳಕ್ಕೆ ಸೀಮಿತವಾದ ಕಾಲಮಾನ; ಒಂದು ರೇಖಾಂಶದಲ್ಲಿರುವ ಸ್ಥಳಗಳ ಕಾಲಮಾನ: ರಂಗೂನ್, ಬೊಂಬಾಯಿ, ಕಲ್ಕತ್ತನಗರಗಳ ಸ್ಥಳೀಯಕಾಲಮಾನ ಬಹುಮಟ್ಟಿಗೆ ವ್ಯತ್ಯಾಸವಾಗಿರುತ್ತದೆ (ಭೂವಿವ. ೨೦). [ಸಂ. ಸ್ಥಲೀಯ]

**ಸ್ಥಳೈಕ್ಯ** (ನಾ). [ಕಾವ್ಯಮೀ] ನಾಟಕದ ಕ್ರಿಯೆ ಒಂದೇ ಸ್ಥಳದಲ್ಲಿ ನಡೆಯುವಿಕೆ: ಕಾಲೈಕ್ಯ, ಸ್ಥಳೈಕ್ಯ ಎಂಬುವು ನಾಟಕರಚನೆಯ ಸಮ್ಮತತತ್ತ್ವಗಳಾದುವು (ಸಾಹಿಪ್ರ. ೧೭೪). [ಸಂ. ಸ್ಥಲೈಕ್ಯ]

**ಸ್ಥಾಣವಲೀಲೆ** (ನಾ). ಶಿವನ ಲೀಲೆ; ಶಿವಲೀಲೆ: ಪರಶಿವನ ಚಂದ್ರಧರಲೀಲೆಯಾದಿಯಾದ ಸ್ಥಾಣವಲೀಲೆಯಂತ್ಯಮಾದ ಇಪ್ಪತ್ತೈದು ಲೀಲೆಗಳೆ ಆ ಪರಶಿವನ ಸಗುಣಾನಂದಲೀಲೆ (ಭೈರಸೂ. I, ೨). [ಸಂ. ಸ್ಥಾಣವಲೀಲಾ]

**ಸ್ಥಾಣು** (ಗು). ೧. ಸ್ಥಿರವಾದ; ಭದ್ರವಾದ; ಅಚಲವಾದ. (ನಾ). ೨. ಶಿವ; ಈಶ್ವರ : ಅನಾಥೆಯೆಂ ಶರಣೆನುತ್ತಾಶ್ರಯಿಸಿದೆಂ ಸ್ಥಾಣುವಂ (ಕಾದಂಪೂ. ೯೫೩); ವನಜಾಕ್ಷಂ ವೈಷ್ಣವಾಸ್ತ್ರಂದುಡೆ ಸುರರಗಿದರ್ ಸ್ಥಾಣುವಲ್ಲಾಡಿಧಂ (ಜಗವಿ. ೮-೬೩). ೩. ಮರದ ಬೊಡ್ಡೆ,– ಕಾಂಡ; ಮುಂಡಿಗೆ: "ಆರಯ್ಯೆ ಮುಂಡಿಗೆ ಸ್ಥಾಣುವೆಂದೆನಿಸಿಕ್ಕು" (ಮಂಗರಾ. ೫೯-೧೩) ; ಸ್ಪರ್ಶಕೆ ಸ್ಥಾಣುವೆಂದೆನಿಸಿ . . . ಎಡೆಯಾಡುತಿರ್ಪುದೆ ನಿರ್ವಿಷಯ ಮತವು (ಗಗತಾ. ೧೬-೧೧). ೪. ಕಂಬ; ಸ್ತಂಭ. ೫. ಗೂಟ ; ಮೊಳೆ. ೬. ಕತ್ತರಿಸಿದ ಮರದ ಕೊರಡು. ೭. ಈಟಿ; ಸಬಳ. ೮. ಬ್ರಹ್ಮ. ೯. ವಿಷ್ಣು. [ಸಂ.]

**ಸ್ಥಾಣುಚೋರನ್ಯಾಯ** (ನಾ). [ತರ್ಕ] ಲೌಕಿಕನ್ಯಾಯಗಳಲ್ಲಿ ಒಂದು; **P** ಮಬ್ಬುಗತ್ತಲೆಯಲ್ಲಿ ನಿಲ್ಲಿಸಿರುವ ಮೋಟುಮರವನ್ನು ಕಳ್ಳನೆಂದು ಭ್ರಮಿಸುವುದು. ಅಜ್ಞಾನದಿಂದ ಉಂಟಾಗುವ ತಪ್ಪುತಿಳಿವಳಿಕೆ: ಸ್ಥಾಣುಚೋರನ್ಯಾಯದಂತೆ ಶುಕ್ತಿರಜತನ್ಯಾಯದಂತೆ ರಜ್ಜುಸರ್ಪನ್ಯಾಯದಂತೆ ಅಧ್ಯಾರೋಪವಾದ ಅವಿದ್ಯೆಯಲ್ಲಿ ಲೇಸುಂಟೆ (ಸಿದ್ಧವ. ಕ. ೨೫-೭೨). [ಸಂ.]

**ಸ್ಥಾಣುನಿವಸನ** (ನಾ). ೧. ಶಿವನ ನಿವಾಸ. ೨. ಮರದ ಕಾಂಡಗಳಿಗೆ ಆಶ್ರಯವಾದುದು. ೧, ೨: ಆ ಮಹಾವನಂ . . . ಸ್ಥಾಣುನಿವಸನಮಾಗಿಯುಂ ಅಪರ್ಣಾನ್ವಿತಮಲ್ತು (ಚಂದ್ರಪ್ರ. ೫-೫೨ ವ). [ಸಂ.]

**ಸ್ಥಾಣೂತ್ಕರ** (ನಾ). ಕೊರಡುಗಳ ಸಮೂಹ : ನವಚೂತಂ ತಳಿರ್ವಂದದಿಂ ತಳಿರ್ಗುಮೆ ಸ್ಥಾಣೂತ್ಕರಂ ಚೈತ್ರದೊಳ್ (ಜಗವಿ. ೧-೧೩). [ಸಂ.]

**ಸ್ಥಾನ** (ನಾ). ೧. ನಿಲ್ಲುವಿಕೆ; ನೆಲೆಯಾಗಿ ನಿಂತಿರುವಿಕೆ. ೨. ಭದ್ರವಾಗಿರುವಿಕೆ ; ನಿಶ್ಚಲತೆ; ದೃಢತೆ. ೩. ಅವಸ್ಥೆ; ಇರವು. ೪. ಜಾಗ; ಸ್ಥಳ: "ತಾಣಮೆ ತಾಂ ಸ್ಥಾನಮಕ್ಕುಂ" (ಕವಿಕಂ. ೧೨೮). ೫. ಮನೆ; ನಿವಾಸ: "ಆವಾಸಃ, [ಅ]ವಸಥಂ, ಗೃಹಂ, ಭವನಂ, ಸ್ಥಾನಂ . . . ಆಲಯಃ – ಈ ೩೧ ಮನೆ" (ಹಲಾಯು. ೪೯-೧೩೬). ೬. ನಾಡು; ಪ್ರದೇಶ. ೭. ನಗರ ; ಪಟ್ಟಣ. ೮. ಪದವಿ; ದರ್ಜೆ; ಅಂತಸ್ತು: ಸಮಾಜದಲ್ಲಿ ಅವರ ಸ್ಥಾನ ಯಾವುದೆಂಬುದನ್ನು ಯೋಚಿಸದೆ ಅವರೊಂದಿಗೆ ಮಾತನಾಡಿ ವಿನೋದ ಮಾಡಬಹುದಾಯಿತು (ಮಲನಾ. ೧೬) ; ಸ್ಥಾನವನಾರ್ಜಿಸು ಸಿರಿಯ ಸಂಪಾದಿಸು ಸಾಧ್ಯವಾದರೆ ಮಾನದಿಂದೆ (ಇಂಚಾಪ. ೧೩೧-೪೩). ೯. ಪವಿತ್ರಕ್ಷೇತ್ರ; ದೇವಸ್ಥಾನ: [ಪರಿರ]ಕ್ಷಿಸಿದೀ ಸ್ಥಾನಕ್ಕೆರಡಂ ಬಗೆದಳಿ(ಟಿ)ದವಂಗೆ . . . ಪಾಪಂ ಸಾರ್ಗುಂ (ಎಇ. XXVIII, ೩೬-೬೩; 1082); ಜ್ಞಾನವಿಲ್ಲದನ ಬಱಿಯೊಡಲು ಹಾಳೂರ ಸ್ಥಾನದಂತಿಕ್ಕು (ಸರ್ವಜ್ಞ. ೪೨೬). ೧೦. ಸರಿಯಾದ ಸ್ಥಳ; ಯೋಗ್ಯವಾದ ಜಾಗ. ೧೧. (ಬಾಣ ಬಿಡುವುದು ಮುಂತಾದ ಸಂದರ್ಭಗಳಲ್ಲಿ ನಿಲ್ಲುವ) ದೇಹದ ಭಂಗಿ; ಸ್ಥಾನಕ: ಗದೆಗಳುಮನಿರ್ವರುಮಾಯ್ದುಕೊಂಡು ಆಲೀಢ ಪ್ರತ್ಯಾಲೀಢ ಸಮಪಾದ ವೈಷ್ಣವ ಮಂಡಲಾಗ್ರಮುಮೆಂಬ ಪಂಚವಿಧ ಸ್ಥಾನಕೃತಂಗಳೊಳಂ . . . ಎಂಟುಂತೆಱದ ಪ್ರಹರಣಂಗಳೊಳಂ ಅತಿಪರಿಚಿತರಾಗಿ ವೈಶಾಖಸ್ಥಾನದೊಳ್ ನಿಂದು (ಗದಾಯು. ೮-೧ ವ). ೧೨. ವರ್ಣಗಳ ಉಚ್ಚಾರಣೆಯ (ಕಂಠ, ತಾಲವ್ಯ ಮುಂತಾದ) ಬೇರೆ ಬೇರೆ ಅಂಗ. ೧೩. ಸಂದರ್ಭ ; ಅವಕಾಶ. ೧೪. ವಿಷಯ; ವಸ್ತು. ೧೫. ಹೋಲಿಕೆ; ಸಾದೃಶ್ಯ. ೧೬. [ವೀಶೈ] "ಗುರುವಿನ ಗೃಹಕ್ಷೇತ್ರಾದಿ ರಕ್ಷಣವೆ ಸ್ಥಾನವೆನಿಪುದು" (ಮನೋವಿ. ೨-೨೧ ಟೀಕು) : ಸದ್ಗುರುಸೇವೆ ಯಾವುವೆಂದೊಡೆ ಆಪ್ತ, ಅಂಗ, ಸ್ಥಾನ, ಸದ್ಭಾವವೆಂದು ನಾಲ್ಕುತೆಱನಾಗಿಹುದು . . . ಗುರುವಿನ ಗೃಹಕ್ಷೇತ್ರಾದಿರಕ್ಷಣಾಧಿಕವೇ ಸ್ಥಾನವೆನಿಸುವುದು (ವಿವೇಕ. ೧೬). ೧೭. [ಜೈನ] ದ್ವಾದಶಾಂಗಗಳಲ್ಲಿ ಒಂದು: ಆಚಾರ, ಸೂತ್ರಕೃತ, ಸ್ಥಾನ . . . ದೃಷ್ಟಿವಾದ ಎಂಬುವು ಹನ್ನೆರಡು ಅಂಗಗಳು (ಭಾತತ್ತ್ವ. ೨೨೮). ೧೮. [ವೈದಿಕ] ಆಗಮ ಗ್ರಂಥಗಳಲ್ಲಿಯ ಪ್ರಕರಣಗಳ ಸಮೂಹ : ಪ್ರಕರಣಗಳ ಸಮೂಹಕ್ಕೆ ಸ್ಥಾನವೆಂದು ಹೆಸರು (ಭಾತತ್ತ್ವ. ೨೬). ೧೯. [ರಾಜನೀ] ರಾಜ್ಯದ ಶಕ್ತಿಗೆ ಮುಖ್ಯವಾದ ಆಧಾರ; ಸೈನ್ಯ, ಕೋಶ, ನಗರ, ರಾಜ್ಯ ಇತ್ಯಾದಿ. ೨೦. ಯುದ್ಧ ಬಂದರೆ ಎದುರಿಸುವುದಕ್ಕೆ ಸಿದ್ಧವಾಗಿ ಸೈನ್ಯವನ್ನು ನಿಲ್ಲಿಸಿಕೊಂಡಿರುವ ಸ್ಥಿತಿ. ೨೧. ಶತ್ರುವಿನೊಂದಿಗೆ ಸಮಾನತೆಯನ್ನು ಕಾಪಾಡಿಕೊಂಡಿರುವಿಕೆ: ಕ್ಷಯವೃದ್ಧಿಸ್ಥಾನವಿಧಿತ್ರಯಂಗಳೊಳ್ ಕ್ಷಯಮನಹಿತರೊಳ್ ಶೇಷವಿಧಿದ್ವಯಮಂ

ತನ್ನೊಳ್ ನಿಱಿಸುವುದು (ಶಾಂತಿಪು. ೨-೪೯). ೨೨. [ಸಂಗೀತ] ಸಪ್ತಸ್ವರಗಳಲ್ಲಿ ಪ್ರತಿಯೊಂದರ ನಿರ್ದಿಷ್ಟ ಶ್ರುತಿಸ್ಥಾಯಿ. [ಸಂ.]

**ಸ್ಥಾನಕ** (ನಾ). ೧. ಸ್ಥಳ; ಜಾಗ; ಪ್ರದೇಶ: ಜನನಂ . . . ನಿರ್ಜನಸ್ಥಾನಕದೊಳ್ (ಜಾತತಿ. ೪-೨೨). ೨. ನಗರ; ಪಟ್ಟಣ. ೩. ಬಾಣ ಬಿಡುವಾಗ ಬಿಲ್ಲುಗಾರನು ನಿಲ್ಲುವ ಭಂಗಿ. ೪. ಗಿಡಗಳಿಗೆ ನೀರುಣಿಸಲು ಸುತ್ತಲೂ ರಚಿಸಿದ ಮಡಿ,– ಪಾತಿ; ಆಲವಾಲ. ೫. [ನಾಟ್ಯ] ನಿಲ್ಲುವ ಭಂಗಿ,– ನಿಲವು: ಋಜು ಋಜುಪರಾವೃತ್ತಿ ಅರ್ಧಋಜು ಅರ್ಧಋಜುಪರಾವೃತ್ತಿ ಸಾಚಿ ಸಾಚಿಪರಾವೃತ್ತಿ ದ್ವ್ಯರ್ಧಾಕ್ಷಂ ತತ್ಪರಾವೃತ್ತಿ ಪಾರ್ಶ್ವಗತಮೆಂಬ ನವಸ್ಥಾನಕಂಗಳೊಳಂ (ಚಂದ್ರಪು. ೧೫-೭೦ ವ); ಅಂತು ಪುರುಷ, ಸ್ತ್ರೀ, ದೇಶೀ, ಉಪವಿಷ್ಟ, ಸುಪ್ತ ಇವುಗಳಿಂದ ಒಟ್ಟು ಐವತ್ತೊಂದು ಸ್ಥಾನಕಂಗಳಕ್ಕುಂ (ಲಾಸ್ಯರಂ. ೭-೧೨ ವ); ಸ್ಥಾನಕ, ನಿಲ್ಲುವ ಭಂಗಿ ; ಚಾರಿ, ಕಾಲುಗಳ ಚಲನ (ಭಾರದ. ೫೫೩). ೬. [ವಾಸ್ತು] ದೇವಾಲಯಗಳಲ್ಲಿ ಪ್ರತಿಷ್ಠಿಸುವ ಮೂರ್ತಿಪ್ರಕಾರಗಳಲ್ಲಿ ಒಂದು; ನಿಂತುಕೊಂಡಂತೆ ನಿರ್ಮಿಸಿದ ಮೂರ್ತಿ: ''ಸ್ಥಾನಕ''ವೆಂದರೆ ನಿಂತಿರುವ ವಿಗ್ರಹ (ಮೈವಾಸ್ತು. ೨೭); ಗರ್ಭಗುಡಿಯಲ್ಲಿ ಮೂರು ಸ್ಥಾನಕವಿಗ್ರಹಗಳಿವೆ (ಹೊಯ್ಸವಾ. ೮೮). [ಸಂ.]

**ಸ್ಥಾನದೀಪಿಕೆ** (ನಾ). ಒಂದೇ ಸ್ಥಳದಲ್ಲಿಟ್ಟಿರುವ ದೀಪ; ತಾಣದೀವಿಗೆ: ''ಸ್ಥಾನದೀಪಿಕೆ- ತಾಣದೀವಿಗೆ'' (ಶಮದ. ೨೮೯ ಪ್ರಯೋ) ; ಚಂಚತ್ಕಾಂಚನಸ್ಥಾನದೀಪಿಕಾಗ್ರ ನಿರ್ವ್ಯಗ್ರದೇದೀಪ್ಯಮಾನದೀಪಪ್ರಭಾಭಿಭೂತತಮಸ್ತೋಮಮುಮಪ್ಪ ಗರ್ಭಗೃಹಮಂ . . . ಪೊಕ್ಕು (ಚಂದ್ರಪು. ೩-೯೭ ವ). [ಸಂ. ಸ್ಥಾನದೀಪಿಕಾ]

**ಸ್ಥಾನಪತಿ** (ನಾ). ೧. ಮಠದ ಅಥವಾ ದೇವಾಲಯದ ಪ್ರಧಾನಾಧಿಕಾರಿ: ಆ ಗಣಗಚ್ಛದ ಸ್ಥಾನಪತಿಗಳ್ (ಎಕ. VII, ಶಿವಮೊ. ೧೦-೫೪; 1085) ; ಸ್ಥಾನಿಕ, ಸ್ಥಾನಾಧ್ಯಕ್ಷ ಮತ್ತು ಸ್ಥಾನಪತಿ ಎಂಬೀ ಮೂರು ವಾಚಕಗಳು ಒಂದೇ ಅರ್ಥವನ್ನೀಯುವುವು (ತುಳುನಾ. ೧೧೦). ೨. ಅಧಿಕಾರಿ: ಮಹಾರಾಜಾಧಿರಾಜರು ಪರಮಹರ್ಷಿತರಾಗಿ ಮಹಲುದಾರನು ತಂದ ಪತ್ರಗಳನ್ನು ಓದುವ ಸ್ಥಾನಪತಿಗಳ ಕೈಗೆ ಕೊಟ್ಟು ಓದಿಸಿದರು (ಬಖೈರು. ೨). [ಸಂ.]

**ಸ್ಥಾನಪಲ್ಲಟ** (ನಾ). ೧. ಒಂದು ಜಾಗವನ್ನು ಬಿಟ್ಟು ಇನ್ನೊಂದು ಜಾಗಕ್ಕೆ ಹೋಗುವಿಕೆ; ಸ್ಥಾನಾಂತರ: ಈ ಸೂತ್ರಗಳಲ್ಲಿ ಪರಸ್ಪರ ಸ್ಥಾನಪಲ್ಲಟವಾದರೆ . . . ವ್ಯಾಕರಣಪಾಠಕ್ಕೆ ಭಂಗವುಂಟಾಗುತ್ತದೆ (ಶಮಪಾಂ. ೬); ಧ್ರುವಗಳ ಸ್ಥಾನ ಪಲ್ಲಟವು ಇದಕ್ಕೆ ಕಾರಣ (ನಕ್ಷತ್ರ. ೭೨). ೨. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವರ್ಗಾಯಿಸುವಿಕೆ; ಸ್ಥಳಾಂತರ ಮಾಡುವಿಕೆ: ಪದಾರ್ಥಗಳ ಸ್ಥಾನಪಲ್ಲಟ ದಿಂದ ಆತುರದಲ್ಲಿ ಕೈಗೆ ಸಿಕ್ಕದೆ ಶ್ರಮವಾಗುತ್ತದೆ (ರೂಢಿ). [ಸ್ಥಾನ + ಪಲ್ಲಟ]

**ಸ್ಥಾನಭ್ರಷ್ಟ** (ನಾ). ೧. ತನ್ನ ಸ್ಥಾನದಿಂದ ಹೊರದೂಡಲ್ಪಟ್ಟವನು; ಪದಚ್ಯುತನಾದವನು: ಎಂತುಂ ಸ್ಥಾನಭ್ರಷ್ಟಂಗೆ ತೇಜಮೆಂಬುದುಮುಂಟೇ (ಆದಿಪು. ೯-೭೮). ೨. [ಸಂಗೀತ] ''ತ್ರಿಸ್ಥಾಯಿಗಳನ್ನೂ ಸ್ವರಸ್ಥಾನಗಳನ್ನೂ ಬಿಟ್ಟು ಹಾಡುವವನು'' (ಸಂಗೀಚಂ. ೧೦೩). [ಸಂ.]

**ಸ್ಥಾನಭ್ರಷ್ಟತೆ** (ನಾ). ಸ್ಥಾನವನ್ನು ಕಳೆದುಕೊಳ್ಳುವಿಕೆ; ಸ್ಥಾನಚ್ಯುತಿ; ಪದವಿ ಭ್ರಷ್ಟನಾಗುವಿಕೆ: ನೀನಾತಂಗೆಱಗದೆಯಭಿಮಾನತೆಯಿಂದಿರ್ದೆಯಾದಡಂ ನಿನಗಕ್ಕುಂ ಸ್ಥಾನಭ್ರಷ್ಟತೆ ರಾಜ್ಯವಿಹೀನತೆ (ಪುಣ್ಯಾಸ್ರ. ೫-೫೫). [ಸಂ. ಸ್ಥಾನಭ್ರಷ್ಟತಾ]

**ಸ್ಥಾನಮಾನ** (ನಾ). ಸ್ಥಾನ ಮತ್ತು ಗೌರವ: ಭಾರತದ ಸಮಸ್ತನಾಗರಿಕರಿಗೆ . . . ಸ್ಥಾನಮಾನ ಮತ್ತು ಅವಕಾಶಸಮತೆಯೂ ದೊರೆಯುವಂತೆ ಮಾಡುವುದ ಕ್ಕಾಗಿಯೂ (ಭಾಧಾನ. ೧); ಭೂಸ್ವಾಮ್ಯದ ವಿಷಯದಲ್ಲಿ ತನ್ನ ಸ್ಥಾನಮಾನವೇನೆಂಬ ಪ್ರಶ್ನೆಯನ್ನು ಕೆರಳಿಸಿತು (ಪುನರು. ೨೬೨). [ಸಂ.]

**ಸ್ಥಾನಲಾಭ** (ನಾ). ೧. ಸ್ಥಾನ ಅಥವಾ ಪದವಿಯ ಪ್ರಾಪ್ತಿ. ೨. [ಜೈನ] ನಲವತ್ತೆಂಟು ದೀಕ್ಷಾನ್ವಯಕ್ರಿಯೆಗಳಲ್ಲಿ ಮೂರನೆಯದು: ಅವತಾರ ವೃತ್ತಿಲಾಭ ಸ್ಥಾನಲಾಭ . . . ಉಪಯೋಗತ್ವಮೆಂಬೆಂಟುಂ ಬೆರಸು ಪೂರ್ವೋಕ್ತೋಪನಯನಾದಿ ಚತ್ವಾರಿಂಶತ್ ಕ್ರಿಯೆಗಳೊಡನೆ ನಾಲ್ಪತ್ತೆಂಟು ದೀಕ್ಷಾನ್ವಯಕ್ರಿಯೆಗಳುಮಂ (ಆದಿಪು. ೧೫-೧೬ ವ). [ಸಂ.]

**ಸ್ಥಾನಶುದ್ಧಿ** (ನಾ). ಐದು ವಿಧದ ಶುದ್ಧಿಗಳಲ್ಲೊಂದು: ಆತ್ಮಶುದ್ಧಿ ಸ್ಥಾನಶುದ್ಧಿ ದ್ರವ್ಯಶುದ್ಧಿ ಲಿಂಗಶುದ್ಧಿ ಮಂತ್ರಶುದ್ಧಿಗಳೆಂಬ ಪಂಚಶುದ್ಧಿಗಳಂ ವಿಸ್ತರಿಸುವುದಱಲ್ಲಿ ಶೋಧನ ಸಮ್ಮಾರ್ಜನ ಅನುಲೇಪನ ವರ್ಣಕ ಗಂಧ ಪುಷ್ಪ ಧೂಪ ದೀಪ ಪೂಜೋಪಕರಣ ವಾಸ್ತುಶುದ್ಧ್ಯಾದಿಗಳಿಂ ಚೌಕವನಲಂಕರಿಸುವುದೇ ಸ್ಥಾನಶುದ್ಧಿ (ವಿವೇಕ. ೧೦೩). [ಸಂ.]

**ಸ್ಥಾನಾಚಾರ್ಯ** (ನಾ). = ಸ್ಥಾನಪತಿ ೧: ಸಮಸ್ತಧರ್ಮಂಗಳಿವೆಲ್ಲಮಂ ನೋಡಿ ಮಾಡುವರೆಂದಡದೇಂ ಪ್ರಸಿದ್ಧರೋ ಸ್ಥಾನಾಚಾರ್ಯ್ಯರ್ (ಸೌಇಇ. XX, ೭೬-೪೪ ; 1118); ಸ್ಥಾನಾಚಾರ್ಯರಾದ ಕಾಳಾಮುಖರು . . . ಗುರುಗಳಾಗಿ ಜಂಗಮರೆಂದು ಕರೆಸಿಕೊಂಡರು (ನೊಳಂಬ. ೧೩೪). [ಸಂ.]

**ಸ್ಥಾನಾಧಿಪ** (ನಾ). = ಸ್ಥಾನಪತಿ ೧ : ಸ್ವಯಂಭುದೇವರ ಸ್ಥಾನಾಧಿಪರಪ್ಪ ದೇವರಾಸಿ ಜೀಯ್ಯರ ಸಿಷ್ಯ ವಾಮದೇವ (ಸೌಇಇ. XX, ೨೪-೨೨; 1034). [ಸಂ.]

**ಸ್ಥಾನಿಕ** (ಗು). ೧. ಒಂದು ನಿರ್ದಿಷ್ಟ ಸ್ಥಳಕ್ಕೆ ಸಂಬಂಧಿಸಿದ,– ಸೀಮಿತ ವಾದ: ಇಂದಿನ ಈ ಸ್ಥಾನಿಕ ರಾಜಕಾರಣಕ್ಕಾಗಿ ಬಲಿಯಾಗುವವರು ಮಧ್ಯಮವರ್ಗದ ಬಡಜನರು (ಅಪನಾ. ೧). (ನಾ). ೨. ದೇವಸ್ಥಾನ ಮುಂತಾದ ಸಾಮಾಜಿಕ ಸಂಸ್ಥೆಗಳ ಮೇಲಧಿಕಾರಿ; ಆಡಳಿತಾಧಿಕಾರಿ: ಎಱೆಯಂಗೇಶ್ವರದ ಸ್ಥಾನಿಕ ಇ ಲೇಖ ಬರೆದೊಂ (ಮೈಆರಿ. ೧೯೩೮, ೭೭-೧೩; 908); ಸಿದ್ಧನಾಥದೇವರ ಸ್ಥಾನಿಕ ಹಿರಿಯ ಸಿದ್ಧಣಂಗಳ ಮಗ ಸೋವಣ್ಣಂಗೆ ಧಾರೆಯನೆಱದು ಕೊಟ್ಟೆವು (ಎಕ. XI, ಚಿತ್ರದು. ೫೫-೧೩; 1355); ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ವಿವರಿಸಿರುವ ಆಡಳಿತೆಯ ಕ್ರಮದಂತೆ ಸಣ್ಣ ನೆಲೆವೀಡುಗಳ ಅಧಿಕಾರಿಗಳು ಸ್ಥಾನಿಕರೆಂದೂ ಅವರು ಧಾರ್ಮಿಕ ರಾಜಕೀಯಾಧಿಕಾರಿಗಳಾಗಿದ್ದರೆಂದೂ ಸ್ಪಷ್ಟವಿದೆ (ತುಳುನಾ. ೯೮). ೩. ದೇವಸ್ಥಾನದಲ್ಲಿ ಪೂಜಾರಿಗೆ ಸಹಾಯಕನಾದ ಸೇವಕ: ಕಾಯವೆಂಬ ದೇಗುಲದಲ್ಲಿ ಜೀವವೆಂಬ ದೇವರು ಕರಣೇಂದ್ರಿಯಂಗಳೆಂಬ ಸ್ಥಾನಿಕಂ ಕೈಯಲ್ಲಿ ಪೂಜಿಸಿಕೊಂಬುದು ಗೊಹೇಶ್ವರಲಿಂಗಕ್ಕೆ ದೂರ (ಅವಚಂ. ೨೬೨-೧೯೧); ದೇವಸ್ಥಾನದ ಸೇವಕರು . . . ಸಾತಾನಿ, ಸ್ಥಾನಿಕ, ವಾರಿಯನ್ (ತುಳುನಾ. ೧೭೨). ೪. ಬ್ರಾಹ್ಮಣರಲ್ಲಿ ಒಂದು ವರ್ಗ: ಸ್ಥಾನಿಕರು ತುಳುನಾಡಿನ ಬ್ರಾಹ್ಮಣರಲ್ಲಿ ಮೊದಲಿಗರು (ತುಳುನಾ. ೭). [ಸಂ.]

**ಸ್ಥಾನಿಗ** (ನಾ). = ಸ್ಥಾನಿಕ ೨: ವಿಶ್ವಕರ್ಮ್ಮಗೋತ್ರದ ಕರುವೂರೆಮ್ಮ ಪೊಬಲ ಸ್ಥಾನಿಗ ಮಧುರೊವರ್ಝನಗಟ್ಟ ಶಾಸನಂ ಅಗಟ್ಟದು ನಿಮಿತ್ತಮಾಗೆ ಕೊಟ್ಟ ಮಣ್ಣೊ ಋಣ್ಣುಗಂ ಬೆದೆ ಉತ್ತಮ ಕ್ಷೇತ್ರಂ (ಎಕ IX(S), ಬೆಂಗಳೂ. ೧೫೧-೬೦; 828). 'ಸ್ತಾನೀಕ' ಪಠಾ. [ಸ್ಥಾನ + - ಇಗ]

**ಸ್ಥಾಪಕ** (ನಾ). ೧. (ದೇವರ ಮೂರ್ತಿಯನ್ನು) ಸ್ಥಾಪನೆ ಮಾಡುವವನು; (ವಿಗ್ರಹವನ್ನು) ಪ್ರತಿಷ್ಠೆಗೊಳಿಸುವವನು,– ನೆಲೆಗೊಳಿಸುವವನು: ಪ್ರಾಪಕ ಸ್ಥಾಪಕ ನಿಯಾಮಕ ವ್ಯಾಪಕನು ಎಂದಱಿದು ನೀ ನಿರ್ಲೇಪನಾಗಿರು (ಹಸಾರ. ೪-೨೯) : ಶಿಲ್ಪಿಗೆ ''ಸ್ಥಪತಿ''ಯೆಂದೂ, ಆಗಮಿಕರಿಗೆ ''ಸ್ಥಾಪಕ'ರೆಂದೂ ಆಗಮಶಾಸ್ತ್ರದಲ್ಲಿ ಉಲ್ಲೇಖವಿದೆ (ಭಾರದ. ೭೭). ೨. ಮಠ, ಧರ್ಮ, ರಾಜ್ಯ, ಸಂಸ್ಥೆ ಮೊದಲಾದುವು ಗಳ ಪ್ರವರ್ತಕ,- ಆರಂಭಕಾರ : ಈ ವಿದ್ಯಾಸಂಸ್ಥೆಯ ಸ್ಥಾಪಕರು ಒಬ್ಬ ದೊಡ್ಡ ಶ್ರೀಮಂತರು (ರೂಢಿ). ೩. [ನಾಟ್ಯ] ರಂಗಭೂಮಿಯ ಮೇಲ್ವಿಚಾರಕ; ಸೂತ್ರ ಧಾರನ ಸಹಾಯಕ: ಸೂತ್ರಧಾರನು ತನ್ನ ಸಹಾಯಕರೊಡನೆ ಪ್ರಸ್ತಾವನೆಯನ್ನು ನಡಸಿ ಹೋದ ಮೇಲೆ ''ಸ್ಥಾಪಕ''ನೆಂಬ ಮತ್ತೊಬ್ಬನು ಬಂದು ಕವಿಚರಿತ್ರಾದಿಗಳನ್ನು ಹೇಳಿ ನಾಟಕವನ್ನು ಸ್ಥಾಪಿಸಬೇಕೆಂದು ಹೇಳಿದೆ; ಆದರೆ ಸ್ಥಾಪಕನು ಬರುವುದು ಅಪರೂಪ; ಸೂತ್ರಧಾರನೇ ಪ್ರಾಯಿಕವಾಗಿ ಅವನ ಕೆಲಸವನ್ನೂ ಮಾಡುತ್ತಾನೆ (ಸಂನಾಟಿ. ೨೭). [ಸಂ.]

**ಸ್ಥಾಪತ್ಯ** (ನಾ). ೧. ವಾಸ್ತುಶಿಲ್ಪವಿದ್ಯೆ: ಸ್ಥಾಪತ್ಯವಿಶಾರದಪದವಿಯನ್ನು ಪಡೆದ ನಾನು ಆಗಂತುಕವಾಗಿ ಹೆಸರು ದೆಸೆ ಕೇಳುವುದು ಅನಾಗರಿಕವೆಂದು ಬಿಟ್ಟೆ (ಗೀಚುಗ. ೪೦). ೨. ಅಂತಃಪುರದ ಕಾವಲುಗಾರ; ಕಂಚುಕಿ: ''ಸೌವಿದಃ, ಸೌವಿದಲ್ಲಃ, ಸ್ಥಾಪತ್ಯಃ, ಕಂಚುಕೀ - ಈ ೪ ಸಾವಾಸಿ'' (ಹಲಾಯು. ೭೦-೨೭೩). [ಸಂ.]

**ಸ್ಥಾಪನ** (ನಾ). ೧. (ದೇವರ ವಿಗ್ರಹ ಮುಂತಾದುವನ್ನು) ಸ್ಥಾಪಿಸುವಿಕೆ; ಪ್ರತಿಷ್ಠಾಪನೆ ಮಾಡುವಿಕೆ: ಶಿವನಂ ಭಜಿಸುತ ಆವಾಹನ ಸ್ಥಾಪನ ಸನ್ನಿಧಾನ

ಸನ್ನಿರೋಧನ ಸಮುಖೀಕರಣಾದಿ ಮುಖ್ಯಕ್ರಿಯೆಗಳಿಂದೊಡಗೂಡಿ (ವಿವೇಕ. ೧೦೪). ೨. ಮನಸ್ಸನ್ನು ಧ್ಯಾನದಲ್ಲಿ ನೆಲೆಗೊಳಿಸುವಿಕೆ; ಏಕಾಗ್ರತೆ. ೩. ಮನೆ; ನಿವಾಸ. ೪. ಗರ್ಭಿಣಿಗೆ ಮಾಡುವ ಒಂದು ಸಂಸ್ಕಾರೋತ್ಸವ: 'ಪುಂಸವನ' ಪರಾ. ೫. ಅಲುಗಾಡದಂತೆ ಕಟ್ಟಿ ನಿಲ್ಲಿಸುವುದು,— ಸ್ಥಿರಗೊಳಿಸುವುದು. ೬. ಮತ, ಧರ್ಮ, ಸಂಸ್ಥೆ ಮುಂತಾದುವುಗಳನ್ನು ಸ್ಥಾಪಿಸುವುದು;— ನಿರ್ಮಿಸುವುದು. [ಸಂ.]

**ಸ್ಥಾಪನಂಗೆಯ್** (ಕ್ರಿ). ರಚಿಸು; ನಿರ್ಮಿಸು: ಆಪರದಿಗ್ಭಾಗದೊಳನ್ನಗಾರಕೇವಲಿ ಹುತಾಶನಕುಂಡಮಂ ಸ್ಥಾಪನಂಗೆಯ್ದು (ಆದಿಪು. ೧೬-೫೨ ವ). [ಸ್ಥಾಪನ + ಕೆಯ್₁]

**ಸ್ಥಾಪನವಡೆ** (ಕ್ರಿ). ಸ್ಥಾಪಿಸಲ್ಪಡು: ಒಪಳ ಗುರುಕುಚಯುಗಳವ ಪುಷ್ಪದ್ರೇಕ್ಕುಚಾಪ ಕಣ್ಣಿಟ್ಟು ನಿಟ್ಟಿಸಲು ಸ್ಥಾಪನವಡೆದಿರ್ದ ಬಾಲೆಂದುಗೆಜ್ ಸುಸ್ವರೂಪವಾಗಿರ್ದುದೇನಂಬೆ (ಮೋಹತ. ೧೭-೫೨ ವ). [ಸ್ಥಾಪನ + ಪಡೆ₁]

**ಸ್ಥಾಪನಾಚಾರ್ಯ** (ನಾ). ನೆಲೆಗೊಳಿಸಿದ ಹಿರಿಯ ವ್ಯಕ್ತಿ; ಪ್ರತಿಷ್ಠಾಪನೆ ಮಾಡಿದ ಮಹಾತ್ಮ: ಪಾಂಡವಸ್ಥಾಪನಾಚಾರ್ಯನೆಂದು ಧರೆಯುಳ್ಳನ್ನೆಗಂ ಜನಮಾಡದಿರ್ದಪುದೆ (ಜೈಮಿಭಾ. ೨-೫೩). [ಸಂ.]

**ಸ್ಥಾಪನೆ** (ನಾ). = ಸ್ಥಾಪನ ೧: ಹೊಸದೇವಾಲಯದಲ್ಲಿ ಅವರು ಲಕ್ಷ್ಮಿಯ ವಿಗ್ರಹವನ್ನು ಸ್ಥಾಪನೆ ಮಾಡಿದರು (ರೂಢಿ). [ಸಂ. ಸ್ಥಾಪನಾ]

**ಸ್ಥಾಪಿತ** (ಗು). ೧. ವಿಗ್ರಹ, ಕಟ್ಟಡ ಮೊದಲಾದುವುಗಳಂತೆ ನಿರ್ಮಿಸಿ ನಿಲ್ಲಿಸಿದ; ಪ್ರತಿಷ್ಠಾಪಿಸಿದ. ೨. ನೆಲೆಗೊಳಿಸಿದ; ಭದ್ರಪಡಿಸಿದ. ೩. ನಿಯಮಿಸಿದ; ನೇಮಕ ಮಾಡಿದ. ೪. ನಿರ್ಧರಿಸಿದ; ತೀರ್ಮಾನ ಮಾಡಿದ. ೫. ಮದುವೆಯಾದ; ವಿವಾಹವಾದ. ೬. ಅಚಲವಾದ; ಸ್ಥಿರವಾದ. (ನಾ). ೭. ಪ್ರತಿಷ್ಠಿತವಾದುದು; ನೆಲೆಗೊಳಿಸಲ್ಪಟ್ಟುದು: ಧರ್ಮಾರ್ಥಕಾಮವಿಮೋಕ್ಷ ದೀಪಿತಮಾರ್ಗ ಸಂತತಲಕ್ಷಣಸ್ಥಾಪಿತಸಮುನ್ನತಮಹಿಮ ಸಿತಕೀರ್ತಿ (ಬಸವಪು. ೪೬-೩). [ಸಂ.]

**ಸ್ಥಾಪಿಸು** (ಕ್ರಿ). ೧. ಪ್ರವರ್ತಿಸು; ನಿರ್ಮಿಸು: ಈ ಸಾಹಿತ್ಯದ ಹೊಸ ಮನುಗಳು ಈ ಯುಗದಲ್ಲಿ ಹೊಸ ಮನ್ವಂತರವನ್ನು ಸ್ಥಾಪಿಸಿದರು (ಸಾಹಿಸ. ೧). ೨. ಮಂಡಿಸು; ನಿರೂಪಿಸು: ಈ ಕೃತಿ ಅನುಭವಾಮೃತದ ಮಾದರಿಯಲ್ಲಿ ಅದನ್ನನುಸರಿಸಿ ಅನುಕರಿಸಿ ರಚಿತವಾದುದಲ್ಲವೆಂದು ಸ್ಥಾಪಿಸುವುದು (ಜಗದಾ. ೩). ೩. ಇಡು; ಇರಿಸು: "ಸ್ಥಾಪಿಸು- ನ್ಯಾಸಕರಣೇ" (ಶಮಧಾ); ನೆಗಟ್ಟಿ ಡಾಳಪ್ರಿಯನೊಳ್ ಸಂಗತಗುಣ ನಸಿಲತೆಯನಸುಂಗೊಳೆ ಭುಜವಿಜಯಗರ್ವದಿಂ ಸ್ಥಾಪಿಸಿದಂ (ಪಂಪಭಾ. ೧-೩೮). ೪. ನೆಲೆಗೊಳಿಸು; ಪ್ರತಿಷ್ಠಾಪಿಸು; ಸ್ಥಾಪನೆಮಾಡು: ಬಾಬರನು ಹಿಂದೂಸ್ಥಾನ ದಲ್ಲಿ ಮೊಗಲ್ ಸಾಮ್ರಾಜ್ಯವನ್ನು ಸ್ಥಾಪಿಸಿದನು (ರೂಢಿ). [ಸ್ಥಾಪನ + - ಇಸು₁]

**ಸ್ಥಾಪ್ಯ** (ಗು). ೧. ಇಡಬೇಕಾದ; ನಿಕ್ಷೇಪ ಮಾಡಬೇಕಾದ. ೨. ಸ್ಥಾಪಿಸ ಬೇಕಾದ; ನೆಲೆಗೊಳಿಸಬೇಕಾದ. ೩. ನಿಯಮಿಸಬೇಕಾದ. ೪. ಮುಚ್ಚಿಡ ಬೇಕಾದ. (ನಾ). ೫. ಇರವು; ನಿಕ್ಷೇಪ: ಪರುಷದ ಗಿರಿಯಲ್ಲಿ ಕಬ್ಬುನದ ಮೊರಡೆ ಉಂಟೇ ಕ್ಷೀರದ ಶರಧಿಯಲ್ಲಿ ಕ್ಷಾರಜಲ ಸ್ಥಾಪ್ಯ ಉಂಟೇ (ಮೋಳಿವಾ. ೧೪೦-೧೬೭). ೬. ಜೋಡಣೆ; ಕೂಡಿಸುವಿಕೆ: ಹೊತ್ತು ಹೊತ್ತಿಗೆ ಕಿಚ್ಚನೆ ಬರಿಸಿದರೆ ತಲೆ ಉರಿದುದೆಂದು ಹೊತ್ತುಹೊತ್ತಿಗೆ ಪ್ರಾಣಕ್ಕೆ ಪ್ರಸಾದವ ಸ್ಥಾಪ್ಯವ ಮಾಡಿ . . . ಮಹಾಬೆಳಗಿನಲಿ ಬಯಲಾದರು ಕಾಣಾ (ಲಿಂಗವ. ೫. ೬೭-೬೨); ಕುರುಡನ ಮುಂಡಕ್ಕೆ ಹಳವನ ಶಿರವ ಸ್ಥಾಪ್ಯವ ಮಾಡಿದರಯ್ಯಾ (ಸರ್ವವ. ೧೯೯-೬೦೦). ೭. ಪ್ರತಿಷ್ಠಾಪನೆ; ಸ್ಥಾಪನೆ: ರಾಮನಾಥನನರ್ಚಿಸನೆ ಲಕ್ಷ್ಮೀಮನೋಹರನೊಲಿದು ದುಗ್ಧಾಗ್ರಾಮದೊಳು ದ್ವಾರಾವತಿಯೊಳುಂ ಸ್ಥಾಪ್ಯವಂ ಮಾಡಿ (ಬಸವಪು. ೫೪-೬೩). ೮. ಸ್ಥಾಪಿತವಾದುದು; ಭದ್ರವಾಗಿ ನೆಲೆಸಿದುದು: ಊರ ಮುಂದಕೆ ಹೋಗಲೊಡನಾ . . . ಊರ ಶಿವಭವನಂಗಳಾ ಸ್ಥಾಪ್ಯೋರುಲಿಂಗಂಗಳು ಸ್ವಯಂಭೂಚಾರುಲಿಂಗವು ತಮ್ಮ ನಿಜಪೀಠಂಗಳಿಂದಗಲ್ದು (ಬಸವಪು. ೫೭-೪೨). ೯. ದೇವತಾವಿಗ್ರಹ. ೧೦. ಲಂಗರು; ಬೀಳ್ಗುಂಡು: "ನಂಗಲ್ಲು ಸ್ಥಾಪ್ಯಮಕ್ಕುಂ" (ಮಂಗರಾ. ೧೨೦-೪). [ಸಂ.]

**ಸ್ಥಾಯಿ** (ಗು). ೧. ನಿಲ್ಲುವ; ನಿಂತಿರುವ. ೨. ಉಳಿಯುವ; ಶಾಶ್ವತವಾಗಿರುವ. ೩. ವಾಸವಾಗಿರುವ; ನೆಲಸಿರುವ. ೪. ಸ್ಥಿರವಾದ; ನೆಲೆಗೊಂಡ. (ನಾ). ೫. ಶಾಶ್ವತವಾದುದು; ಅಮರವಾದುದು: 'ಕಲ್ಪಾಂತರಸ್ಥಾಯಿ' ಪರಾ. ೬. ಸ್ಥಿರವಾಗಿರುವುದು; ಕಾಯಂ: ಅಲ್ಲಿ ಜನ ಸ್ಥಾಯಿಯಾಗಿ ವಾಸಿಸುವುದಕ್ಕೆ ಅಗತ್ಯವಾದ ಸೌಕರ್ಯಗಳನ್ನು ಒದಗಿಸಬೇಕು (ಹಸಹಿ. ೬೮). ೭. ಸ್ವರದ ತೀವ್ರತೆಯ ಮಟ್ಟ: ಲೋಹಬಿಲ್ಲೆಯು ನಾದದ ಗುಣ ಮತ್ತು ಸ್ಥಾಯಿಗನುಸಾರವ ಕಂಪಿಸುವಂತೆ ಅದನ್ನು ಜಾಗರೂಕತೆಯಿಂದ ರಚಿಸಿರುತ್ತಾರೆ (ವಿಜ್ಞಾ. ೬೧). ೮. = ಸ್ಥಾಯಿಭಾವ: ಔಚಿತ್ಯದಿಂದ ಪ್ರವೃತ್ತವಾದ ಚಿತ್ತವೃತ್ತಿಗಳಲ್ಲಿ ಸ್ಥಾಯಿಗಳು ಆಸ್ವಾದ್ಯವಾದರೆ 'ರಸ' (ಧ್ವನ್ಯಾಲೋ. ೧೭. ಅಡಿಟ), ಒಂದು ಭಾವ ಸ್ಥಾಯಿಯೋ ಸಂಚಾರಿಯೋ ಎಂಬುದನ್ನು ಸರಿಯಾಗಿ ನಿರ್ಧರಿಸಲು ಸನ್ನಿವೇಶದ ಪರಿಜ್ಞಾನ ಅವಶ್ಯಕ (ಭಾರತೀಯ. ೬೪೪). ೯. [ಸಂಗೀತ] "ಆರೋಹಣ ಮತ್ತು ಅವರೋಹಣಕ್ಕೆ ಸುಲಭವಾಗಿ ಹೊಂದಿ ಬರುವ ಸಪ್ತಸ್ವರಸಮೂಹಕ್ಕೆ ಸ್ಥಾಯಿ ಎಂದು ಹೆಸರು" (ಸಂಗೀತಂ. ೧೬): ಸ್ಥಾಯಿ ಸಂಚಾರಿಗಳ ಸರಿಗಮಪಧನಿಯ ಸರದಾಯುತದ ಶುದ್ಧ ಸಂಕೀರ್ಣಸಾಳಗದ ಪೂರಾಯತ ಸುತಾನಂಗಳಂ . . . ಗೇಯರಸಪೊಸರೆ ಪಾಡಿದರವರ್ (ಜೈಮಿಭಾ. ೨೧-೫೮). 'ತ್ರಿಸ್ಥಾಯಿ' ಪರಾ. [ಸಂ. ಸ್ಥಾಯಿನ್]

**ಸ್ಥಾಯಿಭಾವ** (ನಾ). [ಕಾವ್ಯಮೀ] ಮನುಷ್ಯನಲ್ಲಿ ಜಾಗೃತವಾಗಿ ಅಥವಾ ಸುಪ್ತವಾಗಿ ಯಾವಾಗಲೂ ಇರತಕ್ಕ ಎಂಟು (ಅಥವಾ ಕೆಲವರ ಮೇರೆಗೆ ಒಂಬತ್ತು) ಬಗೆಯ ಚಿತ್ತವೃತ್ತಿ ಅಥವಾ ಭಾವ: ರತಿ ಪರಿಹಾಸಂ ಶೋಕೋದ್ಧ ತಮುತ್ಸಾಹಂ ಭಯಂ ಪ್ರಕೋಪಂ ವಿಜುಗುಪ್ಸತೆ ವಿಸ್ಮಯಾಶಯತ್ವಂ ಪ್ರತಿನಿಯತ ಸ್ಥಾಯಿಭಾವಮಿವು ತಾಮಕ್ಕುಂ (ಕಾವ್ಯಾವ. ೭೯೪); ರತಿ ಪರಿಹಾಸಂ ಶೋಕೋದ್ಧತಮುತ್ಸಾಹಂ ಪ್ರಕೋಪ ವಿಸ್ಮಯ ಭಯ ಸಂತತಿ ವಿಜುಗುಪ್ಸತೆಯೆಂದುನ್ನತಿ ವಡೆಗುಂ ಸ್ಥಾಯಿಭಾವ ಮೊಪ್ಪುವ ಶಮಮುಂ (ರಸರ. ೧-೭). [ಸಂ.]

**ಸ್ಥಾಯಿಭಾವಕ** (ನಾ). = ಸ್ಥಾಯಿಭಾವ: ಶೃಂಗಾರಾದಿಗಳಪ್ಪೊಂಬತ್ತುಂ ರಸಂ ಗಳುಮನೆಂಟುಂ ಸ್ಥಾಯಿಭಾವಕಂಗಳುಮಂ (ಆದಿಪು. ೫-೬೦ ವ). [ಸಂ.]

**ಸ್ಥಾಯಿಸಮಿತಿ** (ನಾ). ಒಂದು ಸಂಘದಿಂದ ನಿಯಾಮಕವಾಗಿ ಆ ಸಂಘದ ಜೀವಮಾನದಲ್ಲಿ ಕಾರ್ಯಾಲೋಚನೆಗೆ ಸಿದ್ಧವಾಗಿರುವ ಸಮಿತಿ; ಸಿದ್ಧಸಮಿತಿ: ಆರ್ಥಿಕ-ಸಾಮಾಜಿಕ ಸಭೆಯ ಒಂದು ಸ್ಥಾಯಿಸಮಿತಿ (Standing Committee) ಆದ ತಾಂತ್ರಿಕಸಹಾಯಸಮಿತಿಗೆ ವರದಿಗಳನ್ನು ಸಲ್ಲಿಸುವುದು (ಅಂತಸಂ. ೨೦). [< ಸಂ. ಸ್ಥಾಯಿಸಮಿತಿ]

**ಸ್ಥಾಲಿ, ಸ್ಥಾಳಿ** (ನಾ). ೧. ಮಣ್ಣಿನ ಪಾತ್ರೆ; ಮಡಕೆ. ೨. ಅಡುಗೆಗೆ ಬಳಸುವ ಪಾತ್ರೆ: "ಪಾತ್ರಂ ಭಾಂಡಂ ಸ್ಥಾಲಿಯಮತ್ರಂ ಭಾಜನಮೆನಿಕ್ಕುಂ" (ವಸ್ತುಕೋ. ೬೯-೨೬). ೩. ಸೋಮರಸವನ್ನು ತಯಾರಿಸುವಾಗ ಬಳಸುವ ಒಂದು ವಿಶಿಷ್ಟವಾದ ಪಾತ್ರೆ. ೪. ಲೋಹದ ಗುಂಡನೆಯ ಸಣ್ಣ ಪಾತ್ರೆ: ಅವರು ಪ್ರತಿದಿನವೂ ತಾಮ್ರದ ಸ್ಥಾಲಿಯಲ್ಲಿ ನೀರು ಕುಡಿಯುತ್ತಾರೆ (ರೂಢಿ). ಸ್ಥಾಳಿ: ೧. "ಉಖಾ, ಸ್ಥಾಳೀ . . . ಕುಂಡಂ- ೬ ಮಡಕೆ" (ಹಲಾಯು. ೫೨-೧೫೯). [ಸಂ. ಸ್ಥಾಲೀ]

**ಸ್ಥಾಲೀಪಾಕ** (ನಾ). ಪ್ರತಿಪರ್ವಕಾಲದಲ್ಲಿ ಗೃಹಸ್ಥನು ಔಪಾಸನಾಗ್ನಿಯಲ್ಲಿ ಚರುವನ್ನು ಬೇಯಿಸುವ ಕರ್ಮ: ಇನ್ನು ಬರುವ ಪ್ರತಿಪದೆಯ ಸ್ಥಾಲೀಪಾಕವಾದ ಮೇಲೆ ಇಲ್ಲಿಂದ ಹೊರಡುವೆನು (ನಡದಾ. II. ೧೪೫೦); ದಂಪತಿಗಳ ಪ್ರೇಮವು ದೃಢವಾಗಿರಲೆಂದು ಸ್ಥಾಲೀಪಾಕವನ್ನು ಮಾಡಿದರು (ಮಹಾಭಾ. ೨೭೬). [ಸಂ.]

**ಸ್ಥಾಲೀಪುಲಾಕನ್ಯಾಯ** (ನಾ). [ತರ್ಕ] ಲೌಕಿಕನ್ಯಾಯಗಳಲ್ಲಿ ಒಂದು; ಗಿ ಬೇಯಲಿಟ್ಟಿರುವ ಪಾತ್ರೆಯಲ್ಲಿ ಒಂದು ಕಾಳು ಬೆಂದಿದ್ದರೆ ಎಲ್ಲ ಕಾಳೂ ಬೆಂದಿರುತ್ತವೆಯೆಂದು ನಿರ್ಧರಿಸುವಂತೆ ಏಕಾಂಶವನ್ನು ಪರೀಕ್ಷಿಸಿ ಸಮೂಹದ ಯೋಗ್ಯತೆಯನ್ನು ನಿರ್ಣಯಿಸುವ ನ್ಯಾಯ: ಸ್ಥಾಲೀಪುಲಾಕನ್ಯಾಯದಿಂದ ಕೆಲವೇ ಶ್ರುತಿಯುಕ್ತಿಗಳನ್ನು ಈ ಚಿಕ್ಕಲೇಖನದಲ್ಲಿ ಉದಾಹರಿಸಿದೆ (ಭಾರದ. ೩೩೪). [ಸಂ.]

**ಸ್ಥಾವರ** (ಗು). ೧. ಸ್ಥಿರವಾಗಿ ಒಂದೇ ಕಡೆ ಇರುವ; ಚಲನೆಯಿಲ್ಲದ; ನಿಶ್ಚಲವಾದ. ೨. ಅಚೇತನವಾದ; ಜಡವಾದ. ೩. ಸ್ಥಿರವಾದ; ಶಾಶ್ವತವಾದ. (ನಾ). ೪. ಚಲನಶಕ್ತಿಯಿಲ್ಲದೆ ಇದ್ದಲ್ಲಿಯೇ ಇರುವ ಬೆಟ್ಟ,

ಭೂಮಿ, ಮರ ಮುಂತಾದುವು: ಸಚರ ಸ್ಥಾವರಕೆಲ್ಲ ಸರ್ವಸುಖದುಃಖಂಗಳ್ ಸಮಾನಂಗಳ್ (ಸೋಮೇಶ. ೯೯); ಜಂಗಮಕೆ ಸ್ಥಾವರಕೆ ಚೈತನ್ಯಾಂಗರಕ್ಷನು . . . ಪರಕರವಸ್ತು ತಾನೀತ (ಕುವ್ಯಾಉ. ೯-೭೦); ಕೆಲಬಲನ ಸ್ಥಾವರಜಂಗಮಂಗಳ್ ಕಂಡುಂ ಕಾಣದಂತಿರ ಕಣ್ಮುಚ್ಚಿಯಾದುವು (ರಾಮಾಶ್ವ. ೩೦-೮). ೫. ಮನೆ, ಹೊಲ ಮುಂತಾದ ಸ್ಥಿರಾಸ್ತಿ. ೬. ಒಂದು ಬಗೆಯ ವಿಷ. ೭. [ವೀಶೈ] ಲಿಂಗದ ಎರಡು ವಿಧಗಳಲ್ಲಿ ಒಂದು; ದೇವಾಲಯಗಳಲ್ಲಿ ಪ್ರತಿಷ್ಠಿತವಾದ ಲಿಂಗ : ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ (ಬಸವ. ೮೨೦). ೮. [ಜೈನ] ಏಕೇಂದ್ರಿಯಜೀವ; ಇದ್ದ ಸ್ಥಳವನ್ನು ಬಿಟ್ಟು ಚಲಿಸಲಾರದ ಜೀವ: ತ್ರಸಂಗಳುಂ ಸ್ಥಾವರಂಗಳಪ್ಪುವು (ತತ್ವಪ್ರ. ೯೨): ಜೀವಾತ್ಮರುಗಳಿಗೆ ಅವರವರ ಕರ್ಮಾಧೀನವಾಗಿ ಬರುವ ದೇಹವನ್ನು ದೇವ, ಮನುಷ್ಯ, ತಿರ್ಯಕ್, ಸ್ಥಾವರವೆಂದು ಸಾಮಾನ್ಯವಾಗಿ ನಾಲ್ಕು ಪ್ರಕಾರ ಪುರಾಣಗಳಲ್ಲಿ ವಿಭಾಗಮಾಡಿರುತ್ತಾರೆ . . . ಸ್ಥಾವರವೆಂದರೆ ವೃಕ್ಷ ಗುಲ್ಮಲತೆ ಮೊದಲಾದುವು (ಹಿಂದಸಾ. ೧೪). ೯. ಏಕೇಂದ್ರಿಯಜನ್ಮಕ್ಕೆ ಕಾರಣವಾದ ನಾಮಪ್ರಕೃತಿ: ನಿದ್ರಾ ನಿದ್ರಾ . . . ಸ್ಥಾವರ ಸಾಧಾರಣ ಸೂಕ್ಷ್ಮಂಗಳೆಂಬ ಪದಿನಾಱುಂ ಕರ್ಮಪ್ರಕೃತಿಗಳಂ ನಿಶ್ಶೇಷಂ ಕಿಡಿಸಿ (ಆದಿಪು. ೧೦-೧೪ ವ); ಸ್ಥಾವರ ಸೂಕ್ಷ್ಮ ಅಪರಿಯಾಪ್ತ ಸಾಧಾರಣ ಶರೀರ ಅಸ್ಥಿರ . . . ಅಯಶಸ್ಕೀರ್ತಿ ನಾಮಕರ್ಮಮೆಂದಿಂತು ನಾಮಕರ್ಮದುತ್ತರಪ್ರಕೃತಿಗಳು ತೊಂಭತ್ತಮೂಱುಂ ನೂಱುಮೂಱುಂ ಮೇಣಪ್ಪುವು (ಗೊಮ್ಮಸಾ. ೪-೨). [ಸಂ.]

ಸ್ಥಾವರತೆ (ನಾ). ನಿಶ್ಚಲವಾಗಿ ನಿಂತಿರುವಿಕೆ ; ಸ್ಥಿರತೆ : ಅದನ್ನು 'ಮನೆ'ಯೆಂದು ಕರೆಯುತ್ತಿದ್ದರು ಅಷ್ಟೇ. ಆ ಹೆಸರಿಗೆ ಅದಕ್ಕಿದ್ದ ಹಕ್ಕು ಎಂದರೆ-ತಡಿಕೆಗೋಡೆಗೆ ಬದಲಾಗಿ ಅದಕ್ಕಿದ್ದ ಮಣ್ಣಿನ ಗೋಡೆಗಳು ಮತ್ತು ಅದರ ಸ್ಥಾವರತೆ (ಮಲಮ. ೬೭೦).

[ಸಂ. ಸ್ಥಾವರತಾ]

ಸ್ಥಾವರನಾಮಕರ್ಮ (ನಾ).= ಸ್ಥಾವರ ೯: ಸ್ಥಾವರನಾಮಕರ್ಮಪಾಕಾಧೀನಂಗಳ್ ಸ್ಥಾವರಂಗಳ್ (ಆದಿಪು. ೧೦-೬೧ ವ); ಸ್ಥಾವರನಾಮಕರ್ಮ - ಈ ಪ್ರಕೃತಿಯ ಉದಯದಿಂದ ಪೃಥ್ವೀ, ಜಲ, ತೇಜ, ವಾಯು, ವನಸ್ಪತಿಕಾಯಗಳಲ್ಲಿ ಏಕೇಂದ್ರಿಯಜೀವವಾಗಿ ಜನಿಸುವುದು (ಜೈನಪ. ೩೭೬). [ಸಂ. ಸ್ಥಾವರನಾಮಕರ್ಮನ್]

ಸ್ಥಾವರಲಿಂಗ (ನಾ). ದೇವಸ್ಥಾನ ಮೊದಲಾದ ಕಡೆಗಳಲ್ಲಿ ಪೂಜೆಗಾಗಿ ಪ್ರತಿಷ್ಠಿತವಾದ ಶಿವಲಿಂಗ: ಅಂಗದ ಮೇಲೆ ಲಿಂಗದೇವನಿರ್ದಂತೆ ಇತರ ಸ್ಥಾವರಲಿಂಗಕ್ಕೆ ಹೋಗಿ ಹೋಗಿ ದೇವರ ಕಂಡೆನೆಂದು ಅಱಿವುತಿಪ್ಪ ಸಲೆ ಮನುಜರುಗಳಿಗೆ ಉಪದೇಶ ಮಾಡುವ ಗುರುವಿಂಗೆ ಪುಣ್ಯದ ಬಟ್ಟೆಯ ಕೊಡ ಉರಿಲಿಂಗತಂದೆ (ವಚಸಂ. ೩೬೨-೧೯೯) ; ಶುದ್ಧಶೈವವು ಸ್ಥಾವರಲಿಂಗವನ್ನು ಪೂಜಿಸಿದರೆ ವೀರಶೈವವು ಇಷ್ಟಲಿಂಗವನ್ನು ಪೂಜಿಸುತ್ತದೆ (ಶೂನ್ಯಕು. ೩). [ಸಂ.]

ಸ್ಥಾವರವಿಷ (ನಾ). ಸಸ್ಯಮೂಲವಾದ ವಿಷ : ವಿಷ ಮೂಱು ತೆಱ-ಸ್ಥಾವರವಿಷ, ಜಂಗಮವಿಷ, ಕೃತ್ರಿಮವಿಷಮೆಂದು. ಆವುದೊಂದು ವಿಷ ಗೆಣಸು, ಗೆಂಡೆಬೇರುಗಳಿಂದ ಉಂಟಾಗುತಲಿರೆ ಅದು ಸ್ಥಾವರವಿಷವೆನಿಸಿಕೊಂಬುದು (ವೈದ್ಯಸಾ. II, ೧೭೫). [ಸಂ.]

ಸ್ಥಾವಿರ (ನಾ). ಮುಪ್ಪು ; ವಾರ್ಧಕ್ಯ : "ಸ್ಥಾವಿರಂ, ವೃದ್ಧತ್ವಂ - ೨ . . . ಮುದಿತನ, ಮುಪ್ಪು" (ಸಿದ್ಧಾಂತಿ. ೧೭೫). [ಸಂ.]

ಸ್ಥಾಸಕ (ನಾ). ೧. ಗಂಧ ಮೊದಲಾದ ಸುವಾಸನೆಯ ದ್ರವ್ಯಗಳನ್ನು ದೇಹಕ್ಕೆ ಅನುಲೇಪಿಸುವುದು : ಅಲೆವ ತೆರೆಗಳ್ ಮೆಲ್ಲಂ ಬವರಿಸಿ ಸೋಂಕುತ್ತುಂ ಕಳೆದುವು ಘನಕುಚಕಳಶಕುಂಕುಮಸ್ಥಾಸಕಮಂ (ಆದಿಪು. ೧೧-೧೪೧) ; ಬೆಳ್ದಾವರೆವೂಗಳವನ್ನ ದರಾರರಸನ ಭುಜಶಿಖರಚಂದನಸ್ಥಾಸಕಮಂ (ಮಲ್ಲಿಪು. ೮-೧೫೫). ೨. ಅನುಲೇಪನ ದ್ರವ್ಯ: ಗೊಂದಳವೆಕ್ಕಣವಾಗಳಾ ನೃಪಾವಾಸದೊಳಾಡಿದತ್ತಸೆಯೆ ಪಾಣಿತಲಂ ಪಡೆವಂತೆ ಕುಂಕುಮಸ್ಥಾಸಕಮಂ ಕುರುಳ್ ಕೆದಱುವಂತೆ ತಮಾಲನವಪ್ರವಾಳಮಂ (ಪಂಪಾವಾ. ೩-೧೧೬). ೩. ಬಾಗಿಲು, ಗೋಡೆ ಮುಂತಾದುವುಗಳ ಮೇಲೆ ಅಂಗೈಯಿಂದ ಚಟ್ಟು ಬಡಿಯುವುದು,— ಅಂಗೈ ಗುರುತು ಮೂಡಿಸುವಿಕೆ : "ಸ್ಥಾಸಕಂ, ಹಸ್ತಬಿಂಬಂ – ಈ ೨ ಚಟ್ಟಿಬಡಿವುದು" (ಹಲಾಯು. ೪೯-೩೮೭). ೪. ಸುಗಂಧದ್ರವ್ಯಗಳಿಂದ ಮಾಡಿದ ಬೊಂಬೆ, — ವಿಗ್ರಹ : ಆಗಳ್ ನಿರಂತರಂ ಸಮುತ್ಥಾಪಿತಂಗಳುಂ ಕನಕರಜತಮಯಾನೇಕಸ್ಥಾಸಕಾಲಂಕೃತಂಗಳುಂ ವಿಚಿತ್ರಚೀನಾಂಶುಕರುಚಿರಂಗಳುಂ ಉನ್ನದ್ಧ ವಿವಿಧಮಣಿದರ್ಪಣಧ್ವಜಂಗಳುಂ . . . ಅಪ್ಪ ತೋರಣಂಗಳನೆ ನುಗುಳುತ್ತುಂ (ಆದಿಪು. ೪-೫೮ ವ). ೫. ನೀರು ಮೊದಲಾದ ದ್ರವ್ಯಗಳ ಮೇಲೆ ಏಳುವ ಗುಳ್ಳೆ ; ಬುದ್ಬುದ. ೬. (ಕುದುರೆಯ ಗೌಸು ಇತ್ಯಾದಿ ಅಲಂಕಾರಸಾಮಗ್ರಿಯ ಮೇಲಿರುವ) ಬುದ್ಬುದಾಕಾರದ ಆಭರಣ. [ಸಂ.]

ಸ್ಥಾಸ್ನು (ಗು). ೧. ಅಚಲವಾದ ; ಸ್ಥಿರವಾದ. ೨. ಶಾಶ್ವತವಾದ; ನಿತ್ಯವಾದ. (ನಾ). ೩. ಅಚಲವಾಗಿರುವವನು : "ಸ್ಥಾಸ್ನುಃ, ಸ್ಥಿರತರಃ, ಸ್ಥೇಯಾನ್-೩ ಬಹುಕಾಲದವರೆಗೂ ಚಲನೆಯಿಲ್ಲದೆ ಸ್ಥಿರವಾಗಿ ಇರುವಂಥವನು" (ಸಿದ್ಧಾಂತಿ. ೩೪೨). ೪. ಚಲಿಸಲಾರದುದು; ಸ್ಥಾವರ: ನರರಂ ರಾಕ್ಷಸರಂ . . . ಅಪ್ಸರೋಬೃಂದಮಂ ತರದಿಂ ನಿರ್ಮಿಸಿಯವ್ಯಯವ್ಯಯಮನಿಪ್ಪಾ ಸ್ಥಾಸ್ನುವಂ ಜಂಗಮೋತ್ಕರಮಂ ಕಲ್ಪಿಸಿದಂ ಸರೋರುಹಭವಂ ವಿಜ್ಞಾನಸಂಪತ್ತಿಯಿಂ (ವಿಷ್ಣುಪು. ೧-೧-೨೪೦). ೫. ಮರ; ವೃಕ್ಷ. [ಸಂ.]

ಸ್ಥಾಳಿ 'ಸ್ಥಾಲಿ' ನೋ.

ಸ್ಥಿತ (ಗು). ೧. ನಿಂತುಕೊಂಡ; ನಿಂತಿರುವ. ೨. ಎದ್ದುನಿಂತ; ಮೇಲೆದ್ದ. ೩. ಇರುವ; ನೆಲಸಿದ: ದಂತೋತ್ಸಂಗಸ್ಥಿತ ಜಯಕಾಂತೆಗೆ ಚೆಲ್ವಾಗೆ ಪಿಡಿದ ಸೀಗುರಿಗಳೆವೆಂಬಂತೆವೊಲೆಸೆದುವು . . . ಎಱಗಿ ಸುಳಿವ ಮದಮಧುಪಂಗಳ್ (ಆದಿಪು. ೧೨-೬೦). ೪. ಸ್ಥಿರವಾದ; ಚಂಚಲವಲ್ಲದ: 'ಸ್ಥಿತಪ್ರಜ್ಞ' ಪರಾ. ೫. ಶಾಶ್ವತವಾದ; ನಿತ್ಯವಾದ. ೬. ನಿರ್ಣೀತವಾದ; ಸ್ಥಾಪಿತವಾದ. ೭. ಸಮೀಪದಲ್ಲಿ ಇರುವ; ಕೈಗೆಟುಕುವ. ೮. ಪ್ರತಿಜ್ಞೆಗೆ ಬದ್ಧನಾದ. ೯. ಉಂಟಾದ; ಸಂಭವಿಸಿದ. (ನಾ). ೧೦. ಇಡಲ್ಪಟ್ಟುದು; ಸ್ಥಾಪಿತವಾದುದು; ಇರಿಸಿದುದು: ಮಧ್ಯಾಂತಸ್ಥಿತಮಾಗಿ ಬೆಳಪ್ಪುದಱಿಗೆ ದೀಪಕಮಕ್ಕುಂ (ಕಾವ್ಯಾವ. ೬೪೨). ೧೧. ಉಳಿಕೆ; ಬಾಕಿ; ಕೊರತೆಯಾಗಿರುವ ಹಣದ ಮೊತ್ತ: ಸಂದಾಯಮಂ ಬೀಯದೊಳಗೆ ಕಳೆವನಿತಕ್ಕೆ ಐದುಕೋಟಿ ಸ್ಥಿತವನೊಳಗೆ ಗಣಕರ್ ಕಂಡು (ಬಸರ. ೫-೪೯). ೧೨. [ಕಾಮಶಾ] ಒಂದು ಬಗೆಯ ರತಿಬಂಧ; ಸ್ಥಿತರತಿ: ನಿಂದು ನೆರೆಯಲEಲಾತೆ ಸ್ಥಿತಂ (ಜನವ. ೯-೬). [ಸಂ.]

ಸ್ಥಿತಪ್ರಜ್ಞ (ಗು). ೧. ಸ್ಥಿರವಾದ ಬುದ್ಧಿಯುಳ್ಳ; ದೃಢನಿರ್ಣಯವುಳ್ಳ. (ನಾ). ೨. ಪ್ರಪಂಚದ ಎಲ್ಲ ಆಗುಹೋಗುಗಳನ್ನು ಸಮಭಾವದಿಂದ, ನಿರ್ವಿಕಾರವಾಗಿ ಗಣಿಸುವವನು; ಸೋಲು-ಗೆಲವು, ಸುಖ-ದುಃಖ ಮೊದಲಾದುವನ್ನು ಸಮಚಿತ್ತನಾಗಿ ಸ್ವೀಕರಿಸುವ ದೃಢಚಿತ್ತವುಳ್ಳವನು: ಮನಸ್ಸಿನಲ್ಲಿ ಹುಟ್ಟುವ ಎಲ್ಲ ಕಾಮವಾಸನೆಗಳನ್ನು ತ್ಯಾಗಮಾಡಿ, ಯಾವಾಗ ತನ್ನ ಮೂಲಕ ತನ್ನಲ್ಲಿಯೇ ತೃಪ್ತಿ ಹೊಂದಿರುತ್ತಾನೋ ಆಗ ಅವನು ಸ್ಥಿತಪ್ರಜ್ಞನೆನಿಸಿಕೊಳ್ಳುತ್ತಾನೆ (ಅನಾಸ. ೧೧); ಸುಖವನ್ನೂ ದುಃಖವನ್ನೂ ಮನಸ್ಸಿನ ಸಮಭಾವದಿಂದಲೇ ಕಾಣುವ ಸ್ಥಿತಪ್ರಜ್ಞನ ಸ್ಥಿತಿ ನನಗೆ ಸಾಧ್ಯವಿಲ್ಲ (ಶಾಂತಲಾ. ೨೮). [ಸಂ.]

ಸ್ಥಿತಪ್ರಜ್ಞೆ (ನಾ). ಸುಖದುಃಖ, ಲಾಭಾಲಾಭ ಮೊದಲಾದುವನ್ನು ಸಮಭಾವದಿಂದ ಕಾಣುವ ಚಿತ್ತಸ್ಥೈರ್ಯ : ಸುಖದುಃಖಗಳಾಚೆಗಿನ ರಾಜ್ಯದಲ್ಲಿ ನಿಂತ ಯೋಗಸ್ಥನ ಹಾಗೆ ಸ್ಥಿತಪ್ರಜ್ಞೆಯಿಂದ . . . ಅಕ್ಕನು ತನ್ನನ್ನು ನೋಡುತ್ತಿರುವಂತೆ ನರಹರಿಗೆನಿಸಿತು (ಸಮಜೀ. ೨೨೩). [ಸಂ. ಸ್ಥಿತಪ್ರಜ್ಞಾ]

ಸ್ಥಿತರತಿ (ನಾ). [ಕಾಮಶಾ] ಒಂದು ಬಗೆಯ ರತಿಬಂಧ : ಈರ್ವರೂ ಕೋಲಿನಂತೆ ನಿಂದಿರ್ದು ರಮಿಸಿದೊಡೆ ಸ್ಥಿತರತಿ (ಕಾಮಶಾ. ೭-೧೩೫). [ಸಂ.]

ಸ್ಥಿತಾವರ್ತ (ನಾ). [ನಾಟ್ಯ] ಹದಿನಾರು ಬಗೆಯ ಮಾರ್ಗಭೌಮಚಾರಿಗಳಲ್ಲಿ ಒಂದು : ಚರಣಮೊಂದಗ್ರತಲಸಂಚರಮಂ ಬಿತ್ತರಿಸಿ ಮತ್ತಮೊಂದೀ ಪಾರ್ಶ್ವಕ್ಕಿರದೆಯ್ದಿ ತತ್ಪದಂ ಪೂರ್ಣ್ವರೆ ಮೊಳಕಾಲೊಳಗುಮಾಗಿ ಸ್ವಸ್ತಿಕದಿಂದಂ ಸಲೆ ಸ್ವಸ್ತಿಕ ಪದಮಂ ಬಿರ್ಚೊಲವಿಂದಂ ತನ್ನ ತಾಣದಿಂದಿರಲದು ತಾಂ ಸೆಲೆಗೊಳಲ್ ಸ್ಥಿತಾವರ್ತದ . . . ಚಾರಿಯೆನಿಸಿ ರಂಜಿಸಿ ತೋರ್ಕುಂ (ರಾಸ್ಯರಂ. ೬-೨೦). [ಸಂ.]

ಸ್ಥಿತಿ (ನಾ). ೧. ಚಲಿಸದೆ ನಿಲ್ಲುವಿಕೆ; ಕೆಳಕ್ಕೆ ಬೀಳದಿರುವಿಕೆ : ಸ್ಥಿತಿಯೆಂದರೆ ನಿಲ್ಲುವಿಕೆ, ಕೆಳಕ್ಕೆ ಬೀಳದಿರುವಿಕೆ (ಹಿಂದಸಾ. ೮೨). ೨. ಇರುವಿಕೆ; ಅಸ್ತಿತ್ವ: ಪಂಚವಸ್ತುಗಳಿಗೆ ಒಟ್ಟಿನಲ್ಲಿ ಸಂಭವಿಸುವ ಅವಸ್ಥೆಗಳು ಎಂಟು - ಉತ್ಪತ್ತಿ, ಸ್ಥಿತಿ, ಸಂಚಾರ,

ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷ ಎಂದು (ಭಾತತ್ತ್ವ.೪೮೭). ೩. ಪೋಷಣೆ; ರಕ್ಷಣೆ: ಸೃಷ್ಟಿಸಲ್ಪಟ್ಟ ಪ್ರಪಂಚವನ್ನು ಜಾಗ್ರದಾದ್ಯವಸ್ಥೆಗಳಲ್ಲಿ ನಾನಾರೂಪಗಳಿಂದ ಪೋಷಿಸುವುದು ಸ್ಥಿತಿ (ಓಂದಸಾ. ೨೮೪). ೪. ಒಂದು ಅವಸ್ಥೆಯಲ್ಲಿ ಮುಂದುವರಿಯುವಿಕೆ. ೫. ಇದ್ದಂತೆ ಇರುವಿಕೆ; ಸ್ಥಿರತೆ. ೬. ಅವಸ್ಥೆ; ದೆಸೆ: ಇಲ್ಲಿ ಕಾಣುವ ಅಸ್ತವ್ಯಸ್ತಸ್ಥಿತಿಯ ಗೊಂದಲ . . . ಗಾಬರಿಯನ್ನು ಮೂಡಿಸಿದರ ಆಶ್ಚರ್ಯವಲ್ಲ (ದ್ರಾವಿ. ೯೮). ೭. ವ್ಯವಸ್ಥೆ; ಏರ್ಪಾಡು: "ತನ್ನಿರವಿನಲಿ ವ್ಯವಸ್ಥೆಯಲಿ ಸ್ಥಿತಿಯೆನಿಕು" (ಮಂಗರಾ. ೧೪೬-೨೨). ೮. ನಿಯಮ; ಕಟ್ಟುಪಾಡು: ಪೂರ್ವ್ವಮರ್ಯ್ಯಾದೆಯೊಳೆ ಹಂಚಿಸುವೊ ಸ್ಥಿತಿಯನಿಟಿದು ಉಣ್ಣವರ್ ಕಪಿಲೆಯುಂ ಪಾರ್ವ್ವರುಮಂ ಕೊನ್ದೋಂ (ಎಕ. XVI. ತುಮಕೂ. ೮೧-೧೨; 902). ೯. ಐಶ್ವರ್ಯ; ಸಂಪತ್ತು: ಸ್ಥಿತಿ ಇಲ್ಲದಿದ್ದರೂ ಗತಿಗೆಡಬಾರದು (ಗಾದೆ). 'ಸ್ಥಿತಿವಂತ' ಪರಾ. ೧೦. ದಾನಭೂಮಿ; ದತ್ತಿ: ಪುಳಿಯಣ್ಣ ನನ್ನಿಯ ಎಕಣದ ಬಾಗಿಯುಲಗನಾಗೆ X ಕ್ಕಟ್ಟು ಪಡೆದ ಸ್ಥಿತಿ ಖಣ್ಣಾಗಂ ಕಟನಿಯು ಪಾಟ್ಕಣ್ಣಾಗವು ತಣ್ಣುಪಟ್ಟು (ಎಕ. X (S). ಚಿಕ್ಕಬ. ೨೭-೧೦; 9ನೆಯ ಶತ). ೧೧. ಅಂತಸ್ತು; ಮಟ್ಟ. ೧೨. ಒಳ್ಳೆಯ ನಡತೆ; ಸಚ್ಚಾರಿತ್ರ. ೧೩. ತೀರ್ಮಾನವಾದ ನಿಯಮ; ಅಂತಿಮನಿರ್ಣಯ. [ಸಂ.]

**ಸ್ಥಿತಿಕರ್ತ** (ನಾ). ಲೋಕವನ್ನು ಪಾಲಿಸುವವನು; ವಿಷ್ಣು: (ಕ).
[< ಸಂ. ಸ್ಥಿತಿಕರ್ತೃ]

**ಸ್ಥಿತಿಗತಿ** (ನಾ). ಇರುವ ಸ್ಥಿತಿ; ಅವಸ್ಥೆ: ಸಭ್ಯತೆಯು ಸ್ನೇಹಸಂಬಂಧ ಯೋಗ್ಯತೆ ಸ್ಥಿತಿಗತಿ ಸಮಯ ಸಂದರ್ಭ ಮುಂತಾದವುಗಳಿಗೆ ಅನುಗುಣವಾದುದು (ಆರ್ಯಧ. ೬೩); ಮುಂದೆ ಹೋದರು ಸಾವು ಹಿಂದೆ ಬಂದರು ಸಾವು ಸ್ಥಿತಿಗತಿಯಿಂತಿರುವಂದು ಮುಂದೆ ಹೋಗಿಯೆ ಸತ್ತು ಯಶವನು ಪಡೆವೆವು (ಇಂಚಾಪ. ೨೩೫-೬೪). [ಸಂ.]

**ಸ್ಥಿತಿವಂತ** (ನಾ). ಸಿರಿವಂತ; ಧನಿಕ: ಅವರು ಈ ಊರಿಗೆಲ್ಲ ಸ್ಥಿತಿವಂತರು (ರೂಢಿ).
[ಸಂ. ಸ್ಥಿತಿವತ್]

**ಸ್ಥಿತಿಸಾರ** (ನಾ). ೧. ಭಾಷೆಗೆ ತಪ್ಪದವನು; ಪ್ರತಿಜ್ಞಾಪಾಲಕ : ಆರಯೆ ನೃಪರಾರುಂ ವಾಕ್ಸಾರರ್ ಕರ್ತವ್ಯಸಾರರಲ್ಲರ್ . . . ಸ್ಥಿತಿಸಾರಂ ನಿನ್ನನ್ನನಾವನಿಜಿವ ಬೆಡಂಗಾ (ಗದಾಯು. ೨-೭). ೨. ದೃಢಮನಸ್ಸುಳ್ಳವನು; ಸ್ಥಿರಚಿತ್ತನಾದವನು: ಸ್ಥಿತಿಸಾರರಲ್ಲದವನೀಪತಿಗಳನೋಲ್ಕೆಸಿ ಪಡೆವ ಧನಲಾಭದಿನುನ್ನತಗಿರಿಗುಹಾಂತರಾಳ ಸ್ಥಿತಿಲಾಭಂ ಪೂಜ್ಯಮೆಂಬರಜಿವವರೆಲ್ಲರ್ (ಪಂಚತಂ. ೧೩೪-೧). [ಸಂ.]

**ಸ್ಥಿತಿಸ್ಥಾಪಕ** (ಗು). ೧. ವ್ಯತ್ಯಾಸ ಹೊಂದಿದರೂ ಮರಳಿ ಮೊದಲಿನ ನೈಜಸ್ಥಿತಿಗೆ ಬರಬಲ್ಲ; ತನ್ನ ಸಹಜಸ್ಥಿತಿಯನ್ನು ಪುನಃ ಹೊಂದಬಲ್ಲ: ಕಬ್ಬಿಣದ ಹೊರ್ತು ಎರಡನೇ ಯಾವ ಧಾತುವಿನಲ್ಲಿಯೂ ತಾವ್ರದಷ್ಟು ಸ್ಥಿತಿಸ್ಥಾಪಕಗುಣವಿಲ್ಲ (ಮುಂಬಯಿ. ೪-೧೩೭). (ನಾ). ೨. ಸಂಕೋಚ, ವಿಸ್ತರಣ ಮೊದಲಾದ ವಿಕಾರಗಳಾದರೂ ಅವುಗಳಿಂದ ಬಿಡುಗಡೆಯಾದೊಡನೆ ಮರಳಿ ತನ್ನ ಸಹಜಸ್ಥಿತಿಯನ್ನು ತಾಳುವ ಗುಣ: ಸ್ಥಿತಿಸ್ಥಾಪಕವೆಂದರೆ ಮೊದಲಿನ ಸ್ಥಿತಿಯನ್ನು ಕಾಯ್ದುಕೊಳ್ಳುವ ಗುಣವು (ಮುಂಬಯಿ. ೫-೫೨). ೩. ಸ್ಥಿತಿಸ್ಥಾಪಕಗುಣವುಳ್ಳದು: ಅಸಂಖ್ಯಾತಕಣಗಳು ಸಂದಣಿಯಲ್ಲಿ ಸ್ಥಿತಿಸ್ಥಾಪಕವಲ್ಲದ ಆಘಾತಗಳುಂಟಾಗುವುದೆಂದೂ ಮತ್ತು ಒಂದಕ್ಕೊಂದು ಕೂಡಿಕೊಂಡು ಸಂಬದ್ಧವಾಗುವುದೆಂದೂ ಲಿಗೊಂಡಸ್ ತಿಳಿಸಿದನು (ಭೂಹುಟ್ಟು. ೨೭); ಅಣುಗಳು ಸಂಪೂರ್ಣವಾಗಿ ಸ್ಥಿತಿಸ್ಥಾಪಕಗಳಾಗಿವೆ (ಭೌತವಿ. ೨೮೭). [ಸಂ.]

**ಸ್ಥಿತಿಸ್ಥಾಪಕತ್ವ** (ನಾ). = ಸ್ಥಿತಿಸ್ಥಾಪಕ ೨: ವ್ಯತ್ಯಾಸವನ್ನುಂಟುಮಾಡಿದ ಬಲವನ್ನು ತೆಗೆದು ಹಾಕಿದರೆ ವಸ್ತುವು ಸಾಧಾರಣವಾಗಿ ತನ್ನ ಮೊದಲಿನ ಸ್ಥಿತಿಗೇ ಬರುವುದರಿಂದ ಈ ಗುಣಕ್ಕೆ ಸ್ಥಿತಿಸ್ಥಾಪಕತ್ವವೆಂದೂ (Elasticity) ಇಂತಹ ವಸ್ತುಗಳಿಗೆ ಸ್ಥಿತಿಸ್ಥಾಪಕ ವಸ್ತುಗಳೆಂದೂ . . . ಹೆಸರು (ಭೌತವಿ. ೧೦೫). [ಸಂ.]

**ಸ್ಥಿತ್ಯಂತರ** (ನಾ). ಇದ್ದ ಸ್ಥಿತಿಯು ಹೋಗಿ ಇನ್ನೊಂದು ಸ್ಥಿತಿಯು ಪ್ರಾಪ್ತವಾಗುವಿಕೆ; ಬದಲಾವಣೆ: ನರಹರಿ - ರಮಾಬಾಯರ ಆಕ್ರೋಶಮಯ ಸನ್ನಿವೇಶದಲ್ಲಿ ಅವರ ಭಾವನೆಗಳಲ್ಲಾದ ಸ್ಥಿತ್ಯಂತರ ಕ್ರಮವಾಗಿ ಚಿತ್ರಿತವಾಗಿದೆ (ಸಮಜೀ. ೨೭ ಪೀಠಿಕೆ); ಇಂತಹ ಧಾರ್ಮಿಕ ಸಾಮಾಜಿಕ ಸ್ಥಿತ್ಯಂತರಗಳ ಮಧ್ಯದಲ್ಲಿ ಅವಳ ಸಾಹಿತ್ಯದ ಅಭಿವ್ಯಕ್ತಿಗೆ ಅವಕಾಶವೆಲ್ಲಿ? (ಕರ್ನಾಕ. ೧೮). [ಸಂ.]

**ಸ್ಥಿರ** (ಗು). ೧. ದೃಢವಾದ; ಭದ್ರವಾದ. ೨. ಅಚಲವಾದ; ಸ್ಥಾವರ. ೩. ಶಾಶ್ವತವಾದ; ನಿತ್ಯವಾದ. ೪. ಶಾಂತಸ್ಥಿತಿಯುಳ್ಳ; ಪ್ರಶಾಂತವಾದ. ೫. ರಾಗದ್ವೇಷರಹಿತವಾದ. ೬. ದೃಢವಾದ ಚಾರಿತ್ರವುಳ್ಳ; ಸನ್ಮಾರ್ಗದಿಂದ ಕದಲದ. ೭. ನಿಶ್ಚಯವಾದ; ನಿಶ್ಚಿತವಾದ. ೮. ಸಾಂದ್ರವಾದ; ಘನೀಭೂತವಾದ: ಈ ಬಂಗಾರದ ತುಂಡುಗಳು ಈ ಸ್ಥಿರತಿಮಿರದಲ್ಲಿ ಚಿರಕಾಲ . . . ನಿಶ್ಚಲವಾಗಿ ಬಿದ್ದುಕೊಂಡಿವೆ (ಇಪ್ಪಕ. ೩೫೧). ೯. ಬಲಶಾಲಿಯಾದ; ಸಮರ್ಥವಾದ. (ನಾ). ೧೦. ನಿತ್ಯವಾದುದು; ಶಾಶ್ವತವಾದುದು: "ನಿತ್ಯಂ ಧ್ರುವಂ ಶಾಶ್ವತಮದು ಸನಾತನಮನಶ್ವರಂ ಸ್ಥಿರಮೆನಿಕ್ಕು" (ಮಂಗರಾ. ೮-೨೫). ೧೧. ಮರ. ೧೨. ಬೆಟ್ಟ; ಪರ್ವತ: "ಗಿರಿ ಗೋತ್ರಂ ಶಿಖರಿ ಧರಂ ಸ್ಥಿರಂ ನಗಂ ಪರ್ವತಂ" (ವಸ್ತುಕೋ. ೨೮-೧). ೧೩. ಶಿವನ ಒಂದು ಹೆಸರು. ೧೪. ಶನಿಗ್ರಹ: 'ಸ್ಥಿರವಾರ' ಪರಾ. ೧೫. ಸಮಾಧಾನಚಿತ್ತದಿಂದ ಇರುವವನು: "ವಿಸ್ರಬ್ಧಃ ಸ್ಥಿರಃ- ಈ ೨ ಹದುಳಿ (ಗ) ದಂ" (ಹಲಾಯು. ೬೧-೨೧೫). ೧೬. ಸ್ಥೈರ್ಯ; ದೃಢತೆ : ಸ್ಥಿರವ ಹಡೆದು ವಿದ್ಯುಲ್ಲತೆ ಸುರಧನು ತರುಣಿ ರೂಪವನಾಂತು ಧರೆಗಿಳಿತಪ್ಪ ಪಾಂಗಿನೊಳಂದಳದಿಂ ತರುಣಿಯಿಳಿವುತಿರ್ದಳಾಗ (ಶ್ರೀಪಾಲ.೧೦-೬೭). ೧೭. ದೇವತೆ. ೧೮. ಎತ್ತು; ವೃಷಭ. ೧೯. ಷಣ್ಮುಖ. ೨೦. ಮುಕ್ತಿ; ಮೋಕ್ಷ. ೨೧. [ಜ್ಯೋತಿ] ವೃಷಭ, ಸಿಂಹ, ವೃಶ್ಚಿಕ ಮತ್ತು ಕುಂಭರಾಶಿಗಳು. ೨೨. [ಜೈನ] ನಾಮಕರ್ಮಪ್ರಕಾರಗಳಲ್ಲಿ ಒಂದು; IP ಈ ಕರ್ಮದ ಉದಯದಿಂದ ಶರೀರದಲ್ಲಿ ರಸಾದಿಧಾತುಗಳು ಉತ್ಪನ್ನವಾಗಿ ಸ್ಥಿರವಾಗಿ ಉಳಿಯುತ್ತವೆ: ಸ್ಥಿರಾಸ್ಥಿರ ಶುಭಾಶುಭ ಸುಸ್ವರದುಸ್ವರ . . . ನೀಚೈರ್ಗೋತ್ರಂ ಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೯ ವ). [ಸಂ.]

**ಸ್ಥಿರಂ** (ಅ). ದೃಢವಾಗಿ; ಸ್ಥಿರವಾಗಿ: ಸ್ಥಿರಮಿರ್ದು ಪ್ರಭು ನುಡಿಯೆ ಪ್ರರೂಢಮುದ ನಾದನಾತಂ (ಕವಿರಾ. ೨-೭). [< ಸಂ. ಸ್ಥಿರ]

**ಸ್ಥಿರಕರಿಸು** (ಕ್ರಿ). ದೃಢಪಡಿಸು; ಸ್ಥಿರೀಕರಿಸು: ಮುಂ ಪೆತ್ತವರಿರವಂ ಪೋಲ್ಪುದು ಪುಟ್ಟಿದ ಶಿಶುವೆಂಬರ ಮಾತಂ ಸ್ಥಿರಕರಿಸುವ ತೆಜದಿಂ ತದ್ರಾಜಾತ್ಮಜೆಯ . . . ಮಧ್ಯದೊಳೊದವಿದ ಸೊನ್ನೆಯ ದೊರೆಯಾದುದು ನಾಭೀವಲಯಂ (ಜಯಕಾ. ೩-೩೪).
[ಸಂ. ಸ್ಥಿರಕರಣ + - ಇಸು]

**ಸ್ಥಿರಕುಕ್ಷಿ** (ನಾ). ಕಲ್ಲು; ಶಿಲೆ : "ಸ್ಥಿರಕುಕ್ಷಿ ಪಾಷಾಣಮಶ್ಮಮುಪಲಮೆನೆ ಪ್ರಸ್ತರಂ . . . ಕಲ್ಲಕ್ಕು" (ಮಂಗರಾ. ೨೯-೧). [ಸಂ.]

**ಸ್ಥಿರಗೊಳಿಸು** (ಕ್ರಿ). ೧. ಅಚಲವಾಗಿ ಇರಿಸು; ಸ್ಥಿರವಾಗಿ ನಿಲ್ಲಿಸು: ಮೂಲದೇಹ ಸ್ವಭಾವವು ಅಥವಾ ಪ್ರಕೃತಿಯು ತಾಮಸವಿದ್ದರೆ ಪರಮೇಶ್ವರನ ಶುದ್ಧಸ್ವರೂಪದಲ್ಲಿ ಚಿತ್ತವನ್ನು ಸ್ಥಿರಗೊಳಿಸುವ ಉದ್ಯೋಗವು ಒಮ್ಮೆಲೇ ಅಥವಾ ಒಂದೇ ಜನ್ಮದಲ್ಲಿ ಸಫಲವಾಗಲಾರದು (ಶಾಂಪಜೀ. ೬೭). ೨. ದೃಢಪಡಿಸು; ಸ್ಥಿರೀಕರಿಸು: (ಕ).
[ಸ್ಥಿರ + ಕೊಳ್ + - ಇಸು]

**ಸ್ಥಿರಚಿತ್ತ** (ನಾ). ದೃಢವಾದ ಮನಸ್ಸುಳ್ಳವನು: ಉನ್ಮತ್ತನು ನಾನು, ಸ್ಥಿರಚಿತ್ತನು ನಾನು! (ಪಾಂಚಜ. ೧೭-೧೯). [ಸಂ.]

**ಸ್ಥಿರಜೀವಿ** (ನಾ). ಎಲವದ ಮರ; ಬೂರುಗ : "ಸ್ಥಿರಜೀವಿ ಮೋಚ ಶಾಲ್ಮಲಿ ಯೆಲವವಕ್ಕು" (ಮಂಗರಾ. ೩೬-೧೭). [ಸಂ. ಸ್ಥಿರಜೀವಿನ್]

**ಸ್ಥಿರತೆ** (ನಾ). ೧. ದೃಢತೆ; ಗಟ್ಟಿತನ: ಸ್ಥಿರತೆಯಲಿ ಕನಕಾದ್ರಿ ಧೈರ್ಯದಿ ಧರೆಗೆ ಸರಿ ಗಂಭೀರತನದಲಿ ಶರಧಿಗೆಣೆ . . . ಭೂಪ ದಶರಥನು (ಕೌಶಿರಾ. ೧-೨೪). ೨. ಶಾಶ್ವತತೆ; ನಿತ್ಯತೆ: ಪೆರ್ಮೆಗಂ ಸ್ಥಿರತೆಗಮಾಶ್ರಯಮಾದ ಗಗನಲಕ್ಷ್ಮಿಯ ಮಧ್ಯಾಧಿಗತವಳಿತ್ರಯಮೆನೆ ಸಲೆ ಸೊಗಯಿಪುದು ಜಗತ್ತ್ರಯಂ (ಚಂದ್ರಪ್ರ. ೧-೭೯).
[ಸಂ. ಸ್ಥಿರತಾ]

**ಸ್ಥಿರತ್ವ** (ನಾ). ೧. ಸ್ಥೈರ್ಯ; ದೃಢತೆ: ನಿಶ್ಶಂಕನುಂ ನಿಸ್ಸಹಾಯನುಮಾಗಿ ನುಡಿದ ಮೋಘಜಿಷ್ಣುವ ಸ್ಥಿರತ್ವಕ್ಕೆ ಮೆಚ್ಚಿ (ಶಾಂತಿಪು. ೭-೨೫ ವ). ೨. ಬಲ; ಸಾಮರ್ಥ್ಯ: ಸುರಪತಿ ಕೆಯ್ಯಿಜಿದು . . . ಆಯಿರ್ವರ್ ಮುನ್ನೆರಪಿರ್ದಗಣ್ಯಪುಣ್ಯಸ್ಥಿರತ್ವಮಂ ನೆಗಟೆ ಪೊಗಟಲಟಿಯಂ ಸಭೆಯೊಳ್ (ಶಾಂತಿಪು. ೧೦-೭೭). [ಸಂ.]

**ಸ್ಥಿರನುಡಿ** (ಕ್ರಿ). ಸ್ಥಿರವಾದ ಮಾತನ್ನು ಆಡು; ಸತ್ಯವನ್ನು ನುಡಿ: [ಗು]ಣಸಂಪನ್ನಂ ಸ್ಥಿರನುಡಿವಾತಂ ಧರ್ಮದ ಮೇರು (ಸೌಇಇ. XX. ೨೪-೩೪; 1034). [ಸ್ಥಿರ + ನುಡಿ]

**ಸ್ಥಿರಪಡಿಸು** (ಕ್ರಿ). ದೃಢಪಡಿಸು; ಸ್ಥಿರೀಕರಿಸು: ಅನೇಕ ನಿದರ್ಶನಗಳನ್ನು ನೀಡಿ ಅವರು ತಮ್ಮ ವಾದವನ್ನು ಸ್ಥಿರಪಡಿಸಿದರು (ರೂಢಿ). [ಸ್ಥಿರಪಡು + -ಇಸು]

**ಸ್ಥಿರಪಡು** (ಕ್ರಿ). ರುಜುವಾತಾಗು; ದೃಢಪಡು: ಟೀಕೆಟಿಪ್ಪಣಿ ನೀಡಿದ ಸಂಗತಿ ಸಾಕ್ಷ್ಯಸಾಮಗ್ರಿಯಿಂದ ಸ್ಥಿರಪಟ್ಟುದಾದರೆ ಅವನನ್ನು . . . ಕಠಿಣಶಿಕ್ಷೆಗೆ ಗುರಿಪಡಿಸ ಬಹುದು (ಪುನರು. ೩೧೫). [ಸ್ಥಿರ + ಪಡು]

**ಸ್ಥಿರಪದ** (ನಾ). ಶಾಶ್ವತವಾದ ಪದವಿ; ಮೋಕ್ಷ: ಇಂದುಶೇಖರನ ವೊಲವಾಂತು ಬಾಣಾಖ್ಯ . . . ಸ್ಥಿರಪದಕ್ಕೆದಿದಂ (ನವಮೋ. ೩೩-೩೨). [ಸಂ.]

**ಸ್ಥಿರಬಾಳ್** (ಕ್ರಿ). ಸ್ಥಿರವಾಗಿ ಬದುಕು; ಚಿರಕಾಲ ಜೀವಿಸು: ಪರಿವ ಪೆರ್ದೊಱೆಯ ಮೃವಳಿಗಾದ ಗೇಕೆಲ್ಲ ಸ್ಥಿರಬಾಳ್ಕುವದಕಿದಿರಾದ ಮರಗಳು ಬೇರ್ಗಿತ್ತು ಬಿದ್ದುಹೋಹುವು (ಭರಚ. ೩೯-೧೧೨). [ಸ್ಥಿರ + ಬಾಳ್ (< ಬಾೞ್)]

**ಸ್ಥಿರಬುದ್ಧಿ** (ನಾ). ೧. ದೃಢಮನಸ್ಸು ; ಅಚಲವಾದ ಬುದ್ಧಿ. ೨. ಸ್ಥಿರವಾದ ಮನಸ್ಸುಳ್ಳವನು; ದೃಢಚಿತ್ತ. [ಸಂ.]

**ಸ್ಥಿರಬೋಧ** (ನಾ). ಮೋಕ್ಷಜ್ಞಾನವುಳ್ಳವನು ; ಕೇವಲಜ್ಞಾನಿ: ಸ್ಥಿರಬೋಧಂ ಚಂಪೆಯೊಳ್ ಪೆಂಪೆಸದಿರೆ ವಸುಪೂಜ್ಯಾತ್ಮಜಂ . . . ನಿರ್ಮಿದರ್ (ಶಾಂತಿಪು. ೧೨-೩೦). [ಸಂ.]

**ಸ್ಥಿರಮನಸ್ಕ** (ನಾ). = ಸ್ಥಿರಬುದ್ಧಿ ೨: ಅವನು ಹೀಗೆ ಇಷ್ಟೇ ಶಾಂತಚಿತ್ತನಾಗಿ, ಸ್ಥಿರಮನಸ್ಕನಾಗಿ ಇರುತ್ತಾನೆ (ವೀರಯೋ. ೫). [ಸಂ.]

**ಸ್ಥಿರವಚನ** (ನಾ). ೧. ಶಾಶ್ವತವಾಗಿ ಉಳಿಯುವ ಮಾತು; ಸತ್ಯ. ೨. ಸತ್ಯವನ್ನು ನುಡಿಯುವವನು: ಕಾಳಿಗನತಿಧವಳಯಶಂ ರಾಜಪೂಜಿತಂ ಸ್ಥಿರವಚನಂ (ಸೌಇಇ. XX. ೩೧-೧೨; 1044). [ಸಂ.]

**ಸ್ಥಿರವಾರ** (ನಾ). ಶನಿವಾರ: ಈ ಶು ೯ರಲ್ಲಿ ಸ್ಥಿರವಾರ ಮಾರುಕಲ್ಲುಬೆಟ್ಟದ ಕಾಡಿನಲ್ಲಿ ಬೇಟೆ ಆಡಿದಲ್ಲಿ ಬಿದ್ದ ಮೃಗಜಾತಿಗಳ ವಿವರಾ (ರಾಜೇಂದ್ರ. ೧೪೯); ತ್ರಯೋದಶಿ ಸ್ಥಿರವಾರ ಹಸ್ತನಕ್ಷತ್ರ ವೃದ್ಧಿಯೋಗ ಅಭಿಜಿನ್ಮುಹೂರ್ತದಲ್ಲಿ ಕೇಶವ ಪ್ರತಿಷ್ಠೆ ಮಾಡಿಸಿದರು (ಹೊಯ್ಸವಾ. ೨೦). [ಸಂ.]

**ಸ್ಥಿರಸೇಸೆ** (ನಾ). ಸ್ಥಿರವಾಗಿರುವಂತೆ ಹರಸಿ ತಳಿಯುವ ಅಕ್ಷತೆ: ಕಂಕಣ ಕೈಹಾರ ಕಟ್ಟಿ ಸ್ಥಿರಸೇಸೆಯನಿಕ್ಕಿ ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯ ಮಾಡಿದರು (ಮಹಾದೇ. ಬ. ೩೫-೭೬). [ಸಂ. ಸ್ಥಿರಸೇಸಾ]

**ಸ್ಥಿರಸ್ವತ್ತು** (ನಾ). ಮನೆ, ಭೂಮಿ ಮುಂತಾದ ಸ್ಥಾವರ ಆಸ್ತಿ: ಸ್ಥಿರಸ್ವತ್ತಿನ ಆಧಾರದ ಮೇಲೆ ಸಾಲ ಕೊಡುವುದು ಎಷ್ಟು ಅಪಾಯಕರ (ಯೋಧಪು. ೩೦). [ಸ್ಥಿರ + ಸ್ವತ್ತು]

**ಸ್ಥಿರಹಸ್ತ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಮೊದಲನೆಯದು: ಸ್ಥಿರಹಸ್ತ, ಪರ್ಯಸ್ತ ಸೂಚೀವಿದ್ಧ, ಅಪರಾಜಿತ . . . ಸಂಭ್ರಾಂತ, ಸ್ವಸ್ತಿಕರೇಚಿತ – ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಲಾಸ್ಯರಂ. ೫-೭ ವ). [ಸಂ.]

**ಸ್ಥಿರಾಯು** (ಗು). ೧. ಬಹುಕಾಲ ಬದುಕುವ ; ದೀರ್ಘಾಯುಷಿಯಾದ. (ನಾ). ೨. ಬಹುಕಾಲ ಬದುಕುವಂತಹುದು; ದೀರ್ಘಾಯುಷಿಯಾದುದು. ೩. ಒಂದು ಬಗೆಯ ಮರ; ಬೂರುಗದ ಮರ: ''ಎಲವಂ ಸ್ಥಿರಾಯು ತಾಂ ಶಾಲ್ಮಲಿಯೆನಿಕ್ಕುಂ'' (ವಸ್ತುಕೋ. ೩೩-೨). [ಸಂ. ಸ್ಥಿರಾಯುಸ್]

**ಸ್ಥಿರಾಸ್ತಿ** (ನಾ). = ಸ್ಥಿರಸ್ವತ್ತು: ಅವನು ತನ್ನ ಸ್ಥಿರಾಸ್ತಿಯನ್ನು ಆಧಾರಮಾಡಿ ಅವರಿಂದ ಸಾಲಪಡೆದನು (ರೂಢಿ). [ಸ್ಥಿರ + ಆಸ್ತಿ]

**ಸ್ಥಿರೀಕರಣ** (ನಾ). ಸ್ಥಿರಗೊಳಿಸುವಿಕೆ; ದೃಢಗೊಳಿಸುವಿಕೆ: 'ದೇಗುಲ'ವೆಂಬ ಭವ್ಯಕಲ್ಪನೆ, ಈ ಏರುವಿಕೆಯ ಒಂದು ನೆಲೆಯ ಸ್ಥಿರೀಕರಣಕ್ಕೆ ದೇವಮಾನವರು ಕಲ್ಪಿಸಿರುವ ಉಪಾಯಗಳಲ್ಲೊಂದು (ಕಾವ್ಯಕು. ೬). [ಸಂ.]

**ಸ್ಥಿರೀಕರಿಸು** (ಕ್ರಿ). ದೃಢಪಡಿಸು; ಸ್ಥಿರಗೊಳಿಸು: ಶಿವಸ್ಕಂದವರ್ಮನು ತಂದೆಯಾದ ಮಹಾರಾಜ ಬಪ್ಪಸ್ವಾಮಿಯು ಹಿಂದೆ ಕೊಟ್ಟಿದ್ದ ಬ್ರಾಹ್ಮಣದತ್ತಿಯನ್ನು ಸ್ಥಿರೀಕರಿಸಿದನೆಂದು ಹೇಳಿದೆ (ಕರ್ಣಾಅ. ೫). [ಸ್ಥಿರೀಕರಣ + -ಇಸು]

**ಸ್ಥಿರೆ** (ನಾ). ೧. ಸ್ಥಿರಬುದ್ಧಿಯಿರುವ ಹೆಣ್ಣು; ದೃಢಚಿತ್ತವುಳ್ಳ ಸ್ತ್ರೀ: ಸ್ಥಿರೆಯಲ್ಲದವಳನತಿನಿಷ್ಠುರೆಯಂ . . . ಸಿರಿಯಿಂ ಭಾವಿಪುದು ಮುನ್ನಮೇ ಶುಭಕಾಮಂ (ಕಾದಂಪೂ. ೫೪೫); ಧರೆಯಂ ಸ್ಥಿರೆಯೆನಿಸಿದನಿಂದಿರೆಯಂ ಪದ್ಮಾಲಯಾಖ್ಯೆಯೆಂದೆನಿಸಿದಂ . . . ಅದೇಂ ಸಮರ್ಥನೊ ಪದ್ಮಂ (ಪುಷ್ಪಪು. ೩-೨). ೨. ಭೂಮಿ; ಪೃಥ್ವಿ: ''ಸ್ಥಿರೆ ಧರಣಿ ಧಾತ್ರಿ . . . ನೆಲಂ'' (ವಸ್ತುಕೋ. ೨೬-೧). ೩. ಒಂದು ಬಗೆಯ ಮರ; ಬೂರುಗದ ಮರ. ೪. ಮೂರೆಲೆಹೊನ್ನೆ; ಶಾಲಪರ್ಣಿ: ''ವಿದಾರಿಗಂಧಾ, ಅಂಶುಮತೀ, ಶಾಲಪರ್ಣೀ, ಸ್ಥಿರಾ, ಧ್ರುವಾ– ೫ ಮೂರೆಲೆಹೊನ್ನೆ ಹೆಸರು'' (ಸಿದ್ಧಾಂತಿ. ೧೩೮). [ಸಂ. ಸ್ಥಿರಾ]

**ಸ್ಥೂಣಾನಿಖನನನ್ಯಾಯ** (ನಾ). [ತರ್ಕ] ಕಂಬವನ್ನು ಹೂಳುವಾಗ ಪುನಃಪುನಃ ಅಲ್ಲಾಡಿಸಿ ಸ್ಥಿರಗೊಳಿಸುವಂತೆ, ಒಂದು ಸಿದ್ಧಾಂತವನ್ನು ಸ್ಥಿರಪಡಿಸಲು ವಿಷಯವನ್ನು ಮತ್ತೆ ಮತ್ತೆ ಚರ್ಚಿಸುವುದು: ಆ ಹೊಸಬೆಳಕೂ ಸ್ಥೂಣಾನಿಖನನ ನ್ಯಾಯದಂತೆ ಎಂದರೆ ಕಂಭವನ್ನು ಅಲ್ಲಾಡಿಸಿ ಅಲ್ಲಾಡಿಸಿ ದೃಢಪಡಿಸಿದಂತೆ, ಈ ಸಂಸ್ಕೃತಿಯ ಪೋಷಣೆಗೇ ಸಹಾಯಕಾರಿಯಾಗಿದೆ (ಕರ್ಣಾಸಂ. ೧೫). [ಸಂ.]

**ಸ್ಥೂರಿ** (ನಾ). ೧. ಭಾರವನ್ನು ಹೊತ್ತು ಸಾಗಿಸುವ ಕುದುರೆ; ಹೇರಿನ ಕುದುರೆ: ಮನೋಜವ ಕಾಮಚಾರಿ ಸ್ಥೂರಿ ಪೃಷ್ಠಯೋಜಿತಮುಮನುಕೂಲಶೂರರಥ ಕಲ್ಪಪರಿಣತರಥಚೋದಕಭ್ರಾಜಿತಮುಂ ಆಗಿ (ಆದಿಪು. ೧೧-೧೨ ವ). ೨. ಭಾರ ಹೊರುವ ಎತ್ತು; ಹೇರೆತ್ತು. [ಸಂ. ಸ್ಥೂರಿನ್]

**ಸ್ಥೂಲ, ಸ್ಥೂಳ** (ಗು). ೧. ದೊಡ್ಡ ಆಕಾರದ; ದಪ್ಪವಾದ: ಸ್ಥೂಲಗಾತ್ರದ ದಾದಿ ಫೋಟೋವಿನ ಮೇಲೆ ಬಾಗಿಕೊಂಡು ಪ್ರಶ್ನಿಸಿದಳು (ಪುನರು. ೩೨೩). ೨. ಶಕ್ತಿಶಾಲಿಯಾದ; ಸಾಮರ್ಥ್ಯವುಳ್ಳ. ೩. ಬೊಜ್ಜುಳ್ಳ; ಕೊಬ್ಬಿದ. ೪. ನಿಖರವಲ್ಲದ; ಸರಿಸುಮಾರಾದ: $\pi = 3$ ಎಂಬ ಬಹಳ ಸ್ಥೂಲವಾದ (Rough) ಬೆಲೆಯನ್ನು ಪ್ರಾಚೀನದೇಶಗಳಲ್ಲೆಲ್ಲಾ . . . ಉಪಯೋಗಿಸಿರುತ್ತಾರೆ (ಗಣಿಚ. ೧೫೧). ೫. ಮಂದಬುದ್ಧಿಯ; ಅವಿವೇಕಿಯಾದ. ೬. ಹೊರಗಿನ; ಬಾಹ್ಯ: ಕಾವ್ಯಶಾಖೆಯಲ್ಲಿ ಬೆಳವಣಿಗೆ ತೋರಿರುವಷ್ಟು ಮಟ್ಟಿಗೆ ದೇಶಚರಿತ್ರೆ ಮೊದಲಾದ ಸ್ಥೂಲಲೋಕವಿಚಾರದ ಶಾಖೆಗಳಲ್ಲಿ ಬೆಳೆವಣಿಗೆ ಕಾಣಬರುವುದಿಲ್ಲ (ಸಾಹಿಶ. ೩೯). (ನಾ). ೭. ದಪ್ಪವಾಗಿರುವುದು; ತೋರವಾದುದು : ''ಪೀನ ಪೀವರಾಖ್ಯಂ ಸ್ಥೂಲಂ'' (ವಸ್ತುಕೋ. ೧೧೭-೫೬); ಶ್ಲೇಷ್ಮಾಧಿಕ್ಯದಿಂದ ದೇಹವು ಸ್ಥೂಲವಾಗಿರುವುದು (ಸಕಪ್ಪ. ೧೯). ೮. ಜಡಸ್ವಭಾವದವನು; ಆಲಸಿ: ''ಸ್ಥೂಲಂ ಜಡನುಂ'' (ವಸ್ತುಕೋ. ೧೨೩-೩೩). ೯. ಸೂಕ್ಷ್ಮ, ಸ್ಥೂಲ ಮತ್ತು ಪರ ಎಂಬ ಮೂರು ಬಗೆಯ ದೇಹಪ್ರಕಾರಗಳಲ್ಲಿ ಒಂದು; ಭೌತಿಕವಾದ ಶರೀರ: ಸ್ಥೂಲಸೂಕ್ಷ್ಮಪರಂ ಗಳೆಂದೇ ಹೇಳುವರು ಮೂಱೆಂದು ತನುಗಳ ಸ್ಥೂಲವವಯವಗೂಡಿ ತೋರ್ಪುದು ಮಾಂಸಮಯಪಿಂಡ (ಅಮೃತ. ೩-೭೮). ೧೦. [ತತ್ತ್ವಶಾ] ಹೊರಗೆ ತೋರುವಂತಹುದು; ಬಾಹ್ಯವಾದುದು: ಸ್ಥೂಲವು ಬಾಹ್ಯವೆಂದೂ ಸೂಕ್ಷ್ಮವು ಅಭ್ಯಂತರವೆಂದೂ . . . ಹೇಳಲ್ಪಡುತ್ತದೆ (ಶಿವಾಸೂ. ೩೭-೧೪ ಅಡಿಟ). **ಸ್ಥೂಳ:** ೭. ''ಬಹುಳಃ, ಸ್ಥೂಳಃ, ಪೀನಃ, ಪೀವಾ, ಪೀವರಃ– ಈ ೫ ದೊಡ್ಡಿ (ತು)'' (ಹಲಾಯು. ೫೭-೧೮೭). ೧೧. ಡೇರೆ; ಗುಡಾರ: ''ದೂಷ್ಯಂ, ಸ್ಥೂಳಂ, ಪಟಕುಟೀ, ಗುಣಲಯನೀ, ಕೇಳಿಕಾ – ಈ ೫ ಗುಡಿ'' (ಹಲಾಯು. ೭೪-೨೯೭).

**ಸ್ಥೂಲವಾಗಿ** = ಸರಿಸುಮಾರಾಗಿ; ಅಂದಾಜಿನಲ್ಲಿ: ನಕ್ಷತ್ರಗಳು ಪೂರ್ವದಲ್ಲಿ ಹುಟ್ಟಿ ಪಶ್ಚಿಮದಲ್ಲಿ ಮುಳುಗುತ್ತವೆ ಎಂದು ಸ್ಥೂಲವಾಗಿ ಆಗಲೇ ಹೇಳಿದ್ದೇವೆ (ನಕ್ಷತ್ರ. ೩೨); ನೂತನ ಪರಿಕ್ರಾಕ್ರಮ ಏರ್ಪಟ್ಟಿದೆ. ಅದನ್ನಿಲ್ಲಿ ಸ್ಥೂಲವಾಗಿ ವಿವರಿಸಿದ (ಶಿಕ್ಷದ. ೩೪೯). [ಸಂ.]

**ಸ್ಥೂಲತನು** (ನಾ). ಭೌತಿಕವಾದ ದೇಹ; ಪಂಚಭೂತಗಳಿಂದಾದ ಶರೀರ; ಜಡದೇಹ: ಎನ್ನ ಸ್ಥೂಲತನುವೆಂಬ ಕೈಲಾಸದ ಮೇಲೆ . . . ಲೀಲೆಯನಾಡುವಾತ ನೀನೇ ಅಯ್ಯಾ (ಅಖಂಡೇ. ೨೪೦-೮೬). [ಸಂ.]

**ಸ್ಥೂಲತ್ವ** (ನಾ). ದಪ್ಪನಾಗಿರುವಿಕೆ ; ತೋರವಾಗಿರುವಿಕೆ : ಈ ಸ್ಥೂಲತ್ವದ ಕಾರಣದಿಂದಲೇ ದೈಹಿಕಚಟುವಟಿಕೆಗಳು ಕೂಡ ಮಂದಗತಿಯನ್ನು ಹಿಡಿಯುತ್ತವೆ (ಮನೋಸಂ. ೨೩೭). [ಸಂ.]

**ಸ್ಥೂಲದಾರು** (ನಾ). ೧. ದಪ್ಪನಾಗಿರುವ ಕೊರಡು : ''ಸೇಚನ ವಂಶ ಸ್ಥೂಲದಾರುಗಳೊಳು ತಳೆ'' (ಶಬ್ದಮಂ. ೧೧೪). ೨. ದೊಣ್ಣೆ ; ಬಡಿಗೆ. [ಸಂ.]

**ಸ್ಥೂಲದೇಹ** (ನಾ). ೧. = ಸ್ಥೂಲತನು. ೨. ದಪ್ಪನಾದ ಶರೀರ; ತೋರವಾದ ದೇಹ: ಅವರದು ಸ್ಥೂಲದೇಹ (ರೂಢಿ). [ಸಂ.]

**ಸ್ಥೂಲಪಾದ** (ನಾ). ೧. ಆನೆ. ೨. ಆನೆಕಾಲು ರೋಗವುಳ್ಳವನು. ೩. (?): ಆರುಯವೆಗಳ ಸ್ಥೂಲಪಾದವೆರೆದಿರಲದಕ್ಕಾರು ಪಾಲಿನೊಳೂಪವಾಂ ಕೂಡಿ ತಂಡಿಲವ ಸಾರಿ ರವತೂಕ ಮಿರಲದಕೆ ಕ್ರಯವನು ಪೇಳು ಪಿಂಶತಿಯ ಮೇಲೆಂಟನೂ (ರತ್ನಶಾ. ೫-೧೮). [ಸಂ.]

**ಸ್ಥೂಲಬುದ್ಧಿ** (ನಾ). ೧. ಮಂದಬುದ್ಧಿ ; ಸೂಕ್ಷ್ಮವಲ್ಲದ ಬುದ್ಧಿ : ನಮ್ಮ ಸ್ಥೂಲ ಬುದ್ಧಿಗೆ ನ್ಯಾಯ ಎಂದು ಕಂಡುಬರುವ ವಿಷಯ (ಶಾಂತಲಾ. ೯೪). ೨. ದಡ್ಡ ; ಅವಿವೇಕಿ. [ಸಂ.]

**ಸ್ಥೂಲಲಕ್ಷ** (ನಾ). ಧಾರಾಳವಾಗಿ ದಾನಮಾಡುವವನು; ದಾನಶೂರ: ಸ್ಥೂಲಲಕ್ಷಂ, ಬಹುವ್ಯಯಿಯಾ - ಈ ೨ ಪಿರಿದನೀವಂ'' (ಹಲಾಯು. ೬೦-೨೦೦). [ಸಂ.]

**ಸ್ಥೂಲಶರೀರ** (ನಾ). ೧. = ಸ್ಥೂಲತನು. ೨. = ಸ್ಥೂಲದೇಹ ೨: ಸ್ಥೂಲಶರೀರದವರಿಗೆ ಹೆಚ್ಚು ಓಡಾಡುವುದು ಕಷ್ಟವಾಗುತ್ತದೆ (ರೂಢಿ). [ಸಂ.]

**ಸ್ಥೂಲಾಂಗ** (ನಾ). ೧ = ಸ್ಥೂಲತನು : ತ್ಯಾಗಾಂಗವು ಬಹಿರಂಗವಾದುದರಿಂದ ಸ್ಥೂಲಾಂಗವೆಂದೂ ಹೇಳಲ್ಪಡುವುದು (ಶಿವಾಸೂ. ೭೫). ೨. ದಪ್ಪನಾದ ದೇಹವುಳ್ಳವನು: ''ಬೃಹಚ್ಚರಣಂ ಸ್ಥೂಲಾಂಗಂ ಸೂಕರವದನಂ ಕರ್ಕಟಾದಿಮದ್ರೇಕ್ಕಾಣಂ'' (ಜಾತತಿ. ೧೮-೧೦). [ಸಂ.]

**ಸ್ಥೂಲೋಚ್ಚಯ** (ನಾ). ೧. ಬೆಟ್ಟದಿಂದ ಉರುಳಿ ಬಿದ್ದು ದಿಣ್ಣೆಯಾಗಿರುವ ಬಂಡೆಗಲ್ಲು. ೨. ಅಪೂರ್ಣತೆ; ಅಸಮಗ್ರತೆ. ೩. ಆನೆಯ ನಡಗೆಯಂತಹ ನಡಗೆ; ವೇಗವೂ ಅಲ್ಲದ, ನಿಧಾನವೂ ಅಲ್ಲದ ನಡಗೆ: ''ಸಿಟ್ಟೋಟವಹ ನಡೆ ಸ್ಥೂಲೋಚ್ಚಯಮನಿಕ್ಕು'' (ಮಂಗರಾ. ೪೭-೬). ೪. ಮುಖದಲ್ಲಿ ಮೊಡವೆಗಳು ಮೂಡುವಿಕೆ. [ಸಂ.]

**ಸ್ಥೇಮ** (ನಾ). ಸ್ಥಿರತೆ ; ದೃಢತೆ : ''ಸ್ಥಿರಭಾವಂ ಸ್ಥೇಮಂ'' (ವಸ್ತುಕೋ. ೧೧೫-೨೮); ಗ್ರಾಮಪಾಲಕದಂತೆ ಧಾತುಗ್ರಾಮಗಳಿಗುಂಡನ್ನರಸಮಂ ಸ್ಥೇಮದಿಂ ಹಂಚಿಡುತ (ವಿವೇಭ. ೧೩-೨೩). [ಸಂ. ಸ್ಥೇಮನ್]

**ಸ್ಥೈರ್ಯ** (ನಾ). ೧. ಸ್ಥಿರತೆ; ದೃಢತೆ. ೨. ಮನಸ್ಸಿನ ಗಟ್ಟಿತನ; ಮನೋದಾರ್ಢ್ಯ: ಸ್ಥೈರ್ಯಶೌರ್ಯಂ ವರಕೃಪಾನಿಧಿ ಪೂರ್ಯಧೈರ್ಯಂ (ಬಸಪು. ೨೨-೨೪); ನಾರಾಯಣನ ಸ್ವಭಾವ ಚಂಚಲವಾದುದು; ಅವನದು ಸ್ಥೈರ್ಯವಿಲ್ಲದ ಜೀವ (ಬೆಟ್ಟದಜೀ. ೧೪೬). ೩. ತಾಳ್ಮೆ. ೪. ಎಡೆಬಿಡದೆ ಇರುವಿಕೆ; ನಿರಂತರತೆ. ೫. ಜಿತೇಂದ್ರಿಯತ್ವ. ೬. [ದ್ವೈತ] ನಲವತ್ತು ಬಗೆಯ ಗುಣಗಳಲ್ಲಿ ಒಂದು: ರೂಪ, ರಸ, ಗಂಧ . . . ಸ್ಥೈರ್ಯ, ಶೌರ್ಯ, ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಒಂದಸಾ. ೨೭೫). [ಸಂ.]

**ಸ್ಥೌರಿ** (ನಾ). ೧. ಭಾರ ಹೊರುವುದಕ್ಕಾಗಿ ಬಳಸುವ ಕುದುರೆ; ಹೇರುಗುದುರೆ. ೨. ಹೇರೆತ್ತು: ''ಸ್ಥೌರೀ, ಪೃಷ್ಠವಾಹ್ಯ- ಈ ೨ ಹೇಱುವೆತ್ತು'' (ಹಲಾಯು. ೪೪-೧೧೧). [ಸಂ. ಸ್ಥೌರಿನ್]

**ಸ್ನಪನ** (ನಾ). ೧. (ದೇವರಿಗೆ) ಸ್ನಾನಮಾಡಿಸುವಿಕೆ; ಅಭಿಷೇಕ: ಜಿನಪತಿ ಸ್ನಪನದ ಕಡೆಯೊಳ್ (ಶಾಂತಿಪು. ೧೧-೬೪ ವ); ಪರಮಶ್ರೀತೀರ್ಥನಾಥಸ್ನಪನಸಲಿಲದಿಂದೆನ್ನ ಗಾತ್ರಂ ಪವಿತ್ರಕರಮಕ್ಕೆ (ಪುಷ್ಪಪು. ೭-೮). ೨. ಜಳಕ ; ಸ್ನಾನ : ಅಂತು ಪುಷ್ಪವತಿಯಾಗಿ ಚತುರ್ಥಸ್ನಪನಮಾಂಗಲ್ಯಪುರಸ್ಸರಮರ್ಹತ್ಪೂಜಾಮಂಗಳಮನಾಚರಿಸಿ (ಮಲ್ಲಿಪು. ४-೫೩). ೩. ಪ್ರೋಕ್ಷಣೆ ಮಾಡುವುದು. [ಸಂ.]

**ಸ್ನಾತ** (ಗು). ೧. ಸ್ನಾನ ಮಾಡಿದ; ಮಿಂದ. ೨. ನಿಷ್ಣಾತನಾದ; ಪಾರಂಗತನಾದ. (ನಾ). ೩. ಸ್ನಾನ ಮಾಡಿದವನು: ನೀಡಿದನು ಕುಶಿಕತನಯಂ ರಾಮಚಂದ್ರಂಗೆ ಮಂಗಳಸ್ನಾತಂಗೆ ಮಂತ್ರಸದ್ವಿದ್ಯೆಯಂ (ಶ್ರೀರಾಮಾ. ೩೧-೯೧); ಗೋವಿಂದಭಟ್ಟ . . . ಮತ್ತೊಮ್ಮೆ ಸ್ನಾತನಾಗಿ ಮಡಿಯಾಗಿ ಮಂಗಳಾರತಿಗೆ ಬರುತ್ತಾನೆ (ದೀಪಹ. II, ೯೦). ೪. ವಿದ್ಯಾಪಾರಂಗತನಾದವನು. [ಸಂ.]

**ಸ್ನಾತಕ** (ನಾ). ೧. ಬ್ರಹ್ಮಚರ್ಯಾಶ್ರಮದ ಕರ್ತವ್ಯದಂತೆ ಗುರುಕುಲದಲ್ಲಿ ವಿದ್ಯಾರ್ಜನೆಯನ್ನು ಮುಗಿಸಿಕೊಂಡು, ಗುರುವಿನ ಅಪ್ಪಣೆಯಿಂದ ಮನೆಗೆ ಮರಳಿ ಗೃಹಸ್ಥಾಶ್ರಮಕ್ಕೆ ಸೇರುವವನು: ಗುರುಕುಲದಿಂದ ಹಿಂತಿರುಗುವವನಿಗೆ ಸ್ನಾತಕನೆಂದು ಹೆಸರು (ಆರ್ಯಧ. ೧೨೭). ೨. ಕಾಲೇಜಿನಲ್ಲಿ ಓದಿ ಪದವಿ ಪಡೆದವನು : ಬರೀ ಕಾಲೇಜುಗಳಲ್ಲಿ ಓದಿ ಬಂದ **ಸ್ನಾತಕ (Graduate)**ನಿಗೆ ನಾನು ಮೂರು ಕಾಸನ್ನೂ ಕೊಡುವುದಿಲ್ಲ (ವಿಜ್ಞಾಕ. ೧೦೮). ೩. [ಜೈನ] ''ಸರ್ವ ಘಾತಿಕರ್ಮಗಳನ್ನು ನಾಶಮಾಡಿದ ಕೇವಲಿಗಳು ಸ್ನಾತಕರೆನಿಸುವರು'' (ಜೈನಧ. ೮೯): ನೈಷ್ಠಿಕಬ್ರಹ್ಮಚಾರಿಗಳ್ . . . ಭಿಕ್ಷಾವೃತ್ತಿಯಿಂ ಸ್ನಾತಕರೆನಿಸಿ ದೇವಾರ್ಚನಾನಿರತರಪ್ಪರ್ (ತತ್ತ್ವಪ್ರ. ೨೮೭). [ಸಂ.]

**ಸ್ನಾತಕಪೂರ್ವ** (ಗು). (ಕಾಲೇಜಿನಲ್ಲಿ) ಪದವಿಪೂರ್ವಹಂತದ; ಪದವಿಗೆ ಹಿಂದಿನ : ಸ್ನಾತಕಪೂರ್ವಶಿಕ್ಷಣ ಬಹುಮಟ್ಟಿಗೆ ಅವುಗಳ ವಿವೇಚನಾತ್ಮಕ ಅಧ್ಯಯನಕ್ಕಾಗಿ (ಶಿಕ್ಷದ. ೪೯). [ಸಂ.]

**ಸ್ನಾತಕವ್ರತ** (ನಾ). ಗುರುಕುಲ ವಿದ್ಯಾಭ್ಯಾಸದ ನಂತರದ ತೀರ್ಥಸ್ನಾನ ಮುಂತಾದ ವಿಧಿನಿಯಮಗಳನ್ನು ಹಿಡಿಯುವಿಕೆ: ಕೃಷ್ಣಭೀಮಾರ್ಜುನರು ವಿಮಳಸ್ನಾತಕವ್ರತಮುನಿಗಳಾದರು (ಕುವ್ಯಾಸ. ೨-೫೫). [ಸಂ.]

**ಸ್ನಾತಕವ್ರತಿ** (ನಾ). ಗುರುಕುಲವಿದ್ಯಾಭ್ಯಾಸವನ್ನು ಮುಗಿಸಿ, ಗೃಹಸ್ಥಾಶ್ರಮಕ್ಕೆ ಮೊದಲಿನ ನಿಯಮಗಳನ್ನು ಪಾಲಿಸುವವನು: ಸ್ನಾತಕವ್ರತಿಯಲ್ಲ ಋತ್ವಿಜ ನೀತನಲ್ಲಾಚಾರ್ಯನಲ್ಲ (ಕುವ್ಯಾಸ. ೮-೨೯); ಸಾರ ಹೃದಯಾರವಿಂದ ಸ್ನಾತಕವ್ರತಿಗಳೋರಂತಪಾರಸಂಸಾರಪಾರಾವಾರಪಾರವಂ ಸೇರುವಡೆ . . . ದೂಲ್ಯಸವಾಲಿಸು (ನಂದಿಮಾ. ೧೮-೨). [ಸಂ.]

**ಸ್ನಾತಕೋತ್ತರ** (ಗು). ಕಾಲೇಜಿನಲ್ಲಿ ಓದಿ ಮೊದಲನೆಯ ಪದವಿಯನ್ನು ಗಳಿಸಿದ ಮೇಲೆ ಮುಂದಿನ ಪದವಿಗೆ ಸಂಬಂಧಿಸಿದ: ಸ್ನಾತಕೋತ್ತರಶಿಕ್ಷಣವನ್ನು ಟರಾಂಟೋ ವಿಶ್ವವಿದ್ಯಾಲಯದಲ್ಲೇ . . . ಮುಂದುವರಿಸಿ (ಸಸ್ಯಕ. ೫೫). [ಸಂ.]

**ಸ್ನಾನ** (ನಾ). ೧. ಜಳಕ; ಮೀಹ; ಮಜ್ಜನ : ಆ ಪ್ಲವನಂ, ಸ್ನಾನಂ, ಸವನಂ - ಈ ೩ ಮೀವುದು'' (ಹಲಾಯು. ೬೮-೨೫೪); ತಿಳಿದೂ ತಿಳಿದೂ ಕ್ಷೌರ ಮಾಡಿಕೊಂಡು ನೆತ್ತಿಗೆ ಸ್ನಾನ ಮಾಡಿದಿರಿ (ನಂಟರು. ೬೪); ಹೋಗು ಬೇಗನೆ ಸ್ನಾನಮಾಡಿ ಬಾ (ಭ್ರಾಂತಿ. ೭೪). ೨. ಸೂತಕ ಮುಂತಾದ ಮೈಲಿಗೆಗಳನ್ನು ಕಳೆಯಲು ಮಾಡುವ ಮಜ್ಜನ. ೩. ಶುದ್ಧಿಗಾಗಿ ಮಂತ್ರಪೂರ್ವಕವಾಗಿ ಪ್ರೋಕ್ಷಣೆ ಮಾಡುವುದು. ೪. ದೇವರಿಗೆ ಮಾಡುವ ಅಭಿಷೇಕ. [ಸಂ.]

**ಸ್ನಾನಂಗೈ** (ಕ್ರಿ). ಮೀಯು ; ಜಳಕಮಾಡು : ದೇವಗಂಗೆಯಲ್ಲಿ ಇಳಿದು ಸ್ನಾನಂಗೈದು (ಗಗತಾ. ೧೬-೧೯). [ಸ್ನಾನ + ಗೈ (< ಕೆಯ್$_1$)]

**ಸ್ನಾನಘಟ್ಟ** (ನಾ). ನದಿ ಅಥವಾ ಕೆರೆಯ ದಂಡೆಯಲ್ಲಿ ಸ್ನಾನಮಾಡುವುದಕ್ಕಾಗಿ ನಿರ್ಮಿಸಿದ ಮೆಟ್ಟಲುಗಳ ಸಾಲು,— ಸೋಪಾನಪಂಕ್ತಿ: ಬ್ರಾಹ್ಮಣರಿಗೂ ಒಕ್ಕಲಿಗರಿಗೂ ಬೇರೆ ಬೇರೆ ಸ್ನಾನಘಟ್ಟಗಳಿವೆ (ಬೆಸ್ತಕ. ೧೧). [ಸಂ.]

**ಸ್ನಾನೀಯ** (ಗು). ೧. ಸ್ನಾನಕ್ಕೆ ಯೋಗ್ಯವಾದ. ೨. ಅಭಿಷೇಕಕ್ಕೆ ಯೋಗ್ಯವಾದ. (ನಾ). ೩. ಸ್ನಾನಕ್ಕೆ ಅಗತ್ಯವಾದ ಚೂರ್ಣ ಮುಂತಾದುವು : ''ಕ್ಷೋದಂ ಸ್ನಾನೀಯಂ ಕ್ಷಣದಾದಿ ತನುತ್ವಕ್ ಪ್ರಸಾಧಕದ್ರವ್ಯ ಸಮುತ್ಸಾದಿತಂ'' (ವಸ್ತುಕೋ. ೭೭-೧೫); ಪುರೋಡಾಶಕಷಾಯಸ್ನಾನೀಯೋದ್ವರ್ತನಸಂಚಾವಳಿ ಸ್ನಾನೋಪಕರಣಂಭರಿಸು ಜಗದೇಕಬಂಧುವಂ ಮಜ್ಜನಂಬುಗಿಸಿ (ಶಾಂತಿಪು. ೧೧-೩೭ ವ). [ಸಂ.]

**ಸ್ನಾಪಕ** (ನಾ). ಸ್ನಾನಮಾಡಿಸುವವನು: ಸಕಳಾಮರರ್ ಪಯೋವಾಹಕರಮರಿಯರಲ್ಲಿ ಪರಿವೆಸಂಗೆಯ್ವರ್ ಸ್ನಾಪಕನಿಂದ್ರಂ . . . ಜಿನಮಜ್ಜನದೊಳ್ (ಚಂದ್ರಪು. ೧೨-೧೩೪). [ಸಂ.]

**ಸ್ನಾಪನ** (ನಾ). ಮಿಾಯಿಸುವಿಕೆ; ಸ್ನಾನಮಾಡಿಸುವಿಕೆ: ಸಾಂಗೋಪಾಂಗದಿಂ ಪಂಚಾಮೃತ ಸ್ನಾ [ಪಾಠಾಂ. ಸ್ನ]ಪನಂಗಳಂ ಮಾಡಿ (ಬಸವು. ೧೮-೩೫); ಉತ್ಸವ, ಸ್ಥಾಪನ, ಬಲಿಗಾಗಿ ಬೇಕಾದ ಮೂರ್ತಿಗಳು ಮಾತ್ರ ಲೋಹದಿಂದ ನಿರ್ಮಿತವಾಗುವುವು (ಭಾರದ. ೫೧೮). [ಸಂ.]

**ಸ್ನಾಯು** (ನಾ). ೧. ಪ್ರಾಣಿದೇಹದಲ್ಲಿ ಚಲನಕ್ಕೆ ಕಾರಣವಾಗಿ ಸಂಕೋಚನ ಶಕ್ತಿಯುಳ್ಳ ತಂತುತಂಡ ; ರಜ್ಜು ; ಮಾಂಸಖಂಡ : "ಸ್ನಾಯು ಸಿರಾಪ್ರಚಯಂ" (ವಸ್ತುಕೋ. ೭೨-೨೮); ಪ್ರಾಣಿಗಳ ಮಾಂಸ ಎಂಬುದು ಸ್ನಾಯುಗಳ ಅಸಂಖ್ಯಾತ ಚಿಕ್ಕ ದೊಡ್ಡ ಸೂಡಿಗಳೇ (ಪ್ರಾಣಿಶಾ. ४). ೨. ಬಿಲ್ಲಿನ ಹೆದೆ. [ಸಂ.]

**ಸ್ನಿಗ್ಧ** (ಗು). ೧. ಎಣ್ಣೆಯಂತೆ ಜಿಡ್ಡಾದ. ೨. ಜಿಗುಟಾದ: ಅಂಟಂಟಾದ. ೩. ನುಣುಪಾದ; ನಯವಾದ: ನಸುದೋಱುತ್ತಿರ್ದ ನುಣ್ಮೀಸೆಗಳುಮಾ ಮೃದುಸ್ನಿಗ್ಧಕೇಶಂಗಳುಂ ಕಣ್ಗೆಸೆಯಲ್ (ಕಾದಂಬ. ೫೪೭); ಸ್ನಿಗ್ಧಕೇಸರಮಂ ನೇರ್ಪಡೆ ನೀವಿ ಕಂಧರಕೆ ಕೈಯಂ ನೀಡಿ (ಮಲ್ಲಿಪು. ೬-೧೭೦). ೪. ಹೊಳೆಯುವ; ಪ್ರಕಾಶಿಸುವ. ೫. ಒದ್ದೆಯಾದ; ತೇವವಾದ. ೬. ನಿಬಿಡವಾದ; ಸಾಂದ್ರವಾದ. ೭. (ದ್ರವಗಳಿಗೆ ಸಂಬಂಧಿಸಿದಂತೆ) ಮಂದವಾದ; ಗಟ್ಟಿಯಾದ. ೮. ಸೌಜನ್ಯಪರವಾದ; ಸ್ನೇಹಶೀಲ. ೯. ಹಿತಕರವಾದ; ಸೌಮ್ಯವಾದ: ದಂತ ಸುಸ್ನಿಗ್ಧಕಾಂತಿಯ ತನುರುಚಿರಕಾಂತೆ (ಶ್ರೀರಾಮಾ. ೫೫-೩೩). (ನಾ). ೧೦. ಮೃದುವಾದುದು; ಕೋಮಲವಾದುದು: "ಮಸೃಣಂ ಸ್ನಿಗ್ಧಂ ಚಿಕ್ಕಣಂ" (ವಸ್ತುಕೋ. ೧೧೨-೧೦). ೧೧. ಸ್ನೇಹಿತ; ಗೆಳೆಯ: "ಮಿತ್ರಂ, ಸಖಾ, ವಯಸ್ಯಃ, ಸುಹೃತ್, ಸ್ನಿಗ್ಧಃ- ಈ ೫ ಕೆಳೆಯಂ" (ಹಲಾಯು. ೭೦-೨೭೪). ೧೨. [ಜೈನ] ಎಂಟು ಬಗೆಯ ಸ್ಪರ್ಶನಾಮಕರ್ಮಗಳಲ್ಲಿ ಒಂದು: ಸ್ಪರ್ಶನಾಮಕರ್ಮಮಷ್ಟವಿಧಮಕ್ಕುಂ ಕರ್ಕಶಮೃದು ಗುರುಲಘು ರೂಕ್ಷಸ್ನಿಗ್ಧ ಶೀತೋಷ್ಣ ಸ್ಪರ್ಶನಾಮಕರ್ಮಮೆಂದಿಂತು (ಗೊಮ್ಮಸಾ. ४-೧೦). ೧೩. [ನಾಟ್ಯ] ಸ್ಥಾಯಿಭಾವದ ನೋಟಗಳಲ್ಲಿ ಒಂದು; ಅನುರಾಗವನ್ನು ವ್ಯಕ್ತಪಡಿಸುವ ನೋಟ: ಸ್ನಿಗ್ಧ, ಹೃಷ್ಟ, ದೀನ, ಕ್ರುದ್ಧ, ದೃಪ್ತ, ಭಯ, ಜುಗುಪ್ಸಿತ, ವಿಸ್ಮಿತ-ಈ ಎಂಟು ಸ್ಥಾಯಿಭಾವದ ನೋಟಂಗಳು (ಲಾಸ್ಯರಂ. ೩-೫ ವ); ಅತ್ಯಭಿಲಾಷೆಯನೆಯ್ದಿಸಿಯುತ್ತಮದ ಕಟಾಕ್ಷವೀಕ್ಷಣಂ ಕಡುನಯದಿಂ ಪತ್ತುಗೆವಡೆ ನಿಡುವುರ್ಬುಂ ಮತ್ತಂ ಮಧುರಂ ಪ್ರಸನ್ನಮಾ ಸ್ನಿಗ್ಧಗುಣಂ (ಲಾಸ್ಯರಂ. ೩-೧೮). [ಸಂ.]

**ಸ್ನಿಗ್ಧತೆ** (ನಾ). ಮಾರ್ದವ ; ಮಧುರತೆ : ಅವರು ಕುಡಿದ ಮದಿರೆಯು (Madeira) ಆ ಸ್ನೇಹಕ್ಕೆ ಹೆಚ್ಚಿನ ಸ್ನಿಗ್ಧತೆಯನ್ನು ತಂದಿತ್ತು (ಸಮಾಜೀ. ೮೦೭). [ಸಂ. ಸ್ನಿಗ್ಧತಾ]

**ಸ್ನಿಗ್ಧಾಲೋಕ** (ನಾ). ಮೋಹಕವಾದ ನೋಟ; ಮನೋಹರವಾದ ದೃಷ್ಟಿ: ಸ್ಖಲಿತಗಮನಂ ಮುಗ್ಧಾಲಾಪಂ . . . ಸ್ನಿಗ್ಧಾಲೋಕಂ ಪ್ರಸಾರಿತಕಜ್ಜಲಂ ತಿಳಕವಿಳಸದ್ಭಾಳಂ ಭೂಷಾಪರಂಪರಲೀಲೆಯಂ ತಳೆಯೆ ತಳೆದಂ ಚೆಲ್ವಂ ಲಂಬಾಳಕಂ ನೃಪಬಾಲಕಂ (ಮಲ್ಲಿಪು. ४-೧೩೦). [ಸಂ.]

**ಸ್ನುತ** (ಗು). ೧. ಸ್ರವಿಸಿದ ; ತೊಟ್ಟಿಕ್ಕಿದ : ಎತ್ತಿಕೊಂಡಾ ಕಾಂತೆ ತೊಡೆಯಲಿ ಚಿತ್ತಚಾಕ್ಷಿಯ ಕುಳ್ಳಿರಿಸಿಕೊಂಡತ್ಯಧಿಕಪುತ್ರಾನುರಾಗಸ್ನುತಪಯೋಧರವ ಇತ್ತು ಮಗ್ನುಲಲಪ್ಪಿ ಕುಳ್ಳಿರಲು (ನಿಭಾಗ. ೧೦-೯-೨೯). (ನಾ). ೨. ಸ್ರವಿಸಿದುದು; ಸೋರಿದುದು: "ಸ್ಪನ್ನಂ, ರೀಣಂ, ಸ್ರುತಂ, ಸ್ನುತಂ - ४ ಸೋರಿ ಹೋದುದು" (ಸಿದ್ಧಾಂತಿ. ೩೪೮). [ಸಂ.]

**ಸ್ನುಷೆ** (ನಾ). ಸೊಸೆ ; ಮಗನ ಹೆಂಡತಿ : "ಸ್ನುಷೆ ತಾಂ ಮಗನ ವಧು" (ವಸ್ತುಕೋ. ೫೫-೨೨); ಅಮಾತ್ಯನ ಸತೀಮಣಿಯನಾ ಚತುರ್ಮುಖನೆಂಬ ಶಿಲ್ಪಿಗನೊಡರ್ಚಿಸುವೊಡಾ ಚಕ್ರಿಸ್ನುಷೆಯೊಳಿಹ ಲಾವಣ್ಯರಸವನೊಬ್ಬುಳಿ ಮಾಡಿ ತಂದು . . . ಜೀವಂಗೊಟ್ಟನು (ಶಿರೀಟೀ. ೨-೨೪). [ಸಂ. ಸ್ನುಷಾ]

**ಸ್ನುಹಿ** (ನಾ). ಒಂದು ಬಗೆಯ ಕಳ್ಳಿ ; ಮುಂಡುಗಳ್ಳಿ : "ಮಹಾವೃಕ್ಷಃ, ಸ್ನುಹಿಃ- ಈ ೨ ಮುಂಡಗಳ್ಳಿ" (ಹಲಾಯು. ೩೩-೪४). [ಸಂ.]

**ಸ್ನುಹಿವೃಕ್ಷ** (ನಾ). = ಸ್ನುಹಿ: ಸ್ನುಹಿವೃಕ್ಷಮಂ ಮಹಾವೃಕ್ಷಮೆಂದು ನುಡಿವಂತೆ ಭೀಮನಂ ಮಹಾರಥನೆಂದು ನುಡಿಯಲ್ತಕ್ಕುದೆ ವಲಂ (ಗದಾಯು. ೩-೫೭ ವ). [ಸಂ.]

**ಸ್ನೇಹ** (ನಾ). ೧. ಜಿಡ್ಡು ; ಅಂಟಂಟಾಗಿರುವಿಕೆ. ೨. ಎಣ್ಣೆ ಮೊದಲಾದ ಜಿಡ್ಡಿರುವ ವಸ್ತು. ೩. ಕೊಬ್ಬು : ನಿರ್ಗಂಧವಾಯುವಿಲ್ಲದ ಆಹಾರದೊಳಗೆ ಸ್ನೇಹ ಪಿಷ್ಟ ಸರ್ಕರೆ ಎಂಬ ಮೂರು ಒಳಭೇದಗಳಿವೆ (ಮುಂಬಯಿ. ೫-೧೬೧). ೪. ತೇವ; ಆರ್ದ್ರತೆ. ೫. ವೀರ್ಯ ಮೊದಲಾದ ದೇಹದೊಳಗಿನ ರಸ. ೬. ಗೆಳೆತನ; ಸಖ್ಯ: "ಸಖ್ಯಂ, ಸಾಪ್ತಪದೀನಂ, ಸೌಹಾರ್ದಂ, ಸೌಹೃದಂ, ಸ್ನೇಹಃ, ಪ್ರೀತಿಃ, ಅಜರ್ಯಂ, ಸಂಗತ(ತ)ತಿಃ, ಸಭಾಜನಂ-ಈ ೯ ಕೆಳೆ" (ಹಲಾಯು. ೧೧೭-೨೧); ಅವನಿಗೂ ಇವನಿಗೂ ಸ್ನೇಹ ಬಿತ್ತು (ಮುಂಬಯಿ. ೫-೨೩೦). ೨, ೬: ಉದಕಾಂತಃಪಾತಿವೊಲ್ ಸ್ನೇಹದ ಲವಮೆನಸುಂ ಪರ್ವಿ ಪುದ್ಗ್ಯಾವನೋದ್ಯನ್ಮದದೊಳ್ ತೋಱುತ್ತಮಿರ್ದಪ್ಪುದು (ಕಾದಂಬ. ೯೧). [ಸಂ.]

**ಸ್ನೇಹಗೈ** (ಕ್ರಿ). ಗೆಳೆತನ ಮಾಡು; ಸ್ನೇಹ ಮಾಡು: ಬಿಡದಾಕ್ಷಣಂ ಸ್ನೇಹಗೈವವಂ ಶ್ರೇಯಸಂ (ಮಂಗರಾ ೭೧-೨೦). [ಸ್ನೇಹ + ಗೈ (< ಕೆಯ್)]

**ಸ್ನೇಹಪಾತ್ರ** (ನಾ). ೧. ಎಣ್ಣೆಯ ಪಾತ್ರೆ,– ಬುದ್ದಲಿ : ಆ ಸ್ನೇಹಪಾತ್ರ ಕಿಱಿದಾದೊಡೆ ಕುತುಪ ಎನಿಸುಗು, ಅದು ಕೆಯ್ಸಿದ್ದಿಗೆ (ನಾಚಿರಾ. ೬). ೨. ಸ್ನೇಹಕ್ಕೆ ಯೋಗ್ಯನಾದ ವ್ಯಕ್ತಿ ಅಥವಾ ವಸ್ತು. [ಸಂ.]

**ಸ್ನೇಹಿತ** (ಗು). ೧. ಎಣ್ಣೆ ಸವರಿದ. ೨. ವಿಶ್ವಾಸದಿಂದ ಕೂಡಿದ; ಪ್ರಿಯವಾದ. (ನಾ). ೩. ಗೆಳೆಯ; ಮಿತ್ರ: ನನ್ನ ಸ್ನೇಹಿತ ಶಿವು ಒಂದು ಬಗೆಯ ಮನುಷ್ಯ (ರಾಮಾನ. ೧೦೫); ರಾಯರಿಗೆ ಊರಿನವರೆಲ್ಲಾ ಸ್ನೇಹಿತರು (ರಾಯಕ. ೯೯). [ಸಂ.]

**ಸ್ನೇಹಿಸು** (ಕ್ರಿ). ಗೆಳೆತನಮಾಡು; ಸ್ನೇಹ ಮಾಡು: ಹತ್ತುಮಂದಿಗಂಜದವನ ಸ್ನೇಹಿಸ ಬಾರದು (ಪುರಂದ. ೨-೭೦-೬). [ಸ್ನೇಹ + - ಇಸು$_3$]

**ಸ್ಪಂದ** (ನಾ). ೧. (ಕಣ್ಣು, ಭುಜ ಮೊದಲಾದುವು) ಮಿಡಿಯುವಿಕೆ; ಅದಿರುವಿಕೆ: ದಕ್ಷಿಣಭುಜಮುಚಿರಪ್ರತಿಪಕ್ಷಮಹೀಪಾಲವಿಜಯಲಕ್ಷ್ಮೀಲಲನಾ ವಕ್ಷೋಜಸ್ಪರ್ಶನಮನನಕ್ಷರಮಱಿಪಿದುದು ಪತಿಗಮಂದಸ್ಪಂದಂ (ಆದಿಪು. ೧೧-೧೧); ಮುದದಿಂ ತ್ವತ್ಕೀರ್ತಿಯಂ ಕೇಳ್ಪೆಡೆಯೊಳತುಳರೋಮಾಂಚದಿಂ ಸ್ಪಂದದಿಂ ಗದ್ಗದದಿಂ ಸ್ವೇದಂಗಳಿಂ . . . ಶೈವಸಾಮ್ರಾಜ್ಯಸಮ್ಯಕ್‌ಪದವಾಂತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೬೭). ೨. ಅಲ್ಪಚಲನೆ: ತ್ರಿಜಗದುದಯ ನಾಶಂಗಳಾತ್ಮೀಯಶಕ್ತಿಸ್ಪಂದಾಸ್ಪಂದಗಳೆಂಬಚ್ಚುತನ ಭುಜಬಲಕ್ಕಂತದೊಂದಾವ ಲೆಕ್ಕಂ (ಜಗಪಿ. ೬-೬೭). [ಸಂ.]

**ಸ್ಪಂದನ** (ನಾ). ೧. = ಸ್ಪಂದ ೧ : ದಕ್ಷಿಣಾಕ್ಷಿಸ್ಪಂದನದೊಳಂ ಸೂಚಿಸುವ ಶುಭ ಸೂಚನೆಯೊಳಂ ನಾರಾಯಣನುದಾತ್ತನಾರಾಯಣನ ಬರವನಱಿದು (ಪಂಪಭಾ. ४-೩೩ ವ); ಬಸವಣ್ಣನವರ ವ್ಯಕ್ತಿತ್ವ ಎಷ್ಟು ಹಿರಿದೋ ಅಷ್ಟು ಮಾನವೀಯ. ಅದರ ಸ್ಪಂದನವನ್ನೂ ಹೋರಾಟವನ್ನೂ ನಾವು ಅರ್ಥಮಾಡಿಕೊಂಡು ಅನುಭವಿಸಬಲ್ಲೆವು (ಕಸಾಚ. ೧೫೮). ೨. ಗತಿ; ಚಲನೆ. ೩. ಇತರರ ಭಾವನೆಗಳಿಗೆ ಸಮಾನವಾಗಿ ಪ್ರತಿಕ್ರಿಯೆಯನ್ನು ತೋರಿಸುವಿಕೆ. [ಸಂ.]

**ಸ್ಪಂದಿಸು** (ಕ್ರಿ). ೧. ಮಿಡಿ; ಅದುರು; ಕಂಪಿಸು: ಸ್ಪಂದಿಸಿದುದವನ ಮೆಯ್ ಚಿನ್ಮಯಾವೇಶದಿಂ (ಶ್ರೀರಾಮಾ. ೩೭-೨೩೯). ೨. ಇತರರ ಭಾವನೆಗಳಿಗೆ ಸಮಾನವಾಗಿ ಪ್ರತಿಕ್ರಿಯೆಯನ್ನು ತೋರಿಸು,– ತುಡಿತವನ್ನು ಹೊಂದು: ಬಡವರ ನೋವನ್ನು ಕಂಡು ಅವರ ಹೃದಯ ಸ್ಪಂದಿಸುತ್ತದೆ (ರೂಢಿ). [ಸ್ಪಂದನ + - ಇಸು$_3$]

**ಸ್ಪರುಶ** 'ಪರುಸ' ನೋ.

**ಸ್ಪರುಶಣ** 'ಪರುಸನ' ನೋ.

**ಸ್ಪರುಶನ** 'ಪರುಸನ' ನೋ.

**ಸ್ಪರುಷ** 'ಪರುಸ' ನೋ.

**ಸ್ಪರ್ಧಾಳು** (ನಾ). ಹುರುಡಿಸುವವನು; ಸ್ಪರ್ಧಿ: ಈ ಜಾತಿವೈರ ಸಹಜ . . . ನಾವು ಮೇಲಿರುವವನನ್ನು ನೋಡಿ ಸ್ಪರ್ಧಾಳುಗಳಾಗುತ್ತೇವೆ (ಬಂಕಿಮ. ४೯೭). [ಸಂ. ಸ್ಪರ್ಧಾಲು]

**ಸ್ಪರ್ಧಿ** (ಗು). ೧. ಹುರುಡಿಸುವ, ಸ್ಪರ್ಧೆಗೆ ನಿಲ್ಲುವ. ೨. ಈರ್ಷ್ಯೆಯುಳ್ಳ; ಕರುಬುವ. (ನಾ). ೩. ಹುರುಡಿಸುವವನು; ಸ್ಪರ್ಧಿಸುವವನು. ೪. ಸ್ಪರ್ಧೆಗೆ

ನಿಲ್ಲುವಂತಹುದು; ಸರಿಸಮವೆನಿಸುವಂತಹುದು: ಮೊಗಮುತ್ಪುಲ್ಲಸರೋಜಹಾಸಿ ನಯನಂ ನೀಲಾಂಬುಜಸ್ಪರ್ಧಿ (ಆದಿಪು. ೧-೭೪). [ಸಂ. ಸ್ಪರ್ಧಿನ್]

**ಸ್ಪರ್ಧಿಸು** (ಕ್ರಿ). ೧. ಹುರುಡಿಸು; ಪೈಪೋಟಿ ಮಾಡು: ಈ ವಯಸ್ಸಿನಲ್ಲಿ ಮತ್ತೆರಡು ಭಾಷೆಗಳು ಸ್ಪರ್ಧಿಸುವಂತೆ ಮಾಡುವುದು ತುಂಬಾ ಅಪಾಯಕರ (ಶಿಕ್ಷಣ. ೧೭೨); ಗಂಡಸರೂ ಹೆಂಗಸರೂ ತಮ್ಮ ಪಾಕಶಾಸ್ತ್ರಪಾಂಡಿತ್ಯದ ಪ್ರಯೋಗಪರೀಕ್ಷೆಯಲ್ಲಿ ಸ್ಪರ್ಧಿಸುತ್ತಿರುವುದು ಗಮನಾರ್ಹವಾದ ವಿಷಯ (ಜೀವಾತ್ಮ. ೧೭೨). ೨. ವಿರೋಧಿಸು; ಪ್ರತಿಭಟಿಸು : ದುರ್ಧರದರಣ್ಯಪ್ರವೇಶಮಂ ಮಾಡಿದಂ ಸ್ಪರ್ಧಿಸುವ ದನುಜರಂ ಮುಱಿದು ಮುನಿಗಳನೋವಿ ಸತಿಸಹಿತ ಕಾಕುತ್ಸ್ಥನು (ಜೈಮಿಭಾ. ೧೮-೩). [ಸ್ಪರ್ಧೆ + -ಇಸು]

**ಸ್ಪರ್ಧೆ** (ನಾ). ೧. ಹುರುಡು; ಮೇಲಾಟ; ಪೈಪೋಟಿ: ನಾಗರಿಕತೆಯೆಂದರೆ ಶಿಕ್ಷಣಕ್ಕೂ ಪ್ರಳಯಕ್ಕೂ ಆಗುತ್ತಿರುವ ಸ್ಪರ್ಧೆ (ಶಿಕ್ಷಣ. ೪). ೨. ಈರ್ಷ್ಯೆ; ಮತ್ಸರ. ೩. ವಿರೋಧ; ಪ್ರತಿರೋಧ: "ಸ್ಪರ್ಧಾ, ಸಂಘರ್ಷಃ- ಈ ೨ ಪಡಿಪಡಿಸುಹ" (ಹಲಾಯು. ೧೩೦-೧೦೦). [ಸಂ. ಸ್ಪರ್ಧಾ]

**ಸ್ಪರ್ಶ** (ನಾ). ೧. ಮುಟ್ಟುವಿಕೆ; ಸೋಕುವಿಕೆ. ೨. ಶರೀರಕ್ಕೆ ಸೋಕುವುದರಿಂದ ಆಗುವ ಜ್ಞಾನ; ಸ್ಪರ್ಶಜ್ಞಾನ. ೩. ಸಂಪರ್ಕ; ಸಂಸರ್ಗ. ೪. ಸೋಕುವ ಅಥವಾ ಸಂಪರ್ಕವಾಗುವ ವಸ್ತು. ೫. ಸಂಪರ್ಕ ಅಥವಾ ಪ್ರಭಾವದಿಂದ ರೋಗವನ್ನುಂಟುಮಾಡುವಂತಹುದು; ಸೋಂಕು. ೬. ಅಸ್ವಸ್ಥತೆ; ವ್ಯಾಧಿ: "ಸ್ಪರ್ಶಃ, ಸ್ಪಷ್ಟಾ, ಉಪತಪ್ತಾ- ೩ ಕಂದಿ ಬಳಲುವ ಹಾಗೆ ಮಾಡುವ ರೋಗ" (ಸಿದ್ಧಾಂತಿ. ೩೭೦). ೭. ಕೊಡುಗೆ; ದಾನ. ೮. ಸ್ಪರ್ಶಮಣಿ; ಪರುಸಗಲ್ಲು. ೯. ಗಾಳಿ. ೧೦. ಆಕಾಶ. ೧೧. ಸುರತ ; ಕೂಟ. ೧೨. ಗುಪ್ತಚಾರ. ೧೩. [ದ್ವೈತ] ನಲವತ್ತುಗುಣಗಳಲ್ಲಿ ಒಂದು: ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ . . . ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಸಾ. ೨೭೫). ೧೪. [ಬೌದ್ಧ] ಇಂದ್ರಿಯಜ್ಞಾನ: ಇಂದ್ರಿಯವು ತನ್ನ ವಿಷಯವನ್ನು ಮುಟ್ಟಿದಾಗ ಆಗುವುದು 'ಸ್ಪರ್ಶ'. 'ಸ್ಪರ್ಶ'ದಿಂದ ಆಗುವ ಅನುಭವವೇ ವೇದನೆ (ಭಾರದ. ೧೯೫). ೧೫. [ವ್ಯಾಕ] ಕಕಾರದಿಂದ ಮಕಾರದವರೆಗಿನ ವ್ಯಂಜನ; ವರ್ಗೀಯವ್ಯಂಜನ. ೧೬. ಸಂಪೂರ್ಣಶ್ವಾಸನಿರೋಧದಿಂದ ಉಚ್ಚರಿಸುವ ವ್ಯಂಜನ; ಮೂಕವ್ಯಂಜನ: ಭಾಷಾಶಾಸ್ತ್ರಜ್ಞರ ಅಭಿಪ್ರಾಯದಂತೆ ಮೂಲದ್ರಾವಿಡದಲ್ಲಿ ಸ್ಪರ್ಶವರ್ಣಗಳು ಇದ್ದುದು ಐದಲ್ಲ, ಆರು. ಆ ಆರನೆಯ ಸ್ಪರ್ಶವೇ (Stop) ವರ್ತ್ಸ್ಯ (ದ್ರಾವಿವಿ. ೩೫೩). [ಸಂ.]

**ಸ್ಪರ್ಶಕಾಲ** (ನಾ). [ಜ್ಯೋತಿ] ಗ್ರಹಣವು ಆರಂಭವಾಗುವ ಸಮಯ. [ಸಂ.]

**ಸ್ಪರ್ಶನ** (ನಾ). ೧. ಮುಟ್ಟುವಿಕೆ; ಸೋಕುವಿಕೆ: ಪಯಃಪಾನದಿಂ ಯುವತೀ ಸ್ಪರ್ಶನಮಾಮ್ಲತಿಕ್ತಮಧುರದ್ರವ್ಯಂಗಳಿಂ . . . ಆ ತಿಕ್ತಮುಂ ಪಿಂಗುಗುಂ (ಲೋಕೋಪ. ೯-೫); ಕೂಡಲಸಂಗನ ದರ್ಶನ ಸ್ಪರ್ಶನದಿಂದ ಮನವೊಲಿದು ನೆರೆವ ಭರವನೇನ ಹೇಳುವೆನಯ್ಯ (ಬಸವ. ೪೯೩). ೨. ಹಿಡಿತ; ಹಿಡಿಯುವಿಕೆ: "ನಿಗ್ರಹಂ ಪೀಡನಂ ಸ್ಪರ್ಶನಂ ಗ್ರಹಣಮೆನಲು ಹಿಡಿಹಂ" (ಮಂಗರಾ. ೧೩೦-೧೭೧). ೩. ಸ್ಪರ್ಶೇಂದ್ರಿಯ. ೪. ಕಾಳಗ; ಯುದ್ಧ. ೫. ಗಾಳಿ; ವಾಯು: "ಸ್ಪರ್ಶನಃ - ವಾಯು" (ಕಾಶಕ್ಕ. ೨೨೨). ೬. ದಾನ; ಕೊಡುಗೆ: "ವಿಶ್ರಾಣನಂ, ವಿಹಾಯನಂ . . . ಸ್ಪರ್ಶನಂ, ಉತ್ಸರ್ಗಃ, ಪ್ರದೇಶನಂ, ದಾನಂ - ಈ ೧೦ ಕುಡುವುದು" (ಹಲಾಯು. ೬೯-೨೭೫). [ಸಂ.]

**ಸ್ಪರ್ಶನತಪ್ಪುಕ** (ನಾ). [ವೀಶೈ] ಸ್ಪರ್ಶದಿಂದ ಪಾಪಮಾಡಿದವನು: ದರುಶನ ತಪ್ಪುಕ ಪ್ರಥಮಪಾತಕ ಸ್ಪರ್ಶನತಪ್ಪುಕ ದ್ವಿತೀಯಪಾತಕ ಗುರುತಪ್ಪುಕ ತೃತೀಯ ಪಾತಕ ಪರದಾರ ಚತುರ್ಥಪಾತಕ ಮಾಂಸಾಹಾರಿ ಪಂಚಮಪಾತಕ ಈ ಐವರೊಡನೆ ನೀ ನುಡಿಯಲಿಲ್ಲ್ಕೆ ರಾಮನಾಥಾ (ದೇದಾಪ. ೧೯-೨೮). [ಸ್ಪರ್ಶನ + ತಪ್ಪುಕ]

**ಸ್ಪರ್ಶನಾನುಮಿತ** (ನಾ). ಮುಟ್ಟಿ ನೋಡಿ ತಿಳಿಯಬಹುದಾದುದು ; ಸ್ಪರ್ಶದ ಮೂಲಕ ಊಹಿಸಬಹುದಾದುದು : ಇದು ಬನಮಿದು ನೃಪಗೃಹಮೆಂಬುದನೋಘಂ ಸ್ಪರ್ಶನಾನುಮಿತಮಪ್ಪುದು ಷಟ್ಪದ ಶುಕಪಿಕಾಳಿಗೆನೆ ನೃಪಸದನಂ ಸೊಗಯಿಪ್ಪುದು ಚಿತ್ರಮಣಿಶಬಲತೆಯಿಂ (ಜಗವಿ. ೨-೩೬). [ಸಂ.]

**ಸ್ಪರ್ಶನಾಮಕರ್ಮ** (ನಾ). [ಜೈನ] ತೊಂಬತ್ತುಮೂರು ಬಗೆಯ ನಾಮಕರ್ಮ ಪ್ರಕೃತಿಗಳಲ್ಲಿ ಒಂದು: ಸ್ಪರ್ಶನಾಮಕರ್ಮಮಷ್ಟವಿಧಮಕ್ಕುಂ ಕರ್ಕಶ ಮೃದು ಗುರು ಲಘು ರೂಕ್ಷ ಸ್ನಿಗ್ಧ ಶೀತೋಷ್ಣ ಸ್ಪರ್ಶನಾಮಕರ್ಮಮೆಂದಿಂತು (ಗೊಮ್ಮಸಾ. ೪-೧೦). [ಸಂ.]

**ಸ್ಪರ್ಶನೀಯ** (ಗು). ೧. ಮುಟ್ಟುವುದಕ್ಕೆ ಯೋಗ್ಯವಾದ. ೨. ಮುಟ್ಟತಕ್ಕ; ಮುಟ್ಟಬೇಕಾದ. (ನಾ). ೩. ಮುಟ್ಟುವುದಕ್ಕೆ ಹಿತವಾದುದು; ಸ್ಪರ್ಶಸುಖವನ್ನು ಕೊಡತಕ್ಕುದು: ಧೃತನಾನಾವರ್ಣಪರ್ಣಚ್ಛವಿಸಮುದಯ ಸಂದರ್ಶನೀಯಂ . . . ದ್ವಿರೇಫೋದಿತನಾದಕರ್ಣನೀಯಂ ಸಿಕತಿಲತಲಶಯ್ಯಾಚಯ ಸ್ಪರ್ಶನೀಯಂ ಸತತಂ ಪೌರರ್ಗೆ ಪಂಚೇಂದ್ರಿಯಸುಖದೊದವಂ ನಂದನಂ ಮಾಳ್ಪುದೆಂದುಂ (ಚಂದ್ರಪು. ೧-೧೧೨). [ಸಂ.]

**ಸ್ಪರ್ಶನೋದಕ** (ನಾ). [ವೀಶೈ] ದಶವಿಧ ಪಾದೋದಕಗಳಲ್ಲಿ ಒಂದು; ಜಿಹ್ವೆಯಲ್ಲಿ ಸ್ವೀಕರಿಸಿದ ತೀರ್ಥ: ಪ್ರಥಮದಲ್ಲಿ ಪಾದೋದಕ . . . ಚತುರ್ಥದಲ್ಲಿ ಸ್ಪರ್ಶನೋದಕ . . . ದಶಮದಲ್ಲಿ ಸತ್ಯೋದಕ (ಚನ್ನವ. ಕ. ೫೩೦-೧೧೩೪); ಪಾದದಲ್ಲಿ ಪಾದೋದಕ ಆ ಪಾದತೀರ್ಥವನ್ನು ಲಿಂಗಕ್ಕೆ ಮಜ್ಜನಕ್ಕೆರೆಯಬೇಕೆಂಬ ಇಚ್ಛೆ ಹುಟ್ಟಿದಲ್ಲಿ ಲಿಂಗೋದಕ . . . ಜಿಹ್ವೆಯಲ್ಲಿ ಪಂಚಾಂಗುಲದಿ ಸ್ವೀಕರಿಸಿದ್ದೇ ಸ್ಪರ್ಶನೋದಕ (ಕರ್ನಾಕ. ೧೩೭). [ಸಂ.]

**ಸ್ಪರ್ಶಪ್ರವೀಚಾರ** (ನಾ). [ಜೈನ] ಸ್ಪರ್ಶದ ಮೂಲಕವೇ ರತಿಸುಖವನ್ನು ಪಡೆಯುವವನು: ಅಲ್ಲಿಯ ನಿಳಿಂಪರೆಲ್ಲಂ . . . ಸ್ಪರ್ಶಪ್ರವೀಚಾರರುಮಪ್ಪರ್ (ಸುಕುಮಾ. ೧೧-೬೨ ವ). [<ಸಂ. ಸ್ಪರ್ಶಪ್ರವಿಚಾರ]

**ಸ್ಪರ್ಶಮಣಿ** (ನಾ). ಸೋಕಿದ ಲೋಹವನ್ನು ಚಿನ್ನವಾಗಿ ಪರಿವರ್ತಿಸುವುದೆಂದು ನಂಬಲಾದ ಒಂದು ಬಗೆಯ ಕಲ್ಲು: ತನ್ನಂ ಸೋಂಕಿದ ಲೋಹಾದಿಗಳನ್ನೆಲ್ಲ ಸುವರ್ಣಮಯಮಾಗಿ ಮಾಳ್ಪ ಸ್ಪರ್ಶಮಣಿ (ವಿವೇಕ. ೨೧೦) ; ಕಾಂಚನ ಖನಿಯ ಖನನಂ ವೃಥಾ ಪರಿಶ್ರಮವಲ್ತೆ ಸ್ಪರ್ಶಮಣಿ ಕರದೊಳಿರೆ ? (ಚಿತ್ರಾಂಗ. ೪೦-೧೮೯೧). [ಸಂ.]

**ಸ್ಪರ್ಶಯೋಗ** (ನಾ). [ವೀಶೈ] ಒಂದು ಬಗೆಯ ಯೋಗ: ಮಂತ್ರಯೋಗ ಸಹಿತ ಪವನಮನಂಗಳೊಂದುಗೂಡಿ ಮೂಲಾಧಾರದಿಂ ಸುಷುಮ್ನಾನಾಡಿಮಾರ್ಗದೊಳ್ಗದಿ ಶಿರೋಮಧ್ಯಗತ ಪರಮಾತ್ಮತೇಜಸ್ಸಿನೊಳು ಮನೋಲಯವಹುದೇ ಸ್ಪರ್ಶಯೋಗ ವೆನಿಸುವದು (ವಿವೇಕ. ೫೫). [ಸಂ.]

**ಸ್ಪರ್ಶವೇದಿ** (ನಾ). = ಸ್ಪರ್ಶಮಣಿ: ಆತತಾಭ್ರಂಶಿಕಶಿಲೆಗಳೊಳು ರತ್ನಗಿರಿಗಳೊಳು ಸ್ವೀತವಿಲಸತ್ ಸ್ಪರ್ಶ[ಪಾಠಾಂ. ಪುರುಷ]ವೇದಿವ್ರಾತದೊಳು ದರುಶನವಿಮುಕ್ತಿಖ್ಯಾತ ದಾಸ್ಥಾನಂಗಳೊಳು ನಂದನವನಂಗಳೊಳು . . . ಪೊಂಗಿ ನಡೆವುತ (ಬಸವು. ೧೯-೩೪). [ಸಂ.]

**ಸ್ಪರ್ಶಾನುಮೇಯ** (ನಾ). = ಸ್ಪರ್ಶನಾನುಮಿತ: ವನಿತೆಯ ಕಣ್ಬೆಳಗುಂ ಚಂದನಜಲಮುಂ ಬೇಱೆವೇಱೆ ನಿಟ್ಟಿಸಲರಿದೆಂಬಿನಮಡಱೆ ಪರ್ವಿ ಭೂಪಂಗೆನಸುಂ ಸ್ಪರ್ಶಾನುಮೇಯಮಾದುವು ಕೊಳದೊಳ್ (ಮಲ್ಲಿಪು. ೬-೧೧೫). [ಸಂ.]

**ಸ್ಪರ್ಶಾಷ್ಟಕ** (ನಾ). [ಜೈನ] ಎಂಟು ಬಗೆಯ ಸ್ಪರ್ಶನಾಮಕರ್ಮಪ್ರಕೃತಿ: ಸ್ಪರ್ಶಾಷ್ಟಕಂ . . . ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೯ ವ). [ಸಂ.]

**ಸ್ಪರ್ಶಿಸು** (ಕ್ರಿ). ಮುಟ್ಟು; ಸೋಕು: ವಿದ್ಯುಚ್ಛಕ್ತಿಯ ಜೀವಂತತಂತಿಯನ್ನು ಸ್ಪರ್ಶಿಸುವುದರಿಂದ ಆಘಾತವುಂಟಾಗುತ್ತದೆ (ರೂಢಿ). [ಸ್ಪರ್ಶ + -ಇಸು]

**ಸ್ಪರ್ಶೇಂದ್ರಿಯ** (ನಾ). ಸ್ಪರ್ಶಜ್ಞಾನವುಳ್ಳ ಇಂದ್ರಿಯ; ಮೈದೊಗಲು; ಚರ್ಮ : ಗಾಳಿಯು ನಮಗೆ ಕಾಣಿಸುವುದಿಲ್ಲ, ಆದಾಗ್ಯೂ ಸ್ಪರ್ಶೇಂದ್ರಿಯದಿಂದ ಗಾಳಿ ಇರುತ್ತದೆಂದು ತಿಳಿದುಕೊಳ್ಳುತ್ತೇವೆ (ಮುಂಬಯಿ. ೪-೫೮). [ಸಂ.]

**ಸ್ಪಷ್ಟ** (ಗು). ೧. ನಿಚ್ಚಳವಾಗಿ ಕಾಣುವ; ವಿಶದವಾದ; ಚೆನ್ನಾಗಿ ಗೋಚರವಾದ. ೨. ನಿಜವಾದ; ಸತ್ಯವಾದ. ೩. ಚೆನ್ನಾಗಿ ಅರಳಿದ; ಪೂರ್ಣವಿಕಸಿತವಾದ. (ನಾ). ೪. ನಿಚ್ಚಳವಾಗಿ ಕಾಣುವಂತಹುದು; ಸ್ಫುಟವಾಗಿರುವುದು: "ವಿಶದಂ, ಪ್ರಕಟಂ, ಸ್ಪಷ್ಟಂ, ಪ್ರಕಾಶಂ, ಸ್ಫುಟಂ - ಈ ೫ ಅಱಿಯಲ್ಪಪ್ಪುದು" (ಹಲಾಯು. ೧೨೪-೬೭); ಬೆಳ್ಳಿಯ ನಾಣ್ಯಗಳ ಮೇಲೆ ಅಚ್ಚು

ಸ್ಪಷ್ಟವಾಗಿ ಮೂಡುವುದು (ಮುಂಬಯಿ. ೪-೧೨೧) ; ಇವುಗಳೊಂದೂ ಸ್ಪಷ್ಟವಾಗಿ ಸರಿಯಾಗಿ ತಿಳಿದಿರಲಿಲ್ಲ (ಮಲನಾ. ೭). [ಸಂ.]

**ಸ್ಪಷ್ಟೀಕರಣ** (ನಾ). ೧. ವಿವರಗಳೊಂದಿಗೆ ಸಂಪೂರ್ಣವಾಗಿ ತಿಳಿಸಿಹೇಳುವುದು; ಕ್ಲಿಷ್ಟ ಅಥವಾ ಗೂಢವಾಗಿರುವುದನ್ನು ವಿವರವಾಗಿ ವಿವರಿಸುವುದು: ಹೊಸಪ್ರತಿಯಲ್ಲಿ ಇದರ ಸ್ಪಷ್ಟೀಕರಣ ಮಾಡಿದೆ (ಶಮಪಾಂ. ೭೭). ೨. ವಿವರಣೆ ಕೊಡುವ ಹೇಳಿಕೆ ; ಸಮಜಾಯಿಷಿ. [ಸಂ.]

**ಸ್ಪೃಶ್ಯ** (ಗು). ೧. ಮುಟ್ಟುವುದಕ್ಕೆ ಯೋಗ್ಯವಾದ; ಮುಟ್ಟಲರ್ಹವಾದ: ಮತ್ತಂ ಸ್ಪೃಶ್ಯಾಸ್ಪೃಶ್ಯಕಾರುಗಳುಮೆಂದಿರ್ತೆಱದ ಶೂದ್ರಸಂತತಿಗೆ ಶುಶ್ರೂಷಾ ನಿಯೋಗಂಗಳುಮಂ . . . ಉಪದೇಶಂಗೆಯ್ದು (ಆದಿಪು. ೮-೬೪ ವ). (ನಾ). ೨. ಮುಟ್ಟುವುದಕ್ಕೆ ಯೋಗ್ಯನಾದ ವ್ಯಕ್ತಿ; ಮುಟ್ಟಿದರೆ ಮೈಲಿಗೆಯೆನಿಸದವನು : ಸ್ಪೃಶ್ಯಾಸ್ಪೃಶ್ಯರ ವಿಚಾರಮಂಥನ ಹಾಗೆಯೇ ಸಾಗಿದೆ (ಧರ್ಮಸಾ. ೨). [ಸಂ.]

**ಸ್ಪೃಷ್ಟ** (ಗು). ೧. ಕೈಯಿಂದ ಮುಟ್ಟಿದ; ಸ್ಪರ್ಶ ಮಾಡಿದ. ೨. ಸಂಪರ್ಕ ಹೊಂದಿದ; ಸಂಸರ್ಗವಾದ. ೩. ಪ್ರಭಾವಕ್ಕೆ ಒಳಗಾದ; ಪರಿಣಾಮಕ್ಕೆ ಒಳಗಾದ. ೪. ಮೈಲಿಗೆಯಾದ; ಸ್ಪರ್ಶದಿಂದ ಕೆಟ್ಟುಹೋದ. (ನಾ). ೫. ನಿಶ್ಚಯಿಸಲ್ಪಟ್ಟುದು. ೬. ಅಧಿಕವಾದುದು: ''ಸ್ಪೃಷ್ಟಂ - ೧ ನಿಶ್ಚಯಿಸಲ್ಪಟ್ಟದ್ದು, ೨ ಬಹುವಾದ್ದು'' (ಸಿದ್ಧಾಂತಿ. ೩೮೩). ೭. ಪ್ರಭಾವಕ್ಕೆ ಅಥವಾ ಪರಿಣಾಮಕ್ಕೆ ಒಳಗಾದವನು: ಸೃಷ್ಟಿಚೋದನೆಗಳಿಂ ನರನೊಳಿಷ್ಟಗಳುದಯವಿಷ್ಟಸಿದ್ಧಿಗೆ ಯಂತ್ರತಂತ್ರಗಳ ಯುಕ್ತಿ ತ್ವಷ್ಟೃಕುಶಲದೆ ಸೃಷ್ಟವಿಕೃತಿ ; ಇಂತನ್ಯೋನ್ಯ ಸ್ಪೃಷ್ಟರ್ ಪ್ರಕೃತಿನರರು (ಮಂಕುಕ. ೮೭೦). ೮. [ವ್ಯಾಕ] ಅಕ್ಷರೋತ್ಪತ್ತಿಸ್ಥಾನಗಳಿಂದ ಪೂರ್ಣಸ್ಪರ್ಶವಾಗಿ ಉದ್ಭವಿಸುವ ವರ್ಣ; ವರ್ಗೀಯ ವರ್ಣ. [ಸಂ.]

**ಸ್ಪೃಷ್ಟಕ** (ನಾ). [ಕಾಮಶಾ] ಆಲಿಂಗನಪ್ರಕಾರಗಳಲ್ಲಿ ಒಂದು : ರಭಸದೆ ಪೋಪಳ್ಗೆಯಿದಿರ್ವರುತಾಟಂದೊರ್ವನವನೆ ಮನದಂದವಂಗರುಹರಿನೀಕ್ಷಿಸಲವಳುಂ ನಿರೀಕ್ಷಿಸಲ್ ಸ್ಪೃಷ್ಟಕಾಖ್ಯಮುಪಗೂಹನಕ(ಮು)ಂ (ಮನ್ಮವಿ. ೧೧-೪) ; ಇದಿರೆ ಬರ್ಪ ಸುದತಿಗಿದಿರೆ ನಡೆದು ಕಿಱಿದೆನಿಪ್ಪ ಪಥದೊಳು ಪದೆದು ಪುರುಷನವಳ ಸೋಂಕಲದನೆ ಮನದೆಗೊಂಡು ಪುಳಕಮುದಿಸೆ ಮುರಿದು ನೋಳ್ಪುದೀಗ ಸ್ಪೃಶ್ಯಸ್ಪೃಶ್ಯೃಷ್ಟಕಂ (ಜನವ. ೭-೨). [ಸಂ.]

**ಸ್ಪೃಹಣೀಯ** (ಗು). ೧. ಬಯಸತಕ್ಕ; ಅಪೇಕ್ಷಣೀಯವಾದ. (ನಾ). ೨. ಇಷ್ಟವೆನಿಸುವಂತಹುದು; ಅಪೇಕ್ಷಣೀಯವಾದುದು: ಗೃಹದೀರ್ಘಿಕೆಯಂ ಧಾರಾಗೃಹಮಂ . . . ಆರ್ಗಂ ಸ್ಪೃಹಣೀಯಮಾಗೆ ಪಲವುಂ ಬಹುವಿದ್ಯಾಗೃಹಮಹತ್ತರರ್ ಸಮೆದಿತ್ತರ್ (ಪಂರಾಮಾ. ೧೨-೯೮); ಶರೀರದೆ ಘಟಿಸಿದ ಯೌವನವೆ ಸುಮದವೋಲ್ ಸ್ಪೃಹಣೀಯಂ (ಶಾಕುಂತ. ೧೦-೯) ; ಯಾರಾದರೂ ಮದುವೆಯಾಗಲು ಇಚ್ಛಿಸಿದರೆ ಅದು ಸ್ಪೃಹಣೀಯವೇ, ಗರ್ಹಣೀಯವಲ್ಲ (ಶರಚ. ೨೨೮). ೪. ಇಷ್ಟನೆನಿಸುವವನು; ಅಪೇಕ್ಷಣೀಯ ವ್ಯಕ್ತಿ: ವಸಂತ ಎಷ್ಟೇ ಸ್ಪೃಹಣೀಯನಾದರೂ ತಾನು ಆನಂದನ ಹೆಂಡತಿ (ಕಮನೆ. ೧೩೦). [ಸಂ.]

**ಸ್ಪೃಹೆ** (ನಾ). ಬಯಕೆ ; ಅಪೇಕ್ಷೆ : ''ಇಚ್ಛಾ, ಕಾಂಕ್ಷಾ, ಸ್ಪೃಹಾ . . . ಆಶಂಸಾ - ಈ ೮ ಇಚ್ಛೆ'' (ಹಲಾಯು. ೧೧೮-೨೫). [ಸಂ. ಸ್ಪೃಹಾ]

**ಸ್ಪೃಹೆವೆಱು** (ಕ್ರಿ). ಬಯಸು ; ಇಚ್ಛಿಸು : ಭಯಭಕ್ತಿ ಸ್ಪೃಹೆವೆತ್ತು ನೋಳ್ಪ ಸಯನಂ ರೋಷಾರುಣಾವೇಶದುರ್ಣಯಕಿಂಬಾಯ್ತು (ಶಬ್ದಶಂ. ೪-೧೩೩). [ಸ್ಪೃಹೆ + ಪೆಱು$_1$]

**ಸ್ಫಟಾಧರ** (ನಾ). ಹೆಡೆಯುಳ್ಳ ಹಾವು ; ಸರ್ಪ : ಈ ಘುಳುಘುಳುಧ್ವಾನೋದ್ಗತ ಬುದ್ಬುದಪ್ರಕರವಾ ಸ್ಫಟಾಧರನತಿಸ್ಫಾರ ಸ್ಫಟಾಪೂತ್ಕಾರವಾತೋದ್ಗತ ಬುದ್ಬುದಪ್ರಕರಂ (ಜಗವಿ. ೩-೮೦ ವ). [ಸಂ.]

**ಸ್ಫಟಾರತ್ನ** (ನಾ). ಹಾವಿನ ಹೆಡೆಯಲ್ಲಿರುವುದೆಂದು ನಂಬಲಾದ ರತ್ನ; ಫಣಾರತ್ನ : ದಶಾದಿಶಾದ್ಯೋತತ್ ಸ್ಫಟಾರತ್ನಮಂಜುಳನಿರ್ಕುಂ (ವಿಷ್ಣುಪು. ೨-೧-೧೭೨). [ಸಂ.]

**ಸ್ಫಟಿಕ** (ನಾ). ೧. ಬೆಣಚುಕಲ್ಲಿನ ಜಾತಿಗೆ ಸೇರಿದ ನಿರ್ಮಲವೂ ಪಾರದರ್ಶಕವೂ ಆಗಿರುವ ಒಂದು ಬಗೆಯ ಬಿಳಿಯ ಹೊಳಪಿನ ಕಲ್ಲು : ''ನಿರ್ಮಲೋಪಲಃ - ಸ್ಫಟಿಕ'' (ಓಷಧಿ. ೮೮); ಚಿದಂಬರದೇವಾಲಯದಲ್ಲಿರುವ ಲಿಂಗವು ಸ್ಫಟಿಕದಿಂದ ನಿರ್ಮಿತವಾದುದು (ಭಾರದ. ೫೧೯) ; ಅವನ ಕೀರ್ತಿಪ್ರಶಸ್ತಿಯ ಸ್ಫಟಿಕಭೂಮಿಕೆಯಂತೆ . . . ಅಚಲದಲಶಾಂತಿ ದೆಸೆದೀವೆ (ವೈಶಾಖಿ. ೯೦-೭೨೬). ೨. ಸೂರ್ಯಕಾಂತ ಶಿಲೆ: ''ಸ್ಫಟಿಕಃ, ಸೂರ್ಯಕಾಂತಃ, ಅರ್ಕಾಶ್ಮಾ, ದಹನೋಪಳಃ - ಈ ೪ ಸ್ಫಟಿಕಂ'' (ಹಲಾಯು. ೨೯-೨೨). ೩. ''(ಒಂದು ಗೊತ್ತಾದ ಒಳರಚನೆಯಿದ್ದು, ಒಂದು ಕ್ರಮದಲ್ಲಿ ಅಳವಡಿಸಿದ ಸಮತಳದ ಮುಖಗಳಿಂದ ಎಲ್ಲೆಗಟ್ಟಿ) ನಿರ್ದಿಷ್ಟಘನರೂಪವನ್ನು ಪಡೆದ ಅಣುರಾಶಿ'' (Crystal. ೩೦೫೫): ಕೆಲವು ಸ್ಫಟಿಕಗಳನ್ನು (Crystals) ಕಾಯಿಸುವುದರಿಂದ, ಸೀಳುವುದರಿಂದ ಇಲ್ಲವೆ ಅದುಮುವುದರಿಂದ ವಿದ್ಯುತ್ತು ಉತ್ಪತ್ತಿಯಾಗುತ್ತದೆ (ಶಿಲ್ಪನಾ. ೨೨೭). ೪. ಒಂದು ಬಗೆಯ ಸಸ್ಯ ಮತ್ತು ಅದರ ಹೂವು: ಕುರುವಕ, ಪಟಿಕದ ಹೂ, ಸ್ಫಟಿಕದ ಹೂ (ವೃಜಿಗಿ. ೧೧-೧೯೫); ಕೋಕಿಲಾದಿ ಕೂಜನ: ಸ್ಫಟಿಕಪುಷ್ಪಲಾಜನ (ಅನಕೇ. ೨೦-೧೪). ೫. ಗುರಾಣಿ ; ಢಾಲು (?) : ಎಷ್ಟು ಪಟುಭಟರಾದರೂ ಸ್ಫಟಿಕದ ಮರೆಯಲ್ಲಿ ಅಡಗಬೇಕು (ಮೋಳಮಾ. ೨೧-೯೨). [ಸಂ.]

**ಸ್ಫಟಿಕಮಣಿ** (ನಾ). = ಸ್ಫಟಿಕ ೧: ಅತಿಶೈತ್ಯವಾಗಿ ಜನಗಳ ಪಿತ್ತವನ್ನು ಪರಿಹರಿಸುವುದರಲ್ಲಿ ಮುಖ್ಯವಾಗಿರುವುದು ಸ್ಫಟಿಕಮಣಿಯ ಗುಣ (ಸಕವ್ಯ. ೩೯). [ಸಂ.]

**ಸ್ಫಟಿಕಾದ್ರಿ** (ನಾ). ಕೈಲಾಸಪರ್ವತ: ಸರದದ ಮುಗಿಲ್ಗಳೆಱಗಿದ ತರಳ ಸ್ಫಟಿಕಾದ್ರಿನಿಕರಮನೆ ಕೊನೆಯೊಳ್ ಬೆಳ್ನೊರೆವಿಂಡಂ ತಾಳ್ದಿದ ಪೆರ್ದೆರೆವಿಂಡುಗಳೆಸೆವುವಾ ಮಹಾವಾಹಿನಿಯೊಳ್ (ಚಂದ್ರಪ್ರ. ೧೦-೫೦). [ಸಂ.]

**ಸ್ಫಟಿಕಾಬ್ಜ** (ನಾ). ಬಿಳಿಯ ಕಮಲ; ಬಿಳಿಯ ತಾವರೆ: ಅನುರೂಪಂ ಸ್ಫಟಿಕಾಬ್ಜದೊಳ್ ದಧಿ ಸುವರ್ಣಕ್ರೌಂಚದೊಳ್ ರೋಚನಂ . . . ಮಾಣಿಕ್ಯಭಾಜನದೊಳ್ ಕುಂಕುಮಪಂಕಮೇಂ ಮೆಱೆದುವೋ ಮಾಂಗಲ್ಯಸಾಕಲ್ಯಮಂ (ಪಂರಾಮಾ. ೫-೧೨೫). [ಸಂ.]

**ಸ್ಫಟಿಕಾಶ್ಮ** (ನಾ). ಸ್ಫಟಿಕದ ಶಿಲೆ: ಪದಂ ಚಾರುಕಾಂಚನವರ್ಣಂ ಸ್ಫಟಿಕಾಶ್ಮವರ್ಣಮುದರಂ ಮಾಣಿಕ್ಯವರ್ಣಂ ಕೊರಲ್ (ಜಗವಿ. ೧-೫೧). [ಸಂ. ಸ್ಫಟಿಕಾಶ್ಮನ್]

**ಸ್ಫಟೆ** (ನಾ). ಹಾವಿನ ಹೆಡೆ: ''ಫಣಮೆನಲ್ ಸ್ಫಟೆಯೆನಲ್ ಪೆಡೆಯಕ್ಕು'' (ಮಂಗರಾ. ೧೧೮-೩). [ಸಂ. ಸ್ಫಟ]

**ಸ್ಫಾಟಿಕ** (ನಾ). = ಸ್ಫಟಿಕ ೧: ಕನಕಸ್ಫಾಟಿಕರತ್ನಹರ್ಮ್ಯಚಯಮಂ ಬಂದೇಱಿ ನಿಂದು (ರಾಜಶೇ. ೧೩-೯೨). [ಸಂ.]

**ಸ್ಫಾಟಿಕಗ್ರಾವ** (ನಾ). = ಸ್ಫಟಿಕಾಶ್ಮ: ನಿರ್ಮಳಜಳರುಚಿಯಂ ಸ್ಫಾಟಿಕಗ್ರಾವಬದ್ಧಾವನಿಯೊಳ್ . . . ತಾಳುತ್ತುಮೆತ್ತಂ ಸುಟಿವುದು ಮಹಿಭೃದ್ಗೇಹದೇಣೀಸಮೂಹಂ (ಚಂದ್ರಪ್ರ. ೧-೧೪೭). [ಸಂ.]

**ಸ್ಫಾಟಿಕಾದ್ರಿ** (ನಾ). = ಸ್ಫಟಿಕಾದ್ರಿ: ಅಚ್ಛ ಸ್ಫಾಟಿಕಾದ್ರಿಪ್ರತಿಮ ಲಹರಿಕಾಜಾಲ ಸಂಕೀರ್ಣಮಂತಾ ನದಿ ಚೆಲ್ವಾದತ್ತು (ಚಂದ್ರಪ್ರ. ೧-೮೩). [ಸಂ.]

**ಸ್ಫಾರ** (ಗು). ೧. ದೊಡ್ಡ ; ಅಗಲವಾದ ; ವಿಶಾಲವಾದ: ಪೊಕ್ಕಂ ನೃಪಾವಾಸಮಂ . . . ವಿಶಾಲೋರಃಸ್ಥಲೀನಿಸ್ತುಲ ಚಕಚಕಿತಸ್ಫಾರಹಾರಂ ಕುಮಾರಂ (ಪಂರಾಮಾ. ೨-೩); ಸ್ಫಟಾಧರನತಿಸ್ಫಾರಸ್ಫಟಾಪೂತ್ಕಾರವಾತೋದ್ಗತಬುದ್ಬುದಪ್ರಕರಂ (ಜಗವಿ. ೩-೮೦. ವ). ೨. ಹೇರಳವಾದ; ಅತಿಶಯವಾದ: ಗಂಗಾಪಗಾಸ್ಫಾರರುಗ್ವಿಸ್ತರಮಂ ತಟ್ಟೈಸಿ (ಎಕ. V, ಬೇಲೂರು. ೭; 1136); ಸ್ಫಾರಶರೀರಕಾಂತಿ ಜನನೀನಯನಾಬ್ಜಮನುಳ್ಳಲರ್ಚೆ ವಿಸ್ಫಾರಮನೋರಥಾಂಗಮನೊಣರ್ಚೆ ಬೆಳರ್ಪೆಳನೇಸಱಂತೆ ತೇಜೋರುಚಿರಾತ್ಮನಲ್ಲಿರೆ ಜಿನಾರ್ಭಕಂ (ಪುಷ್ಪಪು. ೧೦-೧೬). (ನಾ). ೪. ಉಬ್ಬು ; ಬಾವು. ೫. ನಡುಕ; ಕಂಪನ. ೬. ಒಂದು ಬಗೆಯ ಆಭರಣ. ೭. ಅತಿಶಯ; ಆಧಿಕ್ಯ : ''ಸ್ಫೀತಂ ಸ್ಫಾರಂ ಘನಮೆನಿಕ್ಕುಂ'' (ವಸ್ತುಕೋ. ೧೦೬-೪೯). [ಸಂ.]

**ಸ್ಫಾಲನ** (ನಾ). ೧. ನಡುಕ; ಕಂಪನ. ೨. ಘರ್ಷಣೆ. ೩. ತಟ್ಟುವಿಕೆ; ಚಪ್ಪರಿಸುವಿಕೆ: ತಮಾಲವನಂಗಳಿಂದೆ ಭೃಂಗಾಳಿಯ ಗಾವರಂ ಪುದಿದ ಪುಷ್ಪಲತಾಗೃಹದಿಂದೆ ಚಂದ್ರಿಕಾಚಾಲದವೊಲ್ ಕೆಲಂಬಿಡಿದು ಭೋರ್ಗರೆಯಲ್ ಸುರಿತರ್ಪ ನಿರ್ಝರ [ಪಾಠಾಂ. ರಾ] ಸ್ಫಾಲನ ಶೀಕರಪ್ರಕರದಿಂದೆಸೆದತ್ತು ಬೃಹದ್ಗುಹಾಂಗಣಂ (ಕಾದಂಪೂ. ೬೯೧). 'ಆಸ್ಫಾಲನ' ಪರಾ. [ಸಂ.]

**ಸ್ಪಿಕ್ಕೆ** (ನಾ). ಪ್ರಾಣಿಗಳ ಮಲ ; ಸಗಣೆ, ಲದ್ದಿ, ಹಿಕ್ಕೆ ಇತ್ಯಾದಿ : "ಸ್ಪಿಕ್ಕಾ - ಹಿಕ್ಕೆ, ಹಿಕ್ಕೆ" (ಶಮದ. ೨೭೨ ಪ್ರಯೋ). [ಸಂ. ಸ್ಪಿಕ್ಕಾ?./ IP ಶಬ್ದಮಣಿದರ್ಪಣದಲ್ಲಿ ಈ ಶಬ್ದವನ್ನು ಸಂಸ್ಕೃತವೆಂದು ಪರಿಗಣಿಸಿ, 'ಹಿಕ್ಕೆ' ಶಬ್ದವನ್ನು ಇದರ ತದ್ಭವವೆಂದು ಹೇಳಿದರೂ ಸಂಸ್ಕೃತಕೋಶಗಳಲ್ಲಿ 'ಸ್ಪಿಕ್ಕಾ' ಶಬ್ದ ಸಿಕ್ಕಿಲ್ಲ. ಪಿಳ್ಕೆ, ಪಿಕ್ಕೆ, ಹಿಕ್ಕೆ ಶಬ್ದಗಳನ್ನು ಜ್ಞಾತಿಶಬ್ದಗಳ ಆಧಾರದಿಂದ ಈ ನಿಘಂಟಿನಲ್ಲಿ ದೇಶ್ಯಶಬ್ದಗಳೆಂದು ಪರಿಗಣಿಸಲಾಗಿದೆ.]

**ಸ್ಫೀತ** (ಗು). ೧. ವಿಶಾಲವಾದ; ವಿಸ್ತೃತವಾದ. ೨. ದೊಡ್ಡ ; ಗಾತ್ರವಾದ: ಅತಿಸ್ಫಾರವಿಸ್ಫುಲಿಂಗ ಸ್ಫೀತಾವರೋಹಣದೊಳಂ ದಂಡನ ಖಂಡನ ತಾಡನ ಪೀಡನ ಗರ್ಜನ ತರ್ಜನಾದಿಗಳನೆಯ್ದಿ (ಅಜಿಪು. ೧೧-೧೦ ವ). ೩. ಅಧಿಕವಾದ; ಅತಿಶಯವಾದ: ಸ್ಫೀತಭಕ್ತಿಸಮಗ್ರದೊಳು . . . ಪ್ರೀತಿಯಿಂದಿಂತಾಡುತ (ಬಸಪು. ೪೩-೯). ೪. ಸಂತುಷ್ಟ; ಆನಂದಿತ. ೫. ಶುದ್ಧವಾದ. ೬. ಯಶಸ್ವಿಯಾದ; ಅಭಿವೃದ್ಧಿ ಹೊಂದಿದ. ೭. ಆನುವಂಶಿಕ ರೋಗದಿಂದ ಬಳಲುತ್ತಿರುವ. (ನಾ). ೮. ದೊಡ್ಡದು; ಘನವಾದುದು: "ಸ್ಫೀತಂ ಸ್ಫಾರಂ ಘನಮೆನಿಕುಂ" (ವಸ್ತುಕೋ. ೧೦೬-೪೯). [ಸಂ.]

**ಸ್ಫುಟ** (ಗು). ೧. ಒಡೆದು ಹೋಳಾದ; ಸ್ಫೋಟವಾದ; ಸೀಳಿಹೋದ. ೨. ಅರಳಿದ; ವಿಕಾಸವಾದ. ೩. ಸ್ಪಷ್ಟವಾದ; ಪ್ರಕಟವಾದ : ಮದವಾದಿ ಭಯಂಕರನೆನ್ನು ದಣ್ಣುಳಂ ಸ್ಫುಟಪಟುಘೋಷದಿಕ್ತಟಮನೆಯ್ದಿತು ವಾಕುಪಟು ಗೋಪನನ್ವಯ (ಎಕ. II, ೬೯-೫೨; 1100). ೪. ಚೆನ್ನಾಗಿ ಕಾಣುವ, – ಗೋಚರಿಸುವ. ೫. ಶುಭ್ರವಾದ; ಹೊಳೆಯುವ. ೬. ಹೆಸರುವಾಸಿಯಾದ ; ಪ್ರಸಿದ್ಧವಾದ. ೭. ಹರಡಿದ ; ವಿಸ್ತರಿಸಿದ. ೮. ನಿಜವಾದ ; ಸತ್ಯವಾದ. ೯. ಅಸಾಮಾನ್ಯವಾದ; ವಿಚಿತ್ರವಾದ. (ನಾ). ೧೦. ಅರಳಿದುದು; ವಿಕಸಿತವಾದುದು: "ಪ್ರಫುಲ್ಲಃ, ಉತ್ಫುಲ್ಲಃ . . . ಸ್ಫುಟಃ, ಫುಲ್ಲಃ , ವಿಕಸಿತಃ, ೮ ಅರಳಿರುವುದರ ಹೆಸರುಗಳು, ಅರಳಿದ್ದು" (ಸಿದ್ಧಾಂತಿ. ೧೧೧). ೧೧. ಸ್ಪಷ್ಟವಾಗಿ ತಿಳಿಯುವಂತಹುದು; ವಿಶದವಾದುದು: "ವಿಶದಂ, ಪ್ರಕಟಂ, ಸ್ಪಷ್ಟಂ, ಪ್ರಕಾಶಂ, ಸ್ಫುಟಂ – ಈ ೫ ಅಚ್ಚಿಯಲ್ಪರ್ಪು[ಹು]ದು" (ಹಲಾಯು. ೧೨೪-೬೭); ಸ್ಫುಟವಾದ ಬರವಣಿಗೆ, ಚೊಕ್ಕಟವಾಗಿರುವ ಅಭ್ಯಾಸ . . . ಎಲ್ಲ ಪಾಠಗಳಲ್ಲೂ ಬೋಧನೆಯಾಗಬೇಕು (ಶಿಕ್ಷದ. ೨೫೦). [ಸಂ.]

**ಸ್ಫುಟಬಂಧ** (ನಾ). [ಕಾವ್ಯಮೀ] ಒತ್ತಕ್ಷರ ಮತ್ತು ಮಹಾಪ್ರಾಣಾಕ್ಷರಗಳು ವಿಶೇಷವಾಗಿರುವ ಪಾದಬಂಧ : ಮೃದುತರ ವರ್ಣಾನುಗಮಾಸ್ಪದ ವಿರಚನೆಯೊಳಗೆ ತೋರ್ಪುದದು ಮೃದುಬಂಧಂ ವಿದಿತಸ್ಫುಟಾಕ್ಷರಾಧಿಕಪದವಿರಚಿತಮಪ್ಪುದಕ್ಕುಮಾ ಸ್ಫುಟಬಂಧಂ (ಕವಿರಾ. ೨-೫೭). [ಸಂ.]

**ಸ್ಫುಟಹರ್ಷ** (ನಾ). ಹೆಚ್ಚಾಗಿ ಹರ್ಷಿತನಾದವನು; ಅತಿಶಯವಾದ ಆನಂದವುಳ್ಳವನು: ಮಣಿಭೂಷಣಭಾಜಟಿಲಿತಮೂರ್ತ್ಯುತ್ಕರ್ಷಂ ಸ್ಫುಟಹರ್ಷಂ ತನ್ನ ವರ್ಷವರ್ಧನದಿನದೊಳ್ (ಆದಿಪು. ೨-೨). [ಸಂ.]

**ಸ್ಫುಟಾಕ್ಷರ** (ನಾ). [ಕಾವ್ಯಮೀ] ಒತ್ತಕ್ಷರ ಮತ್ತು ಮಹಾಪ್ರಾಣಾಕ್ಷರ: ವಿದಿತಸ್ಫುಟಾಕ್ಷರಾಧಿಕಪದವಿರಚಿತಮಪ್ಪುದಕ್ಕುಮಾ ಸ್ಫುಟಬಂಧಂ (ಕವಿರಾ. ೨-೫೭). [ಸಂ.]

**ಸ್ಫುಟಿಕೆ** (ನಾ). ೧. ಪುಡಿಕೆ; ಪೊಟ್ಟಣ: ಚೆಂದಳಿರ ಕರಂಡಕಮರವಿಂದದಳಸ್ಫುಟಿಕೆ ಕದಳಿಯೆಲೆವಡಲಿಗೆ ಚೆಲ್ವೊಂದಿರೆ ಕರದೊಳ್ (ರಾಜಶೇ. ೧೦-೩೪). ೨. ಮುರಿದು ಬಿದ್ದ ತುಂಡು, – ಹೋಳು. [ಸಂ. ಸ್ಫುಟಿಕಾ]

**ಸ್ಫುಟಿತ** (ಗು). ೧. ಬಿರಿದ; ಭಗ್ನವಾದ: ಮದ್ವಿಪತ್ತಿಶ್ರವಣಮಾತ್ರದಿಂ ಸ್ಫುಟಿತ ಹೃದಯನಾದ ಚಂದ್ರಾಪೀಡನೆಲ್ಲಿ ಪುಟ್ಟಿದಂ (ಕಾದಂಉ. ೬೧೪). ೨. ಅರಳಿದ; ವಿಕಸಿತವಾದ. ೩. ಸ್ಪಷ್ಟಗೊಳಿಸಿದ ; ಪ್ರಕಟಪಡಿಸಿದ. ೪. ನಾಶವಾದ. [ಸಂ.]

**ಸ್ಫುಟಿಸು** (ಕ್ರಿ). ಪ್ರಕಟವಾಗು; ವ್ಯಕ್ತವಾಗು; ಗೋಚರಿಸು: ನಿಜದೊಳ್ ಸ್ಫುಟಿಸಿದಮಲಬ್ರಹ್ಮಗುರು ಬಸವಂಗೆ ಶರಣೆಂಬೆ (ಪದ್ಮರು. ೧-೨); ಸಾಧನಾಭ್ಯಾಸಗಳನ್ನು ಮಾಡಿದರೆ ಪ್ರಾತಿಭವು ಸ್ಫುಟಿಸಿ ಪರಶಿವನ ಅನುಗ್ರಹಕ್ಕೆ ಪಾತ್ರನಾಗುತ್ತಾನೆ (ಭಾರದ. ೨೧೫). [ಸ್ಫುಟ + - ಇಸು]

**ಸ್ಫುಟೀಕರಣ** (ನಾ). ೧. ಸ್ಪಷ್ಟಗೊಳಿಸುವಿಕೆ ; ಸ್ಪಷ್ಟೀಕರಣ : ಇಂತಹ ಕಡೆಗಳಲ್ಲಿ ಮಾತ್ರ ಸ್ಫುಟೀಕರಣಕ್ಕಾಗಿ 'ಉ' ಪ್ರತ್ಯಯವನ್ನು ಸೇರಿಸುವುದು ಉಚಿತ (ಸಂಶೋಧ. ೫೭). ೨. ತಿದ್ದುಪಾಟು; ಸರಿಪಡಿಸುವಿಕೆ. [ಸಂ.]

**ಸ್ಫುಟೀಕರಿಸು** (ಕ್ರಿ). ಸ್ಪಷ್ಟಗೊಳಿಸು; ವಿಶದಪಡಿಸು: ವಿವೇಕಿಗಳೊಳ್ದಿತರಗುಣಮ ನಿತರದೊಳಂ ಸ್ಫುಟೀಕರಿಸಿ ತೋರಲದು ನಿರ್ವಾಕ್ಯಕುಳದಿಂದಂ (ಮಾಧವಾ. ೧-೧೦೦). [ಸ್ಫುಟೀಕರಣ + - ಇಸು]

**ಸ್ಫುಟೋಕ್ತಿ** (ನಾ). [ಕಾವ್ಯಮೀ] ಸ್ಫುಟವಾದ ವರ್ಣಗಳಿಂದ ಕೂಡಿದ ಮಾತು; ಒತ್ತಕ್ಷರ ಮತ್ತು ಮಹಾಪ್ರಾಣಾಕ್ಷರಯುಕ್ತವಾದ ನುಡಿ : ವೀರರಸಂ ಸ್ಫುಟೋಕ್ತಿಯಿನುದಾರತಮಂ ಕರುಣಾರಸಂ ಮೃದೂಚ್ಚಾರಣೆಯಿಂದಮದ್ಭುತರಸಂ . . . ಪ್ರಕಟಮಕ್ಕೆ (ಕವಿರಾ. ೨-೯೯). [ಸಂ.]

**ಸ್ಫುರಣ** (ನಾ). ೧. ನಡುಗುವುದು; ಕಂಪನ: "ಸ್ಫುರಣಂ, ಸ್ಫುರಣಂ – ೨ ಅದುರುವುದು; ಅಲ್ಲಾಡುವುದು" (ಸಿದ್ಧಾಂತಿ. ೩೫೪). ೨. ಪ್ರಕಟವಾಗುವಿಕೆ; ಗೋಚರಿಸುವಿಕೆ. ೩. ಹೊಳೆಯುವುದು; ಮಿನುಗುವುದು. ೪. ಮನಸ್ಸಿಗೆ ಹೊಳೆಯುವಿಕೆ ; ತಟ್ಟನೆ ನೆನಪಾಗುವಿಕೆ. ೫. ವಿಸ್ತಾರ. [ಸಂ.]

**ಸ್ಫುರಣೆ** (ನಾ). = ಸ್ಫುರಣ ೪ : ಪರಮೇಶ್ವರಿ ನಿಜಾಂತಃಕರಣಜನಿತಸ್ಫುರಣೆಯನು ಬಿನ್ನೈಸಲುದ್ಯೋಗಿಸಿದಳಭವಂಗೆ (ಪ್ರಭುಲೀ. ೨-೩೦); 'ಇದು ಅಪೂರ್ವವಾದ ಸ್ಫುರಣೆ' ಎಂಬ ಮನಸ್ಸಿನ ಚಮತ್ಕೃತಿಯು ಸಹೃದಯರಲ್ಲಿ ಹುಟ್ಟುತ್ತಿದ್ದರೆ (ಧ್ವನ್ಯಾಲೋ. ೨೬೧). [ಸಂ. ಸ್ಫುರಣ]

**ಸ್ಫುರಣೆಗೆಡು** (ಕ್ರಿ). ಏನೂ ಹೊಳೆಯದಾಗು ; ಅಪ್ರತಿಭನಾಗು : ತರಣಿಸುತನದ ಕಂಡು ತಿರುವಿಗೆ ಸರಳ ಸಂಧಿಸಿ ತೆಗೆಯಲೆಂಬೀ ಸ್ಮರನ ವಿದ್ಯಾಶಕ್ತಿಯೊಳ್ ತಕ್ಷಣದಿ ಕೀಲಿಸಲು ಸ್ಫುರಣೆಗೆಟ್ಟವನಲ್ಲಿ ನಿಂದನು (ಸಾಳ್ವಭಾ. ೩೦-೨೪). [ಸ್ಫುರಣೆ + ಕೆಡು]

**ಸ್ಫುರದನಲ** (ನಾ). ಪ್ರಜ್ವಲವಾದ ಬೆಂಕಿ: ಉರುಪಿತ್ತಶೋಕಪಲ್ಲವವಿರಚಿತ ಶಯನೀಯಮೆನ್ನ ಮೆಯ್ಯಂ ಪೀನಂ ಸ್ಫುರದನಲಪ್ರತಿನಿಧಿ ತತ್‌ಸ್ವರೂಪಗುಣ ಮಕ್ಕುಮೆಂಬುದೆಂದುಂ ಯುಕ್ತಂ (ಕವಿರಾ. ೩-೩೭). [ಸಂ.]

**ಸ್ಫುರದ್ರೂಪಿ** (ನಾ). ಎದ್ದು ಕಾಣುವ ರೂಪವುಳ್ಳವನು; ಚೆಲುವ: ರಾಯನು ಸ್ಫುರದ್ರೂಪಿಯೂ ದೃಢಕಾಯನೂ ಆಗಿದ್ದನು (ಕೃದೇವ. ೧೦); ಸ್ಫುರದ್ರೂಪಿಯೂ ಪೌರುಷವಂತನೂ ಆದ ರಾಜಕುಮಾರನನ್ನು ನೋಡಿ ಅರಸನ ಸಿಟ್ಟು ಇಳಿಯಿತು (ಮಣಿಸ. ೪೭). [ಸಂ. ಸ್ಫುರದ್ರೂಪಿನ್]

**ಸ್ಫುರಿತ** (ಗು). ೧. ನಡುಗುವ; ಕಂಪಿಸುವ: ಸ್ಫುರಿತಾಧರಪಲ್ಲವೆ ಬಂಧುರಲೋಚನ ಕುಸುಮೆ . . . ಕಾಂತೆಯೆಂಬುದವಯವನಿರೂಪಣಕ್ರಮದಿನವಯವಂ ರೂಪಕದೊಳ್ (ಕವಿರಾ. ೩-೧೫). ೨. ಅದುರಿದ; ಕಂಪಿಸಿದ. ೩. ಹೊಳೆಯುವ; ಪ್ರಕಾಶಿಸುವ: ಸ್ಫುರಿತ [ಪಾಠಾಂ. ವಿತತ] ತಪೋಮಯಾನಳನಿನೀಯೊಡಲಂ ನೆಗಟ್ದೀ ಗಿರೀಂದ್ರಕಂದರದೊಳಗಿಂತೆ ದಲ್ ಕರಗಿಪೆಂ (ಪಂಪಭಾ. ೮-೬). ೪. ಅಸ್ಥಿರವಾದ; ಹೊಯ್ದಾಡುವ. ೫. ಉಬ್ಬಿದ ; ಊದಿಕೊಂಡ. ೬. ವ್ಯಕ್ತವಾದ; ಪ್ರಕಟವಾದ. ೭. ಮನಸ್ಸಿನಲ್ಲಿ ಹೊಳೆದ; ಬುದ್ಧಿಗೆ ತೋರಿದ. (ನಾ). ೮. ಅದಿರುವುದು; ಕಂಪಿಸುವುದು. ೯. ಪ್ರಕಾಶಿಸುವುದು; ಹೊಳೆಯುವುದು. ೧೦. ಮನಸ್ಸಿಗೆ ತೋರುವುದು; ಬುದ್ಧಿಗೆ ಹೊಳೆಯುವುದು. ೧೧. ಹೊಳಪು; ಮಿಂಚು. ೧೨. ಭಾವೋದ್ರೇಕ. ೧೩. [ಅಶ್ವಶಾ] ಕುದುರೆಯ ನಡಗೆಗಳಲ್ಲೊಂದು ಪ್ರಕಾರ; ನೆಗೆಯುತ್ತ ಹೋಗುವ ಗತಿ: ಚಿಮ್ಮುಗಳ ಕಾಣಿಸುವುದು ಸ್ಫುರಿತವೆನಿಸಿಕೊಂಬುದು. ಹಾವು ನಡೆದಂತೆ ಡೊಂಕುಡೊಂಕಾಗಿ ಓಡಿಸುವುದು ನಾಗೋಷ್ಠವೆನಿಸಿಕೊಂಬುದು (ಅಶ್ವಟೀ. ೨೫-೭). ೧೪. [ಸಂಗೀತ] ಒಂದು ಸ್ವರಕಂಪ(ಗಮಕ)ವಿಶೇಷ; ಸ್ವರವು ಜಂಟಿಯಾಗಿ ನುಡಿಯುವ ಒಂದು ಗಮಕ: ಸ್ಫುರಿತ ಪ್ರಮಿತ ದೀರ್ಘ . . . ಕೋಮಲವೆಂಬವಿಪ್ಪತ್ತೆರಡೇ ಶ್ರುತಿಗಮಕಂಗಳು (ವಿವೇಕ. ೧೮೭); ಸ್ಫುರಿತ – ಜಂಟಿಯ ಸ್ವರಗಳು ನುಡಿಯುವುದು (ಸಂಗೀತಂ. ೨೮). ೧೫. [ನಾಟ್ಯ] ವ್ಯಾದೀರ್ಣ, ಶ್ವಸಿತ, ವಕ್ರ, ಸಂಹತ, ಚಲಸಂಹತ, ಸ್ಫುರಿತ, ಚಲಿತ, ಲೋಲ ಎಂಬ ಎಂಟು ಬಗೆಯ ಚಿಬುಕಭೇದಗಳಲ್ಲಿ ಒಂದು;

ಬೆಚ್ಚಿದಂತೆ ಗದ್ದವನ್ನು ನಡುಗಿಸುವುದು: ಉರುತರದೆ ಬೆಚ್ಚಿ ನಡುಗಲ್ ಸ್ಫುರಿತಂ (ಲಾಸ್ಯರಂ. ೩-೧೦೧). ೧೬. ಮೂವತ್ತೈದು ಬಗೆಯ ದೇಶೀಯಭೌಮಚಾರಿಗಳಲ್ಲಿ ಒಂದು; ತುದಿಗಾಲುಗಳನ್ನು ನಡುಗಿಸಿ ಪಾದಪಾರ್ಶ್ವಗಳು ನೆಲವನ್ನು ಮುಟ್ಟಿಕೊಂಡಿರುವಂತೆ ಕಾಲುಗಳನ್ನು ಚಲಿಸುವುದು: ಪಿರಿದು ಸ್ತಂಭಕ್ರೀಡಿತಮುರುಲಂಘಿತಮೆಯ್ದೆ ರಾಜಿತ ಸ್ಫುರಿತಂ (ಲಾಸ್ಯರಂ. ೬-೧೧). ೧೭. ಒಂಬತ್ತು ಬಗೆಯ ಎವೆಯ ಭೇದಗಳಲ್ಲಿ ಒಂದು: ಎವೆ ತಿರುಗಲ್ಕೆ ವಿವರ್ತಂ ತವೆ ಪಾಱುತ್ತಿರ್ದೊಡಿಂತು ಸ್ಫುರಿತಮೆನಿಕ್ಕುಂ (ಲಾಸ್ಯರಂ. ೩-೫೧). ೧೮. [ಕಾಮಶಾ] ಚುಂಬನದ ಹನ್ನೆರಡು ಪ್ರಕಾರಗಳಲ್ಲಿ ಒಂದು: ತರಳೆಯಮುರ್ದುಟಿಯನೂರ್ಮೆಯೆ ವರನೀಂಟಲ್ ಕೂಡೆ ಬರಸೆಳೆಯಲೊಡನವನಾದರದಿಂ ತನ್ನಧರಮನೀಂಟಿರಲೆಸೆಗುಂ ಸ್ಫುರಿತಚುಂಬನಂ ರತಿಯೆಡೆಯೊಳ್ (ಮನ್ಮವಿ. ೧೨-೩). [ಸಂ.]

**ಸ್ಫುರಿತಕ** (ನಾ). = ಸ್ಫುರಿತ ೧೮: ಅಸಿಯಳ್ಗಲ್ಲೆಡೆಯೊಸೆಯದಲುಂಗದ ಮುಸುಡೀಯಲಲದೇ ಸ್ಫುರಿತಕವು (ಜನವ. ೭-೧೭): ನಿಮಿತ್ತಕ ಸಂಘಟಕ ಸ್ಫುರಿತಕ ಭ್ರಾಂತಕ ತಿರ್ಯಕ್ಕು ಅತಿತೃಪ್ತಕ ಉತ್ತರ ಸಂಘಟ್ಟಕ ಜಿಹ್ವಾಮೇಳನ ಜಿಹ್ವಿಕೆ ಅಧಿಕ ಜಿಹ್ವಾಯೋಗ ಮೆಂಬ ದ್ವಾದಶಚುಂಬನಸಂಭ್ರಮಿಗಳಿಂ (ವಿವೇಕ. ೧೮೩). [ಸಂ.]

**ಸ್ಫುರಿಯಿಸು** 'ಸ್ಫುರಿಸು' ನೋ.

**ಸ್ಫುರಿಸು, ಸ್ಫುರಿಯಿಸು** (ಕ್ರಿ). ೧. ಮಿನುಗು; ಮಿಂಚು; ಹೊಳೆ: ಸ್ಫುರಿಸು ವೊಳ್ನೊಡೆಯ ಬೆಡಗಿನ ನಡೆಯ . . . ಸೌಂದರಿಯದರಸಿ ನಿಜಪತಿಯ ಮುಂದಚ್ಚರಿಯ ಬಗೆಗೊಂಡಳಂದು ಬೇಱೊಂದು ಪರಿಯ (ಜೈಮಿಭಾ. ೧೧-೯). ೨. ಮೂಡು; ಹುಟ್ಟು; ಉದ್ಭವಿಸು : ನವಮಾಸದೊಳ್ ಶಿವಜ್ಞಾನಂ ಸ್ಫುರಿಸೆ (ಪದ್ಮರಾ. ೧೦-೧೧೫); ಸ್ಫುರಿಸಿತಾ ಗಂಡೆದೆಯ ಹೃದಯದಲಿ ತಾನು ಹೆಣ್ಣೆಂಬ ಲಜ್ಜೆಯ ಲಹರಿ ಮೊತ್ತ ಮೊದಲ್ (ಚಿತ್ರಾಂಗ. ೭-೧೭೨). ೩. ಕಂಡುಬರು; ಗೋಚರವಾಗು; ತೋರು: ಸ್ಫುರಿಸಿದುವು ಸೀತಾಕೃತಿಯಲಾಭರಣವವ ಕಂಡರಸ ತಂದನು ತರಹರದಲುದಕವನು ಹೊಳೆಹೊಳೆವಂಬಕಂಗಳಲಿ (ತೊರರಾ. ೪-೨-೬). ೪. ಮನಸ್ಸಿಗೆ ತಟ್ಟನೆ ಹೊಳೆ,— ಗೋಚರವಾಗು. ಸ್ಫುರಿಯಿಸು : ೧. ಭುಜದೊಳ್ ನಿಂದ ಬೀರಸಿರಿಯೆಸೆವ ನೆಟಿಲ್ ಸ್ಫುರಿ[ಪಾಠಾಂ. ರ]ಯಿಸೆ ಮೆಯ್ಯೊಳ್ ಪೋಲ್ತಂ ಹರಿ ನೀಳೋದ್ಯತ್‌ಪ್ರಸನ್ನಮಣಿದರ್ಪಣಮಂ (ಶಾಂತಿಪು. ೨-೧೩); ಬೆಳಗಿಂ ಸ್ಫುರಿಯಿಪ ಸದ್ರತ್ನನಿಕರದಿಂದೊಪ್ಪುವುದಂ . . . ಪದಕಮಂ ಕಂಡು (ಧರ್ಮಾಮೃ. ೨-೧೧೭). ೨. ಸ್ಫುರಿಯಿಸೆ ಸಿಪ್ಪಿನಲ್ಲಿ ಸಲೆ ಮುತ್ತಿನ ಮಾಟ್ಕೆಯಿನ್ (ಎಇ. XVIII, ೧೮೪-೧೫; 1097). [ಸ್ಫುರಣ + - ಇಸು₃]

**ಸ್ಫುಲಿಂಗ** (ನಾ). ಬೆಂಕಿಯ ಕಿಡಿ; ಅಗ್ನಿಕಣ: "ಸ್ಫುಲಿಂಗಃ, ಕಣಃ - ಈ ೨ ಕಿಡಿ" (ಹಲಾಯು. ೧೨-೬೭); ಖಡ್ಗಘಟ್ಟನಸಮುದ್ಭವ ವಿಸ್ಫುರಿತ ಸ್ಫುಲಿಂಗಮುಂಬರತಳ ಮುಚ್ಚಳದುದ್ರುಧಿರಶಂಬರಸಂಭೃತಮುರ್ವಿ . . . ಲೋಕಭೀಕರಮೆನಿಸಿತ್ತು (ರಾಜಶೇ. ೬-೭೮); ಸ್ಫುಲಿಂಗದಶೆಯೊಳ್ ಸಮಿತ್ತುಗಳನೆಳೆಸುತಿರ್ಪ ವಹ್ನಿಯ ತೆರದಿಂ . . . ಕುಮಾರನಿವನೆನಗೆ ನೋಡೆ ಕಾಣುತ್ತಿರ್ಪಂ (ಶಾಕುಂತ. ೧೧೪-೭೮). [ಸಂ.]

**ಸ್ಫೂರ್ತಿ** (ನಾ). ೧. ಸ್ಪಂದನ; ಸ್ಫುರಣ. ೨. ನೆಗೆತ; ಜಿಗಿತ. ೩. ಅರಳುವಿಕೆ; ವಿಕಸನ. ೪. ಪ್ರಕಾಶನ; ಪ್ರಕಟವಾಗುವಿಕೆ. ೫. ಮನಸ್ಸಿಗೆ ಹೊಳೆಯುವಿಕೆ. ೬. ಹೊಳಪು; ಪ್ರಕಾಶ. ೭. ಥಟ್ಟನೆ ಹೊಳೆಯುವ ಭಾವ, — ವಿಚಾರ; ಕಾವ್ಯದ ಅಥವಾ ಕಲೆಯ ನಿರ್ಮಿತಿಗೆ ಪ್ರಚೋದಿಸುವ ಪ್ರೇರಣೆ: ಅಸಗನ ಸಂಸ್ಕೃತ ಶಾಂತಿಪುರಾಣದಿಂದಲೇ ಸ್ಫೂರ್ತಿಯನ್ನು ಪಡೆದು ಪೊನ್ನನು ಕನ್ನಡದಲ್ಲಿ ಶಾಂತಿಪುರಾಣವನ್ನು ರಚಿಸಿದ್ದಿರಬೇಕು (ಸಾಹಿಸ. ೨೩); ಮಹಾರಾಣಿಯ ಸ್ವರ್ಗೀಯನೃತ್ಯವನ್ನು ನೋಡಿದ ಕುಶಲ ರೂಪಾರಿಗಳಿಗೆ ಆಗ ಮನಸ್ಸಿಗೆ ಒಂದು ಸ್ಫೂರ್ತಿ ಹೊಳೆಯಿತು (ಶಾಂತಲಾ. ೧೨೩). [ಸಂ.]

**ಸ್ಫೂರ್ತಿಗೆಡು** (ಕ್ರಿ). (ಅಲಂ) ಅರಿವುಗೆಡು; ಬುದ್ಧಿಗೆಡು: ಸ್ಫೂರ್ತಿಗೆಡೆ ಮನುಜರಿಗೆ ರಾವಣನಾರ್ತಿಯಪ್ಪುದು (ಕುವ್ಯಾವಿ. ೨-೪೩). [ಸ್ಫೂರ್ತಿ + ಕೆಡು₁]

**ಸ್ಫೋಟ** (ನಾ). ೧. ಒಮ್ಮೆಲೆ ಒಡೆದು ಸಿಡಿಯುವಿಕೆ: ಇಲ್ಲಿ ಮೂರು ಅಥವಾ ನಾಲ್ಕು ರಾಕೆಟ್ಟುಗಳಿರಬಹುದು ಅಷ್ಟೆ. ಅವು ಕೂಡ ಸ್ಫೋಟವಾಗಿ ಹಾರುತ್ತಿರುವ ಕ್ಷಿಪಣಿಯ ವೇಗವನ್ನು ತೀವ್ರಗೊಳಿಸುತ್ತವೆ (ಆಕಾಶ. ೪೮). ೨. ಪ್ರಕಟವಾಗುವಿಕೆ; ಬಹಿರಂಗಗೊಳ್ಳುವಿಕೆ: 'ಸ್ಫೋಟಗೊಳ್ಳು' ಪರಾ. ೩. ಕೊಲೆ; ವಧೆ; ನಾಶ. ೪. ಬಾವು; ಕುರು; ಬೊಕ್ಕೆ. ೫. ಒಂದು ಶಬ್ದವನ್ನು ಕೇಳಿದೊಡನೆ ಮನಸ್ಸಿಗೆ ತಟ್ಟನೆ ಹೊಳೆಯುವ ಭಾವ. ೬. [ಕಾವ್ಯಮೀ] ವರ್ಣಾದಿಗಳಲ್ಲಿರುವ ಅರ್ಥಾಭಿವ್ಯಂಜಕವಾದ ವ್ಯಾಪಾರ,— ಧ್ವನಿವಿಶೇಷ: ಅರ್ಥವು ನಮಗೆ ಗೊತ್ತಾಗುವುದು . . . ಸ್ಫೋಟತತ್ತ್ವದಿಂದ. ಅರ್ಥವನ್ನು ಸ್ಫುಟಪಡಿಸತಕ್ಕದ್ದಾದ ಕಾರಣದಿಂದಲೇ ಇದಕ್ಕೆ ಸ್ಫೋಟವೆಂದು ಹೆಸರು. ಪದವಾಕ್ಯಾದಿಗಳಲ್ಲಿರುವ ವರ್ಣಗಳು ಈ ಸ್ಫೋಟವನ್ನು ಅಭಿವ್ಯಂಜಿಸುತ್ತವೆ (ಭಾರಮೀ. ೫೭). [ಸಂ.]

**ಸ್ಫೋಟಕ** (ನಾ). ೧. ಬೊಕ್ಕೆ; ಗುಳ್ಳೆ; ಹುಗುಳು : "ಗಂಡಂ ಸ್ಫೋಟಕಸಮಾಹ್ವಯಂ ತಾಂ ಪಿಟಕಂ" (ವಸ್ತುಕೋ. ೭೩-೩೬); ತಂಡುಳಜಳದಿಂದರಸಿನಮಂ ಪುಣಿಸೆಯ ಬೇರ ರಸಮುಮಂ ಕುಡಿಯೆ ಕಿಡಿಸುಗುಂ ಸ್ಫೋಟಕಮಂ (ಲೋಕೋಪ. ೯-೨೫). ೨. ಸಿಡುಬಿನ ಬೊಕ್ಕೆ. ೩. ಸಿಡಿಯುವಂತಹುದು; ಸ್ಫೋಟವಾಗುವಂತಹುದು. [ಸಂ.]

**ಸ್ಫೋಟಗೊಳ್ಳು** (ಕ್ರಿ). ೧. ಒಮ್ಮೆಲೆ ಬಹಿರಂಗವಾಗು; ರಹಸ್ಯವು ಬಯಲಾಗು: ಪ್ರಥಮ ಮೂರುನಾಲ್ಕುವರ್ಷ ಈ ವ್ಯವಹಾರ ಗೌಪ್ಯವಾಗಿತ್ತು. ಆದರೆ ಕೊನೆಗೊಮ್ಮೆ ಸ್ಫೋಟಗೊಂಡಿತು (ಗಂಮಾಯಿ. ೫೫). ೨. ಸಿಡಿಮದ್ದು ಮುಂತಾದ ಆಸ್ಫೋಟಕಗಳು ಸಿಡಿ, — ಆಸ್ಫೋಟಗೊಳ್ಳು: ಜನನಿಬಿಡಪ್ರದೇಶದಲ್ಲಿ ದುಷ್ಕರ್ಮಿಗಳು ಅಡಗಿಸಿಟ್ಟಿದ್ದ ಸಿಡಿಮದ್ದು ಸ್ಫೋಟಗೊಂಡು ಅನೇಕರಿಗೆ ಹಾನಿಯಾಯಿತು (ರೂಢಿ). [ಸ್ಫೋಟ + ಕೊಳ್ಳು₁ (< ಕೊಳ್₁)]

**ಸ್ಫೋಟನ** (ನಾ). ೧. = ಸ್ಫೋಟ ೧ : ಅಲ್ಲಿ ಸಿಡಿಮದ್ದಿನ ಸ್ಫೋಟನದಿಂದ ಅನೇಕರಿಗೆ ಗಾಯಗಳಾದುವು (ರೂಢಿ). ೨. ಅರಳುವುದು; ವಿಕಸನ. ೩. ಪ್ರಕಟಪಡಿಸುವುದು; ಬಹಿರಂಗಗೊಳಿಸುವುದು. ೪. ವಿಶದಗೊಳಿಸುವುದು; ಸ್ಪಷ್ಟಪಡಿಸುವುದು. ೫. ಕಾಳುಗಳನ್ನು ತೂರಿ ಹಸನುಗೊಳಿಸುವುದು; ಕೇರುವುದು. ೬. ಬೆರಳನ್ನು ಎಳೆದು ಇಲ್ಲವೆ ಒತ್ತಿ ಲಟಕ್ ಎನಿಸುವುದು; ನೆಟಕೆಮುರಿಯುವುದು. ೭. [ನಾಟ್ಯ] ಇಪ್ಪತ್ತು ಬಗೆಯ ಕರಕರ್ಮಭೇದಗಳಲ್ಲಿ ಒಂದು: ಧೂನನ, ಶ್ಲೇಷ . . . ಸ್ಫೋಟನ, ಮೋಟನ . . . ತರ್ಜನ - ಈ ಇಪ್ಪತ್ತು ಕರಕರ್ಮಭೇದಂಗಳ್ (ಲಾಸ್ಯರಂ. ೪-೧೩ ವ). [ಸಂ.]

**ಸ್ಫೋಟಿಸು** (ಕ್ರಿ). ೧. ಸ್ಫೋಟಗೊಳಿಸು; ಸಿಡಿಮದ್ದಿನಂತೆ ಸಿಡಿಸು: ದುಷ್ಕರ್ಮಿಗಳು ಸ್ಫೋಟಿಸಿದ ಸಿಡಿಮದ್ದಿನಿಂದ ದೊಡ್ಡ ಅನಾಹುತವೇ ಆಯಿತು (ರೂಢಿ). ೨. ಬೆರಳು ಗಳನ್ನು ಒತ್ತಿ ಇಲ್ಲವೆ ಎಳೆದು ನೆಟಿಕೆತೆಗೆ: (ಕ). [ಸ್ಫೋಟನ + - ಇಸು₃]

**ಸ್ಮಯ** (ನಾ). ೧. ನಗೆ; ಹಾಸ; ಸ್ಮಿತ: "ಸ್ಮಿತಂ, ಸ್ಮಿತಿಃ, ಸ್ಮಯಃ . . . ಸ್ಮೇರಂ- ಈ ೨ ನಸುನಗೆ" (ಕಾಶಕೃ. ೧೨೫). ೨. ಆಶ್ಚರ್ಯ; ಬೆರಗು: ಇಮಾದಿಗಳ್ಗೆ . . . ಭಯದಿಂದಂ ಮುಳಿಸಿಂದಂ ಸ್ಮಯದಿಂದಂ (ಶಮದ. ೧೧೭ ಪ್ರಯೋ). ೩. ಸೊಕ್ಕು; ಉದ್ಧಟತನ; ಗರ್ವ: ಸ್ಮಯಮೆರ್ದವುಗೆ ಕಿವಿವುಗೆ ದುರ್ನಯೋಕ್ತಿ ಕೊಲೆಗೆಯ್ದೆ ತನ್ನ ಬಗೆಯಿಂ ತತ್ಕಾಂತೆಯೊಳಳುಪಿ ನೆರೆದೊಡೇಂ ಕಯ್ವಿಯುಣ್ಬರಂ ರಸಮೆ ಬಾರಿಕುಂ ಕೆಮ್ಮನಿರಿಂ (ಶಾಂತಿಪು. ೬-೭೭). [ಸಂ.]

**ಸ್ಮಯರಹಿತ** (ನಾ). ಗರ್ವವಿಲ್ಲದವನು; ನಿರಹಂಕಾರಿ: ಕ್ಷಯವೃಜಿನಂ ಜಿನಸಮಯಂ ಸ್ಮಯರಹಿತಂ ಹಿತವಚಃಪ್ರಿಯಂ ಪ್ರಿಯಧರ್ಮಂ . . . ಸರಸ್ವತೀಮುಖ ಮುಕುರಂ (ಸುಕುಮಾ. ೧-೫೧). [ಸಂ.]

**ಸ್ಮರ** (ನಾ). ೧. ನೆನಪು; ಜ್ಞಾಪಕ; ಸ್ಮರಣೆ. ೨. ಪ್ರೇಮದೇವತೆಯಾದ ಕಾಮ; ಮನ್ಮಥ: ಸ್ಮರನಸ್ತ್ರಸಮಿತಿಯದು ನಿರ್ಭರಮಂಗಮನುರ್ಚಿ ಪೋಗೆಯುಂ (ಕವಿರಾ. ೩-೧೮೫); ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಪೋ ಮೆಚ್ಚೆ ನಾನ್ (ಪಂಪಭಾ. ೪-೩೮); ಬಂದನಲ್ಲಿಗೆ ಕುಮಾರಂ . . . ಯೌವನದರ್ಪಂ ಸ್ಮರನಂ ಮಗುಳ್ಚಿ (ಪುಷ್ಪಪು. ೪-೮೦).

ಸ್ಮರನಾಹವ = ರತಿಕ್ರೀಡೆ: ಸ್ಮರನಾಹವಕ್ಕೆ ಬಾರೆಂದು ರಂಬಿಸಿ ಕರೆದನೋರ್ವ ವಿಟ ತನ್ನನಿಯಳ (ಪ್ರಾಭರಾ. ೬-೨೨). [ಸಂ.]

**ಸ್ಮರಕಳೆ** (ನಾ). ಕಾಮಕಲೆ; ಕಾಮಶಾಸ್ತ್ರ: ಸ್ಮರಕಳಾರಾರಾಜಿತಂ ಪೂಜಿತಂ (ಮದತಿ. ೧೧-೬೯). [ಸಂ. ಸ್ಮರಕಲಾ]

**ಸ್ಮರಕೇತನ** (ನಾ). ಪುರುಷನ ಜನನಾಂಗ; ಶಿಶ್ನ: ಸ್ಮರಕೇತನಮೆಳ್ತರಮಿಲ್ಲದಿರಲ್ ಪುರುಷಂಗದನಱಿತಿನಿಪುಣೆ ತರುಣಿ ತರದೆ ಸೀತ್ಕರಿಸುತೆ ಕಲೆದಂದಿರದೆ ನೆಱೆವಳು (ಜನವ. ೧೦-೩೩). [ಸಂ.]

**ಸ್ಮರಗಲಹ** (ನಾ). ಪ್ರಣಯಕಲಹ; ರತಿಕ್ರೀಡೆ: ಮದಹಂಸಗಮನೆಯರುಗಳು ಜೀರ್ಕೊಳವೆಯೊಳುದಕವ ತೀವಿ ತಂದಾಗ ಮುದದೊಳೆಸೆಯೆ ಸ್ಮರಗಲಹದ ಶರವೆಂದು ಬೆದಱಿದರು (ಕಂಸವಿ. ೨೫-೧೨೯). [< ಸಂ. ಸ್ಮರಕಲಹ]

**ಸ್ಮರಗೃಹ** (ನಾ). ಸ್ತ್ರೀಯ ಜನನೇಂದ್ರಿಯ; ಯೋನಿ: ಪುರುಷನತಿಕಾಮದಿಂ ತರುಣಿಯೊರ್ವಳ ಲಜ್ಜೆಯೆರೆದೆಡೆಯೊಳೀ ಧ್ವಜಮನಿಟ್ಟುಮವಳ ಸ್ಮರಗೃಹದೊಳಗೆ ಲಲ್ಲೆವೆರಸಿ ನಾಲಗೆಯಿಟ್ಟು ನೆರೆಯಲದು ಸ್ತ್ರೀಯುಗಳಕರಣವು (ಜನವ. ೯-೫೫). [ಸಂ.]

**ಸ್ಮರಘಸ್ಮರ** (ನಾ). ಕಾಮನನ್ನು ನಾಶಮಾಡಿದವನು; ಶಿವ: ನೆಗಟ್ದೀಕಾದಶರುದ್ರನಾದಿಪುರುಷಂ ದೇವಂ ಲಲಾಟೇಕ್ಷಣಂ . . . ದ್ರೋಣಂಗೆ ಕಾರ್ಯಾರ್ಥದಿಂ ಮಗನಾದಂ ಸ್ಮರಘಸ್ಮರಂ ದಯೆಯಿನಶ್ವತ್ಥಾಮನೆಂದು (ಗದಾಯು. ೨-೨೫). [ಸಂ.]

**ಸ್ಮರಚಾಪ** (ನಾ). ೧. ಮನ್ಮಥನ ಬಿಲ್ಲು. ೨. ಕಬ್ಬು: ಕರಿದಾದೊಡೆ ಕತ್ತುರಿಯಂ ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ ಸ್ಮರಚಾಪಮನಿಱಿಕೆಯ್ಯರೆ (ಯಶೋಚ. ೨-೪೨); ಸ್ಮರಚಾಪವಿಭ್ರಮಭ್ರೂಲತಾರ್ಧಶಶಿನಿಟಿಲೆ [ಪಾಠಾಂ. ಸ್ಮರಚಾಪಮಂ ಮಿಗುವ ಪುರ್ಬಿನರೆಸಸಿನೊಸಲೆ] (ಪ್ರೌಢರಾ. ೬-೨೨). [ಸಂ.]

**ಸ್ಮರಣ** (ನಾ). ೧. ಮರೆತುಹೋದುದನ್ನು ಮರಳಿ ಜ್ಞಾಪಿಸಿಕೊಳ್ಳುವಿಕೆ, — ನೆನೆಯುವಿಕೆ: ವೃತ್ತಿಯು ಸಂಶಯ, ನಿಶ್ಚಯ, ಗರ್ವ ಮತ್ತು ಸ್ಮರಣ ಎಂದು ನಾಲ್ಕು ವಿಧ (ಭಾತತ್ತ್ವ. ೫೮೮). ೨. ನೆನಪು; ಜ್ಞಾಪಕ. ೩. ದೇವರ ಧ್ಯಾನ; ಚಿಂತನೆ: ಬಾಹ್ಯದ ಭಕ್ತಿ ನವವಿಧ . . . ಶ್ರವಣ ಕೀರ್ತನೆ ಸ್ಮರಣ ಸೇವೆಯು (ಗಗತಾ. ೩-೫೫). ೪. ಸಂಪ್ರದಾಯ; ನಡವಳಿಕೆ. ೫. ಸಾಂಪ್ರದಾಯಿಕ ನೀತಿಬೋಧೆ: (ಶ). ೬. ನೆನಪನ್ನು ಉಳಿಸಿಕೊಡುವ ವಸ್ತು ಅಥವಾ ಕ್ರಿಯೆ: (ಶ). ೭. ಒಂದು ಬಗೆಯ ಸಸ್ಯ; ಬ್ರಾಹ್ಮಿ: ''ಸ್ಮರಣ ಕುಷ್ಮಿಯೆನಲ್ಕೆ ಬ್ರಾಹ್ಮಿಯಕ್ಕುಂ'' (ಮಂಗರಾ. ೩೯-೨೮). ೮. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು; ''ಯಾವುದಾದರೂ ಒಂದಾನೊಂದು ಪದಾರ್ಥದ ಅನುಭವವುಂಟಾದಾಗ ಅದರ ಹೋಲಿಕೆಯಿಂದ ಬೇರೆ ಪದಾರ್ಥದ ಜ್ಞಾಪಕವುಂಟಾದರೆ ಅದು ಸ್ಮರಣಾಲಂಕಾರವೆನ್ನಿಸಿಕೊಳ್ಳುವುದು'' (ಕೈಪಿಡಿ. ೨೬೫): ಮುಂ ಪೋದುದನ ಪೂರ್ವಮಂ ಕಂಡು ನೆನೆವುದದು ತಾಂ ಸ್ಮರಣಂ (ಕಾವ್ಯಾವ. ೭೧೩). [ಸಂ.]

**ಸ್ಮರಣೆ** (ನಾ). ಅಕ್ಷರಮಾಲೆ ; ಜಪಸರ : ಗಿರಿಜೆಯಾ ಪರಿ ಕೇಳಿದಾಗಲೆ ಸ್ಮರಣೆಯನು ಕರದಿಂದಲೊಂದೆಡೆ ಸರಿಸಿ . . . ಮೆಲ್ಲನೆ ಸರಸವಚನಗಳಿಂದ ಬಟುವಿಗೆ ಕೊಟ್ಟಳುತ್ತರವ (ಪಾರ್ವಪ. ೨-೬೪). [ಸಂ. ಸ್ಮರಣೀ]

**ಸ್ಮರಣೆ** (ನಾ). ೧. ನೆನಪು; ಜ್ಞಾಪಕ: ನನಗೆ ಚಿಕ್ಕಂದಿನಲ್ಲಿ ಈ ಸ್ಥಳವನ್ನು ನೋಡಿದ್ದ ಸ್ಮರಣೆಯೇ ಇಲ್ಲ (ರೂಢಿ). ೨. ಧ್ಯಾನ; ಚಿಂತನೆ: ಕೃಷ್ಣನಾಮಸ್ಮರಣೆ ಧನಿಕರಿಗುಂಟೆ (ಕುವ್ಯಾಸ. ೧೪-೧೨೦) ; ನಾರಾಯಣ ನಿನ್ನ ನಾಮದ ಸ್ಮರಣೆಯ ಸಾರಾಮೃತವೆನ್ನ ಬಾಯಿಗೆ ಬರಲಿ (ಪುರಂದ. ೨-೧೪೮ ಪಲ್ಲವಿ). [ಸಂ. ಸ್ಮರಣ]

**ಸ್ಮರಣೆಗೈ** (ಕ್ರಿ). ಧ್ಯಾನಮಾಡು; ಚಿಂತನೆ ಮಾಡು: ಗುರುಪರತರರಹಸ್ಯವನು ಸ್ಮರಣೆಗೈವುದು (ಗಗತಾ. ೩-೫೭). [ಸ್ಮರಣೆ + ಗೈ (< ಕೆಯ್$_1$)]

**ಸ್ಮರತತ್ತ್ವ** (ನಾ). ೧. ಕಾಮತತ್ತ್ವ: ಜಿನತತ್ತ್ವಂ ಸ್ಮರತತ್ತ್ವಮೆಂಬಿವೆರಡುಂ ದೂರಸ್ಥಂ (ಶಾಂತಿಪು. ೧-೧೬). ೨. ಕಾಮಶಾಸ್ತ್ರ: ರೇಚಮಹೀಶ ನೀ ಜಗಕೆಲ್ಲಂ ಸ್ಮರತತ್ತ್ವಮಂ ಬೆಸಸ (ಮದತಿ. ೧-೩೫). [ಸಂ.]

**ಸ್ಮರಬಂಧು** (ನಾ). ಕಾಮನ ಸಹೋದರ; ಬ್ರಹ್ಮ.

**ಸ್ಮರಬಂಧುರಥಗಮನೆ** = ಬ್ರಹ್ಮನ ವಾಹನವಾದ ಹಂಸಪಕ್ಷಿಯಂತೆ (ಮೋಹಕವಾಗಿ) ಚಲಿಸುವವಳು; ಹಂಸಗಮನೆ: ಸ್ಮರಬಂಧುರಥಗಮನ ಸ್ಮರಮೌರ್ವಿಜಿತಚಿಕುರೆ (ಪ್ರೌಢರಾ. ೬-೨೨). [ಸಂ.]

**ಸ್ಮರಬಾಣ** (ನಾ). ಕಾಮನ ಬಾಣ: ಸ್ಮರಬಾಣಾರ್ತ ವಿಟೀವಿಟಾಳಿಗೆ ವಿಯೋಗಂ ಪೂರ್ವಸಂಭೋಗಸಂಸ್ಮರಣಂ . . . ಕುದುವ ಕೋಡೆಂದೀ ಸ್ವಸಂವಿತ್ತರಂಪರೆ ಪೋಕುಂ ಪ್ರಳಯಕ್ಕೆ ತತ್‌ಕ್ಷಣಿಕ ಮಿಥ್ಯಾವಾದಿ ವಾದೀಂದ್ರರಿಂ (ಶಾಂತಿಪು. ೮-೧೪೫); ಸ್ಮರಬಾಣ ಲೋಲಾಯತಾಕ್ಷಿ . . . ಸ್ಮರನಾಹವಕ್ಕೆ ಬಾರೆಂದು ರಂಬಿಸಿ ಕರೆದನೋರ್ವ ವಿಟ ತನ್ನಿನಿಯಳ (ಪ್ರೌಢರಾ. ೬-೨೨). [ಸಂ.]

**ಸ್ಮರಮಂತ್ರ** (ನಾ). ರತಿಶಾಸ್ತ್ರರಹಸ್ಯ; ಕಾಮರಹಸ್ಯ : ಸ್ಮರಮಂತ್ರಂ ಬಹುಭಾಷಾ ಪರಿಚಿತಿಯಂತ್ರಪ್ರಯೋಗಮಖಿಲವ್ಯೂಹೋತ್ಕರಮೆಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪಪು. ೪-೭೦). [ಸಂ.]

**ಸ್ಮರಮಂದಿರ** (ನಾ). = ಸ್ಮರಗೃಹ: ''ಭಗಃ, ಯೋನಿಃ, ಉಪಸ್ಥಃ, ವರಾಂಗಃ, ಸ್ಮರಮಂದಿರಂ – ಈ ೫ ಉಪಸ್ಥಂ'' (ಹಲಾಯು. ೮೫-೩೭೦). [ಸಂ.]

**ಸ್ಮರಯಂತ್ರ** (ನಾ). = ಸ್ಮರಗೃಹ: ''ಸ್ಮರಯಂತ್ರವೆಂದು ಯೋನಿಯ ಹೆಸರು'' (ಕಾಮಶಾ. ೨೩೩). [ಸಂ.]

**ಸ್ಮರರಥ** (ನಾ). ಕಾಮನ ವಾಹನ; ಗಿಳಿ.

**ಸ್ಮರರಥವಾಣ** = ಗಿಳಿಯಂತೆ ಮಧುರವಾಗಿ ಮಾತಾಡುವವಳು; ಕೀರವಾಣಿ: ಸ್ಮರರಥವಾಣ ಸ್ಮರನಾಹವಕ್ಕೆ ಬಾರೆಂದು ರಂಬಿಸಿ ಕರೆದನೋರ್ವ ವಿಟ ತನ್ನಿನಿಯಳ (ಪ್ರೌಢರಾ. ೬-೨೨). [ಸಂ.]

**ಸ್ಮರರಾಗ** (ನಾ). ಕಾಮಾಸಕ್ತಿ; ಕಾಮಪರವಶತೆ: ಸ್ಮರರಾಗಾಂಧತ್ವದಿಂದಂ ಪಗಲೊಳಮಸತಿಕೇಳಿ ಪೊಣ್ಮಲ್ . . . ಬಂದುದು ಶಿಶಿರನ್ನಪೋದ್ಯತ್‌ಕೃತಾಂತಂ ವಸಂತಂ (ಕಾದಂಪೂ. ೭೨೦); ಸ್ಮರರಾಗೋದ್ರೇಕಂ ವೀತರಾಗನಿರ್ದಡೆಯೊಳೀಕೆ ಪುಟ್ಟುಗುಂ (ಪುಷ್ಪಪು. ೯-೧೧೮). [ಸಂ.]

**ಸ್ಮರರಿಪು** (ನಾ). ೧. ಕಾಮನ ವೈರಿ; ಶಿವ: ಸ್ಮರರಿಪುಲಲಾಟನೇತ್ರ ಸ್ಫುರದುರುಹುತವಹನಿನೆಯ್ದೆ ಬೇವುತ್ತಿರ್ದಾ ಸ್ಮರನ ಪೊಗೆಯಿಂದೆ ಪುದಿದಿರ್ದ ರತಿಯವೋಲ್ ಕಾಂತೆ ಕರಮೆ ಕಣ್ಗೆಸೆದಿರ್ದಳ್ (ಕಾದಂಪೂ. ೪೩). ೨. ಜಿನ; ಅರ್ಹಂತ: ಸ್ಮರರಿಪು ಪುಟ್ಟೆ ಧಾರಿಣಿಗೆ ಕಾಶ್ಯಪಗೋತ್ರಮಿದೇಂ ಪವಿತ್ರಮೋ (ಪುಷ್ಪಪು. ೧೨-೧೫). [ಸಂ.]

**ಸ್ಮರಲೋಪ** (ನಾ). ಕಾಮನನ್ನು ನಾಶಗೊಳಿಸಿದವನು,— ಜಯಿಸಿದವನು: ಗುರುರೂಪ ಸ್ಮರಲೋಪ ಸದ್ಭಕ್ತಿಹೃದ್ದೀಪ ಸಿದ್ಧನಂಜೇಶನೊರೆದಂ (ಗುರುಚಾ. ೬-೪೭). [ಸಂ.]

**ಸ್ಮರವೈರಿ** (ನಾ). ಮನ್ಮಥನ ಶತ್ರು; ಶಿವ: ಸ್ಮರವೈರಿ ಧರ್ಮವಕ್ತ್ರೋಜೆ . . . ಸ್ಮರರಥವಾಣ ಸ್ಮರನಾಹವಕ್ಕೆ ಬಾರೆಂದು ರಂಬಿಸಿ ಕರೆದನೋರ್ವ ವಿಟಂ ತನ್ನಿನಿಯಳ (ಪ್ರೌಢರಾ. ೬-೨೨). [ಸಂ.]

**ಸ್ಮರಸಂಗ್ರಾಮ** (ನಾ). ರತಿಕೇಳಿ; ಸುರತ: ಸ್ಮರಸಂಗ್ರಾಮದ ಭೋಗರಾಜರದಟಂ . . . ನಖಾನಖಿ ಪ್ರಬಳದಂತಾದಂತಿಯಿಂ ಕಾದಿದರ್ (ಹಮ್ಮೀರ. ೨-೮೭). [ಸಂ.]

**ಸ್ಮರಸಖ** (ನಾ). ೧. ಕಾಮನ ಗೆಳೆಯ. ೨. ಚಂದ್ರ. ೩. ವಸಂತ. [ಸಂ.]

**ಸ್ಮರಹರ** (ನಾ). ೧. ಕಾಮನನ್ನು ಕೊಂದವನು; ಶಿವ: ಪೇಳುವನುಮಾವರನ ಸ್ಮರಹರನ . . . ಭಿಕ್ಷಾಚರಿತೆಯಂ (ಭಿಕ್ಷಾಚ. ೧-೩); ಸ್ಮರಹರನ ಕರುಣವಿಲ್ಲದಲೆ ಜಗದೊಳಗೆ ಇರುವುದೆ ಕಷ್ಟ (ಸರ್ವಜ್ಞ. ೨೫೧). ೨. [ಜೈನ] ಕಾಮನನ್ನು ಗೆದ್ದವನು; ಜಿನ; ಅರ್ಹಂತ: ಸ್ಮರಹರನ ತಾಯ್ಗೆ ಸುರವಧು ಸಿರಿಗನ್ನಡಿವಿಡಿದ ತೆಱನದೆಂತನೆ (ಶಾಂತಿಪು. ೯-೧೯೦); ಸ್ಮರಹರನುದಯಮನಱಿಪುವ ಸುರವಿಷ್ಟರದೊಡನೆ ನಡುಗಿ ತಲರ್ವಿಲ್ಲುಂ (ಪುಷ್ಪಪು. ೧೦-೧೪). [ಸಂ.]

**ಸ್ಮರಾಂತಕ** (ನಾ). = ಸ್ಮರಹರ ೧ : ಸ್ಮರಾಂತಕನಂತೆ ಗಿರಿಜೆಗರೆಮೈಗೊಡುವನೇಯಸ್ಥಿಚರ್ಮಮಂ ಧರಿಸಿದವನೇಂ ಶುದ್ಧನೇಯುಗ್ರಸರ್ಪವಂ ತೊಟ್ಟಾತನೇಂ ಶಾಂತನೇ (ವೀಶೈಪು. ೨-೨-೨೦). [ಸಂ.]

**ಸ್ಮರಿಯಿಸು** 'ಸ್ಮರಿಸು' ನೋ.

**ಸ್ಮರಿಸು, ಸ್ಮರಿಯಿಸು** (ಕ್ರಿ). ೧. ನೆನಪು ಮಾಡಿಕೊಳ್ಳು; ಜ್ಞಾಪಿಸಿಕೊಳ್ಳು; ಮನಸ್ಸಿಗೆ ಮರಳಿ ತಂದುಕೊಳ್ಳು : ಮಾನವನಿಗೆ ಸದಾ ಸಲ್ಲಿಸುತ್ತಿರುವ ಸೇವೆಯನ್ನು ಮನಸಾ ಸ್ಮರಿಸಿ ತನ್ನ ಕೃತಜ್ಞತೆ ಅರ್ಪಿಸುತ್ತಾನೆ (ನವದಿ. ೧೭); ನಿನ್ನ ಉಪಕಾರ ಎಷ್ಟು ಸ್ಮರಿಸಿಕೊಂಡರೂ ಸಾಲದು (ಪದ್ಮಸ. ೮೧). ೨. ಚಿಂತನೆ ಮಾಡು; ಧ್ಯಾನಿಸು; ನೆನೆ:

ತೀರ್ಥಂಕರರನಾ ಪೊೞ್ತುಂ ಸ್ಮರಿಸಲೆಂದು . . . ಇಪ್ಪತ್ತನಾಲ್ಕು ಘಂಟಾಜಾಲಂ ಗಳನಿೞಿಸಿದೊಡೆ (ಚಾವುಂಪು. ೫೪); ಸ್ಮರಿಸುತ ಕಣ್ಮುಚ್ಚಿ ನೋಡಿದರವರಂತೆ ಪರಮಾತ್ಮ ತೋಱುವನೊಳಗೆ (ಭರಚ. ೨-೭೨). **ಸ್ಮರಿಯಿಸು:** ೧. ಸ್ಮರಿಯಿಪನಿರ್ಪತಿರ್ಚ್ಚಾಸಿರ ಬರಿಸಕ್ಕೊರ್ಮೆ ಮನದೊಳುಣಿಸಂ (ಆದಿಪು. ೬-೧೭); ಸ್ಮರಿಯಿಸಿದಂ ಮುಚುಕುಂದಂ ಚಿರೋಕ್ತಮ: ನುನದೊಳ್ (ಜಗವಿ. ೯-೪೬). ೨. ಮರಣದ ಜನ್ಮದ ನಿಗಳಂ ನಿರಾಕುಳಂ ಪತ್ತುವಿಡುವಿನ: ಜಿನ ನಿನ್ನ ಸ್ಮರಿಯಿಪುದನಣೋರಣ್ವಂತರವ್ಯತಿಕ್ರಮಣಮಾತ್ರಮಂ ಮೆಱೆದಪನೇ (ಆದಿಪು. ೧೦-೫೯); ಮಱೆದನಿಲ್ಲ ಮುಕುಂದನನೇಕಚಿತ್ತದಿಂ ಸ್ಮರಿಯಿಸುತಿರ್ದಂ (ಗದಾಯು. ೫-೩೮). [< ಸ್ಮರಣ + - ಇಸು]

**ಸ್ಮರೋದಕ** (ನಾ). ಮದನದ್ರವ; ರತಾಂಬು: ಮುಡಿಯರನಪ್ಪಿಯೆ ಪೆರ್ಮೊಲೆ ವಿಡಿದು . . . ಚುಂಬಿಸುತೊಡಗೂಡಲ್ ಚೌತಿಯೊಳ್ ಸ್ಮರೋದಕಮೊಸರ್ಗುಂ (ಮನ್ಮವಿ. ೩-೧೫). [ಸಂ.]

**ಸ್ಮರೋನ್ಮಾದ** (ನಾ). ಕಾಮೋದ್ರೇಕ; ಕಾಮಾವೇಶ: ಪೋದುದು ಜೌವನಂ ಕ್ರಮದಿನಾದುದು ಮುಪ್ಪಿನಿಸಾದೊಡಂ ಸ್ಮರೋನ್ಮಾದದೊಳೀ ವಿಮೋಹದೊಳದೇಕೆ ಗಡಂ ಬಗೆಯಂ ತಗುಳ್ಚಿ ಬೇಳಾದಪಂ (ಆದಿಪು. ೨-೩೫). [ಸಂ.]

**ಸ್ಮಶಾನ** 'ಮಸಣ' ನೋ.

**ಸ್ಮಾರಕ** (ಗು). ೧. ನೆನಪು ಮಾಡಿಕೊಡುವ; ಜ್ಞಾಪಕಾರ್ಥವಾದ: 'ಸ್ಮಾರಕ ಸ್ತಂಭ' ಪರಾ. (ನಾ). ೨. ಒಂದು ಮಹತ್ವದ ಘಟನೆಯ ಅಥವಾ ವ್ಯಕ್ತಿಯ ಜ್ಞಾಪಕಾರ್ಥವಾಗಿ ಸ್ಥಾಪಿಸಿದ ಕಂಬ, ಕಟ್ಟಡ ಮೊದಲಾದುದು: ಸನ್ಯಸನವಿಧಿಯಿಂದ ಮಡಿದವರ ಸ್ಮಾರಕವಾಗಿ ವೀರರಿಗೆ ವೀರಗಲ್ಲುಗಳನ್ನು ಸ್ಥಾಪಿಸುತ್ತಿದ್ದಂತೆ ಕೆಲವು ಸ್ಮಾರಕಗಳನ್ನು ನಿಲ್ಲಿಸುತ್ತಿದ್ದರು (ಕಶಾಅ. ೯೬); ಶತ್ರುಗಳು ದೇಶವನ್ನು ಆಕ್ರಮಿಸಿದಾಗ ಈ ಸ್ಮಾರಕಗಳನ್ನು ಸುಟ್ಟುಹಾಕಿ ತಾವೇ ಬೇರೆ ಸ್ಮಾರಕಗಳನ್ನು ಕಟ್ಟಿದರು (ಶಿಲ್ಪನಾ. ೬೭); ಕಟ್ಟಿದರಜಸ್ರಂ ಸಹಸ್ರಶಿಲ್ಪಿಗಳಲ್ಲಿ ಸ್ಮಾರಕನಿಕೇತನಸ್ತೂಪಮಂ (ಚಿತ್ರಾಂಗ. ೯೦-೨೪೯೩). [ಸಂ.]

**ಸ್ಮಾರಕಸ್ತಂಭ** (ನಾ). = ಸ್ಮಾರಕ ೨: ಅನಂತರ ಅವನು . . . ಸ್ಮಾರಕಸ್ತಂಭದ ಕತೆ ಪ್ರಾರಂಭಿಸಿದನು (ಪುನರು. ೩೬೫). [ಸಂ.]

**ಸ್ಮಾರ್ತ** (ಗು). ೧. ನೆನಪಿಗೆ ಸಂಬಂಧಪಟ್ಟ; ಸ್ಮರಣವಿಷಯವಾದ. ೨. ನೆನಪಾದ ; ಸ್ಮರಣೆಗೆ ಬಂದ. ೩. ಸ್ಮೃತಿಗ್ರಂಥಗಳಲ್ಲಿ ವಿಧಿಸಿದ; ಸ್ಮೃತಿ ನಿಯಮಗಳಿಗೆ ಅನುಸಾರವಾದ. ೪. ಕಾನೂನುಬದ್ಧವಾದ; ವಿಧ್ಯುಕ್ತವಾದ. (ನಾ). ೫. ಸ್ಮೃತಿಗ್ರಂಥಗಳಲ್ಲಿ ವಿಧಿಸಿದ ಆಚರಣೆ: ದಂಡನೀತಿಸ್ಮಾರ್ತ ಶೌಚೋದ್ದಂಡವೇದಾಧ್ಯಯನನಿಪುಣನ . . . ಪೌರೋಹಿತನ ಮಾಡುವುದು (ಕುವ್ವಾಲು. ೩-೮೭). ೬. ಸ್ಮೃತಿಗ್ರಂಥ. ೭. ಸ್ಮೃತಿವಿಧಿಗಳನ್ನು ಪಾಲಿಸುವವನು: ಅನುನಯದಿ ಸ್ಮಾರ್ತರಿಗೆ ತನ್ಮಾತ್ರವಿನ ಪದಪ್ರಾಪ್ತಿಯದಾಗುವುದು (ಗಗತಾ. ೮-೭೨). ೮. ಶಂಕರಾಚಾರ್ಯರ ಮತಾನುಸಾರಿಯಾದ ಅದ್ವೈತಪಂಥದ ಬ್ರಾಹ್ಮಣ: ಹುಟ್ಟಿನಲ್ಲಿ ಹರಿಜನನಾಗಿದ್ದ ನಂದನನ್ನು ಸ್ಮಾರ್ತರು ಭಕ್ತಶ್ರೇಷ್ಠನೆಂದು ಗೌರವಿಸಿದರು (ಭಾರದ. ೩೯೦); ನಾನು ಶ್ರೀವೈಷ್ಣವ, ಅವನು ಸ್ಮಾರ್ತ, ಆದರೇನು? (ರಾಮಾನ. ೬೮). [ಸಂ.]

**ಸ್ಮಾರ್ತಕರ್ಮ** (ನಾ). ಸ್ಮೃತಿಯಲ್ಲಿ ವಿಧಿಸಿದ ಅಗ್ನಿಹೋತ್ರವೇ ಮೊದಲಾದ ಕರ್ಮ; IP ಗೃಹ್ಯಸೂತ್ರಗಳಲ್ಲಿ ವಿವಾಹೋಪನಯನಾದಿ ಷೋಡಶ ಕರ್ಮಗಳ ವಿಧಿವಿಧಾನಗಳು ಉಕ್ತವಾಗಿರುತ್ತವೆ. ಈ ರೀತಿಯ ಕರ್ಮ ಗಳಿಗೆ ಸ್ಮಾರ್ತಕರ್ಮಗಳೆಂದು ಹೆಸರು: ಯಜ್ಞಗಳು ಶ್ರೌತಕರ್ಮಗಳು ; ಅಗ್ನಿಹೋತ್ರಾದಿಗಳು ಸ್ಮಾರ್ತಕರ್ಮಗಳು (ಆರ್ಯಧ. ೮). [ಸಂ. ಸ್ಮಾರ್ತಕರ್ಮನ್]

**ಸ್ಮಾರ್ತವಿಧಿ** (ನಾ). ಸ್ಮೃತಿಗಳಲ್ಲಿ ಹೇಳಿದ ಆಚಾರನಿಯಮ: ಅಹುದಹುದಲೇ ಶ್ರೌತಪಥದಲಿ ಬಹಿರಿ ನೀವೇ ಸ್ಮಾರ್ತವಿಧಿಸನ್ನಿಹಿತರೆಂಬುದನಱಿಯದೇ ಮೂಜಗದ ಜನವೆಲ್ಲ (ಕುವ್ವಾಅ. ೮-೩೦). [ಸಂ.]

**ಸ್ಮಿತ** (ಗು). ೧. ನಗುವ; ನಕ್ಕ. ೨. ಅರಳಿದ; ವಿಕಾಸವಾದ: ಸ್ಮಿತಧವಳಕಮಳ ವನದೊಳ್ ರತಿರಾಗದೆ ಹಂಸಿ ಹಂಸನಂ ಸೋಂಕುವವೋಲ್ ಅತಿಶಯಶಯನ ಸ್ಥಳದೊಳ್ ಪತಿಯೊಡನಾ ಕಾಂತೆ ಸುರತಸುಖದಿಂದಿರ್ದಳ್ (ಜಗವಿ. ೨-೭೫); ಸ್ಮಿತಮಧುರ ಮುಖಕಾಂತಿ ಕಲ್ಲೋಲಿತ ಕಟಾಕ್ಷಚ್ಛವಿಯಲೀಶನ ಧೃತಿಯಲೀಡಿಱಿದೆಡದಲೆಸೆವರು ಗೌರಿದೇವಿಯರು (ಕುವ್ವಾಅ. ೬-೭೫). (ನಾ). ೩. ನಸುನಗು; ಮಂದಹಾಸ: ಕುಸುಮಂ ಸ್ಮಿತಮಳಿನಯನಂ ಕಿಸಲಯಮಧರಂ (ಕವಿರಾ. ೩-೧೪); ಸ್ಮಿತವಿರಲಿ ವದನದಲಿ . . . ಹಿತವಿರಲಿ ವಚನದಲಿ (ಮಂಕುಕ. ೭೩೪). ೪. ಅರಳುವಿಕೆ; ವಿಕಸನ: "ಉನ್ಮೀಳಿತಂ, ಉನ್ಮಿಷಿತಂ, ಸ್ಮಿತಂ . . . ವಿಕಾಸಃ – ಈ ೯ ಅಲರ್ವುದರ್ಕೆ ಪೆಸರ್" (ಹಲಾಯು. ೩೧-೩೩). [ಸಂ.]

**ಸ್ಮೃತ** (ಗು). ೧. ನೆನಪುಮಾಡಿಕೊಂಡ; ಸ್ಮರಣೆಗೆ ಬಂದ; ಜ್ಞಾಪಕವಾದ. ೨. ವಿಧಿಸಿದ; ಉಕ್ತವಾದ; ತಿಳಿಸಿದ. ೩. (ಹೀಗೆಂದು) ಹೆಸರಿಸಲಾದ; ಉಲ್ಲೇಖಿತವಾದ. ೪. ಸ್ಮೃತಿಗ್ರಂಥಗಳಲ್ಲಿ ವಿಧಿಸಿದ; ಸಾಂಪ್ರದಾಯಿಕ ಆಚಾರನಿಯಮಗಳು ತಿಳಿಸಿದ. (ನಾ). ೫. ನೆನಪು; ಸ್ಮರಣೆ. [ಸಂ.]

**ಸ್ಮೃತಿ** (ನಾ). ೧. ನೆನಪು; ಸ್ಮರಣೆ; ಜ್ಞಾಪಕ: ಮತಿಗರ್ಥವಾದೊಡೇಂ? ಸ್ಮೃತಿಯೊಳದು ನೆಲಸಿರಲಿ (ಮಂಕುಕ. ೭೫೫). ೨. ಚಿತ್ತವೃತ್ತಿಯ ಐದು ಪ್ರಕಾರಗಳಲ್ಲಿ ಒಂದು; ಜ್ಞಾಪಕಶಕ್ತಿ; ಸ್ಮರಣಶಕ್ತಿ: ಸ್ಮೃತಿಯೆಂಬುದು ಪೂರ್ವದಲ್ಲಿ ಅನುಭವಿಸಿದ ವಿಷಯಗಳನ್ನು ಸಂಸ್ಕಾರದಿಂದ ಜ್ಞಾಪಿಸಿಕೊಳ್ಳುವುದು (ಹಿಂದಸಾ. ೧೦೪). ೩. ಅನುಭವಸಂಸ್ಕಾರದಿಂದ ಉಂಟಾಗುವ ಜ್ಞಾನ: ಕೇವಲ ಸಂಸ್ಕಾರದಿಂದ ಹುಟ್ಟಿದ ಜ್ಞಾನಕ್ಕೆ 'ಸ್ಮೃತಿ' ಎಂದು ಹೆಸರು (ಭಾತತ್ತ್ವ. ೩೫೧). ೪. ಎಚ್ಚರ; ಅರಿವು: ಅವನಿಗೆ ಸ್ಮೃತಿ ತಪ್ಪಿಹೋಯಿತು (ರಾವಿಜ. ೧೩೦). ೫. ಮನು , ಯಾಜ್ಞವಲ್ಕ್ಯ ಮೊದಲಾದವರಿಂದ ರಚಿತವಾದ ಆಚಾರ, ವಿಧಿಗಳ ಗ್ರಂಥ; ಧರ್ಮಸಂಹಿತೆ: ವೇದಾಂಗ ಸ್ಮೃತಿ ವೇದಮೆಂದಿನಿತುಮಂ ಪೂಣ್ಕೋದಿದೆಂ (ಸುಕುಮಾ. ೩-೪೩); ಶ್ರುತಿ ತದರ್ಥ ಸ್ಮೃತಿಗಳಲಿ ಪಂಡಿತರು ನಡೆವುದ ಮಾದು ಮೂರ್ಖರ ಗತಿಯನನುಕರಿಸಿದರೆ ಬಳಿಕ ವಿಶೇಷವೇನೆಂದ (ಕುವ್ವಾದ್ರೋ. ೧೮-೫೭); ಸ್ಮೃತಿಗಳು ಶ್ರುತ್ಯರ್ಥವನ್ನು ಅನುಸರಿಸುತ್ತವೆ (ಭಾರದ. ೫೦). ೬. ಸ್ಮೃತಿಗ್ರಂಥಗಳ ನಿಯಮ, – ಉಲ್ಲೇಖ. ೭. [ಕಾವ್ಯಮೀ] ಮೂವತ್ತು ಮೂರು ಸಂಚಾರಿಭಾವಗಳಲ್ಲಿ ಒಂದು: ಮತಿನಿರ್ವೇದಾವಹಿತ್ಥ . . . ಸ್ಮೃತಿಗರ್ವಾಮರ್ಷ ದೈನ್ಯೋತ್ಸುಕರತಿ ಮುದಪಸ್ಮಾರ ಲಜ್ಜಾವಿಷಾದಸ್ಥಿತಿ ಚಿತ್ತಭ್ರಂಶವೋಹಾಮಯಮೃತಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೫). ೮. = ಸ್ಮರಣ ೮: ಸ್ಮೃತಿ ಸಾಮ್ಯಯೋಗಿತೆ . . . ಭಾವಿಕ ಉದಾತ್ತವೆಂಬ ಅಱುವತ್ತ್ಮದಲಂಕಾರಂಗಳೆಂದೊಡಗೂಡಿ (ವಿವೇಕ. ೧೭೯). [ಸಂ.]

**ಸ್ಮೃತಿಕಾರ** (ನಾ). ಸ್ಮೃತಿಗ್ರಂಥವನ್ನು ರಚಿಸಿದವನು; ಸ್ಮೃತಿಕರ್ತ: ಬೋಧಾಯನನು ತನ್ನನ್ನೂ ಸೇರಿಸಿ ಎಂಟುಜನ ಸ್ಮೃತಿಕಾರರೆಂದು ಹೇಳುತ್ತಾನೆ (ಭಾರದ. ೫೧). [ಸಂ.]

**ಸ್ಮೃತಿಪಥ** (ನಾ). ನೆನಪು; ಸ್ಮರಣೆ: ಹಿಂದಿನದು ನಮ್ಮ ಸ್ಮೃತಿಪಥದಲ್ಲಿಲ್ಲ; ಮುಂದಿನದು ನಮ್ಮ ದೃಷ್ಟಿಗೆ ಅಗೋಚರವಾಗಿದೆ (ಪಂಚಪಾ. ೨೦೮); ಬೆಳಗ್ಗೆ ರಂಗಮ್ಮ, ಗೋವಿಂದನನ್ನು ನಿಷ್ಕಾರಣವಾಗಿ ಬಯ್ದುದು ಅವಳ ಸ್ಮೃತಿಪಥಕ್ಕೆ ಬಂದಿತು (ನಿಶಉ. ೮). [ಸಂ.]

**ಸ್ಮೃತಿಭ್ರಂಶ** (ನಾ). ೧. ನೆನಪಿನ ಶಕ್ತಿ ಇಲ್ಲವಾಗುವುದು. ೨. ಜ್ಞಾನ ತಪ್ಪುವುದು; ಎಚ್ಚರ ತಪ್ಪುವುದು: ಮೂಗಿಗೆ ಆ ತುಪ್ಪವನ್ನು ಇಪ್ಪತ್ತುನಾಲ್ಕು ದಿನ ನಸ್ಯವಂ ಮಾಡಿದರೆ ಸಕಲ ಮದ ಸಕಲ ಅಪಸ್ಮಾರ ಸ್ಮೃತಿಭ್ರಂಶ ಜಿಹ್ವಾಸ್ತಂಭಗಳು – ಈ ಮೊದಲಾದವುಗಳೆಲ್ಲಾ ಮಾಣುವುವು (ವಿಷ್ಣವಿ. ೭೨). [ಸಂ.]

**ಸ್ಮೃತಿವಿಭ್ರಮ** (ನಾ). = ಸ್ಮೃತಿಭ್ರಂಶ ೧ : ಕ್ರೋಧದಿಂದ ಸಮ್ಮೋಹವುತ್ಪನ್ನವಾಗುತ್ತದೆ; ಸಮ್ಮೋಹದಿಂದ ಸ್ಮೃತಿವಿಭ್ರಮವಾಗುತ್ತದೆ; ಸ್ಮೃತಿವಿಭ್ರಮದಿಂದ ಬುದ್ಧಿನಾಶವಾಗುತ್ತದೆ (ಧರ್ಮಸಾ. ೧೩೨). [ಸಂ.]

**ಸ್ಮೇರ** (ಗು). ೧. ನಸುನಗುತ್ತಿರುವ: ಸ್ಮೇರವದನಂ ಚಳಚಕೋರನಯನಂ (ಗದಾಯು. ೮-೫೭); ವೀರತಪಸ್ವಿ ಯಶೌಘಮಹಾರಾಜಂ ನೋಂತು ಕಱಿದನಾಸುರವನಿತಾ ಸ್ಮೇರಕಟಾಕ್ಷನಿರೀಕ್ಷಣಕೈರವಶೀತಾಂಶುದೇವನಾದಂ ದಿವದೊಳ್ (ಯಶೋಚ. ೪-೫೫). ೨. ಅರಳಿದ; ಪ್ರಫುಲ್ಲವಾದ; ಪ್ರಸನ್ನವಾದ: ಸ್ಮೇರವಕ್ತ್ರಸರೋರುಹಂ . . .

ಮುರಾರಿ ಕೈಪಟಿಗಾಡಿದಂ (ಜಗವಿ. ೩-೫೩). (ನಾ). ೩. ನಗು; ಮಂದಹಾಸ: ಸ್ಮೇರಮರೀಚಿ ಲೋಚನಮರೀಚಿ . . . ದಂತವಿಸ್ತಾರಮರೀಚಿಗಳ್ (ಗಿರಿಕ. ೩-೧೧೭); ಉನ್ನತ ಪ್ರಾಸಾದದಬಲೆಯರ ವೃತ್ತವದನದ ಸುಮಂದಸ್ಮೇರಚಂದ್ರಿಕೆಯೊಳುತ್ತುಂಗ ದೇವಾಲಯದ ಗೋಪುರದ ಮಾಣಿಕದ ಕಲಶದೆಳವಿಸಿಲೊಳು ಕತ್ತಲೆ ಪರೆವುದು (ಭೈಮಿಭಾ. ೩-೧೮). ೪. ಸ್ಪಷ್ಟವಾದುದು; ವಿಶದವಾದುದು. ೫. ತೋರಿಕೆ; ಪ್ರಕಟಣೆ. ೬. ಹೆಮ್ಮೆ; ಗರ್ವ. [ಸಂ.]

**ಸ್ಮೇರಮುಖ** (ನಾ). ೧. ನಗುಮುಖ. ೨. ನಗುಮುಖವುಳ್ಳವನು: ಅತ್ಯಂತ ವಿಸ್ಮಯಸ್ಮೇರಮುಖನುಮತಿಚಿರನ್ಯಸ್ತಹಸ್ತಪಲ್ಲವನುಂ (ಆದಿಪು. ೧೦-೫೨ ವ); ಹೃದ್ಯಂ ಸ್ಮೇರಮುಖಂ ಲೋಕೈಕಹಿತಕರಂ ಸುಕುಮಾರಂ ಸಮನಿಸುಗೆ (ಮಲ್ಲಿಪು. ೪-೩೯). [ಸಂ.]

**ಸ್ಯಂದ** (ನಾ). ೧. ಹನಿಯುವಿಕೆ; ತೊಟ್ಟಿಕ್ಕುವಿಕೆ: ವಾರಸುಂದರಿಯರ ಸೂಸುವ ಪರಮಾನಂದ ಸ್ಮಿತಸುಧಾಸ್ಯಂದ ಸಂತತಾರ್ದ್ರಂಗಳಪ್ಪಾರ್ದ್ರಾಕ್ಷತಸಿತಕುಸುಮಾಂಜಲಿಗಳ ನಿದಿರ್ಗೊಂಡು (ಆದಿಪು. ೪-೬೧ ವ). ೨. ತ್ವರಿತವಾದ ಗತಿ; ವೇಗದ ಚಲನೆ. ೩. ರಥ. ೪. ಚಂದ್ರ. ೫. ಒಂದು ಬಗೆಯ ನೇತ್ರರೋಗ. ೬. ಹನಿ; ಬಿಂದು. [ಸಂ.]

**ಸ್ಯಂದನ** (ಗು). ೧. ಹನಿಯುವ; ಒಸರುವ. ೨. ವೇಗವಾಗಿ ಹರಿಯುವ; ಶೀಘ್ರಗತಿಯಲ್ಲಿ ಪ್ರವಹಿಸುವ. ೩. ತ್ವರಿತಗತಿಯುಳ್ಳ; ವೇಗಶಾಲಿಯಾದ. (ನಾ). ೪. ರಥ: ಕರ್ಣನುಮನ್ನಂದೊಂದೋಜೆಯೊಳೆಸಗದೊಡಾಂ ಸ್ಯಂದನದಿಂದಿಟಿದು ಪೋಪೆನೆಸಗೆಂ ತೇರಂ (ಪಂಪಭಾ. ೧೨-೧೦೧). ೫. ನೀರು. ೬. ಗಾಳಿ; ವಾಯು. ೭. ಹೊಳೆ; ನದಿ. ೮. ಒಂದು ಬಗೆಯ ಮರ ; ತಾರೆಯ ಮರ: "ಅಂಬು ರಥಂ ತರಂಗಿಣಿ ಕುಜಾದಿಗಳಿಂತಿವು ಸ್ಯಂದನಾಖ್ಯ" (ನಾನಾರ. ೧೨); "ಉದಕ ರಥ ವೃಕ್ಷ ನದಿ ನಾಲ್ಕಿದು ಸ್ಯಂದನಮೆನಿಕ್ಕು" (ನಾನಾಕಂ. ೩೫). [ಸಂ.]

**ಸ್ಯಂದನಾರೋಹ** (ನಾ). ರಥದಲ್ಲಿ ಕುಳಿತು ಯುದ್ಧ ಮಾಡುವವನು; ರಥಿ; ರಥಿಕ: "ರಥೀ, ಸ್ಯಂದನಾರೋಹಃ – ಈ ೨ ರಥವನೇಱುವಾತಂ" (ಹಲಾಯು. ೬೫-೨೩೭). [ಸಂ.]

**ಸ್ಯಂದಿ** (ಗು). ೧. ಹನಿಯುವ; ತೊಟ್ಟಿಡುವ. ೨. ಒಸರುವ; ಸ್ರವಿಸುವ. ೩. ವೇಗವಾಗಿ ಚಲಿಸುವ. (ನಾ). ೪. ಸ್ರವಿಸುವಂತಹುದು; ಸುರಿಸುತ್ತಿರುವುದು: ಮಂಗಳಗೀತ ಮಂಗಳರವಂ ಕರ್ಣಾಮೃತಸ್ಯಂದಿಯುಣ್ಮುವಿನಂ . . . ಅತ್ಯುತ್ಸಾಹದಿಂ ಪೊಕ್ಕಂ (ಗದಾಯು. ೮-೬೭); ಎಯ್ದುಂದಂ . . . ವಿದ್ಯಾಧರೀಲೋಚನಾನಂದಸ್ಯಂದಿ ತಟೀವಿಲಾಸವನಮಂ ಕೈಳಾಸಮಂ ನಾರದಂ (ಪಂರಾಮಾ. ೪-೮೭); ಕರ್ಣಾಮೃತಸ್ಯಂದಿಗಳಪ್ಪ ನುಡಿಗಳಂ ನರೇಂದ್ರಂ ನುಡಿಯಲೊಡಂ (ಚಂದ್ರಪು. ೭-೭೯ ವ). [ಸಂ. ಸ್ಯಂದಿನ್]

**ಸ್ಯಮಂತಕ** (ನಾ). ಪ್ರತಿದಿನ ಎಂಟು ಹೇರು ಚಿನ್ನವನ್ನು ಕೊಡುವುದೆಂದೂ, ಎಲ್ಲ ಬಗೆಯ ಅಪಾಯಗಳಿಂದ ರಕ್ಷಿಸುವುದೆಂದೂ ನಂಬಲಾದ ಒಂದು ಬಗೆಯ ಬೆಲೆಯುಳ್ಳ ರತ್ನ: ಹರುಷ ಮಿಗಲಂದಾ ಸ್ಯ[ಪಾಠಾಂ. ಶ್ಯ]ಮಂತಕ ವರಪುಹಾರತ್ನವನು ಕೊಟ್ಟನು ಪರಮಧಾರ್ಮಿಕನೆನುತ ಕರುಣಾವನಧಿ ಕೈಮುಗಿದು (ನಿಭಾಗ. ೧೦-೬೭-೨೭). [ಸಂ.]

**ಸ್ಯಮಂತಪಂಚಕ** (ನಾ). ಪರಶುರಾಮನಿರ್ಮಿತವೆಂದು ಪ್ರಸಿದ್ಧವಾದ ಕುರುಕ್ಷೇತ್ರದಲ್ಲಿಯ ಐದು ಮಡುಗಳು: ಮುನ್ನಂ ಪರಶುರಾಮನೀ ನೆಲದೊಳುಳ್ಳರಸುಮಕ್ಕಳೆಲ್ಲರುಮನಿರ್ಪತ್ತೊಂದು ಸೂಳ್ವರೆಗಂ ಪಿಳ್ಳೆಪೆಸರಿಲ್ಲದಂತು ಕೊಂದವಂದಿರ ನೊರೆನೆತ್ತರೊಳ್ ತೀವಿ ತನ್ನ ತಾಯ್ಗೆ ನೀರಿಟಿಯಲುಂ ತಂದೆಗೆ ನೀರ್ಗುಡಲುಮೆಂದು ಮಾಡಿದ ಸ್ಯಮಂತಪಂಚಕಂಗಳೆಂಬ ಪೆಸರ ಪೆರ್ಮಡುಗಳೊಳಗೆ ಮೂಡಿ ಮುಟ್ಕಾಡಿ ನೋಡಿಯುಂ (ಗದಾಯು. ೬-೨೮ ವ); ಅರ್ಜುನನು ಕೃಷ್ಣನ ಸೂಚನೆಯಂತೆ ಅದನ್ನು ಬೇರೆ ಬಾಣಗಳಿಂದ ಹಾರಿಸಿ ಸ್ಯಮಂತಪಂಚಕದ ಹೊರಗೆ . . . ವೃದ್ಧಕ್ಷತ್ರನ ತೊಡೆಯ ಮೇಲೆ ಬೀಳಿಸಿದನು (ವಚಭಾ. ೨೮೭). [ಸಂ.]

**ಸ್ಯಾದ್ವಾದ** (ನಾ). [ಜೈನ] ಪದಾರ್ಥದ ಪೂರ್ಣಜ್ಞಾನವನ್ನು ಪಡೆಯುವುದಕ್ಕೋಸ್ಕರ ಅದರ ಒಂದೊಂದು ಗುಣವನ್ನು ಪ್ರಧಾನವಾಗಿಟ್ಟುಕೊಂಡು ಇತರ ಗುಣಗಳನ್ನು ಗೌಣವಾಗಿಸಿ ಪರೀಕ್ಷಿಸುವುದು, ಅನಂತರ ಇನ್ನೊಂದು ಗುಣವನ್ನು – ಹೀಗೆ ಭಾಗಶಃ, ಆದರೆ ಸಮಗ್ರವಾಗಿ ತಿಳಿದುಕೊಳ್ಳುವ ಕ್ರಮ: ಶ್ರೀಮತ್ಪರಮಗಂಭೀರ ಸ್ಯಾದ್ವಾದಾಮೋಘ ಲಾಂಛನಂ (ಸೌಇಇ. XX, ೧೩-೫ ; 875); ಪರವಾದಿ ಕ್ಷೋಣಿಭೃತ್ಪಕ್ಷಮಂ ದೇವೇಂದ್ರಂ ಕಡಿದಂದದಿಂದೆ ಕಡಿದಂ ಸ್ಯಾದ್ವಾದವಿದ್ಯಾಸ್ತ್ರದಿಂ (ಪಂರಾಮಾ. ೧-೨೪). [ಸಂ.]

**ಸ್ಯಾನಭೋಗ** 'ಸೇನಬೋವ' ನೋ.

**ಸ್ಯಾಲ** (ನಾ). ಹೆಂಡತಿಯ ಅಣ್ಣ ಅಥವಾ ತಮ್ಮ; ಭಾವಮೈದುನ: "ಸತಿಯ ಸಹಜಾತನಕ್ಕುಂ ಪ್ರ[ಶೀ]ತಿಯಿಂ ಸ್ಯಾಲನಾಮನುಂ ದೇವರನುಂ" (ವಸ್ತುಕೋ. ೫೫-೨೦). [ಸಂ.]

**ಸ್ಯೂತ** (ಗು). ೧. ಸೂಜಿಯಿಂದ ಹೊಲಿದ; ಹೊಲಿಗೆ ಹಾಕಿದ. ೨. ಹೆಣೆಗೆ ಹಾಕಿ ಕೂಡಿಸಿದ; ಹೆಣೆದ. ೩. ಚುಚ್ಚಿದ. (ನಾ). ೪. ಚೀಲ. [ಸಂ.]

**ಸ್ಯೂತಿ** (ನಾ). ೧. ಹೊಲಿಯುವಿಕೆ; ಹೊಲಿಗೆ ಹಾಕುವಿಕೆ. ೨. ಸೂಜಿಗೆಲಸ; ಕಸೂತಿ. ೩. ಚೀಲ. ೪. ವಂಶ; ಪೀಳಿಗೆ. ೫. ಸಂತತಿ; ಸಂತಾನ. [ಸಂ.]

**ಸ್ರಂಸನ** (ನಾ). ೧. ಬೀಳುವಿಕೆ; ಪತನ. ೨. ಕೆಡಹುವಿಕೆ; ಬೀಳಿಸುವಿಕೆ. ೩. ಗರ್ಭಸ್ರಾವ. ೪. ಭೇದಿಯ ಔಷಧ; ವಿರೇಚಕ. [ಸಂ.]

**ಸ್ರಂಸಿ** (ಗು). ೧. ಕೆಳಗೆ ಜಾರಿ ಬೀಳುತ್ತಿರುವ. ೨. ಕೆಳಗೆ ಜೋತಿರುವ; ನೇತಾಡುವ. ೩. ಶಿಥಿಲವಾದ; ಹರಿದುಹೋಗುವಂತಿರುವ. ೪. ತೂಗಾಡುತ್ತಿರುವ. (ನಾ). ೫. ಗೋಣಿಮರ: "ಪೀಲುಃ, ಗುಡಫಲಃ, ಸ್ರಂಸೀ – ೩ ಗೋಣಿಮರ" (ಸಿದ್ಧಾಂತಿ. ೧೧೮). [ಸಂ. ಸ್ರಂಸಿನ್]

**ಸ್ರಕ್ಕು** (ನಾ). ಹೂಮಾಲೆ; ಹೂವಿನ ಸರ: ದಿವ್ಯಾಂಬರಾಲಂಕರಣ ಸ್ರಗ್ರಾಜಿಯಿಂ ಪೂಜಿಸಿ (ಅಜಿಪು. ೫-೨೮); ಕುಸುಮ ಸ್ರಗ್ವಸನಾನ್ನಪಾನ . . . ಅನೀಕಮಂ ಕೊಟ್ಟು (ಪಂರಾಮಾ. ೧-೬೬). [< ಸಂ. ಸ್ರಜ್]

**ಸ್ರಗ್ಧರೆ** (ನಾ). [ಛಂದ] ಪ್ರತಿಪಾದದಲ್ಲಿ ಇಪ್ಪತ್ತೊಂದು ಅಕ್ಷರಗಳಿರುವ ಪ್ರಕೃತಿಛಂದಸ್ಸಿನ ಒಂದು ಸಮಪಾದವೃತ್ತ: ಭೂಮಿ ಜ್ವಾಲೇಂದು ದೇವಾಧಿಪಪು[ಪಾಠಾಂ. ಸು]ರಗಣದಿಂ ಮುಂತೆ ತೋಯತ್ರಯಂಗಳ್ ತಾಮೆತ್ತಂ ಬಂದು ಚೆಲ್ವಾಗಿರೆ . . . ಪೆಸರಿಂ ಸ್ರಗ್ಧರಾನಾಮವೃತ್ತಂ (ಛಂದೋಂಬು. ೨-೧೮೧). [ಸಂ. ಸ್ರಗ್ಧರಾ]

**ಸ್ರಗ್ವಿಣಿ** (ನಾ). [ಛಂದ] ಪ್ರತಿಪಾದದಲ್ಲಿ ನಾಲ್ಕು ರಗಣಗಳಿಂದ ಕೂಡಿದ ಹನ್ನೆರಡು ಅಕ್ಷರಗಳನ್ನುಳ್ಳ ಜಗತೀಛಂದಸ್ಸಿನ ಒಂದು ವೃತ್ತ: ಜಾತವೇದೋಗಣಂಗಳ್ ಚತುಸ್ಥಾನಸಂಜಾತಮಾಗುತ್ತಿರ್ದೆಂದಿನಂತಾದೊಡಾ ಜಾತಮಂ ಸ್ರಗ್ವಿಣೀ ವೃತ್ತಮೆಂಬರ್ (ಛಂದೋಂಬು. ೨-೧೩೦). [ಸಂ. ಸ್ರಗ್ವಿಣೀ]

**ಸ್ರಜ** (ನಾ). ಹೂಮಾಲೆ: "ಸ್ರಜಂ ಮಾಲ್ಯಂ ಪುಷ್ಪವಿಶೇಷರಚನಂ" (ವಸ್ತುಕೋ. ೭೭-೧೪) ; ಪ್ರಜೆಯೆಲ್ಲಂ ಜಲಗಂಧ ಸ್ರಜತಂಡುಲ ಧೂಪದೀಪ ಚರು ತಾಂಬೂಲ ವ್ರಜದಿಂ ಪೂಜಿಸುವುದು (ಯಶೋಚ. ೪-೭೩); ಮುನಿಪತಿ ದಿವ್ಯಸ್ರಜಮಂ ಕೊಡಲೊಡ ಮದನಾ ಗಜಮಸ್ತಕದಲ್ಲಿ ಸಾರ್ಚದಂ ಶಚಿಯಾಣ್ಮಂ (ವಿಷ್ಣುಪು. ೧-೨-೧೧೫). [ಸಂ. ಸ್ರಜ್]

**ಸ್ರಮ** 'ಸವ' ನೋ.

**ಸ್ರವ** (ನಾ). ೧. ತೊಟ್ಟಿಕ್ಕುವಿಕೆ; ಹನಿಯುವಿಕೆ. ೨. ಪ್ರವಹಿಸುವಿಕೆ. ೩. ಮೂತ್ರ. ೪. ಹನಿ; ಬಿಂದು. ೫. ಪ್ರವಾಹ. ೬. ಚಿಲುಮೆ; ಬುಗ್ಗೆ. [ಸಂ.]

**ಸ್ರವಂತಿ** (ನಾ). ಹೊಳೆ; ತೊರೆ; ನದಿ: ಕಾವೇರಿ ಸ್ರವಂತೀ ಸಮುತ್ತರಣಾನಂತರಂ ಬರೆವರ (ಶಾಂತಿಪು. ೧೧-೩ ವ). [ಸಂ. ಸ್ರವಂತೀ]

**ಸ್ರವಿಸು** (ಕ್ರಿ). ಒಸರು; ಜಿನುಗು; ಸೋರು: ಆನೆಗಳಿಗೆ ಮದೋದಕವು ಸ್ರವಿಸುವ ಸ್ಥಾನಗಳಂ ಪೇಳುವೆನು (ಸೌಗಂಧಿ. ೨೭೭-೧೭); ಸ್ರವಿಸುವುದು ಜೀವರಸ ಹೃದಯಗರ್ತದ ತಳದಿ (ಮಂಕುತ. ೪೬೪); ಕಣ್ಮುಚ್ಚಿದೆವೆಗಳಿಂ ಸ್ರವಿಸಿದತ್ತಶ್ರು (ಶ್ರೀರಾಮಾ. ೧೬೭-೪೦೧). [(ಸಂ. ಸ್ರವಣ) + - ಇಸು]

**ಸ್ರಷ್ಟಾರ** (ನಾ). ರಚಿಸುವವನು; ನಿರ್ಮಿಸುವವನು: ಮಿಥ್ಯಾಸೃಷ್ಟಿಯು ಕೃತಿಯೆಂದೆನಿಸುವುದು ಅಲ್ಲಿ ಕವಿಗಳು ಸ್ರಷ್ಟಾರರು (ಸಾಹಿವಿ. ೮). [< ಸಂ. ಸ್ರಷ್ಟೃ]

**ಸ್ರಸ್ತ** (ಗು). ೧. ಬಿದ್ದ. ೨. ಜಗುಳಿದ; ಜಾರಿದ. ೩. ಸಡಿಲಿದ; ಶಿಥಿಲವಾದ. ೪. ನೇತಾಡುವ; ಜೋಲುವ: ಸ್ರಸ್ತಕುಂತಳಕೇಶಂ ಗತಪುಷ್ಪದೀನವದನಂ (ಗದಾಯು. ೧೦-೧೩). (ನಾ). ೫. ಕಳಚಿಕೊಂಡುದು: "ಸ್ರಸ್ತಂ, ಧ್ವಸ್ತಂ . . . ಗಲಿತಂ – ೭. ಜಾರಿ ಬಿದ್ದದ್ದು, ಕಳಚಿಕೊಂಬುದು" (ಸಿದ್ಧಾಂತಿ. ೩೫೧). [ಸಂ.]

**ಸ್ರಾವ** (ನಾ). = ಸ್ರವ ೨: 'ಗರ್ಭಸ್ರಾವ', 'ರಕ್ತಸ್ರಾವ' ಪರಾ. [ಸಂ.]

**ಸ್ರಾವೆ** 'ಶ್ರಾವೆ' ನೋ.

**ಸ್ರಾಹೆ** 'ಶ್ರಾಹೆ' ನೋ.

**ಸ್ರುಕ್ಕು** (ನಾ). ಹೋಮಾಗ್ನಿಯಲ್ಲಿ ತುಪ್ಪವನ್ನು ಸುರಿಯಲು ಬಳಸುವ (ಪಲಾಶ ಅಥವಾ ಖದಿರವೃಕ್ಷಗಳ) ಮರದಿಂದ ಮಾಡಿದ ಸವುಟು: ಸ್ರುಕ್‌ಸ್ರುವಾಕ್ಷತ ಸುಗಂಧ ಯವಾವಳತಿಲ . . . ವಿವಿಧ ಮಖಪರಿಕರಂಗಳುಮಂ ಬೇಱವೇಱ ತೋಱ (ಜಗವಿ. ೧೭-೭ ವ); ಶತಜುಹುಗಳಿಂ ವೈಕಂಕತದ ಷಷ್ಟಿಸ್ರುಕ್ಸ್ರುವನಿವಹದಿಂದ . . . ಬೇಕಾದ ವಸ್ತುಸಂಜಾತದಿಂ ಮಖಶಾಲೆ ಕಣ್ಗೆಸೆದುದು (ಜೈಮಿಭಾ. ೩೩-೩೮).

[< ಸಂ. ಸ್ರುಚ್]

**ಸ್ರುತ** (ಗು). ೧. ಪ್ರವಹಿಸಿದ. ೨. ಜಿನುಗಿದ; ತೊಟ್ಟಿಕ್ಕಿದ. ೩. ಹೊರಟು ಹೋದ. (ನಾ). ೪. ದ್ರವ. [ಸಂ.]

**ಸ್ರುವ** (ನಾ). ೧. ಯಜ್ಞದಲ್ಲಿ ಬಳಸುವ ಸವುಟುಗಳಲ್ಲಿ ಒಂದು ಬಗೆ : "ಧ್ರುವಾ, ಉಪಭೃತ್, ಜುಹೂಃ, ಸ್ರುವಃ . . . ಸ್ರುಕ್ಕು ಎಂಬ ಆಜ್ಯಗ್ರಹಣಪಾತ್ರದ ಆಯಾ ನಾಮಗಳು, ೪ ಬಗೆಯ ಸ್ರುಕ್ಕುಗಳು" (ಸಿದ್ಧಾಂತಿ. ೨೨೦). ೨. ಸೋಮರಸಕ್ಕೆ ಬಳಸುವ ದರ್ವಿ. ೩. ಜಲಪಾತ; ನೀರ್ಬೀಳು. [ಸಂ.]

**ಸ್ರುವೆ** (ನಾ). ೧. ಒಂದು ಬಗೆಯ ಸಸ್ಯ; ಹೆಗ್ಗುರಂಟಿಕೆ: "ಮಧುರಸೆ, ಮಧುಶ್ರೇಣಿ . . . ಹೆಗ್ಗುರಂಟಿಕೆ, ಸ್ರಾವೆ, ಸ್ರುವಾ" (ಸಸ್ಯನಿ. ೧೧೭). ೨. ಒಂದು ಬಗೆಯ ಮರ; ಆನೆಬೇಲ. [ಸಂ. ಸ್ರುವ]

**ಸ್ರೋತ** (ನಾ). ೧. ನೀರಿನ ಪ್ರವಾಹ; ಹರಿಯುವಿಕೆ: "ಓಘಃ, ಪ್ರವಾಹಃ, ವೇಣೀ, ಧಾರಾ, ಸ್ರೋತಃ, ರಯಃ - ಈ ೬ ತೊಱೆಯ ಹರಿಹಂ" (ಹಲಾಯು. ೧೧೦-೪೭). ೨. ರಭಸವುಳ್ಳ ಪ್ರವಾಹ; ನುಗ್ಗಿ ಹರಿಯುವ ಹೊನಲು: ಕಣ್ಗೊಳಿಸಿರ್ದುದು ನೋಡ ಹಿಮಾಚಳಶಿಖರದ ಮೇಲೆ ಪಾಯ್ವ ಗಂಗಾಸ್ರೋತಂ (ಪಂಪಭಾ. ೭-೭೩); ಮೊರೆಯುತ್ತುಂ ಪರಿಯುತ್ತುಮಿರ್ಪ ರುಧಿರಸ್ರೋತಂಗಳಿಂ (ಪಂರಾಮಾ. ೯-೧೨೪). ೩. ಹೊಳೆ; ನದಿ: 'ಸ್ರೋತಃಪತಿ' ಪರಾ. ೪. ತೆರೆ ; ಅಲೆ. ೫. ನೀರು. ೬. ಜ್ಞಾನೇಂದ್ರಿಯ: "ಖಂ, ಅಕ್ಷಂ, ಇಂದ್ರಿಯಂ, ಸ್ರೋತಃ, ಹೃಷೀಕಂ, ಕರಣಂ – ಈ ೬ ಇಂದ್ರಿಯಂಗಳ್" (ಹಲಾಯು. ೮೮-೩೮೧). ೭. ಆನೆಯ ಸೊಂಡಿಲು. ೮. ಪ್ರಾಣಿದೇಹದಲ್ಲಿರುವ ರಂಧ್ರ. ೯. ವಂಶ; ಪೀಳಿಗೆ. [ಸಂ. ಸ್ರೋತಸ್]

**ಸ್ರೋತಃಪತಿ** (ನಾ). ಸಮುದ್ರ: ಖ್ಯಾತಂ ಮಹೇಂದ್ರಗಿರಿಸಾರಾತಿಶಯಂ ಪತಿ ಮಹೇಂದ್ರಗಿರಿಗಂ ಪ್ರಾಚೀಸ್ರೋತಃಪತಿ ಪ್ರಯಾಣದೊಳೀತಂ ಜಂಗಮಮಹೇಂದ್ರಮೆನಿಕುಂ ಘಟೆಯಿಂ (ಶಾಂತಿಪು. ೫-೧೩೩). [ಸಂ.]

**ಸ್ರೋತಸ್ವಿನಿ** (ನಾ). ನದಿ; ಹೊಳೆ: ತರುಣೀಲೋಚನಲೋಲವಾಯುವಚಲ ಸ್ರೋತಸ್ವಿನೀಸಂಚಲಂ ಸಿರಿ (ಚಂದ್ರಪ್ರ. ೪-೫೩); ಆ ಸಮಿಾಪೋರ್ವಿಯೊಳ್ ಸ್ಥಿರಮಿರ್ಪರ್ ಪದೆದೀಂಟುಗುಂ ರಸಮನಾ ಸ್ರೋತಸ್ವಿನೀತೀರದೊಳ್ (ವಿಷ್ಣುಪು. ೨-೧-೪೭).

[ಸಂ. ಸ್ರೋತಸ್ವಿನೀ]

**ಸ್ರೋತ್ರಗುತ್ತಿಗೆ, ಸುತ್ರಗುತ್ತಿಗೆ, ಸುತ್ರೆಗುತ್ತಗೆ** (ನಾ). ಶ್ರೋತ್ರಿಯರಿಗೆ ಕೊಡುತ್ತಿದ್ದ ಉಂಬಳಿ: ದೇವಣ ಆರಾಧ್ಯರಿಗೆ ಕೊಟ ಸ್ರೋತ್ರಗುತ್ತಿಗೆಯ ಭೂದಾನ ಶಿಲಾಶಾಸನದ ಕ್ರಮವೆಂತೆಂದರೆ (ಮ್ಯಆರಿ. ೧೯೩೪, ೫೮-೧೩ ; 1434). **ಸುತ್ರಗುತ್ತಿಗೆ:** ಆ ಸೀಮೆಗೆ ಗದ್ದೆ ತೋಟ ಮರ ಮಗ್ಗವಣ ಕಿಱುಕುಳ ಸೊನ್ನಾದಾಯ ಸುತ್ರಗುತ್ತಿಗೆ ಯಿಯೊಳಗಾಗಿ (ಎಕ. VII(R), ಮಳವ. ೧೦-೧೦ ; 1517). **ಸುತ್ರೆಗುತ್ತಗೆ :** ಸೀಮೆಯ ವೊಳಗಣ ಹಳನವು ನಿಮಗೆ ಸುತ್ರೆಗುತ್ತಗೆಯಗಿ ಕೊಟವಾಗಿ (ಎಕ. VII(R), ಮಳವ. ೧೧೮-೧೦; ಸು. 13ನೆಯ ಶತ). [< ಶ್ರೋತ್ರಿಯ + ಗುತ್ತಿಗೆ (< ಗುತ್ತಗೆ)]

**ಸ್ವ** (ಗು). ೧. ತನ್ನ; ತನಗೆ ಸಂಬಂಧಿಸಿದ; ಸ್ವಂತ. ೨. ಹುಟ್ಟಿನಿಂದ ಬಂದ; ಸ್ವಭಾವಸಿದ್ಧವಾದ; ನೈಸರ್ಗಿಕ. (ನಾ). ೩. ತನ್ನ ಕುಲ ಅಥವಾ ವಂಶಕ್ಕೆ ಸಂಬಂಧಪಟ್ಟ ವ್ಯಕ್ತಿ; ಜ್ಞಾತಿ; ಬಂಧು. ೪. ಆತ್ಮ: ಸ್ವ ಎಂಬುದನ್ನು ಜ್ಞಾನಿಗಳು ಆತ್ಮವೆನ್ನುತ್ತಾರೆ (ಸಂಶೋಧ. V, ಮುನ್ನುಡಿ). [ಸಂ.]

**ಸ್ವಂ** (ನಾ). ಧನಸಂಪತ್ತು: "ದ್ಯುಮ್ನಂ . . . ಅರ್ಥಃ, ಸ್ವಂ . . . ವಸು, ವಿಭವಃ - ಈ ೧೫ ಒಡಮೆಯ ಪೆಸರ್" (ಹಲಾಯು. ೧೪-೮೦). [ಸಂ.]

**ಸ್ವಂತ$_1$, ಸೊಂತ** (ಗು). ೧. ಒಬ್ಬ ವ್ಯಕ್ತಿ, ವಸ್ತು ಅಥವಾ ಒಂದು ಸಂಸ್ಥೆಗೆ ಸೇರಿದ; ಖಾಸಗಿಯಾದ; ವೈಯಕ್ತಿಕ: ಸರ್ಕಾರವು ವಿಧಿಸಿದ್ದ ಅನೇಕ ಆರ್ಥಿಕನಿಬಂಧನೆಗಳು ಸಡಿಲವಾದುದರಿಂದ, ಆರ್ಥಿಕಶಕ್ತಿಗಳು ಸ್ವಂತಸ್ಥಾಯಿಯನ್ನು ಪಡೆದವು (ಅಂತಸಂ. ೭); ಪ್ರಪಂಚದ ಬಹುಸಂಖ್ಯಾತಭಾಷೆಗಳಿಗೆ ತಮ್ಮದೇ ಆದ ಒಂದು ಸ್ವಂತ ಲಿಪಿ ಇಲ್ಲ (ದ್ರಾವಿವಿ. ೪೫). ೨. ವ್ಯಕ್ತಿಗತವಾದ; ವಿಶಿಷ್ಟವಾದ. (ನಾ). ೩. ತನ್ನದೇ ಆದುದು; ಖಾಸಾ: ಮಾತುಗಳು ನನ್ನ ಸ್ವಂತವಾದಷ್ಟು (ರಾಯಕ. ೪೭). ೪. ಮುದ್ದಾಂ; ಖುದ್ದು: ಕಾಸಕ್‌ಗಳು ತಮ್ಮ ದ್ರಾಕ್ಷಾರಸವನ್ನು ತಾವೇ ಸ್ವಂತವಾಗಿ ಮಾಡಿಕೊಳ್ಳುತ್ತಾರೆ (ಮಲೆನಾ. ೨೧). **ಸೊಂತ:** ೧. ಅಂತಕನ ಪೋಲ್ವಿಂಥ ಪುರುಷನ ಸೊಂತವಾರ್ಧಕ್ಯವನ್ನು . . . ಕಂಡು (ರಘುವಂ. ೧೨೧-೬೭). ೩. ನಿಂದೂ ಸೊಂತದ್ದಲ್ಲ (ಕಮ್ಮಟ. ೩೩). 'ಸ್ವತಃ' ಪರಾ.

[< ಸಂ. ಸ್ವಂ./ ತಮಿ. ಚೊಂತ; ತೆಲು. ಸೊಂತ]

**ಸ್ವಂತ$_2$** (ನಾ). ೧. 'ಸು' ಎಂಬ ಅಕ್ಷರದಿಂದ ಕೊನೆಯಾಗುವುದು; ಸುಕಾರಾಂತವಾದುದು: ವ್ಯಂಜನರೂಪದಿನೇತಱದಿಂ ಸ್ವಂತಧಾತುಗಕ್ಕುಂ ಚತ್ವಂ (ಶಮದ. ೨೪೯). ೨. ಒಳ್ಳೆಯ ಮುಕ್ತಾಯವನ್ನು ಹೊಂದುವುದು; ಸುಖಾಂತವಾದುದು. [ಸಂ.]

**ಸ್ವಂತಿಕೆ** (ನಾ). ತನ್ನದೇ ಆದ ವಿಶಿಷ್ಟತೆ, – ವೈಶಿಷ್ಟ್ಯ; ತನ್ನತನ: ಆದರ್ಶಮಾನವನ ಸಮನ್ವಯ ಸಮ್ಯಕ್ತ್ವವನ್ನು ಬಣ್ಣಿಸುವುದರಲ್ಲಿ ರತ್ನಾಕರನ ಸ್ವಂತಿಕೆಯಿದೆ (ಕಸಾಚ. ೩೬೭).

[ಸ್ವಂತ$_1$ + - ಇಕೆ]

**ಸ್ವಕಪೋಲಕಲ್ಪನೆ** (ನಾ). ೧. (ಆಲಂ) ಸ್ವಂತವಾದ ಕಲ್ಪನೆ. ೨. ತನ್ನದೇ ಆದ ಊಹೆ: ಆ ಲಿಪಿಗಳ ವಿಚಾರದಲ್ಲಿ ಎಲ್ಲದಕ್ಕಿಂತಲೂ ಹೆಚ್ಚಿನ ಊಹಾಪೋಹಗಳೂ ಸ್ವಕಪೋಲಕಲ್ಪನೆಗಳೂ ಹುಟ್ಟಿಕೊಂಡಿವೆ (ದ್ರಾವಿವಿ. ೨೩). [ಸಂ. ಸ್ವಕಪೋಲಕಲ್ಪನಾ]

**ಸ್ವಕಪೋಲಕಲ್ಪಿತ** (ನಾ). ಸ್ವಂತವಾದ ಕಲ್ಪನೆಯಿಂದ ಕೂಡಿದುದು; ತನ್ನದೇ ಆದ ಊಹೆಯಿಂದ ಕೂಡಿದುದು: ಎಲ್ಲವೂ . . . ಸ್ವಕಪೋಲಕಲ್ಪಿತಗಳೆಂಬ ಬಗ್ಗೆ ಮಾತ್ರ ಯಾರೂ ಅನುಮಾನ ಪಡಲಾರರು (ಬಾಗಿನ. IV, ಮುನ್ನುಡಿ). [ಸಂ.]

**ಸ್ವಕರ್ತೃ** (ನಾ). [ವ್ಯಾಕ] ಕ್ರಿಯೆಯನ್ನು ತಾವೇ ನಿರ್ವಹಿಸುವಂತಹುದು; ಕ್ರಿಯೆಯ ನಿರ್ವಹಣೆಯಲ್ಲಿ ಸ್ವತಂತ್ರವಾದುದು: ಸ್ವಪರಕರ್ತೃವೊಳ್ = ಸ್ವಕರ್ತೃ ಪರಕರ್ತೃವಿನಲ್ಲಿ (ಶಮದ. ೨೩೧ ಟೀಕೆ). [ಸಂ.]

**ಸ್ವಕಾರ್ಯ** (ನಾ). ತನ್ನದೇ ಆದ ಕಾರ್ಯ; ಸ್ವಂತಕೆಲಸ: ಆಹ, ಸ್ವಕಾರ್ಯ ಪರತ್ವವೆಂಬುದು ಹೀಗೆ ತಾನೆ. ಈತನ ಸಂತಾಪದಿಂದ ನಾನು ಸಂತಸಪಡುವೆನು (ಶಾಕುಂತ. ೮೫-೧೧); ಅವರು ಬಂದುದರಿಂದ ಸ್ವಾಮಿಕಾರ್ಯ, ಸ್ವಕಾರ್ಯ ಎರಡೂ ಆಯಿತು (ರೂಢಿ). [ಸಂ.]

**ಸ್ವಕೀಯ** (ಗು). ೧. ತನ್ನದಾದ; ತನಗೆ ಸಂಬಂಧಿಸಿದ; ಸ್ವಂತದ: ಸ್ವಕೀಯ ಚರಮಸಮಯದೊಳ್ . . . ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಆದಿಪು. ೧೬-೪೯ ವ); ಆ ಸಮಯದೊಳುದ್ಯಾನದಿನೀ ಸುಗ್ರೀವಂ ಸ್ವಕೀಯಭವನಕ್ಕೆಯ್ತಂದು (ಪಂರಾಮಾ. ೧೦-೧೦). ೨. ತನ್ನ ಕುಟುಂಬಕ್ಕೆ ಸೇರಿದ; ಸ್ವಂತಸಂಸಾರಕ್ಕೆ ಸೇರಿದ. (ನಾ). ೩. ತನ್ನದೇ ಆದುದು; ಸ್ವಂತವಾದುದು: "ಕಾಸಾ = ಸ್ವಕೀಯವೂ" (ಕಾಶಕ್ಯ. ೨೦೧). ೪. ತನಗೆ ಸಂಬಂಧಿಸಿದ ವ್ಯಕ್ತಿ; ಬಂಧು: ಅಸಮವಿಭೂತಿಗಳನುಪಾರ್ಜಿಸುವೊಡೆ ಜನವಂ ಸ್ವಕೀಯವಂ ಮಾಳ್ಪುದು (ಚಂದ್ರಪ್ರ. ೪-೨೧); ರಣಮಹೀಸಂತಮಸ ಶಾಂತೇಕ್ಷಣರು ದಿಗುಭ್ರಮೆಯಲಿ ಸ್ವಕೀಯ ಕ್ಷಣನವನು ರಚಿಸಿದರು ರೌರವವಾಯ್ತು ರಾತ್ರಿಯಲಿ (ಕುವ್ಯಾದ್ರೋ. ೧೫-೩೦). ೫. ತನ್ನ ಕುಟುಂಬಕ್ಕೆ ಸೇರಿದ ವ್ಯಕ್ತಿ: ಮನೆಯ ಆಡಳಿತವನ್ನು ಆಚಾರ್ಯರು ಸಂಪೂರ್ಣವಾಗಿ ವೆಂಕಮ್ಮನವರಿಗೇ ವಹಿಸಿಕೊಟ್ಟಿದ್ದರು. ಅಲ್ಲಿ ಅವರೇ ಸ್ವಕೀಯರು (ಸಮಜೀ. ೨೭೦). [ಸಂ.]

**ಸ್ವಕೀಯಾನ್ವಯ** (ನಾ). ತನ್ನ ಮನೆತನ ,– ವಂಶ: ಆಗಳ್ ಸೂತರ್ ಸ್ವಕೀಯಾನ್ವಯದರಸುಗಳಂ ಬಣ್ಣಿಸುತ್ತಿರ್ಪಿನಂ (ಶಾಂತಿಪು. ೫-೯೭). [ಸಂ.]

**ಸ್ವಕೀಯೆ** (ನಾ). [ಕಾವ್ಯಮೀ] ಮೂರು ಬಗೆಯ ನಾಯಿಕೆಯರಲ್ಲಿ ಒಬ್ಬಳು; ತನ್ನ ಪತ್ನಿ; ಸ್ವಂತ ಹೆಂಡತಿ: ಬಳಿಕ ಸ್ವಕೀಯೆ ಪರಕೀಯೆ ಪಣ್ಯಾರೆಂಬ ತ್ರಿವಿಧ ನಾಯಿಕೆಯರಿಂ (ವಿವೇಕ. ೧೮೨); ಪ್ರಕಟತರನಾಯಿಕೆಯರಾ ಸ್ವಕೀಯೆ ಪರಕೀಯೆ ಪಣ್ಯೆಯೆನೆ ಮೂಱುತೆಱಂ (ರಸರ. ೩-೮೭ ಸೂತ್ರ). [ಸಂ. ಸ್ವಕೀಯಾ]

**ಸ್ವಕುಲ, ಸ್ವಕುಳ** (ನಾ). ತನ್ನ ಕುಲ; ತನ್ನ ವಂಶ: ಸ್ವಕುಲಪ್ರಧಾನ ಗಜವಾಜಿ ಕುಂಜರಂ ವಿಭು ವೃಷಾಖ್ಯಪುಂಗವಮಕ್ಕುಂ (ವಸ್ತುಕೋ. ೧೨೧-೧೮). **ಸ್ವಕುಳ**: ಸ್ವಕುಳಪಯೋಧಿಚಂದ್ರಿಕೆ . . . ನಯನಾಳಿಜಾಳನವಮಾಳಿಕೆಯೆಂಬುದು ಲೋಕ ಮಾಕೆಯಂ (ಚಂದ್ರಪ್ರ. ೧೩-೩೫). [ಸಂ.]

**ಸ್ವಕುಳ** 'ಸ್ವಕುಲ' ನೋ.

**ಸ್ವಗತ** (ಗು). ೧. ಸ್ವಂತವಾದ; ತನ್ನ; ತನಗೆ ಸಂಬಂಧಿಸಿದ: ಸ್ವಗತಾನಲಸನ್ಮಣಿ ರಶ್ಮಿ ಗಾಢನುಗಣಿತ ಜಲಧ್ವಿಪಾವಳಿ ಕಡಲಂ ಮಿಗೆವಂದಮರಗಜೇಂದ್ರಂ ಸೊಗಯಿಸುವುದು ದಾನವಾರಿ ಲೇಖಾನುಗತಂ (ಕಾವ್ಯಾವ. ೭೭೯); ಸ್ವಗತನಿಬಿಡಪಲ್ಯಂಕಾಸನೋಲ್ಲಾಸಂ . . . ಆತ್ಮಕೇಶಾಳಿಗಳನಘದ ಬೇರಂ ತೀರೆ ಕೀಲ್ಕಂತೆ ಕಿಟ್ಟಂ (ಪುಷ್ಪಪು. ೧೩-೧೧೧). ೨. ಅಂತರ್ಗತವಾದ; ಒಳಗೊಂಡ: ಮುಗುಟ್ದಂ ಮ[ಗುಟ್ಟು]ಮಾತಂ ನೆಗಟ್ದಿರೆ ಪೇಟ್ದುಗಳಕ್ಕುಮಾ ವ್ಯಾವೃತ್ತಿ ಸ್ವಗತಾಳಂಕಾರಂ ಬಗೆಗಗಾಢಮನರದಱ ತೆಱನನೀ ಕುಱಿಪುಗಳಿಂ (ಕವಿರಾ. ೩-೨೧೦). 'ಸ್ವಗತಭೇದ' ಪರಾ. (ನಾ). ೩. ತನ್ನಲ್ಲಿರುವುದು; ಅಂತರಂಗದಲ್ಲಿರುವುದು: ಸ್ವಗತವಿಲ್ಲದ ಮೋದ ಹೊಳಲುಗೊಡದು (ಅರಳು. ೪೧೧-೧೧). ೪. ಆತ್ಮಚಿಂತನೆಯಲ್ಲಿ ಲೀನನಾದವನು; ಅಂತರ್ಮುಖಿ: ನೋಡಿದ ಕೂಡಲೆ ಆತನು ಇತರರಿಗಿಂತ ಸ್ವಂತಂತ್ರನೂ ಸ್ವಗತನೂ ಆಗಿರುವಂತೆ ತೋರುತ್ತಿತ್ತು (ನಿಬಂಧ. II, ೩೮೪). ೫. [ನಾಟ್ಯ] ನಾಟಕದ ಸಂಭಾಷಣೆಯಲ್ಲಿ ಒಂದು ಬಗೆ; ಒಂದು ಪಾತ್ರವು ಉಳಿದ ಪಾತ್ರಗಳನ್ನು ಉದ್ದೇಶಿಸದೆ ಪ್ರೇಕ್ಷಕರಿಗೆ ಮಾತ್ರ ಕೇಳಿಸುವಂತೆ ತನಗೆ ತಾನೇ ಮಾತನಾಡಿಕೊಳ್ಳುವುದು; ಆತ್ಮಗತ: ಸ್ವಗತಂ – ಮಾತನಾಡುವ ಪಾತ್ರವಲ್ಲದೆ ಮತ್ತಾರೂ ಕೇಳದ್ದು (ಕೈಪಿಡಿ. ೨೧೭). 'ಸ್ವಗತಭಾಷಣ' ಪರಾ. [ಸಂ.]

**ಸ್ವಗತತೃಪ್ತ** (ನಾ). ಆತ್ಮತೃಪ್ತಿಯನ್ನು ಹೊಂದಿದವನು; ಆತ್ಮಸಂತೋಷವನ್ನು ಪಡೆದವನು: ಸ್ವಗತತೃಪ್ತರಾಗಿ ಸನ್ಯಾಸಿಯಂತೆ ಅವರು ತಮ್ಮ ಜೀವನವನ್ನು ಸಾಗಿಸಿದ್ದರು (ಸಮಜೀ. ೭೭೫); ಪ್ರಥಮಪ್ರಾಯದಲ್ಲಿ ನಾಚಿಗೆಮುಸುಗಿ ಕುಲವಧುವು ದನಿಗೊಡದೆ ಇದ್ದಾಗ ಪುರುಷನನುರಾಗವು ಬಣ್ಣಗುಂದಿ ಆತನು ಸ್ವಗತತೃಪ್ತನಾಗುತ್ತಾನೆ (ಗೊತ್ತುರು. ೧೪೨). [ಸಂ.]

**ಸ್ವಗತಭಾಷಣ** (ನಾ). = ಸ್ವಗತ ೫ : ಸ್ವಗತಭಾಷಣ ಮುಕ್ತಾಯಗೊಂಡಾಗ ಕೈ ಚಪ್ಪಾಳೆ ನಾಟಕಮಂದಿರದಲ್ಲಿ ಮಾರ್ಮೊಳಗಿತು (ಪುನರು. ೩೯೯). [ಸಂ.]

**ಸ್ವಗತಭೇದ** (ನಾ). ಒಂದು ವಸ್ತುವಿನಲ್ಲಿ ಅಂತರ್ಗತವಾದ ವಿಭಾಗ: ಪ್ರತಿವಸ್ತುವಿಗೂ ಸಜಾತೀಯಭೇದ, ವಿಜಾತೀಯಭೇದ, ಸ್ವಗತಭೇದವೆಂದು ಮೂರು ವಿಧ ವಸ್ತುಗಳಿರುವುವು (ಹಿಂದಸಾ. ೨೨೨); ಇಲ್ಲಿ ಬರುವ ಪದ, ವಾಕ್ಯ, ವರ್ಣ, ಪದಭಾಗ, ಸಂಘಟನೆ, ಮಹಾವಾಕ್ಯ – ಈ ಭೇದಗಳೆಲ್ಲ ವ್ಯಂಜಕಶಬ್ದದ ಸ್ವಗತಭೇದಗಳು (ಧ್ವನ್ಯಾಲೋ. ೧೧೭ ಅಡಿಟಿ). [ಸಂ.]

**ಸ್ವಗುರುಸ್ಥಾನಸಂಕ್ರಾಂತಿ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು; ಮುನಿಗಣಕ್ಕೆ ಪೋಷಕನಾಗಿದ್ದು ತನ್ನ ಗುರು ಅಲಂಕರಿಸಿದ್ದ ಸ್ಥಾನವನ್ನು ಅಲಂಕರಿಸುವುದು; ಸ್ವಗುರುಸ್ಥಾನಾವಾಪ್ತಿ: ಸ್ವಗುರುಸ್ಥಾನಸಂಕ್ರಾಂತಿ ನಿಸ್ಸಂಗತ್ವಾತ್ಮಭಾವನಾಯೋಗ . . . ಎಂಬಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ ವ); ಆದಾನಮುಂ . . . ಸ್ವಗುರುಸ್ಥಾನಸಂಕ್ರಾಂತಿಯುಂ . . . ನಿರ್ವಾಣಪರ್ಯಂತ ಮಪ್ಪಯ್ವತ್ತುಮೂಱುಗರ್ಭಾನ್ವಯಕ್ರಿಯೆಯೊಳ್ (ಚಾವುಂಪು. ೨೧೨). 'ದೀಕ್ಷೆ' ಪರಾ. [ಸಂ.]

**ಸ್ವಗೃಹ** (ನಾ). ೧. ಸ್ವಂತಮನೆ; ತನ್ನಮನೆ: ವಧುವಿನ ಸ್ವಗೃಹದಲ್ಲಿ ವಿವಾಹಮಹೋತ್ಸವವನ್ನು ನೆರವೇರಿಸಬೇಕೆಂದು ಗುರುಹಿರಿಯರು ನಿಶ್ಚಯಿಸಿರುತ್ತಾರೆ (ರೂಢಿ). ೨. [ಜ್ಯೋತಿ] (ಆಯಾರಾಶಿಯ) ಸ್ವಂತಕ್ಷೇತ್ರ; ಸ್ವಕ್ಷೇತ್ರ: ಕ್ರಮದಿಂ ದ್ವಾದಶಭಾಗಮೊಂದು ಗೃಹಕಕ್ಕುಂ ತದ್ಗೃಹದ್ವಾದಶಾಂಶಮನಾಳ್ವರ್ ಸ್ವಗೃಹಾದಿ ರಾಶಿಪತಿಗಳ್ (ಜಾತತಿ. ೧-೨೭). [ಸಂ.]

**ಸ್ವಗೃಹತ್ಯಾಗ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ತನ್ನ ಸಂಪತ್ತನ್ನೆಲ್ಲ ದಾನಮಾಡಿ ಆತ್ಮಕಲ್ಯಾಣಸಾಧನೆಗಾಗಿ ಮನೆಬಿಟ್ಟು ಹೊರಡುವುದು: ಆದಾನಮುಂ . . . ಸ್ವಗೃಹತ್ಯಾಗಮುಂ . . . ನಿರ್ವಾಣಪರ್ಯಂತಮಪ್ಪಯ್ವತ್ತುಮೂಱು ಗರ್ಭಾನ್ವಯಕ್ರಿಯೆಯೊಳ್ (ಚಾವುಂಪು. ೨೧೨). 'ದೀಕ್ಷೆ' ಪರಾ. [ಸಂ.]

**ಸ್ವಗೃಹಸ್ಥ** (ನಾ). [ಜ್ಯೋತಿ] ಸ್ವಂತಕ್ಷೇತ್ರದಲ್ಲಿರುವುದು: ಗ್ರಹಮೇಱುಂ ಜನನೋದಯಗೃಹಮುಂ ಬಲಯುಕ್ತಮೆನೆ ಪರಸ್ಪರ ಪೀಡಾರಹಿತಂ ಸ್ವಗೃಹಸ್ಥಂ ತದ್ಗೃಹಮೆನೆ ಪರಮಾಯುವಂ ಯಥೋಕ್ತಂ ಕುಡುಗುಂ (ಜಾತತಿ. ೮-೯). [ಸಂ.]

**ಸ್ವಗ್ರಾಮ** (ನಾ). ಸ್ವಂತಗ್ರಾಮ; ತನ್ನ ಹಳ್ಳಿ: ಜಾತ್ರೆಗೆ ಬಂದವರೆಲ್ಲರೂ ಸ್ವಗ್ರಾಮಗಳಿಗೆ ತೆರಳಿದರು (ರೂಢಿ). [ಸಂ.]

**ಸ್ವಚ್ಛ₁** (ಗು). ೧. ಪಾರದರ್ಶಕವಾದ. ೨. ಬಿಳಿಯ; ಬಿಳುಪಾದ. ೩. ಪರಿಶುದ್ಧವಾದ; ನಿರ್ಮಲವಾದ: ಹಾರಾಂಶು ಸ್ವಚ್ಛನೀರಂ ಸುರಯುವತಿ ಮುಖಾಂಭೋಜನೇತ್ರೋತ್ಪಲಶ್ರೀಸಾರಂ (ಆದಿಪು. ೧೦-೧೯). ೪. ನಿಷ್ಕಳಂಕವಾದ; ದೋಷರಹಿತವಾದ: ಆಲಿಸು ಮದೀಯ ಸ್ವಚ್ಛವಾಕ್ಯಗಳಂ (ಶ್ರೀಮಹಾ. ೯-೧೭). (ನಾ). ೫. ನಿರ್ಮಲವಾದುದು; ಪರಿಶುದ್ಧವಾದುದು : "ಅನಾವಿಲಂ ಪ್ರಸನ್ನಂ ಸ್ವಚ್ಛಂ" (ವಸ್ತುಕೋ. ೧೧೮-೭೦); ಸ್ವಚ್ಛಂಗಳ್ ನಿಜದಿಂ ವಿರಕ್ತವಿನುತಂಗಳ್ . . . ರತ್ನತ್ರಯಂಗಳ್ ಹೃದಯವ್ಯಚ್ಛನ್ನಾಭರಣಂಗಳಕ್ಕೆಮಗೆ ಮುಕ್ತಿಶ್ರೀ ಮನಂಗೊಳ್ವಿನಂ (ಪುಷ್ಪಪು. ೧-೮). ೬. ಸ್ಫಟಿಕಶಿಲೆ. [ಸಂ.]

**ಸ್ವಚ್ಛ₂** (ಅ). (ಉಕ) ಸ್ಪಷ್ಟವಾಗಿ; ಸ್ಫುಟವಾಗಿ: ನಾ ಸ್ವಚ್ಛ ಹೇಳತೀನಿ, ನಿನ್ನ ಮ್ಯಾಲ ನಾ ಸಿಟ್ಟಗೆದ್ದೀನಿ (ಹೊಸಂಸಾ. ೧೭೨). [< ಸ್ವಚ್ಛ₁]

**ಸ್ವಚ್ಛಂದ** (ಗು). ೧. ಮನಸ್ಸು ಬಂದಂತೆ ನಡೆದುಕೊಳ್ಳುವ; ಅಂಕೆಯಿಲ್ಲದ; ಸ್ವೇಚ್ಛೆಯಿಂದ ಕೂಡಿರುವ: ಇಂದಲೇ ರಿಪುರುಧಿರಪಾನಾನಂದಕೃತಮದಶಾಕಿನೀ ಸ್ವಚ್ಛಂದಲೀಲಾನೃತ್ಯದರ್ಶನವೆಂದನಾ ಚೈದ್ಯ (ಕುವ್ಯಾಸ. ೧೦-೫೭). ೨. ಸ್ವಪ್ರೇರಣೆಯ; ಸ್ವತಃ ಪ್ರೇರಿತವಾದ. ೩. ಸಂಸ್ಕರಣವಿಲ್ಲದ; ನಯವಿಲ್ಲದ. (ನಾ). ೪. ಮನಸ್ಸು ಬಂದಂತೆ ನಡೆದುಕೊಳ್ಳುವಿಕೆ; ಕಟ್ಟುಪಾಡಿಲ್ಲದಿರುವಿಕೆ; ಸ್ವೇಚ್ಛೆ: "ಸ್ವವಶಂ ಸ್ವಚ್ಛಂದಂ ಸ್ವೈರವೃತ್ತಿ" (ವಸ್ತುಕೋ. ೧೧೧-೧೯); ಈ ವಿಚಿತ್ರಸನ್ನಿವೇಶ, ನೇಹ ನಲುಮೆಗಳ ತಾಕಲಾಟ . . . ಇವೆಲ್ಲ ಅವನ ಚಿದಾಕಾಶದಲ್ಲಿ ಸ್ವಚ್ಛಂದವಾಗಿ ಅಲೆಯತೊಡಗಿದವು (ಸಮಜೀ. ೪೩೧); ಹಾಗಾದರೆ ಸ್ವೇಚ್ಛೆಯಿಂದ ಸ್ವಚ್ಛಂದವಾಗಿ ಹಾರು (ಕಲ್ಲೋಲ. ೨೨-೫). ೫. ಮುಕ್ತವಾದುದು; ಐಚ್ಛಿಕವಾದುದು: ಆದಿಸ್ವರ ಪದಮಂತ್ಯದೊಳಾದೆಡೆಯೊಳ್ದೀರ್ಘಮಕ್ಕುಮೆರಡನೆಯ ವಿಭಕ್ತ್ಯಾದಾನಪದಂ ದೀರ್ಘಂ ಪಾದಾಂತದೊಳುೞಿದ ತಾಣದೊಳ್ ಸ್ವಚ್ಛಂದಂ (ಕವಿರಾ. ೨-೧೭). ೬. ಸ್ವತಂತ್ರವಾಗಿರುವವನು; ಬೇರೆ ಯಾರಿಗೂ ಅಧೀನನಲ್ಲದವನು: "ಯಥಾಕಾಮೀ, ಸ್ವರುಚಿಃ, ಸ್ವಚ್ಛಂದಃ, ನಿರವಗ್ರಹಃ – ಈ ೪ ತನ್ನಿಚ್ಛೆಕಾಱಂ" (ಹಲಾಯು. ೭೨-೨೨೪). [ಸಂ.]

**ಸ್ವಚ್ಛಂದಗಾಮಿ** (ನಾ). ತನ್ನ ಮನಸ್ಸು ಬಂದಂತೆ ಸಂಚರಿಸುವವನು; ನಿರ್ಬಂಧ ವಿಲ್ಲದೆ ಓಡಾಡುವವನು: ಕಮಲಾಕ್ಷಂ ಸ್ವಚ್ಛಂದಗಾಮಿ ಯಮುನಾಕಚ್ಛಂ ಬಿಡಿದೆಟ್ಟರುತ್ತುಮೊಂದವಸರದೊಳ್ (ಜಗವಿ. ೩-೭೯). [ಸಂ. ಸ್ವಚ್ಛಂದಗಾಮಿನ್]

**ಸ್ವಚ್ಛಂದಚಾರಿ** (ನಾ). ಸ್ವೇಚ್ಛೆಯಿಂದ ವರ್ತಿಸುವ ವ್ಯಕ್ತಿ; ಸ್ವೈರವೃತ್ತಿಯುಳ್ಳ ವ್ಯಕ್ತಿ: ಅದುವೆ ಮೊದಲಾಗೀಗಳಲ್ಲಿಯ ಸುದತಿಯರು ಸ್ವಚ್ಛಂದಚಾರಿಯರು (ಕುವ್ಯಾಸ. ೫-೧೭). [ಸಂ. ಸ್ವಚ್ಛಂದಚಾರಿನ್]

**ಸ್ವಚ್ಛಂದಚಾರಿಣಿ** (ನಾ). ಮನಸ್ಸು ಬಂದಂತೆ ನಡೆಯುವವಳು; ಸ್ವೈರಿಣಿ:

ಮುಖದಲ್ಲಿ ಮಧುವನ್ನೂ ಹೃದಯದಲ್ಲಿ ವಿಷವನ್ನೂ ಧರಿಸಿರುವ ಈತನ ಕೈ ಸೇರಿದುದುಕ್ಕೆ ನಾನು ಚೆನ್ನಾಗಿ ಸ್ವಚ್ಛಂದಚಾರಿಣಿಯಾದೆನು (ಶಾಕುಂತ. ೭೦-೨೦); ಶಕುಂತಲೆ . . . ರಾಣಿಯಾಗುವುದಿರಲಿ ತಾನು ಸ್ವಚ್ಛಂದಚಾರಿಣಿಯಲ್ಲವೆಂದು ನಾಲ್ಕುಜನರೆದುರು ಸಿದ್ಧಪಡಿಸಬೇಕಾಯ್ತು (ಧರ್ಮಸಾ. ೭೧). [ಸಂ. ಸ್ವಚ್ಛಂದಚಾರಿಣೀ]

**ಸ್ವಚ್ಛಂದಛಂದ** (ನಾ). [ಛಂದ] (ಪ್ರಾಸ, ಗಣ, ಯತಿ ಇತ್ಯಾದಿ) ಪರಿಚಿತವಾದ ಸಾಂಪ್ರದಾಯಿಕನಿಯಮಗಳ ಕಟ್ಟುಪಾಡಿಗೆ ಒಳಪಡದ ಕಾವ್ಯರಚನೆಯ ಛಂದಸ್ಸು; ಮುಕ್ತಛಂದಸ್ಸು: ವಚನಗಳಲ್ಲಿ ನಿರ್ದಿಷ್ಟವಾದ ಯಾವ ಛಂದೋಬಂಧಗಳು ಅಡಕವಾಗಿದ್ದರೂ ಅವುಗಳಲ್ಲಿ ಒಂದು ಸ್ವಚ್ಛಂದಛಂದದ ನಾಡಿಯು ಸ್ಪಂದಿಸುವುದೆಂಬುದನ್ನೂ . . . ಈ ಸಂದರ್ಭದಲ್ಲಿ ಗಮನಿಸಬೇಕು (ಛಂದೋವಿ. ೨೩೦); ಭಾವಗೀತಗಳ ವಿವಿಧ ತಾನ ಲಹರಿ, ಸರಳರಗಳೆ, ಸ್ವಚ್ಛಂದಛಂದ . . . ಹೀಗೆ ಛಂದಸ್ಸು - ಶೈಲಿಗಳ ವಿಕಾಸವಾಯಿತು (ನವ್ಯಕಾ. ೨೫). [< ಸಂ. ಸ್ವಚ್ಛಂದಛಂದಸ್]

**ಸ್ವಚ್ಛಂದತೆ** (ನಾ). ಮನಬಂದಂತೆ ಇರುವ ಸ್ವಾತಂತ್ರ್ಯ; ಯಾವುದೇ ಕಟ್ಟುಪಾಡುಗಳಿಲ್ಲದೆ ಇರುವ ಸ್ವತಂತ್ರತೆ: ಛಂದಸ್ಸಿನ ಸುಖಭಾವದ ಒತ್ತಡದಲ್ಲಿ ಪದಗಳು ತಮಗೆ ತಾವೆ ಖಚಿತವಾಗಿ ಜೋಡಣೆಗೊಳ್ಳುವ ಸ್ವಚ್ಛಂದತೆಯಲ್ಲಿವೆ (ಕಾವ್ಯಕು. ೯೩).

[ಸಂ. ಸ್ವಚ್ಛಂದತಾ]

**ಸ್ವಚ್ಛಂದಪ್ರವೃತ್ತಿ** (ನಾ). ಮನ ಬಂದಂತೆ ವರ್ತಿಸುವುದು; ಸ್ವೇಚ್ಛಾವೃತ್ತಿ: ಈ ಹಬ್ಬದಲ್ಲಿ ವಿದ್ಯಾರ್ಥಿಗಳ ಸ್ವಚ್ಛಂದಪ್ರವೃತ್ತಿಗೆ ಸಾಕಷ್ಟು ಅವಕಾಶ ಸಿಗುತ್ತಿದ್ದುದರಿಂದ ಅವರ ಹಾವಳಿ ಹೆದ್ದೊರೆಯಂತೆ ಹರಿಯತೊಡಗಿತು (ರಂಗರೋ. ४३); ಅದಕ್ಕೆ ಅವಳ ರಾಷ್ಟ್ರೀಯಜೀವನದ ವಿಷಯವಾಗಿರುವ ಶ್ರದ್ಧೆಯೇ ಕಾರಣವಲ್ಲದೆ ಸ್ವಚ್ಛಂದಪ್ರವೃತ್ತಿಯಾಗಲಿ, ಸ್ವೇಚ್ಛಾಚಾರವಾಗಲಿ ಅಲ್ಲಿಲ್ಲವೆಂಬುದನ್ನು ವಿಚಾರವಂತರು ಒಪ್ಪಿಕೊಂಡಿದ್ದಾರೆ (ಪ್ರಬಂಧ. ೯೦). [ಸಂ.]

**ಸ್ವಚ್ಛಂದಮರಣ** (ನಾ). ೧. ತನಗೆ ಮನಸ್ಸು ಬಂದಾಗ ಪಡೆಯುವ ಸಾವು; ಇಚ್ಛಾಮರಣ. ೨. ತನಗೆ ಇಚ್ಛೆ ಬಂದಾಗ ಸಾವನ್ನು ಪಡೆಯಬಲ್ಲವನು; ಇಚ್ಛಾಮರಣಿ: ನೀನು ಸ್ವಚ್ಛಂದಮರಣನಾಗು! ನೀನಾಗಿ ಸಾವನ್ನು ಅಪೇಕ್ಷಿಸುವವರೆಗೂ ನಿನಗೆ ಸಾವು ಬರದೆ ಇರಲಿ! (ವಚಭಾ. ೫). [ಸಂ.]

**ಸ್ವಚ್ಛಂದಮಿಚ್ಚು** (ನಾ). = ಸ್ವಚ್ಛಂದಮರಣ ೨: ಅಂತು ಶರಪಂಜರದೊಳೊಱಗಿಯುಮೊಡಲಿಂ ಪತ್ತುವಿಟ್ಟು ಪೋಪ ಜೀವಮಂ ಪೋಗಲೀಯದೆ ಸ್ವಚ್ಛಂದಮಿಚ್ಚುವಪ್ಪುದಱಿಂದುತ್ತರಾಯಣಂ ಬರ್ಪನ್ನಮಿರಿಸಿದಂ (ಪಂಪಭಾ. ೧೧-೪೭ ವ).

[ಸ್ವಚ್ಛಂದ + ಮಿಚ್ಚು]

**ಸ್ವಚ್ಛತೆ** (ನಾ). ಪರಿಶುದ್ಧವಾಗಿರುವಿಕೆ; ತಿಳಿಯಾಗಿರುವಿಕೆ; ನೈರ್ಮಲ್ಯ: ಸ್ವಾದು ಸ್ವಚ್ಛತೆ ಶೈತ್ಯವಮಾವೋದವೊಂದಿ ಸೊಗಸಾದ ಲಲಿತಾಂಗಿಯರ ಕರತಳದ ವಿಮಲಕಲಶೋದಕವನೊಲಿದೀಂಟುತಿರ್ದೊಡಂ (ಜೈಮಿಭಾ. ೩-೧೦).

[ಸಂ. ಸ್ವಚ್ಛತಾ]

**ಸ್ವಜನ** (ನಾ). ೧. ಒಂದೇ ಕುಲ ಅಥವಾ ಜಾತಿಗೆ ಸೇರಿದ ಜನ; ಸ್ವಂತಜನ. ೨. ನಂಟ; ಬಂಧು: "ಜನನಮನ್ವವಾಯಂ ಕುಲಮಿನ್ನಂತವಱೊಳ್ ಜನಿಯಿಸಿದಾತಂ ತಾಂ ಸ್ವಜನಂ ಸ್ವಬಂಧು" (ವಸ್ತುಕೋ. ೫೭-೨೯).

**ಸ್ವಜನಪಕ್ಷಪಾತ** = ತನ್ನ ಜಾತಿಗೆ ಅಥವಾ ತನಗೆ ಸಂಬಂಧಿಸಿದ ಜನರ ಬಗ್ಗೆ ಒಲವರವನ್ನು ತೋರಿಸುವಿಕೆ,– ಪಕ್ಷಪಾತ ಮಾಡುವಿಕೆ: ಅವರು ಅಧಿಕಾರದಲ್ಲಿರುವಾಗ ಸ್ವಜನಪಕ್ಷಪಾತದಿಂದ ತಮ್ಮವರನೇಕರಿಗೆ ಉದ್ಯೋಗಗಳನ್ನು ಒದಗಿಸಿಕೊಟ್ಟರು (ರೂಢಿ). [ಸಂ.]

**ಸ್ವಜಾತಿ** (ನಾ). ೧. ಸ್ವಂತಜಾತಿ; ತನ್ನ ಕುಲ: ಸ್ವಜಾತಿ ಧರ್ಮನೀತಿಯ ಬಿಟ್ಟು ವಿಜಾತಿಗಳ ಎಂಜಲು ತಿಂಬ ಪಾಪಕರ್ಮಿಗಳಾದಡಾಗಲಿ . . . ರುದ್ರಾಕ್ಷಿಮಾಲೆಯ ಕೊರಳಲ್ಲಿ ಧರಿಸಿದರೆ ಪರಮಪವಿತ್ರನೆನಿಸಿ ಹರನ ಕೈಲಾಸದಲ್ಲಿಪ್ಪನು ನೋಡಾ (ಅಖಂಡೇ. ೪೫-೮); ಹೆಂಡಕುಡಿಯುವವರಿಗೆ ಸ್ವಜಾತಿಯವರೂ ಹಿಂದೆ ಚೆಂಬಿನಲ್ಲಿ ನೀರು ಕೊಡುತ್ತಿರಲಿಲ್ಲ (ಪನ್ನೂರು. ೩೧೫). ೨. ತನ್ನ ಜೀವವರ್ಗ; ಸ್ವಂತ ಜೀವಜಾತಿ.

[ಸಂ.]

**ಸ್ವಜೀವ** (ನಾ). ತನ್ನ ಜೀವ,– ಪ್ರಾಣ: ಧನಮುಚಿತದಾನದೊಳ್ ಜವ್ವನಂ ತಪೋನಿಯಮದೊಳ್ ಸ್ವಜೀವಂ ಸನ್ಯಾಸನದೊಳ್ ಪೋದಂಗೇವೋಯ್ತೆನೆ ಸುಜನರ್ ನೃಪತಿ ಪಾತ್ರದಾನಮನಿತ್ತಂ (ಶಾಂತಿಪು. ೬-೭೩). [ಸಂ.]

**ಸ್ವತಂತ್ರ** (ಗು). ೧. ಪರಾಧೀನವಲ್ಲದ; ಸ್ವಾವಲಂಬಿಯಾದ: ವ್ಯಕ್ತಿ ಯಾವಾಗಲೂ ಸ್ವತಂತ್ರಜೀವಿಯಾಗಿರಲು ಪ್ರಯತ್ನಿಸಬೇಕು (ರೂಢಿ). ೨. ಸ್ವೇಚ್ಛೆಯಿಂದ ಕೂಡಿದ; ಸ್ವಚ್ಛಂದವೃತ್ತಿಯ; ಯಾರ ಅಧೀನಕ್ಕೂ ಒಳಪಡದ. ೩. (ಮಕ್ಕಳ ವಿಚಾರದಲ್ಲಿ) ತಂದೆ, ತಾಯಿಗಳ ಅಧೀನಕ್ಕೆ ಒಳಪಡದ; ವಯಸ್ಸಿಗೆ ಬಂದ; ಬೆಳೆದ. (ನಾ). ೪. ಯಾರ ಅಧಿಕಾರಕ್ಕೂ ಒಳಪಡದಿರುವಿಕೆ; ಸ್ವಾತಂತ್ರ್ಯ; ಅನಿರ್ಬಂಧತೆ: "ಸ್ವತಂತ್ರ ವ್ಯತ್ಯಾನಂ ವಿವೃತ್ತಿಯೆನಲೊಲಿದಂತೆ ನಡಹಮಕ್ಕುಂ" (ಮಂಗರಾ. ೧೩೩-೩೦); ವ್ಯಕ್ತಿ ಸ್ವತಂತ್ರವಾಗಿ ಅವುಗಳನ್ನು ಬೆದಕಿ ಹೊಸದನ್ನು ಸೇರಿಸುವಂತೆ ಇರಲಿಲ್ಲ (ಶಿಕ್ಷದ. ೩೭); ದೇಶಾಂತರ ಹೋದರೂ ಸ್ವತಂತ್ರವಿರಬೇಕು (ಗಾದ). ೫. ಸ್ವಾತಂತ್ರ್ಯದಿಂದ ಕೂಡಿದವನು; ನಿರ್ಬಂಧವಿಲ್ಲದವನು: ಕೂಡಲಸಂಗಮದೇವಾ ನಿಮ್ಮ ಶರಣರು ಸ್ವತಂತ್ರರು (ಬಸವ. ೮೧೮); ನೀನು ಇನ್ನೂ ಸಣ್ಣವನು; ಸ್ವತಂತ್ರವಾಗಿ ನಡೆಯತಕ್ಕಷ್ಟು ಪ್ರೌಢನಾಗಿಲ್ಲ (ಮುಂಬಯಿ. ४-೩೮). ೬. [ವ್ಯಾಕ] ಸಾಪೇಕ್ಷವಲ್ಲದುದು: ಅವಂ ಅವಳ್ ಅದು ಎಂಬಿವು ಸ್ವತಂತ್ರಂಗಳ್ (ಶಮದ. ೧४೩ ವೃತ್ತಿ). [ಸಂ.]

**ಸ್ವತಂತ್ರಿ** (ನಾ). ಸ್ವಾತಂತ್ರ್ಯವನ್ನು ಹೊಂದಿದವನು; ನಿರ್ಬಂಧವಿಲ್ಲದವನು: ನಾನಱಿದು ತಿಂದಿಹೆನೆಂದಡೆ ಸ್ವತಂತ್ರಿಯಲ್ಲ ನಿನ್ನ ಭೇದಿಸಿ ಕಂಡಿಹೆನೆಂದಡೆ ಸ್ವಾಮಿವಿಶ್ವಾಸಿಯಲ್ಲ (ಮೋಳಿಮಾ. ೯೯-೩೯೫). [ಸಂ. ಸ್ವತಂತ್ರಿನ್]

**ಸ್ವತಂತ್ರಿಕೆ** (ನಾ). ಸ್ವಾತಂತ್ರ್ಯ; ಸ್ವತಂತ್ರತ್ವ: ತನ್ನಿಂದಱಿದೆನೆಂದಡೆ ಸ್ವತಂತ್ರಿಕೆ ಇಲ್ಲ ಇದಿರಿಂದಱಿದೆನೆಂದಡೆ ಪರತಂತ್ರಿಯಲ್ಲ (ಮೋಳಿಮಾ. ೯-೩೧).

[ಸ್ವತಂತ್ರ + - ಇಕೆ]

**ಸ್ವತಂತ್ರಿಸು** (ಕ್ರಿ). ಸ್ವಾತಂತ್ರ್ಯವನ್ನು ಹೊಂದು; ಸ್ವಾತಂತ್ರ್ಯವನ್ನು ವಹಿಸಿಕೊಳ್ಳು: ಮಂತ್ರದಿಂ ತಹೆನೆಂಬುದೇಕಾಣೆಯಿಷ್ಟು ಸ್ವತಂತ್ರಿಸುತಿದೆಯೆಂದಳಾಕೆ (ಭರಚ. ४೭-೧೩೭); ನಾನೇ ಸ್ವತಂತ್ರಿಸಿ ಸರಸ್ವತಿಯನ್ನು ಕರೆದು ಕೇಳುವೆನು (ನಡೆದಾ. II, ೧४೩೯).

[ಸ್ವತಂತ್ರ + - ಇಸು$_3$]

**ಸ್ವತಃ** (ಅ). ತಾನೇ; ಖುದ್ದಾಗಿ; ಸ್ವಯಂ: ನೀವೀಗ ಸ್ವತಃ ಹೋಗಬೇಕೇನು? (ಪ್ರಣಸ. ೫). [ಸಂ. ಸ್ವತಸ್]

**ಸ್ವತಃಪ್ರಮಾಣ** (ನಾ). ಸ್ವಯಂ ವ್ಯಕ್ತವಾದುದು; ತಾನೇ ಪ್ರಮಾಣವಾದುದು; ಸ್ವತಃ ಸಿದ್ಧವಾದುದು: ಮಾನವನ ಪುಸ್ತಕಭಂಡಾರದಲ್ಲಿ ವೇದವು ಅತ್ಯಂತ ಪುರಾತನ . . . ಸನಾತನಕಾಲದಿಂದ ಭಾರತೀಯರಿಗೆ ಅದು ಸ್ವತಃಪ್ರಮಾಣ; ಶಾಶ್ವತಸತ್ಯ (ಭಾರದ. ೩४). [ಸಂ.]

**ಸ್ವತಃಸಿದ್ಧ** (ನಾ). ೧. = ಸ್ವತಃಪ್ರಮಾಣ. ೨. ಸ್ವಯಂವ್ಯಕ್ತನಾದವನು; ಸ್ವತಃ ಪ್ರಮಾಣನಾದವನು; ಸ್ವಯಂಭೂ: ಶತಪತ್ರಕಮಳಕರ್ಣಿಕಾಮಧ್ಯದಲ್ಲಿ ಸ್ವತಃ ಸಿದ್ಧನಾಗಿರ್ಪ ನಮ್ಮ ಕೂಡಲಸಂಗಮದೇವ (ಬಸವ. ೮೧೭). [ಸಂ.]

**ಸ್ವತಸ್ಸಿದ್ಧ** (ನಾ). = ಸ್ವತಃಪ್ರಮಾಣ: ಅವೆಲ್ಲಾ ಧ್ವನಿತಾರ್ಥವೇ, ಅದು ಸ್ವತಸ್ಸಿದ್ಧವಾಗಿರಬಹುದು (ಧ್ವನ್ಯಾಲೋ. X, ಮುನ್ನುಡಿ). [ಸಂ.]

**ಸ್ವತ್ತು** 'ಸೊತ್ತು$_2$' ನೋ.

**ಸ್ವತ್ವ** (ನಾ). ೧. ಸ್ವತಂತ್ರಸ್ಥಿತಿ,– ಅಸ್ತಿತ್ವ. ೨. ಸ್ವಂತ ಹಕ್ಕು; ಒಡೆತನ; ಸ್ವಾಮ್ಯ: ದಾನವೆಂದರೆ ದಾತನು ದಾನಮಾಡುವ ಸ್ವತ್ತಿನ ಮೇಲೆ ತನಗಿರುವ ಸ್ವತ್ವವನ್ನು ನಿವೃತ್ತಿ ಮಾಡಿ ಅದರ ಮೇಲೆ ಪ್ರತಿಗ್ರಹೀತನ ಸ್ವತ್ವವನ್ನು ಉತ್ಪಾದನ ಮಾಡುವ ಕ್ರಿಯೆಯು (ಆರ್ಯಧ. ೮೮); ಪ್ರತ್ಯಕ್ಷವಿಲ್ಲದಾ ಸ್ವಾಮಿಯಂ ನೆನೆನೆನೆದು ಸತ್ಯ ಭಕ್ತಿಯ ಸೇವೆಗೆಯ್ದವಂ ಭರತಂ ನಿತ್ಯಜೀವನದಿ ನೀನಾ ನಯವನನುಸರಿಸೊ ಸ್ವತ್ವದಾಶೆಯ ನೀಗಿ (ಮಂಕುಕ. ೭೧೦). ೩. ತನ್ನತನ; ಸ್ವಂತಿಕೆ: ಪರಿಸ್ಥಿತಿಯು ಹಲವು ಬಗೆಗಳಿಂದ ವಂಶಮಿಶ್ರಣಕ್ಕೆ ಜನಾಂಗಗಳನ್ನು ಒತ್ತಾಯಪಡಿಸುತ್ತಿದ್ದರೂ ಮನುಷ್ಯನಲ್ಲಿರುವ ಸ್ವತ್ವದ ಅಭಿಮಾನವು ಈ ವಿಷಯಕ್ಕೆ ಎಷ್ಟೋ ತಡೆಯನ್ನು ಹಾಕಿದೆ (ಕರ್ನಾಪೂ. ೧೦). [ಸಂ.]

**ಸ್ವದಸ್ಖತ್ತುರ** (ನಾ). ೧. ಸ್ವಂತ ಕೈಬರೆಹ; ಸ್ವಹಸ್ತಾಕ್ಷರ: ನರಸಪ್ಪನ ಸ್ವದಸ್ಖತ್ತುರ ಬರಹ ಬಸವಲಿಂಗಯದೇವರ ಸ್ವಹಸ್ತದಿನ್ನಾ ಬರಕೊಟ್ಟ ಭೂದಾನ ಪೊಪಿತ (ಮೈಆರಿ. ೧೯೨೮ ; ೮೨-೪೮ ; 1768); ಶಂಕರಕಾಕಾ ಅವರಿಗೆ ಸ್ವದಸ್ಖತ್ತುರ ಖುದ್ದ ಕಾಗದ ಬರೆದಿದ್ದ (ದೀಪಹ. II. ೩೬೪). ೨. ಸ್ವಂತ ಸಹಿ; ತನ್ನ ರುಜು : ಇವನ – ಸ್ವದಸ್ಖತ್ತುರ (ಪೂರ್ವದ ಯಜಮಾನ) (ನಿರಾಭ. ೧೪೭). [← ಮರಾ. ಸ್ವದಸ್ಖತ್ತುರ್]

**ಸ್ವದಾರಸಂತೋಷ** (ನಾ). ತನ್ನ ಹೆಂಡತಿಗೆ ಸಂತೋಷವನ್ನುಂಟುಮಾಡುವಿಕೆ: ವಸುವಂ ದ್ವಿಜನ್ಮದಾನದೆ ಪೊಸಜೌವನಮಂ ಸಂತೋಷಬೆ ನಿನ್ನಸುವಂ ಪತಿಕಾರ್ಯದೆ ವರ್ಜಿಸಿದೈ ನಿನ್ನನ್ನನಾವನಂಗಾಧಿಪತೀ (ಗದಾಯು. ೫-೨೨). [ಸಂ.]

**ಸ್ವದೇಶ** (ನಾ). ಸ್ವಂತ ದೇಶ; ತಾಯ್ನಾಡು: ಇಂತಹ ಎಷ್ಟೋಜನ ನರಪಿಶಾಚರು ಸ್ವದೇಶಹಿತೈಷಿಗಳೆಂಬ ಮೊಗವಾಡಗಳನ್ನು ಹಾಕಿಕೊಂಡು . . . ತಮ್ಮ ಹಾಳ ಹೊಟ್ಟೆಗಳನ್ನು ಹೊರೆದುಕೊಳ್ಳುತ್ತಿರುವರು (ಚೆನ್ನಬೇ. ೧೮೭). [ಸಂ.]

**ಸ್ವದೇಶಾಭಿಮಾನ** (ನಾ). ತಾಯ್ನಾಡಿನ ಬಗೆಗಿರುವ ಅಭಿಮಾನ, – ಗೌರವ: ಇಂಗ್ಲೀಷ್‌ಸಾಹಿತ್ಯವನ್ನೋದಿದ ಭಾರತೀಯರು ಅದರಲ್ಲಡಕವಾದ ಸ್ವದೇಶಾಭಿಮಾನವನ್ನೂ ಸ್ವಾತಂತ್ರ್ಯಪ್ರೇಮವನ್ನೂ ಬೆಳೆಸಿಕೊಂಡರು (ಭಾರದ. ೪೨೭). [ಸಂ.]

**ಸ್ವದೇಶಿ** (ಗು). ಸ್ವಂತದೇಶಕ್ಕೆ ಸಂಬಂಧಪಟ್ಟ ; ತಾಯ್ನಾಡಿಗೆ ಸೇರಿದ: ಜರ್ಮನ್ ಬ್ಯಾಂಕುಗಳು ಸ್ವಾಕು, ಸ್ವದೇಶಿಹುಂಡಿ ಮತ್ತು ವಿನಿಮಯದ ಹುಂಡಿಗಳ ದಲ್ಲಾಳಿಕೆಲಸ ಮಾಡುವರು (ಹಣಪ್ರ. ೧೨೩).

**ಸ್ವದೇಶಿಚಳುವಳಿ** = ಸ್ವದೇಶಕ್ಕೆ ಸಂಬಂಧಿಸಿದ ಆಂದೋಳನ; ದೇಶೀಯಪರವಾದ ಚಳುವಳಿ; IP ಸ್ವದೇಶೀವಸ್ತುಗಳನ್ನೇ ಎಲ್ಲರೂ ಬಳಸಬೇಕೆಂದು ಸ್ವಾತಂತ್ರ್ಯಪೂರ್ವಭಾರತದಲ್ಲಿ ಗಾಂಧೀಜಿಯವರು ನಡೆಸಿದ ಚಳುವಳಿ: ಸ್ವದೇಶಿಚಳುವಳಿಯ ಸಂದರ್ಭದಲ್ಲಿ ಅಸಂಖ್ಯಾತದೇಶಭಕ್ತರು ತಮ್ಮ ಪರದೇಶಿವಸ್ತುಗಳನ್ನು ಬೆಂಕಿಗೆ ಆಹುತಿ ನೀಡಿದರು (ರೂಢಿ). [< ಸಂ. ಸ್ವದೇಶೀಯ]

**ಸ್ವಧರ್ಮ** (ನಾ). ೧. ಸ್ವಂತಧರ್ಮ; ತನ್ನ ಧರ್ಮ: ಜೈನಧರ್ಮಂ ಸ್ವಧರ್ಮಂ (ಸುಕುಮಾ. ೧-೪೯); ತನ್ನ ಸ್ವಭಾವಕ್ಕೆ ಹೊಂದಿಕೊಳ್ಳುವ ಧರ್ಮ ಸ್ವಧರ್ಮ (ಭಾರದ. ೩೨೮); ಸ್ವಧರ್ಮ ತಪ್ಪಿದರೂ ಅಧರ್ಮ ಮಾಡಬಾರದು (ಗಾದೆ). ೨. ತನ್ನ ಜನಾಂಗ ಅಥವಾ ಜಾತಿಗೆ ಸಂಬಂಧಿಸಿದ ಕರ್ತವ್ಯ. ೩. ತನ್ನ ಕರ್ತವ್ಯ ; ಸ್ವಂತ ವೃತ್ತಿ,– ಕಾರ್ಯ: ಸ್ವಧರ್ಮದಲ್ಲಿ ಗಳಿಸಿದ ಪಿತನ ಧನವ ಅಧರ್ಮದಲ್ಲಿ ಕೆಡಿಸುವ ಸುತನಂತೆ (ಬಸವ. ೨೧೩); ರೈತರ ಅವನತಿಯ ಮೂಲಕ ಸ್ವಹಿತವನ್ನು ಸಾಧಿಸಿಕೊಳ್ಳುವುದೇ ಮಾಲೀಕರ ಸ್ವಧರ್ಮವಾಗಿತ್ತೆಂಬುದನ್ನು ಅವರು . . . ಅನುಭವದಿಂದ ಮನಗಂಡಿದ್ದರು (ಪುನರು. ೨೯೩). ೪. ತನ್ನತನ; ಸ್ವಂತಿಕೆ. [ಸಂ.]

**ಸ್ವಧಾಂತ್ಯ** (ನಾ). ಪಿತೃಗಳಿಗೆ ಹವಿಸ್ಸನ್ನು ಸಮರ್ಪಿಸುವಾಗ ಮಾಡುವ ಘೋಷಣೆಯೊಂದಿಗೆ ಮುಗಿಯುವಿಕೆ: ನಿತ್ಯಹೋಮ ಸ್ವಧಾಂತ್ಯದಿ ಘನ ಸ್ವಾಹಾಂತ್ಯ ದಖಿಳಸಂಭ್ರಮಕೆ ಬೆಱಗಾದನು ಹರಿಶ್ಚಂದ್ರನು (ಹಚಕಾ. ೬-೩೯). [ಸಂ.]

**ಸ್ವಧಾಕಾರ** (ನಾ). ಪಿತೃದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವಾಗ ಮಾಡುವ ಘೋಷಣೆ: ಸ್ವಧಾಕಾರ ವಷಟ್ಕಾರ ಸ್ವಾಹಾಕಾರೋಂಕಾರಧ್ವನಿ ನೆಗೞೆ ನೆಗೞ್ದು ದಾಹತಿಧೂಮಂ (ಪಂಪಭಾ. ೬-೩೪); ಪಿತೃಕಾರ್ಯಗಳಲ್ಲಿ ಮಾಡುವ ಸ್ವಧಾಕಾರಗಳೂ ಯಿಲ್ಲ (ಅರ್ಕಮಾ. ೯೪). [ಸಂ.]

**ಸ್ವಧಿತಿ** (ನಾ). ಕೊಡಲಿ; ಕುಠಾರ: "ಪರಶ್ವಧಃ, ಕುಠಾರಃ, ಪರಶುಃ, ಸ್ವಧಿತಿಃ – ಈ ೪ ಕೊಡಲಿ" (ಹಲಾಯು. ೭೮-೩೨೦). [ಸಂ.]

**ಸ್ವನ** (ನಾ). ಶಬ್ದ; ಸದ್ದು; ಧ್ವನಿ: ಉಣ್ಮೆ ನಭದೊಳ್ ಮಾಂಗಲ್ಯತೂರ್ಯಸ್ವನಂ (ಜಗವಿ. ೨-೭೭); ಗೀತವಾದ್ಯಮಧುರಸ್ವನಂ ಕೇಳದಿಹುದಿನಿತು ಬಳಿಸಾರ್ದೊಡಂ (ಶ್ರೀರಾಮಾ. ೧೧೫-೧೫೪). [ಸಂ.]

**ಸ್ವನಾಮಖ್ಯಾತ** (ನಾ). ತನ್ನ ಹೆಸರಿನಿಂದ ಪ್ರಸಿದ್ಧವಾದ ವ್ಯಕ್ತಿ; ಹೆಸರಾಂತ ವ್ಯಕ್ತಿ: ಎಷ್ಟೋ ಜನ ದೊಡ್ಡ ದೊಡ್ಡ ಸ್ವನಾಮಖ್ಯಾತರಾದ ನ್ಯಾಯವಾದಿಗಳೂ . . . ಜಯಿಸಲಾರದವರಾಗಿ ತಲೆಯನ್ನು ತಗ್ಗಿಸಿ ಬಿಟ್ಟಿರುವರು (ಚೆನ್ನಬೇ. ೪). [ಸಂ.]

**ಸ್ವನಾಯ** 'ಸೊನಯಿ' ನೋ.

**ಸ್ವನಾಯಿ** 'ಸೊನಯಿ' ನೋ.

**ಸ್ವನಿತ** (ಗು). ೧. ಶಬ್ದಮಾಡಿದ; ಧ್ವನಿಮಾಡಿದ. (ನಾ). ೨. ಶಬ್ದಮಾಡುವುದು; ಧ್ವನಿಯನ್ನು ಹೊರಡಿಸುವುದು: "ಸ್ವನಿತಂ, ಧ್ವನಿತಂ – ೨ ಕೂಗುತ್ತಿರುವಂಥಾದ್ದು, ಮೊರೆಯುತ್ತಿರುವಂಥಾದ್ದು" (ಸಿದ್ಧಾಂತಿ. ೩೪೮). ೩. ಶಬ್ದ; ಧ್ವನಿ. ೪. ಸಿಡಿಲಿನ ಶಬ್ದ. ೫. ಸಿಡಿಲಿನ ಹೊಡೆತ; ವಜ್ರಾಘಾತ. [ಸಂ.]

**ಸ್ವನಿಮಾ** (ನಾ). [ಭಾಷಾಶಾ] ಧ್ವನಿಗಳ ಒಂದು ವರ್ಗ: Phoneme ಎಂಬ ಇಂಗ್ಲಿಷ್‌ಪದಕ್ಕೆ ಸಮಾನಾರ್ಥದಲ್ಲಿ ಧ್ವನಿಮಾ ಎಂಬ ಪದವನ್ನು ಇದೂವರೆಗೂ ಬಳಸುತ್ತಿದ್ದರು, ಆದರೆ ಈಗ ಸ್ವನಿಮಾ ಎಂಬ ಪದ ರೂಢಿಗೆ ಬರುತ್ತಿದೆ (ದ್ರಾವಿವಿ. X. ಮೊದಲಮಾತು). 'ಧ್ವನಿಮಾ' ಪರಾ. [ಸಂ.]

**ಸ್ವಪಕ್ಷ** (ನಾ). ೧. ಸ್ವಂತ ಗುಂಪು; ತನ್ನ ಪಕ್ಷ. ೨. ತನ್ನ ಸಿದ್ಧಾಂತ; ಸ್ವಂತ ಅಭಿಪ್ರಾಯ: ಪರಪಕ್ಷದೂಷಣಪುರಸ್ಸರಮನೇಕೋಪಪತ್ತಿಗಳಿಂ ಸ್ವಪಕ್ಷ ಸ್ಥಾಪನಂಗೆಯ್ದು (ಆದಿಪು. ೨-೨೨ ವ). ೩. ತನ್ನ ಪಕ್ಷಕ್ಕೆ ಸೇರಿದವನು; ಸ್ನೇಹಿತ: ವಸುಧಾತಲದೊಳ್ ಸ್ವಪಕ್ಷದರ್ಶನವಿಲಾಸಮೊದವಿಸದೆ ಮುದಮನಾರ್ಗಂ ಮನದೊಳ್ (ಚಂದ್ರಪ್ರ. ೨-೯೩). [ಸಂ.]

**ಸ್ವಪನ** (ನಾ). ೧. ಮಲಗುವುದು; ನಿದ್ರೆ: "ಸ್ವಪನಂ ಸ್ವಾಪಂ" (ವಸ್ತುಕೋ. ೧೧೪-೨೦). ೨. ನಿದ್ರೆಯಲ್ಲಿ ಕಾಣುವ ನೋಟ; ಕನಸು; ಸ್ವಪ್ನ: ಸ್ವಪನದಿ ಬಂದು ಕ್ರೀಡಿಸಿದಾತ ಪ್ರಿಯನಾದಪ ಕೆಲದಿವಸಂಗಳಿಗೆ (ಮೋಹತ. ೨೫-೨೭); ಸ್ವಪನದಿ ಜ್ಞಾನ ಬಂದಂತೆ (ಕಪೋತ. ೨೩).

[ಸಂ. / IP ಈ ಶಬ್ದವು 'ಸ್ವಪ್ನ'ದ ತದ್ಭವವಾಗಿರುವ ಸಾಧ್ಯತೆಯೂ ಇದೆ]

**ಸ್ವಪ್ನ** (ನಾ). ೧. ಮಲಗುವಿಕೆ; ನಿದ್ರೆ. ೨. = ಸ್ವಪನ ೨: ಸುಖದುಃಖಗಳೆಂಬುದು ಸ್ವಪ್ನೇಂದ್ರಜಾಲಸನ್ನಿಭಂಗಳುಂ . . . ಅಕ್ಕುಂ (ಶಾಂತಿಪು. ೮-೧೩೨ ವ); ಜಾಗ್ರತ್ಸ್ವಪ್ನ ಸುಷುಪ್ತಿಯವಸ್ಥಾತ್ರಯಂಗಳೊಳು ಶರಣರಂ ಸಂಗನೆಂದಲ್ಲದೆ ಕಾಣೆ (ಬಸರ. ೮-೪೧).

[ಸಂ.]

**ಸ್ವಪ್ನಜೀವಿ** (ನಾ). ಕಲ್ಪನಾಲೋಕದಲ್ಲಿ ವಿಹರಿಸುವವನು; ಕನಸುಗಾರ; ಕನಸು ಕಟ್ಟುವವನು: ಅದನ್ನು ನೆಚ್ಚಿ ಸ್ವಪ್ನಜೀವಿಗಳು ದಿಕ್ಸೂಚಿಯನ್ನು ಸಹ ಬಯಸದೆ ತೇಜಸ್ಸಾಗರದಲ್ಲಿ ಯಾತ್ರೆ ಹೊರಡುತ್ತಾರೆ (ಯೋಧಪು. ೪೨). [ಸಂ. ಸ್ವಪ್ನಜೀವಿನ್]

**ಸ್ವಪ್ನತಂತ್ರ** (ನಾ). ಸಾಹಿತ್ಯದ ರಚನೆಯಲ್ಲಿ ಕನಸನ್ನು ಬಳಸಿಕೊಳ್ಳುವ ತಂತ್ರ, – ಯೋಜನೆ : ನವ್ಯಕಾವ್ಯದ ಗಂಭೀರಗೀತಗಳಲ್ಲಿ ಇನ್ನೊಂದು ವಿಶೇಷನಿರೂಪಣೆಯು ಕಂಡು ಬರುತ್ತದೆ. ಅದಾವುದೆಂದರೆ, – ಸ್ವಪ್ನತಂತ್ರ (ನವ್ಯಕಾ. ೩೦). [ಸಂ.]

**ಸ್ವಪ್ನದರ್ಶನ** (ನಾ). ಕನಸಿನಲ್ಲಿ ಕಾಣುವಿಕೆ; ಸ್ವಪ್ನದಲ್ಲಿ ನೋಡುವಿಕೆ: ಮಹಾಶ್ಚರ್ಯಸ್ವಪ್ನದರ್ಶನೋತ್ಸವಾನಂತರಂ ಸಹಸ್ರಕಿರಣೋದಯಸಮಯದೊಳ್ . . . ಒಪ್ಪುತ್ತಿರೆ (ಜಗವಿ. ೨-೭೭ ವ); ಧ್ಯಾನನಿದ್ರಾಸ್ವಪ್ನದರ್ಶನದಿ ಕಾಣಿಸಿತ್ತೊಂದು ದಿವ್ಯಾಕೃತಿ ರುಚಿರಮೂರ್ತಿ! (ಚಿತ್ರಾಂಗ. ೮೩-೨೨೮೧). [ಸಂ.]

**ಸ್ವಪ್ನಲೋಕ** (ನಾ). ಕನಸಿನ ಪ್ರಪಂಚ; ಕಲ್ಪನಾಲೋಕ: ಸ್ವಪ್ನಲೋಕವ ಜಾಗೃತಂ ಸುಳ್ಳೆನುವನಲ್ತೆ? (ಮಂಕುಕ. ೮೯೩). [ಸಂ.]

**ಸ್ವಪ್ನಾವಸ್ಥೆ** (ನಾ). ಕನಸಿನ ಸ್ಥಿತಿ; ಕನಸು ಕಾಣುವ ಭಾವ,– ನೆಲೆ: ಎನ್ನ ಸೂಕ್ಷ್ಮತನುವಿನ ಸ್ವಪ್ನಾವಸ್ಥೆಯಲ್ಲಿ ದೃಶ್ಯಾದೃಶ್ಯದ ಲೀಲೆಯನಾಡುವಾತನು ನೀನೇ ಅಯ್ಯಾ (ಅಖಂಡೇ. ೩೦೮-೯೩). [ಸಂ. ಸ್ವಪ್ನಾವಸ್ಥಾ]

**ಸ್ವಪ್ರಕಾಶ** (ನಾ). ೧. ಸ್ವತಃ ಇರುವ ತೇಜಸ್ಸು; ಸ್ವಯಂಪ್ರಕಾಶ. ೨. ಸ್ವತಃ ತೇಜಸ್ಸನ್ನು ಹೊಂದಿರುವುದು; ಸ್ವಯಂಪ್ರಕಾಶವಾದುದು: ಅದ್ವಯವತೀಂದ್ರಿಯವಮೂರ್ತಸ್ವಪ್ರಕಾಶವದು (ಅವ್ಯಕ್ತ. ೩-೧೩೧); ಜ್ಞಾನವು . . . ಸ್ವಪ್ರಕಾಶವಲ್ಲ ಎಂಬ ವಾದದ ರಹಸ್ಯವನ್ನು 'ನ್ಯಾಯಮಂಜರೀ'ಕಾರರು ಸೂಚಿಸಿರುವರು (ಹಿಂದಸಾ. ೫೪). [ಸಂ.]

**ಸ್ವಪ್ರತಿಷ್ಠೆ** (ನಾ). ೧. ಆತ್ಮಾಭಿಮಾನ; ಸ್ವಾಭಿಮಾನ; ಸ್ವಂತದ ಬಗ್ಗೆ ಹೆಮ್ಮೆಪಡುವುದು: ಪಹರೆನಾಯಕ ಸ್ವಪ್ರತಿಷ್ಠೆ ಮತ್ತು ವಿನೋದ ಬೆರೆತ ಧ್ವನಿಯಲ್ಲಿ ಗದರಿಸಿದನು (ಪುನರು. ೫); ಕುರ್ಚಿಯಲ್ಲಿ ಕೂರಿಸಿದಾಗ ಮಗುವಿನ ಸ್ವಪ್ರತಿಷ್ಠೆಯ

ಹುಟ್ಟುಗುಣದ ಪ್ರದರ್ಶನಕ್ಕೆ ಅಡ್ಡಿಯಾಯಿತು (ಶಿಕ್ಷದ. ೬೫೩). ೨. ತನ್ನ ಅಭಿಪ್ರಾಯವನ್ನು ಪಟ್ಟು ಹಿಡಿಯುವಿಕೆ ; ದುರಾಗ್ರಹ : ಇದು ದಾಸನ ಸ್ವಪ್ರತಿಷ್ಠೆ ! (ಹೇಮಕೂ. ೧೦೨). [ಸಂ. ಸ್ವಪ್ರತಿಷ್ಠಾ]

**ಸ್ವಪ್ರಯತ್ನ** (ನಾ). ತನ್ನ ಯತ್ನ; ಸ್ವತಃ ಮಾಡುವ ಪ್ರಯತ್ನ, – ಎತ್ತುಗಡೆ : ತಮ್ಮ ರಾಜ್ಯವನ್ನು ನೊಳಂಬರು ಒಡೆಯರ ಸಹಾಯದಿಂದಲೂ ಸ್ವಪ್ರಯತ್ನದಿಂದಲೂ . . . ಅಭಿವೃದ್ಧಿಗೊಳಿಸಿಕೊಂಡರು (ನೊಳಂಬ. ೭೧). [ಸಂ.]

**ಸ್ವಪ್ರಯೋಜನ** (ನಾ). ಸ್ವಂತ ಅನುಕೂಲ; ತನ್ನ ಉಪಯೋಗ,– ಪ್ರಯೋಜನ: ಸಾಮಾನ್ಯವಾಗಿ ಯಾರೂ ಸ್ವಪ್ರಯೋಜನವಿಲ್ಲದೆ ಕೆಲಸವನ್ನು ಮಾಡುವುದಿಲ್ಲ (ರೂಢಿ). [ಸಂ.]

**ಸ್ವಪ್ರಶಂಸೆ** (ನಾ). ತನ್ನನ್ನು ತಾನೇ ಹೊಗಳಿಕೊಳ್ಳುವಿಕೆ; ಆತ್ಮಪ್ರಶಂಸೆ: ಸ್ವಲ್ಪ ಸ್ವಪ್ರಶಂಸೆಯೂ ಅವನಲ್ಲಿ ಸೇರಿಕೊಂಡಿತ್ತು (ಪುನರು. ೩೪೦). [ಸಂ. ಸ್ವಪ್ರಶಂಸಾ]

**ಸ್ವಪ್ರೇರಣೆ** (ನಾ). ತನಗೆ ತಾನೇ ಉಂಟಾಗುವ ಪ್ರಚೋದನೆ; ಆಂತರಿಕ ಪ್ರೇರಣೆ; ಸ್ವಯಂಪ್ರೇರಣೆ: ಸ್ವಪ್ರೇರಣೆಯಿಂದ ಮಾಡುವ ಉದ್ಯಮಗಳಂತೆ ತೋರಬೇಕು (ಶಿಕ್ಷದ. ೩೧೬) [ಸಂ. ಸ್ವಪ್ರೇರಣಾ]

**ಸ್ವಬುದ್ಧಿ** (ನಾ). ಸ್ವಂತ ಬುದ್ಧಿ; ತನ್ನ ಬುದ್ಧಿಶಕ್ತಿ: ಹೇಳಿಕೆಯ ಮಾತು ಕೇಳದೆ ಯಾವಾಗಲೂ ಸ್ವಬುದ್ಧಿಯಿಂದ ಕೆಲಸ ಮಾಡುವುದು ಒಳ್ಳೆಯದು (ರೂಢಿ). [ಸಂ.]

**ಸ್ವಭಾನು** (ನಾ). ೧. ತನ್ನಷ್ಟಕ್ಕೆ ತಾನೇ ಹೊಳೆಯುವಂತಹದು; ಸ್ವಯಂ ಪ್ರಕಾಶವಾದುದು. ೨. [ಜ್ಯೋತಿ] ಅರವತ್ತು ಸಂವತ್ಸರಗಳಲ್ಲಿ ಹದಿನೇಳನೆಯದು: ಮತ್ತಮಾ ವರುಷವೇ ಪ್ರಭವ . . . ಸ್ವಭಾನು . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩.೨೧). [ಸಂ.]

**ಸ್ವಭಾವ** (ನಾ). ೧. ಸಹಜಸ್ಥಿತಿ ; ಸ್ವಾಭಾವಿಕವಾದ ಇರವು. ೨. ಸಹಜವಾದ ಗುಣಧರ್ಮ; ಸ್ವಾಭಾವಿಕವಾದ ಗುಣ: "ಧರ್ಮಃ, ಸ್ವಭಾವಃ, ಆತ್ಮಾ – ಈ ೩ ಸ್ವಭಾವಂ" (ಹಲಾಯು. ೧.೪೯–೯೭); ಅಲ್ಲದೆ, ಧರ್ಮವು ನನ್ನ ಸ್ವಭಾವಕ್ಕೆ ಬಂದದ್ದು (ವಚಭಾ. ೧೨೦). ೩. (ಸಾಮಾನ್ಯವಾಗಿ ಪ್ರಾಣಿಗಳಲ್ಲಿ) ಕಲಿಯದೆ ಬಂದ ಚಾತುರ್ಯ; ಹುಟ್ಟರಿವು: ಹಲವು ವಸ್ತುಗಳಿಗೆ ಹಲವು ತೆರನಾಗಿ ತೋರುವ ಈ ಪ್ರತಿಕ್ರಿಯೆಗಳಿಗೆ ಮೂಲವಾದುದು ಸ್ವಭಾವ (Instinct) (ಸೌಂದಸ. ೫). ೪. [ಕಾವ್ಯಮೀ] ರಸವಾಗಬಲ್ಲ ಸ್ಥಾಯಿಭಾವ : "ಆ ರತಿಸ್ಥಿತಿಯಿಂದ ಪೊಱಗೆ ಪುಟ್ಟಿದ ಮನವಿಕಾರಂ ಸ್ವಭಾವವಕ್ಕು" (ಮಂಗರಾ. ೨೩–೪). ೫. ಅರ್ಥಾಲಂಕಾರಗಳಲ್ಲಿ ಒಂದು ಬಗೆ; ಸಹಜಗುಣಧರ್ಮಗಳ ವರ್ಣನೆ; ಸ್ವಭಾವೋಕ್ತಿ : ಸತತಂ ದಕ್ಷಿಣಮಾರ್ಗೋದಿತೋಕ್ತಿಭೇದಕಗುಣಂ ಸ್ವಭಾವಾಖ್ಯಾನಂ (ಕವಿರಾ. ೨–೫೩). [ಸಂ.]

**ಸ್ವಭಾವತಃ** (ಅ). ಸಹಜವಾಗಿ; ಸ್ವಾಭಾವಿಕವಾಗಿ: ಸ್ವಭಾವತಃ ಅವನು ಮುಂಗೋಪಿ (ರೂಢಿ). [ಸಂ. ಸ್ವಭಾವತಸ್]

**ಸ್ವಭಾವಧರ್ಮ** (ನಾ). ಸ್ವಾಭಾವಿಕವಾದ ಗುಣ; ಹುಟ್ಟುಗುಣ: ಅನುಭವ ಅವರ ಸ್ವಭಾವಧರ್ಮವನ್ನು ಸಾಂದ್ರಗೊಳಿಸಿತು (ಧರ್ಮಸಾ. ೭೭). [ಸಂ.]

**ಸ್ವಭಾವವಾದ** (ನಾ). [ವೇದಾಂತ] ವಸ್ತುಗಳ ನೈಸರ್ಗಿಕಪ್ರವೃತ್ತಿಗನುಗುಣವಾದ ಸಹಜ ಹಾಗೂ ಅತ್ಯಾವಶ್ಯಕಕ್ರಿಯೆಗಳಿಂದ ಜಗತ್ತು ಸೃಷ್ಟಿ ಮತ್ತು ಸ್ಥಿತಿಯನ್ನು ಹೊಂದಿದೆ ಎಂಬ ವಾದ: ಒಂದು ಬೀಜವು ಭೂಮಿಯಲ್ಲಿ ಬಿದ್ದರೆ ಬೀಜಶಕ್ತಿ ಯಿಂದಲೇ ಮೊಳಕೆಯಾಗಿ ಎಲೆಗಳಾಗಿ ದಂಟಾಗಿ ಪುಷ್ಪವಾಗಿ ಫಲವಾಗುತ್ತದೆ. ಇದಕ್ಕೆ ಸ್ವಭಾವವಾದವೆಂದು ಹೆಸರು (ಹಿಂದಸಾ. ೧೫). [ಸಂ.]

**ಸ್ವಭಾವವೈರಾಗ್ಯ** (ನಾ). ಸ್ವಾಭಾವಿಕವಾದ ವಿರಕ್ತಿ; ಸಹಜವೈರಾಗ್ಯ: ಸ್ವಭಾವವೈರಾಗ್ಯಭಾವಮುಂ ಸರ್ವಭವಾನುಭವವಿರಕ್ತತೆಯುಂ ದುರ್ಲಭಂ (ಸುಕುಮಾ. ೧೨–೩೭). [ಸಂ.]

**ಸ್ವಭಾವಸಿದ್ಧ** (ಗು). ೧. ಸಹಜವಾದ; ಸ್ವಾಭಾವಿಕವಾದ. (ನಾ). ೨. ಸಹಜವಾದುದು; ಸ್ವಾಭಾವಿಕವಾದುದು: ಸ್ವಭಾವಸಿದ್ಧವಾಗಿಯೇ ತಲೆದೋರುತ್ತಿದ್ದ ಅವಳ ಬುದ್ಧಿಶಕ್ತಿಯನ್ನೂ ನಡೆವಳಿಕೆಗಳನ್ನೂ ನೋಡಿದವರೆಲ್ಲ ಅವಳು . . . ರಾಜಮಂದಿರದಲ್ಲಿ ಬೆಳೆದವಳಲ್ಲವೆಂದು ಹೇಳಲಾರದವರಾಗಿದ್ದರು (ಕವಿಕ. ೯). [ಸಂ.]

**ಸ್ವಭಾವೋಕ್ತಿ** (ನಾ). ೧. ಇದ್ದುದನ್ನು ಇದ್ದಂತೆ ಹೇಳುವ ಮಾತಿನ ಕ್ರಮ. ೨. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ಬಗೆ; ಸಹಜಗುಣಧರ್ಮಗಳ ವರ್ಣನೆ: ವಕ್ರೋಕ್ತಿ ಸ್ವಭಾವೋಕ್ತಿ ಪಾಕ ಲಾಲಿತ್ಯ ಗುಂಪು ಇಂಪು ರೀತಿ ನೂತನಮಾಗೆ . . . ಮೆಱೆದಿರ್ದ ಸರಸಕವಿಗಳ ಸಂದಣಿಯೊಳಂ (ಗಿರಿಕ. ೨–೧೦೫ ಬ); ವಸ್ತುಗಳ ಜಾತಿಗುಣ ಕ್ರಿಯಾದಿಗಳನ್ನು ಇದ್ದದಿದ್ದ ಹಾಗೇ ವರ್ಣಿಸುವುದು 'ಸ್ವಭಾವೋಕ್ತಿ' (ಕೈಪಿಡಿ. ೨೮೭). [ಸಂ.]

**ಸ್ವಭಾಷಾಪ್ರೇಮ** (ನಾ). ತನ್ನ ಮಾತೃಭಾಷೆಯ ಬಗೆಗಿರುವ ಪ್ರೀತಿ, – ಅಭಿಮಾನ: ಅವರು ಪರದೇಶಕ್ಕೆ ಹೋದರೂ ಸ್ವಭಾಷಾಪ್ರೇಮದಿಂದ ಕನ್ನಡದ ಸಂಪರ್ಕವನ್ನು ಉಳಿಸಿಕೊಂಡಿದ್ದಾರೆ (ರೂಢಿ). [ಸಂ.]

**ಸ್ವಭಾಷಾಮೋಹ** (ನಾ). = ಸ್ವಭಾಷಾಪ್ರೇಮ: ಇದು ಕೇವಲ ಸ್ವಭಾಷಾಮೋಹದಿಂದ ಆಡುವ ಮಾತಲ್ಲ (ಗೃಹವಿ. IV, ಮುನ್ನುಡಿ). [ಸಂ.]

**ಸ್ವಭು** (ನಾ). ತನ್ನಿಂದ ತಾನೇ ಉಂಟಾದವನು; ಸ್ವಯಂಭು; ಬ್ರಹ್ಮ: "ಪಿತಾಮಹಂ ಸ್ವಭು ಸ್ವಯಂಭು ವಿಧಿ ಚತುರಾನನಂ . . . ವಿರಂಚಿಯೆನೆ ಬ್ರಹ್ಮನಕ್ಕುಂ" (ಮಂಗರಾ. ೩–೯). [ಸಂ. ಸ್ವಭೂ]

**ಸ್ವಯ** (ನಾ). ೧. [ವೀಶೈ] ತಾದಾತ್ಮ್ಯಭಾವ: ಬಯಲ ಬಣ್ಣವ ಮಾಡಿ ಸ್ವಯವ ನಿಲವ ಮಾಡಿ ಸುಳಿವಾತನ ಬೆಡಗ ಬಲ್ಲವರಾರು (ದೇದಾವ. ೯೪–೧೫೧) ; ಅಗ್ನಿಯಂಜಲನುಂಡು ಲಿಂಗದಲ್ಲಿ ಸ್ವಯವನಱಿಸುವ ಭಂಗಿತರನೇನೆಂಬೆನಯ್ಯಾ (ಚನ್ನವ. ಕ. ೫೪೫–೧೧೬೨). ೨. ಪ್ರತ್ಯಕ್ಷಭಾವ; ನಿಜಸ್ವರೂಪ: ನಯನೇಂದ್ರಿಯದೊಳು ಚಿನ್ಮಯರೂಪ ನೋಟ ತನ್ಮಯವೆ ಶಿವಲಿಂಗ ಸ್ವಯವೆಂದು ನಂಬು ನಿಶ್ಚಯವೆಂದ ಗುರುವೆ ಕೃಪೆಯಾಗು (ಮೈಲಾರ. ೬೦–೧೬೧). ೩. ನಿತ್ಯವಾದುದು ; ಶಾಶ್ವತವಾದುದು: ಸ್ವಯವಿದ್ದಂತೆ ಲಯವ ಕೂಡುವರೆ ಅಯ್ಯಾ (ಮದೇವ. ೨೮೭–೬೪). ೪. ನಿತ್ಯವಾದುದು; ಸತ್ಯ: ಸತ್ತು ಹುಟ್ಟಿ ಕೆಟ್ಟವರೆಲ್ಲರೂ ದೇವಲೋಕಕ್ಕೆ ಹೋದರೆಂಬ ಬಾಲಭಾಷೆಯ ಕೇಳಲಾಗದು ಸಾಯದ ಮುನ್ನ ಸ್ವಯವನಱಿದಡೆ ದೇವನೊಲಿದ (ಅವಚಂ. ೧೩೩–೬೦೭). ೫. ತನ್ನನ್ನು ತಾನು ಅರಿತುಕೊಳ್ಳುವುದು: "ಸ್ವಯ – ತನ್ನ ತಾನರಿವುದು" (ವೀಶ್ಮಪಾ. ೨೪–೮). ೬. ಸ್ವಯಂಪೂರ್ಣವಾದುದು; ತಾನೇ ವ್ಯಕ್ತವಾದುದು: ತನ್ನಲ್ಲಿ ಅರಿವು ಸ್ವಯವಾಗಿರಲು ಅನ್ಯರ ಕೇಳಲುಂಟೇ (ಮಹಾದೇ.ಬ. ೨೮–೫೭); ಹಿಂದೆ ನೀವು ಕೊಟ್ಟ ನಿರೂಪು ಹುಸಿಯಾದಡೆ ಇನ್ನು ಮುಂದೆ ಸ್ವಯವಪ್ಪಂತೆ ನಡಿಸಾ (ಸಿದ್ಧವ. ಕ. ೬೩–೧೯೯). ೭. ತನ್ನತನ; ಸ್ವಂತಿಕೆ: ಸ್ವಯವಿರಬೇಕು ಸಕಲಗುಣಂಗಳಲ್ಲಿ ನಯವಿರಬೇಕು ನುಡಿಗಡಣದಲ್ಲಿ (ಅಖಂಡೇ. ೧೩೧–೧೦೦). ೮. ಸ್ವಾಧೀನ; ಅಂಕೆ; ಹತೋಟಿ: ನಿಮ್ಮಜ್ಜಿಗೆ ಈಗೀಗ ಏನೇನೂ ಬುದ್ಧಿ ಸ್ವಯವಿಲ್ಲವಂತಲ್ಲ (ಮೂಕಜ್ಜ. ೩೦). 'ಸಯ' ಪರಾ.

ಸ್ವಯವಾಗು = ೧. ತಾದಾತ್ಮ್ಯಭಾವವನ್ನು ಹೊಂದು; ಲೀನವಾಗು; ಐಕ್ಯವಾಗು: ಅಱಿವು ನಿಮ್ಮಲ್ಲಿ ಸ್ವಯವಾದ ಬಳಿಕ ನಾನಾರನಱಿವೆ (ಮಹಾದೇ. ಬ. ೧೪೪–೩.೩೦); ಅಂಗೈಯ ಲಿಂಗದಲ್ಲಿ ನೋಟ ಸ್ವಯವಾದ ಇರವ ನೋಡಾ (ಅವಚಂ. ೨೪೩–೧೧೦೬). ೨. ಸ್ವಾವಲಂಬಿಯಾಗು: ಇವರು ಪಂಚಮವರ್ಷದಲ್ಲಿ ವೇದ ವೇದಾಂಗಗಳನ್ನು ಶೈವಾಗಮಂಗಳನ್ನು ಪೂರ್ವಜನ್ಮಜ್ಞಾನವಿಶೇಷದಿಂದ ಸ್ವಯವಾಗಿಯೇ ಅಭ್ಯಾಸ ಮಾಡಿದರು (ಪುರಾವಿ. ೧೦೭). ೩. "ಪ್ರತ್ಯಕ್ಷನಾಗು (?)" (ಬಸವ.ಕೋಶ): ಎಲೆ ತಂದೆ ಎಲೆ ಹಂದೆ ಕೂಡಲಸಂಗ ಸ್ವಯವಾಗು ಸ್ವಯವಾಗು (ಬಸವ. ೧೨–೩೦). [< ಸಂ. ಸ್ವಯಂ]

**ಸ್ವಯಂ** (ಅ). ತನಗೆ ತಾನೇ; ಸ್ವತಃ; ಖುದ್ದಾಗಿ; ಮುದ್ದಾಂ: ಸ್ವಯಮನ್ನ ಬ್ರಹ್ಮಾದ್ಯಖಿಳಚೇತನ ಕನ್ನಕಲ್ಪಕನಾಹನನಿರುದ್ಧಾದಿ ನಾಮದಲಿ (ಹಸಾರ. ೧೨–೨೪); ಸ್ವಯಮುಂ ಕುರಿತ ಸಕಲ ವಿಶ್ವಸತ್ತ್ವಮೊ ಬೇವ ಪ್ರಿಯತಮಮೊ ಸೃಷ್ಟಿಯಲಿ (ಮಂಕುಕ. ೨೭೪). [ಸಂ.]

**ಸ್ವಯಂಕರ್ತೃ** (ನಾ). [ವ್ಯಾಕ] ತಾನೇ ಕರ್ತೃವಾಗಿರುವುದು; ಕ್ರಿಯೆಯನ್ನು ತಾನೇ ವಹಿಸಿಕೊಂಡಿರುವ ಕರ್ತೃ: ಸಂಸ್ಕೃತದನೇಕಾಕ್ಷರಧಾತುಗೆ ಸ್ವಯಂಕರ್ತೃವಿನೊಳಿಸುವಕ್ಕುಂ (ಶಮದ. ೨೫೧ ವೃತ್ತಿ). [ಸಂ.]

**ಸ್ವಯಂಕರ್ತೃಕ** (ನಾ). = ಸ್ವಯಂಕರ್ತೃ: ಕನ್ನಡದ ಧಾತುವಿಂಗೆ ಹೇತುವಿನೊಳಂ ಸ್ವಯಂಕರ್ತೃಕ ಪರಕರ್ತೃಕದೊಳಂ ಇಸುವಕ್ಕುಂ (ಶಮದ. ೨೩೧ ವೃತ್ತಿ). [ಸಂ.]

**ಸ್ವಯಂಕೃತ** (ಗು). ೧. ತಾನೇ ಮಾಡಿದ; ತನ್ನಿಂದಾದ: ಸ್ವಯಂಕೃತಾನರ್ಥ ಮಾಡಿಕೊಳ್ಳುದಿದಾವ ಕಾರಣಂ (ಪಂಚತಂ. ೫೩-೧೪). (ನಾ). ೨. ತಾನೇ ಮಾಡಿದುದು; ತನ್ನಿಂದಾದುದು: ಮಾಲಿನ್ಯಕ್ಕೆ ಮೂರು ವಿಧದ ಕಾರಣಗಳು:- ಒಂದು ಜನ್ಮಾಂತ್ರಿಯ, ಒಂದು ಸ್ವಯಂಕೃತ, ಒಂದು ಆಗಂತುಕ . . . ನಾವಾಗಿ ಮಾಡಿಕೊಳ್ಳುವುದು ಸ್ವಯಂಕೃತ (ಆರ್ಯಧ. ೯೭). [ಸಂ.]

**ಸ್ವಯಂಕೃತಾಪರಾಧ** (ನಾ). ತಾನೇ ಮಾಡಿಕೊಂಡ ಅಪರಾಧ; ಸ್ವತಃ ಮಾಡಿದ ತಪ್ಪು: ಸ್ವಯಂಕೃತಾಪರಾಧಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುವ ಸಲುವಾಗಿ . . . ಹಿಂದಿನದೆಲ್ಲ ನೆನೆಸಿಕೊಳ್ಳುತ್ತಿದ್ದೇನೆ (ಪುನರು. ೧೯೬); ಸ್ವಯಂಕೃತಾಪರಾಧದಿಂದುಂಟಾದ ಅನರ್ಥವನ್ನು . . . ಸೈರಿಸಿಕೊಂಡು (ಕವಿಕ. ೨೯). [ಸಂ.]

**ಸ್ವಯಂಚಾಲಿತ** (ಗು). ಸ್ವತಃ ಚಲಿಸಲು ಸಾಮರ್ಥ್ಯವುಳ್ಳ: ಉರುಳೆಯೊಳಕ್ಕೆ ಗಾಳಿ ಬರಲು ಮತ್ತು ಹೊರಹೋಗಲು ಸ್ವಯಂಚಾಲಿತ ಕವಾಟಗಳಿರುತ್ತವೆ (ಕವಿಕೋ. I. ೨೬೭); ಸ್ವಯಂಚಾಲಿತ (Automatic) ಯಂತ್ರಗಳು ಬಂದ ಮೇಲಂತೂ ಈ ಕೆಲಸವು ಇನ್ನೂ ಹಗುರವಾಯಿತು (ಶಿಲ್ಪನಾ. ೧೬೮). [ಸಂ.]

**ಸ್ವಯಂಪಾಕ** (ನಾ). ೧. ತಾನೇ ಮಾಡಿಕೊಳ್ಳುವ ಅಡುಗೆ; ಸ್ವತಃ ತಯಾರಿಸಿಕೊಳ್ಳುವ ಆಹಾರ. ೨. ತನ್ನ ಆಹಾರವನ್ನು ತಾನೇ ತಯಾರಿಸಿಕೊಳ್ಳುವ ನಿಯಮ,– ವ್ರತ : ಸ್ವಯಂಪಾಕ ಪುರುಷೋತ್ತಮಭಟ್ಟೋಪಾಧ್ಯಾಯ (ಸಾಇ. XI, ii ೧೫೪-೫೯ ; 1104). ೩. (ವ್ರತ ಅಥವಾ ವಿಶೇಷಸಂದರ್ಭಗಳಲ್ಲಿ) ತನ್ನ ಅಡುಗೆಯನ್ನು ತಾನೇ ಸಿದ್ಧಪಡಿಸಿಕೊಳ್ಳಲು ಬೇಕಾದ ಪಡಿಪದಾರ್ಥ: ಸ್ವಾಮಿಗಳಿಗೆ ಇಂದು ನಮ್ಮ ಮನೆಯಿಂದ ಸ್ವಯಂಪಾಕ ಕೊಡಬೇಕು (ರೂಢಿ). [ಸಂ.]

**ಸ್ವಯಂಪಾಕಿ** (ನಾ). (ವ್ರತ ಅಥವಾ ವಿಶೇಷ ಸಂದರ್ಭಗಳಲ್ಲಿ) ತನ್ನ ಅಡುಗೆಯನ್ನು ತಾನೇ ಮಾಡಿಕೊಳ್ಳುವವನು; ಸ್ವತಃ ಆಹಾರವನ್ನು ತಯಾರಿಸಿಕೊಳ್ಳುವವನು: ಅವರು ಹತ್ತು ವರ್ಷಗಳಿಂದಲೂ ಸ್ವಯಂಪಾಕಿಗಳಾಗಿದ್ದಾರೆ (ರೂಢಿ). [ಸ್ವಯಂಪಾಕ + - ಇ₃]

**ಸ್ವಯಂಪ್ರಕಾಶ** (ಗು). ೧. ಸ್ವತಃ ಕಾಂತಿ ಬೀರುವ; ಸ್ವತಂತ್ರವಾಗಿ ಹೊಳೆಯುವ: ಈ ಬೆಳಕೆಂಬ ಶಕ್ತಿವಿಶೇಷವು ಸ್ವಯಂಪ್ರಕಾಶವಸ್ತುಗಳಿಂದ ಹೊರಡುತ್ತದೆ (ಭೌತವಿ. ೧೫೪). (ನಾ). ೨. ತಾನಾಗಿ ಪ್ರಕಾಶಿಸುವಂಥದು; ಸ್ವತಂತ್ರವಾಗಿ ಹೊಳೆಯುವಂಥದು: ಜ್ಞಾನವು ಸ್ವಯಂಪ್ರಕಾಶವಲ್ಲದಿದ್ದರೆ ತನ್ನ ಜ್ಞಾನಕ್ಕೂ ಇತರರ ಜ್ಞಾನಕ್ಕೂ ವ್ಯತ್ಯಾಸವಿಲ್ಲ (ಹಿಂದಸಾ. ೫೪); ಗ್ರಹಗಳು ಸ್ವಯಂಪ್ರಕಾಶವಾಗಿಲ್ಲ (ಆಕಾಶ. ೧೩). [ಸಂ.]

**ಸ್ವಯಂಪ್ರಭು** (ನಾ). ತನಗೇ ತಾನೇ ಒಡೆಯನಾದವನು; ಯಾರ ಅಧೀನಕ್ಕೂ ಒಳಪಡದವನು : ಲೀಲಾಯಿತಂ ಸ್ವಯಂಪ್ರಭುಗುಚಿತಂ (ಜಗವಿ. ೩-೭೦). [ಸಂ.]

**ಸ್ವಯಂಬರ** 'ಸೊಯಂಬರ' ನೋ.

**ಸ್ವಯಂಬರಸಾಲೆ** 'ಸೊಯಂಬರಸಾಲೆ' ನೋ.

**ಸ್ವಯಂಬುದ್ಧ** (ನಾ). ತಾನಾಗಿಯೇ ಜ್ಞಾನಿಯಾದವನು; ಸ್ವತಃ ತಿಳಿದವನು: ನೀಂ ಸ್ವಯಂಬುದ್ಧನೆ ಆರ್ ಪ್ರತಿಬೋಧಿಸುವರ್ ನಿನ್ನಂ (ಶಾಂತಿಪು. ೯-೭೧). [ಸಂ.]

**ಸ್ವಯಂಭು** (ಗು). ೧. ತನ್ನಿಂದ ತಾನೇ ಮೂಡಿದ; ತಾನಾಗಿಯೇ ಹುಟ್ಟಿದ: ಅದರ ಸ್ವಯಂಭುಶೋಭೆಗೆ ಶರಣೆಂದು ಶುದ್ಧರಾದೆವು (ಶರಚ. ೮೩೪). ೨. ಸ್ವಯಂ ಪ್ರಕಾಶವುಳ್ಳ: 'ಸ್ವಯಂಭುಲಿಂಗ' ಪರಾ. (ನಾ). ೩. ತಾನಾಗಿಯೇ ಉಂಟಾದುದು; ತನ್ನಿಂದ ತಾನೇ ಮೂಡಿದುದು: ವೇದ ಸ್ವಯಂಭುವೆಂಬ ವಾದಿ ನೀ ಕೇಳೆಲವೊ (ಬಸವ. ೫೩೧); ವೇದವು ಯಾರ ನಿರುಕ್ತಿಯೂ ಅಲ್ಲ. ಅದು ಸ್ವಯಂಭು (ಭಾರದ. ೧೨೯). ೪. ಸ್ವಯಂಪ್ರಕಾಶವುಳ್ಳುದು: ಆಕಾಶದ ಸೂರ್ಯ ಹಲವು ಕುಂಭದಲ್ಲಿ ತೋಱುವ ತೆಱ ಮೆಱೆದರೆ ಪ್ರತಿಷ್ಠೆ ಅಱಿದಡೆ ಸ್ವಯಂಭು (ಮೋಳಮಾ. ೧೧-೪೧). ೫. ಯಾರ ಅಂಕೆಗೂ ಒಳಪಡದಿರುವುದು; ಸ್ವತಂತ್ರವಾದುದು: ಆ ಉಭಯದ ಬಿಡುಗಡೆಯನಱಿದು ಅಡಗಿಯಲ್ಲದೆ ಸ್ವಯಂಭುವಲ್ಲ (ಮೋಳಮಾ. ೨-೩). ೬. ತನ್ನಿಂದ ತಾನೇ ಉಂಟಾದವನು ,– ಉದ್ಭವವಾದವನು: ಕಾಲ ಕಲ್ಪಿತಂಗಳಿಲ್ಲದೆ ನಿಮ್ಮಿಂದ ನೀವೆ ಸ್ವಯಂಭುವಾಗಿರ್ದಿರಯ್ಯಾ (ಚನ್ನವ. ಕ. ೫-೭); ಸ್ವಯಂಭು ನೀನೆಯಾಗಿರ್ದೆಯಯ್ಯ (ಸಿದ್ಧವ. ಕ. ೬೭-೨೧೭). ೭. ಬ್ರಹ್ಮ: ಗಗನವ ಮನ ನುಂಗಿತ್ತು ಆದಿ ವೇದವ ನುಂಗಿ ವೇದ ಸ್ವಯಂಭುವ ನುಂಗಿ ಕಾಲಕರ್ಮ ಹಿಂಗಿತ್ತು (ಅವಚಂ. ೧೦೦-೫೫೨). ೮. ಶಿವ. ೯. ವಿಷ್ಣು. ೧೦. ಬುದ್ಧ. ೧೧. ಯಾರ ಅಂಕೆಗೂ ಒಳಪಡದ ವ್ಯಕ್ತಿ; ತನ್ನ ಇಚ್ಛೆಯಂತೆ ನಡೆಯುವ ಸ್ವತಂತ್ರವ್ಯಕ್ತಿ: ತಾನೇ ಸ್ವಯಂಭು ಎಂದುಕೊಂಡು ಶಾಲಬ್ಬೆ ತನ್ನ ಇಷ್ಟಕ್ಕೆ ವಿರುದ್ಧವಾದದ್ದೇನನ್ನೂ ಎಂದೂ ಸಹಿಸಿದವಳಲ್ಲ (ಹೊಸಕ್ಷಿ. ೨೧). ೧೨. ಸ್ವಂತಸಾಮರ್ಥ್ಯವುಳ್ಳ ವ್ಯಕ್ತಿ; ಚತುರ: ಸಹಸ್ರಜನರಲ್ಲಿ ಯಾವನೋ ಒಬ್ಬ ವ್ಯಕ್ತಿ ಮಾತ್ರ ಸ್ವಶಕ್ತಿ ಸ್ವಸಾಮರ್ಥ್ಯಗಳಿಂದ ಸ್ವಯಂಭುವಾಗಿ ವಿಜೃಂಭಿಸುತ್ತಾನೆ (ನಂಜುಂಡ. ೧೩೭). [ಸಂ. ಸ್ವಯಂಭು, ಸ್ವಯಂಭೂ]

**ಸ್ವಯಂಭುಲಿಂಗ** (ನಾ). [ವೀಶೈ] ಸ್ವಯಂಪ್ರಕಾಶವುಳ್ಳ ಲಿಂಗ; ಪಂಚಲಿಂಗಗಳಲ್ಲಿ ಒಂದಾದ ಜ್ಯೋತಿರ್ಲಿಂಗ: ಶೈವಸಿದ್ಧಾಂತಸಮ್ಮತವಾದ ಪಂಚ ಲಿಂಗಾರ್ಚನದೊಳು ಸ್ವಯಂಭುಲಿಂಗ ಬಾಣಲಿಂಗ ಚರಲಿಂಗ ಸಂಕೀರ್ಣಲಿಂಗ ಪ್ರಾಣಲಿಂಗವೆಂಬೈದರೊಳಗೆ ತಮ್ಮ ತಮ್ಮ ಶಕ್ತ್ಯಾನುಸಾರಮಾಗಿ ಅರ್ಚನತತ್ಪರರಾಗ ಬೇಕೆಂದು ನಿಶ್ಚಯಿಸಲಕ್ಕುಂ (ವಿವೇಕ. ೧೦೨). [ಸಂ.]

**ಸ್ವಯಂಭುಸ್ವರ** (ನಾ). [ಸಂಗೀತ] ಒಂದು ಸ್ವರವು ತಂತಿಯಲ್ಲಿ ನುಡಿಯುತ್ತಿರುವಾಗ ಅದರ ಜೊತೆಯಲ್ಲಿಯೇ, ಪ್ರತ್ಯೇಕ ಪ್ರಯತ್ನವಿಲ್ಲದೆ, ಸಹಜವಾಗಿ ಉತ್ಪನ್ನವಾಗುವ ಸ್ವರ: ನಾಲ್ಕು ತಂತಿಗಳಿಗೂ ಹೀಗೆ ಮಾಡುವುದರಿಂದ ತಂತಿಗಳ ಧ್ವನಿ ಸುಶ್ರಾವ್ಯವಾಗಿ ತುಂಬುನಾದದೊಡನೆ ಸ್ವಯಂಭುಸ್ವರಗಳೂ ಕೇಳಿ ಬರುತ್ತವೆ (ಸಂಗೀಚಂ. ೧೦೨) ; ಈ ತಂಬೂರಿಗಳಿಂದ ಹೊರಹೊಮ್ಮುತ್ತಿದ್ದ ಸ್ವಯಂಭುಸ್ವರಗಳು . . . ಒಳ್ಳೆಯ ಮಧುರನಾದದ ವಾತಾವರಣ, ಹಿನ್ನೆಲೆಯನ್ನು ಕಲ್ಪಿಸುತ್ತಿದ್ದುವು (ಸಂಗೀತ. ೧೧೦). [ಸಂ.]

**ಸ್ವಯಂಭೂರಮಣ** (ನಾ). [ಜೈನ] ಮಧ್ಯಲೋಕದ ಒಂದು ಸಾಗರ: ಎಸೆದತ್ತೇಕರಜ್ಜುಪ್ರಮಾಣಂ ತಿರ್ಯಗ್‌ಲೋಕಂ ಸ್ವಯಂಭೂರಮಣಜಲಧಿ ಪರ್ಯಂತಮಂ ತಾಗುವನ್ನಂ (ಆದಿಪು. ೧-೪೮); ಸ್ವಯಂಭೂರಮಣಸಾಗರೋದಕಾದಾನ ಕ್ಕಸಂಖ್ಯಾತದ್ವೀಪಸಮುದ್ರಂಗಳಂ ನಿಮಿಷಮಾತ್ರದಿನತಿಕ್ರಮಿಸಿಯುಂ (ಚಂದ್ರಪು. ೯-೫೫ ವ). [ಸಂ.]

**ಸ್ವಯಂವರ** (ನಾ). ೧. ತಾನೇ ಆರಿಸಿಕೊಂಡುದು; ಸ್ವಂತದ ಆಯ್ಕೆ. ೨. (ಸಾಮಾನ್ಯವಾಗಿ ರಾಜಕುಮಾರಿ ಅಥವಾ ಕ್ಷತ್ರಿಯಕನ್ಯೆಯಾದ) ವಧುವು ವಿವಾಹಾಕಾಂಕ್ಷಿಗಳಾದ ಅಭ್ಯರ್ಥಿಗಳು ನೆರೆದ ಸಭೆಯಲ್ಲಿ ಒಂದು ವ್ಯವಸ್ಥಿತಸಂದರ್ಭದಲ್ಲಿ ತನ್ನ ಪತಿಯನ್ನು ತಾನೇ ಆರಿಸಿಕೊಳ್ಳುವಿಕೆ ಮತ್ತು ಹಾಗೆ ಆರಿಸಿಕೊಂಡು ಏರ್ಪಾಡಾಗುವ ವಿವಾಹ: ಸ್ವಯಂವರಾ, ಪತಿಂವರಾ, ವರ್ಯಾ - ಈ ೩ ಸ್ವಯಂವರದಲ್ಲಿ ಪತಿಯನ್ನು ವರಿಸಿದ ಸ್ತ್ರೀಯ ಹೆಸರು (ನಾಚಿರಾ. ೧೧೬); ಕ್ಷತ್ರಿಯರ ಪದ್ಧತೀಪ್ರಕಾರ ಸ್ವಯಂವರವಾಗಬೇಕು (ನೀತಿಚಿಂ. VI, ೭); ಕೇಳ್ದಳಿತ್ತನಸೂಯೆ . . . ಸ್ವಯಂವರದ ವೃತ್ತಮಂ (ಶ್ರೀರಾಮಾ. ೧೭೮-೭೩). [ಸಂ.]

**ಸ್ವಯಂವರೆ** (ನಾ). ಆಹ್ವಾನಿತರು ನೆರೆದ (ಸ್ವಯಂವರ)ಸಭೆಯಲ್ಲಿ ತನ್ನ ಗಂಡನನ್ನು ತಾನೇ ಆರಿಸಿಕೊಳ್ಳುವ ಹೆಣ್ಣು: "ಸ್ವಯಂವರಾ, ಪತಿಂವರಾ, ವರ್ಯಾ - ಈ ೩ ಸ್ವಯಂವರದಲ್ಲಿ ಪತಿಯನ್ನು ವರಿಸಿದ ಸ್ತ್ರೀಯ ಹೆಸರು" (ನಾಚಿರಾ. ೧೧೬). [ಸಂ. ಸ್ವಯಂವರಾ]

**ಸ್ವಯಂವೇದ್ಯ** (ನಾ). ಸ್ವತಃ ತಿಳಿಯತಕ್ಕುದು; ತನಗೆ ತಾನೇ ಮನದಟ್ಟಾಗುವುದು: ಯಾವುದರ ಅನುಭವ ಸ್ವಯಂವೇದ್ಯವಾದ ಮಾಧುರ್ಯದಲ್ಲಿ ಸೃಷ್ಟಿಯ ಏಕತಾನದೊಡನೆ ಮಿಡಿಯುವುದೋ ಆಗ ಅದು ಸೌಂದರ್ಯವಲ್ಲದೆ ಮತ್ತೇನನ್ನು ತಾನೇ ಅಭಿವ್ಯಕ್ತಿಗೊಳಿಸೀತು (ಸೌಂದಸ. ೮೯). [ಸಂ.]

**ಸ್ವಯಂಶಾಸಿತ** (ನಾ). ಯಾರ ಅಧೀನಕ್ಕೂ ಒಳಪಡದೆ ತನ್ನದೇ ಆದ ಆಡಳಿತಕ್ಕೆ ಒಳಪಟ್ಟುದು: ಒಂದೊಂದು ಗ್ರಾಮವೂ ನಗರವೂ ಸ್ವಯಂಶಾಸಿತವಾಯ್ತು (ಅಪಲ್ಯೋ. ೧೦೨). [ಸಂ.]

**ಸ್ವಯಂಸಿದ್ಧ** (ಗು). ತನ್ನಷ್ಟಕ್ಕೆ ತಾನೇ ಸ್ಪಷ್ಟವಾದ: ಮಿತ – ಪರಿಚ್ಛಿನ್ನ ವೆಂಬುದು ಸ್ವಯಂಸಿದ್ಧವಿಷಯ (ಜೀವಾತ್ಮ. ೫೨). [ಸಂ.]

**ಸ್ವಯಂಸೇವಕ** (ನಾ). (ಪ್ರತಿಫಲಾಪೇಕ್ಷೆಯಿಲ್ಲದೆ) ಸ್ವಸಂತೋಷದಿಂದ ತಾನಾಗಿ ಸೇವೆಯಲ್ಲಿ ತೊಡಗುವ ವ್ಯಕ್ತಿ: ಸ್ವಯಂಸೇವಕರು ಅಲ್ಲಲ್ಲಿ ನಿಂತು ವಸ್ತ್ರಗಳನ್ನು ತೋರಿಸುತ್ತಿದ್ದರು (ಕಪಪ್ರ. ೮-೩೮). [ಸಂ.]

**ಸ್ವಯಂಸೇವಿಕೆ** (ನಾ). (ಪ್ರತಿಫಲಾಪೇಕ್ಷೆಯಿಲ್ಲದ) ಸ್ವಸಂತೋಷದಿಂದ ತಾನಾಗಿ ಸೇವೆಯಲ್ಲಿ ತೊಡಗುವವಳು: ಸ್ವಯಂಸೇವಿಕೆಯರ ಗುಂಪೊಂದು ಮೆರವಣಿಗೆಯಲ್ಲಿ ಹೊರಟಿತ್ತು (ಫಲಸಂ. ೮೭). [ಸಂ. ಸ್ವಯಂಸೇವಿಕಾ]

**ಸ್ವಯಂಸೇವೆ** (ನಾ). ''ಸ್ವಂತ ಇಷ್ಟದಿಂದ ಮಾಡುವ ಸೇವೆ, ಸ್ವಯಂಸೇವೆ'': (Voluntary Service. ೯೦೩೧). [ಸಂ. ಸ್ವಯಂಸೇವಾ]

**ಸ್ವಯಲಿಂಗ** (ನಾ). [ವೀಶೈ] ಆತ್ಮಲಿಂಗ; ತಾದಾತ್ಮ್ಯಭಾವ: ಸ್ವಯಲಿಂಗ ದನುಭಾವ ತನಗೆ ದೊರಕೊಂಡ ಬಳಿಕ ದೇವಲೋಕವೆಂಬುದೇನೊ ಮರ್ತ್ಯಲೋಕವೆಂಬುದೇನೊ (ಬಸವ. ೯೪೭); ಘನಲಿಂಗದೇವರು ತಮ್ಮ ಸ್ವಯಲಿಂಗಾನು ಭಾವದಿಂದ ಹಾಡಿದ ವಚನ (ಘನವ. ೧-೧). [ಸ್ವಯ + ಲಿಂಗ]

**ಸ್ವಯಸಂಪರ್ಕ** (ನಾ). [ವೀಶೈ] ಲಿಂಗಾನುಭೂತಿ: ಉಪೇಕ್ಷೆಯಿಂದ ಉರಿವ ಬೆಳಗು ಪವನನ ಪ್ರಳಯಕ್ಕೆ ಒಳಗು ಸ್ವಯಸಂಪರ್ಕದಿಂದ ಒರಗಿದ ಬೆಳಗು ಅನಿಲನ ಆಹುತಿಗೆ ಪೊಜಗಾಗಿಪ್ಪುದು (ಮೋಳಿಮಾ. ೯-೩೨). ''ಸ್ವಾನುಭಾವ'' (ಮೋಳಿಮಾ. ಕೋಶ).

[ಸ್ವಯ + ಸಂಪರ್ಕ]

**ಸ್ವಯಸುಖ** (ನಾ). [ವೀಶೈ] ಸ್ವಸಂತೋಷ; ಆತ್ಮಾನಂದ: ಇರ್ದಯನದೊಳಾ ನಂದಾಶ್ರುಗಳುಣ್ಮೆ ವರ್ಣಿಸಲಂದಿಲ್ಲ ಸ್ವಯಸುಖವ (ಶಿವಗೀ. ೧೭೧-೮೩೩).

[ಸ್ವಯ + ಸುಖ]

**ಸ್ವಯಾನಂದ** (ನಾ). = ಸ್ವಯಸುಖ: ಸ್ವಯಾನಂದಭರಿತ ನಿಃಕಳಂಕಮಲ್ಲಿಕಾರ್ಜುನಾ (ಮೋಳಿಮಾ. ೧೭೦-೨೭). [ಸ್ವಯ + ಆನಂದ]

**ಸ್ವಯಾನುಭಾವ** (ನಾ). [ವೀಶೈ] ೧. ಸ್ವಂತ ಅನುಭಾವ; ಸ್ವಾನುಭಾವ; ಆತ್ಮಸಾಕ್ಷಾತ್ಕಾರ. ೨. ಸ್ವಾನುಭಾವವನ್ನು ಹೊಂದಿದ ವ್ಯಕ್ತಿ; ಆತ್ಮ ಸಾಕ್ಷಾತ್ಕಾರವನ್ನು ಹೊಂದಿದ ವ್ಯಕ್ತಿ: ಜ್ಞಾನಹೀನರು ಬೇಗ ಹೋಗಿ . . . ನಿರುತ ಸ್ವಯಾನುಭಾವರು ಬನ್ನಿ (ಸರ್ವವ. ೮೧-೪೫೦). [ಸ್ವಯ + ಅನುಭಾವ]

**ಸ್ವಯಾರ್ಜಿತ** (ಗು). ೧. ಸ್ವಂತವಾಗಿ ಗಳಿಸಿದ; ತಾನೇ ಸಂಪಾದಿಸಿದ: ಸ್ವಯಾರ್ಜಿತ ಆಸ್ತಿಯನ್ನು ವ್ಯಕ್ತಿಯು ತನ್ನ ಇಷ್ಟದಂತೆ ವಿನಿಯೋಗಿಸಲು ಸ್ವತಂತ್ರನು (ರೂಢಿ). (ನಾ). ೨. ಸ್ವಂತವಾಗಿ ಗಳಿಸಿದುದು; ಸ್ವತಃ ಸಂಪಾದಿಸಿದುದು: ಅವರ ಮನೆ ಸ್ವಯಾರ್ಜಿತವಾದುದರಿಂದ ಯಾರೂ ಹಕ್ಕನ್ನು ಚಲಾಯಿಸಿ ಪಡೆದುಕೊಳ್ಳುವ ಅಧಿಕಾರವಿಲ್ಲ (ರೂಢಿ). [ಸಂ.]

**ಸ್ವಯೂಥಕಲಹ** (ನಾ). ತಮ್ಮತಮ್ಮವರಲ್ಲೇ ಉಂಟಾಗುವ ಒಳಜಗಳ; ಸ್ವಂತಜನಗಳಲ್ಲಿ ಪರಸ್ಪರ ಹುಟ್ಟುವ ಕಲಹ: ಸ್ವಯೂಥಕಲಹಕ್ಕಿಂತಲೂ ಅಧಿಕವಾದ ವಿಷ ಬೇರೆ ಇಲ್ಲ (ಚಿತ್ರಪಾ. ೧೧೧); ಅಲ್ಲಿ ಸಿಂಹಾಸನಕ್ಕಾಗಿ ಸಹೋದರರಲ್ಲಿ ನಡೆದ ಸ್ವಯೂಥಕಲಹದ ಬೆಂಕಿಗೆ ಆಜ್ಯನಾಗಿ ಮಲ್ಲಿಕಾಪೂರನು ಬಂದಿದ್ದನು (ರಾಜ್ಯೋದ. ೨); ಅನಂತರ ಬ್ರಾಹ್ಮಣರಲ್ಲಿ ಸ್ವಯೂಥಕಲಹ ಪ್ರಾರಂಭವಾಯಿತು (ಗರುಡಾ. ೨೩). [< ಸಂ. ಸ್ವಯೂಥಕಲಹ]

**ಸ್ವರ** (ನಾ). ೧. ಕಂಠದಿಂದ ಹೊರಡುವ ನಾದ; ಧ್ವನಿ: ''ಹ್ರಾದಃ . . .ಸ್ವರಃ, ರವಃ, ಘೋಷಃ – ಈ ೮ ಧ್ವನಿ'' (ಹಲಾಯು. ೨೩-೧೩೭). ೨. ಶಬ್ದ; ಸದ್ದು. ೩. (ವೇದಗಳನ್ನು ಪಠಿಸುವಾಗ ಬಳಸುವ) ಉದಾತ್ತ, ಅನುದಾತ್ತ ಮತ್ತು ಸ್ವರಿತ ಎಂಬ ಮೂರು ಬಗೆಯ ಉಚ್ಚಾರಣೆ,– ಶಬ್ದದ ಮೇಲೆ ಬೀಳುವ ಒತ್ತು: ವೇದಮಂತ್ರಗಳನ್ನು ಸ್ವರಸಹಿತವಾಗಿ ಅಭ್ಯಾಸ ಮಾಡಬೇಕು (ರೂಢಿ). ೪. [ವ್ಯಾಕ] ಭಾಷೆಯಲ್ಲಿ ಅನ್ಯಾವಲಂಬನೆಯಿಲ್ಲದೆ ಉತ್ಪನ್ನವಾಗುವ ಅ, ಇ, ಉ ಮುಂತಾದ ಶಬ್ದದ್ರವ್ಯ; ವರ್ಣಮಾಲೆಯಲ್ಲಿ ಸ್ವತಂತ್ರವಾಗಿ ಉಚ್ಚರಿಸುವ ವರ್ಣ; ವ್ಯಂಜನವಲ್ಲದ ಅಕ್ಷರ: ಅಂತಕಾರಾದಿ ಪಕಾರಾಂತ ಸ್ವರವ್ಯಂಜನ ಭೇದ ಭಿನ್ನ ಶುದ್ಧಾಕ್ಷರಂಗಳುಮಂ . . . ಉಪದೇಶಂಗೆಯ್ದು (ಆದಿಪು. ೮-೫೯ ವ); ತರದಿನಕಾರಂ ಮೊದಲಾಗಿರೆ ಪದಿನಾಲ್ಕುಂ ಸ್ವರಂಗಳ್ (ಶಮದ. ೬); ಬಿಡಿಯಾಗಿ ಉಚ್ಚರಿಸಲು ಆಗುವ ವರ್ಣಕ್ಕೆ ಸ್ವರ ಎಂದು ಹೆಸರು (ಮಧ್ಯಮ. ೧೧). ೫. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ: ''ಸ್ವರ . . . ಏಟಟಿ ನಾಮಂ'' (ವ್ಯವಹಾ. ೯-೭); ''ಋಷಿ ನಗ ಹಯ ಸ್ವರಮದೇಟು'' (ಮಂಗರಾ. ೧೧೩-೮). ೬. [ಸಂಗೀತ] ಇನ್ನೊಂದರ ನೆರವನ್ನು ಅಪೇಕ್ಷಿಸದೆ, ಶ್ರೋತೃಗಳಿಗೆ ಸ್ವತಃ ರಂಜನೆ ಯನ್ನುಂಟುಮಾಡುವ ನಾದವಿಶೇಷ; (ಮುಖ್ಯವಾಗಿ) ಷಡ್ಜ, ಋಷಭ ಇತ್ಯಾದಿ ಸಪ್ತಸ್ವರ: ಸ್ವರಗಳು ಏಳು. ಇವು ಸಂಗೀತಶಾಸ್ತ್ರದಲ್ಲಿ ಉಕ್ತ (ಧ್ವನ್ಯಾಲೋ. ೨೧ ಅಡಿಟ); ಭಾರತೀಯಸಂಗೀತದ ಸ್ವರ ಮತ್ತು ಲಯಗಳ ಮೂಲಬೀಜಗಳನ್ನು ಕಾಣಬೇಕಾದಲ್ಲಿ ವೇದಗಳನ್ನು ನೋಡಬೇಕು (ಭಾರದ. ೫೩೭). ೭. ಗೀತೆಯ ಆರು ಲಕ್ಷಣಗಳಲ್ಲಿ ಒಂದು: ಸ್ವರ ಶ್ರುತಿ ಗಮಕಂಗಳಿಂ ಪುಟ್ಟಿದ ಗೀತಮಾದೊಡೆ ಸ್ವರ ಸುಸ್ವರ ಸುರಾಗ ಮಧುರ ಅಕ್ಷರ ಅಲಂಕಾರವೆಂಬಾಱು ಲಕ್ಷಣಮುಳ್ಳುದಾಗಿಹುದು (ವಿವೇಕ. ೨೩೨). [ಸಂ.]

**ಸ್ವರಕರಣ** (ನಾ). ೧. ಶಬ್ದವನ್ನುಂಟುಮಾಡುವುದು; ಸದ್ದುಮಾಡುವುದು: ಸ್ವರಕರಣ – ಸರಕರಣ (ಶಮದ. ೨೪೯ ಪ್ರಯೋ). ೨. ಒಂದು ಬಗೆಯ ತಾಳ: ಧ್ರುವ ಮಟಯ . . . ಸ್ವರಕರಣ ಪಾಠಕರಣ . . . ಜಯಾಳವೆಂಬವೇ ಮೊದಲಾದ ನೂಱೊಂದು ತಾಳಂಗಳಾದೊಡೆ (ವಿವೇಕ. ೧೯೨). [ಸಂ.]

**ಸ್ವರಗೆಯ್**, ಸ್ವರಗೈ (ಕ್ರಿ). ನಾದವನ್ನು ಹೊರಡಿಸು; ಹಾಡು: ತರುಣಪಲ್ಲವದ ವಿಸ್ತಾರದಿಂ ನೇರದಿಂ ಸ್ವರಗೆಯ್ವ [ಪಾಠಾಂ. ಸರಗೈವ] ಕಲಪಿಕೋಚ್ಚಾರದಿಂ ಸಾರದಿಂ (ಜೈಮಿಭಾ. ೩-೨೮). **ಸ್ವರಗೈ**: ಸ್ವರಗೈವ ಕೋಗಿಲೆಯ ಧ್ವನಿ ಸೊಂಪಿನಿಂದೆ (ನವಮೋ. ೮-೨೮). [ಸ್ವರ + ಕೆಯ್$_1$]

**ಸ್ವರಗೈ** 'ಸ್ವರಗೆಯ್' ನೋ.

**ಸ್ವರಜತಿ** (ನಾ). [ಸಂಗೀತ] ಕರ್ಣಾಟಕ ಸಂಗೀತದ ಒಂದು ರಚನೆ; ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳಿಂದ ಕೂಡಿದ್ದೂ, ಆಯಾ ರಾಗದ ಸ್ವರೂಪವನ್ನು ತಿಳಿಸುವ ಜತಿಗಳಿಂದ ಏರ್ಪಡುತ್ತದೆ: ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳನ್ನು ಹೊಂದಿ, ರಾಗದ ಪೂರ್ಣಸಂಚಾರಕ್ರಮಗಳನ್ನು ಭಾವಯುಕ್ತವಾಗಿ, ಗಮಕಯುಕ್ತವಾಗಿ ಹೊರಗೆಡಹುವ ತಾಳಬದ್ಧವಾದ ಸಾಹಿತ್ಯಯುಕ್ತರಚನೆ, ಸ್ವರಜತಿ ಎನಿಸಿಕೊಳ್ಳುತ್ತದೆ (ಸಂಗೀಚಂ. ೭೦). [ಸ್ವರ + ಜತಿ$_1$]

**ಸ್ವರಜಾಲ** (ನಾ). [ಸಂಗೀತ] ಹ್ರಸ್ವಸ್ವರಗಳು ಅತಿಯಾದ ವೇಗದಲ್ಲಿ ನಡೆಯುವ ಸ್ವರಸಂಚಾರವಿಶೇಷ: ಅತಿ ತೀವ್ರಗತಿಯಿಂದ ನುಡಿಯುತ್ತಿದ್ದ ಆ ಶಾರೀರದ ಸ್ವರಜಾಲ (ಬಿರ್ಕಾ), ಮಿಂಚಿನೋಪಾದಿಯಲ್ಲಿ ಪ್ರವಹಿಸಿ ಶ್ರಾವಕರಿಗೆ ಪರಮಾನಂದವನ್ನೂ ಪರಮಾಶ್ಚರ್ಯವನ್ನೂ ಏಕಕಾಲದಲ್ಲಿ ಉಂಟುಮಾಡುತ್ತಿದ್ದುವು (ಸಂಗೀಚಂ. ೨೫೮). [ಸಂ.]

**ಸ್ವರತಿ** (ನಾ). ತನ್ನಲ್ಲಿ ಮಾತ್ರ ತನಗೆ ಇರುವ ಪ್ರೀತಿ; ತನ್ನಲ್ಲಿ ಮಾತ್ರ ತಾನು ಸಂತೋಷಗೊಳ್ಳುವುದು; ಆತ್ಮರತಿ: ತನ್ನವರನ್ನು ಹರಿದು ಹರಿದು ತಿನ್ನುವ, ಕೊಡುವ ಪ್ರೇಮವನ್ನು ಕಳೆದುಕೊಂಡ ಸ್ವರತಿಯ ನರಕದಲ್ಲಿ ಬಾಳುತ್ತಾನೆ. ಸಭ್ಯ ಸಂತ ಇಬ್ಬರೂ ಆತ್ಮರತರು, ಆತ್ಮತೃಪ್ತರು. ನನಗೆ ಸ್ವರತಿ ಮಾತ್ರ ಸಾಧ್ಯ (ಹೊಸಕ್ಕಿ. ೨೩೭).

[ಸಂ.]

**ಸ್ವರತಿರುವು** (ನಾ). [ಸಂಗೀತ] ಸ್ವರಸಮೂಹವು ತನ್ನ ಸಂಚಾರದ ದಿಕ್ಕನ್ನು ಬದಲಾಯಿಸುವುದು: ಅವರ ಕೆಲವು ನಿರವಲ್‌ಗಳು, ಗಮಕಗಳು, ಮಿಂಚಿನಂತೆ ಹೊಳೆಯುವ ಸ್ವರತಿರುವುಗಳೂ ಪಲುಕುಗಳೂ . . . ಮೆಚ್ಚುಗೆಯನ್ನು ತಂದುಕೊಟ್ಟವು (ಸಂಗೀತ. ೧೨೦). [ಸ್ವರ + ತಿರುವು]

**ಸ್ವರದೋಷ** (ನಾ). [ವ್ಯಾಕ] ಸ್ವರಗಳನ್ನು ತಪ್ಪಾಗಿ ಉಚ್ಚರಿಸುವುದು: ಪಾತಂಜಲಿ ಮಹಾಭಾಷ್ಯದಲ್ಲಿ ಹೇಳುವ ಪ್ರಕಾರ ಇಂತಹ ಹ್ರಸ್ವದೀರ್ಘಪಲ್ಲಟವು ಸ್ವರದೋಷ ವೆನಿಸುವುದು (ಸಂಶೋಧ. ೧೨೦). [ಸಂ.]

**ಸ್ವರಧಾತು** (ನಾ). [ವ್ಯಾಕ] ಸ್ವರವು ಮೂಲಕ್ರಿಯಾಪದವಾಗಿರುವುದು: ಸ್ವರಧಾತುಗೆ ಈ – ಪ್ರದಾನೇ, ಓ – ಸ್ನೇಹೇ (ಶಮಧಾ). [ಸಂ.]

**ಸ್ವರಪಂಪ** (ನಾ). [ಸಂಗೀತ] ಕೇವಲ ಎರಡು ಅಥವಾ ಮೂರುಸ್ವರಗಳನ್ನು ಪ್ರಯೋಗಿಸಿ ಅವುಗಳನ್ನು ದಟ್ಟವಾಗಿ ಹೆಣೆಯುವುದು: ಈ ನಾಲ್ಕು ರೀತಿಯ ಸ್ವರಪಂಪಗಳನ್ನು ಹೊಂದಿರುವುದೇ ಸರಿಯಾದ ತಾನ (ಸಂಗೀಚಂ. ೮೯). [ಸ್ವರ + ಪಂಪ?]

**ಸ್ವರಪುಂಜ** (ನಾ). ಸ್ವರಗಳ ಸಮೂಹ : ಕೆಲವು ಬಾರಿ ದಂಡಿಯ ತುದಿಗೂ ಬೆಣೆಗಳಿಗೂ ನಡುವೆ ಇರುವ ಜಾಗದಲ್ಲಿ ತಂತಿಗಳನ್ನು ಬಡಿದು ಹಲವಾರು ಸುಂದರ ಸ್ವರಪುಂಜಗಳನ್ನು ಸೃಜಿಸುತ್ತಿದ್ದರು (ಸಂಗೀತ. ೬೭). [ಸಂ.]

**ಸ್ವರಪ್ರಸ್ತಾರ** (ನಾ). [ಸಂಗೀತ] ಮಾತಿಗೆ ಸ್ವರಲಯಗಳನ್ನು ರಚಿಸುವುದು; ಸಾಹಿತ್ಯವನ್ನು ಸ್ವರಲಿಪಿಯಲ್ಲಿ ಬರೆದಿಡುವಿಕೆ: ಪಲ್ಲವಿಶೇಷಯ್ಯರ್ ಅವರು ತಮ್ಮ ರಚನೆಗಳಿಗೆಲ್ಲ ಸ್ವರಪ್ರಸ್ತಾರ ಹಾಕಿಕೊಟ್ಟು ಪ್ರಕಟಿಸಿ ಬಹಳ ದೊಡ್ಡ ಉಪಕಾರ ಮಾಡಿದ್ದಾರೆ (ಸಂಗೀತ. ೪೯). [ಸಂ.]

**ಸ್ವರಬತ್** 'ಸ್ವರಬತ್ತು' ನೋ.

**ಸ್ವರಬತ್ತು, ಸ್ವರಬತ್, ಸ್ವರಬಾತ್** (ನಾ). ಒಂದು ಬಗೆಯ ತಂತೀವಾದ್ಯ; IP ಹಿಂದೂಸ್ಥಾನೀ ಸಂಗೀತದಲ್ಲಿ ಬಳಕೆಯಾಗುವ ಈ ವಾದ್ಯವಿಶೇಷ ಈಗ ಅಪರೂಪವಾಗುತ್ತಿದೆ: ಹತ್ತು ದಿನವೂ ತಾವೇ ಕಚೇರಿಮಾಡುವರು. ಈ ದಿನ ವೀಣೆ, ನಾಳೆ ಜಲತರಂಗ . . . ಬೇರೊಂದು ದಿನ ಸ್ವರಬತ್ತು ! (ಗಾನಕ. ೫); ಪಿಟೀಲು, ಪಿಯಾನೋ, ಸ್ವರಬತ್ತು – ಈ ಹಲವಾರು ವಾದ್ಯಗಳಲ್ಲೂ ಪರಿಶ್ರಮ ಪಡೆದಿದ್ದರು (ನಾಕಲಾ. ೨೮). **ಸ್ವರಬತ್**: ವೀಣೆಯೊಂದನ್ನೇ ಅಲ್ಲದೆ ಸ್ವರಬತ್, ಪಿಟೀಲು, ಪಿಯಾನೋ, ಜಲತರಂಗ ಮತ್ತು ನಾಗಸ್ವರಗಳನ್ನೂ ಅದ್ಭುತವಾಗಿ ಶೇಷಣ್ಣನವರು ನುಡಿಸಬಲ್ಲವರಾಗಿದ್ದರು (ಸಂಗೀಚಂ. ೨೭೦). **ಸ್ವರಬಾತ್**: ಪರಮೇಶ್ವರಭಾಗವತರು ವೀಣಾವಾದನ, ಪಿಟೀಲುವಾದನ ಮತ್ತು ಸ್ವರಬಾತ್‌ನ ವಾದನಗಳಲ್ಲಿ ಬಹಳ ಪರಿಶ್ರಮ ಪಡೆದಿದ್ದರು (ಸಂಗೀತ. ೪೩). [?]

**ಸ್ವರಬಾತ್** 'ಸ್ವರಬತ್ತು' ನೋ.

**ಸ್ವರಭಂಗ** (ನಾ). ೧. ಧ್ವನಿ ಒಡೆಯುವುದು, ಭಾವೋದ್ವೇಗ ಮುಂತಾದ ಕಾರಣಗಳಿಂದ ಉಚ್ಚಾರಣೆಯಲ್ಲಿ ಉಂಟಾಗುವ ದೋಷ, – ಅಸ್ಫುಟತೆ. ೨. ಧ್ವನಿಯು ಒಡೆಯುವುದು,– ಬದಲಾಗುವುದು. ೩. ಕಂಠನಾದವನ್ನು ಮೊಟಕುಗೊಳಿಸುವ ಒಂದು ಬಗೆಯ ಗಂಟಲುರೋಗ: ಸ್ವರಭಂಗವನ್ನೂ ಹಲ್ಲುಕುರುವನ್ನೂ ಹಲ್ಲುನೋವನ್ನು . . . ಪರಿಹರಿಸಿ ದೃಷ್ಟಿಪ್ರಸನ್ನತೆಯನ್ನುಂಟು ಮಾಡುವುದು (ಸಕವೈ. ೨೭); ಈ ತ್ರಿದೋಷಗಳಿಂದೊಗೆದ ಸ್ವರಭಂಗವನು, ಮೇದೋಧಾತುವೃದ್ಧಿಯಿಂ ಪುಟ್ಟಿದ ಸ್ವರಭಂಗವನು ಅಸಾಧ್ಯವೆಂದು ಬಿಡುವುದು (ಸಕವೈ. ೨೪೯). [ಸಂ.]

**ಸ್ವರಭಕ್ತಿ** (ನಾ). [ಭಾಷಾಶಾ] ದ್ವಿತ್ವಾಕ್ಷರಗಳ ಮಧ್ಯೆ ಸ್ವರವನ್ನು ತಂದು ವ್ಯಂಜನಗಳನ್ನು ಬಿಡಿಸಿ ಹೇಳುವುದು; IP ಉದಾ: ಭಕ್ತಿ – ಭಕುತಿ, ಯುಕ್ತಿ – ಯುಕುತಿ, ಹರ್ಷ – ಹರುಷ: ದ್ವಿತ್ವಾಕ್ಷರಗಳುಳ್ಳ ತತ್ಸಮಶಬ್ದಗಳು ಸ್ವರಭಕ್ತಿಯಿಂದ ತದ್ಭವಗಳಾಗುತ್ತವೆ (ರೂಢಿ). [ಸಂ.]

**ಸ್ವರಭಾರ** (ನಾ). ವರ್ಣಗಳ ಉಚ್ಚಾರದಲ್ಲಿ ಗೊತ್ತಾದ ಸ್ವರಗಳ ಮೇಲೆ ಒತ್ತು ಬೀಳುವುದು; ಸ್ವರಾಘಾತ: ಗದ್ಯದ ಸ್ವರಭಾರವನ್ನು ಕುಕ್ಕಿಸುವಂಥ ಮಿಕ್ಕಿಸುವಂಥ ಗಾನಮಾಧುರ್ಯವು ಆಕೃತಿಯಲ್ಲಿರಬೇಕು (ಗೊತ್ತುಗು. ೬೩). [ಸಂ.]

**ಸ್ವರಭೇದ** (ನಾ). [ಕಾವ್ಯಮೀ] ಎಂಟು ವಿಧವಾದ ಸಾತ್ವಿಕಭಾವಗಳಲ್ಲಿ ಒಂದು; ಧ್ವನಿ ಬದಲಾಗುವುದು: ಸ್ವೇದಂ ವೈವರ್ಣ್ಯಂ ಸ್ವರಭೇದಂ ರೋಮಾಂಚನಂ ಪ್ರಕಂಪನಮಶ್ರೂದ್ಭೇದಂ ಸ್ತಂಭಂ ಲಯಮೆಂದಾದುವಿವೆಂಟುಂ ರಸಕ್ಕೆ ಸಾತ್ವಿಕಭಾವಂ (ಕಾವ್ಯಾವ. ೭೯೭). [ಸಂ.]

**ಸ್ವರಮಂಡಲ** (ನಾ). ಒಂದು ಬಗೆಯ ತಂತ್ರೀವಾದ್ಯ: ಸ್ವರಮಂಡಲದಲ್ಲಿ ದಂಡಿಗೆಯಲ್ಲಿ ಕಿನ್ನರಿಯಲ್ಲಿ ತ್ರಿವಿಧವೀಣೆಯೊಳು ಕೊರಳು ಬೆರಳು ಕೊಂಕುದನಿಗೂಡಿ ಮುತ್ತಿನ ಸರವೆತ್ತಿದಂತೆ ಪಾಡಿದರು (ಭರಚ. ೬೪-೧೪); ನುಡಿಸುವ ವೀಣೆ ಕಿನ್ನರಿ ಸ್ವರಮಂಡಲ ತಂಬೂರಿ . . . ಇಂತಿವು ಮೊದಲಾದ ನಾನಾ ತೆರದ ನಾದಂಗಳನು ಕಿವಿದುಂಬಿ ಕೇಳಿ (ಅಖಂಡೇ. ೨೦೭-೪೭). [ಸಂ.]

**ಸ್ವರಮೇಳ** (ನಾ). ಪರಸ್ಪರ ಕೂಡಿರುವ ಸ್ವರಗಳ ಸಮೂಹ: ಈ ಕ್ರಮವನ್ನು ತೊಡಕಾದ ತರಂಗಗಳ ಆಕಾರಗಳಲ್ಲಿ ಸ್ವರಮೇಳಗಳನ್ನು ಪ್ರತ್ಯೇಕಿಸಲು ಉಪಯೋಗಿಸುತ್ತಿದ್ದಾರೆ (ಕವಿಕೋ. I. ೬೫೪). [ಸಂ. ಸ್ವರಮೇಲ]

**ಸ್ವರಮೈತ್ರಿ** (ನಾ). [ಸಂಗೀತ] ಪರಸ್ಪರವಾಗಿ ಹೊಂದಿಕೊಂಡು ಕಿವಿಗೆ ಹಿತವಾಗುವಂತಹ ರೀತಿಯಲ್ಲಿ ಸ್ವರಗಳನ್ನು ಏರ್ಪಡಿಸುವುದು: ಸ್ವರಮೇಳ; ಸ್ವರಮೈತ್ರಿ ; ಇಂಪುದನಿ ; ಮಧುರನಾದ (Harmony. ೧೦೮೩). [ಸಂ. ಸ್ವರಮೈತ್ರೀ]

**ಸ್ವರಯೋಗ** (ನಾ). = ಸ್ವರಮೇಳ: ಅವ್ಯಕ್ತ ಮಧುರವಾಗಿಯೂ ವಿಶುದ್ಧವಾಗಿಯೂ ಇರುವ ಗೀತಿಯಲ್ಲಿ ಸ್ವರಯೋಗ ಕೇಳಿಬರುವುದು (ಶಾಕುಂತ. ೬೦-೩). [ಸಂ.]

**ಸ್ವರವಾದಿ** (ನಾ). ಹಾಡು ಹೇಳುವವನು; ಹಾಡುಗಾರ; ಸಂಗೀತಗಾರ: ಸ್ವರವಾದಿ – ಸರವಾದಿ (ಶಮದ. ೨೪೯ ಪ್ರಯೋ). [ಸಂ. ಸ್ವರವಾದಿನ್]

**ಸ್ವರವಿನ್ಯಾಸ** (ನಾ). [ಸಂಗೀತ] ವಿವಿಧರೀತಿಗಳಲ್ಲಿ ಸ್ವರಗುಂಪುಗಳನ್ನು ರಚಿಸುವುದು: ಅವರ ಸ್ವರವಿನ್ಯಾಸ ಕ್ರಮ ವಿಶಿಷ್ಟರೀತಿಯದು (ರೂಢಿ). [ಸಂ.]

**ಸ್ವರವೀಣೆ** (ನಾ). ಒಂದು ಬಗೆಯ ವೀಣೆ: ವಿಪಂಚಿಕೆ . . . ಸ್ವರವೀಣೆ . . . ಕಾಲಕೀಯೆಂಬ ಮೂವತ್ತುಮೂಱು ತಂತ್ರೀವಾದ್ಯಂಗಳಲ್ಲಿ (ವಿವೇಕ. ೨೩೭). [ಸಂ. ಸ್ವರವೀಣಾ]

**ಸ್ವರಶುದ್ಧಿ** (ನಾ). ಸ್ವರಗಳನ್ನು ಸರಿಯಾಗಿ ಉಚ್ಚರಿಸುವುದು; ಸ್ವರಗಳ ಉಚಿತವಾದ ಬಳಕೆ: ಸ್ವರಶುದ್ಧಿಯಲ್ಲಿಯೂ, ಸಮುಚಿತ ಉಚ್ಚಾರದಲ್ಲಿಯೂ . . . ದೊರೆಯಬಹುದಾದ ಸುಸಂಧಿಯು ಬೇರೆ ಯಾವ ಸಂದರ್ಭದಲ್ಲಿಯೂ ದೊರೆಯುವುದಿಲ್ಲ (ಕಥಕ. ೮೭). [ಸಂ.]

**ಸ್ವರಸ** (ನಾ). ೧. ಸ್ವಂತ ಅಪೇಕ್ಷೆ, – ರುಚಿ ; ಸ್ವಸಂತೋಷ. ೨. [ವೈದ್ಯಶಾ] ಸಹಜವಾದ ರಸ; ತನ್ನ ರಸ: ಮತ್ತಲೇಹ್ಯ . . . ಅದರಲ್ಲಿ ಹಾಕುವ ಸ್ವರಸಗಳು – ಗರುಗ, ಆಡುಸೋಗೆ, ಒಂದೆಲಗ, ಎಸಗ (ಸಕವೈ. ೨೨೨). [ಸಂ.]

**ಸ್ವರಸಂಧಿ** (ನಾ). [ವ್ಯಾಕ] ಎರಡು ಸ್ವರಗಳ ನಡುವೆ ಆಗುವ ಸಂಧಿ: ಸ್ವರಸಂಧಿಯಲ್ಲಿ ಆಗಮವಾಗುವ ಯ, ವ ಎಂಬ ಅಕ್ಷರಗಳು ಉಚ್ಚಾರಣೆಯ ಸೌಕರ್ಯವನ್ನನುಸರಿಸಿ ಬರುವವು (ಕೈಪಿಡಿ. ೮). [ಸಂ.]

**ಸ್ವರಸಂವಾದ** (ನಾ). (ಸಂಗೀತದಲ್ಲಿ) ಸ್ವರಗಳ ಹೊಂದಾಣಿಕೆ; ಸ್ವರಗಳ ಸಾಮರಸ್ಯ: ಹೀಗೆ ಏಕತಾನದಲ್ಲಿರುವ ಸ್ವರಗಳು ಬಹು ಇಂಪಾಗಿ ಕೇಳುತ್ತವೆ. ಸ್ವರಸಂವಾದ (Harmony) ವಿಷಯದಲ್ಲಿ ಇದೇ ಮುಖ್ಯತತ್ತ್ವ (ಭೌತವಿ. ೧೨೭). [ಸಂ.]

**ಸ್ವರಸಪ್ತಕ** (ನಾ). [ಸಂಗೀತ] ಆಧಾರಷಡ್ಜದಿಂದ ನಿಷಾದದವರೆಗಿನ ಏಳು ಮೂಲಸ್ವರಗಳು,– ಸಪ್ತಸ್ವರಗಳು: ರೂಢಿಯಲ್ಲಿರುವ ಸಮಗ್ರಸ್ವರಸ್ಥಾನಗಳನ್ನು ಪ್ರತಿನಿಧಿಸುವ ಏಳುಸ್ವರಗಳಲ್ಲಿ ಹಿಂದಿನದಕ್ಕಿಂತ ಮುಂದಿನದು ಧ್ವನಿಮಟ್ಟದಲ್ಲಿ ಕ್ರಮವಾಗಿ ಏರುವಂತೆ ವ್ಯವಸ್ಥೆಗೊಳಿಸಿರುವುದನ್ನು ಸ್ವರಸಪ್ತಕವೆಂದೂ . . . ಕರೆಯಲಾಗುತ್ತದೆ (ಕವಿಕೋ. I. ೮೭೦). [ಸಂ.]

**ಸ್ವರಸಮುದಯ** (ನಾ). (ಸಂಗೀತದಲ್ಲಿ) ಸ್ವರಗಳ ಸಮೂಹ : ಆ ಮಹಾವನಂ . . . ಸ್ವರಸಮುದಯದಂತೆ ನಿಷಾದನಿಷೇವ್ಯಮುಂ . . . ಆರಾಧಕನಂತಕ್ಷಮಾಲಾಗಣಿತ ಜಪೋಪೇತಮುಂ (ಚಂದ್ರಪು. ೫-೫೨ ವ). [ಸಂ.]

**ಸ್ವರಸಾದ** (ನಾ). = ಸ್ವರಭಂಗ ೩: ವಾತ ಪಿತ್ತ ಶ್ಲೇಷ್ಮವೆಂಬ ದೋಷತ್ರಯಂಗಳೇಕವಾಗಿ ಕೂಡಿರ್ಪುದರಿಂದಲೂ ಕ್ಷಯದಿಂದಲೂ ಮೇದಸ್ಸಿನಿಂದಲೂ ಸ್ವರಸಾದವೆಂಬ ರೋಗವು ಆಱು ಪ್ರಕಾರವಾಗಿ ಪುಟ್ಟುವುದು (ಸಕವೈ. ೨೪೯). [ಸಂ.]

**ಸ್ವರಸಾಮ್ಯ** (ನಾ). ೧. [ಭಾಷಾಶಾ] ಒಂದು ಶಬ್ದದಲ್ಲಿ ಒಂದು ಗೊತ್ತಾದ ಪ್ರಚುರಸ್ವರವು ಪದದ ಇತರ ಸ್ವರಗಳನ್ನು ತನ್ನಂತೆ ಪರಿವರ್ತಿಸುವುದು. ೨. (ಬೇರೆ ಭಾಷೆಯ) ಪರ್ಯಾಯಶಬ್ದಗಳಲ್ಲಿ ಒಂದೇ ರೀತಿಯ ಸ್ವರಗಳಿರುವಿಕೆ; ಪರ್ಯಾಯಪದಗಳ ಸ್ವರಗಳಲ್ಲಿರುವ ಪರಸ್ಪರ ಹೋಲಿಕೆ: ಅವರ ಅಭಿಪ್ರಾಯದಂತೆ ಸ್ವರಸಾಮ್ಯವು ನಾಲ್ಕಾರುಭಾಷೆಗಳಲ್ಲಿ ಕಾಣಬಹುದು, ಆದರೆ ಅದರ ಅರ್ಥ ಸ್ವರಸಾಮ್ಯ ನಾಲ್ಕೈದು ಭಾಷೆಗಳ ರಚನೆಯಲ್ಲಿದೆ ಎಂದು (ದ್ರಾವಿವಿ. ೩೮). [ಸಂ.]

**ಸ್ವರಾಂಗ** (ನಾ). [ವ್ಯಾಕ] (ಅನುಸ್ವಾರ, ವಿಸರ್ಗಗಳು) ಸ್ವರಗಳು ಒಂದು ಅಂಗವಾಗಿ ಸ್ವರದ ಮುಂದೆ ಬರುವುದು : ಪರಿಕಿಸೆ ಬಿಂದು ವಿಸರ್ಗಂ ಸ್ವರಾಂಗಮುಂ ವ್ಯಂಜನಾಂಗಮುಂ ತಾವೆಂಬರ್ (ಶಮದ. ೧೨). [ಸಂ.]

**ಸ್ವರಾಂತ** (ನಾ). [ವ್ಯಾಕ] ಸ್ವರವನ್ನು ಕೊನೆಯಲ್ಲಿ ಹೊಂದಿರುವ ಪದ: ಈಗ (ಉ ಸೇರಿ) ಸ್ವರಾಂತವಾಗಿರುವ ಅನೇಕ ಶಬ್ದಗಳು ಹಳಗನ್ನಡದಲ್ಲಿ ವ್ಯಂಜನಾಂತವಾಗಿದ್ದು ವೆಂಬುದನ್ನು ಗಮನಿಸಬೇಕು (ಕೃಪಿಡಿ. ೬); ವ್ಯಂಜನಾಂತಗಳಾದ ಅರಲ್, ಪುರುಳ್ – ಎಂಬಥವು . . . ಸ್ವರಾಂತಗಳಾಗಿ, ಪ್ರಥಮಾವಿಭಕ್ತಿರೂಪಗಳೇ ಆಗುತ್ತವೆ (ಸಂಶೋಧ. ೫೪). [ಸಂ.]

**ಸ್ವರಾಂತರ** (ನಾ). [ಸಂಗೀತ] ನಾಲ್ಕೇ ಸ್ವರಗಳನ್ನೊಳಗೊಂಡ (ರಾಗ) ಪ್ರಯೋಗ: ರಾಗ ಕ್ರಮವಾಗಿ ಸ್ವರೂಪಗೊಂಡ ರೀತಿಯಲ್ಲಿ ಆರ್ಚಿಕ (ಏಕಸ್ವರಪ್ರಯೋಗ) . . . ಸ್ವರಾಂತರ (ನಾಲ್ಕು ಸ್ವರಗಳ ಪ್ರಯೋಗ) . . . ಎಂಬ ಹಂತಗಳು ಕಂಡುಬಂದಿವೆ (ಸಂಗೀಚಂ. ೨೨). [ಸಂ.]

**ಸ್ವರಾಕ್ಷರ** (ನಾ). [ವ್ಯಾಕ] ವರ್ಣಮಾಲೆಯಲ್ಲಿ ಸ್ವತಂತ್ರವಾಗಿ ಉಚ್ಚರಿಸಲಾಗುವ ವರ್ಣ; IP ಕನ್ನಡ ವರ್ಣಮಾಲೆಯಲ್ಲಿ ಅಕಾರದಿಂದ ಔಕಾರದ ವರೆಗೆ ಹದಿನಾಲ್ಕು ಸ್ವರಾಕ್ಷರಗಳಿವೆ : ವರ್ಣಮಾಲೆಯಲ್ಲಿ ಸ್ವರಾಕ್ಷರಗಳನ್ನು ಜೀವಾಕ್ಷರಗಳೆಂದೂ ಅಚ್ಚುಗಳೆಂದೂ ಕರೆಯುತ್ತಾರೆ (ಸಂಶೋಧ. ೧೪). [ಸಂ.]

**ಸ್ವರಾಜ್ಯ** (ನಾ). ೧. ಸ್ವತಂತ್ರವಾದ ರಾಜ್ಯ; ಯಾರ ಅಧೀನಕ್ಕೂ ಒಳಪಡದ ರಾಜ್ಯ: ನಾನು ಸ್ವರಾಜ್ಯ ಮತ್ತು ಬಾದಷಹತೆಯು ಸಮಂಜಸವಾಗಿ ಏರ್ಪಡುವುದು ಎಂದು ಉತ್ತರವಿತ್ತೆ (ಝಾರಾಣಿ. ೧೭೧). ೨. ಸ್ವಾಧಿಪತ್ಯ; ಸ್ವಾಯತ್ತತೆ; ಸ್ವಾತಂತ್ರ್ಯ: ಸ್ವರಾಜ್ಯವು ನಮ್ಮ ಜನ್ಮಸಿದ್ಧಹಕ್ಕು ಎಂದು ಲೋಕಮಾನ್ಯತಿಲಕರು ಘೋಷಿಸಿದರು (ರೂಢಿ). ೩. [ಜೈನ] ಐವತ್ತೊಮ್ರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಜಿನನಾಗುವವನಿಗೆ ಪಟ್ಟಾಭಿಷೇಕ ಮಾಡುವುದು: ಆದಾನಮುಂ . . . ಸ್ವರಾಜ್ಯಮುಂ ಚಕ್ರಲಾಭಮುಂ . . . ನಿರ್ವಾಣಪರ್ಯಂತಮಪ್ಪಯ್ವತ್ತುಮೂಱು ಗರ್ಭಾನ್ವಯಕ್ರಿಯೆಯೊಳ್ (ಚಾವುಂಪು. ೨೧೨). [ಸಂ.]

**ಸ್ವರಾಜ್ಯಕ್ರಿಯೆ** (ನಾ). = ಸ್ವರಾಜ್ಯ ೩: ಮೂರ್ಧಾಭಿಷಿಕ್ತರಪ್ಪ ಪಾರ್ಥಿವರಿಂದ ಭಿಷಿಕ್ತನಾಗಿ ನೆಲನೆಲ್ಲಮನಾಳ್ವುದು ಸ್ವರಾಜ್ಯಕ್ರಿಯೆ (ಚಾವುಂಪು. ೨೧೯).

[ಸಂ. ಸ್ವರಾಜ್ಯಕ್ರಿಯಾ]

**ಸ್ವರಾವಳಿ** (ನಾ). [ಸಂಗೀತ] ಶಾಸ್ತ್ರೀಯಸಂಗೀತದ ಪ್ರಾರಂಭದ ಭಾಗ; ಸರಳೆವರಸೆ: ಸ್ವರಾವಳಿ, ಜಂಟಿವರಸೆ, ಅಲಂಕಾರಗಳು ಮತ್ತು ಗೀತೆಗಳು – ಅವು ಸಂಗೀತಶಿಕ್ಷಣತ್ರಯದ ಪ್ರಥಮಪಾಠಗಳಷ್ಟೆ (ಹೇಮಕೂ. ೧೦೪). [ಸಂ. ಸ್ವರಾವಲೀ]

**ಸ್ವರಾಷ್ಟಕ** (ನಾ). [ಸಂಗೀತ] ಸರಿಗಮಪದನಿಸ ಎಂಬ ಎಂಟು ಸ್ವರಗಳು: ಸ್ವರಸಪ್ತಕದ ಕೊನೆಯಲ್ಲಿ ಮೊದಲನೆಯ ಸ್ವರದ ಪ್ರಥಮ ಊರ್ಧ್ವಾವರ್ತನವನ್ನು ಸೇರಿಸಿಕೊಂಡರೆ ಬರುವುದನ್ನು ಸ್ವರಾಷ್ಟಕವೆಂದೂ ಕರೆಯಲಾಗುತ್ತದೆ (ಕವಿಕೋ. I. ೮೭೦).

[ಸಂ.]

**ಸ್ವರಿತ** (ನಾ). ವೇದಮಂತ್ರಗಳ ಪಠನದಲ್ಲಿ ಬಳಸುವ ನಾಲ್ಕು ಬಗೆಯ ಸ್ವರಗಳಲ್ಲಿ ಒಂದು; ಉದಾತ್ತಸ್ವರದ ಮುಂದೆ ಅನುದಾತ್ತಸ್ವರವನ್ನು ಕೂಡಿಸಿ ಉಚ್ಚರಿಸುವಾಗ ಬರುವ, ಅವೆರಡರ ಸಂಮಿಶ್ರಸ್ವರ: ಆ ಬ್ರಾಹ್ಮಣಂ ಬ್ರಹ್ಮಸಭೆಯ ಮುಂದೆ ಉದಾತ್ತ ಅನುದಾತ್ತ ಸ್ವರಿತ ಪ್ರಚಯವೆಂಬ ಚತುಸ್ಸ್ವರಂಗಳಿಂ . . . ಮಂತ್ರವನು ಉಚ್ಚರಿಸೆ (ನನ್ನಚಾ. ೨-೧೩೦ ಪ); ವೇದಮಂತ್ರಗಳನ್ನು ಗಾನರೂಪದಲ್ಲಿ ಹಾಡಲು ಅವರು ಪ್ರಯೋಗಿಸಿದ ಉದಾತ್ತ, ಅನುದಾತ್ತ ಮತ್ತು ಸ್ವರಿತಕ್ರಮಗಳು . . . ರಾಗ, ಸ್ವರೂಪ ಕಾಣಲು ಮಾರ್ಗದರ್ಶಿಯಾದವೆಂದು ನಿಸ್ಸಂದೇಹವಾಗಿ ಹೇಳಬಹುದು (ಸಂಗೀಚಂ. ೨೦). [ಸಂ.]

**ಸ್ವರು** (ನಾ). ೧. ಇಂದ್ರನ ವಜ್ರಾಯುಧ: ಹರಿಯೆಚ್ಚಂ ಬ್ರಹ್ಮಾಸ್ತ್ರದಿನುರುಳೆ ಶಿರಂ ಶರಶಿಲೀಮುಖಾಕೀರ್ಣವಿಯತ್ತರುವಂ ಗರ್ಜಿತ ವಿಜಿತ ಸ್ವರುವಂ ಸಂಗ್ರಾಮ ಕೇಳಿಗುರುವಂ ಮುರುವಂ (ಜಗವಿ. ೧೨-೨೪). ೨. ಸಿಡಿಲು: ಅಶನಿ. ೩. ಬಾಣ. ೪. ಯಜ್ಞ; ಯಾಗ. [ಸಂ.]

**ಸ್ವರುಚಿ** (ನಾ). ತನ್ನ ಒಲವು; ಸ್ವಂತ ಇಚ್ಛೆ: ನಂಮ ಸ್ವರುಚಿಯಿಂದ . . . ಒಡಂಬಟ್ಟು ಕೊಟ್ಟ ಶ್ರೋತ್ರಿಯದಾನ ಶಿಲಾಶಾಸನ (ಸೌಇಇ. IX-ii, ೪೪೦-೩೦; ಸು. 419). [ಸಂ.]

**ಸ್ವರೂಚಿ** (ನಾ). = ಸ್ವರುಚಿ: ಆಚಂದ್ರಾರ್ಕವಾಗಿ ನಡಸಿ ಪಾಲಿಸುವೆವೆಂದು ತಂದು ಸ್ವರೂಚಿಯಿಂದ ಒಡಂಬಟ್ಟು ಬರೆಸಿದ ಶಿಲಾಶಾಸನ (ಸೌಇಇ. IX-ii, ೪೫೬-೧೫; 1451); ತಮ್ಮ ಧರ್ಮ್ಮಪರಿಣಾಮನಿಮಿತ್ತವಾಗಿ ತಮ್ಮ ಸ್ವರೂ(ರು)ಚಿಯಿಂದ ಗುರುಭಕ್ತಿಯಿಂದ ವೊಡಂಬಟ್ಟು ಬರಸಿ ಕೊಟ್ಟ ತಾಂಬ್ರಶಾಸನ (ಎಇ. XX. ೯೪-೫೬; 1556).

[IP ಇದು 'ಸ್ವರುಚಿ' ಎಂಬುದರ ಅಪಲಿಖಿತ]

**ಸ್ವರೂಪ** (ಗು). ೧. ಸುಂದರವಾದ; ಚೆಲುವಾದ. ೨. ಹೋಲಿಕೆಯುಳ್ಳ; ಸಾದೃಶ್ಯವನ್ನು ಹೊಂದಿದ. (ನಾ). ೩. ನಿಜವಾದ ರೂಪ; ಸ್ವಂತ ಆಕೃತಿ: ಸ್ಮರಹರಂ ತನ್ನಯ ಸ್ವರೂಪಂ ಧರಿಸಿ . . . ಇದಿರ್ವಂದು (ಬಸಪು. ೫೬-೬೦). ೪. ಸಹಜವಾದ ಗುಣ; ಸ್ವಭಾವ: ಸದಸದಾದಿ ವಸ್ತು ಸ್ವರೂಪನಿರೂಪಣಪ್ರವೀಣ (ಸೌಇಇ. XX, ೪೭-೨೫ ; 1072). ೫. ಸಹಜವಾದ ಸ್ಥಿತಿ,– ಇರವು: ೨೦ನೆಯ ಶತಮಾನದ ಆಡುನುಡಿಯ ಸ್ವರೂಪ ನಮಗೆ ತಿಳಿದುಬಂದಿಲ್ಲವಾಗಿ (ದ್ರಾವಿ. ೮೧). ೬. ಕ್ರಮ; ರೀತಿ; ಬಗೆ: ಅಗಲುವ ಸಮಯ ಈ ಸ್ವರೂಪದಲ್ಲಿ ಬಂದೊದಗಿತು (ಇಪ್ರಕ. ೨೭೪). ೭. ಪ್ರಕೃತಿ; ಸಹಜಧರ್ಮ. ೮. ವಿಚಿತ್ರವಾದ ಗುರಿ,– ಉದ್ದೇಶ. ೯. ವಿದ್ವಾಂಸ; ಮೇಧಾವಿ. [ಸಂ.]

**ಸ್ವರೂಪಕಥನ** (ನಾ). [ವ್ಯಾಕ] ವಸ್ತುಸ್ವರೂಪವನ್ನು ಸಹಜವಾಗಿ ಹೇಳುವುದು: ಅನುಕರಣದೊಳೊಂದಿದ ಮಾತಿನಲ್ಲಿ ನಿರ್ದೋಷಮಾಗೆ ಸಲ್ಗುಂ ಪೇಟ್ಟಿಂತಿನಿತುಂ ಸ್ವರೂಪಕಥನದೊಳನುವಾದಂ ಭಿನ್ನಶಬ್ದಮುಪ್ಪುದಱಿಂದಂ (ಕಾವ್ಯಾವ. ೪೫೨). [ಸಂ.]

**ಸ್ವರೂಪಜ್ಞಾನ** (ನಾ). [ವೀಶೈ] ತನ್ನ ಸ್ಥಿತಿಯ ಅರಿವು; ಸ್ವಾತ್ಮಜ್ಞಾನ: ಪ್ರಪಂಚದ ಮಿಥ್ಯಾತ್ವವು ಸ್ವಾನುಭವಕ್ಕೆ ವಿರುದ್ಧವಾಗಿ ತೋರುವುದರಿಂದ ಸ್ವರೂಪಜ್ಞಾನ ಸ್ಥಿರವಾಗಿ ನಿಲ್ಲುವಂತಿಲ್ಲ (ಶಕ್ತಿವಿ. ೧೯). [ಸಂ.]

**ಸ್ವರೂಪದೇಹ** (ನಾ). [ದ್ವೈತ] ಹುಟ್ಟಿನಿಂದ ಬಂದ ಶರೀರ; ಸ್ಥೂಲದೇಹ: ಒಬ್ಬೊಬ್ಬ ಜೀವನಿಗೂ ದೇಹಾವರಣಗಳುಂಟು . . . ಮೊದಲು ಜೀವನ ಸ್ವರೂಪದೇಹ, ಎರಡನೆಯದು ಲಿಂಗದೇಹ (ಹಸಾರ. ೩-೭ ವಿಶೇಷಾರ್ಥ). [ಸಂ.]

**ಸ್ವರ್ಗ** (ನಾ). ೧. ದೇವಲೋಕ; ನಾಕ; IP ಪುಣ್ಯ ಮಾಡಿದವರು ಸತ್ತ ಮೇಲೆ ಹೋಗುವರೆಂದು ನಂಬಲಾದ ಸುಖಮಯವಾದ ಮತ್ತು ಪ್ರಕಾಶಮಯವಾದ ಲೋಕ: ವೇಡಿರೂನ್ ಸ್ವರ್ಗ್ಗಸ್ತ್ರಿಯ ಮರಿಯಾದಿ ಕೊಟ್ಟಾನ್ (ಎಕ. III(R). ಹೆಗ್ಗಡ. ೧೫೬-೩ ; 780); ಆಚಾರವೇ ಸ್ವರ್ಗ ಅನಾಚಾರವೇ ನರಕ (ಬಸವ. ೨೩೯) ; ಬೆಚ್ಚನ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ ಇಚ್ಛೆಯನು ಅರಿವ ಸತಿಯಾಗಿ ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ (ಸರ್ವಜ್ಞ. ೧೭೧೧). ೨. ಸುಖ; ಸಂತೋಷ: ಕುಲಯುತನು ಕೋವಿದನು ಕರುಣಾಜಲಧಿ ಕೌತುಕಯುಕ್ತಿವಿದನೆಂದಿಳೆ ಹೊಗಳುತಿರಲದುವೆ ಕೇಳ್ಕೆ ಸ್ವರ್ಗ ತಾನೆಂದ (ಕುವ್ಯಾಉ. ४-४೦). ೩. ಸೃಷ್ಟಿ. ೪. ಸ್ಥಿತಿ; ಇರವು. ೫. ಪೂರ್ವಕಾಲದಿಂದ ಇರುವುದು; ಅನಾದಿ: ''ಸ್ಥಿತಿಯುಂ ಸೃಷ್ಟಿಯುನಾದಿ ನಾಕ ಸುಖಮುಂ ಸ್ವರ್ಗಾಹ್ವಯಂ'' (ನಾನಾರ. ೧೫೫); ''ಸುರಲೋಕ ಪೂರ್ವ ಸುಖಮುಂ ಇರವುಗಳುಂ ಸೃಷ್ಟಿಯ್ಯೆದು ಸ್ವರ್ಗಾಖ್ಯಂ'' (ನಾನಾಕಂ. ೧೫೯). [ಸಂ.]

**ಸ್ವರ್ಗಕಾಮ** (ನಾ). ಸ್ವರ್ಗವನ್ನು ಬಯಸುವವನು; ಮೋಕ್ಷಾಪೇಕ್ಷಿ: ಯಾವ ಆಧಾರವೂ ಇಲ್ಲದೆ ಸ್ವರ್ಗಕಾಮನು ಅಗ್ನಿಹೋತ್ರ ಮಾಡಬೇಕು (ಧ್ವನ್ಯಾಲೋ. ೫೦). [ಸಂ.]

**ಸ್ವರ್ಗಲೋಕ** (ನಾ). = ಸ್ವರ್ಗ ೧: ಪರಮಜಂಗಮದಲ್ಲಿ ಹದಿನಾಲ್ಕುಲೋಕಂಗಳಡಗಿರ್ಪುವು . . . ಹೃದಯದಲ್ಲಿ ಸ್ವರ್ಗಲೋಕ (ಅಖಿಂಡೇ. ೧೪೨-೧೨೪). [ಸಂ.]

**ಸ್ವರ್ಗವಾಸಿ** (ನಾ). ದೇವಲೋಕದಲ್ಲಿ ವಾಸಿಸುವವನು; ಸ್ವರ್ಗದಲ್ಲಿ ನೆಲಸಿದವನು.

ಸ್ವರ್ಗವಾಸಿಯಾಗು = ಸಾಯು; ಮರಣಹೊಂದು: ಟಿಳಕರ ಹಿರಿಯ ಮಗ ಸ್ವರ್ಗವಾಸಿಯಾಗಿದ್ದಾನೆ (ಧರ್ಮಸಾ. ೧೧೧). [ಸಂ. ಸ್ವರ್ಗವಾಸಿನ್]

**ಸ್ವರ್ಗಸ್ಥ** (ನಾ). = ಸ್ವರ್ಗವಾಸಿ.

ಸ್ವರ್ಗಸ್ಥನಾಗು = ಸಾಯು: ಅವನು ಸ್ವರ್ಗಸ್ಥನಾಗಿ ಇಂದಿಗೆ ಒಂದು ವರ್ಷವಾಯಿತು (ರೂಢಿ). [ಸಂ.]

**ಸ್ವರ್ಗಾಗ್ರ** (ನಾ). [ಜೈನ] ದೇವಲೋಕದ ತುದಿ; ಸ್ವರ್ಗದ ಮೇಲ್ಭಾಗ: ವಾಸೇನರ್ಪರಮಪ್ರಭಾವರಿಷಿಯರ್ . . . ಸಾಸಿರ್ವರ್ಪರಪೂಜೆದನ್ನುಯೆ ಅವರ್ಸ್ವರ್ಗಾಗ್ರಮಾನೇಱಿದಾರ್ (ಎಕ. II, ೨೭-೨ ; ಸು. 700). [ಸಂ.]

**ಸ್ವರ್ಗಾಲಯ** (ನಾ). = ಸ್ವರ್ಗ ೧: ಸಮ್ಯಗಾರಾಧನಂ ಕೃತ್ವಾ ಸ್ವರ್ಗಾಲಯ XXX (ಎಕ. II, ೨೩-೪ ; ಸು. 700) ; ಪಾಣ್ಡ್ಯವಿಲ್ಲರಸರಾ ಮಗನ್ ದೇವು . . . ಶ್ವೇತವಾಹನರ್ ಉದಯಪುರಮಾನ್ ಪೊಗುವಲ್ಲಿ ಎಱಿದು ಸ್ವರ್ಗಾಲಯಕ್ಕೇಱಿದೊನ್ (ಎಇ. IX, ೧೯-೭; ಸು. 800). [ಸಂ.]

**ಸ್ವರ್ಗಿ** (ನಾ). = ಸ್ವರ್ಗವಾಸಿ: ಶ್ರೀ ದಾಸಿಅಮ್ಮನ್ ಕಣ್ಬಯೊಳ್ಪನ್ನೊರ್ಬ್ಬರನೆಱಿದು ಸ್ವರ್ಗ್ಗಿ ಆದನ್ (ಮೈಆ. ೧೯೩೯, ೨೩-೧೦ ; 740). [< ಸ್ವರ್ಗ]

**ಸ್ವರ್ಗೀಯ** (ಗು). ೧. ಸ್ವರ್ಗಕ್ಕೆ ಸಂಬಂಧಿಸಿದ ; ದೇವಲೋಕದ. ೨. ಆನಂದ ದಾಯಕವಾದ: ಮಹಾರಾಣಿಯ ಸ್ವರ್ಗೀಯನೃತ್ಯವನ್ನು ನೋಡಿದ ಕುಶಲ ರೂವಾರಿಗಳಿಗೆ ಆಗ ಮನಸ್ಸಿಗೆ ಒಂದು ಸ್ಫೂರ್ತಿ ಹೊಳೆಯಿತು (ಶಾಂತಲಾ. ೧೩೩). ೩. ಸ್ವರ್ಗವಾಸಿಯಾದ; ದಿವಂಗತ: ಸ್ವರ್ಗೀಯ ರಾಮಕೃಷ್ಣಶಾಸ್ತ್ರಿಗಳು ದೊಡ್ಡ ಸಂಸ್ಕೃತ ವಿದ್ವಾಂಸರು (ರೂಢಿ). [ಸಂ.]

**ಸ್ವರ್ಜಿತ** (ನಾ). ಸ್ವರ್ಗಲೋಕವನ್ನು ಗೆದ್ದವನು: ಗೋಜಿತನು ಸ್ವ[ಪಾಠಾಂ. ಅ]ರ್ಜಿತನು . . . ಅಗ್ರಪಟಲದ ಬೆಳಗು ಕೂಡಲಸಂಗಯ್ಯನು (ಬಸವ. ೯೫೪). [ಸಂ. ಸ್ವರ್ಜಿತ್]

**ಸ್ವರ್ಣ** (ನಾ). ೧. ಚಿನ್ನ; ಬಂಗಾರ: "ಹೇಮಂ, ಸ್ವರ್ಣಂ . . . ತಪನೀಯಂ – ಈ ೨೫ ಹೊನ್ (ಪೊನ್)" (ಹಲಾಯು. ೨೯-೧೯) ; ಗರುಡಪತಾಕೇಶ್ವರನ ಸತ್ಕೃತಿಯ ನೀ ಕೇಳಲುಸಿರುವೆ ಸ್ವರ್ಣಕಂಬಿಯೊಳು ಸಲಾಕೆಯ ತೆಗೆದಂತೆ (ಮೋಹತ. ೨೭-೨); ಲಕ್ಷ್ಮಿಯ ನಿವಾಸಮೆನೆ ಸ್ವರ್ಣ ಸಂಪತ್ತಿನಿಂ ಮೇರುವಿಂಗೆಣೆಯಾಗಿ ಕಣ್ಣು ಕೋರೈಸೆ (ಚಿತ್ರಾಂಗ. ೭೨-೧೯೭೧). ೨. ಐಶ್ವರ್ಯ; ಸಂಪತ್ತು: "ದ್ಯುಮ್ನಂ . . . ಸ್ವರ್ಣಂ . . . ವಿಭವಃ – ಈ ೧೫ ಒಡಮೆಯ ಪೆಸರ್" (ಹಲಾಯು. ೧೪-೯೦). [ಸಂ.]

**ಸ್ವರ್ಣಕಾರ** (ನಾ). ಚಿನ್ನದ ಕೆಲಸ ಮಾಡುವವನು; ಅಕ್ಕಸಾಲಿಗ: ಸ್ವರ್ಣಕಾರನ ಬಲ್ಲನುಳಿದವರರಿಯರು ಚಿನ್ನದ ಚಿತ್ರಕರ್ಮವನು (ಇಂಚಾಪ. ೭೭-೨೫). [ಸಂ.]

**ಸ್ವರ್ಣಕ್ಷೀರಿ** (ನಾ). ಒಂದು ಬಗೆಯ ಸಸ್ಯ; ಹಳದಿವರ್ಣದ ರಸ ಒಸರುವ ಒಂದು ಬಗೆಯ ಗಿಡ; ದತ್ತೂರಿ: ದತ್ತೂರಿ(ಸ್ವರ್ಣಕ್ಷೀರಿ) ಹೂವನ್ನು ಎಮ್ಮೆ ಸಗಣಿರಸದಲ್ಲರೆದು ನಸ್ಯಮಾಡಿಸುವುದು (ಸಕವೈ. ೪೨೮. ಪ೦). [ಸಂ. ಸ್ವರ್ಣಕ್ಷೀರೀ]

**ಸ್ವರ್ಣಗೌರಿ** (ನಾ). ಪಾರ್ವತಿಯ ಇನ್ನೊಂದು ಹೆಸರು.

ಸ್ವರ್ಣಗೌರಿವ್ರತ = IP ಭಾದ್ರಪದ ಶುದ್ಧತದಿಗೆಯಂದು ಸುಮಂಗಲಿಯರು ಆಚರಿಸುವ ಒಂದು ವ್ರತ; ಅಂದು ಸ್ವರ್ಣಗೌರಿಯನ್ನು ಪೂಜಿಸಿ, ಮುತ್ತೈದೆಯರಿಗೆ ಬಾಗಿನಗಳನ್ನು ಕೊಡುವರು: ಈ ಸ್ವರ್ಣಗೌರೀವ್ರತದಿಂ ಸಕಲಸಂಪತ್ತಾಗುವುದು ನೀನುಂ ಮಾಳ್ಪುದು (ಹಮ್ಮಿ.ರ. ೭-೭೭ ವ). [ಸಂ. ಸ್ವರ್ಣಗೌರೀ]

**ಸ್ವರ್ಣದಿ** (ನಾ). ದೇವಗಂಗೆ; ಗಂಗಾನದಿ: ಬಂದೇಱಿದಂ ಧೀರಂ ಶೌರಿ ವರೂಥಮಂ . . . ಶಸ್ತ್ರ ತೂಣೀರವ್ರಾತಸನಾಥಮಂ ಧ್ವಜರುಚಾಪ್ತಸ್ವರ್ಣದೀಪಾಥಮಂ (ಜಗನ್ನಾ. ೧೫-೭೦); ಇಂದುಖಂಡಮಹಿಕುಂಡಳಮುದ್ಯತ್ಸ್ವರ್ಣದಿ ಭಾಳವಿಲೋಚನಂ . . . ನಿಜರೂಪಂ ತೋಱಿದನದ್ರಿಸುತಾಧವಂ (ರಾಜಶೇ. ೧೪-೮೭). [ಸಂ. ಸ್ವರ್ಣದೀ]

**ಸ್ವರ್ಣದೀಧರ** (ನಾ). ಗಂಗಾಧರ; ಶಿವ: ಕಾಶಿಯೊಳರ್ಧಮಾಸವದಱಿಂ ಸ್ವರ್ಣದೀಧರನಂ ಯಜಿಸೆ (ಪದ್ಮರಾ. ೧೧-೧೪೪). [ಸಂ.]

**ಸ್ವರ್ಣಪಾಲೆ** (ನಾ). ಒಂದು ಬಗೆಯ ಸಸ್ಯ: "ತೃಣಗಂಧಿಃ – ಸ್ವರ್ಣಪಾಲೆ" (ಓಷಧಿ. ೭೨). [ಸ್ವರ್ಣ + ಪಾಲೆ]

**ಸ್ವರ್ಣಪಾಷಾಣ** (ನಾ). ಚಿನ್ನದ ಅಂಶ ಇರುವ ಕಲ್ಲು: ಸ್ವರ್ಣಪಾಷಾಣದೊಳ್ ಸುವರ್ಣಮುಂಟಾಗಿಯುಂ ದಹನ ತಾಪನ ಪಿಂಡಿಬದ್ಧನಾದಿ ಕ್ರಿಯೆ[ವೆ]ಱದನ್ನೆಗಂ ಪೊನ್ನಾಗದಂತೆ ತಪದಿಂದಲ್ಲದೆ ಮೋಕ್ಷಮಾಗದು (ವಡ್ಡಾರಾ. ೧೦೦-೨೭). [ಸಂ.]

**ಸ್ವರ್ಣಪುಷ್ಪಿ** (ನಾ). ಹಳದಿಯ ಹೂವು ಬಿಡುವ ಒಂದು ಬಗೆಯ ಸಸ್ಯ; ಕಕ್ಕೆ: "ಆರಗ್ವಧಃ, ಕೃತಮಾಲಃ, ಸ್ವರ್ಣಪುಷ್ಪೀ – ಈ [೩ ಕಕ್ಕೆ]" (ಹಲಾಯು. ೩೩-೪೫). [ಸಂ. ಸ್ವರ್ಣಪುಷ್ಪೀ]

**ಸ್ವರ್ಣಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ: ಸ್ವರ್ಣಮಲ್ಲಿಗೆ, ಹಸುರು ಜಾಜಿಮಲ್ಲಿಗೆ (ಮೈಜಿಗಿ. ೪೭-೯೩೪). [< ಸಂ. ಸ್ವರ್ಣಮಲ್ಲಿಕಾ]

**ಸ್ವರ್ಣಮಾನ** (ನಾ). ಚಿನ್ನರೂಪವಾದ ಬೆಲೆ; ಸ್ವರ್ಣಕ್ರಯ: ಸ್ವರ್ಣಮಾನ (Gold Standard) – ಪದ್ಧತಿಯಲ್ಲಿ ಪ್ರತಿರಾಷ್ಟ್ರವೂ ಅದರ ಮುಖ್ಯನಾಣ್ಯಕ್ಕೆ ಬಂಗಾರದಲ್ಲಿ ಇಷ್ಟು ಬೆಲೆಯೆಂದು ನಿಗದಿಮಾಡಿತು (ಅಂತಸಂ. ೭). [ಸಂ.]

**ಸ್ವರ್ಣಯುಗ** (ನಾ). (ಆಲಂ) ಸಮೃದ್ಧಿಯಿಂದ ಕೂಡಿದ ಕಾಲಾವಧಿ; ಸುವರ್ಣಯುಗ: ಷಹಜಹಾನನ ಕಾಲವನ್ನು ಮೊಗಲ್ ವಾಸ್ತುಶಿಲ್ಪದ 'ಸ್ವರ್ಣಯುಗ' ವೆಂದು . . . ಅಭಿಪ್ರಾಯಪಟ್ಟಿದ್ದಾರೆ (ಭಾರದ. ೫೦೮). [ಸಂ.]

**ಸ್ವರ್ಧಾಮ** (ನಾ). = ಸ್ವರ್ಗ ೧: ನರಪತಿ ಪುತ್ರಶೋಕದಿಂದೆ ಸ್ವರ್ಧಾಮಕಡರ (ಜೈಮಿಭಾ. ೧೮-೩). [ಸಂ.]

**ಸ್ವರ್ಧುನಿ** (ನಾ). ದೇವಗಂಗೆ; ಗಂಗಾನದಿ: ಭೀಷ್ಮಂ . . . ಸ್ವರ್ಧುನಿಯೊಳ್ ಪುಟ್ಟಿದುದಱಿನತಿಜಡನಲ್ತೇ (ಜಗನ್ನಾ. ೧೭-೧೯); ಸ್ವರ್ಧುನಿಯುತುತ್ತುಂಗತರಂಗಾನ್ವಿತ ಮೂರ್ಧಂ (ಉದ್ಭಟದೇ. ೭-೩೦). [ಸಂ. ಸ್ವರ್ಧುನೀ]

**ಸ್ವರ್ಧೌರೇಯ** (ನಾ). ಸ್ವರ್ಗಲೋಕದ ಮುಖಂಡ; ಇಂದ್ರನೇ ಮೊದಲಾದ ನಾಯಕರು: ಸ್ವರ್ಧೌರೇಯರ್ಕಳಿಂದ್ರಾದಿಗಳೆ ದೊರೆಯೆ ತಾಮೆಂದು ಬಾಣಂ ಕರಂ . . . ಮದದೊದವಿಂ ನಿಚ್ಚಲುಂ ಪೇರ್ಚಿ ನಿಲ್ಕಂ (ಜಗನ್ನಾ. ೧೭-೮೪). [ಸಂ.]

**ಸ್ವರ್ಭಾನು** (ನಾ). ನವಗ್ರಹಗಳಲ್ಲಿ ಒಂದು; ರಾಹು: ಪೂರ್ವಭವಬದ್ಧ ಕ್ರೋಧದಿಂ ಬಾಲನಂ ಸುರನುರ್ವಿ ಪಿಡಿದುಯ್ದನುಯ್ಯ ತೆಱದಿಂ ಸ್ವರ್ಭಾನು ಬಾಲಾರ್ಕನಂ (ಪಂರಾಮಾ. ೪-೧೭); ಚಕ್ರಹತಿಯಿಂ ಸ್ವರ್ಭಾನು ತುಂಡಾಗನೇ (ಸೋಮೇಶ. ೪೫). [ಸಂ.]

**ಸ್ವರ್ಮಣಿ** (ನಾ). ನೇಸರು ; ಸೂರ್ಯ : ಸ್ವರ್ಮಣಿ ಧರಾತಳಕೆ ನಭದಿಂದುರುಳ್ವಂತೆ ಪೆರ್ಮಱವೆಗೊಂಡು ಬೀಳ್ವನಿತಱೊಳ್ (ಜೈಮಿಭಾ. ೨೦-೭೦). [ಸಂ.]

**ಸ್ವರ್ಲೋಕ** (ನಾ). ಸ್ವರ್ಗಲೋಕ; ಅಮರಲೋಕ: ಭೂಲೋಕ ಭುವರ್ಲೋಕ ಸ್ವರ್ಲೋಕ . . . ಸತ್ಯಲೋಕದಿಂದತ್ತತ್ತ ನಿಮ್ಮುತ್ತಮಾಂಗ (ಬಸಹ. ೯೬-೨೮೭). [ಸಂ.]

**ಸ್ವಲ್ಪ** (ಗು). ೧. ತುಸು; ಕೊಂಚ; ಅಲ್ಪ: ಇದನ್ನು ಸ್ವಲ್ಪದರಲ್ಲಿಯೇ ತಿಳಿಸು (ಮುಂಬವ್ಯಾ. ೩ ಪ್ರಸ್ತಾವನೆ). ೨. ಸಣ್ಣದಾದ; ಚಿಕ್ಕ. (ನಾ). ೩. ಅಲ್ಪವಾದುದು; ಬೆಲೆಯಿಲ್ಲದುದು; ಕ್ಷುದ್ರವಾದುದು: ಸ್ವಲ್ಪದ ಅರಸನಿಗೆ ಅಲ್ಪದ ಪ್ರಧಾನಿ (ಗಾದೆ). ೪. ಅಲ್ಪನಾದವನು; ಕ್ಷುದ್ರ: ನಿನ್ನನ್ನು ಸ್ವಲ್ಪನಾದ ನಾನು ಹೇಗೆ ಸ್ತೋತ್ರವನ್ನು ಮಾಡಲಿ (ಅರ್ಕಮಾ. ೭). [ಸಂ.]

**ಸ್ವಲ್ಪವಿತ್ತ** (ನಾ). ಅಲ್ಪವಾದ ಐಶ್ವರ್ಯವಿರುವವನು: ರವಿ . . . ಮಕರದೊಳಿರೆ ಮೂರ್ಖಂ ಖಳಂ ಲೋಭಿ ನೀಚವ್ಯವಹಾರಂ ಸ್ವಲ್ಪವಿತ್ತಂ ಪರವಿಭವಯುತಂ (ಜಾತತಿ. ೧೭-೧೭). [ಸಂ.]

**ಸ್ವಲ್ಪಾತ್ಮಜ** (ನಾ). ಕಡಿಮೆ ಮಕ್ಕಳಿರುವವನು; ಮಿತಸಂತಾನಿ: ಧಾತ್ರೀತನಯಂ . . . ಚಾಪನಿಮೇಷಸ್ಥನಾಗಿರೆ . . . ಸ್ವಲ್ಪಾತ್ಮಜಂ (ಜಾತತಿ. ೧೭-೨೦). [ಸಂ.]

**ಸ್ವಲ್ಪು** (ಗು). ೧. (ಉಕ) = ಸ್ವಲ್ಪ ೧: ನಮಗೂ ಸ್ವಲ್ಪು ಗಡ್ಡವಿದೆ (ಅಮಗಾಂ. ೭). (ನಾ). ೨. ಬಹಳ ಕಡಿಮೆ: ಆ ಕಾಲಕ್ಕೆ ತಿಳಿದವರೂ ಸ್ವಲ್ಪು (ವಚಶಾ. I, ಪ್ರಸ್ತಾವನೆ ೫). [< ಸಂ. ಸ್ವಲ್ಪ]

**ಸ್ವಶಬ್ದವಾಚ್ಯತ್ವ** (ನಾ). [ಕಾವ್ಯಮೀ] ಒಂದು ಬಗೆಯ ರಸದೋಷ: ಅನಪೇಕ್ಷಿತವಾದ ಸಹಾಯವು ಅನರ್ಥಕಾರಿಯಾಗುವಂತೆ "ಸ್ವಶಬ್ದವಾಚ್ಯತ್ವ" ಎಂಬ ರಸದೋಷ ಇಲ್ಲಿ ಒದಗುತ್ತದೆ (ಭಾರಮೀ. ೩೩೨). [ಸಂ.]

**ಸ್ವಸೃ** (ನಾ). ಒಡಹುಟ್ಟಿದವಳು ; ಸಹೋದರಿ. [ಸಂ.]

**ಸ್ವಸ್ತಿ** (ನಾ). ೧. ಒಳ್ಳೆಯದು, ಕ್ಷೇಮ, ಕುಶಲ ಎಂಬರ್ಥದ ಒಂದು ಪದ: "ಒಳ್ಳಿತರಲಾದಿಯಲಿ ಪುಣ್ಯದಲಿ ಸ್ವಸ್ತಿಯೆಂದೆಂಬುದಕ್ಕುಂ" (ಮಂಗರಾ. ೧೫೫-೭೮); ಸ್ವಸ್ಥತೆಯ ಕದಲಿಸದ ಜಗದಾಸ್ಥೆಯೊಂದು ಗುಣ ಆಸ್ಥೆಯನು ಕುಂದಿಸದ ತಾಟಸ್ಥ್ಯವೊಂದು

ನಷ್ಟಲಾಭಂಗಳಲಿ ಲಘುಹಾಸ್ಯನಯವೊಂದು ಸ್ವಸ್ತಿಗಾವಶ್ಯಕವೊ (ಮಂಕುಕ. ೭.೫). ೨. ದೇವಸ್ಥಾನ ಮುಂತಾದ ಕಡೆಗಳಲ್ಲಿ ಹೇಳುವ ಶುಭಾಶಂಸನೆಯ ಮಂತ್ರ; ಶಾಂತಿಮಂತ್ರ; ಆಶೀರ್ವಚನ. ೩. ಶಾಸನ, ಪತ್ರ ಮುಂತಾದುವುಗಳ ಪ್ರಾರಂಭದಲ್ಲಿ ಮಂಗಳ, ಶುಭ ಎಂಬರ್ಥದಲ್ಲಿ ಬಳಸುವ ಶಬ್ದ: ಸ್ವಸ್ತಿಶ್ರೀ ಮಹಾವೀರ XX ಆಟ್ಟುಬಿ ತಮ್ಮಡಿಗಳ್ (ಎಕ. II, ೧೫-೧ ; ಸು. 800); ಸ್ವಸ್ತಿ ಸಮಸ್ತಮಂಡಳಿಕಮಸ್ತಕಪುಷ್ಪರಜಃಪಿಶಂಗಿತಾಂಘ್ರಿಸ್ತಬಕದ್ವಯಂ (ಶಾಂತಿಪು. ೧೧-೬೪). ೫. ಪುಣ್ಯ. [ಸಂ.]

**ಸ್ವಸ್ತಿಕ** (ನಾ). ೧. ಮಂಗಳಕರವಾದ ಒಂದು ಬಗೆಯ ಗುರುತು,– ಲಾಂಛನ. ೨. ವಕ್ಷಃಸ್ಥಳವು ಮುಚ್ಚುವಂತೆ ಎರಡು ತೋಳುಗಳನ್ನು ಒಂದರ ಮೇಲೊಂದು ಬರುವಂತೆ ಇಟ್ಟುಕೊಳ್ಳುವುದು: ಮನಸಿಜನೃಪಲೀಲಾಲಾಂಛನಂ ಸ್ವಸ್ತಿಕಂ ಸ್ತ್ರೀಜನದೊಳಿಸೆದು ನಿಂದತ್ತು (ಆದಿಪು. ೧೧-೧೪೮); ಈ ಸ್ವಸ್ತಿಕದಿಂ ಕರ್ಪೂರ ಶಲಾಕೆಯಿಂ ನಯನಪುತ್ರಿಕಾಸ್ವಸ್ತಿಕಮೆನಿಸಿದುದು (ಮಲ್ಲಿಪು. ೫-೪೨). ೩. ಹಿಟ್ಲರನ ಕಾಲದ ನಾಜಿಪಕ್ಷದ ಜರ್ಮನಿಯ ರಾಷ್ಟ್ರಲಾಂಛನ. ೪. ಒಂದು ವಿಶಿಷ್ಟಾಕೃತಿಯ ಕಟ್ಟಡ. ೫. [ವಾಸ್ತು] ಒಂದು ಬಗೆಯ ಕಟ್ಟಡನಿರ್ಮಾಣದ ರೀತಿ: "ಸ್ವಸ್ತಿಕಃ, ವರ್ಧಮಾನಃ, ನಂದ್ಯಾವರ್ತಃ – ಈ ೩ ಮೊದಲಾಗುಳ್ಳುವು ಅರಮನೆಯ ಛಂದಂಗಳ್" (ಹಲಾಯು. ೫೧-೧೫೦). ೬. [ನಾಟ್ಯ] ಮೂವತ್ತು ಬಗೆಯ ನೃತ್ತಹಸ್ತಗಳಲ್ಲಿ ಒಂದು: ತವೆ ಹಂಸಪಕ್ಷ ಕರಮೆರಡವೆ ಮುಂಗ್ಕೆ ಮೇಲನೊಂದೆ ಸ್ವಸ್ತಿಕಮೆನಿಕುಂ (ಲಾಸ್ಯರಂ. ೨-೪೮). [ಸಂ.]

**ಸ್ವಸ್ತಿಕಾಸನ** (ನಾ). [ಯೋಗ] ಯೋಗಾಸನಗಳಲ್ಲಿ ಒಂದು: ಸ್ಥಿರಸುಖದಿಂ ನಿಶ್ಚಲಾತ್ಮಕಮಾದಾಸನದಲ್ಲಿ ಸಿದ್ಧಾಸನ ಸಿಂಹಾಸನ ಸ್ವಸ್ತಿಕಾಸನ . . . ಅರ್ಧಾಸನಾದಿ ಎಂಭತ್ತುನಾಲ್ಕು ಆಸನಭೇದಂಗಳು (ವಿವೇಕ. ೧೩೦); ಮುಖ್ಯವಾದ ಕೆಲವು ಆಸನಗಳು ೧. ಉತ್ತಾನಾಸನ . . . ೬೦ ಸ್ವಸ್ತಿಕಾಸನ (ಭಾರದ. ೧೬೭). [ಸಂ.]

**ಸ್ವಸ್ತಿಕೆ** (ನಾ). ಒಂದು ಬಗೆಯ ಸಸ್ಯ: "ಚಿಲಿಕೆ ಸ್ವಸ್ತಿಕೆಯಕ್ಕು" (ಮಂಗರಾ. ೪೪-೪೭). [?/ ಸಂ. ಸ್ವಸ್ತಿಕ = ಬೆಳ್ಳುಳ್ಳಿ]

**ಸ್ವಸ್ತಿವಾಚನ** (ನಾ). ಒಳ್ಳೆಯದಾಗಲಿ, ಶುಭವಾಗಲಿ ಎಂದು ಸಾಂಪ್ರದಾಯಿಕವಾಗಿ ಹೇಳುವ ವೇದಮಂತ್ರ : ಸುರರು ವಸುಗಳು . . . ಕಿಂಪುರುಷರೀಯಲಿ ನಿನಗೆ ವಿಮಳಸ್ವಸ್ತಿವಾಚನವ (ಕುವ್ಯಾಅ. ೪-೨೮) ; ಸ್ವಸ್ತಿವಾಚನಗಳನ್ನು ಹೇಳುತ್ತ ಓಲಗ ಶಾಲೆಯನ್ನು ಪ್ರವೇಶಿಸಿದರು (ಶಾಂತಲಾ. ೩೩). [ಸಂ.]

**ಸ್ವಸ್ತ್ಯಯನ** (ನಾ). ಪ್ರಯಾಣದಲ್ಲಿ ಮಂಗಳವಾಗಲಿ, ಶುಭವಾಗಲಿ ಎಂದು ಸಾಂಪ್ರದಾಯಿಕವಾಗಿ ಹೇಳುವುದು: ಚಂದದಿಂದೆನಗೆ ಸ್ವಸ್ತ್ಯಯನಗಳನುಂ ಮಾಡಿ ಬೇಗಲಪ್ಪಣೆಯನೀಯೆ (ವಂಕಾರಾ. ೨-೯-೩೮); ತಾರೆ ಸ್ವಸ್ತ್ಯಯನವನ್ನು ಹೇಳಿದ ಬಗ್ಗೆ ರಾಮಾಯಣದಲ್ಲಿ ಉಲ್ಲೇಖವಿದೆ (ಕರ್ನಾಕ. ೭). [ಸಂ.]

**ಸ್ವಸ್ಥ** (ನಾ). ೧. ಚೆನ್ನಾಗಿರುವುದು; ಕ್ಷೇಮ; ಆರೋಗ್ಯ: ಯಾಕೋ ನನ್ನ ಮೈಯಲ್ಲಿ ಸ್ವಸ್ಥವಿಲ್ಲ (ಮುಂಬಯಿ. ೪-೭೭). ೨. (ಆಲಂ) ಯೋಗ್ಯವಾದುದು; ಸರಿಯಾದುದು; ಚೆನ್ನಾದುದು: ಮಣ್ಣೂ ನೀರು ಸ್ವಸ್ಥವಾಗಿ ಮೃತ್ತಿಕೆ . . . ತೋಟಿಬರುವಂತೆ (ಮೋಳಮಾ. ೧೯೪-೭೪೦); ಉಳಿದ ವಿಪ್ರಸಂದೋಹಕುಂ ಗೋದಾನ ಭೂದಾನವ ಸ್ವಸ್ಥದಿಂ ಕೈಗೈದು (ವಂಕಾರಾ. ೧-೨೪-೩೨). ೩. ಕ್ಷೇಮವಾಗಿರುವವನು; ಆರೋಗ್ಯದಿಂದಿರುವವನು. ೪. [ನಾಟ್ಯ] ಒಂದು ಬಗೆಯ ಆಸನಭಂಗಿ: ಸ್ವಸ್ಥ ಮಂದಾಲಸ . . . ವಿಮುಕ್ತ ಈ ಒಂಬತ್ತು ಕುಳ್ಳಿರ್ದ ಸ್ಥಾನಕಂಗಳ್ (ಲಾಸ್ಯರಂ. ೭-೧೨ ವ).

**ಸ್ವಸ್ಥವಾಗಿರು** = ೧. ಆರೋಗ್ಯವಾಗಿರು; ಕ್ಷೇಮದಿಂದಿರು: ಅವರು ಈಗ ಸ್ವಸ್ಥವಾಗಿದ್ದಾರೆ (ರೂಢಿ). ೨. (ಆಲಂ) ಸುಮ್ಮನಿರು; ತೆಪ್ಪಗಿರು: ನೀನು ಸ್ವಸ್ಥವಾಗಿದ್ದರೆ ಯಾವ ತೊಂದರೆಯೂ ಬರುವುದಿಲ್ಲ (ರೂಢಿ). [ಸಂ.]

**ಸ್ವಸ್ಥತೆ** (ನಾ). ಸ್ವರ್ಗವಾಸಿತ್ವ; ಸ್ವರ್ಗವಾಸ: ಸ್ವಸ್ಥತಾಗತಿ ಮುಕ್ತರಾದವರೊಳಲ್ಲದಾ ನಾಡೊಳಿಲ್ಲ (ಹಚಿಕಾ. ೨-೧೧). [ಸಂ. ಸ್ವಸ್ಥತಾ]

**ಸ್ವಸ್ಥಾನ** (ನಾ). ೧. ತನ್ನ ಜಾಗ; ಸ್ವಂತ ಸ್ಥಳ: ಅವರು ಸ್ವಸ್ಥಾನದಲ್ಲಿದ್ದಾರೆ (ರೂಢಿ). ೨. [ಜೈನ] ಜೀವಿಯ ಮೂರು ಅವಸ್ಥೆಗಳಲ್ಲಿ ಒಂದು: ನಿರವಶೇಷ ಮೋಹೋಪಶಮೋದ್ಭೂತ ಯಥಾಖ್ಯಾತಚಾರಿತ್ರಸಂಪನ್ನನಂತರ್ಮುಹೂರ್ತದಿಂ ಸ್ವಸ್ಥಾನಸ್ಥಿತನಾಗಿ (ಆದಿಪು. ೬-೩೩ ವ). [ಸಂ.]

**ಸ್ವಸ್ರೀಯ** (ನಾ). ೧. ಒಡಹುಟ್ಟಿದವಳ ಮಗ; ಸೋದರಳಿಯ: "ಸ್ವಸ್ರೀಯಃ, ಜಾಮೇಯಃ, ಭಾಗಿನೇಯಃ – ಈ ೩ ಒಡಹುಟ್ಟಿದವಳ ಮಗಂ" (ಹಲಾಯು. ೮೪-೩೫೩). ೨. ಹೆಂಡತಿಯ ಅಣ್ಣ ಅಥವಾ ತಮ್ಮ; ಭಾವಮೈದುನ. ೩. ಮಗಳ ಗಂಡ; ಅಳಿಯ. ೪. ತಿಳಿಯದಿರುವಿಕೆ ; ಅಜ್ಞತೆ. ೫. ಮೋಕ್ಷ : "ಅಜ್ಞತೆ ವಿಮೋಹಂ ಮುಕ್ತಿ ಜಾಮಾತೃ ಭಕ್ತಿರಸಂ ಸ್ಯಾಲಕ ಮೂರ್ಛೆಯೆಂಬಿನಿತುಂ ಸ್ವಸ್ರೀಯಾಭಿಧಾನಂ" (ನಾನಾರ. ೧೨೫). [ಸಂ.]

**ಸ್ವಹಸ್ತ** (ನಾ). ೧. ತನ್ನ ಕೈ; ಸ್ವಂತಹಸ್ತ. ೨. ಸ್ವಹಸ್ತಾಕ್ಷರ; ಸಹಿ; ರುಜು: ಯಾ ಧರ್ಮಕ್ಕೆ ಆರೊಬ್ಬರು ತಪಿದರೂ ಕಾಶಿಯಲಿ ಕಪಿಲೆಯ ಕೊಂದ ಪಾಪದಲಿ ಹೋಹರು ಸ್ವಹಸ್ತಗಳ ಒಪ್ಪ (ಎಕ. X(S), ಕೋಲಾರ. ೨೯೮-೧೩; 1419). [ಸಂ.]

**ಸ್ವಹಸ್ತಾಕ್ಷರ** (ನಾ). ರುಜು; ಒಪ್ಪ: ನೆಪಮಾತ್ರಕ್ಕೆ ಒಂದು ಪತ್ರಿಕೆಯನ್ನು ಬರೆದು ಸ್ವಹಸ್ತಾಕ್ಷರವನ್ನು ಹಾಕಿಕೊಡಬೇಕೆಂದು ಕೇಳಿದನು (ಕವಿಕ. ೫). [ಸಂ.]

**ಸ್ವಹಿತ** (ನಾ). ತನ್ನ ಶ್ರೇಯಸ್ಸು; ಸ್ವಂತಲಾಭ: ರೈತರ ಅವನತಿಯ ಮೂಲಕ ಸ್ವಹಿತವನ್ನು ಸಾಧಿಸಿಕೊಳ್ಳುವುದೇ ಮಾಲೀಕರ ಸ್ವಧರ್ಮವಾಗಿತ್ತೆಂಬುದನ್ನು ಅವರು . . . ಅನುಭವದಿಂದ ಮನಗಂಡಿದ್ದರು (ಪುನರು. ೨೯೩). [ಸಂ.]

**ಸ್ವಾಂಗ** (ನಾ). ತನ್ನ ಸ್ವಂತ ಅವಯವ; ತನ್ನದೇ ಆದ ಅಂಗಾಂಗ: ಕಂಪಿನಿಂ ವರ್ಣದಿಂ ಸ್ವಾಂಗಮಿಂತಿಹುದೆಂದು ಪೆಂಪಿನಿಂ ತೋರ್ಪಂತೆ ಜನರ್ಗೆ (ಜ್ಞಾನಚಿ. ೩೮-೧೨೯).

**ಸ್ವಾಂಗಸ್ಪೃಷ್ಟಕಸಹಿತಂ** = ತನ್ನ ಕೈಮುಟ್ಟಿ; ತನ್ನ ಕೈಯಾರೆ; ಸ್ವಹಸ್ತದಿಂದ: ಶ್ರೀಸಾಹಸಾಂಕನಜಿತಂಗಿತ್ತಂ ಮಹಿಪಂ ಸ್ವಾಂಗಸ್ಪೃಷ್ಟಕಸಹಿತಂ ಮಣಿಕನಕವಸ್ತು ವಾಹನಚಯಮಂ (ಪಂಚತಂ. ೧೯೬-೧೭). [ಸಂ.]

**ಸ್ವಾಂತ** (ಗು). ೧. ಶಬ್ದಮಾಡಿದ. (ನಾ). ೨. ತನ್ನ ಅಂತ್ಯ, – ಸಾವು. ೩. ಗವಿ; ಗುಹೆ. ೪. ಮನಸ್ಸು; ಅಂತರಂಗ: ಆ ಪರ್ವತದೊಳಿರ್ದ ಶಾರ್ದೂಲಂ ಜಾತಿಸ್ಮರನಾಗಿ . . . ಉಪಶಾಂತಸ್ವಾಂತನಿರ್ದುದೆಂಬುದಂ ತನ್ನನೀಂದ್ರರವಧಿ ಜ್ಞಾನದಿಂದಱಿದು (ಆದಿಪು. ೫-೧೧ ವ); ಕಂತು ಕಳಂಬ ಕದಂಬಂ ಸ್ವಾಂತವನೊಳ ಪೊಕ್ಕುದೆಂದು ಯತಿಪುಂಗವರಾ (ಹಮ್ಮಿರ. ೬-೨೫). [ಸಂ.]

**ಸ್ವಾಗತ** (ನಾ). ೧. ಸುಖವಾಗಿ ಬರುವುದು; ಸುಖಾಗಮನ; ☞ ಬಂಧುಮಿತ್ರರನ್ನು ಆದರದಿಂದ ಬರಮಾಡಿಕೊಳ್ಳುವಾಗ ಸಾಮಾನ್ಯವಾಗಿ ಹೇಳುವ ಮಾತು: ನಂದಂ ನುಡಿದಂ ಸ್ವಾಗತಮೆ ಸುಖಮೆ ಭವದೀಯಾಗಮದಿಂ ಸುದಿನಮಾದುದಿಂದಿನ ದಿವಸಂ (ಜಗವಿ. ೫-೮೨); ಪಾಳೆಯದ ಹೆಬ್ಬಾಗಿಲಲಿ ತನ್ನನಿದಿರ್ಗೊಂಡು ಸಂತೋಷದಿಂ ಸ್ವಾಗತವನಿತ್ತು ವಂದಿಸಿದ ಸಾಮಂತ ಸೇನಾನಿ ಮನ್ನೆಯರ ಮನ್ನಿಸುತೆ (ಚಿತ್ರಾಂಗ. ೧೮-೪೮೦). ೨. [ಛಂದ] ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ, ಪಾದವೊಂದಕ್ಕೆ ಹನ್ನೊಂದು ಅಕ್ಷರಗಳಿರುವ 'ತ್ರಿಷ್ಟುಪ್' ಛಂದಸ್ಸಿನ ಒಂದು ವೃತ್ತ: ಏಗಳುಂ ಯತಿ ದಿಶಾಗಜದೊಳ್ಸಂದಾಗಳಗ್ನಿ ದಿವಿಜೇಂದು ಹರರ್ಸಂಯೋಗಮಾಗಿರೆ . . . ಸ್ವಾಗತಂ (ಛಂದೋಂಬು. ೨-೧೯೯); ಸ್ವಾಗತಂ ರನಭಮುಂ ಗುರುಯುಗ್ಮಂ (ಕೈಪಿಡಿ. ೮೦).

**ಸ್ವಾಗತ ಹೇಳು** = ಸುಖಾಗಮನವನ್ನು ಬಯಸು: ಅವನು ಅವರಿಗೆ ಸ್ವಾಗತ ಹೇಳಿ ಅವರನ್ನು ಅರ್ಘ್ಯಪಾದ್ಯಮಧುಪರ್ಕಾದಿಗಳಿಂದ ಸತ್ಕರಿಸಿದನು (ವಚಿಭಾ. ೭೮). [ಸಂ.]

**ಸ್ವಾಗತವಚನ** (ನಾ). ಸುಖಾಗಮನವನ್ನು ಕೋರಿ ಹೇಳುವ ಮಾತು; ಕುಶಲಪ್ರಶ್ನೆ: ಭದ್ರಾಸನದೊಳ್ ಕುಳ್ಳಿರ್ದು ಸ್ವಾಗತವಚನಪುರಸ್ಸರಂ ಸಂಭಾಷಣಪ್ರಸ್ತಾವದೊಳ್ ವಸ್ತುವಿಚಾರಂ ಪುಟ್ಟೆ (ಶಾಂತಿಪು. ೮-೧೨೭ ವ). [ಸಂ.]

**ಸ್ವಾಗತಿಸು** (ಕ್ರಿ). ಆದರದಿಂದ ಬರಮಾಡಿಕೊಳ್ಳು; ಸುಖಾಗಮನವನ್ನು ಬಯಸು: ಅವರನ್ನು ಸ್ವಾಗತಿಸಲು ಮಕ್ಕಳ ತಂಡವೊಂದು ಸಿದ್ಧವಾಗಿತ್ತು (ಕಂಬಹು. ೧೨೫); ಇಲ್ಲಿಂದ ಇವರುಗಳನ್ನೆಲ್ಲ ಸ್ವಾಗತಿಸಿ ಕರೆದುಕೊಂಡು ಹೋಗುವುದು (ಮೂಲಾನ. ೧೨೨). [ಸ್ವಾಗತ + - ಇಸು]

**ಸ್ವಾಚ್ಛಂದ್ಯ** (ನಾ). ತನ್ನ ಮನ ಬಂದಂತೆ ನಡೆಯುವ ಸ್ವಾತಂತ್ರ್ಯ; ಸ್ವೈರವರ್ತನೆ: ಆ ವಿಶ್ವರೂಪಸಂದರ್ಶನದಿ ಹೊಂದಿಹುವು ಜೀವ ನಿರ್ಜೀವಗಳು, ಕ್ರಮಯದೃಚ್ಛೆಗಳು ಆವಶ್ಯ ವಶ್ಯ; ಸ್ವಾಚ್ಛಂದ್ಯ ನಿರ್ಬಂಧಗಳು ಕೈವಲ್ಯದೃಷ್ಟಿಯದು (ಮಂಕುಕ. ೩೨೨); ಬೇಜವಾಬ್ದಾರಿಯ ದೊರೆಗಳಲ್ಲಿ ಸಹಜವಾಗಿ ಕಂಡುಬರುವ ಸ್ವಾಚ್ಛಂದ್ಯದ ಸ್ವೇಚ್ಛಾಚಾರದ ಕುತ್ತ ಅವನಿಗೂ ಅಂಟಿಕೊಂಡಿತು (ಬದ್ಧಪ್ರ. XII, ೫೮೮). [ಸಂ.]

**ಸ್ವಾತಂತ್ರ್ಯ** (ನಾ). (ವ್ಯಕ್ತಿ, ಸಮುದಾಯ, ದೇಶ ಮುಂತಾದ ಸಂದರ್ಭಗಳಲ್ಲಿ) ಪರಾಧೀನತೆ ಇಲ್ಲದಿರುವಿಕೆ; ತನ್ನ ಇಚ್ಛಾನುಸಾರವಾಗಿ ನಡೆದುಕೊಳ್ಳುವ ಅಧಿಕಾರ; ಸ್ವತಂತ್ರತೆ: ಸ್ವಾತಂತ್ರ್ಯದ ಅರ್ಥ ಹಾಗೂ ಪ್ರಯೋಜನವನ್ನು ತಿಳಿದು ಆಚರಿಸದೆ ಹೋದರೆ ಪುರುಷನಿಗಾದರೂ ಸ್ವಾತಂತ್ರ್ಯವಿದ್ದೇನು ಪ್ರಯೋಜನ? (ಕರ್ನಾಕ. ೨೦೧). [ಸಂ.]

**ಸ್ವಾತಂತ್ರ್ಯಸಂಗ್ರಾಮ** (ನಾ). (ದೇಶದ) ಬಿಡುಗಡೆಗಾಗಿ ನಡೆಸುವ ಹೋರಾಟ: ಸ್ವಾತಂತ್ರ್ಯಸಂಗ್ರಾಮವಾರಂಭವಾಯಿತು (ಇಂಚಾಪ. ೩೮-೭೯). [ಸಂ.]

**ಸ್ವಾತಿ** (ನಾ). ೧. [ಜ್ಯೋತಿ] ಇಪ್ಪತ್ತೇಳುನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ: ಅದು ಸ್ವಾತಿಗಲ್ಲದೆ ಬಾಯ್ದೆಱೆಯದು ಕೇಳು ಕೇಳಾ ತಂದೆ ಎಲ್ಲವಕ್ಕೆ ಬಾಯ ಬಿಟ್ಟರೆ ತಾನೆಲ್ಲಿಯ ಮುತ್ತಪ್ಪುದೋ (ಬಸವ. ೮೧೯); ಸ್ವಾತಿಯೆ ಬರ್ಪವೊಲ್ ಮದನಮಂಜರಿ ಬಂದು . . . ಕಥಾಂಗಗಾಂಗಜಲವರ್ಷಮನಾಗಿಸೆ (ಅನಂಪು. ೪-೫೮); ತಾರೆಗಳ ಮೊತ್ತವಿಪ್ಪತ್ತೇಳಱೊಳಗೆಯು ಹಸ್ತ ಮೃಗಶಿರೆ ಸ್ವಾತಿ ರೋಹಿಣಿ ಶುಭವು (ಗಗತಾ. ೪-೬೮). ೨. [ಜೈನ] ಶರೀರಾಕೃತಿಗೆ ಕಾರಣವಾದ ಸಂಸ್ಥಾನ ನಾಮಕರ್ಮದ ಸಮಚತುರಸ್ರ, ನ್ಯಗ್ರೋಧಪರಿಮಂಡಲ, ಸ್ವಾತಿ, ಕುಬ್ಜ, ವಾಮನ ಮತ್ತು ಹುಂಡ ಎಂಬ ಆರು ಬಗೆಗಳಲ್ಲಿ ಒಂದು; ಕೆಳಗೆ ದಪ್ಪವಾಗಿಯೂ ಮೇಲೆ ತೆಳುವಾಗಿಯೂ ಇರುವ ದೇಹರಚನೆಯನ್ನುಂಟು ಮಾಡುವ ನಾಮಕರ್ಮ: ಹುತ್ತಿನಂತೆ ಕೆಳಗಗಲಿತ್ತಾಗಿ ಮೇಗಸಿದಪ್ಪುದು ಸ್ವಾತಿ (ತಸೂವ್ಯ. ೨೫೬); ಸಮಚತುರಸ್ರಸಂಸ್ಥಾನನಾಮಕರ್ಮಮೆಂಬುದುಂ ನ್ಯಗ್ರೋಧಪರಿಮಂಡಲ ಸ್ವಾತಿ ಕುಬ್ಜ ವಾಮನ ಹುಂಡಶರೀರಸಂಸ್ಥಾನನಾಮ ಕರ್ಮಮೆಂದಿಂತುಂ ಶರೀರಾಂಗೋಪಾಂಗಕರ್ಮಂ (ಗೊಮ್ಮಸಾ. ೪-೧).

ಸ್ವಾತಿಯುದಕ = ಸ್ವಾತಿಮಳೆಯ ನೀರು; ℙ ಸ್ವಾತಿಮಳೆಯ ಹನಿಯನ್ನು ಸಿಪ್ಪು ಹಿಡಿದುಕೊಂಡರೆ ಅದು ಮುತ್ತಾಗುವುದೆಂಬ ನಂಬಿಕೆಯಿದೆ: ಸ್ವಾತಿಯುದಕದೊಳಾದ ಮೌಕ್ತಿಕವ್ರಾತಕಯ್ಯನೆ ಚಿಪ್ಪು (ಕುವ್ಯಾಕ. ೮-೩). [ಸಂ.]

**ಸ್ವಾತಿಬಿಂದು** (ನಾ). ಸ್ವಾತಿಮಳೆಯ ಹನಿ: ಸ್ವಾತಿಬಿಂದುವಿಂದೊಗೆದ ಮುತ್ತಿಂಗೆ ತಿಗಮೊಗವಾವುದೆಂದೆಣಿಪರೇ (ನವಮೋ. ೧-೧೬). [ಸಂ.]

**ಸ್ವಾತಿಮಳೆ** (ನಾ). ಸ್ವಾತಿನಕ್ಷತ್ರದಲ್ಲಿ ಬರುವ ಮಳೆ: ಸ್ವಾತಿಮಳೆಯ ನೀರು ಬೀಳುವುದರಿಂದ ಚಿಪ್ಪು ಮುತ್ತಾಗುವುದೆಂಬ ನಂಬಿಕೆಯಿದೆ (ರೂಢಿ).

[ಸ್ವಾತಿ + ಮಳೆ (< ಮೞೆ)]

**ಸ್ವಾತಿವರುಷ** (ನಾ). = ಸ್ವಾತಿಮಳೆ: ಧರೆಯೊಳೆಲ್ಲಂ ಸ್ವಾತಿವರುಷಂ ಸುರಿಯಲೆಂತಹ ಹನಿಗಳಿಗೆ ಏ ಪರಿಯೊಳಂ ಕಟಿಗೊಳ್ಳದಂತಾಗಿದಱ ಪರಿ ಬೇಱೆ ನಿರುತವದಱಿಂ ಪ್ರಾಣಪದವಾದಿರವಿಗಲ್ಲದೆ ಬಾಯಿದೆಱೆಯದು ಕರಮೆಸೆವ ಸಿಂಪೊಂದು ನೆನೆವುತ ಮಿಹುದು ಮಳೆಗಳಿಗೆ (ಬಸಪು. ೫೧-೨೪). [< ಸಂ. ಸ್ವಾತಿವರ್ಷ]

**ಸ್ವಾತಿವರ್ಷ** (ನಾ). = ಸ್ವಾತಿಮಳೆ: ಬಹುಗುಣಿತ ಜನಗಣದ ಸಂಸ್ಕೃತಿಯ ಧವಳಧಾರಾಸ್ವಾತಿವರ್ಷಕ್ಕೆ ಬಾಯ್ದೆರೆಯುತನ್ನ ಹೃದಯದ ಭಕ್ತಿಶುಕ್ತಿಯಲಿ ಮುತ್ತುಗಳ ರಚಿಸಿ (ಚಿತ್ರಾಂಗ. ೩೭-೧೧೦೨). [ಸಂ.]

**ಸ್ವಾತ್ಮವಿಚಾರ** (ನಾ). ತನ್ನ ಅಂತರಂಗದ ಬಗೆಗಿನ ಯೋಚನೆ; ಆತ್ಮಜ್ಞಾನದ ಯೋಚನೆ: ಸ್ವಾತ್ಮವಿಚಾರಕಲ್ಪಮತಿಯಾವರ್ ಧರ್ಮಮಂ ಪಾಲಿಸರ್ ಯುಗಧರ್ಮಂ ನರರ್ಗಪ್ಪುದೈ (ಷೋಮಾಶ. ೧೬). [ಸಂ.]

**ಸ್ವಾತ್ಮವಿಮರ್ಶೆ** (ನಾ). ತನ್ನನ್ನು ತಾನೆ ಪರೀಕ್ಷಿಸಿಕೊಳ್ಳುವುದು; ಆತ್ಮವಿಮರ್ಶೆ: ಶಾಸ್ತ್ರಾಭ್ಯಾಸವು ಸ್ವಾಧ್ಯಾಯ. ಇದು ಹಿರಿಯ ಜ್ಞಾನಿಗಳ ಅನುಭವವನ್ನೂ, ಸ್ವಾತ್ಮವಿಮರ್ಶೆಯನ್ನೂ ತಿಳಿಯಪಡಿಸುತ್ತದೆ (ಭಾರದ. ೨೬೩). [ಸಂ. ಸ್ವಾತ್ಮವಿಮರ್ಶ]

**ಸ್ವಾದ** (ನಾ). ೧. ತಿನ್ನುವ ಅಥವಾ ಕುಡಿಯುವ ಮೂಲಕ ಆಹಾರವನ್ನು ರುಚಿನೋಡುವುದು; ಆಸ್ವಾದಿಸುವುದು. ೨. ರುಚಿ; ಸವಿ: ಕಪ್ಪುರವು ಬೆಳ್ಳಗಿರುತ್ತದೆ . . . ಆದರೆ ಸ್ವಾದ ಮಾತ್ರ ಕಹಿ ಇರುವುದು (ಮುಂಬಯಿ. ೪-೭೨). ೩. ಸ್ವಾರಸ್ಯ: ಈ ಚೇಷ್ಟೆಗಳ ಸ್ವಾದವನ್ನೂ ಪೂರ್ತಿ ಸವಿದಂತಾಗಲಿಕ್ಕಿಲ್ಲ (ತಿಂಮತಾ. ೮). ೪. ಮೆಚ್ಚಿಕೆ; ಇಷ್ಟಪಡುವಿಕೆ. ೫. ರುಚಿಗೊಳಿಸುವಿಕೆ; ಸವಿಗೊಳಿಸುವಿಕೆ. ೬. [ಕಾವ್ಯಮೀ] ಕಾವ್ಯದ ರಸ: ಸ್ವಾದವು ಬೌದ್ಧಿಕವಾಗಿಯೂ ಭಾವನಾತ್ಮಕವಾಗಿಯೂ ಎಂದು ಎರಡು ವಿಧ . . . ಕವಿಕಾವ್ಯಪ್ರಶಂಸೆಯು ಈ ಎರಡೂ ಪ್ರಕಾರದ ಸ್ವಾದಗಳನ್ನೊಳಗೊಂಡಿರುವುದು (ಸಾಹಿಸ. ೧೬೮). [ಸಂ.]

**ಸ್ವಾದನೀಯ** (ಗು). ೧. ಸವಿಯನ್ನು ಒದಗಿಸುವ; ರುಚಿಕರವಾದ. (ನಾ). ೨. ರುಚಿಕರವಾದುದು: ದಳತ್ತುಪ್ಪತತಿ ಘ್ರಾಣೀಯಮುದ್ಯತ್ಫಲರಸವಿಸರಸ್ವಾದನೀಯಂ . . . ಸತತಂ ಪೌರರ್ಗೆ ಪಂಚೇಂದ್ರಿಯಸುಖದೊದವಂ ನಂದನಂ ಮಾಟ್ಪುದೆಂದುಂ (ಚಂದ್ರಪ್ರ. ೧-೧೧೨). [ಸಂ.]

**ಸ್ವಾದಿಷ್ಠ** (ಗು). ತುಂಬ ಸವಿಯಾದ; ಅತ್ಯಂತ ಮಧುರವಾದ: ಮನಂ ಸಂದ ಬೇವಸವ ಬಗೆತಂದೊರೆವುವೆಮ್ಮ ಸ್ವಾದಿಷ್ಠಗೀತಂ (ಗಿಳಿವಿಂ. ೮-೧೫). [ಸಂ.]

**ಸ್ವಾದಿಸು** (ಕ್ರಿ). ೧. ಸೇವಿಸು; ಅನುಭೋಗಿಸು: ಇಷ್ಟೊಂದು ದಿನ ಪರಿತಪಿಸಿ ಸಿಕ್ಕ ಶ್ರೇಷ್ಠಫಲವೆಂದು ಅದನ್ನು ಸ್ವಾದಿಸಿದರು (ಅಪನಾ. ೮೬). ೨. (ಸೌಂದರ್ಯವನ್ನು) ಅನುಭವಿಸು; ಆನಂದಿಸು: ಕಮಲೋದರನ ಸಂಪನ್ನ ಸರಸಸಿತಾನನಾಬ್ಜವನು ಸ್ವಾದಿಸುತ ಕಂಗಳಲಿ ಸಲೆ ತತ್ಪಾದ ಪರಿಚರಿಯೆಯಲಿ (ನಿಭಾಗ. ೧೦-೧೦೩-೨೩).

[ಸ್ವಾದನ + - ಇಸು]

**ಸ್ವಾದು** (ಗು). ೧. ಸವಿಯಾದ; ರುಚಿಕಟ್ಟಾದ. ೨. ಪ್ರಿಯವಾದ; ಇಷ್ಟವಾದ. ೩. ಚೆಲುವಾದ; ಮನೋಹರವಾದ. (ನಾ). ೪. ರುಚಿ; ಸವಿ. ೫. ಚೆಲುವು; ಸೌಂದರ್ಯ. ೬. ದ್ರಾಕ್ಷಿ. ೭. ರುಚಿಯಾದ ಆಹಾರ: ಅಮೃತಕಲ್ಪಮೆಂಬ ಸ್ವಾದುವುಂ ಅಮೃತಮೆಂಬ ಪಾನಮುಂ (ಅಜಿಪು. ೧೦-೧ ವ). ೮. ಸವಿಯಾದುದು; ಸಿಹಿಯಾದುದು: ಚಿಗುರೆಂದುಂ ಮೆಲೆ ಬೇವು ಸ್ವಾದುವಹುದೇ (ಸೋಮೇಶ. ೪೧). ೯. ಸಕ್ಕರೆ ಜೋನಿ; ಕಾಂಕಬಿ. ೧೦. ಒಂದು ಬಗೆಯ ಸುಗಂಧದ್ರವ್ಯ.

[ಸಂ.]

**ಸ್ವಾದುಕಂಟಕ** (ನಾ). ೧. ನಾಯಿಬೇಲ; ಹಲುಮಾಣಿಕಮರ: "ಸ್ವಾದುಕಂಟಕಃ, ವಿಕಂಕತಃ, ಸ್ರುವಾವೃಕ್ಷಃ, ಗ್ರಂಥಿಲಃ, ವ್ಯಾಘ್ರಪಾತ್ - ೫ ಹಲುಮಾಣಿಕ ಮರದ ಹೆಸರು, ನಾಯಿಬೇಲ, ಹುಳಿಬೇಲ" (ಸಿದ್ಧಾಂತಿ. ೧೨೦). ೨. ಒಂದು ಬಗೆಯ ಮುಳ್ಳುಗಿಡ; ನೆಗ್ಗಿಲು: "ಪಲಂಕಷಾ, ಇಕ್ಷುಗಂಧಾ, ಶ್ವದಂಷ್ಟ್ರಾ, ಸ್ವಾದುಕಂಟಕಃ, ಗೋಕ್ಷುರಕಃ, ವನಶೃಂಗಾಟಃ - ೭ ಪಲ್ಲೇರುಗಿಡದ ಹೆಸರುಗಳು, ನೆಗ್ಗಿಲು ಹೆಸರುಗಳು" (ಸಿದ್ಧಾಂತಿ. ೧೩೪). [ಸಂ.]

**ಸ್ವಾದುಪನಸ** (ನಾ). ಒಂದು ಬಗೆಯ ರುಚಿಕರವಾದ ಹಲಸು; ಬಕ್ಕೆಹಲಸು: "ಸ್ವಾದುಪನಸಕ್ಕೆ ಪೆಸರೊಂದುವುದು ಬಕ್ಕೆವಲಸೆಂದು" (ಶಬ್ದಮಂ. ೨೭).

[ಸ್ವಾದು + ಪನಸ (< ಪಲಸು)]

**ಸ್ವಾದುರಸೆ** (ನಾ). ೧. ಒಂದು ಬಗೆಯ ಔಷಧೀಸಸ್ಯ; ಕಾಕೋಳಿಸೊಪ್ಪು: "ವಾಯಸೊಲೀ, ಸ್ವಾದುರಸಾ, ವಯಸ್ಥಾ - ೩ ಕಾಕೋಳೀಸೊಪ್ಪು, ಗೊರಿಮಿಡಿ" (ಸಿದ್ಧಾಂತಿ. ೧೪೫). ೨. ಕಳ್ಳು; ಮದ್ಯ: "ಮಧು, ಆಸವಃ . . . ಕಾದಂಬರೀ, ಸ್ವಾದುರಸಾ . . . ಈ ೨೪ ಕಳ್ಳು" (ಹಲಾಯು. ೫೫-೧೭೪). ೩. ಶತಾವರೀಬಳ್ಳಿ. ೪. ದ್ರಾಕ್ಷೆ. [ಸಂ. ಸ್ವಾದುರಸಾ]

**ಸ್ವಾದ್ವಿ** (ನಾ). ದ್ರಾಕ್ಷೆ: "ಮೃದ್ವೀಕಾ, ಗೋಸ್ತನೀ, ದ್ರಾಕ್ಷಾ, ಸ್ವಾದ್ವೀ, ಮಧುರಸಾ - ೫ ದ್ರಾಕ್ಷೆ ಪೆಸರುಗಳು" (ಸಿದ್ಧಾಂತಿ. ೧೩೬). [ಸಂ. ಸ್ವಾದ್ವೀ]

**ಸ್ವಾಧಿಕಾರ** (ನಾ). ೧. ತನ್ನ ಸ್ವಂತ ಕರ್ತವ್ಯ; ಸ್ವಂತದ ಕೆಲಸ. ೨. ಸ್ವತಂತ್ರವಾಗಿ ವ್ಯವಹರಿಸುವ ಅಧಿಕಾರ; ಸ್ವಾಧಿಪತ್ಯ: ರಾಜಕೀಯದಲ್ಲಿ ವಿಕ್ಟೋರಿಯ ಪ್ರಾಂತ್ಯ ನ್ಯೂಸೌತ್‌ವೇಲ್ಸ್‌ನಿಂದ ಬೇರ್ಪಟ್ಟು ಎರಡೂ ರಾಜ್ಯಗಳಿಗೆ ಸ್ವಾಧಿಕಾರ ಸಿಕ್ಕಿತು (ಕಪಕೋ. II, ೧೧೭). [ಸಂ.]

**ಸ್ವಾಧಿಪತ್ಯ** (ನಾ). ತನ್ನದೇ ಆದ ಅಧಿಕಾರ; ತನ್ನ ಪರಮಾಧಿಕಾರ: ಸಂಪೂರ್ಣ ಸ್ವಾಧಿಪತ್ಯವನ್ನು ಬೇಡುವ ಗಂಡನೆಂಬ ಅಭಿಮಾನ . . . ಹೃದಯವನ್ನು ಹಿಮ್ಮೆಟ್ಟುತ್ತಿತ್ತು (ಕಮನ. ೪೮). [ಸಂ.]

**ಸ್ವಾಧಿಷ್ಠಾನ** (ನಾ). [ಯೋಗ] ಶರೀರದಲ್ಲಿರುವ ಷಟ್ಚಕ್ರಗಳಲ್ಲಿ ಎರಡನೆಯದು: ಎನ್ನ ಸ್ವಾಧಿಷ್ಠಾನದಲ್ಲಿ ಎಪ್ಪತ್ತುಕೋಟಿ ಸೂರ್ಯಚಂದ್ರಾಗ್ನಿಪ್ರಕಾಶವನೊಳಕೊಂಡು ಬೆಳಗುತಿರ್ಪಿರಯ್ಯ ನೀವು (ವಚಸಂ. ೪೦೧-೩೯); ಯೋಗೀಶ್ವರರ ಧ್ಯಾನಯೋಗಕ್ಕೆ ಸ್ಥಾನಂಗಳಾವವೆನೆ ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಜ್ಞೇಯ (ಅಖಂಡೇ. ೨೧೯-೬೦). [ಸಂ.]

**ಸ್ವಾಧೀನ** (ಗು). ೧. ಸ್ವತಂತ್ರವಾದ; ನಿರ್ಬಂಧರಹಿತವಾದ. ೨. ತನ್ನ ವಶದಲ್ಲಿರುವ; ತನ್ನ ಕೈವಶವಾದ. (ನಾ). ೩. ಹತೋಟಿ; ಅಂಕೆ; ವಶ: ನರ್ಜನ ಕೈಕಾಲು ಸ್ವಾಧೀನಕ್ಕೆ ಬರಲಿಲ್ಲ (ಮಲೆನಾ. ೨೦೭); ಸಿದ್ಧಪುರುಷರಿಗೆ ಕ್ಷೇಮವೆಂಬುದು ಸ್ವಾಧೀನವಾಗಿರುವುದು (ಶಾಕುಂತ. ೬೫-೨೨). ೪. ಸ್ವತಂತ್ರವ್ಯಕ್ತಿ: ನಾವು ಸ್ವಾಧೀನರಾಗಿ ಯಾವುದನ್ನು ವಶಮಾಡಿಕೊಳ್ಳಬೇಕು, ಯಾವುದಕ್ಕೆ ನಾವು ವಶರಾಗಬೇಕು ಎಂಬುದನ್ನು ಆ ಮಹಜ್ಜೀವಿತಗಳು ತಿಳಿಸುತ್ತವೆ (ಭಾರದ. ೪೮೭). [ಸಂ.]

**ಸ್ವಾಧೀನಪತಿಕೆ** (ನಾ). [ಕಾವ್ಯಮೀ] ನಾಯಿಕೆಯರಲ್ಲಿ ಒಂದು ವಿಧ; ಗಂಡನನ್ನು ತನ್ನ ವಶದಲ್ಲಿ ಇಟ್ಟುಕೊಂಡವಳು: ಅನುಕೂಲಮತಿಯಿನಾತ್ಮೇಶನನುದಿನಂ ಕೆಲದೊಳಿರ್ದು ಮಂಡನಮಂ ಕಾಮಿನಿಗೆ ಪೊಸೆಯಿಸುವೊಡಾ ವಧು ಜನದಿಂ ಸ್ವಾಧೀನಪತಿಕೆಯೆನೆ ಪೆಸರ್ವಡೆಗುಂ (ಶೃಂಗಾರ. ೩-೫೦); ಸತತಂ ಸ್ವಾಧೀನಪತಿಕೆ ಪತಿಯಂ ಸ್ವಾಧೀನಮಾಗಿ ತಡೆದಂಗನೆ (ರಸರ. ೩-೯೭). [ಸಂ. ಸ್ವಾಧೀನಪತಿಕಾ]

**ಸ್ವಾಧೀನಭರ್ತೃಕೆ** (ನಾ). = ಸ್ವಾಧೀನಪತಿಕೆ: ಸ್ವಾಧೀನಭರ್ತೃಕೆ ಖಂಡಿತೆ . . . ಕಲಹಾಂತರಿತೆಯರೆಂಬ ಎಂಟು ತೆಱದವಸ್ಥಾನಿಬದ್ಧರಾದ ಕಾಮಿನಿಯರಿಂ (ವಿವೇಕ. ೨೨೮). [ಸಂ. ಸ್ವಾಧೀನಭರ್ತೃಕಾ]

**ಸ್ವಾಧ್ಯಾಯ** (ನಾ). ೧. ತನ್ನಷ್ಟಕ್ಕೆ ತಾನೆ ಹೇಳಿಕೊಳ್ಳುವಿಕೆ; ಇತರರ ಸಹಾಯವಿಲ್ಲದೆ ತಾನೆ ಅಭ್ಯಾಸಮಾಡಿಕೊಳ್ಳುವಿಕೆ. ೨. ಸ್ವಂತವಾಗಿ ವೇದಾಭ್ಯಾಸ ಮಾಡುವಿಕೆ,– ವೇದಾಧ್ಯಯನ ನಡೆಸುವಿಕೆ. ೩. ವೇದ: "ವೇದಃ, ಶ್ರುತಿಃ, ಆಮ್ನಾಯಃ, ಸ್ವಾಧ್ಯಾಯಃ, ಛಂದಃ, ಆಗಮಃ – ಈ ೬ ವೇದದ ಪೆಸರ್" (ಹಲಾಯು. ೩-೯). ೪. [ಜೈನ] ಶ್ರಾವಕನು ಪ್ರತಿದಿನ ಆಚರಿಸಬೇಕಾದ ಇಜ್ಯೆ, ವಾರ್ತೆ, ದತ್ತಿ, ಸ್ವಾಧ್ಯಾಯ, ಸಂಯಮ ಮತ್ತು ತಪ ಎಂಬ ಷಟ್ಕರ್ಮಗಳಲ್ಲಿ ಒಂದು; IP ಅಭ್ಯಂತರತಪಸ್ಸಿನ ಒಂದು ಭೇದವೆಂದೂ ಇದು ಪರಿಗಣಿತ ವಾಗಿದೆ. ಧರ್ಮಶಾಸ್ತ್ರವನ್ನು ಓದುವುದು, ಕೇಳುವುದು, ಚಿಂತಿಸುವುದು, ಮನನ ಮಾಡುವುದು: ಅಭ್ಯಂತರ ತಪಷ್ಷಟ್ಕದೊಳಂ ಪ್ರಾಯಶ್ಚಿತ್ತ ವಿನಯ ವೈಯಾವೃತ್ಯ ಸ್ವಾಧ್ಯಾಯಮೆಂಬ ತಪಮಂ ತಳೆದಂ (ಸುಕುಮಾ. ೪-೧೮). [ಸಂ.]

**ಸ್ವಾನ** (ನಾ). ಧ್ವನಿ; ನಾದ; ಶಬ್ದ: "ಹ್ರಾದಃ, ನಾದಃ, ಶಬ್ದಃ, ಸ್ವಾನಃ, ಧ್ವಾನಃ, ಸ್ವರಃ, ರವಃ, ಘೋಷಃ:- ಈ ೮ ಧ್ವನಿ" (ಹಲಾಯು. ೨೩-೧೩೭). [ಸಂ.]

**ಸ್ವಾನುಭವ** (ನಾ). ೧. ತನ್ನ ಸ್ವಂತ ಅನುಭವ; ಸ್ವಪ್ರಯತ್ನದಿಂದ ಗಳಿಸಿಕೊಂಡ ಅರಿವು: ಬ್ರಹ್ಮವೆನಲದಱಿಂದಧಿಕವೇನಿಲ್ಲವದು . . . ತಿಳಿವ ಪರಿಯೆಂತೆಂದೆನಲು ಶ್ರುತಿಗುರುಗಳಿಂದದು ಸ್ವಾನುಭವವೇದ್ಯ (ಅಮೃತ. ೧-೧೪); ಕಾಡುವಾಸಿಗಳು ಸ್ವಾನುಭವದಿಂದ ಯಾವುದರದು ಕುಡಿಯಬಹುದು, ಯಾವುದರದು ಕುಡಿಯಕೂಡದು ಎಂಬುದನ್ನು ಕಂಡುಕೊಂಡಿರುತ್ತಾರೆ (ಹಸುಹೂ. ೭೧). ೨. ಆಧ್ಯಾತ್ಮಿಕ ಅನುಭವ; ದರ್ಶನ; ಸಾಕ್ಷಾತ್ಕಾರ: ಪೂರ್ವಜನ್ಮಸಂಸ್ಕಾರಬಲದಿಂ ಭಕ್ತಿ ಜ್ಞಾನಾಧಿಕಂ ತಾನೇ ತೋರ್ಪುದೇ ಸ್ವಾನುಭವಮಕ್ಕುಂ (ವಿವೇಕ. ೧೧೧). [ಸಂ.]

**ಸ್ವಾನುಭಾವ** (ನಾ). = ಸ್ವಾನುಭವ ೨: ತೆಱಹಿಲ್ಲದ ನಂಬಿದ ಸ್ವಾನುಭಾವಸುಖವು ತೆಱಹಿಲ್ಲದ ಮಹಿಮೆ ತೆಱಹಿಲ್ಲದ ವಿಚಾರ ಕೂಡಲಸಂಗಮದೇವಾ ನಿಮ್ಮ ಶರಣಂಗೆ (ಬಸವ. ೯೧೮). [ಸಂ.]

**ಸ್ವಾನುಭೂತಿ** (ನಾ). = ಸ್ವಾನುಭವ ೨: ಆ ಸಿದ್ಧರು ಸ್ವಾನುಭೂತಿಯಿಂದ ಉಪದೇಶ ನೀಡುತ್ತಿದ್ದಾರೆ (ರೂಢಿ). [ಸಂ.]

**ಸ್ವಾಪ** (ನಾ). ೧. ನಿದ್ದೆ; ನಿದ್ರೆ: "ಸ್ವಪನಂ ಸ್ವಾಪಂ" (ವಸ್ತುಕೋ. ೧೧೪-೨೦). ೨. ಕನಸು ; ಸ್ವಪ್ನ. ೩. ನಿದ್ರಾಲಸ್ಯ ; ನಿದ್ದೆಯ ಮಬ್ಬು. ೪. ಭಾವಾತಿರೇಕ ದಿಂದ ಉಂಟಾಗುವ ಅಲ್ಪಕಾಲಿಕ ನಿಶ್ಚೇತನತೆ; ಮೈಮರವು. [ಸಂ.]

**ಸ್ವಾಪತೇಯ** (ನಾ). ಧನದ್ರವ್ಯಾದಿ ಸಂಪತ್ತು; ಆಸ್ತಿ: "ದ್ಯುಮ್ನಂ, ದ್ರವ್ಯಂ, ದ್ರವಿಣಂ, ರಾಃ, ಸ್ವರ್ಣಂ, ಸ್ವಾಪತೇಯಂ . . . ವಿಭವಃ- ಈ ೧೫ ಒಡಮೆಯ ಪೆಸರ್" (ಹಲಾಯು. ೧೪-೯೦). [ಸಂ.]

**ಸ್ವಾಪವಡೆ** (ಕ್ರಿ). ನಿದ್ರೆಹೊಂದು; ನಿದ್ದೆಯಲ್ಲಿರು: ಈ ರೂಪು ನಾಮಾಶ್ರಯವೆನಿಪ ಪರಮಾತ್ಮತತ್ತ್ವವನು ತಾ ಪರಮನಾಗಱಿದು ವಿಷಯನಿರೂಪವನು ಬಿಟ್ಟತುಳಸುಖದಲಿ ಸ್ವಾಪವಡೆದವನಂದೆEತತ ನಿಷ್ಕೃತಿತನದಲಿರುತಿಹುದು (ನಿಭಾಗ. ೧೧-೨೦-೪೨). [ಸ್ವಾಪ + ಪಡೆ$_1$]

**ಸ್ವಾಭಾವಿಕ** (ಗು). ೧. ಸ್ವಭಾವದಿಂದ ಉಂಟಾದ; ಹುಟ್ಟುಗುಣವಾದ; ಸಹಜವಾದ: ಸ್ವಾಭಾವಿಕ ಶುಭಗುಣನಿಧಿಗಂಬುಜನಾಭನಿಗಾನೆಱಗುವೆನು (ಹರಿಬ. ೩-೧). (ನಾ). ೨. ಹುಟ್ಟುಗುಣವಾಗಿ ಬಂದುದು; ನೈಸರ್ಗಿಕವಾದುದು; ಸಹಜವಾದುದು: ಈ ಪರ್ಯಾಯಗಳಲ್ಲಿ ದುಃಖರಾಗದ್ವೇಷಾದಿ ಪರ್ಯಾಯಗಳು ಆಗಂತುಕಗಳು. ಜ್ಞಾನ ದರ್ಶನ ಸುಖ ಮೊದಲಾದ ಪರ್ಯಾಯಗಳು ಸ್ವಾಭಾವಿಕಗಳು (ಹಿಂದಸಾ. ೮೩). ೩. [ಜೈನ] ತೀರ್ಥಂಕರನಿಗೆ ಒದಗುವ ಮೂವತ್ತುನಾಲ್ಕು ಅತಿಶಯಗಳಲ್ಲಿ ಒಂದು ವರ್ಗ: ಸ್ವಾಭಾವಿಕ ಕರ್ಮಕ್ಷಯಜ ದೇವಕೃತಂಗಳೆಂಬ ಮೂವತ್ತುನಾಲ್ಕುಮತಿಶಯಂಗಳೊಳೊಂದುಗುಂದದಿರೆಯುಂ (ಶಾಂತಿಪು. ೧೨-೧೪ ವ). [ಸಂ.]

**ಸ್ವಾಭಿಮಾನ** (ನಾ). ೧. ತನ್ನ ಬಗೆಗಿರುವ ಅಭಿಮಾನ; ಆತ್ಮಾಭಿಮಾನ: ಉಪಾಧ್ಯಾಯರಿಗೂ ತಮ್ಮ ಕಾರ್ಯದಲ್ಲಿ ಸ್ವಾವಲಂಬನೆಯೂ ಸ್ವಾಭಿಮಾನವೂ ಉಂಟಾಗುತ್ತವೆ (ಶಿಕ್ಷದ. ೨೮೧). [ಸಂ.]

**ಸ್ವಾಭಿಮಾನಿ** (ನಾ). ಸ್ವಾಭಿಮಾನವುಳ್ಳವನು; ತನ್ನ ಗೌರವವನ್ನು ಕಾಪಾಡಿಕೊಳ್ಳುವವನು: ಅಪ್ಪ ಎಂಥ ಸ್ವಾಭಿಮಾನಿಯೆಂಬುದನ್ನು ಅಣ್ಣ ಅರಿತೇ ಇಲ್ಲ (ವಾತ್ಸಲ್ಯ. ೩೪). [ಸಂ. ಸ್ವಾಭಿಮಾನಿನ್]

**ಸ್ವಾಮಿ** (ನಾ). ೧. ಯಜಮಾನ; ಮಾಲೀಕ. ೨. ಒಡೆಯ; ಅಧಿಪತಿ: "ಆರ್ಯಃ, ಪರಿವೃಢಃ, ಸ್ವಾಮಿಾ . . . ಅಧಿಪತಿಃ – ಈ ೧೦ ಒಡೆಯಂ" (ಹಲಾಯು. ೫೭-೧೮೮); ಸ್ವಾಮಿ ನೀನು, ಶಾಶ್ವತ ನೀನು (ಬಸವ. ೫೨೮). ೩. ದೇವರು; ಪರಮಾತ್ಮ: ತಿರುಪತಿಯ ವೆಂಕಟರಮಣಸ್ವಾಮಿಯ ದೇವಾಲಯ ಪ್ರಸಿದ್ಧವಾದುದು (ರೂಢಿ). ೪. ಅರಸು; ಪ್ರಭು. ೫. ಗಂಡ; ಪತಿ: "ಸ್ವಾಮಿ ಭರ್ತೃ ಪತಿ . . . ವಲ್ಲಭಂ ಪ್ರಿಯಂ ಪ್ರಣಯಿ ಕಾಂತನಿಷ್ಟಂ ದಯಿತಂ" (ವಸ್ತುಕೋ. ೯೯-೯). ೬. ಧರ್ಮಗುರು; ಆಧ್ಯಾತ್ಮಗುರು. ೭. ವಿದ್ವಾಂಸನಾದ ಬ್ರಾಹ್ಮಣ. ೮. ಸಂನ್ಯಾಸಿ ಮತ್ತು ಅವರ ಹೆಸರಿನ ಮುಂದೆ ಸೇರುವ ಪದ. ೯. ಸ್ಕಂದ; ಷಣ್ಮುಖ: "ಶರಜನ್ಮಂ ಗುಹಂ . . . ತಾರಕರಿಪು ಸ್ವಾಮಿ ಕಾರ್ತಿಕೇಯಂ" (ಮಂಗರಾ. ೫-೧೬); ಗಣಪನುಂ ಸ್ವಾಮಿಯುಂ ಕೆಲಬಲದೊಳೊಪ್ಪಿರಲು (ಬಸರ. ೧-೧೫). ೧೦. ಶಿವ. ೧೧. ವಿಷ್ಣು. ೧೨. ಗರುಡ. ೧೩. ವಾತ್ಸ್ಯಾಯನಋಷಿ. ೧೪. ಒಂದು ಬಗೆಯ ಮರ; ಕೆಮ್ಮರ: "ಸ್ವಾಮೀಮರ, ಕೆಮ್ಮರ, ಸೋಮೇಮರ" (ವೃಕ್ಷಗಿ. ೭೧-೧೪೫೭); ಅಡವಿಗೋರಂಟಿ, ಚಿಲ್ಲ, ಮರುವ, ಸ್ವಾಮಿ, ದೂಪ, ತೇಗ, ಅರಸಿನ (ಸಮ್ಮನು. ೨೩೭). ೧೫. ಪುರುಷರನ್ನು ಸಂಬೋಧಿಸುವಾಗ ಸಾಮಾನ್ಯ ವಾಗಿ ಬಳಸುವ ಗೌರವಸೂಚಕ ಪದ: ತೋಱೆಯ ಮಾವಣ್ಣಗಳಿರಾ ತೋಱೆಯ ಮಾವ ಸ್ವಾಮಿಗಳಿರಾ ತೋಱೆಯಿಂ ಭೋ ತೋಱೆಯಿಂ ಭೋ ಪರನಾರಿಯ ಸಂಗವ ತೋಱೆಯಿಂ ಭೋ (ಬಸವ. ೬೪೪); ಸ್ವಾಮಿಾ, ವಿದ್ವಾಂಸರಾದವರು ಹೀಗೆ ಆತ್ಮಸ್ತುತಿಯಂ ಮಾಡಿಕೊಳ್ಳುವುದುಂಟೇ (ಮುದ್ರಾಮಂ. ೩೩೧); ಇಲ್ಲ ಸ್ವಾಮಿ! ನಾನು ಬಡವ. ಆದರೆ ಸುಳ್ಳು ಹೇಳೋ ಮನುಷ್ಯನಲ್ಲ (ರಂಗಕ. ೪೯). ೧೬. ಸಾಮಾನ್ಯವಾಗಿ ಪುರುಷರ ಹೆಸರಿನೊಂದಿಗೆ ಸೇರುವ ಪದ: ಉದಾ: ಕೃಷ್ಣಸ್ವಾಮಿ, ಶಿವಸ್ವಾಮಿ ಇತ್ಯಾದಿ. ೧೭. (ಪೂರ್ವಕಾಲದಲ್ಲಿದ್ದ) ವರ್ತಕಸಂಘದ ಸದಸ್ಯ: ತೆಲಸಂಗ[ವ]ದ

ಮಹಾಜನಂಗಳೆರಡಯ್ಯೂ[ರ್ವ್ವ]ರ್ ಸ್ವಾಮಿಗಳುಂ ಮೂವತ್ತಾಱುಂ ಬೀಡಿನ ಸೆಟ್ಟಿಯರುಂ . . . ಸತ್ರಕ್ಕೆ ಬಿಟ್ಟ ಧಮ್ಮವೆನ್ತೆಂದಡೆ (ಕಇ. II, ೨೦-೨೦ ; 1147). [ಸಂ. ಸ್ವಾಮಿನ್]

**ಸ್ವಾಮಿಕಂಟಕ** (ನಾ). ಒಡೆಯನಿಗೆ ಕೆಡುಕು ಮಾಡುವವನು; ಸ್ವಾಮಿದ್ರೋಹಿ: ಹರಿಬಕಿಲ್ಲದ ನಾಯಕರ ಸುಡು ಹೊಟ್ಟೆಹೊರಕರ ವಾಯಕಿವದಿರ ಸಂತವಿಟ್ಟನು ಸ್ವಾಮಿಕಂಟಕರ (ಕುಮ್ಮಾದ್ರೋ. ೧೦-೫೮). [ಸಂ.]

**ಸ್ವಾಮಿಕಾರ್ಯ** (ನಾ). ಒಡೆಯನ ಕೆಲಸ: ಸ್ವಾಮಿಕಾರ್ಯವಲ್ಲದೆ ಇನ್ನೇನೂ ಬೇಕಾಗಿಲ್ಲದ ನಮಗೆ ಯಾವ ವಿಜಯವು ಅಭಿಮತವೋ ತಾವೇ ಯೋಚಿಸಿ (ಮಹಾಣ. ೧೫೪); ಈ ವ್ಯವಹಾರದಲ್ಲಿ ನನ್ನದೇನೂ ಇಲ್ಲ ಅಮ್ಮ . . . ಸ್ವಾಮಿಕಾರ್ಯ ಎಂದು ಬಂದಿದ್ದೇನೆ (ದೇವಹಂ. ೧೫೦). [ಸಂ.]

**ಸ್ವಾಮಿತ್ವ** (ನಾ). ೧. ಒಡೆತನ; ಮಾಲೀಕತ್ವ. ೨. ಪ್ರಭುತ್ವ; ಆಧಿಪತ್ಯ: ಕೆಲರುತ್ಪಾದಿಸುವರ್ ಸ್ವಾಮಿತ್ವದೊಳಾದ ಭೇದದೆ ಚತುರ್ಥಿಯಂ ಷಷ್ಠಿಯುಮಂ (ಕಾವ್ಯಾವ. ೧೨೦). [ಸಂ.]

**ಸ್ವಾಮಿದುರುಹಿಕೆ** (ನಾ). ಒಡೆಯನಿಗೆ ಕೇಡು ಬಗೆಯುವಿಕೆ,–ದ್ರೋಹ ಮಾಡುವಿಕೆ: ನುಡಿವವರು ನಾವ್ ಹಗೆಗಳೆ ನಿನ್ನೊಡೆಯರಲ್ಲಾ ಸ್ವಾಮಿದುರುಹಿಕೆ ಲೇಸು ಲೇಸು (ಕುಮ್ಮಾವಿ. ೬-೧೧). [ಸ್ವಾಮಿ + ದುರುಹಿಕೆ]

**ಸ್ವಾಮಿದ್ರೋಹ** (ನಾ). ೧. ಒಡೆಯನಿಗೆ ಕೇಡು ಮಾಡುವಿಕೆ,– ದ್ರೋಹ ಬಗೆಯುವಿಕೆ: ಸ್ವಾಮಿದ್ರೋಹಮುಂ ಪುತ್ರವಧಮುಂ ಗೆಯ್ವನೆಂದಾತಂಗೆ ಮುಳಿದು (ಚಾವುಂಪು. ೪೫೯); ಅರಸಿನವರಿಂದಾ ನಮಗೆ ಪ್ರಾಣೋಪಕಾರವಾದ್ದಕ್ಕೆ ಅವರಿಗೆ ನಾಉ ಸ್ವಾಮಿದ್ರೋಹ ಮಿತ್ರದ್ರೋಹ ಮಾಡಬಾರದು (ಹೈದರ. ೨೯). ೨. ಒಡೆಯನಿಗೆ ದ್ರೋಹ ಬಗೆಯುವವನು; ಒಡೆಯನನ್ನು ವಂಚಿಸುವವನು: ಪ್ರಾಣವನೆ ಕಾವ ಬಗೆ ಮಿಗೆ ಸ್ವಾಮಿದ್ರೋಹನಾದ ವೈದ್ಯನಂತೆ . . . ದೆಸೆಗೆಟ್ಟೋಡುವಶನಿಘೋಷನಂ (ಶಾಂತಿಪು. ೬-೩೯ ವ); ಸ್ವಾಮಿದ್ರೋಹರು ದಳದಲಿದ್ದವರೆತ್ತ ಹೋದರು (ಕುಮ್ಮಾದ್ರೋ. ೧-೬೩).

**ಸ್ವಾಮಿದ್ರೋಹರ ಗಂಡ** = ಸ್ವಾಮಿದ್ರೋಹಿಗಳನ್ನು ಶಿಕ್ಷಿಸುವ ವೀರ; ಒಂದು ಬಿರುದು: ಸ್ವಾಮಿದ್ರೋಹರ ಗಂಡ ಗಡಿಯಂಕಭೀಮ ರಾ[ಮ]ರಾಜೇಂದ್ರ ಮಹಾ ಅರಸುಗಳು (ಕಇ. IV, ೩೦-೭ ; 1505). **ಸ್ವಾಮಿದ್ರೋಹರ ಶಿರಃಖಂಡನ** = ಸ್ವಾಮಿದ್ರೋಹಿಗಳ ತಲೆಗಳನ್ನು ಕತ್ತರಿಸುವವನು; ಒಂದು ಬಿರುದು: ಕಶ್ಮೀರ ವಿಷಯಮುಖಮಂಡನಂ ಸ್ವಾಮಿದ್ರೋಹರ ಶಿರಷ್ಖಂಡನಂ ನಾಮಾದಿ ಸಮಸ್ತಪ್ರಸಸ್ತಿ ಸಹಿತಂ (ಕಇಆ. ೩೬-೫೦-೫; 1042). [ಸಂ.]

**ಸ್ವಾಮಿದ್ರೋಹಿ** (ನಾ). = ಸ್ವಾಮಿದ್ರೋಹ ೨: ಸಿಲುಕಿದನು ಫಡ ಸ್ವಾಮಿದ್ರೋಹಿಗೆ ಬಲೆಯ ಹಾಯಿಕೊ (ಕುಮ್ಮಾಕ. ೧೯-೧೪); ಎಲವೊ ಸ್ವಾಮಿದ್ರೋಹಿ ತಾನಲ್ಲೆಂದನಂಗದನು (ಕೌಶಿರಾ. ೧೮-೪೩). [ಸಂ. ಸ್ವಾಮಿದ್ರೋಹಿನ್]

**ಸ್ವಾಮಿದ್ರೋಹಿಕೆ** (ನಾ). = ಸ್ವಾಮಿದ್ರೋಹ ೧ : ನೆಲನೊಡೆಯನಾಪ್ತಿಗರು ಬಗೆದರು ಸ್ವಾಮಿದ್ರೋಹಿಕೆಯ (ಕುಮ್ಮಾದ್ರೋ. ೧೦-೭). [ಸ್ವಾಮಿದ್ರೋಹ + - ಇಕೆ]

**ಸ್ವಾಮಿನಿ** (ನಾ). ೧. ಒಡತಿ; ಯಜಮಾನಿತಿ: ನಿಮ್ಮ ಈ ನಡತೆಯನ್ನು ಕಂಡು ನಮ್ಮ ಸ್ವಾಮಿನಿಯು ಭಯೋದ್ರೇಕದಿಂದ ಮೂರ್ಛೆಹೋಗಿರುವಳು (ರಾಜವಿ. ೬೫). ೨. ಹೆಂಡತಿ. [ಸಂ. ಸ್ವಾಮಿನೀ]

**ಸ್ವಾಮಿಭಕ್ತಿ** (ನಾ). ಒಡೆಯನಿಗೆ ನಿಷ್ಠನಾಗಿರುವಿಕೆ; ಒಡೆಯನ ಮೇಲಿರುವ ಭಕ್ತಿ, – ಗೌರವ: ಅವರು ಪ್ರವಾಸದಲ್ಲಿದ್ದಾಗ ಅವನೇ ಸಹಾಯಕ. ಎಂಥ ಸ್ವಾಮಿಭಕ್ತಿ ಅವನದು! (ತೇವೋಪ. ೭೧). [ಸಂ.]

**ಸ್ವಾಮಿಭೃತ್ಯನ್ಯಾಯ** (ನಾ). [ತರ್ಕ] ಒಡೆಯ ಮತ್ತು ಸೇವಕರ ನಡುವಿನ ಸಂಬಂಧವನ್ನು ತಿಳಿಸುವ ಒಂದು ನ್ಯಾಯ: ಆಳು ನಾಂ ದೊರೆ ನೀನು ಸ್ವಾಮಿಭೃತ್ಯನ್ಯಾಯ ಕೇಳು ಪೋಷಕ ನೀನು ಪೋಷ್ಯ ನಾಂ (ವಂಕಾರಾ. ೨-೧೯-೩೧). [ಸಂ.]

**ಸ್ವಾಮಿವಂಚಕ** (ನಾ). = ಸ್ವಾಮಿದ್ರೋಹ ೨.

**ಸ್ವಾಮಿವಂಚಕರ ಗಂಡ** = ಸ್ವಾಮಿದ್ರೋಹಿಗಳನ್ನು ಶಿಕ್ಷಿಸುವವನು; ಒಂದು ಬಿರುದು: ಸ್ವಾಮಿವಞ್ಚಕರ ಗಂಣ್ಡರುಂ ರಾಉತ್ತರಾಯರುಂ ಜವನಿಕೆನಾರಾಯಣರುಂ . . . ಪರಮಾಳ ದೇವ ದಣ್ಣಾಯಕರು (ಎಕ. XI, ಚಿತ್ರದು. ೧೨-೧೩; 1286). [ಸಂ.]

**ಸ್ವಾಮಿವಿರೋಧ** (ನಾ). ೧. = ಸ್ವಾಮಿದ್ರೋಹ ೧. ೨. ಷಣ್ಮುಖನಿಗೆ ವೈರಿಯಾಗಿರುವಿಕೆ; ಷಣ್ಮುಖನನ್ನು ಎದುರಿಸುವಿಕೆ. ೧, ೨ : ವಿಶ್ವಾಸಘಾತಂ ವನದ್ರುಮನೀಡದೊಳ್ ಸ್ವಾಮಿವಿರೋಧಂ ತಾರಕಚಿತ್ರಕಥೆಯೊಳ್ . . . ಅಕ್ಕುಮಲ್ಲದೆ ಜನಪದಜನಂಗಳೊಳಿಲ್ಲ (ಜಗವಿ. ೨-೧ ವ). [ಸಂ.]

**ಸ್ವಾಮಿಸಂಬಂಧ** (ನಾ). ಒಡೆತನದ ಸಂಬಂಧ; ಸ್ವಾಮಿತ್ವದ ಬಂಧುತ್ವ: ಸಂಬಂಧದೊಳ್ ಷಷ್ಠಿಯಕ್ಕುಂ. ಅದು ಸ್ವಾಮಿಸಂಬಂಧ, ಕುಲಸಂಬಂಧ, ಜಾತಿಸಂಬಂಧ, ಅವಯವಸಂಬಂಧ, ಲಕ್ಷಣಸಂಬಂಧ, ಸನ್ನಿಧಾನಸಂಬಂಧ, ಸಂಸ್ಪರ್ಶಸಂಬಂಧ, ಸಂಬಂಧದ ಸಂಬಂಧವೆಂಬಿನಿತಱೊಳಮಕ್ಕುಂ (ಶಮದ. ೧೩೨ ವೃತ್ತಿ). [ಸಂ.]

**ಸ್ವಾಮಿಹಿತವ** (ನಾ). ಒಡೆಯನಿಗೆ ಹಿತವನ್ನುಂಟುಮಾಡುವವನು; ಸ್ವಾಮಿಭಕ್ತ: ಫಹಿತವಯಹ ಸುದತಿಯನ್ನತವಱಿಯದವನೀಶನುಭಯಕುಲಶುದ್ಧನಹ ಕುವರನೀ ಸ್ವಾಮಿಹಿತವನಹ ಮಂತ್ರಿಯ ಸೋಂಕು ತನಗೆ ಕೈಸಾರ್ದುದೆಂದು (ಹಚಕಾ. ೧೦-೩೨). [ಸಂ. ಸ್ವಾಮಿಹಿತವತ್]

**ಸ್ವಾಮ್ಯ** (ನಾ). ೧. ಒಡೆತನ; ಯಾಜಮಾನ್ಯ: ತನ್ನ ಸ್ವಾಮ್ಯದ ವಸ್ತುವನ್ನು ತನ್ನಿಂದ ಇತರರು ಕಿತ್ತುಕೊಂಡಂತೆ ಆತ ಗುರುಗುಟ್ಟುತ್ತಿದ್ದ (ಕೀಲುಗೊಂ. ೪೭); ನನಗೆ ಅದರ ಸ್ವಾಮ್ಯದ ಹಕ್ಕು ಹೊರಟುಹೋದೀತು (ಸಂಚರು. ೧೯). ೨. (ಭೂಮಿ, ಆಸ್ತಿ, ರಾಜ್ಯ ಮೊದಲಾದುವು) ಒಡೆತನಕ್ಕೆ ಒಳಪಟ್ಟಿದು ಅಥವಾ ಒಳಪಡ ಬೇಕಾದುದು: ನೀವಿಂತೊಡಬಡಿಸಿ ಪಾಂಡವರ ಸ್ವಾಮ್ಯವನೀಸಿ ಕೊಡಿ (ಕುಮ್ಮಾಉ. ೯-೨೪). ೩. ಸಂಪೂರ್ಣಅಧಿಕಾರದ ಅಥವಾ ಏಕಸ್ವಾಮ್ಯದ ಸನ್ನದು, – ಹಕ್ಕುಪತ್ರ : ಸ್ವಾಮ್ಯದ ಹಕ್ಕು (Patent) ಕೊಡುವುದಕ್ಕಾಗಿಯೇ . . . ಕಾನೂನುಗಳೂ ಪ್ರಚಾರದಲ್ಲಿವೆ (ಹಸುಹೊ. ೨೭೪). [ಸಂ.]

**ಸ್ವಾಯಂಭುವ** (ನಾ). ೧. ಸ್ವಯಂಭುವಿನ ಮಗ; ಹದಿನಾಲ್ಕು ಮನುಗಳಲ್ಲಿ ಮೊದಲನೆಯವನು: ಸ್ವಾಯಂಭುವ . . . ಇಂದ್ರಸಾವರ್ಣಿಕರೆಂಬ ಹದಿನಾಲ್ಕುಂ ಮನುಗಳೊಳಗೆ (ವಿವೇಕ. ೨೦೪). ೨. ಇಪ್ಪತ್ತೆಂಟು ಬಗೆಯ ಶಿವಾಗಮ ಗಳಲ್ಲೊಂದು: ಕಾಮಿಕ . . . ಸ್ವಾಯಂಭುವ, ಅನಲ, ವೀರ, ರೌರವ, ಮಕುಟ . . . ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಭಾರದ. ೬೨). ೩. ಒಂದು ಬಗೆಯ ವೀಣೆ: ಅಂತು ಬಗೆದಂದು ರಾವಣ ರುದ್ರಕೂರ್ಮ ಕೈಲಾಸಾಕಾಶ ಗೌರಿ ಸ್ವಾಯಂಭುವ ಕಿನ್ನರವೀಣೆಗಳುಮಂ ವೇಣುಸ್ವರಮಂಡಲಂಗಳುಮಂ ಶ್ರುತಿಗೊಳಿಸಿ (ವೃಷವಿ. ೧೧-೭ ವ). [ಸಂ.]

**ಸ್ವಾಯತ** (ನಾ). [ವೀಶೈ] ೧. "ಅಳವಡುವಿಕೆ, ಸಾಕ್ಷಾತ್ಕಾರ" (ಅವಚಂ. ಕೋಶ): ಆಯತವಾಯಿತ್ತು ಅನುಭವ ಸ್ವಾಯತವಾಯಿತ್ತು ಶಿವಜ್ಞಾನ (ಅವಚಂ. ೬೪-೨೮೧); ಗುರುಕರುಣವ ಪಡೆದುದಕ್ಕೆ ಚಿಹ್ನವಾವುದೆಂದಡೆ ಅಂಗದ ಮೇಲೆ ಲಿಂಗ ಸ್ವಾಯತ ವಾಗಿರಬೇಕು (ವಚಸಂ. ೧೩೫-೧). ೨. "ವೀರಶೈವರಲ್ಲಿ ಗುರುವು ಭಕ್ತನಿಗೆ ಪ್ರಾಣಲಿಂಗವನ್ನು ಅರುಹಿಕೊಡುವ ದೀಕ್ಷೆ" (ಬಸವ. ಕೋಶ): ಆಯತ ಕೆಟ್ಟರೆ ಕೆಡಬಹುದಲ್ಲದೆ ಸ್ವಾಯತ ಕೆಡಬಾರದಯ್ಯಾ (ಬಸವ. ೮೯೭). [ಸಂ.]

**ಸ್ವಾಯತಲಿಂಗ** (ನಾ). [ವೀಶೈ] ಪ್ರಾಣಲಿಂಗ: ಆಯತಲಿಂಗದಲ್ಲಿ ನೀವೆನಗೆ ಆಚಾರವ ತೋಱಿದಿರಾಗಿ ಸ್ವಾಯತಲಿಂಗದಲ್ಲಿ ನೀವೆನಗೆ ಅಱುಹ ತೋಱಿದಿರಾಗಿ (ವಚಸಂ. ೫೨೦-೧೦೦); ಆಯತಲಿಂಗವ ಹಿಡಿದು ಸ್ವಾಯತಲಿಂಗವ ಕಾಣಬೇಕು (ಅಪ್ರಭು. ೬೬). [ಸಂ.]

**ಸ್ವಾಯತ್ತ** (ಗು). ೧. ಸ್ವಾಧಿಕಾರವುಳ್ಳ; ಸ್ವತಂತ್ರವಾದ: ಆಗಷ್ಟ ೧೫ಕ್ಕೆ ಭಾರತಕ್ಕೆ ಸ್ವಾಯತ್ತ ಸರಕಾರ ಸಿಗುವುದು (ವಿಜಯ. ೧೪). (ನಾ). ೨. ಸ್ವಾಧೀನ ವಾದುದು; ತನ್ನ ವಶಕ್ಕೆ ಬಂದುದು: ವೀರಸಂಕಮದೇವಪ್ರಭು ಚಕ್ರವರ್ತಿಪದಮಂ ಸ್ವಾಯತ್ತಮಂ ಮಾಡಿದಂ (ಶಾಸಪ. ೯೩); ಸ್ತೇಯಮದತ್ತಾದಾನಂ ಹೇಯಮದಂ ತೊಱೆದವಂಗೆ ನವನಿಧಿರತ್ನಂ ಸ್ವಾಯತ್ತಂ (ಉಸಾರ. ೯೭). ೩. [ರಾಜನೀ] ಅರಸನು ತಾನೇ ಎಲ್ಲ ಅಧಿಕಾರವನ್ನು ವಹಿಸಿಕೊಂಡು ಆಳುವುದು; ರಾಜಾಯತ್ತ ನೀತಿ: ದಂಡನೀತಿಶಾಸ್ತ್ರದಲ್ಲಿ ಸ್ವಾಯತ್ತವೆಂದೂ, ಸಚಿವಾಯತ್ತವೆಂದೂ, ಉಭಯಾಯತ್ತವೆಂದೂ ಸಿದ್ಧಿಗಳು ಮೂರು ತೆರನಾಗಿ ಹೇಳಿ ಇಹವು (ಮುದ್ರಾಮಂ. ೩೨೪). [ಸಂ.]

**ಸ್ವಾಯತ್ತತೆ** (ನಾ). ತಾನೆ ಆಡಳಿತ ಅಥವಾ ವ್ಯವಹಾರವನ್ನು ನಡೆಸುವ ಅಧಿಕಾರ: ಶಾಸನಸಭೆಯಲ್ಲಿ ಬಹುಮತ ಪಡೆದ ಕಾಂಗ್ರೆಸ್ಸು ಪ್ರಾಂತಿಕಸ್ವಾಯತ್ತತೆಯ ವಿಷಯವಾಗಿ ಸರಕಾರದ ನಿರ್ಣಯವನ್ನು ವಿರೋಧಿಸಿ ಜಯಶಾಲಿಯಾಯಿತು (ಕುರುಕಾ. ೧೩೪). [ಸಂ. ಸ್ವಾಯತ್ತತಾ]

**ಸ್ವಾಯತ್ತಸಂಸ್ಥೆ** (ನಾ). ಸ್ವತಂತ್ರವಾಗಿ ಆಡಳಿತವನ್ನು ನಡೆಸುವ ಸಂಸ್ಥೆ: ಕನ್ನಡ ಸಾಹಿತ್ಯಪರಿಷತ್ತು ಒಂದು ಸ್ವಾಯತ್ತಸಂಸ್ಥೆಯಾಗಿದೆ (ರೂಢಿ). [ಸಂ. ಸ್ವಾಯತ್ತಸಂಸ್ಥಾ]

**ಸ್ವಾರ** 'ಸವಾರ' ನೋ.

**ಸ್ವಾರಕಚೇರಿ** 'ಸವಾರಕಚೇರಿ' ನೋ.

**ಸ್ವಾರಸ್ಯ** (ನಾ). ೧. ಸ್ವಾಭಾವಿಕವಾದ ಮಾಧುರ್ಯ; ನೈಸರ್ಗಿಕವಾದ ರುಚಿ. ೨. ಆಹ್ಲಾದಕರವಾದುದು; ಸಂತೋಷಪ್ರದವಾದುದು. ೩. ಆಸಕ್ತಿಯನ್ನುಂಟು ಮಾಡುವಂತಹುದು; ಕುತೂಹಲಕರವಾದುದು: ಇದರ ಚರಿತ್ರೆ ಸ್ವಾರಸ್ಯವಾದದ್ದು (ಶಾಸಗಿ. ೮೨). ೪. ಶ್ರೇಷ್ಠತೆ; ಉತ್ತಮತೆ. ೫. ಮರ್ಮ; ಸಾರ; ಸತ್ತ್ವ. [ಸಂ.]

**ಸ್ವಾರಾಜ್ಯ** (ನಾ). ಇಂದ್ರನ ರಾಜ್ಯ; ಸ್ವರ್ಗ: ಎಮ್ಮೊಳಗೆ ನಿಸದಂ ನೆಲೆಸಿರುವ ಸ್ವಾರಾಜ್ಯವೆಮಗೆ ತೋರಿಸೆ ಯೇಸು . . . ನಲವತ್ತುದಿನ ಹಸಿದಂ (ಗಿಳಿವಿಂ. ೪೫-೧೧); ಸ್ವಾರಾಜ್ಯ ಭೂರಾಜ್ಯ ಮತ್ತೆ ಭುವೋರಾಜ್ಯದೈಶ್ವರ್ಯವೆಷ್ಟಿದ್ದರಿರಲಿ (ಇಂಚಾಪ. ೧೩೦-೩೯). [ಸಂ.]

**ಸ್ವಾರಿ** 'ಸವಾರಿ' ನೋ.

**ಸ್ವಾರಿಫಿರಂಗಿ** (ನಾ). ದಂಡಯಾತ್ರೆಯಲ್ಲಿ ಬಳಸುವ ತೋಪು,– ಫಿರಂಗಿ: ಆನೆಯನ್ನೇರಿ ಸೊನ್ನೇಬಾಣಗಳನ್ನು ಹೊಡೆಯಿಸಿ ಸ್ವಾರಿಫಿರಂಗಿ ಹೊಡೆದು . . . ಕಡಿಯಲಾಗಿ ಹಗೆಗಳು ತಡೆಯಲಾರದೆ ನಾಲ್ಕು ಕಡೆಗೂ ಓಡಿಹೋದರು (ಚಿತ್ರಪಾ. ೫೫). IP ''ದೊರೆಯ ಸಂಗಡ ತೆಗೆದುಕೊಂಡು ಹೋಗುವ ಕತ್ತಿ, ಇದನ್ನು ಸ್ವಾರಿಫಿರಂಗಿ ಎಂತಲೂ ಬರೆಯುತಾರೆ'' (ಚಿತ್ರಪಾ. ಅನುಬಂಧ).

[ಸ್ವಾರಿ (< ಸವಾರಿ) + ಫಿರಂಗಿ]

**ಸ್ವಾರ್ಜಿತ** (ನಾ). ತಾನು ಗಳಿಸಿದುದು; ಸ್ವತಃ ಸಂಪಾದಿಸಿದುದು: ಶೀನಪ್ಪನ ಅಡ್ಡಹೆಸರು 'ಕಲಿಯುಗ' . . . ಸ್ವಾರ್ಜಿತವಾದ ಈ ಬಿರುದು ಒಂದು ಬಗೆಯ ನಗುನಾಮ ಅಷ್ಟೆ (ಕಂಬಹು. ೩೭). [ಸಂ.]

**ಸ್ವಾರ್ಥ** (ನಾ). ೧. ತನ್ನ ಪ್ರಯೋಜನ; ಸ್ವಹಿತ. ೨. ತನ್ನ ಹಿತವನ್ನು ನೋಡಿಕೊಳ್ಳುವ ಪ್ರವೃತ್ತಿ; ಸ್ವಹಿತಾಸಕ್ತಿ: ಸ್ವಾರ್ಥವನ್ನು ಕಳೆದುಕೊಂಡು ಮಮತ್ವವನ್ನು ಅಹಂಕಾರವನ್ನು ದೂರಮಾಡು (ಧರ್ಮಸಾ. ೧೩೨); ಆ ದಾಸಿ ನಚ್ಚಿ ನೊಡತಿಗೆ ಮತ್ತೆ ಮೆಚ್ಚನಾಕೆಯ ಶಿಶುಗೆ ತೊಳ್ತುಗೆಯ್ಮೆಯ ಪೆರ್ಮೆಗೊಳ್ಳನೆಸಗುವೆನೆಂದು ಕಜ್ಜಮಂ ಕೈಕೊಂಡೊಡೇಂ ಸ್ವಾರ್ಥದೋಷಮಂ ಕಾಣ್ಬರಾರಾಕೆಯ ಪರಾರ್ಥತೆಯ ಶುದ್ಧಿಯಲಿ? (ಶ್ರೀರಾಮಾ. ೧೧೫-೯೮). ೩. ತನ್ನ ಅರ್ಥವನ್ನು ಉಳ್ಳುದು: ಸ್ವಾರ್ಥಂ ಪ್ರಥಮಾರ್ಥ ತೃತೀಯಾರ್ಥ ಚತುರ್ಥ್ಯರ್ಥದೊಳ್ ದ್ವಿತೀಯೆ (ಶಮದ. ೧೩೫). ೪. ಪ್ರಯೋಜನ; ಫಲ: ಜಡಪಾಷಾಣವ ಅನಂತಕೋಟಿವರ್ಷ ಪೂಜೆ ಮಾಡಿದರು ವ್ಯರ್ಥವಲ್ಲದೆ ಸ್ವಾರ್ಥವಿಲ್ಲ (ಅಖಂಡೇ. ೨೬೯-೧೧); ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತಾ (ನಾದಲೀ. ೮೫-೧೧). ೫. ಸ್ವಂತ ಹಣ. [ಸಂ.]

**ಸ್ವಾರ್ಥಪರ** (ನಾ). ತನ್ನ ಹಿತವನ್ನೇ ನೋಡಿಕೊಳ್ಳುವವನು; ಸ್ವಾರ್ಥಿ: ಸ್ವಾರ್ಥಪರರೂ ಸಂಕುಚಿತಮನೋಭಾವನೆಯವರೂ ಹೆಚ್ಚಿಕೊಂಡು (ಶಿಕ್ಷದ. ೨೧). [ಸಂ.]

**ಸ್ವಾರ್ಥಲೋಲುಪ್ತಿ** (ನಾ). ಸ್ವಂತಸತ್ತ್ವದ ಮೇಲಿನ ಆಸಕ್ತಿ; ಸ್ವಸಾಮರ್ಥ್ಯದ ಮೋಹ: ಕೌರವನರ್ಥವನು ಸಲೆ ತಿಂಬುದಲ್ಲದೆ ಸಮರ ನಿಮಗೇಕೆ ಸ್ವಾರ್ಥಲೋಲುಪ್ತಿಯಲಿ ನಿಲುವ ಸಮರ್ಥರಾದರೆ ಬಾಣಧಾರಾತೀರ್ಥದೊಳಗೋಲಾಡಿಸುವೆನೆಂದೆಚ್ಚನಭಿಮನ್ಯು (ಕುವ್ಯಾದ್ರೋ. ೬-೧೧). [< ಸಂ. ಸ್ವಾರ್ಥಲೋಲುಪತಾ]

**ಸ್ವಾರ್ಥಸಿದ್ಧಿ** (ನಾ). ತನ್ನ ಬಯಕೆಯನ್ನು ನೆರವೇರಿಸಿಕೊಳ್ಳುವಿಕೆ; ಇಷ್ಟಸಿದ್ಧಿ: ಆ ಧೂರ್ತಶಿಖಾಮಣಿ ಸ್ವಾರ್ಥಸಿದ್ಧಿಯಂ ಮಾಡಿಕೊಂಡು ಸ್ವೇಚ್ಛೆಯೊಳೋಡಿಪೋದಂ (ಪಂಚತಂ. ೨೩೦-೧೮). [ಸಂ.]

**ಸ್ವಾರ್ಥೋಚ್ಚರಿತ** (ನಾ). ತನ್ನ (ಸಹಜವಾದ) ಅರ್ಥದಲ್ಲಿ ಹೇಳಲ್ಪಟ್ಟುದು: ಪುರುಷತ್ರಯಮುಂ ಸ್ವಾರ್ಥೋಚ್ಚರಿತಂಗಳ್ (ಶಮದ. ೨೨೩). [ಸಂ.]

**ಸ್ವಾವಲಂಬನ** (ನಾ). ತನ್ನ ಜೀವನೋಪಾಯಕ್ಕಾಗಿ ಇನ್ನೊಬ್ಬರನ್ನು ಆಶ್ರಯಿಸದಿರುವಿಕೆ; ಪರಾವಲಂಬನವಿಲ್ಲದಿರುವಿಕೆ: ಕೇಶವನಿಗೂ ಸಹ ಭೀಮು ಸ್ವಾವಲಂಬನದ ಪಾಠವನ್ನು ಕಲಿಸುತ್ತಾನೆ (ಸಮಜೀ. ೧೨ ಪೀಠಿಕೆ); ಗ್ರಾಮೋದ್ಯೋಗ ಮಾಡಿರಿ, ಕೈಗಾರಿಕೆ ನಡೆಸಿರಿ, ಸ್ವಾವಲಂಬನ ಕಲಿಯಿರಿ (ದೇಕನ್ನ. ೩೦). [ಸಂ.]

**ಸ್ವಾವಲಂಬಿ** (ನಾ). ೧. ತನಗಾಗಿ ಬೇರೆಯವರನ್ನು ಆಶ್ರಯಿಸದಿರುವ ವ್ಯಕ್ತಿ; ಪರಾವಲಂಬಿಯಲ್ಲದವನು : ತನಗೆ ಇಲ್ಲಿಯ ತನಕ ಕಲಿಸಿ ತನ್ನನ್ನು ಸ್ವಾವಲಂಬಿಯಾಗಿ ಮಾಡಿದಳಲ್ಲ ಎಂದು ಅವಳ ಬಗ್ಗೆ ಅಭಿಮಾನವಿದೆ (ಆಚೋಲೀ. ೭೪). ೨. ತನ್ನ ಅಗತ್ಯಗಳನ್ನೆಲ್ಲ ತಾನೆ ಪೂರೈಸಿಕೊಳ್ಳುವಂತಹದು: ಪ್ರತಿರಾಷ್ಟ್ರವೂ ಸ್ವಾವಲಂಬಿಯಾಗಿರುವುದು ಸಾಧ್ಯವಿಲ್ಲದ ಮಾತು (ಕವಿಕೋ. I, ೮೨೪). [ಸಂ. ಸ್ವಾವಲಂಬಿನ್]

**ಸ್ವಾಸ** 'ಸಾಸ$_2$' ನೋ.

**ಸ್ವಾಸ್ತಿ** 'ಸ್ವಾಸ್ತೆ' ನೋ.

**ಸ್ವಾಸ್ತೆ, ಸ್ವಾಸ್ತಿ, ಸ್ವಾಸ್ಥಿ** (ನಾ). ಸುಸ್ಥಿತಿ, ಅಭಿವೃದ್ಧಿಗಳಿಗಾಗಿ ಕೊಟ್ಟ ದಾನ,– ದತ್ತಿ: ಸ್ವಾಸ್ತೆಯು ನಡದು ಬರುತ್ತಿದ್ದಲ್ಲಿ (ಮೈಆರಿ. ೧೯೨೯, ೧೮-೮; 1402); ನೀವು ಕಟಿಸಿದ ಮಠದ ಧರ್ಮಕ್ಕೆ ಸ್ವಾಸ್ತೆಯ ಮಾಡಿಕೊಡಬೇಕೆಂದು ನಂಮ ಕೂಡೆ ಹೇಳಿದಲ್ಲಿ (ಮೈಆರಿ. ೧೯೨೯, ೯೨-೮; 1667); ನಾವು ಶಿವಾರ್ಪಣವಾಗಿ ಕೊಟ್ಟ ಸ್ವಾಸ್ತೆ ಶಾಸನದ ಕ್ರಮವೆಂತೆಂದರೆ (ಎಕ. VII, ಶಿವಮೊ. ೮೨-೧೭; 1683). **ಸ್ವಾಸ್ತಿ**: ಮಲ್ಲಿನಾಥಸ್ವಾಮಿಗೆ ಸ್ವಾಸ್ತಿಗೆ ಕೊಟ್ಟದು (ಎಕ. XVI, ಮದ್ದಗಿ. ೧೪-೮; 1531); ಯಿ ಧರ್ಮ್ಮಕ್ಕೆ ಬಿಟ್ಟ ಸ್ವಾಸ್ತಿಗೆ ತಪ್ಪಿದರೆ ಯಿ ಸ್ವಾಮಿಗಳ ಹರಿವಾಣಕ್ಕೆ ವಿಷವನಿಕ್ಕಿದವರು (ಎಕ. XIV, ಶ್ರೀರಂಗ. ೧೯೮-೨೯; 1598). **ಸ್ವಾಸ್ಥಿ** : ಯಿವರಿಗೆ ಉತ್ತಾರ ಕೊಟ್ಟ ಸ್ವಾಸ್ಥಿಗೆ ಶಾಸನವ ಬರಸಿ ಕೊಡಬೇಕೆಂದು (ಎಕ. VII, ಶಿವಮೊ. ೨೯-೧೨; 1712). [< ಸ್ವಾಸ್ಥೆ]

**ಸ್ವಾಸ್ಥಿ** 'ಸ್ವಾಸ್ತೆ' ನೋ.

**ಸ್ವಾಸ್ಥೆ** (ನಾ). = ಸ್ವಾಸ್ತೆ: ಯಿ ಸ್ವಾಸ್ಥೆ ಗ ೨॥ ಭೂಮಿಯನ್ನು . . . ಬಿಟ್ಟು ಕೊಟ್ಟದ್ದರಿಂದ (ಮೈಆರಿ. ೧೯೨೯, ೧೮-೧೧; 1402); ಗಾಜನೂರ ಸೀಮೆ ವಳಗೆ ಕೊಟ್ಟ ಸ್ವಾಸ್ಥೆಯ ವಿವರ (ಎಕ. VII, ಶಿವಮೊ. ೨-೮೦ ; 1641). [ಸಂ. ಸ್ವಾಸ್ಥಾ (ಸು + ಆಸ್ಥಾ)./ IP ಇದು ಸಂಸ್ಕೃತದ 'ಸ್ವಾಸ್ಥ್ಯ' ದಿಂದ ಬಂದಿರುವ ಸಾಧ್ಯತೆಯೂ ಇದೆ]

**ಸ್ವಾಸ್ಥ್ಯ** (ನಾ). ೧. ಸ್ವಾವಲಂಬನೆ. ೨. ಧೈರ್ಯ; ದೃಢತೆ; ಸ್ಥೈರ್ಯ. ೩. ಕ್ಷೇಮ; ಆರೋಗ್ಯ; ದೇಹಪ್ರಕೃತಿಯ ಸ್ವಸ್ಥತೆ: ಅವನ ಸ್ವಾಸ್ಥ್ಯಕ್ಕೆ ನಾವೆಲ್ಲರೂ ಪಾನಮಾಡಿ ಸಂತೋಷವಾಗಿರೋಣ (ರಾಜಾಮ. ೩೨); ಚಾರುವ ಸ್ವಾಸ್ಥ್ಯಕ್ಕೆ ಭಂಗ ಬಂದೀತೆಂದು ಶಂಕಿಸಿ ಯಾವಾಗಲೂ ಅವಳ ಮೇಲೆ ತನ್ನ ಸಂರಕ್ಷಣೆಯ ಕಣ್ಣಿಟ್ಟನು (ಇಪ್ಪಕ. ೨೮೭). ೪. ಸುಸ್ಥಿತಿ; ಕಲ್ಯಾಣ: ಸಮಾಜದ ಸ್ವಾಸ್ಥ್ಯಕ್ಕಾಗಿ ಅದರ ಮುಖಂಡರೂ . . . ರಾಜ್ಯದ ಅಧಿಕಾರೀವರ್ಗದವರೂ ಸೇರಿ, ಸಮಾಲೋಚಿಸಿ ಮಹಾರಾಜರೆಡೆಗೆ ಹೋದರು (ಕುಂಕುಮ. ೩೮). ೫. ಸೌಖ್ಯ; ಸಂತೋಷ. ೬. ತೃಪ್ತಿ; ಸಮಾಧಾನ. ೭. ಪಾಳೆಯ; ವಸಾಹತು: ಪುಲಿಕಾಟ್ . . . ಮಾಡ್ರಾಸ್ – ಇವು ಮುಂಚೆ ಡಚ್ಚರ ಸ್ವಾಸ್ಥ್ಯಗಳಾಗಿದ್ದುವು (ಭೂಗೋಳ. ೮೨). ೮. [ಕಾವ್ಯಮೀ] ಕವಿತ್ವದ ಎಂಟು ಪರಿಕರಗಳಲ್ಲಿ ಒಂದು : ಕಾವ್ಯಮೀಮಾಂಸೆಯಲ್ಲಿ ರಾಜಶೇಖರನು, ಸ್ವಾಸ್ಥ್ಯಂ ಪ್ರತಿಭಾಭ್ಯಾಸೋ ಭಕ್ತಿರ್ವಿದ್ವತ್ಕಥಾ ಬಹುಶ್ರುತತಾ ಸ್ಮೃತಿದಾರ್ಢ್ಯಮನಿರ್ವೇದಶ್ಚ ಮಾತರೋಷ್ಟೌ ಕವಿತ್ವಸ್ಯ . . . ಎಂದು ಪಟ್ಟಿಹಾಕುತ್ತಾನೆ (ಭಾರಮೀ. ೧೮೩). [ಸಂ.]

**ಸ್ವಾಹಾಕಾರ** (ನಾ). ಹೋಮಕಾಲದಲ್ಲಿ ಮಾಡುವ 'ಸ್ವಾಹಾ' ಎಂಬ ಶಬ್ದದ ಉಚ್ಚಾರಣೆ: ಸ್ವಧಾಕಾರ ವಷಟ್ಕಾರ ಸ್ವಾಹಾಕಾರೋಂಕಾರಧ್ವನಿ ನೆಗಟ್ ನೆಗಟ್ಟುದಾಹುತಿಧೂಮಂ (ಪಂಪಭಾ. ೬-೩೪). [ಸಂ.]

**ಸ್ವಾಹಾಪತಿ** (ನಾ). ಸ್ವಾಹಾದೇವಿಯ ಪತಿ; ಅಗ್ನಿ: ಶ್ರೀಪತಿಗೆ ಸೊಬಗನು . . . ಸರಿತ್ಪತಿಗೆ ಗಂಭೀರತೆಯನು ಸ್ವಾಹಾಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ ಪಂಪಾಪತಿ ವಿರೂಪಾಕ್ಷನೆಮಗಿಷ್ಟಸಿದ್ಧಿಯಂ ಮಾಳ್ಕೆ ಸಂತೋಷದಿಂದ (ಹಚಕಾ. ೧-೧);

ಸುರಪತಿಯುಂ ಸ್ವಾಹಾಪತಿಯುಂ . . . ಧನಪತಿಯುಂ ಪಶುಪತಿಯುಮೆನಿಸಿದಾಶಾಪತಿಗಳ್ (ಪುಷ್ಪಪು. ೧೦-೮೦). [ಸಂ.]

**ಸ್ವಾಹಾಪ್ರಿಯ** (ನಾ). = ಸ್ವಾಹಾಪತಿ : ''ವಸು ಸಿತೇತರಗತಿ ಸ್ವಾಹಾಪ್ರಿಯಂ . . . ಪಾವಕಂ ಜ್ವಾಲಿ ವೈಶ್ವಾನರಂ'' (ಮಂಗರಾ. ೧೪-೬). [ಸಂ.]

**ಸ್ವಾಹೆ** (ನಾ). ಅಗ್ನಿಯ ಹೆಂಡತಿ : ''ಅರ್ಚಿಯೆನಲಗ್ನಿ . . . ಸ್ವಾಹಾಖ್ಯೆಯೆನಲವನ ನಾರಿಯಕ್ಕುಂ'' (ಮಂಗರಾ. ೧೪-೭). [ಸಂ. ಸ್ವಾಹಾ]

**ಸ್ವಿನ್ನತೆ** (ನಾ). ಬೆವರುವಿಕೆ: ರತಖಿನ್ನ ಕಿನ್ನರೀಸ್ವಿ [ಪಾಠಾಂ. ಸ]ನ್ನತೆಯಂ ತಣ್ಕಾಲೆದು ಕಳೆದು ಸುಯ್ಯಿಂ ಸುರಭೀಕೃತಮಾಗುತ್ತುಂ ಪ್ರತ್ಯುಪಕೃತಿವಡೆವುದು ತದುಪವನದ ಪಾವನಪವನಂ (ಚಂದ್ರಪ್ರ. ೧೦-೪೨). [ಸಂ. ಸ್ವಿನ್ನತಾ]

**ಸ್ವಿನ್ನಾಂಗ** (ನಾ). ಬೆವರುವ ದೇಹ; ಬೆವರಿಡುವ ಶರೀರ: ಸುಕುಮಾರ ಕುಮಾರನ ಕಂಟಕಿತಾಂಗಪ್ರಕೃತಿಗಂ ವಧೂಸ್ವಿನ್ನಾಂಗಪ್ರಕೃತಿಗಮನಂಗನೇಂ ಪಚ್ಚಿ ಕೊಟ್ಟನೋ ಬೇಱವೇಱ ರಸಮಂ ಪಸೆಯೊಳ್ (ಶಾಂತಿಪು. ೬-೧೪). [ಸಂ.]

**ಸ್ವೀಕರಣ** (ನಾ). ೧. ಇನ್ನೊಬ್ಬರಿಂದ ತೆಗೆದುಕೊಳ್ಳುವಿಕೆ; ಅಂಗೀಕರಿಸುವಿಕೆ: ಹೊಗೆಸೊಪ್ಪು . . . ಪೋರ್ಚುಗೀಸರಿಂದ ಸ್ವೀಕರಣ (ಶಾಸಗ. ೨೭). ೨. (ಅತಿಥಿಗಳನ್ನು) ಬರಮಾಡಿಕೊಳ್ಳುವುದು; ಸ್ವಾಗತಿಸುವುದು: ಲೋಕಪಾಲನು ಕಾಲ್ನಡೆಯೊಳಿದಿರ್ವಂದೊಡನೆ ಸಾರ್ದು ಪ್ರಾಕಟಪ್ರಿಯ ವಿನಯಪೂರ್ವ ಸ್ವೀಕರಣ ಸತ್ಕಾರ ಸಂತುಷ್ಟಾಕಲನನಂ ಮಾಡಿ (ಬಸವು. ೫-೧೭). ೩. ಮದುವೆ; ವಿವಾಹ. ೪. [ಭಾಷಾಶಾ] ಒಂದು ಭಾಷೆಯು ಬೇರೆ ಭಾಷೆಗಳಿಂದ ಪದಗಳನ್ನು ತೆಗೆದುಕೊಂಡು ತನ್ನದಾಗಿ ಮಾಡಿಕೊಳ್ಳುವಿಕೆ: ಅಕ್ಷರಮಾಲೆಯ ವೈಲಕ್ಷಣ್ಯದಿಂದಲೂ, ಸ್ವೀಕರಣಕ್ರಮದ ವೈಲಕ್ಷಣ್ಯದಿಂದಲೂ ಸಂಸ್ಕೃತದಿಂದ ಅದರೊಳಕ್ಕೆ ಬಂದ ಪದಗಳು ಬಹುವೇಳೆ ಮಾರ್ಪಟ್ಟು ಹೋದುವು (ನಮ್ಮನು. ೧೮); ಈ ಸ್ವೀಕರಣ ಕಾರ್ಯ ಮತ್ತು ಪದಗಳ ಸಂಖ್ಯೆ ಹೆಚ್ಚಾಯಿತು (ದ್ರಾವಿವಿ. ೪೩೭). ೫. [ಗ್ರಂಥಸಂ] ಪಾಠಾಂತರಗಳಿರುವಲ್ಲಿ ಪರಿಶೀಲಿಸಿ ಒಂದು ಪಾಠವನ್ನು ಯೋಗ್ಯಪಾಠವೆಂದು ಒಪ್ಪಿ ಇಟ್ಟುಕೊಳ್ಳುವಿಕೆ: ಸಂಪಾದಕ, ಕವಿ ಬರೆದದ್ದು ಇದೇ ಅಥವಾ ಅದು ಬೇರೆ ಇದ್ದಿರಲಾದರು ಎಂದು ತೀರ್ಮಾನಿಸಿ ಪಾಠವೊಂದನ್ನು ಒಪ್ಪಿಕೊಳ್ಳುವುದು ಸ್ವೀಕರಣ (ಕನ್ನಸಂ. ೧೭೭). [ಸಂ.].

**ಸ್ವೀಕರಣೀಯ** (ನಾ). ಸ್ವೀಕರಿಸುವುದಕ್ಕೆ ಯೋಗ್ಯವಾದುದು; ಪಡೆಯಲು ಅರ್ಹವಾದುದು: ಅದು ನನಗನುಭವನೀಯವಲ್ಲವೆಂದು ಹೇಳುತ್ತಿರುತ್ತೇನೆಯೇ ಹೊರತು ಸ್ವೀಕರಣೀಯವಲ್ಲವೆಂದು ನಾನು ಹೇಳಲಿಲ್ಲ (ಲಕ್ಷ್ಮೀಪ್ರ. ೧೬೮). [ಸಂ.]

**ಸ್ವೀಕರಿಸು** (ಕ್ರಿ). ೧. ತನ್ನದಾಗಿ ಮಾಡಿಕೊಳ್ಳು; ಅಂಗೀಕರಿಸು: ಅರಸುಗಳ್ ತಮ್ಮ ಮೊರೆಯೊಳಿರ್ದೋಲೈಸುವ ಮನುಜಂ ವಿದ್ಯೆಯಿಲ್ಲದವನಾದೊಡಂ ಅಕುಲೀನನಾದೊಡಂ ಅಯೋಗ್ಯನಾದೊಡಂ ಸ್ವೀಕರಿಸುವರ್ (ಪಂಚತಂ. ೩೨-೧೯); ಮಾಱುಗೊಂಬವರು ಹರವಿಯುಂ ಬಾಱಿಸಿಯಲಾ ಸ್ವೀಕರಿಸುವರು (ಬಸವು. ೨೨-೬೪). ೨. ಸೇವಿಸು; ಭುಂಜಿಸು: ನಾನು ಸಕಲಪದಾರ್ಥವ ಸ್ವೀಕರಿಸುವ ಮುನ್ನವೇ ಜಂಗಮಕ್ಕೆ ಮೃಷ್ಟಾನ್ನವ ನೀಡುವೆ (ಮಹಾದೇ.ಜ. ೮೯-೨೧೫). ೩. ವಧುವನ್ನಾಗಿ ಒಪ್ಪಿಕೊಳ್ಳು; ಮದುವೆಯಾಗು: ಎನ್ನ ಮಗಳಂ ಸ್ವೀಕರಿಸಿ ನೀವೆನ್ನನುದ್ಧರಿಸುವುದು (ಬಸವು. ೪-೨). ೪. ಒಂದು ನಿರ್ದಿಷ್ಟ ಮತ, ಸಂಪ್ರದಾಯ ಮೊದಲಾದುವನ್ನು ಒಪ್ಪಿ, ಅದಕ್ಕೆ (ಹೊಸದಾಗಿ) ಸೇರು: ಶೈವಸಂಪ್ರದಾಯವನ್ನು ಸ್ವೀಕರಿಸಿದರು (ಇಸ್ಲಾಂಸಂ. ೧೮). ೫. ವ್ರತ, ಆಚರಣೆ ಮೊದಲಾದುವನ್ನು ಕೈಕೊಳ್ಳು : ಕೆಲಂಬರ್ ಪ್ರಥಮೋಪಶಮ ಸಮ್ಯಕ್ತ್ವಮಂ ಸ್ವೀಕರಿಸಿ ಅಸಂಯುತರಪ್ಪರ್ (ಗೊಮ್ಮಸಾ. ೧೫೧-೨). ೬. ಒಪ್ಪಿಕೊಳ್ಳು; ಸರಿಯೆಂದು ಗ್ರಹಿಸು: ಒಂದೆರಡು ಮೂಱಿಂದು ಪದಾರ್ಥಮನೆಣಿಸುವೆಡೆಯೊಳ್ ಏಕವಚನ ದ್ವಿವಚನ ಬಹುವಚನಂಗಳಂ ಸ್ವೀಕರಿಸುವರ್ (ಶಮದ. ೯೪ ವೃತ್ತಿ). ೭. ತಾಳು; ಹೊಂದು: ಶ್ರೀಕೇಳೀನಿಲಯಂ ರಮ್ಯಾಕೃತಿ ದಿವಸಾನುಸಾರದಿಂ ಪುದಿದೊಡವಂ ಸ್ವೀಕರಿಸಿದನಮಳಿನ ಕಮಳಾಕರಮೆನೆ ಜೈನಮನೋಹರಚರಿತಂ (ಚಂದ್ರಪ್ರ. ೪-೧). [ಸ್ವೀಕರಣ + - ಇಸು₃]

**ಸ್ವೀಕಾರ** (ನಾ). = ಸ್ವೀಕರಣ ೧: ''ಪ್ರಮಾಣಸ್ವೀಕಾರ' ಪರಾ. [ಸಂ.]

**ಸ್ವೀಕಾರಬಡು** (ಕ್ರಿ). ಒಪ್ಪಿಗೆಯಾಗು; ಅನುಮತವಾಗು: ಸ್ವೀಕಾರಬಟ್ಟು ಕರೆಸಿಕೊಂಡು ಹೋಗದೆ ನೂಕಿ ಬಂಧುಗಳೆಯ್ದಲವರು ಏಕವರ್ಬಂದರೊ ಕರೆದೆವೆಯೆಂಬರು ತೂಕ ತಗ್ಗುವುದು (ಭರಚ. ೪೦-೩೮). [ಸ್ವೀಕಾರ + ಪಡು₁]

**ಸ್ವೀಕೃತ** (ಗು). ೧. ತನ್ನದಾಗಿ ಮಾಡಿಕೊಂಡ; ಅಂಗೀಕರಿಸಿದ. ೨. ಕೈಕೊಂಡ: ಸ್ವೀಕೃತಸತ್ತ್ವಪಃಪ್ರಚಯನಂ ಶ್ರೀಕುಂಡಕುಂದೋಜ್ಜ್ವಳಾನ್ವಯನಂ ವಂದಿಪೆನಟ್ಟಿಯಿಂದೆ (ಚಂದ್ರಪ್ರ. ೧-೨೧). ೩. ಮದುವೆಯಾದ. ೪. ತಾಳಿದ; ಹೊಂದಿದ. ೩,೪: ಆ ಕಮಳಜಾತವಂಶಸುಧಾಕರದೊಳ್ ಪೆಂಪುವೆತ್ತನುದ್ಧತಧಾತ್ರೀಲೋಕಂ ಸ್ವೀಕೃತವಿಮಳಶ್ರೀಕಂ ಗೋವಿಂದನಂದದಿಂ ಗೋವಿಂದಂ (ಕಇಅ. ೩-೨-೫೯: 1058). ೫. ಒಪ್ಪಿಗೆಯಾದ; ಸಮ್ಮತವಾದ. [ಸಂ.]

**ಸ್ವೀಕೃತಪುತ್ರ** (ನಾ). ದತ್ತುಪುತ್ರ. [ಸಂ.]

**ಸ್ವೀಕೃತಿ** (ನಾ). ಒಪ್ಪಿಗೆಯಾದುದು; ಅಂಗೀಕೃತವಾದುದು; ಸ್ವೀಕರಿಸಿದುದು. [ಸಂ.]

**ಸ್ವೀಯ** (ಗು). ತನ್ನದೇ ಆದ; ಸ್ವಂತ; ಸ್ವಕೀಯ: ರಾಯ ಮುದಿದಶರಥನನಾಡಿಸುತ ಕೈಕೇಯಿ ಸ್ವೀಯವಶವೆಕ್ಕಿ ಓಸಲವನಾಳಿದಂತೆ ಮಾಯೆ ಬೊಮ್ಮನ ಬಿನದವಡಿಸಿ ನಮ್ಮಾ ಜಗವ ಕಾಯುವಳು ತನ್ನಿಚ್ಛೆ (ಮಂಕುಕ. ೧೪೭); ಸ್ವಸ್ಥಾನದಲಿ ನಿಂತು ಸ್ವೀಯಧರ್ಮದಿ ನಡೆದು ಸರ್ವರಿಗೆ ಹಿತಕಾರಿಯಾಗಿ ಬಾಳುವೆನು ! (ಕರುಶ್ರಾ. ೩೨-೧೩). [ಸಂ.]

**ಸ್ವೀಯೆ** (ನಾ). [ಕಾವ್ಯಮೀ] ಮೂರು ಬಗೆಯ ನಾಯಿಕಾಭೇದಗಳಲ್ಲಿ ಮೊದಲನೆಯ ವರ್ಗಕ್ಕೆ ಸೇರಿದವಳು: ಎನಸುಂ ಸ್ವೀಯೆ ಜ್ಯೇಷ್ಠಾಕನಿಷ್ಠೆಯಿಷ್ಟಂಗಳಿಂದಮಿರ್ತೆಱಂ (ಶೃಂಗಾರ. ೩-೨೨) ; ನಾಯಿಕೆಯರಲ್ಲಿ 'ಸ್ವೀಯೆ' (ತನ್ನವಳು), 'ಅನ್ಯೆ' (ಇತರಳು), 'ಸಾಧಾರಣೆ' (ವೇಶ್ಯೆ) ಎಂದು ಮೂರು ವಿಧ (ಸಂನಾಟ. ೧೮). 'ಸ್ವಕೀಯೆ' ಪರಾ. [ಸಂ. ಸ್ವೀಯಾ]

**ಸ್ವೇಚ್ಛಾಚಾರ** (ನಾ). ಮನಬಂದಂತೆ ನಡೆಯುವಿಕೆ; ಉಚ್ಛೃಂಖಲತೆ; ಸ್ವೈರವೃತ್ತಿ: ಸ್ವಚ್ಛಂದಪ್ರವೃತ್ತಿಯಾಗಲಿ ಸ್ವೇಚ್ಛಾಚಾರವಾಗಲಿ ಅಲ್ಲಿಲ್ಲ (ಪ್ರಬಂಧ. ೯೦). [ಸಂ.]

**ಸ್ವೇಚ್ಛಾಚಾರಿಣೆ** (ನಾ). ತನ್ನ ಮನಬಂದಂತೆ ವರ್ತಿಸುವವಳು; ಸ್ವೈರಿಣೆ: ಮೂರು ಮಕ್ಕಳಿಗಿಂತ ಹೆಚ್ಚಾಗಿ ಯಾವ ಆಪದ್ಧರ್ಮವೂ ಒಪ್ಪುವುದಿಲ್ಲ. ಆದ್ದರಿಂದ ನಾಲ್ಕನೆಯ ಮಗನನ್ನು ಪಡೆದರೆ ನಾನು ಸ್ವೇಚ್ಛಾಚಾರಿಣಿಯಾದೇನು ! (ವಚಭಾ. ೧೩). [ಸಂ. ಸ್ವೇಚ್ಛಾಚಾರಿಣೀ]

**ಸ್ವೇಚ್ಛಾತೂರ್ಯ** (ನಾ). (?): ಋಣಾತೂರ್ಯ ಸ್ವೇಚ್ಛಾತೂರ್ಯ ಇಂತೀ ಮಾಟದಲ್ಲಿ ಮಾಡೆ ಉಂಡ ಓಗರ ವಾಂತಿಯಾದಂತೆ . . . ಸ್ವೇಚ್ಛಾತೂರ್ಯವೆಂಬ ತೂರ್ಯದಲ್ಲಿ ನಿಂದು ಆ ತೂರ್ಯವಂ ಬಿಟ್ಟು ತುದಿಯಲ್ಲಿ ನಿಂದು ಒಡೆಯನ ಕೈಯಲ್ಲೆಡೆ ಮಡಗಿರಲಾಗಿ ಒಡೆಯ ಕೇಳಿದಡೆ ಒಡೆಯಂಗೆ ಒಡವೆಯಂ ಕೊಟ್ಟು ದೃಢಚಿತ್ತದಲ್ಲಿಪ್ಪವಂಗೆ ಪೊಡವಿಯ ಮಾಟಕೂಟದವರು ಸರಿಯೇ (ಮೋಳಿಮಾ. ೨೮-೧೧೮); ಕ್ರಿಯನಱಿದು ಆಚಾರದಲ್ಲಿ ನಿಂದು ಋಣಾತೂರ್ಯ ಮುಖ್ಯತೂರ್ಯ ಸ್ವೇಚ್ಛಾತೂರ್ಯವೆಂಬ ಮೂಱು ಮಾಟವ ಕಂಡು . . . ಮಾನ್ಯರ ಇರವನಱಿತು ಕೂಡುವಲ್ಲಿ ಇಂತೀ ಭಾವ ಸದ್ಭಕ್ತನ ಸ್ಥಲ (ಮೋಳಿಮಾ. ೧೧೬-೪೫೭). [ಸಂ. ?]

**ಸ್ವೇಚ್ಛಾಮರಣ** (ನಾ). ೧. ತನ್ನ ಇಚ್ಛಾನುಸಾರವಾಗಿ ಸಾವನ್ನು ಹೊಂದುವಿಕೆ,– ಮರಣವನ್ನು ಪಡೆಯುವಿಕೆ. ೨. ತನ್ನ ಇಚ್ಛಾನುಸಾರವಾಗಿ ಹೊಂದುವ ಸಾವು. [ಸಂ.]

**ಸ್ವೇಚ್ಛಾಮರಣೆ** (ನಾ). ೧. ತನ್ನ ಇಚ್ಛೆಯ ಮೇರೆಗೆ ತನ್ನ ಸಾವಿನ ಸಮಯವನ್ನು ನಿರ್ಧರಿಸಲು ಸಮರ್ಥನಾದ ವ್ಯಕ್ತಿ: ಮಾರ್ಕಂಡೇಯಮಹಾಮುನಿ ಸ್ವೇಚ್ಛಾಮರಣೆಯೆನಿಸಿಕೊಂಡನಲ್ಲದೆ ಲಿಂಗದ ನಿಜವನಱಿಯನು (ಬಸವ. ೮೫೭) ; ಆ ಮಹಾರಥ ಭೀಷ್ಮನೇ ಸ್ವೇಚ್ಛಾಮರಣೆಯಾಚಾರ್ಯ ಚಾಪವ್ಯೋಮಕೇಶನು ಹೊಕ್ಕು ಕಾಣರು ಹಗೆಗೆ ಹರಿವುಗಳ (ಕುವ್ಯಾಕ. ೧-೨೭); ಸ್ವೇಚ್ಛಾಮರಣೆಯಾಗಿದ್ದದ್ದರಿಂದ ಅವನು ಯಾವಾಗ ಬೇಕಾದರೆ ಆವಾಗ ಸಾಯಬಹುದಾಗಿತ್ತು (ವಚಭಾ. ೨೭೫). ೨. ಭೀಷ್ಮನ ಒಂದು ಹೆಸರು. [ಸಂ. ಸ್ವೇಚ್ಛಾಮರಣಿನ್]

**ಸ್ವೇಚ್ಛಾಮೃತ್ಯು** (ನಾ). = ಸ್ವೇಚ್ಛಾಮರಣೆ ೨: ದೇವವ್ರತಿಯುಂ ಸ್ವೇಚ್ಛಾಮೃತ್ಯುವುಂ ಕುರುಕುಲಪಿತಾಮಹನುಂ ಆಹವಭೀಷ್ಮನುಮೆನಿಸಿದ ಭೀಷ್ಮನ ಶರಶಯನದೊಳಂ . . . ಸುಯೋಧನಂ ಚಿಂತಾಕ್ರಾಂತನಾಗಿ (ಗದಾಯು. ೨-೧೦ ವ). [ಸಂ.]

**ಸ್ವೇಚ್ಛಾಲಾಪ** (ನಾ). ೧. ಇಷ್ಟಬಂದಂತೆ ಮಾತನಾಡುವುದು: ಒಳ್ಳೆಯದು, ಇವರ ಸ್ವೇಚ್ಛಾಲಾಪಗಳನ್ನು ಕೇಳುವೆನು (ಶಾಕುಂತ. ೩೩-೨೧). ೨. ಕಾಡುಹರಟೆ. [ಸಂ.]

**ಸ್ವೇಚ್ಛಾವೃತ್ತಿ** (ನಾ). = ಸ್ವೇಚ್ಛಾಚಾರ: ನಿನ್ನ ಸ್ವೇಚ್ಛಾವೃತ್ತಿಯನ್ ತೊಱೆಯಲ್ಕೆವೇಟ್ಕುಂ (ಬದ್ಧಪ್ರ. ೫೫-೧೨೦೨). [ಸಂ.]

**ಸ್ವೇಚ್ಛೆ** (ನಾ). ೧. ತನ್ನ ಇಚ್ಛೆ,– ಇಷ್ಟ. ೨. ಯಾವುದೇ ಕಟ್ಟುಪಾಡುಗಳಿಲ್ಲದೆ ಇಷ್ಟಬಂದಂತೆ ಇರುವಿಕೆ: ನೆರೆದಿರ್ದತ್ತೊಂದು ನಾನಲ್ಕಿಡಿದು ಮಹಿಷವೃಂದಂ ಯಥಾ ಸ್ವೇಚ್ಛೆಯಿಂದಂ (ಚಂದ್ರಪ್ರ. ೫-೭೧); ಸ್ವೇಚ್ಛೆಯಿಂದಾ ಹಯಂ ತೆಂಕಮೊಗವಾಗಿ ನಡೆದುದು (ಜೈಮಿಭಾ. ೮-೧೩); ಯಾವ ನಿಯಮ ನಿರ್ಬಂಧಗಳೂ ಇಲ್ಲದೆ ಸ್ವೇಚ್ಛೆಯಾಗಿ ಬೆಳೆದಳು ಮುಕ್ತಾ (ಆಶ್ರಮ. ೪೭). [ಸಂ. ಸ್ವೇಚ್ಛಾ]

**ಸ್ವೇದ** (ನಾ). ೧. ಬೆವರು: ಸಂತಸದೊಳೋಲಾಡಿ ಪುಳಕ ಸ್ವೇದ ತೊದಳು ಕಂಪನ . . . . ಸುಖದಲಿ ಹಾಡಿ (ಹಚಕಾ. ೫-೮೦). ೨. ಉಷ್ಣತೆ. ೩. ಆವಿ; ಉಗಿ. ೪. [ಕಾವ್ಯಮೀ] ಎಂಟು ಬಗೆಯ ಸಾತ್ವಿಕಭಾವಗಳಲ್ಲಿ ಒಂದು; ಬೆವರುವಿಕೆ: ಸ್ವೇದಂ ವೈವರ್ಣ್ಯಂ ಸ್ವರಭೇದಂ ರೋಮಾಂಚನಂ ಪ್ರಕಂಪನಂ . . . ಲಯಮೆಂದಾದುವಿವೆಂಟುಂ ರಸಕ್ಕೆ ಸಾತ್ವಿಕಭಾವಂ (ಕಾವ್ಯಾವ. ೭೯೭); ಪುಲಕಾಶ್ರುಸ್ವೇದ ಸ್ತಂಭಲಯ ಸ್ವರಭೇದಕಂಪವೈವರ್ಣ್ಯಂಗಳ್ ಸಲೆ ಸಾತ್ವಿಕಭಾವಂಗಳ್ (ರಸರ. ೧-೮). [ಸಂ.]

**ಸ್ವೇದಜ** (ಗು). ೧. ಬೆವರಿನಿಂದ ಹುಟ್ಟಿದ. (ನಾ). ೨. ನಾಲ್ಕು ಬಗೆಯ ಜೀವಜಂತುಗಳಲ್ಲಿ ಒಂದು ಬಗೆ; ಬೆವರಿನಿಂದ ಹುಟ್ಟುವ ಕ್ರಿಮಿ: ಅಂಡಜ, ಸ್ವೇದಜ, ಉದ್ಭಿಜ, ಜರಾಯುಜರೆಂಬ ಪ್ರಾಣಿಗಳಿಗೆ ಭವಿತವ್ಯವ ಕೊಟ್ಟವರಾರೋ (ಬಸವ. ೨೨೫); ಬೆರೆಯೆ ಭೂತಾಂಶಗಳು ಪಂಚೀಕರಣದಿಂದಲಿ ಸ್ವೇದಜೋದ್ಭಿಜ ನೆರೆ ಜರಾಯುಜವಂಡಜವೆನಿಪ ನಾಲ್ಕು ಪ್ರಾಣಿಗಳು (ಅಮೃತ. ೪-೧೪). [ಸಂ.]

**ಸ್ವೇದಜಲ** (ನಾ). ಬೆವರಿನ ನೀರು; ಬೆವರು: ಲಾವಣ್ಯರಸದ ಬಂಡುಗಳಾವರಿಸಿದುವೆನಿಸಿ ಪೊಳೆದುವವನೀಶ್ವರಕಾಂತಾವದನಂಗಳ್ ಸ್ವೇದಜಲಾ[ಪಾಠಾಂ. ಲವಾ]ವಳಿಯಿಂ (ಆದಿಪು. ೧೧-೫೧); ವಿತತಸೃಕ್ಕದ ಲೋಳಿಗಳ ಸಂಸ್ರುತ ಜಠರಜ ಸ್ವೇದಜಲಲಾಲಿತ ಹಯಾವಳಿ ಕಳನ ಗೆಲಿದವು ಹರಿಯ ನೇಮದಲಿ (ಕುವ್ಯಾಭೀ. ೩-೪). [ಸಂ.]

**ಸ್ವೇದನ** (ನಾ). ೧. ಬೆವರು. ೨. ಬೆವರುವಂತೆ ಮಾಡುವುದು. ೩. ಬೆವರು ಬರಿಸುವ ಔಷಧ. [ಸಂ.]

**ಸ್ವೇದನವಿಧಿ** (ನಾ). [ವೈದ್ಯಶಾ] ಆಯುರ್ವೇದಪದ್ಧತಿಯ ಐದು ಬಗೆಯ ಚಿಕಿತ್ಸಾಕ್ರಮಗಳಲ್ಲಿ ಒಂದು; ಬೆವರುವಂತೆ ಮಾಡುವುದರಿಂದ ನೀಡುವ ಚಿಕಿತ್ಸೆ: ಸ್ನೇಹವಿಧಿಯು ಸ್ನೇಹವೆನಿಸಿಕೊಂಬುದು; ಸ್ವೇದನವಿಧಿಯೇ ಸ್ವೇದನವೆನಿಸಿಕೊಂಬುದು, ವಮನವಿಧಿ, ವಿರೇಚನವಿಧಿ, ನಸ್ಯವಿಧಿ ಸಹಾ ಪಂಚಕರ್ಮವೆನಿಸಿಕೊಂಬುವುವು (ಸಕವ್ಯ. ೨೪). [ಸಂ.]

**ಸ್ವೇದನಿಕೆ** (ನಾ). ಹುರಿಯುವ ಕಾವಲಿ, ಬಾಣಲಿ ಮುಂತಾದುದು: ''ಸ್ವೇದನಿಕೆಯದೆಂದರೆ ಕಾವಲಿಯೆನಿಕ್ಕು'' (ಮಂಗರಾ. ೬೩-೨೪). [ಸಂ. ಸ್ವೇದನಿಕಾ]

**ಸ್ವೇದಬಿಂದು** (ನಾ). ಬೆವರಿನ ಹನಿ: ಸಾತ್ವಿಕ ಸ್ವೇದಬಿಂದುಗೆ ರೋಮೋದ್ಗತಿಗಿರ್ಕೆಯಾದ ಸುತೆಗಂ ಜಾಮಾತೃಗಂ . . . ಕೈನೀರೆಱೆದಂ (ಚಂದ್ರಪ್ರ. ೬-೭೧) ; ಸೈಗೆಡೆವ ರೋಮದ ಧೂಮ್ರವಕ್ತ್ರದ ಸ್ವೇದಬಿಂದುಗಳ ಜಡಿವ ರೋಷದ ಭರದಲಿ . . . ಕಡಿಕಡಿದು ಬಿಸುಟನು ಗುರುಸುತನ ಸಾರಥಿಯ ರಥಹಯವ (ಕುವ್ಯಾಕ. ೧೪-೨೦). [ಸಂ.]

**ಸ್ವೈರ** (ಗು). ೧. ಮನಬಂದಂತೆ ನಡೆಯುವ; ಸ್ವಚ್ಛಂದ ವರ್ತನವುಳ್ಳ. ೨. ಅನಿಯಂತ್ರಿತವಾದ; ಯಾವ ಕಟ್ಟುಪಾಡಿಗೂ ಒಳಗಾಗದ. ೩. ಸ್ವತಂತ್ರವಾದ. ೪. ಸೋಮಾರಿಯಾದ; ಆಲಸಿಯಾದ. ೫. ಐಚ್ಛಿಕವಾದ. (ನಾ). ೬. ಸ್ವಂತ ಇಚ್ಛೆ; ಸ್ವೇಚ್ಛೆ. ೭. ಅನಿರ್ಬಂಧತೆ; ಸ್ವಚ್ಛಂದತೆ: ''ಮಂದದೊಳು ಸ್ವೇಚ್ಛೆಯೊಳು ಸ್ವೈರಮೆಂದೆಂಬುದು'' (ಮಂಗರಾ. ೧೪೩-೨೩); ಸ್ವೈರದಿನಾಂ ಪೋಗುತ್ತಿರೆ ತಾರಾಪಥದೊಳ್ ಪಳಂಚಿದುದು ಕವಿಯಂ ಹಾಹಾರವಂ (ಪಂರಾಮಾ. ೧೦-೫೭); ಪೌರ ಪೌರಂಧ್ರಿಯರ್ ಪದುಳದಿಂದೈತಂದು ಸ್ವೈರದಿಂದವಗಾಹಮೆಸಗೆ (ವಂಕಾರಾ. ೧-೫-೪). ೮. ಸೋಮಾರಿ; ಆಲಸಿ: ''ಸ್ವೈರಃ – ಆಲಸ್ಯಗಾರ, ಸ್ವತಂತ್ರನು'' (ಸಿದ್ಧಾಂತಿ. ೪೧೮). ೯. ನಿಧಾನ; ಮಂದವೇಗ: 'ಸ್ವೈರಚರ' ಪರಾ. [ಸಂ.]

**ಸ್ವೈರಚರ** (ನಾ). ಮೆಲ್ಲಗೆ ಸುಳಿಯುವಂತಹುದು; ಮಂದಗಾಮಿ: ಸಾರತರ ಶೈತ್ಯಭಾರಂ ಸ್ವೈರಚರಂ ಸುೞಿವುದಲ್ಲಿ ಚಾರುಸಮೀರಂ (ಜಗವಿ. ೨-೨೫). [ಸಂ.]

**ಸ್ವೈರಚಾರ** (ನಾ). = ಸ್ವೈರಚರ: ಚೇತಃಪ್ರೀತಿಯಂ ಪೆರ್ಚಿಸುವುದುಪವನಸ್ವೈರಚಾರಂ ಸಮೀರಂ (ಮಲ್ಲಿಪು. ೨-೪೦); ಲೀಲೆಯಿಂ ಬಾಲಕನೆನೆ ಸುಳಿದಂ ಸ್ವೈರಚಾರಂ ಸಮೀರಂ (ರಾಜಶೇ. ೧೧-೭೭). [ಸಂ.]

**ಸ್ವೈರತೆ** (ನಾ). ಸ್ವಚ್ಛಂದವರ್ತನೆ ; ಸ್ವೇಚ್ಛಾವೃತ್ತಿ. [ಸಂ. ಸ್ವೈರತಾ]

**ಸ್ವೈರಪಥ** (ನಾ). ಅನಿರ್ಬಂಧವಾದ ಮಾರ್ಗ; ಅಡೆತಡೆಗಳಿಲ್ಲದ ದಾರಿ: ಪಾರಂಗತಂಗಂತರಾಳ ದೂರಗಳೇನು? ಸ್ವೈರಪಥವಾತನದು (ಮಂಕುಕ. ೭೯೮). [ಸಂ.]

**ಸ್ವೈರಮಾರ್ಗ** (ನಾ). ಸ್ವಂತಅಪೇಕ್ಷೆಯಿಂದ ಆಯ್ದುಕೊಂಡ ಮಾರ್ಗ: ಜಿನಮಾರ್ಗಂ ಸ್ವೈರಮಾರ್ಗಂ ಜಿನಮತಮೆ ಮತಂ ಜೈನಧರ್ಮಂ ಸ್ವಧರ್ಮಂ (ಸುಕುಮಾ. ೧-೪೯). [ಸಂ.]

**ಸ್ವೈರವೃತ್ತಿ** (ನಾ). ಮನಬಂದಂತೆ ನಡೆಯುವಿಕೆ; ಸ್ವಚ್ಛಂದವರ್ತನೆ; ಸ್ವೇಚ್ಛಾವೃತ್ತಿ: ಹರಿತಹ ನೀರು ಕೊಱೆವುದು ದಡವನೆರಡನು ಸ್ವೈರವೃತ್ತಿಯಲಿ (ಕಾಶಿರಾ. ೪೩-೨೫); ತಾಯಿ ಮೇನಕೆಯಾದರೂ ಬಂದುದು ವೇಶ್ಯೆಗೆ ಸಹಜವಾದ ಸ್ವೈರವೃತ್ತಿಯಿಂದಲ್ಲ, ಮಹೇಂದ್ರನಾಣತಿಯಂತೆ (ಧರ್ಮಸಾ. ೭೫). [ಸಂ.]

**ಸ್ವೈರಾಲಾಪ** (ನಾ). = ಸ್ವೇಚ್ಛಾಲಾಪ ೧: ಒಂದು ರಮಣೀಯಸ್ಥಾನದೊಳ್ ಪರಸ್ಪರ ಸ್ವೈರಾಲಾಪದಿಂದಿರ್ದ ವಿಟಜನದೊಳೊರ್ವಂ . . . ಎನೆ (ಜಗವಿ. ೧೭-೧೨೯ ವ). [ಸಂ.]

**ಸ್ವೈರಿಣಿ** (ನಾ). ಮನಬಂದಂತೆ ವರ್ತಿಸುವವಳು; ವ್ಯಭಿಚಾರಿಣಿ; ವೇಶ್ಯೆ: ಸ್ವೈರಿಣಿ ಬಗೆ ಬಂದಾಗಳೆ ಮಾರಕ್ರೀಡೆಯನೊಡರ್ಚಲೆಂದುಪಪತಿಯಂ ದಾರಕನಂ ಕೊಲವೇಟ್ದಳ್ (ಪಂರಾಮಾ. ೮-೫೨); ಮೇನಕೆಯಲ್ಲಿ ಕಾಮದಿಂದ ಹುಟ್ಟಿದ ನೀನು ಸ್ವೈರಿಣಿಯಾಗಿ ತೋರುತ್ತೀಯೆ (ವಚಭಾ. ೩೯೭). [ಸಂ. ಸ್ವೈರಿಣೀ]

**ಸ್ವೋದರಪೂರಣ** (ನಾ). ತನ್ನ ಹೊಟ್ಟೆಯನ್ನು ತುಂಬಿಸಿಕೊಳ್ಳುವಿಕೆ; ಉದರಂಭರಣ: ಕ್ರೂರಕರ್ಮಮಂ ಪತ್ತುವಿಟ್ಟು ಶುದ್ಧಚಿತ್ತನಾಗಿ ಸ್ವೋದರಪೂರಣ ಮಾತ್ರಕ್ಕೆ ತಕ್ಕನಿತನೇ ಸ್ವೀಕರಿಸಿ (ಪಂಚತಂ. ೭೭-೭). [ಸಂ.]

**ಸ್ವೋಪಜ್ಞ** (ಗು). ೧. ಸ್ವತಂತ್ರವಾಗಿ ಕಲ್ಪಿಸಿದ; ಸ್ವಂತಪ್ರತಿಭೆಯಿಂದ ಉಂಟಾದ. (ನಾ). ೨. ಸ್ವತಂತ್ರವಾಗಿ ತಾನೆ ಸೃಷ್ಟಿಸಿದುದು,– ನಿರ್ಮಿಸಿದುದು: ಎಲ್ಲವೂ ಸ್ವಂತ, ಸ್ವೋಪಜ್ಞ, ಸ್ವಕಪೋಲಕಲ್ಪಿತಗಳೆಂಬ ಬಗ್ಗೆ ಮಾತ್ರ ಯಾರೂ ಅನುಮಾನ ಪಡಲಾರರು (ಬಾಗಿನ. IV ಮುನ್ನುಡಿ). [ಸಂ.]

**ಸ್ವೋಪಜ್ಞತೆ** (ನಾ). (ಸಾಹಿತ್ಯ, ಕಲೆ ಮುಂತಾದುವುಗಳಿಗೆ ಸಂಬಂಧಿಸಿದಂತೆ) ಸ್ವತಂತ್ರವಾಗಿ ನಿರ್ಮಾಣಮಾಡುವ ಶಕ್ತಿ; ಸೃಜನಸಾಮರ್ಥ್ಯ: ನವಚೈತನ್ಯವು ಆ ಕವಿಯ ಸ್ವೋಪಜ್ಞತೆಯನ್ನೇ ಪವಿತ್ರವಾಗಿಸಿದ ನಿಸರ್ಗದಿಂದೊದಗಿದುದು (ಅನುಕ. ೧೩೭). [ಸಂ. ಸ್ವೋಪಜ್ಞತಾ]

*

# ಹ

**ಹ$_1$** (ನಾ). ೧. ಕನ್ನಡ ವರ್ಣಮಾಲೆಯ ಐವತ್ತು ಮೂರನೆಯ ಅಕ್ಷರ; ಹಕಾರ: ಭತ್ವಕ್ಕೆ ಹ ಪ ವಮಕ್ಕುಂ ರತ್ವಕ್ಕಂ ಲ ಳಮುಮಕ್ಕುಂ (ಶಮದ. ೨೮೨); **ಅವರ್ಗೀಯ:** ಯ ರ ಲ ವ ಸ ಹ ಳ ೞ ಱ (ಕೈಪಿಡಿ. ೩). **೨.** [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ: ''ಜದಹಮೆಂಟು'' (ಮಂಗರಾ. ೧೦೪-೧೧).

**- ಹ$_2$** '- ಪ$_2$' ನೋ.

**ಹಂಕಣಿದಲೆ** (ನಾ). ಕೆದರಿದ ಕೂದಲು ತುಂಬಿದ ತಲೆ; (ಎಣ್ಣೆ ನೀರಿಲ್ಲದೆ, ಬಾಚದೆ) ಸಿಕ್ಕಾದ ತಲೆ: ಬಿಟ್ಟ ಹಂಕಣಿದಲೆಯನಡಿಗಡಿಗೆ ತುಱಿಸುತ್ತ ನಟ್ಟ ದಿಟ್ಟಿಯೊಳು ತನಯನ ಬರವ ನೋಡುತ್ತ . . . ನಿಂದು ಸುಱಿವನೆ ಸುಯ್ದಳು (ಹಚಕಾ. ೧೨-೧೬); ಹತ್ತಿದೊಡಲು ಹಂಕಣಿದಲೆ ಕೈಯಲಿ ಎತ್ತಿದ ಅಡನಿಕೊಡ್ಡುಗಳು (ಹರಿಸಾಂ.೩-೪೭). [ಹಂಕಣ್$_0$ + ತಲೆ$_1$]

**ಹಂಕರ** (ನಾ). ಜಂಬ; ಗರ್ವ; ಅಹಂಕಾರ: ಹಂಕರವು ಡಂಭಾದಿಕಾರವಂತಕ ವುಳ್ಳವರಾಗಿ ವಿಷಯದ ಮಂಕು ಬಯಕೆಯ ಬಯಸಿ . . . ಮಾಡಲಿಕೆ ರಾಕ್ಷಸತಪವದು (ಜ್ಞಾನಸಿಂ.೩೦-೬೨). [< ಸಂ. ಅಹಂಕಾರ]

**ಹಂಕಲು** 'ಹಕ್ಕಲ್' ನೋ.

**ಹಂಕಲುತೆರಿಗೆ** (ನಾ). ಹಕ್ಕಲುಭೂಮಿಯ ಮೇಲೆ ಹಾಕುವ ಕಂದಾಯ: (ಕಿಸಂಗ್ಲಾ. ೧೫೯). [ಹಂಕಲು (< ಹಕ್ಕಲ್) + ತೆರಿಗೆ (< ತೆಱಿಗೆ)]

**ಹಂಕಳು** 'ಹಕ್ಕಲ್' ನೋ.

**ಹಂಕಾರ** 'ಆಂಕರ' ನೋ.

**ಹಂಕಾರಿಸು** (ಕ್ರಿ). ಲಂಗರು ಹಾಕಿ ನಿಲ್ಲಿಸು: (ಕಿಸಂಗ್ಲಾ.೧೭೬).
[ಹಂಕಾರ? + - ಇಸು$_3$]

**ಹಂಕೃತಿ** (ನಾ). = ಹಂಕರ: ಶೋಕಕಾರಣ ಲೋಭಮೋಹಸ್ಪೃಹೆ ಜನನ ಮರಣ ಈ ಕಳಂಕೀ ಹಂಕೃತಿಗೆಯೇಕಾಕಿ ವರಮತಿಗಿಲ್ಲ (ನಿಭಾಗ. ೧೧-೩೪-೧೨). [< ಸಂ. ಅಹಂಕೃತಿ]

**ಹಂಗ$_1$** 'ಪಂಗ$_1$' ನೋ.

**ಹಂಗ$_2$, ಪಂಗ$_4$** (ನಾ). ಒಂದು ಬಗೆಯ ಶಕುನದ ಹಕ್ಕಿ; ಹಂಗಾಗೆ: ''ಅಸಮಾಕ್ಷವೆನೆ ಹಂಗಮಕ್ಕು'' (ಮಂಗರಾ. ೫೨-೮); ಅರ್ಚಿಸಿ ಕಾಬುದಕ್ಕೆ ಹಕ್ಕಿ ಹಂಗನ ನಿಮಿತ್ಯವೆ (ಮೋಳಮಾ.೬-೨೧); ಹಂಗಂ, ಹಸುಬಂ (ಶಮದ. ೧೨೧ ಪ್ರಯೋ); ಬರುತ ಬಟ್ಟೆಯೊಳೆಡಕೆ ಹಂಗನು, ಹರಿಣ ಬಲದಲಿ ತೋಱಿ ಹಾಯಿತು ಹರಿಣಿ (ಕುವ್ಯಾಅ.ಓರಿ. ೨೭-೧೬). Δ **ಪಂಗ$_4$**: ಶರಭ ಭೇರುಂಡ ರಣಪದ್ದು ಬಾವಲಿ ಪಂಗ ಗರುಡ ಮೊದಲಾದ . . . ಖಗಮೃಗದ ನೆರವಿ (ನವಮೋ. ೮-೧೦). [?]

**ಹಂಗಡ, ಹಗಡು** (ನಾ). ಹಗ್ಗ; ಹುರಿ: ಆರಂಭಕೃಷಿಯನು ಮಾಳ್ಪರು ಗದ್ದೆಗೆ ನೀರ ಹರಿಯೆ ತಿದ್ದನಲು ನಾರ ಹಂಗಡವ ಮಾಡೆನಲಾಗಿ (ಮೋಹತ.೪೧-೨೦); ಹಟ್ಟಿಯ ದೇವರ ಗಟ್ಟಿ ಹಂಗಡದಲಿ ಕಟ್ಟೆಳೆದೊಯ್ದನು ಬಟ್ಟಬಯಲಿನಲಿ (ಪ್ರಸಭಾ.೧೭-೮). **ಹಗಡು** : ಮಗ್ಗವ ಬಿಟ್ಟು ಮನೆಯ ಬಿಟ್ಟು ನೇಯ್ಗೆಯ ಹಗ್ಗ ಹಗಡನೆಲ್ಲವನುಳಿದು ಭರ್ಗನ ಪುರದೊಳೋಲಾಡುವ ಶಕುನದ ಸುಗ್ಗಿಯಾದುದು ನವಮಗೆನುತ (ಅಮುಸಾಂ. ೪-೪೦). [?]

**ಹಂಗಣೆ** (ನಾ). ಹೀಯಾಳಿಸುವಿಕೆ; ಹಂಗಿಸುವಿಕೆ: ಧರ್ಮದಾಸನಿಗೆ . . . ದೊರೆಸಾನಿಗಳ ಹಂಗಣೆಯೂ ಕುಚೋದ್ಯವೂ ದಿನೇ ದಿನೇ ಹೆಚ್ಚುತ್ತಾ ಬಂದುವು (ಅದೂಟ.೭೬); ಸ್ವಲ್ಪ ಆಸ್ತಿ ಮಾಡಿದ್ರೂ ಒಬ್ಬನ ಹಂಗಣೆಯಿರಬಾದು (ಬಾಗಿನ.೪೭); ಕರ್ಣನು ದ್ರೌಪದಿಗೆ . . . ಹಂಗಣೆಯ ಮಾತನಾಡಿದನು (ರಾಜಸೂ.೧೨೦).
[ಹಂಗಿಸು + - ಅಣೆ$_4$]

**ಹಂಗನೂಲು** 'ಪೊಂಗುನೂಲ್' ನೋ.

**ಹಂಗಪಕ್ಷಿ** (ನಾ). = ಹಂಗ$_2$: ರಾಮನೂ ಕಾಟಣ್ಣನೂ ಬೇಟೆಗೆಂದು ಹೊರಡುವ ಹೊತ್ತಿಗೆ ಹಂಗಪಕ್ಷಿ ಅಡ್ಡಾಗಲು ಅಪಶಕುನವೆಂದು ಬಗೆದು ಊರಲ್ಲಿಯೇ ಉಳಿಯುವರು (ಕುಮಾಸಾಂ.೨೩೫). [ಹಂಗ$_2$ + ಪಕ್ಷಿ]

**ಹಂಗರ** (ನಾ). ಒಂದು ಬಗೆಯ ಸಸ್ಯ : ಈ ಕಲ್ಲಿಗೆ ತೆಂಕಲು ಹಂಗರ ಮೆಳೆ ಕೆಳಗೆ ನೆಟ್ಟ ಕಲ್ಲು (ಎಕ. XIV, ಮೈಸೂರು. ೧೧೫-೩೫೪; 1674). [?]

**ಹಂಗರಕ** 'ಹೊಂಗರಕ' ನೋ.

**ಹಂಗರಲು** (ನಾ). ಸದಾ ಹಸಿರಾಗಿರುವ ಒಂದು ಬಗೆಯ ಸಸ್ಯ : (ಕಿ). P ಇದು ಹಸಿಯಿದ್ದಾಗಲೂ ಚೆನ್ನಾಗಿ ಉರಿಯುತ್ತದೆ. [< ಹಂಗರು$_1$?]

**ಹಂಗರಿಕೆ** (ನಾ). ಒಂದು ಬಗೆಯ ಸಸ್ಯ: ಬಂದರೆ, ಬಂದಾರೆ, ಹಂಗರಿಕೆ, ಬಂದರಿಕೆ (ಮೈಜಿಗಿ.೩೨-೬೦೮). [< ಹಂಗರು$_1$?]

**ಹಂಗರು$_1$, ಹಂಗಾರು** (ನಾ).= ಹಂಗರಲು : ಕಂಕುಳಲ್ಲಿ ಹಂಗರು ಬರಲುಗಳನ್ನು ಇರಕಿಕೊಂಡು ಬರುವ ವಾಡಿಕೆಯಿತ್ತು (ಹುಟ್ಟುಹ.೫೯). **ಹಂಗಾರು** : ಬಂದಾರಿಕೆ . . . ಹಂಗಾರು, ಹಂಗರಿಕೆ, ಹೆಂಗರಳು, ಒಣದುರ್ಗಿ (ಸಸ್ಯನಿ. ೫೧). [?]

**ಹಂಗರು$_2$** (ನಾ). (?): ಕುಂದಾಪುರದ ಗ್ರಾಮದವೊಳಗಣ ಹಂಗರು ಅಧಿವಾಸದ ಉರುಧನಿಯರ ಜನ ೨ (ಸೌಇಇ. IX-ii, ೪೨-೧೫; 1406). [?]

**ಹಂಗರೆ** (ನಾ).= ಹಂಗರಲು: ದೇವಪುರದ ಬಸವನ ಗುಡಿ ಹಂಗರೇಮಾಳದಲ್ಲಿ ಲಿಂಗಮುದ್ರೆ ಬಳಿಯ ಮೂಡಮುಖ (ಎಕ. III, ತಿರುಮ.೬೩-೮೮೬; 1748). [< ಹಂಗರು$_1$?]

**ಹಂಗರ್ಕಟ್ಟೆ** (ನಾ). ಲಂಗರು ಹಾಕಿ ಹಡಗು ನಿಲ್ಲಿಸುವ ಸ್ಥಳ; ಬಂದರು: ಹಡಗು ಲಂಗರು ಹಾಕಿ ನಿಲ್ಲುವ ಸ್ಥಳ. ಹಂಗರ್ಕಟ್ಟೆ (ತುಳುನಾ.೨೧೧).
[ಹಂಗರ? + ಕಟ್ಟೆ$_1$]

**ಹಂಗಳಿ** (ಕ್ರಿ). ಹಳೆಯದಾಗು; ಜೀರ್ಣವಾಗು : ಭೃಂಗ ಹಂಸವು ಅಕ್ಕು ಶೃಂಗಿ ಮಾಣಿಕವಕ್ಕು ಹಂಗಳಿದ ಸೀರೆ ಮಡಿಯಕ್ಕು ಕರ್ಮ ತಾ ಹಿಂಗುವ ದಿನಕೆ (ಸರ್ವಜ್ಞ. ೮೯೧). [ಹಂಗು? + ಅಳಿ$_1$ (< ಅೞಿ$_1$)]

**ಹಂಗಾಂ** 'ಹಂಗಾಮು$_2$' ನೋ.

**ಹಂಗಾಗೆ, ಪಂಗಾಗೆ** (ನಾ).= ಹಂಗ ೨: ಹಂಗಾಗೆ [ಪಾಠಾಂ. ಪಂಕಾಗೆ] ಪೊಣರ್ವಕ್ಕಿ ಪಿಂಗುರಿ ಗೂಗೆ (ಸೂಕ್ತಿಸು.೩-೧೪೪); (ಕಾವ್ಯಸಾ. ೧೦೪೪ ಶೂದ್ರಕ ನೋ). Δ **ಪಂಗಾಗೆ:** ನೆರನುಳ್ಳಂ ಪ್ರಿಯಂಗೆಯ್ಯಂತೆ ಪಂಗಾಗೆ ಮುಳಿದು ನೋಟ್ಟನಂತೆ ಕೆಂಗಣ್ಣ . . . ಎಂದಿಂತುಮನೇಕ ಪಕ್ಷಿಜಾತಿಗಳಿಂ ತೆಕ್ಕನೆ ತೀವಿದ ಪಟುವಂ (ಬಂಹರಿ.೨-೩೮ ವ).
[ಹಂಗ$_2$ + ಕಾಗೆ]

**ಹಂಗಾಮ, ಹಂಗಾಮು$_1$** (ನಾ). ೧. ಹದಕ್ಕೆ ಬರುವ ಕಾಲ; ಋತುಸಮಯ; ಸುಗ್ಗಿಕಾಲ: ಮಾವಿನಹಣ್ಣಿನ ಹಂಗಾಮವು ಬರುವುದರೊಳಗಾಗಿ ತಯಾರುಮಾಡಿಕೊಂಡು ಆ ಮಡಿಯಲ್ಲಿ ಬೀಜವನ್ನು ಹಾಕಬೇಕು (ಕೃಷಿಪ್ರ.೧೩೫); ಹತ್ತಿಯು ಎರಡನೇ ಹಂಗಾಮದವರಿಗೆ . . . ತುಂಬಿ ಇಡುವರು (ಮುಂಬವ್ಯಾ. ೪೧). **೨.** ಗಡು; ಅವಧಿ: ಆಗ ಒಪ್ಪಂದದ ಹಂಗಾಮವು ಮೀರಿ ಹೋದ್ದರಿಂದ . . . ಕಳಿಸಿಕೊಟ್ಟನು (ಚರಿಸಂ. ೧೫೦). **ಹಂಗಾಮು$_1$** : ೧. ಭತ್ತ ಕೊಯ್ಯುವ ಹಂಗಾಮು ಬಂದಿತು (ಕರವೀ. ೨೦೦); ತೆಂಗಿನಕಾಯಿ ಖೊಬ್ಬರಿ . . . ಹಂಗಾಮಿನಲ್ಲಿ ಮಾತ್ರ ದೊರೆಯುತ್ತದೆ (ಮುಂಬವ್ಯಾ.೨೮೫).
[<— ಪಾರ. ಹಿಂ. ಮರಾ. ಹಂಗಾಮ್]

**ಹಂಗಾಮಿ** (ಗು).೧. ತಾತ್ಕಾಲಿಕ; ಖಾಯಂ ಅಲ್ಲದ: ಹಂಗಾಮಿ ಬಕ್ಷಿಗಿರಿಯಾಯಿತು (ಮಹಾವಂ.II, ೪೬). (ನಾ). **೨.** ತಾತ್ಕಾಲಿಕವಾದುದು; ಕಾಯಂ ಅಲ್ಲದುದು: ಕಮಲಜ ನಾಟಕವಿದೆಂದಱಿಯದಾ ಮಹಕೋಟಲೆಗೆ ಹಂಗಾಮಿಯೆನಿಸಿದ ಹದನ ಕೇಳು (ಕೃಷ್ಣಾಕಾ.೪-೪೦). [<— ಪಾರ. ಹಿಂ. ಹಂಗಾಮೀ]

**ಹಂಗಾಮು**₁ 'ಹಂಗಾಮ' ನೋ.

**ಹಂಗಾಮು**₂, ಹಂಗಾಂ (ನಾ). ಗಲಾಟೆ; ಗದ್ದಲ; ದಂಗೆ: ಲೂಟಿ ಮಾಡಬೇಕು ಯಂತಾ ಹಂಗಾಮು ಮಾಡುತ್ತಾರೆ (ರಾಜೇಂದ್ರ.೪೮); ಕೊಡಗರ ಹಂಗಾಮು ಹದ್ದು ಮೀರಿಯದೆ (ರಾಜೇಂದ್ರ.೪೯). **ಹಂಗಾಂ**: ಅರಮನೇ ಬಾಗಿಲಿಗೆ ಬಂದು ಹಂಗಾಂ ಮಾಡುತ್ತಿದ್ದನು (ಮಹಾವಾ.I,೧೭೦). [<— ಪಾರ. ಹಂಗಾಮ್; ಹಿಂ. ಮರಾ. ಹಂಗಾಮಾ]

**ಹಂಗಾರು** 'ಹಂಗರು₁' ನೋ.

**ಹಂಗಾಳು** (ನಾ). ಋಣದಲ್ಲಿರುವ ಸೇವಕ; ಹಂಗಿನಲ್ಲಿರುವ ಆಳು: ಹಂಗನ ಬಲ ಲೇಸು ಹಂಗಾಳು ಇರ ಲೇಸು (ಸರ್ವಜ್ಞ.೬೯೪); ಹಂಗಾಳಾದ ಮೇಲೆ ಮಂಗನ ಹಾಗೆ ಮಾಡಬೇಕು (ಗಾದೆ). [ಹಂಗು (< ಪಂಗು₂) + ಆಳು₃ (< ಆಳ್₃)]

**ಹಂಗಿಗ** 'ಪಂಗಿಗ' ನೋ.

**ಹಂಗಿಗೆ** (ನಾ). ಋಣದಲ್ಲಿರುವವಳು; ಹಂಗಿಗೆ ಒಳಗಾದವಳು: ಸೂಸುವಾಲಿ ನೀರ್ವನಿಗಳ್ಗಂ ಮಿಳಿರ್ವಳಿಜ್ಜಣಿಗೆಗಳಿಂ ತಳಿರ್ವಲರ್ಗಂ ಕಾಂತೆ ಕರಮೆ ಹಂಗಿಗೆಯಾದಳ್ (ಚಂದ್ರಪ್ರ.೫-೧೩೨). [ಹಂಗಿಗ (< ಪಂಗಿಗ) + - ಎ₂]

**ಹಂಗಿತಿ** (ನಾ). = ಹಂಗಿಗೆ : ಒಮ್ಮೆ ಕಾಮನ ಕಾಲ ಹಿಡಿವೆ ಒಮ್ಮೆ ಚಂದ್ರಮಂಗೆ ಸೆರಗೊಡ್ಡಿ ಬೇಡುವೆ ಸುಡು ವಿರಹವನು . . . ಎಲ್ಲರಿಗೆ ಹಂಗಿತಿ [ಪಾಠಾಂ. ಹಂಗುಗಿತ್ತಿ] ಯಾದೆನವ್ವ (ಮಹಾದೇ. ಬ.೩೩-೭೨). [ಹಂಗು (< ಪಂಗು₂) + - ಇತಿ₁ (< - ಇತ್ತಿ)]

**ಹಂಗಿಸು** (ಕ್ರಿ). ಮೂದಲಿಸು; ಹೀಯಾಳಿಸು: ನಿಸದಂ ಹಂಗಿಸುತಿರ್ಪನಾ ಖಳನನಾಳ್ವಾತಂಗೆ ಪೆಂಪಕ್ಕುಮೇ (ಸೂಕ್ತಿಸು.೧೬-೪೬); ಪಿಂಗಿಯುಂ ನೆಟ್ ಪಿಂಗದೀ ವ್ಯಾಸಂಗವಯ್ಯೋ ಎನುತ ಶಿವನಂ ಹಂಗಿಸುವನೀ ಪರಿಯ ದೇವರು ನಿನ್ನುವಂ ನಗರೆ (ಬಸವಪು.೧೮-೫೮); ಗಂಡನನ್ನು ಹಂಗಿಸಿ ನಾವು ರಾಜಿಯಾಗುವುದನ್ನು ತಪ್ಪಿಸಿದಳು (ಆರ್ಯಕ. ೧೧); ಹಂಗಿಸಿದರೂ ಮಂಗತನ ಹೋಗಲಿಲ್ಲ (ಗಾದೆ).

[ಹಂಗು (< ಪಂಗು₂) + - ಇಸು₃]

**ಹಂಗು** 'ಪಂಗು₂' ನೋ.

**ಹಂಗುದೊರೆ** (ಕ್ರಿ). ಆಸೆಯನ್ನು ಬಿಡು; ಅಪೇಕ್ಷೆಯನ್ನು ತ್ಯಜಿಸು: ಸಿಪಾಯಿಯರು ತಮ್ಮ ಜೀವನದ ಹಂಗುದೊರೆದು ಸೇನಾಪತಿಯ ಬೆದರಿಕೆಗೆ ಬಗ್ಗದೆ ನಿಂತಿದ್ದಾರೆ (ಪ್ರಣಸ.೭೪). [ಹಂಗು (< ಪಂಗು₂) + ತೊರೆ₁ (< ತೊಱೆ₁)]

**ಹಂಗುವಡು** (ಕ್ರಿ). ಹಂಗಿಗೆ ಒಳಗಾಗು; ಋಣಿಯಾಗು: ಮಾರಯ್ಯ ಶೂಲವ ಹಾಯಬಂದಲ್ಲಿ ಮತ್ತಿನ್ನು ಸಾವಿಂಗೆ ಹಂಗುವಡಲೇಕೆ (ಕರ್ನಾಕ.೧೪೩).

[ಹಂಗು (< ಪಂಗು₂) + ಪಡು₁]

**ಹಂಗುಹರಿ** (ಕ್ರಿ). ಸಂಬಂಧ ಇಲ್ಲವಾಗು ,— ಕಿತ್ತುಹೋಗು: ಆ ದುಷ್ಟನ ಹಂಗು ಹರಿದಾಗಲೇ ನಿನಗೆ ನೆಮ್ಮದಿ ಸಿಕ್ಕುತ್ತದೆ (ರೂಢಿ).

[ಹಂಗು (< ಪಂಗು₂) + ಹರಿ₁ (< ಪಱಿ₁)]

**ಹಂಗುಹಱಿ** (ನಾ). ಹಂಗಿನಿಂದ ಕೂಡಿದ ಭಿಡೆ,—ಮುರವತ್ತು: ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ನಾನು ಹಂಗುಹಱಿಯಿಲ್ಲದೆ ಮಾಡುವೆ (ಅವಚಂ.೧೯೬-೮೮೬); ಹಂಗುಹಱಿಯಳಿದ ನಿರ್ವಂಚಕನೆ ಮಾಹೇಶ್ವರ (ವೀಶ್ವಪು. ೮-೧೪-೧೩).

[ಹಂಗು(< ಪಂಗು₂) + ಹಱಿ₄]

**ಹಂಗುಳಿ** (ನಾ). ಒಂದು ಬಗೆಯ ಪಾದಪೀಠ: "ಹಂಗುಳಿ [ಪಾಠಾಂ. ಹಂಗುಳಿಗೆ] ಯನೆ ಕಾಲ್ಮಣೆ" (ಚತುನಿ. ೯೪); ಮಹಿಶೂರಿನ ಸಿಂಹಾಸನವು ಹೇಡಿಯ ಹಂಗುಳಿಯಲ್ಲ (ಸುಗುಗಂ. ೫೦-೧೫). [?]

**ಹಂಗುಳಿಕೆ** (ನಾ).= ಹಂಗುಳಿ: ಕುರವಕ ಸರಸೀರುಹ ಲತಾವಳಿಗಳ ತಂಡಣೆಯಿಂ ಕೊಳನಂತೆ ವಿರಾಜಿಪ ಹಂಗುಳಿ[ಪಾಠಾಂ. ವೇದಿ]ಕೆಯ ಮೇಲೆ ಪದ್ಮಾವತಿಯಂ ಭೋಂಕನೆ ಕಂಡು (ಆದರ. ಹ.೩೬-೯). [ಹಂಗುಳಿ + - ಇಕೆ]

**ಹಂಚಳಿಗೆ** (ನಾ). ಒಂದು ಬಗೆಯ ಸಸ್ಯ : ಹೂವಿನ ಬನ ಹಂಚಳಿಗೆಯ ಕೈದೋಟ ಮಾವಿನಾರವೆ ಪಣ್ಣಾಯಿ ತೀವಿದ ತೆಂಗಿನಾರವೆಗಳ ನೋಡುತ ಭೂವರ ನಡೆತಂದನಾಗ (ಶ್ರೀಪಾಲ.೭-೧೪೮); ನಳನಳಿಸುವ ಹೂವಿನ ಬನಗಳ ಹಂಚಳಿಗೆಯ ಕೈದೋಟಗಳ (ಗುರುಚ. ೫೧೮). [?]

**ಹಂಚಿ**₁ (ನಾ). ಒಂದು ಬಗೆಯ ಹುಲ್ಲು: ಕಱುಕೆ ಮರಗಱುಕೆ ಕವಲುಂಗಱುಕೆ ಕವಲ್ಗೊಟ್ಟಿ ಹಂಚಿ . . . ಮಾನಿನಿ ಕಸಕೆ ಕಲ್ಕುಲ್ (ಸೂಕ್ತಿಸು.೩-೨೯); ಹಂಚಿಯ ಕಡ್ಡಿಯಂ ಪೊಡೆದು ನೋಡುತೆ ದಂಷ್ಟ್ರದ ಕೂರ್ಪನುರ್ಬಿ ರೋಮಾಂಚವನಾಂತು (ಉದ್ಭಟ. ೨-೬೭); ಕೃಪೆಯೆನಿಪಾರಣ್ಯದ ಹಂಚಿಯ ಪುಲ್ವೇರಂ ಕುಡಿಸಲ್ಕೆ ವಾಂತಿಯಿಂ ವಿಷಮಿಟಿಗುಂ (ವಿಮದ.೧೬-೬೮). [ದೇ. ‖ ತಮಿ. ಪಞ್ಚಾಯ್]

**ಹಂಚಿ**₂ 'ಪಂಚಿ₁' ನೋ.

**ಹಂಚಿಕಡ್ಡಿ** (ನಾ). ಹಂಚಿಯ ಹುಲ್ಲಿನ ಕಡ್ಡಿ; IP ಇದನ್ನು ಪೊರಕೆಗಳನ್ನು ಮಾಡಲು ಮತ್ತು ಎಲೆ ಹಚ್ಚಲು ಉಪಯೋಗಿಸುತ್ತಾರೆ: ಹಂಚಿಕಡ್ಡಿಯನ್ನು ತಂದು ಮಾಧವನಿಗೆ ದೃಷ್ಟಿ ತೆಗೆದಳು (ನಿರಾತ.೫೩); ತೆಳ್ಳಗೆ ಹಂಚಿಕಡ್ಡಿಯಂತಿದ್ದಾಳೆ (ಆಲಹೂ. ೧೧೩); ಹೆಣ್ಣುಮಕ್ಕಳಿಗೆ ಕಸೂತಿ ಕೆಲಸ ಮತ್ತು ಹಂಚಿಕಡ್ಡಿಯಿಂದ ತರಹೆವಾರಿ ಬುಟ್ಟಿಗಳನ್ನು ಮಾಡುವುದನ್ನು ಕಲಿಸುತ್ತಿದ್ದಾರೆ (ದಿಲ್ಲಿಪ.೧೧೩). [ಹಂಚಿ₁ + ಕಡ್ಡಿ]

**ಹಂಚಿಕೆ**₁ (ನಾ). ಪಾಲುಮಾಡುವಿಕೆ; ಭಾಗಮಾಡುವಿಕೆ; ವಿತರಣೆ: ಪ್ರಾಥಮಿಕಶಾಲೆಯ ಪಾಠದ ಹಂಚಿಕೆಯಲ್ಲೂ ವ್ಯತ್ಯಾಸವಾಗಬೇಕು (ಶಿಕ್ಷದ.೯೭); ಹಣದ ಸಂಗ್ರಹದಲ್ಲಿಯೂ ಹಂಚಿಕೆಯಲ್ಲಿಯೂ ಯಾವ ನಿಯಮವನ್ನು ಅನುಸರಿಸುವುದು (ಹಣಪ್ರ.೧). 'ಪಸುಗೆ' ಪರಾ. [ಹಂಚು₁ (< ಪಸು₁)+ - ಇಕೆ]

**ಹಂಚಿಕೆ**₂ (ನಾ). ೧. ಯುಕ್ತಿ; ಉಪಾಯ: ನರಿಯ ಹಳೆ ಹಂಚಿಕೆಗಳೆಲ್ಲ ಎತ್ತ ಹೋದವೋ ಏನೋ ಹೊಸವಂತೂ ತೋರಲಿಲ್ಲ (ಮುಂಬಯಿ.೨-೪೯); ನನಗೆ ಒಂದು ಹಂಚಿಕೆ ತೋಚುವುದು (ಸ್ಕೂಲಮಿ.೨೧೨). ೨. ಯೋಜನೆ; ಕಾರ್ಯಕ್ರಮ: ಪ್ರತಿಯೊಂದು ಹವಣಿಕೆ, ಹುಡುಕಿಗೆ ಮತ್ತು ಹಂಚಿಕೆಗೆ ದುಡ್ಡು ಅವಶ್ಯ (ತಕ್ಕಡಿ. ೫೩); ನಾಗಯ್ಯನವರು ಹಂಚಿಕೆಯನ್ನು ಹೇಗೆ ಕಾರ್ಯಗತ ಮಾಡಬೇಕು ಎಂಬುದನ್ನು ನಿರ್ಣಯಿಸುತ್ತಾರೆ (ಸವತಿ.೨೨). [ಹಂಚು₃ + - ಇಕೆ]

**ಹಂಚಿಬುಲ್ಲು**, ಹಂಚಿಹುಲ್ಲು (ನಾ). ಹಂಚಿಯ ಹುಲ್ಲು: "ದೀರ್ಘಪತ್ರಾ— ಗಣಜಿಲು . . . ಹಂಚಿಬುಲ್ಲು" (ಓಷಧಿ.೭೭). **ಹಂಚಿಹುಲ್ಲು**: "ರೋಮಶತೃಣಂ— ಹಂಚಿಹುಲ್ಲು" (ಓಷಧಿ. ೧೪೦). [ಹಂಚಿ₁ + ಪುಲ್ಲು (< ಪುಲ್)]

**ಹಂಚಿಸು** (ಕ್ರಿ). ಪಾಲುಮಾಡಿಸು; ಭಾಗಮಾಡಿಸು: ಪೂರ್ವ್ವಮರ್ಯಾದೆಯೊಳೆ ಹಂಚಿಸುವೊXಸ್ಥಿತಿಯನಟಿದು ಉಣ್ಣವರ್ ಕಪಿಲೆಯಂ ಪಾರ್ವ್ವರುಮಂ ಕೊನ್ದೊಂ (ಎಕ. XVI, ತುಮಕೂ. ೮೧-೧೧; 903). [ಹಂಚು₁ (< ಪಸು₁) + - ಇಸು₃]

**ಹಂಚಿಹುಲ್ಲು** 'ಹಂಚಿಬುಲ್ಲು' ನೋ.

**ಹಂಚು**₁ 'ಪಸು₁' ನೋ.

**ಹಂಚು**₂ 'ಹೆಂಚು' ನೋ.

**ಹಂಚು**₃ (ನಾ). ಉಪಾಯ; ಹಂಚಿಕೆ; ಯುಕ್ತಿ: ಆತನನ್ನು ಹಿಡಕೊಡಲಿಕ್ಕೆ ಹಂಚುಮಾಡಿ ಹೊತ್ತು ಕಾಯುತ್ತಿದ್ದರು (ಗೊಲ್ಲೂಥಾ. VI ಮುನ್ನುಡಿ). [< ಪೊಂಚು₂]

**ಹಂಚುಬಡಿ** (ಕ್ರಿ). ಹಂಚಿನಂತೆ ಕಪ್ಪಾಗು; ಕಳೆಗುಂದು: ಪ್ರತಾಪಸಿಂಹನ ತೇಜಸ್ವಿಯಾದ ಮೋರೆಯು ಹಂಚುಬಡಿದಂತಾಯಿತು (ಸ್ವಾಭಿಮಾ.೯).

[ಹಂಚು₂ (< ಹೆಂಚು) + ಬಡಿ₁]

**ಹಂಚುರಿ** (ನಾ). (ಮಾಂಸ ಮುಂತಾದುವನ್ನು)ಹೆಂಚಿನ ಮೇಲೆ ಬೇಯಿಸುವಿಕೆ: ಕಟುಕರು ಕಿರಾತರು ಕೈವಿಕರು ಹಂಚುರಿಯ ಮೂಲದಿ ಜೀವಿಸುವ ಭರ್ಜಕರು ಕಟುಕರು (ವಿವೇಘ. ೪-೬೪). [ಹಂಚು₂ (< ಹೆಂಚು) + ಉರಿ₂]

**ಹಂಚಿಯ** (ನಾ). ಒಂದು ಊರಿನ ಹೆಸರು: ಒಟ್ಕೋಡಿನ ಹಂಚಿಯದ ಹತ್ತೂರ ತ್ರಿಸನ್ದಿ (ಇಆ.VIII, ೨೧೩-೩೩; 10ನೆಯ ಶತ). [?]

**ಹಂಜಕ** (ನಾ). ಒಂದು ಬಗೆಯ ಸೊಪ್ಪು: ಹಂಜಕ:- ಈ ಸೊಪ್ಪಂ ಮೊಳೆಹಾಲಲ್ಲಿ ಅರೆದು ಕೊಳ್ಳೆ ಬಿಕ್ಕಲು ಕೆಮ್ಮು ಬರುವುದು ಮಾಣ್ಗುಂ (ವಿಷ್ಯವಿ. ೭). [< ಸಂ. ಹಂಜಿಕಾ]

**ಹಂಜಕ್ಕಿ** (ನಾ). ೧. ಹಾಲು ತುಂಬಿಕೊಂಡಿರುವ ಅಕ್ಕಿ; ಹಸಿಯಕ್ಕಿ: ಪತಿತ ಪಾವನ ಪರ್ವತಾಶ್ರಮದಲ್ಲಿಪ್ಪೆನುನ್ನತ ಮಲ್ಲಿನಾಥನೆಂದೆನ್ನ ನಾಮಂ ನಿನ್ನನತಿನೇಹದಿಂ ನೋಡಿ ಹಂಜಕ್ಕಿಯಂ ಬೇಡ ಮೆಲಬಂದೆನು (ಸಿದ್ಧರಾ.೨-೨೮). ೨. ಅರ್ಧ ಬೆಂದ ಅಕ್ಕಿ; ಗಂಜಿ ಸುತ್ತಿದ ಅನ್ನ: ಬುಡವಿಲ್ಲದ ಗಡಿಗೆಗೆ ಹಾಕಿದರು ಅಕ್ಕಿಗಳ ಎರಡು ಹಂಜಕ್ಕಿ

ಒಂದು ಬೇಯಲಿಲ್ಲ (ಪುರಂದ.೩-೨೭-೯); ಸಾರು ಉಪ್ಪಿಲ್ಲದ್ದು! ಪಲ್ಯ ಕಾರವಿಲ್ಲದ್ದು! ಅನ್ನವು ಹಂಜಕ್ಕಿ! (ಯಾಹೂಣ. ೧೦). [< ಹಸಿ$_2$? + ಅಕ್ಕಿ$_1$]

**ಹಂಜಮಾನ** (ನಾ). ಅರಬ್ಬಿದೇಶದ ವ್ಯಾಪಾರಿಗಳ ಸಂಘ,—**ಸಂಸ್ಥೆ:** ನಾಂಡುಗ್ರಾಮ ನಖರ ಹಂಜಮಾನ ಆಚರ ಮುಂತಾಗಿ (ಸೌಇಇ. ೯೯೪, ಮಂಗಳೂರು. ೪೬೦-೨೫; 1297); ಹೊಂನಾಉರದ ಹಂಜಮಾನಕೆ ಮುಕ್ಯವಾದ [ಉಂ] ಮದಮದ [ಕಾ] ಲರು ಹಂಜಮಾನವೊಂದು ಕೋಲ ಬಳಿ (ಕಇ.I, ೪೮-೬; 1427); ಬಸರೂಱ ಒಳಗಣ ಹಂಜಮಾನದವರು ನಂಮ ಅರಮನೆಗೆ ತೆಱುವ ಹಡಿಕೆಯ ಹೊಂನನೂ ತೆಱುವದಕೆ ತೀರದೆ (ಸೌಇಇ.IX-ii, ೪೫೯-೧೪; 1465); ಚಾರಣರ ವಂದಿಗಳ ವೈಶ್ಯರ ಕೇರಿಗಳನಾ ಹ[ಪಾಠಾಂ. ಹು]ಂಜಮಾನರ ಕೇರಿಗಳನೀಕ್ಷಿಸುತ ನಡೆತರುತಿರ್ದರೊಲವಿನಲಿ (ನಿಭಾಗ. ೧೦-೩೭-೪೪). [<– ಪಾರ. ಅರ. ಅಂಜುಮಾನ್]

**ಹಂಜರ, ಹಂದರ$_2$** (ನಾ). ೧. ಹಕ್ಕಿಗಳನ್ನು ಅಥವಾ ಮೃಗಗಳನ್ನು ಕೂಡಿಡುವ ಸಾಧನ; **ಪಂಜರ:** ಹಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯೇ (ಬಸವ.೧೬೩); ಹಂಜರದೊಳು ತೇಜಃಪುಂಜ ರಂಜಿಸುತಿರಲು ಅಂಜನಸಿದ್ಧ ಶಿವಯೋಗಿ ತಾ ಕುಟಿಲ ಮಂಜರೆಯ ಕಾದ (ಸರ್ವಜ್ಞ.೪೮೫); ಅರಗಿಳಿಯ ಹರಣಮಂ ಹೊರೆವ ಹಂಜರಮೆನಲ್ (ಶ್ರೀರಾಮಾ. ೫೭೭-೫೪). ೨. **ಹೆಣಿಗೆ; ತಡಿಕೆ:** ಕರುಳ ತೊಂಡಲು ಖಂಡದ ಬಣ್ಣ ಬಾಸಿಗ ನರದ ಹಂಜರ ಚಪ್ಪರದಲಿ ನೆರೆದು ಶಾಕಿನಿಯರು ಮದುವೆಯ ಮಾಡುತ ಪೊಣೆದರು (ಕಂಸವಿ.೧೫-೭೩). ೩. **ಮುಸುಕು; ಹೊದಿಕೆ:** ತನುವೆಂಬ ಮನೆಗೆ ಅಸ್ಥಿಯೇ ಕಂಭಗಳು ಚರ್ಮದ ಹಂಜರ [ಪಾಠಾಂ. ರು] ನರದ ಚಿಮ್ಮುಗಟ್ಟು (ಆದವ. ಧಾ.೩೨-೫೨); ಅಱು ಹಣವೇಳು ಸತ್ತಿಗೆಯ ಹಂಜರ ಮುಕ್ಕೊಡೆಗೂಡಿ ಗದ್ಯಾಣಂವೊಂದು (ಎಕ.III,ತಿರುಮ. ೯೭-೨೦; 1297). ೪. **ಮನೆಯ ಮೇಲಿನ ಹುಲ್ಲು ಹೊದಿಕೆ,—ಛಾವಣಿ,—ಸೂರು:** ಒಬ್ಬನು ಹೊಸದಾಗಿ ಮನೆ ಕಟ್ಟಿ ಹಂಜರ ಹರಡುವಾಗ ಮನೆಗೊಬ್ಬರು ಹೋಗಿ ಒಂದು ಗಳಿಗೆಯೊಳಗಾಗಿ ಆ ಕೆಲಸವನ್ನು ಪೂರೈಸಿ ಬರುವ ವಾಡಿಕೆಯಿತ್ತು (ಹುಟ್ಟಿಹ.೧೮).

**ಹಂದರ$_2$:** ೨. ನೆಲೆ ಇಲ್ಲದ ಕಾಯ ಎಲುವಿನ ಹಂದರ (ಪುರಂದ.೨-೧೦-೨); ಹೊಲಸು ಮಾಂಸದ ಹುತ್ತ ಎಲುವಿನ ಹಂದರವು ಹೊಲೆ ಬಲಿದ ತನುವಿನೊಳಗಿರ್ದುಮದಱೊಳಗೆ ಕುಲವನಱಸುವರೆ (ಸರ್ವಜ್ಞ.೨೦). [< ಸಂ. ಪಂಜರ]

**ಹಂಜರಕೂಳಿ** 'ಹಂಜರಗೂಳಿ' ನೋ.

**ಹಂಜರಗಟ್ಟು** (ನಾ). **ಚಪ್ಪರದ ಹೆಣಿಗೆ:** ಅನಲನ ತೋಳೆಯ ಹಾಕಿ ಮೋಳೆಯ ಗಳುವ ಬೀಸಿ ಕೆಂಡದ ಹಂಜರಗಟ್ಟಂ ಕಟ್ಟಿ (ಚಿಕ್ಕವ. ೪-೨೧೧); ಸುರ್ಕಿದಿರ್ಬರಿಗಳೊಳಮೆಲ್ಲಂ ಸಮೆದು ಸಡಿಲಾದ ಹಂಜರಗಟ್ಟನಿರ್ಕೆಯಂ ಮತ್ತೊರ್ಮೆ ಕಂಡು (ಸಂಸಪ.೨೬-೧೦).

[ಹಂಜರ + ಕಟ್ಟು$_2$]

**ಹಂಜರಗೂಳಿ, ಹಂಜರಕೂಳಿ** (ನಾ). (ಮೀನು ಹಿಡಿಯಲು ಉಪಯೋಗಿಸುವ) ಸೀಳಿದ ಬಿದಿರಿನಿಂದ ಮಾಡಿದ ಬುಟ್ಟಿ; **ಬಿದಿರಿನ ಕೂಳಿ:** ಕಾಡೊಡೆಯಂ ತೋಡಿಲ್ಲದ ತೊಱೆವೇಂಟೆಯಾಡಲೆಳಸುತಿಱಿಗೂಳಿ ಹಂಜರಗೂಳಿಡುಗಾಣಂ . . . ಕೊಂಡು (ರಾಜಶೇ.೫-೧೧೪ ವ). **ಹಂಜರಕೂಳಿ:** ಆವ ಹಂಜರಕೂಳಿ ಮೊಗವಲೆ ಯಾವ ಗಾಣವು ಬೀಸುವಲೆಯುಱೆ ತೀವಿದುದಕದ ಮಡುವೆಯಿದು ಸಂಗ್ರಾಮಭೂಮಿ ಕಣಾ (ಕುಮಾರ.೨೨-೨೬). [ಹಂಜರ + ಕೂಳಿ (< ಕೂಳಿ$_1$)]

**ಹಂಜರವಕ್ಕಿ** (ನಾ). **ಗೂಡಿನಲ್ಲಿರುವ ಹಕ್ಕಿ; ಪಂಜರದ ಪಕ್ಷಿ:** "ಪಂಜರಪಕ್ಷಿ ಹಂಜರವಕ್ಕಿ" (ಶಮದ. ೨೯೨ ಪ್ರಯೋ). [ಹಂಜರ + ಪಕ್ಕಿ]

**ಹಂಜರಿಕೆಕುಚ್ಚು** (ನಾ). ಒಂದು ಬಗೆಯ **ಸಸ್ಯ:** ಮರಸದ, ಬಗುಲಿ, ಹಂಜರಿಕೆಕುಚ್ಚು, ಮರಸುತ್ತುಬಳ್ಳಿ (ಮೃಔಗ.೧೬-೨೯೨). [?]

**ಹಂಜರಿಸು$_1$** 'ಪಂದರಿಸು' ನೋ.

**ಹಂಜರಿಸು$_2$** (ಕ್ರಿ). **ಹರಡು; ವ್ಯಾಪಿಸು:** "ಹಂಜರಿಸಿತೆನಲು ಪಸರಿಸಿದರ್ಥಂ" (ಕವಿಕಂ. ೨೧೦); ನರೆ ನೆಗೆದು ಬೆಳುಕರಿಸಿ ತಲೆಗೆ ತಲೆದೋಱುತಿರೆ ಪರಕರಿಸಿ ಹಂಜಿಯಂ ಹಂಜರಿಸಿ ಮಿಱುಗುತಿರೆ ತೆರೆನೆಗೆಯೆ ಯಮಪುರದ ಸೋಪಾನವೆಂಬಂತೆ (ಪಿಂಡೋರ. ೨-೧೧). 'ಪಂಜರಿಸು' ಪರಾ. [ಹಂಜರ + - ಇಸು]

**ಹಂಜಿ** (ನಾ). ೧. ನೂಲನ್ನು ತಯಾರಿಸಲು ಹತ್ತಿಯ ಬೀಜ ಬಿಡಿಸಿ ಹಕ್ಕಿ ಹಸನುಮಾಡಿದ ಹತ್ತಿಯ ಸಣ್ಣ ಸುರುಳಿ: ಹತ್ತಿ ಹಂಜಿ ನೂಲಮಳವೆಗೆ ವೀಸ ೨ (ಎಕ. XII, ಚಿಕ್ಕನಾ. ೨೧-೬೯; 1160); ಕಟಕಸೂತ್ರದ ಗೂಡ ಮಾಡಿಕೊಂಡಿಪ್ಪಲ್ಲಿ ಸೂತ್ರಕ್ಕೆ ನೂಲನು ಅದೆಲ್ಲಿಂದ ತಂದಿತ್ತು ರಾಟ ಇಲ್ಲ ಹಂಜಿ ಇಲ್ಲ (ಚನ್ನವ. ೫.೬-೯); ಎಡಗಾಲಿಂದ ಹಂಜಿಯ ಹೊಸವಂದದಿ ಕೆಡಹಿ ಹೊಸೆದು ಕೊಂದನಾಗ (ನೇಮಿಸಂ.೨೩-೧೩೪). ೨. **ಹತ್ತಿ;** **ಅರಳೆ:** ನರೆನೆಗೆದು ಬೆಳುಕರಿಸಿ ತಲೆಗೆ ತಲೆದೋಱುತಿರೆ ಪರಕರಿಸಿ ಹಂಜಿಯಂ ಹಂಜರಿಸಿ ಮಿಱುಗುತಿರೆ ತೆರೆನೆಗೆಯೆ ಯಮಪುರದ ಸೋಪಾನವೆಂಬಂತೆ (ಪಿಂಡೋರ.೨-೧೧). ೩. **ಹತ್ತಿಯಿಂದ ಮಾಡಿದ ಬತ್ತಿ; ಅರಳೆ ಬತ್ತಿ:** "ಹಂಜಿ ಎಣ್ಣೆ ವರ್ತಿಕೆಯಕ್ಕು" (ಮಂಗರಾ.೬೧-೨೦). 'ಪಿಂಜಿ$_2$', 'ಹಿಂಜಿ' ಪರಾ. [< ಸಂ. ಪಂಜಿ]

**ಹಂಜಿಕೆ** (ನಾ). ಒಂದು ಬಗೆಯ ಔಷಧಿಸಸ್ಯ ಮತ್ತು ಅದರ ಬೇರು; **ಗಂಟುಭಾರಂಗಿ:** "ಹಂಜಿಕಾ . . . ಬರ್ಬರಃ, ವಂದಕಃ - ೯ ಭಾರಂಗೀ ಹೆಸರುಗಳು, ಗಂಟುಭಾರಂಗಿ ಎಂಬುವ ಗ್ರಂಥಿಕದ್ರವ್ಯವು ಪ್ರಸಿದ್ಧವಾದದ್ದು" (ಸಿದ್ಧಾಂತಿ. ೧೩೨).

[ಸಂ. ಹಂಜಿಕಾ]

**ಹಂಜಿಗುಕ್ಕೆ** (ನಾ). ಅರಳೆಯನ್ನು ತುಂಬುವ ಕುಕ್ಕೆ,—**ಗೂಡೆ:** ಹಂಜಿಗುಕ್ಕೆಯೊಳೆಣ್ಣೆಸವ ಮೊಗದೊಳಾ ಬೊಗಡು ಬಾಯಿಂ ಜೊಲ್ಲು ಸುರಿಯೆ . . . ಮುರುಡುಗೋಲ್ವಿಡಿದು ತಡವರಿಸಿ ನಡೆವ ಮುದುಪಂ (ಚಿಬಪು.೧೦-೭೭). [ಹಂಜಿ + ಕುಕ್ಕೆ$_1$]

**ಹಂಜೆ** (ನಾ). (ನಾಟಕದಲ್ಲಿ) ದಾಸಿ ಅಥವಾ ತೊತ್ತನ್ನು ಕರೆಯುವಾಗ **ಸಂಬೋಧಿಸುವ ಪದ:** ಸುಡು ಪಂಚಿಗಳೆಂಜಲ ಹಂಜೆಯೆಂದು ಬಯ್ದೊಡನೊಡನೆತ್ತಿದ ಮೆಸಗಿ ಬೇಟದ ಬನ್ನಮನಕ್ಕತಂಗಿಯರ್ (ಅನಂಪು.೮-೩೦); ಹೇಕುಳಿಗೊಂಡ ನಾಯಿ ನೀನೇಕೆಲೆ ಹಂಜೆ ಎಣ್ಣೆ ಬಾಯ್ಬಡಿಯದಿರ್ (ಬಾಧಪು. ೧೫-೭೮). [ಸಂ. ಹಂಜಾ]

**ಹಂಟಗೆ** (ನಾ). ಒಂದು ಬಗೆಯ ಔಷಧೀಸಸ್ಯ : ನಾರುಬೇರು, ಹಾವುಲಿಗೆ, ಹಂಟಗೆ, ಔಳಿಗೆ, ಬೆಳಂಗಿ (ಮೃಔಗ.೨-೩೨). [?]

**ಹಂಡ$_1$** (ನಾ). **ಷಂಡ; ನಪುಂಸಕ :** ಷಂಡ- ಹಂಡ (ಶಮದ.೨೫೪ ಪ್ರಯೋ).

[< ಸಂ. ಷಂಡ]

**ಹಂಡ$_2$** (ನಾ). ೧. **ಬಿಳಿಯ ಬಣ್ಣ; ಬಿಳುಪು:** 'ಹಂಡಬಂಡ' ಪರಾ. ೨. **ಬಿಳಿಯ ಬಣ್ಣದ ಎತ್ತು; ಬಿಳಿಯೆತ್ತು:** ಹಂಡ ಹಾಱುವ ಚಂಚ ಮಲೆವ ಪುಲ್ಲೋರಿ . . . ಪಲವುಪರಿಯೆತ್ತು ತೊಂಭತ್ತಾಱುಲಕ್ಷ ಮೇಳೈಸಿ (ಸಿಂಗಿರಾ.೩೫-೭); ಹಂಡ ಕೆಂದಗಳಿಲ್ಲ ಹುಂಡಿ ಕಾರಿಗಳಿಲ್ಲ ಗಂಡರಿದ್ದೊಬ್ಬ ಮಗನಿಲ್ಲ (ಸರ್ವಜ್ಞ. ೧೯೨೭); ಯಾವುದು ಹಂಡಎತ್ತೇ, ಕಳೆದ ಹನ್ನೆರಡು ವರಹಕೊಟ್ಟು ಕೊಂಡದ್ದೇ? (ಬೆಟ್ಟಜೀ.೫೩).

[< ಪಾಂಡು$_1$?]

**ಹಂಡಕ್ಕಿ** (ನಾ). ಬಿಳಿಯ ಬಣ್ಣದ ಅಕ್ಕಿ; **ಬೆಳತಿಗೆ ಅಕ್ಕಿ:** ಹಂಡಕ್ಕಿ ದುಂಡಕ್ಕಿ ದುಂಡುರಾಜಣದಕ್ಕಿ ಬಂದೂರ ಗದ್ದೆ ಗೊನೆ ಬತ್ತದ ನೆಲ್ಲಕ್ಕಿ ಬಂದವೆ ನಮ್ಮ ಅರಮನೆಗೆ (ನಾಪದ. ೧೧೫). [ಹಂಡ$_2$ + ಅಕ್ಕಿ$_1$]

**ಹಂಡನಾಯ್, ಹಂಡನಾಯಿ** (ನಾ). **ಕ್ಷುದ್ರವಾದ ನಾಯಿ; ಹೊಲಸುನಾಯಿ:** ವಿಷ್ಣುವಂ ಹಂಡನಾಯಾಗೆಂದವಂ ಶಪಿಸಿದ (ವೀಶೈಪು. ೪-೧೨-೧೫). **ಹಂಡನಾಯಿ :** ತನ್ನ ಬಡತಿಂಡಿಗಳಲಿನಿತನ್ನು ಹಂಡನಾಯಿಗೆ ಹಾಕಿ ತಿನ್ನುವನು (ಕಥನ. ೪-೧).

[ಹಂಡ? + ನಾಯ್]

**ಹಂಡನಾಯಿ** 'ಹಂಡನಾಯ್' ನೋ.

**ಹಂಡಬಂಡ, ಹಂಡಹುಂಡ** (ಗು). ೧. ಬಿಳುಪು ಮತ್ತು ಕಂದುಬಣ್ಣ ಮಿಶ್ರವಾದ; **ಬೆರಕೆಬಣ್ಣದ:** ಹಂಡಬಂಡದ ಕುದರಿ ಗೊಂಡೇದ ಲಗಾಮು ಕಂಡೇನ ಊರ ತೆವರಾಗ (ಗರತಿ.೬೩); ಹಂಡಬಂಡ ಕುರಿಯ ಮರಿಯು ಬಹಳ ಮುದ್ದು ಬರುವ್ಹೊಲಿತ್ತು (ಕನನ.೪-೩); ಬಿಳಿಯವು ಕರಿಯವು ಹಂಡಬಂಡ ಕೆಂಪು ಬೂದಿಬಣ್ಣದವು ಈ ಮೇರೆಗೆ ಹಲವು ಬಣ್ಣದ ಪಾರಿವಾಳಗಳುಂಟು (ಮುಂಬಯಿ.೩-೧೧೧). ೨. **ಮಿಶ್ರವಾದ; ಬೆರಕೆಯಾದ:** ಕನ್ನಡವನ್ನು ಕೈಬಿಟ್ಟು ತನ್ನ ಮಾತೃಭಾಷೆಯಾಗಿದ್ದ ಆ ರೂಪುಗೆಟ್ಟ ಹಂಡಬಂಡ ಮರಾಠಿಯನ್ನು ಕೇಶವರಾಯ ಶುರು ಮಾಡಿದರಾಯಿತು (ಬೆಂಗಬ.೮೩). (ನಾ). ೩. **ಮಿಶ್ರಬಣ್ಣದ ಪಾರಿವಾಳ; ಹೊರಸು:** (ಓ). ೪. **ಬಿಳಿ ಮತ್ತು ಕಂದು ಬಣ್ಣದ ಎತ್ತು:** ಕೆಂದಬಣ್ಣದ ಬಲು ಚಂದ ಚಂದ ಹೋರಿಗಳು ನಂದಿಯ

ಹಂಗ ಮೈಮಾಟ ಹಂಡಬಂಡ ಹೊಂದಿ ನಡೆದವು ಸಾಲುಗೊಂಡು (ಸಿದ್ಧಪು.೧೬-೨೦).
**ಹಂಡಹುಂಡ** : ೧. ಕರಿಯ ಬಿಳಿಯ ಹಂಡಹುಂಡ ಮರಿಗಳು (ಮಲೆಮ.೧೦೬).
೪. ಕಾರಿಕಪ್ಪಂ ಹಂಡಹುಂಡ ಕೆಂದಂ ಬೆಳ್ಳಿಹೋರಿಗಳುಮೊಳಗಾದ ಹಿಂಡು (ಸಿದ್ಧರಾ. ೮-೪೯). 'ಹುಂಡವಣ್ಣ' ಪರಾ. [ಹಂಡ$_2$ + ಬಂಡ$_?$]

**ಹಂಡಬಂಡಕಥೆ** (ನಾ). (ಆಲಂ) ಪೊಳ್ಳುಕತೆ; ಜೊಳ್ಳುಕತೆ : ಅತಿರಂಜಿತವಾದ ಈ ಹಂಡಬಂಡಕಥೆಗಳು ಅವರಿಗೆ ಹಾಸ್ಯಾಸ್ಪದವೆನಿಸುವುವು (ಕಥಕ. ೩೪).
[ಹಂಡಬಂಡ + ಕಥೆ]

**ಹಂಡಬಂಡತನ** (ನಾ). ಬೆರಕೆಯಾಗಿರುವಿಕೆ; ಮಿಶ್ರತನ: ಬೆಳಗಾಂವಿಯ ಹಂಡಬಂಡತನವು ಕಾಣಸಿಕ್ಕಿತು (ಬಟ್ಟಸೂ. ೧೦೦). [ಹಂಡಬಂಡ + - ತನ]

**ಹಂಡಬಂಡು** (ನಾ). ಬೆರಕೆಬಣ್ಣ; ಮಿಶ್ರವರ್ಣ: ಕನ್ನಡಕದ ಹಂಡಬಂಡು ಸಂಸಾರಕ್ಕೆ ಬಣ್ಣವೇರುವ ಸಂಭವವಿಲ್ಲ (ವಿಚಾಮಂ. ೨೦). [ಹಂಡಬಂಡ + - ಉ$_4$]

**ಹಂಡಹಕ್ಕಿ** (ನಾ). ಬಿಳಿಯ ಬಣ್ಣದ ಹಕ್ಕಿ; ಬೆಳ್ಳಕ್ಕಿ: ತುಸುಹೊತ್ತಿನಲ್ಲಿ ಮನೆಯ ಮುಂದೆ ಬೇಲಿಯ ಸಾಲಿನಲ್ಲಿ ಹಂಡಹಕ್ಕಿ ಸಿಳ್ಳುಹಾಕತೊಡಗಿತ್ತು (ಮಲೆಮ. ೨೫).
[ಹಂಡ$_2$+ ಹಕ್ಕಿ (< ಪಕ್ಕಿ)]

**ಹಂಡಹುಂಡ** 'ಹಂಡಬಂಡ' ನೋ.

**ಹಂಡಹೋರಿ** (ನಾ). ಬಿಳಿಯ ಬಣ್ಣದ ಹೋರಿ: ಗೊಂಡ್ಯಾದ ಹಣೆಪಟ್ಟಿನ ಹಂಡಹೋರಿ ನನಗಾಗಿ ಕೊಂಡಾರ ನಮ್ಮವರು (ಕನ್ನಜಾ. ೧೪೬).
[ಹಂಡ$_2$ + ಹೋರಿ (< ಪೋರಿ$_2$)]

**ಹಂಡಾಕಳು** (ನಾ). ಬಿಳಿಯ ಬಣ್ಣದ ಹಸು: ಆ ಹಂಡಾಕಳು ಐತಲ್ಲ ಅದನ್ನೇ ಚಂದನ ಜೊತೆಗೆ ತಲಾರಕ್ಕೆ ಕಟ್ಟಿದರಾತು (ಸುವಸಂ. ೬೩). [ಹಂಡ$_2$ + ಆಕಳು (< ಆಕಳ್)]

**ಹಂಡಾಹಂಡ** (ನಾ). ದೊಡ್ಡ ದೊಡ್ಡ ಪಾತ್ರೆ (?): ಮಂಡಲಂಗಳ ಮಾಡಿ ರಂಗವಲಿಗಳ ಹಾಕಿ ಹಂಡಾಹಂಡದಲಿಯಿಳಿವಿ ಭೂಮಂಡಲಾಧಿಪತಿ ನಿನಗೆ ಅರ್ಪಿತವೆಂದು ತಂದು ನೈವೇದ್ಯಿಟ್ಟು ಶ್ರೀಹರಿಗೆ ಅರ್ಪಿಸುತ್ತಿದ್ದೆ (ಪುರಂದ. ೫-೭೯-೧೩). [?]

**ಹಂಡೆ$_1$** (ನಾ). ತಾಮ್ರ ಮೊದಲಾದ ಲೋಹಗಳಿಂದ ಮಾಡಿದ ನೀರು ತುಂಬುವ ದೊಡ್ಡ ಪಾತ್ರೆ; ಕಡಾಯಿ; ದೊಡ್ಡತಪ್ಪಲೆ: ನೀರು ತುಂಬುವುದೊಂದು ದೊಡ್ಡ ಹಂಡೇ ಅದೆಯಂತೆ (ಮುಂಬಯಿ.೪-೫೨); ಪ್ರತಿ ಮನೆಯ ಮುಂದೆ ಒಂದೊಂದು ಹಂಡೆಯ ತುಂಬಾ ಓಕುಳಿ ಮಾಡಿಡುವ ಪದ್ಧತಿ (ಹುಟ್ಟಿಹ. ೫೦); ಹತ್ತು ಕೊಡದ ಹಂಡೇ ಒಬ್ಬನ ಎತ್ತಿ ಇಳಿಸುತಿದ್ದಿನಿ (ಮಣ್ಣುಹ. ೧೧೩).
[? / ತುಳು. ಹಂಡೆ; ತೆಲು. ಹಂಡ./ ಹಿಂ. ಮರಾ. ಹಂಡಾ]

**ಹಂಡೆ$_2$** (ನಾ). ಬಿಳಿಯ ಎತ್ತು: ಹಂಡೆ ಹವಳೆ ಹುಲುಗಚ್ಚಿಕೊಂಡು ನಿಂತವು (ಪ್ರಸಭಾ. ೪೯-೬). 'ಹವಳೆ' ಪರಾ. [< ಹಂಡ$_2$]

**ಹಂತ$_1$** 'ಪಂತ$_1$' ನೋ.

**ಹಂತ$_2$** (ನಾ). ೧. ಮೆಟ್ಟಿಲು; ಸೋಪಾನ; ಪಾವಟಿಗೆ: ''ಆರೋಹಣಂ, ಸೋಪಾನಂ . . . ಸೋಪಾನದ ಹೆಸರುಗಳು, ಮೆಟ್ಟುಗಳು, ಪಾವಟಿಗೆ, ಹಂತಗಳು'' (ಸಿದ್ಧಾತಿ.೧೦೪); ಮನೆಯ ಹೊಱಗಣ ಹಂತ ಬಿಡದಿಹ ಜನದನಿತು ತಾನೈಸೆ ನಿಮ್ಮಯ ಸೇನೆ (ಕುವ್ಯಾಸ. ಒರಿ೯.೫-೩೮); ಹಜಾರದ ಪಾರ್ಶ್ವಗಳಲ್ಲಿ ಉಪ್ಪರಿಗೆಗಳ ಮೇಲೆ ಹತ್ತಿಹೋಗುವ ಹಂತಗಳು (ಶ್ರೀರಾಯ.೧೩೬). ೨. ಘಟ್ಟ; ಮಜಲು: ಈ ಕಸಬೇಕೆರೆ ಹಿನ್ದೆ ಕೀಳುಪಾಯ ಹನ್ತದಲ್ಲಿರುವ ದೈವದ ಗದ್ದೆ ಅಯಾಚಿತರ ಗದ್ದೆ (ಎಕ. XV, ಅರಸೀ. ೨೧೪-೨; 1817); ಯೋಗಸಿದ್ಧರು ಲಯಯೋಗದ ಅನುಭವದಲ್ಲಿ ಅನೇಕ ಹಂತಗಳನ್ನು ನಿರೂಪಿಸಿರುತ್ತಾರೆ (ಭಾರದ. ೧೫೫); ಆಳುಕಾಳುಗಳಿಂದ ಉಪದೇಶ ಪಡೆಯುವ ಹಂತಕ್ಕೆ ನಾನು ಇನ್ನೂ ಇಳಿದಿಲ್ಲ (ಹಾಹುತ್ತ. ೩೫).

ಹಂತವಾರು = ಒಂದು ಮಜಲು ಅಥವಾ ಮಟ್ಟಕ್ಕೆ ಸಂಬಂಧಿಸಿದ,— ಸೇರಿದ: ಗ್ರಾಮಗಳ ಹಂತವಾರು ಮೇರೆಗೆ . . . ಕಾಲೂಳಿಗದ ಜನ ಮುಂತಾದವರನ್ನೂ ನೇಮಕಮಾಡಿದರು (ಮಹಾವಂ. I, ೧೯೯).

**ಹಂತ$_3$** 'ಪಂತ$_2$' ನೋ.

**ಹಂತ$_4$** (ಅ). ಶೋಕ, ಕರುಣ, ಸಂಘರ್ಷ, ಜುಗುಪ್ಸೆ ಮುಂತಾದ ಭಾವಗಳನ್ನು ಸೂಚಿಸುವ ಅವ್ಯಯ: ''ಅತಿಶೋಕದಲ್ಲಿ ಸಂಘರ್ಷದಲಿ ಹಂತವೆಂದೆಂಬ ನುಡಿ ವರ್ತಿಸಿರ್ಕುಂ'' (ಮಂಗರಾ. ೧೫೫-೭೯); ಹಂತ ಹಿರಿಯರು ಹುಸಿಯ ನುಡಿವರೆ ಸಂತವೇಕಾತ್ಮಕವು ಕಂಡೇಕಾಂತವೆಂದಿನ್ನಾವದಾವುದು ಹೇಳನೇಕಾಂತ (ನಿಭಾಗ. ೧೦-೭೨-೨೦); ಅಂತವಿಲ್ಲದ ಸೌಖ್ಯವೋರ್ವನ ಹಂತ (ರಘುವಂ. ೮-೭೯). [ಸಂ.]

**ಹಂತಕ** (ನಾ). ಕೊಲ್ಲುವವನು; ಕೊಲೆಗಾರ: ವಿಜಯನಾರಸಿಂಹ ಎಂಬ ಕತ್ತಿಯು ಆ ಹಂತಕರನ್ನು ತುತ್ತುಗೊಂಡ ಕಥೆ (ಸಂಸಕ. ೧೧೫). [ಸಂ.]

**ಹಂತಿ** 'ಪಂತಿ' ನೋ.

**ಹಂತಿಕಟ್ಟು** 'ಪಂತಿಗಟ್ಟು' ನೋ.

**ಹಂತಿಕಾಱ** 'ಪಂತಿಕಾಱ' ನೋ.

**ಹಂತಿಕುಂಟೆ** (ನಾ). (ಉಕ) ಹೊಲವನ್ನು ಹಸನುಮಾಡಲು ಹೊಡೆಯುವ ಸಾಲುಕುಂಟೆ: (ಕ). [ಹಂತಿ (< ಪಂತಿ) + ಕುಂಟೆ$_1$]

**ಹಂತಿಗಟ್ಟು** 'ಪಂತಿಗಟ್ಟು' ನೋ.

**ಹಂತಿಗಣ್ಣೆ** (ನಾ). ಸಾಲಾಗಿ ಕಟ್ಟಲು ಉಪಯೋಗಿಸುವ ಹಗ್ಗ; ದಾವಣಿ: ಹಂತಿಗಣ್ಣೆಯು ಚೆನ್ನ, ಚಿಂತೆಯಿಲ್ಲದ ರಾಣಿ ಬಂತು ಮಹಮನೆಗೆ ಬಸವಣ್ಣ ಉಣಸಿದನು ನಿಂತು ಶಿವಮತವ ಅಂಬಲಿಯ (ಕನ್ನಜಾ.೧೩೩); ಕಣ, ಕೂರಿಗೆ, ಮೇಳಿ, ಹಂತಿಗಣ್ಣೆ (ಕನ್ನಜಾ. ೨೧೧). [ಹಂತಿ(< ಪಂತಿ) + ಕಣ್ಣೆ]

**ಹಂತಿಗಾಱ** 'ಪಂತಿಕಾಱ' ನೋ.

**ಹಂತಿಗೂಡಿಸು** (ಕ್ರಿ). ಸಾಲಾಗಿಸು; ಪಾಳಿಮಾಡು: ಕ್ರತುಪದಕ್ಕಿರುವ 'ಸರ್ವ' ಎಂಬ ವಿಶೇಷಣಪದವು ಹಿಂಸಾತ್ಮಕಕ್ರತುಗಳನ್ನೂ ಹಂತಿಗೂಡಿಸುತ್ತಿದೆ (ನಾಡೋಜ. ೬೭).
[ಹಂತಿ(< ಪಂತಿ) + ಕೂಡಿಸು]

**ಹಂತಿಗೊರಲು** (ನಾ). ತಲೆಗಳ ಸಾಲು; ಸಾಲುದಲೆ.

ಹಂತಿಗೊರಲವನು = ಸಾಲಾಗಿ (ಹತ್ತು)ತಲೆಗಳುಳ್ಳವನು; ರಾವಣ : ಹಂತಿಗೊರಲವನನೇಳಿಸೆ[ಪಾಠಾಂ. ಹಂತಿಗೊರಲವನೇಳಿದದೆ, ಹಂತಿಗೊರಲವವೇಳಿದ] ಪೆರ್ಚಿರಲೊಳೊತ್ತಿ ಹಂತಮಂ ಮುಱಿದು ಮೂಱವತೆಯುಳ್ಳರಮನೆಯನಂತವುರಮಂ ಮಾಡಿ (ಪದ್ಮರಾ.೧೩-೬೫). [ಹಂತಿ (< ಪಂತಿ) + ಕೊರಲು (< ಕೊರಲ್)]

**ಹಂತಿಗೊಳ್** 'ಪಂತಿಗೊಳ್' ನೋ.

**ಹಂತಿಗೊಳ್ಳು** 'ಪಂತಿಗೊಳ್' ನೋ.

**ಹಂತಿದಪ್ಪು** (ಕ್ರಿ). ಸಾಲುತಪ್ಪು; ಅಸ್ತವ್ಯಸ್ತವಾಗು: ಪೊರ್ಕುಳಿಯಂದಮೆ ಹಂತಿದಪ್ಪಿ ತಾಱುಂಬಟಿಯುಂ ತೆರಳ್ದ ಕುರುಳುಣ್ಮೆ ಬೆಮರ್ . . . ಕೂಟದೊಂದು ಸವಿಯಂ ಪಿಸುಣಾಡುವುವೀ ಲತಾಂಗಿಯಾ (ಚಂದ್ರಪು.೮-೭೨).
[ಹಂತಿ (< ಪಂತಿ) + ತಪ್ಪು$_1$]

**ಹಂತಿದಾವಣಿ** (ನಾ). (ಕಣದಲ್ಲಿ ಸಾಲಾಗಿ) ಕಟ್ಟುವ ಹಗ್ಗ; ಎಣೆಹಗ್ಗ: (ಕ).
[ಹಂತಿ (< ಪಂತಿ) + ದಾವಣಿ$_1$]

**ಹಂತಿಯೂಟ** 'ಪಂತಿಯೂಟ' ನೋ.

**ಹಂತಿವಿಡಿ** 'ಪಂತಿವಿಡಿ' ನೋ.

**ಹಂತಿವೆಣ್** (ನಾ). ಹೆಂಗಸರ ಸಾಲು: ಪಂತವಾಡುವ ಭಟರಳಿಗಿಳಿ ಪಡಿಯಱ ತಿಂಥಿಣಿ ಕೋಗಿಲೆವಿಂಡು ಹಂತಿವೆಣ್ಗಳ ತನುಲತೆ ವನಮೆನಲು ವಸಂತನವೊಲು ನೃಪನೆಸೆದ (ಶ್ರೀಪಾಲ. ೩-೬). [ಹಂತಿ (< ಪಂತಿ) + ಪೆಣ್]

**ಹಂತಿಹೊಡೆ** (ಕ್ರಿ). ಕಣದಲ್ಲಿ ಒಕ್ಕಣೆಗಾಗಿ ಸಾಲಾಗಿ ಕಟ್ಟಿದ ದನಗಳನ್ನು ಸುತ್ತಿಸು: ಏತದಿಂದ ಬಾವಿಯ ನೀರೆತ್ತುವಾಗ ಅಥವಾ ಹಂತಿ ಹೊಡೆಯುವಾಗ ಗಂಡಸರು ಹಾಡುವ ತ್ರಿಪದಿ (ಛಂದೋವಿ. ೨೪೪); ಹಂತಿ ಹೊಡೆಯುತ ನೆನೆದೆ ಸಂತಸದಿ ಶರಣರನು (ಜನಗೀ. ೧೩); ಹಂತಿಹೊಡೆಯುವಾಗ ಆಳುಗಳು ಪದಗಳನ್ನು ಹೇಳುತ್ತಿದ್ದರು (ಕಪಪು. ೩-೬೪). [ಹಂತಿ (< ಪಂತಿ) + ಹೊಡೆ$_1$ (< ಪೊಡೆ$_1$)]

**ಹಂತುಗೊಳ್** (ಕ್ರಿ). ಕೊನೆಗೊಳ್ಳು; ಮುಗಿ; ಅಂತ್ಯವಾಗು: ಲಲನೆಯರ ಭ್ರಾಂತಿನಿಂ ಹಂತುಗೊಳುವರೆ ಖಚರನೆಂದೆಸೆದ (ಜಿನಮು. ೨೪-೧೮). [ಹಂತು$_0$ + ಕೊಳ್$_1$]

**ಹಂತೆ** (ನಾ). ಗರ್ವ; ಅಹಂಕಾರ; ಮದ: ಇಂತಿದಧ್ಯಾಸವಿದರಂತಾತ್ಮನಲ್ಲಿ ಜಡ

ಹಂತೆಯೊಳಗುಳ್ಳ ಗುಣವೆಯ್ದು ಸತ್ಯವೆಂಬಂತೆ ಕಾಣಿಸುವುದೆಲೆ ಪುತ್ರ (ಅನುಸಾ. ೬-೨-೯); ಚಿಂತಿಪನಾತ್ಮಮದವೆತ್ತೆಮಿಗೆ ಹಂತೆ ಮುಂದೆನಗೆ ಸರಿ ಯಾರೆ (ವೀಶೈಪು. ೭-೩-೧೯); ಅಣಿಮಾಡಿಸಿದ್ದಿ ಸಂಭ್ರಮದ ಹಂತೆಯೊಳಾರ ಯೆಣಿಕೆಗೊಳ್ಳದೆ ಮಹಿಮರಿರವಟಿಗೆಯುದಾಂ ನೊರಿದೆ . . . ನುತಿಸುತ್ತೆ ಸೈಗೆಡೆದು ಪೊರಳಿದಂ ಧಾರಿಣಿಯೊಳು (ಚತುಪು. ೨-೪-೪೮). [< ಅಹಂತೆ]

**ಹಂದರ್** 'ಪಂದರ್' ನೋ.

**ಹಂದರ$_1$** 'ಪಂದರ್' ನೋ.

**ಹಂದರ$_2$** 'ಹಂಜರ' ನೋ.

**ಹಂದರಜಡ್ಡು** (ನಾ). ಮದುವೆಯ ಕಾರ್ಯದ ಓಡಾಟದಲ್ಲಿ ಉಂಟಾಗುವ ದೇಹಾಲಸ್ಯ: ಮದುವೆಯೆಲ್ಲ ಮುಗಿದ ಮೇಲೆ 'ಹಂದರ - ಜಡ್ಡಿನಿಂದ' ಮೂರುದಿನದಲ್ಲಿ ನಿರ್ವಿಣ್ಣರಾಗಿ ಹೋದ ದೇಸಾಯರು ರಾತ್ರಿ ಅವಳ ಮನೆಗೆ ಬಂದಾಗ . . . ನಕ್ಕಳು (ಸಮಜೀ. ೩೫೦). [ಹಂದರ$_1$ (< ಪಂದರ್) + ಜಡ್ಡು$_4$]

**ಹಂದರಹೂ** (ನಾ). ಒಂದು ಬಗೆಯ ಹೂವು ಮತ್ತು ಅದರ ಗಿಡ: ಹಲ್ಲೆಬಳ್ಳಿ, ಹಂದರಹೂ (ಮೈಶಿಗಿ. ೭೫-೧೩೩೦). [ಹಂದರ? + ಹೂ$_2$ (< ಪೂ$_2$)]

**ಹಂದರಿಕ್ಕು** 'ಪಂದರಿಕ್ಕು' ನೋ.

**ಹಂದರು** 'ಪಂದರ್' ನೋ.

**ಹಂದರುವಣ** (ನಾ). ಮದುವೆ ಮುಂತಾದ ಸಮಾರಂಭಗಳಲ್ಲಿ (ಮನೆಯ ಮುಂದೆ) ಚಪ್ಪರ ಹಾಕುವಾಗ ಕೊಡಬೇಕಾಗಿದ್ದ ತೆರಿಗೆ; ಚಪ್ಪರದ ಹಣ: ಪುರಿಗೆರೆಯ ರಾಮೇಸ್ವರದೇವರ್ಗ್ಗೆ ಪುರದ [ಸಾ]ದದ[ಲ್] ಹಂದರುವಣವೆಂಬಿವಂ ಸರ್ವನಮಶ್ಯವಾಗಿ ಬಿಡೆಂದು ಬೇxವುದುಂ (ಸೌಇಇ. XX,೭೮-೧೪; 1118). [ಹಂದರು (< ಪಂದರ್) + ಪಣ$_3$]

**ಹಂದಲ್** 'ಪಂದಲ್' ನೋ.

**ಹಂದಲು** 'ಪಂದಲ್' ನೋ.

**ಹಂದಲೆ** 'ಪಂದಲೆ' ನೋ.

**ಹಂದಿ** 'ಪಂದಿ' ನೋ.

**ಹಂದಿಕೊಬ್ಬು** (ನಾ). ಹಂದಿಯ ಕೊಬ್ಬು,— ನೆಣ: ಮುರಿದ ಮೂಳೆಗಳನ್ನು ಒಂದುಗೂಡಿಸಲು ಹಂದಿಕೊಬ್ಬನ್ನು ಉಪಯೋಗಿಸುತ್ತಾರೆ (ರೂಢಿ). [ಹಂದಿ (< ಪಂದಿ)+ ಕೊಬ್ಬು$_2$ (< ಕೊರ್ಬು$_2$)]

**ಹಂದಿಗ** (ನಾ). ಅಂಜುಬುರುಕ; ಹೇಡಿ: ಹಂದಿಗರು ನನಗೆಯಿದಿರಾಂಪರೇ ಹರಿಯೆರ್ದೆಯ ಕುಂದಿಲ್ಲದೊದ್ದೆ ಧಾತನ ಜಿಹ್ವೆಪೀಠದೊಳು ನಿಂದೆಯಾಖಂಡಲಗೆ ಡಾಗ ನೊತ್ತಿದ ಹರನ ಸಿರತೊಡೆಯನಡರ್ದ ಮತ್ತಂ (ಪ್ರಭುಪು. ೫-೧೫೦). 'ಹಂದೆಗ$_1$' ಪರಾ. [ಹಂದೆ (< ಪಂದೆ) + - ಇಗ]

**ಹಂದಿಗಡ್ಡೆ** 'ಪಂದಿಗಡ್ಡೆ' ನೋ.

**ಹಂದಿಗೀರ** (ನಾ). (ಹಂದಿಯಂತೆ ಕಿರುಚುವ) ಒಂದು ಬಗೆಯ ಹಕ್ಕಿ; ಸಣ್ಣಗೂಗೆಹಕ್ಕಿ : (ಹಿ). [ಹಂದಿ (< ಪಂದಿ) + ಕೀರ$_3$?]

**ಹಂದಿಗುಂಟೆ** (ನಾ). (?): ಮುಂದಗಮನೆಯಿಂದು ನಡೆಗಂಡನಲ್ಲದೆ ಹಂದಿ ಗುಂಟೆಯನದ ಹೇಳಲಿಲ್ಲ (ಚದಾವ. ೩೮-೭). [?]

**ಹಂದಿಗೆಡ್ಡೆ** 'ಪಂದಿಗಡ್ಡೆ' ನೋ.

**ಹಂದಿಗೆರಕನಗೆಡ್ಡೆ** (ನಾ). ಒಂದು ಬಗೆಯ ಗೆಡ್ಡೆ; ಕೊನ್ನಾರಿಗೆಡ್ಡೆ: "ಕಸೇರುಕಾ- ಸೀಬಿ ಗೆಡ್ಡೆ, ಹಂದಿಗೆರಕನ ಗೆಡ್ಡೆ" (ಔಷಧಿ. ೨೪). [< ಹಂದಿ(< ಪಂದಿ) + ಗೆಡ್ಡೆ(< ಗಡ್ಡೆ)]

**ಹಂದಿಡು** (ಕ್ರಿ). ಹಂದಿಯನ್ನು ಹೊಡೆ,—ಬಡಿ: ಕರ್ನಾಟಕ ಪ್ರಕೃತಿಸ್ವರ ಲೋಪಕ್ಕೆ . . . ಇಕಾರಕ್ಕೆ — ದಾಳಿಟ್ಟಂ, ಹಂದಿಟ್ಟಂ, ಸವಡಿಟ್ಟಂ (ಶಮದ. ೫೨ ಪ್ರಯೋ). [ಹಂದಿ (< ಪಂದಿ) + ಇಡು$_1$]

**ಹಂದಿತುಪ್ಪ** (ನಾ). ಹಂದಿಯ ಕೊಬ್ಬಿನಿಂದ ತಯಾರಿಸಿದ ತುಪ್ಪ: ಮೂಳೆ ಮುರಿದಾಗ ಹಂದಿತುಪ್ಪ ಹಾಕಿ ಕಟ್ಟುತ್ತಾರೆ (ರೂಢಿ). [ಹಂದಿ (< ಪಂದಿ) + ತುಪ್ಪ]

**ಹಂದಿದಾಟು** (ನಾ). ಕತ್ತಿವರಸೆಯಲ್ಲಿ ಒಂದು ಪಟ್ಟು; ಹಂದಿ ನೆಗೆಯುವಂತೆ ನೆಗೆಯುವುದು: ಆಸ್ಥಾನದಲ್ಲಿ ಶೀಘ್ರಗಮನದ ಕಡೆಯಲ್ಲಿ ತಾನು ತಿರುಗಿ ಮುಂದುಕಡೆಯಲ್ಲಿ ಬಲದ ಪಾದವನ್ನುಯಿಟ್ಟು ಬಂಡಿಕೋಲಿನಿಂದ ಕಡಿವುದು ಅವದಾನೊಂದುಂಟು ಅದು ಖಡ್ಗಶಾಸ್ತ್ರವ ಬಲ್ಲವರಿಂದ ಹಂದಿದಾಟುಯೆಂದು ನುಡಿಯಲ್ಪಡುವುದು (ಖಡ್ಗಟೀ. ೫-೨೭). [ಹಂದಿ (< ಪಂದಿ) + ದಾಟು$_2$ (< ದಾಂಟು$_3$)]

**ಹಂದಿಪುಟ್ಟನ ಗೆಡ್ಡೆ** (ನಾ). ಒಂದು ಬಗೆಯ ಗೆಡ್ಡೆ; ಕೊನ್ನಾರಿಗೆಡ್ಡೆ: "ಈ ಹಂದಿಪುಟ್ಟನ ಗೆಡ್ಡೆ ಇದೆಯಲ್ಲಾ ಅದರ ರುಚಿಗೆ" ಎಂದು ಪಂಡಿತನಿಗಿಂತಲೂ ತನ್ನ ಕನ್ನಡ ಮೇಲುಮಟ್ಟದ್ದು ಎಂಬ ಹೆಮ್ಮೆಯಿಂದ ಹೇಳಿದನು (ಮಲಮ. ೩೩೦). [ಹಂದಿ (< ಪಂದಿ) + < ಪುಟ್ಟ$_1$ + ಗೆಡ್ಡೆ (< ಗಡ್ಡೆ)]

**ಹಂದಿಪೊದೆಕೊಡೆ** (ನಾ). ಒಂದು ಬಗೆಯ ಸಸ್ಯ: ಹಂದಿಪೊದೆಕೊಡೆ, ಮೊಲ್ಲೆ (ಮೈಶಿಗಿ. ೫೦-೧೦೧೮). [ಹಂದಿ (< ಪಂದಿ) + ಪೊದೆ$_3$ + ಕೊಡೆ$_2$]

**ಹಂದಿಬಳ್ಳಿ** (ನಾ). ಒಂದು ಬಗೆಯ ಸಸ್ಯ: ಚೀನಾಬಿಳೀಮರ, ಪುನಾಲೀ ಹಂದಿಬಳ್ಳಿ (ಮೈಶಿಗಿ. ೨೯-೫೭೯). [ಹಂದಿ (< ಪಂದಿ) + ಬಳ್ಳಿ]

**ಹಂದಿಮೀನು** 'ಪಂದಿಮೀನ್' ನೋ.

**ಹಂದಿವಲೆ** (ನಾ). (ಕಾಡು) ಹಂದಿಯನ್ನು ಹಿಡಿಯುವ ಬಲೆ: ಎರಳೆವಲೆ ಹಂದಿವಲೆ ಹೊಯ್ಕಲೆ . . . ಬೇಡರ ಸಿರದೊಳೊಪ್ಪಿದುದು (ಸಾಳ್ವಭಾ. ೫-೧೯). [ಹಂದಿ (< ಪಂದಿ) + ಬಲೆ$_1$]

**ಹಂದಿವಳಯ** (ನಾ). ಒಂದು ಬಗೆಯ ಸಸ್ಯ: "ಕೂರ್ಚಂ - ಹಂದಿವಳಯ" (ಔಷಧಿ. ೩೭). [ಹಂದಿ (< ಪಂದಿ) + ವಳಯ?]

**ಹಂದಿವಾಡಿ** (ನಾ). ಒಂದು ಊರಿನ ಹೆಸರು: ಪಳ್ಳಮ ಮುತ್ತೆರಿಎ(ಯ) ಹನ್ದಿವ(ವಾ)ಡಿ ಎ(ಯ)ನಿ(ನೀ)ರುಂಗಲ್ಲೆ (ಇಇ. VIII, ೨೧೩-೨೫; 10ನೆಯ ಶತ). [ಹಂದಿ (< ಪಂದಿ) + ವಾಡಿ$_1$ (< ಪಾಡಿ$_2$)]

**ಹಂದಿವೇಂಟೆ** 'ಪಂದಿವೇಂಟೆ' ನೋ.

**ಹಂದೀಟಿ** (ನಾ). (ಹಂದಿಯನ್ನು ತಿವಿಯಲು ಬಳಸುವ) ಒಂದು ಬಗೆಯ ಈಟಿ (?): "ಭಲ್ಲಾ= ಹಂದೀಟಿ" (ಕಾಶಕ್ಕ. ೧೧೪). 'ಪಂದಿಪೊಟ್ಟು' ಪರಾ. [ಹಂದಿ (< ಪಂದಿ) + ಈಟಿ (< ಇಟ್ಟಿ$_2$)]

**ಹಂದು** 'ಹೆಂದು' ನೋ.

**ಹಂದೆ** 'ಪಂದೆ' ನೋ.

**ಹಂದೆಗ$_1$** (ನಾ). ಹೇಡಿ; ಅಂಜುಬುರುಕ: ಹೇಳಬಲ್ಲಿರೆ ತಥ್ಯವನು ತೆಗೆ ಕಾಳಗದ ಹಂದೆಗರ [ಪಾಠಾಂ. ಹಂದೆಗಳ]ನೆನುತ ಕರಾಳದೈತ್ಯವ್ರಾತ ಕವಿದುದು ಕೃಷ್ಣನಭಿಮುಖಕೆ (ನಿಭಾಗ. ೧೦-೪೯-೩೭); ಎನ್ನನು ಹಂದೆಗರೆಂಬರು (ಕರಿಕ. ೧೨-೧). [ಹಂದೆ (< ಪಂದೆ) + - ಗ$_2$]

**ಹಂದೆಗ$_2$** (ನಾ). ಒಂದು ಬಗೆಯ ಮೀನು: ಹಾರುವಂ ಹಿರಿಯ ಷಡುಸಕ್ಕರಿಗ ನಿಜಿಲು ಹಂದೆಗನಾನೆಮೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದುರು (ಹಚಕಾ. ೫-೪೫). [IP ಇದು 'ಹಂದಿಗ' ಎಂದಿರಬಹುದೆ?]

**ಹಂದೆತನ** 'ಪಂದೆತನ' ನೋ.

**ಹಂದೊಗಲ್** 'ಪಂದೊಲ್' ನೋ.

**ಹಂಪ$_1$** 'ಪಂಪ$_2$' ನೋ.

**ಹಂಪ$_2$** (ನಾ). (?): ಪರಮವಿಕ್ರಮವುಳ್ಳ ರಘುವಿನ ಬರುವ ವಾರ್ತೆಯನರಿತು ಪಶ್ಚಿಮಧರಣಿಪತಿಗಳ ಹಂಪದಿಂ ಕರವನ್ನು ಕೊಟ್ಟಿಹನು (ರಘುವಂ. ೪-೫೮). [?]

**ಹಂಪಲು** 'ಪಣ್$_3$' ಪರಾ.

**ಹಂಪುಗಾಲ** (ನಾ). ಅದ್ದೂರಿಯ ಕಾಲ; ವೈಭವದ ಸಮಯ: ಲೋಕದ ಅನ್ನವು ಲೋಕದಂತೆಯೆ ತಾನು ಹಂಪುಗಾಲದ ಬೆಳೆಯು ಹಾಲುಂಡಿತ್ತು (ಸವೀಗೀ. ೧೭-೩೭೪); ಮಿಡಿ ಕಾಯಿ ಹಣ್ಣುಗಳ ಹಂಪುಗಾಲದ ಸೊಂಪು ಖುತು ಖುತುಗಳಾಡಿಸಿದ ನೂರು ಚದುರು (ನಲಮು. ೪೨-೫). [ಹಂಪು$_0$ (< ಪಂಪು$_1$) + ಕಾಲ]

**ಹಂಪುಗೊಳಿಸು** (ಕ್ರಿ). ಅದ್ದೂರಿಮಾಡು; ವೈಭವಗೊಳಿಸು: ಹಂಪುಗೊಳಿಸುವ

ದೇವಿಯೊಲಿದ ಮಾಧವನ ವಿದ್ಯಾತೀರ್ಥವನ್ನು ತಂದು ಹಂಪು ಪಡೆಯೆಂದು ನಾ ಎರೆಯುವೆನು ನೀ ಸರ್ವಸಂನ್ಯಾಸಿಯಾಗು ಎಂದು (ಸೂರ್ಯಪಾ. ೮೯-೧೭).

[ಹಂಪ್ಪು(< ಪಂಪ್ಪು) + ಕೊಳಿಸು]

**ಹಂಪುಪಡೆ** (ಕ್ರಿ). ಅದ್ದೂರಿಯಾಗು; ವೈಭವವನ್ನು ಹೊಂದು : ಹಂಪುಗೊಳಿಸುವ ದೇವಿಯೊಲಿದ ಮಾಧವನ ವಿದ್ಯಾತೀರ್ಥವನ್ನು ತಂದು ಹಂಪುಪಡೆಯೆಂದು ನಾ ಎರೆಯುವೆನು ನೀ ಸರ್ವಸಂನ್ಯಾಸಿಯಾಗು ಎಂದು (ಸೂರ್ಯಪಾ. ೮೯-೧೭).

[ಹಂಪ್ಪು (< ಪಂಪ್ಪು) + ಪಡೆ]

**ಹಂಪೆ** (ನಾ). ಕನ್ನಡನಾಡಿನ ಒಂದು ಪ್ರಸಿದ್ಧ ತೀರ್ಥಕ್ಷೇತ್ರ; ವಿರೂಪಾಕ್ಷನು ನೆಲಸಿರುವ, ತುಂಗಭದ್ರಾನದಿಯ ದಂಡೆಯ ಮೇಲಿರುವ (ಪೌರಾಣಿಕವಾಗಿ ವಾಲಿ, ಸುಗ್ರೀವರು ನೆಲಸಿದ್ದರೆಂದು ನಂಬಲಾದ, ಐತಿಹಾಸಿಕವಾಗಿ ವಿಜಯನಗರವೆಂದು ಪ್ರಸಿದ್ಧವಾಗಿದ್ದ) ಸ್ಥಳ: ಗಿರಿಜಾಕಲ್ಯಾಣ ಕಥಾಕಾವ್ಯಮಂ ಹಂಪೆಯ ಮಾದರಸರ ಕಾರುಣ್ಯದ ಶಿಶುವಪ್ಪ ಹಂಪೆಯ ಹರಿಹರಂ ಬಿನ್ನಪಂಗೈದಂ (ಗಿರಿಕ. ಕಥಾಗರ್ಭಂ ೩); ಹಂಪೆಯ ಕೊಂಪೆಯ ನೋಂಪಿಯು ಫಲಿಸಲಿ ಗುಡಿಗಟ್ಟಲಿ ಕನ್ನಡ ಹರಣ (ಅರಳು ೩೦೫-೨); ಹಂಪೆಗೆ ಹೋಗುವುದಕ್ಕಿಂತ ತನ್ನ ಕೊಂಪೆಯಲ್ಲಿರುವುದು ಲೇಸು (ಗಾದ).

[< ಸಂ. ಪಂಪಾ]

**ಹಂಬಕ್ಕಿ** 'ಪಂಬಕ್ಕಿ' ನೋ.

**ಹಂಬಲ** 'ಪಂಬಲ್' ನೋ.

**ಹಂಬಲಿಕೆ** (ನಾ). ೧. ಉತ್ಕಟವಾದ ಬಯಕೆ; ಅತಿಯಾದ ಹಂಬಲ, — ಅಪೇಕ್ಷೆ: ಶ್ರೀದೇವಿಯನ್ನು ಕಣ್ಣಾರೆ ಕಾಣಬಹುದೆಂಬ ಹಂಬಲಿಕೆ ಅವನಿಗಿದ್ದಿತು (ಶ್ರೀರಾಯ.೨೯೮); ಅವರೀರ್ವರ ಹಂಬಲಿಕೆಯು ಫಲಿಸಿತು (ಧರ್ಮಸಾ.೬೮); ಒಂದು ಮನಸಿನ ಬಯಕೆ ತಾ ಬರಿಯ ಹಂಬಲಿಕೆ (ಇಂಗೀತ.೫೫-೫). ೨. ಚಿಂತೆ; ವ್ಯಥೆ; ದುಃಖ: ಮಾತೃಕದಂಬ ಶೋಕಿಸುತೊರಲುತಿಹ ನಾನಾ ಬಗೆಯ ಹಂಬಲಿಕೆಗಳ ಕೇಳಿ ಪೊರಳಿ ರಾಜಕಳೇಬರವ ಕಂಡರಿಕೆದಪ್ಪಲು (ಅನಂರಾ. ೨-೩-೨೬). [ಹಂಬಲ (< ಪಂಬಲ್) + - ಇಕೆ]

**ಹಂಬಲಿಸು** 'ಪಂಬಲಿಸು' ನೋ.

**ಹಂಬಲು** 'ಪಂಬಲ್' ನೋ.

**ಹಂಬು₁** 'ಪರಪ್ಪು₁' ನೋ.

**ಹಂಬು₂** 'ಪರಪ್ಪು₂' ನೋ.

**ಹಂಬುಕಳ್ಳಿ** (ನಾ). ಬಳ್ಳಿಯಂತೆ ಬೆಳೆಯುವ ಒಂದು ಬಗೆಯ ಕಳ್ಳಿಗಿಡ: ಹಂಬುಕಳ್ಳಿ, ಸೋಮಲತೆ, ಬ್ರಾಹ್ಮಿ (ಮೈಔಗಿ. ೬೮-೧೩೮); ಜತ್ತುವೆ, ಹಂಬುಕಳ್ಳಿ, ನಂಜಿನ ಗೊರಡು, ಸಮುದ್ರಪಾಲ (ಸಮ್ಮನು. ೨೩೮). [ಹಂಬು₂ (< ಪರಪ್ಪು₂) + ಕಳ್ಳಿ₂]

**ಹಂಬುಗಱುಕೆ** (ನಾ). ಬಳ್ಳಿಯಂತೆ ಉದ್ದವಾಗಿ ಬೆಳೆಯುವ ಒಂದು ಬಗೆಯ ಗರುಕೆ: "ಅಳಿದೂರ್ವಾ- ಹಂಬುಗಱುಕೆ" (ಓಷಧಿ. ೧೨).

[ಹಂಬು₂ (< ಪರಪ್ಪು₂) + ಕಱುಕೆ₁ (< ಕಱುಂಕೆ)]

**ಹಂಬುಗಾರಕ** (ನಾ). ವೀಳೆಯದೆಲೆಯ ಬಳ್ಳಿಯಿಂದ ಎಲೆ ಕೊಯ್ಯುವುದು (?): ಅನುಪಿನ ಕಟ್ಟೆ ಗ್ರಾಮದಿಂದ ಹಟೆಕಾರ ಮಗ ೨ಕ್ಕೆ ಗ೧।೭ ಹುಡಿಕೆಕಾರಕದಿಂದ ಜನ ೨ಕ್ಕೆ ಗ।೭ ಹಂಬುಗಾರಕದಿಂದ ಜನ ೨ಕ್ಕೆ ಗ೧೮೩ (ಎಕ.VIII, ತೀರ್ಥಹ. ೯೫-೬೦; 1709). 'ಹುಡಿಕೆ ಕಾರಕ' ಪರಾ. [ಹಂಬು₂ (< ಪರಪ್ಪು₂) + - ಗಾರ (< - ಕಾಱ) + - ಕ₂]

**ಹಂಬುದುರುಚ** (ನಾ). ಬಳ್ಳಿಯಾಗಿ ಬೆಳೆಯುವ ತುರುಚೆ ಗಿಡ: ಅಗುಳುಶುಂಠಿ, ಮುಡಿವಾಳ . . . ಹಂಬುದುರುಚನಬೇರು . . . ಕಷಾಯಂ ಕಾಸಿ ಕುಡಿಯೆ ಪಿತ್ತ ಛರ್ದಿ ಹರ (ಸಕವೈ.೨೬೭). [ಹಂಬು₂ (< ಪರಪ್ಪು₂) + ತುರುಚ (< ತುಱುಚೆ)]

**ಹಂಬುಮಲ್ಲಿಗೆ** (ನಾ). ಬಳ್ಳಿಯಾಗಿ ಬೆಳೆಯುವ ಮಲ್ಲಿಗೆಗಿಡ : ನವಮಲ್ಲಿಗೆ, ಹಂಬುಮಲ್ಲಿಗೆ (ಮೈಔಗಿ. ೪೭-೯೩೨). [ಹಂಬು₂ (< ಪರಪ್ಪು₂) + ಮಲ್ಲಿಗೆ]

**ಹಂಬುಹಾರಕಹುಲ್ಲು** (ನಾ). ಒಂದು ಬಗೆಯ ಹುಲ್ಲು: ಹಂಬುಹಾರಕ ಹುಲ್ಲು, ಪೊರೆಹುಲ್ಲು (ಮೈಔಗಿ. ೧೪-೨೪೧).

[ಹಂಬು₂ (< ಪರಪ್ಪು₂) + ಹಾರಕ (< ಪಾರಕು) + ಹುಲ್ಲು (< ಪುಲ್)]

**ಹಂಬೆ** (ನಾ). ಬಳ್ಳಿ; ಹಂಬು: ನಾನೊಬ್ಬನುಂಟು ಹಲವಾಗಲೆಲ್ಲೊ ಎಂಬ ಹಂಬಲಿನ ಹಂಬೆ ಹರಿಬಳ್ಳಿವಳ್ಳಿಗಳಾಗಿ ತನ್ನ ದಾಂಗುಡಿಯ ಗೊನೆ ಬಾನು ಮುಟ್ಟೊಂದಾಗಿ (ಅರಳು ೧೨೦-೨). [< ಪರಪ್ಪು₂]

**ಹಂಸ** (ನಾ). ೧. ಒಂದು ಬಗೆಯ ಬಿಳಿಯ ಬಣ್ಣದ ಪಕ್ಷಿ; ಅಂಚೆ; ಮರಾಲ: ಭರದಿಂ ರಾಮಂ ಕಾಕಾಸುರನಂ ಮುನಿದಿಸುವ ತೆಱದಿನೆಚ್ಚಂ ವಿಹಗೇಶ್ವರನೆನಿಪ ಹಂಸನಂ ವರ[ಪಾಠಾಂ. ರಾಜಹಂಸನ] ಶರಾಸನಾಗಮವಿಶಾರದಂ ತತ್‌ಕ್ಷಣದಿಂ ಅಂತೆಚ್ಚ ಕೋಲಿಂ ಮುನ್ನಮೆ ಸುರುಳ್ದುರುಳ್ದು ಹಂಸಂ ವಿಧ್ವಂಸಮನೆಯ್ದಿತ್ತು (ಪಂಚತಂ. ೧೨೮-೬); ಸರಯೂ ತರಂಗಿಣಿಗೆ ಹಿಮಗಿರಿಯ ದೂರದಿಂದೈತಂದುವೆಡೆಬಿಡದೆ . . . ಹಂಸಕಾರಂಡತತಿ (ಶ್ರೀರಾಮಾ.೧೫-೩೯೮); ಹಂಸನಂಥಾ ಪಕ್ಷಿಯಿಲ್ಲ ಕಂಸನಂಥಾ ರಾಕ್ಷಸನಿಲ್ಲ (ಗಾದ). ೨. ಶ್ರೇಷ್ಠವಾದ ಆತ್ಮ; ಪರಮಾತ್ಮ: ಕಾಯದೊಳಗೆ ಕಾಯವಾಗಿರ್ದೆಯಲ್ಲ ಹಂಸಾ ಸಂಸಾರವಮಾಯಾಪಾಶವ ಬಿಡಲೊಲ್ಲದೆ ಡಿಂಬವ ನೆಚ್ಚಿ ಕೆಟ್ಟೆಯಲ್ಲಾ ಹಂಸ ಜೀವ ಶೂನ್ಯವಾಗಿ ಹೋದುದನಱಿಯಾ ಹಂಸಾ (ಬಸಹ.೨೫); ಸಂಸಾರಬಂಧಪ್ರವಿಧ್ವಂಸಂಗೆ ಹಂಸಂಗೆ . . . ಸಿಂಹವಿಷ್ಟರಂ ಕಣ್ಣ ಪುಣ್ಯದ ಬೆಳಸಿನಂತಿರ್ಪುದು (ಚಬಪು.೨೯-೧೩); ಒಂದು ಕಂಭದೊಳಯ್ದು ಗಂಧ ಹಂಸನ ಕಟ್ಟಿ ಒಂದಱೊಳು ಮನವು ಬೆರೆದಿಹರೆ ಪರಬೊಮ್ಮ ವಂದುತಾನಿರುವ (ಸರ್ವಜ್ಞ. ೫೩೭). ೩. ಶಿವ. ೪. ಬ್ರಹ್ಮ. ೫. ವಿಷ್ಣು. ೬. ಸೂರ್ಯ: ಪುರುಷಾರ್ಥನಿಧಿಪುರಂದರ ಪರಮಪ್ರಿಯಮಿತ್ರನೋರ್ವನುದಯಿಸಿದಂ ಸುಂದರ ರೂಪನರಿಷ್ಟೆಗೆ ಚಿತ್ರರಥಾನನ ಪುಂಡರೀಕಹಂಸಂ ಹಂಸಂ (ಕಾದಂಪೂ. ೭೧೧); ಮರು ದಾಕೀರ್ಣಲಸದ್ವನಪ್ರಸವತಾರಾರಾಜಿತಂ ಹಂಸಬಂಧುರಸಾಪಾಳಿ ರುಚಿಪ್ರದಾನ ಕವಿರಾಜಾಲಂಕೃತಂ . . . ರಂಜಿಸಿದುದಾ ರಾಜೇಂದ್ರನೊಡ್ಡೋಲಗಂ (ರಾಜಶೇ.೫-೨೦). ೧, ೬: ವಿನುತ ಹಂಸಾವಳಿಯ ನದಿಗಳಿಂದಬ್ಜಮಯವೆನಿಸುವ ತಟಾಕಂಗಳಿಂ ಕುಜದ ಪಙ್ತಿಯಿಂ . . . ದೇಶಂ ನವಗ್ರಹಾತ್ಮಕವೆನಿಸಿತು (ಭಾವಚಿಂ. ೨-೬). ೭. ಶಶಿ; ಚಂದ್ರ. ೧, ೭: ಕರಿಯಂತೆ ಕೊಳದಂತೆ . . . ಗಿರಿಜಾತೆಯಂತೆ ಮಿಗೆ ಹಂಸ ಸದ್ವಿಜ ಕೇಕಿಶರ ಸಿಂಹಯುತಮಾಗಿ ಕಾನನಂ ಬಹಳ ರೌದ್ರಾನನಂ ಕಣ್ಗೆಸೆದುದು (ಚಬಪು. ೫೩-೧೯). ೮. ಕಾಮ; ಮನ್ಮಥ. ೯. ಮುನಿ; ಯತಿ: ಯತಿಯೇ ವ್ಯಕ್ತಿಭೇದದಿಂ ಕುಟೀಚಕ ಬಹೂದಕ ಹಂಸ ಪರಮಹಂಸರೆಂದು ನಾಲ್ಕುತೆಱನಾಗಿರ್ಪರ್ (ವಿವೇಕ. ೧೨೬). ೧೦. ಶ್ರೇಷ್ಠನಾದವನು. ೧೧. ಶಕ್ತಿಯುತನಾದವನು; ಬಲಶಾಲಿ. ೧೨. ಅತ್ಯುತ್ತಮವಾದುದು; ಶ್ರೇಷ್ಠವಾದುದು. ೧೩. ತಾವರೆ; ಕಮಲ. ೧೪. ನಿರ್ಮಲವಾದುದು. ೧೫. ಬೆಳಕಿನ ಕಿರಣ; ಕಾಂತಿ. ೧೬. ಕಣ್ಣು; ನೇತ್ರ. ೧೭. ಕುದುರೆ: "ಫುಲ್ಲನೇತ್ರನೊಳರ್ಕನೊಳು ಶಶಿಯೊಳಾತ್ಮನೊಳು ಬಲ್ಲಿದನೊಳಶ್ವನೊಳು ಕಿರಣದೊಳು ಹಂಸೆಯೊಳು ಸಲ್ಲಲಿತ ಶಿವನೊಳು ಸರೋಜದೊಳ್ ಪರಿವರ್ತಿಸಿರ್ಕುಂ ಹಂಸಾಭಿಧಾನಂ" (ಮಂಗರಾ. ೧೪೮-೪೧); "ವಿಮಲಂ ಹಯಮುಖ್ಯ ಮರೀಚಿಯಾತ್ಮ ಕಾಮಾರಿ ಮರಾಳ ನೇತ್ರ ಮುನಿ ವಾರಿಜಬಾಂಧವ ವಾರಿಜೋದ್ಭವಂ ವಾರಿಜವೈರಿ ವಾರಿಜಲೋಚನ ವಾರಿಜ ಹಂಸವಾಚಕಂ" (ನಾನಾರ. ೯). ೧೮. ಕೋಣ; ಮಹಿಷ. ೧, ೯, ೧೫, ೧೮: ಹರಿಸಂದೋಹವಿರಾಜಿತಂ ವಿವಿಧಪದ್ಮಾಲಂಕೃತಂ ಹಂಸಸಂಚರಣಪ್ರೌಢ ಉದಾತ್ತ ವಿಕ್ರಮಗುಣೋದ್ಯತ್ಪುಂಡರೀಕಾಂಕ(ಂ)ಸೌಂದರ ವಾಗಿರ್ಪುದಱಿಂದೆ ಪದ್ಮವನದಂದಂ ಭಾವಿಸಲ್ ವಿಷ್ಣುಭೂವರರಿರ್ಪ್ಪ ಪುರಮುಂ ಸುರೇಂದ್ರಪುರಮುಂ ವಿದ್ವಿಟ್ಟುರಾನೀಕಮುಂ (ಎಕ.V, ಅರಸೀ. ೩೯-೫; 1185). ೧೯. ಉಪನಿಷತ್ತುಗಳಲ್ಲಿ ಒಂದು: ಶ್ರೀರುದ್ರ ಬೃಹದಾರಣ್ಯಕ . . . ಹಂಸ ಪರಮಹಂಸ . . . ಮುದ್ಗಲ ಮುಂಡಕವೆಂಬಿವು ಮೊದಲಾದವೇ ಉಪನಿಷತ್ತುಗಳು (ವಿವೇಕ. ೫). ೨೦. ಪ್ರಮಾಣಕ್ಕೆ ಅನುಸಾರವಾಗಿ ವಿಂಗಡಿಸುವ ಐದು ಪ್ರಕಾರದ ಮನುಷ್ಯಜಾತಿಗಳಲ್ಲಿ ಒಂದು: ವರಾಹಮಿಹಿರನು ಮನುಷ್ಯರನ್ನು ಶರೀರದ ಅಳತೆ ಆಕಾರದ ಮೇಲೆ, ಐದು ಜಾತಿಗಳನ್ನಾಗಿ ವಿಂಗಡಿಸುತ್ತಾನೆ . . . 'ಹಂಸ' ಜಾತಿಗೆ ಸೇರಿದ ಪುರುಷನ ಎತ್ತರವು ೯೬ ಅಂಗುಲ ಪ್ರಮಾಣವಿರುತ್ತದೆ (ಭಾರದ. ೫೧೭). ೨೧. ಒಂದು ಪರ್ವತದ ಹೆಸರು: ಶಂಖಕೂಟ ವೃಷಭ ಹಂಸ . . . ಶಿಖರಿಯಂಬೈದು ಕುಧರಂಗಳೇ . . . ಸುರಸಂತತಿಗಾಶ್ರಯಂಗಳಾಗಿರ್ಕುಂ (ವಿವೇಕ. ೧೭೩). [ಸಂ.]

**ಹಂಸಕ** (ನಾ).೧. ಹಂಸಪಕ್ಷಿ; ಮರಾಳ. ೨. ಕಾಲಿನಲ್ಲಿ ತೊಡುವ ಒಂದು ಬಗೆಯ ಆಭರಣ; ಅಂದುಗೆ; ನೂಪುರ: "ಮಂಜೀರಂ, ಹಂಸಕಂ - ಈ ೨

ಅಂದುಗೆ'' (ಹಲಾಯು. ೯೨-೪೦೭); ಚಾರುಹಂಸಕಮಂ ಸಮಂತಿಕ್ಕಿ ಝಣತ್ಕಾರಮಂ ಮಾಳ್ಪ ಕಿಂಕಿಣಿಗಳಂ . . . ಕಟ್ಟಿ (ಪದ್ಮರಾ. ೩-೪೫); ಹಂಸಕದುಲುಹು ಕಂಕಣನಾದಗೇಳ್ದಮೃತಾಂಶು ವದನೆಯೆದ್ದಳೆಂದು ಹಂಸನಾಥನಿಗೆ ವಂದಿಸಿ ಕಣ್ಣುದೆಱೆದನದೇಂ ಸುಖಶೀಲನೊ ಚಕ್ರಿ (ಭರಚ.೪೧-೧೬೭). [ಸಂ.]

**ಹಂಸಕುಳ** (ನಾ). ಮರಾಳಗಳ ಗುಂಪು; ಹಂಸಗಳ ಸಮೂಹ: ಅಮರನದೀ ಹಂಸಕುಳಂ ಕಮಳಜ ಹಂಸೇಂದ್ರ ಸೇವೆಗೆಟ್ಟುರ್ವ ವಿಳಾಸಮದೆನಿಸಿ ದೇಸೆವೆತ್ತುವು . . . ಚಮರರುಹಂಗಳ್ (ಜಗವಿ. ೧-೩೮). [ಸಂ. ಹಂಸಕುಲ]

**ಹಂಸಕ್ಷೀರನ್ಯಾಯ** (ನಾ). [ತರ್ಕಶಾ] ಒಂದು ಬಗೆಯ ನ್ಯಾಯ; IP ಹಾಲಿಗೆ ನೀರು ಬೆರಸಿಟ್ಟರೆ, ಹಂಸ ಹಾಲನ್ನು ಮಾತ್ರ ಕುಡಿದು ನೀರನ್ನು ಬಿಡುವ ಹಾಗೆ ಕೆಟ್ಟದ್ದನ್ನು ಬಿಟ್ಟು ಒಳ್ಳೆಯದನ್ನು ಮಾತ್ರ ಗ್ರಹಿಸಬೇಕೆಂಬ ನ್ಯಾಯ: ಭಾವಶುದ್ಧಿಯನಳೆಯಲಾವ ಮಂತ್ರಸವಾಲು ಮಾನಸಸರೋವರದಿ ಹಂಸಕ್ಷೀರನ್ಯಾಯ (ನೆಲಮು. ೬೭-೧೨). [ಸಂ.]

**ಹಂಸಗತಿ** (ನಾ).೧. ಹಂಸ ನಡೆಯುವ ರೀತಿ,— ಭಂಗಿ; ಮರಾಳಗಮನ: 'ಹರಿ' ಎನ್ನೆ ಗರಿಕೆದರಿ ರೆಕ್ಕೆ ಹರಡುವ ಸಂತಚಿತ್ತದನುಕರಣೆಯೊಳು ಹಂಸಗತಿಗೆರೆದು (ಮಲೆದೇ. ೫೫-೬). ೨. [ಛಂದ] ವರ್ಣಛಂದಸ್ಸಿನ ಇಪ್ಪತ್ತಾರು ಛಂದಸ್ಸುಗಳಲ್ಲಿ ಇಪ್ಪತ್ಮೂರು ಅಕ್ಷರಗಳುಳ್ಳ ವಿಕೃತಿಛಂದಸ್ಸಿನ ಒಂದು ವೃತ್ತ: ದಿವಿಜಷಡಂಬುಜ ಮಿತ್ರಗಣಪ್ರಕರಂ ಲಗಮುಂ ಕ್ರಮದಿಂ ಪದದೊಳ್ ವಿವರಿಸೆ ಬಂದು ವಿರಾಜಿಸೆ ವಿಶ್ರಮಣಂ ವಸುಸಂಖ್ಯೆಯೊಳ್ಳಯದಿಂದವಿಚಳಿತಂ ರಸವೃತ್ತಿಯನಾಳ್ದೆಸೆಯುತ್ತಿರೆ ಕೇಳ್ಕಳಹಂಸಗತೀ ಭುವನದೊಳೀ ತೆಱದಿಂದಮೆ ಸಂದುದು ನಾಕಿಗನಿಂದುದು ಹಂಸಗತೀ (ಛಂದೋಂಬು. ೨-೧೮೭). [ಸಂ.]

**ಹಂಸಗಮನೆ** (ನಾ). ೧. ಹಂಸದಂತೆ ಮಂದಗತಿಯ ನಡಗೆಯುಳ್ಳವಳು; ಮರಾಳಗಮನೆ. ೨. ಬ್ರಹ್ಮನ ಹೆಂಡತಿ: (೬). [ಸಂ. ಹಂಸಗಮನಾ]

**ಹಂಸಗ್ರೀವ** (ನಾ). ಹಂಸದ ಕೊರಳು: ಹಂಸಗ್ರೀವನಿಹಿತೈಕಪಾದನಿಳಾವಂದ್ಯನ ನಿಂದ್ಯನಬ್ಜಗರ್ಭಂ ಬಂದಂ (ಪಂಪಭಾ. ೧೨-೧೩೮). [ಸಂ. ಹಂಸಗ್ರೀವಾ]

**ಹಂಸಚ್ಛದ** (ನಾ). ಹಂಸದ ನವಿರಾದ ಗರಿ: ಕರಿದಂತಂ ಚಮರೀರುಹಂ ಪುಲಿದೊವಲ್ ಹಂಸಚ್ಛದಂ . . . ಚೂಡಾರತ್ನಮೆಂಬೀ ವನಾಂತರಸಂಜಾತಮನಾತನೋಲಗಿಸಿಗಂ ಸದ್ವಸ್ತುಸಂಘಾತಮಂ (ಪುಷ್ಪಪು. ೫-೧೦೨). [ಸಂ.]

**ಹಂಸತೂಲ, ಹಂಸತೂಳ** (ನಾ).೧. = ಹಂಸಚ್ಛದ: ಲಲಿತಮೃದುತರಹಂಸತೂಲದ ತಳಿತ ಮಂಚದ ತಂಬೆಲರ ನಸುಸುಳಿವಿನಲಿ ಥಳಥಳಿಪ ಜಾಳಕಪಂಕ್ತಿ ರಂಜಿಸಲು (ಬಸವು. ೧೨-೧೪). ೨. = ಹಂಸತೂಲತಲ್ಪ: ಹರಿಸಹಿತನಿಳಯದೊಳ್ ಷಡ್ರಸಾದಿಗಳ ನಾರೋಗಿಸಿ ವಿಮಲ ಹಂಸತೂಲದೊಳ್ಪವಡಿಸಿದಂ (ಜೈಮಿಭಾ.೨-೬೪). **ಹಂಸತೂಳ**: ೧. ಮೃದುವಂ ಪಚ್ಚಡಿಸಿದ ಹಂಸತೂಳದ ಹಾಸುಮಂಚವನಾಸೆಗೆಯ್ಯುತಂ (ನಂಬಿರ. ೧೦-೭೦); ಒಡನೊಪ್ಪುವ ಹಂಸತೂಳದ ತಲ್ಪವ ಕಡುಚೆಲ್ವ ಮಿಸುನಿಮಂಚದಲಿ ಮಡಿಸಿ ಹಚ್ಚಡಿಸಿ ರತ್ನದ ಬಟ್ಟುವೊಱಗ ಸಂಗಡಿಸಿದರತಿಮುದದಿಂದ (ಕಂನವಿ. ೮-೧೩). [ಸಂ.]

**ಹಂಸತೂಲತಲ್ಪ, ಹಂಸತೂಲತಳ್ಪ, ಹಂಸತೂಳತಲ್ಪ** (ನಾ). ಹಂಸದ ನವಿರಾದ ಗರಿಯನ್ನು ಹಾಕಿ ತಯಾರಿಸಿದ ಹಾಸಿಗೆ; IP ಬಹಳ ಮೃದುವಾದ ಹಾಸಿಗೆ : ವರಹಂಸತೂಲತಲ್ಪದೊಳು ಮಣಿವೆಳಗಿನೊಳು . . . ಪವಡಿಸುವ ಸುಕುಮಾರನು (ಹಚಕಾ. ೧೨-೩೦). **ಹಂಸತೂಲತಳ್ಪ**: ಸಜ್ಜೆವನೆಯೊಳುಪಾಧಾನ ವಿರಾಜಮಾನಹಂಸತೂಲತಳ್ಪದೊಳ್ ವಿಶ್ರಮಿಸಿ (ಪಂರಾವಾ. ೫-೩೦ ವ). **ಹಂಸತೂಳತಲ್ಪ**: ಮಿಱುಪ ರತ್ನದ ಶಾರದಾಮಂಟಪದೊಳು ವರಹಂಸತೂಳತಲ್ಪದಲಿ ತರುಣಿ . . . ಧರಣೀಶನ ಕಂಡಳು (ಕಂನವಿ. ೧೧-೧೧೮). [ಸಂ.]

**ಹಂಸತೂಲತಳ್ಪ** 'ಹಂಸತೂಲತಲ್ಪ' ನೋ.

**ಹಂಸತೂಲಿಕಾತಲ್ಪ** (ನಾ).= ಹಂಸತೂಲತಲ್ಪ: ಹಂಸತೂಲಿಕಾತಲ್ಪ ಎಂದರೆ ಹಂಸಗಳ . . . ತುಪ್ಪುಳವನ್ನು . . . ಹತ್ತಿಗೆ ಬದಲಾಗಿ ಉಪಯೋಗಿಸಿ ತುಂಬಿ ಹೊಲಿದ ಲೇಪು (ಸಾಹಿಜೀ. ೫೬). [ಸಂ.]

**ಹಂಸತೂಳ** 'ಹಂಸತೂಲ' ನೋ.

**ಹಂಸತೂಳತಲ್ಪ** 'ಹಂಸತೂಲತಲ್ಪ' ನೋ.

**ಹಂಸತ್ವ** (ನಾ). ಬ್ರಹ್ಮಪದವಿ; ಮೋಕ್ಷ: ಬಳಿಕ ಹಂಸತ್ವದಲಿ ಗಗನವೆ ನಿಲುಗು ಹಮ್ಮು ಮಹತ್ವದಲಿ ಮಹದಳಿವು ಮಾಯೆಯೊಳಾಕೆಯಡಗುವಳೀತನಂಘ್ರಿಯಲಿ (ಕುವ್ಯಾಸ. ೯-೨೪). [ಸಂ.]

**ಹಂಸಧ್ವನಿ** (ನಾ).೧. ಹಂಸಪಕ್ಷಿಯ ಧ್ವನಿ. ೨. [ಸಂಗೀತ]ಒಂದು ರಾಗದ ಹೆಸರು: ಹಂಸಧ್ವನಿರಾಗದ ವಾತಾಪಿ ಗಣಪತಿಂ . . . ಈ ಕೆಲವು ಕೃತಿಗಳನ್ನು ಮಾತ್ರ ಅವರು ತಮ್ಮ ಕಚೇರಿಗಳಲ್ಲಿ ಹಾಡುತ್ತಿದ್ದರು (ಸಂಗೀತ. ೫). [ಸಂ.]

**ಹಂಸಪದ** (ನಾ). ಹಂಸದ ಹೆಜ್ಜೆ; ಮರಾಳದ ಪಾದ: ಇಲ್ಲಿಯದೆ ಚೈತ್ರರಥ ದೊಳ್ಪೆಲ್ಲಮುಮೆಂದಜನೆ ಹಂಸಪದನಂ ತಪ್ಪೆಂದಲ್ಲಿಟ್ಟನೆನಿಪುವಾ ಬನದಲೊಕ್ಕ ಪರಾಗದಲ್ಲಿ ಹಂಸಪದಂಗಳ್ (ಚಂದ್ರಪ್ರ. ೧-೧೦೯). [ಸಂ.]

**ಹಂಸಪದಿ** (ನಾ). ಒಂದು ಬಗೆಯ ಸಸ್ಯ: ''ಗೋದಾಪದೀ – ಹಂಸಪದಿ, ನೆಲದಾಳಿ'' (ಓಷಧಿ. ೫೧). [ಸಂ.]

**ಹಂಸಪಾದ** (ನಾ).೧. ಹಂಸದ ಹೆಜ್ಜೆ; ಮರಾಳದ ಪಾದ.೨. ಒಂದು ಬಗೆಯ ಸಸ್ಯ; ಇಂಗುಳಿಕ: ''ಹಿಂಗುಳಂ ಹಂಸಪಾದಮೆನೆ ಕುರುವಿಂದ'' (ಮಂಗರಾ.೩೧-೭). ೩. ಬರವಣಿಗೆಯಲ್ಲಿ ಅಕ್ಷರ ಮೊದಲಾದುವುಗಳನ್ನು ಬಿಟ್ಟಿರುವ ಸ್ಥಳವನ್ನು ತೋರಿಸಲು ಪಂಕ್ತಿಯ ಕೆಳಗಡೆ ಹಾಕುವ ಚಿಹ್ನೆ: ಪ್ರಯೋಗದಲ್ಲಿ ಬಿಟ್ಟುಹೋಗಿದ್ದ ಒಂದು ಸಾಲನ್ನು ಪುಟಕಟ್ಟಿದ ಕರಡಿನಲ್ಲಿ ಹಂಸಪಾದ ಹಾಕಿ ಸೇರಿಸಿದ್ದಾಯಿತು (ರೂಢಿ). [ಸಂ.]

**ಹಂಸಪಾದಿ** (ನಾ). ಒಂದು ಬಗೆಯ ಸಸ್ಯ: ''ತ್ರಿಪದಿ ಧೃತಮಂಡಳಿ ಮರಾಳಪದಿಯೆನೆ ಹಂಸಪಾದಿ'' (ಮಂಗರಾ.೪೨-೩೮); ಆದಿತ್ಯವಾರ ಉದಯಕಾಲದಲ್ಲಿ ಮೌನವಾಗಿ ಹಂಸಪಾದಿಯ ಮೂಲವ ತಂದು ಇರಿಸಿಕೊಂಡಿದ್ದು ಚೇಳು ಕಚ್ಚಿದರೆ ಆ ಬೇರ ಬಾಯಲ್ಲಿ ಹಾಕಿಕೊಂಡು ಅಗಿದು ಕಿವಿಯಲ್ಲಿ ಉರುಹಲು ವಿಷಹರ (ವೈದ್ಯಸಾ. II, ೧೯೩); ಕಹಿಪಡವಲ, ಎಸಗದ ಬೇರು . . . ಹಂಸಪಾದಿ ಬೇರು, ಬಜೆ, ಶುಂಠಿ ಇವಂ ಕಷಾಯಂಗೈದು ಸೇವಿಸೆ ದೋಷಜ್ವರಂ ಗುಣಮಕ್ಕು (ಸಕವ್ಯ. ೧೦೭). [ಸಂ. ಹಂಸಪಾದಿನ್]

**ಹಂಸಬೆಂಡಿ** (ನಾ). ಒಂದು ಬಗೆಯ ಮರ: ಹಂಸಬೆಂಡಿ: ಮಧ್ಯಮ ಆಕಾರದ ವೃಕ್ಷ. ಮೇಲಾದ ಜಂತೆಗಳಾಗುತ್ತವೆ (ಕಭಾಗ. ೪೯). [ಹಂಸ + < ಬೆಂಡಿಗ]

**ಹಂಸಭೇದ** (ನಾ). ಒಂದು ಬಗೆಯ ವನಸ್ಪತಿ: ''ಅಭವ್ಯಃ, – ಹಂಸಭೇದ'' (ಓಷಧಿ. ೪). [ಸಂ.]

**ಹಂಸಮಂಡಳಿ** (ನಾ). [ನಾಟ್ಯ] ಹದಿನಾರು ಜನರು ಸೇರಿ ಮಾಡುವ ಒಂದು ಬಗೆಯ ನೃತ್ಯ: ಹಂಸಕಲಾಂಭೋಜಹಂಸನೆನಿಪ ನೃಪಹಂಸನ ಸಮ್ಮುಖದಲ್ಲಿ ಹಂಸಮಂಡಳಿಯೆಂಬ ನಾಟ್ಯವ ತೊಡಗಿದರೇಂ ಸೊಬಗು (ಭರಚ. ೧೩-೧೧೮). [ಸಂ. ಹಂಸಮಂಡಲೀ]

**ಹಂಸಮಂತ್ರ** (ನಾ). ಪರಮಾತ್ಮನನ್ನು ಕುರಿತು ಹೇಳುವ ಮಂತ್ರ : ಇವಕೆಲ್ಲ ಪ್ರಾಣಾಯಾಮ ಹಂಸಮಂತ್ರವೇ ಮುಖ್ಯವು (ನವಮೋ. ೧೮-೨೮). [ಸಂ.]

**ಹಂಸಮತ್ತ** (ನಾ). [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ, ಪಾದದಲ್ಲಿ ಹನ್ನೆರಡುಅಕ್ಷರಗಳನ್ನುಳ್ಳ ಜಗತಿ ಛಂದಸ್ಸಿನ ಒಂದು ವೃತ್ತ: ಇಂದುಯುಗಾಗ್ನಿ ಪಯೋಗಣಂಗಳೆತ್ತಂ ಬಂದಿರೆ ಪಾದದೊಳೊಂದಿ ರಾಜಿಸುತ್ತುಂ ಸುಂದರಿ ನಾಕಿಗನಿಷ್ಟದಿಂದೆ ವೃತ್ತಂ ಸಂದುದು ನಾಮದೊಳೊಪ್ಪಿ ಹಂಸಮತ್ತಂ (ಛಂದೋಂಬು.೨-೧೩೪). [ಸಂ.]

**ಹಂಸಮಿಥುನ** (ನಾ). ಹೆಣ್ಣು ಮತ್ತು ಗಂಡು ಹಂಸಗಳ ಜೊತೆ; ಮರಾಳ ದಂಪತಿ : ಅಗಲದ ಹಂಸಮಿಥುನಮೆನೆ . . . ಅಗಲದೆ ನಲಿಯುತಿರ್ದರಾ ದಂಪತಿಗಳ್ (ಜಗವಿ. ೨-೫೨). [ಸಂ.]

**ಹಂಸಯಾನೆ** (ನಾ). ಹಂಸದಂತೆ ನಡಗೆಯುಳ್ಳವಳು; ಹಂಸಗಮನೆ: (೬). [ಸಂ. ಹಂಸಯಾನಾ]

**ಹಂಸರಾಜ** (ನಾ).೧. ಹಂಸಗಳ ಒಡೆಯ; ರಾಜಹಂಸ. ೨. ಒಂದು ಬಗೆಯ ಸಸ್ಯ: (ಮೈಔಗಿ.೩-೪೩).೩. ಒಬ್ಬ ಕನ್ನಡ ಕವಿಯ ಹೆಸರು: ಎರಡು ಪದಮುಂ

ತದ್ಭವಮನೆಯ್ದುವಲ್ಲಿಯೊಂದು ಪದಮನುಟಿಸಿ ತಪ್ಪಾದುದರ್ಕೆ ಹಂಸರಾಜನ ಪ್ರಯೋಗಂ ತರವೇಟ್ಯಾಣಿಕ್ಯಭಂಡಾರದ ಪುಟಿಕೆಗಳಂ (ಶಮದ.೨೪೮ ಪ್ರಯೋ.). [ಸಂ. ಹಂಸರಾಜನ್]

**ಹಂಸರುತಿ** (ನಾ). ಹಂಸಗಳ ಶಬ್ದ, — ಧ್ವನಿ: ಗೃಹದೀರ್ಘಿಕೆಯಿಂದೆಟ್ಟಿರ್ತ ಹಂಸರುತಿ ಮಧುರಮಧುಕರೀಝುಂಕಾರಂ (ಮಲ್ಲಿಪು.೪-೫೮). [ಸಂ.]

**ಹಂಸಲೋಚನಶೋಭಿ** (ನಾ).೧. ಸೂರ್ಯನನ್ನು ಕಣ್ಣಲ್ಲಿ ಉಳ್ಳುದರಿಂದ ಶೋಭಿಸುವವನು; ವಿಷ್ಣು. ೨. ಹಂಸಗಳ ನೋಟವುಳ್ಳದ್ದರಿಂದ ಶೋಭಿಸುತ್ತಿರುವುದು; ಸರೋವರ: ವನಮಾಲಿಯಿಂದದಿಂ ಪದ್ಮಿ ಪದ್ಮಿನಿಯ ವೋಲ್ಬುವನಕುಕ್ಷಿಯ ತೆಜದಿ ಹಂಸಲೋಚನಶೋಭಿ ಹಂಸಲೋಚನಶೋಭಿಯಂತೆ ವರಚಕ್ರಿ ವರಚಕ್ರಿಯವೊಲು ಅನಿಮಿಷಾಶ್ರಯಮೂರ್ತಿ (ಜೈಮಿಭಾ.೧೫-೧೨).
[ಸಂ. ಹಂಸಲೋಚನಶೋಭಿನ್]

**ಹಂಸವಾಹನ** (ನಾ). ಹಂಸವನ್ನು ವಾಹನವಾಗಿ ಉಳ್ಳವನು; ಬ್ರಹ್ಮ. [ಸಂ.]

**ಹಂಸವ್ಯೂಹ** (ನಾ). ಹಂಸದ ಆಕಾರದಲ್ಲಿರುವ ಸೈನ್ಯದ ರಚನೆ: ತುರಗವಟು ವತ್ತಾಱುಕೋಟಿಯನುರುಮದೇಭವನೆಂಟುಲಕ್ಷವ ವರರಥವನಱುವತ್ತುಸಾವಿರವನು ಸಗಾಢದಲಿ . . . ಹಂಸವ್ಯೂಹವನು ಸಡಗರಿಸಿದನು (ಕುಮಾವ್ಯದ್ರೋ.೯-೨೦). 'ಚಕ್ರವ್ಯೂಹ', 'ಪದ್ಮವ್ಯೂಹ' ಪರಾ. [ಸಂ.]

**ಹಂಸಶಾಬಕ** (ನಾ). ಹಂಸದ ಮರಿ; ಮರಾಳಶಿಶು: ಮುಕುರದೊಳು ಮಾರ್ಪೊಳೆವ ಚಂದ್ರಮಂಡಲದಂತೆ ಸುಕರಾಂಬುವೊಳ್ ಪೊಳೆವ ಹಂಸಶಾ[ಪಾಠಾಂ. ಸಾ]ಬಕದಂತೆ (ಬಸರ.೧-೧೨೨). [ಸಂ.]

**ಹಂಸಸಲ್ಲಾಪ** (ನಾ). ಪರಮಾತ್ಮನ ವಿಷಯದಲ್ಲಿ ಮಾತನಾಡುವುದು, — ಸಂಭಾಷಣೆ: ಪುಂಸರಿಗೆ ಪೂರ್ವಕೃತಪುಣ್ಯಪರಿಪಾಕದಿಂ ಹಂಸಸಲ್ಲಾಪ ಸಂದರುಶನಾದಿಗಳೊಳ್ ರಿರಂಸೆ ಪುಟ್ಟುವುದಲ್ತೆ (ವಂಕಾರಾ.೨-೩-೧). [ಸಂ.]

**ಹಂಸಾಯ** (ನಾ). ಹೊಸದಾಗಿ ಬಿತ್ತುವರಿ ಮಾಡಿದ ಭೂಮಿಯ ಮೇಲೆ ಹಾಕುವ ಕಂದಾಯ: (ಕೈಶ್ಗ.II, ೫೪೯). [ಸಂ.]

**ಹಂಸಾರ್ಭಕ** (ನಾ).= ಹಂಸಶಾಬಕ: ನೆಲವರ್ಚುವ ಪೆಣ್ಗಳ ಕರತಳದಿಂ ಕರತಳಕೆ ಬರ್ಪ ಬಾಲಕನಾಗಳ್ ಗೆಲೆವಂದಂ ಕೆಂದಾವರೆಯಲರಿಂದಲರ್ಗೆಯ್ದೆ ತಳರ್ವ ಹಂಸಾರ್ಭಕನಂ (ರಾಜಶೇ. ೪-೬೯). [ಸಂ.]

**ಹಂಸಾವಳಿ** (ನಾ). ಒಂದು ಬಗೆಯ ಸೀರೆ : ಪಳಿಯು ಪಟ್ಟಾವಳಿಯು ನೇತ್ರಾವಳಿಯು ಹಂಸಾವಳಿಯು (ಬಸವು.೧೧-೨೫). [ಹಂಸ + < ಪಳಿ$_4$ (< ಪಟ್$_5$)]

**ಹಂಸಿ** (ನಾ).೧. ಹೆಣ್ಣುಹಂಸ: ಶ್ರೀಕಾಂತ ತನ್ನುರಃಪದ್ಮಾಕರದೊಳ್ ಹಂಸಿಯಂತೆ ನೆಲಸಿರೆ (ಪುಷ್ಪಪು.೩-೧). ೨. ಒಂದು ಬಗೆಯ ಸಸ್ಯ: "ಪರಿಪಾಲೀ-ಹಂಸೀ" (ಓಷಧಿ.೯೨). [ಸಂ. ಹಂಸೀ]

**ಹಂಸೀಭಾವ** (ನಾ). ಹಂಸದ ರೀತಿ : ಶ್ರೀವಿಶದವರ್ಣೆ ಮಧುರಾರಾವೋಚಿತೆ . . . ಸರಸ್ವತಿ ಹಂಸೀಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್ (ಕವಿರಾ. ೧-೩). [ಸಂ.]

**ಹಂಸೆ** (ನಾ). ೧. = ಹಂಸಿ ೧ : ಚಕೋರಂ ಹಂಸೆ ಕುರ್ಕುಗಿಳಿ . . . ಮೊದಲಾಗೊಡೆಯ ಗಗನಚರಂ (ವಡ್ಡಾರಾ. ೯೭-೯); ಅರಳಿಯ ಮರದ ಮೇಲೊಂದು ಹಂಸೆ ಗೂಡನಿಕ್ಕಿತ್ತ ಕಂಡೆ (ಅವಚಂ. ೪೯-೨೦೮); ಹಂಸೆಗಳ ನಡೆಗಳ ಹೆಟ್ಟುಗೆಯರುಣಬಡಿಸಿದರು ಬಹುವಿಧದ ಭಕ್ಷ್ಯಗಳ (ತೊರರಾ. ೬-೫೫-೪೦). ೨. = ಹಂಸಿ ೨ : "ಮರಾಳಿಕಾ-ಹಮ್ಮಿಟಿಲ, ಹಂಸ" (ಓಷಧಿ.೧೧೮). [ಸಂ. ಹಂಸ]

**ಹಂಹ** (ನಾ). ಪಾಪ; ಕರ್ಮ: "ಹಂಹಮೆನಲ್ಕೆ ಪಾಪ" (ಕರ್ಣಾನಿ. ೪೩); ಶ್ರೀರಾಮರಂ ವೊಕ್ಕಳಂ ತನ್ನೊಂದು ಹಂಹದಟಿವಗ್ಗಿನ ಬೆಸೆಗೆಯ್ಮೆಯಿಂ ತೆಗಟ್ಟಿ ಕೀಟನ ದುರ್ಗತಿಗಿಟಿವೆಂ (ರಾಮಾಶ್ವ. ೧೧೧-೧೮). 'ಹಂಹಗೆಯ್ತ' ಪರಾ. [< ಸಂ. ಅಂಹ]

**ಹಂಹಗೆಯ್ತ** (ನಾ). ಪಾಪದ ಕೆಲಸ; ಕೆಟ್ಟ ಕೆಲಸ: ಮದಿಸಿದ ಹಂಹಗೆಯ್ತದಳಿವಾನಿಸ ದಣ್ಣಣೆಯಿನ್ನದುಂಟೆನುತ್ತದಿರಿಪ (ಸಂಸಪ. ೩೯-೯). [ಹಂಹ + ಕೆಯ್ತ$_1$]

**ಹಕನಾಕ** (ನಾ). (ಉಕ) ಯೋಗ್ಯತೆಯಿಲ್ಲದವನು; ಕ್ಷುದ್ರಮನುಷ್ಯ: ಅಂತಿಂತಹ 'ಹಕನಾಕ' ಗಳ ಪಾಲುಮಾಡಲು ಬಾಳವ್ವ ಸುತರಾಂ ಒಪ್ಪಲಿಲ್ಲ (ಗಂಗಾಗಾ. ೮೨); ಇಷ್ಟಾಗಿ ಅವಾ ಆರಿಸಿ ಬಂದರ . . . ನಮಗೇನು ಒಂದು ಐದುರೂಪಾಯಿ ಪಗಾರ ಹೆಚ್ಚು ಕೊಡತಾನೇನು? ಭಲೆ ಹಕನಾಕ ಅವ (ಅಪನಾ.೨೧೪).
[<— ಮರಾ. ಹಕನಾಕ, ಹಕನಾಹಕ = ವಿನಾಕಾರಣ]

**ಹಕಲ** (ಗು). ಅಖಂಡವಾದ; ಸ್ಥಿರವಾದ: 'ಹಕಲಮನಸು' ಪರಾ.
[< ಸಂ. ಅಕಲ]

**ಹಕಲಮನಸು** (ನಾ). ಸ್ಥಿರವಾದ ಮನಸ್ಸು; ಚಂಚಲವಲ್ಲದ ಮನಸ್ಸು: ಕಕುಲಾತಿ ತೋರಿಯದೆ ಸಕಲ ಸೊಗಸಿನಿಂದ ಹಕಲಮನಸಿನಲ್ಲಿ ಬಕನು ಕುಳಿತು ತನ್ನ ಭಕುತಿಗೆ ಒಂದು ಕುಯುಕುತಿಯ ನಡಿಸಿ ಉದಕತೀರವಿದ್ದಂತೆ ಬಕುತಿಯ ತೋರುವೆನೊ (ವಿಸಾಸು. ೬೬-೪).
[ಹಕಲ + ಮನಸು]

**ಹಕಲು** 'ಹಕ್ಕಲ್' ನೋ.

**ಹಕಳಾಡು** (ಕ್ರಿ).೧. ಅಲುಗಾಡು. ೨. ಅಶಾಶ್ವತವಾಗಿರು (?): ಯಿವರ್ರಿಗೆ ಚಪರ ಕಾಣಿಕೆಯಿಲ್ಲ ಮಗ್ರಿಕಾಣಿಕೆಯಿಲ್ಲ ಡೊಂಬಕಾಣಿಕೆಯಿಲ ಲಿಂಗಕಾಣಿಕೆಯಿಲ ಹಕಳಾಡದ ಬಿರುದು ಹಳದಿಗಡಿಗೆ ಹಗಲುದೀವಿಟಿಗೆ (ಎಕ. XVI, ಗುಬ್ಬಿ. ೬೯-೩೩; ?). [< ಅಗುಳಾಡು?]

**ಹಕಾರ** (ನಾ). 'ಹ' ಎಂಬ ಅಕ್ಷರ: ಸಂದ ಪಕಾರಕ್ಕೆ ಹಕಾರಂ ದೊರೆಕೊಳ್ಗುಂ ವಿಕಲ್ಪದಿಂ (ಶಮದ. ೧೫೯). [ಸಂ.]

**ಹಕಾರಿಹೊಡೆ** (ಕ್ರಿ). ಕೂಗಿಡು; ಬೊಬ್ಬೆಹೊಡೆ: ಕೇವಲ ಹಾದೀ ತಪ್ಪಿಕೊಂಡ ಮನುಷ್ಯನೊಬ್ಬನು 'ಹಕಾರಿ' ಹೊಡೆಯುವಂತೆ ಕೂಗುಗಳು ಕೇಳಿಸುತ್ತಿದ್ದವು (ಕಾಳರಾ.೧೯೯).
[ಹಕಾರ್$_0$ (IP <— ಮರಾ. ಹಾಕಾರಣೇ = ಜೋರಾಗಿ ಕೂಗು)+ ಹೊಡೆ$_1$ (< ಪೊಡೆ$_1$)]

**ಹಕೀಕತ್, ಹಕೀಕತು, ಹಕೀಕತ್ತು** (ನಾ). ನಿಜವಾದ ವರ್ತಮಾನ; ಸತ್ಯವಾರ್ತೆ; ವಾಸ್ತವಸುದ್ದಿ: ಹಕೀಕತ್ ಏನೇನೂಂತ ಅವರನ್ನು ತಡೆದು ನಿಲ್ಲಿಸಿ ಕೇಳಿದ (ಕುಮಾಕಾ. ೧೮೫). **ಹಕೀಕತು:** ನಿಮಗೆಲ್ಲಾ ಹಕೀಕತು ಮೊದಲಿನಿಂದಲೂ ಗೊತ್ತಾಐತಿ (ಗ್ರಾಮಾಯ. ೪೭೩); ಪದ್ಮನಾಭನು ಅವಳ ಹಕೀಕತನ್ನು ವಿವರವಾಗಿ ತಿಳಿದುಕೊಂಡು ಮೃದುಳಾಬೆಹನಳಿಗೆ ಅರುಹಿದ (ದರ್ಶನ. ೧೧೮). **ಹಕೀಕತ್ತು:** ಅವರ ಮಧ್ಯಯುದ್ಧದ ಹಕೀಕತ್ತು ಆಗಿ ಇರುವ ಸಮಯ ಜಲ್ದು ಆಗುವದರಿಂದಾ (ರಾಜೇಂದ್ರ. ೮೨); ನಿನಗೆ ಇನ್ನೊಂದು ಹಕೀಕತ್ತು ಹೇಳೋದು ಮರೆತಿದ್ದೆ ಅನಂತಾ (ಬೀಳತ. ೧೨೫); ಎಲ್ಲಾ ಹಕೀಕತ್ತು ಕೇಳಿ ಕಾಕಾನು ಬಹಳ ಚಡಪಡಿಸಿದ (ವೃನಿ. ೪೪೫).
[<— ಅರ. ಹಿಂ. ಹಕೀಕತ್; ಮರಾ. ಹಕೀಕತ್, ಹಕೀಗತ್]

**ಹಕೀಕತು** 'ಹಕೀಕತ್' ನೋ.

**ಹಕೀಕತ್ತು** 'ಹಕೀಕತ್' ನೋ.

**ಹಕೀಮ** (ನಾ). ಯುನಾನಿವೈದ್ಯ: ಹಕೀಮರ ಲೇಹ್ಯ ಮುರಬ್ಬ ಎಲ್ಲವನ್ನು ತರಿಸಿದಂತೆ ತಿಪ್ಪೆಗೆ ಎಸೆದಾಯಿತು (ಸಿಡಿಲು. ೧೧೬); ಹಕೀಮರಿಗೆ ಹೇಳಿ ಕಳುಹಿಸಲೆ (ಕೃಷ್ಣಭಾ. ೩); ದೇಶೀಯ ಹಕೀಮರು ಯಾವ ಫಲವೆಂದು ಹೇಳಬಹುದು (ಕಮಕ. ೧೮).
[<— ಅರ. ಹಿಂ. ಮರಾ. ಹಕೀಮ್]

**ಹಕೋರಿ** (ನಾ). ಒಡೆತನ; ಅಧಿಕಾರ; ಸ್ವಾಮ್ಯ (?): ಭೈರವದೇವಒಡೆಯರು ತಮ್ಮ ಹಕೋರಿಯ ಒಳಗಣ ಬಳನುನಾಡ ಕೈಯಲ್ಲಿ ಕಾಣಿಕೆಯ ಮಾಡಿಕೊಂಡು (ಕಇ.I, ೫೧-೬; 1432). [< ಹಕ್ಕುದಾರಿ?]

**ಹಕ್ಕರಕಿ, ಹಕ್ಕರಿಕೆ$_1$** (ನಾ). ಒಂದು ಬಗೆಯ ಸೊಪ್ಪು; ಶಂಖಿನಿ: ಉರುಳಿಗಡ್ಡಿ, ಬಳ್ಳೊಳ್ಳಿ, ಚಟ್ನಿ, ಹಕ್ಕರಕಿ, ಹೆಸರುಕಾಳು ಎಲ್ಲಾ ನನ್ನ ಬಯಕೆಯ ಜೀನಸುಗಳೇ ಆಗಿದ್ದವು (ವೃನಿ. ೧೧೫). **ಹಕ್ಕರಿಕೆ$_1$:** "ಶಂಖಿನೀ, ಚೋರಪುಷ್ಪೀ, ಕೇಶಿನೀ, ಕಡಿಯಾಲದ ಗಿಡದ ಪೆಸರುಗಳು, ಹಕ್ಕರಿಕೇಸೊಪ್ಪಿನ ಹೆಸರು" (ಸಿದ್ಧಾಂತಿ.೧೪೧). 'ನಾಯಿಹಕ್ಕರಿಕೆ ಗಿಡ' ಪರಾ. [?]

**ಹಕ್ಕರಕ್ಕೆ** 'ಪಕ್ಕರಿಕೆ' ನೋ.

**ಹಕ್ಕರಿ** 'ಪಕ್ಕರೆ$_1$' ನೋ.

**ಹಕ್ಕರಿಕೆ$_1$** 'ಹಕ್ಕರಕಿ' ನೋ.

**ಹಕ್ಕರಿಕೆ$_2$** 'ಪಕ್ಕರಿಕೆ' ನೋ.

**ಹಕ್ಕರಿಕ್ಕೆ** 'ಪಕ್ಕರಿಕೆ' ನೋ.

**ಹಕ್ಕರಿಗೆ** 'ಪಕ್ಕರಿಕೆ' ನೋ.

**ಹಕ್ಕರೆ** 'ಪಕ್ಕರೆ$_1$' ನೋ.

**ಹಕ್ಕಲ್, ಹಂಕಲು, ಹಂಕಳು, ಹಕಲು, ಹಕ್ಕಲ, ಹಕ್ಕಲು, ಹಕ್ಕಲ್ಲು, ಹಕ್ಲು** (ನಾ).೧. (ಬೆಳೆ ಕೊಯ್ದ) ಬಯಲುಪ್ರದೇಶ; ಬೀಳು; ಪಾಳು: ಆ ಗರ್ದ್ದೆಯ ತೆಂಕಣ ಹಳ್ಳದಿಂ (೦) ತೆಂಕಲ್ ಹಕ್ಕಲ್ ಮತ್ತರೊಂದು (ಇಆ. V, ೧೬-೨೯; 1019). **ಹಂಕಲು:** ೧. ಇವು ಬೇರೆ ಬೇರೆ ಸ್ಥಿತಿಯ ನೆಲ; ಹಂಕಲು ಬೆಳೆ ಕುಯ್ದ ನೆಲ (ನಮ್ಮನು.೨೪೩). ೨. ಹೊಲದಲ್ಲಿ ಚೆಲ್ಲಾಡಿದ ತೆನೆ: ಹಂಕಲು ಆಯುತ್ತಿದ್ದವನಿಗೆ ಅರಿಹುಲ್ಲು ಸಿಕ್ಕಿದ ಹಾಗಾಯ್ತು (ಹುಟ್ಟಿಹ. ೧೫೦). **ಹಂಕಳು:** ೧. ದನವಂ ಕೊಂಡು ಹಂಕಳು XXX ಮುಚ್ಚುವಲ್ಲಿ (ಎಕ.VIII, ಸೊರಬ. ೩೦೯-೬; 1212). **ಹಕಲು:** ೧. [ಬಿಟ್ಟಿ]ಗೊಂಡದ ಬಳಿಯ ಹಕಲು ಮತ್ತ೧ (ಸೌಇಇ. XX ,೬೬-೫೮; 1118). **ಹಕ್ಕಲ:** ೧.ಎರಡು ಹಕ್ಕಲದ XXX ಹತ್ತಿಯ ಮಳವೆ (ಸೌಇಇ.XX , ೬೧-೬೪; 1109); ಹಕ್ಕಲದ ದಾರಿಯಲ್ಲೂ ಕೆಲವು ಭೂತದ ಕಲ್ಲುಗಳಿವೆ (ಪದ್ಮಸ. ೨೦); ಕಟ್ಟಂಗೆರೆಯ ಉಬ್ಬಿನ ಇಕ್ಕಡೆಯ ಹಕ್ಕಲದ ನಡುವೆ ಮಲೆನೂರಿನಿಂದ ಹಾದು ಬರುವ ಕೆಮ್ಮಣ್ಣಿನ ಮಾರ್ಗವಿದೆ (ದೇವಹಂ. ೫೨). ೩. ''ಬೀಕಲು; ಹಾಳಾಗಲು ಬಂದ ಬೆಳೆ'' (ಬಾನಕೋ. ೫೧). **ಹಕ್ಕಲು:** ೧. ದೇವರ ಸೊಡರೆಣ್ಣೆಗೆ ಬಿಟ್ಟ ಹಕ್ಕಲು ಮತ್ತರೊಂದು (ಎಕ.VIII, ಸೊರಬ. ೨೯೯-೨೭; 1074); ಬಲ್ಲವತ್ತದ ಕಟ್ಟೆಯ ಒತ್ತಾರಿಣ ಹಕ್ಕಲ ಬರದು (ಎಕ.VII, ಶಿವಮೊ. ೨೬-೨೫೪; 1524); ಹಕ್ಕಲು ಇಲ್ಲದ ಒಕ್ಕಲು ಅಲ್ಲ ಮಕ್ಕಳಿಲ್ಲದ ಭಾಗ್ಯವಿಲ್ಲ (ಗಾದೆ). ೩. ಹಕ್ಕಲಂತೆ ಬಡಿಹಕ್ಕೆ ವಂದು ಮುಯ್ಯಿಲ್ಲದೊಕ್ಕಲಂತೆ ಬಡುಗುಲಿಗೆ ವಂದು (ಧರ್ಮಾಮೃ. ೩-೬೬). ೪. ಚೆಲ್ಲಾಡಿರುವಿಕೆ; ಚೆದರಿರುವಿಕೆ: ಕಾಣಿಕೆಯನಿತ್ತಖಿಳಸುಭಟಶ್ರೇಣಿ ಕಂಡುದು ನುಡಿಯ ಹಾಣಾಹಾಣಿಗಳ ಭಾಷೆಗಳ ಹಕ್ಕಲು ವೀರರುಕ್ಕುಗಳ (ಕುವ್ಯಾಶ. ೧-೨೬). **ಹಕ್ಕಲ್ಲು:** ೧. ತೋಟ ತುಡಿಕ್ಕೆ ಹಕ್ಕಲ್ಲು ಕುಂಮರಿ (ಎಕ.VI, ಕೊಪ್ಪ.೪೯-೨೨; 1392). **ಹಕ್ಲು:** ೧. 'ಹಕ್ಲುಗದ್ದೆ' ಪರಾ.

**ಹಕ್ಕಲ ಕಾಯಕ** = ಹೊಲಗಳಲ್ಲಿ ಕಾಳು, ತೆನೆ ಬೇರ್ಪಡಿಸುವ ಕೆಲಸ: ಮಡದಿ ಹಕ್ಕಲ ಕಾಯಕದೊಳು ಗೌರಮ್ಮನು ಕಸವಿಕೋಟೆಯ ಬಸವಣ್ಣ (ಲಶಿಚಂ. ೩೮-೨೬). **ಹಕ್ಕಲನು ಹೊಗಿಸು** = (ಆಲಂ) ಬಯಲಿಗೆ ಬರುವಂತೆ ಮಾಡು; ನಿರಾಶ್ರಯಗೊಳಿಸು: ಸುರಪಾಲಕನ ಪರಿಭವಿಸಿ ಹಕ್ಕಲನು ಹೊಗಿಸಿದನು (ನಿಭಾಗ. ೭-೩-೩). **ಹಕ್ಕಲಾಗು** = ೧. ಬಯಲಾಗು; ಗಿಡಮರಗಳಿಲ್ಲವಾಗು: ಬರಬರುತ್ತಾ ಕಾಡಿನಂಚು ಹಕ್ಕಲಾಯಿತು (ಮಲಮ. ೨೨). ೨. ಚದುರು; ಶೂನ್ಯವಾಗು: ಹೊಕ್ಕವರು ಹೆಣಗಿದರೆ ನಿಱಿಗರುಳೊಕ್ಕವಡಗುದಿರಿದವು ಮೋಹರ ಹಕ್ಕಲಾಗಲು ಹರಿದು ಸಬಳಿಗರಿಱಿದು ತೋಱಿದರು (ಕುವ್ಯಾಭೀ. ४-४೨).

[ದೇ. ‖ ತಮಿ. ಪೊಱುಕ್ಕು= ಆಯು; ತುಳು. ಹಕ್ಕಲ್]

**ಹಕ್ಕಲ** 'ಹಕ್ಕಲ್' ನೋ.

**ಹಕ್ಕಲಗೈಸು** (ಕ್ರಿ). ಬೀದಿಪಾಲು ಮಾಡು; ನಿರ್ಗತಿಕನನ್ನಾಗಿ ಮಾಡು: ಪರಿಪರಿ ಭಯಂಗಳು ಹರಿಬಿಟ್ಟು ಎನ್ನನು ಹಕ್ಕಲಗೈಸದೆ ಪರಿಪಾಲನೆ ಮಾಡು (ಮೋಕ್ಷದೀ.೩೬-೫).

[ಹಕ್ಕಲ (< ಹಕ್ಕಲ್) + ಕೈಸು (< ಕೆಯ್ಸು)]

**ಹಕ್ಕಲಾಯು** (ಕ್ರಿ). (ಹೊಲದ ಬಯಲಿನಲ್ಲಿ ಬಿದ್ದಿರುವ) ತೆನೆಗಳನ್ನು ಆಯು,— ಶೇಖರಿಸು: ''ಧೃಶ್ನಾತಿ — ಹಕ್ಕಲಾಯ್ದಪಂ'' (ಕಾಶಕ್ಕ. ೨೪೯).

[ಹಕ್ಕಲು (< ಹಕ್ಕಲ್) + ಆಯು$_1$(< ಆಯ್$_1$)]

**ಹಕ್ಕಲಿಕೆ** 'ಪಕ್ಕರಿಕೆ' ನೋ.

**ಹಕ್ಕಲು** 'ಹಕ್ಕಲ್' ನೋ.

**ಹಕ್ಕಲುಗಡಿ** (ನಾ). ಬಯಲಾದ ಮೇರೆ; ಇಲ್ಲದ ಸೀಮೆ: ಬಿಡದಲಾ ಕುರುಸೈನ್ಯ ಹಕ್ಕಲುಗಡಿಯ ಭಟರೊಗ್ಗಾಯ್ತಲಾ (ಕುವ್ಯಾಗ. ೧-೬೭).

[ಹಕ್ಕಲು (< ಹಕ್ಕಲ್) + ಗಡಿ$_1$]

**ಹಕ್ಕಲ್ಮೀಸೆ** (ನಾ). (ಕೂಳೆಯಂತೆ) ಒರಟಾಗಿರುವ ಮೀಸೆ: ನೆಗಳ್ದ ಹಱಿಗಡ್ಡ ಹಕ್ಕಲ್ಮೀಸೆಗಳ್ ಮನಂಬುಗುವ ನೊಸಲೊಳ್ತೋರ್ಪ ಸಿತಭೂತಿ ಕಂಧರದೊಳಗೆ ಮಿಱುಪ ರುದ್ರಾಕ್ಷಮಾಲೆಯಚ್ಛಸ್ಫಟಿಕಮಣಿಗೂಡಿ ತೊಳಗುತಿರ್ಪ (ಆರಾಚ. ೧-೭-೮).

[ಹಕ್ಕಲ್ + ಮೀಸೆ]

**ಹಕ್ಕಲ್ಲು** 'ಹಕ್ಕಲ್' ನೋ.

**ಹಕ್ಕಶಾಯಿ** 'ಹಕ್ಕುಶಾಯಿ' ನೋ.

**ಹಕ್ಕಳೆ** (ನಾ).೧. ಬಿರುಕು ಬಿಟ್ಟು ಮೇಲೆ ಎದ್ದಿರುವ ಪದರ,— ಪೊರೆ,— ಸಿಪ್ಪೆ: ಆ ನಾಡೊಳಗೆ ಸ್ಥಳವೃತ್ತಿಯಾಗಿ ಹಕ್ಕಳೆಯ ಹೊಲನು ಮಂತ್ರಿ ಭೋಗಾಭ್ಯನ್ತವಾಗಿ ಕೊಟ್ಟು (ಎಕ. VII, ಶಿಕಾರಿ. ೧೦೦-೭೧; 1129); ಗೋಡೆಗಳಿಗೆ ಅಂಗೈದಪ್ಪದ ಹಕ್ಕಳೆಗಳಾಗಿ ಅಂಟಿಕೊಂಡಿದೆ (ಗಂಗಾಸಾ. ೭). ೨. ಅರಗು; ಅಲಕ್ತಕ: ''ಹಕ್ಕಳೆಯೆಲತ್ತಿಕೆಯನಿಕ್ಕು'' (ಮಂಗರಾ. ೩೩-೮).

**ಹಕ್ಕಳೆಯಾಗು** = ಪದರವಾಗು; ಪೊರೆಯಾಗು: ಈ ಗುಳ್ಳೆಗಳು ಅತಿ ಸುಲಭವಾಗಿ ಒಡೆದುಕೊಂಡು ಹಕ್ಕಳೆಯಾಗುತ್ತವೆ (ಕೆಲರೋ.೬೬). [?]

**ಹಕ್ಕಳೆಯೇಳು** (ಕ್ರಿ). ಪದರವೇಳು; ಪೊರೆಯಾಗು: ಕಾಲಿನ ಹಿಮ್ಮಡಿಯು ಒಡೆದು ಹಕ್ಕಳೆಯೆದ್ದಿದೆ (ರೂಢಿ). [ಹಕ್ಕಳೆ + ಏಳು$_1$ (< ಏೞ್$_1$)]

**ಹಕ್ಕಿ** 'ಪಕ್ಕಿ' ನೋ.

**ಹಕ್ಕಿಕಾರ** (ನಾ). ಒಂದು ಬಗೆಯ ಔಷಧೀಸಸ್ಯ: ಹಕ್ಕಿಕಾರ, ಸೊಗದೆ, ಸಿಲದೆ, ನಾಯಿನಾರೆ ಇವಂ ಆಡಿನ ಹಾಲಲ್ಲಿ ಕೊಡಿಸುವುದು (ವಿಷ್ಣುವಿ. ೧೪೭). [?]

**ಹಕ್ಕಿನೋಟ** (ನಾ).೧. ಪಕ್ಷಿಯು ಹಾರುವಷ್ಟು ಎತ್ತರದಿಂದ ಕಾಣುವ ಭೂದೃಶ್ಯ; ದೂರದಿಂದ ಕಾಣುವ ಸಮಗ್ರನೋಟ; ಪಕ್ಷಿನೋಟ: ''ಎತ್ತರದಿಂದ ಊರು, ಮೊ.ಗಳ ವಿಶಾಲವಾದ ನೋಟ; ಹಕ್ಕಿನೋಟ (ರೂಪ) ಸೂಕ್ಷ್ಮನಿರೂಪಣ; ಒಟ್ಟಡಕ'' (Birds Eye- View. ೯೦೩೩). ೨. (ಆಲಂ) ಯಾವುದಾದರೊಂದು ವಿಷಯದ ಸ್ಥೂಲವಾದ ವಿವರಣೆ: ಸಮಾಜರಚನೆ ಸಂಸ್ಕೃತಿ ಸಂಘಟನೆಗಳ ವಿಕಾಸವನ್ನು ಮೇಲೆ ಹಕ್ಕಿನೋಟದಿಂದ ಅವಲೋಕಿಸಲಾಗಿದೆ (ಮಾವಾದ. ೭೮). [ಹಕ್ಕಿ (< ಪಕ್ಕಿ) + ನೋಟ]

**ಹಕ್ಕಿಪಿಕ್ಕಿ** 'ಹಕ್ಕಿಬಿಕ್ಕಿ' ನೋ.

**ಹಕ್ಕಿಬಿಕ್ಕಿ, ಹಕ್ಕಿಪಿಕ್ಕಿ** (ನಾ). ೧. ಒಂದು ಬಗೆಯ ಅಲೆಮಾರಿಜನಾಂಗ; **P** ಹಕ್ಕಿಗಳನ್ನು ಹಿಡಿದು, ಮಾರಿ ಜೀವಿಸುವವರು: ಮೂರುರಾತ್ರಿ ಹಕ್ಕಿಬಿಕ್ಕಿಯವರನ್ನು ಕರಸಿ ಗೂಬೆನ ಹೊಡೀರಿ ಎಂದೆ (ಮನೋನಂ. ೮೪). ೨. ಕೈಚಳಕ; ಕಣ್ಕಟ್ಟು; ಇಂದ್ರಜಾಲ: (ಕ). **ಹಕ್ಕಿಪಿಕ್ಕಿ:** ೧. ಚಂದಿ ಸೀರೆಗಳನ್ನು ಸುತ್ತಿದ್ದ ಇಬ್ಬರು ಹಕ್ಕಿಪಿಕ್ಕಿಯುವತಿಯರು . . . ನರ್ತಿಸುತ್ತಿದ್ದರು (ಸರ್ವಮಂ. ೫೯).

[IP ಇದು ಪ್ರತಿಧ್ವನಿಶಬ್ದವಿರಬಹುದು]

**ಹಕ್ಕಿರೋಗ** (ನಾ). ಮೂಳೆ ಮೆತುವಾಗುವ ಒಂದು ಬಗೆಯ ಮಕ್ಕಳ ರೋಗ: ನಮ್ಮನೆ ಮಕ್ಕಳಿಗೆ ಮನುಷ್ಯರಿಗೆ ಬರುವ ಖಾಯಿಲೆಗಳು ಬರಬಾರದೆ? ನಾಯಿಕೆಮ್ಮು, ಹಕ್ಕಿರೋಗ . . . ಹುಲಿಹುಣ್ಣು — ಖಾಸ್‌ಬಂಗಲೆ ಖಾಯಿಲೆಗಳೆಲ್ಲಾ ನಮ್ಮ ಮನೆಲೇನೆ! (ತುಟಮಿ. ೨೯). [ಹಕ್ಕಿ(< ಪಕ್ಕಿ) + ರೋಗ]

**ಹಕ್ಕಿವಾರ್ಜಿಹುಲ್ಲು** (ನಾ). ಒಂದು ಬಗೆಯ ಹುಲ್ಲು: ಹಕ್ಕಿವಾರ್ಜಿಹುಲ್ಲು, ಮರಗತಟ್ಟು ಹುಲ್ಲು (ಮೈಔಗಿ. ೧೦-೧೬೩).

[ಹಕ್ಕಿ (< ಪಕ್ಕಿ) + ವಾರ್ಜಿ$_0$ + ಹುಲ್ಲು(< ಪುಲ್)]

**ಹಕ್ಕಿವಾಹನ** (ನಾ). ಗರುಡಪಕ್ಷಿಯನ್ನು ವಾಹನವಾಗಿ ಉಳ್ಳವನು; ವಿಷ್ಣು: ಹಕ್ಕಿವಾಹನನ ಗುಣ ಲೆಕ್ಕಿಸಿ ಪೊಗಳದೆ ಬೆಕ್ಕಸಬೆಱಗಾಗಿ ಅಕ್ಕಿಗೆ ತಿರುಗುವವ (ಕನಕ. ೧೦೭-೨೦). [< ಸಂ. ಪಕ್ಷಿವಾಹನ]

**ಹಕ್ಕಿಶಕುನ** (ನಾ). ಹಾಲುಹಕ್ಕಿಯಿಂದ ಸೂಚಿತವಾಗುವ ಶುಭಾಶುಭ: ಹಕ್ಕಿಶಕುನ ಕೇಳಿ ಬಂದರು (ರೂಢಿ). [ಹಕ್ಕಿ (< ಪಕ್ಕಿ) + ಶಕುನ]

**ಹಕ್ಕಿಸಿಳ್ಳೆಗಿಡ** (ನಾ). ಒಂದು ಬಗೆಯ ಸಸ್ಯ: ''ಕೂರ್ಚಶೀರ್ಷಃ . . . ಜೀವಕವೆಂಬುವ ಔಷಧ, ಹಕ್ಕಿಸಿಳ್ಳೆಗಿಡ'' (ಸಿದ್ಧಾಂತಿ. ೧೪೦).

[ಹಕ್ಕಿ (< ಪಕ್ಕಿ) + ಸಿಳ್ಳೆ$_1$ (< ಸಿಳ್ಳು$_1$) + ಗಿಡ (< ಗಿಡು)]

**ಹಕ್ಕು$_1$** 'ಪಕ್ಕು$_1$' ನೋ.

**ಹಕ್ಕು$_2$**, ಪಕ್ಕು$_6$ (ನಾ). ೧. ಒಡೆತನ; ಅಧಿಕಾರ; ಸ್ವಾಮ್ಯ: ಎಲ್ಲರಿಗೂ ಸಾಮಾಜಿಕ, ರಾಜಕೀಯ, ಆರ್ಥಿಕ ನ್ಯಾಯನೀತಿಗಳಲ್ಲಿ ಸಮಾನ

ಹಕ್ಕುವುಂಟೆಂಬುದನ್ನು ಸಾರಲಾಗಿದೆ (ಯಕ್ಷಪ್ರ. ೬೫); ಮದುವೆ ಎಂದರೆ ನಮ್ಮ ಜೀವನದ ಹಕ್ಕನ್ನು ಗಂಡಿಗೆ ಮಾರಿಕೊಂಡಂತೆ (ಕಾವೇರಿ. ೧೯೪). ೨. ಗ್ರಾಮದ ಅಧಿಕಾರಿಗಳಿಗೆ ಆನುವಂಶಿಕವಾಗಿ ಕೊಡುವ ಪಾಲು; ವರ್ಷಾಶನ: ವೃತ್ತಿವಂತರು ಕಂದಾಯದ ಹಕ್ಕನ್ನು ಇಟ್ಟುಕೊಂಡು ಭೂಮಿಯ ಸ್ವಾಮ್ಯವನ್ನು ಸರ್ಕಾರದ ಕಡೆಗೊಪ್ಪಿಸಿದರು (ಹುಟ್ಟುಪ. ૩). ೩. ಉದ್ಯೋಗ; ಕೆಲಸ: (೬). Δ ಪಕ್ಕು₆ : ೧. ಆದೊಡನ್ನೀ ಕೇಡ ತೊಡರಿಂದೆ ನಾನ್ ಪಱಿದು ಬಿಡುಗಡೆಯನಾನಲ್ಕೆ ಪಕ್ಕುಂಟು ನನಗೆ (ಅಂತಿಗೂ. ೧೯-೩೮೮). [<— ಅರ. ಹಿಂ. ಮರಾ. ಹಕ್]

**ಹಕ್ಕು₃** (ನಾ). (?): ಮೂವರ ಕಟ್ಟೆಯ(ಂ)ವೊತ್ತಿನ[ಲಿ] ಹಾಳಿ[ಗೂಡಾಗಿ ಬೀಜ ಬಿಡುವ] ಕೆಯಿ ಕಂಬ ೪೦೦ ಅದಬಳಿಯ ಹಕ್ಕ ಸಹಿತ ಅಂಗಡಿಬೀದಿಯಲಿ ರಾಜಬೀದಿಯಿಂ ಪಡುವಲು . . . ಸರ್ವ್ವನಮಸ್ಯವಾಗಿ ಬಿಟ್ಟರು (ಶಾಇ. XV, ೨೩೨-೮; 1206). [?]

**ಹಕ್ಕುಗಟ್ಟು** (ಕ್ರಿ). (ಕಣ್ಣು, ಮೂಗು ಮೊದಲಾದುವುಗಳಲ್ಲಿ) ಮಲ ಸೇರು; ಕೊಳೆಗಟ್ಟು: ಮೂಗಿನಲ್ಲಿ ಹಕ್ಕುಗಟ್ಟಿದೆ (ರೂಢಿ). [ಹಕ್ಕು₁ (< ಪಕ್ಕು₁)+ ಕಟ್ಟು₁]

**ಹಕ್ಕುದಾರ** (ನಾ). ಒಡೆತನವಿರುವವನು; ಬಾಧ್ಯಸ್ಥ: ತಲಾಂತರದಿಂದ ನಡೆದು ಬರುತ್ತಿರುವ ಗ್ರಾಮನೌಕರರ ಕೆಲಸಗಳಿಗೆ ಹಕ್ಕುದಾರನು (ಗ್ರಾಮೂಕ. ೫); ನೀನು ನಿನ್ನ ಹಟವನ್ನೇ ಹಿಡಿದರೆ ನೀನು ಗಂಗವಳಿಯ ಸಿಂಹಾಸನಕ್ಕೆ ಹಕ್ಕುದಾರನಲ್ಲವೆಂದು ಸಾರುವೆನು (ಹಾಪುತ್ರ. ೯೫). [ಹಕ್ಕು₂ + - ದಾರ₄]

**ಹಕ್ಕುದಾರಿ** (ನಾ). ಒಡೆತನ; ಬಾಧ್ಯತೆ: ತಂದೆಯ ಹಕ್ಕುದಾರಿಯ ಮೇಲೆ ತಿಮ್ಮಣ್ಣನವರು ಆದವಾನೀಸುಭೆಯ ದಿವಾನರಾಗಿದ್ದರೆಂಬ ನೆನಪು ವಾಚಕರಿಗಿರಬಹುದು (ಕಭವಿ. ೫೯೪); ರಜನಿಯ ಹಕ್ಕುದಾರಿಯು ಸ್ಪಷ್ಟವಾಗುತ್ತಿತ್ತು (ಬಂಕಿಮ. ೯೨). [< ಹಕ್ಕುದಾರ]

**ಹಕ್ಕುದಾರಿಕೆ** (ನಾ).= ಹಕ್ಕುದಾರಿ: (೬). [ಹಕ್ಕುದಾರ + - ಇಕೆ]

**ಹಕ್ಕುಪತ್ರ** (ನಾ). ಒಡೆತನದ ಪತ್ರ; ಅಧಿಕಾರಪತ್ರ: ಕೋರ್ಟಿನಲ್ಲಿ ನನ್ನ ಮೂಲ ಹಕ್ಕುಪತ್ರವನ್ನು ಪಡೆದು ನ್ಯಾಯತೀರ್ಮಾನ ಮಾಡಿದರು (ರೂಢಿ). [ಹಕ್ಕು₂ + ಪತ್ರ]

**ಹಕ್ಕುಬಾಧ್ಯತೆ** (ನಾ). ಅಧಿಕಾರ ಮತ್ತು ಜವಾಬ್ದಾರಿ: ಅವರಿಗೆ ನ್ಯಾಯವಾಗಿ ಕೊಡಬೇಕಾದ ಜನ್ಮಸಿದ್ಧವಾದ ಹಕ್ಕುಬಾಧ್ಯತೆಗಳಿಗೂ ಧಕ್ಕೆ ತಂದಿದ್ದೇವೆ (ರಾಯಕ. ૩೦); ವೀರನರಸಿಂಹರಾಯನು ಇಮ್ಮಡಿನರಸಿಂಹರಾಯನ ಮಕ್ಕಳಿಗೆ ವಿಜಯನಗರಸಿಂಹಾಸನದ ಮೇಲಿದ್ದ ಹಕ್ಕುಬಾಧ್ಯತೆಗಳನ್ನು ಗಣನೆಗೆ ತಾರದೆ ತಾನೇ ಚಕ್ರವರ್ತಿಯಾದನು (ಕೃದೇವ. ೬). [ಹಕ್ಕು₂ + ಬಾಧ್ಯತೆ]

**ಹಕ್ಕುಶಾಯಿ, ಹಕ್ಕಶಾಯಿ** (ನಾ). ಅಧಿಕಾರಯುತವಾಗಿ ವಿಧಿಸಲಾಗುವ ಖರ್ಚು: ಒಳಗಿನ ಖರೀದಿಗೆ ಅಡತಿ, ಹಕ್ಕುಶಾಯಿ, ದಲಾಲಿ ಮತ್ತು ಧರ್ಮಾದಾಯ (ಮುಂಬವ್ಯಾ. ૩೫ ಪ್ರಸ್ತಾವನ). **ಹಕ್ಕಶಾಯಿ**: ಭಂಗಾರ ಬೆಳ್ಳಿಯ ಖರೀದಿಗೆ ಅಡತಿ ಧರ್ಮಾದಾಯ ದಲಾಲಿ ಹಾಂಗು ಹಕ್ಕಶಾಯಿಯ ದರಗಳು (ಮುಂಬವ್ಯಾ. ೧೮ ಪ್ರಸ್ತಾವನ); ಹಕ್ಕಶಾಯಿ. ಭಂಗಾರದ ದರ ಒಂದು ತೊಲಿಗೆ ಪಾವ ಆಣೆಯಂತೆ . . . ಖರ್ಚು ಬೀಳುವುದು (ಮುಂಬವ್ಯಾ. ೨೬೦). [ಹಕ್ಕು₂+ ಶಾಯ್ಶಿ₀ (< ಶಾಹಿ)]

**ಹಕ್ಕೆ** 'ಪಟ್ಕೆ' ನೋ.

**ಹಕ್ಕೆಗೊಳ್** (ಕ್ರಿ). ನೆಲೆಗೊಳ್ಳು; ಆಶ್ರಯವನ್ನು ಪಡೆ: ಮಿಕ್ಕು ಮಿಗೆ ಮತಿಮಱೆದು ಹರುಷವು ಹಕ್ಕೆಗೊಂಡುದು (ಪ್ರಭುಲೀ.೨೨-೪೦). [ಹಕ್ಕೆ (< ಪಟ್ಕೆ) + ಕೊಳ್₁]

**ಹಕ್ಕೆದಲೆ** 'ಪಕ್ಕೆದಲೆ' ನೋ.

**ಹಕ್ಕೆದಾಣ** (ನಾ). ನೆಲೆ; ಆಶ್ರಯಸ್ಥಾನ: ಪಕ್ಕೆದಾಣಂ ಮೋಹುದಾಣ ನಾನಾಮೃಗಗಳಕ್ಕೆದಾಣಂಗಳಱಿದು . . . ಬಂಧನವ ರಚಿಸಿದರು ಬೇಂಟೆಯೊಳಗೆ (ಸೌಂದಪು. ೧೮-೪೩). [ಹಕ್ಕೆ(< ಪಟ್ಕೆ) + ತಾಣ]

**ಹಕ್ಕೆರಲು** (ನಾ). ಒಂದು ಬಗೆಯ ಸಸ್ಯ: ಮೂಕರಿವೆ, ಮೂಕಾರ್ತಿ, ಹಕ್ಕೆರಲು (ವ್ಯಚಿಗಿ. ૩૩-೬೪೦). [?]

**ಹಕ್ಕೊತ್ತಾಯ** (ನಾ). ತಮ್ಮ ಹಕ್ಕಿನ ಬೇಡಿಕೆಗಳನ್ನು ಪೂರೈಸುವಂತೆ ಒತ್ತಾಯಿಸುವಿಕೆ: ಸಿಬ್ಬಂದಿಯು ತಮ್ಮ ಬೇಡಿಕೆಗಳನ್ನು ಈಡೇರಿಸುವಂತೆ ಹಕ್ಕೊತ್ತಾಯಮಾಡಿದರು (ರೂಢಿ). [ಹಕ್ಕು₂ + ಒತ್ತಾಯ]

**ಹಕ್ಲು** 'ಹಕ್ಕಲ್' ನೋ.

**ಹಕ್ಲುಗದ್ದೆ** (ನಾ). "ಹುಲ್ಲು ಬೆಳೆಸಲಿಕ್ಕೆ ಬಿಟ್ಟ ಗದ್ದೆ" (ನಮ್ಮೂರು. ಟಿಪ್ಪಣಿ): ಸಸಿ ಒಳಗ ನಮ್ಮ ಹುಳ್ಳಿಚಿಕ್ಕನಿಗೆ ಅವನ ಹಕ್ಲುಗದ್ದೆಗೆ ಅಂತ ವಸೀ ಕೊಟ್ಟೆ (ನಮ್ಮೂರು. ೧೭೨). [ಹಕ್ಲು (< ಹಕ್ಕಲ್) + ಗದ್ದೆ (< ಗಟ್ದೆ)]

**ಹಕ್ಲುಸಾಗುವಳಿ** (ನಾ). "ಜಲಾಶಯಗಳ ಸಹಾಯವಿಲ್ಲದೆ ದಿಬ್ಬದಲ್ಲಿ ವ್ಯವಸಾಯಮಾಡುವುದು" (ಕಸಂಗ್ಲಾ. ೧೮); "ಕೃಷಿಬೇಸಾಯ; ಬೆದ್ದಲುಭೂಮಿ; ಕಾಡಾರಂಭ" (ಕಸಂಗ್ಲಾ. ೧೫೯). [ಹಕ್ಲು (< ಹಕ್ಕಲ್) + ಸಾಗುವಳಿ]

**ಹಗ** 'ಪಗವು' ನೋ.

**ಹಗಡಿ** (ನಾ). (?): ಗಂಧವಣಿಗ ಹಗಡಿಯಿಂ ಮಾಱುಗೊಂಡು ಬಂದುದುಂ ನಿರುದ್ಧ ಮಪ್ಪುದುಂ ಹಾಲು ತುಪ್ಪ ಮೊಸರು ಭಕ್ಷ್ಯಾದಿಗಳು ಪ್ರಚುರದಿಂ ಹೊಸತಲ್ಲದುದು ಮೆಂಬೀ ದೋಷಂಗಳಿಲ್ಲದ ನಿರವದ್ಯಮಪ್ಪ ವಸ್ತುಗಳಂ (ಶ್ರಾವಕಾ. ೧೩೪-೨೧). [?]

**ಹಗಡು** 'ಹಂಗಡ' ನೋ.

**ಹಗಣ** 'ಪಗರಣ' ನೋ.

**ಹಗಣಾಟ** (ನಾ). ನಟನೆ; ಸೋಗು: ಕೇಳಬೇಕೆಂದು ಇಚ್ಛಾ! ಮತ್ತೆ ಮೇಲೆ ಹಗಣಾಟ (ಚಂದುಟ. ೬೬). [ಹಗಣ (< ಪಗರಣ) + ಆಟ]

**ಹಗಣಿಗ** 'ಪಗರಣಿಗ' ನೋ.

**ಹಗರ** (ನಾ).೧. ಕಟ್ಟು; ಹೊರೆ (?) : ಕರ್ವ್ವಿನ ಹಗರಕ್ಕೆ ಒಂದು ಕರ್ವು (ಎಇ.XIII. ೨-೫೮; 1204). ೨. (?): ಹಗರದಾ ದಾನವಂ ಕರದೊಯ್ದು ಲಂಕೆಯೊಳ್ ಸೊಗಸಾಂತ ಬನದೊಳಿಡಲ್ (ವಂಶಾರಾ. ೬-೬೭-೨೨). [?]

**ಹಗರಣ** 'ಪಗರಣ' ನೋ.

**ಹಗರಣಗಿತ್ತಿ** (ನಾ). ಬಿನ್ನಾಣಗಾತಿ; ಒಯ್ಯಾರಿ : ಹಗರಣಗಿತ್ತಿ ಹಬ್ಬ ಮಾಡಿದರೆ ಮನೆಗಂಡನಿಗೆ ಉಪವಾಸ (ಗಾದೆ). [ಹಗರಣ (< ಪಗರಣ) + - ಗಿತ್ತಿ]

**ಹಗರಣವಾಡಿಸು** (ಕ್ರಿ). ಆಟವಾಡಿಸು; ನಾಟಕವಾಡಿಸು: ಹಗರಣವಾಡಿಸಿತ್ತು ಹರಿಯಂ ಹರನಂ ತಿರಿಸಿತ್ತು ಬೊಮ್ಮನಂ ಮಗಳೊಡಗೂಡಿಸಿತ್ತು . . . ವಿಧಿ (ನಳಚಂ.೬೪೧). [ಹಗರಣ (< ಪಗರಣ) + ಆಡಿಸು]

**ಹಗರಣವಾಡು** (ಕ್ರಿ). ಆಟವಾಡು; ನಟನೆಮಾಡು: ದೊರೆಯೆದ್ದು ಹಗರಣ ವಾಡಿದಂದದಿ ನೀನಿರದೀ ಹುಲುಕಜ್ಜಕಾಗಿ ತರಲು ಮನವನು (ನೇಮಿಸಂ.೨೬-೮೨); ನಗೆಗೆಡೆಯಾಗಿಂತು ನೆಗಳ್ವರೆ ದೊರೆಯೆದ್ದು ಹಗರಣವಾಡಿದಂದದೊಳು (ಭರಚ. ೫೦-೮೧). [ಹಗರಣ (< ಪಗರಣ) + ಆಡು₁]

**ಹಗರಣಿ** 'ಪಗರಣ' ನೋ.

**ಹಗರಣಿಗ** 'ಪಗರಣಿಗ' ನೋ.

**ಹಗರಣಿಯಾಟ** (ನಾ). ಸೋಗಿನ ಆಟ; ನಟನೆಯ ಆಟ: ಮತ್ತೆ ಹಗರಣಿಯಾಟದ ವರನೀ ಬಸವಣ್ಣನುತ್ತಮದ ಜಂಗಮಂ ಮಾಡಿ ಜಂಗಮಕ್ಕಿತ್ತು (ಚೆಬಪು. ೫೭-೬೭). [ಹಗರಣಿ (< ಪಗರಣ) + ಆಟ]

**ಹಗರಣಿಸು** (ಕ್ರಿ).೧. ತೊಂದರೆಕೊಡು; ಕಾಟಕ್ಕೊಳಗುಮಾಡು: ಹಗರಣಿಪ ಗೃಹಕಲಹ ಪೊಟ್ಟೈಸಿ ಕಂಗಳಿಂದುಗಿವಶ್ರು ಸೃಷ್ಟಿಯುಂ ತೋಯಲಾಜಿದಲೆ (ಕೃಕವ. ೧-೧೯-೨). ೨. ತೊಂದರೆಪಡು; ಕಾಟಕ್ಕೊಳಗಾಗು: ಮಗನೆ ಕುರುರಾಯ ಕೇಳು ಚಿತ್ತದಲಿ ಹಗರಣಿಸಬೇಡ ತಾಳು (ಅಭಿಕಾ.೩೦). [ಹಗರಣ (< ಪಗರಣ) + - ಇಸು₃]

**ಹಗರಣೆ** 'ಪಗರಣ' ನೋ.

**ಹಗರು₁** (ಕ್ರಿ). ನೆಗೆ; ಜಿಗಿ: ಇಬ್ಬರ ಕೈಯಿಂದ ಹಗರಿ ಮೂರನೆಯವನಾದ ಇವನ ಜೊತೆಗಿದ್ದಳು (ಒಡ್ಡಿಉ. ೧೧೯). [?]

**ಹಗರು₂** 'ಹಗಱು' ನೋ.

**ಹಗರು₃** 'ಹಗುರು₂' ನೋ.

**ಹಗಲ್** 'ಪಗಲ್' ನೋ.

**ಹಗಲು** 'ಪಗಲ್' ನೋ.

**ಹಗಲುಕೈದೀವಿಗೆ** (ನಾ). (ಬಿರುದುಸೂಚಕವಾಗಿ ಹಿಡಿಯುವ) ದೀವಟಿಗೆ;

ಹಗಲಿನ ಪಂಜು: ಹಗಲುಕೈದೀವಿಗೆಯ ಬಿರುದಿನ ವಿಗಡನಿವನಾರೆನಲು ಭೂಪಾಳಿಗಳ ರತ್ನಪ್ರಭೆಯ ಲಹರಿಯ ಲಾವಣಿಗೆ ಮಿಗಿಲು (ಕುಮ್ಮಾಆ. ೭-೨೭).

[ಹಗಲು(< ಪಗಲ್)+ ಕೈದೀವಿಗೆ (< ಕೆಯ್ದೀವಿಗೆ)]

**ಹಗಲುಗತ್ತಲೆ** (ನಾ). ಹಗಲುಹೊತ್ತಿನಲ್ಲಿ ಉಂಟಾಗುವ ಕತ್ತಲೆ: ಕರಿಯ ಕಬ್ಬಿಳೆ ಬಳಗಗಳೆ ಸಲೆ ತರತರದ ಹೊರಳಿಗಳ ಜೋಳಿಯ ನೆರವಿ ಕೂಡಿತು ಹಗಲುಗತ್ತಲೆ ಮುಸುಕಿದಂದದಲಿ (ಬಸವು. ೫೮-೫೦); ಹಗಲುಗತ್ತಲೆ ಕಟ್ಟಿತೇನಿದು ಯುಗದ ಕಡೆಯೋ ಶಿವಶಿವಾ (ಕುಮ್ಮಾಕ. ೨೩-೩೪). [ಹಗಲು (< ಪಗಲ್) + ಕತ್ತಲೆ (< ಕಟ್ತಲೆ)]

**ಹಗಲುಗನಸು** 'ಪಗಲ್ಗನಸು' ನೋ.

**ಹಗಲುಗನ್ನ** (ನಾ). ಹಗಲು ಹೊತ್ತಿನಲ್ಲಿ ಹಾಕುವ ಕನ್ನ; ದಿನದಲ್ಲಿ ಮಾಡುವ ಕಳ್ಳತನ: ಅಗಣಿತಮಹಿಮನೆಂದು ಕಟಕಂ ಪೊಗಳೆ ಕನ್ನದ ಬೊಮ್ಮಿದೇವನು ಹಗಲುಗನ್ನವನಿಕ್ಕಿ ಮೆಚಿದನು ಬಿಜ್ಜಳನ ಮನೆಯ (ಬಸವು. ೩೧ ಸೂಚನೆ); ಪದಾರ್ಥವಂ ತಮ್ಮ ಮನೆಯಲ್ಲಿ ಅಲ್ಪವಿರಲು, ಹಗಲುಗನ್ನವನಿಕ್ಕಿ ಬಿಜ್ಜಳನರಮನೆಯೊಳು ತರಬೇಕೆಂದು (ಭೈರಸೂ. I, ೩೫೦). [ಹಗಲು (< ಪಗಲ್) + ಕನ್ನ$_1$]

**ಹಗಲುಗಳ್ಳ** 'ಪಗಲ್ಗಳ್ಳ' ನೋ.

**ಹಗಲುಗೊಲೆ** (ನಾ). ಹಗಲಿನಲ್ಲಿಯೇ ಕೊಲ್ಲುವುದು.

ಹಗಲುಗೊಲೆಮಾನ್ಯ = ಹಗಲಿನಲ್ಲಿಯೇ ಕೊಲ್ಲುವ ವೀರ; ಒಂದು ಬಿರುದು: ದುರ್ಗದ ಪಾಳಯಗಾರರನ್ನು ಇರಿಸಿಕೊಂಡಿದ್ದು . . . ಹಗಲುಗೊಲೆಮಾನ್ಯ ಎಂದು ಹೊಗಳಲು ಭಟರನ್ನು ಕೊಟ್ಟು ದುರ್ಗಕ್ಕೆ ಕಳುಹಿಸಿದನು (ಚಿತ್ರಪಾ. ೧೪).

[ಹಗಲು(< ಪಗಲ್) + ಕೊಲೆ]

**ಹಗಲುದರೋಡೆ** (ನಾ). ದಿನದಲ್ಲಿ ಮಾಡುವ ಲೂಟಿ; ಹಗಲಿನಲ್ಲಿ ಮಾಡುವ ಸೂರೆ,— ದರೋಡೆ: ಈ ದಾರಿಯಲ್ಲಿ ಹಗಲುದರೋಡೆ ಇದೆಯೇ? (ದೇವಪಂ. ೧೨೨).

[ಹಗಲು(< ಪಗಲ್) + ದರೋಡೆ]

**ಹಗಲುದೀವಟಿ** (ನಾ). (ಬಿರುದುಸೂಚಕವಾಗಿ ಹಿಡಿಯುವ) ಹಗಲಿನ ದೀವಿಗೆ: ಹಗಲುದೀವಟಿಯ ಪಂಜೆಯು ಬಗೆಗತಿಶಯಮಾದ ಸಿಂಹಲಕ್ಷ್ಮ ಪತಾಕಂ (ಬೀಳವಂ. ೧-೧೦೮). [ಹಗಲು (< ಪಗಲ್) + ದೀವಟಿ (< ದೀವಟಿಗೆ)]

**ಹಗಲುದೀವಟಿಗೆ** (ನಾ). = ಹಗಲುದೀವಟಿ: ಬಿರುದು ಹಳದಿ ಗಡಿಗೆ ಹಗಲುದೀವಟಿಗೆ ಸಹ ಕೊಟರೂ (ಎಕ. XVI, ಗುಬ್ಬಿ. ೬೯-೩೪ ?); ಸ್ವಾತಂತ್ರ್ಯವನ್ನು ಪಡೆಯಬೇಕೆಂಬ ಹಂಬಲವು ತನ್ನ ಹಗಲುದೀವಟಿಗೆಯನ್ನು ಹೊತ್ತಿಸಿಕೊಂಡು ಮಹಾಸಾಧನೆಯನ್ನು ನಾಡಜೀವಿಗಳಿಗೆಲ್ಲ ನೀಡಿತು (ಸುವರ್ಣ. ೨೨೫).

[ಹಗಲು (< ಪಗಲ್) + ದೀವಟಿಗೆ]

**ಹಗಲುಪಂಜು** (ನಾ). = ಹಗಲುದೀವಟಿ: ಹಗಲುಪಂಜಿನ ಬಿರುದಿನ ಸುಭಟರು ನೆಜೆ ಜಗಜಂಪಿನ ಸತ್ತಿಗೆಯ ವಿಗಡವಿಗ್ರಹವೀರರುಗಳು (ಕಂನವಿ. ೧೧-೧೪೩).

[ಹಗಲು (< ಪಗಲ್) + ಪಂಜು]

**ಹಗಲುಲಗ್ಗೆ** (ನಾ). ಹಗಲುಹೊತ್ತಿನಲ್ಲಿ ಮಾಡುವ ದಾಳಿ: ಹಗಲುಲಗ್ಗೆಯೊಳರಿನೃಪರ ದುರ್ಗವ ಕೊಂಡ ಜಗಕತಿಕೀರ್ತಿಪ್ರಚಂಡ (ಕಂನವಿ. ೮-೭೮).

[ಹಗಲು (< ಪಗಲ್)+ ಲಗ್ಗೆ]

**ಹಗಲುಹಾವಸೆ** (ನಾ). ಬೆಳಗಿನಲ್ಲಿ ಸುರಿಯುವ ಮಂಜು; ಕಾವಳ: ತೆಗೆದುದಗ್ಗದ ತಂಪು ನದಿ ಸರಸಿಗಳ ತಡಿಯಲಿ ಹಚ್ಚೆಯಾದುದು ಹಗಲುಹಾವಸೆ ಹರಿದು ಹೊಕ್ಕರಿಸಿದುದು ಹಿಮಜಲವ (ಕುಮ್ಮಾಆ. ೫-೫); "ಹಗಲುಹಾವಸೆ" ಎಂಬ ಶಬ್ದಗಳಿಗೆ ಅರ್ಥವಾಗದೆ ಲಿಪಿಕಾರನು 'ಹಾವಸೆ' ಯನ್ನು 'ಹಂಸೆ' ಯನ್ನಾಗಿ ಮಾಡಿದನು . . . ಹಗಲುಹಾವಸೆ ಎಂದರೆ ಮಂಜು, ಕಾವಳ (ಕನ್ನಸಂ. ೧೩೦).

[ಹಗಲು (< ಪಗಲ್) + ಹಾವಸೆ (< ಪಾವಸೆ)]

**ಹಗಲುಳುಕು** 'ಪಗಲುಳ್ಕು' ನೋ.

**ಹಗಲೆಱೆಯ** 'ಪಗಲೆಱೆಯ' ನೋ.

**ಹಗಲೇರು** (ಕ್ರಿ). ಹೊತ್ತೇರು; ಮಧ್ಯಾಹ್ನವಾಗು: ಹಗಲೇರಿ ಹಗಲಿಳಿಯುತಿರುಳಾಗಿರುಳು ಹೋಗಿ ಕಾಲಜೀವನ ಸೋರಿದುದು (ಚಿತ್ರಾಂಗ. ೭೪-೧೭೫೨).

**ಹಗಲೊಡೆಯ** 'ಪಗಲೊಡೆಯ' ನೋ.

**ಹಗಲೋಲಗ** (ನಾ). ಹಗಲಿನಲ್ಲಿ ನಡೆಸುವ ದರ್ಬಾರು; ಹಗಲುಹೊತ್ತಿನ ಸಭೆ: ಶೂದ್ರಕನೆಂಬ ಅರಸು . . . ಒಂದು ದಿನ ಹಗಲೋಲಗವಾಗಿ ಹಜಾರದಲ್ಲಿ ಇರುವ ಸಮಯ (ವಚಕಾ. ೧). [ಹಗಲು (< ಪಗಲ್) + ಓಲಗ$_1$]

**ಹಗವ** 'ಪಗವು' ನೋ.

**ಹಗವು** 'ಪಗವು' ನೋ.

**ಹಗಹ** 'ಪಗವು' ನೋ.

**ಹಗಱ್**, **ಹಗರು$_2$**, **ಹಗಱು$_1$** (ನಾ). ಬಿದಿರಿನ ಸೀಳು; ದೆಬ್ಬೆ: ಱಕಾರಾದೇಶ ರೇಫೆಗಂ ಶಿಥಿಲತ್ವಂ . . .ಕೆಸರ್ಗಳ್, ಬಸಿರ್ಗಳ್, ಪೆಸರ್ಗಳ್, ಹಗರ್ಗಳ್ (ಶಮದ. ೪೨ ಪ್ರಯೋ). **ಹಗರು$_2$**: ಬೆನ್ನನ್ನು ಹಗರಹಾಂಗೆ ನೆಟ್ಟಗೆ ನಿಗರಿಸಿ (ಮಂತ್ರಶ. ೮೧-೬). **ಹಗಱು$_1$**: ಹಗಱುಗಳನಿಕ್ಕಿ ಬಿಗಿದೊಡೆ ನಾಯಬಾಲವದು ಬಳಿಕ ನೀಳಕೆ ಸಸಿನವಹುದೇ (ಬಸವು. ೭೦-೪೮); ಉತ್ತರನ ಹೆಡತಲೆಯ ಹಗಱ[ಪಾಠಾಂ. ಹದರಿ]ನೊಳೌಂಕಿ ತಂದನು (ಕುಮ್ಮಾವಿ. ೭-೩೦); ಅಸಿಯವೆರಡುಂ ಕಲ್ಲನೆರಡು ಕಡೆಯೊಳಗಿರಿಸಿ ಮಿಸುಪ ತಱಿಗೆಂಡಮಂ ನಡುವಿಕ್ಕಿಯೆಳೆವಿದಿರ ಹಸಿಯ ಹಗಱಿಂ ಹರಹಿಕೊಂಡದಱ ಮೇಲೆ ಕೆನೆಬೆಣ್ಣೆಯಂ ಕೂಡಿ ಸಮೆದ ಹಸನಾದ ರೊಟ್ಟಿಯಂ ಮಡಗಿ ಹದನಾಗಿ ಬೇಯಿಸಿ ತೆಗೆದು ಮತ್ತದಕ್ಕಂಗಾರಸಿತಕಮೆಂದೊಸೆದು ಹೆಸರಂ ಕೊಟ್ಟು (ಸೂಪಶಾ. ೧-೧೭); ಬಿಲ್ಲಿಂದ ಬೀಹಿನ ಹಗಱು ಮುಱಿವವೋಲು (ನೇಮಿಸಂ. ೨-೫೨).

**ಹಗಱ** (ನಾ). ಒಂದು ವಂಶದ ಹೆಸರು (?): ಆಶ್ವೀಜ ಸು ೫ ಶು ಹಗಱರ ಬೊಂಮಣ . . . ಸುರಲೋಕಪ್ರಾಪ್ತನಾದ (ಎಕ. VII, ಶಿವಮೊ. ೧೧೪-೩; ?). [?]

**ಹಗಱಿಕ್ಕು** (ಕ್ರಿ). ೧. ಬಿದಿರಿನ ಸೀಳುಗಳನ್ನು ಸೇರಿಸಿ ಕಟ್ಟು; ದೆಬ್ಬೆಗಳನ್ನು ಒಟ್ಟು: ಗಳಕೆ ಹಗಱಿಕ್ಕಿ ಬಂಧಿಸುತ (ವೀಶೈಪು. ೪-೨೫-೩೧). ೨. ಕವೆಗೋಲಿನಂತೆ ಸೀಳಿದ ಬಿದಿರನ್ನು ಕುತ್ತಿಗೆಗೆ ಇಟ್ಟು ನೂಕು: ದಿವಾಕರನು ಹೆಡತಲೆಗೆ ಹಗಱಿಕ್ಕಿದನು ಚಂದ್ರಮನ (ಕುಮ್ಮಾದ್ರೋ. ೧-೪೨). [ಹಗಱು$_1$(< ಹಗಱ್) + ಇಕ್ಕು$_1$]

**ಹಗಱಿಡು** (ಕ್ರಿ).೧. = ಹಗಱಿಕ್ಕು ೨: ಕಲ್ಲಿಂದಿಟ್ಟು ಕರಂ ಬಡಿಯಿಂದವೆ ನಿಲ್ಲದೆ ಬಡಿದು ಬಱಲ ಬಲ್ಲೊಯ್ಲಿಂದೆಲ್ಲೆಡೆ ಬಾಸುಳನೇಳಿಸಿ ಕೈಕಾಲೋವದೆ ಹಗಱಿಟ್ಟು ಚೆಲ್ಲಯದಿಂ ಕಡು ಕೇಱನಿಱಿದು . . . ಬಾಧಿಸಿದಂ ಜತಿರಾಯನನಾ ಖಳನು (ಜಯಕಾ. ೧೩-೯೧). ೨. "ಬಣ್ಣವಿಡು" (ಪ್ರಭಣ್ಣ): ಅಂಗಜನವನೀಶ್ವರನುತ್ತಮಿಕೆಯ ಚೆಲ್ವಂ ಕುಡು ಕೊಲ್ವೆನೆನುತ್ತವೆ ಬೆಳ್ಳಿಯ ಹಗಱಿಟ್ಟಂದದಿ ಕಣ್ಗೆ ವಿರಾಜಿಸಿತು (ಜಯಕಾ. ೧೦-೫೭). [ಹಗಱ್ + ಇಡು$_1$]

**ಹಗಱು$_1$** 'ಹಗಱ್' ನೋ.

**ಹಗಱು$_2$** (ನಾ). ಕೊರಳು; ಕುತ್ತಿಗೆ (?) : ಮಂದನೊಳೆ ಶಂಖಪಾಳಂ ಸಂದೆಯಮೇಂ ಜಾನ(ವ)ದಲ್ಲಿ ಹಗಱಿಂ [ಪಾಠಾಂ. ಹದಱ] ಪಿಡಿಗುಂ ಬಂದಿರ್ಕುಂ ಕಣ್ಣೊಳ್ ವಿಷಮೆಂದಱಿ ನೀಂ ಮಂಗರಾಜನನುಮತದಿಂದಂ (ಖಮದ. ೩-೩೭). [?]

**ಹಗಿನ** 'ಪಗಿನ್' ನೋ.

**ಹಗಿನಗಂಪು** (ನಾ).ಅಂಟಿನ ವಾಸನೆ; ತಿಗುಡಿನ ನಾತ: ಸಾಹಸಿಯ ಆವೇಶ ಕೆತ್ತಿದಾರತಿಯಾಯ್ತಡವಿವೆಂಕೆ: ಧೂಪಮಿಕ್ಕಿತು ಹಗಿನಗಂಪು (ಶ್ರೀರಾಮಾ. ೪೧೭-೮೧).

[ಹಗಿನ (< ಪಗಿನ್) + ಕಂಪು]

**ಹಗಿನು** 'ಪಗಿನ್' ನೋ.

**ಹಗುರ**, **ಹಗುರು$_1$** (ನಾ). ೧. ಭಾರವಿಲ್ಲದುದು; ತೂಕವಿಲ್ಲದುದು: ಹೊಳೆಯ ಹಗುರದಿಂದ ಹಳ್ಳವ ಹಾಯಬೇಕು (ಮೋಳಿಮಾ.೭೦-೨೪೭); ಮಣ್ಣು ಇಷ್ಟು ಸೂಕ್ಷ್ಮ ಹಂಗೂ ಹಗುರ ಇರುತ್ತದಲ್ಲಾ (ಮುಂಬವ್ವಾ. ೪೭); ಮೇಲೆ ಕೊಟ್ಟಿರುವ ಪಟ್ಟಿಯಲ್ಲಿನ ಬಹುಸಂಖ್ಯಾತ ಮರಗಳು ಹಗುರದ ಗುಣ ಪಡೆದವು (ಶಾಸಗಿ.೭೮). ೨. (ಆಲಂ) ನೆಮ್ಮದಿ; ಸಂತೋಷ: ನಮ್ಮ ಹೃದಯದಲ್ಲಿ ಅದೊಂದು ತರಹೆಯ ಹಗುರ ವೇರ್ಪಟ್ಟಿತ್ತು (ಸುಂದರಿ. ೧೩). ೩. ಅಲ್ಪವಾದುದು; ಕ್ಷುಲ್ಲಕವಾದುದು: ಮರಿಯಾದೆಗಳು ಇಲ್ಲ ಹಗುರ ರಾಜ್ಯಕೆಲ್ಲ (ಪುರಂದ.೧-೧೪೮-೨). **ಹಗುರು$_1$** : ೧. ಇಮಾರತಿಯ ಕಟ್ಟಿಗೆಯಲ್ಲಿ ಅನೇಕ ಜಾತಿ ಇದ್ದು . . . ದೊಡ್ಡದು ವಜನದಾರ ಮತ್ತು

ಹಗುರು ವಗ್ಗರೆ ಅನೇಕ ಭೇದಗಳು (ಮುಂಬವ್ಯಾ.೨೦೦).

ಹಗುರಮಾಡಿಕೊಳ್ಳು = (ಆಲಂ) ನೆಮ್ಮದಿಯನ್ನು ತಂದುಕೊಳ್ಳು; ಸಂತೋಷವನ್ನು ಹೊಂದು: ಅವನು ಒಂದಲ್ಲ ಒಂದು ರೀತಿಯಿಂದ ತನ್ನ ಮನಸ್ಸನ್ನು ಹಗುರಮಾಡಿಕೊಳ್ಳುತ್ತಿದ್ದನು (ಪುನರು. ೨೬೨). [ದೇ. ॥ ತುಳು. ಹಗುರ]

**ಹಗುರು$_1$** 'ಹಗುರ' ನೋ.

**ಹಗುರು$_2$, ಹಗರು$_3$** (ನಾ).ತಲೆಯಲ್ಲಿ (ಕೊಳೆಗಟ್ಟಿ) ಪುಡಿಪುಡಿಯಾಗಿ ಉದುರುವ ಹೊಟ್ಟು; ಹುರುಪು; ಸಿಬ್ಬು: ಕಿವಿಯೊಳಗಣ ಗುಗ್ಗೆ ಕಣ್ಣಿನೊಳಗಣ ಕಿಸುರು . . . ತಲೆಯೊಳಗಣ ಹಗುರು (ಬಾಹಟೀ. ೨-೩-೫೩ ವ). **ಹಗರು$_3$:** ತಲೆ ತುಂಬಾ ಹಗರಾಗಿ ಕಡಿಯುತ್ತಿದೆ (ರೂಢಿ).

**ಹಗುರುನೀರು** (ನಾ). ಗಡುಸಲ್ಲದ ನೀರು; ಸಿಹಿನೀರು: ಹಗುರುನೀರೆಂದರೆ ನಮ್ಮ ಶರೀರಕ್ಕೆ ಪಾಚಕಪದಾರ್ಥಗಳು ಕೂಡಿದ ನೀರು (ಮುಂಬಯಿ.೫-೧೫೭).
[ಹಗುರು$_1$ + ನೀರು$_1$ (< ನೀರ್)]

**ಹಗೆ$_1$** 'ಪಗೆ$_1$' ನೋ.

**ಹಗೆ$_2$** 'ಪಗೆ$_2$' ನೋ.

**ಹಗೆ$_3$** 'ಪಗವು' ನೋ.

**ಹಗೆಗಲಹ** (ನಾ). ದ್ವೇಷದಿಂದ ಕೂಡಿದ ಜಗಳ; ವೈರದ ಕದನ: ನಿಲಲು ಬೇಕೆಲೆ ಜೀಯ ನೀ ಹಗೆಗಲಹದಲಿ ಹರನೊಡನೆ ಮಿಕ್ಕಿನ ಗಲಭೆಕಾಱರು ಪಾಡೆ ನಿನಗಂ ದಮರರೊಗ್ಗಿನಲಿ (ತೊರರಾ. ೫-೬-೫). [ಹಗೆ$_2$ (< ಪಗೆ$_2$) + ಕಲಹ]

**ಹಗೆಗಾರ** 'ಪಗೆಗಾಱ'ನೋ.

**ಹಗೆಗೆಡು** (ಕ್ರಿ).ದ್ವೇಷ ಹೋಗು; ವೈರವಿಲ್ಲದಂತಾಗು: ಮುಂತೆ ಬಗೆಗೆಟ್ಟು ಹಗೆಗೆಟ್ಟು ಮೃಗನಿಚಯವಿರೆ (ಅನಾರ. ದೇ. ೧೮೩-೨). [ಹಗೆ$_2$ (< ಪಗೆ$_2$) + ಕೆಡು$_1$]

**ಹಗೆಗೊಳ್** 'ಪಗೆಗೊಳ್' ನೋ.

**ಹಗೆಗೊಳ್ಳು** 'ಪಗೆಗೊಳ್' ನೋ.

**ಹಗೆತನ** 'ಪಗೆತನ' ನೋ.

**ಹಗೆತೀರಿಸು** (ಕ್ರಿ).ದ್ವೇಷವನ್ನು ಸಾಧಿಸು: ನೀನು ಹಗೆತೀರಿಸಿಕೊಳ್ಳಬೇಕೆಂದಿದ್ದರೆ ನನ್ನ ಮಾತು ಕೇಳು (ಆರ್ಯಕ.೨೫). [ಹಗೆ$_2$ (< ಪಗೆ$_2$) + ತೀರಿಸು]

**ಹಗೆಯ$_1$** 'ಪಗೆಯ' ನೋ.

**ಹಗೆಯ$_2$** 'ಪಗವು'ನೋ.

**ಹಗೆವ** 'ಪಗೆವ' ನೋ.

**ಹಗೆವಡೆ** (ಕ್ರಿ). ದ್ವೇಷವನ್ನು ಹೊಂದು; ವೈರವನ್ನು ಪಡೆ : ಬಲುಗೈಯನೊಡನೆ ಹಗೆವಡೆದು ಕೊಲೆಗಂಜಲೇಕೆ (ಮೋಳಮಾ.೪೦-೧೬೭). [ಹಗೆ$_2$ (< ಪಗೆ$_2$ + ಪಡೆ$_1$]

**ಹಗೆವು** 'ಪಗವು' ನೋ.

**ಹಗೆಸಾಧಿಸು** (ಕ್ರಿ). ದ್ವೇಷವನ್ನು ಸಾಧಿಸು; ವೈರವನ್ನು ತೀರಿಸಿಕೊಳ್ಳು: ತಾನು ಹಗೆಸಾಧಿಸಿಕೊಳ್ಳಬೇಕೆಂದು ಮಾಡಿದ ಪ್ರಯತ್ನವು ವ್ಯರ್ಥವಾದುದನ್ನು ಕಂಡು . . . ನುಡಿದನು (ಕವಿಕ. ೨೦). [ಹಗೆ$_2$(< ಪಗೆ$_2$) + ಸಾಧಿಸು]

**ಹಗೆಹರಿ** (ಕ್ರಿ). ದ್ವೇಷವಿಲ್ಲದಂತಾಗು; ವೈರತ್ವವಿಲ್ಲವಾಗು: ಬವರಕ್ಕೆತಂದ ರಿಪು ಕೃಷ್ಣನಂ ಕಾಣದಿಹ ಪವಣಾವುದಕಟ ಪೊಸತಿದು ತನ್ನ ಹಗೆಹರಿಯದೆಂದು ಚಿಂತಿಸುತಿರ್ದನು (ಜೈಮಿಭಾ. ೭-೫೩). [ಹಗೆ$_2$(< ಪಗೆ$_2$) + ಹರಿ$_1$ (< ಪರಿ$_2$)]

**ಹಗೆಹು** 'ಪಗವು' ನೋ.

**ಹಗೇವ** 'ಪಗವು' ನೋ.

**ಹಗೇವು** 'ಪಗವು' ನೋ.

**ಹಗ್ಗ** 'ಪಗ್ಗ' ನೋ.

**ಹಗ್ಗಿ** 'ಅಗ್ಗಿ$_1$'ನೋ.

**ಹಗ್ಗು** (ಕ್ರಿ).ಜೀರ್ಣವಾಗು; ಲಯವಾಗು: ಹರನ ಕೊರಲೊಳು ಹಗ್ಗಿತು ದೇವನಿವಹನಿರದಟ್ಟಿ ಕೊಲಲಾಯ್ತೆಂದು ಪಿರಿದು ನಗುವವಂದಿನ ಕಾಲಕೂಟದ ಭರದಿಂದಾ ಫಣಿವಿತತಿ (ಶ್ರೀಪಾಲ.೧೧-೬೦). [< ಅಟ್ಟು]

**ಹಚ, ಹಚಾ** (ಅ).೧. ದನ, ನಾಯಿ ಮೊದಲಾದುವುಗಳನ್ನು ಓಡಿಸುವಾಗ ಉಚ್ಚಾರಮಾಡುವ ಒಂದು ಅವ್ಯಯ : ಹಚ ಎಂದು ನಾಯಿಯನ್ನು ಓಡಿಸಿದರು (ರೂಢಿ). ೨. ತಿರಸ್ಕಾರ ಅಥವಾ ಛೀಮಾರಿ ಹಾಕುವಾಗ ಉಚ್ಚರಿಸುವ ಒಂದು ಅವ್ಯಯ: (೬). **ಹಚಾ: ೨.** ನನಗಂತೂ ಗಂಡು ಹೆತ್ತವರ ಮನೆ ಬಾಗಿಲು ಕಾದು 'ಹಚಾ' ಅನ್ನಿಸಿಕೊಂಡು ಸಾಕಾಗಿ ಹೋಗಿದೆ (ಸಾವಿಸ. ೭೫).

**ಹಚಹಚ** (ದ್ವಿರುಕ್ತಿ) : ಇವನನ್ನು ಶಪಿಸಿ ಜನ ಮತ್ತೆ ನುಗ್ಗಿದರು. ಬರುವವರನ್ನು ಹಚಹಚ ಅನ್ನಲು ನಾನೂ ಶಾಸ್ತ್ರೀ ಜೊತೆ ಸೇರಿಕೊಂಡೆ (ವೃದ್ಧವಿ.೬೦).

**ಹಚಡ** 'ಪಚ್ಚಡ' ನೋ.

**ಹಚಾ** 'ಹಚ' ನೋ.

**ಹಚ್ಚ$_1$** 'ಪಚ್ಚ$_1$' ನೋ.

**ಹಚ್ಚ$_2$** 'ಪಚ್ಚ$_2$' ನೋ.

**ಹಚ್ಚಕಬ್ಬುನ** (ನಾ). ಶುದ್ಧವಾದ ಲೋಹ; ಅಚ್ಚಕಬ್ಬಿಣ: ದಿನದೆಡೆಯುಂಟೆ ಸೂರ್ಯನುದಯಕ್ಕೆ ತಮೋವಿಲಯಕ್ಕೆ ಹಚ್ಚಕಬ್ಬುನದಳವಿಂಗೆ ಸಿದ್ಧರಸದಾಕ್ರಮಣಕ್ಕೆ (ಶತಕ. ೧೫೮-೨೨). [ಹಚ್ಚ$_1$ (< ಪಚ್ಚ$_1$) + ಕಬ್ಬುನ]

**ಹಚ್ಚಗೆ** (ಅ). ೧. ಹಸಿರಾಗಿ: ವಸಂತ ಹಚ್ಚಗಾಗಿ ಹಬ್ಬಿದ ಹುಲ್ಲುಹಾಸಿಗೆಯ ಮೇಲೆ ಹಾಯಾಗಿ ಒರಗಿದ (ಕಮನಿ. ೨೫); ಈ ದಿವಸದೊಳಗೆ ಅಡವೆಲ್ಲ ಹಚ್ಚಗೆ ಒಪ್ಪುತ್ತದೆ (ಮುಂಬಯಿ. ೩-೭೪); ಹಚ್ಚಗಿರುವಲ್ಲಿ ಮೇಯೋದು ಬೆಚ್ಚಗಿರುವಲ್ಲಿ ಮಲಗೋದು (ಗಾದೆ). ೨. (ಆಲಂ) ಆರಾಮವಾಗಿ; ಹಾಯಾಗಿ: ನಾನು ಮನೆಬಿಟ್ಟು ಎಲ್ಲಿಗೂ ಹೊರಡುವುದಿಲ್ಲ. ನಿಮ್ಮ ಸ್ನೇಹಿತರು ಬದುಕಿದ್ದಾಗ ಎಂದರೆ, ನಾನೂ ಹಚ್ಚಗೆ ಹತ್ತುಕಡೆ ಹೋಗುತ್ತಿರಬೇಕು, ಬರುತ್ತಿರಬೇಕು (ಮಹಾಗ. ೧೪೭). [ಹಚ್ಚ$_1$(< ಪಚ್ಚ$_1$) + - ಅಗೆ$_3$]

**ಹಚ್ಚಡ$_1$** 'ಪಚ್ಚಡ' ನೋ.

**ಹಚ್ಚಡ$_2$** (ನಾ). ಒಂದು ಬಗೆಯ ಅಳತೆ , — ಮಾಣ (?): ವಜ್ರಕ್ಕೆ ಮಂಜಾಡಿ ಕರ್ಪೂರ ಕುರುಜು ಕಸುರಿವೇಣು ಚಿನ್ನಬೆಳ್ಳಿ ತೂಕ ಕಂಚು ತಾಮ್ರ ಹಲ ಇವು ತೂಗಿ ಮಾರುವಂತ ವಿವರಗಳು: ಆನೆಗೆ ಗಜಕಡ್ಡಿ, ಕುದುರೆಗೆ ಕುಡುಮೆಟ್ಟು, ಕೋಡಿಗೆಯಿಪ್ಪತ್ತು ಹಚ್ಚಡಾ (ಭಾಸ್ಕರ. ೭೮-೩). [?]

**ಹಚ್ಚಡಿ** 'ಪಚ್ಚಡ' ನೋ.

**ಹಚ್ಚಡಿಕೆ** 'ಪಚ್ಚಡಿಕೆ' ನೋ.

**ಹಚ್ಚಡಿಸು** 'ಪಚ್ಚಡಿಸು' ನೋ.

**ಹಚ್ಚನೆ** 'ಪಚ್ಚನೆಯ' ನೋ.

**ಹಚ್ಚನೆಯ** 'ಪಚ್ಚನೆಯ' ನೋ.

**ಹಚ್ಚವಡ** 'ಪಚ್ಚವಡ$_1$' ನೋ.

**ಹಚ್ಚವಡಿ** 'ಪಚ್ಚವಡ$_1$' ನೋ.

**ಹಚ್ಚವಡಿಗೆ** 'ಪಚ್ಚವಡಿಗೆ' ನೋ.

**ಹಚ್ಚವಡಿಸು** 'ಪಚ್ಚವಡಿಸು' ನೋ.

**ಹಚ್ಚಹಸಿ** 'ಪಚ್ಚಪಸಿ' ನೋ.

**ಹಚ್ಚಹಸಿರು** 'ಹಚ್ಚಹಸುರು' ನೋ.

**ಹಚ್ಚಹಸುರು, ಹಚ್ಚಹಸಿರು** (ನಾ). ಅಚ್ಚ ಹಸಿರಾದ ಬಣ್ಣ: ಹಚ್ಚಹಸುರಂ ತೋರ್ಪುದೀ ನೆಲದ ಮಾಟಂ (ಕಾಲೂರ. ೧೯೦-೪೩೬). **ಹಚ್ಚಹಸಿರು:** ಕಾರೆಗಿಡಗಳೆರಡನ್ನು ಆವರಿಸಿ ಅದಕ್ಕೆ ಹಚ್ಚಹಸಿರು ಹಚ್ಚಡವನು ಹೊದೆಸಿದ ಜಾಗಟೆಯ ಹೊದರೊಳಗೆ ಸರಿದು ಕುಳಿತುಕೊಂಡರು (ಹುಲಿಹಾ. ೨೫೩). [ಹಚ್ಚ$_1$(< ಪಚ್ಚ$_1$) + ಹಸುರು (< ಪಸುರ್$_2$)]

**ಹಚ್ಚಹಸುಳೆ** (ನಾ). ಬಹಳ ಎಳೆಯ ಮಗು; ಹಸುಗೂಸು : ಮೆಚ್ಚಿ ಬಂದ ವಳಲ್ಲ ಕಂಪಿಲರಾಯಗೆ ಹೆಚ್ಚಿ ಬಂದವಳಾನಲ್ಲ ಹಚ್ಚಹಸುಳೆಯನೆನ್ನನು ನೂಕಿ ಕೊಂಡನು ಹುಚ್ಚುಹಿಡಿದು ಮೋಹದಪ್ಪಿ (ಕುರಾಸಾಂ.೨೬-೧೨೧).
[ಹಚ್ಚ$_1$(< ಪಚ್ಚ$_1$) + ಹಸುಳೆ (< ಪಸುಳೆ)]

**ಹಚ್ಚಳೆ** 'ಪಚ್ಚಳೆ$_2$' ನೋ.

**ಹಚ್ಚಿಡು** (ಕ್ರಿ).ಉರಿಯುವಂತೆ ಮಾಡು; ಹೊತ್ತಿಸಿಡು: ಮನೆಯು ಕತ್ತಲೆಯಲ್ಲಿರಲು

ಒಂದು ದೀಪ ಹಚ್ಚಿಟ್ಟಂತಾಯಿತು (ಕಾಲೂರ. ೧೪ ಕಥಾಸಾರ).

[ಹಚ್ಚು$_1$ (< ಪಚ್ಚು$_3$) + ಇಡು$_1$]

**ಹಚ್ಚಿಸು$_1$** 'ಪಚ್ಚಿಸು$_1$' ನೋ.

**ಹಚ್ಚಿಸು$_2$** 'ಪಚ್ಚಿಸು$_2$' ನೋ.

**ಹಚ್ಚು$_1$** 'ಪಚ್ಚು$_3$' ನೋ.

**ಹಚ್ಚು$_2$** 'ಪಸು$_1$' ನೋ.

**ಹಚ್ಚುಕೊಳ್** 'ಪಚ್ಚುಗೊಳ್' ನೋ.

**ಹಚ್ಚೆ** 'ಪಸು$_3$' ನೋ.

**ಹಚ್ಚೆಚುಚ್ಚಿಸು** (ಕ್ರಿ). ಮೈಮೇಲೆ ಅಲಂಕಾರಕ್ಕಾಗಿ ಚಿತ್ರ ಬರೆದು ಹಸಿರು ತುಂಬಿ ಮುಳ್ಳಿನಿಂದ ಅಥವಾ ಸೂಜಿಯಿಂದ ಚುಚ್ಚಿಸು; ಹಚ್ಚೆಹೊಯಿಸು: (ಕ). [ಹಚ್ಚೆ (< ಪಸು$_3$) + ಚುಚ್ಚಿಸು]

**ಹಚ್ಚೆಚುಚ್ಚು** (ಕ್ರಿ). ಮೈಮೇಲೆ ಅಲಂಕಾರಕ್ಕಾಗಿ ಚಿತ್ರ ಬರೆದು ಹಸಿರುಬಣ್ಣವನ್ನು ತುಂಬಿ ಮುಳ್ಳಿನಿಂದ ಅಥವಾ ಸೂಜಿಯಿಂದ ಚುಚ್ಚು, — ಹೊಯ್ಯು: ಆಕೆಯ ಕೈಮೇಲೆ ಹಚ್ಚೆಚುಚ್ಚಿದ ಗುರುತಿದೆ (ರೂಢಿ).

[ಹಚ್ಚೆ (< ಪಸು$_3$) + ಚುಚ್ಚು$_1$ (< ಚುರ್ಚು$_1$)]

**ಹಚ್ಚೆತಿಲಕ** (ನಾ). ಹಣೆಯ ಮೇಲೆ ಅಲಂಕಾರಕ್ಕಾಗಿ ಚುಕ್ಕೆಯಿಟ್ಟು, ಅದರ ಮೇಲೆ ಸೂಜಿಯಿಂದ ಚುಚ್ಚಿ ಹಸಿರುಬಣ್ಣವನ್ನು ತುಂಬಿದ ಬೊಟ್ಟು, — ತಿಲಕ: (ಕ). [ಹಚ್ಚೆ (< ಪಸು$_3$) + ತಿಲಕ]

**ಹಚ್ಚೆಬಟ್ಟು** 'ಹಚ್ಚೆಬೊಟ್ಟು' ನೋ.

**ಹಚ್ಚೆಬೊಟ್ಟು, ಹಚ್ಚೆಬಟ್ಟು** (ನಾ). = ಹಚ್ಚೆತಿಲಕ: ಶೃಂಗಾರ ಹಣೆಗೆ ಹಚ್ಚೆಬೊಟ್ಟು (ವಿದಾಕ್ಯ. ೧೦೩-೬). **ಹಚ್ಚೆಬಟ್ಟು**: ಹೆಚ್ಚಿನ ಸಖಿಯರು ಸ್ವಚ್ಛದಿ ಫಣೆಯೊಳು ಹಚ್ಚೆಬಟ್ಟಿನ ರೇಖಾ ಚುಚ್ಚಿದರು (ಜನಗೀ. ೪೩). [ಹಚ್ಚೆ (< ಪಸು$_3$) + ಬೊಟ್ಟು$_2$ (< ಬಟ್ಟು)]

**ಹಚ್ಚಿಲ** (ನಾ). (ಹಂಚಿದ) ಪಾಲು; ಭಾಗ: ಎಚ್ಚಂಬುವೆರಸು ಮೃಗಮಂ ಬಿಚ್ಚದೆ ಮುಂದಿಟ್ಟು ತಳುವದೆನಗಂ ನಿನಗಂ ಹಚ್ಚಿಲಮದೀಗೆನುತ್ತಂ ನಿಚ್ಚಳಗಲಿ ಕಣ್ಣಪಯ್ಯ ನೊಲವಿಂ ನುಡಿದಂ (ತ್ರಿಪುವಿ. ೨೭-೧೨೨). [< ಪಸು$_1$]

**ಹಚ್ಚೆಹೊಯ್** (ಕ್ರಿ). = ಹಚ್ಚೆಚುಚ್ಚು: ಮನದ ಮೈಯೊಳು ಹಚ್ಚೆಹೊಯ್ದಂತೆ ಹಸುರಾಗಿ ನಿಂತಂಥ ಸಂಗತಿಗಳು ಕೆಲವನು ಗುರುತಿಸಿ ಹೇಳಿದೆ ಹಾಡಾಗಿ (ಇಂಚಾಪ. ೬೨-೯೬). [ಹಚ್ಚೆ (< ಪಸು$_3$) + ಹೊಯ್$_1$ (< ಪೊಯ್$_1$)]

**ಹಚ್ಚೋತ್ತಿ** 'ಪಚ್ಚೋಂತಿ' ನೋ.

**ಹಜರತ್** 'ಹಜರತು' ನೋ.

**ಹಜರತು, ಹಜರತ್, ಹಜರತ್ತ** (ನಾ). ಮಹನೀಯ; ಮಹಾತ್ಮ; ಶ್ರೇಷ್ಠ: ಹಜರತು ನವಾಬುಸಾಹೇಬರ ಅಪ್ಪಣೆ ಪ್ರಕಾರ (ಎಕ. VIII, ಸಾಗರ. ೩೫೪-೬; 1743). **ಹಜರತ್**: ಹಜರತ್ ಮಹಮದರು ತಮ್ಮ ಕುರಾನನ್ನು ಗ್ರಂಥಸ್ಥವಾಗಿ ಮಾಡುತ್ತಿದ್ದಾಗ ಪರ್ಷಿಯನ್ನರ ಕತೆಗಳು ಜನಕ್ಕೆ ಇದಕ್ಕಿಂತ ಚನ್ನಾಗಿ ಹಿಡಿಸುತ್ತವೆ ಎಂದು ಹೇಳಿದವರುಂಟಂತೆ (ಭಾರದ. ೪೦೫). **ಹಜರತ್ತ**: ಒಂದು ಕಡೆ ಹೈದರಾಬಾದಿನ ಹಜರತ್ತರು ಒಂದು ಕಡೆ ಆದವಾನಿಯ ಖಾನರು . . . ಹೀಗೆ ಕರ್ನಾಟಕದ ಚತುರ್ದಿಕ್ಕುಗಳೂ ಮುಸಲ್ಮಾನರ ಅಂಕೆಯಲ್ಲಿದ್ದವು (ಕಭವಿ. ೫೨೩). [<— ಅರ. ಹಿಂ. ಹಜರತ್]

**ಹಜರತ್ತ** 'ಹಜರತು' ನೋ.

**ಹಜಾಮ** (ನಾ). ಕ್ಷೌರಿಕ; ನಾಯಿಂದ: ಭುತನಹಳ್ಳಿಯಿಂದ್ಬಾ ಹಜಾಮರ್ರು ವಾಲಗಕ್ಕೆ ಮಲ್ಲಿಗೆ ಹುವು ಮುಡ್ಸಿ . . . ವಾಲಗಾ ಮಾಡುತ್ತಿರಲ್ಲು (ಎಕ. IX, ಕಾನಕಾ. ೯೦-೩; 1700); ನಿಜಾಮನಿಂದ ಹಜಾಮನ ತನಕ ಎಲ್ಲರ ಗುಟ್ಟಿನ ಗವಸಣಿಕೆ ನಾನು (ಪರಿಲ. ೧೩); ಆಗತಾನೆ ಹಜಾಮನಲ್ಲಿ ಗಡ್ಡಬೋಳಿಸಿಕೊಂಡು ಬಂದು . . . ನಿಂತಿದ್ದರು (ಚಿಗುಬ. ೧).

[<— ಅರ. ಹಜ್ಜಾಮ್; ಹಿಂ. ಮರಾ. ಹಜಾಮ್]

**ಹಜಾಮಗಿರಿ** (ನಾ). ೧. ಹಜಾಮನ ಕೆಲಸ; ಕ್ಷೌರಿಕವೃತ್ತಿ. ೨. (ಆಲಂ) ಕೀಳಾದ ಕೆಲಸ; ಕ್ಷುಲ್ಲಕವೃತ್ತಿ: ಇಂತಹ ಹಜಾಮಗಿರಿ ಮಾಡಲಿಕ್ಕೇನೆ ಏನು ನಾನು ಡಾಕ್ಟರನಾದದ್ದು (ಹೂಬಿಸಿ. ೯೧). [ಹಜಾಮ + - ಗಿರಿ$_2$]

**ಹಜಾಮತ್** 'ಹಜಾಮತ್ತು' ನೋ.

**ಹಜಾಮತ್‌ಶಾಲೆ** (ನಾ). ಕ್ಷೌರದ ಅಂಗಡಿ; ಆಯುಷ್ಕರ್ಮಶಾಲೆ: ಮೇಸ್ಟ್ರೇ ಇದೇನು ಹೊರಗೆ ನೋಡಿದರೆ ಪ್ರಾಥಮಿಕಶಾಲೆ, ಒಳಗೆ ನೋಡಿದರೆ ಹಜಾಮತ್‌ಶಾಲೆ (ರಂಗಕ. ೭೦). [ಹಜಾಮತ್ (< ಹಜಾಮತ್ತು) + ಶಾಲೆ$_3$]

**ಹಜಾಮತಿ** 'ಹಜಾಮತ್ತು' ನೋ.

**ಹಜಾಮತ್ತು, ಹಜಾಮತ್, ಹಜಾಮತಿ** (ನಾ). ೧. ತಲೆಬೋಳಿಸುವುದು; ಕ್ಷೌರ: ತಿರುಪತಿಕ್ಷೌರದಂತಿದೆ ನಿನ್ನ ಹಜಾಮತ್ತು (ರೂಢಿ). **ಹಜಾಮತ್**: ೧. ನಿನ್ನ ಹಜಾಮತ್ ಮಾಡಬೇಕೋ (ಕಲಕ. ೧೦೭). ೨. (ಆಲಂ) ನಿರ್ವಾಹವಿಲ್ಲದ ವೆಚ್ಚ; ಅನಗತ್ಯವಾದರೂ ಮಾಡಬೇಕಾದ ಖರ್ಚು: ಲೋಕಾಭಿರಾಮು, ಜಯರಾಮು - ಹಜಾಮತ್ ಮಾಡಿದರು (ಬಂಗಬ. ೯೩). **ಹಜಾಮತಿ**: ೧. ಹಣವಂತನು ಹಜಾಮತಿಯನ್ನು ಮಾಡಿಸಿಕೊಂಡರೆ ಸುಮ್ಮನೆ ಯಾವುದಾದರೊಂದು ಹೊಂಡದಲ್ಲಾಗಲಿ ಕೆರೆಯಲ್ಲಾಗಲೀ ಮೈಮುಳುಗಿಸಿಕೊಂಡು ಶುದ್ಧವಾಗಿ ಬರುತ್ತಿರಲಿಲ್ಲ (ಫಲಸಂ. ೧೭); ಇದು ಹಜಾಮತೀ ಮಾಡೋ ಅಂಗಡಿ (ಹೂಬಿಸಿ. ೪). ೨. ವರ್ಷದಲ್ಲೆರಡು ಸಲ ಎಲ್ಲ ಪೋಲೀಸ್ ಕಚೇರಿಗಳಿಗೂ ಆಗುವ 'ಹಜಾಮತಿ'ಇದು (ಬಂಗಾರ.೯).

[<— ಹಿಂ. ಮರಾ. ಹಜಾಮತ್]

**ಹಜಾರ$_1$** (ನಾ). ೧. ಸಭೆ ಮೊದಲಾದುವುಗಳು ನಡೆಯುವ ಸ್ಥಳ; ಓಲಗಶಾಲೆ: ದೀವಾಣವು ದೀವದ ಮೃಗವಾಸವು ಪಾವನತರದ ಹಜಾರ ಜಾವಗಳನು ಸೂಚಿಪ ಘಳಿಯಾರದ ಭಾವವನದನೇನೆಂಬೆ (ಅಂಜಚ. ೩-೩೮); ಹಜಾರ ಸಿಂಹಾಸನವ ಮಾಡಿದಲ್ಲಿ (ಸೌಇಇ. IX-ii, ೪೭೯-೧೧; 1418); ಅಗಲದೊಳ್ ಚಾವಡಿ ಹಜಾರ ಹಯ ಗಜಶಾಲೆ ಮುಖ್ಯ ಬಿಡಾರಂಗಳು (ಚಿಬಪು. ೪೭-೩೩). ೨. ಮನೆಯಲ್ಲಿ ಪ್ರಧಾನವಾಗಿರುವ, ದೊಡ್ಡದಾದ ಮುಂಭಾಗ; ಪಡಸಾಲೆ: ವಸಂತನು ವನವೆನ್ನುವ ಹಜಾರದಲ್ಲಿ ವಸ್ತುಗಳನ್ನು ಕಟ್ಟಿರುವನು (ಸೌಗಂಧಿ. ೪೭೯-೧); ನಂಜಮ್ಮ ಅವರನ್ನೆಲ್ಲ ತನ್ನ ಮನೆಗೆ ಕರೆದೊಯ್ದು ಹಜಾರದಲ್ಲಿ ಉಚಿತಪೀಠಗಳ ಮೇಲೆ ಕುಳ್ಳಿರಿಸಿದಳು (ಹಾಹುತ್ರ. ೧೦೮). ವೇದಗಳ ಕಾಲದ ಮನೆಯಲ್ಲಿ ಒಂದು ಹಜಾರವೂ ಅದರ ಸುತ್ತಲೂ ಕೋಣೆಗಳೂ ಇರುತ್ತಿದ್ದುವು (ಮೈವಾಸ್ತು. ೨೩). [?./ ತೆಲು. ಹಜಾರ, ಹಜಾರು]

**ಹಜಾರ$_2$** (ನಾ). ಒಂದು ಸಂಖ್ಯೆ; ಸಾವಿರ; ಸಹಸ್ರ: ಬಿಜಾಪುರದಲ್ಲಿ ಇಜಾರದವರು ಹಜಾರಮಂದಿ (ಗಾದ). [<— ಪಾರ. ಹಿಂ. ಮರಾ. ಹಜಾರ್]

**ಹಜಾರವಟ್ಟೆ** (ನಾ). ಸಭಾಮಂದಿರಗಳ ಸಾಲು; ಓಲಗಶಾಲೆಗಳ ಸಮೂಹ: ವಿಲಸಿತಪ್ರಾಕಾರಮೇಳದ ನಿಲವು ತಾಂ ಪದಿನಾರುಯೋಜನದಳತೆಯಷ್ಟದ್ವಾರ ಕೊತ್ತಳ ಮೂರು ಕೋಂಟೆಯಲೀ ಪೊಳೆವ ಚಾತುರ್ಲಕ್ಷವೀಧಿಗಳಳವಿಯಲಿ ನವಕೋಟಿ ಶಂಕರನಿಳಯಗಳು ಮೂವತ್ತುಕೋಟಿ ಹಜಾರವಟ್ಟೆಗಳು (ಆನಂರಾ. ೧-೬-೩೧).

[ಹಜಾರ$_1$ + ಪಟ್ಟೆ$_3$]

**ಹಜಾರಾ, ಹಜಾರಿ** (ನಾ). ೧. ಅನೇಕ ಧಾರೆಗಳನ್ನು ಸೂಸುವ ಕಾರಂಜಿ: ಅಸಂಖ್ಯಸೂಕ್ಷ್ಮಛಿದ್ರಗಳೊಳಗಿಂದ ಹಾರುವ ಹಜಾರಾಯೆಂಬ ಕಾರಂಜಿಯ ಎದುರಿಗೆ ಬೆಳಿಗ್ಗಾಗಲಿ ಸಂಜೆಯಾಗಲಿ ಸೂರ್ಯನ ಕಡೆಗೆ ಬೆನ್ನುಮಾಡಿ ನಿಂತರೆ (ಮುಂಬಯಿ. ೬-೯೫). **ಹಜಾರಿ**: ೨. ಸಾವಿರ ಸಿಪಾಯಿಗಳ ಸರದಾರ, — ನಾಯಕ: ಪದಾತಿಯಲ್ಲಿ . . . ಎರಡು ಹವಾಲುಗಳಿಗೊಬ್ಬ ಜುಮ್ಲೇದಾರನೂ, ಹತ್ತು ಜುಮ್ಲೆಗಳಿಗೊಬ್ಬ ಹಜಾರಿಯೂ, ಏಳು ಹಜಾರಿಗಳಿಗೊಬ್ಬ ಸರ್‌ನೌಬತ್ತು . . . ಇರುತ್ತಿದ್ದರು (ಛತ್ರಶಿ. ೧೫೫). [<— ಮರಾ. ಹಜಾರಾ, ಹಜಾರೀ; ಪಾರ. ಹಜಾರ್]

**ಹಜಾರಿ** 'ಹಜಾರಾ' ನೋ.

**ಹಜೂರು$_1$** 'ಹುಜೂರು$_1$' ನೋ.

**ಹಜೂರು$_2$** 'ಹುಜೂರು$_2$' ನೋ.

**ಹಜೂರುಕಚೇರಿ** (ನಾ). (ಕಂದಾಯವಸೂಲಿಯ) ಅಧಿಕಾರಿಯ ಕಾರ್ಯಾಲಯ, — ಕಚೇರಿ: (ಕ). [ಹಜೂರು (< ಹುಜೂರು$_2$) + ಕಚೇರಿ]

**ಹಜ್ಜ** 'ಪಜ್ಜ' ನೋ.

**ಹಜ್ಜೆ** 'ಪಜ್ಜೆ' ನೋ.

**ಹಜ್ಜೆಗೊಳಿಸು** (ಕ್ರಿ). ಹೆಜ್ಜೆಯಿಡುವಂತೆ ಮಾಡು; ಚಲಿಸುವಂತೆ ಮಾಡು: ದೆಸೆಯಱಿದು ಬೋಳೈಸಿ ಹಜ್ಜೆಗೊಳಿಸಿ ತೊಡೆ ಮಡ ದನಿ ಚಮ್ಮಟಿಗೆಗಳಿನೊಯ್ಯ ನೊಯ್ಯನೆ ಮೈವಳಿಗೆ ತಂದು (ರಾಜಶೇ. ೬-೧೧ ವ). [ಹಜ್ಜೆ (< ಪಜ್ಜೆ) + ಕೊಳಿಸು]

**ಹಜ್ಜೆದೆಗೆ** (ಕ್ರಿ). ಕಾಲುಕೀಳು; ಹಿಂದಕ್ಕೆ ನಡೆ; ಓಡು : ಹಜ್ಜೆದೆಗದರೆ ಮಣಗಲೀಯದೆ ಮೇಲೆ ಕವಿಸುವ ಮಿಾಜಿ ಕೈಮಾಡಿ ಕೆಣಕಿದರೆ ಝುಂಕಿಸುವ . . . ಸುರಗಿಯತಿಬಲರು (ಕುವ್ಯಾಭೀ. ೪-೨೩). [ಹಜ್ಜೆ (< ಪಜ್ಜೆ) + ತೆಗೆ$_1$]

**ಹಜ್ಜೆಯಿಡು** 'ಪಜ್ಜೆಯಿಡು' ನೋ.

**ಹಜ್ಜೆವಿಡಿ** 'ಪಜ್ಜೆವಿಡಿ' ನೋ.

**ಹಜ್ಜೆಹಾಕು** 'ಪಜ್ಜೆಹಾಕು' ನೋ.

**ಹಟ** (ನಾ). ಛಲ; ಆಗ್ರಹ: ಅವನಿಗೆ ಪಚ್ಚರು ತಯಾರಿಸುತ್ತಿದ್ದ ಹರಳುಗಳಿಗಿಂತ . . . ಉತ್ತಮೋತ್ತಮವಾದ ಉಜ್ಜಿದ ಹರಳನ್ನು ತಯಾರಿಸಬೇಕೆಂಬ ಹಟ (ವಿಕಾಸ. ೩); ಹಲವರಿಗೆ ಈ ಪ್ರಶ್ನೆ ವೈಯಕ್ತಿಕಸ್ಥಾನಮಾನಗಳ ಪ್ರಶ್ನೆಯಾಗಿ ಹಟ ಹೆಚ್ಚಿತು (ದ್ರಾವಿವಿ. ೮೨).
ಹಟತೊಡು = ಛಲಹಿಡಿ; ಛಲಮಾಡು: ಅವರು ಏನೆಂದರೂ ನೊಂದು ಹಟತೊಡಬೇಡ (ರಂಗನಾ. ೩೭). ಹಟಮಾಡು = ಮೊಂಡುಹಿಡಿ; ಚಂಡಿಮಾಡು: ಮಗು ತುಂಬಾ ಹಟಮಾಡುತ್ತಿತ್ತು (ರೂಢಿ). ಹಟಸಾಧಿಸು = ಛಲಹಿಡಿದು ಸಾಧನೆಮಾಡು: ಅಂತೂ ಹಟಸಾಧಿಸಿ ಹಿಡಿದ ಕೆಲಸವನ್ನು ಮಾಡಿಬಿಟ್ಟೆಯಲ್ಲ ! (ರೂಢಿ). [< ಸಂ. ಹಠ]

**ಹಟಗಾತಿ** (ನಾ).ಛಲದ ಸ್ವಭಾವದವಳು; ಛಲಗಾತಿ: ಅವಳು ಬಹಳ ಹಟಗಾತಿ (ರೂಢಿ). [ಹಟ + - ಗಾತಿ$_1$]

**ಹಟಗಾರ** (ನಾ). ಛಲದ ಸ್ವಭಾವದವನು; ಛಲಗಾರ: ಅವನು ತುಂಬಾ ಹಟಗಾರ (ರೂಢಿ). [ಹಟ + - ಗಾರ (< - ಕಾಱ)]

**ಹಟದ್ರತ್ನ** (ನಾ).ಹೊಳೆಯುವ ಮಣಿ,— ರತ್ನ: ವೈದೇಹಿಗೆ ಮಕುಟಹಟದ್ರತ್ನ ದಿಂದರ್ಘ್ಯಮಿತ್ತಂ (ಪಂರಾಮಾ. ೯-೮೪); ದೇದೀಪ್ಯಮಾನಪ್ರಭವೇಂ ಕಣ್ಗೆಂಬುವೆತ್ತಿ ರ್ದುದೊ ವಿಕಟಹಟದ್ರತ್ನಕೂಟಂ ಕಿರೀಟಂ (ಚಂದ್ರಪ್ರ. ೨-೫೬). [ಸಂ.]

**ಹಟದ್ರುಚಿ** (ನಾ).ಹೊಳೆಯುವ ಕಾಂತಿ , — ಪ್ರಭೆ: ಉಜ್ಜ್ವಲನವರತ್ನಭೂಷಣ ಕೀರಿಟಹಟದ್ರುಚಿಯಿಂದದೇಂ ಪಳಂಚಲೆದುದೊ ರಾಜರಾಜಸಭೆ (ಪಂರಾಮಾ. ೬-೭೪). [ಸಂ.]

**ಹಟನ್ನೀರೇಜ** (ನಾ).ನಳನಳಿಸುವ ತಾವರೆ: ಇರ್ದತ್ತು ಹಟನ್ನೀರೇಜನಾಳಂ ನಿಮಿರ್ದುದನಿದಿರೊಳ್ ಪೊತ್ತು ತೋರ್ಪಂಡದಿಂದಂ (ಸುಕುಮಾ. ೩-೧೫). [ಸಂ.]

**ಹಟಮಾರಿ** (ನಾ).ಛಲದ ಸ್ವಭಾವದ ವ್ಯಕ್ತಿ: ನಮ್ಮ ರಾಘವ ತುಂಬಾ ಹಟಮಾರಿ (ತುಂಗಭ. ೧೧೩); ವೆಂಕಟರಾಯ ಅಸಾಧ್ಯ ಸಂಶಯ; ಅಸಾಧ್ಯ ಹಟಮಾರಿ (ಗಂಮಾಯಿ. ೨೬೯). [ಹಟ + - ಮಾರಿ$_1$]

**ಹಟಮಾರಿತನ** (ನಾ). ಛಲದ ಸ್ವಭಾವ; ಆಗ್ರಹಬುದ್ಧಿ : ನನ್ನ ಅಂಗಿಯ ಬೇಕೆಂಬ ಹಟಮಾರಿತನ ಅವನಿಗಿಲ್ಲ (ದೇಕನ್ನ. ೩೪); ಇದರಿಂದ ಅವಳಲ್ಲಿ ಹಟಮಾರಿತನವು ಮನೆಮಾಡಿತು (ರಂಗರೂ. ೧೮೬). [ಹಟಮಾರಿ + - ತನ]

**ಹಟಯೋಗಿ** (ನಾ). ಹಠಯೋಗವನ್ನು ಮಾಡುವವನು: ಅಂಬಿಕಾಯೋಗಿಗಳ ಡೊಂಬರಿಗೆ ಸರಿಯೆಂಬೆ ಹಟಯೋಗಿಗಳ ಆಟಮಟಗಾಱರೆಂದೆಂಬೆ (ಸಿದ್ಧೇವ.೨೧೪-೩೫೮). [< ಸಂ. ಹಠಯೋಗಿನ್]

**ಹಟವಾದಿ** (ನಾ). ಛಲವನ್ನು ಸಾಧಿಸುವವನು: ಹೀಗೆಮಾಡಬೇಡ. ಅವರು ಹಟವಾದಿ . . . ಎಂದು ಅಂಗಲಾಚಿದರು (ರಂಗನಾ. ೩೪); ಛಲವಾದಿಯ ಸಂಗಡ ಹಟವಾದಿ ಸೇರಿದ ಹಾಗೆ (ಗಾದೆ). [< ಸಂ. ಹಠವಾದಿನ್]

**ಹಟವಿಡಿ, ಹಟಹಿಡಿ** (ಕ್ರಿ). ಛಲತೊಡು; ಆಗ್ರಹಪಡಿಸು: ದುರ್ಜನರುಯಿಲೆಮರುಳೆ ಪಾಲ್ಪಸುಗೆಯ ಈ ಕಾಲ ಬಿಡದಿರಲೆ ಹಟವಿಡಿದು ಕೊಳ್ಳೆಂದು . . . ಎಂಬರು (ತುರಂಗ. ೪-೫); ಯಾರೆಷ್ಟು ಹೇಳಿದರೂ ಕೇಳದೆ ತೌರುಮನೆಗೆ ಹೋಗದೆ ಬಿಡೆನೆಂದು ಹಟವಿಡಿದರೆ ಆಗ ನಾವೇನು ಮಾಡಬಲ್ಲೆವು (ಲಕ್ಷ್ಮೀಪ್ರ. ೧೦೭). ಹಟಹಿಡಿ: ನಿನ್ನನ್ನೇ ಮದುವೆಯಾಗುವೆನೆಂದು ಈ ಒಂದು ವರುಷದಿಂದ ಹಟಹಿಡಿದಿದ್ದ (ತೇಮೋಡ. ೯೯). [ಹಟ + ಪಿಡಿ$_1$]

**ಹಟಹಿಡಿ** 'ಹಟವಿಡಿ' ನೋ.

**ಹಟಾತ್ಕಾರ** (ನಾ). ಗರ್ವ; ಅಹಂಕಾರ: ಕಲಿಯುಂ ಬಲ್ಲಾಳುಮೆನ್ನಿಂದೊಳರ ಪೆಱರುಮೆಂಬೀ ಹಟಟಾತ್ಕಾರದಿಂದಂ ಮಲೆದೆಯ್ತಂದೆಮ್ಮ ಮಾವಂಗಿದಿರಿದಿರುಱೆ ಬಂದಾಂತ[ಯಾಂತಂತ] ತಿಣ್ಣಂ ನಿಲವೇಟೆಂದಟ್ಟಿ (ಬಂಪಭಾ. ೧೨-೪); ಸಹಸ್ರಧಾರವಾದ ಚಕ್ರವು ಗರ್ವಿತನಾಗಿ ಕ್ಷಮೆಯ ಬಿಟ್ಟು ಆ ದೇವನಂ ಕುರಿತು ಹಟಾತ್ಕಾರದಿಂದ ನುಡಿದುದು (ಗದಾಮ. ೯-೫೫). [?/ ಹೋ. ಹಠಾತ್ಕಾರ = ಬಲಾತ್ಕಾರ; ಒತ್ತಾಯ]

**ಹಟಾತ್ತು** (ಅ). ಇದ್ದಕ್ಕಿದ್ದಂತೆ: ಮೇಲೆ ಹೇಳಿದ ಯಾವ ಚಿಹ್ನೆಯೂ ಕಾಣಿಸಿಕೊಳ್ಳದೆ ಹಟಾತ್ತಾಗಿ ಮೂರ್ಛೆಹೋಗಿ ಸಾಯುವುದು (ಗ್ರಾಮಾಕ. ೧೨೮); ನನ್ನ ಸುಶಿ ಹಟಾತ್ತಾಗಿಯೂ ಕೇಳಿಬಿಟ್ಟಳು (ನಡದಾ. II, ೮೬೫). 'ಹಠಾತ್ತು' ಪರಾ. [?]

**ಹಟಿಕಾರ** (ನಾ). ಬಟ್ಟೆ ನೇಯುವವನು; ನೇಕಾರ: ಅನುಪಿನ ಕಟ್ಟ ಗ್ರಾಮದಿಂದ ಹಟಿಕಾರ ಮಗ ೨ಕ್ಕೆ ಗ ೧ . . . ಅಸಗಗಾರಕದಿಂದ ಜನ ೧ಕ್ಕೆ ಗ॥ ೨ (ಎಕ.VIII, ತೀರ್ಥಹ. ೯೫-೬೦; 1709). [< ಪಟ್ಟೆಗಾಱ]

**ಹಟ್ಟಿ** (ನಾ). ೧. ವಸ್ತುಗಳನ್ನು ಮಾರುವ ಸ್ಥಳ; ಅಂಗಡಿ: "ಕ್ರಿತಹಟ್ಟಮಾಪಣಂ ಪಣ್ಯ ವಿಕ್ರಯಶಾಲೆ" (ವಸ್ತುಕೋ. ೪೮-೨೦). ೨. ಸಂತೆ; ಬಜಾರು: ಬಿಟ್ಟ ಕರವು ಕಠಾರಿಯಿಂದರೆಯಟ್ಟ ತೀವಿದುದು ತೀವಿದಡವಿಯ ಬಟ್ಟಗರನಾ ದಂಡೆಗೊಡ್ಡಿದ ಕೈಯ ಕಡುಹಿನಲಿ ಹೊಟ್ಟೆಯಲಿ ಕರುಳೊಕ್ಕು ಕಪಿಗಳ ಹ[ಪಾಠಾಂ. ಬೆ]ಟ್ಟವಗಣಿತವಾದವಾ ನೊರೆಗಟ್ಟಿ ಸುರಿವರುಣಾಂಬುನದಿ ಹಲವಾದುದಗಲದಲಿ (ತೊರರಾ. ೬-೨೮-೫೦). [ಸಂ.]

**ಹಟ್ಟಿಗಾಱ** (ನಾ).೧. ವ್ಯಾಪಾರಮಾಡುವವನು; ವರ್ತಕ. ೨. ಒಂದು ಮನೆತನದ ಹೆಸರು ಮತ್ತು ಆ ಮನೆತನಕ್ಕೆ ಸೇರಿದವನು: ಅಲಿಂ ಪಡುವಲು ಹಟ್ಟಿಗಾಱರ ಕೆಯಿ ಪಡುವಣ ಸೀಮೆ ಅಂಗಡಿಯ ದಾವಣ್ಣನ ಸತ್ರಕ್ಕೆ ಬಿಟ್ಟ ಕೆಯ್ಯಿಂ ಮೂಡಲು . . . ಸರ್ವ್ವಬಾಧಾಪರಿಹಾರವಾಗಿ ಪ್ರತಿಪಾಳಿಸುವರು (ಸೌಇಇ. XI -ii, ೧೩೬-೫೭; 1091); ಶ್ರೀಮತು ಹಟ್ಟಿಗಾಱ ಕಡಂಬರ ಕಾಡೆಯ ನಾಯಕನುಮವರ ಮಾವಂ ಸೋವೆಯ ನಾಯಕನುಂ ತಳಾಱಕೆ ಡೊಂಕಿವಣ ಮಾನೆಣ್ಣೆಸಹಿತಂ ಬಿಟ್ಟ ಗಾಣವೊಂದು (ಕಇ. II, ೧೦-೩೭; 1181); ಪಟ್ಟಣಸ್ವಾಮಿಗಳು ಹಟ್ಟಿಗಾಱ ಹರಿಗ ಕಾಳಬೋವ ಮಂಡಳಿಕ ಜಗದ್ದಳ ಬಂಮಿದೇವನ ಸುಪುತ್ರ ಸೋಯಿದೇವ ಘಟ್ಟದೇವಯೀ ಧರ್ಮ್ಮವಂ ಸ್ವಧರ್ಮದಿಂ ಪ್ರತಿಪಾಳಿಸಿದರು (ಸೌಇಇ. IX - i, ೩೩೮-೧೫; 1221). [ಹಟ್ಟಿ + - ಕಾಱ]

**ಹಟ್ಟಿವಿಲಾಸಿನಿ** (ನಾ). ೧. ಸಂತೆಸೂಳೆ; ಬಜಾರಿ: "ಹಟ್ಟವಿಲಾಸಿನಿ . . . ಸಂತೆಯಲ್ಲಿ ಸುಳಿದಾಡುವವಳು ; ಹಾದರಗಿತ್ತಿ" (ಅನಂನಾ). ೨. ಒಂದು ಬಗೆಯ ಸುಗಂಧದ್ರವ್ಯ. [ಸಂ. ಹಟ್ಟವಿಲಾಸಿನೀ]

**ಹಟ್ಟಳೆ** (ನಾ).ಬಂಧನ; ಸಂಕೋಲೆ: ಒತ್ತೆಗೊಂಡವನವಳ ಕಾಲ್ಗೆ ಹಟ್ಟಳೆವೂಱಿದು ಕೊಂಡಿರೆ (ಪದ್ಮರಾ. ೨-೧೮); ದುರ್ಜನೆ ಕಾಲ್ಗೆ ಹಟ್ಟಳೆಯ ಹೊಲಿಸಿ ಬಾಗಿಲ್ಗಾಯ್ಯುತಂ ಇರಲು (ಗುರುಚಾ. ೮-೩೩). [?]

**ಹಟ್ಟಿ$_1$** 'ಪಟ್ಟಿ$_1$' ನೋ.

**ಹಟ್ಟಿ$_2$** (ನಾ). ವ್ಯಾಪಾರದ ಸ್ಥಳ; ಸಂತೆ. [ಸಂ. ಹಟ್ಟೀ]

**ಹಟ್ಟಿಕಾರ** 'ಹಟ್ಟಿಕಾಱ' ನೋ.

**ಹಟ್ಟಿಕಾಱ, ಹಟ್ಟಿಕಾರ** (ನಾ). ದನಕಾಯುವವನು; ಗೋಪಾಲಕ; ಗೊಲ್ಲ: ಹಟ್ಟಿಕಾಱರಿಹ ಹಳ್ಳಿ ಘೋಷಂ (ಮಂಗರಾ. ೫೫-೧೦); ಹಟ್ಟಿಕಾಱರು ಭಾಪು ತನ್ನನು ಕಟ್ಟಿ ಬಿಸುಟರು (ನಿಭಾಗ. ೧-೧೦-೫೭). ಹಟ್ಟಿಕಾರ: ಹಟ್ಟಿಕಾರರು, ಹಳ್ಳಿಕಾರರು, ಹನುಮರು . . . ರಾಮನ ಎಡಬಲದಲ್ಲಿ ಬಂದು ನಿಂತರು (ಕುಮಾಸಾಂ. ೧೪೩); ಹಟ್ಟಿಕಾರನೆಂದರೆ 'ಜೀವಧನಂಗಳ' ಸಾಕಿ ಬದುಕುವವನು (ಕರ್ನಾಜಾ. ೧೨). 'ಪಟ್ಟಿಕಾಱ' ಪರಾ. [ಹಟ್ಟಿ$_1$ (< ಪಟ್ಟಿ$_1$) + - ಕಾಱ]

**ಹಟ್ಟಿಕೆ** 'ಪಟ್ಟಿಗೆ' ನೋ.

**ಹಟ್ಟಿಕೊಟ್ಟಿ** (ನಾ). ದನಗಳನ್ನು ಕಟ್ಟುವ ಸ್ಥಳ; ಗೋಶಾಲೆ: ಹಟ್ಟಿಕೊಟ್ಟದ ಅರಸುಗಳಿಗೆ ಸಮಾನಸ್ಕಂಧತೆಯ ಸಂಗಡಿಗನಾಗಿ ತೊಳಲ್ದಾಡುತ್ತಿದ್ದ ಆ ತಿರಿಕತನದ ತಾರತಕ್ಕಡಿಗನಿಗೆ ರಾಜಗಾಂಭೀರ್ಯವೆಲ್ಲಿಂದ ಬರಬೇಕು? (ಮಂತ್ರಶ. ೧೫೦-೧). [ಹಟ್ಟಿ$_1$ (< ಪಟ್ಟಿ$_1$) + ಕೊಟ್ಟ$_1$]

**ಹಟ್ಟಿಕೊಟ್ಟಗೆ** (ನಾ). = ಹಟ್ಟಿಕೊಟ್ಟಿ: ತೋಟ ತುಡಿಕೆ ಹಟ್ಟಿಕೊಟ್ಟಗೆ ದನಹುಲ್ಲು (ಬೆಟ್ಟೂಅ. ೧೯೫-೧೭). [ಹಟ್ಟಿ$_1$(< ಪಟ್ಟಿ$_1$) + ಕೊಟ್ಟಗೆ]

**ಹಟ್ಟಿಗಾಳಗ** 'ಹಟ್ಟಿಗಾಳೆಗ' ನೋ.

**ಹಟ್ಟಿಗಾಳೆ** (ನಾ). (ಆಲಂ) ಬಜಾರಿ ಎಂಬರ್ಥದ ಒಂದು ಬಯ್ಗುಳು: ಜಗುಳ್ಳೆಯಿದಿರ್ಚೆ ಸಬ್ಬಮೆನಗಿಲ್ಲದ ದೋಷಮನಿಟ್ಟು ಹಟ್ಟಿಗಾಳೆ ಗಳಹಿಯೆಂಬುದಂ ಕರೆಯದಿರ್ದೊಡೆ (ಲೀಲಾವ. ೨-೧೧೦). [ಹಟ್ಟಿ$_1$(< ಪಟ್ಟಿ$_1$) + ಕಾಳೆ (< ಕಹಳೆ)]

**ಹಟ್ಟಿಗಾಳೆಗ, ಹಟ್ಟಿಗಾಳಗ** (ನಾ). ಹಟ್ಟಿ, ಹಟ್ಟಿಗಳ ನಡುವೆ ನಡೆಯುವ ಕಾದಾಟ: ಚಾಳುಕ್ಯನರೇಂದ್ರನ ಮುಂದೆ ಹಟ್ಟಿಗಾಳೆಗದೊಳ್ ಪಂಪನಪಪಂ ಪರಪಿನಂದನೆ ಸುಭಟದ್ಟೋರೆಯೆ ಬಗೆವಡಾಚುಗಿನ್ನಪನೊಳ್ (ಸೌಇಇ. XI-ii, ೧೧೯-೧೫; 948). **ಹಟ್ಟಿಗಾಳಗ:** ಹಟ್ಟಿಗಾಳಗಕ್ಕೆ ಮಲೆವ ಸಾಮನ್ತರ ಗಂಡಂ (ಎಕ.XIV, ನಾಗಮಂ. ೧೮೦-೨೧; 1225). [< ಪಟ್ಟಿಗಾಳೆಗ]

**ಹಟ್ಟಿಗೆ$_1$** (ನಾ). ವಾಸಮಾಡುವ ಸ್ಥಳ; ಆವಾಸ: (ಕ). [< ಹಟ್ಟಿ$_1$]

**ಹಟ್ಟಿಗೆ$_2$** 'ಪಟ್ಟಿಗೆ' ನೋ.

**ಹಟ್ಟಿದೆರೆ** (ನಾ). ದನಗಳನ್ನು ಕಟ್ಟುವ ಮನೆಗಳ ಮೇಲೆ ಹಾಕುವ ಕಂದಾಯ, — ತೆರಿಗೆ: ಆ ಪುರದ ಚತುಸೀಮೆಯೊಳಗಣ . . . ಬಿಟ್ಟ ಕೊಟ್ಟಣ ಅಳಿವಂನ್ನಾಯ ಸುಂಕ ಹಟ್ಟಿದೆರೆ ತಪ್ಪು ತೌವುಡಿ (ಎಕ.XI, ಚಿತ್ರದು. ೨-೨೨; 1355).

[ಹಟ್ಟಿ$_1$(< ಪಟ್ಟಿ$_1$) + ತೆರೆ$_3$ (< ತೆಱ$_3$)]

**ಹಟ್ಟಿಮನೆ** (ನಾ). ದನಗಳನ್ನು ಕಟ್ಟುವ ಕೊಟ್ಟಿಗೆ: ನಿನ್ನ ಕಾಲ್ಗುಳಿತದಿಂ ಹಟ್ಟಿಮನೆ ತುಂಬಿತ್ತು (ಕಾಲೂರ.೮೩-೧೫೮). [ಹಟ್ಟಿ$_1$ (< ಪಟ್ಟಿ$_1$) + ಮನೆ]

**ಹಟ್ಟಿಹಕ್ಕಲು** (ನಾ). ಹಟ್ಟಿ ಮತ್ತು ಅದಕ್ಕೆ ಸಂಬಂಧಿಸಿದ ಬಯಲು ಪ್ರದೇಶ: ಯಿಂತೀ ಚತುಸ್ಸೀಮೆಯೊಳಗುಳ್ಳ . . . ಹಟ್ಟಿಹಕ್ಕಲು ತೋಟತುಡಿಕೆ (ಮೈಆರಿ. ೧೯೩೪, ೫೩-೧೮; 1405). 'ತೋಟತುಡಿಕೆ' ಪರಾ.

[ಹಟ್ಟಿ$_1$ (< ಪಟ್ಟಿ$_1$) + ಹಕ್ಕಲು (< ಹಕ್ಕಲ್)]

**ಹಟ್ಟು** 'ಪಡು$_1$' ಪರಾ.

**ಹಟ್ಟೆ** 'ಪಟ್ಟಿ$_2$' ನೋ.

**ಹಟ್ಟೆಗಾಱ$_1$** (ನಾ).= ಹಟ್ಟಗಾಱ ೨ : ಸಾಂತಳಿಗೆ ಸಾಯಿರಕ್ಕೆ ಧಾಳಿಯಾಗಿ ಹರಿದಲ್ಲಿ ಹಟ್ಟೆಗಾಱ ಬೀಚ ಹಲರನಿಱಿದು ಮೆಱೆದು ಸುರಲೋಕಪ್ರಾಪ್ತನಾದಂ (ಎಕ.VIII, ಸೊರಬ.೧೯೭-೪; 1132). [< ಹಟ್ಟಗಾಱ]

**ಹಟ್ಟೆಗಾಱ$_2$** 'ಪಟ್ಟುಕಾಱ' ನೋ.

**ಹಠ** (ನಾ). ಛಲ; ಆಗ್ರಹ: ಎಳೆಯ ಮಕ್ಕಳ ಹಾಗೆ ಹಠ ಮಾಡಿದಿರಿ (ನಂಟರು.೩೪); ನಾರಾಯಣ ತನ್ನ ಹಠ ಬಿಡಲಿಲ್ಲ (ತ್ಯಾಗಮ. ೧೮೭). ೨. ಒತ್ತಾಯ; ಬಲಾತ್ಕಾರ: "ಹಠEಠ3ಂ ಪ್ರಸರEಭತಿವೆನಲು ಬಲುಹಿಂಗಕ್ಕು" (ಮಂಗರಾ. ೧೩೭-೩೯).

**ಹಠತೊಡು** = ಛಲತೊಡು; ಛಲಹಿಡಿ: ನೀವೆಲ್ಲ ಪುಣ್ಯಶಾಲಿಗಳಮ್ಮ ಹಠತೊಟ್ಟು ಬೈಗಳಿಂ ಕೋಪದಿಂ ಕೋರಿಕೆಯ ಸಾಧಿಪಿರಿ (ಕವಿಸೋ. ೪೫-೨); ಈ ಹುಟ್ಟುಹವ್ಯಾಸ ಗಂಡಿನಲ್ಲಿ ಏಕೆ ಹಠತೊಟ್ಟು ಹೋರಾಡುತ್ತಲಿದೆ (ದೇಶನ್ನ. ೭೪). [ಸಂ.]

**ಹಠಗಾರ** (ನಾ). ಹಟಹಿಡಿಯುವವನು; ಛಲಗಾರ : ನನಗೆ ನೀನು ಹಠಗಾರನೆಂದು ಗೊತ್ತು; ಬೇಡವೆಂದರೆ ಅಪಶುನ ನುಡಿದಂತಾಗುತ್ತದೆ (ಚಂಗಾಳ್ಳ. ೪೯೧).

[ಹಠ + - ಗಾರ (< - ಕಾಱ)]

**ಹಠತ್ಕುಟಾರ** (ನಾ).೧. ಹೋಳೆಯುವ ಕತ್ತಿ.೨. ಹೋಳೆಯುವ ಕತ್ತಿಯ ಸ್ವರೂಪನಾದವನು: ಅಖರ್ವಗರ್ವಪರ್ವತಾರೂಢದುರ್ವಿನೀತಸರ್ವಚಾರ್ವ್ವಾಕೋರ್ವ್ವಿಧರಾಹನಿಪಾತನಪಟುಹಠತ್ಕುಟಾರರ್ ವಿಷಮವಿಷಯಾತಿದೂರರ್ (ಶಾಸಪ. ೫೨-೪೩; 12ನೆಯ ಶತ). [IP ಇದು 'ಹಟತ್ಕುಟಾರ' ಎಂಬುದರ ಅಪಲಿಖಿತ]

**ಹಠಮಾರಿ** (ನಾ). = ಹಟಮಾರಿ: ಸುಮಿತ್ರ ಎಷ್ಟು ಹಠಮಾರಿಯೋ . . . ಅಷ್ಟೇ ಮೃದು ಸರೋಜಿ (ವಿದ್ಯಾರ. ೩೦). [ಹಠ + - ಮಾರಿ$_1$]

**ಹಠಯೋಗ** (ನಾ). [ಯೋಗ] ಯೋಗದಲ್ಲಿ ಒಂದು ಬಗೆ: ಮಂತ್ರ ಯೋಗ ಲಯಯೋಗ ಹಠಯೋಗ ರಾಜಯೋಗವೆಂದು ಯೋಗ ಚತುರ್ವಿಧ (ಅಖಂಡೇ. ೨೧೨-೫೩); ಇಡಾ ಪಿಂಗಳ ಈ ಎರಡು ನಾಡಿಗಳಲ್ಲಿ ಸಂಚರಿಸುತ್ತಿರುವ ಪ್ರಾಣವಾಯುವು ಇವುಗಳ ಮಧ್ಯೆ ಇರುವ ಸುಷುಮ್ನಾನಾಡಿಯೊಳಕ್ಕೆ ಪ್ರವೇಶಿಸುವಿಕೆಯೇ ಹಠಯೋಗ (ಭಾರದ. ೧೫೩). [ಸಂ.]

**ಹಠವೃತ್ತಿ** (ನಾ).೧. ಛಲದ ಸ್ವಭಾವ. ೨. ಒತ್ತಾಯ; ಬಲವಂತ: "ಪ್ರಸಭಮೆನಿಕ್ಕುಂ ಹಠವೃತ್ತಿ" (ವಸ್ತುಕೋ. ೧೧೨-೧೦). [ಸಂ.]

**ಹಠಾತ್ಕಾರ** (ನಾ). ಬಲಾತ್ಕಾರ; ಒತ್ತಾಯ. [ಸಂ.]

**ಹಠಾತ್ತನೆ** (ಅ). ಇದ್ದಕ್ಕಿದ್ದಂತೆ; ಕೂಡಲೆ: ಲೂಟಿಯಾಯಿತೆಂಬ ವರ್ತಮಾನ ಹಠಾತ್ತನೆ ಬಂತು (ನಿರಾತ. ೪೭); ಹಠಾತ್ತನೆ ಬರುವ ಆವಶ್ಯಕತೆಯೇನು (ಕಾವೇರಿ. ೧೧೫).

[ಹಠಾತ್ತು + - ಅನೆ$_1$]

**ಹಠಾತ್ತು** (ಅ). ಕೂಡಲೆ; ತಕ್ಷಣ: ತಲೆಯ ಮೇಲೆ ಲಾಠಿ ಏಟು ಬಿದ್ದರೆ ಕೈ ಹಠಾತ್ತಾಗಿ ತಲೆಯ ಮೇಲಕ್ಕೆ ಹೋಗುತ್ತದೆ (ಜೀವಾತ್ಮ.೨೦೦); ಅಧಿಕ ಒತ್ತಡದ ಪರಿಣಾಮವಾಗಿ ಅವು ಹಠಾತ್ತಾಗಿ ಪರಿವರ್ತನೆಯಾಗಬಲ್ಲವು (ಭೂಹುಟ್ಟು.೨). 'ಹಟಾತ್ತು' ಪರಾ. [?]

**ಹಡಕಿ** 'ಪಡುಕೆ' ನೋ.

**ಹಡಕಿಗ** (ನಾ). ಹೊಲಸು ತಿನ್ನುವವನು; ಹೊಲೆಯ: ಸತ್ತ ನಾಯ ಭಕ್ಷಿಸುವ ಹಡಕಿಗರನೇನೆಂಬೆನಯ್ಯಾ (ದೇದಾವ. ೩೩-೫೮). [ಹಡಕು (< ಪಡುಕೆ) + - ಇಗ]

**ಹಡಕು** 'ಪಡುಕೆ' ನೋ.

**ಹಡಕುಳಿನಾಯ್** (ನಾ). ದುರ್ಬಲವಾಗಿ, ಮೇಲೇಳಲಾರದ ನಾಯಿ: ಶುನಿಕಾಪಿ-ಹಡಕುಳಿನಾಯ್ (ನೀತಿವಾ. ೨೭-೩೭). 'ಪಡುಕುಳಿಯೆತ್ತು' ಪರಾ.

[ಹಡಕುಳ್ಳಿ (< ಪಡುಕುಳಿ) + ನಾಯ್]

**ಹಡಕೆ** 'ಪಡುಕೆ' ನೋ.

**ಹಡಗ** 'ಪಡಂಗು' ನೋ.

**ಹಡಗಿಲೆ** (ನಾ). ಒಂದು ಊರಿನ ಹೆಸರು: ಹಡಗಿಲೆನಾಮಗ್ರಾಮಂ (ಸೌಇಇ. XX, ೪-೧೨; 683). 'ಪಡುಗಲ್' ಪರಾ. [?]

**ಹಡಗು** 'ಪಡಂಗು' ನೋ.

**ಹಡಗುಕಟ್ಟೆ** (ನಾ). ಹಡಗು ಮೊದಲಾದುವುಗಳು ನಿಲ್ಲುವ ಸ್ಥಳ; ಬಂದರು: ರಾತ್ರಿಯ ಆ ಅತಲಸ್ಪರ್ಶಅಂಧಕಾರವೂ ಅವೊತ್ತು ಖಿದಿರಪುರದ ಹಡಗುಕಟ್ಟೆಯ (Jettly) ಮೇಲೆ ಮಲಿನವಾಗಿದ್ದದ್ದನ್ನು ನೋಡಿದೆ (ನಿಬಂಧ.II, ೧೮೧).

[ಹಡಗು (< ಪಡಂಗು) + ಕಟ್ಟೆ]

**ಹಡಗುದಂಡು** (ನಾ). ಹಡಗಿನಲ್ಲಿ ಯುದ್ಧಮಾಡುವ ಸೈನ್ಯ; ನೌಕಾಬಲ: ಅಮೂರ್‌ನದಿಗೆ ದಕ್ಷಿಣದೇಶದಲ್ಲಿ — ವ್ಲೇಡಿವೋಸ್ಟಾಕ್ಸ್ ಹಡಗುದಂಡಿನ ಸ್ಥಳ (ಭೂಗೋಳ.೧೧೯). [ಹಡಗು (< ಪಡಂಗು) + ದಂಡು]

**ಹಡಣ** 'ಪಡಣ' ನೋ.

**ಹಡಣಗಿತ್ತಿ** (ನಾ). ದುಸ್ಥಿತಿಗಿಳಿದ ವೇಶ್ಯೆ, — ಜಾರೆ: ಮತ್ತೊರ್ವಳ್ ನೆರೆಮನೆಯ ಮಱಿಸೂಳೆಯ ಸೊಬಗಿಂಗಟಲ್ಬು ತನ್ನಂತೆ ಪಡಪುದುಗಿ ಗಡಣಕ್ಕೆ ಬಂದ ಹಡಣಗಿತ್ತಿ ಸೂಳೆಗಿಂತೆಂದಳ್ (ಅನಂಪು. ೮-೧೮ ವ). [< ಹಡಣ + - ಗಿತ್ತಿ]

**ಹಡಣಿಗೆ** 'ಪಡಣಿಗೆ' ನೋ.

**ಹಡದ** (ನಾ). ಒಂದು ಬಗೆಯ ಬಳ್ಳಿ: ಹಡದದ ಬಳ್ಳಿಯಮೃತವಳ್ಳಿ . . .ಪೊಸ ಶುಂಠಿದಾರುಗಳ ತ್ರಿಫಳೆವೆರಸು ಕಾಯ್ದ ಕಷಾಯಂ (ಕಲ್ಯಾಕಾ. ೩-೩೯). [?]

**ಹಡದಿ$_1$** (ನಾ). (ಗುರು ಹಿರಿಯರೇ ಮೊದಲಾದ ದೊಡ್ಡವರನ್ನು ಬರಮಾಡಿಕೊಳ್ಳುವಾಗ) ನೆಲದ ಮೇಲೆ ನಡೆಯಲು ಹಾಸುವ ಮಡಿ ಮಾಡಿದ ಬಟ್ಟೆ; ನಡೆಮಡಿ: ದುಡಿದವರ ಪಾದಕ್ಕಂತ ಹಡದಿ ಹಾಸ್ಯಾವ (ಸಖೀಗೀ. ೮೭-೧೦); ಹಡದಿಯನ್ನು ಹಾಸಲು ಮಡಿವಾಳನೂ ಬೇಕು (ಕನ್ನಜಾ. ೭೮); ಬಿಡುದಿಯೊಳಗೆ ಹಡದಿ ತಪ್ಪೀತೆ? (ಗಾದ).

[ದೇ. ‖ ತೆಲು. ಪಡಿದೆ]

**ಹಡದಿ$_2$** 'ಪಡಿಯದೆ' ನೋ.

**ಹಡದೆ** 'ಪಡಿಯದೆ' ನೋ.

**ಹಡದೆನಂದಾಕ** (ನಾ). ಒಂದು ವಂಶ ಮತ್ತು ಆ ವಂಶಕ್ಕೆ ಸೇರಿದವನು: ಕಮುಂಗಱ ಕನ್ತಿಯರ್ಗೆ ಪೊಟ್ಟಿದ ಹಡದೆನನ್ದಾಕರ ಮಗನಯ್ಯಮ್ಮದೆನನ್ದಾಕರ ಮಗಂ . . . ಕಣ್ಣಮಂಗಲದೊಳ್ಬಸದಿ ಮಾಡಿಸಿ ಆ ಬಸದಿಗೆ ಕೊಟ್ಟ ಮಣ್ಣು (ಎಕ.X, ಕೋಲಾರ. ೯೦-೮೫; 903). [ಹಡ? + ತೆನಂದಾಕ (< ತೆನ್ನಂದಾರ್ಕ)]

**ಹಡದೇವ** (ನಾ). ಒಬ್ಬಾತನ ಹೆಸರು: ಆದಿತ್ಯ ಶ್ರೀ ಹಡದೇವಪುತ್ರನ್ (ಇಆ.X, ೧೬೭-೪; 8ನೆಯ ಶತ). [ಹಡ? + ದೇವ]

**ಹಡಪ$_1$** 'ಅಡೆಪ' ನೋ.

**ಹಡಪ$_2$** (ನಾ). ಒಂದು ಬಗೆಯ ಕಜ್ಜಿ; ನಾಯಿಕಜ್ಜಿ: ಪಕ್ವಾನ್ನವನ್ನು ಬಡಿಸಿಟ್ಟಾಗ ಹಡಪ ಹತ್ತಿದ ನಾಯಿಯು ಬಾಯಿ ಹಾಕಿ ಹಸಿವಿಗೆ ಹೇಸಿಕೆಯನ್ನು ತರಿಸುವಂತೆ ಆ ದಿನ ಅವರ ಮನಸ್ಥಿತಿಯಾಗಿತ್ತು (ಬಾಬಲ. ೫೧). [< ಅಡಪು$_4$]

**ಹಡಪಂಬಿಡಿ** 'ಅಡಪಂಬಿಡಿ' ನೋ.

**ಹಡಪಗಾಣಿಕೆ** (ನಾ). ಹಡಪದ ಕೆಲಸಕ್ಕಾಗಿ ಕೊಡುವ ಕಾಣಿಕೆ,— ಬಳುವಳಿ: ನೀವು ಕೊಡುವ ಕಾಣಿಕೆ ಹಡಪಗಾಣಿಕೆ ಬಿಟ್ಟಿ ಬಿಡಾರ . . . ಉಡುಗೊಱ ವೊಲುಪೆ ಮುಂತಾಗಿ ಎಲ್ಲವನು ಸರ್ವಮಾಂನ್ಯವಾಗಿ ನಿಮಗೆ ಮಾಡಿದೆವಾಗಿ (ಎಕ.VIII, ತೀರ್ಥಹ. ೧೨೫-೮೧; 1404). [ಹಡಪ$_1$ (< ಅಡೆಪ) + ಕಾಣಿಕೆ (< ಕಾಣ್ಕೆ)]

**ಹಡಪನಡಸು** (ಕ್ರಿ). (ಸಂಚಿಯ) ಊಳಿಗಮಾಡು (?): ಶಂಭು ನಂಬಿಗಿ ಹಡಪ ನಡಸುತಿರೆ ನಿನ್ನೊಡನೆ ನಾಂ ಬರ್ಪೆ ಕೈಲಾಸಕಮ್ಮರೆಯದಿರುಯೆನುತ ನಂಬಿಗೆಯೊಳಿರಲು (ನವಮೋ.೧೪-೩). [ಹಡಪ$_1$ (< ಅಡೆಪ) + ನಡಸು$_1$ (< ನಡೆಯಿಸು)]

**ಹಡಪವಳ** 'ಅಡಪವಳ' ನೋ.

**ಹಡಪಾಳಿ** 'ಪಡಪಾಳಿ$_2$' ನೋ.

**ಹಡಪಿ** (ನಾ). ಸಂಚಿಯನ್ನು ಹಿಡಿಯುವವನು; ಹಡಪದವನು: ತರ್ಕ ಮಿಮಾಂಸಕಾಚಾರಿಯಗೆ ಚಾಮರವನಿಕ್ಕುವನ ಪೆಸರ್ಶೈವ ಹಡಪಿ ವೈಷ್ಣವ ಗದ್ದುಗಿಕ್ಕುವನ ಪೆಸರಾರುಹತ (ಸಿಂಗಿರಾ. ೨೭-೭). [ಹಡಪ$_1$ (< ಅಡೆಪ) + -ಇ$_3$]

**ಹಡಪಿಗ** 'ಅಡಪಿಗ' ನೋ.

**ಹಡಬೆ** 'ಅಡಬೆ' ನೋ.

**ಹಡಬೆಬೀಳು** (ಕ್ರಿ). ಕೆಟ್ಟಚಾಳಿ ಹಿಡಿ; ದಾರಿತಪ್ಪು: ಬೈರ ಮದುವೆಯಾಗುವ ಮೊದಲೇ ಹಡಬೆಬಿದ್ದಿದ್ದನೆಂಬ ಪ್ರತೀತಿ ಇತ್ತು (ಮಲಮ. ೧೧೩).

[ಹಡಬೆ (< ಅಡಬೆ)+ ಬೀಳು$_1$ (< ಬೀೞ್$_1$)]

**ಹಡರ** (ನಾ). ಒಂದು ಬಗೆಯ ಸುಂಕ (?): ತಪ್ಪು ತವುಡಿ ದಂಡ ಉಂಡಿಗೆ ಹಡರ ಹನುಕೊಂಬಣ (ಎಕ. IX, ಕಾನಕಾ.೪೧-೧೨; 1300); ದಂಡವುಂಡಿಗೆ ಹಡರ ಕಿಱುಕು XX ಬೆದ್ದಾಯ ಮುಂತಾಗಿ (ಎಕ. XIV, ಕೃಷ್ಣರಾ. ೨೮-೩೧; ?). [?]

**ಹಡಲ** 'ಪಡಲ$_1$' ನೋ.

**ಹಡಲಗೆ** 'ಪಡಲಗೆ' ನೋ.

**ಹಡಲಿಕೆ** 'ಪಡಲಗೆ' ನೋ.

**ಹಡಲಿಗೆ** 'ಪಡಲಗೆ' ನೋ.

**ಹಡಲು** (ನಾ). ಕೆಸರುಭೂಮಿ: ಈ ಚತುಸ್ಸೀಮೆಯ ಒಳಗೆ ಉಳ್ಳಂಥಾ ಬೆಟ್ಟು ತಿಟ್ಟೆ ಹಕ್ಕಲು ಹಡಲು ಹೊಲನು ನೆಲ ಜಲ (ಸೌಇಇ. IX-ii, ೪೧೭-೯; 1377); ಹಡಳೊEಲೊತೆಳಗೆ ಹುಡಿಯೊಳಗೆ ಮೊರಡಿಗಳೊಡೆದ ತಱಿಗಳ್ಲೊಳಗೆ . . . ಎಳೆದು ಕೊಂಡೊಯ್ಯರು ಮಹಾಪಾತಕನನು (ಪ್ರಹ್ಲಾಚ. ೯-೩೯). 'ಅಡಲು' ಪರಾ. [< ಅಳಿಱ್]

**ಹಡವಳ** 'ಪಡೆವಳ' ನೋ.

**ಹಡವಳತಿ** 'ಪಡವಳತಿ' ನೋ.

**ಹಡವಳ್ತಿ** 'ಪಡವಳತಿ' ನೋ.

**ಹಡವು** (ನಾ). ಒಂದು ಬಗೆಯ ಜವಳಿ (?): ಗುಡಿಯ ಬೀಡಿಗಂ ಅಡಕೆ ಮೆಣಸು ದಸರೆಯ ಮಳವ ಶಿಲೆಯ ಮಳವ ಹಡವಿನ ಮಳವ ಅರಿಷಣ ಮಳವ ಅಲ್ಲದ ಮಳವ ನೀಲದ ಕೊಡಯೆತ್ತಿನಲು . . . ರುದ್ರಶಕ್ತಿಪಂಡಿತರ ಕಾಲಂ ಕರ್ಚಿ ಧಾರಾಪೂರ್ವಕಂ ಬಿಟ್ಟು (ಶಾಸಪ. ೪೪-೪; 1098). [?]

**ಹಡಸಾಲೆ** (ನಾ). ಒಂದು ಬಗೆಯ ಔಷಧೀಸಸ್ಯ: ಪಂಚೋಟಿಮರ, ಹಡಸಾಲೆ, ಹಲುಸಲ್ಲೆ, ಪಲುಚೊಟ್ಟೆ , ನಾಟಿಗಟ್ಟಪರ್ಚ (ಮೃಚಿಗಿ. ೫೯- ೧೧೮೪). [?]

**ಹಡಹಾಳಿ** 'ಪಡಪಾಳಿ$_1$' ನೋ.

**ಹಡಹು$_1$** 'ಪಡಪು$_1$' ನೋ.

**ಹಡಹು$_2$** 'ಪಡಂಗು' ನೋ.

**ಹಡ್ಡಳಿಗೆ** 'ಪಡಲಗೆ' ನೋ.

**ಹಡಿ$_1$** 'ಪಡಿ$_2$' ನೋ.

**ಹಡಿ$_2$** 'ಪಡಿ$_3$' ನೋ.

**ಹಡಿ$_3$** 'ಹಡು$_3$' ನೋ.

**ಹಡಿಂಕೆ** 'ಪಡುಕೆ' ನೋ.

**ಹಡಿಕ** (ನಾ). ತುಂಬಿದ ಹೇರು (?): ಸೋಜಿಗೆಭತ್ತ ಹಡಿಕದ ಭಂಡಿಯಲುಯೊಕುಳ ಭತ್ತ (ಎಕ. XI, ಚಳ್ಳಕೆ. ೨೧-೩೯; 1087); ಒಕ್ಕಲಲಿರ್ಬ್ಬಳ ಭತ್ತ ಹಡಿಕದ ಭಂಡಿಗಿರ್ಬ್ಬಳ ಬೆಲ್ಲದ ಭಂಡಿಗೆ ವೀ ೨ ಮರನ ಬಂಡಿಗೆ ವೀ ೧ ಬಿದಿರ ಬಂಡಿಗೆ ವೀ ೧ (ಸೌಇಇ.XI-ii, ೧೯೮-೧೬; 1123). [< ಅಡುಕು ?]

**ಹಡಿಕಟ್ಟು** 'ಪಡಿಗಟ್ಟು$_2$' ನೋ.

**ಹಡಿಕೆ$_1$** 'ಪಡುಕೆ' ನೋ.

**ಹಡಿಕೆ$_2$** 'ಹಡಿಕ್ಕೆ$_2$' ನೋ.

**ಹಡಿಕು** 'ಪಡುಕೆ' ನೋ.

**ಹಡಿಕುನಾರು** 'ಪಡುಕೆನಾಋ' ನೋ.

**ಹಡಿಕ್ಕೆ$_1$** 'ಪಡುಕೆ' ನೋ.

**ಹಡಿಕ್ಕೆ$_2$**, ಹಡಿಕೆ$_2$ (ನಾ). ಒಂದು ಬಗೆಯ ತೆರಿಗೆ: ಖಾಣವಾ ಚದ್ದಿಯ ಭಂಡಿ ಜಡೆದೆಱ ಕೋಟೆಯ ಹಡಿಕೆ ಕೊಟ್ಟಿಗೆಗೆಱ (ಎಕ. V, ಹಾಸನ. ೧೫೯-೧೦; 1200); ಗ್ರಾಮದವರು ಅರಮನೆಗೆ ಹಡಿಕೆ ಬಿಟ್ಟಾಗ ಪುರುಶೋತ್ತಮಭಟ್ಟರಿಗೂ ಅವರ ಸಂತಾನ ಪಾರಂಪರಿಯಕ್ಕೆ ನಡಸಿ ಬಾಹರು (ಕಇ. I, ೫೮-೨೦; 1446); ಹಂಜಮಾನದವರು ನಂಮ ಅರಮನೆಗೆ ತೆಱುವ ಹಡಿಕೆಯ ಹೊಂನನೂ ತೆಱುವದು (ಸೌಇಇ.IX-ii, ೪೫೯-೧೫; 1465). **ಹಡಿಕ್ಕೆ$_2$**: ಭತ್ತವಲ್ಲದ ಹಡಿಕಿ ಹೊದಕೆ ಆಕರ (ಸೌಇಎ.೧೯೩೦, ಉಡುಪಿ. ೭೦೧-೧೮; 1339). [?]

**ಹಡಿಕೆಕಾಯ** (ನಾ). ಹೊಲಸಿನಿಂದ ತುಂಬಿದ ದೇಹ; ಕೊಳೆಯಿಂದ ತುಂಬಿದ ಶರೀರ: ಒಡಕ ಮಡಿಕೆಯಂತೆ ಒಡೆದು ಹೋಗುವ ಹಡಿಕೆ[ಪಾಠಾಂ.ಕಿ]ಕಾಯವ ನೆಚ್ಚಿ ತಟತಟನೆ ತಾಗಿ ಮಠದ ಬೆಕ್ಕಾಗಿ ತಿಟ್ಟನೆ ತಿರುಗಿ (ಲಿಂಗವ. ಕ. ೬೧-೪೭).

[ಹಡಿಕೆ$_1$ (< ಪಡುಕೆ)+ ಕಾಯ]

**ಹಡಿಕೆಗೈನೆ** (ನಾ). ಕ್ಷುದ್ರ ಹೆಂಗಸು; ದುಷ್ಟೆ: ಇಡಿದ ಹೊಲಸಿನ ನಾತದುಬ್ಬರದೆಡ ಬಲದ ತಿನಿಸುಗಳ ಮಧ್ಯದ ಹಡಿಕೆಗೈನೆಯ ಕಂಡು ಹೇಸುತ ಹನುಮ ಹೊಱವಂಟ (ತೊರರಾ. ೫-೨-೩೬). [ಹಡಿಕೆ$_1$ (< ಪಡುಕೆ) + ಗೈನೆ (< ಕೈನೆ)]

**ಹಡಿಕೆದೇಹ** (ನಾ). = ಹಡಿಕೆಕಾಯ: ಜಡನು ನಾನಾಗಿನಿತುಕಾಲಂ ಹಡಿಕೆದೇಹ ದೊಳಿರ್ದು ಮೋಹಿಸಿ ಕೆಡುವ ಸುಖವನು ನಚ್ಚಿ ಕೆಟ್ಟೆನನಂತಭವದಲ್ಲಿ (ಘಣಟ. ೫-೮೫).

[ಹಡಿಕೆ$_1$ (< ಪಡುಕೆ) + ದೇಹ]

**ಹಡಿಕೆದೊಳ್ತು** (ನಾ). ಕೆಟ್ಟ ಸೇವಕಿ; ಕ್ಷುದ್ರದಾಸಿ: ಬಾವನ್ನಮಂ ಪೊರೆದು ರಂಜಿಸುವ ರಸಿಕನಿರದೋವೊ ಕಿಸುಕುಳವನೇಂ ಪೊರೆವನೇ ದಿವ್ಯಕಾಂತಾವಿನುತಸುರಾತನುಭವಿ ಹಡಿಕೆದೊಳ್ತಿಂಗೆ ರಮಿಸುವನೆ (ಪದ್ಮರಾ. ೭-೧೬).

[ಹಡಿಕೆ$_1$ (< ಪಡುಕೆ) + ತೊಳ್ತು (< ತೊಱ್ತು)]

**ಹಡಿಕೆನಾತ, ಹಡುಕುನಾತ** (ನಾ). ಹೊಲಸುವಾಸನೆ; ಗಬ್ಬುನಾತ: ಮಡಿಯೊಳಗಿಟ್ಟರೂ ಹಡಿಕೆನಾತ ಹೋಗಲಿಲ್ಲ (ಗಾದೆ). **ಹಡುಕುನಾತ**: ಅಲ್ಲಿಯ ಹಡುಕುನಾತವನ್ನು ಸಹಿಸಲಾರದೆ ಧರ್ಮರಾಜನು . . . ಈ ಸ್ಥಳವಾವುದು ? ನನ್ನ ತಮ್ಮಂದಿರೆಲ್ಲಿದ್ದಾರೆ ? ಎಂದು ದೇವದೂತನನ್ನು ಕೇಳಿದನು (ವಚಭಾ. ೩೮೯).

[ಹಡಿಕೆ$_1$ (< ಪಡುಕೆ)+ ನಾತ]

**ಹಡಿಕೆನಾಋ** 'ಪಡುಕೆನಾಋ' ನೋ.

**ಹಡಿಕೆವಾಯ್ದೞ್** (ನಾ). ಹೊಲಸು ನಾರುವ ಬಾಯಿ: ದ್ದುರ್ದ್ಯವಪೂಜಕರ್ ಮಿಂಚುದಲೆ ಹಡಿಕೆವಾಯ್ದೞೆಯ ದುಃಕುಹಕಿಗಳ್ (ಏಕೋಪು. ೯-೩೭). [ಹಡಿಕೆ$_1$ (< ಪಡುಕೆ) + ಬಾಯ್ದೞ್$_2$]

**ಹಡಿಗಣ್ಣು** (ನಾ). ಕಣ್ಣಿನ ಒಂದು ಬಗೆಯ ರೋಗ; ಪಿಸುರುಗಣ್ಣು: ನೀರುಗಣ್ಣು ಚಾರುಗಣ್ಣು ಹುಳುಗಣ್ಣು ಹಡಿಗಣ್ಣು (ಶುಕಸ.೩.೨೮). [< ಹಡಿಕೆ$_1$ + ಕಣ್ಣು (< ಕಣ್)]

**ಹಡಿಗಿಜು** 'ಪಡಿಗಿಜು' ನೋ.

**ಹಡಿತಾರ** (ನಾ). ಒಂದು ಬಗೆಯ ಚಿಕ್ಕ ನಾಣ್ಯ: ತುಳುವ ಶಾಸನಗಳಲ್ಲಿ ಬರುವ ನಾಣ್ಯಗಳೂ ಅಳತೆಗಳೂ ಗದ್ಯಾಣ . . . ತಾರ, ಹಡಿತಾರ, ಹಾನೆ (ತುಳುನಾ.೨೭೧). [?]

**ಹಡಿದಳ** (ನಾ). ಒಂದು ಅಳತೆಯ ಸಾಧನ (?): ಕ್ರಮದಿಂದಂ ಸಟ್ಟುಗಜಳಮುಮಂ ಹಡಿದಳದಿ ಸಂಚೆ ಸೊಡರ್ಗೆಣ್ಣೆಯುಮಂ . . . ದೇವರ್ಗ್ಗೆ ನಗರವೆಲ್ಲಂ ಬಿಟ್ಟರು (ಕಇಅ. ೧೪-೪-೧೪೫; 1093). [? + ತಳ (= ತಲ)]

**ಹಡಿದೇಱ್** 'ಪಡಿದೇಱ್' ನೋ.

**ಹಡಿಮುಖ** 'ಪಡಿಮುಖ' ನೋ.

**ಹಡಿಮೈಲಿಗೆ** (ನಾ). ಹೊಲಸುಮೈಲಿಗೆ: ನಾನು ಮಡೀಲಿದೀನಿ. ನಿನ್ನ ಸ್ಕೂಲಿನ ಹಡಿ ಮೈಲಿಗೆ ಸೀರೆ ನನಗೆ ಹೊದಿಸಬೇಡ (ಕೀಲುಗೊಂ.೧೪). [ಹಡಿ$_3$ (< ಹಡು$_3$) + ಮೈಲಿಗೆ]

**ಹಡಿಮೊಖ** 'ಪಡಿಮೊಗ' ನೋ.

**ಹಡಿಯದೆ** 'ಪಡಿಯದೆ' ನೋ.

**ಹಡಿಯರ** 'ಪಡಿಯಱ' ನೋ.

**ಹಡಿಯಱ** 'ಪಡಿಯಱ' ನೋ.

**ಹಡಿಯಾಱ** 'ಪಡಿಯಱ' ನೋ.

**ಹಡಿರೋಗ** (ನಾ). ಕೆಟ್ಟ ರೋಗ: ಆ ಪಾಳಯಗಾರನ ಮಗಳಿಗೆ ಏಕೆ ಅಂತಹ ಹಡಿರೋಗ? (ದೇಶಾಂಕ. ೭೭). [< ಹಡಿಕೆ$_1$ + ರೋಗ]

**ಹಡಿಲು** (ನಾ).೧. ಸಸ್ಯ ಬೆಳೆಯದ ಭೂಮಿ; ಬಂಜರು; ಬೀಳುನೆಲ: ಗರಗುಳಿ ಈಂತಾಟುಯ ಹಡಿಲಿಂ ಮೂಡ ಆವೆಯ ಕುಂಟೆ (ಎಕ.XII, ಗುಬ್ಬಿ, ೩೦-೬೮; 1331); ಕಡೆಯುಡುಗಿ ಹಡಿಲಾಗಿ ಬಗೆ ಅಳಲ ಮಡಿಲಾಗಿ ತಳರುತಿದೆ ಮೃತ್ಯುವಿನ ತಡಿಗೆ (ಭಾರಂಗ. ೬-೭). ೨. (ಕರಾ) ಪಶುಗಳಿಂದ ಮೆಟ್ಟಿಸಲು ಹಾಕಿದ ಹುಲ್ಲುರಾಶಿ. ಹಡಿಲುಬೀಳು = ಸಸ್ಯ ಬೆಳೆಯದ ಭೂಮಿಯಾಗು; ಬಂಜರಾಗು; ಬೀಳಾಗು: ಮಂಜಣ್ಣ ಸತ್ತ. ಅದರಿಂದ ಗದ್ದೆ ಹಡಿಲು ಬೀಳುತ್ತದೆ (ಮುಗಿಯಿ. ೭೫); ಗದ್ದೆ ಈ ವರ್ಷವೂ ಹಡಿಲುಬಿದ್ದರೆ ನಾಳೆ ಕೆಟ್ಟೋ ಹೋಗುತ್ತದೆ (ಜಿದಾಉ. ೩೭೪). [<– ತುಳು. ಪಡಿಲ್, ಪಡೀಲ್, ಹಡೀಲ್]

**ಹಡಿಲುಭೂಮಿ** (ನಾ). ಸಸ್ಯ ಬೆಳೆಯದ ಭೂಮಿ; ಬಂಜರು; ಬೀಳುನೆಲ: ಸೊಪ್ಪಿನ ಹಳ್ಳಿಯಲ್ಲಿ ಮನೆಮಠಗಳು ಕಡಿಮೆ, **ಹಡಿಲುಭೂಮಿಯೇ ಅಧಿಕ** (ಸ್ವಪ್ನಪೂ.೪). [ಹಡಿಲು + ಭೂಮಿ]

**ಹಡಿಸಲಿಸು** 'ಪಡಿಸಲಿಸು$_2$' ನೋ.

**ಹಡಿಹಾಱ** 'ಪಡಿಯಱ' ನೋ.

**ಹಡು$_1$** 'ಪಡು$_1$' ನೋ.

**ಹಡು$_2$** 'ಪಡು$_5$' ನೋ.

**ಹಡು$_3$**, ಹಡಿ$_3$, ಹಡೆ$_3$ (ನಾ).೧. ಹೊಲಸು; ಕೊಳೆ. ೨. ಮಲ; ಹೇಸಿಗೆ: 'ಹಡುವು', 'ಹಡುಹು' ಪರಾ. **ಹಡಿ$_3$**: ೧. 'ಹಡಿಮೈಲಿಗೆ' ಪರಾ. **ಹಡೆ$_3$**: ೨. 'ಹಡೆಹರ್ದು' ಪರಾ.೩. ಬೆದೆ: ಹಸುವಿಗೆ ಹಡೆ ಬಂದಿದೆ (ರೂಢಿ). ೪. ಕೆಟ್ಟ ಚಾಳಿಗೆ ಬಿದ್ದವನು: ಶಾಮಭಟ್ಟನೆ, ಪಾಪ ಒಳ್ಳೆಯವ, ಆದರೆ ಹಡೆ ನೋಡಿ ಖರ್ಚು ಕಳೆದು ಉಳಿದ ಹಣವನ್ನು ಸೂಳೆಯ ಮೇಲೆ ಸುರಿಯುತ್ತಾನೆ (ಪ್ರಶ್ನ. ೧೯೭). [< ಪಡುಕೆ]

**ಹಡುಕು** 'ಪಡುಕೆ' ನೋ.

**ಹಡುಕುನಾತ** 'ಹಡಿಕೆನಾತ' ನೋ.

**ಹಡುಕುಳಿ** 'ಪಡುಕುಳಿ' ನೋ.

**ಹಡುಕೆ** 'ಪಡುಕೆ' ನೋ.

**ಹಡುಗಾರುಕ್ಕೆ** (ನಾ). ಬೀಳುನೆಲವನ್ನು ಉಳುವುದು; ಬಂಜರುಉಕ್ಕೆ; ಬೀಳುಕ್ಕೆ: ಯಾವ ಯಾವ ಹೊಲಗಳ ಹಡುಗಾರುಕ್ಕೆಯಾಯ್ತೆಂದು ಕೇಳಿದೆ (ಚೆಂಗಾಳ್ಯ. ೪೨೦). [< ಹಡು$_2$ + ಆರು$_5$(< ಆರ್$_3$) + ಉಕ್ಕೆ (< ಉಟ್ಕೆ)]

**ಹಡುಬೀಳಿಸು** (ಕ್ರಿ). ಸಸ್ಯ ಬೆಳೆಯದಂತೆ ಮಾಡು; ಬಂಜರಾಗಿಸು; ಬೀಳುಮಾಡು: ನಮ್ಮ ಕೆಳಗಿನ ಗದ್ದೆಯನ್ನು ಹಾಗೆಯೇ ಹಡುಬೀಳಿಸುವ ಬದಲು ಎಳ್ಳನ್ನಾದರೂ ಬಿತ್ತಿದ್ದರೆ, ಒಂದೆರಡು ಬೇಳೆ ಎಣ್ಣೆಯಾದರೂ ಸಿಗುತ್ತಿತ್ತು (ಮರಮ. ೩೨). [ಹಡುಬೀಳು (< ಪಡುಬೀಳು) + - ಇಸು$_3$]

**ಹಡುಬೀಳು** 'ಪಡುಬೀಳು' ನೋ.

**ಹಡುಭೂಮಿ** 'ಪಡುಭೂಮಿ' ನೋ.

**ಹಡುವಣ** 'ಪಡು$_2$' ಪರಾ.

**ಹಡುವಲ್** 'ಪಡು$_2$' ಪರಾ.

**ಹಡುವಲು** 'ಪಡು$_2$' ಪರಾ.

**ಹಡುವು** (ನಾ). ಹೇಸಿಗೆ; ಮಲ: ಕೋಳಿಯ ತಂದು ಹಂಜರವ ಕೂಡಿ ಅಮೃತಾನ್ನವನಿಕ್ಕಿ ಸಲಹಿದಡೆ ಅದು ತಾನೆ ಮತ್ತೆ ತಿಂಬ ಹಡುವಿಂ [ಪಾಠಾಂ. ಕಿ] ಗೆ ಚಿತ್ರವನಿಕ್ಕುವದ ಮಾಣ್ಬುದೆ (ಬಸಪ. ೮೭); (ಗಣಭಾ.೨೬೪ ನೋ); ಕುಕ್ಕು(ರ್ಕು)ರಂಗೆ ಪಟ್ಟೆಮಂಚ ಸುಪ್ಪತ್ತಿಗೆ ಅಮೃತಾನ್ನವನಿಕ್ಕಿ ಸಲಹಿದಡೂ ಹಡುವಿಂಗೆ ಚಿತ್ತವನಿಕ್ಕುವುದೇ ದಿಟ (ಸರ್ವವ. ೩೫-೧೭೫); ಹಡುವ ಕಚ್ಚಿದ ಶ್ವಾನ ಒಡೆಯನ ಕುಱುಹ ಬಲ್ಲುದೆ (ಸಿದ್ದೇಪ. ೧೧೮). [ಹಡು$_3$ + - ವು]

**ಹಡುಹು$_1$** (ನಾ). = ಹಡುವು: ಭಕ್ತರು ಬಯಕೆಯನಿರಿಸಿದರೆ ಅದು ಸತ್ತ ನಾಯ ಮಾಂಸ ವಿರಕ್ತರು ದ್ರವ್ಯವ ಮುಟ್ಟಿದಡೆ ಅದು ಕತ್ತೆಯ ಹಡುಹಿಂಗೆ ತಪ್ಪಿದರೆಂಬೆ (ಸರ್ವವ. ೧೨-೮೫). [ಹಡು$_3$ + - ಹು$_2$ (< - ವು$_2$)]

**ಹಡುಹು$_2$** (ನಾ). ಬಂಜರುಭೂಮಿ (?): ಪಡುವ ಪಳಿಯ ಹಡುಹು ಗಡಿ ಬಡಗಣ ಮಕ್ಕಿ (ಸೌಇಇ. ೧೯೩೨, ಉಡುಪಿ. ೨೫೨-೭; ?). [< ಪಡವು$_1$?]

**ಹಡೆ$_1$** 'ಪಡೆ$_1$' ನೋ.

**ಹಡೆ$_2$** 'ಪಡೆ$_2$' ನೋ.

**ಹಡೆ$_3$** 'ಹಡು$_3$' ನೋ.

**ಹಡೆ$_4$** (ನಾ). ೧. (ಕರಾ) ಮಾತುಗಾರ; ವಾಚಾಳಿ: ಹಬ್ಬಾರರನ್ನು 'ಹಡೆ, ಪಳ್ಳು' ಅನ್ನುತ್ತೀರಿ ನೀವು (ಸ್ವಪ್ನಪೂ. ೫೮). ೨. ಪೊಳ್ಳು; ವ್ಯರ್ಥ.

ಹಡೆಪಟ್ಟಾಂಗ (ಕರಾ) = ಪೊಳ್ಳುಹರಟೆ: ಅಣ್ಣನನ್ನು ಬಾಯಿಬಿಟ್ಟು ಕೇಳೋಣವೆಂದರೆ 'ಈ ಹೆಂಗಸರಿಗೆ ಹಡೆಪಟ್ಟಾಂಗವೆಂದರೆ ಅಷ್ಟು ಪ್ರೀತಿ' ಎಂದು ಅಣ್ಣನು ಹೇಳುವುದಕ್ಕೆ ಹಿಂದೆಮುಂದಾಗನೆಂಬುದು ಖಂಡಿತ (ಮರಮ. ೬೯). [?]

**ಹಡೆಮಾತು** 'ಪಡೆವಾತು' ನೋ.

**ಹಡೆಯಿಸು** 'ಪಡೆಯಿಸು' ನೋ.

**ಹಡೆವಳ** 'ಪಡೆವಳ' ನೋ.

**ಹಡೆವಳಿತಿ** 'ಪಡವಳತಿ' ನೋ.

**ಹಡೆಹರ್ದು** (ನಾ). ಹೊಲಸು ತಿನ್ನುವ ಹದ್ದು: ಪರ್ದು ಚೆಂಬರ್ದುರುತರದ ಹಡೆಹರ್ದು ಪೆರುವರ್ದವರೊಳೊಪ್ಪಿದವು (ಸಾಳ್ವಭಾ. ೫-೨೩). [ಹಡೆ$_3$ (< ಹಡು$_3$) + ಹರ್ದು (< ಪರ್ದು)]

**ಹಡೆಹುಡುಗ** (ನಾ). ಪ್ರಾಯದ ಹುಡುಗ; ಪಡ್ಡೆ: ಈ ಹಡೆಹುಡುಗ ಕೈಯಲ್ಲಿರುವ ದುಡ್ಡನ್ನೆಲ್ಲ ಕಳೆದುಕೊಂಡರೆ ಏನು ಗತಿ? (ಸಂಸ್ಕಾರ. ೧೨೪). [ಹಡೆ$_0$ (< ಪಡ್ಡೆ) + ಹುಡುಗ]

**ಹಡ್ಡಲಗೆ** 'ಪಡಲಗ' ನೋ.

**ಹಡ್ಡಲಿಗೆ** 'ಪಡಲಗ' ನೋ.

**ಹಡ್ಡು$_1$** (ಕ್ರಿ). (ಉಕ) ತೋಡು; ಬಗೆ; ಅಗೆ: ಹಡ್ಡುತ್ತಲುಗುರಿನಿಂದಡಿಯಿಟ್ಟು ಮುಂದಕ್ಕೆ ಗುಡ್ಡದೊಳಗರಭಾವಿಯೆಲ್ಲಿರ್ಪುದೆಂದೆನುತೆ ಕುಂಟುತ್ತ ಬರುತಿರ್ದನು (ದುರಪು. ೨೪-೧೨); ಒಬ್ಬನು ಅಲ್ಲಿಯೇ ಹತ್ತಿರ ನೆಲ ಹಡ್ಡುತ್ತಿದ್ದನು (ಅಸ್ತ. ೨೦೮). [< ಪರಡು$_1$]

**ಹಡ್ಡು$_2$** (ನಾ). (ಆಲಂ) ಹಾಳು; ನಾಶ.

**ಹಡ್ಡುಮಾಡು** = ನಾಶಮಾಡು; ಹಾಳುಮಾಡು: ಬಿಟ್ಟ ಸಂಪಾದನೆ ಇರುವಾಗ ಕೊಡದೆ ಏನು ಮಾಡಿಯಾನು? ನೀನು ಅದಕ್ಕೆ ನಮ್ಮ ಮನೆ ಬದುಕು ಹಡ್ಡುಮಾಡಿ ಬಿಟ್ಟೆಯಲ್ಲ! (ಸುವಸಂ. ೮೦). [< ಹಡ್ಡು$_1$]

**ಹಡ್ಡೆ** 'ಪಡ್ಡೆ' ನೋ.

**ಹಣ್$_1$** 'ಪಣ್$_2$' ನೋ.

**ಹಣ್$_2$** 'ಪಣ್$_3$' ನೋ.

**ಹಣ** 'ಪಣವು$_1$' ನೋ.

**ಹಣಕಾಸು** (ನಾ). (ರಾಜ್ಯದ ಅಥವಾ ಒಬ್ಬ ವ್ಯಕ್ತಿಯ) ದ್ರವ್ಯರೂಪದ ವರಮಾನ,— ಆದಾಯ: ಹಣಿಗೆ ಹಾರೈಸಿಕೊಂಡು ತಿರುಪತಿಗೋಹದ ಕಂಡು ಹಣಕಾಸು ಕೊಂಡು ಬಂದು (ಪುರಂದ. ೨-೬೬-೭).

**ಹಣಕಾಸು ಅಧಿಕಾರಿ** = ರಾಜ್ಯದ ದ್ರವ್ಯರೂಪವರಮಾನಕ್ಕೆ ಸಂಬಂಧಿಸಿದ ಇಲಾಖೆಯ ಅಧಿಕಾರಿ: ನೀವು ಹಣಕಾಸು ಅಧಿಕಾರಿಗಳೊಂದಿಗೆ ಈ ವಿಷಯವನ್ನು ಚರ್ಚಿಸಿ (ರೂಢಿ). [ಹಣ(< ಪಣವು$_1$) + ಕಾಸು$_2$]

**ಹಣಕು** 'ಹಣಿಕು$_1$' ನೋ.

**ಹಣಗಟ್ಟು** (ಕ್ರಿ). (ಕರಾ) ಮರಗಟ್ಟು; ಜಡವಾಗು: ಮಲಗಿಕೊಳ್ಳುವಾಗ ಶರೀರವೆಲ್ಲ ಹಣಗಟ್ಟುತ್ತದೆ (ಮರಮ. ೫೦೬).

[ಹಣ್$_0$ (IP <— ತುಳು. ಪಣ = ನಿಷ್ಕ್ರಿಯತೆ; ಜಡತ್ವ) + ಕಟ್ಟು$_1$]

**ಹಣಗಾತಿ** (ನಾ). ದುಡ್ಡಿರುವವಳು; ಐಶ್ವರ್ಯವಂತೆ: (ಕ).

[ಹಣ(< ಪಣವು$_1$) + - ಕಾತ್ತಿ]

**ಹಣಗಾರ** (ನಾ). ದುಡ್ಡಿರುವವನು; ಐಶ್ವರ್ಯವಂತ; ಧನಿಕ: ಪುಷ್ಪಸೇನನೆಂಬ ಹಣಗಾರನಾದ ಮತ್ತೊಬ್ಬ ಬ್ರಾಹ್ಮಣನಿಗೆ ವಿವಿಲಶನೆಂಬ ಮಗನಿದ್ದನು (ನೀತಿಚಿಂ. ೫ ೨೪); ಮಣಿಯಗಾರನ ಹಂಗು ಹಣಗಾರನಿಗೂ ಬೇಕು (ಗಾದೆ).

[ಹಣ(< ಪಣವು$_1$) + - ಗಾರ(< - ಕಾಱ)]

**ಹಣಚಿ$_1$** (ನಾ). ಮುತ್ತೈದೆ; ಸುಮಂಗಲಿ: 'ಹಣಚಿಬಟ್ಟು' ಪರಾ.

[< ಅಣಚಿ]

**ಹಣಚಿ$_2$** (ನಾ). ಒಂದು ಬಗೆಯ ಮರ: ಆ ಹುಣಚಿಯ ಮರ ಹಣಚಿಯ ಮರವಾಗಿ ತಾ ಕಣಚಿ ಹೋದುದ ಕಂಡೆ (ಸಿದ್ಧವ. ಕ. ೨೩೩-೬೬೨). 'ಹನಿಚೆ' ಪರಾ. [?]

**ಹಣಚಿಬಟ್ಟು** (ನಾ). ಮುತ್ತೈದೆತನದ ಸೂಚಕವಾಗಿ ಚುಚ್ಚಿಸಿಕೊಳ್ಳುವ ಹಚ್ಚೆಯ ಬೊಟ್ಟು,— ಗುರುತು: ಹಣಚಿಬಟ್ಟಿನ ಮ್ಯಾಲ ಹರಿದಾಡು ಕುಂಕುಮ (ಗರತಿ. ೭೭); ಹಣಚಿಬಟ್ಟಿನ ಕೈಯ ಒತ್ತಿ ಹಿಡಿಯಲುಬ್ಯಾಡ (ಕನ್ನಜಾ. ೧೨೦).

[ಹಣಚಿ$_1$ + ಬಟ್ಟು]

**ಹಣಚು** 'ಪಳಂಚು$_1$' ನೋ.

**ಹಣಜಿ** (ನಾ). ಒಂದು ಬಗೆಯ ಹುಲ್ಲು; ಇಕ್ಕುಳಿಕೆ: "ಇಕ್ಕುಳಿಕೆ ಹಣಜಿಯಕ್ಕು" (ಮಂಗರಾ. ೩೩-೮). [ದೇ. || ತಮಿ. ಅಣಿಚ್ಚೈ; ತುಳು. ಪಣಜ]

**ಹಣತಿ** 'ಪಣೆತೆ' ನೋ.

**ಹಣತಿಸೊಡರು** 'ಪಣತೆಸೊಡರ್' ನೋ.

**ಹಣತೂಕ** (ನಾ). ಚಿನ್ನದ ಒಂದು ತೂಕ; ೨೧೩ ದ್ರಮ್ಮದ ತೂಕ: (ಕಸಂಗ್ಲಾ.೧೭೨).

[ಹಣ(< ಪಣವು$_1$) + ತೂಕ]

**ಹಣತೆ$_1$** 'ಪಣೆತೆ' ನೋ.

**ಹಣತೆ$_2$** (ನಾ). (ಬಾಳೆಯ)ಚಿಪ್ಪು: ಒಂದು ತಾಮ್ರದ ಹರಿವಾಣದಲ್ಲಿ ಎರಡು ಹಣತೆ ಗಾಳಿಬಾಳೆಹಣ್ಣುಗಳನ್ನಿರಿಸಿದ (ಚಿಗುಕ. ೯೭); ಒಂದು ಹಣತೆ ಬಾಳೆಹಣ್ಣು ಬಂದಿತು (ಮುಗಿಯು. ೧೮೫). 'ಹಣಿಗೆ' ಪರಾ. [?]

**ಹಣಬಿರಿ** (ನಾ). ಎತ್ತುಗಳಲ್ಲಿ ಒಂದು ಬಗೆ: ಎತ್ತುಗಳಲ್ಲಿ ಸೋರಟಿ, ಮೂಡಲು, ಕುಂಡಲವಾಡಿ, ಜವಾರಿ, ಧಣಗರೀ, ಖಿಲಾರೀ, ಹಣಬಿರಿ, ಚಿಲ್ಲರಿಯೆಂಬ ಎಂಬ ೮ ಜಾತಿಗಳುಂಟು (ಕಭಾಗ.೫೭). [?]

**ಹಣಬೆ** 'ಅಳಂಬೆ' ನೋ.

**ಹಣಮ** 'ಹಣುವ' ನೋ.

**ಹಣಮಂತ** 'ಹಣುಮಂತ' ನೋ.

**ಹಣಮಟೆಂಕಿ** (ನಾ). ಹನುಮಂತನ ಚಿತ್ರವಿರುವ ಒಂದು ಬಗೆಯ ಚಿನ್ನದ ನಾಣ್ಯ: ಚಿನ್ನದ ನಾಣ್ಯಗಳು:— ರಾಮಟೆಂಕೀ ಮೊಹರು . . . ಹಣಮಟೆಂಕಿ ರೂ. ೧೮, ಪದ್ಮಟೆಂಕಿ ರೂ. ೧೮ (ಕಭಾಗ.೨೮೦). 'ರಾಮಟೆಂಕಿ' ಪರಾ.

[ಹಣಮ (< ಹಣುವ) + ಟೆಂಕಿ (< ಟಂಕಿ$_2$)]

**ಹಣಮಣಿಹ** (ನಾ). ದುಡ್ಡಿನ ಕೆಲಸ; ಹಣದ ಕಾರ್ಯ: ತುಳುವಮನ್ನೆಯರ ಮದಮಂ ಮುರಿದು ಸ್ವಾಧೀನಂಗೆಯ್ದು ಕರಮಂ ಕೊಂಡು ಹಣಮಣಿಹಮಂ ತೆತ್ತು ನಡೆವಂತು ಕಟ್ಟಳೆಯಂ ರಚಿಸಿ (ಕಳನೃ. ೨-೬೨). [ಹಣ (< ಪಣವು$_1$) + ಮಣಿಹ$_1$]

**ಹಣಮುಟ್ಟು** (ಕ್ರಿ). ದುಡ್ಡು ತೆಗೆದುಕೊಳ್ಳು; ಹಣ ಅಗತ್ಯವಾಗು: ಯಲೆ ಕಾಯಿ ಮೇಲೋಗರ ಹುಲುಗಂಧ ಮೊದಲಾದ ಹಣಮುಟ್ಟದ ಸೋಪಸ್ಕರ ಏನು ತರಿಸಿಕೊಟ್ಟು ರಥೋತ್ಸವವನ್ನು ಸಂಭ್ರಮವಾಗಿ ಆಗುಮಾಡಿಸುವುದು (ಮೈಆರಿ. ೧೯೨೪, ೪೭-೭; 1711). [ಹಣ (< ಪಣವು$_1$) + ಮುಟ್ಟು$_1$]

**ಹಣರುಣ** (ನಾ). (ಸಂಬಳ ಮುಂತಾದ ರೂಪದಲ್ಲಿ ಪಡೆಯುವ) ಹಣದ ಹಂಗು: ಕಯ್ಯುಗಾಱರು ನೀಗಿದರು ನಿಜಪತಿಯ ಹಣರು[ಪಾಠಾಂ. ರಿ]ಣವ(ಕುವ್ಯಾಭ. ೧೯-೧೦). [ಹಣ(< ಪಣವು$_1$) + ರುಣ]

**ಹಣವಂತ** (ನಾ). ದುಡ್ಡಿರುವವನು; ಧನಿಕ: ವಿದ್ಯಾವಂತ, ಜೊತೆಗೆ ಹಣವಂತ (ಸುವಸಂ. ೧೪). [ಹಣ (< ಪಣವು$_1$) + - ವಂತ]

**ಹಣವಡ** 'ಹಣವಡ್ಡ' ನೋ.

**ಹಣವಡ್ಡ, ಹಣವಡ** (ನಾ). ಒಂದು ಹಣ ಮತ್ತು ಒಂದು ಅಡ್ಡ; ಏಳು ಆಣೆಗಳು: ಹಸುವಿಗೆ ಹಾಗ ಎತ್ತಿಗೆ ಹಣವಡ್ಡ ಕಱುವಿಗೆ ಮೂಱು ಹಣ (ಕುಜುಗಾ.೩); ಹಾದಿಯ ಜಗಳವನ್ನು ಹಣವಡ್ಡಕ್ಕೆ ಕೊಂಡು ತನಗೂ ತನ್ನ ಯಜಮಾನರಿಗೂ ಹಂಚಿಬಿಡುತ್ತಿದ್ದಳು (ದುಶಾರ.೩). **ಹಣವಡ:** ಅಡಬಱಿಯಲು ಹಣವಡ ಬಿನುಗಿನ ಅಡ ಮುಱಿದೆಯ ಹಾಗ (ಎಕ. XI. ದಾವಣ.೪-೩೯; 1143). [ಹಣ (< ಪಣವು$_1$)+ ಅಡ್ಡ$_2$]

**ಹಣವಡ್ಡತೂಕ** (ನಾ). ಏಳು ಆಣೆಗಳ ತೂಕ : ಇಂಗು ಹಣವಡ್ಡತೂಕ, ಸೈಂಧವ ನಾಲ್ಕು ಹಣವಡ್ಡ ತೂಕ . . . ಉಳ್ಳಿ ನಲ್ವತ್ತು ಹಣವಡ್ಡತೂಕ, ಈ ಪ್ರಕಾರದಲ್ಲಿ ಇಂಗು ಮೊದಲಾದ ನಾಲ್ಕು ಔಷಧವು ಕೂಡಿ ಆರುವರಾಹ ತೂಕವ ಕೊಡಿಸಲು ಗುಲ್ಮ, ಉದಾವರ್ತ ಉದರಶೂಲೆಗಳು ಪರಿಹರವಹವು (ವೈದ್ಯಸಾ. I,೩೧೭).

[ಹಣವಡ್ಡ + ತೂಕ]

**ಹಣವು** 'ಪಣವು$_1$' ನೋ.

**ಹಣಾಹಣಿ, ಹಾಣಾಹಣಿ, ಹಾಣಾಹಾಣಿ** (ನಾ).೧. ಒಬ್ಬನು ತನ್ನ ಹಣೆಯಿಂದ ಇನ್ನೊಬ್ಬನ ಹಣೆಗೆ ಹೊಡೆದು ಮಾಡುವ ಯುದ್ಧ: ದೆಕ್ಕಾದೆಕ್ಕಿ (ಹಾಣಾಹಾಣಿ) ಹಣಾಹಣಿ . . . ಇವು ತತ್ಸಮಂಗಳ್ (ಶಮದ. ೧೮೫ ಪ್ರಯೋ); ರಾಯ ಶ್ರೀ ತಾಳಪತ್ರಮಂ ಕೈಕೊಂಡು ಹಣಾಹಣಿ ಕೇಶಾಕೇಶಿ ಮೋಡಾಮೋಡಿಯುದ್ಧಮಂ ಮಾಡುತ್ತ ಗಂಧರ್ವನ ಶಿಖೆಯಂ ಪಿಡಿದು ನೆಲಕ್ಕೆ ಮೆಟ್ಟಿ ನಿಲ್ಲಲಾಗಿ (ಬತ್ತೀಪು. ೬೭). **೨. ದೊಡ್ಡ ಜಗಳ:** ಬೆಳಗದ್ದರ ಅತ್ತೆಗೂ ಸೊಸೆಗೂ ಹಣಾಹಣಿ ಜಗಳ (ಮಾಮರಾ. ೧೩೨). **ಹಾಣಾಹಣಿ:** ೧. ಕುದುರೆಗಳಾ ಮೋಹರದೊಳಗುಱಿಯುರುಳ್ವುದನೀಕ್ಷಿಸುತಿನಿವಿರಿದುಂ ಕೋಪ ದಿನದಟು ಮಿಗಲ್ಕೇಱುವ ಹಾಣಾಹಣಿಯಿಂದ ನಿಮಿರ್ಚಿದರು (ಜಯಕಾ. ೬-೩೭); ಕಣ್ಕಾಣದೆ ತಮ್ಮೊಳು ತಾವು ಹಾಣಾಹಣಿಯೊಳು ತಿವಿದಾಡುವುದ ಜಗತ್ಪ್ರಾಣ ನಿರೀಕ್ಷಣೆಗೆಯ್ದು (ಮೋಹತ. ೪೦-೪೨). **ಹಾಣಾಹಾಣಿ:** ೧. ಹೂಣಿಗರು ಹುರಿಬಲಿದು ಹಾಣಾಹಾಣಿಯಲಿ ಹೊಯ್ದಾಡಿದರು (ಕುವ್ಯಾಭೀ. ೮-೧೫); ತರದಿ ದಂಡಾದಂಡಿ ಕೂಡೆ . . . ಕೇಶಾಕೇಶಿ ಪಿರಿದು ಹಾಣಾಹಾಣಿಯ ಹಲ್ಲಾಹಲ್ಲಿಯುದ್ಧಮಾದುದು (ಸಾಳ್ವಭಾ. ೧೫-೧೪). [< ಪ್ಣೆ$_1$]

**ಹಣಿ$_1$** 'ಪಣಿ$_1$' ನೋ.

**ಹಣಿ$_2$** (ಕ್ರಿ).೧. ಹೊಡೆ; ಬಡಿ: ಚಿನ್ನದ ಗಿಂಡೀಲಿ ನೀರ ತಂದಿಟ್ಟರೆ ಕಣ್ಣುಕಾಣದೆ ನಾ ಹಣಿದೆ[ಪಾಠಾಂ. ಶೂಣದೆ] ಪಂಢರಿರಾಯ (ಪುರಂದ. ೧-೬೫-೪); ಹೋರಾಟದಲ್ಲಿ ಹಗೆಯನ್ನು

ಹಣೆದು ಹಣ್ಣಿಗಿಳಿಸಿದರೆ ಮಾತ್ರ ಬಂಕೆಯನೀತನು ಹಿಂದಿರುಗಿ ಬಂದು ಸಿಂಹಾಸನ ಕ್ಕೇರುವನು (ವೀರಬಂ.೬೬). ೨. (ಹಪ್ಪಳ ಮೊದಲಾದುವುಗಳನ್ನು) ಲಟ್ಟಿಸು; ಒತ್ತಿ ಅಗಲಮಾಡು: ಮೂರನೆಯ ಮನೆಯಲ್ಲಿ ಹಪ್ಪಳ ಹಣೆಯುವುದಕ್ಕೆ . . . ಹೋದುದೂ ಉಂಟು (ಸಂಸ್ಕಾಸಿ. ೨೮). ೩. ಕುಡುಗೋಲು, ಕತ್ತಿ, ಕಬ್ಬಿಣ ಮೊದಲಾದುವುಗಳನ್ನು (ಹರಿತಗೊಳಿಸಲು) ತಟ್ಟು ,— ಬಡಿ: ಇಮ್ಮಡಿ ಶಕ್ತಿಯಿಂದ ಕತ್ತಿಯನ್ನು ಹಣಿದರೆ ಅದು ನಾಲ್ಕುಮಡಿ ಪದಾರ್ಥವನ್ನು ಕಡಿಯುತ್ತದೆ (ಮುಂಬಯಿ. ೫-೧೦೧); ಕಬ್ಬಿಣ ಕಾಸುವ ಅಡಿಗಲ್ಲ ಮೇಲಿರಿಸುವ ಥಣಥಣ ಹಣಿಯುವ (ಕಪಪು. ೨-೫೭); ಬಿದುಕಿನಡಿಗಲ್ಲಿನಲಿ ನೂರುನೋವಿನ ಭ್ರೂಣ ತಾಳ- ಕುಡ-ಕುಳಗಳನು ಹಣಿದು ಕುಡಿಸಿದ ನೀರು (ನಲಮು.೬೦-೮). ೪. ಕತ್ತರಿಸು; ತುಂಡರಿಸು: ಹಣಿದ ಮೂಗಿನ ಹಜಿದ ತುಟಿಗಳ ಜುಣುಗುಗಿವಿಗಳ ಜುರಿತ ಹುಣ್ಣಿನ ಕೊಚಿದ ಕದಪುಗಳ . . . ರಕ್ಕಸಿ ಬಂದಳು (ತೊರರಾ.೩-೭-೧೧೨). ೫. ಮುರಿ; ತುಂಡುಮಾಡು: ಹಣಿಗೆ ಮಟ್ಟೆಯ ಬಡಿದು ದರ್ಬೆಯ ಹಣಿದು ಬೆರಳಲಿ ಸಿಕ್ಕಿ ಧೋತ್ರದ ದಣಿಬವನು ನಿಟಿವಿಡಿದು ಮಹಳದ ಮನೆಯ ಚೌಕದಲಿ ಮಣೆಗೆ ಮಂಡಿಸಿ ಕುಳ್ಳಿತುಂಬೌತಣದ ವಿದ್ಯವ ಬಲ್ಲಿರಿ (ಕುವ್ಯಾವಿ. ೭-೧೨). ೬. ಜಜ್ಜು; ಹಿಂಡು: ಬಳ್ಳಿ ತುಱುಚಿಯ ಬೇರ ಒಳ್ಳಿತಾಗಿಯೆ ಹಣಿದು ಬೆಳ್ಳಿಯ ರಸದಿ ಬೆರೆಯಲ್ಕೆ ಹೇಮ ತಾ ಬಳ್ಳದಲಿ ಬಕ್ಕು (ಸರ್ವಜ್ಞ. ೧೯೭೪). ೭. ಹೋರಾಡು; ಪ್ರತಿಭಟಿಸು: ಹಣಿದ ದಿಕ್ಪಾಲಕರ ಪ್ರಮಥರ ಕುಣಿಹವನು ಕುಂದಿಸುವ ತಾಗುವ (ಅಂಬಿಕಾ. ೩೯-೮). ೮. ನಾಶಗೊಳಿಸು; ಇಲ್ಲವಾಗಿಸು: ರಣದೊಳಿನಿಬರ ನೊಬ್ಬನೇ ನೆಜೆ ಹಣಿದನೆಂದಮರಾಳಿ . . . ಹೊಗಳಿತು (ಕುವ್ಯಾವಿ. ಓರಿಇ. ೯-೯೪); ಸುರರಾಯನಸುರರ ಹಣಿದನು (ನಿಭಾಗ. ೬-೮-೧); ಬಲುಮೆ ಮೋಸಗಳನು ಹಣಿಯೆ ಕಲಹಗ್ಗೆದೆ ರಾಜ (ಅಮತಂ. ೨೮-೧೫). ೯. ಇಲ್ಲವಾಗು; ನಾಶವಾಗು: ಬೆಳೆದ ಕತ್ತಲ ಮುತ್ತು ಹಣಿತುದೋ ಕುಮುದಿನಿಯ ಕೆಳೆಯ ಬಹಡಮಳಸಂಧ್ಯಾವನಿತೆ ಭುವನಮಂ ಮಳಯಜದಿ ಧವಳಿಸಿದಳೋ . . . ಎಂದೆಂಬ ಸಂದೇಹಕೊಳಗಾಗಿ ಚೌಪಟಂಬರಿದು ಪಸರಿಸಿತು ಬೆಳುದಿಂಗಳು (ಹಚಿಕಾ. ೩-೮೪). [< ಪಣ್ಣ$_2$]

**ಹಣ್ಣ$_3$** 'ಪಣೆ$_2$' ನೋ.

**ಹಣಿಕಿಕ್ಕು** (ಕ್ರಿ). ಇಣುಕಿ ನೋಡು; ಮರೆಯಲ್ಲಿ ನಿಂತು ನೋಡು: ಮನಸ್ಸಿನಲ್ಲಿ ಎಂತಹದೋ ಸಂಶಯ ಮೆಲ್ಲನೆ ಹಣಿಕಿಕ್ಕಹತ್ತಿತ್ತು (ಮೂರುದಾ.೮೦); ಮನೆಯ ಗೋಡೆಯ ಮಧ್ಯದಿಂದ ಮೆಲ್ಲನೆ ಒಂದು ಮುಖ ಹಣಿಕಿಕ್ಕುವುದು (ನಡೆದಾ. I,೩೧೩).

[ಹಣಿಕು$_1$ + ಇಕ್ಕು]

**ಹಣಿಕಿಸು** (ಕ್ರಿ). ತಗ್ಗಿಸು; ಬಗ್ಗಿಸು: ಮರ್ಮಾಹತನಾದ ಆ ಮಾಣಿ ಮತ್ತೆ ಅಲ್ಲಿ ನಿಲ್ಲದಾದ ಹಾಗೆ ತಲೆ ಹಣಿಕಿಸಿ ಕಣ್ಣೀರು ಸುರಿಸುತ್ತಲೇ . . . ದುಃಖವನ್ನು ಕೋಡಿಯಾಗಿ ಹರಿಬಿಟ್ಟ (ಹೊಸಕ್ಕ. ೩೨). [ಹಣಿಕು$_2$ (< ಪಣುಂಕು) + - ಇಸು$_3$]

**ಹಣಿಕು$_1$, ಹಣಕು** (ಕ್ರಿ). ಇಣಿಕಿ ನೋಡು; ಮರೆಯಲ್ಲಿ ನಿಂತು ನೋಡು: ಕಣಕ ಕುಟ್ಟೋ ಅಲ್ಲಿಗೆ ಹೋಗಿ ಹಣಿಕಿ ಇಣಿಕಿ ನೋಡುವಿರಿ (ಪುರಂದ. ೨-೯೦-೧); ಹಣಿಕುವುದು ಇಲ್ಲಿ ಬಿರುಬಿರುಕಿನಲ್ಲಿ ಕಣ್ಣಲೆಯುವಂಥ ಸುಗ್ಗಿ (ಸೂರ್ಯಪಾ. ೫೭-೨); ಕುಮಾರವ್ಯಾಸನ ಶೈಲಿಯ ಅನುಕರಣವು ಕನಕದಾಸರ ಕೃತಿಗಳಲ್ಲಿ ಹಣಿಕುತ್ತದೆ (ತವನಿ. ೧೫೫); ಸ್ವಲ್ಪಹೊತ್ತಿನ ನಂತರ ನಾಗ ಹಣಿಕಿದ (ನಡೆದಾ. II, ೧೦೨೭). **ಹಣಕು**: ಬೆಚ್ಚನಾ ಮನೆಯಾ ಹೊಚ್ಚಲದೊಳಗೆ ನಿಂತರು ಭಟ್ಟರು ಹಣಕುತ ಹೊರಗೆ (ಗರಿ. ೪೫-೬); ಕತ್ತನ್ನು ಮೇಲಕ್ಕೆ ಹಣಕಿ ಹಣಕಿ ದಣಿದರು (ಅಳಿನಿ. ೮೫).

**ಹಣಿಕಿ ನೋಡು** = ಇಣಿಕಿ ನೋಡು; ಮರೆಯಲ್ಲಿ ನಿಂತು ನೋಡು: ಕೆಲವರು ಕಿಟಕಿಯ ಹೊರಗೆ ಹಣಿಕಿ ನೋಡುತ್ತಿದ್ದರು (ಸಾಹೇಬ್. ೫). **ಹಣಿಕಿ ಹಾಕು, ಹಣಕಿ ಹಾಕು** = ಹಣಿಕಿ ನೋಡು: ಕಿಡಿಕಿಯಲ್ಲಿ ಹಣಿಕಿ ಹಾಕಿದೆ (ಮೇದಿಮ. ೧೬); ರಾತ್ರೆಯಲ್ಲಿ ಆಗಸದ ತುಂಬೆಲ್ಲಾ ತಾರೆಗಳು ಹಣುಕಿ ಹಾಕಿದಾಗ ಹಡಗಿನ ಜನಕ್ಕೆ ಯಾವುದೋ ಶಾಂತಿ ಸಿಗುತ್ತಿತ್ತು (ದಕ್ಷಿನ. ೧). 'ಇಣಿಕು' ಪರಾ.

**ಹಣಿಕು$_2$** 'ಪಣುಂಕು' ನೋ.

**ಹಣಿಗು** 'ಪಣುಂಕು' ನೋ.

**ಹಣಿಗೆ** 'ಪಣಿಗೆ' ನೋ.

**ಹಣಿತ** (ನಾ). ಹೊಡೆತ; ಪೆಟ್ಟು: ಗುಣವ ರೂಢಿಸಿದರೆ ಸಮಷ್ಟಿಯ ಹಣಿತದಲಿ ಮುರಿದಿದಿರನಗಲಕೆ ಕುಣಿವ ಚೌಪಟಬೊಮ್ಮಗಜವಿದನಟಿವರಾರೆಂದ (ಕುವ್ಯಾಸ. ೯-೧೫).

[ಹಣ್ಣ$_2$ + - ತ$_2$]

**ಹಣಿತೆ** 'ಪಣಿತೆ' ನೋ.

**ಹಣಿದ$_1$** 'ಪಣಿದ$_1$' ನೋ.

**ಹಣಿದ$_2$** 'ಪಂತ$_1$' ನೋ.

**ಹಣಿದ$_3$** (ನಾ). ೧. ಕಬ್ಬಿನ ಹಾಲಿನಿಂದ ಮಾಡಿದ ಪದಾರ್ಥ; ಕಾಕಂಬಿ: ''ಫಾಣಿತಮೆಂಬುದು ಹಣಿದಂ'' (ಪಲಾಯು. ೫೪-೧೬೯). ೨. (ಕಾವಲಿಯಲ್ಲಿ ಬೇಯಿಸಿ ತಯಾರಿಸುವ) ಒಂದು ಬಗೆಯ ತಿಂಡಿ: ''ತುಪ್ಪದೊಳ್ ತಾಳಿಸಿದುದ್ಯೆದೆ ಭಕ್ಷ್ಯಮೆನಿಕ್ಕು ಹಪ್ಪಳಾದಿಗಳ್ ದಗ್ಧಮಕ್ಕು ಕಾವಲಿಯಲಹವ್ಯೆದೆ ಹಣಿದಮಕ್ಕುಂ'' (ಮಂಗರಾ. ೩೪-೩). [< ಸಂ.ಫಾಣಿತ]

**ಹಣಿದಂಬೊಯ್** 'ಪಣಿದಂಬೊಯ್$_1$' ನೋ.

**ಹಣಿವರಡು** (ಕ್ರಿ). (ಕಾಲಿನ ಗೊರಸಿನಿಂದ) ಬೆದಕು: ಹಣಿವ[ಪಾಠಾಂ.ದ] ರಡುತ್ತಮುದ್ದರಿಸಿ ಬಿದ್ದಣಸುಂಗಳ ಬಂಗಿ ಕೋಟ್ಗಳಿಂದಣೆದಣೆಯಿಂ ನೆಲಂ ಬಿರಿವಿನಂ ಕೆಲದೀಡಿಟಿಯುತ್ತಲತ್ತಲಿತ್ತಣ ಬಸವಂಗೋಡೆ ಪೊಣರಲ್ ತೊಣೆಯಿಲ್ಲದೆ ಮತ್ತಮೆಲ್ಲಿಯುಂ ಮಣಿಯದೆ ಮುಂದೆ ನಿಂದ ವೃಷಭೇಂದ್ರನನಿಂದುನಿಭಾಸ್ಯೆ ನೋಡಿದಳ್? (ಸೂಕ್ತಿಸು. ೭-೩೭). [ಹಣ್ಣ$_2$ + ಪರಡು$_1$]

**ಹಣಿಸು** 'ಪನಿಸು' ನೋ.

**ಹಣು$_1$** 'ಪಣ್$_2$' ನೋ.

**ಹಣು$_2$** 'ಪಣ್$_3$' ನೋ.

**ಹಣುಂಗು** 'ಪಣುಂಕು' ನೋ.

**ಹಣುಗು** 'ಪಣುಂಕು' ನೋ.

**ಹಣುಗುದಲೆ** (ನಾ). ಕುಸಿದ ತಲೆ: ಅಲ್ಲಿಗಲ್ಲಿಗೆ ತಱುಬಿ ಕಾದುವ ಕಲ್ಲು ಮರದಣ್ಣಗಳನಗಲಕೆ ಕೊಲ್ಲುಗೊಲೆಯಲಿ ಕೊಂದು ಕೊಡಹಿದರುಸುರ ಹಸರಗಳ ಹಲ್ಲುಗಿರುಕಿನ ಹಣುಗು[ಪಾಠಾಂ. ಹುಣುಬು]ದಲೆಗಳ ತಲ್ಲಣದ ತಳಮೇಲುಗಳ ಕೈಗಲ್ಲಗಳ ಹರಿಸೇನೆ ಸೈಗೆಡೆದಿರ್ದುದು (ತೊರರಾ. ೬-೩೭-೧೫).

[ಹಣುಗು(< ಪಣುಂಕು) + ತಲೆ$_1$]

**ಹಣುಮಂತ, ಹಣಮಂತ** (ನಾ). ಆಂಜನೇಯ: ಹಣುಮಂತರಾಯ ಹಗ್ಗ ತಿನ್ನುವಾಗ ಪೂಜಾರಿ ಶಾವಿಗೆ ಬೇಡಿದ (ಗಾದೆ). **ಹಣಮಂತ** : ಹಣಮಗೊಲ್ಲರು ಹಣಮಂತನ ಪೂಜಾರಿಗಳು (ಕಭಾಗ. ೧೭೩). [< ಹನುಮಂತ]

**ಹಣುವ, ಹಣಮ** (ನಾ). ೧. ಆಂಜನೇಯ;ಹನುಮಂತ. ೨. (ಅಲಂ) ಬಂಟ; ಸೇವಕ: ಅರಿಮಚ್ಚಳಿಕ ಗಜಕಂಠೀರವ ಆಹವಮಲ್ಲದೇವನ ಹಣುವಂ (ಎಕ.VII,ಶಿಕಾ. ೧೫೧-೧೭; 1048). 'ಅಣುವ' ಪರಾ. **ಹಣಮ**: ೧. 'ಹಣಮಟೆಂಕಿ' ಪರಾ.

[< ಸಂ. ಹನುಮನ್]

**ಹಣುಹಗಿನು** 'ಪಣ್$_3$' ಪರಾ.

**ಹಣೆ$_1$** 'ಪಣೆ$_1$' ನೋ.

**ಹಣೆ$_2$** 'ಪಣೆ$_2$' ನೋ.

**ಹಣೆ$_3$** 'ಪಣೆ$_4$' ನೋ.

**ಹಣೆಕಟ್ಟು** 'ಪಣೆಗಟ್ಟು' ನೋ.

**ಹಣೆಗಣ್ಣ** 'ಪಣೆಗಣ್ಣ' ನೋ.

**ಹಣೆಗಣ್ಣು** 'ಪಣೆಗಣ್' ನೋ.

**ಹಣೆಗಿಚ್ಚು** 'ಪಣೆಗಿಚ್ಚು' ನೋ.

**ಹಣೆಗುತ್ತಿ** (ನಾ). ಏತ ಹಾಕಲು ಭೂಮಿಯಲ್ಲಿ ನೆಡುವ ಮರ; ಏತದ ಮರ: ಆ ಬಯಲಲ್ಲಿಯ ಒಂದು ಬಾವಿಗೆ ಒಂದು ಹಣೆಗುತ್ತಿಯನ್ನು ತಂದು ನೆಡಬೇಕಾದ ಪ್ರಸಂಗ ಬಂತು (ಮಾಮುಗು. ೯). [ಹಣೆ$_3$(< ಪಣೆ$_4$) + ಕುತ್ತಿ$_1$]

**ಹಣೆಚಾಚು** (ಕ್ರಿ). ನಮಸ್ಕರಿಸು: ಭೃತ್ಯನ ಕಾವುದೆಂದರ್ಜುನನು ಹಣೆಚಾಚಿದನು

ಹರಿಪದಕೆ (ಕುವ್ಯಾಲು.೧-೪೪); ಅಲಘುಮತಿ ಹಣೆಚಾಚಿದಳು ಹರಿಯಂಘ್ರಿಕಮಲದಲಿ (ನಿಭಾಗ. ೩-೧೨-೫). [ಹಣೆ$_1$ (< ಪಣೆ$_1$) + ಚಾಚು$_1$]

**ಹಣೆಪಟ್ಟಿ** (ನಾ). ನೊಸಲಿಗೆ ಕಟ್ಟುವ ಅಲಂಕಾರದ ಪಟ್ಟಿ; ಹಣೆಯ ಪಟ್ಟಿ: ನೊಳಂಬರ ಮೂರ್ತಿಶಿಲ್ಪದಷ್ಟೇ ಸುಂದರವಾದವು ಈ ನಂದಿವಿಗ್ರಹಗಳು ಇವುಗಳಿಗೆ ಘಂಟಾಹಾರ, ಗೆಜ್ಜೆಯ ಹಾರ, ಸರಪಳಿ, ಹಣೆಪಟ್ಟಿ . . . ಇರುತ್ತವೆ (ನೊಳಂಬ. ೧೧೨). [ಹಣೆ$_1$ (< ಪಣೆ$_1$) + ಪಟ್ಟಿ$_2$]

**ಹಣೆಬಟ್ಟು** (ನಾ). ೧. ಬೈತಲೆಗೆ ಇಟ್ಟುಕೊಳ್ಳುವ ಆಭರಣ; ಬೈತಲೆಬೊಟ್ಟು: ಅರಳೆಲೆಯು ಹಣೆಬಟ್ಟು ಸರದ ಗುಂಡಿನ ಕೊಪ್ಪು ಪರಿಪರಿಯ ವಜ್ರದ್ದೊನ್ನೋಲೆಗಳು (ಜಗೀತ. ೭೧). ೨. ಹಣೆಯಲ್ಲಿ ಇಟ್ಟುಕೊಳ್ಳುವ ಕುಂಕುಮದ ಬೊಟ್ಟು,—ತಿಲಕ: ಹಣೆಬಟ್ಟು ದೊಡ್ಡದಾಗಿ ಇಟ್ಟುಕೊಂಡರೆ ನಿನಗೆ ಒಪ್ಪುತ್ತದೆ (ರೂಢಿ). [ಹಣೆ$_1$ (< ಪಣೆ$_1$) + ಬಟ್ಟು$_1$]

**ಹಣೆಬರಹ, ಹಣೆಬರೆಹ** (ನಾ).೧. ವಿಧಿಲಿಖಿತ; ನಿಯತಿ; ವಿಧಿ: "ಅದು ನಿಮ್ಮ ಹಣೆಬರಹ. ಮತ್ತೇನೂ ಹೇಳಲಾರೆ". ಎಂದವಳು ಮಾರ್ನುಡಿದಳು (ಪುನರು. ೨೫೫); "ನಾನೇನು ಕರ್ಮ ಮಾಡಿದ್ದೆ?" ಎಂದು ತನ್ನ ಹಣೆಬರಹವನ್ನು ನಿಂದಿಸಿದಳು (ಮುಗಮಾಂ. ೧೦೦); ಯಾರ ಹಣೆಬರಹ ಹೇಗಿದೆಯೆಂಬುದು ಯಾರಿಗೆ ಗೊತ್ತು (ಚಂದ್ರಪ್ರಾ. ೨೫). ೨. (ಆಲಂ) ದುಸ್ಥಿತಿ; ಶೋಚನೀಯಸ್ಥಿತಿ: ಇಂಥ ಹೊಲಸು ವಾತಾವರಣದಲ್ಲಿ ಇದೇ ಹಣೆಬರಹವೆಂದು ಕಾಣುತ್ತದೆ (ಬದುಜ.೨೧೭). ೩. ತಲೆಬರಹ; ಶಿರೋನಾಮೆ: ಹಲಗೆಯ ಹಣೆಬರಹವೇ ಬದಲಾಗಿ "ಗಾಂಧೀರಜಕಸೇವಾ" ಆಗಿ ನೇತಾಡುತ್ತಿದ್ದಿತು (ಹುಟ್ಟುಹು. ೨೩). **ಹಣೆಬರೆಹ: ೨.** ಈ ಜನರ ಹಣೆಬರೆಹನೆ ಇದು. ಖೂನಿ ಮಾಡೋದು (ನಡದಾ. I,೩೨೨). [ಹಣೆ$_1$ (< ಪಣೆ$_1$) + ಬರಹ (< ಬರೆಪ)]

**ಹಣೆಬರೆಹ** 'ಹಣೆಬರಹ' ನೋ.

**ಹಣೆಯಕ್ಕಿ** 'ಪಣೆಯಕ್ಕಿ' ನೋ.

**ಹಣೆಯಿಕ್ಕು** 'ಪಣೆಯಿಕ್ಕು' ನೋ.

**ಹಣೆಯೊಂದು** (ಕ್ರಿ). (ನಮಸ್ಕರಿಸುವಾಗ) ಹಣೆಯು ಕಾಲುಗಳಿಗೆ ತಾಕು,—ಮುಟ್ಟು: ಕಂದನಂ ತಾನೆತ್ತಿಕೊಂಡೈತಂದವರ ಚರಣಾಂಬುಜಕೆ ಹಣೆಯೊಂ[ಪಾಠಾಂ. ವೊಂ]ದೆ ಹೊಡವಡಿಸಲ್ಕೆ ಕರುಣಾರಸವೊಸರುತಿರಲು (ಬಸಪು. ೪೮-೩೦); ಆ ಬಸವನಾ ಗುರುವಿನ ಚರಣಸರಸಿಜಯುಗಕೆ ಹಣೆಯೊಂದೆ ವಂದಿಸುತ (ಬಸಪು. ೬೧-೬೦). [ಹಣೆ$_1$ (< ಪಣೆ$_1$) + ಒಂದು$_1$]

**ಹಣೆಹಗ್ಗ** (ನಾ). ಎತ್ತುಗಳನ್ನು ಅಂಕೆಯಲ್ಲಿಡಲು ಉಪಯೋಗಿಸುವ ಹಗ್ಗ: (ಕ). [ಹಣೆ$_1$ (< ಪಣೆ$_1$) + ಹಗ್ಗ (< ಪಗ್ಗ)]

**ಹಣೆಹಚ್ಚು** (ಕ್ರಿ). = ಹಣೆಯೊಂದು: ಬಾದಷಹರು ರಮೇಶನ ಪಾದಗಳಿಗೆ ಹಣೆ ಹಚ್ಚಿದರು (ಹಾಡುಹು. ೬೫). [ಹಣೆ$_1$(< ಪಣೆ$_1$) + ಹಚ್ಚು$_1$ (< ಪಚ್ಚು$_3$)]

**ಹಣ್ಗೊಂಡ** 'ಪಣ್ಗೊಂಡ' ನೋ.

**ಹಣ್ಗೊನೆ** 'ಪಣ್ಗೊಲೆ' ನೋ.

**ಹಣ್ಗೊಳ್** 'ಪಣ್ಗೊಳ್' ನೋ.

**ಹಣ್ಗೊಳಿಸು** 'ಪಣ್ಗೊಳಿಸು' ನೋ.

**ಹಣ್ಣಡಕೆ** 'ಪಣ್ಣಡಕೆ' ನೋ.

**ಹಣ್ಣಡಿಕೆ** 'ಪಣ್ಣಡಕೆ' ನೋ.

**ಹಣ್ಣಲು** (ನಾ). ಒಂದು ಬಗೆಯ ಮೀನು: ಕೊಳೆವ ಸೀಗುಡಿ ಗೆಂಡೆ ಕುಚ್ಚು ಹಣ್ಣಲು ಬಸಿಗ ಗಿಜಿಲು ಬಂಗಡೆ ಹಾವು . . . ಪರಿಪರಿಯ ಮೀನ್ಗಳಂ ಗುದಿಗೆಯ್ದುರು (ಪಚಕಾ. ೫-೪೫). [?]

**ಹಣ್ಣಳುವೆ** (ನಾ). ಹಳೆಯದಾಗಿರುವ ಬಟ್ಟೆ; ಜೀರ್ಣವಾದ ವಸ್ತ್ರ: ತನ್ನವನೊಬ್ಬ ನುಟ್ಟ ಹಣ್ಣಳುವೆ ಸೀರೆಯನೀಸಿಕೊಂಡು ನಾಲ್ಕಾಗಿ ಸೀಳಿ . . . ಅವಿಚಾರದಿಂ ನೀಡೆ (ಹಚಕಾ. ೮-೫೦). [ಹಣ್ಣು$_3$ (< ಪಣ್$_3$) + ಅಳುವೆ]

**ಹಣ್ಣೆಸ್ತು$_1$** 'ಪಣ್ಣೆಸ್ತು$_1$' ನೋ.

**ಹಣ್ಣೆಸ್ತು$_2$** 'ಪಣ್ಣೆಸ್ತು$_2$' ನೋ.

**ಹಣ್ಣು$_1$** 'ಪಣ್ಣು$_1$' ನೋ.

**ಹಣ್ಣು$_2$** 'ಪಣ್$_2$' ನೋ.

**ಹಣ್ಣು$_3$** 'ಪಣ್$_3$' ನೋ.

**ಹಣ್ಣುಗಣ್ಣು** (ನಾ). ಕಣ್ಣಿನ ಒಂದು ಬಗೆಯ ರೋಗ: ಪಿತ್ತರೋಹಿಣಿ ೧ ಭಾಗ ಇವಂ ಹುಲಿಗಿಲಿರಸದಲ್ಲಿ ಮರ್ದಿಸಿ ಹಿಪ್ಪಲಿಯ ಹಾಗೆ ಗುಳಿಗೆಯಂ ಮಾಡಿ ನಿಂಬೇರಸದಲ್ಲಿಯಾಗಲೀ ನೀರಲ್ಲಾಗಲೀ ತೇದು ಕಣ್ಣಿಗಿಕ್ಕಲು ಕಾಚು, ಪಟಲ, ಹಣ್ಣುಗಣ್ಣು, ನೀರುಸುರಿಯುತ್ತಿರುವುದು ಮಾಣುವುವು (ವಿವೈವಿ.೫೬). [ಹಣ್ಣು$_3$ (< ಪಣ್$_3$)? + ಕಣ್ಣು (< ಕಣ್)]

**ಹಣ್ಣುಗರಡಿ** (ನಾ). ವಯಸ್ಸಾದ ಕರಡಿ; ಮುದಿಕರಡಿ: ರಣವದೇತಕೆ ಹಣ್ಣುಗರಡಿಗೆ (ಕೌಶಿರಾ. ೨೬-೨೫). [ಹಣ್ಣು$_3$ (< ಪಣ್$_3$) + ಕರಡಿ$_1$]

**ಹಣ್ಣುಗಾಯ** (ನಾ). ಕೀವು ತುಂಬಿಕೊಂಡು ಮೆತ್ತಗಾಗಿರುವ ಗಾಯ: ಹಣ್ಣುಗಾಯ ಒಡೆದು ನೋವು ಕಡಮೆಯಾಯಿತು (ರೂಢಿ). [ಹಣ್ಣು$_3$ (< ಪಣ್$_3$)+ ಗಾಯ]

**ಹಣ್ಣುಗಾಯಿ** 'ಪಣ್ಗಾಯ್' ನೋ.

**ಹಣ್ಣುಗೆಣಸು** (ನಾ). ಚೆನ್ನಾಗಿ ಬಲಿತ ಗೆಣಸು; ಪಕ್ವವಾದ ಗೆಣಸು: ಹಾಲುಜೇನಂ ಕೂಡೆ ಕುಡಿದೆಮ್ಮ ಜಗಳವಂ ಮುಳುಗಿಸುವ ಹಣ್ಣುಗೆಣಸಂ ತಿಂದು ತೇಗಿಸುವ (ಹಪ್ಪರ.೪೭-೨೨೦). [ಹಣ್ಣು$_3$ (< ಪಣ್$_3$) + ಗೆಣಸು (< ಗೆಣಸು)]

**ಹಣ್ಣುಗೊಳಿಸು** 'ಪಣ್ಗೊಳಿಸು' ನೋ.

**ಹಣ್ಣುನನ್ನೆ** (ನಾ). ಒಂದು ಬಗೆಯ ಸಸ್ಯ: (ಮೃಔಗಿ.೬೪-೧೩೦೫). [?]

**ಹಣ್ಣುಮುದುಕ** (ನಾ). ತುಂಬ ವಯಸ್ಸಾದ ವ್ಯಕ್ತಿ; ಅತಿವೃದ್ಧ: ಆ ಹಣ್ಣು ಮುದುಕರಿಗೆ ಕಣ್ಣುಕಾಣುವುದಿಲ್ಲ (ರೂಢಿ). [ಹಣ್ಣು$_3$ (< ಪಣ್$_3$) + ಮುದುಕ]

**ಹಣ್ಣುಮುದುಕಿ** (ನಾ). ಬಹಳ ವಯಸ್ಸಾದ ಹೆಂಗಸು; ಅತಿವೃದ್ಧೆ: ನಾಯ್ ಸರಕೆಂದೊಡಿತ್ತ ಬಾ ಜಾಣಯೆಂಬಾ ಹಣ್ಣುಮುದುಕಿ ಸೂಳೆಯರೆಸೆದರು (ಚೆಬಪು. ೧೦-೭೬). [ಹಣ್ಣು$_3$ (< ಪಣ್$_3$) + ಮುದುಕಿ]

**ಹಣ್ಣುವ** (ನಾ). ಸಿದ್ಧಗೊಳಿಸುವಿಕೆ; ಸಜ್ಜು; ಅಣಿ: "ಕಲ್ಪನೆ ಸಜ್ಜನೆ ಎಂದೊಡೆ ಆನೆಯ ಹಲ್ಲಣಿಸುವುದು, ಹಣ್ಣುವಮೆಂದೂ ಎಂಬರು" (ನಾಚಿರಾ. ೩). [< ಪಣ್$_1$]

**ಹಣ್ಣುವರಿ** (ಕ್ರಿ). ಹಣ್ಣಾಗು; ಪಕ್ವವಾಗು; ಕಳಿ: ಆ ಕಾಯಿಗಳು ಪಾಡಿಗೆ ಬಂದು ಕೆಲಕೆಲವು ಹಣ್ಣುವರಿದು ಸೊಂಪಾಗಿ ತೋರುತ್ತಿದ್ದವು (ಮುಂಬಯಿ. ೩-೩೭). [ಹಣ್ಣು$_3$ (< ಪಣ್$_3$) + ಪರಿ$_2$]

**ಹಣ್ಣುವಾಳೆ** (ನಾ). ಪಕ್ವಕ್ಕೆ ಬಂದ ಬಾಳೆ; ಹಣ್ಣಿಗೆ ಬಂದ ಬಾಳೆ: ಹಣ್ಣುವಾಳೆಯ ಕಾಯ ಸುಟ್ಟು ನಾರಂ ತೆಗೆದು ಸಣ್ಣ ಗದುಗದ ತೋರವಂ ಮಾಡಿ ಮತ್ತವಂ ಬಣ್ಣಸರದಂತೆ ಸರಗೆಯ್ದು . . . ಸಿತಮೋಚಫಲವೆಸರಿಡುವುದು (ಸೂಪಶಾ. ೪-೮೩). [ಹಣ್ಣು$_3$(< ಪಣ್$_3$)+ ಬಾಳೆ$_1$ (< ಬಾೞೆ)]

**ಹಣ್ಣುಸಂಪಗೆ** (ನಾ). ಒಂದು ಬಗೆಯ ಸಂಪಗೆಮರ: ಆಟುರಕ, ಹಣ್ಣುಸಂಪಗೆ (ಮೃಔಗಿ. ೩೭-೭೩೮). [ಹಣ್ಣು$_3$ (< ಪಣ್$_3$) + ಸಂಪಗೆ]

**ಹಣ್ಣುಹಂಪಲು** 'ಪಣ್$_3$' ಪರಾ.

**ಹಣ್ಣೆ** (ನಾ). ಒಂದು ಬಗೆಯ ಔಷಧೀಸಸ್ಯ: "ಸಿರಿಕನ್ನೆ ಮಧುಮೂಲಿಯೆನೆ ಹಣ್ಣೆ" (ಮಂಗರಾ.೪೫-೪೮). 'ಅಣ್ಣೆ$_2$' ಪರಾ. [ದೇ. ॥ ತಮಿ. ಪಣ್ಣೈ]

**ಹಣ್ಣೆಲೆ** 'ಪಣ್ಣೆಲೆ' ನೋ.

**ಹಣ್ಡೆನೆ** 'ಪಣ್ಡೆನೆ' ನೋ.

**ಹತ** (ಗು).೧. ಕೊಂದ; ಸಂಹರಿಸಿದ. ೨. ಹೊಡೆದ; ಗಾಯಗೊಳಿಸಿದ. ೩. ನೋಯಿಸಿದ; ಬಾಧೆಗೊಳಗುಮಾಡಿದ. ೪. ನಾಶವಾದ; ಭಂಗವಾದ: ಹತಭುಜಗರ್ವಮಾಗೆ ದೆಸೆಗೆಟ್ಟನಿರುದ್ಧತಳಪ್ರಹಾರದಿಂ . . . ಗತವಿಷವಾಗಿ ನಾಗಕುಲ ಮುತ್ಕಟಭೀತಿಯನೋಡುವಂತೆವೋಲ್ (ಜಗಪು. ೧೭-೧೫೯). (ನಾ). ೫. ಕೊಲ್ಲುವಿಕೆ; ಸಂಹಾರ; ನಾಶ.೬. ಕೊಲ್ಲಲ್ಪಟ್ಟವನು; ಸಂಹರಿಸಲ್ಪಟ್ಟವನು: ಹರನಿಂದ ಹತನಾದ ಕಂತು (ಮೋಹತ.೫-೨). [ಸಂ.]

**ಹತಕ** (ನಾ). ಕೆಟ್ಟವನು; ನೀಚ: "ಹತಕಂ ಕೆಟ್ಟವಂ" (ಮಂಗರಾ.೭೧-೧೮); ಇತ್ತ ವಸಂತನಿತ್ತ ಮಲಯಾನಿಲನಿತ್ತ ಮಧುವ್ರತಾಳಿ ಮತ್ತಿತ್ತ ಮದೋತ್ಕ ಕೋಕಿಲ ಕದಂಬಕವೆಯ್ದೆ ವಿಜ್ರಂಭಿಸಿತ್ತು ತಾನಿತ್ತಲಡರ್ದು ಚಂದ್ರಹತಕಂ ತಲೆದೋಱಿದನೋವೋ ಕೆಟ್ಟೆಂ (ಕಾದಂಪೂ. ೮೮೨); ತಾಯತ್ತ ಮರೆಯಾಗಲಿಂದುಹತಕನು ಇತ್ತ ಉದಿಸಿದನು ಮದಿಸಿ (ಶಬ್ದಾ. I, ೪೬೧). [ಸಂ.]

**ಹತಕಂತುಕ** (ನಾ). ಹೊಡೆದ ಚಂಡು; ಎಸೆದ ಸೆಂಡು: ಮಿಾಱಿ ಹತಕಂತುಕದವೊಲು ಪುಟವೇಱುತಿದೆ ವಿಕ್ರಮ ಚಡಾಳಿಸಿ ಬೀಱುತಿದೆ ಭುಜ ಭಾರಿಯಂಕವ (ಜುಮ್ಮಾ.ಅ. ೬-೨೫). [ಹತ + ಕಂತುಕ]

**ಹತಕಲ್ಮಷ** (ನಾ). ಕಳಂಕರಹಿತನಾದವನು; ಕಲ್ಮಷರಹಿತ: ಈ ಪರಮೇಶ್ವರಂ ತ್ರಿಜಗದೀಶ್ವರನೀ ಹತಕಲ್ಮಷಂಗೆ ಮಾತಾಪಿತೃಭಾವಮೆಂದು ನಿಮಗಾದುದು (ಶಾಂತಿಪು. ೧೧-೭೫). [ಸಂ.]

**ಹತದೇಹ** (ನಾ). ಏಟು ಬಿದ್ದ ದೇಹ,— ಶರೀರ: ಹತದೇಹ ಹತಭುಜದ್ವಯ ಹತೋರು ಹತಜೀವ ಹತಕಿರೀಟಂ ಹತಹೃತ್ಪ್ರತಿಕಾರ್ಯಮೆಂಬುದುಂಟೇ ಗತಿಯಂ ಸಾಧಿಸುವುದಲ್ತೆ ತಾಂ ಪ್ರತಿಕಾರಂ (ಗದಾಯು. ೯-೨೬). [ಸಂ.]

**ಹತಪ್ರತಿಜ್ಞ** (ನಾ). ಶಪಥ ಕೈಗೂಡದವನು; ಪ್ರತಿಜ್ಞೆ ಭಂಗವಾದವನು: ಆತ್ಮೀಯವಿದ್ಯಾಗರ್ವಪರ್ವತಮವರ ವಚೋವಜ್ರನಿರ್ಘಾತದಿಂ ನುಚ್ಚುನುಱಿಯಾಗಿ ಪೋದೊಡೆ ಹತಪ್ರತಿಜ್ಞರುಂ ಗಳಿತಗರ್ವರುಮಾಗಿ (ಆದಿಪು. ೩-೭೫ ವ). [ಸಂ.]

**ಹತಪ್ರಭ** (ನಾ). ಕಾಂತಿಯನ್ನು ಕಳೆದುಕೊಂಡವನು; ಕಳಾಹೀನ: ಕೋದಂಡಂ ಕಡಿಕಂಡಮಾಗೆ ಪೞಿಪಡೆ ಪೊಡರ್ಪು ಪೇಮಪ್ರಭಂ ಹತಪ್ರಭನಾದಂ (ಪಂಪರಾಮಾ.೩-೬೦). [ಸಂ.]

**ಹತಬಲ** (ನಾ).೧. ಶಕ್ತಿಗುಂದಿದುದು: ಅವನ ಶಕ್ತಿವಿಶೇಷಗಳೆಲ್ಲ ಇದರಲ್ಲಿ ತನಿಗೊಂಡು ಮೇಳಗೊಂಡಿವೆ, ಮತೀಯ ಅಭಿನಿವೇಶಗಳೆಲ್ಲ ಸೌಂದರ್ಯಪ್ರಜ್ಞೆಯ ಮುಂದೆ ಹತಬಲವಾಗಿವೆ (ಕಸಾಚ. ೧೮೩). ೨. ಶಕ್ತಿಗುಂದಿರುವವನು; ಬಲವನ್ನು ಕಳೆದುಕೊಂಡವನು: ಜೈನರು . . . ಧಾರ್ಮಿಕರಂಗದಲ್ಲಿ ಹತಬಲರಾಗಿದ್ದರು (ಸಾಪಿಸ. ೧೩೬). ೩. ಇಂದ್ರ: ಹತಬಲವಾಸಮಾದುದಮರಾವತಿಯೈಲಬಿಲಪ್ರಭಾವ ಸಂಗತಿಗೆಡೆಯಾಯ್ತು (ವೃಷಪು. ೪-೩೨). [ಸಂ.]

**ಹತಬುದ್ಧ** (ನಾ). ಬುದ್ಧಿಯನ್ನು ಕಳೆದುಕೊಂಡ ವ್ಯಕ್ತಿ: ಭವಾನೀಚರಣನು ಕಾಲೀಪದನ ಅವಸ್ಥೆ ನೋಡಿ ಹತಬುದ್ಧನಾಗಿ ಹೋದನು (ಇಪ್ಪಕ. ೩೮೯); ತೀರ ಹತಬುದ್ಧಳಾದ ಕುವರಿಯಂ ನೀವು ಕೈನೀಡಿ ಕಾಯಬೇಕು (ಕೃಷ್ಣಾಕು. ೬-೨೨). [< ಸಂ. ಹತಬುದ್ಧಿ]

**ಹತಭಾಗಿನಿ** (ನಾ). ಅದೃಷ್ಟವನ್ನು ಕಳೆದುಕೊಂಡವಳು; ಭಾಗ್ಯಹೀನೆ: ಈ ಪರಿಣಾಮಫಲವನ್ನು ಹತಭಾಗಿನಿಯರಾದ ಅಂದಿನ ಸತಿಯರು ಭುಂಜಿಸಬೇಕಾಯಿತು (ಭಾರದ. ೪೮೪). [ಸಂ. ಹತಭಾಗಿನೀ]

**ಹತಭಾಗ್ಯ** (ನಾ). ಅದೃಷ್ಟವನ್ನು ಕಳೆದುಕೊಂಡವನು; ಭಾಗ್ಯಹೀನ: ಅಜ್ಞಾನದ ಕಗ್ಗತ್ತಲು ಹೆಪ್ಪುಗಟ್ಟಿ ಈ ಹತಭಾಗ್ಯನ ಆತ್ಮವನ್ನು ಮುಸುಕಿದೆ (ವೀರಯೋ. ೧೯). [ಸಂ.]

**ಹತಭುಜದ್ವಯ** (ನಾ). ಏಟು ಬಿದ್ದು ಜರ್ಜರಿತವಾದ ಕೈಗಳು: ಹತದೇಹ ಹತಭುಜದ್ವಯ ಹತೋರು ಹತಜೀವ ಹತಕಿರೀಟಂ ಹತಹೃತ್ಪ್ರತಿಕಾರ್ಯಮೆಂಬುದುಂಟೇ ಗತಿಯಂ ಸಾಧಿಸುವುದಲ್ತೆ ತಾಂ ಪ್ರತಿಕಾರಂ (ಗದಾಯು. ೯-೨೬). [ಸಂ.]

**ಹತಮತಿ** (ನಾ). ಬುದ್ಧಿಯನ್ನು ಕಳೆದುಕೊಂಡವನು; ಬುದ್ಧಿಗೇಡಿ: ಹತಮತಿ [ಪಾಠಾಂ. ಹತನುಂ] ಮನುಷ್ಯಗತಿವಡೆದು ತಾಪಸತ್ವಕ್ಕೆ ಸಾರ್ದು ರಾಕ್ಷಸವಂಶೋದ್ಭತನಾಗಿ ಭರದಿನುಪಸರ್ಗತತಿಯನಾ ತೀರ್ಥವಿಭುಗೆ ಬಿಡದೊಡರಿಸಿದಂ (ಪಾರ್ಶ್ವಪು. ೧೬-೧೪೦). [ಸಂ.]

**ಹತಮದ** (ನಾ). ಅಹಂಕಾರವನ್ನು ಕಳೆದುಕೊಂಡವನು: ನಾಗಸೇನಂ . . . ರಾಜಪೂಜ್ಯಮಮಲಶ್ರೀಯಾಪ್ಪುದಂ ಕಾಮದಂ ಹತಮದಂ ನಮಾಮ್ಯಹಂ (ಎಕ.II, ೩೪-೪; 700). [ಸಂ.]

**ಹತಮದನ** (ನಾ). ಕಾಮನನ್ನು ನಾಶಮಾಡಿದವನು; ಶಿವ: ಈ ಹೋದನೆ ಮುಳುಗಿ ಬಹಳ ಸಂಸಾರದೊಳಂ ನೀ ಹರಿದು ಬಂದು ತೆಗೆಯಯ್ಯಾ ಹತಮದನಾ ಪ್ರಸನ್ನಶಂಕರ ಲಿಂಗಾ (ಶಂಕಕಂ. ೬೦). [ಸಂ.]

**ಹತಮನ** (ನಾ). ಕುಂದಿದ ಚಿತ್ತ; ಮುರಿದ ಮನಸ್ಸು: ಒರೆದಪನೇನಂ ಹತಮನಮುರೆ ತಾಂ ಪಂಬಲಿಸಿ ಮರುಗಲಿಳ್ದತ್ತೀಗಳ್ (ಶಾಕುಂತ. ೮೩-೧೩೮). [ಸಂ.]

**ಹತವಿತತಕೋಲಾಹಳಂ** (ಅ). ಪೆಟ್ಟುಗಳಿಂದ ಜರ್ಝರಿತಗೊಳಿಸಿ; ಕೋಲಾಹಲವನ್ನುಂಟುಮಾಡಿ: ಗಜಪತಿಯುಂ ಮುಗಿಲ ಧ್ವನಿಯ ಮೆಲ್ಲಂಭೀರಮಪ್ಪ ಗರ್ಜನೆಯನೊಡೆಯದುಂ ಬಂದು ಪಡೆಯೆಲ್ಲಮಂ ಹತವಿತತಕೋಲಾಹಳಮೆಟೆದು ಕೊಲ್ಲುದುಂ (ವಡ್ಡಾರಾ. ೩೫-೯); ಸಾರ್ವಭೌಮನೆಂಬ ಪಟ್ಟವರ್ಧನಗಜಂ ಸೊರ್ಕಿ ಮಸಗಿ ಕಟ್ಟುಗಳೆಲ್ಲಮಂ ಪಱಿದು ಹತವಿತತಕೋಲಾಹಳಮೆಟೆದು ಪೊಟಲೆಲ್ಲಮಂ ಕೊಲ್ವುದಂ (ವಡ್ಡಾರಾ. ೬೩-೧೦). [ಸಂ. ಹತವಿತತಕೋಲಾಹಲಂ]

**ಹತಾರ** 'ಹತ್ಯಾರು' ನೋ.

**ಹತಾಶ** (ನಾ). ಆಸೆಯು ನಾಶವಾದವನು; ನಿರಾಶೆಗೊಂಡವನು: ಸುಬ್ಬು ಹತಾಶನಾಗಿ ಹೋಗಿ ಮಲಗಿದನು (ನಿರಾತ. ೩೬); ರಾಜರೆಲ್ಲರೂ ಹತಾಶರಾಗಿ . . . ಹಿಂದಿರುಗಿದರು (ಆರ್ಯಕೀ. ೫). [ಸಂ.]

**ಹತಾಶತೆ** (ನಾ). ಆಸೆ ನಾಶವಾದುದು; ಆಶಾಭಂಗ: ಪದಿನಾಲ್ಕು ಬರಿಸಮಾಶಂಕೆಯ ನಿರೀಕ್ಷಣೆಯ ಭೀತಿ ಖಿನ್ನತೆ ಹತಾಶತೆಗಳ್ಕವುರಿ ನಡುವೆ ತಪಮಿರ್ದುಂ (ಶ್ರೀರಾಮಾ. ೯೯-೧೭೯). [ಹತಾಶ + - ತೆ]

**ಹತಾಶೆ** (ನಾ). ಆಸೆಯ ನಾಶ; ಆಶಾಭಂಗ: ಕುಳಿತನ್ ಹತಾಶೆಯ ಮಂಕುಬಡಿದಂತೆ (ಶ್ರೀರಾಮಾ. ೨೬೩-೧೩); ಶಾಲಬ್ಬೆಗೆ ಒಮ್ಮೆ ಹತಾಶೆಯೆನ್ನಿಸಿದರೂ . . . ಸಮಾಧಾನ ಬಾರದಿಲ್ಲ (ಹೊಸಕ್ಟ. ೪೫). [ಸಂ. ಹತಾಶಾ]

**ಹತಾಹತಿ** (ನಾ). ೧. ಏಟಿನ ಮೇಲೆ ಏಟು; ಹೊಡೆತದ ಮೇಲೆ ಹೊಡೆತ: ಎರಡು ಚೂಣಿಗಳ ಕಾಹುರದ ಕಲಿಗಳೆಡೆವರಿಸಿ ಹೊಯ್ದಾಡಿದರ್ ಬಾಹುನಖಮುಷ್ಟಿ ಕೇಶಾಕೇಶಿ ಮಲ್ಲಯುದ್ಧದ ಹತಾಹತಿಗಳಿಂದೆ (ಜೈಮಿಭಾ. ೨೭-೬). ೨. ನಾಶ; ಅಳಿವು: ಆಂಗ್ಲೇಯ ಸಿಪಾಯಿಗಳು ಹತಾಹತಿಯಾದರು (ಝಾರಾಣಿ. ೩೯೭). [ಸಂ.]

**ಹತಿ** (ನಾ).೧. ಹೊಡೆಯುವಿಕೆ. ೨. ಸಂಹಾರ. ೩. ನಾಶಪಡಿಸುವಿಕೆ. ೪. ಪೆಟ್ಟು; ಹೊಡೆತ: ಗಾಳಿಗೊಡ್ಡಿದ ಮುಗಿಲ್ಗೆಣೆಯಾದುದು ಕೊಡೆಯೊಕ್ಕಿದಂತಾದುದು . ರಾಮಬಾಣಹತಿಯಿಂದಿದಿರಾದ ವಿರೋಧಿಸಾಧನಂ (ಪಂಪರಾಮಾ. ೪-೬೭); ಪಡಿಬಲವನು ಕೊಂದು ಕಾದಿದರೊಮ್ಮೆ ಶರಶರದ ಹತಿಗಳಿಂ (ಜೈಮಿಭಾ.೧೨-೪೮). [ಸಂ.]

**ಹತಿಗೆಯ್** (ಕ್ರಿ). ಏಟು ಕೊಡು; ಪೆಟ್ಟು ಹಾಕು; ಹೊಡೆ: ಪಶುವಂ ತಾಂ ಹತಿಗೆಯ್ವುದರೊಳ್ ಶ್ರೋತ್ರಿಯನತಿ ಕರ್ಕಶನಾದೊಡೇಂ ಕೃಪಾನ್ವಿತನಲ್ತೇ (ಶಾಕುಂತ. ೭೭-೧೩೨). [ಹತಿ + ಕೆಯ್]

**ಹತಿಯಾರು** 'ಹತ್ಯಾರು' ನೋ.

**ಹತಿಯಿಸು** 'ಹತಿಸು' ನೋ.

**ಹತಿಸು, ಹತಿಯಿಸು** (ಕ್ರಿ).೧. ಕೊಲ್ಲು; ಸಂಹರಿಸು; ನಾಶಮಾಡು: ಆ ಯತಿ ನಾಥನಂ ಹತಿಸಿ ತಂದು (ದಶಕು. ೧೩-೫೮); ಗೋವಂ ಹತಿಸಿ ಸಕಲದೋಷವಂ ಮಾಡಿ (ಪದ್ಮರಾ. ೧೧-೧೩೮); ರಾವಣ ಕುಂಭಕರ್ಣಾದಿ ದುರುಳರಕ್ಕಸರನೆಲ್ಲರ ಹತಿಸಿ (ಚಬಸ್ವಪು. ೫೪-೨೨). ೨. ಗುಣಾಕಾರ ಮಾಡು: ಹತಿಸು, ಗುಣಿಸು . . . ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೧೧). **ಹತಿಯಿಸು:** ೧. ಕೊಟ್ಟಾರದ ಕರಣಂ(ಣ)ಗಳಂ ಬಂಚಿಸಿ ಕಳ್ದು ದ್ರವ್ಯಮಂ ಸೂಳೆಗೆ ಕೊಟ್ಟೊಡರಸಂ ಪಿಡಿತರಿಸಿ ಹತಿಯಿಸೆ ಸತ್ತು ಪುಲಿಯಾದೊಂ (ಚಾವುಂಪು. ೨೬). [ಹತಿ + - ಇಸು]

**ಹತೋಟಿ** (ನಾ). ಅಂಕೆ; ಹಿಡಿತ: ಸಾಹಸದಿಂದ ಆ ದನಗಳನ್ನು ಹತೋಟಿಗೆ ತರಹತ್ತಿದನು (ಬಂಗಾಪ. ೬೮); ತನ್ನ ಮೇಲೆ ತನಗೇ ಹತೋಟಿ ಇಲ್ಲದ ಹಾಗೆ ಎದ್ದು ನಿಂತು ಅತ್ತಿಂದಿತ್ತ ಓಡಾಡತೊಡಗಿದ (ಅವಾಥ. ೨೪೬).

[<— ಮರಾ. ಹಾತೌಟೀ= ಹಸ್ತಚಾತುರ್ಯ; ಹಿಂ. ಹಥೌಟಿ = ಹಸ್ತಕೌಶಲ./ ಸಂ. ಹಸ್ತವರ್ತಿನ್ = ಕೈಯಲ್ಲಿ ಹಿಡಿದುದು]

**ಹತೋದ್ಧೂತ** (ಗು). (ಪಾದದ)ಆಘಾತದಿಂದ ಉಂಟಾದ, — ಮೇಲೆದ್ದ: ಬಭ್ರುವಾಹನಂ ಸಮರಕನುವಾಗಿ ನಿಲಲು . . . ತರಣಿಮಂಡಲಮಂ ಚಮೂಪದ ಹತೋದ್ಧೂತರೇಣುವ್ರಜಂ ಮುಸುಕಿತು (ಜೈಮಿಭಾ. ೨೨-೧). [ಸಂ.]

**ಹತ್ತ** (ನಾ). ಕೈ; ಹಸ್ತ: ಕಪ್ಪುವಟ್ಟಗನನಾಂತು ಬರಮಿಾವ ಹತ್ತದ ತುತ್ತತುದಿಯಾಗಿ ಮಂತುರಪರಿಜುದಾಳ್ದ ನಜ್ ಮೆಟ್ಟಿವ ಕಾಶಿಯೊಡೆಯಂ (ಪದ್ಮರಾ.೧೩-೬೫). [< ಪ್ರಾ. ಹತ್ಥ./ ಸಂ. ಹಸ್ತ]

**ಹತ್ತಂಡಿ** (ನಾ). (ಉಕ) ಇಕ್ಕಟ್ಟು; ಸ್ಥಳಸಂಕೋಚ: ಬಸ್ಸಿನಲ್ಲಿ ಹತ್ತಂಡಿಯಾಗಿ ಜಾಗವೇ ಸಿಗಲಿಲ್ಲ (ರೂಢಿ). [< ಪತ್ತು₂ + ಅಂಡಿ₁]

**ಹತ್ತಂಬಳ್ಳಿ, ಹತ್ತಂಬಾಳ** (ನಾ). (ಉಕ) ೧. (ಒಬ್ಬರ ಕೈಯನ್ನು ಮತ್ತೊಬ್ಬರು ಹಿಡಿದಿರುವ) ಒಂದು ಬಗೆಯ ಮಕ್ಕಳ ಆಟ: ಮಕ್ಕಳು ಹತ್ತಂಬಳ್ಳಿ ಆಡುತ್ತಿದ್ದಾರೆ (ರೂಢಿ). **ಹತ್ತಂಬಾಳ** : ೨. (?): ಆ ಎಲ್ಲ ನಾಯಿಗಳ ಬಳಗವು ಇದರ ಸುತ್ತ ಹತ್ತಂಬಾಳವನ್ನು ಕಟ್ಟುತ್ತಿದ್ದವು (ಮೊಪಾಸಾ. ೨೩).

**ಹತ್ತಂಬಾಳ ಕಟ್ಟು** = ಸುತ್ತುಗಟ್ಟು (?): ಇನ್ನುಳಿದ ರೈತರಾಣೇರು ಸುತ್ತಲೂ ಹತ್ತಂಬಾಳ ಕಟ್ಟಿ ನಿಂತಿರುವರು (ಮುಳ್ಳುಜೀ. ೧೧೩). [ಹತ್ತ + ಬಳ್ಳಿ]

**ಹತ್ತಂಬಾಳ** 'ಹತ್ತಂಬಳ್ಳಿ' ನೋ.

**ಹತ್ತಕಟ್ಟು₁** 'ಹತ್ತೆಗಟ್ಟು₁' ನೋ.

**ಹತ್ತಕಟ್ಟು₂** 'ಹತ್ತೆಗಟ್ಟು₂' ನೋ.

**ಹತ್ತಕಟ್ಟು₃** (ನಾ). ಕೈಗೆ ಕಟ್ಟಿಕೊಳ್ಳುವ ಒಂದು ಬಗೆಯ ಆಭರಣ: ''ಹತ್ತಕಟ್ಟು:- ಇದು ಮಣಿಗಂಟು ಮೊದಲಾದ ಹಸ್ತಭಾಗಗಳಿಗೆ ಕಟ್ಟುವ ಆಭರಣಭೇದ''(ಪಾರ್ತಿಸು.೪೭); ಮಾಲಿಂಗ . . . ಆ ಹತ್ತಕಟ್ಟು ಇತ್ತ ತಾ (ಬಣ್ಣಮಾ. ೯೦). [ಹತ್ತ + ಕಟ್ಟು₂]

**ಹತ್ತಕಡಕು** 'ಹತ್ತುಕಡುಕು' ನೋ.

**ಹತ್ತಕಡುಕು** 'ಹತ್ತುಕಡುಕು' ನೋ.

**ಹತ್ತಗಟ್ಟು₁** 'ಹತ್ತೆಗಟ್ಟು₁' ನೋ.

**ಹತ್ತಗಟ್ಟು₂** 'ಹತ್ತೆಗಟ್ಟು₂' ನೋ.

**ಹತ್ತಗಡೆ** 'ಹತ್ತುಗಡೆ' ನೋ.

**ಹತ್ತಡ** (ನಾ). ಉತ್ತರೀಯ; ಮೇಲುವಸ್ತ್ರ (?): ತುಡುಕಿದನು ಚಕ್ರವನು ರಥದಿಂ ಪೊಡವಿಯೊಳು ದುಮ್ಮಿಕ್ಕಿದನು ಹತ್ತಡವ ಹಾಯಿಕಿ ಹರಿದನು (ಕುಮಾರಾಭೀ. ೬-೩೫). [P ಇದು 'ಹಚ್ಚಡ' ಎಂದಿರಬಹುದೇ?]

**ಹತ್ತಡಿ, ಹತ್ತರಿ** (ನಾ). ಮರ ಮೊದಲಾದುವುಗಳನ್ನು ನಯಮಾಡಲು ಬಳಸುವ ಒಂದು ಸಾಧನ; ಉಜ್ಜುಗೊರಡು: ''ಹತ್ತಡಿ = ಬಡಿಗನ ಒಂದು ಉಪಕರಣ'' (ಜಾನಕೋ. ೫೨). **ಹತ್ತರಿ:** ಮಧ್ಯದಲ್ಲಿ ಹಿಡಿದಿದ್ದ ಹಗ್ಗವನ್ನು ಎಮ್ಮೆ ಜಗ್ಗಿಸಿದುದರಿಂದ ಕೈ ಹತ್ತರಿ ಕೊಟ್ಟಂತೆ ಆಯಿತು (ಜಸ್ಸಕ. ೪೭).

**ಹತ್ತರಿಹಿಡಿ** = ಉಜ್ಜು; ನಯಮಾಡು: ಕೀಸಿ ಹರಿತಮಾಡಿದ ಅಡಕೆಯ ದಬ್ಬೆಗಳಿಂದ ಹಂದಿಯ ಚರ್ಮವನ್ನು ಹತ್ತರಿ ಹಿಡಿವಂತೆ ಹೆರಸುತ್ತಿದ್ದರು (ಮಲಮ. ೪೫೫). **ಹತ್ತರಿಹೊಡೆ** = ಹತ್ತರಿಹಿಡಿ: ಅವನಿಗೆ . . . ಮರದ ತುಂಡುಗಳನ್ನು ಕುಯ್ದು ಕತ್ತರಿಸಿ ಕೆತ್ತಿ ಹತ್ತರಿಹೊಡೆದು ಅಭ್ಯಾಸವಾಗಿದ್ದಿತು (ಶಿವರಾ. ೫೯). [<— ಹಿಂ. ಹಥೌಡಾ, ಹಥೌಡಿ; ಮರಾ. ಹತೋಡಾ, ಹಾತೋಡಾ]

**ಹತ್ತರ₁** 'ಪತ್ತಿರ' ನೋ.

**ಹತ್ತರ₂** 'ಪತ್ತಿರೆ' ನೋ.

**ಹತ್ತರಸ** (ನಾ). ಮಂದವಾದ ರಸ; ಗಟ್ಟಿರಸ: ಅತ್ತರದ ಮೇಲುಂಡೆಬದನೆ ಗಾಯ್ಗಳನಿಟ್ಟು . . . ಮತ್ತಮಾ ಕಾಯ್ಗಳಂ ಸೀಳಿಕೊಂಡವಚಲ್ಲಿ ಉತ್ತಮದ ಸಂಭಾರಮಿಕ್ಕಿ ತಾಳಿಸಿ ಕೆಲವ ಹತ್ತರಸಮಾದ [ಪಾಠಾಂ. ರಸದ] ಕೊಣಬಿನೊಳಿಕ್ಕಿ ಒಗ್ಗರಿಸೆ ಮಧುರವ್ಯಂತಾಕಪಾಕ (ಸೂಪಶಾ. ೪-೧೪). [< ಪತ್ತು₁ + ರಸ]

**ಹತ್ತರಿ** 'ಹತ್ತಡಿ' ನೋ.

**ಹತ್ತರಿಕೆ** (ನಾ). ಒಂದು ಬಗೆಯ ಸೊಪ್ಪು: ಗುರುಗುಂಜಿಯ ಕಳ್ಳಿಯ ಹತ್ತರಿಕೆಯ ಚೀಲ್ಕೆತಮಂಬಿವನಿತಱ ಬೇರೊಳ್ ದೊರೆಕೊಂಡುದೊಂದನಣಲೊಳ್ ಧರಿಯಿಸಿದೊಡೆ ಪಲ್ಲ ಪುಟುಗಳೆಲ್ಲಂ ಕಿಡುಗುಂ (ಲೋಕೋಪ. ೯-೬೫); ಹತ್ತರಿಕೆಯ ರಸಮೊಂದಂ ಮತ್ತಂ ಮಧುಯುಕ್ತಮಾಗಿ(ಗೆ) ಪೂಸಲೊಡಂ ಪಲ್ಲೊತ್ತಿದ ಪುಣ್ಗಳ್ . . . ಮಾಣ್ಗುಂ (ವಿಮದ. ೧೩-೧೦); ಹತ್ತರಿಕೆ ಪಲ್ಲೆ ಜೋಳದ ಹೊಲದಲ್ಲಿ ಬೆಳೆಯುತ್ತದೆ (ರೂಢಿ). 'ಹಕ್ಕರಿಕೆ' ಪರಾ. [?]

**ಹತ್ತವಸ** (ನಾ). ಒಂದು ಬಗೆಯ ಅಲಂಕಾರವಸ್ತು: ತೋಳ ಕಡೆಯದ ಪೊಂಗಿಱುಗೆಜ್ಜೆಗಳಿಂ ಪಳಚ್ಚನಪ್ಪ ಹ[ಪಾಠಾಂ. ಹು]ತ್ತವಸದ ತೊಡೆಗಳೊಳಮರ್ಚಿದ ಸೌವರ್ಣದ ಸವಗಂಗಳ ಸುಚ್ಚವಿಯ ಮೊಚ್ಚೆಯಂಗಳಪ್ಪ ಪ್ರಭೆಗಳ್ ಪಲವುಂ ಬಣ್ಣದ ಪರಿವೇಷಮಂ ಪಡೆಯೆ (ಮಹಾನೀ. ೧೨-೩೨ ವ). [?]

**ಹತ್ತಸರ** (ನಾ). ಕೊರಳಿಗೆ ಒತ್ತಿಕೊಂಡಿರುವಂತೆ ಧರಿಸುವ ಒಂದು ಬಗೆಯ ಆಭರಣ, — ಕಂಠಾಭರಣ: ಹತ್ತಸರದ ಬೆಳ್ಮಣಿಯನಭಿನ್ನತವೆತ್ತು ಸರಾಗದಿ ಕಟ್ಟಿದ ವಿಲಸದ್ವೃತ್ತಪಯೋಧರಯುಗಳೆಯ ನುಣ್ಗೊದಲತಿ ವಿಭ್ರಾಜಿಸಿತು (ಜಯಕಾ. ೫-೧೩); ಮುತ್ತಿನ ಹತ್ತಸರ ಕಂಠಮಾಲೆ ಮೂಗುತಿಯ ಸರಸಿಜಾಕ್ಷಿಯರು . . . ಚರಿಸುವರಾ ಬೀದಿಯೊಳಗೆ (ಕಂಠವಿ. ೬-೧೦೨). [< ಪತ್ತು₂ + ಸರ₂]

**ಹತ್ತಸು** (ನಾ). ಶೇಕಡ ಹತ್ತರಷ್ಟು ತೆರಿಗೆವಿನಾಯಿತಿ ಉಳ್ಳ ಭೂಮಿ (?): ಭೂಮಿಯಂ ಮಾಱುಗೊಣ್ಡು . . . ನೂಱಿರ್ಪ್ಪತ್ತು ಮತ್ತಮೆದಱ ಹತ್ತಸಿನ ತನ್ನ ಬಳದೊಳಗೆ ಬರ್ಮ್ಮಯ್ಯಂ ವಿದ್ಯಾದಾನಕ್ಕೆ ಕೊಟ್ಟ ಮತ್ತರ್ಪ್ಪನ್ನೆರಡು (ಸೌಇಇ. IX-i, ೧೦೪-೦೯; 1046). 'ಪನ್ನಸು' ಪರಾ. [< ಪತ್ತು₂]

**ಹತ್ತಳ, ಹಥಳ** (ನಾ). ೧. ಒಂದು ಬಗೆಯ ಆಯುಧ: ಪರಶು ಪಿಂಡಿವಾಳಂ ವಜ್ರಮುಷ್ಟಿ ಹತ್ತ[ಪಾಠಾಂ. ತ್ತೊ]ಳ ಮುದ್ಗರ . . . ಎಂಬ ಕೈದುವಂ ಹಿಡಿದು ಕಾಲಾಳ್ಗಳೋವದೆ ನೆರೆದುದು (ಸೋಮಚ. ೫-೨೭); ಝಡಿವ ದೂಹತ್ತಿಗಳ ಹಾಯಿಕಿ ಹಿಡಿವ ಲೌಡಿಯ ಹತ್ತಳದ ತನಿಗಡಣಿಗರು ಮೂದಲಿಸಿ ಕವಿದುದು ರಾಯರಾವುತರು (ಕುಮಾರಾಭೀ. ೪-೫೫); ಕನ್ನಗತ್ತಿ ಕೈವಲೆಯಲಗು ಮಾಸಿದುಡುಪಿನ ಹತ್ತಳವ ಹವಣಿಸುತ ಪರಮ ಪದದಂತೆ (ಸಿಂಗಿರಾ. ೧೭-೬). ೨. (ಹುರಿ ಅಥವಾ ಚರ್ಮದ ಪಟ್ಟಿಯನ್ನು ಕಟ್ಟಿ ಮಾಡಿದ) ಹೊಡೆಯುವ ಸಾಧನ; ಬಾರುಗೋಲು; ಚಾವಟಿ: ಬಿಳಿಯ ಚೌರಿಯ ಹೊಚೆಗಳುರು ಹತ್ತಳದ ಕಟ್ಟಿಗೆ ಬೇಂಟೆಗಳ ಹದವಿಲು ತದೀಯ ಶರಾಳಿಗಳ ತಂದಿಳುಹಿದರು ಚರರು (ಕುಮಾರಾಸ. ೫-೪೭); ಮತ್ತೆ ಪೋಹಿದವೆರಡು ರಥ ಕೆಂಪೊತ್ತಿದಿನನುದಯದಲಿ ಸೂತನ ಹತ್ತಳದ ಹೊಯ್ಲಿನಲಿ ಹೊಳಕಿದವಶ್ವವೆಡಬಲಕೆ (ತೊರರಾ. ೬-೫೦-೧). **ಹಥಳ:** ೨. ಸಬಳದ ಸೆಲ್ಲಹದ ಕುಂತದ ಹಥಳದ ಕುದುರೆ ಗಾಳಿಗದ ಬೀಣನಣದೊಳು(೦)ನ್ನತಿಕೆವಡೆದ ಸುಭಟಸವಾರಿ ಚೂಡಾರತ್ನ (ಸೌಇಇ. IX-i, ೩೪೩-೨೦; 1226). [? ./ ಪ್ರಾ. ಹತ್ಥಲ = ಆಟಕ್ಕಾಗಿ ಕೈಯಲ್ಲಿ ಹಿಡಿದಿರುವ ವಸ್ತು]

**ಹತ್ತಾಹತ್ತಿ** (ನಾ). ಕೈ ಕೈ ಸೇರಿಸಿ ಮಾಡುವ ಜಗಳ, — ಕಾದಾಟ: ಹಿಡಿದರಿಬ್ಬರು ಕೈಗಳನ್ನು ಹೊಕ್ಕೊಡನೆ ಹತ್ತಾಹತ್ತಿಯಲಿ (ಕುಮಾರಾಅ. ೭-೨೭); ಒಬ್ಬರೊಬ್ಬರ ಕರತಳವ ಕರತಳಕಿಡುವ ಬಂಧುರದ ಹತ್ತಾಹತ್ತಿಯಲಿ ಕೆಣಕಿದರು ಕಾಳೆಗವ (ಅಕ್ರೂಚ. ೭-೬೦). [< ಪ್ರಾ. ಹತ್ಥಾಹತ್ಥಿ ./ ಸಂ. ಹಸ್ತಾಹಸ್ತಿ]

**ಹತ್ತಿ₁** 'ಪಟ್ಟಿ' ನೋ.

**ಹತ್ತಿ₂** (ನಾ). ಗುಂಪು; ವರ್ಗ: ಕೊಡಗೆಯ್ಯ ಇಪ್ಪತ್ತನಾಲ್ಕನೆಯ ಹತ್ತಿಯಲ್ಲಿ ಇಱಿಸಲ್ ಗಟ್ಟೆಸಹಿತಂ ಮತ್ತರಯ್ದು (ಎಇ. XIII, ೨೧-೪೨; 1204). [<— ತಮಿ. ಪತ್ತಿ]

**ಹತ್ತಿಎಲೆಹರಳು** (ನಾ). ಒಂದು ಬಗೆಯ ಸಸ್ಯ: ಚಿಕ್ಕಕಾಡುಹರಳು, ಹತ್ತಿ ಎಲೆಹರಳು (ಮೃಷಿಗಿ. ೪೮-೯೪೫). [ಹತ್ತಿ₁ (< ಪಟ್ಟಿ) + ಎಲೆ₁ + ಹರಳು (< ಪರಲ್)]

**ಹತ್ತಿಕಾಯಿ** (ನಾ). ೧. ಹತ್ತಿಯ ಕಾಯಿ: (ಕ). ೨. ಹತ್ತಿಕಾಯಿಯ ಆಕಾರದಲ್ಲಿ ಕರಿದು ತಯಾರಿಸಿದ ಒಂದು ಭಕ್ಷ್ಯ: ಪಕೋಡ ಇವೆ, ಹತ್ತಿಕಾಯಿ ಇವೆ (ರೂಢಿ). [ಹತ್ತಿ₁ (< ಪಟ್ಟಿ) + ಕಾಯಿ₁ (< ಕಾಯ್₄)]

**ಹತ್ತಿಕಾಳು** (ಕ್ರಿ). ಹತ್ತಿಯಿಂದ ತೆಗೆದ ಬೀಜ: ಹತ್ತಿಕಾಳು ದನಗಳಿಗೆ ಒಳ್ಳೆಯ ಆಹಾರ (ರೂಢಿ). [ಹತ್ತಿ₁ (< ಪಟ್ಟಿ) + ಕಾಳು₂ (< ಕಾಟ್₂)]

**ಹತ್ತಿಕ್ಕು** (ಕ್ರಿ). ೧. ಹತ್ತಿರಕ್ಕೆ ಸೇರಿಸು; ಒರಗಿಸು: ಖುರ್ಚಿಯ ಬೆನ್ನಿಗೆ ತನ್ನ ಬೆನ್ನನ್ನು ಹತ್ತಿಕ್ಕಿ ಖುರ್ಚಿಯ ಹಿಂಗಾಲುಗಳ ಮೇಲೆ ತನ್ನನ್ನು ತೂಗಿಕೊಳ್ಳಹತ್ತಿದ (ಪ್ರೇಮತ. ೨). ೨. ಅಧೀನದಲ್ಲಿಡು; ಅಂಕೆಯಲ್ಲಿಟ್ಟುಕೊಳ್ಳು: ತುಟಿಯವರೆಗೆ ಬಂದಿದ್ದ ಬೈಗಳನ್ನು ಹಾಗೆಯೇ ಹತ್ತಿಕ್ಕಿ ಮುಖ ತೊಳೆದುಕೊಳ್ಳಲು ಕೆಳಗೆ ಹೋದೆ (ಚಂದುಟ. ೮೬); ಹತ್ತಿಕ್ಕಿದರೂ ಉಕ್ಕಿಬರುವ ಕಣ್ಣೀರುತುಂಬಿದ ಕಣ್ಣುಗಳಿಂದ ಮಗಳತ್ತ ನೋಡಿದ (ಬೆನ್ನುಹಿಂ. ೨೧). [ಹತ್ತೆ$_2$(< ಪತ್ತೆ$_1$ ) + ಇಕ್ಕು]

**ಹತ್ತಿಗ** 'ಪತ್ತಿಗ$_1$' ನೋ.

**ಹತ್ತಿಗಿಡ** (ನಾ). ಹತ್ತಿಯನ್ನು ಬಿಡುವ ಗಿಡ; ಅರಳೆಗಿಡ: ಹತ್ತಿಗಿಡದ ಕೊನೆ ಹಗೆಯಾಗಿ ಬಿಡದ ಮೇಲಿನ್ನೇನಿನ್ನೇನು (ಪುರಂದ ೨-೩೬-೧).

[ಹತ್ತಿ$_1$ (< ಪಟ್ಟಿ ) + ಗಿಡ (< ಗಿಡು )]

**ಹತ್ತಿಗೆ$_1$** 'ಪತ್ತುಗೆ' ನೋ.

**ಹತ್ತಿಗೆ$_2$** 'ಪತ್ತಿಗೆ$_3$' ನೋ.

**ಹತ್ತಿಗೆ$_3$** (ನಾ). ಒಂದು ಬಗೆಯ ಸಸ್ಯ: "ಅಕ್ಷಿಕಾ – ಹತ್ತಿಗೆ; ಅಬಿಳವಾಳಲು; ನುಲಿಗನಕಾಯಿ" (ಓಷಧಿ. ೪). [?]

**ಹತ್ತಿಡು** (ಕ್ರಿ). ೧. = ಹತ್ತಿಕ್ಕು ೧: ಮನಮುಟ್ಟಿ ಮಸ್ತಕದಿ ಹತ್ತಿಟ್ಟು ನುತಿತತಿಗಳಿಂ ಪೊಗಳ್ದನಾ ಚಂದ್ರಧರನಂ (ಮಲ್ಲಾರಿ.೯-೧೦). ೨. = ಹತ್ತಿಕ್ಕು ೨: ಆತನನ್ನು ಮುತ್ತಿ ಹತ್ತಿಡಲು ಹವಣಿಸಬಹುದು (ಮೋಳಿಮಾ.೧೮ ಪ್ರಸ್ತಾವನೆ); ಲೆಕ್ಕದ ಮೊತ್ತ ಅದೆಷ್ಟು ಹತ್ತಿಟ್ಟು ಬಿಗಿಹಿಡಿದರೂ ಚಾರುಲತೆಯ ಕೈವೆಚ್ಚದ ಸೊತ್ತಿನಲ್ಲಿ ಹಿಡಿಸಲೊಲ್ಲದು (ಇಪ್ಪಕ. ೨೨೦).

**ಹತ್ತಿಟ್ಟುಕೊಳ್ಳು** = ಹತ್ತಿಕ್ಕು ೨: ತುಳಸಿಯ ಸುದ್ದಿಯನ್ನು ಹೇಳಬೇಕೆಂಬ ಇಚ್ಛೆಯನ್ನು ರಘುನಿಯಾನ ತಾಯಿ ಬಹಳ ದಿವಸದವರೆಗೆ ಹತ್ತಿಟ್ಟುಕೊಂಡಿದ್ದಳು (ಜಮಿನ್ದಾ. ೭೪). [ಹತ್ತೆ$_1$ (< ಪತ್ತೆ$_1$ ) + ಇಡು$_1$]

**ಹತ್ತಿಬೀಜ** (ನಾ). = ಹತ್ತಿಕಾಳು: ಹತ್ತಿಬೀಜ ದನಗಳಿಗೆ ಒಳ್ಳೆಯ ಆಹಾರ (ರೂಢಿ).

[ಹತ್ತಿ$_1$ (< ಪಟ್ಟಿ) + ಬೀಜ ]

**ಹತ್ತಿರ$_1$** 'ಪತ್ತಿರ' ನೋ.

**ಹತ್ತಿರ$_2$** 'ಪತ್ತಿರೆ' ನೋ.

**ಹತ್ತಿರು** 'ಪತ್ತಿರ' ನೋ.

**ಹತ್ತಿರೆ$_1$** 'ಪತ್ತಿರ' ನೋ.

**ಹತ್ತಿರೆ$_2$** 'ಪತ್ತಿರೆ' ನೋ.

**ಹತ್ತಿಲ** 'ಪತ್ತಿರ' ನೋ.

**ಹತ್ತಿಸು** 'ಪತ್ತಿಸು' ನೋ.

**ಹತ್ತಿಹರಳು** (ನಾ). = ಹತ್ತಿಕಾಳು: ಮಹಾಕಾರ್ಪಾಸಚೂಣ: – ಹುರಿದ ಹತ್ತಿಹರಳ ಬೀಜ ಗ ೩ ತೂಕ . . . ಚೂರ್ಣಂ ಮಾಡಿ ಸಮಸಕ್ಕರೆವೆರಸಿ ಉದಯದಲ್ಲಿ . . . ಸೇವಿಸಲು ಪೈತ್ಯರೋಗ . . . ಮುಂತಾದ ಸಕಲ ರೋಗವೂ ಗುಣಮಕ್ಕುಂ (ಸಕವೈ. ೧೪೫).

[ಹತ್ತಿ$_1$ (< ಪಟ್ಟಿ ) + ಹರಳು (< ಪರಲ್)]

**ಹತ್ತಿಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಮೈಔಗಿ. ೪೫-೮೯೫).

[ಹತ್ತಿ$_1$ (< ಪಟ್ಟಿ ) + ಹುಲ್ಲು(< ಪುಲ್ )]

**ಹತ್ತು$_1$** 'ಪತ್ತು$_1$' ನೋ.

**ಹತ್ತು$_2$** 'ಪತ್ತು$_3$' ನೋ.

**ಹತ್ತುಕಡಕು** 'ಹತ್ತುಕಡುಕು' ನೋ.

**ಹತ್ತುಕಡುಕು, ಹತ್ತಕಡಕು, ಹತ್ತಕಡುಕು, ಹತ್ತುಕಡಕು** (ನಾ). (ಕಿವಿಯಲ್ಲಿ ಧರಿಸುವ) ಮಧ್ಯದಲ್ಲಿ ಹರಳು ಅಥವಾ ಮುತ್ತು ಇರುವ ಒಂದು ಆಭರಣ: ಒಬ್ಬಳು ಒಳ್ಳೆ ಶೀರೆಯನ್ನು ಉಟ್ಟಿದ್ದಾಳೆ. ಒಳ್ಳೆ ಮೌಲ್ಯದ ಹತ್ತುಕಡುಕು ಸರಗಳನ್ನು ಧರಿಸಿದ್ದಾಳೆ (ನಿಷ್ಕಾಮ. ೧೪). **ಹತ್ತಕಡಕು:** ಮುತ್ತಿನ ನೀಲದ ರನ್ನದ ಚೆಲ್ವಿನ ಹತ್ತಕಡಕು ರಾಜಿಸಲು (ನಾಗಕು. ೬-೫೦); ಈಗಲೂ ಸಹ ಕಿವಿಯಲ್ಲಿ ಹತ್ತಕಡಕು,ಒಂಟಿ, ಬಟ್ಟುಗಳನ್ನುಳ್ಳ ಜನ ಅಪರೂಪವಾಗಿ ಸಿಗಬಹುದು (ನಂಜುಂಡ. ೧೨೮). **ಹತ್ತಕಡುಕು:** ವಂಟಿ ಚವುಕುಳಿ ಹತ್ತಕಡುಕು ವುಂಗುರವು (ಕೃಷ್ಣವಿ. ೨-೪೫); ಒಬ್ಬನ ಕಿವಿಯಲ್ಲಿ ಒಂಟಿ ಇತ್ತು, ಮತ್ತೊಬ್ಬನ ಕಿವಿಯಲ್ಲಿ ಸಣ್ಣ ಹತ್ತಕಡುಕು ಇತ್ತು (ಕಥಾಮಂ. IV, ೯೧). **ಹತ್ತುಕಡಕು:** ಕಿವಿಯಲ್ಲಿದ್ದ ಹತ್ತುಕಡಕುಗಳಿಂದ ಅದು ಬಕ್ಕಪ್ಪನದೇ ಎಂದು . . . ಬಾಯಿಕಟ್ಟಿದರು (ನನ್ನೂರು. ೨೧೦).

[< ಪತ್ತು$_2$ + ಕಡುಕು$_3$]

**ಹತ್ತುಗಡೆ, ಹತ್ತಗಡೆ** (ನಾ). ಅಂಟಿರುವುದು; ಹತ್ತಿರದ ಸಂಬಂಧ; ಬಾಂಧವ್ಯ: ಜೀವನಕ್ಕೂ ನಮಗೂ ಅದಾವ ಹತ್ತುಗಡೆ ಎಂದು ನಾವು ಮರಣಕ್ಕೆ ಹೆದರಿಕೊಳ್ಳಬೇಕು (ಇಪ್ಪಕ. ೪೩೨); ಆ ಹೆಣ್ಣುಮಕ್ಕಳ ಹತ್ತುಗಡೆಯವರೆಲ್ಲ ಒಳಗೊಳಗೇ ತುಂಬ ಸಂತಾಪಗೊಂಡರು (ಜನಜೀ. ೧೨೦). **ಹತ್ತಗಡೆ:** ನಾನು ರಣದುಲ್ಲಾಖಾನರನ್ನು ನೋಡಬೇಕಾಗಿದೆ. ನಾನು ಅವರ ಹತ್ತಗಡೆಯವಳು (ಧಾರ್ಮಿತೇ. ೩೬). [< ಪತ್ತು$_2$ + ಕಡೆ$_3$]

**ಹತ್ತುಗೆ** 'ಪತ್ತುಗೆ' ನೋ.

**ಹತ್ತುಗೋಂಟೆ** (ನಾ). ಹೊಂದಿಕೊಂಡಿರುವ ಕೋಟೆ (?): ಕೋಂಟೆಗೆ – ತಟಿಗೋಂಟೆ, ಧೂಳಿಕೋಂಟೆ, ಹತ್ತುಗೋಂಟೆ, ಹೆಡಗೆಗೋಂಟೆ (ಶಮದ. ೨೯೮ ಪ್ರಯೋ).

[< ಪತ್ತು$_2$ + ಕೋಂಟೆ]

**ಹತ್ತುಮಿನು** (ನಾ). ಒಂದು ಬಗೆಯ ಮೀನು: ಹಿಂದೆ ಕಾಣಿಸಿದ್ದ ಹತ್ತುಮಿನು ಕಡಿಯಲು ಹೊರಟವರ ಕೈಬೆಳಕುಗಳೊಂದೂ ತೋರಲಿಲ್ಲ (ಮಲೆಮ. ೮).

[ಹತ್ತು$_?$ + ಮೀನು$_2$(< ಮೀನ್$_2$ )]

**ಹತ್ತೆ$_1$** (ನಾ). ೧. ಹತ್ತಿರ; ಸಮೀಪ: ಜನರ ಗುಂಪು ಮತ್ತಷ್ಟು ಅದನ್ನು ಹತ್ತೆಯಾಗಿ ಮುತ್ತಿ ತಮ್ಮ ವರ್ತುಳವನ್ನು ಸಣ್ಣದು ಮಾಡಿತು (ಮೇದಿಮ. ೧೪೬). ೨. (ಅಳತೆಗೆ) ಚಿಕ್ಕದು; ಬಿಗಿಯಾದುದು: ನೋಡು; ಬೂಟು ಹತ್ತೆಯಾದಾವು (ಪವನ. ೧೩). ೩. ಮಲ್ಲಯುದ್ಧದಲ್ಲಿಯ ಒಂದು ಪಟ್ಟು,– ವರಸೆ: ಮಲ್ಲತನಮೊಲ್ಲದೆ ದಾನಕದೊಳ್ಪೊದಟ್ಪೊಡಾಂ ಪಿಡಿದುದೆ ಕತ್ತರಂ ಕರವಳಂ ಸೆರವಟ್ಟಣೆ ಹತ್ತೆ ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದಣುವಟ್ಟೆ ಪಟ್ಟಿಸಂ (ಅನಂಪು. ೨-೨೭).

[< ಪತ್ತು$_2$]

**ಹತ್ತೆ$_2$** 'ಪತ್ತೆ$_1$' ನೋ.

**ಹತ್ತೆಗಟ್ಟು$_1$, ಹತ್ತಕಟ್ಟು$_1$, ಹತ್ತಗಟ್ಟು$_1$** (ಕ್ರಿ). (ಕೊರಳಿಗೆ ಹತ್ತಿದಂತೆ)ಬಿಗಿಯಾಗಿ ಕಟ್ಟು: ಹತ್ತೆಗಟ್ಟಿದ ಕಂಠಮಾಲೆ ಕಡುಕುಂಗುರಂ (ಲಿಂಗಪು.೨೯-೧೪). **ಹತ್ತಕಟ್ಟು$_1$:** ನಿನ್ನ ಕಾಲಿಗೆ ಎನ್ನ ಕೊರಳ ಹತ್ತಕಟ್ಟುವೆ (ಪುರಂದ. ೪-೬-೨). **ಹತ್ತಗಟ್ಟು$_1$:** ಅತ್ತ ಇತ್ತಲಿ ನೋಡಿನ್ನೆತ್ತ ಪೋಗಲಿ ನಿನ್ನ ಚಿತ್ತದಲಿ ಹತ್ತಗಟ್ಟಿಕೊಂಬೆ (ಪುರಂದ. ೫-೯೦-೪).

[ಹತ್ತೆ$_2$ (< ಪತ್ತೆ$_1$ ) + ಕಟ್ಟು$_1$]

**ಹತ್ತೆಗಟ್ಟು$_2$, ಹತ್ತಕಟ್ಟು$_2$, ಹತ್ತಗಟ್ಟು$_2$** (ನಾ). (ಕೊರಳಿಗೆ) ಹತ್ತಿಕೊಂಡಂತೆ ಕಟ್ಟಿಕೊಳ್ಳುವ ಸರ: ಮದಕುಂಭಿಕುಂಭದೊಳೊಗೆದ ತೋರಮುತ್ತಿನ ಹತ್ತೆಗಟ್ಟನೆಸೆವ ತೊಳಪ ದಂತದ ಕನ್ನವುರ (ಸೌಂದಪು. ೧೮-೩೬); ಮುಕ್ತಾನಿಚಯದಿಂದ ಸಂಘಟಿತ ಸುರುಚಿರದ ಹತ್ತೆಗಟ್ಟು ಮುಂತಾದುವಂ ತೊಡಿಸಿದಳ್ ಚೆಚ್ಚರದಲಿ (ವೆಂಕಾರಾ. ೧-೨೧-೫೬). **ಹತ್ತಕಟ್ಟು$_2$:** ಕೊರಳೊಳೊಪ್ಪುವ ಹತ್ತಕಟ್ಟಿನ ಮೌಕ್ತಿಕಸರ ಹರಿದೊಕ್ಕುವತ್ತಿತ್ತ (ಭರಚ. ೧೮-೭೩). **ಹತ್ತಗಟ್ಟು$_2$:** ಕೊರಲ ಮುತ್ತಿನ ಹತ್ತಗಟ್ಟು ಮಾಣಿಕ್ಯದ ಸರವೆನಿಸಿಹುದು (ನಾಗಕು. ೨೬-೪೩). [ಹತ್ತೆ$_2$ (< ಪತ್ತೆ$_1$ ) + ಕಟ್ಟು$_2$]

**ಹತ್ತೆಗಡಿ** (ಕ್ರಿ). ಸಮೀಪದಿಂದ ಕತ್ತರಿಸು: ಮಿಸೆಗಡಿದೌಡೊತ್ತಿ ಸೆಳೆದನು ಶರವನೆಚ್ಚನು ಪವನನಂದನನ ಹತ್ತೆಗಡಿದನು (ಕುವ್ಯಾದ್ರೋ. ೧೮-೪೨). [ಹತ್ತೆ$_2$ (< ಪತ್ತೆ$_1$ )+ ಕಡಿ$_2$]

**ಹತ್ತೆಬರು** (ಕ್ರಿ). ಹತ್ತಿರಕ್ಕೆ ಬರು; ಸಮೀಪಕ್ಕೆ ಆಗಮಿಸು: ಇತ್ತಲಿರ್ದಾ ಭಕ್ತರುಗಳು . . . ಮುದವೆತ್ತಿ ತಾನುಂ ಚನ್ನಬಸವಂ ಹತ್ತೆಬರೆ ನಡೆತಂದರಾ ಉಳುವೆಯ ಮಹಾಮನೆಗೆ (ಬಸಪು. ೬೧-೭೪). [ಹತ್ತೆ$_2$ (< ಪತ್ತೆ$_1$ ) + ಬರು(< ವರ್)]

**ಹತ್ತೆವಿಡಿ** 'ಪತ್ತೆವಿಡಿ' ನೋ.

**ಹತ್ತೆಸಾರ್** 'ಪತ್ತೆಸಾರ್' ನೋ.

**ಹತ್ತೆಸಾರು** 'ಪತ್ತೆಸಾರ್' ನೋ.

**ಹತ್ತೆಸೇರು** (ಕ್ರಿ). ಹತ್ತಿರಕ್ಕೆ ಹೋಗು; ಬಳಿಸೇರು: ಹರಿದುಬಂದು ಹತ್ತೆಸೇರಿದ ಬಸವನ ಮಹಾಮನೆಯ ತಲೆ ಎತ್ತಿ ನೋಡಿದ ಮುಗಿಲ ಮೂಲೆದಪ್ಪದೆ (ಶೂನ್ಯಸಂ. ೩೧೫-೧೯); ಋಷಿಶಾಪಮಂ ಮಱೆದೆಯಾ ಜಗದಿ ಸತ್ತ ಕನಸಂ ಕಾಣಲೆದ್ದು

ಕುಳ್ಪಿರ್ಪರೆಂಬಾ ಗಾದೆಯನಱಿಯೆಯಾ ಹತ್ತೆಸೇರದಿರೆಂದು ಚರಣಕಿಙ್ಗಲ್ (ಲಕ್ಷ್ಮ.ಭಾ. ೧-೨೭-೧೨). [ಹತ್ತೆ$_2$ (< ಪತ್ತೆ$_1$) + ಸೇರು$_1$ (< ಸೇರ್)]

**ಹತ್ತೆಹಿಡಿ** 'ಪತ್ತೆವಿಡಿ' ನೋ.

**ಹತ್ತೆಹೊದ್ದು** (ಕ್ರಿ). = ಹತ್ತೆಸೇರು: ಇತ್ತ ಬಾ ಎನ್ನದವನ ಹತ್ತೆಹೊದ್ದಲುಬೇಡ (ದೇವಾವ. ೨೮-೪೮). [ಹತ್ತೆ$_2$ (< ಪತ್ತೆ$_1$) + ಹೊದ್ದು$_1$ (< ಪೊರ್ದು)]

**ಹತ್ಯ** (ನಾ). ಕೊಲ್ಲುವಿಕೆ; ಸಂಹಾರ; ಹತ್ಯೆ. [ಸಂ.]

**ಹತ್ಯಾಕಾಂಡ** (ನಾ). ೧. ಕೊಲ್ಲುವಿಕೆಯ ಪ್ರಸಂಗ; ಹತ್ಯೆಯ ಪ್ರಸಂಗ. ೨. (ಆಲಂ) ಸರ್ವನಾಶ: ಹತ್ಯಾಕಾಂಡವಾರಂಭಿಸಲು . . . ಕ್ಷಣಕ್ಷಣವನ್ನೂ ಎಣಿಸುತ್ತಿದ್ದ ರಾಜಂ ತಂದೆಯ ಚಿತ್ರ ಸ್ವಾಮಿಯ ಮನಸ್ಸಿನ ಮುಂದೆ ನಿಂತಿತು (ಸ್ವಾಮಿಸ್ನೇ. ೧೨೨); ಈ ಸಾಮೂಹಿಕಹತ್ಯಾಕಾಂಡದಲ್ಲಿ ತನ್ನ ಇಸ್ತ್ರಿಕಲ್ಲಿಗೂ ಅಷ್ಟೇ ಶ್ರೇಯಸ್ಸುಂಟು ಎಂದು ಅದರ ಅರ್ಥವಿದ್ದೀತು (ದೇಶನ್ನ. ೩೨). [ಸಂ.]

**ಹತ್ಯಾರ್** 'ಹತ್ಯಾರು' ನೋ.

**ಹತ್ಯಾರ** 'ಹತ್ಯಾರು' ನೋ.

**ಹತ್ಯಾರು, ಹತಾರ, ಹತಾರು, ಹತಿಯಾರು, ಹತ್ಯಾರ್, ಹತ್ಯಾರ** (ನಾ). ಕತ್ತಿ, ಖಡ್ಗ, ಬಂದೂಕು, ತುಬಾಕಿ ಮೊದಲಾದ ಆಯುಧ; ಶಸ್ತ್ರ: ಆ ಯರಡಜನ ಚೇಲೇರ ಕೈಯ ಇದ್ದ ಹತ್ಯಾರು: ಚಕಮುಕಿ ಬಂದೂಕು ಯರಡು (ರಾಜೇಂದ್ರ. ೫೭); ಅವೊತ್ತೆಲ್ಲ ನಾಯಕನು ಹತ್ಯಾರುಗಳ ಜೊತೆಯಲ್ಲಿದ್ದನು (ಮಲ್ಲಿ. ೫೫). **ಹತಾರ:** ಹೆಚ್ಚಿನ ಹತಾರ ಮುಚ್ಚಿಟ್ಟರು (ಕನ್ನಜಾ. ೮೬); ನಾವು ತುರುಗಾಹಿಗಳು ಹತಾರ ಸಹಿತವಾಗಿ ಕವಳ ಕುಡುಗೋಲು ಗೊಂಗಡಿ ತೆಗೆದುಕೊಂಡು ಹಿಂಬಾಲಿಸಿಕೊಂಡು ಹೋಗುವೆವು (ಸುವಸಂ. ೬೬). **ಹತಾರು:** ಆಳುಗಳು ಹತಾರುಗಳನ್ನು ಹಿಡಿದು ನೆಟ್ಟಗೆ ನಿಂತು ನೋಡಿದರು (ಕಾನೂರು. ೧೮೧); ಹಾರೆ ಕತ್ತಿ ಸಮೆಗೋಲು ಮೆಟ್ಟುಗತ್ತಿ ಮುಂತಾದ ಕದ್ದ ಹತಾರುಗಳನ್ನು ಕೊಟ್ಟು . . . ತಿಂಡಿಪದಾರ್ಥಗಳನ್ನು ತೆಗೆದುಕೊಂಡು ಹೋಗತೊಡಗಿದರು (ಮಲೆಮ. ೪೪೩). **ಹತಿಯಾರು:** ಓರೆಯಲ್ಲಿದ್ದ ಹತಿಯಾರಿಂದಲೇ ಒಬ್ಬಿಬ್ಬರಿಗೆ ಹೊಡೆದಿರುವುದಾಗಿಯೂ . . . ಹೇಳಿದರು (ಸಕತ. ೮೩). **ಹತ್ಯಾರ್:** "ಹತ್ಯಾರ್, ಮಂತ್ರಶಕ್ತಿಯುಳ್ಳ ಆಯುಧಗಳಾದ ಅಸ್ತ್ರಗಳಿಗೂ, ಬಾಣ ಕತ್ತಿ ಪಿರಂಗಿ ಮುಂತಾದ ಎಲ್ಲಕ್ಕೂ ಹೆಸರುಗಳು" (ಸಿದ್ಧಾಂತಿ. ೨೮೨). **ಹತ್ಯಾರ:** ಕುಡುಗೋಲು ಕೊಡತಿ ದೊಣ್ಣೆ ಹಾರೆ ಮುಂತಾದ ಕೈಗೆ ಸಿಕ್ಕಿದ ಹತ್ಯಾರಗಳನ್ನು ಕೈಯಲ್ಲಿ ಹಿಡಿದಿರುವರು (ತುಂಗಭ. ೩೦); ಬಂದೂಕು, ಹತ್ಯಾರ ಎರಡೂ ತಾ (ಮೇದಿಮ. ೧೮).

[< ಪ್ರಾ. ಹತ್ಥಿಯಾರ್./ಮರಾ. ಹತ್ಯಾರ್, ಹತಿಯಾರ್, ಹತೇರ್; ಹಿಂ. ಹಥಿಯಾರ್]

**ಹತ್ಯೆ** (ನಾ). = ಹತ್ಯ: ಹತ್ಯೆಯೋ ಹನ್ಯತೆಯೊ ವಿಜಯವೋ ಪರಿಭವವೊ ಕ್ಷತ್ರಿಯಂ ಸ್ವಾರ್ಥಮಂ ಗಣಿಸುವನೆ ರಣದೊಳ್? (ಮಂಕುಕ. ೬೨೪). [ಸಂ. ಹತ್ಯಾ]

**ಹತ್ರ$_1$** 'ಪತ್ತಿರ' ನೋ.

**ಹತ್ರ$_2$** 'ಪತ್ತಿರೆ' ನೋ.

**ಹತ್ವ** (ನಾ). = ಹಕಾರ: ಥಕಾರಕ್ಕೆ ಹತ್ವಂ-ಗಾಥೆ-ಗಾಹೆ (ಶಮದ. ೨೫೭ ಪ್ರಯೋ). [ಸಂ.]

**ಹಥಳ** 'ಹತ್ತಳ' ನೋ.

**ಹದ** 'ಪದ$_1$' ನೋ.

**ಹದಗ** (ನಾ). ದೀಪದ ಹುಳು; ಪತಂಗ : ಹಣ್ಣೆಂದೆಱಗಿ ಹದಗಂಗಳು ಮಹಾಗ್ನಿಯಲೆಱಕೆ ಸೀದುರುಳ್ವಂತೆ (ನಿಭಾಗ. ೯-೭-೪೭). [< ಸಂ. ಪತಂಗ]

**ಹದಗಡಲೆ** (ನಾ). ಕಂಕುಳು, ತೊಡೆಸಂದು ಮೊದಲಾದ ಕಡೆಗಳಲ್ಲಿ ಎದ್ದು ನೋವು ಕೊಡುವ ಒಂದು ರೀತಿಯ ಗಂಟು; ಉಡುಚು: ಕುರುವು ಹದಗಡಲೆಗಳಿಂದ ಯಾರೂ ಸಾಯುವದಿಲ್ಲ (ಹೊಸಂಸಾ. ೯೮). [ಹದ (< ಪದ$_1$) + ಕಡಲೆ$_6$ (< ಗಳಲೆ)]

**ಹದಗಾತಿ** (ನಾ). (ಪ್ರೇಮದ) ಪಕ್ವತೆಯನ್ನು ತಿಳಿದವಳು,– ಹದವನ್ನು ಅರಿತವಳು; ಪ್ರೌಢೆ: ಹರೆಯ ಮೀರಿದ ಹದಗಾತಿ ತಲೆಯೊಳೊಂದು ನೆರೆಯಿಲ್ಲ (ಸೌಂದಕಾ. ೩-೫೨). [ಹದ (< ಪದ$_1$) + - ಕಾತಿ$_5$]

**ಹದಗಾಯಿ** 'ಪದಗಾಯಿ' ನೋ.

**ಹದಗಾರ** 'ಹದಗಾಱ' ನೋ.

**ಹದಗಾಸು** 'ಪದಂಗಾಸು$_1$' ನೋ.

**ಹದಗಾಱ, ಹದಗಾರ** (ನಾ). (ಪ್ರೇಮದ) ಪಕ್ವತೆಯನ್ನು ತಿಳಿದಿರುವವನು,– ಅರಿತವನು; ಪ್ರೌಢ: ವಿರಹಮಂ ತವಿಸಿ ನೆರೆಯೊ ಹದಗಾಱ ನೀನೆಮ್ಮನೆಂದಮರಿಯರ್ ಭ್ರಮೆಗೊಂಡರು (ಚೆಬಪು.೧೯-೬೭). **ಹದಗಾರ:** ಮುದದಿ ಸ್ತಿರಬಾಳು ಸತ್ಕದ ಹದಗಾರನು ವೀರ ತಿಂಮರಾಯ (ಎಕ. XII, ಪಾವಗ. ೪೬-೩೨; 1670). [ಹದ (< ಪದ$_1$) + - ಕಾಱ]

**ಹದಗಿಡು** 'ಪದಗೆಡು' ನೋ.

**ಹದಗುದಿ** (ನಾ). ೧. ಪಕ್ವವಾಗುವಂತೆ ಬೇಯುವಿಕೆ; ಹದಕ್ಕೆ ಬರುವ ಕುದಿ: ಊರಿನಲ್ಲಿ ಪಾಲುಹಾಕಿದರೆ ಎಂಟಾಣೆಗಿಂತ ಹೆಚ್ಚಾಗಿ ತರುತ್ತಿರಲಿಲ್ಲ. ತಂದುದರಲ್ಲಿ ಅರ್ಧವನ್ನು ಹದಗುದಿಯಲ್ಲೇ ರುಚಿ ನೋಡ್ತೀನಿ ಅಂತಲೋ . . . ನೆಪ ಹೇಳಿ ಮುಗಿಸಿಬಿಡುತ್ತಿದ್ದ (ನನ್ನೂರು. ೨೨೫). ೨. (ಆಲಂ) ಪ್ರಯತ್ನ; ತರದೂದು: ನಿನ್ನೇ ದಿನ ಹದವಾದ ಮಳೆಯಾಗಿದೆ. ಏನಾದರೂ ಹದಗುದಿಮಾಡಿ ಹೊಲ್ಕೆ ಕಾಳು ಬಿತ್ತೋದು ಬಿಟ್ಟು ಆಟಾ ಆಡಿ ಮಲಕೊಂಡವ್ರಲ್ಲಾ (ಹುಟ್ಟಹ. ೧೬೪). [ಹದ (< ಪದ$_1$) + ಕುದಿ$_1$]

**ಹದಗೆಂಪು** 'ಪದಗೆಂಪು' ನೋ.

**ಹದಗೆಡಿಸು** 'ಪದಗೆಡಿಸು' ನೋ.

**ಹದಗೆಡು** 'ಪದಗೆಡು' ನೋ.

**ಹದಗೆಯ್** 'ಪದಗೆಯ್' ನೋ.

**ಹದಗೈ** 'ಪದಗೆಯ್' ನೋ.

**ಹದಗೊಡು** 'ಪದಂಗೊಡು' ನೋ.

**ಹದಗೊಳಿಸು** 'ಪದಂಗೊಳಿಸು' ನೋ.

**ಹದಗೊಳ್ಳು** 'ಪದಂಗೊಳ್' ನೋ.

**ಹದಡ** 'ಪರಡು$_3$' ನೋ.

**ಹದಡಿ** 'ಪದಡೆ' ನೋ.

**ಹದಡು** 'ಪರಡು$_3$' ನೋ.

**ಹದಡೆ** 'ಪದಡೆ' ನೋ.

**ಹದತಪ್ಪು** 'ಪದಂದಪ್ಪು' ನೋ.

**ಹದದಂಬುಲ** (ನಾ). ರುಚಿಕಟ್ಟಾದ ತಾಂಬೂಲ; ಸವಿಯಾದ ವೀಳೆಯ: ಇದಿರ್ವಂದಮರ್ದಪ್ಪಿ ಬಾಯೊಳು ಬಾಯಿಟ್ಟು ಹದದಂಬುಲವನೀಸಿಕೊಂಡು (ನೇಮಿಸಂ. ೨೮-೯೬). [ಹದ (< ಪದ$_1$) + ತಂಬುಲ]

**ಹದದೋರೆ** (ನಾ). ಹದವಾದ ದೋರೆಕಾಯಿ: ಕಾಯ್ಬಳಗಮನೊಂದು ಕೊಂಬು ಹದದೋರೆಗಳೋಳಿಯನೊಂದು ಕೊಂಬು ಪಣ್ಗಳನೆಸೆವೊಂದು ಕೊಂಬು ತಳೆದಿಂತು ಮನೋಹರಮಾಯ್ತು ಮಾಮರಂ (ಕುಸುಮಾ. ೧೦-೧೫೫). [ಹದ (< ಪದ$_1$) + ದೋರೆ$_1$]

**ಹದನ್** 'ಪದ$_1$' ನೋ.

**ಹದನ** 'ಪದ$_1$' ನೋ.

**ಹದನಗೊಳಿಸು** 'ಪದಂಗೊಳಿಸು' ನೋ.

**ಹದನಱಿ** 'ಪದನಱಿ' ನೋ.

**ಹದನು** 'ಪದ$_1$' ನೋ.

**ಹದನುಗೊಳಿಸು** 'ಪದಂಗೊಳಿಸು' ನೋ.

**ಹದಬೆದೆ** (ನಾ). ಬಿತ್ತಲು ಯೋಗ್ಯವಾದ ಕಾಲ; ವ್ಯವಸಾಯಕ್ಕೆ ತಕ್ಕ ಕಾಲ: ಆ ಹೊಲನಂ ಹಸಮಾಡಿ ಬಿತ್ತುವ ಪರಿ ಇನ್ನಾವುದಯ್ಯಾ ಎಂದೊಡೆ ನಾದಬಿಂದು ಕಳೆ ಮಳೆಗಾಲದ ಹದಬೆದೆಯನಱಿದು ಸ್ಥೂಲವೆಂಬ ದಿಂಡಿಗೆ ತ್ರಿದೇವರೆಂಬ ತಾಳ ನೆಟ್ಟು (ಸರ್ವವ. ೧೦೭-೫೭೮); ಹದಬೆದೆಯಲಾರಂಬ ಕದನದಲಿ ಕೂರಂಬ ನದಿಯ ಹಾಯುವಲಿ ಹಱುಗೋಲ ಮಱೆದಾತ ವಿಧಿಯ ಬೈದೇನು (ಸರ್ವಜ್ಞ. ೧೩೬೩); ಬೆದೆಯರಿತು ಹದಮಾಡು ಹೃದಯದೀ ಹೊಲವನ್ನು ಹದಬೆದೆಯನರಿತಂಥ ಹೃದಯವಾಸೀ (ನಾದಲೀ. ೧೩-೨).

[ಹದ (< ಪದ$_1$) + ಬೆದೆ]

**ಹದಬೆದೆಗಾಲ** (ನಾ). (ಬೀಜವನ್ನು ಬಿತ್ತಲು) ಪಕ್ವವಾದ ಮತ್ತು ಯೋಗ್ಯವಾದ

ಕಾಲ: ಕಾಡಗಿಡಗಳ ಕಡಿದು . . . ಭೂಮಿಯ ಹಸನಗೊಳಿಸಿ ಹದಬೆದೆಗಾಲ ನೋಡಬಿಳಧಾನ್ಯಗಳ ಬಿತ್ತಿ (ನವಮೋ. ೨-೪೨). [ಹದಬೆದೆ + ಕಾಲ]

**ಹದಮಳೆ** 'ಪದವಟಿ' ನೋ.

**ಹದಮೀರು** (ಕ್ರಿ). ರೀತಿಯನ್ನು ಕಳೆದುಕೊಳ್ಳು; ಕ್ರಮತಪ್ಪು: ಕರ್ಣಾಭರಣದ ಹುಡುಗಿಯ ಸಹಾಯದಿಂದ ತನ್ನ ಹೆಂಡತಿ ತಯಾರಿಸಿದ್ದ ಭೋಜನ ಎಲ್ಲಿ ಹದಮೀರುತ್ತೊ ಎಂದು ಅವನು ಶಂಕೆ ವ್ಯಕ್ತಪಡಿಸಿದನು (ಪುನರು. ೨೯೦); ಎಲ್ಲರೂ ನಮಗೇಕೆ ಆ ವಿಚಾರ ಎಂದು ಕುಳಿತರೆ ನಿತ್ಯ ಊರಲ್ಲಿ ಆಗುವ ಅನರ್ಥಗಳು ಮಾತ್ರ ಹದಮೀರುತ್ತದೆ (ಕಾವೇರಿ. ೬೯). [ಹದ(< ಪದ$_1$) + ಮೀರು(< ಮೀಱು)]

**ಹದರಿ** (ನಾ). ಬೆದೆ; ನಸೆ: ಹಸುವಿಗೆ ಹದರಿ ಬಂದಿದೆ (ರೂಢಿ). 'ಹದರಿದನ' ಪರಾ. [< ಹದ]

**ಹದರಿಕ್ಕು$_1$** 'ಪದಿರಿಕ್ಕು' ನೋ.

**ಹದರಿಕ್ಕು$_2$** (ಕ್ರಿ). ಹೆದರಿಸು; ಭಯವನ್ನುಂಟುಮಾಡು: ಗದಗದಿಸಿ ಕಾಂತಾ ಸಮೂಹವು ಬೆದರಿದುದು ಜಗದೀಶ್ವರೀಕ್ಷಿಸಿ ಬೆದರಬೇಡೆಂದಭಯಪದ್ಮವ ತೋರಿ ಹೂಂಕೃತಿಯ ಮದಮುಖದ ಹದರಿಕ್ಕಿ ತೋರಿಸೆ ಬುದುಬುದಾಕಾರದಲಿ ಕೇಸರಿ ವದನದಲಿ ಜನಿಸಿದವುಯಡೆಬಿಡದಬುಧಿಘೋಷದಲಿ (ಅಂಬಿಕಾ. ೩೨-೩೭).
[ಹದರ್ು$_1$(< ಪದಱು$_2$) + ಇಕ್ಕು]

**ಹದರಿದನ** (ನಾ). ಬೆದೆಗೆ ಬಂದ ಹಸು; ನಸೆ ಬಂದ ಆಕಳು: ಹದರಿದನಕ್ಕೆ ಹದಿನಾರು ಹೋರಿ (ರೂಢಿ). [ಹದರಿ + ದನ]

**ಹದರು$_1$** 'ಪದಿರ್$_1$' ನೋ.

**ಹದರು$_2$** 'ಪರಡು$_3$' ನೋ.

**ಹದವರಿ** 'ಪದನಱಿ' ನೋ.

**ಹದವಳಿ** (ಕ್ರಿ). ಹದತಪ್ಪು; ಹವಣುಗೆಡು: ಹಮ್ಮುಗೊಳದೆ ಹದವಳಿಯದೆ . . . ಚಿತ್ತ ಸಮ್ಮತಿಯಱಿತೆಸಗುವುದು (ಹದಿಬ. ೪-೧೫).
[ಹದ (< ಪದ$_1$) + ಅಳಿ$_1$(< ಅೞ್$_1$)]

**ಹದವಳೆ** 'ಪದವಟಿ' ನೋ.

**ಹದವಱಿ** 'ಪದನಱಿ' ನೋ.

**ಹದವಿಲು** 'ಪದವಿಲ್' ನೋ.

**ಹದವಿಲ್ಲು** 'ಪದವಿಲ್' ನೋ.

**ಹದಹದಿಕಿಸು** (ಕ್ರಿ). ೧. ಅದಿರು; ಗಿಟಕರಿಸು; ಅಲ್ಲಾಡು: ಬೆಳರ್ದುಟಿ ಬಿಂಬಿಸೆ ಹದಹದಿಕಿಸೆ ಪಲ್ಲು ನಳಿನಮುಖವು ಕೊರಗುತಲಿ ತಳರುವ ಕೋಮಲಾಂಗಿಯ ಕಂಡು (ಅನಂಚ. ೯-೧೨೯). ೨. ಅಲ್ಲಾಡಿಸು; ಅಲುಗಿಸು: ಮದಗಜದೊಬ್ಬುಳಿಗೆದಱಿಸಿ ನಿಡಿದಾಗಿ ಪದುಳದಿ ಮಲಗಿ ವಾಲವನು ಹದಹದಿ [ಪಾಠಾಂ. ರಿ] ಕಿಸುತಿರ್ದ ಮೃಗರಾಜನಿರೆ ಸ್ವಪ್ನವೊದವಿ ಕಂಡಳು ಮೃಗನೇತ್ರೆ (ಅನಂಚ. ೫-೯೭). [ಹದಹದಿಕು + - ಇಸು$_1$]

**ಹದಹದಿಕು** (ಕ್ರಿ). ಅಲ್ಲಾಡು; ಅಲುಗು: 'ಹದಹದಿಕಿಸು' ಪರಾ. [?]

**ಹದಹದಿಸು** (ಕ್ರಿ). ಹದವಾಗಿರಿಸು: ಹದಹದಿಸಿ [ಪಾಠಾಂ. ಹದಸರಿಸಿ, ಹುದಿಸಿದನು, ಹೊದಿಸಿದನು] ಹವಣಿಸಿದನೆಡೆಗೆಡೆಗಿದಿರುಕಲುಗಳ ಬೆಣೆಗಳಲಿ ನಡೆದುದು ನಿಜೋನ್ನತಸೇತುಬಂಧನ ಹತ್ತುಯೋಜನವ (ತೊರರಾ. ೭-೫-೪೭). [? + - ಇಸು$_1$]

**ಹದಹು** 'ಪದಪು' ನೋ.

**ಹದಿ$_1$** 'ಪದಿ$_1$' ನೋ.

**ಹದಿ$_2$** 'ಪದಿ$_2$' ನೋ.

**ಹದಿ$_3$** 'ಪದಿನ್' ನೋ.

**ಹದಿ$_4$** (ನಾ). ಒಂದು ಬಗೆಯ ತೆರಿಗೆ (?): ಕುಳಕೆ ಬಂದ ಹದಿ ಹೊದಕೆ ಮೊದಲಾದ XXX ದ ಸಿದ್ದಾಯವನು . . . ಕೊಂಡು (ಎಕ. VIII, ತೀರ್ಥಹ. ೧೭೦-೧೭; 1424); ಪಡುವ ಸಾಲಿಂದ ಯೆತ್ತುವ ಮೆದೆಯನ ಹದಿಯ ಉಪ್ಪಿನ XXX (ಸೌಇಇ. IX-II, ೪೫೫-೧೫; 1451). 'ಹದಿಕೆ' ಪರಾ. [?]

**ಹದಿಕೆ** 'ಪೊದಕೆ$_2$' ನೋ.

**ಹದಿಗು** 'ಪದುಗು' ನೋ.

**ಹದಿಗೆ$_1$** 'ಪೊದಕೆ$_2$' ನೋ.

**ಹದಿಗೆ$_2$** (ನಾ). ಒಂದು ಬಗೆಯ ಆಯುಧ: ಬಿಲ್ಲು ಬಾಣವು ಈಟಿ ಹದಿಗೆ ಪಿಡಿದ ಕತ್ತೀ ಗುದ್ದೆಗಳಲಿ ಘಲ್ಲುಘಲ್ಲನೆ ವೂರಿಕೊಳುತಾ ಕಾಲಕಿಂಕರರಂದದಲ್ಲಿ . . . ಬಂದರಾಗ (ಸಾರಂಗ.೨೧). [?]

**ಹದಿಟೆ** 'ಪದಿಟೆ' ನೋ.

**ಹದಿಟೆಗೆಯ್** 'ಪದಿಟೆಗೆಯ್' ನೋ.

**ಹದಿನ್** 'ಪದಿನ್' ನೋ.

**ಹದಿನಯ್ದು** 'ಪದಿನಯ್ದು' ನೋ.

**ಹದಿನಾಕು** 'ಪದಿನಾಲ್ಕು' ನೋ.

**ಹದಿನಾರು** 'ಪದಿನಾಱು' ನೋ.

**ಹದಿನಾರುಭಾವನೆ** 'ಪದಿನಾಱುಭಾವನೆ' ನೋ.

**ಹದಿನಾಲ್ಕು** 'ಪದಿನಾಲ್ಕು' ನೋ.

**ಹದಿನಾಱು** 'ಪದಿನಾಱು' ನೋ.

**ಹದಿನಾಱುಕಳೆ** (ನಾ). (ಚಂದ್ರನ) ಷೋಡಶಕಲೆಗಳು.

ಹದಿನಾಱುಕಳೆಯಣ್ಣ = ಷೋಡಶಕಲೆಗಳನ್ನು ಹೊಂದಿರುವವನು; ಚಂದ್ರ: ಅಂಗಜಭಟನ ಖಂಡೆಯದೇಱಿನವರಿಗೆ ಸುಖತರವ ಹದಿನಾಱುಕಳೆಯಣ್ಣನ ವಿಲೋಕನವು (ತೊರರಾ. ೩-೧೧-೪೯). [ಹದಿನಾಱು (< ಪದಿನಾಱು) + ಕಳೆ$_6$(< ಕಲೆ$_3$)]

**ಹದಿನಾಱುಭಾವನೆ** 'ಪದಿನಾಱುಭಾವನೆ' ನೋ.

**ಹದಿನೆಂಟು** 'ಪದಿನೆಂಟು' ನೋ.

**ಹದಿನೆಂಟುದೋಷ** 'ಪದಿನೆಂಟುದೋಷ' ನೋ.

**ಹದಿನೆಂಟುಸಮಯ** (ನಾ). ಹದಿನೆಂಟು ಬಣ,– ಪಂಗಡ: ಅಱುವತ್ತು ಗವುಡು ನೂಱಿಪ್ಪತ್ತುಸ್ಥಾನವೂ ಹದಿನೆಂಟುಸಮಯವೂ ನೆರೆದು (ಎಕ.VII, ಶಿವಮೊ. ೧೯-೧೫; 1309). [ಹದಿನೆಂಟು (< ಪದಿನೆಂಟು ) + ಸಮಯ$_1$]

**ಹದಿನೆರಡು** 'ಪನ್ನೆರಡು' ನೋ.

**ಹದಿನೇಳು** 'ಪದಿನೇೞ್' ನೋ.

**ಹದಿನೇೞು** 'ಪದಿನೇೞ್' ನೋ.

**ಹದಿನೈದು** 'ಪದಿನಯ್ದು' ನೋ.

**ಹದಿಬತೆ** 'ಹದಿಬದೆ' ನೋ.

**ಹದಿಬದೆ,** ಅದೆಬದೆ, ಪತಿಬ್ರತೆ, ಹದಿಬತೆ (ನಾ). ಗಂಡನ ಸೇವೆಯನ್ನೇ ವ್ರತವಾಗಿ ಉಳ್ಳವಳು; ಗರತಿ; ಸಾಧ್ವಿ: "ಹದಿಬದೆಯೆಂದು ಪತಿವ್ರತೆ" (ಕಶಸಾ. ೬೨-೩೭೮); ಲಂಪಟಕೊಳಗಾಗದ ಹದಿಬದೆಯಂತೆ . . . ಪೆರ್ಸಂಪಗೆಮರಗಳೊಪ್ಪಿದುವು (ಮೋಹತ. ೨೪-೪೯); ಹದಿಬದೆಯರೆಂದು ಹೆಸರಾಂತ ಹೆಣ್ಮಣಿಗಳಂ ಪರಿಕಿಸಿದೆನವರುಂ ಸುಲಭಮಾದರಯ್ (ಶ್ರೀರಾಪಾ. ೨೨೪-೩೫೨). **ಅದೆಬದೆ:** ನುಡಿದಳದೆಬದೆ ಪತಿಯನುಪಚರಿಸೆ ತಳುವಾಯ್ತುದಾಸೀನ ನಿಮ್ಮೊಳಿಲ್ಲ (ಲಕ್ಷ್ಮಭಾ. ೨೧-೧೦). **ಪತಿಬ್ರತೆ:** 'ಪತಿಬ್ರತಿಕೆ' ಪರಾ. **ಹದಿಬತೆ:** ಮತಿಯಂ ಮಱೆದು ಮರುಳ್ಗೊಂಬಾ ಹದಿಬತೆಯರ್ ಬೆನ್ನಂ ಬಿಡದ ನವಪ್ರಾಯತೆಯರೆಸೆದರವನೀಶಂ ಬೀದಿವಿಡಿದು ನಡೆತರ್ಪಾಗ (ಜಯಕಾ. ೧೧-೬೧).

ಪತಿಬ್ರತಾಚರಣಗುಣಸಾವಿತ್ರಿ = ಪಾತಿವ್ರತ್ಯದ ಆಚರಣೆಯ ಗುಣದಲ್ಲಿ ಸಾವಿತ್ರಿಯಂತಿರುವವಳು; ಒಂದು ಬಿರುದು: ಪತಿಬ್ರತಾಚರಣಗುಣಸಾವಿತ್ರಿ ಪರಿವಾರ ಸಮುದ್ಧರಣಧಾತ್ರಿ . . . ಶ್ರೀಮತ್ಪಿರಿಯರಸಿ ಕಂಚಲಮಹಾದೇವಿಯರ್ (ಸೌಇಇ. XX, ೪೬-೧೧; 1072). [< ಸಂ. ಪತಿವ್ರತಾ]

**ಹದಿಮೂರು** 'ಪದಿಮೂಱು' ನೋ.

**ಹದಿಮೂಱು** 'ಪದಿಮೂಱು' ನೋ.

**ಹದಿರ್$_1$** 'ಪದಿರ್$_1$' ನೋ.

**ಹದಿರ್$_2$,** ಹದಿರು$_3$ (ನಾ). ೧. ಎಳೆಯ ಕಾಯಿ; ಮಿಡಿ; ಹೀಚು: "ಹದಿರೆನಲಳಕಂ"

(ಕರ್ಣಾನಿ.೪೭). **ಹದಿರು$_3$**: ೧. "ಎಳೆಗಾಯಿ ಮಿಡಿ ಹದಿರು ಹೀಚುಂ" (ಶಬ್ದಮಂ. ೨೩). ೨. (ಆಲಂ) ಎಳೆತನ; ಬಾಲ್ಯ: ೨೩ ವರ್ಷವೆಂದರೆ ಹೀಗೆ ಹಣ್ಣೂ ಅಲ್ಲ ಹಾಗೆ ಹದಿರೂ ಅಲ್ಲ (ಮೂರುಉ. ೩೨). [ದೇ. ‖ ಮಲ. ಪಯಿಳ್ಳು]

**ಹದಿರಾಟ** (ನಾ). ಚಮತ್ಕಾರದ ಆಟ: ತೊದಲನುಡಿ ಹದಿರಾಟ ಬೆದರುನೋಟಗಳಿಂದ ಮದವೇರಿದಾನೆ ಇಮ್ಮಡಿಯಾದವಳು (ಸಾರಂಗ. ೫). [ಹದಿರ್$_1$(< ಪದಿರ್$_1$) + ಆಟ]

**ಹದಿರಿಕ್ಕು** 'ಪದಿರಿಕ್ಕು' ನೋ.

**ಹದಿರಿಸು** (ಕ್ರಿ). ವಿಡಂಬನೆ ಮಾಡು; ಚುಚ್ಚಿ ಮಾತನಾಡು: ಉದರನಿಮಿತ್ತವಿಡಿದು ಉದರವ ಹೊರೆವವನಲ್ಲ ಹದಿರಿಸಬಲ್ಲ ಚದುರ ಕಾಣ ಭೋ (ಚನ್ನವ.ಕ. ೫೭-೧೨೫). [ಹದಿರು$_1$(< ಪದಿರ್$_1$) + -ಇಸು$_3$]

**ಹದಿರು$_1$** 'ಪದಿರ್$_1$' ನೋ.

**ಹದಿರು$_2$** 'ಪರಡು$_3$' ನೋ.

**ಹದಿರು$_3$** 'ಹದಿರ್$_2$' ನೋ.

**ಹದಿರುಗಾಱ** (ನಾ). ಚತುರ; ಜಾಣ: ಈ ಹದಿರುಗಾಱನಾತನ ಮಗಂ ಗಡ ಮರಳ್ದಾ ಓರಿಯನೆಡೆಗೆಮ್ಮನೊಯ್ಯ ಗಡ ಕೇಳಿಮೆಂದು ಪತ್ತಿರ್ದವರ ಕೈವೊಯ್ದು ನಕ್ಕು (ಚಬಪು. ೩೩-೧೪). [ಹದಿರು$_1$(< ಪದಿರ್$_1$) + -ಕಾಱ]

**ಹದಿರುಗಾಱಿಕೆ** (ನಾ). ಜಾಣ್ಮೆ; ಚಮತ್ಕಾರ: ಕದನವೆಂದೊಡೆಯೆನ್ನ ಹೃದಯ ಜರ್ಜರಿಸುತಿದೆ ಮೃದುಮಾತನಾಡೆಂದು ಬಡವನಂದದಿ ನುಡಿಯೆ ಹದಿರುಗಾಱಿಕೆಯ ನಿನ್ನಯ ಬಲ್ಮೆಯೊಳಗೆನ್ನ ಮಾಯೆಯಂ ಗೆಲ್ದನೆನಲು (ಪ್ರಭುಪು. ೭-೧೧). [ಹದಿರುಗಾಱ + -ಇಕೆ]

**ಹದಿರುನೋಟ** (ನಾ). ಬೆಡಗಿನ ನೋಟ: ಹ [ಪಾಠಾಂ.ಕ]ದಿರುನೋಟದ ಮಿಂಡಿ ಬೇಡಿತಿ ಪುದಿಯೆ ತನ್ನೊತ್ತಿನಲಿ ನಿಂದನು ಮದನನಾ ಬಟ್ಟೆಯಲಿ ಸಂದ ಪುಳಿಂದ ವೇಷದಲಿ (ಸಾಳ್ವಭಾ. ೩೦-೧೭). [ಹದಿರು$_1$(< ಪದಿರ್$_1$) + ನೋಟ]

**ಹದಿರುವಯ್ಯಳುಳು** (ನಾ). ಚಮತ್ಕಾರಯುಕ್ತವಾದ ಬಯ್ಗುಳು: ಸುಯ್ಗಳುಣ್ಮದ ಭರಂ ತನುಬಂಧನಂ ಹದಿರುವಯ್ಗಳುಣ್ಮದ ಲಲ್ಲೆ ನಡದುಗುರ್ ಕರಗದರ್ದೆ ಪೊಯ್ಗಳುಣ್ಮದ ಸರಸಮಱಿಕೆಗೂಡಿದ ಪರವಶಂ ಜಾರರೊಳ್ ಮೞಿದುದು (ಚಬಪು. ೯-೧೫). [ಹದಿರು$_1$(< ಪದಿರ್$_1$) + ಬಯ್ಗುಳು(< ಬಯ್ಗುಳ್)]

**ಹದಿರುವಾತು** 'ಪದಿರುವಾತು' ನೋ.

**ಹದಿರ್ಗೊಳ್ಳು** (ಕ್ರಿ). ಚಂಚಲವಾಗು; ಉದ್ವಿಗ್ನಗೊಳ್ಳು: ಮುಟ್ಟಿದೊಡಾಕ್ಷಣ ತನುರೋಮಗಳು ಗುಡಿಗುಟ್ಟಿ ಮೆಯ್ಯೊಳಗೆ ಕಾತುರವ ಮುಟ್ಟಿದರದೆ ಹದಿರ್ಗೊಳ್ಳದೆ ಕರಣದ ಗಟ್ಟಿವಾಳದೆ ತೆರಳಿದಳು (ಮೋಪತ. ೩೧-೨೮). [ಹದಿಱು$_0$(< ಪದಱು$_2$) + ಕೊಳ್ಳು$_1$(< ಕೊಳ್$_1$)]

**ಹದಿವಡು** (ಕ್ರಿ). (ಆಯಕಟ್ಟಾದ) ನೆಲೆಯಲ್ಲಿ ನಿಲ್ಲು: ನಿನ್ನತಹಿಯೋ ಪ್ರಾಣನಾಥ ಕೇಳೆನಗೆ ತನಗಿನ್ನೇನು ವೈರವೋ ನೀನಗಲಲೊಡನೆ ಕವಿದೆನ್ನನಿಸಲೆಂದು ತಿರುವಿನೊಳು ನನೆಗಣೆದೊಟ್ಟು ಹದಿವಟ್ಟು ಕಂದರ್ಪನು ಸನ್ನದ್ಧನಾಗಿ ನಿಂದು (ಸೌಂದಪು. ೧೭-೪೩). [ಹದಿ$_2$(< ಪದಿ$_2$) + ಪಡು$_1$]

**ಹದಿಹ** (ನಾ). ಒಳ್ಳೆಯ ಅವಕಾಶ; ಸುಸಂದರ್ಭ: ಬೆಳೆದೆಳೆಯ ದರ್ಭೆಯಂ ಕಂಡು ಹಾರಯಿಸಿ ನಾನಿದನೆಲ್ಲವ ಗಳಗಳನೆ ಕೊಯ್ದು ಕೊಂಡೊಯ್ವುತ್ತಡೆನ್ನೊಡೆಯ ಮುಳಿಯದಿಹ ನಿದು ಹದಿಹನೆಂಬಾಸೆಯಿಂ ಹೊಱಿಯನಿಳುಹಿ [ಪಾಠಾಂ. ನೆಂಬಾಸೆಯಿಂ ಹೊಱಿಯನಿಳುಹಿ ಮತ್ತಳಸಿ, ನದು ದಿಟಂಯೆಂಬಾಸೆಯಿಂ ಹೊಱಿಯನಿಳುಹಿ] ಕುಡುಗೋಲ್ಗಿಡಿದು ಸಾರ್ದನಸ್ತಾದ್ರಿಯಂ ಸಾರುತಿಹ ಸೂರ್ಯನಂತೆ (ಹಚಕಾ. ೧೨-೮). [ಹದಿ$_2$(< ಪದಿ$_2$) + -ಹ$_2$(< -ಪ$_2$)]

**ಹದಿಹರೆಯ** (ನಾ). ಹತ್ತು, ಹನ್ನೊಂದು ವರ್ಷದ ಪ್ರಾಯ: ಅಲ್ಲಿ ಸೇರಿದ್ದವರೆಲ್ಲ ಹದಿಹರೆಯದ ಹುಡುಗರೇ (ರೂಢಿ). [ಹದಿ$_3$(< ಪದಿನ್) + ಹರೆಯ(< ಪರಯ)]

**ಹದುಗಿಸು** (ಕ್ರಿ). ಕುಗ್ಗಿಸು; ಸಂಕೋಚಗೊಳಿಸು: ಭಂಗವಡಿಸದ ಹಸಗೆಡಿಸದ ಹದುಗಿಸದೆ ಬಸಿಱೊಳು ಬಂದ ಪೆಣ್ಮಕ್ಕಳ ಮಱುಕವ ಸೊಸೆಯರೆದೆಯೊಳಿಸಗುವುದು (ಹದಿಬ. ೪-೨೫). [ಹದುಗು$_1$(< ಪದುಗು) + -ಇಸು$_3$]

**ಹದುಗು$_1$** 'ಪದುಗು' ನೋ.

**ಹದುಗು$_2$** (ನಾ). ಪಕ್ಕ; ಬದಿ; ದಡ: ಮೊದಲೇರಿಯ ಹದುಗಿಂ ತೆಂಕಲು ಕೊಳಗ ಎಂಟು (ಮೈಆರಿ. ೧೯೩೭, ೧೮-೪೧; 1289); ಬಯಲ ಹದುಗಿನ ಗದ್ದೆ (ಇಎ. ೧೯೫೨, ಓರೇಕರೂರು. ೪೭-೨೩; ?). [← ತಮಿ. ಪತುಕ್ಕೈ]

**ಹದುರು** 'ಪದಿರ್$_1$' ನೋ.

**ಹದುಳ** 'ಪದುಳ' ನೋ.

**ಹದುಳವಿಡು** (ಕ್ರಿ). ಕ್ಷೇಮವಾಗಿಡು; ಸುಖವಾಗಿಡು: ಹದುಳವಿಡುವವರಿಲ್ಲ ಸೇನೆಯ ಮೊದಲಿಗರು ಮುನ್ನೋಟವಿಕ್ಕಿತು ಕದನದಲಿ ಕೈಸೂಱೆಗೊಟ್ಟರು ಜಯವ ತಮತಮಗೆ (ಕುವ್ಯಾಭೀ. ೯-೨೭). [ಹದುಳ(< ಪದುಳ) + ಇಡು$_1$]

**ಹದುಳವಿರು** 'ಪದುಳಮಿರ್' ನೋ.

**ಹದುಳಹೋಗು** 'ಪದುಳಂಬೋಗು' ನೋ.

**ಹದುಳಿಗ** 'ಪದುಳಿಗ' ನೋ.

**ಹದುಳಿಗಚಿತ್ತ** (ನಾ). ನೆಮ್ಮದಿಯಿಂದ ಕೂಡಿದ ಮನಸ್ಸುಳ್ಳವನು: ಹದುಳಿಗ ಚಿತ್ತನಾಗಿ ಹರ್ಷಾನಂದದಿಂ ಸೇವನೆಯ ಮಾಡಿ . . . ಶಿವಮಯನಾಗಿರ್ದನಯ್ಯ (ಅಖಂಡೇ. ೨೪೮-೧೦೧). [ಹದುಳಿಗ(< ಪದುಳಿಗ) + ಚಿತ್ತ]

**ಹದುಳಿದ** 'ಪದುಳಿದ' ನೋ.

**ಹದುಳಿರ್** 'ಪದುಳಮಿರ್' ನೋ.

**ಹದುಳಿರಿಸು** 'ಪದುಳಮಿರಿಸು' ನೋ.

**ಹದುಳಿಸು** 'ಪದುಳಿಸು' ನೋ.

**ಹದುಳು** 'ಪದುಳ' ನೋ.

**ಹದುಳೆ** (ನಾ). ಸುಖವಾಗಿರುವವಳು: ಹದುಳೆ ಹೊಂತಕಾರಿ ದೆಸೆದಿಕ್ಕ ನೋಡುತ ಕುಶಲರೆಲ್ಲರನು ಸೋಲಿಸುವಂತೆ ಬಂದು ನಿಂದಿಹಳು (ಸೌಂದಕಾ. ೩-೪೦). [ಹದುಳ (< ಪದುಳ) + -ಎ$_2$]

**ಹದೆ$_1$** 'ಪದೆ$_1$' ನೋ.

**ಹದೆ$_2$** (ನಾ). ಪಕ್ಕ; ಬದಿ: ಊರಿಂ ಪಡುವಣ ಕೆಱೆಯ ಹಿಂದೆ ಮತ್ತರು ನಾಲ್ಕು ಹದೆಯ ಹಡುವಣ ಹಳ್ಳದಿ ಹಡುವಲು ಮತ್ತರು ನಾಲ್ಕು (ಎಕ.XI, ಚಿತ್ರದು. ೩೭-೪೯; 1199). 'ಹದುಗು$_2$' ಪರಾ. [< ಪದಿ$_2$ ?]

**ಹದ್ದಿಕೆ** 'ಪೊದಕೆ$_2$' ನೋ.

**ಹದ್ದು$_1$** 'ಪರ್ದು' ನೋ.

**ಹದ್ದು$_2$, ಪದ್ದು$_2$** (ನಾ). ೧. ಗಡಿ; ಸೀಮೆ; ಮೇರೆ: ನಮ್ಮ ಅಪ್ಪಣೆ ಇಲ್ಲದೆ ನಿಮ್ಮ ಹದ್ದು ದಾಟ ನಮ್ಮ ಅರ್ದಿಗೆ (ಹದ್ದಿಗೆ) ಬರುವುದಕ್ಕೆ ಕಾರಣವೇನು (ರಾಜೇಂದ್ರ. ೧೯). ೨. ಅಂಕೆ; ಅಧೀನ; ನಿರ್ಬಂಧ: ನಮ್ಮ ಗುರುವೆ ಸಾಕು ಅವರನ್ನು ಹದ್ದಿನಲ್ಲಿಟ್ಟಿರುವುದಕ್ಕೆ (ತುಂಗಭ. ೯೯); ತಾಯಿಯ ಹದ್ದಿನಲ್ಲಿ ಬೆಳೆದ ಮಗ ಸಾಂಬನಿಗೆ ತಾಯಿಯ ಮಾತೇ ವೇದವಾಕ್ಯ (ಹೊಸಕ್ಕಿ. ೧೯). Δ **ಪದ್ದು$_2$**: ೧. ಮುಳಿದು ಪದ್ದಿನಿಂದಾ ಪರಶು ಪಾಣಿಯುಂ ಮುಂದೆಸಗಿ ನಡದಾ ಪ್ರಯಾಣದೆಡೆಗೆ (ಪರಶು. ೩೯-೨೭). ೨. ಪಾರ್ಥಿವರ ವಂಶದೊಳುದ್ಭವಿಸಿ ಪದ್ದನುಳಿದಿಳೆಯೊಳುಂ ಜೀವಿಪಡೆ ಭವದಂಘ್ರಿಶಿಷ್ಯ ತಾಂ ನಿರ್ದ್ಯವನೆ (ಪರಶು. ೨೯-೧೫).

ಹದ್ದುದಾಟಿಸು = ಗಡಿಹಾಯಿಸು; ಗಡಿಪಾರುಮಾಡು: ಕಳವಿನ ಪ್ರಕರಣದಲ್ಲಿ ಮನೋಹರನನ್ನು ಹಿಡಿಸಿ ಬ್ರಿಟಿಶ ಹದ್ದುದಾಟಿಸಿ ಆ ಸಂಸ್ಥಾನಕ್ಕ ಕಳಿಸುತ್ತೇನೆ (ಕೊತಕಾ. ೫೫). [← ಅರ. ಹದ್ದ್; ಹಿಂ. ಹದ್; ಮರಾ. ಹದ್, ಹದ್ದ್]

**ಹದ್ದುಗಟ್ಟು** (ನಾ). (ಆಲಂ) ಬಹಳ ಬಿಗಿಯಾದ ಬಂಧನ: ದಾನವನ ಕದ್ದ ಕಳ್ಳನ ಕಟ್ಟುವಂದದಿ ಹದ್ದುಗಟ್ಟನು ಕಟ್ಟಿ ಹೊಡೆದರೆ ಬಿದ್ದನಸುವಡಗಿತ್ತು (ಕಾಶಿರಾ. ೨೧-೩೯). [ಹದ್ದು$_1$(< ಪರ್ದು) + ಕಟ್ಟು$_1$]

**ಹದ್ದುಗಣ್ಣು** (ನಾ). (ಆಲಂ) ಕ್ರೂರವಾದ ದೃಷ್ಟಿ; ಕೆಟ್ಟ ನೋಟ: ಆಕಾಶದಲ್ಲಿ ಹಾರಾಡುತ್ತಿದ್ದ ಹದ್ದುಗಳಲ್ಲಿ ಒಂದು ಇಳಿದು . . . ಅಗ್ರಹಾರವನ್ನೆಲ್ಲಾ ಹದ್ದುಗಣ್ಣಿನಲ್ಲಿ ಈಕ್ಷಿಸಿತು (ಸಂಸ್ಕಾರ. ೭೪); ಇನ್ನು ಕೆಲವರು ಆದಿಲ್‌ಶಾಹಿಯ ಹದ್ದುಗಣ್ಣಿಗೆ ಸಿಕ್ಕು ತಮ್ಮ

ಪ್ರಾಣಗಳನ್ನು ನಾಡಿಗಾಗಿ ಬಲಿದಾನವಿತ್ತರು (ಕುಂಕುಮ.೪೭).

[ಹದ್ದು$_1$ (< ಪರ್ದು) + ಕಣ್ಣು(< ಕಣ್)]

**ಹದ್ದುಗೈ** (ನಾ). = ಹದ್ದುಗಟ್ಟು: ಅರ್ಧರಾತ್ರಿಯೊಳಗೆ ಹೆಣನನು ತಂದು ಕದ್ದು ಸುಡುವ ಲಂಡಹೆಣ್ಣ ಹದ್ದುಗೈಯನು ಕಟ್ಟಿ ತಲೆಯನರಿವೆನೆಂದು ಹೊದ್ದಿದ ಹೆಣನ ಹಿಂಗಾಲ (ಹರಿಸಾಂ. ೪-೫೨). [ಹದ್ದು$_1$ (< ಪರ್ದು) + ಕೈ$_2$(< ಕೆಯ್$_2$)]

**ಹದ್ದುಗೈಯಿಡು** (ಕ್ರಿ). (ಆಲಂ) (ದೂರದಲ್ಲಿರುವುದನ್ನು ನೋಡುವ) ನಿರೀಕ್ಷೆಯಲ್ಲಿರು: ಹದ್ದುಗೈಯಿಟ್ಟು [ಪಾಠಾಂ. ಕೈಯಿಟ್ಟು] ಹಾದಿಯ ನೋಡುತೀ ಪರಿಯ ಸುದ್ದಿಯಲಿ ನಿಮಿಷಯುಗಮಾಡಿ ದೊಬ್ಬುತ್ತಯೆದ್ದು ಕುಳಿತಿರೆ (ಶ್ರೀಕೃಪಾ. ೨೪); ಸದ್ದುಸಪ್ಪಳವನಾಲಿಸುತಿದ್ದೆನಮ್ಮಾ ನಾ ಹದ್ದುಗೈಯಿಟ್ಟು ಕದ ಹೊಂದಿದ್ದೆನಮ್ಮಾ (ಶ್ರೀಕೃಪಾ.೨೭). [ಹದ್ದುಗೈ + ಇಡು$_1$]

**ಹದ್ದುಪಾರು** (ನಾ). ಎಲ್ಲೆ ದಾಟುವಿಕೆ; ಗಡಿಪಾರು; ಸೀಮೋಲ್ಲಂಘನೆ.

**ಹದ್ದುಪಾರುಮಾಡು** = (ಅಪರಾಧದ ಶಿಕ್ಷೆಯಾಗಿ) ನಾಡಿನ ಗಡಿಯಿಂದ ಹೊರಗಟ್ಟು; ಗಡಿಪಾರುಮಾಡು: ನನ್ನನ್ನು ರಾಜದ್ರೋಹಿಯೆಂದು ದರ್ಬಾರದಲ್ಲಿ ಅವಮಾನಗೊಳಿಸಿ ಹದ್ದುಪಾರುಮಾಡಿದರು (ಕುಮುದಿ. ೮೦); ಪರಕೀಯಶತ್ರುಗಳನ್ನು ಈ ದೇಶದಿಂದ ಹದ್ದುಪಾರುಮಾಡುವುದಕ್ಕಾಗಿ . . . ಸಿದ್ಧನಿರುವೆನು (ಪ್ರಬಂಧ. ೫೭).

[ಹದ್ದು$_2$ + ಪಾರು$_1$]

**ಹದ್ದುಬಸ್ತು**(ನಾ). ೧. ಗುರುತು ಮಾಡಿದ ಮೇರೆ,– ಗಡಿ: ಕೆಲವು ಮಂದಿ ತಂಟೆಕೋರರಾದ ರೈತಜನರು ನಂಬರಿನ ಹದ್ದುಬಸ್ತಾದ ಬಾಂದುಕಲ್ಲುಗಳನ್ನು ಮನಃಪೂರ್ವಕವಾಗಿ ಕಿತ್ತೆಸೆಯುವುದೂ ವುಂಟು (ಭೂಮಿಅ. ೩೮). ೨. ಎಲ್ಲೆ; ಗಡಿ: ನನ್ನ ಹದ್ದುಬಸ್ತಿನ ಜಮಿನಿಗೆ ನೀನು ಬರುವುದು ಬೇಕಿಲ್ಲ (ರೂಢಿ) ೩. (ಆಲಂ) ಅಂಕೆ; ಅಧೀನ; ಹಿಡಿತ: ಜನರ ಸ್ವೇಚ್ಛಾಪ್ರವೃತ್ತಿಯನ್ನು ತಡೆದು ಅವರನ್ನು ಒಂದು ನ್ಯಾಯದ ಹದ್ದುಬಸ್ತಿನಲ್ಲಿ ನಿಲ್ಲಿಸುವುದಕ್ಕೋಸ್ಕರ ಏರ್ಪಟ್ಟದ್ದು (ರಾಜ್ಯಶಾ. ೪೯); ಖೈದಿಗಳ ಈ ದೊಡ್ಡ ಗುಂಪನ್ನು ಹದ್ದುಬಸ್ತಿನಲ್ಲಿಡುವುದೇ ಕಷ್ಟ (ಪುನರು. ೨೨೫). [< ಹದ್ದು$_2$]

**ಹದ್ದುಮಿಾರು** 'ಹದ್ದುಮಿಾಱು' ನೋ.

**ಹದ್ದುಮಿಾಱು, ಹದ್ದುಮಿಾರು** (ಕ್ರಿ). ೧. ಎಲ್ಲೆ ಮಿಾರು: ಕುಸುಮವೃಷ್ಟಿಯ ಸುರಿದನಮರೇಂದ್ರ ಹದ್ದುಮಿಾಱಿದ ಹಬ್ಬವಾಯಿತು ಹೊದ್ದಿದರ ಹೊರೆವಾತ ಸುಖದಿಂದಿದ್ದನು (ಕಾಶಿರಾ. ೨೨-೭೦). **ಹದ್ದುಮಿಾರು:** ೨. ಅಂಕೆ ಮಿಾರು; ನಿರ್ಬಂಧವನ್ನು ಉಲ್ಲಂಘಿಸು: ಅತ್ತ ದಕ್ಷಿಣದಲ್ಲಿ ಚೋಳ ಪಾಂಡ್ಯರು ಹದ್ದುಮಿಾರುತ್ತಿದ್ದಾರೆ (ಶ್ರೀರಾಯ. ೩೦೨); ಈ ತೋಟದೊಳಕ್ಕೆ ಯಾರೂ ಬರಕೂಡದು. ಹದ್ದುಮಿಾರಿ ಬಂದವರಿಗೆ ಶಿಕ್ಷೆ (ಪುಟ್ಟರ. ೧೭). [ಹದ್ದು$_2$ + ಮಿಾಱು]

**ಹನ್** 'ಪದಿನ್' ನೋ.

**ಹನಕೆ** (ನಾ). ಒಂದು ಬಗೆಯ ಔಷಧೀಸಸ್ಯ: ಬಾನಾವರ, ನೀರುನಲ್ಲಿ, ಹನಕೆ (ಮೈಔಗಿ. ೩೯-೭೭೫). [?]

**ಹನನ**(ನಾ). ೧. ಕೊಲ್ಲುವಿಕೆ; ಸಂಹಾರ; ವಧೆ: ಬ್ರಾಹ್ಮಣಹನನ ಮಹಾಪಾಪಮಂಗೆಯ್ದು ನಿಸ್ತ್ರಿಂಶೆಯನೆನ್ನಂ ಪಾಪೆಯಂ ನೀಂ ಬೆಸಗೊಳೆ ಫಲಮೇಂ (ಕಾದಂಪೂ. ೯೫೭); ಆಗಸಕ್ಕೆ ಬೆಕ್ಕಸವೆನೆ ತಳ್ತು ಪಾಯ್ವ ಕಣೆಗಳ್ ಕೋಟಿದಿಕ್ಕಿದುವಿರ್ವರಂ ನಿರೀಕ್ಷಿಸೆ ಪರನಿರ್ನಿಮಿತ್ತಹನನೋದ್ಯಮಮಾತ್ಮವಿನಾಶಕಾರಣಂ (ರಾಜಶೇ. ೫-೧೦೩). ೨. ನಾಶಪಡಿಸುವಿಕೆ; ಅಳಿವು; ವಿನಾಶ. ೩. ಹೊಡೆಯುವಿಕೆ; ನೋಯಿಸುವಿಕೆ. ೪. ಗುಣಿಸುವುದು. ೫. ಒಂದು ಬಗೆಯ ಶಿಕ್ಷೆ: ಹನನ . . . ದುರ್ಬೋಧ್ಯ ನಾನಾವಿಧಾಸಂಖ್ಯಾತ ತೀವ್ರವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷೆ (ವಿವೇಕ. ೧೮೧). [ಸಂ.]

**ಹನವದ್ದದಗಿಡು** (ನಾ). ಒಂದು ಬಗೆಯ ಸಸ್ಯ: "ಆಮ್ರಪತ್ರಕಃ– ಹನವದ್ದದಗಿಡು" (ಓಷಧಿ. ೧೨). [? + ಗಿಡು]

**ಹನಸವಾಡಿ** 'ಪನಸವಾಡಿ' ನೋ.

**ಹನಸವಾತು** (ನಾ). (ಆಲಂ) ಗೊಡ್ಡುಮಾತು: ಹನಸವಾತಿಗೆ ನಾನು ಹರವಸಗೊಂಬಳಲ್ಲ (ಗೀತಗೋ. ೨೫). [< ಹನಸು$_2$ + ಮಾತು$_1$]

**ಹನಸು$_1$** 'ಪನ್ನಸು' ನೋ.

**ಹನಸು$_2$** (ನಾ). ವೇದದ 'ಪ್ರಶ್ನ' ಎಂಬ ಭಾಗದಲ್ಲಿ ಬರುವ ಮಾತು: ಆ ಪನ್ನದಲ್ಲಿರುವ ಹನಸುಗಳಂ ಬೇರೆ ಬೇರೆ ವಿಂಗಡಿಸಿ (ಸೌಗಂಧಿ. ೩೭-೧೭); ಸರ್ವಂ ಖಲ್ವಿದಂ ಬ್ರಹ್ಮ ಎಂಬ ಹನಸೆಮ್ಮುವನೆ ಕುರಿತೊ? ಜಗವಂ ಕುರಿತೊ? (ಪಚ್ಚರ. ೨೩-೧೮).

[< ಪನ್ನ$_2$]

**ಹನಸೋಗೆ** 'ಪನಸೋಗೆ' ನೋ.

**ಹನಿ$_1$** 'ಪನಿ$_1$' ನೋ.

**ಹನಿ$_2$** 'ಪನಿ$_2$' ನೋ.

**ಹನಿಕಪ್ಪೆ** (ನಾ). (ಕರಾ) ಕಪ್ಪೆಯಲ್ಲಿ ಒಂದು ಬಗೆ; ಮಳೆಗಪ್ಪೆ.

[ಹನಿ$_2$ (< ಪನಿ$_2$) +ಕಪ್ಪೆ$_1$]

**ಹನಿಕಿಸು, ಹನುಕಿಸು** (ಕ್ರಿ). ನೀರು, ರಸ ಮುಂತಾದುವುಗಳನ್ನು ತೊಟ್ಟಿಕ್ಕಿಸು: (೬). **ಹನುಕಿಸು:** ನೀರನ್ನು ಹನುಕಿಸಬೇಡ (ರೂಢಿ). [ಹನಿಕು + - ಇಸು$_3$]

**ಹನಿಕು, ಹನುಕು** (ಕ್ರಿ). ಹನಿಯಾಗಿ ಬೀಳು; ತೊಟ್ಟಿಕ್ಕು: (೬). **ಹನುಕು:** ರಾತ್ರಿಯೆಲ್ಲಾ ಮಳೆ ಹನುಕುತ್ತಲೇ ಇತ್ತು (ರೂಢಿ). [< ಹನಿ$_1$(< ಪನಿ$_1$)]

**ಹನಿಕೈ** (ನಾ). ಒಂದು ಬಗೆಯ ಅಳತೆ (?): ಕೇರಿಯ ನೈರಿತ್ಯದ ಗೋಂಟಿನಲು ಏಳು ಕೈಯಗಲ ಹನಿಕೈಯ ನೀಳದ ಮನೆಯು ಮಗ್ಗ ಸಹಿತ ಕೊಟ್ಟರು (ಸೌಇಇ . ೧೮೯-೧೭; 1233). [?]

**ಹನಿಗಣ್ಣು** (ನಾ). (ಸಂತೋಷ, ದುಃಖ ಮೊದಲಾದುವುಗಳಿಂದ) ನೀರು ತುಂಬಿರುವ ಕಣ್ಣು: ಅವ್ವ ನನ್ನನ್ನು ಮಾಮಾನ ತೊಡೆಯ ಮೇಲೆ ಕೂಡಿಸಿ ಹನಿಗಣ್ಣಿನಿಂದ ದತ್ತಕ ಕೊಟ್ಟಳು (ಸ್ಮೃತಿಚಿ .೨೪); ಒಗ್ಗಾಲಿ ತನಗೆ ನೀಡಲಾದ ಅಷ್ಟೆಲ್ಲ ದ್ರವ್ಯವನ್ನು ಮರಳಿ ಮುದುಕನಿಗೇ ಅರ್ಪಿಸಿ ಹನಿಗಣ್ಣಿನಿಂದ . . . ನಮಸ್ಕಾರ ಹಾಕಿದನು (ಕಂಬಹು. ೨೧). [ಹನಿ$_2$ (< ಪನಿ$_2$) + ಕಣ್ಣು(< ಕಣ್)]

**ಹನಿಗವನ** (ನಾ). (ಆಲಂ) ಸಣ್ಣಕವನ; ಚಿಕ್ಕಪದ್ಯ: ಶ್ರೀ ಅರವಿಂದರ ಸಾವಿತ್ರಿಯನ್ನು ಕುರಿತು ಬಂದ ಒಂದು ಹನಿಗವನ (ಜೀವಲ. ೧೨೪). [ಹನಿ$_2$ (< ಪನಿ$_2$) + ಕವನ]

**ಹನಿಗೂಡು** (ಕ್ರಿ). ನೀರಿನಿಂದ ತುಂಬು; ಹನಿತುಂಬು: ಆಕೆಯ ಕಣ್ಣುಗಳು ತಟ್ಟನೆ ಹನಿಗೂಡುವುವು (ಚತಂಬಾ . ೧೫); ಹನಿಗೂಡಿದರೆ ಹಳ್ಳ, ತೆನೆಗೂಡಿದರೆ ಬತ್ತ (ಗಾದೆ).

[ಹನಿ$_2$(< ಪನಿ$_2$) + ಕೂಡು$_1$]

**ಹನಿಚೆ** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೧೫-೨೭೭). 'ಹಣಚಿ$_2$' ಪರಾ. [?]

**ಹನಿಬ್ಬರು** 'ಪನ್ನೆರಡು' ಪರಾ.

**ಹನಿಮಳೆ** (ನಾ). ತುಂತುರುಮಳೆ; ಸೋನೆ; ಜಿನುಗುಮಳೆ: ರಾತ್ರಿಯೆಲ್ಲಾ ಹನಿಮಳೆಯಾಯಿತು (ರೂಢಿ). 'ಜಡಿಮಳೆ' ಪರಾ.

**ಹನಿಹನಿಮಳೆ** = ಹನಿಮಳೆ: ಗಾಳಿಮಳೆ, ಹನಿಹನಿಮಳೆ, ಜಡಿಮಳೆ, ಜಿರಾವರ್ತಿ ಮಳೆಯೂ ಸುರಿಯತೊಡಗಿತು (ಬಾಳಿಗಿ. ೫೩). [ಹನಿ$_2$(< ಪನಿ$_2$) + ಮಳೆ(< ಮೞೆ)]

**ಹನಿಸು** 'ಪನಿಸು' ನೋ.

**ಹನಿಹೊತ್ತು** 'ಪನಿಪೊಳ್ತು' ನೋ.

**ಹನು$_1$** (ನಾ). ೧. ದವಡೆ; ಕಪೋಲ: "ಕಪೋಲಮೆನೆ ಹನು" (ಮಂಗರಾ. ೯೪-೪); ಕ್ರೂರಂ ಸ್ಥೂಲಹನುದ್ವಯಂ ಕಲಿಮನಂ . . . ಸಿಂಹೋದ್ಭವಂ (ಜಾತತಿ. ೧೭-೫); ಹನು ನಸುನೀಳಮಾಗೆ ಮೃದುವತ್ಕರುಣಾಧರಮಾಗೆ ಪಲ್ಲಳೆಂಬಿನೆ ಋಜುವಾಗೆ . . . ವಿಭೂತಿಯನುಂಟುಮಾಡುಗುಂ (ಲೋಕೋಪ . ೧೧-೨೧); ಚಿಬುಕದ ಮೇಗಣ ಅಣುಗಳೆ ಹನು (ಅಶ್ವಶಾ. ೯-೨೩). ೨. ಒಂದು ಬಗೆಯ ಸುಗಂಧದ್ರವ್ಯ. ೩. ಒಂದು ಬಗೆಯ ಮೂಲಿಕೆ. [ಸಂ.]

**ಹನು$_2$** (ನಾ). ಒಂದು ಬಗೆಯ ತೆರಿಗೆ (?): ಸಮಸ್ತ ಗಲುಂಡಗಳಿಗೆ ಕೊಟ್ಟ ಸಾಸನದ ಕ್ರಮವೆಂತೆಂದಡೆ ತಪ್ಪು ತಲುಡಿ ದಂಡ ಉಂಡಿಗೆ ಹಡರ ಹನು ಕೊಂಬಂಣ (ಎಕ. IX, ಕಾನಕಾ. ೪೧-೧೨; 1300). [?]

**ಹನುಕಲು** (ನಾ). ಹನಿಯುತ್ತಿರುವಿಕೆ; ತುಂತುರುಮಳೆ: "ಹನುಕಲು–ಹನಿಗಾಲ, ಸಮ್ಯುದ್ಧಮಳೆಗಾಲ" (ಜಾನಕೋ.೫೩). [ಹನುಕು (< ಹನಿಕು ) +– ಅಲು(< ಅಲ್$_2$)]

**ಹನುಕಿಸು** 'ಹನಿಕಿಸು' ನೋ.

**ಹನುಕು** 'ಹನಿಕು$_2$' ನೋ.

**ಹನುಚಕ್ರ** (ನಾ). [ಅಶ್ವಶಾ] (ಕುದುರೆಯ) ಕಪೋಲದ ಮೇಲ್ಭಾಗ ಹಾಗೂ ಕೆಳಭಾಗದ ಸಮೂಹ: ಗಂಡದ ಪೊಱಗಣ ಕೆಳಗಣ ತಂಡಕೆ ಹನುಚಕ್ರಮೆಂಬ ಪೆಸರ ದಕಕ್ಕುಂ (ಅಶ್ವಶಾ. ೯-೨೪). [ಸಂ.]

**ಹನುಮ** (ನಾ). ೧. (ದೊಡ್ಡ) ದವಡೆಯನ್ನು ಹೊಂದಿರುವುದು. ೨. ವಾಯುವಿನ ಮಗ; ಅಂಜನಾಪುತ್ರ; ಮಾರುತಿ: ವಿತತರಾಕ್ಷಸರಾಜಬಲ ಸಂಗತವನುಜೆ ಸಂಹರಿಸಿ ರಾವಣಸುತನಿನಬುಜಭವಾಸ್ತ್ರದಲಿ ಬಿಗಿವಡೆದನಾ ಹನುಮ (ತೊರರಾ. ೫-೭ ಸಂಚಿಪ); ನಿಮಿರ್ದುದು ನವಿರ್, ಮೆಯ್ಗೆ ಹನುಮನಾ! (ಶ್ರೀರಾಮಾ. ೪೮೧-೧೯೩). ಹನುಮನ ಕಲ್ಲು = ಹನುಮಂತನ ಮುದ್ರೆಯಿರುವ ಗಡಿಕಲ್ಲು; ಹನುಮನ ಮುದ್ರೆಕಲ್ಲು: ಕೊನೆಯಗೆ ನೆಟು ಕೊಟ ಹನುಮನ ಕಲು (ಮೈಅ೦. ೧೯೩೭, ೪೫-೨; ೧೬ನೆಯ ಶತ). **ಹನುಮನ ತಾಳಿ** = ಹನುಮಂತನ ಚಿತ್ರವಿರುವ, ಕೊರಳಲ್ಲಿ ಧರಿಸುವ ಒಂದು ಆಭರಣ: ಕತ್ತಿನಲ್ಲಿ ಅಡ್ಡಿಕೆ . . . ಹನುಮಂತನ ತಾಳಿ, ಹುಲಿಯುಗುರು (ಮಲ್ಲಿ. ೪೦). **ಹನುಮನ ಬಾಲ** = ಒಂದು ಬಗೆಯ ಯುದ್ಧದ ಸಾಮಗ್ರಿ: ಬಲೆ ಪಟ ಹನುಮನ ಬಾಲ ಚಬುಕು ಕೊಳ್ಳಿ ತೊಲಗದ ಕಂಭ ಮುಂದುಲಿವ ತಲೆ ಕಳಸದ ಬಿರಿದಿನ ಹರಿಗೆಯ ಮಂದಿ ಕಲಹಕ್ಕೆ ಪೊಱಮಟ್ಟರೊಸೆದು (ಕುರಾಸಾಂ. ೧೧-೩೩); ಇದೆ ಮುತ್ತಿನ ಕುಚ್ಚಿನ ಹನುಮನ ಬಾಲವಿದೆ ನವರತ್ನದ ಠೌಳಿ ಇದೆ ಪಚ್ಚೆಗಾವಿನ ಸತ್ತಿಗೆಯಿವ ರಾಮನಿದಿಕೆ ಸಂದೆಗಬೇಡವಿನ್ನು (ಕುರಾಸಾಂ. ೪೦-೧೭); ಹಮ್ಮುಗೆ ವರಹನುಮನ ಬಾಲ ಹೊಂಗಂಟೆ ಹೊಮ್ಮೇಳದ ಕಠಾರಿಗಳು . . . ಒದವಿತೊಗ್ಗಿನಲಿ (ಮೋಹತ. ೧೯-೧೧). **ಹನುಮನ ಹಕ್ಕಿ** = ಒಂದು ಬಗೆಯ ಹಕ್ಕಿ: (೬).

[< ಸಂ. ಹನುಮತ್]

**ಹನುಮಂತ** (ನಾ).= ಹನುಮ ೨: ರಾವಣನ ಮೇಲಣ ರಾಜಕಾರಿಯದ ಕಥನಕಾಲೋಚಿಸಿ ಕರಡಿ ಕಪಿಗಳಂ ನೆರಪಿ ಪೃಥಿವಿಜೆಯನಱಸಲ್ಕೆ ವೀರಹನುಮಂತನಂ ಕಳುಹಿದಂ ಕಾಕುತ್ಸ್ಥನು (ಜೈಮಿಭಾ. ೧೪-೫); ಹನುಮಂತ ಹಗ್ಗ ಕಡಿಯುವಾಗ ಪೂಜಾರಿ ಶಾವಿಗೆ ಬೇಡಿದ (ಗಾದೆ). [ಸಂ. ಹನುಮತ್]

**ಹನುಮಂತಢಾಳ** (ನಾ). ಕತ್ತಿಯ ವರಸೆಯಲ್ಲಿ ಒಂದು ಬಗೆ; IP ಹನುಮಂತನು ಕುಳಿತುಕೊಳ್ಳುವಂತೆ ಕುಳಿತು ತೀವ್ರವಾಗಿ ಹೊಡೆಯುವ ಒಂದು ವರಸೆ: ಕುಳಿತುಕೊಂಡವನಾಗಿ ಯೇಳುವಾಗ ಪಾರ್ಶ್ವಗಳಲ್ಲಿ ದೃಷ್ಟಿಯನ್ನು ಮಾಡಿ ಮೇಲೆಯೂ ಕೆಳಗೂ ಕೈಗಳ ಕ್ಷೇಪಣು ಆವದುಂಟು ಅದು ಹನುಮಂತಢಾಳ (ಹನುಮಂತಗತಿ)ಯಂದು ತಿಳಿವದು (ಖಡ್ಗಟೀ. ೪-೭೧). [ಹನುಮಂತ + ಢಾಳ$_1$(< ಡಾಳ$_1$)]

**ಹನುಮಂತತೊಪ್ಪಲು** (ನಾ). ಒಂದು ಬಗೆಯ ಸಸ್ಯ: ಸಿತ್ತುಂಡೆಗಿಡ, ಸಿಡಿಗೋಲಿ, ಹನುಮಂತತೊಪ್ಪಲು, ಚೇಡುಬೀರ (ಮೈಔಗಿ. ೨೧-೩೯೩). [ಹನುಮಂತ + ತೊಪ್ಪಲು]

**ಹನುಮಗತಿ** (ನಾ). ಹನುಮಂತನಂತೆ ನೆಗೆಯುವುದು: ತುರಗರತ್ನಮಂ . . . ಇಮ್ಮಡಿಘಂಟೇಂದ್ರನರೇಂದ್ರಂ ಹನುಮಗತಿಯಿಂದೇರಿದಂ (ಬೀಳವಂ. ೧-೫೫).

[ಹನುಮ + ಗತಿ]

**ಹನುಮುತ್ತು** (ನಾ). ಒಂದು ಬಗೆಯ ಹಲ್ಲಿನ ಬೇನೆ,– ದಂತರೋಗ: ಹನುಮುತ್ತೆಂಬ ದಂತರೋಗದಲ್ಲಿ ಹಲ್ಲುಗಳು ಕಟವಾಯಿಸಂದುಗಳಲ್ಲಿ ವಾತದಿಂದ ಅತ್ಯಂತ ವಕ್ರವಾಗಿ ಮುಖವನು ವಕ್ರವಾಗಿ ಮಾಡುವವು (ವೈದ್ಯಸಾ. II, ೧೨೨). [ಸಂ. ಹನುಮತ್]

**ಹನುಮದ್ಧ್ವಜ** (ನಾ). ಹನುಮಂತನ ಚಿತ್ರವಿರುವ ಬಾವುಟ,– ಧ್ವಜ: ತಮ್ಮ ಭುಜಪರಾಕ್ರಮದಿಂದ ಸಂಪಾದಿಸಿದ ಹನುಮದ್ಧ್ವಜ ಗರುಡಧ್ವಜ . . . ಏಟುಪಾವುಡೆ ಮುಂತಾದ ಬಿರುದುಗಳಿಂದಲೂ . . . ಆಸ್ಥಾನವು ಕಂಗೊಳಿಸುತ್ತಿರಲು (ಮಹಾವಂ. I, ೧೪). [ಸಂ.]

**ಹನುಮನ ಫಲ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಫಲ: (ಮೈಔಗಿ. ೭-೧೨೦). 'ರಾಮಫಲ', 'ಸೀತಾಫಲ' ಪರಾ. [< ಹನುಮ + ಫಲ]

**ಹನುಮನಾಯಕ** (ನಾ). ಯಕ್ಷಗಾನಗಳಲ್ಲಿ ಬರುವ ಹಾಸ್ಯಪಾತ್ರ, –ವಿದೂಷಕ: ಹನುಮನಾಯಕನ ಪಾತ್ರಕ್ಕೆ ಕಾಣಿಯೇ ಸೈ (ಬೆಲುಮ. ೫). [ಹನುಮ + ನಾಯಕ]

**ಹನುಮಾನಾಸನ** (ನಾ). [ಯೋಗ] ಒಂದು ಬಗೆಯ ಆಸನ: ಮುಖ್ಯವಾದ ಕೆಲವು ಆಸನಗಳು . . . ೪೮. ಸೇತುಬಂಧಾಸನ ೪೯. ಹನುಮಾನಾಸನ ೫೦. ಗರುಡಾಸನ (ಭಾರದ. ೧೬೭). [ಸಂ.]

**ಹನುಮಾಯಣ** (ನಾ). ಹನುಮಂತನ ವಿಸ್ತಾರವಾದ ಕಥೆ: ಕೆಟ್ಟೆ ಹನುಮಾಯಣ ವಿದಾಯಿತು ಮುಟ್ಟೆ ರಾಮಾಯಣದ ಕಥೆಗಳ ಬಟ್ಟೆದಪ್ಪಿತು . . . ಎನುತಣುವನುದಕವನು ಥಟ್ಟನಸುರನ ಬಾಯಿಗೆಚೆದನು (ಕೌಶಿರಾ. ೨೨-೨೩).

[P ಇದು 'ರಾಮಾಯಣ' ಎಂಬ ಶಬ್ದದ ಹೋಲಿಕೆಯ ಮೇಲೆ ಆದ ರೂಪ] .

**ಹನುಮಿಸು** (ಕ್ರಿ). ಕೆನೆ; ಹೇಷಾರವಮಾಡು: ನರಿವಿಂಡುಗಳ ಕೂಡಿ ಬಹುವಿಧದ ವರ್ಣಗಳಲಿ ತುರಗಮಯವಾಗಿ ಹನುಮಿಸುತ ಖುರಪುಟವೆತ್ತಿ ಧರಣಿಯಂ ಬಗಿದೊಗುವ ವಹಿಲಗತಿ ಚಿತ್ರದಿಂದಿರಲು (ಲಶಿಚಂ. ೩೭-೧೨); ಳಿ ಮಸಗಿ ಹನುಮಿಸುತ ಖುರದಲಿ ನೆಲನ ಕೆರೆದವು ಕುದುರೆ (ಕುವ್ಯಾಭೀ.೮-೨); ಹನುಮಿಸಿದೊಡೆ ಸಿಂಹನಾದವೆಂದಾನೆಗಳ್ಮನ ಗುಂದುವವು ಕುದುರೆಗಳು ಕನಲಿ ಕಣ್ಗೆಡುವವೆಂದೆನಲಾ ವಾರುವನನುವನದೇನ ಬಣ್ಣಿಪೆನು (ಕುರಾಸಾಂ. ೧೩-೮೮). [ಹನುಮು + - ಇಸು$_1$]

**ಹನುಮು** (ನಾ). ಕುದುರೆಯ ಕೆನೆತ; ಹೇಷಾರವ: ಮೋಡಮಂ ಹನುಮಿಂ ಪಳಿದುಂ ನಾಡೆ ನರ್ತನದಿಂ ನಟನಂ ಕೂಡೆ ನಕ್ಕು ಸುವಕ್ತ್ರದೊಳಂ ಗಾಡಿಯಿಂದೆ ಪತಿವ್ರತೆಯಾ ಮೋಚೆಯಂದದ ವಾಜಿಚಯಂ (ಹಾಲಾಸ್ಯ. ೪-೧೧-೧೧೪). 'ಹನುಮಿಸು' ಪರಾ.

[< ಹನುಮ?]

**ಹನುರೋಮ** (ನಾ). ಮುಖದ ಕೂದಲು; ಗಡ್ಡ: ''ಮುಖರೋಮಂ ಶ್ಮಶ್ರು ಕೂರ್ಚಕಂ ಹನುರೋಮಂ'' (ವಸ್ತುಕೋ.೭೧-೭೨). [ಸಂ.]

**ಹನೆ$_1$** 'ಪನೆ$_1$' ನೋ.

**ಹನೆ$_2$** 'ಪನೆ$_2$' ನೋ.

**ಹನೆ$_3$** 'ಪಾನೆ' ನೋ.

**ಹನೆಗರಿ** (ನಾ). ತಾಳೆಗರಿ; ಪನೆಗರಿ: ವರ್ಷವೆಲ್ಲ ಮನೆಯ ಗೋಡೆಗಳನ್ನು ಮುಚ್ಚುತ್ತಿದ್ದ 'ಹನೆ' ಗರಿಗಳಿಗೆ ಆ ದಿನ ವಿಶ್ರಾಂತಿ (ಮರಮ. ೧).

[ಹನೆ$_1$(< ಪನೆ$_1$) + ಗರಿ (< ಗಱಿ)]

**ಹನೆಗೊನೆ** (ನಾ). ಹಲ್ಲಿನ ಆಕಾರದಲ್ಲಿರುವ ಹೊಂಬಾಳೆ: ಅಡಕೆಯ ಹನೆಗೊನೆ ಬಿಂಗಾರ ಹಳ್ಳಿಯ ಹೆಣ್ಣಿನ ಸಿಂಗಾರ ಬಡವರ ಬೆಡಗಿನ ಬಂಗಾರ ಕರಿದೇವ ಹರಸಲಿ ಮುಂಗಾರ ಹಿಂಗಾರ (ಕ್ರೌಂಚಧ್ವ. ೩-೧೯). [ಹನೆ$_2$ (< ಪನೆ$_2$) + ಕೊನೆ$_2$]

**ಹನೆಬೊಂಡ** (ನಾ). (ಕರಾ) ಹನೆಮರದ ಎಳೆಯ ಕಾಯಿ: ತಾನು ಮನೆಯಿಂದ ತಂದ ಹನೆಬೊಂಡದ ತೊಳೆಗಳನ್ನು ಎಬ್ಬಿಸಿ ಅವರ ಮುಂದಿಟ್ಟಳು (ಮರಮ. ೪೨೦).

[ಹನೆ$_1$ (< ಪನೆ$_1$) + ಬೊಂಡ$_1$]

**ಹನೆಮರ** 'ಪನೆಮರ' ನೋ.

**ಹನೆಹೆಡೆ** (ನಾ). = ಹನೆಗರಿ: ಮನೆಯ ಬಾಗಿಲಿಗೆ, ಒಂದು ತೂಗಾಡುವ 'ಹನೆಹೆಡೆ', ಮಳೆಗಾಲ ಬಂದರೆ ಯಾರನ್ನಾದರೂ ಬೇಡಿ ಕಾಡಿ, ಇನ್ನೊಂದು ಹತ್ತು ಹನೆಮರದ ಗರಿಗಳನ್ನು ತಂದು ನಾಲ್ಕು ಸುತ್ತಲೂ ತೂಗಿಸುತ್ತಾನೆ (ಹಹಸ. ೭೭).

[ಹನೆ$_1$ (< ಪನೆ$_1$) + ಹೆಡೆ$_1$(< ಪೆಡೆ)]

**ಹನ್ನ$_1$** 'ಪನ್ನ$_1$' ನೋ.

**ಹನ್ನ$_2$** 'ಪನ್ನ$_3$' ನೋ.

**ಹನ್ನವಣ** 'ಪನ್ನವಣ' ನೋ.

**ಹನ್ನವಣಿಗ** (ನಾ). (ವೀಳೆಯದ) ಎಲೆಯನ್ನು ಮಾರುವವನು: ಈನ್ತೀ ಧರ್ಮಮಂ ಸ್ಥಳದ ಹನ್ನವಣಿಗರುಂ ಡ್ಡಾಯದ ಕೋಲ್ಕಾಱರುಂ ಪುರಸ್ಸಹರಾಗಿ ನಡಸುವುದು (ಸೌಇಇ.IX-i; ೧೬೪-೪೩;1098); ಹನ್ನವಣಿಗ ಸಿಂಗಣನುಮ್ಮೆನೊಱ ನಾಲ್ವರುಮಿಟ್ಟು ಬಿಟ್ಟ ಧರ್ಮ ಗಾತ್ರಕ್ಕೆಯೊಂದು ಪೇಱಿ (ಕಇ. I, ೧೯-೧೫;1108).

[ಹನ್ನ$_2$ (< ಪನ್ನ$_3$) + - ವಣಿಗ$_2$]

**ಹನ್ನಸ** (ನಾ). ನಿಂದೆ; ಅಪವಾದ: ಮಱಿ ಮೋಸ ಕಲಹ ಕಾತರ ಕಟ್ಟಾಯಸ ಬಿಱುಬು ಹರುಬು ಹನ್ನಸಗಳ ತೆಱನಱಿಯದಳ ರಕ್ಷಿಸು ರಂಗಾ (ಶತಸಾಂ. ೩೩-೭೭); ಗನ್ನಗದುಕುಗಳ

ಕಳೆದು ಗರ್ವವ ಬಿಟ್ಟು ಹನ್ನಸಗಳನು ಹಬ್ಬಿಸದೆ ತನ್ನ ಬಾಳಿಕೆ ಬಡತನದ ಬಗೆಯನೆಲ್ಲ ಬಿನ್ನವಿಪುದು ವಿನಯದೊಳು (ಹದಿಬ. ೩-೨೨). [?]

**ಹನ್ನಸವಾತು** (ನಾ). ನಿಂದೆಯ ಮಾತು : ಈ ಮೇಲ್ಗೆಯ್ಮೆವಾಡಂ ಕೇಳ್ದುಮ್ಮಹದೊಳೆ ಗಮ್ಮನೆ ಪೋಪುದುಚಿತಮಿನ್ನಿವರ್ ಪಾಡುವ ಬಜಬಿನ್ನಣಿಯ ಹನ್ನಸವಾತುಗಳನನ್ನೆವರ ಮನ್ನರೆನಿಸಿ ಕೇಳ್ವೆಂ (ಚಕವಿ. ೬-೧೫೭ ವ). [ಹನ್ನಸ + ಮಾತು₁]

**ಹನ್ನಸು** 'ಪನ್ನಸು' ನೋ.

**ಹನ್ನಾಸಿ** 'ಪನ್ನಸು' ನೋ.

**ಹನ್ನಿಬ್ಬರ್** 'ಪನ್ನೆರಡು' ಪರಾ.

**ಹನ್ನಿಬ್ಬರ ಗಂಡ** 'ಪನ್ನೆರಡು' ಪರಾ.

**ಹನ್ನಿಬ್ಬರು** 'ಪನ್ನೆರಡು' ಪರಾ.

**ಹನ್ನಿರ್ಕಾಯಿ** 'ಪನ್ನೆರಡು' ಪರಾ.

**ಹನ್ನಿರ್ಚಾಸಿರ** 'ಪನ್ನೆರಡು' ಪರಾ.

**ಹನ್ನಿರ್ಧಾನ್ಯ** 'ಪನ್ನೆರಡು' ಪರಾ.

**ಹನ್ನಿರ್ಬರ್** 'ಪನ್ನೆರಡು' ಪರಾ.

**ಹನ್ನಿರ್ವರು** 'ಪನ್ನೆರಡು' ಪರಾ.

**ಹನ್ನುಸಿಗ** 'ಪನ್ನಸಿಗ' ನೋ.

**ಹನ್ನೆರಡು** 'ಪನ್ನೆರಡು' ನೋ.

**ಹನ್ನೆರಡುಮಹಲು** (ನಾ). ಕೋಟಿಮಹಲು, ಗಾಡೀಮಹಲು, ದೀವಟೀ ಮಹಲು, ಜಕಾಯತ್ ಮಹಲು, ತಟ್ಟಿಮಹಲು, ದರೋಗಿಮಹಲು, ಸೇಂದೀಮಹಲು, ಪಾಲಖಿಮಹಲು, ಇಮಾರ್ತಿ ಮಹಲು, ದರ್ಜಿಮಹಲು, ಫಾಯಿನ್‌ಮಹಲು ಮತ್ತು ಜಾಸೂದ್‌ಮಹಲು ಎಂಬ ಹನ್ನೆರಡು ವಿಧವಾದ ಭವನಗಳು: 'ಹಸವಾಯಿ ಜಗಜೆಂಪ ಸುಗುಣ ಕನ್ನಡಜಾಣ' ಪಾದಷಹನು ರತ್ನಖಚಿತ ವಾದ ವಸಂತಮಹಲಿನಲ್ಲಿ ಸಭೆಮಾಡಿಕೊಂಡು ಎಪ್ಪತ್ತೆರಡು ನಿಯೋಗ ಅಠಾರಖಾನೆ ಹನ್ನೆರಡುಮಹಲು ವಿದ್ವಜ್ಜನಸಮೇತವಾಗಿ ಸದರು ಮಾಡಿಕೊಂಡು ಕುಳಿತಿದ್ದನು (ಬಖೈರು. ೪). [ಹನ್ನೆರಡು (< ಪನ್ನೆರಡು ) + ಮಹಲು (< ಮಹಾಲು)]

**ಹನ್ನೊಂದು** 'ಪನ್ನೊಂದು' ನೋ.

**ಹಪ** (ನಾ). ಬೈಗುಳು; ಶಾಪ.

ಹಪಹಾಕು = ಬೈಯು; ಶಾಪಹಾಕು: ಉಪಕಾರ ಅರಿಯದವ ಊಟಕ್ಕೆ ಬಂದರೇನೊ ಹಪಹಾಕಿ ಉಣಿಸುವ ಅಪ್ಪನಾದರೆ ಏನೊ (ವಿದಾಕ್ಯ. ೧೧೭-೩).

[?. / ಮರಾ. ಹಪಾಪ್ = ದುರಾಸೆ, ವ್ಯಥೆ]

**ಹಪತಾಪ** (ನಾ). ಸಂಕಟದಿಂದ ಕೂಡಿದ ತಾಪ; ಬಹಳವಾದ ಸಂಕಟ: ಪಾಪವೆಂಬ ಗರಳದಲ್ಲಿ ಹಪತಾಪ ಪಡುತ್ತೇನೆ ಶ್ರೀಪತಿಯೆ ನಿನ್ನ ನಾಮ ಲೇಪಿಸೆನ್ನ ನಾಲಿಗೆಗೆ (ವಿದಾಕ್ಯ. ೧೧೭-೬). [ಹಪ₁(ಔ ← ಮರಾ. ಹಪಾಪ್) + ತಾಪ₁]

**ಹಪಹಪ** (ನಾ). ತೊಂದರೆ; ತ್ರಾಸ: ಎಲೆಗೆರಡಾದರೂ ಚೆಲ್ಲದಿದ್ದರೆ ಯಾರಿಗೂ ತೃಪ್ತಿ ಇಲ್ಲ. ಅದೇನೋ ಹಪಹಪ ಎಲ್ಲರ ಮನಸ್ಸಿಗೂ (ದಾಕುಟ. ೧೧೪).

[← ಮರಾ. ಹಪಾಪ್]

**ಹಪಹಪಿಸು** (ಕ್ರಿ). ಬವಣೆಪಡು; ಬೇಗುದಿಗೊಳ್ಳು: ಮನೆಯಲ್ಲಿಯ ಕಾಳು-ಕಡಿಗಳೆಲ್ಲ 'ತಳ ಝಾಡಿಸಿ' ಪ್ರತಿಯೊಂದು ಒಕ್ಕಲುಕುಟುಂಬವೂ ಹಪಹಪಿಸಿತು (ಬರಹಾ. ೫೮); ಒಮ್ಮೆಲೆ ಕೇಳಬಂದಿತು ಬನುವನಿಗೆ ಅರ್ಧ ಕುಡಿದು ಹಪಹಪಿಸುತ್ತಿರುವ ತನ್ನಣ್ಣನ ದನಿ! (ಬನಸಿ. ೨೫). [ಹಪಹಪ + - ಇಸು₃]

**ಹಪಾಪಿ** (ನಾ). (ಉಕ) ೧. ದುರಾಸೆ; ಲೋಭ: ಹಪಾಪಿಯಿಂದ ಎಲ್ಲ ದಿನಗಳನ್ನು ಮೊದಲಿಗೇ ವೆಚ್ಚಮಾಡಿ ಆಮೇಲೆ ಚಡಪಡಿಸುವ ಸ್ಥಿತಿ ಇವನಿಗಿಲ್ಲ (ಗಾಳಿಪ. ೫೮). ೨. ದುರಾಸೆಯುಳ್ಳ ವ್ಯಕ್ತಿ; ಲೋಭಿ: ಅವುಗಳಿಗೆ ಭೋಗಗಳನ್ನು ಸೇವಿಸಲಿಕ್ಕೆ ಅನುವನ್ನೇ ಮಾಡಿಕೊಡದಿದ್ದರೆ ಅವು ಹಪಾಪಿಯಾಗಿ ಅನುಕೂಲಸಂಧಿ ದೊರೆತೊಡನೆ ಅನಿಯಂತ್ರಿತವಾಗುವುವು (ಭಾರಸಂ. ೧೭೦); ಮೊದಲಿನಿಂದಲೂ ಹೊಂಚುಹಾಕಿ ಕುಳಿತ ಹಪಾಪಿಯಂತೆ! (ಮೂರುದಾ. ೨೯೧). [← ಮರಾ. ಹಪಾಪ್]

**ಹಪಾಪಿತನ** (ನಾ). ದುರಾಸೆ; ಲೋಭ: ಎರಡಕ್ಕೆ ಬದಲು ಹತ್ತು ಕಣ್ಣುಗಳಿದ್ದರೆ ಹೇಗೊ ಹಾಗೆ ಹಪಾಪಿತನದಿಂದ ಕೂರಾಗಿ ನೋಡಿದರು (ಕಾಗೆ. ೨೩); ಎಷ್ಟು ತಿಂದರೂ ಸಾಕಿಲ್ಲ. ದರಿದ್ರತನ ತಪ್ಪುವದಿಲ್ಲ. ಹಪಾಪಿತನ ಹೋಗುವದಿಲ್ಲ (ಸ್ಮೃತಿಚಿ. ೩೮೯).

[ಹಪಾಪಿ + - ತನ]

**ಹಪಾಪಿಸು** (ಕ್ರಿ). ಅತಿಯಾಗಿ ಬಯಸು; ತವಕಪಡು: ಮತ್ಸರಬುದ್ಧಿಯಿಂದ ದೂಷಿತವಾದ ಗಂಡನ ಪ್ರೇಮಕ್ಕಾಗಿ ಅವಳು ಹಪಾಪಿಸಿರಲಿಲ್ಲ (ಸ್ತ್ರೀಶಾಪ್ನ. ೬೭); ಜನರೆಲ್ಲ ಅಧಿಕಾರ ಗೌರವಕ್ಕೆ ಹಪಾಪಿಸಿದ್ದಾರೆ (ರಂಗರೂ. ೧೫೧); ಮನುಷ್ಯರೆಂಬುವ ಮಾನವಪ್ರಾಣಿಗಳು . . . ಅನ್ನಕ್ಕಾಗಿ ಹಪಾಪಿಸಿ ಅನ್ನದ ದಾರಿ ನೋಡುತ್ತ ಸಾಲುಸಾಲಾಗಿ ಕುಳಿತಿದ್ದರು (ಮಣ್ಣಮ. ೧೨೬). [ಹಪಾಪಿ + - ಇಸು₃]

**ಹಪಾಪಿಹದ್ದು** (ನಾ). ದುರಾಸೆಯ ಹದ್ದು : ಮೊದಲ ಸಲ ಅನ್ನ ದೃಷ್ಟಿಗೆ ಬಿದ್ದೊಡನೆ ಹಪಾಪಿಹದ್ದಿನಂತೆ ಹಾರಿ ಅದನ್ನು ಹೊಡೆಯುತ್ತಿರಲಿಲ್ಲ (ಅನಾದಿ. ೩೫).

[ಹಪಾಪಿ + ಹದ್ದು₁ (< ಪರ್ದು)]

**ಹಪ್ತೆ, ಹಫ್ತೆ** (ನಾ). ೧. ಏಳುದಿನಗಳ ಅವಧಿ; ಒಂದು ವಾರ: ಬಡಾಫಕೀರರು . . . ಇಲ್ಲಿಂದ ಹೋಗಿ ಎರಡು ಹಪ್ತೆಗಳಾದವು (ದೌಲತ್. ೧೪); ಈ ಒಂದು ಹಪ್ತೆ ಒಂದು ವರ್ಷದಲ್ಲಿ ತರಲಾಗದಷ್ಟು ಮಾರ್ಪಾಡನ್ನು ಅವಳಲ್ಲಿ ತಂದಿತ್ತು (ಹುಲಿಹಾ. ೮೮). ೨. ಕಂತು ಕಟ್ಟುವ ಕಾಲಾವಧಿ ಮತ್ತು ಕಂತಿನ ಹಣ: (೩). ೩. ಕಂದಾಯ; ತೆರಿಗೆ: ಸಭೆ, ಮೆರವಣಿಗೆ ಮಾಡಿರಿ, ಬೇಡವಾದರೆ ಸರಕಾರದ ಕಾಯದೆಗಳನ್ನು ಪಾಲಿಸಬೇಡಿರಿ, ಹಪ್ತೆ ಕೊಡಬೇಡಿರಿ (ಬಂಗಾರ. ೧೭೭); ನಿನ್ನ ಹೊಲದ ಹಪ್ತೆ ಏನರ ಈ ಸರೆ ಹೆಚ್ಚು ಆಗೇತೇನು? (ಗಂಮಾಯಿ. ೧೮೮). **ಹಫ್ತೆ**: (ಅನಂಪಾ); (ಕಿಸಂಗ್ಯಾ, ೫೯).

[← ಪಾರ ಹಿಂ. ಹಫ್ತಾ; ಮರಾ. ಹಪ್ತಾ, ಹಫ್ತಾ ./ ಸಂ. ಸಪ್ತಾಹ]

**ಹಪ್ತೆಕೊಡು** (ಕ್ರಿ). ಕಂದಾಯ ಸಲ್ಲಿಸು; ತೆರಿಗೆ ಕೊಡು: ನಾವು ಹಪ್ತೆಕೊಟ್ಟು-ಕೊಟ್ಟು ಸತ್ತೆವು. ಆದರಿನ್ನೂ ಇವರ ಹೊಟ್ಟೆ ತುಂಬಿಲ್ಲ (ಜಮಿನ್ನಾ. ೬೪).

[ಹಪ್ತೆ + ಕೊಡು₁]

**ಹಪ್ಪರಿಕೆ** (ನಾ). (?): ಸರಕಿನ ಕೋಣೆ ಕಟ್ಟಳೆಮರಂ ಕುಡುಗೋಲ್ತೆರಸೀರೆ ದಬ್ಬಳಂ ಹುರಿ ಗಡಹಾರೆ ನೇಣ್ಕೊಡಲಿ ಕತ್ತಿಗೆ ಸಗ್ಗಳೆ ಗೂಂಟವೆತ್ತು ಹಪ್ಪರಿಕೆಯ ಭಂಡಿ ತೊತ್ತು ಬೆಸವಾಳ್ ಸವಗಂ ತೊದೆ ಮೊಚ್ಚೆಯಂಗಳೆಂಬುರುತರಸಾಧನಂಬೆರಸು ದಂಡಿನವರ್ ಪೊಱಮಟ್ಟರರ್ಥಿಯಿಂ (ತ್ರಿಪುವಿ. ೨೪-೨೮೫). [?]

**ಹಪ್ಪಳ** 'ಪಪ್ಪಡ' ನೋ.

**ಹಪ್ಪಳಕಾರ** 'ಪಪ್ಪಡಕಾರ' ನೋ.

**ಹಪ್ಪಳಖಾರ** 'ಪಪ್ಪಡಕಾರ' ನೋ.

**ಹಪ್ಪಳಿಕೆ, ಹಪ್ಪಳಿಗೆ** (ನಾ). ೧. (ಹಪ್ಪಳದಂತೆ) ಚಪ್ಪಟ್ಟೆಯಾಗಿರುವುದು: ನಿಯತದ್ವಿತ್ವಕ್ಕೆ - ಪಪ್ಪುಕಂ . . . ಹಪ್ಪಳಿಕೆ, ಹಿಪ್ಪಲಿ, ಸಿಪ್ಪು (ಶಮದ. ೩೬ ಪ್ರಯೋ). 'ಹಪ್ಪಳಿಕೆಮೂಗು' ಪರಾ. **ಹಪ್ಪಳಿಗೆ**: ೧. ಸ್ಫಟಿಕೋಪಲಂಗಳಿಂ ಧಾರಿಣಿ ಕೂಡೆ ಹಪ್ಪಳಿಗೆಯೊತ್ತಿದುದೋ ಸಲಿಲಾಶಯಂ ಪಯಃಪೂರವನಾಂತುದೋ ದಿಟಕೆ ತಾನೆನಿಸಿತ್ತಮೃತಾಂಶುರಶ್ಮಿಯಿಂ (ಚಂದ್ರಪ್ರ. ೮-೩೯). ೨. ಚಪ್ಪಟೆಯಾದ ಕಲ್ಲು; ಹಾಸುಗಲ್ಲು: ಆ ತೀರ್ಥದ್ವಾರಪಕ್ಷಶೋಭಾರ್ತ್ಥಂ ಮಾಡಿಸಿದ ನೀರಂಗದ ಹಪ್ಪಳಿಗೆ ಯುಮನೀ ಮಹಾಸೋಪಾನಪಙ್ತಿಯುಮಂ ರಚಿಸಿದಂ ಶ್ರೀಗೊಮ್ಮಟದೇವರ ಸುತ್ತಲು ರಂಗಮ ಹಪ್ಪಳಿಗೆಯಂ ಬಿಗಿಯಿಸಿದಂ (ಎಕ. II, ೨೬೭-೭; 1160).

[ಹಪ್ಪಳ (< ಪಪ್ಪಡ) + - ಇಕೆ]

**ಹಪ್ಪಳಿಕೆಮೂಗು** (ನಾ). ಹಪ್ಪಳದಂತೆ ಚಪ್ಪಟೆಯಾದ ಮೂಗು; ತಟ್ಟೆಮೂಗು: ಪಱಿದಲೆ ಕುಱಿನೊಸಲಟಿಗಣ್ ನೊರೆವಾಯ್ ಹಪ್ಪಳಿಕೆಮೂಗು (ಯಶೋಚ. ೨-೩೮).

[ಹಪ್ಪಳಿಕೆ + ಮೂಗು]

**ಹಪ್ಪಳಿಗೆ** 'ಹಪ್ಪಳಿಕೆ' ನೋ.

**ಹಪ್ಪಳಿ** (ನಾ). ಚಪ್ಪಟೆಯಾಗಿರುವ ಕಲ್ಲು; ಚಪ್ಪಡಿ: ಇಂದುಕಾಂತದ ಶಿಲೆಯ ಹಪ್ಪಳಿ ಬಂಧಿಸಿದ ಸೋಪಾನ ಸುತ್ತಲು ಹೊಂದಿ ಹೊಱಗಾಣಿಸದ ಸಪ್ತಾವರಣಮಯಭಿತ್ತಿ (ಪ್ರಭುಲೀ. ೨೧-೧೦). [< ಹಪ್ಪಳ]

**Δ ಹಪ್ಪಟಿ** 'ಪಪ್ಪಡ' ನೋ.

**ಹಪ್ಪು** (ನಾ). ಮಾಂಸದ ತುಂಡು; ಬಾಡಿನ ಚೂರು: ಇರುಳಾಗಲಿಬ್ಬರುಂ ಹುಲಿಯನೇಳಿಸಿ ಪೋಪೆವೆರ ಬೇಕೆ? ಹಸಿದಿಹೆಯ ಕಾಡ ಮದುಮಗನೆ ಇರುವುದಿಲ್ಲಿಯೆ ಹಪ್ಪು ಮೆರವಣಿಗೆ ನಾಳೆ ನೀನರಸನಾಗುವೆಯೆಂದು ಪೋದರವರೊಡನೆ (ಕಾಲೂರ. ೮೮-೧೭೦); ಮಾತು ಕೇಳದ ಮಕ್ಕಳು ನಾಯಿ ಬಾಯಿಗೆ ಹಪ್ಪು (ಗಾದೆ). [?]

**ಹಪ್ಪುಕಳ** (ನಾ). "ಹಪ್ಪು ತಿನ್ನುವ ಹದ್ದು; ಕಬ್ಬಾರೆಹದ್ದು; ರಣಹದ್ದು" (ಸಿರಿಕೋ. ೫೮೨): ಈಗ ಈ ಹುಡುಗ ಸಿಕ್ಕಿದ್ದಾನೆ; ಅವನನ್ನು ಲಗಾಡಿ ತೆಗೆಯುತ್ತಾರೆ; ಚೂರು ಚೂರು ಇರಿಸುವುದಿಲ್ಲ . . . ಶುದ್ಧ ಹಪ್ಪುಕಳಗಳು (ಹಹಸ. ೫೮). [ಹಪ್ಪು + ಕಳ$_1$]

**ಹಪ್ಪುಸವಗ** (ನಾ). ಒಂದು ಬಗೆಯ ಮರ: ಹಪ್ಪುಸವಗ - ಶೋಭೆಯುಳ್ಳ ದೊಡ್ಡ ಮರ. ಕಟ್ಟಿಗೆ ಕೆಲಸಕ್ಕೆ ಬರುವದಿಲ್ಲ. ತೋಟೆಯ ನಾರಿನಿಂದ ಹಗ್ಗಗಳಾಗುತ್ತವೆ. ಸಮುದ್ರ ತೀರದಲ್ಲಿ ಈ ನಾರಿನ ವಸ್ತ್ರಗಳನ್ನು ಮಾಡುವರು (ಕಭಾಗ. ೪೯).

[ಹಪ್ಪು$_?$ + ಸವಗ]

**ಹಫ್ತೆ** 'ಹಪ್ತೆ' ನೋ.

**ಹಬಶಿ, ಹಬಸಿ, ಹಬ್ಬಸಿ, ಹಬ್ಬಿಸಿ, ಹಬ್ಬುಸೆ** (ನಾ). ೧. ಒಂದು ದೇಶದ ಹೆಸರು; ಅಬಿಸೀನಿಯಾ: ನಮಗೆ ಕಾಣಿಸಿದವನಿಗೆ ಪ್ರಾಣಾಜ್ಞೆಯಾಗಲೆಂದು ಹಬಶಿಯವರಿಗೆ ಹುಕ್ಕುಂ ಕಳುಹಿಸಿದನು (ಕಥಾಮಂ. IV, ೧೦೦). **ಹಬಸಿ:** ೧. ಆಫ್ರಿಕಾಖಂಡದೊಳಗೆ ಹಬಸೀದೇಶದಲ್ಲಿಯೂ (ಮುಂಬಯಿ. ೪-೪೭). ೨. ಅಬಿಸೀನಿಯಾ ದೇಶದವನು: ಮೋರೆಯಂತೂ ಹಬಸಿಯ ಮೋರೆಯಂತೆ ಎಷ್ಟು ಚಂದ ಕಾಣುತ್ತದೆ! (ಮೋಹಿನೀ. ೨೮). **ಹಬ್ಬಸಿ:** ೧. 'ಹಬ್ಬಸಿಗ' ಪರಾ. **ಹಬ್ಬಿಸಿ:** ೨. ಹಬ್ಬಿತು ಕೆಂಧೂಳು ಮುಸುಕೆ ಬಹ ಹಬ್ಬಿಸಿಗಳು ಫರಂಗಿಗಳು (ಸೌಂದಕಾ. ೫-೧೧). **ಹಬ್ಬುಸೆ:** ೧. ಬರ್ಬರದ ಸ್ತ್ರೀನಿಕರ ರೂಪಿಲಿ ವಿಭ್ರಮೆಯ ನೋಡುವರೆ ಸಹಸದಿ ನಿರ್ಬರವು ಠಕ್ಕುಗಳನರಿಯರು ನಿರ್ಮಳಾಂಗಿಯರು ಹಬ್ಬುಸೆಯ ಸಿಂಗಣವು ಬೋಟಕ (ಕಕ್ಕೋಕ. ೯-೭೨).

[← ಪಾರ. ಹಿಂ. ಹಬಶೀ; ಮರಾ. ಹಬಶೀ, ಹಫ್ಶೀ]

**ಹಬಸಿ** 'ಹಬಶಿ' ನೋ.

**ಹಬಸೇಗಿಡ** (ನಾ). ಒಂದು ಬಗೆಯ ಗಿಡ: "ವಂಜುಲಃ, ನಿಚುಲಃ - ಈ ೨ ಹಬಸೇ ಗಿಡದ ಪೆಸರ್" (ಹಲಾಯು. ೩೨-೪೨). [ಹಬಸ್ಸೆ + ಗಿಡ (<ಗಿಡು)]

**ಹಬು** 'ಪಬು' ನೋ.

**ಹಬೆ, ಹಬ್ಬೆ$_2$** (ನಾ). ೧. ಕಾಂತಿ; ಪ್ರಭೆ: ಪರಿವೃತರೇಫಲೋಪಕ್ಕೆ . . . ಪ್ರಭಾ - ಹಬೆ; ಪ್ರಭು-ಹಬು (ಶಮದ. ೨೬೧ ಪ್ರಯೋ); ಮಿಸುನಿರತುನದ ಹಬೆ[ಪಾಠಾಂ. ಚವಿ]ಗಳಲಿ ರಂಜಿಸುವ ಮಂಟಪದೊಳಗೆ ರಾಜಪ್ರಸರದೊಡನವನೀಶನಿದ್ದನು ಸಿಂಹಪೀಠದಲಿ (ನಳಚ. ೪-೨೫); ಪುರದ ಪುರಂಧ್ರಿಯರ ಪೊಂಬಚ್ಚದೊಚ್ಚತಂ ಟಟಟಟಿಪ ಹಬೆಯು ಪರ್ಬುಗೆಯಿಂ . . . ರಾಜಿಪ ನಗರಮಂ ಕಣ್ಣಾಣೆಯೆ ಕಂಡು (ರಾಮಾಶ್ವ. ೧೦೪-೨). ೨. (ಬಿಸಿಯಿಂದ ಬರುವ) ಆವಿ; ಉಗಿ: ಆಮ್ಲ, ಸಾರ, ಅನಿಲಗಳನ್ನು ಬಟ್ಟಿರೆ ಉಗಿ ಇಲ್ಲವೆ ಹಬೆಯು ಅಧಿಕವಾಗಿ ವಾಯುಗೋಲದಲ್ಲಿದೆ (ಬಾಲಪ್ರ. II, ೯೦೨); ಆಹಾರ ಬೇಯುವ ಪಾತ್ರೆಯನ್ನು ಮುಚ್ಚಿರಬೇಕು. ಹೀಗೆ ಮುಚ್ಚದಿದ್ದರೆ ಕೆಲವು ವಿಟಮಿನ್ನುಗಳು ಹಬೆಯೊಡನೆ ಹೊರಹೊರಟು ನಷ್ಟವಾಗುವುವು (ಗೃಹವಿ. ೫೧); ಸೂರ್ಯನ ಮೇಲ್ಮೈ ಮಿಂಚುವ ಅನಿಲ ಹಬೆಗಳಿಂದ ರಚಿತವಾಗಿದೆ (ಆಕಾಶ. ೯); ಹಬೆಗೆ ತಾಳದೆ ಉರಿಯೊಳಗೆ ಬಿದ್ದ (ಗಾದೆ). **ಹಬ್ಬೆ$_2$:** ೧. ಫಣೆಗಣ್ಣನ ನಿಡುಹಬ್ಬೆಯೋ ಕುಂಡಲ ಫಣಿಫಣಾಮಣಿಗಣಗ್ಘಣಿಯೊ ಹಸ್ತದಿ ಮಣಿಯದ ಕಾಲಾನಲಕೀಲೆಯ ರೋಚಿಶ್ಚಯವೋ (ಭಕ್ತಿಸ. II, ೪-೩). [< ಸಂ. ಪ್ರಭಾ./ ತುಳು. ಹಬೆ]

**ಹಬೆಗಣ್ಣು** (ನಾ). ಉಷ್ಣದಿಂದ ಕೆಂಪಾದ ಕಣ್ಣು; ಆವಿಗಣ್ಣು; ಕಾವುಕಣ್ಣು: ನೀರುಗಣ್ಣು, ಜಾರುಗಣ್ಣು, ಕಿಸುಬುಗಣ್ಣು, ಹಬೆಗಣ್ಣು (ಶುಕಸ. ೩.೨೮).

[ಹಬೆ + ಕಣ್ಣು (< ಕಣ್)]

**ಹಬ್ಬ** 'ಪರ್ಬ' ನೋ.

**ಹಬ್ಬಗಾಣಿಕೆ** (ನಾ). ಪುಣ್ಯಕಾಲದಲ್ಲಿ ಕೊಡುವ ಕಾಣಿಕೆ: ತೋಟಿಕೆ ತೆಱುವ ಸಿದ್ದಾಯದ ಯಿಪ್ಪತ್ತುಹಣ ಹಬ್ಬಗಾಣಿಕೆ ಹೊಂನಂಗಿಯಲಿ (ಎಕ. VIII, ತೀರ್ಥಹ. ೨-೨೯; 1423); ದೀವಳಿಗೆ ಯುಗಾದಿ ಹಬ್ಬಗಾಣಿಕೆ ಗ ೨ (ಎಕ. VIII, ತೀರ್ಥಹ. ೯೫-೭೪; 1709).

[ಹಬ್ಬ (< ಪರ್ಬ) + ಕಾಣಿಕೆ (< ಕಾಣ್ಕೆ)]

**ಹಬ್ಬಣ್ಣ** (ನಾ). ಒಬ್ಬಾತನ ಹೆಸರು: ಸೇನಬೋವ ಹಬ್ಬಣ್ಣಂಗೆ ದಯೆಗೆಯ್ದುಂಬಳಿ ಯಾಗಿ ಕೊಟ್ಟ ಮತ್ತರ್ಪ್ಪದಿನಾಲ್ಕು (ಇಇ. XVIII, ೪೦-೩೮; 999). [? + ಅಣ್ಣ$_1$]

**ಹಬ್ಬಸಿ** 'ಹಬಶಿ' ನೋ.

**ಹಬ್ಬಸಿಗ, ಹಬ್ಬಿಸಿಗ** (ನಾ). ಅಬಿಸೀನಿಯಾದೇಶದವನು: ತಮ್ಮ ನಚ್ಚಿನ ಹಬ್ಬಸಿಗರ ಸಾಸಿರದಿನ್ನೂರ ಕಟ್ಟಾಳ್ಗಳ ರಾವುತದಳವನ್ನು . . . ಸಜ್ಜಾಗಿರಬೇಕೆಂದೆಚ್ಚರಿಸಿ (ಮಂತ್ರಶ. ೯೮); ಈ ಹಬ್ಬಸಿಗರ ಪಡೆಯನ್ನೊಡಗೊಂಡು, ಶ್ರೀಮಂತರು . . . ಹೊರಡಲನುವಾಗಿರುವರು (ಮಂತ್ರಶ. ೯೯). **ಹಬ್ಬಿಸಿಗ:** ಮದವಟಿದತ್ತು ಮೈಮೆಯಟಿದತ್ತಿಳೆಯೊಳ್ ಬಳೆದತ್ತು ದುರ್ಯಶಂ ಪದೆದು ಪಠಾಣ ಹಬ್ಬಿಸಿಗ ರೋಹಿಲ ಸೈದಬಲಂ ಮಲಂಗಿದತ್ತೊದವಿ ಪಲಾಯನಂಬಡೆವುದು (ಚಿಕವಿ. ೨-೧೧೭).

[ಹಬ್ಬಸಿ (< ಹಬಶಿ) + - ಗ$_2$]

**ಹಬ್ಬಹರಿದಿನ** 'ಪರ್ಬ' ಪರಾ.

**ಹಬ್ಬಹಾಡಿ** 'ಪರ್ಬ' ಪರಾ.

**ಹಬ್ಬಹುಣ್ಣಿಮೆ** 'ಪರ್ಬ' ಪರಾ.

**ಹಬ್ಬಿ** (ನಾ). (?): ಹಬ್ಬಕ್ಕೆ ಅಕ್ರೂರ ಕರದೊಯ್ದನದಕೋ ಶಬ್ದದ ಬಿಗಿವಿಲಿ ಹೆಣ್ಣಿನ ಗೋಸುಗ ತಬ್ಬಿಬ್ಬ ಭೀಷ್ಮನುಗೊಳಿಸೀದನದಕೊ ಹಬ್ಬೀಗಿಕ್ಕಿ ತಮ್ಮ ಮನಸಿಗೆ ಬಂದಂತೆಯಬ್ಬಟ್ಟೆಗೊಲ್ಲರು ಆಡಿದರದಕೊ (ಮೋಕ್ಷದೀ. ೨೩-೩); ಒಬ್ಬರಿಬ್ಬರೇನೊ ಭುಂಜಿಸುವರು ನಿತ್ಯಾ ಹಬ್ಬಿಗಿಕ್ಕದೆ ನೋಡು ಸಾಲುಸಾಲಾಗಿ ಇದ್ದು ಉಬ್ಬಿ ಮತ್ಸರದಿಂದ ಎಲ್ಲಾದರು ನಾನೊಬ್ಬನೆ ಕರ್ಮದಲ್ಲಿ ಬಿಡದೆ ಹಾಕಲಿಬೇಕು (ವಿಸಾಸು. ೪೭-೫); ಹಬ್ಬಿದ ಸುಖಮಾನವಬ್ಬಿಗೆ ಸತಿಪತಿ ಇಬ್ಬರಾನಂದದಲ್ಲಿ ಹೆಬ್ಬಟ್ಟಿನಲ್ಲಿ ಸವಿದು ಸಭ್ಯವಾಗಿಪ್ಪದು ಹಬ್ಬವೆ ಬಲುಹಬ್ಬ ನಿರ್ಭಯವಾದ ರತ್ನಗರ್ಭದಲ್ಲಿ ಕುಟಿರ ಗುಬ್ಬಿಗೂಡಿನಷ್ಟು ಗರ್ಭವಾಸವೆ ರಚಿಸಿ ಹಬ್ಬಿಗಿಕ್ಕದೆ ಏನು ನಿರ್ಬಂಧನವಿಲ್ಲದೆ ಲಭ್ಯವಾಗಿಪ್ಪ ಗರ್ಭದ ಸುಖಿಗಳವರು (ವಿಸಾಸು. ೫೩-೧). [?]

**ಹಬ್ಬಿಗೆ** 'ಪರ್ಬುಗೆ' ನೋ.

**ಹಬ್ಬಿಸಿ** 'ಹಬಶಿ' ನೋ.

**ಹಬ್ಬಿಸಿಗ** 'ಹಬ್ಬಸಿಗ' ನೋ.

**ಹಬ್ಬಿಸು** 'ಪರ್ಬಿಸು' ನೋ.

**ಹಬ್ಬು$_1$** 'ಪರಪ್ಪು$_1$' ನೋ.

**ಹಬ್ಬು$_2$** 'ಪರಪ್ಪು$_2$' ನೋ.

**ಹಬ್ಬುಕಟುಕೆ, ಹಬ್ಬುಗರಿಕೆ** (ನಾ). ಹಬ್ಬಿ ಬೆಳೆಯುವ ಒಂದು ಬಗೆಯ ಕರುಕೆ: "ಅವಾಕ್ಪರ್ಣ-ಮಲ್ಲಿ, ಹಬ್ಬುಗಟುಕೆ" (ಓಷಧಿ. ೯). **ಹಬ್ಬುಗರಿಕೆ:** ಹೊಲದ ತುಂಬ ಹಬ್ಬುಗರಿಕೆ ಹರಡಿದೆ (ರೂಢಿ). [ಹಬ್ಬು$_1$ (< ಪರಪ್ಪು$_1$) + ಕಱುಕೆ$_1$ (< ಕಱುಂಕೆ)]

**ಹಬ್ಬುಗಣೆ** (ನಾ). ಹರಡುವ ಬಾಣ: ಗಬ್ಬರಿಸಿ ಗಬಲಿಕ್ಕಿ ಮುಸುಕಿದಂ ಕೂರ್ಗಣೆಯ ಹಬ್ಬುಗಣೆಯಿದಿರುಗಣೆ ಬಳಿಸಲಿಸಿ ರಿಪುಬಲವನೆಬ್ಬಿಸಿದ ಯಮನಗರಿಗಂ (ತುರಂಗ. ೫೧-೨೭). [ಹಬ್ಬು$_1$ (< ಪರಪ್ಪು$_1$) + ಕಣೆ$_1$]

**ಹಬ್ಬುಗರಿಕೆ** 'ಹಬ್ಬುಕಟುಕೆ' ನೋ.

**ಹಬ್ಬುಗಿಡಿ** (ನಾ). ಹರಡುವ ಕಿಡಿ; ಹಬ್ಬುವ ಕಿಡಿ: ಅಬ್ಬರಿಸಿ ಬಲುಮುಷ್ಟಿಗಳ ನಭಕೆಬ್ಬಿಸುತ ಕಯ್ದುಡುಕಿದರು ಸುರುಬ್ಬಿಟಿಯ ಸುಳಿಸಿದರು ಮುಷ್ಟಿಯ ಸೂಳುಪಾಳಿನಲಿ ಹಬ್ಬುಗಿಡಿಗಳ ಹೊದಱುದಿವಿಗಳ ಗುಬ್ಬರದ ಸಬುದದಲಿ ತಾಯ್ಮಳಲುಬ್ಬುತಿರ್ದುದು ಶರಧಿಯಲಿ ತಾ ಸೊರಹಲೇನೆಂದ (ತೊರರಾ. ೪-೩-೯). [ಹಬ್ಬು$_1$ (< ಪರಪ್ಪು$_1$) + ಕಿಡಿ]

**ಹಬ್ಬುಗುಳ್ಳ** (ನಾ). ಹಬ್ಬಿ ಬೆಳೆಯುವ ಒಂದು ಬಗೆಯ ಗುಳ್ಳ– ಬದನೆ: ಕೆಂಪುಗುಳ್ಳ, ಹಬ್ಬುಗುಳ್ಳ (ಮೈಟಿಗಿ. ೭೦-೧೪೪೧). [ಹಬ್ಬು$_1$ (< ಪರಪ್ಪು$_1$) + ಗುಳ್ಳ]

**ಹಬ್ಬುಗೆ** 'ಪರ್ಬುಗೆ' ನೋ.

**ಹಬ್ಬುಗೆವಲೆ** (ನಾ). ಒಂದು ಬಗೆಯ ಬಲೆ; ಹರಡಿರುವ ಬಲೆ: ಹಬ್ಬಲಿ ತೆರೆಸೀರೆ ಕಾಲ್ಕಣ್ಣೆ ಬೆಳ್ಳಾರ ಹಬ್ಬುಗೆವಲೆಗಳ ಹೊಚೆಯ ಒಬ್ಬರೊಬ್ಬರ ಬೈವುತ

ಹೊತ್ತು ನಡೆದರಂದಬ್ಬರ ಮಸಗೆ ಶಬರರು (ಕುರಾಸಾಂ. ೨೭-೪೩).

[ಹಬ್ಬುಗೆ (< ಪರ್ವುಗೆ) + ಬಲ್ಗೆ₁]

**ಹಬ್ಬುಗೆವಿಡಿ** (ಕ್ರಿ). **ಮೆಟ್ಟಿಲನ್ನು ಆಶ್ರಯಿಸು; ಸೋಪಾನಮಾರ್ಗವನ್ನು ಅನುಸರಿಸು:** ಸಿದ್ಧಲೋಕಕೆ ಪೋಪರಿದು ತಾನೆ ಸೂಚನೆ ಸಿದ್ಧಶಿಲೆಯೊಲಿದ ಶೈಲ ಸಿದ್ಧಂ ನಮೋಯೆಂದು ಹಬ್ಬುಗೆವಿಡಿದದಱುದ್ಧವನೇಱಿದರವರು (ಭರಚ. ೬೬-೭).

[ಹಬ್ಬುಗೆ (< ಪರ್ವುಗೆ) + ಪಿಡಿ₁]

**ಹಬ್ಬುಗೆವೆಳಗು** (ನಾ). **ಹರಡುತ್ತಿರುವ ಕಾಂತಿ; ಹಬ್ಬುತ್ತಿರುವ ಪ್ರಭೆ:** ಹೊಳೆಹೊಳೆವ ಕೈದುಗಳ ಹಬ್ಬುಗೆವೆಳಗು ಗಬ್ಬರಿಸಿದುದು ದಿಗುತಟವ (ಕುವ್ಯಾಭೀ. ೧-೪೭). [ಹಬ್ಬುಗೆ (< ಪರ್ವುಗೆ) + ಬೆಳಗು₂]

**ಹಬ್ಬುಗೊಳ್ಳು** 'ಪರ್ವುಗೊಳ್' ನೋ.

**ಹಬ್ಬುಬದನೆ** (ನಾ). = ಹಬ್ಬುಗುಳ್ಳ: "ಲತಾಬೃಹತೀ - ಬಳ್ಳಿಸುಂಡೆ, ಹಬ್ಬು ಬದ (ನೆ)ನೆ" (ಓಷಧಿ. ೧೪೨). [ಹಬ್ಬು₁ (< ಪರಪ್ಪು₁) + ಬದನೆ]

**ಹಬ್ಬುವಣಿಕೆ** (ನಾ). ಒಂದು ಬಗೆಯ ಆದಾಯ (?): ನಾಗಬೋವನ ಮಕ್ಕಿಬೀಜ ಖ ೩ಕ್ಕೆ ಹೊಂಗ್ತು ಗ ೧ ಆ ಭೂಮಿಯ ಹಬ್ಬುವಣಿಕೆಯಿಂದ ಗ ೮೧ (ಎಕ. VI, ಕೊಪ್ಪ. ೪೭ ೨೪: 1530). [?]

**ಹಬ್ಬುಸುಂಡೆ, ಹಬ್ಬುಸೊಂಡೆ** (ನಾ). **ಒಂದು ಬಗೆಯ ಬಳ್ಳಿ ಮತ್ತು (ತರಕಾರಿಯಾಗಿ ಬಳಸುವ) ಅದರ ಕಾಯಿ:** (ಮೈಜಿಗಿ. ೭೧-೧೪೪೮). **ಹಬ್ಬುಸೊಂಡೆ:** ಗಜಬೇರು, ಹಬ್ಬುಸೊಂಡೆ, ಚಿತ್ರಮೂಲ, ಗರುಗನಸೊಪ್ಪು, ಈಶ್ವರೀಬೇರು, ಶುಂಠಿ, ಹಿಪ್ಪಲಿ ಇವುಗಳ ಕಷಾಯ ಕಾಯಿಸಿ, ಹಿಪ್ಪಲಿ ಪ್ರತಿಪಾಕವಿಕ್ಕಿ ಕೊಡಲು ವಾತಪಿತ್ತಜ್ವರ ಶ್ಲೇಷಮಜ್ವರ, ಕ್ಷಯ, ಕಾಸರೋಗ, ಸರ್ವವಾಯುರೋಗ ಸಹ ಗುಣವಾಗುವುವು (ಸಕವೈ. ೯೪). [ಹಬ್ಬು₁ (< ಪರಪ್ಪು₁) + ಸುಂಡೆ₁]

**ಹಬ್ಬುಸೆ** 'ಹಬಶಿ' ನೋ.

**ಹಬ್ಬುಸೊಂಡೆ** 'ಹಬ್ಬುಸುಂಡೆ' ನೋ.

**ಹಬ್ಬೆ₁** (ನಾ). **೧. ಒಂದು ಬಗೆಯ ಜೊಂಡು; ಬೆತ್ತ:** ನಡುಗೆ ದಿಶಾಧಿಪರ್ ಕಡಲ ಹಬ್ಬೆಯ ವೋಲ್ ತಲೆದೋಱಲಾಱದಿರ್ದಡೆಯೊಳೆ ತರ್ಗಿ ನೋಡೆ ಕುರುಸೈನಿಕಮೊರ್ಮೊದಲೆತ್ತಲುಂ ಸಿಡಿಲ್ ಪೊಡೆದುದೆನಲ್ಕೆ ಜೇವೊಡೆದು (ನೇಮಿಪು. ೧೨-೬೬); ಭೂದೇವಿಯ ಮೇಲ್ಸೆಱಗಿನಂತೆ ಪರಿವ ನದಿಯ ತಡಿಯೊಳು ಪರ್ವಿರ್ದ ಹಬ್ಬೆಯ ಕಿಚ್ಚಿನ ಬಟ್ಟೆವಿಡಿದು ಬರುತಿರ್ಪ ಪದದೊಳ್ (ಪುಣ್ಯಾಸ್ರ. ೪-೨೭ ವ); ಎನಿತು ಮಳೆಗರೆ ದೊಡೇಂ ಹಬ್ಬೆ ಹೂವುದೆ ದೇವ? (ಹಬ್ಬರ. ೧೮-೬೨). **೨. ಒಂದು ಬಗೆಯ ಮರ:** ಅಂಬಿಲದಿಂದರೆದರೆಸಿನಮಂ ಬೆರಸಿಯೆ ತೊಳೆದು ಪುಣ್ಗೆ ಹ(ಹೆ)ಬ್ಬೆಯ ದಳಮಂ "ಕಿಂ ಬಹುನಾ" ಚೂರ್ಣಿಸಿ ತಳಿಯಂಬುರುಹಂ ಹಿಮದೊಳಗಿದವೋಲ್ ವಿಷಮಟಿಗುಂ (ಖಮದ. ೧೭-೧೧೪): ಹಬ್ಬೆಯದೊಂದು ದಂಡಮಂ ಪಿಡಿದಿರ್ದಿರ್ಪರ್ಪಣಂ ಪಡೆದು ನಿಟ್ಟಿಸಿ (ರಸರ. ಪರಿ. I, ೧೧೯); ಮುತ್ತಿಗೆ, ಹಬ್ಬೆ, ನೀರುಹಬ್ಬೆ, ನುಗ್ಗೆ, ಶೀನುಗ್ಗೆ ಮೊದಲಾದ ಪುಷ್ಪಫಲಭರಿತವಾದ ವೃಕ್ಷಂಗಳನ್ನು (ಕೃವಾಅ. ೨೨೮). **'ಅಬ್ಬೆ₄', 'ಪರಂಬೆ'** ಪರಾ.

**ಹಬ್ಬೆ₂** 'ಹಬೆ' ನೋ.

**ಹಮ್‌ಚೌಕು** 'ಹಮಚೌಕು' ನೋ.

**ಹಮಚೌಕು, ಹಮ್‌ಚೌಕು, ಹಮ್ಮಚೌಕು** (ನಾ). **ಸರಿಸಮಾನವಾದ ಉದ್ದ ಮತ್ತು ಅಗಲಗಳುಳ್ಳ ಚತುರಸ್ರ,-ಚೌಕ; ಚದರ:** ತೋಟದ ಸುತ್ತಲೂ ಬೇಲಿಯ ಸಮೀಪಕ್ಕೆ ಇಪ್ಪತ್ತುನಾಲ್ಕು ಮೊಳಕ್ಕೆ ಒಂದರಂತೆ ಹಮಚೌಕುಗಜದ ಪ್ರಮಾಣ ಅಗಲ ಹಾಗೂ ಒಂದುಗಜ ತಗ್ಗಾಗಿರುವ ತಗ್ಗುಗಳನ್ನು ಅಗಳಿಸಿ . . . ಭರೀ ಮಾಡಬೇಕು (ಕೃಷಿಪ್ರ. ೧೩೩). **ಹಮ್‌ಚೌಕು:** ಊರ ಮಧ್ಯದಲ್ಲಿ ಹಮ್‌ಚೌಕು ಒಂದೂ ಒಂದೂವರೇ ಎಕರೆಯ ಭೂಮಿಯನ್ನು . . . ಹಿಡಿದಿದೆ (ದೀಪಹ. II, ೮೭). **ಹಮ್ಮಚೌಕು:** ಹಮ್ಮ ಚೌಕು ಮೂವತ್ತೆರಡುಮಾರು ಭೂಮಿಗೆ ನಾಲ್ಕತ್ತೆಂಟು ಸೇರು ಬೀಜವನ್ನು ಬಿತ್ತಬೇಕು (ಕೃಷಿಪ್ರ. ೯೨).

[ಹಮ್ಮ₀ (IP ← ಪಾರ. ಹಿಂ. ಹಮ್ = ಸಮಾನ, ಸದೃಶ) + ಚೌಕು₁ (< ಚೌಕ₂)]

**ಹಮರಹ** (ಅ). **ಜೊತೆಯಲ್ಲಿ; ಸಂಗಡ:** ನಾಜರಜಂಗರ ಹಮರಹಾ ಹೋಗಿಯಿದ್ದ ವ್ಯಾಳೇಲಿ (ಹೈದರ. ೬೮). [← ಪಾರ. ಹಿಂ. ಹಮ್‌ರಾಹ್]

**ಹಮಹಮಿಕೆ** (ನಾ). **೧. ನಾನು ಮುಂದು ತಾನು ಮುಂದು ಎಂದು ಯಾವುದಾದರೂ ಕೆಲಸಕ್ಕೆ ಸ್ಪರ್ಧೆಯಿಂದ ನುಗ್ಗುವುದು:** ತಾನು ಮಾತ್ರ . . . ಚಿಲ್ ಎಂದು ಚಿಮ್ಮುವ ಹಮಹಮಿಕೆಯಲ್ಲಿದ್ದ ಉತ್ಸಾಹವನ್ನು ಒತ್ತಿ ಅದುಮಿದ್ದ (ದೀಪಹ. I, ೧೦೬). **೨. ಅಹಂಕಾರ; ಸೊಕ್ಕು; ಗರ್ವ: ಹತ್ತು ಹೆಣ್ಣು ತರುವ** ಹಮಹಮಿಕೆಯ ಮಾವನವರಿಗೆ ತಮ್ಮ ಕೈಗೊಂಬೆಯಾದ ರಾಜನನ್ನು ಹೇಗೆ ಬೇಕು - ಹಾಗೆ ಕುಣಿಸುವ ಸಾಮರ್ಥ್ಯವಿತ್ತು (ದೀಪನಿ. ೯೪); ಈ ಒಂದೇ ಕಾಗದದಿಂದ ಶ್ಯಾಮರಾಯನನ್ನು ನುಶಿಯಂತೆ ಒರೆಸಿ ಒಗೆಯಬಲ್ಲೆನೆಂಬ ಹಮಹಮಿಕೆ ಬಂದಿತು (ದೀಪಹ. II, ೩೦೦).

[< ಅಹಮಹಮಿಕೆ]

**ಹಮಾ, ಹಮಾಂ** (ಗು). **ಎಲ್ಲ; ಸಮಸ್ತ; ಸರ್ವ:** ಒಂದು ಚೂರು ಗಸಿ ಸಾಕ್ರೋ, ಹಮಾ ಬೇಡ (ಮಲೆಮ. ೨೧). **ಹಮಾಂ:** 'ಹಮಾಂಕೋಮು' ಪರಾ.

[← ಪಾರ. ಹಮಹ್; ಅರ. ಆಮ್; ಹಿಂ. ಹಮಾ; ಮರಾ. ಹಮ್]

**ಹಮಾಂ** 'ಹಮಾ' ನೋ.

**ಹಮಾಂಕೋಮು** 'ಹಮಾಕೋಮು' ನೋ.

**ಹಮಾಂಜಿನಸು** (ನಾ). **ಎಲ್ಲ ವಿಧವಾದ ವಸ್ತು; ಸಮಸ್ತಪದಾರ್ಥ:** (ಶಿ).

[ಹಮಾಂ (< ಹಮಾ) + ಜಿನಸು]

**ಹಮಾಕೋಮು, ಹಮಾಂಕೋಮು** (ನಾ). **ಎಲ್ಲ ಜಾತಿ; ಸಮಸ್ತವರ್ಗ:** ಗಡಿಗಳು ಮುಂತಾದ ಸ್ಥಳದ ಪೇಟೆಗಳಲ್ಲಿ ಬಣಜಿಗರು, ಕೋಮಟಿಗರು, ಪಂಚಾಳದವರು ಮುಂತಾದ ಹಮಾಕೋಮಿನ ಜನರು ತಮ್ಮ ತಮ್ಮ ಜಾತಿನಿಬಂಧನೆಯನ್ನು ಮೀರ ದಂತೆಯೂ ಕಳ್ಳತನ ನಡೆಯದಂತೆಯೂ . . . ಕಟ್ಟುಮಾಡಿದರು (ಮಹಾವಂ. I, ೧೨೫). **ಹಮಾಂಕೋಮು:** ಆ ಊರಿನ ಉತ್ಸವದಲ್ಲಿ ಹಮಾಂಕೋಮಿನ ಜನರೂ ನೆರೆದಿದ್ದರು (ರೂಢಿ). [ಹಮಾ + ಕೋಮು]

**ಹಮಾಮ್‌ಸ್ನಾನ** (ನಾ). **೧. ಬಿಸಿನೀರಿನ ಸ್ನಾನ. ೨. ಆವಿಯಿಂದ ಮಾಡುವ ಸ್ನಾನ; ಹಬೆಯ ಸ್ನಾನ:** ಆವಿಸ್ನಾನ (ಹಮಾಮ್)ಮಾಡಲು ನೀರನ್ನು ಕಾಯಿಸುವದಕ್ಕಾಗಿ ನೆಲದ ಕೆಳಗೆ ಒಲೆಗಳಿದ್ದು ಆವಿ ಮೇಲಕ್ಕೆ ಬರುವಂತೆ ನೆಲದಲ್ಲಿ ಮತ್ತು ಕೋಣೆಯ ಗೋಡೆಯಲ್ಲಿ ರಂಧ್ರಗಳಿವೆ . . . ಇಂತಹ ಹಮಾಮ್‌ಸ್ನಾನಪದ್ಧತಿ ಮತ್ತಾವ ಸಂಸ್ಕೃತಿ ಯಲ್ಲೂ ಕಂಡುಬರುವುದಿಲ್ಲ (ಭಾರದ. ೧೨).

[ಹಮಾಮ್₀ (IP ← ಅರ. ಹಮಾಮ್; ಹಿಂ. ಹಮಾಮ್, ಹಮ್ಮಾಮ್; ಮರಾ. ಹಮಾಮ್ = (ಬಿಸಿನೀರಿನ) ಸ್ನಾನ, ಸ್ನಾನಗೃಹ) + ಸ್ನಾನ]

**ಹಮಾಲ** (ನಾ). **ಸಾಮಾನುಹೊರುವ ಕೆಲಸ ಮಾಡುವವನು:** ಹಮಾಲರಿಬ್ಬರು ಮಾತಿಲ್ಲದೆ ಸಾಮಾನು ಹೊತ್ತುನಿಂತಿದ್ದರು (ಪಹಾರ. ೧೯೯); ಹಮಾಲನ ಕೈಯಲ್ಲಿ ಆಕೆ ತನ್ನ ಸಾಮಾನು ಕೊಡುತ್ತಿರುವಾಗಲೇ ಪ್ರಮೀಲೆಯು ನರಹರಿಯನ್ನು ನೋಡಿದ್ದಳು (ಸನುಜೀ. ೩೮೧). [← ಅರ. ಹಿಂ. ಹಮ್ಮಾಲ್: ಮರಾ. ಹಮಾಲ್]

**ಹಮಾಲಿ** (ನಾ). **೧. ಕೂಲಿಯ ಕೆಲಸ:** ಅವರ ಮರ್ಜಿ ಅನುಸರಿಸಿಕೊಂಡು, ಅವರ ಹಮಾಲಿಮಾಡುವುದಕ್ಕೆ ಯಾರಿಗೆ ಸಾಧ್ಯ ಸ್ವಾಮಿ (ಗೃಹಲ. ೧೪೭). **೨. ಕೂಲಿಯ ಕೆಲಸ ಮಾಡುವವನಿಗೆ ಕೊಡುವ ಹಣ; ಕೂಲಿ:** ಒಂದೆರಡು ಜನರು ಮಾತ್ರ ಯಾವದೇ ಒಂದು ಬೀದಿಯ ಹೆಸರು ಹೇಳಿ 'ಅಲ್ಲಿಗೆ ಒಯ್ದು ಮುಟ್ಟಿಸಿದರೆ ಮಾತ್ರ ಹಮಾಲಿ!' ಅಂದರು (ಭೂಮಿತಾ. ೮೫); ಕಟ್ಟಿಗೆ ಮುಂತಾದ ಕಿರಕೋಳ ಸಾಮಾನುಗಳ ಅಡತಿ, ಹಮಾಲಿ, ಪ್ಯಾಕಮಾಡುವ ಕೂಲಿ ಮತ್ತು ಮಜೂರಿ (ಮುಂಬಪ್ಯಾ. ೩೬ ಪ್ರಸ್ತಾವನೆ). **೩. ಕೂಲಿಯ ಕೆಲಸಮಾಡುವವನು:** ಒಬ್ಬಿಬ್ಬರಿಗೆ ಹಮಾಲಿ ಬರುತ್ತೀಯೇನು? ಎಂದು ಕೇಳಿದರೇನೆ ಅವರಿಗೆ ವಾಗತ್ಯವೆನಿಸಿತು (ಮುಂಗಾಪು. ೧೦೨); ತನಗೆ ಮ್ಯಾನೇಜರ ಎಂದು ದೊಡ್ಡ ಹೆಸರನ್ನು ದಯಪಾಲಿಸಿ 'ಹಮಾಲಿ' ಕೆಲಸ ಮಾಡಹಚ್ಚಿದರೆಂದು ಗುಂಡನು ಸಿಟ್ಟಿಗೆದ್ದು ಕುದಿಯತೊಡಗಿದನು (ರಂಗರೂ. ೧೪೭). [← ಮರಾ. ಹಮಾಲೀ]

**ಹಮೀರ, ಹಮೀರು** (ನಾ). **೧. ಪರಾಕ್ರಮಿ; ವೀರ; ಶೂರ:** "ಶೂರಃ, ವೀರಃ, ವಿಕ್ರಾಂತಃ - ೩. ಶೂರನ ಹೆಸರು. ಹಮೀರನಾದ ವೀರನು" (ಸಿದ್ಧಾಂತಿ. ೨೫೯).

೨. [ಸಂಗೀತ] ಒಂದು ರಾಗದ ಹೆಸರು: 'ಹಮಿರಾರನಾಟ' ಪರಾ. ಹಮೀರು: ೨. ಯಮುನಾಕಲ್ಯಾಣ, ಹುಸೇನಿ, ಬೇಹಾಗು, ಹಮೀರು, ನವರೋಜು ಮುಂತಾದ ರಾಗಗಳು ಹಲವು ನಮ್ಮಲ್ಲಿ ನೆಲೆಗೊಂಡು ಕರ್ಣಾಟಕ ಗೌರವವನ್ನು ಪಡೆದಿರುವುದು ಈ ಮಾರ್ಗದಿಂದಲೇ (ಗಾನಕ. ೫೫).

[< ಸಂ. ಹಮ್ಮೀರ ./ ಹಿಂ. ಹಮೀರ್, ಹಮ್ಮೀರ್; ಮರಾ. ಹಮೀರ್]

**ಹಮಿರಾರತನ (ನಾ).** ಘಾಟಿತನ: ನೋಡಿದಿರೊ ಅವಳ ಹಮಿರಾರತನವನ್ನ? (ಮಾಮರಾ. ೮೦).

[ಹಮಿರಾರ + -ತನ]

**ಹಮಿರಾರನಾಟ (ನಾ).** [ಸಂಗೀತ] ಒಂದು ರಾಗದ ಹೆಸರು: ನಾಟ ಆಹರೀನಾಟ ಸಾಳಗನಾಟ ಹಮಿ [ಪಾಠಾಂ. ಮ್ಮೀ]ರನಾಟ ಗುಜ್ಜರನಾಟ ಎಂಬವೇ ಪಂಚವಿಧ ನಾಟಗಳು (ವಿವೇ. ೧೪೯). [ಹಮೀರ + ನಾಟ$_2$]

**ಹಮೀರು** 'ಹಮೀರ' ನೋ.

**ಹಮೇಷ (ನಾ). (ಅ).** ಸದಾ; ಯಾವಾಗಲೂ; ಸರ್ವದಾ: ಟೀಪುಸುಲ್ತಾನರು ವಿಕಲ್ಪಮಾಡಬೇಕುಯಂಬದಾಗಿ ಕುಂಪನಿಗೆ ತಿಳಿಯದ ಹಾಗೆ ಹಮೇಷ ಹಿಕಮತ್ತುಗಳ ನಡಸುತ್ತಾ ಇದ್ದರು (ರಾಜೇಂದ್ರ. ೫೨); ಮನೆಗೆ ಹಮೇಷ ಬೀಗ ಹಾಕಿರುವುದನ್ನು ನೋಡಿ ಜನ ಹಲವುರೀತಿಗಳಲ್ಲಿ ಮಾತಾಡಿಕೊಳ್ಳುತ್ತಿದ್ದರು (ರೂಪಸ. ೧೪೯).

[← ಪಾರ. ಹಿಂ. ಮರಾ. ಹಮೇಶಾ]

**ಹಮ್ಮಚೌಕು** 'ಹಮಚೌಕು' ನೋ.

**ಹಮ್ಮದ, ಹಮ್ಮಳ (ನಾ).** ೧. ಮೈಮರೆಯುವಿಕೆ; ಪ್ರಜ್ಞೆ ತಪ್ಪುವಿಕೆ; ಮೂರ್ಛೆ: ''ಹಮ್ಮದಮುಂ ಮುಚ್ಛೆ ಹರವಸಂ ಮೂರ್ಛಾಖ್ಯಂ'' (ಕವಿಕಂ. ೧೧೩); ನೀರ ತೋರವನಿಯ ತಂದಲೊಂದುಗೆಯೊಳಮೆಂತಾನುಂ ಹಮ್ಮದದಿನಗಲ್ದು ತನ್ನವಸ್ಥಾಂತರಕ್ಕೆ ತಾನೆ ಬೆಕ್ಕಸಂಬಡುತ್ತಿರ್ಪನ್ನೆಗಂ (ಚಂದ್ರಪ್ರ. ೫-೧೯ ವ); ಸವನಿಸೆ ಹಮ್ಮದಂ ನಡುಪ ಕಾಲ್ ಬೆಮರಂ ಬಿಡುತಿರ್ಪ ಗಲ್ಲಂ (ಕಬ್ಬಿಗಾ. ೩೩೨). ೨. ಬೆರಗು; ದಿಗ್ಭ್ರಮೆ: ಹಮ್ಮದವೆಂದನೆ ಕೌತುಕಾರ್ಥದೊಳ್'' (ಕರ್ಣಾನಿ. ೧೭). **ಹಮ್ಮಳ:** ೧. ಶಬರಿಯರರಿದು ಹಮ್ಮಳದಿವುಮ್ಮಳದಿ ಹೊರಳಿದರು ಪುರುಷರಗಲಿಂ (ಜನಮು. ೧೩-೧೯).

[< ಸಂ. ಪ್ರಮಾದ]

**ಹಮ್ಮದಂಬೊಂದು (ಕ್ರಿ).** ಎಚ್ಚರತಪ್ಪು; ಮೂರ್ಛೆಹೋಗು: ಸುಂಪಾ ಸ್ವೇದ ಮೊಡಲ್ಬಡುಂಗು ನವಿರ್ಗಳ್ಪುಷ್ಪೋದ್ಗಮಂ ಗದ್ಗದಸ್ವರಮುಂ ತಾಮಿಸಿತೆಲ್ಲಮೊರ್ಮೆ ದೊರೆಯಲ್ಕೋ ಹಮ್ಮದಂಬೊಂದಿದರ್ (ನರಚ. ೪೮-೧೧೧).

[ಹಮ್ಮವ + ಪೊಂದು$_1$ (< ಪೊರ್ದು)]

**ಹಮ್ಮದಂಬೋಗು, ಹಮ್ಮದವ್ವೋಗು (ಕ್ರಿ).** = ಹಮ್ಮದಂಬೊಂದು: ನೃಪ ನಿನ್ನಂ . . . ನಭದಿಂ ಗಾಂಡೀವಿ ತರ್ಪಾಗಳೀ ಕೃಪನೀ ಸೈಂಧವಂ . . . ಈ ಕುಂಭಜನೀ ಕುರುಪ್ರಭವರಂದೇಂ ಹಮ್ಮದಂಬೋದರೇ (ಗದಾಯು. ೨-೩೪): ಅನೇಕೌಷಧಿಗಳಂ ಕೊಟ್ಟೊಡೇಳೆಂಟುಮಡಿಯಾಗಿ ವೇದನಿಸಿತದು ಹಮ್ಮದಂಬೋಗೆ ವಾಗೀಶನು (ಸೌಂದಪು. ೧೩-೪). **ಹಮ್ಮದವೋಗು:** ಬಿಗುರ್ತುಜೆ ಹಮ್ಮದವೋದನೋಹಿಲಂ (ಉದ್ಭಟ. ೧೧-೭೧): ಒದಜಿದವು ರಣವಾದ್ಯಚಯವಳ್ಳೆದೆಗೊಳಲ್ ಬ್ರಹ್ಮಾಂಡವೀಶನ ಹೃದಯ ಹಾತಕವಾಜೆ ಹಮ್ಮದವೋಗೆ ಕಮಲಭವ (ತೊರಲಾ. ೭-೧೭-೧೩).

[ಹಮ್ಮದ + ಪೋಗು$_1$ (< ಪೋ$_1$)]

**ಹಮ್ಮದವೋಗು** 'ಹಮ್ಮದಂಬೋಗು' ನೋ.

**ಹಮ್ಮನೆ (ಅ).** ಇದ್ದಕ್ಕಿದಂತೆ, ಕೂಡಲೆ, ತಕ್ಷಣ ಎಂಬರ್ಥದ ಒಂದು ಅನುಕರಣಾವ್ಯಯ: ಜಜ್ಜನೆ ಜರಿದು ಬಿಬ್ಬನೆ ಬಿರಿದು ಪ್ರಾಣ ಹಮ್ಮ [ಪಾಠಾಂ. ವ್ವ]ನೆ ಹಾಜೆ ಭಯವಟ್ಟು ನಡನಡುಗಿ (ಶೂನ್ಯಸಂ. ೧೯೦-೩೫); ತನುವ ದಂಡಿಸುತುಗ್ರತಪಸು ಮಾಡುವರು ಹಮ್ಮನೆ ಶಾಸ್ತ್ರಪಠನದೋಜುವರು ಅನಿಮಿಷರಾಗಿ ಯೋನಿಗೆ ಬೀಳ್ವರಲ್ಲದ ವಿನುತಾತ್ಮಸಿದ್ಧಿವಡೆಯರು (ಭರಚ. ೭೮-೧೭). [? + -ಅನೆ$_1$]

**ಹಮ್ಮಯಿಸು, ಹಮ್ಮಯ್ಸು, ಹಮ್ಮವಿಸು, ಹಮ್ಮಿಸು, ಹಮ್ಮೈಸು$_1$ (ಕ್ರಿ).** ೧. ಎಚ್ಚರತಪ್ಪು; ಮೂರ್ಛೆಹೋಗು; ಮೈಮರೆ: ತನು ಕಡುಗೋಡುಗೋಡಿದಪ್ಪು ದೆಳ್ಳನಿತುಂ ಮಿಡುಕಂತದಿಲ್ಲ . . . ನಿಜವಲ್ಲಭನಂದ[ಮದೆಂ]ದಿನಂದಮಿಂದನಿತಟನಲ್ಲು ಹಮ್ಮಯಿಸಿದಂದಮೊ ಮೇಣ್ ಮಚಲುಂದಿದಂದವೋ (ವರ್ಧಮಾ. ೫-೫); ವೀರ ಧೀರೋದ್ಧತನಿಶಾಚರವೀರನತಿಮಥನದಲಿ ವಹ್ನಿಕುಮಾರ ಹಳಚಿದು ಹಮ್ಮಯಿಸಿದನು ಕದನಕೇಳಿಯಲಿ (ತೊರರಾ. ೬-೨೨ ಸೂಚನ). ೨. ಎಚ್ಚರ ತಪ್ಪಿ ಕುಸಿ; ಮೂರ್ಛೆಹೋಗಿ ಬೀಳು: ಆ ಪೊಟ್ಟಿಂಗೆ ಭೂಮಿಜೆ . . . ನಡನಡೆದು ಕಾಲೊಡೆದು ನೆತ್ತರ್ ಬಸಿಯೆ ಮೆಯ್ಯುಂದಿ ಧರೆಗೆ ಹಮ್ಮಯಿಸೆ (ರಾಮಾಶ್ವ. ೩೩-೨೮). **ಹಮ್ಮಯ್ಸು:** ೧. ಹಮ್ಮಯ್ಸು ಕಿಜಿದು ಬೇಟಕ್ಕೊಮ್ಮೆಯೆ ಪೋಪಂದು ಪುಗುವುದಸು ಬೇಗಂ (ಧರ್ಮಾಮೃ. ೯-೧೧೧). **ಹಮ್ಮವಿಸು:** ೧. ಈ ಪರಿ ನಮ್ಮನೆಲ್ಲರ ಮುಂದೆ ಭಂಗಿಸಿ ಹೆಮ್ಮೆಗೆಡಿಸುವ ಪರಿಯ ನೋಡಾ ಎನುತ ಮನಮಜುಗಿ ಇಮ್ಮೆ ಬೆಂದವಳಿದ್ದಲಂತಿರೆ ಹಮ್ಮವಿಸಿಯೊಜಗುತಲಿ ವಿಮಳೆಯ ನೆಮ್ಮಿದಳು ನಿಲಲಾಜದಾಳಾಪಿಸುತಲಾ ಮಾಯೆ (ಪ್ರಭುಲೀ. ೭-೭೦). **ಹಮ್ಮಿಸು:** ೧. ನಮ್ಮವರು ಬರುವುದನು ಉಮ್ಮಳಿಸಿ ನೋಡುವೆನು ಹಮ್ಮಿಸುವೆ ಮನದೊಳಗೆ ಬಾರದಿರಲು (ಸುಸಾರ. ೨). **ಹಮ್ಮೈಸು$_1$:** ೧. ಬೊಮ್ಮದ ಮನೆಯ ಕೋಣೆಯೊಳೊಬ್ಬ ಗೊರವತಿ ಇಮ್ಮೆಯ ಸಿರಿಯ ಮಾಳಿಗೆಯೊಳಗೆ ಹಮ್ಮೈಸಿದಳು (ಅವಚಂ. ೩೦೦-೧೩೦೫); ಹಂಬಲಿಸಿದರು ಹಮ್ಮೈಸಿದರು ಕೋಮಳೆಯ ಕಾಣದೆ ಮೋಹಿನಿಯು ಮಮಕಾರ ಭೂಮಿಪನು (ಪ್ರಭುಲೀ. ೮-೮). ೩. ದುಃಖಪಡು; ಗೋಳಾಡು: ಕೌರವೇಶ್ವರಗೆ ನೆಲ್ಲನಾಸಗಾಣನು ಶಿವಶಿವಾಯೆನುತ ಹಮ್ಮೈಸಿದಂ ಒಡೆಯಗಂ ಕರ್ಣನು (ತುರಂಗ. ೭೦-೪೭). [< ಹಮ್ಮದ + -ಇಸು$_1$]

**ಹಮ್ಮಯ್ಸು** 'ಹಮ್ಮಯಿಸು' ನೋ.

**ಹಮ್ಮವಿಸು** 'ಹಮ್ಮಯಿಸು' ನೋ.

**ಹಮ್ಮಸ (ನಾ).** ಒಂದು ಬಗೆಯ ಆಯುಧ (?): ನಿಮ್ಮಂ ನೆನೆಯದ ಮನಮಂ ಹಮ್ಮಸದಿಂದೂತ್ತಿ ಕೆತ್ತಿ ಕೀಸುವೆ ಮತ್ತಾ[ಂ] ಘುಮ್ಮನೆ ಶೂಲದೊಳಿಡುವಂ ಸುಮ್ಮನೆ ಬಿಡೆನಾಂ (ಶಂಕಕಂ. ೧೫). [?]

**ಹಮ್ಮಳ** 'ಹಮ್ಮದ' ನೋ.

**ಹಮ್ಮಳಿಸು (ಕ್ರಿ).** = ಹಮ್ಮಯಿಸು ೧: ಸೋವಿಲೊಳಿರ್ದ ಮಗುವ ಕಾಣದಾ ಸತಿಯೆವ್ವನು ಕಟ್ಟೆನಾನನುತ ಆ ವಸುಧೆಗೆ ಹಮ್ಮಳಿಸಿಯುರುಳಿ ಶೋಕಾವೇಶದೊಳಗಿರುತಿರಲು (ನೇಮಿಸಂ. ೧೮-೨೩); ಹಮ್ಮಳಿಸಿ ದೇಹವುರಿಯ ಬೇಗೆಗೆ ಬ್ರಹ್ಮರೆಲ್ಲರಿಗೆ ದಾನ ದಕ್ಷಿಣ ಗಮ್ಮನೆ ಹೋಮಹವನ ತೀರ್ಥ ದಿಶ್ಶಾಂತವಾಗದಿರೆ (ನಂದಿಲೀ. ೭-೫೪).

[ಹಮ್ಮಳ (< ಹಮ್ಮದ) + -ಇಸು$_1$]

**ಹಮ್ಮಿಕೆ (ನಾ).** ಅಹಂಕಾರ; ಸೊಕ್ಕು: ಎಲವೊ ಕಿರಾತಸಂಕುಳವ ಕಾಷ್ಠಾಂಗಾರವಳವನು ಮುಜಿದ ಹಮ್ಮಿಕೆಯ ಬಲುಪಂಥ ನಮ್ಮೊಳು ಸಲ್ಲದು (ಜೀವಕಸಾಂ. ೮-೬೮); ಪ್ರಹಲಾದನನ್ವಯದ ಬಲಿ ಬಹುಭಕ್ತಿಯೊಳೀಶ್ವರಾರ್ಚನೆಯನುಜ್ ಮಾಡಲ್ಕಹಿ ಭೂಷಣನಾತಗೊಲಿದತಿ ಬಹಳೈಶ್ವರ್ಯಗಳನಿತ್ತಡಾ ಹಮ್ಮಿಕೆಯಿಂ (ದಶಾವ. ೬-೮೫).

[ಹಮ್ಮು$_2$ (< ಅಹಮ್ಮು) + -ಇಕೆ]

**ಹಮ್ಮಿಗ (ನಾ).** ಅಹಂಕಾರಿ; ಗರ್ವಿಷ್ಠ: ಇಮ್ಮನದ ಸೊಡಗೆಯ ಮದ್ದು ಕರ್ಮಕ್ರೀಡಾದವರ ನುಡಿಯೆಂದಡೆ ಎನ್ನ ಹಮ್ಮಿಗನೆಂಬರು (ಮೋಳಿಮಾ. ೨೬೫-೮೧೭); ಬಲು ಚೆನ್ನಿಗತನವ ತಾನು ಮಾಡಲು ಬಲುಹಮ್ಮಿಗನೆಂದು ಬೈಯುವರೂ (ಪುರಂದ. ೩-೧೩೨-೨). [ಹಮ್ಮು$_2$ (< ಅಹಮ್ಮು) + -ಇಗ]

**ಹಮ್ಮಿಣೆ, ಹಮ್ಮಿಾಣೆ, ಹಿಮ್ಮಣೆ, ಹಿಮ್ಮಣ್ಣೆ, ಹಿಮ್ಮೇಣೆ (ನಾ).** (ಉದ್ದವಾಗಿಯೂ ಚಿಕ್ಕದಾಗಿಯೂ ಇರುವ) ಹಣದ ಚೀಲ; ಥೈಲಿ: ಸಾಹುಕಾರರು ಮರುಮಾತಾಡದೆ ಮೊದಲು ಹಮ್ಮಿಣೆಯನ್ನು ತಿಜೋರಿಯಲ್ಲಿಟ್ಟು ಬರಬೇಕೆಂದು ಕೋಣೆಗೆ ಹೋದರು (ಹೊಂಬಿಲು. ೩೪); ಈ ಉತ್ಸವದ ಮೂಲಕವಾಗಿ ಕರ್ನಾಟಕವು ಕವಿಗೆ ತನ್ನ ಗೌರವವನ್ನು ಸಲ್ಲಿಸಿತಲ್ಲದೆ, ಕವಿಗೆ ಒಂದು ಹಮ್ಮಿಣೆಯನ್ನಿತ್ತು ತನ್ನ ಮೆಚ್ಚುಗೆಯನ್ನೂ ತೋರಿಸಿತು (ಸಾಸಮಾ. ೮೧). **ಹಮ್ಮಿಾಣೆ:** ಅವರು ತಮ್ಮ ಹಮ್ಮಿಾಣೆಯೊಳಗಿಂದ ರೂಪಾಯಿ ಎಣಿಸಲಿ (ಮೋಹನೀ. ೬೫); ಒಂದು ಮರದ ಕೆಳಗೆ ಕುಳಿತು ಬಸಪ್ಪನು ತನ್ನ ಹಮ್ಮಾಣೆ ತೆಗೆದು ಹಣ ಎಣಿಸಿದನು (ಪವನ. ೩೭). **ಹಿಮ್ಮಣೆ:** ಎನ್ನ ಹಿಮ್ಮಣೆಯ ಗೂಂಡೆಯಂ ಹರಿದು ಹೊನ್ನೆರಚಿ ತೀವೆನುಪವನವ ನಾ ಮರೆಯಿಂ (ಗಿಲಿವಿ. ೧೧೮-೧೦); ಪೆಟ್ಟಿಗೆಯಲ್ಲಿಯೂ ಹಿಮ್ಮಣೆಯಲ್ಲಿಯೂ ಬ್ಯಾಂಕಿನಲ್ಲಿಯೂ ತುಂಬಿರುವ ಹಣವನ್ನು ಹೇಗೆ ವೆಚ್ಚ ಮಾಡಬೇಕು?

(ನಾಡಿಗೇ. ೧೫೨). **ಹಿಮ್ಮಣ್ಣೆ:** 'ಹಿಮ್ಮಣ್ಣೆಚೀಲ' ಪರಾ. ಹಿಮ್ಮೇಣಿ: ಮಡಿವಾಳಯ್ಯ . . . ಇನ್ನೂರುರೂಪಾಯಿಯ ಹಿಮ್ಮೇಣಿಯನ್ನು ಮಾದಣ್ಣನ ಕೈಗಿಟ್ಟರು (ಬೆಳುಮ. ೬೬).
[← ಮರಾ. ಹಮಿಣೇ, ಹಮಾಣೇ, ಹಮಿಣಾ, ಹಮೇಣೀ]

**ಹಮ್ಮಿಸು** 'ಹಮ್ಮಯಿಸು' ನೋ.

**ಹಮ್ಮೀಣ** 'ಹಮ್ಮಿಣ' ನೋ.

**ಹಮ್ಮೀರ** (ನಾ). ೧. ಒಂದು ದೇಶದ ಹೆಸರು: ಪಲ್ಲವಕ ಹಮ್ಮೀರ ಜಾಳಾಂಧ್ರ . . . ದೇಶಂಗಳೊಳೆಸೆವ ಜಂಗಮವು ಭಕ್ತಾಳಿ (ಬಸವು. ೬-೧೯); ಕೊಂಕಣ ಸಿಂಧು ಹಮ್ಮೀರ . . . ಕಾಂಬೋಜದೇಶದ ಸಕಲಶರಣರ್ಮೈತರುತಿರ್ದರು (ಚೆಬಪು. ೬-೪೯). ೨. (ಹಮ್ಮೀರದೇಶದ ರಾಜ ಮತ್ತು ಅಲ್ಲಿಯ ಪ್ರಜೆ: ಪಾರಸೀಕ ಪಾರಿಯಾತ್ರ ಹಮ್ಮೀರ ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ (ಜಗವಿ. ೨-೬೯ ವ); ತೆಲುಂಗ ಗುರ್ಜರ ಹಮ್ಮೀರ ತುರುಷ್ಕ ನೇಪಾಳರ್ ಮೊದಲಾದ ರಾಜಪುತ್ರರ ಪಂಕ್ತಿಗಳೊಳಂ (ಗಿರಿಕ. ೨-೧೦೫ ವ). ೩. (ಅಲಂ) ಶೂರ; ಪರಾಕ್ರಮಿ: ವೀರಹಮ್ಮೀರ ದಾಮೋದರ ಪಾತ್ರೆಗಳಾ ರಣರಂಗಮಧ್ಯದೊಳು ವೀರರಾಮನ ಖಡ್ಗದಿಂದ ಮಡಿದು ಸುರನಾರಿಯ ರೆಡೆಗೆಯ್ದಿದರು (ಕುರಾಸಾಂ. ೧೬-೭೦); ಪ್ರಳಯಾಗ್ನಿಯಂತೆಸೆವ ರಘುವೀರನಂ ಕಂಡ ಧುರವಿಜಯಹಮ್ಮೀರನಂ (ವೆಂಕಾರಾ. ೩-೧೧-೧೦). [ಸಂ.]

**ಹಮ್ಮೀರತಾತಿ** (ನಾ). ವೀರತ್ವದ ಗುರುತಿಗಾಗಿ ಕೈ ಅಥವಾ ಕುತ್ತಿಗೆಯಲ್ಲಿ ಧರಿಸುವ ಕಾಪು,– ರಕ್ಷೆ: ಪ್ರೀತಿಯಿಂದೊಲಿದು ಭೂಪನ ಕೈಗೆ ಹಮ್ಮೀರತಾತಿಯ ಕಟ್ಟಿದಳೊರ್ವೆ (ಕಂಸವಿ. ೨೪-೬೬); ಘನಸುಪ್ಪಾಣಿಮುತ್ತುಗಳ ಕಟ್ಟಿರುವ ಹಮ್ಮೀರತಾತಿಯು ಪಟ್ಟೆಪೀತಾಂಬರಗಳಿಂದಡಿಯಿಟ್ಟು ಚರಿಸುವ ರಾಜಕುವರರು (ನಾಗಪ. ೨-೬೮).
[ಹಮ್ಮೀರ + ತಾತಿ$_2$ (< ತಾಯಿತಿ)]

**ಹಮ್ಮು$_1$** (ಕ್ರಿ). ೧. (ಹಗ್ಗ ಮೊದಲಾದುವುಗಳನ್ನು) ಹೊಸೆ; ಹೆಣೆ: "ಹಮ್ಮು-ರಜ್ಜುಕ್ರಿಯಾಯಾಂ (ಹೆಣೆ)" (ಶಮಧಾ). ೨. ಕಟ್ಟು; ಬಂಧಿಸು: ತುರಂಗ ಬಲದಪರಭಾಗದೊಳ್ ಹಮ್ಮಿದ ಗುಳದ ಹೂಡಿದ ಜೆಂಚೆಯದ . . . ಕೋಳಾಹಳ ದಬ್ಬರಮಾಗೆ (ಗಿರಿಕ. ೬-೫೫ ವ); ಬಲುಮಿಳಿಯಲಿವನನು ಸುತ್ತಿ ಸಿಂಧುರಘಟೆಗಳಿಂದೆಳೆಸುತ್ತ ಕೊಂಡೊಯ್ಯೆನಲು ಹಮ್ಮಿದರಾನೆಯಲಿ ಕಪಿಯ (ತೊರರಾ. ೫-೭-೩). ೩. ಏರ್ಪಡಿಸು; ಯೋಜಿಸು; ಸಜ್ಜುಗೊಳಿಸು: ಆ ಪಾತಕವನ್ನು ಕಳೆಯಲಿಕ್ಕೆಂದು ಧರ್ಮರಾಯ ಅಚ್ಯುತನ ಅಪ್ಪಣೆಯಂತೆ ಅಶ್ವಮೇಧಯಾಗವನ್ನು ಹಮ್ಮಿದ (ಬಿದುರೆ. ೧೦೩); ಮೂರು ಅರ್ಥವತ್ತಾದ ಗೋಷ್ಠಿಗಳನ್ನು ಹಮ್ಮಿ ಆಯಾ ರಂಗದಲ್ಲಿ ಪರಿಣತರಾದವರ ಶ್ರದ್ಧೆಯುಳ್ಳವರ ವ್ಯಾಸಂಗದ ಫಲವನ್ನು ವಿನಿಯೋಗಿಸುವ ವ್ಯವಸ್ಥೆ ಇಲ್ಲಿದೆ (ಸುವರ್ಣ. ೨೩೧). ೪. ಒದಗು; ಉಂಟಾಗು: ಹಿಂದೆ ಹಮ್ಮಿದ [ಪಾಠಾಂ. ನ] ಸಮರದೊಳು ನಡೆತಂದು ಖೇಚರನಡಸಿ ಕಟ್ಟಿದಡಂದು ನಿನ್ನನು ಬಿಡಿಸಿದವನರ್ಜುನನೊ ರವಿಸುತನೊ (ಕುವ್ಯಾಭೀ. ೧-೧೦). ೫. ಕೊಳ್ಳೆ ಹೊಡೆ; ಲೂಟಿಮಾಡು: ಇನ್ನು ಗರವಲೆಗೆ ಕಳ್ಳರು ಬಂದು ಮನೆ ಹಮ್ಮಿದರು (ರಾಜೇಂದ್ರ. ೧೪೨). ೬. ಹರಡು; ಸೂಸು: ಪೊಸಮುಗಿಲ್ಗಳು ಹಮ್ಮಿ ಪಸರಿಸಿ ತೋರ್ದವಾ ವರ್ಷಪ್ರವೇಶದಲಿ (ಕಾವೇಮ. ೧೭-೪೨); ಹೊಸಮಳೆಗಳಾಗಿ ನೆಲ ಹೊಸಹೊನಲು ಹರಿದು, ಹೊಸ ಹಮ್ಮು ಹಮ್ಮುತ್ತ, ಎಲ್ಲರೂ ನನ್ನಕ್ಕ ತಂಗಿಯರು ಚಿಗುರಿ ಎಲ್ಲರೂ ಚೆಲುವಾದರು (ಹೂಂಗಳು .೧೮-೧).

**ಹಮ್ಮಿಕೊಳ್ಳು** = ಏರ್ಪಡಿಸಿಕೊಳ್ಳು; ಯೋಜಿಸು: ಈ ವರ್ಷ ಅವರು ಒಳ್ಳೆಯ ಪುಸ್ತಕಗಳನ್ನು ಪ್ರಕಟಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದಾರೆ (ರೂಢಿ).

**ಹಮ್ಮು$_2$** 'ಅಹಮ್ಮು' ನೋ.

**ಹಮ್ಮುಖವೋಗು** (ಕ್ರಿ). ನಿಸ್ತೇಜವಾಗು; ಕಾಂತಿಗುಂದು (?): ಹಮ್ಮುಖವೋದುದು ಸಭೆಯೆಲ್ಲ ಭರತೇಶ ಸಮ್ಮುಖಗೊಟ್ಟು ನೋಡಿದನು ದಿಮ್ಮನೆದ್ದರು ಕೂಡೆ ಸೇವಕರೆಲ್ಲರಾಗುಮ್ಮುವ ಕಂಬನಿಗೂಡಿ (ಭರಚ. ೭೧-೧೩).
[? + ಮುಖ + ಪೋಗು$_1$ (< ಪೋ$_1$)]

**ಹಮ್ಮುಗ** (ನಾ). ಜಂಬದವನು; ಅಹಂಕಾರಿ: ನಿಮ್ಮ ಚಿತ್ತಕೆಯಜೆಕೆಮಾಡಿದಂ ಮತ್ತಿನ್ನು ಹಮ್ಮುಗರ ಕಳುಹಿದೊಡೆ ಎಂತಪ್ಪುದೋ ಕಾರ್ಯಾ ಶಮ್ಮದಿಂ ನೋಡಿ ಚಿತ್ತೈಸಿಂ (ಪ್ರಭುಪು. ೮-೫೬). 'ಹಮ್ಮಿಗ' ಪರಾ. [ಹಮ್ಮು$_2$ (< ಅಹಮ್ಮು) + - ಗ$_2$]

**ಹಮ್ಮುಗೆ$_1$** (ನಾ). ೧. (ಜೋಡಿಸಿ ಕಟ್ಟುವ) ಹಗ್ಗ; ಪಾಶ: ಸಂಕಟಕಮನೆ ಹಮ್ಮುಗೆಯ ಕುಣಿಕೆಗಳು (ಮಂಗರಾ. ೮೬-೩೧); ಮರಳಿ ವಾಘೆಯ ಕೊಂಡು ರಾವ್ತರು ತಿರುಗಿದರು ಹಮ್ಮುಗೆಯ ನೇಣ್ಗಳ ಹಱಿದು ಹಕ್ಕರಿಕೆಗಳ ಬಿಸುಟರು (ಕುವ್ಯಾಗ. ೧-೧೬). ೨. ಕಟ್ಟು; ಬಂಧನ: ಮುಗ್ಗಿ ಕೆಡೆಯಲು ಕುದುರೆ ಸೂತನ ಬಗ್ಗಿಸಿದ ನಸುರೇಂದ್ರನವಸಾ ಹಗ್ಗಗಳ ಹಮ್ಮುಗೆಯ ಸಡಿಲಿಸಿ ಹಯವನಬ್ಬರಿಸೆ (ತೊರರಾ. ೬-೨೨-೨೧). ೩. ಯೋಜನೆ: ಎಮ್ಮ ಮನ ಮುಂಚುವುದು ಕಾರ್ಯದ ಹಮ್ಮುಗೆಯ ನೀವಱಿಯಿರೇ ತಮತಮ್ಮ ದುಷ್ಕೃತ ತಮಗೆ ಫಲಿಸಿದರೇನು ನಿಮಗೆಂದ (ಕುವ್ಯಾಆ. ೨೦-೧೨). [ಹಮ್ಮು$_1$ + - ಗೆ]

**ಹಮ್ಮುಗೆ$_2$** (ನಾ). ಗರ್ವ; ಸೊಕ್ಕು: ನಿಮ್ಮರ್ಬರ ಸೌಭಾಗ್ಯದ ಹಮ್ಮುಗೆಯಂ ಸುಭಗೆ ಕಾಮಮಂಜರಿ ಪದೆಪಿಂದೊರ್ಮೆ ಪರೀಕ್ಷಿಸಿ ಪೇೞ್ದೊಡೆ ನಿಮ್ಮಯ ಹೀನಾಧಿಕತ್ವಮತಿ ನುತಿವಡೆಗುಂ (ದಶಕು. ೮-೮೮); ಸುರವಂಶಕುಲಹೃತ್ಶೂಲನೆದೆಯಲಿ ಹುಣುಬುದೋಱಿತು ಹಗೆಯ ಹಮ್ಮುಗೆಯ (ತೊರರಾ. ೬-೨-೧).
[ಹಮ್ಮು$_2$ (< ಅಹಮ್ಮು) + - ಗೆ]

**ಹಮ್ಮುಗೆಡು** (ಕ್ರಿ). ಜಂಬವಿಳಿ; ಗರ್ವಭಂಗವಾಗು: ಸೌರಾಷ್ಟ್ರಸೋಮೇಶ್ವರಾ ನಿಮ್ಮ ಮುಟ್ಟಿ ಹಮ್ಮುಗೆಟ್ಟುದ ನಾನೇನೆಂಬೆನಯ್ಯ (ಆದವ. ೩೧-೪೯); ಸಿಂಹಳನು ಹಮ್ಮುಗೆಡದೆ ಆ ರಥವನ್ನೇರಿ ಬೊಬ್ಬಿರಿದನು (ಶ್ರೀವಸು. ೨೧).
[ಹಮ್ಮು$_2$ (< ಅಹಮ್ಮು) + ಕೆಡು$_1$]

**ಹಮ್ಮುಗೊಳು** (ಕ್ರಿ). ಜಂಬಪಡು; ಗರ್ವಿಸು: ಹಮ್ಮುಗೊಳದೆ ಹದವಳಿಯದೆ . . . ಚಿತ್ತಸಮ್ಮತಿಯಱಿದೆಸಗುವುದು (ಹದಿಬ. ೪-೧೫).
[ಹಮ್ಮು$_2$ (< ಅಹಮ್ಮು) + ಕೊಳು (< ಕೊಳ್$_1$)]

**ಹಮ್ಮುಬಿಮ್ಮು** (ನಾ). ಗರ್ವ ಮತ್ತು ಬಿಂಕ: ಪೂಜೆಯ ಮಾಡುವಲ್ಲಿ ಪುಣ್ಯವನಱಿಯದೆ ಮಾಡಬೇಕು ಹೆಣ್ಣು ಮಣ್ಣು ಹೊನ್ನು ಕೊಡುವಲ್ಲಿ ಹಮ್ಮುಬಿಮ್ಮಿಲ್ಲದಿರಬೇಕು (ಮೋಳಿಮಾ. ೩೯-೧೬೧); ಭವದೇಕಶರಣಮೆನಿಸಿ ಶಿವಶಾಂತಿಯಂ ವಹಿಸಿ ಹಮ್ಮುಬಿಮ್ಮುಗಳುಳಿದು ನವಲೋಷ್ಟಕಾಂಚನ ಸಮಾನಬುದ್ಧಿಯೊಳು ಮತ್ತವಿರಳಾಚರಣ ಸಂಕಲಿತ ಮಾನಸಮದುವೆ ಮಂದಿರಂ ಮನುಕುಲೇಶ (ವೆಂಕಾರಾ. ೨-೧೮-೧೫); ನಿನ್ನಲ್ಲಿ ಹಮ್ಮು ಬಿಮ್ಮುಗಳು ಇನ್ನೂ ಅವಿತುಕೊಂಡಿರುವಂತೆ ಕಾಣುತ್ತಿದೆ (ತುಂಗಭ. ೬೬).
[ಹಮ್ಮು$_2$ (< ಅಹಮ್ಮು) + ಬಿಮ್ಮು$_1$]

**ಹಮ್ಮುಹೆಮ್ಮೆ** (ನಾ). = ಹಮ್ಮುಬಿಮ್ಮು: ಏನೆ ಇರಲಿ, ಏನೆ ಇರಲಿ, ಹಮ್ಮು ಹೆಮ್ಮೆಗಳೇನೆ ಇರಲಿ, ತಿರುಳಿನರಿವು, ಹಿರಿಯ ನಡತೆ, ಮೇಲುಸಾಲು, ಏನೆ ಇರಲಿ (೧೦ಗೀತ. ೩೮-೭). [ಹಮ್ಮು$_2$ (< ಅಹಮ್ಮು) + ಹೆಮ್ಮೆ (< ಪೆರ್ಮೆ)]

**ಹಮ್ಮೈಸು$_1$** 'ಹಮ್ಮಯಿಸು' ನೋ.

**ಹಮ್ಮೈಸು$_2$** (ಕ್ರಿ). ಬಯಸು; ಅಪೇಕ್ಷಿಸು: ನನ್ನ ಮಲತಮ್ಮನು ನನ್ನೊಡನೆ ಕಾಳಗಕ್ಕೆ ಹಮ್ಮೈಸುವನಲ್ಲವೆ ? (ಶಕಾರ. ೨೦೬); ಪತ್ನಿಯು ಅವನನ್ನೂ ಅವನ ಕಡೆಯವರನ್ನೂ ಆರಾಧಿಸಿ ಸೇವಿಸಿ ಅಪಚಾರಗಳನ್ನೆಲ್ಲ ಸಹಿಸಿಕೊಂಡು ಅವರ ಹಸಾದಕ್ಕೆ ಹಮ್ಮೈಸಿ ತನ್ನ ಯೋಗಕ್ಷೇಮವನ್ನೇ ಮರೆತು ಜನ್ಮವನ್ನು ಸಾರ್ಥಕಗೊಳಿಸಬೇಕು (ಆರ್ಯಧ. ೧೬೪). [? + - ಇಸು$_1$]

**ಹಯ** (ನಾ). ೧. ಕುದುರೆ; ಅಶ್ವ: ಹಯದ ಮನಕ್ಕಮೇಱಿದನ ಬಿನ್ನಣಕಂ ದೊರೆಯಾಗಿಯುಂ ವಾಹಳಿಗಳ್ ಮನೋಹರಂ (ಶಾಂತಿಪು. ೭-೧೪೪); ವಾನರನ ಹಯ ಕುಂಜರನ ಪಂಚಾನನನ ಮೃಗಪೋತಕನ ಗುಣವಾ ನರೇಂದ್ರಸೂಳಿರಲು ಬೇಹುದು (ಕುವ್ಯಾಉ. ೩-೧೦೯); ಹಂದಿ ಹದಿನೈದು ಈದರೂ ಒಂದೂ ಹಯವಾಗಲಿಲ್ಲ (ಗಾದೆ). 'ಹಯವಲ್ಲನ' ಪರಾ. ೨. [ಕಾಮಶಾ] ಮೂರು ಬಗೆಯ ಪುರುಷರಲ್ಲಿ ಒಂದು ವಿಧ: ಮುನಿವರ ವಾತ್ಸ್ಯಾಯನ ಮತದೊಳು ನೆಟ್ಟನೆ ಶಶ ವೃಷ ಹಯರೆಂದೆನಿಪ ಮನುಜರ್ ಮೂದೆಱಂ (ಜನವ. ೪-೧); ಶಶ ವೃಷ ಹಯರೆಂಬ ಪ್ರಮಾಣಪುರುಷರಿಂ (ಖಿವೇಕ. ೧೮೨). ೩. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ: "ಋಷಿ ನಗ ಹಯ ಸ್ವರಮದೇಟು" (ಮಂಗರಾ. ೧೦೩-೮). ೪. [ಛಂದ] ಒಂದು ಬಗೆಯ ಪ್ರಾಸ: ನಿಜದಿಂ ಬಂದೊಡೆ ಸಿಂಗಂ ಗಜದೀರ್ಘಂ . . . ಹಯಮಂಬುಜಮುಖಿ ದಡ್ಡಕ್ಕರಂಗಳವು

ಷಟ್‌ಪ್ರಾಸಂ (ಛಂದೋಂಬು. ೧-೪೭ ಅಡಿಟಿ). 'ಹಯಪ್ರಾಸ' ಪರಾ.

**ಹಯಒರಟ** = (ತುಂಟ) ಕುದುರೆಯಂತೆ ಒರಟಾದವನು; ಬಹಳ ಒರಟ: ಶುದ್ಧ ಒರಟ ಅಲ್ಲ, ಹಯಒರಟ! ನಾನು ಬೇಕಾಗಿ ಕೆರಳಿಸಿ ಮಾತಾಡಿದೆ (ಮರಳಿ. ೭೮).

**ಹಯವತ್ಸರಾಜ** = ಅಶ್ವಾರೋಹಣದಲ್ಲಿ ವತ್ಸರಾಜನಂತೆ ಪ್ರಸಿದ್ಧನಾದವನು; ಒಂದು ಬಿರುದು: ನುಡಿದಂತೆ ಗಣ್ಣಂ ಹಯವತ್ಸರಾಜಂ ರೂಪಮನೋಜಂ ಪರಬಳ ಸೂಜೆಕಾಱಂ (ಸೌಇ.II, ೧೮-೮; 980); ದಾನಕಾನೀನಂ ಹಯವತ್ಸರಾಜ ರೂಪ ಮನೋಜಂ ರಿಪುನೃಪತಿಹೃದಯಸೆಲ್ಲಂ ಭುವನೈಕಮಲ್ಲಂ (ಸೌಇ. XI - i, ೮೪-೬; 1049). [ಸಂ.]

**ಹಯಖುರ** (ನಾ). ಕುದುರೆಯ ಗೊರಸು: ಹಯಖುರಮುಂ ಚಕ್ರದ ನೇಮಿಯುಮೂರ್ಜಿತವಜ್ರಮಕ್ಕುಮೆನೆ ವಾಹಿನಿಯೊಳ್ ನಿಯತಮದಾಟದೆ ಸಮಭೂಮಿಯೊಳದಿರದೆ ಪರಿವ ತೆಱದೆ ಪರಿದತ್ತು ರಥಂ (ಪಾರ್ಶ್ವಪು. ೧೧-೧೦೩). [ಸಂ.]

**ಹಯಗಂಧಿ** (ನಾ). ಒಂದು ಬಗೆಯ ಔಷಧೀಸಸ್ಯ; ಹಿರೇಮದ್ದಿನ ಗಿಡ; ಅಶ್ವಗಂಧಿ: ಹಯಗಂಧಿಯ ಬೇರಂ ಕ್ಷಾರಯುತಂ ಮೇಣಂದೆ ಪುಟ್ಟಿದೆಳಗಱುವಿನ ವಿಷ್ಟಿಯುಮಂಗುರುವುಮನುಂ ತಿಂದು ಯಥೇಷ್ಟಂ ತಿನ್ಗೆ ಮೆಯ್ಗೆ ಮಚ್ಚಿದ ವಿಷಮಂ (ಲೋಕೋಪ. ೧೧-೪೫). [< ಸಂ. ಹಯಗಂಧಾ]

**ಹಯಗ್ರೀವ** (ನಾ). ೧. ವಿಷ್ಣುವಿನ ಒಂದು ಅವತಾರ; ಕುದುರೆಯ ಮುಖದ ಆಕೃತಿಯನ್ನು ಹೊಂದಿದ, ಮಧುಕೈಟಭರೆಂಬ ರಾಕ್ಷಸರನ್ನು ಕೊಂದು ವೇದಗಳನ್ನು ರಕ್ಷಿಸಿದ ವಿಷ್ಣುವಿನ ಒಂದು ಹೆಸರು. ೨. ಹಯಗ್ರೀವ ಆಕಾರದ ವಿಷ್ಣುವಿನಿಂದ ಹತನಾದ ಒಬ್ಬ ರಾಕ್ಷಸನ ಹೆಸರು: ಮುರ ಹಯಗ್ರೀವ ಪಂಚಜನ ನಿಶುಂಭರೆಂಬ ನಾಲ್ವರ್ ದನುಜನಾಯಕರಿರ್ಪರ್ (ಜಗವಿ. ೧೧-೪೫ ವ). ೩. ಕಡಲೆಬೇಳೆ ಬೆಲ್ಲಗಳಿಂದ ತಯಾರಿಸುವ ಒಂದು ಬಗೆಯ ಭಕ್ಷ್ಯ: ಮೊನ್ನೆ ದ್ವಾದಶಿ ಪಾರಣೆಗೆ ನಾನು ಹಯಗ್ರೀವ ಮಾಡಿದ್ದೆ (ಗೃಹಲ. ೬೯). [ಸಂ.]

**ಹಯತತಿ** (ನಾ). ೧. ಕುದುರೆಗಳ ಗುಂಪು, – ಸಮೂಹ. ೨. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ: ನನಭನಲಗಮೆಂಬಿವು ಗಣನಿವಹಂ ಜನಿಯಿಸಿ ಯತಿ ನಿಲ್ತಿರೆ ಹಯತತಿಯೊಳ್ ನಿನಗಿದನಱಿವಂತಿರೆ ವಿರಚಿಸಿದಂ ವನರುಹವದನೇ ಪ್ರಹರಣಕಲಿಕಂ (ಛಂದೋಂಬು. ೨-೧೪೭). [ಸಂ.]

**ಹಯದಳ** (ನಾ). ಚತುರಂಗಬಲದಲ್ಲಿ ಒಂದು; ಕುದುರೆಯ ಪಡೆ; ಅಶ್ವಸೈನ್ಯ: ಕೆಡೆದಡಜಿಗಿಜಿಯಾಯ್ತು ಹಯದಳ ಹತ್ತುಸಾವಿರವು (ಕೌಶಿರಾ. ೨೦-೪೩). [ಸಂ. ಹಯದಲ]

**ಹಯದಟ** (ನಾ). = ಹಯದಳ: ಹಯದಟಮಂ ಬೆಸಸಲ್ ವಾರ್ಧಿಯ ವೀಚಿಯ ತೆಱದಿನುಱದೆ ಕವಿಯಲ್ ಶತ್ರುಂಜಯನ ಹರಿಯುಗ್ರಹರಿಬಳಚಯಮದನಿದಿರಾಂತು ಬೆದಱಿ ಬೆಂಕೊಳಿ ಭೋಂಕಲ್ (ನೇಮಿಪು. ೭-೯೦). [ಹಯ + ದಟ]

**ಹಯನ** 'ಪಯನ್' ನೋ.

**ಹಯನು** 'ಪಯನ್' ನೋ.

**ಹಯನುಗದ್ದೆ** (ನಾ). ಬೇಸಗೆ ಕಾಲದಲ್ಲಿ ಕೆರೆಯ ನೀರಿನಿಂದ ಬೆಳೆಯುವ ಗದ್ದೆ: (ಕ). [ಹಯನು (< ಪಯನ್) + ಗದ್ದೆ (< ಗೞ್ದೆ)]

**ಹಯನುಬತ್ತ** (ನಾ). ಬೇಸಗೆಕಾಲದಲ್ಲಿ ಕೆರೆಯ ನೀರಿನಿಂದ ಬೆಳೆಯುವ ಬತ್ತ; ಜನವರಿ ತಿಂಗಳಲ್ಲಿ ನಾಟಿ ಮಾಡುವ ನೆಲ್ಲು: (ಕ). [ಹಯನು (< ಪಯನ್) + ಬತ್ತ]

**ಹಯನುಬೆಳೆ** (ನಾ). ಬೇಸಗೆ ಕಾಲದ ಬೆಳೆ; ಜನವರಿ ತಿಂಗಳಲಿನಲ್ಲಿ ನಾಟಿ ಹಾಕಿ ಕೆರೆಯ ನೀರಿನಿಂದ ಬೆಳೆಯುವ ಬೆಳೆ: (ಕ). [ಹಯನು (< ಪಯನ್) + ಬೆಳೆ]

**ಹಯಪತಿ** (ನಾ). ೧. ಕುದುರೆಗಳ ಒಡೆಯ; ತುರಗದಳದ ಅಧಿಪತಿ. ೨. ಒಂದು ಬಿರುದು: ಭೋಜ ಲಾಳ ಗಜಪತಿ ಹಯಪತಿ ನರಪತಿಯೆನಿಪ ಮಹೀಪಾಳರಾಸ್ಥಾನದಲ್ (ಎಇ. VI, ೨೧೭-೮; 1057). [ಸಂ.]

**ಹಯಪರಿಕರ** (ನಾ). ಕುದುರೆಯ ನಡುಕಟ್ಟು; ಲಗಾಮು: "ಬಿಗಿ-ಬಂಧನೇ, ಹಯಪರಿಕರೇ ಚ" (ಶಮಧಾ). [ಸಂ.]

**ಹಯಪರ್ಯಾಣ** (ನಾ). ಕುದುರೆಯ ಜೀನು, – ತಡಿ: ಹಯಪರ್ಯಾಣ[ಪಾಠಾಂ. ಪಲ್ಯಾಣ] ಪ್ರಭಾಮಂಜರಿ ಗಜ ಭಿದು ಸಿಂಧೂರರಾಗಂ... ತದ್ದಿಗ್ವಿಜಯಯಾತ್ರೋದ್ಯೋಗದೊಳ್ ಕೊಲ್ಲಣಿಗೆ ಮೆಱೆಯೆ ಬರ್ಪಲ್ಲಿ ಭೂಪಾಲಸಿಂಹರ್ (ಅನಂಪು. ೧೩-೭೫). [ಸಂ.]

**ಹಯಪ್ರಾಸ** (ನಾ). [ಛಂದ] ಒಂದು ಬಗೆಯ ಪ್ರಾಸ; "ಪ್ರತಿಪಾದದ ಮೊದಲೆರಡು ಸ್ವರಗಳ ನಡುವೆ ಒಂದೇ ವಿಧದ ಸಜಾತೀಯ ಸಂಯುಕ್ತವ್ಯಂಜನಗಳು ಬರಲು ಹಯಪ್ರಾಸವೆನಿಸುವುದು" (ಕೈಪಿಡಿ. ೭೩). [ಸಂ.]

**ಹಯಮಂದಿರ** (ನಾ). ಕುದುರೆಗಳಿರುವ ಸ್ಥಳ; ಲಾಯ: ಹಯಮಂದಿರಂಗಳೆಲ್ಲರ ನಯನಂಗಳ್ಗೀವುತಿರ್ಪುವತಿಶಯಮಂ ತಮ್ಮಯ ರತ್ನಕಳಶಕಿರಣೋಚ್ಚಯದೊಳ್ ತೇಂಕಾಡುತಿರ್ದವೆಂಬಂತೆವೊಲಂ (ಬಾಧಪು. ೧-೧೫೧). [ಸಂ.]

**ಹಯಮಾರ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು; ಕಣಗಿಲು: "ಕರವೀರಃ, ಹಯಮಾರಃ - ಈ ೨ ಕಣಿಗಿಲೆ" (ಹಲಾಯು. ೩೨-೪೧). [ಸಂ.]

**ಹಯಮಾರಕ** (ನಾ). = ಹಯಮಾರ: "ಪ್ರತಿಹಾಸ, ಶತಪ್ರಾಸ, ಚಂಡಾತ, ಹಯಮಾರಕ, ಕರವೀರ - ಕಣಗಿಲೆ" (ನಾಚಿರಾ. ೬). [ಸಂ.]

**ಹಯಮೇಧ** (ನಾ). ಹಿಂದೆ ರಾಜರು ದಿಗ್ವಿಜಯವನ್ನು ಸಾಧಿಸಿ ನಂತರ ಕುದುರೆಯನ್ನು ಬಲಿಕೊಟ್ಟು ಮಾಡುತ್ತಿದ್ದ ಯಾಗ; ಅಶ್ವಮೇಧ: ಮಿತ್ರೋದಯಾತ್ಸರದೊಳೈತಂದು ಹಯಮೇಧ ಸತ್ರಸಾಧನಕೆ ವೇದವ್ಯಾಸಮುನಿ ಧರ್ಮಪುತ್ರನಂ ಬೋಧಿಸಿ ಮರಳ್ದನು (ಜೈಮಿಭಾ. ೨-೪೭); ಪೂರ್ವಪದ್ಧತಿವಿಡಿದು ಮಾಳ್ಪ ದಿಗ್ವಿಜಯ ಹಯಮೇಧ ಮೊದಲಾದುವಂ ತೊರೆದು ... ದೇವರ್ಕಳಂ ಪೂಜಿಸಲ್ ಮೆಚ್ಚುವುದು ಜಗವನಾಳುವ ಖುತಂ (ಶ್ರೀರಾಮಾ. ೯-೨೪೩). [ಸಂ.]

**ಹಯಮೋಹರ** (ನಾ). = ಹಯದಳ: ಕರಿಘಟೆಯ ಕಲಕಿದನು ಹಯಮೋಹರವ ಜರುಹಿದನೌಕಿ ಹರಿತಹ ವರರಥವ ಹುಡಿಮಾಡಿದನು ಕೆಡಹಿದನು ಕಾಲಾಳ (ಕುಮಾದ್ರೋ. ೫-೧೨). [ಹಯ + ಮೋಹರ]

**ಹಯರಕ್ಷೆ** (ನಾ). ಕುದುರೆಯ ಕಾವಲು, – ರಕ್ಷೆ: ಅಂದು ಕುಲಗೋತ್ರಮಂ ಕೊಂದ ಪಾಪಂ ಪೋಗಲೆಂದಶ್ವಮೇಧಮಂ ತೊಡಗಿಯೆನ್ನಂ ಧರ್ಮನಂದನಂ ಕಳುಹಿದಂ ಹಯರಕ್ಷೆಗದಱೊಡನೆ ಬರೆ ಸಿಲ್ಕಿತದು ಶಿಲೆಯೊಳು (ಜೈಮಿಭಾ. ೧೧-೧೭). [ಸಂ. ಹಯರಕ್ಷಾ]

**ಹಯವಲ್ಗನ** (ನಾ). [ಅಶ್ವಶಾ] ಕುದುರೆಯ ಐದು ಬಗೆಯ ನಡೆಗಳಲ್ಲಿ ಒಂದು ಬಗೆ: ಅದಂ ಗುಣಾರ್ಣವನಿಡಲೊಲ್ದನಿಲ್ಲ ಹಯವಲ್ಗನಸಂಚಳರತ್ನಕುಂಡಳಂ (ಪಂಪಭಾ. ೫-೫೧). [ಸಂ.]

**ಹಯವ್ಯೆಹಾಳಿ** (ನಾ). ಕುದುರೆಯನ್ನು ಹತ್ತಿ ಸವಾರಿಮಾಡುವುದು; ಕುದುರೆ ಸವಾರಿ: ದ್ವಿರದಾರೋಹಣಯೋಗ್ಯವೀಧಿ ಹಯವ್ಯೆಹಾಳಿಪ್ರದೇಶಂ ನಿರಂತರ ಶಸ್ತ್ರಶ್ರಮಭೂಮಿ ... ಸುತ್ತಿರ್ಪಿನೆಗಂ (ಪುಷ್ಪಪು. ೪-೫೪). [ಹಯ + ವ್ಯೆಹಾಳಿ]

**ಹಯವ್ರಾತ** (ನಾ).= ಹಯತತಿ ೧: ಶಾತಶರಪ್ರಹಾರದ ರಥಾಂಗವಿದಾರಣಮಕ್ಷ ಖಂಡನಂ ಸೂತನಿಷೂದನಂ ಯುಗಸಮುದ್ದಳನಂ ಧ್ವಜಭಂಜನಂ ಹಯವ್ರಾತ ನಿಶುಂಭನಂ ಸಮನಿಸುತ್ತಿರೆ (ಚಂದ್ರಪು. ೧೦-೭೫). [ಸಂ.]

**ಹಯಶಾಸ್ತ್ರ** (ನಾ). ಕುದುರೆಯ ಜಾತಿ, ಲಕ್ಷಣ, ಬಲ, ರೋಗ, ಚಿಕಿತ್ಸೆ ಮುಂತಾದ ಕುದುರೆಗೆ ಸಂಬಂಧಿಸಿದ ಎಲ್ಲ ವಿಚಾರಗಳನ್ನೂ ತಿಳಿಸುವ ಶಾಸ್ತ್ರ; ಅಶ್ವಶಾಸ್ತ್ರ: ನೃತ್ತಗೀತ ಹಯಶಾಸ್ತ್ರಾದ್ಯೈತ ... ವಿದ್ಯಾಕದಂಬಕಮಂ ಚಂದ್ರ ಕವೀಂದ್ರನೋರ್ವನೆ ವಲಂ ಬಲ್ಲಂ ಪೆಱರ್ಬಲ್ಲರೇ (ಮದತಿ. ೧-೫೧); ಇಭೇಂದ್ರಶಿಕ್ಷೆ ಹಯಶಾಸ್ತ್ರಂ . . . ಅಖಿಲವ್ಯೂಹೋತ್ಕರಮೆಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪಪು. ೪-೫೯). [ಸಂ.]

**ಹಯಶಿಕ್ಷಕ** (ನಾ). ಕುದುರೆಗಳನ್ನು ಪಳಗಿಸುವವನು; ಅಶ್ವಗಳಿಗೆ ಶಿಕ್ಷಣಕೊಡುವವನು: ಹಯಶಿಕ್ಷಕರಿಂ ಗಜಶಿಕ್ಷೆಯ ಭೀಕರದಿಂ ಪ್ಲವಂಗುಡುವ ಜೋದರ ಸಂಚಯದಿಂ ನಯದಿಂ ವ್ಯೆಹಾಳಿಯ ಬಯಲೊಪ್ಪಿತ್ತು ಪಟ್ಟಣದ ವನದೆಡೆಯೊಳ್ (ಗಿರಿಕ. ೨-೭೪). [ಸಂ.]

**ಹಯಶಿಕ್ಷೆ** (ನಾ). ಕುದುರೆಗಳನ್ನು ಪಳಗಿಸುವುದು; ಅಶ್ವಗಳನ್ನು ತರಬೇತುಮಾಡುವುದು: ಹಯಶಿಕ್ಷಾಕ್ರೀಡೆಯಂ ತೋಱುವ ಹರಿಸುತನೋ ತಾನೆನಿಪ್ಪಂದದಿಂ . . . ನಾಡೆಯುಮಾ ಕಂದರ್ಪದೇವಂ ಸುರುಚಿರತುರಗಾರೂಢಿಯೊಳ್ ಪ್ರೌಢನಾದಂ (ಕುಸುಮಾ. ೭-೭೫). [ಸಂ. ಹಯಾಶಿಕ್ಷಾ]

**ಹಯಶೃಂಗಚಾಪ** (ನಾ). (ಆಲಂ) ಕುದುರೆಯ ಕೊಂಬಿನ ಬಿಲ್ಲಿನ ಹಾಗೆ ಅಸಂಭವವಾದುದು: ಮದನರಸಪ್ಲವಂ ಕವಿಯೆ ತಣ್ಣಸನಾಗದೆ ತೃಷ್ಣೆಗಿಂಬುಕೆಯ್ವದೆ ಪಗೆಗೊಂಡು ಪೋಪುದು ಸಮುದ್ರದ ಮಧ್ಯದ ಬಾಳೆ ಕೆಯ್ಗೆವರ್ಪುದುಮನಗಾಧ ಮನ್ಮಥ ಸಮುದ್ರದ ಮಧ್ಯದ ಬಾಳೆ ಕೆಯ್ಗೆವರ್ಪುದುಮನಮೋಘಮಿಚ್ಚಯಿಪ ನಿಚ್ಚಯಿಪೊಂ ಹಯಶೃಂಗಚಾಪಮಂ (ಶಾಂತಿಪು. ೮-೯೭). [ಸಂ.]

**ಹಯಹೇಷಿತ** (ನಾ). ಕುದುರೆಯ ಕೆನೆತ; ಹೇಷಾರವ: ಯುಗಪದಾಸ್ಫಾಲಿ ತಾನೇಕದುಂದುಭಿಧ್ವನಿಮಧುರಗೀತಂಗಳಪ್ಪ ಹಯಹೇಷಿತಂಗಳಿಂದಂ ಸಂದಣಿಸಿ (ಆದಿಪು. ೧೪-೮೭ ವ). [ಸಂ.]

**ಹಯಾತ್**, ಹಯಾತಿ (ನಾ). ಬಾಳು; ಜೀವಮಾನ; ಆಯುಷ್ಯ: ಭಗವಂತನ ಮುಖ್ಯಗುಣಗಳೆಂದರೆ – ಜಮಾಲ್ (ಸೌಂದರ್ಯ), ಜಲಾಲ್ (ಶಕ್ತಿ, ಮಹತ್ವ), ಕಮಾಲ್ (ಪರಿಪೂರ್ಣತೆ), ಹಯಾತ್ (ಜೀವನ) . . . ಬಸೀರ್ (ಮಹದ್‌ವೀಕ್ಷಣ) (ಇಸ್ಲಾಂಸಂ. ೨೯೫). **ಹಯಾತಿ:** ತಂದೆಯು ಕೊಂಡ ಗಡಿಗೆಯು ಮಗನ ಹಯಾತಿಯವರೆಗೆ ಬರಬೇಕು ಎಂಬ ವೃತ್ತಿಯಿಂದ ಗೋರಾಕುಂಬಾರನು ಗಡಿಗೆಗಳನ್ನು ತಯಾರಿಸುತ್ತಿದ್ದನು (ಭಾರಸಂ. ೮೩); ಕಾಕಾ ಅವರ ಹಯಾತೀ ಒಳಗ ಆ ಕುಟುಂಬ ಒಡೀಬಾರದು (ದೀಪಹ. II, ೧೦೭). [← ಅರ. ಹಿಂ. ಮರಾ. ಹಯಾತ್]

**ಹಯಾತಿ** 'ಹಯಾತ್' ನೋ.

**ಹಯಾಮಿ** (ನಾ). ಆಳ್ವಿಕೆ; ದರಬಾರು: ಉಡುಪಿಪದ್ಮನಾಭಾಚಾರ್ಯರ ಹಯಾಮಿಯಲ್ಲಿ ಅವಲು ತಿನ್ನುತ್ತಿದ್ದ ಒಂದೇ ಒಂದು ಬೀಡಾದ ಬೆಲೆ ಏಳೂವರೆ ರೂಪಾಯಿ (ಬೆಂಗಬ. ೧೪೩). [← ಹಿಂ. ಹಯಾಮ್?. / ತೆಲು. ಹಯಾಮು]

**ಹಯಾರ್ಜುನರುಕ್ಕು** (ನಾ). ಕುದುರೆಯ ಬಿಳಿಯ ಹೊಳಪು, – ತೇಜಸ್ಸು: ವಾಗ್ವಲೀಲಾಭೃದ್ಧರಾಮರ ಭುಗ್ನರಿನಮುಚಿಭಿದ್ಧಯಾರ್ಜುನರುಗ್ಗಿಮಾನಿ ಮರುದ್ದುನೀವನ ಪುಂಡರೀಕಾಬ್ಜ . . . ಬಸವ (ಬಸವು. ೩೮-೧). [ಸಂ. ಹಯಾರ್ಜುನರುಚ್]

**ಹಯಾಳಿ** (ನಾ). = ಹಯತತಿ ೧: ಏಱಿದಾತನ ಮನಂ ಮನವಾಗೆ ಮನೋಜವಂ ಗಳಿಂ ಪರಿವ ಹಯಾಳಿ . . . ಒಪ್ಪುಗುಮಾ ಪುರಗೋಪುರಂಗಳೊಳ್ (ಜಗವಿ. ೨-೧೭). [ಸಂ. ಹಯಾಲಿ]

**ಹಯಿನು** 'ಪಯನ್' ನೋ.

**ಹಯ್ದ** 'ಹೈದ' ನೋ.

**ಹಯ್ನ** 'ಪಯನ್' ನೋ.

**ಹಯ್ನು** 'ಪಯನ್' ನೋ.

**ಹಯ್ಯಂಗವೀನ** (ನಾ). ೧. ಆಗತಾನೆ ಕಡೆದು ತೆಗೆದ ಬೆಣ್ಣೆ; ತಾಜಾಬೆಣ್ಣೆ; ನವನೀತ: ಅತಿದೂರೋಚ್ಛ್ವಾಸವಿಕಾಸ ನಾಸಾಂಜಲಿಪುಟ ಪೀಯಮಾನದುಗ್ಧಹಯ್ಯಂಗ ವೀನಮುಂ (ಆದಿಪು. ೧೧-೨೭ ವ); ಸುಗಂಧಿ ಪರಿಮಲಾನೂನನಪ್ಪ ಹಯ್ಯಂಗವೀನ ಮುಮನರಸಂಗಂ ಪಂಕ್ತಿಯೊಳುಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೧೧-೨೯ ವ). ೨. ಆಗತಾನೆ ಕಾಸಿದ ತುಪ್ಪ: "ಹಯ್ಯಂಗವೀನಂ, ಆಜ್ಯಂ – ಈ ೨ ಹೊಸತುಪ್ಪಂ" (ಹಲಾಯು. ೫೭-೧೧೯). [< ಸಂ. ಹೈಯಂಗವೀನ]

**ಹಯ್ವೆ** (ನಾ). ಒಂದು ನಾಡಿನ ಹೆಸರು: ಕುಂದಮರಸರು ಸಾನ್ತಳಿಸಾಸಿರಮುಮಂ ಹಯ್ವೆಯುಮ್ನೂಱುಮನ್ . . . ರಾಜ್ಯಂಗೆಯ್ಯುತ್ತಮಿರ್ದು (ಎಕ.VII, ಶಿಕಾ. ೧೨೫-೨೪; 1019); ಬನವಾಸೆ ಕಡಂಬಳಿ ಹಯ್ವೆಯೆಂಬ ದೇಶಂಗಳ್ (ಮುಂಬರಾ. XI, ೨೬೦-೨೭; 1162). 'ಪಯ್ವೆನಾಡು' ಪರಾ. [?]

**ಹಯ್ವೆಗುಂದ** (ನಾ). ಒಂದುಊರಿನ ಹೆಸರು; P ಈಗಿನ ಸೊರಬ ತಾಲ್ಲೂಕಿನ ಹಯ್ಗುಂದ: ಲೋಕಟಿಗನರಸಂಗೆ ಪುತ್ರನಿಮಿತ್ತಕಾರಣಮಾಗಿ ಹಯ್ವೆಗುನ್ದದಬ್ಬೆಗೆ ತಲೆಯಂ ಪರಿಸಿ (ಎಕ. VIII, ಸೊರಬ. ೪೭೯-೭; 991). [ಹಯ್ವೆ + ಕುಂದ$_3$]

**ಹರ** (ನಾ). ೧. ಶಿವ; ರುದ್ರ; ಈಶ್ವರ: ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬರ್ಕು (ಬಸವ. ೧೭೯); ಹರ ಕೊಲ್ಲಲ್ ಪರಕಾಯ್ವನೇ (ಸೋಮೇಶ. ೨೯). ೨. ಅಗ್ನಿ; ಬೆಂಕಿ. ೩. ಶಿವನ ದಿಕ್ಕು; ಈಶಾನ್ಯ: ತೆಂಕಣೊಗೆದು ಬಡಗಣ್ಗೆ ಬರ್ಪೊಡಂ . . . ಹರನೊಳೊಗೆದು ನೈಋತಿಗೆ ಬರ್ಪೊಡಂ . . . ಇವ ನೋಡಿ ಪೇೞ್ ಮಱೆಯಧಿಕ ತಾನೆಂಬುದಂ (ಜಟ್ಟಮ. ೨-೧). ೪. ಭಾಗಿಸುವ ಸಂಖ್ಯೆ; ಛೇದ; ಭಾಜಕ. ೫. ಭಾಗಿಸುವಿಕೆ; ಭಾಗಾಕಾರ. ೬. ನಿವಾರಣೆ; ಪರಿಹಾರ: ವಾತಜ್ವರ, ಪಿತ್ತಜ್ವರ, ಶ್ಲೇಷ್ಮಜ್ವರ ಇವು ಹರವಹುದು (ವಿಷವಿ. ೧೮). 'ಹರಂಗೆಯ್' ಪರಾ. ೭. ಕತ್ತೆ. ೮. ಹಿಡಿತ; ಒತ್ತಾಯದಿಂದ ಹಿಡಿದುಕೊಳ್ಳುವಿಕೆ. "ಹರ – ಅಗ್ನಿ; ೨. ಶಿವ; ೩. ಕತ್ತೆ; ೪. ಹಿಡಿತ; ೫. ಭಾಜಕ" (ನಾನಾಶ. ೨೭೩). ೯. [ಛಂದ] ಗುರು ಅಕ್ಷರದ ಸಂಕೇತ: "ಲಘುವೆ ಹರಿ ಗುರುವೆ ಹರರ್" (ಮಂಗರಾ. ೧೦೭-೧೯); ವ್ಯೋಮಂ ಹರಂ ತಾಮಾ ಗಿರಲ್ ಶ್ಯಾಮಾಂಗಿ ಕೇಳ್ ಕಾಮಾಂಗಮಂ (ಛಂದೋಂಬು. ೨-೭೭). ೧೦. [ಗಣಿತ] ಹನ್ನೊಂದು ಎಂಬ ಸಂಖ್ಯೆಯ ಸಂಕೇತ: ಹರರೆಡೆ [ಪಾಠಾಂ. ಹರಿಹರರೊಳೆ] ಯತಿನಿಯಮಂ (ಛಂದೋಂಬು. ೨-೧೯೭).

ಹರಹರ (ದ್ವಿರುಕ್ತಿ) = ಆಶ್ಚರ್ಯವನ್ನು ಸೂಚಿಸುವ ಒಂದು ಉದ್ಗಾರ: ಗಿರಿಯ ಮಕ್ಕಳು ನೆರೆದು ವಜ್ರವ ಸರಸವಾಡುವ ಕಾಲವಾಯಿತೆ ಹರಹರತಿವಿಸ್ಮಯವು (ಕುಮಾದ್ರೋ. ೨-೫೫). **ಹರನತನು** = ೧. ಶಿವನ ದೇಹ. ೨. ಎಂಟು ಎಂಬ ಸಂಖ್ಯೆಯ ಸಂಕೇತ: ಕರಿದಿಙ್ನಾಗಂ. . . ಹರನ ತನು ಸಿದ್ಧಿ ವಾರಣಮಾರಯೆ ಯೆಂಟಕ್ಕೆ ನಾಮಂ (ವ್ಯವಹಾ. ೯-೮). **ಹರಹರ ಎನ್ನು** = (ಆಲಂ) ಪ್ರಾಣ ಬಿಡು; ಸಾಯು: ಓಡುವ ಬಸ್ಸಿನಡಿಯಲ್ಲಿ ಸಿಕ್ಕಿಹಾಕಿಕೊಂಡ ನಾಯಿ ಅಲ್ಲೇ ಹರಹರ ಎಂದಿತು (ರೂಢಿ). [ಸಂ.]

**ಹರಂಗೆಯ್** (ಕ್ರಿ). ನಿವಾರಿಸು; ಪರಿಹರಿಸು: ಜೀವರಿಗುಂಟಾದ ರೋಗಗಳ ಹರಂಗೆಯ್ವ ಔಷಧಿಗಳಲ್ಲಿಯೂ ತಾನೇ ವ್ಯಾಪಿಸಿರ್ಪುದರಿಂ . . . ಲಕ್ಷ್ಮೀಪತಿಗೆ ಮೊದಲು ನಮಸ್ಕರಿಸಿ ರೋಗಹರವಾದ ಔಷಧಗಳನ್ನು ಬಳಿಕ ಪೇಳ್ವೆನು (ಸಕವೈ. ೫). [ಹರ + ಕೆಯ್]

**ಹರಕ** (ನಾ). (?): ಕುಂದಣನ ಹರಕದಿಂ ಪಿರಿಯ XX ಗಡಿ ನಿಡಿ ಹುಟ್ಟು ಕಟ್ಟಳೆಯ ವಿವರ (ಸೌಇಇ. IX-ii, ೪೫೭-೧೦; 1455) [?]

**ಹರಕತು** 'ಹರಕತ್ತು' ನೋ.

**ಹರಕತ್ತು**, ಹರಕತು (ನಾ). ೧. ಅಡ್ಡಿ; ಅಡಚಣೆ: ತಾಲೂಕಿನ ಅಮಲುದಾರ್ರು ಹರಕತ್ತು ಮಾಡಿದ್ದಕ್ಕೆ ದಿವಾನ ಪೂರ್ಣಯ್ಯನವರ ತಾಕಿತ್ತು ತೆಗೆದುಕೊಂಡು ಹೋಗಿ ಕೊಟ್ಟಲ್ಲಿಯರಡು ಹೊಲಾ ನಡಸಿಕೊಟ್ಟು (ಎಕ. VII (S), ಚನ್ನಗಿ. ೮೫-೫; 1821); ಇಲ್ಲಿಯವರೆಗೆ ಎಂದಾದರೂ ನಿಮ್ಮ ಕೆಲಸವು ಹರಕತ್ತಾಗಿ ನಿಂತಿರುವದೇ? (ಜಮಿನ್ದಾ. ೧೯); ದೇವರ ದರ್ಶನಕ್ಕೆ ಯಾರಾದರೂ ಬರಬಹುದಲ್ಲ – ಯತಿಗಳು ಬರುವುದಕ್ಕೆ ಏನು ಹರಕತ್ತು? (ಕೆಲಸ. ೩೯೦). ೨. ಕಷ್ಟ; ತಾಪತ್ರಯ: ಏ ಸಾವಕಾರ, ಒಂದು ಹತ್ತು ರೂಪಾಯಿಕೊಡು, ಬಹಳ ಹರಕತ್ತಾಗೇದ (ಕ್ಷೀಜ. ೪೯). **ಹರಕತು:** ೧. ಒಂದ್ಹನೀ ನೀರು ಉಳೀದಿದ್ರೂ ಹರಕತಿಲ್ಲ (ಕಮ್ಮಟ. ೩). [← ಅರ. ಹಿಂ. ಮರಾ. ಹರಕತ್]

**ಹರಕಲಿಸು** 'ಪರಕಲಿಸು' ನೋ.

**ಹರಕಲಿಸು** 'ಪರಕಲಿಸು' ನೋ.

**ಹರಕಿಣಿ** (ನಾ). ಕಿಂಡಿ; ಕಿಟಕಿ (?): ಕರೆಯಲಮ್ಮದೆ ಪಾಣ್ಬೆಯನು ಹರಕಿಣಿಯೊಳ ಗಿಳಿಕಿ ತಾ ನೋಡುತ ಕರಸನ್ನೆ ಮಾಡುವನೊರ್ವ (ಜ್ಞಾನಚ. ೩೮-೫೩). [?]

**ಹರಕೆ** 'ಪರಕೆ$_1$' ನೋ.

**ಹರಕೆಕಟ್ಟು** 'ಪರಕೆಗಟ್ಟು' ನೋ.

**ಹರಕೆಕೊಡು** 'ಪರಕೆಗೊಡು' ನೋ.

**ಹರಕೆಗೊಳ್** 'ಪರಕೆಗೊಳ್' ನೋ.

**ಹರಕೆಗೊಳ್ಳು** 'ಪರಕೆಗೊಳ್' ನೋ.

**ಹರಕೆತೀರಿಸು** (ಕ್ರಿ). ದೇವರಿಗೆ ಹೊತ್ತ ಹರಕೆಯನ್ನು ಈಡೇರಿಸು; ದೇವರಿಗೆ ಕೊಡುತ್ತೇನೆಂದ ಕಾಣಿಕೆಯನ್ನು ಸಲ್ಲಿಸು: ಅವರು ಹರಕೆ ತೀರಿಸಿ ಬಂದ ಮೇಲೆಯೆ ಮಗನ ರೋಗ ವಾಸಿಯಾಯಿತು (ರೂಢಿ). [ಹರಕೆ (< ಪರಕೆ$_1$) + ತೀರಿಸು]

**ಹರಕೆದೆಗೆ** (ಕ್ರಿ). ದೇವರಿಗೆ ಬಲಿಯೆಂದು ಒಪ್ಪಿಸು; ಬಲಿಕೊಡು: ಈಗಳೊಂದಿಸಿಸು ಹೊತ್ತಿಗೆ ಹರಕೆದೆಗೆದ ಕುಱಿಯಾಗಿ ಕೊರಲಂ ಕೊಯ್ಸಿಕೊಂಡು ಭೂತಕ್ಕೆ ಬಲಿಯಾಗುತಿದಯನ್ನ ಮೆಯ್ (ಸಮ್ಯಕ್ತ. ೨-೬೭) [ಹರಕೆ (< ಪರಕೆ₁) + ತೆಗೆ₁]

**ಹರಕೆಹೊರು** (ಕ್ರಿ). ತನ್ನ ಕೆಲಸ ನೆರವೇರಿದರೆ ದೇವರಿಗೆ ಪ್ರತಿಯಾಗಿ ಹೀಗೆ ಸೇವೆ ಸಲ್ಲಿಸುತ್ತೇನೆಂದು ಪ್ರತಿಜ್ಞೆಮಾಡು, — ಹರಸಿಕೊಳ್ಳು: ಜ್ಞಾಪಕ ಬಂದ ದೇವರಿಗೆಲ್ಲಾ ಹರಕೆಹೊತ್ತೆ (ನಿರಾತ. ೨೮); ಹರಕೆ ಹೊತ್ತು ಕೊಂಡ ಭಕ್ತರು ಸ್ನಾನಮಾಡಿ ನೆಲದ ಮೇಲೆ ಮಲಗಿಕೊಂಡು ಬಸವನಿಂದ ದಾಟಿಸಿಕೊಳ್ಳುತ್ತಾರೆ (ಚೋರಿದೇ. ೨೩).

[ಹರಕೆ (< ಪರಕೆ₁) + ಹೊರು (< ಪೊಱು)]

**ಹರಕೋಟೀರ** (ನಾ). ಶಿವನ ಜಡೆಮುಡಿ; ಜಟಾಜೂಟ: ಹರಕೋಟೀರದ ಚಂದ್ರಮಂಗಮರ್ದ ಗಂಗಾದೇವಿಗಾದತ್ತು ಭಾಸುರಸಂಧ್ಯಾರುಣರೋಚಿ ಬೈತಲೆಯ ಸಿಂಧೂರಂ ಭವತ್ ಪಾದುಕಾಭರಣ ಶ್ರೀಪದಪದ್ಮಪಾಂಶುನಖಜಾಲಂ ತಾರಕಾಪಾಳಿ ಭಾಸುರಸೀಮಂತದ ಮೌಕ್ತಿಕಾವಳಿಯಲಂಕಾರಂ ಕಿರಾತೇಶ್ವರಾ (ವೃಷವಿ. ೧೦-೧೩೬).

[ಸಂ.]

**ಹರಕೋಲು** (ನಾ). ಹರಗುವ ಸಾಧನ; ಕುಂಟೆಯ ಈಸು: ಮುತ್ತಿನ ಹರಕೋಲು ಮುಗಿಲುಬಣ್ಣದ ಕುಂಟೆ ಸಣ್ಣ ಕೊಂಬಿನ ನವರತ್ನ ಕಟ್ಕೊಂಡು ಜಾಣ ಹರಗಿದನು ಜವನಾವ (ಹಳ್ಳಿಯ. ೮೧). [ಹರಗು₁ (< ಪರಗು) + ಕೋಲು₁ (< ಕೋಲ್₁)]

**ಹರಗ** (ನಾ). (?): ಪ್ರೀತಿಯಿಂ ತನ್ನ ಯೆಮ್ಮೆಗೆ ಹರಗಮಂ ತಿನಿಸಿ ಸಾತಿಶಯಮೆನಲದರ ಮೈದೊಳೆದು ಕರೆವುತ್ತ (ಮಹಾಂತೇ. ೧೨-೨೯). [?]

**ಹರಗಣ** (ನಾ). ೧. ಶಿವನ ಓಲಗದಲ್ಲಿರುವ ಶ್ರೇಷ್ಠಭಕ್ತರ ಸಮುದಾಯ. ೨. ಶಿವಭಕ್ತರ ಸಮೂಹ: ಹರಗಣಪಂಕ್ತಿಯ ನಡುವೆ ಕುಳ್ಳಿರ್ದು . . . ಸಕಲ ದೇವಾನ್ನವ ಒಡೆಯರಿಂದಲೂ ಮಿಗಿಲಾಗಿಕ್ಕಲು ತೆಗೆದಿರಿಸಿದೆನು (ಬಸವ. ೪೬೯). ೩. ಶಿವನ ಲೆಂಕರಾದ ವೀರಭದ್ರನೇ ಮೊದಲಾದ ವೀರರ ಪಡೆ: ಜಗದಳಿವಿನಗ್ರದ ಹರನ ವೊಲು ಬಲವವನೊಳದೆ (ತೊರಿರಾ. ೬-೮-೧೩). [ಸಂ.]

**ಹರಗಣೆ** (ನಾ). ಸಾಗುವಳಿಗಾಗಿ ಭೂಮಿಯನ್ನು ಹರಗುವಿಕೆ: ಒಂದು ದಿವಸ ಪ್ರಾಣವಂ ಬಿಡುವಾಗ ಸತಿಸುತರು ನಮಗೇನು ಗತಿ ಎಂದು ಕೇಳಲು ಹೊಲನ ಹರಗಣೆಯಂ ಮಾಡಿ ಬದುಕಿ ಎನಲು (ಭ್ಯರಸೂ. I, ೩೦೩); ಹರಗಣೆಯ ಕಳವಳ ದೊಳಿರ್ದುತಲಳಿದೊರ್ವಂಗೆ ಪರಲೋಕವಾದುದು (ಅಱುಪು. ೮).

[ಹರಗು₁ (< ಪರಗು) + - ಅಣೆ₄]

**ಹರಗಲು** 'ಪಱಿಗೋಲ್' ನೋ.

**ಹರಗಿ** 'ಪರಗಿ' ನೋ.

**ಹರಗಿರಿ** (ನಾ). ಶಿವನು ವಾಸಮಾಡುವ ಬೆಟ್ಟ; ಕೈಲಾಸಪರ್ವತ: ಹರಗಿರಿಯಂ ಪರಿದೇಱುವ ಹರಿಪಾದಕ್ರಮಮು ಸರಸಿ ಪರಪಿದ ನೀಲಂಬೆರಸಿದ ಪೀತಾಂಬರಮೆನೆ ಬಿರಿದಲರ್ದುವು ತುಂಬಿವೆರಸಿ ಪೊಂದಾವರೆಗಳ್ (ಸೂಕ್ತಿಸು. ೯-೪೨); ಹರಗಿರಿಗೆ ಹುಲು ರಕ್ಕಸರು ಮತ್ಸರಿಸುವಂತಾಯ್ತು (ಕುವ್ಯಾಆ. ೧೪-೫). [ಸಂ.]

**ಹರಗು₁** 'ಪರಗು' ನೋ.

**ಹರಗು₂** 'ಪರಪು₁' ನೋ.

**ಹರಗುವಾಳ್** (ನಾ). ಕುಂಟೆಯ ತಾಳು; ಗುಳ: ಬಾಟ್ - ಜೀವನಾರ್ಥಂ; (ನಾವಿದವಾಳ್, ಕೂರ್ವಾಳ್, ಹರಗುವಾಳ್ - ಎಂಬಲ್ಲಿ ಕುಳಂ) (ಶಮದ. ಪರಿ.೧).

[ಹರಗು₁ (< ಪರಗು) + ಬಾಳ್₃]

**ಹರಗೃಹ** (ನಾ). ಶಿವದೇವಾಲಯ; ಶಿವಾಲಯ: ಹರಿಗ್ರಿಹದಿಂ ಹರಗೃಹದಿಂ ಸುರಗೃಹದಿಂದರುಹಗೃಹದೆ ಬೌದ್ಧಾಲಯದಿಂ ಗೊರವರ ಸವಣರ ಬೌದ್ಧರ ನೆರವಿಗಳಿಂದಿಂಡೆ ನಾಡೆ ಸೊಗಯಿಸಿ ತೋರ್ಕುಂ (ಕೊಲ್ಹಾಶಾ. ೧೭-೧೪; 1118); ಹರಗೃಹದಿಂ ನೆಗೆದು ನಭೋಂತರಕ್ಕೆದುವ ಧೂಪಧೂಮದಾಮೋದಕ್ಕಂಬರಲಕ್ಷ್ಮಿ ನಿಜಶಿರೋಜೋತ್ಕರಮಂ ಬಿರ್ಚಿದವೊಲಬ್ಬ ಮಗ್ಗದೊಳೆಸೆಗುಂ (ರಾಜಶೇ. ೨-೧೩೦). [ಸಂ.]

**ಹರಗೋಲು** 'ಪಱಿಗೋಲ್' ನೋ.

**ಹರಚರಣ** (ನಾ). ಶಿವನ ಪಾದ: ಹರಚರಣಕಮಲಭೃಂಗಂ . . . ಇಱಿವಬೆಡಂಗಂ (ಗದಾಯು. ೧-೨೧); ಹರಚರಣನಿಕ್ಷಿಪ್ತಚೇತಃಸ್ಫುರಣೆ ತತ್ಪರಿಯಂತ ಉಕ್ಕಿತು (ಕುವ್ಯಾಆ. ೫-೯). [ಸಂ.]

**ಹರಚಿತ** (ನಾ). ಪರಿಹಾರೋಪಾಯ; ಪ್ರಾಯಶ್ಚಿತ್ತ: ಇಂದು ಕೃತಪಾತಕಕೆ ತ್ರಿಕರಣದಿಂದ ಹರಚಿತ ಮಾಡದಿರ್ದಡೆ ಮುಂದೆ ನವೆವರು ನರಕದಲಿ (ನಿಭಾಗ. ೬-೧-೩); ಧರಣಿಸುರರಿಗೆ ಬಂದ ಕಂಟಕವ ಪರಿಹರಿಸದಿರಲವಗೆ ಪಾತಕಂ ಪಿರಿದಹುದು ಬಳಿಕಿದಕೆ ಹರಚಿತವ [ಪಾಠಾಂ. ಪರಿಹರವ] ನಾ ಕಾಣೆ (ತುರಂಗ. ೧೫-೨).

[?. / ಸಂ. ಹರ = ನಿವಾರಣೆ]

**ಹರಜಟಾನಿಲಯೆ** (ನಾ). ಶಿವನ ಜಡೆಯಲ್ಲಿ ಇರುವವಳು; ಗಂಗೆ: ಗಂಗಾದೇವಿ ಹರಜಟಾ [ಪಾಠಾಂ. ಶಿರೋ]ನಿಲಯೆ ನಿನ್ನಯ ಮಹಿಮೆಯಂ ಪೊಗಳಲಂದರಿದು ಪೊರೆವುದೆನ್ನ (ಪ್ರಾಥರಾ. ೧-೪). [ಸಂ. ಹರಜಟಾನಿಲಯಾ]

**ಹರಜನ್ಮ** (ನಾ). ಶಿವಪದ; ಹರತ್ವ: ನರಜನ್ಮವ ತೊರೆದು ಹರಜನ್ಮವ ಮಾಡಿದ ಗುರುವೇ . . . ನಮೋ ನಮೋ (ಮಹಾದೇ. ಬ. ೨೩-೪೩). [ಸಂ.]

**ಹರಟಿ** 'ಹರಿಟೆ' ನೋ.

**ಹರಟು** (ಕ್ರಿ). ಗಳಹು; ವ್ಯರ್ಥವಾಗಿ ಮಾತಾಡು: ಮನಬಂದಂತೆ ಹರಟಿದರೆ ನಿನ್ನ ಶಿರವು ಉಳಿಯಲಾರದು (ಸೌಗಂಧಿ. ೨೯೪-೧೫); ದುರುಳತನದಲಿ ಬಾಯ್ಗೆ ಬಂದುದ ಹರಟದೇ ಪೋಗತ್ತ ಸುಮ್ಮನೆ ಸಾಯಬೇಡ (ಅರ್ಜುವಿ. ೧೨-೧೪). ೨. ವಿನೋದಾರ್ಥವಾಗಿ ಸಂಭಾಷಿಸು; ಸಲ್ಲಾಪಮಾಡು: ಗಂಡಸರು . . . ನಾಡಿನ ವಾರ್ತೆಗಳನ್ನು ಹರಟುತ್ತಿದ್ದರು (ಹಾಪುತ್ತ. ೮೮); ಮದುವೆಯ ಸಡಗರದಲ್ಲಿ ತನ್ನ ಗಂಡನೊಡನೆ ಹರಟುವುದರಲ್ಲಿ ಬೇರೆಲ್ಲರನ್ನೂ ಆಕೆ ಮರೆತಂತಿತ್ತು (ವಾತ್ಸಲ್ಯ. ೨೨೨).

[?./ ತುಳು. ಅರಟು, ಹರಟು]

**ಹರಟೆ** (ನಾ). ೧. ವ್ಯರ್ಥವಾದ ಮಾತು; ಗಳಹುವಿಕೆ: ಹೇಗೆ ಉದ್ಧಾರ ಮಾಡ್ವಾನು ಶ್ರೀಹರಿ . . . ಹರಿಯ ನೆನೆಯದೆ ಗೊಡ್ಡುಹರಟೆಗೆ ಹೊತ್ತು ಏಱಿಸಿದವನ (ಪುರಂದ. ೧. ೧೫೩-೧); ಮರ್ಯಾದೆಯಿಲ್ಲದೆ ಹರಟುತ್ತೀಯೆ . . . ನಿನ್ನ ಹರಟೆ ನನಗೆ ಬೇಡ (ಆರ್ಯಕ. ೪೭); ಬಾಲಸಂನ್ಯಾಸಿಗೆ ಹಾಳುಹರಟೆ ಯಾಕೆ? (ಗಾದ). ೨. ನೀರಸವಾದ ಕಥನ; ಗೊಡ್ಡುಕತೆ: ಹಿಂದುಮುಂದಣ ನಿಂದ ಹರಟೆಯ ಹೇಳಿಹೆನೆಂದರೆ ಪುರಾಣಿಕನಾದ (ಶಿವಮಂ. ೪೪). ೩. ಸರಸಸಲ್ಲಾಪ; ವಿನೋದದ ಮಾತುಕತೆ: ದಿನವೆಲ್ಲ ಗೆಳೆಯರಲ್ಲಿ ಹರಟೆಯಲ್ಲಿಯೇ ಹೋಗಿತ್ತು (ಅಪನಾ. ೨೪೨); ಹರಟೆಯ ಸುಖ ಉಳಿಯಬೇಕಾದರೆ ಕೂಡಿದವರ ಸಂಖ್ಯೆ ಮಿತವಾಗಿರುವುದು ಅವಶ್ಯ (ದೀಕನ್ಯ. ೧೨೭). ೪. ಪ್ರಬಂಧಸಾಹಿತ್ಯದಲ್ಲಿ ಒಂದು ಪ್ರಕಾರ; ಲಘುಪ್ರಬಂಧ: ಹರಟೆಯೆಂದರೆ ಗದ್ಯಭಾವಗೀತ ಎನ್ನುವಷ್ಟು ಉತ್ತಮ ಹರಟೆಗಳು ಇಂಗ್ಲೀಷಿನಲ್ಲಿವೆ (ನಿರಾಭ. ೧೫); ನಮ್ಮ ಸಾಹಿತ್ಯದಲ್ಲಿ ಹರಟೆಯು ತೀರ ಕೂಸು (ನಿರಾಭ. ೧೨೨).

[< ಹರಟು ./ ತಮಿ. ಅರಟ್ಟೈ; ತುಳು. ಅರಟೆ, ಹರಟೆ]

**ಹರಟೆಕೊಚ್ಚು** (ಕ್ರಿ). = ಹರಟು ೧: ಹರಟೆಯ ಗತಿಯು ದೇವರಿಗೂ ತಿಳಿಯದು . . . ಹರಟೆಕೊಚ್ಚುವವರಿಗೂ ತಿಳಿಯದು (ನಿರಾಭ. ೧೨೦); ಒಂದು ದಿನ ಮಧ್ಯಾಹ್ನ ನಂಜಮ್ಮ ತನ್ನ ಪರಿಚಿತರ ಮನೆಗೆ ಹರಟೆಕೊಚ್ಚಲು ಹೋಗಿದ್ದಳು (ಕುಸುಸಂ. ೨೮).

[ಹರಟೆ + ಕೊಚ್ಚು₁]

**ಹರಟೆಗಾರ** (ನಾ) ಲಘುಪ್ರಬಂಧಗಳನ್ನು ಬರೆಯುವವನು: ಹರಟೆಗಾರ ಕೇವಲ ನರ್ಮಸಚಿವನಲ್ಲ; ಉಚ್ಚಸಾಹಿತಿ, ಕವಿತೆಗಳನ್ನು ಬರೆಯದ ಕವಿ (ನಿರಾಭ. ೧೬).

[ಹರಟೆ + - ಗಾರ (< - ಕಾಱ)]

**ಹರಟೆಗುಟ್ಟು** (ಕ್ರಿ). = ಹರಟು ೧: ಯಾರೂ ಇಲ್ಲದೆ ಕರೆವ ದಾರಿಯೆಡ್ಡವ ಕಟ್ಟಿ ಕೂಡಿಕೊ ಎನುತಲೆ ಹೋರಾಟವ ಮಾಡಿ ಹರಟೆಗುಟ್ಟುವನೀತ [ಪಾಠಾಂ. ಜೋಗಾಡಿಸಿದನಮ್ಮ] (ಪುರಂದ. ೧-೬೦-೧); ಕಂಡಕಂಡಲ್ಲಿ ನಿಂದನಿಂದಲ್ಲಿ ಮುಂದುವರಿದು ಹರಟೆಗುಟ್ಟುವ ಒಣಹರಟೆಗಾಱರ ಶಿವಾನುಭಾವಿಗಳೆಂತೆಂಬೆನಯ್ಯಾ (ಅಖಂಡೇ. ೧೯೨-೧೦). [ಹರಟೆ + ಕುಟ್ಟು₁]

**ಹರಟೆಬಡಿ** (ಕ್ರಿ). = ಹರಟು ೧: ಎಲಾ ಹಾರವ, ಲಕ್ಷ್ಯವಿಲ್ಲದೆ ಹರಟೆ ಬಡಿಯುತೀಯೆ? ನಿನ್ನ ತಲೆಯನ್ನು ಈಗಲೇ ಹಾರಿಸುತ್ತೇನೆ (ನೀತಿಚಿಂ. XI, ೧೪). [ಹರಟೆ + ಬಡಿ₁]

**ಹರಟೆಬಾಯಿ** (ನಾ). ಹರಟುವ ಬಾಯಿ; ಸಿಕ್ಕಾಪಟ್ಟೆ ಆಡುವ ಬಾಯಿ: ಅಲ್ಲಿದ್ದ ಹರಟೆಬಾಯಿಗಳನ್ನು ಮುಚ್ಚಿಸಬೇಕಾದರೆ ತಾಯಿಗೆ ಸಾಕುಸಾಕೆನಿಸಿತು (ಮುಂಗಾಪು. ೮೧). [ಹರಟೆ + ಬಾಯಿ$_1$ (< ಬಾಯ್)]

**ಹರಟೆಮಲ್ಲ** (ನಾ). ಹೆಚ್ಚು ಮಾತಾಡುವವನು; ವಾಚಾಳಿ: ಒಂದು ಮಾತು ಹೇಳಿ ಮುಗಿಸೋ ಕಡೆ ನಾಲ್ಕುಮಾತು. ಅವನಿಗೇನು ಬಂತು? ಶುದ್ಧ ಹರಟೆಮಲ್ಲನಾಗಿದ್ದಾನೆ (ಮಾರ್ಗದ. ೭೩); ಇಂತಹ ಸುಕೃತಶಾಲಿಯಾದ ತಂದೆಯ ಮಗನಾಗಿ ಹುಟ್ಟಿದೆ-ಜನ್ಮತಃ ಅಸ್ಥಿರಚಿತ್ತನೂ ಹರಟೆಮಲ್ಲನೂ ಅಲೆದಾಟದ ಸ್ವಭಾವದವನೂ ಆದ ನಾನು (ಬಾಣಳ. ೧೦); ತರುಣಬರಹಗಾರರಲ್ಲಿ ಅಧಿಕಮಂದಿ ಹರಟೆಮಲ್ಲರು (ರೂಪಸಂ. ೪೦). [ಹರಟೆ + ಮಲ್ಲ]

**ಹರಟೆಮಲ್ಲಿ** (ನಾ). ಹರಟುವವಳು; ಗಳಹುವವಳು: ಆ ಹರಟೆಮಲ್ಲಿಯ ಮಾತು ಕೇಳುತ್ತಿದ್ದರೆ ಹೊತ್ತುಕಳೆದದ್ದೇ ತಿಳಿಯುವುದಿಲ್ಲ (ರೂಢಿ). [ಹರಟೆಮಲ್ಲ + - ಇ$_2$]

**ಹರಟೆಹೊಡೆ** (ಕ್ರಿ). ೧. = ಹರಟು ೧: ಅದು ಇದೂ ಹರಟೆಹೊಡೆಯುತ್ತ . . . ನಡೆದ (ರೂಪಸಂ. ೭). ೨.= ಹರಟು ೨: ರಜೆ ಇದ್ದಾಗ ಆನಂದ . . . ಹತ್ತಾರು ವಿಷಯಗಳನ್ನು ಕುರಿತು ಹರಟೆಹೊಡೆಯುತ್ತಿದ್ದ (ಕಮಸ. ೨.) [ಹರಟೆ + ಹೊಡೆ$_1$ (< ಪೊಡೆ$_1$)]

**ಹರಡಿ** 'ಪರಡು$_3$' ನೋ.

**ಹರಡಿಕೆ** (ನಾ). ಹಬ್ಬುವಿಕೆ; ಪ್ರಸಾರ; ವಿಸ್ತರಣೆ: ಚರ್ಚುಗಳ ಪರಸ್ಪರದ್ವೇಷವೂ . . . ಸರ್ಕಾರದ ಪ್ರಭಾವವೂ ಇಸ್ಲಾಂ ಹರಡಿಕೆಗೆ ಸಹಾಯವಾದುವು (ಇಸ್ಲಾಂಸಂ. ೨೧). [ಹರಡು$_1$ (< ಪರಡು$_1$) + - ಇಕೆ]

**ಹರಡಿಸು** (ಕ್ರಿ).೧. ಅಗಲವಾಗಿ ಹಾಕಿಸು; ಹರವುವಂತೆ ಮಾಡು: ಪಂಡಿತರು ಸ್ವಲ್ಪ ಮರಳು ತರಿಸಿ ತಮ್ಮ ಮುಂದೆ ನೆಲದ ಮೇಲೆ ಹರಡಿಸಿ . . . ಎಂದರು (ಚಂಗಾಳ್ಳ. ೭೧). ೨. ಪ್ರಸಾರಮಾಡು; ವಿಸ್ತರಿಸು; ಹಬ್ಬಿಸು: ವೇದಶಾಸ್ತ್ರಾದಿಗಳಿಗಿಂತಲೂ ಹೆಚ್ಚಾಗಿ ಕಾವ್ಯವೇ ಆತ್ಮಸಮತಾಸಂಸ್ಕೃತಿಯನ್ನು ಹರಡಿಸಿ ನೆಲೆವಡಿಸಿತು ಎಂದು ನಮ್ಮ ಭಾವನೆ (ನಾಡೋಜ. ೨). [ಹರಡು$_1$(< ಪರಡು$_1$) + - ಇಸು$_3$]

**ಹರಡು$_1$** 'ಪರಡು$_1$' ನೋ.

**ಹರಡು$_2$** 'ಪರಡು$_2$' ನೋ.

**ಹರಡು$_3$** 'ಪರಡು$_3$' ನೋ.

**ಹರಡೆ$_1$** 'ಪರಡು$_3$' ನೋ.

**ಹರಡೆ$_2$** 'ಪರಡೆ$_3$' ನೋ.

**ಹರಡೆ$_3$**, ಹರ್ಡೆ (ನಾ). ಅಳಲೆಕಾಯಿಮರ: (೩).**ಹರ್ಡೆ:** (೩). 'ಅಣಿಲೆ$_1$' ಪರಾ. [← ತುಳು. ಹರಡೆ, ಅರಡೆ]

**ಹರಣ$_1$** 'ಪರಣ$_2$' ನೋ.

**ಹರಣ$_2$** (ನಾ). ೧. ತೆಗೆದುಕೊಳ್ಳುವಿಕೆ; ಸ್ವೀಕಾರ. ೨. ಕಿತ್ತುಕೊಳ್ಳುವುದು; ಸೆಳೆದುಕೊಳ್ಳುವುದು. ೩. ಕಳ್ಳತನ; ಅಪಹಾರ: ಅನ್ಯರದನ್ನು ತನ್ನದೆಂದು ಮರೆಮಾಚಿ ಹೇಳುವುದೇ ನಿಜವಾದ ಹರಣ (ಭಾರಮಿಾ. ೨೦೦). ೪. ನಾಶಗೊಳಿಸುವಿಕೆ; ಕೊಲೆ: 'ಹರಣಂಗೆಯ್' ಪರಾ. ೫. ಇಚ್ಛೆಗೆ ವಿರುದ್ಧವಾದುದು; ಅನಪೇಕ್ಷಿತವಾದ ಕಾರ್ಯ. ೬. ಮದುವೆಯ ಕಾಲದಲ್ಲಿ ಮದುಮಕ್ಕಳಿಗೆ ಕೊಡುವ ಉಡುಗೊರೆ; ಬಳುವಳಿ. ೭. ಉಪನಯನಕಾಲದಲ್ಲಿ ವಟುವಿಗೆ ಕೊಡುವ ಕಾಣಿಕೆ. ೮. ಸಂಧಾನ ಮಾಡುವುದು; ಸಂಧಿಕಾರ್ಯ. "ಪ್ರಾಣಮುಂ ಸಂಧಿಕೃತ್ಯಂ ಕೊಲೆಯುಂ ತನ್ನಿಚ್ಛೆಗಂ ಬಾರದುದು ಹರಣಮಕ್ಕುಂ" (ನಾನಾರ. ೧೬೭). [ಸಂ.]

**ಹರಣಂಗಳೆ**, ಹರಣಗಳೆ (ಕ್ರಿ). ಪ್ರಾಣವನ್ನು ಬಿಡು; ಸಾಯು: ಕಾದಲನನಗಲ್ದಗಲ್ಕೆಯುರಿಪಂ ಸೈರಿಸಲಾಱದೆ ಹರಣಂಗಳೆಯಲುಜ್ಜುಗಿಸಿ (ಶಬಶಂ. ೩-೩೫ ವ). **ಹರಣಗಳೆ:** ಸ್ಮರನ ಚರಣಹತಿಯಿಂದಸುರ ಕಾರಿ ರಕ್ತವ ಧರೆಗೆ ಕೆಡೆದುರುಳಿ ಹರಣಗಳಿಯೆ (ನವಮೋ. ೧೨-೯೨). [ಹರಣ$_1$ (< ಪರಣ$_2$) + ಕಳೆ$_2$ (< ಕಟೆ)]

**ಹರಣಂಗೆಯ್** (ಕ್ರಿ).ಕೊಲೆಮಾಡು; ಕೊಲ್ಲು: ಪಾಱುವ ಪಾಱುಂಬಳ ಕೊಳೆ ಜೀಟೋಟ್ಟಂಬರಕೆ ತಲೆ ಸಿಡಿಲ್ದೊಡಮಾ ಕಾಯ್ವಾಱದೆ ಹರಣಂಗೆಯ್ವುವು ಜಾಱಲ್ದದೆ ಜೋದರಟ್ಟೆಗಳ್ ಕೆಲವಾಗಳ್ (ಪಂಪಭಾ. ೧೦-೯೫). [ಹರಣ$_2$ + ಕೆಯ್$_1$]

**ಹರಣಂಗೊಳಿಸು** (ಕ್ರಿ). ಅಪಹಾರಮಾಡಿಸು; ಕಳವುಮಾಡಿಸು: ಹರಣಂಗೊಳಿಪುದಿ ವಂಗಚ್ಚರಿಯಲ್ತು . . . ತಸ್ಕರರಿಂ ಮದ್ಧನಮನಿಂತು ಕಳಿಸಿದ ಕತದಿಂ (ವೃಷವಿ. ೨೦-೧೪). [ಹರಣ$_2$ + ಕೊಳ್$_1$ + - ಇಸು$_3$]

**ಹರಣಂಬಡೆ** (ಕ್ರಿ). ಪ್ರಾಣವನ್ನು ಹೊಂದು; ಜೀವಂತವಾಗು: ಪಲವುಂ ಪರಿಯ ಪಕ್ಕಿಗಳ ಪೆರ್ಚಿದ ಸರಂಗಳಿಂ ಹರಣಬಡೆದಂತ ಪರಿವಡೆದು ತಿಂತಿಣಿವಡೆದ ಪೇರಡವಿಯೊಳ್ ಪೊಗಲ್ಟೆವೆತ್ತು (ಕಬ್ಬಿಗಾ. ೨೧೭); ಅವರ್ ಮಂತನಾಂಗೊಂಡು ಮಂತ್ರತಂತ್ರೌಷಧ ವಿಲೇಪನಾದಿಯಂ ನಿಮಿರ್ಚಿಯುಂ ಹರಣಂಬಡೆಯಲ್ಕವಾಱದೆ ಕೆಲಸಾರ್ದರ್ (ವೃಷವಿ. ೩೧-೨೪ ವ). [ಹರಣ$_1$ (< ಪರಣ$_2$) + ಪಡೆ$_1$]

**ಹರಣಂಬಾರು** (ಕ್ರಿ). ಪ್ರಾಣರಕ್ಷಣೆಯನ್ನು ನಿರೀಕ್ಷಿಸು: ನಿನ್ನೊಳ್ತಾಂ ಪೋರ್ವೆನೆಂದಚ್ಯುತನುರುತರ ಸಂರಂಭದಿಂದಾಜಿಗೇಳ್ತರ್ಪನ್ನಂ ತನ್ನೊಡ್ಡದೆಲ್ಲಂ ಕ್ಷಣದೊಳೆ ಹರಣಂಬಾರಿ ಪೋದತ್ತದಾಗಳ್ (ವೀರಶ. ೮೪). [ಹರಣ$_1$(< ಪರಣ$_2$) + ಪಾರು$_1$ (< ಪಾರ್$_1$)]

**ಹರಣಂಬಿಡಿ,** ಹರಣವಿಡಿ (ಕ್ರಿ). ಪ್ರಾಣವನ್ನು ಕಾಯ್ದುಕೊಂಡಿರು; ಜೀವಹಿಡಿ; ಬದುಕಿರು: ವಿರಹದಿಂದುರಿಗದಿರಿಂದ ಕಿಮುಳ್ಚಿದ ತಳಿರೆನೆ ಕೊರಗಿ ಕರಂ ಹೂವಿನ ಹೊತ್ತಪ್ಪನ್ನೆವರಂ ಬೀಡಿನೊಳು ಹರಣಂಬಿಡಿ[ಪಾಠಾಂ. ಬಡೆ]ದಿರ್ದಲ್ಲಿಂ ತಳರ್ದಂ . . . ಜಯಭೂಪಂ (ಜಯಕಾ. ೪-೪೫). **ಹರಣವಿಡಿ:** ಆತನನೆಚ್ಚ ವೀರಂ ಗರಸಿಯಹೆಯೆನಲದನೆ ಹಾರುತ ಹರಣವಿಡಿದಿಹಳವುರಧೇನುವಿನುಕುತಿಯನು ನಂಬಿ (ನಿಭಾಗ. ೯-೧೬-೩೨). [ಹರಣ$_1$ (< ಪರಣ$_2$) + ಪಿಡಿ$_1$]

**ಹರಣಗಳೆ** 'ಹರಣಂಗಳೆ' ನೋ.

**ಹರಣಗೊಳ್**, ಹರಣಗೊಳು (ಕ್ರಿ). ಪ್ರಾಣವನ್ನು ತೆಗೆ; ಕೊಲ್ಲು; ವಧಿಸು: ನರರು ರಾಕ್ಷಸಭಟರ ರಣದಲಿ ಹರಣಗೊಂಬುದು ಬೆಱಗಲಾ (ತೊರರಾ. ೬-೧೨-೫). **ಹರಣಗೊಳು:** ಸುಭಟರ ಹರಣಗೊಳುವ ಪೆಟಲುಗಳ ಕಜೆವ ಗುಂಡಿನ ಮಳೆಯೂರೊಳಗೆಸೆದುದು ಹೊಱಪಾಳೆಯದವರಿಂದ (ಕಂನವಿ. ೧೬-೩೭). [ಹರಣ$_1$ (< ಪರಣ$_2$) + ಕೊಳ್$_1$]

**ಹರಣಗೊಳು** 'ಹರಣಗೊಳ್' ನೋ.

**ಹರಣಭರಣ** (ನಾ). ೧. ತೆಗೆದುಕೊಳ್ಳುವುದು ಮತ್ತು ತುಂಬಿಕೊಡುವುದು: ಬಿಸಿಲಂ ನಾನಾತಪತ್ರಂ ಮುಸುಳಿಸೆ ಸಿತಖಡ್ಗಪ್ರಭಾಮಂಡಲಂ ಕೊರ್ವಿಸೆ . . . ಮಾರ್ಗಾನೇಕತೋಯಾಶಯಮನುರುರಜಂ ಪೀಱೆ ದಾನಪ್ಲವಂ ಪೂರಿಸೆ ತೋಱೆ ತ್ತೆತ್ತಮಾದಂ ಹರಣಭರಣಚಾತುರ್ಯಮಂ ಚಾತುರಂಗಂ (ಚಂದ್ರಪ್ರ. ೧೦-೩೦); ಈ ಧರ್ಮಜನ ಬಹುಮಾನಾವಮಾನದ ಹೊಱಗೆ ನಿನ್ನದು ಹರಣಭರಣವನು ನೀವು ಬಲ್ಲಿರಿ (ಕುಮ್ಮಾಉ. ೧-೪); ಸರಿಗಮಪದನಿಗಳ ನೇಮ ತಪ್ಪದೆ ಹರಣಭರಣದ ಹೆಂಪು ತಿರುಪುಗಳ . . . ರಾಮಣೀಯಕರಚನೆಯಲಿ ಸನಾಮನೆನಿಸುವನವನೆ ಗಾಯಕನು (ಕುಮ್ಮಾಉ. ३-೯೫). ೨. ತಪ್ಪು ಮತ್ತು ಒಪ್ಪು: ಆ ಲಿಂಗದ ಶೃಂಗಾರದ ಹರಣ ಭರಣವಲಾ ಎಂದೆಱೆದು ಅಳವಡಿಸೂದು ರುದ್ರಾಕ್ಷಿಯನು (ಸರ್ವವ. ೧೮೨-೮೩೪). ೩. (ಶತ್ರುಗಳ) ಶಿಕ್ಷೆ ಮತ್ತು (ಸ್ವಕೀಯರ) ರಕ್ಷೆ: ಮರನನೇಱಿದಱೊಳಗೆ ಪಾಂಡವರಿರಿಸಿ ಹೋದರು ಕೈದುಗಳ ಮಿಗೆ ಹರಣಭರಣಕ್ಷಮೆಗಳಲಿ (ಕುಮ್ಮಾವಿ. ೬-೩೨). [ಸಂ.]

**ಹರಣವಲ್ಲಭ** (ನಾ). ಪ್ರಾಣನಾಥ; ಜೀವದೊಡೆಯ: ಕರುಣಿ ರಾಘವ ಶ್ರುತಿಶಿರೋಮಣಿ ಹರಣವಲ್ಲಭ ಹಂಸವರ್ಧನ ತರಣಿಕುಲ ಕೃಪೆಮಾಡು (ಕೌಶಿರಾ. ೧೦-೫೧); ಕರಣವಿಕಾರ ಬೇಡೆಂದು ಪೇಳ್ ನಿನ್ನಯ ಹರಣವಲ್ಲಭಗೆ (ಮೋಹತ. ೧೦-೨೯). [< ಸಂ. ಪ್ರಾಣವಲ್ಲಭ]

**ಹರಣವಳಿ** (ಕ್ರಿ). ಪ್ರಾಣವನ್ನು ಬಿಡು; ಸಾಯು: ದಾನವಾರಿಯ ವಿರಹಕ್ಕಾಱದೆ ಜಾನಕೀಸತಿ ಹರಣವಳಿದಳೊ (ಕೌಶಿರಾ. ೧೦-೪೭); ಹರಣವಳಿದು ಧರೆಗುರುಳಿದ ಪಕ್ಕಿಯ ಪರಿಯ ನಿಟ್ಟಿಸಿ ಪರಿತಪಿಸಿ ಇರದೆ ತಾನೆಸಗಿದ ತಪಗಳ ಮೈಮೆಗೆ ಸರಿಯಿಲ್ಲೆಂದೆಣಿಸಿದನು (ಹದಿಬ. ೨-೩೫). [ಹರಣ$_1$ (< ಪರಣ$_2$) + ಅಳಿ$_1$ (< ಅಟಿ$_1$)]

**ಹರಣವಿಡಿ** 'ಹರಣಂಬಿಡಿ' ನೋ.

**ಹರಣೆ, ಹರಳೆ$_2$** (ನಾ). ಹಾವರಣೆ: ಹಾದಿಯಲ್ಲಿ ಹಲ್ಲಿ, ಹರಣೆ ಮುಂತಾದುವುಗಳು ಇದ್ದ ಸ್ಥಳವನ್ನು ಬಿಟ್ಟು ಪೊದರುಗಳನ್ನಾಶ್ರಯಿಸುತ್ತಲಿದ್ದುವು (ರಾಜಾಮು. ೧೬೪). **ಹರಳೆ$_2$**: ಗಾರೆಗೋಡೆಯ ತೂತಿನಿಂದ ಅನೇಕ ಕ್ರಿಮಿಕೀಟಗಳೂ ಹರಳೆಗಳೂ . . . ಹೊರಗೆ ಹೊರಟವು (ರಾಜಾಮು. ೧೬೫). [< ಅರಣೆ]

**ಹರತರದೂದು, ಹರ್ತರದೂದು** (ನಾ). ೧. ಎಲ್ಲ ಬಗೆಯ ಸಿದ್ಧತೆ; ಸಂಪೂರ್ಣ ಸಜ್ಜು, – ತಯಾರಿ: ಹರತರದೂದಿನಿಂ ನಮ್ಮಯ ದುರ್ಗದ ಭರವಸದೊಳು ನಿಲ್ವೆವು (ಕಂನವಿ. ೧೯-೩೦); ನಾನು ಇಬ್ಬರು ಕಾನ್‌ಸ್ಟೇಬಲ್‌ಗಳನ್ನು ಹರತರದೂದುಮಾಡಿ ಅವನನ್ನು ಹಿಡಿಯಬೇಕೆಂದು ಓಡಿಸಿದೆ (ಕಲಸ. ೧೨೧); ಲಕ್ಷ್ಮೀನಾರಣಪ್ಪನವರು ಸಾವಿತ್ರಿಗೆ ವರ ಹುಡುಕಲು "ಹರತರದೂದು" ಮಾಡಿದರು (ತಾಯಿಕ. ೧೦). **ಹರ್ತರದೂದು**: ೧. ಆ ಹೆಳವಿ ಹುಡುಗೀಗೆ ಷಾಕ್ ಆಗೋ ಅಂಥ ಒಂದು ಕಾಗದಾನ ಶಶಿ ಅಕ್ಷರದಲ್ಲಿ ತಯಾರು ಮಾಡಿ, ಅದು ಅವಳ ಕೈಗೆ ನೇರವಾಗಿ ಹೋಗೋಹಾಗೆ ಹರ್ತರದೂದು ಮಾಡಿಬಿಡೋದು (ಉಮಾಶ. ೧೧೧) ೨. ಎಲ್ಲ ರೀತಿಯ ಪ್ರಯತ್ನ; ಸರ್ವಪ್ರಯತ್ನ: (ಕಿಸಂಗ್ಲಾ. ೧೨೦)

[← ಅರ. ಹಿಂ. ಹರ್‌ತರದ್ದುದ್; ಮರಾ.ಹರ್‌ತರದೂದ್]

**ಹರತಾಳ$_1$** (ನಾ). ಶಂಖಪಾಷಾಣ ಮತ್ತು ಗಂಧಕಗಳ ಸಂಯೋಗದಿಂದಾಗುವ ಒಂದು ಬಗೆಯ ಹಳದಿವರ್ಣದ ವಿಷಾರಿವಸ್ತು; ಅರಿದಾಳ: ಪ್ರತಿ, ಹರತಾಳ, ಇಂಗು . . . ಗುಲಾಬಿನೀರು ಮುಂತಾದವುಗಳು (ಮುಂಬವ್ಯಾ. ೯೯).

[< ಸಂ. ಹರಿತಾಲ. / ಹಿಂ. ಹರತಾಲ್; ಮರಾ. ಹರತಾಳ್]

**ಹರತಾಳ$_2$** (ನಾ). ರಾಜಕೀಯ ಅಥವಾ ಸಾಮಾಜಿಕ ಬಿಕ್ಕಟ್ಟಿನಿಂದಾದ ಅಸಮಾಧಾನಪ್ರದರ್ಶನಕ್ಕಾಗಿ ಅಂಗಡಿ, ಶಾಲೆ, ಕಾರಖಾನೆ ಮೊದಲಾದ ಸಾರ್ವಜನಿಕಸಂಸ್ಥೆಗಳ ವ್ಯವಹಾರವನ್ನು ನಿಲ್ಲಿಸುವುದು, – ಬಾಗಿಲು ಮುಚ್ಚುವುದು: ಪ್ರಪಂಚದಲ್ಲಿ ಬಾಹುಬಲವಿಲ್ಲದೆ ಯಾವ ಹರತಾಳವೂ ಯಶಸ್ವಿಯಾಗುವದಿಲ್ಲ (ಭಾರತಿ. ೧೧೭); ವಿದ್ಯಾರ್ಥಿಗಳೇ, ಈದಿನ ಶಾಲೆಗೆ ಹರತಾಳ. ನಾನು ಹೊರಗೆ ಹೊರಟೆ (ರಕ್ತಧ್ವ. ೧೫೭). [← ಹಿಂ .ಹಡತಾಲ್; ಮರಾ. ಹರತಾಳ್]

**ಹರತಾಳಕ** (ನಾ). (ಉಕ) ಭಾದ್ರಪದಶುಕ್ಲ ತೃತೀಯೆಯಂದು ಮುತ್ತೈದೆಯರು ಆಚರಿಸುವ ಗೌರೀವ್ರತ: ನಾಳೆ ಹರತಾಳಕವಿದೆ. ಸಂಜೆಗೆ ಇಬ್ಬರು ಮುತ್ತೈದೆಯರನ್ನು ಪೂಜೆಗೆ ಕರೆ (ಸ್ಮೃತಿಚಿ. ೫೮). [← ಹಿಂ. ಹರತಾಲಿಕಾ, ಹರಿತಾಲಿಕಾ; ಮರಾ. ಹರತಾಳಕಾ, ಹರತಾಳಿಕಾ. / ಸಂ. ಹರಿತಾಲಿಕಾ]

**ಹರತಿ** 'ಪರಂತಿ' ನೋ.

**ಹರತೆ** (ನಾ). ಹರಗುವಿಕೆ; ಕುಂಟೆ ಹೊಡೆಯುವಿಕೆ: ಪೈರು ಸಾಲಾಗಿ ಬೆಳೆಯುವುದರಿಂದ ಸಾಲುಗಳ ಮಧ್ಯದಲ್ಲಿ ಕಳೆಕೀಳುವುದನ್ನೂ ಹರತೆ ಹೊಡೆಯುವುದನ್ನೂ ಎತ್ತುಗಳ ಸಹಾಯದಿಂದಲೇ ಮಾಡಬಹುದು (ವ್ಯವಮ. ೨೧); ಮಣ್ಣು ತಳಮೇಲನಾದ ತರುವಾಯ . . . ಹರತೇ ಹೊಡೆಯುವವರು (ಸುಮಚ. ೭೭). [< ಹರಗು$_1$ (< ಪರಗು) + - ತೆ$_2$]

**ಹರತ್ತಿ** 'ಪರಂತಿ' ನೋ.

**ಹರದ$_1$** 'ಪರದ$_1$' ನೋ.

**ಹರದ$_2$** (ನಾ). ೧. ಅವ್ಯವಸ್ಥೆ: ಏನೊ ತುಂಬ ಹರದವಾಗಿತ್ತು. ಆದುದರಿಂದ ಸರಿಯಾಗಿಟ್ಟೆ (ಕೀಲುಗೊಂ. ೧೩೦). ೨. ನಿರುಪಯುಕ್ತವಾದ ವಸ್ತು, ಸಂಗತಿ ಮುಂತಾದುದು: ಈ ನಿಯಮಗಳ ಉದ್ದೇಶವೇನೆಂದರೆ . . . ಬರಿಯ ಒಣಪಾಂಡಿತ್ಯವನ್ನು ಮಾತ್ರ ತೋರಿಸತಕ್ಕ ಸಂಸ್ಕೃತದ ಹರದವನ್ನೆಲ್ಲಾ ಗುಡಿಸಿ ಎತ್ತಿಹಾಕುವುದೇ (ಕಜಸಾ. I, ೨೬); ಅಡಿಗೆಯ ಮನೆಯ ಹರದವನ್ನು ಗುಡ್ಡೆಹಾಕಿ, ಮನೆಯ ಕಸಗುಡಿಸಿ . . . ಹೋಗುತ್ತಿದ್ದಳು (ರಂಗನಾ. ೪೫). [?]

**ಹರದಮಾತು** 'ಹರದವಾತು' ನೋ.

**ಹರದವಾತು, ಹರದಮಾತು** (ನಾ). ಪೇಟೆಯ ಮಾತು; ಬೀದಿಮಾತು: ಇದನಾರೆಂದರಲವೋ ನಿನಗೆ ತನಗಳಿಯೆಂದಿರವರೆಂದೆಂಬ ಲೋಕದ ಹರದಮಾತುಗಳ (ನಿಭಾಗ. ೧೦-೩೦-೨೭). **ಹರದಮಾತು**: ಜೀಯ ಬಲ್ಲಿರಿ ನಿಮ್ಮವರ ಪರಿಯ ಹರದಮಾತಿನ ಹದನು ಬಳಿಕಾ ಚರರಿಗಿದು ಗೋಚರಿಸುವುದೆ (ಕುವ್ಯಾವಿ. ೬-೮).

[ಹರದ$_1$ (< ಪರದ$_1$) + ಮಾತು$_1$]

**ಹರದಾಡು** 'ಪರದಾಡು$_2$' ನೋ.

**ಹರದಾರಿ** 'ಹರಿದಾರಿ' ನೋ.

**ಹರದಾಳಿ** 'ಹರಿದಾಳಿ' ನೋ.

**ಹರದಿ, ಹರದೆ** (ನಾ). ೧. ಗರತಿ; ಮುತ್ತೈದೆ: ಹರೆಯೊಂದು ಹರಿನೀರ ತಿರೆಯೊಂದು ಕರಿನೀರ ಹರದಿ ನಿನ್ನೆದೆಯು ಮುನ್ನೀರ ಜನುಮಾವು ಹರಿಗಿಡಿಯದಂಥ ಹೊಳೆನೀರ (ಮೂರ್ತಿಕಾ. ೪೩-೮); ರಕ್ಷಿಪ ಹರಿ ಬಂದ ಹರದಿ ಜಾನಕಿಯರಸು ಬಂದಾನೆಂದು ಬಿರುದಿನ ಕಾಳಿ ಕೂಗಿದವು (ಕರ್ನಾಕ. ೨೭೪). ೨. ಹೆಂಡತಿ; ಮಡದಿ: ಕರಪಾತ್ರೆ ಗಜಚರ್ಮ ಹರದಿಯರಿರ್ವರೂ ಉರಗಕಂಕಣ ಶೂಲ ಡಮರು ಹರಿಟೆಯ ಭಾರವಿಲ್ಲೆನುತ ತ್ರಿಶೂಲವ ಹರನಡ್ಡಹಾಕಿ ದಾಂಟಿದನು (ಅಮುಸಾಂ. ೫-೧೧೩). **ಹರದೆ**: ೧. ಹರದೇರ ಸೋಬನಕೆ ಕರಸವ್ವ (ನಾಪದ. ೧೧೪); ಅರಸ ಸ್ವತ್ತನ್ನು ದೋಚಿದ್ದು, ಹರದೆಯರನ್ನು ಕೆಡಿಸಿದ್ದು ಉಂಟು (ಚಿಕರಾ. ೪೧೭) ೨. ಹರಕೊಟ್ಟ ಕಾಲಕ್ಕೆ ಹರನ ರೂಪಿಗೆ ನೀಡು ಹರದೆಯರು ಸುತರು ನೆಜ ಸವಿದು ಸುಖಿಸುತಲಿ ಹರನ ಹರಸುವರು (ಸರ್ವಜ್ಞ. ೭೦೫).

[< ಗರತಿ./ ಸಂ. ಗೃಹಸ್ತ್ರೀ. / ಪ್ರಾ. ಹರ = ಗೃಹ]

**ಹರದಿಕೆ** 'ಪರದಿಕೆ' ನೋ.

**ಹರದಿಗ** (ನಾ). ವ್ಯಾಪಾರಸ್ಥ; ವ್ಯಾಪಾರಿ; ಬಣಜಿಗ: ಸರ್ವವ್ಯಾಪಾರವ ಕಟ್ಟಿ ಕೊಂಡಿಪ್ಪ ಹರದಿಗನ ತೆಱನಂತೆ ಕೊಂಡುದಕ್ಕೆ ಕೊಡುವಲ್ಲಿ ವಾಸಿಯ ಕಂಡು ಬಿಟ್ಟ ಲಾಭ ಗಾಱನಂತೆ ಮೊದಲಿಗೆ ಮೋಸ ಲಾಭಕ್ಕುಂಟೇ ಅಯ್ಯಾ (ಮೋಳಿಮಾ. ೭೭-೨೯೭); ಅಧಿಕಧನಯುತನಾಗಿ ವುನ್ನತದಿ ಮೆರೆವ ಹರದಿಗ ಸೆಟ್ಟಿ ವರ್ತಕರುಮಿರ್ಪರು (ನವಮೋ. ೨-೪೭). [ಹರದು (< ಪರದು) + - ಇಗ]

**ಹರದೀಕ್ಷೆ** (ನಾ). ಶೈವರಿಗೆ ಮಾಡುವ ದೀಕ್ಷಾಸಂಸ್ಕಾರ; ಶಿವದೀಕ್ಷೆ: ಹರದೀಕ್ಷೆಯಾಂತ ಮಹಿಮಂ ಪರದೀಕ್ಷೆಯನಾಶೆಗೈವನೇ (ವೃಷವಿ. ೩-೩೪). [ಸಂ. ಹರದೀಕ್ಷಾ]

**ಹರದು** 'ಪರದು' ನೋ.

**ಹರದುಗೇಯ್** 'ಪರದುಗೇಯ್' ನೋ.

**ಹರದುಗೇಯ್ಯು** 'ಪರದುಗೇಯ್' ನೋ.

**ಹರದೆ** 'ಹರದಿ' ನೋ.

**ಹರದೇಶಿ, ಹರದೇಸಿ, ಹರಿದಾಸಿ** (ನಾ). (ಉಕ) ಗಂಡು ಹೆಣ್ಣಿಗಿಂತ ಹೆಚ್ಚೆಂದು ಬಣ್ಣಿಸಿ ಹಾಡುವ ಲಾವಣಿಕಾರರ ಪಂಗಡ: ಹರದೇಶಿ ಪಂಗಡದ ಹಾಡುಗಾರರು ಎದ್ದು ನಿಂತು ದಪ್ಪು ಬಾಜಿಸತೊಡಗಿದರು (ಕಪವು. ೬-೧೮); ಹಳ್ಳಿಗರಲ್ಲಿ 'ಹರದೇಶಿ' 'ನಾಗೇಶಿ' ಪದಗಳನ್ನು ಈರ್ಷೆಯಿಂದ ಹಾಡುವುದು ಎಲ್ಲರಿಗೂ ಗೊತ್ತಷ್ಟೆ (ಕರ್ನಾಸಂ. ೧೨೫). **ಹರದೇಸಿ**: ಹರದೇಸಿಗಳು ಪುರುಷನನ್ನು ಮೇಲುಗಟ್ಟಿ, ನಾಗೇಸಿಯು ಪ್ರಕೃತಿಯನ್ನು ಮೇಲುಗಟ್ಟಿ ಹಾಡುವರೆನ್ನಬೇಕು (ಸುವರ್ಣ. ೪೧). **ಹರಿದಾಸಿ**: ಹರಿದಾಸಿ ನಾಗೇಶಿಯವರ ಹಾಡು ಕೇಳುವದೂ . . . ಇವೇ ಮೊದಲಾದ ಕಾರ್ಯಗಳಲ್ಲಿ ಅವರು ತೊಡಗಿದ್ದರು (ಸಾಹಿಸಂ. ೧೭೫). [? . / ಮರಾ. ಹರದಾಸ್‌ವಳ]

**ಹರದೇಸಿ** 'ಹರದೇಶಿ' ನೋ.

**ಹರನಯನ** (ನಾ). ೧. ಶಿವನ ಮೂರನೆಯ ಕಣ್ಣು. ೨. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ: ಹರನಯನ ವಹ್ನಿ ಪುರ ಶಿಖಿ . . . ಅದು ಮೂಱು ನಾಮಂ (ವ್ಯವಹಾ. ೯-೩); ಹರನಯನ ವೇದ ಶಶಿ(?) ಗಿರಿಯಿಂದಂ ಗುಣಿಸಲ್ (ಭಾಸ್ಕರ. ೪೨-೭).

[ಸಂ.]

**ಹರನಾಳಿಗೆ** 'ಪರಿನಾಳಿಗೆ' ನೋ.

**ಹರನಿಲಯ, ಹರನಿಳಯ** (ನಾ). ಶಿವದೇವಾಲಯ; ಶಿವಾಲಯ: ಹರನಿಲಯಕೆ ನಡೆವಾತನ ಚರಣಸರೋಜಾತ ಶುದ್ಧ (ಶಂಕಕಂ. ೯೨). **ಹರನಿಳಯ**: ಹರನಿಳಯದ ಬಾಗಿಲೊಳೆದ್ದುರಿಗಂಡೊಳಗಿರ್ದ ಭಕ್ತರೊದಱುತ್ತಿರಲು (ತ್ರಿಪುವಿ. ೩೩-೨೨); ಹರ ನಿಳಯಂಬೊಕ್ಕಲ್ಲದೆ ಧರಣಿಯೊಳೀ ಕಂಬಿಯಂ ಸಮಂತಿಳುಪದ ಬಲ್ಪಿರಿದಿನ ಭಕ್ತಿಯ ಬಿಂಕಂ ದೊರೆವೆತ್ತುದು ನಿನ್ನೊಳ್ (ವೃಷವಿ. ೨೯-೧೩೩). [ಸಂ.]

**ಹರನಿಷ್ಠ** (ನಾ). ಶಿವನಲ್ಲಿ ಶ್ರದ್ಧೆಯುಳ್ಳವನು; ಶಿವಭಕ್ತ: ಹರನಿಷ್ಠಗಲ್ಲದಲೆ ಹರಿದು ಹೋಗದು ಪಾಪ (ಸರ್ವಜ್ಞ. ೪೦). [ಸಂ.]

**ಹರನಿಳಯ** 'ಹರನಿಲಯ' ನೋ.

**ಹರನೇತ್ರ** (ನಾ). ೧. ಶಿವನ ಮೂರನೆಯ ಕಣ್ಣು: ಹರನೇತ್ರಜ್ವಾಲೆಯಿಂ ಬೇವ ತನುವನುಮ ಕಾಣುತ್ತೆ . . . ಮತ್ತೆ ತ್ರಿದಂತಿರ್ದ ಶೋಭಾಕರರೂಪಾಕಾರನಂ ತತ್ತರುಣಿ ಕನಸಿನೊಳ್ ಕಂಡು ಸೋಲ್ತಳ್ (ಲೀಲಾವ. ೭-೭೯); ಹರನೇತ್ರವಹ್ನಿಯೊಳಡಬಳವ ಸುಡಬಗೆದೆಲಾ ಮರುಳೆ ಮಹೀಪತಿಯೆ (ಕುವ್ಯಾಸ. ೧೪-೬೭). ೨. ಶಿವನ ಬಲಗಣ್ಣಾದ ಸೂರ್ಯ; ರವಿ: ಹರನೇತ್ರಸಖಂ ಗಡ ಮುರಹರನೇತ್ರಂ ಗಡ ವಿಧಾತ್ರಜನಕಂ ಗಡ ತಾವರೆಯದ ಕರೆಯಾದುದು ಗಡ ಸಿರಿಯೆನೆ ತಿಳಿ ಕಾಲವಶಮನಾರ್ಕಳಿದಪರೋ (ರಾಜಶೇ. ೧೧-೧೨). ೩. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ. [ಸಂ.]

**ಹರಪುರ** (ನಾ). ಶಿವನ ಪುರ; ಕೈಲಾಸ: ಸುರಪುರಕೆ ಹರಪುರಕೆ . . . ಬೊಮ್ಮನ ಪುರಕೆ ನೂರ್ಮಡಿ ಮಿಗಿಲೆನಿಸಿ ತಾ ಕರಚೆಲುವಿನಿಂದೆಸೆವುದದು ಪಾತಾಳದೊಳು ಲಂಕೆ (ಕೌಶಿರಾ. ೩೯-೨). [ಸಂ.]

**ಹರಪೂಜೆ** (ನಾ). ಶಿವನನ್ನು ಅರ್ಚಿಸುವುದು; ಶಿವಪೂಜೆ: ಹರಪೂಜೆಯಿಂದೆ ಮಿಗಿಲೀಶ್ವರ ಭಕ್ತರ ಪೂಜೆಯೆಂಬುದಾಗಮಂ (ರಾಜಶೇ. ೧೪-೧೨). [ಸಂ. ಹರಪೂಜಾ]

**ಹರಪೂಜೆಗೆಯ್** (ಕ್ರಿ). ಶಿವನನ್ನು ಪೂಜೆಮಾಡು: ಹರಪೂಜೆಗೆಯ್ದು ಪೊಳ್ತೋಸರಿವುದು (ವೃಷವಿ. ೧೨-೫೨). [ಹರಪೂಜೆ + ಕೆಯ್$_1$]

**ಹರಪೆ** (ನಾ). ೧. ಬಯಲು; ತೆರೆದ ಪ್ರದೇಶ: ಮನೆಯಂ ಕಟ್ಟದರೆಂಬಲ್ಲಿ ಹರಪೆಯಲ್ಲಿರಬಾರದೆಂಬುದಾಯಿತು (ಅರಸಾ. ೧೯೩-೧). ೨. (ರಹಸ್ಯ ಮುಂತಾದುವು) ಹರಡುವಿಕೆ; ಬಯಲಾಗುವಿಕೆ: ಅವರ ಮನೇ ಜನದ ಎದುರಿಗೆಲ್ಲಾ ನನ್ನ ಸಂಗತಿಯನ್ನು ಹರಪೆಮಾಡಿಕೊಳ್ಳಲೇ ? (ಸುಮಚ. ೨೬೮). [< ಪರಪು$_1$]

**ಹರಪ್ರಿಯ** (ನಾ). ಶಿವನ ಗೆಳೆಯ; ಕುಬೇರ: ನಯನೌಘಛ್ಛಲದಿಂದೆ ನೈದಿಲೆಸಳಂ ಶಕ್ರಂ ಮುಸುಂಕಿಟ್ಟಂ . . . ತುಹಿನಭೂಮೀಧ್ರಕ್ಕೆ ಸಾರ್ದಂ ಹರಪ್ರಿಯನಾವರ್ತಿಸೆ ತಳ್ತು ನಾಲ್ದೆಸೆಯುಮಮಂ ಗ್ರೀಷ್ಮಪ್ರತಾಪೋದಯಂ (ಚಂದ್ರಪ್ರ. ೯-೬೭). [ಸಂ.]

**ಹರಬಕುತಿ** (ನಾ). ಶಿವನ ಮೇಲಿನ ಭಕ್ತಿ; ನಿಷ್ಠೆ: ಹರಬಕುತಿಯಿಲ್ಲದ ಜಡಪತಿಗಳಂ ಬಿಟ್ಟು ಸದ್ಗತಿಗಳಂ ಪಡೆದ ಮಡದಿಯರನೇಕರುಂಟು (ಪಾಸೋಪು. ೪-೧೧೫). [< ಸಂ. ಹರಭಕ್ತಿ]

**ಹರಬಿ** 'ಪರವಿ' ನೋ.

**ಹರಭಕ್ತ** (ನಾ). ಶಿವಶರಣ; ಶಿವಭಕ್ತ: ಹರಭಕ್ತಂ ಪೆಟ್ಟಿಗೆಯಂ ಭರದಿಂ ತೆಱೆದೀಕ್ಷಿಸಲ್ಕೆ ವಿಸ್ಮಯದೊಳ್ . . . ಪಂದೆಯನೆ ಪಾವದರ್ದಂತಾದಂ (ತ್ರಿಪುವಿ. ೭-೯೦); ಹರಭಕ್ತ ದ್ರೋಹಮನಾರ್ ವಿರಚಿಪರವರ್ಗೀ ನೃಪಾಲಗತಿಯಪ್ಪುದು (ವೃಷವಿ. ೪೨-೨೭). [ಸಂ.]

**ಹರಭಕ್ತಿ** (ನಾ). = ಹರಬಕುತಿ: ಹರಭಕ್ತಿಪ್ರಮದಾಮುಖೈಕಮುಕುರಂ . . . ವೃಷಭೇಶ್ವರಂ ಸಲಹುಗೆಮ್ಮಂ (ಶಬಶಂ. ೧-೪). [ಸಂ.]

**ಹರಮ** (ನಾ). ಏರ್ಪಾಟು; ವ್ಯವಸ್ಥೆ: ಹೈದರಲ್ಲಿಖಾನ ಬಹದರರೂ ಬಂದು . . . ದಳವಾಯ ಹೇಳಿ ಸ್ವಸ್ಥಾಮಾಡಿಕೊಂಡು ಹಣ ಬರುವಂತೆ ಹರಮ ಮಾಡಿ ಪುನಹಾ ದಿಂಡುಗಲ್ಲಿಗೆ ಹೊರಟು ಹೋದರು (ಹೈದರ. ೭೪). [?]

**ಹರಯ** 'ಪರಯ' ನೋ.

**ಹರಯುಗಳಿ** (ಕ್ರಿ). ಪ್ರಾಯವು ಹೊರಟು ಹೋಗು; ತಾರುಣ್ಯವು ಮೀರು; ಪ್ರೌಢವಯಸ್ಸಾಗು: ಹರಯಗಳಿದ ಪೆಣ್ಣಿನ ಸಂಗಸುಖವೆಳಹರಯದ ಹೆಣ್ಣಿನೊಳುಂಟೆ (ಶಂಸವಿ. ೬-೧೯೪). [ಹರಯ (< ಪರಯ) + ಕಳಿ$_1$ (< ಕಟ್$_1$)]

**ಹರಯೋಗ** (ನಾ). ಶಿವಭಕ್ತಿ: ಹರಯೋಗವಾಂತ ವೃಷಭನ ಕರಿಯಾಲಿಯ ಕಾಂತಿಯೊಳಗಣಿಂ ಕುಚಮುಖದೊಳ್ ಪರಕಲಿಸಿ ಪೊಣ್ಮದತ್ತೆನೆ ಗುರುಕುಚ ಚೂಚುಕದ ಮೇಚಕದ್ಯುತಿ ಮೆಱೆಗುಂ (ವೃಷವಿ. ೩-೫). [ಸಂ.]

**ಹರಲು** 'ಪರಲ್' ನೋ.

**ಹರಲುಗ** 'ಪರಲುಗ' ನೋ.

**ಹರಲೆ** 'ಪಱಲೆ' ನೋ.

**ಹರಲ್ಕಟ್ಟು** (ನಾ). ಹರಳಿನ ರಚನೆ; ಸಣ್ಣಕಲ್ಲುಗಳ ವಿನ್ಯಾಸ (?): ಬಿಲಸಗ್ಗಂ ಸವಿಸಂದಿ ಡೋಣಿ ಪರಿಚಾರೇರುಂ ಪುಗಿಲ್ಪಟ್ಟಿ ಮೇಖಳೆ ತಾಳ್ಪಾಸಟಿ ಗಂಡಶೈಲಮಡ ಕಿಲ್ಕೂಟಂ ಹರಲ್ಕಟ್ಟು ತಾಱಲೊಸರ್ದಾಣ ಮಹಾಗ್ರಹಂ ತೊಱೆ ಕೊಳಂ ಪುಲ್ವಟ್ಟೆಗಳ್ ಕಾರ್ಮುರ್ಕಂಬೋಲ್ಸಲೆ ಗಂಟಕ್ಕಿದ ಕಾಡ ದಿಕ್ಕಿಗಮಜಸ್ರಂ ರಯ್ಯಾಮಾ ಬೆಟ್ಟದೊಳ್ (ಸೂಕ್ತಿಸು. ೩-೨). [ಹರಲ್$_0$ (< ಪರಲ್) + ಕಟ್ಟು$_1$]

**ಹರವಂಚು** (ನಾ). ನಂಬಿಕೆಗೆ ದ್ರೋಹಮಾಡಿ ಮೋಸದಿಂದ ಹಣವನ್ನು ತಿಂದುಹಾಕುವುದು; ಕೊಟ್ಟ ಹಣವನ್ನು ದುರುಪಯೋಗಮಾಡಿಕೊಳ್ಳುವುದು: (ಕಸಂಗ್ರಾ. ೭೯). [?]

**ಹರವಡಿ** 'ಪರವರಿ' ನೋ.

**ಹರವಣಿಗೆ** 'ಪರವಣಿಗೆ' ನೋ.

**ಹರವರಿ$_1$** (ಕ್ರಿ). ಮಿತಿಯನ್ನು ತಿಳಿ; ವ್ಯಾಪ್ತಿಯನ್ನು ಅರಿ: ತರುಣನಂ ನೋಡಿ ಸ್ಮರರತಿದೇವಿಯರು ಹೆಚ್ಚಿ ಹರವರಿಯದಾನಂದದುಗ್ಧಾಬ್ಧಿಯೊಳು ಮುಳುಗಿ ಸುತನ ಪರಿಪಾಲಿಸುತ್ತೆ (ನವಮೋ. ೧೫-೫೦). [ಹರವು$_2$ (< ಪರಪು$_2$) + ಅರಿ$_2$ (< ಅಱ್)]

**ಹರವರಿ$_2$** 'ಪರವರಿ' ನೋ.

**ಹರವರಿಗಾಱ** (ನಾ). ಏಳಿಗೆಯನ್ನುಂಟುಮಾಡುವವನು; ವೃದ್ಧಿಗೊಳಿಸುವವನು: ಜೊನ್ನ ಹರವರಿಗಾಱ ಕಾಮನ ಗೆಲ್ಲಗಾಱ ಚಂದಿರನುದಿಸಿದ ಮೂಡದೆಸೆಯ (ವರ್ಧಚ. ೮-೭). [ಹರವರಿ$_2$ (< ಪರವರಿ) + - ಕಾಱ]

**ಹರವರಿಗೊಳ್** (ಕ್ರಿ). ನೆಲೆಗೊಳ್ಳು; ನೆಲಸು: ತರುಣಿಯರಿಟ್ಟ ಭೂಷಣದಿ ಕೀಲಿತವಾದ ಬೆರಕೆವರಲಾ ಕಾಂತಿ ಮುಸುಕಿ ಸುರಚಾಪ ಸ್ಥಿರವೆತ್ತು ಹರವರಿಗೊಂಡೊಂದಿರವಾದುದು ನೋಟಕರಿಗೆ (ಗೊಮ್ಮಚ. ೧-೭೧); ಹರುಷಂ ಹರವರಿಗೊಂಡು ಎನಗೆ ಶಿವತತ್ತ್ವ ಸಾಧ್ಯವಾಯಿತು (ಘಸವ. ೨೭-೨೨). [ಹರವರಿ$_2$ (< ಪರವರಿ) + ಕೊಳ್$_1$]

**ಹರವರಿಸು** 'ಪರವರಿಸು' ನೋ.

**ಹರವಸ** 'ಪರವಸ' ನೋ.

**ಹರವಸಂಬಡು** (ಕ್ರಿ). ಮೈಮರೆ; ಮೂರ್ಛೆಹೋಗು: ಪರಿಮಳಕೆ ಬಂದು ಮುಸುಱಿದ ನೊಣಂಗಳು ಕೂಡೆ ಹರವಸಂಬಟ್ಟು ಚರಿಯಿಸಲು ನೆರೆಯದೆ ಸೊಕ್ಕಿ ಮರುಳಾದುವು (ಹಚಕಾ. ಪಂ. ೪-೫೫). [ಹರವಸ (< ಪರವಸ) + ಪಡು$_1$]

**ಹರವಸಂಬೊಗು** (ಕ್ರಿ). = ಹರವಸಂಬಡು: ಮೈಜೋಗೇಱಿದಂತೆ ಸುಖದಾವೇಶ ಬಂದಂತೆ ಹರವಸಂಬೊಕ್ಕಿರ್ದನು (ಸೋಮಚ. ೪-೧೧). [ಹರವಸ (< ಪರವಸ) + ಪೊಗು]

**ಹರವಸಂಬೋಗು, ಹರವಸವೋಗು** (ಕ್ರಿ). = ಹರವಸಂಬಡು: ವ್ಯಸನಾರ್ಥವಾಗಿ ವಿಟನ ಬೆಂಬಿಡದೆ ಬಂದನೆಲೆಯೆಂದು ಹರುಷಂಗೆಟ್ಟು ಹರವಸಂಬೋಗಿ ಮತ್ತೆ ಮೆಲ್ಲನೆಳ್ಚತ್ತು ಸಂತಾಪಿಸುತ್ತೆ (ಹಮ್ಮೀರ. ೬-೩೦ ವ); ಬಿರಹದ ಬೆಂಕೆಯಿಂ ಬೆಂದು ಕಡುಹರವಸಂ ಬೋದರಮರಿಯರ್ ನಡೆವಲ್ಲಿ ನಿಂತಲ್ಲಿ ತತ್‍ಕ್ಷಣದೊಳು (ಚಬಪು. ೧೯-೪೩). **ಹರವಸವೋಗು:** ಕುವರನ ಚೆಲ್ವಿಕೆಯ ಒಸೆದೀಕ್ಷಿಸುತ ಹೊಸಜೌವನೆಯರು ಹ [ಪಾಠಾಂ. ಪ]ರವಸವೋದರು (ಕುರಾಸಾಂ. ೩೧-೧೨). [ಹರವಸ (< ಪರವಸ) + ಪೋಗು$_1$ (< ಪೋ$_1$)]

**ಹರವಸಗೊಳಿಸು** (ಕ್ರಿ). ಪರವಶಗೊಳಿಸು; ಮೋಹಗೊಳಿಸು: ಕಾಣರೆ ನೀವೆನ್ನಿನಿಯನನು . . . ಮೆಯ್ಸಿರಿಯೊಳಾನಂದದ ಸರೆಯನಲುಗಿ ಮಿಗೆ ಹರವಸಗೊಳಿಸುವ ಹರಿಯನೀಯೆಡೆಯ (ಗೀತಗೋ. ೧೮-೨). [ಹರವಸ (< ಪರವಸ) + ಕೊಳ್$_1$ + - ಇಸು$_3$]

**ಹರವಸತೆ** 'ಪರವಸತೆ' ನೋ.

**ಹರವಸದಿಳಿ** (ಕ್ರಿ). ಮೂರ್ಛೆತಿಳಿ; ಎಚ್ಚರಗೊಳ್ಳು: ಮತ್ತಗಜಾನನ ಹರವಸದಿಳಿದೆಚ್ಚತ್ತು ಪೆರ್ಗದೆಯ ತೆಕ್ಕೊಂಡು . . . ಅಪ್ಪಳಿಸುತಿಕ್ಕಿದನು (ಮೋಹತ. ೩೮-೭೧). [ಹರವಸ (< ಪರವಸ) + ತಿಳಿ$_1$]

**ಹರವಸವೋಗು** 'ಹರವಸಂಬೋಗು' ನೋ.

**ಹರವಿ** 'ಪರವಿ' ನೋ.

**ಹರವಿಗೂಳು** (ನಾ). ಒಂದು ಬಗೆಯ ತೆರಿಗೆ: ಅನುಪು ಕೊಡವೀಸ ಹಂದರಹಣ ಹರವಿಗೂಳು ಮೇಟುಕೊಳಗ . . . ಸರ್ವಬಾಧೆ ಪರಿಹಾರಕ್ಕೆ ಗದ್ಯಾಣ ಗ ೧೧ ವರಹ ಅಂತು ಗದ್ಯಾಣ ಗ ೪೭ ॥ ೧ ಅಕ್ಷರದಲು ನಾಲ್ವತ್ತೇಳು ಆರುಹಣ (ಮೈಆರ. ೧೯೩೪, ೨೭-೨೧; 1430). [ಹರವಿ (< ಪರವಿ) + ಕೂಳು$_2$ (< ಕೂೞ್$_1$)]

**ಹರವು$_1$** 'ಪರಪು$_1$' ನೋ.

**ಹರವು$_2$** 'ಪರಪು$_2$' ನೋ.

**ಹರಸಖ** (ನಾ). = ಹರಪ್ರಿಯ: ಹರಸಖನಲ್ಲಿ ಪುಷ್ಪಕಮನಿಟ್ಟುಳಿಗೊಂಡು . . . ಅಜೇಯನಾಗಿರೆ ಬಹುಯತ್ನಗೌರವದಿನಾಂ ಪೊಣರ್ದಿಕ್ಕಿದ ರಾವಣಂ ವಚೋಧರ ಶಿಶುಪಾಲನೆಂಬಸುರನಾದುದನಾಂ ತಿಳಿದೆಂ ನಿರಾಕುಳಂ (ಜಗವಿ. ೧-೭೧). [ಸಂ.]

**ಹರಸಮಯಿ** (ನಾ). ಶೈವಮತಕ್ಕೆ ಸೇರಿದವನು: ಗುರುವಹಂ ಗಡ ಚೋಳರಾಯನ ಹರಸಮಯಿ ಗಡ ಈತನಂ ಧಿಕ್ಕರಿಸಿ ಸುಮ್ಮನೆ ಹೋಱವಡಿಸುವುದು ಧರ್ಮವಲ್ಲವಿದು (ಬಸವು. ೫೦-೨೨). [ಸಂ. ಹರಸಮಯಿನ್]

**ಹರಸಾಲು** (ನಾ). ಪ್ರತಿಯೊಂದು ವರ್ಷ; ವರ್ಷಂಪ್ರತಿ: ಹರಸಾಲು ತಾಜಾಸನ್ನದು ಉಜುರುಯಿಡದೆ ಸದರಿಪ್ರಕಾರಾ . . . ನಡಸಿಕೊಂಡು ಬರುವದು (ಎಕ. VI, ಕೊಪ್ಪ. ೪೮-೪೮; 1811); ಹರಸಾಲು ತಾಜಾ ಸಂನ್ನದು ಉಜೂರ್‍ರುಯಿಡದೆ . . . ನಡಶಿಕೊಂಡು ಬರುವದು (ಮೈಆರ. ೧೯೪೨. ೩೯-೨೦; 1813). [← ಹಿಂ.ಹರ್‌ಸಾಲ್]

**ಹರಸು** 'ಪರಸು$_1$' ನೋ.

**ಹರಹ** (ನಾ). (?): ಸಯಿಗಲನಿಕ್ಕಿ ಹರಹದಲಿ X ನಾಗ XXX ಸೇನಬೋವ (ಎಕ. XII (S), ಚಿಕ್ಕನಾ. ೬೫-೧೨; 1331). [?]

**ಹರಹಸನ** (ನಾ). ಶಿವನ ನಗೆ: ಸ್ಫುರಿತೋದ್ಯತ್ತಾರತಾರಾಚಳಹರಹಸನಾದಭ್ರಶುಭ್ರಾಭ್ರ . . . ಗೌರದ್ಯುತಿವಿಶದಯಶಃಕಾಂತನೀ ಶಾಂತಿವರ್ಮಂ (ಪುಷ್ಪವು. ೧-೮೧). [ಸಂ.]

**ಹರಹಾಸ** (ನಾ) = ಹರಹಸನ: ಹರಹಾಸಕ್ಕೊಂದೆರಟ್ ದಿಕ್ಕರಿರದನಕೆರಟ್ಟಾೞು . . . ಕೈಲಾಸಧಾತ್ರೀಧರಕೆಂಟೊಂಬತ್ತು ಮೇಲಾಗಿರೆ ಪಸರಿಸಿದಂ ಕೀರ್ತಿಯಂ ನಾಗ ವರ್ಮಂ (ಛಂದೋಂಬು. ೧-೨೩); ಹರಹಾಸಾವಯವಂಗಳಂತಿರಲನಂತಾನಂತ ಭೋಗಂಗಳಂತಿರೆ ಪೂರ್ಣೇಂದುಕಲಾಳಿಯಂತಿರೆ ಸಿತಾಬ್ಜಾನೀಕವೊಪ್ಪಲ್ ಶಿಖಾಂತರದೊಳ್ ನಿರ್ಮಲದಿವ್ಯಮೌಕ್ತಿಕಶಿಲಾಲಿಂಗಂ ಚತುರ್ವಕ್ತ್ರಸುಂದರಮಲ್ಲಿರ್ದುದು (ಕಾದಂಪೂ. ೬೫೭). [ಸಂ.]

**ಹರಹಾಸದ್ಯುತಿ** (ನಾ). ಶಿವನ ನಗೆಯ ಕಾಂತಿ: ಹರಹಾಸದ್ಯುತಿ ಮೂರ್ತಿಗೊಂಡುದೊ ವಿರಿಂಚಖ್ಯಾತಿ ಲೋಕಂಗಳೊಳ್ ಪರಿದಾಯಾಸದೆ ನಿಂದುದೋ . . . ಎಂಬಂತಿರೆ ದಿವ್ಯಸುಂದರಿ ಮನಕ್ಕಾನಂದಮಂ ಮಾಡಿದಳ್ (ಕಾದಂಪೂ. ೬೬೩); ಹರಹಾಸದ್ಯುತಿಯಂ ನಿರಾಕರಿಸಿ ಗಂಗಾಸಿಂಧುಕಲ್ಲೋಲಶೀಕರಮಂ ನಿಂದಿಸಿ . . . ಬೆಳಪ್ಪುದುಜ್ವಳಯಶಂ ಶ್ರೀಗಂಡಮಾರ್ತಂಡನಾ (ಕಾವ್ಯಾವ. ೮೬೩). [ಸಂ.]

**ಹರಹು$_1$** 'ಪರಪು$_1$' ನೋ.

**ಹರಹು$_2$** 'ಪರಪು$_2$' ನೋ.

**ಹರಹುಗೆಡು** 'ಪರ್ವುಗೆಡು' ನೋ.

**ಹರಹುವಲೆ** (ನಾ). ಹರಡಿಕೊಳ್ಳುವ ಒಂದು ಬಗೆಯ ಬಲೆ: ಎರಳೆವಲೆ ಹಂದಿವಲೆ ಹೊಯ್ಕಲೆ ಹರಹುವಲೆಗಳೆಳೆವಲೆ ಹುಡಿಕೆವಲೆ . . . ಚಿತ್ತರದ ನೇಣ್ಬಲೆ ಮೊಕರವಲೆ ಬೇಡರ ಸಿರದೊಳೊಪ್ಪಿದುದು (ಸಾಳ್ವಭಾ. ೫-೧೯). [ಹರಹು$_1$ (< ಪರಪು$_1$) + ಬಲೆ$_1$]

**ಹರಳ್$_1$** 'ಪರಲ್' ನೋ.

**ಹರಳ್$_2$**, ಹರಳು$_2$ (ನಾ). ಜಾರತ್ವ; ವ್ಯಭಿಚಾರ: 'ಹರಳಿಗ' ಪರಾ. **ಹರಳು$_2$**: 'ಹರಳಿಸು' ಪರಾ. [ದೇ. II. P ಇದಕ್ಕೆ 'ಪರಳ್' ಎಂಬುದೇ ಮೂಲರೂಪವಿರಬಹುದು]

**ಹರಳ** (ನಾ). ವಿಟ; ಜಾರ: ಶೀಘ್ರದೊಳಾಗ ನಸುತೀರದಿಹ ಕೂಟ ಬೇಟ ನೋಟದಿ ರತಿಸಿ ಹರಳರ್ಕೈದಿದರಿತ್ತಲು (ಪ್ರಭುಪು. ೪-೧೯೯). 'ಹರಳೆ$_1$' ಪರಾ. [ಹರಳ್$_2$ + - ಅ$_7$]

**ಹರಳಿಗ, ಅರಳಿಗ$_1$, ಪರಳಿಗ** (ನಾ). = ಹರಳ: ''ಹರಳಿಗಂ - ಜಾರಂ'' (ಶಮದ. ಪರಿ. ೨); ಅರವಣ್ಣನೀಶಪುತ್ರೀವರಂ ಬ್ರಹ್ಮನಾಸುರದ ಜಾರಂ ಶಕ್ರ ಸತಿಯರೀರೆಂಟು ಸಾಸಿರದ ಹರಳಿಗನು ಹರಿ (ಸಿದ್ಧರಾ. ೪-೬೨); ಮನೆಯೊಳ್ ಕಾಲ್ ನಲೆಗೊಂಡು ನಿಂದಱಿಯನೀ ಜೋಕಾಱಿಯಂತಿರ್ಕೆ ಸೊಂಬನೊಳೊಲ್ದಾಡುವಳೊಲ್ಲಳಾ ಹರಳಿಗಂ ಕಡ್ಡೊಯ್ಯನೇನಿರ್ದೊಡಂ . . . ಆವಾವ ಮುಹೂರ್ತದೊಳ್ ಪಡೆದನೀ ಪಾಟಾದ ಮೂಳಂಗಳಂ ? (ಸೂಕ್ತಿಸು. ೮-೪೫೭); ಬಗೆಬಗೆಯಿಂ ತನುತನುವನೊಂದುಗೂಡಿ ನೆರೆವ ಜಾಣ್ಮೆಯ ಹೆಣ್ಣಱತೆರಳಿಗರ ಭೋಗಮೆ ಭೋಗಮಲ್ತೆ! (ರಾಮಾಶ್ವ. ೬೦-೨೯). **ಅರಳಿಗ: ಅತ್ತ ಮಲಂಗಿದಳೀ ಮನೆಯತ್ತಲ್ ಸುಳಿವವನುವೂರ್ವನಿಲ್ಲಮೆನುತ್ತುಂ ಮತ್ತೇಂ** ಕನಲ್ದವೊಲೊರ್ವಳ್ ಚಿತ್ತಂಬುಗಿಪರಳಿಗಂಗೆ ಮಿಗೆ ಸೂಚಿಸಿದಳ್ (ಉದ್ಭಟ. ೧೦-೧೧೧). Δ **ಪರಳಿಗ:** ''ಸಿತ್ತಗಂ, ಜೋಡಂ, ಪರಳಿಗಂ, ಪಾಣ್ಬಂ – ಈ ೪ ಜಾರಂಗೆ ಪೆಸರ್'' (ಕಶಸಾ. ೬೨-೩೮೭); ''ಜೋಡಂ ಪರಳಿಗನು ಪಾಣ್ಬ ಸಿತಗಂ ಜಾರಂ'' (ಕವಿಕಂ. ೧೬೧). [ಹರಳ್$_2$ + - ಇಗ. P 'ಪರಳಿಗ' ಎಂಬುದೇ ಮೂಲರೂಪವಿರಬಹುದು]

**ಹರಳಿಗಿತ್ತಿ** (ನಾ). = ಹಾದರಗಿತ್ತಿ; ಜಾರೆ: ಕುಚಿತ ತಾಣದೊಳು ತವಕದೆ ಜೋಡ ರೊಳ್ಬೆರೆವ ಹರಳೆ ಕಳಿತೆಗಿತ್ತಿಯರು ಮದನನ ಹೇರಿಗಿತ್ತಿಯರು ಕಾಣಿಸಿದರಿಕ್ಕಟಿಯೊಳು (ಸೌಂದಪು. ೧೭-೪೭). [ಹರಳಿಗ + - ಇತ್ತಿ]

**ಹರಳಿವಟ್ಟ$_1$** (ನಾ). ಒಂದು ಬಗೆಯ ತೆರಿಗೆ: ಬೇಡಿಗೆ ಭತ್ತವರೀ ಹರಳಿವಟ್ಟ ಸರಧಿ ಮುಂತಾದ ಸಮಸ್ತ ಕಾಣಿಕೆಗಳು ಸಹಾ ನೀವೇ ಆಗುಮಾಡಿ ಅನುಭವಿಸಿಕೊಂಡು (ಎಕ. XV, ಅರಕ. ೧೦೭-೧೩೦; 1665). [ಹರಳಿ$_1$ + ವಟ್ಟ]

**ಹರಳಿಸು** (ಕ್ರಿ). ಹಾದರಮಾಡು; ವ್ಯಭಿಚಾರವನ್ನು ನಡೆಸು: ಬಿತ್ತರದಿ ಹರಳಿ ಹರಳಿಸಿ ಹರಿದುಬರಲು (ಪ್ರಭುಪು. ೪-೧೩೪); ಹೊತ್ತಗೆಯ ಕೆದಱ ರತಿಸುವರ ಚಾತುರ್ಯದಿಂ ಮುತ್ತು ತಾಯೆಂದು ಹರಳಿಸುವರತಿ ಬೂದಿಯೊಳು ವಿತ್ತ ಜಗುಳ್ವವು ಎಂದು ವರಸಿ ಗಂಡನ ಮಱಸುವರು ಮಗನನೆರ್ದೆಯೊಳಟ್ಟು ತತ್ತತ್ತೈಯೆಂದು ಕುಣಿಸುತ್ತನ್ಯ ಪುರುಷರೊಳು ಚಿತ್ತಜನಸುಖವೆಸಗಿ ಪತಿಯ ನಾಂಚಿಸುವರು (ಪ್ರಭುಪು. ೭-೧೬೯). [ಹರಳು$_2$ (< ಹರಳ್$_2$) + - ಇಸು$_3$]

**ಹರಳು$_1$** 'ಪರಲ್' ನೋ.

**ಹರಳು$_2$** 'ಹರಳ್$_2$' ನೋ.

**ಹರಳುಂಗುರ** 'ಪರಲುಂಗುರ' ನೋ.

**ಹರಳುಕಲ್ಲು** 'ಪರಳ್ಗಲ್ಲು' ನೋ.

**ಹರಳುಗಟ್ಟಿಸು** (ಕ್ರಿ). ದ್ರವವಸ್ತುವನ್ನು ಒಣಗಿಸಿ ಹಳುಕು ಹಳುಕಾಗುವಂತೆ ಮಾಡು,– **ಹರಳುಹರಳಾಗಿ ಮಾಡು:** ಈ ಜೋನಿಯನ್ನು ಹರಳುಗಟ್ಟಿಸುವುದು (Crystallize) ಮುಂದಿನ ಕೆಲಸ (ಬಾಲಪ್ರ. II, ೬೫೨). [ಹರಳು$_1$ (< ಪರಲ್) + ಕಟ್ಟು$_1$ + - ಇಸು$_3$]

**ಹರಳುಗಲ್ಲು** 'ಪರಳ್ಗಲ್ಲು' ನೋ.

**ಹರಳುಗಿಡ** (ನಾ). ಔಡಲಗಿಡ: ''ವ್ಯಾಘ್ರಪುಚ್ಛಃ, ಗಂಧರ್ವಹಸ್ತಕಃ, ಏರಂಡಃ . . .ವ್ಯಡಂಬಕಃ– ೧೧ ಹರಳುಗಿಡದ ಹೆಸರುಗಳು'' (ಸಿದ್ಧಾಂತಿ. ೧೧೮). [ಹರಳು$_1$ (< ಪರಲ್) + ಗಿಡ (< ಗಿಡು)]

**ಹರಳುಗುಣಿಮಣೆ** (ನಾ). ಬೀಜ ಅಥವಾ ಕವಡೆಗಳನ್ನು ಹಾಕಿ ಆಡುವುದಕ್ಕಾಗಿ ಮಾಡಿರುವ ಹದಿನಾಲ್ಕು ಗುಣಿಗಳಿರುವ ಮಣೆ; ಗೊಟ್ಟುಗುಣಿಮಣೆ: (ತ). [ಹರಳು$_1$ (< ಪರಲ್) + ಗುಣಿ$_1$ (< ಕುೞಿ$_2$) + ಮಣೆ$_1$]

**ಹರಳುಟಿಕ್ಕೆ** (ನಾ). ರತ್ನದಂತೆ ಕಾಣುವ ಖೋಟಾಹರಳು; ಕೃತಕಮಣಿ: ಚಿಂತಾಮಣಿಗೆ ಕೈದುಡುಕಿ ಹರಳುಟಿ[ಪಾಠಾಂ. ತೆ]ಕ್ಕೆಯಿದೆಂಬ ಪಾಪಿಗೆ ಪರಮಗುರು ನಾನಾದೆನ್ನೆ (ಕುವ್ಯಾಭೀ. ೬೦೧. ೩-೬೯). [ಹರಳು$_1$ (< ಪರಲ್) + ಟಿಕ್ಕೆ$_2$ (< ಟಿಕ್ಕೆ$_1$)]

**ಹರಳುದುಂಬು** (ಕ್ರಿ). ರತ್ನವನ್ನು ಕುಂದಣಿಸು; ಹರಳನ್ನು ಕೆಚ್ಚು,– **ಮೆಟ್ಟು:** ಚೆಲುವೆಗೆ ತಕ್ಕ ಸಿಂಗರವ ನಿರ್ಮಿಸಿ . . . ದಾದಿಯರು ಉಲುಹಿಂಗೆ ಸರಳುದುಂಬಿದ ರತ್ನಮಯ ಹೊನ್ನ ನಿಲವುಗನ್ನಡಿಯ ತೋಱಿದರು (ಮೋಹತ. ೨೨-೫೩). [ಹರಳು$_1$ (< ಪರಲ್) + ತುಂಬು$_1$]

**ಹರಳುಪ್ಪು$_1$** (ನಾ). ಹಳುಕುಹಳುಕಾಗಿರುವ ಉಪ್ಪು: ಅಂಗಡಿಗೆ ಹೋಗಿ ಒಂದು ಕೆ. ಜಿ. ಹರಳುಪ್ಪು ತೆಗದುಕೊಂಡು ಬಾ (ರೂಢಿ). [ಹರಳು$_1$ (< ಪರಲ್) + ಉಪ್ಪು$_1$]

**ಹರಳುವೀರೆ** (ನಾ). ಒಂದು ಬಗೆಯ ಸಸ್ಯ: "ಪುಟಬೀಜಂ -ಹರಳುವೀರೆ" (ಓಷಧಿ. ೧೦೦). [?]

**ಹರಳುಹೊನ್ನೆ** (ನಾ). ಒಂದು ಬಗೆಯ ಮರ: ಕಲ್‌ಹೊನ್ನೆ, ಕಿರಿಹೊನ್ನೆ, ಕಲ್‌ಪೊನ್ನೆ, ಹರಳುಹೊನ್ನೆ, ಬೊಬ್ಬಿ, ಇರ್‍ಕೆ (ಮೈಡಿಗಿ. ೧೬-೨೮೬).

[ಹರಳು$_1$ (< ಪರಲ್) + ಹೊನ್ನೆ (< ಪೊನ್ನೆ)]

**ಹರಳೆ$_1$** (ನಾ). ಹಾದರಗಿತ್ತಿ; ಜಾರೆ: ಒರ್ವ ಸತಿ ನಿಂದು ನೋಡುತಿರೆ ಬಿತ್ತರದಿ ಹರಳೆ ಹರಳಿಸಿ ಹರಿದು ಬರಲು (ಪ್ರಭುಪು. ೪-೧೩೬). [ಹರಳ + -ಎ$_2$]

**ಹರಳೆ$_2$** 'ಹರಣೆ' ನೋ.

**ಹರಳೆಣ್ಣೆ** (ನಾ). ಹರಳುಬೀಜದಿಂದ ತೆಗೆದ ಎಣ್ಣೆ; ಔಡಲೆಣ್ಣೆ: ಹರಳೆಂಣೆ ಪ ೧೨ ಭಂಡಿಕಾಜಿರ ಜೀವಿತಕ್ಕೆ ವರಹ ಗ ೧ (ಎಕ. XV, ಬೇಲೂರು. ೭೦-೪೫: 1484); ಹನ್ನೊಂದನೆಯ ದಿನ ಬೆಚ್ಚಗಿರುವ ಹರಳೆಣ್ಣೆಯನ್ನು ಬಾಣಂತಿಯ ಮೈಗೆ ಒತ್ತಿ . . . ಸ್ನಾನಮಾಡಿಸುವುದು ಒಳ್ಳೆಯದು (ಗೃಹವಿ. ೧೦೩); ನಾಲ್ಕು ಹನಿ ಜೇನಿಗೆ ಎರಡುಹನಿ ಹರಳೆಣ್ಣೆಯನ್ನು ಸೇರಿಸಿ ಎರಡು ಮೂರು ಸಲ ನೆಕ್ಕಿಸುವುದು (ಮನೆಮ. ४). [ಹರಳು$_1$ (< ಪರಲ್) + ಎಣ್ಣೆ]

**ಹರಳೊತ್ತು** 'ಪರಲೊತ್ತು' ನೋ.

**ಹರಳೋಲೆ** 'ಪರಲೋಲೆ' ನೋ.

**ಹರಳ್ಚು** (ಕ್ರಿ). ದೃಷ್ಟಿಗೆ ತಡೆಯುಂಟುಮಾಡು: "ಹರಳ್ಚು - ನೇತ್ರನಿರೋಧಕರಣೇ (ದೃಷ್ಟಿಗೆ ಅಡ್ಡಿಮಾಡು)" (ಶಮಧಾ). [ಹರಳ್$_7$ + -ಚು$_1$]

**ಹರಳ್ವಕ್ಕಿ** (ನಾ). ಒಂದು ಬಗೆಯ ಪಕ್ಷಿ: ಹರಳ್ವಕ್ಕಿ ಗೀಜಗ ನೀರೊಳು ಬಿದ್ದೇಳ್ವ ತೆರಳ್ವ ಹಾಲ್ವಕ್ಕಿ ಮಯೂರ . . . ತರುಗಿಡುವಳ್ಳಿಯೊಳೆಸೆಯೆ (ಅಬ್ಬಲೂ. ೩-೨೫).

[ಹರಳ್$_6$ + ಪಕ್ಕಿ]

**ಹರಾಂ** 'ಹರಾಮು' ನೋ.

**ಹರಾಜ್** 'ಹರಾಜು' ನೋ.

**ಹರಾಜು, ಹರಾಜ್** (ನಾ). ಸರಕನ್ನು ಸಾರ್ವಜನಿಕವಾಗಿ ಮಾರಾಟಕ್ಕಿಟ್ಟು ಎಲ್ಲರಿಗಿಂತ ಹೆಚ್ಚಿನ ಬೆಲೆ ನೀಡಿದವರಿಗೆ ಮಾರುವ ಕ್ರಮ; ಲಿಲಾವು: ಹರಾಜಿಗಾಗಿ ಗೊತ್ತುಮಾಡಲ್ಪಟ್ಟ ದಿವಸ ಸ್ವತ್ತನ್ನು . . . ಬಹಿರಂಗವಾದ ಹರಾಜು ಮೂಲಕ ಛಡಸವಾಲುದಾರನಿಗೆ ವಿಕ್ರಯಿಸತಕ್ಕದ್ದು (ಗ್ರಾಮಾಕ. ೩೮); ಅವನ ದೊಡ್ಡ ಮನೆಯು ಹರಾಜಿಗೆ ಬಂತು (ಪಂಚಾಮ್ಯ. ೨೯). **ಹರಾಜ್:** ಪಾವತಿ ಮಾಡತಕ್ಕ ವಿಷಯದಲ್ಲಿಯೂ ಮತ್ತು ಹರಾಜ್ ಮಾಡತಕ್ಕ ವಿಷಯದಲ್ಲಿಯೂ ಗ್ರಾಮಮುನಸಿಫನ ಹುಕುಂ ಮೇರೆಗೆ ನಡೆಯುವುದು (ಗ್ರಾಮಾಕ. ೧೯).

**ಹರಾಜು ಮಾಡು** = **ಲಿಲಾವಿನಿಂದ ಮಾರು:** ನಾಲ್ಕೈದರಷ್ಟು ಮೊತ್ತಕ್ಕೆ ಅವನ್ನು ಹರಾಜು ಮಾಡಿ ಮಹಮ್ಮದನು ಆ ಹಣವನ್ನು ಭಿಕ್ಷುಕನ ಕೈಯಲ್ಲಿಟ್ಟು (ಪ್ರಮಹ. ೧೨೨). **ಹರಾಜುಹಾಕು** = **ಹರಾಜುಮಾಡು:** ಅವನಿಗೆ ಇಷ್ಟಬಂದಂತೆ ಜಮೀನುದಾರಿಯನ್ನು ಹರಾಜುಹಾಕಿ ತೆಗೆದುಕೊಳ್ಳುವುದು ಹೆಚ್ಚಾಗಿದ್ದಿತು (ದೇವೀಚಾ. ೭೧).

[← ಅರ. ಮರಾ. ಹರಾಜ್]

**ಹರಾತ್ಮಜ** (ನಾ). ೧. ಶಿವನ ಮಗ. ೨. ಷಣ್ಮುಖ; ಸ್ಕಂದ: ಆ ಹರಾತ್ಮಜ ಹಸುಳೆತನದ ವ್ಯೂಹದಲಿ ತಾರಕನನಿಕ್ಕನೆ (ಕುವ್ಯಾಅ. ೧೫-೧೯). ೩. ಗಣಪತಿ. [ಸಂ.]

**ಹರಾದ್ರಿ** (ನಾ). ಶಿವನ ವಾಸಸ್ಥಾನವಾದ ಬೆಟ್ಟ; ಕೈಲಾಸಪರ್ವತ: ಕರುಣಿಸು ದೈವಮ ಪಾಲಿಸು ಹರಾದ್ರಿ ರಕ್ಷಿಸೆಲೆ ಧಾತ್ರಿ (ಕಾದಂಪೂ. ೯೨೫); ಹರಾದ್ರಿಯಂ ಹರಂಬೆರಸು ಭುಜಂಗಳಿಂ ನೆಗಪಿ ಶಕ್ರನುಮಂ ಸೆಱೆಗೆಯ್ದು ಜೇಯನಾಗಿರೆ . . . ರಾವಣಂ (ಜಗವಿ. ೧-೭೧).

[ಸಂ.]

**ಹರಾಮ** 'ಹರಾಮು' ನೋ.

**ಹರಾಮಖೋರ** (ನಾ). ದ್ರೋಹಿ; ವಿಶ್ವಾಸಘಾತಕ: ಹರಾಮಖೋರ 'ಕುಂಪಿನಿ' ಜನರು ಸುಲ್ತಾನರನ್ನು ಮೋಸದಿಂದ ಕೊಂದ ಕಥೆ ಮೊದಲಾದುವನ್ನೆಲ್ಲ ರಸವತ್ತಾಗಿ ಬಣ್ಣಿಸಿದ (ಒಡ್ಡಿಉ. ೨೪). [← ಪಾರ.ಹರಾಮ್‌ಖಿರ್; ಹಿಂ. ಮರಾ. ಹರಾಮ್‌ಖೋರ್]

**ಹರಾಮಿ** (ನಾ). ೧. ಉಪಕಾರಗೇಡಿ; ದ್ರೋಹಿ. ೨. ಕೀಳುನಡತೆಯ ಹೆಣ್ಣು; ನೀತಿಗೆಟ್ಟ ಹೆಂಗಸು: ಈ ಘಾತಿಮಾಜೇಗಂ ಹರಾಮಿಯಾಗಿದ್ದಾಳೆ. ಅವಳ ಅಸಹ್ಯವಾದ ಚರಿತ್ರೆಯನ್ನು ಹೇಳಲು ಸಾಧ್ಯವಿಲ್ಲ (ದಾಲತ್. ೧೨೧); ಮಂಗಳೆ . . . ಮೈಸೂರಿಗೆ ಓಡಿಹೋಗಿ ಕಾಯಿಲೆ ಬಿದ್ದಿದ್ದ ನಟರಾಜನನ್ನು 'ಮಡಗಿ'ಕೊಂಡ 'ಹರಾಮಿ' (ಸರ್ವಮಂ. ೩೩೧). [← ಹಿಂ. ಮರಾ. ಹರಾಮೀ]

**ಹರಾಮು, ಹರಾಂ, ಹರಾಮ** (ನಾ). ೧. ಅಧರ್ಮ; ಅನ್ಯಾಯ; ಅನೀತಿ: (೬). ೨. ದುಷ್ಟತನ: (೬). ೩. ನಿಷಿದ್ಧವಾದುದು: (೬). **ಹರಾಂ:** ೧. ಖಾವಂದ್, ಎಲ್ಲಾ ಹರಾಂ ಆಗಿ ಹೋಯಿತು. ಈ ಹುಡುಗರ ಬುದ್ಧಿ ಕೆಟ್ಟುಹೋಯಿತು (ಮಲ್ಲಿ. ೨೮೬). ೪. ದುಷ್ಟವ್ಯಕ್ತಿ; ದುರಾಚಾರಿ: ನಿನ್ನಂಥ ಕಾಮಾಂಧನಾದ ಹರಾಂ ನಂಬಿದರೆ ತಾನೇ ಆ ದೇವರಿಗಾಗುವ ಲಾಭವೇನು? (ದಾಲತ್. ೯೬). **ಹರಾಮ:** ೧. "ಹರಾಮದ ರೊಕ್ಕ" (ಲಂಚದ ಹಣ) ಹರಾಮಕ್ಕೆ ಹೋಯಿತು (ನಾಪೋಲೀ. ೧೧೬). ೫. ದ್ರೋಹಿ: ಉತ್ತಯೆಂಬ ಕೊಡಗ ಕಾರೆಕಾರ ಉಪ್ಪಿಗೆ ಹರಾಮನಾಗಿ ಕೋಟಂಗಡಿ ಅರಸಿನ ಬಳಿಗೆ ಪೋಡಿಹೋಗಿ (ರಾಜೇಂದ್ರ. ४). [← ಅರ. ಹಿಂ. ಮರಾ. ಹರಾಮ್]

**ಹರಾರಿ** (ನಾ). ಶಿವನ ವೈರಿ; ಮನ್ಮಥ; ಕಾಮ: ರಣಮಹಾಮಾರಿಯ ಮುಂದೆ ಬೊಬ್ಬಿಱಿದು ತೋರಿದುಕೋಣನ ತಲೆಗಡಿವಂತೆ ಹರಾರಿ ಖಂಡಿಸಿದ ಖಂಡೆಯದೆ (ಮೋಹತ. ೧೨-೭೭). [ಸಂ.]

**ಹರಾವರಿ** 'ಪರಾವರಿ' ನೋ.

**ಹರಾಶೆ** (ನಾ). ಶಿವನ ದಿಕ್ಕು; ಈಶಾನ್ಯ: ಹರಾಶೆಯೊಳೆರ್ಪ ಕಂಭಮಿರ್ದರಲನಿತರ್ಕೆ ಮತ್ತೆ ಕಿಱಿದಪ್ಪುದು (ಲೋಕೋಪ. ೩-೨೮). [< ಸಂ. ಹರಾಶಾ]

**ಹರಿ$_1$** 'ಪಱಿ$_1$' ನೋ.

**ಹರಿ$_2$** 'ಪರಿ$_2$' ನೋ.

**ಹರಿ$_3$** 'ಪರಿ$_3$' ನೋ.

**ಹರಿ$_4$** (ನಾ). ೧. ಹಸಿರುಬಣ್ಣ. ೨. ಹಳದಿ ಬಣ್ಣ. ೩. ಕಂದುಬಣ್ಣ; ಕಪಿಲವರ್ಣ: "ಪಿಂಗಂ ಕಪಿಳಂ ಬಭ್ರು ಪಿಶಂಗಂ ಹರಿ ಪಿಂಗಳಂ ಕಡಾರಂ ಕಪಿಶಂ" (ವಸ್ತುಕೋ. ೧೧೯-೬೫). ४. ಬಿಳಿದು; ಶುಭ್ರವಾದುದು. ೫. ವಿಷ್ಣು: ಇವನಜ ಇವ ಹರಿ ಇವ ಸುರಪತಿ ಇವ ಧರಣೇಂದ್ರ (ಬಸವ. ೫೩೭). ೬. ಕೃಷ್ಣ: ಅರಿಗನೊಡೆಯಂ ಹರಿ . . . ನರಂಗೆ ಸೆಟಪುಗೆಯ್ದನನಂತಂ (ಪಂಪಭಾ. ४-४४); ಸುಪ್ರೀತನಾದ ನಾಂ ಶ್ರೀಶೈಲಪ್ರಭು ನಿಮಗೆಂದಗ್ರಾಗ್ರದೊಳ್ ಹರಿ ನುಡಿದಂ (ಜಗವಿ. ४-೮೩); ರಾಯನ ನಾರಿ ಬಂದಳು ಕವಿದು ಬಿದ್ದಳು ಹರಿಯ ಚರಣದಲಿ (ಕುವ್ಯಾಅ. ೨-೮). ೭. ಶಿವ; ಈಶ್ವರ. ೮. ಬ್ರಹ್ಮ. ೯. ಯಮ: ಹರಿತನುಜೆಗರ್ಧಾಂಗವಿತ್ತ ಹರಿಯಂ ಪೊತ್ತ ಹರಿಯ ಶೂಲದೊಳಿಟ್ಟ . . . ಕರುಣಿ ಗುರು ಸಂಗಮೇಶ (ಪ್ರಾಥರಾ. ೫-೧). ೧೦. ವಾಯು: "ಪವನಃ . . . ಹರಿಃ, ಮಹಾಬಲಃ- ಈ ೨೦ ಗಾಳಿಯ ಪೆಸರ್" (ಹಲಾಯು. ೧४-೭೭); ಹರಿಯ ಬಾಯ ಹಾಲು ಉರಿಯ ಕೈಯ ಬೆಣ್ಣೆ ಗಿರಿಯ ಮೇಲಣ ಶಿಶು ಹರಿದಾಡುತ್ತಿದೆ (ಅವಚಂ. ೫೫-೨೩೮); ಹರಿಯ ಗತಿಯನು ಹಳಿವ ಮದದಿಕ್ಕರಿಯ ದಿಕ್ಕರಿಗಳೆವ ಸೂರ್ಯನ ತುರಗವನು ಮರುಳಾಡಿ ಬಲು ಮತ್ಸರಿಪ . . . ಮನಕಧಿಕ ವೇಗದಿ ತುರಗ ನೂಕಿದುವು (ಕಾಶಿರಾ. ೩೬-೯). ೧೧. ಅಗ್ನಿ; ಬೆಂಕಿ: 'ಹರಿಸುತ' ಪರಾ. ೧೨. ಇಂದ್ರ; ದೇವೇಂದ್ರ: ಎರಡೆ ಕರದಿಂದವಂ ಕೊಳಲರಿದೆಂದನಿತರ್ಕಮನಿತೆ ಭುಜಮಂ ಹರಿ ವಿಸ್ತರಿಸಿದನೆಣಮಾದಿ ಗುಣೋತ್ಕರಮುಳ್ಳಮರಂಗೆ ಭುಜವಿಗುರ್ವಣೆ ಪಿರಿದೇ (ಶಾಂತಿಪು. ೧೦-४೧); ಅಂದಿನ ಹರಿಗೆ ಕವಚವನಿತ್ತವೊಲು ಮರುಳಾಗಬೇಡ (ಕುವ್ಯಾಉ. ೧೦-೨೯). ೧೩. ಸೂರ್ಯ; ರವಿ: ಹರಿಯಿಲ್ಲದ ಪವನಾಧ್ವಂ ಹರಿಯಿಲ್ಲದ ಲೋಕಪಾಲ ಪರಿಷದ್ವಲಯಂ ಹರಿಯಿಲ್ಲದ ಕಾಂತಾರಂ ಹರಿ ನೀನಿಲ್ಲದ ಮದೀಯ ಗೋಕುಲಮಫಲಂ (ಜಗವಿ. ೩-೯४); ಪುಟ್ಟೆ ಸುರೇಂದ್ರಾಶೆಗೆ ರಾಗಮಂದು ಹರಿ ಪದ್ಮಾನಂದಿ . . . ಆಕ್ರಮಿಸಿದಂ ಭೂಚಕ್ರಮಂ ಪಾದದಿಂ (ಪುಷ್ಪಪು. ೮-೨೩). ೧४. ಚಂದ್ರ: ಹರಿತನುಜೆಗರ್ಧಾಂಗವಿತ್ತ ಹರಿಯಂ ಪೊತ್ತ . . . ಕರುಣಿ ಗುರು ಸಂಗಮೇಶ (ಪ್ರಾಥರಾ. ೫-೧). ೧೫. ಬೆಳಕಿನ ಕಿರಣ. ೧೬. ನೀರು. ೧೭. ಚಿನ್ನ; ಹೊನ್ನು. ೧೮. ಕುದುರೆ: ತೆರೆಗಳ ಮಾಲೆಯನವಯವದೆ ದಾಂಟ ಪರಿದುವು ಹರಿಗಳ್ (ಆದಿಪು. ೧೨-೮೧); ಪಿರಿದು ಜವಮುಳ್ಳದಱಿನೀ ಹರಿ ನಿಮಿಷಕೆ ಪಿರಿದುವರಿಗುಂ (ಕಾದಂಪೂ. ೬೨೫). ೧೯. ಸಿಂಹ: ಪೊಕ್ಕಡಿಗಿಡೆ ಸಾರ್ಚಿದ ಮದರದನಿಗೆ ಹರಿ ನಿಲ್ಲದೆ ನಿಚ್ಚಟಗಲಿಗೆ ಪೆಸರ ಕಲಿ ನಿಂದಪನೇ (ಶಾಂತಿಪು. ೨-೧೦೮);

ಹರಿ ಬಾಳಕನಾದೊಡಂ ಪಡಲ್ವಡಿಸನೆ ಗಂಧಸಿಂಧುರಘಟಾಳಿಯಂ (ಪಂರಾಮಾ. ೪-೪೮). ೨೦. ಗಿಳಿ. ೨೧. ನವಿಲು. ೨೨. ಪಾರಿವಾಳ; ಪಾರಾವತ. ೨೩. ಕೋತಿ; ವಾನರ: ''ಬಲೀಮುಖಃ . . . ಹರಿಃ, ಕಪಿಃ, ಕೀಶಃ, ಶಾಖಾಮೃಗಃ, ವಾನರಃ- ಈ ೧೧ ಕೋಡಗಂ'' (ಪಲಾಯು. ೩೯-೭೮); ಹರಿಯ ಕಟ್ಟೋ ಹರಿಯ ಬಿಡಿಸೋ ಹರಿಯ ಘಸಣೆಯು ಬೇಡ ಮೊರೆಯೋಯೆನಿಸಬೇಕೆಂದ (ಕೌಶಿರಾ. ೧೨-೧೪); ಹರಿಯುಮಮ ಪಳವಿಗೆಯ ಹರಿಯುಮಂ ಪಾರ್ಥನ ಲಹರಿಯುಮಂ ಧಾತುಗಿಡಿಸಿ (ಜೈಮಿಭಾ. ೨೫-೪೬). ೨೪. ಕಪ್ಪೆ; ಮಂಡೂಕ: ಉರಗಾಸ್ಯಾಲಗ್ನಭಗ್ನಪ್ರಚಲಿತಹರಿವೋಲ್ . . . ಇರ್ದನೀ ಮಾಯೆಯ ಮುಖದೆಡೆಯೊಳ್ (ರಕ್ಷಾಶ. ೨೬). ೨೫. ಹಾವು; ಸರ್ಪ: ''ಉರಗಂ ಭೋಗಿ . . . ಹರಿಯಂ ಕುಂಡಲಿ . . . ವಿಷಧರಂ ಸರ್ಪಂ ದ್ವಿಜಿಹ್ವಾಹ್ವಯಂ'' (ವಸ್ತುಕೋ. ೧೯-೭). ೨೬. ಕಡಲು; ಸಮುದ್ರ. ೨೭. ದಿಕ್ಕು; ದಿಶೆ. ೨೮. ಅಂಬು; ಬಾಣ. ೨೯. ಕೋಶ; ಭಂಡಾರ: ಪುರದೊಳಿಹನೇ ರಾಜ ಪುಸಿಯದು ಪುರದೊಳಿಹ ಹರಿ (ಶಂಕರಾ. ೧೧-೨೫). ೩೦. ಬಂಡಿ; ಚಕ್ಕಡಿ. ೩೧. ಕೋಗಿಲೆ. ೩೨. ನಾಭಿ, ಕಿಂಪುರುಷ, ಹರಿ, ಇಳಾವೃತ, ರಮ್ಯಕ, ಹಿರಣ್ಮಯ, ಕುರು, ಭದ್ರಾಶ್ವ ಮತ್ತು ಕೇತುಮಾಲ ಎಂಬ ಒಂಬತ್ತು ಪ್ರಾಚೀನ ಭೌಗೋಲಿಕವಿಭಾಗಗಳಲ್ಲಿ ಒಂದು: 'ಹರಿವರ್ಷ' ಪರಾ. ೩೩. [ಛಂದ] ಲಘು ಅಕ್ಷರದ ಸಂಕೇತ: ''ಲಘುವೆ ಹರಿ ಗುರುವೆ ಹರರ್'' (ಮಂಗರಾ. ೧೦೭-೧೯); ವ್ಯೋಮಂ ಹರಿ ಮುಂದಾ ಮಾರಹರಂ ತಾಮಾಗೆ ಸತೀ ನಾಮಂ ತಿಲಕಂ (ಛಂದೋಂಬು. ೨-೭೦). ೩೪. ಆರು ಬಗೆಯ ಪ್ರಾಸಗಳಲ್ಲಿ ಒಂದು; ಸಿಂಹಪ್ರಾಸ: ಪ್ರತಿಪಾದದ ಮೊದಲೆರಡು ಸ್ವರಗಳ ನಡುವೆ ಒಂದೇ ವಿಧವಾದ ಒಂದು ವ್ಯಂಜನವು ಬರುವುದು: ಹರಿ ಕರಿ ವೃಷಭ ತುರಂಗಂ ಶರಭಮಜಂಗಳುಮೆನಿಪ್ಪ ಷಟ್ಪ್ರಾಸಕ್ಕುಂ ತರುಣಿ ನಿಜದೀರ್ಘಬಿಂದು ವಿನಿರದೊತ್ತುಂ ವ್ಯಂಜನಂ ವಿಸರ್ಗದೆ ಬರ್ಕುಂ (ಛಂದೋಂಬು. ೧-೪೬ ಅಡಿಟಿ ೩). ೩೫. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ: ಏಕತ್ರಿಂಶತ್ ಹರಿಶ್ಚೈವ ದ್ವಾತ್ರಿಂಶತ್ ಮಹಾಹರಿಃ (ವ್ಯವಹಾ. ೮). ೩೬. [ಜ್ಯೋತಿ] ಸಿಂಹರಾಶಿ: ಬಿಸಜಾರಿ ಹರಿಯೊಳಿರೆ ವೀಕ್ಷಿಸೆ ಕನಕಾದಿಗ್ರಹಂ ಮಹೀನಾಥಂ ಜೋಯಿಸಿಗಂ ವಿತ್ತಾಧೀಶಂ ವಸುಧೇಶಂ ನಾವಿದಂ ನರೇಶ್ವರನಕ್ಕುಂ (ಜಾತತಿ. ೨೦-೫); ಹರಿಗೊಂಬತ್ತುಂ(೯) ಕರ್ಕಿಗೆ ನಿರುತಂ ನೂರಿರ್ಪತೊಂದು (೧೨೧)ಮಿದು ಗುಣಕಾರಂ ಪರಿವಿಡಿದಪ್ಪದ ಕೊಳು ಪನ್ನೆರಡುಂ ರಾಶಿಗಳ ಗುಣಮನೊಳ್ಪಿದ ಬಟ್ಟಾ (ಬಟ್ಟಮ. ೧೨-೨೪);''ಇಂದ್ರನೊಳು ವಾಜಿಯೊಳು ಕಾಲನೊಳು ಕಪಿಯೊಳು ಮೃಗೇಂದ್ರನೊಳು ಕೃಷ್ಣನೊಳು ಮರುತನೊಳು ಗಿಣಿಯೊಳು ಫಣೇಂದ್ರನೊಳು ತರಣಿಯೊಳು ಕಿರಣದೊಳು ಮಂಡೂಕನೊಳು ಕಾಂಚನಚ್ಛವಿಯೊಳು ಚಂದ್ರನೊಳು ಶುಭ್ರದೊಳು ಹರಿಶಬ್ದಮಕ್ಕು'' (ಮಂಗರಾ. ೧೪೫-೩೧);''ಕಮಲಾಕ್ಷಂ ಶಕಟಾಹಿ ಸಿಂಹ ಶುಕ ಭೇಕಂ ವಾರಿ ಪಾರಾವತಂ ಯಮ ಕೋಶಾಂಬುಧಿ ದಿಕ್ಕು ವಾನರ ಬಿಡೌಜಾರ್ಕಂ ಸುವರ್ಣಂ ತುರಂಗಮ ಸೋಮಂ ಧವಳಾನಿಲಾಂಶು ಹರಿಶಬ್ದಂ'' (ನಾನಾರ. ೧೧).

**ಹರಿಪೌತ್ರಸತಿಪಿತ** = ಕೃಷ್ಣನ ಮೊಮ್ಮಗನಾದ ಅನಿರುದ್ಧನ ಮಾವ; ಬಾಣಾಸುರ: ಹರಿಪೌತ್ರಸತಿಪಿತಗೆ ಕರಸಹಸ್ರವನಿತ್ತ ಕರುಣಿ ಗುರು ಸಂಗಮೇಶ (ಪ್ರೌಢರಾ. ೫-೧). **ಹರಿಯ ಜಾಮಾತೃ** = ವಿಷ್ಣುವಿನ ಅಳಿಯ; ಗಂಗಾಧರ; ಶಿವ: ಹರಿಯ ಜಾಮಾತೃ ಹರ . . . ಕರುಣಿ ಗುರು ಸಂಗಮೇಶ (ಪ್ರೌಢರಾ. ೫-೧). **ಹರಿಯ ಲಗ್ನ** = ಧನುರ್ಲಗ್ನ: ನವಮನವಾಂಶಕಂ ಹರಿಯ ಲಗ್ನದೊಳಾಗೆ . . . ಯುವತಿಯ ಗರ್ಭದೊಳ್ ಪಲರುಮೊರ್ಮೆಯೆ ಪುಟ್ಟುವರೇಕಕಾಲದೊಳ್ (ಜಾತತಿ. ೩-೧೬). **ಹರಿಯಾತ್ಮಭವ** = ಇಂದ್ರನ ಮಗ; ಅರ್ಜುನ: ಹರಿಯಾತ್ಮಭವಗೊಲಿದು ಶರವಿತ್ತ ವರವಿತ್ತ . . . ಕರುಣಿ ಗುರು ಸಂಗಮೇಶ (ಪ್ರೌಢರಾ. ೫-೧). [ಸಂ.]

**ಹರಿಒಲೆ** 'ಹರಿಯೊಲೆ' ನೋ.

**ಹರಿಕಂಠ** (ನಾ). ನವಿಲು: '' ಚಕ್ಷುಶ್ರವಾಶಂ ಕಲಾಪಿ ಶಿಖಿ ಕೇಕಿ ಪುರುಪಕ್ಷಂ ಮಯೂರಂ ಶಿಖಂಡಿ ಹರಿಕಂಠಂ ಶಿಖಾವಳಂ ನವಿಲೆನಿಕ್ಕುಂ'' (ಮಂಗರಾ. ೫೦-೨). [ಸಂ.]

**ಹರಿಕಣೆ** 'ಪರಿಕಣೆ' ನೋ.

**ಹರಿಕಥಾಶ್ರವಣ** (ನಾ). ಹರಿಕಥೆಯನ್ನು ಕೇಳುವಿಕೆ: ಹರಿಕಥಾಶ್ರವಣ ಮಾಡೋ ಪಾಡೋ ಹರಿಕಥಾಶ್ರವಣ ಮಾಡೋ (ಪುರಂದ. ೪-೧೦ ಪಲ್ಲವಿ). [ಸಂ.]

**ಹರಿಕಥೆ** (ನಾ). ೧. ಶ್ರೋತೃಗಳ ಮುಂದೆ ಸಂಗೀತಸಹಿತವಾಗಿ ಹೇಳುವ, ಸಾಮಾನ್ಯವಾಗಿ ವಿಷ್ಣುಪರವಾದ ಕಥೆ, – ಸಂಕೀರ್ತನೆ; ಕಥಾಕಾಲಕ್ಷೇಪ: ಹರಿಕಥೆ ಕೇಳುವ ಪರಿಜನರು ಈ ಪರಿಯ ಪುರಾಣಕ್ಕೆ ಸರಿದು ಕುಳ್ಳಿರುವರು (ಪುರಂದ. ೪-೧೯೧ ಪಲ್ಲವಿ); ಅವರು ಕೃತಿಕಾರರಾಗಿದ್ದುದಲ್ಲದೆ ಹರಿಕಥೆಗಳನ್ನೂ ಮಾಡುತ್ತಿದ್ದರು (ಸಂಗೀತ. ೬). ೨. (ಆಲಂ) ಅಸಂಬದ್ಧವಾದ ಪ್ರಲಾಪ: ಸಾಕು, ನಿಲ್ಲಿಸು ನಿನ್ನ ಹರಿಕಥೆಯನ್ನು (ರೂಢಿ). [ಸಂ. ಹರಿಕಥಾ]

**ಹರಿಕಥೆದಾಸ** (ನಾ). ಸಾಮಾನ್ಯವಾಗಿ ವಿಷ್ಣುಪರವಾದ ಕಥೆಗಳನ್ನು ಸಂಗೀತಸಹಿತವಾಗಿ ಶ್ರೋತೃಗಳ ಮುಂದೆ ಹೇಳುವವನು; ಸಂಕೀರ್ತನಕಾರ; ಭಾಗವತ: ಭದ್ರಗಿರಿ ಕೇಶವದಾಸರು ಈ ಕಾಲದ ಪ್ರಸಿದ್ಧ ಹರಿಕಥೆದಾಸರು (ರೂಢಿ). [ಹರಿಕಥೆ + ದಾಸ]

**ಹರಿಕರಿಸು** 'ಪರಕಲಿಸು' ನೋ.

**ಹರಿಕಾಂತ** (ನಾ). ವಜ್ರ: ''ವಜ್ರಂ ಹರಿಕಾಂತಂ'' (ಮಂಗರಾ. ೩೧-೬). [ಸಂ.]

**ಹರಿಕಾಂಭೋಜಿ** (ನಾ). [ಸಂಗೀತ] ಒಂದು ರಾಗದ ಹೆಸರು: ಹರಿಕಾಂಭೋಜಿ ಪ್ರಸಿದ್ಧ ರಾಗ. ೨೮ನೇ ಮೇಳಕರ್ತ ರಾಗ . . . ಭಕ್ತಿ ಕರುಣಾರಸಪ್ರಧಾನ ರಾಗ (ಸಂಗೀಚಂ. ೧೪೪). [ಸಂ.ಹರಿಕಾಂಭೋಜೀ]

**ಹರಿಕಾರ** 'ಪರಿಕಾಟಿ' ನೋ.

**ಹರಿಕಾಳೆ** (ನಾ). (?): ಹರಿಕಾಳೆ ಮೊದಲಾದ ಜನಕುಡುಗೊರೆಯಿತ್ತು ವರಬಂಧು ಬಲಸ್ಮರಾದಿಗಳ ಪರಿತೋಷದಿಂದ ಬೀಳ್ಕೊಟ್ಟನು ಗೋಕುಲದೆಡೆಯ ನಾರದ ಗರುತ್ಮರನು (ಮೋಹತ. ೪೨-೭೧). ''ರಣವಾದ್ಯ'' (ಮೋಹತ. ಗದ್ಯಾನುವಾದ). [?]

**ಹರಿಕಾಟಿ** 'ಪರಿಕಾಟಿ' ನೋ.

**ಹರಿಕಿರಣ** (ನಾ). ಸೂರ್ಯನ ಕಿರಣ; ಕಾಂತಿ: ತಾಮ್ರಧ್ವಜಂ ಹರಿನಾದಮಂ ಮಾಡಿ ಹರಿದಾಡುತಿರೆ ಕೂಡೆ ಹರಿಣಾಂಕಕುಲಜಂ ವಿಹರಿಸಿದಂ ಬಾಣದಿಂ ಹರಿಕಿರಣಮಡಗುವಂತೆ (ಜೈಮಿಭಾ. ೨೫-೪೬). [ಸಂ.]

**ಹರಿಕೀರ್ತನೆ** (ನಾ). ವಿಷ್ಣು ಅಥವಾ ಕೃಷ್ಣನನ್ನು ಸ್ತುತಿಸುವ ಹಾಡು, – ಸಂಕೀರ್ತನೆ: ಹರಿಸ್ತುತಿಯ ನೀ ಕೇಳು ಹರಿಕೀರ್ತನೆಯ ಪಾಡು (ಪುರಂದ. ಧಾ. ೨-೫೦-೩). [ಸಂ. ಹರಿಕೀರ್ತನ]

**ಹರಿಕೀಲಾದ್ರಿ** (ನಾ). ಇಂದ್ರಕೀಲವೆಂಬ ಬೆಟ್ಟ: ಹರಿಕೀಲಾದ್ರಿಯೊಳಿರ್ದುರು ಕಿಟಿರೂಪಿನ ಮೂಕದಾನವನ ಪಾಂಗಿನ ಸೂಕರಂ . . . ಒಳಪೊಕ್ಕು ಪಾಯ್ದು ಪೊಯ್ದುದು (ಹಮ್ಮಿರ. ೪-೪೬). [ಸಂ.]

**ಹರಿಕುಣಿ** 'ಪರಿಕಣೆ' ನೋ.

**ಹರಿಕುಶ** (ನಾ). ಒಂದು ಬಗೆಯ ಸಸ್ಯ: '' ಹೊಳೆಚುಳ್ಳಿ, ಮುಳ್ಳುಚುಳ್ಳಿ, ಹರಿಕುಶ, ತುಡಚುಳ್ಳಿ'' (ವೈಜಿಗಿ. ೨-೨೪). [ಸಂ.]

**ಹರಿಕುಳಿ** 'ಪರಿಕಣೆ' ನೋ.

**ಹರಿಕೆ** 'ಪರಕೆ$_1$' ನೋ.

**ಹರಿಕೆಕುಳಿ** (ನಾ). ಒಂದು ಬಗೆಯ ತೆರಿಗೆ: ಯೆಲೆದೋಂಟಕುಳಿಯಯಿನೂಱಿಕ್ಕಂ ಸಿದ್ದಾಯ ಹರಿಕೆಕುಳಿಯ ಸುಂಕಲಾಭಾಯ ಕಟ್ಟಿಲೆ ಬಟ್ಟೆಸುಂಕ ಸರ್ಬ್ಬಾಬಾಧೆ ಪರಿಹಾರ (ಕ಼. I, ೩೦-೪೬; 1222). [ಹರಿಕೆ$_2$ + ಕುಳಿ$_2$]

**ಹರಿಕೇಣಿ** (ನಾ). ಕಾಲುವೆ: ''ಯಾನಂ, ಸಾರಿಣೀ- ಈ ೨ ಹರಿಕೇಣಿ'' (ಪಲಾಯು. ೧೧೩-೬೩). 'ಪರಿಕಣೆ' ಪರಾ. [ ಹರ್$_2$ (< ಪರ್$_2$) + ಕೇಣಿ$_1$]

**ಹರಿಕೇಸರಿ** (ನಾ). ಒಬ್ಬ ರಾಜನ ಹೆಸರು: ಹರಿಕೇಸರಿದೇವರ್ ಬನವಾಸಿ ಪನ್ನಿರ್ಚ್ಛಾಸಿರಕ್ಕಮರಸುಗೆಯ್ಯೆ (ಎಇ. XIII, ೧೭೦-೧೬; 1055); IP ಈ ಶಾಸನದಲ್ಲಿ ಹರಿಕೇಸರಿ, ಹರಿಗ ಹಾಗೂ ಅರಿಕೇಸರಿ, ಅರಿಗ ಎಂಬ ನಾಲ್ಕು ರೂಪಗಳನ್ನೂ ಒಬ್ಬನೇ ರಾಜನಿಗೆ ಪರ್ಯಾಯವಾಗಿ ಬಳಸಲಾಗಿದೆ. 'ಅರಿಕೇಸರಿ' ಪರಾ. [ಸಂ. ಹರಿಕೇಸರಿನ್]

**ಹರಿಗ** (ನಾ). ೧. ಒಬ್ಬ ರಾಜನ ಹೆಸರು: ಭೂವನಿತಾವರಂ ಹರಿಗಂ (ಎಇ. XIII, ೧೭೦-೨೩; 1055); ಶ್ರೀಮಾನ್ ಹರಿಗಮನಸ್ಸರೋವರರಾಜಹಂಸಿ ಸುಭಗವಿಳಾಸಿ

ಹರಿಗನದ್ರ್ಹಾಂಗಿ ಪರಿವಾರಸುರಭಿಯರಪ್ಪ ಶ್ರೀಮಲ್ಲಚ್ಚಲದೇವಿಯರು (ಕ.ಇ. I, ೧೭-೨೧; 1055). ೨. ಅರ್ಜುನ; ☞ ಪಂಪಭಾರತದಲ್ಲಿ ಮಾತ್ರ ಈ ಹೆಸರನ್ನು ಅರ್ಜುನನಿಗೆ ಅನ್ವಯಿಸಲಾಗಿದೆ: ಛಾಯಾಲಕ್ಷ್ಮಮನೊಡ್ಡಿಯುಮಾಯದ ನೀರೊಳಗೆ ತನ್ನನಡಸಿದ ನೆಗಟಂ ಬಾಯಟಿವಿನಮಿಸಿಸಿಯುಮರೆ ಹೋಯಜಬಾಪ್ಪೆಂದು ಹರಿಗನಂ ಗುರು ಪೊಗೞ್ದಂ (ಪಂಪಭಾ. ೨-೬೦); ಸಂಮೋಹನಾಸ್ತ್ರದಿಂದೆಚ್ಚ ಬೀರರಂ ಬೀರದ ಶಾಸನಮನೆ ನಿಱಿಸುವ ಬಗೆಯಿಂದನಿಬರ ಪಟವಿಗೆಯನೆೞೆದುಕೊಂಡಂ ಹರಿಗಂ (ಪಂಪಭಾ. ೮-೧೦೯). 'ಅರಿಗ' ಪರಾ. [< ಹರಿಕೇಸರಿ]

**ಹರಿಗಡಿ₁** 'ಹಱಿಗಡಿ' ನೋ.

**ಹರಿಗಡಿ₂** (ಕ್ರಿ). ೧. (ಪ್ರವಾಹವು) ನಿಂತುಹೋಗು; ನಿಲ್ಲು: ಇತ್ತಲು ಹರಿಗಡಿದುದು ಮಳೆ (ಕೃಷ್ಣಗೋ. ೩-೫೨); ಅವರ ನಗೆ ಥಕ್ಕನೆ ಹರಿಗಡಿಯಿತು (ಎರಸಿ. ೬೪); ಅವಳ ಕಂಬನಿ ಒಂದು ಕ್ಷಣವೂ ಹರಿಗಡಿದಿರಲಿಲ್ಲ (ಪ್ರೇಮಾಶ್ರ. ೮೨). ೨. (ಆಲಂ) ತೆರೆದಿಡು; ಪ್ರಕಟಪಡಿಸು: ಆಕೆ ನಾಳೆ . . . ತನ್ನೊಳಗಿನ ತುಡಿತವನ್ನು ಆತನೆದುರಿಗೆ ಹರಿಗಡಿಯಲು ನಿರ್ಧರಿಸಿದ್ದಾಳೆ (ಬನಸಿ. ೧೭೭). [ಹರಿ₃ (< ಪರಿ₃) + ಕಡಿ₂]

**ಹರಿಗಲು** 'ಪಱಿಗೋಲ್' ನೋ.

**ಹರಿಗತ್ತಲೆ** (ನಾ). ಹಬ್ಬಿರುವ ಕತ್ತಲೆ; ವ್ಯಾಪಿಸಿರುವ ಅಂಧಕಾರ: ಹಳಹಳನಿರ್ದ ತಾರೆಗಳನಾಯ್ದು ಕುಱುಂಕುತುಮಂತೆ ಪೂಣ್ದು ಬೆಂಬಱಿವಿಡಿದೊತ್ತಿಕೊಂಡು ಹರಿಗತ್ತಲೆಯಂ ತವೆ ಪೀರುತಂ . . . ಬಂದುದಯಾದ್ರಿಯನರ್ಕನೇಱಿದಂ (ಕುಸುಮಾ. ೧೪-೨೧); ಬಱಿವಿಡಿದೊತ್ತುಗೊಂಡ ಹರಿಗತ್ತಲೆಯ ತವೆ ನುಂಗುತುಂ . . . ಬಂದುದಯಾದ್ರಿಯನರ್ಕನೇಱಿದಂ (ಶಾಂತೀಶ್ವ. ೧೧-೧೦೯). [ಹರಿ₂ (< ಪರಿ₂) + ಕತ್ತಲೆ]

**ಹರಿಗಾಡು** (ನಾ). ವ್ಯಾಪಿಸಿರುವ ಕಾಡು; ದಟ್ಟವಾದ ಅಡವಿ: ನರಕದಿಕ್ಕಿಗೆ ದ್ವಿಜರ್ನೆರೆದ ಕಳ್ಳರು ಕದ್ದು ಹರಿಸೆ ಹರಿಗಾಡಿನೊಳು ಪಶುನಿಚಯವಂ ಮರಳ್ಚಿ ಪಶುಪತಿಪುರದೊಳಿರಿಸಿ ಸುವಿಧಾನದೊಳು ನೆರಪಲಿಂದಾಂ ಬಯಸಿ ಬರದೆನಿನಿತಂ (ಸಾನಂಚ. ೩-೧೫೫). [ಹರಿ₂ (< ಪರಿ₂) + ಕಾಡು₂]

**ಹರಿಗಾಲುವೆ** 'ಪರಿಗಾಲುವೆ' ನೋ.

**ಹರಿಗುಟ್ಟು** (ಕ್ರಿ). ತುಂಡು ತುಂಡಾಗುವಂತೆ ಹೊಡೆ: ಬೊಬ್ಬಿರಿದು ಚತುರಂಗಬಲವ ಹರಿ[ಪಾಠಾಂ. ಹುಡಿ]ಗುಟ್ಟಿದಂ ಕುರುಸೇನೆಯೊಳಗೆ ಮೂರಕ್ಷೋಣಿಬಲವನವ ನೊರಗಿಸಿದನು (ತುರಂಗ. ೫೭-೩೯). [ಹರಿ₁ (< ಪಱಿ₁) + ಕುಟ್ಟು₁]

**ಹರಿಗೆ₁** (ನಾ). ಬುಗ್ಗೆ; ಚಿಲುಮೆ: ಅರ್ಜುನನೊಂದು ಬಾಣದಿಂದಾಕಾಶಕ್ಕೊಗ್ಗಿರುವ ಹರಿಗೆ [ಪಾಠಾಂ. ಗಂಗೆ] ಯಂ ತರಿಸಿದನು ಸುರಿಸಿದನು ನುಗ್ಗಿಸಿದ ಬಾಯೊಳಗೆ ಸೇದಿದನು ಹೂಳಿದನು ಕಲಿಭೀಷ್ಮನಾ ಡಗೆಯನು (ತುರಂಗ. ೪೭-೩೪) 'ತಲಪರಿಗೆ' ಪರಾ. [ಹರಿ₂ (< ಪರಿ₂) + -ಗೆ]

**ಹರಿಗೆ₂** 'ಪರಿಗೆ' ನೋ.

**ಹರಿಗೆಕಾರ** 'ಪರಿಗೆಕಾಱ' ನೋ.

**ಹರಿಗೆಕಾಱ** 'ಪರಿಗೆಕಾಱ' ನೋ.

**ಹರಿಗೆಡು** 'ಪರಿಗೆಡು' ನೋ.

**ಹರಿಗೇಶ** (ನಾ). ಗರುಡ: ಬಿತ್ತರದಿ ಪಕ್ಕಿಯರೆಯನನು ಶೃಂಗರಿಸಿ ನಲವೆತ್ತು ಘನುರ್ಬಾಣ ಪೇರ್ಶಂಖಚಕ್ರಂಗಳಳವಡಿಸಿಯಾಯತದಿಂ ಜಡಿದು ಹತ್ತಿ ಹರಿಗೇಶನಪರದಿ ಮಂಡಿಸಲು ಕೃಷ್ಣ ಮತ್ತೆ ಬಲರಾಮ ಪ್ರದ್ಯುಮ್ನ . . . ಮಂಡಲೇಶ್ವರರು ಕುಳ್ಳಿರಲು (ನವವೀ. ೨೯-೫೩). [ ? + ಈಶ]

**ಹರಿಗೋಪ** (ನಾ). ಮಿಂಚುಹುಳು; ಇಂದ್ರಗೋಪ: ಭರದೆ ಪೊಯ್ವಾಡಲಸಿಯಸಿಯಿಂ ದೊಗದ ಕಿಡಿಯೆ ಹರಿಗೋಪಮಾ ವೀರರಸವೆ ಪರಿವೊನಲಾಗೆ ವರುಷದಂತಿರ್ಪ ರಣಮಂ ಕಂಡು ವೀರರ ಮನಶ್ಚಾತಕಂ ನಲಿದುದು (ಚಿಬಪು. ೩೬-೩೭). [ಸಂ.]

**ಹರಿಗೋಲು** 'ಪಱುಗೋಲ್' ನೋ.

**ಹರಿಗ್ರಿಹ** (ನಾ). ವಿಷ್ಣುದೇವಾಲಯ: ಹರಿಗ್ರಿಹದಿಂ ಸುರಗೃಹದಿಂದರುಹಗೃಹದೆ ಬೌದ್ಧಾಲಯದಿಂ . . . ಇಂಡಿನಾಡೆ ಸೊಗಯಿಸಿ ತೋರ್ಕುಂ (ಕೊಲ್ಹಾಶಾ. ೧೭-೧೪; 1196). [☞ 'ಇದು ಹರಿಗೃಹ' ಎಂಬುದರ ಅಪಲಿಖಿತ]

**ಹರಿಚಂದನ** (ನಾ). ೧. ಹಳದಿವರ್ಣದ ಶ್ರೀಗಂಧದ ಮರ: "ಹರಿಚಂದನಂ ಮತ್ತೆ ಬರ್ಬರಮಕ್ಕು" (ಮಂಗರಾ. ೯೯-೨೧); ಮೃಗಮದಕಾಂತಿಯಂ . . . ಉದ್ವರ್ತನ ಕಾರಗತಮೆನಿಪ್ಪ ಸೌರಭಮುಮಂ ಹರಿಚಂದನದೊಂದು ನೇರಿತಂ ಮಿಗೆ ಬಿದಿ ಕೊಂಡು ನಿರ್ಮಿಸಿದನೀಕೆಯಂ (ಬಾಥಪು. ೩-೩೦). ೨. ದೇವಲೋಕದ ಐದು ಬಗೆಯ ಮರಗಳಲ್ಲಿ ಒಂದು: "ಮಂದಾರಃ, ಪಾರಿಜಾತಕಃ, ಹರಿಚಂದನಃ, ಕಲ್ಪವೃಕ್ಷಃ, ಸಂತಾನಃ- ಈ ೫ ದೇವರ ಮರಂಗಳ್" (ಹಲಾಯು. ೨೨-೧೩೫); ನಂದನವನಸಂಭವ ಹರಿಚಂದನ ಸಂತಾನ ಪಾರಿಜಾತಕ ವಿಲಸನ್ಮಂದಾರನಮೇರುದ್ರುಮಸಂದೋಹದ ಕುಸುಮಕೋಟಿಯಂ (ಪುಷ್ಪಪು. ೧೧-೪೪); ಹರಿಚಂದನ ಕುಸುಮಂಗಳನಿರದಮರರ್ ಸೂಸೆ (ಹಮ್ಮೀರ. ೨-೧೨). ೩. ಚಂದನವನ್ನು ತೇದು ಮಾಡಿದ ಕಲ್ಕ,– ಗಂಧ: ಚಂದ್ರಾತಪಪಾಂಡುರ ಹರಿಚಂದನಾನುಲಿಪ್ತಗಾತ್ರನುಂ (ಆದಿಪು. ೧೧-೧೦ ವ); ತೊಟ್ಟ ಮೌಕ್ತಿಕಪ್ರಸರ ವಿಭೂಷಾವಳಿ ಹರಿಚಂದನದಣ್ಪು ಪೊದಟ್ದ ಕಾಂತಿಯಂ ಪಸರಿಸೆ (ಸುಕುಮಾ. ೯-೧೧೪). ೪. ಬೆಳ್ದಿಂಗಳು. ೫. ಕುಂಕುಮಕೇಸರಿ. [ಸಂ.]

**ಹರಿಜ** (ನಾ). ೧. ವಿಷ್ಣುವಿನ ಮಗ; ಬ್ರಹ್ಮ: ಹರಿಮಿತ್ರ ಹರಿನೇತ್ರ ಹರಿಜಮಸ್ತಕ ಪಾತ್ರ . . . ಕರುಣಿ ಗುರು ಸಂಗಮೇಶ (ಪ್ರಾಢರಾ. ೫-೧). ೨. ಮನ್ಮಥ; ಕಾಮ: ಹರಿಜನ ರಿಪು ಕೌಶಿಕನ ಸತ್ವಗುಣಂ (ತ್ರಿಷ. ೨೪-೧೭೪). ೩. ಸೂರ್ಯನ ಮಗ ; ಸುಗ್ರೀವ: ಜಾಂಬವ ಹರಿಜ ಹರಿಸುತ ಹರಿಸಖನ ಸುತವೆರಸಿ ಲಂಕೆಯ ಹೊಕ್ಕ ರಾಘವ ನನುಜನೊಡಗೂಡಿ (ಕಾಶಿರಾ. ೪೨-೩೭). [ಸಂ.]

**ಹರಿಜನ** (ನಾ). ಅಸ್ಪೃಶ್ಯ; ಅಂತ್ಯಜ; ☞ ಇದು ಗಾಂಧೀಜಿಯವರು ಅಸ್ಪೃಶ್ಯರಿಗೆ ಕೊಟ್ಟ ಹೆಸರು: ಹುಟ್ಟಿನಲ್ಲಿ ಹರಿಜನನಾಗಿದ್ದ ನಂದನನ್ನು ಸ್ಮಾರ್ತರು ಭಕ್ತಶ್ರೇಷ್ಠನೆಂದು ಗೌರವಿಸಿದರು (ಭಾರದ. ೩೯೦); ಆತನ ಸಹಪಾಠಿಗಳು . . . ಹರಿಜನರ ಕಮ್ಮಾರರ ಮಡಿವಾಳರ ಮಕ್ಕಳು (ಸಸ್ಯಕ. ೯೩). [ಸಂ.]

**ಹರಿಜಾತೆ** (ನಾ). ಬ್ರಹ್ಮನ ಮಗಳು; ಸರಸ್ವತಿ: ವಾಣೀ ಪರಮಕಲ್ಯಾಣಿ . . . ನಿರ್ವಾಹವಂತೆ ಪತಿವ್ರತೆ ನಿರ್ಮಲಚರಿತೆ ಪೂರ್ವದೇವತೆ ಹರಿಜಾತೆ (ವಿದಾಕ್ಯ. ೭೨-೨). [ಸಂ.ಹರಿಜಾತಾ]

**ಹರಿಟೆ, ಹರಟೆ** (ನಾ). (ನೂಲನ್ನು ಸುತ್ತುವ) ರಾಟೆ: ಅಡ್ಡಗಟ್ಟು ಹರಿಟೆ ಹೊಕ್ಕುಳಗೂಟ ನಾಲಿಗೆಗೂಟವನಿರದೊಂದುಳಿಯದೆ ಕಟ್ಟಿದನು (ಅಮುಸಾಂ. ೫-೬); ಕರಪಾತ್ರೆ ಗಜಚರ್ಮ ಪರದಿಯರಿರ್ವರೂ ಉರಗಕಂಕಣ ಶೂಲ ಢಮರು ಹರಿಟೆಯ ಭಾರವಿಲ್ಲನುತ ತ್ರಿಶೂಲವ ಹರನಡ್ಡಹಾಕಿ ದಾಂಟಿದನು (ಅಮುಸಾಂ. ೫-೧೦೩). **ಹರಟೆ**: ಒಬ್ಬ ಕಳ್ಳನು ಚೇಡರಲ್ಲಿ ನೂಲ ಕಳವಂ ಮಾಡಿ ನೂಲ ಹರಟೆಯಂ ಕೊಂಡು ಪೋಗುವಾಗ (ಭೃರಸೂ. I, ೩೭೭). [< ಅಟ್ಟ./ ಪ್ರಾ. ರಹಟ್ಟ, ಅರಹಟ್ಟ. /ಸಂ. ಅರಘಟ್ಟ]

**ಹರಿಣ** (ಗು). ೧. ಬಿಳಿಯ ; ಬಿಳಿಯ ಬಣ್ಣದ. ೨. ಹಳದಿ ಅಥವಾ ಹಸುರು ಛಾಯೆಯ ಬಿಳಿಬಣ್ಣವುಳ್ಳ. (ನಾ). ೩. ಹುಲ್ಲೆ; ಜಿಂಕೆ : ಹರಿಣಧರ ಹರಿಣನಂ ಪೂವಮರದಡಿಯೊಳ್ ಪೊಯ್ದುಪಟ್ಟ ಪುಲಿಗಳವೆನಿಕುಂ ಪರೆದರುಣಸಿತಾಸಿತಮಪ್ಪ ರಾಗದಿಂ ಬೀಡವಟ್ಟ ಬೆಟ್ಟದ ಸಱಿಗಳ್ (ಅಜಪು. ೯-೨೪); ಹರಿಣನಂ ಹಳಿವ ಮಾರುತನನೇಳಿಸುವ ಹರಿಸರಳನಣಕಿಸುವ ಮನದಿಂ ಮುಂದೆ ಲಂಘಿಸುವ ಭರವೆಂತುಟು (ಹಚಕಾ. ೩-೨೧). ೪. ಬಿಳಿಯ ಬಣ್ಣ: "ಗೌರಃ . . . ಹರಿಣಃ, ಪಾಂಡುರಃ, ಪಾಂಡುಃ, ಅವದಾತಃ, ಪಾಂಡರಃ – ಈ ೧೨ ಬಿಳಿದು" (ಹಲಾಯು. ೧೨೧-೪೭). ೫. ಸೂರ್ಯ. ೬. ವಿಷ್ಣು. ೭. ಶಿವ. [ಸಂ.]

**ಹರಿಣಕ್ರೀಡನ** (ನಾ). ಜಿಂಕೆಯಂತೆ ನೆಗೆದು ಆಡುವ ಒಂದು ಬಗೆಯ ಮಕ್ಕಳ ಆಟ: ಹರಿಣಕ್ರೀಡನಮೆಂಬುದನೆರೆವಚ್ಚಾಡಲ್ ವಸುದೇವನಂದನರ್ ಬಗೆದಂದರ್ (ಜಗವಿ. ೪-೫೧). 'ಎರಲೆಥೀಂಕು' ಪರಾ. [ಸಂ.]

**ಹರಿಣಚರ್ಮ** (ನಾ). ಜಿಂಕೆಯ ತೊಗಲು; ಅಜಿನ: ರತುನಪೀಠದಿ ಹರಿಣಚರ್ಮದ ಮೇಲೆ ಕುಳಿತಿರ್ದಾತ ರಾಘವನು (ಕಾಶಿರಾ. ೧೭-೧೮). [ಸಂ.]

**ಹರಿಣತ್ರಾಸ** (ನಾ). [ನಾಟ್ಯ] ಮೂವತ್ತೆರಡು ಬಗೆಯ ದೇಶೀಯಭೌಮ ಚಾರಿಗಳಲ್ಲಿ ಒಂದು; ಕಾಲುಗಳನ್ನು ಕುಂಚಿತಮಾಡಿ ಸ್ವಸ್ತಿಕದಂತಿರಿಸಿ ಅಂಗಾಲನ್ನು ಬಗ್ಗಿಸಿ ಮುಂದಕ್ಕೆ ನೆಗೆದು ನಿಂತುಕೊಳ್ಳುವುದು: ಪದಮೆರಡುಂ

ಕುಂಚಿತಮಂ ಪುದಿದುಂ ಸ್ವಸ್ತಿಕದೆ ನಿಂದು ತಲಮಂ ಸುರ್ಕಿಸಿ ಸುದತಿ ಕೇಳ್ ನೆಗೆದು ಮುಂದಕ್ಕೊದವಿಂದಿಳೆಯಲ್ಲಿ ನಿಲ್ಲೆ ಹರಿಣತ್ರಾಸಂ (ಲಾಸ್ಯರಂ. ೬-೭೩). [ಸಂ.]

**ಹರಿಣತ್ರಾಸಿತ** (ನಾ). = ಹರಿಣತ್ರಾಸ: ರಥಚಕ್ರ, ಪರಾವೃತ್ತತಲ, ನೂಪುರ . . . ಹರಿಣತ್ರಾಸಿತ, ಅರ್ಧಮಂಡಲ . . . ಸಮಸ್ಖಲಿತ – ಈ ಮೂವತ್ತೈದು ದೇಶಿಯ ಸಂಬಂಧದ ಭೌಮಚಾರಿಗಳು (ಲಾಸ್ಯರಂ. ೬-೧೬ ವ). [ಸಂ.]

**ಹರಿಣಧರ** (ನಾ). ೧. ಜಿಂಕೆಯ ಗುರುತನ್ನು ಧರಿಸಿದವನು; ಚಂದ್ರ: ಹರಿಣಧರಂ ಸೊಗಯಿಸಿದಂತಿರೆ ಕುಸುಮಿತ ಚೂತವಿತತಿ ಸೊಗಯಿಸಿತೆನಸುಂ (ಕವಿರಾ. ೩-೩೩); ಹರಿಣಧರನವೊಲೊಳುಮೊಗಂಗಳ . . . ಯುವತಿಯರು . . . ಭೂರಿಘೋಷಣ ಪೂರಿತಾಖಿಳನಾರಿಯರು ಬಂದರು (ಬಸಪು. ೫-೨೪). ೨. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: ಹರಿಣಧರ ದುರಿತಕರ ರುತುಶರಧಿ ಚತುಷಷ್ಠಿ ಯುಗ್ಮ ದಿಕ್ಕರಿಗಳನುಂ ನಿರಿಯೈ ಶಶಿಕರ ಹಿಮದೊಳ್ ಧರೆಯೊಳು ನಕ್ಷತ್ರಮಾಲೆ ಪಸರಿಸಿ ತೋರ್ಗುಂ (ಭಾಸ್ಕರ. ೪೫-೩). [ಸಂ.]

**ಹರಿಣಧರಧರ** (ನಾ). ಚಂದ್ರನನ್ನು ಧರಿಸಿದವನು; ಶಿವ: ಪರಮೇಶ್ವರ ಉಮಾವರ ಹರಿಣಧರಧರ ವರದನಾಗು (ಬಸಪು. ೫೩-೪೬). [ಸಂ.]

**ಹರಿಣಧರಹರಿಣ** (ನಾ). ಚಂದ್ರನಲ್ಲಿರುವ ಜಿಂಕೆ: ಹರಿಣಧರಹರಿಣಂ ಪೂಮರದಡಿಯೊಳ್ ಪೊಯ್ದು ಪಟ್ಟ ಪುಲಿಗಳಿವೆನಿಕುಂ ಪರೆದರುಣಸಿತಾಸಿತಮಪ್ಪ ರಾಗದಿಂ ಬೀಡೆವಟ್ಟ ಬೆಟ್ಟದ ಸಱಿಗಳ್ (ಅಜಿಪು. ೯-೨೪). [ಸಂ.]

**ಹರಿಣಪಕ್ಷ** (ನಾ). ಅಮಾವಾಸ್ಯೆಯಿಂದ ಹುಣ್ಣಿಮೆಯವರೆಗಿನ ಅವಧಿ; ಶುಕ್ಲಪಕ್ಷ: ಬೆಳೆವುತಿರ್ದರು ಹರಿಣಪಕ್ಷದ ನಳಿನರಿಪುವಿನವೊಲ್ ಕುಮಾರರು (ಕುವ್ಯಾಆ. ೩-೧೧). [ಸಂ.]

**ಹರಿಣಪ್ಲುತ** (ನಾ). ೧. [ನಾಟ್ಯ] ಹತ್ತೊಂಬತ್ತು ಬಗೆಯ ದೇಶೀಯ ಆಕಾಶಚಾರಿಗಳಲ್ಲಿ ಒಂದು; ಮುಂದಕ್ಕೆ ನೆಗೆದು ನಿಂತುಕೊಳ್ಳುವುದು: ಮುಂದಕ್ಕೆ ನೆಗೆದು ಪದದಿಂ ನಿಂದಡೆ ಭೂಮಿ[ಯೊ]ಳೆ ಕೇಳ್ ಹರಿಣಪ್ಲುತಂ (ಲಾಸ್ಯರಂ. ೬-೯೨): ಅರುಣಚರಣಾಂಶು ಬಂದುಗೆಯರಲಂ ಬಲಿಗೆದಱ ಕಾಲ್ಗಳೊಳ್ ತೊಡರ್ದ ನರೇಶ್ವರರ ಬಗೆವಲೆದೊಡಂಕಂ ಪರಿಹರಿಪವೊಲಾಂತಳಬಲೆ ಹರಿಣಪ್ಲುತಮಂ (ರಾಜಶೇ. ೧೨-೯೩). ೨. ನೂರೆಂಟು ಬಗೆಯ ಕರಣಗಳಲ್ಲಿ ಒಂದು ; ಹರಿಣಪ್ಲುತ ಚಾರಿಯನ್ನು ಮಾಡುವ ಕಾಲದಲ್ಲಿಯೆ ಒಂದು ಕೈಯಿಂದ ದೋಲಹಸ್ತವನ್ನು ಇನ್ನೊಂದು ಕೈಯಿಂದ ಕಟಕಾಮುಖಹಸ್ತವನ್ನು ಮಾಡುವುದು: ಹರಿಣ ಪ್ಲುತಚಾರಿಯದಂ ಚರಣದೆ ಬಿತ್ತರಿಸುತೊಂದು ಕಯ್ಯುಂ ಡೋಲದಿನಿರೆ ಕಟಕಾಮುಖಮಂ ವಿಸ್ತರಿಸಲ್ ಕರಮೊಂದು ನೋಡೆ ಹರಿಣಪ್ಲುತಮುಂ (ಲಾಸ್ಯರಂ. ೪-೧೩೬). ೩. [ಛಂದ] ಪಾದದಲ್ಲಿ ಹದಿನೇಳು ಅಕ್ಷರಗಳಿರುವ ಅತ್ಯಷ್ಟಿಛಂದಸ್ಸಿನ ಒಂದು ಸಮಪಾದ ವೃತ್ತ: ಹರಿಣಪ್ಲುತಶರಣಜನಸಮುದ್ಧರಂ ವರಪಾವನಭಾಸುರಂ (ಹಾಲಾಸ್ಯ. ೧-೧೪-೨೦). [ಸಂ.]

**ಹರಿಣರಿಪು** (ನಾ). ಜಿಂಕೆಯ ವೈರಿ; ಸಿಂಹ: ಹರಿಣರಿಪುಗೆ ಬಿಕ್ಕಪೋತ ಕಳಭಕುಳಪ್ರಾಣಕೋಳಾಹಳಮಾಸದಿಂಬಂಗಾವೇಡೇವಳಿಗೆಯೆಂಬಂತಕ್ಕುಂ (ಶಾಂತಿಪು. ೩-೬೬ ವ). [ಸಂ.]

**ಹರಿಣರೋಗ** (ನಾ). [ಅಶ್ವಶಾ] ಕುದುರೆಗಳಿಗೆ ಬರುವ ಒಂದು ಮಾರಕರೋಗ: ಬಸಿಱಿತ್ತಿ ಕಟ್ಟೆ ಮೆಯ್ ಕೀಲಿಸಿದಂತಿರೆ ಲೋಳೆ ಸುರಿಯೆ . . . ಬಾಲವಾಲ ಬೀಬಲ ತೆಱದಿಂ ಮಿಡುಕದಿರೆ ಹರಿಣರೋಗಂ ತಡೆಯದೆ ಮಡಿಗುಂ (ಅಶ್ವಶಾ. ೧೩-೪೨). [ಸಂ.]

**ಹರಿಣಾಂಕ** (ನಾ). ಜಿಂಕೆಯ ಗುರುತನ್ನು ಧರಿಸಿದವನು; ಚಂದ್ರ: ಹರಿಣಾಂಕಂ ಪರಮೋಚ್ಚದೊಳಿರೆ . . . ಧರಣೀಶ್ವರನಕ್ಕುಮಾ ವಿಲಗ್ನಪ್ರಭವಂ (ಜಾತತಿ. ೧೨-೧೦); ಹರಿಣಾಂಕಂ ತೆಗೆದೋಡುತ್ತಿರೆ ಪಶ್ಚಿಮಗಿರಿಯ ಮಱಿಗೆ . . . ಪರೆದುವು ಬಿಯದರ್ಕಳಂತಿರರ್ಕಕರಂಗಳ್ (ವೃಷವಿ. ೯-೨೮). [ಸಂ.]

**ಹರಿಣಾಂಕಕುಲಜ** (ನಾ). ಚಂದ್ರವಂಶದಲ್ಲಿ ಹುಟ್ಟಿದವನು; ಅರ್ಜುನ: ಹರಿಣಾಂಕಕುಲಜಂ ವಿಹರಿಸಿದಂ ಬಾಣದಿಂ ಹರಿಕಿರಣಮಡಗುವಂತೆ (ಜೈಮಿಭಾ. ೨೫-೪೬). [ಸಂ.]

**ಹರಿಣಾಂಕಜ** (ನಾ). ೧. ಚಂದ್ರನ ಮಗ. ೨. ಬುಧಗ್ರಹ: ಹರಿಣಾಂಕಂ ಕುಂಭದೊಳಿರೆ ಹರಿಣಾಂಕಜ ಗುರು ಸಿತರ್ ನಿರೀಕ್ಷಿಸೆ ಜನಪಂ ನರಪಸಮಂ ಪಾಣ್ಬಂ ಕ್ರೂರರಭೀಕ್ಷಿಸೆ ತರದೆ ತತ್ಸಮಂ ಫಲಮಕ್ಕುಂ (ಜಾತತಿ. ೨೦-೧೧). [ಸಂ.]

**ಹರಿಣಾಂಕಧರ** (ನಾ). ಚಂದ್ರನನ್ನು ಧರಿಸಿದವನು; ಶಿವ : ಹರಿಯುದಿಸೆ ದಿನದಂತೆ ಹರನಾಲಯಕೆ ಬಂದು ಹರಿಣಾಂಕಧರನ ಪೂಜೆಯನೆಸಗಿ (ಪ್ರಾಭರಾ. ೧೨-೨೬). [ಸಂ.]

**ಹರಿಣಾಂಕಮಂಡಲ** (ನಾ). ಚಂದ್ರನ ಬಿಂಬ; ಚಂದ್ರಮಂಡಲ: ಹರಿಣಾಂಕ ಮಂಡಲವಿಟಿಸಿದುದಳಿ ಪಾಯ್ದ ಬಿಳಿಯ ತಾವರೆಯರಲಂ (ಅಜಿಪು. ೬-೪೪). [ಸಂ.]

**ಹರಿಣಾಕ್ಷಿ** (ನಾ). ಜಿಂಕೆಯ ಕಣ್ಣುಗಳಂತೆ ಚಂಚಲವಾದ ಕಣ್ಣುಗಳುಳ್ಳವಳು: ಕಾತರನೀಟ್ಟುಕೊಳ್ವೆನೆಂದಾ ಹರಿಣಾಕ್ಷಿಯನಿರದೆ ಕಾಳೆಗಕ್ಕೊಡರಿಸಿದಂ (ಪಂರಾಮಾ. ೧೦-೧೨೫) ; ಮೋಹನಲಕ್ಷಣರೇಖೆಗಳೀ ಹರಿಣಾಕ್ಷಿಯ ಮುಖಾಮೃತಾಂಶುಗಿವೆಂದೇನಾ ಹಾರವದಿಂ ಮನ್ಮಥನೂಹಿಸಿ ನಲಿವನೊ ಸವಿಭ್ರಮಭ್ರೂಯುಗಮಂ (ಪುಷ್ಪಪು. ೩-೫೨). [ಸಂ. ಹರಿಣಾಕ್ಷೀ (ಹರಿಣ + ಅಕ್ಷಿ + -)]

**ಹರಿಣಾಜಿನ** (ನಾ). = ಹರಿಣಚರ್ಮ: ಹರಿಣಾಜಿನವಾಸಃಪರಿಕರನಾಗಿ ವಿಚಿತ್ರ ಮೌಂಜಿಮೇಖಳೆಯನವಂ ಧರಿಯಿಸಿ ತೊಡರ್ದಂ ಭವವಾಗುರೆಯೊಳ್ ವಾಗುರೆಯ ಮೃಗದ ವೋಲ್ ಮೃಗಶೃಂಗಂ (ಶಾಂತಿಪು. ೭-೪೪). [ಸಂ.]

**ಹರಿಣಿ** (ನಾ). ೧. ಹಸಿರುಬಣ್ಣ : "ಹರಿಣಿಯೆಂಬುದು ಗಿಳಿಯ ಎಱಂಕೆಯ ವರ್ಣಂ" (ಹಲಾಯು. ೧೨೨-೫೩). ೨. ಹೆಣ್ಣುಜಿಂಕೆ,– ಎರಳೆ : ಮೊಲೆಯೂಡುವ ಹರಿಣಿಯಂ ನೀಡುಂ ಭಾವಿಸಿ ನೋಡಿ . . . ಎನ್ನೊಳಿಂತೆಂದಳ್ (ಪುಷ್ಪಪು. ೩-೭೬ ವ). ೩. ಚಿನ್ನದಿಂದ ರಚಿತವಾದ ಮೂರ್ತಿ; ಸುವರ್ಣಪುತ್ಥಳಿ: "ಹರಿಣೀ, ಹಿರಣ್ಮಯೀ- ಈ ೨ ಹೊನ್ನ ಪ್ರತಿಮೆ" (ಹಲಾಯು. ೨೨-೧೩೧). ೪. ರಾಶಿ; ಸಮೂಹ. ೫. [ಕಾಮಶಾ] ಸ್ತ್ರೀ ವರ್ಗಗಳಲ್ಲಿ ಒಂದು ಮತ್ತು ಆ ವರ್ಗಕ್ಕೆ ಸೇರಿದ ಹೆಣ್ಣು; ☞ 'ಹರಿಣಿ'ಗೆ 'ಚಿತ್ರಿಣಿ'ಯೆಂಬ ಪರ್ಯಾಯನಾಮವೂ ಉಂಟು: ಕಿರಿಗಮನದಸಿಯೊಡಲ ಸುರತದಿಚ್ಛೆಯ ಸೊಬಗು ಪೊರೆದ ಸವಿನುಡಿಯ ಪೂವಿನ ಕಂಪಿನ ಸ್ಮರಜಲದ ಪವಣುಣಿಸಿನಿರದ ಮತ್ಸರದಾಱುಬೆರಳ ನಾಣೆಡೆಯವಳೆ ಹರಿಣಿ ತರುಣಿ (ಜನವ. ೪-೧೫); ರೂಪು ಸಮವಾದ ತಲೆ ಗುಡ್ಡನಾಗಿ ಸಾಂದ್ರವಾದ ಮಂಡೆಯ ಕೂದಲು ಸಣ್ಣ ನಡುವು . . . ಸಸಿನದೇಹ ಅನುರಾಗಮುಂಟು ಈ ಲಕ್ಷಣಂಗಳುಳ್ಳವಳು ಹರಿಣಿಜಾತಿಸ್ತ್ರೀ ಯೆನಿಸಿಕೊಂಬುವಳು (ಕಾಮಶಾ. ೩-೪೬). ೬. [ಛಂದ] ಪ್ರತಿಪಾದದಲ್ಲಿ ಹದಿನೇಳು ಅಕ್ಷರಗಳನ್ನುಳ್ಳ ಅತ್ಯಷ್ಟಿಛಂದಸ್ಸಿನ ಒಂದು ಸಮವೃತ್ತ: ಹರಿಣಿಯೆನಿಪಾ ವೃತ್ತಂ ತೋಱಲ್ ನಸಂಮರಸಂಲಗಂ (ಕೈಪಿಡಿ. ೮೫); "ಚಯಂ ಮೃಗ ಪಾಂಚಾಲಿಕೆ ವೃತ್ತಮಿಂತು ಹರಿಣೀಶಬ್ದಂ" (ನಾನಾರ. ೯೬). [ಸಂ. ಹರಿಣೀ]

**ಹರಿಣೀನೇತ್ರೆ** (ನಾ). ೧. ಹೆಣ್ಣುಜಿಂಕೆಯ ಕಣ್ಣಿನ ಆಕಾರದ ಕಣ್ಣುಗಳುಳ್ಳವಳು. ೨. ಜಿಂಕೆಯನ್ನೇ ಕಣ್ಣಾಗಿ ಉಳ್ಳವಳು; ವನದೇವಿ. ೧ , ೨: ಹರಿಣೀನೇತ್ರೆ ಯನಬ್ಜಷಂಡಮುಖಿಯಂ ಬಿಂಬೋಷ್ಠಿಯಂ . . . ಚಕ್ರೇಶ್ವರನೀ ವನಪ್ರಮದೆಯಂ ಕೈಕೊಳ್ಳದೇಂ ಮಾಣ್ಬನೇ (ಪಂಚತಂ. ೯೮-೫). [ಸಂ. ಹರಿಣೀನೇತ್ರಾ]

**ಹರಿಣೀಪ್ಲುತ** (ನಾ). = ಹರಿಣಿ ೬ : ಕುಲಿಶಧರ ವಾತೋರ್ವೀ ವೈಶ್ವಾನರಾನಿಲರಂತ್ಯ ದೊಳ್ ನೆಲಸೆ ಹರಿಯುಂ ಕಾಮಪ್ರಧ್ವಂಸಿಯುಂ ನಿಲೆ ಯತಿ ಷಟ್ಕದೊಳ್ . . . ಕರ್ಣಾಮೃತಂ ಹರಿಣೀಪ್ಲುತಂ (ಛಂದೋಂಬು. ೨-೧೬೭). [ಸಂ.]

**ಹರಿಣೀಯೂಥ** (ನಾ). ಜಿಂಕೆಗಳ ಹಿಂಡು: ಸುರಿವ ಮಳೆಗಳ್ಕಿ ಗಿರಿಕಂದರದೊಳ್ ಮಡಗಿಟ್ಟು ತಮ್ಮ ಶಾಬಕದಂಬಕ್ಕರೆಗರ್ಚಿ ಹರಿತದೂರ್ವಾಂಕುರಮಂ ಕೊಂಡುಯ್ದುದಂದು ಹರಿಣೀಯೂಥಂ (ಪಂರಾಮಾ. ೭-೧೫೮). [ಸಂ.]

**ಹರಿಣೀಕ್ಷಣೆ** (ನಾ). = ಹರಿಣೀನೇತ್ರೆ ೧: ಒರ್ವನಂ ಬೊಬ್ಬಿಱಿದಾರ್ದು ಕೊಲ್ವ ಕೊಲೆಯಂ ಹರಿಣೀಕ್ಷಣೆ ಕಂಡು ಭೀತಿಯಿಂ ತಂದೆಯನೆಂದಳ್ (ಸುಕುಮಾ. ೭-೬). [ಸಂ. ಹರಿಣೇಕ್ಷಣಾ (ಹರಿಣ + ಈಕ್ಷಣ + -)]

**ಹರಿತ$_{1}$** (ನಾ). (ಆಯುಧ ಮೊದಲಾದುವುಗಳ ತುದಿ ಅಥವಾ ಅಲಗು) ತೀಕ್ಷ್ಣವಾಗಿರುವಿಕೆ; ಹದನಾಗಿರುವಿಕೆ: ಅವನು ಹರಿತವಾದ ಕುಡುಗೋಲಿನಿಂದ ಕಬ್ಬನ್ನು ಕತ್ತರಿಸುತ್ತಿದ್ದಾನೆ (ರೂಢಿ). [ಹರಿ$_{1}$ (< ಪಱಿ$_{1}$) + - ತ$_{2}$]

**ಹರಿತ$_2$** (ನಾ). ೧. ಚಲನೆ; ಸಂಚಾರ : "ಪಂಥನಂ, ಪಂಥನೀಯಂ - ಈ ೨ ಹರಿತಂ" (ಶಾಶಕ್ಕ. ೨೫೮): ಹರಿಯ ಹರಿತಕ್ಕಿಂಬುಗುಡದ ತರುಗುಲ್ಮಗಳ ವರಜನ್ಮವಾಸ . . . ಅರಣ್ಯದೊಳು ಬರುತಿರ್ದ ಹರಿಯಜಸುರಪರುಗಳೊಡೆಯನು (ಭಕ್ತಾಚ. ೧-೧೮). ೨. ಹರಿಯುವಿಕೆ; ಹರಿವು; ಪ್ರವಾಹ : ಹೊಳೆಯ ಹರಿತಕ್ಕೂ ಮಳೆಯ ಸುರಿತಕ್ಕೂ ಇರುವಂತೆ (ಚಿತ್ರಸ್ವ. ೧ ಮುನ್ನುಡಿ). ೩. ರಭಸ; ತೀವ್ರತೆ: ಸಂಗೀತದ ಸಂಚು, ತಾಳಧಾರಿಯ ಕಳವು ವಾದ್ಯಭೇದಕನ ಮುಟ್ಟು ಗಾಣನ ಹರಿತ ಭಾವಜ್ಞನ ಚಿತ್ತ ಇಂತೀ ನಾನಾಗುಣಂಗಳ ಲಕ್ಷ್ಯಾಲಕ್ಷಿತವಂ ತಿಳಿದು (ಸರ್ವವ. ೧೩೮-೬೮೩). [ಹರಿ$_2$ (< ಪರಿ$_2$) + - ತ$_2$]

**ಹರಿತ$_3$** (ಗು). ೧. ಹಸಿರಾದ; ಹಸಿರುಬಣ್ಣದ: ಸಮೀಪದೊಳಿರ್ದ ಹರಿತ ಪಲ್ಲವಭರಾನಮ್ರವಾದೊಂದು ಜಂಬೂವೃಕ್ಷಮನಡರ್ದು (ಕಾದಂಬ. ೭೩೩); ಘನಹಾರೀತಕಹಂಸಿಯೊಳ್ ಹರಿತದೂರ್ವಂ ರಾಜತದ್ರೋಣಿಯೊಳ್ ಘನಸಾರಂ . . . ಏಂ ಮೆಱೆದುವೋ ಮಾಂಗಲ್ಯಸಾಕಲ್ಯಮಂ (ಪಂಪಾರಾಮಾ. ೫-೧೨೫). (ನಾ). ೨. ಹಸಿರು ಬಣ್ಣ; ಪಚ್ಚೆವರ್ಣ : "ಶ್ಯಾಮಂ, ಶ್ಯಾಮಳಂ, ರಾಮಂ, ಪಾಲಾಶಂ, ಹರಿತಂ, ಹರಿತ್- ಈ ೬ ಪ(ಹ)ಸುರ್" (ಹಲಾಯು. ೧೨೧-೪೯); ಶ್ವೇತ ಪೀತ ಕಪೋತ ಹರಿತ ಕೃಷ್ಣ ಮಾಂಜಿಷ್ಠವೆಂಬ ಷಡುವರ್ಣವೆಂದೆನ್ನ . . . ಲಿಂಗೈಕ್ಯವ ನುಡಿಯ (ಅವಚಂ. ೧೨೨-೫೫೪); ಶ್ವೇತಪೀತಹರಿತ ಮಾಂಜಿಷ್ಠ ಕಪೋತ ಮಾಣಿಕ್ಯ ಈ ಆಱುವರ್ಣಂಗಳಲ್ಲಿ ಬೆರೆದುದು ಅಭ್ರಕವೊಂದೇ (ವಚಸಂ. ೧೧೭-೭೩). ೩. ಹಸಿರುನೆಲ: "ಶಾದ್ವಳಂ, ಹರಿತಂ - ಈ ೨ ಹಸುರ್ ನೆಲಂ" (ಹಲಾಯು. ೨೭-೪). ೪. ಹಳದಿಬಣ್ಣ. ೫. ಒಂದು ಬಗೆಯ ಹುಲ್ಲು; ಕರುಕೆ : 'ಹರಿತಾಂಕುರ' ಪರಾ. ೬. ಸಿಂಹ. [ಸಂ.]

**ಹರಿತಕ** (ನಾ). ೧. ಹಸಿರು ತರಕಾರಿಯಾದ ಸೊಪ್ಪು, ಕಾಯಿಪಲ್ಯ ಮುಂತಾದುವು: "ಶಾಕಂ, ಹರಿತಕಂ, ಶಿಗ್ರುಃ - ೩ ಪಲ್ಯ, ತರಕಾರಿ, ಸೀಪಲ್ಯ, ಹುಳಿಪಲ್ಯ, ಸೊಪ್ಪು - ಕಾಯಿ" (ಸಿದ್ಧಾಂತಿ. ೨೮೪). ೨. ಹಸಿರುಹುಲ್ಲು. [ಸಂ.]

**ಹರಿತಗೆಡು** (ಕ್ರಿ). ಓಟ ಕುಗ್ಗು; ನಡೆಗೆಡು: ಹರಿವ ಹರಿತಗಟ್ಟು ಜವಗಟ್ಟು ನಿಂದವು ತುರಗದಳವುಂ (ಅನಂಚ. ೨೩-೪೭). [ಹರಿತ$_2$ + ಕೆಡು$_1$]

**ಹರಿತಗೋತ್ರ** (ನಾ). ಒಂದು ಗೋತ್ರದ ಹೆಸರು; ಹಾರೀತಗೋತ್ರ: ಹರಿತ ಗೋತ್ರೋದ್ಭವನೊಪ್ಪಿರಲೀ ಶಾಸನನ XXX. ವಿರಚಿಸಿದಂ ಗೋಪಾಳರಾಜನಿಳೆಗಿಂತೆಸೆದಂ (ಕೊಲ್ಹಾಶಾ. ೨೦-೪೫; 1265). [IP ಇದು 'ಹಾರೀತಗೋತ್ರ' ಎಂಬುದರ ಅಪಲಿಖಿತ]

**ಹರಿತಚ್ಛ** (ನಾ). ಒಂದು ಬಗೆಯ ಹೂವು (?): ಹರಿತಚ್ಛವನ್ನು ಧರಿಸುವುದರಿಂದ ಉಷ್ಣಕರವಾಗಿ ಕಹಿಯಾಗಿ . . . ಕ್ರಿಮಿರೋಗಗಳನ್ನೂ ವಾತರೋಗವನ್ನೂ ಪರಿಹರಿಸುವುದು (ಸಕವ್ಯ. ೪೫). [?/ ಸಂ. ಹರಿತಚ್ಛದ = ಹಸುರುಎಲೆಗಳನ್ನುಳ್ಳದು]

**ಹರಿತನಯ** (ನಾ). ೧. ವಿಷ್ಣುವಿನ ಮಗ; ಮನ್ಮಥ: ವರವನಿತೆಯರ್ಗೆ ರಿಪುಗಳ್ಗೆ ಕದರ್ತ್ರಿಜನಕ್ಕೆ ತೈಲದಂಡಾಧೀಶಂ ಹರಿತನಯಂ ಹರಿತನಯಂ ಹರಿತನಯಂ ಧರೆಯೊಳೆಂದು ಪೊಗಳದರೊಳರೇ (ಎಕ. V. ಅರಸೀ. ೧೪೧-೩೦; 1158). ೨. ಇಂದ್ರನ ಮಗ; ಅರ್ಜುನ: (ಮೇಲಿನ 'ಎಕ. V' ಪ್ರಯೋಗವನ್ನು ನೋಡಿ) ೩. ಸೂರ್ಯನ ಮಗ; ಕರ್ಣ: (ಮೇಲಿನ 'ಎಕ. V' ಪ್ರಯೋಗವನ್ನು ನೋಡಿ). [ಸಂ.]

**ಹರಿತನಯಾರಿ** (ನಾ). ವಿಷ್ಣುವಿನ ಮಗನಾದ ಮನ್ಮಥನ ಅಥವಾ ಸೂರ್ಯನ ಮಗನಾದ ಯಮನ ಶತ್ರು; ಶಿವ. ೨. ಗಂಗೆಗೆ ಶತ್ರುವಾದವಳು; ಯಮುನೆ. ೧, ೨ : ಹರಿತನಯಾರಿಯೆಂದೆನಿಸಿಯುಂ ಧವಳಾಂಶುಕಧಾರಿ . . . ಅಪ್ರಮೋಹ ಭಾಸುರ ನೆನಿಸಿರ್ದುಮನ್ವಿತನಯಸ್ಥಿತಿಯೊಪ್ಪಿದನದ್ರಿಚಾಪವಂ (ಶಬಶಂ. ೧-೬೯).
[ಸಂ. (ಹರಿತನಯ + ಅರಿ; ಹರಿತನಯಾ + ಅರಿ)]

**ಹರಿತನುಜ** (ನಾ). ವಾಯುಪುತ್ರ; ಹನುಮಂತ : ಉತ್ತಮದ ಲಿಂಗವನು ಧರಿಸಿಯೆ ಹಸ್ತದಲಿ ಹರಿತನುಜ ತರುತಿರಲಿತ್ತ ಹರಿಯಿದಿರಿನಲಿ ಕಂಡನು ಲಿಂಗಕೋಟಿಗಳ (ಕೌಶಿರಾ. ೪೪-೨೨). [ಸಂ.]

**ಹರಿತನುಜೆ** (ನಾ). (ದಕ್ಷ) ಬ್ರಹ್ಮನ ಮಗಳು; ದಾಕ್ಷಾಯಣಿ: ಹರಿತನುಜೆ ಗರ್ಭಾಂಗವಿತ್ತೆ ಹರಿಯಂ ಪೊತ್ತೆ (ಪ್ರಾಥರಾ. ೫-೧). [ಸಂ. ಹರಿತನುಜಾ]

**ಹರಿತಪರಿವೇಷ** (ನಾ). ಹೊಂಬಣ್ಣದ ಪ್ರಭಾವಳಿ,- ಪ್ರಭಾಮಂಡಲ: ತಿಳಿಗೊಳದ ಸುತ್ತಲುಂ ಕಣ್ಗೊಳಿಸಿತು ತಳತಳಿಸುವೆಳಗಱುಂಕೆಯ ಗಱಿತಟ್ಟೆಳವಸಲೆ ಪೂರ್ಣಶಶಿಮಂಡಳಮಂಡನಮಾದ ಹರಿತಪರಿವೇಷದವೊಲ್ (ಮಲ್ಲಿಪು. ೮-೭೯).
[ಸಂ.]

**ಹರಿತಮಣಿ** (ನಾ). ಹಸಿರುರತ್ನ; ಪಚ್ಚೆ; ಮರಕತ: ಈಕೆಯರ ಪಾದಪಾತ ದಿನೇಕೇಂದ್ರಿಯಮಸುಕೆ ತಳರ್ವುದರಿಂದೆ ತಳರ್ದತ್ತಲ್ಲಿ ಕಲ್ಲೆರ್ದೆಯನೆ ಸೊಗಯಿಸಿತಾ ಕಳಿತ ಪದಾಂಶು ಹರಿತಮಣಿಸೋಪಾನಂ (ಚಂದ್ರಪು. ೭-೧೨೪). [ಸಂ.]

**ಹರಿತರ್** 'ಪರಿತರ್' ನೋ.

**ಹರಿತರು** 'ಪರಿತರ್' ನೋ.

**ಹರಿತಾಂಕುರ** (ನಾ). ಹುಲ್ಲುಗರಿಕೆ: ಒಸಗೆಯಂ ನೆವಂ ಮಾಡಿ ಹರಿತಾಂಕುರ ಫಳಪುಷ್ಪಾದಿಗಳನರಮನೆಯೊಳಗಂ ಪೊಱಗಂ ಕೆದಱಿಸಿ ಮಕುಟಬದ್ಧ ಪ್ರಭೃತಿಗಳನೊಸಗೆಗೆ ಬರಿಸಿದೊಡೆ (ಚಾವುಂಪು. ೫೧). [ಸಂ.]

**ಹರಿತಾನ್ನ** (ನಾ). ಹಳದಿಬಣ್ಣದ ಅನ್ನ; ಚಿತ್ರಾನ್ನ : ಅರುಣಾನ್ನ ಹರಿತಾನ್ನ ದಧ್ಯಾನ್ನ ಗೂಡಾನ್ನ ಪರಮಾನ್ನ ಪಾಯಸಂ . . . ಮುಖ್ಯಭೋಜನದ್ರವ್ಯವಾ ತರುಣಿಯರು . . . ತಂದೀಯಲು (ನವಮೋ. ೧೯-೨೯). [ಸಂ.]

**ಹರಿತಾಲ, ಹರಿತಾಳ** (ನಾ). ೧. ಶಂಖಪಾಷಾಣ ಮತ್ತು ಗಂಧಕಗಳ ಸಂಯೋಗದಿಂದಾದ ಒಂದು ಬಗೆಯ ಹಳದಿಯ ಧಾತುವಿಶೇಷ; ಅರಿದಾಳ. ೨. ಹಳದಿಛಾಯೆಯುಳ್ಳ ಹಸುರುಬಣ್ಣದ ಅಥವಾ ಹಳದಿಬಣ್ಣದ ಪಾರಿವಾಳ,- ಕಪೋತ. **ಹರಿತಾಳ** : ೧. ಹರಿತಾಳದೊಳ್ ನಖಾಗ್ರದ ಬರೆದ ನಿಜಾವಸ್ಥೆಯಂ ನಿವೇದಿಸೆ ಬನದಿಂದರಗಿಳಿ ತಳರ್ವುವು ದೇಶಾಂತರಕೆ ಸಂದೇಶಹರರವೋಲ್ ಬಿರಯಿಗಳಾ (ಅಜಿಪು. ೨-೯); ಹರಿತಾಳವನ್ನು ಶುದ್ಧಿಮಾಡಿ ಲೋಳೆಸರ ಬೇರಿನಲ್ಲಿಟ್ಟು ಪುಟಹಾಕಿ ೧ ರೂ ತೂಕದಷ್ಟು ಹಸುವಿನ ತುಪ್ಪದೊಡನೆ ತಿನ್ನಲು ಕುಸುಮ ನಿಲ್ಲುವುದು (ಸಕವ್ಯ. ೪೩೧ ಪರಿಶಿಷ್ಟ). [ಸಂ.]

**ಹರಿತಾಲಕ** (ನಾ). ೧. = ಹರಿತಾಲ ೧: "ಪಿಂಜರಂ . . . ಹರಿತಾಲಕಂ - ೫ ಕರಿದಳದ ಹೆಸರುಗಳು" (ಸಿದ್ಧಾಂತಿ. ೩೦೫). ೨. = ಹರಿತಾಲ ೨. [ಸಂ.]

**ಹರಿತಾಲಿ** (ನಾ). ಕರುಕೆ; ದೂರ್ವೆ: "ದೂರ್ವೆ ಹರಿತಾಲಿ[ವಾತಾಂ. ೪]ಯೆನೆ ಕಱುಕೆಯೆನಿಸಿಕ್ಕು" (ಮಂಗರಾ. ೩೩-೭). [ಸಂ. ಹರಿತಾಲೀ]

**ಹರಿತಾಳ** 'ಹರಿತಾಲ' ನೋ.

**ಹರಿತ್ತು** (ನಾ). ೧. ಹಸಿರು; ಹಸಿರುಬಣ್ಣ: "ಶ್ಯಾಮಂ . . . ಹರಿತಂ, ಹರಿತ್ - ಈ ೬ ಪ(ಹ)ಸುರ್" (ಹಲಾಯು. ೧೨೧-೪೯). ೨. ಹುಲ್ಲು. ೩. ದೆಸೆ; ದಿಕ್ಕು. ೪. ಗಿಡಮರಗಳ ಎಲೆಗಳಲ್ಲಿರುವ ವರ್ಣಧಾತು; ಪತ್ರಹರಿತ್ತು : ಕೆಲವು ಜೀವಿಗಳು . . . ತಮ್ಮಲ್ಲಿರುವ ಹರಿತ್ತು (Chlorophyll) ಎಂಬುದರ ಸಹಾಯದಿಂದ ತಮ್ಮ ಆಹಾರವನ್ನು ತಾವೇ ಸ್ವತಃ ತಯಾರಿಸಿಕೊಳ್ಳುತ್ತವೆ (ಪರಜೀ. ೧). [ಸಂ. ಹರಿತ್]

**ಹರಿತ್ಪ್ರದೇಶ** (ನಾ). ಹಸಿರುಹುಲ್ಲಿರುವ ಸ್ಥಳ: ಹರಿತಾಯಮಾನಮಪ್ಪ ಹರಿತ್ಪ್ರದೇಶಮನೀಶಂ ಮಹಾಪ್ರಾಸಾದದುಪರಿಮತಳದೊಳಿರ್ದು ನೋಡುತಿರ್ಪನ್ನೆಗಂ (ಚಂದ್ರಪು. ೪-೪೯ ವ). [ಸಂ.]

**ಹರಿತ್ವ** (ನಾ). ಕುದುರೆಯಾಗಿರುವಿಕೆ; ಕುದುರೆಯ ಸ್ವರೂಪ: ಧುರಧರೆಯಲ್ಲಿ ಸೋಲ್ತು ತಮವೇಳ್ವುರಗಾಕೃತಿಯಿಂ ವರೂಥಮಂ ಧರಿಯಿಸಿ ಸೇವೆಗೆಯ್ಯಲೊಲವಿಂ ದಿನನಸ್ತನಗೇಂದ್ರಕೆಯ್ದೆ . . . ಆ ಹರಿತ್ವಮಂ ತ್ವರಿತದಿ ಬಿಟ್ಟು ಮುತ್ತಿದುದು ಕತ್ತಲೆ ತಳ್ತು ಸಮಸ್ತಧಾತ್ರಿಯಂ (ತ್ರಿಪುವಿ. ೭-೮೨). [ಸಂ.]

**ಹರಿದಂತ** (ನಾ). ದಿಕ್ಕಿನ ತುದಿ; ದಿಗಂತ: ವನಲಕ್ಷ್ಮಿ ಹರಿದಂತದೊಳ್ ಪಸರಿಸಿದ ಕಹಳಾರವದಿನಿವರ ಬರವಱಿದು ಗಂಧವಹನಂ ನೀಂ ತಳ್ವದಿಲ್ಲಿಗಾರ್ಯನ ಕರೆದು ತಾರೆಂದು ಸಂತಸದೆ ಕಳಿಪಿದಳೊಯೆನೆ ಬಂದುದುದ್ಯಾನದಿಂ ತಂಬೆಲರ್ ಪದ್ಮರಾಜನೆಡೆಗೆ (ಪದ್ಮರಾ. ೮-೨೧); ಹರಿದಂತಂಗಳನೆಯ್ದೆ ಮಂಗಳಮಹಾವಾದ್ಯಸ್ವನಂ (ತ್ರಿಪುವಿ. ೬೧-೪೭).
[ಸಂ.]

**ಹರಿದಂತದಂತಿ** (ನಾ). ದಿಗಂತದ ಆನೆ ; ದಿಗ್ಗಜ: ಹರಿದಂತದಂತಿಗಳ ಗೋಣಿಂದು ಕುಸಿಯದೇನಿರಲಾರ್ಪವೇಯೆಂದು ನೋಟಕರ್ ಮೂಗಿಂಗೆ ಬೆರಳಿಟ್ಟು ಸೋಜಿಗಂಬಡುತಿರೆ ಸಮಸ್ತಬಲಮಂ ನೆರಪಿ (ಪದ್ಮರಾ. ೩-೫೦). [ಸಂ. ಹರಿದಂತದಂತಿನ್]

**ಹರಿದಂಬರ** (ನಾ). ಹಸಿರುಬಟ್ಟೆ; ಹಸಿರುವಸ್ತ್ರ: ಭೂಮಿದೇವಿ ಪೊದೆದತಿಹರಿದಂಬರಮೆಂಬಂತಿರೆ ಪಸುರಾದುರು ಶಾಳಿಕ್ಷೇತ್ರವೆಸೆಗುಂ (ಹಮ್ಮಿ.ರ. ೧-೫೦). [ಸಂ.]

**ಹರಿದರುಶನ** (ನಾ). ವಿಷ್ಣುವಿನ ದರ್ಶನ: ಹರಿದರುಶನಕಾಗಿ ನಾರದರು ಬರಲು ಸಿರಿದೇವಿ ಹೊಜಗಿನ ಬಾಗಿಲಲಿದ್ದಳು (ಪುರಂದ. ೩-೫೦ ಪಲ್ಲವಿ). [< ಸಂ. ಹರಿದರ್ಶನ]

**ಹರಿದಶ್ವ** (ನಾ). ೧. ಸೂರ್ಯ: ಹರಿದಶ್ವಂ ಬಂದಪಂ ವಾಹಳಿಗೆನುತರುಣಂ . . . ಕುಂಕುಮಘನರಸಮಂ ಸಿಂಪಿಸುತ್ತಿರ್ದನೆಂಬಂತಿರಲೆತ್ತಂ ಪೊಣ್ಮಿದತ್ತುದಯಸಮಯದೊಳ್ ಶೋಣಸೂರ್ಯಾಂಶುಜಾಲಂ (ಕಾದಂಪೂ. ೧೧೧); ಹರಿದಶ್ವನ ತುರಗಂಗಳ ತಿರನೆಳಲೊ ಭೂಮಿದೇವಿ ಪೊದೆದತಿಹರಿದಂಬರಮೆಂಬಂತಿರೆ ಪಸುರಾದುರು ಶಾಳಿಕ್ಷೇತ್ರವೆಸೆಗುಂ (ಹಮ್ಮಿ.ರ. ೧-೫೦). ೨. (ಸೂರ್ಯನ) ಹಸುರುಬಣ್ಣದ ಕುದುರೆ: ಕಿರಣಂಗಳ ಕಾವುಗಳೆನೆ ಹರಿದಶ್ವಂಗಳ ಪಸುರ್ತ ಪಸುರೆಲೆಯನೆ ತೋರ್ಪರುಣದಿನಮಣಿ ಬಯಲ್ವಾವರೆಯನೆ ಪೋಲ್ತಿರ್ದನಪರಗಿರಿಪರಶಿರದೊಳ್ (ಕಾವ್ಯಸಾ. ೮೮೦. ಶೂದ್ರಕ). ೩. ಎಕ್ಕದ ಗಿಡ; ಅರ್ಕವೃಕ್ಷ. [ಸಂ.]

**ಹರಿದಳ** (ನಾ). = ಹರಿತಾಲ ೧: ಬರಿಗಜಕ್ಕೆ ಹೊರದೇಶಗಳಿಂದ ಆಮದಾಗುವ ವಸ್ತುಗಳಾವುವೆಂದರೆ . . . ಪರಿಶುದ್ಧವಾದ ಹೊಳಪುಗಾಜು, ಕೆಂಪು ಹರಿದಳ (ಪ್ರವಾ. I, ೯೫). [< ಸಂ. ಹರಿತಾಲ]

**ಹರಿದಾಟ** 'ಪರಿ$_2$' ಪರಾ.

**ಹರಿದಾಡು** 'ಪರಿ$_2$' ಪರಾ.

**ಹರಿದಾರಿ, ಪರಿದಾರಿ, ಹರದಾರಿ** (ನಾ). ದೂರವನ್ನು ಅಳೆಯುವ ಒಂದು ಪ್ರಮಾಣ; ಸುಮಾರು ಮೂರುಮೈಲಿ ಅಳತೆಯ ಪ್ರಮಾಣ: ಹರಿದಾರಿ ಪರಿಯಂತರ ಹೋಗಿ ಜಿನದತ್ತಗುರುವಿನ ಚರಣಾಬ್ಜಕೆರಗಿ (ಜನರಾ. ೬-೧೩೩); ಹಳಿಮನೆಗೆ ಮೇಗರವಳ್ಳಿಯಿಂದ ಸುಮಾರು ಒಂದು ಹರಿದಾರಿ (ಮಲೆಮ ೩೨). Δ **ಪರಿದಾರಿ:** ಪರಿದಾರಿಯಳತೆಯಗಲದ ಸರಿಯೆನೆ ನಾಲ್ದೆಸೆಯೊಳೆಸೆವ ಪಳಿಕಿನ ಮಣಿಗಳ ನೆರೆದುದು ಸೋಪಾನಂಗಳ್ ಬೆರೆದಿರಲಾ ತೀರ್ಥಮಿರ್ದುದುಜ್ ತಿಳಿನೀರಿಂ (ಹಾಲಾಸ್ಯ. ೩-೧೭-೫). **ಹರದಾರಿ:** ಹರ[ಪಾಠಾಂ. ರಿ] ದಾರಿಯಳತೆಯಲಿ ಇದಿರೊಳೊಂದುದ್ಯಾನವನವಿರಲದಱ ಸೊಬಗಂ ನೋಡುತಂ . . . ವಾಲ್ಮೀಕೇಶ್ವರನು ನಿಂದು (ಬಸವು. ೨೭-೩೨); ಹಳ್ಳಿಗಳ ಜನರು ನೀರಿಗಾಗಿ ಎರಡೆರಡು ಹರದಾರಿ ಹೋಗುವದು ಅಪರೂಪವಲ್ಲ (ಕಭಾಗ. ೭).

[?]

**ಹರಿದಾಸ** (ನಾ). ದೀಕ್ಷೆಯನ್ನು ಪಡೆದ ವಿಷ್ಣುಭಕ್ತ; ಮಾಧ್ವಸಂಪ್ರದಾಯದ, ವಿಷ್ಣುಸ್ತುತಿಯ ಕೀರ್ತನೆಗಳನ್ನು ರಚಿಸಿ, ಹಾಡಿ, ಭಕ್ತಿಪ್ರಚಾರ ಮಾಡುವ, ದೀಕ್ಷೆಯನ್ನು ಪಡೆದ ಭಕ್ತ: ಹರಿದಾಸರ ಸಂಗ ದೊರಕಿತು ಎನಗೀಗ ಇನ್ನೇನಿನ್ನೇನು (ಪುರಂದ. ೨-೭೯ ಪಲ್ಲವಿ); ಹರಿದಾಸರಲ್ಲಿ ನರಹರಿತೀರ್ಥ, ಶ್ರೀಪಾದರಾಯ . . . ಹಳವನಕಟ್ಟೆ ಗಿರಿಯಮ್ಮ ಇವರೇ ಮೊದಲಾದವರು ಮುಖ್ಯರಾಗಿದ್ದಾರೆ (ಭಾರದ. ೩೧೧).

[ಸಂ.]

**ಹರಿದಾಸಿ** 'ಹರದೇಶಿ' ನೋ.

**ಹರಿದಾಳಿ, ಹರದಾಳಿ** (ನಾ). ಬಿರುಸಿನ ಮುತ್ತಿಗೆ; ರಭಸದ ಆಕ್ರಮಣ,– ದಾಳಿ: ಸಾಲ ಸಾವಿರ ದೀವಿಗೆಯ ಹರಿದಾಳಿಗಳುಕದೆ ನೃಪರ ಮೋಱೆಗಳೊಳಗಳ ನೆಱೆ ಹೊದ್ದಿ ಕತ್ತಲೆ ನಿಂದುದಲ್ಲಲ್ಲಿ (ಕುವ್ಯಾ.ಕ. ೧-೧೯); ಅರಿಕರ್ಮಗಳ ಸುಡುವವು ಮೋಕ್ಷದುರ್ಗಕೆ ಹರಿದಾಳಿವಿಡುವವು (ಭರತೇ. ೭೫-೫೭). **ಹರದಾಳಿ:** ಹರನ ಗಿರಿಗುಡಿಗಳಲಿ ಸುರೆ ಮಾಂಸ ಮಾಱೀತು ಶರಣರಿಗೆ ಹರಣ ಪಿರಿದಾಗಿ ಜಗದಲ್ಲಿ ಹರದಾಳಿ ನೋಡ (ಸರ್ವಜ್ಞ. ೧೧೫೩). [ಹರಿ$_2$ (< ಪರಿ$_2$) + ದಾಳಿ (< ದಾಟಿ)]

**ಹರಿದಿಗ್ವದನ** (ನಾ). ಪೂರ್ವದಿಕ್ಕಿನ ಮುಖ; ಪೂರ್ವದಿಕ್ಕು: ಹರಿದಿಗ್ವದನಂ ಸಂಧ್ಯಾಸ್ಫುರಿತಾಧರಮಧುರತಾರಕಾವಸನಂ ಭಾಸುರಚಂದ್ರಿಕಾತಿಲಕಮುಡುವರಕಾಂತಿಯುತಂ ಬೆಡಂಗುವೆತ್ತತ್ತಾಗಳ್ (ಅಜಿಪು. ೬-೩೯). [ಸಂ.]

**ಹರಿದಿನ** (ನಾ). ೧. ವಿಷ್ಣುವಿನ ಪ್ರೀತ್ಯರ್ಥವಾಗಿ ಉಪವಾಸವಿದ್ದು ಪೂಜೆ, ಕೀರ್ತನೆ ಹಾಗೂ ಜಾಗರಣೆ ಮಾಡುವ ದಿವಸ,– ಏಕಾದಶಿ ಮತ್ತು ದ್ವಾದಶಿ: ಹರಿದಿನವಿಂದು ಯಜ್ಞಾರಂಭದಿನ ವಡ್ಡಂತಿ ಲೇಸೆಂದು ಬಂದು ನಾನಾಮುಖದ ದಾನಕೆ ತಂದ ವಸ್ತುವ ಬಾಚಿ ಹೊಳ್ಳಿಸಿ ತಿಂದು ಕೊಬ್ಬಿದ ನಿಮಗೆ ಸುಭಟರ ಮಾತದೇಕೆ (ಕುವ್ಯಾವಿ. ೭-೧೩); ಹರಿದಿನದಲಿ ಉಂಡ ನರರಿಗೆ ಘೋರನರಕವು ತಪ್ಪದು (ಪುರಂದ. ೧-೧೩೪ ಪಲ್ಲವಿ). ೨. ಹಾಲಕ್ಕಿ ಒಕ್ಕಲಿಗರು ಆಚರಿಸುವ ಒಂದು ಹಬ್ಬ: ಹಾಲ್ಯಕ್ಕೀ ವೊಕ್ಕಲಿಗರಲ್ಲಿ ಹರಿದಿನ, ದೀವಳಿಗೆ, ಹೋಳೀಹುಣ್ಣಿವೆ, ಇವು ಮೂರು ದೊಡ್ಡಹಬ್ಬಗಳು. ಉಗಾದಿಯಾದ ಬಳಿಕ ಯೆಂಟು ದಿವಸದವರೆಗೆ ಹರಿದಿನದ ಸಮಾರಂಭ ನಡೆಯುತ್ತದೆ (ಕಭಾಗ. ೧೩೭).

[ಸಂ.]

**ಹರಿದೊಗಲು** 'ಪಱಿದೊವಲ್' ನೋ.

**ಹರಿದ್ರ** (ನಾ). ಹಳದಿಬಣ್ಣ; ಅರಿಸಿನ ಬಣ್ಣ: "ಪೀತಂ ಹರಿದ್ರಮೆನೆ ರಜನಿವರ್ಣಂ" (ಮಂಗರಾ. ೧೩೧-೨೨). [ಸಂ. ಹರಿದ್ರಾ]

**ಹರಿದ್ರತ್ನ** (ನಾ). ಹಸಿರುಬಣ್ಣದ ಹರಳು; ಮರಕತಮಣಿ; ಪಚ್ಚೆಮಣಿ: ಭಾಸ್ವದ್ವಿಭ್ರಿತಿಯಂ ಸುತ್ತಿರೆ ಸುರುಚಿರಚಿತ್ರಂ ಹರಿದ್ರತ್ನ ಮಧ್ಯಾಜಿರಮಂ ಮುಕ್ತಾವಲೀ ರಂಗವಲಿ ಬಳಸೆ (ಪಂರಾಮಾ. ೫-೧೧೨); ಮಿಸುಪ ಹರಿದ್ರತ್ನಮೊಂದಿರ್ದ ಮುಂಗೈಸರಂ (ರಾಜಶೇ. ೪-೭೦). [ಸಂ.]

**ಹರಿದ್ರವನ** (ನಾ). ಅರಿಸಿನದ ಗಿಡಗಳ ತೋಪು: ವನಲಕ್ಷ್ಮಿಯ ನೇತ್ರಾಂಶುಕವೆನೆ ನೇತ್ರಕ್ಕೆಸೆದು ಮಿಸುಗಿ ಪಸುರ್ವಡೆದುವು ನಂದನದ ಕೆಲಂಬಿಡಿದಾರ್ದ್ರಕವನ ಜೀರಕವನ ಹರಿದ್ರವನ ಸಂತತಿಗಳ್ (ಪುಷ್ಪಪು. ೨-೪೭). [< ಸಂ. ಹರಿದ್ರಾವನ]

**ಹರಿದ್ರಾಂಗ** (ನಾ). ಅರಿಸಿನವನ್ನು ಲೇಪಿಸಿದ ಮೈ: ಚಂದ್ರಹಾಸಂ ಕಂಡನಿದಿರೆ ಕುಂಕುಮಸುರಂಜಿತಹರಿದ್ರಾಂಗದಿಂ ಕಂಗೊಳಿಪ ನೂತನವಧೂವರರನು (ಜೈಮಿಭಾ. ೨೯-೪೨); ಕುಂಕುಮಸುರಂಜಿತಹರಿದ್ರಾಂಗದಿಂ ಮೆರೆವ ನೂತನ ವಧೂವರರು ಬಂದರಿದಿರಾಗಿ (ಚಂದ್ರಸ. ೬೯-೧೭). [ಸಂ.]

**ಹರಿದ್ರಾಕ್ಷಿ** (ನಾ). ಒಂದು ಬಗೆಯ ಸಸ್ಯ: "ಕೃಷ್ಣಫಲಾ - ಬಾವುಜಿಗೆ, ಹರಿದ್ರಾಕ್ಷಿ, ಕರಿಯ ನಾಯಿತೊಳಸಿ, ತೊಳಸಿ" (ಓಷಧಿ. ೩೯). [ಸಂ. ಹರಿದ್ರಾಕ್ಷಾ]

**ಹರಿದ್ರುಮ** (ನಾ). ದೇವದಾರುವೃಕ್ಷ: "ಪೀತದಾರುಃ- ಹರಿದ್ರುಮ (ದೇವದಾರು)" (ಓಷಧಿ. ೯೯). [ಸಂ.]

**ಹರಿದ್ರೆ** (ನಾ). ೧. ಅರಿಸಿನ: "ಅರಿಸಿನಂ ಸಿತಂ ಹರಿದ್ರೆ ರಜನಿಯೆನಿಕ್ಕು" (ಮಂಗರಾ. ೩೯-೨೮); ವಾಜಿಗೆ ಪೂಸುಗೆ ಕುಂಕುಮ ಹರಿದ್ರೆ ಗಂಧಾಧಿಗಳಂ (ಅಶ್ವಶಾ. ೮-೧೪). ೨. ಅಳಲೆ; ಅಣಿಲೆ: "ಜೀವಕಿ ಹರೀತಕಿ ಹರಿದ್ರೆ ಶಿವೆಯೆನಲಣಿಲೆ" (ಮಂಗರಾ. ೩೭-೨೦). [ಸಂ. ಹರಿದ್ರಾ]

**ಹರಿದ್ವರ್ಣ** (ನಾ). ಹಸಿರುಬಣ್ಣ: ಸುಂದರವಾದ ಹರಿದ್ವರ್ಣದ ನೇತ್ರಗಳು ತುಸು ದೂರ ಸರಿದಂತಿದ್ದುವು (ಪುನರು. ೫೨೪). [ಸಂ.]

**ಹರಿದ್ವಸು** (ನಾ). ಹಸಿರುರತ್ನ; ಮರಕತಮಣಿ; ಪಚ್ಚೆ: ಆ ವೇದೀಸ್ಥಳದೊಳ್ ಹರಿದ್ವಸುವ ಪಾತ್ರಂಗಳ್ ಲಸದ್ದೂರ್ವೆಯಿಂ ತೀವಿರ್ದುಂ ನವಚಂದ್ರಕಾಂತಚಷಕಂಗಳ್ ಚಂದನಕ್ಷೋದದಿಂ ತೀವಿರ್ದುಂ . . . ಬೞಿದಿರ್ದವೋಲೆಸೆದುವಾದಂ ವರ್ಣಸಾಮಾನ್ಯದಿಂ (ಚಂದ್ರಪ್ರ. ೬-೫೪). [ಸಂ.]

**ಹರಿದ್ವಾರ** (ನಾ). ಗಂಗಾನದಿ ಬೆಟ್ಟಗಳಿಂದಿಳಿದು ಬಯಲುಪ್ರದೇಶಕ್ಕೆ ಬರುವ ಸ್ಥಳ ಮತ್ತು ಆ ಸ್ಥಳದಲ್ಲಿರುವ ಪುಣ್ಯತೀರ್ಥ: ತನುವೆಂಬುದೊಂದು ಹುತ್ತಕ್ಕೆ ಒಂಬತ್ತು ಬಾಗಿಲು ತಾಮಸವೆಂಬ ಸರ್ಪಂಗೆ ತಲೆ ಹದಿನಾಲ್ಕು ಒಡಲಾಱು ಬಾಲವ ಬ್ರಹ್ಮಲೋಕಕ್ಕೆ ಇಟ್ಟು ಶಿರವ ಹರಿದ್ವಾರದಲ್ಲಿರಿಸಿ ಕರಣೇಂದ್ರಿಯಂಗಳೆಂಬ ಕಾಳಕೂಟ ವಿಷವನೆ ಉಗುಳುತ್ತಿದೆ ನೋಡಾ (ಸಿದ್ಧೇವ. ೧೨೨). [ಸಂ.]

**ಹರಿದ್ವ್ಯೂಹ** (ನಾ). ದಿಕ್ಕುಗಳ ಸಮೂಹ; ಎಲ್ಲಾ ದಿಕ್ಕುಗಳು: ಪೂರ್ಣದುಗ್ಧಾರ್ಣವ ದೊರೆಗೆಣೆವಂದತ್ತು . . . ಉದ್ದಾಮಸೌಧದ್ಯುತಿಭರಿತ ಹರಿದ್ವ್ಯೂಹಮಾಸ್ಥಾನಗೇಹಂ (ಚಂದ್ರಪ್ರ. ೫-೩). [ಸಂ.]

**ಹರಿಧಾಮ** (ನಾ). ವೈಕುಂಠ: ಹರಿಧಾಮಕ್ಕಾಳ್ವಂದಾರಿರದೆಯ್ದಿದರ್ (ದಿವ್ಯಚ. ೧೧-೨೭). [ಸಂ.]

**ಹರಿನಂದನ** (ನಾ). ೧. ವಾಯುವಿನ ಮಗ; ಭೀಮ: ಅಂಜಿದರಂ ನಿಜಬಾಹು ವಜ್ರಪಂಜರದೊಳಗಿಟ್ಟು ಕಾವ ಹರಿನನ್ದನನಾಶ್ರಿತರಾದ ಶಿಷ್ಟರಂ ಪೊರೆವ ಪೊಗರ್ತೆವೆತ್ತ

ಬಲಿ ಭಾವಿಪೊಡೀತನೆ (ಸೌಇಇ. XX. ೭೪-೧೫; 1112). ೨. ಹನುಮಂತ; ಆಂಜನೇಯ: ನೊಂದ ಹುಲಿಯಂತಸುರನಾ ಹರಿನಂದನನ ಹೊಗಳಿದನು . . . ಕೋಪದಿ ತಿವಿದನನಿಲಜನ (ಕೌಶಿರಾ. ೨೨-೨೪). ೩. ಇಂದ್ರನ ಮಗ; ಅರ್ಜುನ: ಹರಿನಂದನನ ಬಿಡದೆಸುತ ಬಂದನು ಭೀಷ್ಮ ಮುಳಿಸಿನಲಿ (ಕುಮ್ಮಾಭೀ. ೭-೨೧); ಹರಿನಂದನನ ದಿವ್ಯಹರಿಮಯವರೂಥಮಂ ಹರಿವೇಗದಿಂದೆಸಪ ಹರಿಚತುಷ್ಟಯಮುಮಂ . . . ಧಾತುಗಿಡಿಸಿ (ಜೈಮಿಭಾ. ೨೫-೪೭). ೪. ಕಾಮ; ಮನ್ಮಥ. ೩, ೪ : ಹರಿನಂದನಭಂಜನ ನಹಿಮರುಚಿಸುತಾರಾತಿ ವಿಜಯನಾತ್ತಸುಭದ್ರಂ ವರಭೀಮಧರ್ಮಯುತನಾಗಿರುತಂ ನರನಲ್ಲು ಬಸವನೆನಿಸಿದನಲ್ತೇ (ವೃಷವಿ. ೫-೩೯). [ಸಂ.]

**ಹರಿನಾದ** (ನಾ). ೧. ಸಿಂಹದ ಗರ್ಜನೆ. ೨. ಉತ್ಸಾಹ ಹಾಗೂ ಶೌರ್ಯ ಸೂಚಕವಾದ ಧ್ವನಿ; ಸಿಂಹನಾದ: ತಾಮ್ರಧ್ವಜಂ ಹರಿನಾದಮಂ ಮಾಡಿ ಹರಿದಾಡುತಿರೆ (ಜೈಮಿಭಾ. ೨೫-೪೭); ಪರಬಲದೊಳರಿಗಳ ಹರಿನಾದಂ ಪಿರಿದಾದುದು (ಅದ್ಭುತ. ೫೧-೧೧). [ಸಂ.]

**ಹರಿನಾಮ** (ನಾ). ವಿಷ್ಣು ಅಥವಾ ಕೃಷ್ಣನ (ಬೇರೆ ಬೇರೆ) ಹೆಸರು,– ನಾಮ: ಸವಣರ ಕಂಡರೆ ಬತ್ತಲೆಯಪ್ಪಿರಯ್ಯಾ ಹಾರುವರ ಕಂಡರೆ ಹರಿನಾಮವೆಂಬಿರಯ್ಯಾ (ಬಸವ. ೧೦೩); ಕಲಿಯುಗದೊಳು ಹರಿನಾಮವ ನೆನೆದರೆ ಕುಲಕೋಟಿಗಳುದ್ಧರಿಸುವುವು (ಪುರಂದ. ೪-೭೧. ಪಲ್ಲವಿ). [ಸಂ. ಹರಿನಾಮನ್]

**ಹರಿನಾಳಿ** (ನಾ). ನೀರು ಮೊದಲಾದುವು ಹರಿದು ಹೋಗಲು ಮಾಡಿದ ದಾರಿ; ಮೋರಿ; ಚರಂಡಿ: "ಪ್ರಣಾಳೀ, ಜಳಪದ್ಧತಿಃ – ಈ ೨ ಹರಿನಾಳಿ" (ಹಲಾಯು. ೧೧೩-೬೩). [ಹರ್$_2$ (< ಪರ್$_2$) + ನಾಳ್$_1$ (= ನಾಲಿ)]

**ಹರಿನಾಳಿಗೆ** 'ಪರಿನಾಳಿಗೆ' ನೋ.

**ಹರಿನೀರು** 'ಪರಿನೀರ್' ನೋ.

**ಹರಿನೀಲ, ಹರಿನೀಳ** (ನಾ). ಕಪ್ಪುನೀಲವರ್ಣದ ರತ್ನ; ಇಂದ್ರನೀಲ: ಆ ನಿಖಿಲರಾಜಕಿರೀಟಕೀಲಿತಹರಿನೀಲಮಣಿ ಮದಾಳಿಮಾಲಾಪರಿಚುಂಬಿತ ಚರಣಾರವಿಂದಂ (ಪಂರಾಮಾ. ೩-೧೭ ವ); ದಳಿತಾಬ್ಜದಿಂದಮೊಂದೊಂದಳಿಗಳ್ ನೆಗೆನೆಗೆದು ಮುತ್ತಮೆಱಗುತ್ತಿರೆ ತನ್ನಳಿನಿ ಹರಿನೀಲದಿಂ ಕಂದಳದೊಳ್ಪೆಱಕಲ್ಲನಾಡುವಂತೆ ಪೊಲೆಸೆಗುಂ (ರಾಜಶೇ. ೨-೭೧). **ಹರಿನೀಳ** : ಬಿದಿ ಹರಿನೀಳದೊಳ್ಕಡೆದಜಾಂಡಮನಂಜನ ದೊಳ್ಪೊರಳ್ಚಿದಂತೊದವಿರೆ ಮರ್ಬು (ಮಲ್ಲಿಪು. ೭-೨೨) ; ಯಾಮಿನಿಯಂತೆ ಚಂದ್ರ ರುಚಿರಾಜಿತಂ . . . ವಾಯುಪಥದಂತದು ಹರಿನೀಳಭಾಸುರಂ (ಪುಷ್ಪಪು. ೧೩-೮೩). [ಸಂ.]

**ಹರಿನೀಲಚ್ಛವಿ, ಹರಿನೀಳಚ್ಛವಿ** (ನಾ). ಇಂದ್ರನೀಲದ ಕಾಂತಿ: ಹರಿನೀಲಚ್ಛವಿ ಪುಂಡರೀಕನಯನಂ ವಿಸ್ತೀರ್ಣವಕ್ಷಸ್ಥಲಂ . . . ಗಂಡರೊಳ್ ನೀಱಂ (ಪಂರಾಮಾ. ೮-೧೨); ಹರಿನೀಲಚ್ಛವಿ ರೋಚನಾರುಚಿರನೇತ್ರಂ ವೃತ್ತಗಾತ್ರಂ . . . ಕ್ರೋಧೋದ್ಧುರಂ ಸಿಂಧುರಂ (ಚಂದ್ರಪು. ೯-೧೦೦). **ಹರಿನೀಳಚ್ಛವಿ**: ಹರಿನೀಳಚ್ಛವಿಯೆಂಬ ಚೆಲ್ವ ತೊವಲಂ ಕಲ್ಲೋಲಹಸ್ತಾಗ್ರದೊಳ್ ಧರಿಸಿರ್ದುಂ . . . ದುರ್ಧರನಿರ್ಘೋಷಣದಿಂದೆ ಪುಯ್ಯಲಿಡು ವಂತಿರ್ದತ್ತು ದುಗ್ಧಾರ್ಣವಂ (ಬಾಧಪು. ೮-೭೭). [ಸಂ.]

**ಹರಿನೀಲದ್ಯುತಿ** (ನಾ). = ಹರಿನೀಲಚ್ಛವಿ: ಹರಿನೀಲದ್ಯುತಿಜಾಲದಿಂ ರವಿಗೆ ಶೀತದ್ಯೋತಿಗುದ್ಭೂತಭೀಕರರಾಹುವ್ರಜಶಂಕೆಯಂ ಮರಕತಪ್ರದ್ಯೋತಜಾತ ಪ್ರಭಾಸುರದಿಂದಾ ಹಯಸಂಕುಲಕ್ಕೆ ಹರಿಣಂಗುತ್ಕೀರ್ಣದೂರ್ವಾಂಕುರೋತ್ಕರವಿಭ್ರಾಂತಿ ಯನುಂಟುಮಾಡಿ ಕರುಮಾಡಂ ನಾಡೆ ಕಣ್ಗೊಪ್ಪುಗುಂ (ಕುಸುಮಾ. ೨-೧೨೭). [ಸಂ.]

**ಹರಿನೀಲಮಣಿ** (ನಾ). = ಹರಿನೀಲ : ತೋರಮುತ್ತಿನ ಹಾರಮಂ ತೊಟ್ಟು ಚಂದ್ರಮುಖಿ ಕಾರ ಕತ್ತಲೆಯೊಳಡಿಯಿಡಲಂಜಿ ಪಣೆಗೆ ಕಸ್ತೂರಿಯಂ ಕಣ್ಗೆ ಕಾಡಿಗೆಯಂ ಕೊರಲ್ಗೆ ಹರಿನೀಲಮಣಿಭೂಷಣವನು ಸೇರಿಸಲ್ಕದು ನೈಜಮಾಗೆ . . . ಐದಿದಳ್ ಸಂಕೇತಭವನ ದೊಳ್ಕಾದಿರ್ದ ಕಾಂತನೆಡೆಗೆ (ಜೈಮಿಭಾ. ೨೬-೯). [ಸಂ.]

**ಹರಿನೀಲರತ್ನ** (ನಾ). = ಹರಿನೀಲ : ಹರಿನೀಲ [ಪಾಠಾಂ. ಳ] ರತ್ನಮಂ ಕಂಡರಿಸಿದ ಕಣ್ಬೆಱವಿಗೆಯ್ದೆ ಜೀವಂಬೊಯ್ದಂತಿರೆ ತೋರ್ಪ ಗಂಡಗಾಡಿಗೆ ಪುರುಷೋತ್ತಮನೆಂದು ಕೊಂಡುಕೊನೆದುದು ಲೋಕಂ (ಪಂರಾಮಾ. ೩-೧೫೭). [ಸಂ.]

**ಹರಿನೀಲವರ್ಣ** (ನಾ). ೧. ಇಂದ್ರನೀಲದ ಬಣ್ಣ; ಕಪ್ಪುನೀಲಿ. ೨. ಇಂದ್ರನೀಲದಂತೆ ಮೈಬಣ್ಣವುಳ್ಳವನು: ಹರಿನೀಲವರ್ಣನೀ ಸುಂದರತನು ನೀಂ ರೋಚನಾಭೆಯೊಳ್ ನೆರೆಯಲೊಡಂ ಪರಭಾಗಮಾಗಿ ನಿಮ್ಮಿರ್ವರಿರವು ಕಾರ್ಮುಗಿಲ ಮಿಂಚಿನಿರವಿನ ತೆಱದಿಂ (ಶಾಂತಿಪು. ೫-೧೪೩). [ಸಂ.]

**ಹರಿನೀಲೋಪಲ, ಹರಿನೀಳೋಪಳ** (ನಾ). = ಹರಿನೀಲ: ಹರಿನೀಲೋಪಲ [ಪಾಠಾಂ. ನೀಲೋಪಳ] ವಿರಚಿತಮರಳಿಲೆ ಬಾಲಕನ ನಿಟಲದೊಳ್ ನಯನಮನೋಹರ ಮಾದುದು (ಪಂರಾಮಾ. ೩-೧೨೨); ಹರಿನೀಲೋಪಲಪಟ್ಟಿಕಾಘಟಿತಸೋಪಾನಂಗಳೊಳ್ ತೀರಮಂದರಕಲ್ಲೋಲವಿಲೋಲಮಾಲಿಕೆಗಳೊಳ್ ಕಾಂತಾಪ್ರತಿಚ್ಛಾಯೆ ತಳ್ತಿರೆ . . . ಕಣ್ಗೆಂಬಾಯ್ತು ಪದ್ಮಾಕರಂ (ಅನಂಪು. ೭-೩೨). **ಹರಿನೀಳೋಪಳ** : ಹರಿನೀಳೋಪಳಮುಂ ಪಯಗರಡಿಯುಮಿರೆ ನೀಳಯುಗಳಮೆಂದೆಳಸೆ ನಭಶ್ಚರಯುಗಳಮದಕೆ ನಗೆಯೊಳ್ ಬಿರಿವಂತಿರೆ ಬಿರಿವುವಲ್ಲಿ ಪೊಸಮಲ್ಲಿಗೆಗಳ್ (ಶಾಂತಿಪು. ೨-೯೭). [ಸಂ.]

**ಹರಿನೀಳ** 'ಹರಿನೀಲ' ನೋ.

**ಹರಿನೀಳಕುಟ್ಟಿಮ** (ನಾ). ಇಂದ್ರನೀಲದಿಂದ ರಚಿಸಿದ ನೆಲಗಟ್ಟು: ಚಂದನರಸಬಿಂದುಗಳಿಂ ಸೌಂದರಹರಿನೀಳಕುಟ್ಟಿಮಾಂಗಣದೊಳ್ ಜಾಣಿಂದಂ ಚೆಳೆಯಂಗೊಟ್ಟುದದಂದಾಗಸದಲ್ಲಿ ಪೊಳೆವ ತಾರಗೆಗಳವೋಲ್ (ಬಾಧಪು. ೧೧-೪೧). [ಸಂ. ಹರಿನೀಲಕುಟ್ಟಿಮ]

**ಹರಿನೀಳಚ್ಛವಿ** 'ಹರಿನೀಲಚ್ಛವಿ' ನೋ.

**ಹರಿನೀಳತಳ** (ನಾ). ಆಕಾಶ : ಅಮರ್ದುಣಿಸಗ್ಗದಚ್ಚರಸಿಯರ್ ವಧುವರ್ ನಿಳಯಂ ಪರಾರ್ಧ್ಯರತ್ನಮಯವಿಮಾನಮಾಳ್ಗಳಮರರ್ ಹರಿನೀಳತಳಂ ಧರಾತಳಂ . . . ಎನೆ ಬಣ್ಣಿಪಂಗೆ ಸುಖಸಂಪದಮೇಂ ಗಳ ಮೊಗ್ಗೆ ಸಗ್ಗದಾ (ಚಂದ್ರಪು. ೪-೭೨). [ಸಂ. ಹರಿನೀಲತಲ]

**ಹರಿನೀಳೋಪಳ** 'ಹರಿನೀಲೋಪಲ' ನೋ.

**ಹರಿನುಡಿ** (ನಾ). ಒಂದೇ ಸಮನೆ ನಡೆಯುವ ಮಾತು ; ವಾಕ್ಪ್ರವಾಹ : ಮಾತ ಬಣ್ಣಿಸಲು ಹೊತ್ತು ಹೋಯಿತ್ತಯ್ಯ ನಿನಗದೆ ಹರಿನುಡಿಗೆ ಕಡೆಯಿಲ್ಲ (ಅವಚಂ. ೨೪೭-೧೨೭). [ಹರ್$_2$ (< ಪರ್$_2$) + ನುಡಿ$_2$]

**ಹರಿನೆಲೆ** (ನಾ). ೧. ವಿಷ್ಣುವಿನ ವಾಸಸ್ಥಾನ. ೨. ಸಿಂಹಗಳ ನಿವಾಸ. ೧, ೨ : ಹರಿನೆಲೆಯುಯಿರುಳ ನಭದಂತಮಳಸೋಮಾನ್ವಿತಂ (ನವಮೋ. ೮-೧೧). [ಹರಿ$_4$ + ನೆಲೆ$_1$]

**ಹರಿನೇತ್ರ** (ನಾ). ೧. ಅಗ್ನಿನೇತ್ರ. ೨. ಕಣ್ಣಲ್ಲಿ ಅಗ್ನಿಯನ್ನು ಉಳ್ಳವನು; ಅಗ್ನಿನೇತ್ರ; ಶಿವ : ಹರಿಮಿತ್ರ ಹರಿನೇತ್ರ ಹರಿಜಮಸ್ತಕಪಾತ್ರ . . . ಕರುಣಿ ಗುರು ಸಂಗಮೇಶ (ಪ್ರಾಭರಾ. ೫-೧). [ಸಂ.]

**ಹರಿನ್ನೀಲ** (ನಾ). = ಹರಿನೀಲ: ಹರಿನ್ನೀಲದ ಬಜ್ಜರದಿಂ ಮರಕತ ಸೊನ್ನಲಿಗೆಯ ಸಾಲಿಂ ಚೆನ್ನಸೆದವು . . . ಕರುಮಾಡಂ (ಉದ್ಭದೇ. ೨-೩೩).
[IP ಇದು 'ಹರಿನೀಲ' ಶಬ್ದವನ್ನು ಪ್ರಾಸ ಮತ್ತು ಛಂದಸ್ಸಿಗಾಗಿ ಮಾಡಿಕೊಂಡ ರೂಪ]

**ಹರಿನ್ಮಣಿ** (ನಾ). ಹಸಿರುರತ್ನ; ಪಚ್ಚೆ; ಮರಕತ: ತೊಳಪ ಹರಿನ್ಮಣಿಕುಟ್ಟಿಮ ತಳದೊಳ್ ತಳಮಾರೆ ತಳಮನೂಱಿ ಬೆಡಂಗಂ ತಳೆದು ತಳರ್ನಡೆ ನಡೆವೆಡೆಯೊಳದೇಂ ಜನನಿಗೆ ವಿರೋಧಮಂ ಮಾಡಿದನೋ (ಸುಕುಮಾ. ೧೦-೩೯); ತೊಳಗುವ ಪೊನ್ನ ಕೋಟೆಯ ಹರಿನ್ಮಣಿಗೋಪುರದಿಂದ್ರನೀಲದಟ್ಟಳೆಗಳ . . . ಅಂಶುಮಂಡಳ ನೆಗೆದಲ್ಲಿ ಮಂಡಳಿಸೆ (ಪುಷ್ಪಪು. ೯-೨೭). [ಸಂ.]

**ಹರಿಪದ** (ನಾ). ೧. ವಿಷ್ಣುವಿನ ಪಾದ: ಸಭ್ಯತಾಲತೆ ಹೂತು ಹಸರಿಸಿ ಹಬ್ಬಿ ಫಲವಾದಂತೆ ಕಾಯವ ನಿಬ್ಬರದಲೀಡಾಡಿದಳು ಹರಿಪದಪಯೋಜದಲಿ (ಕುಮ್ಮಾಆ. ೧೭-೩೪); ಹರಿಪದದಿಂದೊಗೆದ ರಜಂ [ಹರಿ]ಪದಮಂ ತೊಡರೆ ನಡೆದುದಾ ನೃಪಸೈನ್ಯಂ (ಕುಸುಮಾ. ೧೫-೮೫); ಹರಿಪದಾಶ್ರಯನಮೃತರಂಜಿತ ಕೃಷ್ಣಾಂಕನುರುಕುಮುದವರ್ಧನಂ . . . ಎನ್ನ ಸುತನೆನ್ನಂತೆ ಪೆರ್ಮೆಯಿಂ ಪರಿವರ್ಧಿಪಂ ಗಡಂ (ಚಬಪು. ೯-೨೪). ೨. ಸೂರ್ಯನು ವಿಷುವದ್ರೇಖೆಯನ್ನು ದಾಟುವ ಎರಡು ಕಾಲಗಳಲ್ಲಿ ಒಂದು; ಮೇಷಸಂಕ್ರಾಂತಿ. ೩. ಕುದುರೆಯ ಖುರಪುಟ: ಹರಿಪದದಿಂದೊಗೆದ ರಜಂ [ಹರಿ]ಪದಮಂ ತೊಡರೆ ನಡೆದುದಾ ನೃಪಸೈನ್ಯಂ (ಕುಸುಮಾ. ೧೫-೮೫). [ಸಂ.]

**ಹರಿಪದನಿಷ್ಠ** (ನಾ). ವಿಷ್ಣುವಿನ ಪಾದಗಳನ್ನು ನಂಬಿದವನು; ವಿಷ್ಣುಭಕ್ತ: ಹರಿಪದನಿಷ್ಠರನು ನಿಲುಕುವನೆ ದುರ್ಜನನು (ಕುಮ್ಯಾಭಿ. ೧೭-೪೯). [ಸಂ.]

**ಹರಿಪದವಳಯ** (ನಾ). ಆಕಾಶಸ್ಥಲ; ಗಗನಮಂಡಲ: ಕಲಿತಬಲ ಶತಕೋಟಿ ಗಿದಿರಾಗಳಿದವದ್ರಿಗಳಂತೆ ಹರಿಪದವಳಯವಿವಳಿತವಾಯ್ತು ಮೇಘವ್ರಾತದಂದದಲಿ (ಕುಮ್ಯಾಭೀ. ೭-೯). [ಸಂ. ಹರಿಪದವಲಯ]

**ಹರಿಪೀಠ** (ನಾ). ಸಿಂಹಾಸನ : ಇರೆ ಹರಿಪೀಠದೊಳ್ ಭರತನಾದರದಿಂ ಬೆಸಗೊಂಡುದಂ . . . ಈ ನೆಗಳ್ದಾದಿಪುರಾಣಾಮನಪರಿಮಿತಭಕ್ತಿಯಿಂ ವಿರಚಿಸುವೆಂ (ಆದಿಪು. ೧-೪೦); ಹರಿಪೀಠಮುದಯಗಿರಿಯಂತಿರೆ ಬಾಳಂ ಬಾಳಭಾನುಮಂಡಳಮೆಂಬಂತಿರ ಬಾಳಾತಪಮಂ ಬಂತಿರೆ ತನುರುಚಿ ಪುದಿದುದೊಗೆದು ಗಗನಾಂತರಮಂ (ಮಲ್ಲಿಪು. ೧೨-೧೧೩). [ಸಂ.]

**ಹರಿಪೌರುಷ** (ನಾ). ಸಿಂಹದ ಪರಾಕ್ರಮ: ಮಳಯಜಗಂಧಮೆಂತು ಹರಿಪೌರುಷಮೆಂತು . . . ನಿಜಂ ತನಗಂತು ಸದ್ಗುಣಾವಳಿ ಸಹಜಾತಂ (ಶಾಂತಿಪು. ೭-೧೧೯). [ಸಂ.]

**ಹರಿಪ್ರಿಯೆ** (ನಾ). ೧. ವಿಷ್ಣುವಿನ ಹೆಂಡತಿ; ಲಕ್ಷ್ಮಿ: "ಶರಧಿಸುತೆ ರಾಮೆ ಗೋಮಿನಿ ಲಕ್ಷ್ಮಿ ಪದ್ಮಮಂದಿರೆ ಹರಿಪ್ರಿಯೆ . . . ಮನ್ಮಥಮಾತೆಯೆನಲು ಸಿರಿಗಕ್ಕು ನಾಮಂ" (ಮಂಗರಾ. ೬-೧೮). ೨. ತುಳಸಿ. ೩. ಭೂಮಿ. ೪. ದ್ವಾದಶೀತಿಥಿ. [ಸಂ. ಹರಿಪ್ರಿಯಾ]

**ಹರಿಬ, ಅರುಬ್ಬು$_1$, ಹರುಬು** (ನಾ). ೧. ಕೆಲಸ; ಕಾರ್ಯ; ವ್ಯವಹಾರ: ಬಲ್ಲಗವುಡಂಗೆ ಹಣವಿನ ಮಣ್ಣುಲಕಯ್ಯ ಕಾಡಾಗಿ ಸಲಿಸಿದ ಆ ಹರಿಬಕೆ ನಾಡು ಮಗುಳ್ದು ಲಕ್ಕಯ್ಯಂಗೆ (ಮೈಆರಿ. ೧೯೩೯, ೩೫-೧೩: 1205); ಅರರೆ ರಾವುತು ಜಾಗು ಸ್ವಾಮಿಯ ಹರಿಬಕೋಸುಗ ಹಗೆಯ ಹೊಯ್ಬುರಿ (ಕುಮ್ಯಾಕ. ೩-೪); ಹೋಹೊ ಹಾಹಾ ಎಂದು ನಮ್ಮ ಬಾಯ್ಬಿಡಿಸುವುದೆ ಈ ಹರಿಬದೊಳಗುಟ್ಟೊ? (ಮಂಕುಕ. ೪೨). ೨. ಕರ್ತವ್ಯ; ಕಾರ್ಯಭಾರ: ಪೊರೆದಾಳ್ದಂಗರಿಭಂಜನೋದ್ಯಮದೊಳೆಂದುಂ ನಾಮೆ ಮುಂದಿರ್ದು ಪಿಂಗಿರೆ ಕರ್ಮಾರಿವಿಭೇದದೊಳ್ ಹರಿಬಂ (ವರ್ಧಪು. ೯-೧೫), ಹರಿಬವೆಮ್ಮದು ಸಾರಿ ನೀವೆಂದರಸು ಮಕ್ಕಳ ನಿಲಿಸಿ ಬಿಲುಗೊಂಡುರವಣಿಸಿ ತಡೆದನು ವಿರಾಟನು ಕಳಶಸಂಭವನ (ಕುಮ್ಯಾದ್ರೋ. ೧೭-೩೯); ಅತಿಬಲನು ನೀ ಹರಿಬವಿದು ತಾ ನಿನ್ನದೆಂದನುಕೊಳಿಸಿದನು ರಣವ (ತೊರರಾ. ೬-೧೯-೮). ೩. ಹೊಣೆಗಾರಿಕೆ; ಜವಾಬುದಾರಿ: ಹರಿಬವೆನ್ನದು ಹೊಳ್ಳುಗಳೆನು ದುರುಳಧನುವನು (ಕುಮ್ಯಾಆ. ೧೪-೧೩); ಬರಲಿ ಮಾಣಲಿ ಹಾನಿವೃದ್ಧಿಯ ಹರಿಬವೆನ್ನದು (ಕುಮ್ಯಾಆ. ೧೯-೩೪). ೪. ಕಾಳಗ; ಯುದ್ಧ: ಕಲಿತನಕ್ಕಟ್ ಮೇಣೇಗಳಾಯ್ತೋ ಮನದೊಳ್ ಪೋ ಬರ್ಕದಂತುಂ ಹರಿಬವನಿನಿತುಂ ಟಕ್ಕನಾಂತಲ್ಲಿ ನೋಟ್ಟುಂ (ಚಂದ್ರಪು. ೬-೨೫); ಹಸುಳೆಗಳಲಾ ಹರಿಬವನು ನೀವೆಂದ ಹಗೆಗಳಲಿ ಎಸಗ ಬಲ್ಲರೆ (ತೊರರಾ. ೧-೯-೩೩); ಆ ಹರಿಬಕಸುರಾಂತಕಂ ಬಂದೊಡಾತನ ಮುಂದೆ ತೋರಿಸುವೆನೆನ್ನ ಭುಜವಿಕ್ರಮವನು (ಜೈಮಿಭಾ. ೧೧-೧೨). ೫. ಮುಯ್ಯಿ; ಸೇಡು: ಬರುತ್ತೈದಳೆಮ್ಮಮ್ಮ ಗುಡ್ಡಮ್ಮ ನಿಜಪತಿಯ ಹರಿಬವಂ ತೆಗೆಯಬೇಕೆನುತ (ಲಕಿಬಂ. ೩೭-೨೪); ತನ್ನ ತಮ್ಮನ ಹರಿಬವನು ಮರಳಿಚುವೆನೆನುತಿದಿರಾದನಮರಾರಿ (ಕುಮ್ಯಾಆ. ೧-೨೩); ನನ್ನಯ ಪಿತನಂ ಮುಳಿಸಿಂ ತನ್ನಂಗನೆ ಕೊಂದ ಹರಿಬವಂ ನಾಂ ತೆಗೆಯದ ಮುನ್ನಂ ಕಂಡೊಡೆ ಸರಿಯುವರೇಂ ನಗರೇ ನನ್ನನೆಂದನಾ ಗಜದೈತ್ಯಂ (ವೀರವಿ. ೫-೧೪). ೬. ಕಷ್ಟ; ತೊಂದರೆ : ಜನಿಸಿದನು . . . ಹರಿ ತಾನನಿಮಿಷರ ಹರಿಬವನು ತೆಗೆಯಲ್ಕೆ (ಸಂಭವ. ೧೦-೧೨) ; ಹರಿಬಕಿಲ್ಲದ ನಾಯಕರ ಸುಡು (ಕುಮ್ಯಾದ್ರೋ. ೧೦-೫೮); ವಾರಿಜೋದ್ಭವಜನಕ . . . ಕಂಬುಕಂಧರನೆ ಹೆಂಗಸಿನ ಹರಿಬವಂ ಬಿಡಿಸು (ತುರಂಗ. ೨೪-೨೯). ೭. ರಕ್ಷಣೆ; ಪಾಲನೆ: ಸುರರ್ಗಭಯವಿತ್ತವರ ಹರಿಬಕ್ಕೆ ಶರಭನಿಂ ಹರಿಯ ರಂಜಿಪ ತೊವಲನೆತ್ತಿ ಸುಲಿಸಿ (ಸಾನಂಚ. ೨-೧೭); ಹೆಂಡತಿಯ ಹರಿಬದಲಿಯೊಬ್ಬನು ಗಂಡುಗೂಸೇ ವೈರಿಯನು ಕಡಿಖಂಡವನು ಮಾಡುವನು ಮೇಣ್ ತನ್ನೊಡಲನಿಕ್ಕುವನು (ಕುಮ್ಯಾವಿ. ೩-೪೭); ತನ್ನಯ ವೊಮ್ಮನ ಹರಿಬಕೆ ವಾಸುದೇವ ದಂಡೆತ್ತಿ ಬಂದಿಹನು (ಮೋಹತ. ೩೭-೧೭). ೮. ಕಾರಣ; ಉದ್ದೇಶ: ಕರಿಗಳ್ ಬಾಳ್ಗಂಬದೊಳೊಪ್ಪಿರುತಿರ್ದುವು ಸುಳಿವ ನೀಲಮೇಘಾವಳಿಯಂ ತರದಿಂ ಸೆರೆಯಿಟ್ಟಂತಾ ಗಿರಿಪತಿ ಸುರಪತಿಯ ಹಗೆಯ ಹರಿಬದ ಚಲದೊಳ್ (ಗಿರಿಕ. ೨-೭೫); ಅವರಿವರೆಲ್ಲರುವೊಬ್ಬನ ಹರಿಬಕೆ ಕೆಮ್ಮನೆ ಶಿರವೊಡ್ಡಲೇಕೆ (೧೦೦೩೯ಪ. ೧೮೭-೨೩). ೯. ಅವಕಾಶ; ಸಮಯ; ಸಂಧಿ: ಕೊರಳ ಹಾರವ ತಿದ್ದಬೇಕೆಂದು ಸಾರ್ದೆಮ್ಮ ಕೊರಳ ತಡವಿ ಕೂಡ ನಗುವೆ ತರಹರಿಸಿದೆವಿಂದುತನಕ ನಾವೀಗೆಮ್ಮ ಹರಿಬವ ಬಿಡೆವು (ಭರಚ. ೪೨-೧೧೧). **ಅರುಬ್ಬು$_1$**: ೧. ಎಲೆ ಮಕ್ಕಳಿರ ನೀವು ಇಷ್ಟೊತ್ತು ಏನರುಬುಗಳ ಮಾಡಿ ಬಂದಿರ್ದೆ (ಶರಲೀ. ೪೮೨-೧); ಏನಗಿನ್ನು ಮುಂದಣ ಅರುಬುವುಂಟದಕ್ಕೆದಬೇಕೆಂದವರು ಬೀಳ್ಕೊಂಡು (ಬಸಭಾ. ೧೮-೫೭). **ಹರುಬು** : ೨. ಮಣ್ ಮೋಸ ಕಲಹ ಕಾತರ ಕಟ್ಟಾಯಸ ಬಿಜುಬು ಹರುಬು ಹನ್ನಸಗಳ ತೆಱನಱಿಯದಳ ರಕ್ಷಿಸು (ಶತಸಾಂ. ೩೭-೭೭)

**ಹರಿಬಂಧನ** (ನಾ). ಕುದುರೆಯನ್ನು ಅಂಕೆಗೆ ತರುವುದು,— ಹತೋಟಿಯಲ್ಲಿಟ್ಟುಕೊಳ್ಳುವುದು: ವಿಮಾರ್ಗಂ ಹರಿಬಂಧನಮಂ ಭೌಮಂ ವೈಹಾಯಸಂ ವಯಸ ಯಂತ್ರಕ್ಷೇತ್ರವಹಳಿ ಸತ್ಕಂ ದಾರಿಮೆಂಬ ಭೇದಂಗಳಿಂದಶ್ವಮನೇಱಲು ರೇಚಿಗನೃಪತಿ ತಾನೆ ಬಲ್ಲಂ (ಮದಕಿ. ೧-೨೧). [ಸಂ.]

**ಹರಿಬಂಧು** (ನಾ). ಕೃಷ್ಣನ ನಂಟ; ಅರ್ಜುನ : "ಇಂದ್ರಜಂ ಸಿತಹಯಂ ಗಾಂಡೀವಿ ಜಿಷ್ಣು ಹರಿಬಂಧು ಫಲ್ಗುಣನೆನಲ್ಕರ್ಜುನನೆನಿಕ್ಕು" (ಮಂಗರಾ. ೭೮-೩). [ಸಂ.]

**ಹರಿಬಕಾಱ** (ನಾ). ಕಾಳಗ ಮಾಡುವವನು; ಯೋಧ; ಸೈನಿಕ: ಕವಿದು ಹುಯ್ಯಲು ಹರಿಬಕಾಱರ ತಿವಿದು ಮತ್ಸ್ಯನ ಬಲವ ಸೀಳುತ . . . ಸುಶರ್ಮಕನವಚಿ ಹೊಯ್ದು ವಿರಾಟನೊಡನವಗಡಿಸಿ ಕಾದಿದನು (ಕುಮ್ಯಾವಿ. ಓಗೀ. ೫-೬೨). [ಹರಿಬ + - ಕಾಱ]

**ಹರಿಬಲ** (ನಾ). ೧. ಸಿಂಹಗಳ ಸಮೂಹ: ಇದ್ದುದಾ ಸಮಸಪ್ತಕರು ಜಗವದ್ದ ಜಲಧಿಯ ತೆರೆಯವೊಲು ಮುಳಿದೆದ್ದ ಹರಿಬಲದಂತೆ ದುಶ್ಶಾಸನನ ಪಾಯದಳ (ಕುಮ್ಯಾಕ. ೧೫-೬). ೨. [ಜೈನ] ವಾಸುದೇವನ ಸೈನ್ಯ: ಹರಿಬಲವಳಿದುದು ಹರಿಬಲವಳಿದುದು ಹರಿಬಲದಿಂದ ಬೇಗದೊಳು ಹರಿಬಲಗಿಂತು ಪೇಳುತಲೊದಗಿದನಾ ಹರಿಯ ಹರಿಬಕೆ ರೋಷದಲಿ (ವರ್ಧಚ. ೪-೪೩). ೩. ಸಿಂಹದ ಪರಾಕ್ರಮ: ಮೇಲಿನ 'ವರ್ಧಚ' ಪ್ರಯೋಗವನ್ನು ನೋಡಿ. ೪. ಕಪಿಗಳ ಸೈನ್ಯ: ಹರಿಬಲವ ಬಱಿಕೈವುತಿರ್ದುದು ಹರಿಬದತಿಬಲ ಖಳಕದಂಬಕವಸಮಸಮರದಲಿ (ತೊರರಾ. ೬-೩೦-೨). ೫. ಕುದುರೆಗಳ ಸೈನ್ಯ : ಕೆಲಬಲದಲಿ ಹರಿಬಲ [ಪಾಠಾಂ. ದರಿಬಲ ಹರಿ] ಸಾಲಿನಲಿ ರಾಜಕುಲಮಿರೆ ಪೌದನಾಧಿಪನು ಒಲಿದೋಲಗವಿರೆ ಬಂದ ಬಾಂಬಟ್ಟೆಯ ನೆಲದೆಱೆಯನ ದೂತನಾಗ (ವರ್ಧಚ. ೬-೫೭). [ಸಂ.]

**ಹರಿಬವೆತ್ತು** (ಕ್ರಿ). ಕರ್ತವ್ಯವನ್ನು ನಿರ್ವಹಿಸು; ಜವಾಬ್ದಾರಿಯನ್ನು ಹೊರು: ಜಡಿವ ಪಡಿಯಱರ ಕಳಕಳಮೊಡನೊಗೆತರೆ ಬೆಸನನೆಬ್ಬು ಬೇಡುವ ಚರನಂ ಕಿಡೆ ನುಡಿವ ಹರಿಬವೆತ್ತುವ ಕಡಂಗಿ ಮೂದಲಿಪ ರಭಸಮೇನುಣ್ಮಿದುದೋ (ವರ್ಧಪು. ೭-೪೨). [ಹರಿಬ + ಏತ್ತು$_1$]

**ಹರಿಬಿ$_1$** 'ಪರವಿ' ನೋ.

**ಹರಿಬಿ$_2$** (ನಾ). ಒಂದು ಬಗೆಯ ಆಯುಧ: ಹರಿಬಿ [ಪಾಠಾಂ. ದಿ]ಯುರ್ಗಱಿಪಿ ಕಳಿಕನ ಹೂವಿನ ಕುಚ್ಚನುರುವ ಸಬಳದಾಳುಗಳ ನೆರವಿಯೊಳತಿಸಂಭ್ರಮದೆ ಕಂಠೀರವ ನರಸರಾಜೇಂದ್ರನೈತಂದ (ಕಂನವಿ. ೧೨-೩೩); ತೂಗುವ ಹರಿಬಿಯ ಗರಿಯಿಟ್ಟಯುಧಟರ ಸಾಗರದೊಳು ಬಹನಾರೆ (ಕಂನವಿ. ೨೫-೫೪). [?]

**ಹರಿಬಿಡು** 'ಪರಿವಿಡು' ನೋ.

**ಹರಿಬೀಳು** (ಕ್ರಿ). ೧. ಚೆದರಿ ಬೀಳು: ಹೊಲದ ತುಂಬ ಕಪ್ಪುಮೋಡದ ತುಂಡುಗಳಂತೆ ಹರಿಬಿದ್ದ ಮಣ್ಣಿನ ಹೆಂಟೆಗಳು ಅವಳ ಕಣ್ಣುಗಳನ್ನು ಕೋರೈಸಿದುವು (ಮಣ್ಣಮ. ೩). ೨. ಹರಿಹಾಯು; ಸಿಡುಕು; ರೇಗು: ಸುಮ್ಮಸುಮ್ಮನೆ ನಾನು ಮಾತಾಡಿದ ಕೂಡಲೇ ಎಲ್ಲರೂ ನನ್ನ ಮೇಲೆ ಹರಿಬೀಳುವಿರಿ (ಉದವ್ಯ. ೪೭). [ಹರ್$_2$ (< ಪರ್$_2$) + ಬೀಳು$_1$ (< ಬೀೞ್$_1$)]

**ಹರಿಭಕುತಿ** (ನಾ). ವಿಷ್ಣುಭಕ್ತಿ: ಹರಿಭಕುತಿ ಉಳ್ಳವರ ಶರೀರವೆ ಕುರುಕ್ಷೇತ್ರ ಅವರು ನರರೆಂದು ಬಗೆವವರೆ ನರಕವಾಸಿಗಳು (ಪುರಂದ. ೧-೧೦೬ ಪಲ್ಲವಿ). [< ಸಂ. ಹರಿಭಕ್ತಿ]

**ಹರಿಭಕ್ತ** (ನಾ). ವಿಷ್ಣುಭಕ್ತ. [ಸಂ.]

**ಹರಿಭೂಧರ** (ನಾ). ಕೈಲಾಸಪರ್ವತ: ಹರಿಕರ್ಣಕರಧರನೆ ಹರಿಭೂಧರಸುಮಂದಿರ . . . ಕರುಣಿ ಗುರು ಸಂಗಮೇಶ (ಪ್ರೌಢರಾ. ೫-೧). [ಸಂ.]

**ಹರಿಭೂಮ** (ನಾ). ಮದುವೆಯ ಮರುದಿನ ಹೆಣ್ಣಿನವರು ಅಳಿಯನ ಸ್ನೇಹಿತರಿಗೆ ಮಾಡುವ ಔತಣದ ಊಟ: ಹರವಲ್ಲಭನು ಹರಿಭೂಮದ ದಿನ ಸಂಬಂಧಿಯ ನೆರೆಹೊರೆಯವರನ್ನೂ ಊಟಕ್ಕೆ ಕರೆದನು (ದೇವೀಚಾ. ೫). [ಸಂ.]

**ಹರಿಮಂಥ** (ನಾ). ೧. ಒಂದು ಬಗೆಯ ನೆಲ್ಲಿಮರ. ೨. ಕಡಲೆ; ಚಣಕ: ಹರಿಮಂಥ ತೊಗರಿ ಕಲ್ಲುಪ್ಪು ಲವಂಗವು ವರಜಾಯಿಫಲ ಹಪ್ಪಳವು (ಜ್ಞಾನಚ. ೩೬-೧೦೨). [ಸಂ.]

**ಹರಿಮಣಿ** (ನಾ).= ಹರಿನೀಲ: ಹರಿಮಣಿಯಜಿ'ಯೊಳ್ಮಿಱುಗುತ್ತಿರೆ ವೃತ್ತತೆವೆತ್ತ ದಿನಕರೋಪಲಮಿದು ಭಾಸ್ಕರಬಿಂಬಮೆಂದು ಬಂದಾ ಗರಣದ ಸಮಯದೆ ವಿಧುಂತುದಂ ಪಿಡಿವುದದಂ (ರಾಜಶೇ. ೬-೨೨). [IP ಇದು 'ಹರಿನೀಲಮಣಿ' ಎಂಬುದರ ಸಂಕ್ಷಿಪ್ತರೂಪ]

**ಹರಿಮಣಿಹ** (ನಾ). ಪಾರುಪತ್ಯಗಾರ(?): ತನುವೆಂಬ ರಾಜ್ಯಕ್ಕೆ ಮನವೆಂಬ ಅರಸು ಆ ಅರಸಿಂಗೆ ನೋಟಬೇಟದವರಿಬ್ಬರು ಅಷ್ಟಮಣಿಹ ಹರಿಮಣಿಹದವರು (ಲಿಂಗವ. ೩. ೭೪-೭೫). [ಹರಿ$_2$ (< ಪರಿ$_2$) + ಮಣಿಹ$_2$ (< ಮಣಿಯ)]

**ಹರಿಮಧ್ಯ** (ನಾ). ಸಿಂಹದ ಸೊಂಟದಂತೆ ತೆಳುವಾದ ಸೊಂಟ : ಹರಿಮಧ್ಯಂ ಮೃಗಶಾಬನೇತ್ರಮಳಿಮಾಲಾವೇಣಿ . . . ಒಪ್ಪಿರೆ ಭಿಲ್ಲಾಂಗನೆಯರ್ಕಳಾದಮರಿಯರ್ (ಶಬಶಂ. ೩-೮). [ಸಂ.]

**ಹರಿಮಧ್ಯೆ** (ನಾ). ಸಿಂಹದ ಸೊಂಟದಂತೆ ತೆಳುವಾದ ಟೊಂಕವುಳ್ಳವಳು: ಧರೆಯ ಮೇಲೆರಡು ಕರವನೂರಿ . . . ವರದಂಡಾಕೃತಿಯೊಳು ತನುವಿರಲದು ಹರಿಮಧ್ಯ ನೀಲಕಂಠಾಸನ (ವೇದಾಂಪ. ೩-೧೦-೧೦). [ಸಂ. ಹರಿಮಧ್ಯಾ]

**ಹರಿಮಿತ್ರ** (ನಾ). ಶಿವ : ಹರಿಮಿತ್ರ ಹರಿನೇತ್ರ ಹರಿಜಮಸ್ತಕಪಾತ್ರ . . . ಕರುಣಿ ಗುರುಸಂಗಮೇಶ (ಪ್ರಾಧರಾ. ೫-೧). [ಸಂ.]

**ಹರಿಮಿಥುನ** (ನಾ). ೧. ಗಂಡು ಹೆಣ್ಣು ಸರ್ಪಗಳ ಜೋಡಿ. ೨. ಗಂಡು ಹೆಣ್ಣು ಕಪ್ಪೆಗಳ ಜೋಡಿ. ೩. [ಜ್ಯೋತಿ] ಸಿಂಹ ಮತ್ತು ಮಿಥುನರಾಶಿ. ೧, ೨, ೩: ಮಕರ ಕರ್ಕಾಟಕ ಹರಿಮಿಥುನದಿಂದನಿಮೇಷನಿಕರದಿಂ . . . ಸುಕರಮೆನೆ ರಂಜಿಸಿತು ವಾರಾಶಿ ರಾಶಿರಾಶಿಯನಾಂತ ಗಗನದಂತೆ (ಶ್ರೀರಾಮಾ. ೩-೫೯). [ಸಂ.]

**ಹರಿಮುಖ** (ನಾ). ೧. ಕುದುರೆಯ ಬಾಯಿ: ಪರಿಮುಖ ಹೇಷಾಘೋಷಂ ಹರಿನ್ಮುಖಾಂತರಮನೆಯ್ದಿ ತೀವುತ್ತಿರೆಯುಂ . . . ನಡೆದುದಾ ನೃಪಸೈನ್ಯಂ (ಕುಸುಮಾ. ೧೫-೮೫). ೨. ಸಿಂಹದ ಮುಖವುಳ್ಳವನು; ಶಿವನ ಗಣಗಳಲ್ಲಿ ಒಬ್ಬ: ಹರಿಮುಖರು ಶರಭವಕ್ತ್ರರು ಮಹಾವ್ಯಾಘ್ರಬಂಧುರಲಪನರು . . . ಅಧಿಕಗಣನಿಕರ ವೆಯ್ದಿತ್ತು ಶಿವನ ಕೂಡೆ (ವೀಶೈಪು. ೩-೧೯-೬). [ಸಂ.]

**ಹರಿಮುರಿ** 'ಹಱಿಮುಱಿ' ನೋ.

**ಹರಿಮೇಖಲೆ, ಹರಿಮೇಖಳೆ** (ನಾ). ಇಂದ್ರಜಾಲ; ಯಕ್ಷಿಣಿ; ಮಾಯೆ: ''ಹರಿಮೇಖಲೆಯೆಂದು ಇಂದ್ರಜಾಲಂ'' (ಶಮದ. ಪರಿ. ೨); ಮಾತುಳಸುತೆಯಾಳಿಯರನು ವಂಚಿಸಿ ಕುವರಿಯ ಕದ್ದು ನೆನಹಿಗಗೋಚರವೆನೆ ಹರಿಮೇಖಲೆಯನು ಮಾಱಿ ತಂದನೀ ಪದಕವ (ಸೂಬಸೂ. ೨೦-೧೦); ವಿಷಾದ ವಿಡಂಬ ಹರುಷಂಗಳಲಿ ನೀನಿಹುದೇಕಚಿತ್ತದಲಿ ತುಂಬುವುದು ಬತ್ತುವುದು ರಾಜ್ಯದ ಡೊಂಬು ಹರಿಮೇಖಲೆಯ ವಿದ್ಯಾಡಂಬರವಿದು (ಕುವ್ಯಾಸ. ೧೧-೧೭). **ಹರಿಮೇಖಳೆ** : ಬಲ್ಲೆನಾತನ ಬಲುಹನೀಶ್ವರನಲ್ಲಿ ಹರಿಮೇಖಳೆಯ (ಕುವ್ಯಾದ್ರೋ. ೧೮-೧೧); ಎಲೆಲೆ ಹಾರುವನೇಕೆ ಹರಿಮೇಖಳೆಯ ಕೇಳಿಕೆಯೇಕೆ (ಕುವ್ಯಾಕ. ೩-೨೨). [ಸಂ. ಹರಿಮೇಖಲಾ]

**ಹರಿಮೇಖಳೆ** 'ಹರಿಮೇಖಲೆ' ನೋ.

**ಹರಿಯಂತರ** (ನಾ). ಒಂದು ದೊಡ್ಡಪ್ರಮಾಣದ ಉದ್ದದ ಅಳತೆ: ಒಂದು ಹರಿಯಂತರ ವಿಶಾಲ ಮಹಾಸಭಾವಿಸ್ತರಣವದಱಲಿ ತೆಱಹ ಕಾಣೆನು ತೀವಿತವನಿಪರು (ಕುವ್ಯಾಸ. ೧೩-೩೨). [ಹರಿ$_1$ + ಅಂತರ]

**ಹರಿಯಕ್ಷ** (ನಾ). ಸಿಂಹ: ''ಹರಿಯಕ್ಷನಾ ಮೃಗಾರಾತಿ ಕಂಠೀರವಂ ಕರಿವೈರಿ ಕೇಸರಿಯೆನಲ್ ಸಿಂಹಮೆನಿಸಿಕ್ಕು'' (ಮಂಗರಾ. ೪೭-೬); ಹಾಯ್ಕುಬ್ಬರದ ಹುಲಿ ಹರಿಯಕ್ಷ ಕುಲ ಮಲೆತಿಱಿವ ಕಾಡ್ಕೋಣ . . . ಉಬ್ಬಿಱಿತದೊಡ್ಡನು ಮುಂದೆ ನಿಲಿಸಿದನಾ ಚಮೂರಮಣ (ತೊರರಾ. ೬-೧೯-೧೭). [< ಸಂ. ಹರ್ಯಕ್ಷ]

**ಹರಿಯಣ** 'ಪರಿಯಾಣ$_1$' ನೋ.

**ಹರಿಯರಿಗ** (ನಾ). (?) : ಸೇನಭಾವ ಭೂಮಿ ೪೫೦ ಗ್ರಹಂ ಹಸ್ತ ೭ ೧೧ ಹರಿಯರಿಗ ಉಬ್ಬಾನಿಕಗೆಯ ಗ್ರಹಂ ಹಸ್ತ ೧೨ (ಕೊಲ್ಲಾಶಾ. ೨೩-೫೦; ?). [?]

**ಹರಿಯಾಗೆ** (ನಾ). ಒಂದು ಬಗೆಯ ಸಸ್ಯ : ತಗಡತಿ, ಹರಿಯಾಗೆ, ಮೈಸಾಲೆ (ಮೈಶಿಗಿ. ೫೦-೧೦೦೦). [?]

**ಹರಿಯಾಣ** 'ಪರಿಯಾಣ$_1$' ನೋ.

**ಹರಿಯಿಡು** 'ಪರಿಯಿಡು' ನೋ.

**ಹರಿಯಿಸು** 'ಪರಿಯಿಸು' ನೋ.

**ಹರಿಯೊಲೆ, ಹರಿಒಲೆ, ಹರಿವೊಲೆ** (ನಾ). ದೊಡ್ಡ ಪ್ರಮಾಣದಲ್ಲಿ ಅಡುಗೆ ಮಾಡಲು ನೆಲದಲ್ಲಿ ಕಾಲುವೆಯಾಕಾರದಲ್ಲಿ ತೋಡಿ ಮಾಡಿದ ಒಲೆ: ಶುನಕಗಳು . . . ಹರಿಯೊಲೆಗಳನ್ನು ಸಂತತ ನಿವಾಸಸ್ಥಾನಗಳನ್ನಾಗಿ ಮಾಡಿಕೊಂಡಿದ್ದುವು (ಲಕ್ಷ್ಮೀಪ್ರ. ೮). **ಹರಿಒಲೆ** : ಅಡಿಗೆಯವರು ಒಂದು ಹರಿಒಲೆಯನ್ನು ಅಗೆದು . . . ಅಡಿಗೆ ಮಾಡುತ್ತಿದ್ದರು (ಮಲನಾ. ೫೩); ಒಂದು ದೊಡ್ಡ ಹರಿಒಲೆಯನ್ನು ಮಾಡಿಸಿ ಅದರ ಮೇಲೆ ತಗಡನ್ನಿಟ್ಟು, ಅದರ ಮೇಲೆ ಕುಳ್ಳನ್ನು ಸುಡಿಸಿ ಒಟ್ಟಿ ಇಟ್ಟರಾಯಿತು, ಕೆಲಸ! (ಸ್ಮೃತಿಚಿ. ೩೫೦). **ಹರಿವೊಲೆ** : ಛತ್ರಗಳಲ್ಲಿ ಸಾಮಾನ್ಯವಾಗಿ ಹರಿವೊಲೆಗಳಿರುತ್ತವೆ (ರೂಢಿ). [ಹರಿ$_3$ (< ಪರಿ$_3$) + ಒಲೆ$_4$]

**ಹರಿವಂಶ** (ನಾ). ೧. ಸೂರ್ಯವಂಶ: ಹರಿವಂಶನಿಯಮದಿಂ ಹಿತಪುರೋಹಿತಂ ಶುಭಮುಹೂರ್ತದೊಳ್ ಕನ್ನಕೆಯಂ ತರವೇಳ್ (ಪಂರಾಮಾ. ೫-೪೬). ೨. ಕೃಷ್ಣನ ಕುಲಪರಂಪರೆ ,— ವಂಶ: ಹರಿವಂಶನರಾಧಿಪರಂ ಪರಿರಕ್ಷಿಪೆನಾನುಪಾಯದಿಂದ (ಬಂಹರಿ. ೭-೯); ಹರಿವಂಶತಿಳಕನಾನತಪರನೃಪಜಾಳಕಂ . . . ತತ್ಸಮುದ್ರವಿಜಯ ಮಹೀಶಂ (ನೇಮಿಪು. ೮-೭೭). ೩. ಗುಣವರ್ಮನೆಂಬ ಕವಿ ಕನ್ನಡದಲ್ಲಿ ಬರೆದ, ಕೃಷ್ಣನ ಕಥೆಯನ್ನೊಳಗೊಂಡ ಒಂದು ಚಂಪೂಕಾವ್ಯ: ಈಂದ ಪುಲಿಯಾ ವೂಲಿರ್ದಳೆಂದು . . . ಗುಣವರ್ಮನ ಹರಿವಂಶಪ್ರಯೋಗಂ (ಶಮದ. ೧೧೮ ಪ್ರಯೋ). ೪. ವ್ಯಾಸಮುನಿಯಿಂದ ರಚಿತವಾದ, ಮಹಾಭಾರತಕ್ಕೆ ಪೂರಕವಾದ ಸಂಸ್ಕೃತದ ಒಂದು ಪ್ರಸಿದ್ಧ ಗ್ರಂಥ. ೫. ಸರ್ಪಗಳ ಕುಲ: ಹರಿವಂಶಂ ಹರಿವಂಶದಂತತುಳಭೋಗಖ್ಯಾತಮಾಯ್ತು (ಅರ್ಧನೇ. ೬-೭೮). [ಸಂ.]

**ಹರಿವಕ್ತ್ರ** (ನಾ). ಸಿಂಹದ ಮುಖವುಳ್ಳವನು; ಶಿವನ ಗಣವರ್ಗದಲ್ಲಿ ಒಬ್ಬ: ಹರಿವಕ್ತ್ರಂ ಕರಿವಕ್ತ್ರನಶ್ವವರವಕ್ತ್ರಂ . . . ರುರುವಕ್ತ್ರನೆಂಬರಸೆದರ್ ವಿಶ್ವೇಶ್ವರಾಸ್ಥಾನದೊಳ್ (ರಾಜಶೇ. ೧೪-೧೫೪). [ಸಂ.]

**ಹರಿವಕ್ರ** (ನಾ). [ಕಾಮಶಾ] ರತಿಭೇದಗಳಲ್ಲಿ ಒಂದು: ಸ್ತ್ರೀ ಮರಗಳ ಗೋಡೆಗಳನೊತ್ತುಗೊಂಡು ನಿಂದಿರ್ದು ಮಾಡುವ ಭಾವದಿ ಪುರುಷನವಳ ಕೊರಳಂ ಪಿಡಿದುಕೊಂಡಿರೆ ಅವಳು ಒಂದು ಕಾಲ ಮೇಲಕ್ಕೆತ್ತಿ ರಮಿಸಲ್ಕೆ ಹರಿವಕ್ರಮೆಂಬ ಕರಣಂ (ಕಾಮಶಾ. ೨೩೭). [ಸಂ.]

**ಹರಿವಡಿ** 'ಪರಿವಿಡಿ$_2$' ನೋ.

**ಹರಿವಣ** 'ಪರಿಯಾಣ$_1$' ನೋ.

**ಹರಿವಧು** (ನಾ). ಇಂದ್ರನ ಹೆಂಡತಿ ; ಇಂದ್ರಾಣಿ ; ಶಚಿ : ಹರಿವಧು ನೂಪುರಮಂ ಜಿನಚರಣದೊಳಳವಡಿಸಿ ತಳೆಯೆ ಶಿರದೊಳ್ ಮಣಿಶೇಖರಮೆನಿಸಿತು (ಪಾರ್ಶ್ವಪು. ೧೪-೧೦೭). [ಸಂ. ಹರಿವಧೂ]

**ಹರಿವರಿ** 'ಪರಿ$_3$' ಪರಾ.

**ಹರಿವರುಷ** (ನಾ). ಜಂಬೂದ್ವೀಪದಲ್ಲಿರುವ ನಾಭಿ, ಕಿಂಪುರುಷ, ಹರಿ, ಇಲಾವ್ರತ, ರಮ್ಯಕ, ಹಿರಣ್ಮಯ, ಕುರು, ಭದ್ರಾಶ್ವ ಮತ್ತು ಕೇತುಮೂಲ ವೆಂಬ ಒಂಬತ್ತು ವಿಭಾಗಗಳಲ್ಲಿ ಒಂದು: ಆ ಮಹಾ ಹರಿವರುಷದಲ್ಲಿಯ ಸೀಮೆ ಯೋಜನನವಸಹಸ್ರವಿರಾಮವದಱೊಳಗೆಲ್ಲ ವಿವರಿಸಲಱಿಯೆ ನಾನು (ಕುವ್ಯಾಸ. ೩-೩೫). [< ಸಂ. ಹರಿವರ್ಷ]

**ಹರಿವರೂಥ** (ನಾ). ಸಿಂಹದ ವಾಹನ : ವೈಷ್ಣವಿಯಾಗಿ ಹರಿವರೂಥಮನಡರ್ದು . . . ಅಮರರನುಳುಹಿದಗಚೆ ಸಲಹಾ (ನವಮೋ. ೯-೨). [ಸಂ.]

**ಹರಿವರೂಥೆ** (ನಾ). ಸಿಂಹವನ್ನು ವಾಹನವಾಗಿವುಳ್ಳವಳು; ದುರ್ಗೆ: ಅತಿಬಳಾನ್ವಿತ ಹರಿವರೂಥೆ . . . ಅತಿದಯದೊಳೆನ್ನ ಬಡಮತಿಗೆ ಬೆಂಬಲಮಾಗು (ನವಮೋ. ೮-೨). [ಸಂ. ಹರಿವರೂಥಾ]

**ಹರಿವರ್ಷ** (ನಾ). ೧. = ಹರಿವರುಷ. ೨. [ಜೈನ] ಜಂಬೂದ್ವೀಪದಲ್ಲಿರುವ ಭರತವರ್ಷ, ಹೈಮವತವರ್ಷ, ಹರಿವರ್ಷ, ವಿದೇಹವರ್ಷ, ರಮ್ಯಕವರ್ಷ, ಹೈರಣ್ಯವತವರ್ಷ ಮತ್ತು ಐರಾವತವರ್ಷವೆಂಬ ಏಳು ವಿಭಾಗಗಳಲ್ಲಿ ಮೂರನೆಯದು; ಮಧ್ಯಮ ಭೋಗಭೂಮಿ : ಆ ತಿರ್ಯಗ್‌ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ ಹೈಮವತ ಹರಿವರ್ಷ ವಿದೇಹ ರಮ್ಯಕ ಹೈರಣ್ಯ ವತ್ಯರಾವ್ವತಂಗಳೆಂಬೇಳುಂ ಜನಪದಂಗಳಿಂ . . . ಎಸೆದು (ಆದಿಪು. ೧-೪೮ ವ); ಹರಿವರ್ಷಮೆಂಬ ವಿಷಯದೊಳುರುಶೋಭಾಧಾನಮಾಗಿ ಸೊಗಯಿಪುದು . . . ಭೋಗಪುರಮೆಂಬುದು (ನೇಮಿಪು. ೨-೮೧). [ಸಂ.]

**ಹರಿವಲೆ** (ನಾ). ಅಗಲವಾಗಿ ಹರಡುವ ಒಂದು ಬಗೆಯ ಒಲೆ : ಕರದಲಿ ಪಿಡಿದ ಬಿಲ್ಲಂಬು ಹರಿವಲೆ ಬೆಳ್ಳಾರವಲೆ ಸಹ ವನದಿ ಸಂಚರಿಸುತ ಶಬರರೊಪ್ಪಿದರು (ಜೀವಂಸಾಂ. ೨೦-೭); ಹಾಸುವಲೆಗಳಿಂದ ಹರಿವಲೆಯಿಂದತಿ ಬೀಸುವಲೆಯು ಕಣ್ಣವಲೆಯಿಂ ಸೂಸುವಲೆಗಳಿಂದೆ ಬೇಂಟೆಯ ಜನರಲ್ಲಿ ಘಾಸಿಮಾಡುವರು ಮೃಗಗಳ (ರಾಮವಿ. ೧೫-೭೫). 'ಹರಹುವಲೆ' ಪರಾ. [ಹರಿ$_2$ (< ಪರಿ$_2$) + ಬಲೆ$_1$]

**ಹರಿವಾಣ$_1$** 'ಪರಿಯಾಣ$_1$' ನೋ.

**ಹರಿವಾಣ$_2$** 'ಪಾರಿವಾಳ$_2$' ನೋ.

**ಹರಿವಾಸ$_1$** (ನಾ). ಒಂದು ಬಗೆಯ ಕೊಳಲು: ಹದಿನೆಂಟಂಗುಲ ಹದಿನೇಳಂಗುಲ . . . ಒಂದಂಗುಲ ಪ್ರಮಾಣಿನ ಕ್ರಮವಿಡಿದು ಜಾತಿವಾಸ . . . ಹರಿವಾಸ ನಿಧಿವಾಸ . . . ಭುವನಾಧಿಪತಿವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವನಱಿದು (ವಿವೇಕ. ೧೯೧). [ಹರಿ? + ವಾಸ$_1$]

**ಹರಿವಾಸ$_2$** (ನಾ). ೧. ಹಾವುಗಳ ವಸತಿ. ೨. ಕಪ್ಪೆಗಳ ನಿವಾಸ. ೩. ವಿಷ್ಣುವಿನ ವಾಸಸ್ಥಾನ. ೧, ೨, ೩: ವರಕ್ಷೀರವಾರಾಶಿಯಂತೆ ಹರಿವಾಸದಿಂ . . . ನೆರೆ ಪತಿವ್ರತೆಯಂತೆ ಕಾಂತಾನುಕೂಲದಿಂ ಧರೆಯ ಮಂಡಲದಂತೆ ಕುವಲಯಾನ್ವಿತದಿಂದ ಸರಸಿ ಶೋಭಿಸುತಿರ್ದುದು (ನವಮೋ. ೮-೩೩). [ಸಂ.]

**ಹರಿವಾಸರ** (ನಾ). ವಿಷ್ಣುವಿನ ದಿನ; ಏಕಾದಶಿ ಹಾಗೂ ದ್ವಾದಶಿಯ ತಿಥಿ: ಹರಿವಾಸರದುಪವಾಸದ ಭಾಗ್ಯವು ಕಂಡಕಂಡವರಿಗೆ ದೊರಕುವುದೆ (ಪುರಂದ. ೫-೧೪೭ ಪಲ್ಲವಿ); ಕಷ್ಟಮೇತಕೆ ಜೀಯ ಹರಿವಾಸರ ವ್ರತಭ್ರಷ್ಟರಾದಪವೆಂಬ ಭಯಕೆ ನಿನ್ನಾಲಯದ ಮೃಷ್ಟಾನ್ನಮಾವೊಲ್ಲೆದಿರ್ದೆವ್ವೆಸಲೆ ಗರ್ವದಿಂ ಬೇಡೆಯಲ್ಲ (ಜೈಮಿಭಾ. ೨೯-೨೭). [ಸಂ.]

**ಹರಿವಾಹ** (ನಾ). ಇಂದ್ರ : "ಪುರುಹೂತಂ ಮಘವಂ . . . ಹರಿವಾಹಂ ಶತಮನ್ಯು ನೀರದರಥಂ ಶಕ್ರಂ ವೃಷಂ ವಾಸವಂ" (ವಸ್ತುಕೋ. ೭-೩೩). [ಸಂ.]

**ಹರಿವಾಳ** 'ಪಾರಿವಾಳ$_2$' ನೋ.

**ಹರಿವಿಡು** 'ಪರಿವಿಡು' ನೋ.

**ಹರಿವಿಷ್ಟರ** (ನಾ). ಸಿಂಹಾಸನ ; ರಾಜನ ಗದ್ದುಗೆ : ಸ್ಫುರಿತಮಣಿಖಚಿತಹರಿವಿಷ್ಟರ ದೊಳಲಂಕರಿಸಿ ನೆಱೆದ ರಾಜನ್ಯಕಮಂ . . . ಆದರಿಸುತ್ತುಂ (ಆದಿಪು. ೯-೨); ಹರಿಯ ಹರಿವಿಷ್ಟರದ ಬಲದಲಿ ಧರಣಿಪತಿ ಕುಳ್ಳಿರ್ದನು (ಕುಮಾಲು. ೮-೬೫). [ಸಂ.]

**ಹರಿವು$_1$** 'ಪಱಿವು' ನೋ.

**ಹರಿವು$_2$** 'ಪರಿವು' ನೋ.

**ಹರಿವುಳಿಗ** (ನಾ). ಒಂದು ಬಗೆಯ ಊಳಿಗ,– ಸೇವೆ (?): ಆ ಅರಮನೆಯ ಹರಿವುಳಿಗದ ಆಚಾರಿ ಕೆಸಿವೋಜನ ಅಳಿಯ ಶ್ರೀ ಪದುಮಲೇಸ್ವರದ ಆಚಾರಿ ಹರಿಯಣ್ಣನ ಅಪ್ಪಣೆಯಿಂ ಹಲಯೂರ ಹಾರುವದೇವ ಹೊಯ್ಸಿದ (ಎಕ. IX(S). ಕಾನಕಾ. ೯೨-೩೮; ಸು. 1300). [ಹರಿ$_?$ + ಉಳಿಗ$_2$ (< ಊಳಿಗ)]

**ಹರಿವೆ$_1$** 'ಪರವಿ' ನೋ.

**ಹರಿವೆ$_2$** 'ಹಱುಹೆ' ನೋ.

**ಹರಿವೆಸ** 'ಪರಿವೆಸ' ನೋ.

**ಹರಿವೆಸಗೆಯ್** 'ಪರಿವೆಸಂಗೆಯ್' ನೋ.

**ಹರಿವೇಗ** (ನಾ). ವಾಯುವೇಗ; ತೀವ್ರವಾದ ಗತಿ: ಹರಿನಂದನನ ದಿವ್ಯಹರಿಮಯವರೂಥಮಂ ಹರಿವೇಗದಿಂದೆಸೆವ ಹರಿಚತುಷ್ಟಯಮುಮಂ ಹರಿಯುಮಂ . . . ಘಾತುಗಿಡಿಸಿ (ಜೈಮಿಭಾ. ೨೫-೪೭). [ಸಂ.]

**ಹರಿವೊಬ್ಬೆ** (ನಾ). ಹಸಿರು ಬೇಲಿ (?) : ಕಲ್ಲಿಯ ಹರಿವೊಬ್ಬ ಮುಂತಾಗಿ ತೇಗಮರದ ಉಭಯಮಾರ್ಗದ ನಡವಣಮೇರಿಯರ ಮೇಲೆಯ ಪಡುವಣ ಕಟ್ಟೆ (ಎಕ. V. ಹಾಸನ. ೧೩೩-೭೪ ; 1406). [ಹರಿ$_4$ + ಒಬ್ಬೆ$_1$ (< ಒಟ್ಬೆ)]

**ಹರಿವೊಲೆ** 'ಹರಿಯೊಲೆ' ನೋ.

**ಹರಿವ್ರಜ** (ನಾ). ಕುದುರೆಗಳ ಸಮೂಹ ; ಅಶ್ವಗಳ ಗುಂಪು : ನೆರೆದಾಡುವಟ್ಟೆ ಬೆರ್ಚಿಸೆ ಹರಿವ್ರಜಂ ತೊಲಗಿ ತೊಲಗಿ ಬರೆ ಗೋಮೂತ್ರಂಬರಿಯ ರಥಂ (ಶಾಂತಿಪು. ೪-೩೮). [ಸಂ.]

**ಹರಿಶಕ್ತಿ** (ನಾ). ೧. ಸಿಂಹದ ಸಾಮರ್ಥ್ಯ. ೨. ಸಿಂಹದಂತೆ ಬಲವುಳ್ಳವನು; ಸಿಂಹಬಲ: ಹರಿಶಕ್ತೀ ಭವದಸ್ತ್ರಭಿನ್ನ ಕರಿಕುಂಭೋನ್ಮುಕ್ತ ಮುಕ್ತಾಫಲೋತ್ಕರಮಂ ಮಾಱಲೆವೋಗಿ ರಾಜಗೃಹದೊಳ್ ಕಾಣ್ಬೆಂ (ಅರ್ಧನೇ. ೩-೭೧). [ಸಂ.]

**ಹರಿಶರ** (ನಾ). ೧. ವಿಷ್ಣುವಿನ ಬಾಣ. ೨. ನಾರಾಯಣಾಸ್ತ್ರ : ಬೆರಳ ತುದಿಯಲಿ ಬೊಬ್ಬಿಱಿದು ಹರಿಶರಕೆ ಕೈನೀಡಿದನು ಕಲ್ಪದ ಹರನವೊಲು ಹರರೂಪ ಹೊಂಗಿದ ನಧಿಕರೋಷದಲಿ (ಕುಮ್ಮಾದ್ರೋ. ೧೯-೧೩). ೩. ವಿಷ್ಣುವನ್ನೇ ಬಾಣವನ್ನಾಗಿ ಪ್ರಯೋಗಿಸಿದವನು; ಶಿವ: ಆಂ ಸೆಣಸಲ್ ಸಮರ್ಥನೇ ಹರಿಶರನೊಳ್ ಪರಿಗತಕೃಶಶರಂ (ಶಬಶಂ. ೪-೧೨೨). [ಸಂ.]

**ಹರಿಶಿಶು** (ನಾ). ಸಿಂಹದ ಮರಿ: ಹರಿಶಿಶುಗೆ ಮಿಸುಪ ದಂಷ್ಟ್ರಾಂಕುರಮುದಯಿಸುವಂತೆ . . . ಅವುಳ ರದನೋತ್ಕರಮುದಯಿಸಿದುದು ಕುಮಾರವದನಾಂತರದೊಳ್ (ಕುಸುಮಾ. ೭-೧೪೭). [ಸಂ.]

**ಹರಿಶೌರ್ಯ** (ನಾ). ಸಿಂಹದಂತೆ ಪರಾಕ್ರಮವುಳ್ಳವನು: ಹರಿಶೌರ್ಯಂ ಹರಿ ತೋಱಿದಂ ಹರಿಯ ಸಾಮರ್ಥ್ಯಕ್ಕೆ ಸಾಮರ್ಥ್ಯಮಂ (ಜಗವಿ. ೧೩-೯೫). [ಸಂ.]

**ಹರಿಶ್ಚಂದ್ರ** (ಗು). ೧. ಹೊಂಬಣ್ಣದ ಕಾಂತಿಯುಳ್ಳ. (ನಾ). ೨. ಸೂರ್ಯ ವಂಶದಲ್ಲಿ ಹುಟ್ಟಿ, ಸತ್ಯಕ್ಕೆ ಹೆಸರಾದ ಒಬ್ಬ ಪ್ರಸಿದ್ಧ ರಾಜ; ತ್ರಿಶಂಕುವಿನ ಮಗ: ಹಿಂದಣರಸುಗಳನುದ್ಧರಿಸಲೆಂದವತರಿಸಿದ ವಸುಧಾಧಿಪತಿ ಹರಿಶ್ಚಂದ್ರನಾತನ ಸತ್ಯದೆಸಕಮಂ ಪೊಗಳಲೆನ್ನಳವೆ (ಹಚಾಕಾ. ೨-೭); ದಿಲೀಪ ಮಾಂಧಾತರು ಹರಿಶ್ಚಂದ್ರಾದಿ ಪೃಥ್ವೀಶ್ವರರನಂತರು ಮೃತ್ಯುವಶವರ್ತಿಗಳು (ಕುಮ್ಮಾದ್ರೋ. ೭-೩೮). [ಸಂ.]

**ಹರಿಸ** 'ಹರುಸ' ನೋ.

**ಹರಿಸಂಗ** 'ಪರಿಸಂಗ' ನೋ.

**ಹರಿಸಂಯೋಗಿ** (ನಾ). ೧. ವಿಷ್ಣುವಿನೊಡನೆ ಕೂಡಿದುದು; ವಿಷ್ಣುವಿನ ಸಹವಾಸವುಳ್ಳುದು. ೨. ಗಿಳಿಗಳ ಒಡನಾಟವುಳ್ಳುದು; ಗಿಳಿಗಳ ಸಂಬಂಧ ವುಳ್ಳುದು. ೧, ೨ : ಹರಿಸಂಯೋಗಿಯಾಗಿ ಲಕ್ಷ್ಮೀದೇವಿಯಂತೆ ಗೋಪಿಯರೊಳೊಂದಿ ಬಿಸಜಾಕ್ಷನಂತೆ ಸುವರ್ಣಯುತವಾಗಿ ಪರದನಂತೊಪ್ಪುಗುಂ ಶಾಲಿಯ ವನಂ (ಪದ್ಮರಾ. ೮-೧೩). [ಸಂ. ಹರಿಸಂಯೋಗಿನ್]

**ಹರಿಸಖ** (ನಾ). ಅಗ್ನಿಯ ಮಿತ್ರ; ವಾಯು: ಎಮ್ಮಾ ಪುರದ ಸಿರಿಯನು ನೋಡಬೇಕೆಂದಾ ವಿಭೀಷಣನು ಕರಯುಗವ ಮುಗಿದೆಱಗಿ ಜಾಂಬವ ಹರಿಜ ಹರಿಸುತ ಹರಿಸಖನ ಸುತವೆರಸಿ ಲಂಕೆಯ ಹೊಕ್ಕ ರಾಘವನನುಜನೊಡಗೂಡಿ (ಕೌಶಿರಾ. ೪೨-೩೭). [ಸಂ.]

**ಹರಿಸಗೊಳಿಸು** (ಕ್ರಿ). ಸಂತೋಷಪಡಿಸು; ಹರ್ಷಗೊಳಿಸು: ನನ್ನ 'ಇಂದ್ರಚಾಪ'ವನ್ನು ಗುರುಗಳೂ ಹಿರಿಯರೂ ಮಿತ್ರರೂ ಓದಿ ಮೆಚ್ಚಿ . . . ನನ್ನನ್ನು ಹರಸಿದ್ದಾರೆ, ಹರಿಸಗೊಳಿಸಿದ್ದಾರೆ (ಗಾಥಾಸ. VI. ಮುನ್ನುಡಿ).

[ಹರಿಸ (< ಹರುಸ) + ಕೊಳ್$_1$ + – ಇಸು$_1$]

**ಹರಿಸತಿ** (ನಾ). ಇಂದ್ರನ ಹೆಂಡತಿ; ಇಂದ್ರಾಣಿ; ಶಚಿ: ಹರಿಸತಿ ಜಿನತನುವಂ ಜಾತರೂಪವಿಳಸಿತನಿಧಾನಮಂ ಕಂಡೊಸೆದಳ್ (ಚಂದ್ರಪು. ೧೨-೫೨). [ಸಂ.]

**ಹರಿಸಲುಗೆ** (ನಾ). ಹೆಚ್ಚಿನ ಸಲುಗೆ ,– ಸದರ : ಎಮ್ಮಯ್ಯನೆಮ್ಮವ್ವೆಯೊಳಗ ಹೊಕ್ಕು ಕೆಡುವಿರೊಯ್ಯದಿರೆಂದು ನಾನೊಱಲುತಿರಲಿರಲು ಕಡೆಗಣಿಸಿ ಬೋನಮಂ ಕೊಂಡದಕ್ಕಕ್ಕಿಯಂ ಕೊಡುವವೆಂದೆನುತ ಹರಿ[ಪಾಠಾಂ. ರು]ಸಲುಗೆಯಿಂದೊಯಿದರು (ಸೋಮಚ. ೨-೧೧೧). [ಹರ್ಿ$_3$ (< ಪರ್ಿ$_3$) + ಸಲುಗೆ (< ಸಲ್ಗೆ)]

**ಹರಿಸವಳ** (ನಾ). ವಾರ್ಷಿಕ; ವರ್ಷಂಪ್ರತಿ (?): ಪೊಂಗೆ ತಿಂಗ[ಳ್ಗೆ] ಕಿಱಿಯ ಪಾಗ ಬಡ್ಡಿ ಲೆಕ್ಕದೆ ಹರಿಸವಳದ ಬಡ್ಡಿಯ ಹೊಂಗೆ ದಿವಸ [ವ]ಳಂ ಪನ್ನಿರ್ವರ್ಬ್ರಾಹ್ಮಣರ್ಗ್ಗೆ ಶತ್ರಮಂ ನಡಯಿಸುವುದೆಂದು . . . ಕೊಟ್ಟ ಲೊಕ್ಕಿ ಪೊಂಗದ್ಯಾಣವೆರ್ಪ್ಪತ್ತು (ಸೌಇಇ. XV, ೧-೧೯; 1059). 'ದೇವಸಬಳ' ಪರಾ.

[P ಇದು 'ಪರಿಸವಳ' ಎಂಬುದರ ಅಪಲಿಖಿತವಿರಬಹುದೆ ?]

**ಹರಿಸಾಲೆ** (ನಾ). ಗಿಣಿಗಳ ನೆಲೆ,– ವಾಸಸ್ಥಾನ (?): ಹರಿಗಳೈಶ್ವರ್ಯದರಮನೆ ಹರಿಯ ಹರಿಸಾಲೆ ಹರಿಯ ವಾಹನಗಳಿಹ ಗೊತ್ತು ಹರಿಯಿಹ ತಾಣ . . . ಹರಿಮಯದರಣ್ಯದೊಳು ಬರುತಿರ್ದ ಹರಿಯಜಸುರಪರುಗಳೊಡೆಯನು (ಭಕ್ತಾಚ. ೧-೧೮). [< ಸಂ. ಹರಿಶಾಲಾ]

**ಹರಿಸು$_1$** 'ಪಱಿಯಿಸು' ನೋ.

**ಹರಿಸು$_2$** 'ಪರಿಯಿಸು' ನೋ.

**ಹರಿಸುಟ, ಹರಿಸುಟಗೆ** (ನಾ). ಒಂದು ಬಗೆಯ ಆಟ (?): ಓಡಿ ಹೋಗುತ ಮರಳಿ ಹಿಂದಕೆ ಕೋಡ ಕೆಯ್ಯವರುಗಳನೆಡಿಸಿ ಬೀಳುತೇಳುತಲಿ ಹಾಡುತಲಿ ನಲಿನಲಿದು ಹರಿಸುಟಯಾಡುತಲಿ ನಾನಾವಿನೋದವ ಮಾಡುತಿರ್ದನು ಜಗದೊಳಾ ಪ್ರಭುಲಿಂಗ ಲೀಲೆಯಲಿ (ಪ್ರಭುಲೀ. ೨೨-೩೫). **ಹರಿಸುಟಗೆ:** ಹರಿಯಯಿವೆಯನು ಮೆಟ್ಟಿದೆನು ಶಂಕರನರ್ಧಾಂಗದೊಳು ನೆಟ್ಟನೆ ಹರಿಸುಟಗೆಯಾಡಿದೆನು ಬ್ರಹ್ಮನ ಬಾಯ ಮುದ್ರಿಸಿದೆ (ಪ್ರಭುಲೀ. ೭-೫೭).

[?./ ಸಂ. ಚುಟಿಕಾ = (ಹೆಬ್ಬೆರಳು ನಡುಬೆರಳನ್ನು ಸೇರಿಸಿ) ಚಿಟಿಕೆ ಹಾರಿಸುವುದು]

**ಹರಿಸುಟಗೆ** 'ಹರಿಸುಟ' ನೋ.

**ಹರಿಸುತ** (ನಾ). ೧. ವಿಷ್ಣುವಿನ ಮಗ; ಮನ್ಮಥ : ಮತ್ತಮಲ್ಲಿ . . . ಪಂಚ ಬಾಣಕ್ಕೆ ತಕ್ಕ ಕುಸುಮಶರಮಂ ಬೆಸಲೆಯಾಗದ ಮಲ್ಲೀವಲ್ಲರಿಗಳಿಲ್ಲ ಹರಿಸುತಂಗೆ ಗಿರಿದುರ್ಗಮಾಗಿ ಪಾಳಿಸದ ಕೃತಕಶೈಲಮಿಲ್ಲ (ಪುಷ್ಪಪು. ೯-೨೧ ವ). ೨. ಇಂದ್ರನ ಮಗ; ಅರ್ಜುನ : ಹರಿಸುತನೆಯ್ದೆವಂದಿರದ ನೋಡಿ . . . ಏರ್ವಾಯಮಪ್ಪಿಸುವಿಂದಿಸುವುದುಂ (ನೇಮಿಪು. ೧೧-೫೧). ೩. ಅಗ್ನಿಯ ಮಗ; ಸುಗ್ರೀವನ ಕಪಿನಾಯಕರಲ್ಲಿ ಒಬ್ಬನಾದ ನೀಲ: ಜಾಂಬವ ಹರಿಜ ಹರಿಸುತ ಹರಿಸಖನ ಸುತವೆರಸಿ ಲಂಕೆಯ ಹೊಕ್ಕ ರಾಘವನನುಜನೊಡಗೂಡಿ (ತೊರರಾ. ೪೨-೬೭). ೪. ಸೂರ್ಯನ ಮಗ; ಸುಗ್ರೀವ: ಬೋಯೆಂದು ಹತ್ತಿತು ಹುರಿಕಟಿಸಿ ಹರಿಸುತನ ನೇಮದಲಿ . . . ಬಾಲೇಂದುಧರನ ಗಿರಿಧರನ ದುರ್ಗವನೀ ಕಪಿವ್ರಾತ (ತೊರರಾ. ೬-೧೭-೪೨). [ಸಂ.]

**ಹರಿಸೇನೆ** (ನಾ). ಕಪಿಗಳ ಪಡೆ,– ಸೈನ್ಯ : ಹಲ್ಲುಗಿರುಕಿನ . . . ಹರಿಸೇನೆ ಸೈಗೆಡೆದಿರ್ದುದು (ತೊರರಾ. ೬-೩೭-೧೫). [ಸಂ. ಹರಿಸೇನಾ]

**ಹರಿಸೇವೆ** (ನಾ). ೧. ವಿಷ್ಣುವಿಗೆ ಸಲ್ಲಿಸುವ ಕೈಂಕರ್ಯ ; ಪರಮಾತ್ಮನ ಸೇವೆ: ಸಕಲವೆಲ್ಲವು ಹರಿಸೇವೆಯೆನ್ನಿ (ಪುರಂದ. ೧-೭೧ ಪಲ್ಲವಿ). ೨. ದಾಸಯ್ಯಗಳು ವರ್ಷಕ್ಕೊಮ್ಮೆ ನಡೆಸುವ ವೆಂಕಟರಮಣನ ಸೇವೆ ಮತ್ತು ಆ ಸಂದರ್ಭದಲ್ಲಿ ಹಂಚುವ ಪಂಚಕಜ್ಜಾಯದ ಪ್ರಸಾದ : ಇದಾದ ಮೇಲೆ ಮಾರನೆ ದಿನ ಹರಿಸೇವೆ ನಡೆಯುವುದು (ಹುಟ್ಟಿಹ. ೧೨); ದಾಸಯ್ಯನಿಗೂ ಅವನ ಅನುಚರರಿಗೂ ಹರಿಸೇವೆ ಸಲ್ಲುತ್ತದೆ (ಹಳ್ಳಿಬಾ. ೫೭). [ಸಂ. ಹರಿಸೇವಾ]

**ಹರಿಸೈನ್ಯ** (ನಾ). ಕುದುರೆಗಳ ಪಡೆ; ಅಶ್ವದಳ: ಹರಿಸೈನ್ಯಂ ಹಸ್ತಿಸೈನ್ಯಂ ಪಱಿಪಟಯಿಗೆ . . . ಮಂತ್ರಪಾಳರ್ಬೆರಸಿಂದ್ರಂ ಬರ್ಪವೊಲ್ಶಾಗಧನಧಿಕಬಳಂ ಬಂದನಾನಂದದಿಂದಂ (ಅರ್ಧನೇ. ೫-೬೯). [ಸಂ.]

**ಹರಿಹ** (ನಾ). ಹರಿಯುವಿಕೆ; ಪ್ರವಾಹ: ಓಘಃ, ಪ್ರವಾಹಃ, ವೇಣೀ, ಧಾರಾ, ಸ್ರೋತಃ, ರಯಃ – ಈ ಆಱು ತೊಱೆಯ ಹರಿಹಂ'' (ಹಲಾಯು. ೧೧೧-೪೭); ದೂಳಿಯ ಪಚ್ಚೆಯಂತೆ ಬಯಲ ಕಾಳೆಗದಂತೆ ಮೆಯ್ನೀರ ಹರಿಹದಂತೆ (ಧರ್ಮಾಮೃ. ೯-೨೩ ಅಡಿಟ); ನಗೆಯು ನಗರಾಜನಲಿ ಹರಿವ ಗಂಗಾನದಿಯ ಮಿಗಿಲಾದ ಹರಿಹದೊಲು ಹರಿಯೆ ಸೂಸಲು ತಡೆಯು (ಸಪೀಗೀ. ೭೨-೧೪). [ಹರ್ಿ$_2$ (< ಪರ್ಿ$_2$) + - ಹ$_2$ (< - ಪ$_2$)]

**ಹರಿಹಂಚಿಕೆ** (ನಾ). ಚೂರುಚೂರುಮಾಡಿ ಹಂಚುವಿಕೆ ; ತುಂಡು ತುಂಡು ಮಾಡಿ ಹಂಚುವಿಕೆ: ಭೂಮಿಯನ್ನು ಹರಿದು ಸರ್ವರಿಗೂ ಸಮವಾಗಿ ಹಂಚುವುದೇ ಸಮಾಜವಾದದ ತಿರುಳೆಂಬ ಅಂಥ ಹರಿಹಂಚಿಕೆ ಮೂರ್ಖತನವೆಂಬ . . . ಸಂಗತಿ ಆ ಹೊತ್ತಿಗಾಗಲೆ ಅವನಿಗೆ ಮನವರಿಕೆಯಾಗಿತ್ತು (ಪುನರು. ४೨೫).

[ಹರಿಹಂಚು (< ಹಱಿಪಂಚು) + - ಇಕೆ]

**ಹರಿಹಂಚು** 'ಹಱಿಹಂಚು' ನೋ.

**ಹರಿಹಯ** (ನಾ). ಇಂದ್ರ : ''ಪುರುಹೂತನಿಂದ್ರನಂಬುದರಥಂ ಶತಮುಖ್ಯಹರಿಹಯಂ ಪರ್ಜನ್ಯನಾಖಂಡಲಂ ಮರುತ್ವಾನೆನಲ್ಕೆ ಸುತ್ರಾಮನಕ್ಕುಂ'' (ಮಂಗರಾ. ೧೨-೧); ಹರಿಹಯನು ಸಸ್ಯಾಧಿಕಂಗಳ ಹೊರೆಯಲೋಸುಗ ವೃಗೆ ವ್ಯೆಯಾಗಿರುತಿಹನು ಭುವನದ್ವಯದೊಳು (ಕುವ್ಯಾಖ. ४-೬೦). [ಸಂ.]

**ಹರಿಹರ** (ನಾ). ೧. ವಿಷ್ಣು ಹಾಗೂ ಶಿವ ಎರಡೂ ದೇವತೆಗಳ ಸಂಯುಕ್ತ ರೂಪದ ಮೂರ್ತಿ : ನರರಾ ಸಂದೇಹಮಂ ಪಿಂಗಿಸಲತಿಶಯದಿಂ ಕೂಡಲೂರಲ್ಲಿ ಶೋಭಾಕರಮಪ್ಪಂತೊಂದೆ ರೂಪಂ ತಳೆದ ಹರಿಹರಂ ಕೂರ್ತು ರಕ್ಷಿಕ್ಕೆ ನಮ್ಮಂ (ಎಕ. XI, ದಾವಣ ೨೫-?; 1224); ಶ್ರೀ ಹರಿಹರದೇವರಿಗೆ ಸಲ್ಲುವ ಬಂನ್ನಿಕೋಡಸೀಮೆ ಯೊಳಗೆ ಹರಿದ್ರೆಯೆಂಬ ನದಿಯಂ ಕಟ್ಟಿ (ಎಕ. XI, ದಾವಣ. ೨೩-೬४; 1410). ೨. ವಿಜಯನಗರಸಾಮ್ರಾಜ್ಯದ ಆರಂಭದ ಅರಸುಗಳಲ್ಲಿ ಒಬ್ಬ. ೩. ಗಿರಿಜಾಕಲ್ಯಾಣವೆಂಬ ಕಾವ್ಯವನ್ನೂ ಶಿವಶರಣರ ರಗಳೆಗಳನ್ನೂ ಬರೆದು ಪ್ರಸಿದ್ಧನಾದ ಹನ್ನೆರಡನೆಯ ಶತಮಾನದ ಒಬ್ಬ ಕನ್ನಡದ ಪ್ರಸಿದ್ಧಕವಿ: ವರಗಿರಿಜಾಕಲ್ಯಾಣಮನೊರೆದಂ ವಿವೇಕಿ ಹರಿಹರದೇವಂ (ಗಿರಿಕ. ೧-४೧). ४. ಹರಿಹರೇಶ್ವರ ದೇವಾಲಯವುಳ್ಳ, ದಾವಣಗೆರೆ ತಾಲ್ಲೂಕಿನ ಒಂದು ಊರು: ಗುರುಧರ್ಮ್ಮದ್ವಿತಯಕ್ಕೆ ನೀನೆ ದಿಟದಿಂ ಪೋಲಾಳ್ವ ಕೇಳ್ . . . ನಿನ್ನ ವೊಲ್ ಧರೆ ಚೋದ್ಯಂಬಡುವಂತಿರಾರ್ ಹರಿಹರಶ್ರೀಗೇಹಮಂ ಮಾಡಿದರ್ (ಎಕ. XI, ದಾವಣ. ೨೫; 1224). ೫. [ವೀಶೈ] ವಿಷ್ಣುವನ್ನು ನಿಗ್ರಹಿಸಿದವನು; ಶಿವ: ಹರಿಹರನೆಂದು ನಿನ್ನ ನಿಜಕೀರ್ತನೆಯಂ ಶರಣಾಳಿ ಕೂಡೆ ಡಂಗುರಿಸುತೆ ಸತ್ಯಮಂ ನುಡಿಯೆ ಸೇರದು ಶಾಪಹತರ್ಗೆ (ಪಂಪಾಶ. ೯೫); ಹರನು ಹರಿಯಂ ಹರಿಸಿದಿದು ಕಾರಣದಿ ಹರಿಹರನು (ಬಸಪು. ೫೭-೨೮). ೬. ದಕ್ಷಬ್ರಹ್ಮನನ್ನು ಕೊಂದವನು; ವೀರಭದ್ರ: ಹರಿಹರನ ಪಿತನ ಜಯಜಯವೆಂದು ವಂದಿಗಳ್ ಕೊಂಡಾಡುತಿರಲು (ಚೆಬಪು. ೩೦-೧४). [ಸಂ.]

**ಹರಿಹಲಗೆ** (ನಾ). ಮರದ ಹಲಗೆಯ ಒಂದು ತುದಿಗೆ ಹುಡುಗನನ್ನು ಕೂರಿಸಿ, ಇನ್ನೊಂದು ತುದಿಗೆ ಹಗ್ಗವನ್ನು ಕಟ್ಟಿ ಎಳೆದುಕೊಂಡು ಹೋಗುವ ಒಂದು ಬಗೆಯ ಆಟ (?) : ಗುಡುಗು ಗುತ್ತಿನ ಚೆಂಡು . . . ಹರಿಹಲಗೆ ನಿಡುಗವಣೆ ಕೆಡಹು ಕುಟ್ಟಿಗನಾದಿಯಾದವಗಡ ವಿನೋದದಲಾಡಿದರು ಪಂಗಡದಲ್ಲೆವರು ನೂರ್ವರಿವರಿತ್ತಂಡ ವೊಂದಾಗಿ (ಕುವ್ಯಾಅ. ೬-೨). [ಹರ್ಿ$_2$ (< ಪರ್ಿ$_2$) + ಹಲಗೆ (< ಪಲಗೆ)]

**ಹರಿಹಾದಿ** (ನಾ). (?) : ನೆಲದೊಳಂದಧಿಕದಿ ಮೂಱು ನಾಲ್ಕೇಳನು ತಲೆ ಗುಣಿಸುತ ಲಾಟಿಂದ ಒಲಿದು ಭಾಗಿಸಿ ಬಂದೊಡವು ಹರಿಹಾದಿಯೆ ನೆಲ ಮೂಱು ಜಾತಿ ಬಾಹುಲ್ಯ (ವರ್ಧಗ. ೮-೭೦). [?]

**ಹರಿಹಾಯ್, ಹರಿಹಾಯು** (ಕ್ರಿ). ೧. (ಆಲಂ) ಬಹಳ ಸಿಟ್ಟಿಗೇಳು; ಆಕ್ರೋಶದಿಂದ ರೇಗು: ಇವರ ಮೇಲೆ ಹರಿಹಾಯ್ವುದು ವಿಚಾರಿಗಳ ಮತಮಲ್ಲ (ಮಲ್ಲಚ. ೮-೩); ಪ್ರಭುರಾಯರು ಸಿಪಾಯಿಯ ಮೇಲೆ ಹರಿಹಾಯ್ದರು (ಕೊಂದಯಾ. ೫೨). ೨. ಆತುರದಿಂದ ಮುಂದೆ ಬರು; ತವಕದಿಂದ ಮುಂದಾಗು: ಹೊಸ ಶಿಕ್ಷಕಿ ಬಂದಾಗ ಎಲ್ಲಾ ಮಾಸ್ತರರು ಹರಿಹಾಯ್ದು ಮಾತನಾಡಿಸಿದ್ದರಿಂದ (ಕಾವೇರಿ. ೭). **ಹರಿಹಾಯು:** ೧. ಶಾಲೆಯಲ್ಲಿ ದುಡಿದು ಬಂದ ಲಕ್ಷ್ಮೀಪತಯ್ಯ ಮನೆಯಲ್ಲಿ ಕಾವೇರಿಯ ಮೇಲೆ ಹರಿಹಾಯುತ್ತಿದ್ದರು (ಕಣ್ಣಿ. ೭೨); ಸ್ವಲ್ಪ ಶಾಂತವಾಗಿರಿ ಸುಮ್ಮನೆ ಹರಿಹಾಯ ಬೇಡಿರಿ (ಕಮನೆ. ೧೮೫). [ಹರ್ಿ$_2$ (< ಪರ್ಿ$_2$) + ಹಾಯ್$_1$ (< ಪಾಯ್$_1$)]

**ಹರಿಹಾಯು** 'ಹರಿಹಾಯ್' ನೋ.

**ಹರಿಹು$_1$** 'ಪರಪ್ಪು$_2$' ನೋ.

**ಹರಿಹು$_2$** 'ಪರಿವು' ನೋ.

**ಹರಿಹುಗಿಲ್,** ಹರಿಹುಗಿಲು (ನಾ). ೧. ಸೂರೆಗೆ ಈಡಾದುದು; ದಾಳಿಗೆ ಒಳಗಾದುದು: ಇಳೆಯೊಳ್ ಕಾಡ್ಕೆದ ಬೇಡಗ್ಗಿದು ಹರಿಹುಗಿಲಾಯ್ತು (ಕುಸುಮಾ. ೧೪-೪೩). **ಹರಿಹುಗಿಲು :** ೧. ಅದ್ದ ಹರುಷದ ಹರಹು ಹರಿಹುಗಿಲಾಯ್ತು ಭಯರಸಕೆ (ನಿಭಾಗ. ೧೦-೮೭-೨೦). ೨. ದಾಳಿ; ಆಕ್ರಮಣ : ಯಾದವರಗಡುತನ ನಮ್ಮಲ್ಲಿ ಸಲ್ಲದು . . . ನಿಂ ಹರಿಹುಗಿಲು ಮಾಡುವ ಮಂತ್ರ ಸಾಕಿನ್ನು (ಕುಮ್ಮಾಉ. ೩೬೯. ೯-೪೦); ಉಸುರು ಗರಗಸದಲ್ಲಿ ತನುವಿನ ಬೆಸುಗೆಯನು ಬಿಡುವಾಡಿ ಬಿಸುಡದೆ ಹಸುತ್ಯಷೆಯ ಹರಿಹುಗಿಲಿನುಪಟಳಕಂಜಿ ಮುಖಗೊಡದೆ ದಶವಿಧೇಂದ್ರಿಯದಾಳಿಯಲಿ ಶಂಕಿಸದೆ ನಿಲುವೊಡೆ ಸಿದ್ಧರಾಮನ ದೆಸೆಯ ನೆನೆಯಲು ಭಕ್ತರಹರ್ಕೃ (ಪ್ರಭುಲೀ. ೧೮-೮).

[ಹರಿ$_2$ (< ಪರಿ$_2$) + ಹುಗಿಲ್$_0$ (< ಪುಗಿಲ್$_1$)]

**ಹರಿಹುಗಿಲು** 'ಹರಿಹುಗಿಲ್' ನೋ.

**ಹರಿಹೇಷಾಧ್ವನಿ** (ನಾ). ಕುದುರೆಗಳ ಕೆನೆತ ,– ಕಿಳಿರು: ಹರಿಹೇಷಾಧ್ವನಿ ಗಂಧಸಿಂಧುರಘಟಾಘಂಟಾಸ್ವನಂ . . . ದಿಕ್ಕರಿಕರ್ಣಾಂತರವಾಗೆ ನೀಳ್ದುದು ನೃಪಶ್ರೀಜೈತ್ರಯಾತ್ರೋತ್ಸವಂ (ಪುಷ್ಪಪು. ೮-೩೨). [ಸಂ.]

**ಹರಿಹೊನಲು** 'ಪರಿವೊನಲ್' ನೋ.

**ಹರೀಂದ್ರ** (ನಾ). ಶ್ರೇಷ್ಠವಾದ ಸಿಂಹ : ಕಲಿತಪದ್ಮಪತ್ರಾಂಬಕೆ ಹರೀಂದ್ರವರವಾಹನೆ . . . ಗತಿ ಭವತ್ಪದಂ ಶಾಂಭವೀ (ರಾಜಶೇ. ೭-೧೦೬). [ಸಂ.]

**ಹರೀತಕಿ** (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ; ಅಳಲೆ; ಅಣಿಲೆ : ಏಱುದಿನಂ ಸುರಭಿಯ ಜಳದೊಳ್ ಭಾವಿಸಿ ಹರೀತಕಿಯನಚ್ಚೊಡಂಬಣಂಗಳ್ ಕಿಡುಗುಂ (ಲೋಕೋಪ. ೯-೭೫). [ಸಂ. ಹರೀತಕೀ]

**ಹರು** 'ಪಱಿವು' ನೋ.

**ಹರುಕ** 'ಪಱುಕ' ನೋ.

**ಹರುಕಣೆ** 'ಪರಿಕಣೆ' ನೋ.

**ಹರುಕಲು** (ನಾ). ಹರಿದುದು ; ಚಿಂದಿಯಾದುದು : ಈ ಪುಸ್ತಕ ತುಂಬ ಹರುಕಲಾಗಿದೆ (ರೂಢಿ). [ಹರುಕು (< ಪಱುಕು) + - ಅಲು (< - ಅಲ್$_2$)]

**ಹರುಕು** 'ಪಱುಕು' ನೋ.

**ಹರುಕುಮುರುಕು** 'ಪಱುಕು' ಪರಾ.

**ಹರುಗುಣೆಗೂಟ** (ನಾ). ನೇಯ್ಗೆಯಲ್ಲಿ ಬಳಸುವ ಒಂದು ಸಾಧನ (?): ಹರುಗುಣೆಗೂಟ ಶವಣೆಗೋಲು ಲಾಳಿಯು ಮುರಿಗಟ್ಟೆಗೆಯು ಅಡ್ಡಗಟ್ಟು ಹರಿಟೆ ಹೊಕ್ಕುಳಗೂಟ ನಾಲಿಗೆಗೂಟವನಿರದೊಂದುಳಿಯದೆ ಕಟ್ಟಿದನು (ಅಮುಸಾಂ. ೫-೭).

[? + ಗೂಟ (< ಗೂಂಟ)]

**ಹರುಗೋಲು** 'ಪಱಿಗೋಲ್' ನೋ.

**ಹರುಣೆ** (ನಾ). ಶಕುನದ ಹಲ್ಲಿ (?) : ಇದು ದಲ್ ದಿಗ್ವಿಜಯಂ ರಣಾಜಿರದೊಳಾ ರಾನುಂ ಭರಂಗೆಯ್ದು ತಾಗಿದಪರ್ಬೆಳ್ಪಿದೆಯಾ ಬಲಂ ವಿಧುಬಲಂ ತಾರಾಬಲಂ ನೋಡಬೇಡಿದ ಬೇಳಂಬಮನಂತಕಂಗಮೆನಗಂ ತೀರ್ದಂಬುದೇಂ ವಕ್ರಮೆಂಬುದುಮೇಂ ಮಿಕ್ಕಿನ ಹಕ್ಕಿಯೊಳ್ ಹರುಣೆಯೊಳ್ ಸೇನಾಸಹಸ್ರಂಗಳುಂ ಎಂದು ತೋಱಿದುತ್ಸಾತಕ್ಕೆ ಸಡೆಯದೆಯುಂ (ಅನಂಪು. ೧೩-೮೮). [< ಅರಣೆ ?]

**ಹರುಬರಿ** 'ಪರಿವರಿ' ನೋ.

**ಹರುಬು** 'ಹರಿಬ' ನೋ.

**ಹರುವಿ** 'ಪರವಿ' ನೋ.

**ಹರುವು** 'ಪಱಿವು' ನೋ.

**ಹರುವೆ$_1$** 'ಪರವಿ' ನೋ.

**ಹರುವೆ$_2$** 'ಹಱುಹೆ' ನೋ.

**ಹರುಷ** 'ಹರುಸ' ನೋ.

**ಹರುಷಂದೋಱು** (ಕ್ರಿ). ಆನಂದಗೊಳಿಸು; ಸಂತೋಷಪಡಿಸು: ಪೊಂದೊಟ್ಟಿಲೊಳಗೆ ಶಿಶುಲೀಲೆಯಿಂ ಕೆಲದಿನಂ ತಾಯ್ಗೆ ಹರುಷಂದೋಱಿದಂ ಕುವರನು (ಚೆಬಪು. ೫-೩೫). [ಹರುಷ (< ಹರುಸ) + ತೋಱು]

**ಹರುಷಂಬಡು** (ಕ್ರಿ). ಸಂತೋಷವನ್ನು ಹೊಂದು; ಆನಂದಿಸು: ದಿಟ್ಟಿಪರ ದಿಟ್ಟಿಗಳಿಗಚ್ಚರಿ ಹುಟ್ಟಿ ಪೊನ್ನುಕ್ಕಿದೊಡೆ ಹರುಷಂಬಟ್ಟು ಭೂಪಂ ಬಸವರಸನಂ ಕೀರ್ತಿಸುತಮಿರಲು (ಬಸವು. ೧೧-೧೫). [ಹರುಷ (< ಹರುಸ) + ಪಡು$_1$]

**ಹರುಷಂಬೊಱು** (ಕ್ರಿ). = ಹರುಷಂಬಡು: ಹರುಷಂಬೊತ್ತು ಲಿಂಗಸ್ಪರುಶನದ ನಿಯಮಂಗಳಂ ತೀರ್ಚಿ (ಬಸವು. ೬೦-೩೩). [ಹರುಷ (< ಹರುಸ) + ಪೊಱು]

**ಹರುಷಗೆಡು** 'ಹರುಸಂಗೆಡು' ನೋ.

**ಹರುಷತಿಕೆ** (ನಾ). ಪರಮಾನಂದ: ಮುನ್ನೂಱಱುವತ್ತು ನಕ್ಷತ್ರಕ್ಕೆ ಬಾಯಿ ಬಿಟ್ಟುಕೊಂಡಿಪ್ಪುದೆ ಮುತ್ತು ಅದು ಸ್ವಾತಿಗಲ್ಲದೆ ಬಾಯ್ದೆಱೆಯದು ಕೇಳು ಕೇಳಾ ತಂದೇ ಎಲ್ಲವಕ್ಕೆ ಬಾಯ ಬಿಟ್ಟರೆ ತಾನೆಲ್ಲಿಯ ಮುತ್ತಪ್ಪುದೂ ಪರಮಂಗಲ್ಲದೆ ಹರುಷತಿಕೆಯಿಲ್ಲೆಂದು ಕರಣಾದಿಗುಣಂಗಳ ಮಱೆದರು (ಬಸವ. ೮೧೯). [< ಹರುಷ]

**ಹರುಷನ** (ನಾ). ಹರ್ಷ; ಆನಂದ: ದರುಶನವಾಯಿತು ಹರುಷನವಾಯಿತು ಗುರುವೆಯೆನ್ನಯ ಕಲ್ಪತರುವೆ (ಕೋಡಚೆ. ೧-೧೨೭). [< ಸಂ. ಹರ್ಷಣ]

**ಹರುಷಪುಳಕ** (ನಾ). ಸಂತೋಷದಿಂದ ಉಂಟಾಗುವ ರೋಮಾಂಚನ: ಹರುಷಪುಳಕದ ಹರಹಿನಲಿ . . . ಅರಿದಿಶಾಪಟಮಲ್ಲ ಬಂದನು ಪಯಣಗತಿಗಳಲಿ (ತೊರರಾ. ೧-೬-೭). [< ಸಂ. ಹರ್ಷಪುಲಕ]

**ಹರುಷಭೋಗ** (ನಾ). ಸಂತೋಷದ ಸೌಭಾಗ್ಯ; ಆನಂದದ ಸಮೃದ್ಧಿ: ಉರುಳುರುಳು, ಸಾಗರವೆ, ಮುನ್ನೀರಿನಾಗರವೆ, ತೆರೆತೋಳ್ಗಳಿಂದಯಾಲಿಂಗಿಸಿ ಧರಿತ್ರಿಯಂ ವರುಷಶತ ಗತವಾದರಳಿಯದನುರಾಗದಲಿ ಹರುಷಭೋಗದಲಿ! (ಚಿತ್ರಾಂಗ. ೬೫-೧೭೬೧). [< ಸಂ. ಹರ್ಷಭೋಗ]

**ಹರುಷವೇಱು** (ಕ್ರಿ). ಸಂತೋಷವನ್ನು ತಾಳು: ಬಿಜ್ಜಳನ ಮೊಗಂ ಲಜ್ಜೆಯೇಱೆ ಶರಣರ ಮೊಗಂಗಳ್ ಹರುಷವೇಱೆ (ಬಸರ. ೮-೧೨೯).

[ಹರುಷ (< ಹರುಸ) + ಏಱು$_1$ (< ಏಱ್$_1$)]

**ಹರುಷಾಶ್ರು** (ನಾ). ಆನಂದದಿಂದ ಕಣ್ಣಿನಲ್ಲಿ ಬರುವ ನೀರು; ಆನಂದಾಶ್ರು: ಇಳಿಯೆ ಹರುಷಾಶ್ರುಗಳು ಸಲೆ ಕಂಗಳಲಿ ಪರಮಾನಂದವಾಗಲು ನಳಿನನಾಭನು . . . ಸೆಳೆದು ಬಿಗಿಯಪ್ಪಿದನು ಭರತನ (ಕಾಶಿರಾ. ೪೪-೪೫). [< ಸಂ. ಹರ್ಷಾಶ್ರು]

**ಹರುಷಿತ** (ಗು). ೧. ಸಂತೋಷವನ್ನು ಹೊಂದಿದ; ಪ್ರಸನ್ನಗೊಂಡ : ಮತ್ತೆಯುಂ ಮಣಿಭೂಷಣಂಗಳನಿತ್ತು ಸತತಾನಂದಹರುಷಿತಚಿತ್ತದಿಂದಂ ಕಳುಹಿದನು (ಬಸವು. ೫-೭೦). (ನಾ). ೨. ಸಂತೋಷ ಹೊಂದಿದವನು; ಆನಂದಿತನಾದವನು: ನಸುನಗುತ ಗುರು ಕೌರವಮಹೀಶನ ಮೊಗದ ಸುಮ್ಮಾನಕ್ಕೆ ಹರುಷಿತನಾಗುತಿಂತೆಂದ (ಕುಮ್ಮಾದ್ರೋ. ೧೦-೪೫). ೩. ಸಂತೋಷ; ಆನಂದ: ಬಸವಮಂತ್ರಿಯನು ಸ್ಮಿತಮುಖಾಂಬುಜನಾಗುತಂ ಹರುಷಿತದೊಳೊಡನೊಡನಪ್ಪಿ ಕರುಣಾಮೃತರಸದೊಳೋಲಾಡಿಸಲು ಮಾಹೇಶ್ವರರು ನಲಿದು (ಬಸವು. ೨೨-೬೩). [< ಸಂ. ಹರ್ಷಿತ]

**ಹರುಷಿತೆ** (ನಾ). ಸಂತೋಷ ಹೊಂದಿದವಳು; ಆನಂದಿತೆ: ಪರಮಹರುಷಿತೆಯಾಗಿ ಮನವಚ್ಚರಿವಡುತ್ತಾ ಓಹಿಲಯ್ಯಗೆ ಧರಣಿಯೊಳು ಸಾಷ್ಟಾಂಗದಂಡಪ್ರಣವಮಂ ಮಾಡಿ (ಬಸವು. ೪೪-೪೨); ಕೇಳಿ ಹರುಷಿತೆಯಾದಳುತ್ತರೆಯೋಲಗಕೆ ಬಂದು . . . ಕೈಮುಗಿದೆಂದಳೀ ಹದನ (ಕುಮ್ಮಾವಿ. ೫-೨೮). [< ಸಂ. ಹರ್ಷಿತಾ]

**ಹರುಷಿಸು** (ಕ್ರಿ). ಸಂತೋಷಪಡು; ಆನಂದವನ್ನು ಹೊಂದು: ಅಂಗೈತಳದಲಿಹ ಪರುಷವನು ಕಲ್ಲೆಂದು ಟೆಕ್ಕೆಯ ಹರಳಿನಲಿ ಹರುಷಿಸುವ ಮೂಢಮನುಷ್ಯರಂದದಲಿ ಅರಸಕೌರವನೆಂದನು (ಕುಮ್ಮಾಆ. ೧೬-೭); ಸಕಲಜನ ಹರುಷಿಸಿತು ಹಯಮೇಧದಲಿ (ತೊರರಾ. ೧-೭-೫೧). [ಹರುಷ (< ಹರುಸ) + - ಇಸು$_1$]

**ಹರುಷೋನ್ನತಿ** (ನಾ). ಮಿಗಿಲಾದ ಸಂತೋಷ; ಆನಂದಾತಿಶಯ: ಮುನ್ನ ಸಾರಥಿಯಹನು ನೋಡುವೆನೆನುತ ವಹಿಲದಲಿ ಬೆಸ್ಸಲಬಲೆಯನ್ನದಲಾ ಸಂಪನ್ನಬಲ ನೋಲಗಕೆ ಬರೆ ಹರುಷೋನ್ನತಿಯಲುತ್ತರಕುಮಾರನು ಕರೆದು ಮನ್ನಿಸಿದ (ಕುಮ್ಮಾವಿ. ೫-೬೯). [< ಸಂ. ಹರ್ಷೋನ್ನತಿ]

**ಹರುಸ, ಹರಿಸ, ಹರುಷ** (ನಾ). ಹಿಗ್ಗು; ಸಂತೋಷ: ಸೂಕ್ಷ್ಮ - ಸುಕುಮ, ಹರ್ಷ-ಹರುಸ (ಶಮದ. ೨೫೪ ಪ್ರಯೋ); ಸಚಿವನು ಹರುಸ ಮಿಗಲಾ ಪೊಳಲ ಹೊಕ್ಕು . . . ರತ್ನಕನ್ನಿಕೆಯೆನಿಪ್ಪಳಂ ನಿಶ್ಚೈಸಿ ಉಂಗುರುಡಿಕೆಯ ಮಾಡಿದ (ಸೌಂದಪು. ೪-೧೭); ಹರುಸದೆ ದೂತಿಯರ್ ಸತಿಗೆ ಸಿಂಗರ ಮಾಡುತಿರಲ್ಕೆ . . . ಸಖಿಯರ್ತೊಡಿಸಿರ್ದ ಕಂಕಣಂ ಪರಿದುದು (ನರಚ. ೩೬-೭೫). **ಹರಿಸ** : "ಸಂತಸ ಹರಿಸಮುಲಂಪುಂ ಸಂತೋಷಾಖ್ಯಾನ" (ಕವಿಕಂ. ೧೩೪): ಹರಿಸಂ ಮಿಗೆ ಕೈಲಾಸದ ಪುರದೊಳಗೊಪ್ಪಿರ್ಪ ನಭವನದ್ವಯರೂಪಂ (ಗಿರಿಕ. ೧೦-೧೧೨). **ಹರುಷ** : ಕೂಡಲಸಂಗನ ಶರಣರು ಬಂದರ ಉಬ್ಬಿ ಕೊಬ್ಬಿ ಹರುಷದಲೋಲಾಡುವೆ (ಬಸವ. ೩೭೭); ಹರುಷದ ಶರಧಿಯೊಳ ಗೋಲಾಡುತಿದ್ದುದು ನಿಖಿಲಜನ ನಲಿದು (ಕೌಶಿರಾ. ೪೪-೫೫). [< ಸಂ. ಹರ್ಷ]

**ಹರುಸಂಗೆಡು, ಹರುಷಗೆಡು** (ಕ್ರಿ). ಸಂತೋಷವಿಲ್ಲದಾಗು; ವ್ಯಥೆಪಡು: ಎರಡುಂ ಸಂಜೆಯೊಳಂ ಹರಿ ಹರುಸಂಗೆಟ್ಟಶ್ರುಬಿಂದು ವಿಣ್ಮೂತ್ರಂಗಳ್ ಸುರಿಯೆ ಕಿಳಿಱುವೊಡೆ ಮಾಡುಗುಮರಸಂಗಂ ಪಿರಿದು ಭಯಮಂ (ಅಶ್ವಶಾ. ೪-೫೭). **ಹರುಷಗೆಡು**: ಮುಂದುಗಾಣದೆ ಹಲವನೆಣಿಸುತ ಹರುಷಗೆಟ್ಟಿಂತೆಂದನಾ ಮುನಿಪ (ತೊರರಾ. ೧-೯-೨೮).
[ಹರುಸ + ಕೆಡು$_1$]

**ಹರುಹು$_1$** 'ಪರಪು$_1$' ನೋ.

**ಹರುಹು$_2$** 'ಪರಪು$_2$' ನೋ.

**ಹರುಹು$_3$** 'ಪರಿವು' ನೋ.

**ಹರುಹುಗೆಡು** (ಕ್ರಿ). ನಡೆಗೆಡು; ಮುಂದೆ ಸಾಗದಂತಾಗು: ಹರುಹುಗೆಟ್ಟುದು ತೇರು ಸಾರಥಿ ಹುರುಳುಗೆಡಿಸಿಯೆ ನುಡಿದನಂಬಿನ ಕೊಱತೆ ತಾ ಮುನ್ನಾಯ್ತು (ಕುಮ್ಮಾಕ. ೧-೧೫). [ಹರುಹು$_3$ (< ಪರಿವು) + ಕೆಡು$_1$]

**ಹರುಹೆ** 'ಹಱುಹೆ' ನೋ.

**ಹರೆ$_1$** 'ಪರೆ$_1$' ನೋ.

**ಹರೆ$_2$** 'ಪರೆ$_2$' ನೋ.

**ಹರೆ$_3$** 'ಪಱೆ$_1$' ನೋ.

**ಹರೆ$_4$** 'ಪೊರೆ$_5$' ನೋ.

**ಹರೆ$_5$** 'ಪರೆ$_5$' ನೋ.

**ಹರೆ$_6$** 'ಪರಯ' ನೋ.

**ಹರೆಕಾರ** 'ಪಱೆಕಾಱ' ನೋ.

**ಹರೆಕಾಱ** 'ಪಱೆಕಾಱ' ನೋ.

**ಹರೆಗಡಿ** 'ಪರೆಗಡಿ' ನೋ.

**ಹರೆಗಡಿಸು** (ಕ್ರಿ). ಸೀಳು; ತುಂಡುಗೊಳಿಸು; ಕತ್ತರಿಸು: ಪರ್ಬತವನೊಡೆದುಳಿಸಿ ಭೂಮಿಯನಿಬ್ಬಗೆಯ ಮಾಡಿಸುತ ರಥಗಜದೊಬ್ಬುಳಿಯ ಹರೆಗಡಿಸಿ . . . ಅಹಿತರಿಗುಬ್ಬಸ ವನೆಸಗುವನೆ ಜೋಧನು (ಕುಮ್ಮಾಉ. ೩-೧೧೨). [ಹರೆಗಡಿ (< ಪರೆಗಡಿ) + - ಇಸು$_3$]

**ಹರೆಗಳೆ** 'ಪೆರೆಗಳೆ' ನೋ.

**ಹರೆಯ** 'ಪರಯ' ನೋ.

**ಹರೆಯಂಬಡೆ, ಹರೆಯವಡೆ** (ಕ್ರಿ). ತಾರುಣ್ಯವನ್ನು ಪಡೆ ; ಯೌವನವನ್ನು ಹೊಂದು: ಹರನ ಮೆಚ್ಚು ಹರೆಯಂಬಡೆದಂತೆ ಶಂಕರನ ಬಿಂಕಂ ಬಿನ್ನಣಮಾದಂತೆ . . . ನೆಱೆ ಮೆಱೆದು ನಡೆತಂದು ನಗತನೂಜೆ ಚಂದ್ರಧರನ ಮುಂದೆ ನಿಂದು (ಗಿರಿಕ. ೫-೭೬ ವ). **ಹರೆಯವಡೆ**: ಜಯಧರಣೀಪತಿ ಸಕಲಕಲಾಕೋವಿದನಾಗಿ ಹರೆಯವಡೆದಂ (ಜಯಕಾ. ೨ ಸೂಚನೆ). [ಹರೆಯ (< ಪರಯ) + ಪಡೆ$_1$]

**ಹರೆಯಂಬೋಗು** (ಕ್ರಿ). ಯೌವನಾವಸ್ಥೆಯನ್ನು ಮೀರು; ವೃದ್ಧಾಪ್ಯವನ್ನು ಹೊಂದು : ಪ್ರವಯಾಃ, ಸ್ಥವಿರಃ, ವೃದ್ಧಃ, ಯಾತಯಾಮಃ - ಈ ೪ ಹರೆಯಂಬೋದಾತಂ (ಹಲಾಯು. ೮೩-೩೪೯). [ಹರೆಯ (< ಪರಯ) + ಪೋಗು$_1$ (< ಪೋ$_1$)]

**ಹರೆಯಬೋಗುಹ** (ನಾ). ತಾರುಣ್ಯವು ಕಳೆದು ಹೋಗುವಿಕೆ; ಮುಪ್ಪು ಉಂಟಾಗುವಿಕೆ: "ಜ್ಯಾನಿ, ಜೀರ್ಣ - ಹರೆಯಬೋಗುಹ" (ನಾಚಿರಾ. ೬).
[< ಹರೆಯಂಬೋಗು + - ಹ$_2$ (< - ಪ$_2$)]

**ಹರೆಯವಡೆ** 'ಹರೆಯಂಬಡೆ' ನೋ.

**ಹರೆಯಿಸು** 'ಪರೆಯಿಸು' ನೋ.

**ಹರೆಹಂದಲ್** (ನಾ). ವಿಸ್ತಾರವಾದ ಹಂದರ,— ಚಪ್ಪರ : ಮಱೆಯದೆಲ್ಲರನಂದು ಮನ್ನಿಸಿ ಬೀಳ್ಕೊಟ್ಟ ಮಱುದಿನ ಮೊದಲಾಗಿ ಚಕ್ರಿ ಹರೆಹಂದಲಿಕ್ಕಿ ಹಲವು ದಿನ ಮದುವೆಯ ತೆಱನಱಿದೊಲ್ದು ಮಾಡಿದರು (ಭರಚ. ೪೩-೧೧೫); ಚೊಕ್ಕವಣ್ಣಲ್ಲಲ್ಲಿ ಪುಟ್ಟುವುವಾ ಪೆಣ್ಣ ಪಕ್ಕದವರೆ ನೋಡಿ ನೃಪಗೆ ತಕ್ಕುವೆಂದರ್ತಿಯೊಳೀಯೆ ಹರೆಹಂದಲಿಕ್ಕಿ ಮದುವೆಯಾಗುತಿಹನು (ಭರಚ. ೭೫-೭೨).
[ಹರೆ$_1$ (< ಪರೆ$_1$) + ಹಂದಲ್ (< ಪಂದರ್)]

**ಹರೇಣು** (ನಾ). ೧. ಬಟ್ಟಗಡಲೆ; ಬಟಾಣಿಕಾಳು. ೨. ಒಂದು ಬಗೆಯ ಸುಗಂಧಯುಕ್ತವಾದ ಔಷಧೀದ್ರವ್ಯ ; ರೇಣುಕ : "ದ್ವಿಜಾ, ಹರೇಣುಃ, ರೇಣುಕಾ, ಕೌಂತೀ, ಕಪಿಲಾ, ಭಸ್ಮಗಂಧಿನೀ - ೬ ರೇಣುಕ ಎಂಬುವ ಗ್ರಂಥ್ಯದ್ರವ್ಯದ ಹೆಸರು" (ಸಿದ್ಧಾಂತಿ. ೧೪೦). [ಸಂ.]

**ಹರೇಣುಕ** (ನಾ). = ಹರೇಣು ೨: ಲೋಧ್ರದ ಚಕ್ಕೆ, ತುಲಸೀಬೇರು, (ನೆಲ್ಲಿಚೆಟ್ಟು), ಆಲದ ಮುಗುಳು, ಹರೇಣುಕ ಇವಿಷ್ಟನ್ನೂ ಸಮಾಂಶವಾಗಿ ಹಾಲಲ್ಲರೆದು ಋತುಸ್ನಾನ ಮಾಡಿದ ದಿನದಲ್ಲಿ ಕುಡಿಯ ಕೊಡೆ ಗರ್ಭಸಿದ್ಧಿಯಹುದು (ವೈದ್ಯಸಾ. II, ೪೫)). [ಸಂ.]

**ಹರ್ಡೆ** 'ಪರಡೆ$_3$' ನೋ.

**ಹರ್ತ** (ನಾ). ಸಂಹರಿಸುವವನು; ಲಯಕರ್ತ: ಕರ್ತನುಂ ಸರ್ಪಕ್ಕೆ ಭರ್ತನು ಹರ್ತನುಂ ಪರಮೇಶನಲ್ಲದೆ ಭರ್ತ ಬೇಱುಂಟೇ (ಬಸಪು. ೫೪-೪); ಲಿಂಗರೂಪನಂ ಹರ್ತ ಪಾವಕರೂಪ ಲಿಂಗದೊಳಗಿರ್ದನಂ ಕೂರ್ತು ವಂದಿಸುವೆನು (ವೀಕ್ಷೈಪು. ೬-೧-೩೭).
[< ಸಂ. ಹರ್ತೃ]

**ಹರ್ತರದೂದು** 'ಪರತರದೂದು' ನೋ.

**ಹರ್ತಾರ** (ನಾ). ಸಂಹರಿಸುವವನು; ಲಯಗೊಳಿಸುವವನು: ಕರ್ತಾರಂ ನೀನೆ . . . ಹರ್ತಾರಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಣ್ನಾಶ. ೯೯).
[< ಸಂ. ಹರ್ತೃ]

**ಹರ್ತೃ** (ನಾ). ೧. ತರುವವನು; ಮುಟ್ಟಿಸುವವನು. ೨. ಸ್ವೀಕರಿಸುವವನು; ತೆಗೆದುಕೊಳ್ಳುವವನು. ೩. ಕಿತ್ತುಕೊಳ್ಳುವವನು. ೪. ಕಳ್ಳ; ತುಡುಗ. ೫. ಸಂಹರಿಸುವವನು; ನಾಶಮಾಡುವವನು. ೬. ಸೂರ್ಯ. [ಸಂ.]

**ಹರ್ದು** 'ಪರ್ದು' ನೋ.

**ಹರ್ಬು** 'ಪರಪು$_1$' ನೋ.

**ಹರ್ಬುಗೆ** 'ಪರ್ವುಗೆ' ನೋ.

**ಹರ್ಮಾಗಾಲ** (ನಾ). ಕಷ್ಟಸಾಧ್ಯ; ದುಸ್ತರ (?): ಅವಳನ್ನು ಸಮಾಧಾನ ಮಾಡಬೇಕಾದರೆ ಅಜ್ಜಿಗೆ ಹರ್ಮಾಗಾಲವಾಗಿತ್ತು (ಮಲಮ. ೯೭); ಅವನಿಗೆ ಅನುಭವದಿಂದ ಗೊತ್ತಿತ್ತು, ತನ್ನ ಹೆಂಡತಿ ಮಾತು ಪ್ರಾರಂಭಿಸುವುದು ಹರ್ಮಾಗಾಲ ಎಂದು (ಮಲಮ. ೨೪೪). [?]

**ಹರ್ಮ್ಯ** (ನಾ). (ಶ್ರೀಮಂತರ) ಉಪ್ಪರಿಗೆ ಮನೆ; ಸೌಧ; ಮಹಲು: ಪರ್ವತದ ಮೇಲೆ ಕಱಂಗಿ ಕಟ್ಟಲಿಸಿದ ಮರದುಱುಗಲ ನಡುವೆ ಸುಧಾಧವಳಿತೋತ್ತುಂಗ ರಮ್ಯಹರ್ಮ್ಯಂಗಳಂ ಕಾಣ್ಬರಪ್ಪೊಡದು ಹಿಡಿಂಬಪುರಮೆಂಬುದು (ಪಂಪಭಾ. ೩-೧೮ ವ); ರತ್ನಹರ್ಮ್ಯಚಯಮುಮಂ ಬಂದೇಱಿ ನಿಂದಲ್ಲಿ ಕಾಮಿನಿಯರ್ ಸಾಲ್ವಿಡಿದೀಕ್ಷಿಸುತ್ತಿರೆ (ರಾಜಶೇ. ೧೩-೯೨). [ಸಂ.]

**ಹರ್ಮ್ಯಾಗ್ರ** (ನಾ). ಉಪ್ಪರಿಗೆಯ ಮೇಲುಭಾಗ: ಅಶನಿವೇಗಂ . . . ಒರ್ಮೆ ಹರ್ಮ್ಯಾಗ್ರಭೂಮಿಯೊಳಿರ್ದು ನೆಗೆದ ಮುಗಿಲಂ ನೋಡುತ್ತುಮಿರ್ಪುದುಂ (ಪಂಶಾಮಾ. ೧೦-೧೨೭ ವ); ತಳರಲ್ಕೆಂದಡಿಯಿಟ್ಟು ಜಾಱಿ ಜವದಿಂ ಕೈಯೂಱಿ ಬಿಳ್ದೇಳ್ದು . . . ಕೋಲ್ಗಳನಾಂತ್ಮೆದುವ ಪಾಂಥರಂ ನಗುವರಾ ಹರ್ಮ್ಯಾಗ್ರದಬ್ಜಾಕ್ಷಿಯರ್ (ರಾಜಶೇ. ೮-೧೨೪). [ಸಂ.]

**ಹರ್ಮ್ಯೋರ್ಧ್ವ** (ನಾ). = ಹರ್ಮ್ಯಾಗ್ರ : ಹರ್ಮ್ಯೋರ್ಧ್ವದೊಳ್ . . . ವಿಮಾನನಿಚಯಂ ನಿಂದತ್ತದೆತ್ತೆತ್ತಲುಂ (ಚಂದ್ರಪ್ರ. ೬-೧೮). [ಸಂ.]

**ಹರ್ಯಕ್ಷ** (ನಾ). ೧. ಸಿಂಹ: ಹರಿ ಹರ್ಯಕ್ಷನ ಬಾಯಂತಿರೆ ಕಟ್ಟೆಯ ತೆಱೆದ ಬಾಯಂ . . . ಎರಡುಂ ಕೆಯ್ಯಿಂ ಪಿಡಿದಾಸುರಮಾಗಿರೆ ಸೀಳ್ದು ಬಿಸುಟನೆರಡುಂ ದೆಸೆಗಂ (ಅರ್ಧನೇ. ೭-೯೨); ಜಯಜಯ ಜಲಂಧರಮದಾಂಧಗಜ ಹರ್ಯಕ್ಷ (ರಾಜಶೇ. ೧೪-೧೭ ರಗಳೆ). ೨. ಕುಬೇರ. ೩. ಶಿವ. ೪. ಹಿರಣ್ಯಾಕ್ಷನೆಂಬ ರಾಕ್ಷಸ. [ಸಂ.]

**ಹರ್ವು** 'ಪರಪ್ಪು₁' ನೋ.

**ಹರ್ಷ** (ನಾ). ೧. ಹಿಗ್ಗು; ಸಂತೋಷ; ಆನಂದ : ಮದಮಾನಮಾಯಭಯಲೋಭ ವಿಷಾದಹರ್ಷಾಭ್ಯುದಿತಾಂತರಂಗರಿಪುವರ್ಗಜಯಾವತಾರಂ (ಕವಿರಾ ೩-೨೨೭); ನವಿಸ್ಮಾ ಭರಾಕ್ರಾಂತಿನಿರೋಧಂ ಮಾಣ್ದುದಿನ್ನೆಂದು . . . ಕಮಠನುಂ ತೂಗಿದಂ ಹರ್ಷದಿಂದಂ (ಜಗನ್ನಾ. ೩-೪). ೨. ರೋಮಾಂಚನ ; ಪುಳಕ : 'ರೋಮಹರ್ಷ' ಪರಾ. ೩. ನೈಷಧವೆಂಬ ಸಂಸ್ಕೃತಮಹಾಕಾವ್ಯವನ್ನು ರಚಿಸಿದ ಒಬ್ಬ ಕವಿ. ೪. ರತ್ನಾವಳಿ, ನಾಗಾನಂದ ಮತ್ತು ಪ್ರಿಯದರ್ಶಿಕಾ ಎಂಬ ಸಂಸ್ಕೃತ ನಾಟಕಗಳನ್ನು ಬರೆದವನೂ, ಉತ್ತರಭಾರತದ ಪ್ರಸಿದ್ಧ ಚಕ್ರವರ್ತಿಯೂ ಆಗಿದ್ದ ಹರ್ಷವರ್ಧನನೆಂಬ ದೊರೆ: ಸ್ತುತಿಗೆಯ್ಯಂ . . . ಚತುರೋಕ್ತಿ ಪ್ರಚುರಾರ್ಥಕಾವ್ಯಜನಿತೋರ್ವೀಹರ್ಷನಂ ಹರ್ಷನಂ (ಜಗನ್ನಾ. ೧-೮). ೫. [ಕಾವ್ಯಮಿ] ಮೂವತ್ತುಮೂರು ವ್ಯಭಿಚಾರಿ ಅಥವಾ ಸಂಚಾರಿ ಭಾವಗಳಲ್ಲಿ ಒಂದು: ಮತಿ ಲಜ್ಜೆ . . . ಹರ್ಷ . . . ಅಪಸ್ಮಾರವೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ ಪರಿವರ್ಧಿಸಿ (ವಿವೇಕ. ೧೮೧):-ಮತಿಲಜ್ಜಾವೇಗಶಂಕಾಮರಣಚಪಲತಾಹರ್ಷನಿರ್ವೇದ . . . ಅಪಸ್ಮಾರಕಾಖ್ಯಾನದಿಂದಂ – ಈ ಮೂವತ್ತುಮೂಱುಂ ವ್ಯಭಿಚಾರಿಭಾವಂಗಳ್ (ರಸರ. ೧, ಸೂತ್ರ. ೧೦). [ಸಂ.]

**ಹರ್ಷಂದಾಳು** (ಕ್ರಿ). ಸಂತೋಷವನ್ನು ಹೊಂದು ; ಆನಂದವನ್ನು ಪಡೆ: ಸುತಂ ಜನಿಯಿಸುವಂ ನಿನಗೆಂದು ಲೀಲೆಯೊಳುಸಿರಲು ಕೇಳ್ದತಿಹರ್ಷಂದಾಳಿ ಸುಖದೊಳಿರು ತಿರಲಾ ವಾರ್ತೆಯಿಂ ಲಲಿತಾಂಗಿಯ ನಡುವಿನ ಕಡುದಾರಿದ್ರ್ಯಂ ಪಿಂಗಿದುದು (ಜಯಕಾ. ೨-೫೭). [ಹರ್ಷ + ತಾಳ್ದು₁ (< ತಾಳ್₁)]

**ಹರ್ಷಗರ್ಭ** (ನಾ). ೧. ಸಂತೋಷದಿಂದ ತುಂಬಿದುದು; ಆನಂದಮಯ ವಾದುದು: ಮಹೋತ್ಸವಂಗಳೊಡನೆ ಗರ್ಭಮುಂ ಬಂಧುಜನ ಹರ್ಷಗರ್ಭಮುಂ ಪರಿಪೂರ್ಣವಾಗೆ (ಪಂರಾಮಾ. ೩-೧೦೩ ವ); ಉದರದೊಳಂ ರಮಣಿಗೆ ನೆಲಸಿತ್ತು ಹರ್ಷಗರ್ಭಂ ಗರ್ಭಂ (ಚಂದ್ರಪ್ರ. ೩-೮೪). ೨. ಆನಂದಿತನಾದವನು; ಹರ್ಷಿತ ನಾದವನು: ಧರೆ ರತ್ನಗರ್ಭಮಾದುದು ಸುರರೆಲ್ಲಂ ಹರ್ಷಗರ್ಭರಾದರ್ (ಆದಿಪು. ೭-೨೬). [ಸಂ.]

**ಹರ್ಷಣ** (ಗು). ೧. ಸಂತೋಷವನ್ನುಂಟು ಮಾಡುವ ; ಆನಂದದಾಯಕವಾದ. (ನಾ). ೨. ಸಂತೋಷ; ಆನಂದ. ೩. ರೋಮಾಂಚನಗೊಳಿಸುವಿಕೆ: 'ರೋಮಹರ್ಷಣ' ಪರಾ. ೪. ಒಂದು ಬಗೆಯ ನೇತ್ರರೋಗ. ೫. ಮನ್ಮಥನ ಪಂಚಬಾಣಗಳಲ್ಲಿ ಒಂದು. ೬. [ಜ್ಯೋತಿ] ವಿಷ್ಕಂಭವೇ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಹದಿನಾಲ್ಕನೆಯದು: ವಿಷ್ಕಂಭ . . . ಹರ್ಷಣ . . . ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೩೨೦). [ಸಂ.]

**ಹರ್ಷಧೃತಿ** (ನಾ). ಸಂತೋಷದಿಂದ ಕೂಡಿದ ಧೈರ್ಯ: ಪಕ್ಷಸಪ್ಪುಳಂ ಕೇಳ್ದವೊಲಾಗಿ ತಿರುಗಿದಳಯ್ಯೊ ತನ್ನವರ ಬಂದರೆಂಬೊಂದತಿಯ ಹರ್ಷಧೃತಿಯಿಂದೆ (ಶ್ರೀರಾಮಾ. ೨೪೩-೪೧೯). [ಸಂ.]

**ಹರ್ಷನಿರ್ಭರ** (ಗು). ೧. ಸಂತೋಷದಿಂದ ತುಂಬಿದ; ಅತ್ಯಾನಂದವುಳ್ಳ. (ನಾ). ೨. ತುಂಬ ಸಂತೋಷಗೊಂಡವನು: ಮಲಪ್ರಭೆ ಎದುರಿಗೆ ಕಂಡಿತಂತೆ ಅದನ್ನು ಕಂಡಾಕ್ಷಣಕ್ಕೆ ಹರ್ಷನಿರ್ಭರರಾದ ಭಾರ್ಗವರು 'ಐಹೊಳೆ' – ಎಂದು ಉದ್ಗಾರ ತೆಗೆದ ಮಾತೇ ಆ ಊರ ಹೆಸರಾಗಿ 'ಐಹೊಳೆ' ಎಂದು ಪ್ರಸಿದ್ಧಿವಾಗಿದೆಯೆಂದು ಸ್ಥಲಪುರಾಣ (ಭಾಪಾಶಾ. ೭೪). [ಸಂ.]

**ಹರ್ಷಪ್ರಕರ್ಷ** (ನಾ). ಸಂತೋಷದ ಹೆಚ್ಚಳ; ಆನಂದದ ಆಧಿಕ್ಯ: ಜನಪತಿ ನಿಮ್ಮಿಂದಲ್ಲದೆ ಜನಕ್ಕೆ ಹರ್ಷಪ್ರಕರ್ಷಮಕ್ಕುಮೆ ಪೆಱರಿಂ (ಮಲ್ಲಿಪು. ೯-೯೪). [ಸಂ.]

**ಹರ್ಷಾಂಬು** (ನಾ). ಆನಂದದಿಂದ ತುಡಿಯುವ ಕಣ್ಣೀರು; ಆನಂದ ಬಾಷ್ಪ: ಭಗವಂತನಿಗೆ, ತಮ್ಮ ಆತ್ಮಾರ್ಪಣೆಯಿಂದ ಆದ ಸುಖರೂಪದ ಹರ್ಷಾಂಬು ಅದು ಇದ್ದರೂ ಇರಬಹುದು (ಶಾಂತಲಾ. ೨೫೮). [ಸಂ.]

**ಹರ್ಷಾಶ್ರು** (ನಾ). = ಹರ್ಷಾಂಬು: ನೆರೆದ ಮುನಿಪದಾಂಭೋಜಮಂ ಕಂಡು ಹರ್ಷಾಶ್ರುಪಯಃಪೂರಂಗಳಿಂ ಪಾದ್ಯಮನೊಡರಿಸಿದಂ ಸೂಕ್ತಿಮುಕ್ತಾವತಂಸಂ (ಮಲ್ಲಿಪು. ೧೩-೧೯೯); ನಡುಗುವ ತನುವಲ್ಲಿಯ ತುದಿಯಿಂ ಪೊಡೆಗೊಡನುದಿರ್ವಲರಂದದಲಿ . . . ಹರ್ಷಾಶ್ರು ಬಿಡದೊಕ್ಕುವು (ಕಂಸವ. ೧೦ ೩೭). [ಸಂ.]

**ಹರ್ಷಿಸು** (ಕ್ರಿ). ಸುಖಿಸು; ಸಂತೋಷಪಡು: ನೈರ್ಮಲ್ಯಕ್ಕೆ ನೋಂತವರಲಿ ಗುಡುಗಿ ಮಿಂಚಿ ವರ್ಷಿಸು, ಮಲಮಲನೇ ಮಲರುತಿರುವ ಜೀವ ಕಂಡು ಹರ್ಷಿಸು (ಜೀವಲ. ೫೨-೧೨). [ಹರ್ಷ + - ಇಸು₁]

**ಹರ್ಷೋತ್ಕರ್ಷ** (ನಾ). ಆನಂದಾತಿಶಯ; ಅತ್ಯಧಿಕವಾದ ಸಂತೋಷ: ಶ್ರೀಕುಮುದಿನಿಗೊದವುಗುಮೆ ಕಲಾಕಾಂತನೊಳಲ್ಲದಾತ್ಮಹರ್ಷೋತ್ಕರ್ಷಂ (ರಾಜಶೇ. ೭-೯೭). [ಸಂ.]

**ಹರ್ಷೋತ್ಕರ್ಷಚಿತ್ತ** (ನಾ). ಅಧಿಕವಾದ ಮನಃಸಂತೋಷವನ್ನು ಹೊಂದಿದವನು; ಅತಿಶಯವಾದ ಆನಂದದಿಂದ ಕೂಡಿದ ಮನಸ್ಸುಳ್ಳವನು: ಮನಂ ಸಂತಸಂಬಡೆ ಪರಿಪುಷ್ಟ ಹರ್ಷೋತ್ಕರ್ಷಚಿತ್ತನಾಗಿ (ಶಾಂತಿಪು. ೧೦-೬೦ ವ); ತಜ್ಜರದ್ವಾನರಂ ಹರ್ಷೋತ್ಕರ್ಷಚಿತ್ತನಾಗಿ ಆತ್ಮಗತದೊಳಿಂತೆಂದಂ (ಪಂಚತಂ. ೨೭೯-೯). [ಸಂ.]

**ಹರ್ಷೋತ್ಕರ್ಷಿತ** (ಗು). ಆನಂದಾತಿಶಯದಿಂದ ಕೂಡಿದ ; ತುಂಬ ಸಂತೋಷ ವನ್ನು ಹೊಂದಿದ: ಹರ್ಷೋತ್ಕರ್ಷಿತಾಂತರಂಗನಾಗಿ ನಮಸ್ಕಾರಂಗೆಯ್ದು (ಸುಕುಮಾ. ೩-೧೪ ವ). [ಸಂ.]

**ಹರ್ಷೋದ್ಗಾರ** (ನಾ). ಅತ್ಯಂತ ಹೆಚ್ಚಾದ ಸಂತೋಷವುಂಟಾದಾಗ ಮಾಡುವ ಧ್ವನಿ,– ಉದ್ಗಾರ : ಇದೆಲ್ಲವನ್ನೂ ಕಿಟಕಿಯ ಮೂಲಕ ನೋಡುತ್ತಿದ್ದ ಹುಡುಗರು ಓ ಎಂದು ಹರ್ಷೋದ್ಗಾರ ಮಾಡಿದರು (ಹಸುಹೂ. ೧೩). [ಸಂ.]

**ಹಲ₁** 'ಪಲ₁' ನೋ.

**ಹಲ₂** (ನಾ). ತೂಕದ ಒಂದು ಸಣ್ಣಪ್ರಮಾಣ; ನಾಲ್ಕುಕರ್ಷಗಳ ತೂಕ: ಹಲಕ್ಕೆ ನಾಲ್ಕು ಕರುಷಗಳಕ್ಕುಂ (ವ್ಯವಹಾ. ಅನುಬಂ. I, ೩-೧೨); ಎರಡುಮೊಗೆಯುದಕ ದೊಳಗೊಂದೊಂದು ಹಲ ಶುಂಠಿ ಮತ್ತರೆವಲ ಮೆಣಸನಿಕ್ಕಿ (ಸೂಪಶಾ. ೩-೨೮). [< ಸಂ. ಪಲ]

**ಹಲ₃, ಹಳ₂** (ನಾ). ೧. ನೇಗಿಲು; ರೆಂಟೆ: ಪದಿನಾಱುಸಾಸಿರ ಸಂವಾಹನಂಗಳುಂ . . . ಶತಸಹಸ್ರಕೋಟಿ ಹಲಂ [ಪಾಠಾಂ. ಹ್ರದಂ]ಗಳುಂ ಮೂಱುಕೋಟಿ ಗೋಮಂಡಳಮುಂ . . . ಆತ್ಮೀಯಸಾಮ್ರಾಜ್ಯಪರಿಚ್ಛೇದವಾಗೆ (ಆದಿಪು. ೧೫-೩ ವ); ಏಕಲಕ್ಷಕೋಟಿ ಹಲಗಳುಂ . . . ಸ್ಥಾಲಿಗಳೇಕಕೋಟಿಗಳು ಮತ್ತಲ್ಲಿ (ಶಾಂತೀಶ. ೮-೫೩). ೨. (ಬಲರಾಮನ ಕೈಯಲ್ಲಿರುವ) ನೇಗಿಲಿನ ಆಕಾರದ ಒಂದು ಆಯುಧ: ಬಲನಾರಾಯಣ ಬಾಹುದಂಡದಳವಂ ನೋಡಲ್ ಗದಾದಂಡದಿಂ ಹಲದಿಂ ಕೂಡಿದ ಚಾಪದಂಡಯುಗಮಂ ಬೈತಲ್ಲಿ ಕಾದಿರ್ಪುದುಂ (ಪಂರಾಮಾ. ೫-೨೯); ಬಂದು ಹಲಂ [ಪಾಠಾಂ. ೪೦] ದಿವದಿಂ ಬಲಭದ್ರಹಸ್ತದೊಳ್ ನಿಂದುದತಿಭಯಂಕರರೂಪಿಂ (ಜಗನ್ನಾ. ೭-೬೪). ೩. ವಿರೂಪತೆ ; ಕುರೂಪತೆ. ೪. [ಜ್ಯೋತಿ] ಲಗ್ನವನ್ನು ಬಿಟ್ಟು ಉಳಿದ ಸ್ಥಾನಗಳಲ್ಲಿ ಏಳು ಗ್ರಹಗಳಿದ್ದರೆ ಆಗುವ ಯೋಗ: ಗ್ರಹಮೇೞುಂ ಲಗ್ನೇತರಗ್ರಹದೊಳ್ ನೆಲಸಿದೊಡೆ ಹಲಮೆನಿಕ್ಕುಂ ಯೋಗಂ (ಜಾತಕ. ೧೩-೩). **ಹಳ₂**: ೧. ಅರಿನರಪಾಲಮೌಳಿಮಣಿಯೊಳ್ ನೆಲೆಗೊಂಡುದು ಶಂಖಚಕ್ರ ಚಾಮರ ಹಳಚಿಹ್ನಚಿಹ್ನಿತ ಪದಾಕೃತಿ (ಪಂಪಭಾ. ೬-೨೯); ಪದಿನಾಱ್ಸಾಸಿರ ಸಂವಾಹನಂಗಳಿಂ ದಮಯ್ಯತ್ತಾಱಂತರದ್ವೀಪಂಗಳಿಂದಂ ನೂರ್ಛಾಸಿರಕೋಟಿ ಹಳಂಗಳಿಂದಂ (ಶಾಂತಿಪು. ೧೧-೮೪ ವ). ೨. ರಾಮಂಗಪರಾಜಿತಮೆಂಬ ಹಳ[ಪಾಠಾಂ. ಲ]ಮುಂ ಕೌಮುದಿಯೆಂಬ ಗದೆಯುಂ ಯಕ್ಷಸಹಸ್ರರಕ್ಷಿತಂಗಳಾಗೆ (ಚಾವುಂಪು. ೩೧೫). [ಸಂ.]

**ಹಲ₄** 'ಹಲಿ₃' ನೋ.

**ಹಲ$_5$** (ನಾ). ಹಿಂದೆ ಅಗಸರ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ: ಮಾದಾರಿಕೆವೊಜನ ವರಿ ಅಸಗರ ಹಲ ಗಾಣಿಗರ ಸುಂಕ . . . ಅಂತು ಯಾ ತೆಱಿಗೆ ಸಹವಾಗಿ (ಎಕ. XIV, ಗುಂಡ್ಲುಪೇ. ೧೪೯-೯೯; 1521). [?]

**ಹಲಕಾಲ** 'ಪಲಕಾಲ' ನೋ.

**ಹಲಕು$_1$** (ಕ್ರಿ). ಮರವನ್ನು ಹತ್ತು,– ಏರು: ''ಹಲಕು - ವೃಕ್ಷಾರೋಹಣೇ, ಶರೀರಾಂಗಭೇದೇ ಚ'' (ಶಮಥಾ). [?]

**ಹಲಕು$_2$** (ನಾ). ದವಡೆಯ ಭಾಗ; ಕೆನ್ನೆಯ ಕೆಳಭಾಗ: ''ಹಲಕು - ವೃಕ್ಷಾರೋಹಣೇ, ಶರೀರಾಂಗಭೇದೇ ಚ'' (ಶಮಥಾ); ಕರದ ಬಲ್ಲೆಯದಿಂದ ವಾಲಿಯ ವರಕುಮಾರನ ತಿವಿಯೆ ಹಲಕಿನ ಸರಿಸದಲಿ ಮೊನೆದೋಱಿತುಗುಳುವ ರಕುತಧಾರೆಯಲಿ (ತೊರರಾ. ೬-೩೦-೩೦). [?. / ತಮಿ. ಅಲಕು]

**ಹಲಗಣೆ** (ನಾ). ಹಲಗೆಗಳನ್ನು ಜೋಡಿಸಿದ ಅಟ್ಟಣೆ (?): ಹಲಗಣೆ ಹಾಕಿದ್ದ ಕೆಳಗರುಡಿಯಲ್ಲಿ ಒಂದು ಹಣತೆಯ ಬೆಳಕಿನಲ್ಲಿ ಐಗಳು ಅನಂತಯ್ಯ ಏನನ್ನೊ ರಾಗವಾಗಿ ಓದುತ್ತಿದ್ದುದು ಕೇಳಿಸಿ, ಐತ . . . ಎಂದನು (ಮಲೆಮ. ೨೬೭). 'ಅಟ್ಟಣೆ$_1$' ಪರಾ.
[ಹಲಗೆ (< ಪಲಗೆ) + ಮಣೆ$_1$]

**ಹಲಗಾರತಿ, ಹಲಿಗಾರತಿ** (ನಾ). ಚಪ್ಪಟೆಯಾಗಿರುವ ಹಾಗು ಹಿಡಿಯುಳ್ಳ ಆರತಿ ತಟ್ಟೆ: ಅವರು ದೇವರಿಗೆ ಹಲಗಾರತಿಯಿಂದ ಮಂಗಳಾರತಿ ಮಾಡಿದರು (ರೂಢಿ). **ಹಲಿಗಾರತಿ:** ಕಟ್ಟುದೀವಿಗೆಗಳು ಹಚ್ಚಿಟ್ಟು ತುಪ್ಪದ ದೀವಿಗೆಯ ಬಗೆಬಗೆ ತುಂಬಿಟ್ಟ ಹಲಿಗಾರತಿ . . . ವಿಷ್ಣುಮೂರುತಿಗೆ ನಾ ಕೈಯ ಮುಗಿಯುತಲಿದ್ದೆ (ಪುರಂದ. ೫-೬೯-೧೧).
[ಹಲಗೆ (< ಪಲಗೆ) + ಆರತಿ$_1$]

**ಹಲಗಾಲ** 'ಪಲಕಾಲ' ನೋ.

**ಹಲಗೆ** 'ಪಲಗೆ' ನೋ.

**ಹಲಗೆಕಾಱ** (ನಾ). ಹರೆಯನ್ನು ನುಡಿಸುವವನು; ತಮಟೆ ಬಾರಿಸುವವನು: ಹಲಗೆಕಾಱರನಾಪ್ತರಂ ದೇವಲಕರಂ ಪೂವಾಡಿಗರಂ ಬಾಗಿಲವರಂ ಸುಯಿಧಾನರಂ ಹಲವಾಳುಗಳನಾಯ್ದು (ಬಸವು. ೧೭-೧೩). [ಹಲಗೆ (< ಪಲಗೆ) + - ಕಾಱ]

**ಹಲಗೆಗಲ್ಲು** (ನಾ). ಚಪ್ಪಟೆಯಾದ ಕಲ್ಲು; ಚಪ್ಪಡಿ: ಅಲ್ಲಿಂದಂ ಪಡುವ ನಡದು ನಟ್ಟ ಹಲಗೆಗಲ್ಲು (ಎಕ. XII, ತಿಪಟೂ. ೧೪೯-೭೫; ?).
[ಹಲಗೆ (< ಪಲಗೆ) + ಕಲ್ಲು (< ಕಲ್$_3$)]

**ಹಲಗೆಮಂಚ** (ನಾ). ಮರದ ಫಲಕಗಳನ್ನು ಹೊಂದಿಸಿ ಮಾಡಿದ ಮಂಚ: ಹಲಗೆಮಂಚದ ಮೇಲೆ ಹಾಸಿಗೆಯಿಲ್ಲದೆ ಮಲಗಿಕೊಳ್ಳುವುದರಿಂದ ಸದಾ ಆರೋಗ್ಯಕರವಾಗಿ . . . ಶರೀರಕ್ಕೆ ಕಾಂತಿಯನ್ನೂ ಅಗ್ನಿಬಲವನ್ನೂ ಕೊಡುವುದು (ಸಕವೈ. ೫೪).
[ಹಲಗೆ (< ಪಲಗೆ) + ಮಂಚ]

**ಹಲಗೆಸೇರುವೆ** (ನಾ). ೧. ಹಲಗೆಗಳನ್ನು ಜೋಡಿಸಿ ರಚಿಸಿದ ಒಳಮಾಳಿಗೆ,– ಛತ್ತು: ಅವರ ಮನೆಗೆ ಹಲಗೆಸೇರುವೆ ಮಾಡಿಸಿದ್ದಾರೆ (ರೂಢಿ). ೨. ಹಲಗೆಗಳನ್ನು ಜೋಡಿಸುವಿಕೆ: ಹಲಗೆಸೇರುವೆ ಮಾಡು; ಹಲಗೆ ಹಾಸು (Board, ಇಂಕನಿ).
[ಹಲಗೆ (< ಪಲಗೆ) + ಸೇರುವೆ]

**ಹಲಗೆಸೇವೆ** (ನಾ). ದೇವರ ಉತ್ಸವದಲ್ಲಿ ಹರೆ ಬಾರಿಸುವ ಕೈಂಕರ್ಯ: ಮಾರಮ್ಮನ ಉತ್ಸವಗಳಲ್ಲಿ ಹಲಗೆಸೇವೆ ಮಾಡುವ ಹೊಲೆಯರ ಕೆಂಚ ಮುನಿಯರು ಕುಡಿದು ಬಂದು ತಮ್ಮ ರಣವಾದ್ಯಗಳನ್ನು ಆವೇಶದಿಂದ ನುಡಿಸಲಾರಂಭಿಸಿದ್ದರು (ಊರುಕ. ೬).
[ಹಲಗೆ (< ಪಲಗೆ) + ಸೇವೆ$_1$]

**ಹಲಚಿ** 'ಹಲಚೆ' ನೋ.

**ಹಲಚಿಗಲ್ಲು** (ನಾ). ಚಪ್ಪಟೆಯಾದ ಕಲ್ಲು; ಹಲಗೆಕಲ್ಲು: ಒಂದು ಹಲಚಿಗಲ್ಲಿನ ಮೇಲೆ ಹೆಣ್ಣುಗೊಂಬೆಯ ಆಕಾರವನ್ನು ಹುಟ್ಟಿಸಿದ್ದಾರೆ (ಕಭಾಗ. ೫೧೭).
[ಹಲಚಿ (< ಹಲಚೆ) + ಕಲ್ಲು (< ಕಲ್$_3$)]

**ಹಲಚೆ, ಹಲಚಿ** (ನಾ). ೧. ಚಪ್ಪಟೆಯಾದುದು ; ಸಪಾಟಾದುದು: ಹಲಚೆಯಾದ ಕಲ್ಲು ತಗೊಂಡು ಅಡ್ಡ ಹಿಡಿದು ನೀರ ಮೇಲೆ ಪುಟಸುತ್ತ ರೊಟ್ಟೀ ಆಟವನ್ನು ಆಡಿದರು (ಕಸಾಪ. I, ೧೩೨). **ಹಲಚಿ:** ೧. ಇವುಗಳ ತಲೆ ದೊಡ್ಡದು, ಕಣ್ಣು ಸಣ್ಣವು, ಮೋರೆ ಹಲಚಿ, ಮೈಬಣ್ಣ ಕಪ್ಪು (ಮುಂಬಯಿ. ೩-೨೪); ಕರಡಿಯ ತಲೆ ಹಲಚಿ (ಮುಂಬಯಿ. ೩-೧೦೪). (ಗು). ೨. ಹಲಗೆಯಂತೆ ಚಪ್ಪಟೆಯಾದ; ಸಮತಲವಾದ: 'ಹಲಚಿಗಲ್ಲು' ಪರಾ. [?]

**ಹಲದಂಡ** (ನಾ). ನೇಗಿಲಿನ ಈಸು: ''ಹಲದಂಡ ಪಚ್ಚೆ ಪಲ್ಲವ ನವಿರಾರುಣಂ ಪವಳವಾಳ ವಿಪಂಚಿಗಳುಂ ಪ್ರವಾಳ'' (ನಾನಾರ. ೮). [ಸಂ.]

**ಹಲದಿ** 'ಹಳದಿ' ನೋ.

**ಹಲಧರ, ಹಳಧರ** (ನಾ). ೧. ನೇಗಿಲನ್ನು ಹಿಡಿದವನು; ರೈತ. ೨. ನೇಗಿಲಿನ ತರಹ ಆಯುಧವನ್ನು ಹಿಡಿದವನು; ಬಲರಾಮ: ಸಿರಿಲೋಲಸಹಿತ ಯುಧಿಷ್ಠಿರಾದಿ ನೃಪಾಲಕರು ಕಾಣಿಕೆಯನಿತ್ತರು ನಮಿಸಿ ಹಲಧರಗೆ (ಕುವ್ಯಾಗ. ೬-೧); ವಸುದೇವ ಹಲಧರರ್ಪೊಳಲಿನಲಿರ್ದು ಪಾಲಿಸಲಿ (ಚೈಮಿಭಾ. ೭-೨). ೩. [ಜೈನ] ವಾಸುದೇವನ ಸಹೋದರನಾದ ಬಲದೇವ ; IP ಇವರು ಬೇರೆ ಬೇರೆ ತೀರ್ಥಂಕರರ ಕಾಲದಲ್ಲಿರುವ ಒಟ್ಟು ಒಂಬತ್ತು ಬಲದೇವರು : ಪದೆದೆಱಗಿ ಹಲಧರಂ ತ್ರಿಃಪ್ರದಕ್ಷಿಣಂಗೆಯ್ದು ಸೇಸೆಗೊಂಡು (ಶಾಂತಿಪು. ೧-೯೨). **ಹಳಧರ:** ೨. ಕೃಷ್ಣನಬ್ಬ ಮಣ್ಣಂ ತಿಂದಂ ನೋಡೆಂದು ಹಳಧರಂ ಪಿಸುಣಾಡಲ್ (ಜಗವಿ. ೩-೬೨). ೩. ಹಳಧರನಂಬ ಕಾಂಬುರುಹಮುಂ ವಸುದೇವನ ನೇತ್ರನೀರಜಾವಳಿ ಪುದಿದಾ ಜನಾರ್ದನನ ದೇಹದೊಳೊಂದಿರೆ (ನೇಮಿಪು. ೬-೧೦೮); ಹಳಧರನಂ ನುಂಗಿ . . . ಅಲಂಘ್ಯಬಲ ನಲ್ಲಿಯುಗುಟ್ಟು ಬ[ಂ]ದಂ ಮದನಂ (ಬಂಹರಿ. ೯-೩೮). [ಸಂ.]

**ಹಲಪಿ** 'ಹಲಪೆ' ನೋ.

**ಹಲಪೆ, ಹಲಪಿ** (ನಾ). ವರ್ತುಳಾಕಾರದ ಚಪ್ಪಟೆಯಾದ ಬಿಲ್ಲೆ : ಅಬಿಸಿನಿಯಾ, ತಿಬೇಟ ಹಾಗೂ ಆಫ್ರಿಕೆಯ ಹಲವಾರು ಭಾಗಗಳಲ್ಲಿ ಉಪ್ಪಿನ ಚಿಕ್ಕಚಿಕ್ಕ ಹಲಪೆಗಳನ್ನು ನಾಣ್ಯಗಳೆಂದು ಬಳಸಿದುದು ನಮಗೆ ತಿಳಿದು ಬರುವದು (ಸುತ್ತುಮು. ೨೦). 'ಹಲಚೆ' ಪರಾ. **ಹಲಪಿ :** ತನ್ನ ಗಂಟಿನೊಳಗಿನ ಹಲಪಿಯ ಹಣವನ್ನು ಎಣಿಸುತ್ತಲಾಗಲಿ . . . ಹಾಡುತ್ತಲಾಗಲಿ ಕುಳಿತುಕೊಳ್ಳುವಳು (ಹೂಬಿಸಿ. ೬೩). 'ಕುಂಟಿಹಲಪಿ' ಪರಾ. [?]

**ಹಲಬು** 'ಪಲುಂಬು' ನೋ.

**ಹಲಮಾಣಿಕ** 'ಪಲ್ಮಾಣಿಕ' ನೋ.

**ಹಲಯೋಗ** (ನಾ). [ಜ್ಯೋತಿ] ''ಲಗ್ನವನ್ನು ಬಿಟ್ಟು ಉಳಿದ (ಎರಡು ಮೂರು ನಾಲ್ಕು ಮತ್ತು ಅವುಗಳ ತ್ರಿಕೋಣ)ಸ್ಥಾನಗಳಲ್ಲಿ ಏಳುಗ್ರಹಗಳಿದ್ದರೆ ಹಲಯೋಗ'' (ಜಾತತಿ. ೧೩-೩ ಅಡಿಟಿ). [ಸಂ.]

**ಹಲರೇಖೆ** (ನಾ). [ಸಾಮುದ್ರಿ] ಅಂಗೈಯಲ್ಲಿರುವ ಚಿಹ್ನೆ: ಹಲರೇಖೆಯು ಚಾಮರರೇಖೆಯು ಇರಲು ರಾಜ್ಯಾಧಿಪತಿಯಾಗಿ ನಿತ್ಯದಲ್ಲಿಯೂ ಸಂಪತ್ತೂ ಅಭಿವೃದ್ಧಿಯಾಗುವುದು (ಸಾಮುಲ. ೧೦೩-೫). [ಸಂ. ಹಲರೇಖಾ]

**ಹಲವಂಗ** 'ಪಲವಂಗ' ನೋ.

**ಹಲವಂದ** 'ಪಲವಂದ' ನೋ.

**ಹಲವಣ** (ನಾ). ನೇಗಿಲಿನ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ (?): ಯಾನೆಗೊಸನೆ ಸಲ್ಲನ್ನೆಗಂ ಪುರದ್ರಮ್ಮಮುಂ ಕೊಳ್ಳಸಲ್ಲು[ದು] (ಕೆಇಅ. ೪೭-೬-೧೪; 1152). [ಹಲ$_3$ + ಪಣ$_3$]

**ಹಲವಣ್ಣಿಗೆ** (ನಾ). ಹಲವು ಬಗೆಯ ವರ್ಣನೆ: ತನ್ನ ಕೊಲಬಂದುದನು ಮಾತಿಗೆ ಮುನ್ನ ಹರಿಯನು ಬೈದುದನು ಹಲವಣ್ಣಿಗೆಯಲೆಂಟೊಂದಗೂಡಿಸಿ . . . ಕಲಹವ ಹಣ್ಣಿದನು ದಾರುಕನು (ಕೃಷ್ಣಾಕಾ. ೧೫-೫೨). [ಹಲ$_1$ (< ಪಲ$_1$) + ಬಣ್ಣಿಗೆ$_1$]

**ಹಲವರಿ** (ಕ್ರಿ). ಹಲುಬು; ಅಲವತ್ತುಕೊಳ್ಳು: ಮೂರು ಹೊತ್ತು . . . ನರಳುತ್ತಲೋ ಇನ್ನೇನನ್ನಾದಾರೂ ಹಲವರಿಯುತ್ತಲೋ ಇರುತ್ತಿದ್ದ (ಮಲೆಮ. ೬೯೫); ಅವನು ಜಾಗೃತಗೊಂಡವನಂತೆ . . . ''ನಾನೀಗ ಮಲಗಬೇಕು'' ಎಂದು ಪರಿಪರಿಯಾಗಿ ಹಲವರಿದನು (ಪುನರು. ೨೭೭). [< ಅಲವಱು]

**ಹಲವರ್ಧ** 'ಪಲವರ್ಧ' ನೋ.

**ಹಲವಳಿ** 'ಹಲಿವುಳಿ' ನೋ.

**ಹಲವಾ, ಹಲುವ, ಹಲ್ವ, ಹಲ್ವಾ** (ನಾ). ಒಂದು ಬಗೆಯ ಮೆದುವಾದ

ಸಿಹಿತಿಂಡಿ: ಉಡುಪೀ ಫರಾಳದ ಅಂಗಡಿಯಲ್ಲಿ ಫೇಡೆ, ಹಲವಾ, ಅಂಟಿನ ಉಂಡಿ ಮುಂತಾದ ಮಡಿಯ ಪದಾರ್ಥಗಳು ಬಿದ್ದ ಮೂಲಕ . . . ಕೆಲಸಮಾಡಿಕೊಡಲು ಅಂತರಾತ್ಮನ ಪ್ರೇರಣೆಯಾಗಿತ್ತು (ಗಂಪಾಯಿ. ೨೩೨). **ಹಲುವ :** ಹಲುವವು ಕಿತ್ತಳೆಬಣ್ಣವನ್ನು ತಳೆದಾಗ . . . ಹರಿವಾಣದ ಮೇಲೆ ಹರಡಬೇಕು (ಅಡುಸಾ. ೯೭). **ಹಲ್ವ :** ತುಪ್ಪ ಸಕ್ಕರೆಗಳನ್ನು ಸೇರಿಸಿ ಅದನ್ನು ಹಲ್ವವನ್ನು ತಯಾರಿಸಿದರೆ ತುಪ್ಪ ಸಕ್ಕರೆಗಳ ಸ್ವಂತಸ್ವಭಾವಗಳಿಗೆ ಯಾವ ಹಾನಿಯೂ ಆಗದು (ಜೀವಾತ್ಮ. ೨೧೩). **ಹಲ್ವಾ :** ಹಲ್ವಾಗಳಲ್ಲಿ ಅನೇಕ ಪ್ರಕಾರಗಳಿವೆ, ಬಾದಾಮಿ ಹಲ್ವಾ ಅವುಗಳಲ್ಲೊಂದು (ರೂಢಿ).

[← ಅರ. ಹಲ್ವಾ; ಹಿಂ. ಮರಾ. ಹಲವಾ]

**ಹಲವು** 'ಪಲ$_1$' ನೋ.

**ಹಲವುಮಕ್ಕಳಬಳ್ಳಿ** (ನಾ). ಒಂದು ಬಗೆಯ ಸಸ್ಯ ; ಶತಾವರಿಬಳ್ಳಿ : "ಶತಾವರಿ, ಹಲವುಮಕ್ಕಳಬಳ್ಳಿ" (ಪ್ರಮಿಗಿ. ೧೦-೧೭೯). 'ಹಲುಮಕ್ಕಳತಾಯಿಬಳ್ಳಿ' ಪರಾ.

[ಹಲವು (< ಪಲ$_1$) + < ಮಗು + ಬಳ್ಳಿ]

**ಹಲವುಮಾತು** 'ಪಲವಾತು' ನೋ.

**ಹಲವುಸೂಳ್** 'ಪಲಸೂಳ್' ನೋ.

**ಹಲಸಮುದ್ಭವ** (ನಾ). [ಜ್ಯೋತಿ] ಹಲಯೋಗದಲ್ಲಿ ಹುಟ್ಟಿದವನು: ಹಲಸಮುದ್ಭವಂ ಕೃಷಿಗೆಯ್ವಂ (ಜಾತತಿ. ೧೩-೧೩). [ಸಂ.]

**ಹಲಸಿಗ** (ನಾ). ವನಸ್ಪತಿಗಳಲ್ಲಿ ವ್ಯವಹರಿಸುವವನು; ವೈದ್ಯ: ಹಾಲಿಗೆ, ಹಲಸಿಗಂ, ಹಲಗೆ (ಶಮದ. ೧೬ ಪ್ರಯೋ); ಹ [ಪಾಠಾಂ. ಹಾ]ಲಸಿಗನೊರ್ವಂ . . . ಭಗಂಧರಾದಿಯಾದ ರೋಗವೆಲ್ಲಮಂ ಕಳೆವೆನೆನುತ್ತೆ ಕೇರಿಕೇರಿಯಂ ಸುತ್ತಿ ಬರುತಿರೆ (ಧರ್ಮಪ. ೯-೨೮ ವ).

[? + - ಇಗ]

**ಹಲಸು** 'ಪಲಸು' ನೋ.

**ಹಲಹಸ್ತ** (ನಾ). = ಹಲಧರ ೩: ಅಂಗಜನ್ಮನಾಗಿಯುಮಮಾನುಷಂ ಹಲಹಸ್ತಂ (ಶಾಂತಿಪು. ೨-೯). [ಸಂ.]

**ಹಲಾಕು, ಹಲಾಖು** (ಗು). (ಉಕ) ೧. ಸೋತುಹೋದ; ಬಳಲಿದ: (ಶಿ). ೨. ಹಾಳಾದ; ನಾಶವಾದ : (ಶಿ). (ನಾ). ೩. ಕೊರಗು; ವ್ಯಥೆ. ೪. ಬಳಲಿಕೆ; ಆಯಾಸ: ಒಂದು ಇಡೀ ದಿವಸದ ಗಾಡಿಯ ಪ್ರಯಾಣ; ಹಾದಿಯಲ್ಲಿ ಹಲಾಕು ಹೈರಾಣಾಗುವ ಸಂಭವ ಜಾಸ್ತಿ (ದೀಪಹ. I, ೨೦). ೫. ನಾಶ ; ಹಾಳು. **ಹಲಾಖು.**

**ಹಲಾಕಾಗು** = ೧. ಕೊರಗು; ವ್ಯಥೆಪಡು: ಸೋನಕ್ಕ . . . ತಾವು ನಿಶ್ಚಿಂತರಾಗಿದ್ದೇವೆ, ನೀವು ಹಲಾಕಾಗಬೇಡಿರೆಂದು ಧೈರ್ಯ ಕೊಡುತ್ತಿದ್ದರು (ದೀಪಹ. II, ೪೭). ೨. ಹಾಳಾಗು; ನಾಶವಾಗು: ಫೌಜು ಯಾವತ್ತೂ ಮುರಿದು ಬಿಯಾ ಜಖಮಿ ಆಗಿ ಹಲಾಕಾದ್ದರಿಂದ (ರಾಜೇಂದ್ರ. ೨೭); ಜಪ್ತಿಯಾದ ಸ್ವತ್ತುಗಳು ಹರಾಜಾಗುವವರೆಗೂ ಆ ಸ್ವತ್ತುಗಳು ಹಲಾಕಾಗದಂತೆ ಗ್ರಾಮಾಧಿಕಾರಿಯು ಇಟ್ಟು ಕಾಪಾಡಿಕೊಂಡಿರಬೇಕು (ಗ್ರಾಮಾಕ. ೭೩). **ಹಲಾಕು ಮಾಡು, ಹಲಾಖು ಮಾಡು** = ೧. ಪೀಡಿಸು; ಗೋಳಾಡಿಸು: ಕೆಲವರ ಕಾಲು ಕುಯಿದು ಕೆಲವರಿಗೆ ಗಲ್ಲುಹಾಕಿ ಈ ಮೇರೆ ನಾನಾ ಪ್ರಕಾರ ಹಲಾಕುಮಾಡಿ ಶರಾರತ್ತು ನಡಸಿದ್ದರಿಂದ (ರಾಜೇಂದ್ರ. ೪೯). ೨. ನಾಶಮಾಡು: ಪಾಕಶಾಕ ಸಮಸ್ತವೆಲ್ಲ ಹಲಾಕುಮಾಡಿ ಜಂಗಮರ್ ನೂಕಿ ಪೋಗಲು (ಶರಲೀ. ೩೪೫-೪); ಮರಾಟೆ ಥವುಜನೆಲ್ಲಾ ಹಲಾಖು ಮಾಡಿ . . . ಪಟ್ಟಕ್ಕೆ ಬಂದರು (ಹೈದರ. ೪೩).

[← ಅರ. ಹಿಂ. ಹಲಾಕ್; ಮರಾ. ಹಲಕ್, ಹಲಾಕ್, ಹಲಾಖ್]

**ಹಲಾಖು** 'ಹಲಾಕು' ನೋ.

**ಹಲಾಗ್ರ** (ನಾ). ನೇಗಿಲಿನ ತುದಿ: ಚೆನ್ನ ಭೂಮಿಯನುಳಿಸೆ ಕಂಡುದು ಹೊನ್ನ ಮಂದಸವಾ ಹಲಾಗ್ರದಿ ಕನ್ನೆಯದಟೊಳಗಿರಲು ಭೂಷಿತೆಯಾಗಿ ಸಿರಿಯಂತೆ (ಕೌಶಿರಾ. ೨-೨). [ಸಂ.]

**ಹಲಾಯುಧ** (ನಾ). ೧. ನೇಗಿಲು: ಅಂತು ಬಲದೇವಂ . . . ಹಲಾಯುಧ ಮನೆತ್ತಿಕೊಂಡು . . . ವೀರ್ಯಮಂ ಪೊಸಯಿಸಿದಂ (ಶಾಂತಿಪು. ೫-೫೭ ವ). ೨. ಬಲರಾಮ: ದೇವ ಮಹಿಮಾಸ್ಪದ ಹಲಾಯುಧಸಮೇತ ಜಯ (ಜಗವಿ. ೩-೧೧೩). ೩. = ಹಲಧರ ೩: ಭಟಮುಂಡಳಕ್ಕೆ ಕೆಂಡದ ಮಟೆಯೆಂಬಿನಂ ಕಜೆದನಂಬಿನ ಮಟೆಯಂ ಹಲ[ಪಾಠಾಂ. ಳಾ]ಯುಧಂ (ಪಂರಾಮಾ. ೪-೭೭). ೪. 'ಅಭಿಧಾನರತ್ನಮಾಲಾ' ಎಂಬ ನಿಘಂಟನ್ನು ಬರೆದ ಒಬ್ಬ ಸಂಸ್ಕೃತಗ್ರಂಥಕರ್ತ: ವರವೈಜಯಂತಿಯ ನಯಂ ಹಲಾಯುಧನ ವಿಸ್ತರದ ವಚನೋಕ್ತಿಯೆಂಬಿಂತಿವೆಲ್ಲವನು ಸಂವರಿಸಿಯಭಿನವ ಮಂಗನುಸುರಿದಂ (ಮಂಗರಾ. ೨-೪). ೫. ಪ್ರಸಿದ್ಧ ಶಿವಭಕ್ತನಾದ ಒಬ್ಬ ಅರಸನ ಹೆಸರು : ಇರ್ಪನೊರ್ವಂ ಶಿವನ ಭಕ್ತನೊಲವಿಂದಲ್ಲಿ ತನ್ನ ನಾಮಂ ಹಲಾಯುಧನೆಂಬುದಾಗಿರಲ್ (ಹಲಾರ. ಹ. ೧೯೩-೯); ಹಲಾಯುಧದೇವನರ್ಥಿಯಲಿ ಆ ಮಹಾತ್ಮರ ಮೆಲ್ಲಡಿಗಳಿಗೆ . . . ನಮಿಸುತಂ (ಬಸಪು. ೨೫-೧). ೬. [ಛಂದ] ಪ್ರತಿಪಾದದಲ್ಲಿ ಒಂಬತ್ತು ಅಕ್ಷರಗಳನ್ನುಳ್ಳ ಒಂದು ಸಮವೃತ್ತ: ಪಾವಕಂ ತ್ರಿದಶಪಾವಕಂ ಭಾವಿಸಿರ್ದೊಡಜೆ ನಾಮದಿಂ . . . ಕೇವಲಂ ಬಗೆ ಹಲಾಯುಧಂ (ಛಂದೋಂಬು. ೨-೯೯).

[ಸಂ.]

**ಹಲಾಸನ** (ನಾ). [ಯೋಗ] ಆಸನಗಳಲ್ಲಿ ಒಂದು : ೧. ಉತ್ತಾನಾಸನ . . . ೨೫ ಹಲಾಸನ (ಭಾರದ. ೧೭೭). [ಸಂ.]

**ಹಲಾಹಲ** (ನಾ). ಒಂದು ಬಗೆಯ ಘೋರವಾದ ವಿಷ; ಹಾಲಾಹಲ: "ಕಾಕೋಲಃ, ಕಾಲಕೂಟಃ, ಹಲಾಹಲಃ . . . ವತ್ಸನಾಭಃ . . . ಈ ೯ ವಿಷದ ಭೇದಗಳು" (ಸಿದ್ಧಾಂತಿ. ೭೩). [ಸಂ.]

**ಹಲಿ$_1$, ಹಳಿ$_6$** (ನಾ). ೧. ಬೇಸಾಯಗಾರ; ಒಕ್ಕಲಿಗ. ೨. ಬಲರಾಮ: ಹಲಿಯಂ ರಣಕೇಳಿಕುತೂಹಲಿಯಂ ನಚ್ಚಿರ್ದಂ (ಗದಾಯು. ೩-೬೨); ಜಲಜಲೋಚನನಗ್ರಜನಾಗಿ ಮೆಜೆಯುವ ಹಲಿಯ ಚಿತ್ರವ ತೋಜಿಸಿದಳು (ಮೋಹತ. ೩೦-೨೭). ೩. = ಹಲಧರ ೩: ಕೊಳ್ಳದೆ ಮಾಣೆಂ ಹಲಿ[ಪಾಠಾಂ. ಳಿ]ಯಾಣೆ ಪರಮದೀಕ್ಷೆಯನಾಗಳ್ (ಶಾಂತಿಪು. ೨-೬೨). ೪. ರಾಮ: ಭರತಂಗೇಂ ಹಲಿ ಸಾಮ್ರಾಜ್ಯಪಟ್ಟಮಂ ಕಟ್ಟಿದನೋ (ಪಂರಾಮಾ. ೭-೨೨). **ಹಳಿ$_6$:** ೨. ಇಂದೆ ಹಳಿಯುಂ ಗಡ ಕೂಡುವನಾತನಂ ಗೆಲಲ್ ಬಂದಪುದೇ (ಪಂಪಭಾ. ೧೩-೭೫). ೩. ಕಳಿಂದನಂದನೆಯನಾ ಬಳೀವರ್ದಪುಂಗವನ ಬಟಿಯನಾ ಹಳಿಯುಂ ವಸುದೇವನುಂ ಪೊಜಮಟ್ಟು (ನೇಮಿಪು. ೬-೭೪ ವ). [ಸಂ. ಹಲಿನ್]

**ಹಲಿ$_2$** (ನಾ). ೧. ದೊಡ್ಡ ನೇಗಿಲು. ೨. ನೇಗಿಲು ಹೊಡೆದ ಸಾಲು; ಉಕ್ಕೆ ಸಾಲು. ೩. ಬೇಸಾಯ; ಒಕ್ಕಲುತನ. [ಸಂ.]

**ಹಲಿ$_3$, ಹಲ$_4$, ಹಲೆ** (ನಾ). (ಉಕ) ಭ್ರೂಣ; ಗರ್ಭಪಿಂಡ: 'ಹಲಿವುಳಿ' ಪರಾ. **ಹಲ$_4$ :** 'ಹಲವಳಿ' ಪರಾ. **ಹಲೆ:** 'ಹಲೆವುಳಿ' ಪರಾ. [< ಸಂ. ಫಲಿನ್?]

**ಹಲಿಕ** (ನಾ). ರೈತ; ಬೇಸಾಯಗಾರ: ಹಲಿಕಕನ್ನಿಕೆಯಿಷ್ಟ ಸುಸ್ತನಿಯೆನ್ನುವುದನು ತರುಣರಿಗೊರೆವಂತೆ ಈ ಮನೆಯಂಗಳದೇರಂಡಕಾಂಡವು ಚಿಗುರೊಡೆದೆಸೆದಪುದಲ್ಲ (ಗಾಥಾಸ. ೩-೫೭). [ಸಂ.]

**ಹಲಿಕೆ, ಹಲಿಗೆ** (ನಾ). ಹೊಲಗದ್ದೆಗಳಲ್ಲಿ ಹೆಂಟೆಗಳನ್ನು ಒಡೆಯುವ ಸಾಧನ; ಹಲಬೆ: "ಕೋಟಿ(ಲ)ಶಂ, ಲೋಷ್ಟಭೇದನಂ - ಈ ೨ ಹಲಿಕೆ" (ಹಲಾಯು. ೯೪-೪೨೨). **ಹಲಿಗೆ:** ಊರ ತರುಣನೊಬ್ಬ . . . ಆ ಮೆತ್ತನೆ ಭೂಮಿಯನ್ನು ಉತ್ತನು; ಹಲಿಗೆ ಹೊಡೆದನು (ಜಾನಗೀ. ೯೦). 'ಪಲಗೆ', 'ಹಲಿವೆ' ಪರಾ. [< ಸಂ. ಫಲಕ./ತಮಿ. ಪಲಕೆ]

**ಹಲಿಗ** (ನಾ). ಒಂದು ಬಗೆಯ ತೆರಿಗೆ (?): ಕೆರೆಮಣ್ಣು ಮದ್ದಕ ಕಿರುಕುಳ ಹಲಿಗಗಳ ಸ್ವಾಮ್ಯ ಅಲ್ಲಿಯ ಮರವಳಿಯ ಸುಂಕ ಆಲೆಸುಂಕ ಸ್ಥಳಸುಂಕ ಸಮಸ್ತ ಬಳಿ ಸಹವಾದ ನುಗ್ಗಿಲೂರ ಚತುಃಸೀಮೆ (ಎಕ. III, ಮಳವ. ೧೨೧-೧೭೦; 1424). [?]

**ಹಲಿಗಾರತಿ** 'ಹಲಗಾರತಿ' ನೋ.

**ಹಲಿಗೆ** 'ಹಲಿಕೆ' ನೋ.

**ಹಲಿದಳ** (ನಾ). ನವಿಲುಗರಿಯ ಕೊಡೆ (?): ಹರುಷ ಕೈಮಿಗಿಲು ಕುಳ್ಳಿರಿಸಿ ಢಾಳಿಸುವ ಚಾಮರ ಹಲಿದಳಗಳ್ ಮುಂದೆಸೆಯೆ ಮೊರೆವ ಮಂಗಳವಾದ್ಯದಿ ರುರೆ ಮಝುರೆಯೆಂಬ ಧರಣೀಶರೊತ್ತೊತ್ತೆಯಿಂದ (ಭೈರವೇ. ೧-೨೦೩). [< ಹೀಲಿದಳೆ ?]

**ಹಲಿನೀಲ** (ನಾ). = ಹರಿನೀಲ: ಮಲಯಜಕೆಜಗುವಳಿಯ ಕರಯುಗದಿಂದ ಲಲನೆ ಸೋವಲು ರತಿದೇವಿ ಹಲಿನೀಲವರಲೀಂದಾಡುವಮ್ಮಾಲೆಯು ಗೆಲುವಂತಿಹವು ಸೋಳ್ಳರಿಗ (ರಾಮವಿ. ೩-೨೨). [< ಹರಿನೀಲ]

**ಹಲಿಪ್ರಿಯ** (ನಾ). ಕಡಹದ ಮರ; ಕದಂಬವೃಕ್ಷ: "ನೀಪಃ, ಪ್ರಿಯಕಃ, ಕದಂಬಃ,

ಹಲಿಪ್ರಿಯಃ - ೪ ಕಡಹದ ಗಿಡದ ಹೆಸರುಗಳು, ಈಚಲಗಿಡದಲ್ಲಿ ಉತ್ತಮಜಾತಿ - ದೇವಯೋಗ್ಯವಾದ ಈಚಲುಮರ'' (ಸಿದ್ಧಾಂತಿ. ೧೨೧). [ಸಂ.]

**ಹಲಿಪ್ರಿಯೆ** (ನಾ). ಹೆಂಡ; ಮದ್ಯ: ''ಸುರಾ, ಹಲಿಪ್ರಿಯಾ, ಹಾಲಾ . . . ಮದ್ಯಂ - ೧೩ ಹೆಂಡದ ಪೆಸರು'' (ಸಿದ್ಧಾಂತಿ. ೩೦೮). [ಸಂ. ಹಲಿಪ್ರಿಯಾ]

**ಹಲಿಯುಳಿ** 'ಹಲಿವುಳಿ' ನೋ.

**ಹಲಿವಳಿ** 'ಹಲಿವುಳಿ' ನೋ.

**ಹಲಿವುಳಿ, ಹಲವಳಿ, ಹಲಿಯುಳಿ, ಹಲಿವಳಿ, ಹಲೆವುಳಿ** (ಕ್ರಿ). (ಉಕ) ೧. ಗರ್ಭಸ್ರಾವ ಹೊಂದು; ಮೈಯಿಳಿ: ''ಸ್ರವದ್ಗರ್ಭ = ಹಲಿವುಳಿದವಳು'' (ಗಂಗಾಮ). ೨. (ಆಲಂ) ಪೂರ್ಣಗೊಳ್ಳುವ ಮೊದಲೇ ಮುರಿದುಹೋಗು; ನಿಷ್ಫಲವಾಗು: ಆತನ ಆಗಿನ ಎಣಿಕೆಗಳೆಲ್ಲಾ ಹಲಿವುಳಿದ ನಂತರ ಮೊಮ್ಮಗಳಾಗಿ ಬರಬೇಕಾಗಿದ್ದ ಗೌರಿ ಸೊಸೆಯಾಗಿ ಬಂದಿದ್ದಳು (ನಡೆದಾ. II. ೮೪೯). **ಹಲವಳಿ:** ೧. ಕುಮಾರಿಯು ಗರ್ಭಿಣಿಯಾದ ಲಕ್ಷಣ ಕಂಡು ಬಂದು, ಮರುಕ್ಷಣವೇ ಔಷಧೋಪಚಾರ ನಡೆದು, ಈಗ ಹಲವಳಿದಿದ್ದಳು (ಸಮಜೀ. ೯೭೭). **ಹಲಿಯುಳಿ:** ೧. ಹಲಿಯುಳಿಯುವ ಬಾಣಂತಿಯಂತೆ ಹಲವಳಿದು ಭೂಮಿತಾಯಿ ಹಾಸಿಗೆ ಹಿಡಿದಿದ್ದಾಳೆ (ನವ್ಯಕಾ. ೩೩). **ಹಲಿವಳಿ:** ೧. ಅವನ ಹೆಂಡತಿ ಬರುವ ಹಾಗಿರಲಿಲ್ಲ; ಹಲಿವಳಿದು ಮತ್ತೆ ಹಾಸಿಗೆ ಹಿಡಿದು ಮಲಗಿದ್ದರು (ಸಮಜೀ. ೪೫೧). **ಹಲೆವುಳಿ:** ೧. ''ಅವತೋಕಾ - ಅಕಸ್ಮಾತ್ ಹಲೆವುಳಿದವಳು'' (ಗಂಗಾಮ. ೧೭). [ಹಲಿ$_3$ + ಉಳಿ$_1$ (< ಉಱ್$_1$)]

**ಹಲಿವೆ, ಹಲುಬೆ, ಹಲುವೆ** (ನಾ). = ಹಲಿಕೆ : ಹಲುಬೆಗಳು ಅಥವಾ ಹಲಿವೆಗಳು - ಇವು ನೆಲವನ್ನು ಉತ್ತ ಮೇಲೆ ಅದನ್ನು ಹಸನು ಮಾಡುವುದಕ್ಕೆ ಮುಖ್ಯವಾಗಿ ಉಪಯೋಗಿಸಲ್ಪಡುತ್ತವೆ (ವ್ಯವಮ. ೯). **ಹಲುಬೆ:** ಐದು ರೂಬಲ್ಲಿಗೆ ರೈತರು . . . ಮೂರು ಬಾರಿ ಉತ್ತು, ಹಲುಬೆ ಹೊಡೆದು, ಬಿತ್ತಿ, ಬಲಿತ ಮೇಲೆ ಕೊಯ್ದು ಕಂತೆ ಕಟ್ಟಿ ಕಣಕ್ಕೆ ಸಾಗಿಸಬೇಕಾಗಿತ್ತು (ಪುನರು. ೨೭೪). **ಹಲುವೆ:** ಹಲುವೆ, ಹಲುಬೆ (ಕಿಸಂಗ್ರಾ. ೧೮). 'ಹಲಿಕೆ' ಪರಾ. [?]

**ಹಲೀಮಕ** (ನಾ). ಕಾಮಾಲೆರೋಗದಲ್ಲಿ ಒಂದು ಪ್ರಕಾರ; ಪಾಂಡುರೋಗ: ಪಾಂಡುರೋಗದಲ್ಲಿ ವಾತ, ಪಿತ್ತಗಳ ಹೆಚ್ಚಿಗೆಯಿಂದ ರೋಗಚಿಹ್ನಂಗಳು ತೋರುವ ರೀತಿಯಲ್ಲಿ ಭ್ರಮೆ, ತೃಷ್ಣೆ, ಸ್ತ್ರೀಸಂಗದಲ್ಲಿ ದ್ವೇಷ, ಅಲ್ಪವಾದ ಜ್ವರ, ಇವಿಷ್ಟು ಉಂಟಾಗಿದ್ದುದು ಹಲೀಮಕವೆನಿಸಿಕೊಂಬುದು (ವೈದ್ಯಸಾ. I. ೩೪೭); ಸಿದ್ಧಘೃತ . . . ಆ ಘೃತವನ್ನು ಸೇವಿಸಲು ಕಾಸರೋಗ, ಸಂತಾಪ, ಹಲೀಮಕ, ತಲೆಬೇನೆ ಸಹ ಮಾಣ್ಗುಂ (ಸಕವೈ. ೧೧೪). [ಸಂ.]

**ಹಲು** 'ಪಲ್' ನೋ.

**ಹಲುಂಬು** 'ಪಲುಂಬು' ನೋ.

**ಹಲುಕಡಿ** 'ಪಲ್ಗಡಿ' ನೋ.

**ಹಲುಕಡ್ಡಿ, ಹಲ್ಲುಕಡ್ಡಿ** (ನಾ). ಹಲ್ಲುಗಳ ಸಂದಿನಲ್ಲಿ ಸಿಕ್ಕಿಕೊಂಡಿರುವ ಆಹಾರದ ಕಣ ಮೊದಲಾದುವನ್ನು ತೆಗೆಯಲು ಬಳಸುವ ಲೋಹ ಅಥವಾ ಮರದ ಕಡ್ಡಿ: ಅಶನ ಶಯನ ಹಲುಕಡ್ಡಿ ದರ್ಪಣ ನಡೆ ನುಡಿ ಚೈತನ್ಯ . . . ರೂಪ ನಿರೂಪ ಎಲ್ಲವು ಲಿಂಗಕ್ಕರ್ಪಿತವಲ್ಲದೆ ಎನ್ನಂಗಕ್ಕೆ ಸೊಗಸದೊ ಅಯ್ಯ (ಶಿವಗೀ. ೮೯-೪೩೮). **ಹಲ್ಲುಕಡ್ಡಿ:** ಲಿಂಗೋದಕ ಹಲ್ಲುಕಡ್ಡಿ ಮೊದಲಾದ ಸಕಲಪದಾರ್ಥಂಗಳ ಇಷ್ಟಲಿಂಗಕ್ಕೆ ಕೊಟ್ಟು ಕೊಂಬ ಎಚ್ಚರಿಕೆ (ಘನವ. ೨೫-೨೧); ಹತ್ತುಜನರ ಹಲ್ಲುಕಡ್ಡಿ ಒಬ್ಬನ ತಲೆಹೊರೆ (ಗಾದೆ). [ಹಲು (< ಪಲ್) + ಕಡ್ಡಿ]

**ಹಲುಗಳೆ** 'ಪಲ್ಗಳೆ$_1$' ನೋ.

**ಹಲುಗಿರಿ** 'ಪಲ್ಗಿರಿ' ನೋ.

**ಹಲುಗಿರಿಗಚ್ಚು** (ಕ್ರಿ). ಹಲ್ಲುದವಡೆ ಕಚ್ಚು: ಬಿಡದೆ ಜಂಬುಕ ಘೂಕ ನಗರಿಯ ನಡುವೆ ಹಲುಗಿರಿಗಚ್ಚಿಯುಲಿದವು (ಪ್ರಶ್ನಾಚ. ೨-೨೩).

[ಹಲುಗಿರಿ$_2$ + ಕಚ್ಚು$_1$ (< ಕರ್ಚು$_1$)]

**ಹಲುಗಿರಿಸು** 'ಪಲ್ಗಿರಿಸು' ನೋ.

**ಹಲುಗಿರುಕು, ಹಲ್ಲುಗಿರುಕು** (ನಾ). ಹಲ್ಲು ಕಿರಿಯುವಂತಹುದು: ಅಹಹ ಹಲುಗಿರುಕುಮ್ಮಗ ನೀನೇನು ತೊಲತೊಲಗು (ಆನಂರಾ. ೧-೫-೬೮). **ಹಲ್ಲುಗಿರುಕು:** ಹಲ್ಲುಗಿರುಕಿನ ಹುಣುಬುದಲೆಗಳ ತಲ್ಲಣದ ತಳಮೇಲುಗಳ ಕೈಗಲ್ಲಗಳ ಹರಿಸೇನೆ ಸೈಗೆಡೆದಿರ್ದುದಗಲದಲಿ (ತೊರರಾ. ೬-೩೭-೧೫). [< ಹಲುಗಿರಿ (< ಪಲ್ಗಿರಿ)]

**ಹಲುದಿನ್** 'ಪಲ್ದಿನ್' ನೋ.

**ಹಲುದಿನು** 'ಪಲ್ದಿನ್' ನೋ.

**ಹಲುದೆಗೆ** (ಕ್ರಿ). ಹಲ್ಲನ್ನು ಕೀಳು: ಒಗುವ ಕಿವಿಮೂಗುಗಳ ರಕುತದ ಹಗರಣದ ಹೊಸನಾಟಕದ ಹಲುದೆಗೆದ ರಕ್ಕಸಿ ಬಂದಳೊದಱುತ ಖಳನ ಪಟ್ಟಣಕೆ (ತೊರರಾ. ೩-೪-೩೦). [ಹಲು (< ಪಲ್) + ತೆಗೆ$_1$]

**ಹಲುದೆಱಿಹಿ** (ನಾ). ಹಲ್ಲು ಕಿರಿಯುವವನು: ಹಚ್ಚಿ ಹಲುಬುವ ಹಲುದೆಱಿಹಿಗಳ ಮೆಚ್ಚಿದಿದಿರನು ನಿಂದಿಸುತ ಕಣುಮುಚ್ಚಿ ನಿಗುರುವ ಭಿನ್ನಮತಿಗಳನೊಲ್ಲೆನು (ನಿಭಾಗ. ೮-೨೦-೯). [ಹಲು (< ಪಲ್) + ತೆಱಹು (< ತೆಱಪು) + - ಇ$_1$]

**ಹಲುದೇಜ್** 'ಪಲ್ದೇಜ್' ನೋ.

**ಹಲುದೋಱು** (ಕ್ರಿ). ಹಲ್ಲು ಕಾಣಿಸು; ಹಲ್ಲುಗಳೆಲ್ಲ ಸ್ಪಷ್ಟವಾಗಿ ಕಾಣು: ಅಳಿಮನದಾಸೆಯವರ ಮೂಗ ಹಲುದೋಱಿ ಕೊಯ್ಯ ಕೂಡಲಸಂಗಮದೇವ (ಬಸವ. ೬೬೫); ಈ ನುಡಿದ ನುಡಿಯೊಳಗೆ ಎಳ್ಳ ಮೊನೆಯಷ್ಟು ಸಂದೇಹವುಳ್ಳರೆ ಹಲುದೋಱಿ ಮೂಗ ಕೊಯಿ (ಬಸವ. ೭೧೦). [ಹಲು (< ಪಲ್) + ತೋಱು]

**ಹಲುಬಾಟ** (ನಾ). ಹಂಬಲ; ಬಯಕೆ: ಅದೇತಕೆ ಅಯ್ಯಾ ಶಿವನೊಳಗೆ ಕೂಟಸ್ಥನಾದೆಹೆನೆಂಬ ಹಲುಬಾಟ ಇದು ಭಕ್ತಿಸತ್ವದ ಆಟವಲ್ಲ (ಮದೇವ. ೨೮೯-೧).

[ಹಲುಬು (< ಪಲುಂಬು) + ಆಟ]

**ಹಲುಬಿ** 'ಪಲುಬಿ' ನೋ.

**ಹಲುಬು** 'ಪಲುಂಬು' ನೋ.

**ಹಲುಬೆ** 'ಹಲಿವೆ' ನೋ.

**ಹಲುಬೇನೆ, ಹಲ್ಲುಬೇನೆ** (ನಾ). ಹಲ್ಲು ಸಡಿಲವಾಗುವುದು, ಹುಳುಕಾಗುವುದು ಮುಂತಾದ ಕಾರಣಗಳಿಂದ ವಸಡಿನಲ್ಲಿ ಉಂಟಾಗುವ ನೋವು; ಹಲ್ಲುನೋವು; ದಂತಶೂಲೆ: ಜ್ವರವೆಯ್ದೆ ದಕ್ಷಂಗೆ ಕರರೋಗವಿಂದ್ರಂಗೆ ನೆರೆದ ಹಲುಬೇನೆ ಪೂಷಂಗೆ (ಸಾನಂಚ. ೩-೪೩). **ಹಲ್ಲುಬೇನೆ:** ''ಅರ್ಬುದ - ಹಲ್ಲುಬೇನೆ'' (ಗಂಗಾಮ. ೬). [ಹಲು (< ಪಲ್) + ಬೇನೆ]

**ಹಲುಮಕ್ಕಳತಾಯಿಬಳ್ಳಿ** (ನಾ). ಒಂದು ಬಗೆಯ ಸಸ್ಯ: 'ಹಲವುಮಕ್ಕಳಬಳ್ಳಿ' ಪರಾ. [? + ಬಳ್ಳಿ]

**ಹಲುಮಾಣಿಕ** 'ಪಲ್ಮಾಣಿಕ' ನೋ.

**ಹಲುಮಾಣಿಕ್ಯ** 'ಪಲ್ಮಾಣಿಕ' ನೋ.

**ಹಲುಮಿಡಿ** 'ಪಲ್ಮಿಡಿ' ನೋ.

**ಹಲುಮೊರೆ** 'ಪಲ್ಮೊರೆ' ನೋ.

**ಹಲುವ** 'ಹಲವಾ' ನೋ.

**ಹಲುವೆ** 'ಹಲಿವೆ' ನೋ.

**ಹಲುಸಲ್ಲೆ** (ನಾ). ಒಂದು ಬಗೆಯ ಔಷಧೀಸಸ್ಯ: ಪಂಚೋಟಿಮರ, ಹಡಸಾಲೆ, ಹಲುಸಲ್ಲೆ, ಪಲುಚೊಟ್ಟೆ, ನಾಟಿಗಟ್ಟಪರ್ಚ (ಮೈಔಗಿ. ೫೯-೧೧೮೪). [?]

**ಹಲೆ** 'ಹಲಿ$_3$' ನೋ.

**ಹಲೆಚಾರ** (ನಾ). ಸೇವೆ; ಪರಿಚರ್ಯೆ(?): ಹಲುಗುರ ವೈಜ್ಯನಾಥ' ದೇವರಿಂಗೆ ನೈವೇದ್ಯಕಂ ನಂದಾದೀವಿಗೆಗಂ ದೇಗುಳ ಹಲೆಚಾರಕ್ಕಂ . . . ಧಾರಾಪೂರ್ವಕಂ ಮಾಡಿಕೊಟ್ಟರು (ಎಕ. III, ಮಂಡ್ಯ. ೨೯-೨೩; 1131).

[IP ಇದು 'ಪರಿಚಾರ' ಎಂಬುದರ ಅಪಲಿಖಿತವಿರಬಹುದು]

**ಹಲೆದೇಜ್** (ನಾ). ನೇಗಿಲಿನ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ(?): ಕಾಣಿಕೆ ಕಿಱುಕುಳಾಯ ದಾಯಸಹಿತಂ XXX ಪಂಚಕ ಅರುವಣ ಹಿಟ್ಟುದೆಜ್ ಹಲೆದೆಜ್ . . . ಯಿಂತಿನಿತುವಂ . . . ಧಾರಾಪೂರ್ವಕಂ ಮಾಡಿ ಕೊಟ್ಟರು (ಸೌಇಇ. XX. ೧೨೭-೨೭; 1186). [IP ಇದು 'ಹಲದೇಜ್' ಎಂಬುದರ ಅಪಲಿಖಿತವಿರಬಹುದು]

ಹಲೆವುಳಿ 'ಹಲಿವುಳಿ' ನೋ.

ಹಲ್ಕ 'ಹಲ್ಕಾ' ನೋ.

ಹಲ್ಕಡಿ 'ಪಲ್ಗಡಿ' ನೋ.

ಹಲ್ಕಡಿವಿನಯ (ನಾ). (ಆಲಂ) ತೋರಿಕೆಯ ವಿನಯ; ಧೂರ್ತವಿನಯ (?): ನುಡಿ ತೊದಳಾರ್ಪು ನಿಪ್ಪಸರ ವಾಯಮದುಳ್ಳಸಿ ವಿಕ್ರಮಕ್ರಮಂ ಬಡವರ [ಮಾ]ರಿ ಪೆಂಪು ಮುಗಿಲೊಡ್ಡಱುತ ಕುಱುಗಂಟು ನಂಟು ಹಲ್ಕಡಿವಿನಯಂ ಪ್ರಪಂಚಪುರುಷಾರ್ತ್ಥಮನರ್ತ್ಥಕಮೆಂಬ ನಾಡ ನಿಗ್ಗಡಿಗಳನೆನ್ನು ಪೋಲಿಪೆನೊ ಕೇಶವದೇವನೊಳನ್ಯಮರ್ತ್ಯರ (ಶಾಸ. XV. ೪೮-೫; 1152 ?).

[ಹಲ್ಕಡಿ (< ಪಲ್ಗಡಿ) + ವಿನಯ]

ಹಲ್ಕಾ, ಹಲ್ಕ (ಗು). ೧. ಲಘುವಾದ; ಹಗುರವಾದ: (೬). ೨. ಅಮುಖ್ಯವಾದ; ಮಹತ್ವವಲ್ಲದ: ಈ ಹಲ್ಕಾ ವಿಚಾರಗಳಿಗೆ ತಲೆಕೆಡಿಸಿಕೊಳ್ಳಲು ನನಗೆ ಬಿಡುವಿಲ್ಲ (ರೂಢಿ). ೩. ನಿಕೃಷ್ಟವಾದ; ಕ್ಷುಲ್ಲಕವಾದ: ಈ ರೀತಿ ಹಲ್ಕಾ ಕೆಲಸ ಮಾಡಲು ನಿನಗೆ ನಾಚಿಕೆಯಾಗಬೇಕು (ರೂಢಿ). ೪. ಕೀಳ್ತರಗತಿಯ; ಅಸಭ್ಯವಾದ: ಅವರು ಈ ಊರಿಗೇ ದೊಡ್ಡ ಮನುಷ್ಯರು. ಆದರೆ ಶುದ್ಧ ಹಲ್ಕಾಜನ (ಮರಳಿ. ೬೩). ೫. ಸಣ್ಣಪ್ರಮಾಣದ; ಗಂಭೀರವಲ್ಲದ; ಅಲ್ಪಪ್ರಮಾಣದ: ೩೨೩ ಕಲಮಿನ ಪ್ರಕಾರ ಹಲ್ಕಾ ಮಾರಾಮಾರಿ ಅರ್ಜಿ (ಗ್ರಾಮಾಯ. ೨೬೩). (ನಾ). ೬. ಕೀಳ್ತರಗತಿಯ ವ್ಯಕ್ತಿ; ಅಸಭ್ಯವ್ಯಕ್ತಿ: ಅವ್ವನೂ ಹಲ್ಕಾ, ಮಗಳೂ ಹಲ್ಕಾ, ಅಂಥಲ್ಲಿ ಹೋದರ ನಾನು ಹಲ್ಕಾ ಆಗುತೀನಿ (ಮಣ್ಣುಪ. ೮೮). ಹಲ್ಕ: ೪. ಸಾಲ್ಕಾರದ ಬೀದಿಯಲ್ಲಿ ಹಲ್ಕ ಹೆಂಗಸೊಬ್ಬಳು ತನ್ನ ಸ್ನೇಹಿತನ ಗಡಿಯಾರವನ್ನು ಕದ್ದುಕೊಂಡು ಹೋದ ಕತೆಯನ್ನು ವಿವರಿಸಿದನು (ಪುನರು. ೧೧೨). [← ಹಿಂ. ಮರಾ. ಹಲಕಾ./ ಸಂ. ಕ್ಷುಲ್ಲಕ]

ಹಲ್ಕಿರಿ 'ಪಲ್ಗಿರಿ' ನೋ.

ಹಲ್ಕಿಸಿ (ಕ್ರಿ). ಹಲ್ಲುಕಿರಿ; ನಗು: ಹಲ್ಕಿಸಿವುದೆ ಸರಿ ಪ್ರಚಾರವು ಚೀರಾಟವೆ ಜಯಜಯಕಾರ (ಅರಳು. ೧೫೪-೧೨). [< ಪಲ್ + ಕಿಸಿ₁]

ಹಲ್ಕುರು (ನಾ). ಹಲ್ಲಿನ ದೋಷದಿಂದ ದವಡೆಯ ಮೇಲೆ ಏಳುವ ಬೊಕ್ಕೆ,– ಬಾವು: (೬). [< ಪಲ್ + ಕುರು₁]

ಹಲ್ಗಡಿ 'ಪಲ್ಗಡಿ' ನೋ.

ಹಲ್ಗಿರಿ 'ಪಲ್ಗಿರಿ' ನೋ.

ಹಲ್ಗೆರೆ 'ಪಲ್ಗೆಱೆ' ನೋ.

ಹಲ್ನಗೆ (ನಾ). ಹಲ್ಲು ಕಾಣವಂತೆ ನಗುವುದು (?): ತೊಟ್ಟಿಲಯ್ಯ:- (ಆರಕ್ತಪ್ರಫುಲ್ಲನಾಗಿ, ಬೆಳ್ತನದ ಹಲ್ನಗೆಯಿಂದ) ವೋ! ಅದೇ? (ಮಂತ್ರಶ. ೩೮-೨೧).

[< ಪಲ್ + ನಗೆ]

ಹಲ್ಮಡಿ 'ಪಲ್ಮಡಿ' ನೋ.

ಹಲ್ಮೊರೆ 'ಪಲ್ಮೊರೆ' ನೋ.

ಹಲ್ಯ (ಗು). ೧. ಉಳಬೇಕಾದ; ಸಾಗುಮಾಡಬೇಕಾದ. ೨. ಕುರೂಪಿಯಾದ. (ನಾ). ೩. ಉತ್ತ ಭೂಮಿ; ಸಾಗುಮಾಡಿದ ಭೂಮಿ: "ಸೀತ್ಯಂ, ಕೃಷ್ಟಂ, ಹಲ್ಯಂ – ೩ ಉತ್ತ ಭೂಮಿ, ಗೆಯ್ದು ನೆಲ" (ಸಿದ್ಧಾಂತಿ. ೨೬೬). ೪. ಕುರೂಪ; ವಿರೂಪತೆ: ಜಗತಿಯೊಳಗುಳ್ಳಖಿಳಪ್ರಾಣಿಗಳ ಸೌಂದರ್ಯ ಬಗೆಯಲೊಂದೊಂದು ತಿಲದನಿತನುಂ ಸ್ವೀಕರಿಸಿ ಮಿಗೆ ಹಲ್ಯರಹಿತಮೆಂದೆನಿಪಹಲ್ಯಾನಾಮ ಸುಂದರಿಯಳಂ ನಿರ್ಮಿಸಿ (ವೆಂಕಾರಾ. ೧-೧೫-೪೩). [ಸಂ.]

ಹಲ್ಲಕ (ನಾ). ೧. ಕೆಂಪುಬಣ್ಣದ ತಾವರೆ ಅಥವಾ ನೈದಿಲೆ: "ಹಲ್ಲಕಂ, ರಕ್ತಸಂಧ್ಯಕಂ – ೨ ಕೆಂಪುನೈದಿಲೇ ಹೆಸರು" (ಸಿದ್ಧಾಂತಿ. ೮೯); ಮುಖಚಂದ್ರನ ನೋಲ್ಪಿಸಲ್ಕಟ್ಟಂದೆಡ ಬಲಂಗಳೊಳಳವಟ್ಟ ಹಲ್ಲಕಂಗಳೆನೆ ಬಗೆಗೊಳ್ವ ಮಣಿಕರ್ಣಾವತಂಸದ ಕಮನೀಯನುಂ (ಉದ್ಭಟ. ೮-೫೦ ವ). ೨. ಕೆಂಪುಬಣ್ಣದ ಬಂಧೂಕಪುಷ್ಪ: "ಹಲ್ಲಕಂ – ಕೆಚ್ಚನೆ ಅಪ್ಪ ಬಂದುಗೆ. ಅದು ಜಲದೊಳಾದಡೂ ಸ್ಥಲದೊಳಾದಡೂ ಹುಟ್ಟುವುದು" (ನಾಚಿರಾ. ೬); ಅರವಿಂದೋತ್ಪಲ ಕುಂದ ಹಲ್ಲಕ ಪಲಾಶಂ ಕಾಂಚವಾಲಂಗಳುಂ . . . ಇರ್ಕುಂ (ಹಮ್ಮೀರ. ೬-೪೬). [ಸಂ.]

ಹಲ್ಲಕಾರ್ತಿ (ನಾ). (?): ಭಲ್ಲೂಕರರಸ ಲೋಕೋಪಕಾರಂಗೈವ ಸೊಲ್ಲುಗಳ ನುಸುರ್ದುದರಿಂವಾದುದೈ ಮಾನಸಕೆ ಹಲ್ಲಕಾರ್ತಿಯು ಜನಿಸುವನ್ನೆಗಂ ಪಾಲ್ಗಡಲಿಗೈದಿ ಸಂಜೀವನವನು ಉಲ್ಲಾಸದಿಂ ತಂದು (ವೆಂಕಾರಾ. ೬-೩೬-೧೦). [?]

ಹಲ್ಲಟೆ (ನಾ). ಹಿಂಸೆ; ತೊಂದರೆ (?): ಎಲ್ಲಿಯ ಮಾರಿಯ ಬರಿಯ ಚವುಟ ಮತ್ತಲ್ಲಿಯ ಬಲುಮಿಳ್ಳುವಿನ ಹಲ್ಲಟೆಗಾಡಿದೆವೆನುತೊಲ್ಲೆಸಿತು ಬಲ್ಲಿದ ನೃಪನಿಕುರುಂಬ (ನೇಮಿಸಂ. ೧೨-೮೨). [?]

ಹಲ್ಲಣ 'ಪಲ್ಲಣ' ನೋ.

ಹಲ್ಲಣಗೆ (ನಾ). (ಕುದುರೆಯ) ತಡಿ,– ಜೀನು: ಇಂದ್ರಾಯುಧವು ಹಲ್ಲಣಗೆಯೊಡನೆ ಸಿದ್ಧವಾಗಿ ನಿಂತಿತು (ನಾಗಕಾ. ೫೨). [< ಹಲ್ಲಣ (< ಪಲ್ಲಣ)]

ಹಲ್ಲಣಿಸು 'ಪಲ್ಲಣಿಸು' ನೋ.

ಹಲ್ಲಣೆ₁ (ನಾ). ಮುಸುಕು; "ಗವಸಣಿಕೆ" (ತ್ರಿಪುವಿ. ಕೋಶ): ಹಲಗೆಯ ಹಲ್ಲಣೆಯಂ ತೆಗೆದು ನಾಲ್ಕು ತೆಱದ ಧಾರೆಯಂ ಮೂಱು ತೆಱದ ನಿವಾರಣೆಯಂ ನಾಲ್ಕು ತೆಱದಡವೊಯ್ಲುಂ ಬಿತ್ತರಿಸಿ (ತ್ರಿಪುವಿ. ೨೩-೧೪ ವ). [?]

ಹಲ್ಲಣೆ₂ (ನಾ). ಗಟ್ಟಿಯಾದ ಅಬ್ಬರ (?): ಘಲ್ಲಣೆಯ ಖುರಪುಟದ ತುರಗದ ಹಲ್ಲಣೆಯ ಹೇಷಿತಕೆ ಹಗೆಯೆದೆ ಝಲ್ಲೆನಲು ಕಣೆ ಜಾಡಿ ಕವಿದುದು ಕಟಕದಗಲದಲಿ (ಕುಮಾರ್ದ್ರೋ. ೧೮-೩); ಹಲ್ಲಣೆಯ ಹೇಷಿತರವಕೆ ಹೆದಱಿತು ರಾಕ್ಷಸವ್ರಾತ (ಕುವ್ಯಾಕ. ೬-೨೩); ನಿಲುಕಿತೊಂದೆಸೆಯಲಿ ಮಹಾರಥರುಲುಹು ಮತ್ತೊಂದೆಸೆಯಲಶ್ವಾವಳಿಯ ಹಲ್ಲಣೆ ಹೊಳಕಿದುದು (ತೊರರಾ. ೬-೧೫-೧೨). [?]

ಹಲ್ಲಳ 'ಪಲ್ಲಣ' ನೋ.

ಹಲ್ಲಾ, ಹಲ್ಲೆ₄ (ನಾ). ಲಗ್ಗೆ; ಮುತ್ತಿಗೆ; ದಾಳಿ: ಕೋಟೆಯ ಮೇಲೆ ಹಲ್ಲಾ ನಡೆಯುವುದಾದರೆ ಅದು ಕತ್ತಲೆಯ ಹೊತ್ತಿನಲ್ಲೇ ಸರಿ (ಕೃಷ್ಣಭೂ. ೧೦೭); ನಾವು ಬರುವುದರೊಳಗೆ ಕಲ್ಯಾಣ ಕಲ್ಲುಬುರುಗೆ ಕೋಟೆಗಳ ಹಲ್ಲಾ ಮಾಡು ಯಂಬುದಾಗಿ ನೇಮಕ ಮಾಡಿದ್ದರು (ಕೆಳವಂ. ೧೩). ಹಲ್ಲೆ₄: ಕಿತ್ತೂರ ಮೇಲೆ ಹಲ್ಲೆಮಾಡಲು ದೊಡ್ಡ ಸೈನ್ಯವನ್ನು ಕಳಿಸಿಕೊಟ್ಟರು (ಕಪವು. ೪-೯೩).

[← ಅರ. ಮರಾ. ಹಿಂ. ಹಲ್ಲಾ]

ಹಲ್ಲಿ 'ಪಲ್ಲಿ₁' ನೋ.

ಹಲ್ಲಿಕೆ (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಅದರ ಹೂವು: (ಮೈಔಗಿ. ೨೦-೩೫೯). [?]

ಹಲ್ಲಿಟ್ಟು (ನಾ). ಹಲ್ಲುಗಳಿಗೆ ಕಪ್ಪುಬಣ್ಣವನ್ನು ಉಂಟುಮಾಡಲು ಉಜ್ಜಿಕೊಳ್ಳುವ ಒಂದು ಬಗೆಯ ನಸುಹಳದಿ ಪುಡಿ; ಚಾಚೇಲು: ಹಲ್ಲು ತುಂಬಿ ಇಡಗಿದ ಹಲ್ಲಿಟ್ಟು (ಹುಚ್ಚಾಟ. ೩); ಕೆಂಪಿ ತನ್ನ ದಂತಾಲಂಕಾರಕ್ಕಾಗಿ ಹಲ್ಲುಕಪ್ಪು ಹಾಕಿದ್ದಳು. ಇನ್ನೂ ಕಠ್ರಗೆ ಕಾಣಲಿ ಅಂತ ದಿನವೂ ತಪ್ಪದೆ ಹಲ್ಲಿಟ್ಟು ತಿಕ್ಕುತ್ತಿದ್ದಳು (ನಮ್ಮೂರು. ೨೫೫). [ಹಲ್ಲು (< ಪಲ್) + ಹಿಟ್ಟು (< ಪಿಟ್ಟು)]

ಹಲ್ಲಿಲಿ 'ಪಲ್ಲಿಲಿ' ನೋ.

ಹಲ್ಲಿಲಿಬಾಯಿ 'ಪಲ್ಲಿಲಿವಾಯ್' ನೋ.

ಹಲ್ಲಿಸಕುನ (ನಾ). ಹಲ್ಲಿ ನುಡಿಯುವುದನ್ನು ಗುರುತಿಸಿ ಹೇಳುವ ಶಕುನ: (೬). 'ಪಲ್ಲಿಶಕುನ' ಪರಾ. [ಹಲ್ಲಿ (< ಪಲ್ಲಿ₁) + ಸಕುನ]

ಹಲ್ಲೀಶ (ನಾ). [ಕಾವ್ಯಮೀ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು; ಒಂದು ಗಂಡು ಪಾತ್ರ ಹಾಗೂ ಏಳರಿಂದ ಹತ್ತರಷ್ಟು ಹೆಣ್ಣುಪಾತ್ರಗಳಿರುವ, ನೃತ್ಯ ಹಾಗೂ ಗಾಯನಗಳೇ ಪ್ರಧಾನವಾಗಿರುವ ಏಕಾಂಕನಾಟಕಪ್ರಭೇದ: ೧. ನಾಟಿಕಾ . . . ೧೭. ಹಲ್ಲೀಶ ೧೮. ಭಾಣಿಕಾ ಎಂದು ಉಪರೂಪಕಗಳು ಹದಿನೆಂಟು ವಿಧ (ಸಂನಾಟ. ೩೨). [ಸಂ.]

ಹಲ್ಲೀಶಕ (ನಾ). ವೃತ್ತಾಕಾರವಾಗಿ ನರ್ತಿಸುವುದು; ರಿಂಗಣಗುಣಿತ: ಪ್ರತಿಜ್ಞಾಯೌಗಂಧರಾಯಣ ಪಂಚರಾತ್ರ ಬಾಲಚರಿತಗಳಲ್ಲಿ 'ಹಲ್ಲೀಶಕಾದಿ' ನೃತ್ಯವಿದೆ (ಸಂನಾಟ. ೧೦೦). [ಸಂ.]

ಹಲ್ಲೀಶಿಕ್ಕಾ (ನಾ). ಬ್ರಿಟಿಶರ ಆಳ್ವಿಕೆಯ ಆರಂಭಕಾಲದಲ್ಲಿ ಬಳಕೆಯಾಗುತ್ತಿದ್ದ

ಹದಿನಾರು ಬಗೆಯ ಬೆಳ್ಳಿರೂಪಾಯಿನಾಣ್ಯಗಳಲ್ಲಿ ಒಂದು: ಔರಂಗಾಬಾದಿ . . . ೪ ಹಲ್ಲೀಶಿಕ್ಕಾ, ೫ ಶಹಾಪುರೀ (ಕಭಾಗ. ೨೮೦). [? + ಶಿಕ್ಕಾ (< ಸಿಕ್ಕಾ)]

**ಹಲ್ಲು** 'ಪಲ್' ನೋ.

**ಹಲ್ಲುಕಚ್ಚು** 'ಪಲ್ಗರ್ಚು$_1$' ನೋ.

**ಹಲ್ಲುಕಡಿ** 'ಪಲ್ಗಡಿ' ನೋ.

**ಹಲ್ಲುಕಡ್ಡಿ** 'ಹಲುಕಡ್ಡಿ' ನೋ.

**ಹಲ್ಲುಕಪ್ಪು** (ನಾ). ಹಲ್ಲುಗಳನ್ನು ಕರಿದಾಗಿ ಮಾಡಲು ಲೇಪಿಸುವ ಒಂದು ಬಗೆಯ ದ್ರವ: ಕೆಂಪಿ ತನ್ನ ದಂತಾಲಂಕಾರಕ್ಕಾಗಿ ಹಲ್ಲುಕಪ್ಪು ಹಾಕಿದ್ದಳು (ನನ್ನೂರು. ೨೫೫). [ಹಲ್ಲು (< ಪಲ್) + ಕಪ್ಪು$_4$ (< ಕರ್ಪು$_1$)]

**ಹಲ್ಲುಕಿರಿ** 'ಪಲ್ಗಿರಿ' ನೋ.

**ಹಲ್ಲುಕಿಸಿ** (ಕ್ರಿ). ಹಲ್ಲುಕಿರಿ; ಹಲ್ಲು ಕಾಣುವಂತೆ ನಗು: ಮಂಗ ಹಲ್ಲುಕಿಸಿಯುತ್ತಿದೆ (ರೂಢಿ). [ಹಲ್ಲು (< ಪಲ್) + ಕಿಸಿ$_1$]

**ಹಲ್ಲುಗಿಂಜು** (ಕ್ರಿ). (ಅಲಂ) ದೈನ್ಯದಿಂದ ಬೇಡಿಕೊಳ್ಳು; ಯಾಚಿಸು: ಮಕ್ಕಳ ಮೇಲುಖರ್ಚಿಗೆ ಗಂಡನನ್ನು ಹಲ್ಲುಗಿಂಜುವ ಪರಿಸ್ಥಿತಿ ಹೋಯಿತು (ತಾಯಿಕ. ೧೧೫); ಅವರ ಹಿಂದೆ ಮುಂದೆ ಓಡಾಡಿ ಹಲ್ಲುಗಿಂಜುತ್ತ ಶುಶ್ರೂಷೆ ಮಾಡುವುದು ಅವನ ಸ್ವಭಾವಕ್ಕೆ ಅಂಟಿ ಬಂದಿತ್ತು (ರಾಗಿಣಿ. ೧೨೨). [ಹಲ್ಲು (< ಪಲ್) + ಗಿಂಜು$_1$]

**ಹಲ್ಲುಗಿರಿ** 'ಪಲ್ಗಿರಿ' ನೋ.

**ಹಲ್ಲುಗಿರಿಕು** 'ಹಲುಗಿರಿಕು' ನೋ.

**ಹಲ್ಲುಚುಚ್ಚೋಹಂಚಿ** (ನಾ). ಒಂದು ಬಗೆಯ ಔಷಧೀಸಸ್ಯ: ದೊಡ್ಡಹಂಚೀಹುಲ್ಲು, ಹಲ್ಲುಚುಚ್ಚೋಹಂಚಿ, ನಾಯಿಹಂಚೀಕಡ್ಡಿ (ಮೈಶಿಗಿ. ೯-೧೫೧). [?]

**ಹಲ್ಲುದ್ದಿಕೆ** (ನಾ). ಹಲ್ಲು ಮಸೆಯುವಿಕೆ: ಬದ್ದುದಗಣಿತಸೇನ ಜಾಂಬವನಿದ್ದನಂಬಿನ ಗೂಡಿನಲಿ ಹಲ್ಲುದ್ದಿಕೆ[ಪಾಠಾಂ. ಗೆ]ಯ ಹನುಮಂತನಘ ಮರುಷಣಪ್ರತಾಪದಲಿ ಇದ್ದನಹಿತನ ಕಾಣದೆ (ತೊರರಾ. ೬-೧೫-೨೯). [ಹಲ್ಲು (< ಪಲ್) + ಉದ್ದು$_1$ (< ಉರ್ದು$_1$) + -ಇಕೆ]

**ಹಲ್ಲುನೋವು** (ನಾ). ಹಲ್ಲಿಗೆ ಉಂಟಾಗುವ ಬಾಧೆ; ಹಲ್ಲಿನ ಬೇನೆ: ಹಲ್ಲುನೋವಿಗೆ: - ಶುಂಠಿ, ಹಿಪ್ಪಲಿ, ಸಾಸುವೆ, ಮೆಣಸು, ಇವಂ ಅರೆದು ನೀರೊಳಗೆ ಹಾಕಿ ಕಾಸಿ ಮುಕ್ಕಳಿಸಲು ನೋವು ಮಾಣ್ಬುಂ (ವಿಷ್ಣುವಿ. ೧೩೭); ನೆಲ್ಲು ಒಣಗಲಿಲ್ಲ ಹಲ್ಲುನೋವು ಘನ್ನ ಕಲ್ಲುಹೋಗದು (ಪುರಂದ. ೪-೧೯೧-೧). [ಹಲ್ಲು (< ಪಲ್) + ನೋವು]

**ಹಲ್ಲುಪುಡಿ** (ನಾ). ಹಲ್ಲುಗಳನ್ನು ಶುಭ್ರಗೊಳಿಸಲು ಉಜ್ಜುವ ಪುಡಿ; ದಂತಮಂಜನದ ಪುಡಿ: ಪಕ್ಕದ ನಾಗೊಂದಿಗೆಯ ಮೇಲಿದ್ದ ಹಲ್ಲುಪುಡಿಯ ಡಬ್ಬವನ್ನು ತೆಗೆದು ಆಕೆಯ ಕೈಗಿತ್ತ (ವಾತ್ಸಲ್ಯ. ೧೭); ಅವನ ಹಲ್ಲುಗಳು . . . ನಂಜನಗೂಡಿನ ಹಲ್ಲುಪುಡಿಗೂ ಜುಮ್ಮೆನ್ನದಂತೆ ಮೆರೆಯುತ್ತಿದ್ದುವು (ನನ್ನೂರು. ೨೮೨). [ಹಲ್ಲು (< ಪಲ್) + ಪುಡಿ]

**ಹಲ್ಲುಬಾರಿಸು** (ಕ್ರಿ). ೧. ಹಲ್ಲುಗಳನ್ನು ಕಟಗುಟ್ಟಿಸು: ಈ ಜ್ವರವು ಬೇಗನೆ ನನ್ನನ್ನು ಬಿಡುವಂತೆ ತೋರುವುದಿಲ್ಲ. ಅಹಹಾ . . . ಎಂದು ಹಲ್ಲುಬಾರಿಸತೊಡಗಿದಳು (ಜಯಂತ. ೨೩೧). ೨. (ಅಲಂ) ಕೋಪದಿಂದ ಅವಡುಗಚ್ಚು: ಅತ್ತ ಇಂಗ್ಲಿಷ್ ನಿಜಾಮರು ನಿಷ್ಕಾರಣವಾಗಿ ಹೃದರನ ದ್ವೇಷ ಕಟ್ಟಿಕೊಂಡು ಹಲ್ಲುಬಾರಿಸುತ್ತ ಕುಳಿತರು (ಚರಿಸಂ. ೧೩೫). [ಹಲ್ಲು (< ಪಲ್) + ಬಾರಿಸು$_1$]

**ಹಲ್ಲುಬೇನೆ** 'ಹಲುಬೇನೆ' ನೋ.

**ಹಲ್ಲುಬ್ಬ** (ನಾ). ಮುಂದೆ ಹಾಯ್ದ ಹಲ್ಲುಳ್ಳವನು; ಉಬ್ಬುಹಲ್ಲಿನವನು: (ಕಿ). [ಹಲ್ಲುಬ್ಬು + -ಅ$_7$]

**ಹಲ್ಲುಬ್ಬಿ** (ನಾ). ಉಬ್ಬಿದ ಹಲ್ಲುಳ್ಳವಳು; ಹಲ್ಲು ಮುಂದೆ ಹಾಯ್ದಿರುವವಳು: ಅತ್ತರು ತಿಳಿಯದು, ನಕ್ಕರು ತಿಳಿಯದು, ಹಲ್ಲುಬ್ಬಿ ಹೇಗಿದ್ದರೇನು (ಇಂಚಾಪ. ೧೬೧-೯೪). [ಹಲ್ಲುಬ್ಬ + -ಇ$_2$]

**ಹಲ್ಲುಬ್ಬು** (ನಾ). ಹಲ್ಲು ಮುಂದೆ ಹಾಯ್ದಿರುವಿಕೆ; ಉಬ್ಬುಹಲ್ಲಾಗಿರುವಿಕೆ: ಆ ಹುಡುಗೀಗೆ ಹಲ್ಲುಬ್ಬು, ಹೌದೋ ಅಲ್ಲವೋ ? (ನನ್ನಪ. ೫೧). [ಹಲ್ಲು (< ಪಲ್) + ಉಬ್ಬು$_2$ (< ಉರ್ವು$_2$)]

**ಹಲ್ಲುಮಟ್ಟೆ** 'ಹಲ್ಲುಮೊಟ್ಟೆ' ನೋ.

**ಹಲ್ಲುಮದ್ದುಗಿಡ** (ನಾ). ಒಂದು ಬಗೆಯ ಸಸ್ಯ; ಬಕುಲ: "ಕೇಸರಃ, ವಕುಳಃ- ೨ ಪವಳದ ಹುವ್ವಿನ ಗಿಡ, ವಕುಳವೃಕ್ಷ, ಹಲ್ಲುಮದ್ದುಗಿಡ, ವಜ್ರದಂತಗಿಡ" (ಸಿದ್ಧಾಂತಿ. ೧೨೬). [ಹಲ್ಲು (< ಪಲ್) + ಮದ್ದು (< ಮರ್ದು) + ಗಿಡ (< ಗಿಡು)]

**ಹಲ್ಲುಮಸೆ** (ಕ್ರಿ). ಹಲ್ಲುಕಡಿ; ಹಲ್ಲುಕಚ್ಚು: ಆ ಗ್ರಾಮದ ಎರಡು ಪಕ್ಷಗಳೂ ಒಂದರ ಮೇಲೆ ಮತ್ತೊಂದು ಹಲ್ಲುಮಸೆಯುತ್ತಾ ಇರುತ್ತವೆ (ರೂಢಿ). [ಹಲ್ಲು (< ಪಲ್) + ಮಸೆ$_1$]

**ಹಲ್ಲುಮಿಡಿ** 'ಹಲ್ಲುಮುಡಿ' ನೋ.

**ಹಲ್ಲುಮುಡಿ, ಹಲ್ಲುಮಿಡಿ** (ನಾ). ಹಲ್ಲುಗಳ ತುದಿಯ ಭಾಗ: ಕೋಪಾತಿಶಯದಿಂದ ಹಲ್ಲುಮುಡಿಯನ್ನು ಕಚ್ಚುತ ಶೀಘ್ರದಲ್ಲೆದ್ದನು (ಕೃವಾಸ. ೯೮); ಹಲ್ಲುಮುಡಿಯನು ಕಚ್ಚಿ ಕಲ್ಲುಮನಸಾದಾಗ ನೆಟ್ಟುದೀ ನೋಟ! (ಇಂಗೀತ. ೬೫-೧೦). **ಹಲ್ಲುಮಿಡಿ:** ಇನ್ನೂ ಕೆಲವರು ಕೋಪದಿಂದ ಹಲ್ಲುಮಿಡಿ ಕಚ್ಚಿದರು (ವಚಭಾ. ೮೬); ಹಲ್ಲುಮಿಡಿ ಕಚ್ಚಿಕೊಂಡು . . . ಅದನ್ನೇ ತಬಲಾ ಮಾಡಿಕೊಳ್ಳುತ್ತಿದ್ದರು (ನಿಬಂಧ. II, ೩೬). [ಹಲ್ಲು (< ಪಲ್) + ಮುಡಿ$_2$]

**ಹಲ್ಲುಮುರಿ** 'ಪಲ್ಮುೞಿ' ನೋ.

**ಹಲ್ಲುಮೊಟ್ಟೆ, ಹಲ್ಲುಮಟ್ಟೆ** (ನಾ). = ಹಲ್ಲುಮುಡಿ: ಹಲ್ಲುಮೊಟ್ಟೆಗಿರಿಯುತ್ತಾ . . . ಹೆಗಡೆ ಆರ್ಭಟಿಸಿದ (ದೇವಹಂ. ೨೨೪). **ಹಲ್ಲುಮಟ್ಟೆ:** ಪೋಲೀಸು ಜವಾನ . . . ಹಲ್ಲುಮಟ್ಟೆ ಕಚ್ಚಿ, ಆತನ ಶರೀರವನ್ನು ತುಸು ಮೇಲೆತ್ತಿದನು (ಪುನರು. ೪೪೫). [ಹಲ್ಲು (< ಪಲ್) + ಮೊಟ್ಟೆ$_7$]

**ಹಲ್ಲುಶೂಲೆ** (ನಾ). = ಹಲ್ಲುನೋವು: ವಜ್ರದಂತಿ, ಕಾಚ, ಗೇರ ಹರಳು ಇವು ೩ ನ್ನೂ ವೀಳ್ಯದಲ್ಲಿ ಹಾಕಿಕೊಳ್ಳಲು ಹಲ್ಲುಶೂಲೆ ಗುಣ (ವಿಷ್ಣುವಿ. ೧೩೭). [ಹಲ್ಲು (< ಪಲ್) + ಶೂಲೆ$_1$]

**ಹಲ್ಲುಹಚ್ಚು** (ಕ್ರಿ). ಹಲ್ಲುಹಾಕು; ಬಾಯಿಹಾಕು; ಕಚ್ಚು: ಇಲಿಯೂ ಹಲ್ಲುಹಚ್ಚಲು ಬರುವ ಪದಾರ್ಥ ಕಂಡರೆ ಹೇಗೆ ಕಡಿಕಡಿದು ಹಾಕುವುದೋ . . . ಹಾಗೇ ನಾನಾದರೂ ಸಣ್ಣವನಿದ್ದಾಗ ಮುದ್ರಿತಪುಸ್ತಕ ನೋಡಿದರೆ ಓದಿ ಮುಗಿಸಿ ಒಗೆಯುವುದು ನನ್ನ ಸ್ವಭಾವವಾಗಿತ್ತು (ಇಪ್ಪಕ. ೪೬೪). [ಹಲ್ಲು (< ಪಲ್) + ಹಚ್ಚು$_1$ (< ಪಚ್ಚು$_3$)]

**ಹಲ್ಲುಹುಳು** (ನಾ). ಹಲ್ಲಿನ ಬುಡ ಅಥವಾ ಸಂದುಗಳಲ್ಲಿ ಉತ್ಪತ್ತಿಯಾಗಿ ಹಲ್ಲನ್ನು ಕೊರೆಯುವ ಕ್ರಿಮಿ: ಹಲ್ಲುಹುಳುವಿಗೆ ಆದಿತ್ಯವಾರದ ದಿನ ಎಕ್ಕದ ಹಾಲಿಂ ಎಸಗನ ಬೇರನೂದಿ ಹಲ್ಲುಸಂಧಿಯ ಗಿರಿಯೆ ಹಲ್ಲುಹುಳು ತೀರ್ಗುಂ (ವಿಷ್ಣುವಿ. ೯೨). [ಹಲ್ಲು (< ಪಲ್) + ಹುಳು (< ಪುೞು)]

**ಹಲ್ಲೆ$_1$** 'ಪಾಲ್$_3$' ನೋ.

**ಹಲ್ಲೆ$_2$** (ನಾ). ದೊಡ್ಡ ದೊಡ್ಡ ಕಾಯಿಗಳನ್ನು ಬಿಡುವ ಒಂದು ಬಗೆಯ ಬಳ್ಳಿ: (ಕಿ). [← ತುಳು. ಪಲ್ಲೆ]

**ಹಲ್ಲೆ$_3$** 'ಪಲ್ಲೆ$_2$' ನೋ.

**ಹಲ್ಲೆ$_4$** 'ಹಲ್ಲಾ' ನೋ.

**ಹಲ್ಲೆಕಾಯಿಬಳ್ಳಿ** (ನಾ). = ಹಲ್ಲೆ$_2$: "ಹಲ್ಲೇಕಾಯಿಬಳ್ಳಿ, ಗರ್ದಾಳ" (ಮೈಶಿಗಿ. ೩೪-೬೫೨). [ಹಲ್ಲೆ$_2$ + ಕಾಯಿ$_4$ (< ಕಾಯ್$_4$) + ಬಳ್ಳಿ]

**ಹಲ್ಲೆಗಡುಬು** (ನಾ). ಬಿಲ್ಲೆಯಾಕಾರದ ಕಡುಬು: ತಣ್ಣೀರಿನಿಂದ ತೊಳೆದಕ್ಕಿಯನು ಹಾಲೊಳಗೆ ಸಣ್ಣನಪ್ಪಂತರೆದು ಕದಡಿಯೊಲೆಯೊಳು ತೊಳಸಿ ಬೆಣ್ಣೆಯಂ ಹಾಕಿಯುಂಡಲಿಗೆವದದೊಳು ಇಳುಹಿ ಹಲ್ಲೆ[ಪಾಠಾಂ. ಯುಂಡಿ]ಗಡುಬುಗಳ ಮಾಡಿ (ಸೂಪಶಾ. ೧-೬೨). [ಹಲ್ಲೆ (< ಪಲ್ಲೆ$_2$) + ಕಡುಬು (< ಕಡುಂಬು)]

**ಹಲ್ಲೆಬಳ್ಳಿ** (ನಾ). ಒಂದು ಬಗೆಯ ಬಳ್ಳಿ: "ಹಲ್ಲೆಬಳ್ಳಿ, ಹಂದರಹೂ" (ಮೈಶಿಗಿ. ೬೫-೧೩೩೧). [ಹಲ್ಲೆ$_2$ + ಬಳ್ಳಿ]

**ಹಲ್ಲೆವಜ್ಜೆ** (ನಾ). ಚಪ್ಪಟೆಯಾದ ಹೆಜ್ಜೆ: ಸಣ್ಣ ವುಳಲ್ದಾಣಂಗಳೊಳ್

ಪೆಂಟನೆಳೆದಂತಾಗುತ್ತಿರೆ ಪೋದ ಪೇರುಡುಗಳ ಹಲ್ಲೆ[ಪಾಠಾಂ. ಹಿಲ್ಲ]ವಚ್ಚೆಗಳುಮಂ . . . ಕಂಡು (ಕುಸುಮಾ. ೧೪-೨೯ ವ). [ಹಲ್ಲ$_3$ (< ಪಲ್ಲ$_2$) + ಪಚ್ಚೆ]

**ಹಲ್ಲೊತ್ತು** 'ಪಲ್ಲೊತ್ತು$_2$' ನೋ.

**ಹಲ್ವ** 'ಹಲವಾ' ನೋ.

**ಹಲ್ವಾ** 'ಹಲವಾ' ನೋ.

**ಹವ** 'ಹವಾ' ನೋ.

**ಹವಣ** 'ಪವಣ್' ನೋ.

**ಹವಣರಿ** 'ಪವಣಱಿ' ನೋ.

**ಹವಣಱಿ** 'ಪವಣಱಿ' ನೋ.

**ಹವಣೆ** (ನಾ). ಹಾಳತವಾದುದು; ಅತಿ ಹೆಚ್ಚೂ ಅಲ್ಲದೆ, ಅತಿ ಕಡಿಮೆಯೂ ಅಲ್ಲದೆ ಮಧ್ಯಮಪ್ರಮಾಣವಾದುದು: ಅವರು ಅಷ್ಟು ಎತ್ತರವಿದ್ದಿಲ್ಲ; ಅಷ್ಟು ಗಿಡ್ಡೂ ಇದ್ದಿಲ್ಲ; ಹವಣೆಯ ಆಳು ಆಗಿದ್ದರು (ಕಲಿಕು. ೮೨); ಆತನು ವಿಶಾಲವಾದ ಎದೆಯವನೂ ಹವಣೆಯಾದ ನಡುಕಟ್ಟಿನವನೂ . . . ಇರುವನು (ಅಂಬಿಕೆ. ೨೬).

[< ಪವಣ್]

**ಹವಣಿಕೆ** 'ಪವಣಿಕೆ' ನೋ.

**ಹವಣಿಗೊಳಿಸು** (ಕ್ರಿ). ಹೊಂದಿಸು; ಅಳವಡಿಸು: ಕನ್ನಡಗೀತಗಳನ್ನು ಇಂಗ್ಲಿಷಿನ ಹದಕ್ಕೆ ಹವಣಿಗೊಳಿಸುವದು ಹಿತವಾಗಿರುತ್ತದೆಂದು ನನ್ನ ಆಂಗ್ಲಕವಿಮಿತ್ರರೊಬ್ಬರು ಹೇಳಿದರು (ವಿಚಾಮಂ. ೧೨೦). [ಹವಣಿ + ಕೊಳ್$_1$ + -ಇಸು$_3$]

**ಹವಣಿತು, ಹವಣಿತ್ತು** (ನಾ). ೧. ಸಮಪ್ರಮಾಣದಲ್ಲಿರುವುದು; ಹಾಳತವಾಗಿರುವುದು: "ಮಧ್ಯ - ಹವಣಿತಾಗಿ ಬಾಜಿಸುಹ" (ನಾಚಿರಾ. ೬). **ಹವಣಿತ್ತು**: "ನಗೆ ಹವಣಿತ್ತಾದೊಡೆ ವಿಹಸಿತಂ" (ನಾಚಿರಾ. ೬). [< ಪವಣ್]

**ಹವಣಿತ್ತು** 'ಹವಣಿತು' ನೋ.

**ಹವಣಿಸು** 'ಪವಣಿಸು' ನೋ.

**ಹವಣು** 'ಪವಣ್' ನೋ.

**ಹವಣುಗ** (ನಾ). ಅಳೆಯುವವನು; ಅಳತೆ ಮಾಡುವವನು: "ಮಾಯಕಃ, ಮಾಪಕಃ, ಮಾಯಮಾನಃ, ಮಿತವಾನ್, ಈ ೪ ಹವಣುಗಂ" (ಕಾಶಕ್ಕ. ೧೮೦). 'ಪವಣಿಗ' ಪರಾ. [ಹವಣು (< ಪವಣ್) + -ಗ$_2$]

**ಹವಣುಗಳಿ** 'ಪವಣ್ಗಳಿ' ನೋ.

**ಹವಣುಗಾಣ್** (ಕ್ರಿ). ರೀತಿಯನ್ನು ತಿಳಿ: ಇವರ ನೀನಿಂದು ನಿಲಿಸೆ ನಿನ್ನ ಮನಗೊಯ್ಯ ಹವಣುಗಾಣೆನು ನಾನು (ಗೊಮ್ಮಟ. ೭-೧೩೬). [ಹವಣು (< ಪವಣ್) + ಕಾಣ್]

**ಹವನ** (ನಾ). ೧. ಯಾಗ; ಯಜ್ಞ: ಮಾದಕ್ಷಿಣಾಪಥಬಹುಶತಹವನಾಹವದು[ಳ್] ಪಶುಪ್ರದಾನ ಶೌರ್ಯೋದ್ಯಮಭರಿತೋ[ನ್ನಾನ]ಪಶುಪತಿಯೆನ್ನು (ಮೈಆರಿ. ೧೯೩೬, ೧೯-೬; ಸು. 450); ಆತನ ಶಿರವ ಕಡಿದಾಹುತಿಯನೀವೆನು ನಿಮಗೆ ಹವನದಲಿ (ಸಂಭಪ. ಪರಿ. ೧-೫). ೨. ಯಾಗದಲ್ಲಿ ಬಳಸುವ ಸೌಟು. ೩. ಆಮಂತ್ರಣ; ಆಹ್ವಾನ. ೪. ಯುದ್ಧಕ್ಕೆ ನೀಡುವ ಆಹ್ವಾನ. ೫. ಬೆಂಕಿ; ಅಗ್ನಿ. [ಸಂ.]

**ಹವನಕರ್ಮ** (ನಾ). ಯಜ್ಞಕಾರ್ಯ: ಅಣ್ಣನಾದ ಯಾಜನು ಒಪ್ಪಿಕೊಂಡು ತಮ್ಮನ ಸಹಾಯದೊಡನೆ ಹವನಕರ್ಮವನ್ನು ಮಾಡಿಸಿದನು (ವಚಭಾ. ೪೯). [ಸಂ. ಹವನಕರ್ಮನ್]

**ಹವಳ** 'ಪವಳ' ನೋ.

**ಹವಳತೊಂಡೆ** 'ಪವಳದೊಂಡೆ' ನೋ.

**ಹವಳದುಟಿ** 'ಪವಳದುಟಿ' ನೋ.

**ಹವಳದೊಂಡೆ** 'ಪವಳದೊಂಡೆ' ನೋ.

**ಹವಳಬಂಡೆ** (ನಾ). ಹವಳಗಳಿಂದಾದ ಬಂಡೆಗಲ್ಲಿನಂತಹ ಗಡ್ಡೆ; ಹವಳದ ಸ್ತರಗಳು ಗಟ್ಟಿಯಾಗಿ ಉಂಟಾದ ಹವಳಗಲ್ಲು: (೬).

[ಹವಳ (< ಪವಳ) + ಬಂಡೆ$_1$]

**ಹವಳಿಸಿಂಗ** (ನಾ). ಒಬ್ಬಾತನ ಹೆಸರು: X ಹವಳಿಸಿಂಗಂ ತಮ ಅಯ್ಯಂಗೆ ಕಲ್ಲನಿಕ್ಕಿಸಿ XXX (ಎಕ. X, ಚಿಂತಾಮ. ೧೨೦-೨; ಸು. 1000). [? + ಸಿಂಗ$_1$]

**ಹವಳೆ** (ನಾ). ಕಂದುಬಣ್ಣದ ಹಸು; ಕಪಿಲವರ್ಣದ ಹಸು: ಹಿಂಡುಗೋವು ಹರಿಯ ಕೃತಿಯ ಕಂಡು ಧ್ಯಾನದಲ್ಲಿ ತಂದು . . . ತಂಡತಂಡ ಒಪ್ಪಿದವು ಹಂಡೆ ಹವಳೆ ಹುಲುಗಚ್ಚಿಕೊಂಡು ನಿಂತವಲ್ಲಿಗಲ್ಲಿ ಮೆಂಡಲಿದ್ದವು (ಪ್ರಸಭಾ. ೪೯-೬). [< ಹವಳ]

**ಹವಾ, ಹವ, ಹವೆ** (ನಾ). ೧. ಗಾಳಿ; ವಾಯು: 'ಹವಾಸೀರ' ಪರಾ. ೨. ಋತುಮಾನ; ವಾಯುಗುಣ: ಆಗಲೆ ಹವಾ ಬದಲಾಯಿಸುತ್ತಿದ್ದಿತು. ಆದರೂ ಆ ದಿನ ಸಂಧ್ಯಾಕಾಲದಲ್ಲಿ ಆಕಾಶವು ನಿರ್ಮಲವಾಗಿದ್ದಿತು (ಝಾರಾಣಿ. ೧೩). **ಹವ**: ೨. "(ಯಾವುದಾದರೂ ಪ್ರಾಂತದಲ್ಲಿ) ಕಾವು, ತೇವ, ಗಾಳಿ, ಬೆಳಕು ಇವೆ ಮೊ. ಗಳ ಒಂದು ಗೊತ್ತಾದ ಸ್ಥಿತಿ; ವಾಯುಗುಣ; ಹವ" (Climate. ೧೦೮೧). **ಹವೆ**: ೧. ಹವೆಯು ನೆಲದ ಹತ್ತಿರ ದಟ್ಟಾಗಿರುವುದು (ಮುಂಬಯಿ. ೪-೬೧); ಬಸ್ಸೊಂದು ವೇಗವಾಗಿ ಬರುತ್ತಿತ್ತು . . . ಮುಂದಿನ ಗಾಲಿಯ ಹವೆ ಹೋಗಿ ನಿಂತುಬಿಟ್ಟಿತು (ಬೆನ್ನುಹಿಂ. ೩೩). ೨. ಹತ್ತೀಬೆಳೆಗೆ ಉಷ್ಣ ಹವೆ ಬೇಕು (ಮುಂಬಯಿ. ೪-೨೬); ಈ ಶೀಮೆಯ ಹವೆಯು ಬಹು ಆರೋಗ್ಯವಾದದ್ದು (ಕಭಾಗ. ೭). [← ಅರ. ಪಾರ. ಹಿಂ. ಮರಾ. ಹವಾ]

**ಹವಾಗುಣ** (ನಾ). ಋತುಮಾನ; ವಾಯುಗುಣ: ಊರಿನ ಹವಾಗುಣವು ಆರೋಗ್ಯವಾಗಿದ್ದಿತು (ಹುಟ್ಟಿಹ. ೫). [ಹವಾ + ಗುಣ]

**ಹವಾನಿಯಂತ್ರಣ** (ನಾ). (ಕಟ್ಟಡ ಅಥವಾ ಕಾರು ಮುಂತಾದ ವಾಹನ ಇತ್ಯಾದಿಗಳಲ್ಲಿ) ನಿರ್ದಿಷ್ಟವಾದ ವಿದ್ಯುಚ್ಚಾಲಿತಯಂತ್ರದಿಂದ ಗಾಳಿಯನ್ನು ಶೋಧಿಸಿ, ವಾತಾವರಣದ ತೇವಾಂಶ ಮತ್ತು ಉಷ್ಣಾಂಶವನ್ನು ಅಗತ್ಯಕ್ಕೆ ತಕ್ಕಂತೆ ಹೊಂದಿಸುವ ಒಂದು ವಿಧಾನ: ಈ ಕೊಠಡಿಯಲ್ಲಿರುವ ಹವಾನಿಯಂತ್ರಣ ಮಾಡುವ ಯಂತ್ರ ಕೆಟ್ಟುಹೋಗಿದೆ (ರೂಢಿ). [ಹವಾ + ನಿಯಂತ್ರಣ]

**ಹವಾನಿಯಂತ್ರಿತ** (ಗು). ಹವಾನಿಯಂತ್ರಣ ಮಾಡಿದ: ಸುಸಜ್ಜಿತವಾದ ಹವಾನಿಯಂತ್ರಿತಕೊಠಡಿಯಲ್ಲಿ ಸಭೆ ನಡೆಯುತ್ತಿತ್ತು (ರೂಢಿ). [ಹವಾ + ನಿಯಂತ್ರಿತ]

**ಹವಾಮಾನ** (ನಾ). = ಹವಾಗುಣ: ಆರು ದಿನಗಳಿಂದ ಒಂದು ರೀತಿಯ ತಂಗಾಳಿ ಬೀಸುತ್ತಿದೆ. ಹವಾಮಾನ ಚೆನ್ನಾಗಿಲ್ಲ (ಕಾವೇರಿ. ೧೦೯); ವಸಂತಋತುವಿನ ಹವಾಮಾನಕ್ಕನು ಗುಣವಾಗಿ ಮಳೆ ಬಿದ್ದು, ಗಾಳಿ ಬೀಸಿ ಹವ ತಣ್ಣಗಾಗಿತ್ತು (ಪುನರು. ೩೦೯).

[ಹವಾ + ಮಾನ]

**ಹವಾಲ್‌ಸೀಮೆ** (ನಾ). ಅಧೀನದಲ್ಲಿರುವ ಸೀಮೆ: ತಲಕಾಡು ಹವಾಲ್‌ಸೀಮೆಯನ್ನು ಬೆಣ್ಣೆಹೊನ್ನಿ ಕೈಯಿಂದ ವಿಟ್ಠಣ್ಣನು ಕಟ್ಟಿಕೊಂಡಿದ್ದು, ಅವನಿಂದ ಸಾಧಿಸಿದ್ದು ಕೆರೆಗೋಡು (ಬೆಟ್ಟಿಅ. ೨೨೦ ಪರಿ).

[ಹವಾಲ್$_0$ (IP ← ಹಿಂ. ಹವಾಲೀ; ಮರಾ. ಹವಾಲಾ, ಹವಾಲೀ) + ಸೀಮೆ]

**ಹವಾಲತೆ, ಹವಾಲ್ತೆ** (ನಾ). ಹೊಣೆ; ಜಾಮೀನು: ಈ ಬಗೆಯ ಹಣಕ್ಕೆ ಅನ್ನದಾನಸೆಟ್ಟಿ, ನರಸೆಟ್ಟಿಗಳ ಹವಾಲತೆ ಕೊಟ್ಟ ನಂತರ . . . ಕೆಲಸವನ್ನು ಖಾಯಂ ಮಾಡಿಸಿದರು (ಮಹಾವಂ. I, ೨೨೪). **ಹವಾಲ್ತೆ**: 'ಹವಾಲ್ತೆದಾರ' ಪರಾ.

[← ಪಾರ. ಮರಾ. ಹವಾಲತ್./ ತುಳು. ಹವಾಲ್ತೆ]

**ಹವಾಲದಾರ, ಹವಾಲುದಾರ, ಹವಾಲ್ದಾರ** (ನಾ). ೧. ಸೈನ್ಯದಲ್ಲಿಯ ಒಬ್ಬ ಅಧಿಕಾರಿ; ಕಿಲ್ಲೆಯ ಕಾವಲು ಮಾಡುವ ಅಧಿಕಾರಿ: ವೆಂಕಟರಾಯ ಹವಾಲದಾರ ಮಿಯಾಖಾನ ಬಾವಾ ಗರೀಬ ನಾಡಿಗ ವೆಂಕಟಗಿರಿಯಪ್ಪ ಸಹ (ಎಕ. XI, ಹೊಳಲ್ಕೆ. ೧೨೬-೮; 1692 ?); ಬಸವಾಪಟಣದ ಹವಾಲದಾರ ಬಾಬಾಸಾಹೇಬರ ಬಗೆ ಜಮೀನದಾರ ತ್ರಿಯಪ್ಪುಕಸಖಿಜಿಪಣ್ಣಿತರ ಕಾರ ಕಿರದಿಯಲು (ಎಕ. XI, ಹೊಳಲ್ಕೆ. ೬೩-೫; 1716). **ಹವಾಲುದಾರ**: ೨. ಸುಬೇದಾರನ ಕೈಕೆಳಗಿರುವ ಜಿಲ್ಲಾಧಿಕಾರಿ: (೬). **ಹವಾಲ್ದಾರ**: ೩. ಪೋಲೀಸು ಜಮಾದಾರ: ಹವಾಲ್ದಾರರು ಕರೆಯುತ್ತಾ ಇದಾರೆ ಬರ್ರಿ (ಬಂಗಾರ. ೧೧೬).

[← ಪಾರ.ಹವಾಲ್‌ದಾರ್; ಹಿಂ. ಹವಲ್ದಾರ್, ಹವಾಲ್ದಾರ್; ಮರಾ. ಹವಲದಾರ್, ಹವಾಲದಾರ್]

**ಹವಾಲಿಸು** (ಕ್ರಿ). ಒಪ್ಪಿಸಿಕೊಡು; ವಶಕ್ಕೆ ಕೊಡು: ಬೀರುಬಳ್ಳಿ ಗ್ರಾಮವನೂ ಪ್ರಾಕುಸ್ವಾಮಿಯವರ ಶ್ರೀಭಣ್ಡಾರಕ್ಕೆ ನಾವು ಹವಾಲಿಸಿ ಕೊಟ್ಟು ಯಾಗ . . . ಧಾರೆಯನೆಱದು ಕೊಟ್ಟೆವು (ಎಕ. III, ಶ್ರೀರಂಗ. ೯೪-೨೦; 1678). [ಹವಾಲು + -ಇಸು$_3$]

**ಹವಾಲು, ಹವಾಲೆ** (ನಾ). ೧. ವಶ; ಸುಪರ್ದು: ರಾಮಾನುಜಜಿಯ್ಯರ ಹವಾಲಿನಲ್ಲಿ ನಡಸಿಕೊಂಡು ಬರುತ್ತಾಯಿದ್ದದ್ದರಾದ ಕಾರಣ (ಎಕ. III, ಶ್ರೀರಂಗ. ೧೦೦-೧೫೨; 1724). **ಹವಾಲೆ:** ೧. ಅರಮನೆ ಹವಾಲೆಯಾಗಿ ಸಿಸ್ತಿಗೆ ಕೂಡಿ ಬರುತ್ತಿದ್ದ ಬಗೆ ಗ ೧೫೫ಕೆ ವಿವರ (ಮೈಆರಿ. ೧೯೨೮, ೬೧-೧೪; 1684); ಯಿಲ್ಲಿಂಗಾಭಟ್ಟಗೆ ಬಾಳುತ್ತಾರವಾಗಿ ಅನುಭವಿಸಿ ಬಾಹಂಗೆ ಭೂಮಿ ಹವಾಲೆ ಮಾಡಿಕೊಟ್ಟು (ಎಕ. IX(S), ಬೆಂಗಳೂ. ೧೫೦-೫; ಸು. 1700). ೨. ಹೊಣೆಗಾರಿಕೆ; ಜವಾಬ್ದಾರಿ: ಹೀಗೆ ಒಬ್ಬರ ಮೇಲೊಬ್ಬರು ಹವಾಲೆಯನ್ನು ಹಾಕುತ್ತ ಬಂದದ್ದರಿಂದ ನಾವು ಇಷ್ಟೊಂದು ಹಾಳಾಗಿ ಹೋಗಿರುವೆವು (ಕಾಳರಾ. ೬೨). ೩. ಫಿರ್ಯಾದು; ಆಪಾದನೆ (?): ಅಕ್ಕಿ ಕೊಟ್ಟುದು ನಿಜವೆಂದು ಅವರು ಹೇಳಿದರೆ ನಿನ್ನನ್ನು ಬಿಟ್ಟು ಬಿಡುತ್ತೇನೆ. ಇಲ್ಲದಿದ್ದರೆ ನಿನ್ನ ಮೇಲೆ ಹವಾಲೆ ಮಾಡಲಾದೀತು (ಭಾರತಿ. ೧೨). 'ಅಹವಾಲು' ಪರಾ. [← ಅರ. ಹಿಂ. ಮರಾ. ಹವಾಲಾ]

**ಹವಾಲುದಾರ** 'ಹವಾಲದಾರ' ನೋ.

**ಹವಾಲೆ** 'ಹವಾಲು' ನೋ.

**ಹವಾಲ್ತೆ** 'ಹವಾಲತೆ' ನೋ.

**ಹವಾಲ್ತೆದಾರ** (ನಾ). ಜಾಮಿನಾದವನು; ಹೊಣೆಗಾರ: ಅಪೀಲ್‌ವಾದಿಯ ಹವಾಲ್ತೆದಾರನಿಂದ ಅಥವಾ ರಿಸೀವರಿನಿಂದ ಒಂದು ವ್ಯಾಜ್ಯ ಅಥವಾ ಅಪೀಲು ವಜಾ ಆದ್ದನ್ನು ರದ್ದುಪಡಿಸಲು ಹುಕುಂ ಬಗ್ಗೆ - ಅರವತ್ತು ದಿವಸಗಳು (ಗ್ರಾಮಾಕ. ೧೭೬).
[ಹವಾಲ್ತೆ (< ಹವಾಲತೆ) + -ದಾರ್$_4$]

**ಹವಾಲ್ದಾರ** 'ಹವಾಲದಾರ' ನೋ.

**ಹವಾಶೀರ** (ನಾ). ಸಾಕಷ್ಟು ಗಾಳಿಯಾಡುವಂತಹುದು; ಶುದ್ಧವಾದ ಹವೆಯುಳ್ಳುದು: ಪಡಸಾಲೆ ಇಂಬಾಗಿ ಹವಾಶೀರ ಆಗಿತ್ತಲ್ಲ (ರಕ್ತಧ್ವ. ೧೯೧); ಇಲ್ಲಿನ ಎಲ್ಲ ಚಾಳುಗಳೂ 'ಹವಾಶೀರ' ಇವೆ (ರಾಯಚಾ. ೪). [← ಮರಾ. ಹವಾಶೀರ್]

**ಹವಿ$_1$** (ನಾ). ೧. ಹೋಮದಲ್ಲಿ ದೇವತೆಗಳಿಗೆ ಆಹುತಿಯಾಗಿ ಕೊಡುವ ತುಪ್ಪ, ಅನ್ನ, ಕಾಳು, ಹಿಟ್ಟು ಮೊದಲಾದ ಪದಾರ್ಥ; ಚರು: ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವನ ಮನೆಯಲ್ಲಿ ಕಿಚ್ಚೆದ್ದು ಸುಡುವಾಗ . . . ಬೊಬ್ಬಿಟ್ಟೆಲ್ಲರ ಕರೆವರಯ್ಯಾ (ಬಸವ. ೫೮೬); ತುಪ್ಪದೊಳಗಾ ವಸ್ತ್ರಂಗಳಂ ನಾದು ಉರಿಗೆ ಹವಿಯಂ ಕೊಡಲೊಡನೆ . . . ಹೊಗೆಯಂಬರಕೆ ನೆಗೆಯಲು (ಬಸಪು. ೫೭-೧೮). ೨. ತುಪ್ಪ. ೩. ನೀರು. ೪. ಶಿವ. ೫. ಹೋಮ; ಹವನ. ೬. ಅನ್ನ; ಆಹಾರ: ನಂಬಿಯೂ ನಂಬದ ಡಂಬಕ ನಾನಯ್ಯಾ ಹಾವ ತೋಟಿ ಹವಿಯ ಬೇಡುವಂತೆ (ಬಸವ. ೨೮೨).
[ಸಂ. ಹವಿಸ್]

**ಹವಿ$_2$** (ನಾ). ಬೆಂಕಿ; ಅಗ್ನಿ: ಹವಿಯ ಮೇಲೊಣತೃಣವ ಹಾಕಿದೊಲು ಉರಿದೆದ್ದು (ಪ್ರಾಭರಾ. ೧೩-೧೧). [ಸಂ. ಹವಿಸ್]

**ಹವಿಕ, ಹವೀಕ, ಹವ್ಯಕ, ಹೈಗ$_1$** (ನಾ). (ಕರಾವಳಿಯಲ್ಲಿ ವಾಸಿಸುವ) ಸ್ಮಾರ್ತಬ್ರಾಹ್ಮಣರ ಒಂದು ವರ್ಗ: ಹವಿಕರು (ಹೈಗರು)- ಇವರು ಕಾನಡಾ ಜಿಲ್ಲೆಯಲ್ಲಿ ಯಲ್ಲಕಡೆಯಲ್ಲಿ ವಾಸಿಸುತ್ತಾರೆ (ಕಭಾಗ. ೮೫); ಈ ಹವಿಕರು . . . ತುಳುನಾಡಿಗೆ ಎರಡನೆಯ ಕಂತಿನಲ್ಲಿ ಮೂರನೆಯ ಶತಮಾನದಲ್ಲಿ ಬಂದು ನೆಲೆ ನಿಂತವರು (ತುಳುನಾ. ೧೪೩). **ಹವೀಕ:** ಕಾಸರಗೋಡಿನ ಕರಾವಳಿಯ ಪ್ರಾಂತದಲ್ಲಿ ಹವೀಕಬ್ರಾಹ್ಮಣರ ಕುಲದಲ್ಲಿ ಅವನ ಜನನವಾಗಿದ್ದಿತು (ಅಂಬುಚಾ. ೯). **ಹವ್ಯಕ:** ಬೇರೆ ಎನಿಸುವ ಕನ್ನಡ ಒಂದಿದೆ. ಅದನ್ನು ಹವ್ಯಕರು ಆಡುತ್ತಾರೆ, ಅದು ಹಳಗನ್ನಡದ ರೂಪಗಳನ್ನು ಉಳಿಸಿಕೊಂಡು ಈಗಿನ ಕಾಲಕ್ಕೆ ಪ್ರತ್ಯೇಕವೆಂಬಂತೆಯೇ ಇದೆ (ನಮ್ಮನು. ೨೮); ನೀವು ಈ ಮೊದಲು ಹವ್ಯಕರಲ್ಲಿ ಎಂದಾದರೂ ಉಂಡುದುಂಟೇ ? (ಬಟ್ಟಜೀ. ೧೫೭); ನೀಲಗಿರಿಯ ಬಡಗ . . . ದಕ್ಷಿಣಕನ್ನಡಜಿಲ್ಲೆಗಳ ಹವ್ಯಕರ ಕನ್ನಡ - ಇವು ಈ ಗುಂಪಿಗೆ ಸೇರಿದ ಉಪಭಾಷೆಗಳು (ದ್ರಾವಿವಿ. ೧೩೫). **ಹೈಗ$_1$:** ಹೈಗ ಬ್ರಾಹ್ಮಣರಿಗೆ ಮೊಸರು ಮಜ್ಜಿಗೆ ಬಹಳ ಬೇಕಾಗುವ ಕಾರಣ ಅವರು ಘಟ್ಟದ ಕೆಳಗೆ ಸಹ ಯೆಮ್ಮೆಗಳನ್ನು ಕಟ್ಟುವರು (ಕಭಾಗ. ೫೭).
[ದೇ. II ತುಳು. ಹೈಗ]

**ಹವಿಗ** (ನಾ). ಒಬ್ಬಾತನ ಹೆಸರು: ಉಪ್ಪವಳ್ಳಿಯ ಹವಿಗಂಗೆ ಕೊಟ್ಟ ಸ್ಥಿತಿಕ್ರಮಮಾವುದೆಂದೊಡೆ (ಎಕ. VI, ಚಿಕ್ಕಮ. ೪೨-೧೫; 959). [?]

**ಹವಿಗೊಳ್** (ಕ್ರಿ). ಹೋಮದಲ್ಲಿ ಅರ್ಪಿಸಿದ ಆಹುತಿಯನ್ನು ಸ್ವೀಕರಿಸು ,— ತೆಗೆದುಕೊಳ್ಳು: ತುಡುಗುಣಿಗಳವದಿರು ನಭೋಗ್ರಕ್ಕೆ ಸಿಡಿದು ಹವಿಗೊಂಬಮರ ನಿಕರದ ಹೆಡಕ ಬಾರಿಸಿ ಬಾಚುತಿರ್ದರು ಬಾಯ ತುತ್ತುಗಳ (ತೊರರಾ. ೧-೧೧-೮).
[ಹವಿ$_1$ + ಕೊಳ್$_1$]

**ಹವಿನೇತ್ರ** (ನಾ). ಅಗ್ನಿನೇತ್ರ; ಶಿವ: ಹವಿನೇತ್ರಶರಣಮಣಿ ಕಕ್ಕಯ್ಯಗಳ ಪ್ರಸಾದವು ಬಿಚ್ಚದಿರು ಲಿಂಗಪೂಜೆಗೈದ್ವೈತಪ್ಪನನ್ನವರ ಸೈರಿಸನೆಲು (ಪ್ರಾಭರಾ. ೧೯-೭). [ಸಂ.]

**ಹವಿರ್ಭಾಗ** (ನಾ). ಹೋಮದಲ್ಲಿ ಆಯಾ ದೇವತೆಗಳಿಗೆ ನಿಗದಿಯಾದ ಹವಿಸ್ಸಿನ ಭಾಗ: ಎವಗೆ ತವಗೆಂದೀ ಹವಿರ್ಭಾಗವನು ಮುತ್ತಿತು ದೇವತತಿ (ಕುವ್ಯಾಸ. ೭-೩೯); ಸುತ್ರಾಮಂ ಸಕಲದಿವಿಜರೊಡಗೂಡಿ ಯಜ್ಞದ ಹವಿರ್ಭಾಗಮಂ ಕೊಳಲ್ಕೆ ಪ್ರೇಮದಿಂ ಪ್ರತ್ಯಕ್ಷಮಾಗಿ ಬಂದಿರುತಿರ್ದನು (ಜೈಮಿಭಾ. ೫-೪೫). [ಸಂ.]

**ಹವಿರ್ಭುಜ** (ನಾ). ಹವಿಸ್ಸನ್ನು ಭುಜಿಸುವವನು; ಅಗ್ನಿ: ದ್ವಿಷನ್ಮೇದಿನೀಶ್ವರ ಸಂಹಾರಹವಿರ್ಭುಜಂ ಭುಜಬಳಂ ಶ್ರೀರಾಜಮಾರ್ತ್ತಣ್ಡನ (ಎಕ. II, ೧೩೩-೧೩; 982); ರುಧಿರಂ ಸುಖದೊಳ್ ಶನಿ ದಶಮದೊಳಂತಾ ಸೂರ್ಯನಸ್ತದೊಳ್ ನೆಲಸಿದೊಡಾಯುಧ ದಿಂದೆ ಹವಿರ್ಭುಜನಿಂದೆ ಧರಾಪತಿಕೋಪದಿಂದೆ ಮಡಿಗುಂ ಮನುಜಂ (ಜಾತತಿ. ೨೩-೧೩).
[ಸಂ. ಹವಿರ್ಭುಜ್]

**ಹವಿಷ್ಯ** (ನಾ). ೧. ಹೋಮದಲ್ಲಿ ಆಹುತಿ ಕೊಡಲು ಯೋಗ್ಯವಾದ ಆಹಾರಪದಾರ್ಥ. ೨. ತುಪ್ಪ. ೩. ಕಾಡಕ್ಕಿ; ನೀವಾರ. ೪. ತುಪ್ಪದಲ್ಲಿ ಕಲಸಿದ ಅನ್ನ. [ಸಂ.]

**ಹವಿಸ್ಸು** (ನಾ). ಹವಿ; ಚರು: ಜ್ಞಾನಾಗ್ನಿಯಲ್ಲಿ ಕರ್ಮಫಲವೆಂಬ ಹವಿಸ್ಸನ್ನು ಹಾಕಿ ಯಜ್ಞನಾರಾಯಣನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು (ಭಾರದ. ೧೧೬); ಹವಿಸ್ಸು ದೇವತೆಗಳಿಗೆ ಚಾರು ಮತ್ತು ಪ್ರಿಯತಮ (ಸೌಂದಸ. ೪೩ ಅಡಿಟಿ). [< ಸಂ. ಹವಿಸ್]

**ಹವೀಕ** 'ಹವಿಕ' ನೋ.

**ಹವೀಜ** (ನಾ). ಕೊತ್ತುಂಬರಿ ಕಾಳು; ಧನಿಯ: ಮೆಣಸಿನಕಾಯಿ, ಹವೀಜ, ದಾಲಚಿನ್ನಿ . . . ಮುಂತಾದ ಪದಾರ್ಥಗಳು ಅನ್ನದ ರುಚಿಯನ್ನು ಬೆಳಸಿ ಅದನ್ನು ಬೇಗ ಜೀರ್ಣಮಾಡುತ್ತವೆ (ಮುಂಬಯಿ. ೫-೧೬೭); ಇದರಲ್ಲಿ ನಾಲ್ಕು ಹವೀಜಕಾಳು ಮತ್ತು ಅರಳೆಎಲೆ ಕೂಡ ಹಾಕಿ ಮರಳಿಸಿ ತುಸು ಬಿಸಿಬಿಸಿ ಇರುವಾಗಲೇ ತಾಯಿಗೆ ಕುಡಿಸು (ಶ್ಯಾಮತಾ. ೪೦). [?]

**ಹವುಂಬ್ಬೆ** (ನಾ). ಒಬ್ಬಾಕೆಯ ಹೆಸರು: ಶ್ರೀವಿಮುಳಚಂದ್ರಪಣ್ಡಿತದೇವರ ಗುಡ್ಡಿ ಹವುಂಬ್ಬೆಯಾ ತಂಗೆ ಶಾಂತಿಯಬ್ಬೆ ತಮ್ಮ ಗುರುಗಳ್ಗೆ ಪರೋಕ್ಷವಿನಯಂಗೆಯ್ದರ್ (ಎಕ. VI, ಮೂಡಗೆ. ೧೧-೩೫; ಸು. 990). [?]

**ಹವುದ** 'ಹೌದು$_2$' ನೋ.

**ಹವುದು** 'ಅಹುದು$_2$' ನೋ.

**ಹವೆ** 'ಹವಾ' ನೋ.

**ಹವೇಲಿ** (ನಾ). ೧. ದೊಡ್ಡಮಹಲು; ಉಪ್ಪರಿಗೆ ಮನೆ: ಗುಣವಾಗುವವರೆಗೆ ಅವರುಗಳನ್ನು ತನ್ನ ಹವೇಲಿಛತ್ರದಲ್ಲಿಯೇ ಇರಿಸಿಕೊಂಡು . . . ಗುಣ ಮಾಡಿ ಕಳುಹಿಸಿಕೊಡುತ್ತಿದ್ದನು (ಮುಸುಗ. ೧೪೮). ೨. ಜಿಲ್ಲೆ ಅಥವಾ ಪರಗಣೆಯ ಮುಖ್ಯಸ್ಥಳ ,— ಪ್ರಮುಖವಾದ ಪಟ್ಟಣ: ಪರಗಣ ಹೊಸಕೋಟೇ ಹವೇಲಿಗೆ ಸಲುವ ತರಫು ಮಾಲೂರು ಹೋಬಳಿಗೆ ಸಲ್ಲುವ (ಎಕ. X, ಮಾಲೂರು. ೮೦-೮; 1762).
[← ಪಾರ. ಹವೀಲೀ; ಅರ. ಹಿಂ. ಮರಾ. ಹವೇಲೀ]

**ಹವ್ಯ** (ನಾ). ಹೋಮದ ಮೂಲಕ ದೇವತೆಗಳಿಗೆ ಕೊಡುವ ಆಹುತಿ; ಹವಿಸ್ಸು: ನಾಡಿಗರ್ ದಿನದಿನಂ ಬೇಳ್ವೊಂದು ಹವ್ಯಮನುಂಡುಂಡು ಸವಿಗೊಂಡ ಬೋಟಿಯರ್ . . . ಈವುಜ್ಜುಗಕ್ಕೆ ತಡೆವರ್ಪರ್ (ರಾಮಾಶ್ವ. ೫೫-೨೯); ಯಾಜೋಪಯಾಜರು ಮಂತ್ರಿಸಿದ ಹವ್ಯವು ಹೇಗೆ ವ್ಯರ್ಥವಾಗುತ್ತದೆ ನೋಡೋಣ! (ವಚಭಾ. ೪೯).

**ಹವ್ಯಕವ್ಯ** = ದೇವತೆಗಳಿಗೆ ಹೋಮದಲ್ಲಿ ಅರ್ಪಿಸುವ ಹವಿಸ್ಸು ಮತ್ತು ಪಿತೃಗಳಿಗೆ ಶ್ರಾದ್ಧಾದಿಗಳಲ್ಲಿ ಕೊಡುವ ಆಹುತಿ: ಚಾರುವೈದಿಕಹವ್ಯಕವ್ಯವಿಹಾರ ವೃತ್ತಿಗಳೆಳೆದವು (ಕುವ್ಯಾಕ. ೬-೨೨); ಹವ್ಯಕವ್ಯಂಗಳಿಗೆ ಅನ್ನವೆ [illegible] ವಾದುದಜಿಂದಲ

ನವರತ ಸಲೆ ಹೊಗಳುತಿಹರನ್ನವನು ಮುನಿಗಳು ಸುರರು (ತಿಮ್ಮ.ಆ. ೬-೧೭); ಆಸ್ತಿಕರಾದ ಹಿಂದಿನ ಕಾಲದ ಆಫೀಸರುಗಳು . . . ಹವ್ಯಕವ್ಯಗಳಿಗೆ ಉಪಯುಕ್ತವಾದ ಬ್ರಾಹ್ಮಣರನ್ನು ಹತ್ತಿರ ಇಟ್ಟುಕೊಳ್ಳುತ್ತಿದ್ದರು (ಶ್ರೀಕಥ. ೧೬೩). [ಸಂ.]

**ಹವ್ಯಕ** 'ಹವಿಕ' ನೋ.

**ಹವ್ಯವಾಹ** (ನಾ). ದೇವತೆಗಳಿಗೆ ಹವಿಸ್ಸನ್ನು ಒಯ್ದು ಮುಟ್ಟಿಸುವವನು; ಅಗ್ನಿ: ನೀನೆ ಅನಂತಂ, ನೀನೆ ಹವ್ಯವಾಹಂ . . . ನಿನ್ನಂ ಮಱೆವುಗುವೆಂ (ಅದ್ಭುತ. ೬-೨೩). [ಸಂ.]

**ಹವ್ಯವಾಹನ** (ನಾ). = ಹವ್ಯವಾಹ: ಅರ್ಜುನನು . . . ತಾನು ಗಡ ಸೈಂಧವನ ತಲೆಯನು ಭಾನುವಡಗದ ಮುನ್ನ ಕೊಂಬೆನು ಹೀನನಾದರೆ ಹೊಗುವೆನೆಂದನು ಹವ್ಯವಾಹನನ (ಕುಮಾರವ್ಯಾ. ೮-೫೮); ಭಾನುಕೋಟಿತೇಜದವನ ಭವಕಾನನರಾಶಿಗೆ ಹವ್ಯವಾಹನನ (ಪುರಂದ. ೧-೮೩-೪). [ಸಂ.]

**ಹವ್ಯವಾಹನಸಖಿ** (ನಾ). ಅಗ್ನಿಯ ಮಿತ್ರ; ವಾಯು: ಹವ್ಯವಾಹನಸಖಂ ತೊಲಗಿಸುವ ಬಹಳ ಮೇಘವ್ಯೂಹಸಂಘಾತದೊಡ್ಡವಣೆ ಮುಱಿವುದೆ ಕೃತವ್ಯಜನ ವಾತದಿಂದೆಲೆ ಮರುಳೆ ಹೋಗು (ಜೈಮಿಭಾ. ೧೩-೯). [ಸಂ.]

**ಹವ್ಯಾಮೋದ** (ನಾ). ಹೋಮದಲ್ಲಿ ಅರ್ಪಿಸಿದ ಹವಿಸ್ಸಿನ ಸುವಾಸನೆ: ಸಮಿಧೆಗಳನಾಂತು ಪೊಣ್ಮುವ ಹವ್ಯಾಮೋದದಿನಘಪರಿಹಾರಕಮಾದೀ ವೈತಾನವಹ್ನಿ ಸಲಹುಗೆ ನಿನ್ನಂ (ಶಾಕುಂತ. ೫೨-೮೭). [ಸಂ.]

**ಹವ್ಯಾಶನ** (ನಾ). = ಹವಿರ್ಭುಜ: "ಕೃಶಾನುವಗ್ನಿ ದಹನಂ ಹವ್ಯಾಶನಂ ವಹ್ನಿ" (ವಸ್ತುಕೋ. ೭-೩೯). [ಸಂ.]

**ಹವ್ಯಾಸ** (ನಾ). ೧. ಹೆಬ್ಬಯಕೆ; ಉತ್ಕಟವಾದ ಅಪೇಕ್ಷೆ: ಏನೇತಕೆ ಎಂಬುದೆ ಹವ್ಯಾಸ; ಇದನುಳಿದಾಗದು ಪದವಿನ್ಯಾಸ (ಅಹಲ್ಯ. iv); ತಮ್ಮದೇ ಆದ ದನ-ಧನ ಗಳನ್ನು ಮುಂದೆ ತಮ್ಮವರೇ ಆದ ಜನಕ್ಕೆ ಬಿಟ್ಟುಹೋಗಬೇಕೆಂಬ ಹವ್ಯಾಸ ಹುಟ್ಟಿತು (ಮಾವಾದ. ೭೨). ೨. ಚಟ; ಗೀಳು: ಈ ನಾಟಕದ ಹವ್ಯಾಸ ಬಿಟ್ಟು ಹಾರೋಪ್ಲೇನ್ ಕಂಪೆನಿಗೆ ಸೇರ್ಕೊಳ್ಳೊ ನರಸಿಂಹ (ಮಾಮನ. ೩೩); ಸ್ತ್ರೀವ್ಯಾಮೋಹವು ಅಂತಹುದು. ನೀನು ಈ ಹವ್ಯಾಸದಲ್ಲಿ ನಿನ್ನ ರಾಜ್ಯವನ್ನು ಕಳೆದುಕೊಳ್ಳುವಿ (ಶ್ರೀರಾಯ. ೨೯೯). ೩. ಉತ್ಸಾಹ; ಆಸಕ್ತಿ: ತೋಟಗಾರಿಕೆಯಲ್ಲಿ ಮೊದಲಿನಿಂದಲೂ ಅವರಿಗೆ ಹವ್ಯಾಸ (ಪ್ರೇಮಾಶ್ರ. ೨೪೨); ನನಗೆ ತುಂಬಾ ಜನಸೇವೆ ಮಾಡುವ ಹವ್ಯಾಸ (ಗಾಳಿಗು. ೧೩). ೪. ರೂಢಿ; ಅಭ್ಯಾಸ: ಪತ್ರಗಳಿಗಂತೂ ಉತ್ತರ ಕೊಡುವ ಹವ್ಯಾಸ ಇಲ್ಲವೇ ಇಲ್ಲ (ರೂಪಸಂ. ೫೧). [← ಮರಾ. ಹವ್ಯಾಸ; ಅರ. ಹಿಂ. ಹವಸ್]

**ಹವ್ಯಾಸಿ** (ಗು). ೧. ಯಾವುದಾದರೊಂದು ಕಲೆಯನ್ನು ವೃತ್ತಿಯಾಗಿ ಹೊಂದದೆ, ಕೇವಲ ಅಭಿರುಚಿಯ ಮೂಲಕ ತೊಡಗಿ, ಸಾಕಷ್ಟು ಅನುಭವವಿಲ್ಲದಿದ್ದರೂ ಪ್ರಯೋಗ ನಡೆಸುವ: ನಾಟಕ ಈಗೊಂದು ವೃತ್ತಿಯಾಗಿ ಉಳಿದಿಲ್ಲವಾದರೂ, ಹವ್ಯಾಸಿ ನಟರು ಹಾಗು ನಾಟಕಸಂಸ್ಥೆಗಳ ಮೂಲಕ ಜೀವಂತವಾಗಿದೆ (ರೂಢಿ). (ನಾ). ೨. "ಕಲಾಪ್ರೇಮಿ, ವಿನೋದಿ, ಹವ್ಯಾಸಿ, ಪ್ರವೇಶಿ, ಯಾವುದನ್ನೂ ಚೆನ್ನಾಗಿ ಅಭ್ಯಾಸ ಮಾಡದೆ, ಎಲ್ಲದಕ್ಕೂ ಕೈಹಾಕುವ(ವನು); ಅನನುಭವಿ" (Dilettante. ೧೦೫೩).

**ಹವ್ಯಾಸಿ ಕಲಾವಿದ** = ವೃತ್ತಿಯಾಗಿ ಅಲ್ಲದೆ ಕೇವಲ ಮನೋಲ್ಲಾಸಕ್ಕಾಗಿ ನಾಟಕ, ಸಂಗೀತ ಮುಂತಾದ ಯಾವುದಾದರೂ ಲಲಿತಕಲೆಯಲ್ಲಿ ತೊಡಗಿರುವ ವ್ಯಕ್ತಿ: ಹವ್ಯಾಸಿ ಕಲಾವಿದರ ಸಂಘದ ಉದ್ಘಾಟನೆ ಇಂದು ನೆರವೇರಿತು (ರೂಢಿ). **ಹವ್ಯಾಸಿ ರಂಗಭೂಮಿ** = ಹವ್ಯಾಸಿ ಕಲಾವಿದರು ಪ್ರಯೋಗ ನಡೆಸುವ ರಂಗಭೂಮಿ: ಹವ್ಯಾಸಿ ರಂಗಭೂಮಿಯಲ್ಲಿ ತರಬೇತಿ ಹೊಂದಿದ ಅನೇಕ ಕಲಾವಿದರು ಇಂದು ಪ್ರಖ್ಯಾತರಾಗಿದ್ದಾರೆ (ರೂಢಿ).

[ಹವ್ಯಾಸ + -ಇ$_3$ ./ ಮರಾ. ಹವ್ಯಾಶೀ, ಹವ್ಯಾಸೀ]

**ಹವ್ವನೆ** 'ಪವ್ವನೆ' ನೋ.

**ಹವ್ವಳಿಸು** 'ಪವ್ವಳಿಸು$_2$' ನೋ.

**ಹಷಾಮುಬಾರು** (ನಾ). ಆಯುಧಪಾಣಿಗಳಾದ ಸೈನಿಕರ ಪಡೆ; ಸಶಸ್ತ್ರ ಸಿಪಾಯಿಗಳ ದಳ: ನಾಗಂಗಳೋಳ್ ಧ್ವಜವ ಪಿಡಿದು ಕುಳಿತಿರುವ ರನ್ನ ಹಷಾಮುಬಾರಿನವರಾ . . . ಕಂಡಮಾತ್ರದೊಳರಿಗಳೆದೆ ಬಿರಿಯದಿರ್ಪುದೇನೇ (ಅರ್ಜಾವಿ. ೨೪-೪೮). 'ಅಹಷಾಮ್' ಹೋ.

[ಹಷಾಮ್ಮು$_0$ (ಐಪ ← ಮರಾ. ಹಶಾಮ್ = ಸಿಪಾಯಿ) + ಬಾರ್ರು$_2$ (< ಬಾರ್$_3$)]

**ಹಷೀಷ್** (ನಾ). (ಹೊಗೆಸೇದಲು ಅಥವಾ ಅಗಿಯಲು ಒಣಗಿಸಿದ) ಭಂಗಿಯ ಗಿಡದ ತುದಿಯೆಲೆ; ಒಂದು ಬಗೆಯ ಮಾದಕದ್ರವ್ಯ: ಈ ಧೂರ್ತ ಮೂರುದಿನಗಳ ವರೆಗೆ ಅಂತಃಪುರವನ್ನು ಬಿಟ್ಟು ಹೋಗಿ ಹಷೀಷ್ ಸೇದುವ ದುರ್ವ್ಯಸನದಲ್ಲಿ ಮೈಮರತಿದ್ದಾನೆ! (ನಗಹೊ. ೨೩೩). [← ಅರ. ಪಾರ. ಹಷೀಷ್]

**ಹಸ$_1$** 'ಪಸ$_1$' ನೋ.

**ಹಸ$_2$** 'ಪಸ$_2$' ನೋ.

**ಹಸ$_3$** (ನಾ). ಹಗ್ಗ; ಪಾಶ: ಕೊಯ್ದು ಖಂಡವ ಚುಚ್ಚಿ ಬಾಯೊಳಗಿಡುವುತಲಿ ಹಸ ಬಿಟ್ಟು ನಾಯಿಗಳ ಕಚ್ಚಿ ಹರಿಸುತ ಕದುಕಿರಿದು . . . ಅಚ್ಚಪಾಪಿಯನಿಂತು ಕೊಂಡೊಯ್ಯರು ಕಣಾ (ಪ್ರಭ್ಯಾಚ. ೯-೪೦). 'ಪಾಸ$_1$' ಪರಾ. [< ಸಂ. ಪಾಶ]

**ಹಸಂಗೆಡು** 'ಪಸಗೆಡು' ನೋ.

**ಹಸಂಗೆಯ್, ಹಸಗೆಯ್, ಹಸನಗ್ಯೆ** (ಕ್ರಿ). ೧. ಸರಿಪಡಿಸು: ಕಲ್ಲಬಲೆಗಳಂ ಸರಗೊಳಿಸುತುಂ ಹಾಸಮಂ ಹಸಂ[ಪಾಠಾಂ. ಹಾಸು]ಗೆಯ್ಯುತುಂ . . . ತಂತಮ್ಮ ಪರಿವಿಡಿಯ ಜಾತಿವಿದ್ಯಂಗಳಿಂದೆಸೆವ ಲುಬ್ಧಾಶ್ರಯದೆ ವನಮೆಸೆದುದು (ಚಿಬಪು. ೫೩-೨೧). **ಹಸಗೆಯ್**: ೨. ಹಸನುಗೊಳಿಸು; ಶುದ್ಧಮಾಡು: ಲೋಹದಿಂದ ಕೀಳಂ ಹಡೆದ ಚಿನ್ನಮಂ ಪುಟಮುಖದಿ ಹಸಗೆಯ್ದು ತೆಱದಿ ನಾನಿನ್ನೊಮ್ಮೆ ಕರೆದವನ ದುರ್ಮಾರ್ಗಮಂ ಬಿಡಿಸಿ ನಿನಗೆ ತಕ್ಕಂತೆ ಮಾಳ್ಪೆಂ (ಸಮ್ಯಕಾ. ೬-೩೪); ಭೂವಳಯದಲ್ಲಿರ್ಪ ನರರ ಪುಣ್ಯದ ಬೆಳಸನೋವಿ ಹಸಗೆಯ್ಯಲೆಂದಬುಜಜಂ ರತ್ನದಿಂ ಕೇವಣಿಸಿ ನಟ್ಟ ಚಿನ್ನದ ಮೇಟಿಯಂತೆಸೆದು ತೋರ್ಪುದಾ ಮೇರುಶೈಲಂ (ಸಿದ್ಧೇಪು. ೧-೨೯). ೩. ಅಂದಗೊಳಿಸು; ಸೊಗಸುಗೊಳಿಸು: ತೊಳಗುವ ಕಪ್ಪುರದ ಹಳುಕಿಂ ಹಸೆಸೆಕೆಗೆಯ್ದುಕ್ಕಿದ ಹಾಹೆಯೊ (ಜಯಕಾ. ೧೩-೫೧); ಅಲ್ಲಿರ್ದಾ ದುರಗಲಿಗಳು ಮಾರ್ಮಸಗಿ ಅಸಿಗೊಳಲವರನೆಲ್ಲರವಿದ್ಯೆಯಿಂದ ತಂಬಿಸಿ ಲೆಪ್ಪದಿಂ ಹಸಗೆಯ್ದು ರಸಚಿತ್ರದಂತೆ ಕೀಲಿಸಿ ಬಹುಗಟ್ಟನುಬ್ಬಸಮಾಗುವಂದದಿ ಕಟ್ಟಿ (ನೇಮಿಸಂ. ೨೪-೧೧೪). **ಹಸನಗ್ಯೆ**: ೨. ಬಿತ್ತುವ, ಅಗಿಯುವ, ಹಸನಗ್ಯೆಯುವ, ಕೊರೆಯುವ, ರಾಶಿ ಮಾಡುವ ಸಲಕರಣೆಗಳೇ ಬೇರೆ (ಕನ್ನಜಾ. ೧೩೦).

[ಹಸ$_2$ (< ಪಸ$_2$) + ಕೆಯ್$_1$]

**ಹಸಂತಿ** (ನಾ). ಅಗ್ಗಿಷ್ಟಿಕೆ; ಕುಮಟಿ: "ಬೆಸಳಿಗೆ ಹಸಂತಿಗೆ ಹಸಂತಿಯೆಂದೆನಿಸಿಕ್ಕು" (ಮಂಗರಾ. ೬೨-೨೩). [ಸಂ. ಹಸಂತೀ]

**ಹಸಂತಿಕೆ$_1$** (ನಾ). = ಹಸಂತಿ: "ಹಸಂತಿಕೆ ಮತ್ತಂಗಾರ ಶಕಟ(ಕೆ)ಯದು ಹಸಂತಿಯು ಮೆನಿಕುಂ" (ವಸ್ತುಕೋ. ೫೦-೨೮). [ಸಂ. ಹಸಂತಿಕಾ]

**ಹಸಂತಿಕೆ$_2$** (ನಾ). ಮೇಲುಹೊದಿಕೆ; ಶಲ್ಯ; ವಲ್ಲಿ (?): ತಲೆಗಳಿಗೆ ಶಾಲುಗಳ ಸುತ್ತಿಕೊಂಡತಿಧವಳಲಲಿತಚೇಲದ್ವಯವನುಟ್ಟೊದ್ದು ಮತ್ತೆ ಕೋಮಲ ಹಸಂತಿಕೆಗಳನು ಪೊದಿಯುತ್ತ . . . ಎಪ್ಪತ್ತುನಾಲ್ಕು ಪೀಠಸ್ತರೈದಿದರು ಬಲುಸಂಭ್ರಮದಲಿ (ಅರ್ಜಾವಿ. ೨೭-೧೪). [?]

**ಹಸಂತಿಗೆ** (ನಾ). = ಹಸಂತಿ: "ಬೆಸಳಿಗೆ ಪಸಂತಿಗೆ ಹಸಂತಿಯೆಂದೆನಿಸಿಕ್ಕು" (ಮಂಗರಾ. ೬೨-೨೩). [< ಸಂ. ಹಸಂತಿಕಾ]

**ಹಸಕು** 'ಹಸುಕು' ನೋ.

**ಹಸಗಾರ** (ನಾ). ಸೊಗಸುಗಾರ; ರಸಿಕ: ಹಸಗಾರಾ ತಿಮ್ಮಯ್ಯ ಯಾತ್ರಲ್ಲಿ ಉಂಡಾರು ಕಾಡಲ್ಲಿ ಬೆಳೆಯೋ ಬವನಾಸೀ (ಹುಟ್ಟಿಹ. ೧೧೩).

[ಹಸ$_3$ (< ಪಸ$_2$) + -ಕಾರ$_1$ (< -ಕಾಱ)]

**ಹಸಗಾಲ** (ನಾ). ಬರಗಾಲ; ಕ್ಷಾಮದ ಕಾಲ: ಹಸುಗೂಸುಗಳಿಗೆ ಹಾಲಂ ಹಸಿದರ್ಗ್ಗನ್ನವನವಾ XXX ರೆ ನಿಚ್ಚಂ ಹಸಗಾಲದೊಳಂ ಸಲಿಸುವ ಬೆಸನದಿನಾ ರಾದಿಗೌಂಡನಂ ಪೋಲ್ವನ್ನರ್ (ಎಕ. V, ಬೇಲೂರು. ೧೩೭-೪೯; 1183).

[ಹಸ$_1$ (< ಪಸ$_1$) + ಕಾಲ]

**ಹಸಗೆಡಿಸು** 'ಪಸಗೆಡಿಸು' ನೋ.

**ಹಸಗೆಡು** 'ಪಸಗೆಡು' ನೋ.

**ಹಸಗೆಯ್** 'ಹಸಂಗೆಯ್' ನೋ.

**ಹಸಗೊಳಿಸು** 'ಪಸಗೊಳಿಸು' ನೋ.

**ಹಸಗೊಳ್ಳು** 'ಪಸಂಗೊಳ್' ನೋ.

**ಹಸತಿಗೆ** (ನಾ). (?): ನಡುಗಂತಿಯಾದ ಹಸತಿಗೆಯ ಹ[ಪಾಠಾಂ. ಹಸರಿಗೆಯ ಹ, ಹೊಸತಿಕೆಯ ಪ]ಸುವಿನ ಮೊಸರು ಕಡೆದ ಹೊಸಬೆಣ್ಣೆಯಂ ಸೋದಿಸಿಯೊಲೆಯೊಳೆತ್ತಿ . . . ಸಲೆ ಕಾಸಿ ಬಳಿಕಿಳುಹಿಕೊಂಡೊಡನೆ ಗುಳವಿಟ್ಟು ಮತ್ತೊಂದು ಹಾಡಕ್ಕೆಚೆದು ತುಪ್ಪಮಂ ಹಸಮಾಳ್ಪುದು (ಸೂಪಶಾ. ೨-೧೭). [?]

**ಹಸದ** 'ಪಸಾದ' ನೋ.

**ಹಸದನ** 'ಪಸದನ' ನೋ.

**ಹಸನ$_1$** 'ಪಸ್$_2$' ನೋ.

**ಹಸನ$_2$** (ನಾ). ನಗುವಿಕೆ; ನಗೆ: ಮಾಚಯ್ಯಂ ಹರುಷಮಂ ತಾಳ್ದು . . . ಆನನದೊಳು ಹಸನವೆಸೆಯೆ (ಬಸವು. ೩೭-೨೪); ಅಲರ ಬಿಬ್ಬಣಿಗೆಯಿಂ ಬೀಸೆ ಬೀಸರಂಬೋದಂತೆ ಹಸನಂ ಹಸಂಗೆಡೆ (ರಾಜಶೇ. ೭-೯೨ ವ). [ಸಂ.]

**ಹಸನಂಗೆಯ್** (ಕ್ರಿ). ನಗು; ನಗೆಬೀರು: ಅರಿಭೂಮಿಪರೆರ್ದೆಗಳನಾ ಚರಣದಿ ನೂದೆವಂತೆ ಕಾಲನಲ್ಲಾಡಿಸುವಂ ಪರಭೂಪಾಲರ ಬಾಳಂ ಪರಿಹಾಸ್ಯಂ ಮಾಡುವಂತೆ ಹಸನಂಗೆಯ್ವಂ (ಹಮ್ಮಿರ. ೨-೨೭). [ಹಸನ$_2$ + ಕೆಯ್$_1$]

**ಹಸನಗೈ** 'ಹಸಂಗೆಯ್' ನೋ.

**ಹಸನಿಗ** (ನಾ). ಅಂದಗಾರ; ಸೊಗಸುಗಾರ: ತೊಡಳ್ದುಡಿಯ ತವಕಿಗಂ ನಲಿವ ಮಾಗಾಯ ನವನರ್ತನದ ಹಸನಿ[ಪಾಠಾಂ. ಲಿ]ಗಂ ಬಳೆದೋಳ ಭಾಗ್ಯನಿಧಿ (ಬಸರ. ೧-೧೫೦); ಕುಪ್ಪಸದ ಬೀರಣೆಯ ಬಿನ್ನಣದ ಹಸನಿ[ಪಾಠಾಂ. ರಿ, ಲಿ]ಗಂ ಟೊಪ್ಪಿಗೆಯ ಹೊಟವೇಷದಿಹಪರದ ಲೆಕ್ಕಿಗಂ (ಬಸರ. ೫-೫೯). [ಹಸನು (< ಪಸ್$_2$) + - ಇಗ]

**ಹಸನಿಸು** (ಕ್ರಿ). (ಕಾಳುಗಳಲ್ಲಿಯ ಕಸಕಡ್ಡಿಗಳನ್ನು ತೆಗೆದು) ಶುದ್ಧಗೊಳಿಸು; ಹಸನುಗೊಳಿಸು: ಅಕ್ಕಿ ಬೇಳೆ ಹಸನಿಸುವಾಗ . . . ಕಾರಣ ಕೇಳಿದವರಿಗೆ ಹರಳು ಬಿತ್ತೆಂದು ನೆವ ಹೇಳುವಳು (ಕವಪು. ೭-೨೩). [ಹಸನು (< ಪಸ್$_2$) + - ಇಸು$_3$]

**ಹಸನೀಲಿ** (ನಾ). ಅಪ್ಪಟ ನೀಲಿಬಣ್ಣ; ಅಚ್ಚ ನೀಲವರ್ಣ: ಹಸನೀಲಿಯ ಕಣ್ಣು ನಸುಗೆಂಪಿನಲಿ ನಿಂತು ಅಸು ಬೆಳಗಿನಲ್ಲಿ ಕೂಡಿತ್ತು (ಸಿದ್ಧಪು. ३-೫).

[ಹಸ್$_2$ (< ಪಸ್$_2$) + ನೀಲಿ]

**ಹಸನು** 'ಪಸ್$_2$' ನೋ.

**ಹಸನುಗೊಳಿಸು** 'ಪಸಗೊಳಿಸು' ನೋ.

**ಹಸನುಪ್ರತಿ** (ನಾ). ಬರವಣಿಗೆಗಳ ಓರೆಕೋರೆಗಳನ್ನು ತಿದ್ದಿದ ಪ್ರತಿ; ಪಕ್ಕಾಪ್ರತಿ: ಅಂದಿನ ಟಪಾಲಿಗೆ ಹೋಗಬೇಕಾದ ಕಾಗದಪತ್ರಗಳ ಹಸನುಪ್ರತಿಗಳನ್ನು ಸರಿನೋಡಿ ರುಜು ಹಾಕಿ . . . ಸಂಚಾರ ಹೊರಡುವುದು ಅವರ ಬೆಂಗಳೂರಿನ ದಿನಚರಿಯಂತೆ (ನಂಟರು. ೮೭). [ಹಸನು (< ಪಸ್$_2$) + ಪ್ರತಿ]

**ಹಸನುಹನಿ** (ನಾ). ಸ್ವಚ್ಛವಾದ ನೀರಿನ ಬಿಂದು: ಬಿಸಿಲುಕಾಲದ ಬೇಗೆ ತಾಳದ ಕುಸುಮಗಳು ಬಾಯಾರಲು ಹಸನುಹನಿಗಳ ಕಡಲು ಹೊಳೆಗಳ ದೆಸೆಯೊಳೀಂಟುತ ಸುರಿವೆನು (ಕವಪು. ೨೯-೨). [ಹಸನು (< ಪಸ್$_2$) + ಹನಿ$_3$ (< ಪನಿ$_2$)]

**ಹಸನ್ಮುಖ** (ನಾ). ೧. ನಗುಮುಖ; ನಗೆಮೊಗ: ಒಂದೆರಡು ಬಾರಿ ಆ ವಿಷಯವಾಗಿ ನಾವು ಪ್ರಶ್ನಿಸಿದಾಗ ಅಲ್ಲಿದ್ದ ಅಧಿಕಾರಿಣಿಯೊಬ್ಬಳು . . . ಹಸನ್ಮುಖದಿಂದ ಉತ್ತರ ಕೊಟ್ಟಿದ್ದಳು (ನಂಟರು. ೯೭). ೨. ನಗುಮೊಗದವನು; ಪ್ರಸನ್ನವಾದ ಮುಖವುಳ್ಳವನು: ಬಾವಾಜಿ ಹಸನ್ಮುಖನಾಗಿ, ಕುಳಿತುಕೊಳ್ಳಿರೆಂದು ಸನ್ನೆಮಾಡಿದ (ಕುಂಕುಮ. ೨೫). [ಸಂ.]

**ಹಸನ್ಮುಖಿ$_1$** (ನಾ). ನಗುಮೊಗದವಳು; ಪ್ರಸನ್ನಮುಖಮುದ್ರೆಯವಳು: ವಜ್ರಾಯುಧಂಗಂ ಹಸನ್ಮುಖಿ ಲಕ್ಷ್ಮೀಮತಿಗಂ ಪುರಾತನಭವಸ್ನೇಹಕ್ಕೆ ಪುಣ್ಯಂ ಮಹಾಸುಖಮಾಗುತ್ತಿರೆ ಬಂದು ಪುಟ್ಟಿ ಗುರುವುಂ ತಾನುಂ ಮನಂಗೊಂಡರ್ . . . ಕ್ಷೇಮಂಕರಾಧೀಶನಂ (ಶಾಂತಿಪು. ೭-೧೨೧); ಎಲ್ಲವನ್ನೂ ನುಂಗಿಕೊಂಡು . . . ಹೊರಗೆ ಹಸನ್ಮುಖಿಯಾಗಿಯೇ ತೋರುತ್ತಿದ್ದಳು (ಹೊಸಕ್ಕ. ೨೨). [ಸಂ. ಹಸನ್ಮುಖೀ]

**ಹಸನ್ಮುಖಿ$_2$** (ನಾ). ನಗುಮೊಗದವನು; ಪ್ರಸನ್ನತೆಯನ್ನು ಸೂಸುವ ಮುಖವುಳ್ಳವನು: ತನ್ನಷ್ಟು ಸುಖಿ ಯಾರೂ ಇಲ್ಲ ಎನ್ನುವಂಥ ಹುಮ್ಮಸ್ಸಿನಿಂದ ರಾಯರು ಹಸನ್ಮುಖಿಗಳಾಗುತ್ತಿದ್ದರು (ವಾತ್ಸಲ್ಯ. ೨೯); ಐತಾಳರು ಮಗುವಿನ ಮುಖವನ್ನು ಕಂಡು ಹಸನ್ಮುಖಿಗಳಾದರು (ಮರಮ. ೧೨೦). [ಸಂ. ಹಸನ್ಮುಖಿನ್]

**ಹಸರ** 'ಪಸರ' ನೋ.

**ಹಸರಗಣ್ಣೆ** (ನಾ). ಒಂದು ಬಗೆಯ ಮರ: ಮರಗಳು . . . ಕಮರಕ, ಮುರಕಲಿ, ಹಸರಗಣ್ಣೆ, ತುಪರ (ಸಮ್ಮನು. ೨೩೭). 'ಹಸುರ್ಗಣ್ಣೆ' ಪರಾ. [?]

**ಹಸರಣೆ** 'ಪಸರಣ' ನೋ.

**ಹಸರದುಱುಗಲು** (ನಾ). ದೊಡ್ಡರಾಶಿ: ಬಸನೆಣನ ಹರಹಿದ ಹಸಿಯ ತೊಗಲಿನ ತಳಿತ ಖಂಡದ ಹಸರದುಱುಗಲ ಕಾಳಿಜದ ಜಂಗಡೆಯ ಗಳಗೆಗಳ . . . ಕೋದ ಮಾನಂಗಡಿಯಲ್ಕೆತಂದ (ಕುಮಾವ್ಯಾ. ೧೫-೮).

[ಹಸರ (< ಪಸರ) + ತುಱುಗಲ್ (< ತುಱುಂಗಲ್)]

**ಹಸರವಿಕ್ಕು** (ಕ್ರಿ). ವರ್ಣಿಸು; ವಿವರಿಸು: ರಸಿಕದಂಪತಿಗಳು ಕೂಡಿದರೆನೆ ಸಾಕು . . . ಅಂತುಟಂತುಟಾಡಿದರೆಂದು ಹಸರವಿಕ್ಕುವುದಾವ ಜಾಣ್ಮೆ (ಭರತ. ೧೦-೧೦೨).

[ಹಸರ (< ಪಸರ) + ಇಕ್ಕು]

**ಹಸರವಿಡಿ** (ಕ್ರಿ). (ಬೆಳೆದು) ಹೆಚ್ಚಾಗು; ಅಧಿಕವಾಗು: ಹರಭಕ್ತಿ ಹಸರವಿಡಿದಿರದೆ ಹರಿದಾಡಿ ಮೆಲ್ಲೊರೆದ ನುಡಿವದಿರಿನಿಂ ಕೈಮುಗಿವುತಂ ಕರಗಿ ಕಾಸಿದ ತುಪ್ಪದೊರೆವುಗ್ಗಡಂ ತೂಕ ಸರಿಯೆಂದು ಹುಸಿವ ಪರಿಯಂ ನೆನೆವುದು (ಸಾನಂಚ. ೫-೨೭).

[ಹಸರ (< ಪಸರ) + ಪಿಡಿ$_1$]

**ಹಸರಾಣಿಬಳ್ಳಿ, ಹಸುರಾಣಿಬಳ್ಳಿ** (ನಾ). ಒಂದು ಬಗೆಯ ಬಳ್ಳಿ: (೩). **ಹಸುರಾಣಿಬಳ್ಳಿ**: ನರಂಬಬಳ್ಳಿ, ಹಸುರಾಣಿಬಳ್ಳಿ, ಭೂಚಕ್ರಬಳ್ಳಿ (ಮೃಷಿಗಿ. ೨೪-೪೪೪).

[? + ಬಳ್ಳಿ]

**ಹಸರಿಕೆ** 'ಪಸರಿಕೆ' ನೋ.

**ಹಸರಿಗ** 'ಪಸರಿಗ' ನೋ.

**ಹಸರಿಸು** 'ಪಸರಿಸು' ನೋ.

**ಹಸರು$_1$** 'ಪಸರ್' ನೋ.

**ಹಸರು$_2$** 'ಪಸುರ್$_2$' ನೋ.

**ಹಸರುಕಟ್ಟಿಗೆ** (ನಾ). ಒಂದು ಬಗೆಯ ದಂಡ: ಗಗ್ಗರಿಕಟ್ಟಿಗೆ ೩೦, ಬೆಳ್ಳಿಕಟ್ಟಿಗೆ ೫೦, ಹಸರುಕಟ್ಟಿಗೆ ೫೦ (ಗುರುದ. ೧೦). [? + ಕಟ್ಟಿಗೆ$_1$]

**ಹಸರುಕಾಯಿ** 'ಪಸುರ್ಗಾಯ್' ನೋ.

**ಹಸರುಗುಬ್ಬಿ** 'ಹಸುರುಗುಬ್ಬಿ' ನೋ.

**ಹಸರುನೀರುಪಾತ್ರೆ** (ನಾ). ಒಂದು ಬಗೆಯ ಬಳ್ಳಿ: "ಕೊಟ್ಟಗೆಣಸುಬಳ್ಳಿ, ಹಸರುನೀರುಪಾತ್ರೆ" (ಮೃಷಿಗಿ. ೫೮-೧೧೭೪). [?]

**ಹಸರುನೂಲಿಗ** 'ಹಸುರುನೂಲಿಗೆ' ನೋ.

**ಹಸರುವಾಣಿ** 'ಹಸುರುವಾಣಿ' ನೋ.

**ಹಸರುವಾಣಿಚಪ್ಪರ** 'ಹಸುರುವಾಣಿಚಪ್ಪರ' ನೋ.

**ಹಸರ್ವಾಣಿ** 'ಹಸುರುವಾಣಿ' ನೋ.

**ಹಸಲು** (ನಾ). ೧. ಒಂದು ಬಗೆಯ ಭೂಮಿ,— ಜಮೀನು: ಮಾನ್ಯಮಾಗೆ ಖಿಣ್ಣಕಕ್ಕೆ ಬಿಟ್ಟ ಕರ್ಮ್ಮಣ್ಯಗೇರಿಯ ಎರೆಯ ಹಸಲು ಹನ್ನೆರಡೆಂಬುದು ಮತ್ತರು ೩ ಕಮ್ಮಂ ೩೦೦ (ಸೌಇಇ. IX-i, ೨೦೩-೨೫; 1122); ಆಗ್ನೇಯದಲು ಬೆದಲು ಹಸಲು (ಎಕ. VI, ಕಡೂರು. ೧೦೪-೭೭; 1141). ೨. (?): ಯಿ ಧರ್ಮ್ಮಸ್ಥಳಂಗಳನು ಬದ್ದು ಇ ಪುರಾಣವನು ನಡಸಿ ತಂನ್ನ ತನ್ನ ಸಂತತಿ ಸಂತತಿ ಉಳ್ಳಂನ್ನಬರ ಹಿರಿಯರಾಗಿ ಹುಟ್ಟಿದವರೆ ಆಚಂದ್ರಾರ್ಕಸ್ಥಾಯಿ ಎಗಿ ಸುಖದಿಂ ಬಾಳುವವರು ಹುಟ್ಟಿದವನ ಹಸಲು ಸಲ್ಲ ಕೊಟ್ಟವನ ಅರ್ತ್ಥ ಸಲ್ಲ (ಕಇ. I, ೫೩-೩೨; 1433). [?]

ಹಸಲುಗೂಳು (ನಾ). ಪಕ್ವಾನ್ನ; ಮೃಷ್ಟಾನ್ನ (?): ಪರಿಪಂತಿವಿಡಿದು ಕವಿಗಳ ಗಮಕಿಗಳ ವಾದಿಗಳ . . . ಮನ್ನಣೆಯ ಮಾನಿಸರು ಮುಖ್ಯರೆನಲೆಡೆಗೊಂಡ ಸಕಲಪರಿಜನವೆರಸಿ ಸವಿದು ಸಂಗಡ ಹಸಲು[ಪಾಠಾಂ. ಕಲಸು]ಗೂಳುಂಡನಿನಕುಲಲಲಾಮ (ಪಚಕಾ. ೩-೫೯). [ಹಸಲು$_1$ + ಕೂಳು$_2$ (< ಕೂಟ್ಟು$^3$)]

**ಹಸಲೆ** 'ಪಸಲೆ' ನೋ.

ಹಸವಳಿ (ಕ್ರಿ). ಅಂದಗೆಡು; ರೂಪುಗೆಡು: ಹುಳು ಮೈಯನು ಕೊರೆಯೆ ಚೆಂದವಿದು ಹೊರೆಯೆ ಹಸವಳಿದಿರೆ ಎಸಳು, ನಿನ್ನ ಜನ ಮಸು (ಬಾಸಿಗ. ೮-೧೩).
[ಹಸ$_2$ (< ಪಸ$_2$) + ಅಳಿ$_1$ (< ಅಟ್$_1$)]

ಹಸಾಕಳಕಾಯಿ (ನಾ). ಒಂದು ಬಗೆಯ ಕಾಯಿ: ''ಕರ್ಕಟಿಕಾ - ಮಧೂ?, ಖರ್ಜೂರ, ಹಸಾಕಳಕಾಯಿ, ಬೆಳ್ಳಿ, ಬೈಗಿಯ ತಿರುಳು?'' (ಓಷಧಿ. ೨೫). [?]

**ಹಸಾದ** 'ಪಸಾದ' ನೋ.

**ಹಸಾಳೆ** 'ಹಸಿಯಳೆ' ನೋ.

**ಹಸಿ$_1$** 'ಪಸಿ$_1$' ನೋ.

**ಹಸಿ$_2$** 'ಪಸಿ$_3$' ನೋ.

ಹಸಿಕಟ್ಟಿಗೆ (ನಾ). ಒಣಗದ ಸೌದೆ; ಹಸಿಸೌದೆ: ಆದರೆ ಅದೇ ಹಸಿಕಟ್ಟಿಗೆಯನ್ನು ನಂಬಿ ಅವರು ಬದುಕಬೇಕು (ಮರಮ. ೯). [ಹಸಿ$_2$ (< ಪಸಿ$_3$) + ಕಟ್ಟಿಗೆ$_1$]

ಹಸಿಕಲು (ನಾ). ಜೋಡಣೆ; ಸೇರಿಕೆ: ಮಸಿಯ ಮಣ್ಣನೆ ಪೂಸಿ ಕೊರಳಲಿ ಹಸಿಯ ಸೊಪ್ಪನೆ ಕಟ್ಟಿ ಪೀಲಿಯ ಹಸಿಕಲನು ಬಿಗಿದುಟ್ಟು ಭುಜದೊಳು ಹೊಯ್ದು ಬಲುಗೇರ . . . ಪಂಜ ಹಿಡಿದೀ ವಸುಧೆಯೊಳು ತಿರುಗಿದುಂಬುದೊಳ್ಳಿತೆ ಮಗನೆ ನಿನಗೆಂದ (ಪ್ರಭ್ಲಾಚ. ೧೧-೫). [?]

**ಹಸಿಗೆ** 'ಪಸುಗೆ' ನೋ.

ಹಸಿಗೆಕೊಳಗ (ನಾ). ಒಂದು ಅಳತೆಯ ಕೊಳಗ ,– ಅಳೆಯುವ ಕೊಳಗ: ತಾಳೂರ ಹಸಿಗೆಕೊಳಗದಲು ಬೀಜವರಿ ಗದ ಖಂಡುಗ ೧ ವೊಂಬು ಖಂಡುಗ ಬೀಜವರಿಯ ಗದೆಯ ಸ್ಥಳವನು ಕೊ [ಟೆ೧] (ಸೌಇಇ. IV, ೨೫೦-೪; 1521). [ಹಸಿಗೆ$_2$ + ಕೊಳಗ$_1$]

ಹಸಿಗೆಪಟ್ಟಿ (ನಾ). ಉತ್ಪನ್ನವನ್ನು ವಿಭಾಗಿಸಿದ ವಿವರಗಳನ್ನೊಳಗೊಂಡ ಲೆಕ್ಕದ ವಿವರ ,– ಹಂಚಿಕೆ ಪಟ್ಟಿ: (೬). [ಹಸಿಗೆ (< ಪಸುಗೆ) + ಪಟ್ಟಿ$_2$]

ಹಸಿಗೆಮುತ್ಸದ್ದಿ (ನಾ). ಉತ್ಪನ್ನ ವಿಭಾಗದ ಲೆಕ್ಕವಿಡುವ ಕರಣಿಕ: (೬).
[ಹಸಿಗೆ (< ಪಸುಗೆ) + ಮುತ್ಸದ್ದಿ]

ಹಸಿಗೋಡೆ (ನಾ). ಇನ್ನೂ ಒಣಗದಿರುವ ಮಣ್ಣಿನ ಗೋಡೆ: ಹಸಿಗೋಡೆಯಲ್ಲಿ ಹರಳು ನಟ್ಟ ಹಾಗೆ (ಗಾದೆ). [ಹಸಿ$_2$ (< ಪಸಿ$_3$) + ಗೋಡೆ]

ಹಸಿತ (ಗು). ೧. ನಕ್ಕ; ನಗೆಯಿಂದ ಕೂಡಿದ: ಹಸಿತಮುಖದಿಂದಾ ಕದಹುಗಳ ದೆಸೆಯನು ದಿಟ್ಟಿಸಲು (ಬಸವು. ೨೮-೫೦). ೨. ಅರಳಿದ; ವಿಕಸಿತವಾದ. (ನಾ). ೩. ಅರಳುವಿಕೆ; ವಿಕಾಸ: ''ವಿಕಾಸಮುಜ್ಜೃಂಭಿತಂ . . . ಹಸಿತಂ ವಿಕಸಿತಮುನ್ಮೀಲಿತಂ ವಿನಿದ್ರಮೆನಿಕ್ಕುಂ'' (ವಸ್ತುಕೋ. ೩೧-೧೧). ೪. ನಗೆ; ಹಾಸ: ಹಸಿತಯಶಃ ಪ್ರಭೃತಿಯೊಳುಲ್ಲಸಿತಂ ಸಿತಭಾವಂ . . . ಕೋಪರಾಗಪ್ರಸರದೊಳಾರಕ್ತವರ್ಣಮಭಿ ವರ್ಣಿಸುಗುಂ (ಕಾವ್ಯಾವ. ೮೭೧). [ಸಂ.]

**ಹಸಿಬಿಸಿ** 'ಪಸಿ$_3$' ಪರಾ.

**ಹಸಿಬೆ** 'ಪಸುಂಬೆ' ನೋ.

ಹಸಿಬೆಚೀಲ (ನಾ). ಮಧ್ಯದಲ್ಲಿ ಬಾಯಿಯಿದ್ದು ಭುಜದ ಮೇಲೆ ಹಾಕಿಕೊಂಡಾಗ ಎರಡೂ ಕಡೆ ಬರುವಂಥ ಉದ್ದದ ಚೀಲ: ಆ ವೃದ್ಧರು ಹೆಗಲ ಮೇಲೆ ಹಸಿಬೆಚೀಲ ಹಾಕಿಕೊಂಡು ಬರುತ್ತಿದ್ದಾರೆ (ರೂಢಿ).
[ಹಸಿಬೆ (< ಪಸುಂಬೆ) + ಚೀಲ]

ಹಸಿಮಜ್ಜಿಗೆ (ನಾ). ಮಜ್ಜಿಗೆಯಿಂದ ತಯಾರುಮಾಡುವ (ಕುದಿಸದಿರುವ) ಒಂದು ಬಗೆಯ ವ್ಯಂಜನಪದಾರ್ಥ: ''ತೇಮನಂ, ನಿಷ್ಠಾನಂ - ೨ ತೇವನವೆಂಬ ಮಜ್ಜಿಗೆಪಳಿದ್ಯ, ಹಸೀಮಜ್ಜಿಗೆ, ಹಸೀಯಾಳೆ, ಮಸರುಚಟ್ನಿ'' (ಸಿದ್ಧಾಂತಿ. ೨೮೭). 'ಹಸಿಯಳೆ' ಪರಾ. [ಹಸಿ$_2$ (< ಪಸಿ$_3$) + ಮಜ್ಜಿಗೆ]

ಹಸಿಮಡಕೆ (ನಾ). ಇನ್ನೂ ಆವಗೆಗೆ ಹಾಕದಿರುವ ಮಡಕೆ; ಸುಡದಿರುವ ಮಡಕೆ: ಭಯಂಕರವ್ಯೂಹಗಳು ಹಸಿಮಡಕೆಯಂತೆ ಚೆಲ್ಲಾಪಿಲ್ಲಿಯಾಗುವುವು (ಬಾಣಅ. ೧೪೨). [ಹಸಿ$_2$ (< ಪಸಿ$_3$) + ಮಡಕೆ$_1$]

ಹಸಿಮೆಣಸಿನಕಾಯಿ (ನಾ). (ಅಡುಗೆಯಲ್ಲಿ ಕಾರಕ್ಕಾಗಿ ಬಳಸುವ) ಹಸಿಯದಾದ ಮೆಣಸಿನಕಾಯಿ: ಊಟಕ್ಕೆ ಕೂತುಕೊಳ್ಳುವ ಮೊದಲು, ಮನೆಯ ಹಿತ್ತಲಿಗೆ ಹೋಗಿ ನಾಲ್ಕು ಹಸಿಮೆಣಸಿನಕಾಯನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು ಬಂದಿದ್ದನು (ಮರಮ. ೧೦೮). [ಹಸಿ$_2$ (< ಪಸಿ$_3$) + ಮೆಣಸಿನಕಾಯಿ]

ಹಸಿಮೈ (ನಾ). ಮದುವೆಯ ಸಂದರ್ಭದಲ್ಲಿ ವಧೂವರರ ಮೈಯ ಅರಿಸಿನ ಇನ್ನೂ ಮಾಸದಿರುವಾಗ ಅಥವಾ ಹೆಣ್ಣುಮಕ್ಕಳಿಗೆ ಹೆರಿಗೆ, ಋತು ಮುಂತಾದುವುಗಳಾದ ಹೊಸದರಲ್ಲಿ ದೃಷ್ಟಿ ತಾಗುವ ಸಂಭವವಿರುವ ದೇಹ: ಹಸಿಮೈಯೊಳಗ ಈಗ ಯಾತಕ್ಕ ಬರತಾನ ಬಾಬು ? (ಅಕೋಕ. ೨೧).
[ಹಸಿ$_2$ (< ಪಸಿ$_3$) + ಮೈ (< ಮೆಯ್$_2$)]

ಹಸಿಯಕ್ಕಿ (ನಾ). ೧. ಬೇಯಿಸದೆ ಇರುವ ಅಕ್ಕಿ: ರುಚಿಯಿಲ್ಲದಿದ್ದರೆ ಹಸಿಯಕ್ಕಿ ತಿಂದಾನು (ರೂಢಿ). ೨. ನೆನೆದ ಅಕ್ಕಿ; ನೆನೆಯಕ್ಕಿ: ಗೌರಿಯ ನೈವೇದ್ಯಕ್ಕೆ ಹಸಿಯಕ್ಕಿ ತಂಬಿಟ್ಟು ಸಿದ್ಧವಾಗಿವೆ (ರೂಢಿ). [ಹಸಿ$_2$ (< ಪಸಿ$_3$) + ಅಕ್ಕಿ$_1$]

**ಹಸಿಯಡಕೆ** 'ಪಸಿ$_3$' ನೋ.

ಹಸಿಯಲ್ಲ (ನಾ). ಹಸಿಯ ಶುಂಠಿ: ''ಆರ್ದ್ರಕಮೆನಲ್ ಶೃಂಗವೇರಮೆನ ಹಸಿಯಲ್ಲವಕ್ಕು'' (ಮಂಗರಾ. ೪೧-೩೫). [ಹಸಿ$_2$ (< ಪಸಿ$_3$) + ಅಲ್ಲ$_1$]

ಹಸಿಯಳೆ, ಹಸಾಳೆ, ಹಸಿವಾಳೆ (ನಾ). ಒಂದೆಲಗನ ಸೊಪ್ಪು ನೆಲ್ಲಿಕಾಯಿ ಮುಂತಾದುವುಗಳಲ್ಲಿ ಒಂದನ್ನು; ಹಸಿಯಾಗಿಯೇ ತೆಂಗಿನ ತುರಿ, ಉಪ್ಪು, ಮಸಾಲೆಗಳ ಜೊತೆ ರುಬ್ಬಿ ಮೊಸರು ಅಥವಾ ಮಜ್ಜಿಗೆ ಬೆರಸಿ ತಯಾರಿಸುವ ಒಂದು ಬಗೆಯ ವ್ಯಂಜನಪದಾರ್ಥ; ಹಸಿಮಜ್ಜಿಗೆ: ಅಳೆಯೊಳೇಲಕ್ಕಿ ಸ್ವಂಭವ ಬೆಲ್ಲವತ್ತ ಮಾಗುಳಿಯಲ್ಲ ಕರಿಬೇವು ಸವೆದ ಸಾಸುವೆ ಮಾವಿನೆಳಗಾಯಿ ಕೊತ್ತುಂಬರಿಯನಿಕ್ಕಿ . . . ಮಾಡಿದೊಡೆ ಹಸಿಯಳೆಯಸನವೆಂದು ಹೆಸರಾಗಿ (ಸೂಪಶಾ. ೩-೨೯). **ಹಸಾಳೆ:** ಕಣ್ವಾಪಂಡಿತರು ಹೇಳಿದ್ರು, ಇಲಿಕಿವಿಸೊಪ್ಪಿನ ಹಸಾಳೆ ಮಾಡಿಕೊಂಡು ಕುಡಿಯಾಕೆ ii (ಮಲೆಮ. ೧೮೫). **ಹಸಿವಾಳೆ:** ಸಾಮಾನ್ಯವಾಗಿ ಮೊದಲನೆಯ ಅನ್ನಕ್ಕೆ ಹಸಿವಾಳೆಯನ್ನು ಬಡಿಸುತ್ತಾರೆ (ರೂಢಿ). [ಹಸಿ$_2$ (< ಪಸಿ$_3$) + ಅಳೆ$_2$]

ಹಸಿಯಿಸು (ಕ್ರಿ). ಹಸಿದಿರುವಂತೆ ಮಾಡು; ಉಪವಾಸವಿರಿಸು: ಮಾನಿನಿಯರ ಹಸಿಯಿಸಿ ತಾನು ಇನಿತು ಪ್ರಯಾಸವ ಮಾಡುವುದುಚಿತವೆ (ಭರಚ. ೧೯-೬೫).
[ಹಸಿ$_1$ (< ಪಸಿ$_1$) + - ಇಸು$_3$]

**ಹಸಿರು** 'ಪಸುರ್$_2$' ನೋ.

**ಹಸಿರುಗಟ್ಟು** 'ಪಸುರ್ಗಟ್ಟು' ನೋ.

**ಹಸಿರುಗನ್ನೆ** 'ಹಸುರ್ಗನ್ನೆ' ನೋ.

**ಹಸಿರುಮುರಿ$_1$** 'ಹಸುರುಮುರಿ' ನೋ.

ಹಸಿರುಮುರಿ$_2$ (ನಾ). ಹಳದಿಬಣ್ಣದಿಂದ ಆವೃತವಾಗಿರುವುದು: ನನ್ನ ಕಣ್ಣುಗಳನ್ನು ಅದೇತಕ್ಕೋ ಹೋಲಿಸುತ್ತಿದ್ದಿರಿ. ಅವೀಗ ಹಸಿರುಮುರಿಯಾಗಿವೆ (ಸುವಸಂ. ೨೭). [ಹಸಿರು (< ಪಸುರ್$_2$) + ಮುರಿ$_3$ (< ಮುರಿವು)]

**ಹಸಿರುವಾಣಿ** 'ಹಸುರುವಾಣಿ' ನೋ.

**ಹಸಿರುವಾಣಿಚಪ್ಪರ** 'ಹಸುರುವಾಣಿಚಪ್ಪರ' ನೋ.

ಹಸಿರುಹಣೆ (ನಾ). (ಕುಂಕುಮವಿಲ್ಲದ) ಹಚ್ಚೆಯ ಹಸುರು ಕಲೆ ಇರುವ ಹಣೆ; ವಿಧವೆಯ ಹಣೆ: ಎತ್ತರದ ಹಸಿರುಹಣೆ ಹಾಳ ಬಿತ್ತರಿಸುತಿದೆ (ಗಂಗಾತ. ೬೧-೧೭). [ಹಸಿರು (< ಪಸುರ್$_2$) + ಹಣೆ$_1$ (< ಪಣೆ$_1$)]

**ಹಸಿವಾಳೆ** 'ಹಸಿಯಳೆ' ನೋ.

**ಹಸಿವು** 'ಪಸಿ$_2$' ನೋ.

ಹಸಿವೆ (ನಾ). ೧. ಹಸಿವು; ಕ್ಷುಧೆ: ಹುಲಿಯು . . . ನೆಟ್ಟಗೆ ಹಸಿವೆಯಾಗುವ ತನಕ ಸುಮ್ಮನೆ ತನ್ನ ಗವಿಯೊಳಗೆ ಬಿದ್ದುಕೊಂಡಿರುತ್ತದೆ (ಮುಂಬಯಿ. ೪-೩೭); ಉದಂಕನು ದಾರಿ

ನಡೆದು ಹೋಗುತ್ತಿರಲು ಅವನಿಗೆ ಹಸಿವೆಯಾಯಿತು (ಮಣಿಸ. ೬೭); ಹಸಿವೆಗೆ ಬಾಯ್ಸವಿ ಬೇಡ, ನಿದ್ದೆಗೆ ಹಾಸಿಗೆ ಬೇಡ (ಗಾದೆ). ೨. ಆಸೆ; ಬಯಕೆ; ಅಪೇಕ್ಷೆ: ಮಾತಿನಿಂದ, ಉಣಿಸಿನಿಂದ, ತಿನಿಸಿನಿಂದ, ಚೇಷ್ಟೆಯಿಂದ ಇನ್ನಾವುದರಿಂದಾಗಲಿ ನಿಮ್ಮ ಸಾವಿರ ಹಸಿವೆಗಳನ್ನೂ ತೃಪ್ತಿಪಡಿಸಿಕೊಳ್ಳಿರಿ (ಸಂಜೀವಿ. ೧೮೪); ಜ್ಞಾನದ ಹಸಿವೆಯಿಂದ ಬಂದವರಿಗೆ ಆನಂದವಾಗುವಂತಿರಬೇಕು (ಗ್ರಂಥಾಲ. ೫). [ಹಸಿ$_1$ (< ಪಸಿ$_1$) + - ವೆ]

**ಹಸಿಶುಂಠಿ** (ನಾ). = ಹಸಿಯಲ್ಲ: ೪ ಒಣಮೆಣಸು, ೩ ತುಂಡು ಹಸಿಶುಂಠಿ (ಅಡುಸಾ. ೧೧೯). [ಹಸಿ$_2$ (< ಪಸಿ$_3$) + ಶುಂಠಿ]

**ಹಸಿಸುಣ್ಣ** (ನಾ). ಒದ್ದೆಯಾದ ಸುಣ್ಣ; ನೀರಿನಲ್ಲಿ ಹಾಕಿ ಅರಳಿಸಿದ ಸುಣ್ಣ: ಮನೆಗೆ ಬಳಿಯಲು ಹಸಿಸುಣ್ಣ ಬೇಕು (ರೂಢಿ). [ಹಸಿ$_2$ (< ಪಸಿ$_3$) + ಸುಣ್ಣ]

**ಹಸಿಹಿಟ್ಟು** (ನಾ). (ಅಡುಗೆಗೆ ಬಳಸುವ) ಹುರಿಯದ, ನೆನೆಸದ ಅಥವಾ ಬೇಯಿಸದೆ ಇರುವ ಅಕ್ಕಿ, ರಾಗಿ ಮುಂತಾದ ಧಾನ್ಯಗಳ ಹಿಟ್ಟು: ರಾಗಿ ಮಾಡಬೇಡವ, ಹಸಿಹಿಟ್ಟು ಬೀಸಬೇಡವ . . . ಹೊಟ್ಟೆಗಿಲ್ಲದೆ ಇದೆಲ್ಲಾ ಮಾಡಕಾದೀತಾ? (ಮುಸುಗ. ೧೫೦). [ಹಸಿ$_2$ (< ಪಸಿ$_3$) + ಹಿಟ್ಟು (< ಪಿಟ್ಟು)]

**ಹಸು$_1$** 'ಪಸು$_3$' ನೋ.

**ಹಸು$_2$** 'ಪಸು$_4$' ನೋ.

**ಹಸುಂಬ** 'ಪಸುಂಬ' ನೋ.

**ಹಸುಂಬೆ** 'ಪಸುಂಬೆ' ನೋ.

**ಹಸುಕು, ಹಸಕು** (ನಾ). ೧. ಹಸಿಯಾಗಿರುವುದು: ಹಸುಕು ಕಸುಕಿನ ಹಸುರು ಹಣ್ಣಿನಾ ಹೊಸಹಳದಿ ನಸುಕಿನಾ ನೀಲಿ ಮುಂಜಾವಿನಲ್ಲಿ (ನನಲ್ಲ. ೧೪-೨೩). ೨. ಪಕ್ವವಾಗಿ ಬೇಯದಿರುವುದು; ಅರಬರೆ ಬೆಂದಿರುವುದು: ಅನ್ನ ಹಸುಕಾಗಿದೆ (ರೂಢಿ). ೩. (ಹಸಿಯಾಗಿರುವುದರಿಂದ ಉಂಟಾಗುವ) ಕೆಟ್ಟವಾಸನೆ; ದುರ್ವಾಸನೆ: ಹಸುಕು [ಪಾಠಾಂ. ಹಸಲು] ನಾತಂ " (ಶಬ್ದಮಂ. ೨೪). 'ಹಸುಕುನಾಱು' ಪರಾ. **ಹಸಕು:** ೩. "ಹಸಕೆನಲ್ ದುರ್ಗಂಧಕೆಡೆಯಕ್ಕು" (ಕಶರ. ೧೧೪).

**ಹಸಕುಬಿಸಕು** = ಚೆನ್ನಾಗಿ ಬೇಯದ; ಅಪಕ್ವವಾದ: ಹಸಕುಬಿಸಕು ಮುಸುಕಿನ ಜೋಳ, ಎಣ್ಣೆಯಲ್ಲಿ ಕರಿದಿದ್ದ ವಡೆ (ಸಾವಿಸ. ೨೭). [< ಹಸಿ$_2$]

**ಹಸುಕುನಾಱು** (ಕ್ರಿ). ಹಸಿಯಾಗಿರುವುದರಿಂದ ಅಪಕ್ವವಾದ ವಾಸನೆಯನ್ನು ಬೀರು; ಹಸಿವಾಸನೆ ಬರು: ಆ ಹಾಲ ತಂದು ಭಾಜನದಲ್ಲಿ ನೀಡಿ ಕಾಸುವಲ್ಲಿ ಚಟ್ಟ ಹತ್ತದೆ ಹಸುಕುನಾಱದೆ ಕವುರು(ಕವರು)ಏಳದೆ . . . ಕಾಸಿ ಉಣಬಲ್ಲಡೆ ಆತನೆ ಭೋಗಿ (ಸರ್ವವ. ೧೧೭-೫೩೫). [ಹಸುಕು + ನಾಱು]

**ಹಸುಕೂಸು** 'ಪಸುಗೂಸು' ನೋ.

**ಹಸುಗಣ್ಣು** (ನಾ). ಎಳೆಯ ಕಣ್ಣು: ಹಸಗಣ್ಣ ಚಿಗರಿಗಳನು, ಕೊಳೆಯರನು, ಚೆಲುವರನು . . . ದೇವರನು ಬಿಡಿಸುವೆನು ನಿನ್ನ ಕಡಿದು (ದ್ರಾಕ್ಷಿದಾ. ೬೪-೧೯). [ಹಸು$_1$ (< ಪಸು$_3$) + ಕಣ್ಣು (< ಕಣ್)]

**ಹಸುಗಿ** 'ಪಸುಗೆ' ನೋ.

**ಹಸುಗೂಸು** 'ಪಸುಗೂಸು' ನೋ.

**ಹಸುಗೂಸುಂಗೊಲೆ** (ನಾ). ಎಳೆಯ ಮಗುವಿನ ವಧೆ; ಶಿಶುಹತ್ಯೆ: ಹೇಸರು ಯಮದೂತರು ಹಸುಗೂಸುಂಗೊಲೆಗೆ (ಮುಕ್ತಕಂ. ೫೮-೯). [ಹಸುಗೂಸು (< ಪಸುಗೂಸು) + ಕೊಲೆ$_2$]

**ಹಸುಗೆ** 'ಪಸುಗೆ' ನೋ.

**ಹಸುಗೆಗೆಯ್** (ಕ್ರಿ). ಹಂಚು; ವಿತರಣೆ ಮಾಡು: ಆತ್ಮವಿಚಾರಪ್ರಕಾರವನಾವಗ ಹಸುಗೆಗೆಯ್ಯುವ ಶಿವಾರ್ಚಕರ ಚಿತ್ತೈಸು (ಮೋಹತ. ೨೦-೫೩). [ಹಸುಗೆ (< ಪಸುಗೆ) + ಕೆಯ್$_1$]

**ಹಸುಗೆಗೊಳ್** 'ಪಸುಗೆಗೊಳ್' ನೋ.

**ಹಸುಗೆನ್ನೆ** (ನಾ). ಎಳೆಯ ಕಪೋಲ; ಮೃದುವಾದ ಕೆನ್ನೆ: ರಂಗಮ್ಮ ಪ್ರೀತಿಯಿಂದ ಮೃದುವಾಗಿ ಮಗುವಿನ ಹಸುಗೆನ್ನೆಗೆ ಎರಡು ಪೆಟ್ಟುಕೊಟ್ಟು (ನಿಶಟು. ೨೪೮). [ಹಸು$_1$ (< ಪಸು$_3$) + ಕೆನ್ನೆ]

**ಹಸುಗೆಪದ್ಧತಿ** (ನಾ). (ಕರಾ) ಆಹಾರ ಮೊದಲಾದ ಜೀವನಾವಶ್ಯಕ ವಸ್ತುಗಳನ್ನು ಪ್ರತಿಯೊಬ್ಬರಿಗೂ ದಿನಕ್ಕೆ ಇಷ್ಟೆಂದು ನಿಗದಿ ಮಾಡಿ ಕೊಡುವ ಕ್ರಮ; ಪಡಿತರ ವ್ಯವಸ್ಥೆ: ಹಸುಗೆಪದ್ಧತಿ ನಾಡಲ್ಲಿ ಬಂತು (ಕುಟ್ಟದೊ. ೨೭). [ಹಸುಗೆ (< ಪಸುಗೆ) + ಪದ್ಧತಿ]

**ಹಸುಗೆಮಣಿಗಾರ** (ನಾ). ಭೂಮಿಯನ್ನು ಅಳೆದು (ಆಯಾ ವ್ಯಕ್ತಿಗಳ ಅಂಕೆಗೆ ಒಳಪಡುವ ಜಮೀನಿನ ವ್ಯಾಪ್ತಿಯನ್ನು) ನಿಗದಿ ಪಡಿಸುವವನು; ಮೋಜಣಿದಾರ: ಅರಮನೆಯ ವಾರ ಪೈರುಗಳನ್ನು ರೇಖೆಮಾಡುವುದಕ್ಕೆ ಹಸುಗೆಮಣಿಗಾರ ೧ ಹಸುಗೆ ಶ್ಯಾನಭಾಗ ೧, ಕಾಲೂಳಿಗದ ಜನ ಮುಂತಾದವರನ್ನೂ ನೇಮಕ ಮಾಡಿದರು (ಮಹಾವಂ. I, ೧೧೯). [ಹಸುಗೆ (< ಪಸುಗೆ) + ಮಣಿಗಾರ (< ಮಣಿಯಗಾಱ)]

**ಹಸುಗೆಶ್ಯಾನಭಾಗ** (ನಾ). ಭೂಮಿ, ಫಸಲು ಮೊದಲಾದುವುಗಳ ಲೆಕ್ಕವಿಡುವ ಕರಣಿಕ: ಹಸುಗೆ ಮಣಿಗಾರ ೧, ಹಸುಗೆ ಶ್ಯಾನಭಾಗ ೧ (ಮಹಾವಂ. I, ೧೧೯). [ಹಸುಗೆ + ಶ್ಯಾನಭಾಗ (< ಸೇನಬೋವ)]

**ಹಸುತನ** (ನಾ). ಹಸುಳೆತನ; ಎಳಮೆ; ಶೈಶವ: ಮೃದುಮಧುರಗಭೀರಧ್ವಾನದ ನುಡಿಗಳ್ ಹಸು[ಪಾಠಾಂ. ಕೂಸು]ತನದೊಳಂ ಕೇಳ್ವ ಜನಕ್ಕೊದವಿಸಿದುವು ಪರಮಾನಂದದ ಭಾರಮನೇನುದಾರನೋ ವೀರಜಿನಂ (ವರ್ಧಪು. ೧೪-೭೬); ಹಸುತನದ ಹಾಸಬಿಚ್ಚುವನು ತನ್ನ ತಾ ನಿನ್ನ ಮೆಚ್ಚುಗೊಂಡು ಹಿರಿಹಿಗ್ಗನೂಡು ಕಾಣುವದ ಕಂಡು ಚಿರಂಜೀವಿಯಾಗಿಕೊಂಡು (ಮುಕ್ತಕಂ. ೧೯-೫). [ಹಸು$_1$ (< ಪಸು$_3$) + - ತನ]

**ಹಸುಬ** 'ಪಸುಂಬ' ನೋ.

**ಹಸುಬೆ** 'ಪಸುಂಬೆ' ನೋ.

**ಹಸುಮಗ** 'ಪಸುಮಗ' ನೋ.

**ಹಸುಮಗಳು** (ನಾ). ಸುಕುಮಾರಿ; ಬಾಲೆ: ಹಸರ ಬ್ಯಾಳೀ ಒಯ್ದು ಕೆಸರ ಕಲಸೀದಂಗ ಹಸುಮಗಳನೊಯ್ದು ಮುದುಕಾಗ ಕೊಟ್ಟರು ದುಸ್ಮಾನದವರು ತವರವರು (ಕನ್ನಜಾ. ೧೨೪); ವಿಷವ ಕುಡಿದಳ್ಕೆ ಏಕಭಾವದಿ ನಿನ್ನ ಹಸುಮಗಳು (ಕೃಷ್ಣಾಕು. ೭-೧೧). [ಹಸು$_1$ (< ಪಸು$_3$) + ಮಗಳು (< ಮಗಳ್)]

**ಹಸುಮಗು** 'ಪಸುಮಗು' ನೋ.

**ಹಸುಮೀನು** (ನಾ). ಒಂದು ಬಗೆಯ ಮೀನು: ಅವು ಮರದ ತುಂಡುಗಳಲ್ಲ, ಮೀನುಗಳು. ಇವಕ್ಕೆ "ಹಸುಮೀನು" ಎನ್ನುತ್ತಾರೆ (ಬಾಲಪ್ರ. I, ೮೧). [ಹಸು$_?$ + ಮೀನು$_2$ (< ಮೀನ್$_2$)]

**ಹಸುಮೊಗ** 'ಪಸುಮೊಗ' ನೋ.

**ಹಸುರಂಗಿ** 'ಪಸುರಂಗಿ' ನೋ.

**ಹಸುರಂಬಲಿ** (ನಾ). ಸೊಪ್ಪಿನಿಂದ ತಯಾರಿಸುವ ಅಂಬಲಿ: ಗಾಡಿಗ ಡಿಂಬುಗಂಗೆ ಚಿಕ್ಕು ಮುಟ್ಟಗೆ ಹಸುರಂಬಲಿ ಮುಟ್ಟಗೆ ಹುರಿಬುತ್ತಿಯ ಬೇಡಿ . . . ಕುಟುಕುವ ಹೇಸಿದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ (ಬಸವ. ೫೫೭). [ಹಸುರು (< ಪಸುರ್$_2$) + ಅಂಬಲಿ$_1$]

**ಹಸುರಾಣಿಬಳ್ಳಿ** 'ಹಸರಾಣಿಬಳ್ಳಿ' ನೋ.

**ಹಸುರಿಸು** (ಕ್ರಿ). ಹಚ್ಚಗಾಗು; ಹಸಿರಾಗು: ಅಗ್ಗ ಭೂಮಿಯು ಎಷ್ಟು ಹಸುರಿಸಿತ್ತು (ಫಲಸಂ. ೭). [ಹಸುರು (< ಪಸುರ್$_2$) + - ಇಸು$_3$]

**ಹಸುರು** 'ಪಸುರ್$_2$' ನೋ.

**ಹಸುರುಕಲ್ಲು** 'ಪಸುರ್ಗಲ್' ನೋ.

**ಹಸುರುಗಟ್ಟು** 'ಪಸುರ್ಗಟ್ಟು' ನೋ.

**ಹಸುರುಗನ್ನೆ** 'ಹಸುರ್ಗನ್ನೆ' ನೋ.

**ಹಸುರುಗುಂದು** (ಕ್ರಿ). ಹಸಿರುಬಣ್ಣ ಕಡಮೆಯಾಗು,— ಕಂದು: ಎಸೆವ ದೇವಾಳೆ ಕಬ್ಬಾಳೆ ಹಸುರುಗುಂದದ ಪಚ್ಚೆನಾದವು ಮಧುರಂಗ ಪಸರಿಸಿ ಮೆಱೆದುವರ್ತಿಯಲಿ (ಕಂನವಿ. ೫-೮೭). [ಹಸುರು (< ಪಸುರ್$_2$) + ಕುಂದು$_1$]

**ಹಸುರುಗುಬ್ಬಿ, ಹಸರುಗುಬ್ಬಿ** (ನಾ). ಒಂದು ಬಗೆಯ ಔಷಧೀಸಸ್ಯ: "ಪಯೋಷೀ (ಷ್ಣೀ) - ಹಸುರುಗುಬ್ಬಿ" (ಓಷಧಿ. ೯೧). **ಹಸರುಗುಬ್ಬಿ:** "ಅಂಜನಕೇಸಿಕಾ, ನೀಲಪುಷ್ಪಿಕಾ?, ಅಂಜನಪುಷ್ಪಿಕಾ - ಹಸರುಗುಬ್ಬಿ" (ಓಷಧಿ. ೯). [?]

**ಹಸುರುಗೆಂಪು** (ನಾ). ಹಸಿರು ಮತ್ತು ಕೆಂಪುಬಣ್ಣಗಳ ಮಿಶ್ರವರ್ಣ; ಕಪಿಲವರ್ಣ: "ಕವಿಲು ಶ್ಯಾಮಮೆನ ಹಸುರುಗೆಂಪು" (ಮಂಗರಾ. ೧೩೧-೨೧).

[ಹಸುರು (< ಪಸುರ್$_2$) + ಕೆಂಪು$_1$]

**ಹಸುರುಜಾಜಿಮಲ್ಲಿಗೆ** (ನಾ). ಒಂದು ಬಗೆಯ ಜಾಜಿಮಲ್ಲಿಗೆ: "ಸ್ವರ್ಣಮಲ್ಲಿಗ, ಹಸುರುಜಾಜಿಮಲ್ಲಿಗ" (ಮೈಔಗಿ. ೪೭-೯೩೪).

[ಹಸುರು (< ಪಸುರ್$_2$) + ಜಾಜಿ$_1$ (< ಜಾದಿ) + ಮಲ್ಲಿಗೆ]

**ಹಸುರುಡಿಗೆ** 'ಪಸುರುಡಿಗೆ' ನೋ.

**ಹಸುರುಡುಗೆ** 'ಪಸುರುಡಿಗೆ' ನೋ.

**ಹಸುರುಡೆ** 'ಪಸುರುಡೆ' ನೋ.

**ಹಸುರುತುಂಬೆ** (ನಾ). ಒಂದು ಬಗೆಯ ತುಂಬೆಗಿಡ: ಹಸುರುತುಂಬೆ, ದೊಡ್ಡತುಂಬೆ (ಮೈಔಗಿ. ೫೦-೧೦೦೨). [ಹಸುರು (< ಪಸುರ್$_2$) + ತುಂಬೆ$_2$]

**ಹಸುರುದೀಪ** (ನಾ). ಹಸಿರು ಬಣ್ಣದ ಗಾಜನ್ನು ಹೊದಿಸಿದ ದೀಪ; P ವಾಹನಸಂಚಾರ ಕ್ರಮದಲ್ಲಿ ಮಾರ್ಗವು ಸುರಕ್ಷಿತವಾಗಿರುವುದರಿಂದ, ಮುಂದೆ ಹೋಗಬಹುದೆಂದು ಸೂಚಿಸುವ ದೀಪ: ಹಸುರುದೀಪವನದೂ ಗಾರ್ಡು ತೋರಿಸಿದರು ಗಾಡಿ ಮೆಲ್ಲನೆ ಚಲಿಸಿಹುದು (ಚಂದ್ರವೀ. ೧೭೯-೧೪).

[ಹಸುರು (< ಪಸುರ್$_2$) + ದೀಪ$_2$]

**ಹಸುರುನೂಲಿಗೆ, ಹಸರುನೂಲಿಗ** (ನಾ). ಹಸಿರುಬಣ್ಣದ ಒಂದು ಬಗೆಯ ಉದ್ದವಾಗಿರುವ ಹಾವು: ಹಸರುಹಾವು, ಹಸುರುನೂಲಿಗೆ, ಗೋಧಿನಾಗರ (ನಮ್ಮನು. ೨೧೦). **ಹಸರುನೂಲಿಗ:** (ಕಿ). [ಹಸರು (< ಪಸುರ್$_2$) + (< ನೂಲಿಗ)]

**ಹಸುರುಬದನಿಕೆ** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೭೮-೧೫೫).

[ಹಸುರು (< ಪಸುರ್$_2$) + ಬದನಿಕೆ (< ಬಂದನಿಕೆ)]

**ಹಸುರುಮದ್ದು** (ನಾ). ಸ್ವದೇಶದ ಗಿಡಮೂಲಿಕೆಗಳಿಂದ ತಯಾರು ಮಾಡಿದ ಮದ್ದು; ನಾಟಿಔಷಧ; ಹಸುರೌಷಧ: "ಬೆರಕೆಯಿಲ್ಲದ ಮೂಲಔಷಧ ವಸ್ತು (ಜೈವ ಅಥವಾ ಅಜೈವ; ಮಿಶ್ರಣ ಮಾಡಿಯೋ ಮಾಡದೆಯೋ ಪ್ರಯೋಗ) ಗಂದಿಗೆ ವಸ್ತು; ಮೂಲಿಕೆ; ಬೇರು; ಹಸುರುಮದ್ದು" (Drug. ೯೦೩೩)

[ಹಸುರು (< ಪಸುರ್$_2$) + ಮದ್ದು (< ಮರ್ದು)]

**ಹಸುರುಮುರಿ, ಹಸಿರುಮುರಿ$_1$** (ಕ್ರಿ). ಹಸಿರಿನ ಸಮೃದ್ಧಿಯನ್ನು ಹೊಂದಿರು; ಸೊಂಪಾಗಿರು; ಹಸಿರೇರು; "ಹುಸುರು ಕಾಣು" (ಜಾನಕೋ. ೫೫). **ಹಸಿರುಮುರಿ$_1$:** ಹಸಿರುಮುರಿಯುವ ತೋಪಿನಲ್ಲಿ ಅವರ ಬಂಗಲೆ (ಪ್ರೇಮಾಶ್ರ. ೭೩). ಹಚ್ಚಗೆ ಹಸಿರುಮುರಿವ ಮನೋಹರ ನಿಕುಂಜವನದಿಂದ ಹೊರಬಿದ್ದು ತಾನು ಇದಾವ ಮರುಭೂಮಿಯಲ್ಲಿ ಒಮ್ಮಿಂದೊಮ್ಮೆ ಬಂದು ಬಿದ್ದಳೂ (ಇಪ್ಪತ. ೨೮೨).

[ಹಸುರು (< ಪಸುರ್$_2$) + ಮುರಿ$_1$]

**ಹಸುರುಮೇವು** (ನಾ). ಹಸಿರಾದ ಸೊಪ್ಪು, ದಂಟು ಮೊದಲಾದ ದನಗಳ ಆಹಾರ; ಹಸಿಮೇವು: ಹಸುರುಮೇವು ಇರುವ ಕಡೆ ದನ ಹೊಡೆದುಕೊಂಡು ಹೋಗು (ರೂಢಿ). [ಹಸುರು (< ಪಸುರ್$_2$) + ಮೇವು]

**ಹಸುರುವಾಣಿ, ಹಸರುವಾಣಿ, ಹಸರ್ವಾಣಿ, ಹಸಿರುವಾಣಿ** (ನಾ). ೧. ಸಸ್ಯಗಳಿಂದ ಉತ್ಪನ್ನವಾಗುವ ಸೊಪ್ಪು, ಕಾಯಿ, ತರಕಾರಿ, ಹಣ್ಣು ಮೊದಲಾದ (ವ್ಯಾಪಾರದ) ಸರಕು: ಕರಣಿಕರ ಮಾನ್ಯ ಹಸುರುವಾಣಿ ಸುಂಕ ಯೆಂಮ್ಮೆ ಸುಂಕ (ಸೌಇಇ. IV, ೨೫೫-೧೭; 1513); ತೆಂಗು ಹಲಸು ಎಲೆ ಬಳ್ಳಿ [ಹು]ಣಿಸೆ ನಿಂಬೆ ಮಾದಳ ಮೊದಲಾದ ಹ[ಸು]ರುವಾಣಿ (ಸೌಇಇ. IX - ii, ೫೫೫-೧೫; 1539); ಹಸುರುವಾಣಿ ಬೆಳೆದು ನೀರರೆಯಲಿಕ್ಕಿರುತ್ತದೆ (ಸ್ವಪ್ನಪೂ. ೭). ೨. ಹಸುರಾದ ಎಲೆ, ಗರಿ ಮೊದಲಾದುವು: ರಂಗರಾಯರ ಮನೆಯ ಮುಂದೆ ಹಸುರುವಾಣಿಯ ಚಪ್ಪರ . . . ನಗುತ್ತಿತ್ತು (ಮಗಮೂಂ. ೧೪೪). **ಹಸರುವಾಣಿ:** ೧. ಬ್ರಾಹ್ಮಣಜನ್ಮ ಬಂದ ಮೇಲೆ ಹಸರು ವಾಣಿ ತಿಂದೇ ಸಾಯಬೇಕು (ಮರಮು. ೧೦). **ಹಸರ್ವಾಣಿ:** ೧. 'ಹಸರ್ವಾಣಿ ಕೃಧಾಯ' ಪರಾ. **ಹಸಿರುವಾಣಿ:** ೨. ಮನೆಮನೆಗೂ ಹಸಿರುವಾಣಿಯ ಹಂದರ (ತುಂಗಭ. ೩೮).

[ಹಸುರು (< ಪಸುರ್$_2$) + ವಾಣಿ$_2$(< ಬಾಣಿಗ)]

**ಹಸುರುವಾಣಿಚಪ್ಪರ, ಹಸರುವಾಣಿಚಪ್ಪರ, ಹಸಿರುವಾಣಿಚಪ್ಪರ** (ನಾ). ಹಸುರಾಗಿರುವ ಮಾವಿನಸೊಪ್ಪು, ತೆಂಗಿನ ಗರಿ, ಬಾಳೆ ಮುಂತಾದುವು ಗಳಿಂದ ಅಲಂಕರಿಸಿದ ಚಪ್ಪರ,—ಹಂದರ: ಪಾಠಶಾಲೆಯ ಮುಂದುಗಡೆ ವಿಶಾಲವಾದ ಸೊಗಸಾದ ಹಸುರುವಾಣಿಚಪ್ಪರ (ರಂಗಕ. ೪೦). **ಹಸರುವಾಣಿಚಪ್ಪರ:** ಸೂರ್ಯಭಗವಂತನು ತೊಟ್ಟಿಯಲ್ಲಿ ಹಾಕಿದ್ದ ಹಸರುವಾಣಿಚಪ್ಪರದ ಕಂಡಿಗಳಿಂದ ಬಂದು ವಧೂವರರಿಗೆ ಆಶೀರ್ವಾದಮಾಡುತ್ತಿದ್ದನು (ಹುಟ್ಟಹ. ೧೦). **ಹಸಿರುವಾಣಿಚಪ್ಪರ:** ಜಮಾಬಂದಿ ನಡೆಯಬೇಕಾದ ದೇವಸ್ಥಾನದ ಮುಂದೆ ಹಸಿರುವಾಣಿಚಪ್ಪರ ಮತ್ತು ತಳಿರುತೋರಣ ಹೇಳತೀರದು (ನನ್ನೂರು. ೧೫೯). [ಹಸುರುವಾಣಿ + ಚಪ್ಪರ]

**ಹಸುರುಹಾವು** (ನಾ). ೧. ಹಸಿರು ಬಣ್ಣದ ಹಾವು: (ಕಿ). ೨. ಒಂದು ಬಗೆಯ ಔಷಧೀಸಸ್ಯ: ಬಜೆ . . . ಸುಜ್ಜಲಬೀಜ, ಹಸುರುಹಾವು ಇವು ಪ್ರತ್ಯೇಕ ಗ ೧ ತೂಕವಂ ಕಲ್ಕವಂ ಮಾಡಿ ಹಾಕಿ ಕರಪಾಕದಿಂದಿಳುಹಿ ಸರ್ವಾಂಗಲೇಪಂಗೈಯಲು ಸಂಧಿಗಸನ್ನಿ ಮುಂತಾದ ಸಕಲಸನ್ನಿಪಾತವೂ ಗುಣವಕ್ಕುಂ (ಸಕವ್ಯ. ೧೫೩).

[ಹಸುರು (< ಪಸುರ್$_2$) + ಹಾವು$_2$(< ಪಾವು$_1$)]

**ಹಸುರುಹುಲ್ಲು** 'ಪಸುರ್ವುಲ್' ನೋ.

**ಹಸುರೆಲೆ** 'ಪಸುರೆಲೆ' ನೋ.

**ಹಸುರೌಷಧ** (ನಾ). = ಹಸುರುಮದ್ದು: ಎಷ್ಟೋ ಖಾಯಿಲೆಗಳನ್ನು ಹಸುರೌಷಧ ಗಳಿಂದಲೇ ವಾಸಿಮಾಡಿಕೊಳ್ಳುತ್ತಾರೆ (ರೂಢಿ). [ಹಸುರು (< ಪಸುರ್$_2$) + ಔಷಧ]

**ಹಸುರ್ಗಟ್ಟು** 'ಪಸುರ್ಗಟ್ಟು' ನೋ.

**ಹಸುರ್ಗನ್ನೆ, ಹಸಿರುಗನ್ನಿ, ಹಸುರುಗನ್ನಿ** (ನಾ). ಒಂದು ಬಗೆಯ ಮರ: (ಕಿ). **ಹಸಿರುಗನ್ನಿ:** ಹಸಿರುಗನ್ನಿ . . . ಗೋಣಿ, ಬೆಟ್ಟದಸಿರುಗೋಣಿ (ಸಸ್ಯನಿ. ೪೭). **ಹಸುರುಗನ್ನಿ:** "ಹಸುರುಗನ್ನಿ, ಬೆಲಗ, ಬಿಳೀಬೀಟೆ, ಬೆಟ್ಟದ ಹಸುರುಗೋಣಿ" (ಮೈಔಗಿ. ೨೮-೫೪೭). 'ಹಸರಗಣ್ಣೆ', 'ಹಸ್ತಿಗನ್ನೆ' ಪರಾ. [?]

**ಹಸುರ್ಗರಡಿಗೆ** (ನಾ). ಹಸಿರುಬಣ್ಣದ ಕರಂಡಕ,—ಡಬ್ಬಿ: ನಸಿದ ಕಾಮವ ಪೆರ್ಚಿಸುವ ದಿವ್ಯ ಮಡಿಕೆಯ ಹಸುರ್ಗರಡಿಗೆಯೊಳು ತುಂಬಿ ರಸೆಯೊಳು ಮೆರೆಸಲು ಕಟ್ಟಿದಂದದಲಿ ಕಣ್ಗೆಸೆದುವು ಪೂಗವೃಕ್ಷಗಳು (ಮೋಹತ. ೨೪-೪೩).

[ಹಸುರ್$_0$ (< ಪಸುರ್$_2$) + ಕರಡಿಗೆ (< ಕರಂಡಿಗೆ)]

**ಹಸುರ್ಗಾಳು** 'ಪಸುರ್ಗಾಳ್' ನೋ.

**ಹಸುರ್ಗೊನೆ** (ನಾ). ಹಸಿರುಹುಲ್ಲಿನ ತುದಿ: ಚೆಲ್ವ ಹಸುರ್ಗೊನೆಯಲ್ಲಿ ನಲ್ಲ ಹೊಂದೆನೆಯಲ್ಲಿ ಚೆಲ್ಲಿದವು ಇಬ್ಬನಿಯ ಮುತ್ತುಗಳಿವಿಲ್ಲಿ (ವಿಜೀಗೀ. ೨೮-೧೭).

[ಹಸುರ್$_0$ (< ಪಸುರ್$_2$) + ಗೊನೆ$_2$(< ಕೊನೆ$_2$)]

**ಹಸುರ್ನೆಲ** 'ಪಸುರ್ನೆಲ' ನೋ.

**ಹಸುರ್ಬಯಲು** (ನಾ). ಹಸುರಿನಿಂದ ತುಂಬಿರುವ ಬಯಲು; ಹಚ್ಚಗಿರುವ ಮೈದಾನ: ನನ್ನಳಿಯಾ ಹಸುರ್ಬಯಲೀ ಎಳಗರುಕೆಯ ಹಾಸಿನಲಿ ಚಲಿಸದವೋಲೆ ಚಲಿಸುತ್ತಿವೆ ಮೇಯುತ್ತಿಹ ಗೋವು (ಪಕ್ಷಿಕಾ. ೫೨-೮).

[ಹಸುರ್$_0$ (< ಪಸುರ್$_2$) + ಬಯಲು (< ವಯಲ್)]

**ಹಸುವು** 'ಪಸು$_4$' ನೋ.

**ಹಸುವೆ** 'ಪಸುಂಬೆ' ನೋ.

**ಹಸುಹರಣ** (ನಾ). ಎಳೆಯ ಪ್ರಾಣ; ಕೋಮಲವಾದ ಜೀವ: ನೀವೇ ಬಲ, ನೀವೇ ಹೊಲ, ನೀವೇ ಚಲ ಕಲಿಸಿರವ್ವ ಕಲಿಸಿರಿ ಹಸುಹರಣವ ಬಲಿಸಿರಿ (ಅರಳು. ೨೭-೧೪). [ಹಸು$_1$ (< ಪಸು$_3$) + ಹರಣ$_1$ (< ಪರಣ$_2$)]

**ಹಸುಹುಡುಗ** (ನಾ). ಚಿಕ್ಕಪ್ರಾಯದ ಬಾಲಕ: ಅಸುರನ ತೋಳ್ಗಳ ತಚಿದಿಕ್ಕಿ ಸಿಕ್ಕಿದ ಹಸುಹುಡುಗನ ತಂದು ಕುಡುವೆ (ಮೋಹತ. ೩೭-೨೪).

[ಹಸು$_1$ (< ಪಸು$_3$) + ಹುಡುಗ]

**ಹಸುಳ** 'ಪಸುಳ' ನೋ.

**ಹಸುಳೆ** 'ಪಸುಳೆ' ನೋ.

**ಹಸುಳೆಗಾಯ್** (ನಾ). ಎಳೆಯ ಕಾಯಿ; ಮಿಡಿ: ಜಗಿವ ಹಾಸದಿ ಜನಿಸಿದಾ ಹಸುಳೆಗಾಯ್ ವಿರುಜವ್ವನದ ಸೊಂಪಿನೊಳು ಮಾಗಿ, ಫಲಮಾಗಿ, ಹರುಷದಿಂ ಬಿರಿದುಬ್ಬಿ ತೋರುತ್ತಿಪುದು ಮೈಗೊಂಡ ಬಸಿರ ಸಂತಸವ (ವಿಸೀಗೀ. ೨-೮). [ಹಸುಳೆ (< ಪಸುಳೆ) + ಕಾಯ್$_4$]

**ಹಸುಳೆತನ** 'ಪಸುಳೆತನ' ನೋ.

**ಹಸುಳೆದುಂಬಿ** (ನಾ). ಮರಿದುಂಬಿ: ಕೋಮಲೆಯ ಮಿಸುನಿದಾವರೆ ಮೊಗ್ಗೆ ಮೊಲೆಯೊಳವನ ದಿಟ್ಟಿ ಹಸುಳೆದುಂಬಿಯೋಲೆಱಗಿದುವು (ಶ್ರೀಪಾಲ. ೪-೯೧). [ಹಸುಳೆ (< ಪಸುಳೆ) + ತುಂಬಿ$_1$]

**ಹಸುಳೆಬಿಸಿಲು** 'ಪಸುಳೆವಿಸಿಲ್' ನೋ.

**ಹಸುಳೆವೆಱೆ** (ನಾ). ಶುಕ್ಲಪಕ್ಷದ ಆರಂಭದ ಚಂದ್ರ; ಬಾಲಚಂದ್ರ: ನಿಡುಮುಡಿಯೊಳು ರಂಜಿಸುವ ಹಸುಳೆವೆಱೆಯಂತೆ ವಿರಾಜಿಪ ಬೆಳರ್ಗೇದಗೆಯೆಸಳಿಂ . . . ವಸುಧಾಧಿಪಸತಿಯಂದಿನ ದುರ್ಗಾಂಬಿಕೆಯಂತೊಪ್ಪಿದಳು (ಜಯಕಾ. ೨-೧೧). [ಹಸುಳೆ (< ಪಸುಳೆ) + ಪೆಱೆ]

**ಹಸೆ** 'ಪಸೆ$_2$' ನೋ.

**ಹಸೆಗಲ್ಲು** (ನಾ). ವಧೂವರರು ಕುಳಿತುಕೊಳ್ಳುವ ಪೀಠ; ಹಸೆಮಣೆ: ಆಕಾಶವೇನುಂಟು ಚಪ್ಪರವೆ ಹಾಕಿ ಭೂಮಿ ಅಡ್ಡಗಲಕೆ ಹಸೆಗಲ್ಲ ಬರೆದು ಗೌರಿಗು ಈಶ್ವರಗು ಲಗ್ನವ ಮಾಡಿ (ನಾಪದ. ೧೧೩). [ಹಸೆ (< ಪಸೆ$_2$) + ಕಲ್ಲು (< ಕಲ್$_3$)]

**ಹಸೆಗೆ** 'ಪಸುಗೆ' ನೋ.

**ಹಸೆಜಗಲಿ** (ನಾ). ಹಸೆಮಣೆಯನ್ನು ಇಡುವುದಕ್ಕಾಗಿ ನಿರ್ಮಿಸಿದ ವೇದಿಕೆ: (೩). 'ಪಸೆಜಗತಿ' ಪರಾ. [ಹಸೆ (< ಪಸೆ$_2$) + ಜಗಲಿ]

**ಹಸೆದಾನ** (ನಾ). ಭಾರಿಯಾದ ದಾನ; ಅತಿಶಯವಾದ ದಾನ (?): ಹಸುವಿಂಗೆ ಮೇವು ಶಿಶುವಿಂಗೆ ನವನೀತಮಂ ಹಸಿದವಂಗನ್ನೋದಕಂ ದಾನ ಬೇಳ್ಪಂಗೆ ಹಸೆದಾನ ವಧುವಿಲ್ಲದವರ್ಗೆ ವಿವಾಹ ವಿಟರಾದವರ್ಗೞಂಗಸುಖವ ಬೆಸಗೊಂಬುದಕ್ಕಿದೇ ಕುಱುಹು (ಹಚಕಾ. ೪-೪೧), ''ಕನ್ಯಾದಾನ'' (ಪ್ರಭಣ್ಣ). [ಹಸ$_1$ + ದಾನ]

**ಹಸೆನಿಲ್** 'ಪಸೆನಿಲ್' ನೋ.

**ಹಸೆಮಣೆ** 'ಪಸೆವಣೆ' ನೋ.

**ಹಸೆಯಿ** (ಕ್ರಿ). (ಆಲಂ) ಮಂಗಳವನ್ನು ಕೋರು; ಶುಭವನ್ನು ಹಾರೈಸು: ತಾಳಮದ್ದಳೆ ಗೀತನರ್ತನಗಾತಿಯ ಮೇಳ ವಿದ್ವತ್ಸಭೆ ಸುರರ ಜಾಲಕ್ಕೆ ಹಸೆಯಿತ್ತು ಬೀಳ್ಕೊಟ್ಟು ಚವಲ ಬೊಂಬಾಳವನಿಳಿದ ಮಾಧವನು (ಮೋಹತ. ೪೨-೩೭). [ಹಸೆ (< ಪಸೆ$_2$) + ಈ$_2$]

**ಹಸೆವಣೆ** 'ಪಸೆವಣೆ' ನೋ.

**ಹಸೆಹಾಡು** (ನಾ). ಹಸೆಗೆ ಕರೆಯುವ ಹಾಡು; ''ಸೋಬಾನ ಹಾಡು'': (ಜಾನಕೋ. ೫೫). [ಹಸೆ (< ಪಸೆ$_2$) + ಹಾಡು$_2$ (< ಪಾಡು$_2$)]

**ಹಸೆಹಿಡಿ** 'ಪಸೆವಿಡಿ' ನೋ.

**ಹಸ್ತ** (ನಾ). ೧. ಕೈ; ಕರ; ಪಾಣಿ: ಬ್ರಹ್ಮಂಗೆ ವಾಕ್ ಪರುಷ . . . ರುದ್ರಂಗೆ ಹಸ್ತ ಪರುಷ ನಮ್ಮ ಕೂಡಲಸಂಗನ ಶರಣಂಗೆ ಪಾದವೇ ಪರುಷ (ಬಸವ. ೮೭೫); ಹಸ್ತವ ಮುಗಿದು ಕಾಂತನ ಕರ್ಣಯುಗಳಕೆ ವಿಸ್ತರಿಸಿದಳು ಬಿನ್ನಹವ (ಮೋಹತ. ೬-೬). ೨. ಮುಂಗೈ: ''ಸಪ್ರಕೋಷ್ಠಂ ಕರಾಗ್ರಮಂತದು ಹಸ್ತಂ'' (ವಸ್ತುಕೋ. ೬೯-೧೨). ೩. ಮೊಳಕೈಯಿಂದ ನಡುಬೆರಳ ತುದಿವರೆಗಿನ ಅಳತೆ; ಮೊಳ: ಗೇಣುಮದು ನಾಲ್ಕಾಗಳ್ ಭುವನದೊಳೆ ಹಸ್ತಮಕ್ಕುಂ (ವ್ಯವಹಾ. ಅನುಬಂಧ. II, ೫೦-೨೨). ೪. ಆನೆಯ ಸೊಂಡಿಲು: ಆ ಮಹಾಮದೇಭಂ . . . ಆನೆವಾಂಗಿನ ವೀರರೆಲ್ಲರುಮಂ ಪನ್ನೆರಡುಂ ಹಸ್ತಪ್ರಹಾರದೊಳಂ ಪದಿನೆಂಟುಂ ಕೋಡೇಱಿನೊಳಂ ಏಟುಂ ತೆಱದ ತಾಳವಟ್ಟದ ಪೊಯ್ಲೊಳಂ ನಾಲ್ವತ್ತು ನಾಲ್ಕು ಗಾತ್ರಾಪರಪಾತದೊಳಂ ದೆಸೆವಲಿಗೆಯ್ದು (ಚಂದ್ರಪ್ರ. ೯-೧೦೦ ವ). ೫. (ಕೂದಲಿನ)ಮೊತ್ತ; ರಾಶಿ: ''ಹಸ್ತಃ, ಪಕ್ಷಃ, ಪಾಶಃ— ಈ ೩ ಹಿಮ್ಮುಡಿ'' (ಹಲಾಯು. ೬೭-೩೭೭). ೧, ೫: ಕುರುಕುಲಜೀವಾಕರ್ಷಣಪರಿಣತಮಿದು ಕಾಳಹಸ್ತಮಲ್ಲದೆ ಪರಮೇಶ್ವರಿ ಕೇಶಹಸ್ತಮಕ್ಕುಮೆ (ಗದಾಯು. ೧-೬೭). 'ಕೇಶಹಸ್ತ' ಪರಾ. ೬. ಒಬ್ಬ ರಾಕ್ಷಸನ ಹೆಸರು: ಆರಿಂ ಮುನ್ನಂ ಸೆರಗಂ ಪಾರದೆ ಹಸ್ತ ಪ್ರಹಸ್ತರುಱದೊಡ್ಡಿರ್ದರ್ (ಪಂಪರಾಮಾ. ೧೩-೧೨). ೭. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿಮೂರನೆಯ ನಕ್ಷತ್ರ ಮತ್ತು ಆ ನಕ್ಷತ್ರದಲ್ಲಿ ಆಗುವ ಮಳೆ; ℙ ಇದು ಹಸ್ತದ ಆಕೃತಿಯಲ್ಲಿ ಐದು ನಕ್ಷತ್ರಗಳಿಂದ ಕೂಡಿದೆ: ಅಶ್ವಿನಿ ಭರಣಿ . . . ಹಸ್ತ . . . ರೇವತಿಯೆಂಬವಿಪ್ಪತ್ತೇಳು ನಕ್ಷತ್ರಂಗಳುಂ ತಾರೆಗಳ ಮೊತ್ತವಿಪ್ಪತ್ತೇಳರೊಳಗೆಯು ಹಸ್ತ ಮೃಗಶಿರ ಸ್ವಾತಿ . . . ಶುಭವು (ಗಗಶಾ. ೪-೬೮). ೧, ೭: ಉರ್ವರೆ ತಣಿಯಲ್ ಮುದದಿಂ ಪೊಂಗಱೆವುದು ಚಟ್ಟಯನ ಹಸ್ತವಪ್ರತಿಹಸ್ತಂ (ಎಕ. V, ಬೇಲೂರು. ೧೯೩; 1160). ೮. [ನಾಟ್ಯ] ಆಂಗಿಕಾಭಿನಯದಲ್ಲಿ ಕೈಗಳ ವಿನ್ಯಾಸ: ಹಸ್ತ ಕೈಗಳ ಸಂಕೇತ; ಇದು ಎರಡು ವಿಧವಾದುದು, ಒಂದು ಸಂಯುಕ್ತಹಸ್ತ (ಎರಡು ಕೈಗಳು) ಇನ್ನೊಂದು ಅಸಂಯುಕ್ತ (ಒಂಟಿ) ಜೊತೆಗೆ ನೃತ್ತಹಸ್ತಗಳಿವೆ (ಭಾರದ. ೫೫೩). ೯. (ಆಲಂ) ಐದುನೂರು ರೂಪಾಯಿ: ನಿನಗೆ ಎಂಟು ಹಸ್ತ ಲಾಭವಾಗುವಾಗ ನಂಗೆ ಒಂದು ಹಸ್ತವೋ (ನಟಸಾ. ೨). [ಸಂ.]

**ಹಸ್ತಕ** (ನಾ). ೧. ಕೈಯ ವಿನ್ಯಾಸ. ೨. ಒಂದು ಅಳತೆಯ ಪ್ರಮಾಣ. ೩. ತುರುಬು; ಕೇಶಪಾಶ: ''ಹಸ್ತಕಂ ತುಱುಬು'' (ಮಂಗರಾ. ೯೪-೬). ೪. (ಆಲಂ) ವಶವರ್ತಿ; ಆಜ್ಞಾನುಸಾರವಾಗಿ ಕೆಲಸ ಮಾಡುವವನು: ಈ ಕಾಲದಿಂದ ಮುಂದೆ ಬಾಜಿರಾಯನು ಇಂಗ್ಲಿಷರ ಹಸ್ತಕನಾದನು (ಕಭಾಗ. ೩೭೧); ದಿಲ್ಲಿಯ ಬಾದಶಹನ ಹಸ್ತಕನಾದ ಒಬ್ಬ ಸರದಾರನು ಬೆಂಗಳೂರಿಗೆ ಹೋಗಿ ಅದನ್ನು ದೇವ ರಾಜನಿಗೆ . . . ಮಾರಿದನು (ಮುಂಬಯಿ. ೪-೮೨). [ಸಂ.]

**ಹಸ್ತಕಂಕಣ** (ನಾ). ಕೈಗೆ ಧರಿಸುವ ಬಳೆ,— ಕಡಗ: ಹಸ್ತಕಂಕಣ, ಹಿಂಡುಗರಿಕಣ (ಶಮದ. ೨೯೮ ಪ್ರಯೋ). [ಸಂ.]

**ಹಸ್ತಕಟಕ** (ನಾ). = ಹಸ್ತಕಂಕಣ: ವೀರಾಂಗದಂಗಳೆಂಬ ಹಸ್ತಕಟಕಂಗಳುಂ (ಆಜಿಪು. ೧೦-೧ ವ). [ಸಂ.]

**ಹಸ್ತಕಟ್ಟು** 'ಹಸ್ತಗಟ್ಟು' ನೋ.

**ಹಸ್ತಕಡಗ** (ನಾ). = ಹಸ್ತಕಂಕಣ: ಕಾಲ ಕಡೆಹದ ಪೆಂಡೆಯಂಗಳ ತೋಳ ಮಣಿಗಳ ಹಸ್ತಕಡಗದ ನೀಲ ಮುತ್ತಿನ ತೊಂಬೆಗಡುಕಿನ ಕೊರಳ ದಾರಗಳ . . . ಆಭರಣಂಗಳಂ ಧರಿಸಿ (ಬಸಪು. ೭೦-೨೭); ಒಪ್ಪವಿತ್ತ ಹಸ್ತಕಡಗ ಆಶಾಪಾಶವೆರಡಿತ್ತು (ಕನಕ. ೧೭೦-೨); ಕೀಲ ಕಡಗ ಹಸ್ತಕಡಗ . . . ಪಣೆಗಡಗದ ಸೊಬಗಿನ ನೀಲಕುಂತಳೆಯರೊಪ್ಪಿದರು (ಕಂಸವಿ. ೨೪-೩೯). [ಹಸ್ತ + ಕಡಗ$_1$]

**ಹಸ್ತಕು** (ನಾ). ಅಂಕೆ; ವಶ; ಅಧೀನ: ಕೌಲುನಂಬಿಗೆ ಕೊಟ್ಟು ನಮ್ಮ ಹಸ್ತಕಿನಲ್ಲಿ ಬಂದುಬಸ್ತು ಮಾಡಿ ಮಡಗುವದು (ರಾಜೇಂದ್ರ. ೯೬). [< ಹಸ್ತಕ]

**ಹಸ್ತಕೌಶಲ** (ನಾ). ಕೈಚಳಕ; ಕೈಕೆಲಸದ ನೈಪುಣ್ಯ: ಹಸ್ತಕೌಶಲಕಲಿತಚಿತ್ರಕಲಾಪ ಪತ್ರಚ್ಛೇದ್ಯಾದಿ ಸಮನ್ವಿತಮಪ್ಪ ಶಿಲ್ಪಮುಮಂ ಪಡೆದು (ಆದಿಪು. ೮-೭೪ ವ). [ಸಂ.]

**ಹಸ್ತಕ್ಷೇಪ** (ನಾ). (ಆಲಂ) ಇನ್ನೊಬ್ಬರ ಕಾರ್ಯದಲ್ಲಿ ನಡುವೆ ಕೈ ಹಾಕುವಿಕೆ,—ಮಧ್ಯೆ ಪ್ರವೇಶಿಸುವಿಕೆ: ರಾಜ್ಯಕಾರಭಾರದಲ್ಲಿ ನೂರಳ ಈ ಅತಿ ಹಸ್ತಕ್ಷೇಪವನ್ನು ಅವನು ಮನ್ನಿಸುತ್ತಿರಲಿಲ್ಲ (ನೂರಜ. ೪೨); ಕಿರಣಲೇಖ ಖಂಡಿತ ಬಲ್ಲಳು ನೀಲಕಂಠನ ಕೆಲಸದಲ್ಲಿ ಹಸ್ತಕ್ಷೇಪ ಮಾಡಲು ತನ್ನ ನಲ್ಲನಿಗೆ ಯಾವ ಅಧಿಕಾರವೂ ಇಲ್ಲವೆಂದು (ಇಪ್ಪಕ. ೪೦೬). [ಸಂ.]

**ಹಸ್ತಗಟ್ಟು, ಹಸ್ತಕಟ್ಟು** (ನಾ). = ಹಸ್ತಕಂಕಣ: ಹಸ್ತಗಟ್ಟುಗಳ್ ಹೊಳೆಯುವ ಹಣ್ಣಿನ ಮಿತ್ರಯ ಕಂಡು ಹರ ಮರುಳಾದ (ವಾದಿಕೀ. ೪೬-೧೩). **ಹಸ್ತಕಟ್ಟು**: ಎಪ್ಪತ್ತೆರಡು ಸಾವಿರ ಸೂತ್ರದ ಹಸ್ತಕಟ್ಟು ಎರಡಿತ್ತು (ಕನಕ. ೧೨೦-೨). [ಹಸ್ತ + ಕಟ್ಟು$_1$]

**ಹಸ್ತಗಡಿ** (ನಾ). ಕತ್ತರಿಸಿ ಹೋದ ಕೈ: ಕಂಧರಗಡಿ ಬಾಹುಗಡಿ ಹಸ್ತಗಡಿ ನೇರಂಧ್ರದ ನಡುತೊಡೆಗಡಿಯ ವೃಂದಾರಕವಿರೋಧಿಗಳು ಬಿದ್ದರು ಕಾಮನಂದನ ಬಾಣಗಳಿಂದೆ (ಮೋಹತ. ೩೫-೨೨). [ಹಸ್ತ + ಕಡಿ$_1$]

**ಹಸ್ತಗತ** (ಗು). ೧. ಕೈಗೆಬಂದ; ಕೈವಶವಾದ ೨. ದೊರಕಿಸಿದ; ಗಳಿಸಿಕೊಂಡ. (ನಾ). ೩. ಕೈವಶ; ಸ್ವಾಧೀನ: ಆ ಪೈಕಿ ೧೫ ವಂಟೆ ಮೇಲಣ ಅಕಬರೀಮೊಹರಾ ಹೇರುಗಳನ್ನು ಹಸ್ತಗತಾ ಮಾಡಿಕೊಂಡು (ಹೈದರ. ೨೬); ಮಯೂರಶರ್ಮನು ಪಶ್ಚಿಮಸಮುದ್ರದಿಂದ ಶ್ರೀಶೈಲದವರೆಗಿದ್ದ ದೇಶವನ್ನು ಪಲ್ಲವರಿಂದ ತೆಗೆದುಕೊಂಡಾಗ ಈ ಭಾಗವು ಅವನ ಹಸ್ತಗತವಾಗಿರಬೇಕು (ಕರ್ನಾಅ. ೯). [ಸಂ.]

**ಹಸ್ತಗುಣ** (ನಾ). (ಆಲಂ) ಹಿಡಿದ ಕೆಲಸವನ್ನು ಸಫಲಗೊಳಿಸುವ ಕೈಯ ಮಹತ್ತ್ವ, — ಪ್ರಭಾವ; ಕೈಗುಣ: ನನ್ನ ಹಸ್ತಗುಣವನ್ನು ಪರೀಕ್ಷೆ ಮಾಡಿ ನೋಡಿ. ನಿಮ್ಮ ತಲೆಶೂಲೆ ಗುಣವಾಗುವವರೆಗೂ ನಾನು ಇಲ್ಲಿಂದ ಕದಲುವುದಿಲ್ಲ (ಹತ್ತುಮ. ೧೦೫); ಎಲ್ಲಾರಿಗೂ ಗೊತ್ತಾಗಿರಬೇಕು ನಮ್ಮ ಹಸ್ತಗುಣ (ನಡುಮ. ೩೫). [ಸಂ.]

**ಹಸ್ತಚ್ಛಟೆ** (ನಾ). ೧. ಹಸ್ತಗಳ ಸಮೂಹ. ೨. (ಆಲಂ) ಕೈಗಳ ಸಮೂಹದಿಂದ ಹೊಡೆಯುವ ಏಟು; ಹಸ್ತತಾಡನೆ: ಹಸ್ತಚ್ಛಟಾಜರ್ಝರಮಧ್ಯಂ ಪೆಂಡವಾಸಂ ಗಗನವಿವರಮಂ ರೋದನೋನ್ನಾದದಿಂದಂ ಭರಿತಂ ಮಾಳ್ಪಿಂತು ವೈಕುರ್ವಣಪರಿಣತಿಯಂ ಬೀಱಿದಂ ರತ್ನಚೂಲಂ (ಪಂರಾಮಾ. ೧೬-೪೮). [ಸಂ. ಹಸ್ತಚ್ಛಟಾ]

**ಹಸ್ತತಲ, ಹಸ್ತತಳ** (ನಾ). ಅಂಗೈ; ಕರತಳ: 'ಹಸ್ತತಲಾಮಲಕ' ಪರಾ. **ಹಸ್ತತಳ:** ಆಯತವಾಮಹಸ್ತತಳಲಕ್ಷಣವಜ್ರ[ವಿ]ಚೂರ್ಣಿತಾದ್ರಿವಜ್ರಾಯುಧನೆಂಬ ದೊಡ್ಡಿವೆಸರಂ ಕೊಳದೊಳ್ ತನಗರ್ಧಘೋಷಮಾಮ್ನಾಯಮನೀಯೆ (ಶಾಂತಿಪು. ೮-೫೬). [ಸಂ.]

**ಹಸ್ತತಲಾಮಲಕ** (ನಾ). ಅಂಗೈಯೊಳಗಿನ ನೆಲ್ಲಿಕಾಯಿ; ಕರತಲಾಮಲಕ: ವಿಷ್ಟಪಮೊರ್ಮೆಯುಂ ತಮಗೆ ಹಸ್ತತಲಾಮಲಕಂಬೊಲೆಯ್ದೆ (ಚಂದ್ರಪ್ರ. ೩-೬೮). [ಸಂ.]

**ಹಸ್ತತಳ** 'ಹಸ್ತತಲ' ನೋ.

**ಹಸ್ತನ್ಯಸ್ತ** (ನಾ). ಕೈಗೆ ಒಪ್ಪಿಸಿದುದು; ಕೈವಶಮಾಡಿದುದು: ಅನೇಕ ಕ್ಷತ್ರಿಯ ಪುತ್ರರ ಕುಲಧನಂಗಳಂ ಕೈಕೊಂಡು ಕೋಶಾಧ್ಯಕ್ಷ ಹಸ್ತನ್ಯಸ್ತಂಗಳ್ಮಾಡಿ (ಆದಿಪು. ೧೩-೮೦ ವ). [ಸಂ.]

**ಹಸ್ತಪತ್ರ** (ನಾ). ಪ್ರಚಾರಕ್ಕಾಗಿ ಕೈಯಿಂದ ಹಂಚುವ, ಅಚ್ಚುಮಾಡಿದ ಚಿಕ್ಕ ಪ್ರಕಟಣೆ; ಕರಪತ್ರ: ಆ ಹಸ್ತಪತ್ರದಲ್ಲಿ ಕೆಲವು ಪ್ರಾಣಿಗಳ ಚಿತ್ರಗಳು ಇದ್ದವು (ಕಪಪು. ೨-೨೬); ಇವೊತ್ತು ನಾವು ಕೈ ನೀಡಿದರೆ ಸಾಕು; ಹಸ್ತಪತ್ರವನ್ನು ತಂದು ಕೊಟ್ಟು ಹೋಗುತ್ತಾರೆ (ಗಾಳಿಪ. ೬೩). [ಸಂ.]

**ಹಸ್ತಪತ್ರಿಕೆ** (ನಾ). ೧. = ಹಸ್ತಪತ್ರ: ನನ್ನ ಬಾಲ್ಯದ ಬಂಧುರತೆಯನ್ನೆಲ್ಲ ಮರಳಿ ಕರೆತರುವ ಶಕ್ತಿ ಹಸ್ತಪತ್ರಿಕೆಗೆ ಉಂಟು (ಗಾಳಿಪ. ೬೪). ೨. ಕೈಬರೆಹದ ಪ್ರತಿ; ಹಸ್ತಪ್ರತಿ: ಈ ಹಸ್ತಪತ್ರಿಕೆಯಲ್ಲಿರುವ ಮುದ್ರಿತವಾಗಿಯೂ ಇರುವ ಅನೇಕ ಕೃತಿಗಳನ್ನು ಆ ಸಂಸ್ಥೆಯ ಪುಸ್ತಕಭಾಂಡಾರದಲ್ಲಿ ಶೇಖರಿಸಲಾಗಿದೆ (ಯಕ್ಷಗಾ. ೧೪). [ಸಂ. ಹಸ್ತಪತ್ರಿಕಾ]

**ಹಸ್ತಪರೀಕ್ಷೆ** (ನಾ). ಅಂಗೈಯಲ್ಲಿರುವ ರೇಖೆಗಳನ್ನು ಸಾಮುದ್ರಿಕದೃಷ್ಟಿಯಿಂದ ಪರಿಶೀಲಿಸುವುದು; ಕೈ ನೋಡುವುದು: (ಕಿ). [ಸಂ. ಹಸ್ತಪರೀಕ್ಷಾ]

**ಹಸ್ತಪರುಷ** (ನಾ). ಕೈಯಿಂದ ಮುಟ್ಟಿ ಶುದ್ಧಗೊಳಿಸುವ ಸಿದ್ಧಿ: ಪರಿಪಾಕವಾದ ಸಕಲಪದಾರ್ಥಗಳ ಹಸ್ತಪರುಷದಿಂದೆ ಶುದ್ಧಸಂಸ್ಕಾರವ ಮಾಡಿದಲ್ಲದೆ ಲಿಂಗಕ್ಕೆ ಅರ್ಪಿಸಲಾಗದು (ಅಖಂಡೇ. ೧೬೨-೨೪); ಮನಪರುಷ, ವಾಕ್‌ಪರುಷ, ಹಸ್ತಪರುಷ, ದೃಷ್ಟಿಪರುಷ, ಭಾವಪರುಷಂಗಳು ಎಂಬ ಪಂಚಪರುಷಂಗಳನ್ನು ಜಗದೀಶ್ವರನು ಕೊಟ್ಟಿರುವನಾಗಿ (ಕೃಷಿಪ್ರ. ೨೭೫). 'ಪಂಚಪರುಷ' ಪರಾ.
[ಹಸ್ತ + ಪರುಷ₁ (< ಪರುಸ)]

**ಹಸ್ತಪಾವಡ** 'ಹಸ್ತಪಾವುಡ' ನೋ.

**ಹಸ್ತಪಾವುಡ, ಹಸ್ತಪಾವಡ** (ನಾ). [ವೀಶೈ] ಅಭಿಷೇಕ ಮಾಡಿದ ಬಳಿಕ ಇಷ್ಟಲಿಂಗವನ್ನು ಒರಸುವುದಕ್ಕಾಗಿ ಪ್ರತ್ಯೇಕವಾಗಿಟ್ಟಿರುವ ಮಡಿಬಟ್ಟೆ: ವೀರಶೈವಳೆ ಹಸ್ತಪಾವುಡಪಿಲ್ಲದೆ ಊರಿಂದೂರಿಗೆ ಬಂದಿ ಹ್ಯಾಂಗ (ಲೋಕಗೀ. ೬೭-೮). **ಹಸ್ತಪಾವಡ:** ಕರದ ಪುಸ್ತಕ ನಾರಿವಾಳ ತೋಳೂಳು ಕಟ್ಟಿದುರು ಭಸಿತದಾಧಾರ ಹಸ್ತಪಾವಡ ನುಡಿದ ಹರಮಂತ್ರಯೆಡಬಲಂಗಳ ನೋಡ ಶಂಕಿಸಂ ಹಿರಿದು ಕಿಱಿದಿವರೆನ್ನನು (ಗುರುಬಾ. ೩-೫೮). [ಹಸ್ತ + ಪಾವುಡ₁]

**ಹಸ್ತಪ್ರತಿ** (ನಾ). ೧. ಗ್ರಂಥವನ್ನು ಓಲೆ ಅಥವಾ ಕಾಗದ ಮುಂತಾದುವುಗಳಲ್ಲಿ ಬರೆದ ಕೈಬರೆಹದ ಪ್ರತಿ: ಕೆಲವು ಕಾವ್ಯಗಳಿಗೆ ಅನೇಕ ಹಸ್ತಪ್ರತಿಗಳು ದೊರತಿಲ್ಲ (ಕನ್ನಸಂ. ೬೨). ೨. ಮುದ್ರಣವಾಗದ ಯಾವುದೇ ಕೈಬರಹದ ಪ್ರತಿ; ಅಚ್ಚಾಗದ ಮೊದಲಿನ ಪ್ರತಿ: (ಕಿ). [ಸಂ.]

**ಹಸ್ತಪ್ರತಿಶಾಸ್ತ್ರ** (ನಾ). ಹಸ್ತಪ್ರತಿಯ ಸಿದ್ಧತೆಗೆ ಸಂಬಂಧಿಸಿದ ಶಾಸ್ತ್ರ. [ಸಂ.]

**ಹಸ್ತಬಿಂಬ** (ನಾ). ಮೈಗೆ ಸುಗಂಧದ್ರವ್ಯಗಳನ್ನು ಲೇಪಿಸುವುದು; ಸುಗಂಧಾನುಲೇಪನ: "ಸ್ಥಾಸಕಂ, ಹಸ್ತಬಿಂಬಂ-ಈ ೨ ಚಟ್ಟೆಱಿವುದು" (ಹಲಾಯು. ೮೯-೩೮೬). [ಸಂ.]

**ಹಸ್ತಭೂಷಣ** (ನಾ). ಕೈಗೆ ತೊಡುವ ಆಭರಣ, —ಕಡಗ: "ಕೌಸ್ತುಭಂ ಕಣ್ಣುಸೀರ್ ಭ್ರಮಣಂ ಮೇಖಲೆ ಹಸ್ತಭೂಷಣಮಿವಿಂತುಂ ಕಂಕಣಾಖ್ಯಾನಂ" (ನಾನಾರ. ೪೬). [ಸಂ.]

**ಹಸ್ತಮರ್ದನ** (ನಾ). ಕೈಯನ್ನು ಹಿಸುಕುವುದು: ಹಸ್ತಿನಿಗೆ ಜಂಘಗಳು ಚಿತ್ತಿನಿಗೆ ಹರಡುಗಳು ಹಸ್ತಮರ್ದನವು ಶಂಖಿನಿಗೆ ಪದ್ಮಿನಿಗೆ ಮಸ್ತಕವು ನೋಡ (ಸರ್ವಜ್ಞ. ೧೬೩೩) [ಸಂ.]

**ಹಸ್ತಮಸ್ತಕಸಂಯೋಗ** (ನಾ). [ವೀಶೈ] ಇಷ್ಟಲಿಂಗವನ್ನು ಗುರುವು ಶಿಷ್ಯನಿಗೆ ದಯಪಾಲಿಸುವ ಒಂದು ವಿಧಾನ: ಇಷ್ಟಲಿಂಗವ ದೃಷ್ಟದ ತನುವಿಂಗೆ ಪ್ರಮಾಣಿಸುವಲ್ಲಿ ಉತ್ಪತ್ತಿ ಸ್ಥಿತಿಲಯಂಗಳ ಹುಟ್ಟುಗೆಡಿಸಿ ನಿತ್ಯಾನಿತ್ಯವನೀಕ್ಷಿಸಿ ತೋಱಿ ಹಸ್ತಮಸ್ತಕಸಂಯೋಗವ ಮಾಡಬೇಕು (ಮೋಳಿಮಾ. ೧೪೪-೫೫೦). [ಸಂ.]

**ಹಸ್ತಮುದ್ರಿಕೆ** (ನಾ). (ಅರಸ ಮುಂತಾದವರ) ಹೆಸರು ಅಥವಾ ಲಾಂಛನವನ್ನು ಕೆತ್ತಿರುವ ಉಂಗುರ; ಮುದ್ರೆಯುಂಗುರ: ಅವಳ ಕೈಯಲ್ಲಿ ತನ್ನ ಗುರುತಿನ ಹಸ್ತಮುದ್ರಿಕೆ ಅಥವಾ ಪಂಚಾಮೊಹರನ್ನು ಕೊಟ್ಟು . . . ಹೇಳಿ ಕಳುಹಿಸಿದಳು (ಬಂಕಿಮ. ೨೧೮). [ಸಂ. ಹಸ್ತಮುದ್ರಿಕಾ]

**ಹಸ್ತಮುದ್ರೆ** (ನಾ). [ನಾಟ್ಯ] (ಆಂಗಿಕಾಭಿನಯದಲ್ಲಿ) ಕೈಯ ವಿನ್ಯಾಸ; ಹಸ್ತದ ಭಂಗಿ: ಭಾವ ಭಂಗಿಗಳಲ್ಲಿ, ಹಸ್ತಮುದ್ರೆಗಳಲ್ಲಿ, ಬೆರಲಿರಿತದಲ್ಲಿ, ತಲೆದೂಕದಲ್ಲಿ, ಮುಖದ್ಯುತಿಯಲ್ಲಿ . . . ಪರಮತಾಣ್ಡವದಿಂದ ನಿಜವಾಗಿ ಧನ್ಯವಾದುವು! (ಬೆಟ್ಟಅ. ೧೩-೧೨). [ಸಂ. ಹಸ್ತಮುದ್ರಾ]

**ಹಸ್ತಮೈಥುನ** (ನಾ). [ಕಾಮಶಾ] ಹಸ್ತದಿಂದ ಕೃತಕವಾಗಿ ಮಾಡುವ ರತಿಕೇಳಿ. 'ಮುಷ್ಟಿಮೈಥುನ' ಪರಾ. [ಸಂ.]

**ಹಸ್ತರೇಖೆ** (ನಾ). ಅಂಗೈಯಲ್ಲಿರುವ ಗೆರೆ: ಹಸ್ತರೇಖೆಗಳ ಬಗೆಯಂ ಕರುಣದಿಂ ನಿನಗೆ ವಿಸ್ತರಿಸುವೆನು ಕೇಳು (ವೀಶೈಪು. ೪-೨೩-೩೯). [ಸಂ. ಹಸ್ತರೇಖಾ]

**ಹಸ್ತಲಾಗ, ಹಸ್ತಲಾಘ** (ನಾ). ೧. (ಗೌರವಸೂಚಕವಾಗಿ) ಕೈಯನ್ನು ಹಿಡಿದು ಕರೆತರುವುದು: ಸಸಿದಲೆಯಂ ವಿರಿಂಚಿ ಮುರವೈರಿಗಳಾಗಳೆ ಹಸ್ತಲಾಗಮಂ ಸಸಿನೆ ಕುಡಲ್ಕೆ ರಾಜಗೃಹದಂತರಮಂ ಪುಗುತಂದು (ಹಾಲಾಸ್ಯ. ೧-೬-೫೫). ೨. "ಹಸ್ತಸ್ಪರ್ಶ" (ಪಂಚನ. ೧೬೬ ಅಡಿಟ): ಈ ಹಸ್ತಲಾಗಕ್ಕೆ ದಾಹಗೊಳ್ಳುತ, ತಮ್ಮ ದೇಹವಂ ದಂಡಿಪರ್ ಜನರು ತರತರದೆ (ಪಂಚನ. ೧೬೬). **ಹಸ್ತಲಾಘ:** ೧. ಹಸ್ತಲಾಘದಿ ಚೇಳಿನಿಯ ಜನ ವೃತ್ತದಲಿ ವಿಪುಲಾದ್ರಿಯಗ್ರಕೆ ಹತ್ತಿಸಿದೆ ಭೋಯೆನುತಲೇರಿದನಾಗ (ಮುಲ್ಲಾಶ. ೨-೧೦). 'ಕೈಲಾಗು' ಪರಾ. [< ಹಸ್ತಲಾಘವ]

**ಹಸ್ತಲಾಘ** 'ಹಸ್ತಲಾಗ' ನೋ.

**ಹಸ್ತಲಾಘವ** (ನಾ). ೧. ಕೈಯ ಚಳಕ, —ಕೌಶಲ: ಆ ಬಿಲ್ಲುಗಾರರನ್ನೂ ಕರ್ಣನ ಹಸ್ತಲಾಘವವನ್ನೂ ಮನಸ್ಸಿಗೆ ತಂದುಕೊಂಡು ನನಗೆ ನಿದ್ರೆ ಬರುತ್ತಿಲ್ಲ (ವಚಭಾ. ೧೨೩); ಕಾಳಗವನ್ನು ನೋಡಲು ಬಂದಿದ್ದ ಜನರೆಲ್ಲರೂ ಇವರ ಸಾಧನೆಯನ್ನೂ ಹಸ್ತಲಾಘವ ಚಮತ್ಕಾರಗಳನ್ನೂ . . . ಕೊಂಡಾಡುತ್ತಿದ್ದರು (ಒಡೆಕ. ೩೬). ೨. ಗೌರವಕ್ಕಾಗಿ ಅಥವಾ ಆಸರೆಗಾಗಿ ಕೈಯನ್ನು ಹಿಡಿದು ಕರೆತರುವುದು: ತಲೆವಾಗಿ, ವೃದ್ಧಮನ್ತ್ರಿಯ ಹಸ್ತಲಾಘವಂಗೊಂಡು ಭದ್ರಾಸೀನನಾಗುವನು (ಸುಗುಗಂ. ೪೫-೧೨). ೩. ಕೈಕುಲುಕುವುದು; ಹಸ್ತಾಂದೋಲನ; ಸ್ನೇಹಸೂಚಕವಾಗಿ ಕೈಯನ್ನು ಹಿಡಿದು ಮೆಲ್ಲಗೆ ಅಲುಗಿಸುವುದು: ಅಧ್ಯಕ್ಷರ ಬಳಿ ಹೋಗಿ, ಹಸ್ತಲಾಘವ ಕೊಟ್ಟು

ನಮಸ್ಕಾರ ಮಾಡಿ ಸ್ವಸ್ಥಳಕ್ಕೆ ಹಿಂದಿರುಗಬೇಕು (ದಿಲ್ಲಿಪ. ೧೨); ಅವರು ಶ್ರೀಧರನನ್ನು ನಗುಮುಖದಿಂದಲೇ ಸ್ವಾಗತಿಸಿ ಹಸ್ತಲಾಘವ ಸಲ್ಲಿಸಿದರು (ವಾತ್ಸಲ್ಯ. ೩೪೫). ೪. ಕೈಚಳಕದಿಂದ ಮಾಡುವ ಕಣ್ಕಟ್ಟು, — ಗಾರುಡಿ: (೬). [ಸಂ.]

**ಹಸ್ತವಿಸ್ತಾರ** (ನಾ). = ಹಸ್ತಮುದ್ರೆ: ಆಕೆಯರ ಚತುಷ್ಷಷ್ಟಿವಿಧಹಸ್ತವಿಸ್ತಾರದಿಂ ಬಯಲ್ಪಾವಲೆಯ ಬನವಾಗಲ್ಪಂತೆಗಾ . . . ಅತಿಮನೋಹರವಾಗ (ಚಂದ್ರಪು. ೧೨-೧೪ ವ). [ಸಂ.]

**ಹಸ್ತವ್ಯಾಪಾರ** (ನಾ). ಕೈಗಳ ಕಾರ್ಯ, — ಚಟುವಟಿಕೆ: ಅವರು ತಮ್ಮ ಮನೋವ್ಯಾಪಾರವನ್ನು ಪರಮಶಿವನ ಪದಂಗಳಲ್ಲಿಯು . . . ಹಸ್ತವ್ಯಾಪಾರವನ್ನು ಭಕ್ತರಿಗೆ ವಸ್ತ್ರಂಗಳು ಕೌಪೀನಂಗಳು ನೇಯಿಸಿಕೊಡುವುದರಲ್ಲಿಯು ಇರಿಸಿದವರಾಗಿ (ಪುರಾವ. ೨೩೨). [ಸಂ.]

**ಹಸ್ತಶುದ್ಧಿ** (ನಾ). ವ್ಯಾಪಾರ, ವ್ಯವಸಾಯ, ವೈದ್ಯಕೀಯವೃತ್ತಿ ಮೊದಲಾದುವುಗಳಲ್ಲಿ ಕೈಗುಣದಿಂದ ಉಂಟಾಗುವ ಏಳಿಗೆ, — ಊರ್ಜಿತಾವಸ್ಥೆ: (೬). [ಸಂ.]

**ಹಸ್ತಸಂಜ್ಞೆ** (ನಾ). ಹೇಳಬೇಕಾದ ಮಾತನ್ನು ಹಸ್ತವಿನ್ಯಾಸದಿಂದ ಸೂಚಿಸುವುದು; ಕೈಸನ್ನೆ: ರತ್ನಗಳೊಳುತ್ತಮಮೆನಿಪ್ಪುದನು ಹಸ್ತಸಂಜ್ಞೆಯ ತೋರುತಾ ರತ್ನಗಳ ಬೆಲೆಯ ವಾಕ್ಕದಿ ಪೇಳಬಾರದು (ರತ್ನಶಾ. ೬-೨೬). [ಸಂ. ಹಸ್ತಸಂಜ್ಞಾ]

**ಹಸ್ತಸರ** (ನಾ). ಮುಂಗೈಗೆ ಧರಿಸುವ ಒಂದು ಆಭರಣ: ಹಸ್ತಸರ ಹೊನ್ನ ಬಳಿ ತೋಳಬಂದಿ ಕರಮೆಸೆಯಲು ಮಾಸತಿಯರಾದರು ರಾಮನರಸಿಯರಂದು ರಾಗದೊಳು (ಪುರಾಸಾಂ. ೩೬-೧೫೯); ಉಳಿ ಹಸ್ತಸರ[ಪಾಠಾಂ. ರವಿ]ಬೆರಲುಂಗುರ ಕಡಗ ತೋಳ್ಬಳಿ ಕಂಕಣಸೂಡಗವ . . . ತರಿಸಿ ಕೊಟ್ಟನವನು (ರಾಮವಿ. ೮-೪೬). [ಸಂ.]

**ಹಸ್ತಸಾಮುದ್ರಿಕ** (ನಾ). [ಸಾಮುದ್ರಿ] ಅಂಗೈರೇಖೆಗಳ ಆಧಾರದ ಮೇಲೆ ವ್ಯಕ್ತಿಯ ಭವಿಷ್ಯವನ್ನು ಹೇಳುವ ಶಾಸ್ತ್ರ. ೨. ಹಸ್ತಸಾಮುದ್ರಿಕ ಶಾಸ್ತ್ರವನ್ನು ಬಲ್ಲ ವ್ಯಕ್ತಿ: ಸ್ತ್ರೀಪುರುಷರ ಯೋಗಾಯೋಗಗಳನ್ನು ಅಭ್ಯಸಿಸಿ ಅವರ ಆಗುಹೋಗುಗಳನ್ನು ಕಂಡುಹಿಡಿಯುವ ಹಸ್ತಸಾಮುದ್ರಿಕನಂತೆ . . . ಅರಸುತ್ತ ಬರುವಳು (ಹೇಮಂತ. ೮). [ಸಂ.]

**ಹಸ್ತಸೂತ್ರ** (ನಾ). ೧. ವಿವಾಹ ಮೊದಲಾದ ಮಂಗಳಸಮಯಗಳಲ್ಲಿ ಮುಂಗೈಗೆ ಕಟ್ಟುವ ಕಂಕಣ, — ಅಭಿಮಂತ್ರಿಸಿರುವ ದಾರ: "ಕಂಕಣಂ, ಹಸ್ತಸೂತ್ರಂ, ಪ್ರತಿಸರಂ – ಈ ೩ ನೂಲ ಕಂಕಣಂ" (ಹಲಾಯು. ೯೨-೪೦೪). ೨. = ಹಸ್ತಸರ: "ತೀವಿ ಮುಂಗೈಯಲಿಹ ಸರ್ವಭೂಷಣಮಯ್ದೆ ಭಾವಿಸಲು ಹಸ್ತಸೂತ್ರಮೆನಿಕ್ಕು" (ಮಂಗರಾ. ೧೦೦-೨೬). [ಸಂ.]

**ಹಸ್ತಸ್ವಸ್ತಿಕ** (ನಾ). ಕತ್ತರಿಯ ಆಕಾರದಲ್ಲಿ ಕೈಗಳನ್ನು ಅಡ್ಡಲಾಗಿ ಇಡುವುದು; ಕೈಗಳಿಂದ ಸ್ವಸ್ತಿಕಮುದ್ರೆಯನ್ನು ರಚಿಸುವುದು: ಉತ್ತರೀಯಾಂತರೀಯಂ ತೂನೆಯೆ ತೊಲಗಿ ನಿಂದಿರ್ದಲ್ಲಿ ತಂದಿತ್ತುದುಚ್ಚಸ್ತನದೊಳಮರ್ದ ಹಸ್ತಸ್ವಸ್ತಿಕಂಗಳ್ ಬೆಡಂಗಂ (ಆದಿಪು. ೧೧-೧೪೮). [ಸಂ.]

**ಹಸ್ತಾಂಗುಲಿ** (ನಾ). ಕೈಬೆರಳು: ಪಂಚಾಕ್ಷರಿಯಿಮ್ಮಡಿಸಿದಂತಿರ್ಪ ಹಸ್ತಾಂಗುಲಿಗಳ ಪ್ರಸಾದಸ್ಥಲಮೆನಿಸಿದ ಪುಣ್ಯೋದರದ . . . ಬಸವರಾಜಂ ಕಾರಣಿಕಪುರುಷಂ ಶಿವಭಕ್ತಿಸರ್ವಾಂಗಚರಿತಂ ನೆನೆದು ನೋಡಿ (ಬಸರ. ೨-೩೦). [ಸಂ.]

**ಹಸ್ತಾಂತರ** (ನಾ). ೧. (ಆಸ್ತಿ ಮುಂತಾದುವು) ಒಬ್ಬರ ಕೈಯಿಂದ ಇನ್ನೊಬ್ಬರ ಕೈಗೆ ಹೋಗುವುದು, — ಒಬ್ಬರಿಂದ ಇನ್ನೊಬ್ಬರಿಗೆ ಸಾಗುವುದು: ಜಮೀನು ಹಸ್ತಾಂತರವಾಗುವುದನ್ನು ನಿಷೇಧಿಸಬಹುದು ಅಥವಾ ನಿರ್ಬಂಧಿಸಬಹುದು (ಭಾಧಾನ. ೨೫೮). ೨. ಕೈಯಲ್ಲಿ ಉಳಿದಿರುವ ಹಣ; ಶಿಲ್ಕು: ವಟ್ಟ ಲಂಚ ಹೊರನಿಲ ಹಸ್ತಾಂತರ ಸಂಜಾಯಿತನಿಲಗಳ ಪರಿವಿಡಿಯಂ ನಿಲಿಸಿ ಸೀಮೆಯಂ ರಕ್ಷಿಸಿದಂ (ಕೆಳನೃ. ೬-೨೯). ೩. ಬೇರೆಯವರಿಂದ ಬರಬೇಕಾಗಿದ್ದು, ಇನ್ನೂ ಬಾಕಿಯಾಗಿರುವ ಹಣ. ೪. ಖಜಾನೆ; ಬೊಕ್ಕಸ: ನಿಗದಿಯಾದ ತರಿಗೆಹಣ ಅಡ್ಡಿಯಿಲ್ಲದೆ ಹಸ್ತಾಂತರಕ್ಕೆ ವಸೂಲಾಗಿ ಬರುತ್ತದೆ (ಕಥಾಮಂ. IV, ೬೦); ಆಳಿಕೆ ಆಳಿಕೆಗೆ ಹಸ್ತಾಂತರದ ಸುವರ್ಣಾದಾಯ ಹೆಚ್ಚುತ್ತಲೇ ಬಂತು (ಚಿತ್ರಪಾ. ೫ ಉಪೋದ್ಘಾತ). [ಸಂ.]

**ಹಸ್ತಾಂತರಣ** (ನಾ). = ಹಸ್ತಾಂತರ ೧: ಯಾರೊಬ್ಬರ ಪರವಾಗಿ ಅಂಥ ಯಾವುದಾದರೂ ಸಂವಿದೆಯನ್ನು ಅಥವಾ ಹಸ್ತಾಂತರಣಪತ್ರವನ್ನು ಮಾಡುವ ಅಥವಾ ಬರೆಯುವ ಯಾವ ಮನುಷ್ಯನಾಗಲಿ ಅದರ ಸಂಬಂಧದಲ್ಲಿ ವೈಯಕ್ತಿಕವಾಗಿ ಬದ್ಧನಾಗಿರತಕ್ಕುದಲ್ಲ (ಭಾಧಾನ. ೧೭೨). [ಸಂ.]

**ಹಸ್ತಾಂತ್ರಿ** (ನಾ). ಕೈಕೆಲಸದವನು (?): ಯಿ ಶಸನವನು ಕೆತ್ತಿದಾತ ಹಸ್ತಾಂತ್ರಿ ಗೂಳಪ್ಪ (ಎಕ. XVI, ಚಿಕ್ಕನಾ. ೬೦-೯೪; 1802). [P ಇದು 'ಹಸ್ತತಂತ್ರಿ' ಎಂದಿರಬಹುದೆ ?]

**ಹಸ್ತಾಂದೋಲನ** (ನಾ). ಕೈಕುಲುಕುವುದು; ಹಸ್ತಲಾಘವ: ಇನ್ನಪಕ್ಕರು ಚಾಧವನೊಂದಿಗೆ ಹಸ್ತಾಂದೋಲನ ಮಾಡಿ ಹೇಳಿದರು (ರತ್ನಗೋ. ೫೩); ಹಸ್ತಾಂದೋಲನ ಕೊಟ್ಟು ನಮ್ಮಿಬ್ಬರನ್ನು ಕಳುಹಿದರು (ಮೇದಿಮ. ೧೮೯). [ಸಂ.]

**ಹಸ್ತಾಕ್ಷರ** (ನಾ). ೧. ಕೈಬರೆಹ: ಓದೆಂದು ಕೊಡೆ ಬರಹವ ಕಂಡು ಗಣಕ ಮೇಲೋದುತ ಕಣ್ಬನಿಗಳ ತಂದು ಆದರಿಸಮ್ಮಯ್ಯನ ಹಸ್ತಾಕ್ಷರ ಮೇದಿನೀಪತಿಯೆಂದು ನುಡಿದನು (ತ್ರಿಭುತಿ. ೧೦-೧೪); ಹಸ್ತಾಕ್ಷರದಲ್ಲಿರುವ ವ್ಯತ್ಯಾಸಗಳಿಂದ ಈ ವಿಷಯವನ್ನು ತಿಳಿಯಬಹುದು (ಕನ್ನಸಂ. ೬೮). ೨. ಸಹಿ; ರುಜು: ನಿನ್ನ ಇಷ್ಟಾನುಸಾರವಾಗಿಯೇ ಪತ್ರವನ್ನು ಬರೆದು ಹಸ್ತಾಕ್ಷರವನ್ನು ಹಾಕಿ ಕೊಡುವೆನು (ಕವಿಕ. ೫). [ಸಂ.]

**ಹಸ್ತಾಗ್ರ** (ನಾ). ೧. ಕೈಬೆರಳು; ಅಂಗುಲಿ: ರಾಜತನಯರ್ ಪೂಣ್ದೆತ್ತಲೀ ಪ್ರಸ್ತರಕ್ಕೆ ತಗುಳ್ವೆಂಬುದುಮತ್ತಿಕೊಂಡು ಗಗನಕ್ಕೀಡಾಡಿ ವಾಮೇತರಾಯತಹಸ್ತಾಗ್ರದೊಳಾಂತು ತಾಳ್ದಿದುದಜಿಂ ಬಾಳತ್ಯದೊಳ್ ಕೋಟಿಕಾಂತಿತಮಾ ಕಲ್ ತಿಟಿಕಿಲ್ ತ್ರಿಪ್ರಷ್ಠಮಹಿಪಂಗಕ್ಕುಂ ಪೆಜಂಗಕ್ಕುಮೇ (ಶಾಂತಿಪು. ೫-೨೬); ಶಕುಂತಳೆಯು . . . ತನ್ನ ಹಸ್ತಾಗ್ರದಿಂದ ಮುಖವನ್ನು ಮುಚ್ಚಿಕೊಂಡು ಅತಿಭೀತಳಾದಂತಿರುವಳು (ಶಾಕುಂತ. ೯೦-೧೫). ೨. ಸೊಂಡಿಲು: ಕೊಳದೊಳ್ ಬಾಳಮೃಣಾಳಿನೀಕಬಳಮಂ ಕಿಟ್ಟಿತ್ತಿ ಹಸ್ತಾಗ್ರದಿಂ ತಿಳಿನೀರಂ ತಗೆದೂಯ್ಯನೂಡಿಸಿ . . . ಬಾಳಕರೇಣುವಂ ಬಯಕೆಯೊಳ್ ಕೊಂಡಾಡುತಿರ್ದತ್ತಿಭಂ (ಲೀಲಾವ. ೮-೪). [ಸಂ.]

**ಹಸ್ತಾಪಜೇಯ** (ನಾ). ಕೈಗೆ ಸುಲಭವಾಗಿ ಎಟುಕುವಂತಹುದು: ನತರ್ಗೊಲ್ದು ಸರ್ವಸಮಂ ನಲ್ಮೆಬಲಿತ್ತು ಕಾವೆ ದೊರೆಯಲ್ ಹಸ್ತಾಪಜೇಯಂ ಫಲಂ (ವಸ್ತವಂ. ೮೫). [ಸಂ.]

**ಹಸ್ತಾಭರಣ** (ನಾ). ೧. ಕೈಗೆ ಧರಿಸುವ ಒಡವೆ; ಬಳೆ, ಕಡಗ ಮೊದಲಾದ ಆಭರಣ: "ಮುದ್ರಿಃ - ಮುರಿಕುಂ, ಹಸ್ತಾಭರಣಮುಂ, ಬಳೆಯುವುಂ" (ಕಾತಕ್ಕ. ೨೨೪). ೨. [ಜ್ಯೋತಿ] ಹಸ್ತೆ ಎಂಬ ನಕ್ಷತ್ರ. ೧, ೨: ಶ್ರವಣಭೂಷಣದಿಂದ ಹಸ್ತಾಭರಣದಿಂದೆ ದಿವಿಜಪದಮಸೆವಂತೆ . . . ಚೆಲ್ವಿಂದೆ ವಿಷಯ ಕಂಗೊಳಿಸಿರ್ದಳು (ಜೈಮಿಭಾ. ೩೧-೧೦). [ಸಂ.]

**ಹಸ್ತಾಭಿನಯ** (ನಾ). = ಹಸ್ತಮುದ್ರೆ: ಭಾವದ ಬೆಸುಗೆಗಳ ಹಸ್ತಾಭಿನಯ ದೃಕ್ಪ್ರಸರಣದ ವರಸಾತ್ವಿಕಾಂಗಿಕಸುಗತಿವಿಭ್ರಮದ . . . ವರಲಾಸ್ಯತಾಂಡವವೆಸೆದುದ್ಧೆ ರಂಭಾದಿ ನರ್ತಕಿಯರಲಿ ಹೊಸತೆನಿಸಿ (ಕುಮ್ಮಾ. ೬-೯೩). [ಸಂ.]

**ಹಸ್ತಾಮಳಕ** (ನಾ). ೧. ಅಂಗೈ ಮೇಲಿರುವ ನೆಲ್ಲಿಯ ಕಾಯಿ; ಕರತಲಾಮಲಕ: ಭವಸಂಬಂಧದೊಳ್ ತೊಟ್ಟ ಸಂಭಾವನೆ ಚಿತ್ತಂಬೊಕ್ಕು ಹಸ್ತಾಮಳಕದ ತೆಜದಿಂ ತೋಜಿ (ಶಾಂತಿಪು. ೯-೧೦೩). ೨. (ಆಲಂ) ಸುಲಭ; ಸರಾಗ: ಇದನಾವನರಿವ ಗೋಪ್ಯದೊಳರಿತು ಭಾವಿಸುವ ಮುದದೊಳಭ್ಯಾಸಿಸುವನವನಿಗಾನಂದಸಂಪದವು ಹಸ್ತಾಮಳಕಮಾಗಿ ಸಾಯುಜ್ಯಮಂ ಪಡೆವ (ವೆಂಕಾರಾ. ೪-೯-೩೦). [ಸಂ. ಹಸ್ತಾಮಲಕ]

**ಹಸ್ತಾರ್ಕ** (ನಾ). [ಜ್ಯೋತಿ] ಹಸ್ತಾನಕ್ಷತ್ರದಲ್ಲಿರುವ ಸೂರ್ಯ: ಕೀರ್ತಿಶೇಖರ ಧರಾರಮಣಂಗೆ ಹಸ್ತಾರ್ಕನಂತೆ ಕನ್ಯಾಸಮನ್ವಿತಂ ಬರ್ಪಂತು ಬಟಿಯಟ್ಟಿ (ಅನಂಪು. ೬-೩೦ ವ); ಗಡಿಗೆ ಹಸ್ತಾರ್ಕದಿಂದೊಡೆಯಲದಟೋಡಿನೊಳಗಡಕೆಹೋಳಂ ಮೈಯ ನೀರಿಂದವೆ ಬಿಡದೇಳುದಿನಮರೆದು ಕಡುಗಂಪಿನಿಂ ಪೊರೆದು ಕುಡೆ ಮಹಾವಶ್ಯಮಿದು ತಪ್ಪದು (ಜನವ. ೧೩-೫೦). [ಸಂ.]

**ಹಸ್ತಾವಚಯ** (ನಾ). ಕಯ್ಯಿಂದ ಹೂವನ್ನು ಸಂಗ್ರಹಿಸುವುದು: ಹಸ್ತಾವಚಯದಿನುರುಪುಷ್ಪಸ್ತಬಕಮನುನ್ಮದಭ್ರಮದ್ಭ್ರಮರಪರಿತ್ರಸ್ತಮತಿ ಮೆಲ್ಲನೆಬಿಗಿ ಘನಸ್ತನವತಿ ಕೊಯ್ದಳಾಮ್ರಶಾಖೆಯೊಳೊರ್ವಳ್ (ಕಾವ್ಯಾವ. ೫೦೪). [ಸಂ.]

**ಹಸ್ತಾವಲಂಬ** (ನಾ). ಕಯ್ಯ ಆಸರೆ: ಮಂಗಳಾಳಂಕರಣಾಲಂಕೃತಂ ಸೌಧರ್ಮೇಂದ್ರದತ್ತ ಹಸ್ತಾವಲಂಬನಾರೂಢಶುಭಪರಿಣಾಮಂ . . . ಶಿಬಿಕೆಯನೇಱಿದಾಗಳ್ (ಆದಿಪು. ೯-೭೨). [ಸಂ.]

**ಹಸ್ತಾಹಸ್ತಿ** (ನಾ). ಕೈ ಕೈ ಕಾಳಗ; ತುಮುಲಯುದ್ಧ: (೬). [ಸಂ.]

**ಹಸ್ತಾಹಸ್ತಿಕೆ** (ನಾ). ೧. = ಹಸ್ತಾಹಸ್ತಿ. ೨. ವಿನಿಮಯ: ಆಕೆಯ ವದನದಿಂದೀ ನಿನ್ನ ವದನಕೆ ಮತ್ತಲ್ಲಿಂದೆನ್ನ ಚರಣಕೆ ಹಸ್ತಾಹಸ್ತಿಕೆಯಿಂದಲಿಂದು ಈ ತಿಲಕವು ನೆಗಳ್ದುದಿದತುಳದುಷ್ಕರದ್ಪು (ಗಾಥಾಸ. ೪೫-೭೯). [ಸಂ. ಹಸ್ತಾಹಸ್ತಿಕಾ]

**ಹಸ್ತಾಳಂಕೃತಿ** (ನಾ). ಕೈಗೆ ತೊಡುವ ಕಡಗ, ಬಳೆ ಮೊದಲಾದ ಆಭರಣ: "ಕಂಕಣಮಾವಾಪಂ ವಳಯಂ ಕಟಕಂ ಪಾರಿಹಾರ್ಯನಾಮಂ ಹಸ್ತಾಳಂಕೃತಿ" (ವಸ್ತುಕೋ. ೭೭-೬). [ಸಂ. ಹಸ್ತಾಲಂಕೃತಿ]

**ಹಸ್ತಿ** (ಗು). ೧. ಕೈಗಳುಳ್ಳ. (ನಾ). ೨. ಸೊಂಡಿಲುಳ್ಳದು; ಆನೆ: ಹಸ್ತಿಯ ತನ್ನ ಮುನ್ನಿನ ಭವಾವಳಿಯೆಲ್ಲಮನೆಯ್ದೆ ಪೇೞೆ ಲೋಕಸ್ತುತದೇಶಭೂಷಣ ಮಹಾಮುನಿಪುಂಗವರ್ (ಪಂರಾಮಾ. ೧೫-೫೩); ದೇವಕಿ ಪೊತ್ತಳಂತತಿವ್ಯಾಕುಳವೃತ್ತಿಯಂ ನಿಜಫಲಸ್ತಬಕಂ ವನಮತ್ತಹಸ್ತಿಹೇಳಾಕರಭಗ್ನವಾಗೆ ಕಡುಪಾಡಱೆದೊಂದು ನವಾಮ್ರವಲ್ಲರಿವೋಲ್ (ಜಗವಿ. ೨-೫೬). ೩. ಹಸ್ತಿನಾಪುರವನ್ನು ನಿರ್ಮಿಸಿದ ಚಂದ್ರವಂಶದ ಒಬ್ಬ ಅರಸ: ಭರತಸೂನು ಸುಹೋತ್ರನಾತನ ನರಕುಮಾರಕ ಹಸ್ತಿ ಹಸ್ತಿನಪುರಿಗೆ ಹೆಸರಾಯ್ತಾತನಿಂದವೆ (ಕುಮ್ಮಾಭ. ೨-೧೯). ೪. (ಆಲಂ) ದೊಡ್ಡದು; ಹಿರಿದು: 'ಹಸ್ತಿವಾವುಜ' ಪರಾ. [ಸಂ. ಹಸ್ತಿನ್]

**ಹಸ್ತಿಕಂದ** (ನಾ). ಗೆಡ್ಡೆಗಳನ್ನುಳ್ಳ ಒಂದು ಬಗೆಯ ಔಷಧೀಸಸ್ಯ: "ತ್ರಗ್ಗೋಷಾರಿ = ಹಸ್ತಿಕಂದ" (ಓಷಧಿ. ೭೭). [ಸಂ.]

**ಹಸ್ತಿಕಕ್ಷ** (ನಾ). ೧. ಸಿಂಹ. ೨. ಹುಲಿ. ೩. (?): ಏನೆಂಬೆನ್ನೆ ಕಪಿವರನ ಕೋಳಾಹಳದ ಕದನವ ಕರೆದು ನಖದಲಿ ಹೊಯ್ದು ಕರದಲಿ ಕಾದುವಂದದಲಿ ಮುರಿದು ಬಾಲದಲಡಿಗಡಿಗೆ ಬೊಬ್ಬಿಱಿದು ಹಣಗಿದನಿನಸುತನ ಭಾಸುರದ ಹೇಮಧ್ವಜದ ಹಲಗೆಯ ಹಸ್ತಿಕಕ್ಷದಲಿ (ಕುಮ್ಮಾಕ. ೨೨-೧೮). [ಸಂ.]

**ಹಸ್ತಿಕರ್ಣ** (ನಾ). ಒಂದು ಬಗೆಯ ಔಷಧೀಸಸ್ಯ: "ಶ್ರೀಶ(ಟಾಲುಃ)ಲಾಟುಃ- ಬೆಲ್ಲವತ್ತದ ಹೀಚು, ಹಸ್ತಿಕರ್ಣ" (ಓಷಧಿ. ೧೬೮). [< ಸಂ. ಹಸ್ತಿಕರ್ಣ]

**ಹಸ್ತಿಗಂಧಿ** (ನಾ). ಒಂದು ಬಗೆಯ ಔಷಧೀಸಸ್ಯ: "ಶ್ರೀಹಸ್ತಿನೀ, ಭೂರುಂಡೀ — ಈ ೨ ಹಸ್ತಿಗಂಧಿ" (ನಾಚಿರಾ. ೧೦೮). 'ಹಸ್ತಿಗನ್ನೆ' ಪರಾ. [?]

**ಹಸ್ತಿಗನ್ನೆ** (ನಾ). ಒಂದು ಬಗೆಯ ಔಷಧೀಸಸ್ಯ: "ಭೂರುಂಡೀ = ಹಣ್ಣೆ, ಹಸ್ತಿಗನ್ನೆ" (ಓಷಧಿ. ೧೧೨). 'ಹಸುರ್ಗನ್ನೆ' ಪರಾ. [?]

**ಹಸ್ತಿಘಟೆ** (ನಾ). ಆನೆಗಳ ಹಿಂಡು; ಗಜಸೈನ್ಯ: ಪಲ್ಲವಕುಲತಿಲಕಂ ಶ್ರೀಮನ್ ಬೀರನೊಬವ್ವು ಪ್ರಿಥಿವೀರಾಜ್ಯಂಗೆಯ್ಯೆ ಸಾನ್ತರನ ಮೇಗೆಟ್ಟು ಹಸ್ತಿಘಟೆಗಯ್ದು ಕಾಳೆ[ಗ]ದೊಳ್‌ಸತ್ತಿಯ ಕಾದು (ಎಕ. X, ಶ್ರೀನಿವಾ. ೭೮-೩; ಸು. 930). [ಸಂ. ಹಸ್ತಿಘಟಾ]

**ಹಸ್ತಿತಂತ್ರ** (ನಾ). ಆನೆಗಳನ್ನು ಪಳಗಿಸುವ ವಿದ್ಯೆ; ಗಜಶಾಸ್ತ್ರ: ರತ್ನಪರೀಕ್ಷೆಯೊಳ್ ತುರಗಶಾಸ್ತ್ರದೊಳುತ್ತಮಹಸ್ತಿತನ್ತ್ರದೊಳ್ . . . ಅರ್ತ್ಥಶಾಸ್ತ್ರದೊಳ್ ಯತ್ನಪರಂ ಪಲಪ್ಪೊರ್ಗಳೆ ಧಾxxಣೆಯೊಳ್ ವಿಭು ವೀರಶಾನ್ತರಂ (ಎಕ. VIII, ನಗರ. ೮೮-೯. ಸು. 1060). [ಸಂ.]

**ಹಸ್ತಿದಂತ** (ನಾ). ಆನೆಯ ಕೋರೆ; ಗಜದಂತ: (೬). [ಸಂ.]

**ಹಸ್ತಿನಖ** (ನಾ). ೧. ಕೋಟೆಯ ಹೆಬ್ಬಾಗಿಲು ಅಥವಾ ಮಹಾದ್ವಾರದ ಮುಂದೆ (ವೈರಿಗಳು ನುಗ್ಗಿ ಬರದಂತೆ ತಡೆಯಲು) ನಿರ್ಮಿಸುತ್ತಿದ್ದ ಮಣ್ಣಿನ ದಿನ್ನೆ: "ಹಸ್ತಿನಖಃ, ಪರಿಕೂಟಃ— ಈ ೨ ಹೆಬ್ಬಾಗಿಲ ಕಟ್ಟು" (ಹಲಾಯು. ೪೮-೧೩೩). ೨. ಹೆಬ್ಬಾಗಿಲು; ದೊಡ್ಡಬಾಗಿಲು; ಮಹಾದ್ವಾರ: "ಪರಿಕೂಟಮಾ ಹಸ್ತಿನಖಮನಲು ಪೆರ್ಬಾಗಿಲಕ್ಕು" (ಮಂಗರಾ. ೫೭-೪). [ಸಂ.]

**ಹಸ್ತಿನಿ** (ನಾ). ೧. ಹೆಣ್ಣಾನೆ; ಕರಿಣಿ: ವನಗಜಯೂಥಮಳ್ಕಿ ಪೆಱಗಿರ್ದಿರದೊಡ್ಡೆಱೆ ದೋಡುವಲ್ಲಿ ದಂತಿನಿ ಮೊಲೆಯೂಡೆ ನಿಂದು ನಿಜಪೋತಮನಾಗಳೆ ಸಿಂಹಮೆಯ್ದು ಹಸ್ತಿನಿಯನವಚ್ಚಿಗೆಯ್ದು ಕರಿಯೂಥಮನಟ್ಟುವುದಿಲ್ಲಿ (ಶಾಂತಿಪು. ೨-೧೦೫). ೨. [ಕಾಮಶಾ] ಪದ್ಮಿನಿ, ಚಿತ್ತಿನಿ, ಹಸ್ತಿನಿ ಮತ್ತು ಶಂಖಿನಿ ಎಂಬ ನಾಲ್ಕು ಬಗೆಯ ಸ್ತ್ರೀಜಾತಿ ಗಳಲ್ಲಿ ಒಂದು ಮತ್ತು ಆ ಜಾತಿಗೆ ಸೇರಿದ ಸ್ತ್ರೀ: ತೊಡೆ ತೋಳಂಗುಲಿ ಕಂಧರಂ ದ್ವಿಜಮಿವೆತ್ತಂ ಕೋಮಲಂ . . . ಪದ್ಮಾಸ್ಯಮೊಳ್ನುಡಿಗಳ್ವೆಟ್ಟಿತುವಾಗೆ ಹಸ್ತಿನಿಗೆ ದಾನಾಮೋದಮಕ್ಕುಂ (ಮದತಿ. ೨-೬); ಮೂಡಲದು ಹಸ್ತಿನಿಗೆ ಬಡಗಲದು ಚಿತ್ತಿನಿಗೆ ಪಡುವಲದು ಶುದ್ಧಶಂಖಿನಿಗೆ ತೆಂಕಲಿನ ಬೀಡು ಪದ್ಮಿನಿಗೆ (ಸರ್ವಜ್ಞ. ೧೬೩೦); ಒಳ್ಪಿತಲ್ಲದ ನಡೆ ದೊಡ್ಡ ನಡುವು . . . ಗದ್ಗದ ಧ್ವನಿಯುಳ್ಳವಳು ಇವಳು ಹಸ್ತಿನೀಜಾತಿಸ್ತ್ರೀಯೆಂದರಿವುದು (ಕಾಮಶಾ. ೨೦೬). ೩. [ಯೋಗ] ದೇಹದ ಹದಿನಾಲ್ಕುನಾಡಿಗಳಲ್ಲಿ ಒಂದು: ನಾಡಿಗಳ ಚೌದಶಗಳಿಗೆ ನಾಮಗಳಾಯುರು ಸುಷುಮ್ನೆಯು ಪಿಂಗಳೆಯು ಯಿಡಾ ಸರಸ್ವತಿ ಪೂಷವಾರುಣಿ ಮೆರೆವ ಹಸ್ತಿನಿ ಜಿಹ್ಮೆಯಾ ಅಶ್ವಿನಿ ಅಲಂಬುಸಯು . . . ಗಂಧವಾರಿಯು ವರಸೆದಪ್ಪದೆಯಿರುವವಾ ಶಂಖಿನಿಸಹಿತವಾಗಿ (ಗಗತಾ. ೯-೧೧). [ಸಂ. ಹಸ್ತಿನೀ]

**ಹಸ್ತಿಪಕ** (ನಾ). ಆನೆಯನ್ನು ನಡೆಸುವವನು; ಮಾವುತ: "ಹಸ್ತಿಪಕ, ಹಸ್ತಾರೋಹಃ, ನಿಷಾದೀ — ಈ ೩ ಮಾವಂತಂ" (ಹಲಾಯು. ೩೮-೭೨); ಹಸ್ತಿ[ಪ][ಪಾಠಾಂ. ಸ]ಕಂ ಬಿಗಿದೊಂದಿದಂದು ಬಿಲ್ಲಿಗೆ ಮೊದಲಾಗಿ ಕಿಲ್ಸೆಱೆ ತಗುಳ್ದಿರೆ ಕಾಲ್ಗಳೊಳಂತದೊಂದುಮಂ ಬಗೆಯದೆ ಮಾಱೆ ಹಾರಿಯೊಳರಂ ಮುಗುದಂದುವು ಮತ್ತಹಸ್ತಿಗಳ್ (ವರ್ಧಮಾ. ೮೪೯). [ಸಂ.]

**ಹಸ್ತಿಪಾದ** (ನಾ). ಒಂದು ಬಗೆಯ ಔಷಧೀಸಸ್ಯ; ಆನೆಕಾಲುಗಿಡ: ನೆಲಮುಚ್ಚಿಲು, ಹಸ್ತಿಪಾದ, ಹಕ್ಕರಿಕೆ, ಆನೆಕಾಲುಗಿಡ, ನಾಯಿನಾಲಗಗಿಡ (ಮೃಜಿಗಿ. ೩೩-೬೪೦). [ಸಂ.]

**ಹಸ್ತಿಮಶಕಾಂತರ** (ನಾ). ಆನೆಗೂ ಸೊಳ್ಳೆಗೂ ಇರುವ ವ್ಯತ್ಯಾಸ; ಒಂದಕ್ಕೊಂದು ಹೋಲಿಕೆಯೆ ಆಗಲಾರದಂತಹ ಸ್ಥಿತಿ; ಬಹಳ ವ್ಯತ್ಯಾಸವಾಗಿರುವುದು: ರಾಜ್ಯಕ್ಕಂ ತ್ರಿಭುವನಸಾಮ್ರಾಜ್ಯಕ್ಕಂ ಬಗೆಯೆ ಹಸ್ತಿಮಶಕಾಂತರಂ (ಶಾಂತಿಪು. ೫-೭೨); ಪರಿಕಿಪೊಡೆ ಹಸ್ತಿಮಶಕಾಂತರಮೆನಿಪ್ಪುದು ತನ್ನ [ಗು]ಣದ ನೆಗಟ್ಟರ ಗುಣದಂತರಂ (ಎಇ. XVI, ೬೦-೧೫; 1081). 'ಅಜಗಜಾಂತರ' ಪರಾ. [ಸಂ.]

**ಹಸ್ತಿಮೂರ್ಖ** (ನಾ). ಅತಿಮೂರ್ಖ; ದೊಡ್ಡಮೂರ್ಖ: ನಾಸ್ತಿಯೆಂಬ ವಸ್ತುವ ನಾಸ್ತಿಯೆಂದರಿಯದೆ ಅಸ್ತಿಯೆಂದು ಕಂಡರೆ ಹಸ್ತಿಮೂರ್ಖನು (ವಾದಿಕೇ. ೧೫೩-೨೮). [ಸಂ.]

**ಹಸ್ತಿಯೂಥ** (ನಾ). ಆನೆಗಳ ಹಿಂಡು: ಮಲಯಸುಂದರನೆಂಬಾನೆಯುಂಟು ಹಸ್ತಿಯೂಥಕ್ಕೆಱೆಯನಪ್ಪುದು (ವಡ್ಡಾರಾ. ೩೪-೨೦). [ಸಂ.]

**ಹಸ್ತಿರದ** (ನಾ). = ಹಸ್ತಿದಂತ: ಕಸ್ತೂರಿಕಾಂಡಕಂ ವನ [ಪಾಠಾಂ. ನವ] ಹಸ್ತಿರದಂ ಹಸ್ತಿಮಸ್ತಕೋದ್ಭವ ಮುಕ್ತಾವಿಸ್ತಾರಮೆಂದು ತಂದು ಸಮಸ್ತವನಾಧೀಶರವನಿಪತಿಯಂ ಕಂಡರ್ (ಆದಿಪು. ೧೨-೭೭). [ಸಂ.]

**ಹಸ್ತಿವಾವುಜ** (ನಾ). ದೊಡ್ಡದಾಗಿರುವ ಒಂದು ಬಗೆಯ ಚರ್ಮವಾದ್ಯ: ಹಸ್ತಿವಾವುಜ ವೀಣೆ ಮದ್ದಳೆ ರಾವಣಹಸ್ತ . . . ಸ್ವರಮಂಡಲ ಮುಖ್ಯಸಕಲ ವಿದ್ಯಾಸ್ತ್ರೀಯರಿರ್ದರಿಕ್ಕೆಲದಿ (ಮೋಹತ. ೧೮-೪೭). [ಹಸ್ತಿ + ಆವುಜ]

**ಹಸ್ತಿಶಾಲೆ** (ನಾ). ಆನೆಯ ಲಾಯ; ಗಜಶಾಲೆ: ನಿರುತಂ ಶುದ್ಧಾಂತಕಾಂತಾ ಗೃಹಪರಿವೃತಿಯಿಂ ಹಸ್ತಿಶಾಲಾದಿ ನಾನಾಪರಿವಾರಾವಾಸವಿನ್ಯಾಸದಿಂ . . . ರಂಜಿಸಿರ್ಕುಂ ಕರುಮಾಡಂ (ಪುಷ್ಪಪು. ೯-೨೯). [ಸಂ. ಹಸ್ತಿಶಾಲಾ]

**ಹಸ್ತೆ** (ನಾ). = ಹಸ್ತ: ಹಸ್ತ ಮಳೆ ಹುಯ್ಯದಿದ್ದರೆ ಹೆತ್ತ ತಾಯಿಯೂ ಅನ್ನ ಇಡಳು (ಗಾದೆ). [ಸಂ. ಹಸ್ತಾ]

**ಹಸ್ತೋದಕ** (ನಾ). ೧. ಊಟ ಆರಂಭವಾಗುವ ಮುನ್ನ ಆಚಮನಕ್ಕಾಗಿ ಬಲಗೈಗೆ ಹನಿಸುವ ನೀರು; ಆಪೋಶನದ ನೀರು: (೬). ೨. ದಾನ ಕೊಡುವಾಗ ಎರೆಯುವ ಮಂತ್ರಪೂರ್ವಕವಾದ ನೀರು; ಕೈಧಾರೆ: ಯಿ ಸ್ಥಾನದಲು ಮಾನ್ಯವಾಗಿ ಊರುಗಳಂ ಭೂಮಿಗಳಂ ಧನಂಗಳಂ ಈ ಲಿಂಗಕ್ಕೆ ಹಸ್ತೋದಕವಂ ಮಾಡಿಕೊಟ್ಟು ದುವಂ (ಸೌಇಇ. XX, ೧೭೭-೧೦; 1190). ೩. [ವೀಶೈ] ಗುರುಪಾದೋದಕ, ಲಿಂಗಪಾದೋದಕ, ಜಂಗಮಪಾದೋದಕ, ಸ್ಪರ್ಶನೋದಕ,

ಅವಧಾನೋದಕ, ಆಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕ ಮತ್ತು ಸತ್ಯೋದಕ ಎಂಬ ಹತ್ತುವಿಧ ಪಾದೋದಕಗಳಲ್ಲಿ ಒಂದು; ''ಲಿಂಗವನ್ನು ಹಸ್ತದಲ್ಲಿರಿಸಲು ಅದು ಹಸ್ತೋದಕವು'' (ಶಿವಾಕೋ. ೧೦೪); ಎನ್ನ ಆತ್ಮವೆ ಪರಮಾಮೃತದ ನೈವೇದ್ಯವಯ್ಯ ನಿಮಗೆ ಎನ್ನ ಪರಿಣಾಮವೆ ಹಸ್ತೋದಕವಯ್ಯ ನಿಮಗೆ (ಅವಿಂಶ್ಚ. ೨೪೧-೮೭); ಹಸ್ತದೊಳಗಿದ್ದ ತೀರ್ಥವನು ಸಲಿಸಿದ್ದೇ ಹಸ್ತೋದಕ. ಆ ಬಟ್ಟಲಲ್ಲಿದ್ದ ತೀರ್ಥವನು ಮೂರು ಸಲ ಸ್ವೀಕರಿಸಿದ್ದೇ ಪರಿಣಾಮೋದಕ (ಕರ್ನಾಕ. ೧೫೭). 'ಪಾದೋದಕ' ಪರಾ. [ಸಂ.]

**ಹಸ್ತೋದಕಂಗೆಯ್** (ಕ್ರಿ). ದಾನವಸ್ತುವನ್ನು ಧಾರೆಯೆರೆದು ಕೊಡು: ಶ್ರೀನನ್ದಿಪಣ್ಡಿತದೇವರ್ಗ್ಗೆ ಹಸ್ತೋದಕಂಗೆಯ್ದು ಕೊಟ್ಟವಾ ಗ್ರಾಮಮಂ (ಸೌಇ. XX, ೪೬-೪೧: 1072). [ಹಸ್ತೋದಕ + ಕೆಯ್$_1$]

**ಹಸ್ತ್ಯಾರೋಹ** (ನಾ). ಆನೆಯನ್ನು ನಡೆಸುವವನು; ಮಾವುತ: ''ಹಸ್ತಿಪಕಃ, ಹಸ್ತ್ಯಾರೋಹಃ, ನಿಷಾದೀ — ಈ ೩ ಮಾವಂತಂ'' (ಹಲಾಯು. ೩೮-೭೨). [ಸಂ.]

**ಹಳ$_1$** 'ಪಟ$_1$' ನೋ.

**ಹಳ$_2$** 'ಹಲ$_3$' ನೋ.

**ಹಳಕು** 'ಪಟಿಕ' ನೋ.

**ಹಳಕೆ** (ನಾ). ಹಳೆಯದಾಗಿರುವಿಕೆ: ಆ ಕಾಣುವ ಮೂಡಲ ಗೋಡೆಯು ಹೊರಗಣಿಂದ ನೋಡುವವರಿಗೆ ಕಲ್ಕಟ್ಟಡದ ಹಳಕೆಯ ಬಣ್ಣಗಳಿಂದ ಹಾವಸೆಗರುಕೆಗಳಿಂದ ಅಚ್ಚುಕಟ್ಟಾಗಿ ಬಲವಾಗಿ ಭದ್ರವಾಗಿ ಮುದ್ದಾಗಿದೆ (ಬೆಟ್ಟಿಅ. ೭೭-೨೭). [ಹಳ$_1$ (< ಪಟಿದು$_1$) + -ಕೆ]

**ಹಳಗ, ಹಳಗು** (ನಾ). ಕಳೇಬರ; ಅಸ್ಥಿಪಂಜರ: ಜಿಹ್ವೇಂದ್ರಿಯ ವಿಷಯಾಸಕ್ತಂಗಳಪ್ಪ ಕಾಗೆಗಳಾನೆಯ ಹಳಗದ ಪಡುಕಗೊಳಪೊಕ್ಕು ಪೂಜಿಮಡಲಾಜಿದ ಮಹಾನದಿಯ ಪೊನಲಿಂ ಒರಿದು ದುಃಖವನೆಯ್ದುವಂತೆಯುಂ (ದ್ವಾದಶಾ. ೮-೬೧ ವ); ಸುಗ್ರೀವ . . . ರಘುನಾಥಗಾ ಸತ್ವವನ್ನೋಡಲೆಂದು ತನ್ನಣ್ಣ ಕೊಂದ ಹಳಗವಂ ತೋರಿಸಲ್ಕೆ (ತುರಂಗ. ೩೪-೩೮). **ಹಳಗು:** ಗಳಿಸಿ ಪಾಪವನ್ನು ಯಮನ ಬಳಿಗೆ ಒಯ್ದು ತನುವ ನಾಯ ಹಳಗಿಗಿಂದ ಕಡೆಯ ಕಾಂಬುದೆಂದಿಗಪ್ಪುದೊ (ಸುಸಾರ. ೬೩-೪). [< ಪಟಗ$_1$?]

**ಹಳಗನ್ನಡ** 'ಪಟಗನ್ನಡ' ನೋ.

**ಹಳಗಾಗು** (ಕ್ರಿ). (ಆಲಂ) ಅಪಮಾನಿತನಾಗು; ಕೀಳಾಗು: ಕೈ ಹೊಯ್ದು ನಕ್ಕಳು ದ್ರುಪದರಾಜಸುತೆ ನೆರದ ಪೃಥ್ವೀಶ್ವರರ ಮಧ್ಯದೊಳ್ಗುರುಹಿರಿಯರೋಳ್ಮುಂದೆ ಹಳಗಾದನು (ತುರಂಗ. ೨೩-೨೨). [ಹಳಗ + ಆಗು$_1$]

**ಹಳಗಿಸು** 'ಪಳಗಿಸು' ನೋ.

**ಹಳಗು** 'ಹಳಗ' ನೋ.

**ಹಳಗೆ** 'ಪಲಗೆ' ನೋ.

**ಹಳಚಗೆ, ಹಳಚ್ಚಗೆ** (ಅ). ೧. ನಿರ್ಮಲವಾಗಿ; ಸ್ವಚ್ಛವಾಗಿ: ಕಳಮೆಯನ್ನವ ತೊವರಿಯ ಹಳಚಗಿರುವ ತೊಯಿ ರಸ ಹುಣಿಸೆಪಳಿದ್ಯವ ಎಳೆವಣ್ಣುಗಳಿಕ್ಕಿದರು (ಜ್ಞಾನಚ. ೩೯-೧೩೭). **ಹಳಚ್ಚಗೆ:** ೨. ನಿಚ್ಚಳವಾಗಿ: ಇನ್ನೂ ಬೆಳಕು ಹರಿದು ಹಳಚ್ಚಗಾಗಿರಲಿಲ್ಲ (ಜಲುಮು. ೨೬೪). 'ಪಳಚ್ಚನೆ' ಪರಾ. [ಹಳಚು$_1$ (< ಪಳಂಚು$_1$) + -ಅಗೆ]

**ಹಳಚನೆ** 'ಪಳಚ್ಚನೆ' ನೋ.

**ಹಳಚಿಕೆ, ಹಳಚಿಗೆ** (ನಾ). ೧. ನಿರ್ಮಲತೆ; ಸ್ವಚ್ಛತೆ: ಉದಕಕ್ಕೆ ಹಳಚಿಕೆಯಿಲ್ಲದ ಪಾಕುಳಕ್ಕುಂಟೆ (ಸಕವ. ಕ. II, ೨೧೫-೩೨). ೨. ಪವಿತ್ರತೆ; ಪಾವಿತ್ರ್ಯ: ಹರಿಯ ಹಳಚಿಕೆಯುಳ್ಳವನಲ್ಲವೆ ಸುರೂಪಿ ಸಮಗುಣನು ನೀನಲ್ಲವೆ (ಪುರಂದ. ೫-೩೫-೧). ೩. ಅಪ್ಪಳಿಸುಘಿಕೆ; ಘಟ್ಟಣೆ: ಬಲಿದ ಬವರಕೆ ನೂಱುಮಡಿಯೆನೆ ಕಲುಮರನ ಕಣೆಗಳ ಕಠೋರದ ಹಳಚಿಕೆಗಳುಗ್ಗಡಿಸುತಿರ್ದವು ವೀರರಾಹವದ (ತೊರರಾ. ೬-೨೨-೯). **ಹಳಚಿಗೆ:** ೪. ಕಾಂತಿ; ಹೊಳಪು: ತೊಳತೊಳತೊಳಗುವ ಕರಗತ ಹರಿಣನ ಕಂಗಳ ಹಳಚಿಗೆಯೊ (ಭಕ್ತಿಸ. II, ೪-೫). ೫. ಸ್ವಚ್ಛವಾದುದು; ಹಸನಾದುದು: ಬಿಳಿದಾಗಿ ತೊಳೆದಳ್ಳ ಕಪ್ಪನಲ್ಲವ ತೆಗೆದು ಹಳಚಿಗೆ[ಪಾಠಾಂ. ಕೆ]ಯ ಮಾಡಿ (ಸೂಪಶಾ. ೨-೩೩).

[ಹಳಚು$_1$ (< ಪಳಂಚು$_1$) + -ಇಕೆ]

**ಹಳಚಿಕೆವೆಱು** (ಕ್ರಿ). ನಿರ್ಮಲವಾಗು; ಸ್ವಚ್ಛವಾಗು: ಪಲ್ಲಟವಿಲ್ಲದೊರ್ಮೆಯುಂ ಹಳಚಿಕೆವೆತ್ತ ವಸ್ತ್ರದ ವಿಲಾಸದ ಚೆನ್ನಿಗರಲ್ಲಿ ಮೇಳವಂ ಬಳಸದಿರು (ಶಾಂತೀಶ್ವ. ೧೧-೭೫). [ಹಳಚಿಕೆ + ಪೆಱು$_3$]

**ಹಳಚಿಗೆ** 'ಹಳಚಿಕೆ' ನೋ.

**ಹಳಚು$_1$** 'ಪಳಂಚು$_1$' ನೋ.

**ಹಳಚು$_2$** 'ಪಳಂಚು$_2$' ನೋ.

**ಹಳಚ್ಚಗೆ** 'ಹಳಚಗೆ' ನೋ.

**ಹಳಚ್ಚು** 'ಪಳಂಚು$_1$' ನೋ.

**ಹಳತು** 'ಪಟಿದು' ನೋ.

**ಹಳದಿ, ಪಳದಿ, ಹಲದಿ** (ನಾ). ೧. ಅರಿಸಿನದ ಬಣ್ಣ; ಪೀತವರ್ಣ: ಕಿವಿಯಲಿಕ್ಕಿದ ಬಳಹದೋಲೆ ಹಳದಿಯ ಉಡುಗೆ (ಬಸರ. ೯-೧೦೦); ಹಳದಿ ಪಾರಿಯ ಪಚ್ಚೆ ಚೋನೆಗಪಳಿ ಸುವರ್ಣಾವಳಿಯ ಸಂಧ್ಯಾವಳಿಯುದಯರಾಗದಲಿ ರಚಿಸಿದ ಹಕ್ಕರಿಕೆಗಳ . . . ರಚಿಸಿದರು (ಕುವ್ಯಾಭೀ. ೪-೪೯); ಇಲ್ಲಿ ಕೆಂಪು; ಅಲ್ಲಿ ಹಳದಿ (ಆನಿಕೇ. ೨೦-೧೧). ೨. ಅರಿಸಿನ: 'ಹಳದಿಗಡಿಗೆ' ಪರಾ. Δ **ಪಳದಿ:** ೧. ''ಪಳದಿ — ಹರಿದ್ರಾ'' (ತದ್ಭಕೋ. ೨೫); ಕೆಂಪಸಿತಂ ಪಳದಿ ಪಳುಕು ಪಚ್ಚೆಗಳ ಬಣ್ಣದಿಂದೆ (ಜೈಮಿಭಾ. ೮-೪). ೩. ಹಳದಿಬಣ್ಣದ ಬಟ್ಟೆ: ಸುವರ್ಣಾಪಳಿಯ ಪಳದಿಯ ಚೋನೆಗವಳಿಯ ಪಲಬಗೆಯ ಪಲ್ಲಣದ . . . ಪರುತವಣೆ ಪಸರಿಸೆ (ರಾಜಶೇ. ೬-೧೧ ವ). **ಹಲದಿ :** (೬).

[< ಪ್ರಾ. ಹಲದ್ದೀ, ಹಲದ್ದಾ, ಹಲಿದ್ದಾ./ ಸಂ. ಹರಿದ್ರಾ]

**ಹಳದಿಕಣಗಲು** (ಕ್ರಿ). ಹಳದಿ ಬಣ್ಣದ ಕಣಗಿಲು: (ಮೃಔಗಿ. ೫೩-೧೦೬೩).

[ಹಳದಿ + ಕಣಗಲು (< ಕಣಗಿಲ್$_1$)]

**ಹಳದಿಗಡಿಗೆ** (ನಾ). ಅರಸಿನದಿಂದ ಅಲಂಕೃತವಾದ ಗಡಿಗೆ (?): ಹಕಳಾಡದ ಬಿರುದು ಹಳದಿಗಡಿಗೆ ಹಗಲುದೀವಿಟಿಗೆ ಸಹ ಕೊಟರೂ (ಎಕ. XVI, ಗುಬ್ಬಿ, ೬೯-೩೪; ?).

[ಹಳದಿ + ಗಡಿಗೆ]

**ಹಳದಿಗುಳ್ಳ** (ನಾ). ಒಂದು ಬಗೆಯ ಸಸ್ಯ: ''ಹಳದಿಗುಳ್ಳ, ಆನೆಸುಂಡೆಗಿಡ'' (ಮೃಔಗಿ. ೭೦-೧೪೪೦). [ಹಳದಿ + ಗುಳ್ಳ]

**ಹಳದಿಗೋರಟೆ** (ನಾ). ಹಳದಿಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ: ''ಬಾಲಪುಷ್ಪಃ,— ಹಳದಿಗೋರಟೆ, ಸೇವಂತಿಗೆ'' (ಓಷಧಿ. ೧೧೮); ಹಳದಿಗೋರಟೆ ಸೊಪ್ಪು, ಅಮರದವಳ್ಳಿ . . . ತುಪ್ಪದಲ್ಲಿ ಹಾಕಿ ಕಾಸಿ ಆ ತುಪ್ಪವ ತೊಡೆಯಲು ಬೆಂದ ಹುಣ್ಣು ಮಾಣುವುದು (ವೈದ್ಯಸಾ. II, ೧೬೦).

[ಹಳದಿ + ಗೋರಟೆ (< ಗೋರಂಟೆ)]

**ಹಳದಿಜ್ವರ** (ನಾ). ಕಾಮಾಲೆ ಮತ್ತು ಕಪ್ಪುಬಣ್ಣದ ವಾಂತಿ ಉಂಟಾಗುವ ಉಷ್ಣದೇಶದ ಒಂದು ಬಗೆಯ ಜ್ವರ: ದಕ್ಷಿಣ ಆಫ್ರಿಕ, ಕಾಂಗೋ ಪ್ರಾಂತಗಳಲ್ಲಿ ''ಹಳದಿಜ್ವರ'' ಎಂಬೊಂದು ಭಯಂಕರ ಬೇನೆಯಿದೆ (ಬಾಲಪ್ರ. III, ೧೪೮೮); ಅನಾಫಲಿಸ್ ಮಲೇರಿಯಾ (Malaria) ಜ್ವರವನ್ನೂ ಸ್ಟಿಗೋಮಿಯ ಹಳದಿಜ್ವರ (Yellow fever) ವನ್ನೂ ಹರಡುತ್ತವೆ (ಗೃಹವಿ. ೧೮೫). [ಹಳದಿ + ಜ್ವರ]

**ಹಳದಿಪಾವಟೆ** (ನಾ). ಒಂದು ಬಗೆಯ ಔಷಧಿಸಸ್ಯ: ಹಳದಿಪಾವಟೆ, ಐನಷೆ, ಮಡ್ಡಿ (ಮೃಔಗಿ. ೫೫-೧೧೯೬). [ಹಳದಿ + ಪಾವಟೆ (< ಪಾಪಟೆ$_2$)]

**ಹಳದಿಬಣ್ಣ** 'ಹಳದಿವಣ್ಣ' ನೋ.

**ಹಳದಿಯಂಬರ** (ನಾ). ಹಳದಿಬಣ್ಣದ ವಸ್ತ್ರ: ಒಪ್ಪುವ ನಾಗಚಂಪಕಪ್ರಸರದ ಚೊಲ್ಲೆಹಂ ಹಳದಿಯಂಬರಂ (ಸೂಕ್ತಿಸು. ೮-೪೧೦). [ಹಳದಿ + ಅಂಬರ]

**ಹಳದಿವಣ್ಣ, ಹಳದಿಬಣ್ಣ** (ನಾ). ಅರಿಸಿನದ ಬಣ್ಣ; ಪೀತವರ್ಣ: ಒಸೆದು ಹೂಸುವ ಹಳದಿವಣ್ಣದ ಭಸಿತಮಂ ಹೂಸಿದೆನೊಡಲೊಳಿದೆ ರಸಿಕ ನೋಡೆಂದೆನುತ ತೋಱಿದಳರಿಸಿನವನಬಲೆ (ಬಸವು. ೧೨-೧೭). **ಹಳದಿಬಣ್ಣ:** ಸಿಂಹಗಳು ಸಾಧಾರಣವಾಗಿ ಹಳದಿಬಣ್ಣದವು (ಮುಂಬಯಿ. ೪-೨೦೮). [ಹಳದಿ + ಬಣ್ಣ]

**ಹಳದು** 'ಪಟಿದು' ನೋ.

**ಹಳದುಪ್ಪ** 'ಪಳೆದುಪ್ಪ' ನೋ.

**ಹಳಧರ** 'ಹಲಧರ' ನೋ.

**ಹಳಬ** 'ಪಳಬ' ನೋ.

**ಹಳಬಾಳಗೆ** (ನಾ). ಒಂದು ಬಗೆಯ ಮರ: ಹಳಬಾಳಗೆ (ಕುಡಕ).— ಮಧ್ಯಮ ಆಕಾರದ್ದು. ಕಟ್ಟಿಗೆ ಕೆಲಸಕ್ಕೆ ಬರುವದಿಲ್ಲ (ಕಭಾಗ. ೫೦). [?]

**ಹಳಮೂಕ** (ನಾ). ಒಂದು ಬಗೆಯ ಜೋಳ: ಹಳಮೂಕನ ಜೋಳ, ಉಳಕನ ಜೋಳ, ಈ ಯೆರಡು ಜಾತಿಗಳನ್ನು ಬೇರೆ ಜಾತಿಗಳ ಪೈರಿನಲ್ಲಿ ನಡುನಡುವೆ ಸಾಲುಗಳಾಗಿ ಮಾತ್ರ ಬಿತ್ತುವರು (ಕಭಾಗ. ೨೭೦). [?]

**ಹಳಮೆ** 'ಪಟಿಮೆ' ನೋ.

**ಹಳಮೊರೆ** 'ಪಳಮೊರೆ' ನೋ.

**ಹಳಯಿಗೆ** 'ಪಟಯಿಗೆ' ನೋ.

**ಹಳಲೆ** (ನಾ). ಒಂದು ಬಗೆಯ ಮೀನು: ಹಳಲ ಕಪ್ಪೆಗಳೊಱಲೆ ಬೋಟೆ ಗಿಜಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಲನು (ಹಚಕಾ. ೫-೪೬). 'ಹಱಲ್' ಪರಾ. [?]

**ಹಳವಂಡ** (ನಾ). (ಉಕ) ೧. ಉಮ್ಮಳ; ತಲ್ಲಣ: ಎದೆಯು ನಿಗಿನಿಗಿಕೆಂಡ ಮನವೆಲ್ಲ ಹಳವಂಡ (ಪಯಣ. ೮೭-೧೧); ಇದ್ದೊಬ್ಬ ಕುವರನನು ಕಳಕೊಂಡ ಹಳವಂಡ ಬಯಲಾಯ್ತು ನಿನ್ನ ಬರವಿಗೆ ಸೋದರಾ! (ಚಿಂತನ. ೧೦-೩). ೨. ತಳಮಳ ವನ್ನುಂಟುಮಾಡುವ ಭ್ರಾಂತಿ; ಭ್ರಾಮಕಸ್ವಪ್ನ: ಹಾರೈಸಿದೆಲ್ಲವು ಹಳವಂಡವಾದ ಮೇಲಿನ್ನೇನಿನ್ನೇನು (ಪುರಂದ. ೨-೩೭-೫); ಈ ಹಳವಂಡವೆಲ್ಲ ಹೋಗಿ ಎಲ್ಲವೂ ಸರಿಯಾಗುತ್ತದೆ (ಜನನಾ. ೧೧೬). ೩. ತೀವ್ರವಾದ ಹಂಬಲ; ತವಕ: ಓಡಿಹೋಗ ಬೇಕು, ಶಾಂತಿನಿಕೇತನ ಸೇರಬೇಕು ಎಂಬುದೊಂದೆ ಹಳವಂಡ (ಗಾಳಿಪ. ೬೮); ನೂರಜಹಾನಳ ಹಳವಂಡವೇ ಮಗನನ್ನು ಈ ಮನೆಗೆ ತಂದು ಬಿಟ್ಟಿತೆಂದು ಮಾಸಾಹೇಬರು ನಿಶ್ಚಯಿಸಿದರು (ಕನ್ನಡಿ. ೧೮೧).

**ಹಳವಂಡಕನಸು** 'ಹಳವಂಡಗನಸು' ನೋ.

**ಹಳವಂಡಗನಸು, ಹಳವಂಡಕನಸು** (ನಾ). = ಹಳವಂಡ ೨: ಹಗಲು ಮನಸ್ಸಿನಲ್ಲಿ ಬಂದು ಹೋದದ್ದೇ ರಾತ್ರಿ ಕನಸಿನಲ್ಲಿ ವಿಕಾರವಾಗಿಯೂ ವಿಪರೀತವಾಗಿಯೂ ಬಂದರೆ ಅದು ಹಳವಂಡಗನಸು (ವಿಚಾಮಂ. ೭೨); ನೆನಪಾದಂತೆ ಅವಳಿಗೆ ಅದೆಲ್ಲ ಹಳವಂಡಗನಸಿನಂತೆ ತೋರಿತು (ನಿರಾಭ. ೫೩). **ಹಳವಂಡಕನಸು:** ಏನಿಲ್ಲ ಕಂಚುಕಿಯೆ, ಹಳವಂಡಕನಸಿನಲಿ ಎಚ್ಚತ್ತು ನಾನಿಹೆನು (ಸ್ವದರ್ಶಿ. ೬); ಹಳವಂಡಕನಸನ್ನು ಕಂಡವನು ನೆನೆನೆನೆಸಿ ಯಾಕೇನೂ ತಬ್ಬಿಬ್ಬಲಾಗುವೊಲೆ (ಸವೀಗೀ. ೧೫-೨೦೫). [ಹಳವಂಡ + ಕನಸು]

**ಹಳವಂಡಗೈ** (ಕ್ರಿ). ಭ್ರಾಂತಿಯ ಕನಸನ್ನು ಕಾಣು; ಭ್ರಮೆಗೊಳಗಾಗು: ನನ್ನ ಮನಸ್ಸು . . . ಹಳವಂಡಗೈಯುತ್ತ ಬಾಹ್ಯಜಗತ್ತನ್ನೇ ಮರೆತಿದ್ದಿತೆಂದು ಹೇಳಬೇಕು (ಹೇಮಂತ. ೨೭೬). [ಹಳವಂಡ + ಕೈ$_1$ (<ಕೆಯ್$_1$)]

**ಹಳವಳ** (ನಾ). ಉಮ್ಮಳ; ಕಳವಳ: ಗುಂಡಿಗೆವೊಡೆದವೊಲು ಹಾ ವಿಧಿಯೆ ಹಾಯೆನುತ ಹಳವಳದಿ ಮಿಡಿದು ಕಂಬನಿಗಳನು . . . ಶೋಕಿಸಲು (ಉತ್ತಕ. ४೦-೨೭). 'ಹಳಹಳಿ$_2$' ಪರಾ. [?]

**ಹಳವಳಿಸು** (ಕ್ರಿ). ಉಮ್ಮಳಿಸು; ಕಳವಳಪಡು; ಹಳಹಳಿಸು: ಕಣ್ಕೆಂಪೇಱಿ ಕಯ್ ನಡುಗಿ ಘುಡುಘುಡಿಸಿ ಕೊನೆಮೀಸೆ ಕೆತ್ತಿ ಭುಗಿಭುಗಿಲೆನುತ ಹಳವ [ಪಾಠಾಂ. ಹ]ಳಿಸಿ (ಮಜೆರ. ದೇ. ೭೪-೮); ಕಬ್ಬುವಿಲ್ಲ ಹಾಹಾ ನಮ್ಮ ತೊಡೆದ್ಯೆ ಕೊಲ್ಲದೆ ಕೊಂದೆ ನೀನೆಮ್ಮನೆಂದಬಲೆಯರೆಲ್ಲರು ಹಳವಳಿಸಿದರು (ಭರಚ. ೫೨-೬೯); ಅಳದವರಳು ತಿರ್ದರು ರತಿಕಾಂತನ ಹಳವಳಿಸುವ ಪ್ರಳಾಪದಲಿ (ಮೋಹತ. ೮-೨೫); ನಂದನ ನೀನೆನ್ನ ಹಾಕಿ ಹೋಹರೆ ಹಾಯೆಂದುಱೆ ಹಳವಳಿಸಿದಳು (ನಾಗಕು. ೧೧-४೦). 'ಹಳಹಳಿಸು$_2$' ಪರಾ. [ಹಳವಳ + - ಇಸು$_3$]

**ಹಳವಾತು** 'ಪಟಿವಾತು' ನೋ.

**ಹಳವಾರ** 'ಹಳುವಾರ' ನೋ.

**ಹಳವಾರಿ** (ನಾ). ನಿಕೃಷ್ಟವ್ಯಕ್ತಿ; ಕ್ಷುದ್ರನಾದವನು: ಇಳೆಯೊಳು ಬಲವನ್ನು ಪೇಳಿಕೊಂಡು ಸುಳಿದಾಡಿ ಕಂಡಲ್ಲಿ ಹಳವಾರಿಯಾಗಿ ಹಕ್ಕಲವಾಗಿ ತಿರುಗಿದ ಮೂಢ ನಾನು (ಮೋಕ್ಷದೀ. ೯೧). [ಹಳವಾರ (< ಹಳುವಾರ) + - ಇ$_3$]

**ಹಳವಿ** (ನಾ). ದುರ್ಗಾದೇವತೆ (?): ಅಟ್ಟಹಾಸವ ಮಾಡಿ ಕೊಂದಳು ದುಷ್ಟರನು ನಿಮಿಷದಲಿ ಕಾಲನ ಪಟ್ಟಣದವೋಲಾಯ್ತು ಹಳವಿಯ ಮನೆಯದಾಕ್ಷಣಕೆ (ನಿಭಾಗ. ೫-೬-೩೩). [?]

**ಹಳವಿಗೆ** 'ಪಟಯಿಗೆ' ನೋ.

**ಹಳವಿಗೆಗೋಲು** (ನಾ). ಬಾವುಟದ ಕೋಲು, — ದಂಡ: ಕಪಿಯ ಹಳವಿಗೆಗೋಲ ನೆತ್ತಿಸಿ ಕೆಲಬಲದ ಮನ್ನೆಯರ ಕೈವೀಸಿ . . . ಪಾರ್ಥನಿದಿರಾದ (ಕುವ್ಯಾಭೀ. ೬-೧೩). [ಹಳವಿಗೆ (< ಪಟಯಿಗೆ) + ಕೋಲು$_1$ (< ಕೋಲ್$_1$)]

**ಹಳವಿಸು** 'ಪಳಯಿಸು' ನೋ.

**ಹಳವು$_1$** 'ಪಟುವ' ನೋ.

**ಹಳವು$_2$** (ನಾ). ಸಂಶಯ; ಸಂದೇಹ (?): ಅಳವ ಕೊಳಗದ ಮಾಟ ಆತ ನಿನ್ನಡೆಯೂಟ ಸರಕಳಿದ ಬಳಿಕ ನೋಡೋ ದೇಹ ತಾನುಳಿಯದಿದು ಹಮ್ಮೂ ಬಿಡೋ ಇದಕೆ ಹಳವಿಲ್ಲ (ವಾದಿಕೀ. ೩೮-೩). [?]

**ಹಳವೆ** 'ಪಟವೆ' ನೋ.

**ಹಳವೆಣ** (ನಾ). ಬಲುದಿನದಿಂದ ಸಂಸ್ಕಾರವಾಗದೆ ಉಳಿದ ಹೆಣ; ಕೊಳೆತ ಶವ: ಮಿಗೆ ಹಳವೆಣನ ಹೊಲಸಿಗೆ ಹೇಸಿ ಹರಿದಡಿಗಡಿಗೆ ಸುಯ್ವವನ (ಕುವ್ಯಾಗ. ೩-೧೨). [ಹಳ$_1$ (< ಪಟದು) + ಪೆಣ]

**ಹಳಸಲು** (ನಾ). ೧. ಹಳಸಿಹೋದುದು; ಕೆಟ್ಟುಹೋದುದು: ನೆನ್ನೆ ಮಾಡಿದ ಅನ್ನ ಹಳಸಲಾಗಿದೆ (ರೂಢಿ) (ಗು). ೨. ಮಾಸಿದ; ಮಲಿನವಾದ: ಮಾರನೆಯ ದಿವಸ ಹಳಸಲು ಮುಖದಿಂದ ಮನೆಗೆ ತಿರುಗಿ ಹೋಗುವುದಕ್ಕಿಂತ . . . ನಿದ್ರೆ ಮಾಡುವುದೇ ಲೇಸೆಂದು ತೋರಿತು (ನವನೀ. ೬೬); ಮತ್ತೆ ಅದೇ ಹಳಸಲು ಸಮಕಲು ರಗಳೆ! (ತುಂಗಭ. ೬೦). ೩. ಹಳಸಿಹೋದ; ಕೆಟ್ಟುಹೋದ: ಹಳಸಲು ತಿಂಡಿಗಳನ್ನು ತಿಪ್ಪೆಗೆ ಬಿಸಾಡು (ರೂಢಿ). [ಹಳಸು$_1$ (< ಪಟಸು) + - ಅಲು (< - ಅಲ್$_2$)]

**ಹಳಸು$_1$** 'ಪಟಿಸು' ನೋ.

**ಹಳಸು$_2$** (ನಾ). ೧. ಹಳಸಿ ಕೊಳೆಯಾದುದು; ಹೊಲಸು: ಹಲ್ಲು ದಾಳಿಂಬದ ಬಿತ್ತಂದನಲ್ಲದೆ ಹಲ್ಲೊಳಗಣ ಹಳಸ ಹೇಳಲಿಲ್ಲಾ (ಚಿದಾವ. ೩೮-४). (ಗು). ೨. ಹಳಸಿದ; ಕೊಳೆತ: ಹಳಸುತಿಂಡಿಯ ಹುಳಿವಾಸನೆ ಮೂಗಿಗಡರುತ್ತಿತ್ತು (ಪುನರು. ೨೭೮).

**ಹಳಸುಮಾಡು** = ಮಾಸುವಂತೆ ಮಾಡು: ಈ ದಿನಗಳಲ್ಲಿ . . . ಬದಲಾವಣೆಗಳಾಗಿ ಹಳೆಯದನ್ನು ಹಳಸುಮಾಡಿಬಿಟ್ಟವೆ (ಶಿಕ್ಷದ. ೨೯೦).

[< ಪಟಸು./ ತುಳು. ಹಲಸ್, ಅಲಸ್]

**ಹಳಸು$_3$** 'ಪಲಸು' ನೋ.

**ಹಳಸುವೆಣ** (ನಾ). = ಹಳವೆಣ: ಹಳಸುವೆಣವನ್ನು ಮನೆಯಲ್ಲಿಟ್ಟುಕೊಳ್ಳುವುದು ಧರ್ಮವಲ್ಲಾ (ವಿಜಯ. ೧೭೨). [ಹಳಸು$_1$ (< ಪಟಸು) + ಪೆಣ]

**ಹಳಹಳ** (ನಾ). ಅಧಿಕವಾದ ಕಾಂತಿ, ಪ್ರಕಾಶವನ್ನು ಅನುಕರಿಸುವ ಶಬ್ದ: 'ಹಳಹಳನೆ', 'ಹಳಹಳಿಕೆ$_1$' ಪರಾ.

**ಹಳಹಳನೆ** (ಅ). ಕಾಂತಿಯುಕ್ತವಾಗಿ; ಥಳಥಳನೆ: ಬೆಳೆವ ತುಪ್ಪುಳುಮಿಸೆ ಹಳಹಳನೆ ನಳನಳಿಸೆ ವಿಟವೇಷದಿಂ ವಿಳಾಸಂ ಸೂಸಲಡಿಯಿಡುತೆ ಬರೆ (ಇಹರ. ದೇ. ೩೨-೧೨); ಹಳಹಳನೆ ಹೊಳೆಹೊಳೆದು ದೇವಕಳೆ ಮನಕೆ ಮಂಗಳವಿತ್ತುದು (ಸಿದ್ಧರಾ. ೨-೨४); ಹಳಹಳನಿರ್ದ ತಾರೆಗಳನಾಯ್ದು ಕುಱುಂಕುತುಂ . . . ಬಂದುದಯಾದ್ರಿಯನರ್ಕನೇಱದಂ (ಕುಸುಮಾ. ೧४-೨೧). [ಹಳಹಳ + - ಅನ್$_1$]

**ಹಳಹಳಿ$_1$** (ನಾ). ರಭಸ; ತೀವ್ರತೆ: ಹಳಹಳಿಯೊಳೇಳ್ವ ಘನತತಿ ಚುಮ್ಮು ಚುಮ್ಮೆನುತ್ತಳುರ್ವ ಬಿಸಿಲತಿನಿರ್ಮಳತ್ವಮಂ ತಳೆದು ತೊಳತೊಳಗುವ ಸುಧಾಂಶುಬಿಂಬಂ ವಿರಾಜಿಸಿದುದಾ ಬಂದ ಶರದಾಗಮದೊಳು (ಸಮ್ಯಕೌ. ೧-೧೯).

[ದೇ. ‖ ತೆಲು. ಹಳಹಳಿ, ಹಳಾಹಳಿ]

**ಹಳಹಳಿ$_2$, ಹಳಾಹಳಿ** (ನಾ). ೧. ಕಳವಳ; ತಳಮಳ: ಇದುವರೆಗಿನ ಮನಸ್ಸಿನ ಹಳಹಳಿ ಕಡಿಮೆಯಾಗಿ ಸ್ವಲ್ಪ ಹಾಯೆನಿಸಿತ್ತು (ವೃನಿ. ೩३४); ಒಂದು ಬಗೆಯ ಹಳಹಳಿ

ಅವರ ಮನಸ್ಸನ್ನು ಮುತ್ತಹತ್ತಿತು (ಮೂರುದಾ. ೭೭). ೨. ವಿಷಾದ; ಪಶ್ಚಾತ್ತಾಪ: ಸೌಂದರ್ಯದ ಖಣಿಯೊಂದನ್ನು ಕಳೆದುಕೊಂಡುದಕ್ಕೆ ಹಳಹಳಿಯೆನಿಸಿತು (ಶಿಲಾಮು. ೪೪); ಸಿಟ್ಟಿನ ಕೈಯಲ್ಲಿ ಬುದ್ಧೀ ಕೊಟ್ಟರೆ ಎಲ್ಲವ್ವನಂತೆ ಹಳಹಳಿಗೆ ಗುರಿಯಾಗಬೇಕಾಗುವುದು (ಸ್ಕೂಲಮಿ. ೮೮). **ಹಳಾಹಳಿ:** ೧. ರಾಯರು ಗಿರಿಜಮ್ಮನ ಹಳಾಹಳಿಯನ್ನು ನಿವಾರಿಸಿದರು (ಜೀವನ. ೧೧). [<— ಮರಾ. ಹಳಹಳ, ಹಳಹಾಳ]

**ಹಳಹಳಿಕೆ$_1$** (ನಾ). ಕಾಂತಿ; ತೇಜಸ್ಸು: ಥಳಥಳಿಸಿ ತೋಳ ಮೊದಲುಜ್ಜಳಿಕೆ ಕುಡಿಯಿಟ್ಟು ಪೊಳೆವಂಗಭಂಗಿಯೊಳಿ ಹಳಹಳಿಕೆ ಪೊಜಿಮಟ್ಟು ಪೇರುರದ ಪೊಳೆಪು ಮಣಿಹಾರರುಚಿಯಿಂ ಪೆರ್ಚಿ (ಕುಸುಮಾ. ೭-೧೩೩ ರಗಳೆ); ಒಳಗೆ ಢಗೆ ನಗೆ ಹೊಱಗೆ . . . ಪರಾಭವದ ಕಂದೊಳಗೆ ಕಡುಹಿನ ಕಲಿತನದ ಹಳಹಳಿಕೆ ಹೊಱಗೆ ಮಹೀಶ ಹದನಿದು ನಿನ್ನ ನಂದನನ (ಕುವ್ಯಾಶ. ೨-೧). [ಹಳಹಳ + - ಇಕೆ]

**ಹಳಹಳಿಕೆ$_2$** (ನಾ). ರಭಸ; ತೀವ್ರತೆ: ಸಲಗ ಸಲಗನೊಲುಬ್ಬಿ ಹಳಚುವ ಹಳಹಳಿಕೆಯಲಿ ತಾಗಿದರು ತಳವೆಳಗುಗೊಳಿ ತಳದಿಳೆಯ ಭಾರಕರುಸುರು ನಿಮಿಷದಲಿ (ತೊರರಾ. ೬-೩೩-೧೨). [ಹಳಹಳಿ$_1$ + - ಕೆ]

**ಹಳಹಳಿಕೆ$_3$** (ನಾ). ಕಳವಳ; ತಳಮಳ: ಅವನನ್ನು ಅಗಲಿರುವ ನಮ್ಮ ಮನದ ಹಳಹಳಿಕೆಗಿಂತ ನಮ್ಮನ್ನು ಅಗಲಿರುವ ಅವನ ಮನದ ಹಳಹಳಿಕೆ ನೂರುಪಾಲು ಹೆಚ್ಚು (ರಾಮಾಸ. ೨೭); ನನ್ನಿಂದಿನ ಹಳಹಳಿಕೆಗೆ ಕಾರಣ ತಾನೇನೋ (ಅಹಲ್ಯ. ೧೯-೬).

[ಹಳಹಳಿ$_2$ + - ಕೆ]

**ಹಳಹಳಿಪಡು** (ಕ್ರಿ). ವಿಷಾದಿಸು; ಮರುಗು: ಯಾರು ನೋಡಿದರೂ, ಸುಭಗೆಯಂಥ ಹಸುಗೂಸಿಗೆ ಈ ಬಗೆ ಆಗಬಾರದಿತ್ತೆಂದು ಹಳಹಳಿಪಟ್ಟರು (ಗಂಗಾಸಾ. ೧೯).

[ಹಳಹಳಿ$_2$ + ಪಡು$_1$]

**ಹಳಹಳಿಸು$_1$** (ಕ್ರಿ). ಮಿರುಗು; ಹೊಳೆ; ಪ್ರಕಾಶಿಸು: ನಳನಳಿಪ ಕರ್ಪೂರದ ಸೊಡರ್ಗಳಂ ಬೆಳಬೆಳಗಿ ಹಳಹಳಿಪ ಧೂಪವಿತ್ತಾರತಿಗಳಂ ಬೆಳಗಿ (ಇಹರ. ದೇ. ೨೯-೨೨); ಹಳ[ಪಾಠಾಂ. ಳಿ]ಹಳಿಪ ಕಣ್ಣಳಿಂ ಉಚ್ಚೈಶ್ರವಮನಿಳಿಕೈವ ತುರಂಗದೊಳ್ ಕುಳಿತು (ಮಲೆರ. ಹ. ೨೨೬-೨೬); ಹಳಹಳಿಪ ಕುರುಳುಗಳ ಮಱೆಯಲಿ ತೊಳಪ ಕಂಗಳಲೀಕ್ಷಿಸುತ ಕೆಲಬಲದ ನೆರವಿಯನು (ನಿಭಾಗ. ೧೦-೧೦-೩೬). [ಹಳಹಳ + - ಇಸು$_1$]

**ಹಳಹಳಿಸು$_2$** (ಕ್ರಿ). ೧. ಕಳವಳಿಸು; ತಳಮಳಿಸು: ಪುಂಡರೀಕದಳಾಕ್ಷ ರಾಮರು . . . ಹಳಹಳಿಸಿ ಭಯಗೊಂಡವೋಲನುಕರಿಸಿದರು ದಿಗುಮಂಡಲವನೀಕ್ಷಿಸುತ ಮಾಯಾಮರ್ತ್ಯಭಾವನೆಯ (ನಿಭಾಗ. ೧೦-೫೩-೩); ಕುರೂಪಿಯಾಗಿರುವುದು ಪಾಪವಲ್ಲ, ಕುರೂಪಿಯಾಗಿದ್ದೇನಲ್ಲಾ ಎಂದು ಹಳಹಳಿಸುವುದು ಪಾಪ (ಪ್ರಹಾರ. ೭). ೨. ಹಂಬಲಿಸು; ಕಾತರಿಸು: ಲಲನೆ ರುಕ್ಮಿಣಿದೇವಿ ಮಗನಾಗಮನವನು ಕಂಡು ಹಳಹಳಿಸಿ ನೋಡುತ್ತ . . . ಬೆಱಗಾದಳು (ನಿಭಾಗ. ೧೦-೬೬-೩೬). ೩. ತಲ್ಲಣಿಸು: ಅಳಿಕುಲಾಳಕಿ ಬಂದಳೊಬ್ಬಳೆ ಮಳೆಗೆ ಕೈಯೊಡ್ಡಿ ಬಲಿದು ಮೈ ನಡನಡುಗಿ ಹಲುಹಲು ಹಳಚಿ ನೆನೆದಳು ವಾರಿಯಲಿ ತನು ಹಳಹಳಿಸೆ ಬಳಲಿದಳು ಚರಣದ ಹೊನಲ ಹೋರಟೆಗೆ (ಕುವ್ಯಾಅ. ೯-೨೫). [ಹಳಹಳಿ$_2$ + - ಇಸು$_3$]

**ಹಳಾಹಳಿ** 'ಹಳಹಳಿ$_2$' ನೋ.

**ಹಳಿ$_1$** 'ಪಟಿ$_1$' ನೋ.

**ಹಳಿ$_2$** (ಕ್ರಿ). ಹೊಡೆ; ಥಳಿಸು; ಬಡಿ: ಕರಗಿಸಿಯುಮೆಱೆದುಂ ಕಂಡರಿಸಿಯುಂ ಹಳಿದುಂ ಕೆತ್ತಿಯುಂ ಬೆಚ್ಚುಂ ನಯಸಾಣೆವಿಡಿದುಂ ಸಮೆದುದೆಂಬಂತಿರೆ ತಟತಟನೆ ಪೊಳೆದು ಬಿತ್ತರಂ ಬಡೆದ ಬಿದುಗಲ್ಲ ಸುತ್ತಣ ಮೆಟ್ಟಡಿಯಿಂ (ರಾಮಾಶ್ವ. ೫೨-೧೭). 'ಪಣೆ$_2$' ಪರಾ. [< ಹಣೆ$_2$?]

**ಹಳಿ$_3$** 'ಪಟಿ$_2$' ನೋ.

**ಹಳಿ$_4$** 'ಪಟಿ$_3$' ನೋ.

**ಹಳಿ$_5$** 'ಪಳ್ಳಿ$_1$' ನೋ.

**ಹಳಿ$_6$** 'ಹಲಿ$_1$' ನೋ.

**ಹಳಿ$_7$** (ನಾ). ಜೇನುಗೂಡು; ಜೇನುಹುಟ್ಟಿ: ಉರಿದೋಱ ಜೇನ ಹಳಿಯ ಬಿಟ್ಟಾ ನೊಣನಿರದೆ ತೆರಳುವ ತೆಱದೊಳು ಸರಿದುದು ಸುರುತಾಳ ಲಗ್ಗೆ ದುರ್ಗವ ಬಿಟ್ಟು (ಕುರಾಸಾಂ. ೩೯-೨೮). 'ಪಲ್ಲೆ$_2$' ಪರಾ. [?]

**ಹಳಿಗ** (ನಾ). ಶಿವನ ಗಣಗಳಲ್ಲಿ ಒಬ್ಬನಾದ ಭೃಂಗಿ (?): ಬಿಗುರ್ವರಿಜಂ, ಹಳಿಗಂ, ಕೊಂಡಂ, ಗುಳಿಕಂ, ಮುಂತಪ್ಪ ಭೂತವೇತಾಳಂಗಳ ಮರುಳ್ಪಡೆವೆರಸು . . . ಕೊಳುಗುಳಕೆ ನಡೆತಂದು (ರಾಮಾಶ್ವ. ೧೩೧-೧೭). [?]

**ಹಳಿಗು** 'ಹಳುಗು$_1$' ನೋ.

**ಹಳಿಗೆ** 'ಪಳಿಗೆ$_1$' ನೋ.

**ಹಳಿತ** (ನಾ). ಬೈಗಳು; ದೂಷಣೆ; ನಿಂದೆ: "ಗರ್ಹಣಂ, ಗರ್ಹಣೀಯಂ - ಈ ೨ ಹಳಿತಂ" (ಕಾಶಕ್ಕ. ೨೯೭). [ಹಳಿ$_1$(< ಪಟಿ$_1$) + - ತ$_2$]

**ಹಳಿಬಂಡಿ** (ನಾ). ನಾಲ್ಕುಗಾಲಿಗಳುಳ್ಳ, ತೇರಿನಾಕಾರದ ಎತ್ತಿನ ಬಂಡಿ: ಹೊಸದೊಂದು ಹಳಿಬಂಡಿ ಸಿದ್ಧವಾಗಿದೆ. ತೇರಿನ ಮಾಟದ ನಾಲ್ಕು ಗಾಲಿಗಳು . . . ಸಾಮಾನ್ಯವಾಗಿ ಹಳಿಬಂಡಿಯ ಗಾಲಿಗಳಿಗೆ ಗಡ್ಡಿ ಇರುವದಿಲ್ಲ . . . ಶುಭಕಾರ್ಯಗಳಲ್ಲಿ ಮಾತ್ರ ಈ ಬಂಡಿಗಳ ಅಗತ್ಯ (ಬೆಳಬಾ. ೧೩೫). [ಹಳಿ$_7$ + ಬಂಡಿ$_1$]

**ಹಳಿಮೆ** (ನಾ). = ಹಳಿತ: ನನ್ನ ಹಳಿವುದು ದಂಡ . . . ನಿನ್ನೀ ಹಳಿಮೆ ಮನಸಿನೊಳಗೊಳಗಿನೊಲಿಮೆ! (ಪಲಾನ. ೭೬-೧೦). [ಹಳಿ$_1$(< ಪಟಿ$_1$) + - ಮೆ$_3$]

**ಹಳಿಲ್** (ನಾ). ಒಂದು ಅನುಕರಣಪದ: ನುಡಿಯಂ ಕೇಳಿಯದೆ ಹಳಿಲಂ [ಪಾಠಾಂ. ರಂ]ದು ಮಿಗೆ ಹಮ್ಮದಂಬೋಗಿ (ಸಮ್ಯಕೌ. ೯-೧೭).

**ಹಳಿಲನೆ** (ಅ). ತಟ್ಟನೆ; ಕೂಡಲೆ: ಎಲೆಲೆ ವೃದ್ಧನಾ ಬಿದ್ದನೆಂಬಲ್ಲಿಂ ಮುನ್ನಂ ನಿಲಲಾಱದೆ ಹಳಿಲನೆ ಘಳಿಗೆವಟ್ಟಲ ಮೇಲೆ ಬೀಳೆ (ಸಂಬಿರ. ೬-೪೬೬); ಸಿದ್ಧಪತಿ ಬರುತ್ತಿರೆ ಕಾಣುತೊಱಲಿ ಹಳಿಲನೆ ಬಿದ್ದು (ಸಿದ್ಧರಾ. ೯-೩೧). [ಹಳಿಲ್ + - ಅನೆ$_1$]

**ಹಳಿವು$_1$** 'ಪಟಿ$_2$' ನೋ.

**ಹಳಿವು$_2$** 'ಪಟುವ' ನೋ.

**ಹಳಿಸು$_1$** 'ಹಟಿಸು' ನೋ.

**ಹಳಿಸು$_2$** 'ಪಳಯಿಸು' ನೋ.

**ಹಳು$_1$** 'ಪಟುವ' ನೋ.

**ಹಳು$_2$** (ನಾ). ೧. ನಿಕೃಷ್ಟ; ಕೀಳು: ಲಜ್ಜೆಯ ಭಯದ ಹೋರಟೆಗಳುಕಿ ಹಳುವಾಗಿ ಕುಲದ ಸಿರಿ ತಪ್ಪುವುದಲಾ ಸಾಕಿಳುಹಬೇಕೆಂದೆನುತ ಗಂಗಾಜಲದೊಳಗೆ ಹಾಯ್ಕಿದಳು ಜನದಪವಾದ ಭೀತಿಯಲಿ (ಕುವ್ಯಾಆ. ೩-೨೦). ೨. ಊನ; ಚ್ಯುತಿ: ಗುರುವಾದಡೂ ಆಚಾರಭ್ರಷ್ಟನಾದಡೆ ಅನುಸರಿಸಲಾಗದು ಲಿಂಗವಾದಡೂ ಆಚಾರ ಹಳುವಾದಲ್ಲಿ ಪೂಜಿಸಲಾಗದು (ವಚಶಾ. I, ೨೪೦-೨). 'ಹಳುಹು' ಪರಾ. ೩. ಹಗುರ; ಲಘು; ಸುಲಭ: 'ಹಳುವಾಯಿ$_1$' ಪರಾ. [<— ಮರಾ. ಹಳು, ಹಳೂ]

**ಹಳುಂಗು** 'ಪಣುಂಕು' ನೋ.

**ಹಳುಕು** 'ಪಟಿಕ' ನೋ.

**ಹಳುಗು$_1$, ಹಳಿಗು** (ನಾ). ೧. ಕುಗ್ಗಿದುದು; ಕುಸಿದುದು; ತಗ್ಗಿದುದು. **ಹಳಿಗು:** ೨. ಹಿಂಜರಿಕೆ; ಹಿಮ್ಮೆಟ್ಟುವಿಕೆ: ಸಿಂಗದ ಹಳಿಗುಂ ಮೇಷದ ಪಿಂಗುಂ ಕೋವಿದರ ಭೀತಿಯೆಂಬೀ ಮೂರುಂ ಭಂಗವೆನಿಸಲ್ಕೆ ಪಡೆಯವು ಕಂಗಡಿಸಿಯೆ ಕೊಲ್ಲದಿರವು (ನೀತಿಸಾ. ೨೮೭).

**ಹಳುಗಾಗು** = ೧. ಕುಂದು; ಕುಗ್ಗು: ಹಳಹಳಿಕೆ ಹಳುಗಾ[ಪಾಠಾಂ. ವಾ]ದ ಮುಖ ಮಂಡಲದ ಜಯಮುಖದಾದಿಯಲಿ ದಳಗಳನು ದಂತಾಧರದ ಬಿಗುಹಿನಲಿಳಿದನಾಸನವ (ತೊರರಾ. ೬-೨೦-೩). ೨. ಹೆದರು; ಅಂಜು: ಕರಿಮನದ ರಾವಣನು . . . ಮುನಿಪತಿಗೆಱಗಿದನು ಶರಣೆನುತ ಹಳುಗಾದಂತೆ ಕುಳ್ಳಿರ್ದ (ಕಾಶಿರಾ. ೨-೩೭); ಅಜನುದಧಿಶಯನನ ಮೂರ್ತಿಯನು ಜಲದೊಳಗೆ ಕಾಣದೆ ಹತ್ತಿಳಿದು ಹಳುಗಾದನಂಭೋರುಹದ ಕರ್ನಿಕೆಯ (ನಿಭಾಗ. ೩-೪-೨). [< ಪಣುಂಕು]

**ಹಳುಗು$_2$** (ನಾ). ಅಚ್ಚುಕಟ್ಟಿನ ಭೂಮಿ; ನೀರಾವರಿಭೂಮಿ: ತಂಬುಲಗೆಳೆಯ ಗದ್ದೆ ಕ ೧೦೦ ಮಾಚಿಸೆಟ್ಟಿಯ ಕೆಱೆಯ ಹಳುಗಿನೊಳಗೆ ಕ ೨೦೦ (ಸೌಇಇ. IX - i, ೧೭೪-೨; 1100); ತುಂಬಿದಿಳಿದ ಹಳುಗು ಕಮ್ಮಯಿನ್ನೂಱು (ಸೌಇಇ. IX - i, ೨೦೭-೩೨; 1122); ಆಲಗಟ್ಟದ ಹಳುಗಿನಲು ಬಿಟ್ಟ ಗದ್ದೆ ಕ(೦)ಮ್ಮ ನೂಱ ಮೂವತ್ತು (ಸೌಇಇ. IX -i ೨೫೧-೨೮; 11ನೆಯ ಶತ).

**ಹಳುದಾರಿ** (ನಾ). ಕಾಡಿನ ಹಾದಿ; ಅರಣ್ಯದ ದಾರಿ: ಒಲೆಯ ಮೇಲಣ ಹಾಲು ಚಲದಂಕದತಿಪಂಥ ಲಲನೆಯರೊಲುಮೆ ಹಳುದಾರಿ ಇವು ನಾಲಕ್ಕು ತೊಲಗಿದರೆ ಇಲ್ಲ (ಸರ್ವಜ್ಞ. ೧೪೯೬). [ಹಳ್ಳು$_1$(< ಪಟುವ) + ದಾರಿ]

**ಹಳುಮಯ** (ನಾ). ಕಾಡಿನಿಂದ ಕೂಡಿ ದಟ್ಟವಾದುದು: ಬೆಳೆದು ಕತ್ತಲೆ ಹಬ್ಬಿ ಹಳುಮಯವದಾಗಿರಲ್ ಬೆಳಗು ಹೊಳಕಿದ ಬಳಿಕವಡಗಿತೆಲ್ಲ (ಮನೋವಿ. ೪-೨೪). [ಹಳ್ಳು$_1$(< ಪಟುವ) + - ಮಯ್ತು]

**ಹಳುರೆ, ಹಳುರೇ** (ಅ). ಮೆಚ್ಚುಗೆಯನ್ನು ಸೂಚಿಸುವ ಒಂದು ಭಾವ ಸೂಚಕಾವ್ಯಯ: ಹಳುರೆ ಧಿರುಧಿರು ಭಾಪು ಮಝು ಮಂಗಳೆ ಮಹಾಸತಿಯಾದಿ ಮಾಯಾಲಲನೆಯವಧಾರೆಂಬ ದನಿ ಕೇಳಿಸಿತು ರಘುಪತಿಯ (ತೊರರಾ. ೬-೫೩-೪೯). **ಹಳುರೇ:** ಝಾರೆ ಜಝಾರೆ ಹಳುರೇ ಹೋಹೋ ಮಝಾ ಎಂಬುಲಿ ನೆಗವಿನೆಗಂ ಬಿಟ್ಟು ಮಾಜಾಂತ ಮೇಲಾಳ್ಗಳನಾಗಳ್ ತಳ್ತು ಪೊಯ್ದು (ಕಬ್ಬಿಗಾ. ೨೭೯); ಎಲುವ ಗದೆಯಲಿ ಹಿಟ್ಟುಗುಟ್ಟೋ ಹಳುರೆ ಹಳುರೇ ರಾವುರಾವುರೆಯೆಂದು ಖಳರುಲಿಯೆ (ಕೌಶಿರಾ. ೩೨-೨೧).

**ಹಳುರೇ** 'ಹಳುರೆ' ನೋ.

**ಹಳುವ** 'ಪಟುವ' ನೋ.

**ಹಳುವಟೆ** (ನಾ). ಕ್ಷುಲ್ಲಕ; ಕ್ಷುದ್ರ: ಬಳಿಕಲಾ ಖಳರಿಬ್ಬರುಬ್ಬಿದ ಹಳುವಟೆ [ಪಾಠಾಂ. ವಡೆ]ಯ ಕಪಿಭಟರ ಮೋಹರದೊಳಗೆ ಮೋಹರಿಸಿದರು ಮಾರ್ಗಣಗಣ ಮಹಾಂಬುಧಿಯ (ತೊರರಾ. ೬-೩೧-೮). [<— ಮರಾ. ಹಳವಟ, ಹಳುವಟ]

**ಹಳುವಡು** (ಕ್ರಿ). ಅಡವಿಯ ಪಾಲಾಗು; ಕಾಡಿಗೆ ಹೋಗು: ಪಾಂಡವರು ಬಲ್ಲಿದರೆಂದಡೆ ತಮಗೆ ಹಳುವಟ್ಟು ಹೋಗಲದೇನು (ಚನ್ನವ. ಕ. ೨೧೫-೪೮೧); ಕೋಗಿಲೆಗಳು ಹಳುವಟ್ಟ(ಗಳಹು) ಹೋದ ಬನದಂತಾದೆ ನೋಡವ್ವಾ (ಸರ್ವವ. ೭೨-೩೫). [ಹಳ್ಳು$_1$(< ಪಟುವ) + ಪಡು$_1$]

**ಹಳುವರ** 'ಹಳುವಾರ' ನೋ.

**ಹಳುವಾಯಿ$_1$** (ನಾ). ಹಗುರುತನ; ಸುಲಭತೆ: ಚಗಿದ ತಲೆ ಬೊಬ್ಬಿಡಿಯೆ ಬಳಿಕಾಳುಗಳ ದೇವನು ಮುಷ್ಟಿಬಳಿಗೋಲುಗಳನ್ನೆದಾರೇಳ ಹಳು ಹಳುವಾಯಿಯಸುಗೆಯಲಿ (ಕುವ್ಯಾಕ. ೨೦-೩೬); ಬಾಣಗಳು ಸವೆವನ್ನಬರಲೆಚ್ಚುದು ಮುಂಡ ರಾವಣಿಯ ಮಗುಳೆ ಕಿಗ್ಗಟ್ಟಿನ ಕಠಾರಿಯನುಗಿದು ದಂಡೆಯನೊಡ್ಡಿ ತಿವಿದುದು ಗಗನವನು ಹಳುವಾಯಿಯಲಿ ಹವಣಿಸುತ ರಥದೊಳಗೆ (ತೊರರಾ. ೬-೪೪-೫೬). 'ಗರುವಾಯಿ' ಹೋ. [<ಹಳ್ಳು$_2$]

**ಹಳುವಾಯಿ$_2$** (ನಾ). [ಸಂಗೀತ] (?): ಆಯತದ ಹಳುವಾಯಿ ದರಹಳುವಾಯಿ ಗುಂಡಾಗುಂಡಿ ಮಾನಸಚೇಯವೆನಿಪ ಭ್ರಮರಲೀಲೆಯ ಕುರುಟೆ ರಂಜಿಸಲು (ಬಸವು. ೧೯-೧೫); ಸುರಂಗಿತಮಾಯತಂ ಮಣಿಕಂಪಿತಂ ಹಳುವಾಯಿ ಚೊಕ್ಕಳಮನೂರ್ಧ್ವತವೃತ್ತಿ ಪಾಳಿ ವಿಮೋಕ್ಷಮಿಂಪು ಲಯಾಸ್ಪದಂ . . . ಬೆಡಂಗಮರೆ ಬಾಜಿಸುತೆ ಚಾರುವೀಣೆಯಂ (ವೃಷವಿ. ೧೧-೯). [?]

**ಹಳುವಾರ, ಹಳವಾರ, ಹಳುವರ** (ನಾ). ೧. ಕಷ್ಟವಿಲ್ಲದಿರುವಿಕೆ; ಹಗುರಾಗಿರುವಿಕೆ; ಅನಾಯಾಸ: ಅವರ ಕೃಪೆಯಾಂತರೀ ಬಂಡಿಗಳ್ಪಹಳ ಹಳುವಾರದಿಂದೀ ಕ್ಷಣಂ ಘಳಿಲದಿಂ ಮುಂದಕ್ಕೆ ಸಾಗುತ್ತಲಿಡೆಯೂರ ಪೊಳೆಯಲ್ಲಿ ನೆಲಗೊಂಡು ಮರೆದಪವು (ದುರಪು. ೧೮-೩೪); ಈಗ ಹಳುವಾರ ಅನಸಾಕ ಹತ್ತೈತಿ (ಪಠತೋ. ೧೧). **ಹಳವಾರ:** ೨. ನಿಕೃಷ್ಟವಾದುದು; ಲಘು: 'ಹಳವಾರಿ' ಪರಾ. **ಹಳುವರ:** ೧. ಹಳುವರದ ಮಂಡಿಯಲಿ ವಾಸುಗಿಯಳುಕದವೊಲಾಶಾಗಜಂಗಳು ಬಳುಕದವೊಲ್ . . . ಅಸ್ತ್ರವನು ಕೆನ್ನೆಗೆ ಸೆಳೆದು ಮತ್ತೀ ಮಾತನೆಂದನು (ತೊರರಾ. ೬-೫೧-೬೪). [<— ಮರಾ. ಹಳವಾರ, ಹಳುವಾರ]

**ಹಳುವು** 'ಪಟುವ' ನೋ.

**ಹಳುಹಳು** (ನಾ). ಮೆಚ್ಚುಗೆಯನ್ನು ಸೂಚಿಸುವ ಒಂದು ನುಡಿ: ಹಳುಹಳು ಪೂತು ಸಾರಥಿ ಭಲರೆ ಸಾರಥಿ ಜಾಗುರೆನುತಿರ್ದುದು ಮಹಾರಥರು (ಕುವ್ಯಾದ್ರೋ. ೧೭-೧೧); ಹಳುಹಳು ಮಹಾಧನು ಬೇಡ ಬಿದ್ದರೆ ಕೊಲಿಸಿದವರಾವಲ್ಲವೆನುತಿರ್ದುದು ಭಟವ್ರಾತ (ನಿಭಾಗ. ೧೦-೩೭-೫೦).

**ಹಳುಹಾಯ್** (ಕ್ರಿ). ಅಡವಿಯ ಪಾಲಾಗು; ಅರಣ್ಯವನ್ನು ಸೇರು: ಅಂಜಿ ಹದಿನಾಲು ಮಂದಿ ಹಳುಹಾಯ್ದರು ಎಂಟು ಬಂಟರು ಕಂಟಕನಾಶವಾದರು (ಮೋಳಮಾ. ೨೩೦-೭೬೩). [ಹಳ್ಳು$_1$(< ಪಟುವ) + ಹಾಯ್$_1$ (< ಪಾಯ್$_1$) ]

'**ಹಳುಹು** (ನಾ). ಚ್ಯುತಿ; ಕೊರತೆ: ಸತ್ಕಕೆ ಹಳುಹು ಬರದೆಂದಂತರಂಗದಿ ನಿಲಿಸು ಧರ್ಮದೊಳಹಿತವಿಡಬೇಡೆಂದಳಿಂದುಮುಖಿ (ಜನಭಾ. ೪೯-೨೮). [ಹಳ್ಳು$_2$ + - ಹು$_2$ (<- ಪು$_2$)]

**ಹಳಿ** 'ಪಟು$_1$' ನೋ.

**ಹಳಿಕೆರ** 'ಪಳಿಗೆರ್ಪು' ನೋ.

**ಹಳಿಗನ್ನಡ** 'ಪಟಗನ್ನಡ' ನೋ.

**ಹಳಿಗಲೆ** (ನಾ). ಹಳೆಯ ಗಾಯದ ಗುರುತು: ಅಮರರಾಯುಧದ ಪಡಿಮುಖದ ಹಳಿಗಲೆಯ ಕರುಳ್ಗಳನಡಸಿ ಬಸುಜಲಿ ಹೊಲಿದ ಹೊಲಿಗೆಯ ದಡಿಗರಕ್ಕಸರಾಯರಿದ್ದುದು ಕೋಟಿಸಂಖ್ಯೆಯಲಿ (ತೊರರಾ. ೩-೭-೫). [ಹಳಿ$_1$(< ಪಟದು) + ಕಲೆ$_2$]

**ಹಳಿಗೆರಹು** 'ಪಳಿಗೆರ್ಪು' ನೋ.

**ಹಳಿತಲೆ** (ನಾ). ಹಳೆಯ ತಲೆಮಾರಿನವನು; ಹಿಂದಿನ ತಲೆಮಾರಿನವನು: ಹೀಗೆ ಹಾಡುತ್ತಾ ಇದ್ದರು ಅಂತ ಹೊಗಳೋದನ್ನು ಹಳೇತಲೆಗಳ ಬಾಯಲ್ಲಿ ಕೇಳ್ತಾ ಇದ್ದೆ (ಸಂಗೀತ. ೧೪). [ಹಳಿ (< ಪಟದು) + ತಲೆ$_1$]

**ಹಳಿದಿನ** (ನಾ). ಮುಪ್ಪಿನ ದಿನಮಾನ; ವಾರ್ಧಕ್ಯದ ಕಾಲ: ಹಳಿದಿನದ [ಪಾಠಾಂ. ಹಲವುದಿನ] ತಾಯ್ತಂದೆಗಳ ಬಿಡದಲಸದವರನು ಹೊತ್ತು ತೊಳಲಿದೆನಿಳೆಯೊಳುಳ್ಳ ಸಮಸ್ತತೀರ್ಥಕ್ಷೇತ್ರಗಿರಿವನವ (ತೊರರಾ. ೨-೫-೧೫.) [ಹಳಿ (< ಪಟದು) + ದಿನ]

**ಹಳಿನಂಟು** (ನಾ). ಹಿಂದಿನಿಂದ ನಡೆದು ಬಂದ ಸಂಬಂಧ: ಹಳಿನಂಟಿಂದ ಬುದ್ಧಿಯ ಹೇಳಲಾಂ ಬಂದೆ (ಕೌಶಿರಾ. ೧೮-೩೩). [ಹಳಿ (< ಪಟದು) + ನಂಟು$_2$]

**ಹಳಿನೀರು** 'ಪಟನೀರ್' ನೋ.

**ಹಳಿನೇಹ** (ನಾ). ಹಿಂದಿನ ದಿನಗಳಲ್ಲಿದ್ದ ಪ್ರೀತಿ,—ಒಲುಮೆ: ಹಳಿನೇಹವಿಹುದೆಂದು ಎಳಸಿ ಹೋಗುವನೆಗ್ಗ ಕಳವಳವಕ್ಕು ಹಳಿಯಕ್ಕು (ಸರ್ವಜ್ಞ. ೧೮೦೭). [ಹಳಿ (< ಪಟದು) + ನೇಹ]

**ಹಳಿಪೈಕ** 'ಪಟದು' ಪರಾ.

**ಹಳಿಮರ** 'ಪಟವರ' ನೋ.

**ಹಳಿಮಾತು** 'ಪಟವಾತು' ನೋ.

**ಹಳಿಯ** 'ಪಟದು' ಪರಾ.

**ಹಳಿಯಪಯಿಕ** 'ಪಟದು' ಪರಾ.

**ಹಳಿಯಪೈಕ** 'ಪಟದು' ಪರಾ.

**ಹಳಿಯುಳಿಕೆ** 'ಪಳೆಯುಳಿಕೆ' ನೋ.

**ಹಳಿವರ** 'ಪಟವರ' ನೋ.

**ಹಳಿಹಗೆ** 'ಪಟವಗೆ' ನೋ.

**ಹಳಿಹುಣ್ಣು** 'ಪಟೆವುಣ್' ನೋ.

**ಹಳೇಪೈಕ** 'ಪಟದು' ಪರಾ.

**ಹಳ್ಳ** 'ಪಳ್ಳ' ನೋ.

**ಹಳ್ಳಂಬರಿ** (ಕ್ರಿ). ಪ್ರವಾಹವಾಗಿ ಹರಿ: ದನಿಯ ಹನಿ ಕೂಡುತೊಯ್ಯನೆ ಹತಾಶೆ ಹಳ್ಳಂಬರಿದು, ದುಮುಕಿ, ಕೊಚ್ಚತ್ತಲ್ಲಿ ನೆಚ್ಚಿನುತ್ತರಮುಖಿಯ ಕೆಚ್ಚಿ ನೋಡದ ಪುಟ್ಟುನುಚ್ಚುನುರಿವೋಗ! (ಶ್ರೀರಾಮಾ. ೩೬೪-೩೨೨). [ಹಳ್ಳ (< ಪಳ್ಳ) + ಪರಿ$_2$]

**ಹಳ್ಳಗದ್ದೆ** 'ಪಳ್ಳಗೆಟ್ದೆ' ನೋ.

**ಹಳ್ಳಿ** 'ಪಳ್ಳಿ$_1$' ನೋ.

**ಹಳ್ಳಿಕಾತಿ** (ನಾ). ಹಳ್ಳಿಯ ಹೆಣ್ಣು; ಗ್ರಾಮೀಣ ಹೆಂಗಸು: ಕೊಳಲ ರಾಗದ ರಹಿಯೊ ಕಲ್ಲಿಯ ಕಲಸುಗೂಳೋ ಹಳ್ಳಿಕಾತಿಯರೊಳಗುಡಿಯ ಹಾದರವೊ (ಕುವ್ಯಾಸ. ೨-೭೮). [ಹಳ್ಳಿ (< ಪಳ್ಳಿ$_1$) + - ಕಾತಿ$_3$]

**ಹಳ್ಳಿಕಾರ** 'ಪಳ್ಳಿಕಾಟಿ' ನೋ.

**ಹಳ್ಳಿಕಾಱ** 'ಪಳ್ಳಿಕಾಱ' ನೋ.

**ಹಳ್ಳಿಗ** 'ಪಳ್ಳಿಗ' ನೋ.

**ಹಳ್ಳಿಗತನ** (ನಾ). ಹಳ್ಳಿಯವನ ನಡೆ ನುಡಿ; ಗ್ರಾಮೀಣವಾದ ನಡವಳಿಕೆ: ಒಂದು ದಿನವೂ ಅವನ ಹಳ್ಳಿಗತನವು ಹೊರಬೀಳಲಿಲ್ಲ (ಪರಿಣೀ. ೧೦). [ಹಳ್ಳಿಗ (< ಪಳ್ಳಿಗ) + - ತನ]

**ಹಳ್ಳಿಗಮಾರ** (ನಾ). ಹಳ್ಳಿಗ; ಅನಾಗರಿಕ: ನನ್ನೊಡನೆ ಕೆಲಸಕ್ಕೆ ಒಬ್ಬ ಹಳ್ಳಿಗಮಾರ ಪಠಾಣನನ್ನು ನಿಯಮಿಸಿದ್ದಾರೆ (ಝಾರಾಣಿ. ೩೫೮). [ಹಳ್ಳಿ (< ಪಳ್ಳಿ$_1$) + ಗಮಾರ]

**ಹಳ್ಳಿಗಾಡ** (ನಾ). ಹಳ್ಳಿಗಾಡಿನಲ್ಲಿರುವವನು; ಗ್ರಾಮವಾಸಿ: ಹಿರೇರ ಕಾಲದಿಂದ ಕಟ್ಟೇ ಮೇಲೆ ಕೂತು ಹೇಳುವ ಗೊಡ್ಡುಕಥೆಗಳು. ನಮ್ಮ ನಿಮ್ಮಂಥ ಹಳ್ಳಿಗಾಡರಿಗೆ ಸರಿ ಬೀಳಬಹುದು (ದಾಸಹು. ೬೦). [ಹಳ್ಳಿಗಾಡು + - ಅ$_7$]

**ಹಳ್ಳಿಗಾಡು** (ನಾ). ಹಳ್ಳಿಯ ಪರಿಸರ; ಗ್ರಾಮೀಣಪ್ರದೇಶ: ನಿಮಗೆ ಅವರ ಹೆಸರು ಗೊತ್ತಿಲ್ಲವೆಂದರೆ ನೀವು ಯಾವುದೊ ಹಳ್ಳಿಗಾಡಿನವರಿರಬೇಕು (ನಿಷ್ಕಾಮ. ೧೪೭); ಹಳ್ಳಿಗಾಡಿನಲ್ಲಿ ಹುಡುಕಿ ನೋಡಿದರೂ ಅಂಥವನೊಬ್ಬ ರೈತ ಸಿಗುತ್ತಿರಲಿಲ್ಲ (ಪುನರು. ೩೦೯). [ಹಳ್ಳಿ (< ಪಳ್ಳಿ$_1$) + ಕಾಡು$_2$]

**ಹಳ್ಳಿಮುಕ್ಕ** (ನಾ). = ಹಳ್ಳಿಗಮಾರ: ನಮ್ಮ ಹಾಗೆ ಒಂದೂ ತಿಳೀದ ಹಳ್ಳಿಮುಕ್ಕರಲ್ಲ ನೀವು (ಮಾರ್ಗದ. ೧೫೦). [ಹಳ್ಳಿ (< ಪಳ್ಳಿ$_1$) + ಮುಕ್ಕ$_3$]

**ಹಳ್ಳಿವಾಡ** (ನಾ). = ಹಳ್ಳಿಗಾಡು: ಈ ಪಕ್ಕದಲ್ಲಿ ವರ್ತಕರೂ ಅವರ ಗುಮಾಸ್ತರೂ ಒಕ್ಕಲಿಗರೂ ಹಳ್ಳಿವಾಡದ ಜನರೂ ಸೇರಿದರು (ಇಂಗ್ಲಂಡ. ೧೪೮); ಹೆಚ್ಚಿನ ದುಶ್ಚಿಂತೆ, ತನ್ನ ಹಳ್ಳಿವಾಡ ತಂದೆ ಪಟ್ಟಣದ ಹುಡುಗರ ಅಪಹಾಸ್ಯಕ್ಕೆಲ್ಲಿ ಗುರಿಯಾಗುವನೋ ಎಂದು (ಇಪ್ಪತ. ೩೯೦). [ಹಳ್ಳಿ (< ಪಳ್ಳಿ$_1$) + ವಾಡ$_2$]

**ಹೞ್** (ನಾ). ಒಂದು ಅನುಕರಣಶಬ್ದ: ಹೞ್ಣೆಂದೇಡಿಸಿ ರಕ್ತಮಂ ಕುಡಿದು ಪೆರ್ಗಂಡಂಗಳಂ ಸೂಸುತುಂ (ಧರ್ಮಾಮೃ. ೬-೧೮೯); ಪಲ್ಗಿಱಿದು ಹೞ್ಣೆನುತುರ್ಬುತೆ . . . ತಾಂ ನೆಱೆ ನಗಿಸಿತ್ತು ತಾಪಸಕುಮಾರರನಲ್ಲಿಯದೊಂದು ಮರ್ಕಟಂ (ಗಿರಿಕ. ೫-೨೦). 'ಪರ್' ಪರಾ.

**ಹೞಗೋಲು** 'ಪೞಿಗೋಲ್' ನೋ.

**ಹೞಲ್** (ನಾ). ಒಂದು ಬಗೆಯ ಮೀನು: ಸಾನೆ ಮೂಗುಂ ಹೞಲ್ ಮುಡಿಲುಂ ಪಂದಿಗನೆಂಬ ಮೀನ್ದೆಗೆದನಾ ಭಕ್ತಂ ಮಹಾಲೀಲೆಯಿಂ (ತ್ರಿಪುವಿ. ೫೭-೮). 'ಹಳಲೆ' ಪರಾ. [<— ತಮಿ. ಪೞಲಾ]

**ಹೞಲೆ$_1$** 'ಪೞಲೆ' ನೋ.

**ಹೞಲೆ$_2$** (ನಾ). ಹಲ್ಲೆ; ಬಿಲ್ಲೆ: ಹ[ಪಾಠಾಂ. ಪ]ೞಲೆಯಂ ಮಾಡಿ ಕೆನೆಮೊಸರು ಸಿಹಿಬೆಣ್ಣೆಯಿಂ ನೆಱೆ ತಡಹಿ . . . ಹಂಚಿನೊಳು ಬೇಯಿಸೆ ಸಿತಕರೊಟ್ಟಿವೆಸರಂ ಪಡೆದುದು (ಸೂಪಶಾ. ೧-೧೭). [?]

**ಹೞಿ$_1$** 'ಪೞಿ$_1$' ನೋ.

Δ **ಹೞಿ$_2$** 'ಪರಿ$_2$' ನೋ.

**ಹೞಿ$_3$** 'ಪೞಿ$_3$' ನೋ.

**ಹೞಿ$_4$** (ನಾ). ದಾಕ್ಷಿಣ್ಯ; ಭಿಡೆ: ಕೂಡಲಸಂಗಮದೇವಾ ನಿಮ್ಮ ಹಂಗೇನು ಹೞಿಯೇನು ಆನುಭಯಲಿಂಗಜಂಗಮದ ಮೊಱೆಹೊಕ್ಕು ಬದುಕಿದೆನು (ಬಸವ. ೩೯೦). 'ಹಂಗುಹೞಿ' ಪರಾ. [?]

Δ **ಹೞಿಕಾಱ** 'ಪರಿಕಾಱ' ನೋ.

**ಹೞಿಕು** 'ಪೞುಕು' ನೋ.

**ಹೞಿಕುಗಡ್ಡ** 'ಹೞುಕುಗಡ್ಡ' ನೋ.

**ಹೞಿಗಂಡು** (ನಾ). (ಅಲಂ)ಅಲ್ಪವಾದ ಪೌರುಷ; ಹೀನಪೌರುಷ: ಎೞಗಿ ಶರಣೆಂದು ಬಾಳದೆ ಹೞಿಗಂಡಿಂದಾತನೇವನೆಂದುಲಿವನ ಬಾಯೊೞಿಯಾಗಲ್ಕೂರಲಗಂ ಕಿೞಿಹದೆ ಮಾಣ್ದಪನೆ ಹಬ್ಬಣಂ ವಿಜಿತರಣಂ (ಕ.ಇ. I, ೨೫-೪೫; 1186). [ಹೞಿ$_3$ (< ಪೞಿ$_3$) + ಗಂಡು]

**ಹೞಿಗಡಿ, ಹರಿಗಡಿ$_1$** (ಕ್ರಿ). ಸೀಳಿ ಹಾಕು; ಪೂರ್ಣವಾಗಿ ಕತ್ತರಿಸು, —ತುಂಡರಿಸು: ಇವನ ತಲೆಯ ಹೞಿಗಡಿವೆನು (ಪ್ರಭಂಜ. ೨-೧೫೮); ನಿನ್ನ ತೋಳುಗಳ ಹೞಿಗಡಿದು ಬಿಸುಡುವೆನು (ಸಾಳ್ವಭಾ. ೧೭-೩೫). **ಹರಿಗಡಿ$_1$**: ಕಾಲಾಳ ಮೇಲಾಳ ಜೋಧರಂ ಹರಿಗಡಿದು ಬಿಡೆ (ತುರಂಗ. ೭೩-೪೩); ಶಿರ ಬಾಗಿದರೆ ಹರಿಗಡಿಯುವೆಯಾ ಗುರುರಾಜಾ ? (ತುಂಗಭ. ೪೧). [ಹೞಿ$_1$ (< ಪೞಿ$_1$) + ಕಡಿ$_2$]

**ಹೞಿಗರುಳು** (ನಾ). ಕತ್ತರಿಸಿ ಹೋದ ಕರುಳು; ತುಂಡಾದ ಕರುಳು: ಹೞಿಗರುಳ ನೆಣವಸೆಯ ಮೂಳೆಯ ಮುೞಿಕುಗಳ ಕಡಿಖಂಡಮಯವಾಯ್ತಖಿಳ ಚತುರಂಗ (ಕುಮಾದ್ರೋ. ೧೮-೩೩). [ಹೞಿ$_1$ (< ಪೞಿ$_1$) + ಕರುಳು (< ಕರುಳ್)]

**ಹೞಿಗವಿ** (ನಾ). (ಅಲಂ) ಕೀಳುಮಟ್ಟದ ಕವಿ; ಕ್ಷುದ್ರಕವಿ; ಅಳಿಗವಿ: ಹೞಿ[ಪಾಠಾಂ. ಅರಿ]ಗವಿಗಳ ಕಬ್ಬಂಗಳ ಹೊೞಗಳಿಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ಬೞಿ ತಾೞಿಗೆ ಬೀೞಿಗವೆತ್ತೞತತ್ತೞವೆಕ್ಕಸಕ್ಕಮುಸ್ತಂಬ್ಯಸ್ತಂ (ಗಿರಿಕ. ೧-೨೩). [ಹೞಿ$_3$ (< ಪೞಿ$_4$) + ಕವಿ$_5$]

**ಹೞಿಗೊಯಿ** (ಕ್ರಿ). ಹರಿದು ಹೋಗುವಂತೆ ಕತ್ತರಿಸು, — ಸೀಳು: ಹೞಿಗೊಯಿದ ಮಿಂಚಿನ ಗೊಂಚಲ ನೆಱೆವೋತು ಇಂದುಕೋಟಿಪ್ರಭೆಯ ಶಾಂತಿಯನೊಳಕೊಂಡು . . . ಬದುಕಿದೆನು (ಬಸವ. ಕ. ೫೫೩ - ೧೩೨೯). [ಹೞಿ$_1$ (< ಪೞಿ$_1$) + ಕೊಯಿ (< ಕೊಯ್)]

**ಹೞಿಗೋಲು** 'ಪೞಿಗೋಲ್' ನೋ.

**ಹೞಿತಿನ್** 'ಪೞಿತಿನ್' ನೋ.

**ಹೞಿತಿನಿಸು** (ಕ್ರಿ). ಕತ್ತರಿಸಿ ತಿನ್ನಿಸು; ಕಿತ್ತು ತಿನ್ನಿಸು (?): ನವಖಂಡವ ಕೂಡಿ ಕಡಿಕಡಿದು ನೋಡು ಆ ಶೂಲವೈದ್ಯೆದು ಮುಖವಾಗಿ ಹಾಯುವಾಗ (ಆ ಹಾವಿನಿಂದ?) ಹೞಿತಿನಿಸಿ ನೋಡು (ಬಸಹ. ೩೫-೯೧). [ಹೞಿತಿನ್ (< ಪೞಿತಿನ್) + - ಇಸು$_3$]

**ಹೞಿತೆ** (ನಾ). ಅವಕಾಶ (?): ಹೞೆಯ ಕಾಣುತ ಉಡುಗೊಱೆಯನೀವುದಕಿನ್ನು ಹೞಿತೆಯಲ್ಲವು ತನಗೆನುತ ಮಱೆಗಾದಿತ್ಯನು ಪೋಗಲರಿ ತಾವರೆಯು ಮುಖ ದೆಱೆಯಲಮ್ಮದೆ ಮುಸುಕಿದುದು (ಅಮುಸಾಂ. ೩-೪೫). [?]

**ಹೞಿದಲೆ** 'ಪೞಿದಲೆ' ನೋ.

**ಹೞಿದಲೆಯ** (ನಾ). ತಲೆಯ ಮೇಲೆ ಚೆನ್ನಾಗಿ ಕೂದಲಿಲ್ಲದವನು; ಹರಕುಕೂದಲುಳ್ಳ ತಲೆಯವನು: ಗುಳಿಗಣ್ಣಂ, ಹೞಿದಲೆಯಂ (ಶಮದ. ೭೬ ಪ್ರಯೋ). [ಹೞಿದಲೆ (< ಪೞಿದಲೆ) + - ಅ$_7$]

**ಹೞಿದಳ** (ನಾ). ಛಿನ್ನಭಿನ್ನವಾದ ಸೈನ್ಯ: ಪಾರ್ಥನ ತೞುಬಿದನು ನಿನ್ನಾತ ಸೈರಿಸಿ ಹೞಿದಳವ ಕೂಡಿದನು ಕಲಿ ಮಾಡಿದನು ಕಾಲಾಳ (ಕುಮಾಗ. ೧-೪೨). [ಹೞಿ$_1$ (< ಪೞಿ$_1$) + ದಳ$_3$ ( = ದಲ)]

**ಹೞಿದೊಗಲು** 'ಪೞಿದೊವಲ್' ನೋ.

**ಹೞಿಪಡು** 'ಪೞಿವಡು' ನೋ.

**ಹೞಿಮಣ್** (ನಾ). ಹೆಂಟೆ ಹಾಗೂ ಕಲ್ಲಿನ ತುಂಡುಗಳಿರುವ ಮಣ್ಣು; ಗಂಟುಗಂಟಾದ ಮಣ್ಣು: ಅೞಿಯದ ಬಾಲಂ ಬೀದಿಯ ಹೞಿಮಣ್ಣಂ ಮಾಡಿದೊಂದು ಹಾಹೆಯ ತೆಱದಿಂ ತೞಬೞಿಕಂ ವಿಕಟಾಕೃತಿ ನೆಱೆ ನಿಷ್ಠುರನಿವೃತಹುಂಡ ಸಂಸ್ಥಾನಂಗಳ್ (ಶಾಂತೀಶ್ವ. ೯-೧೦೭). [ಹೞಿ$_3$ (< ಪೞಿ$_3$) + ಮಣ್]

**ಹೞಿಮಾತು** (ನಾ). (ಅಲಂ) ಖಂಡಿಸುವ ನುಡಿ; ಪ್ರತಿವಾದದ ಮಾತು: ಆರನಾರಾಡಿಸುವರೆಂಬುದನಾರು ಬಲ್ಲರು ಸಾಕು ಬೞಿಯ ವಿಚಾರವಂತಿರಲಿನ್ನದೇ ಹೞಿ ಮಾತನಾಡಿದರೆ ಸಾರಲೞಿವವೆ ನಮಗೆ ನಮ್ಮ ಮನೋರಥಂಗಳು (ಪ್ರಭುಲೀ. ೭-೬೨). [ಹೞಿ$_1$ (< ಪೞಿ$_1$) + ಮಾತು$_1$]

**ಹೞಿಮುೞಿ, ಹರಿಮುರಿ** (ನಾ). ಅಲ್ಲಲ್ಲಿ ಅಲ್ಪಸ್ವಲ್ಪ ಭಿನ್ನವಾಗುವಿಕೆ; ಖಂಡಸ್ಫುಟಿತ: ಕೈದುವಿದೆಕೋ ತನ್ನ ತನುವನು ಹೊಯ್ದು ನೋಡಾ ನೀನು ನಿನ್ನಾಪನಿತು ಸತ್ವದಲಿ ಕೂಡಲೊಳಗೊಂದಿನಿತು ಹೞಿಮುೞಿಯಾದರಕಟಾ ನಾನು ಸಿದ್ಧನೆ (ಪ್ರಭುಲೀ. ೧೯-೨೫); ಹೞಿಮುೞಿಯಿಲ್ಲೊಂದು ಕುೞುಹಿಲ್ಲ (ಪರಬೋ. ೪-೮-೯). **ಹರಿಮುರಿ**: ಸಮಾಜ ಹರಿಮುರಿಯಾಗದಿರೆ ಸಲ್ಲ (ಹಬ್ಬರ. ೮೪೨-೧೪); ಮುಂಡನ ವೇಗದಲ್ಲಿ ಒಂದಿಷ್ಟು ಹರಿಮುರಿ ಆಗತಕ್ಕುವೆ (ದೇಶನ್ನ. ೭೬). [ಹೞಿ$_3$ (< ಪೞಿ$_3$) + ಮುೞಿ$_2$]

**ಹಱಿಮೂಲೆ** (ನಾ). ಸಂದುಗೊಂದು: ನಡೆತಂದು ಹಱಿಮೂಲೆಗೊಂಬ ಹುಲಿ ಕರಡಿಯಂ ಜಡಿವ ಹೂಂಕೃತಿಗರಣ್ಯದ ಭೂತ ಬೇತಾಳವಡೆ ಸುತ್ತಿ ಮುತ್ತಿ ಬೊಬ್ಬಿಟ್ಟು ಝುಂಕಿಸಿದುವಾ ಕೌಶಿಕನ ಪ್ರೇರಣೆಯೊಳು (ಹಚಕಾ. ೯-೧೩).

[ಹಱಿ$_1$ (< ಪಱಿ$_1$) + ಮೂಲೆ$_1$]

**ಹಱಿಯೆಸು** 'ಪಱಿಯೆಸು' ನೋ.

**ಹರಿಯೊದೆ** (ಕ್ರಿ). ತೊರೆ; ಕಳಚಿಕೊಳ್ಳು; ಬಿಡಿಸಿಕೊಳ್ಳು: ಮಹಾಪಾತಕವ ಕೆಡ ನೂಂಕಿ ತನುವ ಪಾವನ ಮಾಡಿ ಸಂಸಾರಬಂಧನವ ಹಱಿಯೊದೆದು . . . ಅನವರತ ಸೌಖ್ಯಗೊಡುಗೆ (ಲಶಿಚಂ. ೪೧-೧೧). [ಹಱಿ$_1$ (< ಪಱಿ$_1$) + ಒದೆ$_1$]

**ಹಱಿವಾಯ್** 'ಪಱಿವಾಯ್' ನೋ.

**ಹಱಿವು** 'ಪಱಿವು' ನೋ.

**ಹಱಿಸು** 'ಪಱಿಯಿಸು' ನೋ.

**ಹಱಿಸೂಱೆ** (ನಾ). ಸಂಪೂರ್ಣವಾಗಿ ಕಿತ್ತುಕೊಳ್ಳುವುದು; ಅಧಿಕವಾದ ಸೂರೆ: ನಿಪ್ಪೊಸತಪ್ಪ ವಿಲಾಸಂ ಸುರಸತಿಗೊಪ್ಪಂಬಡೆದಮರನ ಮನಮಂ ಹಱಿಸೂಱೆ ವಿಡಿದುವಾಗ (ಜಯಕಾ. ೧೩-೪೯). [ಹಱಿ$_1$ (< ಪಱಿ$_1$) + ಸೂಱೆ]

**ಹಱಿಹಂಚು, ಹರಿಹಂಚು** (ನಾ). ೧. ಚೂರುಚೂರು; ಛಿನ್ನಭಿನ್ನತೆ: ಗುಹೇಶ್ವರನೆಂಬ ಲಿಂಗದ ಘನಘಟ್ಟಿಯನಱಿವಡೆ ನಿನ್ನಱಿವೆಲ್ಲವ ಹಱಿಹಂಚ ಮಾಡಿ ನೀನಱಿ ಮರುಳೇ (ಅವಚಂ. ೧೩೧-೭೦೦). ೨. ಚೆಲ್ಲಾಪಿಲ್ಲಿ; ಚೆದುರುವಿಕೆ: ಧರೆಗೆ ದುರ್ಜನರಾದ ತುರುಕರ ಬಲವನು ಹಱಿಹಂಚ ಮಾಡಿಯೋಡಿಸಿದ (ಕಂಸವಿ. ೧೭-೫). ೩. ಹಾಳು; ಕೇಡು; ನಾಶ: ಹರಭಕ್ತಿಯಿಂದಱುಪಿ ಹಱಿಹಂಚ ಮಾಡಿದಂ (ಕಾಂಠ. ದೇ. ೨೮೭-೨೪). **ಹರಿಹಂಚು:** ೨. ಇನ್ನುಳಿದ ಭಾಗವು ಹಲವಾರು ತುಂಡುಗಳಾಗಿ ಸಣ್ಣಪುಟ್ಟಸಂಸ್ಥಾನಗಳಲ್ಲಿ ಹಾಗು ನಿಜಾಮರಾಜ್ಯದಲ್ಲಿ ಹರಿಹಂಚಾಗಿತ್ತು (ಕಸಾಚ. ೨೪೨); ಸರದಾರರ ಪಡೆಯು . . . ಅವರ ಸೈನ್ಯವನ್ನು ಚದುರಿಸಿ ಹರಿಹಂಚು ಮಾಡಿತು (ಸಕಪ್ಪ. IX, ಪ್ರಸ್ತಾವನೆ).

ಹಱಿಹಂಚಾಗು = ೧. ಚೂರುಚೂರಾಗು; ಛಿದ್ರವಾಗು: ಕೂಡೆ ಹಱಿಹಂಚಾದ ತಂದೆಯ ಗೂಡ ನೋಡದ ಮುನ್ನ ಕಂಬನಿ ಮೂಡಿ ಮುಳುಗಿದವಾಲಿ ಕಾಣವು ಪಿತೃಕಳೇವರವ (ಕುಮ್ಮಾದ್ರೋ. ೧೯-೮); ಸೊಬಗೆಯರು ಪಂಚಗುರುಗಳ ಪಾಡಿದರು ಪಾತಕ ಹಱಿಹಂಚಾಗಿ ಹರಿದು ಹೋಹಂತೆ (ಭರಚ. ೧೩-೩೫). ೨. ಚೆಲ್ಲಾಪಿಲ್ಲಿಯಾಗು; ಚದುರು: ಹಱಿಹಂಚಾಯ್ತು ಮಹಾರಥರೊಡ್ಡಣ (ಜಯಕಾ. ೭-೩). ೩. ಹಾಳಾಗು; ನಾಶವಾಗು: ನಾಡಿಗೋಸುಗ ಸೋದರರು ಹೊಯ್ದಾಡಿ ಹಱಿಹಂಚಾದರೆಂಬುದ ನಾಡದಿಹುದೇ ಲೋಕ (ಕುಮ್ಮಾಭಾ. ೨-೨೯). [ಹಱಿ$_1$ (< ಪಱಿ$_1$) + ಹಂಚು$_1$]

**ಹಱಿಹಂಚುವಡು** (ಕ್ರಿ). ಚೆಲ್ಲಾಪಿಲ್ಲಿಯಾಗು; ಚದುರಿಹೋಗು: ನಿಮಿಷ ಮಾತ್ರದೊಳ್ ಸುರಸೇನೆ ಹಱಿಹಂಚುವಟ್ಟು . . . ಬೆನ್ನಿತ್ತುದು (ಚಬಪು. ೨೪-೨೦).

[ಹಱಿಹಂಚು + ಪಡು$_1$]

**ಹಱುಕ** 'ಪಱುಕ' ನೋ.

**ಹಱುಕು** 'ಪಱುಕು' ನೋ.

**ಹಱುಕುಗಡ್ಡ, ಹಱಿಕುಗಡ್ಡ** (ನಾ). ಹರುಕುಮುರುಕಾಗಿರುವ ಗಡ್ಡ: ಗಿಡ್ಡ ರೂಪಿನ ಹಱು [ಪಾಠಾಂ. ಱಿ]ಕುಗಡ್ಡದ ಹಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ (ನಳಚ. ೬-೧೪). **ಹಱಿಕುಗಡ್ಡ:** ಹಱಿಕುಗಡ್ಡದ ಕೆದಱುಮಿಸೆಯ ಕೀನಿವಲ್ಲುಗಳ . . . ಕಿಱುಕುಳರು ಬಂದರು (ಬಸಪು. ೫೮-೪೯). [ಹಱುಕು (< ಪಱುಕು) + ಗಡ್ಡ$_1$]

**ಹಱುಗಲ್** 'ಪಱಿಗೋಲ್' ನೋ.

**ಹಱುಗಾಣು** (ಕ್ರಿ). ಅಳಿವನ್ನು ಯೋಚಿಸು; ನಾಶವನ್ನು ಚಿಂತಿಸು: ಹರಗೆ . . . ಶ್ರೀಗಂಧವರ್ಪಿಪ ನೇಮ ನಿರುತವೆಂತರಲೊಮ್ಮೆ ಶ್ರೀಗಂಧ ದೊರೆಯದಿರೆ ನೇಮ ತಪ್ಪಿತ್ತೆನುತಲಿ ಹರಣಕ್ಕೆ ಹಱುಗಾಣಲು (ಗುರುಚಾ. ೬-೭); ಮಂತ್ರಜಪದಿಂ ಹರಣಂ ತದಸ್ತಕ್ಕೆ ಬಾರದಿರೆ ತನ್ನಸುಗೆ ಹಱುಗಾಣೆ ಹರನೊಲಿಯೆಯೆಂದಿನೊಲು ಜಯಿಸಿ (ರಾಘಚ. ೧೧-೨೩). [ಹಱು$_0$ (< ಪಱಿವು) + ಕಾಣು (< ಕಾಣ್)]

**ಹಱುಗೊಳ್** (ಕ್ರಿ). ಕಿತ್ತುಕೊಳ್ಳು: ಮೂರ್ಖನ್ನೆನಾರ್ ಶಿವಂ ಜೂಜಾಡಿ ಭರದೆ ಸೋಲಲ್ ಕಟ್ಟಿ ಹಾಯ್ಕೆ ಪಣೆಗಣ್ಣೋಱೆ ನಿರುತ ಜಂಗಮದೊಡವೆಯೆನುತೆ ಹ [ಪಾಠಾಂ. ಹು]ಱುಗೊಂಡಂ (ಚಬಪು. ೫೭-೩೭). 'ಪಱಿಕೊಳ್' ಪರಾ.

[ಹಱು$_0$ (< ಪಱಿ$_1$) + ಕೊಳ್$_1$]

**ಹಱುಗೋಲ್** 'ಪಱಿಗೋಲ್' ನೋ.

**ಹಱುಗೋಲು** 'ಪಱಿಗೋಲ್' ನೋ.

**ಹಱುಣ** 'ಪಱುಣೆ' ನೋ.

**ಹಱುಣೆ** 'ಪಱುಣೆ' ನೋ.

**ಹಱುವು** 'ಪಱಿವು' ನೋ.

**ಹಱುವೆ** 'ಹಱುಹೆ' ನೋ.

**ಹಱುಹೆ**, ಹರಿವೆ$_2$, ಹರುವೆ$_2$, ಹರುಹೆ, ಹಱುವೆ (ನಾ). (ತರಕಾರಿಯಾಗಿ ಬಳಸುವ) ಒಂದು ಬಗೆಯ ಸೊಪ್ಪು: "ಪಾಲಕ್ಯಮೆಂಬುದು ಹಱುಹೆ" (ಹಲಾಯು. ೨೭-೧೧); ನೆಲಗೋಣಿ ಪು(ಹು)ಣಿಸೆ . . . ಹಱುಹೆಯೆಂಬಿವಱೆಲೆಯಂ ಕಟಿಯೊಳುಱೆ ಕಾಸಿ ಕಟ್ಟಲ್ ತೊಲಗುಗುಮೊದಱಿಸುವ ಮುಳ್ಳ ವಿಷಮೆನಿತನಿತುಂ (ಖಮದ. ೨-೨೧೧). **ಹರಿವೆ$_2$** : "ದಂಟಿನ ಸೊಪ್ಪು, ಹರಿವೆ ಸೊಪ್ಪು" (ಸಸ್ಯನಿ. ೧೦); ಮಾರ್ಷ. (ಹರಿವೆ) . . . ಜ್ಯೇಷ್ಠಮಧು ಇವೆಲ್ಲ ಮಧುರ (ಅಷ್ಟಾಂಗ. ೧೩.೮). **ಹರುವೆ$_2$:** ಅಲ್ಲಿಯೂ ಹಂದಿ ಹರುವೆಮಡಿ . . . ತಿಂಗಳವರೆಮಡಿಗಳನ್ನೆಲ್ಲ ತುಳಿದು ರಂಪಮಾಡಿ ಮನೆಯ ಮೇಲಣ ಹಕ್ಕಲುಕಾಡಿನ ಕಡೆಗೆ ನುಗ್ಗಿಬಿಟ್ಟಿತ್ತು (ಮಲಮ. ೧೨೧). **ಹರುಹೆ** : "ರಾಜಕೀರೆ, ರಾಜಗಿರಿ ಈ — ಯೆರಡುಂ ಹರುಹೆ" (ಓಷಧಿ. ೧೩೮). **ಹಱುವೆ:** ತುಪ್ಪೋಗರಕ್ಕೆ ನಱುವಲು . . . ಕೆಂಪಿನ ಹಱುವೆಯಾದಿಯಾಗುತ್ತಮದ ಸೊಪ್ಪಿನೆಸಱಂ ಬಸಿದುಕೊಂಡು (ಸೂಪಶಾ. ೩-೧೮); ಮಿಱುಗುವ ಕನ್ನಡಿಯೊಳು ಹರಹಿಡ ಸಣ್ಣ ಹಱುವೆಯ ಬಿತ್ತುಗಳಂತೆ ತುಱುಗಿದ ಬವರಿಯಿಂದೆಸೆವ ಗಲ್ಲಗಳೊಂದು ಮೆಱಹು ಸಾಲದೆ ಚಕ್ರಧರನ (ಭರಚ. ೬-೪೮).

**ಹಱೆ** 'ಪಱೆ$_1$' ನೋ.

**ಹಱೆಕಾಱ** 'ಪಱೆಕಾಱ' ನೋ.

**ಹಱೆಗಾಱ** 'ಪಱೆಕಾಱ' ನೋ.

**ಹಱೆಗುಟ್ಟು** 'ಪಱೆಗುಟ್ಟು' ನೋ.

**ಹಟ** 'ಪಟ$_1$' ನೋ.

**ಹಟಗೂಂಟಣೆ** 'ಪಟಗುಂಟಣೆ' ನೋ.

**ಹಟದು** 'ಪಟದು' ನೋ.

**ಹಟಮೈಲಗೆ** (ನಾ). ಮಲಿನವಾದ ಬಟ್ಟೆ; ಉಟ್ಟು ಕಳೆದ ವಸ್ತ್ರ: ನಗಲಕ್ಷ್ಮಿ ಯುಟ್ಟ ಹಟಮೈಲಗೆಗಳನೊಪ್ಪರಮೆನಿಪ್ಪ ಮಡಿವಾಳಂಗಂ[ವಗ]ವಱೆಯೊಳ್ ತೆಗೆಬಿಸುಟ ವೊಲಗತಟದೊಳ್ [ಪೊರಳು]ತಿರ್ಪುವಜಗರನಿಕರಂ (ಸೂಕ್ತಿಸು. ೩-೮೨).

[ಹಟ(< ಪಟದು) + ಮೈಲಗೆ (< ಮೈಲಿಗೆ)]

**ಹಟಯಿಗೆ** 'ಪಟಯಿಗೆ' ನೋ.

**ಹಟಯೂರ್** (ನಾ). ಒಂದು ಊರಿನ ಹೆಸರು: ಪುಲಿನಾಡು ರಾಸಮಯ್ಯ ಹಟಯೂರರಸರಂ ದಣ್ಣುವೇಟ್ಟೊಡೆ (ಎಕ. X ಶ್ರೀನಿವಾ. ೮೫-೫; ಸು. 900 ?). [? + ಊರ್]

**ಹಟವಿಗೆ** 'ಪಟಯಿಗೆ' ನೋ.

**ಹಟಿ$_1$** 'ಪಟಿ$_1$' ನೋ.

**ಹಟಿ$_2$** 'ಪಟಿ$_3$' ನೋ.

**ಹಟಿವು** 'ಪಟಿ$_2$' ನೋ.

**ಹಟಿಸು**, ಹಳಿಸು$_1$ (ಕ್ರಿ). ಬಯ್ಯಿಸು; ದೂಷಣೆಗೆ ಒಳಗಾಗುವಂತೆ ಮಾಡು. **ಹಳಿಸು$_1$**.

ಹಟಿಸಿಕೊಳ್ಳು, ಹಳಿಸಿಕೊಳ್, ಹಳಿಸಿಕೊಳ್ಳು = ನಿಂದೆಗೆ ಪಾತ್ರವಾಗು; ಬಯ್ಯಿಸಿಕೊಳ್ಳು: "ಗರ್ಹ್ಯಾಧೀನ, ವಕ್ತವ್ಯ = ಹಟಿಸಿಕೊಂಬವನು" (ನಾಚಿರಾ. ೬); ಕೃತಕಂಗಳಂಗನೆಯರಿಗೆ ನೆಲೆಯಾಗಿ ಹಳಿಸಿ[ಪಾಠಾಂ. ಹಳಿಯಿಸಿ]ಕೊಳುತಿರ್ದು ಮತ್ತಾ ಹೆಸರ ಲೇಸೆನಿಸಿಕೊಂಡವಾ ಹುಲಿಗೆಱೆಯೊಳು (ಸೋಮಚ. ೫-೭೯); ಮಕರದೊಳು

ಮ್ಮನೆಚೆದೊಡೆ . . . ಹಲಬರಿಂ ಹಳಿಸಿಕೊಂಬಳು (ವೀಶೈವು. ೪-೨೧-೨೨).

[ಹಟ್ಟಿ$_1$ (< ಪಟ್ಟಿ$_1$) + - ಇಸು$_3$]

**ಹಟ್** 'ಪಟ್$_1$' ನೋ.

**ಪಟ್‌ಗೂಟ್** 'ಪಟಗೂಟ್' ನೋ.

**ಹಟ್ಗಿ** 'ಪಟ್ಗಿ' ನೋ.

**ಹಾ** (ಅ). (ದುಃಖ, ಕೋಪ, ಆಶ್ಚರ್ಯ, ಉದ್ವೇಗ, ತೃಪ್ತಿ ಮುಂತಾದುವು ಗಳನ್ನು ಸೂಚಿಸುವ) ಒಂದು ಉದ್ಗಾರವಾಚಕಶಬ್ದ: ಕೇಡನಟಿದ್ಯೆ ಹಾ ಶ್ವೇತಕೇತುವ್ರತೀ (ಕಾದಂಪೂ. ೯೦೦); ಹಾ ಗುರುನಾಥನೆ ಹಾ ಗುರುವೆ ಹಾ ಗುರುದೇವನೆ (ಬಸವು. ೪೫-೭); ಹಾ ಯುಧಿಷ್ಠಿರರಾಯ ಶಿವಶಿವ ವಾಯುಸುತ ಹಾ ಪಾರ್ಥ ಹಾ ಮಾದ್ರೇಯರಿರ ಹಾಯೆನುತ ಹರೆದುದು ಸೇನೆ ದೆಸೆದೆಸೆಗೆ (ಕುಮ್ಮಾದ್ರೋ. ೩-೫೯).

**ಹಾಹಾ** (ದ್ವಿರುಕ್ತಿ): ಹಾಹಾ ಜನಕಸುತೇ ವೈದೇಹಿಯೆಂದು . . . ಮೂರ್ಛೆಗೆ ಸಂದಂ (ಪಂರಾಮಾ. ೯-೧೧೬); ಹಾ ಮಹಾವಿಭ್ರಮ ಹಾಹಾ ಮನ್ಮಥ ಹಾ ಸಮ್ಮದ (ಗಿರಿಕ. ೮-೬೭); ಹಾಹಾ ಮಗನೆ ನಮ್ಮುವನು ಪರಕೆ ಸಲಿಸದೆ ಮುಂದೆ ನೀನೀ ಪರಿಯ ಹೋಹರೆ (ತೊರರಾ. ೨-೫-೨೪). 'ಆಹ$_1$' ಪರಾ.

**ಹಾಂ** (ನಾ). ಒಂದು ಉದ್ಗಾರವಾಚಕಶಬ್ದ: ಮೊನ್ನೆ ಆಟಕ್ಕಾಗಿ ಆರೇರ ರಂಗನ ಕೂಡ ಕುಸ್ತಿ ಹಚ್ಚಿದರ ಹಾಂ ಅನ್ನುವುದರಲ್ಲಿ ಮುರಿದು ಒಗೆದ (ಬಟ್ಟಹೂ. ೪೧).

**ಹಾಂಕಾರ** 'ಆಂಕರ' ನೋ.

**ಹಾಂಗೆ** 'ಅಹಗೆ' ನೋ.

**ಹಾಂಸೆ** 'ಪಾವಸೆ' ನೋ.

**ಹಾಕತೆವೆಱು** (ಕ್ರಿ). (?): ಏಕಾಂತದೊಳು ನಿನ್ನ ಪದಪದ್ಮಂಗಳನೇಕಾಗ್ರಚಿತ್ತ ದಿಂದೊಲಿದು ಹಾಕತೆವೆತ್ತು ಜಾನಿಸೆ ಕೆಡದಿಹುದೆಯನೇಕ ಕಿಲ್ಬಿಶ ಜನರಾಜ (ರಾಮವಿ. ೨೦-೧೬೩). [? + ಪೆಱು$_1$]

**ಹಾಕರಿಸು** (ಕ್ರಿ). ಹಾಹಾಕಾರವನ್ನುಂಟುಮಾಡು; ಗೊಂದಲವೆಬ್ಬಿಸು (?): ಸರಳು ಸರಳಿಂಗಣೆದು ಪೊಗೆಮಯಂ ಕಿಡಿಮಯವದಾಗಿ ಹಾಕರಿಸಿ ದಶದಿಕ್ಕಿನೊಳ್ ಜಾರುತ್ತೊರೆಯುತ್ತಿರ್ದುದು (ತುರಂಗ. ೬೮-೬೦). 'ಆಕರಿಸು$_2$' ಹೋ.

[? + - ಇಸು$_3$]

**ಹಾಕಾರ** (ನಾ). ೧. ಹಾ ಎಂಬ ಉದ್ಗಾರ: ಎಲ್ಲೆಡೆಯು ಕೇಳುತಿದೆ ಹಾಕಾರವು, ಕ್ರಾಂತಿ ಎಂಬುವ ಭೂತ ತಲೆಗೆದರಿ ಹುಚ್ಚೆದ್ದು ಸುತ್ತುತಿದೆ (ಪಾಂಚಜ. ೫೨-೭). ೨. [ಜೈನ] ಹಾ ಎಂಬ ಶಬ್ದದ ಉಚ್ಚಾರದಿಂದ ಕೊಡುತ್ತಿದ್ದ ಶಿಕ್ಷೆ; ಒಂದು ಬಗೆಯ ವಾಗ್ದಂಡ; P ಮೊದಲನೆಯ ಐದು ಮನುಗಳು ಪ್ರಜೆಗಳನ್ನು ಅಪರಾಧಗಳಿಂದ ಪರಾವೃತ್ತಗೊಳಿಸುತ್ತಿದ್ದ ಒಂದು ಶಬ್ದೋಚ್ಚಾರ: ಆ ಕಾಲದೊಳಾ ಮನುಷ್ಯರಪರಾಧಂಗೆಯ್ಯೆ ಮುನ್ನಮಯ್ವರ್ ಮನುಗಳು ಹಾಕಾರ ಲಕ್ಷಣಮಪ್ಪ [ಪಾಠಾಂ. ಹಾಮಾಧಿಕ್ಕಾರ] ದಂಡಮಂ ಮಾಡಿದರು (ಚಾವುಂಪು. ೧೧).

[ಹಾ + - ಕಾರ$_4$]

**ಹಾಕಿಮ್** (ನಾ). ಆಡಳಿತಾಧಿಕಾರಿ: 'ಪರಗಣಹಾಕಿಮ್' ಪರಾ.

[<— ಹಿಂ. ಹಾಕಿಮ್; ಮರಾ. ಹಾಕಿಮ್, ಹಾಕೀಮ್]

**ಹಾಕಿಸು** 'ಹಾಯ್ಕಿಸು' ನೋ.

**ಹಾಕು** 'ಪಾಯ್ಕು$_1$' ನೋ.

**ಹಾಕುಪಾವಡಿಗ** (ನಾ). ಬಟ್ಟೆಯಿಂದ ಗಾಳಿ ಹಾಕುವವನು: ಛತ್ರಿ ಚಾಮರ ಢಾಳು ಎತ್ತಿ ಹಿಡಿದಿರುವವರು ಹತ್ರ ಚಿಮ್ಮುವ ಹಾಕುಪಾವಡಿಗರು (ಶರಲೀ. ೨೫೦-೩).

[ಹಾಕು (< ಪಾಯ್ಕು$_1$) + ಪಾವಡ$_1$ (< ಪಾವುಡ$_1$) + - ಇಗ]

**ಹಾಕೈಯ್ಯ** (ನಾ). ಒಬ್ಬಾತನ ಹೆಸರು; ಹಾಕೈಯ್ಯ ಬರೆದ (ಎಕ. VII, ಶಿಕಾರಿ. ೫೦-೧೪; 993). 'ಆಕಯ್ಯ' ಹೋ. [? + ಅಯ್ಯ$_1$]

**ಹಾಕ್ಯಾಟ** 'ಪಾಯ್ಕು$_1$' ಪರಾ.

**ಹಾಕ್ಯಾಡು** 'ಪಾಯ್ಕು$_1$' ಪರಾ.

**ಹಾಗ** 'ಪಾಗ$_1$' ನೋ.

**ಹಾಗಕಂಭ** (ನಾ). [ಗಣಿತ] ಒಂದು ಅಳತೆಯ ಪ್ರಮಾಣ: ಅರೆಗಳೆಯಿಂದ ಅರೆ ಗಳೆಯ ಗುಣಿಸಲು ಹಾಗಕಂಭವಕ್ಕು (ಕ್ಷೇತ್ರಗ. ೬-೩). [ಹಾಗ (< ಪಾಗ$_1$) + ಕಂಭ]

**ಹಾಗಪಾಲು** (ನಾ). ನಾಲ್ಕನೆಯ ಒಂದು ಭಾಗ; ಕಾಲುಭಾಗ: ಸಂತುಷ್ಟ ವಾಯಿತು ಸೀಮೆಪುರದೊಳು ಹಾಗಪಾಲುಜನ (ಬಿಜ್ಜವು. ೬೭-೨೦); ಭೂಮಿಯ ಮೇಲ್ಭಾಗದಲ್ಲಿ ಸುಮಾರು ಹಾಗಪಾಲುನೆಲವೂ ಮುಕ್ಕಾಲುಪಾಲು ನೀರೂ ಇವೆ (ಭೂಗೋಳ. ೧೦). [ಹಾಗ (< ಪಾಗ$_1$) + ಪಾಲು$_2$ (< ಪಾಲ್$_2$)]

**ಹಾಗಮಟ್ಟ** (ನಾ). ಒಂದು ಅಳತೆಯ ಪ್ರಮಾಣ: ಪುಟ್ಟಗೇಣುಯೆಂಬುದು ಹಾಗಮಟ್ಟ (ಕ್ಷೇತ್ರಗ. ೩೬-೪). [ಹಾಗ (< ಪಾಗ$_1$) + ಮಟ್ಟ$_1$]

**ಹಾಗಲ್** 'ಪಾಗಲ್$_1$' ನೋ.

**ಹಾಗಲ** 'ಪಾಗಲ್$_1$' ನೋ.

**ಹಾಗಲು** 'ಪಾಗಲ್$_1$' ನೋ.

**ಹಾಗವಡೆ** (ಕ್ರಿ). ಕನಿಷ್ಠನಾಣ್ಯವನ್ನು ಪಡೆ; ಚಿಕ್ಕಾಸನ್ನು ಹೊಂದು: ಮೇಲಿಕ್ಕಿದ ಹೆಣ್ಣು ಹಾಗವಡೆಯಳೆಂಬಾಳಾಪದ ಗಾದೆಯುಱಿತು ತೂಳಿಸಿ ಮೋಹವ ಕಾಣಿಸುವುದು ಪ್ರೌಢಲೋಲಾಕ್ಷಿಯರ ಮತವಲ್ಲ (ಕಂನವಿ. ೯-೧೫೭). [ಹಾಗ (< ಪಾಗ$_1$) + ಪಡೆ$_1$]

**ಹಾಗವಡ್ಡಿ** (ನಾ). ಒಂದು ಬಗೆಯ ಬಡ್ಡಿ: ಹಾಗವಡ್ಡಿಯಿಂ ದೇವರ ಭಂಡಾರವಾಗಿ ಕೊಟ್ಟ ಗದ್ಯಾಣ ಮೂಱು (ಎಕ. XIV, ತಿರುಮ. ೨೭೦-೫; 1259).

[ಹಾಗ (< ಪಾಗ$_1$) + ಬಡ್ಡಿ$_2$]

**ಹಾಗವೃದ್ಧಿ** (ನಾ). = ಹಾಗವಡ್ಡಿ: ಇನ್ನಿನಿಬರ ಜೀವಿತಂ ಬಡ್ಡಿಯಲು ನಡೆವಂತಾಗಿ ಗುರುದೇವರು ಊರ ಮೇಲೆ ಹಾಗವೃದ್ಧಿಯಿಂ ಕೊಟ್ಟ ಗದ್ಯಾಣ ೧೦೦ (ಶಾಸಪ. ೫೩-೧೧; 1107). [ಹಾಗ (< ಪಾಗ$_1$) + ವೃದ್ಧಿ]

**ಹಾಗೂವೀಸ** (ನಾ). ಒಂದು ಹಾಗ ಮತ್ತು ಒಂದ ವೀಸ (?): ನಾಲುವತ್ತುವಂಭತು ವರಹವೂ ಹಾಗೂವೀಸದ ಗ್ರಾಮವಂದು (ಮೈಆಂ. ೧೯೩೪, ೨೨-೬೯; 1817); ಮಗ್ಗಿ ಬಾರದಿದ್ದರೆ ಹಾಗೂವೀಸ ಗುಣಿಸು ಅಂದ (ಗಾದ). [ಹಾಗ್ಯೂ (< ಪಾಗ$_1$) + ವೀಸ]

**ಹಾಗೆ** 'ಅಹಗೆ' ನೋ.

**ಹಾಚೆ** 'ಪಾವಸೆ' ನೋ.

**ಹಾಜರ್** 'ಹಾಜರು' ನೋ.

**ಹಾಜರ್‌ಭಾಷಿ** 'ಹಾಜರುಭಾಷಿ' ನೋ.

**ಹಾಜರಾತಿ** (ನಾ). ಹಾಜರಾಗಿರುವಿಕೆ; ಉಪಸ್ಥಿತವಾಗಿರುವಿಕೆ: ತಹಶೀಲ್ದಾರ ರುಗಳ ಹಾಜರಾತಿ ಹುಕುಂನಲ್ಲಿರತಕ್ಕದ್ದು (ಗ್ರಾಮಾಕ. ೪); ಶಾಲೆಯ ಹಾಜರಾತಿ, ಅವನಿಗೆ ಕಲಿವಿನಲ್ಲಿರುವ ಆಸಕ್ತಿ . . . ಶಿಕ್ಷಣಾಭಿವೃದ್ಧಿಯ ಮಟ್ಟವನ್ನು ನಿರ್ಧರಿಸುತ್ತವೆ (ಶಿಕ್ಷದ. ೫೬೪). [< ಹಾಜರು]

**ಹಾಜರಿ** (ನಾ). = ಹಾಜರಾತಿ: ಹಾಸ್ಯಚಟಾಕಿಯ ಹಾರಿಸುತಾ ದಿನ ಗುರುತಿಸುತಿದ್ದೆ ಹಾಜರಿಯ (ಇಂಚಾಪ. ೩೯-೮೩); ಇಂದು ಮುಂಜಾನೆಯಿಂದಲೇ ಹಾಜರಿ ಕೊಡುತ್ತಿದ್ದೇನೆ (ಜಮಾನ್ಸಾ. ೧೫೭). [<— ಪಾರ. ಮರಾ. ಹಾಜಿರೀ]

**ಹಾಜರು, ಹಾಜರ್** (ನಾ). ಇರುವಿಕೆ; ಉಪಸ್ಥಿತವಾಗಿರುವಿಕೆ: ನಾವು ಹಾಜರು ಇದ್ದೇವೆ (ರಾಜೇಂದ್ರ. ೩); ನಾಲ್ಕಾರು ಔತಣಗಳಲ್ಲಿ ಹಾಜರು ಇದ್ದು ಬಂದೆ (ಅನ್ನಪೂ. ೭೪).

**ಹಾಜರ್**: ಶ್ಯಾಮ ಎಲ್ಲಿದ್ದರೆ ನಾನು ಅಲ್ಲಿ ತಪ್ಪದೆ ಹಾಜರ್ (ಆಲಹೂ. ೭೭); ಘನಸರಕಾರದೆದುರು ಇಂಥಾ ಸ್ಕೀಮನ್ನು ಹಾಜರ್ ಮಾಡಿರುವಾಗ (ಪ್ರಕಾಶ. ೧೩೮).

**ಹಾಜರಾಗು** = ಉಪಸ್ಥಿತನಿರು; ಪ್ರತ್ಯಕ್ಷ ಇರು: ತಮ್ಮ ಊಟ ಆಗುವುದರೊಳಗಾಗಿ ಬಂದು ಹಾಜರಾಗುತ್ತೇನೆ (ರಂಗಕ. ೯೦); ನೀವು ತಕ್ಷಣ ಸನ್ನಿಧಾನಕ್ಕೆ ಹಾಜರಾಗತಕ್ಕದ್ದು (ಶ್ರೀರಾಯ. ೧೦೬). **ಹಾಜರಿರು** = ಉಪಸ್ಥಿತವಾಗು; ಹಾಜರಾಗು: ಎಲ್ಲರೂ ಹಾಜರಿರಬೇಕೆಂದು ತಾಕೀತು ಮಾಡಿದ್ದನು (ಮುಂಗಾಮು. ೧೧೨); ಆ ದರ್ಬಾರಿನಲ್ಲಿ ಶಿವರಾವ್‌ಭಾವುವಿನ ಮಕ್ಕಳು . . . ಇಬ್ಬರೂ ಹಾಜರಿದ್ದರು (ಝಾಂಸಿ. ೨). **ಹಾಜರುಪಡಿಸು** = ಉಪಸ್ಥಿತನಾಗುವಂತೆ ಮಾಡು: ಕೋರ್ಟಿನಲ್ಲಿ ಹಾಜರು ಪಡಿಸುವ ವಿಷಯದಲ್ಲಿ ನಿಮಗೆ ಬೇಜಾರು ಬೇಡ! (ಧೂಮಮ. ೪೪).

[<— ಅರ. ಹಾಝಿರ್; ಹಿಂ. ಹಾಜಿರ್; ಮರಾ. ಹಾಜೀರ್]

**ಹಾಜರುಪಟ್ಟಿ** (ನಾ). ಉಪಸ್ಥಿತರಿದ್ದವರನ್ನು ಗುರುತಿಸುವ ಯಾದಿ; ಹಾಜರಾತಿಯ ಪಟ್ಟಿ: ಅವರ ಹೆಸರುಗಳನ್ನು ಹಾಜರುಪಟ್ಟಿಯಲ್ಲಿ ದಾಖಲು ಮಾಡಿಕೊಂಡರು (ರಕ್ತರೂ. ೬೨). [ಹಾಜರು + ಪಟ್ಟಿ$_2$]

**ಹಾಜರುಭಾಷಿ, ಹಾಜರ್‌ಭಾಷಿ** (ನಾ). ರಾಜ ಅಥವಾ ಅಧಿಕಾರಿಯ ಸಮ್ಮುಖದಲ್ಲಿದ್ದು ವ್ಯವಹರಿಸುವ ನೌಕರ: ಅವನಿಗೊಂದು ಹಾಜರುಭಾಷಿ ಹುದ್ದೆಯನ್ನೂ ದೊರಕಿಸಿಕೊಟ್ಟರು (ಪುನರು. ೩೭೦). **ಹಾಜರ್‌ಭಾಷಿ:** ರಾಜನು ಅವರೊಡನೆ ನೇರವಾಗಿ ಮಾತನಾಡದೆ ಮತ್ತೊಬ್ಬನ (ಹಾಜರ್‌ಭಾಷಿಯ) ಮೂಲಕ ಮಾತಾಡುತ್ತಾನೆ. ಯಾರು ರಾಜನೊಡನೆ ಮಾತಾಡಬೇಕೋ ಆತ ಮುಂದೆ ಹೋಗಿ ಹಾಜರ್‌ಭಾಷಿಗೆ ಜವಾಬು ಕೊಟ್ಟು ತಾನು ನಿಂತಿದ್ದ ಸ್ಥಳಕ್ಕೆ ಹಿಂದಿರುಗುತ್ತಾನೆ (ಪ್ರವಾ. II, ೩೬೫).

[<— ಹಿಂ. ಹಾಜಿರ್‌ಬಾಶೀ; ಮರಾ. ಹಾಜೀರ್‌ಬಾಶೀ, ಹಾಜರ್‌ಬಾಶೀ]

**ಹಾಟ** (ನಾ). ೧. ಒಂದು ವೃತ್ತಿ,— ಕಸುಬು: ಜೋಗಯ ಹಾಟ ೧ ಮತ್ತ ೨ ಧಾರೆಯ ಹಾಟ ೧ ಹಳಿಜಕೋಜ ಮತ್ತ ೧ ಇಂತೀ ವ್ರಿತ್ತಿಗಳಂ ಸಲಿಸುವರು (ಸೌಇಇ. IX-i, ೩೬೫-೫೩; 1215). **೨.** ಕುದುರೆಯ ಕೆನ್ನೆಯ ಭಾಗ: ಕಟದ ಸಂಕ (ಶಂಖ)ದ ಪೂಜಗಣ ಕೆನ್ನೆಗೆ ಹಾಟಮೆಂಬ ಪೆಸರಕ್ಕುಂ (ಅಶ್ವಶಾ. ೮೭-೩೨). [?]

**ಹಾಟಕ** (ನಾ). ೧. ಚಿನ್ನ; ಬಂಗಾರ: ಸುಗಂಧಿಜಲಸಂಭೃತಹಾಟಕಘಟಿತಘಟಕೋಟಿಗಳನೆತ್ತಿಕೊಂಡು ಸುರಿದಾಗಳ್ (ಆದಿಪು. ೭-೧೦೦ ವ); ವಿಸ್ಫುರಿತಸ್ಫಟಿಕಮಣಿವಿಲಸದುಭಯತಟಘಟಿತಹಾಟಕ ಸೋಪಾನಶ್ರೇಣಿಯಿಂದಂ (ಅಜಿಪು. ೭-೨೦ ವ) **೨.** ಒಂದು ಬಗೆಯ ಸೇಬು; ಮುಳ್ಳುಸೇಬು. [ಸಂ.]

**ಹಾಟಕನೇತ್ರ** (ನಾ). ಹಿರಣ್ಯಾಕ್ಷನೆಂಬ ರಾಕ್ಷಸ: ಧಾತ್ರಿಯನು ಕದ್ದೊಯ್ದು ಹಾಟಕನೇತ್ರನ ತೆಗೆದು ಬಿಸುಟು (ಕಭವಿ. ೧೨). [ಸಂ.]

**ಹಾಟಕಪೀಠ** (ನಾ). ಚಿನ್ನದ ಆಸನ: ವಧೂವರರಿರ್ವರುಮಂ . . . ಮಣಿಮಯವೇದಿಕೆಯ ಹಾಟಕಪೀಠದ ಮೇಲೆ ಪಾಸಿದ ಧುಗುಲದ ದಳಿಂಬದೊಳಿರಿಸಿದಾಗಳ್ (ಆದಿಪು. ೪-೪೭ ವ). [ಸಂ.]

**ಹಾಟಕವೆಟ್ಟು** (ನಾ). ಮೇರುಪರ್ವತ; ಸುವರ್ಣಪರ್ವತ: ಬಜ್ಜರವೇ ಹಾ[ಟ] [ಪಾಠಾಂ. ತ]ಕವೆಟ್ಟಿಗೆ ನಗುವುಜ್ಜುಗವೇನದನುಸುರುಸುರು (ಉದ್ಭಟದೇ. ೩-೧೭).

[ಹಾಟಕ + ಬೆಟ್ಟು$_2$ (< ಬೆಟ್ಟ)]

**ಹಾಟಕಾಂಬರ** (ನಾ). ಜರತಾರಿ ವಸ್ತ್ರವನ್ನು ಧರಿಸಿದವನು; ವಿಷ್ಣು: ಕೋಟಿ ಕೋಟಿ ಭೃತ್ಯರಿರಲು ಹಾಟಕಾಂಬರನ ಸೇವೆ ಸಾಟಿಯಿಲ್ಲದ ಪೂರ್ಣಗುಣಳು ಸರ್ವಕಾಲ ಮಾಡುತಿಹಳು (ಪುರಂದ. ಧಾ. ೧-೫೧-೧). [ಸಂ.]

**ಹಾಟಕೇಶ್ವರ** (ನಾ). ಶಿವನ ಒಂದು ಹೆಸರು; **P** ಗೋದಾವರೀನದೀತೀರದ ಕ್ಷೇತ್ರದಲ್ಲಿರುವ ಈಶ್ವರ: ಉನ್ನತಶ್ರೀಗಿರಿಗೆ ಬಂದು ಸಮುನ್ನತಿಯೊಳಾ ಹಾಟಕೇಶ್ವರ ಸನ್ನಿಧಿಯೊಳುರು ವಿಸ್ಫುಲಿಂಗಂಗಳು ಸಮುಜ್ವಳಿಸೆ (ಬಸಪು. ೫೩-೫೨); ಮತ್ತಲ್ಲಿ ಹಾಟಕೇಶ್ವರಮಿರ್ಪುದು (ಪಾಸೋಪು. ೫-೨೬). [ಸಂ.]

**ಹಾಡ** (ನಾ). ೧. (ಎಣ್ಣೆ ಮುಂತಾದ ದ್ರವಪದಾರ್ಥಗಳ) ಒಂದು ನಿರ್ದಿಷ್ಟ ಅಳತೆ ಮತ್ತು ಆ ಅಳತೆಯ ಸಾಧನವಾದ ಬುದ್ದಲಿ, ಪಾತ್ರೆ ಮುಂತಾದುವು: ಬೇಜೂರಿಂದಂ ಬಂದು ಮಾಱುವ ಎಣ್ಣೆಯ ಹಾಡಕ್ಕೆಯಿದ್ದೆಣ್ಣೆಯ ಕೊಟ್ಟರ್ (ಮುಂಬರಾ. X, ೨೬೯-೭೪; 1229); ಬುದ್ದಣಿ ಹಾಡ ಪಕ್ಕಲ ಕಂಬಿಗಳ ಕೊಡನ ಧಾರೆಗಳ ಘೃತ ತೈಲ ಬಸೆಗಳ ಸಾರ ಕಟ್ಟಿತು (ತೊರಠಾ. ೫-೮-೪); ಇನ್ನೊಂದು ಸಾರಿ ಹೋದರೆ, ಹೊಗೆ ಹಾಕಿ, ನೊಣಗಳನ್ನು ಓಡಿಸಿ, ಒಂದು ಹಾಡ ಜೇನನ್ನು ಹಿಂಡಿ ತಂದೇನು (ಮೂಕಜ್ಜಿ. ೬೩). **೨.** ಒಂದು ನಿರ್ದಿಷ್ಟವಾದ ಅಳತೆಯ ಬೀಜವರಿಯ ಭೂಮಿ: ಯೆರಡುಂ ಹಾಡದ ಕೆಯ್ಯ ಬಳಿಯಲ್ಲಿ (ಸೌಇಇ. XV, ೧೫೧-೩; 1191); ವೈಜನಾಥಭಟ್ಟೋಪಾಧ್ಯಾಯರಿಗೆ ಕೊಟ್ಟ ಭೂಮಿ ಹಾಡವೆರಡು ಅವರ ಮಕಳು ವಿಷ್ಣುಭಟರಿಗೆ ಹಾಡವೆರಡು (ಎಕ. VIII, ಸೊರಬ. ೧೩೫-೪೧; 1217). [ದೇ. ‖ ತುಳು. ಪಾಡ./ ಸಂ. ಹಾಡಿಕಾ = ಮಣ್ಣಿನ ಪಾತ್ರೆ]

**ಹಾಡಂಗಿ** 'ಪಾಡಗ$_1$' ನೋ.

**ಹಾಡಕ** (ನಾ). ಭೂಮಿ; ಜಮೀನು: ಕೊವರಗಾವುಣ್ಣನ ಹಾಡಕ [ವೊ]ಳಗೆ ಮತ್ತರು ಮೂವತ್ತುಂ (ಸೌಇಇ. XI-i, ೧೧೩-೩೦; 1074). [?]

**ಹಾಡಗ** 'ಪಾಡಗ$_1$' ನೋ.

**ಹಾಡಗೆ, ಹಾಡಿಗೆ** (ನಾ). ರಥದ ಒಂದು ಭಾಗ: ಮಂದರಾದ್ರಿಯೆ ರಥದ ಹರುಹಾಯ್ತು ಹಾಡಗೆಯಿದೆಂದೆನಿಪ ರಥದ ವಳಗುದಯಾಸ್ತಗಿರಿಗಳೆರಡುಂ ದೃಢದೆ ರಥವನಾಂತಿಪ್ಪ ಕುರುಗಣೆಗಳ್ಕೆ (ವೀಶೈಪು. ೨-೧೦-೮). **ಹಾಡಿಗೆ:** ಈ ನಾಲ್ಕೂ ಗಾಲಿಗಳ ಮೇಲೆ ಸಮತೂಕವಾಗಿ ಭಾರ ಹಾಕಿ ಕೂಡಿಸಿದ ಹಾಡಿಗೆ ತೋಳು (ಬೆಳಭಾ. ೧೩೫). [?]

**ಹಾಡಹಗಲು, ಹಾಡುಹಗಲು** (ನಾ). ನಿಚ್ಚಳವಾದ ಹಗಲುಹೊತ್ತು: ಹಾಡಹಗಲಿನಲ್ಲಿಯೇ ಅಂಗಡಿ ಲೂಟಿಯಾಗಿ ಹೋಯಿತು (ರೂಢಿ). **ಹಾಡುಹಗಲು:** ಹಾಡುಹಗಲಿನಲ್ಲಿಯೂ ಸಹ ಆ ದಟ್ಟವಾದ ಕಾಡಿನಲ್ಲಿ ಸೂರ್ಯರಶ್ಮಿ ಬೀಳುವುದಿಲ್ಲ (ರೂಢಿ). [< ಪಟ್ಟಪಗಲ್]

**ಹಾಡಿ** 'ಪಾಡಿ$_2$' ನೋ.

**ಹಾಡಿಕೆ** (ನಾ). ಹಾಡುವಿಕೆ; ಹಾಡುಗಾರಿಕೆ: ಹರಿಸ್ಮರಣವಿಲ್ಲದ ಹಾಡಿಕೆಯು ಅರಣ್ಯರೋದನ (ಪುರಂದ. ೫-೧೬೧-೨೪); ಹಾಡು, ಹಾಡಿಕೆ ಮತ್ತು ಹಾಡುಗಾರ ಇದೊಂದು ತ್ರಿವೇಣೀಸಂಗಮವು (ಸಾಹಿಸಂ. ೬೭). [ಹಾಡು$_2$ (< ಪಾಡು$_2$) + - ಇಕೆ]

**ಹಾಡಿಗೆ** 'ಹಾಡಗೆ' ನೋ.

**ಹಾಡಿತಿ** (ನಾ). ಹಾಡುವವಳು; ಹಾಡುಗಾರ್ತಿ: ಅವರಲ್ಲಿ ಹಾಡಿತಿ ಕಣ್ಣಮ್ಮನಾಚ್ಚಿಯಾರ್ ಮುಖ್ಯಳು (ಕೊಳೀಬಾ. ೧೩).

[ಹಾಡು$_2$ (< ಪಾಡು$_2$) + - ಇತಿ$_1$ (< - ಇತ್ತಿ)]

**ಹಾಡಿಮದ್ದು** (ನಾ). ನಾಟಿ ಔಷಧಿ; ಹಳ್ಳಿ ಔಷಧಿ: ಇಂತಿವನಜಿದು ಮಱೆದಲ್ಲಿ ತಾ ಮಾಡಿಕೊಂಡ ಕುತ್ತಕ್ಕೆ ಹಾಡಿಮದ್ದನರದಂತೆ (ಏಲೇಶ್ವ. ೯).

[ಹಾಡಿ (< ಪಾಡಿ$_2$) + ಮದ್ದು (< ಮರ್ದು)]

**ಹಾಡಿಸು** 'ಪಾಡಿಸು' ನೋ.

**ಹಾಡು$_1$** 'ಪಾಡು$_1$' ನೋ.

**ಹಾಡು$_2$** 'ಪಾಡು$_2$' ನೋ.

**ಹಾಡು$_3$** 'ಪಾಡು$_3$' ನೋ.

**ಹಾಡು$_4$** 'ಪಾಡಿ$_2$' ನೋ.

**ಹಾಡುಕಾರ** 'ಪಾಡುಂಗಾಱ' ನೋ.

**ಹಾಡುಕಾಱ** 'ಪಾಡುಂಗಾಱ' ನೋ.

**ಹಾಡುಗ** 'ಪಾಡುಗ' ನೋ.

**ಹಾಡುಗಬ್ಬ** 'ಪಾಡುಗಬ್ಬ' ನೋ.

**ಹಾಡುಗಾಯಿ** 'ಪಾಡುಗಾಯಿ' ನೋ.

**ಹಾಡುಗಾರ** 'ಪಾಡುಂಗಾಱ' ನೋ.

**ಹಾಡುಗಾರಿಕೆ** 'ಪಾಡುಂಗಾಱಿಕೆ' ನೋ.

**ಹಾಡುಹಗಲು** 'ಹಾಡಹಗಲು' ನೋ.

**ಹಾಡೆ** (ನಾ). ಒಂದು ಬಗೆಯ ಮೂಲಿಕೆ; ಅಗಲುಶುಂಠಿ: ಹಾಡೆಯ ಗಂಡೆ ತ್ರಿಕಟುಕ ಜೀರಿಗೆ ಹಿಂಗು ರೂಢಿವಡೆದ ಪಂಚಲವಣ (ಸಾಳ್ವಸಾಂ. ೧೦); ಅಗಲ ಶುಂಠಿ (ಹಾಡೆ) . . . ಇವು ತ್ರಿದೋಷನಾಶಕ (ಅಷ್ಟಾಂಗ. ೧೩೩-೭೦ ಟೀಕೆ).

[< ಸಂ. ಪಾಠಾ]

**ಹಾಡೆಲ** (ನಾ). ಒಂದು ಬಗೆಯ ಸಸ್ಯ: "ಜ್ಯೋತಿಷ್ಮ, ಪಹೇಲಿಕಾ, ಜಾಲಿ - ಈ ೩ ಹಾಡೆಲ" (ನಾಚರಾ. ೧೧೦). [?]

**ಹಾಡ್ಯ** 'ಪಾಡಿ$_2$ ನೋ.

**ಹಾಣರ** (ನಾ). ಒಂದು ಊರಿನ ಹೆಸರು: ಒಜೆಕೋಡಿನ ಉಗುರವಾಡಿಯ ಹಾಣರದ ತ್ರಿಸನ್ದಿ (ಇಇ. VIII, ೨೧೩-೨೯; 10ನೆಯ ಶತ). [?]

**ಹಾಣಾಹಣಿ** 'ಹಣಾಹಣಿ' ನೋ.

**ಹಾಣಾಹಾಣಿ** 'ಹಣಾಹಣಿ' ನೋ.

**ಹಾಣಾಹಾಣಿಕಾಱ** (ನಾ). ಹಣಾಹಣಿ ಕಾಳಗವನ್ನು ಮಾಡುವವನು; ವೀರ: ಸಾಣೆಗಂಡಲಗಿವನು ಸಮರಕೆ ಹೂಣಿಗನು ರಿಪುಬಲದ ಹಾಣಾಹಾಣಿಕಾಱನು

ಕರ್ಣನಳುಕುವನಲ್ಲ ನಿನಗೆ (ಕುಷ್ಯಾಕ. ೧೬-೨೦).

[ಹಾಣಾಹಾಣಿ (< ಹಣಾಹಣಿ) + - ಕಾಱ]

**ಹಾಣೆ** (ನಾ). (?): ಹಾಣೆಯ ಮಿಣೆಯ ಕಡಿಯನು ನಾ'ದು' (ದ?)ವೋದ ಕೆಱಹನು ಬೂದಿವೋದ ಮೆಱಹನು ಒಣಗಿದೆಲುವನು ಆಯಿದುಕೊಂಡು ಒಡಲ ತುಂಬಿ ಬೂದಿಯೊಳಗೆ ಕೆಡೆದಿಪ್ಪ ಶ್ವಾನ ಬಲ್ಲುದೇ ಅಮೃತಾನ್ನಗಳಿಪ್ಪೆಡೆಯ (ಸರ್ವಜ್ಞ. ೧೬೬-೭೮೫). [?]

**ಹಾತಕ** (ನಾ). ಪಾಪ; ಪಾತಕ: ಹೊಸಹೊಸ ಸಿಂಗರಮಂ ಬಿಲ್ಪಿನ್ನಣದಿಂದೊಡರಿಸಿ ತೂಣಿನ ಗೆಲ್ಪೀ ಹಾತಕಮಂ ನಿಕ್ಕುವಮೆನೆ ಕೊಲ್ಮಮರ್ದುರುಳಿಯ ಪೋಲ್ಪೆಳಗುಗ್ಗುಳಮಂ ಹಗ್ಗಿಯೊಳಿರಿಸಿ (ಉದ್ಭಟ. ೬-೪೭). [< ಸಂ. ಪಾತಕ]

**ಹಾತಕವಾಱು** (ಕ್ರಿ). ಹೌಹಾರು (?): ಒದಱಿದವು ರಣವಾದ್ಯಚಯವಳ್ಳಿದೆಗೊಳಲ್ ಬ್ರಹ್ಮಾಂಡವೀಶನ ಹೃದಯ ಹಾತಕ [ಪಾಠಾಂ. ದ್ರವ] ವಾಱೆ ಹಮ್ಮದವೋಗೆ ಕಮಲಭವ (ತೊರರಾ. ೬-೧೭-೧೩). 'ಹಾತವಾಱು' ಪರಾ. [?]

**ಹಾತರುಮಾಲು** (ನಾ). (ಉಕ) ಕೈಚೌಕ; ಕರವಸ್ತ್ರ: ಅವನ ಕೋಟಿನೊಳಗೇ ಇದ್ದ ಒಂದು ಮಾಟ ಹಾತರುಮಾಲದಿಂದ ಮಗುವಿನ ಮೂಗು ಒರೆಸಿದಳು (ಸಾವಿಉ. ೪೭).

[<— ಮರಾ. ಹಾತ್‌ರುಮಾಲ್]

**ಹಾತವಾಱು** (ಕ್ರಿ). ಹಾತೊರೆ; ಉತ್ಕಂಠಿತವಾಗು: ಪಸಿದಿರ್ದ ಹಾಂಗೆ ಹಾತವಾಱುತಿರ್ದ ನೆಲನಪ್ಪಿದ ಕಡುಗಿಡ್ಡನಾಗಿ ಕುರ್ಗಿದ ಕುಂಡೋದರನನಂತ: ಪುರಸ್ಸರೆಲ್ಲರ್ ಕಂಡು ಚೋದ್ಯಂಬಡುತ್ತಮಿರೆಯಿರೆ (ಹಾಲಾಸ್ಯ. ೧-೮-೨೨ ವ). 'ಹಾತಕವಾಱು' ಪರಾ. [?]

**ಹಾತಾಳಿಸು** (ಕ್ರಿ). ಹಸ್ತಕೌಶಲವನ್ನು ತೋರು,—ನಿರ್ವಹಿಸು: ಹೀಗೆ ಎತ್ತಿಕೊಂಡ ಸನ್ನಿವೇಶಗಳನ್ನು ಪ್ರಭಾವಿಯಾಗಿ ಹಾತಾಳಿಸುವ ಹಿಡಿತ, ಅವಶ್ಯವಾದ ಗತಿಪ್ರಜ್ಞೆ, ಪಾತ್ರದರ್ಶನ ಇವು ರುದ್ರಭಟ್ಟನಲ್ಲಿವೆ (ಕಸಾಚ. ೧೯೨).

[ಹಾತಾಳ್$_{0}$ (P <— ಮರಾ. ಹಾತವಳಾ, ಹಾತೋಳ್) + - ಇಸು$_{3}$]

**ಹಾತುಕುಂಟಿ** (ನಾ). ಕುಸ್ತಿಯ ಒಂದು ಪಟ್ಟು: ಎಂದು ಘಂಟೆಯು ಹಾತು ಕುಂಟಿಯು ನಿಂದೆ ಘಂಟೆಯು ಹಾತುಭಾಣುಗಳೊಂದಿದಿಕ್ಕತ ಭಾವು . . . ಚೇಣ ಪಟ್ಟಸುವೆಂದೆನಿಪ ವಿಂದಾಣದಲಿ ಕಾದಿದರು ಜಟ್ಟಿಗಳು (ಸಾಳ್ವಭಾ. ೨೨-೭೨). [?]

**ಹಾತುಭಾಣು** (ನಾ). ಕುಸ್ತಿಯ ಒಂದು ಪಟ್ಟು: ಎಂದು ಘಂಟೆಯು ಹಾತು ಕುಂಟಿಯು ನಿಂದೆ ಘಂಟೆಯು ಹಾತುಭಾಣುಗಳೊಂದಿದಿಕ್ಕತ ಭಾವು ಚೇಣ ಪಟ್ಟಸುವೆಂದೆನಿಪ ವಿಂದಾಣದಲಿ ಕಾದಿದರು ಜಟ್ಟಿಗಳು (ಸಾಳ್ವಭಾ. ೨೨-೭೨). [?]

**ಹಾತೆ** 'ಪಾತ್ರೆ$_{2}$' ನೋ.

**ಹಾತೆಹುಳು** (ನಾ). ಪತಂಗ; ದೀಪದ ಹುಳು: ದೀಪದ ಬೆಳಕಿಗೆ ಹಾತೆಹುಳುವು ಬಂದು ಮೈ ಸುಟ್ಟುಕೊಂಡರೂ ಮತ್ತೂ ದೀಪವನ್ನು ಕೆಡಿಸಲು ನೋಡುವುದಿಲ್ಲವೆ? (ಶಾಂಭವಿ. ೫೬). [ಹಾತೆ (< ಪಾತ್ರೆ$_{2}$) + ಹುಳು (< ಪುೞು)]

**ಹಾತೊರೆ** (ಕ್ರಿ). ಆತುರ ಪಡು; ಕಾತರಿಸು; ಹಂಬಲಿಸು: ಉಗ್ರಕಾರ್ಯಕ್ರಮ ಕೈಗೊಳ್ಳಲು ಜನತೆ ಹಾತೊರೆಯುತ್ತಿತ್ತು (ಕುರುಕಾ. ೧೧೧); ಹಳ್ಳಿಯ ಜೀವನಕ್ಕಾಗಿ ಹಾತೊರೆಯುವವರಲ್ಲಿ ನಾನೊಬ್ಬ (ಜೀ ವರಂ. ೪೭); ಪುನಃ ನಮ್ಮ ಪೂರ್ವಿಕರ ಪಂಥವನ್ನೇ ಹಿಡಿಯಲು ಹಾತೊರೆಯುತ್ತಿದ್ದೇವೆ (ರಾಮರಾ. ೪೨). [?]

**ಹಾದಂಡ** (ನಾ). = ಹಕಾರ ೨: ಹಾದಂಡಮಯ್ಯರಿಂ ಹಾಮಾದಂಡಮತ್ತಯ್ಯರಿಂ ಹಾಮಾದಿಗ್ಭೇದಂ ಕುಲಧರರಯ್ಯರಿನಾದುದು (ಚಾವುಂಪು. ೧೧); ಕ್ರಮದಯ್ಯರಿಂದೆ ಹಾದಂಡಮಯ್ಯರುಂ ಮನುಗಳಿಂದೆ ಹಾಮಾದಂಡಂ ಸಮನಿಸೆ (ಪಂರಾಪಾ. ೧-೮೯).

[ಹಾ + ದಂಡ]

**ಹಾದರ** 'ಪಾರದಾರ' ನೋ.

**ಹಾದರಗಿತ್ತಿ** 'ಪಾದರಗಿತ್ತಿ' ನೋ.

**ಹಾದರವಿದ್ದೆ** (ನಾ). ಜಾರವಿದ್ಯೆ: ಮಧ್ಯರಾತ್ರಿಗೆ ಬರ್ಪನಕ ನಿದ್ದೆಗೆಯ್ವಂತೆ ಮಂದಿರದೊಳು ಹಾದರವಿದ್ದೆಯಂಗನೆಗಳೊಪ್ಪಿದರು (ಮೋಹತ. ೧೮-೨೯).

[ಹಾದರ (< ಪಾರದಾರ) + ವಿದ್ದೆ (< ಬಿಜ್ಜೆ$_{2}$)]

**ಹಾದರಿ** 'ಪಾದರಿ$_{2}$' ನೋ.

**ಹಾದರಿಗ** 'ಪಾದರಿಗ' ನೋ.

**ಹಾದರಿಗಿತಿ** (ನಾ). ಜಾರೆ; ವ್ಯಭಿಚಾರಿಣಿ: ಕಮ್ಮಱಿತಿ, ನಾವಿದಿತಿ, ಹಾದರಿಗಿತಿ (ಶಮದ. ನ. ೨೨೦ ಪ್ರಯೋ). [ಹಾದರಿಗ (< ಪಾದರಿಗ) + - ಇತಿ$_{1}$ (< - ಇತ್ತಿ)]

**ಹಾದರಿವಾಗಲ್, ಹಾದರಿವಾಗಿಲು** (ನಾ). ಒಂದು ಊರಿನ ಹೆಸರು (?): ಒಱೆಕೋಡಿನ ಹಾದರಿವಾಗಿಲ ಕುಪ್ಪೆಯ ತ್ರಿಸನ್ನಿ (ಇಆ. VIII, ೨೧೪-೩೮; 10ನೆಯ ಶತ).

**ಹಾದರಿವಾಗಿಲು**: ಎಡತೊಱೆನಾಡೊಳಗೆ . . . ಕೊಟ್ಟ ಹಾದರಿವಾಗಿಲು (ಮೈಆರಿ. ೧೯೪೫, ೧೮-೩೦; 13ನೆಯ ಶತ). [?]

**ಹಾದರಿವಾಗಿಲು** 'ಹಾದರಿವಾಗಿಲ್' ನೋ.

**ಹಾದಾಟ** 'ಪಾಯ್$_{1}$' ಪರಾ.

**ಹಾದಾಡು** 'ಪಾಯ್$_{1}$' ಪರಾ.

**ಹಾದಿ** 'ಪಾದಿ$_{1}$' ನೋ.

**ಹಾದಿಕಾಯು** (ಕ್ರಿ). (ಆಲಂ) ಎದುರು ನೋಡು; ದಾರಿಕಾಯು; ನಿರೀಕ್ಷಿಸು: ಬಂದರೆ ಬರಲಿ. ತುಸು ಹಾದಿಕಾದಾನು (ಹೊಸಕ್ಟ. ೧೬೨).

[ಹಾದಿ (< ಪಾದಿ$_{1}$) + ಕಾಯು$_{1}$ (< ಕಾ$_{1}$)]

**ಹಾದಿಕಾರ** (ನಾ). ದಾರಿಹೋಕ; ಪ್ರಯಾಣಿಕ: ಹಳ್ಳಿಕಾರನಲ್ಲ ಹಾದಿಕಾರನಲ್ಲ (ನಾಪದ. ೩೮); ಬಡಹಾದಿಕಾರನ ವೇಷದಿಂದ ಮಧ್ಯಾಹ್ನ ಆ ವನಕ್ಕೆ ಬಂದನು (ಕಪಪು. ೭-೮). [ಹಾದಿ (< ಪಾದಿ$_{1}$) + - ಕಾರ$_{1}$ (< - ಕಾಱ)]

**ಹಾದಿಗ** (ನಾ). = ಹಾದಿಕಾರ: ಮೇದಿನಿಯ ಭಾರಾಪಹರಣವಿನೋದವಿದು ಮಾಯಾ ಪ್ರಪಂಚಿನ ಹಾದಿಗರಿಗಿದು ಸಿದ್ಧವೆಂದೇ ತೋಱಿತಿಹುದೆಂದ (ತೊರರಾ. ೧-೮-೭೮); ಅದೇ ಹಾದಿಯ ಹಾದಿಗರಿಗೇ ಅವನು ಸರ್ವೋಚ್ಚ ಸನ್ಮಾನವನ್ನು ಕೊಡದೆ ಹೇಗೆಯೂ ಇರಲಾರನು (ನಿಬಂಧ. I, ೨೧೭). [ಹಾದಿ (< ಪಾದಿ$_{1}$) + - ಗ$_{2}$]

**ಹಾದಿಗೆಡು** (ಕ್ರಿ). ೧. ದಾರಿ ತಪ್ಪು; ಮಾರ್ಗ ತಿಳಿಯದಾಗು: ಹಾದಿಗೆಟ್ಟು ತೊಟ್ಟಗೆ ನೆಗೆತರ್ಪ ನುಣ್ಣದಿರೊ ಪೇಱೆನೆ ನೋಟ್ಪರ ಕಣ್ಣೆ ಸುತ್ತಲುಂ ಸೊಗಯಿಸಿ ಮೇಲೆ ಮೇಲೆ ಕವಿತಂದುವು ಭೋಂಕನೆ ಪೂವಿನಂಬುಗಳ್ (ಕಬ್ಬಿಕಾ. ೩೦೬). ೨. ಕೆಟ್ಟಕ್ರಮವನ್ನು ಅನುಸರಿಸು; ನೀತಿಗೆಡು: ಮನೆಯನ್ನು ನಂಬಿಕೊಂಡು ಇರುವುದೇ ಆಕೆಗೆ ಬೇಕಿಲ್ಲ. ಹಾದಿಗೆಟ್ಟವಳು (ಕಮನ. ೩೯). [ಹಾದಿ (< ಪಾದಿ$_{1}$) + ಕೆಡು$_{1}$]

**ಹಾದಿಗೊಳ್** (ಕ್ರಿ). ೧. ನಡೆಯಲು ಪ್ರಾರಂಭಿಸು; ಪ್ರಯಾಣಕ್ಕೆ ತೊಡಗು: ಮಣಮಂದಪುತ್ತೂರ್ಗೆ ಹಾದಿಗೊಂಡೊಮ್ಮೆಯುಂ ಪ್ರಣಯದಿಂದೆಡೆಯಾಡುವಾ ಜನದ ಪೆರ್ಮೆಯುಂ (ನಂಬಿರ. ೫-೩೭); ಹಾದಿಗೊಂಡೆಡೆಯಾಡುವರ ಕರೆದಾ ದೆಸೆಗಳನು ನೋಡಿ (ನಿಭಾಗ. ೧೧-೧೫-೩). ೨. ಕ್ರಮವಾಗು; ಓರಣವಾಗು: 'ಹಾದಿಗೊಳಿಸು' ಪರಾ.

[ಹಾದಿ (< ಪಾದಿ$_{1}$) + ಕೊಳ್$_{1}$]

**ಹಾದಿಗೊಳಿಸು** (ಕ್ರಿ). ಕ್ರಮವಾಗಿಡು; ಓರಣಗೊಳಿಸು: ಹೊನ್ನ ಹರಿಯಾಣಂಗಳಂ ಹಾದಿಗೊಳಿಸುತಂ ರನ್ನದಡ್ಡಣಿಗೆಗಳ ಮೇಲೆ ತಂದಿರಿಸುತಂ (ಇಹರ. ದೇ. ೨೯-೧೯).

[ಹಾದಿಗೊಳ್ + - ಇಸು$_{1}$]

**ಹಾದಿಜಗಳ** (ನಾ). ಎಲ್ಲರೆದುರಿಗೆ ಬೀದಿಯಲ್ಲಿ ನಡೆಯುವ ಜಗಳ; ಮುಚ್ಚುಮರೆಯಿಲ್ಲದ ಕಲಹ: ಹಾದಿಜಗಳ ಹಣವಡ್ಡ. ಬೀದಿಜಗಳ ಮುಪ್ಪಾಗ (ಗಾದೆ). [ಹಾದಿ (< ಪಾದಿ$_{1}$) + ಜಗಳ (< ಜಗಟ)]

**ಹಾದಿತಪ್ಪು** (ಕ್ರಿ). ೧. = ಹಾದಿಗೆಡು ೧: ಯಾಕೇ ಬಸಂತೀಬಾಯಿ ಈ ಹೊತ್ತು ಹಾದಿ ತಪ್ಪಿದಿರೇನು (ಮಂಜುಕ. ೩೬); ತಾನು ಯಾವನೊ ಒಬ್ಬ ರಾಜಪುತ್ರ, ಹಾದಿತಪ್ಪಿ ಬಂದು ಹೊತ್ತು ಹೋಗಲಾರದೆ ಈ ಕೆಲಸ ಮಾಡುತ್ತಿದ್ದೇನೆ (ದೇಶನ್ನ. ೬೨). ೨. = ಹಾದಿಗೆಡು ೨: ಹುಡುಗ ಹಾದಿ ತಪ್ಪಿದ್ದಾನೆ (ರೂಢಿ). [ಹಾದಿ (< ಪಾದಿ$_{1}$) + ತಪ್ಪು$_{1}$]

**ಹಾದಿದೆಗೆ** (ಕ್ರಿ) ಪ್ರಯಾಣಕ್ಕೆ ತೊಡಗು; ಸಾಗು: ಮೇದಿನಿಯೊಳು ಖಾನ ಮೌನದೀಕ್ಷೆಯ ಕೊಂಡು ಹಾದಿದೆಗೆದ ತನ್ನ ಪುರಕೆ (ಕಂಸವಿ. ೧೫-೧೨೫).

[ಹಾದಿ (< ಪಾದಿ$_{1}$) + ತೆಗೆ$_{1}$]

**ಹಾದಿದೋರು** (ಕ್ರಿ). ದಾರಿಯನ್ನು ಕಾಣಿಸು, ಮಾರ್ಗ ತೋರು: ಬಿದಿರಿಗೆ ಬಿದರ

ತಿಕ್ಕಿ ಉದುರಿತ್ತು ಕಿಡಿಬೆಂಕಿ ಹಾದಿದೋರಿದವು ದೀಪಾಗಿ (ಸಿದ್ಧಪು. ೫-೫೯).

[ಹಾದಿ (< ಪಾದಿ$_1$) + ತೋರು (< ತೋಱು)]

**ಹಾದಿನಡೆ** (ಕ್ರಿ). = ಹಾದಿಗೊಳ್ ೧: ವಾದಿಯ ಸಂಗಡ ವಾದಿಸಲು ಸಲ್ಲ, ಕುಂಟನ ಸಂಗಡ ಹಾದಿನಡೆಯಲು ಸಲ್ಲ (ಗಾದ). [ಹಾದಿ (< ಪಾದಿ$_1$) + ನಡೆ$_1$]

**ಹಾದಿನೋಡು** (ಕ್ರಿ). (ಆಲಂ) ಎದುರು ನೋಡು; ಹಾದಿ ಕಾಯು: ಈಗ ಕತ್ತಲೆಯಾಯಿತು, ಅಮ್ಮ ಹಾದಿ ನೋಡುತ್ತಾಳೆ (ಮೂರುದಾ. ೪೮).

[ಹಾದಿ (< ಪಾದಿ$_1$) + ನೋಡು]

**ಹಾದಿಬಿಡಿಸು** (ಕ್ರಿ). ೧. ಮುಂದೆ ಹೋಗಲು ಸಾಧ್ಯವಾಗುವಂತೆ ಜನರನ್ನು ಆ ಕಡೆ ಈ ಕಡೆ ಸರಿಸಿ ದಾರಿಮಾಡು: ಪೋಲೀಸರು ಬಂದು ಜನಸಂದಣಿ ಚದುರಿಸಿ ಹಾದಿ ಬಿಡಿಸಿದರು (ರೂಢಿ). ೨. ದಾರಿ ತಪ್ಪಿಸು; ಗುರಿ ತಪ್ಪಿಸು: ಅಹಂಗೀತವೇ ಎನ್ನನು ಕೆಡಿಸಿತು,ಎನ್ನ ಹಾದೀ ಬಿಡಿಸಿತು ದಿಟಸುಖವ ಮರೆಯಿಸಿ ಸಟೆಯಲ್ಲಿರಿಸಿತು (ಅಂತರಾ. ೧೭). [ಹಾದಿ (< ಪಾದಿ$_1$) + ಬಿಡಿಸು]

**ಹಾದಿಸುದ್ದಿ** (ನಾ). ಬೀದಿಯಲ್ಲೆಲ್ಲಾ ಹರಡಿರುವ ಸಮಾಚಾರ; ಗುಲ್ಲು: ಪೀಟರ್ಸ್‌ಬರ್ಗ್ ನಗರದಲ್ಲೆಲ್ಲಾ ಹಾದಿಸುದ್ದಿಯಾಗಿದ್ದ ಸೈಬೀರಿಯಾದ ಹೊಸ ಗೌರ್ನರ್ ಪ್ರಸಂಗದ ಬಗ್ಗೆ ಅವರು ಮಾತಾಡಿಕೊಳ್ಳುತ್ತಿದ್ದಿರಬೇಕೆಂದು ನೆಕ್ಲುದೋವ್ ಊಹಿಸಿದನು (ಪುನರು. ೩೭೭). [ಹಾದಿ (< ಪಾದಿ$_1$) + ಸುದ್ದಿ]

**ಹಾದಿಹಿಡಿ** (ಕ್ರಿ). ೧. ನಡೆ; ಹೋಗು: ನಾವಿಬ್ಬರೂ ಕುದುರೆ ಹತ್ತಿ ಹಾದಿ ಹಿಡಿದೆವು (ಸ್ವತಿಚ. ೨೯); ಅಪ್ಪಣ್ಣಭಟ್ಟರ ಮನೆಯ ಹಾದಿ ಹಿಡಿದಳು (ಮೂರುದಾ. ೧೮೫). ೨. ದಾರಿಯನ್ನು ಅನುಸರಿಸು; ಹಿಂಬಾಲಿಸು: ವೇದ ಆಗಮವೇಕೆ ವಾದ ಓದುಗಳೇಕೆ ನಾದಬಿಂದುಗಳ ಭ್ರಮೆಯೇಕೆ ಶರಣರ ಹಾದಿ ಹಿಡಿದವಗೆ (ಸರ್ವಜ್ಞ. ೧೮೩). ೩. (ಒಳ್ಳೆಯ) ರೀತಿಯನ್ನು ಅನುಸರಿಸು: ಶ್ರೀಪಾದರಾಜರು ದ್ವೈತಮತಪ್ರಚಾರ ಮಾಡಲು ಅನುಕೂಲವಾದ ಹಾದಿಹಿಡಿದು ಭಾಗವತರ ತಂಡವೊಂದನ್ನು ತಯಾರುಮಾಡಿದರು (ಜಗಬಾ. ೮೧); ನನ್ನ ಮುಂದಿನ ಪೀಳಿಗೆಯಾದರೂ ಹಾದಿಹಿಡಿಯಲಿ (ಹಳ್ಳಹಾ. ೭೩). [ಹಾದಿ (< ಪಾದಿ$_1$) + ಹಿಡಿ$_1$ (< ಪಿಡಿ$_1$)]

**ಹಾದಿಹೋಕ** (ನಾ). = ಹಾದಿಕಾರ: ನಮ್ಮ ನಿಮ್ಮಂಥ ಹಾದಿಹೋಕಮಂದಿ ಬೆರಗಾಗುವುದು ಅಪರಾಧವಾಗಲಿಕ್ಕಿಲ್ಲ (ಮೂವಾದ. ೪೧); ಹಾದಿಯಲ್ಲಿ ಎರಡು ಮೂರು ಸಲ ಎಡವಿದನು; ಹಾದಿಹೋಕರಿಗೆ ಕೈ ತಾಕಿಸಿದನು (ಕನಕ. ೮೯).

[ಹಾದಿ (< ಪಾದಿ$_1$) + ಹೋಕ (< ಪೋಕ)]

**ಹಾನ$_1$** (ನಾ). ಬಿಡುವಿಕೆ; ತ್ಯಾಗ: ಧನಸೇವೆಯಿಂದೆ ನೆರವಪ್ಪರ್ ನಂಟರೆಂದಂದು ತಾಂ ಮರುಳಕ್ಕುಂ ಪುರುಳಕ್ಕುಮೇ ಮಱೆದು ಹಾನಾದಾನವಿಜ್ಞಾನಮಂ (ಪಂರಾಮಾ. ೬-೬೭). [ಸಂ.]

**ಹಾನ$_2$** (ನಾ). (?): ಕೆಂಪಿನ ಗಂಧ ಅಕ್ಷತೆ . . . ಕೆಂಪಿನ ಹಾನ ಕರಿಯ ಹಾನ ಇವಂ ಮಂತ್ರಸಹಿತವಾಗಿ ಮೂಱುದಿನ ಹೆಬ್ಬಟ್ಟೆಯಲ್ಲಿ ಬಲಿಯಂ ಕೊಡುವುದು (ಬಾಲಚಿ. ೧೩೨-೧೦); ಅರಕೆಱೆಯ ಬಡಗಣ ಹಾನ ಹಾದರಿಯ ಹಕ್ಕಲು (ಎಕ. VII, ಶಿವಮೊ. ೧೦೪-೬; ?). [?]

**ಹಾನಂಜಿಮರ** (ನಾ). ಒಂದು ಬಗೆಯ ಮರ: ಕುರುಡನ ಪೋಣೆಯ ಕೆಳದು ಹಾನಂಜಿಮರದ ಬಳಿಯ ನೆಟ್ಟ ಕಲ್ಲು (ಎಕ. XIV, ಮೈಸೂರು. ೧೧೬-೫೫; 1664).

[ಹಾನಂಜಿ + ಮರ$_1$]

**ಹಾನಂಬಿ, ಹಾನಬಿ** (ನಾ). (?): ಗದ್ದೆಯ ಹಾನಂಬಿಯ ತೆವರ ಮೇಲಣ ನೇಱಿಲ ಮರನ ವೊತ್ತಿನಲು (ಎಕ. VIII, ತೀರ್ಥಹ. ೧೨೯-೪೯; 1404). **ಹಾನಬಿ:** ಅಡಕೆತೋಟದ ವೊತ್ತಿನಲು ಹಾನಬಿಯ ತೆವರ ಮೇಲೆ (ಎಕ. VIII, ತೀರ್ಥಹ. ೨೧೮-೨೫; 1415). [?]

**ಹಾನಬಿ** 'ಹಾನಂಬಿ' ನೋ.

**ಹಾನಿ$_1$** (ನಾ). ಒಂದು ಅಳತೆಯ ಪ್ರಮಾಣ: ಕೋಟೇಶ್ವರದೇವರ ನೈವೇದ್ಯಕೆ ದಿನ ಒಂದಕ್ಕಂ ಅಕ್ಕಿ ನಾಡ ಹಾನಿ ಮೂಱಱ ಲೆಕ್ಕದಲು ತುಪ್ಪ ಸೊಳಸಿ (ಸೌಇಇ. IX-ii, ೪೧೭-೨೫; 1377); ಅದಕ್ಕಂಗಡಿ ಭತ್ತ ೩೭ ಹಾನಿ ವಾಸಿ ಖ ೧ (ಎಕ. VI, ಕೊಪ್ಪ. ೪೭-೧೯; 1530). 'ಹಾನೆ' ಪರಾ. [< ಪಾನೆ]

**ಹಾನಿ$_2$** (ನಾ). ೧. ಕೇಡು; ನಾಶ: ಅತಿ ಕಾಮರ್ಗತಿ ಹಾನಿಯ್ಕೆ (ಸೋಮೇಶ. ೩೯); ಬಂದು ಕರ್ಣನ ಹಾನಿ ಕೌರವವೃಂದವನು ವೇಧೈಸಿತೇ (ಕುವ್ಯಾಶ. ೧-೯). ೨. ಕುಂದು; ಕೊರತೆ: ಪ್ರಾಣ ಕೊಡುವ ತೆಗೆಯುವ ಅವಶ್ಯಕತೆಯಿಲ್ಲದಿದ್ದರೂ, ಕೊಡಬೇಕಾದರೆ ತೆಗೆದುಕೊಳ್ಳಬೇಕಾದರೆ ಹಾನಿಯೇನು (ಬಾಣಾಲಿ. ೩೨). ೩. ನಷ್ಟ: ಮೋನವಿತ್ತಲು ರಭಸವತ್ತಲು ಹಾನಿಯಿತ್ತಲು ವೃದ್ಧಿಯತ್ತಲು ಭೂಪ ಕೇಳೆಂದ (ಕುವ್ಯಾದ್ರೋ. ೪-೧). ೪. ಕ್ಷಯ; ಕ್ಷೀಣಿಸುವಿಕೆ: ಹಾನಿಯುಂ ವೃದ್ಧಿಯುಮದು ನಿಜಮಂಭೋಧಿಗಂಬರ್ (ಎಇ. XIII, ೧೯-೧೭; 1204).

**ಹಾನಿಮಾಡು** = ನಷ್ಟವಾಗಿಸು; ಹಾಳುಮಾಡಿಕೊಳ್ಳು: ಮಾನವಜನ್ಮ ದೊಡ್ಡದು ಇದ ಹಾನಿಮಾಡಲು ಬೇಡಿ ಹುಚ್ಚಪ್ಪಗಳಿರಾ (ಪುರಂದ. ೧-೧೪ ಪಲ್ಲವಿ). **ಹಾನಿವೃದ್ಧಿ** = ನಷ್ಟ ಮತ್ತು ಏಳಿಗೆ; ಲಾಭಾಲಾಭ: ಎನ್ನ ಹಾನಿವೃದ್ಧಿ ನಿಮ್ಮದಯ್ಯಾ (ಬಸವ. ೬೦); ಎನ್ನ ಹಾನಿವೃದ್ಧಿಗಳೆಲ್ಲ ಪ್ರಸಾದವಯ್ಯ (ಅಖಂಡೇ. ೧೮೩-೬೯). [ಸಂ.]

**ಹಾನಿಕರ** (ನಾ). ಕೇಡನ್ನುಂಟುಮಾಡುವಂತಹುದು; ಅಪಾಯಕರವಾದದು: ಸಿಗರೇಟುಸೇವನ ಆರೋಗ್ಯಕ್ಕೆ ಹಾನಿಕರ (ರೂಢಿ). [ಸಂ.]

**ಹಾನುಂಗಲ್** 'ಪಾನುಂಗಲ್' ನೋ.

**ಹಾನುಂಗಲು** 'ಪಾನುಂಗಲ್' ನೋ.

**ಹಾನುಗಲ್** 'ಪಾನುಂಗಲ್' ನೋ.

**ಹಾನುಗಲ್ಲು** 'ಪಾನುಂಗಲ್' ನೋ.

**ಹಾನೆ** 'ಪಾನೆ' ನೋ.

**ಹಾಮಚಿ** (ನಾ). ಒಂದು ಬಗೆಯ ಬಳ್ಳಿ: ''ವಿಷ್ವಕ್ಸೇನಪ್ರಿಯಾ, ಘೃಷ್ಟಿಃ, ವಾರಾಹೀ, ಬದರಾ -- ೪ ಹಾಮಚೀಬಳ್ಳಿ'' (ಸಿದ್ಧಾಂತಿ. ೧೪೬). [?]

**ಹಾಮಾದಂಡ** (ನಾ). [ಜೈನ] ಹಾ ಮತ್ತು ಮಾ ಎಂಬ ಶಬ್ದಗಳ ಉಚ್ಚಾರದಿಂದ ಕೊಡುತ್ತಿದ್ದ ಶಿಕ್ಷೆ; ಒಂದು ಬಗೆಯ ವಾಗ್ದಂಡ; ℙ ಎರಡನೆಯ ಐದು ಮನುಗಳು ಪ್ರಜೆಗಳನ್ನು ಅಪರಾಧಗಳಿಂದ ಪರಾವೃತ್ತಗೊಳಿಸುತ್ತಿದ್ದ ಶಬ್ದೋಚ್ಚಾರ: ಹಾದಂಡಮಯ್ವರಿಂ ಹಾಮಾದಂಡ ಮತ್ತಯ್ವರಿಂ ಹಾಮಾದಿಗ್ಛೇದಂ ಕುಲಧರರಯ್ವರಿನಾದುದು (ಚಾವುಂಪು. ೧೧). [ಹಾ + ಮಾ$_6$ + ದಂಡ]

**ಹಾಮಾಧಿಕ್ಕಾರದಂಡ** (ನಾ). = ಹಾಮಾದಂಡ: ಈ ಮಾಳ್ಕೆಯೊಳೆಸಗದರಂ ಹಾಮಾಧಿಕ್ಕಾರದಂಡದಿಂ ದಂಡಿಪುದು (ಆದಿಪು ೯-೭೪); ಮತ್ತಮಯ್ವರ್ ಮನುಗಳು ಹಾಮಾಧಿಕ್ಕಾರದಂಡಮಂ ಮಾಡಿದರು (ಚಾವುಂಪು. ೧೧).

[ಹಾ + ಮಾ$_6$ + ಧಿಕ್ಕಾರ + ದಂಡ]

**ಹಾಮೆಕ್ಕೆ** 'ಪಾವುಮೆಕ್ಕೆ' ನೋ.

**ಹಾಯ್$_1$** 'ಪಾಯ್$_1$' ನೋ.

**ಹಾಯ್$_2$** 'ಪಾಯ್$_2$' ನೋ.

**ಹಾಯ್$_3$, ಹಾಯಿ$_2$** (ಗು). ೧. (ಊಟ, ನಿದ್ದೆ, ಸ್ಥಳ ಮುಂತಾದುವುಗಳಲ್ಲಿ) ಆಹ್ಲಾದಕರವಾದ; ಸಂತೋಷಕರವಾದ: (೬). **ಹಾಯಿ$_2$:** (ನಾ). ೨. ಸಮಾಧಾನ; ನೆಮ್ಮದಿ; ಸೌಖ್ಯ: ನನಗಿನ್ನೆಲ್ಲಿ ವಿಶ್ರಾಂತಿ, ಮನಸ್ಸಿಗಿನ್ನೆಲ್ಲಿಯ ಹಾಯಿ ? (ಚಿತಂಬಾ. ೨೪); ಎಂದು ಜೀವಕ್ಕೆ ಹಾಯಿ ಬರುವುದೋ ಎಂದು ತಲೆಯ ಮೇಲೆ ಕೈಯಿಟ್ಟು ಕುಳಿತುಬಿಡುವನು (ಮುರುಕು. ೭೪).

**ಹಾಯಗೊಳ್ಳು** = ಸಮಾಧಾನವನ್ನು ಪಡೆ; ನೆಮ್ಮದಿಯನ್ನು ಹೊಂದು: ತಾಯಿಯ ನೆನಪಿಲ್ಲ, ಮಾಯದ ತೊಡಕಿಲ್ಲ ಹಾಯಗೊಂಡಿತು ಮೈ ಮನ (ಸಿದ್ಧಪು. ೪-೧). **ಹಾಯಾಗಿರು** = ನೆಮ್ಮದಿಯಿಂದಿರು; ಸೌಖ್ಯವಾಗಿರು: ಗುತ್ತಿಗೆ ತೆಗೆದುಕೊಂಡು ಹಾಯಾಗಿರಬಹುದು (ಪುನರು. ೨೬೯). **ಹಾಯಾಗು** = ನೆಮ್ಮದಿಯಾಗು; ಹಿತವೆನಿಸು: ನಾನು ಈಗ ಹಾಯಾಗಿ ಬೆಂಡಿನಂತೆ ತೇಲಿಕೊಂಡಿದ್ದೇನೆ (ಬಂಕಿಮ. ೩೩೦); ಆ ಚಿಂತೆಯನ್ನು ಬಿಟ್ಟು ಹಾಯಾಗಿ ಒಂದು ಘಳಿಗೆ ವಿಶ್ರಾಂತಿ ತೆಗೆದುಕೊಳ್ಳಿ (ಚಿತಂಬಾ. ೨೪).

[ದೇ. ‖ ತೆಲು. ಹಾಯಿ]

**ಹಾಯಗಡು** 'ಹಾಯ್ಗಡ' ನೋ.

**ಹಾಯನ** (ನಾ). ೧. ವರ್ಷ; ಸಂವತ್ಸರ: '' ಹಾಯನಃ, ಅಬ್ದಃ . . . ಸಮಃ — ಈ

೬ ವರ್ಷಂ'' (ಹಲಾಯು. ೨೦-೧೧೬); ಬಳಿಸೂನು ಸಹಸ್ರಭುಜಾಬಳಗರ್ವದೆ ಷಷ್ಟಿ ಹಾಯನಂ ತುಂಗಗಜಂ ಕಳಭಕ್ಕಿದಿರ್ಚಿದಂತಿರೆ ಮುಳಿದು ಕುಮಾರಂಗಿದಿರ್ಚಿ ನಿಂದು (ಜಗವಿ. ೧೭-೧೩೦); ಋಷಿಗಳೆತ್ತ ಶಾಪದೊಳು ದಶಹಾಯನಂ ಪೂರೈಸಲಿಲ್ಲ (ರಾಘಚ. ೯-೩೦). **೨. ಕಿರಣ; ರಶ್ಮಿ ೩. ಒಂದು ಬಗೆಯ ಕೆಂಪು ಅಕ್ಕಿ.** [ಸಂ.]

**ಹಾಯಿ$_1$** 'ಪಾಯ್$_2$' ನೋ.

**ಹಾಯಿ$_2$** 'ಹಾಯ್$_3$' ನೋ.

**ಹಾಯಿಕಿಸು** 'ಹಾಯ್ಕಿಸು' ನೋ.

**ಹಾಯಿಕು** 'ಪಾಯ್ಕು$_1$' ನೋ.

**ಹಾಯಿಕ್ಕು** 'ಪಾಯ್ಕು$_1$' ನೋ.

**ಹಾಯಿಗಡ** 'ಹಾಯ್ಗಡ' ನೋ.

**ಹಾಯಿಗೊಳ್** (ಕ್ರಿ). ಸಂತೃಪ್ತಿಯನ್ನು ಹೊಂದು; ಹಾಯಾಗಿರು: ಅಂಬಾಡಿಯ ವೀಳ್ಯದೆಲೆಗಳಿಂದ ಕಟ್ಟಿರುವ ಅರವಟಿಗೆಗಳೊಳ್ ಹಾಯಿಗೊಂಡು (ಸೌಗಂಧಿ. ೧೮೦-೧೧).
[ಹಾಯಿ$_2$ (< ಹಾಯ್$_3$) + ಕೊಳ್$_1$]

**ಹಾಯಿಚಲ** (ನಾ). ಗಾಳಿಯ ಒತ್ತಡಕ್ಕಾಗಿ ದೋಣಿಯ ನಡುಗಂಬಕ್ಕೆ ಕಟ್ಟುವ ಪಟ; ನೌಕಾಪಟ: ಮುಕ್ಕಿಮೊರೆವ ತೆರೆರಕ್ತರೌದ್ರದಲಿ ಆಗೋ ಚುಕ್ಕಿ ಚುಕ್ಕಾಣಿ ದಯೆ; ಬಿಟ್ಟ ಹಾಯಿಚಲ ಅನುಕೂಲಾನಿಲ ಆಚೆ ಸುಧೆಯುಗುವ ಕಿನಾರೆಗೆ (ನಡಬಂ. ೬-೧).
[ಹಾಯಿ$_1$ (< ಪಾಯ್$_2$) + ಚಲ$_2$]

**ಹಾಯಿದೋಣಿ** (ನಾ). ಹಾಯಿಪಟವನ್ನೊಳಗೊಂಡ ದೋಣಿ; ನೌಕಾಪಟವನ್ನು ಕಟ್ಟಿದ ನಾವೆ: ದಾಟಿಕೊಂಡು ಹೋಗಲು ಹಾಯಿದೋಣಿ ಇರಲಿಲ್ಲ (ನಿಬಂಧ. II, ೧೨೯); ಬೆಳಕು ಕಡಲಲಿ ಹಾಯಿದೋಣಿಯಲ್ಲಿ ಮಾರಿಬಲೆ ಬಿದ್ದಿತ್ತು (ಹೊಸಕ್ಷಿ. ೫೭).
[ಹಾಯಿ$_1$ (< ಪಾಯ್$_2$) + ದೋಣಿ$_3$]

**ಹಾಯಿಪಟ** (ನಾ). = **ಹಾಯಿಚಲ:** ಅವರು ನಾವೆಯ ಹಾಯಿಪಟಗಳನ್ನು ಬಿಡಿಸಿದರು (ಹಾಹುತ್ತ. ೨೫). [ಹಾಯಿ$_1$ (< ಪಾಯ್$_2$) + ಪಟ]

**ಹಾಯಿಸು** 'ಪಾಯಿಸು' ನೋ.

**ಹಾಯಿಹಡಗು** (ನಾ). ಪಟವನ್ನು ಕಟ್ಟಿ ನಡೆಸುವ ಹಡಗು; ನೌಕಾಪಟವನ್ನುಳ್ಳ ಹಡಗು: ''ಹಾಯಿಹಡಗು'' (Sailing Ship. ಪತ್ರಿನಿ. ೭೫).
[ಹಾಯಿ$_1$ (< ಪಾಯ್$_2$) + ಹಡಗು (< ಪಡಂಗು)]

**ಹಾಯು** 'ಪಾಯ್$_1$' ನೋ.

**ಹಾಯೆನಿಸು** (ಕ್ರಿ). ಸಮಾಧಾನವಾಗು; ನೆಮ್ಮದಿಯಾಗು: ತನ್ನ ಕಂದಮ್ಮನನ್ನು ಎತ್ತಿಕೊಂಡು ಎದೆಹಾಲುಣಿಸಿದಳು . . . ಸ್ವಲ್ಪ ಹಾಯೆನಿಸಿತು (ನೂರಜ. ೭); ಬೆನ್ನ ಮೇಲೆ ನಾಲ್ಕು ತಂಬಿಗೆ ಬಿಸಿನೀರು ಹಾಕಿಸಿಕೋ. ಹಾಯೆನಿಸಬಹುದು (ಮೂರುದಾ. ೯೭).
[ಹಾಯ್$_2$ + ಎನಿಸು$_1$]

**ಹಾಯ್ಕಿಸು, ಹಾಕಿಸು, ಹಾಯಿಕಿಸು** (ಕ್ರಿ). ೧. ಹಾಕುವಂತೆ ಮಾಡು: ಅಟ್ಟೆಯಂ ಹೊಟಿಗೆಳೆದು ಹಾಯ್ಕಿಸಲು (ಬಸಪು. ೨೮-೨೮); ತುಱುಗೆವೆಗಣ್ಣ ನೀರಿಂಗೆ ಪಱಿಗೋಲ ಹಾಯ್ಕಿಸಬೇಡೆಂದು ಪೊಂಬಟ್ಟೆ ಸೆಱಗಿನಿಂ ತೊಡೆದ ಲೋಚನವ (ಮೋಹತ. ೪-೮೭). **ಹಾಕಿಸು:** ೧. ಅದಕ್ಕೆ ಕಜ್ಜಾಯಮಂ ತರಿಸಿ ಹಾಕಿಸಿ (ಪೂರ್ವಪು. ೩೨). ೨. ಮಾಡಿಸು; ನಿರ್ಮಾಣಗೊಳಿಸು: ಹವಳದ ನೇಗಾರ ಸೆಟಿಗಳಿಗೆ ಹಾಕಿಸ್ತ ಶಿಲಾಶಾಸನ (ಎಕ. X (S), ಕೋಲಾರ. ೨೭೮-೪; 1573); ಕೆಱೆಯ ಕಟ್ಟಿಸು ಮತ್ತೆ ಪೂದೋಟ ಹಾಕಿಸು (ಪುರಂದ. ೨-೯೧-೪); ತಿಮ್ಮಿ ತಾನು ದೇವರಿಗೆ ಮಾತಿನ ಮಂಟಪವನ್ನು ಹಾಕಿಸುವೆನೆಂದು ಯಾರ ಬಳಿಯಲ್ಲಿಯೂ ಹೇಳದಿದ್ದರೂ. . . ಕೇಳಿದಳು (ಜೀವರಂ. ೫೫). **ಹಾಯಿಕಿಸು:** ೨. ಲೋಕನಾಯಿಕ ಹಾಯಿಕಿಸಿದ ವೀರಗಲ್ಲು (ಕಇ. I, ೪೦-೧೧; 1415).
[ಹಾಯ್ಕು (< ಪಾಯ್ಕು$_1$) + -ಇಸು$_3$]

**ಹಾಯ್ಕು** 'ಪಾಯ್ಕು$_1$' ನೋ.

**ಹಾಯ್ಗಡ, ಹಾಯಗಡು, ಹಾಯಿಗಡ** (ನಾ). ಹೊಳೆಯನ್ನು ಸುರಕ್ಷಿತವಾಗಿ ದಾಟುವ ಸ್ಥಳ; ಕಡವು: ಕಿಟ್ಟು ತನ್ನ ಗುಂಪಿನವರೊಡನೆ ಹಾಯ್ಗಡದ ಸಮೀಪ ಹೋದನು (ಕಪಪು. ೩-೭೯); ಅಲ್ಲಿನ ಹಾಯ್ಗಡದಲ್ಲಿ ಪಾರೋಡನ್ನು ಏರಿ ಶ್ರೀರಂಗನ ನಡುಗಡ್ಡೆಯನ್ನು ಮುಟ್ಟಬೇಕಾಗಿತ್ತು (ಸವತಿ. ೧೨೫). **ಹಾಯಗಡು:** ಅದನ್ನು ದಾಟುವುದಕ್ಕೆ ದಾರಿಯಾದ ಹಾಯಗಡು ಸಿಕ್ಕಲಿಲ್ಲ (ಕಾಂಪೂಚ. ೪೩); ಎಲ್ಲಾ ಅಪ್ಸರೆಯರೂ ನದಿಗೆ ನಡೆಯಿರಿ, ಹಾಯಗಡುವಿಗೆ ಹಾರಿ ನಡೆಯಿರಿ (ಭಾರದ. ೨೮). **ಹಾಯಿಗಡ:** ''ಹೊಳೆ ಹಾಯುವ ಸ್ಥಳ ಹಾಯಿಗಡ ಕಡವು'' (Drift ಇಂಕನಿ)
[ಹಾಯ್$_1$ (< ಪಾಯ್$_1$) + ಕಡ$_2$ (< ಕಡಹು$_2$)]

**ಹಾಯ್ದಾಡು** 'ಪಾಯ್$_1$' ಪರಾ.

**ಹಾಯ್ಗುಳಿ, ಹಾಯ್ಗೂಳಿ** (ನಾ). (ಕರಾ) ಒಂದು ಭೂತದ ಹೆಸರು: ಅದು ಇಸಗಾಳಿ ಉಪದ್ರ ಎಂತ ಗೊತ್ತಾಯಿತು . . . ಇಸಗಾಳಿ ಅಂದರೆ ಹಾಯ್ಗುಳಿ, ಗೀಯ್ಗುಳಿ ಭೂತ ಅನ್ನುತ್ತಾರಲ್ಲ! (ಮೂಕಜ್ಜಿ. ೨೭೩). **ಹಾಯ್ಗೂಳಿ:** ಪಂಜುರ್ಲಿ, ಹಾಯ್ಗೂಳಿ, ಬೊಬ್ಬರ್ಯ, ಜಟ್ಟಿಗ . . . ಎತ್ತಿ ಹೊರಟಿವೆ ಕರಿಪತಾಕೆ ಹಾಕುತ ಕೇಕೆ (ಚಂಡಮ. ೩೦-೫೫). [?]

**ಹಾಯ್ಗೂಳಿ** 'ಹಾಯ್ಗುಳಿ' ನೋ.

**ಹಾಯ್ಸು** 'ಪಾಯಿಸು' ನೋ.

**ಹಾರ$_1$** (ನಾ). ಬಲಿ; ಆಹಾರ: ತೆಗೆದಪ್ಪಿ ತೂಪಿಱಿದು ಹಾರವ ನಿವಾಳಿಸಿ ಹಾಯ್ಕಿ ಬಾಯ ತಂಬುಲವಿಟ್ಟು ಮುದ್ದಿಸಿದಳು (ನಂದಿಮಾ. ೧೩-೪೬); ''ಕಡೆ ಸೊಸಿ ಭಾಗೀರತಿನ್ನ ಹಾರವ ಕೊಡಬೇಕು'', ಹಾರ ಕೊಡಬೇಕಂತ ಮಾತಾತು ಮನೆಯಾಗ (ಕನ್ನಬಾ. ೭೯); ದೆವ್ವದ ತೃಪ್ತಿಗಾಗಿ 'ಹಾರ' ದ ಮೇಲೆ 'ಹಾರ' ಸಂಹಾರವಾಯಿತು. ಗುಡಿಯ ಮುಂದಿನ ಅಂಗಳದಲ್ಲಿ ಕೋಳಿಯ ರುಂಡಗಳು ಚಂಡಾಡಿದುವು (ಕುಡಿಕೂ. ೬೬).
[< ಸಂ. ಆಹಾರ./ ತುಳು. ಹಾರ]

**ಹಾರ$_2$** (ನಾ). ೧. ಕೊರಳಲ್ಲಿ ಧರಿಸುವ ಹೂವಿನ ಅಥವಾ ಮುತ್ತು, ರತ್ನಗಳ ಮಾಲೆ,— ಸರ: ಹಾರಂಗಳುಮಂ ಪೆಱವುಂ ಪ್ರತ್ಯಂಗೋಚಿತಾತ್ಯಂಗಮಣಿವಿಭೂಷಣಂಗಳುಮಂ . . . ಪಡೆದು (ಆದಿಪು. ೮-೫೪ ವ); ನುಡಿದರೆ ಮುತ್ತಿನ ಹಾರದಂತಿರಬೇಕು (ಬಸವ. ೮೦೨); ಕೈಯಲ್ಲಿ ಒಂದು ದೊಡ್ಡ ಹೂವಿನ ಹಾರ ಹಿಡಿದುಕೊಂಡು, ರಂಗದ ಮೇಲೆ ನೆಗೆದು ಬಂದ (ದೀಪಹ. II, ೬೪೯). ೨. ಮನೋಹರವಾದುದು; ರಮಣೀಯವಾದುದು: ಮೂಱುಲೋಕದ ಚೆಲ್ವೆಲ್ಲಮಂ ವಿಧಾತ್ರನೊಂದೆಡೆಗೆ ತರಲ್ಬೆದಂತೆ ಸಮಸ್ತವಸ್ತುವಿಸ್ತಾರಹಾರಮಾಗಿರ್ದ ಹಸ್ತಿನಪುರವೆ ನಿಜವಂಶಾವಳಂಬಮಾಗೆ (ಪಂಪಭಾ. ೧-೫೮ ವ). ೩. **ಅಪಹಾರ; ಕಳವು. ೪. ಯುದ್ಧ; ಕದನ. ೫. ನಷ್ಟ; ಹಾನಿ. ೬. [ಗಣಿತ] ಭಿನ್ನರಾಶಿಯಲ್ಲಿ ಅಡ್ಡಗೆರೆಯ ಕೆಳಗಿನ ಅಂಕಿ; ಛೇದ:** (Denominator. ಪಾರಿನಿ. ೨೮). [ಸಂ.]

**ಹಾರ$_3$** (ನಾ). ೧. ಗಾಡಿ; ಬಂಡಿ: ಅಚ್ಚು ಮುಱಿದ ಹಾರಕ್ಕೆ ಎತ್ತಿನ ಹಂಗಿಲ್ಲವೆಂದೆ (ಮೋಳಿಮಾ. ೪೫-೧೮೭). ೨. ಹಗುರ; ಆರಾಮ: ಕಲಿತರು ನಿಮ್ಮ ಪೂರ್ವನೃಪಾಲಕರು ಸರಹಸ್ಯಸಾಂಗೋಪಾಂಗವಿದ್ಯೆಗಳ . . . ಲಘುಪಾಳಿಯಲಿ ಹಾರದಲಿ ವಿವಿಧಾನುಪ್ರಯೋಗದಲಿ (ಕುವ್ಯಾಆ. ೭-೧); ನಾಲ್ಕುಕೊಡ ನೀರನ್ನಾದರೂ ಹೊತ್ತು ಹಾಕಿದರೆ ಸೊಪ್ಪೆ ತಂದು ಕೊರೆದರೆ ಮೈಗೆ ಎಷ್ಟೋ ಹಾರ (ಜಲುಮ. ೧೪೯). [?]

**ಹಾರಂಗಿ$_1$** (ನಾ). ಯುದ್ಧದಲ್ಲಿ ಬಳಸುವ ಒಂದು ಸಾಧನ: ಕೊಡಲಿ ಗೂಟಂ ಹಾರೆ ಹಾರಂಗಿ ಕೈಪಿಡಿದಾ ತಾಮ್ರಸಭಾಂಡಮೆಂಬಿವಿನಿತುಂ ದಂಡಿಂಗೆ ಸಾಮಗ್ರಿಗಳ್ (ಸೂಕ್ತಿಸು. ೮-೨೩). [?]

**ಹಾರಂಗಿ$_2$** (ನಾ). ಒಂದು ನದಿಯ ಹೆಸರು: ಕರಿಹೊಳೆ ಕಪಿಲೆಯು . . . ಹಾರಂಗಿ ಶರಾವತಿ ಶರಯು ಬಂದಿಹರು (ಸಿದ್ಧಪು. ೯-೪೨). [?]

**ಹಾರಂಗೊಡು** (ಕ್ರಿ). ನಿವೇದನೆ ಮಾಡು; ಸಮರ್ಪಿಸು: ಎರಡು ಪರ್ವ್ವದೊಳಂ ಪಟ್ಟಂಗಟ್ಟಿದೇವೆಯನ್ನು ಪಣಮಂ ಕೆಱೆಗೆ ಹಾರಂಗೊಟ್ಟರ್ (ಎಕ. X, ಚಿಂತಾಮ. ೩೪(a) -೩; 955). [ಹಾರ$_1$ + ಕೊಡು$_1$]

**ಹಾರಕ** 'ಪಾರಕು' ನೋ.

**ಹಾರಕಟ್ಟಿಗೆ** 'ಪಾರುಗಟ್ಟಿಗೆ' ನೋ.

**ಹಾರಕು** 'ಪಾರಕು' ನೋ.

**ಹಾರಕ್ಕಿ** 'ಪಾರಕು' ನೋ.

**ಹಾರಕ್ಕು** 'ಪಾರಕು' ನೋ.

**ಹಾರಗಟ್ಟಿಗೆ** 'ಪಾರುಗಟ್ಟಿಗೆ' ನೋ.

**ಹಾರಗಾಲು** 'ಹಾರುಗಾಲು' ನೋ.

**ಹಾರಣ** (ನಾ). ವ್ರತೋಪವಾಸದ ಮಾರನೆಯ ದಿನ ಮಾಡುವ ಊಟ; ಪಾರಣೆ: ಧಾರಣ ಹಾರಣ ಬ್ರತದೊಳಿಂತೊಡಲಂ [ಜದೆ] ಮಾಡಿ ನೈಷ್ಠಿಕಾಯಾತದೊಳೊಪ್ಪಿ ಕೂಡಿ (ಸೌಇಇ. XI-i, ೯೭-೩೨; 1062). 'ಬಾರಣೆ' ಪರಾ. [< ಸಂ. ಪಾರಣ]

**ಹಾರಣೆ** 'ಪಾರಣೆ$_3$' ನೋ.

**ಹಾರಣೆ** 'ಪಾರಣೆ$_3$' ನೋ.

**ಹಾರಬಂಧ**(ನಾ). [ಕಾವ್ಯಮೀ] ಚಿತ್ರಕವಿತ್ವದಲ್ಲಿ ಒಂದು ಬಗೆ; ಹಾರದ ಆಕೃತಿಗೆ ಹೊಂದುವಂತೆ ರಚಿಸಿದ ಪದ್ಯಬಂಧ — ಕವಿತೆ: ಶಬ್ದವೈಚಿತ್ರ್ಯಕ್ಕೆ ಚಿತ್ರಕವಿತ್ವವೆಂದೂ 'ಬಂಧ' ವೆಂದೂ ಹೆಸರು . . . ಇವುಗಳಲ್ಲಿ ನಿರೋಷ್ಠ್ಯ, ಅತಾಲವ್ಯ, ಏಕಾಕ್ಷರ, ದ್ವ್ಯಕ್ಷರ, ಹಾರಬಂಧ, ಮುರಜಬಂಧ ಮುಂತಾದ ನಾನಾವಿಧಗಳುಂಟು (ಕೈಪಿಡಿ. ೨೫೪). [ಸಂ.]

**ಹಾರಬೆಕ್ಕು** (ನಾ). ಒಂದು ಬಗೆಯ ಬೆಕ್ಕು: ಕಬ್ಬೆಕ್ಕು, ಹಾರಬೆಕ್ಕು, ಪುಣುಗಿನ ಬೆಕ್ಕು . . . ಕುರ್ಕ ಮುಂತಾದ ಇತರ ಪ್ರಾಣಿವರ್ಗಕ್ಕೆ ಕಾಡಿನಲ್ಲಿ ಮಿತಿಯೇ ಇರಲಿಲ್ಲ (ಪಂಜಪಂ. ೨). [? + ಬೆಕ್ಕು (< ಬೆರ್ಕು)]

**ಹಾರಯಿಸು** 'ಪಾರಯಿಸು' ನೋ.

**ಹಾರಯ್ಸು** 'ಪಾರಯಿಸು' ನೋ.

**ಹಾರವ$_1$** 'ಪಾರ್ವ' ನೋ.

**ಹಾರವ$_2$** (ನಾ). (ನೋವನ್ನು ಸೂಚಿಸುವ) 'ಹಾ' ಎಂಬ ಶಬ್ದ: ದ್ವಿಗುಣಿಸಿದುದು ಹಾರವಂ ಪ್ರತಿಧ್ವಾನದಿಂ ಜಿನೇಂದ್ರಾಲಯದೊಳ್ (ಪಂರಾಮಾ. ೧೪-೧೦೧); ನೀಂ ಪಡೆವಾ ಸುತಂ ರಿಪುಚಮೂಸಂಹಾರವಂ ಹಾರವಂ ಪೊಡರಲ್ ಮಾಟ್ಕುಂ (ಜಗವಿ. ೨-೮೫). [ಹಾ + ರವ]

**ಹಾರವಲಯ** (ನಾ). ೧. (ಶೋಕಸೂಚಕವಾದ) 'ಹಾ' ಎಂಬ ಉದ್ಗಾರಧ್ವನಿ. ೨. ಕೊರಳಲ್ಲಿ ಧರಿಸುವ ಮಾಲೆ,—ಹಾರ. ೧, ೨: ಸರಸಿಯೊಳ್ಕಲಹಂಸಮಯ ಮುತ್ಪಲಾಕ್ಷಿಯರ ಕಂಧರದೊಳು ಹಾರವಲಯಂ . . . ಇಲ್ಲಮಿವು ಮತ್ತೆಲ್ಲಿಯುಂ ಧರ್ಮಜನ ನೆಲದೊಳು (ಜೈಮಿಭಾ. ೨-೮); ಹಾರವಲಯಂಯೆಂದರೆ, ಹಾಹಾಕಾರ ಧ್ವನಿಲಯವಿದೆಲ್ಲಿಹುದೆಂಬ ಪ್ರಶ್ನೆಕ್ಕೆ ಉತ್ಪಲಾಕ್ಷಿಯ ಕಂಧರದೊಳು ಹಾರವಲಯ ಎಂಬ ಭಿನ್ನೋತ್ತರ (ಕುವಲ. ೧೫೨). [ಹಾರವ$_2$ + ಲಯ; ಹಾರ$_2$ + ವಲಯ]

**ಹಾರವಾಣ$_1$** 'ಪಾರಿವಾಳ$_1$' ನೋ.

**ಹಾರವಾಣ$_2$** 'ಪಾರಿವಾಳ$_2$' ನೋ.

**ಹಾರವಿತ್ತಿ** 'ಪಾರ್ವಂತಿ' ನೋ.

**ಹಾರವಿಸು** 'ಪಾರಯಿಸು' ನೋ.

**ಹಾರಹನಿ** (ನಾ), ಸಣ್ಣಹನಿ; ತೂರುಹನಿ: ದೇಶದ ಇತರ ಭಾಗಗಳಲ್ಲಿ ವಿಪರೀತಮಳೆಯಾಗಿ ಕೊಚ್ಚಿಕೊಂಡು ಹೋದರೂ ಇಲ್ಲಿ ಹಾರಹನಿಯೂ ಉದುರುತ್ತಿರಲಿಲ್ಲ (ಮಣ್ಣಮ. ೫). [< ಹಾರು (< ಪಾಱು$_1$) + ಹನ್ನಿ$_3$ (< ಪನ್ನಿ$_2$)]

**ಹಾರಹೂರ** (ನಾ). ದ್ರಾಕ್ಷಿಯ ಬಳ್ಳಿ ಮತ್ತು ಅದರ ಹಣ್ಣು: "ಹಾರಹೂರಂ ಪಶುಸ್ತನಿ ಮೃದ್ವೀಕೆ ದ್ರಾಕ್ಷೆ" (ಮಂಗರಾ. ೩೪-೧೦). [ಸಂ. ಹಾರಹೂರಾ]

**ಹಾರಾಂಶು** (ನಾ). ಹಾರದ ಕಾಂತಿ: ಉರದೊಳ್ ಹಾರಾಂಶು ಗಂಡಸ್ಥಳಿಯೊಳಮಳ ಕರ್ಣಾವತಂಸಾಂಶು (ಚಂದ್ರಪು. ೬-೭೦). [ಸಂ.]

**ಹಾರಾಟ** 'ಪಾಱಾಟ' ನೋ.

**ಹಾರಾಡಿಸು** (ಕ್ರಿ). ೧. ಹಾರುವಂತೆ ಮಾಡು; ಜಿಗಿಸು: ಹುಡುಗರು ಗಾಳಿಪಟವನ್ನು ಹಾರಾಡಿಸುತ್ತ ಹೊತ್ತು ಕಳೆದರು (ರೂಢಿ). ೨. ಚಲಿಸುವಂತೆ ಮಾಡು; ಅಲುಗಾಡಿಸು: ಆಂಗಿಕಂ ಅಂದರೆ ಕಣ್ಣುಹುಬ್ಬುಗಳನ್ನು ಹಾರಾಡಿಸುವಿಕೆ (ಸಿದ್ಧಾಂತಿ. ೬೨). [ಹಾರಾಡು (< ಪಾಱಾಡು) + -ಇಸು$_3$]

**ಹಾರಾಡು** 'ಪಾಱಾಡು' ನೋ.

**ಹಾರಾವರಿ** (ನಾ). ಒಂದು ಬಗೆಯ ಭೂಮಿ (?): ಅಕ್ಕಿಯ ಬಮ್ಮಯಂಗೆ ಧರ್ಮ್ಮಭೂಮಿಯ ಬಿಟ್ಟ ಗದ್ದೆ ಕೊಳಗ ಹತ್ತು ಹಾರಾವರಿಯ ಮಳಲು (ಎಕ. VI, ಕಡೂರು. ೪೧-೪; ?). [?]

**ಹಾರಿ$_1$** 'ಪಾರಿ$_3$' ನೋ.

**ಹಾರಿ$_2$** 'ಪಾರಿ$_4$' ನೋ.

**ಹಾರಿ$_3$** (ನಾ). (ಮನಸ್ಸನ್ನು) ಅಪಹರಿಸುವಂಥದು; ಮನೋಹರವಾದುದು: 'ಹಾರಿಗೊಳ್', 'ಹಾರಿವಡೆ' ಪರಾ. [ಸಂ. ಹಾರಿನ್]

**ಹಾರಿಂಚರ** (ನಾ). ಹಕ್ಕಿಗಳು ಹಾರುವಾಗ ಆಗುವ ಗರಿಗಳ ಅಥವಾ ರೆಕ್ಕೆಗಳ ಶಬ್ದ: ಗೂಡಿಗೆ ಗೊತ್ತಿಗೆ ಹಾರಿಹೋಗುವ ಹಕ್ಕಿಗಳ ಹಾರಿಂಚರ ಅಡಗತೊಡಗಿತ್ತು (ಮಲೆಮ. ೮೯). [ಹಾರು$_1$ (< ಪಾರ್$_1$) + ಇಂಚರ$_1$]

**ಹಾರಿಕಾಯ** 'ಪಾರಿಖಾಯ' ನೋ.

**ಹಾರಿಕಾಯವಳ** (ನಾ). ಒಂದು ಬಗೆಯ ಸುಂಕ: ಊರೊಳಗೆ ಹು[ಟು]ವ ಹಾರಿಕಾಯವಳವ ತೂಗುವ ಭಂಡಕೆ ಹೊಂಗೆ ಹಾಗ ೧ (ಸೌಇಇ. IX-i, ೧೪೫-೩೫; 1079). [ಹಾರಿಕಾಯ (< ಪಾರಿಖಾಯ) + ವಳ ?]

**ಹಾರಿಕಾಯಸುಂಕ** (ನಾ). ಒಂದು ಬಗೆಯ ಸುಂಕ: ಹಾರಿಕಾಯಸುಂಕಮಂ ಶ್ರೀಕಲಿದೇವರಿಗೆಯಂಗಭೋಗ ಪೂಜೆಪುನಸ್ಕಾರಕ್ಕೆ ಮಾನ್ಯವಾಗಿ ಧರ್ಮ್ಮಕ್ಕೆ ಕೊಟ್ಟರ್ (ಸೌಇಇ. IX-i, ೨೯೭-೮೦; 1176). [ಹಾರಿಕಾಯ (< ಪಾರಿಖಾಯ) + ಸುಂಕ$_1$]

**ಹಾರಿಕಾಯಿ** 'ಪಾರಿಖಾಯ' ನೋ.

**ಹಾರಿಕೆ** 'ಹಾಱಿಕೆ' ನೋ.

**ಹಾರಿಕೆಮಾತು** (ನಾ). ಆಧಾರರಹಿತವಾದ ಮಾತು: ಹಾರಿಕೆಮಾತು ಕೇಳಿಕೊಂಡು ವಿಶ್ವಾಸ ಹಾಳುಮಾಡಿಕೊಳ್ಳಬಾರದು (ರೂಢಿ). [ಹಾರಿಕೆ (< ಹಾಱಿಕೆ) + ಮಾತು$_1$]

**ಹಾರಿಕೆಸುದ್ದಿ** (ನಾ). ಆಧಾರರಹಿತವಾದ ವರ್ತಮಾನ: ಹಾರಿಕೆಸುದ್ದಿಗಂತೂ ರೆಕ್ಕೆಗಳೇ ಇವೆ (ವಿಚಾಮಂ. ೯೫); ಸಾವಿತ್ರಿ ಹೇಳಿದ ಹಾರಿಕೆಸುದ್ದಿಗೂ ಇವನ ಮಾತಿಗೂ ಇರುವ ಸಂಬಂಧವನ್ನು ನೆನೆದು ಅವಳು ನಡುಗಿದಳು (ಮಣ್ಣಮ. ೬೩). [ಹಾರಿಕೆ (< ಹಾಱಿಕೆ) + ಸುದ್ದಿ]

**ಹಾರಿಗೆ** (ನಾ). ಒಂದು ಬಗೆಯ ಸುಂಕ: ಉಂಡಿಗೆ ತೆರಿಗೆ ಹಾರಿಗೆ ಬಲ XX ಸಂಮಂಧ ಇಲ್ಲಾ ಯೆಂದು ಕೊಟ್ಟ ಶಿಲಾಶಾಸನ (ಎಕ. XIV, ಶ್ರೀರಂಗ. ೩೦೩-೨೫; 1550). [?]

**ಹಾರಿಗೊಳ್** (ಕ್ರಿ). ಮನೋಹರವಾಗು; ರಮಣೀಯವೆನ್ನಿಸು: ತರುಣಿಯ ರಂಗಕಾಂತಿಗಳ ಕೂಡೆ ಕಡಲ್ ಪರಿದಳ್ಕಿ ಸೂಸುವಾಭರಣಮರೀಚಿ ಕಾಲಹರಿಗಂ . . . ಪೊಳೆದರ್ದಿದಂತೆವೋಲ್ ಪರಿವುದು ಹಾರಿಗೊಂಡ ಧವಳಾರದ ಕೇರಿಯ ಬೀದಿಬೀದಿಗಳ್ (ಅನಂಪು. ೩-೧೮); ಅಮೃತಾರ್ಣವಮನೆ ಮೇರುವಿವ ಮೇಖಳಾವನಕೆ ತಿರ್ದಿ ಪರಿಯಿಸಲಿಂದ್ರಂ ಸಮೆದೇಱಿವೊಲೆರಡೋಳಿಯೆ ನಿಮಿರ್ದೆಸೆದುದು ಹಾರಿ[ಪಾಠಾಂ. ದಿ]ಗೊಂಡು ಕೇರ್ಗಟ್ಟಿದವೋಲ್ (ಪುಷ್ಪಪು. ೧೧-೯). [ಹಾರಿ$_3$ + ಕೊಳ್$_1$]

**ಹಾರಿದ್ರಕ** (ನಾ). ೧. ಅರಿಸಿನ; ಹರಿದ್ರೆ: ಭೂರಮಣಿಯ ಶೃಂಗಾರಾಗಾರಮಿದೆನೆ ವಿರಹಿಜನಕೆ ಮದನನ ಕಾರಾಗಾರಮಿದೆನೆ ಬಗೆಗೊಳ್ಳುವವು ಹಾರಿದ್ರಕ ಜೀರಕಾರ್ದ್ರಕೇಕ್ಷು ವನಂಗಳ್ (ಪುಷ್ಪಪು. ೯-೨೨). ೨. ಹಳದಿಬಣ್ಣ. [ಸಂ.]

**ಹಾರಿಯಾಳ** 'ಪಾರಿವಾಳ$_2$' ನೋ.

**ಹಾರಿವಡೆ** (ಕ್ರಿ). ಮನೋಹರವಾಗು; ಆಕರ್ಷಕವಾಗು: ಹಾರಿವಡೆದೆಸೆದುದಮರರ ನೇರಾಣಿಯ ಪೊಂಗೊಡಂಗಳೆರಡುಂ ತಱಿದಿಂ ವಾರಿಧಿಯನೆಯ್ದೆ ಮೊಗೆಯಲ್ ಮೇರುಮಹೀಧರಮೆ ತೋಳ್ಗಳಂ ನೀಡಿದವೊಲ್ (ಅನಂಪು. ೫-೫೭). [ಹಾರಿ$_3$ + ಪಡೆ$_1$]

**ಹಾರಿವಾಣ** 'ಪಾರಿವಾಳ$_2$' ನೋ.

**ಹಾರಿವಾಳ** 'ಪಾರಿವಾಳ$_2$' ನೋ.

**ಹಾರಿಸು** 'ಪಾಱಿಸು' ನೋ.

**ಹಾರೀತ** (ನಾ). ೧. ಒಂದು ಬಗೆಯ ಪಾರಿವಾಳ: "ಜೀವಂಜೀವಃ . . . ಹಾರೀತಃ, ವಂಜುಳಃ, ಕಪೋತಃ — ಈ ೬ ಹೊಱಸು" (ಹಲಾಯು. ೪೨-೧೦೦) ಮಯೂರಹಾರೀತಕಾರಂಡಕುರವಕ ಸಂಕುಳಚರಣಸಂಚರಣದಿಂ (ಪುಷ್ಪಪು. ೨-೩೯ ವ)

೨. ಒಬ್ಬ ಋಷಿ: ನಾಳೆಯೆ ಬರ್ಪನತಿಥಿ ನಾರಾಯಣಂ, ಹಾರೀತ! ಧನ್ಯಮಾಯ್ತೆ ಮ್ಮಾಶ್ರಮಂ (ಶ್ರೀರಾಮಾ. ೧೩೦-೧೫೦). [ಸಂ.]

**ಹಾರೀತಕ** (ನಾ). = ಹಾರೀತ ೧: ಯಮುನಾವಾರಿವಿಸ್ತಾರಮಂ ಮಾಂಕರಿಸಲ್ ಸಾಲ್ದಿರ್ದ ಹಾರೀತಕ ಹರಿತಶಿಲಾಪಟ್ಟದೊಳ್ ಭೂಪನಿರ್ದಂ (ಕಾದಂಬ. ೧೦೨); ಘನಹಾರೀತಕಹಂಸಿಯೊಳ್ ಹರಿತ ದೌರ್ಪಂ . . . ಮಾಣಿಕ್ಯ ಭಾಜನ ದೊಳ್ಕುಂಕುಮಪಂಕಮೋಲ್ ಮೆರೆದುದೋ ಮಾಂಗಲ್ಯ ಸಾಕಲ್ಯಮಂ (ಪಂಗಾಮಾ. ೫-೧೨೫). [ಸಂ.]

**ಹಾರು₁** 'ಪಾರ್₁' ನೋ.

**ಹಾರು₂** 'ಪಾಱು₁' ನೋ.

**ಹಾರು₃** 'ಪಾರು₅' ನೋ.

**ಹಾರುಕೇರಿ** (ನಾ). ಬ್ರಾಹ್ಮಣರ ಬೀದಿ: ಆ ಮಳಲೂರ ಪಟ್ಟಣದ ಹಾರುಕೇರಿಗೆ ಸಲುವ ಬೆಜ್ಜನು ವೀರಾಪುರವೆಂಬ ಗ್ರಾಮವು (ಎಕ. IX, ಚನ್ನಪ. ೧೫೨-೧೦; 1534).

[< ಹಾರುವ + ಕೇರಿ]

**ಹಾರುಗಟ್ಟಿಗೆ** 'ಪಾರುಗಟ್ಟಿಗೆ' ನೋ.

**ಹಾರುಗಾಲು, ಹಾರಗಾಲು** (ನಾ). ೧. ನಿಂತಲ್ಲಿ ನಿಲ್ಲದೆ ಓಡಾಡುವ ಕಾಲು: ಮನೆಯ ಹೊರಗಡೆಯೇ ಅಡ್ಡಾಡುತ್ತಿದ್ದರೆ 'ಹಾರುಗಾಲ ಹರದೆ' ಯೆಂದು ಹೆಸರಿಟ್ಟಾರು (ಸುವಸಂ. ೧೦). ೨. ದೂರದೂರಕ್ಕೆ ಇಡುವ ಕಾಲು; ದಾಟುಕಾಲು: ಹಾರುಗಾಲಿನ ಭರದಿ ಗಿಡದಡಿಗೆ ತಲುಪಿದೆನು (ಸಹೀಗೀ. ೭೦-೨). **ಹಾರಗಾಲು:** ೨. ಹೋರಿಗಳು ಹಾರಗಾಲಿನಿಂದ ಓಡುತ್ತಿದ್ದವು (ಮನಬೆ. ೪೦).

[ಹಾರು₂ (< ಪಾಱು₁) + ಕಾಲು₁ (< ಕಾಲ್₁)]

**ಹಾರುಗೂಳು** (ನಾ). (?): ಅರೆಯಿಂಗಿ ಕಾದ ಹಾಲಂ ಮಾದಲದ ಹಣ್ಣನೆರಡಾಗಿ ಕೊಯಿದು ಕುಸುರೆಯ ತೆಗೆದವಕೆ ತುಂಬಿ ಸರಿಯಿರುಳಿನಲ್ಲಿ ಹಾರುಗೂಳಾ ಬೋಸ್ಣದೊಳು ಹಾಕಿದಾ ಕಟ್ಟಶನಕೆ ತುಱುವಲಂ ಮಾಡಿದೆಳೆಯಲ್ಲ ನೀರುಳ್ಳಿಯಂ ಬೆರಸಿ (ಸೂಪಶಾ. ೩-೨೨); "ಬಿರಿಸಾದ ಅನ್ನ" (ಸೂಪಶಾ. ಕೋಶ). [ಹಾರು ? + ಕೂಳು (< ಕೂೞ್₁)]

**ಹಾರುಗೆ** (ನಾ). ಒಂದು ಬಗೆಯ ಸಸ್ಯ: ಹಾರುಗ, ಸುರತಿಚೆಕ್ಕ (ಮೈಔಗಿ. ೭೭-೧೫೭೭).

[?]

**ಹಾರುಗೋಲು** 'ಹಾರೆಕೋಲು' ನೋ.

**ಹಾರುದಿ** 'ಪಾರದಿ' ನೋ.

**ಹಾರುಮೀನು** (ನಾ). ಒಂದು ಬಗೆಯ ಮೀನು; ಜಿಗಿದಾಡುವ ಮೀನು: "ಪ್ರೋಷ್ಠೀ, ಶಫರೀ — ೨ ಹಾರಿ ಬೀಳುವ ಮೀನಿನ ಹೆಸರುಗಳು ಅಂದರೆ ಹಾರುಮೀನು, ಮೀಟುಮೀನು" (ಸಿದ್ಧಾಂತಿ. ೭೩). [ಹಾರು₂ (< ಪಾಱು₁) + ಮೀನು₂ (< ಮೀನ್₂)]

**ಹಾರುಮೆಕ್ಕೆ** (ನಾ). ಒಂದು ಬಗೆಯ ಸಸ್ಯ: ಇಂದ್ರವಲ್ಲಿ — ಹಾರುಮೆಕ್ಕೆಯುಂ (ಪ್ರತಿಪ್ಪಾ. ೭-೨೫). 'ಹಾವುಮೆಕ್ಕೆ' ಪರಾ. [ಹಾರು ? + ಮೆಕ್ಕೆ₃]

**ಹಾರುವ₁** 'ಪಾರ್ವ' ನೋ.

**ಹಾರುವ₂** (ನಾ). ಒಂದು ಬಗೆಯ ಮೀನು: ಹರಳು ಹಾರುವಂ . . . ಹಂದೆಗನಾನೆಮೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದರು (ಹಚಕಾ. ೫-೪೫). 'ಹಾರುಮೀನು' ಪರಾ. [?]

**ಹಾರುವತನ** (ನಾ). ಬ್ರಾಹ್ಮಣಿಕೆ; ಬ್ರಾಹ್ಮಣ್ಯ: ಹಾರುವನು ನಾನಹುದು ಕಪಿಗಳ ಬೇರುಗೊಲೆಯನು ಗೆಯ್ದು ವಿಜಯವ ಹಾರುವೆನು ನೋಡೆಂದು ಹಾರುವತನದ ಕೈಮೆಗಳ ಸೇರದಣಕವೆನುತ್ತ ರಕ್ಕಸ ಮೇರೆಯಿಲ್ಲದೆ ಸರಳ ಸುರಿದನು (ಕಾಶಿರಾ. ೨೧-೫೪).

[ಹಾರುವ₁ (< ಪಾರ್ವ) + - ತನ]

**ಹಾರುವಯ್ಯ** (ನಾ). ಬ್ರಾಹ್ಮಣ: ಏನು ಹಾರುವಯ್ಯನವರು ಬಂದಿರಿ (ಹಬ್ಬಬ. ೧೫೨).

[ಹಾರುವ₁ (< ಪಾರ್ವ) + ಅಯ್ಯ₁]

**ಹಾರುವಾಣ** 'ಪಾರಿವಾಳ₂' ನೋ.

**ಹಾರುವಿತಿ** 'ಪಾರ್ವಂತಿ' ನೋ.

**ಹಾರುವಿತ್ತಿ** 'ಪಾರ್ವಂತಿ' ನೋ.

**ಹಾರುಸುದ್ದಿ** (ನಾ). = ಹಾರಿಕೆಸುದ್ದಿ: ಸಾಧಾರಣಜನರಂತೆ ಹಾರುಸುದ್ದಿಯ ಮೇಲೆ ಅವಲಂಬಿಸಿ ಕೆಲಸ ಮಾಡುವ ಪ್ರಸಂಗ ಬರುತ್ತದೆ (ಕುರಿಓ. ೮೯); ಹಾರುಸುದ್ದಿಗಳಿಂದ ನೀವು ಇಷ್ಟು ವ್ಯಗ್ರರಾಗುವುದು ನನ್ನ ದೃಷ್ಟಿಯಲ್ಲಿ ನಿಮ್ಮ ಗೌರವವನ್ನು ಹೆಚ್ಚಿಸುವುದಿಲ್ಲ (ಪ್ರೇಮಾಶ್ರ. ೬೯). [ಹಾರು₂ (< ಪಾಱು₁) + ಸುದ್ದಿ]

**ಹಾರುಹೊಡೆ** (ಕ್ರಿ). (ಕಪಾಟು, ಬೀರು, ಮನೆ ಇತ್ಯಾದಿಗಳ) ಬಾಗಿಲನ್ನು ವಿಶಾಲವಾಗಿ ತೆಗೆ,—ಸಂಪೂರ್ಣವಾಗಿ ತೆರೆ: ಕಪಾಟಿನ ಬಾಗಿಲು ಹಾರು ಹೊಡೆದಿತ್ತು (ರೂಢಿ). [ಹಾರು₂ (< ಪಾಱು₁) + ಹೊಡೆ₁ (< ಪೊಯ್ದು₁)]

**ಹಾರೆ** 'ಪಾರೆ₁' ನೋ.

**ಹಾರೆಕೋಲು, ಹಾರುಗೋಲು** (ನಾ). ಹಾರೆ; ಗಡಾರಿ: ನನ್ನ ಕೈಯಲ್ಲೂ ಒಂದು ಹಾರೇಕೋಲೋ ಒನಕೆಯೋ ಇರುವುದು ಒಳ್ಳೆಯದಲ್ಲವೇ ? (ರಾಯಕ. ೧೭). **ಹಾರುಗೋಲು:** ಈ ಭೈರಿಗೆಗಳು ನೀಳವಾದ ಹಾರುಗೋಲು(ಪಾರಂಗಿ)ಗಳೆನ್ನಬಹುದು (ಬಾಲಪ್ರ. I, ೩೫೨). [ಹಾರೆ (< ಪಾರೆ₁) + ಕೋಲು₁ (< ಕೋಲ್₁)]

**ಹಾರೆಗಟ್ಟಿಗೆ** 'ಪಾರುಗಟ್ಟಿಗೆ' ನೋ.

**ಹಾರೈಕೆ** (ನಾ). ಕೋರಿಕೆ; ಬಯಕೆ: ಆರು ಋತುಗಳು ಬಂದು ಆರೈಕೆ ಮಾಡುವವು ಯ್ಯಾವುದೋ ಹಾರೈಕೆ ಎದೆಯೊಳಿಟ್ಟು (ನಲಮು. ೩೧-೧೮); ಜೀವನನೈರ್ಮಲ್ಯವುಳ್ಳವರ ಪವಿತ್ರಹಸ್ತದಿಂದ ಅದಾಗಬೇಕೆಂದು ನನ್ನ ಹಾರೈಕೆ ಇತ್ತು (ಜೀವಾತ್ಮ. XI, ಮುನ್ನುಡಿ).

[ಹಾರೈಸು (< ಪಾರಯಿಸು) + - ಇಕೆ]

**ಹಾರೈಸು** 'ಪಾರಯಿಸು' ನೋ.

**ಹಾರೋಗಿಡ** (ನಾ). ಒಂದು ಬಗೆಯ ಸಸ್ಯ: ತಿಲ್ಲ, ಹಾರೋಗಿಡ (ಮೈಔಗಿ. ೩೬-೭೦೨).

[? + ಗಿಡ (< ಗಿಡು)]

**ಹಾರ್ದಿಕ** (ಗು). ೧. ಆತ್ಮೀಯವಾದ; ಪ್ರಿಯವಾದ: ನನ್ನ ಹಾರ್ದಿಕ ಆಕಾಂಕ್ಷೆಯನ್ನು ಪೂರ್ಣಗೊಳಿಸಿ ಪ್ರೋತ್ಸಾಹಿಸಿರುತ್ತಾರೆ (ಜೀವಾತ್ಮ. XI, ಮುನ್ನುಡಿ). (ನಾ). ೨. ಆತ್ಮೀಯವಾದುದು; ಪ್ರಿಯವಾದುದು: 'ಶಾಮಾ ಒಳಗೆ ಬಾ' ರಂಗನು ಹಾರ್ದಿಕವಾಗಿ ಕರೆದನು (ರಂಗರೂ. ೧೧೫); ಸತೀಶನ ಮಾತುಗಳು ಹಾರ್ದಿಕವಾಗಿದ್ದವು (ಶೇಪ್ರಶ್ನೆ. ೩೧೨). [ಸಂ.]

**ಹಾರ್ಮೋನಿಯಂ** (ನಾ). "ತಿದಿಯ ಮೂಲಕ ಗಾಳಿಯನ್ನು ನುಗ್ಗಿಸಿ, ಲೋಹದ ತೆಳುತುಂಡುಗಳು ಕಂಪಿಸುವಂತೆ ಮಾಡಿ, ಅದರಿಂದ ಸ್ವರಗಳು ಹೊರಡುವಂತೆಯೂ, ಬೇಕಾದ ಸ್ವರಗಳನ್ನು ಬೆರಳೊತ್ತುವಿಕೆಯಿಂದ ಪಡೆಯುವಂತೆಯೂ ಅಳವಡಿಸಿರುವ ಒಂದು ವಾದ್ಯ: "ಹಾರ್ಮೋನಿಯಂ" (Harmonium. ಇಂಕನಿ): ಹಾರ್ಮೋನಿಯಂ ಆದೇ ಆಗಷ್ಟೇ ಕೀರ್ತನೆಗಳಿಗೆ ಬಳಸತೊಡಗಿದ್ದರು (ಸ್ಮೃತಿಚಿ. ೭೮); ಹಾರ್ಮೋನಿಯಂ ವಾದ್ಯದಲ್ಲಿ ಈ ಸಂಖ್ಯೆಗಳನ್ನು ಸ್ವಲ್ಪ ಬದಲಾಯಿಸಿ ಯಾವ ಮನೆಯನ್ನಾದರೂ ಷಡ್ಜವಾಗಿಟ್ಟುಕೊಳ್ಳಲಾಗುವಂತೆ ಏರ್ಪಡಿಸಿದೆ (ಭೌತವಿ. ೧೫೧). [← ಇಂ. Harmonium]

**ಹಾರ್ವ** 'ಪಾರ್ವ' ನೋ.

**ಹಾಲ್‌ಅಹವಾಲ್, ಹಾಲಹವಾಲೆ, ಹಾಲಾಲೆ, ಹಾಲಾವಲೆ, ಹಾಲಾಹವಾಲು, ಹಾಲಾಹವಾಲೆ** (ನಾ). ೧. ಪರಿಸ್ಥಿತಿಯ ವಿವರಣೆ; ಅಹವಾಲು; ಮನವಿ: ಜನರ ಸ್ಥಿತಿ ತರಗತಿಗಳನ್ನು ನೋಡಿ ಅವರ ಹಾಲ್‌ಅಹವಾಲ್ ವಿಚಾರಿಸಿ ಸಾಧ್ಯವಾದ ಮಟ್ಟಿಗೂ ಪ್ರಜಾಪ್ರಯೋಜನಾರ್ಥವಾದ ಕಾರ್ಯಗಳನ್ನು ನೆರವೇರಿಸಿದರು (ಮಹಾಪಂ. II, ೪೪). **ಹಾಲಹವಾಲೆ:** ೧. ಹೀಗೆ ನನ್ನ ಹಾಲಹವಾಲೆಗಳು ಹಲವು ಸಾವಿರ (ರೂಪಸಂ. ೩೪). **ಹಾಲಾಲೆ:** ೧. ಏಳುಸಾಗರಕಧಿಕ ಭವಸಾಗರಂಬೋದು . . . ಹಾಲಾಲೆಯಿಂದ ಪೋಗುವುದಲ್ಲ ಇದು ಹರಿಗೋಲು ಹಾಕಿದರಿಂದ ದಾಟುವುದೆ (ವಿದಾಕ್ಯ. ೪೦ - ೩). **ಹಾಲಾವಲೆ:** ೧. ಇವರು ಭಕ್ತರಿಂದ ಹಣ್ಣು ಕಾಯಿ ತೆಗೆದುಕೊಂಡು, ಅವರ ಹಾಲಾವಲೆಯನ್ನು ಮುಖ್ಯ ಜೈನ ಹೆಗ್ಗಡೆಯವರಿಗೆ ಹೇಳಿ . . . ಭಕ್ತರಿಗೆ ಒಳ್ಳೆತನವನ್ನು ಬಯಸುವುದು (ತುಳುನಾ. ೧೨೦). **ಹಾಲಾಹವಾಲು:** ೧. ಸರಕಾರ ಅಂದರೆ ಹಾಗೆ ಜನಗಳ ಹಾಲಾಹವಾಲು, ಅದರ ಮುಂದೆ ಎಷ್ಟೋ ಸಮಯ ಕೊಳೆಯುತ್ತಾ ಬಿದ್ದಿರಬಹುದು (ಆಳಿನಿ. ೨೪೯). **ಹಾಲಾಹವಾಲೆ:** ೧. ಒಬ್ಬೊಬ್ಬರನ್ನೇ ಕರೆದು

ವಿಚಾರಿಸತೊಡಗಿದರು. ಒಬ್ಬೊಬ್ಬರ ಹಾಲಾಹವಾಲೆಯಾಯಿತು (ಜಾರುವಾ. ೧೦೭). ೨. ವರ್ತಮಾನ; ಸುದ್ದಿ: ಮಗದೊಮ್ಮೆ ಇನ್ನೇನೋ ಹಾಲಾಹವಾಲೆ ಹೇಳಿದಳು (ಮೂಕಜ್ಜ. ೧೧೫).

[<— ಹಿಂ. ಮರಾ. ಹಾಲ್‌ಅಹವಾಲ್, ಹಾಲ್‌ಹವಾಲ್./ ತುಳು. ಹಾಲ್‌ಹವಾಲ್]

**ಹಾಲ$_1$** 'ಪಾಲ$_2$' ನೋ.

**ಹಾಲ$_2$** (ನಾ). ೧. ನೇಗಿಲು; ಹಲ. ೨. ನೇಗಿಲನ್ನು ಆಯುಧವನ್ನಾಗಿ ಉಳ್ಳವನು; ಬಲರಾಮ. [ಸಂ.]

**ಹಾಲಂಗರವಳಿಗೆ** (ನಾ). ಹಾಲನ್ನು ಬೆರಸಿ ಮಾಡುವ ಒಂದು ಬಗೆಯ ರೊಟ್ಟಿ,— ಭಕ್ಷ್ಯ: ಕುಟ್ಟಿ ಕಣಿಕವನು ಹಪ್ಪಳದಂತೆ ಲತೆಯಿಱಿದು ಬಟ್ಟವಾಲ್ ಕಾದ ಸಮಯದೊಳದಂ ತಂದಿಳಿಯ ಬಿಟ್ಟು ಬೇಯಿಸಿ ತೆಗೆದು ಮಡಿಸಿ[ದುದು] ಹಾಲಂಗರ ವಳಿಗೆಯೆನಿಸಿಕೊಂಬುದು (ಸೂಪಶಾ. ೧-೧೯).

[ಹಾಲು$_1$ (< ಪಾಲ್$_1$) + ಅಂಗರವಳಿಗೆ (< ಅಂಗರವೋಳಿಗೆ)]

**ಹಾಲಂಗೊಳಲೆ** (ನಾ). ಒಂದು ಬಗೆಯ ಸೊಪ್ಪು: ಕಿರಿನೆಲ್ಲಿಯ ಸೊಪ್ಪು, ಕೊಳಕೊಳಕೆ ಸೊಪ್ಪು, ಹಾಲಂಗೊಳಲೆಸೊಪ್ಪು — ಇಷ್ಟು ಸೊಪ್ಪನ್ನು ಸಮಾನಂಗೊಂಡು ಅಕ್ಕಿಗಚ್ಚಿನಲ್ಲಿ ರಾಯಪುರಿಸಕ್ಕರೆ, ತುಪ್ಪದಲ್ಲಿ ಮೆಲ್ಲಲು ಗರ್ಭಕಟ್ಟುವುದು (ವಿವೈವಿ. ೧೦೫). [?]

**ಹಾಲಕ್ಕಿ** 'ಪಾಲ್ವಕ್ಕಿ' ನೋ.

**ಹಾಲಗುಂಬಳ** 'ಪಾಲ್ಗುಂಬಳ' ನೋ.

**ಹಾಲಡಕೆ** 'ಪಾಲಡಕೆ' ನೋ.

**ಹಾಲತ್ತಿ** (ನಾ). ಒಂದು ಬಗೆಯ ಅತ್ತಿಮರ: " ಯಮಳಪಲಂ — ಉಗುನಿ, ಹಾಲತ್ತಿ, ಕಡಸಿಗೆ" (ಒಷಧಿ. ೧೬೧). [ಹಾಲು$_1$ (< ಪಾಲ್$_1$) + ಅತ್ತಿ$_1$]

**ಹಾಲಪೆ** (ನಾ). ಒಂದು ಬಗೆಯ ಸಸ್ಯ: ತೊರತ್ತಿ, ಸುರಟೆ, ಕಿಲ್ಲಂಗಿ . . . ಹಾಲಪೆ (ಮೈಜಿಗಿ. ೪೫-೮೮೨). [?]

**ಹಾಲಬಲಗೆ** (ನಾ). ಒಂದು ಬಗೆಯ ಸಸ್ಯ: ಗೊಡ್ಡನ ಮರ, ಹಾಲಬಲಗೆ, ಬೋಳವಂಟೆ (ಮೈಜಿಗಿ. ೬೯-೭೬೫). [?]

**ಹಾಲಮಡ್ಡಿ** 'ಹಾಲುಮಡ್ಡಿ' ನೋ.

**ಹಾಲರೊಡ್ಡಿ** 'ಹಾಲುರೊಡ್ಡಿ' ನೋ.

**ಹಾಲವಕ್ಕಿ** 'ಪಾಲ್ವಕ್ಕಿ' ನೋ.

**ಹಾಲವುಗ** 'ಪಾಲೌಗು' ನೋ.

**ಹಾಲಹಕ್ಕಿ** 'ಪಾಲ್ವಕ್ಕಿ' ನೋ.

**ಹಾಲಹಲ** (ನಾ). ತೀಕ್ಷ್ಣವಾದ ವಿಷ; ಹಾಲಾಹಲ: ಕಾಲಕೂಟಂ ವತ್ಸನಾಭಿಯು ಹಾಲಹಲಮುಂ ಸಿಂಗಿ ಮೊದಲಾಭೀಳಗರಳಂಗಳನವೆಲ್ಲಂ ಕಲಸಿ ಅಱೆಯಿಸಲು (ಬಸವು. ೫೮-೫೫). [ಸಂ.]

**ಹಾಲಹವಾಲೆ** 'ಹಾಲ್‌ಅಹವಾಲ್' ನೋ.

**ಹಾಲಾಮೆ** (ನಾ). ಒಂದು ಬಗೆಯ ಆಮೆ: ಆಮೆ, ಹಾಲಾಮೆ, ಮುರಿಕಿಆಮೆ, ತಾಬಿಲೆ (ನಮ್ಮನು. ೨೪೦). [? + ಆಮೆ$_1$]

**ಹಾಲಾಲೆ** 'ಹಾಲ್‌ಅಹವಾಲ್' ನೋ.

**ಹಾಲಾವಲೆ** 'ಹಾಲ್‌ಅಹವಾಲ್' ನೋ.

**ಹಾಲಾವು** (ನಾ). ಒಂದು ಬಗೆಯ ತೆರಿಗೆ (?): ದೇವಿದೆಱ ಅಡಿಗಚ್ಚುಕಾಣಿಕೆ ಕಯ್ಗಾಣಿಕೆ ಹಾಲಾವು (ಎಕ. VIII, ತೀರ್ಥಹ. ೧೯೨-೪೬; 1103). [?]

**ಹಾಲಾಹಲ, ಹಾಳಾಹಳ** (ನಾ). ೧. ಸಮುದ್ರಮಥನಕಾಲದಲ್ಲಿ ಉದ್ಭವವಾದ ಮಹಾವಿಷ: ಹಾಲಾಹಲವನು ಪಾನವ ಮಾಡಿದ ಫಾಲಲೋಚನನ ಬಲ್ಲವನು (ವಿದಾಕ್ಯ. ೧೫-೧). ೨. ಘೋರವಾದ ಒಂದು ಬಗೆಯ ವಿಷ: ಭೋಗಿಸುವದೊಳ್ಳಿಹ ರಸಾಯನದೋಗರಂಗಳು ನಿಮ್ಮ ಭಾಗವಿದಾಗಿ ಹಾಲಾಹಲ ಮಹಾಪ್ರಳಯಗರಳವೆಮ್ಮ ಭಾಗವೇ (ಬಸವು. ೫೮-೪೬); ಕೊಲೆಗೆಯ್ಯದಿರ್, ತಾಯೆ, ಹಾಲೂಡಿದೆದೆಯೊಳೆಯೆ ಹಾಲಾಹಲವನುಗುಳಿ! (ಶ್ರೀರಾಮಾ. ೧೧೯-೨೬೨); ನಾನೆ ದಾರುಣನೆಂದಿದೇತಕೆ ಬೀಗುವೆ ಸುಮ್ಮನೆ ಓ ಹಾಲಾಹಲವೆ (ಅಂಚಾಪ. ೨೫೧-೯೫). **ಹಾಳಾಹಳ:** ೧. ಮಸಕದ ಹಾಳಾಹಳದೊಡನೆಸೆವಿಂದುವಲೇಖೆ ಪುಟ್ಟುವಂದದಿನಾ ರಾಕ್ಷಸನೊಡನೆ ಪುಟ್ಟಿ, ದೇವಕಿ ವಸುದೇವಂಗರಸಿಯಾಗಿ ಸುಖದಿಂದಿರ್ದಳ್ (ಜಗವಿ. ೨-೩೯). ೨. ಕಾಳಕೂಟದ ಹಾಳಾಹಳವೆಂಬ ವಿಷಂಗಳು ಕುಡಿದವರನಲ್ಲದೆ ಮಿಕ್ಕನಂತೆ ಯಾರುವನು ಏನೂ ಮಾಡವು (ಸರ್ವವ. ೧೭೦-೮೧೧). [ಸಂ.]

**ಹಾಲಾಹವಾಲು** 'ಹಾಲ್‌ಅಹವಾಲ್' ನೋ.

**ಹಾಲಾಹವಾಲೆ** 'ಹಾಲ್‌ಅಹವಾಲ್' ನೋ.

**ಹಾಲಿ** (ಅ). ಈಗ; ಸದ್ಯದಲ್ಲಿ; ಪ್ರಕೃತ: ಹಾಲಿ ಯಿನಾಮತ್ತಿಗಳಲ್ಲು ಜಾರಿ ಯಿರುವುದು (ಮೈಅರಿ. ೧೯೩೪, ೫೨-೯; 1812); ಹಾಲಿ ಜಾರಿಯಲ್ಲಿದ್ದ ಆಡಳಿತಪದ್ಧತಿಯಿಂದ ಅನಿವಾರ್ಯವಾಗಿ ಉಂಟಾಗುವ ಕೆಡುಕುಗಳನ್ನು ವಿವರಿಸಿದನು (ದಾದಾನ. ೧೭೦).

[<— ಅರ. ಮರಾ. ಹಾಲ್. / ತುಳು. ಹಾಲಿ]

**ಹಾಲಿಕ** (ಗು). ೧. ನೇಗಿಲಿಗೆ ಸಂಬಂಧಿಸಿದ. (ನಾ). ೨. ಬೇಸಾಯಗಾರ; ರೈತ: ಕುಲಾಲತತಿ ಹಾಲಿಕರ ವರ್ಗಂ (ವಿವೇಭ. ೪-೬೫); ಹಾಲಿಕರು ಎಂಬ ನೇಗಿಲು ಹಿಡಿದು ಉಳುವವರೂ . . . ಉಪಜಾತಿಗಳಾಗಿ ಹುಟ್ಟಿಕೊಂಡವೆಂದು ತಿಳಿದು ಬಂದಿದ (ತುಳುನಾ. ೮೬). [ಸಂ.]

**ಹಾಲಿಗೆ** (ನಾ). ಕರಡಿಗೆ; ಭರಣಿ: ನಿರನುನಾಸಿಕ ಲಕಾರಕ್ಕೆ — ಹಾಲಿಗೆ, ಹಲಸಿಗಂ, ಹಲಗೆ (ಶಮದ. ೧೬ ಪ್ರಯೋ); ವಜ್ರದ ಭಸಿತದ ಹಾಲಿಗೆಯಂತೆಯೊಡರಿಚಿರ್ದಾ ಸ್ಫಟಿಕಪೀಠದಂದದೊಳು ರಾಜಿಪುದು ಚಿನ್ಮೇರು (ವೀಶೈಪು. ೮-೨೦-೨೧). [?]

**ಹಾಲಿಪ್ಪೆ** (ನಾ). ಒಂದು ಬಗೆಯ ಇಪ್ಪೆಮರ: ಇಪ್ಪೆ, ದೊಡ್ಡಿಪ್ಪೆ, ಹಿಪ್ಪೆ, ಹಾಲಿಪ್ಪೆ (ಮೈಜಿಗಿ. ೧೨-೨೦೪). [ಹಾಲು$_1$ (< ಪಾಲ್$_1$) + ಇಪ್ಪೆ$_1$ (< ಇರ್ಪೆ)]

**ಹಾಲಿವಾಣ** 'ಪಾರಿವಾಳ$_2$' ನೋ.

**ಹಾಲು$_1$** 'ಪಾಲ್$_1$' ನೋ.

**ಹಾಲು$_2$** (ನಾ). (ಮನೆ, ಬಂಗಲೆ, ಅರಮನೆ ಮುಂತಾದುವುಗಳಲ್ಲಿ) ಕೊಠಡಿಗಿಂತ ವಿಶಾಲವಾಗಿರುವ ಹಜಾರ; ತೊಟ್ಟಿ: ಮೆಟ್ಟಲು ಹತ್ತಿ ಬಲಗಡೆಯ ಹಾಲಿನ ನಡುವೆ . . . ನಿಂತುಬಿಟ್ಟ (ಸಾಹೇಬ್. ೧೯೩). [<— ಇಂ. Hall]

**ಹಾಲುಂಡೆ** 'ಪಾಲುಂಡೆ' ನೋ.

**ಹಾಲುಕಂಬ** 'ಹಾಲುಗಂಬ' ನೋ.

**ಹಾಲುಕರೆ** 'ಪಾಲ್ಗಱೆ' ನೋ.

**ಹಾಲುಕೀರು, ಹಾಲುಖೀರು** (ನಾ). ಹಾಲಿನಿಂದ ತಯಾರಿಸಿದ ಪಾಯಸ: ಯಾವ ಊಟಕ್ಕೂ ಹಾಲುಕೀರು, ಬೋಂಡ ತಪ್ಪುತ್ತಿರಲಿಲ್ಲ (ನನ್ನೂರು. ೧೫೮). **ಹಾಲುಖೀರು:** ಅವತ್ತೂ . . . ಹಾಲುಖೀರು, ಬೋಂಡ ಇವುಗಳನ್ನು ಮಾಡಿದ್ದರು (ಶ್ರೀಕಥ. ೩೦). [ಹಾಲು$_1$ (< ಪಾಲ್$_1$) + ಕೀರು$_1$]

**ಹಾಲುಕುಂಬಳ** 'ಪಾಲ್ಗುಂಬಳ' ನೋ.

**ಹಾಲುಕುಡಿಸು** 'ಪಾಲ್ಗುಡಿಸು' ನೋ.

**ಹಾಲುಕೊರಟಗೆ** (ನಾ). ಒಂದು ಬಗೆಯ ಸಸ್ಯ: ಚಿತ್ರಮೂಲದ ಬೇರಿನ ಪಟ್ಟೆ . . . ಹಾಲುಕೊರಟಗೆ ಬೇರಿನ ಪಟ್ಟೆ ಇದರ ಕೊನೆ, ಮೆಣಸು, ಬೆಳ್ಳುಳ್ಳಿ ಇವುಗಳನ್ನರೆದು ಪೊಟ್ಟಣ ಕಟ್ಟಿ ಕಟ್ಟಿಕೊಳ್ಳಲು ಛಳಿಜ್ವರ ನಿಲ್ಲುವುದು (ಸಕವೈ. ೭೬).

[ಹಾಲು$_1$ (< ಪಾಲ್$_1$) + ಕೊರಟಗೆ$_1$ (< ಕುರಂಟಗೆ)]

**ಹಾಲುಖೀರು** 'ಹಾಲುಕೀರು' ನೋ.

**ಹಾಲುಖೋವಾ** (ನಾ). ಕಾಯಿಸಿ ಗಟ್ಟಿಗೊಳಿಸಿದ ಹಾಲಿನಿಂದ ತಯಾರಿಸುವ ಒಂದು ಬಗೆಯ ಸಿಹಿತಿಂಡಿ: ಸಿಹಿತಿಂಡಿ ಅಂಗಡಿಯಲ್ಲಿ ಹಾಲುಖೋವಾ, ಜಿಲೇಬಿ ಗಳನ್ನು ತಟ್ಟೆಯಲ್ಲಿ ಪೇರಿಸಿಟ್ಟಿದ್ದಾರೆ (ರೂಢಿ). [ಹಾಲು$_1$ (< ಪಾಲ್$_1$) + ಖೋವಾ]

**ಹಾಲುಗಂಬ, ಹಾಲುಕಂಬ** (ನಾ). ಮದುವೆಯಲ್ಲಿ, ಧಾರೆಯ ಮಂಟಪಕ್ಕೆ ಸಮೀಪವಾಗಿ ನೆಟ್ಟಿರುವ (ಮುರಿದರೆ ಹಾಲು ಸುರಿಸುವ) ಮರದ ಕೊಂಬೆ: ಚಪ್ಪರ ಹಾಕಿದ್ದಾನೆ. ಹಾಲುಗಂಬಗಳನ್ನು ತಂದುಹಾಕಿದ್ದಾನೆ (ಬೆಳುಮ. ೬). **ಹಾಲುಕಂಬ:** (ಎಸಮ್ಮ. II, ೧೦). [ಹಾಲು$_1$ (< ಪಾಲ್$_1$) + ಕಂಬ$_1$ (< ಕಂಭ)]

**ಹಾಲುಗಡಲು** 'ಪಾಲ್ಗಡಲ್' ನೋ.

**ಹಾಲುಗಬ್ಬು** (ನಾ). ಒಂದು ಬಗೆಯ ಕಬ್ಬು: ಬಿಳಿಕಬ್ಬು, ಕರಿಕಬ್ಬು, ಹಾಲುಗಬ್ಬು ಅಥವಾ ಹುಲ್ಲುಕಬ್ಬು — ಈ ಮೂರು ಜಾತಿಗಳ ಕಬ್ಬು ಈ ಜಿಲ್ಲೆಯಲ್ಲಿ ಬೆಳೆಯುತ್ತದೆ (ಕಭಾಗ. ೨೭೨). [ಹಾಲು$_1$ (< ಪಾಲ್$_1$) + ಕಬ್ಬು$_1$ (< ಕರ್ಬು$_1$)]

**ಹಾಲುಗಲ್ಲ, ಹಾಲ್ಗಲ್ಲ** (ನಾ). ಮೃದುವಾದ ಕೆನ್ನೆ; ಕೋಮಲವಾದ ಕಪೋಲ: ಎಸುಗೆ ಚೆಲುವನು ಹಾಲುಗಲ್ಲದ ಹಸುಳೆಯುಂಗವಿದಲ್ಲ (ಕುವ್ಯಾಕ. ೨೦-೨೬); ಬಿಸಿ ಕಂಬನಿಗಳು ಜಾರಿ ಅವಳ ಹಾಲುಗಲ್ಲಗಳ ಮೇಲೆ ಮುತ್ತುಗಳನಿಟ್ಟಂತೆ ಸ್ಥಿರವಾಗಿ ನಿಂತು ಕೊಂಡಿದ್ದವು (ಹಾಡುಹು.೧). **ಹಾಲ್ಗಲ್ಲ**: ಅವಳ ಮುಖದಲ್ಲಿ ನಗೆ ತುಂಬಿತ್ತು! ಹಾಲ್ಗಲ್ಲದಲ್ಲಿ ಚೆಲುವು ಚೆಲ್ಲುತ್ತಿತ್ತು! (ಹೇಮಕೂ. ೫೪). [ಹಾಲು$_1$ (< ಪಾಲ್$_1$) + ಗಲ್ಲ$_1$]

**ಹಾಲುಗಲ್ಲು** (ನಾ). ಬಿಳುಪಾದ ನುಣ್ಣಗಿರುವ ಕಲ್ಲು; ಅಮೃತಶಿಲೆ: ಹಗಲಿರುಳು ಏಳುದಿನಮಲ್ಲಿ ಚೈತ್ಯಾಲಯಂ ಚಿತ್ರಾಂಗದೆಯ ಯಶಶ್ಛತ್ರಸುರತರುವಂತೆ ಬೆಳೆದುದೊಯ್ಯನೆ ಹಾಲುಗಲ್ಲಿನಲಿ (ಚಿತ್ರಾಂಗ. ೯೦-೨೪೮೮); ಹಾಲುಗಲ್ಲಿನ ಪೀಠದ ಮೇಲೆ ಪ್ರತಿಮೆಯನ್ನು ಅಳವಡಿಸಲಾಗಿತ್ತು (ಹಾಹುತ್ರ. ೧೦೮).

[ಹಾಲು$_1$ (< ಪಾಲ್$_1$) + ಕಲ್ಲು (< ಕಲ್$_3$)]

**ಹಾಲುಗಾರೆ** (ನಾ). ಬಿಳಿಯ ಗಾರೆ; ಬಿಳಿಯ ಬಣ್ಣದ ಗಚ್ಚು: ಕ್ಷೀರಸುಧಾ ಮಂದಿರದಲ್ಲಿ ವಾಸಮಾಡಿದಲ್ಲಿ . . . ಚಿತ್ರಗಳಿಂದ ಕೂಡಿಕೊಂಡು ಹಾಲುಗಾರೆ ಯಿಂದಲೂ, ಬಿಳುಪಾದ ಸುಣ್ಣದಿಂದಲೂ, ಮಹತ್ತಾದ ಕಾಂತಿಯುಂಟಾಗಿ ಶ್ಲೇಷ್ಮದೋಷ ಗಳನ್ನುಂಟುಮಾಡುವುದು (ಸಕವ್ಯ. ೫೭); ಹಾಲುಗಾರೇ ಹಾಕಿರುವ ಸ್ಥಳಗಳು ಸುವರ್ಣ ಮಯವಾದ ಬಾಗಲುಗಳು (ಕೃವಾಸ. ೮೭). [ಹಾಲು$_1$ (< ಪಾಲ್$_1$) + ಗಾರೆ$_1$]

**ಹಾಲುಗಾಳು** (ನಾ). ಹಾಲು ತುಂಬಿರುವ ಕಾಳು; ಇನ್ನೂ ಬಲಿಯದೆ ಇರುವ ಕಾಳು: ಹಣ್ಣುಹಂಪಲುಗಳನ್ನೂ, ಹಾಲುಗಾಳುಗಳನ್ನೂ ತಂದು ನನಗೆ ಗುಟುಕು ಕೊಟ್ಟು, ಉಳಿದರೆ ತಾನು ತಿನ್ನುತ್ತಿದ್ದನು (ಕಪಪು. ೭-೧೧೧).

[ಹಾಲು$_1$ (< ಪಾಲ್$_1$) + ಕಾಳು$_2$ (< ಕಾಳ್$_2$)]

**ಹಾಲುಗಿಡ** (ನಾ). ಒಂದು ಬಗೆಯ ಸಸ್ಯ: ಹಾಲುಗಿಡದ ತಿಗಣೆಯ . . . ಭ್ರೂಣೋತ್ಪತ್ತಿ . . . ಆಗುವಂತೆ ತಿಳಿಸಬಹುದು (ಕೀಟಜಿ. ೧೦೪).

[ಹಾಲು$_1$ (< ಪಾಲ್$_1$) + ಗಿಡ (< ಗಿಡು)]

**ಹಾಲುಗಿಣ್ಣು** (ನಾ). ಕಾಯಿಸಿ ಗಟ್ಟಿಗೊಳಿಸಿದ ಎಳಗಂದಿ ಹಾಲು; ಗಿಣ್ಣು ಹಾಲು: "ಕೂರ್ಚಿಕಾ-ಹಾಲುಗಿಣ್ಣಿಗೆ ಹೆಸರು" (ಸಿದ್ಧಾಂತಿ. ೨೮೭).

[ಹಾಲು$_1$ (< ಪಾಲ್$_1$) + ಗಿಣ್ಣು$_1$]

**ಹಾಲುಗುಂಬಳ** 'ಪಾಲ್ಗುಂಬಳ' ನೋ.

**ಹಾಲುಗುನ್ನಿ** (ನಾ). ಒಂದು ಬಗೆಯ ಸಸ್ಯ: ಹುಣ್ಣು ವೆಗ್ಗಳವಾದರೆ ಗೇರ ತೈಲ, ಹಾಲುಗುನ್ನಿಯ ಹಾಲು, ಎಕ್ಕೆಯ ಹಾಲು ಇವಂ ಪೂಸುವುದು (ವಿಷ್ಣವಿ. ೧೪೭).

[ಹಾಲು$_1$ (< ಪಾಲ್$_1$) + ಕುನ್ನಿ$_1$]

**ಹಾಲುಗೆಚ್ಚಲು** (ನಾ). ಹಾಲು ತುಂಬಿದ ಕೆಚ್ಚಲು: ಹಾಲುಗೆಚ್ಚಲು ಬಳಿಯ ತೊಣಸಿ ಹತ್ತಿಕೊಂಡು ಕಾಲವನು ಕಳೆದ ಬಗೆ ಬಲ್ಲಿರೆಲ್ಲ (ವಿದಾಕ್ಯ. ೧೮-೨).

[ಹಾಲು$_1$ (< ಪಾಲ್$_1$) + ಕೆಚ್ಚಲು (< ಕೆಚ್ಚಲ್)]

**ಹಾಲುಗೆಣಸು** (ನಾ). ಒಂದು ಬಗೆಯ ಗೆಣಸು: ಕರೇಹಂಬು, ಗೌರಿಬಳ್ಳಿ, ಹಾಲುಗೆಣಸು (ಮೃಶಿಗಿ. ೪೫-೮೪೮).

**ಹಾಲುಗೆನ್ನೆ, ಹಾಲ್ಗೆನ್ನೆ** (ನಾ). = ಹಾಲುಗಲ್ಲ: ಹೆತ್ತ ತಾಯಿಯು ಹಾಲುಗೆನ್ನಗೆ ಮುತ್ತನೀಯದೆ ಮಾಣಳು (ಅಗ್ನಿಹಂ. ೧೮); ಎಂಟುದಿನಗಳ ಹಿಂದೆ ನಕ್ಕಾಗ ಗುಳಿ ಬೀಳುತ್ತಿದ್ದ ಹಾಲುಗೆನ್ನ ಬತ್ತಿಕೊಂಡ ರೀತಿಯೋ ? (ವಾತ್ಸಲ್ಯ. ೨೧೨). **ಹಾಲ್ಗೆನ್ನೆ**: ಹಾಲ್ಗೆನ್ನೆ ಹೊಸ ಹುಡುಗನವನಿನ್ನು (ನಡೆದಾ. I, ೪೫೨). [ಹಾಲು$_1$(< ಪಾಲ್$_1$) + ಕೆನ್ನೆ]

**ಹಾಲುಣಿಸು** (ಕ್ರಿ). ಹಾಲನ್ನು ಕುಡಿಸು: ನಿನ್ನ ಕರುವಂ ದಣಿಸಿ ನಮಗೆಲ್ಲ ಹಾಲುಣಿಸಿ ಚೆನ್ನ ನೀಂ ಪೋದೆಯೇಂ (ಕಾಲೂರ. ೮೩-೧೫೮).

[ಹಾಲು$_1$ (< ಪಾಲ್$_1$) + ಉಣಿಸು$_1$]

**ಹಾಲುಣ್ಣೆ** (ನಾ). ಚರ್ಮದ ಮೇಲೆ ಏಳುವ ಸಣ್ಣ ಗಂತಿ; ನರವುಲಿ: (ಹ). [?]

**ಹಾಲುತುಂಬು** 'ಪಾಲ್ದುಂಬು' ನೋ.

**ಹಾಲುದುಂಬುದೆನೆ** (ನಾ). ಹಾಲು ತುಂಬಿದ ಧಾನ್ಯದ ಹೊಡೆ,—ತೆನೆ: ಹಾಲುದುಂಬುದೆನೆಯ ಶಾಲಿ ಸೊಗಸನಿತ್ತುವು ನೋಳ್ಪರಿಗೆ (ಕಂಸವಿ. ೫-೬೨).

[ಹಾಲು$_1$ (< ಪಾಲ್$_1$) + ತುಂಬು$_1$ + ತೆನೆ$_1$]

**ಹಾಲುಪರೆ** 'ಹಾಲ್ಪರೆ' ನೋ.

**ಹಾಲುಪಾಯಸ** (ನಾ). ಅಕ್ಕಿ ಮತ್ತು ಹಾಲು ಸೇರಿಸಿ ಮಾಡುವ ಪಾಯಸ: ಪರರ ಮನೆಯ ಬತ್ತವನ್ನು ತಂದು, ಸುಲಿದು, ಹಾಲುಪಾಯಸ ಮಾಡುವ ಗತಿ ಬರಲಿಲ್ಲ (ಮರಮ. ೩೦೫). [ಹಾಲು$_1$ (< ಪಾಲ್$_1$) + ಪಾಯಸ]

**ಹಾಲುಪೊಂಗಲು** 'ಪಾಲುಪೊಂಗಲು' ನೋ.

**ಹಾಲುಬತ್ತ** (ನಾ). ಹಾಲು ತುಂಬಿದ ಬತ್ತದ ತೆನೆ: ಹಾಲುಬತ್ತಕ್ಕೆ ಕವಿವರಗಿಳಿಗಳ ಹಿಂಡ ಮೇಲಕ್ಕೆಬ್ಬಿಸುವ ನಾರಿಯರ ಪೇಳಲಳವೆ (ಕಂಸವಿ. ೫-೬೪).

[ಹಾಲು$_1$ (< ಪಾಲ್$_1$) + ಬತ್ತ]

**ಹಾಲುಬಳಪ** (ನಾ). (ಬಹಳ ಮೃದುವಾಗಿ ಮತ್ತು) ಬಿಳುಪಾಗಿ ಬರೆಯುವ ಬಳಪ; ಬೆಣ್ಣೆಬಳಪ: (ಹ). [ಹಾಲು$_1$ (< ಪಾಲ್$_1$) + ಬಳಪ]

**ಹಾಲುಬಳ್ಳಿ** (ನಾ). ೧. ಒಂದು ಬಗೆಯ ಬಳ್ಳಿ: (ಹ). ೨. ಒಂದು ಬಗೆಯ ಮರ: (ಹ). [ಹಾಲು$_1$ (< ಪಾಲ್$_1$) + ಬಳ್ಳಿ]

**ಹಾಲುಬಾಯಿ** (ನಾ). ಅಕ್ಕಿ,ರಾಗಿ, ಗೋದಿ ಮುಂತಾದುವುಗಳನ್ನು ರುಬ್ಬಿ ತೆಗೆದ ಹಾಲಿನಿಂದ ತಯಾರಿಸುವ ಒಂದು ಬಗೆಯ ಸಿಹಿತಿಂಡಿ; ಕ್ಷೀರಿಣಿ: ಸೀತೆಯ ಬಾಯಿ ಹರಕಾದರೂ ಅವಳು ಮಾಡುವ ಹಾಲುಬಾಯಿಯ ರುಚಿ ಅಷ್ಟೇನೂ ಕಡಿಮೆಯಿಲ್ಲ (ಮೂಕಜ್ಜಿ. ೨೦೪); ಹಾಲುಬಾಯಿ ಮಾಡಿದ್ದಾರೆ ಅಮ್ಮ (ಪದ್ಮಸ. ೨೫೩). [?]

**ಹಾಲುಬುಡ್ಡಿ** (ನಾ). ಎಳೆಯ ಮಕ್ಕಳಿಗೆ ಹಾಲನ್ನು ಕುಡಿಸಲು ಉಪಯೋಗಿಸುವ ಸೀಸೆ: ಹಾಲುಬುಡ್ಡಿಯನ್ನು ಶುಚಿಯಾಗಿ ತೊಳೆದಿಡು (ರೂಢಿ).

[ಹಾಲು$_1$ (< ಪಾಲ್$_1$) + ಬುಡ್ಡಿ (< ಬುರುಡೆ)]

**ಹಾಲುಬೆತ್ತ** (ನಾ). ಒಂದು ಬಗೆಯ ಬೆತ್ತ: ಬೆತ್ತದ ಬಳ್ಳಿ, ಹಾಲುಬೆತ್ತ, ನಾಗಬೆತ್ತ (ಮೃಶಿಗಿ. ೧೫-೨೭೯). [ಹಾಲು$_1$ (< ಪಾಲ್$_1$) + ಬೆತ್ತ]

**ಹಾಲುಬೆಳ್ಳಿ** (ನಾ). ಚೊಕ್ಕ ಬೆಳ್ಳಿ; ಉತ್ತಮ ವರ್ಗದ ಬೆಳ್ಳಿ: (ಹ). 'ಕಂದುಬೆಳ್ಳಿ' ಪರಾ. [ಹಾಲು$_1$ (< ಪಾಲ್$_1$) + ಬೆಳ್ಳಿ]

**ಹಾಲುಮಂಡಗೆ** (ನಾ). ಹಾಲಿನಿಂದ ತಯಾರಿಸುವ ಒಂದು ಬಗೆಯ ಮಂಡಗೆ: ರಾಮೇಶ್ವರದೇವರ ಹಾಲುಮಂಡಗೆಗೆ ಹಿರಿಯ ಕೋಲ ಎಂಟುಮತ್ತರ್ಕೆಯ್ (ಕಇ. II, ೨೪-೩೩; 1166); ಪ್ರಥಮಸ್ಥಳ ಮ ೧೨ ಹಾಲುಮಂಡಗೆ . ಮ ೧೮ (ಬೊಂಕಶಾ. ೧೯೩೯ ಜಮಖಂಡಿ. ೫೦-೧೭; 1306). [ಹಾಲು$_1$ (< ಪಾಲ್$_1$) + ಮಂಡಗೆ]

**ಹಾಲುಮಡ್ಡಿ, ಹಾಲಮಡ್ಡಿ, ಹಾಲ್ಮಡ್ಡಿ** (ನಾ). ಒಂದು ಬಗೆಯ ಸುಗಂಧ ದ್ರವ್ಯ: ಹಾಲುಮಡ್ಡಿ ಸಾಂಬ್ರಾಣಿ ಮೊದಲಾದ ಪರಿಮಳದ್ರವ್ಯಗಳಿಂದಾ ವಾಸನೆಯಂ ಗೊಳಿಸಿ ಮುತ್ತಿನಾರತಿಯನ್ನೆತ್ತಿ (ಸೌಗಂಧಿ. ೩೦-೧೭); ಇಲ್ಲಿಗೆ ನಾನಾ ತರಹ ಅಗರು, ಮರ, ಕರ್ಪೂರ ಹಾಲುಮಡ್ಡಿ ಬರುತ್ತವೆ (ಪ್ರವಾಇ. I, ೩೨೬). **ಹಾಲಮಡ್ಡಿ**: ಗುಗ್ಗುಳ ಹಾಲಮಡ್ಡಿಯ ಮಹಿಪಾಕ್ಷಿಯ ವೆಗ್ಗಳ ಲೋಭಾನ ಕಪ್ರರಾಳ (ದೇವಾಂಪು. ೬-೬೦); ಹಾಲಮಡ್ಡಿ ಕರ್ಪುರ ಶಿಲಾರಸ ದೇವದಾರ (ಸಿದ್ಧಪು. ೧೯-೩). **ಹಾಲ್ಮಡ್ಡಿ**: ಕೆಂಪುಸೊನೆ ಸೋರುತ್ತಿರೆ, ಪಸಿಗಂಪು ಹಸರುವುದು ಕಡಿವಾ ಬಡಗಿಗಳ್ಗೆ ಹಾಲ್ಮಡ್ಡಿ ಹೊಗೆ ಧೂಪವಾಗಿ (ಶ್ರೀರಾಮಾ. ೨೫೮-೮೧೬). [ಹಾಲು$_1$ (< ಪಾಲ್$_1$) + ಮಡ್ಡಿ$_1$]

**ಹಾಲುಮುಲ್ಲಂಗಿ** (ನಾ). ಒಂದು ಬಗೆಯ ಮೂಲಂಗಿ ಗಿಡ: ಹಾಲಹಕ್ಕರಿಕೆ, ಹಾಲುಮುಲ್ಲಂಗಿ (ಮೃಶಿಗಿ. ೧೯-೯೭೦).

[ಹಾಲು$_1$ (< ಪಾಲ್$_1$) + ಮುಲ್ಲಂಗಿ (< ಮೂಲಂಗಿ$_1$)]

**ಹಾಲುರೊಡ್ಡಿ, ಹಾಲರೊಡ್ಡಿ** (ನಾ). ಒಂದು ಬಗೆಯ ಔಷಧದ್ರವ್ಯ: ಕಷಾಯ ದಲ್ಲಿ ಹನಿಸಿ ಕಾಸುವಾಗ ಹಾಕುವ ಕಲ್ಕದ್ರವ್ಯಗಳು — ರೊಡ್ಡಿ, ಹಾಲುರೊಡ್ಡಿ, ಮಂಜಿಷ್ಠ (ವೈದ್ಯಸಾ. I, ೪೧೫). **ಹಾಲರೊಡ್ಡಿ**: ಸಿಹಿಹಾಲೆ, ರೊಡ್ಡಿ, ಹಾಲರೊಡ್ಡಿ . . . ಕಾಯಿಸಿ ಪಾಕದಲ್ಲಿಳಿಹಿ (ಸಕವ್ಯ. ೮೫). [ಹಾಲು$_1$ (< ಪಾಲ್$_1$) + ರೊಡ್ಡಿ]

**ಹಾಲುವಕ್ಕಿ** 'ಪಾಲ್ವಕ್ಕಿ' ನೋ.

**ಹಾಲುವಾಣ**$_1$ 'ಪಾರಿವಾಳ$_1$' ನೋ.

**ಹಾಲುವಾಣ**$_2$ 'ಪಾರಿವಾಳ$_2$' ನೋ.

**ಹಾಲುಸಂಪಿಗೆ** (ನಾ) ಒಂದು ಬಗೆಯ ಸಸ್ಯ. (ಮೈಔಗಿ ೬೩-೧೨೭೬) [ಹಾಲು$_1$ (< ಪಾಲ್$_1$) + ಸಂಪಿಗೆ (< ಸಂಪಗೆ)]

**ಹಾಲುಸೋರೆ** (ನಾ). ಒಂದು ಬಗೆಯ ಸಿಹಿಸೋರೆಯ ಕಾಯಿ: ಹುರಳಿಕಟ್ಟು . . . ಹಾಲುಸೋರೆ, ಕುಸಿಹಾಲೆಸೊಪ್ಪು ಎರಡೆಲೆ ಹೊನ್ನೆ, ಚಕ್ರವರ್ತದ ಸೊಪ್ಪು, ಚಲಿಕೀರೆಸೊಪ್ಪು ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕವ್ಯ. ೧೦೨). [ಹಾಲು$_1$ (< ಪಾಲ್$_1$) + ಸೋರೆ$_1$]

**ಹಾಲುಹಕೀಕತ್ತು** (ನಾ). ಸ್ಥಿತಿಗತಿ; ವಸ್ತುಸ್ಥಿತಿ: ಮೂರು ತಿಂಗಳು ಇಲ್ಲಿ ಇದ್ದು ಇಲ್ಲಿ ಹಾಲುಹಕೀಕತ್ತು ನೋಡಿಯೂ ಕೇಳಿಯೂ ಇದ್ದಾರೆ (ರಾಜೇಂದ್ರ. ೧೦೭). [<— ಮರಾ. ಹಾಲ್‌ಹಕೀಕತ್]

**ಹಾಲುಹಕ್ಕಿ** 'ಪಾಲ್ವಕ್ಕಿ' ನೋ.

**ಹಾಲುಹಸುಳೆ** 'ಪಾಲ್ವಸುಳೆ' ನೋ.

**ಹಾಲುಹಳ್ಳ** 'ಪಾಲ್ವಳ್ಳ' ನೋ.

**ಹಾಲೂಡಿಸು** (ಕ್ರಿ). ಎದೆಹಾಲನ್ನು ಕೊಡು,—ಉಣ್ಣಿಸು: ಸುಮಾರುಜನ ತಾಯಂದಿರು ಮಕ್ಕಳಿಗೆ ಹಾಲೂಡಿಸುವ ಅಭ್ಯಾಸವನ್ನು ಬಿಟ್ಟುಬಿಟ್ಟರು (ಮನೋಸಂ. ೨೧೯). [ಹಾಲು$_1$ (< ಪಾಲ್$_1$) + ಊಡಿಸು]

**ಹಾಲೂಡು** (ಕ್ರಿ). = ಹಾಲೂಡಿಸು: ಮಗುವಿನ ಹೊಟ್ಟೆಗೆ ಹಾಲೂಡುವವರು ಯಾರು ? (ಪುನರು. ೨೮೭). [ಹಾಲು$_1$ (< ಪಾಲ್$_1$) + ಊಡು$_1$]

**ಹಾಲೆ**$_1$ 'ಪಾಲೆ$_1$' ನೋ.

**ಹಾಲೆ**$_2$ 'ಪಾಲೆ$_2$' ನೋ.

**ಹಾಲೆ**$_3$ 'ಪಾಲೆ$_3$' ನೋ.

**ಹಾಲೆ**$_4$, **ಹಾಳೆ**$_2$ (ನಾ). (ತಾಳೆ ಮುಂತಾದ ಮರದಿಂದ ಇಳಿಸಿದ) ಮದ್ಯ; ಹೆಂಡ: (೬). **ಹಾಳೆ**$_2$: "ಮಧು, ಆಸವಃ . . . ಹಾಳಾ, ಕಲ್ಯಂ . . . ಮಧು — ಈ ೨೪ ಕಳ್ಳು" (ಹಲಾಯು. ೫೫-೧೭೪). [ಸಂ. ಹಾಲಾ]

**ಹಾಲೆ**$_5$ (ನಾ). ಕಣ್ಣಿನ ಪಾಪೆ; ಕಣ್ಣುಗುಡ್ಡೆ: ಆಲಿಯ ಕೊನೆಯಲ್ಲಿ ಬೆಳೆದ ಹಾಲೆ ಬಾಲೆಯರನೇ ಬಯಸುತಿಪ್ಪುದು ನೋಡಾ (ಸಿದ್ಧೇವ. ೧೩೦-೩೮೭); ಕರಿಹಾಲೆಗಳಿಂದ ಕೂಡಿರುವ ಕಣ್ಣುಗಳಿಂದ ಹೊರಟು ಬರುವ ಕಂಬನಿಗಳಂ ಕೂಡಿರುವುದಕ್ಕೆ ಕಾರಣವೇನು? (ಕೃವಾಪಿ. ೩೩). [< ಆಲಿ$_2$]

**ಹಾಲೆಮರ** (ನಾ). ಒಂದು ಬಗೆಯ ಮರ: ಹಾಲೆಮರದ ಸೊಸಿಯಂ ಹಸುವಿನ ಸಗಣೆಯಿಂದಲೆ ತುಂಬಿದ ಹಳ್ಳದಲ್ಲಿ ನಡಬೇಕು (ಸೌಗಂಧಿ. ೪೨೬-೯). [ಹಾಲೆ$_2$ (< ಪಾಲೆ$_2$) + ಮರ$_1$]

**ಹಾಲೆರೆ** 'ಪಾಲೆಱೆ' ನೋ.

**ಹಾಲೆಹಕ್ಕಿ** (ನಾ). ಒಂದು ಬಗೆಯ ಶಕುನದ ಹಕ್ಕಿ; ಹಂಗನ ಹಕ್ಕಿ: (೬). [ಹಾಲೆ$_1$ (< ಪಾಲೆ$_1$) + ಹಕ್ಕಿ (< ಪಕ್ಕಿ)]

**ಹಾಲೆಱೆ** 'ಪಾಲೆಱೆ' ನೋ.

**ಹಾಲೊಡಕಲು** (ನಾ). ಒಡೆದ ಹಾಲಿನ ಗಟ್ಟಿಭಾಗ ಮತ್ತು ಅದರಿಂದ ತಯಾರಿಸುವ ಒಂದು ಬಗೆಯ ತಿನಿಸು: ಮನೆಯಲ್ಲಿ ಕಡೆದು ತೆಗೆದ ಬೆಣ್ಣೆ, ಮೊಸರು, ಹಾಲೊಡಕಲು, ಖೀರು (ನಿಬಂಧ. II, ೧೬೫). [ಹಾಲು$_1$ (< ಪಾಲ್$_1$) + ಒಡಕಲು]

**ಹಾಲೊಡಪು** (ನಾ). ಒಡೆದ ಹಾಲಿನ ಗಟ್ಟಿಭಾಗ: ವಡೆಯಂ ಬೇಯಿಸಿಕೊಂಡು ಚೆನ್ನಾಗಿ ನಜುಕಿಸಿದ ಪುಡಿಯುಮಂ ತುಪ್ಪದೊಳು ಹುರಿದ ಹಾಲೊಡಪಿನಿಂದೊಡವೆರಸಿ . . . ತುಪ್ಪದೊಳು ಪಾಕಂ ಮಾಡಲದು ಮುಸುಕಿನೊಡೆಯಾದುದು (ಸೂಪಶಾ. ೧-೬೭). [ಹಾಲು$_1$ (< ಪಾಲ್$_1$) + ಒಡಪು$_1$]

**ಹಾಲೊಱತೆ** (ನಾ). ಹಾಲಿನ ಬುಗ್ಗೆ,— ಝರಿ: ಶ್ವೇತಪರ್ವತದ . . . ಹಾಲೊಱತೆ ಸುರಿತಪ್ಪಂತೆ ಹಾಲ ಹಳ್ಳವೋಲಗದ ನಡುವೆ ಮಾಡುಗಟ್ಟಿ ಪರಿದು ಪೋಱಸೂಸೆ (ಬಸರ. ೧೦-೭೨). [ಹಾಲು$_1$ (< ಪಾಲ್$_1$) + ಒಱತೆ (< ಒಱಂತೆ)]

**ಹಾಲೋಗರ** 'ಪಾಲೋಗರ' ನೋ.

**ಹಾಲ್ಕಾಗದ** (ನಾ). (ಹಾಲಿನಂತೆ) ಬಹಳ ಬಿಳುಪಾಗಿರುವ ಕಾಗದ: ಹಾಲ್ಕಾಗದದಲ್ಲಿ ಬರೆದ ಬರೆಹ ಬಹಳ ಚನ್ನಾಗಿದೆ (ರೂಢಿ). [ಹಾಲ್$_6$ (< ಪಾಲ್$_1$) + ಕಾಗದ]

**ಹಾಲ್ಕುಡಿ** 'ಪಾಲ್ಗುಡಿ' ನೋ.

**ಹಾಲ್ಗಡಗ** 'ಪಾಲ್ಗಡಗ' ನೋ.

**ಹಾಲ್ಗಡಲು** 'ಪಾಲ್ಗಡಲ್' ನೋ.

**ಹಾಲ್ಗಲ್ಲು** 'ಹಾಲುಗಲ್ಲು' ನೋ.

**ಹಾಲ್ಗುಂಬಳ** 'ಪಾಲ್ಗುಂಬಳ' ನೋ.

**ಹಾಲ್ಗುಡಿ** 'ಪಾಲ್ಗುಡಿ' ನೋ.

**ಹಾಲ್ಗೆನ್ನೆ** 'ಹಾಲುಗೆನ್ನೆ' ನೋ.

**ಹಾಲ್ತುತ್ತ** 'ಪಾಲ್ತುತ್ತ' ನೋ.

**ಹಾಲ್ತೊರೆ** 'ಪಾಲ್ತೊಱೆ' ನೋ.

**ಹಾಲ್ದುಂಬು** 'ಪಾಲ್ದುಂಬು' ನೋ.

**ಹಾಲ್ದೆನೆ** 'ಪಾಲ್ದೆನೆ' ನೋ.

**ಹಾಲ್ಪರೆ**, **ಹಾಲುಪರೆ** (ನಾ). ಗಜ್ಜುಗದಾಟದಲ್ಲಿ ಬಳಸುವ ಒಂದು ಉದ್ಗಾರಶಬ್ದ: ಒಂದೆಡೆಯೊಳು ಗರ್ದುಗವನಾಡುತಿರಲಾಗ ಬಂದೋರ್ವ ಹಾಲ್ಪರೆಯೆಂದು ಅಂದೆತ್ತಿಕೊಂಡೋಡಿ ಹಿಡಿವ ಕುಮಾರರ ವೃಂದವ ಕಂಡಳಾ ಚದುರೆ (ಜ್ಞಾನಚಿ. ೨-೫೦). **ಹಾಲುಪರೆ**: ಮಱೆಯೊಳು ಬಂದು ಮಕ್ಕಳ ಗರ್ದುಗವ ಹಾಲುಪರೆಯೆಂದು ಬಾಚಿ ಹಿಡಿಯಲು ಹೆಱನೂಂಕಿ ಬಳಿಕ ಕೈಯಿಂದ ಸುಲಿವನಾವ ದುಱುದುಂಬಿಯಾ ಬಾಲವಿಷ್ಣು (ನೇಮಿಸಂ. ೧೫-೧೦೮). [?]

**ಹಾಲ್ಮಡಿ** (ನಾ). (ಹಾಲಿನಂತೆ) ಪರಿಶುಭ್ರವಾದ ಮಡಿಬಟ್ಟೆ: ಶ್ರೀನದಿಯ ಸಲಿಲದಲಿ ಮಿಂದು ಹೊಸ ಹಾಲ್ಮಡಿಯ ನಾರುಡೆಯನುಟ್ಟು (ಶ್ರೀರಾಮಾ. ೧೧೨-೧). [ಹಾಲ್$_6$ (< ಪಾಲ್$_1$) + ಮಡಿ$_2$]

**ಹಾಲ್ಮಡ್ಡಿ** 'ಹಾಲುಮಡ್ಡಿ' ನೋ.

**ಹಾಲ್ಮರ** 'ಪಾಲ್ಮರ' ನೋ.

**ಹಾಲ್ಮೆಕ್ಕೆಬಳ್ಳಿ** (ನಾ). ಒಂದು ಬಗೆಯ ಬಳ್ಳಿ: "ಅಡಿಕೆಬಾಳೆ . . . ದೊಡ್ಡಮೆಕ್ಕೆ, ಹಾಲ್ಮೆಕ್ಕೆಬಳ್ಳಿ" (ಸಸ್ಯನಿ. ೪೨). [ಹಾಲ್$_6$ (< ಪಾಲ್$_1$) + ಮೆಕ್ಕೆ$_3$ + ಬಳ್ಳಿ]

**ಹಾಲ್ವಕ್ಕಿ** 'ಪಾಲ್ವಕ್ಕಿ' ನೋ.

**ಹಾಲ್ಹಕ್ಕರಿಕೆ** (ನಾ). ಒಂದು ಬಗೆಯ ಹಕ್ಕರಿಕೆಸೊಪ್ಪಿನ ಗಿಡ: ಹಾಲ್ಹಕ್ಕರಿಕೆ, ಹಾಲುಮುಲ್ಲಂಗಿ (ಮೈಔಗಿ. ೪೯-೯೭೦). [ಹಾಲ್$_6$ (< ಪಾಲ್$_1$) + ಹಕ್ಕರಿಕೆ$_1$ (< ಹಕ್ಕಱಿಕೆ)]

**ಹಾವ** (ನಾ). ೧. ಆಹ್ವಾನ; ಕರೆ. ೨. ಸ್ತ್ರೀಯು (ಅಂಗಿಕಾಭಿನಯದ ಮೂಲಕ) ಸೂಚಿಸುವ ಶೃಂಗಾರಭಾವನೆ; ಸ್ತ್ರೀಯು (ಅಂಗವಿನ್ಯಾಸದಿಂದ) ಸೂಚಿಸುವ ಶೃಂಗಾರಭಾವ: ಅಂತಾಕೆಯ . . . ಗಾಡಿವೆರಸಿದ ಹಾವಕ್ಕಂ ನಾಣ್ಚೆರಸಿದ ಭಾವಕ್ಕ ಮೊಲ್ಲು (ಪಂಪಭಾ. ೪-೧೭ ವ); ಸ್ತ್ರೀಸದ್ಮದೊಳ್ . . . ಈಗಳುಳ್ಳವರೊಳಿಲ್ಲೀ ಹಾವವೀ ಭಾವಮಿಾ ಪರಿಜೀ ವಿಭ್ರಮಮಿಾ ವಿಲಾಸಂ (ಸುಕುಮಾ. ೫-೫೮); ಪಾಡೆಂತಂತು ಹಾವಂ, ಹಾವಮೆಂತಂತು ಭಾವಂ, ಪುದುಂಗೊಳೆ ನವರಸೋದಯಕೆ ಪಡಿವೆತ್ತಾಡುವ ನಟ್ಟವಿಗರ ಕೂಟದಿಂ (ರಾಮಾಶ್ವ. ೨೩-೧೮). ೩. ಹಸ್ತಮುದ್ರೆ; ಹಸ್ತವಿನ್ಯಾಸ: ಮುಖಮುದ್ರೆಗಳು ಹೇಗೆ ಭಾವವನ್ನು ಪ್ರಕಟಿಸುವುವೋ ಹಾಗೆಯೇ ಹಾವಗಳಿಂದ ಅಂತರ್ಯವನ್ನು (ಹಸ್ತಮುದ್ರೆಗಳಿಂದ) ಸೂಚಿಸಲು ಬರುವುದು (ಭಾಚಿತ್ರ. ೧೩); ಹಸ್ತಗಳು . . . ಹೇಗೆ ಇರಬೇಕೆಂದೂ ಸೂಚಿಸಿದರು, ಈ "ಹಾವ" (gestures) ಗಳಿಗೆ ಮುದ್ರೆಗಳೆಂದು ಹೆಸರು (ಬಾಲಪ್ರ. II, ೮೫೫).

**ಹಾವಭಾವ** = ಶೃಂಗಾರಭಾವನೆ; ವಿಲಾಸ; ಬೆಡಗು: ಹಾವಭಾವ

ವಿಲಾಸವಿಭ್ರಮಂಗಳನೊಡಯೊಳಂ . . . ಪೋಗವೇಟ್ಟ ಧನಧತ್ತ ನೊಳ್ಪಿದನೆಂದಂ (ವಡ್ಡಾರಾ. ೧೭-೧೧); ಹುಬ್ಬುಗಳ ಗೆರೆಯಲ್ಲಿ ಹಾವಭಾವವ ರಸವು (ಕರುಶ್ರಾ. ೧೦-೨). [ಸಂ.]

**ಹಾವಂಚಿ** 'ಪಾವಸೆ' ನೋ.

**ಹಾವಚಿ** 'ಪಾವಸೆ' ನೋ.

**ಹಾವಚೆ** 'ಪಾವಸೆ' ನೋ.

**ಹಾವಡಿಗ** 'ಪಾವಡಿಗ' ನೋ.

**ಹಾವಡಿಗವಿದ್ಯೆ** (ನಾ). ಹಾವನ್ನು ಆಡಿಸುವ ವಿದ್ಯೆ; ಗಾರುಡಿಗ ವಿದ್ಯೆ: ಉರಗನ ಮೇಲೆ ಕುಣಿದಾಡಿದನು ಗಡ ಹಾವಡಿಗವಿದ್ಯೆಯಲಿ (ಕುವ್ಯಾಸ. ೧೦-೧೫). [ಹಾವಡಿಗ (< ಪಾವಡಿಗ) + ವಿದ್ಯೆ]

**ಹಾವರ** (ನಾ). ಪರಿಸ್ಥಿತಿ (?): ಬಾಳಾಂಬಕಬಲೆಗೆ ಸಿಕ್ಕಿದ ಲೀಲಾಂಗಕಾಲಕ್ಕೆ ಒಳಗಾದ ಪುಷ್ಪೋದ್ಭವ ಹೆಡೆಗಟ್ಟಿಗೀಡಾದ ಇವರು ಮೂವರು ದೇವರೆಂದು ಆರಾಧಿಸಿ ಜೇನ ಮಡಕೆಯಲ್ಲಿ ಸಿಕ್ಕಿದ ನೊಣದಂತಾದಿರಯ್ಯ . . . ಆ ಹಾವರ ಕಂಡೆನ ಗಂಜಿಕೆಯಾಯಿತ್ತಯ್ಯ (ಮೋಳಿಮಾ. ೧೯೭-೭೨೯). [?]

**ಹಾವರಣ** (ನಾ). ಮೇಲುಹೊದಿಕೆ: ನೊಸಲಗನ್ನಡಿ ಢಣರೆಂಬ ಹೊಕ್ಕುಳ ಘಂಟೆ ಮಿಸುನಿಬರಹದ ಹಾವರಣ ಬಸಿವ ಗಲ್ಲದ ಮದಧಾರೆಯಿಂದಾನೆಗಳ್ ಮಸಗಿ ಬಂದುವು ರಾಯನೆಡಗೆ (ಭರಚ. ೨೦-೭೩). [< ಸಂ. ಪ್ರಾವರಣ]

**ಹಾವರಣಿ** 'ಪಾವರಣೆ' ನೋ.

**ಹಾವರಣೆ** 'ಪಾವರಣೆ' ನೋ.

**ಹಾವಸೆ** 'ಪಾವಸೆ' ನೋ.

**ಹಾವಸೆಗಲ್ಲು** 'ಪಾವಸೆಗಲ್' ನೋ.

**ಹಾವಸೆಮನ** (ನಾ). (ಆಲಂ) ಅಶುದ್ಧವಾದ ಮನಸ್ಸು; ಮಲಿನವಾದ ಚಿತ್ತ: ಹಳಿವ ಹಾವಸೆಮನದೊಳಿದ್ದರು ಕೆಲರು ಕೆಲರೆಡೆಯಾಡುತಿರ್ದರು (ಕುವ್ಯಾಅ. ೫-೧೪). [ಹಾವಸೆ (< ಪಾವಸೆ) + ಮನ]

**ಹಾವಸೆಹಲ್ಲು** 'ಪಾವಸೆವಲ್' ನೋ.

**ಹಾವಸೆಹಿಡಿ** (ಕ್ರಿ). ಪಾಚಿ ಕಟ್ಟು; ಪಾಚಿ ಬೆಳೆ: ಮಡುಗಳಕ್ಕುಡಿಸಿದವು ಹಾವಸೆ ಹಿಡಿದ ಪಥ ಪಾಂಥಕರ ಪದಹತಿಗೊಡಲನಿತ್ತವು ಹೊಂಗಿದವು ಹೊಲದಲಿ ವಿಹಂಗಚಯ (ತೊರರಾ. ೪-೭-೧೧). [ಹಾವಸೆ (< ಪಾವಸೆ) + ಹಿಡಿ$_1$ (< ಪಿಡಿ$_1$)]

**ಹಾವಳಿ** (ನಾ). ತೊಂದರೆ; ಕಾಟ; ಉಪದ್ರವ: ಭಾವೆಯರಿಗೆ ತತ್ಪುರದೊಳು ಶ್ರಾವನ ಹಾವಳಿ ವೆಗ್ಗಳಮಾಯ್ತು (ನೇಮಿಸಂ. ೮-೨೭); ಎಲ್ಲಿ ಬೆಣ್ಣೆಯ ಬಚ್ಚಿಡಲಿ ನಾ ಕಳ್ಳಕೃಷ್ಣನ ಹಾವಳಿ ಘನವಾಯಿತು (ಪುರಂದ. ೩-೭೧ ಪಲ್ಲವಿ); ಜಾನಕಿಯ ಸುತನ ಬಾಣಾವಳಿಯ ಹಾವಳಿಯನೇನೆಂಬೆನು (ಜೈಮಿಭಾ. ೨೦-೪೭).

ಹಾವಳಿಮಾಡು = ತೊಂದರೆಮಾಡು; ಉಪದ್ರವ ಕೊಡು: ಹುಲಿ ಚಿರತೆಗಳು ಹಗಲೇ ಊರಿಗೆ ಬಂದು ಹಾವಳಿ ಮಾಡುತ್ತವೆ (ಕೊನಭೇ. ೨೨).

[ದೇ. ॥ ತುಳು. ಹಾವಳಿ; ತೆಲು. ಹಾವಳಿ, ಹಾವಡಿ, ಆವಡಿ]

**ಹಾವಳಿಸು** (ಕ್ರಿ). ತೊಂದರೆ ಕೊಡು; ಹಾವಳಿಮಾಡು: ಹಸಿದೆ ಬಂದಿದೆ ಗೂಗೆ ಮುಗಿಲಿಂದಿಳೆಗೆ ಹಾವಳಿಸುತ್ತಲಿವೆ (ಭಾರಶಾಂ. ೪-೮೧); ಹಾವಳಿಸಿ ಕಾವಳಿಸಿದಹಿತರೊಳ ಗಾವರಿಸಿ (ಜಿನಮು. ೨೦-೩೦). [ಹಾವಳಿ + - ಇಸು$_3$]

**ಹಾವಾಡಿಗ** 'ಪಾವಡಿಗ' ನೋ.

**ಹಾವಿಗೆ** 'ಪಾವುಗೆ' ನೋ.

**ಹಾವು** 'ಪಾವು$_1$' ನೋ.

**ಹಾವುಕಣ್ಣನಗಿಡ** (ನಾ). ಒಂದು ಬಗೆಯ ಸಸ್ಯ: "ನಾಕುಲೀ . . . ಸುವಹಾ — ೮ ಸರ್ಪಾಕ್ಷಿಗಿಡದ ಹೆಸರುಗಳು . . . ಹಾವುಕಣ್ಣನಗಿಡ, ನಂಜಾರೇಗಿಡ, ಮುಂಗೀಮೇವುಗಿಡ" (ಸಿದ್ಧಾಂತಿ. ೧೩೮). [ಹಾವು (< ಪಾವು$_1$) + < ಕಣ್ಣು + ಗಿಡ (< ಗಿಡು)]

**ಹಾವುಗಣ್ಣು** (ನಾ). ಹಾವಿನ ಕಣ್ಣಿನಂತೆ ಹೊಳೆಯುವ ಕಣ್ಣು: ಚೆಲುವಿನಲಿ ಬಳುಬಳುಕಿ ಬೆಡಗಿನಲಿ ನಲಿದು ಹಾವುಗಣ್ಣಿನ ಸೆರೆಯನೆಮ್ಮ ಸೆಳೆಯುವಿರಿ (ನಿಮ್ಮದ್ಯ. ೨). [ಹಾವು (< ಪಾವು$_1$) + ಕಣ್ಣು (< ಕಣ್)]

**ಹಾವುಗಾರ** (ನಾ). ಹಾವನ್ನು ಹಿಡಿದು ಆಡಿಸುವ ವೃತ್ತಿಯವನು; ಹಾವಾಡಿಗ: "ವ್ಯಾಲಗ್ರಾಹಿ — ಗಾರುಡಿಗ, ಹಾವುಗಾರ" (ಗಂಗಾವು. ೩೦೦); ಹಾವುಗಾರನು ಕಣ್ಣು ಮೋಸಮಾಡಲಿಕ್ಕೆ ಕಲಿಯುತ್ತಾನೆ (ಮುಂಬಯಿ. ೪-೨೫೮). [ಹಾವು (< ಪಾವು$_1$) + - ಗಾರ (< - ಕಾಱ)]

**ಹಾವುಗೆ$_1$** 'ಪಾವುಗೆ' ನೋ.

**ಹಾವುಗೆ$_2$** (ನಾ). ತಪ್ಪು; ಕೆಟ್ಟದು; ಕೆಡುಕು (?): (೬).

**ಹಾವುಗೆಗಾಱ** (ನಾ). ೧. ಕೆಟ್ಟದ್ದನ್ನು ಮಾಡುವವನು (?): (೬). ೨. ಜೂಜಾಟದ ಮನೆಯನ್ನು ನಡೆಸುವವನು; ಜೂಜನ್ನು ಆಡಿಸುವವನು: (೬). [ಹಾವುಗೆ$_2$ + - ಕಾಱ]

**ಹಾವುದಲೆಗ** (ನಾ). (ಹಾವಿನ ಹೆಡೆಯನ್ನು ಹೋಲುವ ತಲೆಯನ್ನುಳ್ಳ) ಒಂದು ಬಗೆಯ ಹಕ್ಕಿ: ಹಂಗ ಹಾವುದಲೆಗ ಹದ್ದು ಮರವಕ್ಕಿ . . . ಸೋಗೆ ಸೊರ ಪಿಕಗಳ ಪಿಣದರುವಕ್ಕಿಯಿಂದೊಪ್ಪಿತಡವಿ (ರಾಮವಿ. ೧೫-೭೩); ಹಾವುದಲೆಗ ಹರಡೆ ಹಂಗ . . . ಕನ್ನವಿಲ್ಗಳ ಹೊಱ ಮುಂದೆ ತಳರೆ ತಡೆಯದೆಯ್ದಿದವು (ಕುರಾಸಾಂ. ೩೪-೩). [ಹಾವು (< ಪಾವು$_1$) + ತಲೆ$_1$ + - ಗ$_2$]

**ಹಾವುನಂಜಿನಗಿಡ** (ನಾ). ಒಂದು ಬಗೆಯ ಸಸ್ಯ: ಕೊಮರಕ, ಹಾವು ನಂಜಿನಗಿಡ, ಕಾಡುಮೆಣಸು (ನಮ್ಮನು. ೨೩೮). [ಹಾವು (< ಪಾವು$_1$) + < ನಂಜು$_2$ + ಗಿಡ (< ಗಿಡು)]

**ಹಾವುಮಕ್ಕಿ** 'ಪಾವುಮೆಕ್ಕೆ' ನೋ.

**ಹಾವುಮಿನು** 'ಪಾವುಮೀನ್' ನೋ.

**ಹಾವುಮೆಕ್ಕೆ** 'ಪಾವುಮೆಕ್ಕೆ' ನೋ.

**ಹಾವುರಾಣಿ** 'ಪಾವರಣೆ' ನೋ.

**ಹಾವುಲಿಗೆ** (ನಾ). ಒಂದು ಬಗೆಯ ಸಸ್ಯ: ನಾರುಬೇರು, ಹಾವುಲಿಗ, ಹಂಟಗೆ, ಹೌಳಿಗೆ, ಬೆಳಂಗಿ (ಮೈಔಗಿ. ೨-೩೨). [?]

**ಹಾವುಸೆ** 'ಪಾವಸೆ' ನೋ.

**ಹಾವೇರಿನ್ಯಾಯ** (ನಾ). (ಉಕ) ಉಭಯಪಕ್ಷಗಳಿಗೂ ಸಮಾಧಾನ ತರುವ ನ್ಯಾಯ; ℙ ಧಾರವಾಡಜಿಲ್ಲೆಯ ಹಾವೇರಿತಾಲ್ಲೂಕಿನಿಂದ ಪ್ರಾರಂಭವಾಯಿತೆಂದು ಭಾವಿಸಲಾದ ನ್ಯಾಯ: ಪುರಾಣಗಳಲ್ಲಿ ಹರಿ-ಹರರ ಹಾವೇರಿನ್ಯಾಯವಾಗಿ ಹರಿ ಹೆಚ್ಚಲ್ಲ, ಹರ ಕಡಿಮೆಯಲ್ಲ ಇಬ್ಬರೂ ಸಮಾನರು ಎಂದು ಗೊತ್ತಾಗಿಲ್ಲವೆ! (ನಿರಾಭ. ೧೩೦); ಶಂಕರಾಚಾರ್ಯರೂ ಈ ವಿಷಯದಲ್ಲಿ ಹೇಳಿದುದರಿಂದ, 'ಹಾವೇರಿನ್ಯಾಯ' ಮಾಡಿ ಡಾಕ್ಟರರು ಜನಿವಾರವೊಂದನ್ನು ಹಾಕಿಕೊಂಡಿರುವರು (ಸೇನಾಹ. ೧೦೫). [ಹಾವೇರಿ$_0$ + ನ್ಯಾಯ]

**ಹಾವ್ಮೆಕ್ಕೆ** 'ಪಾವುಮೆಕ್ಕೆ' ನೋ.

**ಹಾಸ$_1$** 'ಪಾಸ$_1$' ನೋ.

**ಹಾಸ$_2$** (ನಾ). ೧. ನಗು; ನಗೆ: ಹರಹಾಸಾವಯವಂಗಳಂತಿರಲ್ . . . ನಿರ್ಮಲ ದಿವ್ಯಮೌಕ್ತಿಕಶಿಲಾಲಿಂಗಂ ಚತುರ್ವಕ್ತ್ರಸುಂದರಮಲ್ಲಿರ್ದುದು ರತ್ನಪೀಠಘಟಿತಂ ದೇದೀಪ್ಯಮಾನಪ್ರಭಂ (ಕಾದಂಪೂ. ೬೫೭); ಮುಕುಳನನಿಮೀಳನಂಗಳ್ ವಿಕಾಸಹಾಸ ಪ್ರಬೋಧನೋನ್ಮೇಷಂಗಳ್ ಪ್ರಕಟಿಸುಗುಮೈಕ್ಯಮಂ ನಿರ್ವಿಕಲ್ಪದಿಂ ಗೌಣ ಮುಖ್ಯವೃತ್ತಿಕೃತಂಗಳ್ (ಕಾವ್ಯಾವ. ೯೧೪). ೨. ಉಲ್ಲಾಸ; ನಲಿವು; ಸಂತೋಷ. ೩. [ಕಾವ್ಯಮೀ] ಅಂಗವಿಕಾರಾದಿ ದರ್ಶನದಿಂದ ಉಂಟಾಗುವ ಚಿತ್ತವಿಕಾಸ: ಹಾಸ್ಯರಸದ ಸ್ಥಾಯಿಭಾವ: ರತಿ ಹಾಸ . . . ಶಮೆಯೆಂಬ ಕ್ರಮದಿಂ ಶೃಂಗಾರಾದಿ ನವರಸಕ್ಕೆ ಬೀಜಭೂತಂಗಳಾದ ಸ್ಥಾಯಿಭಾವಂಗಳೇ ದಕ್ಷಿಣಾದಿನಾಯಕ ಹೃದಯದಲ್ಲಿ ಸ್ಥಾಯಿಯಾಗಿರ್ದು (ವಿವೇಕ. ೧೮೦); ಕೆಳಗಿನ ಭಾವಲೋಕದಿಂದ ರೇಖಾಂಶಗಳಂತೆ ರತಿ ಹಾಸ ಶೋಕಾದಿ ಸ್ಥಾಯಿಭಾವಗಳು ಹೊರಡುತ್ತವೆ (ಸೌಂದಸ. ೧೯). [ಸಂ.]

**ಹಾಸಂಗಿ** 'ಪಾಸಂಗೆ' ನೋ.

**ಹಾಸಕ್ಕಿ** (ನಾ). ರಂಗೋಲಿಯ ಹಸೆ ಬರೆಯುವಾಗ ಇಡುವ ಚುಕ್ಕಿ: ಕೇಸರಿ ಬಣ್ಣದ ಕ್ಯಾವಿ, ಬಿಳಿಯ ಬಣ್ಣದ ಸುಣ್ಣ, ಹಾಸಕ್ಕಿ ಕುಸುರು ಬರೆಯಾರೆ (ಕನ್ನಜಾ. ೬೭). [ಹಾಸು$_3$ (< ಪಾಸು$_2$) + ಅಕ್ಕಿ$_1$]

**ಹಾಸಗಿ** 'ಪಾಸಂಗೆ' ನೋ.

**ಹಾಸಗೆಹಿಡಿ** 'ಹಾಸಿಗೆಹಿಡಿ' ನೋ.

**ಹಾಸರ** 'ಹೇಸರ' ನೋ.

**ಹಾಸರಗತ್ತೆ** 'ಹೇಸರಗಳ್ತೆ' ನೋ.

**ಹಾಸರೆ** 'ಪಾಸಱೆ' ನೋ.

**ಹಾಸರೆಗಲ್ಲು** 'ಪಾಸಱೆಗಲ್ಲು' ನೋ.

**ಹಾಸಲು** (ನಾ). ೧. ಪ್ರಯಾಣ, ಅಂಚೆ ಮುಂತಾದುವುಗಳ ವೆಚ್ಚ: ಮೊದಲು . . . ಪತ್ರ ಮುಟ್ಟತಕ್ಕ ಸ್ಥಳದ ಅಂತರದ ಮಾನದಿಂದ ಹಾಸಲು ಕೊಡಬೇಕಾಗುತ್ತಿತ್ತು (ಮುಂಬಯಿ. ೪-೮೩); ಹಾಸಲು, ಹಾಯಿಸಲು, ಹಾಯಿಸುವುದಕ್ಕೆ ಕೊಡಬೇಕಾದ ಸುಂಕ ಎಂದಿರಬಹುದು (ನಮ್ಮನು. ೧೯೯); ಹೋಗಿ ಬರುವ ಹಡಗಿನ ಹಾಸಲನ್ನು ಕೊಟ್ಟಾಗಿತ್ತು (ಆಪೂಪ. ೭). ೨. ಬೆಲೆ; ಕಿಮ್ಮತ್ತು: ಕಾಗದ್ದಾಗ ಏನ ಹಾಸಲ ಉಳದದ. ಗಂಟಿನಕಿಂತ ಬಡ್ಡೀನ ಜಾಸ್ತ ಆಗೇದ (ದೀಪಹ. I. ೧೮೧). [← ಅರ. ಹಾಸೀಲ್; ಮರಾ. ಹಾಶೀಲ್, ಹಶೀಲ್]

**ಹಾಸಱೆ** 'ಪಾಸಱೆ' ನೋ.

**ಹಾಸಱೆಗಲು** 'ಪಾಸಱೆಗಲ್ಲು' ನೋ.

**ಹಾಸಱೆಗಲ್ಲು** 'ಪಾಸಱೆಗಲ್ಲು' ನೋ.

**ಹಾಸಾದ** 'ಪಸಾದ' ನೋ.

**ಹಾಸಿಕೆ$_1$** 'ಪಾಸಿಕೆ' ನೋ.

**ಹಾಸಿಕೆ$_2$** (ನಾ). ನಗು; ಹಾಸ: (ಕಿ). [ಹಾಸ$_2$ + - ಇಕೆ]

**ಹಾಸಿಕ್ಕು** (ಕ್ರಿ). ಮಗ್ಗದ ನೂಲುಹಾಸನ್ನು ಸಿದ್ಧಪಡಿಸು: (ಕಿ). [ಹಾಸು$_3$ (< ಪಾಸು$_2$) + ಇಕ್ಕು]

**ಹಾಸಿಗ** (ನಾ). ನಗಿಸುವವನು; ಹಾಸ್ಯಗಾರ; ವಿದೂಷಕ: ಒಸೆದು ಪೌರಾಣ ಹಾಸಿಗರು ಮುಂತಾದಸಮಸದ್ಬುಧಜನರು ಮುಖ್ಯವಿನಿಯೋಗದೊಡ್ಡೋಲಗದಲ್ಲಿ ಶಶಿಮೌಳಿಯಂದದಿ ಸಮಸ್ತಪ್ರಭುವರನೆನಿಸಿ . . . ಇರ್ದನಾ ಖಿಳೇಶ (ನವಮೋ. ೩-೨೬). [ಹಾಸ$_2$ + - ಇಗ]

**ಹಾಸಿಗೆ** 'ಪಾಸುಗೆ$_1$' ನೋ.

**ಹಾಸಿಗೆಗಲ್ಲು** 'ಹಾಸುಗೆಗಲ್ಲು' ನೋ.

**ಹಾಸಿಗೆಮರ** (ಕ್ರಿ). ಒಂದು ಬಗೆಯ ಮರ: ಹಾಸಿಗೆಮರ, ಕಾಡುಅಶೋಕ (ಮೈಔಗಿ. ೪೪-೮೭೮). [ಹಾಸಿಗೆ$_1$ + ಮರ$_1$]

**ಹಾಸಿಗೆಹತ್ತು** (ಕ್ರಿ). ರೋಗದ ಕಾರಣದಿಂದ ಹಾಸಿಗೆಯಿಂದ ಮೇಲಕ್ಕೇಳದಂತಿರು,–ಮಲಗು: ಈ ಸ್ಥಿತಿಯಲ್ಲಿ ಅವಳಿಗೆ ಕಾಯಿಲೆಯಾಗಿ ಹಾಸಿಗೆ ಹತ್ತಿ ಮಲಗಲು (ಬಂಕಿಮ. ೧೩೨). [ಹಾಸಿಗೆ (< ಪಾಸುಗೆ$_1$) + ಹತ್ತು$_1$ (< ಪತ್ತು$_1$)]

**ಹಾಸಿಗೆಹಾವು** (ನಾ). ಹಾಸಿಗೆಯಲ್ಲಿ ಸೇರಿಕೊಂಡಿರುವ ಹಾವು,– ಸರ್ಪ.

ಹಾಸಿಗೆ ಹಾವಾಗು = (ಅಲಂ) ಶತ್ರುವಾಗು; ದ್ರೋಹಿಯಾಗು: ದುರ್ಗದ ತುರುಕ ಪ್ರಜೆಗಳೂ, ತುರುಕ ಅಧಿಕಾರಿಗಳೂ, ಹಾಸಿಗೆ ಹಾವಾಗಿ ತಮ್ಮ ದ್ರೋಹಿತನವನ್ನು ಮತವೈರಕ್ಕಿಂತಲೂ ಹೆಚ್ಚಾಗಿ ತೋರಿಸಿದರು (ಚಿತ್ರಪಾ. ೧೧೨). [ಹಾಸಿಗೆ (< ಪಾಸುಗೆ) + ಹಾವು (< ಪಾವು$_1$)]

**ಹಾಸಿಗೆಹಿಡಿ, ಹಾಸಗೆಹಿಡಿ** (ಕ್ರಿ). = ಹಾಸಿಗೆಹತ್ತು: ಸೀತಾರಾಮುವು ಹಾಸಿಗೆ ಹಿಡಿದಂದಿನಿಂದ ರಾಮಚಂದ್ರನು ಅವನ ಪಕ್ಕದಿಂದ ಅಲುಗಲಿಲ್ಲ (ಕಳಹು. ೮೯); ಈ ಬಾರಿ ವೆಂಕಪ್ಪಯ್ಯನವರ ಮನೆಯಲ್ಲಿ ಎಲ್ಲರೂ ಒಂದಲ್ಲ ಒಂದು ಕಾರಣದಿಂದ ಹಾಸಿಗೆಹಿಡಿದುಬಿಟ್ಟಿದ್ದರು (ವಿದ್ಯಾರ. ೨). **ಹಾಸಗೆಹಿಡಿ:** ಹಾಸಗೆಹಿಡಿದಳಾ ದಿನವೆ ಶಬರಿಯುಂ (ಶ್ರೀರಾಮಾ. ೨೭೬-೩೪೯). [ಹಾಸಿಗೆ (< ಪಾಸುಗೆ$_1$) + ಹಿಡಿ$_1$ (< ಪಿಡಿ$_1$)]

**ಹಾಸಿಗೆಹುಣ್ಣು** (ನಾ). "ಯಾವಾಗಲೂ ಮಲಗಿಯೇ ಇರುವುದರಿಂದ ಆದ ಹುಣ್ಣು: ಹಾಸಿಗೆಹುಣ್ಣು" (Bed Sore. ೩೦೩೮). [ಹಾಸಿಗೆ (< ಪಾಸುಗೆ$_1$) + ಹುಣ್ಣು (< ಪುಣ್)]

**ಹಾಸಿಸು** (ಕ್ರಿ). ಗೇಲಿಮಾಡು; ಚೇಷ್ಟೆ ಮಾಡು: ಮೃತ್ಯುರಹಿತನ ಧ್ಯಾನದೊಳಗೆ ಬರುತಿರಲೋರ್ವ ಕುತ್ತದಿಂ ಮೃತವಾಗೆ ಹೂಣುತಿರಲಲ್ಲೊಬ್ಬನುತ್ತಮ ಸುಶಿವಭಕ್ತ ಸಾವರೇಯೆಂದು ಹಾಸಿಸಲವಂಗಸುವಿತ್ತನು (ಪ್ರಬುಪು. ೭-೧೫೩); ಇಂತೆಂದು ನುಡಿಯಲು ಗಜರಿದನು ಹಾಸಿಸುವರೆಂದೆನುತ (ಸುದ್ದಾಮ. ೫-೧೬). [ಹಾಸ$_2$ + - ಇಸು$_3$]

**ಹಾಸು$_1$** 'ಪಾಸು$_1$' ನೋ.

**ಹಾಸು$_2$** 'ಪಾಯಿಸು' ನೋ.

**ಹಾಸು$_3$** 'ಪಾಸು$_2$' ನೋ.

**ಹಾಸು$_4$** 'ಪಾಸ$_1$' ನೋ.

**ಹಾಸುಎಳೆ** 'ಹಾಸೆಳೆ' ನೋ.

**ಹಾಸುಂಬೆ** (ನಾ). ಪಾಚಿ; ಪಾವಸೆ: ಹಾಸುಂಬೆ ಹಬ್ಬಿದ ಕಲ್ಲುಗೋಡೆಯು ಆ ಕಟ್ಟಡಗಳಲ್ಲಾಗಲಿ . . . ಒಂದು ನರಪಿಳ್ಳೆಯಾದರೂ ಕಾಣುತ್ತಿರಲಿಲ್ಲ (ಮಲಮ. ೭೧೧). [< ಪಾವಸೆ]

**ಹಾಸುಕಲ್ಲು** 'ಪಾಸುಗಲ್' ನೋ.

**ಹಾಸುಗಲ್ಲು** 'ಪಾಸುಗಲ್' ನೋ.

**ಹಾಸುಗಳೆ** (ಕ್ರಿ). (ನಾಯಿಯ ಕೊರಳಿಗೆ ಕಟ್ಟಿರುವ) ಪಟ್ಟಿಯನ್ನು ಬಿಚ್ಚು,– ಸಡಿಲಿಸು: "ನೆಱೆ ಭಾವಿಸಲು ಹಾಸುಗಳೆಯಲ್ಲಿ ತಿವಿ ಶಬ್ದ" (ಶಬ್ದಮಂ. ೧೧೦). [ಹಾಸು$_4$ (< ಪಾಸ$_1$) + ಕಳೆ$_1$]

**ಹಾಸುಗಾಯ್, ಹಾಸುಗಾಯಿ** (ನಾ). ಉದ್ದವಾಗಿ ಸೀಳಿರುವ ಕಾಯಿ (?): ಅದಱೊಳಗೆ ತಾಳಿಸಿಕೊಂಡು ನೀರುಳ್ಳಿಗಳನು ಕಗ್ಗುಂಬಳದ ಹಾಸುಗಾಯ್ಗ[ಪಾಠಾಂ. ಹಾಸುಗ]ಳನು ತಂದಿಳಿಪಿ ಸಮನಾದ ಕಂದಲ ಮುಚ್ಚಿ . . . ಪಾಕಂ ಮಾಡೆ (ಸೂಪಶಾ. ೫-೧೬). **ಹಾಸುಗಾಯಿ:** ಬದನೆ ಹೀರೆಯ ಹಾಸುಗಾಯ . . . ಮೃದುವಾದ ತಾಳಿಲನಿಕ್ಕಿ (ಜ್ಞಾನಚಿ. ೩೯-೧೧೫). [ಹಾಸು$_3$ (< ಪಾಸು$_2$) + ಕಾಯ್$_4$]

**ಹಾಸುಗಾಯಿ** 'ಹಾಸುಗಾಯ್' ನೋ.

**ಹಾಸುಗೆ** 'ಪಾಸುಗೆ$_1$' ನೋ.

**ಹಾಸುಗೆಗಲ್ಲು, ಹಾಸಿಗೆಗಲ್ಲು** (ನಾ). ಉದ್ದಕ್ಕೆ ಚಾಚಿರುವ ಕಲ್ಲು; ಹಾಸುಗಲ್ಲು: ಬಸವೇಶ್ವರದೇವಸ್ಥಾನದ ಯಾವುದಾದರೂ ಒಂದು ಕಂಬ ಒರಗು ದಿಂಬಾಗಿರುತ್ತದೆ. ಹಗಲಾದರೆ, ಇರುಳಾದರೆ, ಇವನಿಗೇ ಮೀಸಲಾಗಿರುವ ಹಾಸುಗೆಗಲ್ಲು (ಬೆಳುಮು. ೩). **ಹಾಸಿಗೆಗಲ್ಲು:** ಇಲ್ಲಿಂದ ಹಾಸಿಗೆಗಲ್ಲುಗಳು ಪರವೂರಿಗೆ ಹೋಗುತ್ತವೆ (ಗ್ರಾಟಬ್ರಿ. ೫೦). [ಹಾಸುಗೆ (< ಪಾಸುಗೆ$_1$) + ಕಲ್ಲು$_1$ (< ಕಲ್$_1$)]

**ಹಾಸುಗೆಹಿಡಿ** 'ಪಾಸುಗೆ$_1$' ಪರಾ.

**ಹಾಸುಗೊಳ್** (ಕ್ರಿ). ಹಗ್ಗದಿಂದ ಕಟ್ಟಿಸಿಕೊಳ್ಳು: ಹಾಸುಗೊಂಡ ನಾಯಂತೆ ಸಿಡಿಮಿಡಿಗೊಂಡು (ಧರ್ಮಾಮೃ. ೧-೧೭೮). [ಹಾಸು$_4$ (< ಪಾಸ$_1$) + ಕೊಳ್$_1$]

**ಹಾಸುಗೋಲ್, ಹಾಸುಗೋಲು** (ನಾ). ಓಟಕ್ಕೆ ತಡೆಯಾಗುವಂತೆ (ನಾಯಿ ಮುಂತಾದ) ಪ್ರಾಣಿಯ ಕೊರಳಿಗೆ ಕಟ್ಟುವ ಕೋಲು; "ಕೊಡತ, ನಾಯ ಕೊರಳಿಗೆ ಕಟ್ಟಿದ ಕೋಲು" (ಪ್ರಪಣ್ಣ). **ಹಾಸುಗೋಲು:** "ಚಳಿ ಹಾಸುಗೋಲು ಪುಣ್ಣೋವುಗಳೊಳಂ ಕೊಡತ" (ಶಬ್ದಮಂ. ೯೮). [ಹಾಸು$_4$ (< ಪಾಸ$_1$) + ಕೋಲ್$_1$]

**ಹಾಸುಗೋಲು** 'ಹಾಸುಗೋಲ್' ನೋ.

**ಹಾಸುನರಿ** (ನಾ). ಮಗ್ಗದ ಹಾಸನ್ನು ಸಿದ್ಧಪಡಿಸಲು ಉಪಯೋಗಿಸುವ ಒಂದು ಬಗೆಯ ಸಲಕರಣೆ: (ಕಿ). [ಹಾಸು$_3$ (< ಪಾಸು$_2$) + ನರಿ$_1$]

**ಹಾಸುನೂಲು** (ನಾ). ಮಗ್ಗದಲ್ಲಿ ಉದ್ದಕ್ಕೆ ಹಾಕಿರುವ ಎಳೆಗಳ ಸಾಲು: ನೀಟವಾಗಿ ಸಮವಾಗಿರುವ ಹಾಸುನೂಲುಗಳು ಹೊಕ್ಕುನೂಲುಗಳಿಗೆ ಆಧಾರವಾಗಿರುವ ಹಾಗೆ ಸತ್ಪುರುಷರಿಗೆ ಸತ್ಪುರುಷರೇ ಆಧಾರವಾಗಿರುವರು (ಕೃವಾಳು. ೫೯); ಆ ಮನೆಯ ಮುದುಕಿ ಮತ್ತು ಅವಳ ಹಿರಿಯ ಮೊಮ್ಮಗಳು ಮಗ್ಗದ ಹಾಸುನೂಲನ್ನು ಜೋಡಿಸುತ್ತಿದ್ದರು (ಪುನರು. ೨೮೭). [ಹಾಸು$_3$ (< ಪಾಸು$_2$) + ನೂಲು$_2$ (< ನೂಲ್$_2$)]

**ಹಾಸುಬಂಡೆ** (ನಾ). ಅಗಲವಾದ ಚಪ್ಪಟೆಕಲ್ಲು; ಹಾಸುಗಲ್ಲು: ಪೀಂಚಲು ಒಂದು ಹಾಸುಬಂಡೆಗೆ ಹಾರಿ . . . ತಳಾಲೆಯನ್ನು ತಂದಳು (ಮಲೆಮ. ೧೭೦). [ಹಾಸು$_3$ (< ಪಾಸು$_2$) + ಬಂಡೆ$_1$]

**ಹಾಸುಮಂಚ** 'ಪಾಸುವಂಚ' ನೋ.

**ಹಾಸುಮಡಿ** (ನಾ). (ನಡೆಮಡಿಯಂತೆ ನೆಲಕ್ಕೆ) ಹಾಸಲು ಬಳಸುವ ವಸ್ತ್ರ: ಈ ಹೊನ್ನಿನ ಹಾಸುಮಡಿ, ಬೆಳ್ಳಿಯ ಹೂಮಾಲೆ, ಬಂಗಾರದ ಹೊಮ್ಮುಗುಳಿನ ಮಾಲೆ ಇವನ್ನು ಅಕ್ಕನ ಸುಮ್ಮಾನಕ್ಕೆ ಇರಲೆಂದು ತಮ್ಮಂದಿರು ಕಳುಹಿದರೊ? (ಮಾಮಲ್ಲಿ. ೫೧). [ಹಾಸು$_3$ (< ಪಾಸು$_2$) + ಮಡಿ$_2$]

**ಹಾಸುಮಣೆ** 'ಪಾಸುಮಣೆ' ನೋ.

**ಹಾಸುವಲಗೆ, ಹಾಸುಹಲಗೆ** (ನಾ). ಅಗಲವಾದ ಹಲಗೆ: ಆ ವಿಶ್ವಕರ್ಮನಿಂದಂ ಭೂಮಿ ತಾನೇ ವರೂಥಮಾಯ್ತಾಸುಗಳ್ ತಾರೆಗಳ್ ನಾನಾ ಸಮುದ್ರಂಗಳಚ್ಛಾದುವಾ ವಿಂಧ್ಯಗಿರಿ ಹಾಸುವಲಗೆಯಾಯ್ತು (ಚಿಬಪು. ೪೧-೪೨). **ಹಾಸುಹಲಗೆ:** ವಿಂಧ್ಯ ಹಿಮಗಿರಿ ಹಾಸುಹಲಗೆಗಳಾದವಚ್ಚು ಮಹಾಸಮುದ್ರವೆ ಆಯ್ತು (ಕುವ್ಯಾಕ. ೭-೩). [ಹಾಸು$_3$ (< ಪಾಸು$_2$) + ಪಲಗೆ]

**ಹಾಸುವಲೆ** 'ಪಾಸುಂಬಲೆ' ನೋ.

**ಹಾಸುಹಲಗೆ** 'ಹಾಸುವಲಗೆ' ನೋ.

**ಹಾಸುಹೊಕ್ಕು$_1$** 'ಪಾಸು$_2$' ಪರಾ.

**ಹಾಸುಹೊಕ್ಕು$_2$** 'ಪಾಸುಂಪೊಕ್ಕುಂ' ನೋ.

**ಹಾಸುಹೊಯ್ಯು** (ಕ್ರಿ). ೧. ಮಗ್ಗದ ಹಾಸನ್ನು ಸಿದ್ಧಗೊಳಿಸು: (ಕ). ೨. ಅತ್ತಿತ್ತ ಚಲಿಸು; ಶತಪಥಹಾಕು: ಗೌಡರು ಗುಡಿಯ ತುಂಬ ಹಾಸುಹೊಯ್ಯತೊಡಗಿದರು (ಗ್ರಾಮಾಯ. ೩೬). ೩. ಮಗುಚಿ ಹಾಕು; ತಿರುವು: ಜಯಂತನು ತನ್ನ ಸ್ಮರಣೆಯ ಹಾಸುಹೊಯ್ಯಹತ್ತಿದನು (ಜಯಂತ. ೯೯). [ಹಾಸು$_3$ (< ಪಾಸು$_2$) + ಹೊಯ್ಯು$_2$ (< ಪೊಯ್$_2$)]

**ಹಾಸೆಳೆ, ಹಾಸುವಳೆ** (ನಾ). = ಹಾಸುನೂಲು: ಹಾಸೆಳೆಯನ್ನು ಸರಿಪಡಿಸಲಾಗದುದರಿಂದ ಅವಳು ಉರಿದು ಬೀಳುತ್ತಿದ್ದಳು (ಪುನರು. ೨೬೨). **ಹಾಸುವಳೆ:** ಆ ನೇಯ್ಗೆಯ ಬಟ್ಟೆಗಳಲ್ಲಿ ಕರ್ಣರೇಖೆಗಳು ಕಂಡುಬರುವುದಿಲ್ಲ. ಹೋಗುವಳೆಗಳು ೩ ಅಥವಾ ೪ ಹಾಸುವಳೆಗಳ ಕೆಳಗಾಗಲೀ ಮೇಲಾಗಲೀ ತೂರಿಹೋಗುತ್ತವೆ (ಗೃಹವಿ. ೭೪). [ಹಾಸು$_3$ (< ಪಾಸು$_2$) + ಎಳೆ$_2$ (< ಎಟ್$_2$)]

**ಹಾಸ್ಟಲು** 'ಹಾಸ್ಟೆಲ್ಲು' ನೋ.

**ಹಾಸ್ಟೆಲು** 'ಹಾಸ್ಟೆಲ್ಲು' ನೋ.

**ಹಾಸ್ಟೆಲ್ಲು, ಹಾಸ್ಟಲು, ಹಾಸ್ಟೆಲು** (ನಾ). ವಿದ್ಯಾರ್ಥಿಗಳಿಗೆ ಅಥವಾ ಇತರ ವಿಶೇಷವರ್ಗದವರಿಗೆ ಊಟ, ವಸತಿಗಳನ್ನು ಕೊಡುವ ಮನೆ; ವಿದ್ಯಾರ್ಥಿನಿಲಯ: ಸರೋಜಳನ್ನು . . . ಚಿಕ್ಕಪ್ಪನ ಮನೆಯಲ್ಲಿ ಬಿಡಬಹುದೆಂದೋ ಹಾಸ್ಟೆಲ್ಲಿನಲ್ಲಿ ಇಡಬಹುದೆಂದೋ ನಾಗರಾಜ ಹೇಳಿದ್ದನಷ್ಟೇ (ಮಹಾಗ. ೩೫೫). **ಹಾಸ್ಟಲು:** ಮೈಸೂರಿನ ಕಾಲೇಜುವಿದ್ಯಾರ್ಥಿನಿಯರ ಹಾಸ್ಟಲಿಗೆ ಸೇರಿಸಿದರು (ದೂರಸ. ೪೨). **ಹಾಸ್ಟೆಲು:** ನಮ್ಮ ಹುಡುಗರಿಗೂ ವಿದ್ಯಾಭ್ಯಾಸಕ್ಕೆ ಅನುಕೂಲವಾಗಲಿ ಅಂತ ಹಾಸ್ಟೆಲು ಇಟ್ಟಾರ (ನೀನಮು. ೧೫೪); ನಿತ್ಯ ವಿದ್ಯಾರ್ಥಿಗಳು . . . ಹಾಸ್ಟೆಲನ್ನು ತೊಳೆದು ಶುಭ್ರವಾಗಿಡಬೇಕು (ಹೊಸಕ್ಕ. ೨೪೩). [← ಇಂ. Hostel]

**ಹಾಸ್ತಿಕ** (ನಾ). ೧. ಆನೆಯನ್ನು ನಡೆಸುವವನು; ಮಾವಟಿಗ: ಆಗಳದಱ ಸಿರಿಯನರಸಂ ಭೀಮರಥನೊಳ್ ನುಡಿಯುತ್ತುಂ ಹಾಸ್ತಿಕಪ್ರಾಯಬಲಂ ಬರುತುಮಿರೆ (ಚಂದ್ರಪು. ೧೦-೪೬ ವ). ೨. ಆನೆಗಳ ಹಿಂಡು,— ಗುಂಪು: ''ಕರಿಬೃಂದಂ ಗಜತೆ ಹಾಸ್ತಿಕಂ ತಾನಕ್ಕುಂ'' (ವಸ್ತುಕೋ. ೮೭-೩೨); ಚಿಲಾತಾವರ್ತರೆಂಬಿರ್ವರ್ ಮ್ಲೇಚ್ಛರಾಜರ್ ಧನುರ್ಧರಪ್ರಾಯಮುಮಶ್ವೀಯಬಹಳಮುಂ ಹಾಸ್ತಿಕಸಾಧನಮುಮಪ್ಪ ತಮ್ಮ ಬಲಮನೊಂದು ಮಾಡಿ (ಆದಿಪು. ೧೩-೫೭ ವ). [ಸಂ.]

**ಹಾಸ್ಯ** (ನಾ). ೧. ನಲಿವು; ಉಲ್ಲಾಸ; ಸಂತೋಷ: ಪೂರ್ವರತಿ ಹಾಸ್ಯ ಜುಗುಪ್ಸೆ . . . ಕ್ರೋಧಮೆನೆ ತೋರ್ವ ಭಾವಮದಕ್ಕು (ಮಂಗರಾ. ೨೨-೧); ಸರಸಹಾಸ್ಯದ ಹಾಸಕದ ವಹಣಗಳ ವೈಸಿಕದ . . . ನವಶಾಬರಿಯರ್ಕೆದಿದರರಸ ಕೇಳ್ ಮುನಿಮೃಗವನಾಂತರವ (ತೊರರಾ. ೧-೫-೪೦). ೨. ನಗೆಯನ್ನುಂಟುಮಾಡುವಿಕೆ; ತಮಾಷೆ; ವಿನೋದ: ಸಮರವಿಶ್ರಾಂತಸೈನಿಕರ ಪ್ರದರ್ಶನದ ಘೋಷದಿಂ, ಜಯಗಾನದಿಂ ಹಾಸ್ಯ ಪರಿಹಾಸ್ಯಶಬ್ದದಿಂ . . . ರಣಶಿಬಿರಮೆಸೆದತ್ತು (ಚಿತ್ರಾಂಗ. ೧೮-೪೭೧); ಹಾಸ್ಯದಲ್ಲಿ ನಗೆಯು ಪುಷ್ಪದಲ್ಲಿ ಪರಿಮಳ ಬೆರೆದಂತೆ (ಕನ್ನಜಾ. ೪೯). ೩. ಕುಚೋದ್ಯ; ಗೇಲಿ; **ಅಣಕ:** ಒಮ್ಮೊಮ್ಮೆ ಹೆಣ್ಣು ಹೊಯ್ಮಾಲಿಯಾಗಿ ಒಣಸೋಗು ಮಾಡಿ, ಹಾಸ್ಯಕ್ಕೆ ಗುರಿಯಾಗುವುದೂ ಉಂಟು (ಕನ್ನಜಾ. ೫೯). ೪. [ಕಾವ್ಯಮೀ] ನಾಟಕ ಅಥವಾ ಕಾವ್ಯದಲ್ಲಿ ಬರುವ ನವರಸಗಳಲ್ಲಿ ಒಂದು: ''ಶೃಂಗಾರಃ, ಹಾಸ್ಯಃ, ಕರುಣಃ, ರೌದ್ರಃ, ವೀರಃ, ಭಯಾನಕಃ, ಬೀಭತ್ಸಃ, ಅದ್ಭುತಃ, ಶಾಂತಃ – ಈ ೯ ರಸಂಗಳ್'' (ಪಲಾಯು. ೧೬-೯೨); ಕಾರುಣ್ಯಂ ಹಾಸ್ಯಂ ಶೃಂಗಾರಮಿನಿತುಮೊಳಮಕ್ಕೆ ವೈದರ್ಭಿ . . . ವೀರರಸಂಗಳ್ಗೆ ಪೇಟ್ಗೆ ಪಾಂಚಾಳಿಕೆಯಂ (ಕಾವ್ಯಾವ. ೭೮೮); ವರ ಶೃಂಗಾರಂ ಹಾಸ್ಯಂ ಕರುಣಂ ವೀರಂ . . . ಭೀಭತ್ಸ ರಸಂಗಳಿವೆಂಟು ಮತ್ತೆ ನುತ ಶಾಂತರಸಂ (ರಸರ. ೧-೧೧). ೫. [ಜೈನ] ಒಂಭತ್ತು ವಿಧವಾದ ನೋಕಷಾಯ ಅಥವಾ ಮೋಹನೀಯ ಕರ್ಮಭೇದಗಳಲ್ಲಿ ಒಂದು; ''ನಗೆ, ತಮಾಷೆಗಳನ್ನುಂಟು ಮಾಡುವ ಕರ್ಮ'' (ಜೈನಕೋ. ೨೮೭): ಕ್ರಮಕ್ರಮದೊಳ್ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ ಪುರಾತನಸತ್ಕರ್ಮದೊಡನೆ ಹಾಸ್ಯರತ್ಯರತಿಶೋಕ ಭಯ ಜುಗುಪ್ಸಾಭಿಧಾನ ನವನೋಕಷಾಯ ಷಟ್ಕರ್ಮಮುಮಂ ಘಾತಿಸಿ (ಆದಿಪು. ೧೦- ೧೪ ವ). [ಸಂ.]

**ಹಾಸ್ಯಂಗೆಯ್** (ಕ್ರಿ). ಅಣಕಿಸು; ಗೇಲಿಮಾಡು: ಲಂಬಕರ್ಣಂ ಆ ನರಿ ದೂರುಭೀರುವಾದುದರ್ಕೆ ಹಾಸ್ಯಂಗೆಯ್ವುದು (ಪಂಚತಂ. ೪೧-೨೦). [ಹಾಸ್ಯ + ಕೆಯ್$_1$]

**ಹಾಸ್ಯಕ** (ನಾ). ತಮಾಷೆಗಾರ; ವಿದೂಷಕ: ಗಾಯಕ ವೈಣಿಕ ಮಾರ್ದಂಗಿಕ ಜಟ್ಟಿ ಹಾಸ್ಯಕರೂ . . . ಊರೊಳಿರ್ಪ ಪರಿಜನ ಪಾರ್ವರೂ ನಡೆತಂದು . . . ಕುಳಿತರು (ಕಗವಿ. ೭೫ ವಿಷ್ಣುಪು). [ಸಂ.]

**ಹಾಸ್ಯಗಾತಿ** (ನಾ). ನಗಿಸುವವಳು: ಅವಳು ಒಳ್ಳೆಯ ಹಾಸ್ಯಗಾತಿ (ರೂಢಿ). [ಹಾಸ್ಯ + - ಕಾತಿ$_1$]

**ಹಾಸ್ಯಗಾರ** (ನಾ). ೧. ನಗಿಸುವವನು: ಹಾಸ್ಯಗಾರನಾದ ಅವನು ಇದ್ದರೆ ವೇಳೆ ಸರಿಯುವುದೇ ತಿಳಿಯುವುದಿಲ್ಲ (ರೂಢಿ). ೨. ಯಕ್ಷಗಾನ, ಬಯಲಾಟಗಳಲ್ಲಿ ನಗಿಸುವ ಪಾತ್ರವನ್ನು ವಹಿಸುವವನು: ರಂಗಸ್ಥಳದ ಸಾಹಿತ್ಯದಲ್ಲಿ ಹಾಸ್ಯಗಾರ ಇಲ್ಲವೆ ಹನುಮಂತನಾಯಕನ ಬಗ್ಗೆ ಒಂದೆರಡು ಮಾತುಗಳನ್ನು ನಾನು ಹೇಳಬೇಕಾಗುತ್ತದೆ (ಯಕ್ಷಬ. ೧೪೮). ೩. ಗೇಲಿಮಾಡುವವನು; ಕುಚೋದ್ಯ ಮಾಡುವವನು: ''ಪರಿಹಾಸಕ – ಹಾಸ್ಯಗಾರ'' (ಗಂಗಾಮ. ೨೦೦). [ಹಾಸ್ಯ + - ಗಾರ (< - ಕಾಱ)]

**ಹಾಸ್ಯಚಟಾಕಿ** (ನಾ). (ಆಲಂ) ನಗಿಸುವ ಚುಟುಕುಮಾತು: ನನ್ನೆದೆಮಟ್ಟದ ಎತ್ತರದೆದುರಿನ ಮೇಜಿನ ಮೇಲೂರಿ ಕೈಯ ಹಾಸ್ಯಚಟಾಕಿಯ ಹಾರಿಸುತಾ ದಿನ ಗುರುತಿಸುತಿದ್ದೆ ಹಾಜರಿಯ (ಇಂಚಾಪ. ೩೯-೮೩). [ಹಾಸ್ಯ + ಚಟಾಕಿ]

**ಹಾಸ್ಯದೃಷ್ಟಿ** (ನಾ). ೧. ಹಾಸ್ಯ ಮಾಡುವ ಮನೋಧರ್ಮ. ೨. [ನಾಟ್ಯ] ನೋಟದ ಅಭಿನಯಗಳಲ್ಲಿ ಒಂದು; ☞ ''ಕರಿಗುಡ್ಡೆಯನ್ನು ಸ್ವಲ್ಪ ಒಳಕ್ಕೆ ಮಾಡಿ ವಿಚಿತ್ರವಾಗಿ ಸುತ್ತಿಸಿ ಮೆಲ್ಲನೆ ಸುಮಾರಾಗಿ ಮತ್ತು ಜಾಗ್ರತೆಯಾಗಿ ಕಣ್ಣನ್ನು ಮಿಟುಕಿಸುವುದು'' (ಲಾಸ್ಯರಂ. ೨೬೭ ಗದ್ಯಾನುವಾದ): ಇನಿತೊಳಗೆಟಗಿ ವಿಚಿತ್ರ ಮನುನಕರಿಸಿಯೆ ತಿರುಗುವಾಲಿಯಾಗುತ ಮಿಗೆ ಮೆಲ್ಲನೆ ಮಧ್ಯ ತೀವ್ರ ಕ್ರಮದಂದು ನಿಮೇಷಮನೆಸಗೆ ಹಾಸ್ಯದೃಷ್ಟಿ (ಲಾಸ್ಯರಂ. ೩-೧೧). [ಸಂ.]

**ಹಾಸ್ಯನಾಟಕ** (ನಾ). ಹಾಸ್ಯಪ್ರಧಾನವಾದ ನಾಟಕ; ನಗೆನಾಟಕ: ಪ್ರಹಸನ: ಉಳಿದ ಹಾಸ್ಯನಾಟಕಗಳಲ್ಲಿಯಂತೆಯೆ, ಇವರ ನಾಟಕದಲ್ಲಿಯೂ ನಗೆಗೀಡಾದ ಗುಣವೆಂದರೆ ಸಾಮಾಜಿಕಪ್ರತಿಷ್ಠೆ (ನಡೆದಾ. I. ೨೧೮). [ಸಂ.]

**ಹಾಸ್ಯಪಾತ್ರ** (ನಾ). ನಾಟಕಗಳಲ್ಲಿ ನಗಿಸುವುದಕ್ಕಾಗಿಯೇ ಇರುವ ಪಾತ್ರ: ಇವೆಲ್ಲ ತನ್ನ ನಾಟಕಗಳಲ್ಲಿಯ ಹಾಸ್ಯಪಾತ್ರಗಳ ನೆನಪು ತಂದುಕೊಡುತ್ತಿದ್ದವು (ಗಂಮಾಯ. ೩೯). [ಸಂ.]

**ಹಾಸ್ಯಭಾರ** (ನಾ). ಅತಿಶಯವಾದ ಗೇಲಿ,– ಅಣಕ; ನಗೆಗೇಡು: ಕಣ್ಬರಿ ಪುತ್ರಮಿತ್ರ ವನಿತಾಜನದೊಳ್ ಸಮಸಂದು ರಾಜ್ಯಮಂ ಜಾಣ್ಪಡೆ ದುಃಖಹೇತುವನಿದಂ ನೆಱೆ ತಾಳ್ದಿ . . . ಅಟ್ಟುಣ್ಬ ವರಂಗೆ ಸಂಗಡಿಗನಪ್ಪೆನೆ ತಪ್ಪೆನೆ ಹಾಸ್ಯಭಾರಮಂ (ಚಂದ್ರಪ್ರ. ೨-೪೧). [ಸಂ.]

**ಹಾಸ್ಯರಸ** (ನಾ). [ಕಾವ್ಯಮಿ] ನಾಟಕ ಅಥವಾ ಕಾವ್ಯದಲ್ಲಿ ಬರುವ ನವರಸಗಳಲ್ಲಿ ಒಂದು: ಉತ್ಸವದಿಂದ ಹಾಸ್ಯರಸಮಾ ಮಧುರೋಕ್ತಿಗಳಿಂದಮಲ್ತೆ . . . ಊರ್ಜಿತೋಕ್ತಿಗಳಿನಕ್ಕತಿರೌದ್ರರಸಂ ರಸಾವಹಂ (ಕವಿರಾ. ೨-೧೦೦); ಹಾಸ್ಯರಸವನ್ನು ಬೇರೆ ಬೇರೆ ಸ್ವಭಾವದ ಜನರು ಅನುಭವಿಸುವಾಗ ಅವರ ಶರೀರದಲ್ಲಿ ಉಂಟಾಗುವ ವೈಪರೀತ್ಯಗಳನ್ನು ಮಾತ್ರ ಇವು ತಿಳಿಸುವುದೇ ಹೊರತು ಹಾಸ್ಯರಸದ ಒಳರಹಸ್ಯವೇನೆಂಬುದರ ವಿಚಾರ ಇವುಗಳಿಂದ ಮುಂದುವರಿಯುವುದಿಲ್ಲ (ಭಾರಮಿಮಾ. ೪೦೩). [ಸಂ.]

**ಹಾಸ್ಯವಾಕ್ಕು** (ನಾ). [ಕಾವ್ಯಮಿ] ಕಾವ್ಯದ ಹದಿನೆಂಟು ಬಗೆಯ ದೋಷಗಳಲ್ಲಿ ಒಂದು: ಅಸದರ್ಥಂ ವಿಪರೀತಕಲ್ಪನೆಯಭವ್ಯಂ . . . ದುರ್ಲಕ್ಷಣಂ ಹಾಸ್ಯ ವಾಗ್ವಿಷಮಾಸೌಮ್ಯಮಮೋಜೆಯೆಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೪೭ ಅಡಿವದ್ಯ). [ಸಂ. ಹಾಸ್ಯವಾಚ್]

**ಹಾಸ್ಯಶೀಲ** (ನಾ). ೧. ನಗಿಸುವ ಗುಣ,– ಸ್ವಭಾವ: ಅಸಾಧಾರಣ ಹಾಸ್ಯಶೀಲ ದೈವದತ್ತವಾಗಿ ಅವನಲ್ಲಿ ಮೈಗೂಡಿಕೊಂಡಿತ್ತು (ಪುನರು. ೪೧೪). ೨. ನಗಿಸುವ ಗುಣವನ್ನುಳ್ಳವನು; ಹಾಸ್ಯಗಾರ: ಆ ಹಾಸ್ಯಶೀಲರಾದ ಉಪಾಧ್ಯಾಯರನ್ನೇ ಎಲ್ಲಾ ವಿದ್ಯಾರ್ಥಿಗಳು ಹೆಚ್ಚು ಬಯಸುತ್ತಿದ್ದರು (ರೂಢಿ). [ಸಂ.]

**ಹಾಸ್ಯಾಸ್ಪದ** (ನಾ). ನಗೆಗೀಡಾದುದು; ಅಣಕಕ್ಕೆ ಗುರಿಯಾದುದು: ನಮ್ಮ ಚಿತ್ರಗಳಲ್ಲಿ ಹಾಸ್ಯ! ಇಲ್ಲದೆ ಇರುವಾಗ ಇದೆಯೆಂದು ಸಾಧಿಸುವುದು ಸಹ ತೀರಾ ಹಾಸ್ಯಾಸ್ಪದವಾದದ್ದೇ (ನಾಡಿಗೇ. ೧೮೧). [ಸಂ.]

**ಹಾಹಾ** 'ಹಾ' ಪರಾ.

**ಹಾಹಾಕಾರ** (ನಾ). ೧. ಗೋಳಾಟ ಅಥವಾ ರೋದನದ ಕೂಗು: ಅಂಬೋಧಿ ಘೋಷದಿಂದೆದ್ದು ಹಾಹಾಕಾರದಿಂ ಭಯಂಗೊಂಡೊರಲುತಿರ್ದುದಾಸ್ಥಾನಂ (ಜೈಮಿಭಾ. ೨೭-೬೩); ತೃಷೆಯಿಂದ ಬಾಯ್ಬಿಡುವ ಹಕ್ಕಿಗಳ ಹಾಹಾಕಾರ (ಚಂದ್ರಮಾ. ೪೮-೫): ಜನಸಾಮಾನ್ಯರಲ್ಲಿ ಹಾಹಾಕಾರವುಂಟಾಯಿತು (ಕರ್ನಾಕ. ೩೭). ೨. ಹೋಮಮಂತ್ರಾಕ್ಷರದ ಕಡೆಯ 'ಸ್ವಾಹಾ ಸ್ವಾಹಾ' ಎಂಬುದರಿಂದ ಕೇಳಿ ಬರುವ 'ಹಾಹಾ' ಎಂಬ ಶಬ್ದ. ೧, ೨: ಹಾಹಾಕಾರಂ ಹೋಮಮಂತ್ರಾಕ್ಷರಾಂತ್ಯದೊಳ . . . ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಜಗವಿ. ೨-೧ ವ). [ಸಂ.]

**ಹಾಹಾಕ್ರಂದ** (ನಾ). = ಹಾಹಾಕಾರ ೧: ಭೋಂಕೆನೆ ಹಾಹಾಕ್ರಂದಮೊಗೆದುದಂತಃಪುರದೊಳ್ (ಅಜಿಪು. ೧೦-೩೩). [ಸಂ.]

**ಹಾಹಾಕ್ರಂದನ** (ನಾ). = ಹಾಹಾಕಾರ ೧: ರಘುರಾಮನಂಗನೆಯನೆನ್ನಂ ಸೀತೆಯಂ ಪಾತಕಂ ದೊರೆಗೆಟ್ಟುಯ್ಯುಪನೇವೆನೆಂದು ಸತಿ ಹಾಹಾಕ್ರಂದನಂ ಮಾಡಿದಳ್ (ಪಂರಾಮಾ. ೯-೧೪೩). [ಸಂ.]

**ಹಾಹಾಕ್ರಂದನಂಗೆಯ್** (ಕ್ರಿ). ಅಳು; ಪ್ರಲಾಪಿಸು; ಹಾಹಾಕಾರಮಾಡು: ಪೋದಂ ಬೞಿಕಾತನಿರ್ದೆಡೆಗೆ ಹಾಹಾಕ್ರಂದನಂಗೆಯ್ಯುತಂ (ಕಾದಂಪೂ. ೯೧೪). [ಹಾಹಾಕ್ರಂದನ + ಕೆಯ್$_1$]

**ಹಾಹಾಭೂತಚೇತಸ** (ನಾ). ಪ್ರಲಾಪಿಸುವವನು (?); ಹಾಹಾಕಾರ ಮಾಡುವವನು(?): ತಂದ ಕುಱಿಯನಂದಿರುಳೊಳ್ಕೊಂದು ತಿಂದಾತಂ ಪಸಿದು ದೆಸೆದೆಸೆಗವ್ವಳಿಸಿ ಹಾಹಾಭೂತಚೇತಸನಾಗಿರ್ದು ಮೃದುಪಿಶಿತಾಹಾರಮಂ ಪಡೆದುಂ ಮಚ್ಚಿ ಕರುಣಿಸಿ ತಿನಲೊಲ್ಲದೆ ಕಾದು ಕಟಿಪಿದ ರಕ್ಕಸಂಗೆ ಮಿಕ್ಕವರುಳ್ಳೊಡೆ ಪೇೞಿಮೆಂದಂ (ಸುಕುಮಾ. ೭-೨೭ ವ). [ಹಾಹಾಭೂತ + ಚೇತಸ್$_1$]

**ಹಾಹಾಭೂತಚೇತಸ್ಕೆ** (ನಾ). ಪ್ರಲಾಪಿಸುವವಳು (?); ಹಾಹಾಕಾರ ಮಾಡುವವಳು (?): ನೀಳನೆಂಬ ಮಾದೆಗಂಗಂ ಕೌಶಂಬಿಯೆಂಬ ಮಾದಂಗಿಗಂ ಮಗಳಾಗಿ ಪೂರ್ವೋಪಾರ್ಜಿತ ಶುಭಾನುಪೂರ್ವಿನಾಮಕರ್ಮೋರ್ವೀರುಹ ಪರಿಪಾಕ ಫಳಮನನುಭವಿಸುತ್ತುಮೊಂದು ಪೊಡೆತ್ತಪ್ಪಡಂ ಸುಖಂಗಾಣದೆ ಹಾಹಾಭೂತಚೇತಸ್ಕೆಯಾಗಿರ್ದಳಂ ನೀಮಿಗಾಗಳ್ ಕಂಡಿರ್ (ಸುಕುಮಾ. ೫-೨೧ ವ). [ಹಾಹಾಭೂತ$_1$ + ಚೇತಸ್ಕೆ$_1$]

**ಹಾಹಾರವ** (ನಾ). = ಹಾಹಾಕಾರ ೧: ಅವನೀವ್ಯೋಮಮನೆಯ್ದೆ ಪರ್ವಿ ಬಳೆದುಂ ಶೋಕಾನುಬಂಧಾಂಧಬಾಂಧವ ಹಾಹಾರವಮೆಂತುಮೆಯ್ದದು ವಲಂ ಲೋಕಾಂತರಪ್ರಾಪ್ತನಪ್ಪವನಂ (ಆದಿಪು. ೩-೫೪); ಐಸರಲಿ ಕಲ್ಯಾಣಕಟಕನಿವಾಸಿಗಳು ಹಾಹಾರವಂಗಳು ಸೂಸುವಾನನರಾಗಿ ಬಸವಾ ಎನುತೊಱಲುತಿರಲು (ಬಸವು. ೩೭-೨೧). [ಸಂ.]

**ಹಾಹೂಕ** (ನಾ). ಹಾ, ಹೂ ಎಂದು ಉದ್ಗರಿಸುವವನು (?): ಪಿಮ್ಮೆಟ್ಟದಡಿಯ ನೊಮ್ಮೊಮ್ಮೆ ಪದಲಾಘದಿಂ ಹಿಮ್ಮೆಟ್ಟಿ ಹೊಳೆದು ನೆಗೆದೆಕ್ಕಿ ಕ್ರಮಮಸ್ತಕಮುಗುಮ್ಮುತಿಹ ಗದೆಗದೆಯ ತಟ್ಟಿ ತದ್ದಂಗಮಂ ಪುಟ್ಟಿಸದ ಚತುರಿನಿಂದ ನಿಮ್ಮನೆಮ್ಮಲುವೆಂದು ಮೂದಲಿಸಿ ತೂಕರಿಸಿ ದಿಮ್ಮಿದಿರಗೊಡುತಲೊಲೆದತ್ತಿತ್ತ ಹಾಹೂಕರೊಮ್ಮಿಂದ ಕಾದಿದರ್ (ಜಿನಮು. ೧೩-೭೪). [?]

**ಹಾಹೆ$_1$** 'ಪಾಪೆ' ನೋ.

**ಹಾಹೆ$_2$** 'ಪಾಯ್$_2$' ನೋ.

**ಹಾಹೆದೊಡರು** (ನಾ). ಸಣ್ಣ ಸಣ್ಣ ಬೊಂಬೆಗಳಿಂದ ಕೂಡಿದ ಆಭರಣ; ಬಿರುದಿನ ಪೆಂಡೆಯ: ಪೆಂಡೆಯದ ಪಾಮಾಂಘ್ರಿ ಮೆಱೆದಿರೆ ಹಿಂಡುದೇವರ ಹಾಹೆದೊಡರಲಿ ಗಂಡುಗಲಿ ಪರಿಪಳಿಯುಟ್ಟು . . . ಖಡ್ಗವ ಕೊಂಡು ಝಳಪಿಸಿದ (ಕೌತಿರಾ. ೪೦-೩). [ಹಾಹೆ$_1$ (< ಪಾಪೆ) + ತೊಡರು$_2$ (< ತೊಡರ್$_2$)]

**ಹಾಳ್** 'ಪಾೞ್' ನೋ.

**ಹಾಳ$_1$** 'ಪಾೞ್' ನೋ.

**-ಹಾಳ$_2$** (ಪ್ರ). ಹಾಳುಮಾಡುವವನು ಎಂಬರ್ಥದಲ್ಲಿ ಸೇರುವ ಪ್ರತ್ಯಯ: 'ಕಾಗದಹಾಳ' ಪರಾ. [ಹಾಳು (< ಪಾೞ್) + -ಅ$_7$]

**ಹಾಳಂಬಡು** 'ಪಾೞಂಬಡು' ನೋ.

**ಹಾಳತ,** ಪಾಳತ, ಹಾಳಿತ (ನಾ). ಹೆಚ್ಚು ಕಡಿಮೆಯಿಲ್ಲದಿರುವಿಕೆ; ಅಗತ್ಯಕ್ಕೆ ತಕ್ಕ ಪ್ರಮಾಣ; ಹದ: ಪ್ರಚಲಿತವಿಮರ್ಶೆಯ ಅತ್ಯಂತ ವಿಚಿತ್ರವೂ ನಿರುತ್ಸಾಹದಾಯಕವೂ ಆದ ಲಕ್ಷಣಗಳಲ್ಲಿ ಒಂದು: ಹಾಳತ ಗಾಂಭೀರ್ಯ ದೃಷ್ಟಿವೈಶಾಲ್ಯಗಳ ಅಭಾವ (ಸಾಹಿಪ್ರ. ೨೯೭); ಮಲ್ಲಿಗೆಯ ಕಂಪಿಗೂ ಹಿರಿದಿದರ ಸೌಗಂಧ ಯಾವ ಕಂಠವು ಇದಕ್ಕೆ ಹಾಳತಹುದು? (ಪ್ರವಾತೋ. ೧೦೮). Δ **ಪಾಳತ:** ಸಲೆ ಚರಾಚರ ಜೀವರಾಸಿ ದೇಹಂಗಳವು ನೆಲೆಯಾಗಲಾನವರ ಪಾಳತಮದಾಗಲಿವು ಪಿರಿದು ಕಿಱಿದಾಗಿ ತೋಱಿದೊಡದೇಂ ಕಡೆಗೆ ಕೇಳಱಿಯಲಾರ್ಗಂ ಪೊಱತೆ (ಹಾಲಾಸ್ಯ. ೩-೧೪-೧ ರಗಳೆ). **ಹಾಳಿತ:** ಕೊಡಸಿಗೆತಿಗುಡು ಓವು ಅತಿಭಜೆ . . . ಇವಂ ಮೊಸರಿಂದರೆದು ಗಟ್ಟಿಮಜ್ಜಿಗೆಯಲ್ಲಿ ಕದಡಿ ಹಾಳಿತವಾಗಿ . . . ಊಟ ಮಾಡಲು ಜ್ವರಾತಿಸಾರ ಗುಣಮಕ್ಕುಂ (ಸಕವೈ. ೩೦೭); ತಮ್ಮ ತಮ್ಮ ಪದವಿಯ ಗರ್ವಕ್ಕೆ ತಕ್ಕ ಹಾಗೆ ಹಾಳಿತವಾಗಿ ದಿಟ್ಟದಿಂದ ನೀಟಾಗಿ ಕುಳಿತು . . . ದೃಷ್ಟಿಸಿ ನೋಡಿದನು (ಕೋಹಿನೂ. ೭೮). [ದೇ. ॥ ತುಳು. ಹಾಳಿತ]

**ಹಾಳಲು** (ನಾ). ಜಮೀನು; ಭೂಮಿ: ಹಳ್ಳಿಯ ಹಾಳಲೊಳು ಬೇವನಿತು ಜೀವವ ತೋಱಿ ಕಂಡು (ಸಾಳ್ವಭಾ. ೧೯-೩೭). [ಹಾಳು (< ಹಾೞ್) + -ಅಲು (< -ಅಲ್$_2$)]

**ಹಾಳವಿಸು** (ಕ್ರಿ). ಮೆರೆ; ಪ್ರದರ್ಶಿಸು (?): ತಾಳ ಮದ್ದಳೆಯಾವುಜಂ ಶ್ರುತಿಗಾಳೆ ದಂಡಿಗೆಯರುಮೆ ವೀಣೆಯ ತಾಳಿ ನಿಂದರು ಶ್ರುತಿಯನಾರೈವುತ ಲತಾಂಗಿಯರು ಮೇಳ ಕಂಗೆಸೆದಿತ್ತು ಗಾಡಿಯ ಹಾಳವಿಸುತಲಿ ಪಾತ್ರದವರು ಚಪ್ಪಾಳಿಸುತೆ ನಿಂದರು ವಿಲಾಸದಿ ರಂಗಮಂಟಪದಿ (ಶಂಕರಾ. ೨-೭೪). [? + -ಇಸು$_1$]

**ಹಾಳಹಳ** (ನಾ). ಘೋರವಾದ ವಿಷ; ಹಾಲಾಹಲ: ಒಡಲನಸಿತಂ ಮಾಡಿದಂದಿನ ಕಡುಪಿನಗ್ಗದ ಹಾಳಹಳವಿಂತಡಸಿ ಬಂದುದೆನುತ್ತ ಲಕ್ಷ್ಮೀರಮಣನಳುಕಿದನು (ಬಸವು. ೫೮-೬೨); ಈ ಹಾಳಹಳ ವಿಷದಡಿಗೆಯನು ಬಡಿಸಿದಡೆ ಮೇಣುಂಡು ಬಾಳುವವರಾರೆನುತ ಬಹಳ ಜ್ವಾಲೆಯೊಳು ನಿಂದಂತೆ ರೋಷಕರಾಳಮುಖಿ ನೋಡಿದಳು ತನ್ನೆಡಬಲದ ಪಟುಭಟರ (ನಿಭಾಗ. ೫-೭-೩೦). [< ಸಂ. ಹಾಲಾಹಲ]

**ಹಾಳಾಹಳ** 'ಹಾಲಾಹಲ' ನೋ.

**ಹಾಳಿ$_1$** 'ಪಾೞಿ$_1$' ನೋ.

**ಹಾಳಿ$_2$** 'ಪಾೞಿ$_2$' ನೋ.
**ಹಾಳಿಗೆಡು** 'ಪಾೞಿಗೆಡು' ನೋ.
**ಹಾಳಿಡು** 'ಪಾೞಿಡು' ನೋ.
**ಹಾಳಿತ** 'ಹಾಳತ' ನೋ.
**ಹಾಳಿಹದ್ದು**, ಹಾಳೆಹದ್ದು (ನಾ). ಒಂದು ಬಗೆಯ ಹದ್ದು: ನಾಳೆ ನಾಡದು ಎಂದು ಹೀಗೆ ಬಾಳುವ ಕಾಲದಿ ಯಮನು ಕೋಳಿಪಿಳ್ಳೆಯಾಡುವಾಗ ಹಾಳಿಹದ್ದಿನಂತೆ ಒಯ್ಯುವ (ಪುರಂದ. ೩-೮೧-೪); ಮಲೆಯ ಬನಬನದ ತರಿವ ಮೂಡಲಗಾಳಿ, ಹಸಿರು ಬಯಲಿಗೆ ತರುತಲಿರುವ ಪಡುವಲ ಗಾಳಿ, ಹಾಳಿಹದ್ದುಗಳಂತೆ ತೇಡುತಿರುವದ ನೋಡುವೆನು (ಉಯ್ಯಾಲೆ. ೧೫-೭). **ಹಾಳೆಹದ್ದು**: ಅಲ್ಲಲ್ಲಿ ಹಾಳೆಹದ್ದಿನ ಗೂಡುಗಳು ಕಣ್ಣಿಗೆ ಬೀಭತ್ಸವಾಗಿ ಕಾಣುತ್ತಲಿವೆ (ಜನಜೀ. ೭೭). [ಹಾಳಿ$_1$ + ಹದ್ದು (< ಪರ್ದು)]
**ಹಾಳಿಹಸುಗೆ** (ನಾ). ಯೋಗ್ಯವಾದ ರೀತಿ; ಉಚಿತವಾದ ನಡವಳಿಕೆ: ಹಾಳಿಹಸುಗೆಯನಱಿಯದಾ ಹೀಹಾಳಿಗೆಡಿಸಿದೆನೆಂದು ಸಭೆಯಲಿ ಖೂಳನವಗುಣಶತವ ನೋಡದೆ ನಿಮ್ಮ ಮೆಚ್ಚಿಯೆಂದ (ಕುವ್ಯಾದ್ರೋ. ೧-೨೭).
[ಹಾಳಿ$_2$ (< ಪಾೞಿ$_2$) + ಹಸುಗೆ (< ಪಸುಗೆ)]
**ಹಾಳು** 'ಪಾೞ್' ನೋ.
**ಹಾಳುಕೊಂಪೆ** (ನಾ). ೧. ನಿರ್ಜನವಾದ ಸ್ಥಳ. ೨. (ಅಲಂ) ಬೇಡವಾದ ಸ್ಥಳ; ಇಷ್ಟವಾಗದ ಊರು: ಆ ಹಾಳುಕೊಂಪೆಯಲ್ಲಿ ಅವರ ಬೈಗಳು ಕೇಳಲೆಂದು ಹೋಗಬೇಕಿತ್ತೆ? (ವಾತ್ಸಲ್ಯ. ೯೭). [ಹಾಳು (< ಪಾೞ್) + ಕೊಂಪೆ]
**ಹಾಳುಗ** (ನಾ). ಹಾಳುಮಾಡುವವನು: ಹಾಳುಗ ನಾಂ ಕಾಳುಗ ನಾಂ ಕೀಳುಗ ನಾಂ ಏಳು ಬೇಲಿಯಂ ಕಳೆದವ ನಾಂ ಭಾಳಾಕ್ಷ ನಿಮ್ಮ ಆಳಿನ ಆಳಿಗೆ ಸರಿಯೇ (ಶಂಕರಂ. ೧೧೨).
[ಹಾಳು (< ಪಾೞ್) + -ಗ$_2$]
**ಹಾಳುಗರೆ** 'ಹಾಳ್ಗರೆ' ನೋ.
**ಹಾಳುಗಸ** (ನಾ). (ಹೊತ್ತು ಮೂಡಿದ ಕೂಡಲೆ ತೆಗೆಯಬೇಕಾದ) ಹಿಂದಿನ ದಿನದ ಕಸ: ಮರುದಿನ ಮುಂಜಾನೆ ಎಂಟು ಗಂಟೆಯಾದರೂ . . . ಹಾಳುಗಸವನ್ನೂ ತೆಗೆಯುವ ಮನಸ್ಸಾಗಲಿಲ್ಲ (ಗಂಗಾಸಾ. ೭೮). [ಹಾಳು (< ಪಾೞ್) + ಕಸ]
**ಹಾಳುಗುಡಿ** (ನಾ). ಹಾಳು ಬಿದ್ದ ದೇವಾಲಯ; ನಾಶವಾದ ದೇವರ ಗುಡಿ: ಮಸೆಯುತಿಹ ಮತ್ಸರದ ನೆರೆಯೊಳಿರುವುದಕಿಂದ ಹಸನಿಲ್ಲದ ಹಾಳುಗುಡಿಯ ಲೇಸು (ಕನಕ. ೫೧-೩); ಆ ಮಾವಿನ ತೋಪಿನ ಕತೆ, ಹಳ್ಳದ ಇತಿಹಾಸ, ಹಾಳುಗುಡಿಯ ಐತಿಹ್ಯ . . . ಇಂಥ ವಿಷಯಗಳನ್ನೆಲ್ಲ ಅವರು ಬಹು ರಮ್ಯವಾಗಿ ಹೇಳುತ್ತಾರೆ (ಮುಂಗಾಮು. ೯೭).
[ಹಾಳು (< ಪಾೞ್) + ಗುಡಿ$_3$]
**ಹಾಳುಗೆಡವು** 'ಪಾೞ್ಗೆಡವು' ನೋ.
**ಹಾಳುಗೆಡಹು** 'ಪಾೞ್ಗೆಡಪು' ನೋ.
**ಹಾಳುಗೆಡು** (ಕ್ರಿ). ಹಾಳಾಗು; ನೀತಿಗೆಡು: ಜೋಳವಾಳಿಯಾನಲ್ಲ ವೇಳೆವಾಳಿಯವ ನಾನಯ್ಯಾ ಹಾಳುಗೆಟ್ಟೋಡುವ ಆಳು ನಾನಲ್ಲಯ್ಯಾ ಕೇಳು . . . ಮರಣವೇ ಮಹಾನವಮಿ (ಬಸವ. ೬೯೮); ಎಲ್ಲ ಬಿಟ್ಟು ಆ ಹಾಳುಗೆಟ್ಟಪಳ ಖಾನಾವಳಿಗೇ ಏಕೆ ಹೋಗಬೇಕಿತ್ತೋ (ಮೂರುದಾ. ೧೮೪). [ಹಾಳು (< ಪಾೞ್) + ಕೆಡು$_1$]
**ಹಾಳುಗೇಡಿ** (ಕ್ರಿ). ವ್ಯರ್ಥಗೊಳಿಸುವವನು; ನಾಶಮಾಡುವವನು: ಹಾಳುಗೇಡಿಯೇ ನಾನು, ಯಾಕೆ? ಈ ಹೂ ಬಿಸಾಡಿದುದಕ್ಕೇನು? ಅದು ಮರದಲ್ಲಿದ್ದರೇನು ಸಂಭ್ರಮವಾಗುತ್ತಿತ್ತು . . . ಎಂದನು (ಮುಗಿಯ. ೧೭). [ಹಾಳು (< ಪಾೞ್) + ಕೇಡಿ$_1$]
**ಹಾಳುಗೋಡೆ** 'ಪಾೞ್ಗೋಡೆ' ನೋ.
**ಹಾಳುದೇಗುಲ** 'ಪಾೞ್ದೇಗುಲ' ನೋ.
**ಹಾಳುಬಗೆ** (ಕ್ರಿ). ಕೆಡುಕನ್ನು ಹಾರೈಸು; ಕೆಟ್ಟುದನ್ನು ಬಗೆ: ಹೀಗೆ ಹಗೆ ಮಾಡಿ ಇವನಿಗೆ ಹಾಳುಬಗೆದವರಲ್ಲಿ ಕ್ಷೇಮರಬಲ್ಲಾಳನೇ ಮೊದಲನೆಯವನು (ಕಗದ್ಯ. ೭೭).
[ಹಾಳು (< ಪಾೞ್) + ಬಗೆ$_1$]
**ಹಾಳುಬಡಿ** (ಕ್ರಿ). ೧. ಕೆಡಿಸು; ಹಾಳಾಗಿಸು: ಮುತ್ತಿನಂಥಾ ಹುಡುಗಿ ಸಂಸಾರ ಹಾಳುಬಡದು ಈ ಚಿಕ್ಕ ಪುಟ್ಟವರನ್ನ ಒಯ್ಯೋ ಬದಲು ನನ್ನ ಒಯ್ಯಬಾರದಿತ್ತೇನಪಾ (ಹನ್ನೊಂದ. ೨೪). ೨. ಬರಿದಾಗಿರು; ಹಾಳುಗರೆ: ಊರು ಬಿಕೋ ಎಂದು ಹಾಳುಬಡಿಯುತ್ತಿತ್ತು (ರಂಗಕ. ೧೨೯). [ಹಾಳು (< ಪಾೞ್) + ಬಡಿ$_1$]
**ಹಾಳುಬಾವಿ** 'ಪಾೞ್ಬಾವಿ' ನೋ.
**ಹಾಳುಬೀಡು** (ನಾ). ನಾಶವಾದ ಸ್ಥಳ; ಹಾಳು ಬಿದ್ದ ಜಾಗ: ಸೂಸಪುರಿ ಬೆಳಗದೋ, ಪಾಡದೋ ಮತ್ತೆ? ಹಾಳುಬೀಡೆನಿಪುದೇ ಇನ್ನದಕೆ ಹೊತ್ತೆ? (ಪಾರಸಿ. ೭-೧೫೦). [ಹಾಳು (< ಪಾೞ್) + ಬೀಡು$_2$]
**ಹಾಳುಬೀಳು$_1$** 'ಪಾಳುಬೀಳು' ನೋ.
**ಹಾಳುಬೀಳು$_2$** (ನಾ). ನಾಶ ಹೊಂದುವಿಕೆ: ಮಾನವನ ರೂಪ ಗುಣಗಳನ್ನೆಲ್ಲಾ ತನ್ನ ಬಣ್ಣದಿಂದ ಪವಿತ್ರಗೊಳಿಸುವ ಈ ಸೌಂದರ್ಯ ಇದ್ದಕ್ಕಿದ್ದ ಹಾಗೆ . . . ಈ ಲೋಕವನ್ನು ಹಾಳುಬೀಳಾಗಿಸುವುದೇತಕ್ಕೆ? (ಸೌಂದಸ. ೩೧). [< ಹಾಳುಬೀಳು$_1$]
**ಹಾಳುಭಾವಿ** 'ಪಾೞ್ಬಾವಿ' ನೋ.
**ಹಾಳುಮನೆ** 'ಪಾೞ್ಮನೆ' ನೋ.
**ಹಾಳುಮೂಳ** (ನಾ). ಕೆಟ್ಟವನು; ದುಷ್ಟ: ಅವನೊಬ್ಬ ಹಾಳುಮೂಳ (ರೂಢಿ).
[ಹಾಳು (< ಪಾೞ್) + ಮೂಳ$_1$ (< ಮೂೞ)]
**ಹಾಳುಮೂಳಿ** (ನಾ). ಕೆಟ್ಟವಳು; ಕೆಟ್ಟ ಹೆಂಗಸು: ಆ ಹಾಳುಮೂಳಿ ಸುಳ್ಳು ಹೇಳುತ್ತಿದ್ದಾಳೆ (ಕಲ್ಲಿಕಾ. ೪೦). [ಹಾಳುಮೂಳ + -ಇ$_2$]
**ಹಾಳುಮೂಳು** (ನಾ). ಕೆಲಸಕ್ಕೆ ಬಾರದುದು; ವ್ಯರ್ಥವಾದುದು: ಹಾಳುಮೂಳು ಇದರ ಜೊತೆಗೆ ಸೇರಿಸಬೇಡಿರಿ (ಮರಳಿ. ೧೫೪). [ಹಾಳುಮೂಳ + -ಉ$_4$]
**ಹಾಳುಮೆಣಸು** (ನಾ). ಒಂದು ಬಗೆಯ ಮೆಣಸು: ಪೂರ್ವ ಪಶ್ಚಿಮ ಉತ್ತರ ದಕ್ಷಿಣಾದಲ್ಲೂ ತಿರಿಗಾಡುವ ಹಾಳುಮೆಣಸು ಬೂಸ ನಾನಾ ಸರಕ್ಕುನಡೆ ಗಕ್ಕೆ ಗೆ ಟ್ ೮೦ (ಎಕ. XVI, ಗುಬ್ಬಿ. ೭೩-೭೮; ಸು. 1672). [ಇದು 'ಕಾಳುಮೆಣಸು' ಎಂದಿರಬಹುದೆ?]
**ಹಾಳುಮೊರಡಿ** (ನಾ). ನಿರ್ಜನವಾದ ಬೆಟ್ಟ: ಹಾಳುಮೊರಡಿಗಳಲ್ಲಿ ಊರ ದಾರಿಗಳಲ್ಲಿ ಕೆಱೆ ಬಾವಿ ಹೂಗಿಡುಮರಂಗಳಲಿ . . . ಹಿರಿಯಾಲದ ಮರದಲ್ಲಿ ಮನೆಯ ಮಾಡಿ (ಬಸವ. ೫೫೭). [ಹಾಳು (< ಪಾೞ್) + ಮೊರಡಿ$_1$ (< ಮೊರಡು$_2$)]
**ಹಾಳುಮೋರೆ** (ನಾ). ಕುಂಕುಮವನ್ನು ಇಟ್ಟುಕೊಳ್ಳದಿರುವ ಮುಖ: ಹಾಳುಮೋರೆಯಲ್ಲಿರಬಾರದು ಕುಂಕುಮ ಇಟ್ಟುಕೋ (ರೂಢಿ).
[ಹಾಳು (< ಪಾೞ್) + ಮೋರೆ (< ಮೋಱೆ)]
**ಹಾಳುವರಿ** (ಕ್ರಿ). ಕೆಟ್ಟು ಹಾಳಾಗು; ನಾಶವಾಗು: ಆ ಕುಂಟೆ ಒಡೆದು ಹೋಗಿ ಖಿಲವಾಗಿ ಇರಲಾಗಿ ಕಟಿಸುವರಾರೂ ಇಲ್ಲದೆ ಹಾಳುವರಿದುಯಿರಲಾಗಿ ನಾಉ ವಿಚಾರಿಸಿ . . . ಆ ಕುಂಟೆಯನೂ ಕಟ್ಟಿಸ್ತೇಉ (ಸೌಇಇ. IX-ii, ೫೧೦-೯; 1539).
[ಹಾಳು (< ಪಾೞ್) + ಪರಿ$_1$ (< ಪಱಿ$_1$)]
**ಹಾಳುಸುರಿ** 'ಪಾೞ್ಸುರಿ' ನೋ.
**ಹಾಳುಹಂಪೆ** (ನಾ). ಪಾಳುಬಿದ್ದ ಪಂಪಾಕ್ಷೇತ್ರ; ಹಾಳಾದ ಹಂಪೆ: ಈ ದೇವಾಲಯವು ಈಗಲೂ ಕರ್ಣಾಟಕರಾಜ್ಯದ ಹಿರಿಮೆಯನ್ನು ಹಾಳುಹಂಪೆಯಲ್ಲಿ ಎತ್ತಿ ತೋರಿಸುವಂತೆ ಕಾಣುತ್ತದೆ (ಭಾರದ. ೫೦೭). [ಹಾಳು (< ಪಾೞ್) + ಹಂಪೆ]
**ಹಾಳುಹಣೆ** (ನಾ). ಕುಂಕುಮ, ಬೊಟ್ಟು ಇತ್ಯಾದಿಗಳನ್ನು ಇಟ್ಟಿರದ ಬೋಳುಹಣೆ: ಸುಭಗೆ ಹಾಲು ಮೊಸರು ಬಡಿಸಲು ಬಂದಾಗ ಅವನ ದೃಷ್ಟಿ ಆಕೆಯ ಹಾಳುಹಣೆಯ ಕಡೆಗೆ ಬಿದ್ದಿತು (ಗಂಗಾಸಾ. ೮೨).
[ಹಾಳು (< ಪಾೞ್) + ಹಣೆ$_1$ (< ಪಣೆ$_1$)]
**ಹಾಳುಹರಟೆ** (ನಾ). ಪ್ರಯೋಜನವಿಲ್ಲದ ಮಾತು; ಕಾಡುಹರಟೆ: ಹಾಳು ಹರಟೆಯಾಡಿ ಮನವ ಬೀಳು ಮಾಡಿಕೊಳ್ಳಬೇಡಿ (ಪುರಂದ. ೧-೧೭೭-೩); ಹಂಬಲಿಸಿ ಹಾಳುಹರಟೆಗಳ ವರಟೆಗಳ ಹರಟೆಗಿಂತ ನಂಬಿ ಹರಿದಾಸರೊಳು ಪೊಂದುವುದೆ ಲೇಸು (ಪುರಂದ. ೪-೨೧-೧); ಬಾಲಸನ್ಯಾಸಿಗೆ ಹಾಳುಹರಟೆ ಯಾಕೆ? (ಗಾದೆ).
[ಹಾಳು (< ಪಾೞ್) + ಹರಟೆ]
**ಹಾಳುಹರಿ** (ನಾ). ಕೆಟ್ಟಪದಾರ್ಥ; ಹೊಲಸುಪದಾರ್ಥ: ಬಾಳುವಲ್ಲಿ ಬದುಕುವಲ್ಲಿ ಗುರುಲಿಂಗಜಂಗಮವನಱಿಯದೆ ಹಾಳುಹರಿಯ ತಿಂದ ಶುನಕನಂತೆ ಕಾಲ್ಗೆಡದು

ಓಡಾಡಿ ಏಳಲಾಜದೆ ಬಿದ್ದಾಗ ಶಿವಾ ಎಂದರೆ ಅಲ್ಲಿ ದೇವನಿಪ್ಪನೇ (ವಚಸಂ. ೪೭-೭೦).
[ಹಾಳು (< ಪಾೞ್) + ಹರಿ?]

**ಹಾಳುಹೊಟ್ಟೆ** (ನಾ). ೧. ಬರಿದಾದ ಉದರ; ಖಾಲಿಹೊಟ್ಟೆ: ಗಿಡಗವು, ದೊರೆಯೇ ಆಹಾರವೇನೂ ಸಿಕ್ಕದೆ ಹಸಿವಿನಿಂದ ಈ ಒಂದು ಪಕ್ಷಿಯನ್ನಾದರೂ ತಿನ್ನೋಣವೆಂದು ಬಂದ ನನ್ನನ್ನು ಹಾಳುಹೊಟ್ಟೆಯಲ್ಲಿ ಕಳುಹಿಸುವುದು ಧರ್ಮವೊ . . . ಎಂದು ಕೇಳಿತು (ನೀತಿಚಿಂ. XIV. ೧೯). ೨. (ಆಲಂ) ಕೆಟ್ಟಹೊಟ್ಟೆ: ಈ ಹಾಳುಹೊಟ್ಟೆಯಿಂದ ಎಷ್ಟು ಮಾತುಗಳನ್ನು ಕೇಳಬೇಕೋ ? (ರೂಢಿ).
[ಹಾಳು (< ಪಾೞ್) + ಹೊಟ್ಟೆ (< ಪೊಟ್ಟೆ$_1$)]

**ಹಾಳೂರು** 'ಹಾೞೂರ್' ನೋ.

**ಹಾಳೆ$_1$** 'ಪಾಳೆ$_1$' ನೋ.

**ಹಾಳೆ$_2$** 'ಹಾಲೆ$_4$' ನೋ.

**ಹಾಳೆಕಿಳ್ಳಿ** (ನಾ). (ಕರಾ) ಅಡಕೆಯ ಗೊಂಚಲಿನ ಮೇಲಿರುವ ಪೊರೆ; ಅಡಕೆಪಟ್ಟೆ: ಅಡಕೆತೋಟದಲ್ಲಿ . . . ಮರದ ಬುಡಗಳಿಗೆ ಹಾಳೆಕಿಳ್ಳಿಯಿಂದ (ಅಡಿಕೆಮರದ ಎಲೆಯ ಬುಡದಲ್ಲಿರುವ ಹಾಳೆಯಿಂದ ತಯಾರಿಸಿದ ನೀರು ಹಾಯಿಸುವ ಸಾಧನ) ನೀರೆರಚುವುದನ್ನು ನೋಡಲು ನಮಗೆ ತುಂಬಾ ಆನಂದವಾಗುತ್ತಿತ್ತು. ಹಾಳೆಕಿಳ್ಳಿಗಳನ್ನು ಹಿಡಕೊಂಡು ನಾವೂ ಸಿಕ್ಕಿದತ್ತ ತಮಾಷೆಗಾಗಿ ಆಟಕ್ಕಾಗಿ ನೀರೆರಚುತ್ತಿದ್ದೆವು (ಕುರುಕಾ. ೨೮). [ಹಾಳೆ$_1$ (< ಪಾಳೆ$_1$) + ಕಿಳ್ಳಿ$_1$]

**ಹಾಳೆಕೊಟ್ಟೆ** (ನಾ). ಅಡಕೆಹಾಳೆಯಿಂದ ಮಾಡಿದ ದೊನ್ನೆ: ನಾಲ್ಕಾರು ಕಾರೇಡಿಗಳೂ . . . ಪೀಂಚಲು ಹಿಡಿದಿದ್ದ ಹಾಳೆಕೊಟ್ಟೆಗೆ ಬಿದ್ದುವು (ಮಲೆಮ. ೧೬೩).
[ಹಾಳೆ$_1$ (< ಪಾಳೆ$_1$) + ಕೊಟ್ಟೆ$_2$]

**ಹಾಳೆಟೋಪಿ** (ನಾ). ಅಡಕೆಹಾಳೆಯಿಂದ ಮಾಡಿದ ಟೋಪಿ: ಮಲೆನಾಡಿನಲ್ಲಿ ಹಾಳೆಟೋಪಿಗಳ ಉಪಯೋಗ ಹೆಚ್ಚು (ರೂಢಿ). [ಹಾಳೆ$_1$ (< ಪಾಳೆ$_1$) + ಟೋಪಿ]

**ಹಾಳೆಹದ್ದು** 'ಹಾಳಿಹದ್ದು' ನೋ.

**ಹಾಳೇರಿಸು** (ಕ್ರಿ). ಕೆಡಿಸು; ನಾಶಪಡಿಸು: ನೀಚಜಾತಿಯವರೊಡನೆ ಪಂತಿಯೂಟದ ಸವ್ಯವಹಾರವಾಗುವಂತೆ ಎಂತೋ ಏರ್ಪಡಿಸಿ ಮತಾಚಾರಗಳನ್ನು ಹಾಳೇರಿಸಿದ ಸೇನಾಪತಿ ಬಸವಲಿಂಗಣ್ಣನೂ ಉಂಟು (ಬಟ್ಟಳು. ೪೮-೨೧).
[ಹಾಳು (< ಪಾೞ್) + ಏರಿಸು(< ಏಱಿಸು)]

**ಹಾಳೊಡಲ್** (ನಾ). ೧. ವ್ಯರ್ಥವಾದ ದೇಹ; ನಿರರ್ಥಕವಾದ ಶರೀರ. ೨. (ಆಲಂ) ವ್ಯರ್ಥವಾಗಿ ಜೀವಿಸುವ ವ್ಯಕ್ತಿ: ದೇವಬಾಳೆ . . . ಹಂಸೆ ಮಯೂರಾದಿಗಳ ಕಾಣ್ಕೆಯೆಂಬುದು ಶಿವಭಕ್ತಿಯಿಲ್ಲದ ಹಾಳೊಡಲ್ಗಳಂ ಕಂಡ ಶಿವಭಕ್ತನಂತೆ ಕಣ್ಣೇಱು (ನಂಬಿರ. ೧೭-೧೨). [ಹಾಳು (< ಪಾೞ್) + ಒಡಲ್]

**ಹಾಳ್ಗರೆ, ಹಾಳುಗೆರೆ** (ಕ್ರಿ). ಬರಿದಾಗಿರು; ಶೂನ್ಯವಾಗಿರು: ನಾಯಕತ್ವವಿಲ್ಲದೆ ಹಾಳ್ಗರೆಯುತ್ತಿರುವ ಅಂಗಡಿಯಲ್ಲಿ . . . ಕಡುಕಾವಲ್ಗುಡುತ್ತಿರುವರು (ಬಿರುಗಂ. ೧೨-೮).
**ಹಾಳುಗರೆ:** ಮನೆ ಹಾಳುಗರೆಯುತ್ತಿದೆ (ಜಮಿನ್ದಾ. ೪೭).
[ಹಾಳ್(< ಪಾೞ್) + ಕರೆ$_2$ (< ಕಱೆ$_1$)]

**ಹಾಳ್ಗಿಯ್** 'ಪಾಳ್ಗಿಯ್' ನೋ.

**ಹಾಳ್ಮನೆ** 'ಪಾೞ್ಮನೆ' ನೋ.

**ಹಾಱಾಟ** 'ಪಾಱಾಟ' ನೋ.

**ಹಾಱಿಕೆ, ಹಾರಿಕೆ** (ನಾ). ೧. (ಪಕ್ಷಿಯಂತೆ) ಆಕಾಶದಲ್ಲಿ ಚಲಿಸುವಿಕೆ; ಹಾರಾಡುವಿಕೆ: ಏಱಿದುದು ಹಯವಮಮ ಗರುಡನ ಹಾಱಿಕೆಯ ಹವಣಿನಲಿ (ತೊರರಾ. ೬-೩೦-೧೩). **ಹಾರಿಕೆ:** ೧. ಪಕ್ಕಗಳು ಬಲಿತಿಲ್ಲ, ಹಾರಿಕೆ ಕಲಿತಿಲ್ಲ (ಸವೀಗೀ. ೩೩-೬೨೭). ೨. ನೆಗೆತ; ಲಂಘನ: ನೋಟಕರಿಗಾಶ್ಚರ್ಯಮಾಗೆ ಹಾರಿಕೆಗಳೊಳು ನೀಟನಿಂದೆಡಬಲಕೆ ಸುತ್ತಿ (ಕೃಷ್ಣವಿ. ೫-೧೦೭); ವಿರಿಂಚಿಮಹಾರಾಜರು ಒಂದೇ ಹಾರಿಕೆಗೆ ಮನೆಯೊಳಗಿಂದ ಹೊರಗೆ ಬಂದರು (ಕುರಿಹಿಂ. ೩೩). ೩. (ಆಲಂ) ವಿಷಯವನ್ನು ಮರೆಸುವಿಕೆ; ತೇಲಿಸುವಿಕೆ: ನೇರಪ್ರಶ್ನೆಗೆ ಅವರು ಕೊಟ್ಟ ವಿವರಣೆ ಕೇವಲ ಹಾರಿಕೆಯದಾಗಿತ್ತು (ರೂಢಿ).
**ಹಾರಿಕೆಯ ಉತ್ತರ** = ವಿಷಯವನ್ನು ಮರೆಸಿ ಕೊಡುವ ಉತ್ತರ; ಅಸ್ಪಷ್ಟವಾದ ಉತ್ತರ: ಮೂಸಬ್ಬ ಹಾರಿಕೆಯ ಉತ್ತರ ಕೊಟ್ಟನೆ ಹೊರತು ನೇರ ಮಾತಾಡಲಿಲ್ಲ (ಒಡ್ಡಿಲು. ೮೩); ಅವರು ಹಾರಿಕೆಯ ಉತ್ತರ ಕೊಟ್ಟರು (ಗಂಪಾಯಿ. ೨೯೮). **ಹಾರಿಕೆಯ ಮಾತು** = ವಿಷಯವನ್ನು ಮರೆಸಿ ಆಡುವ ಮಾತು: ನನಗೆ ಹಾರಿಕೆಯ ಮಾತು ಬೇಕಾಗಿಲ್ಲ, ಸ್ಪಷ್ಟವಿಷಯವನ್ನು ತಿಳಿಸು (ರೂಢಿ). **ಹಾರಿಕೆಯ ಸುದ್ದಿ** = ಸ್ಪಷ್ಟವಲ್ಲದ ಸಮಾಚಾರ: ಹಾರಿಕೆಯ ಸುದ್ದಿಗಳಿಂದಲೆ ಸೇರಿಕೆಯ ಅಭಿಪ್ರಾಯಗಳನ್ನು ಪ್ರಸಾರ ಮಾಡುವ ಪ್ರಚಾರಕರೂ ಒಮ್ಮೊಮ್ಮೆ ವಾಚಕವರ್ಗದಲ್ಲಿ ಸೇರಿರುತ್ತಾರೆ (ಸಾಹಿಸಂ. ೧೯೭). [ಹಾಱು$_1$ (< ಪಾಱು$_1$) + - ಇಕೆ]

**ಹಾಱಿಸು** 'ಪಾಱಿಸು' ನೋ.

**ಹಾಱು$_1$** 'ಪಾಱು$_1$' ನೋ.

**ಹಾಱು$_2$** 'ಪಾಱು$_2$' ನೋ.

**ಹಾಱುಗಣೆ** (ನಾ). ಒಂದು ಬಗೆಯ ಬಾಣ; ಹಾರಿ ಬರುವ ಕಣೆ: ಹಾಱುಗಣೆಗಳ ಹರಿಸಿ ಹೆಮ್ಮೆಯ ಬೀಱೆ ಚದುರಿಗತನವ ಮೆಱೆದರೆ ನೀಱನೆಂಬರೆ ನಿನ್ನನೆನುತೆಚ್ಚನು ಧನಂಜಯನ (ಕುವ್ಯಾಕ. ೨೨-೩೦). [ಹಾಱು$_1$ (< ಪಾಱು$_1$) + ಕಣೆ$_1$]

**ಹಾಱುಗುಪ್ಪೆ** 'ಪಾಱುಂಗುಪ್ಪೆ' ನೋ.

**ಹಾಱುವಲೆ** (ನಾ). ಒಂದು ಬಗೆಯ ಬಲೆ: ಸಿಡಿವವಲೆ ಸಿಲುಕುವಲೆ ಹಾಱುವಲೆ ಜಾಱುವಲೆ . . . ಗೂಢವಲೆ ಮಡಿಕೆವಲೆ ಮಂದಸಿನವಲೆಯ ಹೊಱೆಗಳ ಬೇಡವಡೆ ನೆರೆದುದೇನೆಂಬೆನು (ಹಚಕಾ. ೫-೮). [ಹಾಱು$_1$ (< ಪಾಱು$_1$) + ಬಲೆ$_1$]

**ಹಾೞಂಬಡು** 'ಪಾೞಂಬಡು' ನೋ.

**ಹಾೞು** 'ಪಾೞ್' ನೋ.

**ಹಾೞೂರ್, ಹಾಳೂರು** (ನಾ). ಹಾಳುಬಿದ್ದ ಊರು; ನಾಶವಾದ ಹಳ್ಳಿ: ಈಕೆ . . . ಒಣಕುಟ್ಟEತ್ತ್ತೆದೆ ಪತ್ತಿದ ಹಾೞೂರ ನಾಯಂತೆ ತೊನ್ನರ ತುಟಿಯಂತೆ . . . ತನ್ನ ದೌರ್ಭಾಗ್ಯಮಂ ಬೇಟದ ಮೇಲೆ ನೆವಮಿಕ್ಕಿದಪಳ್ (ಲೀಲಾವ. ೨-೧೧೬ ವ).
**ಹಾಳೂರು:** ಮಾಟವಿಲ್ಲದವನ ಭಕ್ತಿ ಹಾಳೂರ ಮುಂದಿಟ್ಟಿಹ ಕೋಳದಲ್ಲಿ ಕಾಲನಿಟ್ಟು ಕೀಲ ಜಡಿಕೊಂಡಂತಾಯಿತ್ತು (ಶೂನ್ಯಸಂ. ೨೨೮-೩೦); ಧನಕನಕವುಳ್ಳನಕ ದಿನಕರನ ವೋಲಕ್ಕು ಧನಕನಕ ಹೋದ ಮಱುದಿನ ಹಾಳೂರ ಶುನಕನಂತಕ್ಕು (ಸರ್ವಜ್ಞ. ೧೨೩೭); ಹಾಳೂರಿಗೆ ಉಳಿದವನೇ ಗೌಡ (ಗಾದೆ). [ಹಾೞ್$_0$ (< ಪಾೞ್) + ಊರ್]

**ಹಾೞ್ಮನೆ** 'ಪಾೞ್ಮನೆ' ನೋ.

**ಹಾೞ್ಮನೆಹಾೞಿ** 'ಪಾೞ್ಮನೆಪಾೞಿ' ನೋ.

**ಹಿಂ** 'ಪಿನ್' ನೋ.

**ಹಿಂಕಾರ** (ನಾ). ೧. ಸಾಮಗಾನದ ಒಂದು ಪ್ರಭೇದ: ಉದ್ಗೀಥ, ಪ್ರಸ್ತಾವ, ಹಿಂಕಾರ, ಪ್ರತಿಹಾರ, ನಿಧನವೆಂಬ ೫ ಪ್ರಕಾರವಾಗಿ ಸಾಮಗಾನವು ಭಾಗಿಸಲ್ಪಟ್ಟಿರುವುದು (ಹಸಾರ. ೬-೧೪ ತಾತ್ಪರ್ಯ). ೨. ವಿಷ್ಣುವಿನ ಒಂದು ಹೆಸರು: ಗೋವುಗಳೊಳುದ್ಗೀಥನಿಹ ಪ್ರಸ್ತಾವ ಹಿಂಕಾರೆರಡು ರೂಪದಲಾವಿಯ ಜಗದೊಳಗಿಹನು ಪ್ರತಿಹಾರಂ ಹಯಗಳೊಳು (ಹಸಾರ. ೬-೧೪). [ಸಂ.]

**ಹಿಂಕೋರೆ** (ನಾ). ಖಡ್ಗಯುದ್ಧದ ಒಂದು ವರಸೆ; ಕತ್ತಿಯನ್ನು ಹಿಂದಕ್ಕೆ ಓರೆಯಾಗಿ ಬೀಸುವಿಕೆ: ತಳಸಂಚು ಮೇಲ್ಸಂಚು ಹಿಂಕೋರೆ ಮುಂಕೋರೆ ಬಲಸನ್ನೆಯೆಡದ ಸನ್ನೆಯೊಳು ಅಲಗ ನೀಡಿದರಲಗಿನೊಳಾಂತು ನೆಗೆದು ಮೈ ಹೊಳೆದು ತಪ್ಪಿಸಿದನೆಲ್ಲವನು (ಭರಚ. ೬೩-೨೭). 'ಮುಂಕೋರೆ' ಪರಾ.
[ಹಿಂ (< ಪಿನ್) + ಕೋರೆ$_1$]

**ಹಿಂಗಚ್ಚೆ** (ನಾ). ನಡುಪಟ್ಟಿಯ ಹಿಂಭಾಗಕ್ಕೆ ಸಿಕ್ಕಿಸಿದ ಪಂಚೆಯ ಅಥವಾ ಸೀರೆಯ ತುದಿ; ಹಿಂಭಾಗದಲ್ಲಿ ಸಿಕ್ಕಿಸಿದ ಕಚ್ಚೆ: ಇನ್ನು ಸಂಶಯವಿಲ್ಲೆನುತ ಚಿತ್ತಂ ನಲಿದು ಹಿಂಗಚ್ಚೆಯೊಳಿಸೆವ ತನ್ನ ಕುಡುಗೋಲಂ ತೆಗೆದು ಕೊರಳಂ ಪಱಿದುಕೊಳುತಿರಲು (ಬಸಪು. ೨೭-೧೮). [ಹಿಂ (< ಪಿನ್) + ಕಚ್ಚೆ]

**ಹಿಂಗಟ್ಟು** (ನಾ). ೧. (ಕೈಗಳನ್ನು ಶರೀರದ) ಹಿಂಭಾಗದಲ್ಲಿ ಸೇರಿಸಿ ಹಾಕುವ ಕಟ್ಟು,— ಬಂಧನ: ತೋಳ ಹಿಂಗಟ್ಟುಗಳ ಮೋಱೆಯ ಕಾಳಿಕೆಯ ಬಿಡುವಲೆಯ

ನೀರೋಜ್‌ವಾಲಿಗಳ ಕುರುಭೂಪನಿದ್ದನು ತಮ್ಮದಿರುಸಹಿತ (ಕುವ್ಯಾಅ. ೨೧-೧); ಸದೆದ ಭಟರನೆಲ್ಲ ಕದುಬಿ ಹಿಡಿದುಕೊಂಡು ಒಡೆದು ಹಿಂಗಟ್ಟ ಕಟ್ಟಿದರು (ಸೌಂದಕಾ. ೮-೬೭). **೨. ಹಿಂದಿನ ಸ್ಥಳ; ಹಿಂಭಾಗ:** ಬಕನ ಬಳಗದಂತೆ ನಿಂದ ಬಿಲ್ಲ ಬಲ್ಲಣಿಯ ಹಿಂಗಟ್ಟಿನೊಳೆ ಮುಂಕಣಿಸಿ ನೆಗೆಪಿದ ಸಬಳಂಗಳ . . . ಕೊಂತಕಾಜಿರ ತಿಂತಿಣಿಯ ನಡುವೆ (ಗಿರಿಕ. ೬-೫೫ ವ). **೩. ಕೊಳದ ಒಡ್ಡಿನ ಹೊರಭಾಗ:** (೩). [ಹಿಂ (< ಪಿನ್) + ಕಟ್ಟು$_1$]

**ಹಿಂಗಟ್ಟುಕಟ್ಟು** (ಕ್ರಿ). (ಕೈಗಳನ್ನು ಶರೀರದ) ಹಿಂಭಾಗದಲ್ಲಿ ಸೇರಿಸಿ ಕಟ್ಟುಗಳನ್ನು ಹಾಕು; ಬಂಧಿಸು: ಶ್ರೀಕೃಷ್ಣನನ್ನು ಹಿಂಗಟ್ಟುಕಟ್ಟಿ ಅಲ್ಲಿಯೇ ಸೆರೆಯಲ್ಲಿ ಇಟ್ಟರೆ ಕೃಷ್ಣನ ಸಹಾಯ ಪಾಂಡವರಿಗೆ ತಪ್ಪಿ ಅವರು ಓಡಿ ಹೋಗುವರು (ನೀತಿಚಂ. I. ೧೧). [ಹಿಂಗಟ್ಟು + ಕಟ್ಟು$_1$]

**ಹಿಂಗಟ್ಟುಮುರಿ** (ನಾ). ಕೈಗಳನ್ನು ಶರೀರದ ಹಿಂಭಾಗದಲ್ಲಿ ಸೇರಿಸಿ ಕಟ್ಟಿರುವಿಕೆ: ಚಿತ್ರಸೇನಾದಿ ಗಂಧರ್ವರು ನಿನ್ನನ್ನು ಹಿಂಗಟ್ಟುಮುರಿಯನ್ನು ಕಟ್ಟಿಕೊಂಡು ಹೋಗುವಾಗ ಅರ್ಜುನನು ನಿಗ್ರಹಿಸಿಕೊಂಡುದು ತಿಳಿಯದೇ (ಕೃಪಾಭೀ. ೧೫೩); ಆತನ ಹಿಂದೆ ಹಿಂಗಟ್ಟುಮುರಿಯುಳ್ಳ ಪುರುಷನನ್ನು ಹಿಡಿದುಕೊಂಡು ಇಬ್ಬರು ಕಾವಲುಗಾರರೂ ಬರುವರು (ಶಾಕುಂತ. ೬೫). [ಹಿಂಗಟ್ಟು + ಮುರಿ$_1$ (< ಮುರಿವು)]

**ಹಿಂಗಟ್ಟುಮುರಿಕಟ್ಟು** 'ಹಿಂಗಟ್ಟುಮುರಿಗಟ್ಟು' ನೋ.

**ಹಿಂಗಟ್ಟುಮುರಿಗಟ್ಟು, ಹಿಂಗಟ್ಟುಮುರಿಕಟ್ಟು** (ಕ್ರಿ). = ಹಿಂಗಟ್ಟುಕಟ್ಟು: ಕಾಲನನು ಹಿಂಗಟ್ಟುಮುರಿಗಟ್ಟಿ ಸೆಳೆತಂದು ಅವನ ಕಣ್ಣೆಯಲವಗೆ ಉರುಲ ಹಾಕುವೆ ನಾನು (ಶಕಾರ. ೭೭-೨೩); ಶಾಂತಿ ಇಲ್ಲದ ಹಗಲೂ,ನಿದ್ರೆ ಇಲ್ಲದ ಇರುಳೂ ನನ್ನನ್ನು ಹಿಂಗಟ್ಟುಮುರಿಗಟ್ಟಿ ಸರಪಣಿಯಿಂದ ಬಿಗಿಯುವುದಕ್ಕೆ ಮೊದಲುಮಾಡಿದವು (ನಿಬಂಧ.II,೨೧೬). **ಹಿಂಗಟ್ಟುಮುರಿಕಟ್ಟು:** ಅಫ್ಜುಲ್‌ಖಾನನು ಸೇನಾಪತಿಯಾಗಿ . . . ಶಿವಾಜಿಯನ್ನುಹಿಂಗಟ್ಟುಮುರಿಕಟ್ಟಿತರುವುದಕ್ಕೆ ಬಿಜಾಪುರದಿಂದ ಹೊರಟನು (ಛತ್ರಶಿ. ೬೨); ಇಬ್ಬರು ಡಕಾಯಿತರು ಅವನ ಮೇಲೆ ಬಿದ್ದು . . . ಹಿಂಗಟ್ಟುಮುರಿಕಟ್ಟಿ ಹೊತ್ತುಕೊಂಡು ಮಧುರನ ಮನೆಯ ಹಿಂದೆ ಹೋಗಿ ಹಾಲಕ್ಕಿಯಂತೆ ಸಿಳ್ಳುಹಾಕಿದರು (ಬಂಕಿಮ.೧೪೦).
[ಹಿಂಗಟ್ಟುಮುರಿ + ಕಟ್ಟು$_1$]

**ಹಿಂಗಡಿ** (ನಾ). ೧. ಹಿಂದಿನ ಪ್ರದೇಶ,– ಸೀಮೆ. ೨. ಹಿಂಬದಿ; ಹಿಂಭಾಗ: ಹಿಂಗಡಿಯ ಬಲುಗಾರ ಖಳರ ಕರಾಂಗುಳಿಗಳಂತಿರುವನುಗಿದು ಶಿವಾಂಗನೆಯ ಮೇಲೆಚ್ಚಲು ಬಲು ಬಾಣವೃಷ್ಟಿಗಳ (ದೇವೀಮ.೩-೬). [ಹಿಂ (< ಪಿನ್) + ಗಡಿ$_1$]

**ಹಿಂಗಡೆ** 'ಪಿಂಗಡೆ' ನೋ.

**ಹಿಂಗಣ** (ನಾ). ಹಿಂಭಾಗ; ಹಿಂಬದಿ: ಅಂಗಾಲಿಗೆ ವಂಕಿಕ್ಕಿ ಮುಂಗಾಲಿಗೆ ಕಡಗವನಿಟ್ಟು ಉಂಗುಷ್ಠದಲ್ಲಿ ಉಂಗುರವ ಹಾಕಿ ಅಂಗಣಕ್ಕೆ ಬಂದು ನಿಂತು ಹಿಂಗಣಕ್ಕೆ ಮೊಲೆಕಟ್ಟುವಳು ಗಂಗಾಜನಕನ ಬಳಿಗೆ ಶೃಂಗರಿಸಿ ಬಂದು ನಿಂತಳು (ಪುರಂದ.೫-೪೩-೨).
[ಹಿಂ (< ಪಿನ್) + ಕಣ$_1$ (< ಕಳ$_3$)]

**ಹಿಂಗಣ್ಣು** (ನಾ). ೧. ಡೊಂಬರು ಹಾಕುವ ಒಂದು ಬಗೆಯ ವರಸೆ; ಹಿಮ್ಮುಖವಾಗಿ ಹಾಕುವ ಲಾಗ: ಒಂದು ಗಣೇಮರದ ಸಮೀಪಕ್ಕೆ ಹೋಗಿ ಮೇಲಕ್ಕೆ ಹತ್ತಿ ಅಲ್ಲಿ ಲಾಗ, ಅಂತರಪರಟಿ, ಹಿಂಗಣ್ಣು, ಮುಂಗಣ್ಣು . . . ಮೊದಲಾದ ಸಾಹಸಗಳನ್ನೆಲ್ಲಾ ಮಾಡುತಿರಲಾಗಿ (ಅದೂಟ. ೧೬೬). ೨. ಈಜುವಿಕೆಯ ಒಂದು ವಿಧಾನ; ಹಿಮ್ಮುಖವಾಗಿ ಈಜುವಿಕೆ: ದೊಡ್ಡನ ಕಲ್ಲಿನಲ್ಲಿ ಈಜುವುದೇ ನಮ್ಮ ಊರು ಹುಡುಗರಿಗೆ ದೊಡ್ಡ ಸಮಾರಂಭ. ಅಲ್ಲಿ ಹಿಂಗಣ್ಣು ಮುಂಗಣ್ಣು ಹಾಕುವುದರಲ್ಲಿ ನಿಸ್ಸೀಮನಾದವನಿಗೆ ಯಾವ ತುಂಬುಹೊಳೆಯಲ್ಲೂ ಭಯವಿಲ್ಲ (ಗರುಡಾ. ೧೬೨).
[ಹಿಂ (< ಪಿನ್) + ಕಣ್ಣು (< ಕಣ್)]

**ಹಿಂಗತೆ** 'ಪಿಂಗತೆ' ನೋ.

**ಹಿಂಗರಣೆ** (ನಾ).ಹಿಂದಕ್ಕೆ ಹೊಡೆಯುವ ಲಾಗ: ಕೆಲವು ಎತ್ತರಕ್ಕೆ ಹಾರಿ ಹಿಂಗರಣೆ ಹೊಡೆದು ಕಳಕ್ಕೆ ಇಳಿಯುವುವು. ಕೆಲವು ಬಲು ದೂರ ಸಾಗಬಲ್ಲವು (ಬಾಲಪ್ರ. III, ೧೪೩೫). [?./ ತುಳು. ಹಿಂಗರನೆ = ಹಿಂದಕ್ಕೆ, ಹಿಂದೆ]

**ಹಿಂಗರ್ತರಿ** (ನಾ). ಖಡ್ಗಯುದ್ಧದ ಒಂದು ವರಸೆ: ನಿಂತುಕೊಂಡು ಪಾದದಲ್ಲಿ ಪಾದಪ್ರಕ್ಷೇಪವು ಮುಂಗರ್ತರಿಯೆಂಬುದು ಇದನ್ನೆ ಹಿಂದಕ್ಕೆ ಮಾಡಿದರೆ ಅದು ಹಿಂಗರ್ತರಿಯೆಂಬುದು (ಖಡ್ಗಟೀ.೪-೩೯). 'ಮುಂಗರ್ತರಿ' ಪರಾ.
[ಹಿಂ (< ಪಿನ್)+ ಕರ್ತರಿ]

**ಹಿಂಗಾರ** 'ಪಿಂಗಾರ' ನೋ.

**ಹಿಂಗಾರಿ** 'ಹಿಂಗಾರು' ನೋ.

**ಹಿಂಗಾರಿಮಳೆ** 'ಹಿಂಗಾರುಮಳೆ' ನೋ.

**ಹಿಂಗಾರು, ಹಿಂಗಾರಿ** (ನಾ). ೧. ವರ್ಷದಲ್ಲಿ ಬೀಳುವ ಕಡೆಯ ಮಳೆ: 'ಹಿಂಗಾರುಮಳೆ' ಪರಾ. ೨. ವರ್ಷದ ಕಡೆಯ ಮಳೆಗಾಲದಲ್ಲಿ ಈಶಾನ್ಯದಿಕ್ಕಿನಿಂದ ಬೀಸುವ ಗಾಳಿ; ಈಶಾನ್ಯವಾಣಿಜ್ಯಮಾರುತ: ಇವುಗಳಿಗೆ ಹಿಂದುಸ್ಥಾನದಲ್ಲಿ ಈಶಾನ್ಯ ಪರ್ಜನ್ಯ ಮಾರುತಗಳೆಂದೂ ಹಿಂಗಾರೆಂದೂ ಹೆಸರುಂಟು (ಭೂವಿವ. ೬೩). **ಹಿಂಗಾರಿ:** ೧. ಸಿಂಗಕ್ಕೆ ಗುರು ಬರಲು ಸಂಗರವು ಘನವಕ್ಕು . . . ಕಡೆಯ ಮಳೆ ಹಿಂಗಾರಿಯಕ್ಕು (ಸರ್ವಜ್ಞ.೧೫೮೮); ಒಕ್ಕಲಿಗರು ಹಿಂಗಾರಿಯ ಮಳೆಯನ್ನು ನಂಬಿದಷ್ಟು ಮುಂಗಾರಿಯ ಮಳೆಯನ್ನು ನಂಬುವುದಿಲ್ಲ (ಕಭಾಗ. ೨೦). [ಹಿಂ (< ಪಿನ್) + ಕಾರು$_2$ (< ಕಾರ್$_2$)]

**ಹಿಂಗಾರುಮಳೆ, ಹಿಂಗಾರಿಮಳೆ** (ನಾ).= ಹಿಂಗಾರು ೧: ದೊಡ್ಡಮರಗಳಿರುವ ಅಂತಹ ಕಾಡುಗಳಿಗೆ " ಮುಂಗಾರು, ಹಿಂಗಾರುಮಳೆಗಳ ಕಾಡುಗಳು" ಎಂದು ಹೆಸರು (ಭೂವಿವ.೨೬೦). **ಹಿಂಗಾರಿಮಳೆ:** ಮುಂಗಾರಿಮಳೆಗಳು ಮುಗಿದು ಹಿಂಗಾರಿಮಳೆಗಳು ಪ್ರಾರಂಭವಾಗುವುವು (ಕನ್ನಜಾ. ೧೬೫). [ಹಿಂಗಾರು + ಮಳೆ (< ಮೞೆ)]

**ಹಿಂಗಾಲ್** 'ಪಿಂಗಾಲ್' ನೋ.

**ಹಿಂಗಾಲು** 'ಪಿಂಗಾಲ್' ನೋ.

**ಹಿಂಗಿಸು** 'ಪಿಂಗಿಸು' ನೋ.

**ಹಿಂಗು$_1$** 'ಪಿಂಗು$_1$' ನೋ.

**ಹಿಂಗು$_2$** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹಾಲಿನಿಂದ ತಯಾರಾಗುವ (ಅಡುಗೆ ಮತ್ತು ಔಷಧಿಗಳಿಗೆ ಬಳಕೆಯಾಗುವ) ಒಂದು ಪದಾರ್ಥ: "ಹಿಂಗುಃ, ರಾಮಠಂ-ಈ ೨ ಹಿಂಗು" (ಹಲಾಯು. ೧೧೧-೪೭೭); ಹಿಂಗು ವಚಾದ್ಯಯ ಮರಿಚ ವಿಳಂಗ . . . ಪಶುಮೂತ್ರದಿಂ ವೃಕ್ಷಗಳನಿಂಬಾಗಿ ಪೊರೆಯೆ ಕೀಟಾಪಹರಂ (ಲೋಕೋಪ. ೬-೧೧); ಕೊಡಸಿಗೆ ಚಿತ್ರಂ ಪಿಪ್ಪಲಿ ಒಡನತಿಬಜೆ ಶುಂಠಿ ಹಿಂಗು ಮುಸ್ತೆಗಳಂ ಕೂಡಿಡಿದಿಟ್ಟದರ ಕಷಾಯಂ ಕುಡಿದೊಡೆ ವಾತಾತಿಸಾರಮಂ ಪಿಂಗಿಸುಗುಂ (ಕಲ್ಯಾಕಾ.೪-೧೦); ಬಿಂಗಿಗೆ ಬದಲಾಗಿ ಹಿಂಗು ಹಚ್ಚಿದಂತೆ (ಗಾದ). [ಸಂ.]

**ಹಿಂಗುಕಣ್ಣು** 'ಹಿಂಗುಗಣ್ಣು' ನೋ.

**ಹಿಂಗುಗಣ್ಣು, ಹಿಂಗುಕಣ್ಣು** (ನಾ). ಕಣ್ಣುಗಳು ಹಿಂಗಿ ಹೋಗುವ ಒಂದು ಬಗೆಯ ರೋಗ; ಕಣ್ಣಿನ ಒಂದು ರೋಗ: "ಜೀವಸತ್ವ A" ಯನ್ನು ಸರಿಯಾದ ಪ್ರಮಾಣದಲ್ಲಿ ಹುಡುಗರ ಆಹಾರದಲ್ಲಿ ಸೇರಿಸುವುದರಿಂದ ಈ ಹಿಂಗುಗಣ್ಣನ್ನು ತಡೆಯಬಹುದು (ನಿಮ್ಮದೃ. ೧೧). **ಹಿಂಗುಕಣ್ಣು:** (ಹಿಂಗುಕಣ್ಣುಗಳು) ಇಂಡಿಯ ದೇಶದಲ್ಲಿ ಕೆಲವು ಕಡೆ ಚಿಕ್ಕಮಕ್ಕಳಲ್ಲಿ ಈ ರೋಗವು ಸಾಧಾರಣವಾಗಿ ಕಂಡುಬರುತ್ತದೆ (ನಿಮ್ಮದೃ. ೧೨೨). [ಹಿಂಗು$_1$ (< ಪಿಂಗು$_1$) + ಕಣ್ಣು (< ಕಣ್)]

**ಹಿಂಗುಡಿ** 'ಪಿಂಗುಡಿ' ನೋ.

**ಹಿಂಗುಪತ್ರ** (ನಾ).ಒಂದು ಬಗೆಯ ಸಸ್ಯ; ಇಂಗಳದ ಗಿಡ: "ಪಿಂಪಾ – ಅರಿಸಿನ, ಕುಂದುರುಷ್ಕ, ಹಿಂಗುಪತ್ರ" (ಓಷಧಿ. ೯೭). [ಸಂ.]

**ಹಿಂಗುಪತ್ರಿ** (ನಾ). ೧. ಇಂಗಿನ ಗಿಡದ ಎಲೆಗಳನ್ನು ಹೋಲುವ ಒಂದು ಬಗೆಯ ಎಲೆಯಿಂದ ತಯಾರಿಸಿದ ಔಷಧಿ: (೩). ೨. ಒಂದು ಬಗೆಯ ಸಸ್ಯ: "ಕುವರೀ-ಹಿಂಗುಪತ್ರಿ" (ಓಷಧಿ. ೩೫). [ಸಂ. ಹಿಂಗುಪತ್ರಿನ್]

**ಹಿಂಗುಪತ್ರೆ** (ನಾ). = ಹಿಂಗುಪತ್ರ: "ನಾಳಿಃ-ನಾಳಲು, ತಾಳೀಸಪತ್ರ, ಗಂಧರ್ವದೂರ್ವೆ, ಹಿಂಗುಪತ್ರ, ಬಳ್ಳಿಸೊಂಡೆ" (ಓಷಧಿ. ೮೫). [ಸಂ. ಹಿಂಗುಪತ್ರ]

**ಹಿಂಗುರುಳು** (ನಾ). ತಲೆಯ ಹಿಂಭಾಗದ ಕೂದಲು: ಹಡದವ್ವ ತನ್ನಗಳ ಮಡಿಲಲ್ಲಿ ಕೂರಿಸಿಕೊಂಡು ಹಾರೀದ ಹಿಂಗುರಳ ಬಿಗಿಬಾಚಿ (ಜಗೀತ. ೧೧೧).
[ಹಿಂ (< ಪಿನ್) + ಕುರುಳು$_1$ (< ಕುರುಳ್$_1$)]

**ಹಿಂಗುಲ, ಹಿಂಗುಳ** (ನಾ). ಪಾದರಸವನ್ನು ಗಂಧಕ, ಇಂಗಲೀಕಗಳೊಂದಿಗೆ ಬೆರಸಿ ಮಾಡಿದ ಒಂದು ಬಗೆಯ ದ್ರವ್ಯ,– ವಸ್ತು; ರಸಗಂಧಕ; ರಸಸಿಂಧೂರ: ಚಂದ್ರ, ಹಿಂಗುಲ, ಅರಿದಾಳ ಮುಂತಾದುವುಗಳಿಂದ ಬಣ್ಣದ ಮಸಿಗಳಾಗುತ್ತಿದ್ದುವು (ಕನ್ನಸಂ. ೪೪). **ಹಿಂಗುಳ:** "ಹಿಂಗುಳಂ, ಹಂಸಪಾದಂ, ಕುರುವಿಂದಂ – ಈ ೩ ಇಂಗುಲಿಕಂ" (ಹಲಾಯು. ೧೦೨-೪೬೭). [ಸಂ.]

**ಹಿಂಗುಳ** 'ಹಿಂಗುಲ' ನೋ.

**ಹಿಂಗೂಡು** (ಕ್ರಿ). ಹಿಂದಕ್ಕೆ ಸೇರಿಸು,– ಸಿಕ್ಕಿಸು: ನೀವಿಯನೆತ್ತಿ ಹಿಂಗೂಡಿ ನಗಿಪ ಹಾಸ್ಯಭಾವದ ವಿಟನೊರ್ವನೆಸೆದ (ಕಂಸವಿ. ೬-೧೨೬). [ಹಿಂ (< ಪಿನ್) + ಕೂಡು$_1$]

**ಹಿಂಗೆಜ್ಜೆ** (ನಾ). ಹಿಂದಕ್ಕೆ ಕಟ್ಟಿರುವ ಗೆಜ್ಜೆ: ಜಘನವನಲೆವ ನಿಱಿಗಳ ಹಿಂಗೆಜ್ಜೆಯ ಬಗಸೆಗಂಗಳ . . . ವಾರೆದುಱುಬಿನ ಸೌಂದರ್ಯದ ತಿಗುಳನಾರಿಯರೊಪ್ಪಿದರು (ಕಂಸವಿ. ೨೧-೪೪). [ಹಿಂ (< ಪಿನ್) + ಗೆಜ್ಜೆ]

**ಹಿಂಗೆಯ್, ಹಿಂಗೈ** (ನಾ). ಕೈಯ ಹಿಂಭಾಗ, – ಹಿಂಬದಿ: (೬). **ಹಿಂಗೈ:** "ಪೆಡಗೈ, ಪೆಡಂಗೈ, ಹಿಂದಿನ ಕೈ, ಹಿಂಗೈ" (ಗಂಗಾಮ. ೨೦೫); ನೀರನ್ನು ಕುಡಿದಾಗ ತನ್ನ ತುಟಿಗಳನ್ನು ತನ್ನ ಹಿಂಗೈಯಿಂದ ಒರೆಸಿಕೊಳ್ಳುತ್ತಿದ್ದ (ಮಹಾತ್ಮಾ. ೧೯). [ಹಿಂ (< ಪಿನ್) + ಕೆಯ್$_2$]

**ಹಿಂಗೈ** 'ಹಿಂಗೆಯ್' ನೋ.

**ಹಿಂಗೋಟು** (ನಾ). (ಕರಾ) (ದೋಣಿಯ) ಹಿಂಭಾಗದ ತುದಿ,– ಕೊನೆ: ಐತಾಳರು . . . ಮೈತುಂಬ ಕೆಸರು ಬಳಿದವರಾಗಿ, ದೋಣಿಯ ಹಿಂಗೋಟಿನ ಮೇಲೆ ಸ್ಥಾಪಿತರಾಗಿದ್ದರು (ಮರಮ. ೧೧೧). [ಹಿಂ (< ಪಿನ್) + ಗೋಟು$_1$ (< ಗೊಂಟು)]

**ಹಿಂಗೋಲು** (ನಾ). ೧. ಕಡಿಮೆ ತೂಕ: "ಹಿಂಗೋಲು- ಹಿಂಗಾಣಿತೂಕ; ಕಡಿಮೆತೂಕ" (ಜಾನಕೋ. ೫೬). ೨. ಗಾಡಿ, ನೇಗಿಲು ಮೊದಲಾದುವುಗಳನ್ನು ಎಳೆಯಲು ಎತ್ತುಗಳನ್ನು ಕಟ್ಟಿದಾಗ ಅವುಗಳಲ್ಲೊಂದು ಹಿಂದೆ ಬೀಳುವುದು: ಯಾವಾಗಲೂ ಹಿಂಗೋಲಾಗುವ ಈ ಎತ್ತನ್ನು ಬಿಟ್ಟು ಬೇರೆಯದನ್ನು ಗಾಡಿಗೆ ಕಟ್ಟು (ರೂಢಿ). [ಹಿಂ (< ಪಿನ್) + ಕೋಲು$_1$ (< ಕೋಲ್$_1$)]

**ಹಿಂಚನೂರು** 'ಪಿಂಚನೂರ್' ನೋ.

**ಹಿಂಚಾರಿ** (ನಾ). ಯುದ್ಧದ ಒಂದು ವರಸೆ; ಹಿಂದಕ್ಕೆ ಚಲಿಸುವಿಕೆ: ಹಿಂಚಾರಿಯೊಳು ತೂಗಿ ತಿವಿದನಾ ಪಡಿ ಕೊಡೆ ಹಂಚಿದಂತೆರಡು ಹೋಳಾಯ್ತು (ಭರಚ. ೨೯-೬೯).
[ಹಿಂ (< ಪಿನ್) + ಚಾರಿ$_2$]

**ಹಿಂಚಿಸು** (ಕ್ರಿ). ಹಿಂದೆ ಉಳಿಯುವಂತೆ ಮಾಡು; ಹಿಂದೆ ಹಾಕು: ಉಕ್ಕಿನ ಯುಗದೊಳು ಯಾಂತ್ರಿಕಬಲವದ್ದರ್ಪವ ಹಿಂಚಿಸಿ ಮುಂಬರಿಯೆ (ಅಮತಂ. ೫೫-೮); ಪ್ರಾಣವ ತುಳಿಯುತ ಮನಂ ಮೂಡಿತೋ ಮನಮಂ ಹಿಂಚಿಸಿ ಜ್ಞಾನಂ ಕೂಡಿತೊ (ಗಣೇಶ. ೨೧-೫೪೦). [ಹಿಂಚು (< ಪಿಂಚು$_1$) + - ಇಸು$_3$]

**ಹಿಂಚು$_1$** 'ಪಿಂಚು$_1$' ನೋ.

**ಹಿಂಚು$_2$** 'ಪಿಂಚು$_2$' ನೋ.

**ಹಿಂಚೂಣಿ** (ನಾ). ಹಿಂಭಾಗ; ಹಿಂಬದಿ: ಸುತ್ತಲಿನ ವಾಯು ಒತ್ತಡಕ್ಕಿಂತ ರೆಕ್ಕೆಯ ಮುಂಚೂಣಿಯಲ್ಲಿನ ಒತ್ತಡ ಹೆಚ್ಚಾಗಿಯೂ ಹಿಂಚೂಣಿಯಲ್ಲಿ ಕಡಿಮೆಯಾಗಿಯೂ ಇರುವುದರಿಂದ (ಕವಿಕೋ. I, ೨೫೩). [ಹಿಂ (< ಪಿನ್) + ಚೂಣಿ (< ಚೂಳಿ$_1$)]

**ಹಿಂಚೆ** (ಅ). ಅನಂತರ; ತರುವಾಯ: ಮುಂಚೆ ಕಿನ್ನರ ಶರಣನಸುವಂ ಹಿಂಚೆ ಬಸವರಸನ ಹರಣವಂ ಪಂಚಮುಖನಲಿ ಪಡೆದು ಮೆಱೆದನು ಮಾಚಿದೇವಯ್ಯ (ಬಸವು. ೩೭ ಸೂಚನ).

**ಹಿಂಚೆಮುಂಚೆ** = ಅನಂತರ ಮತ್ತು ಮೊದಲು: ಇರುಳಿನಂಚಿಗೆ ಹಿಂಚೆಮುಂಚೆಗೆ ನಲಿವ ಬೆಳ್ಳಿಯ ಬೆಳ್ಳಿಯೇ (ಮುಕ್ತಕಂ. ೪೧-೧). [< ಹಿಂಚು (< ಪಿಂಚು$_1$)]

**ಹಿಂಜಗಿಸು** (ಕ್ರಿ). ಹಿಮ್ಮೆಟ್ಟಿಸು; ಹಿಂದಕ್ಕೆ ಸರಿಸು: ಆ ಸಿಂಗರದ ನಿರ್ಮಲಿನ ರೂಹಿಗಾನಂಗನಂ ಹಿಂಜಗಿಸಿ ಪಡದ ಮಾಣಿಕ್ಕ ಜಿನಪುಂಗ ವಾಂ ಪಾಹಿ ಪಾಹಿ (ಜಿನಮು. ೩೨-೧೫). [ಹಿಂ (< ಪಿನ್) + ಜಗಿಸು (< ಜರ್ಗಿಸು)]

**ಹಿಂಜರಿ** 'ಪಿಂಜರಿ$_1$' ನೋ.

**ಹಿಂಜರಿಕೆ** (ನಾ). ಹಿಂದೆ ಸರಿಯುವಿಕೆ; ಹಿಮ್ಮೆಟ್ಟುವಿಕೆ: ಯಾವ ಹಿಂಜರಿಕೆಯೂ ಇಲ್ಲದೆ ಮುಂದೆ ನುಗ್ಗುವ ಕೆಚ್ಚು ಅವರಲ್ಲಿದೆ (ರೂಢಿ).
[ಹಿಂಜರಿ (< ಪಿಂಜರಿ$_1$) + - ಇಕೆ]

**ಹಿಂಜರಿತ** (ನಾ). = ಹಿಂಜರಿಕೆ: ಅವರ ಹಿಂಜರಿತದಿಂದ ಪರಿಣಾಮ ಕೆಟ್ಟಿತು (ರೂಢಿ).
[ಹಿಂಜರಿ (< ಪಿಂಜರಿ$_1$) + - ತ$_2$]

**ಹಿಂಜಾಪು** (ನಾ). ಹಿಂದೆ ಇಟ್ಟ ಹೆಜ್ಜೆ: ಭಲೆ ಛಾಪು ಛಾಪು! ಹಿಂಜಾಪು ಕಿತ್ತಲೆ ಎತ್ತು, ಭಲೆ ಸಿದ್ಧಶಿಖರವನ್ನೇರು; ಹತ್ತು! (ಗರಿ. ೨೦-೧೧).
[ಹಿಂ (< ಪಿನ್) + ಚಾಪು$_1$]

**ಹಿಂಜಾವ** (ನಾ). ರಾತ್ರಿಯ ಕಡೆಯ ಭಾಗ; ಪ್ರಾತಃಕಾಲದ ಹಿಂದಿನ ಜಾವ: ಹಾಲೊಳಗೆಯಂಚಿನೊಳು ಸುಣ್ಣದ ಕುಱುಹನಿಕ್ಕಿ ಮೇಲೆ ಹೆಪ್ಪಂ ಬಿಟ್ಟು ಹಿಂಜಾವದೊಳಗೆಯಾ ಹಾಲು ನಸು ಹೆಪ್ಪೆಯಾಗಲಾ ಹೆಪ್ಪ ತೆಗೆದು (ಸೂಪಶಾ. ೨-೯); ಮುಂಜಾವ ಧಾರೆಯಾಯ್ತೆರಡು ಜಾವದೊಳರ್ತಿ ರಂಜಿಸಿ ನಿದ್ರೆ ಹಿಂಗಿದುದು ಹಿಂಜಾವದೊಳು ಮತ್ತೆ ಹೊಸಬರಾಗಿದ್ದರದೇಂ ಜಾತಿಸುಖಿಗಳಿಗೊ ಜಗಕೆ (ಭರಚ. ೪೧-೧೬೯). [ಹಿಂ (< ಪಿನ್) + ಜಾವ$_1$]

**ಹಿಂಜಿ** 'ಪಿಂಜಿ$_2$' ನೋ.

**ಹಿಂಜಿಕೆ** (ನಾ). ೧. ವಿಂಗಡಣೆ. ೨. (ಆಲಂ) (ಸೂಕ್ಷ್ಮವಾದ) ಪರಿಶೀಲನೆ: ಈ ಹಿಂಜಿಕೆಯಲ್ಲಿ ಬೇರೆಯವರ ಅಭಿಪ್ರಾಯಗಳ ಚರ್ಚೆ ಕೆಲಮಟ್ಟಿಗೆ ಬರಬಹುದು (ಕಸಾಚ. ೫೨). [ಹಿಂಜು (< ಪಿಂಜು$_2$) +- ಇಕೆ]

**ಹಿಂಜೀರ** (ನಾ). ಆನೆಯ ಕಾಲನ್ನು ಕಟ್ಟಲು ಉಪಯೋಗಿಸುವ ಹಗ್ಗ ಅಥವಾ ಸರಪಣಿ: "ನಿಗಳಃ, ಪಾದಬಂಧಃ, ಹಿಂಜೀರಃ, ಶೃಂಖಲಾ, ಅಂದಕಃ- ಈ ೫ ಆನೆಯ ಕಾಲ್ಗಟ್ಟು" (ಹಲಾಯು. ೩೭-೭೦). [ಸಂ.]

**ಹಿಂಜು** 'ಪಿಂಜು$_1$' ನೋ.

**ಹಿಂಜೋಲಿ** (ನಾ). ಹಿಮ್ಮುಖವಾದ ಚಲನೆ, – ಅಲುಗಾಟ: ಈ ಮುಂಜೋಲಿ ಹಿಂಜೋಲಿಯ ದೆಸೆಯಿಂದ ನಾನು ಬರೆವುದಾದರೂ ಆಟಗೊಮ್ಮೆ ಸೋಣಕ್ಕೊಮ್ಮೆ (ಕಂಪಾಸಾ. ೧೨). 'ಮುಂಜೋಲಿ' ಪರಾ. [ಹಿಂ (< ಪಿನ್) + ಜೋಲಿ$_3$]

**ಹಿಂಡಲ, ಹಿಂಡಳೆ, ಹಿಂಡುಳೆ, ಹಿಂಡ್ಲಿ** (ನಾ). (ಸೌತೆಜಾತಿಗೆ ಸೇರಿದ, ಕಹಿಯಾದ ಕಾಯಿಗಳನ್ನು ಬಿಡುವ) ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ: ಮತ್ತಂ ಬಹುವಧೆಯೆಂತೆನೆ ಹಸಿಯಲ್ಲ (ಶುಂಠಿ) ಹಸಿ ಅರಿಸಿನ ಉಳ್ಳಿ ಕಬ್ಬು ಹಿಂಡಲ ಶೂರಣಗೆಣಸು ಕೆಸವು ನೆಯ್ದಿಲು ತಾವರೆಯ ಗಡ್ಡೆ ಮೊದಲಾದನಂತ ಕಾಯಂಗಳಂ (ಪಸಾರ. ೩೧೬). **ಹಿಂಡಳೆ :** "ಪೀತಪುಷ್ಪೀ – ಹಿಂಡಳೆ, ಸೌತೆ, ಸಣಬು, ಹಾವುಮೆಕ್ಕೆ" (ಓಷಧಿ. ೯೯). **ಹಿಂಡುಳೆ:** "ಸೌರಾಷ್ಟ್ರಿಯೆನೆ ಹಿಂಡುಳೆ [ಪಾಠಾಂ. ಹಿಂಡು]"(ಮಂಗರಾ. ೪೪-೪೫). **ಹಿಂಡ್ಲಿ:** (೬). [?]

**ಹಿಂಡಲಕಾಯಿ** (ನಾ). ಸೌತೆ ಜಾತಿಗೆ ಸೇರಿದ ಒಂದು ಬಗೆಯ ಕಾಯಿ: ನಮ್ಮ ಪಾರ್ವತಕ್ಕ (ಹಿಂಡಲಕಾಯಿ ಹೊಟ್ಟೆಯವಳು) (ಮೂರುದಾ. ೨೪೧).
[ಹಿಂಡಲ + ಕಾಯಿ$_4$ (< ಕಾಯ್$_4$)]

**ಹಿಂಡಲು** 'ಪಿಂಡಲು' ನೋ.

**ಹಿಂಡಸೆ** (ನಾ). (?): ಬೊಂಕೆಯ ಮಾದನ ಹಳ್ಳದಿಂ ತೆಂಕದಿಡಚಾರ್ಯ್ಯರ ಕಟ್ಟೆ ಮಸೆ ಕಲ್ಲ ಆಲದಿಂ ಊರ ಹಿತ್ತಿಲ ಹಿಂಡಸೆಯ ಕಟ್ಟ (ಎಕ. XIII, ಗುಬ್ಬಿ '೩೦-೭೧; 1331). [?]

**ಹಿಂಡಳೆ** 'ಹಿಂಡಲ' ನೋ.

**ಹಿಂಡಾಕಳು** (ನಾ). ಹಸುಗಳ ಮಂದೆ ,– ಗುಂಪು: ಮರಳಿ ಹೊಡೆ ಹಿಂಡಾಕಳನು ಗೋವರನು ಬಿಡು . . . ಎಂದಬ್ಬರಿಸಿ ಕುರುಕುಲ ಬಾಯ ಬಿಟ್ಟುದು ರಾಯರಿದಿರಿನಲಿ (ಕುವ್ಯಾವಿ. ೭-೩೫); ಕೊಂಡು ಬರಿಸಿದನಖಿಳವಸ್ತುಗಳನಮಲಮಣಿಮಂಡನಾಳಿಗಳಂ ವಿವಿಧ ದುಕೂಲಂಗಳಂ ಹಿಂಡಾಕಳಂ ಮಹಿಷಿಗಳನುತ್ತಮಸ್ತ್ರೀಯರಂ ಗಜ ಹಯಾವಳಿಯನು (ಜೈಮಿಭಾ. ೯-೧೯). [ಹಿಂಡು$_2$ (< ಪಿಂಡು$_2$ ) + ಆಕಳು (< ಆಕಳ್)]

**ಹಿಂಡಾನೆ** 'ಪಿಂಡಾನೆ' ನೋ.

**ಹಿಂಡಿ$_1$** 'ಪಿಂಡಿ$_1$' ನೋ.

**ಹಿಂಡಿ$_2$** 'ಪುಂಡಿ' ನೋ.

**ಹಿಂಡಿಕೆ** 'ಪಿಂಡಿಗೆ' ನೋ.

**ಹಿಂಡಿಗೆ** 'ಪಿಂಡಿಗೆ' ನೋ.

**ಹಿಂಡಿಲು** 'ಪಿಂಡಲು' ನೋ.

**ಹಿಂಡಿಲ್ಗಟ್ಟು** (ಕ್ರಿ). ಒಟ್ಟಾಗಿ ಹೆಣೆದುಕೊಳ್ಳು; ಒಂದಾಗಿ ಕೂಡಿಕೊಳ್ಳು: ಎಳವುಲ್ಗಳಂ ಮೇದು ತಿಳಿನೀರನೀಂಟಿ ನೆಳಲೊಳ್ ಪಟ್ಟಿರ್ದು ಬೆಂಡೇಳ್ದ ಲೋಳೆ ಹಿಂಡಿಲ್ಗಟ್ಟಿ ಮೇವಂ ಮಗುಳ್ಚಿ ಕಟ್ಟಿದಿರ ಪುಲಿಯಂ ತೊಟ್ಟನೆ ಕಂಡು ಭೋಂಕನೆಳ್ದು (ಗಿರಿಕ. ೧-೧೨೫ ವ). [ಹಿಂಡಿಲ್$_0$ (< ಪಿಂಡಲು) + ಕಟ್ಟು$_1$]

**ಹಿಂಡಿಸೊಪ್ಪು** 'ಪಿಂಡಿಸೊಪ್ಪು' ನೋ.

**ಹಿಂಡು$_1$** 'ಪಿಂಡು$_1$' ನೋ.

**ಹಿಂಡು$_2$** 'ಪಿಂಡು$_2$' ನೋ.

**ಹಿಂಡುಕೌಪ** (ನಾ). ಅನೇಕವಾಗಿ ಹರಿದು ಚೂರುಚೂರಾದ ಬಟ್ಟೆ: ದಂಡಕೋಲಿನ ತುದಿಗೆ ಹಿಂಡುಕೌಪವ ಕಟ್ಟಿ ಮುಂಡೆಯರ ಕಂಡು ಮಿಡುಕುವ ಯೋಗಿಯ ಮಂಡೆ ಬೋಳೇಕೆ (ಸರ್ವಜ್ಞ. ೫೮೦). [ಹಿಂಡು$_2$ (< ಪಿಂಡು$_2$) + ಕೌಪ]

**ಹಿಂಡುಗಂಕಣ** 'ಪಿಂಡುಗಂಕಣ' ನೋ.

**ಹಿಂಡುಗಟ್ಟಲೆ** (ಅ). ಗುಂಪುಗುಂಪಾಗಿ; ಒಟ್ಟೊಟ್ಟಾಗಿ: ಬೆಳಗಾದರೆ ಮನೆಯ ಮುಂದೆ ಹಿಂಡುಗಟ್ಟಲೆ ಬಂದು ನಿಲ್ಲುತ್ತಾರೆ ಹಳ್ಳಿಯ ಜನ (ಮರಳಿ. ೬). [ಹಿಂಡು$_2$ (< ಪಿಂಡು$_2$) + ಕಟ್ಟಲೆ$_0$]

**ಹಿಂಡುಗಟ್ಟಿಗೆ** (ನಾ). ಸೌದೆಯ ಹೊರೆ,– ಕಟ್ಟು: ಮನವೊಲಿಯದಂತೆ ಅಸಲನ ತೊಲೆಯ ಹಾಕಿ ಮೊಳೆಯ ಗಳುವ ಬೀಸಿ ಕೆಂದದ ಹಂಜರಗಟ್ಟಂ ಕಟ್ಟಿ ಹಿಂಡುಗಟ್ಟಿಗೆ ಗಳುವಿನ ಸಂದಿಯಲ್ಲಿ ಅಡಗಿತ್ತು (ಚಿಕ್ಕವ. ೨೧೧-೧೨). [ಹಿಂಡು$_2$ (< ಪಿಂಡು$_2$) + ಕಟ್ಟಿಗೆ$_1$]

**ಹಿಂಡುಗಟ್ಟು** (ಕ್ರಿ). ಗುಂಪುಗಟ್ಟು; ಒಟ್ಟಾಗಿ ಸೇರು: ಅಡವಿಯಲ್ಲಿ ಹಿಂಡುಗಟ್ಟಿಕೊಂಡು ತಿರುಗುವ ಗೂಳಿ – ಆಕಳುಗಳ ಮಾಂಸದಿಂದ ಅವನು ಜೀವಿಸುತ್ತಿದ್ದನು (ಬಂಗಾಹ. ೨); ಹಿಂಡುಗಟ್ಟಿ ಜನವು ತಮ್ಮ ಕೈಕೆಲಸವನ್ನು ಬಿಟ್ಟು ಇವರ ಲಾವಣಿಗಳನ್ನು ಕೇಳುತ್ತಿರಲು ಸಾಕು (ಕನ್ನಜಾ. ೯೧). [ಹಿಂಡು$_2$ (< ಪಿಂಡು$_2$) + ಕಟ್ಟು$_1$]

**ಹಿಂಡುಗಣೆ** (ನಾ). ಬಾಣಗಳ ಗುಂಪು,– ಸಮೂಹ: ಕಣೆಕಣೆಗೆ ತೆರಳಿದವು ಕಣೆ ಮಾರ್ಗಣೆಯನಣೆದವು ಹಿಂಡುಗಣೆ ಸಂದಣಿಗಣೆಯಲಕ್ಕಾಡಿದವು (ಕುವ್ಯಾಕ. ೨೩-೭); ಹಿಂಡುಗಣೆಯಂ ಕವಿಸಿ ಮಂದಿಯಂ ಕೊಲುತಿರ್ದಂ . . . ಪುಂಡರೀಕಾಕ್ಷಸೂನು (ಜೈಮಿಭಾ. ೨೨-೨೦). [ಹಿಂಡು$_2$ (< ಪಿಂಡು$_2$)+ ಕಣೆ$_1$]

**ಹಿಂಡುಗಲಕ** (ನಾ). ಗುಂಪನ್ನು ಕಲಕುವವನು, – ಚದುರಿಸುವವನು: ವೀರಬಾಹು ಮಹಾಮದೋನ್ನತದ ಹಿಂಡುಗಲಕನು ವುಗ್ರಕೇಶಿ . . . ಎಂಬತಿಬಲರು ಬಂದರು ರಾಯನೋಲಗಕೆ (ಕುವ್ಯಾವಿ. ಓರಿ೯. ೪-೮). [ಹಿಂಡು$_2$ (< ಪಿಂಡು$_2$) + ಕಲಕು$_1$ (< ಕಲಂಕು$_2$) +- ಅ$_7$]

**ಹಿಂಡುಗವರು** (ನಾ). ಕುಡಿಗಳ ಸಮೂಹ: ಗಂಡುಮಗನಂ ಪಡೆವನೆಂಬಕ್ಕಟಿಂದಮಿಾ ಪುಂಡರೀಕಾಕ್ಷಿ ಮಿಗೆ ರಚಿಸಿದಲರ್ವಂದರದ ಹಿಂಡುಗವರುಗಳೆನಲು ರಂಜಿಸಿತು ಗುಣವತಿಯ ಕುರುಳು ಮೋಹನದ ತಿರುಳು (ಚೀರಮ. ೩-೨೧). [ಹಿಂಡು$_2$ (< ಪಿಂಡು$_2$) + ಕವರು$_0$ (< ಕವಲ್$_2$)]

**ಹಿಂಡುಗೂಟ** (ನಾ). ಒಟ್ಟಾಗಿ ಸೇರುವುದು; ಒಗ್ಗೂಡುವುದು: ದೈವವೀ ದ್ರೌಪದಿಗೆ ಸೀರೆಯನೀವುದಲ್ಲದೆ ಬಿಡಿಸಲಾಪುದೆ ದೈವ ತೊತ್ತಿರ ಹುರುಡುಗಳಸದ ಹಿಂಡುಗೂಟದಲಿ (ಕುವ್ಯಾಸ. ೧೫-೭). [ಹಿಂಡು$_2$ (<ಪಿಂಡು$_2$) + ಕೂಟ]

**ಹಿಂಡುಗೂಡು** 'ಪಿಂಡುಗೂಡು' ನೋ.

**ಹಿಂಡುಗೊಳ್** 'ಪಿಂಡುಗೊಳ್' ನೋ.

**ಹಿಂಡುದಲೆ** (ನಾ). ತಲೆಗಳ ಗುಂಪು,– ಸಮೂಹ.

ಹಿಂಡುದಲೆಯವ = ಹೆಚ್ಚುಸಂಖ್ಯೆಯ ತಲೆಯುಳ್ಳವನು; ರಾವಣ: ಹಿಂಡುದಲೆಯವನಣುಗ ಹನುಮನ ಚಂಡಿಕೆಯ ಹಿಡಿದೆಳೆದು ಬಗ್ಗಿಸೆ ಗಂಡುಗಲಿ ಮುಳಿದವನ ಮುಡಿಯನು ಹಿಡಿದು ಬೀಸಿದನು (ಕೌಶಿರಾ. ೨೮-೫೯). [ಹಿಂಡು$_2$ (< ಪಿಂಡು$_2$) + ತಲೆ$_1$]

**ಹಿಂಡುಮಾತು** 'ಪಿಂಡುಮಾತು' ನೋ.

**ಹಿಂಡುವಕ್ಕಿ** (ನಾ). ಪಕ್ಷಿಗಳ ಗುಂಪು, – ಸಮೂಹ: ಹಿಂಡುವಕ್ಕಿಯನೊರಸಲೆರಗುವ ಗಂಡುಸಾಳುವನಂತೆ ಖಳನುದ್ದಂಡದರ್ಪದಿ ಗದೆಯಲಿಡೆ (ಆನಂರಾ. ೧-೧೧-೨೨). [ಹಿಂಡು$_2$ (< ಪಿಂಡು$_2$) + ಪಕ್ಕಿ]

**ಹಿಂಡುವಲೆ** (ನಾ). ಒಂದು ಬಗೆಯ ಬಲೆ: ದಂಡಿವಲೆಗಳ ತೊಡಕುವಲೆಗಳ ಹಿಂಡುವಲೆಗಳ ಮಯದಂಟಿನ ಮಂಡವಿಗೆಬಲೆಗಳ ಕಿರಾತರು ಕೆದಱಿತಗಲದಲಿ (ಕುವ್ಯಾಅ. ೧೩-೨೩). [ಹಿಂಡು$_2$ (< ಪಿಂಡು$_2$) + ಬಲೆ$_1$]

**ಹಿಂಡುಹೊಳಹು** (ನಾ). ಅಧಿಕವಾದ ಕಾಂತಿ, – ಪ್ರಕಾಶ: ಕಂಡ ಮೃಗ ಮೈದೆಗೆಯದಿಕ್ಕೆಯ ಹಿಂಡುಹೊಳಹಿನ ಹುಲಿಯ ಮೇಕೆಯ ಮಿಂಡವಂದಿಯ ಲಾವಣಿಗೆಯ ಉಲಾಯ ಲಾಲನೆಯ . . . ತೋಱಿಸುವನೇಳಂದನಿಲಜಗೆ ನುಡಿದ (ಕುವ್ಯಾಅ. ೧೩-೧೮). [ಹಿಂಡು$_2$ (< ಪಿಂಡು$_2$) + ಹೊಳಹು (< ಪೊಳೆಪು)]

**ಹಿಂಡುಳಿಕೆ** (ನಾ). ಒಂದು ಬಗೆಯ ಬಳ್ಳಿ: ಬಿಳಿಯ ಸಾಸುವೆ, ಹಾವಿನ ಹೆರೆ, ಹಿಂಡುಳಿಕೆಯ ಕಾಯಿ, ಹೀಲಿ, ಮಂಡೆಯ ನವಿರು, ಕಾಲುಗುರು, ಕೈಯುಗುರು . . . ಇವಂ ಧೂಪವಿಕ್ಕುವುದು (ಬಾಲಚಿ. ೧೩೮-೧೮). 'ಹಿಂಡಲಕಾಯಿ' ಪರಾ. [< ಹಿಂಡುಳಿ?]

**ಹಿಂಡುಳಿ** 'ಹಿಂಡಲ' ನೋ.

**ಹಿಂಡೆ** 'ಪಿಂಡು$_2$' ನೋ.

**ಹಿಂಡೆಕೂಳು** 'ಪಿಂಡುಗೂಟು' ನೋ.

**ಹಿಂಡೆತ್ತು** (ನಾ). ೧. ಎತ್ತುಗಳ ಮಂದೆ,– ಗುಂಪು: "ಕಟ್ಟಿ ಹೇಱಿತ್ತುವಂ ದೌವಾರಿಕನೆನಿಕುಮಾ ಗಂಟಿಕ್ಕುವಂ ಶಣಗನಕ್ಕು ಹಿಂಡೆತ್ತಾಗೆ ಕೊಟ್ಟಿಗೆಯೆನಿಕ್ಕು" (ಮಂಗರಾ. ೧೦೨-೩); ಗಂಡನಾ ಗುಣವನ್ನು ಕಂಡೆನೆಂಬೊಳು ಜಾಣೆ ಹಿಂಡೆತ್ತಿನೊಳಗೆ ಬಸವಾನ ಪಾದಾವ ಕಂಡೆನೆಂಬೋಳು ಕಡುಜಾಣೆ (ಹಳ್ಳಿಯ. ೧೩೮). ೨. ಮಂದೆಯಲ್ಲಿ ಇರುವ ಎತ್ತು; ಹಿಂಡಿನೊಡನೆ ಇರುವ ಎತ್ತು: ಬಂಡೀಯ ತರಸೀರಿ ಹಿಂಡೆತ್ತ ಹಿಡಿಸೀರಿ ಬಂಡೀಗೆ ಬಟ್ಟ ಇಡಸೀರಿ ಗಟ್ಟಾದ ಬಂದಿ ಹರಿದಾವು ಹೊರಕಾಗಿ (ಹಳ್ಳಿಯ. ೪೯). [ಹಿಂಡು$_2$ (< ಪಿಂಡು$_2$) + ಎತ್ತು$_2$ (< ಎಟ್ಟು$_1$)]

**ಹಿಂಡೇಳ್** (ಕ್ರಿ). ಗುಂಪಾಗಿ ಏಳು, – ಮೇಲೇರು: ಹರಿಸದಿಂ ನಾರದಂ . . . ಹಿಂಡೇಳ್ವಾನಂದರೋಮಾಂಚದ ಪೊದರ್ಕೆಗಳಂ ತಾಳ್ದು ನಿಂದಿರ್ದು (ಗಿರಿಕ. ೪-೪೫). [ಹಿಂಡು$_2$ (< ಪಿಂಡು$_2$) + ಏಳ್$_1$ (< ಏಟ್$_1$)]

**ಹಿಂಡೊಡೆ** (ಕ್ರಿ). ೧. ಗುಂಪು ಚದುರು; ಚಲ್ಲಾಪಿಲ್ಲಿಯಾಗು: ಕದಡಿತೀ ಬಲ ರೋಮಪುಳಕವ ಹೊದೆದುದಾ ಬಲ ಹಿಂಡೊಡೆದು ನೆಱೆ ಕದುಬಿತೀ ಬಲ ನೆರೆದುದಾ ಬಲ ನರನ ರಥ ಸುಳಿಯೆ (ಕುವ್ಯಾದ್ರೋ. ೩-೪೭); ಹಿಂಡೊಡೆದು ಗಜಸೇನೆ ಮುಮ್ಮುಳಿಗೊಂಡು ಮುರಿದುದು ಮುಳಿದು ಭೀಮನ ಗಂಡುಗೆಡಿಸುವರಲ್ಲ ಕೌರವದಳದ ಸುಭಟರಲಿ (ಕುವ್ಯಾಕ. ೧೦-೧೮). ೨. ಗುಂಪಿನಿಂದ ಬೇರೆಯಾಗು; ಪ್ರತ್ಯೇಕವಾಗು: ಬೆದರ್ದು ತಡವರಿಸುತ್ತೆ ಪುಲಿಸುಳುಹಿಗಂ ಹರಿಣಯೆದೆಗೆಟ್ಟು ಹಿಂಡೊಡೆದು ಚಲ್ಲವರಿದಂದದಿಂ (ನವಮೋ. ೭-೨೩); ಉದಕದಿಂದೆದ್ದು ಖೋಯಿಡೆ ಬಗ್ಗದ್ದನಿಗೇಳಿ ಹುಲ್ಲೆ ಹಿಂಡೊಡೆದಂದದಿ ಬೆದರಿದವರುಗಳ ಬೆದರಿಸಲು (ನವಮೋ. ೧೦-೫೦); ಹಿಂಡೊಡೆದ ಆಕಳು ಕಂಡ ಕಡೆ (ಗಾದ). [ಹಿಂಡು$_2$ (< ಪಿಂಡು$_2$) + ಒಡೆ$_1$]

**ಹಿಂಡ್ಲಿ** 'ಹಿಂಡಲ' ನೋ.

**ಹಿಂತಲೆ** 'ಹಿಂದಲೆ' ನೋ.

**ಹಿಂತಾಲ, ಹಿಂತಾಳ** (ನಾ). ಒಂದು ಬಗೆಯ ತಾಳೆ; ಕಿರುತಾಳೆ; ಕಿರೀಚಲು: ಅಶೋಕ ವಕುಳ ತಿಲಕ ಹಿಂತಾಲ ತಮಾಲ . . . ಅನೇಕಾನೋಕಹಾನೀಕ ಕಮನೀಯ ಮುಮಂ (ಅಜಿಪು. ೭-೨೦ವ); ಹಾಲೆ ಹೊಂಗೇತಕಿ ವನಸಂಪಿಗೆ ಹಿಂತಾಲ ಹೆಮ್ಮರ ಕಮ್ಮರಗಳು . . . ಬನ್ನಿಗಳ್ಮೇಲಕದರಿ ಮುಸುಕಿಹುವು (ಕಂವಿ. ೧೮-೩೭); ಕರಗ ಸಂತಾಲ ಹಿಂತಾಲ ಮತ್ತಿ ತೇಗು . . . ಬಿಲ್ವಾದಿ ಬಹುವೃಕ್ಷಂಗಳಿಂದೆ ತುಂಬಿ (ಮಹಾವಿ. ೭-೧೮). **ಹಿಂತಾಳ:** ಫಳ ಕರ್ಪೂರ ಲವಂಗ ಲುಂಗ ಲವಳೀ ಹಿಂತಾಳ ಲಾಳೀ ತಮಾಳ ಳತಾಸುಂದರನಂದನಕ್ಕಳುರೆ ಮುಂ ತನ್ನರ್ಚಿಗಳ್ (ಪಂಪಭಾ. ೫-೮೭); ಹಿಂತಾಳ ತಾಳ ತಮಾಲ ತಡಸುಗಳ . . . ನಾನಾಭೂರಿಭೂಜಗಳಿಂದ ಹೊಯ್ದಾಡಿದರು ಸಮರದಲಿ (ತೊರರಾ. ೪-೪-೨೩). [ಸಂ.]

**ಹಿಂತಾಲಿ,** ಹಿಂತಾಳಿ (ನಾ). = ಹಿಂತಾಲ: "ಕರತಾಳಿ ಹಿಂತಾಲಿ [ಪಾಠಾಂ. ೪] ತಾಳಿಯೆನಿಕ್ಕುಂ" (ಮಂಗರಾ. ೧೧೫-೧೫). **ಹಿಂತಾಳಿ:** "ನೀಲತಾಳ – ತಾಳಮರ, ಹಿಂತಾಳಿ" (ಒಷಧಿ. ೮೮). [< ಸಂ. ಹಿಂತಾಲ]

**ಹಿಂತಾಳ** 'ಹಿಂತಾಲ' ನೋ.

**ಹಿಂತಾಳಿ** 'ಹಿಂತಾಲಿ' ನೋ.

**ಹಿಂತಾಳೆ** (ನಾ). = ಹಿಂತಾಲ: "ತಾಳೀ – ತಾಮ್ರವಲ್ಲಿ, ಹಿಂತಾಳಿ, ಶ್ರೀತಾಳಿ" (ಒಷಧಿ. ೬೭). [ಸಂ. ಹಿಂತಾಲ]

**ಹಿಂತಿಕ್ಕು** 'ಪಿಂತಿಕ್ಕು' ನೋ.

**ಹಿಂತಿರುಗು** 'ಪಿಂದಿರುಗು' ನೋ.

**ಹಿಂತುದಿ** 'ಹಿಂದುದಿ' ನೋ.

**ಹಿಂತೆ** 'ಪಿಂತೆ$_2$' ನೋ.

**ಹಿಂತೊಡೆ** 'ಹಿಂದೊಡೆ' ನೋ.

**ಹಿಂತೋಟ** (ನಾ). ಹಿಂದುಗಡೆಯಲ್ಲಿ ಇರುವ ಉದ್ಯಾನವನ; ಹಿಂಬದಿಯ ತೋಟ: ಇಂತೆಂದು ಮರುಮರುಗಿ ಬೊಂಕುತಲ; ಪರತಂತ್ರ ತಾಂ ತೋರದಿರ,- ಕುತಂತ್ರಕೆ ಶರಣುಬಂದು, ಸಂತಸವ ತಳೆದು, ನೆರೆ ಸಂತೆಕಟ್ಟೆಯ ಬಳಿಯ ಹಿಂತೋಟ ಕೈದಿ ನೆರೆದಗೋರೆದುದಿಂತು (ಕವಪು. ೪೨-೪).

[ಹಿಂ (< ಪಿನ್) + ತೋಟ$_1$ (< ತೋಂಟ)]

**ಹಿಂದಟ್ಟು** 'ಪಿಂತಟ್ಟು' ನೋ.

**ಹಿಂದಡ** (ನಾ). ಹಿಂಭಾಗ: ಹೆಡಗಯ್ಯ ಬಿಗಿದ ನೇಣಂ ಕೊಯ್ದು ಬಿಸುಟು ನಿಡುದಡದಲ್ಲಿ ಮೂಡ ಮುಂತಾಗಿ ಕುಳ್ಳಿರಿಸಿ ಹಿಂದಡದಲ್ಲಿ ಕುಸಿದು ನೀಡಡಿಯಿಟ್ಟು ನಿಂದು ಖಡ್ಗವ ಸೆಳೆದಂ ಜಡಿದು ನೋಡಿ (ಪಚಕಾ. ೧೩-೧೨).

[ಹಿಂ (< ಪಿನ್) + ದಡ$_3$ (< ತಡ$_2$)]

**ಹಿಂದಡಿ** (ನಾ). ಹಿಂದಕ್ಕೆ ಇಡುವ ಹೆಜ್ಜೆ: 'ಹಿಂದಡಿಯಿಡು' ಪರಾ. [< ಪಿಂತಡಿ]

**ಹಿಂದಡಿಯಿಡು** (ಕ್ರಿ). ಹಿಂದೆ ಸರಿ; ಹಿಮ್ಮೆಟ್ಟು: ತೊಲಗಿ ಹಿಂದಡಿಯಿಡಲು ಕೀಚಕನಳು ಕದ್ದೆತಂದಬುಜವದನೆಯ ಬಳಿಗೆ ಬಂದನು (ಕುವ್ಯಾವಿ. ೨-೧೭). [< ಪಿಂತಡಿಯಿಡು]

**ಹಿಂದಲು** 'ಪಿಂತು' ಪರಾ.

**ಹಿಂದಲೆ** 'ಪಿಂದಲೆ' ನೋ.

**ಹಿಂದವಿ** (ನಾ). ಹಿಂದೀಭಾಷೆ: ಈಗ ಇಂಗ್ಲಿಷ್‌ಭಾಷೆ ಹೇಗೋ, ಆಗ ಮಹಾರಾಷ್ಟ್ರ ಅಥವಾ ಹಿಂದವಿಯು ಹಾಗೆ ರಾಜಭಾಷೆ ಎನ್ನಿಸಿಕೊಂಡಿತ್ತು (ಮಾಮರಾ. ೨೯); ದರಬಾರಿನ ಕಾಗದಪತ್ರಗಳೆಲ್ಲಾ ಹಿಂದವಿಯಲ್ಲಿ ವಿಶೇಷವಾಗಿ ನಡೆಯುತಾ ಇದ್ದ ಕಾರಣ ಪುಣ್ಯವಂತರಾದ ಮೇಲುತರದ ಜನರು ತಮ್ಮ ಮಕ್ಕಳಿಗೆ ಹಿಂದವಿಯನ್ನು ಕಲಿಸುತ್ತಿದ್ದರು (ಮುಸುಗ. ೧೫).

ಹಿಂದವೀದಫ್ತರ = ಹಿಂದೀಭಾಷೆಯಲ್ಲಿ ಬರೆಯಲಾಗಿರುವ ಕಾಗದಪತ್ರ: ಕೃಷ್ಣ ರಾಯನು ನವಾಬರ ಬಳಿಯಲ್ಲಿ ಬಹಳ ಚಾಲಾಕಾಗಿದ್ದುದರಿಂದ ಹಿಂದವೀದಫ್ತರದ ಕೆಲಸವು ಅವನಿಗೆ ನೇಮಕವಾಯ್ತು (ಮಹಾವಂ. I, ೨೨೨). [← ಪಾರ. ಹಿಂ. ಮರಾ. ಹಿಂದವೀ]

**ಹಿಂದಳ** 'ಪಿಂತು' ಪರಾ.

**ಹಿಂದಾಡು** 'ಹಿಂದೆಯಾಡು' ನೋ.

**ಹಿಂದಿ** (ನಾ). ಉತ್ತರಭಾರತದ ಕೆಲವು ಪ್ರದೇಶಗಳಲ್ಲಿ ಹೆಚ್ಚು ಬಳಕೆಯಲ್ಲಿರುವ, ಭಾರತದ ರಾಷ್ಟ್ರಭಾಷೆಯೆಂದು ಪರಿಗಣಿತವಾಗಿರುವ ಒಂದು ಭಾಷೆ; IP ಅನೇಕ ಸಂಸ್ಕೃತಶಬ್ದಗಳು, ತದ್ಭವಗಳು, ಅರೆಬಿಕ್, ಪರ್ಷಿಯನ್ ಶಬ್ದಗಳನ್ನು ಈ ಭಾಷೆಯು ಒಳಗೊಂಡಿದೆ. ಉತ್ತರಭಾರತದ ವ್ರಜ, ಅವಧಿ ಮುಂತಾದ ಉಪಭಾಷೆಗಳಿಗೂ ಇದು ಅನ್ವಯವಾಗುತ್ತದೆ: ಸಂಸ್ಕೃತದ 'ಸಿಂಧು' ಅಥವಾ 'ಸಿಂಧಿ' ಶಬ್ದಗಳು ಪರ್ಷಿಯನ್ ಭಾಷೆಯಲ್ಲಿ 'ಹಿಂದ್' ಅಥವಾ 'ಹಿಂದಿ' ಆಗಿವೆ (ಭಾರದ. ೪೨೬). [← ಪಾರ. ಹಿಂ. ಮರಾ. ಹಿಂದೀ]

**ಹಿಂದಿಕ್ಕು** 'ಪಿಂತಿಕ್ಕು' ನೋ.

**ಹಿಂದಿಡು** (ಕ್ರಿ). ೧. (ಹೆಜ್ಜೆಯನ್ನು) ಹಿಂದಕ್ಕೆ ಇಡು; ಹಿಮ್ಮೆಟ್ಟು: ಅಡಿಯ ಮುಂದಿಡೆ ಸ್ವರ್ಗ ಅಡಿಯ ಹಿಂದಿಡೆ ನರಕ (ಸರ್ವಜ್ಞ. ೭೯೦). ೨. ಮರೆಮಾಡು; ಅಡಗಿಸು: ನಾನಿನ್ನು ಮುಂದೆ ಅಕ್ರಮಸಂಭಾವನೆಯನ್ನು ತೆಗೆದುಕೊಳ್ಳುವುದಿಲ್ಲ. ಲಂಚದ ಆಶೆಯಿಂದ ರಿಕಾರ್ಡುಗಳನ್ನು ಹಿಂದಿಡುವುದಿಲ್ಲ (ಪಂಜಪಂ. ೧೬೬).

[ಹಿಂದು$_1$ (< ಪಿಂತು) + ಇಡು$_1$]

**ಹಿಂದಿರಿಸು** 'ಪಿಂತಿರಿಸು' ನೋ.

**ಹಿಂದಿರುಗಿಸು** (ಕ್ರಿ). ೧. ಹಿಮ್ಮುಖವಾಗಿ ತಿರುಗಿಸು; ಹಿಂದಕ್ಕೆ ತೆರಳುವಂತೆ ಮಾಡು; ಮರಳಿಸು: ನದಿಯ ಪ್ರವಾಹವನ್ನು ಹಿಂದಿರುಗಿಸಿ ನದಿಮೂಲಕ್ಕೊಯ್ಯಲು ಸಾಧ್ಯವಿಲ್ಲ (ಮಣಸ. ೪). ೨. ಹಿಂದಕ್ಕೆ ಕೊಡು; ವಾಪಸ್ಸುಮಾಡು: ಕತ್ತೆಯ ಒದೆಯನು ಹಿಂದಿರುಗಿಸಿದರೆ ನೋವಿನ ಬಹು ಪಾಲು ನಿನಗೆ (ಇಂಚಾಪ. ೭೭-೭೪).

[ಹಿಂದಿರುಗು (< ಪಿಂದಿರುಗು) + -ಇಸು$_1$]

**ಹಿಂದಿರುಗು** 'ಪಿಂದಿರುಗು' ನೋ.

**ಹಿಂದೀಯ** (ನಾ). ಹಿಂದುದೇಶಕ್ಕೆ ಸೇರಿದವನು; ಹಿಂದೂಸ್ಥಾನದವನು: ಹಿಂದುಸ್ಥಾನವೇ ದಾಸ್ಯದಲ್ಲಿ ತೊಳಲಾಡುವವರೆಗೆ ಚಟಗಳಿಗೆ ದಾಸನಾಗದ ಹಿಂದೀಯನು ಯಾರು? (ಮುಂಗಾಪು. ೩೮). [< ಹಿಂದು$_2$]

**ಹಿಂದು$_1$** 'ಪಿಂತು' ನೋ.

**ಹಿಂದು$_2$,** ಹಿಂದೂ (ನಾ). ಭಾರತದೇಶದಲ್ಲಿ ವಾಸಿಸುತ್ತಿದ್ದು, ಅಲ್ಲಿಯ ಸನಾತನಧರ್ಮವನ್ನು ಆಚರಿಸಿಕೊಂಡು ಬಂದಿರುವ ಜನಾಂಗಕ್ಕೆ ಸೇರಿದ ವ್ಯಕ್ತಿ; IP ಇದು ಮುಸ್ಲಿಮರು ಭಾರತವನ್ನು ಪ್ರವೇಶಿಸಿದಾಗ, ಇಲ್ಲಿನ ದೇಶೀಯರನ್ನು ನಿರ್ದೇಶಿಸಿ ಕರೆಯಲು ಬಳಸಿದ ಪದ: ಯಿದಕ್ಕೆ ಯಾವನಾನೊಬ್ಬ ತಪ್ಪಿದರೆ ಹಿಂದು ತಪ್ಪಿದರೆ ಕಾಸಿಯಲಿ ಆಕಳ ಕೊಂದ ಪಾಪಕೆ ಹೋಹರು (ಇಆ. IX, ೯೯-೫;?); ಹಿಂದು ಜೈನ ಮುಸ್ಲೀಮ ಕ್ರೈಸ್ತರಾವೊಂದೇ ಬಾಂಧವರೆಮ್ಮಾ ತಂದೆ ದೇವರೊಬ್ಬನೆ (ಗಿಳಿವಿಂ. ೪೬-೪); ನಾವು ಹಿಂದೂಸ್ಥಾನದವರು; ನಾವು ಹಿಂದುಗಳು (ಮೇದಿಮ. ೧೧). **ಹಿಂದೂ:** ಸರ್ವಜನಾಂಗದ ಶಾಂತಿಯ ತೋಟ, ರಸಿಕರ ಕಂಗಳ ಸೆಳೆಯುವ ನೋಟ. ಹಿಂದೂ ಕ್ರೈಸ್ತ ಮುಸಲ್ಮಾನ ಪಾರಸಿಕ ಜೈನರುದ್ಯಾನ (ಕೊಳಲು. ೧೦೭-೧೧); ಪುರಾತನಭಾರತದ ಹಿಂದೂವೈಭವಗಳನ್ನೂ ರಾಜ್ಯಭಾರವನ್ನೂ ಹಿಂದೂಗಳು ಮರೆಯಲಾರರಾಗಿದ್ದಾರೆ (ಇಸ್ಲಾಂಸಂ. ೨೭).

ಹಿಂದುರಾಯ ಸುರತ್ರಾಣ, ಹಿಂದೂರಾಯ ಸುರತ್ರಾಣ = ವಿಜಯನಗರದ ಕೆಲವು ರಾಜರು ಹೊಂದಿದ್ದ ಒಂದು ಬಿರುದು; IP 'ಸುರತ್ರಾಣ' ಎಂಬುದು ಮುಸ್ಲಿಮರ ರಾಜವಂಶದ 'ಸುಲ್ತಾನ' ಎಂಬುದಕ್ಕೆ ಬದಲಾಗಿ ಸ್ವೀಕಾರ ಮಾಡಿಕೊಂಡಿರುವ ಬಿರುದುಸೂಚಕಪದ: ಹಿಂದುರಾಯಸುರತ್ರಾಣ . . . ಶ್ರೀವೀರಪ್ರತಾಪ ಹರಿಹರರಾಯರು (ಸೌಇಇ. IX-ii, ೪೨೫-೪; 1401); ಹಿಂದುರಾಯಸುರತ್ರಾಣ ದುಷ್ಟಶಾರ್ದೂಲ ಮರ್ದ್ದನಃ (ಎಕ. VI(R), ಕೃಷ್ಣರಾ. ೯೯-೬೩ ;1508); ಮೂರು ರಾಯರ ಗಂಡಾಂಕಃ ಪರರಾಯಭಯಂಕರಃ ಹಿಂದೂರಾಯಸುರತ್ರಾಣ ಇತ್ಯಾದಿ ಬಿರುದೋನತಃ (ಎಕ. III (R), ಗುಂಡ್ಲುಪೇ. ೧೪೭-೩೧; 1448). [< ಸಂ. ಸಿಂಧು, ಸಿಂಧೂ]

**ಹಿಂದುಗಡೆ$_1$** 'ಪಿಂದುಗಡೆ' ನೋ.

**ಹಿಂದುಗಡೆ$_2$** (ಅ). ನಂತರ; ತರುವಾಯ: ಅದರ ಮಾತು ಹಿಂದುಗಡೆ. ಮೊದಲು ಕಾರಣವನ್ನಂತೂ ತಿಳಿಸು (ದಾಸಪು. ೭೬). [< ಹಿಂದುಗಡೆ$_1$]

**ಹಿಂದುಗಳೆ** 'ಪಿಂದುಗಳೆ' ನೋ.

**ಹಿಂದುಗೊಳ್** 'ಪಿಂದುಗೊಳ್' ನೋ.

**ಹಿಂದುಟಪಿ** (ನಾ). ಒಂದು ಬಗೆಯ ಸಸ್ಯ: "ಅಮರಾ – ದೊಡ್ಡ ನೀಲಿ, ಹಿಂದುಟಪಿ, (೧) ವಶ್ಚಿಕಾಳಿ" (ಒಷಧಿ. ೪). [?]

**ಹಿಂದುದಿ,** ಹಿಂತುದಿ (ನಾ). ಹಿಂಭಾಗದ ತುದಿ; ಹಿಂಬದಿಯ ಅಂಚು: ಈ ತೋಪಿನ ಅಳತೆ ಮಾಪುಗಳು ಹ್ಯಾಗಂದರೆ ಉದ್ದ ೨೧ ಫೂಟು ೨ ಇಂಚು, ಹಿಂದುದಿಯಲ್ಲಿ ಹೊರಸುತ್ತಿನ ವ್ಯಾಸ ೪ ಫೂಟು ೪ ಇಂಚು (ಕಭಾಗ. ೫೩೭). **ಹಿಂತುದಿ:** ಒಂದೆರಡು ನಿಮಿಷಗಳಲ್ಲಿ ಒಬ್ಬ ಗಂಡಸು ಒಬ್ಬ ಹೆಂಗಸು ಎಡಬದಿಯಿಂದ ನಡೆದು ಬಂದು ರಂಗಭೂಮಿಯ ಹಿಂತುದಿಯ ಕಡೆಗೆ ಸಾಗುವರು (ಅಶ್ವಮೇ. ೨).

[ಹಿಂ (< ಪಿನ್) + ತುದಿ]

**ಹಿಂದುದೇಶ ,** ಹಿಂದೂದೇಶ (ನಾ). ಭಾರತ; ಇಂಡಿಯಾ: ಹಿಂದುದೇಶದಲ್ಲಿ ಬೇಸಗೆಕಾಲದಲ್ಲಿ ಸೂರ್ಯ ನೇರವಾಗಿ ಕರ್ಕಾಟಕ ಸಂಕ್ರಾಂತಿವೃತ್ತದ ಮೇಲೆ ಇರುತ್ತಾನೆ (ಭೂವಿವ. ೬೩). **ಹಿಂದೂದೇಶ:** ಇವನ ಕಾಲದಲ್ಲಿ ಬ್ರಾಹ್ಮಸಮಾಜ ಹಿಂದೂದೇಶದ ಕ್ರೈಸ್ತವ್ಯಕ್ತಿಯಾಯಿತು (ಭಾರದ. ೩೨೦). [ಹಿಂದು + ದೇಶ]

**ಹಿಂದುವ** (ನಾ). = ಹಿಂದೀಯ: ನಮ್ಮ ರಾಣುವೆಯ ಧನ್ವಿಗಳ ಭಂಗಿಸಲಂ ದುಮ್ಮಹದಿಂದ ಹಿಂದುವನು ನಮ್ಮಲ್ಲಿಗೀ ಬಿಲ್ಲನಟ್ಟಿದನೆಂದುಜೆ ದುಮ್ಮಾನವ ತಾಳಿದನು (ಕುರಾಸಾಂ. ೧೮-೫೭).

**ಹಿಂದುವರಾಯ ಸುಪುತ್ರ** = ಹಿಂದುವರಾಯನೆಂಬ ಬಿರುದನ್ನು ಹೊಂದಿದ್ದ ವಿಜಯನಗರದ ಒಬ್ಬ ಅರಸನ ಪುತ್ರ: ಶ್ರೀಮನ್ಮಹಾರಾಜಾಧಿರಾಜ ಪರಮೇಶ್ವರ ಪೂರ್ವಪಶ್ಚಿಮ ದಕ್ಷಿಣೋತ್ತರ ಚತುಸ್ಸಮುದ್ರಾಧೀಶ್ವರ ಹಿಂದುವರಾಯ ಸುಪುತ್ರಾಣಾಂ (ಎಕ. III (R), ಗುಂಡ್ಲುಪೇ. ೭೮-೪; 1422). [< ಹಿಂದು$_2$]

**ಹಿಂದುವರಾಳಿ** (ನಾ). [ಸಂಗೀತ] ಕರ್ನಾಟಕಪದ್ಧತಿಯ ರಾಗಗಳಲ್ಲಿ ಒಂದು; ವರಾಳಿರಾಗದ ಒಂದು ಪ್ರಭೇದ: ಹಿಂದುವರಾಳಿಯನೊರ್ವನಾಲಾಪಿಸೆ ಹಿಂದುಳಿಯದ ವನವೆಲ್ಲ ಒಂದು ಘಳಿಗೆಯೊಳೆ ಪೂತಳರ್ಮಿಡಿವಣ್ಗಳೊಂದುಗೂಡಿರ್ದುವೇನೆಂಬ (ಭರತ. ೬೪-೧೦). [ಸಂ. ಹಿಂದುವರಾಲೀ]

**ಹಿಂದುಸ್ತಾನಿ,** ಹಿಂದುಸ್ಥಾನಿ, ಹಿಂದೂಸ್ತಾನಿ, ಹಿಂದೂಸ್ಥಾನಿ (ಗು). ೧. ಹಿಂದುಸ್ಥಾನದ; ಹಿಂದುದೇಶದ. (ನಾ). ೨. ಅನೇಕ ಸಂಸ್ಕೃತಶಬ್ದಗಳನ್ನೂ ಸಂಸ್ಕೃತದ ತದ್ಭವಗಳನ್ನೂ ಪರ್ಷಿಯನ್ ಮತ್ತು ಅರೆಬಿಕ್ ಶಬ್ದಗಳನ್ನೂ ಒಳಗೊಂಡಿರುವ (ಉರ್ದು) ಭಾಷೆ: ಅನಂತರ ಕನ್ನಡಕ್ಕೆ ಬಂದ ಸಂಬಂಧವೆಂದರೆ ಹಿಂದುಸ್ತಾನಿಭಾಷೆಯನ್ನಾಡುವ ಜನರದು (ಭಾಷಾಶಾ. ೧೭೭). ೩. ಉರ್ದುಮಿಶ್ರಿತವಾದ ಹಿಂದೀಭಾಷೆ. **ಹಿಂದುಸ್ಥಾನಿ:** ೨. ಸಂಸ್ಕೃತಸಂಬಂಧಭಾಷೆಗಳಾದ - ಬಂಗಾಳಿ, ಉರಿಯ, ಹಿಂದಿ, ಪಂಜಾಬಿ, ಮರಾಠಿ, ಗುಜರಾಥಿ, ಸಿಂಧಿ, ಹಿಂದುಸ್ಥಾನಿ, ಉತ್ತರ ಹಿಂದುಸ್ಥಾನದ ಭಾಷೆಗಳು (ಭೂಗೋಳ . ೩೮). **ಹಿಂದೂಸ್ತಾನಿ:** ೨. ಹಿಂದೂಸ್ತಾನಿ ಭಾಷೆಯು ಈ ದೇಶದ ಎಲ್ಲ ಭಾಗಗಳಲ್ಲಿಯೂ ಇರುವುದಲ್ಲದೆ ಸಾಮಾನ್ಯವಾಗಿ ಮಹಮ್ಮದೀಯರಿಗೆ ಮಾತೃಭಾಷೆಯಾಗಿದೆ (ಪೂರಣ. II, ೧೭೭). **ಹಿಂದೂಸ್ಥಾನಿ:** ೨. ಹಿಂದೂಸ್ಥಾನಿ ಅಥವಾ ಉರ್ದುಭಾಷೆಯು ಸಾಮಾನ್ಯವಾಗಿ ಈ ದೇಶದಲ್ಲಿರುವ ಮುಸಲ್ಮಾನರಿಗೆಲ್ಲ ಮಾತೃಭಾಷೆಯಾಗಿದೆ ( ಪೂರಣ. I, ೧೧೭).

[← ಪಾರ. ಹಿಂ. ಹಿಂದೂಸ್ತಾನೀ]

**ಹಿಂದುಸ್ಥಾನ,** ಹಿಂದೂಸ್ಥಾನ (ನಾ). ೧. ಹಿಂದೂಗಳು ಇರುವ ಸ್ಥಳ,- ಪ್ರದೇಶ; ಭಾರತ: ಬಂಗಾಳದಲ್ಲಿಯೂ, ಮತ್ತು ಮಧ್ಯಹಿಂದುಸ್ಥಾನದಲ್ಲಿಯೂ ಕಲ್ಲಿದ್ದಲೂ ಪಂಜಾಬ್‌ದೇಶದಲ್ಲಿ ಕಲ್ಲುಪ್ಪೂ, ಸಿಕ್ಕುತ್ತವೆ (ಭೂಗೋಳ. ೩೭). **ಹಿಂದೂಸ್ಥಾನ:** ೨. ಭಾರತದ ಉತ್ತರದಿಕ್ಕಿನ ಕೆಲವು ಪ್ರದೇಶ; ಉತ್ತರಭಾರತ: ಹಿಂದಿ ಶಬ್ದಕ್ಕೆ 'ಹಿಂದೂಸ್ಥಾನಕ್ಕೆ ಸಂಬಂಧಿಸಿದ' ಎಂದು ಅರ್ಥ. 'ಹಿಂದೂಸ್ಥಾನದಲ್ಲಿ ವಾಸಿಸುವವರು' ಮತ್ತು 'ಹಿಂದೂಸ್ಥಾನದವರು ಬಳಸುವ ಭಾಷೆ' ಎಂದೂ ಸಹ ಈ ಶಬ್ದಕ್ಕೆ ಅರ್ಥವಾಗುತ್ತದೆ (ಭಾರದ. ೪೫೭). [ಹಿಂದು$_2$ + ಸ್ಥಾನ]

**ಹಿಂದುಸ್ಥಾನಿ** 'ಹಿಂದುಸ್ತಾನಿ' ನೋ.

**ಹಿಂದುಳಿ** 'ಪಿಂದುಟಿ' ನೋ.

**ಹಿಂದುಳಿಸು** (ಕ್ರಿ). ಹಿಂದೆ ಉಳಿಯುವಂತೆ ಮಾಡು; ತಡೆ; ಪ್ರತಿಬಂಧಿಸು: ಅವರಿತ್ತ ಶಾಪವ ಹಿಂದುಳಿಸಲ್‌ಬಾರದನುಭವಿಸಬೇಕೆಂದಂ (ದಶಾವ. ೪-೧೭).

[ಹಿಂದುಳಿ (< ಪಿಂದುಟಿ) + - ಇಸು$_3$]

**ಹಿಂದುಳುಹು** (ಕ್ರಿ). ಹಿಂದೆ ಉಳಿಯುವಂತೆ ಮಾಡು; ಹಿಂದುಳಿಸು: ಮುಂದೆ ಹರಿದರು ಪಾಂಡುತನಯರ ನಂದನರು ತಾವೈವರೀತನ ಹಿಂದುಳುಹಿ ಹೇರಾಳದ ಚತುರ್ಬಲವ (ಕುವ್ಯಾಕ. ೩-೧೭).

[ಹಿಂದು$_1$ (< ಪಿಂತು) + ಉಳುಹು (< ಉಳಿಪು)]

**ಹಿಂದೂ** 'ಹಿಂದು$_2$' ನೋ.

**ಹಿಂದೂಡು** (ಕ್ರಿ). ೧. ಹಿಂದೆ ಸರಿಯುವಂತೆ ಮಾಡು; ಸೋಲಿಸು: ಜಮೀನ್ದಾರನ ಲಾರಿಯನ್ನು ಹಿಂದೂಡಲು ಭಲೆ ಬಾಡಿಗೆಯ ಲಾರಿಗೆಲ್ಲಿ ಸಾಧ್ಯ( ಜಮೀನ್ದಾ. ೬); ನೀತಿಬಾಹಿರರಾದ ಅಧಿಕಾರಿಗಳು . . . ಅವನನ್ನು ಹಿಂದೂಡಿದರು (ಪುನರು. ೩೩೩). ೨.(ಪೂರ್ವಭಾವಿಯಾಗಿ ನಿಶ್ಚಿತವಾದ ಒಂದು ಕಾರ್ಯಕ್ರಮದ ಸಮಯವನ್ನು) ಹಿಂದಕ್ಕೆ ಹಾಕು: ಮುಂದಿನ ತಿಂಗಳಿಗೆ ಇದ್ದ ಸಾರ್ವಜನಿಕಸಭೆಯನ್ನು ಈ ತಿಂಗಳಿಗೇ ಹಿಂದೂಡಿದ್ದಾರೆ (ರೂಢಿ).

[ಹಿಂ (< ಪಿನ್) + ದೂಡು (< ದೂಂಟು$_1$)]

**ಹಿಂದೂದೇಶ** 'ಹಿಂದುದೇಶ' ನೋ.

**ಹಿಂದೂಧರ್ಮ** (ನಾ). ಭಾರತದೇಶದಲ್ಲಿ ಪ್ರಾಚೀನಕಾಲದಿಂದಲೂ ಆಚರಣೆಯಲ್ಲಿ ಉಳಿದುಕೊಂಡು ಬಂದಿರುವ ಒಂದು ಸನಾತನಧರ್ಮ: ಹಿಂದೂಧರ್ಮದ ಸತ್ತ್ವಪರೀಕ್ಷೆಯ ಕಾಲ ಅದು (ಭಾರದ. ೩೧೭).

[ಹಿಂದೂ (< ಹಿಂದು$_2$) + ಧರ್ಮ]

**ಹಿಂದೂಮತ** (ನಾ). = ಹಿಂದೂಧರ್ಮ: ಈ ದೇಶದಲ್ಲಿ ೨ ಭಾಗ ಜನರು ಹಿಂದೂಮತದವರು (ಭೂರಣ. II, ೧೭೫); ಹಿಂದೂಮತ ಪ್ರಪಂಚದ ಧರ್ಮಗಳಲ್ಲಿರುವ ಯಾವ ಅಂಶವನ್ನೂ ಬಿಟ್ಟಿಲ್ಲ (ಭಾರದ. ೩೯). [ಹಿಂದೂ (< ಹಿಂದು$_2$) + ಮತ]

**ಹಿಂದೂಸ್ಥಾನ** 'ಹಿಂದುಸ್ಥಾನ' ನೋ.

**ಹಿಂದೂಸ್ಥಾನಿ** 'ಹಿಂದುಸ್ಥಾನಿ' ನೋ.

**ಹಿಂದೆ** 'ಪಿಂತೆ$_2$' ನೋ.

**ಹಿಂದೆಗೆ** 'ಪಿಂದೆಗೆ' ನೋ.

**ಹಿಂದೆಯಾಡು,** ಹಿಂದಾಡು (ಕ್ರಿ). ೧. ಹಿಂದೆ ಹೇಳು, - ನುಡಿ. ೨. ಪರೋಕ್ಷದಲ್ಲಿ ಆಡಿಕೊಳ್ಳು; ಮರೆಯಲ್ಲಿ ಆಕ್ಷೇಪಿಸು: ಹೋಗಬಿಟ್ಟು ಜಂಗಮವ ಹಿಂದೆಯಾಡುವನ ಬಾಯಲಿ ಮೆಟ್ಟಿ ಹುಡಿ ಹೊಯ್ಯದೆ ಮಾಣ್ಬನೆ ಕೂಡಲಸಂಗಮದೇವ (ಬಸವ. ೪೯೯). **ಹಿಂದಾಡು:** ೧. ದೂರನ್ನು ಎದುರಿಗೆ ಆಡು, ಹೊಗಳನ್ನು ಹಿಂದಾಡು (ಗಾದೆ). ೨. ನನ್ನೀ ನುಡಿ ತೆರೆ ಎದೆ- ಗುಡಿ ದೇವರ ಬರಮಾಡಿ: ಕಡಿದಾಡುವಿರೇತಕ್ಕಿದು ದೆವ್ವನ ಮುಂದೂಡಿ, ನಾಗನ ನಾಲಿಗೆಯಾಡಿಸಿ ಅಣಗಿಸಿ ಹಿಂದಾಡಿ? (ಸೂರ್ಯಪಾ. ೩೭-೧೧).

[ಹಿಂದೆ (< ಪಿಂತೆ$_2$) + ಆಡು$_1$]

**ಹಿಂದೆರಳು** (ಕ್ರಿ). ಹಿಂದಕ್ಕೆ ಹೋಗು,- ತೆರಳು: ನೋಡ ಬಂದವರಲ್ಲ ಮಮ್ಮಲ ಮರುಗಿ ಒಬ್ಬೊಬ್ಬರೆ ಹಿಂದೆರಳಿದರು (ಗೊಲ್ಲೊ.ಥಾ. Viii ಮುನ್ನುಡಿ); ಅವರು . . . ಅರಮನೆಗೆ ಹಿಂದೆರಳಿದರು (ಮಣಿಸ. ೫೧). [ಹಿಂ (< ಪಿನ್) + ತೆರಳು (< ತೆರಳ್)]

**ಹಿಂದೆಸೆ** 'ಪಿಂದೆಸೆ' ನೋ.

**ಹಿಂದೆಹೊನ್ನು** (ನಾ). ಒಂದು ಬಗೆಯ ನಾಣ್ಯ; ಬಂಗಾರದ ನಾಣ್ಯವಿಶೇಷ: ಇದಲ್ಲದೆ ಇನ್ನೂ ಇತರ ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು ಯಾವುವೆಂದರ:- ೧ ಗಬರು ೧ ಪ್ರಿಯಕಾವೇರಿ . . . ೧ ಸಣ್ಣಗಿರಿ ೧ ಹಿಂದೆಹೊನ್ನು (ಚಿತ್ರಪಾ. ೧೦೩).

[ಹಿಂದೆ?.+ ಹೊನ್ನು$_1$ (< ಪೊನ್)]

**ಹಿಂದೊಂಡೆ** (ನಾ). ಗಂಟಲಿನ ಹಿಂಭಾಗ: ಬಿಸುನೆತ್ತರ್ ತೊಗಲಲ್ಕು ಕರ್ಬಸು ಕರುಳ್ ಓಂದೊಂಡೆ ಖಂಡಂ ಮಿದುಳ್ . . . ಮಳಂ ಮಱುಕಮುಗ್ರವ್ಯಾಧಿ ದುರ್ಗಂಧ ಮುರ್ವಿಸುಗುಂ ಪೇಸು ಪತಂ ಕರಂ ಕಿಸುಗುಳಂ ಕಾಯಂ ಶುಚಿಪ್ರಾಯಮೇ (ಪುಷ್ಪಪು. ೧೩-೪೯). [ಹಿಂ (< ಪಿನ್) + ತೊಂಡೆ$_3$]

**ಹಿಂದೋಲ,** ಹಿಂದೋಳ (ನಾ). ೧. ಉಯ್ಯಾಲೆ; ಜೋಕಾಲಿ. ೨. [ಸಂಗೀತ] ಒಂದು ರಾಗದ ಹೆಸರು. **ಹಿಂದೋಳ:** ೧. ಮುಂದೊಂದು ಮಾಕಂದಮಹೀಜದ ತುಱುಂಗಿದ ಶಾಖಾಗ್ರದ ಮೆಱೆವ ಹಿಂದೋಳದೊಳ್ . . . ಉಯ್ಯಲಾಡಿದಳ್ (ಶಾಂತೀಶ್ವ. ೫-೧೧೪ ವ). ೨. ಹಿಂದೋಳರವಕ್ಕೆ ಮಲ್ಲಿಗೆಗೆ ಬೆಳ್ದಿಂಗಳ್ಗೆ ತಣ್ಣಾಳಿಗಿನ್ನೆನಸುಂ ಕ್ರೂರತೆಯಂ ನೆಗಟ್ಟದಪನೋ ಅಕ್ರೂರನೆಂತಾದನೀತನತಿಕ್ರೂರನವೋಘಮಂದರಟಲಿಂದ ಕ್ರೂರನಂಗೋಪಿಯರ್ (ಜಗವಿ. ೫-೮೦); ಮಾಳವಿಯಾ . . . ಗುಜ್ಜರಿಯಾ ಹಿಂದೋಳಂ ವಸಂತಭೈರವಿ ಗೌಳಮನಾ ವೀಣೆಯಲ್ಲಿ ಮುನಿ ಬಾಜಿಸಿದಂ (ವೀರವಿ. ೬-೪೯); ಮಧು ಮಾಧವಿ ಶಂಕರಾಭರಣ ಹಿಂದೋ[ಪಾಠಾಂ. ದೂ]ಳ ಬಂಗಾಳ ಗುಂಡಕ್ರಿಯೆ . . . ಕರ್ನಾಟಕ ಬಂಗಾಳಮೆಂಬಿಪ್ಪತ್ತೆ ರಾಗಾಂಗದಿಂದಾದ ರಾಗಂಗಳು (ವಿವೇಕ. ೧೮೮). [ಸಂ.]

**ಹಿಂದೋಳ** 'ಹಿಂದೋಲ' ನೋ.

**ಹಿಂದೋಳರಾಗ** (ನಾ). = ಹಿಂದೋಲ ೨: ಮೃದುಳ ಹಿಂದೋಳರಾಗರವದೊಡನೆ ಲೀಲಾಂದೋಳ ಚೀತ್ಕಾರರವಮೊಗೆಯೆಯುಂ (ಚಂದ್ರಪ್ರ. ೭-೬೧ ವ); ಆರೋಹಣ ಅವರೋಹಣಕ್ರಮದಿಂದ . . . ಹಿಂದೋಳರಾಗವಂ ನುಡಿಯಿಸುವ ಸುಂದರಿಯಂ ನೋಡಿ (ಸೌಗಂಧಿ. ೧೯೨-೪). [ಸಂ. ಹಿಂದೋಲರಾಗ]

**ಹಿಂಪಾರ್ಶ್ವ** (ನಾ). ಹಿಂದಿನ ಪಾರ್ಶ್ವ, - ಬದಿ; ಹಿಂಬದಿ: ನಂಮ ಅಕ್ಕಾಜಿಯವರ ಅಗ್ರಹಾರಕ್ಕೆ ಹಿಂಪಾರ್ಶ್ವದಲ್ಲಿ ಯಿಪ್ಪತ್ತು ಮನೆಗಳು (ಎಕ. III, ಮೈಸೂರು. ೩-೭; 1822). [ಹಿಂ (< ಪಿನ್) + ಪಾರ್ಶ್ವ]

**ಹಿಂಬಗಲು** 'ಪಿಂಬಗಲ್' ನೋ.

**ಹಿಂಬಡ** 'ಪಿಮ್ಮಡ' ನೋ.

**ಹಿಂಬಡತಿ** (ನಾ). (ಶಿಕ್ಷೆಯಲ್ಲಿ ಒಂದು ಅಂಗವಾಗಿ) ಸಂಬಳ, ಹುದ್ದೆ ಮೊದಲಾದುವುಗಳ ಬಡತಿಯಲ್ಲಿ ಖೋತಾ ಮಾಡುವಿಕೆ: ಹಿರಿಯ ಪೌಜದಾರರಿಗೆ ಎರಡು ರೂಪಾಯಿ ಹಿಂಬಡತಿಯಾಯಿತು (ಪಾಸಕ. ೩೫); ಜೋಶಿ ರಾಮರಾಯನು . . . ಕಠೋರ ಸತ್ಯದ ಯಂತ್ರದಲ್ಲಿ ಸಿಕ್ಕು ಹೇಗೆ ಹಿಂಬಡತಿ ಪಡೆದನೆಂಬುದು ಇನ್ನೊಂದು ದೊಡ್ಡ ಕತೆ (ಗಂಮಾಯಿ. ೨೯೭). [ಹಿಂ. (< ಪಿನ್) + ಬಡತಿ]

**ಹಿಂಬದಿ** (ನಾ). ಹಿಂದಿನ ಭಾಗ; ಹಿಂಭಾಗ: ದೊಡ್ಡ ಒಲೆಯ ಹಿಂಬದಿಯಲ್ಲಿದ್ದ ಮಂಚ ಉದ್ದನೆಯ ಮನುಷ್ಯ ಮೈ ಚಾಚಿ ಮಲಗಿಕೊಳ್ಳಲು ಸಾಕಾಗುವಷ್ಟು ದೊಡ್ಡದಾಗಿರಲಿಲ್ಲ (ಪುನರು. ೨೮೨); ಸ್ವಾಮಿಜಿಯವರು ಹಿಂಬದಿಯಲ್ಲೇ ನಿಂತಿರುತ್ತಾರೆ (ವೀರಯೋ. ೩೪). [ಹಿಂ (< ಪಿನ್) + ಬದಿ$_1$]

**ಹಿಂಬರಹ** (ನಾ). ದಾಖಲೆ, ಪತ್ರ ಮುಂತಾದುವುಗಳ ಕೊನೆಯಲ್ಲಿ ಸೇರಿಸುವ ವಿಶೇಷಾಂಕ; ಹಿಂಬದಿಯ ಬರವಣಿಗೆ: "ಹಿಂಬರಹ ಷರಾ" (Endorsement. ಇಂಕನಿ). [ಹಿಂ (< ಪಿನ್) + ಬರಹ (< ಬರೆಪ)]

**ಹಿಂಬರಿಕೆ$_1$**, ಹಿಮ್ಮರಿಕೆ (ನಾ). ೧. ಹಿಂದಕ್ಕೆ ಓಡುವಿಕೆ, - ಚಲಿಸುವಿಕೆ: ಅಸುರರಾಯನಜಾತಶತ್ರುವಿಗೆಱಗಿ ಹಿಂಬರಿಕೆಯಲಿ ಹಜ್ಜೆಗಳ ಆತು ನಿಲುತ್ಯೆದಿದನು (ತೊರರಾ. ೬-೧೯-೫೩); ಹಿಂಬರಿಕೆಯಡಿಯಲ್ಲಿ ಸಿಕ್ಕು ತೊತ್ತಳಿಗೊಂಡು ಸಾವವರ ನರಳಿಕೆಯ ಕಿವುಡುಗೇಳಿ (ಉದ್ಯೋ.ಲ. ೪೫-೩). **ಹಿಮ್ಮರಿಕೆ: ೨.** ಹಿಂಬಾಲಿಸಿ ಓಡುವಿಕೆ: ಉತ್ತರನು . . . ಓಡುತಿರೆ ಬಿಟ್ಟ ಮಂಡೆಯಲ್ಲಿ ಕಲಿಪಾರ್ಥನಿದ ನೋಡಿದನು ಹಿಮ್ಮರಿಕೆಯಿಂ ಪೋಗಿ ಸೂಟಿಯಿಂ ಕೇಡುಗನ ಬೆಂಬತ್ತಿ ನಿಲ್ಲುನಿಲ್ಲೆಂದೆನುತ ಪಿಡಿದೆಳೆಯುತ್ತಲುತ್ತರನನು (ತುರಂಗ. ೩೭-೫೧). [ಹಿಂ (< ಪಿನ್) + ಪರಿಕೆ$_1$]

**ಹಿಂಬರಿಕೆ$_2$** (ಅ). ಹಿಮ್ಮುಖವಾಗಿ; ಹಿಂಬದಿಗೆ: ಟಿಳಕರು ಈ ಎಲ್ಲ ಮಾತುಗಳನ್ನು ಕೇಳಿ ಹಿಂಬರಿಕೆ ನಡೆದು ಹಚ್ಚಡದ ಮುಸುಕು ಹಾಕಿಕೊಂಡು . . . ಮಲಗಿದರು (ಸ್ಮೃತಿಚಿ. ೮೮); ಕೆಳಸ್ವರಗಳ ಮೆದುವಾದ ಆಲಾಪನೆ ಸುರಳಿ ಸುರುಳಿಯಾಗಿ ಹಿಂಬರಿಕೆ ಹೊರಟ ನದಿಯಂತೆ ಹರಿಯತೊಡಗಿತ್ತು (ಗಂಮಾಯಿ. ೧೩೫). [< ಹಿಂಬರಿಕೆ$_1$]

**ಹಿಂಬಳಿ** 'ಪಿಂಬಳಿ' ನೋ.

**ಹಿಂಬಳೆ** (ನಾ). (ಹೆಂಗಸರು) ಕಡಗದ ಹಿಂದುಗಡೆಯಲ್ಲಿ ತೊಡುವ ಸಾದಾ ನಮೂನೆ ಬಳೆ: ಹರಡಿ ಹಿಂಬಳೆ ಸಾಲ್ವೆರಳ್ಕೆದರ ಮೇಲೆ ಸುರಚಿರರೇಖೆ ಚಂದ್ರಮನ ಸೋಲಿಪ ನಖ (ವಿದಾಕ್ಷ. ೧೧೩-೧); ಕರದ ಕಂಕಣ ಚಳಿಕೆ ಹಿಂಬಳೆ ಕೊರಳ ಸರ . . . ಪಚ್ಚೆ ಪದಕಗಳು (ಜಾಮಾ. ೪೫-೪೦); ಹಿಂಬಳೆ, ಮುಂಬಳೆ ದೋರ್ಯ ಪೌಂಚಿ . . . ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲಮಂ. ೩೮). 'ಮುಂಬಳೆ' ಪರಾ. [ಹಿಂ (< ಪಿನ್)+ ಬಳೆ$_2$]

**ಹಿಂಬಳಿ** 'ಪಿಂಬಳಿ' ನೋ.

**ಹಿಂಬಾಗಿಲು** (ನಾ). ಹಿಂಬದಿಗೆ ಇರುವ ಬಾಗಿಲು; ಹಿಂದಿನ ಬಾಗಿಲು: ಅವಳೇಕೋ ಮುಂಬಾಗಿಲಿಗಾಗಿ ಹೋದವಳು ಹಿಂಬಾಗಿಲಿನಿಂದ ಒಳಸೇರುತ್ತಿದ್ದಳು (ನವನೀ. ೮೯); ಹಿತ್ತಲು ಕಡೆಯ ಹಿಂಬಾಗಿಲು ತೆಗೆದು ಮಾಡಸಂದಿಯ ಕಡೆಗೆ ಕೈದೋರಿದಂತೆ ಮಾಡಿದಳು (ಮಲಮ. ೬೫೮). [ಹಿಂ (< ಪಿನ್) + ಬಾಗಿಲು (< ಬಾಗಿಲ್)]

**ಹಿಂಬಾರ** (ನಾ). ಹಿಂಬದಿಯ ಭಾರ, - ಒಜ್ಜೆ: ಮೂಗುತಿ ಮುಂಭಾರ ತುರುಬೀನ ಹಿಂಬಾರ ಸೇರಿನ ಒಂಕಿ ಕೈಭಾರ ನನ ಗೆಳತಿ ನಾ ಕೊಟ್ಟ ಸೀರೆ ನಿಲಿಭಾರ (ಹಳ್ಳಿಯ. ೮೭). [ಹಿಂ (< ಪಿನ್) + ಬಾರ$_2$]

**ಹಿಂಬಾಲ$_1$** (ನಾ). ೧. ಹಿಂಬದಿಯ ಬಾಲ. ೨. (ಆಲಂ) ಹಿಂದೆ ಹೋಗುವವನು; ಅನುಸರಿಸುವವನು: ತೀರ ಸಮೀಪಕ್ಕೆ ಹೋದಿರಿ, ನಾನು ಹಿಂಬಾಲವಾದೆ (ಸುವಸಂ. ೧೮). [ಹಿಂ (< ಪಿನ್) + ಬಾಲ$_1$]

**ಹಿಂಬಾಲ$_2$** (ಅ). ಹಿಂಬದಿಯಲ್ಲಿ; ಹಿಂದುಗಡೆ: ಆಮೇಲೆ ಎಲ್ಲ ದನಗಳು ಆ ಕುದುರೆಯ ಹಿಂಬಾಲ ಬಂದು . . . ಬೇಲಿಯ ಮೇಲಿಂದ ಹಾರಿ ಹೊರಬಿದ್ದವು (ಮುಂಬಯಿ. ೫-೯೧). [< ಹಿಂಬಾಲ$_1$]

**ಹಿಂಬಾಲಕ** (ನಾ). ಹಿಂಬಾಲಿಸುವವನು; ಅನುಸರಿಸುವವನು; ಅನುಯಾಯಿ: ನಾನು ಯುವರಾಜನ ಹಿಂಬಾಲಕನಾಗಿ ಹೋಗುವುದೇ ಇಲ್ಲವೆಂದು ನಿಶ್ಚಯಿಸಿದ್ದೇನೆ (ಶ್ರೀರಾಯ. ೩೧೭); ಹ್ಯೂಂ ಮತ್ತು ಅವನ ಹಿಂಬಾಲಕರು ಇದನ್ನು ಸಂದೇಹವಾದಕ್ಕೆ ಗುರಿ ಪಡಿಸುವ ತನಕ ಅದು ಸತ್ಯವೇ ಸರಿ (ಜೀವಾತ್ಮ. ೧೮೩). [ಹಿಂ (< ಪಿನ್) + ಪಾಲಕ]

**ಹಿಂಬಾಲತನ** (ನಾ). ಹಿಂಬಾಲಿಸುವ ಸ್ವಭಾವ: ಇನ್ನು ಆಡಳಿತಗಾರರ ಹಿಂಬಾಲತನ, ಇದರಲ್ಲಿ ಫಲ ಬಲು ನಿಧಾನ (ಹುಟ್ಟಿಸ. ೧೮೭). [ಹಿಂಬಾಲ$_1$ + - ತನ]

**ಹಿಂಬಾಲಿಸು**, ಪಿಂಬಾಲಿಸು (ಕ್ರಿ). ಹಿಂದೆ ಬರು; ಅನುಸರಿಸು: ರಾಮನು ವಿಶ್ವಾಮಿತ್ರನನ್ನು ಹಿಂಬಾಲಿಸಿದನು (ವಾರಾಕ್ಯ. ೫೭); ಅವನು ಜಿಂಕೆಯನ್ನು ಹಿಂಬಾಲಿಸಿದನು (ಮಣಿಸ. ೯೩). Δ **ಪಿಂಬಾಲಿಸು:** ಸಂಭವಿಸಿತಾತನಂ ಪಿಂಬಾಲಿಪೊಂದುರುವ ತಿರ್ರನೆಯ ತಿರಿವ ಸುಟ್ಟುರೆವೊನಲ ಭೋರಿಡುವ ಬಿರುಗಾಳಿ! (ಶ್ರೀರಾಮಾ. ೪೦೭-೧೧೩). [ಹಿಂ (< ಪಿನ್) + ಪಾಲಿಸು]

**ಹಿಂಬಾಲು** (ನಾ). ಹಿಂಬದಿ; ಹಿಂಭಾಗ: ಸೋನಕ್ಕನ ಹಿಂಬಾಲಿಗೆ ನಡೆಯುವ ಮೃತ್ಯು ಕಾಮಿಜೀವಗಳ ವೀಥಿಯೇ ಇತ್ತು (ದೀಪಹ. II, ೩೮೧). [ಹಿಂಬಾಲ$_1$ + - ಉ$_4$]

**ಹಿಂಬೆದೆ** 'ಪಿಂಬೆದೆ' ನೋ.

**ಹಿಂಬೆರಕು** (ನಾ). ಹಿಮ್ಮುಖ; ಹಿಂಭಾಗ (?): ನಡೆನಡೆದು ತಿರುತಿರುಗಿ ಹಿಂಬೆರ [ಪಾಠಾಂ. ಹೆಂಬೆಱ]ಕಿನಿಂ ನಡೆದು (ಕಣ್ಣರ. ಹ. ೩೭-೮); ಅಂದಣದ ಸಂದಣೆಯ ದೊಂದಣಮಂದಿಯಿಬ್ಬಗಿಯಾಗಿ ಹಿಂಬೆರಕಿಂದ[ಪಾಠಾಂ. ಹೆಬ್ಬೆಱಗಿಂದ]ವಂದುಂ ತೊಳತೊಳಗುತುಚ್ಚಳಿಸಿ . . . ಬಂದು ಹೊಕ್ಕರು ರಾಜಮಂದಿರವ (ಬಸವು. ೬೦-೨೮). [?]

**ಹಿಂಬೆಱಗು** (ನಾ). ದೇಹವು ಹಿಂದಕ್ಕೆ ಬಾಗಿ ಸೆಟೆದುಕೊಳ್ಳುವ ಒಂದು ಬಗೆಯ ಅಪಸ್ಮಾರ: ದೇಹವ ಬಿಲ್ಲಿನ ಹಾಗೆ ಹಿಂದಕ್ಕಾಗಿ ಬಗ್ಗಿಸಿ ನೋವ ಉಂಟುಮಾಡಿ ಕಷ್ಟಪಡಿಸುವುದು, ಇದು ಬಾಹ್ಯಾಯಾಮವೆನಿಸಿಕೊಂಬುದು. ಇದನೇ ಹಿಂಬೆಱಗು ಎಂಬರು (ವೈದ್ಯಸಾ. I,೪೦೫). 'ಮುಂಬೆಱಗು' ಪರಾ. [ಹಿಂ (< ಪಿನ್) + ಬೆಱಗು]

**ಹಿಂಬೊತ್ತು** 'ಪಿಂಬೊತ್ತು' ನೋ.

**ಹಿಂಭಾಗ** (ನಾ). ಹಿಂದಿನ ಭಾಗ; ಹಿಂಬದಿ: ಈಡಿಱಿದನಂಬಿನಿಂ ಪಾರ್ಥನ ವರೂಥಮಂ ಕೂಡೆ ಹಿಂಭಾಗಕ್ಕೆನೂಱು ಬಿಲ್ಲಂತರಕೆ ಪೋದುದದು ಸಂಗರದೊಳು (ಜೈಮಿಭಾ. ೧೪-೨); ಅವಳು ಮಾರಿಯಮ್ಮನ ಮುಂದೆ ಅಡ್ಡ ಬಿದ್ದಿದ್ದಾಗ ಹಿಂಭಾಗದಿಂದ ನೋಡಿಯೆ ಭಾವವಶನಾಗಿದ್ದನು (ಮಲಮ. ೬೭೮). [ಹಿಂ (< ಪಿನ್) + ಭಾಗ]

**ಹಿಂಭಾಗವಡೆ** (ಕ್ರಿ). ಹಿಂದಿನ ಭಾಗವನ್ನು ಹೊಂದು; ಹಿಂಭಾಗದಲ್ಲಿರು: ಕುಂಭಗಳೊಳು ತಮ್ಮ ತೊಂಡಿಲು ಬಾಸಿಗ ಹಿಂಭಾಗವಡೆದ ಬೆನ್ನೊಳಗೆ ಶುಂಭಿತ ಮಿಥುನದ ತೊಂಡಿಲು ಭಾಸಿಗ ಸ್ತಂಭಿಸೆ ನಡೆದುವಾನೆಗಳು (ಭರಚ. ೪೦-೧೦೪). [ಹಿಂಭಾಗ + ಪಡೆ$_1$]

**ಹಿಂಸಕ** (ಗು). ೧. ಪೀಡಿಸುವ; ನೋಯಿಸುವ. (ನಾ). ೨. ಪೀಡಿಸುವವನು; ನೋಯಿಸುವವನು: ಹಿಂಸ್ರಜಂತುವಿನ ರಕ್ಷಣೆಗಾಗಿ ಹಿಂಸಕನನ್ನೆ ಅನುಸರಿಬೇಕಾಯಿತು (ಪುನರು. ೩೪೪). ೩. ಕೊಲ್ಲುವವನು; ಕೊಲೆಗಾರ. ೨,೩: "ಹಿಂಸಕಂ ಕೊಲ್ಲುವವನಕ್ಕುರುಂತುದಂ ನೋಯಿಸುವನಕ್ಕು" (ಮಂಗರಾ. ೭೦-೧೫). [ಸಂ.]

**ಹಿಂಸನ** (ನಾ). ೧. ಪೀಡಿಸುವಿಕೆ; ತೊಂದರೆ ಕೊಡುವಿಕೆ. ೨. ಕೊಲ್ಲುವಿಕೆ; ಕೊಲೆ: "ವಿಶಸನಂ . . . ಹಿಂಸನ ನಿಶುಂಭನಂ ವರ್ಜನಂ . . . ಪ್ರಮಾಪಣಂ ಕೊಲೆಗ ನಾಮಂ" (ಮಂಗರಾ. ೮೮-೩೯). [ಸಂ.]

**ಹಿಂಸಾಕರ್ಮ** (ನಾ). ಶತ್ರುವಿನ ನಾಶಕ್ಕಾಗಿ ಪ್ರಯೋಗಿಸುವ ಮಾಟ; (ವಿಶೇಷವಾಗಿ ಅಥರ್ವವೇದದ) ಮೂಲಾಕ್ಷರಗಳನ್ನೂ ರಹಸ್ಯವಾದ ಮೂಲಪಾಠಗಳನ್ನೂ ಶತ್ರುವಿಗೆ ಕೆಡುಕನ್ನುಂಟುಮಾಡುವುದಕ್ಕಾಗಿ ಪ್ರಯೋಗಿಸುವಿಕೆ. [ಸಂ. ಹಿಂಸಾಕರ್ಮನ್]

**ಹಿಂಸಾಚಾರ** (ನಾ). ಪೀಡಿಸುವ ಸ್ವಭಾವದಿಂದ ಕೂಡಿದ ನಡತೆ; ಕ್ರೂರವಾದ ಆಚಾರ: ಮದುವೆಯಾದ ಗಂಡನ ಕೈಯಲ್ಲಿ ಹೆಣ್ಣು ಹಿಂಸಾಚಾರಕ್ಕೆ ಎಡೆಯಾಗುತ್ತಾಳ (ಕಾವೇರಿ. ೧೯೪). [ಸಂ.]

**ಹಿಂಸಾತ್ಮಕ** (ಗು). ಕೆಡುಕಿನಿಂದ ಕೂಡಿದ; ಹಿಂಸೆಯನ್ನೊಳಗೊಂಡ: ಅವನು ಹಿಂಸಾತ್ಮಕಕೃತ್ಯಗಳಲ್ಲಿ ನಿಸ್ಸೀಮ (ಪುನರು. ೩೩೫). [ಸಂ.]

**ಹಿಂಸಾಪರ** (ನಾ). ಕೆಡುಕನ್ನುಂಟುಮಾಡುವವನು; ಹಿಂಸಕ: ವರಗುಣಾಸೂಯಕನ ಹಿಂಸಾಪರನ ಹಿಸುಣನ ಶಠನ ಕೃಪಣನ ನರಕವಾಗಲಿ ಕೊಲ್ಲದಿದ್ದರೆ ನಾಳೆ ಸ್ಯಂಧವನ (ಕುಮ್ಯಾದ್ರೋ. ೮-೩೭); ಹಿಂಸಾಪರನಹರ್ನಿಶವಾ ದುರಾತ್ಮನ ವರಿಸಿದರು ದೇವಾಂಗನೆಯರು (ಕುಮ್ಯಾಕ. ೧೭-೧೭). [ಸಂ.]

**ಹಿಂಸಾರತಿ** (ನಾ). ಅನ್ಯರಿಗೆ ಕೇಡನ್ನುಂಟುಮಾಡುವುದರಲ್ಲಿ ಇರುವ ಆಸಕ್ತಿ,- ಪ್ರೀತಿ: ಕೃತವಿನಾಶನ ಡಂಭ ಹಿಂಸಾರತಿ ನಿಜಾನ್ವಯಧರ್ಮಕರ್ಮಚ್ಯುತಿಗಳಿವು ದೋಷಾಂಕುರಂಗಳು (ಕುಮ್ಯಾಅ. ೧೪-೧೪). [ಸಂ.]

**ಹಿಂಸಾರುಚಿ** (ನಾ). ೧. ಕೇಡನ್ನುಂಟುಮಾಡುವುದರಲ್ಲಿ ಇರುವ ಆಸಕ್ತಿ; ಪೀಡಿಸುವ ಬಯಕೆ: ಮಾಂಸ ಮಧು ಮದ್ಯಸೇವನೆ ಹಿಂಸಾರುಚಿ . . . ಎಂಬಿವಲ್ಲದೆ ಸಂಸಾರಭ್ರಮಣಕಾರಣಂ ಪೆಱವೊಳವೇ (ಆದಿಪು. ೫-೮೦). ೨. ಕೇಡನ್ನುಂಟುಮಾಡುವುದರಲ್ಲಿ ಆಸಕ್ತಿಯುಳ್ಳವನು; ಪೀಡಿಸುವ ಬಯಕೆಯುಳ್ಳವನು; ಹಿಂಸಕ. [ಸಂ.]

**ಹಿಂಸಾಲು** (ಗು). ೧. ಪೀಡಿಸುವ; ತೊಂದರೆಗೊಳಿಸುವ. ೨. ಕೊಲೆಮಾಡುವಂತಹ; ಕೊಲ್ಲುವ. [ಸಂ.]

**ಹಿಂಸಾವಿರಹಿತ** (ನಾ). ಕೇಡನ್ನು ಬಿಟ್ಟವನು; ಹಿಂಸೆಯನ್ನುಳಿದವನು: ಹಿಂಸಾವಿರಹಿತನ್ಕೆ ನೀನಿಂ ಸಲೆ ಬಾಟ್ ಪಾಪಕರ್ಮನೆಂ ಪೆಱರಟೆವಂ ಹಿಂಸೆಯನೆ ಬಯಸಿ ಮಱುಗುವ ನಾಂ ಸತ್ತಪೆನೆಂದು ಪೂಣ್ದು ಬರ್ಪನ ತೆಱದಿಂ (ಧರ್ಮಾಮೃ. ೧೦-೨೦೦). [ಸಂ.]

**ಹಿಂಸಿಸು** (ಕ್ರಿ). ನೋಯಿಸು; ಪೀಡಿಸು: ಹುಡುಗರಿಗೆ ಹೇಗೆ ಹಿಂಸಿಸಿ ವಿದ್ಯಾ ಕಲಿಸುವುದಕ್ಕಾಗುತ್ತದೆಯೇ? (ಚಂಗಾಳ್ಳ. ೬೮); ನನ್ನನ್ನು ಯಾಕೆ ಹಿಂಸಿಸುತ್ತೀರಿ? (ನೀತಿಚಂ. III. ೭). [ಹಿಂಸೆ + - ಇಸು[1]]

**ಹಿಂಸೆ** (ನಾ). ೧. ನೋವು; ತೊಂದರೆ: "ಗೋಣ್ಣುಱಿಯೆನಲದು ಹಿಂಸೆಗಕ್ಕು" (ಕವಿಕಂ. ೧೨೪); ಹಿಂಸಾನೃತಸ್ತೇಯಾಬ್ರಹ್ಮಪರಿಗ್ರಹಪರಿತ್ಯಾಗಮೆಂಬಯ್ದುಂ ಮಹಾವ್ರತಂಗಳೊಳ್ ನೆರೆದು (ಆದಿಪು. ೬-೨೭ ವ); ಹಿಂಸೆ ಪುಸಿ ಕಳವು ರತಿ ರಾಗಂ ಸಕಳ ಪರಿಗ್ರಹಂಗಳೆಂಬುದನಱಿದಿರ್ದಂ ಸಕಳಮೆಂದು ತೊಱೆವುದು (ಶಾಂತಿಪು. ೬-೪೯); ಹುಸಿ ಡಂಬು ಹಿಂಸೆ ಮೂರ್ಖತೆಯುಂಟು ಧರೆಯೊಳಗೆ (ಬಸರ. ೧-೭೦). ೨. ಕೊಲ್ಲುವಿಕೆ; ಕೊಲೆ: "ಮಾರಣಂ, ನಿಶರಣಂ, ನಿಬರ್ಹಣಂ. . . ಪ್ರಮಯಾ, ಹಿಂಸಾ, ಸಂಜ್ಞಪನಂ- ಈ ೨೧ ಕೊಲೆ" (ಹಲಾಯು. ೭೮-೩೨೪). ೩. ಕಳ್ಳತನ; ಕಳವು. ೨,೩: "ಅಸಮ ಕೊಲೆ ಕಳವಿನಲಿ ಹಿಂಸೆಯೆಂಬುದು" (ಮಂಗರಾ. ೧೪೦-೧೨). ೪. ಕತ್ತಿ; ಖಡ್ಗ: "ತಸ್ಕರಂ ನಿಸ್ತ್ರಿಂಶಂ ಕೊಲೆಯಿಂತು ಹಿಂಸೆಯೆನಿಕ್ಕುಂ" (ನಾನಾರ. ೧೧೯). [ಸಂ. ಹಿಂಸಾ]

**ಹಿಂಸ್ರ** (ಗು). ೧. ಕೆಡುಕನ್ನುಂಟುಮಾಡುವ; ತೊಂದರೆಯನ್ನು ಕೊಡುವ. ೨. ಕೊಲ್ಲುವ; ಸಾಯಿಸುವಂತಹ. ೩. ಉಗ್ರವಾದ; ಭೀಷಣವಾದ. ೪. ಕ್ರೂರವಾದ; ದುಷ್ಟ: 'ಹಿಂಸ್ರಜಂತು' ಪರಾ. (ನಾ). ೫. ಕೊಲ್ಲುವವನು; ಕೊಲೆಗಾರ: "ಶರಾರುಃ, ಘಾತುಕಃ, ಹಿಂಸ್ರಃ - ಈ ೩ ಕೊಲ್ವವಂ" (ಹಲಾಯು. ೬೦-೨೦೭). ೬. ಶಿವ. ೭. ಭೀಮ. [ಸಂ.]

**ಹಿಂಸ್ರಪಶು** (ನಾ). ಕ್ರೂರಪ್ರಾಣಿ; ದುಷ್ಟಮೃಗ: ಊರನ್ನು ಬಿಟ್ಟು ಹಿಂಸ್ರಜಂತುಗಳಿಗೂ ರಾಕ್ಷಸರಿಗೂ ಆವಾಸವಾದ ಕಾಡಿನಲ್ಲಿ ಆಸುರಜೀವನವನ್ನು ಜೀವಿಸುತ್ತಿರುವವರು (ಸಂನಾಟ. ೯೪). [ಸಂ.]

**ಹಿಂಸ್ರಪಶು** (ನಾ). = ಹಿಂಸ್ರಜಂತು. [ಸಂ.]

**ಹಿಕಮತ್ತು** (ನಾ). ಉಪಾಯ; ತಂತ್ರ; ಸಂಚು: ಆ ನೀಚ ಬಚ್ಚಪ್ಪನ ಜತೆಗೆ ಸೇರಿಕೊಂಡು ಈ ಧೂರ್ತ ಪಟೇಲ ಮಾಡಿರೋ ಹಿಕಮತ್ತು ಅದು (ಊರುಕ. ೩೯); ಇದು ಸುಬ್ರಾಯರೇ, ನಿಮ್ಮ ಭಾವಯ್ಯನ ಹಿಕಮತ್ತು (ಕುರುಕ. ೪೮); ದುಷ್ಮಾನನನ್ನು ಹಿಕಮತ್ತಿನಿಂದ ಜಯಿಸಬೇಕು (ಗಾದ). [← ಅರ. ಹಿಕ್ಮತ್; ಹಿಂ ಮರಾ. ಹಿಕಮತ್]

**ಹಿಕಾಳಿ** (ನಾ). ಬಡಬಡಿಕೆ; ಸನ್ನಿ: ನೀನು ಬರೋದಕ್ಕಿಂತ ಮುಂಚೆ ಎಷ್ಟು ಹರಟೆ ಹೊಡೆದರೋ! ಜ್ವರದ ಹಿಕಾಳಿಗೆ ಸಿಕ್ಕದ್ದೆಲ್ಲ ಮಾತಾಡೋರ (ಚಂಗಾಳ್ಳ. ೧೪೭). [?]

**ಹಿಕ್ಕ** (ನಾ). ಬಿಕ್ಕಳಿಕೆ; ಬಿಕ್ಕು: ಹಿಧ್ಮವೆಂದೂ ಹಿಕ್ಕವೆಂದೂ ಬಿಕ್ಕಳಿನ ಹೆಸರು (ಸಕವ್ಯ. ೨೪೦). [ಸಂ. ಹಿಕ್ಕಾ]

**ಹಿಕ್ಕಟ್ಟು** (ನಾ). ೧. ಹಿಂಭಾಗ; ಹಿಂಬದಿ: ಹಡಗಿನ ಹಿಕ್ಕಟ್ಟಿನಲ್ಲಿ ಸುಕಾಣಿ ಮುಕ್ಕ ಟ್ಟಿನಲ್ಲಿ ಗಡುತರವಾದ್ದೊಂದು ಕಬ್ಬಿಣ ಸರಪಳಿಯು ಇರುವವು (ಮುಂಬಯಿ. ೩-೧೧೨). ೨. (ಉಕ) ತಡವಾದುದು; ವಿಳಂಬವಾದುದು.

[< ಹಿಂದು[1] + ಕಟ್ಟು[2]]

**ಹಿಕ್ಕಣಿಕೆ**. 'ಹಿಕ್ಕುಹಣಿಗೆ' ನೋ.

**ಹಿಕ್ಕಲು** (ನಾ). ಗದ್ದೆ, ತೋಟ ಮುಂತಾದ ಕಡೆಗಳಲ್ಲಿ ನೀರು ಹರಿಯಲು ಮಾಡಿರುವ ಸಣ್ಣ ತೋಡು,- ಕಾಲುವೆ: ಹಿಕ್ಕಲು, ಸಣ್ಣಕಾಲುವೆ. ಹಿರ್‌ಕಾಲ್, ಹಿರಿದ ಕಾಲ್; ಕಾಲ್ ಎಂದರೆ ಕಾಲುವೆ. ಕಾ ಹ್ರಸ್ವವಾಗಿದೆ (ನಮ್ಮನು. ೧೧೦).

[ಹಿಕ್ಕು[1] (ಪಿಕ್ಕು) + - ಅಲು (< - ಅಲ್[2])]

**ಹಿಕ್ಕವತ್ತಿಗೆ** (ನಾ). ಒಂದು ಬಗೆಯ ಔಷಧೀಸಸ್ಯ: ಪವಣಱಿದು ಮಧುವುಮಂ ಹಿಕ್ಕವತ್ತಿಗೆಯ ಬೇರ ರಸಮಂ ಶಶಿಯುಮನೊಂದುವಿನಂ ತೊಡೆದೊಡೆ ಪುಷ್ಪಂ ದ್ರವಮಂ ಮಾಟ್ಟುಂ (ಲೋಕೋಪ. ೭-೪೭). [?]

**ಹಿಕ್ಕಾಡಲ್ಲಿಕೆ** (ನಾ). = ಹಿಕ್ಕವತ್ತಿಗೆ: ಸಮಸ್ತಜ್ವರಗಳಿಗೆ ಹಿಪ್ಪಲಿ, ಹಿಡಿಹಿಡಿಕೆ, ನುಗ್ಗೆ, ಬಸಲೆ . . . ಚಿಟ್ಟ ಅವುಡಲ, ಹಿಕ್ಕಾಡಲ್ಲಿಕೆ, ಇವುಗಳ ಬೇರುಗಳು ಪ್ರತ್ಯೇಕ ೫ ತೂಕದ ಲೆಕ್ಕದಲ್ಲಿ ಕೊಂಬುದು (ವಿಷ್ಯವಿ. ೧೪೫). [?]

**ಹಿಕ್ಕು[1]** 'ಪಿಕ್ಕು' ನೋ.

**ಹಿಕ್ಕು[2]** (ನಾ). ೧. ಬಿಡಿಸುವಿಕೆ; ಹಿಂಜುವಿಕೆ: "ಪಿಂಜಯತಿ = ಹಿಕ್ಕಿದಪಂ; ಪಿಂಜಾರಃ- ಹಿಕ್ಕುವಂ . . . ಪಿಂಜನಂ, ಪಿಂಜನೀಯಂ, ಈ ೨ ಹಿಕ್ಕು" (ಶಾಶಕ್ಯ. ೨೪೦). ೨. (ಕೂದಲಿನ) ಸಿಕ್ಕು; ಗೋಜು: ಜಡೆಯ ಹಿಕ್ಕನು ಒಡೆದು ಎಣ್ಣೆಯ ತಡವಿ ದಿನಚರಿ ನೀರನೆರೆವುತ ಕೊಡುವ ಪಾಲ್ ಘೃತ ದಣಿಯುವಂದದಿ ಮೃಡನು ಸುತನಾಗೆ (ಶರಲೀ. ೩೯೦). [< ಪಿಕ್ಕು]

**ಹಿಕ್ಕುಗೊಡು** (ಕ್ರಿ). ಭೇದಿಸು: ಆತ್ಮತೇಜಕ್ಕೆ ತರ್ಕದ ಗೆಲ್ಲ ಸೋಲಕ್ಕೆ ಇಕ್ಕೆ ಹಕ್ಕೆಗೆ ಹಿಕ್ಕುಗೊಡದಿರ್ಪುದೇ ಅಱಿವು (ಮೋಳಿಮಾ. ೮೫-೩೩೭). [ಹಿಕ್ಕು[2] + ಕೊಡು[1]]

**ಹಿಕ್ಕುಹಣಿಗೆ, ಹಿಕ್ಕಣಿಕೆ** (ನಾ). (ಸಣಬು ಮೊದಲಾದುವುಗಳನ್ನು) ಹಿಕ್ಕುವ ಸಾಧನ: "(ಸಣಬು ಮೊ.ಗಳನ್ನು ಹಿಕ್ಕುವ) ಉಕ್ಕಿನ ಹಿಕ್ಕುಹಣಿಗೆ; ಹಿಕ್ಕಣಿಕೆ" (Hacklc. ೦೦೮೫). **ಹಿಕ್ಕಣಿಕೆ:** (ಸಣಬನ್ನು) ಹಿಕ್ಕಣಿಕೆಯಿಂದ ಹಿಕ್ಕು (Hacklc. ೦೦೮೫).

[ಹಿಕ್ಕು[1] (< ಪಿಕ್ಕು[1]) + ಹಣಿಗೆ (< ಪಣಿಗೆ)]

**ಹಿಕ್ಕೆ[1]** 'ಪಿಕ್ಕೆ' ನೋ.

**ಹಿಕ್ಕೆ[2]** (ನಾ). ಬಿಕ್ಕಲು; ಬಿಕ್ಕಳಿಕೆ; ಬಿಕ್ಕು: ಹಿಧ್ಮೆಯೆಂದರೂ, ಹಿಕ್ಕೆಯೆಂದರೂ, ಬಿಕ್ಕಟೆಂದರೂ, ಬಿಕ್ಕಳಿನ ಹೆಸರು (ವೃದ್ಯಸಾ. I. ೧೫೪). [ಸಂ. ಹಿಕ್ಕಾ]

**ಹಿಕ್ಕೊಡೆ** (ಕ್ರಿ). (ಕೂದಲಿನ) ಸಿಕ್ಕು ಬಿಡಿಸು; ಗೋಜನ್ನು ಬಿಡಿಸು: ತರುಣಿಯಳ ಕುರುಳ ಹಿಕ್ಕೊಡೆದು ಮದನನ ರಾಣಿ ನಾರಿಗಿರದೆ ಮಧುರಸವನುಣಿಪಂತೆ ತಿಳಿಘೃತವ ತಲೆಗಂ ಪೂಸಿ (ನವಮೋ. ೧೩-೪೧). [ಹಿಕ್ಕು[2] + ಒಡೆ[1]]

**ಹಿಗೆ** (ನಾ). ಒಂದು ಬಗೆಯ ಗಿಡ: ಕುರಥ, ಹಿಗೆ, ತುಮಕಿ, ತಿಂಡುಕ, ಹೊಳೆತುಮ್ರಿ, ಬಂಧ (ಮೃಱಗಿ. ೩೧-೬೦೩). [?]

**ಹಿಗ್ಗಣ್ಣು** (ನಾ). (ಸಂತೋಷದಿಂದ) ಹಿಗ್ಗಿದ ಕಣ್ಣು,- ಅಗಲವಾಗಿರುವ ಕಣ್ಣು: ಮಿಂಚಿನವನೆ ಹಿಗ್ಗಣ್ಣಿನವಳಿಗಾ ಬೆಳಕುಕಂಡಿಯಿಂದ ಮಾತನಾಡು ಗಂಭೀರವಾಗಿ

ನಸು ಗುಡುಗು ಬೆಡಗಿನಿಂದ (ಮೇಘದೂ. ೨೭-೩೫).

[ಹಿಗ್ಗು₁ (< ಪಿಳ್ಗು₁) + ಕಣ್ಣು (< ಕಣ್)]

**ಹಿಗ್ಗಲಿಕೆ** (ನಾ). ದೊಡ್ಡದಾಗಿ ಮಾಡುವಿಕೆ; ವಿಸ್ತರಿಸುವಿಕೆ: ರಗಳೆ ಷಟ್ಪದಿಗಳ ಆಧಾರವಾದ ಮಾತ್ರಾಛಂದಸ್ಸು ಅಂಥ ಹಿಗ್ಗಲಿಕೆಯನ್ನು ಸುಲಭವಾಗಿ ತಡೆಯಬಲ್ಲದು (ಸಮಾಲೋ. ೧೭೯). [ಹಿಗ್ಗಲು + - ಇಕೆ]

**ಹಿಗ್ಗಲಿಸು** (ಕ್ರಿ). ಅಗಲವಾಗಿ ತೆರೆ; ಹಿಗ್ಗಿಸು; ದೊಡ್ಡದನ್ನಾಗಿ ಮಾಡು: ನಮ್ಮ ಆಚಾರ್ರು ಮಾತ್ರ ಒಡವೆಗಳನ್ನು . . . ಬಿಗಿಯಾಗಿಯೇ ಮಾಡುತ್ತಿದ್ದರು. ಹೀಗೆ ಮಾಡಿದ ಒಡವೆಗಳನ್ನು ಹಿಗ್ಗಲಿಸಿ ಹೆಣ್ಣಿಗೆ ತೊಡಿಸಬೇಕಾದರೆ ಅದೊಂದು ದೊಡ್ಡ ಕೆಲಸವೇ ಆಗುತ್ತಿತ್ತು (ನನ್ನೂರು. ೧೯೦); ಧರ್ಮಾಧಿಕಾರಿಯ ಮಗಳು ಸಹ ಕ್ಷಣಕಾಲ ನಿಂತು ಮಾಸ್ಟ್ರೋವಳ ಕಡೆಗೆ ಕಣ್ಣು ಹಿಗ್ಗಲಿಸಿ ನೋಡಿದಳು (ಪುನರು. ೧೪೩); ಮಾನವನ ಭಾವವನ್ನು ಉನ್ನತೋನ್ನತವಾಗಿ ಹಿಗ್ಗಲಿಸುವುದೇ ಇದರ ಶಕ್ತಿ (ಸಮಾಲೋ. ೩೭).

[ಹಿಗ್ಗಲು + - ಇಸು₁]

**ಹಿಗ್ಗಲು** (ನಾ). ದೊಡ್ಡದಾಗಿ ಆಗುವಿಕೆ; ಹಿಗ್ಗುವಿಕೆ: 'ಹಿಗ್ಗಲಿಕೆ', ಹಿಗ್ಗಲಿಸು ಪರಾ. [ಹಿಗ್ಗು₁ (< ಪಿಳ್ಗು₁) + - ಅಲು (< ∗-ಅಲ್₂)]

**ಹಿಗ್ಗಾಮುಗ್ಗ** 'ಹಿಗ್ಗುಮುಗ್ಗು' ನೋ.

**ಹಿಗ್ಗಾಮುಗ್ಗಾ** 'ಹಿಗ್ಗುಮುಗ್ಗು' ನೋ,

**ಹಿಗ್ಗಿಸು** 'ಪಿಳ್ಗಿಸು' ನೋ.

**ಹಿಗ್ಗು₁** 'ಪಿಳ್ಗು' ನೋ.

**ಹಿಗ್ಗು₂** 'ಪಿರ್ಗು₂' ನೋ.

**ಹಿಗ್ಗುದೆಗೆ** (ಕ್ರಿ). ಸಂತೋಷವನ್ನು ತೊರೆ,—ಉಳಿ: ಲಗ್ಗೆಯೊಳಗೆ ನೊಂದು ಹಿಪುಭೂಪರ ಸೇನೆಯೊಗ್ಗೊಡೆದೋಡಿ ಹಿನ್ನಲೆಗೆ ಹಿಗ್ಗುದೆಗೆದು ದೂರ ಚೌದಿಕ್ಕಿನೊಳಾಗ ಬೊಗ್ಗನೆ ಪಾಳ್ಯವಿಳಿದರು (ಕಂಠವಿ. ೩-೬೦). [ಹಿಗ್ಗು₂ (< ಪಿರ್ಗು₂) + ತೆಗೆ₁]

**ಹಿಗ್ಗುಮುಗ್ಗು, ಹಿಗ್ಗಾಮುಗ್ಗ, ಹಿಗ್ಗಾಮುಗ್ಗಾ** (ಅ). ಹಿಂದಕ್ಕೆ ಮತ್ತು ಮುಂದಕ್ಕೆ ಎಂಬರ್ಥದಲ್ಲಿ ಬಳಕೆಯಾಗುವ ಒಂದು ಅವ್ಯಯ: ಮಾಳಿಗಗಳೊಲೆಗಾಡಿ ಹಿಗ್ಗುಮುಗ್ಗಾಗೆ . . . ಒಂದು ವರುಷದ ಕೆಳಗೆ ನನಗೆ ಮೆರವಣಿಗೆ (ಇಂಗೀತ.೩೫--೩). **ಹಿಗ್ಗಾಮುಗ್ಗ:** ಆ ಪಿಶಾಚಿಗಳು ಅವನನ್ನು ಹಿಗ್ಗಾಮುಗ್ಗ ಎಳೆಯುತ್ತಿದ್ದಾರೆ (ಪುನರು.೨೦೯); ಅಂಬಿಕಾತನಯ ಕಟ್ಟಿದ ಕಗ್ಗಾ ಜಗ್ಗಬ್ಯಾಡ ನೀ ಹಿಗ್ಗಾಮುಗ್ಗಾ ಹುರಿ ಐತಿ ಒಳಗ ಬರಿದಲ್ಲಾ ಹಗ್ಗಾ (ಜೀವಲ. ೩೩-೧೪). **ಹಿಗ್ಗಾಮುಗ್ಗಾ:** ಅವಳ ಜೀವ ಹಿಗ್ಗಾ- ಮುಗ್ಗಾ ಎಳೆದಾಡಿತು (ಕತ್ತಪೆ.೮).

[ಹಿಗ್ಗು₁ (< ಪಿಳ್ಗು₁) + ಮುಗ್ಗು₁ (< ಮೊಟ್ಟು)]

**ಹಿಚಕು** 'ಪಿಸುಂಕು' ನೋ.

**ಹಿಚಿಕೆ** 'ಪಿಚಿಕೆ' ನೋ.

**ಹಿಚಿಕು** 'ಪಿಸುಂಕು' ನೋ.

**ಹಿಚುಕಾಟ, ಹಿಜಿಗಾಟ** (ನಾ). ೧. ಅದುಮುವಿಕೆ; ಒತ್ತಡ: ಅಂತರ್ಯದಲ್ಲಿ ಅವಳ ಹೃತ್ಪಿಂಡವು ಮತ್ತೆ ಹಿಚುಕಾಟಕ್ಕೆ ಹಿಂಸೆಗೆ ಗುರಿಯಾಗಿ ನುಚ್ಚುನುರಿಯಾಗ ತೊಡಗಿತು (ಇಪ್ರಕ. ೨೮೭). **ಹಿಜಿಗಾಟ :** ೨. ನೋವು ; ತೊಂದರೆ: ತೆಜಿಸವೀ ಸ್ಥಲವನುಂ ವಿಪ್ರರಾದವರ್ಗಳುರು ಹಿಜಿಗಾಟದಿಂ ಮನಂ ಮೇಣಲಸಿ (ಪರಶು.೪೧-೨೮).

[ಹಿಚುಕು (< ಪಿಸುಂಕು) + ಆಟ]

**ಹಿಚುಕು** 'ಪಿಸುಂಕು' ನೋ.

**ಹಿಚ್ಚಗೆಗ್ರಾಮ** (ನಾ). ಒಂದು ಹಳ್ಳಿಯ ಹೆಸರು: ತದ್ದಕ್ಷಿಣತಃ ಹಿಚ್ಚಗೆಗ್ರಾಮ (ಸೌಇಇ. XX, ೬-೨೧; 730). IP ಈ ಶಾಸನವನ್ನು ಹತ್ತನೆಯ ಶತಮಾನದಲ್ಲಿ ಪ್ರತಿ ಮಾಡಿರುವುದರಿಂದ, ಶಬ್ದವು ಹಕಾರರೂಪದಲ್ಲಿದೆ. [ಹಿಚ್ಚಗೆ ? + ಗ್ರಾಮ]

**ಹಿಜಡ** (ನಾ). ನಪುಂಸಕ. [<— ಹಿಂ. ಮರಾ. ಹಿಜಡಾ]

**ಹಿಜರಾ** 'ಹಿಜರೀ' ನೋ.

**ಹಿಜರಿ** 'ಹಿಜರೀ' ನೋ.

**ಹಿಜರಿಲೆಕ್ಕ** (ನಾ). ಹಿಜರಿಶಕೆಯ ಕಾಲದಲ್ಲಿ ಬಳಕೆಯಲ್ಲಿ ಇದ್ದ ಲೆಕ್ಕ (?): 'ರಾಜಾಚಿಕ್ಕದೇವರಾಜ್ ಮಹಮದ್‌ಷಾಯಿ' ಎಂಬ ಮಾತನ್ನು ಹಿಜರಿಲೆಕ್ಕವನ್ನು ಸಹ ಪಾರಸಿಯ ಅಕ್ಷರದಲ್ಲಿ ಕೆತ್ತಿರುವ ಮೊಹರನ್ನೂ . . . ಈ ಲಿಂಗಣ್ಣಯ್ಯನ ಸಂಗಡ ಕಳುಹಿಸಿಕೊಟ್ಟರು (ಮಹಾವಂ.I, ೧೪೪). [ಹಿಜರಿ (< ಹಿಜರೀ) + ಲೆಕ್ಕ₂]

**ಹಿಜರಿಶಕೆ** (ನಾ). ಮಹಮ್ಮದ್ ಪೈಗಂಬರನು ಮಕ್ಕಾನಗರವನ್ನು ತೊರೆದು ಮದೀನಾಪಟ್ಟಣಕ್ಕೆ ಹೋದ, ಕ್ರಿಸ್ತಶಕ ಆರುನೂರ ಅರವತ್ತೆರಡನೆಯ ಇಸವಿ ಜುಲೈ ಹದಿನಾರನೆಯ ದಿನದಿಂದ ಮೊದಲಾಗುವ ಶಕವರ್ಷ; ಮಹಮ್ಮದೀಯರ ಒಂದು ಕಾಲಗಣನೆ: ಪಯಗಂಬರರು ಅಬುಬಕರನ ಮನೆಗೆ ಬಂದು ಆತನೊಡನೆ ಅದೇ ರಾತ್ರಿ ಕತ್ತಲೆಯಲ್ಲಿ ಮದಿನೆಗೆ ಹೊರಟರು . . . ಈ ಪ್ರವಾಸಕ್ಕೆ ಹಿಜರತ್ ಎಂದು ಹೆಸರು. ಆದ್ದರಿಂದ ಆ ಶಕಕ್ಕೆ ಹಿಜರಿಶಕೆ ಯೆನ್ನುವರು (ಹಮಪ. ೧೭). 'ಹಿಜರೀಶಕ' ಪರಾ. [ಹಿಜರೀ (< ಹಜರೀ) + ಶಕೆ]

**ಹಿಜರೀ, ಹಿಜರಾ, ಹಿಜರಿ** (ನಾ). = ಹಿಜರಿಶಕೆ: ಬ ತಾರೀಖು ಥಂಡ್, ೨೧ ನೇ ಮಾಹೆ ಜಿಲ್ಲೆಜ್ ೧೧೯೭ ನೇ ಹಿಜರೀ ಮುತಾಬಕ್ ಥಂಡ್ ೨೭ನೇ ಮಾಹೆ ನವೆಂಬರ್ ೧೭೮೨ನೇ ಇಸವಿ (ಚಾಮವಂ. ೨೨೭). **ಹಿಜರಾ:** (೩). **ಹಿಜರಿ:** 'ಹಿಜರಿಲೆಕ್ಕ' ಪರಾ.

[<— ಅರ. ಹಿಜ್ರಾ; ಹಿಂ. ಹಿಜರೀ; ಮರಾ. ಹಿಜರಾ, ಹಿಜರೀ]

**ಹಿಜರೀಶಕ** (ನಾ). = ಹಿಜರೀ: ಮಹಮ್ಮದ ಪೈಗಂಬರರಿಂದ ಆರಂಭವಾದ ಹಿಜರೀಶಕವು ಈವೊತ್ತಿನಿಂದಲೇ ಆರಂಭವಾಗುವುದು (ಹಮಪ.೧೭). [ಹಿಜರೀ + ಶಕ]

**ಹಿಜಿಗಾಟ** 'ಹಿಚುಕಾಟ' ನೋ.

**ಹಿಜಿಗು** 'ಪಿಸುಂಕು' ನೋ.

**ಹಿಜ್ಜಲ** (ನಾ). ಒಂದು ಬಗೆಯ ಗಿಡ; ನೀರಹಲಸು: ''ಹಿಜ್ಜಲ - ತೊಟಿಗಣಿಗಿಲ್'' (ನಾಚರಾ. ೩). [ಸಂ.]

**ಹಿಟಕವಾಡು** (ಕ್ರಿ). ಚೇಷ್ಟೆಮಾಡು; ಗೇಲಿಮಾಡು: ಅಂತವುರಕ್ಕೆ ಪೋಪ ವಾಚಾಳೆಯನೊರ್ವಳಂ ಚಟುಳ ಚೇಟಿಕೆಯಂ ವಸುದೇವವಲ್ಲಭಂ ಹಿಡಿದು ಹಿಟಕವಾಡೆ (ಅರ್ಧನೇ. ೫-೭ ವ). [ಹಿಟಕ್ಕ + ಆಡು₁]

**ಹಿಟು** 'ಪಿಟ್ಟು' ನೋ.

**ಹಿಟುಕಾಱ** 'ಪಿಟ್ಟುಕಾರ' ನೋ.

**ಹಿಟ್ಟಗಾಣಿ** (ನಾ). ಆಕಾಶನೀಲಿಯ ಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಬಳ್ಳಿ; ಗುಬ್ಬಚ್ಚಿ ಬಾಳೆ; ಕನ್ನೆಸೊಪ್ಪು: (೩). [?]

**ಹಿಟ್ಟಡಿಗೆ** (ನಾ). (ಜೋಳ, ಅಕ್ಕಿ, ಗೋಧಿ, ರಾಗಿ ಮೊದಲಾದ ಧಾನ್ಯಗಳ) ನಯವಾದ ಪುಡಿ ಅಥವಾ ಪಿಷ್ಟದಿಂದ ತಯಾರಿಸುವ ಆಹಾರ; ಹಿಟ್ಟಿನಿಂದ ಮಾಡುವ ದೋಸೆ, ಕಜ್ಜಾಯ, ಎರೆಯಪ್ಪ ಮುಂತಾದುವು: ''ಪೂಪಃ, ಅಪೂಪಃ, ಪಿಷ್ಟಕಃ- ೩ ಹಿಟ್ಟಡಿಗೆ,' ಅಂದರೆ ಹಿಟ್ಟುಕ್ಕರಿಸಿ ಮಾಡುವ ದೋಸೆ, ಎರಿಯಪ್ಪ, ಕಜ್ಜಾಯ, ಹೋಳಿಗೆ, ಒಬ್ಬಟ್ಟು, ಕಡುಬು ಸಾರಸತ್ತು, ಇಡ್ಡಳಿಗೆ, ಉಪ್ಪಿಟ್ಟು ಮುಂತಾದ್ದಕ್ಕೆ ಹೆಸರು''(ಸಿದ್ಧಾಂತಿ. ೨೮೮). [ಹಿಟ್ಟು (< ಪಿಟ್ಟು) + ಅಡಿಗೆ (< ಅಡುಗೆ)]

**ಹಿಟ್ಟಳಿಕ** 'ಹಿಟ್ಟಳಿಕೆ' ನೋ.

**ಹಿಟ್ಟಳಿಕೆ, ಹಿಟ್ಟಳಿಕ, ಹಿಟ್ಟುಳಿಕ, ಹಿಟ್ಟುಳಿಕೆ, ಹಿಟ್ಟುಳುಕ** (ನಾ). ಒಂದು ಬಗೆಯ ಔಷಧೀಸಸ್ಯ: ''ಆ ಶಿಲಾಬೇಧಿ ಹಿಟ್ಟಳಿಕೆ [ಪಾಠಾಂ. ಹಿಟ್ಟುಳಿ ಹಿಟ್ಟುಳಿಕೆ]ಯಕ್ಕು'' (ಮಂಗರಾ. ೩೯-೨೯); ಉತ್ತರಣೆಬೇರು ಹಿಟ್ಟಳಿಕೆಬೇರು ಈಶ್ವರಿಬೇರು (ಅಶ್ವಚಿ.೧೮-೧೦). **ಹಿಟ್ಟಳಿಕ:** ಹಿಡಿಹಿಡಿಕೆ ಬೀಜ ಹಿಟ್ಟಳಿಕನ ಬೀಜ ಹಂಗರಬೀಜ . . . ಚಿತ್ರಮೂಲ ಈ ೫೦ ಬಗೆಯನ್ನು ಸಮಾನಂಗೊಂಡು ಚೆನ್ನಾಗಿ ಕುಟ್ಟಿ ಚೂರ್ಣವಂ ಮಾಡಿ ಇರಿಸಿಕೊಂಡು ತೆಗೆದುಕೊಂಬುದು (ವಿವೈವಿ.೪೨). **ಹಿಟ್ಟುಳಿಕ:** ''ಅಶ್ಮಘ್ನಃ- ಹಿಟ್ಟುಳಿಕ; ದೊಡ್ಡೀಪತ್ರೆ'' (ಓಷಧಿ. ೩). **ಹಿಟ್ಟುಳಿಕೆ:** ''ಅರ್ಕಪುಷ್ಪಿ - ಚಿಟುಕೆ; ಹಾಲೆ; ಹಿಟ್ಟುಳಿಕೆ'' (ಓಷಧಿ. ೬). **ಹಿಟ್ಟುಳುಕ:** ಕಡವದ ಬೇರು, ಚನ್ನೆಗ್ಗಿಲು, ಹಿಟ್ಟುಳುಕನ ಬೇರು, ಇವಂ ಹಸುವಿನ ಹಾಲೊಳರೆದು ಶರ್ಕರೆವೆರಸಿ ಮೂರುದಿನಂ ಕೊಳ್ಳಲು ಕಲ್ಲುಕಟ್ಟು, ಮೂತ್ರಕೃಚ್ಛ್ರ ಸಹ ಮಾಣ್ಗುಂ (ಸಕವೈ. ೩೭೯). [?]

**ಹಿಟ್ಟು** 'ಪಿಟ್ಟು' ನೋ.

**ಹಿಟ್ಟುಂಗುಟ್ಟು** 'ಪಿಟ್ಟುಗುಟ್ಟು' ನೋ.

**ಹಿಟ್ಟುಕಾರ** 'ಪಿಟ್ಟುಕಾರ' ನೋ.

**ಹಿಟ್ಟುಕಾಱ** 'ಪಿಟ್ಟುಕಾರ' ನೋ.

**ಹಿಟ್ಟುಗಲ್ಲು** (ನಾ). ಒಂದು ಬಗೆಯ ಮೃದುವಾದ ಕಲ್ಲು: ದಕ್ಷಿಣಭಾರತದ ಪಶ್ಚಿಮತೀರದಲ್ಲಿ ಕೆಲವು ಕಡೆ ಲ್ಯಾಟರ್ಯೆಟ್ ಎಂಬ ಹಿಟ್ಟುಗಲ್ಲಿನ ಮಣ್ಣು ಆವರಿಸಿದೆ. ಇದು ನೀರಾವರಿಗೆ ಹೇಳಿಸಿದ್ದಲ್ಲ (ಶಿಲ್ಪಸಾ. ೩೭೨). [ಹಿಟ್ಟು (< ಪಿಟ್ಟು) + ಕಲ್ಲು (< ಕಲ್)]

**ಹಿಟ್ಟುಗಳೆ** (ಕ್ರಿ). ಪುಡಿಯಾಗುವಂತೆ ಮಾಡು; ಹಿಟ್ಟಾಗಿಸು: ತನ್ನಂ ಮಟ್ಟವಿಸದಿದಿರಿಟ್ಟ ಮುಕುರವ ಹಿಟ್ಟುಗಳೆದುದಱಿಂದಲೇಂ ಫಲ (ಸದ್ಭುರು. ೯-೫). [ಹಿಟ್ಟು (< ಪಿಟ್ಟು) + ಕಳೆ]

**ಹಿಟ್ಟುಗುಟ್ಟು** 'ಪಿಟ್ಟುಗುಟ್ಟು' ನೋ.

**ಹಿಟ್ಟುದೆಱೆ** (ನಾ). ಒಂದು ಬಗೆಯ ತೆರಿಗೆ: ಪಂಚಕ ಅರುವಣ ಹಿಟ್ಟುದೆಱೆ . . . ಯಿಂತಿನಿತುವಂ . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಸೌಇಇ. XX, ೧೨೭-೨೭; 1186). [ಹಿಟ್ಟು (< ಪಿಟ್ಟು) + ತೆಱೆ$_3$]

**ಹಿಟ್ಟುದೋಱು** (ಕ್ರಿ). ಪುಡಿ ಪುಡಿಯಾಗು: ಹಿಟ್ಟುದೋಱಿತು ತೇರು ಬಳಿಕವನಿಟ್ಟ ನಿಟ್ಟೆ ಮುಸುಂಡಿ ಮುದ್ಗರ ಪಟ್ಟೆ ಪರಿಘ ಪರಶ್ವಧಾದಿ ಮಹಾಯುಧಂಗಳಲಿ (ತೊರರಾ. ೫-೬-೨೭). [ಹಿಟ್ಟು (< ಪಿಟ್ಟು) + ತೋಱು]

**ಹಿಟ್ಟುನೆಲ್ಲಿ** (ನಾ). ಒಂದು ಬಗೆಯ ನೆಲ್ಲಿ; (ಹಿಟ್ಟಿನಂತೆ) ಮೃದುವಾಗಿರುವ ನೆಲ್ಲಿಯ ಕಾಯಿ : ಉದಕದೊಳು ಹಿಟ್ಟುನೆಲ್ಲಿಯ ಕಾಯ್ಗಳಂ ಹಾಕಿ ಕುದಿಗೊಳಿಸಿ ಬಸಿದು . . . ಮೆಂತೆಯದ ಚೂರ್ಣಸಹಿತ ಸಾಸುವೆಗೆಯರಿಸಿನವಿಕ್ಕಿ ಹದನಾಗಿಯರೆದದಂ ಕಲಸಿಯೆಣ್ಣೆಯ ಬಿಡಲು ಹಿರಿದಾಗಿ ಸವಿವಡೆದುದು (ಸೂಪಶಾ. ೬-೨೦). [ಹಿಟ್ಟು (< ಪಿಟ್ಟು) + ನೆಲ್ಲಿ]

**ಹಿಟ್ಟುಬಳಪ** (ನಾ). ಪಾತ್ರೆ ಮಾಡಲು ಉಪಯೋಗಿಸುವ ಒಂದು ಬಗೆಯ ಮೃದುವಾದ ಕಲ್ಲು; ಮೇಲ್ಮೈ ಕಣಕಣವಾಗಿರುವ ಒಂದು ಬಗೆಯ ಬಳಪದ ಕಲ್ಲು; ಮರಿಗೆಕಲ್ಲು: (ಕ). [ಹಿಟ್ಟು (< ಪಿಟ್ಟು) + ಬಳಪ]

**ಹಿಟ್ಟುಮಟ್ಟಿ** (ನಾ). (ಹಿಟ್ಟಿನಂತೆ) ಮೃದುವಾಗಿರುವ ಮಣ್ಣು: ನೆಲದ ಹೊಟ್ಟೆ ಬದುಕ ನೋಡು ಗಟ್ಟಿಕಲ್ಲು ಹಿಟ್ಟುಮಟ್ಟಿ ಪದರು ಗುಂಡು ದುಂಡಿ ಬಂಡೆ (ಮೂರ್ತಿಕಾ. ೧೩-೨). [ಹಿಟ್ಟು (< ಪಿಟ್ಟು) + ಮಟ್ಟಿ]

**ಹಿಟ್ಟುಳಿಕ** 'ಹಿಟ್ಟಳಿಕೆ' ನೋ.

**ಹಿಟ್ಟುಳಿಕೆ** 'ಹಿಟ್ಟಳಿಕೆ' ನೋ.

**ಹಿಟ್ಟುಳುಕ** 'ಹಿಟ್ಟಳಿಕೆ' ನೋ.

**ಹಿಟ್ಟೆಲೆ** (ನಾ). ಒಂದು ಬಗೆಯ ಸಸ್ಯ: ಹೆಜ್ಜಾಲ, ಹಿಟ್ಟೆಲೆ, ಗುನ್ನಾಮದ ಪಟ್ಟೆಬಳ್ಳಿ (ಮೃಡಿಗಿ.೩೩-೬೩೧). [? + ಎಲೆ]

**ಹಿಟ್ಟೆಸರು** (ನಾ). ರಾಗಿಯ ಮುದ್ದೆಯನ್ನು ಮಾಡಲು ಕುದಿಯಲು ಇಡುವ ನೀರು: ಒಲೆಯ ಮೇಲೆ ಹಿಟ್ಟೆಸರಿಡು (ರೂಢಿ). [ಹಿಟ್ಟು (< ಪಿಟ್ಟು) + ಎಸರು$_2$ (< ಎಸರ್)]

**ಹಿಡ, ಹಿಡಿ$_4$** (ನಾ). ೧. ವೃಷಣ: 'ಹಿಡಬಡಿ' ಪರಾ. ೨. ವೀರ್ಯಗುಂದಿಸುವಿಕೆ; ಶಕ್ತಿಗುಂದಿಸುವಿಕೆ: ಹಿಡ (Castration) – ವಿಶಾಲದೃಷ್ಟಿಯಿಂದ ಹೇಳುವುದಾದರೆ ಒಂದು ಕೀಟದಲ್ಲಿ ವೃದ್ಧಿಹೊಂದಿದ ಜಂಪತಿಗಳ (Mature gametes) ಉತ್ಪತ್ತಿಯನ್ನು ಯಾವುದೇ ಕಾರಣದಿಂದ ಪೂರ್ತಿ ಅಥವಾ ಸ್ವಲ್ಪ ಪ್ರತಿಬಂಧಿಸುವುದು (ಕೀಟಜ. ೧೧೬). **ಹಿಡಿ$_4$: ೨.** 'ಹಿಡಿಯಿಸು', 'ಹಿಡಿಹೋರಿ' ಪರಾ. [< ಹಿಡುಕು$_1$]

**ಹಿಡಗಲು, ಹಿಡಗಿಲು, ಹಿಡುಗಲು** (ನಾ). ಕಸಬರಲು; ಕಸಬರಿಗೆ; ಪೊರಕೆ: ಹಿಡಗಲು ಕೂಡಾ ಯಾವನೂ ಹಿಡಿಯುತ್ತಿರಲಿಲ್ಲ (ಕಿಲಕ.೬). **ಹಿಡಗಿಲು:** "ಮಾರ್ಜನಿ-ಹಿಡಗಿಲು" (ಬಾಪಟೀ.೨-೬-೯). **ಹಿಡುಗಲು:** ಪರಿಮಳ ಹಿಡುಗಲಿನಿಂದ ಹಜಾರವನ್ನು ಗುಡಿಸುವುದಕ್ಕೆ ಬಂದಳು (ಚಂಗಾಳ್ಯ. ೧೩೬). [< ಹಿಡಿ$_2$]

**ಹಿಡಗಿಲು** 'ಹಿಡಗಲು' ನೋ.

**ಹಿಡಹಿಡಕೆ** 'ಹಿಡಿಹಿಡಿಕೆ' ನೋ.

**ಹಿಡಿ$_1$** 'ಪಿಡಿ$_1$' ನೋ.

**ಹಿಡಿ$_2$** 'ಪಿಡಿ$_2$' ನೋ.

**ಹಿಡಿ$_3$** 'ಪಿಡಿ$_3$' ನೋ.

**ಹಿಡಿ$_4$** 'ಹಿಡ' ನೋ.

**ಹಿಡಿಂಬಾಂತಕ** (ನಾ). ಹಿಡಿಂಬನೆಂಬ ರಾಕ್ಷಸನನ್ನು ಕೊಂದವನು; ಭೀಮ: ಕುರುಕ್ಷೇತ್ರದೊಳ್ ಪ್ರಳಯೋಗ್ರಾಂತಕನಂತಗುರ್ವನೊಳಕೊಂಡಿರ್ದಂ ಹಿಡಿಂಬಾಂತಕಂ (ಗದಾಯು. ೧-೫೫). [ಸಂ.]

**ಹಿಡಿಕಟ್ಟು** 'ಪಿಡಿಗಟ್ಟು' ನೋ.

**ಹಿಡಿಕಳ** (ನಾ). ಒಂದು ಮುಷ್ಟಿಯಷ್ಟು ಆಹಾರ; ಹಿಡಿಕೂಳು: ಕಡ ತಂದೆನಲ್ಲದೆ ಹಿಡಿಕಳವ ಕದ್ದನೇ ತಡವಲುಱೆ ಬೈದು ತೆಗೆದಾನು ಸಾಲಿಗನು ನಡುವೆ ಜಗಳವನು (ಸರ್ವಜ್ಞ. ೧೯೦೦). [ಹಿಡಿ$_2$ (ಪಿಡಿ$_2$) + ಕಳ$_7$ (IP < ಸಂ. ಕವಲ)]

**ಹಿಡಿಕಿಸು** 'ಪಿಡಿಕೆಯ್ಸು' ನೋ.

**ಹಿಡಿಕು$_1$** 'ಹಿಡುಕು' ನೋ.

**ಹಿಡಿಕು$_2$** (ನಾ). ೧. ಹಿಡಿತ; ಹಿಡಿಯುವಿಕೆ: ಹಿಡಿದಡೆ ಹಿಡಿಕಿಗೆ ಬಾರದೆ ಬಿಟ್ಟಡೆ ಹರವರಿಯಲ್ಲಿ ಹರಿಯದೆ . . . ಇಪ್ಪ ಉಭಯಸ್ಥಲವನು ಅಱಿತಲ್ಲಿ ವಿಶ್ವಸ್ಥಲ ನಾಶವಾಗಿ ಸದ್ಯೋಜಾತಲಿಂಗವು ವಿನಾಶವಾಗಬೇಕು (ವಚಶಾ. I, ೧೨೦). **೨.** ಜಿಪುಣತನ; ಜೀನತನ: ಅಡವಿಯೊಳು ನೀನೆನಗೆ ಕಡುಕಷ್ಟಪಡಿಸುತಲಿ ಒಡನೆ ಕರತಂದೀಗ ಹಿಡಿಕ ಮಾಡುವೆಯಾ (ಹಮಚ. ೮೭). [ಹಿಡಿ$_2$ (< ಪಿಡಿ$_2$) + - ಕು$_0$]

**ಹಿಡಿಕುಂಟೆ** (ನಾ). ಪೊರಕೆ; ಕಸಬರಿಗೆ: ಒಂದು ಮನೆಯೊಳಗೆ ಅಮೂಲ್ಯವಾದ ಎಷ್ಟೋ ಒಡವೆಗಳಿರುತ್ತವೆ. ಆದರೆ ಒಂದು ಕೆಲಸಕ್ಕೆ ಹಿಡಿಕುಂಟೆಯೇ ಬೇಕಾಗುತ್ತದೆ (ಲೋಕಕ. ೫೫); ಹಿಡಿಕುಂಟೆ ಕೊಟ್ಟು ಗುಡಿಸು ಎನ್ನುತ್ತೇವೆ (ಕೋಲ್ಮಿಂಚು. ೩೨). [ಹಿಡಿ$_2$ (< ಪಿಡಿ$_2$) + ಕುಂಟೆ$_1$]

**ಹಿಡಿಕೂಳು** (ನಾ). ಒಂದು ಮುಷ್ಟಿ ಅನ್ನ,–ಆಹಾರ: ಹಿಡಿಕೂಳು ಬಡವನಿಗೀಯುವೊಡದೆ ಸಾಕು ಮತ್ತಿನ ತಪವೇಕೆ ಬೇಕು (ಇಂಚಾಪ. ೧೫೫-೬೧). [ಹಿಡಿ$_2$ (< ಪಿಡಿ$_2$) + ಕೂಳು$_2$ (< ಕೂೞ್$_1$)]

**ಹಿಡಿಕೆ** 'ಪಿಡಿಕೆ' ನೋ.

**ಹಿಡಿಕೆಮೊಲೆ** (ನಾ). ಮುಷ್ಟಿಯ ಗಾತ್ರದ ಸ್ತನ: ಮೊಳೆಯ ಮೊಲೆಯಡಿಕೆ ಮೊಲೆಯಮಳಕಾEಯಾಮಳಕತೆಮೊಲೆ ನಿಂಬೆಮೊಲೆಯು ಬೆಳುಗಾಯ ಮೊಲೆ . . . ಹಿಡಿಕೆಮೊಲೆ ಹೂಚ್ಚುಮೊಲೆಯು (ನವಮೋ.೨೪-೧೪). [ಹಿಡಿಕೆ (< ಪಿಡಿಕೆ) + ಮೊಲೆ$_1$]

**ಹಿಡಿಕೆಯ್ಸು** 'ಪಿಡಿಕೆಯ್ಸು' ನೋ.

**ಹಿಡಿಕೈಸು** 'ಪಿಡಿಕೆಯ್ಸು' ನೋ.

**ಹಿಡಿಕೋಲು** 'ಪಿಡಿಗೋಲ್' ನೋ.

**ಹಿಡಿಖಂಡ** 'ಪಿಡಿಖಂಡ' ನೋ.

**ಹಿಡಿಖಂಡಂಗೊಯ್** 'ಪಿಡಿಖಂಡಂಗೊಯ್' ನೋ.

**ಹಿಡಿಖಂಡಗೊಯ್ಯು** 'ಪಿಡಿಖಂಡಂಗೊಯ್' ನೋ.

**ಹಿಡಿಗಣ್ಣವಲೆ** (ನಾ). ಹಿಡಿಯಿಂದ ಕೂಡಿದ ಹಗ್ಗದ ಬಲೆ: ಕೀಸುವಲೆ ಕೊಂಬುವಲೆ ಹಿಡಿಗಣ್ಣವಲೆಗಳಂ ಸೂಸುತೆಲ್ಲೆಡೆಯೊಳ್ಕೆತಪ್ಪ ಕಾಡೊಡೆಯರ ವಿಲಾಸಮಂ ಕಂಡು (ರುಕ್ಮಾಂಗ. ೧೦-೧೯). [ಹಿಡಿ$_2$ (< ಪಿಡಿ$_2$) + ಕಣ್ಣವಲೆ]

**ಹಿಡಿಗತ್ತಿಮಾನ್ಯ** (ನಾ). ಬಿಚ್ಚುಗತ್ತಿಯ ಮನ್ನೆಯ,– ಬಂಟ: ಕಡಿದಾರ ಕಡಿದಾರ ಹಿಡಿಗತ್ತಿಮಾನ್ಯಾನ ಕಡಿಯ ಹುಬ್ಬಳ್ಳಿ ಸರಜ್ಯಾನ್ನ ಕೋ ಮಲ್ಲಪ್ಪ ಕಡಿದಾರ ಕಲ್ಲಗಸಿ ಇದರೀಗೆ (ಲೋಕಗೀ. ೨೨೫). [ಹಿಡಿಗತ್ತಿ$_0$ + ಮಾನ್ಯ]

**ಹಿಡಿಗಲ್ಲು** 'ಪಿಡಿಗಲ್' ನೋ.

**ಹಿಡಿಗವಡಿಕೆ** (ನಾ). ಒಂದು ಬಗೆಯ ಕವಡೆಯಾಟ: ಗೋಪನಂದನರನು ಕೂಡಿ ಹಿಡಿಗವಡಿಕೆ ಹಿಳ್ಳು ಲಗ್ಗೆ ಸಡುಗಡು ಮೊದಲಾದ ಮಕ್ಕಳಾಟವ ಕಡುಸಡಗರ ದಿಂದಾಡುತಿಹನು (ನೇಮಿಸಂ. ೧೫-೧೧೭). [ಹಿಡಿ$_2$ (< ಪಿಡಿ$_2$) + ಕವಡಿಕೆ$_2$]

**ಹಿಡಿಗವಡೆ** (ನಾ). = ಹಿಡಿಗವಡಿಕೆ: ಬಾಲಕರು ನೂಱಾಱು ಮೆಱೆದರು . . . ಆಳಿನೇಱಿಕೆ ಹಿಡಿಗವಡೆ ಗುಱಿಯೊಳು ಚೆಂಡಿನ ಹೊಣಕೆ ಚಿಣಕೋಲಾಳು ಗೊತ್ತಿನ ದಂಡೆಯನೆ ನಾನಾವಿನೋದದಲಿ (ಕುವ್ಯಾಅ. ೬-೧); ಹಿಡಿಗವಡೆ ಸಡುಗುಡಂ

ಸಂಡು ಜಗಿಹಲ್ಲೆ ಬೊಹರಿಗಳಾಟದಲ್ಲಿ ಮನಗೊಂಡಾಡಿ ಬೆಳೆದು ಜವ್ವನನಾಗಿ ಬಾಳ್ತೆಯಿಲ್ಲದೆ ಕೆಟ್ಟು ಹೋದೆಯಲ್ಲಾ (ಸವ್ಯಸಾ.೧೦-೯); ಬೊಗರಿ ಗದುಗು ಸಡುಗುಡು ಲಗ್ಗೆ ಹಿಡಿಗವಡೆಗಳಿವು ರಾಜಪುತ್ರರಿಗೆ ಬಗೆಯಲುಚಿತವೆ (ಕುರಾಸಾಂ. ೩೦-೧೭). [ಹಿಡಿ$_2$ (< ಪಿಡಿ$_2$) + ಕವಡೆ$_2$]

**ಹಿಡಿಗುಟ್ಟು** (ಕ್ರಿ). ಮುಷ್ಟಿಯಿಂದ ಕುಟ್ಟು: ಒಡಲೊಡೆದ ತೆರನಾಗೆ ಬೆದರಿ ಬೆಬ್ಬಳವೋಗಿ ಹಿಡಿಗುಟ್ಟುತೋಡಿದಂ ಕಿವಿಯ ಕಾಲ್ಮಾಡಿ (ಕಾಲೂರ. ೮೨-೧೫೪).
[ಹಿಡಿ$_2$ (< ಪಿಡಿ$_2$) + ಕುಟ್ಟು$_1$]

**ಹಿಡಿಗುದಿಗೆ** (ನಾ). ಹಿಡಿಕೆಯನ್ನುಳ್ಳ ದಪ್ಪನಾದ ಕೋಲು, — ದೊಣ್ಣೆ: ಹಿಡಿಗುದಿಗೆ ಕಲುಗುಂಡು ಭಲ್ಲೆಯ ಖಡುಗ ಕುಂತ ಕುಠಾರ ಮುಸಲದೊಳೊಡನೊಡನ ಬಡಬಡಿಸುತೆಬ್ಬಿಸಿದರು ರಣೋತ್ಸವಕೆ (ಅನಂರಾ. ೪-೫-೨೯).
[ಹಿಡಿ$_2$ (< ಪಿಡಿ$_2$) + ಗುದಿಗೆ]

**ಹಿಡಿಗುದುರೆ** 'ಪಿಡಿಗುದುರೆ' ನೋ.

**ಹಿಡಿಗೂಟ** (ನಾ). (ಬೀಸುವ ಕಲ್ಲಿನ ಮೇಲ್ಭಾಗಕ್ಕೆ ಇರುವ) ಹಿಡಿದುಕೊಳ್ಳಲು ಅನುಕೂಲವಾಗುವಂತೆ ಇರುವ ಗೂಟ, — ಬೆಣೆ: ಬಿದಿರೆ ಬೆಟ್ಟದ ಮೇಲೆ ಚದುರ ರಾಗಿಕಲ್ಲು ಮದನಾರಿನೆಂಬೊ ಹಿಡಿಗೂಟ ಹಿಡುಕೊಂಡು ಶಿವನ ಪಾಡ್ಯಾಳೆ ಸಿರಿಗೌರಿ (ನಾಪದ. ೬೨). [ಹಿಡಿ$_2$ (ಪಿಡಿ$_2$) + ಗೂಟ (< ಗೂಂಟ)]

**ಹಿಡಿಗೆ** (ನಾ). ದೊಡ್ಡ ಬುಟ್ಟಿ; ಕುಕ್ಕೆ: ಹಿಡಿಗೆ ಜಲ್ಲಡಿ ಪಂಚಪಾತ್ರೆ ಸೋಟಕ ಬುರುಡೆ ಕಡುಬು ಮುಚ್ಚಳ ಮಿಳ್ಳೆ ಕುಡಿಕೆ . . . ಎಲ್ಲವುಂ ಪೊಡವಿಪತಿ ಬಂಡಿಕುದುರೆಗಳೆತ್ತುಗಳ ಮೇಲೆ ಬಿಡದೇರಿ ಕಳುಪಿದಂ (ಸಿದ್ಧಕಾ. ೧೩-೪೪).
[IP ಇದು 'ಹಡಿಗೆ' ಎಂಬುದರ ಅಪಲಿಖಿತವಿರಬಹುದು]

**ಹಿಡಿಗೆಯ್$_1$** (ಕ್ರಿ). ಮುಷ್ಟಿಯನ್ನು ಬಿಗಿಗೊಳಿಸು, — ಮುಚ್ಚು: "ಹಿಡಿಗೆಯ್ದು [ಪಾಠಾಂ. ಹಿಡಿಕಿಸಿದ, ಹಿಡಿಗೈದ] ಕೈ ಮುಷ್ಟಿಯೆನಿಸಿಕ್ಕು" (ಮಂಗರಾ. ೯೫-೯).
[ಹಿಡಿ$_2$ (< ಪಿಡಿ$_2$) + ಕೆಯ್$_1$]

**ಹಿಡಿಗೆಯ್$_2$**, ಹಿಡಿಗೈ (ನಾ).೧. ಮುಚ್ಚಿದ ಕೈ; ಬಿಗಿಹಿಡಿದ ಮುಷ್ಟಿ: (ಕ). ೨. (ಆಲಂ) ಅಧೀನ; ವಶ: ಹಿಡಿಗೆ [ಪಾಠಾಂ. ಗ] ಯ್ಯೊಳಿರ್ದಸುರರಿಪು ಪಾರ್ಥನಂ ಕರೆದು ತುಡು ಮಹಾಸ್ತ್ರವನೆಂದು ನೇಮಿಸಲ್ (ಜೈಮಿಭಾ. ೨೫-೫೪). **ಹಿಡಿಗೈ:** ೩. ಹಿಡಿಯುವ ಸಾಧನ; ಹಿಡಿಕೆ; ಕಾವು: "(ಕಡೆತದ ಯಂತ್ರದಲ್ಲಿ) ಕಡೆಯ ಬೇಕಾದ ವಸ್ತುವನ್ನು ಭದ್ರವಾಗಿ ಹಿಡಿದುಕೊಳ್ಳುವ ಸಲಕರಣೆ: ಹಿಡಿಗೈ" (chuck. ೫೦೫೧).
[ಹಿಡಿ$_2$ (< ಪಿಡಿ$_2$) + ಕೆಯ್$_2$]

**ಹಿಡಿಗೈ** 'ಹಿಡಿಗೆಯ್$_2$' ನೋ.

**ಹಿಡಿಗೊಡು** (ಕ್ರಿ). ವಶಕ್ಕೆ ಕೊಡು; ಸ್ವಾಧೀನಪಡಿಸು: ಧರಯೊಳೀ ಹೆಣ್ಣು ರಾಕ್ಷಸಿಯಲ್ಲದಿನ್ನುಂಟೆ . . . ನೋಡಿದರೆ ಮನವ ಮಾತಾಡಿದರೆ ಧನವನೊಡಗೂಡಿದರೆ ಪ್ರಾಣಗಳ ಸೆಳೆದುಕೊಳ್ಳುವುದು ಮಾಡಬಾರದನೆ ಮಾಡಿಸಿ ಕಡೆಗೆ ಯಮಭಟರ ತಾಡನೆಗೆ ಹಿಡಿಗೊಟ್ಟು ಕೊಲ್ಲಿಪುದರಿಂದೆ (ಕೈಕವ. ೨-೧೦-೧). [ಹಿಡಿ$_2$ (< ಪಿಡಿ$_2$) + ಕೊಡು$_1$]

**ಹಿಡಿಗೋಲು** 'ಪಿಡಿಗೋಲ್' ನೋ.

**ಹಿಡಿಚಂಡು** (ನಾ). (ಢಕ್ಕೆ ಮುಂತಾದ ವಾದ್ಯಗಳನ್ನು ಬಾರಿಸುವ)ತುದಿಯಲ್ಲಿ ಚೆಂಡಿನಾಕಾರವುಳ್ಳ ಕೋಲು, — ವಾದನದಂಡ: ಕಾಯವೆಂಬ ಢಕ್ಕೆಯ ಮೇಲೆ ಜೀವವೆಂಬ ಹಿಡಿಚಂಡು ಬೀಳೆ (ವಚಶಾ. I, ೧೪೪).
[ಹಿಡಿ$_2$ (< ಪಿಡಿ$_2$) + ಚಂಡು$_1$ (< ಸೆಂಡು)]

**ಹಿಡಿಜೋಳ** (ನಾ). ಒಂದು ಬಗೆಯ ಜೋಳ; ದೊಡ್ಡ ಜೋಳ: (ಕ).
[ಹಿಡಿ$_0$ + ಜೋಳ]

**ಹಿಡಿತ** 'ಪಿಡಿತ' ನೋ.

**ಹಿಡಿತಡೆ** (ನಾ). ಅಂಕೆ; ಹತೋಟಿ: ರೋಗಿ ಬಯಸಿತ್ತ ವೈದ್ಯ ಕೊಡುವಂತೆ . . . ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ ಎನಿಸುವುದು ಹಿಡಿತ [ಪಾಠಾಂ. ದ] ಡೆ ಇಲ್ಲ (ಮಡಿಮಾ. ೨೫-೩೫); ಮುಚ್ಚಿ ಮುಚ್ಚಿ ಒಯ್ದು ಭಿಕ್ಷಾದವರಿಗೆ ಹಾಕಿದರ, ಸಂಸಾರ ಹಿಡಿತಡೆಯೊಳಗ ಬಾ ಅಂದ್ರ ಹ್ಯಾಂಗ ಬಂದೀತು (ಧರ್ಮಸ. ೧೩೩). [ಹಿಡಿ$_2$ (< ಪಿಡಿ$_2$) + ತಡೆ$_2$]

**ಹಿಡಿತರ್** 'ಪಿಡಿತರ್' ನೋ.

**ಹಿಡಿತರಿಸು** 'ಪಿಡಿತರಿಸು' ನೋ.

**ಹಿಡಿತರು** 'ಪಿಡಿತರ್' ನೋ.

**ಹಿಡಿತೆ** 'ಪಿಡಿತೆ' ನೋ.

**ಹಿಡಿದಪ್ಪಲೆ** (ನಾ). (ಹಿಡಿಯಲು) ಅನುಕೂಲವಾಗುವಂತೆ ಹಿಡಿಕೆಯಿರುವ ತಪ್ಪಲೆ, — ಪಾತ್ರೆ: ಅವರ ಮನೆಯಲ್ಲಿ ಹಿಂದಿನ ಕಾಲದ ತೂಕವಾದ ಹಿಡಿದಪ್ಪಲೆಗಳು ತುಂಬಾ ಇವೆ (ರೂಢಿ). [ಹಿಡಿ$_2$ (< ಪಿಡಿ$_2$) + ತಪ್ಪಲೆ]

**ಹಿಡಿನಾಯಿ** (ನಾ). ಕ್ರೂರಪ್ರಾಣಿಗಳನ್ನು ಬೇಟೆಯಾಡಲು ತರಪೇತು ಪಡೆದಿರುವ ನಾಯಿ: ಹಿಡಿಯೆರಳೆ ಬೆಳ್ಳಾರ್ಪಟಂ ಹಿಡಿನಾಯಿಗಳು ಹೆಗಲ ಸಾಳುವಂ . . . ಪರಿಪರಿಯ ಹಕ್ಕಿವೆರಸಡವಿಗಂತಕರಂತೆ ನಡೆವ ಶಬರರ ಕಂಡನು (ಸೋಮಚಿ. ೩-೪).
[ಹಿಡಿ$_1$ (< ಪಿಡಿ$_1$) + ನಾಯಿ (< ನಾಯ್)]

**ಹಿಡಿಬಂದಿ** (ನಾ). ೧. ಸೆರೆಗೆ ಸಿಕ್ಕಿದವನು; ಸೆರೆಯಾಳು. ೨. ಸೆರೆಗೆ ಸಿಲುಕುವಂತಹುದು: ನೋಟ ಸುತ್ತಲು ಬೇಹುದೇ ಹರಿದಾಟವಗಲಕೆ ಬಳಕೆಯಲಿ ಮಾತಾಟ ಸುಳಿವಿನೊಳಗ್ಗಳದ ಹಿಡಿಬಂದಿ[ಪಾಠಾಂ. ಧಿ] ಹರಹಿನಲಿ . . . ಕೂಟದಲಿ ಕುಱುಹಾಗಿ ಮಿಗೆ ನಿರ್ಲೋಟಿಸುವ ನಿಜ ದಿಟ್ಟ ಬೊಮ್ಮವಿದು (ಕುವ್ಯಾಸ. ೯-೧೭);ಕಳವಳಿವು ಹಿಡಿಬಂದಿ ಜೂಜುಗಳೊಳಗವತೆಯನ್ಯಾಯವೆಂಬೀ ಬಳಕೆಯಲಿ ಕೀಳ್ಗೊಳ್ಗೊಳ್ಳೊಂದಿರೆ ಕಾಮವಶತೆಯಲಿ ಕಳಿದವೆಂಭತ್ತೆಂಟು ವರ್ಷಂಗಳು (ನಿಭಾಗ. ೬-೧-೧೫).
[ಹಿಡಿ$_2$ (< ಪಿಡಿ$_2$) + ಬಂದಿ$_1$]

**ಹಿಡಿಬಿಟ್ಟಿ** (ನಾ). ಅಧೀನತೆಗೆ ಒಳಗಾಗಿಸುವುದು: ಕೊಡಬಹುದೇ ಮಗಳ ಹಿಡಿಬಿಟ್ಟಿಯನೆ ಮಾಡಿ ಹೀಗೆ ಸಮುದ್ರರಾಯ (ಪುರಂದ. ೩-೬೭ ಅನುಪಲ್ಲವಿ); ಕುಡೆನಂದುದಿಲ್ಲಮ್ಮ ಭರತೇಶ ತಾನಿಷ್ಟು ಪೊಡವಿಗಗ್ಗಳನಾದೆನೆಂದು ಹಿಡಿಬಿಟ್ಟಿಯೊಳು ಪೆಣ್ಣ ಬೇಡಿದರದಕೆ ನಾನೊಡಬಟ್ಟುದಿಲ್ಲ (ಭರತೇ. ೩೭-೪೪). [ಹಿಡಿ$_1$ (< ಪಿಡಿ$_1$) + ಬಿಟ್ಟಿ$_1$]

**ಹಿಡಿಬುಗುರಿ** (ನಾ). ಒಂದು ಬಗೆಯ ಬುಗುರಿ; ಮುಷ್ಟಿಗಾತ್ರದ ಬುಗುರಿ: ಸುಜನವಂದ್ಯನ ರಥವ ಹಿಡಿದನಿಲಜನು ಮುಂಗೈಗೊಂಡು ಪಡೆ ಗಜಬಜಿಸೆ ನಭಕೀಡಾಡಿದನು ಹಿಡಿಬುಗುರಿಯಂದದಲಿ (ಕುವ್ಯಾದ್ರೋ. ೧೩-೧೩).
[ಹಿಡಿ$_2$ (< ಪಿಡಿ$_2$) + ಬುಗುರಿ (< ಬವರಿ)]

**ಹಿಡಿಬೂದಿ** (ನಾ). ಮುಷ್ಟಿಯಲ್ಲಿ ಹಿಡಿಯಬಹುದಾದಷ್ಟು ಬೂದಿ; ಒಂದು ಹಿಡಿ ಬೂದಿ: ಇನಿತಾಯ್ತೆ, ಹಿಡಿಮಣ್ಣು, ಹಿಡಿಬೂದಿ, ಆಳ ಬಾಳು ? ಬಡವನೋ, ಬಲ್ಲಿದನೊ, ದೊರೆಯೊ, ಹುಳುವೋ ಇನಿತೆ ಈ ಬಾಳು ? (ಹೂಂಗಳು. ೨೮-೨೩).
[ಹಿಡಿ$_2$ (<ಪಿಡಿ$_2$) + ಬೂದಿ]

**ಹಿಡಿಮಂದಿ** (ನಾ). ಕೆಲವೇ ಮಂದಿ; ಸ್ವಲ್ಪಜನ: ಹಿಡಿಮಂದಿಯ ಮತ್ತು ಅರಸೊತ್ತಿಗೆಯ ಸ್ವತ್ತಾಗಿದ್ದು ಪರೋಪಜೀವಿಯಾಗಿದ್ದ ಸಾಹಿತ್ಯ ಸರ್ವಸಾಮಾನ್ಯರ ಆಸ್ತಿಯಾದದ್ದಲ್ಲದೆ, ತಾಯಿನೆಲದಲ್ಲಿ ಬಲವಾಗಿ ಬೇರುಬಿಟ್ಟಿತು (ನಂಜುಂಡ. ೩೯); ಹಿಡಿಮಂದಿಯ ಭೋಗ ವೈಭವಗಳ ರಕ್ಷಣೆಗಾಗಿ ಕೋಟ್ಯಂತರ ಜನರ ರಕ್ತಶೋಷಣೆ ದುಃಖ ಸಂಕಟಗಳನ್ನು ಜಾಗರೂಕತೆಯಿಂದ ಬಚ್ಚಿಡುತ್ತಿದ್ದ . . . ಶ್ರೀಮಂತರಿಗೆ ಆಶ್ರಯ ಕೇಂದ್ರವಾಗಿದ್ದ ಸಮಾಜದ ಬಗ್ಗೆ ಅವನಲ್ಲಿ ಜುಗುಪ್ಸೆ ಜನಿಸಿತು (ಪುನರು. ೩೨೬).
[ಹಿಡಿ$_2$ (< ಪಿಡಿ$_2$) + ಮಂದಿ]

**ಹಿಡಿಮಣ್ಣು** (ನಾ). ಒಂದು ಮುಷ್ಟಿ ಮಣ್ಣು: ನನ್ನ ಕೈಯಿಂದಲೇ ಹಿಡಿಮಣ್ಣು ಹಾಕಿಸಿದ ಮೇಲೆ, ಎಲ್ಲರೂ ನಿಮ್ಮ ಮೇಲೆ ಮಣ್ಣು ಹಾಕಿ ಮುಚ್ಚಿ ಹೂಳಿದರು (ನಿಶಲು. ೨೫೫); ಎದೆಯೊಲುಮೆಯ ಚಲುಮೆಯ ಹೆಣ್ಣು ಮುಕ್ತಿಯ ಕಣ್ಣಿಗೆ ಹಿಡಿಮಣ್ಣು (ಪಾಂಚಜ. ೫೯-೨). [ಹಿಡಿ$_2$ (< ಪಿಡಿ$_2$) + ಮಣ್ಣು (< ಮಣ್)]

**ಹಿಡಿಮಿಗವಕ್ಕಿ** (ನಾ). ಬೇಟೆಯಾಡಿ ಹಿಡಿದ ಪ್ರಾಣಿ ಮತ್ತು ಪಕ್ಷಿ: ಹಿಡಿಮಿಗವಕ್ಕಿಯ ತುಂಡು ತುಂಡುಗಳನು ಸಡಿಲದೆ ಸೊಪ್ಪಿನೊಳ್ಪುದುಗಿದಡಿಗಿಕ್ಕಿ ಹೊತ್ತವರನಿತಿನಿತೆಂಬುದ ಪಡಿಗಾಣ್ಬೊಡೆ ಶಕ್ಯವಲ್ಲ (ಮೋಹತ. ೧೯-೮೭).
[ಹಿಡಿ$_1$ (< ಪಿಡಿ$_1$) + ಮಿಗ + ಪಕ್ಕಿ]

**ಹಿಡಿಮೃಗ** (ನಾ). ಕ್ರೂರಪ್ರಾಣಿಗಳನ್ನು ಬೇಟೆಯಾಡಲು ಬಳಸುವ ಪ್ರಾಣಿ;

ದೀಹದ ಪ್ರಾಣಿ: ಹೆಸರ ನಾಯ್ಗಳ ಹಾಸ ಹಚಿದುಬ್ಬಸದಲುಳಿಗದವದಿರ ಹಿಡಿಮೃಗ ಮಸಗಿದವ್ಪೆಹದವಿಲುಗಳೊದೆದವು ಹೆದೆಯ ಹರವಿನಲಿ (ಕುವ್ಯಾಅ.೧೩-೨೧).

[ಹಿಡಿ$_1$ (< ಪಿಡಿ$_1$) + ಮೃಗ]

**ಹಿಡಿಮೊಲ** (ನಾ). ಬೇಟೆಯಲ್ಲಿ ಆಕರ್ಷಣೆಗಾಗಿ ಉಪಯೋಗಿಸುವ ಮೊಲ; **ದೀಹದ ಮೊಲ:** ಅಶನವನುಂಡು ವ್ಯಸನಕ್ಕೆ ಹರಿದು ವಿಷಯಂಗಳೆಂಬ ಹಿಡಿಮೊಲಕ್ಕೆ ಸಿಲ್ಕಿ ಪಂಚೇಂದ್ರಿಯಂಗಳೆಂಬ ನಾಯಿಗಳಿಚ್ಛೆಗೆ ಹರಿದು . . . ನಾಯ ಸಾವ ಸಾವ ಅದ್ವೈತಿಗಳಿರಾ (ಚನ್ನವ. ಕ. ೧೯೯-೪೪೪); ಜೀಯ ಕೊಡು ವೀಳೆಯವನಾ . . . ಹರನಾರಾಯಣರು ತಾವಾಗಲೊಂದೇ ಛಾಯದಲಿ ಹಿಡಿತಹೆನು ಹಿಡಿಮೊಲನಂತೆ ತಾನೆಂದ (ತೊರರಾ. ೫-೫-೧೦). [ಹಿಡಿ$_1$(< ಪಿಡಿ$_1$) + ಮೊಲ]

**ಹಿಡಿಮೊಲಂಗೊಳ್** (ಕ್ರಿ). ಬೇಟೆಯಲ್ಲಿ ದೀಹದ ಮೊಲವನ್ನು ಹಿಡಿಯುವಂತೆ ಹಿಡಿ: ಬೇಟವಡೆ ಕೂಡೆ . . . ಸೌಂದರನ ಬಲವನೊರ್ಬುಳಿಮಾಡಿ ಗರ್ವಂಗೆಡಿಸಿ ಕಂಗೆಡಿಸಿ ಶಕುತಿಗೆಡಿಸಿ ಹಿಡಿಮೊ[ಪಾಠಾಂ. ಮೂ]ಲಂಗೊಂಡೊಡೆಯುಚ್ಚಿಕ್ಕೊಂಡು ನಂಬಿಯುಂ ತುಂಬುರನುಮುಳಿಯೆ (ನಂಬಿರ. ೧೮-೨೩೭). [ಹಿಡಿಮೊಲ + ಕೊಳ್$_1$]

**ಹಿಡಿಯಂಬು** 'ಪಿಡಿಯಂಬು' ನೋ.

**ಹಿಡಿಯಕ್ಕಿ** (ನಾ). ಒಂದು ಹಿಡಿ ತುಂಬುವಷ್ಟು ಅಕ್ಕಿ,— ಅಕ್ಷತೆ: ಮುತ್ತ್ಯದ ವೆಂಗಳು ಸಿರಿಮುಡಿಯ ಪೂದಂಡೆಗಳೊಡನೆ ಹಿಡಿಯಕ್ಕಿದಳೆದು ಬಂದರು (ಮೋಹತ. ೧೭-೪೮). [ಹಿಡಿ$_2$ (<ಪಿಡಿ$_2$) + ಅಕ್ಕಿ$_1$]

**ಹಿಡಿಯಾನೆ** 'ಪಿಡಿಯಾನೆ' ನೋ.

**ಹಿಡಿಯಾಳು** 'ಪಿಡಿಯಾಳ್' ನೋ.

**ಹಿಡಿಯಿಸು** (ಕ್ರಿ). ವೀರ್ಯಗುಂದಿಸು; ಶಕ್ತಿಗುಂದಿಸು: "ಆರ್ಷಭ್ಯಃಯೆಂಬುದು ಹಿಡಿಯಿಸಲ್ತಕ್ಕ ಹೋ(ಚಿ)ರಿ" (ಹಲಾಯು.೪೪-೧೧೯). [ಹಿಡಿ$_4$ (< ಹಿಡ) + - ಇಸು$_3$]

**ಹಿಡಿಯೆರಲೆ,** ಹಿಡಿಯೆರಳೆ (ನಾ). ಇತರ ಪ್ರಾಣಿಗಳನ್ನು ಬೇಟೆಯಾಡಲು ಆಕರ್ಷಣೆಗಾಗಿ ಬಳಸುವ ಜಿಂಕೆ; ದೀಹದ ಮೃಗ: ಗಿಡಗ . . . ಕರಿಕೋಣ ಹಿಡಿಯೆರಲೆಯ ಮೊತ್ತವನು ತಡೆಯದೆ ಕೊಂಡ್ಯೊಯ್ದಂದರು ಬೇಟೆಯ ಕಡುಗಲಿಗಳು (ಕುರಾಸಾಂ.೨೭-೪೪). **ಹಿಡಿಯೆರಳೆ:** ಹಿಡಿಯೆರಳೆ ಬೆಳ್ಳಾರ್ಪಟಂ ಹಿಡಿನಾಯಿಗಳು ಹೆಗಲ ಸಾಳುವಂ ಬಂಡಿಯ ಹುಲಿ . . . ಪರಿಪರಿಯ ಹಕ್ಕಿವೆರಸಡವಿಗಂತಕರಂತೆ ನಡೆವ ಶಬರರ ಕಂಡನು (ಸೋಮಚ. ೩-೪). [ಹಿಡಿ$_1$ (< ಪಿಡಿ$_1$) +ಎರಲೆ]

**ಹಿಡಿಯೆರಳೆ** 'ಹಿಡಿಯೆರಲೆ' ನೋ.

**ಹಿಡಿವಡೆ** 'ಪಿಡಿವಡೆ' ನೋ.

**ಹಿಡಿವತ್ತಿ,** ಹಿಡಿಹತ್ತಿ (ನಾ). ೧. ಒಂದು ಮುಷ್ಟಿ ತುಂಬುವಷ್ಟು ಹತ್ತಿ,- **ಅರಳೆ:** ಹತ್ತಿಯ ಪಸಾರಕ್ಕೆ ಹಿಡಿವತ್ತಿಯ ಕೊಟ್ಟರೆ (ಮುಂಬರಾ. X, ೨೬೯-೭೪; 1229). **ಹಿಡಿಹತ್ತಿ:** ೨. (ಆಲಂ) ನಿಷ್ಪ್ರಯೋಜಕ: ಜಗದಿ ಮೂರುವಿಧದ ನರರಿಹರು; ಮೊದಲವರಕ್ಕದಂತೆ ಹೂವುಂಟು ಹಣ್ಣಿಲ್ಲ ಗಳಪವೆ ವಿನಾ ಕೆಲಸವೆನೆ ಹಿಡಿಹತ್ತಿ! (ಹಪ್ಪಿರ. ೭-೧೦೫). [ಹಿಡಿ$_2$ (< ಪಿಡಿ$_2$) + ಪತ್ತಿ$_1$(< ಪಟ್ಟಿ)]

**ಹಿಡಿವಸುಗೆ** (ನಾ). ವಶಕ್ಕೊಳಪಟ್ಟ ವಿಭಾಗ (?): ಶ್ರೀ ಮಾರ್ಕಣ್ಡೇಶ್ವರದೇವರ ಶ್ರೀಪಾದಸನ್ನಿಧಾನದಲು ಶಿವಾನನ್ದಯೋಗಿನಿವೇದ್ಯಶಾಲೆಯಂ ಮಾಡಿ [ಸೂ]ರಲಲು ತೊಳಹನ ಕಯ್ಯಲೂ ಬಿ[ಡಾ]ರ್ವ್ಬರ ಮಾಗ ಹಿಡಿವ[ಸುಗೆ] ಬಿತುವ ಬಿದಿರ ಗದ್ದೆಯ ಮೇಲಿಕ್ಕಿದ ಪಾಣ್ಯಗದ್ಯಾಣಂ ಮುವತ್ತುಮಂ (ಸೌಇಇ.VII, ೩೮೧-೧೪; 1140).

[ಹಿಡಿ$_2$(< ಪಿಡಿ$_2$) + ಪಸುಗೆ]

**ಹಿಡಿವಾಳ** (ನಾ). (?): ಉಟ್ಟ ರೇಕೆಯ ಹಿಡಿವಾಳ ಕಡಗ ಅಳವಟ್ಟಿಹ ಬೆರಳ ಮುದ್ರಿಕೆಯು . . . ಎಡೆಪಣೆ ಚಿಂತಾಕದ ಸರಿಗೆಯ ತಂದಿರುವರಂಗನೆಗೆ ನಾರಿಯರು (ಚಂದ್ರಹಾ. ೪-೧೨). [?]

**ಹಿಡಿಶಾಪ** (ನಾ). (ಆಲಂ) ಇತರರಿಗೆ ಕೆಟ್ಟುದನ್ನು ಹಾರೈಸುವುದು; ಬಯ್ಯುವುದು.

**ಹಿಡಿಶಾಪ ಹಾಕು** = ಕೆಟ್ಟದ್ದನ್ನೆಣಿಸು; ಕೇಡು ಬಗೆ: ಆಕೆ . . . ಅವನಿಗೂ ಹಿಡಿಶಾಪ ಹಾಕಿದಳು (ಯೋಧಪು. ೭೮); ಕವಿದ ಕತ್ತಲೆಯನು ಕಂಡು . . . ಹಿಡಿಶಾಪ ಹಾಕುವ ಬದಲು ಹಣತೆಯನೊಂದನು ಹೇಗಾದರೂ ತಂದು ಹಚ್ಚಿಡುವುದು ಮೇಲು ಮೊದಲು (೧ಂಚಾಪ. ೧೬೫-೧೨). [ಹಿಡಿ$_2$ (< ಪಿಡಿ$_2$) + ಶಾಪ ]

**ಹಿಡಿಸು** 'ಪಿಡಿಯಿಸು' ನೋ.

**ಹಿಡಿಸೂಡಿ** (ನಾ). ೧. ಹುಲ್ಲಿನ ಸಣ್ಣ ಕಂತೆ: ಹೊಲವೆಲ್ಲ ಹಾಳಾಯಿತು, ಹಿಡಿಸೂಡಿಗೆ ಬಡಿದಾಟ (ಗಾದೆ). ೨. ಕಸಬರಿಗೆ; ಪೊರಕೆ: ಹಿಡಿಸೂಡಿ ತೆಗೆದು ಗುಡಿಸಲಾರಂಭಿಸಿದ (ಕೆಲಕ.೩); ಬದಿಯಲ್ಲೇ ಮಡಗಿದ ಹಿಡಿಸೂಡಿಯನೆತ್ತಿಕೊಂಡ (ತ್ಯಾಗಮ. ೭೭). [ಹಿಡಿ$_2$ (< ಪಿಡಿ$_2$) + ಸೂಡಿ$_1$(< ಸೂಟೆ)]

**ಹಿಡಿಹ** 'ಪಿಡಿಹ' ನೋ.

**ಹಿಡಿಹಗ್ಗ** (ನಾ). (ಎತ್ತು ಮೊದಲಾದುವುಗಳನ್ನು) ಕಟ್ಟಲು ಉಪಯೋಗಿಸುವ ಹಿಡಿಯಿರುವ ಹಗ್ಗ: ಬಂಗಾರ ಹಣೆಕಟ್ಟು ಬೆಳ್ಳಿಯ ಹಿಡಿಹಗ್ಗ ಹಳ್ಳದ ಹೊಲದಾಗ ಮೇಯೂವ ನಂಬಸವಗ ಒಳ್ಳೇವನೆಂದು ಶರಣಂದೆ (ಲೋಕಗೀ. ೧೯೭); ಹಿಡಿಹಗ್ಗ, ಮಿಣಿ ಜತ್ತಿಗೆ ಬಾರಕೋಲು ಮಕ್ಕಡ, ಮುಗುದಾಣ ಇವೆಲ್ಲ ಸಾಮಾನ್ಯವಾಗಿ ಎತ್ತು ಕಟ್ಟಿದವರ ಮನೆಯಲ್ಲಿ ಇರತಕ್ಕ ವಸ್ತುಗಳೇ (ಚಳಭಾ. ೧೭೭).

[ಹಿಡಿ$_1$ (< ಪಿಡಿ$_1$) + ಹಗ್ಗ (< ಪಗ್ಗ)]

**ಹಿಡಿಹಡೆ** 'ಪಿಡಿವಡೆ' ನೋ.

**ಹಿಡಿಹಣ್ಣು** (ನಾ). ಕೈಯಲ್ಲಿ ಹಿಡಿದು ಎತ್ತಬಹುದಾದಷ್ಟು ಗಾತ್ರದ ಹಣ್ಣು (?): ಹಿಡಿಹಣ್ಣು ಕುಂಬಳಕೆ ಮಿಡಿಹಣ್ಣು ಆಲಕ್ಕೆ ಅಡಿನೆಳಲೊಳಿಪ್ಪ ಪಾಂಥ ತಾ ಕೆಡದಂತೆ ಮೃಡನು ಮಾಡಿಹನು (ಸರ್ವಜ್ಞ. ೧೯೨).

[ಹಿಡಿ$_1$(< ಪಿಡಿ$_1$) + ಹಣ್ಣು$_1$(< ಪಣ್$_3$)]

**ಹಿಡಿಹತೆ** (ನಾ). ಇನ್ನೊಬ್ಬರಿಗೆ ಕೊಡುವ ಹಣದಲ್ಲಿ ತನಗೆ ಬರಬೇಕಾದ ಹಣವನ್ನು ಮೊದಲೇ ಮುರಿದುಕೊಂಡು ಕೊಡುವಿಕೆ: ಪಟ್ಟಣಸ್ವಾಮಿಕೆಯ ಪದಕೆ ನೆರೆದು ಪಟ್ಟಂಗಟ್ಟಿ ಹಲರು ಕಾಣಿಕೆಗೊಟ್ಟು ಉಡಿಯ ಚೀಲಂಗಟ್ಟಿಸಿ ಒರೆಯಾಣಿ ಕೇಣಿ ನೋಟಂ ತೂಕ ಬಡ್ಡಿಯಾವರಿ ಉಭಯವಟ್ಟ ಹಿಡಿಹತೆ[ಪಾಠಾಂ. ತಿ]ಗನ್ನಗತಕ ಭಾಸುರರ ರತ್ನಪರೀಕ್ಷೆಗಳೊಳು ಪರಿಣತನ ಮಾಡಿದನಯ್ಯನಾದಯ್ಯನ (ಸೋಮಚ. ೧-೯೩). [ಹಿಡಿಹ (< ಪಿಡಿಹ) + - ತೆ$_3$]

**ಹಿಡಿಹತ್ತಿ** 'ಹಿಡಿವತ್ತಿ' ನೋ.

**ಹಿಡಿಹಾರ** 'ಪಿಡಿಹಾರ' ನೋ.

**ಹಿಡಿಹಿಡಿ$_1$** 'ಪಿಡಿ$_1$' ಪರಾ.

**ಹಿಡಿಹಿಡಿ$_2$** 'ಪಿಡಿ$_2$' ಪರಾ.

**ಹಿಡಿಹಿಡಿಕೆ,** ಹಿಡಹಿಡಕೆ, ಹಿಡುಹಿಡಿಕೆ, ಹಿಡುಹಿಡುಕೆ (ನಾ). ಒಂದು ಬಗೆಯ ಔಷಧೀಸಸ್ಯ: "ವಾರುಳಿ ಬಲಿರ್ಬುಧ್ನಾಕ್ಷಿ ಹಾವುಮೆಕ್ಕೆ ಹಿಡಿಹಿಡಿಕೆ ತ್ರಿಪತ್ರಿಣಿಯೆಂದೆನಿಕ್ಕುಂ" (ಮಂಗರಾ. ೪೪-೪೪); ಹಿಡಿಹಿಡಿಕೆ ಯಾಚಕತ್ತರಿ ಮಡುವಾಗಲ್ . . . ಅಂಕೋಲದ ಗಿಡುದಳಿರುಪನಾಹಮಖಿಳವಿಷಮಂ ಕಳೆಗುಂ (ಖಮದ. ೧೭-೭೭); ಮಾನವಿಷಕ್ಕೆ . . . ಹಿಡಿಹಿಡಿಕೆಯ ಸೊಪ್ಪನಾದರೂ ಜಡೆಗಳ್ಳಿಯ ಸೊಪ್ಪನಾದರೂ ಗಾಯಕ್ಕೆ ಮುಚ್ಚಿ ಕಟ್ಟುವುದು (ವೃದ್ಧಸಾ. II, ೨೨೦). **ಹಿಡಹಿಡಕೆ:** "ಖಮುಕಾ - ಮುಳ್ಳು ಹಿಡಹಿಡಕೆ" (ಓಷಧಿ. ೪೩). **ಹಿಡುಹಿಡಿಕೆ:** "ಪ್ರಿಯಾ ಪ್ರಿಯಂಗು-ಹಿಡುಹಿಡಿಕೆ" (ಓಷಧಿ. ೯೮). **ಹಿಡುಹಿಡುಕೆ:** ಎಕ್ಕೆಯ ಹಿಡುಹಿಡುಕೆಯುಮಂ ತೆಕ್ಕನೆ ತೀವಿರ್ದ ಕಟಿಯೊಳರೆದಿಡು ಪುಣ್ಣೊಳ್ (ಖಮದ. ೧೦-೬೦). 'ಹಿಟ್ಟಳಿಕೆ' ಪರಾ. [?]

**ಹಿಡಿಹು** 'ಪಿಡಿಪು' ನೋ.

**ಹಿಡಿಹುಗೊಡು** (ಕ್ರಿ). ಅಂಕೆಗೆ ಒಳಪಡು; ವಶವಾಗು: ಲಲನೆಯರ್ಥಿಗೆ ರಾಮನನುಜನ ನಿಲಿಸಿ ಮೃಗವಾರ್ಗದಲಿ ಸಂದನು ತೊಳಲಿ ವನದಲಿ ಹಿಡಿಹುಗೊಡದಿರಲೆಚ್ಚನಾ ಮೃಗವ (ನಿಭಾಗ. ೯-೧೦-೯); ಹಿಡಿಹುಗೊ[ಪಾಠಾಂ. ಗು]ಡ ದಸುರಾರಿ ಕಾಲುಗಳೆಡೆಯಲಡಗಿದರಚಿಸಿ ಕಾಣದೆ ತುಡುಕುತಿರ್ದುದು ಕಂಡವರನಾ ಹಸ್ತಿ ಹರಿಹರಿದು (ನಿಭಾಗ. ೧೦-೩೮-೨೩). [ಹಿಡಿಹು (< ಪಿಡಿಪು) + ಕೊಡು$_1$]

**ಹಿಡಿಹುಗೊಳ್** (ಕ್ರಿ). ತೆಗೆದುಕೊಳ್ಳು; ಸ್ವೀಕರಿಸು: ಕಡೆಯಲಿನ್ನರೆಜಾವದವಧಿಯಿದು ತಪ್ಪಿತಾದೊಡೆ ಬಳಿಕ್ಕೇಸುಮಡಿಯಿತ್ತೊಡಂ ಮೂರ್ಖಿಮುನಿಪ ತಾ ಹಿಡಿ[ಪಾಠಾಂ.ಡು]ಹು

ಗೊಂಬವನಲ್ಲ [ಪಾಠಾಂ. ಮೂರ್ಖಿಮುನಿ ಕೆಡೆನುಡಿವನೆನಲಿನ್ನು] ಮಾಳ್ಪುದೇನು (ಹಚಕಾ. ೧೧-೧೫). [ಹಿಡಿಹು (< ಪಿಡಿಪು) + ಕೊಳ್$_1$]

**ಹಿಡಿಹುಗೊಳಿಸು** (ಕ್ರಿ). ಸ್ವೀಕರಿಸುವಂತೆ ಮಾಡು: ನುಡಿದು ತೋಱಲದೇಕೆ ನೀನೇ ನಡೆದು ತೋಱಿಸಿ ಲಿಂಗನಿಷ್ಠೆಯ ಹಿಡಿ[ಪಾಠಾಂ. ಡು]ಹುಗೊಳಿಸುವುದು (ಪ್ರಭುಲೀ. ೧೧-೩೫). [ಹಿಡಿಹುಗೊಳ್ + - ಇಸು$_3$]

**ಹಿಡಿಹೊನ್ನು** 'ಪಿಡಿಪೊನ್' ನೋ.

**ಹಿಡಿಹೋರಿ** (ನಾ). ಹಿಡಮಾಡುವ ವಯಸ್ಸಿಗೆ ಬಂದ ಹೋರಿ: "ಆರ್ಷಭ್ಯ ಮೆನಲು ಹಿಡಿಹೋರಿಯಕ್ಕುಂ" (ಮಂಗರಾ. ೫೩-೧).

[ಹಿಡಿ$_4$ (< ಹಿಡ) + ಹೋರಿ (< ಪೋರಿ$_2$)]

**ಹಿಡುಕು**, ಹಿಡಿಕು (ನಾ). ವೃಷಣ; ಹಿಡ: ಧೃತಿಗೆಡಿಸಿ ಹೋರಿಗಳ ಹಿಡು[ಪಾಠಾಂ. ಡಿ]ಕುಗಳ ಬಡಿವನು (ಲಶಿಚಂ. ೩೯೫-೨೧). **ಹಿಡಿಕು:** ಹಲವು ಜೀವಂಗಳ ಇಂದ್ರಿಯದರ್ಪವ ತೊಲಗಿಸಿ ಲಿಂಗಚ್ಛೇದನವ ಬಲುಹಿಂದ ಮಾಡಿ ಹಿಡಿಕ ಬಡಿವುದಱಿಂದ ಸಲೆ ತೀವ್ರ ಕ್ರೋಧಾದಿಗಳಿಂ (ದ್ವಾದಶಾ. ೮-೫೦).

[ದೇ. || ತಮಿ. ಪಿಟುಕ್ಕು, ಪುಟುಕ್ಕು; ಮಲ. ಪಿಡುಕ್ಕು]

**ಹಿಡುಗಲು** 'ಹಿಡಗಲು' ನೋ.

**ಹಿಡುವಳಿ** (ನಾ). ೧. ಒಡೆತನ; ಸ್ವಾಮ್ಯ: ನಮ್ಮ ಮಹಾರಾಜರಿಗೆ ಇನ್ನೂ ಮನೆಯನ್ನಾಳುವ ಹಿಡುವಳಿಯೊದಗಿಲ್ಲವೆಂದು ಭಾವಿಸಬೇಕಾಯಿತು (ವೀರಬಂ. ೧೬). ೨. ಒಕ್ಕಲುತನ; ಬೇಸಾಯ: ಯಾವುದೇ ಜಮೀನನ್ನು ಅದು ಹಿಡುವಳಿಯಲ್ಲಿರಲಿ ಅಥವಾ ಇಲ್ಲದಿರಲಿ, ಸಾರ್ವಜನಿಕಉದ್ದೇಶಗಳಿಗಾಗಿ ಕಡ್ಡಾಯವಾಗಿ ಆರ್ಜನೆ ಮಾಡಲು ಪ್ರಾಧಿಕಾರ ಕೊಡುವಂತೆ ತತ್ಕಾಲದಲ್ಲಿ ಜಾರಿಯಲ್ಲಿ ವಿಧಿಗೆ ಅನುಸಾರವಾಗಿ . . . ಅಡ್ಡಿಯನ್ನುಂಟುಮಾಡತಕ್ಕುದಲ್ಲ (ಭಾಧಾನ. ೨೬೩).

[< ಹಿಡಿ$_1$ (< ಪಿಡಿ$_1$) + - ವಳಿ]

**ಹಿಡುವಳಿಗೆ** (ನಾ). = ಹಿಡುವಳಿ ೨: ಈಗಿನ ಹಿಡುವಳಿಗೆಗಳ ಹಂಚಿಕೆ ವಿತರಣೆಯಿಂದ ನಡೆಯಬೇಕು ನಿಜ, ಆದರೆ ಅದು ನೀವಂದಂತೆ, ವರ್ಷಕ್ಕೆ ನಾಲ್ಕು ತಿಂಗಳ ಅನ್ನ ಕೊಟ್ಟೀತು (ಗೊಂಡಾರ. ೧೬೮). [ಹಿಡುವಳಿ + - ಗೆ]

**ಹಿಡುವಳಿಜಮೀನು** (ನಾ). ಬೇಸಾಯದ ಜಮೀನು; ಸಾಗುವಳಿಯ ಭೂಮಿ: ಪಾಶ್ಚಾತ್ಯದೇಶಗಳಲ್ಲಿಯೂ ಹೊಸದಾಗಿ ಏರ್ಪಟ್ಟಿರುವ ಭೂಖಂಡಗಳಲ್ಲಿಯೂ ಹೊರತು ಇತರ ದೇಶಗಳಲ್ಲಿ ರೈತನ ಕೈಯಲ್ಲಿನ ಹಿಡುವಳಿಜಮೀನು ಅಲ್ಲಿಲ್ಲಿ ಚೆದುರಿರುವುದು ಸಾಮಾನ್ಯ (ಹಣಪ್ರ. ೧೫೩). [ಹಿಡುವಳಿ + ಜಮೀನು]

**ಹಿಡುವಳಿದಾರ** (ನಾ). ೧. (ಭೂಮಿಯ) ಒಡೆಯ, —ಯಜಮಾನ. ೨. ಬೇಸಾಯಮಾಡಲು ಜಮೀನನ್ನು ಪಡೆದವನು; ಸಾಗುವಳಿದಾರ: ನಮ್ಮ ಜಮೀನಿನ ಹಿಡುವಳಿದಾರ ತುಂಬಾ ನಂಬಿಕಸ್ಥ (ರೂಢಿ). [ಹಿಡುವಳಿ + - ದಾರ$_4$]

**ಹಿಡುಹಿಡಿಕೆ** 'ಹಿಡಿಹಿಡಿಕೆ' ನೋ.

**ಹಿಡುಹಿಡುಕೆ** 'ಹಿಡಿಹಿಡಿಕೆ' ನೋ.

**ಹಿಡುಹು** 'ಪಿಡಿಪು' ನೋ.

**ಹಿಣಿ** 'ಪಿಣಿಲ್$_3$' ನೋ.

**ಹಿಣಿಕು** 'ಹಣಿಕು' ನೋ.

**ಹಿಣಿಲ್$_1$** 'ಪಿಣಿಲ್$_2$' ನೋ.

**ಹಿಣಿಲ್$_2$** 'ಪಿಣಿಲ್$_3$' ನೋ.

**ಹಿಣಿಲಿಱಿ** 'ಪಿಣಿಲಿಱಿ' ನೋ.

**ಹಿಣಿಲು$_1$** 'ಪಿಣಿಲ್$_2$' ನೋ.

**ಹಿಣಿಲು$_2$** 'ಪಿಣಿಲ್$_3$' ನೋ.

**ಹಿಣಿಲುಗರುಳು** (ನಾ). ಒಂದಕ್ಕೊಂದು ಹೆಣೆದುಕೊಂಡಿರುವ ಕರುಳು, — ಅಂತ್ರ: ಕುಣಿವ ಕುಂತಾಗ್ರದಲಿ ಜೋಲುವ ಹಿಣಿಲುಗರುಳೊಪ್ಪಿದವು ಜವನೀ ರಣಕೆ ಬರೆ ಕಟ್ಟಿದವು ಗುಡಿ ತೋರಣವನೆಂಬಂತೆ (ಕುಮ್ಮಾಭೀ. ೪-೪೪).

[ಹಿಣಿಲು$_2$ (< ಪಿಣಿಲ್$_3$) + ಕರುಳು (< ಕರುಳ್$_1$)]

**ಹಿತ** (ಗು). ೧. ಇಟ್ಟ; ಇರಿಸಿದ ೨. ತೆಗೆದುಕೊಂಡ; ಹಿಡಿದ; ಸ್ವೀಕರಿಸಿದ. ೩. ಯೋಗ್ಯವಾದ; ಅರ್ಹವಾದ. ೪. ಉಪಯೋಗಕ್ಕೆ ಬರುವ; ಪ್ರಯೋಜನಕಾರಿಯಾದ. ೫. ಸತ್ಪರಿಣಾಮಕಾರಿಯಾದ; ಆರೋಗ್ಯ ದಾಯಕವಾದ. ೬. ಸ್ನೇಹದಿಂದ ಕೂಡಿದ; ವಿಶ್ವಾಸಪೂರ್ವಕವಾದ. (ನಾ). ೭. ಒಳ್ಳೆಯದು; ಪ್ರಯೋಜನಕಾರಿಯಾದುದು: ಹಿತಮಂ ಹಿತರಱಿಪಿದೊಡಂ ಮತಿಗೆಟ್ಟಿಟಿಕೆಯ್ದುಂ (ಪಂರಾಮಾ. ೧೪-೧೨೫); ಹಿತವಿದು ಶಾಸ್ತ್ರವಿಹಿತವಿದು ಮನಕೆ ಸಮ್ಮತವಿದೆಂದೆಂಬ ಮರ್ಮವನು ಮತಿಯೊಳೆಣಿಸಿ (ಹದಿಬ. ೩-೧೯). ೮. ಇಚ್ಛಿಸುವಂತಹುದು; ಪ್ರಿಯಕರವಾದುದು: ಭೋಗಿಗೆ ಲೋಭಿಗೆ ಯೋಗಂ ತ್ಯಾಗಂ ಹಿತಮಾಗದೆಂದು ನುಡಿದಂ ಭೂಪಂ ತ್ಯಾಗಿಗೆ ಯೋಗಿಗೆ ಲೋಭಂ ಭೋಗಂ ಹಿತಮಾಗದೆಂದು ನುಡಿದಂ ಭೂಪಂ (ಹಮ್ಮೀರ. ೨-೫). ೯. ಒಳ್ಳೆಯದನ್ನು ಹಾರೈಸುವವನು; ಶುಭ ಕೋರುವವನು: ಹಿತನಪ್ಪ ಭೃತ್ಯನೆಂದುಂ ಪತಿಗಪಜಯಮಾಗದಂತು ನೆಗೞ್ವುದು (ಪಂಚತಂ. ೯೪-೧); ಹಿತರೆನಗಿನ್ನಾರ್ ವಾಚಸ್ಪತಿ ನೀನೆಂದಂತಿರಹಹ ಹುಸಿಯಲ್ತಲ್ತುನ್ನತಸಂಗರದೊಳಗಱಿಯಯ್ ಹಿತರೆನ್ನ ನಿಶಾತಖಡ್ಗಮುಂ ನಿಡುದೋಳುಂ (ಗಿರಿಕ. ೬-೩೧).

**ಹಿತಮಿತ** = ೧. ಒಳ್ಳೆಯದಾಗಿಯೂ, ಮಿತವಾಗಿಯೂ ಇರುವಂತಹ: ಕದಳೀಗರ್ಭಶ್ಯಾಮಮಂ . . . ಮೃದುಮಧ್ಯಮತನು ಹಿತಮಿತಮೃದುವಚನಂ ಲಲಿತಮಧುರಸುಂದರವೇಷಂ (ಆದಿಪು. ೧-೨೫). ೨. ಒಳ್ಳೆಯದಾಗಿಯೂ, ಮಿತವಾಗಿಯೂ ಇರುವಂತಹುದು: ಗಂಡಿನಲ್ಲಿ ಸಹನೆ, ಹೆಣ್ಣಿನಲ್ಲಿ ಜಾಣತನ ಮತ್ತು ಸಮಯೋಚಿತ ಚಾಣಾಕ್ಷತನ ಎಷ್ಟು ಹಿತಮಿತವಾಗಿ ಬಂದಿವೆ (ಕನ್ನಜಾ. ೫೦).

**ಹಿತವಾಗು** = ಇಷ್ಟವಾಗು; ಪ್ರಿಯವಾಗು: ಉದಯದ ಮಾಗಿಯ ಬಿಸಿಲು ಅಂಗಕ್ಕೆ ಹಿತವಾಯಿತ್ತು (ಬಸವ. ೨೧೯). [ಸಂ.]

**ಹಿತಕರ** (ಗು). ೧. ಒಳ್ಳೆಯದಾದ; ಉಚಿತವಾದ. (ನಾ). ೨. ಒಳ್ಳೆಯದು; ಉಚಿತವಾದುದು: ನಿಮ್ಮ ವಚೋಜಾಲಮಾಲವಾಲಜಲಕೃತವಿಲಾಸನೃಪಭೂರುಹಕ್ಕೆ ಹಿತಕರಮೆ ವಲಂ (ಶಾಂತಿಪು. ೧೧-೧೧೯); ತರುಣಿಯರ ಮಾತುಗಳು ಶಿವಭಕ್ತರಿಗರೋಚಕವಲ್ಲದೇ ಹಿತಕರಮೆ (ಬಸವು. ೪೦-೭೯). ೩. ಒಳ್ಳೆಯದನ್ನು ಬಯಸುವ ವ್ಯಕ್ತಿ: ಪಶುಗಳಿಗೆ ಹಿತಕರಳೂ, ಸುಮುಖಳೂ, ವರ್ಚಸ್ಸುಳ್ಳವಳೂ ಆಗಿರು (ಋಕ್ಸಾರ. ೩೦೧). [ಸಂ.]

**ಹಿತಕಾರಿ** (ಗು). ೧. ಒಳ್ಳೆಯದಾದ; ಶ್ರೇಯಸ್ಸನ್ನುಂಟುಮಾಡುವ. (ನಾ). ೨. ಒಳ್ಳೆಯದು; ಶ್ರೇಯಸ್ಸನ್ನು ಉಂಟುಮಾಡುವಂತಹುದು: ಜಗತ್ತಿಗೆ ಹಿತಕಾರಿಯಾದ ತೇಜಸ್ಸುಳ್ಳ ಅಗ್ನಿಯೆ, ನಮ್ಮೊಡನೆ ಬಂಧುತ್ವವನ್ನು ಪಾಲಿಸು (ಋಕ್ಸಾರ. ೧೮). ೪. ಒಳ್ಳೆಯದನ್ನು ಮಾಡುವ ವ್ಯಕ್ತಿ; ವಿಶ್ವಾಸಿ: ಮತ್ತವಾರಣಚರ್ಮಧಾರಿ ವಿಪತ್ತಮೋವಾಸರರಮಣನುನ್ಮತ್ತಚಿತ್ತಭವಾರಿ ಗೌರಿ ಚಿತ್ತಹಿತಕಾರಿ (ಬಸವು. ೧೬-೨೫); ಎಲೆಲೆ ಲಕ್ಷ್ಮಣ ದಿವ್ಯಬಾಣಾವಳಿಯ ಜಯಿಸಿದೆನೆಂದು ದಿಟ ಹೆಕ್ಕಳಿಸದಿರು ಹಿತಕಾರಿಗಳು ನಮಗಮರರಲ್ಲಾಗಿ (ತೊರರಾ. ೬-೪೪-೩೩); ನಾರಿ ಸಕಲರಿಗೆ ಹಿತಕಾರಿ ಮುನಿದರೆ ನಾರಿಯೆ ಮಾರಿ (ಸರ್ವಜ್ಞ. ೧೭೭೬). [ಸಂ. ಹಿತಕಾರಿನ್]

**ಹಿತಗೈ** (ಕ್ರಿ). ಒಳ್ಳೆಯದನ್ನು ಮಾಡು; ಶುಭವನ್ನುಂಟುಮಾಡು: ಪಾಪಕ್ಷಯಕ್ಕೆಂದು ಗಂಗೆಯೊಳ್ಮಿಂದರೆ ಪಾಪಿಯ ಮೊಸಳೆ ತಿಂದಂತೆ ತಾಪಸ್ಥ ಸುರರಿಂಗೆ ಹಿತಗೈಯ ಬಂದ ಪ್ರಾಣೋಪನನುರಿಹಿದೆ ನೀನು (ಮೋಹತ. ೮-೩೩). [ಹಿತ + ಗೈ (< ಕೆಯ್$_1$)]

**ಹಿತಗೊಳ್** (ಕ್ರಿ). ಒಳಿತನ್ನು ಲಕ್ಷಿಸು: ಭೀತಸ್ಥರಾದ ನಿರ್ಜರರಿಗೆ ಹಿತಗೊಂಡು ಭೂತೇಶ ತಾನಡ್ಡಬಂದು ಶ್ವೇತೋರಸ್ಥಲ ಬಲರಾಮ ತೊಲಗೆಂದು ಪೀತಾಂಬರಗೆ ಹೂಣಿಸಿದ (ಮೋಹತ. ೩೯-೨೧). [ಹಿತ + ಕೊಳ್$_1$]

**ಹಿತಚಿಂತಕ** (ನಾ). ಒಳ್ಳೆಯದನ್ನು ಕುರಿತು ಚಿಂತಿಸುವವನು: ತಮ್ಮಂತಹ ಹಿತಚಿಂತಕರು ನನಗೆ ಮತ್ತೆ ಯಾರಿರುವರು ? (ರಾವಿಜ. ೨೦). [ಸಂ.]

**ಹಿತತನ** (ನಾ). ಒಳ್ಳೆಯತನ; ಸದ್ಗುಣ: ಹಿಂದಣ ಹಿತತನದಿಂದೀ ವಿರಹ ದೊಳೊಂದಿದ ಬಲ್ಲಿರ್ಚಿಗೆ ವೇದನೆಯಂ ತಂದೆನ್ನಂ ಭಸ್ಮೀಕರಿಸದೆ ತಾಂ ನಿರ್ನೆರಮಿಹುದಲ್ಲ (ಜಯಕಾ. ೪-೩೦.). [ಹಿತ + - ತನ]

**ಹಿತವ** (ನಾ). ಒಳ್ಳೆಯದನ್ನು ಬಯಸುವವನು; ಆಪ್ತ; ಸ್ನೇಹಿತ: ''ಹಿತವಂ ತಕ್ಕನೆನಿಸಿರ್ಕು'' (ಕಬ್ಬಿಗ. ೩೭); ಹಿತವನತಿಭಕ್ತನನ್ನಿತನಿವಂ ಸುಭೃತ್ಯಂ ಕೃತಕೃತ್ಯನೆನ್ನರ್ (ಪಂಚತಂ. ೫೨-೧); ಆರು ಹಿತವರು ನೀತಿಕೋವಿದರಾರು ಸುಜನರು ಬಹುಪರಾಕ್ರಮ ರಾರವರ ಹೊಜಬೀಸಿ ಕಾಬುದು ನಿನ್ನ ಮತವೆಂದ (ಕುಮಾರವ್ಯಾ. ೧-೬); ಆರು ಹಿತವರು ನಿನಗೆ ಮೂಱು ಮಂದಿಗಳೊಳಗೆ ನಾರಿಯೋ ಧಾರಿಣಿಯೊ ಬಲುಧನದ ಸಿರಿಯೋ (ಪುರಂದ. ೧-೧೩೨ ಪಲ್ಲವಿ); ಮುಂದಿನ ಕಾರ್ಯಗಳ ನಿರ್ಣಯಕ್ಕೂ ನೆರವಾಗುವ ಹಿತವ, ಭಾಗವತನು ಬಳಿಯಲ್ಲಿ ಇದ್ದೇ ಇರುತ್ತಾನೆ (ಯಕ್ಷಬ. ೪೫). [< ಹಿತ]

**ಹಿತವಂತ** (ನಾ). = ಹಿತವ: ''ಆ ಭುಜಿಷ್ಯಂ ಚೇಟನಾ ಕಿಂಕರಂ ಹಿತವಂತನಕ್ಕುಂ'' (ಮಂಗರಾ. ೭೧-೧೭); ಅರಸಿನಲ್ಲಿ ಹಿತವಂತರು ಅರ್ಥಪ್ರಾಣ ಅಭಿಮಾನಕ್ಕೆ ತಪ್ಪಿದವರನೇನ ಮಾಡಬೇಕು (ಭೈರಸೂ. ೧೭೧); ತಾಯಿಗಿಂತ ಹಿತವಂತರಿಲ್ಲ, ಸಕ್ಕರೆಗಿಂತ ಸವಿಯಿಲ್ಲ (ಗಾದೆ). [ಸಂ. ಹಿತವತ್]

**ಹಿತವಂತಿಕೆ** (ನಾ). ಒಳ್ಳೆಯದನ್ನು ಹಾರೈಸುವಿಕೆ; ಶುಭವನ್ನು ಕೋರುವಿಕೆ: ಯಂತು ಬಹನರಿವನಕ ಆ ಹಿತವಂತಿಕೆಯ ಬಿಡಲಳಿಯನಾಗಿರುವಂತನೊಳಗೀಗೇಕೆ ನಿಷ್ಠುರವು (ಜೈರಾಮಾ. ೪೨೦-೨೪). [ಹಿತವಂತ + - ಇಕೆ]

**ಹಿತವಂತೆ** (ನಾ). ಒಳ್ಳೆಯದನ್ನು ಬಯಸುವವಳು; ಶುಭವನ್ನು ಹಾರೈಸುವವಳು: (೬). [ಹಿತವಂತ + - ಎ$_2$]

**ಹಿತವಂದಿಗ** (ನಾ). = ಹಿತವ: ಮರುಗಳಿಗೆಗೆ ಪಾಪ, ಹಿತವಂದಿಗರು; ದೊಡ್ಡ ವಿಚಾರಗಳೋ ಸಮಸ್ಯೆಗಳೋ ಅವರ ತಲೆಯಲ್ಲಿ ಬಾರದ್ದಕ್ಕೆ 'ಊಟ, ಮದುವೆ, ಮಕ್ಕಳು, ಮರಿ' ಎಂಬುದರಲ್ಲಿಯೆ ತೇಲಾಡುತ್ತಾರೆ . . . ಎಂದುಕೊಳ್ಳುತ್ತಾನೆ (ಸ್ವಪ್ನಪೂ. ೩೦೧); ಆಕೆ ವಿಲೆಪಾರ್ಲೆಯಲ್ಲಿರುವಾಗಲೇ ಪತಿಯ ವಿಷಯದ ಕೆಲವು ಆರೋಪಗಳನ್ನು ತನ್ನ ಹಿತವಂದಿಗರೆನಿಸುವವರಿಂದ ಕೇಳಿದ್ದಳು (ಒಂಟಿದ. ೧೯೪). [ಹಿತ + ಒಂದಿಗ]

**ಹಿತವಚಃಪ್ರಿಯ** (ನಾ). ಒಳ್ಳೆಯ ಮಾತುಗಳನ್ನು ಬಯಸುವವನು,— ಇಚ್ಛಿಸುವವನು: ಕ್ಷಯವೃಜಿನಂ ಜಿನಸಮಯಂ ಸ್ಮಯರಹಿತಂ ಹಿತವಚಃಪ್ರಿಯಂ (ಸುಕುಮಾ. ೧-೫೧). [ಸಂ.]

**ಹಿತವಚನ** (ನಾ). ಬುದ್ಧಿಮಾತು: ಹಿತವಚನವ ನಾನೇಸಾಡಿದೊಡವ ಹಿತವಾಡಿದಡೆಯೆನ್ನೊಳೆಂದು ಅತಿಕೋಪದಿಂದ ಮಹೋಪಸರ್ಗವನೀ ಮತಿವಂತೆಗೆ ಮಾಡಿದನು (ಶ್ರೀಪಾಲ. ೫-೯೦). [ಸಂ.]

**ಹಿತವಾದಿ** (ನಾ). = ಹಿತವ: ನೀವು ನನ್ನ ಹಿತವಾದಿ ಎನ್ನುವುದರಲ್ಲಿ ನಾನು ಸ್ವಲ್ಪವೂ ಸಂದೇಹವಿಟ್ಟಿಲ್ಲ (ಚಂಗಾಳ್ವ. ೬೧೯). [ಸಂ. ಹಿತವಾದಿನ್]

**ಹಿತವಾರೆ** (ನಾ). ಸ್ನೇಹಸಂಬಂಧ; ವಿಶ್ವಾಸ: ನನಗೂ ಅವನಿಗೂ ಮೊದಲಿನಿಂದಲೂ ಇರುವ ಹಿತವಾರೆ ಅಷ್ಟಕ್ಕಷ್ಟೆ (ಕುಡಿಕೂ. ೨೩೩). [ಹಿತ + ವಾರ್$_1$]

**ಹಿತವೆ** (ನಾ). ಒಳ್ಳೆಯದನ್ನು ಬಯಸುವವಳು; ಶುಭವನ್ನು ಕೋರುವವಳು: ಇವಳಲ್ಲದೆಮಗಾರು ಹಿತವೆಯರೆಂದು ಮತ್ತವರು ಸಂತಸದೊಳಾಡಿದರು (ಭರತೇ. ೪೦-೮೧). 'ಪತಿಹಿತವೆ' ಪರಾ. [ಹಿತವ + - ಎ$_2$]

**ಹಿತವೇಳು** (ಕ್ರಿ). ಒಳ್ಳೆಯದನ್ನು ಹೇಳು; ಶುಭವನ್ನು ನುಡಿ; ಹರಸು: ಹಿತವೇಳ್ದು . . . ವಪು ಚಾರುಧನ್ವಿಗಳನಾ ಪುತ್ರಯುಗ್ಮಮಂ ಬೀಳ್ಕೊಟ್ಟನೈ ನೃಪತಿ (ಶ್ರೀರಾಮಾ. ೩೧-೮೪). [ಹಿತ + ಪೇಳು (< ಪೇೞ್)]

**ಹಿತಶತ್ರು** (ನಾ). ತೋರಿಕೆಗೆ ಸ್ನೇಹಿತನಂತಿದ್ದು ಮರೆಯಲ್ಲಿ ಹಗೆ ಸಾಧಿಸುವವನು: ಹಿತಶತ್ರುವಾಗಿ ಪೊಂದುವುದು . . . ಕ್ಷಿತಿಯ ಪೂಜ್ಯತೆ ಕೆಡಿಸುವುದು ಮುಂದೆ ಶತಜನ್ಮಂಗಳಿಗೆ ಹೊಣೆಯಾಗಿ ನಿಲ್ಲುವುದು (ಪುರಂದ. ೧-೫೧-೨); ನಿಮಗಿಂದ Eತರೆ ಹಿತಶತ್ರುಗಳ ಕಾಣೆನು (ನವಮೋ. ೮-೨೦). [ಸಂ.]

**ಹಿತಶತ್ರುತ್ವ** (ನಾ). ತೋರಿಕೆಗೆ ಸ್ನೇಹಿತರಂತಿದ್ದು ಮರೆಯಲ್ಲಿ ಸಾಧಿಸುವ ವೈರ. [ಸಂ.]

**ಹಿತಸಖ** (ನಾ). ಒಳ್ಳೆಯದನ್ನು ಬಯಸುವ ಸ್ನೇಹಿತ; ಶುಭವನ್ನು ಕೋರುವ ಗೆಳೆಯ: ಶ್ರೀರಾಮನಾಹ್ಲಾದರೂಪಿ . . . ಪ್ರಿಯಭಾಷಿ ಹಿತಸಖಂ (ಶ್ರೀರಾಮಾ. ೫೭-೯೪). [ಸಂ.]

**ಹಿತಾರ್ಥಂ** (ಅ). ಒಳ್ಳೆಯದಕ್ಕಾಗಿ: ಮಱೆಯಂ ಕಱೆವಂ ಹಿತಾರ್ಥಮಿಾ ಭೂವಳಯಕ್ಕೆ ಶಕ್ರನದುಕಾರಣಮರ್ಚಿಪುದಿಂದ್ರನಂ ಜನಂ (ಜಗನ್ನಾ. ೪-೭೭). [ಸಂ.]

**ಹಿತಾವಹ** (ನಾ). ಪ್ರಯೋಜನವನ್ನು ತರುವಂತಹುದು; ಹಿತಕರವಾದುದು: ಯಾವತ್ತು ತರದ ಅನ್ನ ಶರೀರಕ್ಕೆ ಸರಿಯಾಗಿ ಹಿತಾವಹವಾಗುವುದಿಲ್ಲ (ಮುಂಬಯಿ. ೪-೩೨); ಈ ಕೆಲಸವನ್ನು ಬೇಗ ಮುಗಿಸುವುದು ಎಲ್ಲರಿಗೂ ಹಿತಾವಹ (ಗಂಮಾಯಿ. ೨೨೪). [ಸಂ.]

**ಹಿತಾಶಂಸೆ** (ನಾ). ಒಳ್ಳೆಯದಾಗಲೆಂಬ ಮಾತು; ಆಶೀರ್ವಚನ: ಆರ್ಯಾಶ್ರಮಂಗಳಂ ನೋಡುವಾಶೆಗೆ ಮುನಿಯ ಹರಕೆಯ ಹಿತಾಶಂಸೆಯಂ ಪಡೆಯುತಲ್ಲಿಂದೆ ಪೊರಮಟ್ಟರವರು ಯಾತ್ರಿಕ ಮುನಿಗಣಂವೆರಸಿ (ಶ್ರೀರಾಮಾ. ೧೮೪-೨೨೭). [ಸಂ. ಹಿತಾಶಂಸಾ]

**ಹಿತು** (ನಾ). ೧. ಒಳ್ಳೆಯದು; ಪ್ರಯೋಜನಕಾರಿಯಾದುದು. ೨. ಸ್ನೇಹ; ವಿಶ್ವಾಸ: ಒಬ್ಬ ತಾಯ ಸಿರಿಮಕ್ಕಳು ಸಾಲದೊಂದು ದಿನ ಹೇಳಿ ಮುಗಿಸುವರ ಹಬ್ಬಿ ಹೆಣೆದವರ ಹಿತುವನು (ಇಂಗೀತ. ೬೯-೪). [< ಹಿತ ./ ತೆಲು. ಹಿತವು]

**ಹಿತೇಚ್ಛು** (ನಾ).ಒಳ್ಳೆಯದಾಗಲೆಂದು ಹಾರೈಸುವವನು; ಹಿತೈಷಿ: ಅವನು ಕೃಷ್ಣವರ್ಮನ ಹಿತೇಚ್ಛುವಾಗಿ ಪಲ್ಲವರನ್ನು ಸೋಲಿಸುವುದರಲ್ಲಿ ಭಾಗ ತೆಗೆದುಕೊಂಡಿರಬೇಕು (ಕರ್ನಾಅ. ೩೩). [ಸಂ.]

**ಹಿತೈಷಿ** (ನಾ). ಒಳ್ಳೆಯದನ್ನು ಹಾರೈಸುವವನು: ನೀವೆಲ್ಲರೂ ಈ ರಾಜ್ಯದ ಪರಮಹಿತೈಷಿಗಳು (ಶಾಂತಲಾ. ೮೭); ಗೋವಿಂದರಾಯರು ತನ್ನ ಹಿತೈಷಿಗಳೊಂದಿಗೆ ಜಯಪಡೆಯಲಿಕ್ಕಾಗಿ ದುಡಿದರು (ಕುರುಕಾ. ೧೩೫). [ಸಂ. ಹಿತೈಷಿನ್]

**ಹಿತೈಷಿಣಿ** (ನಾ). ಒಳ್ಳೆದನ್ನು ಹಾರೈಸುವವಳು: ಅವಳು ನನ್ನ ಹಿತೈಷಿಣಿ (ರೂಢಿ). [ಸಂ. ಹಿತೈಷಿಣೀ]

**ಹಿತೋಪದೇಶ** (ನಾ). ೧. ಒಳ್ಳೆಯ ಸಲಹೆ; ಯಥೋಚಿತವಾದ ಆಲೋಚನೆ: ಇದು ಪರಮಾರ್ಥ ಹಿತೋಪದೇಶದ ತಿರುಳಿದನು ಸತಿಯರೋದುವುದು (ಹದಿಬ. ೧-೬೦); ಮುದ್ದಿನಿಂದ, ವಾತ್ಸಲ್ಯದಿಂದ ಹಿತೋಪದೇಶ ಮಾಡಿ ಬೆಳೆಯಿಸಿದವರು ಅವರು (ಜಾರುದಾ. ೫). ೨. ವಿಷ್ಣುಶರ್ಮನೆಂಬ ಗ್ರಂಥಕಾರನಿಂದ ರಚಿತವಾದ, ನೀತಿಕತೆಗಳನ್ನೊಳಗೊಂಡ ಒಂದು ಗ್ರಂಥದ ಹೆಸರು. [ಸಂ.]

**ಹಿತ್ತಲ್** 'ಪಿಂತಿಲ್' ನೋ.

**ಹಿತ್ತಲವರೆ, ಹಿತ್ತಿಲವರೆ** (ನಾ). (ಸಾಮಾನ್ಯವಾಗಿ) ಹಿತ್ತಲಿನಲ್ಲಿ ಚಪ್ಪರದ ಮೇಲೆ ಹಬ್ಬಿ ಬೆಳೆಯುವ ಒಂದು ಬಗೆಯ ಅವರೆಗಿಡ ಮತ್ತು ಅದರ ಕಾಯಿ: ''ಶರ - ಅಂಬಟೆ, ಹಿತ್ತಲವರೆ, ಉಮ್ಮತ್ತ'' (ಓಷಧಿ. ೧೫೯). **ಹಿತ್ತಿಲವರೆ**: ''ಗುಚ್ಛಫಲಾ - ಬಾಟೆ, ದ್ರಾಕ್ಷೆ, ಹಿತ್ತಿಲವರೆ'' (ಓಷಧಿ. ೪೯). [ಹಿತ್ತಲು (< ಪಿಂತಿಲ್) + ಅವರೆ$_1$]

**ಹಿತ್ತಲು** 'ಪಿಂತಿಲ್' ನೋ.

**ಹಿತ್ತಳೆ** 'ಪೆತ್ತಿಳೆ' ನೋ.

**ಹಿತ್ತಳೆ** 'ಪಿತ್ತಳೆ' ನೋ.

**ಹಿತ್ತಾಳೆ** 'ಪಿತ್ತಳೆ' ನೋ.

**ಹಿತ್ತಿಲ್** 'ಪಿಂತಿಲ್' ನೋ.

**ಹಿತ್ತಿಲವರೆ** 'ಹಿತ್ತಲವರೆ' ನೋ.

**ಹಿತ್ತಿಲು** 'ಪಿಂತಿಲ್' ನೋ.

**ಹಿದಯ** 'ಹೆದೆಯ' ನೋ.

**ಹಿದಿರೆ** (ನಾ). ಹುಲ್ಲಿನ ಬಣವೆ: ಹಲವುಕಾಲ ಧಾವತಿಗೊಂಡು ಒಟ್ಟಿದ ಹಿದಿರೆಯು ಒಂದು ಮಿಡುಕುಜಿಲ್ಲಿ ಬೇವಂತೆ (ಬಸವ. ೨೧೩). [?]

**ಹಿದುಕವರೆ** (ನಾ). ೧. ನೀರಿನಲ್ಲಿ ನೆನೆಸಿ ಸಿಪ್ಪೆ ತೆಗೆದ ಅವರೆಕಾಳು: ಅವರೆಕಾಯಿಗೆ ಬದಲು ಹಿದುಕವರೆಯನ್ನೇ ತಂದರಾಯಿತು (ರೂಢಿ). ೨. ನೆನೆಸಿ ಸಿಪ್ಪೆತೆಗೆದ ಅವರೆ ಕಾಳಿನಿಂದ ಮಾಡುವ ಒಂದು ಬಗೆಯ ಮೇಲೋಗರ,—ಸಾರು: ನಮ್ಮ ಮನೆಯಲ್ಲಿ ಇವತ್ತು ದೋಸೆ, ಹಿದುಕವರೆ ಮಾಡಿದ್ದಾರೆ (ರೂಢಿ).'ಚಿದಕವರೆ' ಪರಾ. [ಹಿದುಕು + ಅವರೆ$_1$]

**ಹಿದುಕು** (ಕ್ರಿ). (ಹಸಿಯ) ಕಾಳನ್ನು ನೀರಿನಲ್ಲಿ ನೆನೆಹಾಕಿ ಹಿಸುಕಿ ಸಿಪ್ಪೆಯಿಂದ ಬೇರ್ಪಡಿಸು; ಚಿದುಕು: ಹಿದುಕಿದ ಅವರೇಕಾಳಿನ ಸಾರು ಬಹಳ ರುಚಿಯಾಗಿತ್ತು (ರೂಢಿ). [ದೇ. ॥ ತಮಿ. ಪಿತುಙ್ಕು, ಪಿತುಕ್ಕು; ಮಲ. ಪಿತುಕ್ಕು, ಪಿತಙ್ಙು, ಪುತುಕ್ಕು; ತೆಲು. ಪಿತುಕು. ಪಿದುಕು; ಕೋಲಾ. ಪಿಡ್ಕ್]

**ಹಿದೌತ** (ನಾ). ಒಂದು ಬಗೆಯ ತೆರಿಗೆ: ಆ ಗಉಡಗಳಿಗೆ ಹಿದೌತಯಿಲ್ಲೆಂದು ಬಾಳಿಕೆಸೆಸೆ ಇಲ್ಲೆಂದು ಆ ಗೌಡುಗಳಿಗೆ ಮಕ್ಕಳು ಮಕ್ಕಳು ತೊತ್ತಿನ ಮಕ್ಕಳಿಂಗೆ ಸಲವುದೆಂದು ಭೂಮಿಯಂ . . . ಸುಖದಿಂ ಬಾಳುಂತಾಗೆ ಕೊಟ್ಟ ಶಾಸನ (ಎಕ. VI, ಚಿಕ್ಕಮ. ೧೦೫-೧೯; 1343). [?]

**ಹಿದ್ಮ, ಹಿಧ್ಮ** (ನಾ). ಬಿಕ್ಕಳಿಕೆ; ಬಿಕ್ಕಲು: ಹಿದ್ಮವೆಂದೂ ಹಿಕ್ಕವೆಂದೂ ಬಿಕ್ಕುಳಿನ ಪೆಸರು (ಸಕಪ್ಪ. ೨೪೦). **ಹಿಧ್ಮ:** ಹಿಧ್ಮಯೆಂದರೂ, ಹಿಕ್ಕೆಯೆಂದರೂ, ಬಿಕ್ಕಟೆಂದರೂ, ಬಿಕ್ಕಳಿನ ಹೆಸರು. ಆ ಹಿಧ್ಮ ಎಂಬುದು ಅನ್ನಜೆ, ಕ್ಷುದ್ರೆ, ಯಮಳ, ಮಹತಿ, ವೇಗಿನಿ ಎಂದು ಐದು ತೆಱ (ವೃದ್ಯಸಾ. I, ೧೫೪). [?]

**ಹಿಧ್ಮ** 'ಹಿದ್ಮ' ನೋ.

**ಹಿನ್** 'ಪಿನ್' ನೋ.

**ಹಿನ್ನಡಿ** (ನಾ). ಹಿಂದಕ್ಕೆ ತಿರುಗಿರುವ ಪಾದ,— ಅಡಿ: ಬೆನ್ನೊಳೊಗೆದ ಮೊಗಗಳ ನೆತ್ತಿಗಣ್ಣಿನ ಕೆನ್ನೆಯೊಳೊಗೆದ ಪೆರ್ಬಾಯಿಗಳಾ ಹಿನ್ನಡಿಗಳ ಹೇರೊಡಲಿನೆದೆಯ ಭೂತನ್ನೆರದೊಡನೆಯ್ದುದವಾಗ (ಸೂಬಸೋ. ೯-೭೪). [ಹಿನ್ (< ಪಿನ್$_1$) + ಅಡಿ$_1$]

**ಹಿನ್ನಡೆ$_1$** (ಕ್ರಿ). ಹಿಂದಕ್ಕೆ ಸರಿ,—ನಡೆ: ಕೆಳೆಯನೇ ಹಳೆಹಗೆಯೆಯೆಂಬವೋಲ್ ಮಳೆ ಕಡೆಗೆ ಮಲೆನಾಡುಗಳ ನೋಡಿ ಹಿನ್ನಡೆಯುತಿರಲು (ಕಾಲೂರ. ೫೭-೯೨).
[ಹಿನ್ (< ಪಿನ್$_1$) + ನಡೆ$_1$]

**ಹಿನ್ನಡೆ$_2$** (ನಾ). ಹಿಮ್ಮೆಟ್ಟುವಿಕೆ; ಹಿಂಜರಿತ: ನೀವು ಯಾವುದನ್ನು ಹಿನ್ನಡೆ ಎನ್ನುತ್ತೀರೋ ಅದೇ ನನಗೆ ಮುನ್ನಡೆ ಎನ್ನಿಸುತ್ತದೆ (ದೂರಸ. ೧೧೩).
[< ಹಿನ್ನಡೆ$_1$ ./ ಹಿನ್ (< ಪಿನ್$_1$)+ ನಡೆ$_2$]

**ಹಿನ್ನಿ** 'ಪಿನ್ನಿ$_1$' ನೋ.

**ಹಿನ್ನೀರು** (ನಾ). (ಸಮುದ್ರದಲ್ಲಿ) ಹಿಂದಕ್ಕೆ ಮರಳಿದ ನೀರು: ಸಮುದ್ರದ ಹಿನ್ನೀರಿನಲ್ಲಿಯ ಪ್ರವಾಸವು ನೆನಪಾಗಿ ಅದನ್ನು ವರ್ಣಿಸಿದಳು (ಮೇಡಿಮ. ೯೯).
[ಹಿನ್ (< ಪಿನ್$_1$) + ನೀರು$_1$ (< ನೀರ್)]

**ಹಿನ್ನುಡಿ** (ನಾ). ಗ್ರಂಥದ ಉಪಸಂಹಾರಭಾಗ; ಕಡೆನುಡಿ: ಈ ಗ್ರಂಥದ ಹಿನ್ನುಡಿಯಲ್ಲಿ ಗ್ರಂಥದ ಬಗ್ಗೆ ಲೇಖಕರು ಸಾಕಷ್ಟು ವಿವರಗಳನ್ನು ಕೊಟ್ಟಿದ್ದಾರೆ (ರೂಢಿ).
[ಹಿನ್ (< ಪಿನ್$_1$) + ನುಡಿ$_2$]

**ಹಿನ್ನೆ** 'ಪಿನ್ನೆ$_1$' ನೋ.

**ಹಿನ್ನೆಗೆ** (ಕ್ರಿ). ಹಿಂದಕ್ಕೆ ಹಾರು,—ಚಿಮ್ಮು: ತನ್ನುಬ್ಬಟೆಗೆ ನೆಲ ನಡುಗೆ ಹೆಬ್ಬುಲ್ಲ ತೆರೆದು ಹೆಬ್ಬುಲಿಯು ಹಿನ್ನೆಗೆದು (ಕಾಲೂರ. ೯೭-೧೯೧). [ಹಿನ್ (< ಪಿನ್$_1$) + ನೆಗೆ$_1$]

**ಹಿನ್ನೆರಿಗೆ** (ನಾ). ಹಿಂದಕ್ಕೆ ಮಡಿಸಿದ ನೆರಿಗೆ,—ಮಡಿಕೆ: ಅವಳು ಕೆದರಿದ ಹಿನ್ನೆರಿಗೆಯನ್ನು ಬೆರಳುಗಳಿಂದ ಸರಿಪಡಿಸಿಕೊಳ್ಳುತ್ತಾ ನಡುಮನೆಗೆ ಬಂದಳು (ನಡೆವಾ. I. ೧೧೨೪). [ಹಿನ್ (< ಪಿನ್$_1$) + ನೆರಿಗೆ (< ನಿಱಿಗೆ)]

**ಹಿನ್ನೆಲ** (ನಾ). ೧. ಹಿಂಭಾಗ; ಹಿಂಬದಿ: ಬಲದೊಳು ಹೊಕ್ಕು ಬಲ್ಲಿದರ ನೆಗ್ಗೊತ್ತಿ ಹಿನ್ನೆಲಕಡರ್ಚಿದರು ಸೂಠಿಯಲಿ (ಮೋಹಪತ. ೩೯-೧೪). ೨. (ಆಲಂ) ಪೂರ್ವಸಿದ್ಧತೆ; ಹಿನ್ನೆಲೆ: ಇಷ್ಟೆಲ್ಲ ಹಿನ್ನೆಲ ಸಜ್ಜಾಯಿತೆಂದರೆ ಮುಂದಿನ ಸಮ್ಮೇಲನದ ಅಧ್ಯಕ್ಷರಾಗಲು ಯತ್ನ ನಡಸಿರಿ (ಮುಂಗಾಪು. ೧೧೯). [ಹಿನ್ (< ಪಿನ್$_1$) + ನೆಲ]

**ಹಿನ್ನೆಲೆ** 'ಪಿನ್ನೆಲೆ' ನೋ.

**ಹಿನ್ನೆಲೆಗಾಯಕ** (ನಾ). ಚಲನಚಿತ್ರಗಳಲ್ಲಿ ಮೊದಲೇ ಧ್ವನಿಮುದ್ರಣ ಮಾಡಿಕೊಂಡು ಸಿದ್ಧಪಡಿಸಿಟ್ಟುಕೊಳ್ಳುವ ಹಾಡುಗಳನ್ನು ಹಾಡುವವನು: ಈ ಚಿತ್ರದಲ್ಲಿನ ಹಿನ್ನೆಲೆಗಾಯಕರು ಯಾರು ಯಾರು ? (ರೂಢಿ).
[ಹಿನ್ನಲೆ (< ಪಿನ್ನೆಲೆ) + ಗಾಯಕ]

**ಹಿನ್ನೆಲೆಗಾಯಕಿ** (ನಾ). ಚಲನಚಿತ್ರಗಳಲ್ಲಿ ಮೊದಲೇ ಧ್ವನಿಮುದ್ರಣ ಮಾಡಿಕೊಂಡು ಸಿದ್ಧಪಡಿಸಿಟ್ಟುಕೊಳ್ಳುವ ಹಾಡುಗಳನ್ನು ಹಾಡುವವಳು: ಪಿ.ಸುಶೀಲಾ ಈ ಚಿತ್ರದ ಹಿನ್ನೆಲೆಗಾಯಕಿ (ರೂಢಿ). [ಹಿನ್ನೆಲೆ (< ಪಿನ್ನೆಲೆ) + ಗಾಯಕಿ]

**ಹಿನ್ನೆಲೆಗಾಯನ** (ನಾ). ಚಲನಚಿತ್ರಗಳಲ್ಲಿ ಮೊದಲೇ ಧ್ವನಿಮುದ್ರಣ ಮಾಡಿಕೊಂಡು ಸಿದ್ಧಪಡಿಸಿಟ್ಟುಕೊಳ್ಳುವ ಸಂಗೀತ: ಹಿನ್ನೆಲೆಗಾಯನ ಕೊಟ್ಟಿರುವ ಬಾಲಮುರುಳಿಕೃಷ್ಣ ಅವರನ್ನು ವರ್ಷದ ಅತ್ಯುತ್ತಮ ಹಾಡುಗಾರರೆಂದು ರಾಷ್ಟ್ರಮಟ್ಟದಲ್ಲಿ ಗೌರವಿಸಲಾಗಿದೆ (ಕವಿವಿ. ೫೩೩). [ಹಿನ್ನೆಲೆ (< ಪಿನ್ನೆಲೆ) + ಗಾಯನ]

**ಹಿನ್ನೆಳಲು** (ನಾ). ೧. ಹಿಂಭಾಗದ ನೆರಳು. ೨. (ಆಲಂ) ಆಶ್ರಯ; ಆಸರೆ; ಹಿನ್ನೆಲೆ: ಒಂದು ಅಪೂರ್ವ ಉತ್ಸಾಹದ ಹಿನ್ನೆಳಲಿನಲ್ಲಿ ಈ ಕಾರ್ಯ ನಡೆಯಿತು (ನವ್ಯಕಾ. ೨೪). [ಹಿನ್ (< ಪಿನ್$_1$) + ನೆಳಲು$_2$ (< ನೆಟಲ್$_1$)]

**ಹಿಪ್ಪಣ** (ನಾ). ತುಕ್ಕು; ಕಿಟ್ಟ: "ಕಿಟ್ಟಂ – ಮಲ, ಹಿಪ್ಪಣ" (ಓಷಧಿ. ೩೩). [?]

**ಹಿಪ್ಪದಿಕೆ, ಹಿಪ್ಪರಿಕೆ, ಹಿಪ್ಪಲಿಕೆ** (ನಾ). ಬೆಳಗಿನ ಜಾವ; ಮುಂಜಾವ: ಹಿಪ್ಪದಿಕೆ [ಪಾಠಾಂ. ಹಪ್ಪಳಿಕೆ, ಹಿಪ್ಪಲಿ] = ಬೆಳಗುಜಾವ (ಶಮದ. ನ. ೯೭ ಪ್ರಯೋ). **ಹಿಪ್ಪರಿಕೆ:** ಆ ಮಹೀಪಾಲನುದಿತೋದಯನ ಮೋಹಾಂಧಕಾರಮೇ ಹರೆವಂತಿರಾದುದಾ ಹರವ ಹಿಪ್ಪರಿಕೆಯಂದಿನ ದಿನದ ಬೆಳಗಪ್ಪ ಜಾವದಲ್ಲಿ (ಸಮ್ಯಕೌ. ೧೨-೧). **ಹಿಪ್ಪಲಿಕೆ:** ಧೀವರಂ ಮಱುದಿನದ ಹಿಂ [ಪಾಠಾಂ. ಪಿ] ಪ್ಪಲಿಕೆ ಹೊತ್ತು ಹರಿಯದ ಮುನ್ನಮಾ ಮರಕೆ ಬಳ್ಳಿವಿಡಿದು ಹರಿಸದಿಂ ಹತ್ತಿ (ಸಮ್ಯಕೌ. ೨-೩೭); ಹರಿವ ಹಿಪ್ಪಲಿಕೆಗೆ ಮುನ್ನೆಳ್ದಟ್ಟುಂಡು ಭರದಿಂದ ಹೂಜೆ ಹೂಡಗಟ್ಟಿ ಹಿರಿದು ಸಂದಣಿಗೊಂಡಾ ಕೂಳ ಪಾಳೆಯಮಿರದಲ್ಲಿ ಪೊಱಮಟ್ಟು ದಾಗ (ಶ್ರೀಪಾಲ. ೧೩-೯೭). [?]

**ಹಿಪ್ಪನೇರಿಳೆ, ಹಿಪ್ಪುನೇರಳೆ** (ನಾ). ಒಂದು ಬಗೆಯ ಸಸ್ಯ; **P** ರೇಷ್ಮೆ ಹುಳುಗಳಿಗೆ ಇದರ ಎಲೆಗಳನ್ನು ಆಹಾರವಾಗಿ ನೀಡುತ್ತಾರೆ: ಹಿಪ್ಪನೇರಿಳೆ (Morus alba): ಇದನ್ನು ಮೈಸೂರು, ಕಾಶ್ಮೀರಗಳಲ್ಲಿ ಬೆಳೆಸುತ್ತಾರೆ. ರೇಷ್ಮೆ ಹುಳುಗಳಿಗೆ ಇದರ ಎಲೆಗಳು ಆಹಾರವಾಗಿವೆ (ಸಸ್ಯಶಾ. ೧೩೩). **ಹಿಪ್ಪುನೇರಳೆ:** ಹಿಪ್ಪುನೇರಳೆಯನ್ನು ಬೆಳೆಯುವುದಕ್ಕೆ ಅನುಕೂಲವಿರುವ ಕಡೆಗಳಲ್ಲೆಲ್ಲ ಮನೆಯಲ್ಲಿಯ ಹೆಂಗಸರೂ ಮತ್ತು ಹುಡುಗರೂ ಈ ಕೆಲಸವನ್ನು ಸುಲಭವಾಗಿ ಮಾಡಬಹುದು (ವ್ಯವಮ. ೬೮). 'ಉಪ್ಪುನೇರಳೆ' ಪರಾ.
[ಹಿಪ್ಪ$_0$ + ನೇರಿಳೆ (< ನೇಱಿಲ್)]

**ಹಿಪ್ಪರಿಕೆ** 'ಹಿಪ್ಪದಿಕೆ' ನೋ.

**ಹಿಪ್ಪಲಿ, ತಿಪ್ಪಲಿ** (ನಾ). ಒಂದು ಬಗೆಯ ಮೆಣಸು; ಉದ್ದಮೆಣಸು: "ಕೃಷ್ಣಾ, ಉಪಕುಲ್ಯಾ, ವೈದೇಹೀ, ಮಾಗಧೀ, ಹಿಪ್ಪಲೀ, ಕಣಾ ಈ ೬ ಹಿಪ್ಪಲಿ" (ಪಲಾಯು. ೧೦೭-೪೮೦); ಉತ್ತರಣೆಯ ಬೇರು ಹಿಪ್ಪಲಿ ಚಿತ್ರಮೂಲ ಇವಂ ಸಮಾನಂಗೊಂಡು ಅರದು ಕೂಸಿನ ಮಯ್ಯಂ ಪೂಸುವುದು (ಬಾಲಚಿ. ೧೨೫-೧); ಹಿಪ್ಪಲಿ ಕರಂಜಿಗೆ ಬೆಲ್ಲಪುದಿ ಬೆಲ್ಲವತ್ತ ಪಾಗುಳಿ ಬಿದಿರ ಕಳಿಲೆ ಪೊಸತದುಕಂಬಟೆಯು ಕಾಯ್ಗಳಿಂದ ಸಮೆದೊಪ್ಪುವುಪ್ಪಿನ ಕಾಯ್ಗಳಂ ಮಾಳ್ಪುದು (ಸೂಪಶಾ. ೬-೧೭); ಹಿಪ್ಪಲಿ, ಬೆಲ್ಲ, ಅಳಲೆಕಾಯಿ ಇವನ್ನು ಬಿಸಿನೀರಿನಿಂದ ಅರೆದು, ಕುಡಿದರೆ ವಾತಜ್ವರ ಪರಿಹಾರ ವಾಗುವುದು (ಸಕಪ್ಪ. ೬೩). **ತಿಪ್ಪಲಿ:** (ಕ). [< ಸಂ. ಪಿಪ್ಪಲಿ]

**ಹಿಪ್ಪಲಿಕೆ** 'ಹಿಪ್ಪದಿಕೆ' ನೋ.

**ಹಿಪ್ಪಿ** 'ಹಿಪ್ಪೆ$_2$' ನೋ.

**ಹಿಪ್ಪುನೇರಳೆ** 'ಹಿಪ್ಪನೇರಿಳೆ' ನೋ.

**ಹಿಪ್ಪೆ$_1$** 'ಇಪ್ಪೆ' ನೋ.

**ಹಿಪ್ಪೆ$_2$, ಹಿಪ್ಪಿ** (ನಾ). ಸತ್ತ್ವವನ್ನು ತೆಗೆದನಂತರ ಉಳಿಯುವುದು; ನಿಸ್ಸಾರ ವಾದ ಚರಟ ,—ತೊಗಟೆ: ಹಿಪ್ಪೆಯಾದ ತಂಬುಲದಂತೆ [ಪಾಠಾಂ. ಪಲ್ಲ ಸಂದಿ ಯಡಕೆಯಂತೆ] (ಧರ್ಮಾಮೃ. ೯-೨೩ ಅಡಿಪಾಠ); ಹಿಪ್ಪೆಗೆ ರುಚಿಯುಂಟೇ ಮಧುರಕ್ಕಲ್ಲದೆ (ಪೋಳಿಮಾ. ೧೨೦-೪೭೨); ಎನ್ನ ಹಿಪ್ಪೆಯ ಮಾಡಿ ಹಿಂಡದಿರು (ತೊರರಾ. ೬-೪೭-೨೩). **ಹಿಪ್ಪಿ :** ತಿಲದ ಹಿಪ್ಪಿ ಹೊಱಗಾದುದನಱಿದು ನಿಶ್ಚಯವ ಕಂಡಲ್ಲಿ ಹೊಱಗಣ ಪೂಜೆ ಬೆಳಗಣ ದಿವ್ಯಪ್ರಕಾಶ ವಸ್ತುಭಾವದ ಕೂಟ ಇಷ್ಟವಿಲ್ಲದಿಲ್ಲ (ಮದೇವ. ೨೭೦-೪).
[ದೇ. ॥ ತೆಲು. ಪಿಪ್ಪಿ, ಪಿಪ್ಪಿರಿ; ತುಳು. ಹಿಪ್ಪಿ ]

**ಹಿಪ್ಪೆಗ** (ನಾ). (ಆಲಂ) ಶಕ್ತಿಗುಂದಿದವನು; ನಿತ್ರಾಣಿ: ಹಿಪ್ಪೆಗರ ಹರಗಡಿದು

ಹೊಗರಲಗೊಪ್ಪಿದವು ಕರುಳುಗಳ ನಿಮಿಷದೊಳೊಪ್ಪಗೆಡಿಸಿದವರಿಕದಂಬವನೀತ ನಂಬುಗಳು (ಕುಮ್ಮಾದ್ರೋ. ೨-೫೩) [ಹಿಪ್ಪೆ + -ಗ]

**ಹಿಪ್ಪೆಯೆಣ್ಣೆ** (ನಾ). ಇಪ್ಪೆಯ ಬೀಜದಿಂದ ತೆಗೆದ ಎಣ್ಣೆ: ಹಿಪ್ಪೆಯೆಣ್ಣೆಯನ್ನು ಅಭ್ಯಂಗವಂ ಮಾಡಿ ಅದರ ಹಿಂಡಿಯಲ್ಲಿ ಮೈ ತೊಳೆಯಲು (ವಾತಾಚಿ. ೧೫-೩). 'ಇಪ್ಪೆಯೆಣ್ಣೆ' ಪರಾ. [ಹಿಪ್ಪೆ (< ಇರ್ಪೆ) + ಎಣ್ಣೆ]

**ಹಿಬುಕ** (ನಾ). [ಜ್ಯೋತಿ] ಲಗ್ನದಿಂದ ನಾಲ್ಕನೆಯ ಸ್ಥಾನ,– ರಾಶಿ: ವ್ಯವಹರಿಪ ಸಂಜ್ಞೆ ಚತುರಸ್ರವದೆಂದಷ್ಟಮ ಚತುರ್ಥಗೃಹಕೆ ಚತುರ್ಥಕ್ಕೆ ವಲಂ ಮತ್ತಂ ಪಾತಾಳ ವೇಶ್ಮ ಸುಖ ಹಿಬುಕ ಬಂಧುವೆಂದ್ಸೆದು ಪೆಸರ್ (ಜಾತತಿ. ೧-೩೪). [ಸಂ.]

**ಹಿಮ** (ಗು). ೧. ತಣ್ಣನೆಯ; ಶೀತಲವಾದ. ೨. ಇಬ್ಬನಿಯಿಂದ ಕೂಡಿದ; ಮಂಜಿನ. (ನಾ). ೩. ಚಳಿಗಾಲ; ಹೇಮಂತಋತು. ೪. ಚಂದ್ರ. ೫. ಹಿಮಾಲಯಪರ್ವತ: ಹಿಮದಿಂದಂ ಲವಣಾಂಬುರಾಶಿವರೆಗಂ ಷಟ್ಖಂಡ ಭೂಮಂಡಲಂ ನಿಮಿರ್ದಾಜ್ಞಾಪ್ರಸರಕ್ಕಗುರ್ವುಗೊಳೆಯಿಂ . . . ಚಕ್ರೇಶ್ವರಂ ಕೀರ್ತಿ ವಿಭ್ರಮದಿಂ ಪಜ್ಜಳಿಪನ್ನಮುಜ್ಜಳಿಸಿದಂ ವ್ಯೋಮಾವನೀಭಾಗಮಂ (ಆದಿಪು. ೧೫-೪); ಹಿಮದಿಂ ಸೇತುವರಂ ಮತ್ತೆ ಮಗುಳ್ಲಾ ಸೇತುವಿಂ ಹಿಮಂಬರೆಗಂ ವಿಕ್ರಮಕೇಳಿಯಿಂ ತೊಳಲ್ವಂ (ಎಕ. V, ಹಾಸನ. ೧೩೦-೧೫; 1147 ?); ಯೋಗೇಶ್ವರ ದಂಣ್ಣನಾಯಕರು ಬನವಾಸೆ ಪಂನ್ನಿರ್ಚ್ಛಾಸಿರಮುವಂ(ಮಂ) ಸಾನ್ತಳಿಗೆ ಸಾಯಿರಮುಂ ಹಿಮಪರಿಯನ್ತ ದುಷ್ಟನಿಗ್ರಹ ಶಿಷ್ಟಪ್ರತಿಪಾಳನದಿನಾಳುತ್ತಮಿರೆ (ಎಕ. V, ಹಾಸನ. ೧೧-೧೧; ಸು. 12ನೆಯ ಶತ). ೬. ಶ್ರೀಗಂಧದ ಮರ; ಚಂದನವೃಕ್ಷ. ೭. ಕರ್ಪೂರ: "ಘನಸಾರಂ ಪ್ರಾಲೇಯಾಂಶು ನಾಮಕಂ ಹಿಮಮೆನಿಪ್ಪುದದು ಕರ್ಪೂರಂ" (ವಸ್ತುಕೋ. ೭೬-೧೦); ಹಿಮ ಮಿಶ್ರಾಂಬುವನೊಯ್ಯನೋಪನಿದಿರೊಳ್ನಿಂದಂಗನಾಚಂದನಾಂಕಮನೋಜ್ಞಾಂಗದೊಳೊತ್ತ (ರಾಜಶೇ. ೧೦-೮೦). ೮. ಇಬ್ಬನಿ; ಮಂಜಿನ ಹನಿ: ಹಿಮಧವಳಾತಪತ್ರಮನೆ ಪೋಲೆ ಮುಖೇಂದುವ ಬೆಳ್ಪು ಪೂರ್ಣಕುಂಭಮನೆ ನಿರಂತರಂ ಗೆಲೆ ಕುಚಂಗಳ ತೋರ್ಪು . . . ಒಳಕೊಂಡುದವಳ್ಗೆ ಗರ್ಭಚಿಹ್ನಮೆ ಗಳ ಗರ್ಭದರ್ಭಕನ ಸೂಚಿಪ ಮುಂದಣ ರಾಜ್ಯಚಿಹ್ನಮಂ (ಪಂಪಭಾ. ೧-೧೨೦); ಇದಿರೊಳಾನುವುದರಿದು ಹಸುಳೆಯ ಕದನ ಹಂಗಿಗರಾದೆವಾಳ್ದನ ವದನಕಮಲಕೆ ನಮ್ಮ ಪೌರುಷವಿಂದು ಹಿಮವಾಯ್ತು (ಕುಮ್ಮಾದ್ರೋ. ೭-೨೮). ೯. ಮಂಜಿನ ಗಡ್ಡೆ; ಬರ್ಫ: 'ಹಿಮಗಡ್ಡೆ' ಪರಾ. ೧೦. ಚಳಿ; ಶೈತ್ಯ: ಹಿಮಮೆಂದಾತಪಬಾಧೆಯೆಂದು ಮಟೆಯೆಂದಿಲ್ಲಾ ನೆಲಂ ಪಂಚರತ್ನಮಯಂ ನಾಲ್ಕೆರಲಲ್ಲದಾಗದೆಳವುಲ್ ನೀಲೋತ್ಪಲಾಬ್ಜಾಕರಾಲಿ ಮನಂಗೊಳ್ಪುದು (ಆದಿಪು. ೫-೨೯). ೧೧. ಹೊಸದಾದ ಬೆಣ್ಣೆ. ೧೨. ಮುತ್ತು. ೧೩. ಇರುಳು; ರಾತ್ರಿ. ೧೪. ತವರು. ೧೫. ಶಿವ; ಈಶ್ವರ. ೧೬. ದೊರೆ; ರಾಜ. ೧೭. ಅಮೃತ. ೧೮. ನೀರು; ಜಲ. ೧೯. ಬಿಳಿಯ ಬಣ್ಣ. ೨೦. ಕೆಂಪು ಬಣ್ಣ; ಕಾವಿ. ೨೧. ಕೀರ್ತಿ; ಯಶಸ್ಸು. ೨೨. ಮುಖ್ಯವಾದುದು; ಶ್ರೇಷ್ಠವಾದುದು: "ಶಂಕರ ನೃಪ ಕೀರ್ತಿ ಮುಖ್ಯ ಶಿಶಿರಾಮೃತ ಶುಭ್ರ ಹಿಮಾಚಲಂ ಸುಧಾಕರಜಲಗಳ್ ಹಿಮಾಹ್ವಯಂ" (ನಾನಾರ. ೬೨); "ಜಾಬುಂ ಗಿರಿವುರ ನೀರ್ ಮಂಜು ಹಿಮವಿದಾಱು ಹಿಮಶಬ್ದಂ" (ನಾನಾಕಂ. ೧೧೧). [ಸಂ.]

**ಹಿಮಂದಳೆ** (ಕ್ರಿ). ಮಂಜನ್ನು ಧರಿಸು; ಇಬ್ಬನಿಯನ್ನು ಹೊತ್ತಿರು: ಇಂದುರುಚಿ ಬಂದುದೊ ಹರಸ್ಮೇರಂ ದಿವಿಯೊಳಾಕಾರಮಾಯ್ತೊ ಹಿಮಂದಳೆದುದೋ . . . ಏನೆ ರಜತಾದ್ರಿ ರಂಜಿಪುದು (ಬಸವು. ೧-೩೪). [ಹಿಮ + ತಳೆ]

**ಹಿಮಕರ** (ನಾ). ೧. ತಂಪಾದ ಕಿರಣಗಳಿಂದ ಕೂಡಿರುವವನು; ಚಂದ್ರ: ಹಿಮಕರನಟಲಂ ಪಡೆವನೆಂಬುದಿದು ವಿಪರೀತಂ (ಕವಿರಾ. ೩-೩೭); ಹಿಮಕರನಾತ್ಮ ಶೀತರುಚಿಯಂ ದಿನನಾಯಕನುಷ್ಣದೀಧಿತಿಕ್ರಮಮಂ . . . ಬಿಸುಟ್ಟೊಡಂ ಬಿಸು [ಟ್ಟೆಮ] ಬಿಸುಡೆಂ ಮದೀಯ ಪುರುಷವ್ರತಮೊಂದುಮನಿಗಳ್ (ಪಂಪಭಾ. ೧-೮೩); ಹರಿ ದಿಕ್ಪಣ ವಧು ಬರೆ ಹಿಮಕರ ಖರಕರರೊಂದೆ ತೆಱದೊಳನುರಕ್ತತೆಯಿಂ ನೆರೆವಳ್ಗಡ (ರಾಜಶೇ. ೧೨-೨೭). ೨. ಕರ್ಪೂರ: ಹಿಮಕರ ಮೃಗ ಕಾಳಾಗುರುಶತಮಾಳಜಾತೀಫಳಂಗ ಳೊಂದಂಶಂ ತತ್ಸಮಮಾಗೆ ಪೂತಿಕರುಷಪ್ರಮಿತಾ ಗುರುವಾಗಿರಲೆದು ಮಧುವಿಂದಮದಂ (ಲೋಕೋಪ. ೭-೬೪); ಕರಿದಂತಂ . . . ಚಂದನಂ ಹಿಮಕರಂ ಜಾತೀಫಳಂ ಪೂತಿ ಸೂಕರಮುಕ್ತಾಮಣಿ ಚೂಡಾರತ್ನಮೆಂಬೀ ವನಾಂತರಸಂಜಾತಮನಾತನೋಲಗಿಸಿದಂ ಸದ್ವಸ್ತುಸಂಘಾತಮಂ (ಪುಷ್ಪಪು. ೫-೧೦೨). ೩. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: ಶಶಿಯಿಂದು (ಹಿಮಗು ಹಿಮಕರ)ಶಶಾಂಕ ಸೋಮಂ . . . ರಸೆ ಧರೆ ಇಳೆ ರೂಪವೈಕಮೊಂದಱ ನಾಮಂ (ವ್ಯವಹಾ. ೯-೧).

**ಹಿಮಕರಗಂಧ** = ಒಂದು ಬಿರುದು: ಶ್ರೀ ವೀರಕೃಷ್ಣದೇವರಾಯದೇವ ಮಹಾರಾಯರವರು ನಮ್ಮ ವೃದ್ಧಪಿತಾಮಹರಾದ ಸಿನ್ನುಗೋವಿನ್ದ ಹಿಮಕರಗನ್ಧ ಧವಲಾಂಕಭೀಮ . . . ಯರಕೃಷ್ಣಪ್ಪನಾಯಕರ್ಕೈಯನವರಿಗೆ ಪಾಲಿಸ್ತ ಬೇಲೂರುಶೀಮೆಗೆ (ಎಕ. I (R), ೨೮-೮; 1693). [ಸಂ.]

**ಹಿಮಕರಕುಲ** (ನಾ). ಕ್ಷತ್ರಿಯರಲ್ಲಿ ಒಂದು ವಂಶ; ಚಂದ್ರನು ಮೂಲ ಪುರುಷನಾದ ವಂಶ; ಚಂದ್ರವಂಶ: ಹಿಮ[ಕರ]ಕುಲಲಲಾಮರು ಕಾಳಗಕೆ ಕೈದಟ್ಟಿ ಹರಿದುದು ಕಳನ ಚೌಕದಲಿ (ಕುಮ್ಮಾಭೀ. ಓರಿಇ. ೩-೧, ಅಡಿಪದ್ಯ). [ಸಂ.]

**ಹಿಮಕರಬಿಂಬ** (ನಾ). ಚಂದ್ರನ ಆಕೃತಿ,–ಆಕಾರ; ಚಂದ್ರಬಿಂಬ: ಹಿಮಕರಬಿಂಬನಿಭಚ್ಛತ್ರಮನೀಶಾನೇಂದ್ರನೆತ್ತಿದಂ (ಆದಿಪು. ೭-೫೦); ಹಿಮಕರಬಿಂಬಮಂ ವಿಗತಲಾಂಛನಮಂ ಕಡೆದಬ್ಜಸಂಭವಂ ಪ್ರಮದದೆ ಮಾಡಿದಂ ಸುರನ ಸುಂದರರೂಪಮ ನೆಂಬಿನಂ . . . ತನೂದಯಮಾದುದು ಕೌತುಕಪ್ರದಂ (ವರ್ಧಪು. ೧೩-೨೮). [ಸಂ.]

**ಹಿಮಕರಭೂಷಣ** (ನಾ). ಚಂದ್ರನನ್ನು ಆಭರಣವಾಗಿ ಉಳ್ಳವನು; ಶಿವ: ಹಿಮಕರಭೂಷಣಾಜ್ಞಾಧಾರ ಬಸವಕುಮಾರ ಮಾಂ ತ್ರಾಹಿ (ಬಸಪು. ೨೦-೩೮). [ಸಂ.]

**ಹಿಮಕರಮಂಡಲ, ಹಿಮಕರಮಂಡಳ** (ನಾ). = ಹಿಮಕರಬಿಂಬ: ಹಿಮಕರಮಂಡಲದಿಂದೊಸರ್ವಮರ್ದನೆ ನಿಜಭಾಷೆ ಬೆಸಸಿದರ್ ಕೇವಲಿಗಳ್ (ಪಂರಾಮಾ. ೧೬-೭೧). **ಹಿಮಕರಮಂಡಳ:** ಹಿಮಕರಮಂಡಳ[ಪಾಠಾಂ. ಲ]ಮಿದು ಶತ್ರುಮಂಡಲಾಭಂ ನೃಪೇಂದ್ರ ಮಸುಳ್ಪುದು ಬೇಗಂ (ಆದಿಪು. ೧೨-೫೨). [ಸಂ.]

**ಹಿಮಕರಮಂಡಳ** 'ಹಿಮಕರಮಂಡಲ' ನೋ.

**ಹಿಮಕರಮೌಲಿ** (ನಾ). ಚಂದ್ರನನ್ನು ಮುಡಿಯಲ್ಲಿ ಧರಿಸಿದವನು; ಶಿವ: ಹಿಮಕರಮೌಲಿ ಪೂರ್ವದೊಳುದಾರ ಭಗೀರಥನಂ ಪ್ರಮುದದಿನಾಗಳೆ ಕಾಯ್ತುತೆನ್ನನೆ ಮನ್ನಿಸಿ ಬೀಳ್ಕೊಡಲ್ (ಹಾಲಾಸ್ಯ. ೧-೯-೧೨). [ಸಂ.]

**ಹಿಮಕರೋಪಳ** (ನಾ). ಚಂದ್ರಕಾಂತಶಿಲೆ; ಶಶಿಕಾಂತ: ಲಸತ್ಸಿತಸರೋಜಮಂ ಹಿಮಕರೋಪಳಾದರ್ಶಮಂ . . . ಬಿಸುಟ್ಟುಮವಿಕಾರದೊಳ್ ನೆಲಸಿದತ್ತು ತನ್ನಿಚ್ಛೆಯಿಂ ಪ್ರಸನ್ನತೆ ನಿಜಾಸ್ಯದೊಳ್ (ಚಂದ್ರಪು. ೧೪-೯೪). [ಸಂ. ಹಿಮಕರೋಪಲ]

**ಹಿಮಕಿರಣ** (ನಾ). ೧. ತಂಪಾದ ಕದಿರು,– ರಶ್ಮಿ. ೨. = ಹಿಮಕರ ೧: ವಿಮಲತರಗಗನತಲತಿಲಕ ಹಿಮಕಿರಣನಂ (ಆದಿಪು. ೭-೨೭ ರಗಳೆ); ಹಿಮಕಿರಣಂ ಸಂಧ್ಯಾರಾಗಮನುಟಿವಂತಾಗಳಂತೆ ಸುಗ್ರೀವಂ ರಾಗಮನುಟಿದು (ಪಂರಾಮಾ. ೧೦-೪೬); ಹರನವಸರಹನ್ನೆವರ ತಾವರೆಗಳಂ ಪಿಡಿದ ಹಿಮಕಿರಣಂ ತಿರುಗುತಿಪ್ಪಂ (ಬಸಪು. ೪೩-೪೩).

**ಹಿಮಕಿರಣಶಕಲಾಭರಣ** = ಚಂದ್ರನ ಕಲೆಯನ್ನು ಆಭರಣವನ್ನಾಗಿ ಉಳ್ಳವನು; ಶಿವ: ಹಿಮಕಿರಣಶಕಲಾಭರಣನಜನವ್ಯುತವಿಗ್ರಹನೀ ಪರಿಯೊಳಾಗಮನಪರಿತಾ ಪಪ್ರಶಮನವನಾಂತಿರಲು (ಬಸಪು. ೨೭-೪೫). [ಸಂ.]

**ಹಿಮಕಿರಣಕಾಂತ** (ನಾ). = ಹಿಮಕರೋಪಳ: ಸತತಮುಂ ಹಿಮಕಿರಣಕಾಂತ ಪ್ರತಿಮೆಯುದರದೊಳು ಜ್ವಲಿಸುವಪ್ರತಿಮದೀಪದವೊಲು . . . ಇರ್ದನು ತಾಯ ಬಸುಱಲಿ (ಬಸಪು. ೩-೧೨). [ಸಂ.]

**ಹಿಮಕಿರಣಧರ** (ನಾ). ಚಂದ್ರನನ್ನು ಧರಿಸಿದವನು; ಶಿವ: ಪರಿವಡೆದು ವಾಗ್ದೇವಿ ಕುಣಿವ ನಾಲಿಗೆಯ ಸರಸಿರುಹಸಂಭವರು ಸಾಸಿರಕೋಟಿ ಕುಳ್ಳಿರ್ದುದರರೆ ಬಲವಂತದೊಳಗೋಲೈಸಿ ಹರನ ಶಂಕರನ ಹಿಮಕಿರಣಧರನ (ಸೌಂದಪು. ೧-೩೩). [ಸಂ.]

**ಹಿಮಕೃತ್ತು** (ನಾ). ೧. ಚಂದ್ರ: ಹಿಮಕೃದ್ವಂಶಜರಪ್ಪ ಪಾಂಡುಸುತರಂ ಕೆಯ್ಕೊಂಡು ನಿನ್ನಯ್ದು ಬಾಡಮನಿತ್ತುಂ ನಡೆಪೆಂದು ಸಾಮಮನೆ ಮುಂ ಮುಂತಿಟ್ಟೊಡೆ (ಪಂಪಭಾ. ೯-೮೮); ಹಿಮಕೃತ್ ಧರಾತ್ಮಕ ಸರಮರುತ್ ಧನಂಜಯರ ವಿಲಸತ್ ದೇಹ ಸರ್ವೇಶ್ವರಂ (ಗುರುಚಾ. ೮-೧). ೨. [ಛಂದ] ವರ್ಣಗಣಗಳಲ್ಲಿ ಒಂದು; ಭಗಣ (– UU):

ಕಾಂತಂ ಧಾತ್ರೀ ಹಿಮಕೃದಮರಾಕಾಶಯುಗ್ಮೇಶಯುಗ್ಮಂ ಮುಂತಂ ಬಂದಾ ಪದಧ ಕಡೆಯೊಳ್ಳಿಲ್ಪನಾಂತಿರ್ದೊಡಾ ವಿಶ್ರಾಂತಂ (ಛಂದೋಂಬು. ೨-೧೭೩). [ಸಂ. ಹಿಮಕೃತ್]

**ಹಿಮಕೃದ್ಧರ** (ನಾ). ಚಂದ್ರನನ್ನು ಧರಿಸಿದವನು; ಶಿವ: ಭದ್ರಗಾಯಕ ದೇವರಾದ್ಯರೊಲ್ ಮಿಗೆ ಹಿಮಕೃದ್ಧರನನು ಕೇಳಿಸಿದನು (ಭೈರವೇ. ೪-೯೮). [ಸಂ.]

**ಹಿಮಕೃನ್ಮಂಡಲ** (ನಾ). = ಹಿಮಕರಮಂಡಲ: ಶರದದ ಹಿಮಕೃನ್ಮಂಡಲದ ಮೇಲೆ ಚೆಲ್ವಂ ಕೊಂಡೆಸೆವ ಕಳಂಕದಂತಿರೆಸೆದಂ ಕೃಷ್ಣಂ (ಅರ್ಧನೇ. ೮-೩೭). [ಸಂ.]

**ಹಿಮಗಡ್ಡೆ** (ನಾ). ಮಂಜಿನ ಗಡ್ಡೆ; ನೀರ್ಗಲ್ಲು: ಸಮುದ್ರದ ಅಲೆ ಹೊಡೆದು ಮಾರುತ ಬೀಸಿ ಈ ಹಿಮಕ್ಷೇತ್ರ ಒಡೆದು ಸಣ್ಣ ಸಣ್ಣ ಹಿಮಗಡ್ಡೆಗಳ ರಾಶಿಗಳಾಗುತ್ತವೆ (ಭೂವಿವ. ೬೯). [ಹಿಮ + ಗಡ್ಡೆ]

**ಹಿಮಗದಿರ** (ನಾ). ತಂಪಾದ ಕಿರಣಗಳನ್ನು ಉಳ್ಳವನು; ಚಂದ್ರ: "ಜೊನ್ನೊಡಲಂ, ಸವಿಗಡಲಣುಗಂ . . . ಚಳಿಗದಿರಂ, ಹಿಮಗದಿರಂ, ಕಟ್ಟಿಲೆವಣಿ, ತಿಂಗಳ್ - ಈ ೨೦ ಚಂದ್ರನ ಪೆಸರ್" (ಕಶಸಾ. ೨೩). [ಹಿಮ + ಕದಿರ್$_2$ + - ಅ$_7$]

**ಹಿಮಗಾಳಿ** (ನಾ). ತಂಪಾದ ಗಾಳಿ; ತಂಬೆಲರು: ತೂರುವುದು ಹಿಮಗಾಳಿ ಹಣ್ಣೆಲೆಯನಾದು (ಇಂಗೀತ. ೧೮-೧೩). [ಹಿಮ + ಗಾಳಿ$_1$]

**ಹಿಮಗಿರಿ** (ನಾ). ೧. ಮಂಜಿನಿಂದ ಕೂಡಿದ ಪರ್ವತ; ಹಿಮವತ್ಪರ್ವತ: ಹಿಮಗಿರಿಯ ಮಧ್ಯಕೂಟದ ಹಿಮವದ್ವಿಜನುಮನೊತ್ತಿ ಕಪ್ಪಂಗೊಂಡಾ ಹಿಮಶೈಳದೊಳಮಲಂಪಿಂ ಹಿಮವತ್ತೇಜಮನುದಾತ್ತತೇಜಂ ಮೆಚಿದಂ (ಆದಿಪು. ೧೪-೫೯); ಸರಯೂತರಂಗಿಣಿಗೆ ಹಿಮಗಿರಿಯ ದೂರದಿಂದೈತಂದುವೆಡೆಬಿಡದೆ ಕ್ರೌಂಚಸಾರಸಪಂಕ್ತಿ (ಶ್ರೀರಾಮಾ. ೧೫-೩೯೮). ೨. ಪರ್ವತರಾಜನಾದ ಹಿಮವಂತ: 'ಹಿಮಗಿರಿನಂದನೆ' ಪರಾ. [ಸಂ.]

**ಹಿಮಗಿರಿನಂದನೆ** (ನಾ). ಪರ್ವತರಾಜನ ಮಗಳು; ಗಿರಿಜೆ: ಹಿಮಗಿರಿನಂದನೆಗೆ ಮದ್ವಿಮಳತತ್ವಾನಂದಬೋಧೆಯನಱುಹಿದದಱಿಂದಱುಹಿದೆನು ನಿನಗೆ (ಬಸಪು. ೨-೩೭). [ಸಂ. ಹಿಮಗಿರಿನಂದನಾ]

**ಹಿಮಗಿರಿರಾಜ** (ನಾ). ಪರ್ವತರಾಜ; ಪಾರ್ವತಿಯ ತಂದೆ: ಕರಸಿ ಬೇಕಾದ ಶಿಲ್ಪಿಗಳ . . . ಪಟ್ಟಣವ ಗುಡಿತೋರಣಂಗಳಲಲಂಕರಿಸಿ ಪೂರ್ವದಲಿ ಹಿಮಗಿರಿರಾಜನೆಂತು ಶಾಂಕರಿಯ ಕಲ್ಯಾಣಕುತ್ಸವಿಪಂತೆ ಭುಲ್ಲೈಸುತಿರ್ದನೀಶಾನಸೆಟ್ಟಿ (ಸೌಂದಪು. ೧೩-೨೭). [ಸಂ. ಹಿಮಗಿರಿರಾಜನ್]

**ಹಿಮಗಿರಿಸುತೆ** (ನಾ). = ಹಿಮಗಿರಿನಂದನೆ: ಸೆಱಗ ಸೌವರಿಸಿ ಹಿಮಗಿರಿಸುತೆಯ ನಿದ್ರೆಯೆಚ್ಚಱದಂತೆ ಮೆಲ್ಲನಾರ್ಸೆದೆದ್ದು (ಸೌಂದಪು. ೧-೭). [ಸಂ. ಹಿಮಗಿರಿಸುತಾ]

**ಹಿಮಗು** (ನಾ). ೧. ತಂಪಾದ ಕಿರಣಗಳನ್ನು ಉಳ್ಳವನು; ಚಂದ್ರ: ಪೊಂದುಗುಂ . . . ಅಸ್ಥಿಗಳ್ ದಿನಕರನಿಂ ತ್ವಚಂ ಹಿಮಗುವಿಂ (ಜಾತತಿ. ३-३); ಅಭವಭಕ್ತಿ ಸಮಯವಾರ್ಧಿವಿವರ್ಧನೋಜ್ವಲ ಹಿಮಗು ಶಿವಕವಿದೇವನಾತ್ಮಜ ಸುಮತಿ ಭೀಮನುಭಯಕವಿತ್ವಸಮರ್ಥನುಸುರುವೊಡೆ (ಬಸಪು. ೧-೧೭). ೨. ಚಂದ್ರಕಾಂತಶಿಲೆ; ಶಶಿಕಾಂತ: " ಹಿಮಗು ಚಂದ್ರಕಾಂತಂ" (ಮಂಗರಾ. ೩೦-೭). ೩. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: ಶಶಿಯಿಂದ (ಹಿಮಗು ಹಿಮಕರ) ಶಶಾಂಕ ಸೋಮಂ . . . ರಸೆ ಧರೆ ಇಳೆ ರೂಪವೈಕಮೊಂದಱ ನಾಮಂ (ವ್ಯವಹಾ. ೯-೧). [ಸಂ.]

**ಹಿಮಗೃಹ** (ನಾ). ತಂಪಾದ ಮನೆ; ಶೈತ್ಯಾಲಯ: ಹಿಮಗೃಹಮಂ ವಿರಚಿಸುವುದ್ಯಮದಿಂ . . . ಚಿತ್ರಕೋದ್ಯಾನಮನಾಗಳ್ ಪೋಗಿ ಪೊಕ್ಕೆನತ್ಯಾತುರದಿಂ (ಕುಸುಮಾ. ೧೩-೪೩); ಎಲ್ಲಿ ಉಪವನ ವರಸರೋವರವೆಲ್ಲಿ ಕೇಳೀಶೈಲ ಹಿಮಗೃಹ . . . ಅಲ್ಲಿಗಲ್ಲಿಗೆ ಹರಿದು ಮೌರುತಿ ವಲ್ಲಭೆಯ ರಮಿಸಿದನು (ಕುಮ್ಯಾಅ. ೯-೨೪). [ಸಂ.]

**ಹಿಮಘರ್ಮ** (ನಾ). ಶೀತದಿಂದ ಬರುವ ಜ್ವರ; ಚಳಿಜ್ವರ: "ಹಿಮಘರ್ಮಮೆನೆ ಶೀತಜ್ವರಂ" (ಮಂಗರಾ. ೧೧೪-೪). [ಸಂ.]

**ಹಿಮಘೃಷ್ಟಿಶೇಖರ** (ನಾ). ಚಂದ್ರನನ್ನು ಮುಡಿಯಲ್ಲಿ ಧರಿಸಿದವನು; ಶಿವ: ಹಿಮಘೃಷ್ಟಿಶೇಖರನೆನ್ನ ನೇಮವನೆಂತು ತಪ್ಪಿಸುವ (ಬಸಪು. ೫೩-೧೫). [ಸಂ.]

**ಹಿಮಚೂರ್ಣ** (ನಾ). ಕರ್ಪೂರದ ಪುಡಿ: ಅಸುವೆಯ ಕಲ್ಗಳಂ ತೊಳೆದು ಚಂದನಮಂ ಪನಿನೀರ್ಗಳಿಂದೆ ಚಾರಿಸಿ ಹಿಮಚೂರ್ಣಮಂ ತಳಿದು (ಗಿರಿಕ. ೨-೮೯). [ಸಂ.]

**ಹಿಮಜಲ** (ನಾ). ತಂಪಾದ ನೀರು; ತಣ್ಣೀರು: ಹಿಮಜಲದಿ ಕರವರಣಾಗ್ರಮುಖಪ್ರಕ್ಷಾಲನಂಗಳಂ ಮಾಡಿ . . . ಪಥಶ್ರಮಮಂ ಕಳೆದು ನೃಪಾಲತನಯಲಲಾಮಂ (ದಶಕು. ೬-೧೫). [ಸಂ.]

**ಹಿಮತಾಂಬೂಲ** (ನಾ). ಕರ್ಪೂರಮಿಶ್ರಿತವಾದ ತಾಂಬೂಲ: ಹಿಮತಾಂಬೂಲೋರುರಾಗಧರಮದ್ಯಧನಿತಂಬಾಂಬರಂ . . . ಚಂದನಾಪಾಂಡಿಮಗಾತ್ರಂ ಗ್ರೀಷ್ಮ ಸಾಯಂಸಮಯದೊಳೆಸೆದತ್ತಂದು ಬಾಲಾಕಲಾಪಂ (ಚಂದ್ರಪು. ೯-೮೪); ಹಿಮತಾಂಬೂಲಮನಾಗಳಂತೆ ಕೆಲದೊಳ್ ತಾಂ ನಿಂದು ನೀಡುತ್ತುಂ (ಕುಸುಮಾ. ೧೦-೧೦೭). [ಸಂ.]

**ಹಿಮದೀಧಿತಿ** (ನಾ). ಚಂದ್ರನ ಕಾಂತಿ; ಬೆಳುದಿಂಗಳು: ಇದು ಕೊರಲಿಂತಿದಾರಮಿದು ಭೂಷ್ಯಮಿದರ್ಕಿದು ಭೂಷಣಂ ದಲೆಂಬುದನೆನವೇಡಲಂಕರಣಕಾರಣಮಾ ರಮಣಂ ಕೃತಾರ್ಥಮೆಂಬುದು ದೊರೆವೆತ್ತುಮಾ ವಿತತಹಾರಮಧಃಕೃತತಾರಕಾಂತಿ ಪೋಲ್ದುದು ಖಚರಾನನಕ್ಕೆ ಹಿಮದೀಧಿತಿಯೆಂಬುದನುಂಟುಮಾಡುಗುಂ (ಶಾಂತಿಪು. ३-೪೦). [ಸಂ.]

**ಹಿಮದ್ಯುತಿ** (ನಾ). ಚಂದ್ರನ ಬೆಳಕು, –ಕಾಂತಿ: ಒಳಿಯೊಳಿರ್ದ ಮಹೀಭೃನ್ಮೌಳಿಯೊಳೆಸೆದಾನತಾರಿ ಸೊಗಯಿಸುಗುಂ ತಾರಾಳಿಯೊಳೆಸೆವ ಹಿಮದ್ಯುತಿಮಾಳೆಪೊಲ್ (ಶಾಂತಿಪು. ೨-೪೪). [ಸಂ.]

**ಹಿಮಧಾಮ** (ನಾ). ತಂಪಾದ ಕಿರಣಗಳಿಗೆ ಆಶ್ರಯನಾದವನು; ಚಂದ್ರ: ಹಿಮಧಾಮಂ ನಿಲೆ ಜೀವ ವರ್ಜಿತ ಪರತ್ರಿಂಶಾಂಶದೊಳ್ . . . ಶುದ್ಧಾತ್ಮನಾ ಮಾನವಂ (ಜಾತತಿ. ४-८). [ಸಂ.]

**ಹಿಮನಗ** (ನಾ). ೧. ಮಂಜು ಆವರಿಸಿದ ಪರ್ವತ; ಹಿಮಾಲಯ: ಹಿಮನಗದಂತೆ ಮೇಣದು ಸದಾ ಮಹಿಮಾನ್ವಿತಂ (ಶಬಶಂ. ೨-೩೫). ೨. ಹಿಮವಂತ. [ಸಂ.]

**ಹಿಮನಗಸುತೇಶ** (ನಾ). ಪರ್ವತರಾಜನ ಮಗಳಾದ ಪಾರ್ವತಿಯ ವಲ್ಲಭ; ಶಿವ: ಮುಗುಳುನಗೆ ಮೊಗದೊಳು ಮೊಳೆಯೆ ಹಿಮನಗಸುತೇಶನು ಮದಿಸಿದಾತನ ಬಗೆಯನಱಿದು (ಬಸಪು. ೨೪-೫೨). [ಸಂ.]

**ಹಿಮನಗಾತ್ಮಜೆ** (ನಾ). = ಹಿಮಗಿರಿನಂದನೆ: ಪ್ರಥಮರಾರೋ ಇವರೊಳಗೆ ಮದ್ರಮಣನಾವನೊಯೆನುತ ತಿಳಿಯದೆ ಹಿಮನಗಾತ್ಮಜೆ ನಿಂದಡೆ (ಬಸಪು. ೮-೩೦). [ಸಂ. ಹಿಮನಗಾತ್ಮಜಾ]

**ಹಿಮನದಿ** (ನಾ). ಮಂಜುಗಡ್ಡೆಗಳಿಂದ ಕೂಡಿದ ನದಿ; ನೀರ್ಗಲ್ಲ ನದಿ: ಶೀತದೇಶಗಳಲ್ಲಿ ಹಿಮನದಿ ಸಮುದ್ರಮಟ್ಟಕ್ಕಿಳಿಯುತ್ತದೆ (ಭೂವಿವ. ೧೧೫); ಹಿಮನದಿಗಳಷ್ಟು ಕೊರೆಯುವ ಶಕ್ತಿ ಇನ್ನಾವುದಕ್ಕೂ ಇಲ್ಲ (ಬಾಲಪ್ರ. I. ೭೭). [ಸಂ. ಹಿಮನದೀ]

**ಹಿಮಪವನ** (ನಾ). ತಂಪಾದ ಗಾಳಿ; ಶೀತಲವಾದ ಗಾಳಿ: ರೈವೃಷ್ಟಿ ಕುಸುಮ ವರ್ಷಂ ದೇವರಹೋದಾನಘೋಷಣಂ ಹಿಮಪವನಂ ದೇವಾನಕರವಮೊದವೆ ನೃಪಾವಾಸದೊಳೊಗೆದುದಿಂತು ಪಂಚಾಶ್ಚರ್ಯಂ (ಮಲ್ಲಿಪು. ೧೪-೧೧). [ಸಂ.]

**ಹಿಮಪಿಕ** (ನಾ). ೧. ಚಳಿಗಾಲದ ಕೋಗಿಲೆ. ೨. (ಆಲಂ) ಸಂತೋಷದಿಂದಿರದ ಕೋಗಿಲೆ; ದುಗುಡದಿಂದ ಕೂಡಿದ ಕೋಗಿಲೆ: ಬೆಳಗನುಳಿದಂತಿರುಳನಗಲಿದ ಕಳೆಯ ಕುಮುದಿನಿಯಂತೆ . . . ಹಿಮಪಿಕದಂತೆಯೆಸೆದಿರಲಾಗ ಕೌಸಲ್ಯೆ (ಪಿರಾಮಾ. ೨೭-೩೯). [ಸಂ.]

**ಹಿಮಪ್ರಭ** (ನಾ). ಮಂಕಾದ ಕಾಂತಿಯಿಂದ ಕೂಡಿದವನು; ಚಂದ್ರ: ಸೆಡೆಯೆ ಹಿಮಪ್ರಭಂ ನಿಜಯಶಃಪ್ರಭೆಯಿಂದಿನನಂಶುಮಾಲೆ ಕೀಳ್ಪಡೆ . . . ರಾಹು ತನ್ನ ಹರಿನೀಳವಿಮಾನಮನೇಱುವಂತಿರಾಗಡೆ ಕಡುಕೆಯ್ದು ಪುಷ್ಪಕವಿಮಾನಮನೇಱಿದ ನಿಂದ್ರವಿದ್ವಿಷಂ (ಪಂಪರಾಮಾ. ೯-೭೪). [ಸಂ.]

**ಹಿಮಭಾನು** (ನಾ). ಚಂದ್ರ: ವೃಜಿನಕಂಜಾತಸಂಜಾತಹಿಮಭಾನುವಂ ಭವವನಕೃಶಾನುವಂ ಭಜಕಸುರಧೇನುವಂ ಚಿದ್ರತ್ನಸಾನುವಂ ಶಂಕರನ ಸೂನುವಂ ನಾ ನುತಿಸುವೆಂ (ಉದ್ಭಟ. ३-೫); ಭಾನುವಿಲ್ಲದ ದಿವಸಮುಂ ಹಿಮಭಾನುವಿಲ್ಲದ ರಾತ್ರೆಯುಂ ಸನ್ಮಾನವಿಲ್ಲದ ನಂಟನುಂ . . . ಸೂನೃತವಿಲ್ಲದಾಲಾಪ (ಬಸಪು. ३೭-३೦). [ಸಂ.]

**ಹಿಮಮಣಿ** (ನಾ). ಮಂಜಿನ ಹನಿ; ಇಬ್ಬನಿ: ಗಹಗಹಿಸಿ ಬೀರಿತು ಪಸುರ್ನಗೆಯ ವೀಚಿಯಂ, ಹಿಮಮಣಿಮರೀಚಿಗಳ ದಂತಪಂಕ್ತಿಯ ಕಾಂತಿ ದೆಸೆದೆಸೆಗೆಸೆಯೆ (ಚಿತ್ರಾಂಗ. ೫೦-೧೩೭೦). [ಸಂ.]

**ಹಿಮರಶ್ಮಿ** (ನಾ). ೧. ತಂಪಾದ ಕಿರಣ: ಜಗಕೆಲ್ಲ ತಂಪನೆಸಗುವ ಮೃಗಲಾಂಛನನಕಟ ತನ್ನ ಹಿಮರಶ್ಮಿಗಳಿಂ . . . ಅಗಲಿಕೆಯಾಂತೆನ್ನ ಸುಡುವನೇಗೈದಪೆನಾಂ (ಶಾಂತಿಪು.೩೨ ಅಡಿಟ). ೨. ತಂಪಾದ ಕಿರಣಗಳನ್ನು ಉಳ್ಳವನು; ಚಂದ್ರ: ಹಿಮರಶ್ಮಿ ರೋಹಿಣೀ ಕುಂಕುಮಮಸೃಣೋಲ್ಲಣರಸಂ ನಿಜಾಕೃತಿಯೊಳ್ ಸಂಕ್ರಮಿಸಿ ದೊಡದನಮರಾಪಗೆಯ ಮಡುವಿನೊಳ್ ಕರ್ಚಿದಂತೆ ಕೆಂಪಂ ಬಿಸುಟಂ (ಶಾಂತಿಪು.೮-೭೨). [ಸಂ.]

**ಹಿಮರುಕ್ಸುತ್ರ** (ನಾ). ಚಂದ್ರನ ಮಗ; ಬುಧ: ಹಿಮರುಕ್ಸುತ್ರಂ ಷಡಾಯ ವ್ಯಯ ನವದಶಪಂಚತ್ರಿಗೇಹಂಗಳೊಳ್ . . . ಮಾಬ್ಕುಮೊಳ್ಪಂ (ಜಾತಿ.೧೦-೮). [ಸಂ.]

**ಹಿಮರುಗ್ಬಿಂಬ** (ನಾ).= ಹಿಮಕರಬಿಂಬ: ಹಿಮರುಗ್ಬಿಂಬಕಳಂಕಪಂಕಮನದಂ ಪ್ರಕ್ಷಾಳಿಸಲ್ಕೆಂದು . . . ವಿಳಸತ್ಪೀಯೂಷಮಂ ತಂದು ತನ್ನ ಮನಃಪ್ರೇಮದಿನಿಲ್ಲಿ ಪಂಕಜಭವಂ ತೀವಿಟ್ಟನೋ ತಾನೆನಲ್ ಕಮನೀಯಂಬಿಡಿದಿರ್ದುದಾ ಕೊಳಂ (ಕುಸುಮಾ. ೧೧-೧೫೨). [ಸಂ.]

**ಹಿಮರುಗ್ಮೌಲಿ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದವನು; ಚಂದ್ರಶೇಖರ; ಶಿವ: ತ್ರ್ಯಗ್ಮಾಂಸಾಸ್ಥಿಮುಖಾವಯವಮುಂ ಹಿಮರುಗ್ಮೌಲಿಗೆ ಧೂಪಾಮೋದಂಗುಡೆ (ಉದ್ಭದೇ. ೩-೬೧). [ಸಂ.]

**ಹಿಮರುಚಿ** (ನಾ). ತಂಪಾದ ಕಿರಣಗಳಿಂದ ಕೂಡಿದವನು; ಚಂದ್ರ: ಹಿಮರುಚಿ ಕುಂದೆಕುಂದೆ ನೆರೆದೊಪ್ಪುವ ಚಂದ್ರಿಕೆ ಕುಂದುವಂತೆ (ಶಾಂತಿಪು.೭-೭೮); ಹಿಮರುಚಿ ತಾನಗಲ್ದಿರದೆ ಪೊಗೆ (ಕುಸುಮಾ.೧೦-೮೦). [ಸಂ.]

**ಹಿಮರುಚಿಗ್ರಾವ** (ನಾ). ಚಂದ್ರಕಾಂತಶಿಲೆ; ಶಶಿಕಾಂತ: ಪನಿಯಂ ಸೂಸುತ್ತ ದಿಂಬಾದುದಾ ಹಿಮರೋಚಿಷ್ಕರಪಾತದಿಂ ಹಿಮರುಚಿಗ್ರಾವಸ್ಫುರತ್ಪುತ್ರಿಕಾಂಗಮ ತಾನೊಲ್ದೊಸರ್ದಿಕ್ಕುವಂತೆ ವಿಳಸನ್ಮುಕ್ತಾಚ್ಛವಾರ್ಬಿಂದುವಂ (ರಾಜಶೇ. ೧೦-೮೧). [ಸಂ.]

**ಹಿಮರೋಚಿ** (ನಾ).= ಹಿಮರುಚಿ: ಪ್ರಾಚೀಪರ್ಯಂತರ ಹಿಮರೋಚಿಯವೋಲ್ ತಾಯ ಕೆಲದೊಳಿರ್ದಖಿಳಜಗಲ್ಲೋಚನನಂ ನೀಳೋತ್ಪಲಲೋಚನೆ ಕರಮೊಸೆದಳಾ ಚಕೋರಾಂಗನೆವೊಲ್ (ವರ್ಧಮಾ.೧೨-೭); ಪೊಗಳ್ವುದು ಜನಂ ವಿಬುಧೋತ್ಕರ ಕೈರವಪ್ರಬೋಧನಹಿಮರೋಚಿಯಂ ನೆಗರ್ದ್ದ ಬೂಚಿಯಂ (ಎಕ.II, ೧೨೭-೨೮; 1113). [ಸಂ. ಹಿಮರೋಚಿಸ್]

**ಹಿಮರ್ತು** (ನಾ). ಚಳಿಗಾಲ; ಹೇಮಂತಋತು: ಕೋಕಿಲಗಲಂ ನುಣ್ಪೇಱೆ . . . ಹಿಮರ್ತುವಾಱೆ ತೃಣಸಂದೋಹಂ ಕರಂ ಬೀಱೆ ನಿರ್ಮಲಚಿತ್ತಂ ಮಿಗೆ ತೋಱೆ ಬಂದುದು ವಸಂತಂ (ದಶಾವ. ೬-೧೭). [ಹಿಮ + ಋತು]

**ಹಿಮವಂತ** (ನಾ).೧. ಮಂಜನ್ನು ಹೊಂದಿರುವುದು; ಇಬ್ಬನಿಯಿಂದ ಕೂಡಿದುದು. ೨. ಹಿಮಾಲಯಪರ್ವತ: ಭಿಕ್ಷುಗಳು ಬಹುವಾಗಿ ಹಿಮವಂತಕ್ಕೇ ಹೋಗುವರು (ಬುದ್ಧಪ. ಮಿಲಿಂದ. ೨೦). ೩. ಹಿಮಾಲಯಪರ್ವತದ ಅಭಿಮಾನ ದೇವತೆ; ಪರ್ವತರಾಜ: ಸಪ್ತಋಷಿಗಳು ಅಲ್ಲಿಗೆ ಬರಲು, ಬ್ರಹ್ಮದೇವನು ಅವರನ್ನು ಹಿಮವಂತನ ಬಳಿಗೆ ಕಳಿಸಿದನು (ತುಳಸೀ. ೩೦). [ಸಂ. ಹಿಮವತ್]

**ಹಿಮವತ್ಕಾಳ** (ನಾ).ಚಳಿಗಾಲ; ಮಾಘಮಾಸ: ಹಿಮವತ್ಕಾಳದೊಳಾ ವಿಶಾಳ ಗುಣನತ್ಕಾನಂದದಿಂ ಬೆಳ್ಪವಾಸಮನುದ್ದಾಮನಿರಲ್ (ನೇಮಿಪು. ೨-೬೪). [ಸಂ. ಹಿಮವತ್ಕಾಲ]

**ಹಿಮವತ್ಕುತ್ಕೀಲ** (ನಾ). ಹಿಮಾಲಯಪರ್ವತ; ಹಿಮಾಚಲ: ಹಿಮವತ್ಕುತ್ಕೀಲ ಲೀಲಾವನಪರಿಸರರಮ್ಯೋಪಕಂಠಗಳೊಳ್ಪಿಂ ಕ್ರೀಡಿಸುತುತ್ತಮ ಸೌಖ್ಯಾಧಾರನಾದಂ (ಆದಿಪು. ೨-೭೮). [ಸಂ.]

**ಹಿಮವತ್ತಟ** (ನಾ). ಹಿಮಾಲಯಪರ್ವತದ ಸುತ್ತುಮುತ್ತಿನ ಪ್ರದೇಶ: ಷಟ್ಖಂಡಭೂವಲ್ಲಭನುಂ ಹಿಮವತ್ತಟಂಬಿಡಿದು ಮೂಡಮೊಗದೆ ಪಯಣಂಬರೆ (ಶಾಂತಿಪು. ೧೧-೫೪ ವ). [ಸಂ.]

**ಹಿಮವತ್ಪರ್ವತ** (ನಾ). ಹಿಮಾಲಯಪರ್ವತ; ಹಿಮಾಚಲ: ಭರದೆ ಹಿಮವತ್ಪ ರ್ವತಕೆ ಮದನನೈತರಲ್ (ಲಶಿಚಂ. ೧೪-೪೩). [ಸಂ.]

**ಹಿಮವತ್ಸುತೆ** (ನಾ). ಪರ್ವತರಾಜನ ಮಗಳು; ಗಿರಿಜೆ: "ಉಮೆ ಪಾರ್ವತಿ ಕಾತ್ಯಾಯನಿ ಹಿಮವತ್ಸುತೆ . . . ಮಹೇಶ್ವರಿ ಕಾಳಿಯೆಂಬಿವಂಬಿಕೆಯ ಪೆಸರ್" (ವಸ್ತುಕೋ. ೩-೧೭). [ಸಂ. ಹಿಮವತ್ಸುತಾ]

**ಹಿಮವದ್ಗಿರಿ** (ನಾ).= ಹಿಮವತ್ಪರ್ವತ: ಹಿಮವದ್ಗಿರಿಕಟಕದಿನೊಗೆವಮರಸರಿತ್ ಸ್ರೋತವೆಂಬ ಮಾತಂ ಪಡೆದೇಂ ಹಿಮಗೌರಹಾರಮೆಸೆದುದೊ ಹಿಮಶೈಲಶಿಲಾವಿಶಾಲ ವಕ್ಷಸ್ಥಳದೊಳ್ (ಆದಿಪು. ೪-೩೮). [ಸಂ.]

**ಹಿಮವನ್ನಗ** (ನಾ).೧. = ಹಿಮವತ್ಪರ್ವತ: ಹಿಮವತ್ಸಾರತೆಯಿಂಬಂ ಹಿಮಮಂ ನೃಪನಱೆದನವನಿಪತಿಸಾರತೆಯಂ ಹಿಮವನ್ನಗಮಱೆದುದದೇನಮೇಯಸಾರರೊ ಹಿಮಾದ್ರಿಯುಂ ಭೂಪತಿಯುಂ (ಶಾಂತಿಪು. ೧೧-೫೯). ೨. = ಹಿಮವಂತ ೩. [ಸಂ.]

**ಹಿಮವನ್ನಗಜೆ** (ನಾ). ಪರ್ವತರಾಜನ ಮಗಳು; ಗಿರಿಜೆ: ಭೋಗೋತ್ಪನ್ನ ನಾನಾ ವಸ್ತುಗಳನಭಿಮತಫಲಾದಿಗಳ ಮುನ್ನವೊಡನೊಡನೊದವಿಸುತ ಹಿಮವನ್ನಗಜೆಯಿರಲುಂ (ಬಸವು. ೮-೪೦). [ಸಂ. ಹಿಮವನ್ನಗಜಾ]

**ಹಿಮವರ್ಷ** (ನಾ). ಇಬ್ಬನಿಯ ಸುರಿತ: ಹಿಮವರ್ಷಬಿಂದುಗಳ್ ಸಂಕ್ರಮಿಸಿರೆ ವನತರುನಿಕಾಯದೊಳ್ ನವಮುಕುಳೌಘಮನಾಂತ ಸುರಭಿವಾತಂ ಭ್ರಮರಾಳಿಗೆ ಪರಿಮಳಾನುಮಿತಮಾಯ್ತೆತ್ತಂ (ಜಗವಿ. ೧೪-೮). [ಸಂ.]

**ಹಿಮವಾರವಾಣ** (ನಾ). ಮಂಜನ್ನೇ ಕವಚವಾಗಿ ಉಳ್ಳುದು; ಹಿಮಾಲಯ ಪರ್ವತ: ಪ್ರಕಟಶ್ರೀಹಿಮವಾರವಾಣವಿಶದಂ ಗಂಗಾಂಶುಕನ್ಯಸ್ತಮಸ್ತಕನಗ್ರಸ್ಥನಮೇರು ಶೇಖರಂ (ಶಾಂತಿಪು. ೧೧-೬೦). [ಸಂ.]

**ಹಿಮವಾರಿ** (ನಾ).೧. ಮಂಜಿನ ನೀರು. ೨. ಅನೇಕ ವಿಧವಾದ ಹೂವುಗಳಿಂದ ತೆಗೆದ ಸಾರ; ಪನ್ನೀರು: "ಹಿಮವಾರಿ ಪನ್ನೀರೆನಿಕ್ಕುಂ" (ಮಂಗರಾ.೯೯-೨೨). [ಸಂ.]

**ಹಿಮವಾಲುಕ** (ನಾ). ಕರ್ಪೂರದ ಪುಡಿ: "ಹಿಮವಾಲು [ಪಾಠಾಂ. ಳು] ಕಂ ಚೀನಿ ತುಹಿನಂ ಪನ್ನೆಯಕ್ಕು"(ಮಂಗರಾ. ೯೯-೨೨); ಸುಚಂದನ ಹಿಮವಾಲುಕಂ ಕಸ್ತೂರಿಗಳ ಪುಡಿಯಿಂದಂಗಜನಂಗವಿಭೂತಿಯ ತೊಡಕೊಂಡವನಲ್ಲ (ಭಕ್ತಿಸ. II, ೨೦-೨). [ಸಂ.]

**ಹಿಮವಿಭವ** (ನಾ). ಅಧಿಕ ಚಳಿಯಿಂದ ಕೂಡಿದುದು: ಹಿಮವಿಭವಂ ಪ್ರತೀತಶಿಶಿರಂ ಸಮಯಂ ಸಮಯಜ್ಞನಂದದಿಂದಮೆ ಪೆಱಪಿಂಗಿದತ್ತು (ಪಾರ್ಶ್ವಪು. ೮-೧೧೭). [ಸಂ.]

**ಹಿಮವೆಟ್ಟು** (ನಾ). ಮಂಜಿನಿಂದ ಕೂಡಿದ ಬೆಟ್ಟ; ಹಿಮಾಲಯ: ನಡೆಗೊಂಡು ಹಿಮವೆಟ್ಟುವಂ ಕಂಡ ಮನ್ಮಥವೀರನಱಿವವರ ಚರಣಾಂಬುಜಕ್ಕೆ ಶರಣು (ಲಶಿಚಂ. ೧೪-೪೧). [ಹಿಮ + ಬೆಟ್ಟು]

**ಹಿಮಶಿಖರಿ** (ನಾ). ಮಂಜಿನಿಂದ ಕೂಡಿದ ತುದಿ ಅಥವಾ ಶಿಖರವನ್ನುಳ್ಳುದು; ಹಿಮಾಲಯಪರ್ವತ: ಅವಱೊಳುತ್ತರಶ್ರೇಣಿಯೊಳುದಗ್ರಹಿಮಶಿಖರಿಶೇಖರಶಾರದ ನೀರದಾಕಾರ ಸುಧಾಧವಲಿತೋತ್ತುಂಗಪ್ರಾಸಾದಕೂಟಕೋಟಿಸಂಕೀರ್ಣಮುಂ . . . ಆಗಿ (ಆದಿಪು. ೧-೭೦ ವ). [ಸಂ. ಹಿಮಶಿಖರಿನ್]

**ಹಿಮಶ್ಶೈಲ, ಹಿಮಶ್ಶೈಳ** (ನಾ). ಮಂಜಿನಿಂದ ಕೂಡಿದ ಪರ್ವತ; ಹಿಮಾಚಲ: ಹಿಮಶ್ಶೈಲಾಗ್ರ ಸರಸ್ಸರೋರುಹರಜಃಪಿಂಗಾಂಗೆಯಂ . . . ನೋಡಿ ನಾಡೆ ಮನಂಗೊಂಡ ನಿಳೇಶ್ವರಂ (ಆದಿಪು. ೧೧-೫೪); ಹಿಮಶ್ಶೈಲಪ್ರಮುಖಂಗಳಾಱು ಕುಲಶೈಲಗಳ್ಪಿಯದ್ವಾಹಿನೀ ಪ್ರಮುಖಂಗಳ್ ಪದಿನಾಲ್ಕು ಗೋತ್ರನದಿಗಳ್ . . . ನಿಜನಾನಾವರ್ಣದಿಂ ಮುತ್ತೆ ಚಿತ್ತಮನೇಂ ಚಿತ್ತಜ ಚಿತ್ರಶಾಲೆಯೆನೆ ಜಂಬೂದ್ವೀಪಮಿಂಬಾದುದೋ (ಮಲ್ಲಿಪು. ೧-೬೬). **ಹಿಮಶ್ಶೈಳ:** ಹಿಮಶ್ಶೈಳ[ಪಾಠಾಂ. ಲ]ದೊಳಂ ಜಳಧಿಯೊಳಮೆಂತಭಿನ್ನಾಂಗಿ ಗಂಗೆ ಸಂಗತೆ ಖಚರೋತ್ತಮನೊಳಮಾ ವಿದ್ಯಾಧರಕುಮಾರನೊಳಮಂತೆ ಲಕ್ಷ್ಮಿ ಸಂಗತೆಯಾದಳ್ (ಆದಿಪು . ೧-೭೭). [ಸಂ.]

**ಹಿಮಶ್ಶೈಲೇಂದ್ರ** (ನಾ). ಮಂಜಿನಿಂದ ಕೂಡಿದ ಪರ್ವತಗಳ ಒಡೆಯ; ಹಿಮಾಚಲ: ಹಿಮಶ್ಶೈಲೇಂದ್ರಮೆಱಂಕೆಯಂ ತಳೆದು ಬಂದಾಕಾಶದೊಳ್ ನೋಡೆ ಮೇರುಮಹಾಶೈಲಮನಾಂತು ಪಾಱಿದಪುದೆಂಬನ್ನಂ . . . ಅಬ್ಜಭವಹಂಸಂ ಪಾಱಿತಾಬ್ದಾಧ್ವದೊಳ್ (ಜಗವಿ. ೧-೪೦). [ಸಂ.]

**ಹಿಮಶ್ಶೈಳ** 'ಹಿಮಶ್ಶೈಲ' ನೋ.

**ಹಿಮಸಮಯ** (ನಾ). ಚಳಿಗಾಲ; ಹೇಮಂತಋತು: ಹಿಮಸಮಯದೊಳಾ ದೀಪಂ ಹಿಮದಿಂದೆಲುವಡೆಯ ಬಗೆಯ ಬಕ್ಕಂಬಯಲೊಳ್ ಹಿಮನಿಧಿಯೆಮನಿಧಿ XXX ಧೈರ್ಯಮಹಾಂಬುಧಿ ನೆಲಸಿ ಬೆಳ್ಳವಾಸದೊಳಿರ್ದಂ (ಅಜಪು. ೧೨-೩); ವನದೇವತೆ ಹಿಮ ಸಮಯಕ್ಕನುನಯದಿಂ ಸೇನೆದಳಿದ ಕಳಮಾಕ್ಷತಮಂ ನೆನೆಯಿಸಿದುವು ನೀಳ್ಪಿನ ಬೆಳ್ಪಿನ ಜಾದಿಯ ನನೆಗಳಳಿಕುಲೋಚ್ಚಲಿತಂಗಳ್ (ಪುಷ್ಪಪು. ೬-೪೩). [ಸಂ.]

**ಹಿಮಸಮಯಪತಿ** (ನಾ). ಚಳಿಗಾಲದ ಒಡೆಯ; ಚಂದ್ರ: ಹಿಮಸಮಯಪತಿಯ ರೂಪಂ ಕುಮುದಿನಿ ನೋಡಲ್ಕೆ ಪಲವು ಕಣ್ಣಡೆದಂತೇಂ ರಮಣೀಯಮಾಯ್ತೊ ವಿದಳಿತ ಕುಮುದಂಗಳ ಮಿಸುಗುವೆಸಟಿ ಮಸಕಂ ಕೊಳದೊಳ್ (ಪುಷ್ಪಪು. ೬-೪೪). IP ಋತುಗಳಿಗೆ ಅಧಿಪತಿಗಳನ್ನು ಎಲ್ಲಿಯೂ ಹೇಳಿರದಿದ್ದರೂ ಶೀತಕ್ಕೆ ಚಂದ್ರನನ್ನೂ ಉಷ್ಣಕ್ಕೆ ಸೂರ್ಯನನ್ನೂ ಹೋಲಿಸಿ ಹೇಳುವುದರ ಅನುರೂಪತೆಯ ಮೇಲೆ ಕವಿ ಈ ಶಬ್ದವನ್ನು ಬಳಸಿರಬಹುದು. [ಸಂ.]

**ಹಿಮಾಂಬು** (ನಾ). ತಂಪಾದ ನೀರು; ಹಿಮಜಲ: ಕೆಳದಿಯ ಮೇಲೆ ಹಿಮಾಂಬುವ ತುಳುಂಕಲೆಂದೊರ್ವಳಟ್ಟೆ ಮುಳುಗಿರೆ ಕೊಳದೊಳ್ ಜಳರುಹಮನವಳ ಮೊಗಮೆಂದೆಳಸಿ ಕರಂ ಪೊಯಿದಳಂಬುವಂ ಸಂಭ್ರಮದಿಂ (ರಾಜಶೇ. ೧೦-೮೩). [ಸಂ.]

**ಹಿಮಾಂಶು** (ನಾ).೧. ತಂಪಾದ ಕಿರಣ: ಹಿಮಕರನ ಹಿಮಾಂಶುಗಳುತ್ತಮಜಾತಿಗ ಮಂತ್ಕಜಾತಿಗಂ ತಣ್ಪಂದಂ ಸಮನಪ್ಪ ತೆಱದಿ ನರನುಂ ಸಮನಾಗಲೇವೇಟ್ಕುಮಾವ ಜಾತಿಗಮೆಂತುಂ (ಸಮಪ. ೧೫-೨). ೨. ತಂಪಾದ ಕಿರಣಗಳಿಂದ ಕೂಡಿದವನು; ಚಂದ್ರ: ಕೃಶಶಾಪಾನ್ವಿತನಾ ಹಿಮಾಂಶು ಗುರುವಿಂ ಗೋತ್ರಾರಿಯನ್ಕಾಂಗನಾರತಿಯಿಂ . . . ದಶಕಂಠನಾ ಹರಿಶರಕ್ಕೀಡಾದಂ (ಸೋಮೇಶ. ೩೯); ಇನನುದಯಿಸಲಿ ಪಶ್ಚಿಮಾದ್ರಿಯೊಳ ನಲನೊಮ್ಮೆ ಹಿಮಾಂಶುವಾಗಲಿ . . . ಸಜ್ಜನರುಗಳು ನುಡಿದೆರಡನಾಡರು ಮನವಚನ ಕಾಯದಲಿ (ಕುಮ್ಮಾಉ. ೩-೧೨೬). ೩. ಕರ್ಪೂರ. [ಸಂ.]

**ಹಿಮಾಂಶುಗೃಹ** (ನಾ). [ಜ್ಯೋತಿ]ಚಂದ್ರನು ಅಧಿಪತಿಯಾಗಿರುವ ಸ್ಥಾನ, — ರಾಶಿ; ಕರ್ಕಾಟಕ ರಾಶಿ: ಹಿಮಾಂಶುಗೃಹದೊಳ್ ಸುರೇಜ್ಯನಿರೆ ಪುತ್ರವಿತ್ತಾಂಗನಾ ಸಮುತ್ತವಿಭವಂ ಸುಬುದ್ಧಿ ಸುಖಿ (ಜಾತತಿ. ೧೭-೨೮). [ಸಂ.]

**ಹಿಮಾಂಶುಮಂಡಲ** (ನಾ). ಚಂದ್ರನ ಬಿಂಬ, — ಆಕೃತಿ; ಚಂದ್ರಮಂಡಲ: ಉದಯಾದ್ರಿಯೊಳ್ ಪದಂಗಾಸಿದ ಪೊನ್ನ ಪುಂಜಿಯವೊಲಿರ್ದುದು ಕಣ್ಗೆ ಹಿಮಾಂಶು ಮಂಡಲಂ (ಪಂಪಭಾ. ೩-೮೧); ಆ ಹಲಗೆ ಸೋತುದು ಯುಧಿಷ್ಠಿರನೂಹೆ ಮುಱಿದುದು ಮುಂದುಗೆಟ್ಟನು ರಾಹು ಹಿಡಿದ ಹಿಮಾಂಶುಮಂಡಲದುಳಿದ ಕಳೆಯಂತೆ (ಕುಮ್ಮಾಸ. ೧೪-೨೩). [ಸಂ.]

**ಹಿಮಾಂಶುರಶ್ಮಿ** (ನಾ). ಚಂದ್ರನ ಕಿರಣ: ಹಿಮಾಂಶುರಶ್ಮಿಗಳನುಜ್ಜಳಿಸಿ ದುರ್ಘಟಜಾಂಗಣಂಗಳೊಳ್ ಪರೆದೆಸಗಿತ್ತತಿಪ್ರಮದಕಾರಣನಂದು ನಿಶಾಸಮೀರಣಂ (ಕಾದಂಪೂ. ೨೮೩). [ಸಂ.]

**ಹಿಮಾಂಶುವಂಶ** (ನಾ). ಕ್ಷತ್ರಿಯರ ಒಂದು ವಂಶ; ಚಂದ್ರನು ಮೂಲಪುರುಷ ನಾದ ಒಂದು ವಂಶ; ಚಂದ್ರವಂಶ: ಆ ವಿನೇಯನಿಕಾಯಾಂಬುಜಭಾನುವಪ್ಪ ಹಿಮಾಂಶುವಂಶಲಲಾಮಂ (ಶಾಂತಿಪು. ೧೧-೬೫ ವ). [ಸಂ.]

**ಹಿಮಾಂಶುಶೇಖರ** (ನಾ).೧. ಚಂದ್ರನನ್ನು ಮುಡಿಯಲ್ಲಿ ಧರಿಸಿದವನು; ಶಿವ. ೨. [ಛಂದ] ಗುರುವನ್ನು ಸೂಚಿಸುವ ಒಂದು ಸಂಕೇತ, — ಪದ: ಸುರಪ ಶೀತಕರಾಗ್ನಿ ಮಾರುತ ಭಾನುಯುಗ್ಮಗಣಂಗಳಿಂ ಪರದೊಳೊಪ್ಪೆ ಹಿಮಾಂಶುಶೇಖರ ನಿರ್ದು ವಿಶ್ರಮಣಂ ದಿಶಾಕರಿಯೊಳಾಗಿರೆ . . . ನಾಮದಿಂ ತರಳಂ ಕವೀಂದ್ರಜನಸ್ತುತಂ (ಛಂದೋಂಬು. ೨-೧೭೧). [ಸಂ.]

**ಹಿಮಾಗಜಾತೆ** (ನಾ). ಪರ್ವತರಾಜನ ಮಗಳು; ಪಾರ್ವತಿ: ಹಿಮಾಗಜಾತ ನಿತ್ಯಪೂತ . . . ಪಾಲಿಸೆಮ್ಮನಂಬಿಕೇ (ಹಾಲಾಸ್ಯ. ೩-೯-೨೭). [ಸಂ. ಹಿಮಾಗಜಾತಾ]

**ಹಿಮಾಚಲ, ಹಿಮಾಚಳ** (ನಾ).೧. ಮಂಜಿನಿಂದ ಕೂಡಿದ ಪರ್ವತ; ಹಿಮಾಲಯ: ಹಿಮಾಚಲಕ್ಕೆ ತೆಂಕಣದೆಸೆಯೊಳ್ಳೀಲಗಿರಿಯಿರ್ಪುದು (ಎಕ.IV, (R). ಎಳಂದೂ. ೧-೫; 1654). ೨. = ಹಿಮವಂತ ೩: 'ಹಿಮಾಚಲನಂದನೆ' ಪರಾ. **ಹಿಮಾಚಳ**: ೧. ನಳನಳಿಸುತ್ತ ಸುತ್ತಿಡಿದು ತೋರ್ಪ ಕದಂಬ ಕದಂಬದಿಂ . . . ಎತ್ತಲುಂ ತುಱುಗಿ ಪರ್ವಿದಗುರ್ವಿನ ಬಿಂಬ ಬಿಂಬದಿಂದಿಳೆಯೊಳಗೊಪ್ಪುತಿರ್ಪುದು ಹಿಮಾಚಳಂ (ಗಿರಿಕ. ೧-೫೨). [ಸಂ.]

**ಹಿಮಾಚಲನಂದನೆ** (ನಾ). ಪರ್ವತರಾಜನ ಮಗಳು; ಪಾರ್ವತಿ: ಬೆಸಸನೆ ಹಿಮಾಚಲನಂದನೆಗೆ ಶಿವನಾ ಮುನೀಂದ್ರನು ಕೇಳಲಿಂತೆಂದ (ಬಸವು. ೧-೬೨).
[ಸಂ. ಹಿಮಾಚಲನಂದನಾ]

**ಹಿಮಾಚಳ** 'ಹಿಮಾಚಲ' ನೋ.

**ಹಿಮಾದ್ರಿ** (ನಾ). ಹತ್ತುಕುಲಪರ್ವತಗಳಲ್ಲಿ ಒಂದು; ಹಿಮಾಲಯಪರ್ವತ: "ಕುಳಿರ್ವೆಟ್ಟ್ಕಿಲ್ವೆಟ್ಟುಂ ಚಳಿವೆಟ್ಟು ಹಿಮಾದ್ರಿ" (ಚತುನಿ. ೧೦); ಗಜಶೈಲ ಪಿಶಾಚಶೈಲ . . . ಹಿಮಾದ್ರಿ[ಪಾಠಾಂ. ಹೇಮವಾನ್ನು]ಗಳೆಂಬ ದಶಕುಲಪರ್ವತಂಗಳೇ ಪೂರ್ವೋಕ್ತ ಗಂಧಮಾದನಮೆಂಬ ಕೀಲಕಪರ್ವತಕ್ಕೆ ತೆಂಕಣದಿಕ್ಕಿನಲ್ಲಿಹವು (ವಿವೇಕ. ೧೭೨). [ಸಂ.]

**ಹಿಮಾನಿ** (ನಾ).೧. ಮಂಜಿನ ರಾಶಿ, — ಒಟ್ಟಿಲು: ಹಿಮಾನಿಯಿಂ ನಡುಗುತಿರ್ಪಾ ಪುಲ್ಲೆಯುಂ ಕಂಡಿಸಲ್ ಪದನೆಂದೇಟಲೊಡರ್ಚಿಯುಂ ನಿಜವಪುಸ್ಸಂಕೋಚದಿಂ ಬಿರ್ಚಲಾಱದೆ ಪಟ್ಟಿರ್ದುದು ಕೂಡೆ ಬೇಡವಡೆ ದೇಹಸ್ತಂಭವಾದಂದದಿಂ (ಜಗವಿ. ೧೪-೧೪); ಲೀಲಾವಹಾಗಧಾಭೀಲಾವನತವಿತತಿ ಬೇಲಾ ಹಿಮಾನೀಕುಕ್ಕೀಲಾತ್ಮಜಾತಾನು ಕೂಲಾ (ಉದ್ಭಟದೇ. ೫-೨). ೨. ಒಂದು ಬಗೆಯ ಸಕ್ಕರೆ. [ಸಂ. ಹಿಮಾನೀ]

**ಹಿಮಾನಿಲ, ಹಿಮಾನಿಳ** (ನಾ). ತಂಪಾದ ಗಾಳಿ; ಶೀತಲಗಾಳಿ: ಸಖಿಯೆ ಹಿಮಾನಿಲ ಶಿಖಿಯವೊಲಾದನು ಸುಖಿಯ ನಾನೀ ತೆರನಿರಲು (ಇಂಚಾಪ. ೧೫೫-೬೭). **ಹಿಮಾನಿಳ**: ಏನೆಸೆದುದೊ ರೈವೃಷ್ಟಿ ಹಿಮಾನಿಳನಳಿಮಾಳಿತಕುಸುಮವರ್ಷಂ ಸುರಭೇರೀನಾದಂ . . . ನೆಗಟೆ ನೆಗಟ್ದ ಪಂಚಾಶ್ಚರ್ಯಂ (ಪಂರಾಮಾ. ೯-೨). [ಸಂ.]

**ಹಿಮಾನಿಳ** 'ಹಿಮಾನಿಲ' ನೋ.

**ಹಿಮಾಲಯ** (ನಾ). ಮಂಜಿಗೆ ಆಶ್ರಯವಾದುದು; ಹಿಮವತ್ಪರ್ವತ: ಹಿಮಾಲಯದೊಳೆಸೆವ ರಜತಾದ್ರಿಯೊಳ್ತೇಜೋಮಯಂ ಸದಾಶಿವನಿಪ್ಪನು (ಜೈಮಿಭಾ. ೫-೩೫); ಹಿಮಾಲಯಪರ್ವತಗಳು ಪ್ರಪಂಚದ ಎಲ್ಲಾ ಪರ್ವತಗಳಲ್ಲಿಯೂ ಅತ್ಯಂತ ಉನ್ನತವಾದವುಗಳು (ಭೂಗೋಳ. ೨೪). [ಸಂ.]

**ಹಿಮೋಪಲ, ಹಿಮೋಪಳ** (ನಾ). ಚಂದ್ರಕಾಂತಶಿಲೆ: ಚೂತಮನಪ್ಪಿ ಪುಷ್ಪವತಿ ಯಾದುದು ಮಲ್ಲಿಗೆ ಶೀತಕೃತ್ಕರವ್ರಾತಮನಪ್ಪಿಯೊಪ್ಪೆ ಕರೆಗಿತ್ತು ಹಿಮೋಪಲಂ (ಗಿರಿಕ. ೪-೧೧೨). **ಹಿಮೋಪಳ**: ಹಿಮೋಪಳಮೊಸರ್ವವೊಲಿಂದುಕರಾವಳಿಗೆ ತೃಣಗ್ರಾಹಿ ನೀಳಮಣಿಯೊಸರ್ದಪುದೇ (ಚಂದ್ರಪು. ೧-೩೯). [ಸಂ.]

**ಹಿಮೋಪಳ** 'ಹಿಮೋಪಲ' ನೋ.

**ಹಿಮ್ಮಗ್ಗಲು** (ನಾ). ಹಿಂಭಾಗ; ಹಿಂಬದಿ: ಭೀಮಸೇನನನ್ನು ಕರೆಸಿ ಹಿಮ್ಮಗ್ಗಲಿನ ಕಿಡಿಕಿಯನ್ನು ಏರಿ ಹಣಿಕಿಹಾಕಲು ಹೇಳಿದರು (ಗಂಮಾಯಿ. ೨೮೨).
[ಹಿಂ (< ಪಿನ್) + ಮಗ್ಗಲು (< ಮಗ್ಗುಲ್)]

**ಹಿಮ್ಮಡ** 'ಪಿಮ್ಮಡ' ನೋ.

**ಹಿಮ್ಮಡಿ** 'ಪಿಮ್ಮಡ' ನೋ.

**ಹಿಮ್ಮಡಿಕೆ** (ನಾ). ಹಿಂದಕ್ಕೆ ಮಡಿಸಿದ ಮಡಿಕೆ, — ನಿರಿಗೆ: ಮುಂದೆ ಇಳಿಬಿಡುವ ವಸ್ತ್ರಗಳನ್ನ ಸ್ವಲ್ಪ ಹಿಂದಕ್ಕೆ ಹಿಮ್ಮಡಿಕೆ ಮಾಡಿ ಎಳೆದು . . . ಬಿಗಿಯುವುದು (ಜೋಲಿದೇ.೪೧). [ಹಿಂ (< ಪಿನ್) + ಮಡಿಕೆ]

**ಹಿಮ್ಮಡಿಗೂಟ** (ನಾ). "ಮಗ್ಗದಲ್ಲಿ ಕಾಲುಚಕ್ಕೆಗಳನ್ನು ಕಟ್ಟುವ ಗೂಟ" (ಆನಂನಾ). [ಹಿಮ್ಮಡಿ (< ಪಿಮ್ಮಡ) + ಗೂಟ (< ಗೂಂಟ)]

**ಹಿಮ್ಮಡು** 'ಪಿಮ್ಮಡ' ನೋ.

**ಹಿಮ್ಮಣಿ** 'ಹಮ್ಮಿಣಿ' ನೋ.

**ಹಿಮ್ಮಣಿಚೀಲ, ಹಿಮ್ಮಣ್ಣಿಚೀಲ** (ನಾ). ಹಣವನ್ನು ಹಾಕಿಟ್ಟುಕೊಳ್ಳಲು ಬಳಸುವ ಸಣ್ಣ ಚೀಲ; ಬಾಯಿಗೆ ಕಟ್ಟಿದ ದಾರವನ್ನು ಎಳೆಯುವುದರಿಂದ ಮುಚ್ಚಬಹುದಾದ ಹಣದ ಥೈಲಿ; ಹಮ್ಮಿಣಿ: "ಹಣ ಮೊ. ನ್ನು ತನ್ನೊಡನೆ ತೆಗೆದುಕೊಂಡು ಹೋಗುವುದಕ್ಕಾಗಿ, ತೊಗಲು, ಮೊ.ಗಳಿಂದ ಮಾಡಿದ ಸಣ್ಣ ಚೀಲ:

ಹಣದ, ದುಡ್ಡಿನ,- ಚೀಲ (ಹಿಂದೆ) ಬಾಯಿಗೆ ಕಟ್ಟಿದ ದಾರವನ್ನು ಎಳೆಯುವುದರಿಂದ ಮುಚ್ಚಬಹುದಾದದ್ದು; ಹಿಮ್ಮಣಿಚೀಲ; ಥೈಲಿ'' (Purse. ೨೦೫೨). **ಹಿಮ್ಮಣ್ಣೆಚೀಲ:** ನಾನು ಅವನ ಕೈಗೆ ನನ್ನ ಹಿಮ್ಮಣ್ಣೆಚೀಲದಿಂದ ಐದು ವರಹಗಳನ್ನು ತೆಗೆದುಕೊಟ್ಟೆ (ಚೆಂಗಾಳ್ವ. ೩೧೮). [ಹಿಮ್ಮಣಿ (< ಹಮ್ಮಿಣಿ) + ಚೀಲ]

**ಹಿಮ್ಮಣ್ಣೆ** 'ಹಮ್ಮಿಣಿ' ನೋ.

**ಹಿಮ್ಮಣ್ಣೆಚೀಲ** 'ಹಿಮ್ಮಣಿಚೀಲ' ನೋ.

**ಹಿಮ್ಮತು** 'ಹಿಮ್ಮತ್ತು₂' ನೋ.

**ಹಿಮ್ಮತ್ತು₁** (ನಾ). ಬೆಂಬಲ; ಸಹಾಯ; ''ರಕ್ಷಣೆ; ಆಶ್ರಯ'' (ಜಾನಕೋ. ೫೭.): ಹಿಮದ ಹಿಮ್ಮತ್ತಿನುರು ಬಲ್ಪಿನಿಂ ಹಿಮಕರಂ ದ್ಯುಮಣಿಯಂ ಜಡಿದಗ್ನಿಮೂಲ ಗಂದೊತ್ತಿದಂ (ಪರಶು ೧೫-೨೯). [<- ಅರ. ಹಿಂ. ಹಿಮಾಯುತ್; ಮರಾ. ಹಿಮಾಈತ್, ಹಿಮಾಯತ್, ಹಿಮಾಯತೀ]

**ಹಿಮ್ಮತ್ತು₂**, ಹಿಮ್ಮತು (ನಾ).೧. ಧೈರ್ಯ; ಸಾಹಸ: ಅದರಲ್ಲಿ ಕೆಲವು ಸೀಮೆ ಬಾಕಿ ಇದ್ದಂಥಾದ್ದನ್ನು ತಮ್ಮ ಹಿಮ್ಮತ್ತಿನಿಂದಲೇ ಸ್ವಾಧೀನ ಮಾಡಿಕೊಂಡರು (ರಾಜೇಂದ್ರ. ೫೩). ೨. ಉತ್ಸಾಹ; ಉಮೇದು: ನನ್ನ ಮೈಯಲ್ಲಿ ಅಷ್ಟು ಹಿಮ್ಮತ್ತಿತ್ತು (ಮೂರುದಾ. ೧೮೧).**ಹಿಮ್ಮತು:** ೨. ಹಿಮ್ಮತು ಬಾಳ ಹಿಡಿದಳು ಚನ್ನವ್ವ ಮೊಮ್ಮಗ್ಗ ಪಟ್ಟಗಟ್ಟಿ (ಲೋಕಗೀ. ೨೨೩). [<- ಅರ.ಹಿಂ. ಮರಾ. ಹಿಮತ್, ಹಿಮ್ಮತ್]

**ಹಿಮ್ಮರಿಕೆ** 'ಹಿಂಬರಿಕೆ' ನೋ.

**ಹಿಮ್ಮಾಲು** (ನಾ). ಹಿಂದಕ್ಕೆ ಬಾಗಿದುದು; ಹಿಮ್ಮುಖವಾದುದು.

ಹಿಮ್ಮಾಲಾಗು = ಹಿಂದಕ್ಕೆ ಸರಿ; ಹಿಮ್ಮುಖವಾಗು: ಕಾಲ ಪೈಸರಗೊಟ್ಟು ಸರಪಣಿವಿಡಿದು ಹಿಮ್ಮಾಲಾಗಿ ಪಡೆ ತೆಗೆವಾಗ ತೋಳ ಸಿಕ್ಕಿಗೆ ರಾಯ ನೀಡಿದನುಚೆ ಹೊಟ್ಟೆ ಮೇಲಾಗಿ ಕೆಡೆದರುರ್ವಿಯಾಳು (ಭರತ. ೪೯-೧೯). [ಹಿಂ (< ಪಿನ್) + ಮಾಲು₂]

**ಹಿಮ್ಮುಖ** (ನಾ).೧. ಹಿಂದೆ ಸರಿಯುವಿಕೆ; ಹಿಂದಾಗುವಿಕೆ: ಕ್ರಮವಾಗಿ ಶಾಲೆಗೆ ಬಾರದಿರುವುದು, ವೃತ್ತಿ ವಿಧಿಸಿರುವ ಕ್ರಮಾನುಸರಣೆಗೆ ಹಿಮ್ಮುಖವಾಗುವುದು - ಇವೆಲ್ಲ ಆರಂಭವಾಗುವುವು (ಶಿಕ್ಷದ. ೬೬೮): ಬೆಳಗಿನ ಜಾವ ಜ್ವರ ಹಿಮ್ಮುಖವಾಯಿತು (ಗಂಗಾಳ.೪). ೨. ಹಿಂದೆ ಸರಿದ ವ್ಯಕ್ತಿ; ಸೋತವನು: ಆಚಾರ್ಯರು ಹಿಮ್ಮುಖರಾದದ್ದನ್ನು ತಿಳಿದು ರಾಕ್ಷಸರು ದಂಡೆತ್ತಿ ಬಂದು ಅಮರಾವತಿಯಲ್ಲಿ ತಮ್ಮ ಧ್ವಜವನ್ನು ಊರಿ ಬಿಟ್ಟರು (ನೀಗಟ್ಟು. ೪೯). [ಹಿಂ (< ಪಿನ್) + ಮುಖ]

**ಹಿಮ್ಮುಡಿ** (ನಾ). (ಹಿಂಭಾಗದ) ಕೂದಲಿನ ರಾಶಿ,— ಸಮೂಹ: ''ಹಸ್ತಃ, ಪಕ್ಷಃ, ಪಾಶಃ — ಈ ೩ ಹಿಮ್ಮುಡಿ'' (ಹಲಾಯು. ೮೭-೩೭೭).

[ಹಿಂ (< ಪಿನ್) + ಮುಡಿ₂]

**ಹಿಮ್ಮುರಿ** (ಕ್ರಿ). ಹಿಂದಕ್ಕೆ ತಿರುಗು,— ಬಾಗು: ಪಿರಿದಪ್ಪ ಕೋಪದೊಳವನಾರೆನುತ ಹಿಮ್ಮುರಿದು ನೋಡಿದುದು ಬೇತಾಳ (ಶ್ರೀಪಾಲ. ೮-೪೫). [ಹಿಂ (< ಪಿನ್)+ ಮುರಿ₁]

**ಹಿಮ್ಮೆಟ್ಟಿಸು** (ಕ್ರಿ). ಹಿಂದೆ ಸರಿಯುವಂತೆ ಮಾಡು; ಹಿಂದೆ ಉಳಿಸು: ತನ್ನ ಬಲವನ್ನು ಇನ್ನೂ ಸ್ವಲ್ಪ ಹಿಮ್ಮೆಟ್ಟಿಸಿ ರಾಣಿಯ ಸೈನ್ಯವು ಮುಂದೆ ಬರಲು ಅವಕಾಶವಿತ್ತನು (ಝಾರಾಣಿ. ೪೫). [ಹಿಮ್ಮೆಟ್ಟು (< ಪಿಮ್ಮೆಟ್ಟು) + - ಇಸು₃]

**ಹಿಮ್ಮೆಟ್ಟು** 'ಪಿಮ್ಮೆಟ್ಟು' ನೋ.

**ಹಿಮ್ಮೆಯ್** 'ಪಿಮ್ಮೆಯ್' ನೋ.

**ಹಿಮ್ಮೇಣಿ** 'ಹಮ್ಮಿಣಿ' ನೋ.

**ಹಿಮ್ಮೇಳ** (ನಾ). ನೃತ್ಯ, ನಾಟಕ ಮುಂತಾದ ಕಾರ್ಯಕ್ರಮಗಳಲ್ಲಿ ಸಹಾಯಕವಾಗಿ ಹಿಂಭಾಗದಲ್ಲಿದ್ದು ಹಾಡುವವರ ಗುಂಪು,— ಗೋಷ್ಠಿ: ಸಂವಾದದ ಹಾಡುಗಳ ಎಡೆಯಲ್ಲಿ ಹಿಮ್ಮೇಳ ಹೇಳಬೇಕಾದ ಹಾಡುಗಳೂ ಇರುತ್ತವೆ (ಯಕ್ಷಬ. ೪೯): ಹಿಮ್ಮೇಳ ಇದ್ದರೆ ಮುಮ್ಮೇಳ, ಇಲ್ಲದಿದ್ದರೆ ಸಮ್ಮೇಳ (ಗಾದೆ).

ಹಿಮ್ಮೇಳದವರು = ಹಿನ್ನೆಲೆಯಲ್ಲಿ ಹಾಡುವವರು; ಹಿನ್ನೆಲೆಗಾಯಕರು: ಉಳಿದವರು ಗುಂಪಿನಲ್ಲಿ ಹಿಮ್ಮೇಳದವರಾಗಿ ಹಾಡಿ, ಕಣೆ, ಜಗ್ಗಲಿಗೆಗಳ ಇಳಿ ಹಾಗೂ ಏರುಗತ್ತಿನಲ್ಲಿ . . . ಒಟ್ಟಾಗಿ ಹೆಜ್ಜೆ ಹಾಕುವರು (ಕನ್ನಜಾ. ೩೦): ಹಿಮ್ಮೇಳದವರು ಹಾಡಿದರು (ಸವತಿ. ೨). [ಹಿಂ (< ಪಿನ್) + ಮೇಳ (= ಮೇಲ)]

**ಹಿಮ್ಮೇಳಕಾರ** (ನಾ). ನೃತ್ಯ, ನಾಟಕ ಮುಂತಾದ ಕಾರ್ಯಕ್ರಮಗಳಲ್ಲಿ ಸಹಾಯಕವಾಗಿ ಹಿಂಭಾಗದಲ್ಲಿದ್ದು ಹಾಡುವವನು; ಹಿನ್ನೆಲೆಗಾಯಕ: ರಾಸಪ್ರದರ್ಶನದ ಉದ್ದಕ್ಕೂ ಹಿಮ್ಮೇಳಕಾರರು ಸಂಗೀತವನ್ನು ಒದಗಿಸುತ್ತಾರೆ (ಭಾರದ. ೫೬೧). [ಹಿಮ್ಮೇಳ + - ಕಾರ₁ (<- ಕಾಜ)]

**ಹಿಮ್ಮೇಳಗಾನ** (ನಾ). ನೃತ್ಯ, ನಾಟಕ ಮುಂತಾದ ಕಾರ್ಯಕ್ರಮಗಳಲ್ಲಿ ಸಹಾಯಕವಾಗಿ ಹಿಂಭಾಗದಲ್ಲಿದ್ದು ಹಾಡುವ ಹಾಡು,— ಸಂಗೀತ: ಹಿಮ್ಮೇಳಗಾನಮುಕ್ಕಿದ ತೆರದಿ ತೆಕ್ಕನೆಯೆ ಮಾಧುರ್ಯ ಗಿರಿಶೃಂಗಮೆನಿಪೊಂದು ಸುಂದರಂ ಕೇಳ್ವತ್ತು ತೌರ್ಯತ್ರಿಕಂ (ಶ್ರೀರಾಮಾ. ೪೮೮-೫೭). [ಹಿಮ್ಮೇಳ + ಗಾನ₂]

**ಹಿಮ್ಮೊಗ** (ನಾ).೧. = ಹಿಮ್ಮುಖ ೧ : ಬಯಲೊಳಗೆ ಬನವಾಯ್ತು ನೆಳಲೊಳಗೆ ರೂಪಾಯ್ತು ಕಾಲ ಹಿಮ್ಮೊಗ ಹರಿದು ಗೋಕುಲವೆ ಕಣ್ಣಿಗಾಯ್ತು! (ಗೋಕುನಿ.೧-೨೦): ನನ್ನ ಪಾನಗಳ ಅಭ್ಯಾಸ ಏಕೆ ಪೂರ್ತಿ ಹಿಮ್ಮೊಗನಾಗಿತ್ತು ಎಂದು ಹಿಂದೆಯೇ ತಿಳಿಸಿದ್ದೇನೆ (ನಿಬಂಧ.II ೭೧). ೨. = ಹಿಮ್ಮುಖ ೨: ದಶಮುಖನು ಜಗುಳಿ ಹಿಮ್ಮೊಗನಾಗಲದ ಕಂಡು (ಆನಂರಾ. ೧-೧೧-೪). [ಹಿಂ (< ಪಿನ್) + ಮೊಗ]

**ಹಿಯರಿಂಗ್** (ನಾ). ಮೊಕದ್ದಮೆಯ ವಿಚಾರಣೆ: ಸದರಿ ಸಮನಿನಲ್ಲಿ ಪ್ರತಿವಾದಿಯ ಕಡೆ ಸಾಕ್ಷಿಗಳು ಯಾರಾದರೂ ಇದ್ದ ಪಕ್ಷದಲ್ಲಿ ಅವರನ್ನು ಹಿಯರಿಂಗ್ ತಾರೀಖಿನಲ್ಲಿ ಕರೆತರುವಂತೆ ನಮೂದಿಸಬೇಕು (ಗ್ರಾಮಾಕ. ೨೫). [<- ಇಂ. Hearing]

**ಹಿಯ್ಯಾಳಿ** 'ಹೀಹಾಳಿ₂' ನೋ.

**ಹಿಯ್ಯಾಳಿಕೆ** 'ಹೀಹಾಳಿಕೆ' ನೋ.

**ಹಿಯ್ಯಾಳಿಸು** 'ಹೀಹಾಳಿಸು₁' ನೋ.

**ಹಿರಣೆ** (ನಾ). ಬಲವಂತವಾಗಿ ವಸೂಲು ಮಾಡುವ ಒಂದು ಬಗೆಯ ತೆರಿಗೆ: ಕಾಣಿಕೆ, ಕಡ್ಡಾಯ, ಹಿರಣೆ ಈ ತೆರಿಗೆಗಳ ಸಂಬಂಧದಲ್ಲಿ ಜನರು ಅಸಮಾಧಾನ ಗೊಂಡಿದ್ದರು (ರೂಲೇಬಾ. ೧೮೨).

[<- ಮರಾ. ಹಿರಣೇ = ಬಲಾತ್ಕಾರದಿಂದ ಕಿತ್ತುಕೊಳ್ಳು; ಹರಣ ಮಾಡು]

**ಹಿರಣ್ಮಯಿ** (ನಾ). ಚಿನ್ನದಿಂದ ಮಾಡಿದ ಪ್ರತಿಮೆ: ''ಹರಿಣೀ, ಹಿರಣ್ಮಯಿಾ – ಈ ೨ ಹೊನ್ನ ಪ್ರತಿಮೆ'' (ಹಲಾಯು. ೨೨-೧೩೧). [ಸಂ. ಹಿರಣ್ಮಯಿಾ]

**ಹಿರಣ್ಯ** (ನಾ).೧. ಚಿನ್ನ; ಬಂಗಾರ: ವ್ರತಸಂಪನ್ನರ್ಗೆ ಕರಿತುರಗಮಣಿ ಭೂಷಣ ಹಿರಣ್ಯಭೂಮಿಕನ್ಯಾದಿವಸ್ತುಗಳಂ ಕುಡುವ ಸಮುದತ್ತಿಯುಂ (ಸುಕುಮಾ. ೬-೨೫ ವ): ಪುಣ್ಯಹೀನನ ಕೈಯಲಿದ್ದ ಹಿರಣ್ಯವೊಡಾಗಿಪ್ಪ ಪರಿಯೊಳಗಣ್ಯ ಶಿವವಾಕ್ಯತಿಯೊಳಿಹ ಭಕ್ತನು ಭವಿಯ ಕಣ್ಗೆ ಗಣ್ಯಮಾನಸನಾಗಿ ತೋರ್ಪನು (ಬಸವು. ೫೫-೨೧): ಸಮಸಪ್ತಕರು ತಮ್ಮೊಳಗಂದು ಶಪಥವ ಮಾಡಿ ವಿಪ್ರರ ಮಂದಿಗಿತ್ತರು ಗೋ ಹಿರಣ್ಯ ಸಮಸ್ತವಸ್ತುಗಳ (ಕುಮ್ಯಾದ್ರೋ. ೨-೯). ೨. ಚಿನ್ನದ ಪಾತ್ರೆ. ೩. ಬೆಳ್ಳಿ; ರಜತ. ೪. (ಯಾವುದಾದರೊಂದು) ಅಮೂಲ್ಯವಾದ ಲೋಹ. ೫. ಸಂಪತ್ತು; ಐಶ್ವರ್ಯ: ''ರಿಕ್ಥಮಾ ಕನಕಂ ಹಿರಣ್ಯಮರ್ಥಂ ವಸ್ತು ಋಕ್ಥಮಾ ರೈ ಸ್ವಂ ಸುವರ್ಣಮೆನಲು'' (ಮಂಗರಾ. ೧೭-೧೭). ೬. ವೀರ್ಯ; ರೇತಸ್ಸು. ೭. ಕವಡೆ. ೮. ಒಂದು ಅಳತೆಯ ಪ್ರಮಾಣ. ೯. ದತ್ತೂರ ಫಲ. ೧೦. ಬಂಗಾರದಿಂದ ಮಾಡಿದ ನಾಣ್ಯ; ಚಿನ್ನದ ನಾಣ್ಯ: ಹುಟ್ಟುತ ದ್ರವ್ಯವನರಿಯದವಂಗೆ ಐಶ್ವರ್ಯವಂತ ಮಗನಾದರೆ ಲಕ್ಷಸಂಖ್ಯೆಯ ಹಿರಣ್ಯವ ತಂದು ಸಂತೋಷಪಡಿಸುವಂತೆ (ಬಸವ. ೭೦೫). ೧೧. ಒಬ್ಬ ಖೇಚರನ ಹೆಸರು: ಕೃತಸುಕೃತವೇಷದಿಂದೀ ಗತಿಯೊಳ್ ಸೂರ್ಯಚರನಾಂ ಹಿರಣ್ಯನೆನಾದಂ (ಚಂದ್ರಪ್ರ. ೫-೪೯). ೧೨. ಬೆಂಕಿಯ ಜ್ವಾಲೆ, — ನಾಲಗೆ: ''ಬಹುರೂಪಮತಿರಕ್ತಮಸಿತರಕ್ತಂ ಸದಂಶು ಹಿರಣ್ಯಮಾ ಕನಕ ಮರ್ಚಿಯೆನಲಗ್ನಿಯಲ್ಲಿಹವೇಳು ನಾಲಗೆಗಳಕ್ಕು'' (ಮಂಗರಾ. ೧೪-೭). [ಸಂ.]

**ಹಿರಣ್ಯಕ** (ನಾ). ಒಬ್ಬ ರಾಕ್ಷಸನ ಹೆಸರು: ಹಿರಣ್ಯಕಶಿಪು : ದೇವ ಸಂದಾರಿತ ಹಿರಣ್ಯಕ ಶರೀರ ಜಯ (ಜಗವಿ. ೫-೧೧೩ ರಗಳೆ): ಸ್ಮರಣೆಗೈದ ಪ್ರಹ್ಲಾದನ ರಕ್ಷಿಸಿದ ದುರುಳ ಹಿರಣ್ಯಕನುದರವ ಸೀಳಿದ (ಪುರಂದ. ೫-೬೫-೨). 'ಹಿರಣ್ಯಾಕ್ಷ' ಪರಾ. [ಸಂ.]

**ಹಿರಣ್ಯಕಶಿಪು** (ನಾ). ಚಿನ್ನದ ಆಸನವುಳ್ಳವನು; ಒಬ್ಬ ರಾಕ್ಷಸನ ಹೆಸರು; ಹಿರಣ್ಯಾಕ್ಷನ ಅವಳಿ ಸಹೋದರ; IP ಈತ ಪ್ರಹ್ಲಾದನ ತಂದೆ. ಈತನನ್ನು

ವಿಷ್ಣುವು ನರಸಿಂಹರೂಪವನ್ನು ಧರಿಸಿ ಸಭಾಮಂಟಪದ ಸ್ತಂಭದಿಂದ ಹೊರಬಂದು ಸಂಧ್ಯಾಸಮಯದಲ್ಲಿ, ಬಾಗಿಲ ಹೊಸ್ತಲ ಮೇಲೆ ಕುಳಿತು, ತನ್ನ ತೊಡೆಯ ಮೇಲಿಟ್ಟುಕೊಂಡು, ಹರಿತವಾದ ಉಗುರುಗಳಿಂದ ಎದೆಯನ್ನು ಸೀಳಿ ಕೊಲ್ಲುತ್ತಾನೆ: ನೃಸಿಂಹನನಿಪ್ಪಾಕೃತಿಯಿಂ ಹಿರಣ್ಯಕಶಿಪು ಪ್ರಧ್ವಂಸಮಂ ಮಾಡಿದ್ಧ (ಜಗವಿ. ೧-೫೮); ಕನಕಲೋಚನ ಹಿರಣ್ಯಕಶಿಪುಗಳಂತಿರ್ವರುಂ ಪರಿವರಾಹ ನರಸಿಂಹರೂಪಿಂ ತಡೆಯದಳಿದು ಪೋಗಲ್ (ಚಬಪು. ೪೭-೮). [ಸಂ.]

**ಹಿರಣ್ಯಕಹರ** (ನಾ). **ಹಿರಣ್ಯಕಶಿಪುವನ್ನು ಕೊಂದವನು; ವಿಷ್ಣು.** [ಸಂ.]

**ಹಿರಣ್ಯಕಾಮಧೇನುದಾನ** (ನಾ). ಷೋಡಶಮಹಾದಾನಗಳಲ್ಲಿ ಒಂದು; ಚಿನ್ನದ ಹಸುವಿನ ಪ್ರತಿಮೆಯ ದಾನ: ಷೋಡಶಮಹಾದಾನಗಳನ್ನು ಮಾಡಬೇಕೆಂದು ಸಂಕಲ್ಪಿಸಿ ಆಯಾ ಪುಣ್ಯಕಾಲದಲ್ಲಿ . . . ೧. ತುಲಾಪುರುಷದಾನ . . . ೬ ಹಿರಣ್ಯಕಾಮಧೇನುದಾನ, ಹಿರಣ್ಯಾಶ್ವದಾನ . . . ಮಾಡಿ ಸತ್ಕೀರ್ತಿಯಂ ಪಡೆದರು (ಮಹಾವಂ. I, ೧೦೦). [ಸಂ.]

**ಹಿರಣ್ಯಗರ್ಭ** (ನಾ).೧. ಬ್ರಹ್ಮ; ಪ್ರಜಾಪತಿ: ನಾನುಮರಡಂ ನುಡಿದೊಡ ಹರಿ ಹರ ಹಿರಣ್ಯಗರ್ಭರ್ ನಗರೇ (ಪಂಪಭಾ. ೧-೮೨); ಚತುರಾಸ್ಯನಾಗಿಯುಂ ಹಿರಣ್ಯಗರ್ಭನಲ್ತು (ಜಗವಿ. ೮-೧೧ ವ). **೨. ವಿಷ್ಣು. ೩. ಸೂಕ್ಷ್ಮಶರೀರ. ೪. ಜೀವಾತ್ಮ; ಪ್ರಾಣ:** ನವಮದೊಳು ಪರಿಪೂರ್ಣಸೂಕ್ಷ್ಮಮಪ್ಪಾ ಜೀವಚೇತದುರುಹಿರಣ್ಯಗರ್ಭ ಗುರು (ವೀಶೈಪು. ೧-೧-೩೦). **೫. [ಜೈನ] ''ಆದಿಬ್ರಹ್ಮನೆನಿಸಿದ ವೃಷಭತೀರ್ಥಂಕರ''** (ಆದಿಪು. ಬಿ. ಕೋಶ): ಧರೆ ರತ್ನಗರ್ಭಮಾದುದು ಸುರರೆಲ್ಲಂ ಹರ್ಷಗರ್ಭರಾದರ್ ಪೊಗಳಲ್ ಪಿರಿದೆನೆ ಹಿರಣ್ಯಗರ್ಭನ ನಿರುಪಮ ಗರ್ಭಾವತರಣಮಂಗಳವಿಧಿಯೊಳ್ (ಆದಿಪು. ೭-೨೭). [ಸಂ.]

**ಹಿರಣ್ಯಗರ್ಭದಾನ** (ನಾ). ಷೋಡಶಮಹಾದಾನಗಳಲ್ಲಿ ಒಂದು: ಷೋಡಶ ಮಹಾದಾನಗಳನ್ನು ಮಾಡಬೇಕೆಂದು ಸಂಕಲ್ಪಿಸಿ ಆಯಾಪುಣ್ಯಕಾಲದಲ್ಲಿ . . .೧) ತುಲಾಪುರುಷದಾನ ೨) ಹಿರಣ್ಯಗರ್ಭದಾನ . . . ಮಾಡಿ ಸತ್ಕೀರ್ತಿಯಂ ಪಡೆದರು (ಮಹಾವಂ.I, ೧೦೦). [ಸಂ.]

**ಹಿರಣ್ಯದಾನ** (ನಾ). ಚಿನ್ನದ ದಾನ: ಅರಸನಿತ್ತ ಹಿರಣ್ಯದಾನವನಿರದೆ ಮೂವತ್ತೆರಡು ಕೋಟಿಯ ತುರಗ ಕರಿರಥ ವಸ್ತ್ರದಾನದಿ ದಣಿದರಾ ದ್ವಿಜರು (ಕೌಶಿರಾ. ೪೪-೫೧); ವಸ್ತ್ರದಾನ, ಭೂದಾನ, ಗೋದಾನ, ಹಿರಣ್ಯದಾನ ಮುಂತಾದವುಗಳು ಯಥೇಚ್ಛವಾಗಿ ನಡೆದವು (ಶಾಂತಲಾ. ೧೧೫). [ಸಂ.]

**ಹಿರಣ್ಯದಾನಿ** (ನಾ). ಚಿನ್ನದ ದಾನವನ್ನು ಮಾಡುವವನು: ಹಿರಣ್ಯದಾನಿ ಗಜದಾನಿ ತುರಂಗಮದಾನಿ ದಿವ್ಯವಸ್ತ್ರನಿಕರದಾನಿಯೆಂದು ಮಹಿ ವಣ್ಣಿಪುದೀ ಜಗದೇಕದಾನಿಯಂ (ಎಕ.VII, ಶಿಕಾರಿ. ೧೫೧-೨೯; 1047). [ಸಂ. ಹಿರಣ್ಯದಾನಿನ್]

**ಹಿರಣ್ಯಬಾಹು** (ನಾ).೧. ಶಿವ. ೨. ಒಂದು ನದಿಯ ಹೆಸರು; ಶೋಣಾನದಿ: ''ಶೋಣಃ, ಹಿರಣ್ಯಬಾಹುಃ– ಈ ೨ ಶೋಣನದಿ''(ಹಲಾಯು. ೧೧೧-೫೨). [ಸಂ.]

**ಹಿರಣ್ಯಮೂರ್ತಿ** (ನಾ).೧. ಚಿನ್ನದ ಮೂರ್ತಿ. ೨. ಸುವರ್ಣವನ್ನೇ ಸ್ವರೂಪವಾಗಿ ಉಳ್ಳವನು: ಮಣ್ಣನಿತ್ತು ನಿಮ್ಮ ಕಂಡೆಹೆನೆಂದಡೆ ಜಗಭರಿತ ನೀನು ಹೊನ್ನನಿತ್ತು ನಿಮ್ಮ ಕಂಡೆಹೆನೆಂದಡೆ ಹಿರಣ್ಯಮೂರ್ತಿ ನೀನು (ಮದೇವ. ೨೪೩-೫೨). [ಸಂ.]

**ಹಿರಣ್ಯರೇತ** (ನಾ).೧. ಅಗ್ನಿ: ''ಸಪ್ತಾರ್ಚಿಃ, ಬಹುಲಃ, ಶಿಖೀ . . . ಹಿರಣ್ಯರೇತಾ, ತಪೋಘ್ನ, ಲೋಹಿತಾಶ್ವ, ಹುತಾಶನಃ – ಈ ೪೦ ಕಿಚ್ಚಿನ ಪೆಸರ್'' (ಹಲಾಯು. ೧೫-೭೪); ನೆರದೂರ್ಧ್ವರೇತಸನೊಳ್ ಪು(ರು)ಹಿರಣ್ಯರೇ(ತೋ)ತಿ ತೀವ್ರನೊಳ್ಮನಿವರನೊಳ್ಪರಮ ಭಗಸಹಿತ ಮುದದಿರೆ ಪರಿಶ್ರಮಕ್ಕನ್ನ ನಿರ್ವಿಶೇಷನೊಳಾಗಳ್ (ಕವಿರಾ. ೧-೬೩). ೨. ಸೂರ್ಯ; ರವಿ. ೩. ಶಿವ. [ಸಂ. ಹಿರಣ್ಯರೇತಸ್]

**ಹಿರಣ್ಯಾಕ್ಷ** (ನಾ).೧. ಚಿನ್ನದ ಕಣ್ಣುಗಳನ್ನು ಉಳ್ಳವನು; ಒಬ್ಬ ರಾಕ್ಷಸನ ಹೆಸರು. ಹಿರಣ್ಯಕಶಿಪುವಿನ ಅವಳಿ ಸಹೋದರ; IP ಈತನು ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ ಅನೇಕ ವರಗಳನ್ನು ಪಡೆದು ದೇವತೆಗಳನ್ನು ಪೀಡಿಸಿ ಲೋಕಕಂಟಕನಾಗಿರುವಾಗ ವಿಷ್ಣುವು ವರಾಹಾವತಾರವನ್ನು ತಳೆದು ಈತನನ್ನು ಕೊಲ್ಲುತ್ತಾನೆ: ಹಿರಣ್ಯಾಕ್ಷನಂ. . . ತವೆ ಕೊಂದಾದಿವರಾಹರೂಪದೊಳೆ ನೀನಂದೆತ್ತಿದ್ಯೆ ಗೋಮಿನೀಧ್ವದಂಷ್ಟ್ರಾಗ್ರದ ನೀಲಜಾಲಮಣಿಯೆಂಬಂತಾಗೆ ಭೂಗೋಳಮಂ (ಜಗವಿ. ೧-೫೭); ಮುತ್ತೈದೆಯರ ಪರಕೆ ಸೇಸೆಗಳನುಟ್ ಕೈಕೊಳುತ್ತೆ ಪೊಳಲೊಳ್ ಮೆರೆದು ಮಂದಿರಂಬೊಕ್ಕು ತನ್ನುತ್ತಮಾಂಗನೆಗಾ ಕುಮಾರಕನನಿತ್ತಂ ಹಿರಣ್ಯಾಕ್ಷನುತ್ಸವದೊಳು (ಚಬಪು. ೪೭-೫). **೨. ಹಿರಣ್ಯಕಶಿಪು: ಹಿರಣ್ಯಾಕ್ಷನುರಮಂ ಪೋಟ್ಟ ನಾರಸಿಂಗನಂತೆ** (ಪಂಪಭಾ. ೧೨-೧೫೨ ವ). **IP 'ಹಿರಣ್ಯಕ', 'ಹಿರಣ್ಯಾಕ್ಷ'** ಎಂಬ ರೂಪಗಳು 'ಹಿರಣ್ಯಕಶಿಪು' ಎಂಬರ್ಥದಲ್ಲಿಯೂ ಕಾವ್ಯಗಳಲ್ಲಿ ಬಳಕೆಯಾಗಿವೆ. [ಸಂ.]

**ಹಿರಣ್ಯಾಶ್ವದಾನ** (ನಾ). ಷೋಡಶಮಹಾದಾನಗಳಲ್ಲಿ ಒಂದು; ಚಿನ್ನದ ಕುದುರೆಯ ಪ್ರತಿಮೆಯದಾನ: ಷೋಡಶಮಹಾದಾನಗಳನ್ನು ಮಾಡಬೇಕೆಂದು ಸಂಕಲ್ಪಿಸಿ ಆಯಾ ಪುಣ್ಯಕಾಲದಲ್ಲಿ ೧. ತುಲಾಪುರುಷದಾನ . . . (೭) ಹಿರಣ್ಯಾಶ್ವದಾನ (೮). ಹಿರಣ್ಯಾಶ್ವರಥದಾನ . . . ಮಾಡಿ ಸತ್ಕೀರ್ತಿಯಂ ಪಡೆದರು (ಮಹಾವಂ. I, ೧೦೦). [ಸಂ.]

**ಹಿರಣ್ಯೆ** (ನಾ). ಬೆಂಕಿಯ ಜ್ವಾಲೆ,—ನಾಲಗೆ; ಅಗ್ನಿಯ ಸಪ್ತಾರ್ಚಿಗಳಲ್ಲಿ ಒಂದು: ''ಹಿರಣ್ಯಾ, ಕನಕಾ, ಕೃಷ್ಣ, ರಕ್ತಾ, ಸುಪ್ರಭಾ, ಅತಿರಕ್ತಾ, ಬಹುರೂಪಾ, ಈ ೭ . . . ಅಗ್ನಿಯ ನಾಲಗೆಗಳ್'' (ಹಲಾಯು. ೧೩-೭೮). [ಸಂ. ಹಿರಣ್ಯಾ]

**ಹಿರಣ್ಯೋತ್ಕೃಷ್ಟಜನ್ಮ** (ನಾ). [ಜೈನ] ಐವತ್ತೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು; ''ಜಿನಜನನಿಯ ಗರ್ಭದಲ್ಲಿ ಅವತರಿಸುವುದು'' (ಜೈನಕೋ. ೮೭); ಹಿರಣ್ಯೋತ್ಕೃಷ್ಟಜನ್ಮಮುಂ ಮಂದರಾಭಿಷೇಕಮುಂ ಗುರುಪೂಜೋಪಳಂಬನಮುಂ . . . ಅಪ್ಪಯ್ಯತ್ತುಮೂಱು ಗರ್ಭಾನ್ವಯಕ್ರಿಯೆಯೊಳ್ (ಚಾಪುಂಪು. ೨೧೨). [ಸಂ. ಹಿರಣ್ಯೋತ್ಕೃಷ್ಟಜನ್ಮನ್]

**ಹಿರಣ್ಯೋದಕದಾನ** (ನಾ). (ಗೋದಾನ, ಭೂದಾನ ಇತ್ಯಾದಿ ದಾನಗಳಲ್ಲಿ) ಸುವರ್ಣಸಹಿತವಾಗಿ ನೀರೆರೆದು ಕೊಡುವ ದಾನ: ಪಲಂಪಾಡು ಗ್ರಾಮ ೧ ವಂದ್ಯೂ ವುಭಯಂ ಗ್ರಾಮ ೨ ಯೆರಡನೂ ಸಹಿರಣ್ಯೋದಕದಾನ ಧಾರಾಪೂರ್ವಕವಾಗಿ ಧಾರೆಯನೆರದು (ಕಆಅ. ೧೧೨-೧೭-೩೮; 1521). [ಸಂ.]

**ಹಿರಬ್ಬಿ** (ನಾ). ಒಂದು ಬಗೆಯ ಔಷಧ ವಸ್ತು: ಹಿರಬ್ಬಿ ೪ ತೂಕ, ಹಿಪ್ಪಲಿ ೫ ತೂಕ, ಗಂಧಕ ೨ ತೂಕ, ವತ್ಸನಾಭಿ ೨ ತೂಕ . . . ಹಿರಿಯ ಹಿರಬ್ಬಿ ಎನ್ನೂ ಗೋಮೂತ್ರದಲ್ಲಿ ೧ ದಿನ ನೆನೆಯಲಿರಿಸುವುದು (ವಿವ್ಯವಿ. ೧೦೦). [?]

**ಹಿರಳೆ** 'ಪೇರೀಳೆ' ನೋ.

**ಹಿರಾಕಸ, ಹಿರಾಕಾಸ** (ನಾ). ಕಬ್ಬಿಣ ಮತ್ತು ಗಂಧಕಾಮ್ಲಗಳ ಸಂಯೋಗದಿಂದ ಉಂಟಾಗುವ ಒಂದು ಬಗೆಯ ಲವಣ; ಕಾಸೀಸ; ಅನ್ನಭೇದಿ: ಹಿರಾಕಸವು ಗಂಧಕ ಧ್ವತಿಯಲ್ಲಿ ಕಬ್ಬಿಣದ ಜಂಗು ಮಿಶ್ರವಾಗಿ ಹುಟ್ಟುತ್ತದೆ (ಮುಂಬಯಿ. ೪-೪೮); ಅವರ ಗುಮಾಸ್ತರು ಇಂದಿಗೂ ಹಿರಾಕಸ ಅಣಿಲೆಕಾಯಿಗಳ ಶಾಯಿಗಳನ್ನು ಉಪಯೋಗಿಸುತ್ತಾರೆಯೇ ಹೊರತು ಪೊಟ್ಟಣದ ಶಾಯಿಯನ್ನು ಉಪಯೋಗಿಸುತ್ತಿಲ್ಲ (ಜಾರುದಾ. ೨೭). **ಹಿರಾಕಾಸ:** ಸುವರ್ಣಮುಖಿ ಹಿರಾಕಾಸ ಇವು ಗಂಧಕ ಕೂಡಿದ ಕಬ್ಬಿಣದ ರೂಪಾಂತರಗಳುಂಟು (ಮುಂಬಯಿ. ೬-೧೮).

[<-- ಮರಾ. ಹಿರಾಕಸ]

**ಹಿರಾಕಾಸ** 'ಹಿರಾಕಸ' ನೋ.

**ಹಿರಾವಳಿ** (ನಾ). ಒಂದು ಬಗೆಯ ಔಷಧೀಸಸ್ಯ: ''ಕುಷ್ಠಘ್ನಿ– ಕಗ್ಗಲಿ; ಹಿರಾವಳಿ'' (ಓಷಧಿ. ೩೫). [?]

**ಹಿರಿ**$_1$ 'ಪಿರಿ$_1$' ನೋ.

**ಹಿರಿ**$_2$ 'ಪಿರಿ$_4$' ನೋ.

**ಹಿರಿಕೊಳ್** (ಕ್ರಿ). ಸೆಳೆದುಕೊಳ್ಳು: ಚೆಂದದಲಿ ಇಬ್ಬರೂ ಹೊಂದಿರುವುದೇ ಕಾಲ, ಆ ಕಾಲ ಹಿರಿಕೊಳಲಿ ಒಲುಮೆಸಿರಿಯ (ಇಂಗೀತ. ೫೦-೨೧). [ಹಿರಿ$_1$ (< ಪಿರಿ$_1$) + ಕೊಳ್$_1$]

**ಹಿರಿಗನ್ನಡ** (ನಾ). ಹಿರಿತನವನ್ನು ಪಡೆದ ಕನ್ನಡ: ಸಿರಿಗನ್ನಡಂ ಗೆಲ್ಗೆ ಹಿರಿಗನ್ನಡಂ ಗೆಲ್ಗೆ (ಹೊಂಗಳು. ೨೧-೫). [ಹಿರಿ$_2$ (< ಪಿರಿದು$_1$) + ಕನ್ನಡ$_1$]

**ಹಿರಿಜೇಕು** (ನಾ). ಒಂದು ಬಗೆಯ ಜೇಕಿನ ಗಡ್ಡೆ: ಹಿರಿಜೇಕನು ಪುಡಿಮಾಡಿ ಹಾಗಲ

ಬೇರ ಕೆಂಡದಲ್ಲಿ ಈ ಚೂರ್ಣ ಹಾಕಿ ಕಾಸಲು ಮೂಲವ್ಯಾಧಿಯ ಮೊಳೆ ಕರಗುವುದು (ವಿವೈವಿ. ೧೯೩). [ಹಿರಿ$_2$ (< ಪಿರಿದು$_1$) + ಜೇಕು (< ಗೇಕು)]

**ಹಿರಿತನ** 'ಪಿರಿತನ' ನೋ.

**ಹಿರಿದು$_1$** 'ಪಿರಿದು$_1$' ನೋ.

**ಹಿರಿದು$_2$** 'ಪಿರಿದುಂ' ನೋ.

**ಹಿರಿಪಿಲ್ಲಿ** (ನಾ). ದೊಡ್ಡ ಪಿಲ್ಲಿ; ದೊಡ್ಡ ಕಾಲುಂಗುರ: ಹಿರಿಪಿಲ್ಲಿ ಕಿರಿಪಿಲ್ಲಿ ಸುರಳಿ ಸಹಿತವಾಗಿ ಪರಿಪರಿ ವಸ್ತ್ರವ ಧರಿಸಿಕೊಂಡಿಹರು (ಜನಗೀ. ೪೪). [ಹಿರಿ$_2$ (< ಪಿರಿದು$_1$)+ ಪಿಲ್ಲಿ$_1$]

**ಹಿರಿಬೋಗಿ** (ನಾ). ಒಂದು ಬಗೆಯ ಸಸ್ಯ: ಕಿರಲ್‌ಬೋಗಿ, ಬೋವುಮರ, ಹಿರಿಬೋಗಿ, ಕರ್ಮರ (ವೃಕ್ಷಗಿ. ೪೪-೬೭೩). [ಹಿರಿ$_2$ (< ಪಿರಿದು$_1$) + ಬೋಗಿ?]

**ಹಿರಿಮಣಿ** (ನಾ).೧. ಶಾಲೆಯಲ್ಲಿ ತರಗತಿಯ ಶಿಸ್ತನ್ನು ನೋಡಿಕೊಳ್ಳುವವನು; ಮಾನೀಟರು: ಅಂದಿನ ಪೂಜೆಯನ್ನು ವರ್ಗದ ಹಿರಿಮಣಿಯು ಸಾಂಗವಾಗಿ ನೆರವೇರಿಸಿದನು (ಜಯಂತ. ೧೪). ೨. ಮುಖಂಡ; ನಾಯಕ: ಕಬಾಡಿಗರಿಗೆಲ್ಲ ಹಿರಿಮಣಿಯಾತ (ಶರಜ. ೨); ಊರಿನ ಹಿರಿಮಣಿಗಳು ಅವರ ಕುದುರೆಯ ಹಿಂದೆ ಹಿಂದೆ ಇಡೀ ದಿನ ಓಡುತ್ತಲೇ ಇದ್ದರು (ಪ್ರೇಮಾತ್ರ. ೧). [<— ತುಳು. ಹಿರಿಮಣಿ]

**ಹಿರಿಮದ್ದು** (ನಾ). ಒಂದು ಬಗೆಯ ಔಷಧೀಸಸ್ಯ: ಅಶ್ವಗಂಧಿಘೃತಃ- ಹಿರಿಮದ್ದು, ಕಳ್ಳಂಗಡಲೆ . . . ಕಚೋರ ಇವು ಸಮಾನ (ವಿವೈವಿ. ೧೧); ಹಿರಿಮದ್ದಿನ ಬೇರು ಬನ್ನಿ ಸೊಂಡೆಬೇರು . . . ವಾತಾರ್ಧಿಕಾ ಇವೆಲ್ಲವಂ ಪರಿಹರಿಸುವುದು (ದ್ರಾಕ್ಷಾಚೂ. ೪-೯). [ಹಿರಿ$_2$ (< ಪಿರಿದು$_1$) + ಮದ್ದು (< ಮರ್ದು)]

**ಹಿರಿಮರ** (ನಾ). ದೊಡ್ಡಮರ; ಮಹಾವೃಕ್ಷ: ಸ್ಥಿರವಾಗಿ ನಿಂತಿೀದಿ ಹಿರಿಮರವೆ ನೀ ಎನ್ನ ಹರಮಲ್ಲನನು ಕಂಡಿದೆಯಾ (ಸಿದ್ಧವು. ೫-೬). [ಹಿರಿ$_2$ (< ಪಿರಿದು$_1$) + ಮರ$_1$]

**ಹಿರಿಮೆ** 'ಪೆರ್ಮೆ' ನೋ.

**ಹಿರಿಮೆಕ್ಕೆ** (ನಾ). ಮೆಕ್ಕೆಯಲ್ಲಿ ಒಂದು ಬಗೆ: (ಕ). [ಹಿರಿ$_2$ (< ಪಿರಿದು$_1$)+ ಮೆಕ್ಕೆ$_2$]

**ಹಿರಿಯಏಲಕ್ಕಿ** (ನಾ). ಒಂದು ಬಗೆಯ ಏಲಕ್ಕಿ: "ಗರ್ಭಸಂಭವ - ಹಿರಿಯ ಏಲಕ್ಕಿ" (ಓಷಧಿ. ೪೭). [< ಪಿರಿದು$_1$ + ಏಲಕ್ಕಿ]

**ಹಿರಿಯಕಡವ** (ನಾ). ಜಿಂಕೆಯಲ್ಲಿ ಒಂದು ಬಗೆ; ದೊಡ್ಡ ಸಾರಂಗ (?): "ಝಿಲ್ಲೀ - ಜೀರುಂಡೆಯ ಹುಳು, ಹಿರಿಯ ಕಡವ" (ಓಷಧಿ. ೬೪). [< ಪಿರಿದು$_1$ + ಕಡವ$_2$ (< ಕಡವೆ$_2$)]

**ಹಿರಿಯಕವಳಿ** (ನಾ). ಒಂದು ಬಗೆಯ ಬತ್ತ: "ಮಹಾಶೌಂಡೀ— ಹಿರಿಯಕವಳಿ" (ಓಷಧಿ. ೧೧೭). [< ಪಿರಿದು$_1$ + ಕವಳಿ$_2$ (< ಕಟವೆ)]

**ಹಿರಿಯಕಳವಿ** (ನಾ). ಒಂದು ಬಗೆಯ ಮುಳ್ಳುಕಂಟಿ,— ಕವುರಿಕೆ: "ಮಹಾಕಟಭೀಃ - ಹಿರಿಯ ಕಳವಿ" (ಓಷಧಿ. ೯೭). [< ಪಿರಿದು$_1$ + ಕಳವಿ (< ಕಳವೆ$_1$)]

**ಹಿರಿಯಕಿತ್ತೀಳೆ** (ನಾ). ಈಳೆಜಾತಿಗೆ ಸೇರಿದ ಮರ ಮತ್ತು ಅದರ ಕಾಯಿ: "ಪಾರಿಖಂ - ಹಿರಿಯ ಕಿತ್ತೀಳೆ" (ಓಷಧಿ. ೯೭). [< ಪಿರಿದು$_1$ + ಕಿತ್ತೀಳೆ]

**ಹಿರಿಯಕ್ಕ** (ನಾ). ದೊಡ್ಡ ಅಕ್ಕ: ಹಿರಿಯಕ್ಕನ ಚಾಳಿ ಮನೆಮಕ್ಕಳಿಗೆಲ್ಲ (ಗಾದ). [ಹಿರಿ$_2$ (< ಪಿರಿದು$_1$) + ಅಕ್ಕ$_1$]

**ಹಿರಿಯಗಿಡು** (ನಾ). ಒಂದು ಬಗೆಯ ಔಷಧೀಸಸ್ಯ: "ಮಣೀಶಕಃ -ಹರಿಯಗಿಡು" (ಓಷಧಿ. ೧೧೯). [< ಪಿರಿದು$_1$ + ಗಿಡು]

**ಹಿರಿಯಚುಂಚು** (ನಾ). ಒಂದು ಬಗೆಯ ಔಷಧೀಸಸ್ಯ: "ನಿಶಾರಿಃ-ಹಿರಿಯ ಚುಂಚು" (ಓಷಧಿ. ೮೭). [< ಪಿರಿದು$_1$ + ಚುಂಚು$_4$]

**ಹಿರಿಯಣ್ಣ** 'ಪಿರಿಯಣ್ಣ' ನೋ.

**ಹಿರಿಯದುಪ್ಪಿ** (ನಾ). = ಹಿರಿಯಕಡವ: "ರಾಮುಃ - ಹಿರಿಯ ದುಪ್ಪಿ, ವಿಷಹರಮೃಗವು,ಇದನ್ನು ಹಿರಿಯ ಶರಭಮೃಗವೆನ್ನುವರು" (ಸಿದ್ಧಾಂತಿ. ೧೩೭). [< ಪಿರಿದು$_1$+ ದುಪ್ಪಿ]

**ಹಿರಿಯನೆಲದಾವರೆ** (ನಾ). ಒಂದು ಬಗೆಯ ಔಷಧೀಸಸ್ಯ: "ಪದ್ಮಮೂಲ: - ಹಿರಿಯನೆಲದಾವರೆ" (ಓಷಧಿ. ೯೩). [< ಪಿರಿದು$_1$ + ನೆಲದಾವರೆ]

**ಹಿರಿಯನೇಱಿಲ್** (ನಾ). ಒಂದು ಬಗೆಯ ನೇರಳೆ; ದೊಡ್ಡ ನೇರಳೆ; ಜಂಬುನೇರಳೆ: "ರಾಜಜಂಬೂ - ಹಿರಿಯ ನೇಱಿಲ್" (ಓಷಧಿ. ೧೩೭). [< ಪಿರಿದು$_1$ + ನೇಱಿಲ್]

**ಹಿರಿಯಪುಂಡರೀಕ** (ನಾ). ಒಂದು ಬಗೆಯ ಔಷಧೀಸಸ್ಯ: "ಶ್ರೀಪುಷ್ಪೀ- ಹಿರಿಯ ಪುಂಡರೀಕ, ಲವಂಗದ ಕುಸುಮ" (ಓಷಧಿ. ೧೬೭). [< ಪಿರಿದು$_1$ + ಪುಂಡರೀಕ]

**ಹಿರಿಯಪ್ಪ** (ನಾ). ತಂದೆಯ ಅಣ್ಣ; ದೊಡ್ಡಪ್ಪ: ಚಿತ್ರವಿಸು ಹಿರಿಯಪ್ಪ ರಾಘವನೆತ್ತ ಹೋದನೋ (ಕಶಿರಾ. ೩೨-೧೭). [< ಪಿರಿದು$_1$ + ಅಪ್ಪ$_1$]

**ಹಿರಿಯಬೆಲ್ಲ** (ನಾ). ಒಂದು ಬಗೆಯ ಔಷಧೀಸಸ್ಯ : ಇಂದ್ರಿಯಾ - ಹಿರಿಯ ಬೆಲ್ಲ" (ಓಷಧಿ. ೧೩). [< ಪಿರಿದು$_1$ + ಬೆಲ್ಲ?]

**ಹಿರಿಯಮದ** (ನಾ). ಒಂದು ಬಗೆಯ ಸಸ್ಯ : "ವರ - ವಿಳಂಗ . . . ಅಮರದುವಳ್ಳಿ, ಮಡುವಾಗಲು, ಹಿರಿಯಮದ, ಸೀಸ" (ಓಷಧಿ. ೧೪೫). [< ಪಿರಿದು$_1$ + ಮದ]

**ಹಿರಿಯಮದ್ದು** 'ಹಿರಿಯಮರ್ದು' ನೋ.

**ಹಿರಿಯಮರದವಲ್ಲಿ** (ನಾ). ಒಂದು ಬಗೆಯ ಔಷಧೀಸಸ್ಯ: "ಮಧುಪಲಾ- ಖರ್ಜೂರ, ಸಿಹಿಮಾದಲ, ಹಿರಿಯಮರದವಲ್ಲಿ, ಮೆದೆ, ಗುಂಜಿ" (ಓಷಧಿ. ೧೨೦). [< ಪಿರಿದು$_1$ + ಅಮರದವಲ್ಲಿ (< ಅಮರ್ದುವಳ್ಳಿ)]

**ಹಿರಿಯಮರ್ದು, ಹಿರಿಯಮದ್ದು** (ನಾ). ಒಂದು ಬಗೆಯ ಔಷಧೀಸಸ್ಯ: "ಅಶ್ವಗಂಧಾ-ಹಿರಿಯ ಮರ್ದು, ಇಂಗು"(ಓಷಧಿ. ೫). **ಹಿರಿಯಮದ್ದು:** "ಕೃಷ್ಣಗಂಧಿಕಾ-ಹಿರಿಯಮದ್ದು" (ಓಷಧಿ. ೩೯). [< ಪಿರಿದು$_1$ + ಮರ್ದು]

**ಹಿರಿಯಮೆಕ್ಕೆ** (ನಾ). ಒಂದು ಬಗೆಯ ಮೆಕ್ಕೆ : "ಗೋದುಂಬಾ-ಹಿರಿಯ ಮೆಕ್ಕೆ" (ಓಷಧಿ. ೫೧). [< ಪಿರಿದು$_1$ + ಮೆಕ್ಕೆ$_2$]

**ಹಿರಿಯಯ್ಯ** 'ಪಿರಿಯಯ್ಯ' ನೋ.

**ಹಿರಿಯರಸಿ** 'ಪಿರಿಯರಸಿ' ನೋ.

**ಹಿರಿಯಸಿವನ್ನಿ** (ನಾ). ಒಂದು ಬಗೆಯ ಔಷಧೀಸಸ್ಯ :"ವರಾಂಗೀ - ಅರಿಸಿನ, ನಾಗದಂತಿ, ಹಿರಿಯಸಿವನ್ನಿ , ಹೆಗ್ಗುಳ್ಳ" (ಓಷಧಿ. ೧೪೫). [< ಪಿರಿದು$_1$ + ಸಿವನ್ನಿ (< ಸೀವನ್ನಿ)]

**ಹಿರಿಯಸಿಹಿಗೆಣಸು** (ನಾ). ಒಂದು ಬಗೆಯ ಗೆಣಸು; ದೊಡ್ಡಗೆಣಸು: "ದೀರ್ಘವೃಂತಾ - ಹಿರಿಯ ಸಿಹಿಗೆಣಸು" (ಓಷಧಿ. ೭೭). [< ಪಿರಿದು$_1$ + ಸಿಹಿಗೆಣಸು (< ಸೀಗೆಣಸು)]

**ಹಿರಿಯಹಾಲುಗುಂಬಳ** (ನಾ). ಒಂದು ಬಗೆಯ ಕುಂಬಳ; ದೊಡ್ಡ ಹಾಲುಗುಂಬಳ: "ಗೋರಕ್ಷೀ - ಹಿರಿಯ ಹಾಲುಗುಂಬಳ" (ಓಷಧಿ. ೫೦). [< ಪಿರಿದು$_1$ + ಹಾಲುಗುಂಬಳ (< ಪಾಲ್ಗುಂಬಳ)]

**ಹಿರಿಯಹಿಂಗುಳಪತ್ರ** (ನಾ). ಒಂದು ಬಗೆಯ ಸಸ್ಯ: "ದೀರ್ಘಪತ್ರಿಕಾ - ಒಂದೆಲೆಹೊನ್ನೆ, ಬಿಳಿಯ ಬಜೆ, ಲೋಯಿಸರ, ಹಿರಿಯಹಿಂಗುಳಪತ್ರ" (ಓಷಧಿ. ೭೭). [< ಪಿರಿದು$_1$ + ಹಿಂಗುಳಪತ್ರ?]

**ಹಿರಿಯಿಸು, ಹಿರಿಸು** (ಕ್ರಿ). ೧. ಹರಡುವಂತೆ ಮಾಡು; ಪಸರಿಸು: ಮೊಲ್ಲೆಯನರಳಿಸಿ ಕಂಪನು ಹಿರಿಯಿಸಿ ಮೆಲ್ಲನೆ ಬೀಸಿತು ಗಾಳಿ (ಚಂದ್ರವೀ. ೭೩-೯೨). **ಹಿರಿಸು:** ೨. ಇಲ್ಲವಾಗಿಸು; ಪರಿಹರಿಸು; ನೀಗು: ಡಗೆಯ ಹಿರಿಸು [ಪಾಠಾಂ. ಹಿಂಗಿಸು] ಪಾರ್ಥ ನೀನೆಂದನಾಗ (ತುರಂಗ. ೪೭-೩೪). ೩. (ತಲೆಕೆಳಗಾಗುವಂತೆ) ಸೀಳಿಡು: ಹಿರಿಸಿದನು ಧರಣಿಯಲಿ ಕಾಲಿನಲೊರಸಿದನು ನೋಟಕರ ಧರಣೀಸುರಜನದ ಹಾಹಾರವದ ರಹಿ ಮಸಗೆ (ಕುವ್ಯಾಸ. ಓರಿ೯. ೨-೧೪೧). [ಹಿರಿ$_1$ (< ಪಿರಿ$_1$) + - ಇಸು$_3$]

**ಹಿರಿಯಿಾಚಲು** 'ಪಿರಿಯಿಾಚಲ್' ನೋ.

**ಹಿರಿಯುದ್ದರಿ** (ನಾ). ದೊಡ್ಡ ಪ್ರತಿಸ್ಪರ್ಧಿ,— ಎದುರಾಳಿ: ಧರ್ಮಸೇವಾಧುರೀಣ ಸುಬ್ಬಶ್ರೇಷ್ಠಿಯವರು ಕಳ್ಳಪೇಟೆ ಹಿರಿಯುದ್ದರಿ, ಕೊಡುಗ್ಗೆ (ಹನ್ನೊಂದ. ೧). [ಹಿರಿ$_2$ (< ಪಿರಿದು$_1$) + ಉದ್ದರಿ$_2$]

**ಹಿರಿಯುಬ್ಬಣ** 'ಪಿರಿಯುಬ್ಬಣ' ನೋ.

**ಹಿರಿಯೆಲವ** (ನಾ). ಒಂದು ಬಗೆಯ ಎಲವದ ಮರ; ದೊಡ್ಡದೂದಿಮರ: ''ಮರುವಕಾಪಃ - ಹಿರಿಯೆಲವ'' (ಓಷಧಿ. ೧೨೩). [ಹಿರಿ$_2$ (< ಪಿರಿದು$_1$) + ಎಲವ]

**ಹಿರಿಯೇಲ** (ನಾ). ಒಂದು ಬಗೆಯ ಸಸ್ಯ : ''ಮರುವಕಃ - ಮರುಗ, ಕಳಿಮಾವು, ಹಿರಿಯೇಲ'' (ಓಷಧಿ. ೧೧೮). [ಹಿರಿ$_2$ (< ಪಿರಿದು$_1$) + ಏಲ?]

**ಹಿರಿಯೇಲಕ್ಕಿ** (ನಾ). ಒಂದು ಬಗೆಯ ಏಲಕ್ಕಿ; ದೊಡ್ಡ ಏಲಕ್ಕಿ: ''ಘ್ನತಾಚೀ - ಹಿರಿಯೇಲಕ್ಕಿ'' (ಓಷಧಿ. ೫೨). [ಹಿರಿ$_2$ (< ಪಿರಿದು$_1$) + ಏಲಕ್ಕಿ]

**ಹಿರಿಯೋಲಗ** (ನಾ). ದೊಡ್ಡ ರಾಜಸಭೆ; ದೊಡ್ಡ ದರ್ಬಾರು : ದುಗುಡವೇಕೈ ಮಗನೆ ಹಿರಿಯೋಲಗವನೀಯೆ (ಕುವ್ಯಾಸ. ೧೨-೨೫). [ಹಿರಿ$_2$ (< ಪಿರಿದು$_1$) + ಓಲಗ$_1$]

**ಹಿರಿಸು** 'ಹಿರಿಯಿಸು' ನೋ.

**ಹಿರಿಹಿಗ್ಗು$_1$** (ಕ್ರಿ). ಹೆಚ್ಚು ಆನಂದ ಪಡು; ವಿಶೇಷವಾಗಿ ಸಂತೋಷಿಸು: ವಿಜಯದಿಂದ ಹಿರಿಹಿಗ್ಗಿದ ಬ್ರಿಟಿಷ್ ಸಾಮ್ರಾಜ್ಯವಾದಿಗಳ ಹೃದಯವು ಉನ್ಮತ್ತವಾಗಿತ್ತು (ರಾಜಪ. ೬೯); ಮದುವೆಯೆನಲು ಹಿರಿಹಿಗ್ಗುವರಲ್ಲವೆ ನಿನ್ನೀ ಹರೆಯದ ಕನ್ನೆಗಳು? (ನಲ್ಮೆ. ೨೮-೧).

**ಹಿರಿಹಿರಿಹಿಗ್ಗು** (ದ್ವಿರುಕ್ತಿ) : ಗಂಗೆಯ ತಾಯಿ ಇದನ್ನು ಕಂಡು ಹಿರಿಹಿರಿಹಿಗ್ಗಿ (ಸುವರ್ಣ. ೨೮); ಬೆನ್ನು ಚಪ್ಪರಿಸಿಕೊಂಡು ಹಿರಿಹಿರಿಹಿಗ್ಗಿದ (ಹುಚ್ಚುಹು. ೧೬).

[ಹಿರಿ$_2$(< ಪಿರಿದು$_1$) + ಹಿಗ್ಗು$_1$ (< ಹಿಳ್ಗು)]

**ಹಿರಿಹಿಗ್ಗು$_2$** (ನಾ). ಅತಿಶಯವಾದ ಆನಂದ; ಹೆಚ್ಚು ಸಂತೋಷ: ಮನಸ್ಸಿನಲ್ಲಿ ಗಾಳಿಗೋಪುರ ಕಟ್ಟಿಕೊಂಡು ಹಿರಿಹಿಗ್ಗಿನಲ್ಲಿ ಮರೆಯುವುದೂ ಉಂಟು (ಶಿಕ್ಷದ. ೧೧೪).

[ಹಿರಿ$_2$ (< ಪಿರಿದು$_1$) + ಹಿಗ್ಗು$_2$ (< ಪಿರ್ಗು$_2$)]

**ಹಿರಿಹುದ್ದರಿ** (ನಾ). = ಹಿರಿಯುದ್ದರಿ: ಅಶೋಕನೂ ಕರೀಮನೂ ಹಿರಿಹುದ್ದರಿಗಳಾದರು (ಕಪವು. ೪-೪೬). [ಹಿರಿ$_2$ (< ಪಿರಿದು$_1$) + ಹುದ್ದರಿ$_2$]

**ಹಿರೀಕ** (ನಾ). ಹಿರಿಯವನು; ದೊಡ್ಡವನು: ಏನೋ ಹಿರೀಕರ ಪುಣ್ಯ . . . ನಿಮ್ಮ ಹೊಟ್ಟೆಯಲ್ಲಿ ಇಟ್ಟುಕೊಂಡು ಕಾಪಾಡುತಿದೀರಿ (ಮಲ್ಲಿ. ೨೬); ಒಳ್ಳೆ ಪ್ರಾಯದ ಮನುಷ್ಯ ಅನ್ಯಾಯವಾಗಿ ಕೆಟ್ಟು ಹಾಳಾಗಿ ಹೋಗುತಾನಲ್ಲಾ ಅಂತ ಕೇರಿಯ ಹಿರೀಕರಿಗೆ ತುಂಬ ವ್ಯಥೆಯಾಯಿತಂತೆ (ನಡದಾ. II, ೧೦೦೪). 'ಸರೀಕ' ಹೋ.

[ಹಿರಿ$_2$(< ಪಿರಿದು$_1$) + - ಕ$_3$]

**ಹಿರೀಚಲು** 'ಪಿರಿಯಿಾಚಲ್' ನೋ.

**ಹಿರುಗ** (ನಾ). ಲೂಟಿಮಾಡುವವನು: ಕುನ್ನಿ ಮರುಳಜೋಗಿ ಹೆಗ್ಗ ಹಿರುಗ ಬೊಮ್ಮಕನ್ನೆಕಸವ ಕಟಬಾಂಡ್ಕರೆನ್ನಿಸಿ ನಾಮವೆತ್ತಿಹಪರವಳಿದರ್ಗೆ ನಿನ್ನೊಲವುಂಟೆ ರಂಗೇಶ (ಶತಸಾಂ. ೧೨-೬೫). [< ಹಿರಿ$_1$ (< ಪಿರಿ$_1$) + - ಗ$_2$]

**ಹಿರುಡು** (ನಾ). (?): ಓಟಕ್ಕೆ ನಾಣ್ಚುವನೆ ಒಂದಿಟಿವಾತನ್ ಹಿರುಡವನ್ (ಮೈಅರಿ. ೧೯೧೬, ೧೩-೧೦; 900). [?]

**ಹಿರೇಕಣಗಲು** (ನಾ).ಒಂದು ಬಗೆಯ ದೊಡ್ಡ ಜಾತಿಯ ಕಣಗಲು: ದೇವಗರಿಗೆ, ಹಿರೇಕಣಗಲು, ನೇರಳೆಮಾವು, ದೀವರಿಗೆ, ಚಿಕ್ಕಕಮರಾಕ್‌ಮರ, ಕಾಡುಜೀರಕ (ಮೈಜಿಗಿ. ೩೮-೭೫೯). [< ಪಿರಿದು$_1$ + ಕಣಗಲು$_0$ (< ಕಣಗಿಲೆ$_1$)]

**ಹಿರೇತಂಗಡಿ** (ನಾ). ಒಂದು ಬಗೆಯ ತಂಗಡಿಗಿಡ : ಸೀಮೇತಂಗಡಿ, ಹಿರೇತಂಗಡಿ (ಮೈಜಿಗಿ. ೧೯-೩೩೮). [< ಪಿರಿದು$_1$ + ತಂಗಡಿ]

**ಹಿರೇಮುತ್ತುಕ** (ನಾ). ಒಂದು ಬಗೆಯ ಮುತ್ತುಗದ ಮರ: ಆ ಚಕ್ರಂಗಳ ರೂಪು ಹಿರೇಮುತ್ತುಕದ ಪುಷ್ಪದೋಪಾದಿಯಲ್ಲಿ ಪ್ರಕಾಶಿಸುತ್ತಿರ್ಪುದು (ವಚಶಾ. II, ೧೭೮).

[< ಪಿರಿದು$_1$ + ಮುತ್ತುಕ (< ಮುಟ್ಟುಗ)]

**ಹಿರ್ರನೆ** 'ಹಿಬ್ಬನೆ' ನೋ.

**ಹಿರ್ಗು** 'ಪಿರ್ಗು$_2$' ನೋ.

**ಹಿಲ, ಹೀಲ, ಹೀಲೆ** (ನಾ). ಒಂದು ಬಗೆಯ ಮರ : ಚದುರನೊಡಲ ಕಾಯ ರುದ್ರಾಕ್ಷಿಯ ಮಾಡಿ ಬದನೆಯ ಕಾಯ ಲಿಂಗವನು ಮುದದಿಂ ಧರಿಸಿದ ಹಸ್ತತಾವಡವೆಂದು ಅದಟೊಳು ಹಿಲದ ಕಾಯ (ನಿಜಸಾಂ. ೧-೯೮); ಅರನೆಲ್ಲಿ ಹಿಲ ತಾಳ ಗರಚಿಗಳ್ (ರುಕ್ಮಾಂಗ. ೧೦-೩). **ಹೀಲ:** ''ಬಂಗರಳಿಯೆನೆ ಹೀಲವಕ್ಕು'' (ಮಂಗರಾ. ೩೬-೧೭). **ಹೀಲೆ:** ಸರಲೆಯಿಂ ಹೊರಲೆಯಿಂ ಹಾಲೆಯಿಂ ಹೀಲೆಯಿಂ ತೊರಲೆಯಿಂ ನೀಲಿಯಿಂ ಹೊಂಗಿಯಿಂ . . . ಕಾಡೆಸೆದುದು (ನಂದಿಮಾ. ೧೩-೧೨). [?]

**ಹಿಲಮೋಚಿಕೆ** (ನಾ). ಒಂದು ಬಗೆಯ ಸಸ್ಯ: ''ಕಲಂಬೀ, ಉಪೋದಕಾ, ಮೂಲಕಂ, ಹಿಲಮೋಚಿಕಾ, ವಾಸ್ತುಕಂ . . . ಚಿಲಿಕೆಸೊಪ್ಪು, ಚಕ್ರವರ್ತಿಕೆಸೊಪ್ಪು ಈ ತರಕಾರಿಗಳಿಗೆ ಹೆಸರುಗಳು'' (ಸಿದ್ಧಾಂತಿ. ೧೪೮). [ಸಂ. ಹಿಲಮೋಚಿಕಾ]

**ಹಿಲಾಲು, ಇಲಾಲ್, ಇಲಾಲಿ, ಇಲಾಲು, ಹಿಲ್ಲಾಲು** (ನಾ). ಬಟ್ಟೆಯನ್ನು ಎಣ್ಣೆಯಲ್ಲಿ ನೆನೆಯಿಸಿ ಮಾಡಿದ ದೀವಟಿಗೆ; ಪಂಜು; ಕಕ್ಕಡ: ಸೂರಿಯಪಾನ ಚಾಮರಸಾಲು ಪಂಜುಗಳು ಹಿಲಾಲು ಓಲಗಿಸುವ ನಾನಾವಾದ್ಯರಭಸದಿಂ (ಗೋಮಟೇ. ೧೭-೨೯); ಕರದ ದಿವಟಿ ಹಿಲಾಲುಗಳ ಭಾಸುರ ಜಗಂಜ್ಯೋತಿಗಳ ಕಾಂತಿಸ್ಫುರಿತ ಸೂರ್ಯಜ್ಯೋತಿಗಳ ಸಾಲುಗಳು ಬೆಳಬೆಳಗೆ (ಆನಂರಾ. ೧-೨೪-೩೫); ದಕ್ಷಿಣಹಸ್ತದಿ ಪ್ರಜ್ವಲಿಸುತ್ತಿದೆ ಉರಿವ ಹಿಲಾಲು (ಕೋಗಿಲೆ. ೭೮-೧). **ಇಲಾಲ್:** (ಕ). **ಇಲಾಲಿ:** ತೇರಿನ ಮುಂದೆ ಇಲಾಲಿಗಳನ್ನು ಹಿಡಿದು ಹೋಗುತ್ತಾರೆ (ರೂಢಿ). **ಇಲಾಲು:** ಖಾನಾ ಓಲಗದವರು, ಒಂದು ಜೋಡಿ ತಾಫೆದವರ್ರು, ಇಲಾಲುಗಳು . . . ಕಳುಹಿಸಬೇಕೆಂದು ಅಪ್ಪಣೆಯಾಯಿತು (ಮಾಮರಾ. ೬೫). **ಹಿಲ್ಲಾಲು:** ಅದೇನು ಉತ್ಸವ . . . ಹತ್ತಿಪ್ಪತ್ತು ಹಿಲ್ಲಾಲುಗಳು ಉರಿಯುತ್ತಿವೆ (ಬೆಟ್ಟಹೂ. ೧೨). [<— ಅರ. ಮರಾ. ಹಿಲಾಲ್]

**ಹಿಲುಕು, ಹಿಳುಕು$_2$** (ನಾ). ಭಾಗ; ಚೂರು: ಬೆಳ್ಳುಳ್ಳಿಯ ಹಿಲುಕುಗಳನ್ನು ಬಿಡಿಸಿ ಒಗ್ಗರಣೆಗೆ ಹಾಕು (ರೂಢಿ). **ಹಿಳುಕು$_2$:** ಬೀಜದ ಬೆಳ್ಳುಳ್ಳಿಯ ಹಿಳುಕುಗಳನ್ನು ಸೀಳಿದರೆ ಮೊಳಕೆ ಬಂದಿರುವುದು ಚೆನ್ನಾಗಿ ಕಾಣಿಸುತ್ತದೆ (ತರಜ. ೩೦). [?]

**ಹಿಲ್ಲಾಲು** 'ಹಿಲಾಲು' ನೋ.

**ಹಿಲ್ಲುಗಾಟಿಕೆ** (ನಾ). ಮೋಸಗಾರಿಕೆ; ಕಪಟ: ಹದಿರು ಹೋರಟೆ ಠಕ್ಕು ಹಿಲ್ಲುಗಾಟಿಕೆ ಗನ್ನಗದುಕು . . . ವೇಶ್ಯಾಸುದತಿಯರೊಳಗಿರುತಿಹವು (ಚಂಪ್ರಸಾಂ. ೧೮-೮೫). [ಹಿಲ್ಲು$_7$ (IP <— ಮರಾ . ಹಿಲ್ಲಾ = ಯುಕ್ತಿ) + - ಕಾಟಿ + - ಇಕೆ]

**ಹಿಲ್ಲೋಲ** (ನಾ). ಹುಚ್ಚಾಟಿಕೆ; ವಿಚಿತ್ರವರ್ತನೆ: ಹೆಂಡತಿ ಮಕ್ಕಳ ಉಲ್ಲಾಸ ಹಿಲ್ಲೋಲದಲ್ಲಿಯೂ ವಿಚಾರಪರಮುಖಿಹೊತ್ತು ನೋಡಿದ ಪ್ರಥಮವೆ ವೈದ್ಯನಾಥ ಸಂಶಯಪರಿಚ್ಛೇದಮಾಡಿಬಿಡುವ ಹಾಗೆ . . . ಎಂದ (ಸುಖಿಪಿ. ೧೧೩). [ಸಂ.]

**ಹಿಲ್ಲೋಲಿತ** (ನಾ). ಸ್ವಚ್ಛಂದವಾಗಿ ಬೆಳೆಯುವ ವ್ಯಕ್ತಿ: ಶಕುಂತಲೆ ಅಲ್ಲಿಯ ತರುಲತೆಗಳ ಕೂಡಕೂಡ ನವಯೌವನದಲ್ಲಿ, ದೇಹಮನಗಳಲ್ಲಿ ಹಿಲ್ಲೋಲಿತಳಾಗಿ ಬೆಳೆಯುತ್ತಿದ್ದಳು (ನಿಬಂಧ. I, ೩೮೧). [ಸಂ.]

**ಹಿವ** (ನಾ). ಹಿಮ; ಮಂಜು: ''ಹಿವಂ ಹಿಮಮಕ್ಕುಂ'' (ಕರ್ಣಾನಿ. ೨೬); ಮಕಾರಕ್ಕೆ ವಕಾರಂ — ಅಮರೀ — ಅವರಿ . . . ಹಿಮ — ಹಿವ (ಶಮದ. ೨೬೩ ಪ್ರಯೋ); ಬಿಸಿಲ ಜಳಕ್ಕೆ ಬಾಡದ ಬೆಳ್ದಿಂಗಳ ಹಿವಕ್ಕೆ ಕೋಡದೆ (ರಾಮಾಶ್ವ. ೧೦೦-೪). [< ಸಂ. ಹಿಮ]

**ಹಿವಗದಿರ** (ನಾ). ತಂಪಾದ ಕಿರಣಗಳುಳ್ಳವನು; ಚಂದ್ರ: ''ಜೊನ್ನಡಲಂ . . . ಹಿವಗದಿರಂ, ಕಟ್ಟಲೆವಣಿ, ತಿಂಗಳ್ - ಈ ೨೦ ಚಂದ್ರನ ಪೆಸರ್'' (ಕಶಸಾ. ೨-೨೩); ಕಂದನರ್ದೆಯೊಳ್ ತಾಳ್ದಂ ಹಿವಗದಿರನೆಂದೊಡಿನ್ನುಳಿದವರೇನಂ ಪೊಗಟಲಾರ್ಪರ್ (ಕಬ್ಬಿಕಾ. ೧೨೨); ನಗೆಮೊಗವೆಂಬ ಹಿವಗದಿರನಂ ಸಾರ್ದು ಕಳೆದು (ಸೌಂದಪು. ೧೩-೩೮).

[ಹಿವ + ಕದಿರ್$_2$ + - ಅ$_7$]

**ಹಿಶೆ** 'ಹಿಸ್ಸೆ' ನೋ.

**ಹಿಷಾರೆ** 'ಇಷಾರೆ' ನೋ.

**ಹಿಸಕು** 'ಪಿಸುಂಕು' ನೋ.

**ಹಿಸಿ** 'ಪಿಸಿ$_1$' ನೋ.

**ಹಿಸಿಕ, ಹಿಸುಕ** (ನಾ). ಒಡೆಯುವವನು; ಸೀಳುವವನು: ಇಕ ಪ್ರತ್ಯಯಕ್ಕೆ - ಕರಿಕಂ, ಅಸಿಕಂ, (ರಸಿಕಂ) ಹಿಸಿಕಂ, ಬಾರಿಕಂ (ಶಮದ. ೬.೨೦೩ ಪ್ರಯೋ). **ಹಿಸುಕ:** ಜ್ಞಾನಿಗಳು ಮೌನಿಗಳು ಪರಸಂಧಾನರಲ್ಲಿ ಹರಲ್ಲದೆ ಹೀನ ಹಿಸುಕರು ಹಿಂಸೆಪಾತಕರೇನು ಇಲ್ಲ (ಶರಲೀ. ೧೭೭-೫). [ಹಿಸಿ (< ಪಿಸಿ$_1$) + - ಕ$_3$]

**ಹಿಸಿಕು** 'ಪಿಸುಂಕು' ನೋ.

**ಪಿಸಿತಿನ್** (ಕ್ರಿ). ಹರಿದು ತಿನ್ನು: ಈ ಉಭಯದ ಮಾರ್ಗ ಅಜಿವ ಅಜಿವಿಂಗ ಪಿಸಿ [ಪಾಠಾಂ. ಹೇಸಿ]ತಿಂಬ ಕರಣಕ್ಕೆ ಒಡಗೂಡಿದ ಸ್ನೇಹ ಉಂಟೆ (ಸಕಪ.ಕ. II. ೬೩೭-೧೫೧೦); ಕಾಲ ಪಿಸಿತಿಂಬ ಶಂಕೆಯಿಂದಾ ಪಾದರಕ್ಷೆಗೆ ತೈಲಮಂ ಮೊದಲೆ ತೀಡುವಂತೆ (ಚೇರಮ. ೧-೨೩). [ಹಿಸಿ (< ಪಿಸಿ$_1$) + ತಿನ್]

**ಪಿಸುಕ** 'ಹಿಸಿಕೆ' ನೋ.

**ಪಿಸುಕು$_1$** 'ಪಿಸುಂಕು' ನೋ.

**ಪಿಸುಕು$_2$** (ನಾ). ಅಮುಕುವಿಕೆ; ಒತ್ತುವುದು: "ಮ್ರದ್,ಮ್ರದಿಃ, ಮ್ರದನಂ, ಮ್ರದನೀಯಂ, ಮ್ರದ್ಯಂ, ಮ್ರಾದ್ಯಂ - ಈ ೬ ಪಿಸುಕು" (ಕಾಶಕೃ. ೧೩೫). [< ಪಿಸುಂಕು]

**ಪಿಸುಗು$_1$** 'ಪಿಸುಂಕು' ನೋ.

**ಪಿಸುಣ$_1$** 'ಪಿಸುಣ್' ನೋ.

**ಪಿಸುಣ$_2$** 'ಪಿಸುಣ$_2$' ನೋ.

**ಪಿಸುಣತೆ** 'ಪಿಸುಣತೆ' ನೋ.

**ಪಿಸುಣಾಡು** 'ಪಿಸುಣಾಡು' ನೋ.

**ಪಿಸುಣಿಕೆ** (ನಾ). ಚಾಡಿಹೇಳುವುದು; ಚಾಡಿಕೋರತನ: ಹರಿಯ ಪಿಸುಣಿಕೆಯವರ ಚಿತ್ತವ ಬೆರಸಿ ವೈರವ ಬೆಳಸಿ ಬಂದರು (ಕುಪ್ಪಾಭೀ. ೧-೧೯).

[ಪಿಸುಣ (< ಪಿಸುಣ) + - ಇಕೆ]

**ಪಿಸುಣಿಗ** 'ಪಿಸುಣಿಗ' ನೋ.

**ಪಿಸುಣು** 'ಪಿಸುಣ್'ನೋ.

**ಪಿಸೆ** 'ಹಿಸ್ಸೆ' ನೋ.

**ಹಿಸ್ಸೆ, ಹಿಶೆ, ಹಿಸೆ** (ನಾ). ಪಾಲು; ಭಾಗ: ಕೆರೆ ಕೆಳಗಣ ಸರಕಾರದ ಹಿಸ್ಸೆ ಭೂಮಿಯಲ್ಲಿ ಕಂಠೀರಾಯಿ ಯಿಂನೂರ ಐವತ್ತು ವರಹಾದ ಭೂಮಿಯಂನ್ನು ನಿರುಪಾಧಿಕ ಸರ್ವಮಾನ್ಯವಾಗಿ ನಡಶಿಕೊಂಡು ಬರುವಂತೆ . . . ಅಪ್ಪಣೆ ಮಾಡಿಶಿಕೊಟ್ಟುಯಿದೆ (ಮೈಆರಿ. ೧೯೩೬,೩೬ ೧೪; 1628); ಒಂದು ಹಿಸ್ಸೆ ದವಸ ಎರಡು ಹಿಸ್ಸೆ ನಗದು ಸಹಾ ಕೊಡುವದು (ಮಹಾಪಂ. II. ೬೭); ನಿನ್ನ ಹಿಸ್ಸೆ ನೀ ತಗೊಂಡು ಹೋಗು (ಕಾನೂರು. ೨೭೩). **ಹಿಶೆ:** ನಮ್ಮೊಳಗೆ ಹಿಶೆಯಾಗಲೇಬೇಕೆಂದು ತೀರ್ಮಾನವಾಯಿತು (ಕುರುಕಾ. ೧೫೩). **ಹಿಸೆ:** ಪರಮೇಶ್ವರಯ್ಯನ ಮನೆ ಹಿಸೆಯಾಯಿತು (ಸ್ವಪ್ನಪೂ. ೫); ದನಕರುಗಳ ಹಿಸೆಯಾಯಿತು (ಅಲ್ಪವಿ. ೯೯). [<– ಅರ.ಹಿಂ. ಮರಾ. ಹಿಸ್ಸಾ]

**ಹಿಸ್ಸೆದಾರ** (ನಾ). ಪಾಲುಗಾರ; ಭಾಗಸ್ಥ: ಇನ್ನು ಕೆಲವೇ ವರ್ಷಗಳಲ್ಲಿ ಆ ಕಂಪನಿಯ ಹಿಸ್ಸೆದಾರರು ದಿವಾಳಿಯಾಗುತ್ತಾರೆ (ಪಂಜಪಂ. ೨೦೫). [ಹಿಸ್ಸೆ + - ದಾರ$_4$]

**ಹಿಳಕು** 'ಪಿಳ್ಕು' ನೋ.

**ಹಿಳಗು** 'ಪಿಳ್ಗು' ನೋ.

**ಹಿಳಲು** 'ಪಿಣಿಲ್$_3$' ನೋ.

**ಹಿಳಿ$_1$** 'ಪಿಟಿ' ನೋ.

**ಹಿಳಿ$_2$** 'ಪಿಳಿ$_2$' ನೋ.

**ಹಿಳಿಕು** 'ಪಿಳ್ಕು' ನೋ.

**ಹಿಳಿಲ್** 'ಪಿಣಿಲ್$_3$' ನೋ.

**ಹಿಳಿಲು$_1$** 'ಪಿಣಿಲ್$_3$' ನೋ.

**ಹಿಳಿಲು$_2$** (ನಾ). ದನಗಳಿಗೆ ತಿನ್ನಿಸುವ ಒಂದು ಬಗೆಯ ಮೇವು (?): ಹುರುಳಿ, ಹೊಟ್ಟು, ಹಿಳಿಲು, ಇಂಥ ಖರ್ಚಿನ ಬಾಬ್ತು ಇಲ್ಲದೆ ಬಿಟ್ಟಿ ದೊರೆಯುವ ಸರಾಯಿಯಿಂದಲೇ ಹೋರಿಗಳು ಖಂಡಗಟ್ಟುವುದಾದರೆ. . . ಧರ್ಮ, ನೀತಿ ಯಾರಿಗೆ ಬೇಕು? (ಬೆಳುಮ. ೧೬೭).

[?]

**ಹಿಳಿಸು** (ಕ್ರಿ). ಸುರಿಸು; ಸೂಸು: ಕೊಳಲಿನ ಸರಗಳು . . . ಹೃದಯದಲ್ಲಿ ನರ್ತಿಸುತ್ತಾ ಬಗೆಬಗೆಯ ರಸವನ್ನು ಹಿಳಿಸುತ್ತಿವೆ (ಗೋಕುನಿ. VI. ಮುನ್ನುಡಿ).

[ಹಿಳಿ$_1$ (< ಪಿಟಿ) + - ಸು$_1$]

**ಹಿಳುಕು$_1$** 'ಪಿಳ್ಕು' ನೋ.

**ಹಿಳುಕು$_2$** 'ಹಿಲುಕು' ನೋ.

**ಹಿಳುಕುಗಟಿ** (ನಾ). ಬಾಣದ ತುದಿಗೆ ಕಟ್ಟಿರುವ ಗರಿ : ಪ್ರಳಯದಿವಸದ ಪಟುಪವನನೀ ಹಿಳುಕುಗಟಿಯೊಳುದಿಸಿದುದೊ (ಕುಪ್ಪಾಭೀ. ೪-೧೯); ಹಳಚುತಿರ್ದವಖಂಡಿತಾಸ್ತ್ರದ ಹಿಳುಕುಗಟಿಗಣೆಯಲಗು [ಪಾಠಾಂ. ಗಳುಗುಡಿಯಿಟಿದು, ಗಣೆ ಗಟಿಯಲಗು] ಹೊದೆಸಿದವವನಿಮಂಡಲವ (ತೊರರಾ. ೬-೨೫-೧೫). [ಹಿಳುಕು$_1$ (< ಪಿಳ್ಕು) + ಗಟಿ]

**ಹಿಳುಕುಗೆನ್ನೆ** (ನಾ). ಶರಸಂಧಾನ ಮಾಡಿದಾಗ ಬಾಣದ ಗರಿಯ ಭಾಗ ಅಥವಾ ಹಿಂಭಾಗ ಸೋಕಿದ ಕೆನ್ನೆ (?): ಹಿಳುಕುಗೆನ್ನೆಯ ಹೊಗರುವೋಜೆಯ ಬಿಗಿದ ಹುಬ್ಬುಗಳ ಕಳಶಜನ ಸುತನೊಕಿದನು (ಕುಪ್ಪಾತ. ೨ ೨೫).

[ಹಿಳುಕು$_1$ (< ಪಿಳ್ಕು) + ಕೆನ್ನೆ]

**ಹಿಳುಗಾಡಿಸು** 'ಪಿಳುಗಾಡಿಸು' ನೋ.

**ಹಿಳುಹು** (ಕ್ರಿ). ನಾಶಮಾಡು: ಧೀರ ವಿಟರು ಎಂಬ ಸಾರಮಾತ್ರವನೆಲ್ಲ ಹೀರಿ ಹಿಳುಹಿ ನಾವು ಬಿಸುಡೆ (ಅಮುಸಾಂ. ೩-೯೦). [< ಹಿಳಿ$_1$ + - ಹು$_1$ (< - ಪು$_1$)]

**ಹಿಳ್ಕಂಬು** (ನಾ). ಗರಿಯಿಂದ ಕೂಡಿದ ಬಾಣ: ಕಾಳ್ಕಿಚ್ಚು ಸುತ್ತುರಿಯ ಹಿ[ಪಾಠಾಂ. ಹೇ]ಳ್ಕಂಬು ತಾಗುತಿರೆ (ಕುಮುರಾ. ೧೩-೨೧). [ಹಿಳ್ಕು (< ಪಿಳ್ಕು) + ಅಂಬು$_2$]

**ಹಿಳ್ಕು** 'ಪಿಳ್ಕು' ನೋ.

**ಹಿಳ್ಗು$_1$** 'ಪಿಳ್ಗು' ನೋ.

**ಹಿಳ್ಗು$_2$** 'ಪಿರ್ಗು$_2$' ನೋ.

**ಹಿಳ್ಳನೆ** (ಅ). ಕೂಡಲೆ; ತಟ್ಟನೆ: (೩). [ಹಿಳ್$_0$ + - ಅನೆ$_1$]

**ಹಿಳ್ಳಯಿಸು, ಹಿಳ್ಳಿಸು** (ಕ್ರಿ). ಅಗಲಿಸು; ಬಿರಿಯಿಸು: ಆ ಪ್ರಶ್ನಮಾಲಿಕೆಗೆ ನಾಚಿಕೆಪಟ್ಟುಕೊಂಡು ತುಟಿ ಹಿಳ್ಳಯಿಸಿ ನಗುತ್ತಾ ಪೀಂಚಲು ಹೇಳಿದಳು (ಮಲೆಮ. ೨೨೩). **ಹಿಳ್ಳಿಸು:** ಹೇಷಾರವದಿ. . . ರೋಷಾಗ್ನಿ ನೇತ್ರ ಜ್ವಲಿಸಿ ಹಿಳ್ಳಿಸಿ ನಾಶಿಕದ್ಯಬ್ಬರಿಸಿ (ಪ್ರಸಭಾ. ೫೨-೩). [? + - ಇಸು$_1$]

**ಹಿಳ್ಳಿ, ಹಿಳ್ಳೆ$_2$** (ನಾ). ಕೊಂಬೆ; ರೆಂಬೆ; ಟೊಂಗೆ: 'ಹಿಳ್ಳಿಯೊಡೆ' ಪರಾ. ಹಿಳ್ಳೆ$_2$: 'ಹಿಳ್ಳೊಡೆ' ಪರಾ. [?]

**ಹಿಳ್ಳಿಯೊಡೆ, ಹಿಳ್ಳೊಡೆ** (ಕ್ರಿ). ೧. ಕವಲೊಡೆ; ರೆಂಬೆಯೊಡೆ: "ಅಪ್ರಕಾಂಡಃ, ಸ್ತಂಭಃ, ಗುಲ್ಮಃ — ಈ ೩ ಹಿಳ್ಳಿಯೊಡೆದು ಬೆಳೆದ ತೃಣಧಾನ್ಯಂಗಳು" (ನಾಚಿರಾ. ೧೦೫). **ಹಿಳ್ಳೊಡೆ:** ೨. ಗುಂಪು ಚದುರು: ಸಿಗುಚೆದ್ದ ರೋಮಂ ಕೆದಟಿ ಮೆಳ್ಳಿಸುವ ಕಣ್ಣಾದಾಡೆಗಳಿಂದ ಕಿಡಿಯುದುರೆ ಹಿಳ್ಳೊಡೆದು ಹಿಂದೆ ಮರಳ್ದಕ್ಕಲಂ ಬೀದಿವರಿದುದು ಬೇಂಟೆಕಾಜರೊಳಗೆ (ಪಚಕಾ. ೬-೧೧). [ಹಿಳ್ಳಿ + ಒಡೆ$_1$]

**ಹಿಳ್ಳಿಸು** 'ಹಿಳ್ಳಯಿಸು' ನೋ.

**ಹಿಳ್ಳು** 'ಪಿಳ್ಳೆ' ನೋ.

**ಹಿಳ್ಳೆ$_1$** 'ಪಿಳ್ಳೆ' ನೋ.

**ಹಿಳ್ಳೆ$_2$** 'ಹಿಳ್ಳಿ' ನೋ.

**ಹಿಳ್ಳೆಗಾಲ್** 'ಪಿಳ್ಳೆಕಾಲು' ನೋ.

**ಹಿಳ್ಳೆಗಾಲ** (ನಾ). ಬಡಕಲಾದ ಕಾಲುಳ್ಳವನು: ಬಹುವ್ರೀಹಿಗೆ - ಕಡುಚಾಗಿ ಹಿಳ್ಳೆ [ಪಾಠಾಂ. ಪೆಟ]ಗಾಲಂ, ನಿಡುಮೂಗಂ (ಶಮದ.ಮ. ೧೭೬ ಪ್ರಯೋ).

[ಹಿಳ್ಳೆಗಾಲ್ (< ಪಿಳ್ಳೆಕಾಲು) + - ಅ$_7$]

**ಹಿಳ್ಳೆಗಾಲು** 'ಪಿಳ್ಳೆಕಾಲು' ನೋ.

**ಹಿಳ್ಳೊಡೆ** 'ಹಿಳ್ಳಿಯೊಡೆ' ನೋ.

**ಹಿಳ್ಳೊಡೆಯಿಸು** (ಕ್ರಿ). ಕವಲೊಡೆಯುವಂತೆ ಮಾಡು: ಕುದುರೆಯ ಹಿಂಡ ಹಿಳ್ಳೊಡೆ [ಪಾಠಾಂ. ಹಿಂಡೊಡೆ]ಯಿಸಿದನು ಬಂದು ಕದುಬುವ ಕಾಲುಪಾಯಕರ ಮೆದೆಗೆಡಹಿದನು (ಕುರಾಸಾಂ. ೧೩-೧೩). [ಹಿಳ್ಳೊಡೆ (< ಹಿಳ್ಳಿಯೊಡೆ) + - ಇಸು$_1$]

**ಹಿಜ್ಜನೆ, ಹಿರ್ರನೆ** (ಅ). ಅತಿಶಯವಾಗಿ; ಹೆಚ್ಚಾಗಿ. **ಹಿರ್ರನೆ.**

**ಹಿಜ್ಜಹಿಜ್ಜನೆ** (ದ್ವಿರುಕ್ತಿ): ಹಿಜ್ಜಹಿಜ್ಜನೆ ಹೀರಿ ಮುನಿಸುತ ಸುಜ್ಜಸುಜ್ಜನೆ ಸುರಿದು ರುಧಿರವ ಡಜ್ಜಡಜ್ಜನೆ ತೇಗುತಿರ್ದವು ಡಾಕಿನಿಪ್ರಾತ (ಮದೇಪು. ೩-೬೪). **ಹಿರ್ರನೆಹಿಗ್ಗು** = ಬಹಳವಾಗಿ ಸಂತೋಷಿಸು: ಕೊಂಡಾಡಿದಡೆ ಹಿರ್ರನೆ ಹಿಗ್ಗುವರು (ಮೋಹತ. ೨೬-೨೩). [? + - ಅನೆ$_1$]

**ಹೀಟಿ** 'ಪೀಟಿ' ನೋ.

**ಹೀಂಗೆ** 'ಇಹಗೆ' ನೋ.

**ಹೀಕರಣೆ** (ನಾ). ಜುಗುಪ್ಸೆ; ಹೇವರಿಕೆ: ಈ ಹುರುಳಿಸಾರು, ಹಲಸಿನ ಬೇಳೆ ಸೌತೆಕಾಯಿಹುಳಿ - ತಿಂದು ಹೀಕರಣೆ ಬಂದಿತು (ಮರಮ. ೧೨೪). [ಹೀಕರಿಸು + - ಅಣೆ$_4$]

**ಹೀಕರಿಸು** (ಕ್ರಿ). ಹೀಯಾಳಿಸು; ಅಲ್ಲಗಳೆ; ತಿರಸ್ಕಾರಮಾಡು: ಹೀಕರಿಸಿದಭಿಮನ್ಯು ಪರಿಘದಿಂ ಖಡ್ಗದಿಂ ಕೆಡಪಿದನು ರಿಪುಬಲಗಳ (ತುರಂಗ. ೫೨-೩೪); ನಾರಿಯರು ನಡನಡುಗಿ ಆಕರಿಸಿ ಹೀಕರಿಸಿ (ಜನಮು. ೧೫-೪೩); ನನ್ನನ್ನು ಕಂಡು ಹೀಕರಿಸುವುದಿಲ್ಲವೆ? (ದೇವಹಂ. ೧೯೦). [? + - ಇಸು$_1$]

**ಹೀಗಳೆ** (ಕ್ರಿ). ಅಲ್ಲಗಳೆ; ತಿರಸ್ಕಾರಮಾಡು: ಸರಸದಿಂದಲಿ ತಪ್ಪುಯಿರ್ದೊಡೆ ಜರಿದು ಹೀಗಳೆಯದಲೆ ತಿದ್ದುತ ಕರುಣವಿಟ್ಟಿದನೋದಿ (ಯಚೋರ. ೬); ನನ್ನ ಮಾತನ್ನು ಹೀಗಳೆಯ ಬೇಡಿರಿ (ಬಟ್ಟಪೂ. ೫೪). [ಹೀ$_0$ + ಕಳೆ$_1$]

**ಹೀಗೆ** 'ಇಹಗೆ' ನೋ.

**ಹೀಚು$_1$**, ಹೀಸು (ಕ್ರಿ). ೧.ಧ್ವಂಸ ಮಾಡು; ದಮನಮಾಡು: ಕೀಚಕ ಮೊದಲವನನುಜರನೆಲ್ಲ ಹೀಚಿ ಬಿಸಾಡಿದ ಮಹಿಮನೆ (ಪುರಂಡ. ೪-೩೪-೨); ಉಚಿತಾಸ್ತ್ರದಿಂ ಗೋಚಿದಂ ಹೀಚಿದಂ ಯಸುರಾರಿಯಹಿತಾಸ್ತ್ರವ (ಜನಮು. ೨೯-೪೯); ಹೀಚಿದನು ಜನರಂಗ ವಾಲಯ ಗೋಚಿದನು (ಬಿಜ್ಜಪು. ೬೭-೧೮). ೨. ನೀಳವಾಗಿಸು; ಹಿಗ್ಗಿಸು: ಕೈಗಳನ್ನು ಹೀಚಿದೆ, ಕಾಲುಗಳನ್ನು ಚಾಚಿದೆ (ಮೇದಿಮ. ೬೦); ವಸಂತ ಇಡೀ ಮೈಯನ್ನೇ ಹೀಚಿ ತುದಿಗಾಲ ಮೇಲೆ ನಿಂತನು (ಗಂಮಾಯಿ. ೭೦). ೩. ಪ್ರಯಾಸಪಡು; ಕಷ್ಟಪಡು: ಇನ್ನು ನಾನು ತಾಳಿಕಟ್ಟುವ ತನಕ ಅದನ್ನು ಹೀಚಿ ಕಾರ್ಯಗತ ಮಾಡ್ತೀನಿ (ಮಾಮನ. ೧೧೦). **ಹೀಸು**: ಚಂಚುಗಳಿಂದ ನಖದಿಂದಲುಭಯ ಪಕ್ಕಗಳಿಂದಲಿ ಬಾಸುತಂ ಹೀಸುತಂ ಮೂಸುತಂ ಮುಸುಕಲು (ಜನಮು. ೩೫-೧೫); ಹಾವ ಹಿಡಿದು ಹೀಸಿ ಕರಹುಸಿ ಹೂಜೆಯ ಹೇವಗೇಡಿ ಹೈಯೆಂದವರವೋವೂ ಹೊರೆದವೆ (ಶತಸಾಂ. ೭೮-೧೦೦). [< ಪಿಂಜು$_1$]

**ಹೀಚು$_2$** 'ಪೀಚು$_2$' ನೋ.

**ಹೀಚುಗಾಯಿ** (ನಾ). ಬಲಿಯದಿರುವ ಕಾಯಿ; ಎಳೆಯ ಕಾಯಿ: ಹುಡುಗರು ಹೀಚುಗಾಯಿಗಳನ್ನೇ ಕಿತ್ತು ಹಾಳುಮಾಡಿದ್ದಾರೆ (ರೂಢಿ). [ಹೀಚು$_2$ (< ಪೀಚು$_2$) + ಕಾಯಿ$_4$ (< ಕಾಯ್$_4$)]

**ಹೀದೆ** (ನಾ). ಸಾರವು ಹೀರಿಹೋದುದು; ಹಿಪ್ಪೆ; ಸಿಪ್ಪೆ: ಅವಳ ಬಾಳ ಹಿಂಡಿ ಹೀರಿ ಆಸೆ ಹೀದೆಯುಳಿಸಿತೆನ್ನೆ (ಗಣೇಶ. ೮೯-೧೦); ಅಗಿದು ಉಗಿದ ಕಬ್ಬಿನ ಹೀದೆಯಂತೆ ಕಾಣಿಸುತ್ತಿತ್ತಂತೆ (ಕಂಕಂ. ೨೪). [< ಪೀರ್]

**ಹೀನ** (ಗು). ೧. ಕೀಳಾದ; ಅಲ್ಪವಾದ: ನಾನಾಪರಿಯಲಿ ಮೋಹ ಮಾಡದಿರು ಹೀನ ಮೂತ್ರದ ಕುಳಿಯಲ್ಲಿ (ಪುರಂಡ.ಧಾ. ೨-೪೯-೧); ಪ್ರಭುಗಳೆ ನಾನು ಹೀನತಂತ್ರಗಳನ್ನು ಎಸಗುವುದಿಲ್ಲ (ಶ್ರೀರಾಯ. ೨೦೫). ೨. ಕೆಟ್ಟ; ದುಷ್ಟ. ೩. ತೊರೆದ; ತ್ಯಜಿಸಿದ: 'ಹೀನಧ್ರುವ'ಪರಾ. ೪.ಇಲ್ಲದಿರುವ; ಊನವಾದ. (ನಾ). ೫. ಕೆಟ್ಟುದು: ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿ (ಮಹಾದೇ. ಬ. ೨೮-೫೮); ಮನುಷ್ಯನು ಒಳಿತು ಹೀನಗಳನ್ನು ತಿಳಿಯಬಲ್ಲನು (ಮುಂಬಯಿ.೪-೧೪). ೬. ಕಳಪೆಯಾದುದು; ಕೀಳಾದುದು: ಗದ್ದೆಯ ಹೊಲ ಹೀನ ಗೊಡ್ಡುಹೆಂಡತಿ ಹೀನ (ಇಂಚಾಪ. ೯೭-೭೫). ೭. ಕೀಳುಮನುಷ್ಯ; ಅಲ್ಪವ್ಯಕ್ತಿ: ವನನಾಗಾರಿಯನಾಂತ ದಂತಿಶಿಶುವೋಲ್ ದಿಗ್ದಂತಿಯೊಳ್ ಪೋರ್ದ ಹೀನನವೋಲ್ . . . ನೀಡಿಲ್ಲದಳ್ಳಾಡುಗುಂ (ಶಾಂತಿಪು. ೫-೨೭); ಹೀನರೊಳ್ ನಾನತಿಹೀನನಾಗಿ ಅಭಿಮಾನಿಯಾಗಿ ಕಾಲಕಳೆದೆನಲ್ಲ (ಪುರಂಡ.ಧಾ. ೨-೪೧-೧). [ಸಂ.]

**ಹೀನಗುಣ** (ನಾ). ನೀಚಸ್ವಭಾವ; ಕೆಟ್ಟಗುಣ: ಎನ್ನ ಹೀನಗುಣಗಳನೆಲ್ಲ ಮನ್ನಿಸಿ ಸಲಹೊ (ಪುರಂಡ. ೪-೧೨೬-೩); ಹೀನಗುಣವಿನಿತಿರದ . . . ಶಿಷ್ಯನ ಶಿರದ ಮೇಲೆಯು ತಮ್ಮ ದಕ್ಷಿಣಕರವ ಚಾಚುತಲಿ (ಗಗತಾ. ೨-೨೯). [ಸಂ.]

**ಹೀನಜಾತಿ** (ನಾ).೧. ಕೀಳುಜಾತಿ. ೨. ಕೀಳುಜಾತಿಯಲ್ಲಿ ಹುಟ್ಟಿದವನು: ಗತಿಗೆಟ್ಟು ಹೀನಜಾತಿಗಳೊಡನೆ ಕೂಡಿದೊಡೆ ಸೈರಿಸಂ (ಜೈಮಿಭಾ. ೧೦-೩೯). [ಸಂ.]

**ಹೀನತನ** (ನಾ). ಕೀಳುತನ; ಕೆಟ್ಟತನ: ದಾನಿಗೆ ದೀನತನವೇಕೆ ಜ್ಞಾನಿಗೆ ಹೀನತನವೇಕೆ (ಸರ್ವಜ್ಞ. ೪೪೩). [ಹೀನ + - ತನ]

**ಹೀನತೆ** (ನಾ).= ಹೀನತನ: ನಿನ್ನ ಪುಣ್ಯದಿಂದಂ ನೀರೇಜಾನನೆಯಾಂ ದೊರೆಕೊಂಡಂ ಹೀನತೆಯಂ ಬಿಸುಡು ಮೋಹದಿಂ ಕೂಡೆನ್ನೊಳ್ (ಧರ್ಮಾಮೃ. ೪-೨೫೭); ಹೆರರೆದುರ್ ಸ್ವಪ್ರಶಂಸೆಯ ಹೀನತೆಯನಿನಿತು ಲೆಕ್ಕಿಸದೆ ನೋಡುತಿರ್ದಳು ಕನ್ನೆ (ಚಿತ್ರಾಂಗ. ೧೯-೫೨೨). [ಸಂ. ಹೀನತಾ]

**ಹೀನತ್ವ** (ನಾ). ಕೀಳುತನ: ನಾನಾ ಜನ್ಮದಿ ಬಹು ಯೋನಿಮುಖದಿ ಬಾಹೊ ಹೀನತ್ವವನು ನೀನು ಕಳೆಯಲಾಪೆಯ (ಕನಕ. ೯೩-೧). [ಸಂ.]

**ಹೀನದೈವ** (ನಾ).ಕ್ಷುದ್ರದೈವ; ಕೀಳುದೇವರು: ಹೀನದೈವಗಳ ನಂಬಿದ ಜನರಿಗೆ ತನ್ನ ಜ್ಞಾನದಿಂದಲಿ ಹರಿಯ ತೋರಿದ (ಪುರಂಡ.ಧಾ. ೧-೭-೧). [ಸಂ.]

**ಹೀನಧ್ರುವ** (ನಾ). ಮೈಮೇಲೆ ಧ್ರುವ ಎಂಬ ಸುಳಿಯಿಲ್ಲದ ಕುದುರೆ: ಹೀನಧ್ರುವನುಂ ಪ್ರೋಥಸ್ಥಾನವಳಿತ್ರಯನುಂ. . . ಆಱುವರ್ಷದೊಳಟಿಗುಂ (ಅಶ್ವಶಾ. ೬-೭). [ಸಂ.]

**ಹೀನನುಡಿ** (ನಾ). ಕೆಟ್ಟಮಾತು; ಕೀಳುನುಡಿ: ಹರಿಕಥೆಯನ್ನು ಬಿಟ್ಟು ಹೀನನುಡಿ ನುಡಿಯುವವರು (ಪುರಂಡ. ೧-೨೮-೨). [ಹೀನ + ನುಡಿ$_2$]

**ಹೀನಬಲ** (ನಾ). ಕಡಿಮೆ ಶಕ್ತಿಯುಳ್ಳವನು: ಹೀನಬಲನನಧಿಕಬಲಂ ತೊತ್ತಳದುಳಿದ ನೆಂಬ ಲೋಕದ ಪಟಿಪೊರ್ದದೆ ಮಾಣ್ಗೆ (ಆದಿಪು. ೧೪-೧೦೨). [ಸಂ.]

**ಹೀನಬುದ್ಧಿ** (ನಾ). ಕೆಟ್ಟ ವಿಚಾರ; ದುರಾಲೋಚನೆ: ಧ್ಯಾನಿಸುವನೆನುತಲತಿ ಮೌನವನು ಪಿಡಿದು ಬಕಪಕ್ಷಿಯಂತೆ ಹೀನಬುದ್ಧಿಗಳ ಯೋಚಿಸಿ ಕುಳಿತು ಫಲವೇನು (ಪುರಂಡ. ಧಾ. ೨-೮೫-೧). [ಸಂ.]

**ಹೀನಯಾನ** (ನಾ). [ಬೌದ್ಧ] ಬೌದ್ಧಮತದ ಒಂದು ಶಾಖೆ: ಈ ಮಾಧ್ಯಮಿಕ ಸಂಪ್ರದಾಯಕ್ಕೆ ಮಹಾಯಾನವೆಂದೂ, ಯೋಗಾಚಾರಸಂಪ್ರದಾಯಕ್ಕೆ ಹೀನಯಾನವೆಂದೂ ಹೆಸರು (ಹಿಂದಸಾ. ೨೫); ಐತಿಹಾಸಿಕಪುರುಷನಾದ ಬುದ್ಧನು ಬೋಧಿಸಿದ ಧರ್ಮಕ್ಕೆ ಮುಂದೆ ಹೀನಯಾನವೆಂಬ ಹೆಸರು ಬಂದಿತು (ಕಶಾಅ. ೧೧೮). 'ಮಹಾಯಾನ' ಪರಾ. [ಸಂ.]

**ಹೀನಯಿಸು** 'ಹೀನಿಸು' ನೋ.

**ಹೀನಲೋಹ** (ನಾ). ಕೀಳುಲೋಹ; ಕೆಳದರ್ಜೆಯ ಲೋಹ: ಕಿರೀಟದೊಳಗೆ ಸೊನ್ನಗಾರನು ಹೀನಲೋಹವನ್ನು ಬೆರೆಸಿ ಚಿನ್ನವನ್ನು ತಕ್ಕೊಂಡನೆಂದು ಅರಸನಿಗೆ ಸಂಶಯ ಬಂತು (ಮುಂಬಯಿ. ೫-೬೫). [ಸಂ.]

**ಹೀನವೃತ್ತಿ** (ನಾ). ತುಚ್ಛ ಕೆಲಸ; ನೀಚಕಾರ್ಯ: ಎನಗಗ್ಗಳಿಕೆಯಲ್ಲದೆ ಹೀನ ವೃತ್ತಿಯ ಬಳಸಿ ನಡೆಸನು (ಕುಪ್ಪಾಊ. ೧೧-೧೭); ಆರ್ಜನೆಗಾಗಿ ಸೇವಾದಿ ಹೀನವೃತ್ತಿ ಯನ್ನವಲಂಬಿಸುತ್ತಲೂ ಇರಲಿಲ್ಲ (ಆರ್ಯಧ. ೮೩). [ಸಂ.]

**ಹೀನಸುಳಿ** (ನಾ).೧. ಮೈಮೇಲೆ ಇರುವ ಅಶುಭಸೂಚಕವಾದ ಕೂದಲಿನ ಸುಳಿ: ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ . . . ಕೊಪ್ಪಲ್ಲು ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೆ ಸುಳಿ ಇರೋದ ತತ್ತಾಲಾ (ಹುಟ್ಟಿಪ. ೧೬೫); ಹೀನಸುಳಿ ಬೋಳಿಸಿದರೆ ಹೋದೀತೆ? (ಗಾದೆ). ೨. (ಆಲಂ) ಕೆಟ್ಟಚಾಳಿ; ದುಷ್ಟಸ್ವಭಾವ: ತಮ್ಮಾಜಿ ಹೀನಸುಳಿಯ ಪ್ರಾಣಿ (ದೀಪಹ.। ೩೫). [ಹೀನ + ಸುಳಿ$_2$ (< ಸುೞಿ$_2$)]

**ಹೀನಸ್ಥಿತಿ** (ನಾ). ಕೆಟ್ಟಸ್ಥಿತಿ; ದುರ್ದೆಸೆ: ಅವನ ವ್ಯವಹಾರ ತುಂಬ ಹೀನಸ್ಥಿತಿ ಯಲ್ಲಿದ್ದುವು (ಪುನರು. ೩೧೧). [ಸಂ.]

**ಹೀನಾಂಗ** (ನಾ). ಅಂಗಹೀನ; ಅಂಗವಿಕಲ: ಒರ್ವಂ ಹೀನಾಂಗನಂ ಕಂಡಾವುದು ಕಾರಣದಿಂತಪ್ಪ ರೂಪಾದುದೆಂದು ಸೆಟ್ಟಿ ಬೆಸಗೊಂಡೊಡೆ (ಚಾವುಂಪು. ೬೩). [ಸಂ.]

**ಹೀನಾಧಿಕ** (ನಾ). ಕಡಮೆ ಮತ್ತು ಅಧಿಕ: ಹೀನಾಧಿಕ ಗುಣದೋಷವಿತಾನ ಮುಮಂ ಲಿಂಗವಚನಭೇದಂಗಳುಮಂ ಮಾನಧನರಱಿದು ಪೇಳ್ಗೆ (ಕವಿರಾ. ೩-೮೭). [ಸಂ.]

**ಹೀನಾಧಿಕವಿನಿಮಾನ** (ನಾ). [ಜೈನ] ಅಸ್ತೇಯಾಣುವ್ರತದ ಐದು ಬಗೆಯ

ಅತಿಚಾರಗಳಲ್ಲಿ ಒಂದು; ವಸ್ತುಗಳ ವಿಕ್ರಯವ್ಯವಹಾರಗಳಲ್ಲಿ ತೂಕ, ಮಾಪುಗಳನ್ನು ಹೆಚ್ಚು ಕಡಮೆಯಾಗಿ ಇಡುವುದು: ಹೀನಾಧಿಕವಿನಿಮಾನ ಸ್ತೇನಾ[ಹೃತ] ದಾನಸದೃಶ ಮಿಶ್ರ ವಿಲೋಪಸ್ತೇನಪ್ರಯೋಗಮೆಂದಿವು ತಾನಸ್ತೇಯ ವ್ರತಕ್ಕತಿಕ್ರಮಮಕ್ಕುಂ (ಸುಕುಮಾ. ೬-೧೫); ತೂಕಮಾಡುವ ತಕ್ಕಡಿ ಕಲ್ಲುಗಳನ್ನು ಸರಿಯಾದವುಗಳನ್ನು ಇಡದೆ ಇರುವುದು, ಜೀನಸನ್ನು ಕೊಳ್ಳುವಾಗ ಹೆಚ್ಚಿಗೆ ಬರಬೇಕು ಮಾರುವಾಗ ಕಡಿಮೆ ಹೋಗಿರಬೇಕು — ಈ ಪ್ರಕಾರದ ವ್ಯವಹಾರ ಇಡುವುದು ಇದು ಹೀನಾಧಿಕವಿನಿಮಾನವೆನಿಸುತ್ತದೆ (ಶ್ರಾವಕಾ. ೧೫೪). [ಸಂ.]

**ಹೀನಾಮಾನ** (ಅ). ಅಪಮಾನವಾಗುವಂತೆ; ಹೀಯಾಳಿಕೆಯಿಂದ ಕೂಡಿ: ಯಾರಾದರೂ . . . ಸಹಾಯ ಕೋರಿ ಬಂದರೆ ಅವರಿಗೆ ಹೀನಾಮಾನ ಅಂದು ಕಳುಹಿಸುತ್ತಿದ್ದ (ಹೇಮಕೂ. ೧೨); ಅವರು ನಿಮ್ಮಿಬ್ಬರನ್ನೂ . . . ಮನಸ್ಸಿಗೆ ಬಂದಂತೆ ಹೀನಾಮಾನವಾಗಿ ಬೈದು, ಹೊರಗೆ ಕಳುಹಿಸಿದರು (ರಾಯಕ. ೬೨). [< ಸಂ. ಹೀನಮಾನ]

**ಹೀನಾಯ** (ನಾ). ೧. ಅವಮರ್ಯಾದೆ; ಅವಮಾನ: ಅವರಿಗೆ ತುಂಬಾ ಹೀನಾಯವಾಯಿತು (ವಿದ್ಯಾರ್. ೫೬); ತನಗೆ ಒದಗಿದ ಹೀನಾಯವಾದ ಗತಿ (ವೀರಯೋ. ೧೧). ೨. ಕೀಳಾದುದು; ಅಲ್ಪವಾದುದು: ದಯವಿಟ್ಟು ಈ ಹೀನಾಯವಾದ ಕೆಲಸವನ್ನು ಮಾತ್ರ ಮಾಡಬೇಡಿ (ಸುಂದರಿ. ೩); ಆ ಕೆಲಸ ಹೀನಾಯದ್ದು (ಮುನಿಮಾ. ೯). ೩. ಕೊರತೆ; ನ್ಯೂನತೆ: ಯಾವ ಕಾಲಕ್ಕಂ ಪೂರಾಯಂ ಹೀನಾಯಮೆನ್ನದೆ ವರ್ಷನಿಬನ್ಧದಿಂ ಧರ್ಮವತ್ತಳೆಯಾಗಿ (ಎಕ. XI, ದಾವಣ. ೧೪೩-೨೫; 1062). [< ಹೀನ]

**ಹೀನಾಯವಾಡು** (ಕ್ರಿ). ಕೆಟ್ಟಮಾತನ್ನಾಡು; ತುಚ್ಛವಾಗಿ ನುಡಿ: ಹೀನಾಯ ವಾಡದಿರು ಪರರ ಗುಣಗಳ ಎಣಿಸಿ (ವಿದಾಕ್ಯ. ೩೬ ಅನುಪಲ್ಲವಿ). [ಹೀನಾಯ + ಆಡು$_1$]

**ಹೀನಾಳಿ** (ನಾ). ಕ್ಷುದ್ರವ್ಯಕ್ತಿ: ಅವಳಂ ಬೈದು ನಿಂದಿಸುತ ಹೀನಾಳಿಯಂ ಮಾಡುತ . . . ಕರತಂದು (ಹಮುಚ. ೧೮೭). [ಹೀನ + - ಆಳಿ$_1$]

**ಹೀನಿಗ** (ನಾ). ನೀಚ; ಅಲ್ಪ: ಹೀನಿಗನಾಗುವರೆ ದುರ್ಲೋಷಿ ಖಗಪತಿಯೆಂದಳಿಂದು ಮುಖಿ (ಜಿನಭಾ. ೫೨-೫೦). [ಹೀನ + - ಇಗ]

**ಹೀನಿಸು, ಹೀನಯಿಸು, ಹೀನ್ಯೈಸು** (ಕ್ರಿ). ೧. ಹೀನಾಯಮಾಡು; ಅವಮಾನಿಸು: ಅನ್ಯರ ಕೃತಿಯಂ ಹೀನಿಸಲಲ್ಲದೆ ಕುನ್ನಿಗಳೇನಱಿವರೆ ಕೃತಿರಹಸ್ಯಮಂ ಸುಕವಿಯವೋಲ್ (ಪುಣ್ಯಾಸ್ರ. ೧-೨೫); ಹೀನಿಸಿ ನುಡಿಯಲೇಕೆಮ್ಮ (ತೊರರಾ. ೬-೫-೫೩). ೨. ಅಲ್ಪವಾಗಿ ಪರಿಗಣಿಸು: ಆ ನಿಸಿತಶಸ್ತ್ರಗಳನಂತರದಿ ಕತ್ತರಿಸಿ ಹೀನಿಸುತ ಹಾನಿಸುತಲಿ (ಜಿನಮು. ೩೦-೪೩). **ಹೀನಯಿಸು:** ೧. ಬಡವರೆಂದು ತಾ ಹೀನಯಿಸಿದನ್ (ನನಲ್ಲ. ೧೦೦); ನಿನ್ನ ಒಳ್ಳೆಯತನ ಸಾಧ್ವಿಯಾದ ಅತ್ತೆಯನ್ನು ಹೀನಯಿಸಿ ಬಯ್ಯುವಾಗ ತೋರಿಬಂದಿದೆ (ಒಡ್ಡಉ. ೧೬೫). **ಹೀನ್ಯೈಸು:** ೧. ತಾನು ಮೇಲೆಂದುಬ್ಬಿ ಹೀನ್ಯೈಸುವವ ಹೊಲೆಯ (ಗಿಳಿವಿಂ. ೧೬-೭); ಅವರ ಸಂಗಡ ಜಗಳವಾಡಿ ಅವರನ್ನು ಹೀನ್ಯೈಸಿ ಬೈದಳು (ದೇವೀಚೌ. ೫). [ಹೀನ + - ಇಸು$_3$]

**ಹೀನೇಂದು** (ನಾ). ಕ್ಷಯಿಸುತ್ತಿರುವ ಚಂದ್ರ; ಕ್ಷೀಣಚಂದ್ರ: ಪಡೆಯೊ ಹೀನೇಂದು ವಿಸಿರುಳ ಮುಂಗುಡಿಯೊ (ಕುಮ್ಯಾಭೀ. ೪-೭೩). [ಸಂ.]

**ಹೀನ್ಯೈಸು** 'ಹೀನಿಸು' ನೋ.

**ಹೀನೋತ್ಪಾತ** (ನಾ). ಕೆಡುಕನ್ನುಂಟುಮಾಡುವ ಅಶುಭಸೂಚನೆ: ಹೀನೋತ್ಪಾತದ ಸೂಚನಾರ್ಥಮೋ ಮಹಾನಾಗಂ ಶಿರಂದೂಗೆ ಮೇಣ್ ಭೂನಾಕಂಗಳ ಥೀರಮಾದ ಬಗೆಯೋ (ಹಮ್ಮಿರ. ೭-೯). [ಸಂ.]

**ಹೀನೋಪಮೆ** (ನಾ). [ಕಾವ್ಯಮೀ] ಅಲ್ಪವಾದ ವಸ್ತುವಿನೊಂದಿಗೆ ಅತಿಶಯವಾದ ವಸ್ತುವನ್ನು ಹೋಲಿಸುವ ಒಂದು ಉಪಮೆ: ಹೀನೋಪಮೆಗೆ- ಎರಲೆಯ ಪಿಂಡುಗಳಂ ದೆಸೆವರಿವಿನಮಳಱೆ ತಗುಳ್ವ ನಾಯಂತೆ ರಣಾಜಿರದೊಳಿದಿರ್ಚಿದ ಬಲವದ್ವಿರೋಧಿಸೈನಿಕಮನಾ ನೃಪಂ ಬೆಂಕೊಂಡಂ (ಕಾವ್ಯಾವ. ೬೮೧). [ಸಂ. ಹೀನೋಪಮಾ]

**ಹೀಯಾವಳಿ** (ನಾ). ಒಂದು ಬಗೆಯ ಔಷಧೀಸಸ್ಯ: ನಿರ್ವಿಷ, ಚಂಗಲ್ವಕೋಷ್ಟ, ಶುಂಠಿ, ಹೀಯಾವಳಿ, ಚಿತ್ರಮೂಲ . . . ಇವನ್ನೆಲ್ಲಾ ಕೂಡಿ . . . ಮಂದಾಗ್ನಿಯಿಂದ ಎಣ್ಣೆ ನಿಲುವ ತನಕ ಅಟ್ಟು (ಸಕವ್ಯ. ೧೭೯). [?]

**ಹೀಯಾಳ** 'ಹೀಹಾಳಿ$_1$' ನೋ.

**ಹೀಯಾಳಿಕೆ** 'ಹೀಹಾಳಿಕೆ' ನೋ.

**ಹೀಯಾಳಿಸು** 'ಹೀಹಾಳಿಸು$_1$' ನೋ.

**ಹೀಯು ?** (ಕ್ರಿ). (?): ಮಾಯಲುಣ್ಣಲಿ ವೀಳ್ಯ ಕೊಳ್ಳಲಿ ಹೀಯಲೊರಗಲಿ ಕಾಂತೆಯರ ಬಲು ಹೂಯಲನು ಮಾಡಲಿ ರಣದಲತಿಸುಕೃತದುಷ್ಕೃತವ (ನಿಭಾಗ. ೧೧-೩೪-೨೪). [?]

**ಹೀರ್** 'ಪೀರ್' ನೋ.

**ಹೀರ** (ನಾ). ೧. ನವರತ್ನಗಳಲ್ಲಿ ಒಂದು; ವಜ್ರ: "ಹೀರಮನೆ ವಜ್ರಂ" (ಕರ್ಣಾನಿ. ೩೭); ಮುತ್ತಿನ ನೀಲದ ಹೀರದ ಮಾಣಿಕದ ಪೊಳೆವ ಜೀರ್ಕೋಟವೆಗಳಂ (ಚಂದ್ರಪು. ೭-೧೨೯); ಚಂದನಮನಿಂದುವಂ ಹಾರಮಂ ಹೀರಮಂ ಘನಸಾರಮಂ ಹಿಂದುಗಳೆವಮಳಧವಲಾಂಗದಿಂ ಸೊಗಯಿಸುವನಂ . . . ಭಜಿಸುವೆಂ (ಉದ್ಭಟ. ೧-೧೧); ಹೀರಪಟೀರ . . . ಗೌರರುಚಿಪೂರಿತ ಚಿತ್ರಶರೀರದಿಂದೆ . . . ವಿಮಳವಿಳಸಿತ ಧವಳಾತುಳಾಖಂಡಚಿತ್ಪಿಂಡ ವೃಷಭೇಶ್ವರನಂ ಕಂಡು (ಹಮ್ಮಿರ. ೫-೪). ೨. ಸಿಡಿಲು. ೩. ಹಾವು. ೪. ಕೊರಳ ಹಾರ; ಸರ. ೫. ಹುಲಿ. ೬. ಶಿವ. ೭. ಒಂದು ಬಗೆಯ ಸಸ್ಯ: "ಕೇಶಫಲಃ - ಹೀ(ರೆ)ರ" (ಓಷಧಿ. ೪೦); ಹೀರ, ಕಿರಿಚರಿಪ್ಪೆ (ವೃಜಿಗಿ. ೪೨-೮೩೮). [ಸಂ.]

**ಹೀರಕ** (ನಾ). ವಜ್ರ: ಅಂಗಿಯ ತೋಳಿಗೆ ಹಚ್ಚಿದ ಹೀರಕರತ್ನದ ಬಿರಡೆಗಳು ಕಾಣಿಸಿಕೊಳ್ಳುತ್ತವೆ (ಇಪ್ರಕ. ೩೧೯). [ಸಂ.]

**ಹೀರರೇಖೆ** (ನಾ). ವಜ್ರದ ಗುರುತು: ಪರಮಪಾದದಿ ಹೀರರೇಖೆಯಿರಲು ಕಂಡು (ಚಂದ್ರಾವ. ೨೫). [ಸಂ. ಹೀರರೇಖಾ]

**ಹೀರಾಯುಧ** (ನಾ). ವಜ್ರಾಯುಧ: ಕವೀಂದ್ರಸಮಯಾಬ್ಧಿರಾಕಾಚಂದ್ರಕುಕವಿಗಿರಿ ಹೀರಾಯುಧಂ (ವಿಕೋಪು. ೨-೮೮). [ಸಂ.]

**ಹೀರಾವಳಿ** (ನಾ). ವಜ್ರದ ಹಾರ,— ಸರ: ಮುದ್ರಿಕೆಯುಂಗುರವನಳವಡಿಸಿದರು ಹಸ್ತಾಂಗುಲದೊಳುರದಲ್ಲಿ ಹೀರಾವಳಿಯನಿಕ್ಕಿದರು (ಬಸಪು. ೪-೩೭); ಮಿಗೆ ಹೊಳೆವ ಹೀರಾವಳಿಯ ಕೊರಳುಗಳ . . . ಭಾರವಣೆಯಲಿ ಬಂದನು ಕರ್ಣನೋಲಗಕೆ (ಕುಮ್ಯಾದ್ರೋ. ೧-೧೪); ಕಠಾರಿ ಮುಸುಂಡಿ ಮುದ್ಗರ ಕಡೆಯ ಸರವಳಿ ಹಾರ ಹೀರಾವಳಿಯ ಕುಂಡಲದ (ತೊರರಾ. ೬-೨೦-೯). [ಸಂ. ಹೀರಾವಲಿ]

**ಹೀರಿಕೆ** (ನಾ). ಹೀರಿಕೊಳ್ಳುವಿಕೆ; ಒಳಸೆಳೆದುಕೊಳ್ಳುವಿಕೆ: ಕೊರಕಂಬಿಗಳಲ್ಲಿನ ಆಹಾರನಾಳದಲ್ಲಿ ತುದಿಯವರೆಗೂ ಹೀರಿಕೆಯುಂಟಾಗುತ್ತದೆ (ಕೀಟಜೆ. ೭೮). [ಹೀರು (< ಪೀರ್) + - ಇಕೆ]

**ಹೀರಿಸು** (ಕ್ರಿ). ಕುಡಿಸು; ಈಂಟಿಸು: ಎನ್ನ ಪರಾಕ್ರಮಾನಲವಾಡವನಿಂ ಮುನ್ನೀರ ಹೀರಿಸಿ ಹರಿಯ ಬನ್ನಬಡಿಪೆವು (ನೇಮಿಸಂ. ೨೬-೮೮). [ಹೀರು (< ಪೀರ್) + - ಇಸು$_3$]

**ಹೀರು** 'ಪೀರ್' ನೋ.

**ಹೀರೆ$_1$** 'ಪೀರೆ' ನೋ.

**ಹೀರೆ$_2$** (ನಾ). = ಹೀರ ೧ : ವರ ಜ್ಯೋತಿರ್ಮಾಲೆಯೆಂದೆಂಬ ಪದಕವ ಹೀರೆಯಂದದಿ ಪ್ರಜ್ವಲಿಪ ಕರ ಚೆಲುವಾದ ಮುತ್ತಿನ ಬೊಟ್ಟ ದೇವನು ಎರಕದೊಳಿತ್ತನೇನೆಂಬೆ (ಜ್ಞಾನಚ. ೩-೫೧). [ಸಂ. ಹೀರ]

**ಹೀರೆಕಾಯಿ** (ನಾ). ಒಂದು ಬಗೆಯ ತರಕಾರಿ ಕಾಯಿ: ಸೌತೆಯ ಕಾಯಿ ೧ . . . ಹೀರೆಕಾಯಿ ೫ (ಬೊಂಕಶಾ.೧೪೪೩, ಹುಬ್ಬಳ್ಳಿ.೬೩-೩೮; ?); ಹೀರೆಕಾಯಿ ನಮ್ಮ ದೇಶದ ಎಲ್ಲಾ ಕಡೆಗಳಲ್ಲೂ ಬೆಳೆಯಾಗುತ್ತದೆ (ತರಚಿ. ೨೭). [ಹೀರೆ$_1$ (< ಪೀರೆ) + ಕಾಯಿ$_4$ (< ಕಾಯ್$_4$)]

**ಹೀಲ$_1$** (ನಾ). ವೀರ್ಯ; ರೇತಸ್ಸು. [ಸಂ.]

**ಹೀಲ$_2$** 'ಹಿಲ' ನೋ.

**ಹೀಲಗ** (ನಾ). ಒಂದು ಬಗೆಯ ಸಸ್ಯ: ಕಾಡುಗುಂಬಳ, ಕಟಕಾಂಬ, ಹೀಲಗ (ವೃಜಿಗಿ. ೭೫-೧೫೩೭). [< ಹೀಲ$_2$ ?]

**ಹೀಲಿ** 'ಪೀಲಿ' ನೋ.

**ಹೀಲಿಕರಗ** 'ಪೀಲಿಗರಗ' ನೋ.

**ಹೀಲಿಗರಿ** (ನಾ). ನವಿಲುಗರಿ: ಮುಡಿಯಲಿ ಹೀಲಿಗರಿಗಳ ಸುತ್ತಿಕೊಂಡಿಹ ಗೋಪರಂದದಲಿ (ಯಾದವ. ೬-೬೩). [ಹೀಲಿ (< ಪೀಲಿ) + ಗರಿ (< ಗಱಿ)]

**ಹೀಲಿಗೆದಱು** (ಕ್ರಿ). ನವಿಲುಗರಿಯನ್ನು ಹರಡು,— ಬಿಚ್ಚು: ಮೇಲುಮೊಳಗಿನ ದನಿಯನಾಲಿಸಿ ಹೀಲಿಗೆದಱುವ ನವಿಲವೊಲು . . . ಹಿಗ್ಗಿದನು (ಕುಮಾ.ಕ. ೨೦-೧೭).
[ಹೀಲಿ (< ಪೀಲಿ) + ಕೆದಱು$_1$ (< ಕೆದಱ್$_1$)]

**ಹೀಲಿಗೊಡೆ** 'ಪೀಲಿಗೊಡೆ' ನೋ.

**ಹೀಲಿದಳೆ** 'ಪೀಲಿದಟೆ' ನೋ.

**ಹೀಲೆ** 'ಹಿಲ' ನೋ.

**ಹೀವರ** (ಗು). ಕೊಬ್ಬಿದ; ದಪ್ಪವಾದ: ಪೀವರ, ಹೀವರ . . . ದೀಪಿಕೆ, ದೀವಿಗೆ (ಶಬ್ದಾನು. ೧೪೫ ಪ್ರಯೋ). [< ಸಂ. ಪೀವರ]

**ಹೀಸು** 'ಹೀಚು$_1$' ನೋ.

**ಹೀಹಂದಿ** (ನಾ). ಹೇಯವಾದ ಹಂದಿ; ತುಚ್ಛವಾದ ಹಂದಿ; ಪೇಪಂದಿ: ಕಾಂತಾನಿವಾಸಾಂತರದೊಳ್ ಶ್ವಾನಂಗೆ ಹೀಹಂದಿಗೆ ಕಪಿಗೆಣೆಯಾಗಿರ್ದು ಬೇಳಾಗುತುಂ (ರಸ್ನಾಶ. ೫). [ಹೀ$_0$ + ಹಂದಿ (< ಪಂದಿ)]

**ಹೀಹಾಳಿ$_1$**, ಹೀಯಾಳ (ನಾ). ೧. ತೆಗಳಿಕೆ; ಅವಹೇಳನ: ಬೀಳಲವನೀಪತಿಗಳತಿ ಹೀಹಾಳಿಯಲಿ ಸಾತ್ಯಕಿ ಮುಳಿದು (ಕುಮಾ.ಭೀ. ೬-೭); ಧೂಳಿ ಮುಸುಕಲ್ಕು ಹಳಚಿದುದು ಹೀಹಾಳಿಯಲಿ ಮೂದಲಿಸುವರೇನ್ನೆಲಪ್ಪೆಲದ ಕಣಕೆಯವರೇ ರಾಯ (ಅಂಬಿಕಾ. ೩೯-೧೩). **ಹೀಯಾಳ**: ೨. ದೀನಭಾವ; ದೈನ್ಯತೆ: ಹೀಯಾಳದಿಂದಲಿ ಕರವ ಮುಗಿದು ನಿಂದು ಬಾಳುವ ಜೀವನು (ವಿಉಸು. ೧೦-೧೩). [< ಹೀ]

**ಹೀಹಾಳಿ$_2$**, ಹಿಯ್ಯಾಳಿ (ನಾ).೧. ಪ್ರತಿಜ್ಞೆ; ಪಂಥ: "ಹೀಹಾಳಿಯೆನಲ್ ವಾಶಿಯು" (ಭಾರನಿ. ೨೭). ೨. ಹುರುಡು; ಪೈಪೋಟಿ: ನೆಱೆ ಹೀಹಾಳಿಯುಳ್ಳರೆ ಬರಲಿ ಕರ್ಣದ್ರೋಣ ಕೃಪರೆನುತ (ಕುಮಾ.ದ್ರೋ. ೧೫-೬೦); ಶೂಲಿಯೊಳು ತಾ ಹೂಣಿಸಿದ ಹೀಹಾಳಿಯನು ಮಱುಕಳಿಸಿ (ಪ್ರಭುಲೀ. ೭-೨೭). ೩. ಸಂಭ್ರಮ; ಸಡಗರ: ಚಾಳ ನೂಕಿಸಿ ಪೊತ್ತುಗಳವರು ಹೇಳಿ ಫಲವೇನಿನ್ನು ರಣಹೀಹಾಳಿ ತಮಗಿಲ್ಲೆಂದು ಗಹಗಹಿಸಿ ದನು ಕಲಿಭೀಷ್ಮ (ಕುಮಾ.ಭೀ. ೯-೧೭); ಕೇತುಳಲೆ ಮನದೊಳಗೆ ಕಡುಹೀಹಾಳಿ ಮಿಗಲೊಲೆದೊಲೆದು ತನುವನು ಮೌಳಿಗಳಲಾಂತರು ಮಹಾಭಾಗವತನಂಘ್ರಿಗಳ (ನಿಭಾಗ. ೭-೭-೧). **ಹಿಯ್ಯಾಳಿ**: ೨. ಮಧುಕೈಟಭರ ಹಿಯ್ಯಾಳಿ ಹಿಂಗಿತು ಪರಶುರಾಮನ ತೋಳ ಬಲುಹಿನಲಿ (ಸಂಭಪ. ೨೭-೨೭); ಅಯ್ಯಂಗಿತ್ತ ಭಾಶಿತಕೆ ಖೂಳನಹೆನೆಂದಿಂದ್ರಜಿತು ಹಿಯ್ಯಾಳಿ[ಪಾಠಾಂ. ಹೀಹಾಳಿ]ಯಲಿ ತಮ್ಮನ್ನಯಾಗತದೇಳಿಗೆಯ ಮನೆದೇವತೆಯ ನೋಲೈಸಲ್ಕೆತಂದ (ತೊರರಾ. ೬-೪೨-೨). [?]

**ಹೀಹಾಳಿಕೆ,** ಹೀಯಾಳಿಕೆ, ಹಿಯ್ಯಾಳಿಕೆ, ಹೀಹೇಳಿಕೆ (ನಾ). ೧. ನಿಂದೆ; ತೆಗಳಿಕೆ; ಮೂದಲಿಕೆ: ಈ ವಿಧಿಗೆ ಬರಿಸಿದ ಹೀಹಾಳಿಕೆಗಾಗಿ ಕೊಂಡದ ಉರಿಯೊಳು ತನುವ ನೀಗಿದೆನು (ನೇಮಿಸಂ. ೮-೧೧೫); ಹೀಹಾಳಿಕೆಯ ಹೇವಗಳ ಮನದುಬ್ಬಾಳಿನಿಂದೆ ಚ್ಚಾಡಿದರು (ತೊರರಾ. ೬-೫೦-೧೨). ೨. ಅವಮಾನ; ಅಗೌರವ: ಆಳುವನಟ್ಟಿದೂಳಿಗ ಭಂಗವಾದ ಹೀಹಾಳಿಕೆಯೊಳು ಬರುತಿರ್ದ (ಭರಚ. ೪೯-೧೦). **ಹೀಯಾಳಿಕೆ**: ೧. ಬಸವಲಿಂಗಯ್ಯನ ಕುಹಕ ಹಾಗೂ ಹೀಯಾಳಿಕೆಯ ಮಾತಿನಿಂದ ಗುರುರಾಜರಾಯರು ತುಂಬಾ ನೊಂದುಕೊಂಡರು (ಮರಳಿ. ೧೦); ಹೀಯಾಳಿಕೆ ಮರಣಕ್ಕಿಂತ ಕ್ರೂರತರವೂ ವಿಷತಮವೂ ಆಗಿದೆ (ಪ್ರವಾತೂ. ೧೨೫). **ಹಿಯ್ಯಾಳಿಕೆ**: ೧. ತೇಳಿನ ಗದ್ದಿಗೆಯೊಳಗಣಾಲಯ ದಂತೆ ಹಿಯ್ಯಾಳಿಕೆಯಲ್ಲದೆ ಅಕಟಕಟ (ವಿದ್ಯಾಕ್ಯ. ೪೦-೩); ಕಡೆಗೊಮ್ಮೆ ನಿಷ್ಠುರಪಕ್ಷದ ಮುಖಿಂಡನ ಹೀಯ್ಯಾಳಿಕೆಯನ್ನು ಮಾಡಿದ್ದನು (ರಘುರಾಣಿ. ೩೪). **ಹೀಹೇಳಿಕೆ**: ೧. ಹೀಹೇಳಿಕೆಯ ಮಾತ ನುಡಿದು ಭಂಗಿಸುವರೆಯಾಹವದೊಳು (ರಾಮವಿ. ೧೮-೧೭೪).
[ಹೀಹಾಳಿ$_1$ + - ಕೆ]

**ಹೀಹಾಳಿಗೆಡಿಸು** (ಕ್ರಿ). ೧. ಅವಮಾನಗೊಳಿಸು; ಅಗೌರವವನ್ನುಂಟುಮಾಡು: ಹಾಳಿಹಸುಗೆಯನಱಿಯದಾ ಹೀಹಾಳಿಗೆಡಿಸಿದನಂದು ಸಭೆಯಲಿ (ಕುಮಾ.ದ್ರೋ. ೧-೨೭). ೨. ಹೀನಾಯಗೊಳಿಸು; ಸೋಲಿಸು: ಕುರುಭೂಪಾಲನ ಮದದಾನೆಯನು ಹೀಹಾಳಿಗೆಡಿಸಿ ತುರಂಗ ರಥ ಸಾರಥಿಯ ಖಂಡಿಸಿದ (ಕುಮಾ.ದ್ರೋ. ೧೩-೨೫).
[ಹೀಹಾಳಿ$_1$ + ಕೆಡಿಸು$_1$]

**ಹೀಹಾಳಿಗೆಡು** (ಕ್ರಿ). ಕುಗ್ಗು; ಸಂಕೋಚಗೊಳ್ಳು (?): ಕೇಳಿದ್ಯೆಯಲ ತಾತ ಮನ ಹೀಹಾಳಿಗೆಡದಿರು ಮೇಣದುರಗನ ಹೇಳಿಗೆಗೆ ಹೆದಱದಿರು . . . ಎಂದಿಂದ್ರಾರಿ ಗರ್ಜಿಸಿದ (ತೊರರಾ. ೬-೪೧-೫). [ಹೀಹಾಳಿ$_1$ + ಕೆಡು$_1$]

**ಹೀಹಾಳಿತನ** (ನಾ). ಉತ್ಸಾಹ: ಸುರಕದಂಬಕವ ಭಂಗಿಸಿದ ದುಂದುಭಿಯ ಜೀವವ ಹಿಂಗಿಸಿದ ಹೀಹಾಳಿತನದ ಭಟಾಂಗವೇನಾಯ್ತು (ತೊರರಾ. ೪-೫-೯).
[ಹೀಹಾಳಿ$_2$ + - ತನ]

**ಹೀಹಾಳಿಸು$_1$**, ಹೀಯಾಳಿಸು, ಹಿಯ್ಯಾಳಿಸು (ಕ್ರಿ). ೧. ನಿಂದಿಸು; ತೆಗಳು; ಮೂದಲಿಸು: ಲಯಕಾಲಕೊದಱುವ ಸಿಡಿಲವೊಲು ಹೀಹಾಳಿಸುತ ತಮತಮಗೆ ಬಯ್ಯುದು ಕೂಡೆ ಪರಿವಾರ (ಕುಮಾ.ಕ. ೧೩-೧); ಹಳಿದು ಹೀಹಾಳಿಸಿದನಲ್ಲಮಲಿಂಗ ನವರುಗಳ (ಪ್ರಭುಲೀ. ೧೩-೧೧); ಮಾಯೆಯನು ಬಿಡು ಬಿಡು ಮರುಳಹನೆ ಕಲಿ ವೃಷಭ ನಿನ್ನಯ ಚರಣಸೇವಕನು ಎಂದು ಹೀಹಾಳಿಸುತ (ಅರ್ಜಾವಿ. ೧೦-೧೭). ೨. ಅವಮಾನ ಗೊಳಿಸು; ಅವಹೇಳನ ಮಾಡು: ಮಾರ್ಮಲೆಯೆ ನಿನ್ನನಾತಂ ಸದೆವನೆನೆ ಹೀಹಾಳಿಸಿದ ಮಾಳ್ಕೆಯಾಗಲು (ವೀಶ್ಮಪು. ೩-೨೦-೧೯). **ಹೀಯಾಳಿಸು**: ೧. ಗೂಳಿಯೊಳಿದಿರಾಗಿ ಕಾದಬೇಕೆಂದು ಹೀಯಾಳಿಸಿ ಬಿಟ್ಟುದಾ ನವಿಲ (ಮೋಹತ. ೩೮-೩೦); ಕುಟಿಲಾತ್ಮರಾಲಿಪಂತೆ ಕುದುಕುಳಿಗೊಳುತ್ತ ಹೀಯಾಳಿಸದೆ (ಕೊಟ್ಟೂಬ. ೧-೩೭); ನನ್ನನ್ನು ಬಹಳವಾಗಿ ಹೀಯಾಳಿಸಿದ್ದರಿಂದ ನನ್ನ ಪರಾಕ್ರಮವನ್ನು ಹೇಳುತ್ತೇನೆ ಕೇಳು (ಕೃವಾಉ. ೧೩೦). ೨. ಧನಾಧಿಪೇಶಾನರನು ಕದನಕೆ ಕರೆಕರೆದು ಹೀಯಾಳಿಸಿದನಮರಾರಿ (ಪ್ರಹ್ಲಾಚ. ೩-೨೪). **ಹಿಯ್ಯಾಳಿಸು**: ೧. ಜವಾನ ಹಿಯ್ಯಾಳಿಸುವುದು ಬಿಡಲೇ ಇಲ್ಲ (ಚಂಗಾಳ್ವ. ೪೩); ಆಲೋಚಿಸಲಾರದವರನ್ನು ಹಿಯ್ಯಾಳಿಸದೆ . . . ಉಪಪ್ರಶ್ನೆಯನ್ನು ಹಾಕುವುದುತ್ತಮ (ಶಿಕ್ಷದ. ೫೪೭). [ಹೀಹಾಳಿ$_1$ + - ಸು$_1$]

**ಹೀಹಾಳಿಸು$_2$** (ಕ್ರಿ). ೧. ಸಂಭ್ರಮಗೊಳ್ಳು; ಸಡಗರಿಸು: ಮೌಳಿಯನು ತೂಗುತ್ತ ಮುನಿ ಹೀಹಾಳಿಸುತ ಹರಿಯಾಗಮನವನು ಹೇಳುವೆನು ಪಾಂಡವರಿಗಿದನಾನೆನುತ ಹರುಷದಲಿ (ನಿಭಾಗ. ೧೦-೭೮-೫೧). ೨. ಧ್ಯಾನಿಸು; ಸ್ಮರಿಸು: ಶ್ರೀಲಲಾಮಪದಾಬ್ಜವನು ಹೀಹಾಳಿಸುತ ಮನದೊಳಗೆ ನಿಯಮಾಳಿಗಳನಾಚರಿಸುತ್ತಿರ್ದನು (ನಿಭಾಗ. ೮-೨೩-೮).
[ಹೀಹಾಳಿ$_2$ + - ಸು$_1$]

**ಹೀಹೇಳಿಕೆ** 'ಹೀಹಾಳಿಕೆ' ನೋ.

**ಹೀಳು** (ಕ್ರಿ). ಸೀಳು: ಸೆಳೆದ ಚಾಪವನಸ್ತ್ರಸಂತತಿ ತಳರುಗಿಡಿಗಳನುಗುಳೆ ಕೋಪದಿ ತುಳಿಸಿದನು ತೂಳಿದನು ಹಿಡಿದನು ಹಿಂಡಿ ಹೀಳಿದನು (ಕೌಶಿರಾ. ೩೦-೧೪).
[IP ಛಂದಸ್ಸಿಗಾಗಿ 'ಹಿಳಿ' ಎಂಬುದನ್ನು 'ಹೀಳು' ಎಂದು ಮಾಡಿರಬಹುದು]

**-ಹು$_1$** '-ಪು$_1$' ನೋ.

**-ಹು$_2$** '-ಪು$_2$' ನೋ.

**ಹುಂ** (ಅ). ಸಂಶಯ, ಪ್ರಶ್ನೆ, ಅನುಮತಿ, ಕೋಪ, ತಿರಸ್ಕಾರ, ನಿಂದೆ, ಭಯ ಮೊದಲಾದ ಭಾವಗಳನ್ನು ಸೂಚಿಸುವಾಗ ಬಳಸುವ ನಿಪಾತಾವ್ಯಯ: ಕಥೆಯಂ ಕೇಳಲೆ ಕಂದ ಹುಂ ರಘುಜನೆಂಬಂ ಹುಂ (ಜಗವಿ.೩-೬೧): ಹುಂ ಎನೆಯುಂ ಅಲ್ತೆಯಲ್ಲೆಯೆನೆಯುಂ ಫಲಿಯಿಸುಗುಂ ಪ್ರಶ್ನಾರ್ಥೋಽಜ್ವಲಾನುಮಾನಾರ್ಥಯುಗಳಮವು ಶಾಬ್ದಿಕರಿಂ (ಶಮದ. ೩೧೩); ಎಲೆ ಚಂಡಾಮಹಾಚಂಡರಿರ ನೀವು ಹಿಡಿಕೊಳ್ಳಿ ಹುಂಯೆಂಬ ಮಾತ್ರದಿಂದೆದ್ದವರನಾ ಭಟರು ಗರ್ಜಿಸುತ್ತಾ ಎಡದ ಕಾಲಿಂದೊದೆದು (ವೀಶ್ಮಪು. ೪-೧೯-೪). [ಸಂ.]

**ಹುಂಕಣೆ** (ನಾ). (?): ಗಜ ಹಯಾರುಢ ಪ್ರಉಢರೇಖಾರೇವಂತ ಜಯಾಂಗನಾಕಾಂತ ಬಲದ ಹುಂಕಣೆಯ ತೊಡಚುವ ನಾಯಕರ ಗಂ[ಡ] (ಸೌಇಇ. XV, ೧೭೦-೧೨; 1225).
[?]

**ಹುಂಕರಿಸು** (ಕ್ರಿ). ಹುಂ ಎಂದು ಸದ್ದುಮಾಡು; ಅಬ್ಬರಿಸು: ಕೃಷ್ಣಾವತಾರದಲ್ಲಿ ನೀನು ಮರೆಯಾದಾಗ ಅವುಗಳು ನಿನ್ನನ್ನು ಕಾಣಲರಿಯದೆ ಹುಂಕರಿಸಿ ಒದರಿದವು (ಪರಪ. ೧೩೪). [< ಹುಂಕಾರ + - ಇಸು$_3$]

**ಹುಂಕಾರ** (ನಾ). ಹುಂ ಎಂಬ ಶಬ್ದ: ತ್ರಿಶಂಕುನರಾಧೀಶನ ಲಕ್ಷ್ಮೀ ಶಕ್ರನ ಮಹಾ ಹುಂಕಾರದಿಂ ಬಿರ್ದಳೆಂಬಿನೆಗಂ . . . ಬಂದಿರ್ದಪಳ್ ಬಾಗಿಲೊಳ್ (ಕಾದಂಪೂ. ೨೪); ಈಗ ನೀವು ಅನ್ನುತ್ತಿರುವ ಹುಂಕ್ಕಾರ ಪ್ರಭುಗಳ ಬಾಯಿಂದಲೂ ಹೊರಟುಬಿಟ್ಟರೆ ಸಾವು ಧನ್ಯರು (ಶಾಂತಲಾ. ೬೯). [ಸಂ.]

**ಹುಂಕೃತಿ** (ನಾ). = **ಹುಂಕಾರ**: ಪೂರ್ವಮಂ ನೆನೆಯುತುಂ ಹುಂಕೊಳ್ಳದುತ್ಕೋಪ ಹುಂಕೃತಿಯಂ ಮಾಡುತುಮೌಂಡುಗರ್ಚಿ ಶಿಸುಗಣ್ಬೆಟ್ಟಚ್ಯುತಂ ರಂಜಿಕುಂ (ಜಗಪಿ. ೩-೬೧). [ಸಂ.]

**ಹುಂಕೊಳ್** (ಕ್ರಿ). ೧. ಹೂಂಗುಟ್ಟು; ಒಬ್ಬರು ಹೇಳುವುದನ್ನು ಕೇಳು: ಹುಂಕೊಳ್ಳದುತ್ಕೋಪಹುಂಕೃತಿಯಂ ಮಾಡುತುಂ . . . ಅಚ್ಯುತಂ ರಂಜಿಕುಂ (ಜಗಪಿ. ೩-೬೧); ಕಥೆಯ ಹುಂಕೊಳಲನ್ಯರಿಗೆ ಹೇಳುತಿರ್ದು (ಭರತೇ. ೨-೪೪). ೨. ಒಪ್ಪಿಕೊಳ್ಳು; ಬಸವನ ಭಕ್ತಿ ಭಾರದ ಹೊಣಕೆಯನೆ ಹುಂಕೊಂಡು ಪೂರೈಸಲಿಕೆ ಬೇಕೆನುತ (ಪ್ರಭುಲೀ. ೨೨-೩೦). [ಹುಂ + ಕೊಳ್₁]

**ಹುಂಚ** 'ಹುಂಜ₂' ನೋ.

**ಹುಂಜ₁** 'ಪುಂಜ₂' ನೋ.

**ಹುಂಜ₂**, ಹುಂಚ, ಹುಂಜಿ, ಹುಂಜು (ನಾ). ಮಗ್ಗದ ಹಾಸಿನಲ್ಲಿರುವ ರೇಷ್ಮೆಯ ಅಥವಾ ನೂಲಿನ ಲಡಿ; ಎಪ್ಪತ್ತರಿಂದ ಎಂಬತ್ತು ಎಳೆಗಳ ಸಮೂಹ: ಪಟ್ಟೆಗೆ ಏಳು ಹುಂಜ (ಭಾಸ್ಕರ. ೬೬); ಹೊಯ್ದಂತ ಏಳ್ಪುಂಜ ಕೊಡಳೀಗಿ ಹಾಯ್ಕೊಂಡು ಮಠನೇರಿ ಕುಂತಾದ ನೋಡ ನೀಲವ್ವಾ (ಮಲ್ಲಿಗ. ೧೦೪). **ಹುಂಚ**: ಎಂಟು ಹುಂಚದಡಿಸ್ಸೀರೆ ಬಹು ಚೆನ್ನಾಗಿತ್ತು (ಮಾಮರಾ. ೫೪). **ಹುಂಜಿ**: ಭಳದಿಂದ ಹುಂಜಿಯ ಹೊಸೆವಂತೆ ಹೊಸೆದು (ಜ್ಞಾನಚ. ೧೬-೧೧೩). **ಹುಂಜು**: ಹುಂಜು ದಡ್ಡಿ (ಮುಂಜುಯು. ೩. ೩-೧೦೩). [< ಪುಂಜ₂]

**ಹುಂಜಿ** 'ಹುಂಜ₂' ನೋ.

**ಹುಂಜಿಕೆ** 'ಪುಂಜಿಗೆ' ನೋ.

**ಹುಂಜು** 'ಹುಂಜ₂' ನೋ.

**ಹುಂಟ** (ನಾ). ಒಂದು ಬಗೆಯ ಭೂಮಿಯ ಅಳತೆ (?): ಶ್ರೀಯಳಹ ಪೆರುಮಾಳದೇವರ ನಿತ್ಯ ನಂದಾದೀವಿಗೆ ನಿವೇದ್ಯಕ್ಕಂ ಮೋದಗುಯ್ಯಲಲು ಹುಂಟ ೧. ಕೆಯಿ ೧೦ ಮಹಾಜನಂಗಳು ಕೊಟ್ಟರು (ಸೌಇಇ. IX-1, ೩೬೬-೩೦; 1225). [?]

**ಹುಂಡ** (ನಾ). ಹೆಡ್ಡ; ದಡ್ಡ; ಗಾಂಪ: ಹಾಗೆ ಬಟಿ ಹುಂಡರ ಅಚಾರಭ್ರಷ್ಟರ . . . ಅಪ್ರಮಾಣಪಾತಕರ ಭಕ್ತಿ ತೊಟ್ಟಲ್ಲಿ ಭಕ್ತರೆಂದರೆ ವಿರಕ್ತಿ ತೊಟ್ಟಲ್ಲಿ ಕರ್ತರೆಂದರೆ ದೀಕ್ಷೆಯ ಮಾಡಿದಲ್ಲಿ ಗುರುವೆಂಥಡೆ ನಾನೀ ತಪ್ಪು ಕಂಡಲ್ಲಿ ಎತ್ತಿ ತೂಱುವೆನು (ವಚಶಾ. I, ೨೪೦); ಜೊಂಡ ಜೈನರ ಮಾತ ಹುಂಡ ಬಿಜ್ಜಳ ಕೇಳಿ ಕೊಂಡನಳವಮನೆಗೆ ಶಿವನುರಿಯ (ಕನ್ನಜಾ. ೨೩೪). ೨. ವಿಕಾರವಾದ ಆಕೃತಿ; ಕುರೂಪ: ಓಸರಿಸಭಣ್ನ ವಸ್ತುವನಾಸಕ್ತಿಯಿನೆನ್ನದೆಂದೊಡಕ್ಕುಮೆ ದಿಟದಿಂ ಹೂಸಿದೊಡೆ ಹುಂಡನಕ್ಕುಮೆ (ಉಸಾರ. ೩೨೮); ಮೆಟ್ಟುವ ನೆಲನಲ್ಲ ಕಾದ ಕಬ್ಬುನ ಬಜ್ಜರ ಸೂಜಿ (?)ಯೊಟ್ಟು ವಾಸನೆಯ ದುರ್ಗಂಧ ನೆಟ್ಟನೆ ತನು ಹುಂಡದಾಕೃತಿ ನೋವಿನ ಬಟ್ಟೆಯಘನ ಬಗೆಯೆಲ್ಲ (ಧರ್ಮಚ. ೬-೮೩). [ಸಂ.]

**ಹುಂಡಗರಡಿ** 'ಪುಂಡುಗರಡ್ಡಿ' ನೋ.

**ಹುಂಡಗುತ್ತಿಗೆ** (ನಾ). (ಕನ್ನಾ) ಅಂದಾಜು; ಸುಮಾರು: ಒಬ್ಬೊಬ್ಬರು ಹುಂಡ ಗುತ್ತಿಗೆ ಮೇಲೆ ಹೇಳಿದರೂ ಸಹ ಲೆಖ್ಖ ಮಾಡಿದ ಹಾಗೆ ಹೇಳುತ್ತಾರೆ (ರೂಢಿ). 'ಹುಂಬಗುತ್ತಿಗೆ' ಪರಾ. [?]

**ಹುಂಡವಣ್ಣ** (ನಾ). ಬಗೆಬಗೆಯ ಬಣ್ಣ; ಮಿಶ್ರವರ್ಣ: ನಿಶಿತಲಘುಕೀಲವ್ರಜೆಯ ಖಿಂಡದಿಂದಿಟ್ಟಯಿಮಮಿಂದಳಿಸಿ ಕೆಂಗರಿಯ ಹುಂಡವಣ್ಣದ ಕೋಲ್ಗಳೆಳೆದು ಕರ್ನಾಂತರಕೆ ಹೊದ್ದಿಸುತೆಲುದ್ದಿಸುತಲಿ (ಜಿನಮು. ೧೯-೪೬). 'ಹಂಡಬಂಡ' ಪರಾ. [ಹುಂಡ? + ಬಣ್ಣ]

**ಹುಂಡಸಂಸ್ಥಾನ** (ನಾ). [ಜೈನ] ಶರೀರದ ಅಂಗೋಪಾಂಗಗಳನ್ನು ಅತಿಕುರೂಪಗೊಳಿಸುವ ಕರ್ಮಗಳ ಉದಯ: ಅದೇಂ ನೆಱೆ ಪೋಲ್ವುದೊ ಷಂಡ ಹುಂಡ ಸಂಸ್ಥಾನದೆ ಗುಂಡುದೀವಿದ ತಡಂಗಮನಂಗದ ಪಾಂಗವಂದಿರ (ಆದಿಪು. ೫-೯೦); ನೋಡದೆ ಮಾಡಿದ ರೂಪಿನಂತೆ ನೇರ್ಪಿಲ್ಲದ ವಿಕಟಾಕೃತಿಯ ಹುಂಡಸಂಸ್ಥಾನಗಳುಂ (ಶ್ರಾವಕಾ. ೨೧-೧೨). [ಸಂ.]

**ಹುಂಡಹಾಳತ** (ನಾ). ವಿವೇಚನೆಯಿಲ್ಲದಿರುವಿಕೆ; ವಿವೇಕರಹಿತತೆ: ಕೋರ್ಟು ಮುಂದೆ ಬರಬೇಕೆಂದು ಅವರ ಹೆಸರನ್ನು ಕೂಗಿಸಿದ ಕೂಡಲೇ ಆ ಮಾತನ್ನು ಹುಂಡಹಾಳತವಾಗಿ ಥಟ್ಟನೆ ಆಡುತ್ತಿದ್ದರು (ಮುಸುಗ. ೧೮೭). [ಹುಂಡ? + ಹಾಳತ]

**ಹುಂಡಾ** (ನಾ). ಮದುವೆಯಲ್ಲಿ ಗಂಡಿಗೆ ಕೊಡುವ ಹಣ; ವರದಕ್ಷಿಣೆ: ತುಳಸಿ ನನಗ ತಂಗೀ ಹಾಂಗ, ಹುಂಡಾ ಅಂತ ಕೊಡತೇನಿ (ದೀಪಕ್ಷ.II, ೪೨೦). [<- ಮರಾ. ಹುಂಡಾ]

**ಹುಂಡಾವಣಿ**, ಹುಂಡಾವಳಿ (ನಾ). ಹಣದ ದಾಖಲೆಪತ್ರ; ಹುಂಡಿ: ಕೋಟ್ಯಂತರ ಧನದ ಹುಂಡಾವಣಿಗಳಂ (ಸೌಗಂಧಿ.೧೩೪-೨೦). **ಹುಂಡಾವಳಿ**: "ಹುಂಡಾವಳಿಯ ಕಾಯದೆ"ಯ ಪ್ರಕಾರ ಹುಂಡಿಯು ಪಟಾಯಿಸದಿದ್ದರೆ (ಮೋಹಿನೀ. ೩೦). [< ಹುಂಡಿ./ ಹಿಂ. ಹುಂಡಾವನ = ಹುಂಡಿಯ ದರ]

**ಹುಂಡಾವಸರ್ಪಿಣಿ** (ನಾ). [ಜೈನ] ಅನೇಕ ಅವಸರ್ಪಿಣಿಗಳ ಕಾಲವಾದ ಮೇಲೆ ಬರುವ ಅವಧಿ: ಭಂಗಂ ದೊರೆಕೊಂಡುದಿಂತು ಭರತೇಶ್ವರಂಗೆ ಹುಂಡಾವಸರ್ಪಿಣೀ ವಿಳಸನದಿಂ (ಆದಿಪು. ೧೪-೧೧೪); ಹುಂಡಾವಸರ್ಪಿಣಿಯೊಳಿಂತು ದು(ಷ್ಷ)ಷ್ಷಮಸಮೀಪ ಮುಕ್ಕುಮೆಂತಂತೆ ಸಮ್ಯಕ್ತ್ವಾದಿಗುಣಂಗಳ್ಗೆ ಪ್ರಾಣಿಗಳ್ವಿಮುಖರಪ್ಪರ್ (ಚಾವುಂಪು. ೧೩೬). [ಸಂ. ಹುಂಡಾವಸರ್ಪಿಣೀ]

**ಹುಂಡಾವಳಿ** 'ಹುಂಡಾವಣಿ' ನೋ.

**ಹುಂಡಿ₁** (ನಾ). ಸಣ್ಣ ಹಳ್ಳಿ; ಚಿಕ್ಕಗ್ರಾಮ; ಕೊಪ್ಪಲು: ಆಲಗೂಡಿಗೆ ಸಲುವ ಮುಧ್ದಬೀರನ ಹುಂಡಿ ಹಾಲುಹುಂಡಿ ಚನ್ನಗೌಡನ ಹುಂಡಿ (ಎಕ. III, ತಿರುಮ.೬೩-೨೪೭; 1748); ಕಿರಾತ ದಸ್ಯುಗಳಂ ಕಟ್ಟಿಕೊಂಡು . . . ಗ್ರಾಮ ಹುಂಡಿಗಳಿದ್ದರೆ ಕೊಳ್ಳೆಯಂ ಮಾಡಿ (ಮುದ್ರಾಮಂ. ೧೧೨).

**ಹುಂಡಿ₂** (ನಾ). ಮಿಶ್ರವರ್ಣದ ಎತ್ತು: ಹಂಡಕೆಂದಗಳಿಲ್ಲ ಹುಂಡಿ ಕಾರಿಗಳಿಲ್ಲ ಗಂಡುಳಿದ್ದೊಬ್ಬ ಮಗನಿಲ್ಲ (ಸರ್ವಜ್ಞ.೧೯೨೭). 'ಹುಂಡವಣ್ಣ' ನೋ.

**ಹುಂಡಿ₃** (ನಾ). ೧. ಹಣ ಕೊಡುವಂತೆ ನಮೂದಿಸಿದ ಪತ್ರ; ಹಣದ ದಾಖಲೆಪತ್ರ: ವಿಧವಿಧದ ಪೊನ್ನ ಬೇಕೆಂದಷ್ಟಹುಂಡಿಯಿಂದೊದಗಿಸುವ ಸಾವಕಾರರ ಗುಂಪು (ಕೃಷ್ಣವಿ. ೫-೭೫); ದೇಶಾಂತರದ ಸಾಹುಕಾರರಿಂದ ಬರುವ ಹುಂಡಿಗಳಿಗೆ ಹಣವನ್ನು ಕೊಡುತ್ತಿದ್ದುದರಿಂದ ಆ ಹೆಸರಿನ ರೂಢಿ ದಾಸರಾದ ಮೇಲೂ ಕಡೆಯ ತನಕ ತಪ್ಪಲಿಲ್ಲ (ಕಭವಿ. ೬೦೭). ೨. ಬ್ಯಾಂಕುಗಳಿಂದ ಹಣ ಪಡೆಯಲು ಕೊಡುವ ಅದೇಶಪತ್ರ; ಚೆಕ್ಕು: ಮೂರುಸಾವಿರದ ಮುದ್ದತೀ ಹುಂಡಿ ಕಳಿಸಿರುತ್ತೇನೆ (ಮೋಜೀವ. ೯೪); ಬೇರೆ ಬೇರೆ ಬ್ಯಾಂಕುಗಳ ಮೇಲಿನ ಈ ಹುಂಡಿಗಳ ಒಟ್ಟು ಮೊತ್ತ ಸುಮಾರು ಒಂದುಕೋಟಿ ರೂಪಾಯಿಗಳಷ್ಟಾಗಬಹುದೆಂಬುದು ಶೇಟಜಿಗೆ ಅರಿವಾಯಿತು (ರತ್ನಗೋ. ೨೧). ೩. ಬೆಲೆಯನ್ನು ತೋರಿಸುವ ಪಟ್ಟಿ: "(ವ್ಯಾಪಾರ) ಸಲ್ಲಿಸಿದ ಸಾಮಾನುಗಳ ಅಥವಾ ಮಾಡಿರುವ ಕೆಲಸದ, ಬೆಲೆ ತೋರಿಸುವ ಪಟ್ಟಿ, ಬೆಲೆಪಟ್ಟಿ; ಹುಂಡಿ" (Bill. ೧೦೬೩). ೪. ಹಣವನ್ನು ಸಂಗ್ರಹಿಸುವ ಡಬ್ಬ; ಗೋಲಕ: ಬಳಾಪುರದ ಬಸವಣನ ವಶಿತಾ ಹುಂಡಿ (ಎಕ. X (S), ಕೋಲಾರ. ೨೫೮-೬೩; 1761); ಒಂದು ರೂಪಾಯಿ ಇದೆ . . . ಅದನ್ನು ಅನಾಥಾಲಯದ ಹುಂಡಿಗೆ ಹಾಕಬಹುದು (ಭಾರದ. ೬). ೫. ಪ್ರಸ್ತಾಪ; ಸೂಚನೆ: ಕೆಲವು ಮದುವೆಯ ಹುಂಡಿಗಳೂ ಸಿದ್ದಣ್ಣನಿಗೆ ಬಂದಿದ್ದವು (ಪಂಜಪಂ. ೨೪). ೬. ಜವಾಬ್ದಾರಿ; ಹೊಣೆಗಾರಿಕೆ: ಹೊರಿಸುವೆಂ ಹುಂಡಿಯಂ ನಿಸ್ಸಾತ ನಾನೆನುತ (ಪರಶು. ೬-೨೧). [<- ಹಿಂ. ಮರಾ. ಹುಂಡೀ./ ತುಳು. ಹುಂಡಿ]

**ಹುಂಡಿಗಡಿಗೆ** (ನಾ). ಹಣವನ್ನು ಸಂಗ್ರಹಿಸುವ ಡಬ್ಬ; ಗೋಲಕ: ದೇವಸ್ಥಾನದಲ್ಲಿರುವ ಹುಂಡಿಗಡಿಗೆಯಲ್ಲಿ ಹಣವನ್ನು ಹಾಕು (ರೂಢಿ). [ಹುಂಡಿ₂ + ಗಡಿಗೆ]

**ಹುಂಡಿಗೆ** (ನಾ). (?): ಸುಂಡಾ ನೀ ಮುಂದೆ ನಡೆಯೆಂದೆ ಬೀಗೂತಿ ಹುಂಡೀಗೆ ಮಾಡ್ಯಾಳೇ ಮದುವೇಯ (ಹಟ್ಟಿಹ. ೧೮೫). [?]

**ಹುಂಡಿಪತ್ರ** (ನಾ). = ಹುಂಡಿ₂ ೨: ಅವನು ಆ ಹಣವನ್ನು ಅಲ್ಲಿನ ಒಂದು ಬ್ಯಾಂಕಿಗೆ

ಒಪ್ಪಿಸಿದರೆ, ಆ ಬ್ಯಾಂಕಿನವರು ಅವನಿಗೆ ಹಿಂದೂಸ್ತಾನದಲ್ಲಿ ತಮಗೆ ಲೆಕ್ಕವಿರುವ ಬ್ಯಾಂಕಿನ ಹೆಸರಿಗೆ ಒಂದು ಹುಂಡಿಪತ್ರ ಕೊಡುತ್ತಾರೆ (ಬಾಲಪ್ರ. III, ೧೫೫೪). [ಹುಂಡಿ₂ + ಪತ್ರ]

**ಹುಂಡು** (ನಾ). ೧. ಸಣ್ಣ ಚೂರು; ಕಣ: ಸೇದುತ್ತಿದ್ದ ಬೀಡಿಯ ತುದಿಯ ಬೆಂಕಿಯ ಹುಂಡುಗಳು ಕೆಂಪಗೆ ಮಿರುಗಿದವು (ಮಲಮ.೬೦೫). ೨. ಸಣ್ಣ ಬೊಟ್ಟು; ಚುಕ್ಕೆ: ಬಾನಲ್ಲಿ ಮುಗಿಲು ಅರ್ಧಮರ್ಧ ಕವಿದಿದ್ದುದರಿಂದ, ಆಗಾಗ ಬಿಸಿಲು ನೆರಳುಗಳು ಹಾಳೆಗಳಂತೆ ಹುಂಡುಗಳಂತೆ ಬೀಳುತ್ತಾ ಕಣಿವೆ, ಬೆಟ್ಟಗಳನ್ನು ಒಮ್ಮೆ ಮಿನುಗಿಸುತ್ತಿದ್ದವು (ಆಬೂಬ. ೮); ಅದರ ಮೈಮೇಲೆ ಹುಂಡುಹುಂಡುಬೊಟ್ಟು ನೋಡು, ಅದು ಕೋಗಿಲೆ (ಸ್ವಪ್ನಹೂ. ೫೧). ೩. ತೊಟ್ಟು; ಹನಿ: ಕೆರೆಯಲ್ಲಿ ಒಂದು ಹುಂಡೂ ನೀರಿಲ್ಲ (ರೂಢಿ). ೪.(?): ಬಂಡ ಹುಂಡಿನ ಮೈಯ ಬಣ್ಣ ಬೆಳಕು ಮಾಡಿಕೊಂಡು ಕೈವಿಡಿದಿಹರುಂಟು ಗಂಡು ಗಂಡಿಗೆ ಮೋಹಿಸುವ ಚೆನ್ನಿಗರು ದೀಕ್ಷೆಗೊಂಡವರಾರಿವರಂತೆ (ಭರಚ. ೭೦-೧೧೪).

**ಹುಂಡುಕೋಳಿ** (ನಾ). ಒಂದು ಬಗೆಯ ಕೋಳಿ: ಅವುಗಳ ಮಧ್ಯೆ ಹುಂಡುಕೋಳಿಗಳು ಬೆಚ್ಚಿ ಬೆವರಿ ಚಲಿಸುತ್ತಿದ್ದವು (ಕಾನೂರು. ೨೧); ಹುಂಡುಕೋಳಿ ರೆಕ್ಕೆಯ ಹಾಗೆ ಕಾಣಿಸಿತು (ಸ್ವಪ್ನಹೂ. ೧೬). [ಹುಂಡು? + ಕೋಳಿ₁ (< ಕೋೞಿ₁)]

**ಹುಂಡೇಕರಿ, ಹುಂಡೇಕಾರ, ಹುಂಡೇಕಾರಿ** (ನಾ). ಸುಂಕವನ್ನು ಕೊಟ್ಟು ಪದಾರ್ಥಗಳನ್ನು ಬಿಡಿಸಿಕೊಂಡು ಅವುಗಳನ್ನು ಮಾಲೀಕನಿಗೆ ಮುಟ್ಟಿಸುವ ವ್ಯಕ್ತಿ ಹಾಗೂ ಆತನಿಗೆ ನೀಡುವ ಶುಲ್ಕ: ಸ್ಟೇಶನದ ಮೇಲೆ ಮಾಲವು ಏರಿಸುವವರ ದೆಶೆಯಿಂದ ಹುಂಡೆಕರಿ ಇಲ್ಲವೆ ಎರಡನೇ ಮನುಷ್ಯನು ಹೋಗಿ ಸ್ಟೇಶನದ ಮೇಲೆ ಮಾಲವು ಏರಿಸಿದ ಬಳಿಕ ರಶೀದಿಯ ಪರಭಾರೆ ಕಳಿಸುವದಿದ್ದರೆ ಆ ಹುಂಡೆಕರಿ ಇಲ್ಲವೆ ಮನುಷ್ಯನಿಗೆ ಮಾಲದ ಮಾರಾಟ ಮಾಡಬೇಕು (ಮುಂಬವ್ಯಾ.೮೪); ಕೂಲಿಯಲ್ಲಿ . . . ಬಂಡಿ ಇಳಿಸುವ ಕೂಲಿ ಮತ್ತು ಹುಂಡೆಕರಿ ಇವೆಲ್ಲದರ ಸಮಾವೇಶ ಆಗುತ್ತದೆ (ಮುಂಬವ್ಯಾ.೨೨೨). **ಹುಂಡೇಕಾರ:** ಸಾಹುಕಾರರುಗಳ, ಹುಂಡೇಕಾರರುಗಳ ಚಲನವಲನ ಸಂಪೂರ್ಣ ನಿಂತುಹೋಯಿತು (ಮರಳಿ.೧೭೦); ಭಂಡಿಬಾಡಿಗೆ, ಹುಂಡೇಕಾರರ ವಗೈರೆ ಹಿಡಿದು . . . ಈ ಪ್ರಕಾರ ತೆಗೆದುಕೊಂಡೇವು (ಮುಂಬವ್ಯಾ.೧೦). **ಹುಂಡೇಕಾರಿ:** ಭಂಡೀಭಾಡಿಗೆ, ಹುಂಡೇಕಾರಿ ಮತ್ತು ಹೊಲಿಗೆ ಮುಂತಾದವುಗಳಿಗೆ ಹತ್ತುವ ರಕಮುಗಳಿಗೆ ಒಟ್ಟಿನಿಂದ 'ಮಜೂರಿ' ಎಂಬ ಶಬ್ದವನ್ನು ಉಪಯೋಗಿಸಿದ್ದೇವೆ (ಮುಂಬವ್ಯಾ.೮).

[<— ಮರಾ. ಹುಂಡೇಕರೀ]

**ಹುಂಡೇಕಾರ** 'ಹುಂಡೆಕರಿ' ನೋ.

**ಹುಂಡೇಕಾರಿ** 'ಹುಂಡೆಕರಿ' ನೋ.

**ಹುಂತಕಾರ** 'ಹೊಂತಕಾಱ' ನೋ.

**ಹುಂಬ** (ನಾ). ಅಸಂಸ್ಕೃತನಾದವನು; ಅವಿವೇಕಿ; ಉದ್ಧಟ: ನಿನ್ನಂತಹ ಹುಂಬನಿಂದ ಇದೆಲ್ಲವನ್ನು ನೋಡಿಕೊಳ್ಳಲಾಗುವದಿಲ್ಲ (ಬಂಗಾಹ.೬೯); ಯಾವ ಹಳ್ಳಿಯ ಹುಂಬನೋ ಇವನು (ಹೊಸಕ್ಕಿ. ೧೬೨). [<— ಮರಾ. ಹುಂಬ]

**ಹುಂಬಗುತಿಗೆ** 'ಹುಂಬಗುತ್ತಿಗೆ' ನೋ.

**ಹುಂಬಗುತ್ತಿಗೆ, ಹುಂಬಗುತಿಗೆ, ಹುಂಬಗುದ್ದಿಕೆ, ಹುಂಬುಗುತ್ತಿಗೆ** (ನಾ). ವಿವೇಚನೆಯಿಲ್ಲದೆ ಮಾಡುವ ಕೆಲಸ; ದುಡುಕಿನ ಕೆಲಸ: ಸತ್ಯಸಂಗತಿಗೂ ಕಣ್ಣುಮುಚ್ಚುವುದರಲ್ಲಿ ಕ್ರಾಂತಿ ಏನಿದೆ? ಬರಿಯೆ ಹುಂಬಗುತ್ತಿಗೆ (ಮೂರುದಾ.೧೩೫). **ಹುಂಬಗುತಿಗೆ:** ಇಂತಹ ಹುಂಬಗುತಿಗೆಯ ಕೆಲಸಕ್ಕೆ ಸ್ವಲ್ಪ ಛೀ ಹಾಕಿ (ವ್ಯನಿ.೨೩೭). **ಹುಂಬಗುದ್ದಿಕೆ:** ಇಂದು ಹೀಗೆ ಅಡದಾಂಡ ಬೆಳೆದ ಕೋಲ್ಹಾಪುರೀಪೇಟಾ ಸುರವರದಲ್ಲಿ ಪರಕಾಯಪ್ರವೇಶ ಮಾಡಿದ ಹುಂಬಗುದ್ದಿಕೆಯ ವಿಶ್ವಾನನ್ನು ತುಳಸಿ ಗುರುತಿಸುವದು ಸಾಧ್ಯವಾದೀತೆ? (ದೀಪಹ.II, ೪೦೦). **ಹುಂಬುಗುತ್ತಿಗೆ:** ಒಪ್ಪಿಕೊಳ್ಳಲಾರದ್ದಕ್ಕೆ ಅದು ಮಹತ್ವದ್ದೇ ಅಲ್ಲ ಎಂಬ ಹುಂಬುಗುತ್ತಿಗೆ ನ್ಯಾಯಕ್ಕೆ ಬಂದಿರುವುದರಿಂದಲೂ (ವಿಚಾಮಂ. ೩೩). [?]

**ಹುಂಬಗುದ್ದಿಕೆ** 'ಹುಂಬಗುತ್ತಿಗೆ' ನೋ.

**ಹುಂಬತನ** (ನಾ). ಒರಟುತನ; ಅವಿವೇಕ: ಬ್ರಿಟಿಶರು ದೇಶವನ್ನು ಮುಸಲ್ಮಾನರಂತೆ ಹುಂಬತನದಿಂದ ಸುಲಿಯಲಿಲ್ಲ (ಯಕ್ಷಪ್ರ.೧೯); ಹುಂಬತನದಿಂದಾಗಿ ಲಿಂಗಪ್ಪ . . . ತನ್ನ ಆಸಕ್ತಿಯನ್ನು ಪ್ರಕಟಿಸಿದ್ದ (ಗ್ರಾಮಾಯ. ೫೩೩). [ಹುಂಬ + - ತನ]

**ಹುಂಬುಗುತ್ತಿಗೆ** 'ಹುಂಬಗುತ್ತಿಗೆ' ನೋ.

**ಹುಃ** (ಅ). ಕೋಪ, ಧಿಕ್ಕಾರ, ಜುಗುಪ್ಸೆ ಮುಂತಾದ ಭಾವಗಳನ್ನು ಸೂಚಿಸುವ ಒಂದು ಅವ್ಯಯ: ತೊಟ್ಟನೆ ಮುನಿಸಾಗಿ ಹುಃ ಸವತಿಯಂ ನೆಱ ತೋಱಪೆನೆಂದು ತನ್ನ ಕಾಮಿನಿಯ ವಿದಗ್ಧವೃತ್ತಿಗಳನಕ್ಕಟ ನಾಳೆಯೆ ತಾನೆ ಕಾಣನೇ (ಧರ್ಮಾಮೃ.೭-೨೦೨); ತೊಟ್ಟನೆ ತಾಂ ಕಂಡೊಡೆ ಹುಃ ಬಬಾಪ್ಪುಱಕೆಂಬಲ್ಲೂಳೆಯಂ ನೆರ್ಕ್ನನೆರ್ಕ್ನನೆ ಬೇರ್ಕೆಯ್ದು (ಎಕ.VI, ತರೀಕೆ.೨೫-೩೭; 1196).

**ಹುಕಮತು** 'ಹುಕುಮತ್ತು' ನೋ.

**ಹುಕಿ** (ನಾ). ತಟ್ಟನೆ ಮನಸ್ಸಿಗೆ ಬರುವ ಲಹರಿ;— ಇಚ್ಛೆ; ಚಪಲ: ಇನ್ನೊಮ್ಮೆ ತಂಬಾಕಿನ ಬಾರುಮಾಡುವ ಹುಕಿ ಉಕ್ಕಿತು (ದೀಪಹ.I, ೧೪೩).

[<— ಮರಾ. ಹುಕೀ, ಹುಕ್ಕೀ]

**ಹುಕುಂ** 'ಹುಕುಮು' ನೋ.

**ಹುಕುಂನಾಮೆ, ಹುಕುಮನಾಮೆ** (ನಾ). ಲಿಖಿತಮೂಲಕವಾದ ಅಪ್ಪಣೆ; ಆಜ್ಞಾಪತ್ರ; ನಿರೂಪ: x ಸರಕಾರದ ಹುಕುಂನಾಮೆ ಪ್ರಕಾರಕ್ಕೆ (ಎಕ.IX. ದೊಡ್ಡಬ. ೧೨-೧; 1785); ಮುಲ್ಕಿ ಮುಂತಾದ ಬಾಬಿನಲ್ಲಿ ಖಾವಂದರವರಿಂದ ಅಪ್ಪಣೆಯಾದ ಹುಕುಂನಾಮೆ (ಮಹಾವಂ.II, ೫೭). **ಹುಕುಮನಾಮೆ:** ಹುಕುಮನಾಮೆಗಳನ್ನು ಹೊರಡಿಸಿ ಬೇರೆ ಬೇರೆ ದೇಶಗಳಿಗೆ ಕಳುಹಿಸಿದರು (ಇಂಗ್ಲಇ. ೪೩).

[<— ಅರ. ಹಿಂ. ಮರಾ. ಹುಕ್ಮನಾಮಾ]

**ಹುಕುಮ** 'ಹುಕುಮು' ನೋ.

**ಹುಕುಮತ್ತು, ಹುಕಮತು** (ನಾ). ಒಡೆತನ; ಅಧಿಕಾರ: ಮುಂಬಯಿಸಂಸ್ಥಾನದ ಕಡೆ ಫೌಜು ನಂಮ ಹುಕುಮತ್ತಿನಲಿ ಇತ್ತು (ರಾಜೇಂದ್ರ.೫೩). **ಹುಕಮತು:** ಅವರೆಲ್ಲರ ಮೇಲೆ ಹುಕಮತು ಇಟ್ಟು ಒಳಿತಾಗಿ ವ್ಯವಸ್ಥೆಯನ್ನಿಡುವುದು (ಮುಂಬವ್ಯಾ.೨೮೦).

[<— ಅರ. ಹುಕ್ಮತ್; ಹಿಂ. ಹುಕೂಮತ್; ಮರಾ. ಹುಕಮತ್]

**ಹುಕುಮನಾಮೆ** 'ಹುಕುಂನಾಮೆ' ನೋ.

**ಹುಕುಮು, ಹುಕುಂ, ಹುಕುಮ, ಹುಕ್ಕುಂ** (ನಾ).೧. ಅಪ್ಪಣೆ; ಅಜ್ಞೆ: ಸರಕಾರದಿಂದ ಸ್ಪೆಷಲ್ ಹುಕುಮು ಹೊರಟಿತು (ಇಂದುಮು.೯೧).**ಹುಕುಂ:** ೧. ಬೇರೆ ಯಾರುನು ಬಾದ್ಯತೆಯಿಲ್ಲವೆಂದು ಹುಕುಂ ಅನುಸರಿಸಿಯಿರುತ್ತೆ (ಮೈಆರಿ.೧೯೩೦,೨೪-೧೯; 1487 ?); ಆ ಅಮಲುದಾರನು ಅದೇ ಹುಕುಂ ಮೇರೆ (ರಾಜೇಂದ್ರ.೧೬). **ಹುಕುಮ:** ೧. ಶಾಹುರಾಜನ ಹುಕುಮದಿಂ ಮೋಹರ ಸಹಿತೈದಿ (ಕೆಳನೃ. ೧೦-೮೦). ೨. (ಆಲಂ) ಕೃತ್ರಿಮ; ಮೋಸ; ಕುಟಿಲತೆ: ಶಕುನಿ ಬೋಧೆಯ ಕೇಳ್ದು ಹಿತವಾಗಿ ಕುರುಪತಿ ಮುಕುತಿಯಹುದೆಂದು ನಿಶ್ಚೈಯಿಸಿದಂ ಪಾಂಡವರ ಹುಕುಮದಿಂ ಕೊಲ್ಲಬೇಕೆನುತ (ತುರಂಗ. ೧೩-೬). **ಹುಕ್ಕುಂ:** ೧. ಸಾಕ್ಷ್ಯವು ಅತ್ಯವಶ್ಯಕವೆಂದು ಸನ್ನಿಧಾನದಿಂದ ಹುಕ್ಕುಂ ಬಂದಿತ್ತು (ಶ್ರೀರಾಯ. ೨೪೬). [<— ಅರ. ಹಿಂ. ಹುಕುಮ್, ಹುಕ್ಮ್; ಮರಾ. ಹುಕ್ಮ್, ಹುಕೂಮ್]

**ಹುಕ್ಕ** 'ಹುಕ್ಕಾ' ನೋ.

**ಹುಕ್ಕಾ, ಹುಕ್ಕ, ಹುಕ್ಕೆ** (ನಾ). ತಂಬಾಕು ಸೇದುವ ಒಂದು ಸಾಧನ; ಗುಡಿಗುಡಿ: ಹುಕ್ಕಾ ಎಳೆಯುತ್ತಾ ಮಲಗುತ್ತಿದ್ದ ಜಹಾಂಗೀರ ಬಾದಷಹನಂತೆ (ಮುಂಗಾಮು.೫); ಬಾಯಿಯಲ್ಲಿ ಹುಕ್ಕಾದ ನಲಿಕೆ ಇದೆ (ಕುರಿಹಿಂ.೪೪). **ಹುಕ್ಕ:** ಅದಾದ ಮೇಲೆ ಸೇವಿಸಲು ಹುಕ್ಕವನ್ನು ಇರಿಸಿದನು (ಬಾಲಪ್ರ. I, ೧೫೫).**ಹುಕ್ಕೆ:** ಜಗಲಿಯ ಮೇಲೆ ಕುಳಿತು ಹುಕ್ಕೆಯನ್ನು ಸೇದುತ್ತಾ . . . ಗೋಡೆಗೆ ಒರಗಿದ್ದನು (ವಿಧಿವ್ಯ. ೧೦); ಆ ವ್ಯಕ್ತಿಗಳು ಅದನ್ನು ಕುಡಿಯುವಷ್ಟರಲ್ಲಿ ಎರಡು ಹುಕ್ಕೆಗಳು ತಯಾರಾದುವು (ನಿಷ್ಕಾಮ. ೧).

[<— ಅರ. ಹಿಂ. ಹುಕ್ಕಾ; ಮರಾ. ಹುಕ್ಕಾ, ಹುಕಾ]

**ಹುಕ್ಕುಂ** 'ಹುಕುಮು' ನೋ.

**ಹುಕ್ಕೆ** 'ಹುಕ್ಕಾ' ನೋ.

**ಹುಕ್ಕೇರಿ** (ನಾ). ಪೂರ್ವಕಾಲದಲ್ಲಿ ಬಳಕೆಯಲ್ಲಿದ್ದ ಹದಿನಾರು ಬಗೆಯ ರೂಪಾಯಿನಾಣ್ಯಗಳಲ್ಲಿ ಒಂದು; IP ಹುಕ್ಕೇರಿಯೆಂಬ ಊರಿನಲ್ಲಿ ಟಂಕಿಸಿದ ನಾಣ್ಯ: ೧೩.ಹುಕ್ಕೇರಿ. ೧೪. ಉಡವಣೆ. ೧೫. ಗೋವಿಂದಬಕ್ಷಿ. ೧೬. ಪೀರಖಾನಿ (ಕಥಾಗ. ೨೮೧). [?]

**ಹುಗಲು** 'ಪುಗಿಲ್$_1$' ನೋ.

**ಹುಗಿ** (ಕ್ರಿ).೧. (ಹಣ, ಹಣ ಮುಂತಾದುವನ್ನು) ನೆಲದಲ್ಲಿ ಕುಳಿಮಾಡಿ ಮುಚ್ಚು, — ಹೂಳು; ಹುದುಗಿಸು: ಹುಗಿದ ಹಣಗಳನ್ನು ಕೆದರಿ ತೆಗೆದು ತಿನ್ನುವವು (ಮುಂಬಯಿ. ೩-೭೫); ಈ ಪಾತ್ರೆಯಲ್ಲಿ ನಾಣ್ಯಗಳನ್ನು ತುಂಬಿ ನೆಲದಲ್ಲಿ ಹುಗಿದಿಡುವೆನು (ಕಪವು.೩-೧೦೧). ೨. ಊರು; ನೆಡು: ಮದುವೆಗೆ ಇನ್ನೂ ಹದಿನೈದು ದಿನಗಳಿರುವಾಗಲೇ . . . ಮೊದಲನೇ ಕಂಬವನ್ನು ಹುಗಿದು, ಅದನ್ನು ಮಾವಿನ ಟೊಂಗೆಗಳಿಂದ ಸಿಂಗರಿಸಿ (ಆಚೋಲೀ. ೩೮); ಯಾವ ಪಾತ್ರೆಯಲ್ಲಿ ಬೇಯಿಸುತ್ತೀರೋ ಆ ಪಾತ್ರೆಯನ್ನು ಉಸುಕಿನಲ್ಲಿ ಅರ್ಧ ಹುಗಿಯಬೇಕು (ಅಡುಸಾ.೮೯). ೩. ಮುಚ್ಚಿಹೋಗು; ಹುದುಗು: ಚತುರ್ದಶಲಕ್ಕಸಂಖ್ಯೆಯ ಸುದತಿಯರು ನಿನಗರುಣರಸದಂಗದಲಿ ಹುಗಿದುದು [ಪಾಠಾಂ. ಹುದುಗಿದು] ಹೊಳೆವ ಗಾಜಿನ ಮಣಿಯ ಸರದಂತೆ (ತೊರರಾ.೩-೭-೧೯); ಅವರ ವಿಚಾರಗಳೆಲ್ಲ ಹಾಳುಕೋಟೆಯಂತೆ ಹುಗಿದುಕೊಂಡಿವೆ (ಸಮಜೀ.೬).

**ಹುಗಿಯಭತ್ತ** (ನಾ). ಒಂದು ಬಗೆಯ ಬತ್ತ (?): ಈ ಗ್ರಾಮಕ್ಕೆ ಸಲುವ ದುರ್ಗದೇವರಿಗೆ ಕೊಟುಬಹ ಕಡಿವಾಡಿ ನಾಡುದಳವಾಡಿಕೆ ಹುಗಿಯಭತ್ತ ಚಿನವಾದಿಯರಿಗೆ ಕೊಟುಬಹ ತಳವಾಡಿಕೆ ಉಪಾಡಿರ ವೊಳೆಯ ರೊಕ ಸಹ (ಸೌಇಇ. IV, ೨೫೫-೧೪; 1513). 'ಹುಡಿಕ್ಕೆಬತ್ತ' ಪರಾ.

[? + ಭತ್ತ$_1$ (< ಬತ್ತ)]

**ಹುಗಿಲಿಡು** (ಕ್ರಿ). ಒಳಹೊಗುವಂತೆ ತಿವಿ, — ಚುಚ್ಚು: ನಿನ್ನಯ ಕಣೆಗಳೊಕಿದರೆ ತೆರಳುವನೆ ಅಭಿಮನ್ಯುವೆನುತಬ್ಬರಿಸಿ ಕರ್ಣನ ಕಾಯವನು ಹುಗಿಲಿಡಿದನೆಂಟಂಬಿನಲಿ (ಕುವ್ಯಾದ್ರೋ. ೫-೫೫); ಮನಸಿಜಂ ಪರಿಮಳವ ಬೀಱುವರಳಂಬೊಂದ ತೊಟ್ಟು ಹುಗಿಲಿಡಿದನಾಕೆಯ ಮನವನಾತನಂತಃಕರಣವಂ ಚಿತ್ರವೆಂಬಂದದಿಂ (ಸೌಂದಪು. ೮-೧೪).

[ಹುಗಿಲು (< ಪುಗಿಲ್$_1$) + ಇಡು$_1$]

**ಹುಗಿಲು** 'ಪುಗಿಲ್$_1$' ನೋ.

**ಹುಗಿಲುಗಳೆ** (ಕ್ರಿ). ಸೀಳು; ಭೇದಿಸು: ನಗವನೊಡ್ಡಿದರೊಂದು ಶರದಲಿ ಹುಗಿಲುಗಳೆವ ವಿದೂರಪಾತದಿ (ಸಂಭವ.೧೮-೩). [ಹುಗಿಲು (< ಪುಗಿಲ್$_1$) + ಕಳೆ$_1$]

**ಹುಗಿಲುತೆಗೆ** 'ಹುಗಿಲುದೆಗ' ನೋ.

**ಹುಗಿಲುದೆಗೆ, ಹುಗಿಲುತೆಗೆ** (ಕ್ರಿ). ಚಕ್ಕೆ ತೆಗೆ; ಕೆತ್ತು; ಪದರವನ್ನೆತ್ತು: ಆಸೆಯಚಿತ ಬಾಚಿಯಲ್ಲಿ ಭವಪಾಶವಿಲ್ಲದ ಜಂಗಮಕ್ಕಿತ್ತು ರೋಷವಿಲ್ಲದ ಉಳಿಯಲ್ಲಿ ನಿಜವಾಸವ ನೋಡಿ ಹುಗಿಲುದೆಗೆವುತ್ತ (ಸರ್ವವ. ೧೨೦-೬೧೮). **ಹುಗಿಲುತೆಗೆ:** ಪೂರ್ವಕ್ಕೆ ತಾಳಾಗಿ ಉತ್ತರಕ್ಕೆ ತಲೆಬಾಗಿ ಬಿದ್ದ ಮರನ ತಂದು ಬದ್ದಿಯ ಕಾರುಕನ ಕೈಯಲ್ಲಿ ಸುಬದ್ಧಿಸಿ ಬಂಧಿಸಿ ಸುದ್ದಯಿಸಿ ಅನಾದಿ ಎಂಬ ಹುಗಿಲುತೆಗೆದು (ಸರ್ವವ. ೧೦೫-೫೬೭).

[ಹುಗಿಲು (< ಪುಗಿಲ್$_1$) + ತೆಗ$_1$]

**ಹುಗಿಸು$_1$** 'ಪೊಗಿಸು' ನೋ.

**ಹುಗಿಸು$_2$** (ಕ್ರಿ). ನೆಲದೊಳಗೆ ಮುಚ್ಚಿಸು; ಹೂಳಿಸು: ಅರಳಿಯ ಮರದಡಿಯಲ್ಲಿ ಕುಣಿ ತೋಡಿಸಿದ. ಅಲ್ಲಿ ಹುಗಿಸಿದ (ಜಮಿನ್ದಾ.೧೪); ನಮ್ಮಿಬ್ಬರನ್ನೂ ಜೀವಂತ ಹುಗಿಸಿ ಬಿಡುವುದಾಗಿ ಹೇಳಿದನು (ಮೇದಿಮ. ೧೫೬). [ಹುಗಿ + - ಇಸು$_3$]

**ಹುಗು** 'ಪೊಗು' ನೋ.

**ಹುಗುತೆ** 'ಪೊಗುತೆ'. ನೋ.

**ಹುಗುಲು** 'ಪುಗಿಲ್$_1$' ನೋ.

**ಹುಗುಳು** 'ಪುಗುಳ್$_2$' ನೋ.

**ಹುಗುಳೇಳು** 'ಪುಗುಳೇೞ್' ನೋ.

**ಹುಗ್ಗಿ** 'ಪುಟ್ಗಿ' ನೋ.

**ಹುಗ್ಗಿಗ** (ನಾ). ಸೊಕ್ಕಿನವನು; ಬಿಂಕದವನು: ಹೋಳುಗಳೆವೆನು ಹುಗ್ಗಿಗರನೆನು ತಾಳೊಳಗೆ ಬೆರಸಿದನು (ಕುವ್ಯಾದ್ರೋ. ೧೦-೩೧); ಭರದಿಂದ ಮುಗ್ಗಿದ ಬಲಮಂ ಕಾಣುತ ಹುಗ್ಗಿಗರಾ ಕುರುಭೂಪಾಲನುಜರದಡೆಹಾಯ್ದರು (ಅಭಿಕಾ. ೩೩).

[ಹುಗ್ಗು$_2$ (< ಪುಗ್ಗು$_2$) + - ಇಗ]

**ಹುಗ್ಗು$_1$** (ಕ್ರಿ). ೧. ತೆರು; ಬಿಡು; ತ್ಯಜಿಸು: ನೂರೆಂಟು ಜಗಳದೊಳ್ ಪೆಸರೊಡೆದ ನಾಯಕರು ಮುಗ್ಗಿದರು ಹು[ಪಾಠಾಂ. ಉ]ಗ್ಗಿದರು ಹರಣಮನಾಜಿಯೊಳಗೆ (ತುರಂಗ. ೭೩-೪೨). ೨. ಅಡಗು; ಹುದುಗು: ನೆಗ್ಗಿತವನಿ ಭಟರ ಹತಿಯ ಲಗ್ಗೆಗಮರರು ಹುಗ್ಗಿದರು (ಯಾದವಾ. ೬೦). [< ಪುಟ್ಗು?]

**ಹುಗ್ಗು$_2$** 'ಪುಗ್ಗು$_2$' ನೋ.

**ಹುಗ್ಗೆ** 'ಪುಟ್ಗಿ' ನೋ.

**ಹುಚ್ಚ** 'ಪುಚ್ಚ$_1$' ನೋ.

**ಹುಚ್ಚಕಬ್ಬು** 'ಹುಚ್ಚುಕಬ್ಬು' ನೋ.

**ಹುಚ್ಚತ್ತಿ** (ನಾ). ಕೀಳುದರ್ಜೆಯ ಅತ್ತಿಮರ; ಕಾಡುಅತ್ತಿಯ ಮರ: "ಕಾಕೋದುಂಬರಿಕಾ—ಹುಚ್ಚತ್ತಿ, ಮಳಲತ್ತಿ" (ಒಷಧಿ. ೩೨). 'ಮಳಲಹುಚ್ಚತ್ತಿ' ಪರಾ.

[ಹುಚ್ಚು (< ಪುರ್ಚು) + ಅತ್ತಿ$_1$]

**ಹುಚ್ಚಮಲ್ಲಿ** (ನಾ).೧. (ಉಕ) ಚದುರಂಗದಾಟದಲ್ಲಿ ಒಂದು ಬಗೆಯ ಪಟ್ಟು; IP ಪೇದೆಮಾತಿನ ಒಂದು ಪ್ರಕಾರ. ೨. (ಆಲಂ) ನಿರುಪಾಯನಾದವನು; ಅಸಹಾಯಕನಾದವನು: ಹೈದರನು ಈ ಮೇರೆಗೆ ರಾಜಧಾನಿಯಲ್ಲೆಲ್ಲ ವ್ಯವಸ್ಥೆಯನ್ನು ಮಾಡಿ ಪೇಶ್ವೆಯನ್ನು ಹುಚ್ಚಮಲ್ಲಿಯಾಗಿ ಮಾಡಿ ಕೂಡ್ರಿಸಿದ (ಚರಿಸಂ. ೧೩೪). [<— ಮರಾ. ಹುಚಮಲ್ಲೀ, ಹುಚಮುಲ್ಲೀ]

**ಹುಚ್ಚಹತ್ತಿ** 'ಹುಚ್ಚುಹತ್ತಿ' ನೋ.

**ಹುಚ್ಚಾಟ** (ನಾ). ೧. ಅವಿವೇಕದಿಂದ ವರ್ತಿಸುವುದು; ಬುದ್ಧಿಗೇಡಿತನ: ಹುಚ್ಚಾಟವನ್ನು ಆಡಿದವನು ತಾನು . . . ಆದರೆ ಇವಳಿಗೇನು ಅರೆಯಾಯಿತು? (ಬಾಳಪೂ. ೨೨೨). ೨. ಹಾಸ್ಯನಾಟಕ; ಪ್ರಹಸನ: ಈ ಪುಸ್ತಕದಲ್ಲಿ ಮೂರು ಹುಚ್ಚಾಟಗಳನ್ನು ಕೊಟ್ಟಿದೆ. ಹುಚ್ಚಾಟಗಳು ಹೆಸರಿಗೆ ಹುಚ್ಚಾಟಗಳಾಗಿದ್ದರೂ ಅವು ಒಳಹೊಡತದಲ್ಲಿರುವುದೇ ಹೆಚ್ಚು (ತಿಡುಗು.೪ ಪೀಠಿಕೆ); ಸಾಮಾಜಿಕರನ್ನು ಸಾಹಿತ್ಯದ ಸೂತ್ರದಲ್ಲಿ ಸೇರಿಸಿಕೊಳ್ಳಬೇಕಾದರೆ 'ಹುಚ್ಚಾಟ'ವು ಒಂದು ಹಾದಿ (ಸಾಹಿವಿ. ೧೨೦).

[ಹುಚ್ಚು (< ಪುರ್ಚು) + ಆಟ]

**ಹುಚ್ಚಾಪಟ್ಟೆ** 'ಹುಚ್ಚಾಬಟ್ಟೆ' ನೋ.

**ಹುಚ್ಚಾಬಟ್ಟೆ, ಹುಚ್ಚಾಪಟ್ಟೆ** (ಅ). ಮನಸ್ಸಿಗೆ ಬಂದಂತೆ: ಬಂದಿಯೊಡನೆ ಅವನು ಹುಚ್ಚಾಬಟ್ಟೆ ಕೂಗಾಡುತ್ತಿದ್ದನು (ಪುನರು.೧೮೬). **ಹುಚ್ಚಾಪಟ್ಟೆ:** ಹುಚ್ಚಾಪಟ್ಟೆ ಮಾತಾಡಬೇಡ (ರೂಢಿ). 'ಕಂಡಾಬಟ್ಟೆ', 'ಸಿಕ್ಕಾಬಟ್ಟೆ' ಹೋ. [< ಹುಚ್ಚು ]

**ಹುಚ್ಚಾಸ್ಪತ್ರೆ** (ನಾ). ಬುದ್ಧಿಭ್ರಮಣೆಗೊಂಡ ರೋಗಿಗಳಿಗೆ ಚಿಕಿತ್ಸೆ ಮಾಡುವ ಆಸ್ಪತ್ರೆ; ಮಾನಸಿಕರೋಗಿಗಳ ಚಿಕಿತ್ಸೆ ನಡೆಸುವ ಆಸ್ಪತ್ರೆ: ಹುಚ್ಚಾಸ್ಪತ್ರೇಲಿರೋಕೆ ನಮಗೇನು ಹುಚ್ಚೆ? (ಮುಚ್ಚಬಾ. ೩೨). [ಹುಚ್ಚು (< ಪುರ್ಚು) + ಆಸ್ಪತ್ರೆ]

**ಹುಚ್ಚಿ$_1$** (ನಾ).೧. ಬುದ್ಧಿಪಲ್ಲಟವಾದವಳು; ಹುಚ್ಚು ಹಿಡಿದವಳು: ಆ ಹುಡುಗಿಗೆ ಪ್ರಜ್ಞೆಯು ಶಿಥಿಲವಾಗಿ ಮೂರುನಾಲ್ಕುದಿನ ಹುಚ್ಚಿಯಂತೆ ಕಾಣುತ್ತಿತ್ತು (ಹುಟ್ಟಹ. ೧೩); ಹುಚ್ಚಿಗೆ ಅತ್ತೆಮನೆಯೇನು ತವರುಮನೆಯೇನು? (ಗಾದ). ೨. (ಆಲಂ) ಅವಿವೇಕದಿಂದ ವರ್ತಿಸುವವಳು: ಅವಳೊಬ್ಬಳು ಹುಚ್ಚಿ, ಎಲ್ಲ ವಿಷಯಕ್ಕೂ ಹಟಹಿಡಿಯುತ್ತಾಳೆ (ರೂಢಿ). [ಹುಚ್ಚು (< ಪುರ್ಚು) + - ಇ$_2$]

**ಹುಚ್ಚಿ$_2$** 'ಪುಚ್ಚಿ' ನೋ.

**ಹುಚ್ಚಿಡು** (ಕ್ರಿ). (ಆಲಂ) ದಿಗ್ಭ್ರಮೆಯಿಂದ ವಿಕಾರವಾಗು; ಗಾಬರಿಯಿಂದ ವಿವರ್ಣವಾಗು: ಅವರಿಬ್ಬರ ಮೋರೆಯೂ ಹುಚ್ಚಿಟ್ಟು ನೆಲ ನೋಡತೊಡಗಿದರು (ಪ್ರೇಮಾತ್ರ. ೨೧೫); ರಾಯರ ಮುಖ ಹುಚ್ಚಿಟ್ಟು ಹೋಗಿತ್ತು (ನಿರಾಭ. ೧೧೪).

[ಹುಚ್ಚು (< ಪುರ್ಚು) + ಇಡು$_1$]

**ಹುಚ್ಚು** ಪುರ್ಚು' ನೋ.

**ಹುಚ್ಚುಕಗ್ಗಲಿ** (ನಾ). ಕೀಳುದರ್ಜೆಯ ಕಗ್ಗಲಿಮರ: "ಅರಿಮೇದಃ, ವಿಟ್ಖದಿರಃ-೨ ದುರ್ಗಂಧವುಳ್ಳ ಕಗ್ಗಲೀಗಿಡ, ಹುಚ್ಚುಕಗ್ಗಲೀಮರ" (ಸಿದ್ಧಾಂತಿ. ೧೨೩).

[ಹುಚ್ಚು (< ಪುರ್ಚು) + ಕಗ್ಗಲಿ$_1$]

**ಹುಚ್ಚುಕಬ್ಬು, ಹುಚ್ಚಕಬ್ಬು** (ನಾ). ಕಬ್ಬಿನಂತೆಯೇ ಇರುವ ಒಂದು ಬಗೆಯ ಜೊಂಡು; ಕಾಗಬ್ಬು: ದರ್ಭೆ, ಹುಚ್ಚುಕಬ್ಬು, ಕಾಡುಕಬ್ಬು (ವೃಟಿಗಿ.

೭೭-೧೩೬೦). **ಹುಚ್ಚಕಬ್ಬು:** ಹೊಳೆಗೆ ಹೋದರೆ ಜೋಳದ ಬೆಂಡು, ಹುಚ್ಚಕಬ್ಬು ಇವುಗಳಿಂದ ದೋಣಿ ತೆಪ್ಪಗಳನ್ನು ಮಾಡಿ ತೇಲಿ ಬಿಡುತ್ತಿದ್ದರು (ಹುಚ್ಚಹ. ೧೫೪).
[ಹುಚ್ಚು(< ಪುರ್ಚು) + ಕಬ್ಬು(< ಕರ್ಬು$_1$)]

**ಹುಚ್ಚುಕುಣಿತ** 'ಪುರ್ಚುಕುಣಿತ' ನೋ.

**ಹುಚ್ಚುಕುನ್ನಿ** 'ಪುಚ್ಚುಗುನ್ನಿ' ನೋ.

**ಹುಚ್ಚುಕೆಲಸ** (ನಾ). ವಿಚಾರಮಾಡದೆ ಮಾಡುವ ಕೆಲಸ: ನಮ್ಮ ಹುಡುಗ ಶುದ್ಧ ಹುಚ್ಚುಕೆಲಸ ಮಾಡಿಬಿಟ್ಟ (ರೂಢಿ). [ಹುಚ್ಚು(< ಪುರ್ಚು) + ಕೆಲಸ]

**ಹುಚ್ಚುಗಟ್ಟು** (ಕ್ರಿ). ಮರುಳಾಗು; ಹುಚ್ಚುಹಿಡಿ: ಕಾಲೇಜಿನ ಹುಡುಗಿಯರೆಲ್ಲ ಹುಚ್ಚುಗಟ್ಟಿ ಕಾಲಿಗೆ ಬೀಳಬೇಕು (ಕಲಕ.೯೩). [ಹುಚ್ಚು(< ಪುರ್ಚು) + ಕಟ್ಟು$_1$]

**ಹುಚ್ಚುಗುಂಜಿ** (ನಾ). ಒಂದು ಬಗೆಯ ಸಸ್ಯ: ಚಿರುಂಡಿ ಚಿಂಚು ಹುಚ್ಚುಗುಂಜಿ (ಅಕಾನಿ.೧೦-೨೭). [ಹುಚ್ಚು(< ಪುರ್ಚು) + ಗುಂಜಿ]

**ಹುಚ್ಚುಗೊಳ್** 'ಪುರ್ಚುಗೊಳ್' ನೋ.

**ಹುಚ್ಚುಗೊಳಿಸು** 'ಪುಚ್ಚುಂಗೊಳಿಸು' ನೋ.

**ಹುಚ್ಚುಚಕ್ಕೋತ** (ನಾ). ಒಂದು ಬಗೆಯ ಚಕ್ಕೋತ: ಹುಚ್ಚುಚಕ್ಕೋತ, ಹುನ್‌ಚಿಕ್ (ಮೈಔಗಿ. ೧೦-೩೬೫). [ಹುಚ್ಚು(< ಪುರ್ಚು) + ಚಕ್ಕೋತ$_2$]

**ಹುಚ್ಚುಜೋಳ** (ನಾ). ಒಂದು ಬಗೆಯ ಸಸ್ಯ; ಕಾಡುಜೋಳ: ಕಾಡುಜೋಳ, ಹುಚ್ಚುಜೋಳ, ಕಾಡುಕಂಬುಹುಲ್ಲು (ಮೈಔಗಿ. ೭೦-೧೪೫೫).
[ಹುಚ್ಚು(< ಪುರ್ಚು)+ ಜೋಳ]

**ಹುಚ್ಚುತನ** 'ಪುಚ್ಚುತನ' ನೋ.

**ಹುಚ್ಚುತುಂಬೆ** 'ಹುಚ್ಚುದುಂಬೆ' ನೋ.

**ಹುಚ್ಚುತೊಂಡೆ** (ನಾ). ಒಂದು ಬಗೆಯ ತೊಂಡೆ; ಕಾಗೆದೊಂಡೆ: "ಕಾಕಾಂಗೀ, ಕಾಕನಾಸಿಕಾ - ೨ ಕಾಗಿತೊಂಡೇಗಿಡದ ಹೆಸರು, ಹುಚ್ಚುತೊಂಡೆ"(ಸಿದ್ಧಾಂತಿ. ೧೪೯).
[ಹುಚ್ಚು(< ಪುರ್ಚು) + ತೊಂಡೆ$_1$]

**ಹುಚ್ಚುದುಂಬೆ, ಹುಚ್ಚುತುಂಬೆ** (ನಾ). ಒಂದು ಬಗೆಯ ತುಂಬೆಗಿಡ; ಕಾಡುತುಂಬೆ: ಅಂಡಶೂಲೆಗೆ . . . ಹುಚ್ಚುದುಂಬೆಯ ಬೇರಂ ನಿಂಬೆಯಲ್ಲಿ ಅರೆದು ಅಂಡಕ್ಕೆ ಕಟ್ಟುವುದು (ವಿವೈವಿ.೧೬೭). **ಹುಚ್ಚುತುಂಬೆ:** (ಮೈಔಗಿ.೫೦-೧೦೦೩).
[ಹುಚ್ಚು(< ಪುರ್ಚು) + ತುಂಬೆ$_2$]

**ಹುಚ್ಚುನಗೆ** (ನಾ). ತಡೆಯಲಾರದೆ, ಮೇರೆಮೀರಿ ಬರುವ ನಗು: ಜಗುಳ್ದ ಹೆಂಗಳನೆತ್ತಿ ತಕ್ಕಿಸಿ ಮೊಗವಡ್ಡದೆಗೆಯೆ ಚುಂಬಿಸುತಿಹ ನಿನ್ನ ಬಗೆಯ ಕಂಡರೆ ಹುಚ್ಚುನಗೆ ಬರುತಿದೆ (ಭರಚ. ೯-೧೧೩). [ಹುಚ್ಚು(< ಪುರ್ಚು$_1$) + ನಗೆ]

**ಹುಚ್ಚುನರವೆ** (ನಾ). ಒಂದು ಬಗೆಯ ಸಸ್ಯ: ಕೂಲಿ, ಕುಮತಿ, ಕಾಶ್ಮೀರಿಮರ, ಹುಚ್ಚುನರವೆ (ಮೈಔಗಿ.೪೦-೭೮೨). [ಹುಚ್ಚು(< ಪುರ್ಚು) + ನರವೆ]

**ಹುಚ್ಚುನಾಯಿ** (ನಾ). ಹುಚ್ಚು ಹಿಡಿದಿರುವ ನಾಯಿ: ಹುಚ್ಚುನಾಯಿ ಕಚ್ಚಿದರೆ ಹುಚ್ಚುಹಿಡಿಯುತ್ತದೆ (ರೂಢಿ). [ಹುಚ್ಚು(< ಪುರ್ಚು) + ನಾಯಿ(< ನಾಯ್)]

**ಹುಚ್ಚುನಿಂಬೆ** (ನಾ). ಒಂದು ಬಗೆಯ ನಿಂಬೆ; ಕಾಡುನಿಂಬೆ: (ಮೈಔಗಿ. ೧೦-೧೭೪).
[ಹುಚ್ಚು(< ಪುರ್ಚು) + ನಿಂಬೆ]

**ಹುಚ್ಚುನೆಲಬೇವು** (ನಾ). ಒಂದು ಬಗೆಯ ಸಸ್ಯ: (ಮೈಔಗಿ.೪೮-೯೫೫).
[ಹುಚ್ಚು (< ಪುರ್ಚು) + ನೆಲಬೇವು]

**ಹುಚ್ಚುಪಡವಲ** (ನಾ). ಒಂದು ಬಗೆಯ ಪಡವಲಕಾಯಿ ಮತ್ತು ಅದರ ಬಳ್ಳಿ; ಕಹಿಪಡವಲ: "ಕುಲಕಂ, ಪಟೋಲ, ತಿಕ್ತಕಃ, ಪಟುಃ - ೪ ಖೈ ಪಡುವಲಗಿಡ; ಹುಚ್ಚು ಪಡವಲಗಿಡ" (ಸಿದ್ಧಾಂತಿ. ೧೪೭). [ಹುಚ್ಚು(< ಪುರ್ಚು) + ಪಡವಲ (< ಪಡಲ$_1$)]

**ಹುಚ್ಚುಬಳ್ಳಿ** (ನಾ). ಒಂದು ಬಗೆಯ ಬಳ್ಳಿ; ℙ ಇದು ಸೋಕಿದರೆ ದಾರಿ ತಪ್ಪಿ ಅಲೆಯಬೇಕಾಗುತ್ತದೆಂದು ಭಾವಿಸಲಾಗಿದೆ: ದಿಕ್ಕು ತಪ್ಪಿಬಿಟ್ಟೆನೆ? . . . ಅಥವಾ ಹುಚ್ಚುಬಳ್ಳಿ ಎಲ್ಲಿಯಾದರೂ ಕಾಲಿಗೆ ತಗುಲಿಬಿಟ್ಟಿತೆ? (ಮಲಮ. ೫೭೭).
[ಹುಚ್ಚು(< ಪುರ್ಚು) + ಬಳ್ಳಿ]

**ಹುಚ್ಚುಬಿಡಿಸು** (ಕ್ರಿ). (ಆಲಂ) ಅವಿವೇಕವನ್ನು ಹೋಗಲಾಡಿಸು; ವಿವೇಕಿಯನ್ನಾಗಿಸು: ಅವನು ನನ್ನ ಹತ್ತಿರ ಬರಲಿ, ಹುಚ್ಚುಬಿಡಿಸಿ ಕಳಿಸುತ್ತೇನೆ (ರೂಢಿ).
[ಹುಚ್ಚು(< ಪುರ್ಚು) + ಬಿಡಿಸು]

**ಹುಚ್ಚುಬಿಡು** (ಕ್ರಿ). ಮರುಳುತನ ನಿವಾರಣೆಯಾಗು: ಹುಚ್ಚು ಬಿಡದೆ ಮದುವೆಯಾಗದು, ಮದುವೆಯಾಗದೆ ಹುಚ್ಚು ಬಿಡದು (ಗಾದೆ).
[ಹುಚ್ಚು(< ಪುರ್ಚು) + ಬಿಡು$_1$]

**ಹುಚ್ಚುಬೇವು** (ನಾ). ಒಂದು ಬಗೆಯ ಬೇವು; ತುರುಕಬೇವು: "ಅರೆಬೇವು, ಹುಚ್ಚುಬೇವು . . . ಅಜಣಿ" (ಸಸ್ಯನಿ.೮೮). [ಹುಚ್ಚು(< ಪುರ್ಚು) + ಬೇವು]

**ಹುಚ್ಚುಬ್ರಹ್ಮದಂಡಿ** (ನಾ). ಒಂದು ಬಗೆಯ ಔಷಧೀಸಸ್ಯ: ದತ್ತೂರದ ಗಿಡ, ಹುಚ್ಚುಬ್ರಹ್ಮದಂಡಿ, ಅರಿಸಿನ ಉಮ್ಮತ್ತಿ (ಮೈಔಗಿ. ೮-೧೪೧).
[ಹುಚ್ಚು(< ಪುರ್ಚು) + ಬ್ರಹ್ಮದಂಡಿ]

**ಹುಚ್ಚುಮಳೆ** (ನಾ). (ಆಲಂ) ಹತೋಟಿಯಿಲ್ಲದೆ ಒಂದೇ ಸಮನೆ ಸುರಿಯುವ ಮಳೆ; ಅತಿವೃಷ್ಟಿ: ೧೭೬೩ನೇ ದುರ್ಮತಿ ಸಂ॥ ಆಶ್ವೀಜ ಶುದ್ಧ ೧೦ಯಿಂದ ಕಾರ್ತೀಕ ಶು॥ ೫ವರೆಗೆ ಘುಚ್ಚುಮಳೆ ಹೊಯಿತು (ಚಿತ್ರಪಾ.೮ ಉಪೋದ್ಘಾತ); ಅವನು ಬೇಸಾಯಕ್ಕೆ ಹೊರಟ ಸಮಯದಲ್ಲಿ ಗುರುತೇಟನಂತೆ. ಹುಚ್ಚುಮಳೆ ಕರೆಯುವುದು (ಯೋಧವು. ೭೪). [ಹುಚ್ಚು(< ಪುರ್ಚು) + ಮಳೆ(< ಮೞೆ)]

**ಹುಚ್ಚುಮುಂಡೆ** (ನಾ). (ಆಲಂ) ಅವ್ಯವಸ್ಥೆಯ ವ್ಯಕ್ತಿ: ಹುಚ್ಚುಮುಂಡೆಯ ಮದುವೆಯಲ್ಲಿ ಉಂಡವನೇ ಜಾಣ (ಗಾದೆ). [ಹುಚ್ಚು (< ಪುರ್ಚು) + ಮುಂಡೆ$_1$]

**ಹುಚ್ಚುಮುಟ್ಟೇಗಿಡ** (ನಾ). ಒಂದು ಬಗೆಯ ಸಸ್ಯ: ಮಂಗವಾರಿಸೊಪ್ಪು ಹೆಣ್ಣುಕರೀತುಂಬೆ, ಹುಚ್ಚುಮುಟ್ಟೇಗಿಡ (ಮೈಔಗಿ. ೭-೧೧೭).
[ಹುಚ್ಚು (< ಪುರ್ಚು) + ಮುಟ್ಟೆ + ಗಿಡ (< ಗಿಡು)]

**ಹುಚ್ಚುಮೆಣಸಿನಮರ** (ನಾ). ಒಂದು ಬಗೆಯ ಸಸ್ಯ: ಕಾಡುಅಮಟೆ, ವಾಸನೆಮರ, ಹುಚ್ಚುಮೆಣಸಿನ ಮರ (ಮೈಔಗಿ. ೬೮-೧೩೭೨).
[ಹುಚ್ಚು (< ಪುರ್ಚು) + ಮೆಣಸು (< ಮೆೞಸು) + ಮರ$_1$]

**ಹುಚ್ಚುಸಾಸುವೆ** (ನಾ). ಒಂದು ಬಗೆಯ ಸಾಸುವೆ : "ಕ್ಷವಃ , ಕ್ಷುತಾಭಿಜನನಃ, ರಾಜಕಾ, ಏಷ್ಟಿಕಾ, ಅಸುರೀ - ೫ ಕರೀಸಾಸುವೆ, ದೊಡ್ಡಸಾಸುವೆ; ಹುಚ್ಚುಸಾಸುವೆ" (ಸಿದ್ಧಾಂತಿ. ೨೭೯). [ಹುಚ್ಚು (< ಪುರ್ಚು) + ಸಾಸುವೆ (< ಸಾಸಿವೆ)]

**ಹುಚ್ಚುಸೊಂಡೆ** (ನಾ). ಒಂದು ಬಗೆಯ ಸೊಂಡೆಗಿಡ: "ಕಾಡುಬದನೆ, ಹುಚ್ಚು ಸೊಂಡೆ, ಸವುಡಂಗಿ, ಸೊಂಡೆ" (ಸಸ್ಯನಿ. ೧೨೧); (ಮೈಔಗಿ. ೭೦-೧೪೪೬).
[ಹುಚ್ಚು (< ಪುರ್ಚು) + ಸೊಂಡೆ$_1$ (< ಸುಂಡೆ$_1$)]

**ಹುಚ್ಚುಹತ್ತಿ, ಹುಚ್ಚಹತ್ತಿ** (ನಾ). ಒಂದು ಬಗೆಯ ಹತ್ತಿ: "ಭದ್ರೋದುಂಬರಿಕಾ- ಹುಚ್ಚುಹತ್ತಿ" (ಒಷಧಿ. ೧೧೦). **ಹುಚ್ಚಹತ್ತಿ:** "ಫಲಭದ್ರಃ- ಹುಚ್ಚಹತ್ತಿ" (ಒಷಧಿ. ೧೦೪).
[ಹುಚ್ಚು (< ಪುರ್ಚು) + ಹತ್ತಿ$_1$ (< ಪಟ್ಟಿ)]

**ಹುಚ್ಚುಹತ್ತು** (ಕ್ರಿ). ಹುಚ್ಚುಹಿಡಿ; ಬುದ್ಧಿಭ್ರಮಣೆಯಾಗು: ಅವನಿಗೆ ಹುಚ್ಚು ಹತ್ತಿತು (ಮುಂಬವ್ಯಾ. ೫-೨೦೯). [ಹುಚ್ಚು (< ಪುರ್ಚು) + ಹತ್ತು$_1$ (< ಪತ್ತು$_1$)]

**ಹುಚ್ಚುಹರಟೆ** (ನಾ). (ಆಲಂ) ಮನಸ್ಸಿಗೆ ಬಂದಂತೆ ಆಡುವ ಮಾತು; ಅಸಂಬದ್ಧಪ್ರಲಾಪ: ಗುರಿಯೆ? ಹುರಿಯೆ! ಕಚ್ಚೆ! ನೆಚ್ಚೆ? ಅವರ ಹುಚ್ಚುಹರಟೆ (೩೦ಗೀತ. ೯೯-೯). [ಹುಚ್ಚು (< ಪುರ್ಚು) + ಹರಟೆ$_1$]

**ಹುಚ್ಚುಹರಳು** (ನಾ). ಒಂದು ಬಗೆಯ ಹರಳಿನ ಗಿಡ : ವಿಶಲ್ಯಾ ಜಾಪಾಳದ ಗಿಡ, ಅಪಿಶಬ್ದದಿಂದ ಹಾವುಮೆಕ್ಕೆಗಿಡ, ಎಲುವುಸಂಧಿಗಿಡ, ಹುಚ್ಚು ಹರಳುಗಿಡ." (ಸಿದ್ಧಾಂತಿ. ೪೧೦). [ಹುಚ್ಚು (< ಪುರ್ಚು) + ಹರಳು (< ಪರಲ್)]

**ಹುಚ್ಚುಹಿಡಿ** (ಕ್ರಿ). = ಹುಚ್ಚುಹತ್ತು : ಹುಚ್ಚುಹಿಡಿಯಿತು ಎನಗೆ ಹುಚ್ಚುಹಿಡಿಯಿತು (ಪುರಂದ. ೩-೨೯ ಪಲ್ಲವಿ); ಏನು, ನಿಪುಣೆಕೆಗೆ ಹುಚ್ಚುಹಿಡಿಯಿತೇನು? (ಜಾಣಿಅ. ೨೨೦).
[ಹುಚ್ಚು (< ಪುರ್ಚು) + ಹಿಡಿ$_1$ (< ಪಿಡಿ$_1$)]

**ಹುಚ್ಚುಹೀರೆ** (ನಾ). ಒಂದು ಬಗೆಯ ಹೀರೆ: ಹುಚ್ಚುಹೀರೆಕಾಯಿಬೀಜವನ್ನು ಮೊಲೆಹಾಲಿನಲ್ಲಿ ನೆನೆಯಿಕ್ಕಿ ನಸ್ಯಂಗೆಯ್ಯೆ ಸಕಲಸನ್ನಿದೋಷಗಳು ಗುಣಮಕ್ಕುಂ (ಸಕವೈ. ೧೮೧). [ಹುಚ್ಚು (< ಪುರ್ಚು) + ಹೀರೆ$_1$ (< ಪೀರೆ)]

**ಹುಚ್ಚುಹೊಳೆ** 'ಪುರ್ಚುವೊಳೆ' ನೋ.

**ಹುಚ್ಚೆಳ್ಳು** (ನಾ). ಒಂದು ಬಗೆಯ ಎಳ್ಳು; **ಗುರೆಳ್ಳು**: "ತಿಲಪಿಂಜಃ, ತಿಲಪೇಜಃ- ಈ ೨ . . . ಹುಚ್ಚೆಳ್ಳಿಗೂ ಹೆಸರು. ಕೆಲವರು ಕಾಡೆಳ್ಳು ಎಂಬುವರು" (ಸಿದ್ಧಾಂತಿ. ೨೭೯); ಸಾಸಿವೆ, ಹುಚ್ಚೆಳ್ಳು ಮೊದಲಾದವುಗಳನ್ನು . . . ಬೆಳೆಯುತ್ತಾರೆ (ವ್ಯವಮ.೪೪).
[ಹುಚ್ಚು (< ಪುರ್ಚು) + ಎಳ್ಳು (< ಎಳ್)]

**ಹುಚ್ಚೇಳು** 'ಪುರ್ಚೇಱು' ನೋ.

**ಹುಜರು** 'ಹುಜೂರು$_1$' ನೋ.

**ಹುಜರೆ** (ನಾ). ಯಾವಾಗಲೂ ರಾಜನ ಸಮೀಪದಲ್ಲಿರುವ ಸೇವಕ; ಯಾವಾಗಲೂ ರಾಜನ ಖಾಸಾಸೇವೆಯಲ್ಲಿರುವ **ನೌಕರ**: ನೆಟ್ಟಗಿದ್ದರೆ ಯಾವಾಗೋ ನಮ್ಮ ವಿಮಲದೇವನು ಬಾದಶಹರ ಹುಜರೆ (ಕಂಚುಕಿ)ಯಾಗುತ್ತಲಿದ್ದನು (ಧಾರ್ಮಿತೇ. ೧೩); ಓರ್ವ ಸಂಸ್ಥಾನಿಕನ ಹುಜರೆಯಾಗುತ ಬೆಳೆದು ನೀನೇ ಹುಜೂರೆಂದು ಭಾವಿಸಿರುವೆ (ನವ್ಯಕಾ. ೩೬). [<— ಹಿಂ. ಹಜೂರೀ, ಹುಜೂರೀ]

**ಹುಜುರು** 'ಹುಜೂರು$_1$' ನೋ.

**ಹುಜೂರ್** 'ಹುಜೂರು$_2$' ನೋ.

**ಹುಜೂರ್‌ಜಮಾಬಂದಿ** 'ಹುಜೂರುಜಮಾಬಂದಿ' ನೋ.

**ಹುಜೂರ** 'ಹುಜೂರು$_2$' ನೋ.

**ಹುಜೂರರಿಕೆ** (ನಾ). ರಾಜನಿಗೆ ಮಾಡಿಕೊಳ್ಳುವ ಮನವಿ,— **ವಿಜ್ಞಾಪನೆ**: ಸೇನಬೋವರು ಹುಜೂರರಿಕೆ ಮಾಡಿಕೊಂಡದು (ಎಕ. VIII, ಸೊರಬ. ೨೬೬-೧೦; 1629?).
[ಹುಜೂರು$_2$ + ಅರಿಕೆ (< ಅಱಿಕೆ)]

**ಹುಜೂರು$_1$**, ಹಜೂರು$_1$, ಹುಜರು, ಹುಜುರು (ನಾ). ೧. **ಸಮಕ್ಷಮ**; **ಎದುರು**: ನೀಂ ಹುಜೂರೊಳಿರ್ಪುದೆಂದು ನಿಯಾಮಿಸಲಿಂತು ರಾಯರಾ ಸಮೀಪದೊಳ್ . . . ಕತಿಪಯವತ್ಸರಂ ವರ್ತಿಸುತ್ತುಂ (ಕೆಳನೃ. ೩-೩). ೨. **ಖುದ್ದು**; **ಸ್ವತಃ**: ವಿವರಕೆ ಹುಜೂರು ಬರವದು (ಎಕ. VIII, ಸಾಗರ. ೧೭-೧೫; 1672); ಲಿಂಗಾಭಟ್ಟನು ಹುಜೂರು ಬಂದು ಹಾರನ ಹಳ್ಳಿ ಕೋಟೆವಳಗಣ ನಾರಾಯಣದೇವರು . . . ಪೂಜೆಯನ್ನು (ಎಕ. IX (s), ಬೆಂಗಳೂ. ೧೫೦-೧; 1700). **ಹಜೂರು$_1$** : ೧. ಎಲ್ಲಿ ನೀ ಕಾದು ತಂದಿ ಹೇಳು ಕೃತಕದಿ ಇಲ್ಲಿ ನಮ್ಮ ಹಜೂರಿನೊಳಿರ್ದು (ಬಿಜ್ಜರಾ. ೮-೪೦); ಆ ಬಗ್ಗೆ ಶ್ರೀಸ್ವಾಮಿಗಳವರು ಹಜೂರಿಗೆ ಬಂದುಯಿದ್ದು (ಮೈಆರಿ. ೧೯೩೪, ೫೨-೧೨; 1812). **ಹುಜರು**: ೧. ಗಂಡಕೂಸ ಒಂದು ಆಗಲಿ ತಾಯಿ, ಮುದುಕಿ ಕಣ್ಣ ಹುಜರೆ! (ನಿಸರ್ಗ. ೩೦೭). **ಹುಜುರು**: ೧. ನಾನು ಏನನ್ನಾದರೂ ತಿನ್ನಬೇಕಾದರೆ ಎಲ್ಲರ ಹುಜುರು ತಿನ್ನುವವ (ರಕ್ತಧ್ವ. ೧೪೫). ೨. ಬೆಳ್ಳರೆ ಕುಡಿನೆಲ್ಲಿ ಚಂನ್ನಂಣನು ಹುಜುರು ಬಂದು (ಮೈಆರಿ. ೧೯೩೪, ೯-೨; 1690).
[<— ಅರ. ಹಿಂ. ಹುಜೂರ್; ಮರಾ. ಹುಜೂರ್, ಹುಜೀರ್, ಹುಜರಾಹುಜೂರ್, ಹುಜುರಾಹುಜೂರ್]

**ಹುಜೂರು$_2$**, ಹಜೂರು$_2$, ಹುಜೂರ್, ಹುಜೂರ (ನಾ). ೧. **ರಾಜ**; **ಒಡೆಯ**: ರಾಜಶ್ರೀ ದೊರೆಗಳು ತಮ್ಮ ಹುಜೂರು ಸಾಮದಿಕರು ಪಾರಪತೆಗಾರ ಕಸಬೆಗೌಡ (ಎಕ. XI, ಮೊಳಕಾ. ೫೫-೬೦; 1665); ಹುಜೂರ ಮೇಳದ ಪುಟ್ಟತಾಯಿ (ಎಕ. VIII, ತೀರ್ಥಹ. ೭೧-೧೩; 1671). **ಹಜೂರು$_2$**: ೧. ಬಹುಮಂದಿ ಪಟೇಲರುಗಳೂ . . . ಹಜೂರು ಅಪ್ಪಣೆಯನ್ನು ಜಾರೀ ಮಾಡುವುದಕ್ಕೆ ಉದ್ಯುಕ್ತರಾಗುವ ಅಮಿಲ್ದಾರನೇಕರನ್ನು ಹಿಂಸಿಸಿದರು (ಮಹಾವಂ. II, ೧೪). ೨. **ದೊರೆ, ಅಧಿಕಾರಿ ಮುಂತಾದವರನ್ನು ಸಂಬೋಧಿಸುವ ಶಬ್ದ**: ಶ್ರೀಕೃಷ್ಣರಾಜವಡೆಯರವರ ಪಾದಸೇವಕನಾದ ಹಜೂರು ಮೋದೀಖಾನೆ ಸಾವಕಾರ (ಎಕ. XIV, ಹುಣಸೂ. ೧೪೫-೫; 1867). **ಹುಜೂರ್**: ೨. ಹುಜೂರ್, ದಯಮಾಡಿ ನಾಳಿನದೊಂದು ದಿವಸದ ಅವಧಿ ಕೊಟ್ಟರೆ ನಾನು ಆ ಕಳ್ಳರನ್ನು ಗೊತ್ತುಹಚ್ಚಿ ಕೊಡುವೆ (ಮುಂಬಯಿ. ೪-೨೦); ಹುಜೂರ್, ಅದಕ್ಕೆ ಅವಕಾಶ ಒದಗಲಿಲ್ಲ (ಝಾರಾಣಿ. ೧೧). **ಹುಜೂರ**: ೨. "ಹುಜೂರ, ನನ್ನದೇ ಅಹುದು" ಎಂದು ದೃಢತೆಯಿಂದ ಉತ್ತರ ಕೊಟ್ಟ (ಜಮಿನ್ದಾ. ೧೧೯); ಅವ್ರು ಎಷ್ಟು ದಿವಸ ನೆರವಾಗುವುದು ಹುಜೂರ? (ಕೊತಕಾ. ೭೧). [<— ಅರ. ಹಿಂ. ಮರಾ. ಹುಜೂರ್]

**ಹುಜೂರುಖಜಾನೆ** (ನಾ). ಸರಕಾರದ ಬೊಕ್ಕಸ,— **ಭಂಡಾರ**: ಹುಜೂರು ಖಜಾನೆಗೆ ಐವಜು ಸಂದಾಯಮಾಡಿ ರಶೀದಿ ತರಿಸಿಕೊಳ್ಳುವದು (ಮಹಾವಂ. II, ೬೭).
[ಹುಜೂರು$_2$ + ಖಜಾನೆ]

**ಹುಜೂರುಜಮಾಬಂದಿ**, ಹುಜೂರ್‌ಜಮಾಬಂದಿ (ನಾ). **ಕಂದಾಯ ವಸೂಲಿಯ ಅಧಿಕಾರಿಗಳ ಸಮಕ್ಷಮದಲ್ಲಿ ನಡೆಯುವ ಜಮಾಬಂದಿ**: ಲೆಕ್ಕಗಳನ್ನು, ಅವುಗಳ ವಿಚಾರವಾಗಿ ಬರಬಹುದಾದ ತಕರಾರು ಅಹವಾಲುಗಳ ವಿಚಾರಣೆ ಮಾಡಿ, ಖಾಯಂ ಮಾಡುತ್ತಾರೆ. ಇದೇ ಹುಜೂರುಜಮಾಬಂದಿ (ಕೆಲಸ. ೧೫೬); ಹುಜೂರು ಜಮಾಬಂದಿಯಲ್ಲಿ ಎಲ್ಲಾ ಶಾನುಭೋಗರ ಲೆಕ್ಕ ಚೆಕ್ಕಾದರೂ ನನ್ನೂರಿನ ಲೆಕ್ಕ ಇನ್ನೂ ಬಾಕಿ (ನನ್ನೂರು. ೧೫೨). **ಹುಜೂರ್‌ಜಮಾಬಂದಿ**: ಅವರು ಶಿವಮೊಗ್ಗಿಗೆ ಹುಜೂರ್‌ಜಮಾಬಂದಿಗೆ ಹೋಗಿದ್ದಾರೆ (ಎದಿರೇ. ೨೮). [ಹುಜೂರು$_2$ + ಜಮಾಬಂದಿ]

**ಹುಜೂರುಶಿಕೆರೂಪಾಯಿ** (ನಾ). **ಹೈದರಾಬಾದುನಿಜಾಮಸರಕಾರದಲ್ಲಿ ಚಾಲ್ತಿಯಲ್ಲಿದ್ದ ನಾಣ್ಯ**: ಹುಜೂರುಶಿಕೆರೂಪಾಯಿ ಅಂದರೆ (ಮೊಗಲಾಯಿ) ದಕ್ಷಿಣಹೈದರಾಬಾದನಿಜಾಮಸರಕಾರದವರ ನಾಣ್ಯಕ್ಕೆ ಅನ್ನುತ್ತಾರೆ (ಮುಂಬವ್ಯಾ. ೨೮೬ ಅಡಿಟಿ). [ಹುಜೂರು$_2$ + ಶಿಕೆ$_0$ (< ಸಿಕ್ಕಾ) + ರೂಪಾಯಿ]

**ಹುಜ್ಜತ್ತಿ** (ನಾ). ಒಂದು ಬಗೆಯ **ಔಷಧೀಸಸ್ಯ**: "ಕಾಚಂ-ಗೌಜು, ಹುಜ್ಜತ್ತಿ, ಕಾಡುಲವಣ" (ಓಷಧಿ.೨೮). [?]

**ಹುಟಾರು** (ನಾ). ತಡಿಕೆ; **ತಟ್ಟಿ** (?): ಮೆಳೆ ಸವರಿಸಿ ಮೆಳೆ ಒಳಗೆ ಒಂದು ಕೋಲನ್ನು ಕೋವಿ ಹೇರಿಕೊಳ್ಳುವ ಬಗ್ಗೆ ಕಟ್ಟಿ, ಅದರ ಮೇಲೆ ನನಗೂ, ಚನ್ನವೀರನಿಗೂ ಎರಡು ಸಲಾ ತಿರುಗಿಸಿ, ಎದೆ ಸಮಕ್ಕೆ ಹುಟಾರ ಕಟ್ಟಿ (ರಾಜೇಂದ್ರ. ೨೭೫). [?]

**ಹುಟ್ಟಗೆ** 'ಪುಟ್ಟಿಗೆ$_2$' ನೋ.

**ಹುಟ್ಟಜೆ** 'ಪುಟ್ಟಜ' ನೋ.

**ಹುಟ್ಟಡಗಿಸು** (ಕ್ರಿ). ಜನ್ಮವನ್ನೇ ನಾಶಮಾಡು; ಸಂಪೂರ್ಣವಾಗಿ **ಧ್ವಂಸಮಾಡು**: ನಾವು ಅವರನ್ನು ಹುಟ್ಟಡಗಿಸಬಹುದು (ದೌಲತ್. ೩೧೧); ಅವರ ಹುಟ್ಟಡಗಿಸುವುದೇ ತಮ್ಮ ಗುರಿ (ಯಕ್ಷಪ್ರ. ೧೧೦); ಈ ಅಪವಾದವನ್ನು ಹುಟ್ಟಡಗಿಸಲೇ ಬೇಕು (ಝಾರಾಣಿ. ೪೦). [ಹುಟ್ಟು$_2$ (< ಪುಟ್ಟು$_2$) + ಅಡಗಿಸು (< ಅಡಂಗಿಸು)]

**ಹುಟ್ಟಡಗು** (ಕ್ರಿ). ಹುಟ್ಟು ನಾಶವಾಗು, — **ಸಂಪೂರ್ಣವಾಗಿ ಧ್ವಂಸವಾಗು**: ಇವನನ್ನು ಶಿಕ್ಷಿಸಿದರೆ ವಿದ್ರೋಹದ ಹುಟ್ಟಡಗುತ್ತದೆ (ರಾಜ್ಯೋದ. ೧೮೭).
[ಹುಟ್ಟು$_2$ (< ಪುಟ್ಟು$_2$) + ಅಡಗು$_1$ (< ಅಡಂಗು$_1$)]

**ಹುಟ್ಟಮೂಕ** (ನಾ). ಹುಟ್ಟಿನಿಂದಲೇ **ಮಾತನಾಡಲು ಆಗದವನು**: ಹುಟ್ಟಮೂಕನೆಂದು ದಟ್ಟೀತು ಜನಮನ (ಸಿದ್ಧಪು. ೪-೫೭). [< ಹುಟ್ಟು$_2$ + ಮೂಕ]

**ಹುಟ್ಟರಿವು** 'ಪುಟ್ಟಱಿವು' ನೋ.

**ಹುಟ್ಟರೆ** 'ಹುಟ್ಟಱೆ' ನೋ.

**ಹುಟ್ಟಳಿ** (ಕ್ರಿ).= **ಹುಟ್ಟಡಗು**: ಇಂಗ್ಲೀಷು ಹುಟ್ಟಳಿದು ಹೋಗುತ್ತದೆ (ದೇವಿಚಾ. ೨೨).
[ಹುಟ್ಟು$_2$ (< ಪುಟ್ಟು$_2$) + ಅಳಿ$_1$ (< ಅೞಿ$_1$)]

**ಹುಟ್ಟಳಿಸು** (ಕ್ರಿ). = **ಹುಟ್ಟಡಗಿಸು**: ಸೆರೆಯ ಹರಿ, ಅರಿಯನಿರಿ, ಹುಟ್ಟಳಿಸು ಹುಡಿಯಲ್ಲಿ (ಪಾಂಚಜ. ೫-೮). [ಹುಟ್ಟು$_2$ (< ಪುಟ್ಟು$_2$) + ಅಳಿಸು$_2$ (< ಅೞಿಯಿಸು)]

**ಹುಟ್ಟಱೆ**, ಹುಟ್ಟರೆ, ಹುಟ್ಟುಅರೆ (ನಾ). **ಭೂಮಿಯ ಮೇಲಿರುವ ಸ್ವಾಭಾವಿಕವಾದ ಬಂಡೆ**: ಕೊಟೂರ ದಾರಿಯ ಗುಡ್ಡದ ಹುಟ್ಟಱೆಯ ಮೇಲೆ ಹೋದ ವಾಮನಮುದ್ರೆಯ ಸರಿತದಲು (ಸೌಇಇ. IX.- ii, ೪೪೦-೧೯; 1419). **ಹುಟ್ಟರೆ**: ಬೆಟ್ಟದ ದಾರಿಗೆ ಒಡಗವತ್ತು ಹುಟ್ಟರೆ ಮೇಲೆ (ಎಕ. III, ತಿರುಮ. ೬೩-೪೫೮; 1748). **ಹುಟ್ಟುಅರೆ**: ತೆಂಕ ಹುಟ್ಟುಅರೆಗಳ ಮೇರೆಯ ಮಾಡಿಕೊಂಡು ನಡದು (ಎಕ. XII, ತುಮಕೂ. ೧೧-೬೦; 1426). [ಹುಟ್ಟು$_2$ (< ಪುಟ್ಟು$_2$) + ಅಱೆ$_4$]

**ಹುಟ್ಟಾ** (ಅ). ಹುಟ್ಟಿದಂದಿನಿಂದ; **ಜನ್ಮಾರಭ್ಯ**: ಹುಟ್ಟಾ ಊರು ಬಿಟ್ಟು ಗೊತ್ತಿಲ್ಲದ ಅವನು ಮಾಡುತ್ತಿದ್ದ ಸಾಹಸ ಆ ವಯಸ್ಸಿಗೆ ಸಾಮಾನ್ಯವೇನೂ ಅಲ್ಲ (ಹೊಸಕ್ಕಿ. ೩೨); ಕೆಲವೊಂದು ಪಶುಪಕ್ಷಿಗಳಿಗೆ ಕಲಾಕೃತಿಗಳಂತೆ ಕಾಣುವ ರಚನೆಗಳನ್ನು ಮಾಡುವ ಶಕ್ತಿಯು ಹುಟ್ಟಾ ಬಂದಿರುತ್ತದೆ (ಪ್ರಬಂಧ. ೧೨). [< ಹುಟ್ಟು$_2$]

**ಹುಟ್ಟಾಜ್ಯ** (ನಾ). ಹುಟ್ಟುವಳಿ; ಉತ್ಪತ್ತಿ; ಆದಾಯ: ಈ ನಾಲ್ಕು ಶಾವಿನ ಹುಟ್ಟಾಜ್ಯದ ಅಯಿವತ್ತು ಹೊಂನನೂ ಪರ್ವತದ ಶ್ರೀಗಿರಿ ಮಲ್ಲಿಕಾರ್ಜುನದೇವರ XXX ಪ್ರೀತ್ಯರ್ಥವಾಗಿ (ಎಕ. VIII. ತೀರ್ಥಹ. ೩೩-೬೩; ಸು. 1430).
[ಹುಟ್ಟು$_2$ (< ಪುಟ್ಟು$_2$) + ಆಜ್ಯ$_0$ (< ಆದಾಯ)]

**ಹುಟ್ಟಿ** 'ಪುಟ್ಟಿ$_4$' ನೋ.

**ಹುಟ್ಟಿಗೆ** 'ಪುಟ್ಟಿಗೆ$_2$' ನೋ.

**ಹುಟ್ಟಿಸು** 'ಪುಟ್ಟಿಸು' ನೋ.

**ಹುಟ್ಟು$_1$** 'ಪುಟ್ಟು$_1$' ನೋ.

**ಹುಟ್ಟು$_2$** 'ಪುಟ್ಟು$_2$' ನೋ.

**ಹುಟ್ಟು$_3$** 'ಪುಟ್ಟು$_3$' ನೋ.

**ಹುಟ್ಟು$_4$** 'ಪುಟ್ಟಿ$_4$' ನೋ.

**ಹುಟ್ಟುಅರೆ** 'ಹುಟ್ಟರೆ' ನೋ.

**ಹುಟ್ಟುಕಟ್ಟಳೆ** (ನಾ). ಆದಾಯದ ವಿಧಾನ; ಉತ್ಪನ್ನದ ವ್ಯವಸ್ಥೆ: ಆನೆವಳಿಯ ಸಿರಿಯಣನಾಯಕನು ತಂನ್ನ ಹುಟ್ಟುಕಟ್ಟಳೆಗೆ ಲೆಕ್ಕ ಮಾಡಿದ ಸ್ವಾಮಿಕಾರ್ಯ (ಕಇ. I. ೭೦-೮; 1462). [ಹುಟ್ಟು$_2$ (< ಪುಟ್ಟು$_2$) + ಕಟ್ಟಳೆ$_1$]

**ಹುಟ್ಟುಕವಿ** 'ಪುಟ್ಟುಂಗವಿ' ನೋ.

**ಹುಟ್ಟುಕಸುಬು** (ನಾ). ವಂಶಪಾರಂಪರ್ಯವಾಗಿ ಬಂದ ವೃತ್ತಿ: ಸಾಕ್ರಟೀಸನು ಹುಟ್ಟುಕಸುಬಿನಲ್ಲಿ ಬಹುಕಾಲವಿದ್ದಂತೆ ಕಾಣುವುದಿಲ್ಲ (ಸೋಕ್ರಮ. ೧೬).
[ಹುಟ್ಟು$_2$ (< ಪುಟ್ಟು$_2$) + ಕಸುಬು (< ಕಸಬು)]

**ಹುಟ್ಟುಕಿವುಡ** (ನಾ). ಹುಟ್ಟಿನಿಂದಲೇ ಕಿವಿ ಕೇಳಿಸದವನು; ಜನ್ಮಾರಭ್ಯ ಕಿವುಡಾಗಿರುವವನು: (ಕ). [ಹುಟ್ಟು$_2$ (< ಪುಟ್ಟು$_2$) + ಕಿವುಡ (< ಕಿವುಂಡ)]

**ಹುಟ್ಟುಕಿವುಡಿ** (ನಾ). ಹುಟ್ಟಿನಿಂದಲೇ ಕಿವಿ ಕೇಳಿಸದವಳು; ಜನ್ಮಾರಭ್ಯ ಕಿವುಡಾಗಿರುವವಳು: (ಕ). [ಹುಟ್ಟುಕಿವುಡ + - ಇ$_2$]

**ಹುಟ್ಟುಕುರುಡ** 'ಪುಟ್ಟುಂಗುರುಡ' ನೋ.

**ಹುಟ್ಟುಕುರುಡಿ** 'ಪುಟ್ಟುಂಗುರುಡಿ' ನೋ.

**ಹುಟ್ಟುಕೂದಲು** (ನಾ). ಮಗುವು ಹುಟ್ಟಿದಾಗ ಇರುವ ತಲೆಕೂದಲು.
**ಹುಟ್ಟುಕೂದಲು ತೆಗೆಸು** = ಮೊದಲ ಬಾರಿಗೆ ಮಗುವಿನ ತಲೆಕೂದಲನ್ನು ತೆಗೆಸು: ಮಗುವಿನ ಹುಟ್ಟುಕೂದಲು ತೆಗೆಸಲು ಅವರುಗಳು ಮನೆದೇವರಿರುವ ಹಳ್ಳಿಗೆ ಹೋಗಿದ್ದಾರೆ (ರೂಢಿ). [ಹುಟ್ಟು$_2$ (< ಪುಟ್ಟು$_2$) + ಕೂದಲು (< ಕೂಂದಲ್)]

**ಹುಟ್ಟುಗಟ್ಟು** (ಕ್ರಿ). ಉಂಟಾಗು; ಜನ್ಮ ತಾಳು: ಶೂನ್ಯದಲ್ಲಿ ಹುಟ್ಟುಗಟ್ಟಿತು ಹದುಳದೊಂದು ಹುಣ್ಣಿಮೆ (ಉಯ್ಯಾಲೆ. ೧೬-೧೧). [ಹುಟ್ಟು$_2$ (< ಪುಟ್ಟು$_2$) + ಕಟ್ಟು$_1$]

**ಹುಟ್ಟುಗನ್ನಡ** (ನಾ). ೧. ಹುಟ್ಟಿನಿಂದ ಬಂದ ಕನ್ನಡ; ತಾಯಿನುಡಿಯಾದ ಕನ್ನಡಭಾಷೆ: ಇವರ ಪ್ರಯತ್ನವನ್ನೂ ಇವರ ಪಾಂಡಿತ್ಯದ ಫಲವನ್ನೂ ಮೆಚ್ಚತಕ್ಕವರು ಯಾರು? . . . ಹುಟ್ಟುಗನ್ನಡವನ್ನೂ ಮರೆಯುತ್ತಾ ದೊಡ್ಡಮನುಷ್ಯರಾಗುವ ಇವರ ಸಹಪಾಠಿಗಳೇ ಅಲ್ಲವೇ? (ಕಬಸಾ.೫). ೨. ಅಚ್ಚಗನ್ನಡ; ಶುದ್ಧಕನ್ನಡ: ನಿನ್ನ ಹುಟ್ಟುಗನ್ನಡದ ಷಟ್ಪದೀಛಂದಸ್ಸು ನೂರಾರುವರ್ಷಗಳು ಅನುಕರಣೀಯವಾಗುತ್ತದೆ (ತುಂಗಭ. ೧೨೪). [ಹುಟ್ಟು$_2$ (< ಪುಟ್ಟು$_2$) + ಕನ್ನಡ$_1$]

**ಹುಟ್ಟುಗಲ್ಲು** (ನಾ). = ಹುಟ್ಟರೆ: ವಾಮನಮುದ್ರೆ ತಿದ್ದಿಯಿರುವ ಹುಟ್ಟುಗಲ್ಲು (ಎಕ. XIV, ಮೈಸೂರು. ೧೧೫-೩೫೮; 1674); ಮೊರಟಿಯ ಪಡುವಣ ಪಾರ್ಶ್ವದಲ್ಲಿ ಹುಟ್ಟುಗಲ್ಲು (ಎಕ. III, ಶ್ರೀರಂಗ. ೧೪-೧೩೬; 1686).
[ಹುಟ್ಟು$_2$ (< ಪುಟ್ಟು$_2$) + ಕಲ್ಲು (< ಕಲ್$_3$)]

**ಹುಟ್ಟುಗುಟ್ಟು** (ಕ್ರಿ).= ಹುಟ್ಟಡಗಿಸು: ಕಾಲನನಟ್ಟಿ ಕಾಮನ ಮೆಟ್ಟಿ ದುಷ್ಕರ್ಮಜಾಲ ವೆಲ್ಲವ ಹುಟ್ಟುಗುಟ್ಟಿ (ಭರಚ. ೭೦-೬೫). [ಹುಟ್ಟು$_2$ (< ಪುಟ್ಟು$_2$) + ಕುಟ್ಟು$_1$]

**ಹುಟ್ಟುಗುಣ** (ನಾ).ಹುಟ್ಟಿನಿಂದಲೇ ಬಂದ ನೈಜಗುಣ,— ಸ್ವಭಾವ: ಮಕ್ಕಳ ಹುಟ್ಟುಗುಣಗಳಲ್ಲಿ ಹಲವನ್ನು ತಿದ್ದಿ ಮಾರ್ಪಡಿಸಬೇಕು (ಶಿಕ್ಷದ. ೩೨); ಹುಟ್ಟುಗುಣ ಸುಟ್ಟರೂ ಹೋಗದು (ಗಾದೆ). [ಹುಟ್ಟು$_2$ (< ಪುಟ್ಟು$_2$) + ಗುಣ]

**ಹುಟ್ಟುಗುರುಡ** 'ಪುಟ್ಟುಂಗುರುಡ' ನೋ.

**ಹುಟ್ಟುಗೆ** 'ಪುಟ್ಟಿಗೆ$_2$' ನೋ.

**ಹುಟ್ಟುಗೆಡಿಸು** (ಕ್ರಿ). ಸಂಪೂರ್ಣವಾಗಿ ನಾಶಮಾಡು: ದ್ರೋಣ ಅಶ್ವತ್ಥಾಮರು ಕೋಪಿಸಿಕೊಂಡರೆ ಈ ಭೂಮಂಡಲವೆಲ್ಲವನ್ನೂ ಹುಟ್ಟುಗೆಡಿಸಬಲ್ಲರು (ಭೀಷ್ಮಚ. ೧೦೦).
[ಹುಟ್ಟುಗೆಡು + - ಇಸು$_1$]

**ಹುಟ್ಟುಗೆಡು** (ಕ್ರಿ). ೧. ಜನ್ಮವಿಲ್ಲದಂತಾಗು; ಹುಟ್ಟು ಇಲ್ಲದಂತಾಗು: ಕೂಡಲ ಸಂಗಮದೇವಯ್ಯ ನಿಮ್ಮ ಮುಟ್ಟಿ ಹುಟ್ಟುಗೆಟ್ಟೆನು (ಬಸವ. ೫೨೨); ಪುರಾತನರಿಗೆ ನಾನು ಶರಣೆಂದು ಹುಟ್ಟುಗೆಟ್ಟೆನಯ್ಯ (ಮಹಾದೇ. ಬ. ೮೮-೨೧೩). ೨. ಸ್ವರೂಪವು ಹಾಳಾಗು; ರೂಪ ಬದಲಾಗು: ಹುಟ್ಟುಗೆಟ್ಟ[ಪಾಠಾಂ. ಹುಟ್ಟಿಬಂಗೆಟ್ಟ, ಹುಟ್ಟಿದಂದುಟ್ಟ] ಹುಟ್ಟಗೆಯಂತೆ (ಲೀಲಾವ. ೨-೧೧೬ ವ); ಬಿಸುಗದಿರನ ಹುಟ್ಟುಗೆಟ್ಟುದೊ ರೋಮಶಋಷಿಕಲ್ಪ ಕೋಟಿ ತೀರ್ವನಕ (ಪೋಹತ. ೨೭-೬೩). ೩. ಇಲ್ಲದಂತಾಗು; ಹುಟ್ಟಡಗು: ಜಂಬ್ವಾದಿಲೇಹ್ಯ . . . ತೆಗೆದುಕೊಳ್ಳಲು ಬಹುಮೂತ್ರವ್ಯಾಧಿ ಹುಟ್ಟುಗೆಟ್ಟು ಹೋಗುವುದು (ಸಕವೈ. ೩೯೨). [ಹುಟ್ಟು$_2$ (< ಪುಟ್ಟು$_2$) + ಕೆಡು$_1$]

**ಹುಟ್ಟುಗೊಡ್ಡು** (ನಾ). ಜನ್ಮದಿಂದಲೇ ಬಂಜೆ ,— ಗೊಡ್ಡು: ಹುಟ್ಟುಗೊಡ್ಡು ಮಕ್ಕಳ ಗರ್ಭವ ಬಲ್ಲುದೆ (ಮೋಳಿಮಾ. ೨೩-೮೯).
[ಹುಟ್ಟು$_2$ (< ಪುಟ್ಟು$_2$) + ಗೊಡ್ಡು$_1$]

**ಹುಟ್ಟುತನ** (ನಾ). ಹುಟ್ಟಿನಿಂದಲೇ ಬಂದುದು: ಹುಟ್ಟುತನದ ಮೌನ ಬಿಟ್ಟನು ಕಂಡು ಮಲ್ಲಯ್ಯನ ತಟ್ಟನೆ ಅವನಡಿ ಹಿಡಕೊಂಡನು (ಸಿದ್ಧಪು. ೩-೬೮).
[ಹುಟ್ಟು$_2$ (< ಪುಟ್ಟು$_2$) + - ತನ]

**ಹುಟ್ಟುದರಿದ್ರ** (ನಾ). ಹುಟ್ಟಿನಿಂದಲೇ ಬಡವನಾದವನು: ಹುಟ್ಟುದರಿದ್ರಗೆ ಬಹಳ ಸಂಪದವರೆ ನೆಟ್ಟನೆ ಕೊರ್ಬುವಂದದಲಿ (ಮೋಹತ. ೧೭-೫).
[ಹುಟ್ಟು$_2$ (< ಪುಟ್ಟು$_2$) + ದರಿದ್ರ]

**ಹುಟ್ಟುಬಂಜೆ** (ನಾ). ಜನ್ಮತಃ ಬಂಜೆಯಾದವಳು: ಹುಟ್ಟುಬಂಜೆಗೆ ಫಲವಾದೀತ (ಪುರಂದ. ೧-೧೫೭-೯); ಹುಟ್ಟುಬಂಜೆಯ ಮಕ್ಕಳೈವರೊಳು ನಾನೆ ಕಡೆಹುಟ್ಟಿನವನೆಂದು ಸುರುವವಿವೇಕಿಯಂತೆ (ಕೈಕವ. ೫-೨೪-೧). [ಹುಟ್ಟು$_2$ (< ಪುಟ್ಟು$_2$) + ಬಂಜೆ]

**ಹುಟ್ಟುಬಣ್ಣ** (ನಾ). ಜನ್ಮದಿಂದಲೇ ಬಂದ ಬಣ್ಣ: ಹುಟ್ಟುಬಣ್ಣ ಒಂದಚೊಳಗೆ ಕಟ್ಟುಬಣ್ಣ ಒಂದುಮಾಡಿ (ಕನಕ. ೨೩೧-೧); ಮಾಯದ ಕಾಗೆಗೆ ಮಿಂದೆದ್ದ ಕಾಗೆಗೆ ಅಂತರವಾವುದು . . . ತೋರ್ಪುದು ಕಪ್ಪಗೆ ಹುಟ್ಟುಬಣ್ಣವು ಗಟ್ಟಿ ಕೇಳಿ (೯ಂಚಾಪ. ೨೩೭-೭೫). [ಹುಟ್ಟು$_2$ (< ಪುಟ್ಟು$_2$) + ಬಣ್ಣ]

**ಹುಟ್ಟುಬುದ್ಧಿ** (ನಾ). ಜನ್ಮದಿಂದಲೇ ಉಂಟಾಗಿರುವ ಅರಿವು: ಅವುಗಳಿಗೆ ತಮ್ಮನ್ನು ತಮ್ಮ ತತ್ತಿಗಳನ್ನು ಸಂರಕ್ಷಿಸಿಕೊಳ್ಳುವಷ್ಟು ಹುಟ್ಟುಬುದ್ಧಿಯುಂಟು (ಮುಂಬಯಿ. ೪-೧೧೫). [ಹುಟ್ಟು$_2$ (< ಪುಟ್ಟು$_2$) + ಬುದ್ಧಿ]

**ಹುಟ್ಟುಮಚ್ಚೆ** (ನಾ). ಹುಟ್ಟಿದಾಗಿನಿಂದ ಇರುವ ಮಚ್ಚೆ; ಸಂಗಾತಿ: ''ಚಟುಲಃ, ಕಾಲಕಃ, ಪಿಪ್ಲುಃ, ತಿಲಕಃ, ತಿಲಕಾಲಕಃ -೫ ತಿಲಕಾಕಾರಗಳಾದ ಕರೀಮಚ್ಚೆಗಳ ಹೆಸರು. ಸಂಗಾತಿಮಚ್ಚೆ, ಹುಟ್ಟುಮಚ್ಚೆ'' (ಸಿದ್ಧಾಂತಿ. ೧೮೨). [ಹುಟ್ಟು$_2$ (< ಪುಟ್ಟು$_2$) + ಮಚ್ಚೆ$_1$]

**ಹುಟ್ಟುಮನೆ** (ನಾ). ಜನ್ಮ ತಳೆದ ಮನೆ; ತವರುಮನೆ: ರಾಮಪ್ಪನು ತನ್ನ ಹುಟ್ಟುಮನೆಯನ್ನು, ಹುಟ್ಟೂರನ್ನು ಬಿಟ್ಟುಬಂದುದು ಕುಟುಂಬದೊಳಗಿನ ಕಲಹ ದಿಂದಾಗಿಯೇ (ಒಡ್ಡಿಉ. ೧೬); ಹುಟ್ಟುಮನೆ ಏಕಾದಶಿ, ಕೊಟ್ಟ ಮನೆ ಗೋಕುಲಾಷ್ಟಮಿ (ಗಾದೆ). [ಹುಟ್ಟು$_2$ (< ಪುಟ್ಟು$_2$) + ಮನೆ]

**ಹುಟ್ಟುಮರುಳ** (ನಾ). ಜನ್ಮತಃ ತಿಳಿಗೇಡಿಯಾದವನು: ಕನಸಿನ ಅಂಜನದಿಂದ ಜೀವಿತದ ನಿಧಿಯನ್ನು ಕಂಡುಕೊಳ್ಳಬೇಕೆನ್ನುವ ಹುಟ್ಟುಮರುಳರ ಜಾತಿಯವರೆ ಸೈ (ವಿಚಾಮಂ. ೭೨). [ಹುಟ್ಟು$_2$ (< ಪುಟ್ಟು$_2$) + ಮರುಳ]

**ಹುಟ್ಟುಮರುಳು** (ನಾ). = ಹುಟ್ಟುಮರುಳ: ಹುಟ್ಟುಮರುಳಿವನೆಂದು ಮೂಕೋನ್ಮತ್ತ ಜಡನೆಂದು ಹೊಟ್ಟೆಗಿಕ್ಕುವರುಂಡು ಮಿಕ್ಕುದ (ನಿಭಾಗ. ೫-೬-೧೨).
[ಹುಟ್ಟು$_2$ (< ಪುಟ್ಟು$_2$) + ಮರುಳು (< ಮರುಳ್$_2$)]

**ಹುಟ್ಟುಮೆಟ್ಟು** (ನಾ). ಪೂರ್ವಾಪರ; ಸಮಗ್ರವಿಷಯ: ಆ ಬಾಲಕನ

ಮುಖದಿಂದಲೇ ಅವನ ಹುಟ್ಟುಮೆಟ್ಟಂ ತಿಳಿದು ಚಿಂತಿಸಿ ವಿಚಾರಿಸದೇ ಅನ್ಯಾಯದಿಂ ತಂಗಿಯಂ ಕೊಂದೆನಲ್ಲಾ ಎಂದು ದುಃಖಿಸಿ (ಪುರುಚ. ೨೯೯).

**ಹುಟ್ಟುಮೆಟ್ಟಾಗಿ** = ಸಂಪೂರ್ಣವಾಗಿ; ಸಮಗ್ರವಾಗಿ: ದಂಣಾಯ್ಕರ ಮಕ್ಕಳು ಮಕ್ಕಳಿಗೆ ಸಲುವಂತಾಗಿ ಹುಟ್ಟುಮೆಟ್ಟಾಗಿ ಸರ್ವಮಾನ್ಯವಾಗಿ ಕೊಟ್ಟು (ಎಕ. X; ಹಾಸನ. ೧೮೨-೨೮; 1314). [ಹುಟ್ಟು$_2$ (< ಪುಟ್ಟು$_2$) + ಮೆಟ್ಟು$_2$]

**ಹುಟ್ಟುವಣ** (ನಾ). ಅಂಕುರಿಸುವಿಕೆ; ಮೊಳೆಯುವಿಕೆ: ಹುರಿದ ಚಣಕ ತಿನಲಿಕೆ ಬಾಹದಲ್ಲಾದೆ ಹುಟ್ಟುವಣೆಲ್ಲದ ಹಾಗೆ (ಚಿವಾವ. ೪೪-೩).

[ಹುಟ್ಟು$_2$ (< ಪುಟ್ಟು$_2$) + - ಅಣ]

**ಹುಟ್ಟುವಳಿ** (ನಾ). ಮೂಲಆದಾಯ; ಉತ್ಪತ್ತಿ; ವರಮಾನ: ನಾಯಕವಾಡಿಗಳು . . . ಅನುಭವಿಸಿ ಬಹ ಹುಟ್ಟುವಳಿ (ಎಕ. VII, ಶಿವಮೊ. ೭೧-೩೨; 1431); ಈ ಗ್ರಾಮಗಳಲ್ಲಿ ಯೆಷ್ಟು ಹೆಚ್ಚು ಹುಟ್ಟುವಳೀಯಾದಾಗ್ಯೂ ನಿರುಪಾಧಿಕ ಸರ್ವಮಾನ್ಯವಾಗಿ (ಎಕ. III, ಮೈಸೂರು. ೨-೧೮; 1822); ಗ್ರಾಮದ ಹುಟ್ಟುವಳಿ ವಸೂಲಿಹಣದಲ್ಲಿ ಸಂಬಳ ಬಟವಾಡೆ ಮಾಡುವ ಹುಕುಂ ಮಂಜೂರಾಗಿ (ಗ್ರಾಮಾಕ. ೭). [ಹುಟ್ಟು$_2$ (< ಪುಟ್ಟು$_2$) + - ವಳಿ$_3$]

**ಹುಟ್ಟುಶ್ವಾಸ** (ನಾ). ಶ್ವಾಸಕೋಶಕ್ಕೆ ಸಂಬಂಧಿಸಿದಂತೆ ಉಂಟಾಗುವ ಒಂದು ಬಗೆಯ ರೋಗ: ಭಾವನಾಲವಣ . . . ಸೇವಿಸಲು ಹುಟ್ಟುಗೂರಲು, ಹುಟ್ಟುಶ್ವಾಸವು ಪರಿಹರ (ಸಕವ್ಯ. ೨೨೭). [ಹುಟ್ಟು$_2$ (< ಪುಟ್ಟು$_2$) + ಶ್ವಾಸ]

**ಹುಟ್ಟುಹ** 'ಪುಟ್ಟುಹ' ನೋ.

**ಹುಟ್ಟುಹಬ್ಬ** (ನಾ). ಜನ್ಮದಿನದಂದು ಆಚರಿಸುವ ಸಂತೋಷಸಮಾರಂಭ: ಸ್ವಾತಂತ್ರ್ಯದ ಹುಟ್ಟುಹಬ್ಬ ಕರೆವುದು ಸಾವಿರದ ಕಬ್ಬ (ಸೂರ್ಯಪಾ.೧೧೭-೧); ಅಂದು ಕಾರಹುಣ್ಣಿಮೆಯಾಗಿದ್ದಿತು. ಅಂದೆ ನನ್ನ ಹುಟ್ಟುಹಬ್ಬ (ಫಲಸಂ. ೧೨).

[ಹುಟ್ಟು$_2$ (< ಪುಟ್ಟು$_2$) + ಹಬ್ಬ (< ಪರ್ಬ)]

**ಹುಟ್ಟುಹಾಕು$_1$** (ಕ್ರಿ). ೧. ಬೀಜ ಅಥವಾ ಸಸಿಯನ್ನು ನೆಡು , — ಊರು: ಇಲ್ಲೊಂದು ಸೇಬಿನ ಗಿಡ ಹುಟ್ಟುಹಾಕಿ ಬರುತ್ತೇನೆ (ಯೋಧವು. ೧೭). ೨. (ಆಲಂ) ಜಗಳವನ್ನು ತಂದುಹಾಕು ,— ತೊಡಗಿಸು: ಅವನು ಎರಡು ಪಕ್ಷದವರಿಗೂ ಹುಟ್ಟುಹಾಕಿ ಮನಸ್ತಾಪ ಬೆಳೆಸಿದ್ದಾನೆ (ರೂಢಿ).

[ಹುಟ್ಟು$_2$ (< ಪುಟ್ಟು$_2$) + ಹಾಕು (< ಪಾಯ್ಕು$_1$)]

**ಹುಟ್ಟುಹಾಕು$_2$** (ಕ್ರಿ). ದೋಣಿ ಚಲಿಸುವಂತೆ ಹುಟ್ಟುಗೋಲಿನಿಂದ ನೀರನ್ನು ತಳ್ಳು: ಹುಟ್ಟುಹಾಕಿ ಪಟ ಹಾರಿಸಿ ಯಾನ ಮಾಡುವ ದೋಣಿಯನ್ನೇ ಏರ್ಪಾಟು ಮಾಡಿಕೊಂಡೆವು (ಹಸುಹೂ. ೩೩೦). [ಹುಟ್ಟು$_3$ (< ಪುಟ್ಟು$_3$) + ಹಾಕು (< ಪಾಯ್ಕು$_1$)]

**ಹುಟ್ಟುಹಾಡು** (ನಾ). ಬದುಕಿನ ಗೀತೆ; ಜೀವನದ ಹಾಡು; ಜೀವನಗಾಥೆ: ಪಟ್ಟಿ ಪಾಡೆಲ್ಲವು ಹುಟ್ಟುಹಾಡಾಗುತ ಹೊಸದಾಗಿ ರಸವಾಗಿ ಹರಿಯುತಿವೆ (ಸಪೀಗೀ. ೧-೭). [ಹುಟ್ಟು$_2$ (< ಪುಟ್ಟು$_2$) + ಹಾಡು$_2$ (< ಪಾಡು$_2$)]

**ಹುಟ್ಟೂರು** (ನಾ). ಜನ್ಮ ತಳೆದ ಊರು; ಹುಟ್ಟಿದ ಊರು: ಮೈಸೂರೇ ನನ್ನ ಹುಟ್ಟೂರು ಎಂದು ಮಗದೊಬ್ಬರ ಅಭಿಮತ (ರೂಪಸಂ. ೨೯); ವೇಷ ಮರೆಯಿಸಿ ನಟ್ಟರುಳು ಹುಟ್ಟೂರನ್ನು ಬಿಟ್ಟೆನು (ಮಣಿಸ. ೫). [ಹುಟ್ಟು$_1$ (< ಪುಟ್ಟು$_1$) + ಊರು$_3$ (< ಊರ್)]

**ಹುಡಕೆ, ಹುಡಿಕೆ** (ನಾ). ಕರಂಡ; ಭರಣಿ: ಚೈತ್ಯಾಲಯದ ತಾಮ್ರದ ಹುಡಕೆಯ ತುಡಿನ್ನಿಲೆಯ ಆದಿನಾಥಸ್ವಾಮಿಗಳ ಪೂಜೆಗೆ (ಸೌಇಇ. ೧೯೨೯, ಕಾರ್ಕಳ್. ೫೨೯-೬೬; 1520).

**ಹುಡಿಕೆ:** ೧.'ಹುಡಿಕೆಕಾರಕ' ಪರಾ. ೨. ಬುಟ್ಟಿ: 'ಹುಡಿಕೆವಲೆ' ಪರಾ.

[< ಪುಡಿಕೆ]

**ಹುಡದಿ** (ನಾ). (ಉಕ) ೧. ಗೊಂದಲ; ಗಲಾಟೆ: ಎಳೆಯ ಬಿಸಲಾಗ ಹುಡದೀಯ ಹಾಕೂವ ಕಂದ (ಗರತಿ. ೯೮); ದಿನವೆಲ್ಲ ಮನೆಯಲ್ಲಿ ಅವರ ಹುಡದಿ ಇದ್ದದ್ದೇ (ಸ್ಮೃತಿಚಿ. ೩೯೮). ೨. ಹುಡುಗಾಟಿಕೆ; ಚೆಲ್ಲಾಟ: ಹುಡದೀಯ ಬಿಟ್ಟು ಅಡಿಗಡಿ ಮುರಕದ ನಡಿಗೀಯ ಹಿಡಿದು ದಿನವೇಸ ಕೋಲ (ಮೂರ್ತಿಶಾ. ೪೧-೧೧).

**ಹುಡದಿಯಾಡು** = ಗದ್ದಲಮಾಡು; ಗೊಂದಲಮಾಡು: ಒಳಗೆಲ್ಲ . . . ಮಂಗ ಹುಡದಿಯಾಡಿದವು (ಜನಗೀ. ೩೮). **ಹುಡದಿ ಹಾಕು** = ಹುಡದಿಯಾಡು: ನೀವು ಹೀಗೆ ಹುಡದಿ ಹಾಕುವದರೊಳಗೆ ಎಲ್ಲಿಯಾದರೂ ಬೆಂಕಿಯ ಕುಣಿಯಲ್ಲಿ ಬಿದ್ದು ಮೈಸುಟ್ಟು ಕೊಂಡೀರಿ (ಕಲಿಕು. ೧೩೫); ಹೀಂಗ ಹುಡದಿ ಹಾಕಿದರ ನಾಳೆ ಭರಮು ಹ್ಯಾಂಗ ಸುಮ್ಮನೆ ಇದ್ದಾನು? (ನಿಸರ್ಗ. ೧೭). [ದೇ. || ಮರಾ. ಹುಡದೀ]

**ಹುಡಹಾವು** (ಕ್ರಿ). ಗಾಬರಿಯಿಂದ ಓಡಾಡು; ಪರದಾಡು: ಹೆಂಡಿರೀ ಮಕ್ಕಳೆಲ್ಲರುಂ ಸತ್ತುಹೋಹಂತಾಯಿತೆಂದೆನುತ ಬಾಯಂ ಬಿಡುತ್ತ ಮದ್ದಳೆಯ ಹೊಕ್ಕಿಲಿಯಂತಿರತ್ತಿತ್ತ ಹುಡ [ಪಾಠಾಂ.ಡು]ಹಾವುತಿರ್ದರಾಗ (ಸಮ್ಯಕೌ. ೮-೫೩); ಕೊಲೆಗಳ್ಕಿ ತಡೆಯದಿರ್ದವರು ಮದ್ದಳೆಯ ಹೊಕ್ಕಿಲಿಯಂತೆ ಹುಡಹಾವುತ್ತಿರ್ದರಾಗ (ನೇಮಿಸಂ. ೨೮-೧೩೮). [?]

**ಹುಡಾಯಿಸು** (ಕ್ರಿ). ಚಡಪಡಿಸು (?): ಸ್ನಾನಕ್ಕೆಂದು ಸಿದ್ಧವಾಗಿದ್ದ ನೀರನ್ನು ವಿಜಯದಾಸರು ನೀರಿಗಾಗಿ ಹುಡಾಯಿಸುತ್ತಿದ್ದ ಒಂದು ಕತ್ತೆಗೆ ಕುಡಿಸಿಬಿಟ್ಟರು (ಕಥವಿ. ೪೧೭). [? + - ಇಸು$_3$]

**ಹುಡಿ** 'ಪುಡಿ' ನೋ.

**ಹುಡಿಕೀಲುಗ** (ನಾ). ಒಂದು ಬಗೆಯ ಪಕ್ಷಿ: ಲೊಕ್ಕಿಗನು ಹುಡಿಕೀಲುಗನು ಹಾಲ್ಹಕ್ಕಿ ಕೋಗಿಲೆ ಕೋದವನ ಕುಕ್ಕುಮಾಯಿಯ ಕೆಂಡವಕ್ಕಿಗಳವಜೊಳೊಪ್ಪಿದುದು (ಸಾಳ್ವಭಾ. ೫-೨೨). [?]

**ಹುಡಿಕೆ** 'ಹುಡಕೆ' ನೋ.

**ಹುಡಿಕೆಕಾರಕ** (ನಾ). ಭರಣಿ, ಕರಂಡ ತಯಾರಿಸುವ ಕೈಕೆಲಸಗಾರರ ಮೇಲೆ ಹಾಕುವ ತೆರಿಗೆ: ಹುಡಿಕೆಕಾರಕದಿಂದ ಜನ ೨ ಕ್ಕೆ ಗ ೧೧೨ ಹಂಬುಗಾರಕದಿಂದ ಜನ ೨ ಕ್ಕೆ ಗ ೧೮೩ (ಎಕ. VIII, ತೀರ್ಥಹ. ೯೫-೬೨; 1709).

[ಹುಡಿಕೆ (< ಹುಡಕೆ) + ಕಾರಕ$_1$]

**ಹುಡಿಕೆವಲೆ** (ನಾ). ಬುಟ್ಟಿಯಾಕಾರದ ಒಂದು ಬಗೆಯ ಬಲೆ: ಗಾಡವಲೆ ಗೂಢವಲೆ ಹು[ಪಾಠಾಂ. ಮ]ಡಿಕೆವಲೆ ಮಂದಾಸುವಲೆಯ ಹೊರೆಗಳ ಮೊತ್ತಮಂ ಕಂಡನಾದಯ್ಯನು (ಆಸೆಪು. ೩-೧೩); (ಹಚಕಾ.೫-೮ ನೋ); ಎರಳೆವಲೆ ಹಂದಿವಲೆ ಹೊಯ್ವಲೆ ಹರಹುವಲೆಗಳಳೆವಲೆ ಹುಡಿಕೆವಲೆ ಮರೆವಲೆಗಳು (ಸಾಳ್ವಭಾ. ೫-೧೯).

[ಹುಡಿಕೆ (< ಹುಡಕೆ) + ಬಲೆ$_1$]

**ಹುಡಿಕ್ಕೆಬತ್ತ** (ನಾ). ಒಂದು ಬಗೆಯ ಬತ್ತ: ಕೆಱೆಯ ಪಂಚವೇಸ್ವರದೇವರಿಗೆ ಬಿಟ್ಟ ಕಾಡಲಹಳ್ಳಿಯಲಿ ಅಂತು ಹುಡಿಕ್ಕೆಬತ್ತಕ್ಕೆ ಬಿಟ್ಟ ದೇವದಾನದ ಸೇವೆ (ಎಕ. VI, ಚಿಕ್ಕಮ. ೬೨-೪೨; 1058 ?). 'ಹುಡುಕಳನಿ' ಪರಾ. [ಹುಡಿಕ್ಕೆ? + ಬತ್ತ]

**ಹುಡಿಗಲ್ಲು** (ನಾ). ಸಣ್ಣ ಕಲ್ಲು; ಪುಡಿಗಲ್ಲು: ಹುಡಿಗಲ್ಲು ನಿಡುಗಲ್ಲು ಬಡಿಗಲ್ಲು ಭರಹಾಸರೆಗಲ್ಲು (ನವಮೋ. ೩೨-೩೩). [ಹುಡಿ (< ಪುಡಿ) + ಕಲ್ಲು (< ಕಲ್$_3$)]

**ಹುಡಿಗಳೆ** (ಕ್ರಿ). ಪುಡಿಮಾಡು: ಗಿರಿತರುವ್ರಜಗಳನು ಹುಡಿಗಳೆದು ಬಿಡದೆ ಸೀಳುತ ಕೊಚ್ಚಿ ಬಿಸುಡುತ (ಕೌಶಿರಾ. ೩೫-೧೪). [ಹುಡಿ (< ಪುಡಿ) + ಕಳೆ$_1$]

**ಹುಡಿಗುಟ್ಟು** 'ಪುಡಿಗುಟ್ಟು' ನೋ.

**ಹುಡಿಗೂಡಿಸು** 'ಪುಡಿಗೂಡಿಸು' ನೋ.

**ಹುಡಿಗೆ** 'ಹುಡುಗೆ' ನೋ.

**ಹುಡಿಗೆದಱು** (ಕ್ರಿ). ಧೂಳೆಬ್ಬಿಸು: ತಪ್ಪಿ ಮೈಯಲಿ ಬಿದ್ದ ಗಿರಿ ಸಿಡಿದುಪ್ಪರಿಸಿ ಹುಡಿಗೆದಱಿದವು (ತೊರರಾ. ೪-೪-೨೧). [ಹುಡಿ (< ಪುಡಿ) + ಕೆದಱು$_1$ (< ಕೆದಱ್$_1$)]

**ಹುಡಿಗೆಯ್** 'ಪುಡಿಗೆಯ್' ನೋ.

**ಹುಡಿಗೈ** 'ಪುಡಿಗೆಯ್' ನೋ.

**ಹುಡಿಬಡಿ** (ಕ್ರಿ). ಚೂರು ಚೂರಾಗುವಂತೆ ಹೊಡೆ; ಧ್ವಂಸಮಾಡು: ಕುಡಿವೆವು ಸಮುದ್ರಾದಿ ಸಕಲಾಂಬುಜಾಲಮಂ ಹುಡಿಬಡಿವೆವಮರಾಧರಾದಿ ಸಕಲಾದ್ರಿಗಳನು (ಚಬಪು. ೪೨-೮). [ಹುಡಿ (< ಪುಡಿ) + ಬಡಿ$_1$]

**ಹುಡಿಬಿಡು** (ಕ್ರಿ). ಕುಟ್ಟೆಹುಳು ಹಿಡಿ; ಟೊಳ್ಳು ಬೀಳು: ವಾತಪಿತ್ತಶ್ಲೇಷ್ಮಗಳು ತಂತಮ್ಮ ಚೈತನ್ಯವ ಕಾಣಿಸದೆ ಆ ಶರೀರವಂ ಹುಡಿಬಿಟ್ಟ ಮರದ ಹಾಗೆ ಬೆರತು . . . ಮರಣವನ್ನೆಯ್ದುವನು (ಸಕವ್ಯ. ೩೫೮). [ಹುಡಿ (< ಪುಡಿ) + ಬಿಡು$_1$]

**ಹುಡಿಮಸಗು** (ಕ್ರಿ). = ಹುಡಿಗೆದಱು: ಪದಹತಿಗೆ ಗಿರಿ ಹುಡಿಮಸಗಿದವು (ತೊರರಾ. ೪-೪-೨೧). [ಹುಡಿ (< ಪುಡಿ) + ಮಸಗು]

**ಹುಡಿಮಾತು** (ನಾ). ಸಣ್ಣ ಸಣ್ಣ ಮಾತು; ಕಿರುನುಡಿ: ರಂಗಸ್ಥಳದಲ್ಲಿಯೂ ಅದೇ

ವಿಧವಾಗಿ ಹುಡಿಮಾತಿಗೂ ರಾಗವನ್ನು ಸೇರಿಸುತ್ತಿದ್ದರು (ಹುಟ್ಟಿಪ. ೮೨).
[ಹುಡಿ (< ಪುಡಿ) + ಮಾತು$_1$]

**ಹುಡಿಮುಕ್ಕ** (ನಾ). ಕ್ಷುದ್ರನಾದ ಮೂರ್ಖ: ತಕ್ಕ ವರವನು ನೆಱೆ ಪಡೆದು ಹುಡಿಮುಕ್ಕನೆದ್ದನು ಹರನಡಿಗೆ ಮೈಯಿಕ್ಕಿ (ನಿಭಾಗ. ೧೦-೮೧-೨೧).
[ಹುಡಿ(< ಪುಡಿ) + ಮುಕ್ಕ$_3$]

**ಹುಡಿಯಾಟ** 'ಪುಡಿಯಾಟ' ನೋ.

**ಹುಡಿಯೇಳು** 'ಪುಡಿಯೇಳು' ನೋ.

**ಹುಡಿಹಾಱು** (ಕ್ರಿ). ಧೂಳೇಳು; ಧೂಳಾಗು: ಎಡೆತೊಱೆಗಳ ಮುಂದೆ ನಡೆವವರ್ಕುಡಿದರು ನಡುವೆ ಪೋಪರಿಗರಿಲಾಯ್ತು ಕಡೆಯೊಳೆಯ್ದುವರ ಕಾಲೊಳು ಹುಡಿಹಾಱಿತು ನಡೆದುದು ಚಕ್ರಿಯ ಕಟಕ (ಭರಚ. ೨೩-೫೦); ಆವೂರ ಕೆಱೆ ಬತ್ತಿ ಹುಡಿ ಹಾಱುತಿರೆ (ಗುರುಚಾ. ೧೦-೩೫). [ಹುಡಿ (< ಪುಡಿ) + ಹಾಱು$_1$ (< ಪಾಱು$_1$)]

**ಹುಡಿಹುಚ್ಚುಗೊಳಿಸು** (ಕ್ರಿ). ವಿಶೇಷವಾದ ಭ್ರಮೆಗೆ ಒಳಗಾಗುವಂತೆ ಮಾಡು: ಅಡವಿಯ ಹೊಗಸಿತ್ತು . . . ಹಿಡಿದೊತ್ತಿ ಕೇಶವ ಕೀಲಿಸಿತ್ತು ಹುಡಿಹುಚ್ಚುಗೊಳಿಸಿತ್ತು ಊರೊಳಗೆಲ್ಲ ಈ ಬೆಡಗಿನ ಮಾಯೆಯ ಬಡಿಹೋರಿ ಸಮಯಿಗಳ ನುಡಿಗೆ ನಾಚುವೆನು (ವಚಶಾ. I, ೨೫೮-೧೭). [ಹುಡಿ? + ಹುಚ್ಚುಗೊಳಿಸು (< ಪುಚ್ಚುಂಗೊಳಿಸು)]

**ಹುಡಿಹುಲ್ಲು** (ನಾ). ಚೂರುಚೂರಾದ ಹುಲ್ಲು:
ಹುಡಿಹುಲ್ಲ ಮಾಡು = (ಆಲಂ) ಹಾಳುಗೆಡವು; ನಾಶಮಾಡು: ಎಲ್ಲಿ ಕೋಡಗ ಬನವನುಱೆ ಹುಡಿಹುಲ್ಲ ಮಾಡಿದ ಮರ್ಕಟಾಧಮನೆಲ್ಲಿ (ತೊರರಾ. ೫-೬-೧೦).
[ಹುಡಿ (< ಪುಡಿ) + ಹುಲ್ಲು (< ಪುಲ್)]

**ಹುಡುಕಪ್ಪ** (ನಾ). ಬಚ್ಚಿಟ್ಟುಕೊಂಡವರನ್ನು ಹುಡುಕುವ ಒಂದು ಬಗೆಯ ಆಟ: ಚಂದಿರದೇವನು ಬೆಳುಮುಗಿಲ ಮರೆಯಲ್ಲಿ ಹೋಗುತ್ತ ಹೊರಗೆ ಬರುತ್ತ ತನ್ನ ನಲ್ಲೆಯೊಡನೆ 'ಹುಡುಕಪ್ಪ'ನನ್ನು ಆಡುತ್ತ ಬಂದ (ಸುವಸಂ. ೨೩); ನಾನೂ ನೀನೂ ಇಲ್ಲಿಯೇ ಅಲ್ಲವೆ 'ಹುಡುಕಪ್ಪ' ನನ್ನಾಡಿದ್ದು (ತುಂಗಭ. ೧೦೦). [< ಹುಡುಕು$_1$]

**ಹುಡುಕಳನಿ** (ನಾ). ಒಂದು ಬಗೆಯ ಬತ್ತ: ಕುಱುವಿನೊಳಗೆ ಬಯಿರಕಣಗಿ ಹಂನೆರಡು ಮೂಡೆ ಹುಡುಕಳನಿ ಹದಿನೆಂಟು ಮೂಡೆ ಅಂತು ಕಾತಿಗೆ ಮೂವತ್ತು ಮೂಡೆ (ಕಇ. III, ೬-೧೭; 1348). 'ಹುಡಿಕ್ಕೆಬತ್ತ' ಪರಾ. [ಹುಡು? + ಕಳನಿ (< ಕಲನಿ)]

**ಹುಡುಕಾಟ** (ನಾ). ಹುಡುಕುವ ಕೆಲಸ; ಶೋಧನಕಾರ್ಯ: ಈ ಭಾಷೆ . . . ಇತರ ಭಾಷಾಪರಿವಾರಕ್ಕೆ ಸೇರುವುದಿಲ್ಲ. ಇದರ ಬಗೆಗೂ ಹೆಚ್ಚು ಹುಡುಕಾಟ ಆಗಬೇಕು (ದ್ರಾವಿವಿ. ೪೩೮). [ಹುಡುಕು$_1$ (< ಪುಡುಂಕು) + ಆಟ]

**ಹುಡುಕಾಡು** (ಕ್ರಿ). ಪತ್ತೆಮಾಡಲು ತಡಕು; ಶೋಧಮಾಡು: ಹೆಂಡಿರು ಮಕ್ಕಳು ಹುಡುಕಾಡಿದರು (ಕವಿಸೋ. ೨-೬); ರತ್ನವನ್ನು ಕಳೆದುಕೊಂಡ ಕಾಲಪುರುಷನು ಅದನ್ನು ಹುಡುಕಾಡತೊಡಗಿದನು (ಉರ್ದುಪಾ. ೧೯೭). [ಹುಡುಕು$_1$(< ಪುಡುಂಕು) + ಆಡು$_1$]

**ಹುಡುಕಿಸು** (ಕ್ರಿ). ಹುಡುಕುವಂತೆ ಮಾಡು; ಅನ್ವೇಷಣೆ ಮಾಡಿಸು: ಊರುಗಳನ್ನು ತೋಪುಗಳನ್ನು ಕಾಡುಗಳನ್ನು ಹುಡುಕಿಸಿ ಹಣ್ಣುಮಾಡಿಬಿಟ್ಟೆಯಲ್ಲಾ (ಚಂಗಾಳ್ಯ. ೬೬).
[ಹುಡುಕು$_1$ (< ಪುಡುಂಕು) + - ಇಸು$_3$]

**ಹುಡುಕು$_1$** 'ಪುಡುಂಕು' ನೋ.

**ಹುಡುಕು$_2$** (ನಾ). ಡಮರುವಿನ ಆಕಾರದ ಒಂದು ಬಗೆಯ ಚರ್ಮವಾದ್ಯ: ಕರಡೆ ಮದ್ದಳೆ ಹುಡುಕು ಡೋಳು ಮುಂತಾದುವು ಪೃಥ್ವಿಸಂಬಂಧ (ಗುರುಚಾ. ೬-೬೬). 'ಉಡುಕು$_3$' ಪರಾ. [< ಸಂ. ಹುಡುಕ್ಕ]

**ಹುಡುಕು$_3$** (ನಾ).(?) : ಲತೆ ಪರ್ಣ ಮೊದಲಾದ ಪಚ್ಚೆಪೈರು ಗೆಣಸು ವಿಧಲ ಹುಡುಕಂ ಮುಟ್ಟದೆ (ವಿಲೇಶ್ಯ. ೧೯). [?]

**ಹುಡುಕುದಿಟ್ಟಿ** (ನಾ). ಹುಡುಕುವ ನೋಟ; ಶೋಧಕದೃಷ್ಟಿ: ಮಂಜಿನಲ್ ಕವಿದ ಧೂಮದ ಸಾಂದ್ರಜವನಿಕೆಯೊಳಡಗಿದಾ ಪಡಗುರಕ್ಕಸನಿರವನರಿಯಲೆಂದಾ ದೆಸೆಗೆ ಹುಡುಕುದಿಟ್ಟಿಯೊಳಿರ್ದ ಕಪಿಗಳ್ (ಶ್ರೀರಾಮಾ. ೫೫೫-೨೯೭).
[ಹುಡುಕು$_1$ (< ಪುಡುಂಕು) + ದಿಟ್ಟಿ]

**ಹುಡುಕುನೀರ್** 'ಪುಡುಕುನೀರ್' ನೋ.

**ಹುಡುಕುನೀರದ್ದು** 'ಪುಡುಕುನೀರಟ್ಟು' ನೋ.

**ಹುಡುಕುನೋಟ** (ನಾ).= ಹುಡುಕುದಿಟ್ಟಿ: ಕುಳಿಂದಕನು ಬಿಲ್ಲಿಡಿದು ಹುಡುಕುನೋಟ ಬೀರುತ್ತಾ ಪ್ರವೇಶಿಸುತ್ತಾನೆ (ಚಂದ್ರಸ.೩೬); ಅಮ್ಮನಂತೂ ಯಾವಾಗಲೂ ನನ್ನನ್ನು ಹುಡುಕುನೋಟದಿಂದಲೇ . . . ನೋಡುವರು (ಸುವಸಂ. ೧೩).
[ಹುಡುಕು$_1$ (< ಪುಡುಂಕು) + ನೋಟ]

**ಹುಡುಕುಪಡೆ** (ನಾ). ಹುಡುಕಲು ಹೊರಟಿರುವ ಸೈನ್ಯ ; ಶೋಧಿಸಲು ಹೊರಟ ದಳ: ಸಾಗರೋಲ್ಲಂಘನಕೆ ಮುನ್ನಂದು ಹುಡುಕುಪಡೆ ಸಭೆ ನೆರೆದ ಸಾನುಪ್ರದೇಶಮಂ . . . ಬಣ್ಣಿಸುತಿರಲ್ (ಶ್ರೀರಾಮಾ. ೫೪೨-೭೪). [ಹುಡುಕು$_1$ (< ಪುಡುಂಕು) + ಪಡೆ$_2$]

**ಹುಡುಕೆ** 'ಪುಡಿಕೆ' ನೋ.

**ಹುಡುಕ್ಕ** (ನಾ). = ಹುಡುಕು$_2$: ಅಘೋಷಣವೆಂಬ ಹುಡುಕ್ಕಂ (ವಿವೇಕ. ೨೩೬). [ಸಂ.]

**ಹುಡುಗ, ಪುಡುಗ** (ನಾ). ಎಳೆಯ ವಯಸ್ಸಿನವನು; ಬಾಲಕ: ಮಡಿವಾಳಯ್ಯನ ಮನೆಯ ಕಡೆಯ ಬಾಗಿಲ ಕಾಯ್ವ ಹುಡುಗನಿವನೆಂದೆನ್ನ ಕರೆಯೊ ಗುರುವೆ (ಮಿಶ್ರಸ್ತೋ. ೯೯); ಶಿವಾಗಮದ ಸೇವೆಗೆ ನೇಮಿಸಿ ಹುಡುಗರು ಪೂಜಾಕರ್ತರೆಂದು ಇವರು ಉತ್ತ ಭೂಮಿಗೆ ತೆರಿಗೆ ಇಲ್ಲವೆಂದು ಮಾಡಿ (ಮೈಆರಿ. ೧೯೩೦, ೧೩-೩೦; 1345?). Δ **ಪುಡುಗ:** ಉಚ್ಚತರ ಶಾಖಾಗ್ರವಂ ಪತ್ತಿ ಪಾಡುಗಳನಾಯ್ವುತಿಹ ಪುಡುಗರುಗಳಂ ಅಚ್ಚಿಗಳನೀಕ್ಷಿಸುತ್ತಂ (ಮಹಾವಿ. ೫-೭). [?]

**ಹುಡುಗತನ** (ನಾ). ಬಾಲಸ್ವಭಾವ; ಮಕ್ಕಳ ರೀತಿ ನೀತಿ: ಮುಷ್ಟಿಯಿಂದ ಹಿಡಿದು ಹುಡುಗತನದಿಂದ ಇವನು ಬಾಧಿಸುವ ಸಿಂಹದ ಮರಿಯನ್ನು ಬಿಡಿಸು (ಶಾಕುಂತ. ೧೦೫-೨೨); ಮನುಷ್ಯಪ್ರಯತ್ನವಲ್ಲದೆ ದೈವಯತ್ನವೆಲ್ಲಿ ಬಂತು ಎಂದು ನನ್ನ ಹುಡುಗತನದ ವಾದ (ಚಂಗಾಳ್ಯ. ೧೧೪). [ಹುಡುಗ + - ತನ]

**ಹುಡುಗಪಾಳ್ಯ** (ನಾ). ಬಾಲಕರ ಗುಂಪು; ಚಿಕ್ಕಮಕ್ಕಳ ಸಮೂಹ: ಈ ಹುಡುಗಪಾಳ್ಯವಂ ಸೇರಿ (ಸೌಗಂಧಿ. ೫೯೮-೧೧); ಹುಡುಗಪಾಳ್ಯದ ಕೆಲೆದಾಟ ಬಹಳವಾಗಿದ್ದಾಗ್ಯೂ . . . ನಡೆತೆಯಲ್ಲಿ ಮರ್ಯಾದೆ ಚೆನ್ನಾಗಿದ್ದವು (ಕೆಲನ. ೨೦೩).
[ಹುಡುಗ + ಪಾಳ್ಯ (< ಪಾಳೆಯ)]

**ಹುಡುಗಾಟ** (ನಾ). ೧. ಮಕ್ಕಳ ಚೇಷ್ಟೆ, - ವಿನೋದ; ಚಿಣ್ಣಾಟ: ಮುಂ ಕುದುರೆಯಂ ಕಟ್ಟಿ ಹುಡುಗಾಟವೆಂದರಿತೆ ನೀನೀಗಳೇಂ? (ಚತ್ರಾಂಗ. ೮೦-೨೧೪); ನಿನಗಿನ್ನೂ ಹಿಂದಿನ ಹುಡುಗಾಟದ ಸ್ವಭಾವ ಹೋಗಿಲ್ಲ (ಶಾಲಮು.೮). ೨. ಕುಚೋದ್ಯ; ಕುಚೇಷ್ಟೆ: ಏನು ನಾನಾವಾಗಲಾದರೂ ಹುಡುಗಾಟವಾಡಿದ್ದೇನೆಯೆ (ಝೂರಾಣಿ.೪೮); ಓದಲಿಕ್ಕೆ ಕೂತಾಗ ಏನದು ಹುಡುಗಾಟ? (ಕುಂಕುಮ. ೭೦). [ಹುಡುಗ + ಆಟ]

**ಹುಡುಗಾಟಿಕೆ** (ನಾ).= ಹುಡುಗಾಟ ೧: ಏನಿದು, ಅತ್ತ ಹೋಗಿ, ಇನ್ನೂ ಹುಡುಗಾಟಿಕೆ (ತ್ಯಾಗಮು.೧); ಮಾಧವನ ಹುಡುಗಾಟಿಕೆಯೆ? ಅಥವಾ ನಾನು ಬರೋಡಾಕ್ಕೆ ತೆರಳುವಂತೆ ಏನಾದರೂ ಹಂಚಿಕೆ ಸೃಷ್ಟಿಸಲಾಗಿತ್ತೇ ಎಂದು ತಿಳಿದಿಲ್ಲ (ವಾತ್ಸಲ್ಯ. ೨೫೩).
[ಹುಡುಗಾಟ + - ಇಕೆ]

**ಹುಡುಗಿ** (ನಾ). ಚಿಕ್ಕವಯಸ್ಸಿನವಳು; ಬಾಲಕಿ; ಬಾಲೆ: ಹುಡುಗಿಯರ ಸಂಗ ಮಾಡುವನೆ ರಂಗ (ಪುರಂದ. ೨-೪೬-೩); ಕಂಠನ ಹೆಂಡತಿ ಚಲುಡಿಯೆಂಬ ಹುಡುಗಿಯನ್ನು ನಿಮಗೆ ಕ್ರಯಕ್ಕೆ ಕೊಟ್ಟೆನಾಗಿ (ಮೈಆರಿ. ೧೯೨೮, ೬೭-೮; 1808); ಓಹೋಹೋ! ಅಂಥಾ ಸುಂದರಿಯೇನಯ್ಯ ನಿನ್ನ ಹುಡುಗಿ (ಅವತಂ. ೨). [ಹುಡುಗ + - ಇ$_2$]

**ಹುಡುಗು** (ನಾ). ಬಾಲಸ್ವಭಾವದವನು; ವಿವೇಚನೆ ಇಲ್ಲದವನು.
**ಹುಡುಗುಹುಡುಗು** (ದ್ವಿರುಕ್ತಿ): ನಮ್ಮ ರಾಘವ ತುಂಬಾ ಹಟಮಾರಿ. ಇನ್ನೂ ಹುಡುಗುಹುಡುಗು (ತುಂಗಭ. ೧೧೩). [ಹುಡುಗ + - ಉ$_4$]

**ಹುಡುಗುಚೇಷ್ಟೆ** (ನಾ). ಹುಡುಗಾಟಿಕೆ; ವಿನೋದ: ಅವಳು ಮಾಡಿದ ಹುಡುಗು ಚೇಷ್ಟೆಯನ್ನು ಕೇಳಿ . . . ಕ್ಷಮೆ ಬೇಡಿದನು (ವಚಭಾ. ೧೪೮). [ಹುಡುಗು + ಚೇಷ್ಟೆ]

**ಹುಡುಗುಬುದ್ಧಿ** (ನಾ). ಬಾಲಸ್ವಭಾವ; ವಿವೇಚನೆ ಇಲ್ಲದಿರುವಿಕೆ: ಬರೀ ಹುಡುಗುಬುದ್ಧಿ ಇವಳದು (ಬದುಜ. ೧೭೮). [ಹುಡುಗು + ಬುದ್ಧಿ]

**ಹುಡುಗೆ, ಹುಡಿಗೆ** (ನಾ).= ಹುಡುಗಿ: ಹಗಲೆಲ್ಲ ನೀರಲ್ಲಿ ಆಟವಾಡಿ ಈ ಹುಡುಗೆ ನೆಗಡಿ ತಂದುಕೊಂಡರೆ (ದೇಅನ್ನ. ೧೮); ದಿನವೂ ನಮ್ಮ ಮನೆಗೆ ಹೂವು ತರುವ ಹುಡುಗೆ

(ಆಬೋಲೀ. ೧). **ಹುಡಿಗೆ:** ಬೊಗ್ಗಿದ ಸ್ತ್ರೀಯ ಹೋಹೊಲ್ಲ ಹುಡಿಗೆಯ ಕಿಗ್ಗಳವೆ ಹೊಲ್ಲ (ಸರ್ವಜ್ಞ. ೧೮೧೩); ಹಳ್ಳಿಯ ಊರಲ್ಲಿ ಹುಟ್ಟಿ ಬೆಳೆದ ಹುಡಿಗೆಯನ್ನು ಮದುವೆ ಮಾಡಿಕೊಂಡೆ (ಮೋಹಿನೀ. ೧೩). [ಹುಡುಗ + - ಎ$_2$]

**ಹುಡುತುತು, ಹುಡುತುತ್ತು, ಹುತುತು, ಹೂತೂತು** (ನಾ). ಒಂದು ಬಗೆಯ ಆಟ; ಕಬಡಿ ಆಟ: ನಡುನಡುವೆ ಗಡಿ ಕೊರೆದು ಆಡದಿರು 'ಹುಡುತುತು' (ನೆಲಮು. ೧೮-೧೬). **ಹುಡುತುತ್ತು:** ಹುಡುಗರು . . . ''ಹುಡುತುತ್ತು'' ತಿಳ್ಳಿ ಮುಂತಾದ ಆಟಗಳನ್ನು ಆಡುತ್ತಿದ್ದರು (ನಿರಾಘ. ೯೫). **ಹುತುತು:** ಆತ ಹುತುತು ಆಟದಲ್ಲಿ ಗಟ್ಟಿಗ (ರೂಢಿ). **ಹೂತೂತು:** ಸ್ವತಃ ಮಾಸ್ತರರೇ ವಿದ್ಯಾರ್ಥಿಗಳೊಡನೆ ಖೋಖೋ ಹೂತೂತು ಆಟವಾಡುವರು (ಸಶೂರ. ೨೦೯). [<— ಮರಾ. ಹುತುತು, ಹುದುದು]

**ಹುಡುತುತ್ತು** 'ಹುಡುತುತು' ನೋ.

**ಹುಡುಪ** (ನಾ). (?): ಹಸಿದ ಹಾವಿನ ಹೆಡೆಯಲ್ಲಿ ಇಲಿ ಬಿಲನ ತೋಡುತ್ತದೆ . . . ಮೂಗಿನ ವಾಸದಲ್ಲಿ ತಪ್ಪುದಾರಿ ಬಾಲದ ತುದಿಯಲ್ಲಿ ಹುಡುಪ ಹಾವ ಹಿಡಿದಲ್ಲಿಯೇ ಸಿಕ್ಕಿತ್ತು (ಅಬೆಮಾ.ಕ. ೧೪೫-೧೫೪). [?]

**ಹುಡುವೆ** (ನಾ). ಒಂದು ಬಗೆಯ ಸಸ್ಯ: ಬಲುಕುಣಿಯ ಹುಡುವೆ ವಕುಳಂ (ರುಕ್ಮಾಂಗ. ೧೧-೨). 'ಹುಲುವೆ' ಪರಾ. [?]

**ಹುಡುಹುಟ್ಟ** (ನಾ). ನಿಷ್ಪ್ರಯೋಜಕನಾದವನು; ಅಲ್ಪ; ಕ್ಷುದ್ರ: ಮುದಗೆ ಯಲ್ಲಮ್ಮನೆಳಸಿದೊಡೆ ದಟ್ಟುಮಾಡುತ್ತೆನ್ನನೀ ಹುಡುಹುಟ್ಟನಂ ಪೆತ್ತವಳು ಸುಡುಗೆಯ ಸುಟ್ಟಳೆನುತ್ತಾ ಕೈಯೊಳೆ ಹೆಟ್ಟುವಳು ಟೊಮ್ಮೆಯನು (ಮದೇಪು. ೫-೩೭).

[< ಹುಡಿ + ಹುಟ್ಟು (< ಪುಟ್ಟು$_1$) + - ಅ$_7$]

**ಹುಡುಹುಡನೆ** (ಅ). ಒಂದು ಅನುಕರಣಾವ್ಯಯ: ಬಿಸಿಲೊಳ್ ತಾನೆ ಹುಡುಹುಡನೆ ಮಗ್ಗಿ ಮಿಡುಮಿಡುಮಿಡುಕಿ (ಧರ್ಮಾಮೃ. ೧೦-೧೩೨). 'ಪುಡಪುಡನೆ' ಪರಾ.

[ಹುಡುಹುಡು + - ಅನೆ$_1$]

**ಹುಡುಹುಡು** (ನಾ). ಒಂದು ಅನುಕರಣಶಬ್ದ: 'ಹುಡುಹುಡುಗುಟ್ಟು' ಪರಾ. 'ಪುಡುಪುಡು' ಹೋ.

**ಹುಡುಹುಡುಗುಟ್ಟು** (ಕ್ರಿ). ಹುಡುಹುಡು ಎಂದು ಸದ್ದುಮಾಡು: ಹಂದಿ ಹುಡುಹುಡು(ಗುಡುಗುಡು)ಗುಟ್ಟಿತ್ತೆಂದು ನಾಯಿ ಬಗುಳಿತೆಂದು ಸಂದೇಹಿಸಿದವರುಂಟೇ (ಸಿದ್ಧೇವ. ೯೬-೨೯೪). [ಹುಡುಹುಡು + ಕುಟ್ಟು$_1$]

**ಹುಡೆ** 'ಹೂಡೆಯ' ನೋ.

**ಹುಡೆಯ** 'ಹೂಡೆಯ' ನೋ.

**ಹುಣ್** 'ಪುಣ್' ನೋ.

**ಹುಣಚ** 'ಪುಳಿಸೆ' ನೋ.

**ಹುಣಸಿ** 'ಪುಳಿಸೆ' ನೋ.

**ಹುಣಸೆ** 'ಪುಳಿಸೆ' ನೋ.

**ಹುಣಸೆಕಾಯಿ, ಹುಣಿಸೆಕಾಯಿ** (ನಾ). (ಅಡುಗೆಯಲ್ಲಿ ಹುಳಿರುಚಿಗಾಗಿ ಉಪಯೋಗಿಸುವ) ಹುಣಸೆಮರದಲ್ಲಿ ಬಿಡುವ ಕಾಯಿ: ಕಕ್ಕೆಹಣ್ಣು . . . ಹುಣಸೆಕಾಯಿಗಳನ್ನು ನಿವೇದನ ಮಾಡುವರು (ಹುಟ್ಟಪ. ೬೯); ಹುಣಸೆಕಾಯಿತೊಕ್ಕು ಬಹಳ ರುಚಿಯಾಗಿದೆ (ರೂಢಿ). **ಹುಣಿಸೆಕಾಯಿ:** ''ತಿಂತ್ರಿಣೀಫಲಂ – ಹುಣಿಸೆಕಾಯಿ'' (ಓಷಧಿ. ೬೯). [ಹುಣಸೆ (< ಪುಳಿಸೆ) + ಕಾಯಿ$_4$ (< ಕಾಯ್$_4$)]

**ಹುಣಸೆಮರ, ಹುಣಿಸೆಮರ** (ನಾ). (ಹುಳಿರುಚಿಯ ಕಾಯಿ ಮತ್ತು ಹಣ್ಣುಗಳನ್ನು ಬಿಡುವ) ಒಂದು ಬಗೆಯ ಮರ: ಹುಣಸೆಮರ (Tamarindus indicus) ನಮ್ಮ ದೇಶದ್ದೇ ಎಂಬ ಪ್ರಶ್ನೆ ಇಂದಿಗೂ ಉಳಿದಿದೆ (ಶಾಸಗಿ. ೫೪). **ಹುಣಿಸೆಮರ:** ಊರ ಬಳಿಯ ಹತ್ತಿರಣ ಹುಣಿಸೆಮರ (ಎಕ. VII, ಶಿಕಾರಿ. ೨೯-೨೫೧; 1524).

[ಹುಣಸೆ (< ಪುಳಿಸೆ) + ಮರ$_1$]

**ಹುಣಸೆಸರಿ** (ನಾ). ಹುಣಸೆಯ ಬೀಜದಿಂದ ತಯಾರು ಮಾಡುವ, ಬಣ್ಣ ಹಾಕಲು ಬಳಸುವ ಒಂದು ಬಗೆಯ ಅಂಟು: (ಕ).

[ಹುಣಸೆ (< ಪುಳಿಸೆ) + ಸರಿ$_4$ (< ಸಟಿ$_2$)]

**ಹುಣಸೆಸಾರು** (ನಾ). ತೊಗರಿಬೇಳೆಯನ್ನು ಹಾಕದೆ, ಹುಣಸೆಹಣ್ಣಿನ ರಸದಿಂದ ಮಾಡುವ ಸಾರು; ಗೊಡ್ಡುಸಾರು: (ಕ).

[ಹುಣಸೆ (< ಪುಳಿಸೆ) + ಸಾರು$_3$ (< ಸಾಱು$_2$)]

**ಹುಣಸೆಹಣ್ಣು** 'ಪುಣಿಸೆವಣ್' ನೋ.

**ಹುಣಾಬ** (ನಾ). ಒಂದು ಬಗೆಯ ಮರ: ಹುಣಾಬ (ಕಿಂದಳ): ಮತ್ತಿಯಷ್ಟೇ ದೊಡ್ಡದಾಗುತ್ತದೆ. ಕಟ್ಟಿಗೆ ಮತ್ತಿಯಷ್ಟು ಕಪ್ಪಲ್ಲ (ಕಭಾಗೆ. ೫೦). [?]

**ಹುಣಿ** 'ಪುಣಿ' ನೋ.

**ಹುಣಿಗು** 'ಪಣುಂಕು' ನೋ.

**ಹುಣಿಚಿ** 'ಪುಳಿಸೆ' ನೋ.

**ಹುಣಿಚೆ** 'ಪುಳಿಸೆ' ನೋ.

**ಹುಣಿಮೆ** 'ಪುಣ್ಣಮೆ' ನೋ.

**ಹುಣಿವೆ** 'ಪುಣ್ಣಮೆ' ನೋ.

**ಹುಣಿಸೆ** 'ಪುಳಿಸೆ' ನೋ.

**ಹುಣಿಸೆಕಾಯಿ** 'ಹುಣಸೆಕಾಯಿ' ನೋ.

**ಹುಣಿಸೆಮರ** 'ಹುಣಸೆಮರ' ನೋ.

**ಹುಣಿಸೆವಣ್ಣು** 'ಪುಣಿಸೆವಣ್' ನೋ.

**ಹುಣಿಸೆಹಣ್ಣು** 'ಪುಣಿಸೆವಣ್' ನೋ.

**ಹುಣುಗು** 'ಪಣುಂಕು' ನೋ.

**ಹುಣುಬು** 'ಪುಳುಂಬು' ನೋ.

**ಹುಣುಮೆ** 'ಪುಣ್ಣಮೆ' ನೋ.

**ಹುಣುಸೆ** 'ಪುಳಿಸೆ' ನೋ.

**ಹುಣ್ಣಮಿ** 'ಪುಣ್ಣಮೆ' ನೋ.

**ಹುಣ್ಣಮೆ** 'ಪುಣ್ಣಮೆ' ನೋ.

**ಹುಣ್ಣವೆ** 'ಪುಣ್ಣಮೆ' ನೋ

**ಹುಣ್ಣಮೆ** 'ಪುಣ್ಣಮೆ' ನೋ.

**ಹುಣ್ಣಮೆಯಿರುಳ್** (ನಾ). ಪೂರ್ಣಿಮೆಯ ರಾತ್ರಿ: ಹುಣ್ಣಮೆಯಿರುಳ್ . . . ಜ್ಯೋತ್ಸ್ನೆಯಂ ಪಾಲು ಪೊಯ್ದಂದದಲಿ ಚೆಲ್ಲಿ ರಾರಾಜಿಸಿರೆ (ಶ್ರೀರಾಮಾ. ೧೨-೩೦೭).

[ಹುಣ್ಣಮೆ (< ಪುಣ್ಣಮೆ) + ಇರುಳ್]

**ಹುಣ್ಣವೆ** 'ಪುಣ್ಣಮೆ' ನೋ.

**ಹುಣ್ಣು** 'ಪುಣ್' ನೋ.

**ಹುಣ್ಣುಬೇನೆ** (ನಾ). ಗಾಯದಿಂದುಂಟಾಗುವ ರೋಗ,- ಖಾಯಿಲೆ; ವ್ರಣವ್ಯಾಧಿ: ವ್ರಣರುಜಂ-ಹುಣ್ಣುಬೇನೆಗಳು (ವಿವ್ಯವಿ. ೧೬೨).

[ಹುಣ್ಣು (< ಪುಣ್) + ಬೇನೆ]

**ಹುಣ್ಣುಮೆ** 'ಪುಣ್ಣಮೆ' ನೋ.

**ಹುಣ್ಣುವೆ** 'ಪುಣ್ಣಮೆ' ನೋ.

**ಹುತ** (ಗು). ೧. ಅಗ್ನಿಯಲ್ಲಿ ಅರ್ಪಿಸಿದ; ಹೋಮಮಾಡಿದ: ಹಿತ ಪುರೋಹಿತ ಪ್ರಾಜ್ಯಾಜ್ಯಾಹುತಿಹುತಹುತವಹಸಮಕ್ಷದೊಳ್ ಕೆಯ್ನೀರೆಱೆದು ಪಾಣಿಗ್ರಹಂಗೆಯ್ದೆ (ಪಂಪಭಾ. ೩-೭೪ ವ). (ನಾ). ೨. ಯಜ್ಞ, ಯಾಗಾದಿಗಳಲ್ಲಿ ಅಗ್ನಿಗೆ ಅರ್ಪಿಸಿದುದು; ಹವಿಸ್ಸು: ತ್ರಿದಶರಂಜದೆ ಹುತವನುಣ್ಣಲಿ ಕದನಕಾವಿಹವು (ಕೌಶಿರಾ. ೧-೯೧). **[ಸಂ.]**

**ಹುತಭುಗ್ಗಿನೇತ್ರ** (ನಾ). ಅಗ್ನಿಯೇ ಕಣ್ಣಾಗುಳ್ಳವನು; ಶಿವ: ಹುತಭುಗ್ಗಿ [ಪಾಠಾಂ. ಹುತವಾಹ]ನೇತ್ರನಾಗ ಖತಿ ಬೇಡ ಮಗಳೆ . . . ಸುಖದಿ ಬಾಳೆಂದು ಶಿವ ನುಡಿಯಲು (ಪ್ರೌಢರಾ. ೧೧-೧೮). **[ಸಂ.]**

**ಹುತವಹ** (ನಾ). ಹವಿಸ್ಸನ್ನು ದೇವತೆಗಳಿಗೆ ಒಯ್ದು ಮುಟ್ಟಿಸುವವನು; ಅಗ್ನಿ: ಅಮರಾಧಿರಾಜ ಹುತವಹ . . . ಯಕ್ಷೇಶಾನ ಕ್ರಮದಿನವರೆಣ್ಬರಂತುತ್ತಮನಯ್ ನೀಂ (ಕವಿರಾ. ೩-೯೬); ಹಿತಪುರೋಹಿತ ಪ್ರಾಜ್ಯಾಜ್ಯಾಹುತಿಹುತಹುತವಹಸಮಕ್ಷದೊಳ್

ಕೆಯ್ನೊರೆಜಿದು ಪಾಣಿಗ್ರಹಂಗೆಯ್ವೆ (ಪಂಪಭಾ.೩-೭೪ ವ); ಕೊಂಡದಲಿ ನಿಜರೂಪವನು ಕೈಕೊಂಡು ಹುತವಹ ಚರುವ ನೀಡಲು ಕೊಂಡು (ಕೌಶಿರಾ. ೧-೬೩). **[ಸಂ.]**

**ಹುತವಹನಯನ** (ನಾ). ಬೆಂಕಿಯ ಕಣ್ಣುಳ್ಳವನು; ಅಗ್ನಿನೇತ್ರ; ಶಿವ: ಹುತವಹನಯನಂ . . . ಜಿತಭವ ಮರಣಂ ಕ್ಷಿತಿವರನಿದಿರೊಳೆ ನಿಂದಂ (ಹಮ್ಮೀರ. ೨-೧೦). **[ಸಂ.]**

**ಹುತವಹನೇತ್ರ** (ನಾ).= ಹುತವಹನಯನ: ಹುತವಹನೇತ್ರನೆಂಬವನ ಗತಿಗೆಡಿಸಿಯೆ ಪಿಡಿತಂದು . . . ನಿಗಳವಿಕ್ಕುವೆವು (ತ್ರಿಪುಸಾಂ.೧೫-೧೬೩); ಹುತವಹನೇತ್ರನಿರ್ದಟವಿಯ ಕಂಡು ಮನ್ಮಥಮಹೀರಮಣ ಮುಂ ಕೊಂಡು (ಮೋಹತ. ೭-೮). **[ಸಂ.]**

**ಹುತವಹಬಾಣ** (ನಾ). ಅಗ್ನಿಬಾಣ; ಆಗ್ನೇಯಾಸ್ತ್ರ: ಹುತವಹಬಾಣದಿಂದಮಿಸ ತೂಳ್ದುದು ವಾನರಸೇನೆ (ಗದಾಯು. ೧-೨೪). **[ಸಂ.]**

**ಹುತವಹಸಖ** (ನಾ). ಅಗ್ನಿಯ ಸ್ನೇಹಿತ; ವಾಯು: ಶತಪತ್ರಮಿತ್ರಪುತ್ರ ಪತತ್ರಿ ಗೋತ್ರ ಪ್ರಧಾನಂಗೆ ಹುತವಹಸಖಂ ಸಹಾಯನಾಗಿ ಸುಟಿಸುಟಿದು ತಗುಳೆ ಬೀಸಲೊಡಂ (ಪಂಚತಂ.೨೭೭-೮). **[ಸಂ.]**

**ಹುತವಹಾರಾಧನೆ** (ನಾ). ಅಗ್ನಿಯ ಪೂಜೆ; ಯಜ್ಞ,ಯಾಗ ಇತ್ಯಾದಿ: ಶ್ರುತಿಪಠಣವೊ ತರ್ಪಣವೊ ಮೇಣತಿಥಿಪೂಜೆಯೊ ಭೂತಯಜ್ಞವೊ ಹುತವಹಾರಾಧನೆಯೊ ರಣವೀಯ್ಯೆಯ್ದುಜೊಳಗೇನು (ಕುಮ್ಮಾದ್ರೋ. ೧೮-೫೭).

**[ಸಂ. ಹುತವಹಾರಾಧನಾ]**

**ಹುತವಹಾಹಾರ** (ನಾ). ಅಗ್ನಿಯ ಆಹಾರ; ಕಟ್ಟಿಗೆ: "ಹುತವಹಾಹಾರ ಮೇಧಸ್ಸಮಿಧ ಕಾಷ್ಠವಡುಗಬ್ಬಕ್ಕು" (ಮಂಗರಾ.೧೫-೯). **[ಸಂ.]**

**ಹುತಾಗ್ನಿ** (ನಾ). ಹೋಮಮಾಡಿದ ಅಗ್ನಿಯುಳ್ಳವನು; ಅಗ್ನಿಹೋತ್ರಿ; ಯಜ್ಞದೀಕ್ಷಿತ: ಕುಮಾರನಂ ಮುನ್ನಂ ಹುತಾಗ್ನಿಯಾಗಿರ್ದ ಪುರೋಹಿತನನಿದಿರ್ಗೊಂಡು (ಶಾಂತಿಪು.೬-೧೨ ವ); ಮುನ್ನಮೆ ಹುತಾಗ್ನಿಯಾಗಿದ್ದ ಪುರೋಹಿತಂ ಪ್ರಣವ ಪೂರ್ವಕಮುಚ್ಚರಿಸಿದ ಪುಣ್ಯಾಹರವದೊಡನೆ . . . ಕೈನೀರೆಜೆದಂ (ಚಂದ್ರಪು. ೬-೭೦ ವ).

**[ಸಂ.]**

**ಹುತಾತ್ಮ** (ನಾ). ಧರ್ಮ, ದೇಶದ ಹಿತ ಇತ್ಯಾದಿ ಧ್ಯೇಯಸಾಧನೆಗೆ ತನ್ನ ಪ್ರಾಣವನ್ನು ಅರ್ಪಿಸಿದವನು: ನನಗೆ ಧರ್ಮವೀರರಾದ ಆ ಹುತಾತ್ಮರ ನೆನಪಾಯಿತು (ವೀರಯೋ. ೧೭). **[ಸಂ. ಹುತಾತ್ಮನ್]**

**ಹುತಾಶ** (ನಾ). ೧. ಹವಿಸ್ಸನ್ನು ಸೇವಿಸುವವನು; ಅಗ್ನಿ: ತೃತ್ತೃತಾಪಹುತಾಶಂ ಕಡುದಣ್ಣನೇಱುಗುಮಮೋಘಂ (ಜಗಪ. ೨-೪೯). ೨. ಒಂದು ಬಗೆಯ ಸಸ್ಯ: 'ಹುತಾಶರಸ' ಪರಾ. **[ಸಂ.]**

**ಹುತಾಶನ** (ನಾ).೧. ಹೋಮ ಮಾಡಿದುದನ್ನು ಆಹಾರವಾಗಿ ಸ್ವೀಕರಿಸುವವನು; ಹವಿಸ್ಸನ್ನು ಸೇವಿಸುವವನು; ಅಗ್ನಿ: ತಣ್ಪಂ ಹುತಾಶನಂ ಮಂತ್ರಶಕ್ತಿಯಿಂ ತಾಳ್ಪುವವೊಲ್ (ಮಲ್ಲಿಪು.೧-೨೯); ಭಸ್ಮಾಂತರಿತ ಹುತಾಶನಂಬೊಲ್ (ಪಾರ್ಶ್ವಪು.೪-೫೪). ೨. [ಛಂದ] ಒಂದು ಅಕ್ಷರಗಣ; ರಗಣ. **[ಸಂ.]**

**ಹುತಾಶನಕುಂಡ** (ನಾ). ಹವನ, ಹೋಮಗಳಿಗಾಗಿ ಅಗ್ನಿಯನ್ನು ಇರಿಸಿಕೊಳ್ಳುವ ಕುಳಿ,- ಅಗ್ನಿ: ಅಪರದಿಗ್ಭಾಗದೊಳನಗಾರಕೇವಲಿ ಹುತಾಶನಕುಂಡಮಂ ಸ್ಥಾಪನಂಗೆಯ್ದು (ಆದಿಪು. ೧೬-೫೨ ವ). **[ಸಂ.]**

**ಹುತಾಶನಪುತ್ರಿ** (ನಾ). ಅಗ್ನಿಯ ಪುತ್ರಿ; ದ್ರೌಪದಿ: ಧಾತ್ರಿಯುಮನೀ ಹುತಾಶನ ಪುತ್ರಿಯುಮಂ ಬಜಿದ ಸೋಲ್ತನಲ್ಲಂ ಜೂದಿಂ (ಗದಾಯು.೧-೬೦). **[ಸಂ. ಹುತಾಶನಪುತ್ರೀ]**

**ಹುತಾಶರಸ** (ನಾ). ಒಂದು ಬಗೆಯ ಔಷಧಿ: ಹುತಾಶರಸ . . . ಮೆಣಸಿನ ಚೂರ್ಣದಲ್ಲಿ ಕೊಡಲು . . . ಕುಷ್ಠ, ಗುಲ್ಮ, ಸರ್ವವ್ಯಾಧಿ ಮಾಣುವುವು (ವಿವ್ಯವಿ. ೫೪).

**[ಸಂ.]**

**ಹುತುತು** 'ಹುಡುತುತು' ನೋ.

**ಹುತ್ತ** 'ಪುತ್ತು$_1$' ನೋ.

**ಹುತ್ತರಿ** 'ಪುತ್ತರಿ' ನೋ.

**ಹುತ್ತಿಡು** 'ಪುತ್ತಿಡು' ನೋ.

**ಹುತ್ತಿರಿಕೆ** (ನಾ). (?): ನಖರೇಶ್ವರದ ಶ್ರೀಮಹಾದೇವರು ನಾರಣಸೆಟ್ಟಿಯ ಸುಹಸ್ತದ ಒಪ್ಪ ತೊಂಭತ್ತಿನ ಹುತ್ತಿರಿಕೆಯ ಬ್ರಹ್ಮರು (ಸೌಇಇ. IX-ii, ೪೪೯-೩೨; 1444). [?]

**ಹುತ್ತು** 'ಪುತ್ತು$_1$' ನೋ.

**ಹುತ್ತುಗಾಲ್** 'ಪುತ್ತುಂಗಾಲ್' ನೋ.

**ಹುತ್ತುಗಾಲು** 'ಪುತ್ತುಂಗಾಲ್' ನೋ.

**ಹುತ್ತೂರು** (ನಾ). ಒಂದು ಊರಿನ ಹೆಸರು: ಬಜೆಕೋಡಿನ ಹಂಚೆಯದ ಹುತ್ತೂರ ತ್ರಿಸನ್ದಿ (ಇಆ. VIII, ೨೧೩-೩೩; 10ನೆಯ ಶತ). 'ಪುತ್ತೂರ್' ಪರಾ.

[ಹುತ್ತ (< ಪುತ್ತು$_1$)+ ಊರು$_3$ (< ಊರ್)]

**ಹುತ್ತೇಳು** (ಕ್ರಿ). (ಅಲಂ) ಹುತ್ತ ಏಳುವಂತೆ ಮೇಲಕ್ಕೆ ಏಳು; ಹೆಚ್ಚಾಗು: ಬಾಣಂಗಳನು ಪಿಡಿದು ಕೋಪಾಗ್ನಿ ಹುತ್ತೆದ್ದು ನಿಡುಗಂಗಳಲಿ ಕಿಡಿ ಸೂಸಿ (ನವಮೋ. ೨೮-೫೧). [ಹುತ್ತು (< ಪುತ್ತು$_1$) + ಏಳು$_1$ (< ಏೞ್$_1$)]

**ಹುದಲು, ಹುದಿಲು, ಹುದುಲು** (ನಾ). ೧. ಕೆಸರು; ಪಂಕ: ಎತ್ತುಗಳ ಕಾಲಿನಲ್ಲಿ ಮತ್ತು ಅವುಗಳು ಮಲಗುವ ಸ್ಥಳದಲ್ಲಿ ಕೆಸರು ಹುದಲು ರಾಡಿ ನೀರು ರೊಜ್ಜು ಆಗದ ಹಾಗೆ . . . ಹಸನ ಮಾಡುತ್ತಿರಬೇಕು (ಕೃಷಿಪ್ರ.೧೯); ನಿಂತತ್ತರೆ ನೆಲವೆ ಹುದಲು ಸಮರಸಕೂ ಸಮರ ಮೊದಲು (ಅರರೋ.೪೬-೧೧). ೨. (ಅಲಂ) ಗೋಜು; ಗೊಂದಲ: ಸಂಪ್ರದಾಯ ಹೊಸರೀತಿಗಳ ಹುದಲಲ್ಲಿ ಅವರು ಸಿಕ್ಕುಬೀಳದೆ . . . ಹೆಜ್ಜೆಯಿಕ್ಕಬೇಕು (ವಿಚಾಮಂ. ೧೧೭); ಈತನು ಆ ಜಡಶಕ್ತಿಗೇ ದೇವನನ್ನುವರು – ಎಂಬ ಹುದಲಿನೊಳಗಿಂದ ಪಾರಾಗಿ . . . ಬಂದನು (ಪೂರ್ವರಂ. ೧೨). **ಹುದಿಲು:** ೧. ಮಾಚಿದೇವನ ಕೆರೆಯು ಹುದಿಲಿನಿಂದ ಹುಗಿದಿದೆ (ಚಿಟ್ಟಹೊ.೪೯). ೩. ಕಳ್ಳುಸುಕು; ಕಳ್ಳುಸುಬು: ರುದ್ರಪ್ರತಾಪಭೂಪನ ಸಭೆಯು ಚದುರವಿದ್ವಾಂಸರಿಗೆ ಘಣಿಯ ಹೇಳಿಗೆಯಾಯ್ತು ಹುದಿಲ ನೆಲೆಯಾಯ್ತು (ರಾಘುಚ. ೧೭-೨೩). **ಹುದುಲು:** ೧. ಹುದುಲಿಲ್ಲದ ಉಪ್ಪಿನ ಮಾಳಿಗಳ ಹತ್ತಿರ ಮಹಾರಾಜರನ್ನು ಇಳಿಸುವ ವ್ಯವಸ್ಥೆಯನ್ನು ಮಾಡಲಾಗಿತ್ತು (ಗ್ರಾಮಾಯ. ೩೬೭). ೨. ವಿಚಾರ ಮಾಡಿದ ಹಾಗೆ ಜೀವವು ಹುದುಲಿನಲ್ಲಿ ಸಿಗುತಿತ್ತು (ಸಮಜೀ. ೫೬೮).

[< ಹುದಿ$_1$]

**ಹುದಿ$_1$** 'ಪುದಿ$_1$' ನೋ.

**ಹುದಿ$_2$** 'ಪುದಿ$_2$' ನೋ.

**ಹುದಿಗೆ** (ನಾ). ಸತ್ತವರನ್ನು ಹೂಳುವ ಸ್ಥಳ; ಸಮಾಧಿ: ನಮ್ಮೊಲುಮೆ ವೀರನ್ ನಮ್ಮೊಲುಮೆ ಹುದಿಗೆ ನಮ್ಮೊಲುಮೆ ಕುಪ್ಪೆ ಹಿಡಿಮಣ್ಣು! (ಪಾರಸಿ.೨೪-೫೫).

[ಹುದಿ$_1$ (< ಪುದಿ$_1$) + - ಗೆ]

**ಹುದಿಗೊಳ್ಳು** (ನಾ). ಒಂದು ಬಗೆಯ ಸಸ್ಯ: ಕುಂಪೋಲಿ, ಹುದಿಗೊಳ್ಳು, ಕಾಲ್ಮಧು, ಕಂಪಾಲೆ, ಕಬ್ಬಿಣದ ಮರ (ಮೈಜಿಗಿ. ೭೦-೧೪೩). [?]

**ಹುದಿಯೇರಿಸು** (ಕ್ರಿ). ದಿಂಡುಕಟ್ಟು; ದಂಡೆಕಟ್ಟು: ಬೇರು ಸಡಲಿದ ಸಸಿಗಳಿದ್ದರೆ ಅವಕ್ಕೆ ಹುದಿಯೇರಿಸುತ್ತಾನೆ (ಬೆಳುಮ. ೧೧೭).

[ಹುದಿ$_2$ (< ಪುದಿ$_2$) + ಏರಿಸು (< ಏಱಿಸು)]

**ಹುದಿರು** (ನಾ). (?): ತೊಟ್ಟಿಯ ಹುದಿರಿ[ಪಾಠಾಂ. ಹುದಉು, ಹೊದಉು]ನಲ್ಲಿ ಕಲ್ಲು ಸಿಕ್ಕಿದಂತಾಯಿತು (ಕೋಲಶಾಂ.೯-೩೭); ಪ್ರಮಥರ ಕರೆದು ಗದಗದಿಸದಿರಿ ಬಾಗಿಲೊಳಗೆಂದು ಸೂಚಿಸುತ ಸದಮಳಾತ್ಮಕ ಮಾಚಿತಂದೆ ಬಿಜ್ಜಳನ ಹುದಿರಿನೊಳಿರುವ ಬಲು ಸಲುಗೆಯ (ಪ್ರಭುಪು. ೯-೨೨೭). [?]

**ಹುದಿಲು** 'ಹುದಲು' ನೋ.

**ಹುದಿಹೊಸಲು** (ನಾ). ಹೊಸಲಿಗೆ ಅಭಿಮುಖವಾಗಿರುವ ಬಾಗಿಲ ಮೇಲ್ಭಾಗದ ಚೌಕಟ್ಟು: ಒಳಗಿಂದ ಹಂದರಕ್ಕೆ ಬರುವಾಗ ವಧುವಿನ ತಲೆ ಬಾಗಿಲಿನ ಹುದಿಹೊಸಲಿಗೆ ತಾಗಿ ಸೂಡಿದ್ದ ಬಾಸಿಂಗ ಸ್ವಲ್ಪ ಓರೆಯಾಯಿತು (ಸುವಸಂ. ೫೪).

[ಹುದಿ$_2$ (< ಪುದಿ$_2$) + ಹೊಸಲು (< ಪೊಸಂತಿಲ್)]

**ಹುದು$_1$** 'ಪುದುವು' ನೋ.

**ಹುದು$_2$** (ನಾ). ತಿರುಳು; ರಸ; ಸಾರ: ಪ್ರಾಚೀನಪದಗಳಲ್ಲಿಯೂ ಮಂತ್ರಗಳಲ್ಲಿಯೂ ಋಷಿಗಳು ಹುದುಗಿಸಿ ಇರಿಸಿದ ಅರ್ಥದ ಒಳಹುದುವನ್ನೇ ಅವರು ಹೇಗೆ ಸವಿದು

ನೋಡಬಲ್ಲರೆಂಬುದು ಅವರ ಗ್ರಂಥಗಳಿಂದ ಸ್ಪಷ್ಟವಾಗುತ್ತದೆ (ಮಹಾಯೋ. ೧೪೫).
[< ಪುದುಗು$_1$]

**ಹುದುಂಗು** 'ಪುದುಗು$_1$' ನೋ.

**ಹುದುಕಾರ** (ನಾ). ಪಾಲುಗಾರ: ಇವನು ಹುದುಕಾರರೊಂದಿಗೆ ಸೇರಿ ಫಸಲನ್ನು ಹೊಲದಿಂದ ಕಣಕ್ಕೆ ಸಾಗಿಸಿ ಒಕ್ಕಲು ಮಾಡಿ ಮುಗಿಸಿದ್ದ (ಬೆಳುಮ. ೧೧೭).
[ಹುದು$_1$ (< ಪುದುಗು$_1$) + -ಕಾರ$_1$ (<-ಕಾಱ)]

**ಹುದುಗ** (ನಾ). ಮುಸುಕು; ಆಚ್ಛಾದನೆ; "ಹೊದಿಕೆ" (ಜಾನಕೋ. ೫೮).
[< ಪುದುಗು$_2$]

**ಹುದುಗಪಾವಡ** (ನಾ). ಇಷ್ಟಲಿಂಗವನ್ನು ಆಚ್ಛಾದನೆ ಮಾಡಿ ಇಡುವ ಮಡಿಯ ವಸ್ತ್ರ. [ಹುದುಗು$_1$+ ಪಾವಡ$_1$ (< ಪಾವುಡ$_1$)]

**ಹುದುಗಲು** (ನಾ). ೧. ಕಡುಬು, ಕರ್ಜಿಕಾಯಿ ಮೊದಲಾದುವುಗಳ ಒಳಗೆ ತುಂಬುವ ಸೂಸಲು, ಹೂರಣ ಇತ್ಯಾದಿ: ಕರ್ಜಿಕಾಯಿ ಒಳಗೆ ಹುದುಗಲು ತುಂಬ ಇದ್ದರೆ ರುಚಿಯಾಗಿರುತ್ತದೆ (ರೂಢಿ). ೨. ಅಡಕವಾಗಿರುವುದು; ತುಂಬಿರುವುದು: ಏಕೆಂದರೆ ಅದರ ಒಡುಗ ಪುಟದ ಹುದುಗಲನ್ನೆಲ್ಲ ಮುದಿನಾಯಿ ಎಲುಬು ತಿಂದಂತೆ ಪ್ರಯಾಸದಿಂದ ಆಸ್ವಾದಿಸುವ ಪ್ರಯತ್ನದಲ್ಲಿ ಇರುತ್ತಾನೆ (ಗಾಳಿಪ. ೩೦).
[ಹುದುಗು$_1$ (< ಪುದುಗು$_1$) + -ಅಲು (<-ಅಲ್$_2$)]

**ಹುದುಗಿಸು** 'ಪುದುಗಿಸು' ನೋ.

**ಹುದುಗು$_1$** 'ಪುದುಗು$_1$' ನೋ.

**ಹುದುಗು$_2$** 'ಪುದುಗು$_2$' ನೋ.

**ಹುದುನೆಲ** (ನಾ). ಒಟ್ಟಿಗೆ ಸೇರಿ ಅನುಭವಿಸುವ ಭೂಮಿ: ಸುಯೋಧನನರಸಿಯಲ್ಲಾ ಧಾತ್ರಿ ನಿಮ್ಮೆಲ್ಲರಿಗೆ ಹುದುನೆಲನಲ್ಲವೆಂದೆನುತೆಚ್ಚನಾ ಶಲ್ಯ (ಕುವ್ಯಾಶ. ೨-೫೪).
[ಹುದು$_1$ (< ಪುದುವು) + ನೆಲ]

**ಹುದುಭಾಗೆ** (ನಾ). ಒಟ್ಟಿಗೆ ಸೇರಿ ಅನುಭವಿಸುವ ಭಾಗ: ಧಾರುಣಿಯ ಹುದುಭಾಗೆಗೋಸುಗಂ ಪಾಂಡವರ್ ಕಲಹಕುದ್ಯೋಗಿಸಿದರು (ಚಿಟಪು. ೫೪-೧೨).
[ಹುದು$_1$ (< ಪುದುವು) + ಭಾಗೆ]

**ಹುದುಲು** 'ಹುದಲು' ನೋ.

**ಹುದುವನೆ** 'ಪುದುಮನೆ' ನೋ.

**ಹುದುವಾಳ್** 'ಪುದುವಾಟು' ನೋ.

**ಹುದುವಾಳಿಕೆ** 'ಪುದುವಾಟ್ಕೆ' ನೋ.

**ಹುದುವಾಳಿಗೆ** 'ಪುದುವಾಟ್ಕೆ' ನೋ.

**ಹುದುವು** 'ಪುದುವು' ನೋ.

**ಹುದೆ** (ನಾ). ಒಂದು ಬಗೆಯ ಔಷಧೀಸಸ್ಯ: ಬಿಳಿಪಾದ್ರಿ, ಹುದೆ, ಬಿಲ್ಲ, ಹುವ್ವುಲವೆ, ಹುಲವೆ (ಮೃಟಿಗಿ. ೭೨-೧೪೭೬). 'ಉದೆಯ ಮರ' ಪರಾ. [?]

**ಹುದ್ದರಿ** (ನಾ). ೧. ಸ್ಪರ್ಧಿ; ಸ್ಪರ್ಧಾಳು: ನಿಮ್ಮ ವಸಂತನಂಥ ಹುದ್ದರಿಯನ್ನು ಹಿಡಿದುಕೊಂಡು ಆಟವಾಡುವ ನಾನೇ ಅವಿವೇಕಿ (ಗಂಡಮಾಯಿ. ೨೯೨); ನಿನಗೆ ಬೇಕಾದ ಹುದ್ದರಿ ನೀ ಆರಿಸಿಕೊ (ಅಮಾನಿ. ೬೨). ೨. ನಾಯಕ; ಮುಖಂಡ; ಮುಂದಾಳು: ಈಗ ಆ ವರ್ಗದಲ್ಲಿ ರಂಗನೇ ಹಿರಿಯ ಹುದ್ದರಿ (ರಂಗರೋ. ೨೮); ಸುಬ್ಬು ಅಂತರಕಾಲೇಜು ಟೆನಿಸ್ ಮತ್ತು ಬ್ಯಾಡ್‌ಮಿಂಟನ್ ಹುದ್ದರಿ ಎನ್ನಿಸಿಕೊಂಡ (ದಕ್ಷಿನ. ೭೮). 'ಉದ್ದರಿ$_2$' ಪರಾ. [?]

**ಹುದ್ದೆ** (ನಾ). ೧. ನೌಕರಿ; ಕೆಲಸ; ಉದ್ಯೋಗ: ನಮ್ಮಲ್ಲಿ ಒಂದು ಜಾಗಯೇನೋ ಖಾಲಿ ಅದೆ. ನಿನ್ನನ್ನು ಆ ಹುದ್ದೆಗೆ ನೇಮಿಸಿಕೊಳ್ಳಲಿಕ್ಕೇನೂ ಅಡ್ಡಿಯಿಲ್ಲ (ಹೇಮಂತ. ೧೭೮). ೨. ಅಧಿಕಾರ; ಪದವಿ: ನಿನ್ನ ಮಗನು ನಾಳೆ ಒಂದು ಭಾರಿ ಹುದ್ದೆಗೂ ಏರಬಲ್ಲನು (ಸುಂದರಿ. ೧೫). [← ಮರಾ. ಹುದ್ದಾ]

**ಹುದ್ದೇದಾರ** (ನಾ). ೧. ನೌಕರಿಯಲ್ಲಿರುವವನು; ಉದ್ಯೋಗಸ್ಥ: ಸಂಬಳ ಅದೃಷ್ಟದ ಮಾತು, ಮೇಲುಸಂಪಾದನೆ, ಹುದ್ದೇದಾರನ ಶಕ್ತಿಯ ಅಳತೆ (ಕೆಲಸ. ೨೩೦). ೨. ಅಧಿಕಾರಿ: ಜಮಾದಾರರಾದ ನೀವೇ ಎಲ್ಲಾ ಕೆಲಸವನ್ನೂ ಮಾಡುವುದಕ್ಕೆ ಆದೀತೇ ? ಏನಾದರೂ ವ್ಯತ್ಯಾಸ ನಡೆದರೆ ಹುದ್ದೇದಾರರ ತಲೆಗೆ ಬರುತ್ತೆ (ಮುಸುಗ. ೧೫೮); ಇಷ್ಟು ದೊಡ್ಡ ಸಿರಿವಂತರ ಮಗಳು, ದೊಡ್ಡ ಹುದ್ದೇದಾರರ ಹೆಂಡತಿ (ಆಟೋಲೀ. ೪೨); ಅವನನ್ನು ನೋಡಿದರೇನೇ ದೊಡ್ಡ ಹುದ್ದೇದಾರನಂತೆ ಕಾಣುತ್ತಿದ್ದನು (ಮಹಾಗ. ೧೦೫).
[ಹುದ್ದೆ + -ದಾರ$_4$./ ಮರಾ. ಹುದ್ದೇದಾರ್]

**ಹುನಗಲು** (ನಾ). ಒಂದು ಬಗೆಯ ಮರ: ಹೊನಾಲ್, ಹುಲುವೆ, ಹುನಗಲು (ಮೃಟಿಗಿ. ೭೪-೧೫೧೪). 'ಹುನಿಗಿಲು' ಪರಾ. [?]

**ಹುನಾರು** 'ಹುನ್ನರು' ನೋ.

**ಹುನಿಗಿಲು** (ನಾ). ಒಂದು ಬಗೆಯ ಮರ: ಲವಂಗ, ಆನೆಯ ದಂತ, ತೋಟು ಹುನಿಗಿಲ ತಿಗುಡು ಇವಂ ಸಮಂಗೊಂಡು ಆಡಿನ ಮೂತ್ರದಲ್ಲಿ ಅರದು ಕೂಸಿನ ಮೆಯ್ಯಂ ಪೂಸುವುದು (ಬಾಲಚಿ. ೧೩೦-೨). 'ಪುಲಿಗಿಲ್' ಪರಾ. [?]

**ಹುನಿಗಿಲೆಣ್ಣೆ** (ನಾ). ಹುನಿಗಿಲು ಮರದ ತೈಲ: ಏರಂಡತೈಲವ ಸಾಸಿವೆಯನಂಕೋಲೆ ತೈಲವ ಹುನಿಗಿಲೆಣ್ಣೆಗಳ . . . ತೋದು ಸುತ್ತುತಿರೆ (ಕೌಶಿರಾ. ೧೨-೯).
[ಹುನಿಗಿಲು + ಎಣ್ಣೆ]

**ಹುನ್ನರ** 'ಹುನ್ನರು' ನೋ.

**ಹುನ್ನರು,** ಹುನಾರು, ಹುನ್ನರ, ಹುನ್ನಾರ, ಹುನ್ನಾರು (ನಾ). ೧. ಯುಕ್ತಿ; ಉಪಾಯ; ಸಂಚು: ಅದೆಲ್ಲಾ ಆ ಕಪಿತಾನ್‌ಸಾಹೇಬರ ಜಾಣತನದಿಂದಲೂ ಹುನ್ನರಿನಿಂದಲೂ ಆಗಿ ಇದೆ (ರಾಜೇಂದ್ರ. ೧೦೭); ಬಲವನ್ನು ಈ ಉದ್ಯಮದಲ್ಲಿ ಪ್ರಯೋಗಿಸುವ ಹುನ್ನರನ್ನು ಅರಿಯದವರು (ಕೆಲಸ. ೧೯೧). ೨. ಚಾತುರ್ಯ; ಕುಶಲತೆ: ನಮ್ಮಿಂದಾ ಒಂದು ಪಾಲು ಕೆಲಸ ಆಗುವದಿದ್ದರೆ ಅವರ ಬುದ್ಧಿ ಹುನ್ನರಿನಿಂದಾ ಹತ್ತುಪಾಲು ಕೆಲಸ ಮಾಡಿದೆವು (ರಾಜೇಂದ್ರ. ೧೦೮). **ಹುನಾರು:** ೧. ಒಂದು ಪಕ್ಷ ತನ್ನ ಹುನಾರೇನಾದರೂ ವಿಫಲಗೊಂಡದ್ದಾದರೆ, ಸ್ತ್ರೀಶಕ್ತಿಸಾಧ್ಯವಾದ ಆಟಮಟ ತಟವಟಗಳಿಂದ ಅವನನ್ನು ವಂಚಿಸಬಹುದೆಂಬ ಕುಯುಕ್ತಿ . . . ಅನುಭವವೇದ್ಯವಾಗಿತ್ತು (ನಂಜುಂಡ. ೮೭); ತನ್ನ 'ಹುನಾರು' ವ್ಯರ್ಥವಾಗುತ್ತದೆಂಬ ಆಶಾಭಂಗದಿಂದ . . . ಎಂದನು (ಕಾನೂರು. ೬೭೯). **ಹುನ್ನರ:** ೧. ಈ ಹೆಸರು ಈ ಊರಿನಲ್ಲಿ ತಪ್ಪಿಹೋಗುವ ಹಾಗೆ ಏನಾದರೂ ಒಂದು ಹುನ್ನರ ಹುಡುಕಬೇಕೆಂದು ಯೋಚಿಸಿದನು (ಕಥಾಮಂ. IV, ೧೧೧). ೨. ತನ್ನ ಹುನ್ನರದಿಂದ . . . ಗಂಟನ್ನು ಬಿಚ್ಚಿ ರತ್ನವನ್ನು ಕದ್ದುಕೊಂಡು ಹೋದನು (ಕಥಾಮಂ. IV, ೧೩೦). **ಹುನ್ನಾರ:** ೧. ಭಾರತೀಯರ ಮೇಲೆಯೇ ತಪ್ಪುಹೊರಿಸಲು ಮಾಡಿದ ಫರಂಗಿ ಹುನ್ನಾರವದು (ಎಚ್ಚಸಾ. ೫೦). **ಹುನ್ನಾರು:** ೧. ಏನೋ ಹುನ್ನಾರು ನಡಸವರೇ (ಕೂಲಿ. ೧೫). ೨. ನನ್ನ ಕತ್ತನ್ನು ಅಮುಕುವುದಕ್ಕೆ ಪ್ರಾರಂಭಿಸಿದ . . . ಹುನ್ನಾರು ತಪ್ಪಿತೆಂದು ಅವನನ್ನು ಕೆಳಗೆ ಹಾಕಿಕೊಂಡು ಮುಂದಕ್ಕೆ ಬಿದ್ದೆ (ಚಿಂಗಾಳ್ಕ. ೪೫೭).
[← ಪಾರ. ಹಿಂ. ಹುನರ್; ಮರಾ. ಹುನರ್, ಹುನೇರ್]

**ಹುನ್ನಲು** (ನಾ). ಒಂದು ಬಗೆಯ ಮರ: ಮರಗಳು . . . ಅಳಲೆ, ಹುಲುವೆ, ಹುನ್ನಲು, ಮತ್ತಿ (ನಮ್ಮಸು. ೨೫೭). 'ಹೊನಾಲ್' ಪರಾ. [?]

**ಹುನ್ನಾರ** 'ಹುನ್ನರು' ನೋ.

**ಹುನ್ನಾರು** 'ಹುನ್ನರು' ನೋ.

**ಹುನ್ನಿಯು** 'ಹೂಣ್ಯ' ನೋ.

**ಹುಬೇಹೂಬ್,** ಹುಬೇಹೂಬ, ಹೂಬೇಹೂಬ್, ಹೂಬೇಹೂಬ (ಅ). ತದ್ರೂಪವಾಗಿ; ಥೇಟು: ಮೊನ್ನೆ ಮೊನ್ನೆ ಮಿಸೆ ಮೂಡಿದ ಹುಡುಗ: ಹುಬೇಹೂಬ್ ಅಪ್ಪ ಅಕ್ಕಂದಿರದೇ ಅವತಾರನಾಗಿದ್ದಾನಲ್ಲ (ಮೂರುದಾ. ೧೪೧). **ಹುಬೇಹೂಬ:** ನಮ್ಮ ಶಾಂತಾಬಾಯಾರು ಹುಬೇಹೂಬ ನಮ್ಮ ಕಮಲಕ್ಕವರ ಹಾಂಗ ಆದಾರು (ವೃನಿ. ೧೯೪); ಮಾತಿನ್ನಾಗ ಹುಬೇಹೂಬ ಹೋತಾನ ನೋಡು, ದಾದಲ್ಯಾನ್ನ (ದೀಪಹ. II, ೧೯೯). **ಹೂಬೇಹೂಬ್:** ನೀವು ಹೇಳಿದ ಹೊತ್ತಿಗೆ ಹೂಬೇಹೂಬ್ ನೀವು ಮಾಡಿದ ವರ್ಣನಾದ ಹುಡುಗ ಇಲ್ಲಿ ಬಂದಿದ್ದ (ಸಮಜೀ. ೬೨೪). **ಹೂಬೇಹೂಬ:** ಎಂತಾ ಚಂದ ತಗದೀಯೆ ಈ ಚಿತ್ರಾ, ಹೂಬೇಹೂಬ ನಮ್ಮ ಬೇಟೀ ಹಾಂಗ ಕಾಣತದ ನೋಡು (ಕನ್ನಕ. ೭೧). [← ಅರ. ಹುಬಹೂ; ಮರಾ. ಹುಬೇಹುಬ್, ಹುಬೇಹೂ, ಹುಬಹು; ಹಿಂ. ಹೂಬಹೂ]

**ಹುಬೇಹೂಬ** 'ಹುಬೇಹೂಬ್' ನೋ.

**ಹುಬ್ಬ** (ನಾ). (ಆಭರಣಾದಿಗಳನ್ನು ತೊಳೆಯಲು ಬಳಸುವ ಕುಂಚದಲ್ಲಿ ಉಪಯೋಗಿಸುವ) ಹಂದಿಯ ದಪ್ಪ ರೋಮ: ಹಂದಿಯ ಗಾತ್ರವೆಷ್ಟೆಂದು . . . ಅಂದಾಜುಮಾಡಿದ ನಾನು ಅದನ್ನು ಕೊಯಿಸಿಕೊಂಡು ಅದರ ಹುಬ್ಬವನ್ನು ಕೀಳಿಸುವಾಗ ಅದು ದಬ್ಬಣದಂತೆ ಗೇಣುದ್ದವಿತ್ತು (ಈಹುಲಿ. ೫೮).

[ಹುಬ್ಬು (< ಪುರ್ವು) + - ಅ$_7$]

**ಹುಬ್ಬಿಕ್ಕು** 'ಪುರ್ವಿಕ್ಕು' ನೋ.

**ಹುಬ್ಬಿಱು** (ಕ್ರಿ). ಹುಬ್ಬನ್ನು ಏರಿಸು, — ಕೊಂಕಿಸು: ದೂರದಿಂದಿಡುವ ತಱಿಚುಗಳ ರವಗಳಿಗೆ ಮಿಗೆ ಹುಬ್ಬಿಱಿದು ಹಣುಗುತ (ತೊರರಾ. ೫-೫-೨).

[ಹುಬ್ಬು (< ಪುರ್ವು) + ಇಱು$_1$]

**ಹುಬ್ಬು** 'ಪುರ್ವು' ನೋ.

**ಹುಬ್ಬುಗಣ್ಣು** (ನಾ). (ಆಲಂ) ಅಹಂಕಾರದ ದೃಷ್ಟಿ, — ನೋಟ: ನಿಬ್ಬಣವು ಏಕೆ ಕುರುಡಂಗೆ ಸೂಳೆಗೆ ಹುಬ್ಬುಗಣ್ಣೇಕೆ (ಸರ್ವಜ್ಞ. ೧೮೯೭).

[ಹುಬ್ಬು (< ಪುರ್ವು) + ಕಣ್ಣು (< ಕಣ್)]

**ಹುಬ್ಬೆ** 'ಪುಬ್ಬೆ' ನೋ.

**ಹುಬ್ಬೇರಿಸು** 'ಪುರ್ಬೇಱಿಸು' ನೋ.

**ಹುಮ್ಮನ** (ನಾ). (?): ಕವಣೆ ಮಿಡಿಬಿಲ್ಲು ಹುಮ್ಮನ ಪವಣನ ಗರಿಯಿಟ್ಟ ಪಚ್ಚೆ ಕಡಗವಮನೊಲವಿಂ ಸವುಳುಜಾಗಟೆ[ಯ] ಸಹಿತಂ ಭುವನೇಶ್ವರ ಘಂಟೆನೃಪತಿಗಂಡೊಲಿದಿತ್ತರ್ (ಬೀಳವಂ. ೧-೧೦೭). [?]

**ಹುಮ್ಮಸ** 'ಹುಮ್ಮಸ್ಸು' ನೋ.

**ಹುಮ್ಮಸು** 'ಹುಮ್ಮಸ್ಸು' ನೋ.

**ಹುಮ್ಮಸ್ಸು , ಹುಮ್ಮಸ, ಹುಮ್ಮಸು** (ನಾ). ಉತ್ಸಾಹ; ಹುರುಪು: ಕಾರ್ಯಗಳನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುವ ಹುಮ್ಮಸ್ಸು ಬರಬೇಕು (ಶಿಕ್ಷದ. ೮೦); ಗ್ರಾಮಸ್ಥರು ಒಕ್ಕಟ್ಟಾಗಿ ಹುಮ್ಮಸ್ಸಿನಿಂದ ಈ ಕೆಲಸಗಳನ್ನೆಲ್ಲಾ ನೆರವೇರಿಸಿದರೆ ತಮಗೇ ಅನುಕೂಲವಾಗುತ್ತದೆ (ವ್ಯವಮ. ೭೪). **ಹುಮ್ಮಸ:** ಕೇವಲ ಹರ್ಷ, ಸುಖ, ಹುಮ್ಮಸದಲ್ಲಿ ನಾವಿದ್ದುಬಿಟ್ಟರೆ ಅವುಗಳ ರುಚಿ ನಮಗೆ ಗೊತ್ತಾಗದೆ ಹೋಗಬಹುದು (ಗಾಳಿಗು. ೫೫); ನನಗೆ ಇನ್ನಾವುದರಲ್ಲೂ ಹುಮ್ಮಸವಿಲ್ಲ (ಚಟ್ಟಜೀ. ೧೯೭). **ಹುಮ್ಮಸು:** ರಾತ್ರಿ ತುಂಬಾ ಹುಮ್ಮಸಿನಲ್ಲಿ ನನ್ನ ಪತಿ ಕೇಳಿದರು (ತೇಮೋಡ. ೩೫). [?]

**ಹುಯ್$_1$** 'ಪೊಯ್$_1$' ನೋ.

**ಹುಯ್$_2$** 'ಪೊಯ್$_2$' ನೋ.

**ಹುಯಲು** 'ಪೊಯಲ್' ನೋ.

**ಹುಯಸಲ** 'ಪೊಯ್ಸಳ' ನೋ.

**ಹುಯಿ$_1$** 'ಪೊಯ್$_1$' ನೋ.

**ಹುಯಿ$_2$** 'ಪೊಯ್$_2$' ನೋ.

**ಹುಯಿಗಡುಬು** 'ಹೊಯ್ಗಡುಬು' ನೋ.

**ಹುಯಿಲಿಡು** 'ಪುಯ್ಯಲಿಡು' ನೋ.

**ಹುಯಿಲುತಮಟೆ** (ನಾ). ಕಾಳಗದ ಸಮಯದಲ್ಲಿ ಬಳಸುವ ಒಂದು ಬಗೆಯ ತಮಟೆ, — ರಣವಾದ್ಯ: ಕಾಲಾಳಿನ ಬೊಬ್ಬಾಟ ಹುಯಿಲುತಮಟೆಯ ಮುಂದೆ ಕೊಳಲು (ಸೌಂದಕಾ. ೯-೨೨).

[ಹುಯಿಲು (< ಪೊಯಿಲ್) + ತಮಟೆ (< ತಂಬಟ)]

**ಹುಯಿಸು** 'ಪೊಯಿಸು' ನೋ.

**ಹುಯ್ಗಡುಬು** 'ಹೊಯ್ಗಡುಬು' ನೋ.

**ಹುಯ್ದು$_1$** 'ಪೊಯ್$_1$' ಪರಾ.

**ಹುಯ್ದು$_2$** 'ಪೊಯ್$_2$' ಪರಾ.

**ಹುಯ್ಯಲ್** 'ಪೊಯಲ್' ನೋ.

**ಹುಯ್ಯಲಿಕ್ಕು** 'ಪುಯ್ಯಲಿಕ್ಕು' ನೋ.

**ಹುಯ್ಯಲಿಡು** 'ಪುಯ್ಯಲಿಡು' ನೋ.

**ಹುಯ್ಯಲು** 'ಪೊಯಲ್' ನೋ.

**ಹುಯ್ಯಲೇಳಿಸು** (ಕ್ರಿ). ಗದ್ದಲವೆಬ್ಬಿಸು; ಗಲಾಟೆಮಾಡು: ಪಾಳೆಯವನೀಗಳೆ ಹೊಕ್ಕು ಹುಯ್ಯಲೇಳಿಸಿ ತುರುಕರನು ಕಯ್ಯಾರೆ ಕೊಂದು (ಕುರಾಸಾಂ. ೧೯-೫೭).

[ಹುಯ್ಯಲ್ (< ಪೊಯಲ್) + ಏಳಿಸು$_2$ (< ಏೞಿಸು)]

**ಹುಯ್ಯಿ** 'ಪೊಯ್$_2$' ನೋ.

**ಹುಯ್ಯು$_1$** 'ಪೊಯ್$_1$' ನೋ.

**ಹುಯ್ಯು$_2$** 'ಪೊಯ್$_2$' ನೋ.

**ಹುಯ್ಯು** 'ಪೊಯಲ್' ನೋ.

**ಹುಯ್ಯುಗಳೆ** (ಕ್ರಿ). ಗಲಭೆಯೆಬ್ಬಿಸು; ಗಲಾಟೆಮಾಡು: ಕಡುಕೋಪದಿಂದ ತಾ ರಿಪುಬಲವ ಹುಯ್ಯುಗಳೆವುತ ಬರುತಿರಲ್ಕೆ (ತುರಂಗ. ೭೨-೩೬

[ಹುಯ್ಯು (< ಪೊಯಲ್) + ಕಳೆ$_1$]

**ಹುಯ್ಸು$_1$** 'ಪೊಯ್ಸು$_1$' ನೋ.

**ಹುಯ್ಸು$_2$** 'ಪೊಯ್ಸು$_2$' ನೋ.

**ಹುಯ್ಯಾಲು** 'ಹೊಯ್ಯಾಲು' ನೋ.

**ಹುರ್** (ನಾ). ಒಂದು ಅನುಕರಣಶಬ್ದ: ಸುರರ ಸಭೆ ಕಂಗೆಟ್ಟು ಬೆದರುತ ಅರೆ ಹುರೆಂದಬ್ಬರಿಸಿ ಓಡುತ ಭರದಿ ಬಂದರು ಹರಿಯಜೇಂದ್ರರು ಇರುವ ಸನ್ನಿಧಿಗೆ (ಶರಲೀ. ೯೫-೬).

**ಹುರ$_1$** 'ಪುರ$_1$' ನೋ.

**ಹುರ$_2$** (ನಾ). ಪಟ್ಟಣ; ನಗರ: ಕರುಳ ತೋರಣ ನೆತ್ತರ ಸಾರಣೆಯಿಂದ ಹುರವೆಸೆದುದು ಮಾಕಾಳಿಯಾ (ಸೊಬಸೋ. ೯-೩೦); ಎರಲೆಯ ಬೀಡೆಕ್ಕಲನ ಕೊ[illegible]ರಂ . . . ಚಮರಿಯು ಹುರಂ (ಜಯಕಾ. ೧೫-೨೩). [< ಸಂ. ಪುರ]

**ಹುರಕಲು** 'ಹುರಿಕಲು' ನೋ.

**ಹುರಕ್ಕಿ** 'ಹುರಿಯಕ್ಕಿ' ನೋ.

**ಹುರಗನಸೊಪ್ಪು** (ನಾ). ಒಂದು ಬಗೆಯ ಸೊಪ್ಪು: ಒಂದು ಹರವಿ ಉದಕದಲ್ಲಿ ಒಂದು ಹಿಡಿ ಹುರಗನಸೊಪ್ಪ ಹಾಕಿ ಕಾಸಿ ಮೈಯಲ್ಲಿ ಎರೆಯಲು ಎಲ್ಲಾ ಮಾಣ್ಗುಂ (ವಿಷವೈ. ೧೦೯). [? + ಸೊಪ್ಪು$_3$]

**ಹುರಗಲು, ಹುರಿಗಿಲು, ಹುರುಗಿಲು** (ನಾ). ಒಂದು ಬಗೆಯ ಮರ: ಹುರಗಲು ಮರ, ಮಾಷೂಡ್ಲ, ಮಾಸಿ (ಮೃಚಿಗಿ. ೨೦-೩೭೩). **ಹುರಿಗಿಲು:** ಲೊಕ್ಕಿಯಮ್ಮಗುಡಿ ಮುಳ್ಳಿಯು ಸಾಸವೆ ಮುಪ್ಪು ಹುರಿಗಿಲುಂ ಕುರುಟೆನೆಲಾವ ಬೊಕ್ಕಳಿಕೆ (ಅಶ್ವವೈ. ೯-೫೩). **ಹುರುಗಿಲು:** ಹುರುಗಿಲು ಬೇರು . . . ಕಷಾಯವಂ ಮಾಡಿ ತೆಗೆದುಕೊಳ್ಳಲು ಶ್ಲೇಷ್ಮಜ್ವರ ನಾಶವಾಗುವುದು (ಸಕವೈ. ೮೯). 'ಹುನಿಗಿಲು', 'ಪುಲಿಗಿಲ್' ಪರಾ.

**ಹುರಜೆ** 'ಪೊರಜೆ' ನೋ.

**ಹುರಪಳಿಸು , ಹುರುಪಳಿಸು** (ಕ್ರಿ). (ಜ್ವಾಲೆ, ಶಾಖ ಮುಂತಾದುವುಗಳಿಂದ) ಸೀಯು; ಕರಿಕಾಗು: ತಂಗಿಯೂ ಅಪ್ಪನ ಹೆದರಿಕೆಯ ಝಳಕ್ಕೆ ಹುರಪಳಿಸಿ ಬೆಳೆಯದೆ ಕ್ರಮಶಃ ಕಮರಿಹೋಗುತ್ತಿದ್ದಾಳೆ (ಹೊಸಕ್ಕಿ. ೧೯೭); ಬಿಸಿಲು ಬೇಗೆಗೆ ನೊಂದು ಹುರಪಳಿಸಿ ಪಾತಾಳಲೋಕವನ್ನು ಸೇರಲು ಪ್ರಯತ್ನಿಸುವ ಮಹಾಸರ್ಪವೊಂದರಂತೆ ಹೊಳೆ ನೆಲದೊಡಲನ್ನೇ ಸೀಳಹತ್ತಿತು (ಗ್ರಾಮಾಯ. ೫೫೩). **ಹುರುಪಳಿಸು:** ಬಿಸಿಲೇರಿತು, ಬಾಯಾರಿತು ಹುರುಪಳಿಸಿತು ನೆಲವು, ಗುಟುಕರಿಸಿತು ಜಲವು (ನೆಲಮು. ೭-೨).

[ಹುರಪಳ$_0$ (IP <— ಮರಾ. ಹುರಪಳ) + - ಇಸು$_3$]

**ಹುರಪು, ಹುರುಪು$_1$, ಹುರುಪೆ** (ನಾ). ೧. (ಮರ, ಧಾನ್ಯ ಮುಂತಾದುವುಗಳ) ಸಿಪ್ಪೆ; ಹೊರಪದರ: ಬೂರಗಮರದ ಹುರಪನ್ನೂ ಅರಿಸಿನ ನೀಲೀಬೀಜ ತ್ರಿಫಲಂಗಳನ್ನೂ ಚೂರ್ಣವಂ ಮಾಡಿ (ಸೌಗಂಧಿ. ೪೩೭ - ೧೮). **ಹುರುಪು$_1$:** ೧. ಹುಣಸೇಬೀಜದ ಹುರುಪು, ಮಾವಿನ ಬೀಜದ ತಿರುಳು . . . ಚೂರ್ಣವಂ ಮಾಡಿ ಹಾಕಿ ಬಿಸಿನೀರಿಂ ಕಲಸಿ ಗುಲಗಂಜಿ ಪ್ರಮಾಣ ಗುಳಿಗೆಯಂ ಮಾಡಿ (ಸಕವೈ. ೩೦೯). ೨. ಕವಚ; ಮೇಲ್ಪದರ: ಇದರಲ್ಲಿ ಮೀನಿನ ಹುರುಪೊಂದು (Scale) ಹಕ್ಕಿಯ ರೆಕ್ಕೆಯೊಂದು, ಕರಡಿಯ

ಕೂದಲೊಂದು ಇವೆ (ದೇಶಾಂಕ. ೮೧). **ಹುರುಪೆ:** ೩. ಪೊರೆ; ಹಕ್ಕಳೆ: ಅನೇಕ ಪಕ್ಷಿಗಳ ಮುಂಗೈ ಮತ್ತು ಬೆರಳುಗಳ ಮೇಲೆ ಸರೀಸೃಪಗಳಿಗಿರುವಂತಹ ಹುರುಪೆಗಳಿವೆ (ಪಕ್ಷಿ. ೫). 'ಹುರುಕು' ಪರಾ. [ದೇ. ‖ ತಮಿ. ಪುಱಮ್ಬು = ಹೊರಭಾಗ]

**ಹುರಮಂಜ** 'ಹುರಮುಂಜಿ' ನೋ.

**ಹುರಮಂಜಿ** 'ಹುರಮುಂಜಿ' ನೋ.

**ಹುರಮಂಜು** 'ಹುರಮುಂಜಿ' ನೋ.

**ಹುರಮುಂಜಿ**, ಹುರಮಂಜ, ಹುರಮಂಜಿ, ಹುರಮಂಜು, ಹುರಿಮಂಜು, ಹುರುಮಂಜಿ, ಹುರುಮಂಜು (ನಾ). ೧. ಒಂದು ಬಗೆಯ ಬಣ್ಣ; ಮಾಸಲು ಕಂದುಬಣ್ಣ; ಕಾವಿಬಣ್ಣ: ಕಾಳು ದೊಡ್ಡದಿದ್ದು ಜಡ ಮತ್ತು ತುಂಬಿದ್ದಿರಬೇಕು ಬಣ್ಣ ಹುರಮುಂಜಿಯಿದ್ದು . . . ಮಿಂಚುವದಿರತಕ್ಕದ್ದು (ಮುಂಬವ್ಯಾ. ೩೪). **ಹುರಮಂಜ:** ೧. ಕರೆಯೆಳ್ಳು ಅಚ್ಚಕರೆ ಇದ್ದು ಕೆಂಪೆಳ್ಳು ಹುರಮಂಜ ಬಣ್ಣದ್ದಿರಬೇಕು (ಮುಂಬವ್ಯಾ. ೩೫). ೨. ಕೆಮ್ಮಣ್ಣು; ಕೆಂಪುಮಣ್ಣು: ತೆರೆದಿರುವ ಕಟ್ಟಿಗೆಯ ಕಂಭಗಳಿಗೂ ಅಡ್ಡಹಲ್ಲುಗಳಿಗೂ ರಾಳವಣ್ಣೆ ಮೇಣ ಹುರಮಂಜನ್ನು ಕುದಿಸಿ ಹಚ್ಚಬೇಕು (ಕೃಷಿಪ್ರ. ೧೮೯). **ಹುರಮಂಜಿ:** ೧. ಮಳಿವನಿಯೊಳಿಪ್ಪ ಹುರಮಂಜಿ ಮುತ್ತುಗಳಂ ಸರಗೊಳಿಸಿ ಕೊರಳೊಳು ಧರಿಸಬಹುದೆ (ವಚರ. ೬೮). ೨. ''ಹುರಮಂಜಿ = ಕೆಂಪುಮಣ್ಣು'' (ಜಾನಕೋ. ೫೮). **ಹುರಮಂಜು:** ೨. ಚಾವಡಿಗೆ ಸುಣ್ಣ ಹುರಮಂಜು ಹಚ್ಚಿಸುತ್ತಾರೆ (ಗಾಳಿಗು. ೪). **ಹುರಿಮಂಜು:** ೨. ಗೋಡೆಗೆಲ್ಲ ಸುಣ್ಣಬಡಿದು ಪಟ್ಟೆಯಾಗಿ ಹುರಿಮಂಜನ್ನು ಇಳಿಬಿಟ್ಟಿದ್ದಾರೆ (ಹೊಸಕ್ಷಿ. ೧೯೦). **ಹುರುಮಂಜಿ:** ೧. ಹುರುಮಂಜಿಯ ಮುತ್ತಿನ ಕಂಠಮಾಲೆಯಂ . . . ತಳೆದೊಪ್ಪಿದನುನ್ನತೋತ್ಸವಂ (ಚಿಕ್ಕದೇ. ೧೨೦); ಕಂಗೊಳಿಸುವಾ ತೋರಾಯ ಹುರುಮಂಜಿನಾ ನಾಸಾಗ್ರಮಣಿಗಳಂ (ಪರಶು. ೮-೮). **ಹುರುಮಂಜು:** ೧. ಮೂಗಿನಲಿನಲಿವ ಹುರುಮಂಜು ಮುತ್ತಿನ ಮುರುಕಲಾಡಿ (ಶ್ರೀಕೃಪಾ. ೭೪). [← ಮರಾ. ಹುರಮೂಜ್, ಹುರಮೋಜ್, ಪಾರ. ಹುರ್ಮುಂಝ್]

**ಹುರವಿನಮರಳು** (ನಾ). ಒಂದು ಬಗೆಯ ಮೀನು: ಮೀನು: ಮರವೆ . . . ಮರಪಕ್ಕೆ, ಅರುಳಿ, ಹುರವಿನಮರಳು, ಕಂಚಿನಮರಲು (ನಮ್ಮನು. ೨೪೦). [?]

**ಹುರಹುರ**, ಹುರುಹುರು (ನಾ). ಒಳಗುದಿ; ತೀವ್ರಚಿಂತೆ; ಕಾಳಜಿ: ಇದಕ್ಕೆ ಏನನ್ನುವನೋ ಎಂಬ ಹುರಹುರ ಅವರ ಮನಸ್ಸಿನಲ್ಲಿ ಇದ್ದೇ ಇತ್ತು (ಅನ್ನ. ೨೧೭). **ಹುರುಹುರು:** ಟಿಳಕರ ಬಗ್ಗೆ ಮನಸ್ಸಿಗೆ ಹುರುಹುರು ಹತ್ತಿಬಿಟ್ಟಿತ್ತು (ಸ್ಮೃತಿಚಿ. ೧೫೫). [← ಮರಾ. ಹುರಹುರ]

**ಹುರಿ₁** 'ಪುರಿ₁' ನೋ.

**ಹುರಿ₂** 'ಪುರಿ₃' ನೋ.

**ಹುರಿಕಟಿಸು** (ಕ್ರಿ). ಹುರುಪುಗೊಳ್ಳು; ಉತ್ಸಾಹಭರಿತವಾಗು: ಹುರಿಕಟಿಸಿ ರಕ್ಕಸರು ಹೊಕ್ಕರು . . . ನಡೆದಡರಿದರು ಖಳನ (ತೊರರಾ. ೬-೨೬-೨೯); ಪಟುಭಟರು . . . ಹುರಿಕಟಿಸಿ ಬೊಬ್ಬಿರಿದು ಮಾರ್ಮಲೆತರು (ತುರಂಗ. ೫೭-೫೫). [< ಹುರಿಗಟ್ಟು + - ಇಸು₃]

**ಹುರಿಕಟ್ಟು** (ನಾ). ೧. ಹೊಸೆದ ದಾರದ ಕಟ್ಟು: ನೀಲಿವರ್ಣದ ಹುರಿಕಟ್ಟುಗಳಿಂದ ಸಜ್ಜುಗೈದ ನಡುಪಟ್ಟಿಯ ಸಮವಸ್ತ್ರವನ್ನು ಧರಿಸಿದ್ದಳು (ಪುನರು. ೪). ೨. ಪುಷ್ಟವಾದುದು; ಕಟ್ಟುಮಸ್ತು: ಆತನ ನಿಲುವಿಕೆ ಎತ್ತರ, ಮೈಕಟ್ಟು ಹುರಿಕಟ್ಟಿನದು (ಕಗದ್ಯ. II, ೪೮); ಹುರಿಕಟ್ಟಾದ ಮೈ (ಜಮಿನಾನ್ಯಾ. ೩೪). ೩. ದೃಢತೆ: ನನ್ನ ಸಂಸಾರದ ಹುರಿಕಟ್ಟಿನ ಪಕ್ವವ್ಯವಸ್ಥೆಯ ಮಧ್ಯದಲ್ಲಿ ಸಣ್ಣದೊಂದು ಜೀವಕಣ ಎಲ್ಲಿಂದಲೋ ಹಾರಿ ಬಂದು ಬಿದ್ದಿತು (ಇಪ್ಪಕ. ೪೩೨). [ಹುರಿ₂ (< ಪುರಿ₃) + ಕಟ್ಟು₂]

**ಹುರಿಕರಿ** (ನಾ). ೧. ಕಂದಿಹೋಗುವಿಕೆ: ಹುರಿಕರಿಯಾಗಿ ಬಂಬಲುಬಾಡಿದವಳನು ಕರವ ಪಿಡಿದು . . . ಕುಳ್ಳಿರಲೊರಸಿದನು ಕಂಬನಿಯ (ನಾಗಕು. ೧೧-೭೨); ೨. ನಾಶ; ಹಾನಿ: ಡಂಭನು ಸಕಲಲೋಕವ ಹುರಿಕರಿಯ ಮಾಡಿದನು (ಕೋಗಯ. ೯-೮೦). [ಹುರಿ₁ (< ಪುರಿ₁) + ಕರಿ₂]

**ಹುರಿಕಲು**, ಹುರಕಲು, ಹುರುಕಲು (ನಾ). ಹುರಿದು ಉಪ್ಪು, ಕಾರ ಹಾಕಿ ತಯಾರಿಸುವ ಕಡಲೆ, ಹುರುಳಿ, ಹೆಸರು ಮೊದಲಾದ ಕಾಳುಗಳ ಮಿಶ್ರಣ; ಹುರಿಗಾಳು: (ಕಿ). **ಹುರಕಲು:** ಚಳಿಗಾಲದಲ್ಲಿ ಉಪಯೋಗಿಸಲು ಹುರಕಲು ತಯಾರುಮಾಡಬೇಕು (ರೂಢಿ). **ಹುರುಕಲು:** ಕಡಲೆ ತಡುಗುಣಿ ಹೆಸರು ಕುಸುವೆ ಮೊದಲಾದ ಹುರುಕಲಂ ರುಚಿ ನೋಡಿ (ಸೌಗಂಧಿ. ೩೭-೧೧); ಹುರುಕಲ ಕುರುಕುತ್ತ (ಸೌಗಂಪ. ೨-೧೧). [ಹುರಿ₁ (< ಪುರಿ₁) + - ಕಲು₂ (< - ಕಲ್₄)]

**ಹುರಿಕಾತಿ** (ನಾ). ಉತ್ಸಾಹಶೀಲೆ: ನನ್ನ ಮನದ ಮಚ್ಚಿನವಳಾ ವನಜವದನೆ ಹುರಿ [ಪಾಠಾಂ.ರು] ಕಾತಿ [ಪಾಠಾಂ. ತಿ] ನೆನೆಯೆ ಬಹಳು ನನ್ನ ಬಳಿಗೆ (ಕುರಾಸಾಂ. ೨೪-೩೩). [ಹುರಿ₂ (< ಪುರಿ₃) + - ಕಾತಿ₅]

**ಹುರಿಕಾಯಿಸು** (ಕ್ರಿ). ಹುರಿದುಂಬಿಸು; ಪ್ರಚೋದಿಸು: ನಾನು ನಾಗಯ್ಯಸೆಟ್ಟರನ್ನು ಹುರಿಕಾಯಿಸಿಬಿಟ್ಟಿದ್ದೇನೆ. ನಾಗಯ್ಯಸೆಟ್ಟರೊ! ಪಾತಾಳಗರುಡ ಅವರು (ಹಹಸ. ೬೫). [ಹುರಿ₂ (< ಪುರಿ₃) + ಕಾಯ್₇ + ಇಸು₃]

**ಹುರಿಕೊಳಿಸು** 'ಪುರಿಗೊಳಿಸು' ನೋ.

**ಹುರಿಗ** (ನಾ). ಮಾಸಲುಕಂದುಬಣ್ಣದ ಹಸು; ಕಾವಿಬಣ್ಣದ ಹಸು: ಬಟ್ಟ ಗಡಸು ಕೆಂದ ಹುರಿಗ ಕಾರಿಯು ಬೆಳ್ಳ ನೆಟ್ಟ ಕೊಂಬಿನ ಕಾರಿ ಜಾಲೆ ದಿಷ್ಟಿಸಿ ನೋಡುವ ಪಶುಗಳು ಎಸೆದವು (ಮಾದೇಸಾಂ. ೧-೪೧). 'ಹುರಮುಂಜಿ' ಪರಾ. [?]

**ಹುರಿಗಟ್ಟು** (ಕ್ರಿ). ಉತ್ಸಾಹಗೊಳ್ಳು; ಹುರುಪು ಹೊಂದು: ಅಲಗನುಗಿದನು ಮದನ ಮಂದಾನಿಲನು ಹುರಿಗಟ್ಟಿದನು (ತೊರರಾ. ೧-೫-೫೫); ಧೈರ್ಯದಿಂದೆ ಒಡನೊಡನೆ ಹುರಿಗಟ್ಟಿಯುರುಬುವಸುರಾಳಿಯಂ ತಡೆತಡೆದು ಕಾದುತಿರ್ದಂ (ಚಿಬಪು.೪೯-೫೦). [ಹುರಿ₂ (< ಪುರಿ₃) + ಕಟ್ಟು₁]

**ಹುರಿಗಡಲೆ** 'ಪುರಿಗಡಲೆ' ನೋ.

**ಹುರಿಗಡುಬು** 'ಪುರಿಗಡುಬು' ನೋ.

**ಹುರಿಗಾತಿ** (ನಾ). ತೆಂಗಿನ ನಾರಿನಿಂದ ಮಾಡಿದ ಹುರಿ: ಅದಕ್ಕೆ ಬೆಲಗುಗಳೂ . . . ಹುರಿಗಾತಿಯೂ ಹಂಚುಗಳೂ ತಲೆಹಂಚುಗಳೂ ಬೇಕಾಗುತ್ತವೆ (ಮುಂಬಯಿ. ೪-೧೧೭). [ಹುರಿ₂ (< ಪುರಿ₃) + ಕಾತಿ₂ (< ಕತ್ತ₁)]

**ಹುರಿಗಾವಲಿ** (ನಾ). ಧಾನ್ಯಗಳನ್ನು ಹುರಿಯುವ ಓಡು,–ಬಾಣಲಿ: ''ಅಂಬರೀಷಃ, ಭ್ರಾಷ್ಟ್ರಂ – ಈ ೨ ಹುರಿಗಾವಲಿ'' (ಹಲಾಯು. ೫೨-೧೫೮); ಕಾಯ್ದ ಕರ್ಬುನದ ಹುರಿಗಾವಲಿಯೊಳಿಟ್ಟು ಹುರಿವುದುಂ (ಶಾಂತೀಶ್ವ. ೯-೧೧೦ ವ). [ಹುರಿ₁ (< ಪುರಿ₁) + ಕಾವಲಿ₂]

**ಹುರಿಗಾಳು** (ನಾ). = ಹುರಿಕಲು: ತಂದಿದ್ದ ಚಿರೋಟಿಗಳನ್ನೂ ಹುರಿಗಾಳನ್ನೂ ಶಾರದಮ್ಮನವರು ಎಲ್ಲರಿಗೂ ಹಂಚಿದರು (ಮೂಲಾನ. ೧೨೩). [ಹುರಿ₁ (< ಪುರಿ₁) + ಕಾಳು₂ (< ಕಾಟ್₂)]

**ಹುರಿಗಿಲು** 'ಹುರಗಲು' ನೋ.

**ಹುರಿಗುಂದು** (ಕ್ರಿ). ಬಲ ಕಡಿಮೆಯಾಗು; ಶಕ್ತಿಹೀನವಾಗು: ಬೆಂದ ನುಲಿಯಂತೆ ಹುರಿಗುಂದದಂತಿಪ್ಪೆನು (ಮಹಾದೇ. ಬ. ೯೯-೨೩೦). [ಹುರಿ₂ (< ಪುರಿ₃) + ಕುಂದು₁]

**ಹುರಿಗುಟ್ಟು** (ಕ್ರಿ). ಉತ್ಸಾಹ ತೋರು; ವಿಜೃಂಭಿಸು: ಸಂದಣಿಯ ವಿಪ್ರರೆಲ್ಲರ್ ನೆರೆದು ಹುರಿಗುಟ್ಟಿ ಆಲಿ ಬೊಬ್ಬೆಯು ಕುಡುತಲಿದ್ದರು (ಶಿವಸಂ. ೨೭-೨-೩೨೮); ಭೂತಗಣಂಗಳ್ ಕಂಡುಜ್ ಹುರಿಗುಟ್ಟಿಲ್ ಹೇವರಿಸಿದನು (ವೀರೇಚ. ೨-೩೭). [ಹುರಿ₂ (< ಪುರಿ₃) + ಕುಟ್ಟು₁]

**ಹುರಿಗೂಡು** (ಕ್ರಿ). ೧. ಹೊಸೆದ ದಾರಗಳು ಒಟ್ಟಿಗೆ ಸೇರು; ಅನೇಕ ಎಳೆಗಳು ಕೂಡಿ ಬಲವಾಗು: ಆಱುಗೇಣಗಲದ ಗಾತ್ರದ ಕುಂಭವ ಬಿಟ್ಟು ಹುರಿಗೂಡದ ಕಣ್ಣಿಯಲ್ಲಿ ಸೇದುತ್ತಿರಲಾಗಿ (ಮೋಳಿಮಾ. ೧೯೮-೭೫೯); ಆಲಿಂಗಿಸಿದವು ಹೂಗಣೆಯಂ ಹುರಿಗೂಡಿದ ಸಮ್ಮೋಹನಪಾಶದ ತೆಱದಿ (ಜಯಕಾ. ೧೦-೨೮). ೨. ಹುರುಪುಗೊಳ್ಳು; ಬಲಗೊಳ್ಳು: ನಿಮಗೀ ಹುಗ್ಗಿಗರು ಹುರಿಗೂಡಿ ಗೆಲಿದಿನ್ನಿಳೆಯ ಕೊಡಿಸುವರೆ (ಕುವ್ಯಾಭೀ. ೧-೫೮); ಅನುಮಾನವೇತಕೀ ಕಾರ್ಯ ಹುರಿಗೂಡಿದೊಡೆ ಮುಂದಕ್ಕೆ ನಮಗಶಕ್ಯ (ಸಮ್ಮಕೌ. ೨-೧೭). [ಹುರಿ₂ (< ಪುರಿ₃) + ಕೂಡು₁]

**ಹುರಿಗೆಜ್ಜೆ** (ನಾ). ಹುರಿಯಲ್ಲಿ ಕಟ್ಟಿದ ಸಣ್ಣಸಣ್ಣ ಗೆಜ್ಜೆ: ಹುರಿಗೆಜ್ಜೆ ಸರಗೆಜ್ಜೆ ಸರಕೆ ಸಾವಿರಗೆಜ್ಜೆ (ನಾಪದ. ೨೨೦). [ಹುರಿ₂ (< ಪುರಿ₃) + ಗೆಜ್ಜೆ₁]

**ಹುರಿಗೆಡು** (ಕ್ರಿ). ಉತ್ಸಾಹ ಕುಂದು; ಹುರುಪು ಇಲ್ಲವಾಗು: ಹುರಿಗಡದೆ ಕದನದೊಳ್ ತರಿದರಿದು ಕೈದಣಿಯೆ (ತುರಂಗ. ೫೬-೪೮). [ಹುರಿ$_2$(< ಪುರಿ$_3$) + ಕೆಡು$_1$]

**ಹುರಿಗೈ** 'ಪುರಿಗೆಯ್' ನೋ.

**ಹುರಿಗೊಳ್** 'ಪುರಿಗೊಳ್' ನೋ.

**ಹುರಿಗೊಳಿಸು** 'ಪುರಿಗೊಳಿಸು' ನೋ.

**ಹುರಿಗೊಳ್ಳು** 'ಪುರಿಗೊಳ್' ನೋ.

**ಹುರಿಟ್ಟು** 'ಹುರಿಹಿಟ್ಟು$_1$' ನೋ.

**ಹುರಿತ** (ನಾ). ಹುರಿಯುವಿಕೆ: ಋಜಿ, ಭೃಜ-ಭರ್ಜನೇ, ಹುರಿತದೊಳ್ (ಶಾಶಕ್ಯ. ೯೬).
[ಹುರಿ$_1$ (< ಪುರಿ$_1$) + - ತ$_2$]

**ಹುರಿದುಂಬಿಸು** (ಕ್ರಿ). ಪ್ರೋತ್ಸಾಹಿಸು; ಉತ್ಸಾಹ ನೀಡು: ಇನ್ನೂ ಹೆಚ್ಚಿಗೆ ತಿಳಿಯಲೋಸುಗ ಅವನನ್ನು ಹುರಿದುಂಬಿಸಿದೆ (ಬಾಣಅ. ೮೦); ಸೈನಿಕರಿಗೆ ಹೇರಳವಾದ ಧನವನ್ನು ವಸ್ತ್ರಾಭರಣಗಳನ್ನು ಕೊಟ್ಟು ಹುರಿದುಂಬಿಸಿದನು (ಶ್ರೀರಾಯ. ೧೨೪).
[ಹುರಿದುಂಬು + - ಇಸು$_3$]

**ಹುರಿದುಂಬು** (ಕ್ರಿ). ಹುರುಪುಗೊಳ್ಳು; ಉಬ್ಬು: ಅತ್ಯಂತ ಉತ್ಸಾಹದಿಂದ ಹುರಿದುಂಬಿ ಹಾಡುತ್ತಾ ನರ್ತಿಸಲಾರಂಭಿಸಿದಳು (ಝಾರಾಣಿ. ೬೬); ಅನುಯಾಯಿಗಳು ಉತ್ಸಾಹದಿಂದ ಹುರಿದುಂಬಿದರು (ಪ್ರಮಹ. ೫೦). [ಹುರಿ$_2$ (< ಪುರಿ$_3$) + ತುಂಬು$_1$]

**ಹುರಿನೇಣು** 'ಪುರಿನೇಣ್' ನೋ.

**ಹುರಿಬಲಿ** (ಕ್ರಿ). ದಾರವು ಚೆನ್ನಾಗಿ ನುಲಿಯಾಗು; ಹುರಿಗೊಳ್ಳು: ನೆಱಿ ಬಿಗಿಯೆ ಮೈ ಬಾಸುಳೇಳದ ಹುರಿಬಲಿದ ನೇಣ್ಸೋಂಕಿದೊಡೆ ಹೊಗೆಮಸಗದೆದೆಗಿಚ್ಚು (ಕುವ್ಯಾವಿ. ೩-೧೦). [ಹುರಿ$_2$ (< ಪುರಿ$_3$) + ಬಲಿ$_1$ (< ಬಲ್$_1$)]

**ಹುರಿಬಾಡು** (ನಾ). ಹುರಿದ ಮಾಂಸ; ಸುಟ್ಟ ಮಾಂಸ: ಒಬ್ಬಾಕೆ ಹಂದಿಯ ಹುರಿಬಾಡನ್ನೂ ಮಾರುತ್ತಿದ್ದಳು (ಪುನರು. ೪೮೭). [ಹುರಿ$_1$ (< ಪುರಿ$_1$) + ಬಾಡು$_2$]

**ಹುರಿಬಿಡು** (ಕ್ರಿ). ಉತ್ಸಾಹವನ್ನು ನೀಗು; ಹುರುಪು ಕಳೆದುಕೊಳ್ಳು: ಗಱಿಗಟ್ಟಿ ರಥಿಕರು ಹುರಿಬಿಡದೆ ಬಿಗುಹಿನಲಿ ಭಾಷೆಯ ಮಾಡಿ ತಮ್ಮೊಳಗೆ ಸರಳ ಸೂಸಿದರೆಡೆ ಬಲದಲಿ (ಕುವ್ಯಾದ್ರೋ. ೬-೧೮) [ಹುರಿ$_2$ (< ಪುರಿ$_3$) + ಬಿಡು$_1$]

**ಹುರಿಬುತ್ತಿ** (ನಾ). ಹುರಿದ ಅಕ್ಕಿಯಿಂದ ತಯಾರಿಸಿದ ತಂಬಿಟ್ಟು ಇತ್ಯಾದಿ ಪದಾರ್ಥ,– ಬುತ್ತಿ: ಹಸುರಂಬಲಿ ಮುಟ್ಟಿಗೆ ಹುರಿಬುತ್ತಿಯ ಬೇಡಿ . . . ಆಯ್ದು ಕುಱುಕುವ ಹೇಸಿದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ (ಬಸವ. ೫೫೬).
[ಹುರಿ$_1$ (< ಪುರಿ$_1$) + ಬುತ್ತಿ]

**ಹುರಿಭಂಗಿ** (ನಾ). ಹುರಿದ ಭಂಗಿಸೊಪ್ಪು; ಸುಟ್ಟಿರುವ ಗಾಂಜಾ: ಹುರಿಭಂಗಿಯ ಸೊಕ್ಕೇಱಿ . . . ಕದನವ ಬಱಿದೆ ಗಂಟಿಕ್ಕಿದ ಭಂಡೆ (ಕಂಪವಿ. ೬-೧ ೮೫).
[ಹುರಿ$_1$ (< ಪುರಿ$_1$) + ಭಂಗಿ$_1$]

**ಹುರಿಮಂಜು** 'ಹುರಮುಂಜಿ' ನೋ.

**ಹುರಿಮರಳು** 'ಪುರಿವಳಲ್' ನೋ.

**ಹುರಿಮಳಲು** 'ಪುರಿವಳಲ್' ನೋ.

**ಹುರಿಮಿಸೆ** (ನಾ). ಹೊಸೆದು ತಿರುವಿದ ಮೀಸೆ; ಹುರಿಗೊಳಿಸಿದ ಮೀಸೆ: ಹುರಿಮೀಸೆಯ ಮೇಲೆ ಕೈಯಾಡಿಸುತ್ತಾ ದೊಪ್ಪನೆ ಮಂಚದ ಮೇಲೆ ಕುಳಿತು ಕಾಲು ಕುಣಿಸತೊಡಗಿದ್ದ (ದೇವಹಂ. ೧೫೩). [ಹುರಿ$_2$ (< ಪುರಿ$_3$) + ಮೀಸೆ]

**ಹುರಿಮೆಣಸುಗಡಲೆ** (ನಾ). ಹುರಿದು ಕಾರ ಹಚ್ಚಿರುವ ಕಡಲೆ: ಹುರಿಮಣಸು ಗಡಲೆ ಸಕ್ಕರೆ ಶುಂಠಿ ಕಬ್ಬುವಿಲ್ಲೆಗಳನುಱಿ ಮಾಱುವರ್ ಬರುತಿರ್ದರು (ಚೆಬಪು. ೪೭-೪೨). [ಹುರಿ$_1$ (< ಪುರಿ$_1$) + ಮೆಣಸು (< ಮೆಱಸು) + ಕಡಲೆ]

**ಹುರಿಯಕ್ಕಿ** , ಹುರಕ್ಕಿ (ನಾ). ಹುರಿದ ಅಕ್ಕಿ: ಹುರಿಯ[ಪಾಠಾಂ. ಯಿ]ಕ್ಕಿ ಹುರಿ ಗಡಲೆಗಳ ಹುಡಿಯುಮ ಒತ್ತರಿಸಿ . . . ಪರಿಮಳವಿಕ್ಕಿ ಕಟ್ಟಶನಮಂ ಮಾಳ್ಪುದು (ಸೂಪಶಾ. ೩-೧೭); ಹುರಿಯಕ್ಕಿಗಂಜಿಯಂ ಪಥ್ಯಮನಿಕ್ಕಿಸುವುದು (ಸಕವ್ಯ. ೧೫೨). **ಹುರಕ್ಕಿ:** ಹುರಕ್ಕಿಯ ಹೋಳಿಗೆ, ಅಂಬೊಡೆ, ಗಾರಿಗೆ . . . ಮೊದಲಾದವುಗಳನ್ನು ಮಾಡಿಟ್ಟುಕೊಂಡು ಸಿದ್ಧಳಾದಳು (ಹೂಬಿಸಿ. ೭೪). [ಹುರಿ$_1$(< ಪುರಿ$_1$) + ಅಕ್ಕಿ$_1$]

**ಹುರಿಯಳಿ** (ಕ್ರಿ). ಬಿಗಿ ಕಳೆದುಕೊಳ್ಳು; ಸಡಿಲವಾಗು: ನೆನೆದಿಹೆನೆಂಬ ಭ್ರಾಂತು ಹುರಿಯಳಿದು ಆ ನೆನಹೇ ತಾನಾಗಿ (ಮೋಳಿಮಾ. ೧೧೦-೪೭೬).
[ಹುರಿ$_2$ (< ಪುರಿ$_3$) + ಅಳಿ$_1$(< ಅೞಿ$_1$)]

**ಹುರಿಯಾಳು** (ನಾ). ೧. ಕಟ್ಟಾಳು; ವೀರಭಟ: ವೀರಮಾಚಣ್ಣ ಕರವಾಳುಬಸವನಿಗೆ ಧೀರಕಾಯಕದ ಹುರಿಯಾಳು (ಕನ್ನಜಾ. ೨೪೭); ನಮ್ಮ ಪಡೆಯ ಹುರಿಯಾಳುಗಳು ಮದುವೆಯ ದಿವಸ ಪಡೆಗೆಲ್ಲ ಹಬ್ಬದೂಟ ಉಣಿಸಿದರು (ಸವತಿ. ೧೩೧). ೨. ಸ್ಪರ್ಧೆಗೆ ನಿಂತಿರುವವನು; ಉಮೇದುವಾರ: ಚರ್ಚಾಕೂಟದ ಮಂತ್ರಿಪದಕ್ಕೆ ಹುರಿಯಾಳಾಗಿ ನಿಲ್ಲುವೆಯಾ? (ಸಂಜೀವಿ. ೪೭); ಸಸ್ಯವಿಜ್ಞಾನಪೀಠಕ್ಕೆ . . . ಹುರಿಯಾಳಾಗಿ ಆಯ್ಕೆಗೊಳ್ಳಬೇಕೆಂದು ಭಗೀರಥಪ್ರಯತ್ನ ಮಾಡಿದರು,(ಸಸ್ಯಕ. ೯).
[ಹುರಿ$_2$ (< ಪುರಿ$_3$) + ಆಳು$_3$ (< ಆಳ್$_3$)]

**ಹುರಿಯಿಸು,** ಹುರಿಸು (ಕ್ರಿ). ಹುರಿಯುವಂತೆ ಮಾಡು: ಬಿತ್ತಿದ್ದ ಬೀಜವ ನಾಯ್ದುದಕದಿಂದದ್ದಿ ತೊಳೆತಂದಾಗ ಹುರಿಯಿಸಿ ಮಿದಿಸಿ (ಬಸಪು. ೨೭-೪೯). **ಹುರಿಸು:** ಕಾವಲಿಯೊಳು ಹಾಕಿ ಹುರಿಸುವ ಯಮನು (ಪುರಂದ. ೧-೧೩೪-೪).
[ಹುರಿ$_1$ (< ಪುರಿ$_1$) + - ಇಸು$_3$]

**ಹುರಿಯುರುಳು** (ನಾ). ಹೊಸೆದ ನೇಣು,–ಹಗ್ಗ: ಹುರಿಯುರುಳಿ ಹಾವಲ್ಲ ವಾದೊಡಂ ಮಬ್ಬಿನಲಿ ಹರಿದಾಡಿದಂತಾಗೆ (ಮಂಕುಕ. ೩೬೧).
[ಹುರಿ$_2$(< ಪುರಿ$_3$) + ಉರುಳು$_3$ (< ಉರಿಲ್)]

**ಹುರಿಯೇರಿಸು** 'ಹುರಿಯೇಱಿಸು' ನೋ.

**ಹುರಿಯೇರು** 'ಪುರಿಯೇಱು' ನೋ.

**ಹುರಿಯೇಱಿಸು** , ಹುರಿಯೇರಿಸು (ಕ್ರಿ). ೧. ಉತ್ಸಾಹಗೊಳಿಸು; ಹುರಿದುಂಬಿಸು: ಸೇನೆಯ ಹಿಂಡೊಡೆಯದೋಜೆಯಲಿ ಹುರಿಯೇಱಿಸಿ . . . ಸಮರಕೆ ನಡೆದನಾ ಭೀಷ್ಮ (ಕುವ್ಯಾಭೀ. ೯-೮). **ಹುರಿಯೇರಿಸು: ೨. ವೃದ್ಧಿಗೊಳಿಸು; ಹೆಚ್ಚಿಸು:** ಮಹಾರಾಜರ ಸಂದೇಹವನ್ನು ಹುರಿಯೇರಿಸುವ ವಿಲಕ್ಷಣ ಸಂದರ್ಭವೇನಾದರೂ . . . ಸಂಭವಿಸಿತೆ? (ವೀರಬಂ. ೮೦). [ಹುರಿಯೇಱು (< ಪುರಿಯೇಱು) + - ಇಸು$_3$]

**ಹುರಿಯೇಱು** 'ಪುರಿಯೇಱು' ನೋ.

**ಹುರಿಯೊಟ್ಟೆ,** ಹೊರಿಯೊಟ್ಟೆ (ನಾ). (ಕರಾ) ಅಕ್ಕಿ, ಬತ್ತ, ಧಾನ್ಯ ಮುಂತಾದುವುಗಳನ್ನು ಹುರಿಯಲು ಬಳಸುವ ಹೆಂಚು, ಬಾಣಲೆ ಇತ್ಯಾದಿ. **ಹೊರಿಯೊಟ್ಟೆ:** ಹೊರಿಯೊಟ್ಟೆಯಲ್ಲಿ ಎರಡು ಮುಷ್ಟಿ ನೆನೆಹಾಕಿದ ಬತ್ತವನ್ನು ಚೆಲ್ಲಿ . . . ಹುರಿಯುವುದಕ್ಕೆ ಆರಂಭಿಸಿದಳು (ದೇವಹಂ. ೧೫೭).
[ಹುರಿ$_1$ (< ಪುರಿ$_1$) + ?]

**ಹುರಿಯೊಡೆ** (ಕ್ರಿ). ೧. ಹುರುಪು ಇಲ್ಲವಾಗು; ಎದೆಗುಂದು: ಪಾಂಚಾಲ ರೊಳ್ಗಿಗರವದಿರಂಬಿನ ಕೋಲ ಕಾಣದ ಮುನ್ನ ಹಮ್ಮೈಸುವರು ಹುರಿಯೊಡೆದು (ಕುವ್ಯಾದ್ರೋ. ೧-೫೯); ಹುರಿಯೊಡೆದು . . . ಕೈದುವ ಬಿಸುಟು ಪಡೆ ಮೊಗದಿರುಹಲೆಚ್ಚನು (ನಳಚ. ೯-೩೧). ೨. ನೆಟ್ಟಗೆ ನಿಲ್ಲು; ನಿಮಿರು: ನೆಗೆದ ಮೊಗವಿಡಿದುಸುರು ಹುರಿಯೊಡೆದ ರೋಮ ನಸುಮುಗಿದ ಕಣ್ (ಹಚಕಾ. ೫-೨೭); ಹುರಿಯೊಡೆದ ರೋಮ ಹೊಯ್ದುಳ್ಳೆ . . . ಎಳಲ್ವ ಕಿವಿವೆರಸು ಕಂಗೆಟ್ಟೊಂದು ಹರಿಣನೆಯ್ತಂದು (ಸಿದ್ಧರಾ. ೪-೪೨).
[ಹುರಿ$_2$(< ಪುರಿ$_3$) + ಒಡೆ$_1$]

**ಹುರಿಯೋಡು** 'ಪುರಿಯೋಡು' ನೋ.

**ಹುರಿಸಂಡಗೆ** 'ಪುರಿಸಂಡಗೆ' ನೋ.

**ಹುರಿಸಕ್ಕರೆ** (ನಾ). ಒಂದು ಬಗೆಯ ಪುಡಿಸಕ್ಕರೆ: ಬಿಳಿಸಕ್ಕರೆ, ಹುರಿಸಕ್ಕರೆ, ಕಲ್ಲುಸಕ್ಕರೆ, ಗಡಿಗಿ ನಾಬತ್ತು ಮೊದಲಾದ ಸಕ್ಕರೆಗಳನ್ನು ಮಾಡುವದಕ್ಕೆ ಸ್ವಲ್ಪು ಶ್ರಮವಾದುದರಿಂದ (ಕೃಷಿಪ್ರ. ೧೮೭); ಪುಡಿಸಕ್ಕರೆಯಲ್ಲಿ ಚೆನ್ನೀ ರಾಜಪುರೀ ಎಳಗುಡೀ ಹುರಿಸಕ್ಕರೆ ಮಗುದುಮ್ಮ ಎಂದು ಹಲವು ತರವುಂಟು (ಮುಂಬಯಿ. ೬-೪೫).
[ಹುರಿ? + ಸಕ್ಕರೆ]

**ಹುರಿಸು** 'ಹುರಿಯಿಸು' ನೋ.

**ಹುರಿಹಂಚು** (ನಾ). = ಹುರಿಯೊಟ್ಟೆ: "ಅಂಬರೀಷ, ಭ್ರಾಷ್ಟ್ರ - ಹುರಿಹಂಚು"

(ನಾಚರಾ. ೬); ಕೈಗೆ ಹುರಿಹಂಚಿನ ಕಪ್ಪು ಹತ್ತಿಕೊಂಡಿದೆ (ಹೊಸಂಸಾ. ೭೫).

[ಹುರಿ$_1$ (< ಪುರಿ$_1$) + ಹಂಚು$_2$ (< ಹೆಂಚು)]

**ಹುರಿಹಣ್ಣು** (ನಾ). ಉಪ್ಪು, ಕಾರ ಹಾಕಿ ಒಗ್ಗರಿಸಿದ ನಿಂಬೆ ಮುಂತಾದ ಕಾಯಿಯ ಉಪ್ಪಿನಕಾಯಿ (?): ನಿಂಬೆಯ ಹಣ್ಣಿನ ಹುರಿಹಣ್ಣ ನೆಂಚುತ (ಜ್ಞಾನಚ. ೩೯-೧೪೫). [ಹುರಿ$_1$ (< ಪುರಿ$_1$) + ಹಣ್ಣು$_3$ (< ಪಣ್$_3$)]

**ಹುರಿಹಿಟ್ಟು$_1$, ಹುರಿಟ್ಟು** (ನಾ). ಅಕ್ಕಿ, ಗೋದಿ, ರಾಗಿ ಮೊದಲಾದ ಧಾನ್ಯಗಳನ್ನು ಹುರಿದು ಮಾಡಿದ ಹಿಟ್ಟು ಮತ್ತು ಹಾಗೆ ಹುರಿದ ಹಿಟ್ಟಿಗೆ ಬೆಲ್ಲ ಅಥವಾ ಸಕ್ಕರೆ, ತೆಂಗಿನ ತುರಿ, ಹಾಲು ಇತ್ಯಾದಿ ಹಾಕಿ ತಯಾರಿಸುವ ಒಂದು ಬಗೆಯ ತಿನಿಸು: ಎಳನೀರು, ಹುರಿಹಿಟ್ಟು, ಬೇಲದ ಹಣ್ಣು . . . ಇವೆಲ್ಲವು ವಮನಹರದ್ರವ್ಯವೆಂದರಿವುದು (ಸಕವ್ಯ. ೨೬೪); ದಿನವಹಿ ಹುರಿಹಿಟ್ಟು ಒಂದೇನೇ, ಅವಸ್ಥೆ. ನನಗೇನೂ ಬೇಡ (ವೊಗ್ಗು. ೩೨). **ಹುರಿಟ್ಟು**: ತಾಯಿ ಕೊಟ್ಟ ಹುರಿಟ್ಟನ್ನೋ ಅವಲಕ್ಕಿಯನ್ನೋ ರೊಟ್ಟಿಯನ್ನೋ ತಿಂದು . . . ಪಾಠಶಾಲೆಗೆ ಬರಬೇಕು (ಗುಣಸಾ. ೩); ಒಗ್ಗರಣೆ ಅವಲಕ್ಕಿ, ಮೊಸರು, ಹುರಿಟ್ಟು, ಅಕ್ಕೀತರಿ ಉಪ್ಪಿಟ್ಟು ಯಾವುದಾದರೊಂದು ಇರುತ್ತಿತ್ತು (ಮುಯ್ಯಿ. ೧೮). [ಹುರಿ$_1$ (< ಪುರಿ$_1$) + ಹಿಟ್ಟು (< ಪಿಟ್ಟು)]

**ಹುರಿಹಿಟ್ಟು$_2$** (ನಾ). ಒಂದು ಬಗೆಯ ಸಸ್ಯ: ''ಉತ್ತ್ಕಾರಿ ಹೆಗ್ಗುರುಟಿಗೆ ಹುರಿಹಿಟ್ಟು'' (ಅಕಾನಿ. ೪-೯). [?]

**ಹುರುಕ** (ನಾ). ೧. ಒರಟಾದ ಚರ್ಮವುಳ್ಳವನು; ತರಿತರಿಯಾದ ಚರ್ಮವುಳ್ಳವನು: (೬). ೨. ಚರ್ಮರೋಗವುಳ್ಳವನು: ಕಾಡಿ ಬೇಡುವರಲ್ಲ ತಿರುಕ ಹುರುಕರಲ್ಲ ನಾಡಿಗೊಡೆಯರು ಧನಿಕರು (ಜ್ಞಾನಚ. ೩೮-೩೭).

[ಹುರುಕು + - ಅ$_7$]

**ಹುರುಕಲು** 'ಹುರಿಕಲು' ನೋ.

**ಹುರುಕು, ಪುಱುಕು** (ನಾ). ೧. ಒರಟಾದುದು; ತರಿಯಾಗಿರುವುದು: ತರಟುದಲೆಯಾ ಹುರುಕುಮೈದೊಡದ ಹಿಮ್ಮಡ (ನನ್ನಕಾ. ೮-೮೭). ೨. ಗುಳ್ಳೆ; ಬೊಕ್ಕೆ: ಕರಕಾದ ಕೂಳನುಣಹೊಲ್ಲ ಸೂಳೆಗೆ ಹುರುಕಾಗ ಹೊಲ್ಲ (ಸರ್ವಜ್ಞ. ೧೯೦೧); ಹುರುಕು ಮುಂತಾದ ಚರ್ಮರೋಗಗಳಿಗೆ ಸಹಾಯಮಾಡುತ್ತವೆ (ಮುಂಬಯಿ. ೫-೧೭೦). ೩. ಕಾಳು, ಬೀಜ ಮುಂತಾದುವುಗಳ ಸಿಪ್ಪೆ, —ಹೊಟ್ಟು: ಹುಣಸೆಬೀಜದ ಹುರುಕು . . . ಬಿಸಿನೀರೊಳರೆದು ಸೇವಿಸೆ ರಕ್ತಾತಿಸಾರ . . . ಪರಿಹರಮಕ್ಕುಂ (ಸಕವ್ಯ . ೩೧೧). 'ಹುರಪು' ಪರಾ. Δ **ಪುಱುಕು**: ೨. ಒಗೆವಾ ಸುಯ್ವೆಂಕೆಯಿಂ ಕೋಮಳಾಧರಬಿಂಬಂ ಪುಱುಱುತೆಕೆಯ್ದಿ ಪಕ್ಷ್ಮಪುಟಮಂ ಬೆಚ್ಚಂತೆ ಕಣ್ಮುಚ್ಚೆ ತಾನಿರುತಿರ್ದಂ ನಿಜಶಯ್ಯೆಯೊಳ್ ವಿರಹದಿಂ ಭೂನಾಥ ಮಾನಧ್ವಜಂ (ಕುಸುಮಾ. ೧೦-೧೮).

**ಹುರುಬರಕು, ಹುರಬರಕು** = (ಮೇಲ್ಮೈ) ಒರಟಾಗಿರುವುದು; ನುಣುಪಾಗಿಲ್ಲದಿರುವುದು: ಗಿಡದ ತೋಟೆ ಹೊರವುಗ್ಗಲು ಹುರುಬರಕು ಇರುವುದು (ಮುಂಬಯಿ. ೪-೭೧); ಹುರುಬರಕಾದ ಕರೇಕಲ್ಲಿನ ದೊಡ್ಡ ದೊಡ್ಡ ಹಾಸಿಗೆಗಳು ಇರುತ್ತವೆ (ಮುಂಬಯಿ. ೬-೨೨೬); ಆ ಕಾಗದ ಬಹಳ ದಪ್ಪಾಗಿಯೂ ಹುರಬರಕಾಗಿಯೂ ಇರುತ್ತದೆ (ಮುಂಬಯಿ. ೧-೨೪).

**ಹುರುಗಿಲು** 'ಹುರಗಲು' ನೋ.

**ಹುರುಡಾಳಿ** (ನಾ). ಪೈಪೋಟಿಗೆ ನಿಂತವನು; ಸ್ಪರ್ಧಾಳು: ಹುರುಡಾಳಿಗಳಾದ ಅವರು ವಿಜಯಾದಿತ್ಯನನ್ನು ಪಟ್ಟದಿಂದ ತಳ್ಳಿದರು (ನಾಡೋಜ. ೩೩೧).

[ಹುರುಡು (< ಪುರುಡು) + - ಆಳಿ$_3$]

**ಹುರುಡಿಗ** 'ಪುರುಡಿಗ' ನೋ.

**ಹುರುಡಿಸು** 'ಪುರುಡಿಸು' ನೋ.

**ಹುರುಡು$_1$** 'ಪುರುಡು$_1$' ನೋ.

**ಹುರುಡು$_2$** 'ಪುರುಳ್' ನೋ.

**ಹುರುಡುಕಟ್ಟು** (ಕ್ರಿ). ಸ್ಪರ್ಧಿಸು; ಪೈಪೋಟಿ ನಡೆಸು: ಅವನು ಅರ್ಜುನನೊಡನೆ ಹುರುಡುಕಟ್ಟುತ್ತ . . . ಪಾಂಡವರನ್ನು ಧೋರಣೆಯಿಂದ ನೋಡುತ್ತಿದ್ದನು (ವಚಭಾ. ೧೮). [ಹುರುಡು$_1$ (< ಪುರುಡು$_1$) + ಕಟ್ಟು$_1$]

**ಹುರುಡುಕೆಲಸ** (ನಾ). ಪೈಪೋಟಿಯ ವರ್ತನೆ, —ನಡವಳಿಕೆ: ದೈವವೀ ದ್ರೌಪದಿಗೆ ಸೀರೆಯನೀವುದಲ್ಲದೆ ಬಿಡಿಸಲಾಪುದೆ ದೈವ ತೊತ್ತಿರ ಹುರುಡುಗೆಲಸದ ಹಿಂಡು ಗೂಟದಲಿ (ಕುವ್ಯಾಸ. ೧೭-೭). [ಹುರುಡು$_1$ (< ಪುರುಡು$_1$) + ಕೆಲಸ]

**ಹುರುಪಳಿಸು** 'ಹುರಪಳಿಸು' ನೋ.

**ಹುರುಪು$_1$** 'ಹುರಪು' ನೋ.

**ಹುರುಪು$_2$** (ನಾ). ಉತ್ಸಾಹ; ಹುಮ್ಮಸ್ಸು: ಒಂದು ತರದ ಹೊಸ ಹುರುಪು ಮೂಡುವುದು (ಅಶೋಕ. ೧೭); ಕತೆಯೊಂದನ್ನು ಓದುವ ಹುರುಪು ಬಂತು (ಆಚೋಲೀ. ೧೫೮). [ಹುರಿ$_2$ (< ಪುರಿ$_3$) + - ಪು$_1$ ./ ಮರಾ. ಹುರೂಪ್]

**ಹುರುಪುತುಂಬು** (ಕ್ರಿ). ಉತ್ಸಾಹವನ್ನುಂಟುಮಾಡು: ಅಲ್ಲಿಯ ವಾತಾವರಣ ಸಾಮಾನ್ಯವಾಗಿ ಅವನ ಶರೀರಕ್ಕೆ ಸದಾ ಹುರುಪುತುಂಬುವಂತಿದ್ದರೂ, ಅವನ ಆತ್ಮಕ್ಕೆ ಮಬ್ಬು ಕವಿಸುವಂತಿತ್ತು (ಪುನರು. ೩೩೫). [ಹುರುಪು$_2$ + ತುಂಬು$_1$]

**ಹುರುಪೆ** 'ಹುರಪು' ನೋ.

**ಹುರುಪೇರು** (ಕ್ರಿ). ಹುಮ್ಮಸ್ಸು ಹೆಚ್ಚಾಗು: ಬುದ್ಧಿಗೆ ಹುರುಪೇರಲಾರಂಭಿಸಿತು (ನಾಡೋಜ. ೩೭೪). [ಹುರುಪು$_2$ + ಏರು$_1$ (< ಏಱ್$_1$)]

**ಹುರುಮಂಜಿ** 'ಹುರಮುಂಜಿ' ನೋ.

**ಹುರುಮಂಜು** 'ಹುರಮುಂಜಿ' ನೋ.

**ಹುರುಲು** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೪೫-೮೯೦). [?]

**ಹುರುವಲ್ಲಿ** 'ಪುರುವಳ್ಳಿ' ನೋ.

**ಹುರುವಳ್ಳಿ** 'ಪುರುವಳ್ಳಿ' ನೋ.

**ಹುರುಹುರು** 'ಹುರಹುರ' ನೋ.

**ಹುರುಳ್** 'ಪುರುಳ್' ನೋ.

**ಹುರುಳಿ** 'ಪುರುವಳ್ಳಿ' ನೋ.

**ಹುರುಳಿಕಟ್ಟು** (ನಾ). ಹುರುಳಿಯ ಕಾಳನ್ನು ಬೇಯಿಸಿ ತೆಗೆದ ಸಾರ: ಬಿಸಿಯಾದ ಗಂಜಿ ಮಧ್ಯ ಬಿಸಿ ಹುರುಳಿಕಟ್ಟು . . . ನೆನಸಿದರೆ ಶಿಲೆ ವಡದು ಹೋಗುವುದು (ಸೌಗಂಧಿ. ೪೩೩-೨). [ಹುರುಳಿ (< ಪುರುವಳ್ಳಿ) + ಕಟ್ಟು$_3$]

**ಹುರುಳಿಕಾಯಿ** (ನಾ). ತರಕಾರಿಯಾಗಿ ಉಪಯೋಗವಾಗುವ ಒಂದು ಬಗೆಯ ಕಾಯಿ: ಹುರುಳಿಕಾಯಿ ಪಲ್ಯ ರುಚಿಯಾಗಿದೆ (ರೂಢಿ).

[ಹುರುಳಿ (< ಪುರುವಳ್ಳಿ) + ಕಾಯಿ$_4$ (< ಕಾಯ್$_4$)]

**ಹುರುಳು** 'ಪುರುಳ್' ನೋ.

**ಹುರುಳುಗೆಡಿಸು** 'ಪುರುಳುಗೆಡಿಸು' ನೋ.

**ಹುರುಳುಗೆಡು** 'ಪುರುಳುಗೆಡು' ನೋ.

**ಹುರುಳುಗೊಳ್ಳು** 'ಪುರುಳ್ಗೊಳ್' ನೋ.

**ಹುರುಳುತಲೆ** (ನಾ). ಸತ್ವಪೂರ್ಣವಾಗಿರುವಿಕೆ; ಧೀಮಂತಿಕೆ: ಮರುಳುತಲೆ ಹುರುಳು[ಪಾಠಾಂ. ಳ]ತಲೆ ನೀನೆ ದೇವಾ ಹೆಂಗೂಸು ಗಂಡುಗೂಸು ನೀನೇ ದೇವಾ (ಬಸವ. ೯೧೭). [ಹುರುಳು (< ಪುರುಳ್) + - ತಲೆ$_2$]

**ಹುರ್ಜೆ** 'ಪೊರಜೆ' ನೋ.

**ಹುರ್ವು** 'ಪುರ್ವು' ನೋ.

**ಹುಲಗಲಿ** 'ಪುಲಿಗಿಲ್' ನೋ.

**ಹುಲಗಿಲ್** 'ಪುಲಿಗಿಲ್' ನೋ.

**ಹುಲಗಿಲು** 'ಪುಲಿಗಿಲ್' ನೋ.

**ಹುಲಗೆಮ್ಮ, ಹುಲಿಗೆಮ್ಮ** (ನಾ). ಒಬ್ಬ ಗ್ರಾಮದೇವತೆಯ ಹೆಸರು: ತೆಲಗುಬಷ್ಟಮರು . . . ಇವರ ಕುಲದೇವತೆಗಳು ಹನುಮಂತ, ಹುಲಗೆಮ್ಮ (ಕಭಾಗ. ೧೦೭). **ಹುಲಿಗೆಮ್ಮ**: (ಜಾನಕೋ. ೫೮). [? + ಅಮ್ಮ$_2$]

**ಹುಲಬನ್ನಿ** 'ಹುಲುಬನ್ನಿ' ನೋ.

**ಹುಲವೆ** 'ಹುಲುವೆ' ನೋ.

**ಹುಲಶಿಗರಾಯ** (ನಾ). ಒಬ್ಬ ದೇವತೆಯ ಹೆಸರು: ಕಲಬುರ್ಗಿಯ ಹತ್ತರ

ಗೋಬಾರವೆಂಬಲ್ಲಿ ಇರುವ ಹುಲಶಿಗರಾಯನೆಂಬ ದೇವತೆಯು ಮೇದಾರರ ಕುಲದೇವತೆ (ಕಭಾಗ. ೧೫೫). [ಹುಲಿ$_1$ (< ಪುಲಿ) + < ಸಿಂಗ$_1$ + ರಾಯ]

**ಹುಲಸು** 'ಪುಲಿಸು' ನೋ.

**ಹುಲಹತ್ತಿ** 'ಹುಲುಹತ್ತಿ' ನೋ.

**ಹುಲಿ$_1$** 'ಪುಲಿ' ನೋ.

**ಹುಲಿ$_2$** 'ಪೊಲಿ$_2$' ನೋ.

**ಹುಲಿಕಲ್ಲು** 'ಪುಲಿಕಲ್ಲು' ನೋ.

**ಹುಲಿಗಣ್ಣು** (ನಾ). ೧. ಹುಲಿಯ ಕಣ್ಣು. ೨. (ಅಲಂ) ಹೊಳೆಯುವ ನಾಣ್ಯ: ಊಟಾ ಹಾಕಿ ಒಂದು ಹುಲಿಗಣ್ಣು (ರೂಪಾಯಿ) ಕೊಟ್ಟು ಹೊರಗೆ ಹಾಕಬೇಕಾದರೆ ಅಶ್ವಮೇಧಯಜ್ಞವನ್ನು ಮಾಡಿದಂತಾಯಿತು (ಅಪವಾ. ೬). [ಹುಲಿ$_1$ (< ಪುಲಿ) + ಕಣ್ಣು (< ಕಣ್)]

**ಹುಲಿಗರುಕೆ** (ನಾ). ಒಂದು ಬಗೆಯ ಸಸ್ಯ: "ಹುಲಿಗರುಕೆ, ಪುಲಿಮಿಸುಕುಡೆ" (ಸಸ್ಯನಿ. ೫೪). [ಹುಲಿ$_1$ (< ಪುಲಿ) + ಗರುಕೆ (< ಕಱುಂಕೆ)]

**ಹುಲಿಗಾಹು** (ನಾ). (ಅಲಂ) ಬಹಳ ಎಚ್ಚರವಾಗಿ ಮಾಡುವ ಪಹರೆ: ಏಲಯ್ಯಗಳು ಚಾಮಯ್ಯಗಳು ಕೋಟೆಯ ಹುಲಿಗಾಹು ಆ ವಿತ್ತಿಯನು ಮಾಳ್ಪ (ಎಕ. XIV, ಶ್ರೀರಂಗ. ೧೫೨-೧೫; 1189). [ಹುಲಿ$_1$ (< ಪುಲಿ) + ಕಾಹು$_1$ (< ಕಾಪು)]

**ಹುಲಿಗಿಲ್** 'ಪುಲಿಗಿಲ್' ನೋ.

**ಹುಲಿಗಿಲಿ** 'ಪುಲಿಗಿಲ್' ನೋ.

**ಹುಲಿಗಿಲು** 'ಪುಲಿಗಿಲ್' ನೋ.

**ಹುಲಿಗುಲಿ** (ನಾ). ಹುಲಿಯನ್ನು ಕೊಂದವನು: ಒಸೆದು ಕಟ್ಟಿಕ್ಕಿ ಮೇಣಾರಯ್ಯು ಹುಲಿಗುಲಿಯ ಹೆಸರತ್ತಿ ಹೊಗಳಿದರ್ (ಕಾಲೂರ : ೯೯-೧೯೯). [ಹುಲಿ$_1$ (< ಪುಲಿ) + - ಕುಲಿ$_1$]

**ಹುಲಿಗೆಮ್ಮ** 'ಹುಲಗೆಮ್ಮ' ನೋ.

**ಹುಲಿಗೆಜ್** 'ಪುಲಿಗೆಜ್' ನೋ.

**ಹುಲಿಗೋಣ** (ನಾ). ಹುಲಿಯ ತಲೆಯನ್ನು ಹೊಂದಿದ ಒಬ್ಬ ದೇವತೆ: ಚೂಣಿಯ ಹೂಣಿಗರಂ ಮಾಣದೆ ಕಾಣಿಸೆ ಹುಲಿಗೋಣನ ತೂಣನ ತೋಳಂ ತುಂಡಿಸಿ (ವೀರೇಚ. ೨-೪೩). [ಹುಲಿ$_1$ (< ಪುಲಿ) + ಗೋಣು (< ಗೋಣ್) + - ಅ$_7$]

**ಹುಲಿಗೌರಿ** (ನಾ). ಒಂದು ಬಗೆಯ ಸಸ್ಯ: (ಮೈಟಿಗಿ. ೫೩-೮೫೩). [ಹುಲಿ$_1$ (< ಪುಲಿ) + ಗೌರಿ]

**ಹುಲಿಚರ್ಮ** 'ಪುಲಿಚರ್ಮ' ನೋ.

**ಹುಲಿತೊರಡುಮರ** (ನಾ). ಒಂದು ಬಗೆಯ ಮರ: ಜೇನುಕಾತಾಳ, ಹುಲಿ ತೊರಡು ಮರ (ಮೈಟಿಗಿ. ೭೨-೧೪೭೩). [ಹುಲಿ$_1$ (< ಪುಲಿ) + ತೊರಡು$_6$ + ಮರ$_1$]

**ಹುಲಿದೇವ** (ನಾ). ಒಬ್ಬ ದೇವತೆಯ ಹೆಸರು: ಅತ್ತೇವೊಕ್ಕಲಿಗರು ಹುಲಿದೇವನನ್ನು ವಿಶೇಷವಾಗಿ ಪೂಜಿಸುವರು (ಕಭಾಗ. ೧೪೨). [ಹುಲಿ$_1$ (< ಪುಲಿ) + ದೇವ]

**ಹುಲಿದೇವರು** (ನಾ). = ಹುಲಿದೇವ: ತಾನು ಇನ್ನು ಕುಡಿಯುವುದಿಲ್ಲವೆಂದು ಹುಲಿದೇವರ ಆಣೆ ಕೂಡ ಹಾಕಿದ್ದ (ಹೊಸಕ್ಕಿ. ೬೯). [ಹುಲಿ$_1$ (< ಪುಲಿ) + ದೇವರು (< ದೇವರ್)]

**ಹುಲಿದೊಗಲು** 'ಪುಲಿದೋಲ್' ನೋ.

**ಹುಲಿದೊವಲು** 'ಪುಲಿದೋಲ್' ನೋ.

**ಹುಲಿನಖ** 'ಪುಲಿನಖ' ನೋ.

**ಹುಲಿನೀಲ** (ನಾ). ಒಂದು ಬಗೆಯ ಸಸ್ಯ: ಹುಲಿನೀಲಬೀಜಮಂ ಗಿರಿಮಲ್ಲಿಗೆ ಜೀರಿಗೆ . . . ಸಾಸುವೆ ಶುಂಠಿಯ ತತ್ಸಮಾನದಿ (ಗೋವೈದ್ಯ. ೨೦೨-೯೯). [ಹುಲಿ$_1$ (< ಪುಲಿ) + ನೀಲ]

**ಹುಲಿಬಲೆ** 'ಪುಲಿವಲೆ' ನೋ.

**ಹುಲಿಬೆಕ್ಕು** (ನಾ). ಒಂದು ಬಗೆಯ ಹುಲಿ: ಹುಲಿಜಾತಿ . . . ದೊಡ್ಡ ಇಬ್ಬ; ಹುಲಿ ಬೆಕ್ಕು, ಬೊಟ್ಟನ ಬೆಕ್ಕು (ನಮ್ಮನು. ೨೪೯). [ಹುಲಿ$_1$ (< ಪುಲಿ) + ಬೆಕ್ಕು (< ಬೆರ್ಕು)]

**ಹುಲಿಮುಖ** 'ಪುಲಿಮುಖ' ನೋ.

**ಹುಲಿಮೊಗ** 'ಪುಲಿಮೊಗ' ನೋ.

**ಹುಲಿಯುಗುರ್** 'ಪುಲಿಯುಗುರ್' ನೋ.

**ಹುಲಿಯುಗುರು** 'ಪುಲಿಯುಗುರ್' ನೋ.

**ಹುಲಿವಿರಿ** (ಕ್ರಿ). (?): ಸುರೆಯ ಭಾಂಡಕ್ಕೆ ಹುಲಿವಿರಿದ ಬೂದಿಯನಿಟ್ಟಿಸಿರಬಹುದೆ ಇಲ್ಲಿಯೆಂಬರಸಂಗೆ ಬಸವರಸನೊರೆದನದು ಸತ್ಯದ ಹರವೆಯೆನುತ್ತೆ (ರಾಘಚ. ೯-೫೭). [?]

**ಹುಲಿವಿಲಿ** 'ಪುಲುವಿಲು' ನೋ.

**ಹುಲಿವಿಲು** 'ಪುಲುವಿಲು' ನೋ.

**ಹುಲಿವೆ** 'ಹುಲುವೆ' ನೋ.

**ಹುಲಿವೇಷ** (ನಾ). ಹುಲಿಯ ಹಾಗೆ ಹಾಕಿಕೊಂಡ ವೇಷ; ℙ ಮೊಹರಂ ಹಬ್ಬದ ಕೊನೆಯ ದಿನದ ಉತ್ಸವದಂದು ಹಾಕುವ ವೇಷ: ಹುಲಿವೇಷ ಧರಿಸಿದ ಕಲಾವಿದ ತಮಟೆಯ ಗತ್ತಿಗೆ ವಿವಿಧಭಂಗಿಗಳಲ್ಲಿ ಕುಣಿಯುತ್ತಾನೆ (ಕಜಕ. ೧೮೯). [ಹುಲಿ$_1$ (< ಪುಲಿ) + ವೇಷ]

**ಹುಲಿಸು$_1$** (ಕ್ರಿ). ಹೆಚ್ಚಾಗು; ಸಮೃದ್ಧವಾಗು: ಉಪವನದಲ್ಲಿ ವೃಕ್ಷಗಳಿವೆ. ಅವು ಬೆಳೆದು ಫಲಿಸಿ ಹುಲಿಸಲು ಅವಕ್ಕೆ ಸಂಬಂಧಪಟ್ಟ ತಮ್ಮ ಸ್ವಂತನಿಯಮಗಳಿವೆ (ಜೀವಾತ್ಮ. ೨೧೩). [< ಪುಲಿಸು]

**ಹುಲಿಸು$_2$** 'ಪುಲಿಸು' ನೋ.

**ಹುಲಿಹುಣ್ಣು** (ನಾ). (ಅಲಂ) ಸುಲಭವಾಗಿ ವಾಸಿಯಾಗದ ಹುಣ್ಣು; ಮಾಯದ ಗಾಯ: ನಾಯಿಕೆಮ್ಮು . . . . ಹುಲಿಹುಣ್ಣು, ಖಾಸ್‌ಬಂಗಲೆ ಖಾಯಿಲೆಗಳೆಲ್ಲಾ ನಮ್ಮ ಮನೆಲೇನೆ (ತುಟಮಿಾ. ೨೮). [ಹುಲಿ$_1$(< ಪುಲಿ) + ಹುಣ್ಣು (< ಪುಣ್)]

**ಹುಲೀಚಲಬಳ್ಳಿ** (ನಾ). ಒಂದು ಬಗೆಯ ಸಸ್ಯ: (ಮೈಟಿಗಿ. ೬೬ - ೧೩೫೯). 'ಹುಲ್ಲು ಈಚಲ' ಪರಾ. [ಹುಲೀಚಲ$_0$ + ಬಳ್ಳಿ]

**ಹುಲೀಚೆಂಡು** (ನಾ). ಒಂದು ಬಗೆಯ ಸಸ್ಯ: ಕುಂಕುಮದ ಮರ, ಕಪಿಲಾರಂಗು, ಹುಲೀಚೆಂಡು, ಚಂದ್ರಹಿಟ್ಟು, ಊರಬತ್ತಿ, ನ್ಯಾಮತಿ (ಮೈಟಿಗಿ. ೫೨-೧೦೭೯). [?]

**ಹುಲು** 'ಪುಲ್' ನೋ.

**ಹುಲುಕೂಲಿ** (ನಾ). ಅಲ್ಪಮೊತ್ತದ ಕೂಲಿ,— ಮಜೂರಿ: ಮಂಚೆಯ ಕಬಲವದೆರೆ ಹುಲುಕೂಲಿ ಮರಗಾದ X ಕೀಱುಕುಳವೊಳಗಾದಂ (ಎಕ. IX, ಕಾನಕಾ. ೭೨-೨೯; 1277). [ಹುಲು (< ಪುಲ್) + ಕೂಲಿ$_1$]

**ಹುಲುಗಚ್ಚು** 'ಪುಲ್ಗರ್ಚು' ನೋ.

**ಹುಲುಗಲ** 'ಪುಲಿಗಿಲ್' ನೋ.

**ಹುಲುಗಲಿ** 'ಪುಲ್ಗಲಿ' ನೋ.

**ಹುಲುಗಾಣ್** (ಕ್ರಿ). ಹುಲ್ಲಿಗೆ ಸಮವಾಗಿ ಕಾಣು; ಕೀಳಾಗಿ ನೋಡು: ಬಲುಸಿರಿ ವಂತರು ಬಡವರಿಟ್ಟೊಸಗೆಯ ಹುಲುಗಾಣ್ಬರಹುದದಹುದು (ಭರಚ. ೪೩-೨೦). [ಹುಲು (< ಪುಲ್) + ಕಾಣ್]

**ಹುಲುಗಿಚ್ಚು** 'ಪುಲ್ಗಿಚ್ಚು' ನೋ.

**ಹುಲುಗಿಳಿ** (ನಾ). ಸಾಮಾನ್ಯವಾದ ಗಿಳಿ: ನರವಿಂದ್ಯದೊಳೆನ್ನ ಹುಲು [ಪಾಠಾಂ. ಲಿ, ಲ್ಲು] ಗಿಳಿಯ ಮಾಡಿ ಸಲಹುತ್ತ ಶಿವಶಿವಾ ಎಂದೋದಿಸಯ್ಯಾ (ಬಸವ. ೫೪). [ಹುಲು (< ಪುಲ್) + ಗಿಳಿ]

**ಹುಲುಗುಡಿತೆ** 'ಪುಲುಗುಡಿತೆ' ನೋ.

**ಹುಲುಗುಡಿಲು** 'ಪುಲ್ಗುಡಿಲು' ನೋ.

**ಹುಲುಗುಡಿಸಿಲು** 'ಪುಲ್ಗುಡಿಸಿಲ್' ನೋ.

**ಹುಲುಗೈದು** (ನಾ). ಸಾಮಾನ್ಯವಾದ ಆಯುಧ; ಕ್ಷುಲ್ಲಕವಾದ ಆಯುಧ: ಮೈದುನನ ಮೈಸರಸಕೀ ಹುಲುಗೈದು ಸಾಲದೆ (ಕುಪ್ಪಾಲ. ೨೨-೨೫). [ಹುಲು (< ಪುಲ್) + ಕೈದು$_1$ (< ಕೆಯ್ದು)]

**ಹುಲುಚಲವ** (ನಾ). ಒಂದು ಬಗೆಯ ಸಸ್ಯ: ಹುಲುಚಲವದ ಹಗಿನಂ ಎಕ್ಕೆಯ ಹಾಲಲ್ಲಿ ಅರೆದು ಕೊಡಲು ಪೈತ್ಯ ಹರ (ವಿಷ್ಯವಿ. ೧೯೩). [?]

**ಹುಲುನರ** (ನಾ). ಸಾಮಾನ್ಯ ಮನುಷ್ಯ; ಕ್ಷುಲ್ಲಕ; ನಾಡಾಡಿ: ಹುಲುನರರ ಸಂಸಾರವನು ಸುಡಲೆಂದಳಲಿತಖಿಳಜನ (ಜೀವಂಚ. ೫-೩); ಹುಲುನರರು ಗಣ್ಯವೆ ಕೇಳು ಭಾಷೆಯನೆಂದನಭಿಮನ್ಯು (ಕುವ್ಯಾದ್ರೋ. ೪-೫೫). [ಹುಲು (< ಪುಲ್) + ನರ$_2$]

**ಹುಲುನೊರಜು** (ನಾ). ಸೊಳ್ಳೆಯ ಜಾತಿಯ ಸಣ್ಣ ಕೀಟ, — ಅಲ್ಪವಾದ ಕೀಟ: ಹುಲುನೊರಜು ಸಾಗರದ ಸಲಿಲವನಳೆವವೊಲು ನೊಣ ಹಾಱಿ ಗಗನದ ತಲೆಗಡೆಯ ಕಾಣಿಸುವುದೆಂಬವೊಲಾಯ್ತು (ಕುವ್ಯಾಅ. ೧೪-೨೯).

[ಹುಲು (< ಪುಲ್) + ನೊರಜು$_1$ (< ನೊರಂಜು)]

**ಹುಲುಪಜ಼ಿ** (ನಾ). ಕೀಳಾದುದು; ನಿಂದ್ಯವಾದುದು; ಕ್ಷುದ್ರವಾದುದು: ಹುಲುಪಜ಼ಿಯ ದೇವಾಳಿ ತ್ರಿಪುರದ ನೆಲನ ಮೆಟ್ಟಿತು (ಕುವ್ಯಾಕ. ೭-೨೭).

**ಹುಲುಪಜ಼ಿಯತನ** = ಕ್ಷುದ್ರವಾದ ವರ್ತನೆ: ಓಡಿ ಬದುಕುವ ಹುಲುಪಜ಼ಿಯ ತನ ಹೆಮ್ಮೆಯೇ ಕ್ಷತ್ರಿಯರ ಮಕ್ಕಳಿಗೆ (ಕುವ್ಯಾದ್ರೋ. ೨-೩೮).

[ಹುಲು (< ಪುಲ್) + ಪಜ಼ಿ$_2$]

**ಹುಲುಬಡು** (ನಾ). ಸಾಮಾನ್ಯವಾದ ಸಣ್ಣ ಬಡು: ಗತಿ ಮತಿಯೆಂಬ ಇಕ್ಕೆಲದ ಸೂರಿಗೆ ನಿಶ್ಚಯವೆಂಬ ಹುಲುಬಡುವ ಹಾಕಿ (ಸಕವ.ಕ I, ೧೩೭-೫೨೦).

[ಹುಲು (< ಪುಲ್) + ಬಡ್ಡು$_2$]

**ಹುಲುಬನ್ನಿ, ಹುಲಬನ್ನಿ, ಹುಲ್ಲುಬನ್ನಿ** (ನಾ). ಹುಲ್ಲುಗಾವಲಿನ ಮೇಲೆ ಹಾಕುವ ತೆರಿಗೆ: ನಾಡ ದಳವಾರಿಕೆ ಹೊರಬಳಿ ಹುಲುಬನ್ನಿ ಬಣಜಿಗರ ಯೆತ್ತಿನ XXX (ಎಕ. XI, ಮೊಳಕಾ.೧-೧೫; 1557). **ಹುಲಬನ್ನಿ:** ಕಾಂಗ್ರೆಸ್ಸಿನ ಆದೇಶದಂತೆ ಕರನಿರಾಕರಣೆಯ ಪೂರ್ವಭಾವಿಯಾಗಿ ಹುಲಬನ್ನಿಯನ್ನು ಕೊಡಬಾರದೆಂಬ ಆಂದೋಲನವನ್ನು ಕೂಡಲೆ ಸಂಘಟಿಸುವುದು . . . ಅಗತ್ಯವೆನಿಸಿತು (ಕರವೀ. ೩೧). **ಹುಲ್ಲುಬನ್ನಿ:** ಸ್ಥಳಸುಂಕ, ಹುಲ್ಲುಬನ್ನಿ . . . ಉಪ್ಪಿನ ಮೋಳೆ, ಆಚಾರ ಕಾಣಿಕೆ ಇವೇ ಮೊದಲಾಗಿ ಸರ್ಕಾರಕ್ಕೆ ಆದಾಯದ ಬಾಬುಗಳಾಗಿದ್ದವು (ಪಾಳಗಾ. ೫೧).

[ಹುಲು (< ಪುಲ್) + ಬನ್ನಿ$_2$ (< ಬನ್ನಿ$_2$)]

**ಹುಲುಬೇಡ** (ನಾ). ಅಲ್ಪನಾದ ಶಬರ; ಕ್ಷುಲ್ಲಕನಾದ ಕಿರಾತ: ಹುಲುಬೇಡಂ ಮುರವೈರಿಯಂ . . . ಹತಮಾಡರೇ ಪಣೆಯೊಳಂ ಪೂರ್ವಾರ್ಜಿತಂ ಹಾಗಿರಲ್ (ಸೋಮೇಶ. ೩೧); ಧರಣಿಪತಿ ಹುಲುಬೇಡರನು ಸಂಹರಿಸಿ ಬಹುದಕೆ ನೀವು ಪರಿಯಂತೇಕೆ (ಜೀವಂಚ. ೭-೮). [ಹುಲು (< ಪುಲ್) + ಬೇಡ$_1$]

**ಹುಲುಮನುಜ** (ನಾ). = ಹುಲುನರ: ಅಲಸಿಕೆಯೊಳ್ಕೆನೂಱುಸಾವಿರ ನಳಿನಭವರಡಗೆಡೆವರೆಂಬಗ್ಗಳಿಕೆಯೆತ್ತಲು ಹುಲುಮನುಜ ನಾನೆತ್ತಲು (ಕುವ್ಯಾಭೀ. ೬-೩೯); ಹುಲುಮನುಜರಾದ ನಮಗೆ ಇಂಥ ಸಾಮರ್ಥ್ಯವುಂಟೆ (ನೀತಿಚಿಂ. XI, ೨೬).

[ಹುಲು (< ಪುಲ್) + ಮನುಜ]

**ಹುಲುಮನುಷ್ಯ** (ನಾ). = ಹುಲುನರ: ದೇವಾಸುರರ ಗೆಲಿದವನು ಹುಲುಮನುಷ್ಯರ ಕೈಯಲಳಿದನೆ (ಕಾಶಿರಾ. ೩೭-೨); ಇದನ್ನು ಸಹಿಸಿಕೊಂಡು ಬದುಕುವುದು ಸಾಧ್ಯವಿಲ್ಲ . . . ತಾನು ಹುಲುಮನುಷ್ಯ (ಅನಾಥ. ೧೩೧). [ಹುಲು (< ಪುಲ್) + ಮನುಷ್ಯ]

**ಹುಲುಮಾನಿಸ** 'ಪುಲ್ಮಾನಿಸ' ನೋ.

**ಹುಲುಮೀನು, ಹುಲ್ಲುಮೀನು** (ನಾ). ೧. ಚಿಕ್ಕಮೀನು; ಕ್ಷುದ್ರಮೀನು: ಮಿಗೆ ತಿಮಿಂಗಿಲನೊಡನೆ ಹುಲುಮೀನುಗಳು ಮಾಡುವುದೇನು (ಕುವ್ಯಾದ್ರೋ. ೩-೪೨). **ಹುಲ್ಲುಮೀನು:** ೨. (ಜಂಬುಹುಲ್ಲಿನಲ್ಲಿರುವ) ಒಂದು ಬಗೆಯ ಸಣ್ಣ ಮೀನು: "ನಲಮೀನಃ, ಚಿಲಿಚಿಮಃ – ೨ ಕಾರಹುಲ್ಲಿನೊಳು ತಿರುಗುವ ಮೀನಿನ ಪೆಸರುಗಳು. ಅಂದರೆ ಜಂಬುಮೀನು, ಹುಲ್ಲುಮೀನು" (ಸಿದ್ಧಾಂತಿ. ೮೨).

[ಹುಲು (< ಪುಲ್) + ಮೀನು$_2$ (< ಮೀನ್$_2$)]

**ಹುಲುಮೃಗ** 'ಪುಲ್ಮೃಗ' ನೋ.

**ಹುಲುಮೊರಡಿ, ಹುಲ್ಲುಮೊರಡಿ** (ನಾ). ಕ್ಷುದ್ರವಾದ ಗುಡ್ಡ; ಸಣ್ಣಗುಡ್ಡ: ಗಿರಿಯಲಲ್ಲದೆ ಹುಲುಮೊರಡಿಯಲ್ಲಾಡುವುದೇ ನವಿಲು (ಮಹಾದೇ. ಬ. ೧೪೯-೩೧೫); ಹುಲುಮೊರಡಿ ಸೆಣಸುವುದೆ ಸುರಾದ್ರಿಯೊಳ್ (ಕುವ್ಯಾಸ. ೯-೪೯). **ಹುಲ್ಲುಮೊರಡಿ:** ಅಯ್ಯ ಹುಲ್ಲುಮೊರಡಿಯೊಳಗೆ ಕಲ್ಪತರುವನಱಸುವರೆ (ಆದವ. ೧೩-೨೯).

[ಹುಲು (< ಪುಲ್) + ಮೊರಡಿ$_1$ (< ಮೊರಡು$_2$)]

**ಹುಲುರಕ್ಕಸ** (ನಾ). ಕ್ಷುದ್ರನಾದ ರಾಕ್ಷಸ: ಹರಗಿರಿಗೆ ಹುಲುರಕ್ಕಸರು ಮತ್ಸರಿಸುವಂತೆ (ಕುವ್ಯಾಅ. ೧೪-೫); ಕೊಲವುದೇನಚ್ಚರಿ ರಣರಂಗದೊಳು ನೀವು ಹುಲುರಕ್ಕಸರೆ (ಮೋಹತ. ೧೨-೪೨). [ಹುಲು (< ಪುಲ್) + ರಕ್ಕಸ]

**ಹುಲುವಟ್ಟೆ** 'ಪುಲ್ವಟ್ಟೆ' ನೋ.

**ಹುಲುವಿಡಿ** 'ಪುಲ್ವಿಡಿ' ನೋ.

**ಹುಲುವಿಲು** 'ಪುಲುವಿಲು' ನೋ.

**ಹುಲುವಿಲೆ** 'ಪುಲುವಿಲು' ನೋ.

**ಹುಲುವೂಟ** (ನಾ). ಸಾಮಾನ್ಯವಾದ ಊಟ: ಹಿಂದೆ ಭಕ್ತದ್ರೋಹಿಯಂ ನೀ ಕೊಂದು ಬಂದೆಯಿತ್ತಲೂಟಕೆ ಬಂದೆಯಾ ಹುಲುವೂ[ಪಾಠಾಂ. ಊ]ಟವಿನ್ನೆಹಗಿಂಪಹುದು (ಬಸವಪು. ೬೧-೧೯). [ಹುಲು (< ಪುಲ್) + ಊಟ]

**ಹುಲುವೆ, ಹುಲವೆ, ಹುಲಿವೆ** (ನಾ). ಒಂದು ಬಗೆಯ ಸಸ್ಯ: ಹೊನಾಲ್, ಹುಲುವೆ, ಹುನಗಲು (ಮೃಜಿಗಿ. ೭೪-೧೫೧೪). **ಹುಲವೆ:** ಬಿಳಿಪಾದ್ರಿ, ಹುದೆ, ಬಿಲ್ಲ, ಹುವ್ವುಲವೆ, ಹುಲವೆ (ಮೃಜಿಗಿ. ೭೨-೧೪೭೭). **ಹುಲಿವೆ:** "ಹೊನಾಲ್, ಹುಲಿವೆ, ಹುನಗಲು, ಮರವ, ಬಿಳಿಮತ್ತಿ" (ಸಸ್ಯನಿ. ೧೨೭). 'ಹುಡುವೆ' ಪರಾ. [?]

**ಹುಲುವೆಟ್ಟ, ಹುಲುವೆಟ್ಟು** (ನಾ). ಸಣ್ಣ ಬೆಟ್ಟ; ಚಿಕ್ಕ ಬೆಟ್ಟ: ಕುಲಿಶ ಪರಿಯಂ ತೇಕೆ ನೇಗಿಲ ಬಳಿಯ ಹುಲುವೆಟ್ಟಕೆ (ಕುವ್ಯಾಭೀ. ೧-೮). **ಹುಲುವೆಟ್ಟು:** ಹಾಱಿದ ಹುಲುವೆಟ್ಟುಗಳೆಣ್ದೆಸೆಯ ಮುನ್ನೂಱಿದುವೊಂದೊಂದು ಬಳಿಯ (ಮೋಹತ. ೩೭-೪೯).

[ಹುಲು (< ಪುಲ್) + ಬೆಟ್ಟ]

**ಹುಲುವೆಟ್ಟು** 'ಹುಲುವೆಟ್ಟ' ನೋ.

**ಹುಲುವೊದಱು** 'ಪುಲ್ವೊದಱು' ನೋ.

**ಹುಲುಸರವಿ** 'ಪುಲ್ಸರವಿ' ನೋ.

**ಹುಲುಸು** 'ಪುಲಿಸು' ನೋ.

**ಹುಲುಹತ್ತಿ, ಹುಲಹತ್ತಿ** (ನಾ). ಒಂದು ಬಗೆಯ ಸಸ್ಯ: "ಫಲಾದಿನೀ – ಹುಲುಹತ್ತಿ" (ಓಷಧಿ. ೧೧೪). **ಹುಲಹತ್ತಿ:** "ನದೀಕಾಮು(ಕ ?)ಖ – ಹುಲಹತ್ತಿ" (ಓಷಧಿ. ೮೪). [ಹುಲು? + ಹತ್ತಿ$_1$ (< ಪಟ್ಟಿ)]

**ಹುಲುಹೊರೆ** (ಕ್ರಿ). ಹುಲ್ಲನ್ನು ಹರಡು: ತನ್ನೊಡಲೊಳನ್ಯಾಯಶತಮಂ ಮಡಗಿಕೊಂಡು ನೆಟೆ ತೊಡೆದು ಹುಲುಹೊರೆದು [ಪಾಠಾಂ. ಹುಲಿವರೆದು] ಮುಚ್ಚಿದ ಮಡಕೆಯಂದದಿ ಹೊಱಗೆ ಮೆಱೆಯುತಿರಲು (ಸಿದ್ಧರಾ. ೮-೨).

[ಹುಲ್$_0$ (< ಪುಲ್) + ಹೊರ್$_2$ (< ಪೊರ್$_2$)]

**ಹುಲ್ಗರಿ** (ನಾ). ಹುಲ್ಲಿನ ಗರಿ; ಗರಿಕೆಯ ಎಸಳು: ಹುಲ್ಗರಿಯ ಬಳವಿಗೆಯ ಬಿಗಿದುಸಿರೊಳಾಲಿಸುತ ಮೇಲೆ ಬಾಂದಳದಾಳವಳೆಯೆ ಹವಣಿಸುತ (ಮಲೆದೇ. ೩೩-೧).

[ಹುಲ್ (< ಪುಲ್) + ಗರಿ (< ಗಱಿ)]

**ಹುಲ್ಗಾವಲುಸುಂಕ** (ನಾ). ಹುಲ್ಲುಗಾವಲಿನ ಮೇಲೆ ಹಾಕುವ ತೆರಿಗೆ; ಗೋಮಾಳದ ಮೇಲೆ ಹಾಕುವ ಸುಂಕ: (ಮೈಗೆಜ಼ಿ. IV, X, ೭೭೧).

[ಹುಲ್ಗಾವಲು$_0$ + ಸುಂಕ$_1$]

**ಹುಲ್ಗುಡಿಲು, ಹುಲುಗುಡಿಲು** (ನಾ). ಹುಲ್ಲಿನಿಂದ ಮಾಡಿದ ಗುಡಿಸಲು; ಹುಲ್ಲಿನ ಜೋಪಡಿ: ಕಣ್ಣಪ್ಪನೊಡರಿಚುವೆನೆಂಬ ಹುಲ್ಗುಡಿಲೆ ಮೋಹಂ ಶಂಭುಗಂ (ವೀಶೈಪು. ೮-೨-೨೬). **ಹುಲುಗುಡಿಲು:** ಎನ್ನಯ ಪಳ್ಳಿಗೀತನನೀಗ ಕೊಂಡೊಯ್ದು ಬೇಸಱದೆ ಹುಲುಗುಡಿಲನಿ[ಪಾಠಾಂ. ಸಲಿ]ಕ್ಕುವೆನು (ಬಸವಪು. ೧೮-೭). 'ಪುಲ್ಗುಡಿಸಿಲ್' ಪರಾ. [ಹುಲ್$_0$ (< ಪುಲ್) + ಗುಡಿಲು (< ಗುಡಿಲ್)]

**ಹುಲ್ಮೆದೆ, ಹುಲ್ಲುಮೆದೆ** (ನಾ). ಹುಲ್ಲಿನ ಒಟ್ಟಿಲು, — ರಾಶಿ: ಮೃತವಪ್ಪುದೆಂದು ಕರುವಿಗೆ ಗೋವು ಹುಲ್ಮೆದೆಯ ಜೊತೆಮಾಡುವುದೆ (ಕವಪು. ೫೦). **ಹುಲ್ಲುಮೆದೆ:** ಕಣದ ಸುತ್ತಲೂ ಹುಲ್ಲುಮೆದೆಗಳನ್ನು ಹಾಕಿದ್ದಾರೆ (ರೂಢಿ). [ಹುಲ್$_0$ (< ಪುಲ್) + ಮೆದೆ$_1$]

**ಹುಲ್ಲಡಕ** (ನಾ). ಹುಲ್ಲಿನ ಒಟ್ಟಿಲು, — ರಾಶಿ: "ತೃಣ್ಯಾ- ತೃಣಾನಾಂ ಸಂಹತಿಃ - ಹುಲ್ಲು ಪಾಮೆ, ಹುಲ್ಲುರಾಶಿ, ಹುಲ್ಲುಹೊರೆ, ಹುಲ್ಲಮೆದೆ, ಹುಲ್ಲುಮೂಟೆ, ಹುಲ್ಲಡಕ" (ಸಿದ್ಧಾಂತಿ. ೧೫೨). [ಹುಲ್ಲು (< ಪುಲ್) + ಅಡಕ$_2$]

**ಹುಲ್ಲಾಳ್** (ನಾ). ಕ್ಷುದ್ರವ್ಯಕ್ತಿ; ಅಲ್ಪನಾದವನು: ಬಲ್ಲಾಳಂದೆಸಗಿದ ಪಾಪವಶದಿಂ ಹುಲ್ಲಾಳಾದನೆಂದೆನುತ (ನೇಮಿಸಂ. ೩೪-೧೪೬). [ಹುಲ್$_0$ (< ಪುಲ್) + ಆಳ್$_3$]

**ಹುಲ್ಲಾಳೆ** (ನಾ). ಒಂದು ಬಗೆಯ ಸಸ್ಯ; ಲಾಳಿಕಡ್ಡಿ: "ವೀರಣಂ, ವೀರತರಂ -೨ ಮರಕಬ್ಬಿನ ಪೆಸರುಗಳು, ಕೆಲವರು ಲಾಳೀಕಡ್ಡಿಯೆನ್ನುವರು, ಕೆಲವರು ಹುಲ್ಲಾಳೀಕಡ್ಡಿಯೆನ್ನುವರು" (ಸಿದ್ಧಾಂತಿ. ೧೫೦). [?]

**ಹುಲ್ಲಿಱುಹೆ** (ನಾ). ಸಣ್ಣ ಇರುವೆ: ಎಲ್ಲಿ ನೋಡಿದೊಡೆ ಊರೂರ ಬಟ್ಟೆಗಳೊಳಗೆ ಹುಲ್ಲಿಱುಹೆ ನುಸುಳಲೆಡೆಯಿಲ್ಲ (ಸಿದ್ಧರಾ. ೧-೫೯).
[ಹುಲ್$_0$ (< ಪುಲ್) + ಇಱುಹೆ (< ಇಱುಂಪೆ)]

**ಹುಲ್ಲು** 'ಪುಲ್' ನೋ.

**ಹುಲ್ಲುಈಚಲ** (ನಾ). ಒಂದು ಬಗೆಯ ಸಸ್ಯ: (ಕ). 'ಹುಲೀಚಲಬಳ್ಳಿ' ಪರಾ.
[ಹುಲ್ಲು (< ಪುಲ್) + ಈಚಲ (< ಈಂಚಲ್)]

**ಹುಲ್ಲುಕಡ್ಡಿ, ಹುಲುಕಡ್ಡಿ** (ನಾ). ೧. ಹುಲ್ಲಿನ ಎಸಳು. ೨. (ಆಲಂ) ಯಃಕಶ್ಚಿತ್; ನಿಕೃಷ್ಟ: ಮಲ್ಲಯ್ಯನ ತೋರಿರೆ ತಾಯಿಗಳಿರಾ ಅವನಡಿ ಹುಲ್ಲುಕಡ್ಡಿಯಾಗಿ ಬದುಕುವೆ (ಸಿದ್ಧಪು. ೫-೨೬). **ಹುಲುಕಡ್ಡಿ:** ೧. ಸುಲಿವಂದು ಹಲ್ಲನು ಕೆರೆವಂದು ಕಿವಿಯನು ಹುಲುಕಡ್ಡಿ ಕೆಲಸಕೆ ಬರದೆ (ಇಂಚಾಪ. ೧೩೯-೮೩).
**ಹುಲ್ಲುಕಡ್ಡಿಗೆ ಬಗೆ** = (ಆಲಂ) ನಿಕೃಷ್ಟವಾಗಿ ಕಾಣು; ಕೀಳಾಗಿ ಭಾವಿಸು: ಹನುಮನು ಹುಲ್ಲುಕಡ್ಡಿಗೆ ಬಗೆಯದಿದ್ದನು ನಿಖಿಳ ಕೈದುಗಳ (ತೊರರಾ. ೫-೭-೨೦).
[ಹುಲ್ಲು (< ಪುಲ್) + ಕಡ್ಡಿ$_1$]

**ಹುಲ್ಲುಖಾಣ** (ನಾ). ದನಕರುಗಳ ಆಹಾರ; ಹುಲ್ಲು; ಮೇವು: ಕಲ್ಲನಂದಿಯ ನೆಬ್ಬಿಸುತಂ ಹು[ಪಾಠಾಂ. ಪು]ಲ್ಲುಖಾಣ[ಪಾಠಾಂ. ಕವಣ]ವನಿಕ್ಕಿ ಮೆಲಿಸಿದ ನೆಲ್ಲರಚಿಯಲು ಜೋಳವಂ ಶಿವಲಿಂಗವಂ ಮಾಡಿ (ಬಸವಪು. ೨೨-೨೬).
[ಹುಲ್ಲು (< ಪುಲ್) + ಖಾಣ]

**ಹುಲ್ಲುಗದ್ದೆ** (ನಾ). ಹುಲ್ಲು ಬೆಳೆಯುವ ಮೈದಾನ; ಗೋಮಾಳ: ಆ ಕುದುರೆಯು ಒಂದು ಹುಲ್ಲುಗದ್ದೆಯಲ್ಲಿ ಮೇಯುತ್ತ ನಿಂತಿರುವುದು ಅವನ ದೃಷ್ಟಿಗೆ ಬಿತ್ತು (ಮುಂಬಯಿ. ೪-೭೯). [ಹುಲ್ಲು (< ಪುಲ್) + ಗದ್ದೆ (< ಗಟ್ದೆ)]

**ಹುಲ್ಲುಗಬ್ಬು** 'ಪುಲ್ಗರ್ಬು' ನೋ.

**ಹುಲ್ಲುಗಾಬು** (ನಾ). ತೆನೆಯ ಕಾಳಿನ ಮೇಲಿರುವ ಹೊಟ್ಟು: ಕಾಳು ತುಳಿಸಿಯಾಯಿತು. ಹುಲ್ಲುಗಾಬು ತೆಗೆದು ತೂರಬೇಕು (ರೂಢಿ).
[ಹುಲ್ಲು (< ಪುಲ್) + ಗಾಬು]

**ಹುಲ್ಲುಗಾವಲು** (ನಾ). = ಹುಲ್ಲುಗದ್ದೆ: ದಟ್ಟವಾದ ಹಚ್ಚಹಸುರು ಹುಲ್ಲುಗಾವಲಿನ ಮೇಲೆ ಬಹು ಎತ್ತರದಲ್ಲಿ ಹಾರಾಡುತ್ತಿದ್ದ ಬಾನಾಡಿಗಳು (ಪುನರು. ೨೬೩); ಸೂರ್ಯ ಮುಳುಗುವ ಹೊತ್ತಾಗಿ ಹುಲ್ಲುಗಾವಲಿನ ಬೆಳಸೆಲ್ಲ ಹೊಂಬಣ್ಣವನ್ನು ತಳೆದಿತ್ತು (ಯೋಧಪು. ೧೮). [ಹುಲ್ಲು (< ಪುಲ್) + ಕಾವಲು (< ಕಾವಲ್$_1$)]

**ಹುಲ್ಲುಗುಂಚೆ** (ನಾ). (ವೈದಿಕಾಚಾರದಲ್ಲಿ ಬಳಸುವ) ದರ್ಭೆಕಟ್ಟು,— ಕಂತೆ: ಚಂಚಲಮನವೆ ನಿನಗೆಷ್ಟು ಪೇಳಿದರೇನು ವಂಚನೆ ಬಿಡದಲೆ ಚರಿಸುತಿಪ್ಪೆ ಹಂಚು ನೋಡಿಕೊಂಡು ಮೊಗವ ತಿರುಹಿದಂತೆ ಕಿಂಚಿತ್ತುವಾದರು ಸುಖ ಬಪ್ಪುದೇ ಸಂಚಗಾರಕೆ ಭಕುತಿ ಸಂಪಾದಿಸು ಹುಲ್ಲುಗುಂಚೆಯಿಂದಲಿ ಮೋಕ್ಷವಾಗುವುದೇ (ವಿಸಾಸು. ೨೦-೩).
[ಹುಲ್ಲು (< ಪುಲ್) + ಗುಂಚೆ$_0$ (< ಗುಚ್ಛ?)]

**ಹುಲ್ಲುಗುಡಿಸಲು** 'ಪುಲ್ಗುಡಿಸಿಲ್' ನೋ.

**ಹುಲ್ಲುಗುದ್ದೆ, ಹುಲ್ಲುಗೊದ್ದೆ** (ನಾ). ಹುಲ್ಲಿನ ರಾಶಿ; ಬಣವೆ: ಏನು ಮಾಡುತಿದ್ದ? ಹುಲ್ಲುಗುದ್ದೆಯ ಮರೆಗೆ ಆ ಹಾಳು ಕೀರ್ತನಕಾರ ಪ್ರಿಯಾಗಿಗೆ ಮಾಡಿದ್ದನ್ನು? (ಮೂರುದಾ. ೨೮೪). **ಹುಲ್ಲುಗೊದ್ದೆ:** ಮನೆಯ ಹಿಂದಿನ ಹುಲ್ಲುಗೊದ್ದೆಯ ಮರೆಯಲ್ಲಿ (ಮೂರುದಾ. ೨೮೨). [ಹುಲ್ಲು (< ಪುಲ್) + ಗುದ್ದೆ$_0$]

**ಹುಲ್ಲುಗುರು** (ನಾ). (ಕರಾ) ಮೈಮೇಲೆ ಉಂಟಾಗುವ ಸಣ್ಣಗಂಟು; ನರಹುಲಿ. [?]

**ಹುಲ್ಲುಗೊದ್ದೆ** 'ಹುಲ್ಲುಗುದ್ದೆ' ನೋ.

**ಹುಲ್ಲುಚಾಪೆ** (ನಾ). ಹುಲ್ಲಿನಿಂದ ಮಾಡಿದ ಚಾಪೆ: (ಕ).
[ಹುಲ್ಲು (< ಪುಲ್) + ಚಾಪೆ]

**ಹುಲ್ಲುಪಾಚಿ** (ನಾ). ಪಾಚಿಯ ಹುಲ್ಲು: 'ನಾನು' ಎಂಬುದರ ವಿಚಾರವಂತಿರಲಿ. ಒಂದು ಸಾಮಾನ್ಯ ಹುಲ್ಲುಪಾಚಿಯ ವಿಚಾರವನ್ನು ಕೂಡ ಸೋಮಾರಿಗಳಿಂದ ತಿಳಿಯಲು ಸಾಧ್ಯವಿಲ್ಲ (ಜೀವಾತ್ಮ. ೭). 'ಪಾಚಿಹುಲ್ಲು' ಪರಾ.
[ಹುಲ್ಲು (< ಪುಲ್) + ಪಾಚಿ (< ಪಾಪಸೆ)]

**ಹುಲ್ಲುಬಂದಿಗ** (ನಾ). ಒಂದು ಬಗೆಯ ಪಕ್ಷಿ (?): ಪಿಕ್ಕುಳಿಕ ಚೆಂಬೋತ ಗೀಜಗ ಕುಕ್ಕು ಕೋಗಿಲೆ ಕಾಮುರುಳಿ ಬೆಳ್ಳಕ್ಕಿಯೆಲಗೊಲೆ ಹುಲ್ಲುಬಂದಿ[ಪಾಠಾಂ ಹುಲ್ಲಭಂದಿ]ಗಳೆಬ್ಬ ನೀರ್ಮುಳುಕ (ಸಾಳ್ವಭಾ. ೫-೨೨). [?]

**ಹುಲ್ಲುಬಣಬೆ** 'ಹುಲ್ಲುಬಣವೆ' ನೋ.

**ಹುಲ್ಲುಬಣವೆ, ಹುಲ್ಲುಬಣಬೆ** (ನಾ). ಹುಲ್ಲಿನ ರಾಶಿ,—ಒಟ್ಟಿಲು: ಹುಲ್ಲುಬಣವೆ ಸುತ್ತ ಬೇಲಿಹಾಕುತ್ತಿದ್ದಾರೆ (ರೂಢಿ). **ಹುಲ್ಲುಬಣಬೆ:** (ಕ).
[ಹುಲ್ಲು (< ಪುಲ್) + ಬಣವೆ (< ಬಣಂಬೆ)]

**ಹುಲ್ಲುಬನ್ನಿ** 'ಹುಲುಬನ್ನಿ' ನೋ.

**ಹುಲ್ಲುಭತ್ತ** (ನಾ). ಒಂದು ಬಗೆಯ ಸಸ್ಯ: "ನೀವಾರಃ- ಹುಲ್ಲುಭತ್ತ, ನೀರುಮಂಜಿ" (ಓಷಧಿ. ೮೮). [ಹುಲ್ಲು (< ಪುಲ್) + ಭತ್ತ$_1$ (< ಬತ್ತ)]

**ಹುಲ್ಲುಮಣಿ** (ನಾ). ಒಂದು ಬಗೆಯ ಮಣಿ; ನೀಲರತ್ನ (?): ಗಿರುಗಟೆ ತೊಡಕುವಳೆ ವಂಕಿ ಕಲ್ಲಮಣಿ ಪದ್ಮಮಣಿ ಪುತ್ರಜೀವಿಯ ಹುಲ್ಲುಮಣಿ ಪಟಿಕವಣಿ ಭೂಷಣಂ (ಗುರುಚಾ. ೩-೫೦). [ಹುಲ್ಲಿ (< ಪುಲ್) + ಮಣಿ$_3$]

**ಹುಲ್ಲುಮಣೆಯ** (ನಾ). ಸಾರ್ವಜನಿಕ ಹುಲ್ಲುಗಾವಲಿನ ಅಧಿಕಾರಿ; ಗೋಮಾಳದ ಪಾಲಕ: (ಕ). [ಹುಲ್ಲು (< ಪುಲ್) + ಮಣಿಯ]

**ಹುಲ್ಲುಮನೆ** 'ಪುಲ್ವನೆ' ನೋ.

**ಹುಲ್ಲುಮಾನು** 'ಹುಲುಮಾನು' ನೋ.

**ಹುಲ್ಲುಮೆದೆ** 'ಹುಲ್ಮೆದೆ' ನೋ.

**ಹುಲ್ಲುಮೊರಡಿ** 'ಹುಲುಮೊರಡಿ' ನೋ.

**ಹುಲ್ಲುಸರಡು** (ನಾ). ಒಂದು ಬಗೆಯ ಸಸ್ಯ: "ಚೋರಕಂಡಿಕಮೆನಲು ಹುಲ್ಲುಸರಡೆನಿಸಿಕ್ಕು" (ಮಂಗರಾ. ೪೩-೪೦). [ಹುಲ್ಲು (< ಪುಲ್) + ಸರಡು ?]

**ಹುಲ್ಲುಸುಲ್ಲಿಗಿಡ** (ನಾ). ಒಂದು ಬಗೆಯ ಗಿಡ: (ಮೈಜಿಗಿ. ೪೨-೮೭).
[ಹುಲ್ಲುಸುಲ್ಲಿ$_0$ + ಗಿಡ (< ಗಿಡು)]

**ಹುಲ್ಲುಹಕ್ಕಲು** (ನಾ). ಹುಲ್ಲು ಬೆಳೆಯುವ ಮೈದಾನ; ಹುಲ್ಲುಗಾವಲು; ಗೋಮಾಳ: ಹಳ್ಳಿಪಳ್ಳಿಗಳಲ್ಲಿ ಹುಲ್ಲುಹಕ್ಕಲು ಬಳ್ಳಿಗಿಡ ಮರ ಸಿಕ್ಕಂತೆ ತಾವಾಗಿ ಹುಟ್ಟಿ ಬೆಳೆವಂತೆ (ಇಪ್ಪಕ. ೩೭೯).
[ಹುಲ್ಲು (< ಪುಲ್) + ಹಕ್ಕಲು (< ಹಕ್ಕಲ್)]

**ಹುಲ್ಲುಹಣ** (ನಾ). ಒಂದು ಬಗೆಯ ಸುಂಕ; ಹುಲ್ಲಿನ ಮೇಲೆ ಹಾಕುವ ತೆರಿಗೆ: ೧. ಮನೆದೆರಿಗೆ ೨. ಹುಲ್ಲುಹಣ . . . ೧೯. ಕೌದಿಯ ತೆರಿಗೆ - ಈ ಮೇರೆಗೆ ಹತ್ತೊಂಬತ್ತು ಬಾಬುಗಳನ್ನು ರೈತರಿಗೆ ನಿಷ್ಕರ್ಷೆಮಾಡಿಸಿ (ಮಹಾಪಾಂ. I, ೧೨೪); ಈ ವೃತ್ತಿಗೆ ಸಲುವ . . . ಹುಲ್ಲುಹಣ ಚರಾದಾಯ ಹೊರಾದಾಯ (ಹುಟ್ಟಿಹ. ೩).
[ಹುಲ್ಲು (< ಪುಲ್) + ಹಣ (< ಪಣವು$_1$)]

**ಹುಲ್ಲುಹಸಲೆ** (ನಾ). ಅಚ್ಚಹಸಿರಾದ ಹುಲ್ಲು; ಹಸಿರುಹುಲ್ಲು: ಪಾಂಡವರು ಒಂದುದಿನ ಚಿಂತಾಕ್ರಾಂತರಾಗಿ ಹುಲ್ಲುಹಸಲೆಯ ಮೇಲೆ ಕುಳಿತಿದ್ದರು (ವಚಭಾ. ೧೨೬); ಅವರೆಲ್ಲರೂ ಮನೆಯ ಮುಂದಣ ಹುಲ್ಲುಹಸಲೆಯ ಮೇಲೆ ಆಡಲು ಹೋದರು (ಪುನರು. ೫೫). [ಹುಲ್ಲು (< ಪುಲ್) + ಹಸಲೆ (< ಪಸಲೆ)]

**ಹುಲ್ಲುಹೊರೆ** 'ಪುಲ್ವೊಱೆ' ನೋ.

**ಹುಲ್ಲೆ** 'ಪುಲ್ಲೆ$_1$' ನೋ.

**ಹುಲ್ಲೆಕರು** (ನಾ). ಜಿಂಕೆಯ ಮರಿ: ಆ ಮೃಗಶಾಲೆಯಲ್ಲಿ ಹುಲಿ, ಕರಡಿ . . . ಹುಲ್ಲೆಕರು, ಕಡವೆ . . . ಮುಂತಾದ ನಾನಾಬಗೆಯ ಮೃಗಗಳಿದ್ದುವು (ಒಡಕ. ೫೫). [ಹುಲ್ಲೆ (< ಪುಲ್ಲೆ$_1$) + ಕರು$_1$ (< ಕಱು$_2$)]

**ಹುಲ್ಲೆಗಣ್** 'ಪುಲ್ಲೆಗಣ್' ನೋ.

**ಹುಲ್ಲೆಗಣ್ಣು** 'ಪುಲ್ಲೆಗಣ್' ನೋ.

**ಹುಲ್ಲೆನೆಗೆ** (ನಾ). ಜಿಂಕೆಯ ನೆಗೆತ; ಚಿಗರೆಯ ಜಿಗಿತ: ಹುಲ್ಲೆನೆಗೆ ಯೌವನವು, ಹೆಳವು ಮುಪ್ಪು (ಇಂಗೀತ. ೪-೧೧). [ಹುಲ್ಲೆ (< ಪುಲ್ಲೆ$_1$) + ನೆಗೆ$_2$]

**ಹುಲ್ಲೆಮರಿ** 'ಪುಲ್ಲೆಮಱಿ' ನೋ.

**ಹುಲ್ಲೆವಾಱು$_1$** (ಕ್ರಿ). ಜಿಂಕೆಯಂತೆ ನೆಗೆ, – ಹಾರು : ಬಿಲ್ಗಾರರು ಹುಲ್ಲೆವಾಱುವರು (ಭರಚ. ೨೩-೨೧). [ಹುಲ್ಲೆ (< ಪುಲ್ಲೆ$_1$) + ಪಾಱು$_1$]

**ಹುಲ್ಲೆವಾಱು$_2$** (ನಾ). = ಹುಲ್ಲೆನೆಗೆ: ಹುಲ್ಲೆವಾಱಾಗಿ ಸೋಪಾನವ ದಾಂಟುತ ಗೆಲ್ಲದಿಂ ಬರ್ಪನ ಕಂಡು (ಭರಚ. ೫೭-೯೦). [ಹುಲ್ಲೆ (< ಪುಲ್ಲೆ$_1$) + ಪಾಱು$_2$]

**ಹುಲ್ಲೊಕ್ಕಲ್** (ನಾ). ಕೋಲಿನಿಂದ ಬಡಿದು ಅಥವಾ ದನಗಳ ಕಾಲಿನಿಂದ ತುಳಿಸಿ ತೆನೆಯಿಂದ ಕಾಳನ್ನು ಬೇರ್ಪಡಿಸುವುದು; ಒಕ್ಕಲಿಕ್ಕುವಿಕೆ: (೬). [ಹುಲ್ಲು (< ಪುಲ್) + ಒಕ್ಕಲ್$_1$]

**ಹುವ್ವಾಡಿಗ** 'ಪೂವಡಿಗ' ನೋ.

**ಹುವ್ವು** 'ಪೂ$_2$' ನೋ.

**ಹುವ್ವುಲವೆ** (ನಾ). ಒಂದು ಬಗೆಯ ಸಸ್ಯ: ಬಿಳಿಪಾದ್ರಿ, ಹುದೆ, ಬಿಲ್ಲ, ಹುವ್ವುಲವೆ, ಹುಲವೆ (ಮೃಔಗಿ. ೭೨-೧೪೭೭). [?]

**ಹುಷಾರ್**, ಹುಷಾರಿ, ಹುಷಾರು, ಹೋಷಿಯಾರ್ (ನಾ). ೧. ಎಚ್ಚರಿಕೆ; ಜಾಗರೂಕತೆ: ಒಂದಕ್ಕೊಂದು ಕಲೆಯದಂತೆ ಪ್ರತ್ಯೇಕ ಪ್ರತ್ಯೇಕವಾಗಿ ತೆಗೆದಿಡುವುದರಲ್ಲಿ ಬಹಳ ಹುಷಾರ್ ಆಗಿರಬೇಕು (ಗ್ರಾಮೂಕ. ೫೭). ೨. ಜಾಣತನ; ಬುದ್ಧಿವಂತಿಕೆ: ಹುಸೇನಿ ಹುಷಾರ್ ಹುಡುಗನಿದ್ದಾನೆ (ರಂಗರೂ. ೨೨). **ಹುಷಾರಿ:** ೧. ಹುಷಾರಿಯಿಂದ ತಮ್ಮ ಜಾಗ್ರತೆಯಲ್ಲಿ ಇರುವದಕ್ಕೆ ಬೇಕಾಗಿ ಇದೆ (ರಾಜೇಂದ್ರ. ೬೫); ನಿನ್ನ ಹುಷಾರಿ ಮೇಲೆ ನೀನಿರಬೇಡವೆ! (ಚೆಂಗೂಲಿ. ೧೭); ಚಿಕ್ಕಪ್ಪನೇನೋ ಇಂದು ಹುಷಾರಿಯಾದಂತಿದೆ (ಮುಂಗಾಮು. ೧೨೩). **ಹುಷಾರು:** ೧. ನಿಮ್ಮ ಕುತ್ತಿಗೆ ಕೊಯ್ದುಬಿಟ್ಟಾರು, ಹುಷಾರಾಗಿರಿ ಎಂದನು (ಪರಿಣೀ. ೪೫); ನಿನ್ನ ಪುಸ್ತಕ ಹುಷಾರಾಗಿ ನೋಡಿಕೊಳ್ಳುತ್ತೇನೆ (ಶಾಲಮ. ೩೨); ಲಕ್ಕೋಟೆಯನ್ನು ಆದರದಿಂದ ಸ್ವೀಕರಿಸಿ ಹುಷಾರಾಗಿ . . . ಓದಿದರು (ಶ್ರೀರಾಯ. ೧೮೦). ೩. ಆರೋಗ್ಯ; ಸ್ವಸ್ಥವಾಗಿರುವಿಕೆ: ಅವಳ ಅಕ್ಕನ ವಿವಾಹಕ್ಕೂ ಮಂಗಳೆ ಹುಷಾರು ತಪ್ಪಿ ಬಾರದೆಹೋದುದರಿಂದ ಮಂಗಳೆಯ ಮುಖನೋಡುವ ಅವಕಾಶವೇ ಅವಳಿಗೆ ದೊರೆತಿಲಿಲ್ಲ (ಸರ್ವಮಂ. ೩೩೧); ಅಮ್ಮನಿಗೆ ಹುಷಾರಿಲ್ಲ (ನಡೆದಾ. II, ೧೧೦೪). **ಹೋಷಿಯಾರ್:** ೧. ಹೋಷಿಯಾರ್! ನೀರವದ ಇರುಳಿನಲಿ, ಆಗೊಮ್ಮೆ ಈಗೊಮ್ಮೆ ಎಚ್ಚರಿಕೆಯ ಕೂಗು . . . ಹೋಷಿಯಾರ್ (ಆತ್ಮಾರ್ಪ. ೧).
[← ಪಾರ. ಹುಶ್ಯಾರ್, ಹುಶ್ಯಾರು; ಮರಾ. ಹುಶಾರ್; ಹಿಂ. ಹೋಷಿಯಾರ್, ಹೋಷಿಯಾರಿ]

**ಹುಷಾರಿ** 'ಹುಷಾರ್' ನೋ.

**ಹುಷಾರು** 'ಹುಷಾರ್' ನೋ.

**ಹುಸಿ$_1$** 'ಪುಸಿ$_1$' ನೋ.

**ಹುಸಿ$_2$** 'ಪುಸಿ$_2$' ನೋ.

**ಹುಸಿ$_3$** (ನಾ). (ಉಕ) ಮನೆಯ ಮುಂದಿನ ಭಾಗ; ಪಡಸಾಲೆ; ಮೊಗಸಾಲೆ: ಮಾವ ಅದೇ ಊಟ ಮುಗಿಸಿ ಹೊರಗಿನ ಹುಸಿಯಲ್ಲಿ ಕುಳಿತಿದ್ದರು (ಸ್ಮೃತಿಚಿ. ೫೧); ಹೊರಗಿನ ಹುಸಿಯಲ್ಲಿ ಅಗಸರ ಸಂಗ . . . ಕುಳಿತಿದ್ದನು (ಗಂಗಾಸಾ. ೫೧). [?]

**ಹುಸಿಕ** 'ಪುಸಿಕ' ನೋ.

**ಹುಸಿಕಾಳಗ** 'ಪುಸಿಕಾಳೆಗ' ನೋ.

**ಹುಸಿಗ** 'ಪುಸಿಗ' ನೋ.

**ಹುಸಿಗಾಯಿ** (ನಾ). ಹಣ್ಣಾಗದೆ ಅಕಾಲದಲ್ಲಿ ಉದುರಿಹೋಗುವ ಕಾಯಿ; ಜೊಳ್ಳುಕಾಯಿ: ಆ ಗಿಡದಲ್ಲಿ ಹೆಚ್ಚಾಗಿ ಹುಸಿಗಾಯೇ ತುಂಬಿದೆ (ರೂಢಿ). [ಹುಸಿ$_2$ (< ಪುಸಿ$_2$) + ಕಾಯಿ$_2$ (< ಕಾಯ್$_4$)]

**ಹುಸಿಗುಂಡು** (ನಾ). ಕೇವಲ ಎಚ್ಚರಿಕೆಗಾಗಿ ಹಾರಿಸುವ ಗುಂಡು: ರಾಗಿ ಕೂಡಿಸಿ ಹುಸಿಮದ್ದು . . . ಹಾರ್ಯಾವು ಹುಸಿಗುಂಡು (ಕನ್ನಜಾ. ೧೯). [ಹುಸಿ$_2$ (< ಪುಸಿ$_2$) + ಗುಂಡು]

**ಹುಸಿಡಂಭಕ** (ನಾ). ಬೂಟಾಟಿಕೆಯವನು; ಸುಳ್ಳು ಸೋಗಿನವನು: ಇಂತಪ್ಪ ಹುಸಿಹುಂಡ ಹುಸಿಡಂಭಕ ದುರ್ಮತಿ ಬರುಕಾಯನಿಗೆ ಅಖಂಡೇಶ್ವರ ಎಂತು ಮೆಚ್ಚುವನು (ಅಖಂಡೇ. ೯೭-೧೫). [ಹುಸಿ$_2$ (< ಪುಸಿ$_2$) + ಡಂಭಕ (< ಡಂಬಕ)]

**ಹುಸಿತನ** (ನಾ). ಸುಳ್ಳುತನ; ಜೊಳ್ಳುತನ: ಜೀವಜಗದ ಕಡಲಿನಿಂದ ಮೂಡಿಬರದೆ ಹೊಸತನ ಮಣ್ಣುಗೂಡಿ ಹುಸಿತನ? (ಪಿಪಾಸೆ. ೩೩-೮). [ಹುಸಿ$_2$ (< ಪುಸಿ$_2$) + - ತನ]

**ಹುಸಿನಗು** (ನಾ). ೧. ಸುಳ್ಳುನಗೆ; ಕಪಟದ ನಗು. ೨. ಮೃದುನಗೆ; ಮಂದಹಾಸ: ಈಗ ಹುಸಿನಗು ನಕ್ಕ (ಮುಂಗಾಪು. ೭೩); ಒಲುಮೆ ಬೆರೆತ ಹುಸಿನಗುವಿನೊಂದಿಗೆ, ಪ್ರಶ್ನೆ ಕೇಳುವ ದನಿಯಲ್ಲಿ (ತುಂಗಭ. ೮೫). [ಹುಸಿ$_2$ (< ಪುಸಿ$_2$) + ನಗು$_2$]

**ಹುಸಿನಗೆ** (ನಾ). ೧. = ಹುಸಿನಗು ೧: ಸರ್ಕಾರಿ ವಕೀಲ ಅರೆಮುಚ್ಚಿದ ಕಣ್ಣುಗಳಲ್ಲಿ ಕುಯುಕ್ತಿಯ ಹುಸಿನಗೆಯನ್ನು ಪ್ರಕಟಿಸುತ್ತ ನುಡಿದನು (ಪುನರು. ೪೯). ೨. = ಹುಸಿನಗು ೨: ಹುಸಿನಗೆ ನಗುತ ಗಂಡನ ಕೂಡೆ ನುಡಿದರಾ ಹುಸಿನಡುವಿನ ಸೊಬಗೆಯರು (ಭರಚ. ४-೫೧); ರಂಗಣ್ಣನವರೂ ಒಂದು ಹುಸಿನಗೆಯನ್ನು, ತೂರಿ ಕೈಜೋಡಿಸಿದರು (ಅಪನಾ. ೧೧೨). [ಹುಸಿ$_2$ (< ಪುಸಿ$_2$) + ನಗೆ]

**ಹುಸಿನಡು** 'ಪುಸಿನಡು' ನೋ.

**ಹುಸಿನಿದ್ದೆ** 'ಪುಸಿನಿದ್ದೆ' ನೋ.

**ಹುಸಿನುಡಿ$_1$** 'ಪುಸಿನುಡಿ$_1$' ನೋ.

**ಹುಸಿನುಡಿ$_2$** 'ಪುಸಿನುಡಿ$_2$' ನೋ.

**ಹುಸಿಮಣ್ಣು** (ನಾ). ಬಿಗಿಯಾಗಿ ಕೂರದಿರುವ ಮಣ್ಣು; ಸಡಿಲವಾದ ಮಣ್ಣು: ಕೊಳಾಯಿಸಾಲುಗಳನ್ನು ಹುಸಿಮಣ್ಣಿರುವ ಇಳಿಕಲ್ಲಿನಲ್ಲಿ ಭದ್ರವಾಗಿಡಲು ೧೩ ಭದ್ರ ಕಾಂಕ್ರೀಟಿನ ದಿಮ್ಮಿಗಳನ್ನೂ . . . ಕೊಟ್ಟಿದೆ (ಶಿಲ್ಪನಾ. ೨೪೭). [ಹುಸಿ$_2$ (< ಪುಸಿ$_2$) + ಮಣ್ಣು (< ಮಣ್ಣ್)]

**ಹುಸಿಮದ್ದು** (ನಾ). ಕೇವಲ ಸದ್ದುಮಾಡುವ ಮದ್ದು; ಅಪಾಯಕಾರಿಯಲ್ಲದ ಮದ್ದು: ತಂದು ನಿಲಸ್ಯಾಳ ಸಾಲಬುರುಕಿ ಹಾಕಿಸಿ ಹೊರಗಿನ ನಗರಿ ಮ್ಯಾಲೆ ಚಾಪಹಾಕಿ ಹುಸಿಮದ್ದು ಹಾಕಿ ಫಿರಂಗಿ ಜಡಿಸಿ (ಲೋಕಗೀ. ೨೨೩). [ಹುಸಿ$_2$ (< ಪುಸಿ$_2$) + ಮದ್ದು (< ಮರ್ದು)]

**ಹುಸಿಮಸಿ** (ನಾ). ಮಿಥ್ಯೆ; ಮಾಯೆ (?): ಅಱಿದೆನೆಂಬುದಕ್ಕೆ ಕುಱುಹಿಲ್ಲದೆ ಕುಱುಹಿಂಗೆ ಅವಧಿಗೊಡಲಿಲ್ಲದೆ ಹುಸಿಮಸಿಯ ಮಣಿಮಾಡದಲ್ಲಿ ಒಱಗದೆ ಪರಿಣಾಮವೇ ಪಥ್ಯವಾಗಿ ಅಂತರಂಗಶುದ್ಧ ಪರಿಪೂರ್ಣವಾಗಿ ನಿಂದು (ಮೋಳಿಮಾ. ೧೦೦-೩೯೭). [ಹುಸಿ$_2$ (< ಪುಸಿ$_2$) + ಮಸಿ?]

**ಹುಸಿಮಾತು** 'ಪುಸಿವಾತು' ನೋ.

**ಹುಸಿಮುನಿಸು** (ನಾ). ಸುಳ್ಳುಕೋಪ; ನಟನೆಯ ಸಿಟ್ಟು: ಕಕ್ಕಿಯ ಹುಸಿಮುನಿಸಿನ ಕಾರಣ ಒಮ್ಮಿಂದೊಮ್ಮೆಗೆ ಹೊಳೆಯಲಿಲ್ಲ (ವಾತ್ಸಲ್ಯ. ೮೩); ವಯ್ಯಾರದ ಮುನಿಸನ್ನು ಪ್ರದರ್ಶಿಸಿದಳು ನನ್ನ ರಾಜ್ಞಿ. ಅದು ಹುಸಿಮುನಿಸೆಂದು ನಾನರಿಯೆನೆ ? (ರೂಪಸಂ. ೩). [ಹುಸಿ$_2$ (< ಪುಸಿ$_2$) + ಮುನಿಸು$_2$]

**ಹುಸಿಯಾಡು** 'ಪುಸಿಯಾಡು' ನೋ.

**ಹುಸಿವೇಷ** (ನಾ). ಕೃತ್ರಿಮವೇಷ; ಮಾರುವೇಷ: ಎಲ್ಲ ಬಂಧನಗಳನ್ನು ಹರಿದೊಗೆದು ಮೀರಿ ನಿಂದು ಸತ್ಯದ ಹುಸಿವೇಷವನ್ನು ಅಸತ್ಯವನ್ನು ಭೇದಿಸಿ (ಮೋಳಿಮಾ. ೭೫ ಪ್ರಸ್ತಾವನೆ); ಹುಸಿವೇಷದ ಇಂದ್ರನು 'ಬರುತ್ತೇನೆ ಸ್ವಲ್ಪ ತಾಳು' ಎಂದು ಹೇಳಿ ನೀರುನಾಯಿಯ ಹತ್ತಿರ ಬಂದನು (ಕಪಪು. ೭-೯). [ಹುಸಿ$_2$ (< ಪುಸಿ$_2$) + ವೇಷ]

**ಹುಸಿಸುತ್ತು** (ನಾ). (ಮಾತಿನ) ವ್ಯರ್ಥವಾದ ಸುತ್ತುಬಳಕೆ: ಮತ್ತಿನ ಬಿಜು

ನುಡಿಗಳ ಹುಸಿಸುತ್ತಿನೊಳೀನವಳನೀವೊಡೀವುದು ಕುಡೆವೆಂಬುತ್ತರಮನೆ ಕುಡುವುದು (ಪುಷ್ಪಪು. ೭-೫೮). [ಹುಸಿ$_2$ (< ಪುಸಿ$_2$) + ಸುತ್ತು$_2$]

**ಹುಸಿಹುಂಜಿ** (ನಾ). ಸುಳ್ಳಿನ ಕಂತೆ: ಮಂಜಿನ ಮೊತ್ತ ಮಕ್ಕಳಿಗೊಂದು ಗಿರಿಯಾಗಿ ಅಂಜಿಸುವಂತೆ ಲೋಕದೊಳು ಜಂಜಡರಿಗೆ ವಜ್ರವಾಗಿರ್ದುದಿದು ಹುಸಿಹುಂಜಿಯೈ ಕಂಡೆ ನಾನೆಂದ (ಭರಚ. ೨೯-೬೩). [ಹುಸಿ$_2$ (< ಪುಸಿ$_2$) + ಹುಂಜಿ (< ಹುಂಜ$_2$)]

**ಹುಸಿಹುಂಡ** (ನಾ). ಸುಳ್ಳು ಹೇಳುವ ದುಷ್ಟ: ಇಂತಪ್ಪ ಹುಸಿಹುಂಡ ಹುಸಿ ಡಂಭಕ ದುರ್ಮತಿ ಬರುಕಾಯನಿಗೆ ಅಖಂಡೇಶ್ವರ ಎಂತು ಮೆಚ್ಚುವನು ಎನಗೆ (ಅಖಂಡೇ. ೯೬-೧೫). [ಹುಸಿ$_2$ (< ಪುಸಿ$_2$) + ಹುಂಡ]

**ಹುಸಿಹುಯಿಲು** (ನಾ). ಸುಳ್ಳು ಗಲಾಟೆ, — ಗಲಭೆ: ತೋಳ ಬಂತಲೇ ತೋಳಬಂತು ಎಂದು ಹೆದರಿಸಿದ ಕುರುಬರ ಹುಡುಗನಂತೆ ನಾನೆಷ್ಟೋ ಸಲ ಮರಣದ ಹುಸಿ ಹುಯಿಲೆಬ್ಬಿಸಿದ್ದೆ (ನಿರಾಭ. ೧೩೬). [ಹುಸಿ$_2$ (< ಪುಸಿ$_2$) + ಹುಯಿಲು (< ಪೊಯಿಲ್)]

**ಹುಸಿಹೂ** (ನಾ). ಕಾಯಾಗದೆ ಬಿದ್ದುಹೋಗುವ ಹೂವು; ನಿಷ್ಫಲವಾಗಿ ಉದುರುವ ಹೂವು: (೬). [ಹುಸಿ$_2$ (< ಪುಸಿ$_2$) + ಹೂ$_2$ (< ಪೂ$_2$)]

**ಹುಸಿಹೆದರಿಕೆ** (ನಾ). ಸುಳ್ಳು ಬೆದರಿಕೆ; ಗೊಡ್ಡು ಬೆದರಿಕೆ: ಅವನು ಹುಸಿಹೆದರಿಕೆಗೆ ಜಗ್ಗುವಂತಿರಲಿಲ್ಲ (ರೂಢಿ). [ಹುಸಿ$_2$ (< ಪುಸಿ$_2$) + ಹೆದರಿಕೆ]

**ಹುಸಿಹೋಗು** 'ಪುಸಿವೋಗು' ನೋ.

**ಹುಸೇನಿ** (ನಾ). [ಸಂಗೀತ] ಒಂದು ರಾಗದ ಹೆಸರು: ಭೈರವಿ ವರಾಳಿ ಹುಸಾEನೇತೆನಿ ಗುಂಡಾಕ್ರೀ . . . ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹಮ್ಮಾರ. ೨-೯೦); ಹುಸೇನಿ: ೨೨ನೇ ಮೇಳಕರ್ತ ಖರಹರಪ್ರಿಯದಲ್ಲಿ ಜನ್ಯ ಪ್ರಾಚೀನ ರಕ್ತಿರಾಗ 'ರಾಗಾಂಗ-ಭಾಷಾಂಗ' ರಾಗ . . . ಕರುಣಾರಸಪ್ರಧಾನ ರಾಗ ಎಲ್ಲಾ ವೇಳೆಯಲ್ಲೂ ಹಾಡಬಹುದು (ಸಂಗೀತಂ. ೧೬೧); ಯಮುನಾ, ಕಲ್ಯಾಣಿ, ಹುಸೇನಿ . . . ಮುಂತಾದ ರಾಗಗಳು ಹಲವು ನಮ್ಮಲ್ಲಿ ನೆಲೆಗೊಂಡು ಕರ್ಣಾಟಕ ಗೌರವವನ್ನು ಪಡೆದಿರುವುದು (ಗಾನಕ. ೫೫). [← ಮರಾ. ಹುಸೇನೀ]

**ಹುಹುಧ್ವಾನ** (ನಾ). ಚಳಿಯಿಂದುಂಟಾದ ನಡುಕವನ್ನು ಸೂಚಿಸುವ ಒಂದು ಅನುಕರಣಪದ: ನಡುಕಂ ಕೈಮಿಾಱ ದಂತಚ್ಛದಮೊಡೆದು ಹುಹುಧ್ವಾನಮುಂ ಪೊಣ್ಮೆ (ರಾಜಶೇ. ೯-೨೨).

**ಹುಳ** 'ಪುಟು' ನೋ.

**ಹುಳಕ** (ನಾ). ಒಂದು ಬಗೆಯ ಹಕ್ಕಿ: 'ದೊಡ್ಡಹುಳಕ', 'ಸಣ್ಣಹುಳಕ' ಪರಾ. [?]

**ಹುಳಗ** (ನಾ). (ಕರಾ) ಅನ್ನಕ್ಕೆ ಬಡಿಸಿಕೊಳ್ಳುವ ಸಾರಿನಂಥ ಒಂದು ಪದಾರ್ಥ; ಕುದಿಲ. [?]

**ಹುಳಹಿಡಕಗಿಡ** (ನಾ). ಒಂದು ಬಗೆಯ ಗಿಡ: ಹುಳುಹಿಡಕಗಿಡ, ಕ್ರಿಮಿಬಂಧ (ಮೈಡಿಗಿ. ೩೨-೬೧೭). [ಹುಳಹಿಡಕ$_0$ + ಗಿಡ (< ಗಿಡು)]

**ಹುಳಿ$_1$** 'ಪುೞಿ' ನೋ.

**ಹುಳಿ$_2$** 'ಪುಳಿ$_3$' ನೋ.

**ಹುಳಿಆಚಲು** (ನಾ). ಒಂದು ಬಗೆಯ ಸಸ್ಯ: ಬಸವನ ಪಾದ, ಹುಳಿಆಚಲು (ಮೈಡಿಗಿ. ೧೨-೨೦೯). [ಹುಳಿ ? + ಆಚಲು]

**ಹುಳಿಇಪ್ಪೆ** (ನಾ). ಒಂದು ಬಗೆಯ ಇಪ್ಪೆಯ ಮರ: ಹುಳಿಇಪ್ಪೆ (ಮೋಹ): ತಕ್ಕಮಟ್ಟಿಗೆ ಎತ್ತರವಾಗುತ್ತದೆ. ಇದರ ಬೀಜದಿಂದ ಎಣ್ಣೆ ಹೊರಡುತ್ತದೆ. ಅದರಿಂದ ಮೇಣಬತ್ತಿಗಳಾಗಬಹುದು (ಕಥಾಗಿ. ೫೦). [ಹುಳಿ$_2$ (< ಪುಳಿ$_3$) + ಇಪ್ಪೆ$_1$ (< ಇರ್ಪೆ)]

**ಹುಳಿಓಮ** (ನಾ). ಒಂದು ಬಗೆಯ ಸಸ್ಯ: ಕಾಡುಓಮ, ಹುಳಿಓಮ (ಮೈಡಿಗಿ. ೨೦-೩೬೬). [ಹುಳಿ? + ಓಮ$_1$]

**ಹುಳಿಕುಡಿ** 'ಹುಳಿಗುಡಿ' ನೋ.

**ಹುಳಿಗ** (ನಾ). ಒಂದು ಬಗೆಯ ಔಷಧೀಸಸ್ಯ: ''ಅತ್ಯಮ್ಲ - ತನೆಲ ? ಹುಳಿಗ, ತಾಹುಳಿ'' (ಓಷಧಿ. ೩). 'ಪುಳಿಕೆ' ಪರಾ. [?]

**ಹುಳಿಗಟ್ಟು** (ಕ್ರಿ). ಹುಳಿಯಾಗು; ಕೆಡು: ಹಳಸದು ಕೊಳೆಯದು ಹುಳಿಗಟ್ಟಕೊಳ್ಳದು ಕಿಲುಬುಗಟ್ಟದು ರುಚಿಗೆಡದು (ಇಂಚಾಪ. ೨೨೨-೧೦೦); ಕೆಳಗೆ ಇಕ್ಕಟ್ಟಿಗೆ ಸಿಲುಕಿದ ಅಪಾರವಾದ ಸಸ್ಯಸಮೃದ್ಧಿಯು ಕೊಳೆತು ಹುಳಿಗಟ್ಟಿ ಸರಾಯಿಯಂತಿರುವ ಈ ಎಣ್ಣೆಯನ್ನುಂಟುಮಾಡಿತು (ಬಾಲಪ್ರ. I, ೩೫೧). [ಹುಳಿ$_2$ (< ಪುಳಿ$_3$) + ಕಟ್ಟು$_1$]

**ಹುಳಿಗಲಸು** (ಕ್ರಿ). ಹುಳಿಯನ್ನು ಬೆರಸು; ಆಮ್ಲವನ್ನು ಸೇರಿಸು: ಹುಳಿಗಲಸಿದರೆ ಕೊಡನ ಹಾಲವೊಲಳಿವುದೇ ಕ್ಷೀರಾಂಬುನಿಧಿ (ತೊರರಾ. ೩-೭-೪೧); ಕ್ಷೀರದೊಳು ಹುಳಿಗಲಸಿದಂದದಿ . . . ಪಾರಮಾರ್ಥಿಕವಪ್ಪ ಸುಖಸಾಕಾರ ಸಾಗರದೊಳಗೆ ಮಿಶ್ರಿತ ಘೋರತರ ಸಂಸಾರದುಃಖವಿದೆಂದನು (ಅಮೃತ. ೧೦-೧೬).

[ಹುಳಿ$_2$ (< ಪುಳಿ$_3$) + ಕಲಸು$_1$]

**ಹುಳಿಗಾಯ್, ಹುಳಿಗಾಯಿ** (ನಾ). ೧. ಹುಳಿರುಚಿಯಿರುವ ಕಾಯಿ. ೨. ಕಾಯಿಯು ಹಣ್ಣಾಗುವುದಕ್ಕೆ ಮುಂಚಿನ ಸ್ಥಿತಿ; ಪಾಡುಗಾಯಿ: ನನೆಮುಗುಳ್ ನನೆಕುಸುಮ ನಸುಗಾಯ್ ಕನರುಗಾಯ್ ಕಸುಗಾಯಿ ಹುಳಿಗಾಯ್ ತನಿರಸದ . . . ಘನತರದ ಸಹಕಾರ ಸಹ ಸುರವನ ಕದಂಬಕವೆಸೆದುದು (ತೊರರಾ. ೫-೩-೧೪). **ಹುಳಿಗಾಯಿ:** ೧. ಕಕ್ಕೆಯದು ಕಹಿಗಾಯಿ ಬಿಕ್ಕೆಯದು ಹುಳಿಗಾಯಿ (ಸರ್ವಜ್ಞ. ೧೬೯೬).

[ಹುಳಿ$_2$ (< ಪುಳಿ$_3$) + ಕಾಯ್$_4$]

**ಹುಳಿಗಾಯಿ** 'ಹುಳಿಗಾಯ್' ನೋ.

**ಹುಳಿಗಿಡ** (ನಾ). ಒಂದು ಬಗೆಯ ಗಿಡ: (ಮೈಡಿಗಿ. ೬೦-೧೨೦೮).

[ಹುಳಿ$_2$ (< ಪುಳಿ$_3$) + ಗಿಡ (< ಗಿಡು)]

**ಹುಳಿಗುಡಿ, 'ಹುಳಿಕುಡಿ'** (ನಾ). ಒಂದು ಬಗೆಯ ಹುಳಿಸೊಪ್ಪನ್ನು ಬಿಡುವ ಸಸ್ಯ; ಪುಳ್ಳಂಪುರುಚೆ (?): ಹುಳಿಗುಡಿ ಹೆಮ್ಮಿಟಲಿ ಬಿಳಿಯ ಗುಂಜಿಯ ಬೇರಂ ಘಳಿಲನೆ ನಸ್ಯಂಗೆಯ್ಯೆ (ಖಮದ. ೫-೬೮). **ಹುಳಿಕುಡಿ:** ''ಘೋರಾಮ್ಲಿ [ಪಾಠಾಂ. ಮ್ಲ, ವ್ಲಿ] ಹುಳಿ [ಪಾಠಾಂ. ಳು] ಕು[ಪಾಠಾಂ. ಗು]ಡಿ'' (ಮಂಗರಾ. ೪೪-೪೫).

[ಹುಳಿ$_2$ (< ಪುಳಿ$_3$) + ಕುಡಿ$_2$]

**ಹುಳಿಗೂಡು** (ಕ್ರಿ). = ಹುಳಿಗಲಸು: ಹುಳಿಗೂಡಿದ ಆಹಾರವನ್ನು ಹೆಚ್ಚಾಗಿ ತೆಗೆದುಕೊಂಡಿದ್ದರೆ . . . ವೇಗಗೂಡಿ ನಡೆವುದು (ಸಕಪ್ಪ. ೧೨).

[ಹುಳಿ$_2$ (< ಪುಳಿ$_3$) + ಕೂಡು$_1$]

**ಹುಳಿಚಕ್ಕವತ್ತ, ಹುಳಿಚಿಕ್ಕವತ್ತ** (ನಾ). ಚಕ್ಕವತ್ತದಲ್ಲಿ ಒಂದು ಬಗೆ: ''ಲಿಕುಚಂ-ಹುಳಿಚಕ್ಕವತ್ತ'' (ಓಷಧಿ. ೧೪೩). **ಹುಳಿಚಿಕ್ಕವತ್ತ:** ''ಆಮ್ಲವಾಸ್ತುಕಂ, ಹುಳಿಚಿಕ್ಕವತ್ತ'' (ಓಷಧಿ. ೧೨). [ಹುಳಿ$_2$ (< ಪುಳಿ$_3$) + ಚಕ್ಕವತ್ತ (< ಚಕ್ಕವತ್ತಿ)]

**ಹುಳಿಚಿಕ್ಕ, ಹುಳಿಚುಕ್ಕಿ, ಹುಳುಚಿಕ್ಕ** (ನಾ). ಹುಳಿಯ ಸೊಪ್ಪನ್ನು ಬಿಡುವ ಒಂದು ಬಗೆಯ ಸಸ್ಯ; ಪುಳ್ಳಂಪುರುಚೆ: ಉಪ್ಪು ಉಪ್ಪಿನಸೊಪ್ಪು, ಪುಟ್ಟಂಪುರುಳೆ, ಪುಳ್ಳಂಪುರಚಿಸೊಪ್ಪು, ಹುಳಿಚಿಕ್ಕ (ಮೈಡಿಗಿ. ೫೯-೧೧೭೭). **ಹುಳಿಚುಕ್ಕಿ:** ಕೇಸಿನದಡಿ, ಹುಳಿಚುಕ್ಕಿ, ಸೀಗೆಸೊಪ್ಪು - ಅಂದ್ರೇನು ಗೊತ್ತೆತಂತ ಆಕೆಗೆ (ಜೆಳುಮು. ೨೫೮). **ಹುಳುಚಿಕ್ಕ:** (೬). [ಹುಳಿ$_2$ (< ಪುಳಿ$_3$) + ಚಿಕ್ಕ ?]

**ಹುಳಿಚುಕ್ಕಿ** 'ಹುಳಿಚಿಕ್ಕ' ನೋ.

**ಹುಳಿಚಿಕ್ಕವತ್ತ** 'ಹುಳಿಚಕ್ಕವತ್ತ' ನೋ.

**ಹುಳಿತೇಗು** 'ಪುಳಿದೇಗು' ನೋ.

**ಹುಳಿದಾಳಲು** (ನಾ). ಹುಳಿಯಾದ ಒಂದು ವ್ಯಂಜನ, — ಪಲ್ಯ; ತಾಳಿದ: ಮೊಕಚಟ್ಟಯಾದೊಡೆ ಹುಳಿದಾಳಲುಗಳ ನಿಕರವ ಸವಿದರೇನೆಂಬೆ (ಜ್ಞಾನಚ. ೩೯-೧೨೮).

[ಹುಳಿ$_2$ (< ಪುಳಿ$_3$) + ತಾಳಲು (< ತಾಳಿಲು)]

**ಹುಳಿದಾಳಿದ** (ನಾ). = ಹುಳಿದಾಳಲು: ಹುಳಿದಾಳದ ಸಾಬು ಶಿಖರಿಣಿ ಬಹುಕೂಟದಳಿದ ನಿಂಬೆಯ ಹಣ್ಣ ಸವಿದು (ಮೋಹತ. ೩-೫೩).

[ಹುಳಿ$_2$ (< ಪುಳಿ$_3$) + ತಾಳಿದ]

**ಹುಳಿದೇಗು** 'ಪುಳಿದೇಗು' ನೋ.

**ಹುಳಿನಾಣಲು** (ನಾ). ಒಂದು ಬಗೆಯ ಸಸ್ಯ: ''ಇಕ್ಷುಕಾ - ಹುಳಿನಾಣಲು'' (ಓಷಧಿ. ೧೩). [ಹುಳಿ$_2$ (< ಪುಳಿ$_3$) + ನಾಣಲು (< ನಾನಲ್)]

**ಹುಳಿನೀರು** (ನಾ). ಹುಳಿಯಾದ ನೀರು: ಈಳಿ ನಿಂಬೆ ಮಾವು ಮಾದಲಕ್ಕೆ

ಹುಳಿನೀರನೆಱೆದವರಾರಯ್ಯ (ಮಹಾದೇ. ಬ. ೧೦-೩); ಮೆಣಸನ್ನು ಹುಳಿನೀರಿಗೆ ಬೆರಸಿ ಐದು ನಿಮಿಷ ಕುದಿಸಬೇಕು (ಅಡುಸಾ. ೧೧೦). [ಹುಳಿ$_2$ (< ಪುಳಿ$_3$) + ನೀರು (< ನೀರ್$_1$)]

**ಹುಳಿಪದಾರ್ಥ** (ನಾ). ಹುಳಿರುಚಿಯಿರುವ ತಿನಿಸು: ಅವನಿಗೆ ಹುಳಿಪದಾರ್ಥವೆಂದರೆ ಇಷ್ಟ (ರೂಢಿ). [ಹುಳಿ$_2$ (< ಪುಳಿ$_3$) + ಪದಾರ್ಥ]

**ಹುಳಿಪಲ್ಯ** (ನಾ). = ಹುಳಿದಾಳಲು: (ಕ). [ಹುಳಿ$_2$ (< ಪುಳಿ$_3$) + ಪಲ್ಯ$_1$]

**ಹುಳಿಬಸಲೆ** (ನಾ). ಹುಳಿಯಾಗಿರುವ ಬಸಲೆಸೊಪ್ಪು: ಹುಳಿಬಸಲೆ . . . ಬಿಸಿನೀರಿನಲ್ಲಿ ಪುಟವಿಕ್ಕಿ . . . ಸೇವಿಸೆ ಶ್ವಾಸಖಾಸ . . . ಮುಂತಾಗಿ ಗುಣಮಕ್ಕುಂ (ಸಕವೈ. ೨೩೫). [ಹುಳಿ$_2$ (< ಪುಳಿ$_3$) + ಬಸಲೆ$_1$]

**ಹುಳಿಬಾಳೆ** (ನಾ). ಹುಳಿರುಚಿಯ ಬಾಳೆ: ತೀವಿಹ ಸುರಸಬಾಳೆ ಹುಳಿಬಾಳೆ ಚಿಟಬಾಳೆ (ನವಮೋ. ೨೪-೪೧). [ಹುಳಿ$_2$ (< ಪುಳಿ$_3$) + ಬಾಳೆ$_1$ (< ಬಾೞೆ)]

**ಹುಳಿಬೇಲ** (ನಾ). ಒಂದು ಬಗೆಯ ಬೇಲ; ನಾಯಿಬೇಲ: "ಸ್ವಾದುಕಂಟಕಃ . . . ವ್ಯಾಘ್ರಪಾದ್ – ೫ ಹುಲುಮಾಣಿಕಮರದ ಹೆಸರು. ನಾಯಿಬೇಲ, ಹುಳಿಬೇಲ" (ಸಿದ್ಧಾಂತಿ. ೧೨೦). [ಹುಳಿ$_2$ (< ಪುಳಿ$_3$) + ಬೇಲ (< ಬೆೞಲ್)]

**ಹುಳಿಬೇಳಲಕಾಯಿ** (ನಾ). ಒಂದು ಬಗೆಯ ಬೇಳಲಕಾಯಿ: "ಆಮ್ಲಫಲಂ- ಹುಳಿಬೇಳಲಕಾಯಿ" (ಓಷಧಿ. ೧೧). [ಹುಳಿಬೇಳಲ$_0$ + ಕಾಯಿ$_4$ (< ಕಾಯ್$_4$)]

**ಹುಳಿಮಂಗರವಳ್ಳಿ** (ನಾ). ಒಂದು ಬಗೆಯ ಬಳ್ಳಿ: ಹುಳಿಮಂಗರವಳ್ಳಿ, ತಳವಾರನ ಬಳ್ಳಿ (ಮೃಔಗಿ. ೨೨-೬೯೧). [ಹುಳಿ$_2$ (< ಪುಳಿ$_3$) + ಮಂಗರವಳ್ಳಿ (< ಮಂಗುಱುವಳ್ಳಿ)]

**ಹುಳಿಮಜ್ಜಿಗೆ** (ನಾ). ೧. ಹುಳಿಯು ಹೆಚ್ಚಾಗಿರುವ ಮಜ್ಜಿಗೆ: ಅಂಬಲಿಗೆ ಹುಳಿಮಜ್ಜಿಗೆ ಸೇರಿಸಿ ಕುಡಿದರೆ ಒಳ್ಳೆಯದು (ರೂಢಿ). ೨. ಒಂದು ಬಗೆಯ ಸಸ್ಯ: "ಧಾಮನ-ಉತ್ತರಣೆ, ಹುಳಿಮಜ್ಜಿಗೆ" (ಓಷಧಿ. ೮೧). [ಹುಳಿ$_2$ (< ಪುಳಿ$_3$) + ಮಜ್ಜಿಗೆ]

**ಹುಳಿಮಧುರ** (ನಾ). ಹಿತವಾದ ಹುಳಿ: ಹೊಸ ಆಸೆ ಆಕಾಂಕ್ಷೆ ಆದರ್ಶಗಳು ನಾಲ್ಕಾರುವರ್ಷಗಳಲ್ಲಿ ತಲೆದೋರಿ ತಿಳಲಿನ ಕಸುಕನ್ನು ಮೆಲ್ಲನೆ ಹುಳಿಮಧುರ ಗೊಳಿಸತೊಡಗುತ್ತವೆ (ಗಂಮಾಯಿ. ೧೭೭). [ಹುಳಿ$_2$ (< ಪುಳಿ$_3$) + ಮಧುರ]

**ಹುಳಿಮಾದಲ** (ನಾ). ಮಾದಲದಲ್ಲಿ ಒಂದು ಬಗೆ: "ಅಧ್ರುಕೇಸರಃ- ಹುಳಿ ಮಾದಲ" (ಓಷಧಿ. ೧೨). [ಹುಳಿ$_2$ (< ಪುಳಿ$_3$) + ಮಾದಲ]

**ಹುಳಿಮಾವು** 'ಪುಳಿಮಾವು' ನೋ.

**ಹುಳಿಮೊಗ** (ನಾ). (ಆಲಂ) ಅತೃಪ್ತಿ, ಅಸಮಾಧಾನ, ಅಸಹ್ಯಭಾವನೆಗಳನ್ನು ವ್ಯಕ್ತಪಡಿಸುವ ಮುಖ: ನಾನು ಹುಳಿಮೊಗ ಮಾಡಿಕೊಂಡು . . . ಬಾಗಿಲಲ್ಲಿ ನಿಂತಿದ್ದೆ (ಸ್ಮೃತಿಚಿ. ೨೩೫). [ಹುಳಿ$_2$ (< ಪುಳಿ$_3$) + ಮೊಗ]

**ಹುಳಿಮೊಸರು** 'ಪುಳಿಮೊಸರ್' ನೋ.

**ಹುಳಿಯಂಬಳಕ** (ನಾ). ಹುಳಿಯಾದ ಅಂಬಳಕ; ಹುಳಿಮಜ್ಜಿಗೆ ಸೇರಿಸಿದ ಗಂಜಿ: (ಕ). [ಹುಳಿ$_2$ (< ಪುಳಿ$_3$) + ಅಂಬಳಕ (< ಅಂಬಕಳ)]

**ಹುಳಿಯಂಬಲಿ** (ನಾ). ಹುಳಿಯಾದ ಅಂಬಲಿ: ರೈತರು ಬೆಳಗ್ಗೆ ಹುಳಿಯಂಬಲಿ ಕುಡಿದು ದುಡಿಮೆಗೆ ಹೋಗುತ್ತಾರೆ (ರೂಢಿ). [ಹುಳಿ$_2$ (< ಪುಳಿ$_3$) + ಅಂಬಲಿ$_1$]

**ಹುಳಿಯನ್ನ** 'ಪುಳಿಯನ್ನ' ನೋ.

**ಹುಳಿಯೇರು** (ಕ್ರಿ). (ಆಲಂ) ಬಾಯಲ್ಲಿ ನೀರೂರು: ಊರಲ್ಲಿ ಅವನಿಗೆ ಮಾನವೇನು ! ಮರ್ಯಾದೆಯೇನು ! ಮಕ್ಕಳಿದ್ದರೆ ಇಂಥವರಿರಬೇಕು ಎಂದು ಬಾಯಿ ಹುಳಿಯೇರುವಂತೆ ಬಣ್ಣಿಸಿದರು (ಜಯಂತ. ೮೮). [ಹುಳಿ$_2$ (< ಪುಳಿ$_3$) + ಏರು$_1$ (< ಏಱು$_1$)]

**ಹುಳಿಸಾರು** 'ಪುಳಿಚಾಱು' ನೋ.

**ಹುಳಿಸು** (ಕ್ರಿ). ಹುಳಿಯಾಗುವಂತೆ ಮಾಡು: ಹುಳಿಸುವುದು, ಹಳಸುವುದು – ಇವುಗಳಲ್ಲಿ ಅಂತರವಿದೆ. ಪದಾರ್ಥವು ಹುಳಿಸುವುದರಿಂದ ಪಚನಕ್ಕೆ ಹಗುರಾಗುವುದು (ಗೋಗ್ರಾಸ. ೯೨). [ಹುಳಿ$_2$ (< ಪುಳಿ$_3$) + - ಸು$_2$]

**ಹುಳಿಸೆ** 'ಪುಳಿಸೆ' ನೋ.

**ಹುಳಿಸೊಡಲಿ** (ನಾ). ಒಂದು ಬಗೆಯ ಸಸ್ಯ: ಇಸುಬಿನ ಹುಣ್ಣಿಗೆ: ಹುಳಿಸೊಡಲಿಯ ತೊಪ್ಪೆಯಂ ನಿಂಬೆಯ ಹುಳಿಯಲ್ಲಿ ಅರೆದು ಪೂಸೆ ಮಾಣ್ಗುಂ (ವಿಷ್ಣವಿ. ೭೫). [ಹುಳಿ$_2$ (< ಪುಳಿ$_3$) + ಸೊಡಲಿ$_1$ (< ಸೊಡರಿ)]

**ಹುಳಿಸೊಪ್ಪು** (ನಾ). ೧. ಹುಳಿಯಾಗಿರುವ ಒಂದು ಬಗೆಯ ಸೊಪ್ಪು: ರಾಗಿರೊಟ್ಟಿಯ ಜೊತೆಗೆ ಹುಳಿಸೊಪ್ಪಿನ ಪಲ್ಯ ಬಹಳ ರುಚಿಯಾಗಿರುತ್ತದೆ (ರೂಢಿ). ೨. ಸೊಪ್ಪಿನಿಂದ ಮಾಡುವ ಒಂದು ಬಗೆಯ ಮೇಲೋಗರ: ನಮ್ಮ ಮನೆಯಲ್ಲಿ ಇವತ್ತು ಹುಳಿಸೊಪ್ಪು ಮಾಡಿದ್ದೆ (ರೂಢಿ). [ಹುಳಿ$_2$ (< ಪುಳಿ$_3$) + ಸೊಪ್ಪು$_2$]

**ಹುಳಿಸೌತೆ** (ನಾ). ಸೌತೆಯಲ್ಲಿ ಒಂದು ಬಗೆ; ಹುಳಿಯಾಗಿರುವ ಸೌತೆ: ಕಾಯಿಗಳು . . . ಹೀರೇ, ತುಪ್ಪಹೀರೆ, ಹುಳಿಸೌತೆ, ಸೌತೆ (ನಮ್ಮನು. ೨೩೭). [ಹುಳಿ$_2$ (< ಪುಳಿ$_3$) + ಸೌತೆ (< ಸವುಂತೆ)]

**ಹುಳಿಹಣ್ಣು** (ನಾ). ಹುಣಿಸೇಹಣ್ಣು: ತಿಂತ್ರಿಡೀಕಂ, ಚುಕ್ರಂ, ವೃಕ್ಷಾಮ್ಲಂ – ೩, ಮರಹುಣಿಸೇಹಣ್ಣು, ಹುಳಿಹಣ್ಣು (ಸಿದ್ಧಾಂತಿ. ೨೮೪). [ಹುಳಿ$_2$ (< ಪುಳಿ$_3$) + ಹಣ್ಣು$_2$ (< ಪಣ್$_3$)]

**ಹುಳಿಹತ್ತಿ** (ನಾ). ಒಂದು ಬಗೆಯ ಹತ್ತಿ: "ಚಿಲ್ಮಕಾರ್ಪಾಸೀ – ಹುಳಿಹತ್ತಿ" (ಓಷಧಿ. ೬೨). [ಹುಳಿ? + ಹತ್ತಿ (< ಪಟ್ಟಿ)]

**ಹುಳಿಹಬ್ಬೆ** (ನಾ). ಒಂದು ಬಗೆಯ ಸಸ್ಯ: "ಸಹಸ್ರವೇಧಿ, ಚುಕ್ರ, ಆಮ್ಲವೇತಸ – ಹುಳಿಹಬ್ಬೆ" (ನಾಚಿರಾ. ೬); [ಹುಳಿ$_2$ (< ಪುಳಿ$_3$) + ಹಬ್ಬೆ$_1$]

**ಹುಳಿಹರುಹೆ** (ನಾ). ಒಂದು ಬಗೆಯ ಸಸ್ಯ : "ಕಪಿಕಚ್ಛೂ – ನಸುಗುನ್ನಿ, ಹುಳಿಹರುಹೆ" (ಓಷಧಿ. ೨೫). [ಹುಳಿ$_2$ (< ಪುಳಿ$_3$) + ಹರುಹೆ (< ಪಱುಹೆ)]

**ಹುಳಿಹಿಂಡು** (ಕ್ರಿ). ೧. ಹುಳಿಯನ್ನು ಹಿಂಡು: ಹುಳಿಹಿಂಡಿ ಚೊಟ್ಟೆಯನ್ನು ಎಸೆಯಬೇಡ (ರೂಢಿ). ೨. (ಆಲಂ) ಕೆಡಿಸು; ಹಾಳುಮಾಡು: ತಿಳಿದೂ ತಿಳಿದೂ ಅಪ್ಪಟ ಹಾಲಿನಂತಿರೋ ಕನ್ನಡಕ್ಕೆ ಹುಳಿಹಿಂಡ್ತೀರಿ (ಕಂಕಕೂ. ೧೧). [ಹುಳಿ$_2$ (< ಪುಳಿ$_3$) + ಹಿಂಡು$_1$ (< ಪಿಂಡು$_1$)]

**ಹುಳಿಹೀರೆ** 'ಪುಳಿಹೀರೆ' ನೋ.

**ಹುಳಿಹುಣಿಚೆ** 'ಪುಳ್ಳುಂಪುಣಿಸೆ' ನೋ.

**ಹುಳಿಹೊದ್ದು** (ಕ್ರಿ). (ಆಲಂ) ಕಲುಷಿತಗೊಳ್ಳು: ನಿನ್ನಯ ಹುಳಿಹೊದ್ದ ದಿನಿವಾತುಗಳ ಗಳಿಲನೆ ಬಂದು ಕರ್ಣವ ಹೊಕ್ಕು ಮನವನಿರ್ಕುಳಿಗೊಳ್ಳಲುಸಿರು (ಮೋಹತ. ೨೪-೧). [ಹುಳಿ$_2$ (< ಪುಳಿ$_3$) + ಹೊದ್ದು$_1$ (< ಪೊರ್ದು)]

**ಹುಳು** 'ಪುೞು' ನೋ.

**ಹುಳುಕ** 'ಪುೞುಕ' ನೋ.

**ಹುಳುಕಡ್ಡಿ** (ನಾ). ಒಂದು ಬಗೆಯ ಚರ್ಮರೋಗ: ಶಶಂಕ್ತ ಚಿಗುರ ನಿಂಬೇಹುಳಿಯಲ್ಲಿ ಅರೆದು . . . ತೊಡೆಯೆ ಹುಳುಕಡ್ಡಿ ಮಾಣ್ಗುಂ (ವಿಷ್ಣವಿ. ೭೦). [ಹುಳು (< ಪುೞು) + ಕಡ್ಡಿ]

**ಹುಳುಕು** 'ಪುೞುಕು' ನೋ.

**ಹುಳುಕುಡಿ** (ನಾ). ಒಂದು ಬಗೆಯ ಹುಳಿಸಸ್ಯ: ನೀರುಹಾಕದೆ ಕಡೆದ ಮಜ್ಜಿಗೆಯಲ್ಲಿ ಎಂಟನೆಯ ಒಂದಂಶದಷ್ಟು ಹುಳುಕುಡಿಯ ಚೂರ್ಣವನ್ನು ಹಾಕಿ ಒದ್ದೆಯಾದ ಮರಳಿನಲ್ಲಿ ಹೂತಿಟ್ಟರೆ . . . ಮೊಸರಾಗುವುದು (ಭೀಮಸೂ. ೭ ಅಡಿಟ). 'ಹುಳಿಗುಡಿ', 'ಹುೞಿಗುಡಿ' ಪರಾ. [ಹುಳು? + ಕುಡಿ?]

**ಹುಳುಕುನೀತಿ** (ನಾ). ಕೆಟ್ಟನೀತಿ; ಕುತಂತ್ರ: ಹುಳುಕುನೀತಿಗಳಾ ಕೌರವೇಂದ್ರನು ಕಳಿಂಗನನೊಲಿದು ಕೇಳುವ (ಸಂಭಪ. ೧೭-೬೪). [ಹುಳುಕು (< ಪುೞುಕು) + ನೀತಿ]

**ಹುಳುಕುಬುದ್ಧಿ** (ನಾ). ಕೆಟ್ಟಬುದ್ಧಿ; ದುರ್ಬುದ್ಧಿ: ಕರ್ಣನ ಹುಳುಕುಬುದ್ಧಿಯ ಕೇಳಿ ನಿನ್ನಯ ಕುಲವನದ್ದದಿರು (ಕುವ್ಯಾವಿ. ಓ೧೪. ೫-೧೨). [ಹುಳುಕು (< ಪುೞುಕು) + ಬುದ್ಧಿ]

**ಹುಳುಕುಮತ** (ನಾ). ಕೆಟ್ಟ ಅಭಿಪ್ರಾಯ; ಕುಮತ: ಬಳಿಕ ಕೌರವನಾ ಕಳಿಂಗನ ಹುಳುಕುಮತವನು ಮನದಲಿಕ್ಕಿಯೆ (ಸಂಭಪ. ೧೭-೧೭). [ಹುಳುಕು (< ಪುೞುಕು) + ಮತ]

**ಹುಳುಕುವಾಲೆ** (ನಾ). ಹುಳು ತಿಂದಿರುವ ಓಲೆಗರಿ: ಎನಿತಿನ್ನುಮೆನ್ನ ಬಾಳ್ವೆಯ ಹುಳುಕುವಾಲೆ ಮಗಚುವುದೂ ನಾನರಿಯೆ – ಬರೆದವನೆ ಬಲ್ಲ (ಗಿಳಿವಿಂ. ೫೯-೧). [ಹುಳುಕು (< ಪುೞುಕು) + ವಾಲೆ]

**ಹುಳುಕುಹಲ್ಲು** (ನಾ). ಕ್ರಿಮಿ ತಿಂದಿರುವ ಹಲ್ಲು; ಹುಳುಕಾದ ದಂತ: ಓರ್ಮೆ ನೋಡಲು ಹುಳುಕುಹಲ್ಲಾತನಾರೆನಲು (ವೀಶೈಪು. ೪-೨೨-೩೫).

[ಹುಳುಕು (< ಪುೞುಕು) ಹಲ್ಲು (< ಪಲ್)]

**ಹುಳುಗಣ್ಣು** (ನಾ). ಒಂದು ಬಗೆಯ ಕಣ್ಣಿನ ರೋಗ; ಕಣ್ಣಿನಲ್ಲಿ ಹುಳುಗಳು ಉಂಟಾದ ಕಣ್ಣು: ನೀರುಗಣ್ಣು, ಜಾರುಗಣ್ಣು, ಕೊಳೆಗಣ್ಣು, ಹುಳುಗಣ್ಣು (ಶುಕಸ. ೩೨೮). [ಹುಳು (< ಪುೞು) + ಕಣ್ಣು (< ಕಣ್)]

**ಹುಳುಗಲಗುಹುಲ್ಲು** (ನಾ). ಒಂದು ಬಗೆಯ ಸಸ್ಯ: (ಕಿ).

[ಹುಳುಗಲಗು$_0$ + ಹುಲ್ಲು (< ಪುಲ್)]

**ಹುಳುಗಿಲುಹುಲ್ಲು** (ನಾ). ಒಂದು ಬಗೆಯ ಸಸ್ಯ: ಲಾಳದ ಕಡ್ಡಿ, ಹುಳುಗಿಲು ಹುಲ್ಲು (ಮೈಔಗಿ. ೧೦-೧೬೪). 'ಪುಲಿಗಿಲ್' ಪರಾ. [ಹುಳುಗಿಲು$_0$ + ಹುಲ್ಲು (< ಪುಲ್)]

**ಹುಳುಗೊಂಡ** 'ಪುಳುಗೊಂಡ' ನೋ.

**ಹುಳುಚಿಕ್ಕ** 'ಹುಳಿಚಿಕ್ಕ' ನೋ.

**ಹುಳುಬಾಳು** (ನಾ). ಕ್ರಿಮಿಯ ಬದುಕು; ಕೀಳುಜೀವನ: ಮಣ್‌ಬದುಕಿನ ಹುಳುಬಾಳಿಗೆ ಸಂಕಟವನು ತಂದಿಕ್ಕಿ (ಅನಿಕೇ. ೪೬-೭).

[ಹುಳು (< ಪುೞು) + ಬಾಳ್$_2$ (< ಬಾೞ್$_3$)]

**ಹುಳುಹುಳು** (ನಾ). (ಅಸಮಾಧಾನ, ಭಯ, ಸಂಶಯ ಮೊದಲಾದುವನ್ನು ಸೂಚಿಸುವ) ಒಂದು ಅನುಕರಣಪದ: ದಾರಿಯಲ್ಲಿ ಹುಳುಹುಳು ಇವನ ಮುಖ ನೋಡಿದವರೆಲ್ಲ ಇವನ ಶತ್ರುಗಳೇ (ಗಂಮಾಯಿ. ೭೨); ಕಳ್ಳರ ಜೀವ ಹುಳುಹುಳು ಅನ್ನುವದಂತೆ. ಈಗ ನನಗೆ ತಿಳಿಯುತ್ತಿದೆ (ಭೂಮಿತಾ. ೭೯). [?]

**ಹುಳ್ಳಗೆ** (ಅ). ಸಪ್ಪಗೆ; ಪೆಚ್ಚಾಗಿ: ಅವರು ಆಗಾಗ ನನ್ನ ಕಡೆ ನೋಡಿ ಮುಖವನ್ನು ಹುಳ್ಳಗೆ ಮಾಡಿಕೊಳ್ಳುತ್ತಿದ್ದರು (ಗಲಿಪ್ರ. ೭೭).

**ಹುಳ್ಳುಳ್ಳಗೆ** (ದ್ವಿರುಕ್ತಿ): ಕಳ್ಳರನ್ನು ಹುಳ್ಳುಳ್ಳಗೆ ಮಾಡುವ ಸದ್ದೈವ (ನಿರಾಭ. ೧೫೬).

[? + - ಅಗೆ$_3$]

**ಹುಳ್ಳನೆ** (ಅ). = ಹುಳ್ಳಗೆ: ಹುಳ್ಳನೆ ಮನದೊಳು ಸುಳ್ಳನೆ ನೆನೆಯುವ (ಚಂದ್ರವೀ. ೧೩೫-೪೦). [? + - ಅನೆ$_1$]

**ಹುಳ್ಳಿ** 'ಪುಳ್ಳಿ' ನೋ.

**ಹುಳ್ಳಿ** 'ಹುಳ್ಳಿ' ನೋ.

**ಹುೞಿಗುಟ್ಟು** (ಕ್ರಿ). (?): ಕಱಿಗಟ್ಟಿದ ಬಿಱುಗೋಪದ ಮಱಹಿಂದಂ ಮುಂದಱಿಯದೆ ಪೊಱಮಟ್ಟೆನೆನುತ್ತಂ ತನ್ನಂ ತಾಂ ಹುೞಿಗುಟ್ಟಿಕೊಳುತ್ತಂ ಪೆಱರ ಧನಿಯಾದರೆ. ಕರೆಯರಲಾ ಎಂದೆನುತ (ವೀರೇಚ. ೧-೨೪). [ಹುೞಿ ? + ಕುಟ್ಟು$_1$]

**ಹುಜ್ಜೆನ್** (ಕ್ರಿ). ಹುರ್ ಎಂದು ಶಬ್ದಮಾಡು: ಪುರ್ಬಿಂಕ್ಕಿ ಪಲ್ಗಿಱಿದು ಹುಜ್ಜೆಂದು ಕಿರಾತಕಾಂತೆಯರಂ ಮಿಗೆ ನಗಿಸುತಿರ್ಪ ಮರ್ಕಟಪ್ರಕರದಿಂ (ಗಿರಿಕ. ೧-೧೨೮ ವ). 'ಹುರ್' ಪರಾ. [ಹುಜ್$_0$ + ಎನ್$_1$]

**ಹುೞಿ** 'ಪುೞಿ' ನೋ.

**ಹುೞಿಗುಡಿ** (ನಾ). ಒಂದು ಬಗೆಯ ಸಸ್ಯ: ಕೞಿಯಿಂದರೆದಿರದೀಂಟಿಸೆ ಹುೞಿಗುಡಿ ಹೆಮ್ಮಿಟಲಿ ಬಿಳಿಯ ಗುಂಜಿಯ ಬೇರಂ . . . ಪೂಸೆ ಫಣಿವಿಷಮೞಿಗುಂ (ಖಮದ. ೫-೬೮). 'ಹುಳಿಗುಡಿ', 'ಹುಳುಕುಡಿ' ಪರಾ. [?]

**ಹುೞು** 'ಪುೞು' ನೋ.

**ಹೂ$_1$** 'ಪೂ$_1$' ನೋ.

**ಹೂ$_2$** 'ಪೂ$_2$' ನೋ.

**ಹೂ$_3$** (ಅ). ಒಪ್ಪಿಗೆ, ಸಮ್ಮತಿ ಮೊದಲಾದ ಭಾವಗಳನ್ನು ಸೂಚಿಸಲು ಬಳಸುವ ಪದ: ಕೇಶವಂ ರಂಜಿಸಿ ಚಕ್ರವ್ಯೂಹವೃತ್ತಾಂತಮನೊಱೆಯಲಾ ಕಾಂತೆ ಕೇಳುತ್ತೆ ನಿದ್ರಾವಶದಿಂ ಕಣ್ಮುಚ್ಚೆ ಚಿತ್ತಂ ಮಱೆದಿರಲಱಿದಾ ಪೊಟ್ಟೆಯೊಳ್ಳೂಸು ಹೂವೆಂದುಸಿರಲ್ಕಾಶಂಕೆಗೊಂಡೀ ಸುದತಿಯುದರದೊಳ್ಪುಟ್ಟುಗುಂ ದೈತ್ಯನೆಂದು (ಧರ್ಮಪ. ೭-೧೬); ಊಟ ಅಂದರೆ ಹೂ, ಓಟ ಎಂದರೆ ಊಹೂ (ಗಾದ). ℙ ಉಚ್ಚಾರದಲ್ಲಿ ಈ ಅವ್ಯಯ ಸಾನುಸ್ವಾರವಾಗಿರುವುದು ಸ್ವಾಭಾವಿಕ.

**ಹೂಅಗಿಲು** (ನಾ). ಶ್ರೀಗಂಧದ ಗುಂಪಿಗೆ ಸೇರಿದ, ಹಳದಿಬಣ್ಣದ ಒಂದು ಬಗೆಯ ಸುವಾಸನೆಯ ಅಗಿಲುಮರ ಮತ್ತು ಅದರಿಂದ ತಯಾರಿಸಿದ ಸುಗಂಧದ್ರವ್ಯ; ಜಾಪಕ: "ಜಾಪಕಂ, ಕಾಲೇಯಕಂ, ತಾನುಶಯ್ಯ - ಈ ೩ ಕಪ್ಪಾಗಿ ಹೂಅಗಿಲು ಕಲ್ಲುಹೂವಿನ ಧೂಪವೆಂಮೂ ಎಂಬರು" (ನಾಚಿರಾ. ೧೨೪).

[ಹೂ + ಅಗಿಲು (< ಅಗಿಲ್)]

**ಹೂಂ** (ಅ). = ಹೂ$_3$: ನಿಮ್ಮ ಮಗಳಿಗೆ ನೀವು ಬಂಗಾರ ಹಾಕಿರಿ, ಬಿಡಿರಿ, ಸಾವಿರ ರೂಪಾಯಿ ವರದಕ್ಷಿಣೆಗೆ ಹೂಂ ಅನ್ನಿರಿ (ಬಟ್ಟಹೊ. ೪೭). [ಸಂ.]

**ಹೂಂಕರಣೆ** (ನಾ). ಕೋಪದಿಂದ ಮಾಡುವ ಧ್ವನಿ; ಹೂಂಕಾರ: ಕರುಣರಸದಲಿ ನನೆದು ನಗೆಯಂಕುರಿಸಲಾಜ್ಞಾಹಸ್ತದಲಿ ಶಂಕರನ ಹೂಂಕರಣೆಯಲಿ ತಳಿತುರಿ ತಗ್ಗಿತಲ್ಲಲ್ಲಿ (ಕುವ್ಯಾಕ. ೭-೪೬). [ಸಂ. ಹೂಂಕರಣ]

**ಹೂಂಕರಿತ** (ನಾ). (ಕುದುರೆಗಳ) ಕೂಗು; ಕೆನೆತ: ಇಬ್ಬರೂ ಹುರುಳಿಯನ್ನು ಆರಿಸಿ ಒಳಕ್ಕೆ ತಂದು ಎರಡು ಕುದುರೆಗಳಿಗೂ ಕೊಟ್ಟೆವು. ಅವುಗಳ ಹೂಂಕರಿತವು ನಿಂತಿತು (ಚಂಗಾಳ್ವ. ೧೦೫). [< ಸಂ. ಹೂಂಕೃತ]

**ಹೂಂಕರಿಸು** (ಕ್ರಿ). 'ಹೂಂ' ಎಂದು ರೋಷದಿಂದ ಕೂಗು; ಅಬ್ಬರಿಸು: ಆ ರಾಜಸುತಂ ಪಸಿದೆಂ ನೀರಡಸಿದೆನೆನಗಿವಲ್ಲದಲ್ಲಲ್ತೆನ್ನಂ . . . ಹೂಂಕರಿಸಂ ನಿರ್ವಿನಿಸಂ ಜೀಂಕರಿಸಂ (ಅಜಿಪು. ೫-೯೭); ತಿರುಹಿ ವಾಘೆಯ ಹಿಡಿದು ಹರಿ ಹೂಂಕರಿಸಿ ಬಿಟ್ಟನು ರಥವನು (ಕುವ್ಯಾಕ. ೧೪-೧೩); ಆ ನುಡಿಗೆ ಶತ್ರುಘ್ನನಿನಿಸುಂ ಖತಿಗೊಂಡು . . . ತಾನೈದು ಕೂರ್ಗಣೆಗಳಿಂ ತೇರಂ ಬಿಲ್ಲ ಸಾರಿಯಂ ತುಂಡಿಸಿ ಹೂಂಕರಿಸಿದಂ (ರಾಮಾಶ್ವ. ೧೫೪-೨೮). 'ಹುಂಕರಿಸು' ಪರಾ. [ಹೂಂಕರಣ$_0$ + - ಇಸು$_3$]

**ಹೂಂಕಾರ** (ನಾ). ಕೋಪದಿಂದ ಮಾಡುವ ಧ್ವನಿ; ರೋಷದಿಂದ ಮಾಡುವ ಗರ್ಜನೆ; ಆರ್ಭಟೆ: ಹೂಂಕಾರಪೂರ್ವಕಂ ಕಣ್ಣಿಂ ಕೆಚ್ಚನೆಗೆಯ್ದು ದೆಸೆಗಳಂ ನೋಟ್ಟಳ್ (ಪಂರಾಮಾ. ೧೦-೧೪೨); ಒಂದೊಂದು ಮಾತನ್ನಾಡಿಯೇ, ಒಂದೊಂದು ಠೇಂಕಾರ ಹೂಂಕಾರಗಳಿಂದಲೇ ಉಗ್ರಕದನಕ್ಕೆ ಬೇಕಾದ ವಾತಾವರಣವನ್ನೂ ಹುಟ್ಟಿಸಬಹುದು (ಯಕ್ಷಬ. ೧೨೪). 'ಹುಂಕಾರ' ಪರಾ. [ಸಂ.]

**ಹೂಂಕಾರಂಗೆಯ್** (ಕ್ರಿ). (ರೋಷದಿಂದ) ಆರ್ಭಟಿಸು; ಗರ್ಜಿಸು; ಹೂಂಕರಿಸು: ಪುಲಿ . . . ಇನ್ನಾನಾನೊಡಂ ಸರಂದೋಱಿ ನರಿಯಂ ಬರಿಸಿ ತಿಂಬೆನೆಂಬಱಿವಗೆಯುಂ ಬೇಡರಂತೆ ಬಗೆದು ಹೂಂಕಾರಂಗೆಯ್ವುದುಂ (ಪಂಚತಂ. ೩೮-೧೮).

[ಹೂಂಕಾರ + ಕೆಯ್$_1$]

**ಹೂಂಕೃತ** (ನಾ). ಹೂಂ ಎಂದು ಮಾಡುವ ಶಬ್ದ; ಹೂಂಕಾರ: ಗಣಬದ್ಧಾಮರ ಹೂಂಕೃತಂ ಜಯಕುಮಾರೋನ್ಮುಚ್ಯಮಾನೋಗ್ರಮಾರ್ಗಣಮಾ ವೀರನಿನಾದ ಸಿಂಹ ನಿನದಂ ತಮ್ಮಂ ಪಳಂಚಲ್ಕೆ (ಆದಿಪು. ೧೩-೭೭); ಸೀತ್ಕೃತಂ ಹೂಂ[ಪಾಠಾಂ. ಘೂ] ಕೃತಂ . . . ಶ್ವಸಿತಮುರುರಾತ್ಕೃತಂ ಎನಿಪೀ ಚಮತ್ಕೃತಿಯನಱಿದು ರಮಿಸುವನೆ ಚದುರಂ (ಜನವ. ೮-೫೦); ಸಮರತಸೌಖ್ಯದೊಳ್ ಸತಿ ದಿಗಂಬರವೇಷಮನಾಂತು ಮುಕ್ತಕೇಶಮ ದೆಸೆಯಲ್ಕೆ . . . ಹೂಂಕೃತಪ್ರಣವಮೊಪ್ಪೆ ಶರೀರಮನೊಕ್ಕು ತನ್ನನೋರಮಣನ ಹೃನ್ನಿಧಾನಮನುಪಾರ್ಜಿಪ ಯೋಗಿನಿಯಂತಿರೊಪ್ಪಿದಳ್ (ಕಾವ್ಯಸಾ. ೬೬೫). [ಸಂ.]

**ಹೂಂಕೃತಿ** (ನಾ). ಕೋಪದಿಂದ ಕೂಗಿ ಮಾಡುವ ಧ್ವನಿ; ಹೂಂಕಾರ; ಆರ್ಭಟೆ: ಉರಿ ಛಡಾಳಿಸಿ ಹೂಂಕೃತಿ[ಪಾಠಾಂ. ಪೂತ್ಕೃತಿ]ಯ ಪಂಜರದೊಳಗೆ ಪಲ್ಲವಿಸಿತುಬ್ಬಿದ ಹೊರಳಿ ಹೊಗೆಯಂಬರವ ತುಂಬಿತು (ಕುವ್ಯಾಕ. ೨೫-೬); ಸಭದೊಳ್ ಇಳೆಯೊಳ್ ಸಿಡಿಲ್ ಮಿಂಚಿನೊಲ್ ಪೊಳೆದು ಮೊಳಗುತಿಹ ಛಲವಾಜಿರಾಜಿಯಂ ಸೂತಹೂಂಕೃತಿಗಳಿಂ . . . ಒಗೆಯೆ ಬಂದತ್ತು ನಳಿನಸಖಸುರಪರ ರಥಂಗಳಂ ಕೀಳ್ಪಡಿಸಿ ರಥಸೈನ್ಯಂ (ಚಬಪು. ೪೭-೩೬). 'ಹೂಂಕೃತಿಗೆಯ್' ಪರಾ. [ಸಂ.]

**ಹೂಂಕೃತಿಗೆಯ್** (ಕ್ರಿ). ಕೋಪದಿಂದ ಕೂಗು; ಆರ್ಭಟಿಸು: ನಿನಗೊಸೆದು ಸೇರಿದ ಸಕಲಸಿರಿಸಹಿತ ಕಲಕುವೆನು ಕಡಲೊಳಗೆ ತಪ್ಪಿದ ಕೆಲಸಕಿನ್ನೇನೆಂದು ಹಲುಮೊರೆದುಲಿದು ಹೂಂಕೃತಿಗೆಯ್ದು [ಪಾಠಾಂ. ಗೈದು] ಕಿಡಿಕಿಡಿಯೋದನಾ ಹನುಮ (ತೊರರಾ. ೫-೭-೩೮).

[ಹೂಂಕೃತಿ + ಕೆಯ್$_1$]

**ಹೂಂಕೊಳ್** (ಕ್ರಿ). ಹೂಂಗುಟ್ಟು; ಸಮ್ಮತಿಯನ್ನು ಸೂಚಿಸು; ಒಪ್ಪು:

ತೀರ್ಥಂಗಳ ಪೆಸರಂ ಪೇೞಿಮೆಂದು ಬೆಸಗೊಳ್ಳುದೆತ್ತಲೀಗಳಾಂ ಪೇೞುತಿರ್ದಡೆಯೊಳು ವಾಸೀನಂಗೆಯ್ದು ಹೂಂಕೊಳದಿರ್ಪ ಕಾರಣಮೇನೆನೆ (ಪಂಚತಂ. ೩೦೩-೧೭).

[ಹೂಂ + ಕೊಳ್$_1$]

**ಹೂಂಗುಟ್ಟು**, ಹೂಗುಟ್ಟು (ಕ್ರಿ). ಸಮ್ಮತಿಯನ್ನು ಸೂಚಿಸು: ರಾಮಪ್ಪ ಹೂಂಗುಟ್ಟುತ್ತಾ ನಡೆಯುತ್ತಿದ್ದ (ಒಡ್ಡಿಉ. ೨೪). **ಹೂಗುಟ್ಟು**: ಧೈರ್ಯವಾಗಿ ನನ್ನ ಸಲ್ಲೇಖನಕ್ಕೆ ಹೂಗುಟ್ಟು ಎಂದು ಜಿನಚಂದ್ರರು ಧೈರ್ಯಹೇಳಿದರು (ದಾನಚಿಂ. ೨೧); ನನಗೆ ದಿನವೂ ಉಪದೇಶ ಮಾಡುತ್ತಾರೆ, ನಾನೋ ಹೂಗುಟ್ಟುತ್ತಿರುತ್ತೇನೆ ಅಷ್ಟೆ (ಸುವಸಂ. ೩). [ಹೂಂ + ಕುಟ್ಟು$_1$]

**ಹೂಂಟೆ** (ನಾ). (?): ಬನವಸೆಯ ಪನ್ನಿರ್ಚ್ಛಾಸಿರಕೆ ಸಲುವ ಚಂದ್ರಗುತ್ತಿಯ ವೇಂಟ್ಯದ ಚನವಮಹಳಿಯ ನಾಡವಳಗಣ ಅಂದವಳಿಯ ಬೊಂಮಗೌಡಗಳ ಹೂಂಟೆಯಾಗಿ ಈ ಅಂದವಳಿಯ ಗ್ರಾಮವಂದಕ್ಕಂ ಕುಳಗ ೨ ॥ ೦ ॥ ೭ (ಮೈಆರಿ. ೧೯೩೪, ೨೭-೧೪; 1430). [?]

**ಹೂಕಟ್ಟು** 'ಪೂಗಟ್ಟು' ನೋ.

**ಹೂಕೊಯ್** 'ಪೂಗೊಯ್' ನೋ.

**ಹೂಕೊಯ್ಯು** 'ಪೂಗೊಯ್' ನೋ.

**ಹೂಕೊಳಿಸು** (ಕ್ರಿ). ಹೂ ಎನ್ನುವಂತೆ ಮಾಡು; ಒಪ್ಪಿಸು; ಒಡಂಬಡಿಸು: ಬಿಸಿಲಾಗಿ ಬಿರುಗಾಳಿಯಾಗಿ ಕತ್ತಲೆಯಾಗಿ ಮಸಗಿ ಘೋರಾರಣ್ಯವಾಗಿ ವಿಷಮಾಗ್ನಿಯಾಗಿ ನಾನಾ ಖಗಮೃಗವಾಗಿ ಹುಸಿಗೆ ಹೂಕೊಳಿಸು ಭೂಪತಿಯ (ಹರಿಸಾಂ. ೩-೧೩).

[ಹೂ$_3$ + ಕೊಳ್$_1$ + - ಇಸು$_3$]

**ಹೂಕೋಸು**, ಹೂವುಕೋಸು (ನಾ). ಒಂದು ಬಗೆಯ ತರಕಾರಿ; ಕೋಸಿನಲ್ಲಿ ಒಂದು ಬಗೆ: ಹೂಕೋಸಿನ ವ್ಯವಸಾಯ ಬಹಳಮಟ್ಟಿಗೆ ಕೋಸು ಗಡ್ಡೆಯ ತೋಟಗಾರಿಕೆಯನ್ನು ಹೋಲುತ್ತದೆ (ತರಚಿ. ೪೭). **ಹೂವುಕೋಸು**: ''ದೊಡ್ಡ ಹೂವುತಲೆಯುಳ್ಳ ಒಂದು ಜಾತಿಯ ಕೋಸು: ಹೂವುಕೋಸು'' (Cauli flower. ೯೦ಕನಿ). [ಹೂ$_2$ (< ಪೂ$_2$) + ಕೋಸು$_4$]

**ಹೂಗಂಪು** 'ಪೂಗಂಪು' ನೋ.

**ಹೂಗಣೆ** 'ಪೂಗಣೆ' ನೋ.

**ಹೂಗಣೆಯ** 'ಪೂಗಣೆಯ' ನೋ.

**ಹೂಗಣ್ಣು** 'ಪೂಗಣ್' ನೋ.

**ಹೂಗನಸು** 'ಪೂಗನಸು' ನೋ.

**ಹೂಗಲ್ಲು** 'ಪೂಗಲ್ಲು' ನೋ.

**ಹೂಗಾರ** 'ಪೂಗಾರ' ನೋ.

**ಹೂಗಿಡ** 'ಪೂಗಿಡು' ನೋ.

**ಹೂಗಿಡು** 'ಪೂಗಿಡು' ನೋ.

**ಹೂಗಿರಣ** (ನಾ). ಪ್ರಾತಃಕಾಲದ ಕಿರಣ; ಎಳೆಯ ರಶ್ಮಿ: ಆಕೆ . . . ಹೂಗಿರಣದ ಮೃದುಚುಂಬನದಲ್ಲಿ ತುಟಿಯನ್ನು ಅರಳಿಸಲು ಬಲ್ಲವಳು (ಭಾವಗೀ. ೮).

[ಹೂ$_2$ (< ಪೂ$_2$) + ಕಿರಣ]

**ಹೂಗುಟ್ಟು** 'ಹೂಂಗುಟ್ಟು' ನೋ.

**ಹೂಗೆನ್ನೆ** (ನಾ). ಹೂವಿನಂತೆ ಮೃದುವಾದ ಕೆನ್ನೆ: ನಳನಳಿಪ ಹೂಗೆನ್ನೆಯಲಿ ಬೆಮರಿಳಿಯಿತೇಕೆ ? (ಚಂದ್ರಸ. ೭೨-೨೪). [ಹೂ$_2$ (< ಪೂ$_2$) + ಕೆನ್ನೆ]

**ಹೂಗೆಲಸಿ** (ನಾ). ೧. ಹೂವಿನಲ್ಲಿ ವ್ಯವಹರಿಸುವಂತಹುದು; ದುಂಬಿ: ಅಚ್ಚಹಸು ಕರೆದ ಈ ಇನಿದಾದ ಬೆಳ್ಪಾಲು, ಹೂಗೆಲಸಿ ಚಿಟ್ಟಚೇನಿಳಿಸಿದೀ ಚೆಂಜೇನು (ಪಾರಸಿ. ೨೩-೫೨೦); ನೆಲದೆರೆಯ ಜನಕರಾಜನ ಹೃದಯದಿಂಗಿತಕೆ ಮನವೊಪ್ಪಿ ಸೌಮಿತ್ರಿಯೂರ್ಮಿಳೆಯನೊಪ್ಪಿದನ್, ಹೂಗೆಲಸಿ ಸುಗ್ಗಿವೊಗ್ಗನ್ನಪ್ಪುವಂತೆ (ಶ್ರೀರಾಮಾ. ೫೧-೬೩೦). ೨. ಹೂವಿನಲ್ಲಿ ವ್ಯವಹರಿಸುವವನು; ಹೂವಾಡಿಗ.

[ಹೂ$_2$ (< ಪೂ$_2$) + ಕೆಲಸಿ]

**ಹೂಗೊಂಚಲು** 'ಪೂಗೊಂಚಲ್' ನೋ.

**ಹೂಗೊಳ** 'ಪೂಗೊಳ' ನೋ.

**ಹೂಚೆಂಡು** 'ಪೂಚೆಂಡು' ನೋ.

**ಹೂಜಡೆ** (ನಾ). ಹೂವುಗಳಿಂದ ಅಲಂಕಾರ ಮಾಡಿದ ಜಡೆ; ಮೊಗ್ಗಿನ ಜಡೆ: ಮಲ್ಲಿಗೆಯು . . . ವಿಶೇಷವಾಗಿ ಬೆಳೆಯುವ ವಸಂತಕಾಲದಲ್ಲಿ ಹುಡುಗಿಯರಿಗೆ ಈ ಹೂಗಳಿಂದ ಹೂಜಡೆ ಕಟ್ಟಿ ಅಲಂಕರಿಸುತ್ತಾರೆ (ಕಪವು. ೬-೧೧೦).

[ಹೂ$_2$ (< ಪೂ$_2$) + ಜಡೆ$_1$]

**ಹೂಜಲ್ಲಿ** 'ಪೂಜಲ್ಲಿ' ನೋ.

**ಹೂಜಿ** 'ಹೂಜೆ$_2$' ನೋ.

**ಹೂಜೆ$_1$** (ನಾ). ಅಸೂಯೆ; ಹೊಟ್ಟೆಕಿಚ್ಚು: ಹಾವ ಹಿಡಿದು ಹೀಸಿ ಕರಹುಸಿ ಹೂ[ಜೆಯ] ಹೇವಗೇಡಿ ಹೈಯೆಂದವರ ಪೋಪೂ ಹೊರೆದಪೆ ಹೌವ್ವನೆ ಹಾರಲೆಹಂಗೆ ಶ್ರೀವರ ಹಸ್ತೀಂದ್ರರಕ್ಷ (ಶತಸಾಂ. ೭೮-೧೦೦); ಆ ಹೂಜೆ ಹೆಂಗುಸಿನ ಮಾತಂತಿರಲಿ; ಈ ಸಕಲಗುಣ ಸಂಪನ್ನನು ಆ ಮಾತಿಗೆ ಕಿವಿಗೊಡಬಹುದೆ ? (ಪಾರ್ತಿಸು. ೫೮).

**ಹೂಜೆ$_2$**, ಹೂಜಿ (ನಾ). ೧. ಮಣ್ಣು ಅಥವಾ ಲೋಹದಿಂದ ಮಾಡಿದ ಉದ್ದವಾದ ಕಂಠವಿರುವ ಒಂದು ಬಗೆಯ ನೀರಿನ ಪಾತ್ರೆ; ಕೂಜ: ಗಂಗೋದಕ ಹೂಜೆ ಘನರತ್ನಕೀಲಿತ ಪಿಂಗಾಣಗಂದಲರ್ದಟ್ಟೆ ಹೊಂಗಾಳಾಂಜಿಯ ಹೊಳೆವ ಬಿಜ್ಜಣಿಗೆಯ ಹೆಂಗಳು ತಂದಿರಿಸಿದರು (ಮೋಹತ. ೧೭-೨೮); ವೃಕೋದರಂ . . . ಭಾಜನದ ಕೆಲಬಲದ ರತ್ನದೀಪದ ಪೊನ್ನಹೂಜೆಗಳ ಪನ್ನೀರ ಪರಿವಿಡಿಯೊಳೆಡೆಯಾಗೆ ಭೋಜನಕೆ ಬೇಕಾದ ಭಕ್ಷಭೋಜ್ಯಾದಿಗಳನೊದವಿಸಿದನಾದರದೊಳು (ಜೈಮಿಭಾ. ೩೪-೬೩). **ಹೂಜಿ**: ೧. ಚನ್ನಕನ್ನೆಯರು ಥಣ್ಣಾನ ಜಲದ ಹೂಜಿಗೆ ವಸ್ತ್ರಗಳ ಸುತ್ತಿ ಸಣ್ಣಮಿಳ್ಳಿಗಳ ವೆರಸಿ ಪಿಡಿದವರು ಕೆಲರು (ಶ್ರೀಕೃಪಾ. ೩೭); ಕುಂಬಾರನು ಮಣ್ಣಿನಿಂದ ಗಡಿಗೆ, ಹೂಜಿ ಮುಂತಾದುವನ್ನು ಮಾಡುತ್ತಾನೆ (ಜೀವಾತ್ಮ. ೧೫೫). ೨. ಬತ್ತಕ್ಕೆ ಉಂಟಾಗುವ ಒಂದು ಬಗೆಯ ಬಿಳಿಯ ಹುಳು: ಹೆಚ್ಚುದಿನ ಬತ್ತವನ್ನು ಗೂಡೆಯಲ್ಲಿಡದ ಮೂಟೆಯಲ್ಲಿಟ್ಟರೆ ಹೂಜಿ ಬೀಳುತ್ತದೆ (ರೂಢಿ). 'ಕೂಜ', 'ಕೂಜೆ' ಪರಾ.

[? ./ ತುಳು. ಕೂಜಿ, ಹೂಜೇ]

**ಹೂಜೆಗ** (ನಾ). ಹೊಟ್ಟೆಕಿಚ್ಚುಳ್ಳವನು; ಅಸೂಯಾಪರ: ಗಾಳಿಸು ಗೆಲ್ಪನಂ ಹರಹು ಹೂಜೆಗನಂ ಸುಲಿ ಸುತ್ತುಗಾಱನಂ (ಲೀಲಾವ. ೨-೧೦೭). [ಹೂಜೆ$_1$ + - ಗ$_2$]

**ಹೂಜೆಗತನ** (ನಾ). ಹೊಟ್ಟೆಕಿಚ್ಚುಪಡುವುದು; ಮತ್ಸರಿಸುವುದು: ಹೂಜೆಗತನಕ್ಕೆ ನಾಡೊಳಗೋಜಂ ಪುಸಿಯುತ್ತಮಿರ್ಪುದದೆ ತಮಗೆಂದುಂ ಸಾಜವೆನೆ ಸಂದ ಖಳನಂ ಯೋಜಿಸುವರ್ನಿರ್ವಿಕಾರಿಯಾಗಿರೆ ಋಷಿಯರ್ (ಸಮುಪ. ೭-೩೫); ಹೂಜೆಗತನದಿಂ ಮಯ್ಯ ನಾಗಳೆ ಸಮಳುತ್ತುಮಿರ್ಪುದತಿಪ್ರಸಾಧನಂ (ರತ್ನಕ. ೩-೧೩ ವ). [ಹೂಜೆಗ + - ತನ]

**ಹೂಜೆಗಾರ್ತಿ** (ನಾ). ಹೊಟ್ಟೆಕಿಚ್ಚು ಪಡುವವಳು; ಮತ್ಸರಿಸುವವಳು: ''ಹೂಜೆಗಾರ್ತಿಯೆಂದು ಹುರುಡಿಸುವಾಕೆ'' (ಕಶಸಾ. ೬೨-೩೭೭); ಒಳವುಗೊಟ್ಟ ಕಾದಲನಂ ಮೂದಲಿಪ ಹೂಜೆಗಾರ್ತಿಯೊಂದಾಯತಿಯಂ ಮೆಱೆವ ನಿನಗೆ ನಲ್ಲೆಳದಿಗಲ್ಲದೆ ಪೆಱಳಾವಳ್ಗಂ ಕತೆಯಂ ಬಿತ್ತರಂ ಬಿತ್ತರಿಪಂ . . . ಮುದ್ದಣಂ (ರಾಮಾಶ್ವ. ೧೫೨-೪).

[ಹೂಜೆ + - ಕಾಱ + - ತಿ$_1$ (< - ಇತ್ತಿ)]

**ಹೂಟ** 'ಪೂಟ' ನೋ.

**ಹೂಟಗಾರ** (ನಾ). ಸಂಚುಗಾರ; ಮೋಸಗಾರ: ಅಟ್ಟಿಹನು ತಿರಿದುಂಬ ಕಣಿಗಾರನನು ದ್ರೋಹಿಯನು ಹೂಟಗಾರನನು (ಮೂರುನಾ. ೧೧೧-೪೪೧).

[ಹೂಟ (< ಪೂಟ) + - ಗಾರ (<- ಕಾಱ)]

**ಹೂಟಿ** 'ಪೂಟ' ನೋ.

**ಹೂಟಿಗುಣಕು** (ನಾ). ಬಂಡಿಯ ನೊಗಕ್ಕೆ ಕಟ್ಟುವ ಮಿಣಿಯಲ್ಲಿ ಸೇರಿಸಿದ ಕಟ್ಟಿಗೆಯ ತುಂಡು: (ಕ). [ಹೂಟಿ (< ಪೂಟ) + ಗುಣಕು (< ಗುಣುಕು)]

**ಹೂಟೆ** 'ಪೂಟ' ನೋ.

**ಹೂಡ** (ನಾ). (ಎಣ್ಣೆಯ) ಅಳತೆ; ಪ್ರಮಾಣ (?): ಕೇರಿ ದೆವಸ್ಥಾನದಿಂದಲು ಮೂಡಕೇರಿ ಸೋಮನಾಥದೇವರ ಸ್ವಾಸ್ತಿಯಿಂದಲು ಯೆಂಣೆ ಹೂಡ ೨ ಕೆ ೧ ಗ ೧ (ಎಕ. VIII, ತೀರ್ಥಹ. ೯೨-೩೯; 1664). [?]

**ಹೂಡಗ** (ನಾ). ಒಂದು ಬಗೆಯ ಮರ: ಹುಣಸೆ, ಹೂಡಗ, ಮುತ್ತುಗ . . . ಮೊದಲಾದ ವೃಕ್ಷಗಳಿಂದಲೂ (ಕೃವಾಸ. ೫೧). [?]

**ಹೂಡಿಸು** 'ಪೂಡಿಸು' ನೋ.

**ಹೂಡು** 'ಪೂಡು' ನೋ.

**ಹೂಡುಗೋಲು** (ನಾ). ಹೂಡುವುದಕ್ಕೆ ಉಪಯೋಗಿಸುವ ಒಂದು ಬಗೆಯ ಕೋಲು: ಕದಿರು ಸೂತ್ರದಾರ ಬಲುಗಣಿಕೆಯ ಪೆಂಡಿ ಹೂಡುಗೋಲುಗಳನು ಒಲಿದು ಕಟ್ಟಿದನು ಆ ಶರಣ (ಅಮುಸಾಂ. ೫-೫).

[ಹೂಡು (< ಪೂಡು) + ಕೋಲು$_1$ (< ಕೋಲ್$_1$) ]

**ಹೂಡೆ** 'ಹೂಡೆಯ' ನೋ.

**ಹೂಡೆಯ** , ಹುಡೆ, ಹುಡೆಯ, ಹೂಡೆ (ನಾ). ಕೋಟೆಯ ಮೇಲ್ಭಾಗ; ಬುರುಜು; ದಾಳಿಕಾರರ ಅನಿರೀಕ್ಷಿತ ಆಕ್ರಮಣದಿಂದ ರಕ್ಷಿಸಿಕೊಳ್ಳಲು, ಊರಿನ ತುಸುದೂರದಲ್ಲಿ ಕಟ್ಟಿಕೊಳ್ಳುವ ಕೊತ್ತಲ ಅಥವಾ ಬುರುಜಿನ ರೀತಿಯ ವೃತ್ತಾಕಾರದ ಕಲ್ಲಿನ ಕಟ್ಟಡ: ಹುಸಿಯೆಂಬ ಹೂಡೆಯ [ಪಾಠಾಂ. ಹಗಡಯ] ವೆಸೆದಿಹವಾ ಮೂಱುಸಮಪುರದ ಸುತ್ತುವಿಡಿದು (ತ್ರಿಪುಸಾಂ. ೪-೪೫); ಇಡುವ ಡೆಂಕಣಿಗಯ್ಯ ಮುಱಿವ ಹೂಡೆಯಗಳಂ ಹುಡಿಹುಡಿಯ ಮಾಳ್ಪ . . . ಕಡೆಯ ಕಾಲದ ಸಿಡಿಲ ದಂಡು ನಡೆತಂದು ಪೊಱಗಡೆ ಪಾಳೆಯಂ ಬಿಟ್ಟಿತೋ (ಸಮ್ಯಕೌ. ೮-೩೯); ಸಾಲಿಟ್ಟು ಮುಟ್ಟಱಿದಾಡುವ ಹೂಡೆಯಗಳು ಮುಂದಿಟ್ಟಣಿಸಿದವು ದುರ್ಗದೊಳು (ಕುರಾಸಾಂ. ೪೨-೪೦). **ಹುಡೆ:** ನಾಲ್ಕುಮೂಲೆಗಳಲ್ಲಿ ಅತ್ಯುನ್ನತವಾದ ಹುಡೆಗಳಿದ್ದವು (ದೇಯೂಬಿ. ೪೯); ದುಷ್ಟಾತ್ಮನು ಇಡಿಯ ದಿವಸ ಹುಡೆಯ ಮೇಲೆಯೇ ಕುಳಿತುಬಿಟ್ಟನು (ಪವನ. ೮೪). **ಹುಡೆಯ:** ಅಷ್ಟಮದವೆಂಬ ಕೋಟೆಯನೊಡೆದು ಪಂಚೇಂದ್ರಿಯವೆಂಬ ಹುಡೆಯವ ಕಿತ್ತು . . . ಹಾಯಿಕೆ ಹಾಯಿತ್ತು (ಮೋಳಿಮಾ. ೮೬-೩೩೯). **ಹೂಡೆ:** ಬಿಡದೆ ಬಳಸಿದ ಕಾವಲ ಹೂಡೆಯ ಮೇಲಿಡುವ ಪಿರಂಗಿಯ ತವಗ ಒಡನೆ ಚೌದೆಸೆಯೊಳೊಪ್ಪುವ ಸುರಂಗದ್ವಾರ ಕಡು ಭಯಾಂಕುರವ ಬೀರಿದುವು (ಕಂನವಿ. ೧೮-೬೪); ಆ ಪ್ರದೇಶಗಳ ಬಳಿಯಲ್ಲಿ ಎತ್ತರವಾದ ಹೂಡೆಯು ಈಗಲೂ ಇದೆ (ಕಪಪು. ೬-೩).

[ದೇ. ‖ ತಮಿ. ಊಟ್ಟೈಯಮ್; ತೆಲು. ಊಡೆ]

**ಹೂಡೇವು** 'ಹೂಡೆಯ' ನೋ.

**ಹೂಣ** (ನಾ). ೧. ವಿದೇಶದಿಂದ ಭಾರತಕ್ಕೆ ಬಂದ ಏಷ್ಯದ ಒಂದು ಅಲೆಮಾರಿ ಜನಾಂಗ, ಆ ಜನಾಂಗಕ್ಕೆ ಸೇರಿದ ವ್ಯಕ್ತಿ ಮತ್ತು ಭಾಷೆ: ವಂಗಾಸ್ಸಂಗರಭೀರವಃ ಕರಗಲದ್ವಾಣಾಬಭೂವುರ್ಭ್ಯಶಂ ಹೂಣಾಃ ಕೊಂಕಣ ಭೂಭುಜೋ (ಎಕ. VI (R), ಪಾಂಡವಪುರ. ೨೧೪-೪೬; 1647); ಹೂಣರು ಮಕ್ಕಳ ಚೆಂಡಾಟ ಮಾಡಿ, ಹೆಂಗಸರ ಬೆನ್ನಿನ ಮೇಲೆ ನಗಾರಿ ಬಾರಿಸಿದಾಗ ಭಾರತೀಯರು ಎಚ್ಚರಾದರು (ಭಾರತಿ. ೧೩೮). ೨. ಒರಟ; ಅನಾಗರಿಕ: "ಹೂಣ- ಕಾಡುಮನುಷ್ಯ" (ಗಂಗಾಮ. ೩೫೧). [ಸಂ.]

**ಹೂಣಭಾಷೆ** (ನಾ). ಹೂಣಜನಾಂಗಕ್ಕೆ ಸೇರಿದ ಭಾಷೆ: ಒಂದೊಂದು ಭಾಷೆಯವರೂ ತಮ್ಮ ಭಾಷೆಯೇ ಶ್ರೇಷ್ಠವಾದುದು, ದೇವಭಾಷೆ: ಮಿಕ್ಕೆಲ್ಲರ ಭಾಷೆಗಳೂ ಮ್ಲೇಚ್ಛಭಾಷೆಗಳು, ಹೂಣಭಾಷೆಗಳು ಎಂದು ಕರೆದಿದ್ದಾರೆ (ಕಜಸಾ. ೬೧).

[ಸಂ. ಹೂಣಭಾಷಾ]

**ಹೂಣೆ** 'ಪೂಟ್' ಪರಾ.

**ಹೂಣಿಕೆ** 'ಪೂಣ್ಕೆ' ನೋ.

**ಹೂಣಿಗ** 'ಪೂಣಿಗ' ನೋ.

**ಹೂಣಿಗತನ** 'ಪೂಣಿಗತನ' ನೋ.

**ಹೂಣಿಸು$_1$** 'ಪೂಣಿಸು$_1$' ನೋ.

**ಹೂಣಿಸು$_2$** 'ಪೂಣಿಸು$_2$' ನೋ.

**ಹೂಣಿಸು$_3$** (ನಾ). ಪ್ರತಿಜ್ಞೆ; ಶಪಥ: "ಹೂಣಿಸೆಂದು ಪ್ರತಿಜ್ಞೆಗೊಪ್ಪಿರ್ಪ ನಾಮಂ" (ಕಬ್ಬಕೈ. ೪೦). [< ಪೂಣಿಸು$_2$]

**ಹೂಣು$_1$** 'ಪೂಣ್' ನೋ.

**ಹೂಣು$_2$** 'ಪೂಟ್' ನೋ.

**ಹೂಣೆ** 'ಪೂಣು$_3$' ನೋ.

**ಹೂಣೆಗ** 'ಪೂಣಿಗ' ನೋ.

**ಹೂಣ್ಣವೆ** 'ಪುಣ್ಣಮೆ' ನೋ.

**ಹೂಣ್ಯ**, ಹುನ್ನಿಯ, ಹೂನ್ಯ (ನಾ). ಪುಣ್ಯ: ವಿಟನೆ ಕೇಳ್ ನಿನ್ನನ್ನ ಹೂಣ್ಯವುಳ್ಳವನಾವನ್ಕೆ (ಪ್ರಭಪು. ೩-೮೮). **ಹುನ್ನಿಯ:** ಹುನ್ನಿಯವುಳ್ಳಡೇಂ ಜಗದೊಳೊರ್ವ್ವಳೆ ಭಾಗಿಯೆ (ಎಕ. VII. ಶಿವಮೊ. ೬೪-?; 1112). **ಹೂನ್ಯ:** "ಸ್ಕೆಪೆಂದುಂ ಹೂನ್ಯಮೆಂದು ಪುಣ್ಯಂ" (ಕಶಸಾ. ೫೭-೨೫೫); ಅಂಬೆಗಳು ಮಾಡಿದ ಹೂನ್ಯಕೆ ನಾ ಕಡೆಗಾಣೆನು (ಸೊಬಸೋ. ೨-೮); ಶಿವಭಕ್ತರನಮಳಾಂತಃಕರಣರ ಹೂನ್ಯವೆ ಪರಿಜಾಂತಂ ತೆಸೆವರ ಕೀರ್ತಿ ಕಾಂತರನಂತರನೊಳಕೊಂಡಿರ್ಪುದು (ಉದ್ಭದೇ. ೨-೧೬). [< ಸಂ. ಪುಣ್ಯ]

**ಹೂತ$_1$** 'ಪೂ$_1$' ಪರಾ.

**ಹೂತ$_2$** 'ಪೂಟ್' ಪರಾ.

**ಹೂತಕದುಂಬೆ** (ನಾ). ಒಂದು ಬಗೆಯ ಸಸ್ಯ: "ನರ್ತಕಣಿಕಾ - ಹೂತಕದುಂಬೆ" (ಓಷಧಿ. ೮೪). [?]

**ಹೂತಿ$_1$** (ನಾ). ಪೂತಿಬೆಕ್ಕು; ಪುನುಗುಬೆಕ್ಕು: ಮೃಗದ ಹೊರಜೇನ ಕಂಬಿಗಳ ಹೆಮ್ಮಡಿಲ ಹೂತಿಗಳ ಬೆಕ್ಕಡಗುಗಳ ಹೆಡೆಗೆ ಹೆಬ್ಬುಲಿಯ ಭಂಡಿಗಳ ಹೇಱಿದ ಕೋಣವೆರಸಿ ನಡೆದುದು ಬೇಡವಡೆಗಳಟ್ಟಡವಿಯೊಳಗೆ (ಹಚಕಾ. ಪಂ. ೨೧೩-೫೪); ಪುಲಿಗಳ ಪರವರಿ ಹೂತಿಯ ನೆಲೆ ಬಲ್ಲೂಕಂಗಳಿಕ್ಕೆದಾಣಂ ವೃಕ್ಷಾವಳಿಗಳ ಕಣಿಯೆಂದೆನೆ ಕತ್ತಲಿಸುತ್ತಿಹ ವಿಂಧ್ಯದಡವಿ ಪಡೆದುದಗುರ್ವಂ (ಪುಣ್ಯಾಸ್ರ. ೧-೯೪).

**ಹೂತಿಯ ಬೆಕ್ಕು** = ಪೂತಿಯ ಬೆಕ್ಕು; ಪುನುಗುಬೆಕ್ಕು: ಮುಳ್ ಪುಣಿಸೆ ಪಣ್ಗಳು ಹೂತಿ[ಪಾಠಾ. ಹುತ್ತಿ ]ಯ ಬೆಕ್ಕು ಸೀಳ್ದ ಮುತ್ತದ ಪೊಸನಾರ್ ಸೆಣಂಬು ಪಲವುಂ ಮೃಗ ವಕ್ಕಿಗಳಿಂದಮೊತ್ತಿ ಕಟ್ಟಿದ ಮರಗಂಬಿ ಜೀರ್ಗರೆವಿನಂ ಗುದುಕಿಂ ಮಗುಟ್ದರ್ ವನೇಚರರ್ (ಸೂಕ್ತಿಸು. ೩-೧೭೯); ಪೀಲಿವೊಱೆ ಹೂತಿಯ ಬೆಕ್ಕುಳುವಂದಿಮುಳ್ವರಾಹಂಗಳ ದಾಡೆ ಕತ್ತುರಿಯ ಹುಲ್ಲೆಗಳೊರ್ಮೊದಲಾದ ವನ್ಯಸಾರಂಗಳ ಭಾರದಿಂ ನಡೆದು ಬಂದನದೊರ್ವ ಪುಳಿಂದನಾಯಕಂ (ದಶಕು. ೨-೧೦೬). [← ತೆಲು. ಪೂತಿ]

**ಹೂತಿ$_2$** (ನಾ). ೧. ಬಿನ್ನಹ; ಪ್ರಾರ್ಥನೆ. ೨. ಆಮಂತ್ರಣ; ಆಹ್ವಾನ: ವತ್ತಿಯಿಡುತಿಹ ಇಟ್ಟಿ ಕೊಂತ ಚಕ್ರಗಳ ಹನ್ನೆತ್ತಿತೆ ತ್ರೆತ್ತಲುಂ ಹೇತಿಗಳ ಹೂತಿಗಳು ವತ್ತುತಿಹ ಘಾತಕಂ (ಜಿನಮು. ೧೯-೧೧). [ಸಂ.]

**ಹೂತಿಡು** 'ಪೂಟ್' ಪರಾ.

**ಹೂತು** 'ಪೂ$_1$' ನೋ.

**ಹೂತು$_2$** 'ಪೂಟ್' ಪರಾ.

**ಹೂತೂತು** 'ಹುಡುತುತು' ನೋ.

**ಹೂದಂಬುಲ** (ನಾ). (ಮದುವೆ ಮೊದಲಾದ) ಶುಭಕಾರ್ಯಗಳಲ್ಲಿ (ಒಪ್ಪಿಗೆಯನ್ನು ಸೂಚಿಸುವುದಕ್ಕಾಗಿ) ಆಚರಿಸುವ ಒಂದು ಮಂಗಳ ಕಾರ್ಯ: ಮೋಟರ ಮದುವೆಗೆ ಭಂಡರು ಹಱೆಯ ಹೊಯ್ದು ಮೂಕೊಱತಿಯ ರೆಲ್ಲಾ ಕಳಶವ ಹೊತ್ತರಲ್ಲಾ ಉಘೇ ಚಾಂಗು ಭಲಾ ಎಂದು ನಿಬ್ಬಣ ನೆಱೆದು ಹೂದಂ [ಪಾಠಾಂ. ತಂ]ಬುಲಕ್ಕೆ ಮುನಿವರಿದೇನಯ್ಯ (ಅವಚಂ. ೧೦೨-೪೬೧).

[ಹೂ$_2$ (< ಪೂ$_2$) + ತಂಬುಲ]

**ಹೂದಳ** (ನಾ). ಹೂವಿನ ಪಕಳೆ,— ರೇಕು: ಚಿಗುರು ಗೊಂಚಲಿನಿಂದ ಅರಳ್ದ ಹೂದಳದಿಂದ ಬಿರಿದ ಹಣ್ ಬೆಡಗಿಂದ ಮೆರೆವ ಮೂರುತಿಯೆ ಚೆಲುವ ನೀ ತಾರ್ಕ್ಯಯ ಬಣ್ಣಗೆಟ್ಟಹೆನು (ವಿಸೀಗೀ. ೪೪-೧೪). [ಹೂ$_2$ (< ಪೂ$_2$) + ದಳ (= ದಲ)]

**ಹೂದಾನಿ** (ನಾ). ಹೂವುಗಳನ್ನು ಅಂದವಾಗಿ ಜೋಡಿಸಿಡುವ ಕುಂಡ; ಪುಷ್ಪಕರಂಡ: ಮೇಜಿನ ಮೇಲಿನ ಹೂದಾನಿಯಲ್ಲಿ ಹೂಗೊಂಚಲು ತಲೆಬಾಗಿಸಿ ನವವಧುವಿನಂತೆ ನಿಂತಿತ್ತು (ದೂಬೆಟ್ಟ. ೨೬); ಹೂದಾನಿಯಲ್ಲಿ ಬಣ್ಣಬಣ್ಣದ ಡೇಲಿಯಾ ಹೂವುಗಳಿದ್ದವು (ಕೀಲುಗೊಂ. ೨೪); ಮೇಜಿನ ಮೇಲೆ ಹೂದಾನಿಯೊಂದು ಕಣ್ಣು ಸೆಳೆಯುವ ಬಣ್ಣಬಣ್ಣದ ಹೂಗಳನ್ನು ಮೆರೆದು . . . ಮಾದಕ ಸುಗಂಧವನ್ನು ಹತ್ತುದಿಕ್ಕಿಗೆ ಚೆಲ್ಲಿತ್ತು (ಏಳಜೀ. ೧೬೨). [ಹೂ$_2$ (< ಪೂ$_2$) + ದಾನಿ$_2$]

**ಹೂದಾಳೆ** (ನಾ). ಹೂವುಳ್ಳ ತಾಳೆಗರಿ: ಸದಮಲರ ಸತ್ಕಾರವಂತೆನಲು ಕಬ್ಬಿನಾ ತುದಿಯಿಂದ ತಾಳುತನಕಂ ಮೆದ್ದುಕೊಂಡು ಬರಲದು ಗೆಣ್ಣುಗೆಣ್ಣಿಂಗೆ ಮಿಗಿಲೆನಿಸಿದಿನಿದೀವುದಂತೆ ಸಜ್ಜನರ ಮೋಹಾ ಅಧಮರಾಪ್ತರು ಬರಲು ಸಂತೈಸುತಿರ್ಪರಾ ಮೊದಲದಿನವಿಕ್ಕುವಂ ತಾಳಿಂದ ಸವಿಯಲಗ್ರದ ಪರ್ವ ಪರ್ವದೊಳು ರುಚಿಗೆಟ್ಟು ಹೂದಾಳೆಯಪ್ಪಂತಲಾ ಭಾವಿಸೆ (ವೀಶೈಪು. ೮-೧-೧೪).

[ಹೂ$_2$ (< ಪೂ$_2$) + ತಾಳೆ$_1$ (< ತಾೞೆ)]

**ಹೂದಿಂಗಣ** (ನಾ). ಒಂದು ಬಗೆಯ ಸಸ್ಯ: ಕ್ಯಾನ್ನಾಗಿಡ, ಚರಗುಂಡಿನ ಗಿಡ, ಸರ್ವಜಯ, ಹೂದಿಂಗಣ (ವೃಚಿಗಿ. ೧೭-೨೯೯). [?]

**ಹೂದಿಂಗಳ್** 'ಪೂದಿಂಗಳ್' ನೋ.

**ಹೂದಿಱು** 'ಪೂದಿಱು' ನೋ.

**ಹೂದು** 'ಪೊಯ್$_2$' ನೋ.

**ಹೂದುಡಿಗೆ** 'ಪೂದೊಡಿಗೆ' ನೋ.

**ಹೂದುಱುಗಲು** 'ಪೂದುಱುಗಲ್' ನೋ.

**ಹೂದುಱುಬು** 'ಪೂದುಱುಂಬು' ನೋ.

**ಹೂದೇರ್** 'ಪೂದೇರ್' ನೋ.

**ಹೂದೊಡಬೆ** 'ಪೂದೊಡಂಬೆ$_2$' ನೋ.

**ಹೂದೊಡಿಗ** 'ಪೂದೊಡಿಗೆ' ನೋ.

**ಹೂದೋಂಟ** 'ಪೂದೋಂಟ' ನೋ.

**ಹೂದೋಟ** 'ಪೂದೋಂಟ' ನೋ.

**ಹೂದೋರಣ** (ನಾ). ಹೂವುಗಳಿಂದ ಅಲಂಕೃತವಾಗಿರುವ ತೋರಣ: ಕಲ್ಲಿನ . . . ಕೆಳಗೆ ಬಳ್ಳಿಯೂ ಮೇಲೆ ಹೂದೋರಣವೂ ಮಧ್ಯೆ ಸಣ್ಣ ವಿಗ್ರಹಗಳೂ ಕೆತ್ತಲ್ಪಟ್ಟಿವೆ (ಮೈವಾಸ್ತು. ೧೧೨). [ಹೂ$_2$ (< ಪೂ$_2$) + ತೋರಣ]

**ಹೂನೀರು** 'ಪೂನೀರ್' ನೋ.

**ಹೂನ್ಯ** 'ಹೂಣ್ಯ' ನೋ.

**ಹೂನ್ಯವಂತ** (ನಾ). ಪುಣ್ಯವಂತ: ಧರೆಯೊಳ್ ಪ್ರದೋಷಕಾಲದೊಳಿರಲಾರ್ಪರ ಹೂನ್ಯವಂತರೀ ಧಾರಿಣಿಯೊಳ್ (ವೀರವಿ. ೬-೨೧).

[ಹೂನ್ಯ (< ಹೂಣ್ಯ) + - ವಂತ ]

**ಹೂಪೊಡೆಯ** 'ಪೂಪೊಡೆಯ' ನೋ.

**ಹೂಬಣ್ಣ** (ನಾ). ಹೂವುಗಳ ಚಿತ್ರಗಳಿಂದ ಕೂಡಿದ ಸೀರೆ: ತಾಯಿಾ ದೊಡ್ಡಮ್ಮ ಏನುಟ್ಟು ಮೆರೆದಾಳು ಕಾಗುಟ್ಟು ಕರಿದು ಮನಕುಟ್ಟು ಹಾರುವರ ಹೂಬಣ್ಣನುಟ್ಟು ಮೆರೆದಾಳು (ಹಳ್ಳಿಯ. ೩೫) [ಹೂ$_2$ (< ಪೂ$_2$) + ಬಣ್ಣ]

**ಹೂಬತ್ತಿ** (ನಾ) ೧. ದೇವರ ದೀಪಕ್ಕಾಗಿ ಹತ್ತಿಯನ್ನು ಹೊಸೆದು ಹೂವಿನ ಆಕಾರದಲ್ಲಿ ಮಾಡಿದ ಬತ್ತಿ; ದೀಪವರ್ತಿ: ಕಳೇವರದ ನೀರಲ್ಲಿ ಶಾರದೆಯ ದೀಪ್ತಿ ತೊಳಗುತಿಹುದು ಹಣತೆ ತುಂಬ ನೇಹದಲಿ ನಗೆಯ ಹೂಬತ್ತಿ ಬೆಳಗುತಿಹುದು (ಹೃದಸ. ೯-೧೮); ವಯಸ್ಸಾದ ಮಡಿಹೆಂಗಸರೊಬ್ಬರು ಹೂಬತ್ತಿ ಮಾಡುತ್ತಾ ಭಕ್ತಿಯಿಂದ ಅರೆಕಣ್ಣುಮುಚ್ಚಿ ಕುಳಿತಿದ್ದಾರೆ (ದೂಬಟ್ಟ. ೧೫೫); ಅದರ ಮೇಲೆಯೇ ತುಪ್ಪದಲ್ಲಿ ತೋಯಿಸಿದ ನಾಲ್ಕಾರು ಹೂಬತ್ತಿಗಳಿದ್ದವು (ಗಂಗಾಸಾ. ೬). ೨. ಒಂದು ಬಗೆಯ ಪಟಾಕಿ; ಸುರುಸುರುಬತ್ತಿ: ಎಡವೂರ ತಳದಲ್ಲಿ ಏನೇನ ಶಡಗರ ಎಡಕ ನಂದಿಕೋಲ ಬಲಕ ಪಲ್ಲಕಿ ಪಂಕ . . . ಹಾರೂವ ಹೂಬಾಣ ಹೂಬತ್ತಿ ಕಂಡಿರಿ (ಕನ್ನಜಾ. ೯). [ಹೂ$_2$ (< ಪೂ$_2$) + ಬತ್ತಿ]

**ಹೂಬಾಣ** 'ಪೂಬಾಣ' ನೋ.

**ಹೂಬಿಡು** 'ಪೂಬಿಡು' ನೋ.

**ಹೂಬಿಸಿಲು** (ನಾ). ಎಳೆಯ ಬಿಸಿಲು; ಹಿತವಾದ ಬಿಸಿಲು : ಮಂಜಕ್ಕ ತಂದೆಯ ಬಾಳ್ವೆಯ ಸಂಜೆಯಲ್ಲಿ ಹೂಬಿಸಿಲಿನಂತೆ ಕಂಗೊಳಿಸುತ್ತಿದ್ದಳು (ಹಾಪುತ್ತ. ೬೬); ಹೂಬಿಸಿಲು ಹೊಂಬಿಸಿಲು ಚೆಂಬಿಸಿಲು ಚುಂಬಿಸಲು ಎದೆಯನ್ನೆ ತುಂಬಿಸಲು ಬಿಂಬಿಸುತಿರೆ (ಭಾವಜೀ. ೨೧-೪೦೫). [ಹೂ (< ಪೂ$_2$) + ಬಿಸಿಲು (< ಬಿಸಿಲ್)]

**ಹೂಬುಗುಡಿ** (ನಾ). ಹೂವಿನ ಚಿತ್ರವಿರುವ ಒಂದು ಬಗೆಯ ಕಿವಿಯ ಆಭರಣ: ನಾಲ್ಕುವರಹದ್ವಾಲೆ ಹೂಬುಗುಡಿ ಗೆಜ್ಜೆಟೀಕೆ ಸಾಕು ತವರವರು ಬಡವಾರೆ (ಹಳ್ಳಿಪ. ೭೩). [ಹೂ$_2$ (< ಪೂ$_2$) + ಬುಗುಡಿ]

**ಹೂಬುಟ್ಟಿ** 'ಪೂವುಟ್ಟಿ' ನೋ.

**ಹೂಬೇಹೂಬ್** 'ಹುಬೇಹೂಬ' ನೋ.

**ಹೂಬೇಹೂಬ** 'ಹುಬೇಹೂಬ' ನೋ.

**ಹೂಮಂಚ** (ನಾ). ಒಂದು ಬಗೆಯ ಮಂಚ; ವಿಶೇಷವಾಗಿ ಹೂವುಗಳನ್ನು ಕೆತ್ತಿರುವ ಚಿತ್ರವುಳ್ಳ ಮಂಚ: ಚಪ್ಪರಮಂಚ ಗುಜ್ಜರಿಗಾಲಮಂಚ ಮೇಲುಪ್ಪರಮಂಚ ಹೂಮಂಚ ನಿಪ್ಪಟ್ಟೆ ಶಕುನಿ ತೂಗುವ ಮಂಚ ಸೆಳೆಮಂಚವೊಪ್ಪವಾಂತೆಸೆದುವಲ್ಲಲ್ಲಿ (ಭರಚ. ೧೫-೨೬). [ಹೂ$_2$ (< ಪೂ$_2$) + ಮಂಚ]

**ಹೂಮಡು** (ಕ್ರಿ). ಹೂವುಗಳನ್ನು ಹಾರವಾಗಿ ಕಟ್ಟು; ಹೂಮಾಲೆ ಕಟ್ಟು: ಹೂಗಳನ್ನಾಯ್ದು ಬಂದಳೆಂದರೆ ಅವನ್ನು ಕ್ರಮದಂತೆ ಮಡಬೇಕು, ಅನುಕೂಲವಾದ ಗಿಡದ ನಾರುಗಳನ್ನು ತಂದು ಹೂಮಡುತ್ತಾಳೆ (ಕುಡಿಕೂ. ೧೬).

[ಹೂ$_2$ (< ಪೂ$_2$) + ಮಡು$_1$]

**ಹೂಮರಿ** (ನಾ). ಆಗ ತಾನೇ ಜನಿಸಿದ ಮರಿ; ಎಳೆಯ ಮರಿ: ಅವುಗಳಲ್ಲಿ ಒಂದು ಹೊರತು ಬಾಕಿಯವುಗಳು ಹೂಮರಿಗಳಾಗಿದ್ದವು (ಚಂಗಾಳ್ಯ. ೬೨೩); ಚಿನ್ನಕ್ಕಾ, ಎಲ್ಲಾ ಮಟ್ಟೇನೂ ಮರಿ ಆಗ್ಯವೆ! ಹೂಮರಿ! (ಮಲಮ. ೨೬೯).

[ಹೂ$_2$ (< ಪೂ$_2$) + ಮರಿ (< ಮಱಿ)]

**ಹೂಮಳೆ** 'ಪೂವಱೆ' ನೋ.

**ಹೂಮಳೆಗಱೆ** 'ಪೂವಱೆಗಱೆ' ನೋ.

**ಹೂಮಾರು** 'ಪೂಮಾಱು' ನೋ.

**ಹೂಮಾಲೆ** 'ಪೂಮಾಲೆ' ನೋ.

**ಹೂಮಿಡಿ** 'ಪೂಮಿಡಿ' ನೋ.

**ಹೂಮುಡಿ$_1$** 'ಪೂಮುಡಿ$_1$' ನೋ.

**ಹೂಮುಡಿ$_2$** 'ಪೂಮುಡಿ$_2$' ನೋ.

**ಹೂಮುಡಿಸು, ಹೂವುಮುಡಿಸು** (ಕ್ರಿ). ೧. (ಬೇರೆಯವರ ತಲೆಗೆ) ಹೂವನ್ನು ಸೆಕ್ಕಿಸು, — ಸೂಡು: ತಂಗಿ ಬಾರೆಂದಪ್ಪಿದೊಡನಂ ಕಯ್ಯಿಡಿದ ಮುಂಗುರುಳ ಚೆಲ್ವೆಯಂ ನುಡಿಸಿ ಹೂಮುಡಿಸಿ (ಕಾಲೂರ. ೧೯೦-೪೩೩); ಹೂಸದಿದ್ದರೆ ಹೂಮುಡಿಸಿದ್ದಕ್ಕಿಂತ ಹೆಚ್ಚು (ಗಾದೆ). ೨. ಗರ್ಭಿಣಿಯರಿಗೆ ಐದು, ಏಳು, ಅಥವಾ ಒಂಬತ್ತನೆಯ ತಿಂಗಳಲ್ಲಿ ಶುಭವನ್ನು ಕೋರಲು ಸೀಮಂತಕಾರ್ಯವನ್ನು ಮಾಡು: ಗರ್ಭಿಣಿಯರಿಗೆ ಐದನೆಯ ತಿಂಗಳಲ್ಲಿ ಹೂಮುಡಿಸುವ ಕಾರ್ಯ ಮಾಡುತ್ತಾರೆ (ರೂಢಿ). **ಹೂವುಮುಡಿಸು:** ೨. ಗಂಡನ ಮನೆಯಲ್ಲಿ ನಡೆಯಬೇಕಾದ ಹೂವುಮುಡಿಸುವುದು ಎಂಬ ಮಂಗಳಕಾರ್ಯಕ್ಕೆ ಅವಕಾಶವಾಗಲಿಲ್ಲ (ಮಹಾಗ.೪).

[ಹೂಮುಡಿ$_1$ (< ಪೂಮುಡಿ$_1$) + - ಸು$_1$]

**ಹೂಮೂಡಿಗೆ** (ನಾ). ಹೂವಿನ ಬತ್ತಳಿಕೆ: ನೋಡನೋಡಲಿಕಂಗಜನ ಹೂಮೂಡಿಗೆಯ ಸರಳಂಗಡೊಳಗಕ್ಕಾಡಿದವು ಮೈಮಱೆದಳೊಂದೆರಡೆಂಬವಸ್ಥೆಗಳ (ತೊರರಾ. ೩-೪-೪). [ಹೂ$_2$ (< ಪೂ$_2$) + ಮೂಡಿಗೆ]

**ಹೂಯಲು** 'ಪೊಯಲ್' ನೋ.

**ಹೂರ್$_1$** 'ಪುರ$_1$' ನೋ.

**ಹೂರ್$_2$** (ನಾ). ಒಂದು ಬಗೆಯ ಮರ: ಕಕ್ಕೆ ಹೂರಂ [ಪಾಠಾಂ. ಬೂರಂ] ಬೆಳಲ್ ಮಾವರುಟಾಳಂ . . . ಬ್ರಹ್ಮವೃಕ್ಷಂ ಕಱಿಕೆ ತಱಿಯದಿಂದೊಪ್ಪುತಿರ್ದತ್ತರಣ್ಯಂ (ಗಿರಿಕ. ೧-೭೨); ತೇಗ ಕಗ್ಗಲಿ ಸರಳ ನಿಂಬ ಹೂರಂ . . . ಸಲ್ಲಲಿತ ಚಂದನಂಬೆತ್ತ ಪೇರ್ಮೆಳೆಗಳೊಳು ವಲ್ಲರಿಗಳುಂ ಪರ್ವಿ ಚೆಲ್ವೆಂಬ ಕಾನನವ ಕಂಡು ವಿಸ್ಮಿತರಾದರು (ಪ್ರಭುಪು.೩-೧೩೦); ಹೂರದ ಚೆಕ್ಕೆ, ಗರಿಕೆಯ ಬೇರು . . . ಚೂರ್ಣವ ಹಾಕಿ ಕದಡಿ ಪಾಕವಮಾಡಿ ಹದದಲ್ಲಿ ಇಳುಹಿ ಮೈಗೆ ಲೇಪಿಸಲು ಸ್ಫೋಟಕ, ಮಸೂರಿಕೆಗಳು ಶಮನವಹವು (ವೈದ್ಯಸಾ. I, ೩೭೭). [?]

**ಹೂರಣ** (ನಾ). ೧. ತುಂಬುವುದು; ಭರ್ತಿಮಾಡುವುದು: "ಹೂರಣ (ಹೂರ್ಣ) = ಪೂರ್ಣ" (ತದ್ಭಕೋ.೪೯). ೨. ಕಡುಬು, ಹೋಳಿಗೆ ಮೊದಲಾದುವುಗಳಲ್ಲಿ ತುಂಬುವ ಹುದುಗಲು: ಪೊಂಗಿರ್ದಂಗರವೋಟಿಗೆಯಂ ಗರಗರಮಪ್ಪ ತುಪ್ಪಮಂ ಶರ್ಕರೆಯಂ ಪಿಂಗದೆ ಹೂರಣಮೆನಿಸಿ ಮನಂಗೊಳಿಪುವನಮೃತಪೂರಮಂ (ಪಾರ್ಶ್ವಪು. ೮-೫೩); ಬೆಂದ ಕಡಲೆಯ ಬೇಳೆಯಂ ಬೆಲ್ಲಗೂಡಿಯರೆದು ಹೂರಣವ ಮಾಡಿ . . . ಸೂರಿಗೆಯಡುವುದು (ಸೂಪಶಾ.೧-೨೬); ಕತ್ತೆಗೆ ಪೂರಣದ ರುಚಿ ತಿಳಿಯಲಿಲ್ಲ ತೊತ್ತಿಗೆ ಪತಿವ್ರತೆಗುಣ ಬರಲಿಲ್ಲ (ಪುರಂದ.೨-೫೬-೩). ೩. (ಆಲಂ) ಸತ್ತ್ವ; ತಿರುಳು; ಸಾರ: ಸುರವಿರೋಧಿಯ ಮುಂಡ ಕೊಂದುದು ಹೊರಳಿ ಕಪಿಗಳ ಹೊರಳಿಯನು ಬಲವರದ ಹೂರಣದಂತೆಯಜಗಿಜಿಯಾದುದಗಲದಲಿ (ತೊರರಾ. ೬-೨೮-೬೨). ೪. ಗುಟ್ಟು; ಮರ್ಮ; ರಹಸ್ಯ: ಭಿಕ್ಷುಕನು ಇನ್ನು ವಾತಾವರಣ ತೀರ ಹದಗೆಡಬಹುದೆಂದೂ, ತನ್ನ ಹೂರಣ ಹೊರಬೀಳಬಹುದೆದೂ ಮನವರಿಕೆ ಮಾಡಿಕೊಂಡು . . . ಹೋದ (ಫಲಸಂ. ೭೪); ನಾವು ಗಂಡಹೆಂಡಿರು ಬಹಳ ಪ್ರೀತಿಯಿಂದಲೇ ಇರಬೇಕೆಂದು ತಿಳಿದ ಅಣ್ಣನಿಗೆ ಆನಂದವಾಗುತ್ತದೆ. ಪಾಪ! ಅವನಿಗೇನು ಗೊತ್ತು ಒಳಗಿನ ಹೂರಣವೆಂಥಾದ್ದು ಅಂತ! (ನಾಪೂಲೀ. ೨೩೩); ಶೆಟ್ಟಿ ಸತ್ತ ಮೇಲೆ ಅವನ ಲೆಕ್ಕ ಹೊರಗೆ ಬಿತ್ತು, ಕಳ್ಳ ಸತ್ತ ಮೇಲೆ ಅವನ ಹೂರಣ ಹೊರಗೆ ಬಿತ್ತು (ಗಾದೆ).

**ಹೂರಣದೊಡೆ** = ಹುದುಗಲನ್ನಿಟ್ಟು ಮಾಡುವ ಒಂದು ಬಗೆಯ ವಡೆ: ಹೂರಣವನು ಬಿಳಿಯುದ್ದಿನಿಂದ ಚಾರಿಸಿಕೊಂಡ ಸಣ್ಣ ಸಂಪಳಿಯೊಳಗೆ ತುಂಬಿ ತುಪ್ಪದೊಳು ಪಾಕಂ ಮಾಡಿಯಿಳುಹಿದುದು ತಾನೆ ಹೂರಣದೊ[ಪಾಠಾಂ. ವೊ]ಡೆಯೆನಿಸಿಕೊಂಡು ಹಿರಿದು ಸವಿಯಂ ಪಡೆದುದು (ಸೂಪಶಾ. ೧-೬೫). [< ಸಂ. ಪೂರಣ]

**ಹೂರಣಗಡುಬು** (ನಾ). ಕೊಬ್ಬರಿ, ಕಡಲೆ, ಸಕ್ಕರೆ ಮೊದಲಾದ ಹುದುಗಲನ್ನು ತುಂಬಿಸಿ ಮಾಡಿದ ಕಡುಬು: ಸಣ್ಣ ಸೇವಗೆ ಹಾಲುಂಡೆ ಜೇನ್ಗೂಡ ಶುಭ್ರವಣ್ಣದುದ್ದಿನ ಸವಿಗಡುಬು ಬಣ್ಣಿಸೆ ಹೂರಣಗಡುಬು ಭೂಪಗೆ ಮುದ್ದುವೆಣ್ಣುಗಳೆಡೆಮಾಡಿದರು (ಶಂಸವಿ.ತ-೮೭); ಹುಗ್ಗಿ ಹೂರಣಗಡುಬು ಮಗ್ಗಿ ತಾಳಲಗಾಯಿ (ಜಸಗೀ. ೫೭).

[ಹೂರಣ + ಕಡುಬು (< ಕಡುಂಬು)]

**ಹೂರಣಬದನೆಗಾಯ್** (ನಾ). ಬದನೆಕಾಯಿಗೆ ಸಾಂಬಾರಪದಾರ್ಥವನ್ನು ತುಂಬಿ ಮಾಡಿದ ಒಂದು ಬಗೆಯ ಅಡುಗೆ: ಕೆಲವಕ್ಕೆ ಬದನೆಯ ಬಜ್ಜಿ ಕೆಲವಕ್ಕೆ ಕತ್ತರಿಸಿದೆಳೆಕೀರೆ . . . ಉಳಿದವಕ್ಕೆ ಹಸಮಾಡಿ ಬಟ್ಟ ತ್ರಿವದನಿತ್ತು ಒಗ್ಗರಿಸಿಕೊಂಡವಟವಟ ಹೆಸರ ಹೂರಣ[ಪಾಠಾಂ. ರು ಸೂರಣದ]ಬದನೆಗಾಯುಂಬುದು (ಸೂಪಶಾ.೪-೨೧).

[ಹೂರಣ + ಬದನೆಗಾಯ್$_0$]

**ಹೂರಣು** (ನಾ). ಒಂದು ಬಗೆಯ ತೆರಿಗೆ (?): ಇಂತಿವರು ಮುಖ್ಯವಾಗಿ ಸಮಸ್ತ ವೃತ್ತಿಮಂತರು ತಂಮು ಬ್ರಾಹ್ಮಣವೃತ್ತಿಯೋಪಾದಿಯಲು ಅದXಳಿಕೆ ಹೂರಣು ದಂಡದೋಷದಿಂ ಪಾದ ತಿಱುಗೆಯಂ ಕೊಂಬುದಿಲ್ಲೆಂದು [ಒ]ಂದು ಹೊಂನ ಪಾದಪೂಜೆಯಂ ಕೊಂಡು ಸಿದ್ಧೇಶ್ವರ ಗದ್ದೆ ಭಂಡಿ ೯ . . . ಅಂತು ಭಂಡಿ ೧೯ಕ್ಕಂ ಹಡಿಕೆ [ಹೂ]ರಣು ವೊದಲಾಗಿದ್ದುವಕ್ಕೆ ಸರ್ವ್ವಬಾಧ ಪರಿಹಾರವೆಂದು ಕೊಟ್ಟರು (ಕಇ. V, ೭೦-೪; 1221). [?]

**ಹೂರಿಗೆ** 'ಪೂರಿಗೆ' ನೋ.

**ಹೂರಿಗೆದೋರಣ** (ನಾ). ಪೂರಿಗೆಗಳನ್ನು ಕಟ್ಟಿ ಮಾಡಿದ ತೋರಣ: ಹೊಳವ ಮಣಿದರ್ಪಣದ ಕಾಂತಿಯ ಕಲಶ ಹೂರಿಗೆದೋರಣದ ಥಳಥಳಿಪ ಕದಳೀಸ್ತಂಬ ಮಿಂಚುವ ಸಾಲುದೀಪಗಳ . . . ಧಾರಾನಿಳಮಂಟಪವೆಸದುದಾಕ್ಷಣ ನವವಿಳಾಸದಲಿ (ಅಂಬಿಕಾ. ೪೮-೪೯). [ಹೂರಿಗೆ (< ಪೂರಿಗೆ) + ತೋರಣ]

**ಹೂರುಂಡೆ** (ನಾ). ಒಂದು ಬಗೆಯ ಭಕ್ಷ್ಯ: ಹಾಲುಂಡೆ ಹೂರುಂಡೆಯನು ತೆಱಹಿಲ್ಲೆನಿಸಿ ಗಡಣಿಸುತ್ತ ಗುಡ್ಡರುಗಳಿಗೆ ಕಱಕಂಠನಾರೋಗಿಸಿದಡೆ ಇನಿದಾವರಿಸಿ ಗರಳಸುಧೆಯಂತಿರ್ದುದು (ಸಿದ್ಧರಾ. ೮-೮೫). [? + ಉಂಡೆ]

**ಹೂರ್ಣ** (ಗು). ಸಂಪೂರ್ಣವಾದ; ಸಮಗ್ರವಾದ: ಯಾವಡೆ ಹೂರ್ಣಪಲ ಮಾಡಬೇಕು (ಎಕ.VI, ಶೃಂಗೇರಿ. ೯-೭೪; 1652). [< ಸಂ. ಪೂರ್ಣ]

**ಹೂಲಿ$_1$** 'ಪೂಲಿ$_1$' ನೋ.

**ಹೂಲಿ$_2$** 'ಪೂಲಿ$_2$' ನೋ.

**ಹೂಲಿ$_3$** 'ಪೊಯಲ್' ನೋ.

**ಹೂಲಿಕುಂಟೆ** 'ಪೂಲಿಕುಂಟೆ' ನೋ.

**ಹೂಲಿಬೆಂಡು** (ನಾ). ನೀರಿನಲ್ಲಿ ಜೊಂಡಿನಂತೆ ಬೆಳೆಯುವ ಒಂದು ಬಗೆಯ ಗಿಡ; ಆಪು; ತನಕಲಿ; P ಇದರಿಂದ ಬಿಸಿಲಿಗೆ ತಲೆಯನ್ನು ಮರೆಮಾಡಿ ಕೊಳ್ಳುವ ಪರಂಗಿ ಟೋಪಿಗಳನ್ನು ಮಾಡುತ್ತಾರೆ: (೬).

[ಹೂಲಿ$_1$ (< ಪೂಲಿ$_1$) + ಬೆಂಡು]

**ಹೂವಕ್ಕಿ** 'ಪೂವಕ್ಕಿ' ನೋ.

**ಹೂವಡಿಗ** 'ಪೂವಡಿಗ' ನೋ.

**ಹೂವರಸಿ** 'ಹೂವರ್ಚಿ' ನೋ.

**ಹೂವರಸೆ** 'ಹೂವರ್ಚಿ' ನೋ.

**ಹೂವರಳಿ** (ನಾ). ಒಂದು ಬಗೆಯ ಮರ: ಹೂವರಳಿ ಬೇರು, ಪಾರಿವಾಣದ ಬೇರು . . . ಕಗ್ಗಲಿಬೇರು, ಗರಿಕೆಬೇರು ಇವು ಪ್ರತ್ಯೇಕ ೩೦ ಹಲವಂ ೧೬ ಕೊಳಗ ನೀರಿನಲ್ಲಿ ಹಾಕಿ ಕಷಾಯವ ಕಾಸಿ (ಸಕವೈ. ೩೯೧). [ಹೂ$_2$ (< ಪೂ$_2$) + ಅರಳಿ$_1$]

**ಹೂವರ್ಚಿ, ಹೂವರಸಿ, ಹೂವರಸೆ** (ನಾ). ಒಂದು ಬಗೆಯ ಮರ: ಸೊಗದೇಬೇರು, ಹೂವರ್ಚಿ ಚೆಕ್ಕೆ, ಬೇಲದ ಚೆಕ್ಕೆ . . . ಎಲ್ಲವನ್ನೂ ಒಣಗಿಸಿ (ಸಕವೈ. ಪರಿ.೫೦೨). **ಹೂವರಸಿ**: ಮರಗಳು . . . ಚಿಲ್ಲು, ಹೂವರಸಿ, ಬೆಪ್ಪಾಲೆ, ಹಾಲೆ (ನಮ್ಮನು.೨೩೬). **ಹೂವರಸೆ**: (೬). [ದೇ. ‖ ತಮಿ. ಮಲ. ಪೂವರಚು]

**ಹೂವಲಿ** 'ಪೂವಲಿ' ನೋ.

**ಹೂವಳ** 'ಪೂವಳ' ನೋ.

**ಹೂವಾಡಗಿತ್ತಿ** 'ಪೂವಡಿಗಿತಿ' ನೋ.

**ಹೂವಾಡಿಗ** 'ಪೂವಾಡಿಗ' ನೋ.

**ಹೂವಿಲ್ಲು** 'ಪೂವಿಲ್' ನೋ.

**ಹೂವಿಸು** (ಕ್ರಿ). ಹೂವಾಗುವಂತೆ ಮಾಡು: ಚಿಗುರಿಸಿ ಹೂವಿಸಿ ಕಾಯಿಸಿ ಪಣ್ಣಿಸಿ ಬಣ್ಣಿಸುವೊಲು (ಸಪೀಗೀ.೨೮-೧೩); ಹೂವಿನಾಸೆಯೇ? ಪ್ರೇಮದ ಮೊಗಸನೆ ಸೂಸಿ ಹೂವಿಸೇಕೆದೆಯೆನ್ನ? (ಗೀವಿಂ. ೪೪-೨). [ಹೂ$_2$ (< ಪೂ$_2$) + - ಇಸು$_3$]

**ಹೂವೀಳಯ, ಹೂವೀಳ್ಯ** (ನಾ). (ಮದುವೆ ಮೊದಲಾದ) ಶುಭಕಾರ್ಯಗಳಲ್ಲಿ (ಒಪ್ಪಿಗೆಯನ್ನು ಸೂಚಿಸುವುದಕ್ಕಾಗಿ) ಆಚರಿಸುವ ಒಂದು ಮಂಗಳ ಕಾರ್ಯ: ನಿಮ್ಮ ಗೇಹದೊಳನಂತಸಂಭ್ರಮದಿಂದನೇಕಜಂಗಮ ಉಂಡಿತಂತಱದು ನಾಪಿಕ್ಕುವರ್ಥ ನಿಮಗೊಂದುದಿನ ಹೂವೀಳಯಕೆ ನೆರೆಯದು (ಸಿಂಗಿರಾ.೩೧-೧೨). **ಹೂವೀಳ್ಯ**: ನನ್ನ ಪತಿಯ ಅಜ್ಜಿ ನನ್ನ ಕೈಯಿಂದ ಹೂವೀಳ್ಯ ಮಾಡಿಸಿದರು (ಸ್ಮೃತಿಚಿ. ೩೧); ಪಕ್ಷಕ್ಕೆ ಒಂದಾವರ್ತಿಯಾದರೂ ಹೂವೀಳ್ಯ ಮಾಡದಿದ್ದರೆ ಆಕೆಗೆ ಬಿಡುಗಡೆಯಿರಲಿಲ್ಲ (ನಿರಾತ. ೧೫). [ಹೂ$_2$ (< ಪೂ$_2$) + ವೀಳಯ (< ವೀಳೆಯ)]

**ಹೂವೀಳ್ಯ** 'ಹೂವೀಳಯ' ನೋ.

**ಹೂವು** 'ಪೂ$_2$' ನೋ.

**ಹೂವುಕಟ್ಟು$_1$** 'ಪೂಗಟ್ಟು' ನೋ.

**ಹೂವುಕಟ್ಟು$_2$** (ನಾ). ಹೂವಿನ ಹೆಣಿಗೆ,— ಕಟ್ಟು: ಎಳಹಸುರು ಹೊಂದಳಿರ ಸೊಂಪೆಲೆಯ ಹಿಪ್ಪೆಯಲಿ ಹಿಳಿದ ಈ ಕಮ್ಮೆಣ್ಣೆ, ಈ ಹೂವುಕಟ್ಟುಗಳು, ಎಲ್ಲ ಹೆರುಪೀ ನಮ್ಮ ಭೂತಾಯ ಪುಟ್ಟಮಕ್ಕಳು (ಪಾರಸಿ. ೨೩-೫೨೫). [ಹೂವು (< ಪೂ$_2$) + ಕಟ್ಟು$_2$]

**ಹೂವುಕೋಸು** 'ಹೂಕೋಸು' ನೋ.

**ಹೂವುಗಣೆ** 'ಪೂಗಣೆ' ನೋ.

**ಹೂವುಗಣ್ಣು** 'ಪೂಗಣ್' ನೋ.

**ಹೂವುತನ** (ನಾ). ಹೂವಾಗಿರುವಿಕೆ; ಮೃದುವಾಗಿರುವುದು: ಮೂಗಿಗಿದರ ಕಂಪು ಬರದು ಮೈಗೆ ಇದರ ತಂಪು ಅರಿದು ಸುರರ ಬನದ ಹೂವುತನದ ತಿಳಲು, ಮನದ ಅರಿವಿದು (ನಾದಲೀ. ೨೨-೧೫). [ಹೂವು (< ಪೂ$_2$) + - ತನ]

**ಹೂವುಮುಡಿ** 'ಪೂಮುಡಿ$_1$' ನೋ.

**ಹೂವುಮುಡಿಸು** 'ಹೂಮುಡಿಸು' ನೋ.

**ಹೂವೆತ್ತು** 'ಪೂವೆತ್ತು' ನೋ.

**ಹೂಸ** 'ಪೂಸ$_1$' ನೋ.

**ಹೂಸಕ, ಹೂಸಿಕ, ಹೂಸುಕ** (ನಾ). ೧. ಸುಳ್ಳು; ಹುಸಿ: "ಹೂಸಕವೆನೆ ತೊಡಹಂ"(ಭಾರನಿ. ೩೫); ಗುರುಜಕೃಪ ಕೃತವರ್ಮ ಶಲ್ಯಾದ್ಯರಿಗೆ ಹೂಸಕದೊಲಹು ಮಿಗಿಲಾಯ್ತಿರುಳು ಕರ್ಣಗೆ ಪಟ್ಟವಾಯಿತು (ಕುವ್ಯಾಕ. ೧-೩೦); ಸುರನದೀಸುತನಂಧನೃಪ . . . ಕೌರವನು ಹೂಸಕದ ಕರುಣರಸವನು ಮೆರೆದರು (ಸಾಳ್ವಭಾ. ೩೫-೧೨); ಹೂಸಕವನಾಡದಿರ್ ನಿನ್ನ ಪೆಸರಾವುದಾವಾಸವಾವೆಡೆ ಪೇಳ್ವುದೆನೆ ದನುಜಪತಿ ಮಂದಹಾಸದಿಂ (ಚೆಬಪು. ೨೫-೧೯). ೨. ಆಡಂಬರ; ಸೋಗು: ಆಸೆಗೆ ಮೊದಲಬಳಾವಳಿ ಮೋಸಕ್ಕೆ ಮೊದಲ್ ಜಡತ್ವಮೆಂಬೆರಡುಂ ಗೆಲ್ದೊಡೆ ಹೂಸಕಮಿಲ್ಲದೆ ಭಜಿಪುದು ಮೈಸಿರಿಯುಳ್ಳವಳನಬ್ಬಸದೃಶಾನನೆಯಂ (ಅನುಮು. ೧೫); ಬೆಡಂಗುವಾತು ನಾಣುಡುಗಿದದೆ ತೋಟ ಹೂಸಕದ ಕಾತುರವಿಲ್ಲದ ಸೊರ್ಕು . . . ಆದಿಯಾಗೊಡರಿಪ ವೈಶಿಕಂಗಳಿವು ವೇಶ್ಯೆಗೆ ಭೂಷಣಮಾಗಿ ರಂಜಿಕುಂ (ಮನ್ಮವಿ. ೧೭-೩); ಹೂಸಕದ ಶೌರಿಯದ ಬಾಳಿಕೆಯೇಸು ದಿನವೈ ಕರ್ಣ (ಕುವ್ಯಾದ್ರೋ. ೬-೨೦); ನಿಜವಿರಕ್ತರಂತೆ ದೇಶಮಧ್ಯದಲ್ಲಿ ಸುಳಿದು ವಿರಕ್ತರ ಕಂಡಲ್ಲೆ ಸಟೆಯ ಭಕ್ತಿಯ ಹೂಕ್ಕು ಹೂಸಕದುಪಚಾರಮಂ ನುಡಿದು (ಘನವ. ೩೪-೨೭). ೩. ವ್ಯರ್ಥ; ಹಾಳು: ಅವನ ಮೈಗಂಪು ಸುಯ್ಗಂಪುಗಳನು ಕೊಳ್ಳದವಳ ನಾಸಿಕವು ಹೂಸಕವು (ನಾಗಕು. ೨೫-೫೩). ೪. ಅಲಂಕಾರ; ಬೆಡಗು: ಹುಸಿಯ ಹಸರ ಹುರುಡಿನ ಮನೆ ಹೂಸ[ಪಾಠಾಂ. ನ]ಕವೆಸೆವ ಹೊಳಲು ಹೋರಟೆಯ ಕುಶಲದಿ ಕುಹರದಾಗರವೊಯೆಂಬಂತೆ ರಾಜಿಸಿದುದಾ ವೇಶ್ಯಾಲಂಬ (ಮೋಳಿಪು. ೧-೫೭). ೫. ನಿಸ್ಸತ್ತ್ವವಾದುದು; ಸತ್ತ್ವವಿಲ್ಲದುದು: ಅಳಿವು ಮಖವೆಗಾದ ಬಗೆ ಹೂಸಕದ ಬಾಯಿದೆರೆಗೂಟ ಜೊಂಪಿಸುವಂಗ ತುಟುಬಿದ ರೋಮಾಳಿ ಬೆಂಡೇಳ್ವ ಕಂಗಳು ಮೆರೆದವವರ ಕೂಟದಲ್ಲಿ (ವರ್ಧಚ. ೫-೯೦). ೬. ತೋರಿಕೆಯ ವೇಷದವನು; ಸುಳ್ಳುಗಾರ; ಹುಸಿಕ: ಅಶೆಯಟಮಟದುದರಪೋಷಣಕೆ ಕೆಲವಿಕೃತವೇಷಗಳ ನಟಿಸಿ ಬಹಿರಂಗ ಬಳಕೆಯ ಬಯಲ ಹೂಸಕರನೊಲ್ಲ (ಶಿವಗೀ. ೫೫-೨೮೦); ನಿರಾಲಂಬಿಗಳಾದ ನಿಜಶರಣರು ಮಚ್ಚರು ಕಾಣಾ ಹೊರವೇಷದ ಹೂಸಕರ (ಸಿದ್ಧೇವ. ೧೫೮-೪೭೪). ಹೂಸಿಕ: ೨. ವಿಗಡತನವನು ವಹಿಲದಲಿ ಕೈಮುಗುಚಿ ಕಳೆದರು ಹೂಸಿಕದ ಹೂಣೆಗತನವ (ಕುವ್ಯಾದ್ರೋ. ೧೭-೫೫). ಹೂಸುಕ: ೨. ಪುಸಿಯ ಭೀಮನ ಮಾತು ಹೂಸುಕದೆಸುಗೆ ತಾನೇಕಿನ್ನು ರಿಪು ನಿಪ್ಪಸರದಲಿ ಕಲಿಯೇಱಿದರೆ ಕೈಕೊಳ್ಳಲು (ಕುವ್ಯಾಕ. ೨೩-೪೪). [< ಪೂಸು$_1$ + - ಕ$_3$]

**ಹೂಸಣಂಬ** 'ಪೂಸಣಂಬ' ನೋ.

**ಹೂಸಣೆ** (ನಾ). ಬಳಿಯುವಿಕೆ; ಲೇಪನ: ತನುವೆಂಬ ಮನೆಗೆ ಅಸ್ಥಿಂಗಳು ಚಮ್ಮದ ಹಂಜರ . . . ಮಾಂಸದ ಭಿತ್ತಿಗೆ ರಸದ ಹೂಸಣೆ (ಆದವ. ೧೫-೩೩). [< ಪೂಸು$_1$]

**ಹೂಸತನ** 'ಪೂಸತನ' ನೋ.

**ಹೂಸಿಕ** 'ಹೂಸಕ' ನೋ.

**ಹೂಸೀರೆ** (ನಾ). ದುರ್ಗೆ ಅಥವಾ ಲಕ್ಷ್ಮಿಯ ವಿಗ್ರಹಕ್ಕೆ ಉಡಿಸುವ ಹೂವಿನ ಚಿತ್ರದಿಂದ ಕೂಡಿದ ಸೀರೆ: (೬). [ಹೂ$_2$ (< ಪೂ$_2$) + ಸೀರೆ$_1$]

**ಹೂಸು$_1$** 'ಪೂಸು$_1$' ನೋ.

**ಹೂಸು$_2$** 'ಪೂಸು$_2$' ನೋ.

**ಹೂಸು$_3$** (ನಾ). ಅಪಾನವಾಯು; ಅಧೋವಾಯು: ತಂಗಳ ಕಿಚ್ಚಡಿಯುಂಡು ಹೂಸು ಬಿಡುವಿರಿ (ಬಿಜ್ಜರಾ. ೯-೧೧೧); ಇದ್ದಕ್ಕಿದ್ದ ಹಾಗೆ ಗುತ್ತಿ ದುರುಕ್ಕೆಂದು ಹೂಸು ಕೊಟ್ಟು ನಿಂತನು! (ಮಲೆಮ. ೫೪೨). [< ಪೂಸು$_2$]

**ಹೂಸುಕ** 'ಹೂಸಕ'ನೋ.

**ಹೂಸುದಗ್ಗಿ** (ನಾ).ಒಂದು ಬಗೆಯ ಗಿಡ; ತಕ್ಕಿಲೆ: (೬). [?]

**ಹೂಸುಬುರುಕ** (ನಾ).ಅಪಾನವಾಯುವನ್ನು ಬಿಡುವವನು; ಹೂಸುಬಿಡುವವನು: "ಕರ್ದಕಃ ಕರ್ದಮಾನಃ, ಈ ೨ ಹೂಸುಬುರುಕಂ " (ಕಾಶಕ್ಯ. ೮೫).

[ಹೂಸು$_2$ (< ಪೂಸು$_2$) + - ಪುರುಕ]

**ಹೂಹಗುರ** (ನಾ). ಹೂವಿನಷ್ಟು ಹಗುರವಾದುದು: ಮಲ್ಲಿಗೆಯ ಹೂಹಗುರ ಈ ಹಸುಳೆ (ಚಂದ್ರಸ. ೨೨-೧೪); ಸುಖ ಸಂತೋಷಗಳಿಂದ ಎದೆಯನ್ನು ಹಣಿಸಬೇಕು ಎಂಬುದು ಅವರ ಹೂವಿನಂಥ ಮನಸ್ಸಿನ ಹೂಹಗುರವಾದ ಹಾರೈಕೆ (ಬದ್ನಪ್ರ. xlix, ನಾಟಕದ ಸಮಸ್ಯೆ).

[ಹೂ$_2$ (< ಪೂ$_2$) + ಹಗುರ]

**ಹೂಹತ್ತಿ** (ನಾ).ಒಂದು ಬಗೆಯ ಸಸ್ಯ: "ರಕ್ತಮಂಜರೀ – ಹೂಹತ್ತಿ , ಕಡವ" (ಓಷಧಿ. ೧೩೫). [ಹೂ$_2$ (< ಪೂ$_2$) + ಹತ್ತಿ$_1$ (< ಪಟ್ಟಿ)]

**ಹೂಹುಟ್ಟು** (ಕ್ರಿ). (ಕಣ್ಣಿನಲ್ಲಿ) ಹೂವು ಉಂಟಾಗು; ಹೂಬೀಳು: ಅಲಿ ನೊಂದುದೊ ಕಣ್ಣ ಬೇನೆಯೊ ಮೈಲಗೆಯೊ ಹೂಹುಟ್ಟಿದುದೊ ಕಣುಶೂಲೆಯೋ (ಬಸವು. ೧೮-೬೬). [ಹೂ$_2$ (< ಪೂ$_2$) + ಹುಟ್ಟು$_1$ (< ಪುಟ್ಟು$_1$)]

**ಹೂಹೆ** (ನಾ).೧. ಹಸುಳೆ; ಶಿಶು: "ಹೂಹೆಯೆನೆ ಹಸುಳೆಯಕ್ಕುಂ" (ಭಾರನಿ. ೩೧); ಹೂಹೆಗಳಳಿವ ಹರೆಯವೆ ಶಿವಶಿವಾಯೆಂದಳಲುದೊಱೆಯಲಿ ಮುಳುಗಿ ಮೂಡುವ ದ್ರುಪದಪತಿಯೆಂದ (ಕುವ್ಯಾಅ. ೧೧-೧೧); ಆಹ ತಿಂಬೆನು ಕರುಳನೀಗಳೆ ಹೂಹೆಗಕ್ಕಟ ತನ್ನೊಡನೆ ಹೇಳಾಹವಕೆ ನಿಲುವಂತೆ . . . ಎನುತ ಖಳ ಬಾಯ್ದೆರೆದು ಹರಿತಂದ (ನಿಭಾಗ.೧೦-೩೨-೧೫). ೨. ಮರಿ; ಪೋತ: ಹುಲ್ಲೆಯ ಹೂಹೆಗಳು ಹೆಬ್ಬುಲಿಗೆ ಹಾಯ್ವವೆನುತ್ತ ಗರ್ಜಿಸಿದ (ಕುವ್ಯಾಅ. ೨೦-೩೨). ೩. ಗೊಂಬೆ; ಪುತ್ತಳಿ: ಯಂತ್ರ ಸೂತ್ರದ ಹೂಹೆಯಂತಿರೆ ನೃಪತಿ ತೆತ್ತನು ಹಗೆಗ ತನುಧನವ (ಕುವ್ಯಾಸ. ೧೪-೨೩); ಯಂತ್ರಮಯಹೂಹೆಗಳು ನೃಪರೀ ಯಂತ್ರಸೂತ್ರದ ಕುಣಿಕೆ ನಿನ್ನ ನಿಯಂತ್ರಣವ ಹೇಳೌ ನಿಧಾನವನೆಂದಳು (ಕುವ್ಯಾಅ. ೧೫-೨೨). ೪. (ಆಲಂ) ಹೇಡಿ; ಕ್ಷುದ್ರ; ಅಲ್ಪ: ಉರಗನಿಕ್ಕಡಿಗಾಱ ಹುಲ್ಲಿನ ಸರವಿಗಂಜುವುದುಂಟೆ ಕರ್ಣಾದ್ಯರನು ಕಡ್ಡಿಗೆ ಬಗೆಯನೀ ಹೂಹೆಗಳ ಗಣಿಸುವನೆ (ಕುವ್ಯಾದ್ರೋ. ೫-೭೮); ಕಾದು ಸಾಕೆಲೆ ಹೂಹೆ ಹೆಂಗೂಸಾದಡೀಕ್ಷಿಸೆನುತ್ತ ಕೆನ್ನೆಗೆ ಸೇದಿ ಶರವೈದಱಲಿ ಧನದನ ಬಹಳ ಜಠರವನು ಭೇದಿಸಿದಳು (ನಿಭಾಗ. ೧೧-೭೧-೫); ಆಹರಿಯೊಳವಗಡಿಸಿ ಬಳಿಕೀ ಹೂಹೆಯನು ಕೈವಿಡಿದು ಮುಂದಣ ದೇಹ ಸುಖಸಾಮ್ರಾಜ್ಯವೆಲ್ಲವ ಕೆಡೆಯೊಸೆದು ಮತ್ತೆ ಐಹಿಕಾಮುಷ್ಮಿಕದ ಪದವಿಗೆ ಬಾಹಿರನು ನೀನೆನಿಸುವುದು ಮಿಗೆ ಸಾಹಸವೆ ಹೇಳೆಂದು ನುಡಿದನು ಹನುಮನರ್ಜುನಗೆ (ಕೋಗಯ. ೧೮-೪೪). 'ಪಾಪೆ' ಪರಾ. [?]

**ಹೂಹೊಮ್ಮೆ** (ನಾ). ಒಂದು ಬಗೆಯ ಮರ: ಸುರಹೊನ್ನೆ, ಪಿನ್ನೇಕಾಯಿ, ಪುನ್ನಾಗ, ಸುಡಾಬು, ಹೂಹೊಮ್ಮೆ (ಮೈಔಗಿ. ೧೭-೨೮೭). [ಹೂ$_2$ (< ಪೂ$_2$) + ಹೊಮ್ಮೆ]

**ಹೂಹೊಱೆ** (ನಾ). ಹೂವಿನ ರಾಶಿ ,– ಗುಚ್ಛ,– ಕಟ್ಟು: ಕುಂತಳಗುಣನಾಮಂ ಮೆಱೆಯಲುಕೆ ಕುಂತಳೋರ್ವ್ವರೆಯೆಸಗುಂ ಹೂಹೊಱೆಯವೊಲಿರೆ ತೇಜೋಬ್ಯೂಹವದಾ ಕುಂತಳಕ್ಕೆ ರಾಜಾವಳಿಯುತ್ಸಾಹದಿನಾಳ್ವುದು ಮುನ್ನಂ ಬಾಹಾಬಳದಿಂದೆ ಸೋಮವಂಶಪ್ರಭವಂ (ಎಕ. VII, ಶಿಕಾರಿ. ೨೩೬-೧೪; 1174).

[ಹೂ$_2$ (< ಪೂ$_2$) + ಹೊಱೆ (< ಪೊಱೆ)]

**ಹೂಳ್** 'ಪೂೞ್' ನೋ.

**ಹೂಳಜೆ** (ನಾ). ಒಬ್ಬ ಗ್ರಾಮದೇವತೆಯ ಹೆಸರು: ಇಷ್ಟಲಿಂಗದ ಮೇಲೆ ಇಟ್ಟ ಭಕ್ತಿಯು ಮಿಗಿಲು ಕಟ್ಟಲಿಂಗಿಗಳ ಮನೆದೇವ ಹೂಳಜೆಯ ಶಿಷ್ಯ ಸೋಮೇಶ ದಯಮಾಡ (ಕನ್ನಜಾ. ೨೯೮). [?]

**ಹೂಳಿ** 'ಪೂೞ್' ಪರಾ.

**ಹೂಳಿಡು** 'ಪೂೞ್' ಪರಾ.

**ಹೂಳಿಯ** (ನಾ). ಕೋಟೆಯ ಒಂದು ಭಾಗ (?): ಹೂಳಿಯಗಳಂ ಹುಲ್ಲ ಹಾಕಿ ಡೆಂಕಣಿಗಳಂ ಮೇಳೈಸಿ ನಡೆಚಪ್ಪರವನು ನಡೆಯಿಸಿ . . . ದೂಳಿಗೋಂಟೆಯ ಕೊಳ್ಳ ಬೇಕೆಂಬ ಪಡಿಯಱರ ಕಲಕಲಂ ಕರಮೊಪ್ಪಿತು (ಸಮ್ಯಕೌ. ೮-೩೦). [< ಹೂಡೆಯ]

**ಹೂಳಿಸು** 'ಪೂಣಿಸು$_2$' ನೋ.

**ಹೂಳು$_1$** 'ಪೂೞ್' ನೋ.

**ಹೂಳು$_2$** (ನಾ). (ಬಾವಿ, ಕೆರೆ ಮೊದಲಾದುವುಗಳಲ್ಲಿ ಬಹುದಿನಗಳಿಂದ ತುಂಬಿಕೊಂಡ) ಬುರುದೆ; ಬದಿ; ಕೆಸರುಮಣ್ಣು: ಎಂತಹ ಹೂಳಿನ ಮೇಲೆಯೂ ಕಾಲಕ್ರಮೇಣ ಹುಲ್ಲು ಬೆಳೆಯುತ್ತದೆ (ಮಲೆಮ. ೫೭೧); ಕುಡಿಯಬಾರದ ಬಾವಿ, ಕಸ

ಕವಿದ ಹೂಳು! (ಇಂಗೀತ. ೮೩-೧೨); ಗೋಡೆ ಸರಿಮಾಡುವುದಕ್ಕೆ, ಕಂದಕದ ಹೂಳು ತೆಗೆಯುವುದಕ್ಕೆ . . . ಊರಿನ ಬಿಟ್ಟಿ ಆಳುಗಳನ್ನು ಒದಗಿಸಬೇಕು (ಪ್ರವಾ. II, ೪೭೯).
[< ಹೂಳು₁ (< ಪೂೞ್).⁄ ತಮಿ. ಮಲ. ಪೂೞು]

**ಹೂಳ್ದ** 'ಪೂೞ್' ಪರಾ.

**ಹೂಳ್ದು** 'ಪೂೞ್' ಪರಾ.

**ಹೂೞೆಗದ್ದೆ** (ನಾ). ನೀರಾವರಿಪ್ರದೇಶ; ಗದ್ದೆ (?): ಮಲ್ಲಿಕಾರ್ಜುನದೇವರಿಂ ಬಡಗಣ ಊರಿಗೊಂಡನ ಕೆಱೆ ಕೆಳಗಣ ಹೂೞೆಗದ್ದೆ (ಎಕ. III, ತಿರುಮ. ೩೭-೧೩; 1513).
[ಹೂೞ್₂ + ಗದ್ದೆ (< ಗಟ್ಟೆ)]

**ಹೃಚ್ಛಯ** (ನಾ). ೧. ಹೃದಯದಲ್ಲಿ ಅಡಗಿರುವಂತಹುದು; ಪ್ರೀತಿ; ಪ್ರೇಮ. ೨. ಕಾಮ; ಮನ್ಮಥ: "ಪ್ರದ್ಯುಮ್ನಃ, ಮಕರಧ್ವಜಃ, ಮನಸಿಜಃ, ಸಂಕಲ್ಪಜನ್ಮಾ . . . ಶ್ರೀನಂದನಃ, ಹೃಚ್ಛಯಃ, ಕಾಮಃ . . . ಪುಷ್ಪಧನ್ವಾ, ಮನೋಭವಃ - ಈ ೨೮ ಕಾಮ(ದೇವ)ನ ಪೆಸರ್" (ಹಲಾಯು. ೭-೩೩). [ಸಂ.]

**ಹೃಚ್ಛಯ್ಯ** (ನಾ). ಹೃದಯದಲ್ಲಿ ನೆಲೆಸಿರುವವನು: ಸ್ಥಿರ ಸುಧೀರಾ ಕಿನ್ನರಯ್ಯಾ ವಿರಸದೂರಾ ಕಿನ್ನರಯ್ಯಾ ಸರಸಸಾರಾ ಕಿನ್ನರಯ್ಯ ಮದೀಯ ಹೃಚ್ಛಯ್ಯ (ಬಸವು. ೩೫-೪). [ಸಂ.]

**ಹೃಚ್ಛಲ್ಯ** (ನಾ). ೧. ಎದೆಗೆ ನಾಟಿರುವ ಈಟಿ,—ಭರ್ಜಿ. ೨. (ಆಲಂ) (ಹೃದಯದ) ವ್ಯಥೆ; ನೋವು: ಕುರುಕುಲಚೂಡಾಮಣಿ ಶಲ್ಯನ ಹೃಚ್ಛಲ್ಯ ಮೆಲ್ಲಮುಂ ಕಟಿಲೆ ನುಡಿದೊಡಂ (ಪಂಪಭಾ.೧೨-೯೯ ವ); ಕೆಲರುರದೊಳ್ ನಟ್ಟಂ ಬನಾಳ್ದೊಂ ಮುನ್ನಂ ಮೂದಲಿಸಿದೊಡಾ ಹೃಚ್ಛಲ್ಯಮಂ ಕಳೆವಂತೆ ಕಿಱ್ತು ಕಳೆದು ಸತ್ತರ್ (ಶಾಂತಿಪು. ೪-೩೦ ವ). [ಸಂ.]

**ಹೃಚ್ಛೂಲ** (ನಾ).೧. ಹೃದಯಕ್ಕೆ ನಾಟಿರುವ ಶೂಲ. ೨. ಹೃದಯದಲ್ಲಿ ಉಂಟಾದ ನೋವು; ಮನೋವ್ಯಥೆ; ದುಃಖ: ಅನುಜರಾಡಿದ ನುಡಿಗೆ ತಲೆವಾಗಿ ತರಣಿಕುಲತಿಲಕನೊಯ್ಯನೆ ದೈನ್ಯಭಾವದಿಂ ತರಹರಿಸಬಾರದಪವಾದ ಹೃಚ್ಛೂಲಮಂ ತನಗೆ ಜಾನಕಿಯನುಳಿದು ಪೊರೆಯುರ್ಚಿದುರಗನಂತಿರ್ದಪೆಂ (ಜೈಮಿಭಾ. ೧೮-೫೭). [ಸಂ.]

**ಹೃಜ್ಜನನ** (ನಾ). ಹೃದಯದಲ್ಲಿ ಹುಟ್ಟಿದವನು; ಕಾಮ; ಮನ್ಮಥ: "ಮನಸಿಜಂ ಮನ್ಮಥಂ ಕಂದರ್ಪನಂಗಜಂ . . . ಮಧುಪ್ರೇಮಿ ಹೃಜ್ಜನನಂ ರತಿಪ್ರಭು ಪ್ರದ್ಯುಮ್ನನಾ ಕಂತುವೆನೆ ಮಾರನೆನೆ ಮದನನಕ್ಕು" (ಮಂಗರಾ.೭-೨೨). [ಸಂ.]

**ಹೃಜ್ಜಾತ** (ನಾ). = ಹೃಜ್ಜನನ: ವಿತಟಿ ಸೋಂಕುಂ . . . ಎಂತುಟಪ್ಪ ರಸಮುಂ ತನಗೆಂತುಮಸಹ್ಯಮಾಗೆ ಹೃಜ್ಜಾತನ ಮಾಯೆ ಮೋಹಿಸುವುದುಂ ಬಗೆಯಂ ವಿಗತಾನ್ಯಚಿಂತನಾ ಸೀತೆಯ ಚಿಂತೆಯಿಂ ದಶಮುಖಂ ಮರವಾನಸನಂತೆ ತೋಱಿದಂ (ಪಂರಾಮಾ. ೯-೧೫೫). [ಸಂ.]

**ಹೃತ** (ಗು).೧. ತೆಗೆದುಕೊಂಡು ಹೋದ. ೨. ಕಿತ್ತುಕೊಳ್ಳಲ್ಪಟ್ಟ; ಸೆಳೆದುಕೊಂಡ. (ನಾ). ೩. ತೆಗೆದುಕೊಂಡುದು. ೪. ಪಾಲು; ಭಾಗ. ೫. ಆಕರ್ಷಿಸಲ್ಪಟ್ಟವನು; ಸೆಳೆಯಲ್ಪಟ್ಟವನು: ಅಂಗನೆ ಹೃತನಾದಂ ಹೃದಯಂಗೊಳ್ವೀ ನಿನ್ನ ಗೀತರಾಗದೊಳೀಗಳ್ ತುಂಗತರವೇಗಶಾಲಿ ಕುರಂಗದೆ ಹೃತನಾದ ತೆರದೊಳೀ ದುಷ್ಯಂತಂ (ಶಾಕುಂತ.೩-೫). [ಸಂ.]

**ಹೃತಿ** (ನಾ). ೧. (ಸ್ವಾಧೀನಕ್ಕೆ) ತೆಗೆದುಕೊಳ್ಳುವುದು. ೨. ಅಪಹರಿಸಲ್ಪಡುವುದು; ಕಿತ್ತುಕೊಳ್ಳಲ್ಪಡುವುದು. ೩. ಕಳವು; ಕಳ್ಳತನ. ೪. ನಾಶ; ಹಾನಿ. [ಸಂ.]

**ಹೃತ್ಕಂಪ** (ನಾ). ಮನಸ್ಸಿನ ಆತುರ,— ಕಾತರ: "ಹೃತ್ಕಂಪಮನಲಾತುರಂ" (ಮಂಗರಾ.೧೩೨-೨೪). [ಸಂ.]

**ಹೃತ್ಕರ್ಣ** (ನಾ). ದೇಹದ ರಕ್ತಪರಿಚಲನಾಕ್ರಮಕ್ಕೆ ಸಹಾಯವಾಗುವ ಹೃದಯದ ಮೇಲ್ಭಾಗ: ಹೃದಯದ ಮೇಲ್ಭಾಗದ ಕುಹರಕ್ಕೆ ಹೃತ್ಕರ್ಣವೆಂದು ಹೆಸರು (ರೂಢಿ). [ಸಂ.]

**ಹೃತ್ಕಲ್ಮಷ** (ನಾ). ಪಾಪ: ಇದು ಕಣಾ ಪುರುಷಾರ್ಥಮೆಂಬುದು . . .ಇದುವೆ ಹೃತ್ಕಲ್ಮಷವನುಳಿಸದು ಇದುವೆ ಕರ್ಮದ ಸಸಿಯ ಬೆಳಸದು (ಗಗತಾ. ೧೭-೪೮). [ಸಂ.]

**ಹೃತ್ಕುಕ್ಷಿ** (ನಾ). ದೇಹದ ರಕ್ತಪರಿಚಲನಾಕ್ರಮಕ್ಕೆ ಸಹಾಯವಾಗುವ ಹೃದಯದ ಕೆಳಭಾಗ: ಹೃದಯ ನಿಶ್ಶಕ್ತಿಯುತವಾಗಿ ಅದರಲ್ಲೂ ಬಲಹೃತ್ಕುಕ್ಷಿ ದೊಡ್ಡದಾಗಬಹುದು (ಕೆಲರೋ. ೩೧). [ಸಂ.]

**ಹೃತ್ಕ್ಲೇಶ** (ನಾ). ಹೃದಯದ ನೋವು; ಮನಸ್ಸಿನ ಸಂಕಟ; ದುಃಖ: ತಾರಾಪತಿವತ್ಕೀರ್ತಿ ವಿಹಾರಾ[ಹಾರ]ಪ್ರಭಯಾ ನಿಜತನುಪೂ[illegible] ಪೂರಾಶ್ರಿತ ಹೃತ್ಕ್ಲೇಶ ವಿದೂರಾ ದೂರೀಕೃತಬಲವಿಸ್ತಾರಾ (ಕವಿರಾ. ೩-೨೩೭). [ಸಂ.]

**ಹೃತ್ತಾಪ** (ನಾ). ಹೃದಯದ ತಾಪ; ಮನಸ್ಸಿನ ಬೇಗ[illegible]: ಸಖಿಯ ಸುಭಾಷಿತ ರವದಿನಡಂಗಿದುದು ದೇವಕೀಹೃತ್ತಾಪಂ (ಜಗವಿ. ೨-೭೦); [illegible]ಳಂ ಕಾಣದೀ ಕಣ್ ಹೃತ್ತಾಪದಿಂ ಸೀದು ಕುರುಡಾಯ್ತಲಾ (ಶ್ರೀರಾಮಾ. ೯-೨೦೮). [ಸಂ.]

**ಹೃತ್ತಾಮಸ** (ನಾ). ಮನಸ್ಸಿನ ಅಂಧಕಾರ; ಅಜ್ಞಾನ: ಭೂಮಿಲಂಬದ ನಿಖಿಳ ಭೂಪಸ್ತೋಮಸಹಿತ ಸುಯೋಧನನು ಹೃತ್ತಾಮಸದ ಚಾವಡಿಯ ರಭಾಡಿಯ ರೋಷಪಾವಕದ ಧೂಮಮುಖನೈತಂದು ಗಜಪುರ ಸೀಮೆಯಲಿ ಪಾಳಯವ ಬಿಡಿಸಿದ (ಕುವ್ಯಾಸ. ೧೧-೩೭). [ಸಂ.]

**ಹೃತ್ತಿಮಿರ** (ನಾ). ಮನಸ್ಸಿನಲ್ಲಿ ಉಂಟಾದ ಕತ್ತಲೆ;ಹೃದಯದಲ್ಲಿಉಂಟಾದ ಅಂಧಕಾರ: ತರಣಿಪ್ರಭನರ್ಭಕನೀ ತರುಣಿಯ ಹೃತ್ತಿಮಿರವಂ ನಿರಾಕರಿಸಿ ಬಹಿಷ್ಕರಿಸಿದನೆನಲೆಸೆಗುಂ ಕುಚಭರಚೂಚುಕಯುಗಳಕಾಳಿಮಂ ದೇವಕಿಯಾ (ಜಗವಿ. ೨-೬೨). [ಸಂ.]

**ಹೃತ್ಪಿಂಡ** (ನಾ). ಹೃದಯ; ಎದೆಗುಂಡಿಗೆ: ನಿನ್ನ ಹೃತ್ಪಿಂಡಮಂ ಪಿಂಡಿ ನೆತ್ತರ್ ಕುಡಿಯಲೆಳಸಿದೆ: ನಿಶಾಚರಿಯೆ ನೀಂ ದಿಟಂ! (ಶ್ರೀರಾಮಾ. ೭೧-೪೫೪); ಕರುಳ ಮಾಲೆಯು ತೊಗಲ ಚೀಲ, ಅಟ್ಟೆಯ ಬುಟ್ಟಿ ಹೃತ್ಪಿಂಡ ಬೆಂ[illegible], ಬೆನ್ನೆಲಬು ದಾಂಡು (ನಡಬಂ. ೧೦೨-೨೦). [ಸಂ.]

**ಹೃತ್ಪೂರ್ವಕ** (ನಾ). ತುಂಬುಹೃದಯ: ಸಾವಿರಾರುವರ್ಷಗಳ ಕಾಲದಲ್ಲಿ ಅನೇಕ ಹೊಸಸಂಸ್ಕೃತಿಗಳು ಭಾರತಕ್ಕೆ ಪ್ರವಹಿಸಿ ಬಂದಿವೆ. ಅವನ್ನೆಲ್ಲ ಭಾರತ ಹೃತ್ಪೂರ್ವಕವಾಗಿ ಸ್ವಾಗತಿಸಿ ಎಲ್ಲವನ್ನೂ ತನ್ನದನ್ನಾಗಿಯೆ ಮಾಡಿಕೊಂಡಿದೆ (ಋಚ್ಛಾರ. ೧೨೪ ಪೀಠಿಕೆ). [ಸಂ.]

**ಹೃತ್ಪ್ರಾಂಶ** (ನಾ). ಭಾಗ; ಅಂಶ; ಪಾಲು: ಹೃತ್ಪ್ರಾಂಶ . . . ಸೆಳೆ, ಉಚ್ಚಿಂದುಂ ಇಂತಿನಿತುಂ ಭಾಗಂಗೊಂಬುದಕ್ಕೆ ಪೆಸರು (ವ್ಯವಹಾ. ೧೨-೧೨). [ಸಂ.]

**ಹೃತ್ಸಂತಾಪ** (ನಾ). ಎದೆಯಳಲು; ದುಃಖ; ಖೇದ: ಕುತ್ಸಿತಮಿದೆಂಬಿನಂ ಪ್ರತಿವತ್ಸರಮಿಾ ಕ್ರಮದೆ ಶಿಶುಗಳಾಱುಮನಟಿದಂ ಹೃತ್ಸಂತಾಪದೆ ನಯನಗಳತ್ಸಲಿಲಂ ಕುಚದೊಳಿಟಿಯೆ ದೇವಕಸುತೆಯಾ (ಜಗವಿ. ೨-೫೫). [ಸಂ.]

**ಹೃತ್ಸಂವಾದ** (ನಾ). ತನ್ನೊಳಗಿನ ವಿಚಾರದ್ವಂದ್ವ: ಆದುದಾಗಲಿ ಬಳಿಕ ಮಾಪುವ ಭೇದ ಬೇಱಿಲ್ಲೆನುತ ಹೃತ್ಸಂವಾದವನು ಬೀಳ್ಕೊಟ್ಟು ಗಂಗಾಸೂನು ಪವಡಿಸಿದ (ಕುವ್ಯಾಭೀ. ೧-೨೭). [ಸಂ.]

**ಹೃತ್ಸಮುದ್ಭೂತ** (ನಾ). ಮನಸ್ಸಿನಲ್ಲಿ ಜನಿಸಿದವನು; ಮನ್ಮಥ; ಕಾಮ: ಆತನಿನಾದ ಚೇಟಮಭಿಜಾತತೆಯಿಂ ನೆಗೞ್ದೊಂದು ಧೈರ್ಯವಂತಾತನಿನಾದ ಭೀತಿ ನಿಜಬಾಲ್ಯದೊಳುಣ್ಮಿದ ಲಜ್ಜೆ ಹೃತ್ಸಮುದ್ಭೂತನಿನಾದ ಸೊರ್ಕು ಸುಚರಿತ್ರತೆಯಿಂ ಸಮಸಂದ ಸೌಷ್ಠವಂ ಚೇತನದೊಳುಣ್ಮೆ ಕನ್ನೆ ತಳೆದಳ್ ಕಿಲಿಕಿಂಚಿತಭಾವಚೇಷ್ಟೆಯಂ (ಚಂದ್ರಪ್ರ. ೫-೧೨೨) [ಸಂ.]

**ಹೃದಯ** (ನಾ). ೧. ಎದೆ; ವಕ್ಷಸ್ಥಳ: ನಾಭಿ ಚುಬುಕಂ ಹೃದಯಂ ತಲೆ . . . ಪುರ್ಬುಗಳೆಂಬೆಡೆಯಂ ಮಹಾಹಿ ಕೊಂಡೊಡೆ ಗರುಡಾಂಗಮೆತ್ತಲರಿದೆಂದೊಡೆ ಪೇೞ್ದುಱಿದಂಗೆ ಸಾಧ್ಯಮೇ (ಲೋಕೋಪ. ೧೧-೪); ವಸ್ತು ಹೃದಯದಲುಂಟೆಂಬು ನೆನೆಯದಿರೋ ವಸ್ತು ಭ್ರೂಮಧ್ಯದಲುಂಟೆಂದು ಭ್ರಮಿಸದಿರೋ (ಅವಚಂ. ೨೧೭-೯೪೮). ೨. ಮನಸ್ಸು; ಅಂತಃಕರಣ: ಹೃದಯದೊಳೊದವಿದ ಕತ್ತಲೆ ಚೆದಱುವಿನಂ ಮಂಗಳಪ್ರದೀಪದವೋಲಭ್ಯುದಯಕರನೆನಿಪ ನಂದನನದೆಂದು ತೊಳಗುವನೊ ಕಾಂತೆಯರ ಕರತಳದೊಳ್ (ಕಾದಂಪೂ. ೩-೩೭); ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಿಗೆಯನೊತ್ತಯ್ಯಾ (ಬಸವ. ೪೯೯) ಆತನ ಹೃದಯದಲ್ಲಿ ಇಷ್ಟು ತೀವ್ರವಾದ ಭಾವನೆ ಬರದಿದ್ದರೆ . . . ತಪಸ್ಸಿಗೆ ತೆರಳುವುದೆಂತು (ಮಹಾಣ. ೨೪). ೩. ದಯೆ;

ಕರುಣೆ: ಯಾರಿಗೆ ಗೊತ್ತಿತ್ತು, ಇಷ್ಟೊಂದು ಬೆಲೆಯ ಬಲ್ಲವನಲ್ಲಿ ಹೃದಯ ಎಳ್ಳಷ್ಟೂ ಇಲ್ಲವೆಂದು (ಇಪ್ರಕ. ೨೭೧). ೪. (ಆಲಂ) ಸಾರವತ್ತಾದ ಭಾಗ; ತಿರುಳು: ಇದು ಸಕಲ ಪೌರಾಣವೇದದ ಹೃದಯ ಮುನಿ ವಾಲ್ಮೀಕಿರಚಿತವು (ಕೌಶಿರಾ. ೪೯-೫೮). ೫. ಗುಟ್ಟು; ರಹಸ್ಯ: ಅದು ನಿಮಿತ್ತದಲಾತ್ಮವಿದ್ಯಾಹೃದಯಾಪಾದೀ ಗ್ರಂಥವನು ಪೇಳಿದನು (ಅಮೃತ. ೧-೧೨). [ಸಂ.]

**ಹೃದಯಂಗಮ** (ಗು) ೧. ಹೃದಯಸ್ಪರ್ಶಿಯಾದ; ರಮಣೀಯವಾದ: (ನಾ). ೨. ಹೃದಯಸ್ಪರ್ಶಿಯಾದುದು; ರಮಣೀಯವಾದುದು: ವಿಷಯಾಸಕ್ತಿಯೊಳಾಯಾಸ್ಯಕಿನಿರತರಾಗಿರ್ಪ ಪ್ರಾಕೃತಜನಂಗಳ ಗಮನಮೇ ಸಮಸ್ತವೇದಿಗೆ ಹೃದಯಂಗಮಮಾಗದದುಮಂ ನೀಮೆ ಪೇಳ್ಮೆಂದವರೊಳ್ ಪರೀಕ್ಷಾಕ್ಷಮೋದಾರ ವೀರವಾಕ್ಯಂಗಳಂ ನುಡಿಯುತ್ತುಂ (ಶಾಂತಿಪು. ೪-೧೦೨ ವ); ಹೃದಯಂಗಮಮಪ್ಪಿನೆಗಂ ತದೀಯವಚನಾಮೃತಂಗಳಮೃತವಧೂಗಾಸ್ಪದಮಂ ಪೊರ್ದುವ ಬಗೆಯಿಂ ತಡಸುತ್ತುಮೆಂದಂ ಜಿನೇಂದ್ರಚಂದ್ರನತಂದ್ರಂ (ಅಜಪು. ೬-೮೫); ಆಗಮಶಾಸ್ತ್ರದ ಪ್ರತಿಮಾಲಕ್ಷಣದಲ್ಲಿ ಎಲ್ಲಾ ಮೂರ್ತಿಗಳ ಲಕ್ಷಣವನ್ನೂ ಹೃದಯಂಗಮವಾಗಿ ವರ್ಣಿಸಿದ್ದಾರೆ (ಭಾರದ. ೬೭). ೩. ಹೃದಯ ಸ್ಪರ್ಶಿಯಾದ ಮಾತು; ಮನಮುಟ್ಟುವ ವಚನ: ''ಹೃದಯಂಗಮಂ ನೆಟ್ಟನೆ ಮನಂಬುಗುವ ನುಡಿಯಕ್ಕುಂ'' (ಮಂಗರಾ. ೨೭-೨). [ಸಂ.]

**ಹೃದಯಂಗುಡು, ಹೃದಯಗೊಡು** (ಕ್ರಿ). ಮನಸ್ಸನ್ನು ಕೊಡು: ಹೃದಯಂಗುಡದುದನಱಿಯದೆ ಪದುಮಿನಿ ಮುಗುಳ್ದುಲಿಪಿ ಕೈಯ್ಯನಿಕ್ಕುವ ಶಶಿಯಂ ಪದೆದೀಕ್ಷಿಸಿ ಮುಗಿ ನಗುವಂದದಿನಲರ್ದುದು ನೋಡೆ ನಾಡೆ ಕುವಲಯನಿವಹಂ (ಕುಸುಮಾ. ೪-೪೪). **ಹೃದಯಗೊಡು**: ಸಾವಿಗಣಿಸರು ಮನದಿ ಸತ್ಕಪ ಭಾವಿಸರು ಹುಸಿಯೊಲುಮೆದೋಱುವರಾವ ಪರಿಯಲಿ ಹೃದಯಗೊಡದನೃತಗಳನಾಡುವರು (ನಳಚ. ೩. ೨೫). [ಹೃದಯ + ಕುಡು$_1$ (< ಕೊಡು$_1$)]

**ಹೃದಯಂಗೊಳ್** (ಕ್ರಿ). ಹೃದಯವನ್ನು ತಾಗು; ಮನಸ್ಸನ್ನು ಮುಟ್ಟು: ಅಂಗನೆ ಹೃತನಾದಂ ಹೃದಯಂಗೊಳ್ಳೇ ನಿನ್ನ ಗೀತರಾಗದೊಳೀಗಳ್ ತುಂಗತರವೇಗಶಾಲಿ ಕುರಂಗದೆ ಹೃತನಾದ ತೆರದೊಳೀ ದುಷ್ಯಂತಂ (ಶಾಕುಂತ. ೩-೫). [ಹೃದಯ + ಕೊಳ್$_1$]

**ಹೃದಯಂಬುಗಿಸು** (ಕ್ರಿ). ಮನಮುಟ್ಟುವಂತೆ ಮಾಡು; ಹೃದಯಸ್ಪರ್ಶಿಯಾಗಿಸು: ಹೃದಯಂಬುಗಿಸಿ ಮನೋಜಾಗ್ನಿದಗ್ಧೆಯುಪ್ಪವಳನೆನಗಮನುತಾಪಮನಿಂತೂದವಿಸಿದ ನಿನ್ನ ಸಂಸರ್ಗದೊಳಿನ್ನಿರಲಾಗದೆಂದು ನಸುನಗೆನಗುತುಂ (ವರ್ಧಪು. ೪-೮೮).

[ಹೃದಯಂಬುಗು + - ಇಸು$_3$]

**ಹೃದಯಕ್ರಿಯೆ** (ನಾ). ಹೃದಯದ ಚಟುವಟಿಕೆ,— ಕಾರ್ಯ; ಉಸಿರಾಟ: ಅಂತರಂಗದಲ್ಲೇ ತುಂಬಿದ ದುಃಖದ ತೀವ್ರತೆ ಕಣ್ಣೀರಾಗಿ ಹೊರಗೆ ಹರಿದು ಬರಬೇಕು, ಇಲ್ಲವಾದರೆ ಅಷ್ಟೂ ದುಃಖದ ಭರವನ್ನು ಭರಿಸಲಾರದೆ ಹೃದಯಕ್ರಿಯೆ ನಿಂತು ಹೋದೀತು (ಹೇಮಕೂ. ೪೮); ವಿಷಮತೆ ದೇಹದಲ್ಲಿ ಹೆಚ್ಚಾದಾಗ ಹೃದಯಕ್ರಿಯೆ ನಿಲ್ಲುತ್ತದೆ (ಕೆಲರೋ. ೨೧). [ಸಂ. ಹೃದಯಕ್ರಿಯಾ]

**ಹೃದಯಗಾಣ್** (ಕ್ರಿ). ತಿರುಳನ್ನು ಕಾಣು,-- ತಿಳಿ: ಬಹಳ ಶಾಸ್ತ್ರದ ಹೃದಯ ಗಂಡಾಗಿಹ ಸುಖವು ತಾನಾಗಿ ಮುತ್ತೆಯು ಕುಹಕಬುದ್ಧಿಯ ಚಿಂತೆಯನು ತ್ಯಜಿಸುವನುದಲ್ಲವನು (ನಿಭಾಗ. ೧೧-೨೦-೩೫). [ಹೃದಯ + ಕಾಣ್]

**ಹೃದಯಗೊಡು** 'ಹೃದಯಂಗುಡು' ನೋ.

**ಹೃದಯಜ್ವರ** (ನಾ). ಮನಸ್ಸಿನಲ್ಲಿ ಉಂಟಾಗುವ ತಾಪ; ಪ್ರೇಮಜ್ವರ: ಅವಳ ಆರಾಧನೆಗಾಗಿ ನನ್ನನ್ನು ಸೆಳೆದೊಯ್ದು ಈ ಉದ್ರೇಕ ಪಾದಾಕ್ರಾಂತನಾಗಿ ಕಣ್ಣೀರು ಕರೆಯುವಂತೆ ಮಾಡಿದ ಉನ್ಮಾದ, ಪಂಚಪ್ರಾಣಗಳನ್ನೂ ಸುಡುತ್ತಿದ್ದ ಹೃದಯಜ್ವರ ಇದೆಲ್ಲಿ, ಆ ಕಣಿವೆಯ ಹುಡುಗಿಯ ಮೇಲಿನ ಪ್ರೇಮವೆಲ್ಲಿ? (ಯೋಧಪು. ೪೯). [ಸಂ.]

**ಹೃದಯದಟ್ಟು** (ಕ್ರಿ). ಅಂತಃಕರಣಕ್ಕೆ ಗೋಚರವಾಗು; ಮನವರಿಕೆಯಾಗು; ಮನದಟ್ಟು: ಹೃದಯದಟ್ಟಿತೆ ಮೂಱುಜಗದಂದ ಲಾಲಿಸಿನ್ನದರುದ್ಭವಗಳವಿಷ್ವೆಂದು ಸದರದೊಳಱಿವಂತೆ ರಜ್ಜುವೆಂಬಳತೆಯೊಳೊದವಿ ಸೂಚಿಸಿದವೆವೀಗ (ಭರಚ. ೬೭-೭೯).

[ಹೃದಯ + ತಟ್ಟು$_1$]

**ಹೃದಯದಾರಿದ್ರ್ಯ** (ನಾ). ಅಂತಃಕರಣವಿಲ್ಲದಿರುವಿಕೆ; ಕಟುಕತನ: ಈ ಬಗೆಯಾದ ಹೃದಯದಾರಿದ್ರ್ಯಕ್ಕೂ ಒಂದು ಮಿತಿಯಿರಬೇಡವೆ ? (ಹೊಸಕ್ಕ. ೪೫); ಶ್ರೀಸಾಮಾನ್ಯನ ಹೃದಯದಾರಿದ್ರ್ಯ, ಕರ್ತವ್ಯದಾರಿದ್ರ್ಯ, ಬುದ್ಧಿದಾರಿದ್ರ್ಯಗಳು ಕರುಣೆಯ ದಾರಿಯನ್ನು, ಕಾಯುತ್ತ ಅನಿರ್ವಾಹದ ಬದುಕಿಗೆ ಆಳಾಗಿರುವವರಿಗೆ ಕಾದಂಬರಿಗಳು ಏನು ಕೆಲಸ ಮಾಡಿಯಾವು ? (ಪಂಜಪಂ. ೭ ಮುನ್ನುಡಿ). [ಸಂ.]

**ಹೃದಯದೌರ್ಬಲ್ಯ** (ನಾ). ೧. ಹೃದಯದ ಕಾರ್ಯಚಟುವಟಿಕೆಯಲ್ಲಿ ಕಾಣಿಸಿಕೊಳ್ಳುವ ದುರ್ಬಲತೆ,--ಅಶಕ್ತಿ: ಅವರಿಗೆ ಚಿಕ್ಕವಯಸ್ಸಿನಲ್ಲಿಯೇ ಹೃದಯದೌರ್ಬಲ್ಯ ಕಾಣಿಸಿಕೊಂಡಿತ್ತು (ರೂಪ). ೨. ಮನಸ್ಸಿನ ಅಶಕ್ತತೆ: ಕ್ಷುದ್ರವೂ ದರಿದ್ರವೂ ಆದ ಹೃದಯದೌರ್ಬಲ್ಯವೆನ್ನು ತೆಗೆದೂಗೆದು ಕ್ಲೈಬ್ಯಮನೋಭಾವವನ್ನು ಕಿತ್ತೊಗೆದು ಸ್ಥಿರಚಿತ್ತನಾಗಿ ಎದ್ದು ನಿಲ್ಲು (ಭಾರದ. ೧೧೨). [ಸಂ.]

**ಹೃದಯದ್ರಾವಕ** (ಗು). ೧. ಹೃದಯವನ್ನು ಕರಗಿಸುವಂತಹ; ಮನಕರಗಿಸುವ: ನೀರಿನಲ್ಲಿ ನಡೆದ ಹೃದಯದ್ರಾವಕಚಿತ್ರವು ಕಣ್ಣೆದುರಿಗೆ ಕಟ್ಟಿತು (ಮೇದಿಮು. ೧೬೨). (ನಾ). ೨. ಹೃದಯವನ್ನು ಕರಗಿಸುವಂತಹುದು; ಮನಸ್ಸನ್ನು ಕರಗಿಸುವಂತಹುದು: ಇದರಲ್ಲಿಯ 'ಮನುವಿನ ರಾಣಿ' ಎಂಬ ಕಥೆಯು ಹೃದಯದ್ರಾವಕವಾಗಿದೆ (ಕುಂಕುಮ. ೭೦). [ಸಂ.]

**ಹೃದಯಪರಿವರ್ತನೆ** (ನಾ). ಅಂತಃಕರಣದ ಮಾರ್ಪಾಟು; ಮನಸ್ಸಿನ ಬದಲಾವಣೆ: ಅಗ್ರಜನ ಹೃದಯಪರಿವರ್ತನೆಯನರಿಯದಾ ಸುಗ್ರೀವನಿಕ್ಕಿದರೆ ಬಂಡೆಗಳನಂಗ್ಯೆಯ ದಾಂಡಿನಿಂ ಪೊಡೆಸಂಡನಾಡುತ ಕೆಲಕ್ಕಣೆದು . . . ಶಾರ್ದೂಲಮಂ ಭೇರುಂಡನೆತ್ತುವೋಲ್ ತಮ್ಮನಂ ಪೊತ್ತು, ತಾಯೂರ್ಗೆ ಧಾವಿಸಿದನೈ (ಶ್ರೀರಾಮಾ. ೩೧೧-೨೬೭). [ಸಂ. ಹೃದಯಪರಿವರ್ತನ]

**ಹೃದಯಪ್ರಮೋದ** (ನಾ). ಮನಸ್ಸಿಗೆ ಉಂಟಾಗುವ ಸಂತೋಷ: ಹೃದಯಪ್ರಮೋದಮದಿರಾಮದದಿಂ ಮೆಯ್ಮಱೆದು ಮೇಲುದಂ ಮಱೆದಿರ್ದಾಡಿದುದು ಪಱಿ ಮಾಣ್ದೊಡಂ ಮಾಣದೆ ಮೆಚ್ಚಿದ ತೆಱದಿನಾಪ್ತವೃದ್ಧಕದಂಬಂ (ಪುಷ್ಪಪು. ೪-೩೭).

[ಸಂ.]

**ಹೃದಯಪ್ರಿಯ** (ಗು). ೧. ಮನಸ್ಸಿಗೆ ಹತ್ತಿರವಾದ,—ಇಷ್ಟವಾದ. (ನಾ). ೨. ಮನಸ್ಸಿಗೆ ಬೇಕಾದವನು: ಹೃದಯಪ್ರಿಯನ ಸಮಾಗಮನ ದೃಢಪ್ರತ್ಯಾಶೆಯಿಂದೆ ಘೋರತಪಃಕ್ಲೇಶದಿನೊಂದಿ ನಿಂದಗೆಡೆಯಲ್ಲದ ನಿನ್ನಂ ನೀನಿದೇಕೆ ನಿಂದಿಸಿದಪ್ಪೇ (ಕಾದಂಉ. ೬೨೨). [ಸಂ.]

**ಹೃದಯಬಂಧ** (ನಾ). ಎದೆಯ ಕಟ್ಟುಳ್ಳವನು; ವಕ್ಷಸ್ಥಲವುಳ್ಳವನು: ಅಂತು ದೃಢಕಠಿನಹೃದಯಬಂಧನಂ ಜರಾಸಂಧನಂ ಕೊಂದುಮಾತನ ಮಗಂ ಕ್ಷೇಮಧೂರ್ತಿಯಂ ರಾಜ್ಯದೊಳ್ ನಿಱಿಸಿ (ಪಂಪಭಾ. ೬- ೨೭ ವ). [ಸಂ.]

**ಹೃದಯಭವ** (ನಾ). ಮನಸ್ಸಿನಲ್ಲಿ ಜನಿಸಿದವನು; ಮನ್ಮಥ; ಕಾಮ: ಹೃದಯಭವ ಪ್ರಯಾಣಪಟಹಧ್ವನಿಯೆಂಬಿನಮುತ್ತಲುಂ ಪೊದಟ್ದೊದವಿದ ರತ್ನನೂಪುರಕಲಾಪಕಲಧ್ವನಿಗಂಚೆವಿಂಡು ತಂಡದಿನುಲಿವುತ್ತಿರಲ್ . . . ಏಱಿದಳ್ ತರುಣಿ ತನ್ನಯ ರನ್ನದ ಕನ್ನಮಾಡಮಂ (ಕಾದಂಉ. ೧೯೮). [ಸಂ.]

**ಹೃದಯಭಾರ** (ನಾ). ಮನಸ್ಸಿನ ತಳಮಳ; ಮನೋದುಃಖ: ಅಂತೆ ಮೇಣ್ ಇರುಳೊಳುಂ ಘೋರಾಂಧಮದ್ಮಮಂ ಪೀರ್ದು ಮೂರ್ಛೆಗೆ ಸಂದ ಮೌನಮತಿ ನಿಮ್ನರಂ, ಕಠಿನಂ, ಭಯಾನಕಂ ಹೃದಯಭಾರಂ, ಮಹಾಕ್ರೂರಂ! (ಶ್ರೀರಾಮಾ. ೮೯-೨೯೫). [ಸಂ.]

**ಹೃದಯರೋಗ** (ನಾ). ಹೃದಯದ ವ್ಯಾಧಿ: ತಮಗೆ ಹೃದಯರೋಗ ಕಾಣಿಸಿಕೊಂಡ ಸಂಗತಿ ಅವಳಿಗೆ ತಿಳಿದಿರಲಾರದು (ವಂಶವೃ. ೪೫೨). [ಸಂ.]

**ಹೃದಯವಂತಿಕೆ** (ನಾ). ಸಹೃದಯತೆ; ಕಾರುಣ್ಯ: ದುಃಖದಲ್ಲಿದ್ದವರನ್ನು ಸಮಾಧಾನಪಡಿಸುವ ಹೃದಯವಂತಿಕೆ ಇರುವುದು ಒಳಿತಲ್ಲವೆ ? (ಗಾಳಿಗು. ೭೮); ತಾಯ್ಗರುಳನ್ನೂ ಅಕ್ಕನ ಅಕ್ಕರತೆಯನ್ನೂ ಅವನು ಕುಸುಮಾನ ಹೃದಯವಂತಿಕೆಯಲ್ಲಿ ಕಂಡಿದ್ದ (ಸಮಜೀ. ೪೪೭). [ಹೃದಯವಂತ$_1$ + - ಇಕೆ]

**ಹೃದಯವಲ್ಲಭ** (ನಾ). = ಹೃದಯಪ್ರಿಯ ೨: ಹೃದಯವಲ್ಲಭ ಕನ್ನಡಿಯ ಮಧ್ಯದಲ್ಲಿ ಉದ್ಭಿನ ಬೀಜವನು ಹಾಯ್ಕಿದಡೆ ಬೀಳುವುದೆನಿತು ತಳುವಿಂತನಿತು ಮಾತ್ರದಲಿ . . . ಶಿವನಂ ಕೀರ್ತಿಸಾ ಪ್ರತ್ಯಕ್ಷವಾದಹನು (ಬಸವು. ೬೨-೩೫). [ಸಂ.]

**ಹೃದಯವಿದ್ರಾವಕ** (ಗು). ೧. ಎದೆಯನ್ನು ಕರಗಿಸುವ; ಮನಸ್ಸನ್ನು ಕಲಕುವ: ನನ್ನ ಚಿಕ್ಕತಮ್ಮ ಒಂದು ಕಥೆ, ಅಲ್ಲ ನಡೆದ ಸಂಗತಿ ಹೇಳಿದ, ದುರಂತ ಹೃದಯವಿದ್ರಾವಕ ಸಂಗತಿ (ಸುವಸಂ. ೧೫). (ನಾ). ೨. ಮನಸ್ಸು ಕರಗುವಂತಹುದು; ಎದೆಯನ್ನು ಕಲಕುವಂತಹುದು: ವಿಧಿ ತನ್ನ ಸಮಸ್ಯೆಗೆ ಬಹಳ ಸುಲಭವಾದ, ಆದರೂ ಹೃದಯವಿದ್ರಾವಕವಾದ ಉತ್ತರಕೊಟ್ಟಂತಾಯಿತು (ಯೋಧಪು. ೧೩). **[ಸಂ.]**

**ಹೃದಯವೈಶಾಲ್ಯ** (ನಾ). ಉದಾರವಾದ ಮನೋಭಾವನೆ: ಪಿರಿಯಣ್ಣನಂ ಚಿರದಿನಂ ಬೆಂಬಿಡದೆಯಿರ್ದ ಲಕ್ಷ್ಮಣದೇವನೆಸದನಯ್ ರಾಗಾನುರಾಗದಲಿ, ವೇಗದಲಿ, ರಭಸದಲಿ ಹೃದಯವೈಶಾಲ್ಯದಲಿ (ಶ್ರೀರಾಮಾ. ೨೬-೬೮೭). **[ಸಂ.]**

**ಹೃದಯಶೂನ್ಯ** (ನಾ). ಅನುಕಂಪವಿಲ್ಲದವನು; ಮರುಕವಿಲ್ಲದವನು; ಕಠಿನಾತ್ಮ: ಕುದಿಯದ ಕೂಳಿಂದ ಹದುಳದಂಬಲಿ ಲೇಸು ಹೃದಯಶೂನ್ಯರು ಗಳೊಲಪಿಂದ ಅರಿದರಲಿ ಕದನವೇ ಲೇಸು (ಸರ್ವಜ್ಞ. ೮೦೧). **[ಸಂ.]**

**ಹೃದಯಶೂಲೆ** (ನಾ). ೧. ಮನೋವ್ಯಥೆ; ದುಃಖ; ಖೇದ: ಮೆಹರ ಉನ್ನೀಸೆಯ ಮೇಲೆ ಸೆಲಿಮನು ತೋರುತಿದ್ದ ಅನುರಾಗದ ಲಕ್ಷಣಗಳನ್ನು ನೋಡಿ, ಲುತ್ಫಉನ್ನೀಸೆಗೆ ಎಷ್ಟೊಂದು ಹೃದಯಶೂಲೆಯಾಗಿದ್ದಿತೋ ಬೇಗಂಗೂ ಅಷ್ಟೇ ಹೃದಯಶೂಲೆಯಾಗಿದ್ದಿತು (ಕಪಾಕುಂ. ೬೬). ೨. ಹೃದಯಕ್ಕೆ ಸಂಬಂಧಿಸಿದ ರೋಗ; ಹೃದ್ರೋಗ: ಮೆಣಸು ಗ ೧, ಶುಂಠಿ, ಇದರ ಚೂರ್ಣವಂ ಮಾಡಿ ಗ ೩ ಘನ ಬಿಸಿನೀರಲ್ಲಿ ಕೊಳ್ಳಲು ವೀರ್ಯವರ್ಧನ ಕಾಸ, ಶ್ವಾಸ, ಹೃದಯಶೂಲೆ ಇಷ್ಟು ಮಾಣುವುವು (ವಿಷ್ಣುವಿ.೯೮). [ಹೃದಯ + ಶೂಲೆ$_1$]

**ಹೃದಯಸಂಪನ್ನತೆ** (ನಾ). ಮನಸ್ಸಿನ ಹೆಚ್ಚಳತೆ; ಉದಾರತೆ: ಬುದ್ಧಿನಿಷ್ಠತೆ ಹೃದಯಸಂಪನ್ನತೆ, ಸಾತ್ವಿಕತೆ . . . ಕ್ರಿಯಾಶಕ್ತಿ — ಈ ಐದು ಶಕ್ತಿಗಳನ್ನು ಮಾನವನು ತನ್ನಲ್ಲಿ ಬೆಳಸಿಕೊಳ್ಳಬೇಕಾಗಿದೆ (ನವ್ಯಕಾ. ೧೨). **[ಸಂ. ಹೃದಯಸಂಪನ್ನತಾ]**

**ಹೃದಯಸಂವಾದ** (ನಾ). ಮನಸ್ಸಿನಲ್ಲಿ ಉಂಟಾಗುವ ಚರ್ಚೆ,—**ವಾದ**: ಕಥೆಯಲ್ಲಿ ತೋರುವ ರತಿ, ಉತ್ಸಾಹ, ಶೋಕ ಮೊದಲಾದವಕ್ಕೆ ಸಂವಾದಿಯಾದ ವಾಸನೆಗಳು ಯಾವ ವಿಳಂಬವೂ ಇಲ್ಲದೆ ಇವನಲ್ಲಿ ಉಕ್ಕಿ ಅನುಭವವಿಷಯವಾಗುತ್ತದೆ. ಇದಕ್ಕೆ "ಹೃದಯಸಂವಾದ" ಎಂದು ಹೆಸರು (ಭಾರಮಿಾ. ೩೭೬). **[ಸಂ.]**

**ಹೃದಯಸ್ಥ** (ಗು). ಹೃದಯದಲ್ಲಿ ಇರುವ; ಮನಸ್ಸಿನಲ್ಲಿ ನೆಲಸಿದ: ಬೆರಲ್ಕೆಕಿಲಿಂ ಮುರುಂಟಿರೆ ವಿರಹಿಯ ಹೃದಯಸ್ಥ ವಿರಹವಹ್ನಿಗೆ ಕೈಯಂ ಸ್ಮರನೊಡ್ಡಿ ಕಾಸಿ ಬಿಲ್ಲಂ ತಿರುವೊಯ್ದಿಸುತಿರ್ಪನಸಿತಶರರುಹಶರದಿಂ (ರಾಜಶೇ. ೯-೨೧). **[ಸಂ.]**

**ಹೃದಯಸ್ಥಿತ** (ಗು). ಹೃದಯದಲ್ಲಿ ನೆಲಸಿದ,—**ಸ್ಥಾಪಿತವಾದ**: ಹೃದಯಸ್ಥಿತ ನೃಪರುಮನುರುಪಿದಪುದೆನಲ್ ಪತಿವಿಯೋಗ[ಖಿದ್ಯದ್ವನಿತಾ]ಹೃದಯಂಗಳೊಳಾವಗ ಮುರಿವುದು ಕಡುಪಿನೊಳಾ ನೃಪಪ್ರತಾಪಪ್ರಜ್ವಲನಂ (ಕಾದಂಪೂ. ೧೪); ಹೃದಯಸ್ಥಿತಮದನಂ ಸಂಮದದಿಂ ಜಳಕೇಳಿಗೆಳಸಿ ತಾನುಂ ಪಿಡಿದೆತ್ತಿದ ಪೊನ್ನ ಕಳಶಮೆನಿಸಿದುದ ದಜೊಳಿದಿರ್ಚಿದ ವಧೂಜನದ ಕಳಶಕುಚಂ (ರಾಜಶೇ. ೧೦-೮೬). **[ಸಂ.]**

**ಹೃದಯಸ್ಪರ್ಶಿ** (ಗು). ೧. ಮನಮುಟ್ಟುವ; ಹೃದಯಂಗಮವಾದ. (ನಾ). ೨. ಮನಮುಟ್ಟುವಂತಹುದು; ಹೃದಯಂಗಮವಾದುದು: ಅದು ನಿಜವಾಗಿಯೂ ಹೃದಯಸ್ಪರ್ಶಿಯಾದ ಸಂಗತಿ (ಪುನರು. ೩೪೧); ಅವರು ಅವನ ಮಸ್ತಕವನ್ನು ನೇವರಿಸುತ್ತ ಬೀಳ್ಕೊಡುವ ದೃಶ್ಯ ಹೃದಯಸ್ಪರ್ಶಿಯಾಗಿತ್ತು (ಹೊಸಕ್ಷಿ. ೪೦). **[ಸಂ. ಹೃದಯಸ್ಪರ್ಶಿನ್]**

**ಹೃದಯಹಾರಿ** (ಗು). ಮನಸ್ಸನ್ನು ಸೂರೆಗೊಳ್ಳುವ; ಮನೋಹರವಾದ: ಬಹಳ ಮಧುಪಾನಕಂ ಹೃದಯಹಾರಿ ವಿರುತಾಳಿಮಾಳಿಕಾಕಮನೀಯಂ (ವಸ್ತುಕೋ. ೩೨-೧೨). **[ಸಂ. ಹೃದಯಹಾರಿನ್]**

**ಹೃದಯಾಂತರಾಳ** (ನಾ). ಒಳಮನಸ್ಸು; ಅಂತರಂಗ: ತನ್ನ ಹೃದಯಾಂತರಾಳದಲ್ಲಿದ್ದ ಭಾವನೆಯನ್ನು . . . ಮುಂದುವರಿಸಿದಳು (ಪುನರು. ೨೧೭). **[ಸಂ.]**

**ಹೃದಯಾಂಧಕಾರ** (ನಾ). ಮನಸ್ಸಿಗೆ ಆವರಿಸಿದ ಅಂಧಕಾರ,—**ಅಜ್ಞಾನ**: ಕುಲದವನ ಹೃದಯಾಂಧಕಾರವ ಕಳಚಲೆಂದು ಹಿಮಾಂಶು ಹರಹಿದನೆಳೆಯ ಬೆಳುದಿಂಗಳನೆನಲು ಸುರರಿಪುಕುಲಾಂತಕನು ತೊಳಪ ದಶನಮಯೂಖತತಿ ಹೊಳೆಹೊಳೆಯೆ ನುಡಿದನು (ಕುಮಾ್ರವ್ಯಾ. ೮-೭೨). **[ಸಂ.]**

**ಹೃದಯಾಗ್ನಿ** (ನಾ). (ಪ್ರಣಯದ) ಅಂತರಂಗದ ತಾಪ,—**ಬೇಗೆ**: ಹೃದಯಾಗ್ನಿ ಪೆರ್ಚೆ ವನತತಿಗೆ ದವಾಗ್ನಿವೊಲಾಯ್ತದೆಂತು ಹರಿಯಿರ್ದಪನೀ ಹೃದಯಾಗ್ನಿಯೊಳಗ್ನಿಸ್ತಂಭನ ವಿದ್ಯೆಯನೀಗಳೆಂತು ಕಲ್ತನೊ ಸಖಿಯೇ (ಜಗವಿ. ೧೧-೪೮). **[ಸಂ.]**

**ಹೃದಯಾಧೀಶ** (ನಾ). ಪ್ರಾಣಕಾಂತ; ಹೃದಯೇಶ್ವರ: ಹೃದಯಾಧೀಶಂ ಕರುಳ್ಗಳ್ಪಳಿಸೆ ನುಡಿಸೆ ಮೇಲ್ವಾಯೆ ಲಲ್ಲೈಸೆ ಮೆಲ್ಪಿಂ ಮೊದಲೊಳ್ ಸರ್ವಾಕ್ಷಿಪಾತಂ ಬಟಿಕದು ನಯನಾರ್ಥಾವಲೋಕಂ . . . ಬಟಿಕ್ಕಾವದುಮಿಲ್ಲಾಯ್ತುಗ್ಗಳಂ ಕಾಮದಮಿನಿಯಳ ಸನ್ಮಾನದಿಂ ಮಾನಮಲ್ತೇ (ಅರ್ಧನೇ. ೩-೧೦೫). **[ಸಂ.]**

**ಹೃದಯಾಲು, ಹೃದಯಾಳು** (ಗು). ೧. ಪ್ರೀತಿಯುಳ್ಳ; ಒಲವುಳ್ಳ. **ಹೃದಯಾಳು**: (ನಾ). ೨. ಪ್ರೀತಿಯುಳ್ಳವನು; ಒಲವುಳ್ಳವನು: "ಸುಹೃದಯಂ ಹೃದಯಾಳು" (ವಸ್ತುಕೋ. ೧೦೧-೧೮). **[ಸಂ.]**

**ಹೃದಯಾವೇಶ** (ನಾ). ಅಂತರಂಗದ ಪರವಶತೆ; ಭಾವಾವೇಶ: ಅದೇ ತಾವು, ತಾವೇ ಅದು ಎಂಬ ಆತ್ಮೀಯತೆಯಿಂದ, ಅದನ್ನು ಎಸಗುವ ಚಿತ್ತನೈರ್ಮಲ್ಯ, ಮನೋದಾರ್ಢ್ಯ, ಹೃದಯಾವೇಶ ಅವರಲ್ಲಿ ತುಂಬಿತ್ತು (ಕಜಸಾ. XV.ಪೀಠಿಕೆ). **[ಸಂ.]**

**ಹೃದಯಾಳು** 'ಹೃದಯಾಲು' ನೋ.

**ಹೃದಯಿಸು** (ಕ್ರಿ). ಆಸ್ವಾದಿಸು; ಅನುಭವಿಸು: ಕುಳ್ತು ಗಿರಿಶಿರಶ್ಶಿಲೆಯ ಪೀಠದಿ, ಉಷಾನಿಶ್ಶಬ್ದಸುಪ್ತಿಯಿಂ ವಿಶ್ವಮೆಳ್ಚರ್ಪುದಂ ಧ್ಯಾನಿಸುತೆ ಹೃದಯಿಪನು ರವಿಯುದಯದವತಾರಮಂ (ಶ್ರೀರಾಮಾ. ೪೪೬-೨೬). [ಹೃದಯ + -ಇಸು$_3$]

**ಹೃದಯೇಶ** (ನಾ). ೧. ಪ್ರಾಣಕಾಂತ; ನಲ್ಲ. ೨. ವಿಷ್ಣು; ಕೃಷ್ಣ. ೩. [ಛಂದ] ವಿಷ್ಣುಗಣದ ಒಂದು ಪ್ರಕಾರ: ವಿಷ್ಣುಗಣಮೆಂತೆಂದೊಡೆ:- ೧. ಗೋವಿನ್ದಂ, ೨. ಹೃದಯೇಶಂ [ಪಾಠಾಂ. ಜಲಜಾಕ್ಷಂ, ನಯದಾಳ್ಮಂ] . . . ೬. ಶ್ರೀಪತಿ,೮. ಮುರರಿಪು (ಛಂದೋಂಬು. ೫-೨೪೦ ವ). **[ಸಂ.]**

**ಹೃದಯೇಶ್ವರ** (ನಾ). ಪ್ರಾಣಕಾಂತ; ಪ್ರಿಯ; ನಲ್ಲ: ತಾನು ಹೃದಯೇಶ್ವರನ ಪ್ರಾಣವಲ್ಲಭೆಯಾಗಿ, ರಾಣಿಯಾಗಿ ಬಾಳಿ ಸುಖಿಸುವೆನೆಂದಾಶಿಸಿದಳು (ಧರ್ಮಸಾ. ೭೧). **[ಸಂ.]**

**ಹೃದ್ಗತ** (ಗು). ೧. ಮನವರಿಕೆಯಾದ; ಮನದಟ್ಟಾದ. (ನಾ). ೨. ಮನಸ್ಸಿಗೆ ಬರುವುದು; ಮನವರಿಕೆ; ಮನದಟ್ಟು: ಊರ್ಧ್ವಾರ್ಧೋಮಧ್ಯಗತಾಸಮವಸ್ಥಿತಿಸ್ಮರಣಪರಿಣತಸಂಸ್ಥಾನವಿಚಯಮುಮಂ ಬೇಙೆವೇಙೆ ಹೃದ್ಗತಂ ಮಾಡಿ ಧರ್ಮಧ್ಯಾನಮಯನಾದಂ (ಶಾಂತಿಪು. ೯-೧೧೮ ವ); ಮನಸಿಜವಿಜಯರ್ ತಾಪಸರನು ನಯದಿಂ ಪೇಳ್ದರೊಲ್ದು ಹೃದ್ಗತದಿರವಂ (ಹಾಲಾಸ್ಯ. ೧-೧-೨೫); ಶಕುಂತಲೆ ಎಲೆಯ ಮೇಲೆ ಯಾವುದೋ ರಸದಿಂದ ಬರೆದು ದುಷ್ಯಂತನೆದುರು ತನ್ನ ಹೃದ್ಗತವನ್ನು ಬಿಚ್ಚಿಟ್ಟಳು (ಕರ್ನಾಕ. ೨). **[ಸಂ.]**

**ಹೃದ್ಗತಿ** (ನಾ). ಮನಃಸ್ಥಿತಿ; ಮನಸ್ಸಿನ ಇರವು: ಏಕೆಯೊ ಪಲವುಂ ನುಡಿಗಳ ನಾಕುಲವೆನೆ ನುಡಿವನೀತನಜ಼ಿವಿನ ಬೆಲೆಯಂ ಈ ಕೈಯ ನೆಲ್ಲಿಯಾದುದು ಲೋಕಜನೋದಂತಮೆಲ್ಲಮುಂ ಹೃದ್ಗತಿಯುಂ (ವಸ್ತವಂ. ೬-೪೫). **[ಸಂ.]**

**ಹೃದ್ಗದ** (ನಾ). ಹೃದಯಕ್ಕೆ ಸಂಬಂಧಿಸಿದ ಕಾಯಿಲೆ; ಎದೆಬೇನೆ: ಒದವಂ ಭವ್ಯ ಮುಖಾಂಬುಜಕ್ಕೆ ಮುದಮಂ ಸದ್ಧರ್ಮಚಕ್ರಕ್ಕೆ . . . ಹೃದ್ಗದಮಂ ದುರ್ಮತಕೌಶಿಕಕ್ಕೆ ಪಡೆಯುತ್ತಿಕ್ಷ್ವಾಕುವಂಶೇಂದ್ರಶೈಲದಿನತ್ಯೂರ್ಜಿತತೇಜನುದ್ಧರಿಸಿದಂ ತ್ರೈಲೋಕ್ಯನಾಥಂ ಜಿನಂ (ಪುಷ್ಪಪು. ೧೦-೨). **[ಸಂ.]**

**ಹೃದ್ಗಮ್ಯ** (ನಾ). ಹೃದಯಸ್ಪರ್ಶಿಯಾದುದು; ಮನಮುಟ್ಟುವಂತಹುದು: ಗಿರಿವನ ಪ್ರೀತಿ ತಾಂ ದೈವಕೃಪೆ ದಲ್ . . . ಉಪನಿಷತ್ತಿನ ಮಹಾಮಂತ್ರಾನುಭವಗಳುಂ ಹೃದ್ಗಮ್ಯವಿಲ್ಲಿ (ಶ್ರೀರಾಮಾ. ೩೨-೧೯೯); **[ಸಂ.]**

**ಹೃದ್ಗೋಚರ** (ನಾ). ಮನಸ್ಸಿಗೆ ತಿಳಿಯುವಂತಹುದು; ಹೃದಯಕ್ಕೆ ಗೋಚರಿಸುವಂತಹುದು: ಯತಿಪತಿ ಮುಖಾರವಿಂದೋದ್ಗತ ಋತುವಚನಂ ಸ್ವಕೀಯ ಹೃದ್ಗೋಚರಮಾಗೆ ತನೂದರಿಗಾ ಬೇಗದೊಳತಿ ಹಷವಿಷಾದಮಾದಮೇನೊದವಿದುವೋ (ಸುಕುಮಾ. ೯-೧೧೨). **[ಸಂ.]**

**ಹೃದ್ಭಲ್ಲ** (ನಾ). ಹೃದಯಕ್ಕೆ ಈಟಿಯಂತೆ ತೊಂದರೆಯನ್ನುಂಟು ಮಾಡತಕ್ಕುದು: ಬಗೆಗೊಳ್ಳ ತೋಳ್ಳಳ್ಳಿ ಕೋವಿದರ ಕಾಲ್ಗಳ್ಳಿ ನುಣ್ಣಲ್ಲ ಮುನಿಜನದ ಹೃದ್ಭಲ್ಲವು . . . ಎನೆ ವಿಲಾಸಿನಿಯರುಗಳೊಳ್ಳರೆಯದೆಸಕದಿಂ ಬಂದರ್ (ಉಷ್ಟವಃ. ೫-೨೪). [ಸಂ.]

**ಹೃದ್ಭವ** (ನಾ). ಮನಸ್ಸಿನಲ್ಲಿ ಹುಟ್ಟಿದವನು; ಮನ್ಮಥ ; ಕಾಮ: ಈಕೆ ಶೃಂಗಾರ ಸಮುದ್ರಮಂ ಕಡೆಯೆ ಹೃದ್ಭವನುದ್ಭವಿಯಾದಳೆಂದು ಕಣ್ಣಾರೆ ದಶಾಸ್ಯನೀಕ್ಷಿಸಿದನೀಕ್ಷಿಸಿ ಕಣ್ಣುಜಿದಾರೆ ಮನ್ಮಥಂ (ಪಂರಾಮಾ. ೯-೮೨). [ಸಂ.]

**ಹೃದ್ಯ** (ಗು). ೧. ಮನೋಹರವಾದ; ಸುಂದರವಾದ: ಹೃದ್ಯವ್ಯಾಕರಣಪ್ರಸನ್ನತರ ಪೂರ್ವಾಭ್ಯಾಸವಿನ್ಯಾಸ ತದ್ಧಿದ್ಧಸಂಪದಮಾಗಳಾಕ್ಷಣದೊಳಾದಾಶ್ಚರ್ಯಮಪ್ಪನ್ನಮೇಂ ಸದ್ಯಂ ಸಾರ್ದುದೊ ತತ್ಕುಮಾರಿಕೆಗೆ ಸಯ್ಪಿಂ (ಸುಕುಮಾ. ೭-೫೨); ಬಿದ್ದು ಪದದಲಿ ದಂಡದಂತಿರಲೆದ್ದು ನಿಂದಿರ್ದಚ್ಯುತನ ಮುನಿ ಹೃದ್ಯಮೂರ್ತಿಯ ನೋಡಿ ಪುಳಕಾಮೃತದಲೋಲಾಡಿ (ನಿಭಾಗ. ೧೦-೧೪-೮). ೨. ಒಳ್ಳಿತಾದ; ಪ್ರಿಯವಾದ: ಹೃದ್ಯಗುಣನಿಳಯನಾ ವಿಭುಸದೃಶನಿರೆ ಕನ್ನೆ ನಿನ್ನ ಪತಿಗೆಳಸುವಳೇ ಪ್ರದ್ಯೋತದ್ಯುತಿ ಗಲ್ಲದೆ ಖದ್ಯೋತದ್ಯುತಿಗೆ ನಳಿನಿ ಮೊಗಮಿತ್ತಪಳೇ (ಪುಷ್ಪಪು. ೭-೭೪). ೩. ಮನಸ್ಸಿನಲ್ಲಿ ಹುಟ್ಟುವ. ೪. ಮನಮುಟ್ಟುವ; ಚೆನ್ನಾಗಿ ತಿಳಿಯುವ. (ನಾ). ೫. ಮನೋಹರವಾದುದು; ಸುಂದರವಾದುದು: ಪದ್ಯಂ ಸಮಸ್ತಜನತಾಹೃದ್ಯಂ (ಕವಿರಾ. ೧-೩೦); ಅವಿಚಲಮಪ್ಪ ಲಕ್ಷ್ಮಿ ವಿವಿಧೋತ್ಕರ ಹೃದ್ಯಮೆನಿಪ್ಪ ವಿದ್ಯೆ ನೋಲ್ಪವರನುರಾಗಮಂ ಪಡೆವ ರೂಪು . . . ಆ ನೃಪನಲ್ಲಿ ತೋಱಲಾಱವು (ಮಲ್ಲಿಪು. ೩-೨೦); ಪದ್ಯಂ ವಧ್ಯಂ; ಗದ್ಯಂ ಹೃದ್ಯಂ ಹೃದ್ಯಮಪ್ಪ ಗದ್ಯದೊಳ್ ಪೇೞ್ದುದು (ರಾಮಾಶ್ವ. ೫-೧೪). ೬. ಒಳ್ಳಿತಾದುದು; ಪ್ರಿಯವಾದುದು: "ಪ್ರಾಗ್ರ್ಯಂ, ಪ್ರಾಗ್ರಹರಂ . . . ಮಂಜುಳಂ, ಹೃದ್ಯಂ, ಹಾರಿ . . . ಶುಭಂ, ಪೇಶಲಂ – ೨೯ ಒಳ್ಳಿತು" (ಹಲಾಯು. ೧೧೪-೪). [ಸಂ.]

**ಹೃದ್ಯತೆ** (ನಾ). ಮನಸ್ಸಿಗೆ ತಟ್ಟುವಂತಹುದು; ಅಂತಃಕರಣವನ್ನು ಮುಟ್ಟುವಂತಹುದು: ಕಾವ್ಯಕ್ಕೆ ಹೃದ್ಯತೆಯೆ ಒರೆಗಲ್ಲೆಂದೂ ಅದರ ಹಿರಿಮೆಯ ಅರಿವು ಅತಿ ಸುಲಭವೆಂದೂ ಹೇಳಲಾಗಿದೆ (ಕಸಾಚ. ೭೦). [ಸಂ. ಹೃದ್ಯತಾ]

**ಹೃದ್ಯವಿದ್ಯ** (ನಾ). ೧. ಹೃದಯಂಗಮವಾದ ವಿದ್ಯೆಗಳೆನ್ನು ಬಲ್ಲವನು,– ತಿಳಿದವನು: ಸಿರಿಯೊಲ್ಪಳೆ ಹೃದ್ಯವಿದ್ಯರಂ (ಶಮದ. ೮೮ ಪ್ರಯೋ.). ೨. ಸ್ವಾಧೀನವಾದ ವಿದ್ಯೆ: ಕಡಲೇೞಂ ಮುಗುಚಿಟ್ಟೊಡಂ ಕಲಿಯ ನಾನಾ ಹೃದ್ಯವಿದ್ಯಂಗಳಂ ಪಡೆದಷ್ಟಲ್ಲದೆ ಬರ್ಪುದೇ (ಸೋಮೇಶ. ೨೮). [ಸಂ.]

**ಹೃದ್ಯವಿದ್ಯೆ** (ನಾ). = ಹೃದ್ಯವಿದ್ಯ ೨: ಗುಣರತ್ನವಾರ್ಧಿ ನಾನಾವಿಧಸೌಖ್ಯ ಭಾಜನನುಪಾರ್ಜಿತಖೇಚರರಾಜಹೃದ್ಯವಿದ್ಯಾವಿಭವಂ ಮಗಂ ಜಿತವಿರೋಧಿನರೇಂದ್ರ ಬಳಂ ಮಹಾಬಳಂ (ಆದಿಪು. ೧-೭೩). [ಸಂ. ಹೃದ್ಯವಿದ್ಯಾ]

**ಹೃದ್ಯಾಂಗಿ** (ನಾ). ಮನೋಹರವಾದ ಅಂಗವುಳ್ಳವಳು; ಸುಂದರಾಂಗಿ; ಚೆಲುವೆ: ನೇತ್ರಾಂಬುಜಂ ಪಾಟಳಕಾಂತಿಶ್ರೀಯನೊಪ್ಪುತ್ತಿರೆ ತನುಲತೆ ಸೌರಭ್ಯಮಂ ಬೀಱೆ . . . ಲೀಲೆಯಿಂದುಪ್ಪವಡಿಸಿದಳ್ ಹೃದ್ಯಾಂಗಿ [ಪಾಠಾಂ. ನಿದ್ರಾಂಗಿ, ನೀದಾರ್ಂಗಿ] ಶಯ್ಯಾಗ್ರದಿಂದ (ಜಗವಿ. ೨-೭೮). [ಸಂ. ಹೃದ್ಯಾಂಗಿನ್]

**ಹೃದ್ಯೋಗ** (ನಾ). ಮನಸ್ಸಿನ ಆಸೆ; ಇಷ್ಟಾರ್ಥ; ಬಯಕೆ: ಆತಂ ಬಾಲಿದೇವಂ ಮತ್ತೋರ್ವಂಗೆಱಗೆನೆಂಬ ಪ್ರತಿಜ್ಞೆಯಂ ಪಲಂಬರಿಂ ಕೇಳ್ದು ಮನದೊಳು ಹೃದ್ಯೋಗಮಂ ತಾಳ್ದು (ಪುಣ್ಯಾಸ್ರ. ೫-೫೩ ವ); ಈಗಳುದಾತ್ತನಪ್ಪ ಪುರುಷೋತ್ತಮಸೂನುಗೆ ಭಾನುಗೀವ ಹೃದ್ಯೋಗದಿನಿರ್ದರರ್ಪಿನೆಗಮಿ ಖಳಚೌರ್ಯನುಮಿಂತು ತಂದನಿನ್ನೇಗುವೆನಿಲ್ಲಿ ಸಾವನೆನುತುಂ ತನುಮಧ್ಯೆ ವಿಮಾನದಿಂ ನೆಲಕ್ಕಾಗಳೆ ಜೋಲೆ (ನೇಮಿಪು. ೭-೧೭೦). [ಸಂ.]

**ಹೃದ್ಯೋಗಂಬಡು** (ಕ್ರಿ). ಇಷ್ಟಪಡು; ಬಯಸು: ಸುರೇಂದ್ರದತ್ತನೆಂಬೊಂ ಕಂಡು ನಿಜನಿವಾಸಕ್ಕೊಯ್ದು ಸ್ನಾನಾನ್ನ ಪಾನಾದಿಗಳಿಂ ತಣಿಪಿ ತತ್ಪ್ರಪಂಪಚಮೆಲ್ಲಮಂ ಬೆಸಂಗೊಂಡು ಹೃದ್ಯೋದಂಬಟ್ಟು ಸಿದ್ಧಾರ್ಥಂಗಿಂತೆಂದಂ (ಬಂಹರಿ. ೪-೧೨ ವ).

[ಹೃದ್ಯೋಗ + ಪಡು]

**ಹೃದ್ರೋಗ** (ನಾ). ೧. ಹೃದಯಕ್ಕೆ ಸಂಬಂಧಿಸಿದ ರೋಗ; ಹೃದಯದ ವ್ಯಾಧಿ: ದಶಮೂಲ . . . ಶಿವಫೃತ, ತೈಲಾನ್ನ ಸಹ ಎರಡು ಉಕ್ಕುಬರುವ ತನಕ ಕಾಸಿ ಸೇರು ಸಕ್ಕರೆ ಹಾಕಿ ಪ್ರಾತಃಕಾಲ ಆಮಲಕಪ್ರಮಾಣ ಸಿಂದೂರವನ್ನು ಹಾಕಿಕೊಳ್ಳಲು ಅರತಿ, ಹೃದ್ರೋಗಂ ಗುಣ (ವಿವ್ವವಿ. ೫೮); ಅಜೀರ್ಣಜ್ವರ, ಶ್ವಾಸರೋಗ . . . ಕರ್ಣರೋಗ, ಹೃದ್ರೋಗ, ವಾತರೋಗ, ಇವೇ ಮುಂತಾದ ರೋಗಗಳಿಂದ ಕೂಡಿದವರು ದಂತಧಾವನಕ್ಕೆ ಅನರ್ಹರೆಂದರಿವುದು (ಸಕಪ್ಪ. ೨೯). ೨. ಮನೋವ್ಯಥೆ; ದುಃಖ; ಖೇದ: ಭೋಗಂಗಳ್ ಸಲೆ ಮನದೊಳ್ ರಾಗಮನೊದವಿಸುಗುಮಪ್ಪೊಡನುಭವಿಕೆ ಮನೋರಸಜ್ಞನನುಭವಿಸುಗುಮೇ ರಾಗಮನೊದವಿಸದವು ಹೃದ್ರೋಗಮನೊದವಿಸೆ (ಆದಿಪು. ೩-೭೦); ತತುಪುತ್ರಂ ನೆಗಳ್ದಂ ನಿಜಾರಿಭಳವೊನಲ್ಲು ಬನ್ನಮಂ ಕಂನಮಂ ತತು ಪುತ್ರಂ ನೆಗಳ್ದಂ ನಿಜಾರಿ ತಳೆ[ಯ]ಲು ಹೃದ್ರೋಗಮಂ ಜೋಗಮಂ (ಕಇ. ೭೪-೧೨-೮; 1170); ಈ ಎಲ್ಲ ಪ್ರಕಾರಗಳಿಂದ ಕಿಟ್ಟಗೆ ಹೊಸ ಹೃದ್ರೋಗವು ಪ್ರಾರಂಭವಾಯಿತು (ಗಂಮಾಯಿ. ೧೨೨). [ಸಂ.]

**ಹೃದ್ರೋಗಗಜಕೇಸರಿ** (ನಾ). ಹೃದಯದ ಬೇನೆಗೆ ಉಪಯೋಗಿಸುವಂಥ ಒಂದು ಬಗೆಯ ಔಷಧಿ: ಹೃದ್ರೋಗಗಜಕೇಸರಿ:– ದಶಮೂಲ, ಪಂಚಲವಣ . . . ಸಹ ಎರಡು ಉಕ್ಕುಬರುವ ತನಕ ಕಾಸಿ ಸೇರು ಸಕ್ಕರೆ ಹಾಕಿ ಪ್ರಾತಃಕಾಲ ಆಮಲಕಪ್ರಮಾಣ ಸಿಂದೂರವನ್ನು ಹಾಕಿಕೊಳ್ಳಲು ಅರತಿ, ಹೃದ್ರೋಗಂ ಗುಣ (ವಿವ್ವವಿ. ೫೮).

[ಹೃದ್ರೋಗ + ಗಜಕೇಸರಿ]

**ಹೃದ್ರೋಗಿ** (ನಾ). ಹೃದಯರೋಗವುಳ್ಳವನು; ಹೃದಯದ ಬೇನೆಯುಳ್ಳವನು: ಅರಿಪುತ್ರ ಕಳತ್ರ ಧನಾಗ್ನಿರಾಜಬಾಧೋಪಹತನುದಾರಗುಣಂ ಪಾಪರತಂ ಸ್ವಭೃತ್ಯಕಲಹಂಸರುಜಂ ಹೃದ್ರೋಗಿ ದಿನಪನವರೋಹಿಣಿಯೊಳ್ (ಜಾತತಿ. ೯-೧೮).

[ಸಂ. ಹೃದ್ರೋಗಿನ್]

**ಹೃದ್ವಲ್ಲಭ** (ನಾ). ಹೃದಯವಲ್ಲಭ; ಪ್ರಾಣಕಾಂತ; ನಲ್ಲ: ನಲ್ಲರಗಲ್ಕೆ ಯಿಲ್ಲದೆಡೆಯಸ್ತಮಯಕ್ಕೆ ದಿನಾಧಿನಾಯಕಂ ಸಲ್ಲದ ತಾಣಮಂಗಜಶರಾಹತಿ ಪೊರ್ದದ ದೇಶಮುಳ್ಳೊಡಂತಲ್ಲಿಯೆ ಮಾಣ್ಕೆ ಪುಷ್ಪನನಮಂ ಬಿದಿಯೆಂದು ರಥಾಂಗಕಾಂತೆ ಹೃದ್ವಲ್ಲಭವಿಪ್ರಯುಕ್ತೆ ಬಗೆಗೆಟ್ಟು ನೆೞಲ್ದುದು ಪದ್ಮಪತ್ರದೊಳ್ (ಚಂದ್ರಪ್ರ. ೮-೭).

[ಸಂ.]

**ಹೃಲ್ಲಾಸ** (ನಾ). ಚಿಂತೆ; ಖೇದ: ಕೊಲೆಯಿಂದೊಂದಂ . . . ಅನಾಕುಲ ಮೆಂದಯ್ದನನಾಕುಳಂ ತೊಱೆದೊಡೇಂ ಹೃಲ್ಲಾಸಮೇ ಮಲಮೇ ತಲ್ಲಣಮೇ ಕೃತಾಂತಭಯಮೇ ಸಂತಾಪಮೇ ಬೇವಸಂ (ಶಾಂತಿಪು. ೭-೫). [ಸಂ.]

**ಹೃಲ್ಲೇಖ** (ನಾ). ೧. ಜ್ಞಾನ. ೨. ಚಿಂತೆ. ೩. ಮನೋವ್ಯಥೆ; ದುಃಖ. ೪. ವಿರಹ; ವಿಯೋಗ: "ಆಯಲ್ಲಕಂ, ಉತ್ಕಂಠಾ . . . ಹೃಲ್ಲೇಖ, ವಿರಹಃ, ವಿಯೋಗಃ – ಈ ೯ ವಿರಹಂ" (ಹಲಾಯು. ೧೨೨-೫೭). [ಸಂ.]

**ಹೃಷೀಕ** (ನಾ). ೧. ಜ್ಞಾನೇಂದ್ರಿಯ: "ಖಂ, ಅಕ್ಷಂ, ಇಂದ್ರಿಯಂ, ಸ್ರೋತಃ, ಹೃಷೀಕಂ, ಕರಣಂ – ಈ ೬ ಇಂದ್ರಿಯಂಗಳ್" (ಹಲಾಯು. ೮೮-೩೮೧); ಕಲ್ಪೋದ್ಭೂತ ದೇವರ್ ದಿವ್ಯಾಂಗನಾಶ್ರಂಗಾರಾಕಾರವಿಲಾಸಚತುರಮನೋಜ್ಞವೇಷ ರೂಪಾವಲೋಕನ ಮಾತ್ರದಿಂದಮ ಹೃಷೀಕಜನಿತವರಮಸುಖಮನೆಯ್ದುವರ್ (ತತ್ತ್ವಪ್ರ. ೧೮೨). ೨. ಏಳು ಬಗೆಯ ನರಕಗಳಲ್ಲಿ ಒಂದು: ಕ್ರಮದೊಳಸಂಜ್ಞೆಯಂ ಸರಿ ಸೃಪಾವಳಿಯುಂ . . . ಮನುಷ್ಯಮಸ್ತಿಮಿಕುಳಮುಂ ಹಿಮಾಂಶುನಯನಾಗ್ನಿಕಷಾಯಹೃಷೀಕ ಷಣ್ಮುನಿಕ್ರಮ ನರಕಂಗಳೊಳ್ ನೆಲಸುಗುಂ ದಿವಿಜೋತ್ತಮ ನಂಬು ನೀನಿದಂ (ಆದಿಪು. ೫-೯೪). [ಸಂ.]

**ಹೃಷೀಕೇಶ** (ನಾ). ೧. ಜ್ಞಾನೇಂದ್ರಿಯಗಳ ಒಡೆಯ; ಪರಮಾತ್ಮ. ೨. ವಿಷ್ಣು; ಕೃಷ್ಣ: "ವಿಷ್ಣುಃ, ಕೃಷ್ಣಃ, ಕೇಶವಃ . . . ಹರಿಃ, ಹೃಷೀಕೇಶಃ . . . ವನಮಾಲೀ, ಗದಾಧರಃ – ಈ ೪೫ ನಾರಾಯಣನ ಪೆಸರ್" (ಹಲಾಯು. ೫-೨೪); ಶ್ರೀ ಸರಸ್ವತೀ ಶ್ರೀ ನರನಾರಾಯಣ . . . ಶ್ರೀ ಹೃಷೀಕೇಶ (ಎಕ. VI (R). ಪಾಂಡವಪುರ.೩೭-೨೬; ಸು. 14ನೆಯ ಶತ). ೨. ಉತ್ತರ ಭಾರತದಲ್ಲಿರುವ ಒಂದು ಪುಣ್ಯಕ್ಷೇತ್ರ,–ಯಾತ್ರಾಸ್ಥಳ. [ಸಂ.]

**ಹೃಷ್ಟ** (ಗು). ೧. ಸಂತೋಷಗೊಂಡ; ಆನಂದಿಸಿದ: ಅಂತು ನೋಡಿ ವಿಸ್ಮಯಾಕ್ರಾಂತಚಿತ್ತನತ್ಯಂತಹೃಷ್ಟೋತ್ಪನ್ನಸಂತುಷ್ಟಾಂತರಂಗನವರ ನವಯೌವನಕ್ಕೆ ನೆಱಮಾದ ರೂಪಾತಿಶಯಕ್ಕಂ . . . ಬೆಕ್ಕಸಂಬಟ್ಟು (ಶಾಂತಿಪು. ೩-೫೩ ವ); ಅದಱಿಂದಿಲ್ಲಿ

ವಸಿಷ್ಠನಂದನರಿರಾ ನೀವೆಲ್ಲರುಂ ವಾಸಮಂ ಮುದದಿಂ ಮಾಡೆ ವಿಶುದ್ಧರಪ್ಪಿರೆನೆ ತಾಮಾ ರೋಮಶಪ್ರೋಕ್ತಿಯಂ ಪಡೆದಂತಾಲಿಸಿ ಹೃಷ್ಟಚಿತ್ತರವರಾ ಸುಕ್ಷೇತ್ರದಲ್ಲಿರ್ದು (ಯಾದಚಂ. ೧೫-೨೯). ೨. ರೋಮಾಂಚಿತಗೊಂಡ; ಪುಳಕಗೊಂಡ. (ನಾ). ೩. ಆಹ್ಲಾದ; ಸಂತೋಷ: ''ಪ್ರಿತಂ ಹೃಷ್ಟಂ ಸಮುದಿತ(ಮುತಂ)'' (ವಸ್ತುಕೋ. ೧೦೭-೪೯). ೪. ಸಂತೋಷಗೊಂಡವನು: ನಾನು ಗೌರಿದೇವಿಯೊಡನೆ ವೃಷಭರೂಢನಾಗಿ ಅಲ್ಲಿಗೆ ವಂದು ನಿಶ್ಚಲನಾದ ಮುನಿಯಂ ಕಂಡು ಹೃಷ್ಟನಾದೆನು (ಕಕುಮಾ. ೨೪೮-೭). ೫. [ನಾಟ್ಯ] ಎಂಟು ಬಗೆಯ ಸ್ಥಾಯೀಭಾವನೋಟಗಳಲ್ಲಿ ಒಂದು ವಿಧ: ಬಿಣ್ಪಿದ ಗಲ್ಲಂಗಳ್ ಮಿಗೆ ನುಣ್ಪೊದವಿದ ದಿಟ್ಟಿಯಾಳ್ದ ನಸುಮುಚ್ಚಿವೆಯಂ ತಣ್ಪಡರ್ದು ನಗೆಯನಾಂತುಂ ಕಣ್ಪೊಂದಿರೆ ಕಾಂತೆ ಕೇಳ್ ಹೃಷ್ಟಮೆನಿಕ್ಕು (ಲಾಸ್ಯರಂ. ೩-೧೯). [ಸಂ.]

**ಹೃಷ್ಟತೆ** (ನಾ). ಸಂತೋಷ; ಆನಂದ: ಹೃಷ್ಟತೆಯಿಂದ ಕ್ರೂರಂ ಸಾಷ್ಟಾಂಗಪ್ರಣತನಾಗೆ ಕಾರುಣ್ಯಸುಧಾವೃಷ್ಟಿ ಪಸರಿಸಿದಂತೆನೆ ನಿಜದೃಷ್ಟಿಪ್ರಭೆ ನಿಮಿರೆ ನೋಡಿದಂ ಕಮಳಾಕ್ಷಂ (ಜಗವಿ. ೫-೮೦); ಹೃಷ್ಟತೆಯಿನಾ ಕುಮಾರನರಿಷ್ಟಪುರಾಂತರದೊಳಿರ್ದು (ನೇಮಿಪು. ೫-೭೯).

[ಸಂ ಹೃಷ್ಟತಾ]

**ಹೆಂ** 'ಪೆಣ್' ನೋ.

**ಹೆಂಗತ್ತೆ** 'ಪೆಣ್ಗತ್ತೆ' ನೋ.

**ಹೆಂಗರಿಗ** (ನಾ). ಒಂದು ಬಗೆಯ ಮೀನು: ಕಾಗೆಂಡೆ ಹೆಗ್ಗುರ್ಬು ಹೆಂಗರಿಗಂ . . . ಮುಡಿಲುಂ ಪಂದಿಗನೆಂಬ ಮೀನ್ದೆಗೆದನಾ ಭಕ್ತಂ ಮಹಾಲೀಲೆಯಿಂ (ತ್ರಿಪುವಿ. ೫೭-೮). [?]

**ಹೆಂಗರುಳು** 'ಹೆಣ್ಗರುಳು' ನೋ.

**ಹೆಂಗಸು** 'ಪೆಣ್ಗೂಸು' ನೋ.

**ಹೆಂಗಳ್ಳ** 'ಪೆಣ್ಗಳ್ಳ' ನೋ.

**ಹೆಂಗಳ್ಳವಿದ್ಯೆ** (ನಾ). ಹೆಣ್ಣನ್ನು ಕದ್ದೊಯ್ಯುವ ವಿದ್ಯೆ; ನಾರೀಚೋರವಿದ್ಯೆ: ಕೌರವೇಂದ್ರನ ಮತವೊ ನಿನ್ನ ವಿಕಾರವೋ ಹೆಂಗಳ್ಳವಿದ್ಯೆಯನಾರು ಕಲಿಸಿದರೆನುತ ತಂದರು ಧರ್ಮಜನ ಹೊರಗೆ (ಕುವ್ಯಾಅ. ೨೨-೩೭). [ಹೆಂಗಳ್ಳ (< ಪೆಣ್ಗಳ್ಳ) + ವಿದ್ಯೆ]

**ಹೆಂಗುದುರೆ** 'ಪೆಣ್ಗುದುರೆ' ನೋ.

**ಹೆಂಗುರಿ** 'ಹೆಂಗುಱಿ' ನೋ.

**ಹೆಂಗುರು** 'ಪೆಂಗುರು' ನೋ.

**ಹೆಂಗುಸು** 'ಪೆಣ್ಗೂಸು' ನೋ.

**ಹೆಂಗುಸುತನ** (ನಾ). ಹೆಣ್ಣುತನ; ಹೆಣ್ಣಿನ ಸ್ವಭಾವ: ನರನ ಬಲುಗೈತನವನೀ ಮೋಹರದ ಹೆಂಗುಸುತನವ ನೀವವಧರಿಸಿದಿರೆ ಜಗಭಂಡರಿವರಿಗೆ ಮತ್ತೆ ಬಿರುದುಗಳೆ (ಕುವ್ಯಾದ್ರೋ. ೧೦-೪೩). [ಹೆಂಗುಸು (< ಪೆಣ್ಗೂಸು) + - ತನ]

**ಹೆಂಗುಸುವೃತ್ತಿ** (ನಾ). ಹೆಂಗಸು ಕೊಟ್ಟ ದಾನ (?): ಕಂದರ್ಪೇಸ್ವರ ದೇವರತ್ತಂಣ್ಣಾಯ ಕೊಳೆಯಂಗೆ ತಂಣ್ಣೇಸ್ವರ ಮತ್ತರು ಅಱು ಸರ್ವ್ವಬಾಧಪರಿಹಾರ ಹೆಂಗುಸುವೃತ್ತಿ (ಕಇ. II, ೧೭-೫೭; 1122). [ಹೆಂಗುಸು (< ಪೆಣ್ಗೂಸು) + ವೃತ್ತಿ]

**ಹೆಂಗುಱಿ**, ಹೆಂಗುರಿ (ನಾ). ಹೆಣ್ಣುಕುರಿ; ಮೇಷ: ಕಾಡುಗುಱಿ ತನೆಯಾಗಿ ಬಂದು ಊರೊಳಗೆ ಮೂಱು ಮಱಿಯನೀಯಿತ್ತು ಅದಱ ವರ್ಷ ಒಂದೆಡೆ ಒಂದು ಕಾಡ ಒಂದು ಎಲ್ಲರ ಕೂಡಿದ ಬಣ್ಣ ಹೆಂಗುಱಿ ಸತ್ತಿತ್ತು ಮಱಿಗೆ ಒಡೆಯರಿಲ್ಲ (ಸಕವ. I, ಕ. ೨೭೮-೧೦೦೭). **ಹೆಂಗುರಿ:** ಇದರ ಗಂಡಿಗೆ (Ram) (ಟಗರು) ಎಂದೂ, ಹೆಣ್ಣಿಗೆ (ಹೆಂಗುರಿ) ಎಂದೂ . . . ಹೆಸರು (Sheep. ೯೦೯೩). [ಹೆಂ (< ಪೆಣ್) + ಕುಱಿ$_3$]

**ಹೆಂಗೂಸು** 'ಪೆಣ್ಗೂಸು' ನೋ.

**ಹೆಂಗೆ** 'ಎಹಗೆ' ನೋ.

**ಹೆಂಗೊಲೆ** 'ಪೆಣ್ಗೊಲೆ' ನೋ.

**ಹೆಂಚು**, ಹಂಚು$_2$ (ನಾ). ೧. ಮೇಲ್ಛಾವಣಿಗೆ ಹಾಕಲು ಬಳಸುವ ಮಣ್ಣಿನ ಚದುರಬಿಲ್ಲೆ: ಅಂಬರವೆಸರ ಸುದತಿ ಸುಲೋಕವೆಂದೆಂಬ ಹೆಂಚಿನೊಳಂಜನವನು ಅಂಬಿನೊಳಿಡಲೆಂದಿಟ್ಟ ಹೆಜ್ಜೊಡರೆಂದೆಂಬಂತೆ ಮೇರುವೊಪ್ಪಿದುದು (ನೇಮಿಸಂ. ೧-೫೦); ಕಾನೂರು ಚಂದ್ರಯ್ಯಗೌಡರ ಮಂಗಳೂರು ಹೆಂಚಿನ ದೊಡ್ಡಮನೆ . . . ಏಕಾಂತವಾಗಿತ್ತು (ಕಾನೂರು ೩೫); ಒಡೆದ ಹೆಂಚುಗಳ ಬದಲು ಹೊಸ ಹೆಂಚುಗಳನ್ನಿರಿಸಿದ (ರಂಗವ. ೧೨೦). ೨. ಮಡಕೆಯ ಚೂರು; ಬೋಕಿ: ಹಣ ಹೊನ್ನು ಪರಹೆಣ್ಣು ಹೆಂಚೆಂದು ನೋಡು (ಪುರಂದ. ೨-೫ ಅನುಪಲ್ಲವಿ). **ಹಂಚು$_2$:** ೧. ಮನೆಗಳ ಮಾಳಿಗೆಗಳು ಹಂಚಿನವು (ಕಭಾಗೆ. ೫); ಮಣ್ಣುಗೋಡೆಗಳ ಮಣ್ಣುಮನೆಗಳಿಗೆ ಬೇಕು ಮಣ್ಣು ಹಂಚು (ಅರಳು. ೩೮೩). ೨. ಪಂಚಮಹಾಪಾತಕವ ಮಾಡಿ(ದನಾ)ದೊಡೆ ಒಮ್ಮೆ ಹಂಚಿನಲ್ಲಿ ತಿರಿದುಂಡಡೆ . . . ಸದುಗುರು ಸೊಡ್ಡಳ ತಿರಿದುಂಡ ಪರಿ (ಸರ್ವವ. ೧೬೪-೭೭೯); ತೂಱಿದ ಬೂದಿಯ ಹಿಟ್ಟುಗುಟ್ಟಿ ಬೊಟ್ಟಿಡುವುದು ಮಿಕ್ಕುದಂ ಕದಡಿ ಕುಂಟಣಿಗೀವುದು ತೀವಿ ಹಂಚಿನೊಳ್ (ಅನಂಪು. ೮-೫೭); ಲೋಹಂಗಳಾಗಲುವಳಿವವ್ವೆ ಪರುಸಕ್ಕೆ ಸೋಂಕಲು . . . ಅಳಿವುದೇ ಹಂಚಾಗ ಪರುಸವು ಬಳಸಿದರೆ ತಾನಬ್ಬಲಕ್ಷಗಳೊಳಗೆ (ಸಂಭವ. ೮-೧೩೭); ಪಂಚಮದ ಶನಿ ಹಂಚಿನಲ್ಲಿ ಉಣಿಸ್ಯಾನು (ಗಾದ). ೩. (ದೋಸೆ, ರೊಟ್ಟಿ, ಹೋಳಿಗೆ ಮುಂತಾದುವುಗಳನ್ನು ಬೇಯಿಸಲು ಬಳಸುವ) ಕಾವಲಿ: ಇಪ್ಪತ್ತ ಹಂಚು ಇಟ್ಟದೀರಿ, ಐದು ಸೇರಿನ ಹೋಳಿಗೆಯಾದರೂ ಆಗಲಿಲ್ಲ (ಅಶೋಕ. ೨). ೪. ''ಒಣಗಿಸಿ ಸುಟ್ಟ ಬಿರುಸಾದ ಮಣ್ಣಿನ ಪದಾರ್ಥ'' (ಕಸ್ತೂಕೋ. ೯೨೭). ೫. ಚೂರು; ತುಂಡು: ಗುರುಲಿಂಗಪೂಜೆಯಂ ನರನಾವನುಳಿದಮರ ನೆರವಿಯಂ ಯಜಿಸಿ ಪಡೆವಾ ಬಗೆಯದು ವರರತ್ನವಂ ಬಿಸುಟು ಪಿರಿದು ಗಾಜಿನ ಹಂಚ ನೆರೆದರ್ಚಿಪಂತೆಂದ (ಸಾನಂಚ. ೩-೧೪).

**ಹೆಂಚಿನ ಪಾತ್ರೆ** = ಮಣ್ಣಿನ ಪಾತ್ರೆ; ಮಡಕೆ: ಹೋಳಿಗೆ, ಕಡುಬು, ಸೂಸಲುಂಡಲಿಗೆ . . . ಇರೆ ಹೊಸ ಹೆಂಚಿನ ಪಾತ್ರೆಯಲು ಯಿರಿಸಿ (ಬಾಲಚ. ೧೨೯-೨೦). **ಹೆಂಚಿನ ಮನೆ** = ಮೇಲ್ಛಾವಣಿಗೆ ಮಣ್ಣಿನ ಚದುರಬಿಲ್ಲೆಯನ್ನು ಹೊದಿಸಿರುವ ಮನೆ: ಅದು ಪೂರ್ವಕಾಲದ ಹೆಂಚಿನ ಮನೆ (ರಾಮಾನ. ೧೦೧).

[ದೇ. II ಕೊಡ. ಹಂಚ್; ತುಳು. ಹಂಚು; ತೆಲು. ಪೆಂಚು, ಪೆಂಚಿಕ]

**ಹೆಂಜಱ** 'ಪೆಂಜಱುವು' ನೋ.

**ಹೆಂಜೆಱು** 'ಪೆಂಜಱುವು' ನೋ.

**ಹೆಂಟೆ$_1$** 'ಪೆಂಟೆ$_1$' ನೋ.

**ಹೆಂಟೆ$_2$** 'ಪೆಂಟೆ$_2$' ನೋ.

**ಹೆಂಟೆಗೊಡತಿ**, ಹೆಂಡೆಗೊಡತಿ (ನಾ). (ಹೊಲಗದ್ದೆಗಳಲ್ಲಿ) ಮಣ್ಣಿನ ಗಟ್ಟಿಗಳನ್ನು ಒಡೆಯಲು ಉಪಯೋಗಿಸುವ ಒಂದು ಬಗೆಯ ಉಪಕರಣ: ''ಹೆಂಟೆಗೊಡತಿ-ಲೋಷ್ಟಭೇದನ, ಕೋಟಿಶ'' (ನಾಚಿರಾ. ೬). **ಹೆಂಡೆಗೊಡತಿ:** (೬).

[ಹೆಂಟೆ$_1$ (< ಪೆಂಟೆ$_1$) + ಕೊಡತಿ (< ಕೊಡಂತಿ)]

**ಹೆಂಟೆಗೊದ್ದ**, ಹೇಂಟೆಗೊದ್ದ (ನಾ). ಉಡುವಿನ ಜಾತಿಗೆ ಸೇರಿದ ಒಂದು ಬಗೆಯ ಸಣ್ಣ ಪ್ರಾಣಿ; ಓತಿಕೇತ; ಗೋಸುಂಬೆ: ಹೆಂಟೆಗೊದ್ದ ಗೃಧ್ರ ಗೂಬೆ ಮೊದಲಾದ ಪಕ್ಷಿಗಳಿಗೆ ಸಮಾನವಾದ ರೇಖೆಯು ಯಿದ್ದರೆ ಶುಭವಲ್ಲ (ಸೌಗಂಧ. ೨೭೨-೧೦); ಆ ಬ್ರಾಹ್ಮಣರು . . . ದೊರೆಯನ್ನು ಹೆಂಟೆಗೊದ್ದನಾಗೆಂದು ಶಪಿಸಿದರು (ನೀತಿಚಂ. II, ೨೭). **ಹೇಂಟೆಗೊದ್ದ:** ನೀನು ಹೀಗೆ ಮೋಸಮಾಡಿದುದರಿಂದ ನೀನು ಹೇಂಟೆಗೊದ್ದವಾಗಿ ಹುಟ್ಟು (ಸುಧಾ. ೫೫). [ಹೆಂಟೆ$_?$ + ಗೊದ್ದ$_1$ (< ಗೋದ$_1$)]

**ಹೆಂಟೆಹೊಡೆ**, ಹೆಟ್ಟೆಹೊಡೆ (ಕ್ರಿ). ಹೊಲ, ಗದ್ದೆಗಳಲ್ಲಿ ಉಳುವುದಕ್ಕೆ ಮೊದಲು ಮಣ್ಣಿನ ಗಡ್ಡೆಗಳನ್ನು ಒಡೆ; ಹಲುಬೆಹೊಡೆ; ಕುಂಟೆಹೊಡೆ: (೬). **ಹೆಟ್ಟೆಹೊಡೆ:** ಹೊಲದಲ್ಲಿ ಕೊಯಿಲಿ, ಕಸ, ರವದಿ ಮೊದಲಾದ ಮಲಿನಗಳು ಇಲ್ಲದ ಹಾಗೆ ಹೆಟ್ಟೆ ಹೊಡೆದು . . . ಮಳೆಯು ಬರುವದರೊಳಗೆ ಸಿದ್ಧಮಾಡಿ ಇಟ್ಟಿರಬೇಕು (ಕೃಷಿಪ್ರ. ೫೧).

[ಹೆಂಟೆ$_1$ (< ಪೆಂಟೆ$_1$) + ಹೊಡೆ$_1$ (< ಪೊಡೆ$_1$)]

**ಹೆಂಡ** 'ಪೆಂಡ' ನೋ.

**ಹೆಂಡಗಾಱ** (ನಾ). ಮದ್ಯದಲ್ಲಿ ವ್ಯವಹರಿಸುವವನು: ಕಣ್ಣ ಗುಡ್ಡಿಯ ಮೆಟ್ಟಿ ನೆತ್ತಿಯ ಮೇಲೆ ಮೂಱುಪಟ್ಟೆಯನೆ ಕೆತ್ತಿ ಅವನ ಮುಖದ ಮೇಲೆ ಹೆಂಡಗಾಱನ ಮುಖದಿಂದೆ ಲೊಟ್ಟಲೊಟ್ಟನೆ ಉಗುಳಿಸಿ ಪಡುವಲ ದಿಕ್ಕಿಗೆ ಅಟ್ಟೆಂದ ಕಾಣಾ (ವಚಶಾ. I, ೨೫೦-೨೩).

[ಹೆಂಡ (< ಪೆಂಡ) + - ಕಾಱ]

**ಹೆಂಡತಿ** 'ಪೆಂಡಿತಿ' ನೋ.

**ಹೆಂಡತ್ತಿ** 'ಪೆಂಡಿತಿ' ನೋ.

**ಹೆಂಡಬಾಕ** (ನಾ). ಅತಿಯಾಗಿ ಮದ್ಯವನ್ನು ಸೇವಿಸುವವನು: ಹೆಂಡಬಾಕನವನು. ರೊಕ್ಕ ಕೊಟ್ಟು ಕೊಟ್ಟು ನೀನೇ ಅವನಿಗೆ ಇಂಥ ವ್ಯಸನಗಳನ್ನು ಕಲಿಸಿದವಳು (ಪಾಪಕೀ. ೧೬). [ಹೆಂಡ (< ಪೆಂಡ) + - ಬಾಕ]

**ಹೆಂಡಯ್ಸು** (ಕ್ರಿ). ಮದ್ಯವನ್ನು ಸುರಿದುಕೊಳ್ಳು: ಬೀಮಣ್ಣನು ಹೆಂಡದ ಪಾತ್ರೆಯನ್ನು ಹಿಡಿದು ಹಾಡುತ್ತ ಪ್ರವೇಶಿಸುತ್ತಾನೆ . . . ರಾಗವೇ ಸರಿಯಾಗಿಲ್ಲ, ಮಸಣದಲ್ಲಿ ಅತ್ತಂತಿದ. ಕೂರಳಿಗೆ ಒಂದಿಸಿತು ಹೆಂಡಯ್ಸವೆನ್! (ಕುಡಿಯುತ್ತಾನೆ) (ಬಿಗಾಳಿ. ೪೯). [ಹೆಂಡ (< ಪೆಂಡ) + - ಇಸು$_3$]

**ಹೆಂಡಿ** 'ಹೆಂಡೆ$_2$' ನೋ.

**ಹೆಂಡಿಕಸ** (ನಾ). ದನದ ಸಗಣಿ ಮೊದಲಾದ ಕಸ: ಎದ್ದಿದ್ದ ಹಾಗೆಯೇ 'ಹೆಂಡಿಕಸ' ಮಾಡಿ ಮುಗಿಸಿ ಹಾಲು ಕರೆದೇ ಸಕ್ಕದ ಎರಡು ಮೈಲಿನ ಮೇಲಿನ ಶಹರಕ್ಕೆ ಹೋಗಿ ಹಾಲನ್ನು ಮಾರಿ ಬರುತ್ತಿದ್ದಳು (ಗಂಗಾಗೌ. ೪೦).

[ಹೆಂಡಿ (< ಹೆಂಡೆ$_2$) + ಕಸ]

**ಹೆಂಡಿತಿ** 'ಪೆಂಡಿತಿ' ನೋ.

**ಹೆಂಡೆ$_1$** 'ಪೆಂಟೆ$_1$' ನೋ.

**ಹೆಂಡೆ$_2$, ಹೆಂಡಿ** (ನಾ). (ಉಕ) ಸಗಣಿ; ಗೋಮಯ: ಕಂಡಾ ಕಂಡ ಮನೆಯ ತಿರಿಗಿ ಕಾಲ್ಮುರಿ ನಾಯಿ ಬೆದಕಿದಂತೆ ಹೆಂಡೆಯ ಜೊಂಡನು (ಚಿದಾಕೋ. ೯೬-೬). **ಹೆಂಡಿ:** ಹೆಂಡಿಲಿ ಹೊಯ್ದು ಮೆರಸಿ ಕೈಕಾಲ್ಗಳ ತುಂಡಿಸಿ ತಂದು ನೇಮಿಸಿದ (ಬಿಜ್ಜಳಾ. ೩-೪೫); ಹಿಂಡಿಗನ ಹಾಳಲ್ಲಿ ಹೆಂಡಿಯಂ ಹಾಕಿ . . . ಅಲ್ಲಿಂದ ನಂದೀಶನತಿಹರುಷದಿಂದ ಮೆಲ್ಲನೆ ಮಲೆದೇಶದಲ್ಲಿಗೈತಂದ (ಶರಲೀ. ೧೦೦-೧೫). [← ತೆಲು. ಪೆಂಡ, ಪೇಂಡ]

**ಹೆಂಡೆಗೊಡತಿ** 'ಹೆಂಟೆಗೊಡತಿ' ನೋ.

**ಹೆಂಡೆಮೂಗಕ್ಕಿ** (ನಾ). ಒಂದು ಬಗೆಯ ಪಕ್ಷಿ: "ಪರೋಷ್ಣೀ, ತೈಲಪಾಯಿಕಾ-ೀ ಹೆಂಡೆಮೂಗಕ್ಕಿಯ ಹೆಸರುಗಳು" (ಸಿದ್ಧಾಂತಿ. ೧೫೦). [? + ಹಕ್ಕಿ (< ಪಕ್ಕಿ)]

**ಹೆಂದ** (ನಾ) ಹಿರಿದು; ದೊಡ್ಡದು: 'ಹೆಂದಗತ್ತಲೆ', 'ಹೆಂದವೆಳಗು' ಪರಾ. 'ಪೆದ್ದು$_1$' ಹೋ. [? / ತೆಲು. ಪೆನು]

**ಹೆಂದಗತ್ತಲೆ** (ನಾ). ಹೆಚ್ಚಾದ ಕತ್ತಲೆ; ಅಧಿಕವಾದ ಕತ್ತಲೆ: ಹೆಂದಗತ್ತಲೆಯೊಳ್ಪ್ರವರ್ತಿಸುವಂದು ಕೆಲವು ಮೃಗದ್ವಿಜಾತಿಗೆ ಮುಂದಿರುತಿಪ್ಪನೇ ರವಿ ಕೇಳು ಸಚ್ಚಿಷ್ಯ (ಸದ್ಗುರು. ೭-೧೬). [ಹೆಂದ + ಕತ್ತಲೆ$_1$ (< ಕಟ್ಟಲೆ)]

**ಹೆಂದವೆಳಗು** (ನಾ). ಅಧಿಕವಾದ ಕಾಂತಿ,– ಪ್ರಕಾಶ: ಭಕ್ತರ ಹೃದಯಕಮಲದೆಸಳ್ಗಳ ಹಸೆಯ ಮೇಲೆ ಚಿತ್ತಿನ ಸೊಡರಿನ ಹೆಂ[ಪಾಠಾಂ. ಚಂ]ದವೆಳಗಿನೊಳು (ಸಿದ್ಧರಾ. ೭-೪೨). [ಹೆಂದ + ಬೆಳಗು$_2$]

**ಹೆಂದು, ಹಂದು** (ಕ್ರಿ). ೧. ಕುಂದು; ಕುಗ್ಗು; ಕಡಮೆಯಾಗು: ಪುರವ ರಚಿಸುವೆನೆಂದಡೆ ಹೆಂದದ ಧನಂ ಬೇಕು (ಸಿದ್ಧರಾ. ೩-೪೧); ಹೆಂದದೀಶ್ವರನೊಲುಮೆ ಗಡ ನಿಜದಿಂದ ನಿಚ್ಚಂ ಕೊಡುವುದದು ಹೊನ್ನೊಂದು ಗಡ (ಬಸವಪು. ೨೯-೧೫). ೨. ಹಿಂಜರಿ; ಅನುಮಾನಿಸು; ಹಿಂದು ಮುಂದು ನೋಡು: ಇಂದುಶೇಖರಸದೃಶಯೆನ್ನ ರಕ್ಷಿಪೆನೆಂದು ಹೆಂದದಡವಿಗೆ ಬಂದು ಪ್ರತ್ಯಕ್ಷವಾದ (ಪ್ರಭುಪು. ೮-೧೫೦); ಹೆಂದದಾಟವಿಗೆಯ್ದಿ ಸುಸ್ಥಲದಿ ಕುಳ್ಳಿರಿಸುತೆಂದರು (ಗುರುಚಾ. ೧೩-೪೫). ೩. ಅಲುಗಾಡು; ಚಲಿಸು: (ಕ). **ಹಂದು:** ೩. ಖಗಮಿರ್ಕೆ ಹಂದಲಿಲ್ಲರೆಯ ಮೇಲೊರಗಿರ್ದಿರ್ದರ ಸೀಳ್ವಛಾಯೆಯಿಂ! (ಶ್ರೀರಾಮಾ. ೩೪೫-೬೩೦); ಹೆದರಬೇಡ, ಹಂದದೆ ಸುಮ್ಮನೆ ನಿಂತುಕೊ (ಮಲೆಮ. ೨೪೯).

**ಹಂದಾಡು** = ಅಲುಗಾಡು; ಅಲ್ಲಾಡು: ಏ ಹುಡುಗಾ ಎಷ್ಟೊಂದು ಹಂದಾಡ್ತೀಯೊ? ಕೂತಲ್ಲಿ ಒಂದುಗಳಿಗೆ ಸರೀ ಕೂಡ್ರಲಿಕ್ಕೆ ಬರೂದಿಲ್ಲವೋ? (ಮೂರುದಾ. ೯೨).

[ದೇ. ‖ ತುಳು. ಪಂದು, ಪಂದ್]

**ಹೆಂದುಂಬೆ** (ನಾ). ಒಂದು ಬಗೆಯ ಔಷಧೀಸಸ್ಯ: ನುಗ್ಗೆಯ ಬೇರಿನ ರಸ, ಹೆಂದುಂಬೆಯ ರಸ . . . ಕೊಗ್ಗಿಯ ಬೇರು ಇಷ್ಟನ್ನೂ ಎಕ್ಕೆಯ ಹಾಲಲ್ಲಿ ಅರೆದು ಪೂಸಲು ಸರ್ವಾಂಗವಾತಂ ಮಾಂಬುದು (ವಿಷವೈ. ೧೪೯). 'ಹೆದ್ದುಂಬೆ' ಪರಾ. [?]

**ಹೆಂದುರು** (ನಾ). ಒಂದು ಬಗೆಯ ಸಸ್ಯ: "ನಲ್ಲುಲಃ, ನಟ್ಟಾಂಗಃ – ಈ ಯೆರಡುಂ ಹೆಂದುರು" (ಓಷಧಿ. ೮೩). [?]

**ಹೆಂಪರಿ** (ನಾ). (?) : ಅರಮನೆಗೆ ಹೆಂಪರಿಯಾಗಿ ಬಂದ ಭೂಮಿ (ಸೌಇಇ. IX-ii, ೬೦೯-೩೪; 1544). [?]

**ಹೆಂಪಳಿ** (ಕ್ರಿ). ಕಾಂತಿಗುಂದು; ಕಂಗೆಡು: ಕರಡಿ ಗರ್ಜಿಸಲಂಜಿಯುಸುರಿಕ್ಕದಿರ್ಪನೋ ಉರಗ ಸಾರಲು ಹೆದಱಿ ಹೆಂಪಳಿವುತಿರ್ಪನೋ (ಸ್ವಗು.ಹ. ೩೯-೪); ಹೆಂಪಳಿದ ತನುಲತೆಯ ಹರುಷದ ಸೊಂಪು ಸಡಿಲಿದ ಮುಖದ . . . ಅಂಬುಜವದನೆ ಮೈಯಿಕ್ಕಿದಳು ನಿಜಪತಿಗೆ (ತೊರರಾ. ೬-೫೩-೬೭). [ಹೆಂಪು (< ಪೆಂಪು) + ಅಳಿ$_1$ (< ಅಟಿ$_1$)]

**ಹೆಂಪು** 'ಪೆಂಪು' ನೋ.

**ಹೆಂಬಳ** (ನಾ). (?): ಆ ಗದ್ದೆಗೆ ಸಿದ್ದಾಯ ಕಮ್ಮವೊನ್ದಕೆ ಪಾಗವೊನ್ದನೂ ತೆಱುವರು ಆ ತೋಣ್ಣದ ಫಲಂಗಳು ಅಧಿಕ್ರಯದಾನಕ್ಕೆ ಸಲುವುದು ಕ್ರಿಷಿಬ್ಯವಸಾಯವ ಮಾಡದಿದ್ದರಾದಡೆ ಅವರ ಪಡಿ ಜೀವಿತದಲೆಯಿಕ್ಕಿ ಮಾಡಿಸುವರು ಹೆಮ್ಬಳ ಸಲುವುದು (ಎಕ. XV, ಅರಸೀ. ೨೦೦-೭; 1244). [?]

**ಹೆಂಬಳಿ** (ನಾ). ಹೆಣ್ಣಿನ ಸಂಬಂಧ: ದಿನದಿನಕೆ ಬೆಳೆದುದು ವೈರವಣ್ಣಂಗೆನಗೆ ಹೆಂಬಳಿಯಿಂದ (ತೊರರಾ. ೪-೨-೪೦); ಬಂದು ನಿಂದಿದನಿಂದ್ರಸುತನಿನನಂದನನ ಸರಿಸದಲಿ ಹೆಂಬಳಿಯಿಂದ ಹೆಚ್ಚಿದ ಮನದ ಮಸಕದ ಮತ್ಸರಂಗಳಲಿ (ತೊರರಾ. ೪-೩-೬).

[ಹೆಂ (< ಪೆಣ್) + ಬಳ್ಳಿ$_2$ (< ಬಟ್ಟಿ$_3$)]

**ಹೆಂಬೆಡಿಗ** (ನಾ). (?): ಹೆಂಬೆಡಿಗ ಹಿಡಿಯಬಹುದೇ ಹೆಡಿಗೆಯೊಳಗಣ ಹಾವ ತೆಱೆಯಬಹುದೇ (ದೇದಾವ. ೩೮-೭೪); "ಒಂದು ಬಗೆಯ ವಿಷದ ಹಾವು" (ದೇದಾವ. ಟೀಕೆ). [?]

**ಹೆಂಬೆಳೆ, ಹೆಬ್ಬೆಳೆ** (ನಾ). ಆಧಿಕ್ಯ; ಸಮೃದ್ಧಿ: ದ್ರುಪದನ ಹೆಂಬೆಳೆಯ ತನಿಹರುಷ ಹೊರೆಯೇಱಿತ್ತು ಸಿಮಿಷದಲಿ (ಸಂಭಪ. ೩೩-೫೯). **ಹೆಬ್ಬೆಳೆ:** ಭಕ್ತರ ಭಾಗ್ಯದ ಹೆಬ್ಬೆಳೆಯೊ ಹೊಸರಾಶಿಯೊ (ವೀರಲೀಚ. ೧-೧೧). [< ಪಿರಿದು$_1$ + ಬೆಳೆ$_2$]

**ಹೆಂಬೇಡಿ, ಹೆಬ್ಬೇಳಿ** (ನಾ). ಅತ್ಯಂತ ಪುಕ್ಕಲು ಸ್ವಭಾವದವನು; ದೊಡ್ಡ ಹೇಡಿ: ಹೆಣ್ಣ ಬಿಡದೆ ಹೆಂಬೇಡಿ ನೀನೋಡಿ, ಮುಕ್ಕಣ್ಣನ ಮಱೆಯೊಗೆ ಬಳಿಸಂದು ಅಣ್ಣನಡಿಗಳಾಣೆ ನಿನ್ನ ತಲೆಯ ತಱಿದಣ್ಣೆಕಲ್ಲಾಡದೆ ಬಿಡೆನೆಂದ (ಸೊಬಸೂ. ೫-೨೧); ಜಂಬುಕಂ ಜನಿಸುವುದೆ ಸಿಂಗದುದರದೊಳಕಟಾ ಹೆಂಬೇಡಿ ನೀನೆಲವೊ ಕುಲಗೇಡಿ ತನ್ನ ಬಸಿಱಿಂ ಬಂದವನೆ (ಜೈಮಿಭಾ. ೧೭-೫೪). **ಹೆಬ್ಬೇಳಿ:** ಛಾಂದಸರು ವೇದಜಡರು ಮಟ್ಟೆಯ ಮರುಳ್ಗಳು ವೃಥೋತ್ಸಾಹಿಗಳು ಹೆಬ್ಬೇಳಿಗಳು ದರ್ಭೆಯ ನಿರ್ಭಾಗ್ಯರೆಲ್ಲಂ ನೆರೆದರಮನೆಗೆ ಬಂದು (ಬಸರ. ೧೦-೨೬). [< ಪಿರಿದು$_1$ + ಪೇಡಿ$_1$]

**ಹೆಂಬೇಡಿತನ** (ನಾ). ಅತಿಯಾದ ಅಂಜುಬುರುಕುತನ: ನಾಡೆ ಕರೆಯಿಸಿ ಕೊಂಡದೆನೆ ಹೆಂಬೇಡಿತನದಿಂ ಪಲಸುಗಳ ಮೈಗೂಡೆ ಗುಗ್ಗುರಿಗಟ್ಟಿದವು ನಿಜವೆನಲು ಭಾವಿಪಡೆ (ಮದೇಪು. ೨-೩೨); ಕ್ಷಿತಿಯೊಳತಿಶೂರಧನದಾನುಜನೆನುತ್ತೂರೆವೆ ಹೆಂಬೇಡಿತನವ ಪಳಿದೆ (ವಂಕಾರಾ. ೬-೫೪-೨೧). [ಹೆಂಬೇಡಿ + - ತನ]

**ಹೆಕ್ಕತ್ತು** 'ಹೆಗ್ಗತ್ತು' ನೋ.

**ಹೆಕ್ಕಬ್ಬು** 'ಹೆಗ್ಗಬ್ಬು' ನೋ.

**ಹೆಕ್ಕಳ** 'ಪೆಕ್ಕಳ$_1$' ನೋ.

**ಹೆಕ್ಕಳಂಗೊಳ್** 'ಪೆರ್ಕಳಂಗೊಳ್' ನೋ.

**ಹೆಕ್ಕಳಂಗೊಳು** 'ಪೆರ್ಕಳಂಗೊಳ್' ನೋ.

**ಹೆಕ್ಕಳಗೊಳ್** 'ಪೆರ್ಕಳಂಗೊಳ್' ನೋ.

**ಹೆಕ್ಕಳಗೊಳು** 'ಪೆರ್ಕಳಂಗೊಳ್' ನೋ.

**ಹೆಕ್ಕಳದೋಱು** (ಕ್ರಿ). ಹೆಮ್ಮೆಯನ್ನುಂಟುಮಾಡು: ಮಕ್ಕಳಾಟದಿ ತನ್ನ ಹಡೆದ ತಾಯ್ತಂದೆಗೆ ಹೆಕ್ಕಳದೋರ್ಪ ಸಂತಸದಿ (ಮೋಹಕ್ಕ ೧೭-೭೫).

[ಹೆಕ್ಕಳ (< ಪೆಕ್ಕಳ$_1$) + ತೋಱು]

**ಹೆಕ್ಕಳಬಡು** (ಕ್ರಿ). ಮದಿಸು; ಉಬ್ಬು: ಹೆಣ್ಣ ಕಂಡು ಹೆಜ್ಜೆ ಹೆಕ್ಕಳಬಡುವಂತೆ ಕಣ್ಣಟ್ಟು ನೋಡದಿರಾ (ದೇದಾವ. ೩೫-೭೪). [ಹೆಕ್ಕಳ (< ಪೆಕ್ಕಳ$_1$) + ಪಡು$_1$]

**ಹೆಕ್ಕಳವೆರಸು** (ಕ್ರಿ). ಘನತೆಯಿಂದ ಕೂಡಿರು; ಗಾಂಭೀರ್ಯದಿಂದಿರು: ಗೋಪಾಲವೇಷಧಾರಿಗಳಾದ ಬಲಕೃಷ್ಣರಿರ್ವರು ಕೇಳಿ ಹೆಕ್ಕಳವೆರಸಿ ನಡೆತಂದು (ಕಗವಿ. ೭೬ ವಿಷ್ಣುಪುರಾಣಂ). [ಹೆಕ್ಕಳ (< ಪೆಕ್ಕಳ$_1$) + ಬೆರಸು$_1$ (< ಬೆರೆಯಿಸು)]

**ಹೆಕ್ಕಳಿಕೆ** 'ಪೆರ್ಚಳಿಕೆ' ನೋ.

**ಹೆಕ್ಕಳಿಸು** 'ಪೆಕ್ಕಳಿಸು' ನೋ.

**ಹೆಕ್ಕು$_1$** 'ಪಿಕ್ಕು' ನೋ.

**ಹೆಕ್ಕು$_2$** 'ಪೆಱುಕು' ನೋ.

**ಹೆಕ್ಕುಳಿ** 'ಪೆರ್ಗುಟಿ' ನೋ.

**ಹೆಕ್ಕೆರಕಲು** (ನಾ). ಒಂದು ಬಗೆಯ ಸಸ್ಯ: ಮದ್ದೆ, ಹೆಚ್ಚೆಕರಕಲು, ಹೆಕ್ಕೆರಕಲು, ಸಡ್ಡಿ (ಮೈಜಿಗಿ. ೫೮-೧೧೫೬). [?]

**ಹೆಕ್ಕೌಡಲ** (ನಾ). ದೊಡ್ಡ ಜಾತಿಯ ಹರಳು ಗಿಡ: ಗಣಜಿಲ ಬೇರು . . . ಹೆಕ್ಕೌಡಲದ ಬೇರು, ಶುಂಠಿ, ಇವ ಕಷಾಯಮಂ ಕುಡಿಯೆ ೮೦ ತೆಱದ ವಾತ ತೀರ್ಗುಂ (ವಿವೈವಿ. ೮೬). [< ಹೆರ್ (< ಪಿರಿದು$_1$) + ಔಡಲ (< ಅವುಡಲ)]

**ಹೆಗಡಿ** 'ಪೆರ್ಗಡೆ$_1$' ನೋ.

**ಹೆಗಡಿಕೆ** 'ಹೆಗ್ಗಡಿಕೆ' ನೋ.

**ಹೆಗಡೆ** 'ಪೆರ್ಗಡೆ$_1$' ನೋ.

**ಹೆಗಲ್** 'ಪೆಗಲ್' ನೋ.

**ಹೆಗಲು** 'ಪೆಗಲ್' ನೋ.

**ಹೆಗಲುಗೇಡು** (ನಾ). (ಆಲಂ) ವ್ಯರ್ಥವಾದುದು; ನಿಷ್ಪ್ರಯೋಜಕವಾದುದು: ಮಗನೆ ನೀ ಮನ್ಮಥರಿಪುವಿನ ಮಱಹೊಕ್ಕು ಪಗೆಯಾದೆ ನೀ ಜಗವಱಿಯೆ ಹೆಗಲುಗೇಡಾಗಿ ಹೊತ್ತಿರ್ದ ಲಿಂಗವನೆಂದು ಜಗದ ಜನನಿ ಮಱುಗಿದಳು (ನಿಜಸಾಂ. ೪-೮೨).
[ಹೆಗಲು (< ಪೆಗಲ್) + ಕೇಡು]

**ಹೆಗಲುಗೇಣಿ** (ನಾ). ಒಂದು ಬಗೆಯ ಗುತ್ತಿಗೆ: ಆಱುವಾರ ಮೂಲ ಹೆಗಲುಗೇಣಿ ಆಣೆ [ಪ]ಡಿ ಸಲ್ಲದು (ಸೌಇಇ. ೧೯೩೧, ಉಡುಪಿ. ೭೬೬-೨೮; 1350).
[ಹೆಗಲು$_1$ + ಗೇಣಿ (< ಕೇಣ್ಣಿ$_3$)]

**ಹೆಗಲುಚೀಲ** (ನಾ). ಭುಜಕ್ಕೆ ತೂಗಿಹಾಕಿಕೊಳ್ಳುವ ಚೀಲ: ಹೆಗಲಿಗೆ ಒಂದು ಖಾದಿ ಹೆಗಲುಚೀಲ (Shoulder-bag); ಅದರಲ್ಲಿ ಅವಳ ಸಂಸಾರ ಅಡಗಿತ್ತು! (ಊರುಕ. ೨೦). [ಹೆಗಲು (< ಪೆಗಲ್) + ಚೀಲ]

**ಹೆಗಲುಬಡಿಕ** (ನಾ). (ಆಲಂ) ಭುಜ ತಟ್ಟಿಕೊಳ್ಳುವವನು; ಗರ್ವಿಸುವವನು: ಹಗೆಗಳೆಮಗಿನ್ನಾರು ನಿರ್ಜರನಗರಪತಿ ನಮ್ಮಯ್ಯನುಳಿದರಸುಗಳು ಪಾಡಲ್ಲೆಮಗೆ ದಿವದಲಿ ಧರಣಿಯಲಿ ನೃಪರು ಹೆಗಲುಬಡಿಕರ ಹೇಳದಿರು (ತೊರರಾ. ೪-೩-೩). [ಹೆಗಲು (< ಪೆಗಲ್) + ಬಡಿಕ$_1$]

**ಹೆಗಲೆಣೆ** 'ಪೆಗಲ್' ಪರಾ.

**ಹೆಗಲೇರು** 'ಪೆಗಲೇಱು' ನೋ.

**ಹೆಗಲೇಱು** 'ಪೆಗಲೇಱು' ನೋ.

**ಹೆಗಲೊಡ್ಡು** (ಕ್ರಿ). ಹೆಗಲು ಕೊಡು; ಭಾರ ಹೊರು; ನೇರವಾಗು: ಅನುರೂಪಳಾದ ವಧುವೊಬ್ಬಳನ್ನು ನಿಶ್ಚಯಿಸಿ ವಿವಾಹ ಮಗನಿಗೆ ಮಾಡಿಸಿದರೆ ತನ್ನಿಂದ ತಾನೇ ಆತ ಸಂಸಾರಭಾರಕ್ಕೆ ಹೆಗಲೊಡ್ಡುವವನಾಗುತ್ತಾನೆ (ಕುರುಕಾ. ೧೨೪).
[ಹೆಗಲು (< ಪೆಗಲ್) + ಒಡ್ಡು$_1$]

**ಹೆಗಲ್ಗೊಳಿಸು** (ಕ್ರಿ). ಎತ್ತಿನ ಹೆಗ್ಗತ್ತಿನ ಮೇಲೆ ನೊಗವನ್ನು ಹೂಡು: ಬಲ್ಲೆತ್ತುಗಳನೇ ಹೆಗಲ್ಗೊಳಿಸಿ ಬಂಡಿಯೊಳಗ್ರದಲಿ ಕೇಳಿಕೆಗಳೊಡಗೂಡಿ (ಬಸವು. ೫೬-೬).
[ಹೆಗಲ್(< ಪೆಗಲ್) + ಕೊಳ್$_1$ + - ಇಸು$_3$]

**ಹೆಗಳು** (ನಾ). ಒಂದು ಬಗೆಯ ರೋಗ: ಕಮ್ಮಾರರ ಮನೆಯ ಇಲ್ಲಣ . . . ಸೊಲ್ಲಗೆ ಎಣ್ಣೆ, ಇವಂ ಕೂಡಿ ಎರಡು ದಿನ ನೀರಲ್ಲಿ (ಅರೆದು) ಮೂಱುದಿನ, ಆಱುದಿನ, ಒಂಭತ್ತುದಿನ ಕೊಳ್ಳೆ ಯವಾಗುಗಂಜಿ ಬೆರೆಯೆ ಹೆಗಳು ಮಾಣ್ಗುಂ (ವಿವೈವಿ ೬೩). 'ತೇಮಳು' ಹೋ. [?]

**ಹೆಗುಂಜಿ** 'ಪೆರ್ಗುಂಜಿ' ನೋ.

**ಹೆಗೆಡೆ** 'ಪೆರ್ಗಡೆ$_1$' ನೋ.

**ಹೆಗ್ಗ$_1$** 'ಪೆಂಗ$_1$' ನೋ.

**ಹೆಗ್ಗ$_2$** (ನಾ). ಹಿರಿಯವನು (?): ಅಗ್ಗಿಸಿದೊಡೆ ದಿಟವೆಂದೆಗ್ಗಱಿಯದ ನಗ್ಗದ ಹೆಗ್ಗರು ನುಗ್ಗುಗಳಂ ಬಗ್ಗಿಸಿ ಕರದೊಗ್ಗಿಂ ಮೊಗ್ಗರವಾಯಿತು (ವೀರೇಚ. ೨-೨೬). [< ಪಿರಿದು$_1$]

**ಹೆಗ್ಗ$_3$** (ನಾ). ಹರಳುಗುಳಿಯ ಮಣೆಯಲ್ಲಿ ಹೆಚ್ಚು ಹರಳುಗಳಿಂದ ತುಂಬಿದ ಗುಳಿ: ಈ ಕಾಳನ್ನು ಎತ್ತಿದರೆ ನನಗೆ ಎರಡು ದೊಡ್ಡ ಹೆಗ್ಗ ಬರುತ್ತೆ (ರೂಢಿ). [ದೇ. II ತುಳು. ಪೆರ್ಗ, ಪೇರ್ಗ]

**ಹೆಗ್ಗಂಬ** (ನಾ). ದೊಡ್ಡ ಕಂಬ: ಅವರಿಬ್ಬರೂ ಪವಿತ್ರಪುರತಾಲ್ಲೂಕಿನ ಹೆಗ್ಗಂಬಗಳಂತೆ ಇರುವ ನಾಯಕರೆಂದು ಹೇಳಿದನು (ಪಂಜಪಂ. ೨೧೫). [< ಪಿರಿದು$_1$ + ಕಂಬ$_1$ (< ಕಂಭ)]

**ಹೆಗ್ಗಂಬಳಿ** (ನಾ). ದೊಡ್ಡ ಕಂಬಳಿ: ಚಾಪೆಗಳ ಮೇಲೆ ಜಮಖಾನೆಯನ್ನೊ ಜಾಡಿಯನ್ನೊ ಹೆಗ್ಗಂಬಳಿಯನ್ನೊ ಬಿಚ್ಚಿ ಹರಡಿದರೆ ಅದೇ ಹಾಸಗೆಯಾಗಿ . . . ಜನರು ಒಟ್ಟೊಟ್ಟಿಗೆ ಮಲಗುತ್ತಿದ್ದುದು ರೂಢಿ (ಮಲೆಮ. ೭೨೮). [< ಪಿರಿದು$_1$ + ಕಂಬಳಿ]

**ಹೆಗ್ಗಟ್ಟವತ್ತಿಗೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು; ಶಂಖಪುಷ್ಪಿ: ''ಅಮ್ಮಂಗೊಡಲಿಯೆಂದು ಹೆಗ್ಗಟ್ಟವತ್ತಿಗೆ'' (ಕಶಸಾ. ೬೭-೫೨೫).
[< ಪಿರಿದು$_1$ + ಕಟ್ಟವತ್ತಿಗೆ]

**ಹೆಗ್ಗಡಜ** (ನಾ). ಜೇನುಹುಳುವಿನ ಜಾತಿಗೆ ಸೇರಿದ ಒಂದು ಬಗೆಯ ಕೀಟ; ದೊಡ್ಡ ಕಣಜ: ''ಆಲಿ, ದ್ರುಣ, ವೃಶ್ಚಿಕ ಎಂದೊಡೆ ಚೇಱು; ಹೆಗ್ಗಡಜನೆಂದು ಸುಬೋಧೆಯಲ್ಲಿ ಇದ್ದುದು'' (ನಾಚಿರಾ. ೬); ಜಡವೆ ತನುವಾಗಿರುತಿರುವ ಹೆಗ್ಗಡಜಪುಳುವಂ ತಂದು ತನ್ನವೊಡಲದಕೆ ಕೈಗಟ್ಟಿ ಬಹುದಂತಾರ್ಯರಾದವರು (ವಿವೇಭ. ೧೮-೨೫).
[< ಪಿರಿದು$_1$ + ಕಡಜ$_1$ (< ಕಡಂಜ)]

**ಹೆಗ್ಗಡತಿ** 'ಪೆರ್ಗಡಿತಿ' ನೋ.

**ಹೆಗ್ಗಡಲು** 'ಪೆರ್ಗಡಲ್' ನೋ.

**ಹೆಗ್ಗಡವ** (ನಾ). ದೊಡ್ಡ ಕದಂಬವೃಕ್ಷ: ''ಕಡಂಬರಃ- ನಾಭಿ, ಹೆಗ್ಗಡವ'' (ಓಷಧಿ. ೨೫). [< ಪಿರಿದು$_1$ + ಕಡವ$_1$ (< ಕಡಂಬ)]

**ಹೆಗ್ಗಡಿ** 'ಪೆರ್ಗಡೆ$_1$' ನೋ.

**ಹೆಗ್ಗಡಿಕೆ, ಹೆಗಡಿಕೆ** (ನಾ). ಮುಂದಾಳುತನ; ಮುಖಂಡತ್ವ: ಬಳ್ಳಿಗಾವೆಯ ಮೂಲಸ್ಥಾನದ ಭೇರುಂಡಸ್ವಾಮಿದೇವರ್ಗೆ ಹೆಗ್ಗಡಿಕೆಯಷ್ಟಭೋಗತೇಜಸ್ಸಾಮ್ಯಸಹಿತ ವಯಿದ್ಯ ದಾಸಣ್ಣಂಗೆ . . . ಕೊಟ್ಟ ಭೂಮಿ (ಮೈಆರಿ. ೧೯೨೯, ೫೭-೧೦; 1294). **ಹೆಗಡಿಕೆ:** ಹೆಗಡಿಕೆ ಸೇನಬೋವಿಕೆ ಕೆಱೆಗೆ ಊರ ಸಾಲಕೆ ಅಳಿಉ ಅಂನ್ಯಾಯ ಏನು ಬಂದಡೆಉ . . . ಪರಿಹರಿಸಿ ಕೊಡುವರು (ಎಕ. VII (R), ಕೃಷ್ಣರಾ. ೯೦-೮; 1299).
[ಹೆಗ್ಗಡೆ (< ಪೆರ್ಗಡೆ$_1$) + - ಇಕೆ]

**ಹೆಗ್ಗಡಿತಿ** 'ಪೆರ್ಗಡಿತಿ' ನೋ.

**ಹೆಗ್ಗಡೆ** 'ಪೆರ್ಗಡೆ$_1$' ನೋ.

**ಹೆಗ್ಗಡೆಗದ್ಯಾನ** 'ಪೆರ್ಗಡೆಗದ್ಯಾಣ' ನೋ.

**ಹೆಗ್ಗಡೆತನ** 'ಪೆರ್ಗಡೆತನ' ನೋ.

**ಹೆಗ್ಗಣ್, ಹೆಗ್ಗಣ್ಣು** (ನಾ). ೧. ದೊಡ್ಡದಾದ ಕಣ್ಣು; ವಿಶಾಲವಾದ ಅಕ್ಷಿ: ತನ್ನ ಹೆಗ್ಗಣ್ಣಳಂ ಹಿರಿದು ತೆರೆದು, ಇಂಗಿತವರಿತು ನಿಸ್ತಬ್ಧವಾಗಿರ್ದ ರಾವಣಸಭಾಸಮುದ್ರವನಿಕ್ಕದವೆಯಿಂ ಸಮೀಕ್ಷಿಸುತೆ (ಶ್ರೀ ರಾಮಾ. ೫೭೧-೨೫೬). **ಹೆಗ್ಗಣ್ಣು:** ೧. ತನಗೆ ಒಂದು ಮಾರು ದೂರದಲ್ಲಿ ಕುಳಿತು, ತನ್ನ ಕಡೆಗೇ ನೋಡುತ್ತಿದ್ದ ಹುಲಿಯನ ಹೆಗ್ಗಣ್ಣುಗಳನ್ನು ನೋಡತೊಡಗಿದನು (ಮಲೆಮ. ೨೦). ೨. ಅರಳಿದ ಕಣ್ಣು; ಬಿರುಗಣ್ಣು: ದುಷ್ಟಬುದ್ಧಿ ಓಡೋಡಿ ಬಂದು ಏದುತ್ತಾ . . . ನಿಲ್ಲುತ್ತಾನೆ. ಬುದ್ಧಿಗೆಟ್ಟವನಂತೆ ಉನ್ಮಾದವೇರಿದವನಂತೆ ಹೆಗ್ಗಣ್ಣಾಗಿ ಮುಖ ವಿಕಾರವಾಗಿದೆ (ಚಂದ್ರಸ. ೧೧೨-೧೯). ೩. (ಆಲಂ) ವಿರಾಟ್‌ದರ್ಶನದ ಕಣ್ಣು: ತರಣಿಯೆ ಕರ್ಮಸಾಕ್ಷಿ ಸ್ವರೂಪನಾಗಿ ಪರ್ನ್ನೆ ಜಗದ ಹೆಗ್ಗಣ್ಣಾತನು (ವೀಶೈಪು. ೪-೩-೪೪). [< ಪಿರಿದು$_1$ + ಕಣ್]

**ಹೆಗ್ಗಣ₁** 'ಪೆರ್ಗಣ' ನೋ.

**ಹೆಗ್ಗಣ₂** (ನಾ). [ವೀಶೈ] ಪ್ರಮಥರಲ್ಲಿ ಹಿರಿಯನಾದವನು: ಗಣಬಲದೊಳು ಹೆಗ್ಗಣನಹೆ (ಕುಮಾವ್ಯಾ. ೪೬). [< ಪಿರಿದು₁ + ಗಣ]

**ಹೆಗ್ಗಣ್ಣು** 'ಹೆಗ್ಗಣ್' ನೋ.

**ಹೆಗ್ಗತ್ತಲೆ** 'ಪೆರ್ಗಳ್ತಲೆ' ನೋ.

**ಹೆಗ್ಗತ್ತಿ** (ನಾ). ದೊಡ್ಡ ಕತ್ತಿ: ಸಾಮಾನ್ಯವಾಗಿ ಹೆಗ್ಗತ್ತಿಯ ತುದಿಯಿಂದ ಬೆತ್ತಲೆ ಹೊಟ್ಟೆಗೆ ತಿವಿದುಕೊಳ್ಳುವುದರಿಂದ ತಾನು ನಿಜವಾಗಿಯೂ ಗುಡ್ಡ ಎಂಬುದನ್ನು ಅಂದೇ ಜನರಿಗೆ ತೋರಿಸುತ್ತಾನೆ (ಬೋರದೇ. ೧೪). [< ಪಿರಿದು₁ + ಕತ್ತಿ]

**ಹೆಗ್ಗತ್ತು, ಹೆಕ್ಕತ್ತು** (ನಾ). ೧. ಕತ್ತಿನ ಹಿಂಭಾಗ; ಹೆಡಕು; ಹೆಡತಲೆ: ನೆರಳಂತೆ ಹೆಗ್ಗತ್ತಿನಲಿ ಮರಣವಿಹುದೈ (ಕಎಪು. ೧೧-೭); ಆನೆಯ ಹೆಗ್ಗತ್ತಿನಿಂದ ಉತ್ತರನು ಹೆಣವಾಗಿ ಕೆಳಗೆ ಬಿದ್ದನು (ವ್ಯಾಸಟಿ. ೩೨೭). **ಹೆಕ್ಕತ್ತು**: ೧. ದಾಸೀಜನರಿಂದ ಹೆಕ್ಕತ್ತಿನ ಮೇಲೆ ತಿವಿದು ಹೊರಡಿಸುತ್ತಲಿದ್ದೇನೆ (ಕೃವಾಅ. ೧೧೯); ಹೆಕ್ಕತ್ತಿನಲ್ಲಿರುವ ಸುಳಿಗಳೆರಡು ಕೂಡ ಸ್ವಾಮಿಗೆ ರೋಗಪ್ರದಗಳಾಗುವವು (ಸೌಗಂಧಿ. ೩೦-೧೯). ೨. ಹೆಗಲು; ಭುಜಾಗ್ರ: ಹೆಕ್ಕತ್ತು ಯರಡು ಮುಂಗೈಗಳು ಯಿಂತು ಹದಿನೈದು ಸ್ಥಾನಂಗಳಲ್ಲಿ ಪ್ರತಿನಿತ್ಯದಲ್ಲಿಯು ತ್ರಿಪುಂಡ್ರವಂ ಧರಿಸಬೇಕು (ಸೌಗಂಧಿ. ೩೮೫-೧೦). 'ಹೆಡಕತ್ತು' ಹೋ. [ಹೆಱಗು (< ಪೆಱಗು) + ಕತ್ತು₃ (< ಕಟ್ಟು)]

**ಹೆಗ್ಗದ** 'ಪೆರ್ಗದಹು' ನೋ.

**ಹೆಗ್ಗದಿರ್** (ನಾ). ದೊಡ್ಡ ಕಿರಣ: ರೇಣುಕೆಗೆ ತಗ್ಗಿ ನಡೆಯಲ್ವೇಳ್ಕು ಭಳರೆಂದು ದಿನಪನುಂ ಹೆಗ್ಗದಿರ್ಗಳ ಸೆಳೆದು ಪಶ್ಚಿಮಾಂಬುಧಿಗಿಳಿಯೆ (ಪರಶು. ೧೯-೭). [< ಪಿರಿದು₁ + ಕದಿರ್₂]

**ಹೆಗ್ಗದ್ದೆ** 'ಪೆಗ್ಗಟ್ಟಿ' ನೋ.

**ಹೆಗ್ಗನ** (ನಾ). ರಥವು ಸರಿಯಾಗಿ ಚಲಿಸುವಂತೆ ಮಾಡಲು ಉಪಯೋಗಿಸುವ ಒಂದು ಬಗೆಯ ಸಾಧನ: ಗಗ್ಗರಿಘಲಿರೆಂಬ ಗಾಲಿಯ ಬಲುರವ ಹೆಗ್ಗನ ಮಿಂಚೆ ಝುಂಕಿಸುವ ಒಗ್ಗಿನ ವೀರಮಕ್ಕಳ ಮೊತ್ತದಲಿ ತೇರು ಬೊಗ್ಗನೆ ನಡೆದುದರ್ತಿಯಲಿ (ಕಂನವಿ. ೨೫-೧೦೭). 'ಹೆದ್ನ' ಹೋ. [?]

**ಹೆಗ್ಗನಸು** (ನಾ). ಹಿರಿಯ ಕನಸು; ದೊಡ್ಡ ಕನಸು: ಮುಂದೆ ಸೊಗವಹುದೆಂಬ ಹೆಗ್ಗನಸಿನಡಿಗಳಲಿ ಕನಸಿನಾ ಹಗೆಗಳೆಲ್ಲರು ಕುರಿಗಳಂತೆ ಬಲಿ! (ಕೋಗಿಲೆ. ೧-೧೮). [< ಪಿರಿದು₁ + ಕನಸು]

**ಹೆಗ್ಗಬ್ಬು, ಹೆಕ್ಕಬ್ಬು** (ನಾ). ಒಂದು ಬಗೆಯ ದೊಡ್ಡ ಜಾತಿಯ ಕಬ್ಬು: "ಕರಂಕಮಾಲಃ- ಹೆಗ್ಗಬ್ಬು" (ಓಷಧಿ. ೨೭). **ಹೆಕ್ಕಬ್ಬು**: ಹಾಗಲದ ಕಾಯ ಬೀಜವ ತೆಗೆದು ಬಿಳಿಪಾಷಾಣವ ತುಂಬಿ . . . ಹೆಕ್ಕಬ್ಬಿನ ರಸದಲ್ಲಿ ನೇರಳೆಪ್ರಮಾಣದಲ್ಲಿ ಗುಳಿಗೆಯಂ ಊಟದಲ್ಲಿ ಇಕ್ಕೆ ವಶ್ಯ (ವಿಷ್ಣುವಿ. ೨೧೧). [< ಪಿರಿದು₁ + ಕಬ್ಬು₂ (< ಕರ್ಬು₁)]

**ಹೆಗ್ಗರ** (ನಾ). ದೊಡ್ಡ ಗರ, – ಗ್ರಹ: ಆ ನುಡಿಗೇಳಿ ಹೆಗ್ಗರ ಹೊಡೆದಂತಾ ಮಾನಿನಿ ಸವ್ವೆಱಗಾಗಿ (ನೇಮಿಸಂ. ೩-೫೨); ಕೊಬ್ಬಿ ಕೊಬೆದು ಬಿದ್ದಾಡಿ ಹೆಗ್ಗ[ಪಾಠಾಂ. ಗ]ರಗಳ ಗುಬ್ಬಿಸುತಿರ್ಪವಂತಲ್ಲಿ (ಶ್ರೀಪಾಲ. ೮-೩೫). [< ಪಿರಿದು₁ + ಗರ₂]

**ಹೆಗ್ಗರಗಸ** (ನಾ). ದೊಡ್ಡ ಗರಗಸ: ನಡುನೆತ್ತಿಯಲ್ಲಿ ಹೆಗ್ಗರಗಸವನಿಟ್ಟುಱಿದೆರಡು ಭಾಗಮಂ ಮಾಡಿ (ವೀಶೈಪು. ೪-೧೯-೩೦). [< ಪಿರಿದು₁ + ಗರಗಸ₁ (< ಕರಗಸ₁)]

**ಹೆಗ್ಗರಡಿ** 'ಪೆರ್ಗರಡಿ' ನೋ.

**ಹೆಗ್ಗರಿಲು** (ನಾ). ಒಂದು ಬಗೆಯ ಮೀನು: ಬಾಳೆ ಹೆಗ್ಗರಿಲುಂ ಕಲ್ಲಡಿ . . . ಪಂದಿಗನೆಂಬ ಮಿಸ್ತಿಗೆದನಾ ಭಕ್ತಂ ಮಹಾಲೀಲೆಯಿಂ (ತ್ರಿಪುವಿ. ೫೭-೮). 'ಅರಿಲುಂಬ' ಪರಾ. [?]

**ಹೆಗ್ಗರುಳು** 'ಪೆರ್ಗರುಳ್' ನೋ.

**ಹೆಗ್ಗಲ್ಲು** 'ಪೆರ್ಗಲ್' ನೋ.

**ಹೆಗ್ಗವಣೆ** (ನಾ). ಒಂದು ಬಗೆಯ ಮರ: ಹೆಗ್ಗವಣೆ [ಪಾಠಾಂ. ಣಿ]ಮುಂಗಾರೆ ಬಿಡಿತ್ತಿ . . . ಹೊನ್ನೆ ಮೊದಲಾದ ವೃಕ್ಷಂಗಳಿಂ ಗಿರಿಯ ತಪ್ಪಲದರಣ್ಯಂ ತೋರಿದತ್ತರುಣರುಚಿ ನುಸುಳಲೀಯದಂತೆ (ಮಹಾವಿ. ೧೭-೨೭). [?]

**ಹೆಗ್ಗವಿ** (ನಾ). ದೊಡ್ಡ ಗುಹೆ; ವಿಶಾಲವಾದ ಗವಿ: ಆ ಹಿಮಾಲಯದ ಹೆಗ್ಗವಿಕಗ್ಗಾಡುಗಳನ್ನು ಆಡುಂಬೊಲಗಳನ್ನಾಗಿ ಮಾಡಿಕೊಂಡ ಆರ್ಯರಿಗೆ ಈ ವಿಂಧ್ಯವನ್ನೀಕ್ಷಿಸಿ ಭಯಜ್ವರವುಂಟಾಗಬಹುದೇನು? (ನಾಡೋಜ. ೧೧೧). [< ಪಿರಿದು₁ + ಗವಿ₂]

**ಹೆಗ್ಗಹಳೆ, ಹೆಗ್ಗಾಣೆ, ಹೆಗ್ಗಾಳೆ** (ನಾ). ದೊಡ್ಡ ಕಹಳೆ: ಸಾಲ ಹೆಗ್ಗಹಳೆಗಳು ರಿಪುಭೂಪಾಲಕರ ಬೈಬೆದು ಗಜಱಿದವು (ಕುವ್ಯಾದ್ರೋ. ೪-೫೨); ಹೆಗ್ಗಹಳೆ ಚಿನಿ ಕಹಳೆ ಕರಣೆಯ ನಾದ ಇಂತಿವು ಮೊದಲಾದ ನಾನಾತೆಱದ ನಾದಂಗಳನು ಕಿವಿದುಂಬಿ ಕೇಳಿ (ಅಖಂಡೇ. ೨೦೭-೪೭). **ಹೆಗ್ಗಾಣೆ**: ಮೃದಂಗ ತಮ್ಮಟೆ ಸಂಭ್ರಮದ ಹೆಗ್ಗಾಣೆ ಗಿಡಿಬಿಡಿ ಕರದೆ ಕೌಂಸಾಳೆ (ದೇವೀಮ. ೨-೮೯). **ಹೆಗ್ಗಾಳೆ**: ಘುಡುಘುಡಿಪ ಹೆಗ್ಗಾಳೆ ಮೊಳಗುವ ಬೆಡಗು ಜಾಗಟೆ ಬೊಬ್ಬೆಯಲಿ ಜಗ ನಡುಗೆ (ಕುವ್ಯಾವಿ. ಓರಿಇ. ೪-೧೮); ಶಂಖ ಹೆಗ್ಗಾಳೆ ವೀರತಂಬಟ ತುಡುಮುಗಳಾ ಭೋರನೊಂದೇ ಬಾರಿ ಸದೆದರು (ಭರಚ. ೨೨-೬೮). [< ಪಿರಿದು₁ + ಕಹಳೆ]

**ಹೆಗ್ಗಳ** 'ಪೆಕ್ಕಳ₁' ನೋ.

**ಹೆಗ್ಗಳಂಗಡಲೆ** 'ಹೆಗ್ಗಳ್ಳಂಗಡಲೆ' ನೋ.

**ಹೆಗ್ಗಳಪಿ** 'ಹೆಗ್ಗಳವಿ' ನೋ.

**ಹೆಗ್ಗಳವಿ, ಹೆಗ್ಗಳಪಿ** (ನಾ). ಒಂದು ಬಗೆಯ ಕಪ್ಪುಹಣ್ಣುಗಳನ್ನು ಬಿಡುವ ಮುಳ್ಳುಕಂಟಿ ಗಿಡ: "ಕರಮಾರಿಃ- ಹೆಗ್ಗಳವಿ" (ಓಷಧಿ. ೨೪). **ಹೆಗ್ಗಳಪಿ**: ಕಡಸು ಕಾರೆ ಬೋರೆ ಗುಳವತ್ತಿ ತುಂಬುರು ನಗರೆ ಮುಂತಾದ ಪಣ್ಗಳ ತಂದರಾಳ್ದನ ಬಳಿಗೆ (ಮೋಹತ. ೧೯-೫೭). [< ಪಿರಿದು₁ + ಕಳವಿ (< ಕಳವೆ₁)]

**ಹೆಗ್ಗಳಿಕೆ** 'ಪೆರ್ಕಳಿಕೆ' ನೋ.

**ಹೆಗ್ಗಳೆ** (ನಾ). ಉದ್ದವಾದ ಕೋಲು,– ದಂಡ: ಮುತ್ತಿನ ಸತ್ತಿಗೆ ಮುತ್ತಿನ ಹೆಗ್ಗ[ಪಾಠಾಂ. ಗ್ಗಾ]ಳೆ ಮುತ್ತಿನ ಬಲುಪಂಜರಗಳ . . . ಅಂದಿತ್ತನಾ ರಾಯ ಮಗಳಿಗೆ (ರಾಮವಿ. ೮-೫೦). 'ಪೆರ್ಗಳೆ' ಪರಾ. [< ಪಿರಿದು₁ + ಗಳೆ (< ಗಟ್)]

**ಹೆಗ್ಗಳ್ಳಂಗಡಲೆ, ಹೆಗ್ಗಳಂಗಡಲೆ** (ನಾ). ದೊಡ್ಡ ಜಾತಿಯ ಕಳ್ಳಂಗಡಲೆ: ಹೆಗ್ಗಳ್ಳಂಗಡಲೇಬೇರು, ಕಿರುಗಳ್ಳಂಗಡಲೇಬೇರು . . . ನಾಗಕೇಸರ ಇವಿಷ್ಟನೂ ಪ್ರತ್ಯೇಕ ಎರಡು ವರಹ ತೂಕ ಆಡಿನ ಹಾಲಿಂದ ಅರೆದು ಕುಡಿಯ ಕೊಡಿಸಲು ಶ್ಲೇಷ್ಮಯುಕ್ತವಾದ ಯೋನಿ ಶುದ್ಧವಹುದು (ವೈದ್ಯಸಾ. II, ೪೧). **ಹೆಗ್ಗಳಂಗಡಲೆ**: "ಅತಿಬಲ-ಹೆಗ್ಗಳಂಗಡಲೆ" (ಅಕಾನಿ. ೧-೨೪). [< ಪಿರಿದು₁ + ಕಳ್ಳಂಗಡಲೆ]

**ಹೆಗ್ಗಱ** 'ಪೆರ್ಗಱ' ನೋ.

**ಹೆಗ್ಗಾಡು** 'ಪೆರ್ಗಾಡು' ನೋ.

**ಹೆಗ್ಗಾಣೆ** 'ಹೆಗ್ಗಹಳೆ' ನೋ.

**ಹೆಗ್ಗಾರ** (ನಾ). ೧. ಒಂದು ಬಗೆಯ ಪಕ್ಷಿ; ಟಿಟ್ಟಿಭ: "ಹೆಗ್ಗಾರಂ ಭರದ್ವಾಜಮೆಂದೆನಿಕ್ಕುಂ" (ಮಂಗರಾ. ೫೦-೪). ೨. ಗಿಣಿ; ಶುಕ: ಮದನ ಹೆಗ್ಗಾರನನೇಱಿದಂತಾ ರಾಯ ಕುದುರೆಯನೇಱಿ ಮೋಹಿಸಿದ (ಭರಚ. ೨೯-೧೮); ಮೊಗ್ಗೆಗೋಲನ ಸಭೆಗಿನಿಸು ತಗ್ಗಿ ಬಾ ಮೆಲ್ಲನೆ ಬಾರೆಂದು ಹೆಗ್ಗಾರ ನುಡಿದುವಲ್ಲಲ್ಲಿ (ಭರಚ. ೪೭-೭೦). 'ಕಾರ್ರೆ₂' ಪರಾ. [?]

**ಹೆಗ್ಗಾರೆ** (ನಾ). ಒಂದು ಬಗೆಯ ಮರ: ಹೆಗ್ಗಾರೆ ಕಿರಿದಾಲ ಹೆದ್ದಾಲ . . . ಹೊನ್ನೆ ಮೊದಲಾದ ವೃಕ್ಷಂಗಳಿಂ (ಮಹಾವಿ. ೧೭-೨೭). [< ಪಿರಿದು₁ + ಕಾರೆ₁]

**ಹೆಗ್ಗಾಲುವೆ** (ನಾ). (ನೀರು ಹಾಯಿಸಲು ಮಾಡಿರುವ) ದೊಡ್ಡದಾದ ನಾಲೆ,– ಕಾಲುವೆ: ಬಡಗಣ ಮೇರೆ ಪಡುವ ಮುಂದಾಗಿ ತೋಟಕ್ಕೆ ಹರಿದ ಹೆಗ್ಗಾಲುವೆ (ಸೌಇಇ. IX-i, ೨೭೩-೯೫; 1179); ಹೆಗ್ಗಾಲುವೆಗಳಿಂದ ಉಪಶಾಖೆಗಳನ್ನು ತೆಗೆಯುತ್ತಾರೆ (ಭೂವಿವ. ೨೮೪). 'ಪೆರ್ಗಾಲ್' ಪರಾ. [< ಪಿರಿದು₁ + ಕಾಲುವೆ (< ಕಾಲ್ವಾಯ್)]

**ಹೆಗ್ಗಾವಲಿ** 'ಪೆರ್ಗಾವಲಿ' ನೋ.

**ಹೆಗ್ಗಾಳ** (ನಾ). ದೊಡ್ಡ ಕಪ್ಪುನಾಯಿ: ತರವೇಟು ಸಾಳುವವೇಗನಂ ತೊಗರನಂ ಹೆಗ್ಗಾಳನಂ ಜೂಗನಂ (ನಳಚಂ. ೬೭). [< ಪಿರಿದು₁ + ಕಾಳ₂]

**ಹೆಗ್ಗಾಳೆ** 'ಹೆಗ್ಗಹಳೆ' ನೋ.

**ಹೆಗ್ಗಿಡ** (ನಾ). ದೊಡ್ಡ ಗಿಡ; ಎತ್ತರವಾದ ಗಿಡ: ಕಾಡೆಲ್ಲ ಕಸುಗಾಯಿ ನಾಡೆಲ್ಲ ಹೆಗ್ಗಿಡವು ಆಡಿದ ಮಾತು ನಿಜವಿಲ್ಲ ಮಲೆನಾಡ ಕಾಡು ಸಾಕೆಂದ (ಸರ್ವಜ್ಞ. ೧೬೨೧). [< ಪಿರಿದು₁ + ಗಿಡ (< ಗಿಡು)]

**ಹೆಗ್ಗಿಡಿ** 'ಪೆರ್ಗಿಡಿ' ನೋ.

**ಹೆಗ್ಗಿಡುಗ** 'ಪೆರ್ಗಿಡುಗ' ನೋ.

**ಹೆಗ್ಗಿರಿ** (ನಾ). ದೊಡ್ಡ ಬೆಟ್ಟ: ಹೆಗ್ಗಿರಿಯೊಂದ ಕಿತ್ತೆತ್ತಿ ಡೆಂಡಣಿಸಿ ಬಲುಹಿಂದ ಕಪಿಭಟ ಮಂಡೆಯಲಿ ಹೊತ್ತೆತ್ತಿ ತಂದನು (ಕಾಶಿರಾ. ೧೬-೭); ನಿಡುದೊರಗಳ ಹೇರಾಸಿ ಹೆಗ್ಗಿರಿ ನುಗ್ಗಿದಸ್ಥಿಗಳ ಸರಿಬೆರಕೆಯಲಿ ಭೂತಕೋಟಿಯ ನೆರವಿಗುಣ ಬಡಿಸಿದವೊಲಿರ್ದುದು ಖರವಿರೋಧಿಯ ಕದನಕರ್ಕಶಭಾಣಪರ್ವದಲಿ (ತೊರರಾ. ೬-೪೫-೬೧). [< ಪಿರಿದು₁ + ಗಿರಿ₁]

**ಹೆಗ್ಗಿವಿ** (ನಾ). ದೊಡ್ಡ ಕಿವಿ; ಅಗಲವಾದ ಕಿವಿ: ಗುಂಜುರುದಲೆಯ ಹೆಗ್ಗಿವಿಯ ಬಸುಱ ಹೊದ್ದಿದ ತೋರಮೊಲೆಗಳ ವಿಷಯರಕ್ತಾಸಕ್ತಮಯ ರಾಕ್ಷಸವಧೂನಿಕು ರುಂಬವಿದ್ದುದದೊಂದು ತಾಣದಲಿ (ತೊರರಾ. ೫-೨-೭೦). [< ಪಿರಿದು₁ + ಕಿವಿ₃]

**ಹೆಗ್ಗುಂಟೆ** (ನಾ). ದೊಡ್ಡ ಹಳ್ಳ; ಭಾರಿ ಹಳ್ಳ: ಬೆಂಕಿಯ ಉರಿ ಆರಿದ್ದರೂ ಹೆಗ್ಗುಂಟೆಗಳಲ್ಲಿ ಕೆಂಡ ನಿಗಿನಿಗಿ ಝುಗಿಸುತ್ತಿತ್ತು (ಮಲಮ. ೬೪೧). [< ಪಿರಿದು₁ + ಕುಂಟೆ₂]

**ಹೆಗ್ಗುಂಡು** 'ಪೆರ್ಗುಂಡು' ನೋ.

**ಹೆಗ್ಗುಡ್ಡ** (ನಾ). ದೊಡ್ಡ ಗುಡ್ಡ; ಹೆಗ್ಗುಡ್ಡದೊಳ್ಬಿಂದ ಪಟಲ ಮದ್ದ ಸುಡಲ್ಕಗ್ಗಿ ಗಿಡಿಯಿಂದಳಿದ ಹೆಗ್ಗನಂತಂಗಜಂ ಬುಗ್ಗಿಯಾದಂ (ಮದೇಪು. ೧೨-೧೮).

[< ಪಿರಿದು₁ + ಗುಡ್ಡ₂]

**ಹೆಗ್ಗುದಿಗೆ** (ನಾ). ದೊಡ್ಡ ದೊಣ್ಣೆ: ನೆಲ್ಲಿಯ ಕಾಯ್ಗಳ ಹೆಗ್ಗುದಿಗೆಯೊಳಿಡೆ ಚಲ್ಲವರಿದು ಬೀಳುವಂತೆ ಬಲ್ಲಿದ ಖಾನರು ಚಗಿದು ಬಿಟ್ಟಾಕ್ಷಣ ಹಲ್ಲ ಕಿರಿದರಗಳೊಳಗೆ (ಕಂಸವಿ. ೧೪-೭೯). [< ಪಿರಿದು₁ + ಗುದಿಗೆ]

**ಹೆಗ್ಗುನ್ನಿ** (ನಾ). ದೊಡ್ಡ ಬೇಟೆನಾಯಿ: ಬಸುಱ ಬಗಿ ಕರುಳನುಗಿ ಕೆಡಹು ತಿನ್ನು ತಿರಿದಿಗಳೆ ಮೂಳೆಯಂ ಮುಱಿಯೆನುತ್ತ ಹೆಗ್ಗುನ್ನಿಗಳ ತಲೆದಡವಿ ಹಾಸಮಂ ತಿವಿದು ಕವಿದರು ಬೇಡರಣ್ಣೆಸೆಯೊಳು (ಹಚಕಾ. ೬-೨೪). [< ಪಿರಿದು₁ + ಕುನ್ನಿ]

**ಹೆಗ್ಗುರಂಟಿಕೆ** 'ಪೆರ್ಗುರುಂಟಿಗೆ' ನೋ.

**ಹೆಗ್ಗುರಟಿಗೆ** 'ಪೆರ್ಗುರುಂಟಿಗೆ' ನೋ.

**ಹೆಗ್ಗುರಿ** (ನಾ). ಹಿರಿಯ ಗುರಿ,– ಧ್ಯೇಯ ,– ಉದ್ದೇಶ: ಜನರನ್ನು ಸನ್ಮಾರ್ಗ ಪ್ರವರ್ತಕರನ್ನಾಗಿ ಮಾಡುವುದೇ ಕಾವ್ಯದ ಹೆಗ್ಗುರಿ (ಭಾರದ. ೪೪೫).

[ಪಿರಿದು₁ + ಗುರಿ₁ (< ಕುಱಿ₂)]

**ಹೆಗ್ಗುರುಟಗೆ** 'ಪೆರ್ಗುರುಂಟಿಗೆ' ನೋ.

**ಹೆಗ್ಗುರುಟಿಕೆ** 'ಪೆರ್ಗುರುಂಟಿಗೆ' ನೋ.

**ಹೆಗ್ಗುರುಟಿಗೆ** 'ಪೆರ್ಗುರುಂಟಿಗೆ' ನೋ.

**ಹೆಗ್ಗುರುತು** (ನಾ). ಮುಖ್ಯವಾದ ಗುರುತು , – ಚಿಹ್ನೆ: ಲಿಂಗವು ಶೈವಮತದ ಹೆಗ್ಗುರುತು (ಭಾರದ.೨೦೮); ಅವು ಮಕ್ಕಳಿಗೆ ಕಥೆಯನ್ನು ಜ್ಞಾಪಕದಲ್ಲಿ ನಿಲ್ಲಿಸುವ ಹೆಗ್ಗು ರುತುಗಳಾಗುತ್ತವೆ (ಸಮಾಲೋ. ೧೨೪). [ಪಿರಿದು₁ + ಗುರುತು (< ಗುಱುತು)]

**ಹೆಗ್ಗುರ್ಬು** (ನಾ). ಒಂದು ಬಗೆಯ ಮೀನು: ಕಾಗೆಂಡೆ ಹೆಗ್ಗುರ್ಬು ಹಂಗರಿಗಂ . . . ಪಂದಿಗನೆಂಬ ಮಿನ್ದೆಗೆದನಾ ಭಕ್ತಂ ಮಹಾಲೀಲೆಯಿಂ (ತ್ರಿಷಪು. ೫೭-೮). [?]

**ಹೆಗ್ಗುಳ** 'ಹೆಗ್ಗುಳ್ಳ' ನೋ.

**ಹೆಗ್ಗುಳ್ಳ, ಹೆಗ್ಗುಳ** (ನಾ). ಒಂದು ಬಗೆಯ ದೊಡ್ಡ ಜಾತಿಯ ಬದನೆ,– ಗುಳ್ಳದ ಕಾಯಿ: ಹೆಗ್ಗುಳ್ಳ, ನೆಲಗುಳ್ಳ, ಇವ ತೈಲದಲ್ಲಟ್ಟು ಹೊಟ್ಟೆಗೆ ಕುಡಿಯೆ ಬಾಣಂತಿರೋಗ ಹರ (ವಿಷ್ವಪಿ. ೮೧); ಹಾಗಲ ಬದನೆ ಹೆಗ್ಗುಳ್ಳ ಪಡವಲ (ಆನಂರಾ. ೬-೨೫-೩೯). **ಹೆಗ್ಗುಳ:** ಅಗ್ಗ ಸುಗ್ಗಿಗಳುಂಟು ದೊಗ್ಗೆ ಮಜ್ಜಿಗೆಯುಂಟು ಹೆಗ್ಗುಳದ ಕಾಯಿ ಮೆಲಲುಂಟು (ಸರ್ವಜ್ಞ. ೧೬೮೯); ಹೆಗ್ಗುಳದ ಬೇರು . . . ಕಷಾಯವಿಟ್ಟು . . . ಸೇವಿಸಿದರೆ ವಾತಜ್ವರಂ ತೀರ್ಗುಂ (ಸಕವೈ. ೬೪). 'ಹೆಬ್ಬುಗುಳ್ಳ' ನೋ.

[< ಪಿರಿದು₁ + ಗುಳ್ಳ]

**ಹೆಗ್ಗುಱಿ** 'ಪೆರ್ಗುಱಿ' ನೋ.

**ಹೆಗ್ಗುಱುಹು** 'ಪೆರ್ಗುಱಿಪು' ನೋ.

**ಹೆಗ್ಗೂಗಟೆ** (ನಾ). ಒಂದು ಬಗೆಯ ದೊಡ್ಡ ಜಾತಿಯ ಅಂಟುವಾಳ: "ಮಂಡೂಕಪರ್ಣಃ, ಪತ್ರೋರ್ಣಃ, ನಟಃ . . . ಕುಟನ್ನಟಃ, ಶೋಣಕಃ, ಅರಳು: – ೧೨ ಹೆಮ್ಮರನ ಹೆಸರುಗಳು. ದೊಡ್ಡಮರ, ತಿಗಡುಮರ, ಇದನ್ನು ಹೆಗ್ಗೂಗಟೇಮರವೆಂದು ಕೆಲವರನ್ನುವರು" (ಸಿದ್ಧಾಂತಿ. ೧೨೫). [< ಪಿರಿದು₁ + ಕೂಗಟೆ₁]

**ಹೆಗ್ಗೂರಿಡು** 'ಪೆರ್ಗೂರಿಡು' ನೋ.

**ಹೆಗ್ಗೂರು** 'ಪೆರ್ಗೂರು' ನೋ.

**ಹೆಗ್ಗೂಳಿ** (ನಾ). ದೊಡ್ಡ ಗೂಳಿ: ನಲಿನಲಿದು ಹೆಗ್ಗೂಳಿ ಹಿಗ್ಗಲು ನೆಲನು ಮಿಬ್ಬಗಿಯಾಗಿ ವಟಕುಜವಲೆಯ ಬೇರ್ಗಳು ಛಟಛಟೆನುತಂ ಕೀಳೆ ಪುಟನೆಗೆದು (ಬಸವು. ೩೨-೨೪). [< ಪಿರಿದು₁ + ಗೂಳಿ₁]

**ಹೆಗ್ಗೆ** (ನಾ). ೧. ಮರದ ಎಳೆಯ ಗೆಲ್ಲು,– ರೆಂಬೆ: ಮನೆಗಳ ಅಂಗಳದಲ್ಲಿ ಕಪ್ಪಾಗಿ ಬೆಳೆದ ಹಲಸಿನ ಮರ. ಇದಿರಿನ ಹಿತ್ತಲಿಗೂ ಹೆಗ್ಗೆ ಚಾಚಿ ರಸ್ತೆಗೆ ತೋರಣ ಕಟ್ಟಿದೆ (ಮೂರುದಾ. ೨೦೩). 'ಎಗೆ' ಪರಾ. ೨. ಒಂದು ಬಗೆಯ ಸಸ್ಯ: ಹೆಗ್ಗೆ,ಮಲೆಹೆಗ್ಗೆ (ಮೈಜಿಗಿ. ೪೪-೮೭೫). 'ಮಲೆಹೆಗ್ಗೆ' ಪರಾ. [ದೇ. ॥ ತುಳು. ಎಗ್ಗೆ]

**ಹೆಗ್ಗೆಚ್ಚಲು** 'ಪೆರ್ಗೆಚ್ಚಲ್' ನೋ.

**ಹೆಗ್ಗೆಡೆ** 'ಪೆರ್ಗಡೆ₁' ನೋ.

**ಹೆಗ್ಗೆಣಸು** (ನಾ). ದೊಡ್ಡ ಜಾತಿಯ ಗೆಣಸು: ಕುಂಟಗೆಣಸು, ಹೆಗ್ಗೆಣಸು (ಮೈಜಿಗಿ. ೫೧-೫೯೪); ದಣಿದು ಬಂದ ಕರಿಯನಿಗೆ ಹೆಗ್ಗೆಣಸು ಸುಟ್ಟುಕೊಟ್ಟು ಔತಣ ಮಾಡಿಸಿದ್ದೂ ಆಯಿತು (ಕುಡಿಕೂ. ೨೬೯). 'ಹೆಬ್ಬುಗೆಣಸು' ನೋ.

[< ಪಿರಿದು₁ + ಗೆಣಸು (< ಗೆಱಸು)]

**ಹೆಗ್ಗೆರೆ₁** 'ಪೆರ್ಗೆಱೆ₁' ನೋ.

**ಹೆಗ್ಗೆರೆ₂** (ನಾ). ತಲೆಪಂಕ್ತಿ; ಮೇಲ್ಪಂಕ್ತಿ: ಈ ತನಕ ಮಾನವನು ಸಾಧಿಸಿರುವುದನ್ನು ಹೆಗ್ಗೆರೆಗಳಲ್ಲಿ ತಿಳಿದೆವು (ಮನೋಲಂ. ೨೫೩); ಆಯಾ ವ್ಯಕ್ತಿಯ ಭವಿಷ್ಯಜೀವನದ ರೂಪುರೇಖೆಗಳೂ ವ್ಯಕ್ತಿತ್ವದ ಹೆಗ್ಗೆರೆಗಳೂ ಈ ಕಾಲದಲ್ಲಿ ರೂಪುಗೊಳ್ಳಬೇಕು (ಶಿಕ್ಷದ. ೧೦೩). [ಪಿರಿದು₁ + ಗೆರೆ (< ಗೆಱೆ)]

**ಹೆಗ್ಗೆಸಱು** 'ಪೆರ್ಗೆಸಱ್' ನೋ.

**ಹೆಗ್ಗೆಱೆ** 'ಪೆರ್ಗೆಱೆ' ನೋ.

**ಹೆಗ್ಗೊಂಚೆ** (ನಾ). ಒಂದು ಬಗೆಯ ಆಯುಧ: ಕೊಂಕುಸರಳಿಂ ಹೊಸೆವ ಚಕ್ರದಿಂದಿಡುವ ಕುರುಪಿಂ ಕೆರೆವ ಕಾದಂಬನಿಂದೆಸುವ ಹೆಗ್ಗೊಂಚೆ[ಪಾಠಾಂ. ಗ್ಗೊಂಚೆ] ಯಿಂ ಕೊಯ್ವ . . . ರೌರವದ ನರಕಂ ಭಯಂಕರವಾದುದು (ಸಿದ್ಧರಾ. ೮-೨೮). [?]

**ಹೆಗ್ಗೊಂಬು** 'ಪೆರ್ಗೊಂಬು' ನೋ.

**ಹೆಗ್ಗೊಡ** (ನಾ). ದೊಡ್ಡ ಬಿಂದಿಗೆ: ಈ ಹೊನ್ನಪೀಠವೇಕೆಮಗಯ್ಯ ಕಿಸುವೊನ್ನ ಹೆಗ್ಗೊಡನೊ . . . ಚರುವಿಗೆಯೊ ಸಟ್ಟುಗವೊ (ಸಿದ್ಧರಾ. ೯-೩). [< ಪಿರಿದು₁ + ಕೊಡ₂]

**ಹೆಗ್ಗೊಡೆ** (ಕ್ರಿ). (?): ರುಜುಮತಿಗಳ ಧ್ಯಾವಾ[ನಾ]ಗ್ನಿಮುಖದಿ ನಿಂದ ವೃಜಿನ ಹೆಗ್ಗೊಡೆವಂತಾಯ್ತು (ಗೊಮ್ಮಟ. ೨-೭). [?]

**ಹೆಗ್ಗೊನಮರ** (ನಾ). ದೊಡ್ಡಜಾತಿಯ ಗೋನುಮರ: "ಮಹಾವೃಕ್ಷಃ- ಮುಂಡುಗಳ್ಳಿ, ಹೆಗ್ಗೊನಮರ" (ಒಷಧಿ. ೧೧೬). [< ಪಿರಿದು₁ + ಗೋನಮರ (< ಗೋನುಮರ)]

**ಹೆಗ್ಗೊರವ** 'ಪೆರ್ಗೊರವ' ನೋ.

**ಹೆಗ್ಗೊಲೆ** (ನಾ). ಭೀಕರವಾದ ಕೊಲೆ: ದಳವಾಯಿ ನಂಜರಾಜಯ್ಯನ ರಾಕ್ಷಸ ಪ್ರಕರಣದ ಹೆಗ್ಗೊಲೆಯಿಂದ ಆ ಶಿಬಿರದ ನರನಾಮಧಾರಕರೆಲ್ಲರೂ ಹತರಾಗಿ ಹೋಗಿ (ಮಂತ್ರಶ. ೪೮-೬). [< ಪಿರಿದು₁ + ಕೊಲೆ₂]

**ಹೆಗ್ಗೊಳ್ಳಿ** (ನಾ). ದೊಡ್ಡ ಕೊಳ್ಳಿ: ಉರಿವ ಮನೆಗಳನುರಿಗೊಳದ ಮಂದಿರಕೆ ಸೂಕಿದನೊಡೆದು ಕೆಲವನು ಹಿರಿದು ಹೆಗ್ಗೊಳ್ಳಿಗಳಲಿಟ್ಟನು ಹೊಗೆಯದಾಲಯವ (ತೊರರಾ. ೫-೮-೫೬). [< ಪಿರಿದು₁ + ಕೊಳ್ಳಿ₁]

**ಹೆಗ್ಗೋರಂಟೆ** (ನಾ). ದೊಡ್ಡ ಜಾತಿಯ ಮದರಂಗಿ ಗಿಡ: "ಕುರವಕಃ , ಶೋಣೇ

ತತ್ರ ಕೆಂಪು ಹುವ್ವುಗಳುಳ್ಳ ದೊಡ್ಡಗೋರಂಟೆ, ಹೆಗ್ಗೋರಂಟೆ'' (ಸಿದ್ಧಾಂತಿ. ೧೨೯).

[< ಪಿರಿದು$_1$ + ಗೋರಂಟೆ]

**ಹೆಗ್ಗೋರಟೆ** (ನಾ). ದೊಡ್ಡ ಜಾತಿಯ ಗೋರಂಟೆ ಗಿಡ: ಹಿರೀಮದ್ದಿನ ಬೇರು, ಓಮ, ಹೆಗ್ಗೋರಟೆಯ ಬೇರು, ಕೊಳವಳಿಕೆಯ ಬೇರು, ಇವಿಷ್ಟನ್ನು ಪ್ರತ್ಯೇಕ ಒಂದು ವರಹ ತೂಕವನು ಕೂಡಿಸಿ . . . ಕುಡಿಯಕೊಡಿಸಲು (ವೈದ್ಯಸಾ. II, ೨೦೮).

[< ಪಿರಿದು$_1$ + ಗೋರಟೆ (< ಗೋರಂಟೆ]

**ಹೆಗ್ಡೆ** 'ಪೆರ್ಗಡೆ$_1$' ನೋ.

**ಹೆಚ್ಚಪ್ಪಣೆವೃತ್ತಿ** (ನಾ). ವಿಶೇಷವಾದ ತೆರಿಗೆಯ ರಿಯಾಯಿತಿ: ಉಭಯಂ ದ್ವಿತೀಯ ಶತಕದ ಅಗ್ರಹಾರಕ್ಕೆ ಈ ಹೆಚ್ಚಪ್ಪಣೆವೃತ್ತಿ ಸಹಾ ವೃತ್ತಿ ೮೧ ಯೆಂಮ್ಮತ್ತೊನ್ದು (ಎಕ. XIV, ಮೈಸೂರು. ೧೧೫-೪೭೬; 1674).

[ಹೆಚ್ಚು$_2$ (< ಪೆರ್ಚು$_2$) + ಅಪ್ಪಣೆ + ವೃತ್ತಿ)]

**ಹೆಚ್ಚಳ, ಪೆಚ್ಚಳ$_1$** (ನಾ). ೧. ಅಧಿಕವಾಗಿರುವುದು; ಆಧಿಕ್ಯ: ಆ ನಿರ್ಜರರು ಭುವನದ ಲಲನೆಯರು ಮಾಯೆಯಲಿ ನೆಱೆ ಹೆಚ್ಚಳವೆನಿಸಿ ಕಾವದಕೆ ವಶವಿಲ್ಲೆನಿಸಿಕೊಂಡಿಹರು (ತಿಮ್ಮಅ. ೫-೪೮); ಹಣದ ಹೆಚ್ಚಳದಲ್ಲಿ ಅವನ ವ್ಯಾಪಾರ ವಿಸ್ತಾರವಾಗುತ್ತಿತ್ತು (ನಿಸುತ. ೨೧). ೨. ಹಿರಿಮೆ; ವೈಶಿಷ್ಟ್ಯ: ಬೆಚ್ಚುವರು ಬಲಹೀನರವರಲಿ ಹೆಚ್ಚಳವ ಮೆಱೆಯೆಂದು (ಉತ್ತರಾ. ೧೩.-೩೭); ಪ್ರಭುವು ಅದನ್ನು ಸ್ವೀಕರಿಸುವುದೇ ನಮಗೊಂದು ಹೆಚ್ಚಳ (ಸವತಿ. ೨೦೮). ೩. ಸಂತೋಷ; ಹಿಗ್ಗು: ರಾಜ್ಯಭಾರಮಂ ಧರಿಸುವನೆಮ್ಮ ಚಾಮ ನೃಪನೆಂದಖಿಲಪ್ರಜೆಗಾಯ್ತು ಹೆಚ್ಚಳಂ (ಮರಾಚ. ೭-೫). ೪. ಗರ್ವ; ಅಹಂಕಾರ: ತಪಸ್ಸಿನ ಹೆಚ್ಚಳದೊಳಿಂದ್ರನ ಸಮೃದ್ಧಿಯ ತುಚ್ಛವಾಗಿಯೇ ಮಾಡಿದನು ದುರ್ವಾಸ (ಅಮೃತ. ೨-೫೭). Δ **ಪೆಚ್ಚಳ$_1$**: ೧. 'ಪೆಚ್ಚಳಿಸು' ಪರಾ.

[< ಪೆಚ್ಚು$_1$./ತುಳು. ಹೆಚ್ಚಳ ]

**ಹೆಚ್ಚಳವಡಿಸು** (ಕ್ರಿ). ಸಂತೋಷವುಂಟಾಗುವಂತೆ ಮಾಡು: ಕಾಂತನಿಗೆ ಹೆಚ್ಚಳವಡಿಸಲ್ಕೆ ಕೊಂಬು ಜೀರ್ಕೊಳವೆಯೊಳೆಚ್ಚಾಡುತಿರ್ದರೋಕುಳಿಯ (ಮೋಹತ. ೧೪-೭೪). [ಹೆಚ್ಚಳ + ಪಡು$_1$ + - ಇಸು$_3$]

**ಹೆಚ್ಚಳಿಕೆ** (ನಾ) ೧. ವೈಶಿಷ್ಟ್ಯ; ಹಿರಿಮೆ: ನಿನ್ನಮಲನಗರಿಯ ಹೆಚ್ಚಳಿಕೆ ಯನು ನೋಡಬೇಕೆಂಬಾಶೆ ತನಗೆ (ರಾಮಾಸಂ. ೬-೧೧೩). ೨. ಸಂತೋಷ; ಹಿಗ್ಗು: ಅದು ಊರಿನವರಿಗೂ ಅವರ ಬಂಧುವರ್ಗಕ್ಕೂ ಹೆಚ್ಚಳಿಕೆಯೇ ಆಗಿದ್ದಿತು (ಅನಾಮಿ. ೬೪). [ಹೆಚ್ಚಳ + - ಇಕೆ]

**ಹೆಚ್ಚಳಿಸು, ಪೆಚ್ಚಳಿಸು** (ಕ್ರಿ). ೧. ಉತ್ಸಾಹಗೊಳ್ಳು: ಅಚ್ಚಬೆಳ್ದಿಂಗಳೊಲ್ಮೆತ್ತೊರ್ವನಿನಿಯಳಂ ನಿಚ್ಚಟದೊಳುಳಿವಂತೆ ನೀವಿಯಂ ಬರೆಸೆಳೆದು ಹೆಚ್ಚಳಿಸಿ (ಜೈಮಿಭಾ. ೨೭-೧೯). Δ **ಪೆಚ್ಚಳಿಸು**: ೨. ಅಧಿಕವಾಗು; ಹೆಚ್ಚು: ಕೂರ್ಮೆ ಪೆಚ್ಚಳಿಸಿರ್ಪಂಗನೆಯೊಳ್ ಕರಂ ಸರಸಸಲ್ಲಾಪಂಗಳಿಂ ಪೆಂಪನೊಬ್ಬುಳಿಗೊಂಡು (ಕಮಮಾ. ೭-೧೪೯). [ಹೆಚ್ಚಳ + - ಇಸು$_3$]

**ಹೆಚ್ಚಾಳು** 'ಪೆರ್ಬಾಳ್' ನೋ.

**ಹೆಚ್ಚಾಳುತನ** (ನಾ). ೧. ಹಿರಿಮೆ; ವೈಶಿಷ್ಟ್ಯ; ಹೆಚ್ಚಳಿಕೆ: ಮೌಳಿ ಹತ್ತಱ ರಕ್ಕಸಗೆ ತನ್ನೊಳಿಗವನೆಚ್ಚಱಿಸದಿರೆ ಹೆಚ್ಚಾಳುತನಕತಿಕುಂಧೆನುತ ಮನದಂದನಾ ಹನುಮ (ತೊರರಾ. ೫-೪-೪). ೨. ಗರ್ವ; ಅಹಂಕಾರ: ಧಾಳಿಯಲಿ ಬಂದರಿಬಲದ ಹೆಚ್ಚಾಳುತನವನು ಮುಱಿದು ಸಂಧಿಯ ಮೇಲೆ ಧರ್ಮಜ ಬಂದು ಹೊಕ್ಕನು ಹಸ್ತಿನಾಪುರವ (ಕುವ್ಯಾಅ. ೧೭ ಸೂಚನ). [ಹೆಚ್ಚಾಳು (< ಪೆರ್ಬಾಳ್) + - ತನ]

**ಹೆಚ್ಚಿಕೆ** (ನಾ). ಹೆಚ್ಚುಗಾರಿಕೆ; ಮೇಲ್ಮೆ: ಹೆಚ್ಚಿಕೆಯ ನುಡಿಗೇಳ್ದು ಮಾಳ್ದೆನೊ ಮಚ್ಚರವ ಮಾರ್ಮಲೆತೆನೊ ಮನದಿಚ್ಚೆಯಱಿಯದೆ ನಡೆದೆನೊ ಬಿಱುನುಡಿದೆನೊ ರತಿಗೆ (ಮದೇಪು. ೭-೨೪); ಎಲ್ಲರ ಬಯಕೆಗೂ ಮೆಚ್ಚಿಕೆಗೂ ಅವಕಾಶ ಕೊಟ್ಟು ಚಿನ್ನ ಬೆಳ್ಳಿ ಲೋಕದಲ್ಲಿ ಹೆಚ್ಚಿಕೆ ಪಡೆದಿವೆ (ಹಣಪ್ರ. ೧೭). [ಹೆಚ್ಚು (< ಪೆರ್ಚು$_1$) + - ಇಕೆ]

**ಹೆಚ್ಚಿಗೆ$_1$** 'ಪೆರ್ಚುಗೆ' ನೋ.

**ಹೆಚ್ಚಿಗೆ$_2$** (ಅ). ಹೆಚ್ಚಾಗಿ; ಅಧಿಕವಾಗಿ: ಎಷ್ಟು ನೋಡಿದಾಗ್ಯೂ ಸಾಕಾಗದೆ ಮತ್ತೂ ಹೆಚ್ಚಿಗೆ ನೋಡಬೇಕೆಂದು ಅಪೇಕ್ಷೆ ಹುಟ್ಟಿಸುವ ಒಡವೆ (ಗಂಗಾಮ. ೨೦). [< ಪೆರ್ಚುಗೆ]

**ಹೆಚ್ಚಿಸು** 'ಪೆರ್ಚಿಸು' ನೋ.

**ಹೆಚ್ಚು$_1$** 'ಪೆರ್ಚು$_1$' ನೋ.

**ಹೆಚ್ಚು$_2$** 'ಪೆರ್ಚು$_2$' ನೋ.

**ಹೆಚ್ಚುಗಟ್ಟಲೆ, ಹೆಚ್ಚುಗಟ್ಲೆ** (ನಾ). ೧. ವಿಶೇಷವಾದ ಸಂದರ್ಭ: ದಿನಂ ಪ್ರತಿ ಉಡುಗೆಗೋ ಅಥವಾ ಹೆಚ್ಚುಗಟ್ಟಲೆ ಉಡಿಗೆಗೋ ಎಂಬುದನ್ನು ನಿಶ್ಚಯ ಮಾಡಿಕೊಳ್ಳಬೇಕು (ಗೃಹವಿ. ೭೮); ಊಟದ ತಟ್ಟೆ ಬಟ್ಟಲು ಮತ್ತು ಹೆಚ್ಚುಗಟ್ಟಲೆಗೆ ಉಪಯೋಗಿಸುವ ಸಣ್ಣ ಪಾತ್ರೆಗಳು ಮತ್ತು ದೇವರ ವಿಗ್ರಹಗಳನ್ನು ಬೆಳ್ಳಿಯಿಂದ ಮಾಡಿಸುತ್ತಾರೆ (ಗೃಹವಿ. ೧೭೫). ೨. ಶ್ರಾದ್ಧ; ತಿಥಿ: ಹೆಚ್ಚುಗಟ್ಟಲೆಯ ದಿವಸ ಮನೆಯ ಮುಂದೆ ರಂಗೋಲಿ ಹಾಕಬಾರದು (ರೂಢಿ). **ಹೆಚ್ಚುಗಟ್ಲೆ**: ೧. ''ಇವತ್ತೇನ್ರೋ ಹೆಚ್ಚುಗಟ್ಲೆ?'' (ಮಲಮ. ೨೧); ಈ ದಿನ ಸಾಯಂಕಾಲ ದೇವಸ್ಥಾನದಲ್ಲಿ ಹೆಚ್ಚುಗಟ್ಲೆ (ಸುಬ್ಬಣ್ಣ. ೭೫).

[ಹೆಚ್ಚು$_2$(< ಪೆರ್ಚು$_2$) + ಕಟ್ಟಲೆ (< ಕಟ್ಟಳೆ$_1$) ]

**ಹೆಚ್ಚುಗಟ್ಲೆ** 'ಹೆಚ್ಚುಗಟ್ಟಲೆ' ನೋ.

**ಹೆಚ್ಚುಗಾರಿಕೆ** 'ಹೆಚ್ಚುಗಾಱಿಕೆ' ನೋ.

**ಹೆಚ್ಚುಗಾಱಿಕೆ, ಹೆಚ್ಚುಗಾರಿಕೆ** (ನಾ). ದೊಡ್ಡಸ್ತಿಕೆ; ಹಿರಿಮೆ: ಮೆಚ್ಚರು ತಿಹಳು ಭಾವನ ರೂಪು ಕುಲ ಶೀಲ ಹೆಚ್ಚೆಂದು ತನ್ನೆದೆಯೊಳಗೆ ಒಚ್ಚೆಯಗೊಡದಾಗ ತವರೂರ ಮೇಲಣ ಹೆಚ್ಚುಗಾಱಿಕೆಗಾಡುತಿಹಳು (ಭರಚ. ೯-೮೪). **ಹೆಚ್ಚುಗಾರಿಕೆ**: ಅವನ ಮಾತಿನಲ್ಲೇನೂ ಹೆಚ್ಚುಗಾರಿಕೆಯಿರಲಿಲ್ಲ (ಆಲಹೂ. ೧೧೬); ಇವರಿಗೆ ಕೊಡದೆ ನಾನು ತಿಂದುಹಾಕಿದರಲ್ಲವೇ ಇರುವುದು ಹೆಚ್ಚುಗಾರಿಕೆ! (ಪಂಚಾಮ್ಮ. ೭೬).

[ಹೆಚ್ಚು$_1$(< ಪೆರ್ಚು$_1$) + ಗಾಱ + - ಇಕೆ]

**ಹೆಚ್ಚುಗುಣಿಸು** (ಕ್ರಿ). [ಗಣಿತ] ಗುಣಾಕಾರಮಾಡು: (ಕ).

[ಹೆಚ್ಚು$_1$(< ಪೆರ್ಚು$_1$) + ಗುಣಿಸು]

**ಹೆಚ್ಚುಗೆ** 'ಪೆರ್ಚುಗೆ' ನೋ.

**ಹೆಚ್ಚುಕೊಳ್ಳು** (ಕ್ರಿ). ಅಧಿಕವಾಗು; ಹೆಚ್ಚಾಗು: ಹಗಲುದರೋಡೆ ಈಚೀಚೆಗೆ ಹೆಚ್ಚುಗೊಳ್ಳುತ್ತಿದೆ (ರೂಢಿ). 'ಪೆರ್ಚುಗೊಳ್' ಪರಾ.

[ಹೆಚ್ಚು$_2$(< ಪೆರ್ಚು$_2$ + ಕೊಳ್ಳು$_1$ (< ಕೊಳ್$_1$) ]

**ಹೆಚ್ಚುಬೇಡಿಗೆ** (ನಾ). ಹೆಚ್ಚಿನ ತೆರಿಗೆ; ವಿಶೇಷವಾದ ತೆರಿಗೆ: ದೇವರಾಯವಟ್ಟ ಹೆಚ್ಚುಬೇಡಿಗೆ ಗ್ರಾಮಾದಾಯ ಚರಾದಾಯ ಹೊರಾದಾಯ ಯಿವು ವೊದಲಾದ ಸಕಲಸ್ವಾಮ್ಯವನ್ನು . . . ಸುಖದಿಂದನುಭವಿಸಿಕೊಂಡಿಹರು (ಎಕ. IV(s), ಪಾಂಡವ. ೯೯-೬೭೫; 1722). [ಹೆಚ್ಚು$_1$(< ಪೆರ್ಚು$_1$) + ಬೇಡಿಗೆ]

**ಹೆಚ್ಚುಮಗ್ಗಿ** (ನಾ). ಹತ್ತರಿಂದ ಮುಂದಿನ ಮಗ್ಗಿ; ೧೧ x ೧೧ ಎಂದು ಪ್ರಾರಂಭವಾಗುವ ಮಗ್ಗಿ: (ಕ). [? + ಮಗ್ಗಿ]

**ಹೆಚ್ಚುಲಿಹುಲ್ಲು** (ನಾ). ಒಂದು ಬಗೆಯ ಹುಲ್ಲು: ''ಹೆಚ್ಚುಲಿಹುಲ್ಲು, ಬಲ್ಬಜ, ಗಂಜಳದ ಹೂ'' (ಸಸ್ಯನಿ. ೫೪). [? + ಹುಲ್ಲು (< ಪುಲ್)]

**ಹೆಚ್ಚುವರಿ** (ಗು). ೧. ಅಧಿಕವಾದ; ಹೆಚ್ಚಳವಾದ. (ನಾ). ೨. ಅಗತ್ಯಕ್ಕಿಂತ ಹೆಚ್ಚಾಗಿ ಮಿಕ್ಕುದು: ''ಹೆಚ್ಚುವರಿ; ಉಳಿತಾಯ'' ( Surplus. ಸತ್ರಿನಿ. ೮೦).

[ಹೆಚ್ಚು$_1$ (< ಪೆರ್ಚು$_1$) + - ವರಿ$_2$]

**ಹೆಚ್ಚೆ** (ನಾ). (?): ಅಚ್ಚುತಾನಂತನೆ ತೋರೋ ಶ್ರೀರೂಪವ ಸಚ್ಚಿದಾನಂದ ತೋರೆನಗೆ ಹೆಚ್ಚೆಯು ಮಾಡದೆ ನಿನ್ನ ವನವೆಲ್ಲ ತಿರುಗಿ ಹುಚ್ಚುಮಾಡುವೆನಯ್ಯ ಕ್ಷಿತಿಪತಿಸೇವ್ಯ (ವಾದಿಕೀ. ೪೬-೨). [?]

**ಹೆಜೀಬು** 'ಹೇಜೀಬ' ನೋ.

**ಹೆಜುಂಕ** 'ಪೆರ್ಜುಂಕ' ನೋ.

**ಹೆಜ್ಜ** 'ವೆಜ್ಜ' ನೋ.

**ಹೆಜ್ಜವಿಡು** (ಕ್ರಿ). ತೂತುಮಾಡು; ರಂಧ್ರಮಾಡು: ಮಸದು ಒಪ್ಪವ ಇಟ್ಟು ಮಾಣಿಕರ ಸುಮಸೂತ್ರವು ಆಡುವಂದದಿ ಹೊಸಮುತ್ತುಗಳ ಹೆಜ್ಜವಿಟ್ಟು ಪೋಣಿಗಿಯ ತೆರದಿ (ನಂದಿಲೀ. ೧-೨೬). [ಹೆಜ್ಜ (< ವೆಜ್ಜ) + ಇಡು$_1$]

**ಹೆಜ್ಜಾಜಿ** (ನಾ). ಒಂದು ಬಗೆಯ ಜಾಜಿಹೂವಿನ ಗಿಡ ಮತ್ತು ಅದರ ಹೂವು:

"ಸಪ್ತಲಾ, ನವಮಾಲಿಕಾ – ೨ ವೀರಜಾಜೀಹುವ್ವಿನ ಗಿಡ, ಹೆಜ್ಜಾಜೀ ಗಿಡ" (ಸಿದ್ಧಾಂತಿ. ೧೨೮). [< ಪಿರಿದು$_1$ + ಜಾಜಿ$_1$ (< ಜಾದಿ$_1$)]

**ಹೆಜ್ಜಾರಿಗೆ** (ನಾ). ಒಂದು ಬಗೆಯ ಮರ: ಕರಂಡಹಣ್ಣಿನ ಗಿಡ, ಕಬಳಿಗಿಡ, ಕಳಾಗಿಡ, ದೊಡ್ಡಕಾವಲಿ, ಹೆಜ್ಜಾರಿಗೆ (ಮೈಬಿಗಿ. ೧೮-೩೨೨). [< ಪಿರಿದು$_1$ + ಜಾರಿಗೆ]

**ಹೆಜ್ಜಾಲ** (ನಾ). ಒಂದು ಬಗೆಯ ಮರ; ಕದಂಬವೃಕ್ಷ: ಹೆಜ್ಜಾ[ಪಾಠಾಂ. ಬ್ಬಾ]ಲ ಹೆದ್ದುಂಬರೌದುಂಬುರಂಗಾಲವದೆನಿಸಿ ನಾನಾಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಸೋಮಚ. ೩-೨). [< ಪಿರಿದು$_1$ + ಜಾಲ$_1$]

**ಹೆಜ್ಜಾಲೆ** (ನಾ). ಒಂದು ಬಗೆಯ ಸಸ್ಯ: "ಚತಃ- ಹೆಜ್ಜಾಲೆ, ಶಬಾಂಗಾರ" (ಒಷಧಿ. ೫೭). [< ಪಿರಿದು$_1$ + ಜಾಲ$_4$]

**ಹೆಜ್ಜಿಗಣೆ** (ನಾ). ದೊಡ್ಡ ಜಿಗಣೆ, – ಜಿಗಳೆ: "ದುರ್ನಾಮಾ, ದೀರ್ಘಕೋಶಿಕಾ – ೨ ಆನೆಗಳ ರಕ್ತವನ್ನು ಹೀರಲುಳ್ಳ ದೊಡ್ಡ ಜಿಗಣೆ ಪೆಸರುಗಳು ಅಂದರೆ ಹೆಜ್ಜಿಗಣೆ" (ಸಿದ್ಧಾಂತಿ. ೯೪). [< ಪಿರಿದು$_1$ + ಜಿಗಣೆ$_1$ (< ಜಿಗುಟ್)]

**ಹೆಜ್ಜೀಬ** 'ಹೇಜೀಬ' ನೋ.

**ಹೆಜ್ಜುಂಕ** 'ಪೆರ್ಜುಂಕ' ನೋ.

**ಹೆಜ್ಜುಗ್ಗಿ** 'ಹೆರ್ಜುಗ್ಗಿ' ನೋ.

**ಹೆಜ್ಜೆ** 'ಪಜ್ಜೆ' ನೋ.

**ಹೆಜ್ಜೆಕರಕಲು** (ನಾ). ಒಂದು ಬಗೆಯ ಸಸ್ಯ: ಮದ್ದೆ, ಹೆಜ್ಜೆಕರಕಲು, ಹಕ್ಕಿರಕಲು, ಸದ್ದಿ (ಮೈಬಿಗಿ. ೫೮-೧೧೫೭). [?]

**ಹೆಜ್ಜೆಕೀಳು** (ಕ್ರಿ). ಅಡಿಯಿಡು; ಮುಂದೆ ಸಾಗು: ಬಯಲುದಾರಿಯತ್ತ ಹೆಜ್ಜೆಕಿತ್ತರು (ದೇವಹಂ. ೨೦೪); ಬೇರೆ ಯಾವ ಅಪ್ಪ ಹೇಳಿದ್ದರೂ ನಾನು ಮುಂದೆ ಹೆಜ್ಜೆಕೀಳುತ್ತಿರಲಿಲ್ಲ (ಹಳ್ಳಿಹಾ. ೪೦). [ಹೆಜ್ಜೆ (< ಪಜ್ಜೆ) + ಕೀಳು$_1$ (< ಕೀೞ್$_1$)]

**ಹೆಜ್ಜೆಕುಣಿತ** (ನಾ). ಒಂದು ಬಗೆಯ ನೃತ್ಯ: 'ರಾವುತರ ದಾಳಿಯ' ನುಗ್ಗಾಟ, 'ಕಾಳಗದ ಪದ'[ನಾಟ್ಯ]ದ ಹೆಜ್ಜೆಕುಣಿತ, ತಮ್ಮಟದ ತಾಳ, – ಇವು ಒಂದೊಂದೂ ಒಂದೊಂದು ಗತ್ತನ್ನು ತೋರಿಸುವುವು (ವಿಜಾಮಂ. ೧೨೭). [ಹೆಜ್ಜೆ (< ಪಜ್ಜೆ) + ಕುಣಿತ]

**ಹೆಜ್ಜೆಗಾಣ್** (ಕ್ರಿ). ನೆಲೆಯನ್ನು ಕಾಣು, – ಕಂಡುಕೊಳ್ಳು: ನಿಗಮವೀತನ ಹೆಜ್ಜೆಗಾಣವು (ಕುಮ್ಮಾಅ. ಓಂ೧೪. ೧೫-೨೧). [ಹೆಜ್ಜೆ (< ಪಜ್ಜೆ) + ಕಾಣ್]

**ಹೆಜ್ಜೆದೆಗಹು** (ನಾ). ಅಡಿಯಿಡುವುದು; ನಡಿಗೆ: ಮನುಕುಲಲಲಾಮರ ಮುಂದೆ ಸೂಟಿಸಿ ಸುಳಿದವೈ ಹರಿಣಾಳಿ ಸೀತೆಯನೊಯ್ದು ಪಥವಿಡಿದು ಹೊಲಬುಗಾಣಿರ ಹೆಜ್ಜೆದೆಗಹಿನ ಚಲಿತ ಚಪಳದ ಚಾಳಿಯವೊಲ್ (ತೊರರಾ. ೩-೧೨-೨).

[ಹೆಜ್ಜೆದೆಗೆ + - ಹು$_2$ (< - ವು$_2$)]

**ಹೆಜ್ಜೆದೆಗೆ** (ಕ್ರಿ). ಅಡಿಯಿಡು; ನಡೆ: ಗುಜ್ಜರ ಗರುವಿಕೆಗೆಟ್ಟನು ಲಾಟನು ಲಜ್ಜೆಯೋದನು ದ್ರಾವಿಡನು ಹೆ[ಪಾಠಾಂ. ಹ]ಜ್ಜೆದೆಗೆದ ಹಿಂದಕೆ (ಜೀವಂಸಾಂ. ೧೭-೪೭).

[ಹೆಜ್ಜೆ (< ಪಜ್ಜೆ) + ತೆಗೆ$_1$]

**ಹೆಜ್ಜೆನಮಸ್ಕಾರ** (ನಾ). ಹರಕೆ ಹೊತ್ತವರು ಮಾಡುವ ಒಂದು ಬಗೆಯ ಸೇವೆ; ಪ್ರತಿಯೊಂದು ಹೆಜ್ಜೆ ಇಟ್ಟಾಗಲೂ ಬಗ್ಗಿ ಮಾಡುವ ನಮಸ್ಕಾರ; ಬಾವಿ ಅಥವಾ ಕಲ್ಯಾಣಿಯಲ್ಲಿ ಸ್ನಾನಮಾಡಿ ಆ ಜಾಗದಿಂದ ದೇವರ ಗುಡಿಯವರೆಗೂ ಒದ್ದೆಬಟ್ಟೆಯಲ್ಲಿಯೇ ನಡೆಯುತ್ತ ನಮಸ್ಕಾರ ಸಲ್ಲಿಸುವ ಸೇವೆ: ತೋಪಿನಲ್ಲಿಯ ಮೂರ್ತಿಗೆ ಹಣ್ಣುಕಾಯಿ ಮಾಡಿಸಿ, ಅಲ್ಲಿಂದಲೇ ಹೆಜ್ಜೆ-ನಮಸ್ಕಾರ ಸುರುವು ಮಾಡಿದಳು (ಗಂಗಾಸಾ. ೮೪). [ಹೆಜ್ಜೆ (< ಪಜ್ಜೆ) + ನಮಸ್ಕಾರ]

**ಹೆಜ್ಜೆಪಾಡು** (ನಾ). ಜಾಡಿನ ರೀತಿ; ಮಾರ್ಗದ ರೀತಿ: ತಿರುವಯ್ಯಾರಿನ ಸಂತ ತ್ಯಾಗರಾಜರು ತುಳಿದ ಹೆಜ್ಜೆಪಾಡನ್ನು ಬಿಟ್ಟು ಹೊಸ ರೀತಿಯಲ್ಲಿ ಇದನ್ನು ರಚಿಸಿದ್ದಾರೆ (ಸಂಗೀತ. ೩೭). [ಹೆಜ್ಜೆ (< ಪಜ್ಜೆ) + ಪಾಡು$_3$]

**ಹೆಜ್ಜೆಯಿಡು** 'ಪಜ್ಜೆಯಿಡು' ನೋ.

**ಹೆಜ್ಜೆವಿಡಿ** 'ಪಜ್ಜೆವಿಡಿ' ನೋ.

**ಹೆಜ್ಜೆಹಾಕು** 'ಪಜ್ಜೆಹಾಕು' ನೋ.

**ಹೆಜ್ಜೇನ್, ಹೆಜ್ಜೇನು** (ನಾ). ೧. ದೊಡ್ಡಜಾತಿಯ ಜೇನುನೊಣ; ದೊಡ್ಡಜಾತಿಯ ಜೇನುಹುಳು: ಶಿಲೆಯೋವರಿಯೊಳ್ ಹೆಜ್ಜೇನ ಹುಟ್ಟಿ ಸೊಗಯಿಸಿ ತೋರ್ಕುಂ (ಸೂಕ್ತಿಸು. ೩-೮೪). **ಹೆಜ್ಜೇನು:** ೧. ಜೊತೆಗೆ ಅವೆಲ್ಲಾ ಹೆಜ್ಜೇನುಗಳು (ಕಳಹು. ೬೪). ೨. ಉತ್ತಮ ಮಟ್ಟದ ಜೇನುತುಪ್ಪ; ಉತ್ಕೃಷ್ಟವಾದ ಜೇನುತುಪ್ಪ: ಸಜ್ಜನರ ಸಂಗವದು ಹೆಜ್ಜೇನು ಕೊಡದಂತೆ ದುರ್ಜನರ ಸಂಗದೊಡನಾಟ ಬಚ್ಚಲಿನ ರೊಚ್ಚಿನಂತಿಹುದು (ಸರ್ವಜ್ಞ. ೮೦೯). [< ಪಿರಿದು$_1$ + ಜೇನ್$_1$]

**ಹೆಜ್ಜೇನು** 'ಹೆಜ್ಜೇನ್' ನೋ.

**ಹೆಜ್ಜೇನ್ನೊಣ** (ನಾ). = ಹೆಜ್ಜೇನ್ ೧: ಮೊರೆದುಲಿವ ನಸರಿ ಮೇಣ್ ತುಡುವೆ ಮೇಣ್ ಹೆಜ್ಜೇನ್ನೊಣಂ (ಶ್ರೀರಾಮಾ. ೧೨೯-೧೧೦). [< ಪಿರಿದು$_1$ + ಜೇನ್ನೊಣ$_1$]

**ಹೆಜ್ಜೊಡರ್** 'ಪೆರ್ಜೊಡರ್' ನೋ.

**ಹೆಜ್ವರ** (ನಾ). ತೀವ್ರವಾದ ಜ್ವರ: ಹೆಜ್ವರಕ್ಕೆ ಶುಂಠೀರಸ . . . ತ್ರಿಕಟುಕ, ಬಿಳಿಗಾರವರೆದು (ಕೊಡುವುದು) (ವಿಷ್ಯಪಿ. ೨೩). [< ಪಿರಿದು$_1$ + ಜ್ವರ]

**ಹೆಟ್ಟ$_1$** 'ಪೆಂಟೆ$_1$' ನೋ.

**ಹೆಟ್ಟ$_2$** (ಗು). ಸಂತೋಷಪಟ್ಟ: ಖುತ್ಪಕೃತ್ವಂ – ಹೃದಯ-ಹೆದೆಯ; ಹೃಷ್ಟ-ಹೆಟ್ಟ (ಶಮದ. ೨೬೮ ಪ್ರಯೋ). [< ಸಂ. ಹೃಷ್ಟ]

**ಹೆಟ್ಟಗೆ** 'ಪೆಟ್ಟುಗೆ' ನೋ.

**ಹೆಟ್ಟವೆಳಸು** 'ಪೆಟ್ಟಮೆಟಿಸು' ನೋ.

**ಹೆಟ್ಟಹೊಡೆ** 'ಹೆಂಟೆಹೊಡೆ' ನೋ.

**ಹೆಟ್ಟಿಗೆ$_1$** 'ಪೆಟ್ಟುಗೆ' ನೋ.

**ಹೆಟ್ಟಿಗೆ$_2$** (ನಾ). ದೊಡ್ಡಗಾತ್ರದ ತೊಲೆ; ದೊಡ್ಡ ದಿಮ್ಮಿ: ಬಟ್ಟತಲೆಯವನಾದರೆ ಹೆಟ್ಟಿಗೆ ಹೊತ್ತಾನೇ? (ಗಾದೆ). [< ಹೆಟ್ಟ$_1$]

**ಹೆಟ್ಟಿಸು** 'ಪೆಟ್ಟಿಸು' ನೋ.

**ಹೆಟ್ಟು** 'ಪೆಟ್ಟು$_1$' ನೋ.

**ಹೆಟ್ಟುಗೆ** 'ಪೆಟ್ಟುಗೆ' ನೋ.

**ಹೆಟ್ಟೆ** 'ಪೆಂಟೆ$_1$' ನೋ.

**ಹೆಡ್‌ಗುಮಾಸ್ತ, ಹೆಡ್‌ಗುಮಾಸ್ತೆ** (ನಾ). ಲೆಕ್ಕ ಬರೆಯುವವರಲ್ಲಿ ಮುಖ್ಯ ಗುಮಾಸ್ತ: ಆಚೆ ಮನೆ ತಾಲ್ಲೂಕುಹೆಡ್‌ಗುಮಾಸ್ತು – ಅವರ ಸಂಬಳ ನಲವತ್ತು ರೂಪಾಯಂತೆ (ನವಿನೀ. ೪೧); ಹೆಡ್‌ಗುಮಾಸ್ತರು ಕತ್ತೆತ್ತಿ ನೋಡಲಿಲ್ಲ (ನಟಿಸಾ. ೧). **ಹೆಡ್‌ಗುಮಾಸ್ತೆ:** ಶ್ರೀನಿವಾಸರಾಯರು . . . ಹೆಡ್‌ಗುಮಾಸ್ತೆಯರಾಗಿ ಉಳಿದರು (ಮಹಾಗ. ೩); ಹೆಡ್‌ಗುಮಾಸ್ತೆ ರಾಮಣ್ಣನವರು . . . ಹರಟೆ ಹೊಡೆಯುತ್ತಿದ್ದರು (ಕಳಹು. ೧೦೩). [ಹೆಡ್$_0$ (ಇ ← ಇಂ. Head) + ಗುಮಾಸ್ತ]

**ಹೆಡ್‌ಗುಮಾಸ್ತೆ** 'ಹೆಡ್‌ಗುಮಾಸ್ತ' ನೋ.

**ಹೆಡ್‌ಮುನಶಿ, ಹೆಡ್ಮುನಶಿ** (ನಾ). = ಹೆಡ್‌ಗುಮಾಸ್ತ: ನೀವೂ ಒಬ್ಬರು ಹೆಡ್‌ಮುನಶಿ ಆಗಿದೀರಲ್ಲ ಯಾಕೇಂತ? (ನವಿನೀ. ೪೦). **ಹೆಡ್ಮುನಶಿ:** 'ಹೆಡ್ಮುನಶೀತನ' ಪರಾ. [ಹೆಡ್$_0$ (ಇ ← ಇಂ. Head) + ಮುನಶಿ]

**ಹೆಡ** 'ಪೆಡ' ನೋ.

**ಹೆಡಕಟ್ಟು$_1$** (ಕ್ರಿ). ಕೈಗಳನ್ನು ಬೆನ್ನಿನ ಹಿಂದೆ ಸೇರಿಸಿ ಕಟ್ಟು; ಹೆಡಮುರಿಗೆ ಹಾಕು: ಬಂದೆಯ ಕಲಿಕಾಮನ ಹೆಡಕಟ್ಟ ತಂದೆಯ (ತ್ರಿಭುತಿ. ೧೯-೫).

[ಹೆಡ (< ಪೆಡಗು$_1$) + ಕಟ್ಟು$_1$]

**ಹೆಡಕಟ್ಟು$_2$** 'ಪೆಡಗಟ್ಟು' ನೋ.

**ಹೆಡಕತ್ತು** (ನಾ). ಕತ್ತಿನ ಹಿಂಭಾಗ; **ಹೆಡಕು:** ಎರಡುಗಯ್ಯ ನಾಲ್ಕೆರಲ ನಡನಡುವೆ ಪೆಣಕೆಯೊಳಿಟ್ಟು ಹೆಡಕತ್ತಿಲಿರದಿಟ್ಟು ತೂನೆ ಬಾರದೊಡೆ ಶುಭವವು (ವೀಶೈಪು. ೪-೨೪-೨೪); ಮದ್ದು ಸಂಕಟವ ಹೆಚ್ಚಿಸಲು ಹೆಡಕತ್ತ ಗುದ್ದಿಕೊಳುತಿಹನು (ಸರ್ವಜ್ಞ. ೧೨೫). 'ಹೆಗ್ಗತ್ತು' ಹೋ. [ಹೆಡ (< ಪೆಡಗು) + ಕತ್ತು$_3$ (< ಕಟ್ಟು$_3$)]

**ಹೆಡಕು** 'ಪೆಡಕು' ನೋ.

**ಹೆಡಗಟ್ಟು** 'ಪೆಡಗಟ್ಟು' ನೋ.

**ಹೆಡಗಯ್** 'ಪೆಡಂಗೆಯ್' ನೋ.

**ಹೆಡಗಿಬು( ? ).** (?) (?): ನಡುಚವುಕಿಗೆಗೆ ಬಿಗಿದ ತೊಲೆಯ ಪೊಱವಳಸಿನುಗ್ಗಡದ ನಾನಾವರ್ಣ ಚಿತ್ರಪತ್ರಿಕೆಗಳಂ ಹೆಡಗಿಬಿದ ತನ್ನ ಸುತ್ತಿದ ಪಳುಕುವಿತ್ತಿಯೊಳು ಮಾರ್ಪೊಳೆಯಲು (ಚೀರಮ. ೫-೧೨). [?]

**ಹೆಡಗಡಿ** 'ಪೆಡಗುಡಿ' ನೋ.

**ಹೆಡಗುಡಿಗಟ್ಟು** 'ಪೆಡಗುಡಿಗಟ್ಟು' ನೋ.

**ಹೆಡಗೆ** 'ಪೆಟ್ಟಿಗೆ' ನೋ.

**ಹೆಡಗೆಗೋಂಟೆ** (ನಾ). ಬುಟ್ಟಿಯಾಕಾರದ ಕೋಟೆ: ಕೋಂಟೆಗೆ –ತಟಗೋಂಟೆ, ಧೂಳಿಕೋಂಟೆ, ಹತ್ತುಗೋಂಟೆ, ಹೆಡಗೆಗೋಂಟೆ (ಶಮದ. ೨೯೮ ಪ್ರಯೋ): ಮಿಸುಗುವ ಹೆಡಗೆ [ಪಾಠಾಂ. ಸುಸುಗುವೆಡ, ಮಿಸುಪ ಹೆದೆ]ಗೋಂಟೆ ತಳಿಗೋಂಟೆಯು ಸುತ್ತು ಗೋಂಟೆ (ಕಬ್ಬಿಕೈ. ೯೮). [ಹೆಡಗೆ (< ಪೆಟ್ಟಿಗೆ) + ಕೋಂಟೆ]

**ಹೆಡಗೆಬಳ್ಳಿ** 'ಹೆಡಗೆವಳ್ಳಿ' ನೋ.

**ಹೆಡಗೆವಳ್ಳಿ,** ಹೆಡಗೆಬಳ್ಳಿ (ನಾ). ಒಂದು ಬಗೆಯ ಬಳ್ಳಿ: ಹೆಡಗೆವಳ್ಳಿಯ ಸೀಳಿ ಸಲಕಂ ಬಿಗಿದು ಕಟ್ಟಿ . . . ವಿರಚಿಸಿದರಾಶ್ರಮವನು (ಶ್ರೀರಾಮಾ. ೧೯೭-೬೦). **ಹೆಡಗೆಬಳ್ಳಿ:** ತಾನು ಹೆಡಗೆಬಳ್ಳಿ ಹುಡುಕುತ್ತಾ . . . ಬಂದಿದ್ದನೆಂದೂ ತಿಳಿಸಿ (ಮಲಮ. ೫೭೯).
[ಹೆಡಗೆ ? + ಬಳ್ಳಿ]

**ಹೆಡಗೈ** 'ಪೆಡಂಗೆಯ್' ನೋ.

**ಹೆಡತಲೆ** 'ಪೆಡಂದಲೆ' ನೋ.

**ಹೆಡದಲೆ** 'ಪೆಡಂದಲೆ' ನೋ.

**ಹೆಡಮಂಡೆ** (ನಾ). ತಲೆಯ ಹಿಂಭಾಗ; ಹೆಡತಲೆ: ತೊಡರ್ದೊಡರಾತಿಭೂಭುಜರ ಬೆಂದೊವಲಂ ಹೆಡಮಂಡೆಗೆತ್ತಿ (ಎಕ. XI. ದಾವಣ. ೩೫-೨೭; ಸು. 1160); ಗಂಡುಗಲಿ ಕೈ ಮುರಿದವೊಲು ಹೆಡ[ಪಾಠಾಂ. ಡೆ]ಮಂಡೆಯನು ತುಜಿಸುತ್ತ . . . ಸುಯ್ಯನಡಗಿಡಗೆ (ನಿಭಾಗ. ೮-೧೦-೫೦). [ಹೆಡ (< ಪೆಱಗು) + ಮಂಡೆ]

**ಹೆಡಮುಡಿ** (ನಾ). ೧. ಕೈಗಳನ್ನು ಹಿಂದಕ್ಕೆ ಸೇರಿಸಿ ಹಾಕುವ ಕಟ್ಟು, – ಗಂಟು; ಹಿಂಗಟ್ಟು: ಅಡವಿಯೊಳು ಪಾಂಡವರ ಬೇಟೆಗೆ ನಡೆದು ಬಂದೊಡೆ ಮುನಿದು ಖಚರನು ಹೆಡಮುಡಿಯ ಬಿಗಿದಡರಿದನು (ಕುಮ್ಮಾಉ. ಓರಿ೯. ೯-೪೩); ಝಡಿದು ಸೆಳೆದನು ಬಾಲದಲಿ ಹೆಡಮುಡಿ ಬಿಗಿದನು (ಕಾಶಿರಾ. ೧೫-೬). ೨. ತಲೆಯ ಹಿಂಭಾಗದಲ್ಲಿರುವ ಕೂದಲು: ಹೆಡಮುಡಿ ಹೆಳಲ್ಹಾಕಿ (ಕನ್ನಜಾ. ೩೭೮).
[ಹೆಡ (< ಪೆಱಗು) + ಮುಡಿ$_2$ ./ ತುಳು. ಹೆಡಮುಡಿ]

**ಹೆಡಮುಡಿಕಟ್ಟು** (ಕ್ರಿ). ಕೈಗಳನ್ನು ಹಿಂದಕ್ಕೆ ಸೇರಿಸಿ ಕಟ್ಟು: ಹಡೆದವರ ನುಡಿಗೆ ಬಯ್ಯುತಲಿಪ್ಪ ಕಡುಪಾಪಿಗಳ ಹೆಡಮುಡಿಕಟ್ಟಿ ತಾ (ಕರ್ನಾಕ. ೧೯೫); ಹೆಡಮುಡಿ ಕಟ್ಟಿದರು (ಈಕಥ. ೧೦). [ಹೆಡಮುಡಿ + ಕಟ್ಟು$_1$]

**ಹೆಡಮುಡಿಬಿಗಿ** (ಕ್ರಿ). ಕೂದಲನ್ನು ಒಟ್ಟುಗೂಡಿಸು, – ಸೇರಿಸು: ಕೆನ್ನೀಗೆ ಕುರುಳು ಮುತ್ತಿಟ್ಟು ದಿನವೇಸು ಹೆಡಮುಡಿಬಿಗಿದು ಹೆಳಲ್ಹಾಕಿ (ಮೂರ್ತಿಕಾ. ೪೧ - ೧೭).
[ಹೆಡಮುಡಿ + ಬಿಗಿ$_1$]

**ಹೆಡಮುರಿ** (ನಾ). ಹೆಡಮುಡಿ; ಹಿಂಗಟ್ಟು: (ಅನುಂಪಾ).
[ಹೆಡ (< ಪೆಱಗು) + ಮುರಿ$_3$ (< ಮುರಿವು)]

**ಹೆಡಮುರಿಕೆ** 'ಹೆಡಮುರಿಗೆ' ನೋ.

**ಹೆಡಮುರಿಕೆಕಟ್ಟು** (ಕ್ರಿ). = ಹೆಡಮುಡಿಕಟ್ಟು: ಹಿಡಿಯಿರಿ ಹಿಡಿಯಿರಿ ಅವನನ್ನು ಹೆಡಮುರಿಕೆಕಟ್ಟಿರಿ (ಮುಂಬಯಿ. ೩-೧೨೨). [ಹೆಡಮುರಿಕೆ (< ಹೆಡಮುರಿಗೆ) + ಕಟ್ಟು$_1$]

**ಹೆಡಮುರಿಕೆಬಿಗಿಸು** (ಕ್ರಿ). = ಹೆಡಮುಡಿಕಟ್ಟು: ನಮ್ಮ ಹೆಸರು ತೆಗೆದರೆ ನಿಮ್ಮ ಹೆಡಮುರಿಕೆ ಬಿಗಿಸೇವು (ಹಬ್ಬಿಟ. ೨೦೨).
[ಹೆಡಮುರಿಕೆ (< ಹೆಡಮುರಿಗೆ) + ಬಿಗಿಸು (< ಬಿಗಿಯಿಸು)]

**ಹೆಡಮುರಿಗೆ,** ಹೆಡಮುರಿಕೆ (ನಾ). = ಹೆಡಮುಡಿ ೧: 'ಹೆಡಮುರಿಗೆಕಟ್ಟು' ಪರಾ. **ಹೆಡಮುರಿಕೆ:** ಶಾನುಭೋಗರಿಗೆ ಹೇಳಿ ಅವನ ಹೆಡಮುರಿಕೆ ಯಾಕೆ ಬಿಗಿಸಬಾರದು ಅಂತೀನಿ (ಚಿವಂ. ೯೬). [ಹೆಡ (< ಪೆಱಗು) + ಮುರಿಗೆ$_1$]

**ಹೆಡಮುರಿಗೆಕಟ್ಟು** (ಕ್ರಿ). ೧. = ಹೆಡಮುಡಿಕಟ್ಟು: ಹೆಡಮುರಿಗೆಕಟ್ಟಿ ಹೊಡೆದರೂ ಅವರಿಗೆ ನಾಚಿಕೆ ಬರುವದಿಲ್ಲ (ಎಡಹ. ೯೬); ನೀನು ಮತ್ತೆ ಚೀರಿದೆಯಾದರೆ ಹೆಡಮುರಿಗೆ ಕಟ್ಟುತ್ತೇವೆ (ದಲಿಕು. ೩೭). ೨. ಅಡ್ಡಿಬರು; ತಡೆಯುಂಟಾಗು (?): ನೂರು ಜಂಜಾಟಗಳು ಹೆಡಮುರಿಗೆಕಟ್ಟಿದರು ಗೆಳೆತನವೆ ಬಾ ಬಾರ ಎಂದುಸುರುವೆ! (ಭಾವಜೀ. ೨೦-೩೯೧). [ಹೆಡಮುರಿಗೆ + ಕಟ್ಟು$_1$]

**ಹೆಡಮೆಟ್ಟು** 'ಪೆಡಂಮೆಟ್ಟು$_2$' ನೋ.

**ಹೆಡಲಿಗೆ** 'ಪಡಲಿಗೆ' ನೋ.

**ಹೆಡಲು** (ನಾ). ೧. ತೆಂಗಿನ ಗರಿ, – ಸೋಗೆ: ತೆಂಗಿನ ಹೆಡಲು ಅಡಕೆಸೋಗೆ ಮೊದಲಾದವು ನೊರೆಗರೆಯುತ್ತಿದ್ದ ನೀರಿನಲ್ಲಿ ಭಯಂಕರವೇಗದಿಂದ ಓಡುತ್ತಿರುವ ನೋಟ ಹೆದರಿಕೆ ಹುಟ್ಟಿಸಿತ್ತು (ಮಲಮ. ೭೨೧). ೨. ಬಾಳೆಯ ಎಲೆ: ಬಾಳೆಯ ಹೆಡಲು ಆಘಾತಕ್ಕೆ ತತ್ತರಿಸಿ ಮೇಲಕ್ಕೂ ಕೆಳಕ್ಕೂ ಉಯ್ಯಾಲೆಯಂತೆ ತೂಗಿತ್ತು (ಕಾನೂರು. ೩೪); ಹೆಡಲನ್ನು ಬೀಸಿ ನಿಂತಿರುವ ಬಾಳೆಯ ಗಿಡಗಳು . . . ಅವನ ಮನಸ್ಸನ್ನು ಸ್ವಲ್ಪ ಹರ್ಷಗೊಳಿಸುವುದು (ದುಂಬಿಕ. ೪೨). [< ಹೆಡೆ$_1$]

**ಹೆಡವೆಣ್ಣೆ** (ನಾ). (?): ಸಿದ್ಧಿವಿನಾಯಕದೇವರ ಪೂಜೆ ನೇವೇದ್ಯ ಹೆಡವೆಣ್ಣೆ ಸಾರಣೆಯಿಂತಿನಿತುಂ ನಡೆವಂತಾಗಿ (ಕೊಲ್ಹಾಶಾ. ೧೩-೪೮; 1166). [?]

**ಹೆಡಶಿರ** (ನಾ). = ಹೆಡಮಂಡೆ: ಗಗನದಿಂದುರವಣಿಸಿ ಬಂದು ಹೆಡಶಿರಕೆ ವದೆಯಲು (ನವಮೋ. ೧೨-೯೨). [ಹೆಡ (< ಪೆಱಗು) + ಶಿರ$_2$]

**ಹೆಡಸು** 'ಪೆಡಸು' ನೋ.

**ಹೆಡಳಗೆ** 'ಪಡಲಗೆ' ನೋ.

**ಹೆಡಿಗೆ** 'ಪೆಟ್ಟಿಗೆ' ನೋ.

**ಹೆಡಿಗೆಜಾತ್ರೆ** (ನಾ). ಬಗೆಬಗೆಯ ಭಕ್ಷ್ಯಗಳನ್ನು ದೊಡ್ಡ ದೊಡ್ಡ ಬುಟ್ಟಿಗಳಲ್ಲಿಟ್ಟುಕೊಂಡು ದೇವರ ಉತ್ಸವದೊಂದಿಗೆ ಒಯ್ದು, ದೇವಾಲಯದಲ್ಲಿ ನೈವೇದ್ಯ ಮಾಡುವ ಒಂದು ಹಬ್ಬ: ಸಪ್ತಾಹದ ಕೊನೆಯ ದಿವಸ ಹೆಡಿಗೆಜಾತ್ರೆ (ಕಪಪು. ೬-೧೭). [ಹೆಡಿಗೆ (< ಪೆಟ್ಟಿಗೆ) + ಜಾತ್ರೆ]

**ಹೆಡೆ** 'ಪೆಡೆ' ನೋ.

**ಹೆಡೆಗಳ್ಳಿ** (ನಾ). ಅಗಲವಾದ ಎಲೆಗಳುಳ್ಳ ಒಂದು ಬಗೆಯ ಕಳ್ಳಿಗಿಡ: ಮಿಾಂಗಳ್ ಕಡಿದಾಯೆಡೆಗಂ . . . ಹೆಡೆಗಳ್ಳಿಯಯೆಲೆಯನಿಕ್ಕಿ ಕಟ್ಟುವುದು (ಖಮದ. ೧೩-೧೦೧). [ಹೆಡೆ (< ಪೆಡೆ) + ಕಳ್ಳಿ$_2$]

**ಹೆಡೆದೂಗು** (ನಾ). ಹೆಡೆಯ ಓಲಾಟ; ಹೆಡೆಯು ಅತ್ತಿಂದಿತ್ತ ಚಲಿಸುವಿಕೆ: ಸರ್ಪನು ಹಕ್ಕಿಯನ್ನು ತನ್ನ ಹೆಡೆದೂಗಿನ ವಿಷಮೋಹನಕ್ಕೆ ಸಿಕ್ಕಿಸಿಕೊಂಡು, ಕಡೆಗೆ ನುಂಗಿಕೊಳ್ಳುವಂತೆ (ಮಂತ್ರಕ. ೭೬-೧). [ಹೆಡೆ (< ಪೆಡೆ) + ತೂಗು$_2$ (< ತೂಂಕು$_2$)]

**ಹೆಡೆನಲಿ** (ಕ್ರಿ). (ಆಲಂ) ತಲೆಯನ್ನು ಓಲಾಡಿಸು, – ತೂಗು: ಆ ಚಂದ್ರನಖಿ, ಹೂವಿನಾಕೃತಿವೆತ್ತ ಹಾವಿನಂದದಿ ನಿಂತು ಹೆಡೆನಲಿಯುತಿರೆ (ಶ್ರೀರಾಮಾ. ೨೦೮-೩೦೭).
[ಹೆಡೆ (< ಪೆಡೆ) + ನಲಿ$_1$]

**ಹೆಡೆನಾಗ** (ನಾ). ಹೆಡೆ ಎತ್ತಿರುವ ನಾಗರಹಾವು: ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದಡೆ ಹಿಡಿದಿರ್ದ ಲಿಂಗ ಹೊಡಮರಳಿ ಕಟ್ಟುವ ಹೆಡೆನಾಗ ನೋಡ (ಸರ್ವಜ್ಞ. ೧೮೭). [ಹೆಡೆ (< ಪೆಡೆ) + ನಾಗ]

**ಹೆಡೆಬಿಡು** (ಕ್ರಿ). ಹೆಡೆಯನ್ನು ಅಗಲವಾಗಿ ತೆರೆ, – ಬಿಚ್ಚು: ಹೆಡೆಬಿಟ್ಟ ಹಾವುಗಳಂತಿದ್ದ ಆ ಬಿಲ್ಲುಗಳನ್ನು ನೋಡಿ ಉತ್ತರನು ಭಯಚಕಿತನಾಗಿ . . . ಕೇಳುತ್ತ ಬಂದನು (ವಚಭಾ. ೨೦೭). [ಹೆಡೆ (< ಪೆಡೆ) + ಬಿಡು$_1$]

**ಹೆಡೆಮಟ್ಟೆ** (ನಾ). ತೆಂಗಿನ ಗರಿಯ ಬುಡದಲ್ಲಿರುವ ಹಾವಿನ ಹೆಡೆಯಾಕಾರದ ಭಾಗ; ಗೊದಮೊಟ್ಟೆ: ತೆಂಗಿನ ಹೆಡೆಮಟ್ಟೆಗಳನ್ನು ತಂದು ಚೀಲದ ಮೇಲೆ ಹೇರಿದರು (ನನ್ನೂರು. ೨೧೧). [ಹೆಡೆ (< ಪೆಡೆ) + ಮಟ್ಟೆ$_1$]

**ಹೆಡೆಮಣಿ** 'ಪೆಡೆವಣಿ' ನೋ.

**ಹೆಡೆಮುಚ್ಚು** (ಕ್ರಿ). ೧. ಹೆಡೆಯನ್ನು ಅಡಗಿಸಿಕೊಳ್ಳು, – ಮುದುರಿಸು: ಹಾವು ಹೆಡೆಮುಚ್ಚಿಕೊಂಡು ಸರಸರನೆ ಹೊರಟುಹೋಯಿತು (ರೂಢಿ). ೨. (ಆಲಂ) ಪ್ರಕಟಿಸದಿರು; ತೋರಗೊಡದಿರು: ಪ್ರತಿಭಾನದೃಷ್ಟಿಯಲ್ಲಿ ವಸ್ತುವಿನ ಸೌಂದರ್ಯ

ವನ್ನು ಪರಿಭಾವಿಸಿದಾಗ ನಮ್ಮ ಬಯಕೆಗಳು ಹೆಡೆಮುಚ್ಚುತ್ತವೆ (ಸೌಂದಸ. ೬೪).
[ಹೆಡೆ (< ಪೆಡೆ) + ಮುಚ್ಚು$_1$]

**ಹೆಡೆಯೆತ್ತು** 'ಪೆಡೆಯೆತ್ತು' ನೋ.

**ಹೆಡೆವಣಿ** 'ಪೆಡೆವಣಿ' ನೋ.

**ಹೆಡ್ಡ$_1$** (ನಾ). ೧. ತಿಳಿಗೇಡಿ; ಮೂರ್ಖ: ಎಡೆಯಂತರದಲ್ಲಿ ಮಲಿನವ ಧರಿಸಿ ಹೆಡ್ಡರಾದಿರಿ (ಉಂಪ. ೨೨೪); ಹೆತ್ತನನಱಿಯದ ಹೆಡ್ಡರಿರಾ . . . ನಿಮ್ಮೊಡನೆ ನುಡಿವುದೆ ಕಷ್ಟಂ (ವಾಗೀರ. ದೇ. ೨೬೫-೬); ಜಾಣೆ ಹೆಡ್ಡನು ಕೂಡಲಿಹುದದು ವೀಣೆಗೆ ನೇಣ ಬಿಗಿದು ಮಿಡಿದಂತೆ (ಭರಚ. ೭-೧೪). (ಗು). ೨. ತಿಳಿಗೇಡಿಯಾದ; ಬುದ್ಧಿಯಿಲ್ಲದ: ಈ ಪಿಚ್ಚ ಬ್ರಾಹ್ಮಣನನೀ ಹೆಡ್ಡವೃದ್ಧನಂ ತಂದವರಾರೊ ನೂಂಕು ನೂಂಕೆನಲ್ (ನಂಬರ. ೬-೧೦೦). [< ಎಡ್ಡ$_2$. / ತುಳು. ಹೆಡ್ಡ]

**ಹೆಡ್ಡ$_2$** (ನಾ). ಒಂದು ಬಗೆಯ ಸಸ್ಯ: ಹೆತ್ತೀಗ . . . ದೊಡ್ಡ ಕಡಗ, ಹೆಡ್ಡ (ಮೈಬಿಗಿ. ೩-೪೦). [?]

**ಹೆಡ್ಡತನ** (ನಾ). ತಿಳಿಗೇಡಿತನ; ಮೌಢ್ಯ: ದುರ್ಯೋಧರಂ ಕೂಡಿಕೊಂಡು ಸುತ್ತಂ ಸುಳಿದು . . . ಹೆಡ್ಡತನದಿಂ ಪರಿದು ನಾಯ್ಗಾಲನುಂಬಂತೆ (ಪಿಂಡೋರ. ಹ. ೫೦೨-೨೬); ಹೆಡ್ಡತನ ದುಶ್ಚಿಂತಾನಲಜ್ವಾಲೆಗೀಡಾಗಲೇಕೆ (ಕೊಟ್ಟೂಬ. ೧೨-೩೯). [ಹೆಡ್ಡ$_1$ + - ತನ]

**ಹೆಡ್ಡಯಿಸು** 'ಹೇಡೈಸು$_2$' ನೋ.

**ಹೆಡ್ಡವೆಣ್** (ನಾ). ದಡ್ಡ ಹೆಂಗಸು; ದಡ್ಡಿ.
**ಹೆಡ್ಡವೆಂಗಳು, ಹೆಡ್ಡಹೆಂಗಳು** (ಬಹುವ): ಹೆಡ್ಡವೆಂಗಳ ನೃತ್ಯವೇನೆಂದು ಮಂತ್ರಿಯ ಗಡ್ಡವೊಂದನೆ ನೋಡುತಿದ್ದ (ಭರಚ. ೧೪-೩೭); ಅವರೇನು ಲೋಕದ ಹೆಡ್ಡಹೆಂಗಳೆ (ಭರಚ. ೪-೫೯). [ಹೆಡ್ಡ$_1$ + ಪೆಣ್]

**ಹೆಡ್ಡಾಟ** (ನಾ). ಮೂರ್ಖತನ; ತಿಳಿಗೇಡಿತನ: ನೋಡಿರ ನಮ್ಮ ಕಂಸನ ಹೆಡ್ಡಾಟವನಾಡ ಕೊಲುವ ಮಾಳ್ಕೆಯೊಳು ರೂಢಿಸಿದೀ ದ್ವಿರದವ ಕೊಂದಗೆ ಮಲ್ಲರೀಡೆಯೆಂದೆಲ್ಲರುಲಿಯಲು (ನೇಮಿಸಂ. ೧೭-೧೦೮); ಭಂಡೀ ಭಂಡಾಟ ಹೇರು ಹೆಡ್ಡಾಟ ತಲೆಹೊರೆ ಪರಮ ಸುಖ (ಗಾದ). [ಹೆಡ್ಡು + ಆಟ]

**ಹೆಡ್ಡಾಳು** (ನಾ). ತಿಳಿಗೇಡಿಯಾದ ವ್ಯಕ್ತಿ: ಹೆಡ್ಡಾಳಾದರೂ ಒಡ್ಡಾಳಾಗಿರಬೇಕು (ಗಾದ). [ಹೆಡ್ಡು + ಆಳು$_1$ (< ಆಳ್$_3$)]

**ಹೆಡ್ಡಿ** (ನಾ). = ಹೆಡ್ಡವೆಣ್: ಉತ್ತಮವಸ್ತುವನ್ನು ಆಯ್ಕೆ ಮಾಡಲಾರದ ಹೆಡ್ಡಿಯೇ ಅವಳು? (ಸ್ವಪ್ನಹೂ. ೨೩೫); ಅಷ್ಟೂ ತಿಳಿಯದ ಹೆಡ್ಡಿಯೇನಾಕೆ? (ತ್ಯಾಗಮ. ೭೦).
[ಹೆಡ್ಡ$_1$ + - ಇ$_2$]

**ಹೆಡ್ಡು** (ನಾ). ೧. = ಹೆಡ್ಡತನ: ವಿಷ್ಣು ಕಾದಿದನೆನಲ್ಕೆಯಾ ಹೆಡ್ಡುಂಟೆ ವೀರೇಶಗೆಣೆಯ ಹರಿಯಕಟ . . .ಎನಲ್ಕೆ (ವೀಶೈಪು. ೭-೧೭-೧೩); ಜಡದೇಹಿಗಳಂತೆ ಮಾತಾಡುವ ಹೆಡ್ಡು ಬಿಡದಿದೆ ನಿಮಗೆ (ಮೋಹತ. ೩೬-೨೧೩). ೨. ಏನೂ ತಿಳಿಯದ ವ್ಯಕ್ತಿ; ಮೂರ್ಖ ವ್ಯಕ್ತಿ: ನೀನು ಬರಿ ಹೆಡ್ಡು. ಪೂರ್ವಾಪರವಿಚಾರವನ್ನರಿತು ಸ್ಥಿತಿಗತಿಯನ್ನೂಹಿಸುವ ಸಾಮರ್ಥ್ಯ ಎಳ್ಳಷ್ಟೂ ನಿನ್ನಲ್ಲಿಲ್ಲ! (ಕುರುಕಾ. ೧೭). [ಹೆಡ್ಡ$_1$ + - ಉ$_4$]

**ಹೆಡ್ಡುತನ** (ನಾ). = ಹೆಡ್ಡತನ: ನನ್ನ ಈ ಹೆಡ್ಡುತನವು ನನ್ನ ಯಜಮಾನರಿಗೆ (ಪತಿದೇವರಿಗೆ) ಮೆಚ್ಚುಗೆಯಾಗುತ್ತಿರಲಿಲ್ಲ (ಕಲಕ. ೪೮); ಪರೋಪಕಾರವೆಂಬುದು ಒಳ್ಳೆಯ ಶೀಲವೆನಿಸುವ ಬದಲು ಹೆಡ್ಡುತನ, 'ಭೋಳೆತನ' ಆಗಿಬಿಡುತ್ತದೆ (ಜಾರುದಾ. ೬೨).
[ಹೆಡ್ಡು + - ತನ]

**ಹೆಡ್ಡುಬುದ್ಧಿ** (ನಾ). = ಹೆಡ್ಡತನ: ಮತಾಂತರದ ಮಹತ್ವ ಅವನ ಹೆಡ್ಡುಬುದ್ಧಿಗೆ ಹೊಳೆದಿರಲಿಲ್ಲ (ಕುಡಿಕೂ. ೨೧೪). [ಹೆಡ್ಡು + ಬುದ್ಧಿ]

**ಹೆಡ್ಡೆ** (ನಾ). = ಹೆಡ್ಡವೆಣ್: ಬೆಳ್ಳೆ, ಹೆಡ್ಡೆ, ಎಗ್ಗೆ (ಶಬ್ದಾನು. ೧೯೭ ಪ್ರಯೋ); ದಡ್ಡತನದಿ ಹೀಗೆ ಹೆಡ್ಡೆಯಾಗಿರುವಂತ ಮಡ್ಡಿಯಾದರೆ ನಿನ್ನ ನೆನೆಯೆ (ಕಪೋತ. ೧೪-೫೦).
[ಹೆಡ್ಡ$_1$ + - ಎ$_2$]

**ಹೆಡ್ಡೈಸು$_1$** 'ಹೇಡೈಸು$_1$' ನೋ.

**ಹೆಡ್ಡೈಸು$_2$** 'ಹೇಡೈಸು$_2$' ನೋ.

**ಹೆಡಾ.ಸ.ರು** 'ಹೆಡ್ಮಾಸ್ತರು' ನೋ.

**ಹೆಡ್ಮಾಸ್ಟು** 'ಹೆಡ್ಮಾಸ್ತರು' ನೋ.

**ಹೆಡ್ಮಾಸ್ತರು, ಹೆಡ್ಮಾಸ್ಟರು, ಹೆಡ್ಮಾಸ್ಟ್ರು, ಹೆಡ್ಮೇಷ್ಟ್ರು** (ನಾ). ಮುಖ್ಯೋಪಾಧ್ಯಾಯ: ಬಂದ ಕೂಡಲೇ ನಿಲ್ಲಲಿಕ್ಕೆ ನೀವೇನು ಹೆಡ್ಮಾಸ್ತರೇ? (ಹಸ್ಸೊಂದ. ೫೭). **ಹೆಡ್ಮಾಸ್ಟರು:** ದಿನಬೆಳಗದ್ದರೆ ರಜಾ ಎಂದರೆ ಆ ಹೆಡ್ಮಾಸ್ಟರು ಸುಮ್ಮನೆ ಬಡಕೊಳ್ಳುತ್ತಾನೆ (ರಾಗಿಣಿ. ೨). **ಹೆಡ್ಮಾಸ್ಟ್ರು:** ಹೆಡ್ಮಾಸ್ಟ್ರು ಒಂದು ಸರ್ಟಿಫಿಕೇಟನ್ನ ಕೊಡಬೇಕು (ಮುಂಗಾಮು. ೬೪). **ಹೆಡ್ಮೇಷ್ಟ್ರು:** ಆ ಶಾಲೆಯ ಹೆಡ್ಮೇಷ್ಟ್ರು ನಿವೃತ್ತರಾದರು (ರೂಢಿ). [← ಇಂ. Head Master]

**ಹೆಡ್ಮುನಶಿ** 'ಹೆಡ್‌ಮುನಶಿ' ನೋ.

**ಹೆಡ್ಮುನಶೀತನ** (ನಾ). ಮುಖ್ಯಗುಮಾಸ್ತೆಯ ಹುದ್ದೆ: ಏನಾಗಿದೆ ನನ್ನ ಹೆಡ್ಮುನಶೀತನಕ್ಕೆ? (ನವನೀ. ೪೧). [ಹೆಡ್ಮುನಶಿ (< ಹೆಡ್‌ಮುನಶಿ) + - ತನ]

**ಹೆಡ್ಮೇಷ್ಟ್ರು** 'ಹೆಡ್ಮಾಸ್ತರು' ನೋ.

**ಹೆಣ್** 'ಪೆಣ್' ನೋ.

**ಹೆಣ** 'ಪೆಣ' ನೋ.

**ಹೆಣಕು** 'ಪೆಣಗು' ನೋ.

**ಹೆಣಗ** (ನಾ). (ಅಲಂ) ಹೆಣದಂತಿರುವವನು; ಜೀವಚ್ಛವ: ಎಲೆ ಮೂರ್ಖಾ, ಭೀಷ್ಮಾ, ನೀನು ಮೊದಲೇ ಮುದುಕನು, ಮೇಲೆ ಹೆಣಗನು (ಮಭಾರ. ೬೬).
[ಹೆಣ (< ಪೆಣ) + - ಗ$_2$]

**ಹೆಣಗಂಪು** (ನಾ). ಹೆಣದ ನಾತ, — ದುರ್ವಾಸನೆ: ಹೆಣಗಂಪು ಸೂಸುತಿದೆ ನಿನ್ನ ಮೆಯ್ಯಿಂ (ಚಂದ್ರಸ. ೬೧-೨೩). [ಹೆಣ (< ಪೆಣ) + ಕಂಪು]

**ಹೆಣಗಾಟ** 'ಪೆಣಗಾಟ' ನೋ.

**ಹೆಣಗಾಡು** (ಕ್ರಿ). ೧. ಸೆಣಸು; ಕಾದು; ಹೋರಾಡು: ಶರೀರವಿರುವ ತನಕ ಹೆಣಗಾಡುವೆವು (ದೇವೀಜಾ. ೧೪೦). ೨. ಸ್ಪರ್ಧೆಹೂಡು; ಪೈಪೋಟಿ ಮಾಡು: ಮೋಹಿನಿಯ ಮುಖದಲ್ಲಿ ಒಂದೆಡೆ ಭೀತಿ, ಒಂದೆಡೆ ಕಠೋರವಾದ, ನಿರ್ದಯವಾದ ನಿಶ್ಚಯ ಹೆಣಗಾಡುತ್ತಿದ್ದವು (ಕಮನ. ೧೯೮); ಜೀವನದ ಚದುರಂಗದಾಟದಲ್ಲಿ ಸೋಲು ಗೆಲುವುಗಳಿಗಾಗಿ . . . ಹೆಣಗಾಡುವರು (ಮುರುಕು. ೧೦೧). ೩. ಒದ್ದಾಡು; ಕಷ್ಟಪಡು; ಶ್ರಮಿಸು: ಹೆಂಡಿರಿಗೆ ಮಕ್ಕಳಿಗೆ ಹೆಣಗಾಡುವರು (ಕಾಕೆ. II, ೧೦೬-೬); ಭಕ್ತರಾದವರು . . . ತಮ್ಮ ಇಷ್ಟಾರ್ಥಸಿದ್ಧಿಗಾಗಿ ಬಹಳ ಹೆಣಗಾಡಬೇಕಾಗಿ ಬಂತು (ಜೀವಾತ್ಮ. ೧೮೫).
[ಹೆಣಗು ( < ಪೆಣಗು ) + ಆಡು$_1$]

**ಹೆಣಗಿಸು** 'ಪೆಣಗಿಸು' ನೋ.

**ಹೆಣಗು** 'ಪೆಣಗು' ನೋ.

**ಹೆಣಗೆಡಹು** 'ಪೆಣಗೆಡಹು' ನೋ.

**ಹೆಣದಿನಿ** 'ಪೆಣದಿನಿ' ನೋ.

**ಹೆಣದಿನಿಹಿ, ಹೆಣದಿನುಹಿ** (ನಾ). ಹೆಣವನ್ನು ತಿನ್ನುವಂತಹುದು; ಭೂತ, ಪಿಶಾಚಿ ಮುಂತಾದುವು: ಮುಂದೆ ಹೆಣದಿನಿಹಿಗಳು ಖಗಮೃಗವೃಂದ ಚೆಲ್ಲಿತು (ಕುವ್ಯಾಗ. ೧೨-೪); ಹೆಣದಿನಿಹಿಗಳಿಗುಚಿತವೀ ಮಾತೆಂದಳಾ ಸೀತೆ (ತೊರರಾ. ೫-೩-೫೨). **ಹೆಣದಿನುಹಿ:** ನೋಡುವನು ಹೆಣದಿನು[ಪಾಠಾಂ. ನಿ]ಹಿಗಳ ಹೇರಾಳ ರಕ್ಕಸರ (ಕುವ್ಯಾಗ. ೩-೧೧). [ಹೆಣ (< ಪೆಣ) + ತಿನಿಹಿ ]

**ಹೆಣದಿನಿಹಿಕಾಱ** (ನಾ). = ಹೆಣದಿನಿಹಿ: ಬರಹೇಳು ಮಾರಿಯ ಬಳಗವನು ಹೆಣದಿನಿಹಿ[ಪಾಠಾಂ. ದಿನ್ನಿ]ಕಾಱರ ಕರೆಯ ರಕ್ಕಸರ (ಕುವ್ಯಾಭೀ. ೯-೯).
[ಹೆಣದಿನಿಹಿ + - ಕಾಱ]

**ಹೆಣದಿನುಹಿ** 'ಹೆಣದಿನಿಹಿ' ನೋ.

**ಹೆಣದೆಱಹು** (ನಾ). ಹೆಣಗಳ ನಡುವೆ ಬಿಟ್ಟಿರತಕ್ಕ ಜಾಗ, — ಎಡೆ: ಗಡಣಹೆಣದೆಱಹುಗಳೊಳಗೆ ಕಾಲಿಡುತ ಸೋದಿಸಿ ಮುಂದೆ ಹೆಜ್ಜೆಯನಿಡುತ ವೈಸರವೋಗಿ ಮಾರ್ಗಶ್ರಮಕೆ ಬೆಮರುವನ (ಕುವ್ಯಾಗ. ೩-೧೩).
[ಹೆಣ (< ಪೆಣ) + ತೆಱಹು (< ತೆಱಪು)]

**ಹೆಣನುಂಗಿ** (ನಾ). = ಹೆಣದಿನಿಹಿ: ಕುನ್ನಿಗಳ ಕೆಡೆ ಬಡಿ ಸೀಳು ಹೆಣನುಂಗಿಗಳ ಹೊಯ್

ಹೊಯ್ ರಣಕೆ ಹೆದಱುವ ಕೌರವಾನುಜರ (ಕುವ್ಯಾದ್ರೋ. ೧೨-೧೧).
[ಹೆಣ (< ಪೆಣ) + ಸುಂಗು$_1$ + - ಇ$_3$]

**ಹೆಣಮಯ** 'ಪೆಣಮಯ' ನೋ.

**ಹೆಣಮೂಳ** (ನಾ). (ಆಲಂ) ಕೆಲಸಕ್ಕೆ ಬಾರದವನು; ಅಪ್ರಯೋಜಕ: ಹೆಣಮೂಳ[ಪಾಠಾಂ. ಲ]ನು ನಾನು . . .ಕ್ಷಣ ಹದುಳವಿರದೆ ಬಾಯ ಟೊಣೆದೇ ಹೋಯಿತ್ತೆನ್ನ ಭಕ್ತಿ (ಬಸವ. ೨೬೦). [ಹೆಣ (< ಪೆಣ) + ಮೂಳ$_1$ (< ಮೂಱು)]

**ಹೆಣಮೆದೆ** (ನಾ). ಹೆಣಗಳ ರಾಶಿ, – ಒಟ್ಟಿಲು: ಇದೆ ರಥದ ಪದಘಾತದಲಿ ಹೆಣಮೆದೆಯ ಪಾಯದಳೌಘಭೀಮನ ಕದನಪಥವಿದೆಯೆನುತ ನಗುತ್ಕೃತಂದನಾ ದ್ರೋಣ (ಕುವ್ಯಾದ್ರೋ. ೧೩-೨). [ಹೆಣ (< ಪೆಣ) + ಮೆದೆ$_1$]

**ಹೆಣಮೋರೆ** (ನಾ). (ಆಲಂ) ನಿಸ್ತೇಜವಾದ ಮುಖ; ತೇಜೋಹೀನವಾದ ಮುಖ: ನಾನಂತೂ ಕೋಟೆ ವಪ್ಪಿಸಿ ಹೆಣಮೋರೆಯಿಂದಾ ಖಾವಂದಿರಯೆದುರಿಗೆ ಬರತಕ್ಕದಿಲ್ಲಾ (ಹೃದರ. ೯೧); ಬಿಸಿಲಿನಿಂದ ಕಂದಿಹೋದ ಹೆಣಮೋರೆಯ ಮುದುಕರಿದ್ದರು (ಪುನರು. ೪೭೮). [ಹೆಣ (< ಪೆಣ) + ಮೋರೆ (< ಮೋಱೆ)]

**ಹೆಣಲು$_1$** 'ಪೆಣಲ್' ನೋ.

**ಹೆಣಲು$_2$** 'ಪಿಣಿಲ್$_3$' ನೋ.

**ಹೆಣಲುಭಂಗಾರ, ಹೆರಳುಬಂಗಾರ, ಹೆರಳುಭಂಗಾರ, ಹೆಳಲುಬಂಗಾರ** (ನಾ). ಹೆಣೆದುಕೊಂಡ ಜಡೆಯಲ್ಲಿ ಧರಿಸುವ ಜಡೆಯಾಕಾರದಲ್ಲಿ ಮಾಡಿದ ಒಂದು ಬಗೆಯ ಚಿನ್ನದ ಆಭರಣ; ಜಡೆಬಂಗಾರ: ಹೆಣಲುಭಂಗಾರಗಳ ಕಾಂತಿಯು ಅಣೆದುದ್ದೆ ಶತಕೋಟಿಸೂರ್ಯರ (ದೇವೀಮ. ೨-೧೦). **ಹೆರಳುಬಂಗಾರ:** ಹೆರಳುಬಂಗಾರ ನಡಪಟ್ಟಗಳಿಲ್ಲವಾದರೂ ಮನೆಯಲ್ಲಿಯ ನತ್ತನ್ನಾದರೂ ಹಾಕಲಿಲ್ಲ (ಸ್ಮೃತಿಚಿ. ೨೨೮); ಹೆರಳುಬಂಗಾರದ ಬೆಳ್ಳಿ ಸೇವಂತಿಗೆಯ ಬಳಿಯಾಕೆ (ಗಂ. ೧೦೬- ೫). **ಹೆರಳುಭಂಗಾರ:** ಹರಿದಾಸರ ಪಾದರಜ ಹೆರಳುಭಂಗಾರ (ಪುರಂದ. ೧-೩೪-೨); ಇನ್ನೂ ವಿರಾಜಿಪಿರುಳಿನ ಹೆರಳುಭಂಗಾರ (ಸಪೀಗೀ. ೭೮-೧). **ಹೆಳಲುಬಂಗಾರ :** (ಕ).
[ಹೆಣಲು$_1$ (< ಪೆಣಲ್) + ಭಂಗಾರ (< ಬಂಗಾರ) ]

**ಹೆಣವಿಸರ** (ನಾ). = ಹೆಣಮೆದೆ.

**ಹೆಣವಿಸರವಾಗು** = ಹೆಣಗಳ ರಾಶಿಬೀಳು : ಬಸಿದು ಬೀಳ್ವ ಕಬಂಧದಲಿ ಹೆಣವಿ [ಪಾಠಾಂ. ವ]ಸರವಾದುದು ನೆಲನು (ತೊರರಾ. ೧-೧೧-೧೪). [ಹೆಣ (< ಪೆಣ) + ವಿಸರ]

**ಹೆಣಸಾಲು** (ನಾ). ಹೆಣಗಳ ಓಳಿ, – ಪಂಕ್ತಿ: ಹೆಣಸಾಲುಗಳು ಹರೆದವು ರಕುತ ದರೆವೊನಲುಗಳು ಹರಿದವು (ಕುವ್ಯಾಭೀ. ೪-೧೦); ಬಸಿದೊಡೆವ ಹೆಣಸಾಲುಗಳ ಸಂದಣಿ 'ಯಡವಿಯನು ಕಂಡು (ತೊರರಾ. ೩-೮-೪). [ಹೆಣ (< ಪೆಣ) + ಸಾಲು$_2$ (< ಸಾಲ್$_3$)]

**ಹೆಣಹಕ್ಕಲು** (ನಾ). ಹೆಣಗಳನ್ನು ಚೆಲ್ಲಾಪಿಲ್ಲಿ ಮಾಡುವಿಕೆ, – ತೂರಾಡುವಿಕೆ: ಹೊಕ್ಕು ರಿಪುಬಲದೊಳಗೆ ಕಲಶಜಂ ಮುರಿದು ಹೆಣಹಕ್ಕಲಂ ಮಾಡ್ದನು (ತುರಂಗ. ೫೮-೧೧). [ಹೆಣ (< ಪೆಣ) + ಹಕ್ಕಲು (< ಹಕ್ಕಲ್)]

**ಹೆಣಕೆ** 'ಪೆಣಕೆ$_1$' ನೋ.

**ಹೆಣಿಗೆ$_1$** (ನಾ). ೧. ಬಣ್ಣದ ದಾರ, ಉಲ್ಲನ್ನು ಮುಂತಾದುವುಗಳನ್ನು ಹೆಣೆದು ಮಾಡುವ ಒಂದು ಬಗೆಯ ಕಸೂತಿಕೆಲಸ: ನನ್ನ ತಾಯಿ . . . ಹೆಣಿಗೆ ಮತ್ತು ಕಸೂತಿ ಕೆಲಸಗಳನ್ನು ನಯವಾಗಿ ಮಾಡಿಕೊಡುತ್ತಾಳೆ (ಮಹಾತ್ಮಾ. ೮೬). ೨. ಹೆಣೆದುದು; ನೆಯ್ದುದು: ಗಳುವಿನ ಪಟ್ಟಿಯ ಎರಡು ತುದಿಗಳಿಗೂ ಕಟ್ಟಿದ ಹಗ್ಗದ ಹೆಣಿಗೆಗಳಲ್ಲಿ ಕೊಡಗಳನ್ನಿಟ್ಟು ನೀರನ್ನು ಹೊತ್ತು ತರುವ ವಿಧಾನ (ಸರ್ವಮಂ. ೯).
[< ಹೆಣೆ$_1$ (< ಪೆಣೆ$_1$) + - ಗೆ]

**ಹೆಣಿಗೆ$_2$** 'ಪಣಿಗೆ' ನೋ.

**ಹೆಣಿಗೆಕೆಲಸ** (ನಾ). ೧. ಹೆಣಿಗೆಯ ಕಾರ್ಯ: ಆ ರತ್ನಗಂಬಳಿಯ ಹೆಣಿಗೆಕೆಲಸ ಸುಂದರವಾಗಿದೆ (ರೂಢಿ). ೨. ಹೆಣೆಯುವ ಕಲೆ, – ವಿದ್ಯೆ: ಅವಳಿಗೆ ಹೆಣಿಗೆ ಕೆಲಸದಲ್ಲಿ ಬಹಳ ಆಸಕ್ತಿಯಿದೆ (ರೂಢಿ). [ಹೆಣಿಗೆ$_1$ + ಕೆಲಸ]

**ಹೆಣೆ$_1$** 'ಪೆಣೆ$_1$' ನೋ.

**ಹೆಣೆ$_2$** 'ಪೆಣೆ$_2$' ನೋ.

**ಹೆಣೆಕಟ್ಟು** (ಕ್ರಿ). ತೆನೆಯಿಂದ ಧಾನ್ಯವನ್ನು ಒಕ್ಕುವುದಕ್ಕಾಗಿ ಎತ್ತುಗಳನ್ನು ಮೇಟಿಗೆ ಸಾಲಾಗಿ ಕಟ್ಟು: ಕಷ್ಟಪಟ್ಟು ಕಣದಲ್ಲಿ ಹೆಣೆಕಟ್ಟಿ ಎತ್ತಿನಿಂದ ತುಳಿಸಿದ ಬತ್ತದ ಹುಲ್ಲಿನ ಹೊರೆ ಕಟ್ಟುವ ಹಾಗೆ ಕಟ್ಟಿ ಮುಗಿಸಿದ (ನನ್ನೂರು. ೨೭೪).
[ಹೆಣೆ$_2$ (< ಪೆಣೆ$_2$) + ಕಟ್ಟು$_1$ ]

**ಹೆಣೆತ** (ನಾ). ಹೆಣೆಯುವಿಕೆ; ಸೇರಿಸುವಿಕೆ: "ಜಟ . . . ಸಂಘಾತೇ, ಹೆಣೆತದೊಳ್" (ಶಾಶಕ್ಕ. ೧೭). [ಹೆಣೆ$_1$ (< ಪೆಣೆ$_1$) + - ತ$_2$]

**ಹೆಣ್ಗರುಳು, ಹೆಂಗರುಳು, ಹೆಣ್ಣುಗರುಳು** (ನಾ). ೧. ಹೆಂಗಸಿನ ಮನಸ್ಸು; ಹೆಣ್ಣಿನ ಹೃದಯ. ೨. (ಆಲಂ) ಮೃದುವಾದ ಮನಸ್ಸು; ಕರುಣೆ, ಮಮತೆಗಳಿಂದ ಕೂಡಿರುವ ಹೃದಯ: ಶಂಕರರಾಯರು ಸೌಮ್ಯಗುಣದವರು, ಹೆಣ್ಗರುಳಿನವರು (ಕುಂಕುಮ. ೫೮). **ಹೆಂಗರುಳು:** ೧. ಹೆಂಗರುಳು ನಿಂಗ್ಯಾಗೆ ತಿಳೀಬೇಕು! (ಕಂಕಕೂ. ೧೨); ನನ್ನ ಹೆಂಡತಿಗೆ ಅವಳ ತಾಯಿ ಹೇಳುತ್ತಿದ್ದರಂತೆ, ಹೆಂಗರುಳು ನೋಡ! (ಹುಚ್ಚುಹು. ೯೩). ೨. ಪ್ರಮಿಾತ್ಯೂಸ್ನ ಅವರ ಹೆಂಗರುಳು ಮಿಡಿದಂತೆ ಸ್ಫೂಸ್ನ ಸಿಡಿಮಿಡಿಗೊಂಡಿತು (ಬಧ್ಯಪ್ರ. XLviii, ನಾಟಕದ ಸಮಸ್ಯೆ); ದಂಗೆಯನ್ನು ಅಡಗಿಸಬೇಕಾದರೆ ಇಂಥ ಹೆಂಗರುಳಿನಿಂದ ಪ್ರಯೋಜನವಿಲ್ಲ (ಕೃಷ್ಣಭೂ. ೨೧೭). **ಹೆಣ್ಣುಗರುಳು:** ೧. ಹೆಣ್ಣುಗರುಳ ನಲುಮೆಸೊದೆಯನೀಂಟ ಅಮೃತನಾದನು ಕವಿಯು (ಪಯಣ. ೫-೧೩). ೨. ಹೆಣ್ಣುಗರುಳಿನಲಿ ತೂಗಿ ನೋಡಿದಿರಿ ಹೊನ್ನು ಮಣ್ಣುಗಳನು (ಹೃದಸ. ೭೪-೧೮).
[ಹೆಣ್ (< ಪೆಣ್) + ಕರುಳು (< ಕರುಳ್)]

**ಹೆಣ್ಗಳಿ** 'ಪೆಣ್ಗಳಿ' ನೋ.

**ಹೆಣ್ಣಂಚೆ** 'ಪೆಣ್ಣಂಚೆ' ನೋ.

**ಹೆಣ್ಣಗೆ** 'ಪೆಣ್ಣಗೆ' ನೋ.

**ಹೆಣ್ಣಾನೆ** 'ಪೆಣ್ಣಾನೆ' ನೋ.

**ಹೆಣ್ಣಾಯಿ** 'ಪೆಣ್ಣಾಯ್' ನೋ.

**ಹೆಣ್ಣಾವೆ, ಹೆಣ್ಣುಆಮೆ, ಹೆಣ್ಣುಆವೆ** (ನಾ). ಆಮೆಯಲ್ಲಿ ಹೆಣ್ಣುಜಾತಿಗೆ ಸೇರಿದುದು: "ಧುಳಿಯೆನಲು ಹೆಣ್ಣಾವೆಯಕ್ಕುಂ" (ಮಂಗರಾ. ೧೨೧-೮). **ಹೆಣ್ಣುಆಮೆ:** "ಕಮಠೀ, ಧುಲೀ-೨ ಹೆಣ್ಣುಆಮೆ ಪೆಸರುಗಳು ಅಂದರೆ ಸ್ತ್ರೀಕೂರ್ಮ" (ಸಿದ್ಧಾಂತಿ. ೮೪). **ಹೆಣ್ಣುಆವೆ:** (ಕ). [ಹೆಣ್ (< ಪೆಣ್) + ಆವೆ$_1$ (< ಆಮೆ$_1$)]

**ಹೆಣ್ಣಾಳ್** 'ಪೆಣ್ಣಾಳ್' ನೋ.

**ಹೆಣ್ಣಾಳು** 'ಪೆಣ್ಣಾಳ್' ನೋ.

**ಹೆಣ್ಣಿಗ** (ನಾ). ೧. ಹೇಡಿ; ಅಂಜುಕುಳಿ: ಶಾಸ್ತ್ರಿ "ಏನೋ ಹೆಣ್ಣಿಗ" ಎಂದು ನನ್ನನ್ನು ವಿಚಾರಿಸಿದ (ಪ್ರಶ್ನೆ. ೧೪೯). ೨. ಷಂಡ; ನಪುಂಸಕ: ನಾನು ಹೆಣ್ಣಿಗನ ವೇಷವನ್ನು ಹಾಕಿಕೊಂಡಿರೋಣವೆಂದು ಮಾಡಿದ್ದೇನೆ (ವಚಭಾ. ೧೮೫). [ಹೆಣ್ಣು (< ಪೆಣ್) + - ಇಗ]

**ಹೆಣ್ಣಿಗತನ** (ನಾ). ೧. ಹೇಡಿತನ; ಅಂಜುಕುಳಿಸ್ವಭಾವ: (ಕ). ೨. ಷಂಡತನ: (ಕ). [ಹೆಣ್ಣಿಗ + - ತನ]

**ಹೆಣ್ಣು** 'ಪೆಣ್' ನೋ.

**ಹೆಣ್ಣುಆಮೆ** 'ಹೆಣ್ಣಾವೆ' ನೋ.

**ಹೆಣ್ಣುಆವೆ** 'ಹೆಣ್ಣಾವೆ' ನೋ.

**ಹೆಣ್ಣುಕಣೆ** (ನಾ). ಕಬ್ಬಿನ ಗಾಣದಲ್ಲಿರುವ ಸಣ್ಣ ಕೊರಡು, – ಪಟ್ಟಿ: (ಕ). 'ಗಂಡುಕಣೆ' ಪರಾ. [ಹೆಣ್ಣು (< ಪೆಣ್) + ಕಣೆ$_2$ (< ಗಣೆ)]

**ಹೆಣ್ಣುಕರಟ** (ನಾ). ತೆಂಗಿನಕಾಯಿಯನ್ನು ಒಡೆದಾಗ ಬರುವ ಕೆಳಭಾಗದ ಚಿಪ್ಪು; ಕಣ್ಣಿರುವ ಚಿಪ್ಪು: ಮಾಲಕ್ಕ್ಕ, ಎರಡು ಹೆಣ್ಣುಕರಟ ಕೊಡು (ಮುಗಿಯ. ೧೬೦). 'ಗಂಡುಗರಟ' ಪರಾ. [ಹೆಣ್ಣು (< ಪೆಣ್) + ಕರಟ$_1$ (< ಕರಂಟ)]

**ಹೆಣ್ಣುಕರಿತುಂಬೆ** (ನಾ). ಕರಿಯತುಂಬೆಗಿಡದಲ್ಲಿ ಒಂದು ಬಗೆ: ಮಂಗ ಮಾರಿಸೊಪ್ಪು, ಹೆಣ್ಣುಕರೀತುಂಬೆ, ಹುಚ್ಚುಮುಟ್ಟೇಗಿಡ (ಮೃಔಗಿ. ೭-೧೧೬).
[ಹೆಣ್ಣು (< ಪೆಣ್ ) + ಕರಿತುಂಬೆ ]

**ಹೆಣ್ಣುಕಾಳಿಂಗ** (ನಾ). ಒಂದು ಬಗೆಯ ಸಸ್ಯ: (ಮೃಔಗಿ. ೪೮-೯೭೨). 'ಗಂಡುಕಾಳಿಂಗ' ಪರಾ. [ಹೆಣ್ಣು (< ಪೆಣ್) + ಕಾಳಿಂಗ (= ಕಾಲಿಂಗ)]

**ಹೆಣ್ಣುಕುಣಿಕೆ** (ನಾ). ಕೊಂಡಿ ಅಥವಾ ಕೊಕ್ಕೆಯ ಒಂದು ಭಾಗ, - ತಗುಲು ಹಾಕುವ ಕುಣಿಕೆ : (೬). [ಹೆಣ್ಣು (< ಪೆಣ್) + ಕುಣಿಕೆ$_2$ (< ಕುಳಿಕೆ$_1$)]

**ಹೆಣ್ಣುಕುದುರೆ** 'ಪೆಣ್ಗುದುರೆ' ನೋ.

**ಹೆಣ್ಣುಕೂಸು** 'ಪೆಣ್ಗೂಸು' ನೋ.

**ಹೆಣ್ಣುಗ** 'ಪೆಣ್ಣುಗ' ನೋ.

**ಹೆಣ್ಣುಗತ್ತೆ** 'ಪೆಣ್ಗತ್ತೆ' ನೋ.

**ಹೆಣ್ಣುಗರುಳು** 'ಹೆಣ್ಗರುಳು' ನೋ.

**ಹೆಣ್ಣುಗವಡೆ** (ನಾ). ಕವಡೆಯಲ್ಲಿ ಒಂದು ಬಗೆ: ಹೆಣ್ಣುಗವಡೆಯಿಂ ಕೊಂಡು ಪಚ್ಚೆಕರ್ಪೂರವ ಅದಜೊಳಗೆ ತುಂಬಿ . . . ಕಣ್ಣಿಗೆ ಹಚ್ಚೆ ಹೂವು ಕರಗುವುದು (ವಿಷವಿ. ೧೮೧). [ಹೆಣ್ಣು (< ಪೆಣ್) + ಕವಡೆ$_2$]

**ಹೆಣ್ಣುಗಿಳಿ** 'ಪೆಣ್ಗಿಳಿ' ನೋ.

**ಹೆಣ್ಣುಗುದುರೆ** 'ಪೆಣ್ಗುದುರೆ' ನೋ.

**ಹೆಣ್ಣುಗೂಸು** 'ಪೆಣ್ಗೂಸು' ನೋ.

**ಹೆಣ್ಣುಗೊಡ್ಡ** (ನಾ). ಒಂದು ಬಗೆಯ ಮರ: ಉಡಿಮರ, ಗೊಡ್ಡ . . . ಹೆಣ್ಣುಗೊಡ್ಡ (ಮೃಔಗಿ. ೫೭-೧೧೫೦). [ಹೆಣ್ಣು (< ಪೆಣ್) + ಗೊಡ್ಡ?]

**ಹೆಣ್ಣುಗೊರವಿ, ಹೆಣ್ಣುಗೊರಿವಿ** (ನಾ). ಒಂದು ಬಗೆಯ ಮರ: ಹೆಣ್ಣು ಗೊರವಿ (ಖಿರ) ಸುಂದರವಾದ ಸಣ್ಣಗಿಡ, ದೀವಟಿಗೆಗೆ ಬರುತ್ತದೆ (ಕಭಾಗ. ೫೦). **ಹೆಣ್ಣುಗೊರಿವಿ:** ಮರಗಳು: ಹಸವ, ಹಬ್ಬಲಸು . . . ಗೊರವಿ, ಹೆಣ್ಣುಗೊರಿವಿ (ನಮ್ಮನು. ೨೫೭). [ಹೆಣ್ಣು (< ಪೆಣ್) + ಗೊರವಿ$_2$]

**ಹೆಣ್ಣುಗೊರಿವಿ** 'ಹೆಣ್ಣುಗೊರವಿ' ನೋ.

**ಹೆಣ್ಣುಜನ್ಮ** 'ಪೆಣ್ಜನ್ಮ' ನೋ.

**ಹೆಣ್ಣುಡುಗೆ** (ನಾ). ಹೆಂಗಸಿನ ವೇಷ,– ವಸ್ತ್ರ: ಹೆಣ್ಣುಡುಗೆಯನ್ನುಟ್ಟ ಹರೆಯದ ಹೆಣ್ಣು ಚಾಮಲೆ . . . ಚೆಲುವನ್ನು ತಳೆಯುತ್ತಿದ್ದಳು (ಸವತಿ. ೫೭). [ಹೆಣ್ಣು (< ಪೆಣ್) + ಉಡುಗೆ]

**ಹೆಣ್ಣುಡೆ** 'ಪೆಣ್ಣುಡೆ' ನೋ.

**ಹೆಣ್ಣುತನ** 'ಪೆಣ್ತನ' ನೋ.

**ಹೆಣ್ಣುದೆವ್ವ** 'ಹೆಣ್ದೆವ್ವ' ನೋ.

**ಹೆಣ್ಣುದೇವತೆ** (ನಾ). ಸ್ತ್ರೀದೇವತೆ: (೬). [ಹೆಣ್ಣು (< ಪೆಣ್) + ದೇವತೆ]

**ಹೆಣ್ಣುನಾಯಿ** 'ಪೆಣ್ನಾಯ್' ನೋ.

**ಹೆಣ್ಣುನೀಲಿ** (ನಾ). ನೀಲಿಗಿಡದಲ್ಲಿ ಒಂದು ಬಗೆ: (೬). [ಹೆಣ್ಣು (< ಪೆಣ್) + ನೀಲಿ]

**ಹೆಣ್ಣುನೋಡು** (ಕ್ರಿ). ೧. ವಧುವನ್ನು ಹುಡುಕು: ಅವರ ಮಗನಿಗೆ ಹೆಣ್ಣು ನೋಡುತ್ತಿದ್ದಾರೆ (ರೂಢಿ). ೨. ವಧುಪರೀಕ್ಷೆ ಮಾಡು; ವಧುವನ್ನು ನೋಡು: ಸಾಮಾನ್ಯವಾಗಿ ನನ್ನೂರಿವನರು ಹೆಣ್ಣು ನೋಡಲು ಗೌಡರನ್ನೇ ಕರೆದುಕೊಂಡು ಹೋಗುವುದುಂಟು (ನನ್ನೂರು. ೬೦). [ಹೆಣ್ಣು (< ಪೆಣ್) + ನೋಡು]

**ಹೆಣ್ಣುಮಕ್ಕಳು** 'ಪೆಣ್ಮಗು' ಪರಾ.

**ಹೆಣ್ಣುಮಗಳು** 'ಪೆಣ್ಮಗಳು' ನೋ.

**ಹೆಣ್ಣುಮಗು** 'ಪೆಣ್ಮಗು' ನೋ.

**ಹೆಣ್ಣುಮಣಿ** 'ಪೆಣ್ಮಣಿ' ನೋ.

**ಹೆಣ್ಣುಮತ್ತಿ** (ನಾ). ಒಂದು ಬಗೆಯ ಮತ್ತಿಮರ: ಗೌಜಲ್‌ಮರ, ಕವಲು ಮರ . . . ಕಾವಲ್, ಹೆಣ್ಣುಮತ್ತಿ (ಮೃಔಗಿ. ೧೮-೬೧೯). [ಹೆಣ್ಣು (< ಪೆಣ್) + ಮತ್ತಿ$_1$ (< ಮಟ್ಟಿ$_1$)]

**ಹೆಣ್ಣುಮರಿ** 'ಹೆಣ್ಣುಮಱಿ' ನೋ.

**ಹೆಣ್ಣುಮರುಳ** 'ಹೆಣ್ಮರುಳ' ನೋ.

**ಹೆಣ್ಣುಮಱಿ, ಹೆಣ್ಣುಮರಿ** (ನಾ). ೧. (ಯಾವುದಾದರೂ ಪ್ರಾಣಿಯ) ಚಿಕ್ಕ ಹೆಣ್ಣು ಪ್ರಾಣಿ: ಚಟಕೆ- ಗುಬ್ಬಿಗೆ ಹುಟ್ಟಿದ ಹೆಣ್ಣುಮಱಿ (ನಾಚಿರಾ. ೬); ನೋಡುವುದಕ್ಕೆ ಹುಲ್ಲೆಯ ಹೆಣ್ಣುಮಱಿಗಳ ಜೋಡಿಸಿಕೊಟ್ಟರುತ್ತಸವದಿ (ಮೋಹತ. ೧೯-೭೭). **ಹೆಣ್ಣುಮರಿ:** ೨. ಸಣ್ಣಹುಡುಗಿ: ಡೊಂಬರ ಹೆಣ್ಣುಮರಿ ಗರಗರನೆ ಎತ್ತರಭರದಲ್ಲಿ ತಿರುಗುವಾ ತೆರ ಹುಡಿಯು ಅರಸಿನ ಎರಚಿತೆರಚಿತು ಕಣ್ಣಿಗೆ (ಕವಪು. ೩೯-೧೭). [ಹೆಣ್ಣು (< ಪೆಣ್) + ಮಱಿ]

**ಹೆಣ್ಣುಮೀನ್** 'ಪೆಣ್ಮೀನ್' ನೋ.

**ಹೆಣ್ಣುಮೀನು** 'ಪೆಣ್ಮೀನ್' ನೋ.

**ಹೆಣ್ಣುಮೊಲ** 'ಪೆಣ್ಮೊಲ' ನೋ.

**ಹೆಣ್ಣುವೇಷ** (ನಾ). ೧. = ಹೆಣ್ಣುಡುಗೆ: ಕೆಲವರು ಗಂಡುಮಕ್ಕಳಿಗೆ ಹೆಣ್ಣುವೇಷ ಹಾಕಿ ಫೋಟೊ ತೆಗೆಸುವುದುಂಟು (ರೂಢಿ). ೨. ಸ್ತ್ರೀಪಾತ್ರ; ಹೆಂಗಸಿನ ಪಾತ್ರ: ಹಿಂದಿನ ಕಾಲದ ನಾಟಕಗಳಲ್ಲಿ ಗಂಡಸರೇ ಹೆಣ್ಣುವೇಷ ಹಾಕುತ್ತಿದ್ದರು (ರೂಢಿ). [ಹೆಣ್ಣು (< ಪೆಣ್) + ವೇಷ]

**ಹೆಣ್ಣುಸಂಪಿಗೆ** (ನಾ). ಒಂದು ಬಗೆಯ ಮರ: ಹೆಣ್ಣುಸಂಪಿಗೆ (ಚಂಪಕ)- ಮಧ್ಯಮ ಆಕಾರದ್ದು (ಕಭಾಗ. ೫೦). [ಹೆಣ್ಣು (< ಪೆಣ್) + ಸಂಪಿಗೆ (< ಸಂಪಗೆ)]

**ಹೆಣ್ಣುಸೆಱೆ** 'ಪೆಣ್ಸೆಱೆ' ನೋ.

**ಹೆಣ್ಣುಸೋಗು** (ನಾ). ಹೆಂಗಸಿನ ರೀತಿಯ ನಟನೆ; ಹೆಣ್ಣಿನ ನಡವಳಿಕೆಯ ತೋರಿಕೆ: ನೀ ಈ ಹೆಣ್ಣುಸೋಗು ಬಿಟ್ಟುಬಿಡು (ಗಂಮಾಯಿ. ೨೫೦). [ಹೆಣ್ಣು (< ಪೆಣ್) + ಸೋಗು]

**ಹೆಣ್ಣುಹಕ್ಕಿ** 'ಪೆಣ್ಬಕ್ಕಿ' ನೋ.

**ಹೆಣ್ಣುಹುಲಿ** 'ಪೆಣ್ಬುಲಿ' ನೋ.

**ಹೆಣ್ಣುಹೂವು** (ನಾ). ಅಂಡಾಶಯ, ಶಲಾಕೆ ಮತ್ತು ಶಲಾಕಾಗ್ರಗಳ ನ್ನೊಳಗೊಂಡಿರುವ ಹೂವು: ಅಂಡಾಶಯವುಳ್ಳ ಹೂವು ಹೆಣ್ಣುಹೂವು . . . ಬಲಿತು ಕಾಯಾಗುವದು (ಸಸ್ಯಶಾ. ೫೩). [ಹೆಣ್ಣು (< ಪೆಣ್) + ಹೂವು (< ಪೂ$_2$)]

**ಹೆಣ್ಣುಳಿ** (ನಾ). ಒಂದು ಬಗೆಯ ತೆರಿಗೆಯ ರೂಪದ ಆದಾಯ (?): ಅರಮನೆಗೆ ತೆಱುವ ಪ್ರಾಕು ಸಿಧಾಯ ಹೊದಕೆ ಹೆಂಣುಳಿ ಕಾಣಿಕೆ . . . ಮುಂತಾಗಿ ಏನು ಬಂದಹನೂ (ಎಕ. VIII, ತೀರ್ಥಹ. ೧೧೪-೪೦; 1379). [?]

**ಹೆಣ್ಣೆದೆ** 'ಪೆಣ್ಣೆರ್ದೆ' ನೋ.

**ಹೆಣ್ಣೊಡಲ್** 'ಪೆಣ್ಣೊಡಲ್' ನೋ.

**ಹೆಣ್ತಾಳೆ** (ನಾ). ಒಂದು ಬಗೆಯ ತಾಳೆಮರ: (ಮೃಔಗಿ. ೬೦-೧೨೩೨). [ಹೆಣ್ (< ಪೆಣ್) + ತಾಳೆ$_2$ (< ತಾಳ್$_3$)]

**ಹೆಣ್ದೆವ್ವ, ಹೆಣ್ಣುದೆವ್ವ** (ನಾ). ಹೆಣ್ಣುಪಿಶಾಚಿ: "ಪಿಶಾಚೀ, ಪಿಶಾಚಿಕಾ, ಈ ೨ ಹೆಣ್ದೆವ್ವ" (ಶಾಶಕ್ಕ. ೨೧೪). **ಹೆಣ್ಣುದೆವ್ವ:** ಆ ಹಳೆಮನೆಯಲ್ಲಿ ಹೆಣ್ಣುದೆವ್ವವೊಂದು ವಾಸವಾಗಿದೆಯೆಂದು ಕೆಲವರು ಹೇಳುತ್ತಾರೆ (ರೂಢಿ). [ಹೆಣ್ (< ಪೆಣ್) + ದೆವ್ವ (< ದೆಯ್ವ)]

**ಹೆಣ್ಬುಯ್ಯಲು** 'ಪೆಣ್ಬುಯ್ಯಲ್' ನೋ.

**ಹೆಣ್ಮಕ್ಕಳು** 'ಪೆಣ್ಮಗು' ಪರಾ.

**ಹೆಣ್ಮರುಳ, ಹೆಣ್ಣುಮರುಳ** (ನಾ). ಹೆಣ್ಣಿನಲ್ಲಿ ಬಹಳ ಆಸಕ್ತನಾದವನು; ಕಾಮುಕ: ಐತಾಳರೋ . . . ಹೆಂಡತಿಯೊಡನೆ ಪಟ್ಟಾಂಗ ಹೊಡೆಯುವ ಹೆಣ್ಮರುಳರೇ! (ಮರಮು. ೧೭). **ಹೆಣ್ಣುಮರುಳ:** ಪಕ್ಕಾ ಹೆಣ್ಣುಮರುಳ! (ಪತಿ. ೮೫). [ಹೆಣ್ (< ಪೆಣ್) + ಮರುಳ]

**ಹೆಣ್ಮೀನ್** 'ಪೆಣ್ಮೀನ್' ನೋ.

**ಹೆತ್ತ$_1$** 'ಪೆಱು$_1$' ನೋ.

**ಹೆತ್ತ$_2$** 'ಪೆಱು$_2$' ಪರಾ.

**ಹೆತ್ತರಾಣಿಕೆ** (ನಾ). ಒಂದು ಬಗೆಯ ಸಸ್ಯ: ಹತ್ತರಾಣಿಕೆ . . . ತೆರಣಿ, ಕಕೋರ್ಲ (ಮೃಔಗಿ. ೬೩-೧೨೬೯). [?]

**ಹೆತ್ತರಿಮುಳ್ಳು** (ನಾ). ಒಂದು ಬಗೆಯ ಸಸ್ಯ: ಕುಡವಲೆ, ಹೆತ್ತರಿಮುಳ್ಳು, ಮುಳ್ಳುತಾರೆ, ಗಜಬೀರ (ಮೃಔಗಿ. ೩೭-೭೩೯). [? + ಮುಳ್ಳು (< ಮುಳ್)]

**ಹೆತ್ತಲೆ (?).** (ನಾ). ಮುಖ್ಯವಾದ ವರಮಾನ (?): ಸೇನಬೋವನ ವರ್ತನೆಯಿಂದ ಗ ೨॥ ೪ ಹೆತ್ತಲೆವರಾಡದಿಂದ ಗ ೮॥ ೨ (ಎಕ. VIII, ತೀರ್ಥಹ. ೧೧೦-೨೦; 1702). [?]

**ಹೆತ್ತಿಳ** 'ಪೆತ್ತಿಳ' ನೋ.

**ಹೆತ್ತು$_1$** 'ಪೆಱು$_1$' ನೋ.

**ಹೆತ್ತು$_2$** 'ಪೆಱು$_2$' ನೋ.

**ಹೆತ್ತುತ್ತಿ** (ನಾ). ಒಂದು ಬಗೆಯ ಸಸ್ಯ: (ಮೈಔಗಿ. ೭೦-೧೪೫). [?]

**ಹೆತ್ತೇಗ** 'ಹೆದ್ದೇಗು' ನೋ.

**ಹೆದರಿಕೆ** (ನಾ). ಭಯ; ಅಂಜಿಕೆ: ಗೌಡರ ಗರ್ಜನೆ . . . ಹೆದರಿಕೆ ಹುಟ್ಟಿಸುತ್ತದ (ಗಾಳಿಗು. ೩); ಅವಳನ್ನು ಕಂಡರೆ ಒಂದೊಂದು ದಿನ ಹೆದರಿಕೆಯೂ ಆಗುತ್ತಿತ್ತು (ಆಲಹೂ. ೩೬). [ಹೆದರು (< ಹೆದಱು$_1$) + - ಇಕೆ ./ ತುಳು. ಹೆದರಿಕೆ]

**ಹೆದರಿಗಟ್ಟ** (ನಾ). ಒಂದು ಸ್ಥಳದ ಹೆಸರು: ಗೊಗ್ಗಿಯ ದೇಗುಲದ ಧಮ್ಮರಾಸಿಭಟಾರರ ಕಾಲಂ ಕರ್ಚಿ ಕೊಟ್ಟ ಸ್ಥಿತಿ ಯಾವದೆನ್ನೊಡೆ ಹೆದರಿಗಟ್ಟವುಂ . . . ಇಟ್ಟಿಗೆಯುಮನ್ನು ನಾಲ್ಕುಂ ಬಾಡುವುಮಂ (ಎಕ. IX, ಚಿತ್ರದು. ೬೬-೨೨; 937). [ಹೆದರ್$_0$ + ಗಟ್ಟ$_1$]

**ಹೆದರಿಸು** 'ಹೆದಱಿಸು' ನೋ.

**ಹೆದರು** 'ಹೆದಱು$_1$' ನೋ.

**ಹೆದರುಗಣ್ಣು** (ನಾ). ಭಯಭೀತವಾದ ಕಣ್ಣು: ಕುಳಿತು ಕಣ್ಣುಜ್ಜಿಕೊಂಡು ಸುತ್ತಲೂ ನೋಡಿ ಕಂಡು, ಹೆದರುಗಣ್ಣಾಗಿ (ಚಂದ್ರಸ. ೨೪).
[ಹೆದರು (< ಹೆದಱು$_1$) + ಕಣ್ಣು (< ಕಣ್)]

**ಹೆದರುಗುಳಿ** (ನಾ). ಅಂಜುವುದೇ ಸ್ವಭಾವವಾಗಿರುವ ವ್ಯಕ್ತಿ; ಅಂಜುಕುಳಿ; ಭೀರು: ನಾವು ಹೊರಗೆ ಸ್ವತಂತ್ರವಾಗಿದ್ದಾಗ ಸದಾ ಹೆದರುಗುಳಿಯಾಗಿರುತ್ತೇವೆ (ಪುನರು. ೫೪೬). [ಹೆದರು (< ಹೆದಱು$_1$) + - ಗುಳಿ$_2$ (< - ಕುಳಿ$_3$)]

**ಹೆದರುಪುಕ್ಕ** (ನಾ). = ಹೆದರುಗುಳಿ: ಅವನೊಬ್ಬ ಹೆದರುಪುಕ್ಕ (ರೂಢಿ).
[ಹೆದರು (< ಹೆದಱು$_1$) + ಪುಕ್ಕ$_1$]

**ಹೆದರೆದೆ** 'ಹೆದಱಿದೆ' ನೋ.

**ಹೆದಱಿಸು,** ಹೆದರಿಸು (ಕ್ರಿ). ಭಯಪಡಿಸು; ಅಂಜಿಸು: ನರನ ಕಡುದುಮ್ಮಾನ ನೆಱ ಹೆದಱಿಸಿತು ಮೂಜಗವ (ಕುಮಾರವ್ಯಾದ್ರೋ. ೮-೧೧). **ಹೆದರಿಸು:** ಬಾಯಿ ಬಿಟ್ಟುಕೊಂಡು ಗೊರ್ ಗೊರ್ ಎಂದು ಹೆದರಿಸುತ್ತಲೇ ಇತ್ತು (ಚಂಗಾಳ್ಳ. ೬೧೩); ಅತ್ತು ಹೆದರಿಸ್ತೀಯೇನು! (ಮರಳಿ. ೧೧೧). [ಹೆದಱು$_1$ + - ಇಸು]

**ಹೆದಱು$_1$,** ಪೆದರು, ಹೆದರು (ಕ್ರಿ). ಭಯಪಡು; ಅಂಜು: ಸಿದ್ಧರ ದೇವನೆಱಗಿದಡೆ ಹೆದಱ ಕೇಳ್ದಳು ರಾಣಿ ಹೊಡವಂಟ ಕಾರಣವನು (ಸಿದ್ಧರಾ. ೧-೩೯); ಹೆದಱಿದರು ನಾಯಕರು ಪಾಂಡವರದಟು ಮುಱಿದುದು (ಕುಮಾಭೀ. ೬-೧೭). Δ **ಪೆದರು:** ಹೆಣ್ಣಿನ ಬಣ್ಣ ನೋಡಿ ಕಣ್ಣಾಗೆಡದಿರಿ . . . ಖಿನ್ನವಿಲ್ಲದಂತೆ ವಿಟಪುರುಷನಿಗೆ ಅನುಗುಣ್ಯವಾಗಿ ಇಪ್ಪಳೂ ಪೆದರದಂತೆ (ವಿಸಾಸು. ೫೫-೧); ವುದಿಸಬಾರದು ಕರುಣ ಪೆದರಿಯಪಕ್ಕತಿಯೆಸಗೆ ಮದಕಲಿತನಂದದೆ ಭವತ್ಪಾತ್ರಗತಿಯಿದಿಸುವಂದದೆ (ವಂಕಾರಾ. ೬-೨೬-೧೨). **ಹೆದರು:** ಹೆದರಿತು ಸೇನೆ ಕಂಪಿಸಿತು ಚಂಡಮರೀಚಿ (ಚಂದ್ರಹಾ. ೧೩೯); ಅಷ್ಟು ಹೆದರಿಕೊಳ್ಳುವಂತಹ ಘಟನೆ ಏನು ನಡೆಯಿತು (ದೇವಹಂ. ೧೧೧). 'ಬೆದಱು$_1$' ಪರಾ.

**ಹೆದಱು$_2$** (ನಾ). ಭಯ; ಅಂಜಿಕೆ: ವಿಷಯ ಷಡುವರ್ಗಕ್ಕೆ ಹೆದಱು ದುಷ್ಕರ್ಮಕ್ಕೆ ನಡುಕವಜ್ಞಾನಕ್ಕೆ ತಲ್ಲಣಂ ತಲೆದೋಱಲು (ಸಿದ್ಧರಾ. ೧-೪೬); ಹೆದಱು ಹಿಂಗಿತು (ಕುಮಾಗ. ೭-೧೧). [< ಹೆದಱು$_1$]

**ಹೆದಱೆದೆ ,** ಹೆದರೆದೆ (ನಾ). ಭಯಪಡುವ ಮನಸ್ಸು; ಅಂಜುವ ಹೃದಯ: ಹೆದಱೆದೆಯ ಹೇರಾಳಶೋಕದ . . . ಗರುವಾಯಳಿದ ಭೀಮನ ಕಂಡನಾ ಭೂಪ (ಕುಮಾಶ. ೧೩-೩೮). **ಹೆದರೆದೆ:** ಓದುತಿರ್ದಿನಿಯನಂ ಕರೆದು ತೋರಿದಳು ಹೆದರೆದೆಯ ಹೆಣ್ (ಶ್ರೀರಾಮಾ. ೧೧೬-೧೧೬). [ಹೆದಱು$_1$ + ಎದೆ (< ಎರ್ದೆ)]

**ಹೆದಾರಿ** 'ಪೆರ್ದಾರಿ' ನೋ.

**ಹೆದೆ** 'ಪೆದೆ' ನೋ.

**ಹೆದೆಕಟ್ಟು** 'ಹೆದೆಗಟ್ಟು' ನೋ.

**ಹೆದೆಗಟ್ಟು,** ಹೆದೆಕಟ್ಟು (ಕ್ರಿ). ಬಿಲ್ಲಿನ ಹಗ್ಗವನ್ನು ಇನ್ನೊಂದು ಕೊಪ್ಪಿಗೆ ಕಟ್ಟು; ಹೆದೆಯನ್ನು ಬಿಗಿ; ಹೆದೆಯೇರಿಸು: ನಾರಿಯಂ ಕೀಸಿ ನರಮಂ ಸೀಳಿ ಹೆದೆಗಟ್ಟು . . . ಗಣೆಗೆ ಗಱಿಗಳನು ಹಸನಾಗಿ ಕಟ್ಟು (ಸಮ್ಯಕಾ. ೧೦-೩೨). **ಹೆದೆಕಟ್ಟು:** ಯಾರು ಈ ಬಿಲ್ಲನ್ನು ಬಗ್ಗಿಸಿ ಅದಕ್ಕೆ ಹೆದೆಕಟ್ಟಿ . . . ಲಕ್ಷ್ಯವನ್ನು ಭೇದಿಸುತ್ತಾನೋ ಅವನು ನನ್ನ ಮಗಳನ್ನು ಪಡೆಯುತ್ತಾನೆ (ವಚಭಾ. ೫೦). [ಹೆದೆ (< ಪೆದೆ) + ಕಟ್ಟು$_1$]

**ಹೆದೆಗೊಳಿಸು** (ಕ್ರಿ). = ಹೆದೆಗಟ್ಟು: ಬಾಣವ ಹೆದೆಗೊಳಿಸು ರಕ್ಕಸಿಯ ಜೀವವ ನೊದೆದು ಹಾಯ್ಕು (ತೊರರಾ. ೧-೧೧-೮). [ಹೆದ (< ಪೆದ) + ಕೊಳ್$_1$ + - ಇಸು$_1$]

**ಹೆದೆಯ, ಹಿದಯ** (ನಾ). ಹೃದಯ; ಮನಸ್ಸು: ಹೃದಯ - ಹೆದೆಯ (ಶಮದ. ೨೬೮ ಪ್ರಯೋ); ಹೆದೆಯದೊಳೆಯ್ದೆ ಮಿಳಿರುತಿರೆ ಭೀತಿ . . . ಪೋಗುತಿರ್ದರ್ (ಆರಾಚ. ೫-೬-೨೯). **ಹಿದಯ:** ಹೃದಯ, ಹಿದಯ-ಎರ್ದೆ (ಶಬ್ದಾನು. ೧೬೦ ಪ್ರಯೋ). [< ಸಂ. ಹೃದಯ]

**ಹೆದೆಯೇರಿಸು** 'ಹೆದೆಯೇಱಿಸು' ನೋ.

**ಹೆದೆಯೇಱಿಸು, ಹೆದೆಯೇರಿಸು** (ಕ್ರಿ). = ಹೆದೆಗಟ್ಟು: ಎಡಗೈಯೊಳೆತ್ತಿ ಧನುವಂ ಹೆದೆಯೇಱಿಸಿ [ಪಾಠಾಂ. ನಿಮಿರ್ದೇಱಿಸಿ] ನೀಳ್ದ ಬಾಹುಯುಗ್ಮದೆ ತೆಗೆಯಲ್ಕೆ (ಜಗವಿ. ೬-೩೧). **ಹೆದೆಯೇರಿಸು:** ನನ್ನ ಸಾರಂಗಧನುಸ್ಸು ಹೆದೆಯೇರಿಸು ಪಿನಾಕಿಧನುಸ್ಸು ಮುರಿದ ಹಾಗಲ್ಲ (ತಾತ್ಸನಿ.೩-೨೩). [ಹೆದೆ (< ಪೆದೆ)+ ಏಱಿಸು]

**ಹೆದ್ದ, ಹೆದ್ನ** (ನಾ). ೧. ರಥವು ಮುಂದಕ್ಕೆ ಸರಾಗವಾಗಿ ಚಲಿಸುವಂತೆ ಮತ್ತು ಆಗಾಗ ವೇಗವನ್ನು ತಡೆಯುವಂತೆ ಮಾಡಲು, ರಥದ ಹಿಂಭಾಗದ ಚಕ್ರಗಳಿಗೆ ಪ್ರಯೋಗಿಸುವ (ಉದ್ದವಾದ ಮತ್ತು ದಪ್ಪವಾದ) ಮಿಾಟುಗೋಲು,— ಸನ್ನೆಕೋಲು: ಮದ್ದಾನೆಗಳಿಂದ ಹಿಂದೆ ನೂಕಿಸುವನು ಹೆದ್ದಗಳಿಂದಲೊತ್ತಿಸುವ (ಗೋಮಟೇ.೩-೫೪). ೨. ರಥದ ಅಚ್ಚುಮರ: "ಹೆದಮದ-ಇರಸು" (ಜಾನಕೋ. ೫೯). **ಹೆದ್ನ:** ೧. ಹಿಂದೆ ತ್ರಾಣವುಳ್ಳ ಇಪ್ಪತ್ತುನಾಲ್ಕು ಜನರು ಒಂದೊಂದು ಕಡೆಗೂ ಹೆದ್ನ ಕೊಡದೆ ಹೋದರೆ ಈ ತೇರು ಮುಲುಕುವುದಿಲ್ಲ (ಗರುಡಾ. ೬೧); ಅವರು ಹಿಂದುಗಡೆ ದೊಡ್ಡ ದೊಡ್ಡ ತೊಲೆಗಳ ಸಹಾಯದಿಂದ ಹೆದ್ನ ಹಾಕಿದರೆ ತೇರು ಮುಂದಕ್ಕೆ ಸರಿಯುತ್ತೆ (ಬೈಸರ್ವ. ೬೩). ೩. (ಆಲಂ) ಅಡಚಣೆ; ಅಡ್ಡಿ; ವಿಘ್ನ: ಅವರು . . . ನಮ್ಮ ವ್ಯಾಪಾರದ ಪ್ರಮಾಣಕ್ಕೂ ವೇಗಕ್ಕೂ ಹೆದ್ನ ಹಾಕಿ ತಡೆಕಟ್ಟುವುದು ಸ್ವಾಭಾವಿಕವೇ ಆಗಿತ್ತು (ರಾಜ್ಯಶಾ. ೧೭೨). [?]

**ಹೆದ್ದಂಗಡಿ** (ನಾ). ಒಂದು ಬಗೆಯ ತಂಗಡಿಗಿಡ; ದೊಡ್ಡ ಆವರಿಕೆ: ಹೆದ್ದಂಗಡಿ ಬೀಜ . . . ಗಾಳಿಗೆಡ್ಡೆ ಸ್ವರಸದಲ್ಲಿ ಮರ್ದಿಸಿ ಅಡಿಕೆಗಾತ್ರ ಗುಳಿಗೆ ಮಾಡಿ ಒಂದನ್ನು ಕೊಟ್ಟರೆ ದಾಹ ಪರಿಹಾರವಾಗುವುದು (ಸಕವ್ಯ. ೪೬೫ ಪ). [< ಪಿರಿದು$_1$ + ತಂಗಡಿ]

**ಹೆದ್ದಂಷ್ಟ್ರ** (ನಾ). ನಿಡಿದಾದ ಕೋರೆಹಲ್ಲು,— ದಾಡೆ: ತುಂಗತರನಾಸಿಕಂ ಹೆದ್ದಂಷ್ಟ್ರ ಭೀಕರಬೆಡಂಗಿನ . . . ಯಮನಾಳ್ಗಳಂತಮಮ ಮೈದೋರಿತು (ವಂಕಾರಾ. ೧-೧೭-೪೬). [< ಪಿರಿದು$_1$ + ದಂಷ್ಟ್ರ]

**ಹೆದ್ದಟ್ಟು$_1$** (ನಾ). ೧. ಸಮತಟ್ಟು; ಸಮತಲ: (೩). ೨. ತೋರಿಕೆ; ಥಳುಕು: (೩).
[< ಪಿರಿದು$_1$ + ತಟ್ಟು$_3$ (< ತಟ್ಟೆ)]

**ಹೆದ್ದಟ್ಟು$_2$** (ನಾ). ಪ್ರಮುಖವಾದುದು; ಪ್ರಧಾನವಾದುದು: ಅವರ ವಾಕ್ಯಗಳಲ್ಲಿ ವಿಪುಲಾರ್ಥವು ಹೆದ್ದಟ್ಟಾಗಿ ಹೆಣೆದುಕೊಂಡು ಬರುತ್ತದೆ (ಸಾಹಿಸಂ.೯ ಮುನ್ನುಡಿ); ಉಪಮಾನವಾಗಬಹುದಾದ ವಿಷಯವು ಕವಿಕಲ್ಪಿತವಾಗಿದ್ದಲ್ಲಿ ಉತ್ಪ್ರೇಕ್ಷಾಲಂಕಾರ ವಾಗುವುದೆಂಬದಾಗಿಯೂ ಹೆದ್ದಟ್ಟಾಗಿ ಗ್ರಹಿಸಬಹುದು -(ಕೈಪಿಡಿ.೨೬೮).
[< ಪಿರಿದು$_1$ + ತಟ್ಟು?]

**ಹೆದ್ದರಣ, ಹೆದ್ದರಣೆ** (ನಾ). ಒಂದು ಬಗೆಯ ಮರ: ವಾಲೆ ಹೆದ್ದರಣ ತ್ಕಾರಣ . . . ಮೊದಲಾದ ಗಗನಮಂ ತುಡುಕುವ ವೃಕ್ಷಂಗಳೊಳ್ (ಸೌಗಂಧಿ.೫೪-೫). **ಹೆದ್ದರಣೆ:** ಗೊರವಿ, ಕಿಸ್ಸರ, ಹೆದ್ದರಣೆ . . . ಹೆಣ್ಣುಗೊರವಿ (ಮೈಔಗಿ. ೪೬-೯೨೫). [?]

**ಹೆದ್ದರಣೆ** 'ಹೆದ್ದರಣ' ನೋ.

**ಹೆದ್ದಲೆ** 'ಪೆರ್ದಲೆ' ನೋ.

**ಹೆದ್ದಳಕಲು** (ನಾ). ಬಹಳ ತೆಳುವಾದುದು; ಸಾಂದ್ರವಾಗಿಲ್ಲದುದು: ಅವನು

ನಡೆಯುತ್ತಿದ್ದ ದಾರಿಯ ಕಾಡು ಮೊದಮೊದಲು ತುಸು ಹೆದ್ದಳಕಲಾಗಿ ಅಷ್ಟೇನೂ ನಿಬಿಡವಾಗಿರಲಿಲ್ಲ (ಮಲೆಮ.೬೪). [< ಪಿರಿದು$_1$+ ಅಳಕಲು]

**ಹೆದ್ದಾರಿ** 'ಪೆರ್ದಾರಿ' ನೋ.

**ಹೆದ್ದೀನಿ** 'ಪೆರ್ದಿನಿ' ನೋ.

**ಹೆದ್ದುಂಡಿ** (ನಾ).ದಪ್ಪವಾದ ಕಲ್ಲುಗುಂಡು: ತಣ್ಣೀರಿನ ಮಣ್ಣುಹರವಿಯಲ್ಲ ಕಾದ ಕಬ್ಬಿನದ ಕೆಂಡದ ದುಂಡಿ ! ಕೆಂಗೆಂಡದ ಹೆದ್ದುಂಡಿ!! (ತುಂಗಭ. ೧೦೯). [< ಪಿರಿದು$_1$ + ದುಂಡಿ$_2$]

**ಹೆದ್ದುಂಬೆ** (ನಾ). ೧. ದೊಡ್ಡಜಾತಿಯ ತುಂಬೆಗಿಡ ಮತ್ತು ಅದರ ಹೂವು: ಪ್ರಸಾದಮಂತ್ರವ ಭೋಗಿಸಿ ಹೆದ್ದುಂಬೆಪುಷ್ಪದ ಹಾಗೆ . . . ಇರ್ಪವು (ವಚಶಾ. II, ೧೯೧); ಅಂಬಟೆತೊಕ್ಕು ಕಾಡುಬಾಳೆಯ ಮೋತೆ, ಹೆದ್ದುಂಬೆಸೊಪ್ಪು . . . ಕಷಾಯವಿಕ್ಕಿ ಸೇವಿಸೆ ಶ್ಲೇಷ್ಮಾತಿಸಾರ ಪರಿಹರ (ಸಕವ್ಯ. ೩೨೧). ೨. ಒಂದು ಬಗೆಯ ಮರ: ಹಜ್ಜಾಲ ಹೆದ್ದುಂಬೆ ಟಿ[ಪಾಠಾಂ. ಹೆದ್ದುಂಬರೌ]ದುಂಬುರಂಗಾಲಯವದೆನಿಸಿ ನಾನಾಭೂಜ ದೂಗ್ಗಿನಿಂ ಕಾನನಂ ಕಣ್ಸೆಸೆದುದು (ಸೋಮಚ. ೩-೨). 'ಹೆಂದುಂಬೆ' ಪರಾ [< ಪಿರಿದು$_1$ + ತುಂಬೆ$_2$]

**ಹೆದ್ದುರಚೆ** 'ಹೆದ್ದುಜುಚೆ' ನೋ.

**ಹೆದ್ದುರುಹೆ** (ನಾ). ಒಂದು ಬಗೆಯ ಸಸ್ಯ: "ಜಾಂಗಲೀ-ಹೆದ್ದುರುಹ" (ಓಷಧಿ. ೬೨). [?]

**ಹೆದ್ದುಱಿ** (ನಾ).ಅಧಿಕವಾದ ತುರಿಕೆ,– ನವೆ: ಎಕ್ಕದ ಹಾಲು, ಎಲೆಕಳ್ಳಿಯ ಹಾಲು, ಶುಂಠಿ,ಮಣಿಶಿಲೆ ಎಂಬಿವನ್ನು ಅಂಬಿಲದಲ್ಲಿ ಅರೆದು ಪೂಸೆ ದದ್ರುಗಳನ್ನೂ ತೊನ್ನನ್ನೂ ಕೆಡಿಸುವುದು ಹೆದ್ದುಱಿಯನ್ನು ಪೊಸಲಾಕ್ಷಣವೇ ಕೆಡಿಸುವುದು (ವಿಷ್ಣವಿ. ೧೫೯). [< ಪಿರಿದು$_1$ + ತುಱಿ]

**ಹೆದ್ದುಱುಚೆ**, ಹೆದ್ದುರಚೆ (ನಾ).ತುರುಚೆಗಿಡದಲ್ಲಿ ಒಂದು ಬಗೆ; ದೊಡ್ಡ ಜಾತಿಯ ನಸುಗುನ್ನಿ : "ವಿಷಪತ್ರಿಕಾ - ಹೆದ್ದುಱುಚೆ" (ಓಷಧಿ.೧೫೪). **ಹೆದ್ದುರಚೆ** : ಹೆದ್ದುರಚೆ, ಕಟುಕರೋಹಿಣಿ . . . ನೆಲಬೇವು ಇವುಗಳನ್ನು ಕಷಾಯವಿಕ್ಕಿ ಸೇವಿಸೆ ಶೇಷ್ಮಜ್ವರ ನಾಶವಾಗುವುದು (ಸಕವ್ಯ. ೯೦). [< ಪಿರಿದು$_1$ + ತುಱುಚೆ]

**ಹೆದ್ದೆರೆ** 'ಪೆರ್ದೆರೆ' ನೋ.

**ಹೆದ್ದೆವರು** 'ಪೆರ್ದೆವರ್' ನೋ.

**ಹೆದ್ದೇಗು**, ಹೆತ್ತೇಗ (ನಾ). ದೊಡ್ಡ ಜಾತಿಯ ಒಂದು ಬಗೆಯ ತೇಗದ ಮರ: ಇಲ್ಲಿ ಹುಟ್ಟುವ ತೊಲೆಗಳಲ್ಲಿ ತೇಗು, ಹೆದ್ದೇಗು, ಮತ್ತಿ . . . ಮೊದಲಾದವುಗಳೇ ಮುಖ್ಯ (ಮುಂಬಯಿ.೫-೨೧೦). **ಹೆತ್ತೇಗ** : ಹೆತ್ತೇಗ, ಎಟ್ಟೆಗ . . . ಹೆದ್ದ (ಮೃಚಿಗಿ. ೩-೪೦). [< ಪಿರಿದು$_1$+ ತೇಗು$_4$]

**ಹೆದ್ದೈವ** (ನಾ). ಸರ್ವೋತ್ತಮನಾದ ದೇವರು; ಹಿರಿಯ ದೇವರು: ಪರಮ ಶಾಂತಿಯ ತೋಱಿ ಲೋಕಕ್ಕೆ ಹೆದ್ದೈವವಾದೆಯೆನ್ನೊಡೆಯ (ಮೋಹತ. ೩೬-೧೩); ಅಬ್ಧಿಶಯನ ಕರುಣಾಬ್ಧಿಯೆ ಹೆದ್ದೈವ ಇದ್ದರಿಯೊಳಗೆ ನೀನಲ್ಲದೋರ್ವ ಉದ್ಧರಿಸುವನೇನೋ (ಮೋಕ್ಷದೀ. ೨೮-೨). [< ಪಿರಿದು$_1$+ ದೈವ]

**ಹೆದ್ದೊಡೆ** 'ಪೆರ್ದೊಡೆ' ನೋ.

**ಹೆದ್ದೊರೆ$_1$** 'ಪೆರ್ದೊಱೆ' ನೋ.

**ಹೆದ್ದೊರೆ$_2$** (ನಾ). ೧. ರಾಜಾಧಿರಾಜ; ಶ್ರೇಷ್ಠನಾದ ಅರಸು: ಹೆದ್ದೊರೆಗಳ ಕೈಗಾಣಿಕೆಯಿತ್ತಡ್ಡಬಿದ್ದರು ಬಿಂಕವ ಬಿಸುಟು (ಮೋಹತ. ೨೨-೫೪). ೨. ಅತ್ಯಂತ ಪರಾಕ್ರಮಶಾಲಿ : ದೊಡ್ಡೆಗರೇಕೆ ಹೊಕ್ಕರು ಕೊಲ್ಲು ಕೊಲ್ಲೆಂದು ಹೆದ್ದೊರೆದ್ವೈತ್ಯರೆಯ್ದಿದರು (ಮೋಹತ. ೩೫-೧೮). [< ಪಿರಿದು$_1$ + ದೊರೆ$_2$]

**ಹೆದ್ದೊಱೆ** 'ಪೆರ್ದೊಱೆ' ನೋ.

**ಹೆದ್ದ** 'ಹೆದ್ದ' ನೋ.

**ಹೆದ್ದಾರ** (ನಾ). ಹೆಬ್ಬಾಗಿಲು; ಮಹಾದ್ವಾರ: ರಮ್ಯತರವೆತ್ತುದಾ ಪುರದ ಹೆದ್ದಾರವು (ನವಮೋ. ೨-೨೯). [< ಪಿರಿದು$_1$ + ದ್ವಾರ]

**ಹೆನೆಯಕುಳ** (ನಾ). ಒಂದು ಬಗೆಯ ಆದಾಯ,– ತೆರಿಗೆ: ಲವಣ ಪಣ್ಣಕಾರುಕಕಳು ಕೈ ಬಣ್ಣ ನೂಲು ಕರ್ಬ್ಬುನ ದಳಮಿಡಿ ಹೆನೆಯ ಕುಳ ಮುಖ್ಯವಾದ ಸರ್ವ್ವಾಯವನು ಆ ಚೂಡಾನಾಥದೇವರಿಗೆ ಸರ್ಬ್ಬಮಾನ್ಯಂ ಮಾಡಿ (ಎಕ. IX, ಚನ್ನಪ. ೬೬-೧೫; 1288). [? + ಕುಳ$_2$]

**ಹೆನ್ನರ** 'ಪೆರ್ನರ' ನೋ.

**ಹೆನ್ನೆ$_1$** 'ಪೆಣ್ಣೆ' ನೋ.

**ಹೆನ್ನೆ$_2$** (ನಾ). ಮುಟ್ಟಿಗೆ ಸಂಬಂಧಿಸಿದ ಒಂದು ಬಗೆಯ ರೋಗ; ಅಧಿಕವಾಗಿ ರಕ್ತಸ್ರಾವವಾಗುವುದು: ಅಳಲೇಕಾಯಿ, ನೆಲ್ಲಿಚಟ್ಟು ಇವಂ ಸಮಾನಂಗೊಂಡು ಸಕ್ಕರೆ ಬೆರಸಿ ಕೊಳ್ಳೆ ಹೆನ್ನೆ ಗುಣ (ವಿಷ್ಣವಿ.೧೧೪). [?]

**ಹೆನ್ನೆತ್ತರು** (ನಾ). = ಹೆನ್ನೆ$_2$: ಹಲಸಿನ ಗೊಟ್ಟೆಯ ಗ ಜೇನ ಕೊಳ್ಳಲು ಹೆನ್ನೆತ್ತರು ಮಾಣ್ಬುಂ (ವಿಷ್ಣವಿ.೮೦); ಎಮ್ಮೆಮಜ್ಜಿಗೆಯಲ್ಲಿ ರಾಜಾನ್ನದಕಿ ಅಂಬಲಿಯನಟ್ಟು ಎಣ್ಣೆಯ ಬಿಟ್ಟು ಉಣ್ಣಲು ಹೆನ್ನೆತ್ತರು ಪರಿಹರ (ಸಕವ್ಯ. ೧೯೬). [< ಪಿರಿದು$_1$ + ನೆತ್ತರು (< ನೆತ್ತರ್)]

**ಹೆನ್ನೆರೋಗ** (ನಾ). = ಹೆನ್ನೆ$_2$: ಬಿಳಿದಾಸವಾಳದ ಹೂವು, ಕೆಂಪುದಾಸವಾಳದ ಹೂವು, ಕರಿಹತ್ತಿಯ ಹೀಚು ಈ ಇನ್ನೂ ನೀರಲ್ಲಿ ಕುದಿಸಿ . . . ಕೊಡೆ ಎಲ್ಲಾ ತೆಱದ ಹೆನ್ನೆರೋಗಗಳು ಗುಣ (ವಿಷ್ಣವಿ. ೧೧೪). [ಹೆನ್ನೆ$_2$ + ರೋಗ]

**ಹೆಪ್ಪರಿಗೆ** (ನಾ). ಒಂದು ಬಗೆಯ ಸಸ್ಯ: ಹೆಪ್ಪರಿಗೆ, ಕಂಬಿನೂ, ಬಿಳೀಕಂಬುವಾಳ (ಮೃಚಿಗಿ. ೧೨-೨೧೪). [?]

**ಹೆಪ್ಪಳಿ$_1$** (ಕ್ರಿ). ೧. ಹೆಪ್ಪು ಕಟ್ಟದಿರು; ಘನೀಭೂತವಾಗದಿರು: ಚಿಪ್ಪಿನಲ್ಲಿ ಅಪ್ಪು ನಿಂದು ಹೆಪ್ಪಳಿಯದೆ ದೃಷ್ಟವ ಕಂಡೆ (ಪ್ರಭೋಗ. ೨೨); ಬಿಂಬಿಸುವುದಕ್ಕೆ ಪ್ರತಿರೂಪಿಲ್ಲದೆ ಆನಂದಾಶ್ರುಗಳು ನಿಂದು ಮುತ್ತಿನೊಳಗಣ ಅಪ್ಪುವಿನಂತೆ ಹೆಪ್ಪಳಿಯದೆ ನಿಂದುದು ಜ್ಞಾನಭಕ್ತಿ (ಮೋಳಮಾ. ೧೬-೬೩). [ಹೆಪ್ಪು$_2$ (< ಪೆಪ್ಪು) + ಅಳಿ$_1$(< ಅೞಿ$_1$)]

**ಹೆಪ್ಪಳಿ$_2$** (ಕ್ರಿ). ಗಾಬರಿಗೊಳ್ಳು; ಬೆದರು; ಭಯಪಡು . . . ಉಱೆ ಬಿಗಿಯಪ್ಪೆ ಕೆಲರ ಕಾಲ್ವಿಡಿದು ಅಪ್ಪಳಿಸುತ ಕೆಲಬರ ಕಂಸನೃಪನೆದೆ ಹೆಪ್ಪಳಿವಂತೆ ಮರ್ದಿಸಿದ (ನೇಮಿಸಂ. ೧೬-೧೩೬). [< ಪೆಳ್ಪಳ]

**ಹೆಪ್ಪಳಿಸು** 'ಪೆಳ್ಪಳಿಸು' ನೋ.

**ಹೆಪ್ಪಿಕ್ಕು** (ಕ್ರಿ). ಹೆಪ್ಪಾಗಲು ಹಾಲಿಗೆ ಮೊಸರನ್ನು ಬೆರಸು; ಹೆಪ್ಪುಹಾಕು: ಕಾಡೆಮ್ಮೆಯ ಧುಡುಮಿಸಿ ಕರದೆ ಹೆಪ್ಪಿಕ್ಕಿ ದಧಿಯಂ ಕಡವುತ (ತ್ರಿಭುಮೋ. ೩-೩೨). [ಹೆಪ್ಪು$_2$ (< ಪೆಪ್ಪು) + ಇಕ್ಕು]

**ಹೆಪ್ಪಿಡಿಸು** (ಕ್ರಿ). ಹೆಪ್ಪು ಹಾಕುವಂತೆ ಮಾಡು; ಹೆಪ್ಪು ಹಾಕಿಸು: ಗಂಡುಮಱಿ ಸಹಿತ ಪೆಣ್ಬುಲಿಯ ತರೆ ನೃಪವನವಂ ಕಂಡಿವಂ ಕಪಿಲೆ ಬಸವಂಗಳಂ ಮಾಡೆನಲು ದಂಡನಾಯಕನವಂ ಪಾಲ್ಗಡಿಸಿ ಹೆಪ್ಪಿಡಿಸಿ ಕರಸಿ ಬೆಣ್ಣೆಯ ತೋಱಿದಂ (ವೀಶೈಪು. ೮-೪-೧೭). [ಹೆಪ್ಪು$_2$ (< ಪೆಪ್ಪು) + ಇಡಿಸು$_1$]

**ಹೆಪ್ಪಿಡು** 'ಪೆಪ್ಪಿಡು' ನೋ.

**ಹೆಪ್ಪು$_1$** (ಕ್ರಿ). ಹಾಲು ಮೊಸರಾಗಿ ಪರಿವರ್ತನೆ ಹೊಂದು; ಹೆಪ್ಪಾಗು: ಕಾಸಿಟ್ಟ ಹಾಲ ಬಟ್ಟಲಲಿ ಹುಳಿಯ ಹನಿ ಸಿಡಿದು ಹಾಲು ಒಡೆದಿದೆ, ಈಗ ಹೆಪ್ಪುವನಕವೂ ಕಾಯಬೇಕು (ಮೂರುದಾ. ೧೯೭). 'ಪೆಪ್ಪು' ಪರಾ. [ದೇ. II ತುಳು. ಪೆರ್ಪುನಿ]

**ಹೆಪ್ಪು$_2$** 'ಪೆಪ್ಪು' ನೋ.

**ಹೆಪ್ಪುಕೊಡು** 'ಹೆಪ್ಪುಗೊಡು' ನೋ.

**ಹೆಪ್ಪುಗಟ್ಟು** (ಕ್ರಿ). ೧. ಹೆಪ್ಪಾಗು; ಗಡ್ಡೆಕಟ್ಟು; ಗರಣೆಯಾಗು: ದಟ್ಟ ಮಂಜಿನ ಗಡ್ಡೆ ಹೆಪ್ಪುಗಟ್ಟಿದೆ (ಅನಿಕೇ. ೨-೫); ರೂಪಾನ ಹೃದಯದ ರಕ್ತವೆಲ್ಲ ಹೆಪ್ಪುಗಟ್ಟಿ ಹೋದಂತೆನಿಸಿತು (ಜಯಂತ. ೪೬೬). ೨. ದಟ್ಟವಾಗು; ಸಾಂದ್ರವಾಗು: ಎಲ್ಲೆಲ್ಲಿ ಆನಂದ ಹೆಪ್ಪುಗಟ್ಟುತ್ತದೆಯೋ ಅದೇ ಸೌಂದರ್ಯ (ಸೌಂದಸ. ೧೭); ಹೆಪ್ಪುಗಟ್ಟಿದ್ದ ಕತ್ತಲು . . . ಲೋಕವನ್ನೇ ಅಣಕಿಸುವಂತಿದೆ (ಚಿತೆಸ. ೩೪). [ಹೆಪ್ಪು$_2$ (< ಪೆಪ್ಪು )+ ಕಟ್ಟು$_1$]

**ಹೆಪ್ಪುಗೊಡು**, ಹೆಪ್ಪುಕೊಡು (ಕ್ರಿ). ಹೆಪ್ಪುಹಾಕು; ಹೆಪ್ಪಿಡು: ಭಕ್ತಿಯೆಂಬ ಪಾಲನ್ನು ಮನದಲ್ಲಿ ಹೆಪ್ಪುಗೊಟ್ಟು . . . ತತ್ವವೆಂಬ ಮಂತುಗೋಲಿನಿಂ ಮಥಿಸಲು

(ವಚಶಾ. II, ೧೫೪). **ಹೆಪ್ಪುಕೊಡು:** ಅಂಗನೆ . . . ಮೊಸರು ಕಾಸಿ ಹೆಪ್ಪು ಕೊಡುತ್ತಿದ್ದಳು (ಪುರಂದ. ೧-೧೧೧-೬). [ಹೆಪ್ಪು$_2$ (< ಪೆಪ್ಪು) + ಕೊಡು$_1$]

**ಹೆಪ್ಪುಗೊಳ್, ಹೆಪ್ಪುಗೊಳ್ಳು** (ಕ್ರಿ). ಹೆಪ್ಪಾಗು; ಹೆಪ್ಪುಗಟ್ಟು: ಚಿಪ್ಪಿನೊಳುದಕ ಬಿದ್ದು ಬಲಿದು ಮುತ್ತಾದಂತೆ ಹೆಪ್ಪುಗೊಂಡವು ಬಿಂದುಗಳು (ದೀಕ್ಷಾಬೋ. ೩೮-೭೬೨). **ಹೆಪ್ಪುಗೊಳ್ಳು:** ಮನವು ಮೌನದಲಿ ಹೆಪ್ಪುಗೊಂಡಿರಲು ಮಂಜುದಿಣ್ಣೆಯಂತೆ (ಅರಳು. ೪೦೪-೧೧). [ಹೆಪ್ಪು$_2$ (< ಪೆಪ್ಪು) + ಕೊಳ್$_1$]

**ಹೆಪ್ಪುಗೊಳಿಸು** ( ). (ಆಲಂ) ಭಯಗೊಳಿಸು; ಬೆಪ್ಪುಗೊಳಿಸು: ಸುಭಟರಂ ಹೆಪ್ಪುಗೊಳಿಸು . . ಮ ಕಣೆಗಳಿಂ (ಪರಶು. ೨೮-೧೦). [ಹೆಪ್ಪುಗೊಳ್$_7$ + - ಇಸು$_3$]

**ಹೆಪ್ಪುಗೊಳ್ಳು** 'ಹೆಪ್ಪುಗೊಳ್' ನೋ.

**ಹೆಪ್ಪುಣ್ಣು** (ಕ್ರಿ). ಹೆಪ್ಪನ್ನು ಒಳಗೊಳ್ಳು; ಹೆಪ್ಪಾಗು: ಹೆಪ್ಪುಂಡ ಹಾಲು ತುಪ್ಪವಾಗುವದೊಂದು ಕ್ರಮ. ತಪ್ಪಲಿ, ಒಡೆದ ಹಾಲನು ಕಡೆದು ನೋಡುವ ಶ್ರಮ (ನಲಮು. ೬೭-೧೩). [ಹೆಪ್ಪು$_2$ (< ಪೆಪ್ಪು) + ಉಣ್ಣು (< ಉಣ್)]

**ಹೆಬಗ** (ನಾ). ದಡ್ಡ; ತಿಳಿಗೇಡಿ: ಹೆಬಗನೆನಿಸಿ ಜಾಣನೆನಿಸಿ ವಿಬುಧ ನಾರಕ ನರ ತಿರಿಯಂಚನೆನಿಸುತ ಪ್ರಬಲಹಂಸನ ಕಾಡುತಿಹುವು (ಭರಚ. ೬೮-೧೦೯); ಮಗ ವೃದ್ಧ ಪಾರ್ಥಿವಂ ಹೆಬಗನಾಗೇರೊಡದು ಚೆಂಗಿದಂ ತಲೆಗೆದರಿ ಶಾಕಿನಿಯ ಕೈ ಸಿಲ್ಕದೆ (ಪರಶು. ೩೧-೪೨). [?]

**ಹೆಬಾರು** 'ಪೆರ್ವಾರ್ವ' ನೋ.

**ಹೆಬಾರುವ** 'ಪೆರ್ವಾರ್ವ' ನೋ.

**ಹೆಬ್ಬಂಡೆ** (ನಾ). ದೊಡ್ಡ ಗಾತ್ರದ ಬಂಡೆ,– ಶಿಲೆ: ಈ ಮೂವರೂ . . . ಕಡಿದಾಗಿರುವ ಹೆಬ್ಬಂಡೆಗಳಿಂದ ದುರ್ಗಮವಾಗಿರುವ ಕಮರಿಯೊಂದರ ಬಳಿಗೆ ಬಂದು ಸೇರಿದರು (ಬದ್ಧಪ್ರ. XIII. ಪೀಠಿಕೆ); ಹೆಬ್ಬಂಡೆಯ ಸೆರಗು ಬೆಟ್ಟದ ಗೋಡೆಯಿಂದ ಮುಂದಕ್ಕೆ ಚಾಚಿದ್ದು ಕಾಣಿಸಿತು (ಮೂಕಜ್ಜಿ. ೫೭). [< ಪಿರಿದು$_1$ + ಬಂಡೆ$_1$]

**ಹೆಬ್ಬಂದಿ** 'ಪೆರ್ವಂದಿ' ನೋ.

**ಹೆಬ್ಬಕ್ಕಿ** 'ಪೆರ್ವಕ್ಕಿ' ನೋ.

**ಹೆಬ್ಬಗೆತನ** (ನಾ). ಉತ್ತಮವಾದ ರೀತಿ,– ನಡವಳಿಕೆ; ದೊಡ್ಡತನ; ಹಿರಿಮೆ: ನಿಬ್ಬರಕರ್ಮದಲಿ ತಬ್ಬಿಬುಗೊಳಿಸುತ ಉರ್ಬಿಯೊಳಗೆ ಎನ್ನ ಇಬ್ಬಗೆ ಮಾಡುವದು ಹೆಬ್ಬಗೆತನವೇನೋ ಅಬ್ಜನಾಭ (ಮೋಕ್ಷದೀ. ೫೭-೧೪). [< ಪಿರಿದು$_1$ + ಬಗೆ$_2$ + - ತನ]

**ಹೆಬ್ಬಚ್ಚು** (ನಾ). ಅಧಿಕವಾದ ಪ್ರೀತಿ; ಅತಿಶಯವಾದ ಒಲವು: ಕಳ್ಳಚ್ಚುಗಳು ಹೆಬ್ಬಚ್ಚುಗಳು . . . ಒಚ್ಚೆಯಂಗಳು ಮಚ್ಚುಗಳ ಜನರಚ್ಚರಿಗಳೆದೆಗಿಚ್ಚುಗಳು ವಿಟರ (ಬಸಪು. ೪೦-೬೧). [< ಪಿರಿದು$_1$ + ಅಚ್ಚು$_4$]

**ಹೆಬ್ಬಟೆ** 'ಪೆರ್ವಟ್ಟೆ' ನೋ.

**ಹೆಬ್ಬಟ್ಟೆ** 'ಪೆರ್ವಟ್ಟೆ' ನೋ.

**ಹೆಬ್ಬಡಿಕೆ** 'ಪೆರ್ವಡುಕೆ' ನೋ.

**ಹೆಬ್ಬಣಬೆ** (ನಾ). ದೊಡ್ಡ ಬಣವೆ: ನೆಲ್ಲ ರಾಶಿಗಳಷ್ಟು ಹೊನ್ನ ರಾಶಿಗಳುಂಟು ಹುಲ್ಲ ಹೆಬ್ಬಣಬೆಗಳಷ್ಟು ಜಲ್ಲಿಪಟ್ಟೆಗಳ ಬಲ್ಮೆದೆಯಿದ್ದುವು (ಭರಚ. ೮೦-೧೨). [< ಪಿರಿದು$_1$ + ಬಣಬೆ (< ಬಣಂಬೆ)]

**ಹೆಬ್ಬದಣೆ** 'ಹೆಬ್ಬದನೆ' ನೋ.

**ಹೆಬ್ಬದನೆ, ಹೆಬ್ಬದಣೆ** (ನಾ). ದಪ್ಪ ಜಾತಿಯ ಬದನೆಕಾಯಿಗಳನ್ನು ಬಿಡುವ ಗಿಡ ಮತ್ತು ಅದರ ಕಾಯಿ: "ಬೃಹತೀ-ಹೆಬ್ಬದನೆ, ಗುಳ್ಳ, ನೆಲಗುಳ್ಳ" (ಓಷಧಿ. ೧೦೯). **ಹೆಬ್ಬದಣೆ :** "ಗೋಧೀ-ಹೆಬ್ಬದಣೆ" (ಓಷಧಿ. ೫೦). [< ಪಿರಿದು$_1$ + ಬದನೆ]

**ಹೆಬ್ಬದು** (ನಾ). ಎತ್ತರವಾದ ಮಣ್ಣಿನ ಒಡ್ಡು,– ಕಟ್ಟೆ: ಹಳ್ಳಿಯ ಬಚ್ಚಲಿಂದಂ ಪಡುವಲು ಹೆಬ್ಬದುವಿಂದಂ ಬಡಗಲು[ಸಂ]ದ ಕೊಳನ ಕೆಳಗೆ (ಕಇ. V. ೪೨-೮೬; 1239). [< ಪಿರಿದು$_1$ + ಬದು (< ಬದುವು)]

**ಹೆಬ್ಬದ್ದು** 'ಪೆರ್ವದ್ದು' ನೋ.

**ಹೆಬ್ಬನ** (ನಾ). ದೊಡ್ಡ ಉದ್ಯಾನ: ಒಬ್ಬಳು ಕೆಳದಿಯ ಕೂಡಿ ನಿಬ್ಬರದಲಿ ಕಾಮ ನರ್ಧಾಂಗಿ ನಡೆದಳು ಹೆಬ್ಬನವನು ನಿಟ್ಟಿಸುತೆ (ಮೋಹತ. ೯-೨೨). [< ಪಿರಿದು$_1$ + ಬನ$_1$]

**ಹೆಬ್ಬಯಕೆ** 'ಪೆರ್ಬಯಕೆ' ನೋ.

**ಹೆಬ್ಬಯಲು** 'ಪೆರ್ವಯಲ್' ನೋ.

**ಹೆಬ್ಬಯ್ಯ** (ನಾ). ಒಂದು ಕ್ಷುದ್ರದೇವತೆಯ ಹೆಸರು: ತೋಟದ ಹೆಬ್ಬಯ್ಯಾ ಬುಳ್ಳನು ಸುಂಕ್ಲಾಯಿ ಹಾದಿ ಬೀದಿ ಒಡಿಯಾ (ವಿಸಾಸು. ೫೮-೨). [< ಪಿರಿದು$_1$ + ಅಯ್ಯ$_1$]

**ಹೆಬ್ಬರಗ** (ನಾ). ಒಂದು ಬಗೆಯ ದೊಡ್ಡ ಕಾಡುಪ್ರಾಣಿ: ಕೊಬ್ಬಿಯಬ್ಬರಿಸುತ್ತಲಾ ಘನ ಹೆಬ್ಬರಗ ಪೊಕ್ಕಂತೆ (ನಾಗಷ. ೭-೮). "ಹೆಬ್ಬುಲಿ" (ನಾಗಷ .ಕೋಶ). [< ಪಿರಿದು$_1$ + ಬರಕ$_1$ (< ಬರ್ಕ)]

**ಹೆಬ್ಬರಿ** (ನಾ). ದೊಡ್ಡ ನೀರಿನ ಕಾಲುವೆ: ಶ್ರೀ ಬಂಟೇಶ್ವರದೇವರ ನಿವೇದ್ಯಕ್ಕಂ ಚೈತ್ರಪವಿತ್ರಕ್ಕಂ ತಪೋಧನರ ಗ್ರಾಸಕ್ಕಂ ತನ್ನ ಬಡಗಣ ತೋಟದ ಹಿರಿಯ ಏತದ ಹೆಬ್ಬರಿಯಂ ಸರ್ವ್ವಾಬಾಧೆ ಪರಿಹಾರಮಾಗಿ ಬಿಟ್ಟ (ಕಇ. II. ೨೦-೧೧; 1131). [< ಪಿರಿದು$_1$ + ಪರಿ$_3$]

**ಹೆಬ್ಬಲ್, ಹೆಬ್ಬಲ್ಲು** (ನಾ). ದೊಡ್ಡದಾಗಿ ಚಾಚಿರುವ ಹಲ್ಲು: ಹೆಬ್ಬಲ್ಲ ಬಿಡುವಾಯ ಜೋಲ್ವ ಕೆನ್ನಾಲಗೆಯ ಗಬ್ಬಿನಾಯ್ಗಳ ಹಾಸನುಗಿದು ಬಿಡೆ ಪಂದಿಗಳ ನಬ್ಬರಿಸಿ ತುಡುಕಿದವು (ಜೈಮಿಭಾ. ೨೮-೪೭). **ಹೆಬ್ಬಲ್ಲು:** ಹೆಬ್ಬಲ್ಲ ತೆರೆದು ಹೆಬ್ಬುಲಿಯು ಹಿನ್ನೆಗೆದು ದೊಡ್ಡನಂ . . . ಕಚ್ಚಿದುದು (ಕಾಲೂರ. ೯೭-೧೯೧). [< ಪಿರಿದು$_1$ + ಪಲ್]

**ಹೆಬ್ಬಲ** 'ಪೆರ್ವಲ' ನೋ.

**ಹೆಬ್ಬಲಸು** (ನಾ). ಒಂದು ಬಗೆಯ ಹಲಸಿನ ಮರ: ಹೆಬ್ಬಲಸು (ಪಾಟಫಣಸ) - ಬಹು ಸುಂದರವಾದ ಉನ್ನತವೃಕ್ಷವು . . . ಹಲಸಿನ ಹಣ್ಣು ಪ್ರಸಿದ್ಧ (ಕಭಾಗ. ೫೦); ತೋಟದ ಹೆಬ್ಬಲಸಿನ ಮರದಿಂದ ಹಣ್ಣು ಉದುರುವ ಸಪ್ಪಳ ಕೇಳಿಸಿತು (ದೇವಹಂ. ೫೭). [< ಪಿರಿದು$_1$ + ಹಲಸು (< ಪಲಸು)]

**ಹೆಬ್ಬಲೆ** 'ಪೆರ್ವಲೆ' ನೋ.

**ಹೆಬ್ಬಲ್ಲು** 'ಹೆಬ್ಬಲ್' ನೋ.

**ಹೆಬ್ಬಸಲೆ** (ನಾ). ಬಸಲೆ ಸೊಪ್ಪಿನಲ್ಲಿ ಒಂದು ಬಗೆ: "ರಾಜಮಾತಂಗೀ- ಹೆಬ್ಬಸಲೆ" (ಓಷಧಿ. ೧೩೮). [< ಪಿರಿದು$_1$ + ಬಸಲೆ$_1$]

**ಹೆಬ್ಬಸುರಿ** (ನಾ). ಬಸುರಿ ಮರದಲ್ಲಿ ಒಂದು ಬಗೆ : (ಮೈಡಿಗಿ. ೩೭-೭೩೦). [< ಪಿರಿದು$_1$ + ಬಸುರಿ$_2$ (< ಬಸರಿ)]

**ಹೆಬ್ಬಳ** (ನಾ). ಒಂದು ಜಾತಿಯ ಬೆಕ್ಕು; ಪುನುಗಿನ ಬೆಕ್ಕು: ಕಾಡಲ್ಲಿ ಬೇಟೆ ಆಡಿದಲ್ಲಿ, ಬಿದ್ದ ಮೃಗಗಳ ವಿವರಾ . . . ಕಾಟಿ ಒಂದು, ಕಡವೆ ಆರು, ಹೆಬ್ಬಳ ಒಂದು (ರಾಜೇಂದ್ರ. ೨೮೩). [?]

**ಹೆಬ್ಬಳಬೆಕ್ಕು** (ನಾ) = ಹೆಬ್ಬಳ: ಹೆಬ್ಬಳಬೆಕ್ಕಿನ ವಿಷಕ್ಕೆ - ಪುಣುಗಿನ ಬೆಕ್ಕಗಿದೊಡೆ . . . ಕುಬೇರಾಕ್ಷಿ ತಿಗುಡೆ ಮಡುವಾಗಲಿವಂ ಕ್ವಣಿತಂ ಗ್ರಾವದೆ ಹಿಂಗಿಂ ಕಣಯುತ ವಗ್ಗರಣೆಯಿಂ ಕೊಳಲ್ವಿಷಮಟಿಗುಂ (ಖಮದ. ೧೩-೫೫). [ಹೆಬ್ಬಳ + ಬೆಕ್ಕು (< ಬೆರ್ಕು)]

**ಹೆಬ್ಬಳಿ** 'ಪೆರ್ವಳಿ' ನೋ.

**ಹೆಬ್ಬಳುವ** 'ಪೆರ್ವಟು' ನೋ.

**ಹೆಬ್ಬಱ** (ನಾ). ಭೀಕರವಾದ ಕ್ಷಾಮ,– ದುರ್ಭಿಕ್ಷ: ಕಾಲಕಾಲದೊಳು ಮಳೆಗಳು ಹೊಯ್ಯದಿರಲು . . . ಮಹಾಭೀಲವೆನೆ ಬಂದುದಾ ಹೆಬ್ಬಱಂ (ವೀಶೈಪು. ೪-೧-೭); ಜನರು ಕಾಕು ಹೆಬ್ಬಱದಧಿಕನಿಬ್ಬರದೊಳತಿನೊಂದು (ಚತುಪು. ೪-೧೨-೧೧). [< ಪಿರಿದು$_1$ + ಬಱ]

**ಹೆಬ್ಬಱ್** 'ಪೆರ್ವಱ್' ನೋ.

**ಹೆಬ್ಬಾಗಿಲ್** 'ಪೆರ್ವಾಗಿಲ್' ನೋ.

**ಹೆಬ್ಬಾಗಿಲು** 'ಪೆರ್ವಾಗಿಲ್' ನೋ.

**ಹೆಬ್ಬಾಜಾರು** (ನಾ). ದೊಡ್ಡ ಪೇಟೆ,– ಅಂಗಡಿಬೀದಿ: ಮಂತ್ರಿಯನು ಕರೆದು ಪುರದ ಕೋಟೆಯನು ಹೆಬ್ಬಾಜಾರ ಕೇರಿಗಳ . . . ಅಲಂಕರಿಸ ನೇಮಿಸಿ ಕಳುಹಲು (ನವಮೋ. ೧೩-೩೦). [< ಪಿರಿದು$_1$ + ಬಾಜಾರು (< ಬಾಜಾರ)]

**ಹೆಬ್ಬಾಯ್** (ನಾ). ಅಗಲವಾದ ಬಾಯಿ: ಮೃತ್ಯು ಬರೆ ಬಾಗಿಲಿಗೆ, ತೆರೆದದರ ಹೆಬ್ಬಾಯ್ಗೆ ಬಿಸುಡುವಂ! (ಕೋಗಿಲೆ. ೬೨-೨೩). [< ಪಿರಿದು$_1$ + ಬಾಯ್]

**ಹೆಬ್ಬಾರ** 'ಪೆರ್ವಾರ್ವ' ನೋ.

**ಹೆಬ್ಬಾರುವ** 'ಪೆರ್ವಾರ್ವ' ನೋ.

**ಹೆಬ್ಬಾಲೆ** (ನಾ). ಹಾಲೆಜಾತಿಗೆ ಸೇರಿದ ಒಂದು ಬಗೆಯ ಮರ: "ಪ್ರಿಯಂಕರೀ-ಹೆಬ್ಬಾಲೆ, ಬಿಳಿಯ ನೆಲಗುಳ್ಳ" (ಓಷಧಿ. ೯೯). [< ಪಿರಿದು$_1$ + ಹಾಲೆ$_2$ (< ಪಾಲೆ$_2$)]

**ಹೆಬ್ಬಾವಲ್** (ನಾ). ದೊಡ್ಡ ಬಾವಲಿ: "ಹೆಬ್ಬಾವಲ್-ಜತುಕೆ, ಅಜಿನಪತ್ರೆ" (ನಾಚಿರಾ. ೬). [< ಪಿರಿದು$_1$ + ಬಾವಲ್ (< ವಾವಲ್)]

**ಹೆಬ್ಬಾವಿ** (ನಾ). ದೊಡ್ಡ ಬಾವಿ; ಆಳವಾದ ಬಾವಿ: ಇರುಳು ನಿಟ್ಟಸಿದ ಹೆಬ್ಬಾವಿಗೆ ಹಗಲ ಬಿದ್ದಂತಾದುದು (ಮೋಹತ. ೩೯-೨೦). [< ಪಿರಿದು$_1$ + ಬಾವಿ]

**ಹೆಬ್ಬಾವು** 'ಪೆರ್ವಾವು' ನೋ.

**ಹೆಬ್ಬಾಳಿಕೆ** (ನಾ). ಉತ್ತಮವಾದ ಆಳ್ವಿಕೆ,– ರಾಜ್ಯಭಾರ: ನಾವು - ನೀವೆಂಬ ಹಳಭೇದಗಳನುಳಿದು . . . ಐಕ್ಯಮತ್ಯದಿಂ ಬಾಳುವುದೆ ತಾಯಿಳೆಯ ಹೆಬ್ಬಾಳಿಕೆಯ ಮರ್ಮ! (ಹಬ್ಬರ. ೫೦-೨೭೮). [< ಪಿರಿದು$_1$ + ಆಳಿಕೆ (< ಆಳ್ಕೆ)]

**ಹೆಬ್ಬಾಳು$_1$** (ಕ್ರಿ). ಹಿರಿದಾಗಿ ಬಾಳು; ಉತ್ತಮವಾಗಿ ಬದುಕು: ಜಗದೊಳಗಿವಂ ಹೆಬ್ಬಾಳಲಿದನಿವಗೆ ನೀಡಿ ದೀರ್ಘಾಯುಷ್ಯವಂ ಜಗತ್ಪತಿ ಸಲಹಬೇಕು ನಾರಾಯಣಂ (ಹಬ್ಬರ. ೪೯-೨೬೯). [< ಪಿರಿದು$_1$ + ಬಾಳು$_1$ (< ಬಾೞ್$_1$)]

**ಹೆಬ್ಬಾಳು$_2$** 'ಪೆರ್ಬಾೞ್' ನೋ.

**ಹೆಬ್ಬಾಳೆ** (ನಾ). ದೊಡ್ಡ ಜಾತಿಯ ಒಂದು ಬಗೆಯ ಬಾಳೆ ಮರ: ಹೊನ್ನೆ ಸೊಗಡಗಿಲು ಕಿತ್ತಾಳೆ ಹೆಬ್ಬಾಳೆಯೌದುಂಬರಂ ತುಂಬುರಿಂಗಾಲಯವೆನಿಪ್ಪ ನಾನಾಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಹಚಕಾ.೫-೧೫).

[< ಪಿರಿದು$_1$ + ಬಾಳೆ$_1$ (< ಬಾೞೆ)]

**ಹೆಬ್ಬಿದರು** 'ಪೆರ್ವಿದಿರ್' ನೋ.

Δ **ಹೆಬ್ಬಿದಱು** 'ಪೆರ್ವಿದಿರ್' ನೋ.

**ಹೆಬ್ಬಿದಿರ್** 'ಪೆರ್ವಿದಿರ್' ನೋ.

**ಹೆಬ್ಬಿದಿರು** 'ಪೆರ್ವಿದಿರ್' ನೋ.

**ಹೆಬ್ಬಿಬ್ಬಿ** 'ಹೆಬ್ಬುಬ್ಬು' ನೋ.

**ಹೆಬ್ಬಿಬ್ಬಿಗೊಳು** (ಕ್ರಿ). ಅತಿಯಾಗಿ ಸಂತೋಷಪಡು: ಕೊಂಕಿದ ಹುಬ್ಬಿನ ಪೆಣ್ಣೆಂದರದಕೆ ಹೆಬ್ಬಿಬ್ಬಿಗೊಂಬವರುಂಟಾತ್ಮಕಲೆಗೆ ಮೈಯುಬ್ಬುವರಾರು ನಿನ್ನಂತೆ (ಭರಚ. ೨-೪೮). [ಹೆಬ್ಬಿಬ್ಬಿ (< ಹೆಬ್ಬುಬ್ಬು) + ಕೊಳು (< ಕೊಳ್$_1$)]

**ಹೆಬ್ಬಿಸಿಲು** 'ಪೆರ್ವಿಸಿಲ್' ನೋ.

**ಹೆಬ್ಬು** (ನಾ). ಒಂದು ಬಗೆಯ ಗೆಣಸು: ದುಪ್ಪೆಗೆಣಸು, ಹೆಬ್ಬು (ಮೈಜಿಗಿ. ೩೦-೫೯೩). 'ಹೆಬ್ಬುಗೆಣಸು' ಪರಾ. [?]

**ಹೆಬ್ಬುಗುಳ್ಳ** (ನಾ). ಒಂದು ಬಗೆಯ ಬದನೆ,– ಗುಳ್ಳ: ಹೆಬ್ಬುಗುಳ್ಳ ನೆಲಗುಳ್ಳಗಳು ಪಿತ್ತಕರ (ಅಷ್ಟಾಂಗ. ೧೩೪-೭೭). 'ಹೆಗ್ಗುಳ್ಳ' ಹೋ. [ಹೆಬ್ಬು + ಗುಳ್ಳ]

**ಹೆಬ್ಬುಗೆಣಸು** (ನಾ). ಒಂದು ಬಗೆಯ ಗೆಣಸು: (೬). 'ಹೆಗ್ಗೆಣಸು' ಹೋ.

[ಹೆಬ್ಬು + ಗೆಣಸು (< ಗೆಣಸು)]

**ಹೆಬ್ಬುಚ್ಚ** (ನಾ). ಸ್ವಲ್ಪವೂ ತಿಳಿವಳಿಕೆಯಿಲ್ಲದವನು; ಬಹಳ ಮೂರ್ಖ: ಎನಗೆ ಸಂಶಯ ಪುಟ್ಟುತಿದೆ ನೀ ವಿನುತತತ್ವಜ್ಞಾನನಿಷ್ಠನೊ ಘನತರದ ಹೆಬ್ಬುಚ್ಚನೋ ಪೇಳ್ (ನಿಭಾಗ. ೧೧-೧೩-೧೧). [< ಪಿರಿದು$_1$ + ಪುಚ್ಚ$_1$]

**ಹೆಬ್ಬುಡ** (ನಾ). ದೊಡ್ಡದಾಗಿರುವ ಬುಡ; ವಿಶಾಲವಾದ ಬುಡ: ತಡದ ಬಾಗಿಲುಗಳುಗ್ಗಡದ ಖಳರನು ಹೆಮ್ಮರನ ಹೆಬ್ಬುಡದಲೆಱಗುತ ಹೊಕ್ಕನೋಲಗವನು ಸರಾಗದಲಿ (ತೊರರಾ.೬-೧೦-೨೮). [< ಪಿರಿದು$_1$ + ಬುಡ]

**ಹೆಬ್ಬುಬ್ಬು, ಹೆಬ್ಬಿಬ್ಬಿ, ಹೆಬ್ಬುಬ್ಬೆ** (ನಾ). ೧. ಅಧಿಕವಾದ ಉತ್ಸಾಹ,– ಹುರುಪು: ನಮ್ಮ ಕನ್ನಡವನ್ನು ಮುಂದಕ್ಕೆ ತರುವುದಕ್ಕೆ ಬೇಕಾದ ಹೆಮ್ಮೆಯೂ ಹೆಬ್ಬುಬ್ಬೂ ನಮ್ಮಲ್ಲಿ ಉಂಟು (ಕಜಸಾ.೮); ಮಗನ ಭುಜ ಸುಪುಷ್ಟವಾಗುತ್ತಿದ್ದಂತೆ . . . ಕಂಪಿಲನ ಹೆಮ್ಮೆ ಹೆಬ್ಬುಬ್ಬುಗಳಿಗೆ ಕೈಕಾಲು ಮೂಡುತ್ತವೆ (ಸಂಜುಂಡ.೮೨). **ಹೆಬ್ಬಿಬ್ಬಿ:** ೨.ಅತಿಯಾದ ಸಂತೋಷ: 'ಹೆಬ್ಬಿಬ್ಬಿಗೊಳು' ಪರಾ. **ಹೆಬ್ಬುಬ್ಬೆ:** ೧. ಹೆಬ್ಬುಬ್ಬೆಗೆ ಎತ್ತಿಕೊಂಡು ಬರುತ್ತೇನೆ ಎಂದು ಒಪ್ಪಿಕೊಂಡದ್ದೇನೋ ಆಯಿತು! ಈಗೇನು ಮಾಡುವುದು? (ಮಲೆಮ. ೧೮೦). ೩. **ಅತಿಶಯವಾದ ಹೆಮ್ಮೆ,– ಗರ್ವ:** ಮುದುಕ . . . ದಿಟ್ಟತನದ ಹೆಬ್ಬುಬ್ಬೆಯಿಂದ ನುಡಿದನು (ಪುನರು. ೫೫೯).

[< ಪಿರಿದು$_1$ + ಉಬ್ಬು$_2$ (< ಉರ್ವು$_2$)]

**ಹೆಬ್ಬುಬ್ಬೆ** 'ಹೆಬ್ಬುಬ್ಬು' ನೋ.

**ಹೆಬ್ಬುರಿ** 'ಪೇರುರಿ' ನೋ.

**ಹೆಬ್ಬುಲಿ$_1$** 'ಪೆರ್ವುಲಿ' ನೋ.

**ಹೆಬ್ಬುಲಿ$_2$** (ನಾ). ಒಂದು ಬಗೆಯ ಸಸ್ಯ: ಹೆಬ್ಬುಲಿ, ಕಿರುಬುಲಿ, ಸುರುಸುರಿಗೆ ಈ ಸೊಪ್ಪುಗಳ ರಸ ಒಂದು ಮಾನವಂ ಹಿಂಡಿ . . . ಹಿಮ್ಮಡಿಪರ್ಯಂತವೂ ತೊಡೆಯಲು ಮೂರುದಿನಕ್ಕೆ ಶೀತಜ್ವರಂ ಗುಣಮಕ್ಕುಂ (ಸಕವ್ಯ. ೭೦). [< ಪಿರಿದು$_1$ + ಪುಲಿ]

**ಹೆಬ್ಬುಸಿ** 'ಪೆರ್ಬುಸಿ' ನೋ.

**ಹೆಬ್ಬೆ** (ನಾ). ಹೆಚ್ಚು; ಅಧಿಕ್ಯ.

ಹೆಬ್ಬೆಯಾಡು = ಅಧಿಕವಾಗಿ ತೂಗಾಡು: ಕೋಗಿಲೆಯ ಬಾಗಿಲ್ಲಾಪಿನವರಂತೆ ಪುಗಿಲ್ ಪುಗಿಲೆನೆ ಉಯ್ಯಲು ಹೆಬ್ಬೆಯಾಡುವರಂತೆ ತಿಟ್ಟೆಯೊಳಾಡೆ (ಬಂಹರಿ.೫-೫ ವ).

[< ಪಿರಿದು$_1$]

**ಹೆಬ್ಬೆಟ್ಟ** 'ಪೆರ್ಬೆಟ್ಟ' ನೋ.

**ಹೆಬ್ಬೆಟ್ಟು$_1$** 'ಪೆರ್ಬೆಟ್ಟ' ನೋ.

**ಹೆಬ್ಬೆಟ್ಟು$_2$** 'ಪೆರ್ಬೊಟ್ಟು' ನೋ.

**ಹೆಬ್ಬೆಡೆ** 'ಪೆರ್ವೆಡೆ' ನೋ.

**ಹೆಬ್ಬೆರಳು** 'ಪೆರ್ವೆರಲ್' ನೋ.

**ಹೆಬ್ಬೆಳಕು** 'ಪೆರ್ವೆಳಗು' ನೋ.

**ಹೆಬ್ಬೆಳಸು** 'ಪೆರ್ವೆಳಸು' ನೋ.

**ಹೆಬ್ಬೆಳೆ** 'ಹೆಂಬೆಳೆ' ನೋ.

**ಹೆಬ್ಬೆಳೆಸು** 'ಪೆರ್ವೆಳಸು' ನೋ.

**ಹೆಬ್ಬೆಱಗು** (ನಾ). ಅತಿಯಾದ ಆಶ್ಚರ್ಯ; ಬಹಳ ಸೋಜಿಗ: ಹಳಚುವಚ್ಚಾಳುಗಳನುಂ ಕಳೆದು ಅಂದಣದ ಸಂದಣಿಯ ದೊಂದಣವುಂದಿಯಿಬ್ಬಗಿಯಾಗಿ ಹೆಬ್ಬೆಱಗಿಂದವೊಂದುಂ[ಪಾಠಾಂ. ಹಿಂಬೆರಕಿಂದವಂದುಂ] ತೊಳತೊಳಗುತುಚ್ಚಳಿಸಿ ನಡೆತರುವ (ಬಸಪು. ೬೧-೨೮). [< ಪಿರಿದು$_1$ + ಬೆಱಗು]

**ಹೆಬ್ಬೇಗೆ** (ನಾ). ದೊಡ್ಡ ಉರಿ,– ಜ್ವಾಲೆ: ಉತ್ತರದ ದಿಕ್ಕಿನಲ್ಲಿ ಹತ್ತೀತು ಹೆಬ್ಬೇಗೆ ಸುತ್ತ ಒರಕೊಂಡು ಬರುವಾಗ ಜಗವೆಲ್ಲ ಕತ್ತಲಾದೀತು (ಸರ್ವಜ್ಞ. ೧೧೭೭).

[< ಪಿರಿದು$_1$ + ಬೇಗೆ]

**ಹೆಬ್ಬೇರು** (ನಾ). ನಿಡಿದಾದ ಬೇರು: ಒಬ್ಬನ ನೋಡಿದ ಕಣ್ಣು ಮತ್ತೊಬ್ಬಗೆ ಹಬ್ಬವು ಹಬ್ಬಿದ ಮೇಲೆ ಹೆಬ್ಬೇರು ಬೀಡುವವಲ್ಲಿಯೆ ತೆಗೆದರೆ ಬಾರದು (ಭರಚ. ೫೮-೪೦).

[< ಪಿರಿದು$_1$ + ಬೇರು (< ಬೇರ್$_1$)]

**ಹೆಬ್ಬೇವು** (ನಾ). ಒಂದು ಬಗೆಯ ಬೇವಿನ ಮರ ಮತ್ತು ಅದರ ಸೊಪ್ಪು; ದೊಡ್ಡ ಜಾತಿಯ ಬೇವು: ಬೇಲ ಹೆಬ್ಬೇವು [ಪಾಠಾಂ. ಬ್ಯಾಲೆ, ಬ್ಯಾಲಸು] ವೊಳಗುವ ಮುತ್ತುಗೆ ವೊದಲಾದ ಮರಗಳ ಬಳಗದಿಂದದು ಕಣ್ಗೆಸೆದುದು (ಕುರಾಸಾಂ. ೪-೬); ಹೆಬ್ಬೇವಿನ ಬೇರುಗಳನ್ನು ತಂದು . . . ತೋಟದ ಸುತ್ತಲೂ ಹಚ್ಚಬೇಕು (ಕೃಷಿಪ್ರ. ೧೩೨). [< ಪಿರಿದು$_1$ + ಬೇವು$_1$]

**ಹೆಬ್ಬೇಳಿ** 'ಹೆಂಬೇಡಿ' ನೋ.

**ಹೆಬ್ಬೊಗೆ** 'ಪೆರ್ಬೊಗೆ' ನೋ.

**ಹೆಬ್ಬೊಟ್ಟು** 'ಪೆರ್ಬೊಟ್ಟು' ನೋ.

**ಹೆಬ್ಬೊಟ್ಟೆ** (ನಾ). ದೊಡ್ಡ ಹೊಟ್ಟೆ: ಹೊಟ್ಟೆಯ ಕಕ್ಕುಲತೆಗೆ ಕಷ್ಟಜೀವವ ಹೊರೆವ ಹೆಬ್ಬೊಟ್ಟೆಯ ಡೊಂಬರ ಕಂಡು ಬಟ್ಟಬಯಲಾದೆಯೋ (ಮೋಳಿಮಾ. ೪೩-೧೮೦).

[< ಪಿರಿದು$_1$ + ಪೊಟ್ಟೆ$_1$]

**ಹೆಬ್ಪೊತ್ತಗೆ** (ನಾ). ದೊಡ್ಡ ಪುಸ್ತಕ; ಬೃಹದ್ಗ್ರಂಥ: ಅವರ ದಿನಚರಿ ಮತ್ತು

ಕಾಗದಗಳು 'ಸಮುದ್ರದಾಚೆಯಿಂದ' ಎಂಬ ಹೆಬ್ಬೊತ್ತಗೆಯಾಗಿ ಬಂತು (ಹಕ್ಕನೋ. ೩೦).

[< ಪಿರಿದು$_1$+ ಪೊತ್ತಗೆ]

**ಹೆಬ್ಬೊತ್ತಿಗೆ** (ನಾ). = ಹೆಬ್ಬೊತ್ತಗೆ: ಚೆನ್ನಬಸವಪುರಾಣ ಸಂಪೂರ್ಣವಾಗಿ ಸುಮಾರು ಮೂರುಸಾವಿರಷಟ್ಪದಿಗಳಿರುವ ಹೆಬ್ಬೊತ್ತಿಗೆ (ಕಸಾಹಿ. ೧೨೨).

[< ಪಿರಿದು$_1$+ ಪೊತ್ತಿಗೆ]

**ಹೆಬ್ಬೊಳಲ್** 'ಪೆರ್ವೊಟಲ್' ನೋ.

**ಹೆಬ್ಬೋನು** (ನಾ). ದೊಡ್ಡ ಬೋನು,– ಪಂಜರ: ಹೆಬ್ಬೋನು ಕಲ್ಲಿಗಳಿಡುಕು ಚಿಗುರಂಟುಗಳೆಯುರುಳ್ಗಳ ಕಿಡಿದು ಕಾರ್ಮುಗಿಲಂತೆ ಕವಿದುದು ಶಬರಸಂದೋಹ (ಅನಂರಾ. ೩-೩-೧೫). [< ಪಿರಿದು$_1$+ ಬೋನು]

**ಹೆಬ್ಬೇರಿ** (ನಾ).ಒಂದು ಬಗೆಯ ದೊಡ್ಡ ಚರ್ಮವಾದ್ಯ; ದೊಡ್ಡನಗಾರಿ: ಸದ್ಬ್ರಾಹ್ಮಣರು ಸಂಧ್ಯನೀಯಾವು ಚಿತ್ತಶುದ್ಧದಿ ಮಾಡತೊಡಗಿದರು ಹೆಬ್ಬೇರಿ ಕಾಳೆನಿಚಯಂ ಮೊಳಗಲು (ನವಮೋ. ೧೭-೧೨). [< ಪಿರಿದು$_1$+ ಭೇರಿ]

**ಹೆಮ್ಮ** 'ಪೆರ್ಮ$_1$' ನೋ.

**ಹೆಮ್ಮಕ್ಕಳು** 'ಪೆಣ್ಮಗು' ಪರಾ.

**ಹೆಮ್ಮಗ** 'ಪೆರ್ಮಗ' ನೋ.

**ಹೆಮ್ಮಗಳು** 'ಪೆಣ್ಮಗಳು' ನೋ.

**ಹೆಮ್ಮಗಾರೆ** 'ಹೆಮ್ಮಗ್ಗಾರೆ' ನೋ.

**ಹೆಮ್ಮಗು** 'ಪೆಣ್ಮಗು' ನೋ.

**ಹೆಮ್ಮಗ್ಗಾರೆ, ಹೆಮ್ಮಗಾರೆ** (ನಾ). ದೊಡ್ಡ ಜಾತಿಯ ಕಾರೆಗಿಡ: "ಮಹಾಪಿಂಡತರುಃ- ಹೆಮ್ಮಗ್ಗಾರೆ" (ಓಷಧಿ. ೧೨೨). **ಹೆಮ್ಮಗಾರೆ:** "ಮಹಾನ್ – ಹೆಮ್ಮಗಾರೆ" (ಓಷಧಿ. ೧೧೪). [< ಪಿರಿದು$_1$ + ಮಗ್ಗಾರೆ]

**ಹೆಮ್ಮಟ್ಟಬೀಜ, ಹೆಮ್ಮೊಟಬೀಜ** (ನಾ). ಇಟ್ಟಿಯ ಬೀಜ: ಹೆಮ್ಮಟ್ಟಬೀಜ (ಕುಚಲ) (ಮುಂಬವ್ಯಾ. ೧೭೯). **ಹೆಮ್ಮೊಟಬೀಜ:** ಕುಚಲ,(ಕಾಜರ, ಹೆಮ್ಮೊಟಬೀಜ) (ಮುಂಬವ್ಯಾ. ೧೫೦). [? + ಬೀಜ]

**ಹೆಮ್ಮಡದಿ** (ನಾ). ಹಿರಿಯ ಹೆಂಡತಿ: ವಿಭು ಜಕ್ಕನ ಹೆಮ್ಮಡದಿಪೊಡವುಟ್ಟಿದಂ (ಕಶಾ. IV. ೧೦-೪೨: 1121). [< ಪಿರಿದು$_1$+ ಮಡದಿ]

**ಹೆಮ್ಮಡು** 'ಪೆರ್ಮಡು' ನೋ.

**ಹೆಮ್ಮನೆ** 'ಪೆರ್ಮನೆ' ನೋ.

**ಹೆಮ್ಮಮತೆ** (ನಾ). ಹೆಚ್ಚಾದ ವಿಶ್ವಾಸ,– ಪ್ರೀತಿ: ಹೆಮ್ಮಮತೆಯನು ಮಿಕ್ಕು ಲೋಕದ ಗತಿಗಳನು ಸಂಪರ್ಕ ವಿರಹಿತನಾಗಿ (ನಿಭಾಗ. ೯-೧೯-೩೪).

[< ಪಿರಿದು$_1$+ ಮಮತೆ]

**ಹೆಮ್ಮಯ್** 'ಹೆಮ್ಮೆ$_1$' ನೋ.

**ಹೆಮ್ಮಯ್ಸು** (ಕ್ರಿ). ಗರ್ವಿಸು; ವಿಜೃಂಭಿಸು: ನಿನ್ನನ್ನು ಸುಂಗಿ ನೋಣೆಯು ವುದಕ್ಕೋಸ್ಕರವಾಗಿ ಆ ಹೆಸರ ಹೆಮ್ಮೆನಾಗಿ ಹೆಮ್ಮಯ್ಸುವೆನು (ಮಂತ್ರಶ. ೫೭-೯).

[ ಹೆಮ್ಮೆ (< ಪೆರ್ಮೆ)+ - ಇಸು$_3$]

**ಹೆಮ್ಮರ** 'ಪೆರ್ವರ' ನೋ.

**ಹೆಮ್ಮರಚಕ್ಕೆ** (ನಾ). ತಿಗಡು ಮರದ ಚೆಕ್ಕೆ: ಹೆಮ್ಮರಚಕ್ಕೆ, ಲಾಮಂಚ, ಲವಂಗ . . . ಒಂದೆಲಗ ಇವೆಲ್ಲವನ್ನು ಬಿಸಿನೀರಿನಲ್ಲಿ ಹಾಕಿ ಶೋಧಿಸಿಕೊಂಡು (ಸಕವ್ಯ. ೭೭).

[ಹೆಮ್ಮರ (< ಪೆರ್ವರ) + ಚಕ್ಕೆ (< ಸೆಕ್ಕೆ$_1$)]

**ಹೆಮ್ಮರೆ** 'ಪೆರ್ಮರೆ' ನೋ.

**ಹೆಮ್ಮರೆವಾಲು** (ನಾ). ದೊಡ್ಡ ಹೆಣ್ಣುಜಿಂಕೆಯ ಹಾಲು: ಮಿಕ್ಕ ಹೆಮ್ಮರೆವಾಲುಮಂ ಹೊಡೆಯಕ್ಕಿದುಯ್ಯಲು . . . ಉಡುವಿನ ತುಪ್ಪವುಂಟಲ್ಲಿ (ಬಸಪು ೧೮-೧೭). [ಹೆಮ್ಮರೆ(< ಪೆರ್ಮರೆ) + ಪಾಲು$_1$(< ಪಾಲ್$_1$) ]

**ಹೆಮ್ಮಲಗು** (ನಾ).ಒಂದು ಬಗೆಯ ದೊಡ್ಡ ಮೀನು: ಬಿಳಿಚ ಚಿಪ್ಪಲು ಮಲಗು ಹೆಮ್ಮಲಗು . . . ಗಿಜಿಲುಗಳೆಂಬ ಹೊಳೆವಳೆಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಚಕಾ.೫-೪೭). [< ಪಿರಿದು$_1$+ ಮಲಗು$_3$]

**ಹೆಮ್ಮಲೆ** 'ಪೆರ್ಮಲೆ' ನೋ.

**ಹೆಮ್ಮಳೆ** 'ಪೆರ್ಮಟೆ' ನೋ.

**ಹೆಮ್ಮಾಡ** (ನಾ).ಎತ್ತರವಾದ ಭವನ: ಕಾಗೆ ಹೆಮ್ಮಾಡಮನೇಱಿದೇ (ಸೂಕ್ತಿಸು. ೧೭-೨೩). [< ಪಿರಿದು$_1$+ ಮಾಡ$_1$]

**ಹೆಮ್ಮಾಡಿ** 'ಪೆರ್ಮಾನಡಿ' ನೋ.

**ಹೆಮ್ಮಾಡಿಯಣ್ಣ** (ನಾ).ಒಬ್ಬಾತನ ಹೆಸರು: ಕೊಂಗಳೇಸ್ವರದೇವರಿಗೆ ಸುಂಕದ ಹೆಮ್ಮಾಡಿಯಣ್ಣ ಅರಿಸ XXX ಸಂಚೆದೀವಿಗೆಗೆ ಕೊಟ್ಟ ಗದ್ಯಾಣ ೧ (ಎಕ. IV, ಕೃಷ್ಣರಾ. ೪೧-೩; ಸು. 950). [ಹೆಮ್ಮಾಡಿ (< ಪೆರ್ಮಾನಡಿ)+ ಅಣ್ಣ$_1$]

**ಹೆಮ್ಮಾತು** 'ಪೆರ್ಮಾತು' ನೋ.

**ಹೆಮ್ಮಾರಿ** 'ಪೆರ್ಮಾರಿ' ನೋ.

**ಹೆಮ್ಮಾರಿಮೊಗ** (ನಾ). (ಆಲಂ) ರೌದ್ರವಾಗಿರುವ ಮುಖ; ಭಯಂಕರವಾದ ಮುಖ: ಓರೋರ್ವರಂ ಮುಂಚಿ ಬಂದುದವನೋಲಗಕೆ ಕಾರೊಡಲ ಕೆಮ್ಮೀಸೆಗಳ ಕೆಂಡಗಣ್ಣ ಹೆಮ್ಮಾರಿಮೊಗಗಳ ಬಿಗಿದ ಹುಬ್ಬುಗಳ . . . ಅಹಂಕಾರದುಬ್ಬಿನ ದಡಿಗರಕ್ಕಸರ್ (ಚಿಬಪು. ೪೭-೧೪). [ಹೆಮ್ಮಾರಿ (< ಪೆರ್ಮಾರಿ) + ಮೊಗ]

**ಹೆಮ್ಮಿಗಿಲು** (ನಾ). ಬಹಳ ಶ್ರೇಷ್ಠ; ಉತ್ತಮಿಕೆ: ಬಾಳಿದವು ಮೈತ್ರಿಯಲಿ ಬೆಸೆದು ಹೆಮ್ಮಿಗಿಲಾಗಿ, ಮಿಥ್ರದೇವನ ಕಣ್ಣಿಗಾನಂದವಾಗಿ! (ಪಾರಸಿ. ೩೩-೭೫).

[< ಪಿರಿದು$_1$+ ಮಿಗಿಲು (< ಮಿಗಿಲ್)]

**ಹೆಮ್ಮಿಟಲಿ, ಹೆಮ್ಮಿಟಿಲ, ಹೆಮ್ಮಿಟಿಲಿ** (ನಾ). ಒಂದು ಬಗೆಯ ಔಷಧೀ ಸಸ್ಯ: ಹೆಮ್ಮಿಟಲಿ ಹೇರೆಕ್ಕೆ ರಮ್ಯದ ರಸದಾಳಿ ಒಮ್ಮಾನದರ್ಧ ಉದಕಕಷಾಯದಿಂ ಕೆಮ್ಮೆಲ್ಲ ಕೆಡುಗು (ಸರ್ವಜ್ಞ. ೨೦೨೪). **ಹೆಮ್ಮಿಟಿಲ:** "ಮರಾಳಿಕಾ- ಹೆಮ್ಮಿಟಿಲ ಹಂಸೆ" (ಓಷಧಿ. ೧೧೮). **ಹೆಮ್ಮಿಟಿಲಿ:** ಹೆಮ್ಮಿಟಲಿ ಬಿಳಿಯ ಗುಂಜಿಯ ಬೇರಂ ಘಟಿಲಿಲನೆ ನಸ್ಯಂಗೆಯ್ಯಲ್ ಕಳೇವರಕ್ಕೆಯ್ದೆ ಪೂಸೆ ಫಣಿವಿಷಮಟಿಗುಂ (ಖಮದ. ೫-೭೮). [< ಪಿರಿದು$_1$+ ಮಿಟಲಿ]

**ಹೆಮ್ಮಿಟಿಲ** 'ಹೆಮ್ಮಿಟಲಿ' ನೋ.

**ಹೆಮ್ಮಿಟಿಲಿ** 'ಹೆಮ್ಮಿಟಲಿ' ನೋ.

**ಹೆಮ್ಮಿಣಿ** 'ಪೆರ್ಮಿಳಿ' ನೋ.

**ಹೆಮ್ಮಿನ್** 'ಪೆರ್ಮಿನ್' ನೋ.

**ಹೆಮ್ಮಿನು** 'ಪೆರ್ಮ್ಮಿನ್' ನೋ.

**ಹೆಮ್ಮುಗಿಲ್** 'ಪೆರ್ಮುಗಿಲ್' ನೋ.

**ಹೆಮ್ಮುಟ್ಟುಪಡ** (ನಾ). ಅತಿಯಾದ ಮಲಿನತೆ; ಅಧಿಕವಾದ ಮಾಲಿನ್ಯ: ಹೆಮ್ಮುಟ್ಟುಪಡಂ ಮೊದಲಾದ ಮುಟ್ಟುಪಡಂಗಳಾದೊಡಮನಶನಾದಿಗಳಂ ಬಿಡಲಾಗದೆಂಬುದುಂ (ಪಸಾರ. II, ೪೮೧).

[< ಪಿರಿದು$_1$ + ಮುಟ್ಟುಪಡ (< ಮುಟ್ಟುಪಡು)]

**ಹೆಮ್ಮುಷ್ಟಿ, ಹೆಮ್ಮುಷ್ಟೆ** (ನಾ). ಒಂದು ಬಗೆಯ ಔಷಧೀಸಸ್ಯ: "ಮರುಧ್ರುಮಃ - ಹೆಮ್ಮುಷ್ಟಿ" (ಓಷಧಿ. ೧೧೮). **ಹೆಮ್ಮುಷ್ಟೆ:** ಬಜೆ, ಹೆಮ್ಮುಷ್ಟೆ . . . ಕೊಡನಾರಿ ಬೇರು ಇವಂ ಬೆಣ್ಣೆಯಲ್ಲಿ ಅರೆದು ಪೂಸಲು ಸ್ತನಗಳು ಬರುವುವು (ವಿಷ್ಣವಿ. ೧೦೭).

[< ಪಿರಿದು$_1$+ ಮುಷ್ಟಿ$_1$]

**ಹೆಮ್ಮುಷ್ಟೆ** 'ಹೆಮ್ಮುಷ್ಟಿ' ನೋ.

**ಹೆಮ್ಮೂಳೆ** (ನಾ). ದೊಡ್ಡ ಮೂಳೆ; ನಿಡಿದಾದ ಎಲುಬು: ಹೆಮ್ಮೂಳೆಯ ಬಣಬೆಯಡಗಿನ ಹೆಗ್ಗುಡ್ಡೆ (ಶ್ರೀಪಾಲ.೮-೧೩). [< ಪಿರಿದು$_1$+ ಮೂಳೆ$_1$]

**ಹೆಮ್ಮೆ** 'ಪೆರ್ಮೆ' ನೋ.

**ಹೆಮ್ಮೆಕಾಱ** 'ಹೆಮ್ಮೆಗಾರ' ನೋ.

**ಹೆಮ್ಮೆಕಾಱಿಕೆ** (ನಾ). ಗರ್ವ; ಜಂಬ: ಹೆಣ್ಣುಗಳೊಳು ಹೆಮ್ಮೆಕಾಱಿಕೆ ಸತ್ಯ ಕಣ್ಣುಕಟ್ಟಲ್ಲ ಕವಿಗಳ ಕವಡಲ್ಲ (ಕನಕ. ೧೨೯ ಪಲ್ಲವಿ).

[ಹೆಮ್ಮೆಕಾಱ (< ಹೆಮ್ಮೆಗಾರ) + - ಇಕೆ]

**ಹೆಮ್ಮೆಕ್ಕೆ** (ನಾ).ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ : "ಹೆಮ್ಮೆಕ್ಕೆ- ಚಿತ್ರ,ಗವಾಕ್ಷಿ, ಗೋದುಂಬೆ" (ನಾಚಿರಾ. ೬). [< ಪಿರಿದು$_1$ + ಮೆಕ್ಕೆ$_3$]

**ಹೆಮ್ಮೆಗಾಣ್** (ಕ್ರಿ). ಹಿರಿಮೆಯನ್ನು ಕಾಣು: ಗಂಡಸುತನವೆತ್ತು ನುಡಿದ ಪಂತದ ಹೆಮ್ಮೆಗಂಡು ವೃಂದಾರಕರುಗಳ ಪಿಂಡು ಬದುಕಿತ್ತು (ಮೋಹತ. ೫-೬೨). [ಹೆಮ್ಮೆ (< ಪೆರ್ಮೆ) + ಕಾಣ್]

**ಹೆಮ್ಮೆಗಾರ, ಹೆಮ್ಮೆಕಾಱ** (ನಾ). ೧. ಅಹಂಕಾರಿ; ಜಂಬಗಾರ: (ಶ). **ಹೆಮ್ಮೆಕಾಱ**: ೧. 'ಹೆಮ್ಮೆಕಾಱಿಕೆ' ಪರಾ. ೨. ಹಿರಿಮೆಯುಳ್ಳವನು; ಶ್ರೇಷ್ಠನಾದವನು: ಆದಿಯವನಿಯ ಹೆಮ್ಮೆಕಾಱರು ಸತ್ಯಮಾರ್ಗವ ನೆಮ್ಮಿದವರೇ ನಪ್ರಬುದ್ಧರೆ (ತೊರಾ. ೨-೬-೩೧). [ಹೆಮ್ಮೆ (< ಪೆರ್ಮೆ) + -ಕಾರ$_1$ (< -ಕಾಱ)]

**ಹೆಮ್ಮೆಗೆಡಿಸು** (ಕ್ರಿ). ಗರ್ವವನ್ನು ನಾಶಮಾಡು; ಮುಖಭಂಗಮಾಡು: ಎಲ್ಲರ ಮುಂದೆ ಭಂಗಿಸಿ ಹೆಮ್ಮೆಗೆಡಿಸುವ ಪರಿಯ ನೋಡಾ (ಪ್ರಭುಲೀ. ೭-೭೦). [ಹೆಮ್ಮೆ (< ಪೆರ್ಮೆ) + ಕೆಡಿಸು$_1$]

**ಹೆಮ್ಮೆಗೊಳಿಸು** (ಕ್ರಿ). ಸಂತೋಷಪಡಿಸು; ಹಿಗ್ಗುವಂತೆ ಮಾಡು: ತನ್ನುವ ನಾಡಿಸುವ ತರುಣಿಯರ ತಂಡವನು ಹೆಮ್ಮೆಗೊಳಿಸುತ ಸುಖಮುಖವ ಹೊಱ ಹೊಮ್ಮಿಸುತ . . . ಇರ್ದಳು ಮಾಯೆ (ಪ್ರಭುಲೀ. ೩-೩೦). [ಹೆಮ್ಮೆ (< ಪೆರ್ಮೆ) + ಕೊಳ್$_1$ + -ಇಸು$_3$]

**ಹೆಮ್ಮೆದೆ** (ನಾ). ದೊಡ್ಡ ರಾಶಿ,– ಒಟ್ಟಿಲು: ಅಡಗಿನ ಹೆಗ್ಗುಡ್ಡೆ ನೆಣದ ಹೆಮ್ಮೆದೆ ನೆತ್ತರ ಕೊಳನಿವ ಹೊಕ್ಕು (ಶ್ರೀಪಾಲ. ೮-೧೩). [< ಪಿರಿದು$_1$ + ಮೆದೆ$_1$]

**ಹೆಮ್ಮೆಪಡು** (ಕ್ರಿ). ೧. ಜಂಬಪಡು; ಗರ್ವಿಸು: ಅವಳು ಆ ವೃತ್ತಿಯಿಂದ ತೃಪ್ತಿಗೊಂಡಿದ್ದಂತೆ ಮಾತ್ರವಲ್ಲ ಹೆಮ್ಮೆಪಡುತ್ತಿದ್ದಂತೆ ಕಂಡಳು (ಪುನರು. ೧೯೭). ೨. ಅಭಿಮಾನಪಡು: ಪ್ರಾಚೀನಕಾಲದಲ್ಲೆ ಭಾರತೀಯ ಸಾಮಾಜಿಕಜೀವನವು ಗಣ್ಯವಾಗಿ ಮುಂದುವರಿದು ಇಂದು ನಾವು ನೆನೆದರೂ ಹೆಮ್ಮೆಪಡುವಂತಿದ್ದುದು ಗೊತ್ತಾಗುತ್ತದೆ (ಭಾರದ. ೩೭೭). [ಹೆಮ್ಮೆ (< ಪೆರ್ಮೆ) + ಪಡು$_1$]

**ಹೆಮ್ಮೆವಂತ** (ನಾ). ಗರ್ವಿಷ್ಠ; ಅಹಂಕಾರಿ: ತಮ್ಮನಗ್ಗಳನಾದೊಡಣ್ಣನಿಗಿದಿರಾದ ಹೆಮ್ಮೆವಂತರ ಹಿಡಿತಂದು ಸಮ್ಮುಖಿಗ್ಗೆಸಬೇಕಲ್ಲಣ್ಣಗೆ ತಾನೆ ಮುಮ್ಮೊನೆದೋರ್ಪುದು ಚದುರೆ (ಭರಚ. ೫೦-೧೦). [ಹೆಮ್ಮೆ (< ಪೆರ್ಮೆ) + -ವಂತ]

**ಹೆಮ್ಮೆಳೆ** 'ಪೆರ್ಮೆಳೆ' ನೋ.

**ಹೆಮ್ಮೈ, ಹೆಮ್ಮೆಯ್** (ನಾ). ೧. ದೊಡ್ಡ ದೇಹ; ಮಹಾಕಾಯ: ಇಷ್ಟು ಸಣ್ಣ ಮದುಳಿನ ಪೆಡಂಭೂತ ಹೇಗೆ ತಾನೆ ವಿಷಮಸ್ಥಿತಿಯನ್ನು ಎದುರಿಸಿ ತನ್ನ ಹೆಮ್ಮೈಯನ್ನು ಕಾಪಾಡಿಕೊಂಡೀತು? (ಪ್ರಪಂಚ. ೫೭). **ಹೆಮ್ಮೆಯ್**: ೨. ಹಿರಿದಾದ ಜನ್ಮ; ಉತ್ತಮವಾದ ಜನ್ಮ: ಮುಮ್ಮೆಯ್ಯಂ, ಹೆಮ್ಮೆಯ್ಯಂ ಕಮ್ಮದೊಳೊಮ್ಮಿಸಿ ಕಿಱುಮಯ್ಯಂ ಜೊಮ್ಮಿನ ಜಾನಮ್ಮಚ್ಚಿಸಿ (ಉದ್ಭದೀ. ೭-೪೭). 'ಮುಮ್ಮೆಯ್' ಪರಾ. [< ಪಿರಿದು$_1$ + ಮೈ$_1$ (< ಮೆಯ್$_2$)]

**ಹೆಮ್ಮೊಟಬೀಜ** 'ಹೆಮ್ಮುಟ್ಟೆಬೀಜ' ನೋ.

**ಹೆಮ್ಮೊರಡಿ** (ನಾ). ದೊಡ್ಡ ಗುಡ್ಡ: ಕರುಳ ಕುಪ್ಪಳಿ ಕಾಳಿಜದ ಹೆಮ್ಮೊರಡಿ ಕೆನ್ನೆತ್ತರಿನ ಮಡು . . . ಅಸ್ಥಿಗಳ ಸರಿಬೆರಕೆಯಲಿ ಭೂತಕೋಟಿಯ ನೆರವಿ ಗುಣಬಡಿಸಿದವೊಲಿರ್ದುದು (ತೊರಾ. ೬-೪೫-೭೦). [< ಪಿರಿದು$_1$ + ಮೊರಡಿ$_1$ (< ಮೊರಡು$_2$)]

**ಹೆಮ್ಮೊಲೆ** 'ಪೆರ್ಮೊಲೆ' ನೋ.

**ಹೆರ್** 'ಪಿರಿ$_4$' ನೋ.

**ಹೆರ** 'ಪೆಱ$_2$' ನೋ.

**ಹೆರಂಡ** 'ಹೇರಂಡ' ನೋ.

**ಹೆರಕು** 'ಪೆಱಕು' ನೋ.

**ಹೆರತನ** (ನಾ). ಹೊರಗಿನವನು ಎಂಬ ಭಾವನೆ; ಪರಕೀಯತೆ: ಹೆರತನದ ಹೆದರಿಕೆಯು ಹೃದಯದೊಳು ಹೊಕ್ಕಿಹುದು (ಗಂ. ೨೨-೩). [ಹೆರ್$_0$ (< ಪೆಱತು) + -ತನ]

**ಹೆರತು** 'ಪೆಱತು' ನೋ.

**ಹೆರದೆಗೆ** 'ಪೆಱದೆಗೆ' ನೋ.

**ಹೆರಪೌಳಿ** (ನಾ). ಸುತ್ತಲೂ ಇರುವ ಗೋಡೆ; ಹೊರಪ್ರಾಕಾರ: ಎಡಬಲ ದೊಳೊಪ್ಪಿಹುದು ಕೈಶಾಲೆ ಗೋಶಾಲೆ ಹೆರಪೌಳಿ ಕೆರೆ ಭಾವಿ ರಂಜಿಸಿಹುದು (ನವಮೋ. ೧-೯). [ಹೆರ್$_0$ (< ಪೆಱತು) + ಪೌಳಿ$_1$]

**ಹೆರಮಚ್ಚು** (ನಾ). ಒಂದು ಬಗೆಯ ಔಷಧದ್ರವ್ಯ: ಕಷಾಯದ್ರವ್ಯಗಳು – ಬಜೆ, ಗೇರುಬೀಜ, ಅತಿಬಜೆ, ಹೆರಮಚ್ಚು, ವಾಯುವಿಳಂಗ (ಸಕವೈ. ೪೩೭ ಪಂ). [?]

**ಹೆರಮಣೆ** 'ಹೆರೆಮಣೆ' ನೋ.

**ಹೆರಸು** (ಕ್ರಿ). ಬೋಳಿಸು; ಕೆತ್ತು: ಸ್ಕಂಧವಂ ದ್ರೌಪದಿಯನು ಸೆರಗ ಪಿಡಿದೆಳವುತಿರೆ ಪಿಡಿದು . . . ಮಂಡೆ ಹೆರ[ಪಾಠಾಂ. ರೆ]ಸಿ ಬಿಟ್ಟರು ಮೂರು ಪಟ್ಟೆಯಂ (ತುರಂಗ. ೩೭-೧೦). [ಹೆರೆ$_2$ + -ಸು$_1$]

**ಹೆರಹಿಂಗು** 'ಪೆಱಪಿಂಗು' ನೋ.

**ಹೆರಳು$_1$** 'ಪೆಣಲ್' ನೋ.

**ಹೆರಳು$_2$** 'ಪಿಣಿಲ್$_3$' ನೋ.

**ಹೆರಳುಬಂಗಾರ** 'ಹೆಣಲುಭಂಗಾರ' ನೋ.

**ಹೆರಳುಭಂಗಾರ** 'ಹೆಣಲುಭಂಗಾರ' ನೋ.

**ಹೆರಳೆ** 'ಪೇರೀಳೆ' ನೋ.

**ಹೆರಿಗೆ** 'ಹೆಱಿಗೆ' ನೋ.

**ಹೆರಿಗೆಆಸ್ಪತ್ರೆ** (ನಾ). ಗರ್ಭಿಣಿಗೆ ಹೆರಿಗೆಕಾಲದಲ್ಲಿ ಬೇಕಾದ ಚಿಕಿತ್ಸೆಗಳ ಸೌಲಭ್ಯವಿರುವ ಆಸ್ಪತ್ರೆ: ಈ ಹೆರಿಗೆಆಸ್ಪತ್ರೆಯನ್ನು ದಾನಿಗಳೊಬ್ಬರು ಕಟ್ಟಿಸಿದರು (ರೂಢಿ). [ಹೆರಿಗೆ (< ಹೆಱಿಗೆ) + ಆಸ್ಪತ್ರೆ]

**ಹೆರಿಸು** 'ಪೆಱಿಸು' ನೋ.

**ಹೆರು$_1$** 'ಪೆಱು$_1$' ನೋ.

**ಹೆರು$_2$** 'ಪೆಱು$_2$' ನೋ.

**ಹೆರುಗೆ** 'ಹೆಱಿಗೆ' ನೋ.

**ಹೆರೆ$_1$** 'ಪೆಱು$_2$' ನೋ.

**ಹೆರೆ$_2$** (ಕ್ರಿ). ೧. ತೆಂಗಿನಕಾಯಿ ಮೊದಲಾದುವನ್ನು ತುರಿ: ಬೆಂದಾಗ ತೆಂಗಾಯನು ಹೆರೆದದಱ ಮೇಲಿಕ್ಕಿ ಕಲ್ಲ ಮುಚ್ಚುಳ ಮುಚ್ಚಿಯಿರಿಸಿ (ಸೂಪಶಾ. ೩-೪); ತೆಂಗಿನಕಾಯಿಯನ್ನು ಹೆರೆದು . . . ಪ್ರತ್ಯೇಕ ತೆಗೆದಿಡಿರಿ (ಅಡುಸಾ. ೯೪). ೨. (ತರಕಾರಿಯ ಸಿಪ್ಪೆ, ಸೀಸದ ಕಡ್ಡಿ, ಮರದ ಸಾಮಾನು ಮುಂತಾದುವುಗಳ) ಮೇಲ್ಭಾಗವನ್ನು ಒರೆದುಹಾಕು,– ತೆಗೆದುಹಾಕು,– ಕೀಸು: ಕೀಲ ತೆಗೆಯಚ್ಚುಗಳ ಹೆರೆ ಬಲುಗಾಲಿಗಳ ಚೋಡಿಸು (ಕುವ್ಯಾಕ. ೮-೧೨); ಸರಳ್ಗಳಂ ತಿದ್ದಿ ಗಱಿಗಟ್ಟುತುಂ ಬಿಲ್ಗಳಂ ಹೆರೆದು ಹೆದೆಯಂ ಹೂಡುತುಂ (ಚೆಬಪು. ೫೩-೨೧); ನೀರಿನ ಹಂಡೆಯ ಹತ್ತಿರ ಚಿನ್ನಮ್ಮನ ಅಜ್ಜಿ ತೊಂಡೆಕಾಯಿ ಹೆರೆಯುತ್ತಾ ಕುಳಿತಿದ್ದರು (ಮಲೆಮ. ೨೬೪). ೩. ಗೆಬರು; ಕೆರೆ: ಪಲ್ಲಿಂ ನಾಲಗೆಯಂ ಹೆರೆದಪಂ (ಕಾಶಕ್ಕ. ೧೪೨). ೪. ಕೆರೆತವುಂಟಾಗು; ನವೆಯಾಗು: ಇದು ತುಪ್ಪದಲ್ಲಿ ಕರಿದದ್ದು, ಎಣ್ಣೆಯಲ್ಲಲ್ಲ. ತಿಂದರೆ ಗಂಟಲು ಹೆರೆಯುವುದಿಲ್ಲ (ಒಂಟಿದ. ೧೭೧). ೫. ಕ್ಷೌರಮಾಡು: (ಶ). ೬. ಹುಲ್ಲನ್ನು ಅಗೆ: (ಶ). [ದೇ. ‖ ತುಳು. ಪೆರೆ, ಪಿರೆ]

**ಹೆರೆ$_3$** 'ಹೆಱೆ' ನೋ.

**ಹೆರೆ$_4$** 'ಪೊರೆ$_4$' ನೋ.

**ಹೆರೆ$_5$** 'ಪೆಱೆ' ನೋ.

**ಹೆರೆ$_6$** 'ಪೊರೆ$_5$' ನೋ.

**ಹೆರೆ$_7$** (ನಾ). (ಗಾಡಿಯ ಚಕ್ರಕ್ಕೆ ಹಾಕುವ) ಕಪ್ಪಾದ ಎಣ್ಣೆ; ಕೀಲೆಣ್ಣೆ: 'ಹೆರೆಯೆಣ್ಣೆ' ಪರಾ. 'ಎರೆ$_3$' ಹೋ. [?]

**ಹೆರೆಗಟ್ಟು** (ಕ್ರಿ). ೧. ಹೆಪ್ಪಾಗು; ಗಟ್ಟಿಯಾಗು; ಹೆಪ್ಪುಗಟ್ಟು: ಮಾಚಿ ಕೊಟ್ಟುಹೋದ ಘರಮಾಶಿ ತುಪ್ಪವು ಕಾವು ಇಳಿದ ಮೇಲೆ ಹೆರೆಗಟ್ಟಲೇ ಇಲ್ಲ (ಜಾರುದಾ. ೨೩೪). ೨. (ಆಲಂ) ಬಿರುಸಾಗು; ಒರಟಾಗು: ಸಾಂಪ್ರದಾಯಿಕತೆಯಿಂದ ಹೆರೆಗಟ್ಟಿದ ಮನಸ್ಸುಗಳನ್ನು ತುಸುತುಸುವಾಗಿ ಕಾಯಿಸಿ, ಕರಗಿಸುವ ಕೆಲಸ ಅವಳದು (ಮೂಕಜ್ಜಿ. ೩ ಮುನ್ನುಡಿ). [ಹೆರೆ$_3$ (< ಹೆಱೆ$_2$) + ಕಟ್ಟು$_1$]

**ಹೆರೆಗತ್ತಿ** (ನಾ). ನಯಮಾಡುವುದಕ್ಕಾಗಿ ಬಳಸುವ ಕತ್ತಿ: ಅದನ್ನು ಹರಗತ್ತಿಗಳಿಂದ ಹೆರೆದು . . . ಚಾಪೆಯ ಮೇಲೆ ಸುರಿಯುತ್ತಾರೆ (ನಮ್ಮೂರು. ೨೮೭). [ಹೆರ್$_2$ + ಕತ್ತಿ]

**ಹೆರೆಗಳೆ** 'ಪೆರೆಗಳೆ' ನೋ.

**ಹೆರೆಗೆಹಾಲೆ** (ನಾ). ಒಂದು ಬಗೆಯ ಔಷಧೀಸಸ್ಯ: "ಶೃಂಗೀ, ವೃಷಭಃ, ವೃಷಃ - ಹೆರೆಗೆಹಾಲೆಯ ಹೆಸರು. ವೃಷಭವೆಂಬುವ ಮೂಲಿಕೆ" (ಸಿದ್ಧಾಂತಿ. ೧೩೪). [ಹೆರೆಗ್$_0$ + ಹಾಲ್$_2$ (< ಪಾಲ್$_2$)]

**ಹೆರೆಗೊಂಬು** (ನಾ). ಹೆರೆಯೆಣ್ಣೆಯನ್ನು ತುಂಬಿಡಲು ಬಳಸುವ, ಕೊಂಬಿನಿಂದ ಅಥವಾ ಬಿದಿರಿನಿಂದ ಮಾಡಿದ ಕೊಳವೆ: (+). [ಹೆರ್$_7$ + ಕೊಂಬು$_1$]

**ಹೆರೆಗೊಳು** (ಕ್ರಿ). (ಆಲಂ) ನಶಿಸು (?): ಉರಗನ ಬಾಯ ಕಪ್ಪೆಯಂತೆ ಸಂಸಾರ ಹೆರೆಗೊಳುತ್ತಿರ್ದುದಲ್ಲಾ (ಲಿಂಗಲೀ. ೯೭-೫). [ಹೆರ್$_7$ + ಕೊಳು (< ಕೊಳ್$_1$)]

**ಹೆರೆತುಪ್ಪ** 'ಹೆಱುದುಪ್ಪ' ನೋ.

**ಹೆರೆದುಪ್ಪ** 'ಹೆಱುದುಪ್ಪ' ನೋ.

**ಹೆರೆನಾಮ** (ನಾ). ಅರ್ಧಚಂದ್ರಾಕೃತಿಯಲ್ಲಿಟ್ಟುಕೊಳ್ಳುವ ಬೊಟ್ಟು ,– ತಿಲಕ: ಕಸ್ತೂರಿ ತಿಲಕ ಕಣ್ಣಂಜನ ಹೆರೆನಾಮ ಸಿಸ್ತಾದ ನೀಟು ಮೈಸಿರಿಯು (ಸೌಂದಕಾ. ೩-೩೭). [ಹೆರ್$_5$ (< ಪೆಱ್) + ನಾಮ]

**ಹೆರೆನೊಸಲು** 'ಪೆಱ್ನೊಸಲ್' ನೋ.

**ಹೆರೆಮಣೆ, ಹೆರಮಣೆ** (ನಾ). ಕೊಬ್ಬರಿ ಮುಂತಾದುವನ್ನು ತುರಿಯುವ, ಸಣ್ಣ ಸಣ್ಣ ಕಣ್ಣುಗಳಿರುವ ಲೋಹದ ಸಾಧನ: ಆ ಹೆರೆಮಣೆಯಿಂದ ಕೊಬ್ಬರಿ ತುರಿಯುತ್ತಾರೆ (ರೂಢಿ). **ಹೆರಮಣೆ:** ಅತ್ತೆ - ಹೆರಮಣೆಯಲ್ಲಿ ಕಾಯಿ ತುರಿಯುತ್ತ ಅವರ ಅತೀವ ಸಂತೋಷವನ್ನು . . . ವ್ಯಕ್ತಪಡಿಸಿದರು (ಹೊಸಕ್ಕ. ೭೭). [ಹೆರ್$_2$ + ಮಣೆ$_1$]

**ಹೆರೆಯಂಬು** 'ಪೆಱ್ಯಂಬು' ನೋ.

**ಹೆರೆಯಲಗು** (ನಾ). ಅರ್ಧಚಂದ್ರಾಕೃತಿಯ ತುದಿಯನ್ನು ಹೊಂದಿರುವ ಒಂದು ಬಗೆಯ ಬಾಣ; ಹೆರೆಯಂಬು: ಹೆರೆಯಲಘುEಗುತೆಮುಳ್ಳಲಘುEಗುತೆಗಾಣದ ತೆರದಲಘುEಗುತೆ . . . ಮೊದಲಾದ ಶರಗಳನು ತೊಟ್ಟು (ಜರಾಮಾ. ೨೮೦-೩೭). [ಹೆರ್$_5$ (< ಪೆಱ್) + ಅಲಗು$_2$]

**ಹೆರೆಯುಬ್ಬು** 'ಪೊರೆಯುರ್ಬು$_1$' ನೋ.

**ಹೆರೆಯುರ್ಬು** 'ಪೊರೆಯುರ್ಬು$_1$' ನೋ.

**ಹೆರೆಯೆಣ್ಣೆ** (ನಾ). ಗಾಡಿಯ ಚಕ್ರಕ್ಕೆ ಹಾಕುವ ಎಣ್ಣೆ; ಎರೆ; ಕೀಲೆಣ್ಣೆ: ಆಸಗೆಟ್ಟುವೊ ಪುರಿ ಹರೆಯೆಣ್ಣೆ ತೀದುದೊ ಅಸವಾಶ್ವಗಳು ಬಾಂದೊಱೆಯ ಕೆಸಱೊಳು ಬಿದ್ದೇಳಲಾಱದಾದುವೊ (ಮೋಹತ. ೨೭-೧೯); ಚಿಮಣೆಎಣ್ಣೆ, ಕೀಲದೆಣ್ಣೆ, ಹೆರೆಯೆಣ್ಣೆ (ಭಾಷಾಶಾ. ೧೭೫). [ಹೆರ್$_7$ + ಎಣ್ಣೆ]

**ಹೆರೆಹೆಚ್ಚು** (ಕ್ರಿ). ೧. ಅತಿಶಯವಾಗು; ಅತಿಶಯಿಸು: ಹದಿರಿನ ಗೊಟ್ಟಿ ಹಂಗಿಸುವ ನಾಣ್ನುಡಿ . . . ಹೆರೆಹEಹೆಚ್ಚದ ಮೋಹಮಸತ್ಕದಾಣೆ (ದಶಕು. ೧-೪೪); ಆ ಗುರುವರ ಭಾವದೊಳು ಹೆರೆಹೆಚ್ಚಿಯಿಂತಪ್ಪ ಸತ್ಪುರುಷನಾವ ಕಾರ್ಯಕ್ಕೆ ಕಳುಹಲು ಮಾರುವನಲ್ಲ . . . ಎನುತ ನಿಶ್ಚೈಸಿ (ನವಮೋ. ೫-೭). ೨. ಅತಿಶಯವಾಗಿ ಉಕ್ಕು: ಕಾರುಣ್ಯನಿಧಿ ಮೊಗವೆತ್ತಿಯತಿ ದಯವಾರಾಸಿ ಹೆರೆಹೆಚ್ಚಿದಂತೆ . . . ನುಡಿಸಿದನು ಜಡಜಭವನಾ (ನವಮೋ. ೪-೧೨). [< ಪಿರಿದು$_1$ + ಹೆಚ್ಚು$_1$ (< ಪೆರ್ಚು$_1$)]

**ಹೆರ್ಗುಳಿ** 'ಪೆರ್ಗುಟಿ' ನೋ.

**ಹೆರ್ಗಡಲ್** 'ಪೆರ್ಗಡಲ್' ನೋ.

**ಹೆರ್ಗಡಿತಿ** 'ಪೆರ್ಗಡಿತಿ' ನೋ.

**ಹೆರ್ಗಡೆ** 'ಪೆರ್ಗಡೆ$_1$' ನೋ.

**ಹೆರ್ಗಱ** 'ಪೆರ್ಗಱ' ನೋ.

**ಹೆರ್ಜುಂಕ** 'ಪೆರ್ಜುಂಕ' ನೋ.

**ಹೆರ್ಜುಗ್ಗಿ , ಹೆಜ್ಜುಗ್ಗಿ** (ನಾ). ಹಿರಿಯ ಸುಗ್ಗಿಯ ಕಾಲ: ಹೆರ್ಜುಗ್ಗಿಯ ಪುಣ್ಣಮಿ ಸೋಮವಾರದನ್ದಿನ ಶುಭಲಗ್ನದೊಳ್ (ಇಆ X. ೨೫೨-೩೯; 1108). **ಹೆಜ್ಜುಗ್ಗಿ:** ಹೆಜ್ಜುಗ್ಗಿಯ ಹಬ್ಬವೊ[೦]ಭತ್ತುದಿನ ಸುಂಕ ನೂಱೆತ್ತಿನ ಪರಿಹಾರಯಿಂತಿನಿತುಮಂ ಸರ್ವ್ವಾಬಾಧಿ ಸರ್ವ್ವನಮಸ್ಯವಂ ಮಾಡಿ ಕೊಟ್ಟರು (ಎಇ. XXI. ೧೪-೬೨; 1260). [< ಪಿರಿದು$_1$ + ಸುಗ್ಗಿ]

**ಹೆರ್ತ** 'ಪೆಱು$_2$' ಪರಾ.

**ಹೆರ್ತು** 'ಪೆಱು$_2$' ಪರಾ.

**ಹೆರ್ದೆಸೆ** 'ಪೆಱ್ದೆಸೆ' ನೋ.

**ಹೆರ್ದೊಡೆ** 'ಪೆರ್ದೊಡೆ' ನೋ.

**ಹೆರ್ಬಟ** 'ಪೆರ್ಬಟ್ಟ' ನೋ.

**ಹೆರ್ಮಗ** 'ಪೆರ್ಮಗ' ನೋ.

**ಹೆರ್ಮಾಗೆ** (ನಾ). ಒಂದು ಊರಿನ ಹೆಸರು: ಕರ್ಪೂರ ತುಱುವಂ ನೋಱಮ್ಮನ ಪರಿಬಸ್ಸು ಹೆರ್ಮ್ಮಾಗೆಯ ಪಳಿಯೊಳಿಕ್ಕೆ (ಎಕ. XII. ತಿಪಟೂ. ೧೧೦-೬; ಸು. 930 ?). [?]

**ಹೆರ್ಮಾಡಿ** 'ಪೆರ್ಮಾನಡಿ' ನೋ.

**ಹೆರ್ವಾರುವ** 'ಪೆರ್ವಾರ್ವ' ನೋ.

**ಹೆಲೆಯಬ್ಬೆ** (ನಾ). ಒಬ್ಬಾಕೆಯ ಹೆಸರು: ತನ್ನ ಮನೋನಯನವಲ್ಲಭೆಯರಪ್ಪ ನಾಗಿಯಬ್ಬೆಗಂ ಹೆಲೆಯಬ್ಬೆಗ . . . ಕಟ್ಟಿಸಿದ ನೈರುತಿ ಭಾಗದ ಮುಟ್ಟದ ಕೆರೆಯ (ಎಕ. XII. ಸಿರಾ. ೩೯-೨೯; 920). [ ? + ಅಬ್ಬೆ$_1$]

**ಹೆಲ್ಲ$_1$** (ನಾ). ಒಂದು ಬಗೆಯ ಆಯುಧ: ಹೆಲ್ಲಮಂ ಹೆಲ್ಲಮನೋರೊಂದಂ ಪಿಡಿವುದಾವ ಯುದ್ಧದೊಳದು, ಹೆಲ್ಲಾಹೆಲ್ಲಿ (ಶಬ್ದಾನು. ೩೧೨ ಪ್ರಯೋ). 'ಹೆಲ್ಲಾಹೆಲ್ಲಿ' ಪರಾ. [?]

**ಹೆಲ್ಲ$_2$** (ನಾ). ಚದುರುವಿಕೆ (?): ಮತ್ತಮಲ್ಲಿ ಹುಲ್ಲೆಡೆ ಹೆಲ್ಲವಾಗಿ ತಾಱುಂತಟ್ಟುಂ ಬೀಱುತ್ತಿರೆ ಪೋದ ಮಱಿವಿಂಡಿನ ತಂಡವಚ್ಚೆಗಳುಮಂ . . . ಮಯೂರಂಗಳ ವೃಂದವಚ್ಚೆಗಳುಮಮಂ ಕಂಡು (ಕುಸುಮಾ. ೧೪-೨೯ ವ). [?]

**ಹೆಲ್ಲಣ** 'ಹೆಲ್ಲಣ್ಣೆ$_2$' ನೋ.

**ಹೆಲ್ಲಣ$_1$** 'ಪೆಲ್ಲಣ' ನೋ.

**ಹೆಲ್ಲಣ$_2$** 'ಪೆಲ್ಲಣ' ನೋ.

**ಹೆಲ್ಲಣೆ$_1$** 'ಪೆಲ್ಲಣೆ' ನೋ.

**ಹೆಲ್ಲಣೆ$_2$, ಹೆಲ್ಲಣ, ಹೆಲ್ಲಣ್ಣೆ$_2$** (ನಾ). ನಿಷ್ಠುರತೆ; ಕಾಠಿಣ್ಯ: "ಹೆಲ್ಲ [ಪಾಠಾಂ. ಹೆಲ್ಲ]ಣೆ ನಿಟ್ಟುರ ನಿಷ್ಠುರಂ" (ಕವಿಕಂ. ೨೦೩); ಇನಿತು ಹೆಲ್ಲಣೆಯೊ ಬಡಭಿಲ್ಲನೊಳಕಟ ದೇವ! (ಹಬ್ಬರ. ೧೨-೭೭). **ಹೆಲ್ಲಣ:** "ನಿಟ್ಟುರ ಹೆಲ್ಲಣ [ಪಾಠಾಂ. ಹೆಲ್ಲಣೆ, ಹೊಲ್ಲೆಹ] ಮೊನಲ್ಕೆ ನಿಟ್ಟುರಮೆನಿಕ್ಕುಂ" (ಕಬ್ಬಿಕ್ಕ. ೫೭). **ಹೆಲ್ಲಣ್ಣೆ$_2$:** "ಹೆಲ್ಲಣೆಯೆಂದುಂ ನಿಟ್ಟುರಮೆಂದುಂ ನಿಷ್ಠುರಂ" (ಕಕಸಾ. ೭೭-೪೯೯). [?]

**ಹೆಲ್ಲಣೆಗುಡು** (ಕ್ರಿ). ಕೊಳಲನ್ನು ಒಂದು ನಿರ್ದಿಷ್ಟವಾದ ಗತ್ತಿನಲ್ಲಿ ನುಡಿಸು: ಲಲ್ಲೆಗೊಡುವ ಕೌಸಳದ ಹEಹೆತೆಲ್ಲಣೆಗುಡುವ ವಾಸದ . . . ಸಂಗೀತದ ಸಂದಣಿಯೊಳ್ (ಮಲುರ. ಹ. ೧೭೯-೧೧). [ಹೆಲ್ಲಣೆ$_1$ (< ಪೆಲ್ಲಣೆ) + ಕುಡು$_1$ (< ಕೊಡು$_1$)]

**ಹೆಲ್ಲರ** (ನಾ). ಒಂದು ಬಗೆಯ ಮೀನು: ನಗಲು ಹೆಲ್ಲರಂ ಬಂಕುರುಂ . . . ಗಿಱಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಚಕಾ. ೫-೪೭). [?]

**ಹೆಲ್ಲವಣೆ** 'ಪೆಲ್ಲಣೆ' ನೋ.

**ಹೆಲ್ಲಾಹೆಲ್ಲಿ, ಪೆಲ್ಲಾಪೆಲ್ಲಿ** (ನಾ). ಒಂದು ಬಗೆಯ ಆಯುಧದಿಂದ ಮಾಡುವ ದ್ವಂದ್ವಯುದ್ಧ (?): ಮುಟ್ಟಾಮುಟ್ಟಿ, ಹೆಲ್ಲಾಹೆಲ್ಲಿ, ದಾಟಾದಾಟಿ (ಶಮದ. ೧೮೫ ಪ್ರಯೋ); ಕೂಡೆ ಕೇಶಾಕೇಶಿ ಪರಿದು ಹಾಣಾಹಾಣಿಯಂತೆ ಹೆಲ್ಲಾಹೆಲ್ಲಿ ಯುದ್ಧಮಾಡುದು (ಸಾಳ್ವಭಾ. ೨೫-೧೪); ಹೆಲ್ಲಮಂ ಹೆಲ್ಲಮನೋರೊಂದಂ ಪಿಡಿವುದಾವ ಯುದ್ಧದೊಳದು ಹೆಲ್ಲಾಹೆಲ್ಲಿ (ಶಬ್ದಾನು. ೩೧೨ ಪ್ರಯೋ); ಭರದೆ ಕೇಶಾಕೇಶಿಯಿಂದ ಹಾಣಾಹಾಣಿಯಿಂದ ಹೆಲ್ಲಾಹೆಲ್ಲಿಯಿಂ ಮೊರೆವುತುಂ (ಚತುಪು. ೪-೬-೭). Δ **ಪೆಲ್ಲಾಪೆಲ್ಲಿ:** ಸೇನಾನಾಯಕಂ ನಾಯಕನಾಗಿ . . . ವಜ್ರದ [ಗುದಿ]ಗೆಗಳಂ ಪಿಡಿದು ಕಿಡಿಗುಟ್ಟಿದಂತೆ

ಮೇಘಮುಖದೊಳ್ ತಾಗೆ ಪೆಲ್ಲಾಪೆಲ್ಲಿಯಿಂ ಭರಂಗೆಯ್ದು ಕಾದುವಲ್ಲಿ (ವರ್ಧಮಾ. ೯-೫೫ ವ); ಪಲವುಂ ಶಸ್ತ್ರಂಗಳಿಂ ಕಾದುತಂ ಪೆಲ್ಲಾಪೆಲ್ಲಿಯೊಳಗ್ಗಿ ತಗ್ಗಿ ಪೊಡರ್ದೆರ್ದೆಯ್ಯಂದು ಮತ್ತಂ ಕರಂ ಮಲ್ಲಾಮಲ್ಲಿ ತಗುಳ್ದುರುಳ್ತರೆ ಪಡಲ್ಪಟ್ಟತ್ತು [ತ]ತ್ಸಾಧನಂ (?) (ಬಂಹರಿ. ೭-೫). [< ಹೆಲ್ಲಿ$_1$]

**ಹೆಸರಣಿ** 'ಹೆಸರಣೆ' ನೋ.

**ಹೆಸರಣೆ**, ಹೆಸರಣಿ, ಹೆಸರೆಣೆ (ನಾ). ಒಂದು ಬಗೆಯ ಬಳ್ಳಿ: "ಸಾರಿಣಿ, ಪ್ರಸಾರಿಣಿ, ಕಟಂಭರಾ, ರಾಜಬಲಾ, ಭದ್ರಬಲಾ - ಈ ೫ ಹೆಸರಣೆ. ಕಳ್ಳನ ಚವಲಿಯೆಂಬರು" (ನಾಚಿರಾ. ೧೧೨). **ಹೆಸರಣಿ:** "ಚಾರುಪರ್ಣಿ - ಹೆಸರಣಿ" (ಅಕಾನಿ. ೧೦-೫). **ಹೆಸರೆಣೆ:** "ಕಟುಂಭರಾ - ಹೆಸರೆಣೆ" (ಓಷಧಿ. ೨೩); "ಭದ್ರಪರ್ಣೀ - ಹೆಸರೆಣೆ" (ಓಷಧಿ. ೧೧೦). [< ಸಂ. ಪ್ರಸಾರಿಣೀ]

**ಹೆಸರಾನು** 'ಪೆಸರಾನ್' ನೋ.

**ಹೆಸರಿಡು** 'ಪೆಸರಿಡು' ನೋ.

**ಹೆಸರಿಸು** 'ಪೆಸರಿಸು' ನೋ.

**ಹೆಸರು$_1$** 'ಪೆಸರ್' ನೋ.

**ಹೆಸರು$_2$** 'ಪೆಸಱ್' ನೋ.

**ಹೆಸರುಂಡೆ** (ನಾ). ಹೆಸರುಹಿಟ್ಟಿಗೆ ಬೆಲ್ಲ ಅಥವಾ ಸಕ್ಕರೆ, ತುಪ್ಪ ಮುಂತಾದುವುಗಳನ್ನು ಸೇರಿಸಿ ಮಾಡುವ ಒಂದು ಬಗೆಯ ಸಿಹಿ ಉಂಡೆ: ತಂಬಿಟ್ಟು, ಹೆಸರುಂಡೆ, ಚಕ್ಕುಲಿ ತಯಾರಿಸಿದರು (ಕವಪು. ೩-೮೭). [ಹೆಸರು$_2$ (< ಪೆಸಱ್) + ಉಂಡೆ]

**ಹೆಸರುಕೆಡು** 'ಪೆಸರ್ಗಿಡು' ನೋ.

**ಹೆಸರುಗೊಳ್** 'ಪೆಸರ್ಗೊಳ್' ನೋ.

**ಹೆಸರುಗೊಳ್ಳು** 'ಪೆಸರ್ಗೊಳ್' ನೋ.

**ಹೆಸರುವಡೆ** 'ಪೆಸರ್ವಡೆ' ನೋ.

**ಹೆಸರುವಾಸಿ** 'ಪೆಸರ್ವಾಸಿ' ನೋ.

**ಹೆಸರುಹಿಡಿ** 'ಪೆಸರ್ವಿಡಿ' ನೋ.

**ಹೆಸರೆಣೆ** 'ಹೆಸರಣೆ' ನೋ.

**ಹೆಸರ್ಗೊಳ್** 'ಪೆಸರ್ಗೊಳ್' ನೋ.

**ಹೆಸವ** (ನಾ). ಒಂದು ಬಗೆಯ ಮರ: ಹಲಸು ಹೆಸವಂ ಬಿಳಲ್ ಬದರಿ ಸಾಲಮಾ ಹೊನ್ನೆ ಚೆನ್ನಂಗಿ ಮೊದಲಾದ ವೃಕ್ಷಂಗಳಿಂ ವನಮೆಸೆದುದು (ಚಿಬಪು. ೫೩-೧೮); ಮರಗಳು: ಹೆಸವ, ಹೆಬ್ಬಲಸು . . . ದೇವದಾರು (ನಮ್ಮನು. ೨೩೭). [?]

**ಹೆಸಱ್** 'ಪೆಸಱ್' ನೋ.

**ಹೆಸಱು** 'ಪೆಸಱ್' ನೋ.

**ಹೆಸೆ** (ಕ್ರಿ). ಹಿಂಜು; ಹಿಸಿ (?): ಹೊಸೆಯಿರೋ ಕಾಲೊಳು ಹಂಜಿಯ ಹೊಸೆವಂತೆ ಎಸೆಯಿರೊ ತಲೆ ಪಱೆವಂತೆ ಹೆಸೆಯಿರೊ ಹತ್ತಿಯ ಹೆಸೆವಂತೆ ದುಷ್ಟನ ಕುಸುರಿದಱಿಯಿರೊ ಬಾಳುಗಳಿಂ (ಜ್ಞಾನಚಿ. ೩೫-೧೧೯). [?]

**ಹೆಸ್ಸರಿ** 'ಹೆಸ್ಸರೆ' ನೋ.

**ಹೆಸ್ಸರೆ**, ಹೆಸ್ಸರಿ (ನಾ). ಒಂದು ಬಗೆಯ ಸಸ್ಯ: ಹೆಸ್ಸರೆ, ಅಂಚೆ (ಮೈಡಿಗಿ. ೫೪-೧೦೭೮). **ಹೆಸ್ಸರಿ:** ಕರಿಹೆಸ್ಸರಿಮರ, ಹೆಸ್ಸರಿ (ಮೈಡಿಗಿ. ೭೭-೧೩೭೪). [?]

**ಹೆಳಕೆ** 'ಪೆಳಕೆ' ನೋ.

**ಹೆಳಲು** 'ಪೆಣಲ್' ನೋ.

**ಹೆಳಲುಬಂಗಾರ** 'ಹೆಣಲುಭಂಗಾರ' ನೋ.

**ಹೆಳವ** 'ಪೆಟವ' ನೋ.

**ಹೆಳವಿ** 'ಪೆಟವಿ' ನೋ.

**ಹೆಳವು$_1$** (ಕ್ರಿ). ೧. ವಕ್ರವಾಗಿ ನಡೆ; ಕುಂಟು: "ಖಂಜತಿ - ಹೆಳವಿದಪಂ; ಖಂಜಃ - ಹೆಳವಂ" (ಕಾಶಕ್ಕ. ೧೪). ೨. ನಿಧಾನಗತಿಯಲ್ಲಿ ಸಾಗು: ಮೊದಲಿಂದ ಕೊನೆಯ ತನಕ ಕತೆ ಅಡ್ಡದಾರಿ ಹಿಡಿಯದೆ, ಹೆಳವದೆ, ಕಪಾಟಕಟ್ಟಿದ ಕುದುರೆಯಂತೆ ನಾಯಕನ ಗತಿಯನ್ನು ಹಿಂಬಾಲಿಸುತ್ತದೆ (ನಂಜುಂಡ. ೧೫೦). [< ಪೆಟವು]

**ಹೆಳವು$_2$** 'ಪೆಟವು' ನೋ.

**ಹೆಳಹು** (ಕ್ರಿ). ೧. ಹೆಳವುವಮಾಡು; ಕುಂಟುವಮಾಡು. ೨. (ಆಲಂ) ಚಲಿಸದಿರುವಂತೆ ಮಾಡು; ಸ್ಥಿರಗೊಳಿಸು: ಮೇದಿನಿಯ ಭಾರವನಿಳುಹಿದನು ಸುರಲೋಕಲಕ್ಷ್ಮಿಯ ಹೆಳಹಿದನು ಹೇರಾಳ ಹೆಸರಿನ ಹೆಮ್ಮೆ ಪೂರೈಸೆ (ನಿಭಾಗ. ೮-೨೧-೫೭). [< ಹೆಳವು$_1$]

**ಹೆಳೆ$_1$** (ನಾ). ನೆಪ; ನೆವ: ಬೂದನ ಕೆಲಸ ಅದು. ಈಗ ಮಕ್ಕಳ ಹೆಳೆ ಹೇಳುತ್ತಾನೆ (ಕುಡಿಕೂ. ೯೮). [?]

**ಹೆಳೆ$_2$** (ನಾ). (?): ತೆಂಕಣಂ ಬಂಡ(ದ) ಮುಗುಳಿಯ ಹಳ್ಳವದರ್ಕ್ಕೆ ತೆಂಕಣ ಹೆಳೆ ಪಡುವಲಾ ಹಳ್ಳಂ (ಎಇ. XIII, ತಿ೧-೫೪; 1024). [?]

**ಹೆಳೆಯ** (ನಾ). ಪರಿಚಾರಕ (?): ಬಳೆದಂತಾ ಬಿಜ್ಜಳಂಗೇನದಟೆಸೆದುದೊ ಪೇಟ್ ಸಿಂಹಳಾಧೀಶ್ವರಂ ಬೆತ್ತಳಿಗಂ . . . ಹೆಳೆಯಂ ಪಾಂಡ್ಯಂ ಕಳಿಂಗಂ ಕರಿಪರಿಚರನಾಗಾಳ್ವೆಸಂಗೆಯ್ಯೆ ನಿಚ್ಚಂ (ಎಕ. VII, ಶಿಕಾರಿ. ೧೯೭-?; 1182). [?]

**ಹೆಳ್ಳೆ** (ನಾ). ಮಣ್ಣಿನ ಹೆಂಟೆ,— ಮುದ್ದೆ: "ಹಳ್ಳೆ = ಹೆಂಟೆ" (ಗಂಗಾಮ. ೩೫೨). [?]

**ಹೆಱ** 'ಪೆಱ$_2$' ನೋ.

**ಹೆಱಗು** 'ಪೆಱಗು' ನೋ.

**ಹೆಱಗೆ** 'ಪೆಱಗೆ' ನೋ.

**ಹೆಱತೆಗೆ** 'ಪೆಱದೆಗೆ' ನೋ.

**ಹೆಱತೊಲಗು** (ಕ್ರಿ). ಹಿಂದಕ್ಕೆ ಸರಿ; ಹಿಮ್ಮೆಟ್ಟು; ಹಿಂಜರಿ: ವೇದ ನಡನಡುಗಿತ್ತು . . . ಆಗಮ ಹೆಱತೊಲಗಿ ಅಗಲಿ ಇದ್ದಿತ್ತಯ್ಯಾ (ಬಸವ. ೭೪೯). [ಹೆಱ (< ಪೆಱಗು) + ತೊಲಗು$_1$]

**ಹೆಱದೆಗಹ** (ನಾ). ಹಿಂದೆ ಉಳಿಯುವುದು; ಹಿಂದಕ್ಕೆ ಸರಿಯುವುದು: ಅಗಲಲಾದುದೆ ನನಗೆ ಭರತಾದಿಗಳನಯ್ಯನ ಮರಣದಲಿ ಹೆಱದೆಗಹ [ಪಾಠಾಂ. ಹೆಱೆತೆಗಹ] ವಾದುದೆ ಜನನಿಯಂಘ್ರಿಸರೋಜಸೇವೆಯಲಿ (ತೊರರಾ. ೩-೨-೧೨). [ಹೆಱ (< ಪೆಱಗು) + ತೆಗ$_1$ + - ಹ$_2$ (< - ಪ$_2$)]

**ಹೆಱದೆಗೆ** 'ಪೆಱದೆಗೆ' ನೋ.

**ಹೆಱಮೆಟ್ಟು** 'ಪೆಱಮೆಟ್ಟು' ನೋ.

**ಹೆಱಸಾರ್** 'ಪೆಱಸಾರ್' ನೋ.

**ಹೆಱಸಾರು** 'ಪೆಱಸಾರ್' ನೋ.

**ಹೆಱಹಿಂಗು** 'ಪೆಱಪಿಂಗು' ನೋ.

**ಹೆಱಿಗೆ**, ಹೆರಿಗೆ (ನಾ). ಹಡೆಯುವಿಕೆ; ಪ್ರಸವಿಸುವಿಕೆ; ಪ್ರಸವ: ಹೆಱಿಗೆಗೆ - ಕೊಡಸಿಗನನರೆದು ಕಿಬ್ಬೊಟ್ಟೆಯ ಪೂಸಲು ಬೇಗ ಹೆಱಲಕ್ಕು (ವಿವೈಪಿ. ೯೧). **ಹೆರಿಗೆ:** ಜನ್ನಯ್ಯ ತಮ್ಮ ಹೆಂಡತಿಯನ್ನು ಹೆರಿಗೆಗಾಗಿ ತಾಯಿಮನೆಗೆ ಕಳುಹಿಸಿದಾಗ (ಪದ್ಮಸ. ೨೨೦); ಅವರ ಮೂರನೆಯ ಹೆರಿಗೆ ತೊಂದರೆಯಿಂದಲೇ ಆಯಿತು (ಹಬ್ಬಬ. ೨೯).

**ಹೆರಿಗೆಯಾಗು** = ಪ್ರಸವವಾಗು; ಮಗು ಹುಟ್ಟು: ಹೆರಿಗೆಯಾದ ಮೇಲೆ ಮಗುವು ಅತ್ತುದನ್ನು ಕೇಳಿ . . . ತಾಯಿಯ ಮನಸ್ಸಿಗೆ ನೆಮ್ಮದಿಯಾಗುತ್ತದೆ (ಗೃಹವಿ. ೧೦೩). [ಹೆಱು$_1$ (< ಪೆಱು$_1$) + - ಇಗೆ$_0$]

**ಹೆಱಿಸು** 'ಪೆಱಿಸು' ನೋ.

**ಹೆಱು$_1$** 'ಪೆಱು$_1$' ನೋ.

**ಹೆಱು$_2$** 'ಪೆಱು$_2$' ನೋ.

**ಹೆಱುಗೆ**, ಹೆರುಗೆ (ನಾ). ಹೆರಿಗೆ; ಪ್ರಸವ: ಹೆಱುಗೆಯ ಹೊತ್ತಿನೊಳಗಣ ಕಪೋತಿ ಪೆತ್ತರಗಿಳಿ ಕುಟುಕೀವ ಪರಮೆವಱ ಒತ್ತಾಡಿ ಸೋಗೆಯೊಪ್ಪಿದುವು (ಶ್ರೀಪಾಲ. ೨-೫). **ಹೆರುಗೆ:** "ರುಹ-ಜನ್ಮನಿ, ಹೆರುಗೆಯೊಳ್" (ಕಾಶಕ್ಕ. ೧೫೦). 'ಹೆಱಿಗೆ' ಪರಾ.

**ಹೆಱುಗೆಯ ಮನೆ** = ಹೆರಿಗೆಯನ್ನು ಮಾಡಿಸುವ ಮನೆ; ಸೂತಿಕಾಗೃಹ: ಹೊದ್ದಿದನೊಲವಿಂದ ಹೆಱುಗೆಯ ಮನೆಯನು ಮುದ್ದಿನ ಮಗನ ನೋಡಿದನು (ಭರಚ. ೨೫-೯೩). [ಹೆಱು$_1$ (< ಪೆಱು$_1$) + - ಗೆ]

**ಹೆಱುದುಪ್ಪ**, ಹೆರೆತುಪ್ಪ, ಹೆರೆದುಪ್ಪ, ಹೆಱೆದುಪ್ಪ (ನಾ). ಹೆಪ್ಪುಗಟ್ಟಿದ ತುಪ್ಪ;

ಗಟ್ಟಿಯಾದ ತುಪ್ಪ: ನಿಷ್ಕಲಲಿಂಗಸ್ಥಲವನೆಯ್ದಿದ ಪರವಸ್ತು ತಿಳಿದುಪ್ಪವೆ ಗಟ್ಟಿಗೊಂಡು ಹೆಱುದುಪ್ಪವಾದ ಹಾಗೆ . . . ಮಹಾಲಿಂಗಸ್ಥಲವನೆಯ್ದಿತ್ತು (ಸಿದ್ಧೇಪ. ೧೦-೩೨). **ಹೆರೆತುಪ್ಪ:** ಹೊಸಬತ್ತಿಯನ್ನು ಹೆರೆತುಪ್ಪದಲ್ಲಿ ತೋಯಿಸಿ, ದೀಪ ಹಚ್ಚಿದಳು (ಬಾಳಿಷ್ಟ. ೬೩). **ಹೆರೆದುಪ್ಪ :** ತಿಳಿದುಪ್ಪ ಹೆರೆದುಪ್ಪವಾದಂತೆ ಈ ಸ್ವಯಂಜ್ಯೋತಿಲಿಂಗವೇ ಗಟ್ಟಿಗೊಂಡು . . . ರೂಹುಗೊಂಡಿದೆಯಲ್ಲದೆ ಬೇರಲ್ಲ (ಮೋಳಿಮಾ. ೯ ಪ್ರಸ್ತಾವನೆ). **ಹೆಱ್ದುಪ್ಪ:** ವಾರಿ ಶರಧಿಯ ಕೂಡಿದ ಹಾಗೆ ಹೆಱ್ದು[ಪಾಠಾಂ. ತು]ಪ್ಪದ ಹಾಗೆ (ಮಡಿವಾ. ೪೧-೫೭); ಹೆಱ್ದುಪ್ಪ ಸಕ್ಕರೆಯ ಬೆರಸಿದಾ ಹೂರಣವನಿರದಿಕ್ಕಿದೊಡ (ಸೂಪಶಾ. ೧-೨೭); ತಿಳಿದುಪ್ಪ ಗಟ್ಟಿಗೊಂಡು ಹೆಱ್ದುಪ್ಪವಾದಂತೆ (ಅಖಂಡೇ. ೧೧೯-೫೧).

[ಹೆಱು$_2$ (< ಪೆಱು$_2$) + ತುಪ್ಪ]

**ಹೆಱುಹ** (ನಾ). ಹಡೆಯುವಿಕೆ; ಪ್ರಸವಿಸುವಿಕೆ; "ಪ್ರಸೂತಿ, ಪ್ರಸವ" (ನಾಚಿರಾ. ೬). [ಹೆಱು$_1$ (< ಪೆಱು$_1$) + - ಹ$_2$ (< - ಪ$_2$)]

**ಹೆಱ್$_1$** 'ಪೆಱು$_2$' ನೋ.

**ಹೆಱ್$_2$, ಹೆರೆ$_3$** (ನಾ). ಹೆಪ್ಪುಗಟ್ಟಿರುವುದು; ಗಡ್ಡೆ; ಗಟ್ಟಿಯಾದುದು: ಸತಿಯರು ಹೆಱ್ಯ ತುಪ್ಪವನವನಿಪತಿಗಳಿಗೆಱ್ದರಕ್ಕರದಿ (ಕಾಶೀರಾ. ೨-೬೭). **ಹೆರೆ$_3$:** 'ಹೆರೆದುಪ್ಪ' ಪರಾ.

**ಹೆಱ್ಯಾಗು, ಹೆರೆಯಾಗು = ಹೆಪ್ಪುಗಟ್ಟು; ಗಟ್ಟಿಯಾಗು:** ಹಾಲೊಳಗೆ . . . ಹೆಪ್ಪಂ ಬಿಟ್ಟು ಹಿಂಜಾವದೊಳಗೆಯಾ ಹಾಲು ನಸುಹೆಱ್ಯಾಗಲಾ ಹೆಪ್ಪ ತೆಗೆದು (ಸೂಪಶಾ. ೨-೯); ಚಳಿಯಿಂದ ಹೆರೆಯಾದ ಎಣ್ಣೆಯು, ಸೆಕೆ ಹೆಚ್ಚಲು ಕರಗಿ ತಿರುಗಿ ದ್ರವವಾಗುವುದು (ಬಾಲಪ್ರ. I. ೪೦೩). [< ಪೆಱು$_2$]

**ಹೆಱ್$_3$** 'ಪೆಱ್' ನೋ.

**ಹೆಱ್$_4$** (ನಾ). (?): ಶೋಭಕೃತುಸಂವತ್ಸರದ ಮಸೆಯ ಹೆಱ್ಯ ಅಂಗಾರವಾರದ ಬಿದ್ದ ಕೇತಗವುಂಡನ ಅಣ್ಣ . . . ಹೊಯಿಸಿದ ಕಲ್ಲು (ಎಕ. III, ಮಳವ. ೯೨-೮; 1183). [?]

**ಹೆಱ್ಗಾಣು** (ಕ್ರಿ). ಚಂದ್ರನನ್ನು ನೋಡು ,— ಈಕ್ಷಿಸು: ಉಕ್ಕಿದುದು ಹೆಱ್ಗಂಡ ಕಡಲಿನ ಹೆಕ್ಕಳದವೊಲು ಹರುಷರಸ (ತೊರರಾ. ೧-೧೫-೪೩).

[ಹೆಱ್$_3$ (< ಪೆಱ್) + ಕಾಣು (< ಕಾಣ್)]

**ಹೆಱ್ತೆಗೆ** 'ಪೆಱದೆಗೆ' ನೋ.

**ಹೆಱ್ದಲೆ** 'ಪೆಱ್ದಲೆ' ನೋ.

**ಹೆಱ್ದಲೆಗ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದವನು; ಚಂದ್ರಚೂಡ; ಶಿವ: ಅಸುರರ ತ್ರಿಱ್ದು ಹೆಱ್ದಲೆಗನ ಸಿಕ್ಕ ಬಿಡಿಸಿದೊಡೆನಗುಡುಗೊಱ್ಯಿತ್ತುದೆನುತೆ ಕೈಮುಗಿದ (ಮೋಹತ. ೩೭-೫೪). [ಹೆಱ್$_3$ (< ಪೆಱ್) + ತಲೆ$_1$ + - ಗ$_2$]

**ಹೆಱ್ದಲೆಯ** 'ಪೆಱ್ದಲೆಯ' ನೋ.

**ಹೆಱ್ದುಟಿ** (ನಾ). ಅರ್ಧಚಂದ್ರಾಕೃತಿಯಲ್ಲಿರುವ ತುಟಿ; ಸುಂದರವಾದ ಅಧರ: ಸಣ್ಣ ಚೆಂದಳಿರುದುಟಿಯ ಹೆಱ್ದುಟಿಯೆಳೆವೆಣ್ಣ ತಿಂತಿಣಿ ಬಂದುದಾಗ (ನೇಮಿಸಂ. ೨೩-೨೪೩). [ಹೆಱ್$_3$ (< ಪೆಱ್) + ತುಟಿ]

**ಹೆಱ್ದುಪ್ಪ** 'ಹೆಱುದುಪ್ಪ' ನೋ.

**ಹೆಱ್ನೊಸಲು** 'ಪೆಱ್ನೊಸಲ್' ನೋ.

**ಹೆಱ್ಯಂಬು** 'ಪೆಱ್ಯಂಬು' ನೋ.

**ಹೆಱ್ಸರಳು** (ನಾ). ಅರ್ಧಚಂದ್ರಾಕೃತಿಯ ಅಲುಗುಳ್ಳ ಒಂದು ಬಗೆಯ ಬಾಣ; ಹೆರೆಯಂಬು: ಎಸೆವ ಹೆಱ್ಸರಳೊಡನೆ ಮುಮ್ಮೊನೆಯ ಕಣೆ ಬಿತ್ತರದ ಭಲ್ಲೆಯ . . . ಬತ್ತಳಿಕೆಗಳು ನೆರೆದಿರ್ದುವವರಲ್ಲಿ (ಸಾಳ್ವಭಾ. ೫-೧೪).

[ಹೆಱ್$_3$ (< ಪೆಱ್) + ಸರಳು$_1$ (< ಸರಲ್$_1$)]

**ಹೆಟಿವ** 'ಪೆಟಿವ' ನೋ.

**ಹೆಟಿವು** 'ಪೆಟಿವು' ನೋ.

**ಹೆಟಿವುಗೊಳಿಸು** (ಕ್ರಿ). (ಆಲಂ) ಚಲಿಸದಂತೆ ಮಾಡು: ಹೆಟಿವುಗೊಳಿಸಿತ್ತು ಜನಮಂ ಮಟಿಗಾಲಂ ತೀವ್ರಪವನನಿಂ . . . ಕೆಸಟಿಂ (ಸೂಕ್ತಿಸು. ೧೦-೨೦೯).

[ಹೆಟಿವು (< ಪೆಟಿವು) + ಕೊಳ್$_1$ + - ಇಸು$_3$]

**ಹೇ** (ಅ). ೧. ಸಂಬೋಧನೆಯಲ್ಲಿ ಬಳಸುವ ಒಂದು ಅವ್ಯಯ: ಹೇ ಸೋದರ ಅಶೋಕ, ನೀನು ರಕ್ತಾಂಬರ ರಾಜವೇಷಧಾರಿ. ನಾನು ತೃಣಮಾತ್ರ! (ಇಷ್ಟಕ. ೨೩೭). ೨. ನಿಕೃಷ್ಟಾರ್ಥದಲ್ಲಿ ಬಳಸುವ ಒಂದು ಅವ್ಯಯ. [ಸಂ.]

**ಹೇಂಗೆ** 'ಎಹಗೆ' ನೋ.

**ಹೇಂಟೆ** 'ಪೆಂಟೆ$_2$' ನೋ.

**ಹೇಂಟೆಗೊದ್ದ** 'ಹೆಂಟೆಗೊದ್ದ' ನೋ.

**ಹೇಕಣಿಕೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಸೊಪ್ಪು: ಭಂಗಿಸೊಪ್ಪಿನ ರಸ, ಹೇಕಣಿಕೆ ರಸ . . . ನುಗ್ಗೆಯ ರಸ ಇವೆಲ್ಲ ಸೊಪ್ಪಿನ ರಸವನ್ನೂ ಸಮಾನಂಗೊಂಡು ಅರೆದು ಕೊಳ್ಳೆ ವಾತ ಮಾಣ್ಗುಂ (ವೈದ್ಯವಿ. ೧೨೫). [?]

**ಹೇಕರಿಸು** (ಕ್ರಿ). (ಕುದುರೆಯಂತೆ) ಕೂಗು; ಕೆನೆ: "ಹೇಷತೆ ಹೇಕರಿಸಿದವುದು" (ಶಾಶಕ್ಕ. ೧೨೧); ಕುದುರೆಗಳು ಒದರಿದರೆ ಹೇಕರಿಸುತ್ತವೆ ಅನ್ನುತ್ತಾರೆ (ಮುಂಬಯಿ. ೩-೫೭); ಮೇಕೆಗಳು ಹೇಕರಿಸಿದವು (ಜೀವರಂ. ೧೧). [ಹೇಕರಣ$_0$ + - ಇಸು$_3$]

**ಹೇಕುಳಿ** 'ಪೆಂಕುಳಿ' ನೋ.

**ಹೇಕುಳಿಗೊಳ್** 'ಪೆಂಕುಳಿಗೊಳ್' ನೋ.

**ಹೇಕೆತನ** (ನಾ). ಗರ್ವ; ಸೊಕ್ಕು (?) : ಶ್ರೀಕಾಂತನ ಸ್ಮರಣೆ ಮರೆದಾರೆ ಮಡಿ ಅಲ್ಲ ಹೇಕೆತನ ಕಲಿತವಗೆ ಮಡಿ ಅಲ್ಲ (ವಿಸಾಸು. ೫೭-೪).

[ಹೇಕೆ$_0$ (IP ← ಮರಾ. ಹೇಕಾ = ಗರ್ವ) + - ತನ]

**ಹೇಗ** 'ಪೆಂಗ' ನೋ.

**ಹೇಗತನ** (ನಾ). ದಡ್ಡತನ; ಮರುಳುತನ: ಮತ್ತೆ ದುರಿತಂಗಳ ಹೊಱುವ ಹೇಗತನವೇಕಯ್ಯಾ (ಬಸವ. ೧೫೯); ನಿನ್ನ ಹೇಗತನವನ್ನು ಬಿಟ್ಟು ಕೇಳು (ಪ್ರಭುಪು. ೫-೧೦೬). 'ಎಗ್ಗತನ' ಪರಾ. [ಹೇಗ (< ಪೆಂಗ) + - ತನ]

**ಹೇಗೆ** 'ಎಹಗೆ' ನೋ.

**ಹೇಜಿಬ** 'ಹೇಜೀಬ' ನೋ.

**ಹೇಜೀಬ, ಹಜೀಬು, ಹೆಜ್ಜೀಬ, ಹೇಜಿಬ** (ನಾ). ೧. ದೂತ; ರಾಯಭಾರಿ: ಹೇಜೀಬರ ಮುಖವಚನದ ಸೋಜಿಗವಾರ್ತೆಯನು ಕೇಳಿ (ಬೀಳವಂ. ೧-೧೩೫). ೨. ಆಳು; ಸೇವಕ: ಬಾದಶಹನು ಉದಯಭಾನುವಿನ ಬೆನ್ನ ಹಿಂದೆಯೇ ಆತನನ್ನು ಕರೆತರುವುದಕ್ಕಾಗಿ ಒಬ್ಬ ಹೇಜೀಬನನ್ನು ಕಳಿಸಿದ್ದನು (ಕಮಲ. ೩೨). **ಹಜೀಬು:** ೧. ರಾಜಭೂವರರ ಹಜೀಬು ತಿಮ್ಮಾಜಿ ಭೀಮಾಜಿಯು ಜಹಲ್ನಾಪುರದಲ್ಲಿ ಮೊಕ್ಕಾಂ ಇದ್ದನು (ಬಪ್ಪರು. ೭). **ಹೆಜ್ಜೀಬ:** ೧. ಪುರದೊಳ್ . . . ಪರದರಿಂದಂ ಹೆಜ್ಜೀಬರಿನುರು ಭಿಕ್ಷವನಾಗಿಸಿ ನೆರೆ ಸಂತಸವಡಿಸಿದಳ್ ದಲಾ ಯತಿವರನಂ (ಕಳನ್ನ. ೧೨-೯). **ಹೇಜಿಬ:** ೧. ಅಲ್ಲಿರ್ದ ಕೂರ್ಮಪಾತ್ಸ್ಯಾವಿನ ಹೇಜಿಬರೆಲ್ಲವನರಿದು ಬೇಗದಲಿ ನಿಲ್ಲದೆ ಕಾಗಜವನು ತಮ್ಮ ದಾತಾರನಲ್ಲಿಗಟ್ಟಿದರು (ಕಂಠವಿ. ೧೩-೭೦); ಹೇಜಿಬರನು ಹೊಂತಕಾರಿ ನಿಯೋಗಿಗಳಾಗ ಬೇಗದಿ ಕಳಿಸುವೈ (ಸೌಂದಕಾ. ೪-೧೧).

[← ಅರ. ಹಿಂ. ಹಾಜಿಬ್; ಮರಾ. ಹೇಜೀಬ್]

**ಹೇಟಗಾಲು** (ನಾ). (ಉಕ) ೧. ಊನವಾಗಿರುವ ಕಾಲು; ಒಂದು ಪಕ್ಕಕ್ಕೆ ಸೆಳೆದುಕೊಂಡಿರುವ ಕಾಲು. ೨. ಕಾಲೆಳೆದುಕೊಂಡು ನಡೆಯುವುದು; ಊನವಾದ ನಡಗೆ: ಅವನು ಹೇಟಗಾಲಿನಿಂದ ದೂರ ನಡೆಯುವುದು ಸಾಧ್ಯವಿಲ್ಲ (ರೂಢಿ). [ಹೇಟ? + ಕಾಲು$_1$ (< ಕಾಲ್$_1$)./ಸಂ. ಹೇಠ = ಅಡ್ಡಿ, ತೊಂದರೆ, ಗಾಯ./ ಮರಾ. ಹೇಟ = ಕೆಳಗೆ]

**ಹೇಟೆ** 'ಪೆಂಟೆ$_2$' ನೋ.

**ಹೇಟೆ** 'ಪೆಂಟೆ$_2$' ನೋ.

**ಹೇಡ** (ನಾ). ದಡ್ಡ; ತಿಳಿಗೇಡಿ (?): ರೂಢಿಪತಿ ಸರಿದ ಸುರನಗರಿಗಂ ಬಾಲಕರು ಹೇಡರಾದರು ರಾಜ್ಯಮನ್ನಾಳಲಾರದೆ (ತುರಂಗ. ೧೨-೯); ವಿಪ್ರರೆಲ್ಲರು ಕೂಡಿ ಹೇಳಿದರು ನೋಡಿ ನಗುವರು ನಮ್ಮನು ಹೇಡನಾ[ಪಾಠಾಂ. ಹೇಡಿಯಾ]ಗಲು ಬೇಡ (ತುರಂಗ. ೧೩-೩೫). [< ಹೆಡ್ಡ$_1$./ಸಂ. ಹೇಡ = ಅನಾದರ, ತಿರಸ್ಕಾರ]

**ಹೇಡನ** (ನಾ). ಅನಾದರ; ತಿರಸ್ಕಾರ: 'ಹೇಡೈಸು$_2$' ಪರಾ. [ಸಂ.]

**ಹೇಡವಿಸು** 'ಹೇಡೈಸು$_1$' ನೋ.

**ಹೇಡಾಡು** (ಕ್ರಿ). ಹೆದರು; ಎದೆಗುಂದು; ಭಯಪಡು: ಜೋಡಿವೋಗದೆ ನಿರ್ವಹಿಸಿ ಹೇಡಾಡದವರನು ಕಾಂಬೆವು (ಪ್ರಭುಲೀ. ೧೮-೩೫); ಹೆಪ್ಪಳಿಸಿ ಹೇಡಾಡಿ ಹಿಮ್ಮೆಟ್ಟಿದನೆ ಮನದ ದರ್ಪಗುಂದಿದನೆ (ಸಿಂಗಿರಾ. ೪೧-೮); ಅಭವಶತ್ರುವನಿತ್ತ ಬಳಿಕ ಹೇಡಾಡಿ ಹಿಂಜರಿದು ಸಂಧಾನದಿಂ ಬಾಳುವೆನೆ (ನವಮೋ. ೩೦-೨೮).

[< ಹೇಡಿ (< ಪೇಡಿ$_1$) + ಆಡು$_1$]

**ಹೇಡಿ** 'ಪೇಡಿ$_1$' ನೋ.

**ಹೇಡಿಗ** (ನಾ). ಅಂಜುಕುಳಿ; ಭೀರು: ಓಡಿ ಕೈದುವ ಹಾಯ್ಕಿ ಕಳನೊಳು ಹೇಡಿಗರ ಹಿಡಿದಳುಕಿ ಬದುಕಿದ ಗೂಡಿಹುದೆ (ಕುಷ್ವಾಗ. ೫-೨೧). [ಹೇಡಿ (< ಪೇಡಿ$_1$) + - ಗ$_2$]

**ಹೇಡಿಗರ** (ನಾ). ಹೇಡಿಯಾಗುವಂತೆ ಮಾಡುವ ಗ್ರಹ,– ಪಿಶಾಚಿ: ಮರುಳೆ ರಕ್ಕಸರಂಜುವರೆ ಫಡ ನರರಿಗೆತ್ತಣ ಹೇಡಿಗರವಿದು ಬೆರಸಿ ನಿನ್ನನು ಹಿಡಿಯಿತೆಂದನು ನಕ್ಕು ಗಹಗಹಿಸಿ (ಕಾಶಿರಾ. ೧೪-೧೭). [ಹೇಡಿ (< ಪೇಡಿ$_1$) + ಗರ$_2$]

**ಹೇಡಿಗಳ್ಳ** (ನಾ). ಅಂಜುಕುಳಿಯಾದ ಕಳ್ಳ; ಹೆದರುವ ಸ್ವಭಾವದ ಚೋರ: ಈತನು ಇತರರಂತೆ ಹೇಡಿಗಳ್ಳನಾಗಿರಲಿಲ್ಲ (ಚೆನ್ನಬೇ. ೪).

[ಹೇಡಿ (< ಪೇಡಿ$_1$) + ಕಳ್ಳ$_1$]

**ಹೇಡಿಗೊಳ್**, ಹೇಡಿಗೊಳು (ಕ್ರಿ). ಹಿಂಜರಿ; ಹಿಮ್ಮೆಟ್ಟು: ರಕ್ಕಸ ರೂಪುದಾಳಿ . . . ಬರಲು ತಾಳಲಾಜದೆ ಹೇಡಿಗೊಂಡೋಡಿ (ಸಮ್ಯಕೌ. ೪-೫೧): ಓಡುವಾಳೋಚನೆಯ ಹಾರುವರಾಡಿದೊಡೆ ಹಿರಿಯಯ್ಯ ನಿಮ್ಮಡಿ ಹೇಡಿಗೊಂಡವೊಲೊಪ್ಪುವುದೆ (ಸಾಳ್ವಭಾ. ೨೩-೩೨). **ಹೇಡಿಗೊಳು**: ತುರುವ ಮರಳಿಚುವೆನು ಹೇಡಿಗೊಳದಿರು (ಯವಿಪ. ೪೭).

[ಹೇಡಿ (< ಪೇಡಿ$_1$) + ಕೊಳ್$_1$]

**ಹೇಡಿಗೊಳು** 'ಹೇಡಿಗೊಳ್' ನೋ.

**ಹೇಡಿತನ** 'ಪೇಡಿತನ' ನೋ.

**ಹೇಡಿತರ** (ನಾ). ಹೇಡಿಯ ರೀತಿ,– ಬಗೆ: ನಿನ್ನನು ಪಡೆಯದೆ ಆ ಹೇಡಿತರದ ಸನ್ಯಾಸವನ್ನಂಗೀಕರಿಸಿ (ಸುಗುಗಂ. ೩-೨). [ಹೇಡಿ (< ಪೇಡಿ$_1$) + ತರ$_6$ (< ತರಹ)]

**ಹೇಡಿಮಣ್ಣು** (ನಾ). "ಜಿಗುಟಿಲ್ಲದ ಮಣ್ಣು" (ಹೃದಸ. ಕೋಶ): ಕಾಂಬುವನ ನಂಬೆ, ಹುಸಿ ಚಿಗುರ ಕೊಂಬೆ, ಓ ಹೇಡಿ - ಮಣ್ಣ ಗೊಂಬೆ! (ಹೃದಸ. ೬೬-೮); ಹೇಡಿಮಣ್ಣ ಕಂಬದಂತೆ ಗಾಡಿಯಳಿದು ಬಿದ್ದನೋ - ಗಾಡಿಯಳಿದು ಬಿದ್ದನು (ನಾದಲೀ. ೭-೧೫).

[ಹೇಡಿ (< ಪೇಡಿ$_1$) + ಮಣ್ಣು (< ಮಣ್)]

**ಹೇಡೈಸು$_1$**, ಹಡ್ಡೈಸು$_1$, ಹೇಡವಿಸು (ಕ್ರಿ). ಹಿಮ್ಮೆಟ್ಟು; ಹಿಂದೆಗೆ; ಹಿಂಜರಿ: ಪಾಪಕ್ಕೆ ಹೇಡೈಸಿ ಪುಳುವೆಲ್ಲವಂ ಪೊಜಿಕ್ಕೆ ಚೆಲ್ಲಿಸಿ (ಚೊಮ್ಮರ. ಹ. ೩೩೮-೧೫); ಹೇಡೈ[ಪಾಠಾಂ. ಹಡ್ಡಯಿ, ಹಮ್ಮೈ]ಸದಿರು ಧೈರ್ಯದಲಿ (ತೊರರಾ. ೬-೪೧-೫). **ಹಡ್ಡೈಸು$_1$**: ಬಾದಣವಾದ ಹುಣ್ಣೆ ಹಡ್ಡೈಸದೆದ್ದು . . . ಹೊರಳ್ದುರುಳ್ದು ಹೋಗುತಿರ್ದನಂದಾದಯ್ಯನು (ಸೋಮಚ. ೩-೬೩); ಐಸೆ ಮತ್ತೇನಿದು ಪುರಾಕೃತದೋಷಫಲದುದ್ಭವವಲಾ ಹಡ್ಡೈಸಿ [ಪಾಠಾಂ. ಹಡ್ಡಯ್ಸಿ] ಮಾಡುವುದೇನು (ತೊರರಾ. ೩-೩-೨೩). **ಹೇಡವಿಸು**: ಕುಟ್ಮಳಿತಚಂಪಕಪ್ರಚಯಮಂ ಕಾಮನಿಸುವ ಕಾದ ಪುಳುಂಬಿನಂಬುಗಳ ಪೊದೆಯೆಂದು ಹೆEಹೇತೆಡವಿಸುತ್ತುಂ (ಶಾಂತೀಶ್ವ. ೧೧-೬೫ ವ); ಓಡುತದೆ ಕಪಿ ಹಿಡಿಯಿರೋ ಹಿಡಿ ಹೇಡವಿಸದಿರಿಯೆನುತ ನಗೆಮೊಗಗೂಡಿದಕ್ಷಕುಮಾರ ಸಂಧಿಸಿದನು ಸಮೀರಜನ (ತೊರರಾ. ೫-೫-೨೦). [ಹೇಡಿ (< ಪೇಡಿ$_1$) + - ಇಸು$_3$]

**ಹೇಡೈಸು$_2$**, ಹೆಡ್ಡಯಿಸು, ಹಡ್ಡೈಸು$_2$ (ಕ್ರಿ). ಜುಗುಪ್ಸೆಗೊಳ್ಳು; ಹೇವರಿಸು; ಅಸಹ್ಯಪಡು: ಬಿಸಿಯ ಬೆಳಗೆಂದು ಬೆಳ್ದಿಂಗಳಿಗೆ ಹೇಡೈಸಿ ಪಸಿಯ ಕಿಚ್ಚೆಂದು ಪೊಸಪಲ್ಲವಕೆ ತಲ್ಲಣಿಸಿ (ಮಲುರ. ಹ. ೧೭೩-೨); ಬಾಡಿದ ಮೊಗ ಬಸವಳಿದ ತನುವ ಕಂಡು ಹೇಡೈಸಿದ ಮನದೊಳಗೆ (ಅಂಜಚ. ೯-೯೧); ಮಾಡದುದಂ ಮಾಡಿದನೆನೆ ಹೇಡೈಸಳೆ ಕಮಲೆಯವರ್ಗೆ (ನೀತಿಸಾ. ೨೪೯). **ಹೆಡ್ಡಯಿಸು**: ಪಿಂತಣಘವಶದ ಸಂಸಾರಕ್ಕೆ ಹೆಡ್ಡಯಿಸಿ [ಪಾಠಾಂ. ಹೇಡೈಸಿ] . . . ತಪಸಿನೊಂದುದ್ಯೋಗಕೆ ಚಿಂತೆಯಂ ಮಾಳ್ಪುದೆ (ಸಮ್ಯಕೌ. ೧೨-೨೦). **ಹಡ್ಡೈಸು$_2$**: ಹುಸಿಗೆ ಹಡ್ಡೈಸುವಾತನಲ್ಲೆಂದಜಿಯಲಾಯ್ತು (ಹಚಕಾ. ೮-೪೨); ಉತ್ತಮಶಿವನರ್ಚಕನಾಗಿ ಹೊಲಸಿಗೆ ಚಿತ್ತ ಹಡ್ಡೈಸದೆ ಇಹರೆ ಮತ್ತಾ ಸಿರಿಭಾಗ್ಯವು ಹೋದರೆ ನಿನ್ನ ಉತ್ತಮಿಕೆಯು ಹೋಗಬಹುದೆ (ಹರಿಸಾಂ. ೭೨-೮).

[ಹೇಡನ + - ಇಸು$_3$]

**ಹೇತಿ** (ನಾ). ೧. ಆಯುಧ; ಶಸ್ತ್ರ: ಹೇತಿ ಮುಕ್ತಭಟದೋರ್ದಂಡಾಗ್ರಶುಂಭದ್ಧ್ವಜೋತ್ಕರ ಸಂದೋಹಮುಮಂ ಬಿಸುಟ್ಟು (ಆದಿಪು. ೧೨-೬೮); ಇದು ರತೀಶನ ಹೇತಿ ಇದು ಕುಸುಮಶರನಲಗು (ವಂಕಾರಾ. ೧-೬-೧೫). ೨. ಪ್ರಕಾಶ; ಹೊಳಪು: "ವರ್ಚಃ, ತೇಜಃ, ತ್ವಿಟ್, ಜ್ಯೋತಿಃ, ಹೇತಿಃ . . . ರಶ್ಮಿಃ - ಈ ೧೧ ದೀಪ್ತಿ" (ಹಲಾಯು. ೧೨-೬೫); ಘನಹೇತಿಯಿಂದಂ ದ್ವಿಜೋಪಹತಿಗೆಯ್ದು . . . ಸೂರ್ಯನುಳ್ಳನಿತು ಕಿರಣಮನುಳಿದು ತವೆ ದಿಗಂಬರನಾಗುತಸ್ತಗಿರಿಯಂ ಸಾರ್ದನು (ಚಬಪು. ೯-೩). ೩. ಬೆಂಕಿಯ ಜ್ವಾಲೆ, – ಉರಿ. ೪. (ಸೂರ್ಯನ) ಕಿರಣ,– ಕದಿರು. [ಸಂ.]

**ಹೇತಿವಿದಾರಿಣಿ** (ನಾ). [ಜೈನ] ಶಸ್ತ್ರವನ್ನು ಸೀಳುವ ಒಂದು ಬಗೆಯ ವಿದ್ಯೆ (?): ಸೌಜನ್ಯಕಂದಾಂಕುರಂ ಶ್ರೀವಿಜಯಂಗೆ ಹೇತಿವಿದಾರಿಣಿಯುಂ ಬಂಧವಿಮೋಚನಿಯುಮೆಂಬಿವೆರಡುಂ ವಿದ್ಯೆಗಳಂ ಕೊಟ್ಟು (ಶಾಂತಿಪು. ೬-೩೭ ವ).

[ಸಂ. ಹೇತಿವಿದಾರಿಣೀ]

**ಹೇತು$_1$** 'ಪೇಲ್$_1$' ಪರಾ.

**ಹೇತು$_2$** (ನಾ). ೧. ನಿಮಿತ್ತ; ಕಾರಣ; ಉದ್ದೇಶ: ಧವಲಾಪಾಂಗವಿಲೋಕಾನಾಮೃತಮಯಂ ಭ್ರೂಲಕ್ಷ್ಮರಮ್ಯಂ ಮನೋಭವರಾಜ್ಯೋದಯಹೇತು (ಆದಿಪು. ೬-೮೮); ಜಾತಿಸ್ಮರತೆ ವಿರಕ್ತಿಗೆ ಹೇತುವೆನುತ್ತಿರ್ಪರ್ (ಕಾದಂಉ. ೬೯೩); ಇಂದಿನಿಷ್ಟವೆಯೆ ಮುಂದನಿಷ್ಟಕೆ ಹೇತುವಪ್ಪಂದದಿಂ, ಇಂದಿನ ಅನಿಷ್ಟವೆಯೆ ತೊಟ್ಟಲಾಗದೆ ಮುಂದಣಭ್ಯುದಯಶಿಶುಗೆ? (ಶ್ರೀರಾಮಾ. ೮೧-೯೨). ೨. ಮೂಲ; ಉಗಮಸ್ಥಾನ: ವರಪುಣ್ಯೋದಯಹೇತು ಶಾಶ್ವತಮಹಿಂಸಾಲಕ್ಷಣಂ ಸದ್ಗುಣಾಕರಂ (ಸುಕುಮಾ. ೧-೬); ನಮ್ಮ ಜ್ಞಾನ ನಮ್ಮ ವರ್ತನೆಗೆ ಹೇತುವೆನಿಸಿರುತ್ತದೆ (ಶಿಕ್ಷದ. ೬೩೦). ೩. ತರ್ಕಶಾಸ್ತ್ರ: ಆತನು ಪಂಡಿತನು . . . ಮಾಯಾ, ಹೇತು, ಮಂತ್ರಣ, ಯುದ್ಧ, ಛಂದಸ್ಸು, ಮುದ್ರಾ ಎಂಬ ಅನೇಕ ಶಾಸ್ತ್ರಗಳನ್ನು . . . ಗ್ರಹಿಸಿದ್ದನು (ಬುದ್ಧಪ. ಮಿಲಿಂದ. ೧೯). ೪. [ಕಾವ್ಯಮೀ] ಒಂದು ಬಗೆಯ ಅರ್ಥಾಲಂಕಾರ; ಹೇತೂಕ್ತಿ: ನುತ ಪರಿವೃತ್ತಿ ವ್ಯಾಜಸ್ತುತಿ ಹೇತು ವಿಭಾವನಾಲವೋದಾತ್ತಾಪಹ್ನುತಿ ರಸವದೂರ್ಜಿತವ್ಯಾವೃತಿಪ್ರಿಯತರಾಶಿಗಳ್ ಕ್ರಮಮಾದ್ಯುಕ್ತಂಗಳ್ (ಕವಿರಾ. ೩-೪); ಹೇತುಮುದಾಖ್ಯಾನಂ ಸಹಹೇತುಕಮುದು ಹೇತುವೆಂಬಲಂಕೃತಿಯಕ್ಕುಂ (ಕಾವ್ಯಾವ. ೬೨೫). ೫. [ತರ್ಕಶಾ] 'ಅನುಮಾನ'ದ ಐದು ಅಂಗಗಳಾದ ಪ್ರತಿಜ್ಞಾ, ಹೇತು, ದೃಷ್ಟಾಂತ, ಉಪನಯ ಮತ್ತು ನಿಗಮನ ಎಂಬುವುಗಳಲ್ಲಿ ಒಂದು; ಒಂದು ವಿಷಯವನ್ನು ಸಾಧಿಸಲು ಕೊಡುವ ಕಾರಣ: ಆಯನುಮಾನಪ್ರಮಾಣಕ್ಕೆ ಪ್ರತಿಜ್ಞೆ ಹೇತು ದೃಷ್ಟಾಂತಗಳೆಂಬ ಅಂಗತ್ರಯಮುಂಟದಜೊಳು ಪರಪ್ರತಿಪ್ರತ್ಯರ್ಥಮಾಗಿ ಪ್ರಯೋಗಿಸುವಾಗ ಪರ್ವತವಗ್ನಿವುಳ್ಳದ್ದೆಂಬುವದೇ ಪ್ರತಿಜ್ಞಾವಾಕ್ಯವು ಧೂಮವುಂಟಾದ ಕಾರಣವೆಂಬುವದೇ ಹೇತು (ವಿವೇಕ. ೨೦); ಪರಾರ್ಥಾನುಮಾನವು ಪ್ರತಿಜ್ಞಾ, ಹೇತು, ಉದಾಹರಣ, ಉಪನಯ, ನಿಗಮನ ಎಂದು ಐದು ಅಂಗವುಳ್ಳುದು (ಭಾತತ್ತ್ವ. ೨೭೩). [ಸಂ.]

**ಹೇತುಕ** (ಗು). ೧. ಚೋದನೆಗೆ ಕಾರಣವಾದ; ಉದ್ದೇಶಕ್ಕೆ ಸಂಬಂಧಿಸಿದ. (ನಾ). ೨. ಕಾರಣ; ನಿಮಿತ್ತ: ಪೂರ್ವಪೂರ್ವಹೇತುಕಂಗಳುಂ ಉತ್ತರೋತ್ತರ ಸೂಕ್ಷ್ಮವಿಷಯಂಗಳುಂ ಕ್ರಿಯಾಕಾರಿಗಳುಮಪ್ಪುದಜಿಂ ಸಮ್ಯಗ್ದರ್ಶನಹೇತುಕಂಗಳಪ್ಪುವು (ತತ್ತ್ವಪ್ರ. ೭೬). ೩. ಸಾಧನ. ೪. ತರ್ಕಶಾಸ್ತ್ರಜ್ಞ. ೫. = ಹೇತು$_2$ ೪: ಹೇತುಮುದಾಖ್ಯಾನಂ ಸಹಹೇತುಕಮುದು ಹೇತುವೆಂಬಲಂಕೃತಿಯಕ್ಕುಂ (ಕಾವ್ಯಾವ. ೬೨೫).

[ಸಂ.]

**ಹೇತುಕ್ರಿಯೆ** (ನಾ). [ವ್ಯಾಕ] ಪ್ರಯೋಜಕ ಕ್ರಿಯಾಪದ: ಸತತಂ ಮಧ್ಯಮಪುರುಷ ಪ್ರತಿಷೇಧದ ವಿಧಿಯೊಳಂ ಪ್ರಯೋಜನವಸ್ತ್ವಾಶ್ರಿತ ಹೇತುಕ್ರಿಯೆಯೊಳಮನ್ವಿತಮಲ್ಕ್ರಿಯೆ ತಾಂ ಕ್ರಿಯಾರ್ಥಮಪ್ಪೆಡೆಗಳೊಳಂ (ಶಮದ. ೨೩೪). [ಸಂ. ಹೇತುಕ್ರಿಯಾ]

**ಹೇತುಜ್ಞಾನ** (ನಾ). [ತರ್ಕಶಾ] ಕಾರಣದ ಅರಿವು; ತಿಳಿವಳಿಕೆ: ಹೇತುಜ್ಞಾನವು ಭ್ರಾಂತಿಯಾದರೆ ಸಾಧ್ಯಜ್ಞಾನವೂ ಭ್ರಾಂತಿಯಾಗಬೇಕಾಗುವುದು (ಹಿಂದಸಾ. ೧೩೪).

[ಸಂ.]

**ಹೇತುತ್ವ** (ನಾ). ಕಾರಣದಿಂದ ಕೂಡಿರುವುದು: ಅದು ಶರೀರಬಳಾಯುರ್ದೇಹಪ್ರಮಾಣೋಪಚಯಾಪಚಯ ಹೇತುತ್ವದಿಂದಮುತ್ಸರ್ಪಿಣಿನಾಮಮಂ ಪಡೆದುದದೊಂದು ಪತ್ತುಕೋಟಿ ಕೋಟಿ ಸಾಗರೋಪಮಸಂಖ್ಯೆಯಂ ತಾಳ್ದಿ (ಆದಿಪು. ೬-೪೮ ವ). [ಸಂ.]

**ಹೇತುದೋಷ** (ನಾ). [ತರ್ಕಶಾ] ತರ್ಕಬದ್ಧವಾದ ಅನುಮಾನದಲ್ಲಿ ಯಾವ ನಿಮಿತ್ತವನ್ನು (ಉದಾ. ಹೊಗೆ) ಆಧರಿಸಿ ಸಾಧ್ಯವನ್ನು (ಉದಾ. ಬೆಂಕಿ) ಊಹಿಸಲಾಗುವುದೋ ಆ ನಿಮಿತ್ತದಲ್ಲಿಯೇ ಒದಗುವ ದೋಷ,– ಉಂಟಾಗುವ ತರ್ಕದೋಷ: IP ಇದರಲ್ಲಿ ವ್ಯಭಿಚಾರ, ವಿರೋಧ, ಸತ್ಪ್ರತಿಪಕ್ಷ, ಅಸಿದ್ಧಿ ಮತ್ತು ಬಾಧಗಳೆಂದು ಐದು ವಿಧಗಳಿವೆ: 'ಹೇತ್ವಾಭಾಸ' ಪರಾ. [ಸಂ.]

**ಹೇತುಪದ** (ನಾ). ಕಾರಣದ ಸ್ಥಾನ: ಸಮರಕ್ಕಿದೆ ಹೇತುಪದಂ ಸುಕೃತಮಹೀರುಹ ವಿಪಕ್ವಫಲ ಭುಕ್ತಿಗಿಂತು ನೋಂತರುಮೊಳರೇ (ಶಾಂತಿಪು. ೪-೭೫). [ಸಂ.]

**ಹೇತುಪ್ರಯೋಗ** (ನಾ). [ವ್ಯಾಕ] ಧಾತುವಿಗೆ ಸೇರುವ ಪ್ರೇರಣಾರ್ಥಕ ಪ್ರತ್ಯಯದ ಬಳಕೆ,– ಪ್ರಯೋಗ: ಧಾತುಗಳನೇಕಾಕ್ಷರಕಾಖ್ಯಾತವಿಭಕ್ತಿಗಳ ಮೊದಲೊಳಿಸು ತಾನಕ್ಕುಂ ಹೇತುಪ್ರಯೋಗದೊಳ್ ತಜ್ಜಾತಿಯೆ ಕರ್ಣಾಟಧಾತುಗಳ್ಗೆ ಮರ್ದಿರ್ಕುಂ (ಕಾವ್ಯಾವ. ೪೧೭). [ಸಂ.]

**ಹೇತುಭೂತ** (ನಾ). ಕಾರಣ; ನಿಮಿತ್ತ: ಅಂತು ಶುಭಾಶುಭಂಗಳೆಂಬೆರಡುಮಾಸ್ರವಂಗಳ್ಗೆ ಹೇತಭೂತಮಕ್ಕುಂ (ಶಾಂತಿಪು. ೧೨-೫ ವ). [ಸಂ.]

**ಹೇತುರೂಪಕ** (ನಾ). [ಕಾವ್ಯಮೀ] ರೂಪಕಗಳಲ್ಲಿ ಒಂದು ಬಗೆ; ಸಕಾರಣವಾದ ಸಾಧಾರಣಧರ್ಮದ ಮೂಲರೂಪಕ: ಕುಲಗಿರಿಯ್ಯ ಗೌರವದಿಂ . . . ಆ ಜಲನಿಧಿಯ್ಯ ಗುಣ್ಪಿಂದೆಂದಲಸದೆ ಪೇೞ್ಗಿಂತು ಹೇತುರೂಪಕವಿಧಿಯಂ (ಕವಿರಾ. ೩-೨೦); ಹೇತುರೂಪಕಕ್ಕೆ – ಮೃಗರಾಜಂ ವಿಕ್ರಮದಿಂ ಖಗರಾಜಂ ಸ್ವಾಮಿಭಕ್ತಿಯಿಂ ನಗರಾಜಂ ಮಿಗಿಲಾದ ಪೆಂಪಿನಿಂ ಪನ್ನಗರಾಜಂ ಧೈರ್ಯಗುಣದಿನಾಹವಸಿಂಹಂ (ಕಾವ್ಯಾವ. ೬೯೩). [ಸಂ.]

**ಹೇತೂಕ್ತಿ** (ನಾ). [ಕಾವ್ಯಮೀ] "ಕಾರಣವಾಗಿರುವ ಅಲಂಕಾರವು ಹೇತೂಕ್ತಿ. ಯಾವುದಾದರೂ ಒಂದು ಕಾರ್ಯಕ್ಕೆ, ಪರಿಣಾಮಕ್ಕೆ ಅಥವಾ ಫಲಕ್ಕೆ ಕಾವ್ಯೋಚಿತವಾಗಿ ಕಾರಣವನ್ನು ಕಲ್ಪಿಸಿ ಹೇಳುವುದು" (ಕವಿರಾ. ಟಿಪ್ಪಣಿ); ಕಾರಣವಾಗಿರ್ಪುದಲಂಕಾರಂ ಹೇತೂಕ್ತಿಯೆಂಬುದದು ತಾಂ ನಾನಾಕಾರಂ ಜ್ಞಾಪಕಸದಲಂಕಾರ ಸುಮಾರ್ಗಪ್ರಯೋಗಮಿಾ ತೆಱನದಱಾ (ಕವಿರಾ. ೩-೧೬೩). 'ಹೇತ್ವಲಂಕಾರ' ಪರಾ. [ಸಂ.]

**ಹೇತೂತ್ಪ್ರೇಕ್ಷೆ** (ನಾ). [ಕಾವ್ಯಮೀ] ಕಾರಣವಲ್ಲದುದನ್ನು ಕಾರಣವಾಗಿ ಕಲ್ಪಿಸಿ ಹೇಳುವ ಒಂದು ಉತ್ಪ್ರೇಕ್ಷಾಲಂಕಾರ: "ರಕ್ತವಾದವೊ ಭೂಮಿಯಲ್ಲಡಿಯಿಡೆ" ಎಂಬ ಪದಕ್ಕೆ ಸ್ವತಃ ಸಿದ್ಧವಾದ ಚರಣಗಳ ರಕ್ತತ್ವದಲ್ಲಿ ಪಾದವಿನ್ಯಾಸವು ಹೇತುವಲ್ಲ ಆ ರಕ್ತತ್ವ ಹೇತುತ್ವರೂಪದಿಂದ ಸಂಭಾವನೆ ಮಾಡಲ್ಕೆ ಹೇತೂತ್ಪ್ರೇಕ್ಷಾ (ಕುವಲ. ೨೮). [ಸಂ. ಹೇತೂತ್ಪ್ರೇಕ್ಷಾ]

**ಹೇತೂಪಮೆ** (ನಾ). [ಕಾವ್ಯಮೀ] ಉಪಮಾನ, ಉಪಮೇಯಗಳ ಸಾದೃಶ್ಯಕ್ಕೆ ಕಾರಣಭೂತವಾದ ಸಮಾನಧರ್ಮವನ್ನು ಎತ್ತಿ ತೋರಿಸುವ ಉಪಮೆ: ಸುರಗಿರಿವೋಲ್ ಧೈರ್ಯದಿಂ . . . ಶಶಾಂಕಬೋಲ್ ಬಂಧುರಕಾಂತಿಗುಣದಿನೆಂದಿಂತಿರೆ ಪೇೞ್ವುದನಱಿದುಕೊಳ್ಗೆ ಹೇತೂಪಮೆಯಂ (ಕವಿರಾ. ೩-೮೫); ಹೇತೂಪಮೆಗೆ: ಪರಿವೃತ್ತತೆಯಿಂ ನುಣ್ಪಿಂ . . . ಪರಿಪಕ್ವತಾಫಳದೊಳ್ ದೊರೆಯೆನಿಸುಗುಮವಳ ಘನಪಯೋಧರಯುಗಳಂ (ಕಾವ್ಯಾವ. ೬೬೮). [ಸಂ. ಹೇತೂಪಮಾ]

**ಹೇತ್ವಲಂಕಾರ** (ನಾ). = ಹೇತೂಕ್ತಿ: ಕಾರ್ಯದಿಂದ ಕೂಡಿ ಕಾರಣವ ಪೇಳಲ್ಕೆ ಹೇತ್ವಲಂಕಾರವೆನಿಪುದು (ಕುವಲ. ೧೭೯). [ಸಂ.]

**ಹೇತ್ವಲಂಕೃತಿ** (ನಾ). = ಹೇತೂಕ್ತಿ: ಕಾರಣಮೆ ಹೇತ್ವಲಂಕೃತಿ ಸಾರಂ ದಕ್ಷಿಣಸಮೀರಣಂ೯ಮಲಯಕುಭೃದ್ಭೂರುಹವನದಿಂ ತೀಡುವ ಕಾರಣದಿಂ ರಾಜಸುಕವಿ ರತ್ನಾಭರಣಾ (ಉದಯಾ. ೯). [ಸಂ.]

**ಹೇತ್ವಾಕ್ಷೇಪ** (ನಾ). [ಕಾವ್ಯಮೀ] ಕಾರಣದೊಡನೆ ಕೂಡಿರುವ ಒಂದು ಬಗೆಯ ಆಕ್ಷೇಪಾಲಂಕಾರ: ಮಾನಧನಾ ಪೊಗೞಿಸಲೇಂ ದಾನಿಯೆ ನೀನುಂತೆ ನಿನ್ನ ಕಸವರಮೆಂದುಂ ದೀನಾನಾಥರ ಕೆಯ್ಯದು ದಾನಿಯದೆಂತೆಂಬುದಿಂತು ಹೇತ್ವಾಕ್ಷೇಪಂ (ಕವಿರಾ. ೩-೧೦೫). [ಸಂ.]

**ಹೇತ್ವಾಭಾಸ** (ನಾ). = ಹೇತುದೋಷ: ಹೇತುವಿಗೆ ಐದಂಶಗಳಿರಬೇಕೆಂದು ನಿರ್ಣಯಿಸಿರುವರು. ಇಂತಹ ಐದು ಅಂಶಗಳಲ್ಲಿ ಯಾವುದೊಂದಂಶವು ಕಡಮೆಯಾದರೂ ಹೇತ್ವಾಭಾಸವೆಂದು ಹೆಸರು (ಹಿಂದಸಾ. ೧೪೧); ಯಾವಾಗಲೂ ಉಪಾಯಗಳಿಗೆ ಗಮನ ಮೊದಲು; ಆದರೆ ಉಪೇಯದ ಲಾಭವೇ ಗುರಿ. ಆದ್ದರಿಂದ ಉಪಾಯಗಳು ಅಪ್ರಧಾನವೆಂದೇ ಆಗುತ್ತದೆ. ಅವನ್ನು ಪ್ರಧಾನವೆನ್ನುವುದು 'ವಿರುದ್ಧ'ವೆಂಬ ಹೇತ್ವಾಭಾಸ (fallacy) (ಧ್ವನ್ಯಾಲೋ. ೨೩ ಅಡಿಟಿ). [ಸಂ.]

**ಹೇದಂಡ** (ನಾ). (?): ಸದ್ಭಕ್ತಿಯಿಲ್ಲದ ವಿಶ್ವಾಸಹೀನನು ವಾಚಾರಚನೆಗಳಿಂದ ಮಾತಿನ ಮಾಲೆಯ ಎಷ್ಟು ನುಡಿದಡೇನು ಹೇ[ಪಾಠಾಂ. ಹೆ] ದಂಡದಂತೆ ಮೃತಘಟದಂತೆ ಸಿಥಿಳಫಳದಂತೆ ಅದಾರಿಗೆ ಯೋಗ್ಯ (ಸಕವ. ೬. II, ೫೫೩-೧೫೬೬). [?]

**ಹೇದೆ** 'ಪೇತ' ನೋ.

**ಹೇನು** 'ಪೇನ್' ನೋ.

**ಹೇನುಕುರುವಿನ ಗಿಡ** (ನಾ). ಒಂದು ಬಗೆಯ ಸಸ್ಯ: ಹೇನುಕುರುವಿನ ಗಿಡ, ಪುರುಚಲಿ ಗಿಡ, ಪುಲ್ಲಾರೆ (ಮೈಜಿಗಿ. ೫೫-೧೧೦೬). [? + ಗಿಡ (< ಗಿಡು)]

**ಹೇಪ, ಹ್ಯಾಪ** (ನಾ). ಬುದ್ಧಿಯಿಲ್ಲದವನು; ತಿಳಿಗೇಡಿ; ಮಂಕ: ಅವನು ಇದುವರೆಗೆ ಯಾರನ್ನೂ ಇಟ್ಟುಕೊಂಡವನಲ್ಲ . . . ಹಾಗಾದರೆ ಹೇಪನಾಗಿರಬೇಕು (ಮುಸುಗ. ೧೨೧). ಹ್ಯಾಪ: ಹಣ್ಣುಮೊಗ್ಗುಗಳನ್ನು ಉತ್ತರೀಯದ ತುದಿಯಲ್ಲಿ ಕಟ್ಟಿಕೊಂಡು ಹ್ಯಾಪನಂತೆ ತಿರುಗುತ್ತ (ನಿಬಂಧ. II. ೯೯); ಆಸ್ತಿಪಾಸ್ತಿಯೆಲ್ಲಾ ಹ್ಯಾಪಕಿಟ್ಟಂದು (ಮಾಮರಾ. ೧೩೭). [?]

**ಹೇಮ**$_1$ (ನಾ). ೧. ಚಿನ್ನ; ಬಂಗಾರ: ಅಂಬರಚರಾಂಗನಾಕರತಲಪಲ್ಲವೋಲ್ಲಸಿತ ಹೇಮಚಾಮರಸವನವಿಲೋಲದುಕೂಲವಸನಪರಿವೃತಪಂಚರತ್ನಪ್ರಭಾಭಾಸುರ ವಿವಿಧ ವಿಭೂಷಣವಿರಚಿತಸುರಶರಾಸನನೊಡ್ಡೋಲಂಗಗೊಟ್ಟಿರೆ (ಆದಿಪು. ೨-೨ ವ); ನಿನ್ನ ಮಂದಿರದ ಮೇಲೆರಡು ಯೋಜನದೊಳೆನ್ನಯ ಕೀರ್ತಿಪುರ ಹೇಮವಿರಚಿತದೊಳಿರ ಬೇಹುದೆಂದು ಬೇಡಿದಡದಂ ಕೊಟ್ಟನಂದಗಜೇಶನು (ಹಚಾ. ೧೪-೧೫). ೨. ಚಿನ್ನದ ಒಂದು ನಿರ್ದಿಷ್ಟಪ್ರಮಾಣದ ತೂಕ; ಮಾಷಕ. ೩. ಕಂದು ಅಥವಾ ಕಪ್ಪುಬಣ್ಣದ ಕುದುರೆ: "ಕರಿಯ ವರ್ಣದ ಕುದಿರೆ ಹೇಮನೆಂಬುದು" (ಹಲಾಯು. ೭೪-೨೮೩). ೪. ದತ್ತೂರ; ಉಮ್ಮತ್ತಿ. ೫. ಒಂದು ಬಗೆಯ ಸಸ್ಯ ಮತ್ತು ಅದರ ಹೂವು; ನಾಗಸಂಪಗೆ: ಒಡಗೂಡಿ ಹೇಮ ಗೈರಿಕ ಗುಡ ಸೈಂಧವ ಸರ್ಜಸಿಕ್ಥಕಂಗಳನಿಂಬಾಗಡುಗೆ ತಿಳಕ್ಕೆಲದಿಂದಂ ಕಿಡಿಸುಗುಮದು ಬಿಡದೆ ತೊಡೆದೊಡಧರವ್ರಣಮಂ (ಲೋಕೋಪ. ೯-೮೨). ೬. ಚಳಿಗಾಲ; ಮಾಗಿ. ೭. ಹಿಮ; ಮಂಜು. ೮. ನೀರು; ಜಲ. ೯. ನವಗ್ರಹಗಳಲ್ಲಿ ಒಂದು; ಬುಧ. [ಸಂ. ಹೇಮನ್]

**ಹೇಮ**$_2$ (ನಾ). "ಹೇವ, ಜಿಗುಪ್ಸೆ" (ಹಾಲಾಸ್ಯ. ಕೋಶ) : ದಾರಿಯನಲ್ಲಿ ತಾಂ ಹೇಮವುಮಾಗಿ ಪುಡುಂಕಿ ಕಾಣದೆ ಸುತ್ತುತಿರ್ಪಿನವಾಗಳಾ ಸೋಮಸುಂದರ ಹರ್ಮ್ಯಮಿಾಕ್ಷಿಸಲಾದುದಾತನ ದಿಟ್ಟಿಗೆ (ಹಾಲಾಸ್ಯ. ೧-೪-೧೧). [< ಹೇವ. / IP ಇಲ್ಲಿ 'ಮ' ಕಾರವು ಪ್ರಾಸಸ್ಥಾನದಲ್ಲಿದೆ]

**ಹೇಮಂತ** (ನಾ). ೧. ಆರು ಋತುಗಳಲ್ಲಿ ಒಂದು; ಮಾರ್ಗಶಿರ ಪುಷ್ಯಮಾಸಗಳು; ಚಳಿಗಾಲ: ಸಮನಿಸೆ ಹೇಮಂತಂ ಶಿಶಿರಮಂ ಶರತ್ಸಮಯಮಲ್ಲಿ ಬರೆ ಕೊಳ್ಗೆ ವಸಂತಮನಂಬುದರ್ತುಗಾ ಗ್ರೀಷ್ಮಮನಂತೆ ವಿಲೋಮಕಥ್ಯಮಯ ನದ್ವಯದೊಳ್ (ಜಾತತಿ. ೨೪-೭); ಹೇಮಂತಂ ಬರಲಿರ್ದನೆಂಬ ಭಯದಿಂದೆಟ್ಟಾ ಶರನ್ನೀರದಸ್ತೋಮಂ ಪೋ ಬರುತಿರ್ದುದೀಗಳೆನಲ್ (ಕುಸುಮಾ. ೬-೪೮). ೨. (ಆಲಂ) ಮುದುಕ; ವೃದ್ಧ: ಮದುವೆಯ ಯೋಚನೆ ಮನದೊಳು ಬಂದಾಗ ಪುರುಷರು ಚೈತ್ರರಾಗುವರು ಮದುವೆಯೆ ಆದಾಗ ಅವರೆಯ ಬಹು ಬೇಗ ಮುದಿಯಾಗಿ ಹೇಮಂತರಹರು (ಇಂಚಾಪ. ೨೦೪-೭). [ಸಂ.]

**ಹೇಮಕಂಕುಷ್ಠ** (ನಾ). ಒಂದು ಬಗೆಯ ಔಷಧೀಯಗುಣವುಳ್ಳ ಮಣ್ಣು: "ತಿಕ್ತರೂಢಃ – ಹೇಮಕಂಕುಷ್ಠ" (ಓಷಧಿ. ೬೮). [ಸಂ.]

**ಹೇಮಕಂಕೋಷ್ಠ** (ನಾ). = ಹೇಮಕಂಕುಷ್ಠ: "ಕನಕಕ್ಷೀರಿ - ಹೇಮಕಂಕೋಷ್ಠ" (ಒಷಧಿ. ೨೬). [ಸಂ.]

**ಹೇಮಕಾರಕ** (ನಾ). ಚಿನ್ನದ ಕೆಲಸ ಮಾಡುವವನು; ಅಕ್ಕಸಾಲೆ: ದೀಕ್ಷಾನಲ ನಿನಾತ್ಮಕನಕಮಲಿನಮನಪೋಹಿಪ ಹೇಮಕಾರಕನುಂ (ವೃಷವಿ. ೧೨-೨೬ ವ). [ಸಂ.]

**ಹೇಮಕುಂಭ** (ನಾ). ಚಿನ್ನದ ಕೊಡ; ಹೊನ್ನಿನ ಕಲಶ: ಕಠಿನಸ್ತನಮಂಡಲ ಮಂಗಜಗೃಹಂ ಪರಮವಿಳಾಸಮೆಂಬುದು ಸುಧಾರಸಮಂ ನೆಱ ತುಂಬಿ ಬಯ್ಕೆಯಾಗಿರಿಸಿದ ಹೇಮಕುಂಭದವೊಲೊಪ್ಪಮನಾಳ್ದುದು (ಬಾಧಪು. ೨-೪೨); ಪಾದೋದಕವ ಹೇಮಕುಂಭ ದೊಳು ತುಂಬಿರಿಸಿ ಸಾದರದಿ ಅಷ್ಟವಿಧದಿಂದ ಪೂಜೆಯ ಮಾಡಿ (ಪ್ರಾಥರಾ. ೧೮-೧೪). [ಸಂ.]

**ಹೇಮಕುಕ್ಷಿ** (ನಾ). ಹಿರಣ್ಯಗರ್ಭ; ಬ್ರಹ್ಮ: "ಪಿತಾಮಹಂ ಸ್ವಭು . . . ಹೇಮಕುಕ್ಷಿ ಸುರಜ್ಯೇಷ್ಠಂ ವಿರಂಚಿಯೆನೆ ಬ್ರಹ್ಮನಕ್ಕುಂ" (ಮಂಗರಾ. ೩-೯). [ಸಂ.]

**ಹೇಮಕುತ್ಕೀಳ** (ನಾ). ಚಿನ್ನದ ಬೆಟ್ಟ; ಮೇರುಪರ್ವತ: ಮಹಿಮೆವಡೆದಿಂತು ಸೊಗಯಿಸುವ ಹೇಮಕುತ್ಕೀಳದಿಂದೆ ತೆಂಕಣದೆಸೆಯೊಳ್ ಮಹಿಭರತಂ ಷಟ್ಖಂಡಾವಹಮಲ್ಲಿ ಶುಭಾವಹಂ ವಿನೀತಾಖಂಡಂ (ಸುಕುಮಾ. ೧-೬೮). [ಸಂ. ಹೇಮಕುತ್ಕೀಲ]

**ಹೇಮಕೂಟ** (ನಾ). (ಚಿನ್ನದ ಶಿಖರದಿಂದ ಕೂಡಿರುವುದೆಂದು ಭಾವಿಸಲಾದ) ಹಿಮಾಲಯಪರ್ವತದ ಉತ್ತರಭಾಗದಲ್ಲಿರುವ ಪರ್ವತಪಂಕ್ತಿ: ಕಾದಂಬರಿ ಯೊಲವಿನೊಳಂ ಹೇಮಕೂಟಕ್ಕದೊಮ್ಮೊಮ್ಮೆ ವಿಶೇಷಸ್ನೇಹಮಂ ಮಾಡುವನನು ದಿನಮೇಟ್ಟಿಂದು ರಾಜೇಂದ್ರಚಂದ್ರಂ (ಕಾದಂಉ. ೬೨೦); ಹೇಮಕೂಟದ ತುದಿಗೆ ಆ ಮಹಾಗಜವೇಱ . . . ಕಾಮನ ಪಿಡಿದು ಬಡಿಯಿತ್ತು (ಮಹಾದೇ. ಬ. ೨೨೦-೨೬); ಇದು ತಪಸ್ಸಿದ್ಧಿಕರವಾದ ಹೇಮಕೂಟವೆಂಬ ಕಿಂಪುರುಷಪರ್ವತವಲ್ಲವೆ? (ಶಾಕುಂತ. ೧೦೧-೧೬). [ಸಂ.]

**ಹೇಮಗರ್ಭ** (ನಾ). = ಹೇಮಕುಕ್ಷಿ: ಪ್ರೇಮದಿಂದಂ ತನ್ನ ತಲೆಯಂ ಹೇಮಗರ್ಭಂ ಕಾಯ್ದನೇ ಮದಸಾಮಜಾಸುರನಂ ಮುನಿದು ತಾಂ ಕೊಂದನೇ ಮುನ್ನ (ಬಸಪು. ೪೬-೧೮); ಮಿಗೆ ಪರಿವಚ್ಚ ಪೊಚ್ಚಪೊಸಜೊನ್ನದ ಬಲ್ಸಿರಿ ಹೇಮಗರ್ಭನೊಲ್ದುಗಿಸುವ ಪಾದ್ಯದೋಜೆ ಯನೊಡಂಬಡೆ (ಚಿಕವಿ. ೬-೨೨). [ಸಂ.]

**ಹೇಮಗಿರಿ** (ನಾ). = ಹೇಮಕುತ್ಕೀಳ: ಆ ಹೇಮಗಿರಿಯ ನಿಕಟಸಮೂಹದೊಳಿರ ದೋಡಿದುವು ಪೊನಲ್ಗಳ್ (ಪುಷ್ಪಪು. ೧೧-೪೧). [ಸಂ.]

**ಹೇಮಗೈರಿಕ** (ನಾ). ಕೆಂಪುಬಣ್ಣದ ಒಂದು ಬಗೆಯ ಔಷಧದ್ರವ್ಯ: "ರಕ್ತಧಾತು - ಹೇಮಗೈರಿಕ" (ಒಷಧಿ. ೧೩೪). [ಸಂ.]

**ಹೇಮಚೋರ** (ನಾ). ೧. ಚಿನ್ನವನ್ನು ಕದಿಯುವವನು. ೨. (ಆಲಂ) ಅಕ್ಕಸಾಲಿಗ: ವ್ಯಾಧನಂತೆ ಜಾಲಗಾರನಂತೆ ಹೇಮಚೋರನಂತೆ ಇಂತೀ ಗಾಹುಗಳ್ಳರಂತೆ ಮಾತಿನಲ್ಲಿ ಬ್ರಹ್ಮವ ನುಡಿದು . . . ಬೇವುತ್ತ ನೋವುತ್ತ ಮತ್ತೆ ಬ್ರಹ್ಮದ ಸುಮ್ಮಾನದ ಸುಖಿಗಳೆಂತಪ್ಪರೊ (ವಚರ. ೧೦೧-೪೫೦). [ಸಂ.]

**ಹೇಮಜಾಳ** (ನಾ). ಚಿನ್ನದ ತೋರಣ: ಅರಸಿಯರ್ಕಳುಂ ಗಣಿಕೆಯರ್ಕಳುಂಬೆರಸು ಸುರತ್ನಮಯಮಪ್ಪ ದಿವ್ಯವಿಮಾನಮುಂ ಘಂಟಾಜಾಳ ಮುಕ್ತಾಜಾಳ ಹೇಮಜಾಳಂ ಗಳಿಂದೊಪ್ಪುವ ವಿಮಾನಮನೇಱ . . . ಬರ್ಪನ್ನೆಗಂ (ಪಡ್ಮಾರಾ. ೮೩-೨೦). [ಸಂ. ಹೇಮಜಾಲ]

**ಹೇಮಣಂಬಿ** (ನಾ). ಅರವತ್ತು ಸಂವತ್ಸರಗಳಲ್ಲಿ ಒಂದು; ಹೇವಿಳಂಬಿ: ಹೇಮಣಂಬಿ ಸಂವತ್ಸರದ ಆಸಾಡ ಸು ೧೫ . . . ಮಲೆಯನಾಯಕನವರು ತುಱುವ ಕೊಣ್ಬು ಹೋಹಲ್ಲಿ (ಎಕ. XI, ಹೊಳಲ್ಕೆ. ೧೩೧-೪; 1237). [< ಸಂ. ಹೇಮಲಂಬ]

**ಹೇಮತಾಟಕ** (ನಾ). ಅಕ್ಕಸಾಲಿಗ: ಹೇಮದಾಭರಣಮಂ ಮಾಳ್ಪ ನೆವದಿಂ ಕಳುವ ಹೇಮತಾಟಕ [ಪಾಠಾಂ. ತಾಡಕ] ನಂತೆ . . . ಕಾಮಾರಿವೇಷ ನೆವದಿಂದಕೃತ್ಯಕೆ ಪೊಗಲ್ ಶರಣರೊಪ್ಪರ್ (ಷತಿಲ. ೧೩-೩೬); ಶಿಲ್ಪಿಗ ಹೇಮತಾಟಕ ಕಾಂಸ್ಯಕೃತ್ಯಕರ . . . ಕೇರಿಗಳಿರವ ಚಿತ್ತೈಸೆನುತರಸ ನಡೆದ (ಶಂಕದಾ. ೯-೨೬). [ಸಂ.]

**ಹೇಮದುಗ್ಧ** (ನಾ). ೧. ಹಳದಿಬಣ್ಣದ ರಸವನ್ನುಳ್ಳ ಒಂದು ಬಗೆಯ ಸಸ್ಯ; ಹಾಲುತೊಟ್ಟಿನ ಗಿಡ: "ಅಕ್ಕಿಹೆಡೆ ಹೇಮದುಗ್ಧಂ ಚುಕುಳವೆಂದೆನಿಕ್ಕುಂ" (ಮಂಗರಾ. ೩೯-೨೬). 'ಸ್ವರ್ಣಕ್ಷೀರಿ' ಪರಾ. ೨. ಅತ್ತಿಮರ. [ಸಂ.]

**ಹೇಮದುಗ್ಧಕ** (ನಾ). = ಹೇಮದುಗ್ಧ ೨. [ಸಂ.]

**ಹೇಮದೊಡವು** (ನಾ). ಚಿನ್ನದ ಆಭರಣ; ಹೊನ್ನಿನ ಒಡವೆ: ತರುಣಿಯರು ಗಳಿಟ್ಟಣಿಸಿ ಮೈಮೈಸೋಂಕುಲುರು ಹೇಮದೊಡವುಗಳ್ಸೆದು ವರರಜವಿಳಿಯೊಳೊಪ್ಪಿತು (ಕಂನವಿ. ೨೪-೪೮). [ಹೇಮ್ + ತೊಡವು]

**ಹೇಮನಗ** (ನಾ). ಚಿನ್ನದ ಬೆಟ್ಟ; ಮೇರುಪರ್ವತ: ನಿರ್ಜರಸ್ತೋಮಲಲಾಮ ಹೇಮನಗಧಾಮ ಜಗತ್ತ್ರಯಸಾರ್ವಭೌಮ (ಶಬಶಂ. ೫-೨೫). 'ರಜತಗಿರಿ' ಪರಾ. [ಸಂ.]

**ಹೇಮಪಟ್ಟಕ** (ನಾ). ಚಿನ್ನದ ಪೀಠ; ಬಂಗಾರದ ಆಸನ: ವಿಶಾಲಹೇಮಪಟ್ಟಕ ದೊಳಾತ್ಮಹೃತ್ಪದ್ಮಸದ್ಮೆಯಂ ಸರಸ್ವತಿಯಂ ಪೂಜಾಪೂರ್ವಕಮಧಿವಾಸಿಸಿ (ಆದಿಪು. ೮-೫೮ ವ); ಸುರಕೋಟಿಯಂ ಕಂಡು ಸೌಧರ್ಮೇಂದ್ರಂ ಜಿನಾಭಿಷೇಕಕ್ಕೆ ನಿಂದಕೃತ್ರಿಮ ಹೇಮಪಟ್ಟಕಾಕಾರದಿಂ ಪವಿತ್ರಮಾದಮರಗಿರೀಂದ್ರಕ್ಕೆ ನಡೆಯಿಮೆಂದು . . . ಸನ್ನಗೆಯ್ದು (ಶಾಂತಿಪು. ೧೦-೨೩ ವ). [ಸಂ.]

**ಹೇಮಪದ್ಮ** (ನಾ). ಚಿನ್ನದ ಕಮಲ; ಹೊಂದಾವರೆ: ಮೇದಿನಿಯ ಹಸ್ತವಿಳಾಸದ ಹೇಮಪದ್ಮಮುತ್ತರಕುರುಭೂಮಿಯೆಂದಿನಿತನಲ್ಲದೆ ಬಣ್ಣಿಪನೆಂತು ಬಣ್ಣಿಪೊಂ (ಶಾಂತಿಪು. ೬-೧೨೧). [ಸಂ.]

**ಹೇಮಪರ್ವತ** (ನಾ). = ಹೇಮನಗ. [ಸಂ.]

**ಹೇಮಪುಷ್ಪ** (ನಾ). ೧. ಕೋಲುಸಂಪಿಗೆ; ದೊಡ್ಡಸಂಪಿಗೆ. ೨. ನಾಗಸಂಪಿಗೆ; ನಾಗಕೇಸರ: "ಹೇಮಪುಷ್ಪಂ, ನಾಗಕೇಸರಂ - ಈ ೨ ನಾಗಕೇಸರಂ" (ಹಲಾಯು. ೩೪-೫೩). ೩. ಅಶೋಕವೃಕ್ಷ. ೪. ಲೋಧ್ರವೃಕ್ಷ. [ಸಂ.]

**ಹೇಮಪುಷ್ಪಕ** (ನಾ). ೧. = ಹೇಮಪುಷ್ಪ ೧. ೨. = ಹೇಮಪುಷ್ಪ ೪. [ಸಂ.]

**ಹೇಮಪುಷ್ಪಿಕೆ** (ನಾ). ೧. ಚಿನ್ನದ ಬಣ್ಣದ ಮಲ್ಲಿಗೆ; ಹೊಂಬಣ್ಣದ ಜಾಜಿ. ೨. ಹೊಂಬಣ್ಣದ ಸೇವಂತಿಗೆ: "ಸೇವಂತಿಗೆ ಹೊಂಬಣ್ಣಮಾದೊಡೆ ಹೇಮಪುಷ್ಪಿಕೆ ಎನಿಸುಗು" (ನಾಚಿರಾ. ೬). [ಸಂ. ಹೇಮಪುಷ್ಪಿಕಾ]

**ಹೇಮಪ್ರಭ** (ನಾ). ಒಂದು ಪೌರಾಣಿಕಪರ್ವತದ ಹೆಸರು: ಶಂಖಕೂಟ ಮಹಾನಗ . . . ಹೇಮಪ್ರಭ ವರಾಹಗಿರಿ ಮಯೂರನಗ ಶೈಲೇಂದ್ರಮೆಂಬ ಹದಿನೇಳು ಕುಲಗೋತ್ರಂಗಳೇ ಪೂರ್ವೋಕ್ತ ಸುಪಾರ್ಶ್ವವೆಂಬ ಕೀಲಕಪರ್ವತಕ್ಕೆ ಬಡಗಣದಿಕ್ಕಿನಲ್ಲಿಹವು (ವಿವೇಕ. ೨೩೧). [ಸಂ. ಹೇಮಪ್ರಭಾ]

**ಹೇಮಭೂಧ್ರ** (ನಾ). = ಹೇಮನಗ: ಅಭಿಷೇಕಾಮೃತದಿಂ ಹೇಮಭೂಧ್ರಮಂ ಮುನ್ನ ಮುಳುಗಿಸಿದವೋಲಮರಪ್ರಭು ಮುಳುಗಿಸಿದಂ ತದ್ರಾಜಭವನಮಂ ಮತ್ತೆ ಲಲಿತ ನೃತ್ಯಾಮೃತದಿಂ (ಚಂದ್ರಪು. ೧೨-೧೮೫). [ಸಂ.]

**ಹೇಮಮಯಿ** (ನಾ). ಚಿನ್ನದಿಂದ ಮಾಡಿದ ಪುತ್ತಳಿ; ಬಂಗಾರದ ಪ್ರತಿಮೆ: "ನೆಗಟ್ಟುಂ ನಾನಾವಿಧ ಲೋಹಮಯ ಪ್ರತಿಮಾವಳಿಗಳ್ ಹರಿಣೆ ಹೇಮಮಯಿ ತಾನಕ್ಕುಂ" (ವಸ್ತುಕೋ. ೨೦-೧೬). [ಸಂ. ಹೇಮಮಯೀ]

**ಹೇಮಮಾಕ್ಷಿಕ** (ನಾ). ಚಿನ್ನವು ಸೇರಿದ ಒಂದು ಬಗೆಯ ಸಂಯುಕ್ತಧಾತು: ಹೇಮಾಮಾಕ್ಷಿಕ ತಾಳಕ . . . ಪಾದರಸ ಇವಿಷ್ಟನು ಸಮಾಂಶವಾಗಿ ಎಮ್ಮೆಯ ಹಾಲಿಂದ ಮರ್ದಿಸಿ ಏಳುದಿನ ಮುಖಕ್ಕೆ ಲೇಪವಂ ಮಾಡಲು ಮುಖದ ಕಪ್ಪು ತಿಳಿವದು (ವೈದ್ಯಸಾ. II, ೧೪೬). [ಸಂ.]

**ಹೇಮಲಂಬ** (ನಾ). ಅರವತ್ತುಸಂವತ್ಸರಗಳಲ್ಲಿ ಮೂವತ್ತೊಂದನೆಯದು: 'ಹೇವಿಳಂಬಿ' ಪರಾ. [ಸಂ.]

**ಹೇಮವಸನ** (ನಾ). ೧. ಚಿನ್ನದ ಬಣ್ಣದ ಜರತಾರಿವಸ್ತ್ರ; ಪೀತಾಂಬರ. ೨. ಪೀತಾಂಬರವನ್ನು ಧರಿಸಿದವನು; ಕೃಷ್ಣ: ವಸುದೇವಾತ್ಮಜ ವನಮಾಲಿಸರ ಹೇಮವಸನ . . . ಸಲಹೆನ್ನ (ಶತಸಾಂ. ೭೩-೭೧). [ಸಂ.]

**ಹೇಮಸರೋಜ** (ನಾ). = ಹೇಮಪದ್ಮ: ಹೇಮಸರೋಜದೊಳ್ತಳೆದು ಮಾಣಿಕಮಂ . . . ಒರ್ವಳುತ್ಪಲಶ್ಯಾಮಳೆ ಮಂಗಳಾಭರಣಭೂಷಿತೆ ತಂದದನೀವುದಂ ಲತಾಕೋಮಳೆ ಕಂಡಳಭ್ಯುದಯಕಾರಣಮಂ ಕನಸಂ ನಿಶಾಂತ್ಯದೊಳ್ (ಮಲ್ಲಿಪು. ೪-೫೬). [ಸಂ.]

**ಹೇಮಸ್ತೇಯ** (ನಾ). ಚಿನ್ನವನ್ನು ಕದ್ದವನು: ತಸ್ಕರಿಸಿ ಪದಬಂಧಮಂ ರಚಿಸಿ ಲವಣಿಯಿಂದೀ ಕಾವ್ಯವಂ ಮಾಡಲಾನವರ ಕುವರನಲ್ಲವರ ಹೇಮಸ್ತೇಯನೀಶ ಕವಿಸಮಯಕತಿದೂರಸ್ಥನು (ವಿಕೋಪು. ೩-೫). [ಸಂ.]

**ಹೇಮಳರೇಖೆ** (ನಾ). [ಸಾಮುದ್ರಿ] ಕೈಯ ಮಣಿಕಟ್ಟಿನ ಮೇಲಿರುವ ರೇಖೆ (?): ಮಣಿಬಂಧದಲ್ಲಿ ಹೇಮಳರೇಖೆಯಿರಲು ಆತನು ಬಹು ಅಲಂಕಾರವಂತನಾಗುವನು (ಸಾಮುಲ. ೧೦೨-೧೫). [ಸಂ. ಹೇಮಲರೇಖಾ]

**ಹೇಮಾಂಗ** (ನಾ). ೧. ಚಿನ್ನದ ಶರೀರ; ಬಂಗಾರದ ದೇಹ. ೨. ಚಿನ್ನದ ಶರೀರವನ್ನು ಹೊಂದಿದವನು. ೩. ಗರುಡ. ೪. ಸಿಂಹ. ೫. ಮೇರುಪರ್ವತ. ೬. ಬ್ರಹ್ಮ. ೭. ವಿಷ್ಣು. [ಸಂ.]

**ಹೇಮಾಂಬರ** (ನಾ). ಹೊಂಬಣ್ಣದ ರೇಷ್ಮೆವಸ್ತ್ರ; ಪೀತಾಂಬರ: ಹೇಮಾಂಬರದ ಲಲಿತಕಾಂತಿ ಹೊಳೆಹೊಳೆವ ಸೌದಾಮಿನಿವೊಲಿರೆ . . . ಕೃಷ್ಣನಂ ಕಂಡು ಪುಳಕಿತ ನಾದನು (ಜೈಮಿಭಾ. ೨೬-೬೯). [ಸಂ.]

**ಹೇಮಾಂಬುಜ** (ನಾ). = ಹೇಮಪದ್ಮ: ಅಮರ್ದಸೆವ ಪುರ್ವುಮಂ ನೊಸಲುಮನೊರ್ವಳ್ ಸಮಱುವಮರಿ ಹೇಮಾಂಬುಜದೊಳ್ ಸಮನಿಸಿದ ಶೈವಲಪ್ರಸರ ಮನೋಸರಿಸುವ ಚಳೋರ್ಮಿಯಂ ಪೋಲ್ತಿರ್ದಳ್ (ಶಾಂತಿಪು. ೯-೧೮೮); ಹೇಮಾಂಬುಜಮಂ ತರಲುದ್ದಾಮಭುಜಂ ವಿಜಯನಿರದೆ ಪೋದಂ (ನೇಮಿಪು. ೧೦-೮೩). [ಸಂ.]

**ಹೇಮಾಂಬುರುಹಾಸ್ಯೆ** (ನಾ). ಹೊಂದಾವರೆಯಂತೆ ಮುಖವುಳ್ಳವಳು; ಸುಂದರಿ: ಅಂಗರಾಜನೊಳಿದಿರ್ಚಿದ ಭಾವನೆ ಪೊಚ್ಚಮಾಗೆ ಹೇಮಾಂಬುರುಹಾಸ್ಯೆ ಸೋಲ್ಪುದೆನೆ ಕನ್ನಿಕೆ ಜನ್ಯೆಯನೊತ್ತಿ ಪೋಯ್ತು ಯಾನಂ (ಶಾಂತಿಪು. ೫-೧೧೭).
[ಸಂ. ಹೇಮಾಂಬುರುಹಾಸ್ಯಾ (ಹೇಮ + ಅಂಬುರುಹ + ಆಸ್ಯ + -)]

**ಹೇಮಾಚಲ, ಹೇಮಾಚಳ** (ನಾ). = ಹೇಮನಗ: ಭೂಮಂಡಲಮಂ ತಳೆದಂ ಕ್ಷೇಮಾಸ್ಪದಮಾಗೆ ನಾಮಮಹಿಮೋನ್ನತಿಯಿಂ ಹೇಮಾಚಲಮಂ ಮೆಚ್ಚಂ ಹೇಮರಥಂ ಶ್ರುತಿಮುಖಂ ಚತುರ್ಮುಖತನಯಂ (ಪಂರಾಮಾ. ೨-೬೪); ಅಬ್ಜಾಸನಂ ಪ್ರೀತಿ ಕೈಮಿಗೆ . . . ಲಕ್ಷ್ಮೀವಲ್ಲಭಂಗೆತ್ತಿದಾ ಗಗನಚ್ಛತ್ರದ ಹೇಮದಂಡಮೆನಿಸಲ್ ಸಾಲ್ದತ್ತು ಹೇಮಾಚಲಂ (ಜಗವಿ. ೧-೨೫). **ಹೇಮಾಚಳ**: ಗಜೇಂದ್ರಾರಿಪರಾಕ್ರಮಂ ಜನನುತಂ ಶ್ರೀಮಾನ ಹೇಮಾಚಳಂ (ಕೊಲ್ಹಾಶಾ. ೧೨-೫; 1165); ಹೇಮಾಚಳಶ್ರೀಶಿಲಾತಳಮಂ ಮೆಚ್ಚುಯುಮಂದು ಮೆಚ್ಚದೆ ಬೃಹದ್ವಕ್ಷಂ ಮಹಾಪದ್ಮನಾ (ಪುಷ್ಪಪು. ೪-೬೭). [ಸಂ.]

**ಹೇಮಾಚಳ** 'ಹೇಮಾಚಲ' ನೋ.

**ಹೇಮಾದ್ರಿ** (ನಾ). = ಹೇಮನಗ: ವಕ್ಷ್ಯಾರುಣಂ ಸಂಜೆಯಂ ಗೆಲೆ ಪೋಲ್ತತ್ತು ತಳಪ್ರಹಾರಿಯ ಶಿರಂ ಹೇಮಾದ್ರಿಯಾಕಾರಮಂ (ಕಾವ್ಯಸಾ. ೫೫ ಶೂದ್ರಕ); ಆ ಮಂದರದಿಂ ತೆಂಕಣ ಹೇಮಾದ್ರಿಯ ವಾರಿನಿ XXX ನಡುವಣ ಭರತೋರ್ವಿೀಮಧ್ಯದೊಳಿಪ್ಪ . . . ಕುಂತಳದೇಶಂ (ಕೊಲ್ಹಾಶಾ. ೧೩-೯; 1166). [ಸಂ.]

**ಹೇಮಾದ್ರಿಧನ್ವ** (ನಾ). ಮೇರುಪರ್ವತವನ್ನು ಬಿಲ್ಲನ್ನಾಗಿ ಉಳ್ಳವನು; ಶಿವ: ಹೇಮಾದ್ರಿಧನ್ವನುತನಾಮಾ . . . ಗೌರೀಮಾನಸೇಷ್ಟಪ್ರದಾ ಮಾರಮದಮರ್ದನ (ಉದ್ಭದೇ. ೨-೬೯). [ಸಂ. ಹೇಮಾದ್ರಿಧನ್ವನ್]

**ಹೇಮಾವತಿ** (ನಾ). ಕರ್ನಾಟಕದಲ್ಲಿ ಹರಿಯುವ ಒಂದು ನದಿಯ ಹೆಸರು: ಒಡನೆ ಕಪ್ಪಿನಿ ಕೌಂಡಿನಿ ಹೇಮಾವತಿವಿಡಿದು ಸಮಸ್ತನದಿಗಳ ಸಡಗರದೊಳಗೊಳಕೊಂಡು ಮುಕ್ತಿಸ್ಥಾನಕೆಡೆಯಾಗಿಹಳು ಕಾವೇರಿ (ಕಂಸವಿ. ೨-೧೯). [ಸಂ. ಹೇಮಾವತೀ]

**ಹೇಮಾಸನ** (ನಾ). ಬಂಗಾರದ ಪೀಠ; ಚಿನ್ನದ ಆಸನ: ಕುಮಾರನಂ ಸಾರೆವಂದು ಯಥೋಚಿತಹೇಮಾಸನದೊಳ್ ಕುಳ್ಳಿರ್ದು ನಾಭಿರಾಜಂ (ಆದಿಪು. ೮-೮ ವ); ಕಂಡೆರ್ದೆ ಪವ್ವನೆ ಪಾಱಿದತ್ತು ನಿಜನಂದನನಿಲ್ಲದ ಬಲದ ಕೆಲದ ಹೇಮಾಸನಮಂ (ಚಂದ್ರಪು. ೫-೭). [ಸಂ.]

**ಹೇಮಾಹೇಮಿ** (ನಾ). ಅತಿಸಮರ್ಥ; ಸಾಮರ್ಥ್ಯಶಾಲಿ: ಒಬ್ಬರಲ್ಲಾ ಅಂತಾ ಇಬ್ಬರು ಇದ್ದೀರಿ ಹೇಮಾಹೇಮಿಗಳು! (ಮರಳಿ. ೫೭).
[?./ ತೆಲು. ಹೇಮಾಹೇಮಿ = ಹಿರಿಯ, ಶ್ರೇಷ್ಠ]

**ಹೇಮಿಸು** (ಕ್ರಿ). ನಿಂದಿಸು; ತೆಗಳು; ಮೂದಲಿಸು: ಕಂಡನಾ ಕುರುನೃಪತಿ ಭಟರು ಸರಿವುದನು ಖತಿಗೊಂಡು ನುಡಿದನು . . . ತನ್ನವರ ಕೋಪದಿಂ ಹೇ[ಪಾಠಾಂ. ಹೋ] ಮಿಸಿದನು (ತುರಂಗ. ೫೨-೨೩); ನುಡಿದಿರ್ದ ಭಾಷೆಗಂ ತಪ್ಪಲರಿಯದೆ ಶರವ ತೊಡದಿರ್ದ ಕಾರಣಂ ಹೇ [ಪಾಠಾಂ. ನೇ] ಮಿಸಲ್ಕಾದ್ರಿಶಂ (ತುರಂಗ. ೭೦-೫). [ಹೇಮ್$_2$ + - ಇಸು$_1$]

**ಹೇಯ** (ಗು). ೧. ಬಿಡಲು ಯೋಗ್ಯವಾದ; ತ್ಯಾಜ್ಯವಾದ: ನಿನ್ನ ಬೆಸಗೊಂಡ ತತ್ವಮುಂ ಹೇಯೋಪಾದೇಯರೂಪದಿಂ ದ್ವಿವಿಧಮಕ್ಕುಂ (ಆದಿಪು. ೧೦-೬೩ ವ). ೨. ಅಲ್ಪವಾದ; ಕ್ಷುದ್ರವಾದ. (ನಾ). ೩. ಬಿಡಲು ಯೋಗ್ಯವಾದುದು; ತ್ಯಜಿಸಲು ಅರ್ಹವಾದುದು: ಹೇಯಂ ಸಾಮ್ರಾಜ್ಯಮುಪಾದೇಯಂ ಪ್ರವ್ರಜ್ಯಮೆಂದು ಮಾಣದೆ ರಾಜ್ಯಶ್ರೀಯಂ ಕೊಟ್ಟಂ ಮುಕ್ತಿಶ್ರೀಯಂ ಬಗೆದರ್ಕಕೀರ್ತಿಗಾಗಳ್ ಭರತಂ (ಆದಿಪು. ೧೬-೬೨); ಭಕ್ತರ ದ್ರವ್ಯವೆನಗೆ ಹೇಯ (ಸರ್ವವ. ೬೩-೩೩೩). ೪. ಕೀಳಾದುದು; ಕ್ಷುದ್ರವಾದುದು: ಹೇಯಮಾದುದು ತನ್ನ ಬಾಳ್ಕೆ ಪಿತೃವಧೆಯೊಳೀ ಕಾಯಮಂ ಬಿಡುವೆನೀಗಳೆ (ಜೈಮಿಭಾ. ೨೩-೬೨); ಮನೋರೋಗದಿಂದ ತೊಂದರೆಪಡುವ ಶಿಕ್ಷಕರಲ್ಲಿ . . . ಮಕ್ಕಳನ್ನು ಹೇಯವಾಗಿ ಬೈಯುವುದೂ ದಂಡಿಸುವುದೂ ಮೊದಲಾಗುವುವು (ಶಿಕ್ಷದ. ೬೬೭). ೫. ಕಷ್ಟ; ದುಃಖ; ಅಳಲು: ಹಿಂದೆ ನಾನಾಯೋನಿಯಲ್ಲಿ ಬಂದೆನೆಂಬ ಹೇಯ[ಪಾಠಾಂ. ಹ]ವಿಲ್ಲ (ಬಸವ. ೧೭); ಯೌವನವಿಕಳತೆಯಂ ಮುಪ್ಪಿನಾ ಹೇಯಮಂ ಸಾವ ನಿರೋಧಸ್ತೋಮಮಂ ಕಂಡಲಸಿದೆಂ (ರಕ್ಷಾಶ. ೪೨). ೬. ದುಃಖಕ್ಕೆ ಕಾರಣವಾದುದು; ಕಷ್ಟಕ್ಕೆ ಮೂಲವಾದುದು: ಲಲನೆಯರ ಮಾತುಗಳು ನಟನಾವಳಿಗಳುಂ ದೃಷ್ಟಿಗಳ ಭಾವಂಗಳು ಬಱಿಯ ಹೇಯಂಗಳಲ್ಲದೆ ಸೌಖ್ಯತರವಹುದೆ (ಬಸಪು. ೪೦-೭೭). ೭. ಜುಗುಪ್ಸೆ; ಅಸಹ್ಯ; ಹೇಸಿಕೆ: ಹೇಯಂ ಮಾಯವಾಗೆ ಸತ್ವಂ ಸತ್ವಂಗಿಡೆ . . . ಪಾಸಱೆಯೊಳ್ ಕೂಸನಪ್ಪಳಿಸಿ (ಜಗವಿ. ೨-೫೩); ಹೇಯವಿದು ದೈತ್ಯರಿರ ತನು ಪರಕೀಯ್ಯದಶುಚಿಯಶುದ್ಧದಾಗರ (ನಿಭಾಗ. ೭-೬-೯). ೮. ಲಜ್ಜೆ; ನಾಚಿಕೆ: ಹಡದವ್ವ ಹೇಯ ಇಲ್ಲೇನ ನಿನಗೇಟ (ಕುಮಾಸಾಂ. ೨೫೩); ಆ ನಾಯಕ ಬ್ರಹ್ಮನ್ ಅನುಯಾಯಿಗಳು ನಾವೆಲ್ಲ ಹೇಯವದರೊಳಗೇನೊ (ಮಂಕುಕ. ೬೦೨). ೯. ಬಹುದೂರ; ಬಹಳ ಅಂತರವಿರುವುದು. ೧೦. ಕೋಪ; ಸಿಟ್ಟು. ೧೧. ದೃಷ್ಟಿಗೆ ಗೋಚರವಾದುದು. ೧೨. ಹತ್ತಿರ; ಸಮೀಪ. ೧೩. ಮನೋವಿಕಲ್ಪ; ಚಿತ್ತಚಾಂಚಲ್ಯ. ೧೪. ನಿಷ್ಠುರ; ಕಠಿಣ: "ದುಃಖಮಾಸನ್ನ ನಿಷ್ಠುರ ಪ್ರತ್ಯಕ್ಷ ಮನೋವಿಕಲ್ಪಮತಿ ದೂರಂಗಳ್ಗೆ ಹೇಯಾಹ್ವಯಂ" (ನಾನಾರ. ೧೩೪). [ಸಂ.]

**ಹೇರ್$_1$** 'ಪಿರಿ$_4$' ನೋ.

**ಹೇರ್$_2$** 'ಪೇಱು$_2$' ನೋ.

**ಹೇರ** (ನಾ). ಚಾರ; ಸೇವಕ: 'ಗುಪ್ತಹೇರ' ಪರಾ. [< ಸಂ. ಹೇರಕ]

**ಹೇರಂಡ** (ನಾ). ಹರಳುಗಿಡ; ಔಡಲದ ಗಿಡ: ಹೇರಂಡದ ಬಿತ್ತವ ತುಳಿದು ವಾರಿಯ ಕಲಸಿ ಬೇಯಿಸಿದಲ್ಲಿ ವಾರಿ ಬೇಱೆ ತಾ ಬೇಱಾದ ಭೇದವೆ ಬಲ್ಲರೆ ಇಷ್ಟಲಿಂಗ ಸಂಬಂಧಿ (ಮೋಳಿಮಾ. ೧೩೦-೫೧೫); ಹೇರಂಡದ ಘಟ ಫಲವ ಗ್ರಹಿಸಿ ಫಲ ಪಕ್ವಕ್ಕೆ ಬಂದಲ್ಲಿ ಭಿನ್ನವಾಗುತಲೆ ಬಿಣ್ಣುವ ತೆಱದಂತೆ (ಸಕವ. ೫. II, ೧೯-೪೭). [< ಸಂ. ಏರಂಡ]

**ಹೇರಂಬ** (ನಾ). ೧. ಗಣಪತಿ; ವಿನಾಯಕ: "ಹೇರಂಬಃ, ಲಂಬೋದರಃ . . . ವಿಘ್ನರಾಜಃ - ಈ ೯ ಬೆನಕನ ಪೆಸರ್" (ಹಲಾಯು. ೪-೧೯); ಇಂದುಶಿಲೆಮಂಟಪದಿ ಹೇರಂಬ ರೋದಿಸಲ್ ಕಂದ ಬಾಬಾ ಎನಲ್ (ಭಾವಚಿಂ. ೩-೧); ಹೇರಂಬನಾದಿ ಯಾಗಿರ್ಪ ನಾನಾಪ್ರಮಥವೀರರೆಲ್ಲಂ ಶಾಬರವನುಳಿದು ನಿಜರೂಪಿನಿಂ ಹರನ ಬಳಸಿರಲ್ಕೆ (ಚೆಬಪು. ೫೩-೬೧). ೨. ಎಮ್ಮೆ. [ಸಂ.]

**ಹೇರಂಬಜನಕ** (ನಾ). ಗಣಪತಿಯ ತಂದೆ; ಶಿವ: ತ್ರ್ಯಂಬಕ ಜಯಜಯ . . . ಹೇರಂಬಜನಕ ಜಿತಕುಸುಮಶರಾ (ಶಬಶಂ. ೪-೧೦೨); ಕುಂಭಸಂಭವ ಚಂಡಿಕಾಧವ ಸ್ಕಂದಹೇರಂಬಜನಕಾಂಬುಜಾರಿ (ಏಕೋಪು. ೧-೫). [ಸಂ.]

**ಹೇರಂಬಪಿತ** (ನಾ). = ಹೇರಂಬಜನಕ: ಹೇರಂಬಪಿತನಂ ಪ್ರದಕ್ಷಿಣಗೆಯ್ದವಂ ಗಲ್ಲದೇ . . . ಸೌಖ್ಯವನ್ನರ್ಗೆ ದೊರೆಯಲಹುದೇ (ಗುರುಚಾ. ೭-೯೭).
[ಸಂ. ಹೇರಂಬಪಿತೃ]

**ಹೇರಂಬು** (ನಾ). ನಿಡಿದಾದ ಬಾಣ; ದೊಡ್ಡ ಸರಳು: ಹೇಱಿದ ಹೇರಂಬುಗಳನಿಕ್ಕಡಿ ಮಾಡಿ (ಮೋಹತ. ೩೪-೪೭). [ಹೇರ್$_1$ (< ಪಿರಿದು$_1$) + ಅಂಬು$_2$]

**ಹೇರಕ** (ನಾ). ಗೂಢಚಾರ; ಬೇಹುಗಾರ. [ಸಂ.]

**ಹೇರಡವಿ** 'ಪೇರಡವಿ' ನೋ.

**ಹೇರಣಿ** (ನಾ). ದೊಡ್ಡಸೈನ್ಯ: ವನಿತೆಯರಿರ್ದ್ದರ್ . . . ಕಾಮನಂಬು ಕಾಮನ ಧನು ಕಾಮನಿರ್ಪ್ಪ ಕಾಮನ ಹೇರಣಿ ಕಾಮಪಾಶ[ಮಾ] ನೆನೆಯಿಪ ಕಾಮಮಂತ್ರಮನೆ (ಸೌಇ. XVIII. ೨೯೬-೫೫; 1188). [< ಪೇರಣಿ$_1$]

**ಹೇರಣಿಲ್** 'ಪೇರಣಿಲ್' ನೋ.

**ಹೇರಣಿಲೆ** 'ಪೇರಣಿಲೆ' ನೋ.

**ಹೇರಳ** 'ಹೇರಾಳ$_1$' ನೋ.

**ಹೇರಳೆ** 'ಪೇರೀಳೆ' ನೋ.

**ಹೇರಱಿಕೆ** 'ಪೇರಱಿಕೆ' ನೋ.

**ಹೇರಾಚ** (ನಾ). ಒಂದು ಬಗೆಯ ಮರ: "ಕುದ್ದಾಲಕಃ - ಹೇರಾಚ" (ಓಷಧಿ. ೩೬); "ಚರ್ಮರಿಕ - ಹೇರಾಚ, ಕಂಚಿವಾಳ" (ಓಷಧಿ. ೫೫). [?]

**ಹೇರಾಟ** 'ಹೇಱಾಟ' ನೋ.

**ಹೇರಾನಂದ** 'ಪೇರಾನಂದ' ನೋ.

**ಹೇರಾನೆ** 'ಪೇರಾನೆ' ನೋ.

**ಹೇರಾಲ** 'ಪೇರಾಲ' ನೋ.

**ಹೇರಾಸಡಿ** (ನಾ). ದೊಡ್ಡಜಾತಿಯ ಶತಾವರಿಗಿಡ: "ತುಂಗಿನೀ - ಹೇರಾಸಡಿ" (ಓಷಧಿ. ೬೧). [ಹೇರ್$_1$ (< ಪಿರಿದು$_1$) + ಆಸಡಿ]

**ಹೇರಾಸಿ** (ನಾ). ದೊಡ್ಡ ರಾಶಿ; ಒಟ್ಟಿಲು: ಕತ್ತಲೆಯ ಸೂರ್ಯನನೊತ್ತಿ ತಹ ದಿನವಾಯ್ತಲಾ (ಕುವ್ಯಾದ್ರೋ. ೨-೬೯). [ಹೇರ್$_1$ (< ಪಿರಿದು$_1$) + ರಾಸಿ$_2$]

**ಹೇರಾಸೆ** 'ಪೇರಾಸೆ' ನೋ.

**ಹೇರಾಳ$_1$**, **ಪೇರಾಳ$_1$**, ಹೇರಳ (ಗು). ೧. ಅಧಿಕವಾದ; ಅತಿಶಯವಾದ: ಹೊತ್ತಿತೆದೆ ಹೇರಾಳತಮದಲಿ ಕೆತ್ತಿದುವು ಮಿಸೆಗಳು (ಕುವ್ಯಾಸ. ೮-೧೨); ಪೌರುಷಾಂಗದ ನಿರತಿಶಯವನು ನೋಡು ನೀನೆನುತುರುಪರಾಕ್ರಮಿ ಹೆಚ್ಚಿದನು ಹೇರಾಳರೋಷದಲಿ (ತೊರರಾ. ೪-೧೦-೨೬); ನಿನಗೆ ಕೇಳಾರಂಭ ಬೇಡೆಂದು ವಿಘ್ನೇಶ ಹೇರಾಳಂಬ ಕಱೆದು ಬೊಬ್ಬಿಱಿದ (ಮೋಹತ. ೩೮-೪೮). (ನಾ). ೨. ಆಧಿಕ್ಯ; ಹೆಚ್ಚಳ: ಇಂದು ಏನುವ ನಮಗೆ ತಾರದೆ ಬಂದ ಹೇರಾಳದ ಕಡವರಂ ಬಂದುದದು ತಾನೆತ್ತ ಹೋಯಿತು (ಬಸವು. ೨೨-೩೩); ಬಿರಿದ ಬತ್ತಳಿಕೆಗಳ ಸೀಳಿದ ಹರಿಗೆಗಳ ಹೇರಾಳದಲಿ ರಂಜಿಸಿತು ರಣಭೂಮಿ (ಕುವ್ಯಾಕ. ೧೫-೩೨); ಸೈನಿಕರಿಗೆ ಹೇರಾಳವಾದ ಧನವನ್ನು ವಸ್ತ್ರಾಭರಣ ಗಳನ್ನು ಕೊಟ್ಟು ಹುರಿದುಂಬಿಸಿದನು (ಶ್ರೀರಾಯ. ೧೨೪). ೩. ಶೌರ್ಯಾಡಂಬರ; ವಿಜೃಂಭಣೆ: ಹೇರಾಳದಲಿ ಹೊಕ್ಕೆಚ್ಚನಾ ಪಾರ್ಥ (ಕುವ್ಯಾದ್ರೋ. ೧-೬೯); ರಾಯನ ಬಲದ ಮನ್ನೆಯರ ಪಾಯಿದಳದ ಹೇರಾಳವನಂದಾ ರಾಯಕುವರ ನೋಡಿದನು (ಕುರಾಸಾಂ. ೧೩-೫೧). $\Delta$ **ಹೇರಾಳ$_1$**: ೨. ಸುಭಟರ ಪೆಣದ ಪೇರಾಳದಿಂ [ಪಾಠಾಂ. ಳಂದ] ಭೀಕರಮಾದುದಾ ರಣಭೂಮಿ ನೋಳ್ಪರ ಕಣ್ಗೆ (ಕುರಾಸಾಂ. ೧೨-೪೮). **ಹೇರಳ**: ೨. ನಿನಗೆ ಹೇರಳವಾಗಿ ಮುನಿಯೆ ತಿಳಿಪುವನೆ ಜಾಣಂ (ಚಬಪು. ೧೦-೫೨); ಸಕಲ ಭೂಮಂಡಲವನ್ನು ಜಯಿಸಿ . . . ಹೇರಳವಾದ ಧನಗಳನ್ನು ಸಂಪಾದಿಸಿದನು (ಕೃವಾಸ. ೫೮). 'ಪಿರಿದು$_1$', 'ಹೆಚ್ಚಳ' ಪರಾ.

[ದೇ. ‖ ತಮಿ. ಏರಾಳಮ್; ತುಳು ಹೇರಳ; ತೆಲು. ಏರಾಳ]

**ಹೇರಾಳ$_2$** (ಅ). ಹೆಚ್ಚಾಗಿ; ಅಧಿಕವಾಗಿ; ಅತಿಶಯವಾಗಿ: ಹೇರಾಳ ಉಣಲುಡಲುಳ್ಳವರ ಕೊಡಲುಳ್ಳವರಿಗೆಱಗಿ ಬಾಳು (ಬಸವು. ೨೩-೩೮); ಮೊಗದೋಱುಗಳ ಪೂರಾಯಘಾಯದ ತಾಱುಥಟ್ಟಿನ ಹೆಣನ ಮೆದೆ ಹೇರಾಳ ರಂಜಿಸಿತು (ಕುವ್ಯಾದ್ರೋ. ೧೦-೬); ಕಂತುಕೇಳಿಯನೊಲಿದಿತ್ತು ಸಂತಸವನು ಪುಟ್ಟಿಸಿ ಹಣವನು ಹೇರಾಳೋರಂತೆ ತೆಗೆದಳವನಿಂದ (ಕಂನವಿ. ೨-೧೦೬). [< ಹೇರಾಳ$_1$]

**ಹೇರಾಳಿಸು** (ಕ್ರಿ). ಅಧಿಕವಾಗು; ಮಿತಿಮೀರು: ರುಧಿರದ ಹರಹು ಹೇರಾಳಿಸಿತು (ಕುವ್ಯಾಭೀ. ೪-೧೬); ಕಲಿಶಲ್ಯ . . . ರಥವೇಱಿದನು ನೆಲ ಹಿಳಿಯೆ ಹೇರಾಳಿಸಿತು ಬಹುವಿಧವಾದ್ಯನಿರ್ಘೋಷ (ಕುವ್ಯಾಕ. ೮-೨೪). [ಹೇರಾಳ$_1$ + - ಇಸು$_3$]

**ಹೇರಾಳು** 'ಪೇರಾಳ್' ನೋ.

**ಹೇರಿಕ** (ನಾ). = ಹೇರಕ: "ಯಥಾರ್ಥವರ್ಣಾಃ, ಮಂತ್ರಜ್ಞಾಃ, ಸ್ಪಶಃ, ಹೇರಿಕಃ - ಈ ೪ ಹೇರಿಗಂ" (ಹಲಾಯು. ೬೦-೨೬೧). [ಸಂ.]

**ಹೇರಿಗ** (ನಾ). = ಹೇರಕ: "ಯಥಾರ್ಥವರ್ಣಾಃ, ಮಂತ್ರಜ್ಞಾಃ, ಸ್ಪಶಃ, ಹೇರಿಕಃ - ಈ ೪ ಹೇರಿಗಂ" (ಹಲಾಯು. ೬೦-೨೬೧); ಹೇರಿಗ ಲಾಳ ಸಂಧಿವಿಗ್ರಹದ ಮಹಾಪದವಿಯ ಸಿರಿಕರಣದ . . . ಕೇಶವದೇವಂ (ಎಇ. XVI, ೪೬-೨೧; 1147); ಚರರಿಂ ಹೇರಿಗರಿಂ ಸ್ವಕೀಯ ಪರಕೀಯ ಪ್ರಾಜ್ಯಮಂ ರಾಜ್ಯಮಂ ಪರಿಕಿಪ್ಪಂತುಟೆ (ಅನಂಪು. ೬-೬೭); ಹೇರಿಗರು ಸೇನಬೋವರು ಮಂತ್ರಜೀವಿಗಳು . . . ಬಹು ಸೇವಕರಿರ್ದರಲ್ಲಲ್ಲಿ (ಭರಚ. ೧-೬೫). [< ಸಂ. ಹೇರಿಕ]

**ಹೇರಿಗಿತ್ತಿ** (ನಾ). ಗೂಢಚಾರಿಣಿ; ಬೇಹುಗಾತಿ: ಕುಟಿಲ ತಾಣದೊಳು ತವಕದ ಜೋಡರೊಳ್ಸೆರೆವ ಹರಳೆಗಿತ್ತಿಯರು ಮದನನ ಹೇರಿಗಿತ್ತಿಯರು ಕಾಣಿಸಿದರು (ಸೌಂದಪು. ೧೭-೪೬). [ಹೇರಿಗ + - ಇತ್ತಿ]

**ಹೇರಿಜೆ** (ನಾ). ಒಂದು ಬಗೆಯ ಮರ: ಹೇರಿಜೆಯೆಲಚಿ ತಂಡಸಿ ಮುಳ್ಳುಬೇಲಿಗಳ್ ಸೇರಿ ಮುಟ್ಟಹುವಾಗಸವನು (ಕಂನವಿ. ೧೮-೩೫). [?]

**ಹೇರಿಟ್ಟಿ** 'ಪೇರಿಟ್ಟಿ' ನೋ.

**ಹೇರಿಲ್** (ನಾ). [ಗಣಿತ] (?): ಧಾರುಣಿಯ ನಾಲ್ಕು ಭುಜಗಳು ಸೇರದೆ ಕಿಱಿದಾಗಿ ಬೇಱೆ ಹೋಗಿಹ ಕೆಯ್ಯಂತಾರ್ಯೆಯ ಹೇರಿಲೆನಿಪುದು (ವ್ಯವಹಾ. ಕ್ಷೇತ್ರ. ೧೫). [?]

**ಹೇರಿಸು** 'ಪೇಱಿಸು' ನೋ.

**ಹೇರಿಳೆ** 'ಪೇರೀಳೆ' ನೋ.

**ಹೇರೀಚಲು** (ನಾ). ದೊಡ್ಡ ಜಾತಿಯ ಈಚಲುಮರ: ನೆಲದಾಳ್ ದಾಗುಡಿ ಹೇರೀಚಲು . . . ಸತಕ್ರಪಾನಂ ವಿಷಹಂ (ಏಮದ. ೫-೯೬).

[ಹೇರ್$_1$ (< ಪಿರಿದು$_1$) + ಈಚಲು$_1$ (< ಈಂಚಲ್)]

**ಹೇರೀಟ** 'ಪೇರಿಟ್ಟಿ' ನೋ.

**ಹೇರೀಳೆ** 'ಪೇರೀಳೆ' ನೋ.

**ಹೇರು$_1$** 'ಪೇಱು$_1$' ನೋ.

**ಹೇರು$_2$** 'ಪೇಱು$_2$' ನೋ.

**ಹೇರುಕಾರ** 'ಹೇಱುಕಾಱ' ನೋ.

**ಹೇರುಡು** 'ಪೇರುಡು' ನೋ.

**ಹೇರುದ್ದು** (ನಾ). ಒಂದು ಬಗೆಯ ದಪ್ಪಜಾತಿಯ ಉದ್ದು: "ರಾಜಮಾಷಃ - ಅಲಸಂದೆ, ಹೇರುದ್ದು" (ಓಷಧಿ. ೧೩೮).

[ಹೇರ್$_1$ (< ಪಿರಿದು$_1$) + ಉದ್ದು$_2$ (< ಉಟ್ದು)]

**ಹೇರುರ** 'ಪೇರುರ' ನೋ.

**ಹೇರೂರ್** 'ಪೇರೂರ್' ನೋ.

**ಹೇರೆಕ್ಕೆ** (ನಾ). ಎಕ್ಕೆಗಿಡದಲ್ಲಿ ಒಂದು ಬಗೆ; ದೊಡ್ಡಎಕ್ಕೆ: ಹೆಮ್ಮಿಟಲಿ ಹೇರೆಕ್ಕೆ ರಮ್ಮದ ರಸದಾಳಿ ಒಮ್ಮಾನದರ್ಧ ಉದಕಕಷಾಯದಿಂ ಕೆಮ್ಮೆಲ್ಲ ಕೆಡುಗು (ಸರ್ವಜ್ಞ. ೨೦೨೪). [ಹೇರ್$_1$ (< ಪಿರಿದು$_1$) + ಎಕ್ಕೆ$_2$]

**ಹೇರೆತ್ತು** (ನಾ). ಭಾರವನ್ನು ಹೊರುವ ಎತ್ತು: ಹೇರೆತ್ತುಗಳ ಮೇಲೋ ಕತ್ತೆಗಳ ಮೇಲೋ ದಿನಸುಗಳನ್ನು ದೂರದೂರ ಸಾಗಿಸುವುದು ಹಿಂದಿನ ರೂಢಿಯಾಗಿತ್ತು (ಬಾಲಪ್ರ. I. ೨೬೪); ಹೇರೆತ್ತಿನ ವ್ಯಾಪಾರಮಾಡುತ್ತಿದ್ದ ಹೆಂಗಸೊಬ್ಬಳು . . . ಹರಕೆ ಮಾಡಿಕೊಂಡಳು (ನನ್ನೂರು. ೧). [ಹೇರು$_1$ (< ಪೇಱು$_1$) + ಎತ್ತು$_2$ (< ಎಟ್ತು$_1$)]

**ಹೇರೊಡಲ್** 'ಪೇರೊಡಲ್' ನೋ.

**ಹೇರೊಡಲ** (ನಾ). ದೊಡ್ಡ ಹೊಟ್ಟೆಯುಳ್ಳವನು; ಗಣಪತಿ: ಕಡುಕರುಣಿ ನೀನೆಂದರಿತು ಹೇರೊಡಲ ನಮಿಸುವೆ ನಿನ್ನಡಿಗೆ (ಜಗದಾ. ೨೮೬).

[ಹೇರೊಡಲ್ (< ಪೇರೊಡಲ್) + - ಅ$_7$]

**ಹೇರೊಡಲು** 'ಪೇರೊಡಲ್' ನೋ.

**ಹೇರೊಬ್ಬೆ** 'ಪೇರೊಬ್ಬೆ' ನೋ.

**ಹೇರೊಲೆ** (ನಾ). ದೊಡ್ಡ ಒಲೆ; ಭಾರಿಯಾದ ಒಲೆ: ಹೇರೊಲೆಗೆ ಶಾಶ್ವತವಾಗಿ ಹೂಳಿಬಿಟ್ಟಿದ್ದ ಭಾರಿಯ ಹಂಡೆಯಲ್ಲಿ . . . ಮುರು . . . ಕುದಿಯುತ್ತಿತ್ತು (ಮಲಮ. ೮೪೯). [ಹೇರ್$_{1}$ (< ಪಿರಿದು$_{1}$) + ಒಲೆ$_{4}$]

**ಹೇರೌಡಲ** (ನಾ). ದೊಡ್ಡಜಾತಿಯ ಹರಳುಗಿಡ: "ಮಹೇರಂಡಃ - ಹೇರೌಡಲ" (ಓಷಧಿ. ೧೧೮). [ಹೇರ್$_{1}$ (< ಪಿರಿದು$_{1}$) + ಔಡಲ (< ಅವುಡಲ)]

**ಹೇಲನ, ಹೇಳನ** (ನಾ). ೧. ತಿರಸ್ಕಾರ; ಅನಾದರ; ಅಲ್ಲಗಳೆಯುವಿಕೆ. ೨. ಶೃಂಗಾರಚೇಷ್ಟೆ, – ವಿಲಾಸ. **ಹೇಳನ:** ೧. ಕೋಳುಹೋದುದು ನಿಮ್ಮ ಶಿಂ ಮುನಿಹೇಳನಕೆ ಕಾಲೂಱಿದಡೆ ಸುರಪಾಲಪದವಿಯಲಹಿತರವಧರಿಸಿದೆನು ತಾನು (ನಿಭಾಗ. ೮-೬-೧೨); ಕೊಟ್ಟುದ ಕೊಂಡುದ ಹೇಳನ ಮಾಡೊ ಕನಿಷ್ಠನ ಸೇರಿದರೇನುಂಟು (ಪುರಂದ. ೧-೧೨೪-೨); ದೊರೆಯು . . . ಅವಳ ನಡತೆಯನ್ನು ಹೇಳನದಲ್ಲಿಯೂ ಹಾಸ್ಯದಲ್ಲಿಯೂ ಕೊನೆಗಾಣಿಸುತಾ ಇದ್ದರು (ಪೇಟಮಾ. ೧೯). ೩. ಅಪಹಾಸ್ಯ; ಅಣಕ; ಚೇಷ್ಟೆ: ದೃಷ್ಟಿಚುಕ್ಕೆಯದೊಂದನೆಲ್ಲ ಚೆಂದಂಗಳ್ಗಮಿಟ್ಟಿಹನು ಪರಮೇಷ್ಠಿ, ಶಶಿಗೆ ಮಶಿಯವೊಲು ಗುಟ್ಟೇನೊ? ರಕ್ಷೆಯೋ? ಸಿಂಗರವೊ? ಹೇಳನವೊ? ಮಷ್ಟು ಸೃಷ್ಟಿಗೆ ಬೊಟ್ಟು (ಮಂಕುಕ. ೪೪೭). [ಸಂ.]

**ಹೇಲಾಗತಿ** (ನಾ). ಲೀಲೆ; ವಿನೋದ; ವಿಲಾಸ: ದ್ಯೋತಾಲಂಕೃತಕೌಸ್ತುಭನಂ ಹೇ[ಪಾಠಾಂ. ಲೀ]ಲಾಗತಿರುಚಿರಪೀತಪಟನಂ ಕಂಡಳ್ (ಜಗವಿ. ೧೧-೩೦). [ಸಂ.]

**ಹೇಲಾಸಾಧ್ಯ, ಹೇಳಾಸಾಧ್ಯ** (ನಾ). ೧. (ಆಟದಂತೆ) ಅನಾಯಾಸವಾಗಿ ಜಯಿಸಲು ಸಾಧ್ಯನಾದವನು: ಅಣುವಂ ಬಂದು ವನಭಂಗಮುಮಂ ಲಂಕಾದಹನಮುಮಂ ಮಾಟ್ಪುದಂತಾದೊಡೆ ರಾವಣಂ ಪೊಱಮಡುಗುಮಾತಂ ಹೇಲಾ [ಪಾಠಾಂ. ಪೇಟಾ] ಸಾಧ್ಯನಕ್ಕುಂ (ಕಗವಿ. ೩೫-೨೪); (ಚಾವುಂಪು. ೩೧೨ ನೋ.). **ಹೇಳಾಸಾಧ್ಯ:** ೨. ಆಟದಷ್ಟು ಸುಲಭಸಾಧ್ಯವಾದುದು: ಆ ವಿರಾಟನ ಮಂಡಲಂ ಗೋಮಂಡಲ ದಂತೆ ಹೇಳಾಸಾಧ್ಯಮಾಗಿ ಕೈಗೆ ವರ್ಕುಂ (ಪಂಪಭಾ. ೮-೮೩ ವ); ಶಿಶುಪಾಳನೊ ತಾನೆನಿಸಿ ನೆಗಟ್ದ ನರಗನ ತಲೆ ತನ್ನಾಳಾಳ ಕಯ್ಗೆ ವನ್ದುದು ಹೇಳಾಸಾಧ್ಯದೊಳ್ ಗಂಗಚೂಡಾ ಮಣಿಯಾ (ಎಕ. II, ೫೯-೯೬; 974). [ಸಂ.]

**ಹೇಲಿ** (ನಾ). ಸೂರ್ಯ; ನೇಸರು. [ಸಂ.]

**ಹೇಲು$_{1}$** 'ಪೇಲ್$_{1}$' ನೋ.

**ಹೇಲು$_{2}$** 'ಪೇಲ್$_{2}$' ನೋ.

**ಹೇಲುಕಸ** (ನಾ). ಒಂದು ಬಗೆಯ ಸಸ್ಯ: (ಕ). [?]

**ಹೇಲುಸುಂಡೆ** (ನಾ). ಒಂದು ಬಗೆಯ ಸಸ್ಯ: (ಮೃಟಿಗಿ. ೭೭-೧೫೮೬). [?]

**ಹೇಲೆ, ಹೇಳೆ** (ನಾ). ೧. ತಿರಸ್ಕಾರ; ಅನಾದರ. ೨. ಶೃಂಗಾರಚೇಷ್ಟೆ. ೩. ಸಂತೋಷ; ವಿಲಾಸ; ವಿನೋದ. ೪. ಸಂಪತ್ತು; ಐಶ್ವರ್ಯ. ೫. ಅವಕಾಶ; ಆಸ್ಪದ. **ಹೇಳೆ:** ೧. "ಹೇಳಾ, ಅವಹೇಳಾ, ಲೀಢಾ, ಅವಜ್ಞಾ, ಅವಲೀಢಾ - ಈ ೫ ಲೀಲೆ" (ಹಲಾಯು. ೧೧೮-೩೦). ೨. "ಹೇಳಾ, ವಿಲಾಸಃ, ಬಿಬ್ಬೋಕಃ, ಲೀಲಾ, ಲಲಿತಂ, ವಿಭ್ರಮಃ- ಇವು ಮೊದಲಾದುವು ಸ್ತ್ರೀಯರ ಭಾವಂಗಳ್" (ಹಲಾಯು. ೧೫-೮೯); ಶೃಂಗಾರ ಮನೊಲ್ದಾಂತು ದ್ಯೋತಿಸಿದೊಡೆ ಸಲೆ ಕಾಂತಂ ಪೆಸರಿಂದೆ ಹೇಳೆಯೆಂಬುದು ಸಲ್ಗುಂ (ರಸರ. ೧-೨೧ ಸೂತ್ರ). ೩. "ಅವಲೀಲೆ ಲೀಲೆಯವಜ್ಞೆ ಹೇಳಾವಹೇಳಾಖ್ಯ ಮದು ಹರುಷಮಕ್ಕುಂ" (ಮಂಗರಾ. ೧೨೯-೧೩); ಭಿಕ್ಷಾಯೆನಲು ಖೂಳ ಕುದುರೆಗೆ ಕುದಿವ ಮಡ್ಡಿಯಂ ನೀಡಿಸಲು ಹೇಳೆಯೊಳು ಸವಿದು (ಗುರುಚಾ. ೨-೭); ಅಣ್ಣ ಬೊಮ್ಮಣ್ಣನು ಹೇಳೆಯೊಳು ತನ್ನೊಡನೆ ಬರಲು (ರಾಘಚ. ೧೫-೨೬). ೪. "ಸಿರಿ ಸಿಂಗರಂ ಪಳಿವು ಮುರಿ ಪ್ರಸ್ತಾವ ಹೇಳಾಂಕಿತಂ" (ನಾನಾರ. ೧೦೯). ೫. "ಪ್ರಸ್ತಾವದಲ್ಲಿಯುಂ ಹೇಳಾಯೆಂಬುದು" (ಹಲಾಯು. ೧೩೪-೧೯). [ಸಂ. ಹೇಲಾ]

**ಹೇವ, ಹೇವೆ, ಹೇಹ** (ನಾ). ೧. ಜುಗುಪ್ಸೆ; ಅಸಹ್ಯ: ಶ್ರಾವಕರಾದೊಡೆ ಸಾಲ್ಗುಂ ಹೇವಂ ತನಗಿಲ್ಲ (ಸಮಪ. ೧೩-೨೬); ಧ್ರುವನು ಮಲತಾಯೆನಿಪ್ಪಾ ಸುರುಚಿ ಬಯ್ಯೆ ಹೇವವ ತಾಳ್ದು ಶಿವನ ಮೆಚ್ಚಿಸಿ ಬೇಱೆ ಲೋಕವಂ ಪಡೆದು (ಹಚಕಾ. ೧೦-೧೯); ಕೊನೆಗೆ ನನಗೆ ಫಕ್ಕನೆ ವಿವೇಕ ಮೂಡಿ ಎಚ್ಚರವಾಯಿತು. ನನ್ನ ಬಗೆಯು ನನಗೇನೆ ಹೇವವಾಯಿತು (ನಾಗಕಾ. ೨೮). ೨. ವ್ಯಥೆ; ದುಃಖ; ಅಳಲು: ಕದನಮುಖದಲ್ಲಿ ಹೇವ ವೀರರೊಳಿಲ್ಲಲಾ (ಕುವ್ಯಾಭೀ. ೩-೩೪); ದೇವನೆ ನಿಮ್ಮಿಂದೆನ್ನಯ ಹೇವಂ ಹರಿದತ್ತು (ದಶಾವ. ೮-೧೪೦); ಆವಾವ ಜೀವವನು ಹೇವವಿಲ್ಲದೆ ಕೊಂದು ಸಾವಾಗ ಶಿವನ ನೆನೆದಿಹರೆ ಅವ ಬಂದು ಕಾವನೇ (ಸರ್ವಜ್ಞ. ೯೫೨). ೩. ಹಗೆತನ; ವೈರ; ದ್ವೇಷ: ತರುಣಿಯರ ಮೋಹಕದಲುಱೆ ಮತ್ಸರಿಸದವರಾರರಸ ಹೇವದ ಹುರಿ ಬಲಿದುದೀತಂಗೆ (ತೊರರಾ. ೪-೨-೨೫): ಭಸ್ಮನೆಂಬ ಖಳ ಹೇವದಿಂ ಬಿಡದೆ ಬೆನ್ನಟ್ಟಲವನಂ ಮುಱಿದು (ನಂದಿಮಾ. ೧೦-೪೯). ೪. ರೋಷ; ಕೋಪ: ಹೇವದಲಿ ಕೆಡಹಲ್ಕೆ ಬೀಳ್ವರು (ಕೋಗಯ. ೨೧-೬); ಕಾಲನೀ ಪುರುಹೂತ ಹಿಂಗಿದನೆಂಬ ಹೇವದೊಳಾತುನಿಂದ್ಯೆ ಕಾಲುಝ್ಝುಂಭನ ಗೆಲಿದ ಗರ್ವದಲಿ (ಅಂಬಿಕಾ. ೧೭-೩೭); ದ್ವಾರಪಾಲಕನ ಮಾತು ಕೇಳಿ ವೇಣುಗೋಪಾಲರ ಹೇವ ಕೆರಳಿತು (ಇಪ್ಪಕ. ೩೦೧). ೫. ನಾಚಿಕೆ; ಲಜ್ಜೆ: ತಾವು ಷಡುರಥರೊಬ್ಬ ಹಸುಳೆಯ ಹೇವವಿಲ್ಲದೆ ಕೊಂದರೋ (ಕುವ್ಯಾದ್ರೋ. ೬-೬೩); ಹೇವವೆಲ್ಲಿಹುದಯ್ಯ ವೈಕುಂಠಪತಿಗೆ (ಪುರಂದ. ೧-೧೦೬-೧); ಈ ಲೋಕಮಂ ರಕ್ಷಿಸುವನೆಂಬ ನುಡಿ ಹೇವವಲ್ಲವೆ ತನಗೆ (ಚೆಬಪು. ೩೫-೩೨). ೬. ಸ್ವಾಭಿಮಾನ; ಆತ್ಮಗೌರವ: ಹೇವವುಳ್ಳರೆ ಭೀಮಪಾರ್ಥರ ನೀವು ಕೊಲುವುದು ಮೇಣು ರಣದಲಿ ಸಾವುದು (ಕುವ್ಯಾದ್ರೋ. ೧೫-೧೨); ಜಾವಕ್ಕೆ ಬದುಕುವರೆ ಹೇವಕ್ಕೆ ಬದುಕುವದು (ಸರ್ವಜ್ಞ. ೨೯೨); ಕಿಟ್ಟಿಯಿಂದ ಅಗಲಿದರೆ, ತನ್ನ ಹೇವವೇನು ಉಳಿಯಿತು? (ಗಂಮಾಯಿ. ೧೫೫). ೭. ಹುರುಡು; ಸ್ಪರ್ಧೆ; ಪೈಪೋಟಿ: ಸತ್ಯವಚೋವಿಲಾಸನು ಕಲಿಹರಿಶ್ಚಂದ್ರಾವನಿಪನೆನಲವನಸತ್ಯದ ಕುಲತಿಲಕನೆಂದು ಹೇವವಿಬ್ಬರಿಗಾ ಪ್ರತಿಜ್ಞಾಭಾವದಲಿ ಬಲುಹಾಯ್ತು (ತೊರರಾ. ೩-೨-೨೬); ಆಟ ಬಂದರೆ ತಾನೇ ಹೇವ, ಹೀಗಾಗಿ ಆಟದಲ್ಲಿ ನನಗೆ ಶ್ರದ್ಧೆ ಕಡಿಮೆ (ಹಾಸುಹೊ. ೨೨). ೮. ಅವಮಾನ; ಹೀನಾಯ: ಖೋಯೆಂದು ತಱುಬಿದರ್ ಖಳರಜೇಂದ್ರಾದ್ಯರ ಪಲಾಯನದ ಹೇವಮಂ ಕಂಡನೀ ವಿಷ್ಣು . . . ಮಾಱಾಂತನು (ಚೆಬಪು. ೪೯-೪೦). ೯. ರೋಗ; ವ್ಯಾಧಿ. **ಹೇವೆ:** ೨. ದೇವನಿವರನು ಕಾವ ಭರದಲಿ ನಾವು ಒಱಲಿದೊಡಾವ ಪರಿಯಲಿ ಹೇವೆ ತಪ್ಪುವುದೆನುತ ಚಿಂತಿಸುತಿರ್ದ ಮನದೊಳಗೆ (ಕುವ್ಯಾಸ. ೫-೪೦). **ಹೇಹ:** ೧. ಸಿದಲಿಂಗೇಶ್ವರಂ ಸಮ್ಯಗ್ಜ್ಞಾನೋದಯವಾಗಿ ಸಂಸಾರಹೇಹವಂ ಮಾಡಿ ಶರಣುಹೊಕ್ಕ ಸಿಷ್ಯಜನಂಗಳ ನಾಮುಪರಿಕ್ರಮಂಗಳಂತೆಂದಡೆ (ಎಕ. XVI, ಕುಣಿಗ. ೪೯-೨೦; ಸು. 1480); ಅಂತಕನ ಕೈಯಿಂದ ಅರೆದು ಸಣ್ಣಿಸಿಕೊಂಡು ಭವಕ್ಕೆ ನೂಂಕಿಸಿಕೊಂಬುದೇ ಅವಸಾನ ಇದನಱಿದು ಇವಕ್ಕೆ ಹೇಹವಂ ಮಾಡು (ಘನವ. ೧೦-೭); ಅಂಬುಧಿಯೊಳಗೆ ಸಕಲಮೃಗವಿರಲದ ಕೊಂಬವರಿಗೆ ಹೇಹವುಂಟೆ (ಹರಿಸಾಂ. ೩೩-೬೬). ೧೦. ಆಹ್ವಾನ. ೧೧. ಮೂಢ; ತಿಳಿಗೇಡಿ. ೧೨. ಬಾವುಟ; ಧ್ವಜ : "ಆಹ್ವಾನ ಮೂರ್ಖ ಗದಾ ಹೇಯ ಪತಾಕೆ ದುಃಖಮಿನಿತುಂ ಹೇಹಾ[ಪಾಠಾಂ. ಯಾ]ಭಿಧಾನಂ" (ನಾನಾರ. ೯೬). ೧೩. ತ್ಯಜಿಸುವಿಕೆ: (ಕ). [< ಏವ$_{1}$]

**ಹೇವಗೆಡಿಸು** (ಕ್ರಿ). ಅವಮಾನಗೊಳಿಸು; ಮುಖಭಂಗ ಮಾಡು: ನಾವಲೀ ಹೊಱಗವರ ಹೆಂಡಿರ ಹೇವಗೆಡಿಸಿದೆವು (ಕುವ್ಯಾಸ. ೧೬-೧೦); ತಾವು ಭಟರಾದರೆ ವಿಭಾಡಿಸಿ ಹೇವಗೆಡಿಸುವುದುಚಿತ (ಕುವ್ಯಾದ್ರೋ. ೧೫-೯). [ಹೇವ + ಕೆಡಿಸು$_{1}$]

**ಹೇವಗೇಡಿ** (ನಾ). ನಾಚಿಕೆಯಿಲ್ಲದ ವ್ಯಕ್ತಿ; ಭಂಡವ್ಯಕ್ತಿ: ಹಾವ ಹಿಡಿದು ಹೀಸಿ ಕರ ಹುಸಿ ಹೂ[ಜೆಯ] ಹೇವಗೇಡಿ ಹೈಯೆಂದವರವೋವೊ ಹೊರೆದಪೆ (ಶತಸಾಂ. ೭೮-೧೦೦); ಹೇವಗೇಡಿಗಳಿಗೆ ವಾವಿಯೇನು? ವರಸೆಯೇನು? (ಗಾದೆ). [ಹೇವ + ಕೇಡಿ$_{1}$]

**ಹೇವಗೊಳಿಸು** (ಕ್ರಿ). = ಹೇವಗೆಡಿಸು: ಪತಿಯೊರ್ಮೆ ಹೇವಗೊಳಿಸಲ್ ಮುಳಿಸಿಂ ಪ್ರತಿಕೂಲೆಯಾಗದಿರ್ (ಶಾಕುಂತ. ೫೬-೯೬). [ಹೇವ + ಕೊಳ್$_{1}$ + - ಇಸು$_{3}$]

**ಹೇವಣಿಗ** (ನಾ). ಕಬ್ಬಿಣದ ಕೆಲಸ ಮಾಡುವವನು; ಲೋಹಕಾರ; ಕಮ್ಮಾರ: ಹದನೇಱೆ ಕಾಯ್ದುರಿವ ಲೋಹದ ಬಟ್ಟಂ ನಿಱಿಸಿ ಹೇವಣಿಗನಡೆಗಲ್ಲಾಗ್ರದೊಳಿಕ್ಕುಟಿಂದೆ ಪಿಡಿದೊಡ್ಡಿದನೆನೆ ರವಿಯೆಸೆದನಸ್ತಗಿರಿಮಸ್ತಕದೊಳ್ (ಧರ್ಮಪ. ೭-೪೩). [?]

**ಹೇವಮಾರಿ** (ನಾ). (ಮೂರ್ಖತನದಿಂದ) ಹಟಮಾಡುವ ವ್ಯಕ್ತಿ; ಹಟಮಾರಿ: ನೀನಿಂದುವರೊಲಿದೀಗಗಲ್ದರೆ ಹಿಂದುಳಿದೊಡಲ್ವಿಡಿದಿಹ ಹೇವಮಾರಿ ತಾನೆಂದಿನಿಯನೆ ಬಗೆಗೊಂಡೆಯೊ (ಸೂಬಸೋ. ೧೫-೧೧೬); ಅದಟು ಕೊಳ್ಳದು ರಾಜಸೇವೆಯ ಪದವಿ ಪಾತಕ ಫಲವೆನುತ ನೂಕಿದರು ರಥವನು ಹಳಿವು ದರ್ಪದ ಹೇವಮಾರಿಗಳು

(ಕುಮಾರವ್ಯಾ. ೬-೨೫); ಹೇಡಿಗಳು ಬರಿ ಹೇವಮಾರಿಗಳು ಬಿರಿಸಾದ ರೋಡಿಗರು ನಿಮ್ಮ ಸೇನೆಯೊಳಿರ್ದ ಭಟರು (ತುರಂಗ. ೬೩-೧೩). [ಹೇವ + - ಮಾರಿ₁]

**ಹೇವಯಿಸು,** ಪೇವಯ್ಸು, ಹೇವಯ್ಸು (ಕ್ರಿ). ಅಸಹ್ಯಪಡು; ಜುಗುಪ್ಸೆಗೊಳ್ಳು: ಮುಳಿಸಿಂದ XXX ದಿಂ ಮೂಡಿದನೆನೆಸಿದಡೊಮ್ಮಿಂಗೆ ಹೇವಯಿಸಿ (ಎಕ. IV, ಕೃಷ್ಣರಾ. ೧೦-೧೮; 1306). Δ **ಪೇವಯ್ಸು:** ಎಲೆ ಕಾವೇರಿಯ ವಾರಿ ಕೂಡೆ ಪೊಲಸಾದತ್ತೆಂದು ಪೇವಯ್ಸುತುಂ (ಎಕ. V, ಬೇಲೂರು. ೫೮-೨೭; 1117). **ಹೇವಯ್ಸು:** ಎಲೆ ಕಾವೇರಿಯ ವಾರಿ ಕೂಡೆ ಪೊಲಸಾದತ್ತೆಂದು ಹೇವಯ್ಸುತುಂ (ಮೈಆರಿ. ೧೯೬೭. ೫೮-೨೫; 1148).

[ಹೇವ + - ಇಸು₃]

**ಹೇವಯ್ಸು** 'ಹೇವಯಿಸು' ನೋ.

**ಹೇವರ** (ನಾ). ಜುಗುಪ್ಸೆ; ಅಸಹ್ಯ: ಹೇ [ಪಾಠಾಂ. ಹೀ] ವರಮಂ ಕ್ಷಣಾಂತರಕೆ ತೋರ್ಪ ಸುಖಕ್ಕೊಲವಿಂದೊ ನಾಳೆಯೋ ಸಾವ ಜನಂಗಳೊಳ್ಮಮತೆ ಮತ್ಸರವೀಗಳೊ ಬೈಗಿನಾಗಳೋ . . . ಆತ್ಮತತ್ವಮಂ ಭಾವಿಸಿ ಮುಕ್ತನಾಗಲರಿದಾಯ್ತು (ಅಪಶ. ೩೩-೨೯). 'ಹೇವರಿಕೆ', 'ಹೇವರಿಸು' ಪರಾ. [< ಹೇವ]

**ಹೇವರಿಕೆ** (ನಾ). ೧. = **ಹೇವರ:** ನೋವು ಸಮ ಜೀವ ಸಮ ಸಲೆ ಸಾವು ಸಮಂ ನಿನಗೆ ಸಕಲಜೀವಕ್ಕೆಂಬುದ ಭಾವಿಸಿ ಕೊಲಲುಂ ತಿನಲುಂ ಹೇವರಿಕೆಯ [ಪಾಠಾಂ. ಅವಕರಣೆಯ] ಮಾಡು ಮನದೊಳಂ ಶಬರೇಶ (ನನ್ನಚಾ. ೫-೧೭); ಹಳ್ಳಿಗೆ ಹೋಗಿ ಬಂದನಂತರ ತಾನು ಬಾಳಿ ಬದುಕಿದ್ದ ಸಮಾಜದ ಬಗ್ಗೆ ನೆಕ್ಕುದೋವನಲ್ಲಿ ಅಸಾಧ್ಯ ಹೇವರಿಕೆ ತಲೆದೋರಿತು (ಪುನರು. ೩೨೬). ೨. ತಿನ್ನುವ ಅಪೇಕ್ಷೆಯಿಲ್ಲದಿರುವುದು; ಅರುಚಿ: ಬಾಯಿ ಹೇವರಿಕೆ, ಮಲದಲ್ಲಿ ಕಾಠಿಣ್ಯ . . . ಅಗ್ನಿವೈಷಮ್ಯ ಇವಿಷ್ಟು ವಾತಪ್ರಕೋಪಲಕ್ಷಣ (ವೈದ್ಯಸಾ. I, ೨೧). [ಹೇವರ + - ಇಕೆ]

**ಹೇವರಿಸು** (ಕ್ರಿ). ೧. ಜುಗುಪ್ಸೆ ತಾಳು; ಹೇಸು: ಅವರ ಸುಡುನುಡಿಗೆಲ್ಲ ನಾಚಿ ಹೇವರಿಸಿ ನಡೆತಂದೊಂದು ಶಿವನಿಳಯಮಂ ಪೊಕ್ಕು (ಸಿದ್ಧರಾ. ೮-೧೧); ಆ ವೃತ್ತಾಂತ ಮನಾತನಂಗಳ್ಪಿಡೊಡವಂ ಹೇವರಿಸಿ (ಪುಣ್ಯಾಸ್ರ. ೧-೧೯ ವ); ದೇವ ರಾಕ್ಷಸಭವದ ಬದುಕಿಗೆ ಹೇವರಿಸಿದುದು ಚಿತ್ತ (ತೊರರಾ. ೩-೧೨-೨೧). ೨. ಹಿಂಜರಿ; ಅಳುಕು; ಹಿಂದೆಗೆ: ಆ ಬೆಕ್ಕು ಬೆರ್ಚಿ ರತಿವರನ ಕೊರಲಂ ಬಿಟ್ಟು ಪೆಣ್ಣಂ ಹೇವರಿಸದೆ [ಪಾಠಾಂ. ಯಿಸದೆ] ಪಿಡಿವುದುಂ (ಪುಣ್ಯಾಸ್ರ. ೧೧-೧೨ ವ); ಉರುಳಿಗೆಡಿದನು ಶಲ್ಯನನು ಹೇವರಿಸಲೆಚ್ಚನು ಕೌರವನ (ಕುಮಾಭೀ. ೬-೧೮); ಭೂವನಿತೆ ದಾನವರ ಭಾರಕೆ ಹೇವರಿಸಿ ಬ್ರಹ್ಮಂಗೆ ಮೊರೆಯಿಡಲು (ಅಕ್ರೂಚ. ೧-೯).

[ಹೇವರ + - ಇಸು₃. /ತೆಲು. ಏವಗಿಂಚು]

**ಹೇವಹಜುಕ** (ನಾ). ಸ್ವಾಭಿಮಾನವಿಲ್ಲದ ಕೀಳುವ್ಯಕ್ತಿ: ಹಿಂದುಗಳೆವರು ಮರಳಿ ಮನೆಗಳ ಹಿಂದಣಾಸೆಯ ಹೇವಹಜುಕರಿಗಿಂದು ಮಹನವಮಿ (ಕುಮಾಕ. ೮-೨೯).

[ಹೇವ + ಹಜುಕ (< ಪಜುಕ)]

**ಹೇವಿಲಂಬಿ,** ಹೇವಿಳಂಬಿ (ನಾ). ಅರುವತ್ತು ಸಂವತ್ಸರಗಳಲ್ಲಿ ಮೂವತ್ತೊಂದನೆಯ ಸಂವತ್ಸರ. **ಹೇವಿಳಂಬಿ:** ಮತ್ತಮಾ ವರುಷವೇ ಪ್ರಭವ . . . ಹೇವಿ[ಪಾಠಾಂ. ಮ]ಳಂಬಿ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೧); ಹೇವಿಳಂಬಿಯಲುದಿಸಿ, ಅರಳಿದೆ ವಿಳಂಬಿಯಲಿ (ಅನಿಕೇ. ೨೨-೮). [ಸಂ.]

**ಹೇವಿಳಂಬಿ** 'ಹೇವಿಲಂಬಿ' ನೋ.

**ಹೇವೆ** 'ಹೇವ' ನೋ.

**ಹೇಷ** (ನಾ). ಕುದುರೆಯು ಕೆನೆತ: 'ಹೇಷಧ್ವನಿ' ಪರಾ. [ಸಂ.]

**ಹೇಷಧ್ವನಿ** (ನಾ). ಕುದುರೆಯ ಕೆನೆಯುವ ಶಬ್ದ; **ಹೇಷಾರವ:** ಗಜದ ಬೃಂಹಿತರವದ ವಾಜಿವ್ರಜದ ಹೇಷಧ್ವನಿಯ . . . ಗಜಬಜಿಕೆ ಗಾಢಿಸಿತು (ಕುಮಾಉ. ೧೧-೪೧). [ಸಂ.]

**ಹೇಷಾಕೃತ** (ನಾ). = **ಹೇಷಧ್ವನಿ:** "ಹೇಷಾಕೃತಂ [ಪಾಠಾಂ. ಹೇಷಾಂಕಿತಂ] ವಾಜಿತತಿಯಲ್ಲಿ ವರ್ತಿಸಿರ್ಕುಂ" (ಮಂಗರಾ. ೨೭-೬). [ಸಂ.]

**ಹೇಷಾಘೋಷ** (ನಾ). = **ಹೇಷಾಧ್ವನಿ:** ಬಂದಿರ್ದುವು ಹೇಷಾಘೋಷ ವಿದ್ರಾವಿತರಿಪು ಮಹಿಭೃಚ್ಛಾತುರಂಗಂ ತುರಂಗಂ (ಪುಷ್ಪಪು. ೫-೧೦). [ಸಂ.]

**ಹೇಷಾಧ್ವನಿ** (ನಾ). = **ಹೇಷಧ್ವನಿ:** ದಿನಕರನ ರಥದಶ್ವದೊಲ್ಮೇದಿನಿಯ ಮೆಟ್ಟದಳಟ್ಟ ಹೇಷಾಧ್ವನಿಗಳಿಂದೊಡೆಹಾಯ್ದು (ಪಶುಭಾ. ೨೨-೫೨). [ಸಂ.]

**ಹೇಷಾರವ** (ನಾ). = **ಹೇಷಧ್ವನಿ:** ಇಂದ್ರಾಯುಧಮಂ ಚಂದ್ರಾಪೀಡನೇಱ ದಿಗಂತರಂಗಳೆಲ್ಲಮನಂತಹಯಹೇಷಾರವಂಗಳಿಂ ತೆಕ್ಕನೆ ತೀವೆ (ಕಾದಂಉ. ೫೧೧); ಮೇಲುಲಿಯ ಹೇಷಾರವಂ ಗತಿಗಮಕವೇ ಪಂಚಧಾರಾವಿಶೇಷಮಾಗೆ . . . ನಡೆಗೊಳ್ಳ ಗಿಳಿಗುದುರೆಗಳ ಹಿಂಡು ರಂಜಿಸಿದುವು (ಚಬಪು. ೩೫-೯). [ಸಂ.]

**ಹೇಷಾರಸಿತ** (ನಾ). = **ಹೇಷಧ್ವನಿ:** ಸದ್ವಾಜಿಬೃಂದದ ಹೇಷಾರಸಿತಕ್ಕೆ ಭಾನುರಥದಶ್ವಂ ಬೆಚ್ಚೆ (ವೀರವಿ. ೫-೨೨). [ಸಂ.]

**ಹೇಷಿ** (ನಾ). ಕೆನೆಯುವ ಪ್ರಾಣಿ; ಕುದುರೆ. [ಸಂ. ಹೇಷಿನ್]

**ಹೇಷಿತ** (ನಾ). = **ಹೇಷಧ್ವನಿ:** ತುರಂಗಮಹೇಷಿತಘೋಷನಾದಮೊರ್ಮೊದಲೆ ಪಯೋಧಿಮಂಥನಮಹಾರವಮಂ ಗೆಲೆ (ಪಂಪಭಾ. ೩-೩೮); ಪ್ರಣವನಾದಾಹತಿಗೆ ಗತಿಯಲಿ ಕುಣಿದವಗ್ಗದ ವೇದಹಯ ಹಲ್ಲಣೆಯ ಹೇಷಿತರವಕೆ ಹೆದಱತು ರಾಕ್ಷಸವ್ರಾತ (ಕುಮಾಕ. ೬-೨೩). [ಸಂ.]

**ಹೇಷಿಸು** (ಕ್ರಿ). ಕುದುರೆಯಂತೆ ಕೂಗು,– **ಕೆನೆ:** ತುರಗಕ್ಕೆ ಮಧ್ಯದಶನೋತ್ಕರ ಮುದಯಿಸುಗುಂ ವಿಭಕ್ತಪದನಕ್ಕುಂ ಸುಸ್ವರದಿಂ ಹೇಷಿಸುಗುಂ (ಅಶ್ವಶಾ. ೫-೫).

[ಹೇಷ + - ಇಸು₃]

**ಹೇಷೆ** (ನಾ). = **ಹೇಷ:** ಹೇಷಾಬೃಂಹಿತಂಗಳ್ ವಿಲಯಜಲನಿಧಿಧ್ವಾನಮೆಂಬನ್ನೆಗಂ ಭೋಂಕನೆ ಕರ್ಣಾಭ್ಯರ್ಣಮಂ ಸಾರ್ತರೆ (ಪಂರಾಮಾ. ೧೩-೨). [ಸಂ. ಹೇಷಾ]

**ಹೇಷ್ಯ** (ನಾ). ಅಪಶಕುನ; ದುರ್ನಿಮಿತ್ತ: ಧರ್ಮಕ್ಕೆ ವಿರೋಧವಾಗಿ ನಡೆದವನಾದ ಕಾರಣ ಅವನು ಗಣೀ ಮೇಲಿನಿಂದ ಬಿದ್ದ . . . ಅವನನ್ನು ಎಂಟು ಸೀಳಾಗಿ ಕಡಿದು ನಮ್ಮ ದೇವರಿಗೆ ಬಲಿ ಕೊಡುತ್ತೇನೆ. ನಮಗೆ ದೊಡ್ಡ ಹೇಷ್ಯವಾಯಿತು (ಅದೂಟ. ೧೭೮).

[ಸಂ. ?./ ತೆಲು. ಏಷ್ಯ = ಅನಾದರ, ತಿರಸ್ಕಾರ]

**ಹೇಸರ,** ಪೇಸರು, ಹಾಸರ, ಹೇಸರು (ನಾ). ಒಂದು ಜಾತಿಯ ಕತ್ತೆ: ಕರ್ತನ ಪೂಜಿಸಿ ಕುತ್ಸಿತದೈವಕ್ಕೆಱಗುವದು ಕತ್ತೆಗೆ ಕುದುರೆಗೆ ಹುಟ್ಟಿದ ಹೇಸರನಂತೆ (ವಚಶಾ. I, ೩೨೯-೨); ಹೇಸರನೆಷ್ಟು ದೊಡ್ಡದಾದಡೇನು ತೇಜಿಯಾಗಬಲ್ಲುದೆ (ಚನ್ನವ. ಕ. ೨೦೦-೪೪೫). Δ **ಪೇಸರು:** ದೇಹಪೋಷಣದೊಳಾಸಕ್ತನಾಗಿ ಮತಿಹೀನನೆಂದೆನಿಸಿರ್ಪ ಪೇಸರುಂ ತನ್ನೊಡಲ ಹೊರೆಯದೇ (ಶೇಷರಾ. ೫-೪೦). **ಹಾಸರ:** 'ಹಾಸರಗತ್ತೆ' ಪರಾ. **ಹೇಸರು:** ಬಾಳೆಯ ಕೇಡದರ ಗೊನೆಯ, ಹೇಸರ ಕೇಡದರ ತೆನೆಯ (ಗಿಳಿವಿಂ. ೮೫-೬೯).

[< ಸಂ. ವೇಸರ]

**ಹೇಸರಕತ್ತೆ** 'ಹೇಸರಗಳ್ತೆ' ನೋ.

**ಹೇಸರಗತ್ತೆ** 'ಹೇಸರಗಳ್ತೆ' ನೋ.

**ಹೇಸರಗಳ್ತೆ,** ಪೇಸರಗತ್ತೆ, ಹಾಸರಗತ್ತೆ, ಹೇಸರಕತ್ತೆ, ಹೇಸರಗತ್ತೆ (ನಾ). = **ಹೇಸರ:** ಶ್ವೇತಾಶ್ವತರಮಾಚಷ್ಟೆ = ಬಿಳಿಯ ಹೇಸರಗಳ್ತೆಯುಂ ಪೇಳ್ದಪಂ (ಕಾಶಕ್ತ. ೨೯೧). Δ **ಪೇಸರಗತ್ತೆ:** "ಚಕ್ರಿಪತಿ ವಾಜಿತರಮೆನಲು ಪೇ[ಪಾಠಾಂ. ಹೇ] ಸರಗತ್ತೆಯಕ್ಕು" (ಮಂಗರಾ. ೫೫-೯). **ಹಾಸರಗತ್ತೆ:** ತಿರುಗಿದೆನು ಸರಿಸರಿದು ಹಾಸರಗತ್ತಿEತ್ತೆಯಂತೆ ಸಾರಡಿಯ ಪೊತ್ತು ನಿಸ್ಸಾರರವನಾದೆನೊ (ವಿಸಾಸು. ೩೦-೧). **ಹೇಸರಕತ್ತೆ:** ಸುಪ್ಪತ್ತಿಗೆ ಯಲ್ಲಿ ಹಗಲು ಇರುಳು ಹೇಸರಕತ್ತೆಯಂತೆ ಹೊರಳಿ (ಪುರಂದ. ೧-೬೬-೧). **ಹೇಸರಗತ್ತೆ:** ಒರ್ವನೆರಡು ಹೇಸರಗತ್ತೆಯೊಳ್ಪೂಡಿದ ಬಂಡಿಯುಮಂ ಪೊಡೆದುಕೊಂಡು ಪೋಗು ತ್ತಿರಲ್ (ಪುಣ್ಯಾಸ್ರ. ೫-೬೬ ವ); ಹೇಸರಗತ್ತೆಯ ಮೇಲೆ ಬಂಗಿಯ ಹೇಱು . . . ಲೆಕ್ಕ ವೀಸೆಂದು ಪೇಳ್ವರಾರದನು (ಕಂನವಿ. ೧೧-೩೮); ಸುತ್ತಮುತ್ತಲು ನೋಡಿ ಹೇಸರಗತ್ತೆಗಳು ಸತ್ತಿಹುದ ಕಂಡು (ರಾಮಾಸಂ. ೩-೫-೩೫). [ಹೇಸರ + ಕಳ್ತೆ (< ಕಟ್ತೆ)]

**ಹೇಸರು** 'ಹೇಸರ' ನೋ.

**ಹೇಸಾಟ** (ನಾ). ಜುಗುಪ್ಸೆಯನ್ನುಂಟುಮಾಡುವಂತಹುದು; ಅಸಹ್ಯಕರ ವಾದುದು: "ಹೇಸಾಟ = ನಿರಿಚ್ಛೆ, ಹೇಸಿಕೆ ಬರುವಂತಹುದು, ಓಕರಿಕೆ" (ಜಾನಕೋ. ೬೦); ವಾಗ್ದೇವಿಯನ್ನು ಇಂಥ ಸಮೂಹದ ಮಧ್ಯದಿಂದ ತಕ್ಕೊಂಡು ಬಂದದ್ದು ದೊಡ್ಡ ಹೇಸಾಟವಾಯಿತು (ವಾಗ್ದೇವಿ. ೫೩). [ಹೇಸು₁ (< ಪೇಸು₁) + ಆಟ]

**ಹೇಸಿ** (ಗು). ೧. ಅಸಹ್ಯಕರವಾದ; ಜುಗುಪ್ಸೆಯನ್ನುಂಟು ಮಾಡುವ: ಪುರದ ರಮಣಿಯರೀಕ್ಷಿಸಿಯೆ ನೋಡಿರೆ ವಿಕಾರದ ಹೇಸಿರೂಹಿನ ನರನನೆನೆ (ಸಾಳ್ವಭಾ. ೩೦-೩೭); ಸಾಕು ಸಾಕ್ಮಾಡು ಇಂತಹ ಹೇಸಿ ವಿಚಾರ! (ಅಶ್ವಮೇ. ೧೯). **೨.** **ಕೆಟ್ಟ**; ಕೆಡುಕನ್ನುಂಟು ಮಾಡುವ: ವಿಷಮಯವಾದ ನಗೆಯು ಹೇಸಿ ನಗೆ (ಸಾಹಿವಿ. ೧೧೭); ನನಗೇನ ಬ್ಯಾಡ ಅಂಥ ಹೇಸಿಕೆಲಸ (ಮಣ್ಣುಹ. ೫೮). **೩.** **ಅಲ್ಪವಾದ**; **ಕೀಳಾದ**; **ಕ್ಷುದ್ರ**: ಹೇಸಿದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ (ಬಸವ. ೫೫೬); ಹೇಸಿಮಾನವ ನಾನು ಭಾಷೆವಂತನಲ್ಲ (ಸುಸಾರ. ೧೧-೧). (ನಾ). **೪.** **ಜುಗುಪ್ಸೆ**; **ಅಸಹ್ಯ**: 'ಹೇಸಿಗೊಳ್ಳು' ಪರಾ. **೫.** **ಕೊಳಕು**; **ಹೊಲಸಾದುದು**: "ಹೇಸಿ - ಹೇಸಿಕೆ, ಹೇಸಿಗೆ" (ಜಾನಕೋ. ೬೦). **೬.** **ಕೊಳಕು ವಸ್ತು**; **ಕೆಟ್ಟ ಪದಾರ್ಥ**: ಜಂಬುಕದೆಡೆಯನು ಹೊಕ್ಕರೆ ಸಿಗುವುದು ಗೊರಸಿನ ಚರ್ಮದ ಹೇಸಿ (ಇಂಚಾಪ. ೧೨೯-೩೪). **೭.** **ಅಸಹ್ಯಕರನಾದ ವ್ಯಕ್ತಿ**; **ಜುಗುಪ್ಸೆಯನ್ನುಂಟುಮಾಡುವ ವ್ಯಕ್ತಿ**: ಶರಣರ ಆಸೆ ರೋಷಪಾಶಕ್ಕೊಳಗಾದ ಈ ಜಗದ ಹೇಸಿಗಳೆತ್ತ ಬಲ್ಲರು (ಲಿಂಗವ. ೪೪-೬); ಹೇಸಿಯಾದವಳ ಮನೆವಾರ್ತೆ ಕತ್ತೆಯ ಹೂಸಿನಂತಕ್ಕು (ಸರ್ವಜ್ಞ. ೧೭೩೦); ಕೇಳಿದ ಕೂಡಲೆ ಕೊಟ್ಟು ಬಿಡುವವನು ಸಭ್ಯನೇನೂ ಅಲ್ಲ. ಆದರೆ ಕೊಡದಿರುವವನು ಮಾತ್ರ ಪಕ್ಕಾ ಹೇಸಿ (ಗಾಳಿಪ. ೨೯). [ಹೇಸು$_2$ (< ಪೇಸು$_2$) + - ಇ$_3$]

**ಹೇಸಿಕೆ** 'ಪೇಸಿಕೆ' ನೋ.

**ಹೇಸಿಕೆಪಡು** (ಕ್ರಿ). ಅಸಹ್ಯಗೊಳ್ಳು; ಜುಗುಪ್ಸೆಹೊಂದು: ಇದೆಲ್ಲವನ್ನು ನೋಡಿ ಹೇಸಿಕೆಪಟ್ಟು ಅವರೇ ನಡೆದುದರ ಸುದ್ದಿಯನ್ನು ವಿಶ್ವನಾಥರ ಕಿವಿಯ ಮೇಲೆ ಹಾಕಿದರು (ಮೂರುದಾ. ೬೮). [ಹೇಸಿಕೆ (< ಪೇಸಿಕೆ) + ಪಡು$_1$]

**ಹೇಸಿಗೆ** (ನಾ). ೧. ಅಸಹ್ಯ; ಜುಗುಪ್ಸೆ: ಆ ನೋಟ ನೆನೆಸಿಕೊಂಡರೂ ಹೇಸಿಗೆಯಾಗುತ್ತದೆ (ರೂಢಿ). **೨.** **ಹೊಲಸುಪದಾರ್ಥ**; **ಕೊಳಕು ವಸ್ತು**: ಜಗತ್ತು ಹೇಸಿಗೆಯ ನರಕವಾಗಲು ಇದೇ ಕಾರಣ (ಮುರುಕು. ೩). **೩.** **ಕೆಟ್ಟದು**; **ಕೆಡುಕನ್ನುಂಟು ಮಾಡುವಂತಹುದು**: 'ಹೇಸಿಗೆಗನಸು' ಪರಾ.

**ಹೇಸಿಗೊಳಿಸು** = **ಕೊಳೆ ಮಾಡು**; **ಹೊಲಸನ್ನುಂಟು ಮಾಡು**: ಇಲ್ಲಿ ಹೇಸಿಗೆ ಗೊಳಿಸಬಾರದು (ರೂಢಿ). **ಹೇಸಿಗೆಮಾಡು** = **ಹೇಸಿಗೆಗೊಳಿಸು**: ಇಲ್ಲಿ ಹೇಸಿಗೆ ಮಾಡಿದರೆ ಶಿಕ್ಷೆಗೆ ಗುರಿಪಡಿಸಲಾಗುತ್ತದೆ (ರೂಢಿ).

[ಹೇಸು$_1$ (< ಪೇಸು$_1$) + - ಇಗೆ$_0$ / **ತುಳು.** ಪೇಸಿಗೆ; **ತೊದ.** ಹೇಸಿಗೆ ]

**ಹೇಸಿಗೆಗನಸು** (ನಾ). **ಕೆಟ್ಟಕನಸು**; **ದುಃಸ್ವಪ್ನ**: ವನಿತ ಮಲಗಿಹಳೋ . . . ಹೇಸಿಗೆಗನಸ [ಪಾಠಾಂ. ನಿದ್ರೆಯ ಕನಸ] ಕಂಡೇಳುವಳೋ (ನಳಚ. ೬-೨). [ಹೇಸಿಗೆ + ಕನಸು]

**ಹೇಸಿಗೆಗಿಡ** (ನಾ). ಒಂದು ಬಗೆಯ ಮುಳ್ಳುಪೊದೆ: (೩).

[ಹೇಸಿಗೆ$_7$ + ಗಿಡ (< ಗಿಡು)]

**ಹೇಸಿಗೆಹೂ, ಹೇಸಿಗೆಹೂವು** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು: ಲಂಟವಾಣಿಗಿಡ, ಹೇಸಿಗೆಹೂ, ಕಾಡುಜೋಳ, ಚದುರಂಗ (ಮೈಟಿಗಿ. ೯೯-೯೭೮). **ಹೇಸಿಗೆಹೂವು**: ಹೇಸಿಗೆಹೂವ ಬಳಿಗೆ ಹೋಗಿ ಒಂದು ಗಳಿಗೆ (ಗಂ. ೯೭-೫). 'ಹೇಸಿಹೊವು' ಹೋ. [ಹೇಸಿಗೆ$_7$ + ಹೂ$_2$ (< ಪೂ$_2$)]

**ಹೇಸಿಗೆಹೂವು** 'ಹೇಸಿಗೆಹೂ' ನೋ.

**ಹೇಸಿಗೊಳ್ಳು** (ಕ್ರಿ). ಅಸಹ್ಯಪಡು; ಜುಗುಪ್ಸೆಗೊಳ್ಳು: ಕೇಶವರಾಯ ಕಾತರಗೊಂಡು ಬಂದುದೂ ಆಯಿತು, ಹೇಸಿಗೊಂಡು ಹೋದುದೂ ಆಯಿತು (ಬೆಂಗಟ. ೧೨೯).

[ಹೇಸಿ + ಕೊಳ್ಳು$_1$ (< ಕೊಳ್$_1$)]

**ಹೇಸಿತನ** (ನಾ). ೧. ಕೆಟ್ಟತನ; ಕೇಡಿಗತನ; ದುಷ್ಟಬುದ್ಧಿ: ಮುದುಕ ಕೂಡ ದಿನಕರರಾಯನ ಹೇಸಿತನಕ್ಕೆ ಬೇಸರಪಟ್ಟು . . . ಒಪ್ಪುವಂತಾಯಿತು (ಕಮನ. ೯೯); ಮಾಡೋ ಕೆಲಸದ ಹೇಸಿತನದ ನಾತ ಮಾತ್ರ ನಿನಗಿಲ್ಲಲ್ಲ? (ಹೊಸಂಸಾ. ೫೧). **೨.** **ಹಿಂಜರಿಕೆ**; **ಅಳುಕು**: ದುಃಖದಿಂದ . . . ಆ ಹೆಂಗರುಳಿನ ಹೇಸಿತನಕ್ಕೆ ಅಸಹ್ಯಪಟ್ಟನು (ಜಯಂತ. ೩೦೫). [ಹೇಸಿ + - ತನ]

**ಹೇಸಿಯ** (ನಾ). **ಹೊಲಸುವ್ಯಕ್ತಿ**; **ಕೊಳಕುಮನುಷ್ಯ**: ಹೇಸಿಯನ ಗಂಡ ನೆಂಬುವಳು ಹಾದರದ ಹಾಸು ಕಾಣಯ್ಯ (ಸರ್ವಜ್ಞ. ೧೮೪೪). [ಹೇಸಿ + - ಅ$_7$]

**ಹೇಸಿಹೂವು** (ನಾ). ಒಂದು ಬಗೆಯ ಹೂವು; "ಮಲೆನಾಡಿನಲ್ಲಿ ಒಂದು ಪ್ರಸಿದ್ಧ ಹೂ" (ಬಾಸಿಗ. ೧೦. ನೆರವು) : ಹೇಸಿ ಹೂವ ಬೈವ ಜನವ ಸುಳ್ಳು ಮಾಡಿತು ಲೇಸು ಇದರ ಮಾಟ ನೋಡಿರಯ್ಯ ಎಂದು ತೂರಿ ತೋರಿತು (ಬಾಸಿಗ. ೪೧-೧೬). 'ಹೇಸಿಗೆಹೂ' ಹೋ. [ಹೇಸಿ$_1$ + ಹೂವು (<ಪೂ$_2$)]

**ಹೇಸು$_1$** 'ಪೇಸು$_1$' ನೋ.

**ಹೇಸು$_2$** 'ಪೇಸು$_2$' ನೋ.

**ಹೇಸೇಳ್** 'ಪೇಸೇಟ್' ನೋ.

**ಹೇಹ** 'ಹೇವ' ನೋ.

**ಹೇಹದೋಱು** (ಕ್ರಿ). ಜುಗುಪ್ಸೆಗೊಳ್ಳು; ಅಸಹ್ಯಪಡು: ಕಾಹುರಂಗಳ ಬಿಡಿಸು ಕಮಲಾಕ್ಷಿಯೆಂದವಂ ಬಾಹ್ಯರಂಗದಿ ದೈನ್ಯಮಂ ನುಡಿವುದಂ ಕೇಳಿ ಹೇಹದೋಱುತ್ತ ಮನದೊಳು ಮಹಾದೇವಿ ಚೋದ್ಯಂ ಬಡುತಮಿಂತೆಂದಳು (ಪ್ರಭುಪು. ೮-೫೮).

[ಹೇಹ (< ಹೇವ) + ತೋಱು]

**ಹೇಳ್** 'ಪೇಟ್' ನೋ.

**ಹೇಳನ** 'ಹೇಲನ' ನೋ.

**ಹೇಳನಂಗೈ** (ಕ್ರಿ). ಅಣಕಿಸು; ಅಪಹಾಸ್ಯ ಮಾಡು: ಹೇಳನಂಗೈವನೀ ಕಪಿಯೆನುತ ಘುಡುಘುಡಿಸಿ ಕಾಳರಕ್ಕಸಿ ಪೊಡೆದಳು (ವೆಂಕಾರಾ. ೫-೩-೧೫).

[ಹೇಳನ (= ಹೇಲನ) + ಕೈ$_1$ (< ಕೆಯ್$_1$)]

**ಹೇಳಾಂಚಿತ** (ನಾ). = **ಹೇಲಾಸಾಧ್ಯ** **೨**: ಈ ಮಹಿಯೊಳ್ ಮಾನಕೀಟಕೋಟಿಯು ಮಿದೇಂ ಕಾಳಂಗೆ ಹೇಳಾಂಚಿತಂ (ಪುಷ್ಪಪು. ೧೩-೪೨). [ಸಂ. ಹೇಲಾಂಚಿತ]

**ಹೇಳಾಟ** (ನಾ). ಹೇಳುವಿಕೆ; ಅಪ್ಪಣೆ ಮಾಡುವಿಕೆ: ದಣೀ ಹೇಳಾಟ, ಬಡಗಿ ಮಾಡಾಟ (ಗಾದೆ). [ಹೇಳು (< ಪೇಟ್) + ಆಟ]

**ಹೇಳಾಡಂಬರ** (ನಾ). = **ಹೇಲಾಸಾಧ್ಯ** **೨**: ಹೇಳಾಡಂಬರದಂಬುದೊಟ್ಟು ತೆಗೆದಾಕರ್ಣಾಂತಮಂ ತಾಗೆ ಭೂಪಾಲವ್ರಾಳನಡುರ್ತೆಸುತ್ತಮಿರೆ (ಮಹಾನೇ. ೫-೪೭).

[ಸಂ. ಹೇಲಾಡಂಬರ]

**ಹೇಳಾಣಿಕೆ** (ನಾ). ಮಾತು; ವಿಚಾರ; ಸುದ್ದಿ: ಮಂತ್ರಿಯಾಗಿರುವ ಒಬ್ಬ ಮನುಷ್ಯ ತನ್ನ ದೊರೆಯಾದವನಿಗೆ . . . ಈ ಹೇಳಾಣಿಕೆಯನ್ನು ಕಳುಹಿಸುವುದು ದೊರೆಯ ಕೈಯ ಆಳಿನ ಮೂಲಕ! (ಚಿಕರಾ. ೪೨೫). [< ಹೇಳಿಕೆ$_1$]

**ಹೇಳಾವಲೋಕನ, ಹೇಳಾವಳೋಕನ** (ನಾ). ವಿಲಾಸದಿಂದ ಕೂಡಿದ ದೃಷ್ಟಿ, – **ನೋಟ**: ಹೇಳಾವಲೋಕನಾಮೃತ ನಿಷಿಚ್ಯಮಾನತರುಲತಾಪ್ರತಾನನುಂ ವನಮಹತ್ತರ ಪುರಸ್ಸರನುಮಾಗಿ ಬರ್ಪಾಗಳ್ (ಚಂದ್ರಪ್ರ. ೬-೮೩ ವ). **ಹೇಳಾವಳೋಕನ**: ಬಹಿಃ ಪುರಶ್ರೀಯಂ ಹೇಳಾವಳೋಕನದಿನಳಂಕರಿಸುತ್ತುಮಿರ್ಪನ್ನೆಗಂ (ಚಂದ್ರಪ್ರ. ೨-೨೬ ವ).

[ಸಂ. ಹೇಲಾವಲೋಕನ]

**ಹೇಳಾವಳೋಕನ** 'ಹೇಳಾವಲೋಕನ' ನೋ.

**ಹೇಳಾಸಾಧ್ಯ** 'ಹೇಲಾಸಾಧ್ಯ' ನೋ.

**ಹೇಳಿಕೆ$_1$** 'ಪೇಟ್ಕೆ' ನೋ.

**ಹೇಳಿಕೆ$_2$** 'ಪೇಳಿಕೆ' ನೋ.

**ಹೇಳಿಗೆ** 'ಪೆಟ್ಟಿಗೆ' ನೋ.

**ಹೇಳಿತ** 'ಹೇಳಿತು' ನೋ.

**ಹೇಳಿತು , ಹೇಳಿತ** (ನಾ). ೧. ಹೇಳಿದುದು; ಹೇಳಿಕೆ; ವಿವರಣೆ: ನಾಚುವಳು ಗಡ ಮಾಯೆಯಾವನ ಗೋಚರಕೆ ಬರಲಂಜಿ ಹೇಳಿತನಾಚರಿಸಿ ಬದುಕುವಳು (ನಿಭಾಗ. ೨-೨-೧೯). **ಹೇಳಿತ**: ೧. ಮಹಾಪುರುಷರು ಹುಟ್ಟಿದ ವಂಶದ ಸಂತಾನವು ನಷ್ಟವಾಗುವುದೆಂಬ ಲೋಕಾನುಭವದ ಹೇಳಿತವು ಒಂದುಂಟು (ಯಕ್ಷಪ್ರ. ೧೩೦); ಉಲ್ಲೇಖವು ಮೇಲಿನ ಹೇಳಿತಕ್ಕೆ ಬೆಂಬಲವನ್ನು ಕೊಡುತ್ತದೆ (ತವನಿ. ೩೭). **೨.** **ಆಜ್ಞೆ**; **ಅಪ್ಪಣೆ**: ಹೇಳಿತ ಮಾಡಿ ಬೇಗದಲಿ ಆಯುಧಂಗಳ ಬಿಸುಟು ಕರಿರಥಜಾಯಿಲಂಗಳನಿಳಿದು ಬದುಕುವುಪಾಯವೆಂದಸುರಾರಿ ಸಾರಿದನು (ಕುಮ್ವಾದ್ರೋ. ೧೯-೩೭).

[ಹೇಳು (< ಪೇಟ್) + ?]

**ಹೇಳಿಸು** 'ಪೇಟಿಸು' ನೋ.

**ಹೇಳು** 'ಪೇಟ್' ನೋ.

**ಹೇಳುಗಳೆ** (ಕ್ರಿ). ಧಿಕ್ಕರಿಸು; ತಿರಸ್ಕಾರ ಮಾಡು (?): ಆಳಿಗಾಳಂ ಸೀಳ್ದು . . . ಸುಭಟಾಳಿಯ ಹೇ[ಪಾಠಾಂ. ಹೋ]ಳುಗಳೆದನು (ತುರಂಗ. ೫೦-೪೮). [< ಹೀಗಳೆ]

**ಹೇಳೆ** 'ಹೇಲೆ' ನೋ.

**ಹೇಳ್ಮೆ** (ನಾ). ಹೇಳಿದುದು; ಹೇಳಿಕೆ: ಕೇಳ್ಮೆ ಹೇಳ್ಮೆಯ ನಿನ್ನ ಲಕ್ಕಿಸ ತಾಳ್ಮೆಯಿಂತಿರ ಸಲ್ಲ (ಶರಲೀ. ೨೫೫-೧೩). [ಹೇಳ್ (< ಪೇಟ್) + - ಮೆ$_1$]

**ಹೇಱ್** 'ಪೇಱು$_2$' ನೋ.

**ಹೇಱಾಟ, ಹೇರಾಟ** (ನಾ). ಹೊರೆಯನ್ನು ಹೊರುವಂತಹುದು: ಸಾಯಿರ ಸಾಯಿರ ಲೆಕ್ಕದ ಹೇಱಾಟದಾನೆಗಳೊಟ್ಟೆಗಳೆಟ್ಟುಗಳ ಸಾಲ ಮುಂಗುಡಿಯೊಳ್ . . . ನಡೆಯುತಿರಲೊಡಂ (ರಾಮಾಶ್ವ. ೧೦೯-೧೮). **ಹೇರಾಟ:** ಅವು ಹೇರಾಟದ ಹೇಸರಗತ್ತೆಗಳ ಹಾಗೆ ಕಾಣಹತ್ತಿದವು (ಮುಂಬಯಿ. ೫-೨೬೮).

[ಹೇಱು$_1$ (< ಪೇಱು$_1$) + ಆಟ]

**ಹೇಱಾಳ** (ನಾ). ಹಿಂಸಿಸುವಿಕೆ; ಪೀಡಿಸುವಿಕೆ (?): ಮುದನು ತಗರ್ತ್ರಿಕೂಳೆಯ ಹತ್ತಿ ಹೆಂಗಳಿಕರ್ಳೊಡೆ ಹೇಱಾಳವ ಮಾಡುತ್ತವಿರಲು (ವ್ಯಾಆರಿ. ೧೯೨೯, ೧೫-೪; 12ನೆಯ ಶತ). [?]

**ಹೇಱಿಸು** 'ಪೇಱಿಸು' ನೋ.

**ಹೇಱು$_1$** 'ಪೇಱು$_1$' ನೋ.

**ಹೇಱು$_2$** 'ಪೇಱು$_2$' ನೋ.

**ಹೇಱುಕ** (ನಾ). ಹೊರೆ; ಮೂಟೆ: ಕುದುರೆಯ ಕವಳ ಕಡಲೆ ಬೆಲ್ಲಗಳ ಹೇಱುಕದಲಿ ಬರಲು ಸಹಣಿಗಳು (ಚಂಪ್ರಸಾಂ. ೧೫-೮೨). [ಹೇಱು$_1$ (< ಪೇಱು$_1$) + - ಕ$_3$]

**ಹೇಱುಕಾಱ, ಹೇರುಕಾರ** (ನಾ). ಹೊರೆಯನ್ನು ಸಾಗಿಸುವವನು; ವ್ಯಾಪಾರಿ: ಹೋರಿಗಳ ಬೇಱುಹಗ್ಗವ ಬೆನ್ನಿಗಿಕ್ಕಿಂಬಾ ಹೇಱುಕಾಱರ ನುಡಿಯುಣ್ಮತಲ್ಲಿ (ಶ್ರೀಪಾಲ. ೧೩-೯೦). **ಹೇರುಕಾರ:** ಹೇರುಕಾರರ ಕೂಟ ಓಡಿ ಬಂದ ಮಲ್ಲಯ್ಯ (ನಾಪದ. ೧೦೦).

[ಹೇಱು$_2$ (< ಪೇಱು$_2$) + - ಕಾಱ]

**ಹೇಱುವೆಱು** (ಕ್ರಿ). ಹೊರೆಯನ್ನು ಹೊರು: ಮಿಗೆ ಹೇಱುವೆತ್ತನಡ್ವಸಹಿತಮಾ ವನಸ್ಥಳಮನೆಯ್ದಿದನೊರ್ವ ಮಹಾವಣಿಗ್ವರಂ (ದಶಕು. ೪-೭೭).

[ಹೇಱು$_2$ (< ಪೇಱು$_2$) + ಪೆಱು$_1$]

**ಹೇಟಿಸು** 'ಪೇಟಿಸು' ನೋ.

**ಹೇಟು** 'ಪೇಟ್' ನೋ.

**ಹೇಟುಹ** (ನಾ). ತಿಳಿಸುವುದು; ಹೇಳುವುದು: ಕಿವುಡಂಗೇಕಾಂತವಂ ಹೇಟುಹವುಂ . . . ಎಂಬ ನೀತಿಕಾಱನ ಮಾತದೇಕೆ ತಪ್ಪುಗುಂ (ಪಂಚತಂ. ೧೩೭-೯).

[ಹೇಟು (< ಪೇಟ್) + - ಹ$_2$ (< - ಪ$_2$)]

**ಹೈ** (ಅ). ಸಂಬೋಧನೆ ಮುಂತಾದ ಸಂದರ್ಭಗಳಲ್ಲಿ ಬಳಸುವ ಒಂದು ಅವ್ಯಯ: ಲಿಂಗಾರ್ಚನೆಯೆಡೆಗಾಗಿಸುವ್ವೆ ಹೈ ಯಜ್ಞದ ಕರ್ಮಗಳಿಗೆ ಮೊದಲಿದೆನಿಸುವ್ವೆ (ವೀರಚೆ. ೨-೪೨); ಹಲಗೆಯಾಚಾರ್ಯ ಪೇಳಿನಲು ಹೈ ಮಗನೆ . . . ಕೇಳು (ವೀಶೈಪು. ೩-೧೧-೩೯).

**ಹೈಹಸಾದ** = ತಮ್ಮ ದಯೆ, ತಮ್ಮ ಕರುಣೆ ಎಂದು ಮುಂತಾಗಿ ವಿಧೇಯತೆಯನ್ನು ಸೂಚಿಸುವಾಗ ಬಳಸುವ ಒಂದು ಅವ್ಯಯ: ಹೈ ಹಸಾದ ಭವತ್ ಕೃಪಾಸನ್ನಾಹವೇ ಸಾಮ್ರಾಜ್ಯವಾವುದನೂಹಿಸಿದೊಡಾ ಸ್ಥಿತಿಯೊಳಡಗಿಹೆವು (ಕುವ್ಯಾಅ. ೮-೭೮); ಅಲಘುಬಲ ಮಕರಾಕ್ಷ ಹೈಹಸಾದಮೆನುತ್ತ ಕೈಮುಗಿದು (ವಂಕಾರಾ. ೬-೩೮-೧೯). [ಸಂ.]

**ಹೈಂದವ** (ಗು). ಹಿಂದೂದೇಶಕ್ಕೆ ಸಂಬಂಧಿಸಿದ: ಹಿಂದುಮುಂದರಿವ ಹೈಂದವ ಧರ್ಮಕೆ ಶಬ್ದಶಿಲ್ಪದಿಂ ನಿಗಮದ ಗಂಗೆಗಾಗಮದ ಕಟ್ಟೆಯ ಕಟ್ಟಿದ ಬುದ್ಧಿಶಕ್ತಿಯಂ ಪೊಗಳ್ವನೆ ? (ಗಿಎಂ. ೫೨-೮). [ಸಂ.]

**ಹೈಕಳು** 'ಹೈದ' ಪರಾ.

**ಹೈಕೊಳ್** (ಕ್ರಿ). ಒಪ್ಪು; ಸಮ್ಮತಿಸು; ಅಂಗೀಕರಿಸು: ನಾ ಮಾಳ್ಪ ಚಿತ್ರವ ಭಾವ ಮೇಲ್ನೋಡೆಂದೆ ಹೈಕೊಂಡನು ಕಾಟಿಯ ಬೀಳ್ಕೊಟ್ಟನು (ಸೂಬಸೋ. ೧೯-೭೯); ಲಿಂಗಮಂ ಧರಿಸಿದಾಕ್ಷಣವೆ ಮುಡುಹಿನ ಮುದ್ರೆ ಪೋದಪುದದು ಕುಱುಹೆನಲು ಹೈಕೊಂಡು ಶಿವಭಕ್ತನಾಗಲು (ಗುರುಬಾ. ೧೦-೩೪). [ಹೈ + ಕೊಳ್$_1$]

**ಹೈಗ$_1$** 'ಹವಿಕ' ನೋ.

**ಹೈಗ$_2$** (ನಾ). ಒಂದು ಬಗೆಯ ಮರ: ಹೈಗ, ಉನ್ನಿ ಮರ, ಕಲ್‌ಬೋವು ದೊಡ್ಡೆಲೆಭೋಗಿ (ಮೈಹಿಗಿ. ೪೪-೮೭೪); ಹೈಗ (ಕವಸಿ) – ದೊಡ್ಡ ಮರ . . . ಬಹಳ ಕೆಲಸಗಳಿಗೆ ಬರುತ್ತದೆ (ಕಭಾಗ. ೫೦). [?]

**ಹೈಗನುಡಿ** (ನಾ). ಹವ್ಯಕರ ಭಾಷೆ: ಅವರು ಹವ್ಯಕರು. ... ಮಗೆ ಸಹಜವಾದ ಹೈಗನುಡಿಯಲ್ಲೇ ಸಲ್ಲಪಿಸುತ್ತಿದ್ದರು (ಬೆಟ್ಟಜೀ. ೧೨). [ಹೈಗ$_1$ (< ಹವಿಕ) + ನುಡಿ$_2$]

**ಹೈಗೈ** (ನಾ). ೧. ನಿರ್ಲಕ್ಷ್ಯ; ಅನಾದರ: ಅವನು ಬಾರದಿದ್ದರೆ ನೀನೇ ಬಂದು ಹೇಳಬೇಕು ನೋಡು ಇದರೊಳಗೆ ಹೈಗೈ ಆಗಬಾರದು (ಜಮೀನ್ದಾ. ೪೭). ೨. **ಕೊರತೆ;** ಕುಂದು; ನ್ಯೂನತೆ: ಏತರಲ್ಲಿಯೂ ಯಾರಿಗೂ ಹೈಗೈ ಆಗಲಿಲ್ಲ (ದೀಪಹ. II. ೩೬೬); ರೊಕ್ಕಕ್ಕೇನು ಹೈಗೈ ಇಲ್ಲ (ಪತಿತೋ. ೧೭).

**ಹೈಗೈ ಮಾಡು** = ೧. ಅಸಡ್ಡೆ ಮಾಡು; ತಿರಸ್ಕರಿಸು: ಅವನು ಇವುಗಳ ವ್ಯವಸ್ಥೆಯ ವಿಷಯದಲ್ಲಿ ಹೈಗೈ ಮಾಡುವ ಜಾತಿಯಲ್ಲ (ದೀಪಹ. II. ೮); ಆಗ ಹೀಗ ಹೈಗೈ ಮಾಡಿದನೇನ ಕೇಳಿರಿ? (ನಡೆದಾ. I, ೩೦೧). ೨. **ಹೆಚ್ಚು ಕಡಿಮೆ ಮಾಡು;** ಏರುಪೇರು ಮಾಡು: ಲೆಕ್ಕದಲ್ಲಿ ಏನಾದರೂ ಹೈಗೈ ಮಾಡಿದಿರೊ, ನಿಮ್ಮನ್ನೂ ಕೊಂದಾನು (ಗಾಳಿಪ. ೧೯೮). ೩. **ಹಿಂದೆ ಮುಂದೆ ನೋಡು;** ಅಳುಕು (?): ಕಾಜ ಬೆಂಕಿ ಹಚ್ಚಲು ಹೈಗೈ ಮಾಡಲಿಲ್ಲ (ಕೊತಕಾ. ೩೩); ತಾವು ತಮ್ಮ ಅಭಿಪ್ರಾಯ ತಿಳಿಸಲಿಕ್ಕೆ ಹೈಗೈಮಾಡದೆ ಬೇಗನೆ ತಿಳಿಸಬೇಕು (ಗಂಮಾಯಿ. ೨೨೮).

[← ಮರಾ. ಹೈಗಈ, ಹೈಗಯ, ಹಯಗಈ, ಹಯಗಯಾ]

**ಹೈಡಿಂಬ** (ಗು). ೧. ಹಿಡಿಂಬನಿಗೆ ಸೇರಿದ: ಹೈಡಿಂಬರಾಜ್ಯದ ... ಪಡೆತನವ ನೆಱೆ ಮಾಡಿ ನಿಲಿಸಿದನಾ ಘಟೋತ್ಕಚನ (ಕುವ್ಯಾಅ. ೯-೨೫). (ನಾ). ೨. **ಹಿಡಿಂಬೆಯ ಮಗ;** ಘಟೋತ್ಕಚ: ಬಲದ ಮುಂಗುಡಿ ಭೀಮನದು . . . ಬಲಮಹಾಂಬುಧಿಯೊಳಗಿರುಳ ತರವಳಿಕೆ ಹೈಡಿಂಬಂಗೆ (ಕುವ್ಯಾಉ. ೧೧-೯೫); ಹೈಡಿಂಬನ ಆಡಂಬರ ಅಸದಳವಾಗಲು ರಾಜರಾಜನು ಅಂಗರಾಜನಿಗೆ ಬೆಸಸಿದನು (ಭಾಮಣಿ. ೧೮). [ಸಂ.]

**ಹೈಡಿಂಬಿ** (ನಾ). ೧. **ಘಟೋತ್ಕಚನ ಮಗ; ಮೇಘನಾದ:** ಅರಸನಿತ್ತಂ ಭೀಮಹೈಡಿಂಬಿ ಕರ್ಣಜರ್ಗನುಮತಿಯನು (ಜೈಮಿಭಾ. ೨-೪೪). ೨. **ಹಿಡಿಂಬೆಯ ಮಗ:** ಘಟೋತ್ಕಚ. [ಸಂ.]

**ಹೈತಕ** 'ಪೈತಿಕ' ನೋ.

**ಹೈತಿಕೆ** 'ಹೈತಿಗ' ನೋ.

**ಹೈತಿಗ, ಹೈತಿಕೆ, ಹೈತಿಗೆ$_2$** (ಗು). ೧. ಪಿತೃವಿಗೆ ಸಂಬಂಧಿಸಿದ. (ನಾ). ೨. ಪಿತೃಗಳಿಗೆ ಮಾಡುವ ಶ್ರಾದ್ಧ,– ತಿಥಿ: ''ಪೈತೃಕ – ಹೈತಿಗೆ, ಹೈತಿಗ'' (ಶಮದ. ೨೫೫ ಪ್ರಯೋ). **ಹೈತಿಕೆ:** ೨. ಶಬ್ದಮಣಿದರ್ಪಣದ ಮೂಲೆಯಲ್ಲಿದ್ದು ಸಾಮಾನ್ಯಕಾವ್ಯರೂಢಿಯಲ್ಲಿ ಇಲ್ಲದ ಹೈತಿಕೆ (ಪೈತೃಕ) ಮೊದಲಾದ ಅನೇಕ ತದ್ಭವಗಳು ಕಾರಣವಾಗಿವೆ (ತವನಿ. ೧೯೭). **ಹೈತಿಗೆ$_2$:** ೨ ಸತ್ತ ಮುತ್ತಯ್ಯನ ಹೈತಿಗೆಯನಿಂದೆ ಸದ್ದೆಯನಾಗಿಸಿ ಬಂದ ಬೊಮ್ಮರಕ್ಕಸಿಯರ್ಗೆ ನಿಮ್ಮಡಗಿನೆಡೆಗೆಯ್ವಂ (ರಾಮಾಶ್ವ. ೧೧೨-೧೨); ಕನ್ನಡದಲ್ಲಿ ಈ ಪದಗಳು ಸಂಸ್ಕೃತಮೂಲದವೆಂದು ಗುರುತಿಸದಷ್ಟು . . . ಸೇರಿಬಿಟ್ಟಿವೆ. ಉದಾಹರಣೆಗೆ . . . ಹರಯ, ಹೈತಿಗೆ (ಭಾಷಾಶಾ. ೨೯೪). [< ಸಂ. ಪೈತೃಕ]

**ಹೈತಿಗೆ$_1$** 'ಪೈತಿಕ' ನೋ.

**ಹೈತಿಗೆ$_2$** 'ಹೈತಿಗ' ನೋ.

**ಹೈತಿಗೆ$_3$** (ನಾ). ''ಒಂದು ವಿಧ ಕಬ್ಬು'' (ಸೂಪಶಾ. ಕೋಶ): ರಸದಾಳಿ ಹೈತಿಗೆ ಬಿಳಿಯ ಕರಿಯ ಮರಗಬ್ಬಿನೊಸರ್ವ ರಸಮಂ ಹಿಳಿದು (ಸೂಪಶಾ. ೨-೩೦). [?]

**ಹೈದ, ಹಯ್ದ** (ನಾ). ಹುಡುಗ; ಬಾಲಕ: ಹಿಡಿಯಾಳಾಗಿ ಸಿಕ್ಕಿದ ಚಿಕ್ಕ ಹೈದನ ಕಡಿದಡೆ ಕಲಹವಿಲ್ಲನುತ ಬಿಡಿಸಿಕೊಂಡಡೆ ನೋಡುವೆನೆಂದು ನಿಗಳವ ಜಡಿಸಿದ

ಪದಯುಗಳಕ್ಕೆ (ಮೋಹತ. ೩೭-೧೯); ನಾವವನರ್ತಿಯ ಹೈದಗಳು (ಗೋಕುನಿ. ೫೬-೧೦); ಅಲ್ಲಿಗೊಬ್ಬ ಜಪಾನೀನ ನೇಮಿಸಿಕೊಂಡಿದ್ದ . . . ಬಲು ಕುಳ್ಳ ಹೈದ (ಚಂಗೂಚ. ೧೦೩).
**ಹಯ್ದ**: ನಾವೇನು ಕಮ್ಮಾರನ ಹಯ್ದುಂದಿರಾ, ಬುದ್ದಿ, ಮೂರು ಹೊತ್ತೂವೆ ಕೀಸಲಿಕ್ಕೆ ? (ಮಂತ್ರಶ. ೮೦-೨).

**ಹೈಕಳು** (ಬಹುವ): ಏನೂ ಅರೀದ ಹೈಕಳೂ ದೇವರ ಹಂಗೇ (ಅದೂಟ. ೧೬); ಓದಿಸುವಾಗ ಹೈಕಳನ್ನು ಹೊಡೆಯಬೇಡ (ಮಾಮರಾ. ೧೯೧).

[ದೇ. II > ಪೈಚಲ್; ಮಲ. ಪೈಕಲ್ - ಮಗು; ತೆಲು. ಪಯಿದ, ಪೈದ]

**ಹೈದರಾಬಾದಿ** (ನಾ). ಹೈದರಾಬಾದಿನಲ್ಲಿ ಟಂಕಿಸಿದ ಒಂದು ಬಗೆಯ ನಾಣ್ಯ: ಬೆಳ್ಳಿಯ ನಾಣ್ಯಗಳು . . . ೭ ಧಾರವಾಡೀ, ೮ ಹೈದರಾಬಾದಿ (ಕಭಾಗ. ೨೮೧).

[< ಹೈದರಾಬಾದ್ರು]

**ಹೈದರಿ** (ನಾ). ಒಂದು ಬಗೆಯ ನಾಣ್ಯ: ನೂರು ಆರುವರಹ ಹೈದರಿ ಮೂರು ಹಣ ಹೈದರಿ ನಡಸುಕೊಂಡು ಬರುವುದು (ಮೈಅರಿ. ೧೯೩೪, ೫೨-೨೦; 1812). [< ಹೈದರ್]

**ಹೈದಲು** (ನಾ). ಒಂದು ಬಗೆಯ ಮೀನು: ಪವಳವಾಯಂ ಹೈದಲುಂ ಬಾಳೆ . . . ಪಂದಿಗನೆಂಬ ಮೀನ್ಸ್ನೆಗೆದನಾ ಭಕ್ತಂ (ತ್ರಿಪುಪಿ. ೫೭-೮). [?]

**ಹೈನ** 'ಪಯನ್' ನೋ.

**ಹೈನು** 'ಪಯನ್' ನೋ.

**ಹೈಮ** (ಗು). ೧. ಚಿನ್ನದಿಂದ ಮಾಡಿದ; ಬಂಗಾರದ: ಕುಸುಮ ಸ್ರಗ್ಭಾರ ಶೂನ್ಯೋದ್ಧತಕಚಭರಮುದ್ದಾಮ ಹೈಮ ಪ್ರಕಾಂಚೀಪ್ರಸರಾಪೇತಪ್ರಶುಂಭದ್ಘನಜಘನತಟಂ (ಎಕ. VII. ಶಿಕಾರಿ. ೧೦೩-೧೬; 1149). ೨. ಚಿನ್ನದ ಬಣ್ಣದ; ಹಳದಿ ಬಣ್ಣದಿಂದ ಕೂಡಿದ. ೩. ತಂಪಾದ; ತಣ್ಣನೆಯ. ೪. ಚಳಿಗಾಲಕ್ಕೆ ಸಂಬಂಧಿಸಿದ; ಹೇಮಂತಋತುವಿಗೆ ಸೇರಿದ. (ನಾ). ೫. ಚಿನ್ನ; ಬಂಗಾರ: ವಿನತ ನಾಗೇಂದ್ರ ಹಸ್ತಾರುಣಾಬ್ಜಂ ಹೈಮಂ ಕರ್ಣಾವತಂಸಂ ತನಗೆನೆ (ಅಜಿಪು. ೧-೧); ಹೈಮಂ ರಾಜತಮೆಂಬ ಲೋಹ ಯುಗ ಸಂಸಿದ್ಧ್ಯಾದಿ ವಾದಕ್ರಿಯಾಸ್ವಾಮಿತ್ವಂ . . . ತಮಗೆಕ್ಕಲಾವಣಮೆನಲ್ (ಮಹಾನೀ. ೧-೧೩). ೬. ಚಿನ್ನದಿಂದ ಮಾಡಿದುದು. ೭. ತಂಪು; ಶೀತಲವಾದುದು: ತಳಿದುದ್ಯಾನಭವಾನಿಳಂ ಸರಸಿಜಂ ಹೈಮಂ ವನಂ (ಶಾಂತಿಪು. ೬-೧೦೨). ೮. ಚಳಿಗಾಲ; ಹೇಮಂತಋತು: ಜನಪಾಂತಃಪುರಕಾಂತಾಜನವದನಸರೋಜಮಶ್ರುಜಲಕಣಮುಮನಾಂತನುಕರಿಸಿರ್ದುದು ಹಿಮಬಿಂದುನಿಚಿತಹೈಮಂ ಸರೋಜವನವಿಭ್ರಮಂ (ಅಜಿಪು. ೧೧-೪೩). ೯. ಮಂಜು; ಇಬ್ಬನಿ: 'ಹೈಮನಗ' ಪರಾ. [ಸಂ.]

**ಹೈಮಂತ** (ಗು). ೧. ಹೇಮಂತಋತುವಿಗೆ ಸಂಬಂಧಿಸಿದ. (ನಾ). ೨. ಚಳಿಗಾಲ; ಹೇಮಂತಋತು. [ಸಂ.]

**ಹೈಮಕಂಕಣ** (ನಾ). ೧. ಹಿಮದ ಹನಿ,— ಕಣ; ಹಿಮಬಿಂದು. ೨. ಬಂಗಾರದ ಬಳೆ. ೧, ೨ : ಲೋಕಪಾವನೆಯೊರ್ಮೆ ಬಟಿಯೊಳ್ ಸುಟಿಸುಟಿದುಮೊರ್ಮೆ ಹೈಮಕಂಕಣದಿನೊಪ್ಪುವ ತೆರೆಗೈಗಳಿನಪ್ಪಲ್ಕೆಂದು ಮೇಲ್ವಾಯ್ದುಂ (ರಾಮಾಶ್ವ. ೩೦-೨೬).

[ಸಂ.]

**ಹೈಮಕ್ಷ್ಮಾಚಳ** (ನಾ). ಹಿಮಾಲಯಪರ್ವತ: ಹೈಮಕ್ಷ್ಮಾಚಳೇಂದ್ರಂ [ಪಾಠಾಂ. ಧರೇಂದ್ರಂ] ಬರೆಗಮಖಿಳಷಟ್ಖಂಡಭೂಭಾಗಮಂ . . . ದಿಗ್ವಿಜಯದೊಳೊಗೆ ದಾನಂದಭೇರೀರವಂ ಘೂರ್ಣಿಸೆ (ಆದಿಪು. ೧೪-೧೪೮). [ಸಂ. ಹೈಮಕ್ಷ್ಮಾಚಲ]

**ಹೈಮನ** (ಗು). ೧. ಚಳಿಗಾಲಕ್ಕೆ ಸಂಬಂಧಿಸಿದ. (ನಾ). ೨. ಚಳಿಗಾಲ: "ಹಿಮಸಮಯಭವಂ ಹೈಮನಂ" (ವಸ್ತುಕೋ. ೧೧೬-೭೧). [ಸಂ.]

**ಹೈಮನಗ** (ನಾ). = ಹೈಮಕ್ಷ್ಮಾಚಳ: ಅಮರಾಪಗಾಪಯಃಪೂರಮನಾಂತ ಹೈಮ [ಪಾಠಾಂ. ಹರ್ಮ್ಯ] ನಗದಂತಿರೆ ದೇವಕುಲಂಗಳೊಪ್ಪುಗುಂ (ಕಾದಂಪೂ. ೨೯೫); ಅನಲನನವಷ್ಟಂಭಮೋಡಿತ್ತು . . . ಈ ಲೋಕಮಂ ಹೈಮನಗಂ ಕೈಕೊಂಡುದೆಂಬನ್ನೆಗ ಮೊದವಿದವಶ್ಯಾಯದೊಳ್ ನಿಂದನೇಕಾಂತನಿವಾಸಂ . . . ಯೋಗಿನಾಥಂ (ಸುಕುಮಾ. ೪-೧೧). [ಸಂ.]

**ಹೈಮವತ** (ಗು). ೧. ಹಿಮದಿಂದ ಆವೃತವಾದ. ೨. ಹಿಮಾಲಯಪರ್ವತಕ್ಕೆ ಸಂಬಂಧಿಸಿದ. (ನಾ). ೩. ಭಾರತದೇಶ. ೪. ಒಂದು ಬಗೆಯ ವಿಷ. ೫. [ಜೈನ] ಏಳು ಜನಪದಗಳಲ್ಲಿ ಒಂದು; P "ಈ ಕ್ಷೇತ್ರದ ದಕ್ಷಿಣಕ್ಕೆ ಹಿಮವತ್ಪರ್ವತವೂ ಉತ್ತರಕ್ಕೆ ಮಹಾಹಿಮವತ್ಪರ್ವತವೂ ಪೂರ್ವಪಶ್ಚಿಮಗಳಲ್ಲಿ ಸಮುದ್ರಗಳೂ ಇರುತ್ತವೆ. ಇದು ಜಘನ್ಯಭೋಗಭೂಮಿಯು" (ಆದಿಪು. ಜೈನಪಾಂಭಾಷಿಕಶಬ್ದಕೋಶ): ಜಂಬೂದ್ವೀಪದ ಹೈಮವತಮೆಂಬ ಜಘನ್ಯಭೂಮಿಯೊಳ್ . . . ಪುಟ್ಟಿದೊಂ (ಪದ್ಮಾರಾ. ೧೬೪-೫); ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ ಹೈಮವತ . . . ಐರಾವತಂಗಳೆಂಬೇೞುಂ ಜನಪದಂಗಳಿಂ ಎಸೆದು (ಆದಿಪು. ೧-೪೮ ವ). [ಸಂ.]

**ಹೈಮವತಿ** (ನಾ). ೧. ಹಿಮವಂತನ ಮಗಳು; ಪಾರ್ವತಿ: "ರುದ್ರಾಣೀ . . . ಹೈಮವತೀ, ಪಾರ್ವತೀ . . . ಮೇನಕಾತ್ಮಜಾ - ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೪-೧೫); ಅನಘನು ನಲ್ಮೆಯೊಳಿರಿಭಕ್ತನ ಗುಣಮಂ ಹೈಮವತಿಗೆ ಪೇಳುತ್ತ (ತ್ರಿಪುಪಿ. ೨೨-೬೨); ಮನದಿಷ್ಟವಿತ್ತೆನ್ನ ಪಾಲಿಪುದು ಹೈಮವತಿಯೇ (ಪ್ರಾಭರಾ. ೧-೩). ೨. ಒಂದು ಬಗೆಯ ಸಸ್ಯ ಮತ್ತು ಅದರ ಬೇರು; ಬಿಳಿಯ ಬಜೆ. ೩. ಹಳದಿ ರಸವಿರುವ ಒಂದು ಬಗೆಯ ಸಸ್ಯ; ಸ್ವರ್ಣಕ್ಷೀರಿ. ೪. ಅಣಲೆ; ಹರೀತಕೀವೃಕ್ಷ: "ಚೇತಕಿ ಶಿವೆ ಹೈಮವತಿ ಹರೀತಕಿಯಭಯಾಖ್ಯೆ" (ವಸ್ತುಕೋ. ೩೫-೧೨). ೫. ಗಂಗಾನದಿ. ೬. ಹೊಂಬಣ್ಣದ ಒಂದು ಬಗೆಯ ದ್ರಾಕ್ಷೆ.

[ಸಂ. ಹೈಮವತೀ]

**ಹೈಮಶೈಲ** (ನಾ). = ಹೈಮಕ್ಷ್ಮಾಚಳ: ನಿಧಿರತ್ನವ್ರಾತಮಂತಃಪುರಮೆಸೆವ ಷಡಂಗಂ ಬಲಂ ಹೈಮ [ಪಾಠಾಂ. ಹಿಮ್ಯ, ಹಿಮ, ಹರ್ಮ್ಯ] ಶೈಲಾವಧಿ ಷಟ್ಖಂಡಂ ಮಹೀಮಂಡಲಂ (ಆದಿಪು. ೪-೭೮). [ಸಂ.]

**ಹೈಮಾಂಬರ** (ನಾ). ಪೀತಾಂಬರವನ್ನು ಧರಿಸಿರುವವನು; ಕೃಷ್ಣ: ಹೈಮಾಂಬರಂ ಸಕಲದಳಸಹಿತ ಮೈದುನನ ಮೈಮಚ್ಚಿಕೆಗೆ ಮುಖತುರಂಗದೊಡನೈದಿದಂ (ಜೈಮಿಭಾ. ೨೫-೨). [ಸಂ.]

**ಹೈಮಾಂಬುಜ** (ನಾ). ಚಿನ್ನದ ಬಣ್ಣದ ತಾವರೆ; ಹೊಂದಾವರೆ: ಕೀಟಂ . . . ತುಂಬಿವೊಲೀಂಟ ರಾಗಿಸುಗುಮೇ ಹೈಮಾಂಬುಜಾಮೋದಮಂ (ಮಲ್ಲಿಪು. ೧-೨೬). [ಸಂ.]

**ಹೈಮಾಚಳ** (ನಾ). = ಹೈಮಕ್ಷ್ಮಾಚಳ: ಹೈಮಾಚಳಮಿರ್ಪಂತಾಗಲಿರ್ದ[೦] . . . ಯೋಗಿನಾಥಂ (ಸುಕುಮಾ. ೪-೯). [ಸಂ. ಹೈಮಾಚಲ]

**ಹೈಮಾದ್ರಿ** (ನಾ). = ಹೈಮಕ್ಷ್ಮಾಚಳ: ತೋಱಿದನಾ ತನ್ನೊಡವರ್ಪ ಭೂಪನಿಕರಕ್ಕುತ್ತುಂಗಹೈಮಾದ್ರಿಯಂ (ಆದಿಪು. ೧೩-೬೯); ಮಹಿಪಂ ಹೈಮಾದ್ರಿಯಂ ನೋಡಿದಂ (ಶಾಂತಿಪು. ೧೧-೬೦). [ಸಂ.]

**ಹೈಯಂಗವೀನ** (ನಾ). ೧. ಹಿಂದಿನ ದಿನ ಕರೆದ ಹಾಲನ್ನು ಹೆಪ್ಪು ಹಾಕಿ, ತೆಗೆದ ಬೆಣ್ಣೆ; ಹೊಸ ಬೆಣ್ಣೆ; ನವನೀತ: ಅತಿದೂರೋಚ್ಛ್ವಾಸ ವಿಕಾಸನಾಸಾಂಜಲಿ ಪುಟಪೀಯಮಾನದುಗ್ಧಹೈಯಂಗವೀನಮಂ . . . ಭರತೇಶನಾರೋಗಿಸಿದಂ (ಆದಿಪು. ೧೧-೨೬ ವ); ಸುರಭಿತರ ನವೀನ ಹೈಯಂಗವೀನಕ್ಷೀರದಧಿಪೂರಿತೋದಾರಕುಂಭಂಗಳೊಳಂ . . . ಅಭಿಷೇಕಂಗೆಯ್ದು (ವರ್ಧಮಾ. ೮-೯೫ ವ). ೨. ಹೊಸ ತುಪ್ಪ. [ಸಂ.]

**ಹೈರಣ್ಯ** (ಗು). ೧. ಚಿನ್ನದ; ಬಂಗಾರದಿಂದ ಮಾಡಿದ. (ನಾ). ೨. ಚಿನ್ನ; ಬಂಗಾರ: ಕರ್ಣ ಗಂಗಾಸುತ ಹೈರಣ್ಯಮಯೂರಧ್ವಜಧವಳಮಿವಿಂತೈದು ಗಾಂಗೇಯನಾಮಂ (ನಾನಾರ. ೪೫). [ಸಂ.]

**ಹೈರಣ್ಯಬಾಣ** (ನಾ). ಚಿನ್ನದ ಗರಿಗಳಿಂದ ಕೂಡಿದ ಬಾಣ: ಭೀತಿಗೊಳುತಿರಲು ಭಯಮೋಹರ ಘಾತುಕನು ಹೈರಣ್ಯಬಾಣವ ಬೇಗ ತೆಗೆದೆಚ್ಚ (ಕಾಶಿರಾ. ೨೧-೬೦). [ಸಂ.]

**ಹೈರಣ್ಯವತ** (ನಾ). [ಜೈನ] ಏಳು ಜನಪದಗಳಲ್ಲಿ ಒಂದು; P "ರುಕ್ಮಿ ಮತ್ತು ಶಿಖರಿಪರ್ವತಗಳ ಮತ್ತು ಪೂರ್ವಪಶ್ಚಿಮಸಮುದ್ರಗಳ ನಡುವಿನ ಕ್ಷೇತ್ರ. ಇದು ಜಘನ್ಯಭೋಗಭೂಮಿ" (ಆದಿಪು. ಜೈನಪಾಂಭಾಷಿಕಶಬ್ದಕೋಶ): ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ . . . ಹೈರಣ್ಯವತೈರಾವತಂಗಳೆಂಬೇೞುಂ ಜನಪದಂಗಳಿಂ . . . ಮಹಾವಾಹಿನಿಗಳಿಂದಮೆಸೆದು

(ಆದಿಪು. ೧-೪೮ ವ); ಹೈಮವತ ಹೈರಣ್ಯವತಂಗಳೆಲ್ಲಂ ಜಘನ್ಯಭೋಗಭೂಮಿಗಳಕ್ಕುಂ (ಚಂದ್ರಪ್ರ. ೩-೩೨ ವ). 'ಹೈಮವತ' ಪರಾ. [ಸಂ. ಹೈರಣ್ಯವತ್]

**ಹೈರಾಣ, ಹೈರಾನು** (ನಾ). ೧. ದಣಿವು; ಬಳಲಿಕೆ; **ಆಯಾಸ**: ಹಗಲೆಲ್ಲ ಹೈರಾಣ, ಮಾತೆಂಬುದೇ ಮರಣ (ಭಾವಜೀ. ೨-೨೭); ವೈನಿ ಹೈರಾಣವಾಗಿ ಹಾಸಿಗೆಯ ಮೇಲೆ ಮಲಗಿಕೊಂಡರು (ವೈನಿ. ೩೨೩). ೨. ಕಂಗಾಲುಸ್ಥಿತಿ; **ಕಂಗೆಟ್ಟಿರುವಿಕೆ**: ಈಗೆರಡು ವರುಷಗಳಿಂದ ನೌಕರಿಗಾಗಿ ಅಲೆದು ನನ್ನ ಜೀವ ಹೈರಾಣವಾಗಿ ಹೋಗಿದೆ (ಚಿವಂ. ೩೩); ಗೋವಿಂದರಾಯರಿಗೆ ತಾವೊಂದು ಅನಿರೀಕ್ಷಿತಪ್ರಸಂಗವನ್ನು ಎದುರಿಸಬೇಕಾದ ಸಂದರ್ಭ ಬಂದಂತಾಗಿ ಬಹಳ ಹೈರಾಣಾದರು (ಮುಗಿಮು. ೧೩೪). ೩. ಕಷ್ಟ; **ತೊಂದರೆ**: ಅವರು ಮೈಮೇಲೆ ಕಂಬಳಿಯ ಮುಸುಕು ಹಾಕಿಕೊಂಡಿದ್ದಾಗ್ಯೂ ನೊಣಗಳು ಅವರನ್ನು ಕಡಿದು ಹೈರಾಣ ಮಾಡುತ್ತವೆ (ಕಭಾಗ. ೬೬). **ಹೈರಾನು**: ೨. ನಮ್ಮ ಕುಟುಂಬ ಮಕ್ಕಳು ಯಾವತ್ತು ಖರ್ಚಿಗೆ ಇಲ್ಲದೆ, ಹೈರಾನು ಆಗುತ್ತದೆ (ರಾಜೇಂದ್ರ. ೬೯). ೩. ಅಲ್ಲಿ ರೈತರ ನಿಲ್ಲುವದಕ್ಕೆ ಬಿಡದೆ ಲೂಟಿಮಾಡಿ ಶೀಮೆ ಹೈರಾನುಮಾಡುತ್ತ ಇದ್ದಲ್ಲಿ (ರಾಜೇಂದ್ರ. ೫).
[← ಅರ. ಹಿಂ. ಹೈರಾನ್; ಮರಾ. ಹೈರಾಣ]

**ಹೈರಾಣಗೊಳ್ಳು** (ಕ್ರಿ). ಕಂಗೆಡು; **ಕಂಗಾಲಾಗು**: ಭಾರತೀಯರ ಈ ಹೈರಾಣಗೊಂಡ ಜೀವನ ಮಾರ್ಪಾಟಾಗಬೇಕು (ಎಚ್ಚಸಾ. ೧೪೦).
[ಹೈರಾಣ + ಕೊಳ್ಳು$_1$ (< ಕೊಳ್$_1$)]

**ಹೈರಾನು** 'ಹೈರಾಣ' ನೋ.

**ಹೈಲಾಟ** (ನಾ). ಹುಡುಗಾಟ; ಚೆಲ್ಲಾಟ; **ಚಿನ್ನಾಟ**: ನೀವು ಹೈಲಾಟಕ್ಕೆ ಶುರು ಮಾಡಿ ತಲೆ ಮೇಲೆ ಮನೆ ಕೆಡವಿಕೋಬೇಡಿ (ಕಲನಿ. ೨೮೪); ನನ್ನ ಹತ್ತಿರವಾ ಹೈಲಾಟ! ಎಂದು ಘರ್ಜಿಸಿದ (ಸರ್ವಮಂ. ೫೨). [ಹೈಲು + ಆಟ]

**ಹೈಲು** (ನಾ). ಹುಡುಗಾಟ; ಹುಚ್ಚಾಟ; **ಚೇಷ್ಟೆ**: ನಿನ್ನ ಹೈಲಿಗೆ ಕಿಚ್ಚು ಹಾಕಿತು (ಮರಮ. ೨೮); ಇದೆಲ್ಲಿಯ ಪೋಲಿರಕ್ಕಸ! ಬರಿಯ ಹೈಲು (ಬಗಾಳಿ. ೫೨-೨೭).

**ಹೈಲಾಗು** = ೧. ಕುಚೇಷ್ಟೆಗೆ ಗುರಿಯಾಗು; **ನಗೆಗೀಡಾಗು**: ವಂತಿಗೆ, ವಡಾರಮಾಡಿ, ನಡೆಯಿಸುವ ಕೆಲಸವನ್ನು ಈ ಉಳ್ಳೂರು ಹೆಬ್ಬಾರ ತಾನು ಮಾಡಿ ಹೈಲಾಗಲಿಕ್ಕುಂಟು (ಸ್ವಪ್ನಹೂ. ೫೮). ೨. (ಆಲಂ) ಹಾಳಾಗು; **ಕೆಟ್ಟುಹೋಗು**: ವ್ಯಾಪಾರ ಹೈಲಾಯಿತಲ್ಲ (ಹಹಸ. ೬೬); ಇತರ ನಾಯಿಗಳೂ ಅಲ್ಲಿಗೆ ವೇಗವಾಗಿ ಓಡಿ ಬಂದುವು. ಸರಿ. ವ್ಯಾಪಾರ ಹೈಲಾಯಿತು (ಮಲೆಚ. ೧೦). **ಹೈಲುಕೆಲಸ** = (ಆಲಂ) ದಡ್ಡತನದ **ಕಾರ್ಯ**: ಬೇಡುವುದೇ? ಛೀ, ಹೈಲುಕೆಲಸ . . . ಈ ಜೀವವನ್ನೇ ಕೊಟ್ಟವನ ಹತ್ತಿರ, ಅದನ್ನು ಕೊಡು, ಇದನ್ನು ಕೊಡು – ಎಂದು ಬೇಡಿದರೆ ನಮಗೆ ಬುದ್ಧಿ ಉಂಟು ಎಂದ ಹಾಗಾಯಿತೇ? (ಮೂಕಜ್ಜ. ೧೦೪). [< ಐಲು]

**ಹೈವ, ಹೈವೆ** (ನಾ). ೧. ಉತ್ತರಕರ್ನಾಟಕದ ಒಂದು ಪ್ರದೇಶದ ಹೆಸರು; **ಹೈಗನಾಡು**: ಆಂಧ್ರ ದ್ರಾವಿಡ ಹೈವ ತುಳು ಮಲಯ (ಎಕ. VII, ಶಿವಮೊ. ೭೯-೨೦; 1154?); ರಾಮಚಂದ್ರದೇವ ಒಡೆರು . . . ಹೈವ ತುಳು ಕೊಂಕಣ ಮುಂತಾದ ರಾಜ್ಯಂಗಳನು ಪ್ರತಿಪಾಳಿಸುತ್ತಿದ್ದು (ಮೈಆರಿ. ೧೯೩೪, ೩೦-೪; 1447); ಆವಗಂ ತಣ್ಣೀರ ಮಾವ ನಿರ್ಲಜ್ಜೆಯವಳೇ ವನಿತ ಹೈವೆ[ಪಾಠಾಂ. ಗ]ನಾಡವಳೆನಿಪಳು (ಜನವ. ೬-೨೭). ೨. ಹೈವದೇಶಕ್ಕೆ **ಸೇರಿದವನು**: "ಹೈವ ಹೈವಳನಕ್ಕು" (ಮಂಗರಾ. ೧೧೨-೬). ೩. ಹೈವದೇಶದ **ಭಾಷೆ**: ಪ್ರಾಕೃತಚಂದ್ರಿಕಾಕಾರನು 'ಕರ್ಣಾಟ', 'ಹೈವ', 'ಕೌಂತಲ', ಭಾಷೆಗಳು ಬೇರೆ ಬೇರೆ ಎನ್ನುತ್ತಾನೆ! (ಕರ್ಣಾಟ. ೧೭೭). ೪. ಒಂದು ಜನಾಂಗದ **ಹೆಸರು**: (೩). 'ಹೈಗ$_1$' ಪರಾ. **ಹೈವೆ**: ೧. ಹೈವೆಯು ಸಪ್ತಕೊಂಕಣಗಳೊಳಗಿನ ಒಂದು ಪ್ರಾಂತವಾಗಿತ್ತೆಂಬುದರಲ್ಲಿ ಸಂದೇಹವಿಲ್ಲ (ಸಾಹಿಸ. ೫೯). [?]

**ಹೈವಳ** (ನಾ). = ಹೈವ ೨ : "ಹೈವ ಹೈವಳನಕ್ಕು" (ಮಂಗರಾ. ೧೧೨-೬). [< ಹೈವ]

**ಹೈವಿಗ** (ನಾ). = ಹೈವ ೧ : ಹೈವಿಗ ತೆಲುಂಗ ಗುರ್ಜರ . . . ಕಾಂಬೋಜದೇಶದ ಸಕಲಶರಣರೈತರುತಿರ್ದರು (ಚಿಬಪು. ೬-೪೯). [< ಹೈವ]

**ಹೈವೆ** 'ಹೈವ' ನೋ.

**ಹೈಹಯ** (ನಾ). ೧. ಒಂದು ರಾಜವಂಶದ **ಹೆಸರು**: ಬಾದಾಮಿಚಳುಕ್ಯ ವಿಕ್ರಮಾದಿತ್ಯನ ಇಬ್ಬರು ಮಡದಿಯರು ಹೈಹಯವಂಶದ ಕಲಚೂರಿ ಮನೆತನದವರು (ಕರ್ಣಾಟ. ೧೩೫). ೨. ಹೈಹಯವಂಶದ ಒಬ್ಬ ದೊರೆ; **ಕಾರ್ತವೀರ್ಯ**: ದೇವ ಹೃಹಯ ಬಾಹುಗಹನದವದಹನ ಜಯ (ಜಗವಿ. ೫-೧೧೨ ರಗಳೆ). [ಸಂ.]

**ಹೊಂ** 'ಪೊನ್' ನೋ.

**ಹೊಂಕಿಡಿ** 'ಹೊಂಗಿಡಿ' ನೋ.

**ಹೊಂಕುಂದ** 'ಪೊಂಕುಂದ' ನೋ.

**ಹೊಂಗಂಟೆ** 'ಪೊಂಗಂಟೆ' ನೋ.

**ಹೊಂಗಂಬಿ** (ನಾ). ಚಿನ್ನದ ಕೋಲು; ಸುವರ್ಣದ ದಂಡ,– **ಸಲಾಕೆ**: ಸಂದಣಿಸಿ ನೃಪರಾಣಿವಾಸದ ಗೊಂದಣದ ದಂಡಿಗೆಗಳಿಳಿದವು ಮುಂದೆ ಹೊಂಗಂಬಿಗಳ ಜೋದರ ಜನಪಲಾಯನದ (ಕುವ್ಯಾಆ. ೭-೧೭). [ಹೊಂ (< ಪೊನ್) + ಕಂಬಿ$_1$]

**ಹೊಂಗಂಬುಗೆ** (ನಾ). ಚಿನ್ನದಿಂದ ತಯಾರಿಸಿದ (ಆಯುಧಗಳನ್ನು ಇಡುವ) ರಥದ ಒಂದು **ಭಾಗ**: ಹೊಗರೊಗುವ ಸೂನಿಗೆಯ ಸುಪತಾಕೆಗಳ ಸಿಂಧದ ಹೊಳೆವ ಹೊಂಗಂಬುಗೆಯ ಹೂಡಿದ ಹಯದ ಸೂತರ ಗಳಹ ಗರ್ಜನೆಯ . . . ರಥವಾಜಿಗಳ ನೋಡ್ಡೆ ಪಾರ್ಥ (ಕುವ್ಯಾಭೀ. ೩-೧೯). [ಹೊಂ (< ಪೊನ್) + ಕಂಬುಗೆ]

**ಹೊಂಗಗ್ಗರ** (ನಾ). ಚಿನ್ನದ ಕಿರುಗೆಜ್ಜೆಗಳನ್ನುಳ್ಳ ಒಂದು ಬಗೆಯ **ಆಭರಣ**: ತೊಟ್ಟಿಲಿಗೆ ಕೈಗೆಯ್ದು ಹೊಂಗಗ್ಗರದ ಸರಂ ಘಲಿರೆನಲ್ ಬೆಚ್ಚುತೆಳ್ಚರ್ತಳುತ್ತಿರ್ದನಂ, ಕಂದನಂ, ವಜ್ರಾರಿಯಂ ವಕ್ಷಕವುಂಚಿದಳ್ ಲಂಕೇಶ್ವರನ ಸೊಸೆ! (ಶ್ರೀರಾಮಾ. ೬೩೨-೬೩೦).
[ಹೊಂ (< ಪೊನ್) + ಗಗ್ಗರ$_1$ (< ಗರ್ಗರ$_1$)]

**ಹೊಂಗಟ್ಟಿಗೆ** 'ಪೊಂಗಟ್ಟಿಗೆ' ನೋ.

**ಹೊಂಗಟ್ಟಿಸು** (ಕ್ರಿ). (ಕನ್ಯಾಶುಲ್ಕವಾಗಿ) ಹೊನ್ನನ್ನು ಕಟ್ಟಿಸು; ತೆರವನ್ನು ಕೊಡುವಂತೆ **ಮಾಡು**: ಪಟ್ಟಕರ್ಕಿವು ಕುಳ್ಳಿರ್ಕೆವು ನೆಟ್ಟನೆ ನಿಂದಿರ್ಕೆ ವೊಡಲದೆಂತಿರ್ದೊಡಮೇಂ ದಿಟ್ಟಿ ನಿಜದಲ್ಲಿ ನಿಲೆ ಹೊಂಗಟ್ಟಿಸನೇ ಮುಕ್ತಿಕನ್ನೆಗಾ ಮುನಿಮಾನ್ಯಂ (ಪಸಾರ. ೩೭೦). [ಹೊಂ (< ಪೊನ್) + ಕಟ್ಟು$_1$ + - ಇಸು$_1$]

**ಹೊಂಗಟ್ಟು** (ನಾ). ಚಿನ್ನದ ಕಟ್ಟು,– ಅಣಸು; ಸುವರ್ಣದ **ಚೌಕಟ್ಟು**: ಕಟ್ಟಿ ಮೆರೆವ ಕಠಾರಿಗಳ ಹೊಂಗಟ್ಟುಗಳೊಳೆಸೆವ ಇಟ್ಟ ಕಬ್ಬುನ ಕೋಲುಗಳ ಪಿಡಿದು (ಬಸಪು. ೬೧-೨೭); ಹಲವು ಫಲಭರದ ಕಟ್ಟದಿರ ಕಳಿವಣ್ಣುಗಳ ಕಡಲಿಟ್ಟು ಸುರಿವ ಸುಧಾರಸದ ಹೊಂಗಟ್ಟುಗಳ ಫಲಭೂಜರಾಜಿಯ ಕಿತ್ತನಾ ಹನುಮ (ತೊರರಾ. ೫-೪-೫).
[ಹೊಂ (< ಪೊನ್) + ಕಟ್ಟು$_2$]

**ಹೊಂಗಟ್ಟುಬೆತ್ತ** (ನಾ). ಚಿನ್ನದ ಕಟ್ಟು ಹಾಕಿರುವ ಬೆತ್ತ; ಸುವರ್ಣದ ಅಣಸು ಹಾಕಿರುವ **ದಂಡ**: ಪಡಿಗ ಪಾವುಗೆ ಬಿಜ್ಜಣಿಗೆ ಹೊಂಗಟ್ಟುಬೆತ್ತಗಳಾ ಪಿಡಿದು ಸೇವಕಜನರು . . . ಕಟ್ಟಳೆಯೊಳಿಗಕೆ ಸನ್ನದ್ಧರಾಗಿಹರು (ಅನಂರಾ. ೧-೩-೪೨).
[ಹೊಂಗಟ್ಟು + ಬೆತ್ತ]

**ಹೊಂಗಠಾರಿ** (ನಾ). ಚಿನ್ನದ ಕಠಾರಿ; ಸುವರ್ಣದ **ಕಠಾರಿ**: ಹೊಂಗಠಾರಿಯ ಕೋಲುವಿಡಿದುಲ್ಲಂಘಿಸುತ ಜಡಿಜಡಿದು ಚಿಮ್ಮುತ . . . ನಂಬಿಯಣ್ಣಂ ಪರಮಲೀಲೆಯೊಳುದ್ಧಚಮ್ಮಾವುಗೆಗಳಂ ಮೆಟ್ಟಿ ಸರಸರನೆ ನಡೆತಂದು (ಬಸಪು. ೨೬-೧೨). [ಹೊಂ (< ಪೊನ್) + ಕಠಾರಿ (< ಕಟಾರ$_2$)]

**ಹೊಂಗಡಗ** 'ಪೊಂಗಡಗ' ನೋ.

**ಹೊಂಗಡಲು** 'ಪೊಂಗಡಲು' ನೋ.

**ಹೊಂಗಡಲೆ** (ನಾ). ಒಂದು ಬಗೆಯ **ಕಡಲೆ**: "ಚಣಗೌಳಃ – ಹೊಂಗಡಲೆ" (ಓಷಧಿ. ೫೪). [ಹೊಂ (< ಪೊನ್) + ಕಡಲೆ]

**ಹೊಂಗಣಜಿಲು, ಹೊಂಗಣೆಜಿಲು, ಹೊಂಗಣೆಜಿಲೆ** (ನಾ). ಒಂದು ಬಗೆಯ ವನೌಷಧಿ; ಗಣಜಿಲೆಯಲ್ಲಿ ಒಂದು **ಬಗೆ**: "ಶಿವಮಲ್ಲಿಕಾ – ಹೊಂಗಣಜಿಲು, ಉಮ್ಮತ್ತ" (ಓಷಧಿ. ೧೬೬). **ಹೊಂಗಣೆಜಿಲು**: "ಪಾಶುಪತಃ, ಪಾಶುಪತಾ – ಈ ಯೆರಡುಂ ಹೊಂಗಣೆಜಿಲು" (ಓಷಧಿ. ೯೫). **ಹೊಂಗಣೆಜಿಲೆ**: "ವಸೋದಃ – ಹೊಂಗಣೆಜಿಲೆ" (ಓಷಧಿ. ೧೪೭). [ಹೊಂ (< ಪೊನ್) + ಗಣಜಿಲು (< ಗಣಜಿಲೆ$_1$)]

**ಹೊಂಗಣೆಜಿಲು** 'ಹೊಂಗಣಜಿಲು' ನೋ.

**ಹೊಂಗಣಜೆಲೆ** 'ಹೊಂಗಣಜಿಲು' ನೋ.

**ಹೊಂಗಣೆ** 'ಪೊಂಗಣೆ' ನೋ.

**ಹೊಂಗದಳಿ** 'ಪೊಂಗದಳಿ' ನೋ.

**ಹೊಂಗದಿರು** 'ಪೊಂಗದಿರ್$_2$' ನೋ.

**ಹೊಂಗದ್ದುಗೆ** (ನಾ). ಚಿನ್ನದ ಆಸನ; ಸುವರ್ಣದ ಪೀಠ: ಬಿಗಿದ ಕೂರಂಕುಶದ ಮಾವಂತಿಗನ ಸನ್ನೆಗೆ ಕುಸಿದ ದಂತಿಯ ಹೆಗಲ ಹೊಂಗದ್ದುಗೆಗೆ ಬಿಜಯಂಗೈದನಾ ಭೂಪ (ಕುವ್ಯಾಸ. ೧೨-೯೭); ಅಡರಿದನು ನಿಜಸತಿಸಹಿತ ಹೊಂಗದ್ದುಗೆಯ ಹೊಂಬೆಸೆದ ಚೆಂಚಿಯದ ರತುನಲಹರಿಯ ಲಳಿಯ ಭದ್ರಾಯತಮತಂಗದ ಕಂಧರವ (ತೊರರಾ. ೨-೨-೨೧). [ಹೊಂ (< ಪೊನ್) + ಗದ್ದುಗೆ$_2$ (< ಗರ್ದುಗೆ$_2$)]

**ಹೊಂಗನಸು** (ನಾ). (ಆಲಂ) ಸುಂದರವಾದ ಸ್ವಪ್ನ; ಹಿತಕರವಾದ ಕನಸು: ಬಯಕೆ ಕೈಗೂಡದಾ ಬಾಲೆ ಹನಿಗಣ್ಣಾಗಿ ನಿಡುಸುಯ್ದು ನಿಲ್ಲುವಳ್, ಕಂಬನಿಯೊಳಿನ್ನೊಂದು ಹೊಂಗನಸು ಕಾಂಬಳೆಂಬಂತೆ (ಚಿತ್ರಾಂಗ. ४-೯೭); ಹೊಂಗನಸುಗಳು ಎಂದಿಗೂ ನನ್ನವೆ (ಮುರುಕು. ೭೮). [ಹೊಂ (< ಪೊನ್) + ಕನಸು]

**ಹೊಂಗರಗ** 'ಪೊಂಗರಗ' ನೋ.

**ಹೊಂಗರಡಿಗೆ** 'ಪೊಂಗರಡಿಗೆ' ನೋ.

**ಹೊಂಗರಿ$_1$** 'ಪೊಂಗಱ' ನೋ.

**ಹೊಂಗರಿ$_2$** 'ಪೊಂಗುರು' ನೋ.

**ಹೊಂಗರುಗ** (ನಾ). ಒಂದು ಬಗೆಯ ಸಸ್ಯ; ಗರುಗದಲ್ಲಿ ಒಂದು ಬಗೆ: "ಕೃಷ್ಣನಾಳಃ-ಹೊಂಗರುಗ" (ಓಷಧಿ. ೩೯). [ಹೊಂ (< ಪೊನ್) + ಗರುಗ]

**ಹೊಂಗರೆ** 'ಪೊಂಗರೆ' ನೋ.

**ಹೊಂಗರೆಯಂಬರ** (ನಾ). ಬಂಗಾರದ ಅಂಚುಳ್ಳ ಬಟ್ಟೆ; ಜರತಾರಿಯ ಅಂಚುಳ್ಳ ವಸ್ತ್ರ: ಭಂಗಾರ ಹಲವುಂಟು ದೇವರ ಗೃಹದೊಳೀವುಂಗುರ ತೊಂಡಿಲು ಬಂದಿ ಹೊಂಗರೆಯಂಬರವೀ ನಾಲ್ಕು ಹೆಚ್ಚು ಪುಣ್ಯಾಂಗನೆಗಿವು ಸಲಲೆಂದ (ಭರಚ. ೩೮-೭೭). [ಹೊಂಗರೆ (< ಪೊಂಗರೆ) + ಅಂಬರ]

**ಹೊಂಗಲಶ** 'ಪೊಂಗಳಶ' ನೋ.

**ಹೊಂಗಲಸ** 'ಪೊಂಗಳಸ' ನೋ.

**ಹೊಂಗಲ್ಲು** 'ಪೊಂಗಲ್$_1$' ನೋ.

**ಹೊಂಗಳಶ** 'ಪೊಂಗಳಶ' ನೋ.

**ಹೊಂಗಳಸ** 'ಪೊಂಗಳಸ' ನೋ.

**ಹೊಂಗಱ** 'ಪೊಂಗಱ' ನೋ.

**ಹೊಂಗಱಯಂಬು** (ನಾ). ಚಿನ್ನದ ಗರಿಯುಳ್ಳ ಬಾಣ: ನಿಮಿರ್ದ ಹೊಂಗಱಯಂಬು ಹೊಳೆಹೊಳೆದು ಮುರಹರನ ಪಾದಾರವಿಂದದ ಹೊರೆಯೊಳಡಗಿತು (ಕುವ್ಯಾದ್ರೋ. ೧೯-೫೦). [ಹೊಂಗಱ (< ಪೊಂಗಱ) + ಅಂಬು$_1$]

**ಹೊಂಗಱವೂ** (ನಾ). ಚಿನ್ನದ ಗರಿಯಂತಿರುವ ಹೂ; ಕೇದಗೆ; ತಾಳೆ: ಹೀಲಿಗಳನೊಲಿದುಟ್ಟು . . . ಹೊಂಗಱವೂವಿನೆಸಳುಗಳಾ ಒಲೆಗಳನಿಕ್ಕಿವಿಯೊಳಿಕ್ಕಿ ವಿಶಾಲಗುಂಜಾಭರಣವಾಂತಾ ಲೀಲೆಯಿಂ ಶಬರಿಯರೆಸೆದರಾ ಪೆಕ್ಕಣದೊಳಂದು (ಸಾಳ್ವಭಾ. ೫-೮). [ಹೊಂಗಱ (< ಪೊಂಗಱ) + ಪೂ$_2$]

**ಹೊಂಗಾಗೆ** (ನಾ). ಒಂದು ಬಗೆಯ ಪಕ್ಷಿ,– ಶಕುನದ ಹಕ್ಕಿ; ಹಂಗನ ಹಕ್ಕಿ: "ಚಾಷಃ, ಕಿಕೀದಿವಿಃ, ಈ ೨ ಹೊಂಗಾಗೆ" (ನಾಚಿರಾ. ೧೧೪). 'ಹಂಗ$_2$' ಪರಾ.
[ಹೊಂ (< ಪೊನ್) + ಕಾಗೆ]

**ಹೊಂಗಾಜು** 'ಪೊಂಗಾಜು' ನೋ.

**ಹೊಂಗಾಣ** (ನಾ). ಚಿನ್ನದಿಂದ ತಯಾರಿಸಿದ ಗಾಳ,– ಮೀನು ಹಿಡಿಯುವ ಕೊಕ್ಕೆ: ಅಂಗಜನೆಂಬ ದೀವರ ಮೋಹಿಗಳ ದಿಟ್ಟಿಮೀಂಗಳ ಸೆಳೆಯಲು ಪಿಡಿದ ಹೊಂಗಾಣದ ಕಡ್ಡಿಯೊಯನಲಾ ಲತೆಗಳು ದಾಂಗುಡಿಗಳಿಂದೊಪ್ಪಿದವು (ಶ್ರೀಪಾಲ. ४-೧೧४). [ಹೊಂ (< ಪೊನ್) + ಗಾಣ$_2$ (< ಗಾಳ)]

**ಹೊಂಗಾಯಕ** (ನಾ). ಚಿನ್ನದ ಕೆಲಸ,– ಕಾಯಕ; ಅಕ್ಕಸಾಲಿಗ ವೃತ್ತಿ: ಹೊಂಗಾಯಕದ ನಾಗಪ್ಪನೆಸೆವ ಕಿಕ್ಕೇರಿಯಲಿ ಚಾಕನೂರೊಳ್ ಕೇತಿದೇವಗಳ ಚರಣಾಂಬುಜಕ್ಕೆ ಶರಣು (ಲಶಿಚಂ. ೩೮-೧೧೨); ಚಾರು ಸಜ್ಜನಶೀಲ ಜಂಗಮದ ದಾಸೋಹಿ ಮಾರಾರಿಪದಭಕ್ತ ಹೊಂಗಾಯಕದ ದಿಂಡನೂರ ನಾಗಾಭಕ್ತ (ಗುರುಚಾ. ೧೩-೭೭). [ಹೊಂ (< ಪೊನ್) + ಕಾಯಕ]

**ಹೊಂಗಾರೆ** (ನಾ). ಒಂದು ಬಗೆಯ ಮರ: ಹಂಗರಬೀಜ ಹೊಂಗಾರೆಬೀಜ . . . ಚಿತ್ರಮೂಲ ಈ ೫೦ ಬಗೆಯನ್ನು ಸಮಾನಂಗೊಂಡು ಚೆನ್ನಾಗಿ ಕುಟ್ಟಿ ಚೂರ್ಣವಂ ಮಾಡಿ ಇರಿಸಿಕೊಂಡು ತೆಗದುಕೊಂಬುದು (ವಿವೈವಿ. ೬೨).
[← ತುಳು. ಪೊಂಗಾರೆ, ಪೊಂಗರೆ, ಹೊಂಗರೆ]

**ಹೊಂಗಾಲ್ಮಣೆ** (ನಾ). ಚಿನ್ನದ ಕಾಲುಮಣೆ; ಬಂಗಾರದ ಕಾಲ್ಮಣೆ,– ಪೀಠ: ಲಲಿತಾಂಗಕೆ ನವಚಂದನಪಂಕವನೊಲವಿಂ ತಿಮಿರಿ ಬಳಿಕ ಹೂವಿನ ಹೊಂಗಾಲ್ಮಣೆಯೊಳಗಿರಿಸಿ ಲಲನೆಗೆ ನೀರೆಱೆದರ್ ಮದವತಿಯರ್ (ಜಯಿಕಾ. ೫-४).
[ಹೊಂ (< ಪೊನ್) + ಕಾಲ್$_1$ + ಮಣೆ$_1$]

**ಹೊಂಗಾಸೆ** (ನಾ). ಚಿನ್ನದ ಬಣ್ಣದ ಕಾಸೆ; ಬಂಗಾರದ ಕಟಿವಸ್ತ್ರ: ಮಿಱುಮಿಱನಾದ ಮೈಹೊಳಹಿಂದ ತೆರೆಗಟ್ಟಿ ನಿಱದೇಳ್ವ ಹೊಂಗಾಸೆಯಿಂದ ಕುರುಕುರವುಟ್ಟ ರಂಗದೊಳು ತಂಪಿನ ಬಯಲ್ಗೊಱ ಪೊಳೆವಂತೆ ಪೊಳೆವರು (ಭರಚ. ೧೩-೧೦೧); ವನಜಲೋಚನೆಯರು ಹೊಂಗಾಸೆಗಳನುಟ್ಟು (ಅಪ್ರಭು. ೨೨).
[ಹೊಂ (< ಪೊನ್) + ಕಾಸೆ$_1$]

**ಹೊಂಗಾಳಾಂಜಿ** (ನಾ). ಚಿನ್ನದ ಡವಕೆ; ಸುವರ್ಣದ ಪೀಕದಾನಿ: ರಂಜಿಪ ರತಿಯೊಳು ಗುಟುಕುತಂಬುಲರುಚಿ ಸಂಜೀವನವೆಂದು ತಿಳಿದು ಭುಂಜಿಸಲಾರಿಗೆ ಕುಡೆನೆಂದು ಹೊಂಗಾಳಾಂಜಿಯ ಪಿಡಿದೊರ್ವಯಿಹಳು (ವೋಹತ. ४-೧೦); ಹೊಂಗಾಳಾಂ[ಪಾಠಾಂ. ಳಂ]ಜಿಯ ಹೊಳೆವ ಬಿಜ್ಜಣಿಗೆಯ ಹೆಂಗಳು ತಂದಿರಿಸಿದರು (ಮೋಹತ. ೧೭-೨೮). [ಹೊಂ (< ಪೊನ್) + ಕಾಳಾಂಜಿ$_2$]

**ಹೊಂಗಿಂಡಿ** 'ಪೊಂಗಿಂಡಿ' ನೋ.

**ಹೊಂಗಿಡಿ, ಹೊಂಕಿಡಿ** (ನಾ). ಹೊಂಬಣ್ಣದ ಕಿಡಿ; ಬೆಂಕಿಯ ಕಣ: ಹೂಗೆ ಮಕರಂದಂ ಬೆರಸಿ ನೆಗೆವ ಸೀರ್ಪನಿ ಹೊಂಗಿಡಿ ನೀರ್ವಕ್ಕಿಗಳ ಸಂದಣಿಯಲಿ ಮಂತ್ರಮದಾಗಲ್ಕದಱಂದ ಕೊಳಂ ಮದನಾಧ್ವರಿ ವಿರಹಿಯ ಬಿಂದಕ್ಕೆಸಗಿದ ಮಾರಣ ಮಖಕುಂಡದವೋಲ್ ತೊಳಗಿದುದು (ಜಯಿಕಾ. ೧೧-೩೨). **ಹೊಂಕಿಡಿ:** ಜಡಿದು ನುಡಿವ ರಘಳಪಿಸಿ ಕೂರಸಿಯ ಮೆಯ್ಯಿಡುವ ತನ್ನಯ ವಿದ್ಯದಿಂದ ಸಿಡಿಲು ಸುಟ್ಟುಱ ಕಲ್ಲುಮಳೆಯರಳುವ ಹೊಂಕಿಡಿಯ ತಂದಲ ಸೂಸಿದವು (ಶ್ರೀಪಾಲ. ೫-೯೧).
[ಹೊಂ (< ಪೊನ್) + ಕಿಡಿ]

**ಹೊಂಗಿರಣ** (ನಾ). ಚಿನ್ನದ ಬಣ್ಣದ ಕಿರಣ; ಹೊಂಬಣ್ಣದ ರಶ್ಮಿ: ದಿನದಿನದ ಬೆಳಗು ಹೊಂಗಿರಣದ ಕಿರೀಟ ನೂರುಬಣ್ಣದ ಹೂವ ನರುಗಂಪನೊಮ್ಮೆಲೇ ಚಿಮ್ಮಿಸುವ ತೋಟ (ನಲಮು. ೫-೮). [ಹೊಂ (< ಪೊನ್) + ಕಿರಣ$_1$]

**ಹೊಂಗಿರಿ** (ನಾ). ಚಿನ್ನದ ಬೆಟ್ಟ; ಮೇರುಪರ್ವತ: ಜಂಬೂದ್ವೀಪವೆಂದೆಂಬ ಮಹಾನೃಪನಿಂಬುವಡೆದ ಕಾರ್ಮುಕವೂ ಎಂಬಂದದೆ ಭರತಾವನಿ ಹೊಂಗಿರಿ ಎಂಬುದಱಂ ತೆಂಕಲಿಹುದು (ಅಂಜಚ. ೨-೧೭). [ಹೊಂ (< ಪೊನ್) + ಗಿರಿ$_1$]

**ಹೊಂಗಿಸು** 'ಪೊಂಗಿಸು' ನೋ.

**ಹೊಂಗಿಱುಗೆಜ್ಜೆ** (ನಾ). ಚಿನ್ನದ ಕಿರುಗೆಜ್ಜೆ; ಬಂಗಾರದ ಕಿಂಕಿಣಿ: ಕಂಕಣದ ದನಿ ಕೇವಣದ ಹೊಂಗಿಱುಗೆಜ್ಜೆಗಳ ರಭಸ ಗಣಿಕೆಯರ ಕೆಳದಿಯರ ಹಾಹಾರಣಿತಕಿವು ನೆರವಾದವಾ ಪಟ್ಟಣವ ತುಂಬಿತು ಶೋಕ (ಕುವ್ಯಾಸ. ೧४-೭೮); ಜಡಿವ ಹೊಂಗಿಱು ಗೆಜ್ಜೆಯಂದುಗೆ ತೊಡಱುಗಳ ಸೆಳೆಗೊಂಬು ಕೊಳಲ್ಗಳ ಗಡಣದಲಿ ಹೊಱವಂಟರೊಪ್ಪಿರೆ ರಾಮ ಕೇಶವರು (ನಿಭಾಗ. ೧೦-೧೨-೨).
[ಹೊಂ (< ಪೊನ್) + ಕಿಱುಗೆಜ್ಜೆ]

**ಹೊಂಗು$_1$** 'ಪೊಂಗು$_1$' ನೋ.

**ಹೊಂಗು$_2$** 'ಪೊಂಗು$_2$' ನೋ.

**ಹೊಂಗು$_3$** 'ಹೊಂಗೆ' ನೋ.

**ಹೊಂಗುತ್ತಗೆ** (ನಾ). ಹೊನ್ನಿನ ರೂಪದಲ್ಲಿ ಕೊಡುವ ಗುತ್ತಗೆ: ಶ್ರೀ ಚೆನ್ನಕೇಶವದೇವರ ಸ್ಥಾನಿಕ ನಾಗನಂಬಿಯರ ಮಕ್ಕಳು . . . ಮುಖ್ಯವಾದ ಸಮಸ್ಥನಿಬಂಧಿಕಾಱರಿಗೆ ಹೊಂಗುತ್ತಗೆಯಾಗಿ ನೆರ್ರೆವುರುಗಳ ಮರ್ಯ್ಯಾದೆಯಲು ಕವ್ಳುನ್ತೊಂಗಳೆ, ಪಣನ್ನೊಂದಱಿ ಮುಯ್ಯಾರ್ದೆಯು ತೆಱುತ ಬಹರು (ಎಕ. XV, ಅರಸೀ. ೨೧೦-೩; 1244). [ಹೊಂ (< ಪೊನ್) + ಗುತ್ತಗೆ]

**ಹೊಂಗುಬ್ಬಿ, ಹೊನ್ನುಗುಬ್ಬಿ** (ನಾ). ೧. ಬಂಗಾರದ ಗುಬ್ಬಿಯಾಕಾರದ ಅಲಂಕಾರಸಾಧನ: ಹೊಂಗುಬ್ಬಿಯ ನಿಕರ ಸೀಗುರಿಗಳಿಂದೆಸೆವ ಅಕಳಂಕ ಮುತ್ತಿನ ಚಾವಡಿ ಕಣ್ಗೆ ಕೌತುಕವ ಬೀಱಿತು ನೋಟಕರ (ಮೋಹತ. ३-೬೫). **ಹೊನ್ನುಗುಬ್ಬಿ**: ೨. ಬಾಲಕರು ಆಡುವ ಒಂದು ಬಗೆಯ ಆಟ: ಬಾಲಕ್ರೀಡೆಯಲಜಾಂಡವನಾಳುವ ಶ್ರೀಲಲನೆಯ ವಲ್ಲಭನು ತಾ ಓಲಾಡಿ . . . ಹೊನ್ನುಗುಬ್ಬಿಯಾಡುವವನು (ಪ್ರಸಭಾ. ೧೫-೧೩). [ಹೊಂ (< ಪೊನ್) + ಗುಬ್ಬಿ$_2$]

**ಹೊಂಗುರು** 'ಪೊಂಗುರು' ನೋ.

**ಹೊಂಗುಲಾಬಿ** (ನಾ). ಬಂಗಾರದ ಬಣ್ಣದ ಗುಲಾಬಿಯ ಹೂವು: ಅಲ್ಲಿ ಹೊಂಗುಲಾಬಿ ಹಂತಿ; ಇಲ್ಲಿ ಚಿನ್ನವೂ ಮಳೆ . . . ಹೊಸತೆ ಬಂತೊ ತಾಯ ಹರಕೆ ಹೂವ ರೂಪ ತಾಳಿ! (ಅನಿಕೇ. ೨೦-೧೦). [ಹೊಂ (< ಪೊನ್) + ಗುಲಾಬಿ]

**ಹೊಂಗೆ, ಹೊಂಗು$_3$** (ನಾ). ೧. ಒಂದು ಬಗೆಯ ಮರ; ತಮಾಲವೃಕ್ಷ; ಹುಲಿಗಿಲು: ನೀರುವರಿಯ ಹೊಂಗೆಯ ವತ್ತಿನ ಹೊಳೆಯ ದಡದ ಕೆಂಗಳ XX ಸಲೂ ನಟ್ಟ ವಾಮನಮುದ್ರೆಯ ಕಲ್ಲು ೧ (ಎಕ. VIII, ತೀರ್ಥಹ. ೧೯೦-೩೧; 1407); ಹುಲುವೆ ಸುಜ್ಜಲು ಹೊಂಗೆ ತಾರೆ ತವಸಿ ಕಗ್ಗಲಿ . . . ಬಿಲುವರ ಮೊಳಗಿನ ಮರಗಳಲ್ಲಿಹವು (ಚಂಪ್ರಸಾಂ. ೬-೮೫); ಹೊಂಗೆ ನೇಱಿಲು ಹೆಬ್ಬಿದಿರುಗಳು ಕಾರಾಚ ಕಗ್ಗಲಿ ಕಂಚಿವಾಳದ ಮರ ಸೂರಮಾರ್ಗವ ತಡೆದಿಹವು (ಕಂನವಿ. ೧೮-೩೭); ಹೊಂಗೆಹೂವ ತೊಂಗಲಲ್ಲಿ ಭೃಂಗದ ಸಂಗೀತಕೇಲಿ ಮತ್ತೆ ಕೇಳಬರುತಿದೆ (ಗಂ. ೧೧೭-೫). ೨. ಹೊಂಗೆಯ ಮರಗಳಿರುವ ಭೂಮಿ: ಶ್ರೀಮತು ರಾಜಗುರು ವಾಮರಾಸಿದೇವರು ಮೋರಿಂಗೆಱೆಯ ಬೋವರ್ಸನ ಬಾವಿಗೆ ಯಲೆಯ ಮತ್ತರು ೪ ಹೊಂಗೆ ೪ ಕೆಂಗಾಡು ೪ ಅನ್ತು ಮತ್ತರು ೧೨ ಸ [ಮ] ನಿವೆಲ್ಲಮ (ಸೌಇಇ. IX-i, ೧೫೧-೪; 1082). **ಹೊಂಗು$_3$**: ३. ಹುಲಿಗಿಲು ಮರದ ಕಾಯಿ; ಹೊಂಗೆಬೀಜ; IP ಇದರಿಂದ ಎಣ್ಣೆ ತೆಗೆಯುತ್ತಾರೆ: ಬಿಸಿಲಿಗೆ ಹಾಕದ ಹೊಂಗಿನಿಂದ ಎಣ್ಣೆ ಸಮನಾಗಿ ಬಂದೀತೆ? (ಮರಮ. ೨೬).

[ದೇ. ‖ ತಮಿ. ಪುಙ್ಕ, ಪುಙ್ಕು, ಪೂನ್ತಿ; ಮಲ. ಪುಙ್ಙು; ತುಳು. ಪುಂಗು]

**ಹೊಂಗೆಜ್ಜೆ** 'ಪೊಂಗೆಜ್ಜೆ' ನೋ.

**ಹೊಂಗೆತಾಳು** (ನಾ). ಹೊಂಗೆಯ ಮರದ ಬುಡ: ಅಲ್ಲಿಂದಂ ಬಡಗ ನಡದು ಹೊಂಗೆತಾಳಲ್ಲಿ ಮೂಡಮುಖದ ಲಿಂಗಮುದ್ರೆಯ ಕಲ್ಲು ಅಲ್ಲಿಂದಂ ಪಡುವಲಾಗಿ ಕೊತ್ತಲೆ ಗೋಣಿತಾಳಲ್ಲಿ ಮೂಡಮುಖವಾದ ಲಿಂಗಮುದ್ರೆಯ ಕಲ್ಲು (ಎಕ. IV(R), ಕೊಳ್ಳೇಗಾ. ೭-೩೭; 1512). [ಹೊಂಗೆ + ತಾಳು$_2$ (< ತಾಳ್$_2$)]

**ಹೊಂಗೆತೊಕ್ಕು** (ನಾ). ಹೊಂಗೆಯ ಮರದ ತೊಗಟೆ: ಗಂಟುಭಾರಂಗಿ, ಹಿಪ್ಪಲಿ, ಹೊಂಗೆತೊಕ್ಕು, ಹಿಪ್ಪಲೀಮೂಲ, ದೇವದಾರು ಇವನು ಚೂರ್ಣಿಸಿ ಎಳ್ಳ ಕಷಾಯದಲ್ಲಿ ಹಾಕಿ ಕೊಡಿಸಲು ರಕ್ತಗುಲ್ಮಹರ (ವೈದ್ಯಸಾ. I, ३೦೯).

[ಹೊಂಗೆ + ತೊಕ್ಕು$_2$]

**ಹೊಂಗೆಬೀಜ** (ನಾ). ಹೊಂಗೆಮರದ ಬೀಜ,– ಬಿತ್ತ: ಗಂಟುಭಾರಂಗಿ . . . ಹೊಂಗೆಬೀಜ . . . ಬಿದುರು, ಇವಂ ಸಮತೂಕ ಹಾಕಿ ಕಷಾಯ ಕಾಯಿಸಿಕೊಟ್ಟಲ್ಲಿ ಶೀತಜ್ವರ, ವಿಷಮಜ್ವರ, ದೋಷಜ್ವರವೂ ಸಹ ಮಾಣ್ಬುಂ (ಸಕವೈ. ೬೮).

[ಹೊಂಗೆ + ಬೀಜ]

**ಹೊಂಗೆಯೆಣ್ಣೆ** (ನಾ). ಹೊಂಗೆಬೀಜದಿಂದ ತೆಗೆದ ಎಣ್ಣೆ,– ತೈಲ: ಹೊಂಗೆಯೆಣ್ಣೆಯನ್ನು ದೀಪ ಉರಿಸುವುದಕ್ಕೆ ಬಳಸುತ್ತಾರೆ (ರೂಢಿ).

[ಹೊಂಗೆ + ಎಣ್ಣೆ]

**ಹೊಂಗೆರೆ** (ನಾ). ಚಿನ್ನದ ಬಣ್ಣದ ಗೆರೆ; ಹೊಂಬಣ್ಣದ ರೇಖೆ: ಕೆಂಗಿಡಿ ಬಣ್ಣದ ಹೊಂಗೆರೆಮಿಂಚಿಗೆ ಆಸ್ಥಾನದ ಹಾಸ್ಯದ ಹುರುಪಿಲ್ಲ (ಪಾಂಚಜ. ३೬-೧೭).

[ಹೊಂ (< ಪೊನ್) + ಗೆರೆ (< ಗೆಱೆ)]

**ಹೊಂಗೆಲಸ** 'ಪೊಂಗೆಲಸ' ನೋ.

**ಹೊಂಗೇತಕಿ** (ನಾ). ಚಿನ್ನದ ಬಣ್ಣದ ಕೇದಗೆ; ಹೊಂಬಬಣ್ಣದ ತಾಳೆ: ಹಾಲೆ ಹೊಂಗೇತಕಿ ವನಸಂಪಿಗೆ ಹಿಂತಾಲ . . . ಬನ್ನಿಗಳ್ಮೇಲಕಡರಿ ಮುಸುಕಿಹುವು (ಕಂನವಿ. ೧೮-३೬). [ಹೊಂ (< ಪೊನ್) + ಕೇತಕಿ]

**ಹೊಂಗೇದಗೆ** 'ಪೊಂಗೇದಗೆ' ನೋ.

**ಹೊಂಗೇರು** (ಕ್ರಿ). ಉತ್ಸಾಹವು ಏರು; ಸಂತೋಷವು ಹೆಚ್ಚಾಗು: ಭೃಂಗಗಳು ಹೊಂಗೇರಿ ಸಂಗೀತ ಸುರಿಯುವುವು, ಕೋಗಿಲೆಯು ಕರೆಯುವುದು (ಕರುಶ್ರಾ. ३೦-೨३).

[ಹೊಂಗು$_2$ (< ಪೊಂಗು$_2$) + ಏರು$_1$ (< ಏಱ್$_1$)]

**ಹೊಂಗೇಸರ** (ನಾ). ಚಿನ್ನದ ಬಣ್ಣದ ಕೇಸರ; ಹೊಂಬಣ್ಣದ ಪರಾಗ: ಮೇಲೆ ಕಂಗೊಳಿಪ ಹೊಂಗೇಸರದ ಕಾಂತಿಯಿಂದೆಱಗುವಸಿತಾಳಿಯ ಮರೀಚಿಯಿಂದ ಹೊಳೆಹೊಳೆವ ಕೋಕನದ ಪಂಕ್ತಿಗಳ ಬಣ್ಣಂ (ಜೈಮಿಭಾ. ೧೫-೧೦).

[ಹೊಂ (< ಪೊನ್) + ಕೇಸರ]

**ಹೊಂಗೈಪಿಡಿ** (ನಾ). ಚಿನ್ನದ ಕಟ್ಟುಳ್ಳ ಕನ್ನಡಿ: ಸಿಂಗರಿಸದೆ ಸಿರಿಮುಡಿಗಟ್ಟದೆ ಮೊಗದಿಂಗಳ ತೊಳೆದೊಪ್ಪವಿಡದೆ ಹೊಂಗೈಪಿಡಿಗಲ್ಲದೊಳು ಚಂದಳಿರ್ಗಯ್ಯ ನಂಗನೆಯಿಟ್ಟಣಿಸಿದಳು (ಶ್ರೀಪಾಲ. ೨-३೦).

[ಹೊಂ (< ಪೊನ್) + ಕೈಪಿಡಿ$_2$ (< ಕೆಯ್ಪಿಡಿ)]

**ಹೊಂಗೊಂಬು** (ನಾ). ಚಿನ್ನದ ಅಲಂಕಾರ ಮಾಡಿರುವ ಕೊಂಬು; ಬಂಗಾರದ ಅಣಸು ಹಾಕಿರುವ ಕೋಡು: ಕುದುರೆ ತೇರಾನೆ ಕಾಲಾಳ್, ಹೊಂಗೊಂಬೆಸೆವ ಗೋವು ಗೂಳಿಗಳ್ . . . ಸಮನಿಸಿತು ತುಂಬುವೋಲ್ ಕೋಸಲ ರಾಜಧಾನಿ (ಶ್ರೀರಾಮಾ. ೫೮-೧೨೦). [ಹೊಂ (< ಪೊನ್) + ಕೊಂಬು$_1$]

**ಹೊಂಗೊಡ** 'ಪೊಂಗೊಡ' ನೋ.

**ಹೊಂಗೊಡಗಂಬಿ** (ನಾ). ಚಿನ್ನದ ಕೊಡವನ್ನುಳ್ಳ (ಬಿದಿರಿನ) ಅಡ್ಡೆ: ಕುಂಭಿನಿ ಬೆಸಲಾದುದೆಂಬಂತೆ ಹೊಂಗೊಡಗಂಬಿಯೊಳ್ ತೈಲಹರಿದ್ರ ತುಂಬಿದ ಪರಿಯಣದಬಲೆಯರ್ಪಾಡುತ ಮುಂಬರಿದರು ಬೀದಿಯೊಳಗೆ (ಮೋಹತ. ೧೭-३೯).

[ಹೊಂಗೊಡ (< ಪೊಂಗೊಡ) + ಕಂಬಿ$_1$]

**ಹೊಂಗೊಪ್ಪರಿಗೆ** (ನಾ). ಚಿನ್ನದ ಕಡಾಯಿ; ಬಂಗಾರದ ಕಟಾಹ: ಕರವತಿಗೆ ಹೊಂಗಳಸ ಹೊಂಗೊಪ್ಪರಿಗೆ ದೀಪಸ್ತಂಭ ಹೇಮದ ಸರಪಣಿಯ . . ಚರರು ತಂದೊಟ್ಟಿದರು (ಕುವ್ಯಾಗ. ४-೧५); ಬೆರಸಿದರು ಪನ್ನೀರ ಹೊಂಗೊಪ್ಪರಿಗೆಯಲಿ ಮೊಗಮೊಗೆದು ನಾರಿಯರೆಱೆದರಂಗನೆಗಮಳಚಂದನಗಂಧಪರಿಮಳದಿ ತರುಣಿಯರು ಲೇಪಿಸಿದರರಸಿಗೆ (ನಳಚ. ३-೫४). [ಹೊಂ (< ಪೊನ್) + ಕೊಪ್ಪರಿಗೆ (< ಕೊಪ್ಪರಿಕೆ)]

**ಹೊಂಗೊಳವೆ** (ನಾ). ಚಿನ್ನದ ಕೊಳವೆ; ಬಂಗಾರದ ನಳಿಕೆ: ರತಿಪತಿ ಪಿಡಿದ ಪೇಟಲ ಹೊಂಗೊಳವೆಯೋ ಅತಿರಂಜಿಸುವೆಳ್ಳ ನನೆಯೋ ಪಿತವಳಿಗಾದರೆ ಮುಗುಳ ಸಂಪಗೆಯೋ ಸತಿಯ ನಾಸಿಕದ ಚಲ್ವಿಕೆಯೋ (ನೇಮಿಸಂ. ೨३-೨೦೦).

[ಹೊಂ (< ಪೊನ್) + ಕೊಳವೆ (< ಕೊೞವಿ)]

**ಹೊಂಗೋಂಟೆ** 'ಪೊಂಗೋಂಟೆ' ನೋ.

**ಹೊಂಗೋಟೆ** 'ಪೊಂಗೋಂಟೆ' ನೋ.

**ಹೊಂಗೋಡೆ** (ನಾ). ಚಿನ್ನದ ಗೋಡೆ: ಚಕ್ರನಾಥನ ಬೆನ್ನ ಹೊಂಗೋಡೆಯೊಳು ಧರ್ಮಚಕ್ರನಾಥನ ಪುರುಜಿನನ ವಿಕ್ರಾಂತರೂಪೆಸೆದುದು (ಭರಚ. ೧೨-೨೪).

[ಹೊಂ (< ಪೊನ್) + ಗೋಡೆ]

**ಹೊಂಗೋಪುರ** (ನಾ). ಚಿನ್ನದ ಗೋಪುರ: ಹೊಂಗೋಪುರ ಶಿಖರಕೆ ಪೋಪ ನಡೆ (ಮೋಹತ. ೨೮-೨೮). [ಹೊಂ (< ಪೊನ್) + ಗೋಪುರ]

**ಹೊಂಗೋರಟೆ** (ನಾ). ಹೊಂಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಗೋರಂಟೆ: "ಕುರಂಟಕಃ– ಹೊಂಗೋರಟೆ" (೬ಷಧಿ. ३೬).

[ಹೊಂ (< ಪೊನ್) + ಗೋರಟೆ (< ಗೋರಂಟೆ)]

**ಹೊಂಚಿಕೆ** (ನಾ). ೧. ಅಡಗಿಕೊಂಡಿರುವಿಕೆ; ಗುಪ್ತವಾಗಿರುವಿಕೆ: (*). ೨. ಹಂಚಿಕೆ; ಸಂಚು; ಉಪಾಯ: ಯುದ್ಧ ಮೊದಲಾದ ಒಂದು ತಿಂಗಳೊಳಗೆ, ವಿಷ್ಣುವರ್ಧನಪ್ರಭುವಿನ ಸೈನ್ಯಶಿಬಿರಗಳಲ್ಲಿ ಸಾಂಕ್ರಾಮಿಕ ಉಪಟಳ ಒಂದು ಕಾಣಿಸಿಕೊಂಡಿತು. ಶತ್ರುಗಳ ಹೊಂಚಿಕೆಯಿಂದಲೆ ಹೀಗಾಯಿತು (ಶಾಂತಲಾ. ೪೦೦). ೩. ಹೊಂದಿಸುವಿಕೆ; ಒದಗಿಸುವಿಕೆ; ಅಣಿಗೊಳಿಸುವಿಕೆ: ಆ ಮಹಾಸನ್ನಿಧಾನವು ಈ ಹೊಂಚಿಕೆಯ ಬವಣೆಯಿಂದ ಅರಮನೆಯೊಳಗೆ ಎತ್ತೆತ್ತಲೂ ತೊಳಲುತ್ತ . . . ಕೆಲವರಿಗೆ ಶ್ರೀಚಾಮುಣ್ಡೇಶ್ವರಿಯ ಕರಾಳಾವತಾರವಾಗಿದ್ದಾರೆ (ಚಟ್ಟಿಅ. ೪೯).
[ಹೊಂಚು$_1$ (< ಪೊಂಚು$_1$) + - ಇಕೆ]

**ಹೊಂಚು$_1$** 'ಪೊಂಚು$_1$' ನೋ.

**ಹೊಂಚು$_2$** 'ಪೊಂಚು$_2$' ನೋ.

**ಹೊಂಚುಕಾವಲು** (ನಾ). ಅಡಗಿಕೊಂಡಿದ್ದು ಮಾಡುವ ಕಾವಲು; ರಹಸ್ಯವಾಗಿ ಮಾಡುವ ರಕ್ಷಣೆ: ಆ ದಿವಸದ ಹೊಂಚುಕಾವಲಿನಲ್ಲಿ ಶತ್ರುಗಳನ್ನು ಕೊಂದನು (ಮಲೆನಾ. ೬೬). [ಹೊಂಚು$_1$ (< ಪೊಂಚು$_1$) + ಕಾವಲು$_1$ (< ಕಾವಲ್$_1$)]

**ಹೊಂಚುಗಾರ** (ನಾ). ೧. ಸಮಯವನ್ನು ಕಾಯುವವನು,– ಎದುರು ನೋಡುವವನು: (*). ೨. ಬೇಹುಗಾರ; ಗೂಢಚಾರ: (*).
[ಹೊಂಚು$_1$ (< ಪೊಂಚು$_1$) + - ಗಾರ (< - ಕಾಱ)]

**ಹೊಂಜಬಳ** (ನಾ). ಚಿನ್ನದ ಈಟಿ,– ಸಬಳ: ಕಿಂಜಲ್ಕದ ಹುರಿಮಳಲಿಂದೆಸಳ್ಗಳ ಹೊಂಜಬಳದ ಫಣಿತತಿಯಿಂ ಕಂಜಾಸ್ತ್ರನ ವನದುರ್ಗದಂತಾಯ್ತುಪರಂಜಿಗೇದಗೆಯ ಬಲ್ಸೇಲಿ (ಶ್ರೀಪಾಲ. ೧-೬೫). [ಹೊಂ (< ಪೊನ್) + ಸಬಳ]

**ಹೊಂಜಾವಡಿ** (ನಾ). ಚಿನ್ನದ ಚಾವಡಿ; ಬಂಗಾರದ ಕಟ್ಟೆ,– ಜಗಲಿ: ಎಡಬಲದ ಚಿತ್ರ ಹೊಂಜಾವಡಿಗಳೊಳಗೆ ಎಡೆವಿಡದೆ ಕಿಕ್ಕಿರಿದು ಕುಳುತಿರ್ಪ ಭೈರವರ ಗಡಣ ತೆರತರದಿ ನಿಖಿಳಾಯುಧಮನಾಂತು ಕಾಯ್ದಿಹರು (ನವಮೋ. ೨೪-೩೭).
[ಹೊಂ (< ಪೊನ್) + ಚಾವಡಿ]

**ಹೊಂಜಾಳಿಗೆ** 'ಪೊಂಜಾಳಿಗೆ' ನೋ.

**ಹೊಂಜುರಿಗೆ** 'ಪೊಂಜುರಿಗೆ' ನೋ.

**ಹೊಂಜೆಳೆ** 'ಪೊಂಜೆಳೆ' ನೋ.

**ಹೊಂಜೆಳೆಗ** (ನಾ). ಚಿನ್ನದ ಬೆತ್ತವನ್ನು ಹಿಡಿದವನು: ನಗರಿಯ ರಾಜಬೀದಿಯೊಳು . . . ಪರಾಕವಧಾನ ಜತನವೆಂದೆಂಬ ಹೊಂಜೆಳೆಗರ ನೋಡುತೆಯಿದ್ದನು (ಭರಚ. ೭೨-೮೬). [ಹೊಂಜೆಳೆ (< ಪೊಂಜೆಳೆ) + - ಗ$_2$]

**ಹೊಂಜೆಳೆವಿಡಿ** (ಕ್ರಿ). ಚಿನ್ನದ ಸೆಳೆಯನ್ನು ಹಿಡಿ; ಬಂಗಾರದ ಬೆತ್ತವನ್ನು ಹಿಡಿದುಕೊಳ್ಳು: ಇಳೆಯಾಣ್ಮನ ಮನದಿಂಗಿತವಱಿತು ಹೊಂಜೆಳೆವಿಡಿದಬ್ಜನೇತ್ರೆಯರು ಎಳವೆಣ್ಣುಗಳ ಚಿತ್ರ್ಯಸೆಂದು ಸತಿಯರ ನಿಳಯಕೆ ಬೀಳ್ಕೊಡಿಸಿದರು (ಮೋಹತ. ೨೨-೧೫).
[ಹೊಂಜೆಳೆ (< ಪೊಂಜೆಳೆ) + ಪಿಡಿ$_1$]

**ಹೊಂಟು** 'ಪೊಱಮಡು' ಪರಾ.

**ಹೊಂಡ** (ನಾ) ೧. ಹಳ್ಳ; ತಗ್ಗು; ಕುಣಿ: ಈ ಮನುಷ್ಯನು ಕುಂಬಾರನಾಗಿದ್ದುದರಿಂದ ರತ್ನವನ್ನು ಅಡಗಿಸಿಡಲು ತಕ್ಕ ಸ್ಥಳವು ಆವೆಮಣ್ಣಿನ ಹೊಂಡವೇ ಆಗಿರಬೇಕಲ್ಲವೇ? (ಮಣಸ. ೧೬); ಒಂದು ಭದ್ರವಾದ ತಾವನ್ನು ಅರಸಿ, ಹೊಂಡ ತೋಡಿ, ಗೂಡು ಸಿದ್ಧಪಡಿಸಿದುವು (ಜಾನಗೀ. ೬೧). ೨. ಹಳ್ಳದ ಪ್ರದೇಶ ,– ಭೂಮಿ: ಆ ಮುಂದಿನ ಗುಡ್ಡೆ ಕಾಣುತ್ತದಲ್ಲಾ ಅಲ್ಲಿಯವರೆಗಿನ ಭೂಮಿ ಸೀಮೆಯೆಲ್ಲಾ ನನ್ನ ಪೂರ್ವಜರು ಬಿಟ್ಟುಹೋಗಿದ್ದಾರೆ. ಒಟ್ಟಾರೆ ಕೆಳಗಿನ ಹೊಂಡವೆಲ್ಲಾ ನನ್ನದೇ (ಗಂಗಾವ. ೫). ೩. ಚಿಕ್ಕ ಕೊಳ; ಸಣ್ಣ ಕೆರೆ: ಶರಣರ ಸದಾಚರಣೆಗೆ ನದಿ ಕೂಪಂಗಳಿಲ್ಲವು ಹಳ್ಳ ಹೊಂಡಂಗಳಿಲ್ಲವು ಕೆಱೆಯೊಱತೆಗಳಿಲ್ಲವು (ಸಿದ್ಧೇವ. ಕ. ೩೭೩-೧೨೦೪); ದೈವಜ್ಞನಾ ವರುಣ ಕಂಡನಾಗಳೆ ಕಣ್ಣ ನೀರಿನ ಹೊಂಡವನು ಹಸರಿಸುತ ನಿನಗುದ್ದಂಡವೈರಿಯು ಪುಟ್ಟಿ ಬೆಳೆದಪನತ್ತಲೊಂದೆಡೆಯ ಎಂದೊಡೆ (ಸಾಳ್ವಭಾ. ೨೧-೩೭).

**ಹೊಂಡತೊಣಕು** = (ಮೀನು ಹಿಡಿಯುವುದಕ್ಕಾಗಿ) ಹೊಂಡದಲ್ಲಿರುವ ನೀರನ್ನು ಹೊರಕ್ಕೆ ತುಳುಕಿಸು,– ಚೆಲ್ಲು: ತಂದೆಮಕ್ಕಳಿಬ್ಬರೂ 'ಹೊಂಡ ತೊಣಕಲು (ಹೊಂಡದಲ್ಲಿರುವ ನೀರನ್ನು ತುಳುಕಿ, ಬತ್ತಿಸಿ, ಮೀನು ಹಿಡಿಯುವುದು ಎಂದರ್ಥ) ಪ್ರಾರಂಭಿಸಿದರು (ಕಾನೂರು. ೨೨೮). [?]

**ಹೊಂಡೆಮರ** (ನಾ). ಒಂದು ಬಗೆಯ ಮರ : ಚಿಂಡೇ, ಹೊಂಡೇಮರ (ಮೈಔಗಿ. ೨೦-೩೫೮). [ಹೊಂಡೆ$_0$ + ಮರ$_1$]

**ಹೊಂತ$_1$**, ಹೊಂತು (ನಾ). ೧. ಬಲ; ಪರಾಕ್ರಮ. ೨. ಚಾತುರ್ಯ; ಜಾಣ್ಮೆ: ಅವರ ಪ್ರಶ್ನೆಯು ವಿಚಿತ್ರವಾಗಿತ್ತು. ಅಲ್ಲದೆ ಕೇಳುವ ಅವರ ಹೊಂತ ತಿಳಿಯದೆ ನಾನು ಉತ್ತರಿಸಿದರೆ ಹೆಡ್ಡು ಬಿದ್ದೇನೆಂದು . . . ಇನ್ನೊಂದು ಪ್ರಶ್ನೆ ಸೇರಿಸಿದ (ಚಟ್ಟಜೀ. ೧೬೬). **ಹೊಂತು:** ೩. ಮರ್ಮ; ರಹಸ್ಯ: ಅಂತೆ ಚಿಂತಿಸುತ ಕುಳಿತಿರಲು ಆಂತರ್ಯದಲಿ ಅವರ ಮನಸಿಗೆ ಸಮಾಧಾನವನು ತಹದೊಂದು ಹೊಂತು ಮೊಗದೋರಿ ಬೆಳೆಯಿತು (ನವರಾ II, ೩೨-೧೪); ಆ ದಿನ ಆ ಬ್ರಾಹ್ಮಣನಿಗೆ ಮಾತ್ರ ನನ್ನ ಹೊಂತು ತಿಳಿಯಲಿಲ್ಲ (ಚಟ್ಟಜೀ. ೪೦). ೪. ಮೋಸ; ವಂಚನೆ: 'ಹೊಂತಕಾಱ', 'ಹೊಂತಕಾಜಿ' ಪರಾ. [ದೇ. II ತುಳು. ಕೊಂತ, ಹೊಂತ]

**ಹೊಂತ$_2$** 'ಪಂತ$_1$' ನೋ.

**ಹೊಂತ$_3$** 'ಪಂತ$_2$' ನೋ.

**ಹೊಂತಕ** (ನಾ). ಮೋಸಗಾರ; ವಂಚಕ; ಕುತಂತ್ರಿ: ಸಂತತ ನಿಸ್ಪೃಹರಾಗಿಹೆವೂ ಹರಿಯಂತಲೆ ಅನುಸರಿಸಿದೆವು ಹೊಂತಕರಲ್ಲಾನಂತಾದ್ರೀಶನ ಚಿಂತಿಪರೇ ಸರಿಯಲ್ಲ ಹೊರ್ತು (ಕರ್ನಾಕ. ೩೨೯). [ಹೊಂತ$_1$ + - ಕ$_3$]

**ಹೊಂತಕಾತಿ** (ನಾ). ಚತುರೆ; ಚದುರೆ: ವ್ಯಂತರಕಾಮಿನಿಯಿಂದ ಕೀರ್ತಿಸಿಕೊಂಡ ಹೊಂತಕಾಂತಿಯ ನಿಟ್ಟಸರಸ (ಭರಚ. ೮-೮೧). [ಹೊಂತ$_1$ + - ಕಾತಿ$_5$]

**ಹೊಂತಕಾರ$_1$** 'ಹೊಂತಕಾಱ' ನೋ.

**ಹೊಂತಕಾರ$_2$** 'ಪಂತಗಾಱ' ನೋ.

**ಹೊಂತಕಾರಿ$_1$** 'ಹೊಂತಕಾಜಿ$_1$' ನೋ.

**ಹೊಂತಕಾರಿ$_2$** 'ಹೊಂತಕಾಜಿ$_2$' ನೋ.

**ಹೊಂತಕಾಱ**, ಹೊಂತಕಾರ$_1$, ಹೊಂತಗಾರ (ನಾ). ೧. ಬಲಶಾಲಿ; ಪರಾಕ್ರಮಿ; ಸಮರ್ಥ: ವಿಷ್ಣು ಬಾಲಿಯಂ ಕೊಂದ ಪಾಪದೆ ಕೃಷ್ಣನಾದಾಗಳಾ ಹೊಂತಕಾಱನ ಜರಕನಂಬಿನಿಂ ಮಡಿಯನೇ (ವೀಶೈಪು. ೪-೫-೨೯). ೨. ವಂಚಕ; ಮೋಸಗಾರ; ಕಪಟಿ: ಸಂತತಂ ನಿಜಜಂಗಮಪ್ರಾಣಾಂತರಂಗಪ್ರಾಣ ಭಾಷೆಯ ಹೊಂತಕಾಱನು ಬಸವನಿರ್ದಡೆ ಬಾರೆವಾಯೆಡೆಗೆ (ಬಸಪು. ೩೭-೧೯); ಬಾಲಿ ಸುಗ್ರೀವರೊಂದು ಕಡೆಯಾ ಹೊಂತಕಾಱಂ ಪಂಚಮೇಢ್ರನೆಂದೆಂಬಸುರಸಂತಾನದೊಡೆಯನೊಂದೆಶೆಯ ಹಾಣಾಹಾಣಿಯಿಂ ತಳ್ತು ಕಾದುತಿರ್ದರು (ವಿಶೈಪು. ೩-೮-೧೯). ೩. ಚತುರ; ಕುಶಲಮತಿ: ಜಗದಲಿ ಹವಣನಱಿಯದ ಹೊಂತಕಾಱನ ನಿಜವ ಕೇಳು (ಕೃಷ್ಣಾಕಾ. ೬-೫೦). **ಹೊಂತಕಾರ$_1$:** ೧. ದಂತವಕ್ತ್ರಾದಿಯ ಕೊಂದ ಬಲವಂತನೊ ಹೊಂತಕಾರನೊ ಜಗದಂತರಿಯಾಮನೊ (ತೀರ್ಥಮ. ೨೩-೧). **ಹೊಂತಗಾರ:** ೧. ತೌಡಪ್ಪನ ಮನೆಯೊಳಗೆ ನಾಲ್ಕಾರು ಮಂದಿ ಹೊಂತಗಾರರಿದ್ದರು (ದೇವಮ. ೭೫). [ಹೊಂತ$_1$ + - ಕಾಱ]

**ಹೊಂತಕಾಜಿ$_1$**, ಹೊಂತಕಾರಿ$_1$ (ನಾ). ೧. ಚಾತುರ್ಯವುಳ್ಳವಳು; ಚತುರೆ: ಇಂಥಾ ಹೆಣ್ಣಿನ ನಾನೆಲ್ಲೂ ಕಾಣೆನೊ ಹೊಂತಕಾಜಿ ಕಾಣೆರೋ ಸಂತತ ಸುರರಿಗೆ ಅಮೃತವನುಣಿಸಿದ ಪಂಕ್ತಿಯೊಳಗೆ ಪರವಂಚನೆ ಮಾಡಿದ (ಪುರಂದ. ೧-೧೩೦ ಪಲ್ಲವಿ); ಲಕ್ಷಣಾಪೂರಿಯರು ಬಲು ಹೊಂತಕಾಜಿಯರು ಕಾಮವ್ಯವಹಾರಿಯರು . . . ರಾಜಿಸುವ ಚಾರುಯೌವನದ ವಾರಾಂಗನೆಯರತಿಸೊಬಗ ವರ್ಣಿಸುವದರಿದು (ಪ್ರೌಢರಾ. ೬-೧೬) ೨. ಪ್ರತಿಸ್ಪರ್ಧಿ: ನಾರಿ ಪತಿಧರ್ಮದಾ ಭೇರಿ ಮಾರನ ಹೊಂತಕಾಜಿ ನಡೆತಂದು ಭೂವರನ ಮಂಚವ ಸಾರೆ (ಪ್ರೌಢರಾ. ೩-೧೩). ೩. (ಪ್ರಾಯದಿಂದ) ಮದಿಸಿದವಳು; ಸೊಕ್ಕಿದವಳು: ಎಳೆವರೆಯದಿ ಮೆಱೆವಾ ಹೊಂತಕಾಜಿಯನೆಳಸಿ ನೋಡುವ ಕಣ್ಗಳಿಗೆ ಬಳಲಿಕೆ ಇಲ್ಲ (ಚಂಪ್ರಸಾಂ. ೯-೧೦೭); ಹೊನ್ನ ಹೂವಿನ ಹೊಂತಕಾಜಿಯ ಬಂದಿಯ ಬಿನ್ನಾಣವತೆಯ ತಿಸರದ ಚೆನ್ನೆಯ ರಂಗರಂಗಾಯೆಂಬ ಮುದ್ದು ಮೋಹನ್ನೆಯ ನೆರೆವುದಿನ್ನೆಂತೊ (ಶತಸಾಂ. ೨೭-೩೮). **ಹೊಂತಕಾರಿ$_1$:** ೨. ತಪೋನಿಧಿಯಾದ ವಿಶ್ವಾಮಿತ್ರನಂ ನಾನಾಪ್ರಕಾರವಾಗಿ ನಾಟ್ಯವನ್ನಾಡಿಸಿ . . .

ಇಂದ್ರನ ಸಭೆಗೆ ಹೊಂದಿಸಿದ ಹೊಂತಕಾರಿ ಒಬ್ಬಳು (ಸೌಗಂಧಿ. ೫೦೯-೪).
[ಹೊಂತಕಾಱ + - ಇ$_2$]

**ಹೊಂತಕಾಱಿ$_2$, ಪೊಂತಕಾರಿ, ಪೊಂತಕಾಱಿ, ಹೊಂತಕಾರಿ$_2$** (ನಾ). ೧. ಬಲಶಾಲಿ; ವೀರ; ಪರಾಕ್ರಮಿ: ಬೆರಸಿದವು ಬಲವೆರಡು ಹೊಕ್ಕವು ಕರಿ ಘಟೆಗಳೇಱಿದವು ಕುದುರೆಗಳುರವಣಿಸಿದವು ತೇರ ತಿವಿದರು ಹೊಂತಕಾಱಿಗಳು (ಕುವ್ಯಾಕ. ೧೦-೯); ತವಕಿಸಿದುದಾ ದಂತಿ ದಂತಿಯ ಜವಗತಿಗೆ ಜವಗುಂದಿದರು ಬಲುಭುವನ ಕೋಶದ ಹೊರೆಯ ಹೊಱಿಗೆಯ ಹೊಂತಕಾಱಿಗಳು (ತೊರರಾ. ೬-೩೨-೧೫); ಸಂತತಿ ಸಹಿತ ರಾವಣಬಲವ ತಱಿದ ಹೊಂತಕಾಱಿ ಹನುಮಂತ ನಮ್ಮ ಗುರು ಕಾಣಿರೊ (ಪುರಂದ. ೩-೮೬-೧). ೨. ಪ್ರತಿಸ್ಪರ್ಧಿಯಾದವನು: ಮಾರನ ಮದವನಂಡಲೆವ ಚೆಲ್ವಿನ ಹೊಂತಕಾಱಿ ನೋಡೆಂದು ಮುದ್ದಿಪಳು (ಭರಚ. ೧೫-೫೪). ೩. ವಂಚಕ; ಠಕ್ಕ: ಹೋದನದಕೋ ಹೊಮ್ಮ್ಯಗ ಹೊಂತಕಾಱಿ ನಮ್ಮಾ ದಿನದ ಗಾಯಗಳಿಗೆ ವೇಧೆಯಿಕ್ಕಿದ ಗಾಡಿಕಾಱ ಸಿಕ್ಕದೆ ಬಿಟ್ಟುಹೋದನದಕೊ ಹುಸಿಯಲ್ಲ (ನಿಜಸಾಂ. ೨-೧೦೦). Δ **ಪೊಂತಕಾರಿ:** ೧. ಪೋಗಲೀಯದೆ ಬಲವ ಪೊಂತಕಾರಿಗಳು ಮೊಗಗೆಡಿಸಿ (ಕರಿಕ. ೧೭-೯). Δ **ಪೊಂತಕಾಱಿ:** ೧. ಆ ಪಂದಿಗಳೊಳ್ ಕೆಲಂಬ ಪಂದಿಗಳ್ ಪೊಂತಕಾಱಿಗಳ ನಿಡುಸರಲ್ಗಳ್ ತಾಗೆ . . . ಮಡಿದವು (ಹಾಲಾಸ್ಯ. ೩-೧೩-೩೬ ವ). **ಹೊಂತಕಾರಿ$_2$:** ೧. ರಥಿಕರು ಶರಚಮತ್ಕಾರಿಗಳು ಪದಚರ ಹೊಂತಕಾರಿಗಳು . . . ತರತರದಿ ನಿಂದಿಹರು (ಕೋಗಯ. ೩-೪೬); ಹೊಂತಕಾರಿಗಳಿವರು ಕಲಿಯಾಗಿ ಕಾಳಗಕೆ ನಿಂತು ಹಿರಿಯುಬ್ಬಣದಿ ಪರಿಘದಿಂ ಸುರಗಿಯಿಂ ಕುಂತದಿಂ ಕಠಾರಿಯಿಂ ಮುಸಲದಿಂ ಪರಶು ತೋಮರದಿಂದ ತಿವಿದಾಡ್ವರು (ತುರಂಗ. ೧೮-೮). ೩. ಅಲ್ಲಿಂದ ಪೋಲೀಸರಿಗೆ ಹೊಂತಕಾರಿಗಳನ್ನು ಹುಡುಕುವ ಕೆಲಸವಾಯಿತು (ಗೂಂಡಾರ. ೩೧). ೪. (ಪ್ರಾಯದಿಂದ) ಮದಿಸಿದವನು; ಸೊಕ್ಕಿದವನು: ಹೊಸ ಹರೆಯದ ಹೊಂತಕಾರಿ ವ್ಯೆಸಿರಿಯಿಂದ ಅಸಹಾಯ ಶೂರನಂಗಜನು . . . ಬಂದನು ರಾಜನಾಸ್ಥಾನಕ್ಕೆ (ಸೌಂದಕಾ. ೧-೭೬). [ಹೊಂತಕಾಱ + - ಇ$_3$]

**ಹೊಂತಕಾಱಿತನ** (ನಾ). ಚಾತುರ್ಯ; ಕೌಶಲ: ರಣದ ಮೇಲಭಿಲಾಷೆಯುಳ್ಳಡೆ ಕೆಣಕಿ ನೋಡಿದಡಱಿಯಬಹುದುಬ್ಬಣ ಶರಾನಸ ಸರಳ ಹೊಱಿಗೆಯ ಹೊಂತಕಾಱಿತನ (ತೊರರಾ. ೪-೪-೩೭). [ಹೊಂತಕಾಱಿ$_2$ + - ತನ]

**ಹೊಂತಗಾರ** 'ಹೊಂತಕಾಱ' ನೋ.

**ಹೊಂತಗಾರಿಕೆ, ಹೊಂತುಗಾರಿಕೆ** (ನಾ). ಸಂಚು; ವಂಚನೆ; ಮೋಸಗಾರಿಕೆ: ಪರ್ಶಿಯ, ತುರ್ಕಿಸ್ಥಾನದಂಥ ಸ್ಥಳಗಳಲ್ಲಿ ಅರಸುತನ ಪ್ರಾಪ್ತಿಯು ಕೇವಲ ಕಪಟ, ಹೊಂತಗಾರಿಕೆಗಳಿಂದ ಲಭಿಸುತಿತ್ತು (ಬಾಲಪ್ರ. II, ೧೧೩೬); ಅವನಿಗೆ ಗೌಡನ ಹೊಂತಗಾರಿಕೆ ತಿಳಿಯಿತು (ಮುಗಿಯು. ೨೪೨). **ಹೊಂತುಗಾರಿಕೆ:** ಏನೋ ಹೊಂತುಗಾರಿಕೆ ಇರಬೇಕು (ಕುಡಿಕೂ. ೨೭೭). [ಹೊಂತಗಾರ (< ಹೊಂತಕಾಱ) + - ಇಕೆ]

**ಹೊಂತತನ** (ನಾ). = ಹೊಂತಕಾಱಿತನ: ಇಂತು ಬಲುಬಗೆಯಿಂದ ತಮ್ಮಯ ಪಂತಪೌರುಷ ಮೆರೆಯ ಮೂದಲೆ ಹೊಂತತನ ಕಡುಜಾಣ ಜಾಗ್ರತೆ ಚಾಪದಗ್ಗಳಿಕೆ ನಿಂತು ಕಾದುವ ಚಲವ ಸಕಲದಿಗಂತದರಸರು ಮೆಚ್ಚೆ ಖಳದನುಜಾಂತಕರು ಕಾದಿದರು (ಕೋಗಯ. ೧೦-೫೦). [ಹೊಂತ$_1$ + - ತನ]

**ಹೊಂತಲೆ** (ನಾ). ಸೇನೆಯ ಅಗ್ರಭಾಗ; ಮುಂಚೂಣಿ: ಕಡಗುವ ಜವಚೂಣಿಯ ಮನೆಯೊಳು ಭಗಪೂಷರು . . . ಬಳಿಕುಳಿದ ಪಡೆಸಹಿತಬುಜೋದರ ಹೊಂತಲೆಯೊಳು ಮುಂತೊಗ್ಗೊಡೆಯದೆ ನೆರೆದು (ವೀರೇಚ. ೨-೩೨); ಅವರಿರ್ವರುಂ ತಂತಮ್ಮ ಹಸ್ತ್ಯಶ್ವರಥಪದಾತಿಬಲಂಬೆರಸು ಹೊಂತಲೆಯೊಳಾಂತಿರ್ದರ್ (ಮಹಾನೇ. ೧೨-೬೦ ವ).
[? + ತಲೆ$_1$]

**ಹೊಂತು** 'ಹೊಂತ' ನೋ.

**ಹೊಂತುಗಾರಿಕೆ** 'ಹೊಂತಗಾರಿಕೆ' ನೋ.

**ಹೊಂದಂಡಿಗೆ** 'ಪೊಂದಂಡಿಗೆ' ನೋ.

**ಹೊಂದಂಬಿಗೆ** 'ಹೊಂದಂಬುಗೆ' ನೋ.

**ಹೊಂದಂಬುಗೆ, ಹೊಂದಂಬಿಗೆ** (ನಾ). ಚಿನ್ನದ ತಂಬಿಗೆ; ಬಂಗಾರದ ಸಣ್ಣ ಕೊಡ: ತೋರ ಹೊಂದಂಬು[ಪಾಠಾಂ. ಬಿ]ಗೆಯಲಿ ತುಂಬಿ ತರಿಸಿ ಪನ್ನೀರಿಂದ ಕಾಲ್ಗಳ ತೊಳೆದು ಮಾರಕುಮಾರ ಮಂತ್ರೀಶಸುತೆಗೆ ರನ್ನದಾರತಿಗಳನೆತ್ತಿದಳು (ಮೋಹತ. ೩೧-೩೫). **ಹೊಂದಂಬಿಗೆ:** ಹೊಂದಂಬಿಗೆಯುದಕವ ತಂದು ಚರಣಾರವಿಂದವ ಪಡಿಗದೆ ತೊಳೆದು ಗಂಧಕಸ್ತುರಿಯಿಂದೆ ತಿಗುರಿಕ್ಕಿ (ಮೋಹತ. ೨೦-೩).
[ಹೊಂ (< ಪೊನ್) + ತಂಬುಗೆ]

**ಹೊಂದಗಡು** 'ಪೊಂದಗಡು' ನೋ.

**ಹೊಂದಟ್ಟೆ** 'ಪೊಂದಟ್ಟೆ' ನೋ.

**ಹೊಂದವಗ** (ನಾ). ಚಿನ್ನದ ಆಸನ; ಸುವರ್ಣಪೀಠ: ಬಂದ ನಾರದ ಮುನೀಶ್ವರಗುಪಚರಗೈದು ಹೊಂದವಗದೊಳು ಕುಳ್ಳಿರಿಸಿ ಗಂಧಕಸ್ತುರಿಯ ಲೇಪವನಿಕ್ಕಿ ದೇವಕಿನಂದನ ಮಾತನಾಡಿಸಿದ (ಮೋಹತ. ೧೩-೩೩); "ಅಗಲವಾದ ಚಿನ್ನದ ಜಗಲಿ" (ಮೋಹತ. ಅಡಿಟ). [ಹೊಂ (< ಪೊನ್) + ತವಗ (< ತವಂಗ)]

**ಹೊಂದಳಿಗೆ** 'ಪೊಂದಳಿಗೆ' ನೋ.

**ಹೊಂದಾಣಿಕೆ** (ನಾ). ಹೊಂದಿಕೆ; ಸಾಮರಸ್ಯ: ಅಜಂತಾ ಮತ್ತು ರಜಪೂತ ಕಲಾವಿದರು ತಮ್ಮ ಕಲೆ, ಜೀವನ, ಧರ್ಮಗಳಿಗೆ ಸಮರಸವಾದ ಹೊಂದಾಣಿಕೆಯಿದ್ದ ಆದರ್ಶವಾತಾವರಣದಲ್ಲಿ ದಿವ್ಯವಾದ ಕಲೆಯನ್ನು ನಿರ್ಮಿಸಿದರು (ಭಾರದ. ೫೩೪); ಹೂವು ಹಣ್ಣೂ ಗಿಡದ ಎಡೆಬಿಡದ ಕಾಣಿಕೆ. ಸಾವು-ನೋವೂ ನಮ್ಮ ದಿನದ ಹೊಂದಾಣಿಕೆ (ನಲಮು. ೬೮-೧೪); ಹೊರಗಿನಿಂದ ಪಡೆದುಕೊಂಡ ಜ್ಞಾನ ಲೇಖಕನ ರಕ್ತದಲ್ಲಿ ಬೆರೆಯದೆ, ಕೃತಿ ಎರಡು ಭಾಷೆಗಳ ಹೊಂದಾಣಿಕೆಯಾಗುತ್ತದೆ (ಹೊಸಕ್ಷಿ. ೨೮೦).
[ಹೊಂದು$_1$ (< ಪೊರ್ದು) + - ಅಣೆ$_4$ + - ಇಕೆ]

**ಹೊಂದಾಲಿ** (ನಾ). ಚಿನ್ನದ ಚೊಂಬು; ಬಂಗಾರದ ಥಾಲಿ: ಹೊಂದ್ದಾಲಿಯ ಮಾಳ್ಕೆಯೊಳು . . . ಎಸೆದುದು ಚಂದ್ರಂ (ಜಯಕಾ. ೧೪-೬).
[ಹೊಂ (< ಪೊನ್) + ತಾಲಿ$_2$]

**ಹೊಂದಾವರೆ** 'ಪೊಂದಾಮರೆ' ನೋ.

**ಹೊಂದಾಳ** 'ಪೊಂದಾಳ' ನೋ.

**ಹೊಂದಾಳೆ** (ನಾ). ಚಿನ್ನದ ಬಣ್ಣದ ತಾಳೆ; ಹೊಂಗೇದಗೆ: ತಾಳ ಹೊಂದಾಳೆಯಕ್ಕೆಯು ಕಕ್ಕೆ ಪಚ್ಚಾರಿ ಮೇಲಾದ ಬಿದಿರು . . . ಕಿಕ್ಕಿರಿಪ ಕಾನನದೊಳು (ನವಮೋ. ೮-೯). [ಹೊಂ (< ಪೊನ್) + ತಾಳೆ$_1$ (< ತಾೞ್)]

**ಹೊಂದಿಕೆ** 'ಪೊಂದಿಕೆ' ನೋ.

**ಹೊಂದಿಕೆಗೆಡು** (ಕ್ರಿ). ಹೊಂದಾಣಿಕೆಯನ್ನು ಕಳೆದುಕೊಳ್ಳು; ಸಾಮರಸ್ಯವಿಲ್ಲದಾಗು: ಮುಹಮ್ಮದೀಯರು . . . ಬಂದಾಗ್ಗೆ ಹೊಂದುಗೂಡಿ ಒಂದಾಗಿದ್ದರೂ ಹಿಂದುಗಡೆ ಹೊಂದಿಕೆಗೆಟ್ಟರು (ವಿಚಾಮಂ. ೨೫).
[ಹೊಂದಿಕೆ (< ಪೊಂದಿಕೆ ) + ಕೆಡು$_1$]

**ಹೊಂದಿಗೆ** 'ಪೊರ್ದುಗೆ' ನೋ.

**ಹೊಂದಿಸು** 'ಪೊರ್ದಿಸು' ನೋ.

**ಹೊಂದು$_1$** 'ಪೊರ್ದು' ನೋ.

**ಹೊಂದು$_2$** 'ಪೊಂದು$_2$' ನೋ.

**ಹೊಂದು$_3$** 'ಪೊಂದು$_3$' ನೋ.

**ಹೊಂದು$_4$** 'ಪೊಂದು$_4$' ನೋ.

**ಹೊಂದುಗೂಡಿಕೆ** (ನಾ). ಹೊಂದಿಕೊಂಡು ಒಟ್ಟಾಗಿರುವಿಕೆ; ಸಾಮರಸ್ಯ; ಮೇಳ: ವಿದ್ಯಾರಣ್ಯರೂ . . . ಶಿವಾಜಿಮಹಾರಾಜರೂ ಧರ್ಮಸಂಸ್ಥಾಪನೆ ಪರಿಪಾಲನೆಗಳನ್ನು ಹೊಂದುಗೂಡಿಕೆಯ ಬಾಳುವೆಗೆ ಹಾದಿಯನ್ನು ಮಾಡಿಯೇ ಕೊನೆಗಾಣಿಸಿದರು (ವಿಚಾಮಂ. ೨೫); ಹೊಂದುಗೂಡಿಕೆ ಇರದ ಜನಕೆ ನೊಂದೆ (ನಾದಲೀ. ೬೬-೧೬). [ಹೊಂದುಗೂಡು + - ಇಕೆ]

**ಹೊಂದುಗೂಡಿಸು** (ಕ್ರಿ). ಹೊಂದಿಕೆಯನ್ನುಂಟುಮಾಡು; ಸಾಮರಸ್ಯವನ್ನುಂಟು ಮಾಡು; ಒಂದುಗೂಡಿಸು: ಬೇರೆಬೇರೆಯಾದವರನ್ನು ಹೊಂದುಗೂಡಿಸಿ ಒಂದು ಮಾಡುವನು (ವಿಚಾಮಂ. ೨೫). [ಹೊಂದುಗೂಡು + - ಇಸು$_3$]

**ಹೊಂದುಗೂಡು** (ಕ್ರಿ). ಹೊಂದಾಣಿಕೆಯನ್ನು ಪಡೆ; ಸಾಮರಸ್ಯವನ್ನು ಹೊಂದು; ಒಂದುಗೂಡು: ಒಳ್ಳೆಯ ಮನಸ್ಸಿನಿಂದ ಹೊಂದುಗೂಡಿರುವುದೆ ಧರ್ಮ (ವಿಚಾಮಂ. ೨೪); ಹೊಸಕಾಲದ ಪರಿಸ್ಥಿತಿಗೆ ಹೊಂದುಗೂಡಿರುವಂತೆ ಆ ಭಾಷೆಯನ್ನು ಮಾರ್ಪಡಿಸಬೇಕಾಗುವುದು (ತಿರುಗು. ೮ ಪೀಠಿಕೆ).

[ಹೊಂದು$_2$ (< ಪೊಂದು$_2$) + ಕೂಡು$_1$]

**ಹೊಂದುಗೆ** 'ಪೊರ್ದುಗೆ' ನೋ.

**ಹೊಂದುಗೆಡು** (ಕ್ರಿ). ಸಾವು ಇಲ್ಲವಾಗು: ಹುಟ್ಟು ಹೊಂದುಗೆಟ್ಟುದೆ ನಿರ್ವಾಣ (ಆದವ. ೫೦-೧೪೯). [ಹೊಂದು$_4$ (< ಪೊಂದು$_4$) + ಕೆಡು$_1$]

**ಹೊಂದುಡಿಗೆ** 'ಪೊಂದುಡಿಗೆ' ನೋ.

**ಹೊಂದೂಂಬು** (ನಾ). (ಕೆರೆ, ಕಟ್ಟೆಗಳಲ್ಲಿ ನೀರನ್ನು ಬಿಡಲು ಮಾಡಿರುವ) ಸುವರ್ಣದ ಕಂಡಿ,– ದ್ವಾರ; ಚಿನ್ನದ ತೂಬು: ಲೀಲೆಗಾರ್ತಿಯರಚ್ಯುತ ನಾಜ್ಞೆಯಿಂದೆ ಪೆರ್ಗಾಲ ಹೊಂದೂಂಬನು ನೆಗಹೆ ಕೀಲಣೆಗೆಯ್ದು ಸುವರ್ಣ ವೇತಂಡಶುಂಡಾಲದೆ ಸುರಿದುದು ಸಲಿಲ (ಮೋಹತ. ೧೪-೩೫).

[ಹೊಂ (< ಪೊನ್ ) + ತೂಂಬು]

**ಹೊಂದೆನೆ** 'ಪೊಂದೆನೆ' ನೋ.

**ಹೊಂದೆರೆ** 'ಪೊಂದೆರೆ$_2$' ನೋ.

**ಹೊಂದೇರು** 'ಪೊಂದೇರು' ನೋ.

**ಹೊಂದೊಟ್ಟಿಲು** 'ಪೊಂದೊಟ್ಟಿಲು' ನೋ.

**ಹೊಂದೊಡರು** 'ಪೊಂದೊಡರ್' ನೋ.

**ಹೊಂದೊಡವು** 'ಪೊಂದೊಡವು' ನೋ.

**ಹೊಂದೊಡಿಗೆ** 'ಪೊಂದೊಡಿಗೆ' ನೋ.

**ಹೊಂದೋಣಿ** (ನಾ). ಚಿನ್ನದ ದೋಣಿ; ಬಂಗಾರದ ನಾವೆ: ಅಡಕಿ ತುಂಬುವ ಹೇಮಘಟದುಗ್ಗಡದ ಹೊಂದೋಣಿಗಳ ಹಂತಿಯ ಸಡಗರದ ಸೌರಂಭವೆಸೆದುದು ಸುತ್ತುವಳಯದಲಿ (ತೊರರಾ. ೧-೧೩-೧೦). [ಹೊನ್ (< ಪೊನ್) + ದೋಣಿ$_3$]

**ಹೊಂದೋರಣ** (ನಾ). ಚಿನ್ನದ ತೋರಣ; ಬಂಗಾರದ ತೋರಣ: ಇತ್ತ ಹೊಂದೋರಣದ ತೊಲೆಯಲಿ ಅತ್ತಲಿತ್ತಲು ಹನುಮ ತಿರುಗಲು ಮುತ್ತಿತಮರಾರಿಗಳು ಶಿಖಿಯನು ಶಲಭ ಕವಿವಂತೆ (ಕೌಶಿರಾ. ೧೧-೨೭).

[ಹೊನ್ (< ಪೊನ್) + ತೋರಣ]

**ಹೊಂಪಿಡಿ** (ಕ್ರಿ). ಚೆಲುವು ತುಂಬಿರು; ಸೊಗಸಾಗಿರು: ಬಡನಡುವಿನ ಬಾವನ್ನ ಗಂಪಿನ ಹೊಂಪಿಡಿದ ಹೊಂಬಳ್ಳಿಯೊಳಿಸೆವ ಕಡುಬಿಣ್ಪಿನ ಜಘನದ ಕಾಮಿನಿಗಿಂದು ಪಡಿಗಟ್ಟಿ ಪೇಳುವೆನೇನ (ಜೀವಂಸಾಂ. ೧೦-೨೫). [ಹೊಂಪು (< ಪೊಂಪು) + ಇಡಿ$_2$]

**ಹೊಂಪು** 'ಪೊಂಪು' ನೋ.

**ಹೊಂಪುಣಿ** 'ಪೊಂಪುೞಿ' ನೋ.

**ಹೊಂಪುಳಿ** 'ಪೊಂಪುೞಿ' ನೋ.

**ಹೊಂಪುಳಿಯೋಗು** 'ಪೊಂಪುೞಿವೋಗು' ನೋ.

**ಹೊಂಪುಳಿವೋಗು** 'ಪೊಂಪುೞಿವೋಗು' ನೋ.

**ಹೊಂಪುಳಿಹೋಗು** 'ಪೊಂಪುೞಿವೋಗು' ನೋ.

**ಹೊಂಬಟ್ಟು** 'ಪೊಂಬಟ್ಟು' ನೋ.

**ಹೊಂಬಟ್ಟಲು** 'ಪೊಂಬಟ್ಟಲ್' ನೋ.

**ಹೊಂಬಟ್ಟೆ** 'ಪೊಂಬಟ್ಟೆ' ನೋ.

**ಹೊಂಬಣ್ಣ** 'ಪೊಂಬಣ್ಣ' ನೋ.

**ಹೊಂಬರಹ** 'ಪೊಂಬರಹ' ನೋ.

**ಹೊಂಬರಿಯಣ** 'ಪೊಂಬರಿಯಾಣ' ನೋ.

**ಹೊಂಬರಿವಾಣ** 'ಪೊಂಬರಿಯಾಣ' ನೋ.

**ಹೊಂಬಸಿ** (ನಾ). ಆಗತಾನೇ ಹಸಿಯಾದುದು: ಈ ಪ್ರಕಾರ ಬೇಸಿಗೆಯಲ್ಲಿ ಮೂರು ಸಾಲು ಮಳೆಯಾದ ಮೇಲೆ ಸಮಯವನ್ನರಿತು ಹೊಂಬಸಿ ಒಳಗೆ ಮೂರು ಸಾಲು ನಾಲ್ಕು ಸಾಲು ಹರಗಿದ ಮೇಲೆ . . . ಗೋದಿಯನ್ನು ಬಿತ್ತಬೇಕು (ಕೃಷಿಪ್ರ. ೮೨).

[< ಹೊಚ್ಚ$_7$ + ಪಸಿ$_3$]

**ಹೊಂಬಳದಿ** (ನಾ). ಚಿನ್ನದ ಬಣ್ಣದ ಹಳದಿ; ಹೊಂಬಣ್ಣ: ಚಂದ್ರೋದಯದ ಛಂದದಿಂ ಶಾಂತಿಯಿಂದ್ಯೆತಂದನಾಂಜನೇಯಂ, ಪವನಸೂನು, ಅದೊ ಜಾಂಬವಾನಂತರಂ ಹೊಂಬಳದಿ ಹೊಳಹಿನಂಗದ, ವಜ್ರಸಮತನುಬಲಿಷ್ಠತೆಯ, ವನಲತಾಶೋಭಿತಶಿರತ್ರನಂ (ಶ್ರೀರಾಮಾ. ೩೫೭-೪೭೯). [ಹೊಂ (< ಪೊನ್) + ಪಳದಿ$_1$]

**ಹೊಂಬಳಯಿಗೆ** 'ಪೊಂಬಳಯಿಗೆ' ನೋ.

**ಹೊಂಬಳಿ$_1$** (ಕ್ರಿ). ಸುವರ್ಣದ ಲೇಪವನ್ನು ಮಾಡು; ಬಂಗಾರದ ಮೆರುಗನ್ನು ಕೊಡು: ಉಲಿವ ಗೆಜ್ಜೆಯ ಚೆಲ್ಲಣದ ಹೊಂಬಳಿದ ಹರಿಗೆಯ ಹೊಳೆವ ಕಡಿತಲೆಗಳ ವಿಲಾಸದೊಳಂದು ಹೊಕ್ಕುದು ತುಳುವ ಪಡೆ ಕಡುಗಿ (ಕುವ್ಯಾಭೀ. ೪-೩೩).

[ಹೊಂ (< ಪೊನ್) + ಬಳಿ$_1$ (< ಬೞ್$_1$)]

**ಹೊಂಬಳಿ$_2$** (ನಾ). ಚಿನ್ನದ ಕೆಲಸ ಮಾಡಿರುವ ಒಂದು ಬಗೆಯ ಬಟ್ಟೆ; ಜರತಾರಿಯ ನಕಾಸೆಯುಳ್ಳ ವಸ್ತ್ರ: ಬಳಿಯ ಚೌರಿಯ ಹೊರೆಯ ಚಿತ್ರಾವಳಿಯ ವಿಧಾನದ ಹಾಸುಗಳ ಹೊಂಬಳಿಯ ತೆರೆಸೀರೆಗಳ . . . ಹೊಂಗೆಲಸದೊಳು ಝುರಿಗೆಗಳ ಸುವರ್ಣಾವಳಿಯ ದಿಂಡುಗಳೊಟ್ಟಿದವು ಬಂಡಿಗಳ ಜವ ಜಡಿಯೆ (ಕುವ್ಯಾಗ. ೪-೧೪).

[ಹೊಂ (< ಪೊನ್) + ಪಳಿ$_4$ (< ಪೞ್$_5$)]

**ಹೊಂಬಳಿ$_3$** (ನಾ). ಹೊನ್ನಿನ ರೂಪದಲ್ಲಿ ಕೊಡುವ ತೆರಿಗೆ ,– ಸುಂಕ: ಸಮಸ್ತ ಗವುಂಡುಗಳುಂ ಭುಜಗೇಶ್ವರದೇವರಿಂಗೆ ನೀರು ಕೂಲಿ ನಿಚಂಡಿ ಹೊಂಬಳಿ . . . ಯಾ ದೇವರಯೊಕ್ಕಲು ಏಸುವುಳ್ಳದಕ್ಕುವುಂ ಸರ್ವಮಾನ್ಯವಾಗಿ ಬಿಟ್ಟ ದತ್ತಿ (ಎಕ. IV (R). ಚಾಮರಾ. ೪-೧೧; 1201); ಶ್ರೀರಾಮನಾಥದೇವರ ಶ್ರೀಕಾರ್ಯ್ಯಕ್ಕೆ ಆ ನರಸಿಂಹ ಮಂಗಲವನು ಸಿದ್ಧಾಯ ಹೊದಕೆ ಹೊಂಬಳಿ . . . ಎಲ್ಲ ಕಿಱುಕುಳವನು ಬಿಟ್ಟು . . . ಧಾರೆಯನೆಱದು (ಎಕ. IV(R). ಚಾಮರಾ. ೨೯೫-೩೦; 1337).

[ಹೊಂ (< ಪೊನ್) + ಬಳಿ$_2$ (< ಬೞ್$_3$)]

**ಹೊಂಬಳೆ** (ನಾ). ೧. ಚಿನ್ನದ ಬಳೆ,– ಕಂಕಣ: ಹಸ್ತಕಟಕ ಹರಳುಂಗುರ ಹೊಂಬಳೆ ವಿಸ್ತಾರ ನವರತ್ನಹಾರ (ಶಾಂತೀಚ. ೩-೭೮); ಕಾಲುಂಗುರ ಪಿಲ್ಲಿ . . . ಹೊಂಬಳೆಗಳ ಬಾಲವೆಣ್ಣುಗಳ್ಕೆದಿದರು (ಕಂಸವಿ. ೨೦-೧೭). ೨. (ಆನೆಯ ಕಾಲಿಗೆ ತೊಡಿಸುವ) ಚಿನ್ನದ ಬಳೆಯಂತಹ ಒಂದು ಆಭರಣ: ಮೇಲೇಱುವ ಬಗೆ ಮಿಗೆ ತಿವುರಿನ ಹೊಂಬಳೆಗಳ ಭಾಳದ ಚಂದ್ರದ ಚಿತ್ರದ ಮೊಗರಂಬದ ಕೈದಾಳಿನ ಕಾಲ್ದಾಪಿಂ ಹಡೆಯಂ ಹಣ್ಣಿದ ಕರಿಘಟೆ ನೆರೆದುವು ಬಲದೊಳಗೆ (ವೀರೇಚ. ೨-೨೮).

[ಹೊಂ (< ಪೊನ್) + ಬಳೆ$_2$]

**ಹೊಂಬಳ್ಳಿ** 'ಪೊಂಬಳ್ಳಿ' ನೋ.

**ಹೊಂಬಾಗೆ** (ನಾ). ಒಂದು ಬಗೆಯ ಬಾಗೆಮರ,– ಶಿರೀಷವೃಕ್ಷ: ಬಾಗೆ, ಕಲ್ಬಾಗೆ, ಹೊಂಬಾಗೆ, ಶಿರೀಷ (ಮೈಟಿಗಿ. ೪-೬೪). 'ಕಲ್ಬಾಗೆ' ಪರಾ.

[ಹೊಂ (< ಪೊನ್) + ಬಾಗೆ$_1$]

**ಹೊಂಬಾಳು** (ನಾ). ಚಿನ್ನದ ಕತ್ತಿ; ಸುವರ್ಣದ ಖಡ್ಗ: ಹೊಂಬಾಳಿಂದೊಡಲಿಂಬು ಗೊಡಲು ಬಲುಸಂಭ್ರಮುವಕ್ಕುದೆ ಲಕುಮಿಾಶ (ಪ್ರಸಕೀ. ೭೫-೧).

[ಹೊಂ (< ಪೊನ್) + ಬಾಳು$_3$ (< ಬಾಳ್$_3$)]

**ಹೊಂಬಾಳೆ$_1$** 'ಪೊಂಬಾಳೆ$_1$' ನೋ.

**ಹೊಂಬಾಳೆ$_2$** 'ಪೊಂಬಾಟ್' ನೋ.

**ಹೊಂಬಾಳೆ$_3$** (ನಾ). ಒಂದು ಬಗೆಯ ಸಸ್ಯ (?): "ಕಬರಿ ೨ ಹೊಂಬಾಳೆ" (ಅಕಾನಿ. ೫-೧); "ಜೀವಂತೀ - ಸಿಹಿಪಾಲೆ, ಮೆದೆ, ಹೊಂಬಾಳೆ, ಅಣಿಕೆ, ಶ್ರೇಷ್ಠಶಾಕ" (ಓಷಧಿ. ೬೩). [?]

**ಹೊಂಬಾಳೆಹುಲ್ಲು** (ನಾ). ಒಂದು ಬಗೆಯ ಹುಲ್ಲು: ಗಂಡು ಅಕ್ಕಬುಹುಲ್ಲು, ತಪ್ಪರೆಹುಲ್ಲು, ಹೊಂಬಾಳೆಹುಲ್ಲು, ಸಣ್ಣಕ್ಕಿಹುಲ್ಲು (ಮೈಟಿಗಿ. ೩೦-೫೮೫).

[ಹೊಂಬಾಳೆ$_3$ + ಹುಲ್ಲು (< ಪುಲ್)]

**ಹೊಂಬಾಟ್** 'ಪೊಂಬಾಟ್' ನೋ.

**ಹೊಂಬಿತ್ತಾಳೆ** (ನಾ). ಚಿನ್ನದ ಗಿಲೀಟು ಮಾಡಿದ ಹಿತ್ತಾಳೆ; ಬಂಗಾರದ ಲೇಪ ಮಾಡಿದ ಹಿತ್ತಾಳೆ: ತೊತ್ತಿನ ಕೊರಳಲ್ಲಿ ಹೊಂಬಿತ್ತಾಳೆಯ ಸಿಂಗಾರವ ಮಾಡಿದಂತೆ (ಬಸವ. ೬೩೭); ಹೊಂಬಿತ್ತಾಳೆಯ ಕೆಲಸದಂತೆ [ಪಾಠಾಂ. ಹೊನ್ನು ಕೆಂಚೆಂದಡೆ, ಹಿತ್ತಾಳೆ ಕೆಂಚೆಂಬ] ಸಿಂಹದ ನಡು ಸಣ್ಣದೆಂದಡೆ ನಾಯ ನಡು ಸಣ್ಣದೆಂಬ ಪಂಚಮಹಾಪಾತಕರ ನುಡಿಯ ಕೇಳಲಾಗದು (ಚನ್ನವ. ಕ. ೩೯೯-೮೪೨).

[ಹೊಂ (< ಪೊನ್) + ಪಿತ್ತಾಳೆ (< ಪಿತ್ತಳೆ)]

**ಹೊಂಬಿಸಿಲು** 'ಪೊಂಬಿಸಿಲ್' ನೋ.

**ಹೊಂಬೀಸಣಿಗೆ** (ನಾ). ಬಂಗಾರದ ಬೀಸಣಿಗೆ: ಗಿಣಿನುಡಿಯಬಲೆಯ ಕೂಟದಿ ಮುತ್ತಿನ ಮಣಿಯಂತೆ ಬೆಮರಾಂತಿರುವ ಹಣೆಯ ನಿವಾರಿಸಬೇಕೆಂದು ಹೊಂಬೀಸಣಿಗೆಯ ಹಿಡಿದೊರ್ವಳಿಹಳು (ಮೋಹತ. ೪-೧೧). [ಹೊಂ (< ಪೊನ್) + ಬೀಸಣಿಗೆ]

**ಹೊಂಬು$_1$** 'ಪರಪ್ಪು$_2$' ನೋ.

**ಹೊಂಬುಗುರಿ** 'ಪೊಂಬೊಗರಿ' ನೋ.

**ಹೊಂಬುಟ** 'ಪೊಂಬುಟ್ಟಿ' ನೋ.

**ಹೊಂಬುಟ್ಟ** 'ಪೊಂಬುಟ್ಟಿ' ನೋ.

**ಹೊಂಬುತ್ತಳಿ** 'ಪೊಂಬುತ್ತಳಿ' ನೋ.

**ಹೊಂಬುರ್ಚ** 'ಪೊಂಬುಟ್ಟಿ' ನೋ.

**ಹೊಂಬುಳಿ** 'ಹೊಂಬಳ್ಳಿ$_4$' ನೋ.

**ಹೊಂಬುಟ್ಟಿ** 'ಪೊಂಬುಟ್ಟಿ' ನೋ.

**ಹೊಂಬೆಟ್ಟ** 'ಪೊಂಬೆಟ್ಟ' ನೋ.

**ಹೊಂಬೆಸ** 'ಪೊಂಬೆಸ' ನೋ.

**ಹೊಂಬೆಸರು** 'ಪೊಂಬೆಸಱ್' ನೋ.

**ಹೊಂಬೆಸಱ್** 'ಪೊಂಬೆಸಱ್' ನೋ.

**ಹೊಂಬೆಸಱು** 'ಪೊಂಬೆಸಱ್' ನೋ.

**ಹೊಂಬೆಸೆ** 'ಪೊಂಬೆಸ' ನೋ.

**ಹೊಂಬೆಳಕು** 'ಪೊಂಬೆಳಗು' ನೋ.

**ಹೊಂಬೆಳಗು** 'ಪೊಂಬೆಳಗು' ನೋ.

**ಹೊಂಬೆಳೆ** (ನಾ). ಚಿನ್ನದಂತಹ ಬೆಳೆ; ಉತ್ತಮವಾದ ಫಸಲು: ದ್ರುಪದನ ಹೊಂಬೆಳೆಯ ತನಿಹರುಷ ಹೊಡೆದೋಟಿದುದು ಪುಳಕದಲಿ (ಕುವ್ಯಾಆ. ೧೭-೭೪); ಬಣಗು ತೂರೆಯಡೆ ಹಿಂಡಿ ಹರಿಯದೆ ಬಾರದೇ ಹೊಸ ಹೊಂಬೆಳೆ? (ನಡಬಂ. ೮೩-೧೪); ಎಲ್ಲ ಬಗೆಯೊಡವೆಗಳಿಗೊಡಲ ನೋಡುವವಿಲ್ಲಿ ಚೆಲ್ಲಿರ್ಪ ಸವಿಯ ಹೊಂಬೆಳೆಯ ಹೊಲದಲ್ಲಿ (ಕಾಲೂರ. ೨೭-೧೭). [ಹೊಂ (< ಪೊನ್) + ಬೆಳೆ$_2$]

**ಹೊಂಬೊಂಬೆ** 'ಪೊಂಬೊಂಬೆ' ನೋ.

**ಹೊಂಬೊಗರಿ** 'ಪೊಂಬೊಗರಿ' ನೋ.

**ಹೊಂಬೊಗರು** 'ಪೊಂಬೊಗರ್' ನೋ.

**ಹೊಂಭರಣಿ** (ನಾ). ಚಿನ್ನದ ಭರಣಿ; ಬಂಗಾರದ ಕರಂಡಕ,– ಡಬ್ಬಿ: ತರಿಸಿ ಸಾದು ಜವಾಜಿಗಳ ಹೊಂಭರಣಿಯಲಿ ಮೊಗೆಮೊಗೆದು ಶಲ್ಯಗೆ ಸುರಿದು . . . ಹೊಸ ಮಡಿವರ್ಗದಲಿ ಮಿಗೆ ಮೆಟೆದು ರಣಸುಮ್ಮಾನದಲಿ ಹೊಗರೇಱಿದನು ಕರ್ಣ (ಕುವ್ಯಾಕ. ೨೧-೩). [ಹೊಂ (< ಪೊನ್) + ಭರಣಿ]

**ಹೊಂಭುಳ** (ನಾ). ಹೊನ್ನಹುಳು; ಮಿಣುಕುಹುಳು: ವಿರತಿಜ್ಞಾನಾನ್ವಿತರ ವೆರಸದಂಧಕನಾದೆ ತರಣಿಯೊಳು ಹೊಂಭುಳವು ಗರುವಿಸಿದ ತೆರದಿ (ಪ್ರಸಕೀ. ೫೭-೪).

[ಹೊಂ (< ಪೊನ್) + ಪುಳ (< ಪುೞು)]

**ಹೊಕು** (ನಾ). ಪ್ರವೇಶ: ಗುರುರಾಯವೊಡೆಯರು ಸಿಕುವಲಿ ತನಗೆ ಹೊಕು ಯಿಲ್ಲದೆ ಯಿಸರದೇವನಾಯಕನ ತೀರ[ಕೆ] ಬಂದುಪಜೀವಿಸಲಾಗಿ (ಕೀ. III, ೮-೧೨; 1530).

[< ಪೊಗು]

**ಹೊಕ್ಕ** 'ಪೊಗು' ಪರಾ.

**ಹೊಕ್ಕರಣಿ** 'ಪೊಕ್ಕರಣೆ' ನೋ.

**ಹೊಕ್ಕರಣೆ** 'ಪೊಕ್ಕರಣೆ' ನೋ.

**ಹೊಕ್ಕಳು** 'ಪೊಕ್ಕುೞ್' ನೋ.

**ಹೊಕ್ಕಳುಬಳ್ಳಿ** 'ಹೊಕ್ಕುಳುಬಳ್ಳಿ' ನೋ.

**ಹೊಕ್ಕು$_1$** 'ಪೊಗು' ಪರಾ.

**ಹೊಕ್ಕು$_2$** 'ಪೊಕ್ಕು$_2$' ನೋ.

**ಹೊಕ್ಕುನೂಲು** (ನಾ). ಮಗ್ಗದ ನೆಯ್ಗೆಯಲ್ಲಿ ಅಡ್ಡವಾಗಿ ಹಾಕುವ ಎಳೆ: ನೀಟವಾಗಿ ಸಮವಾಗಿರುವ ಹಾಸುನೂಲುಗಳು ಹೊಕ್ಕುನೂಲುಗಳಿಗೆ ಆಧಾರವಾಗಿರುವ ಹಾಗೆ ಸತ್ಪುರುಷರಿಗೆ ಸತ್ಪುರುಷರೇ ಆಧಾರವಾಗಿರುವರು (ಕೃವಾಉ. ೫೯).

[ಹೊಕ್ಕು$_2$ (< ಪೊಕ್ಕು$_2$) + ನೂಲು$_2$ (< ನೂಲ್$_2$)]

**ಹೊಕ್ಕುಬಳಕೆ** (ನಾ). (ಆಲಂ) ಗಾಢಪರಿಚಯ; ನಿಕಟವರ್ತಿತ್ವ: ಅಂದಿನ ಜನರಿಗೆ ಮಹಮ್ಮದೀಯ ಸಂಸ್ಕೃತಿಯ ಹೊಕ್ಕುಬಳಕೆ ಸಾಕಷ್ಟು ಆದುದರಿಂದ. ಅವರ 'ಷಾಯರ್‌ನಾಮಾ'ಗಳ ಅನುಕರಣ ಮಾಡಬೇಕೆಂಬ ಬುದ್ಧಿಯೂ ಉಂಟಾಗಿರಬಹುದು (ಕರ್ಣಾಜ. ೧೧೭). [ಹೊಕ್ಕು$_2$ (< ಪೊಕ್ಕು$_2$) + ಬಳಕೆ (< ಬೞಕೆ)]

**ಹೊಕ್ಕುಳ್** 'ಪೊಕ್ಕುೞ್' ನೋ.

**ಹೊಕ್ಕುಳ** 'ಪೊಕ್ಕುೞ್' ನೋ.

**ಹೊಕ್ಕುಳಿ** 'ಪೋರ್ಕುೞಿ' ನೋ.

**ಹೊಕ್ಕುಳಿಗೊಳ್** 'ಪೋರ್ಕುೞಿಗೊಳ್' ನೋ.

**ಹೊಕ್ಕುಳು** 'ಪೊಕ್ಕುೞ್' ನೋ.

**ಹೊಕ್ಕುಳುಕುಡಿ** (ನಾ). ಭ್ರೂಣ ಮತ್ತು ಗರ್ಭಾಶಯದಲ್ಲಿರುವ ಪೋಷಕಾಂಗಗಳೆರಡನ್ನೂ ಸಂಬಂಧಿಸುವ ನಾಳ ; ನಾಭಿನಾಳ: ಕರೀಕಾಗಕಣ್ಣು, ಗೂಬೆಕಣ್ಣು . . . ಚೊಚ್ಚಲುಮಗುವಿನ ಹೊಕ್ಕುಳುಕುಡಿ . . . ಇವನೆಲ್ಲ ಸಮಾನವಾಗಿ ತೂಗಿ ವಣಗಿಸಿ (ಕೌತುಬಂ. ೨೧-೨). [ಹೊಕ್ಕುಳು (< ಪೊಕ್ಕುೞ್) + ಕುಡಿ$_2$]

**ಹೊಕ್ಕುಳುಗಂಟೆ** (ನಾ). ಆನೆ, ಕುದುರೆ, ಎತ್ತು ಮುಂತಾದವುಗಳ ಹೊಟ್ಟೆಗೆ (ಹೊಕ್ಕಳಿನ ಭಾಗಕ್ಕೆ ಬರುವಂತೆ) ಕಟ್ಟುವ ಒಂದು ಬಗೆಯ ಗಂಟೆ: ಈ ಹಬ್ಬಕ್ಕಾಗಿಯೆ ಹೇಳಿ ಮಾಡಿಸಿದ ಬಾಸಿಂಗ ಹಣೆಯ ಮೇಲೆ ಮೆರೆಯುತ್ತಿದ್ದುವು. ಕರ್ಣಪತ್ರ, ಹೊಕ್ಕುಳುಗಂಟೆ ಕಾಲುಗಳಲ್ಲಿ ಗೆಜ್ಜೆಪಾಡಗಗಳು. ಮೈಮೇಲೆಲ್ಲ ಬಣ್ಣಬಣ್ಣದ ಹೂಮಾಲೆಯ ಹಸರ (ಬಳುಮ. ೧೭೮). 'ಪೊಕ್ಕುಳುಘಂಟೆ' ಪರಾ.

[ಹೊಕ್ಕುಳು (< ಪೊಕ್ಕುೞ್) + ಗಂಟೆ]

**ಹೊಕ್ಕುಳುಬಳ್ಳಿ, ಹೊಕ್ಕಳುಬಳ್ಳಿ** (ನಾ). = ಹೊಕ್ಕುಳುಕುಡಿ: (ಅನಂನಾ). ಹೊಕ್ಕಳುಬಳ್ಳಿ: ಮಕ್ಕಳು ಚೆನ್ನಾಗಿ ಅತ್ತು ಹೊಕ್ಕಳುಬಳ್ಳಿಯಲ್ಲಿ ನಾಡಿ ಹೊಡೆಯುವುದು ಪೂರಾ ನಿಂತುದನ್ನು ಕೈಸ್ಪರ್ಶದಿಂದ ಖಾತರಿ ಮಾಡಿಕೊಂಡು . . . ಕತ್ತರಿಸಬೇಕು (ಮನಮ. ೭೭). [ಹೊಕ್ಕುಳು (< ಪೊಕ್ಕುೞ್) + ಬಳ್ಳಿ]

**ಹೊಕ್ಕುಳುಶೂಲೆ** (ನಾ). ಒಂದು ಬಗೆಯ ಶೂಲೆ; ಹೊಕ್ಕಳಿನ ಭಾಗದಲ್ಲಿ ಬರುವ ನೋವು: ಖರ್ಜೂರ, ಹಿಪ್ಪಲಿ, ಇವ ಚೂರ್ಣವ ಮಾಡಿ ಸಕ್ಕರೆಯಲ್ಲಿ ಕೊಳ್ಳಲು ಹೊಕ್ಕುಳುಶೂಲೆ ಮಾಣ್ಗುಂ (ವಿವೈವಿ. ೧೭೭). [ಹೊಕ್ಕುಳು (< ಪೊಕ್ಕುೞ್) + ಶೂಲೆ]

**ಹೊಕ್ಕುೞ** 'ಪೊಕ್ಕುೞ್' ನೋ.

**ಹೊಕ್ಕುೞು** 'ಪೊಕ್ಕುೞ್' ನೋ.

**ಹೊಕ್ಕ್ರಣೆ** 'ಪೊಕ್ಕರಣೆ' ನೋ.

**ಹೊಖರಣೆ** 'ಪೊಕ್ಕರಣೆ' ನೋ.

**ಹೊಗದೆಸೆ** 'ಪುಗುದೆಸೆ' ನೋ.

**ಹೊಗರ್$_1$** 'ಪೊಗರ್$_1$' ನೋ.

**ಹೊಗರ್$_2$** 'ಪೊಗರ್$_2$' ನೋ.

**ಹೊಗರಂಬು** 'ಪೊಗರಂಬು' ನೋ.

**ಹೊಗರಲಗು** 'ಪೊಗರಲಗು' ನೋ.

**ಹೊಗರಳಿ** 'ಪೊಗರಳಿ' ನೋ.

**ಹೊಗರಾನ್** 'ಪೊಗರಾನ್' ನೋ.

**ಹೊಗರಿಡು** (ಕ್ರಿ). ೧. ಕಾಂತಿಯನ್ನು ಸೂಸು; ಹೊಳೆ; ಪ್ರಕಾಶಿಸು: ಆ ಮನುಜ ಲಲಾಮನ ತೋಳ್ ಕಾಮನ ಬಾಳೆನಿಸಿ ಹೊಗರಿಡಲ್ ತಕ್ಕುವು ನಿನ್ನೀ ಮೃಗಮದ ನವಲಿಖಿತ ಲತಾಮಳಿನ ಕಪೋಲಘರ್ಷಿತಕ್ರೀಡಿತದಿಂ (ವರ್ಧಪು. ೪-೨೫); ತೊಲತೊಲಗು ಮನ್ಮಥನ ಹೊಗರಿಟ್ಟಲಗು ಬರುತಿದೆ (ಕುವ್ಯಾಅ. ೧೫-೩೩); ಹೊಡಕರಿಸುವುದು ರಜನಿ . . . ಕಡೆದ ಕರುವಾಡದ ಕವಾಟದ ಕಡೆವಿಡಿದು ಹೊಂಬೆಸೆದಲುಱೆ ಹೊಗರಿಡುವ ನೀಲದ ಮೌಕ್ತಿಕದ ಮಾಣಿಕದ ಲಹರಿಯಲಿ (ತೊರರಾ. ೫-೨-೬೪). ೨. ಗರ್ವಪಡು; ಸೊಕ್ಕು; ಬೀಗು: ಮಿಗೆ ದಳ್ಳಿಸುತ ಹೊಗರಿಡುತೌಡುಗಚ್ಚುತ ಹುಬ್ಬುಗಳ ಬಲಿದು ಹೊಸ ಮಸೆಯ ಬಾಯ್ದಾರೆಗಳ ಶರವಿಸರವನು ತೊಡಚಿದನು (ಕುವ್ಯಾಭೀ. ೯-೩೯). ೩. ಹೆಚ್ಚಾಗು; ಅಧಿಕವಾಗು; ಅತಿಶಯವಾಗು: ಹೊಗರಿಡುವ ಹರುಷದಲಿ ರೋಮಾಳಿಗಳ ಗುಡಿಯಲಿ ತನ್ನ ನಿಳಯಕೆ ಮುಗುದೆ ಬಂದಳು ಸೂರ್ಯನಡರಿದನುದಯ ಪರ್ವತವ (ಕುವ್ಯಾವಿ. ೩-೧೦೫); ಹೊಗರಿಡುವ ಜವ್ವನದೊಳಿಂತು ರಂಜಿಸುವ ಪರವೆಗೆ ಪೆಂಪಿನಿಂ ಪ್ರಥಮಋತು ಸಂಭವಿಸಲು (ಸೌಂದಪು. ೭-೧೩); ಹೊಗರಿಡುತಿರೆ ಮನ ಮನದೊಳು ಪ್ರೀತಿ (ಹಂಸದ. ೨೩೭-೪). [ಹೊಗರ್ (< ಪೊಗರ್) + ಇಡು$_1$]

**ಹೊಗರು$_1$** (ಕ್ರಿ). ೧. ಪ್ರಕಾಶಿಸು; ಕಾಂತಿಯನ್ನು ಬೀರು; ಹೊಳೆ: ಬಗೆಯ ನಸುಧೂಮಲಿಸಿ ಹೊಗರುವೀ ಸಂಜೆ ನಿನ್ನೆಗರಿಕೆಯ ಸುತ್ತಲು ಕರಂಗುತಿಹುದು (ಗಿಳಿವಿಂ. ೪-೨೦); ಬಾನ್ ಹೊಗರಲುಂಟು ಮರ ಚಿಗುರಲುಂಟು ಬರಲುಂಟೆ ಸುಗ್ಗಿ ಮತ್ತೆ? (ಅರಳು. ೧೧೭-೧೩); ಒಂದು ದೀಪಕೆ ಲಕ್ಷದೀಪ ಹೊತ್ತಿಸಿ ಹೊಗರಿ ಬೆಳಗಲಿದೆ ಇನ್ನೇನು ಕಣ್ಣ ತುಂಬ! (ನಲಮು. ೪-೧೮). ೨. (ಆಲಂ) ಸಿಡಿಮಿಡಿಗುಟ್ಟು; ಕ್ರೋಧವನ್ನು ತಾಳು; ಕಿಡಿಕಾರು: ನೋಡು ಪತಿದ್ರೋಹಿಯನೆನೆ ಹೊಗರುತ್ತ ಕೋಪದೊಳು ಭೂವರಂ ತಾನೆದ್ದು ಬಿಗಿದು ಪೆಡಗೆಯ್ಯ ಕಟ್ಟುರುಳಿಸುತ . . . ಅಱುಹಲು (ಪ್ರಭುಪು. ೭-೧೬೬).

[< ಪೊಗರ್]

**ಹೊಗರು$_2$** 'ಪೊಗರ್' ನೋ.

**ಹೊಗರುಗಣೆ** 'ಪೊಗರ್ಗಣೆ' ನೋ.

**ಹೊಗರುಗಣ್ಣು** 'ಪೊಗರ್ಗಣ್' ನೋ.

**ಹೊಗರುಗಿಡಿ** (ನಾ). ಹೊಳೆಯುವ ಕಿಡಿ: ಹೊಗರುಗಿಡಿಗಳ ಬಾಯಿಧಾರೆಯಲೊಗೆವ ಹೊಗೆಗಳ ಹೊದಱಿನುರಿಜಾಳಿಗೆಯ ಭೋಂಕಾರದ ಭಯಂಕರಶೂಲವ್ಯೆತರಲು (ಕುವ್ಯಾದ್ರೋ. ೧೭-೪೦). [ಹೊಗರು$_1$ + ಕಿಡಿ]

**ಹೊಗರುಗು** 'ಪೊಗರುಗು' ನೋ.

**ಹೊಗರುಗೆಡು** (ಕ್ರಿ). ಕಾಂತಿಹೀನವಾಗು; ತೇಜಸ್ಸನ್ನು ಕಳೆದುಕೊಳ್ಳು; ಮಂಕಾಗು: ಹೊಗರುಗೆಟ್ಟುದು ಕುಮುದ ಕಮಳದ ಬಿಗುಹು ಬಿಟ್ಟುದು ಚಕ್ರವಾಕದ ತಗಹು ಕೆಟ್ಟುದು ಹೇಳೆನಲು ರಂಜಿಸಿತು ದೀಪಾಳಿ (ಕುವ್ಯಾದ್ರೋ. ೧೫-೩೪).

[ಹೊಗರು$_2$ (< ಪೊಗರ್) + ಕೆಡು$_1$]

**ಹೊಗರುಮೊಗ** (ನಾ). ಕಾಂತಿಯುಕ್ತವಾದ ಮುಖ; ತೇಜಸ್ಸಿನಿಂದ ಕೂಡಿದ ಮುಖ: ಹೊಗರುಮೊಗಕೆ ಪೆಣ್ಣಳ ದಿಟ್ಟಿ ತಾಕದೊಲ್ತೆಗೆದ ಕತ್ತುರಿ ರೇಖೆಯಂತೆ ಸೊಗಸುವ ಬವರಿಯ ಸವಿಗಾಱನಿವನಾರು (ಕಂನವಿ. ೯-೧೧೪).

[ಹೊಗರು$_1$ + ಮೊಗ]

**ಹೊಗರುಮೋಱೆ** (ನಾ). = ಹೊಗರುಮೊಗ: ಹೊಗರುಮೋಱೆಯ ಹಿಣಿಲ ಮಂಡೆಯ ಜಗಿಯ ರಕುತದ . . . ವಿಕ್ರಮಾಗ್ನಿಯ ತಗಹುಬಿಡದಭಿಮನ್ಯು ಮೆಱೆದನು ಶಸ್ತ್ರಶಯನದಲಿ (ಕುವ್ಯಾದ್ರೋ. ೬-೬೨); ಹೊಳೆವ ದಾಡೆಯ ಹೊಗರುಮೋಱೆಯ ತಳಿತ ಹೋಮದ ತೋಳ ಬಿಗುಹಿನ ಕಲಿಗಳಿದ್ದುದು ಕಲಿತ ಘನರೌದ್ರಾತಿರೇಕದಲಿ (ತೊರರಾ. ೬-೧೦-೭). [ಹೊಗರು$_1$ + ಮೋಱೆ]

**ಹೊಗರೆತ್ತು** (ಕ್ರಿ). ೧. (ಸಾಣೆ ಹಿಡಿದಂತೆ) ಕಾಂತಿಯನ್ನು ಹೊಂದು; ಹೊಳಪನ್ನು ಪಡೆ: ಹೊತ್ತಿತಡೆ ಹೇರಾಳ ತಮದಲಿ . . . ರೋಷ ಮಿಗೆ ಹೊಗರೆತ್ತಿತ್ತೈ ಶಿಶುಪಾಲವೀರನ ವಚನಮಯಖಡುಗ (ಕುವ್ಯಾಸ. ೮-೧೨); ಹತ್ತುಸಾವಿರ ಪಾಯದಳ ಹೊಗರೆತ್ತಿದಲಗಿನ ಹೊಳಹಿನಂತಿರೆ ಮುತ್ತಿತವನೀಪತಿಯ ಮೋಹರದೆರಡು ಬಾಹೆಯಲಿ (ಕುವ್ಯಾಗ. ೧-೪೭). ೨. (ಸಾಣೆ ಹಿಡಿದು) ಹೊಳಪು ಕೊಡು; ಕಾಂತಿಗೊಳಿಸು: ಸ್ಮರನಲಗನು ಹೊಗರೆತ್ತುವನಂದದಿ ಸರಸಿರುಹಮುಖಿಯರು ಕುಂಕುಮದ ವರಕರ್ದಮವ ಭಾವೆಯ ಮೋಹನಾಂಗಕೆ ಹರುಷದಿಂ ತಿಗುರನಿಕ್ಕಿದರು (ಜೀವಂಸಾಂ. ೧೦-೪). ೩. ಆಧಿಕ್ಯವುಂಟಾಗು; ಹೆಚ್ಚಳವುಂಟಾಗು: ಕಕ್ಷಪುಟವಲ್ಲಿ ಕತ್ತುರಿಯ ಹೊಗರೆತ್ತುತಿರೆ ಅಕ್ಷಿಗಳು ಕರುಣರಸವಂ ಹೊತ್ತು ಬಳಲುತಿರೆ (ಬಸರ. ೧-೧೧೩).

[ಹೊಗರು$_2$ (< ಪೊಗರ್) + ಎತ್ತು$_1$]

**ಹೊಗರೇರು** 'ಪೊಗರೇಱು' ನೋ.

**ಹೊಗರೇಳ್** 'ಪೊಗರೇೞ್' ನೋ.

**ಹೊಗರೇಳು** 'ಪೊಗರೇೞ್' ನೋ.

**ಹೊಗರೇಱ್** 'ಪೊಗರೇಱು' ನೋ.

**ಹೊಗರೇಱಿಕೆ** (ನಾ). ಕಾಂತಿಯ ಆಧಿಕ್ಯ; ತೇಜಸ್ಸಿನ ಹೆಚ್ಚಳ, – ಅತಿಶಯ: ಏಱಿಳಿಯ ನೋಡಿದನು ಹೊಸಹೊಗರೇಱಿಕೆಯ ಹೊದಱಿದ್ದ ದರ್ಪದ ತೋಱಿಕೆಯ ತನಿರಸದ ಮೊಗವನು (ತೊರರಾ. ೫-೧-೨೭). [ಹೊಗರ್$_2$ (< ಪೊಗರ್) + ಏಱಿಕೆ]

**ಹೊಗರೇಱು** 'ಪೋಗರೆಱು' ನೋ.

**ಹೊಗರೊಗು** 'ಪೊಗರೊಗು' ನೋ.

**ಹೊಗರೊಡೆ** (ಕ್ರಿ). ಕಾಂತಿಯನ್ನು ಹೊಂದು; ಪ್ರಕಾಶಿಸು: ಹೊಗರೊಡದ ಚಿಗುರಿಂದೆ . . . ಕಾಯಿ ಪದಗಾಯಿ ದೋರೆವಣ್ಣುಗಳಿಂದೆ . . . ಒಪ್ಪಿರ್ದುದಾ ಬನಂ (ನವಮೋ. ೮-೨೭); ಹೊಗರೊಡದ ಕೆಮ್ಮಾಸೆ ಕೆಂಗಣ್ಣು ಪೊದರ್ಗಡವಗೆ ಮಾಳವ ಕಜ್ಜಳಂ ಗೆಲುವ ದೇಹರುಚಿ . . . ಮೆರೆವುತಿರೆ (ನವಮೋ. ೧೭-೧೩).

[ಹೊಗರು$_2$ (< ಪೊಗರ್) + ಒಡೆ$_1$]

**ಹೊಗರ್ಗರೆ** (ಕ್ರಿ). ಕಾಂತಿಯನ್ನು ಸೂಸು; ಪ್ರಕಾಶವನ್ನು ಹೊರಹೊಮ್ಮು: ಹೊಗರ್ಗರೆವ ತನುಕಾಂತಿಯಿಂದೆ ತವಕದೊಳ್ಕೈದಿ ಅರ್ಘ್ಯವಸುಪಾತ್ರಮುEಯು೩ ಮನಿಯ್ಯಲಸುರೇಂದ್ರ ಲಿಂಗಕ್ಕೆಯರ್ಘ್ಯಮನಿತ್ತನು (ನವಮೋ. ೧೯-೧೫).

[ಹೊಗರ್ (< ಪೊಗರ್) + ಕರೆ$_2$ (< ಕಱೆ$_1$)]

**ಹೊಗರ್ತೆ** 'ಪೊಗೞ್ತೆ' ನೋ.

**ಹೊಗವಣೆ** (ನಾ). ಒಳಹೊಗುವಿಕೆ; ಪ್ರವೇಶ: ಒಳಹೊಗುವೆ ನಾನೆಂತು ಕಟಕವ . . . ಕಾಣೆನು ಪಥವನೆನುತಾ ಖಳನು ಚಿಂತಿಸಿ ನೋಡಿದನು ಪಾಳೆಯದ ಹೊಗವಣೆಯ (ಮೈರಾಕಾ. ೩-೨೨). [< ಹೊಗು (< ಪೊಗು) + - ಅಣೆ$_4$]

**ಹೊಗಳ್** 'ಪೊಗೞ್$_1$' ನೋ.

**ಹೊಗಳತೆ** 'ಪೊಗೞ್ತೆ' ನೋ.

**ಹೊಗಳಿಕೆ** 'ಪೊಗೞ್ಕೆ' ನೋ.

**ಹೊಗಳಿಸು** 'ಪೊಗೞಿಸು' ನೋ.

**ಹೊಗಳು$_1$** 'ಪೊಗೞ್$_1$' ನೋ.

**ಹೊಗಳು$_2$** 'ಪೊಗೞ್$_2$' ನೋ.

**ಹೊಗಳುಭಟ್ಟ** (ನಾ). ರಾಜರು ಮೊದಲಾದವರನ್ನು ಹೊಗಳುವ ಊಳಿಗದವನು; ಸ್ತುತಿಪಾಠಕ; ವಂದಿ: ಹೊಗಳುಭಟ್ಟರ ಸಾಲ ಕೈದೀವಿಗೆಯ ಕಹಳಾರವದ ಲಗ್ಗೆಯ ಬಿಗುಹಿನಲಿ ಕುರುರಾಯ ಬಂದನು ರಾಜಮಂದಿರಕೆ (ಕುವ್ಯಾಕ. ೫-೨); ಕೋರೆದಾಡೆಯ ದನಿಯ ಖಗಗಳೆಂಬುವ ಹೊಗಳುಭಟ್ಟರಾ ಗಾನದಲಿ ಮುಳುಗುವಂದದಿ ಮಾಡಿ, ಉರುಳುರುಳು ಹಗಲಿರುಳು ಸುಂದರ ವಸುಂಧರಾ! (ಪಾಂಚಜ. ೨೮-೭); ದ್ವಾರಸಮುದ್ರದಲ್ಲಿ ಹೊಗಳುಭಟ್ಟರಿಗಾಗಿಯೇ ಒಂದು ದೊಡ್ಡ ಕೇರಿಯಿದೆ (ತುಂಗಭ. ೭). [ಹೊಗಳು$_1$ (< ಪೊಗೞ್$_1$) + ಭಟ್ಟ]

**ಹೊಗಳ್ಕೆ** 'ಪೊಗೞ್ಕೆ' ನೋ.

**ಹೊಗಳ್ತೆ** 'ಪೊಗೞ್ತೆ' ನೋ.

**ಹೊಗಿಸು** 'ಪೊಗಿಸು' ನೋ.

**ಹೊಗು** 'ಪೊಗು' ನೋ.

**ಹೊಗುತರು** 'ಪೊಗುತರ್' ನೋ.

**ಹೊಗುತೆ** 'ಪೊಗುತೆ' ನೋ.

**ಹೊಗುಮನೆ** (ನಾ). ಹೆಣ್ಣು ಮದುವೆಯಾಗಿ ಸೇರುವ ಮನೆ; ಗಂಡನ ಮನೆ: ತವರುಮನೆಯಾಯ್ತುಮಗೆ ಹೊಗುಮನೆಯುಯೆಮಗಾಯ್ತು ಪ್ರಮಥರಿಗೆ ನೋಡಿ ಹರುಷವನೆಯ್ದುವಂತಾಯ್ತು (ಮಡಿಶ್ಯಾ. IV, ೧೧೧೩, ಮ್ಮದುನರಾಮಯ್ಯನ ರಗಳೆ).
[ಹೊಗು (< ಪೊಗು) + ಮನೆ]

**ಹೊಗುಳು** 'ಪುಗಿಲ್$_{1}$' ನೋ.

**ಹೊಗೆ$_{1}$** 'ಪೊಗೆ$_{1}$' ನೋ.

**ಹೊಗೆ$_{2}$** 'ಪೊಗೆ$_{2}$' ನೋ.

**ಹೊಗೆಕಂಡಿ** (ನಾ). ಹೊಗೆ ಹೊರಗೆ ಹೋಗಲು ಮಾಡಿರುವ ಚಿಮಣಿ: ಮನೆಗಳ ಹೊಗೆಕಂಡಿಗಳಿಂದ ಹೊಗೆ ಎದ್ದು ಮಂಜಿನೊಂದಿಗೆ ಬೆರೆದು ಹಳ್ಳಿಯ ಮೇಲೆ ಹರಡಿತು (ಮಲೆಸಾ. ೯೯೪). [ಹೊಗೆ$_{2}$ (< ಪೊಗೆ$_{2}$) + ಕಂಡಿ$_{1}$]

**ಹೊಗೆಕಡ್ಡಿ** (ನಾ). (ಎಲೆಯಡಕೆಯೊಂದಿಗೆ ಸೇವಿಸುವ) ಹೊಗೆಸೊಪ್ಪಿನ ಕಡ್ಡಿ: ಎಲೆ, ಅಡಕೆ, ಹೊಗೆಕಡ್ಡಿ, ಕಾಚು . . . ಇತ್ಯಾದಿ ಸರಕು ತುಂಬಿದ ತಾಂಬೂಲದ ಚಂಚಿಯನ್ನು ಅವರ ಕೈಗೆ ಕೊಟ್ಟು ತಾನೂ . . . ಕುಳಿತಳು (ಬೆಳುಮ. ೩೨).
[ಹೊಗೆ$_{2}$ (< ಪೊಗೆ$_{2}$) + ಕಡ್ಡಿ$_{1}$]

**ಹೊಗೆಕಾಣಿಕೆ** (ನಾ). ಹೊಗೆಸೊಪ್ಪಿನ ಮೇಲೆ ಹಾಕುವ ಒಂದು ಬಗೆಯ ತೆರಿಗೆ (?): ಅಷ್ಟತೇಜಸ್ವಾಮ್ಯಂಗಳನು ಸಕಲ ಸುವರ್ಣಾದಾಯ ದವಸಾದಾಯ ಹೊಗೆಕಾಣಿಕೆ ಮುಂತಾದ ಚಿಲುವಾನ ಕಾಣಿಕೆಗಳು . . . ಮುಂತಾದ ಸಮಸ್ತಕಾಣಿಕೆಗಳು ಸಹಾ ನೀವೇ ಆಗುವಮಾಡಿ ಅನುಭವಿಸಿಕೊಣ್ಣು (ಎಕ. XV, ಅರಕ. ೧೦೬-೧೨೯; 1665); ಹುಲ್ಲುಹಣ ಹೊಗೆಹಣ ಹೊಗೆಕಾಣಿಕೆ ಕುಟಿದೆಱಿಗೆ ಜಾತಿಗೂಟ . . . ಚರಾದಾಯ ಹೊರಾದಾಯ ಇವು ಮೊದಲಾದ ಆ ಸಕಲಸ್ವಾಮ್ಯವನೂ . . . ಅನುಭವಿಶಿಕೊಂಡು ಬಹರು (ಎಕ. XIV, ಮೈಸೂರು. ೧೧೫-೪೧೩; 1674); ಹುಲ್ಲುಹಣ ಹೊಗೆಕಾಣಿಕೆ ಕುಟಿದೆಱಿಗೆ . . . ಹೊರಾದಯ ಯಿವು ಮೊದಲಾದ ಆ ಸಕಲಸ್ವಾಮ್ಯವನ್ನು . . . ನಿರಾಬಾಧವಾಗಿ ಸುಖದಿಂದನುಭವಿಸಿಕೊಂಡಿಹರು (ಎಕ. VI(R), ಪಾಂಡವ. ೯೯-೬೭೫; 1722). 'ಪೊಗೆವಣ', 'ಹೊಗೆದೆಱೆ' ಪರಾ.
[ಹೊಗೆ$_{2}$ (< ಪೊಗೆ$_{2}$) + ಕಾಣಿಕೆ (< ಕಾಣ್ಕೆ)]

**ಹೊಗೆಕೊಡು** (ಕ್ರಿ). ೧. ಹೊಗೆಯ ಶಾಖವನ್ನು ಕೊಡು: ಎಳೆಯ ಮಕ್ಕಳಿಗೆ ಸ್ನಾನಮಾಡಿಸಿದ ನಂತರ ಶೀತವಾಗದಿರಲೆಂದು ಹೊಗೆಕೊಡುತ್ತಾರೆ (ರೂಢಿ). ೨. (ರಾಸಾಯನಿಕಕ್ರಿಯೆಯಿಂದ) ಚಿನ್ನ ಅಥವಾ ಬೆಳ್ಳಿಯ ತೆಳುಲೇಪವನ್ನು ಕೊಡು: (ಕ). [ಹೊಗೆ$_{2}$ (< ಪೊಗೆ$_{2}$) + ಕೊಡು$_{1}$]

**ಹೊಗೆಕೊಳವಿ, ಹೊಗೆಕೊಳವೆ** (ನಾ). ೧. ಹೊಗೆ ಹೊರಗೆ ಹೋಗಲು ಮಾಡಿರುವ ಕೊಳವೆ,– ನಳಿಕೆ; ಚಿಮಣಿ. ೨. ತಂಬಾಕು ಸೇದಲು ಮಾಡಿರುವ ಮಣ್ಣಿನ ನಳಿಕೆ; ಚಿಲುಮೆ: ಹೊಗೆಕೊಳವಿಗೆ ಸೊಪ್ಪು ತುಂಬಿ ತೃಪ್ತಿಯಾಗುವವರೆಗೂ ಸೇದಿ ಹೊರಟ (ಎಳಜೀ. ೯೫). **ಹೊಗೆಕೊಳವೆ:** ೧. ಅದರ ಹೊಗೆಕೊಳವೆ ದಕ್ಷಿಣದ ಕಡೆಗೆ ಸ್ವಲ್ಪ ಬಾಗಿತ್ತು (ಯೋಧವು. ೨೪). [ಹೊಗೆ$_{2}$ (< ಪೊಗೆ$_{2}$) + ಕೊಳವಿ (< ಕೊಟಿವಿ)]

**ಹೊಗೆಕೊಳವೆ** 'ಹೊಗೆಕೊಳವಿ' ನೋ.

**ಹೊಗೆಗಟ್ಟು** (ಕ್ರಿ). ಹೊಗೆಯು ಕಟ್ಟಿಕೊಳ್ಳು; ಧೂಮವು ತುಂಬಿಕೊಳ್ಳು: ಉಸಿರಾಡುವುದು ಹೇಗೆ ಹೊಗೆಗಟ್ಟಿದೀ ಗೂಡಿನೊಳಗೆ (೧ಂಚಾಪ. ೫೬-೬೬).
[ಹೊಗೆ$_{2}$ (< ಪೊಗೆ$_{2}$) + ಕಟ್ಟು$_{1}$]

**ಹೊಗೆಗಣ್ಣು** (ನಾ). ಒಂದು ಬಗೆಯ ಕಣ್ಣಿನ ರೋಗ: ಕಲ್ಯಾಣ ಅಂಜನ . . . ಹೊಗೆಗಣ್ಣಿಗೆ ಹೊನಗೊನ್ನೆಯ ರಸದಿಂ, ಮಹಾದುಷ್ಟರೋಗಕ್ಕೆ ಪುಳ್ಳಪುಣಸೆಯ ರಸದಿಂ, ವಿಕಾರವಾದ ಹೂವಿಗೆ ಜಾಜಿಯ ಹೂವಿನ ರಸದಿಂ ಹಚ್ಚೆ ಕಣ್ಣುರೋಗ ಮಾಣ್ಗುಂ (ವಿಷ್ಣುವಿ. ೧೭). [ಹೊಗೆ$_{2}$ (< ಪೊಗೆ$_{2}$) + ಕಣ್ಣು (< ಕಣ್)]

**ಹೊಗೆಗಾಡಿ** (ನಾ). ಉಗಿಬಂಡಿ; ರೈಲು: ರೈಲನ್ನು ರೈಲೆಂದೇ ಕರೆಯುವುದು ಉತ್ತಮ; ಹೊಗೆಬಂಡಿ, ಹೊಗೆಗಾಡಿ ಎನ್ನುವುದು ಮಧ್ಯಮ; ಧೂಮಶಕಟವನ್ನುವುದು ಅಧಮ (ಕಬಸಾ. ೧೭). [ಹೊಗೆ$_{2}$ (< ಪೊಗೆ$_{2}$) + ಗಾಡಿ$_{3}$]

**ಹೊಗೆಗುಡಿ** 'ಪೊಗೆಗುಡಿ' ನೋ.

**ಹೊಗೆಗೂಡು** (ನಾ). = ಹೊಗೆಕೊಳವಿ ೧: ಸಾಧ್ಯವಾದ ಮಟ್ಟಿಗೂ ಬೆಂಕಿಯಿಂದ ಉಕ್ಕಿಗೂ ಉಕ್ಕಿನಿಂದ ನೀರಿಗೂ ಸಂಬಂಧವು ಹೆಚ್ಚಿದರೆ ಹೊಗೆಗೂಡಿನಲ್ಲಿ (Chimney) ಪೋಲಾಗುವ ಶಾಖವು ಕಡಮೆಯಾಗುತ್ತದೆ (ಶಿಲ್ಪಸಾ. ೨೦೭).
[ಹೊಗೆ$_{2}$ (< ಪೊಗೆ$_{2}$) + ಗೂಡು]

**ಹೊಗೆಗೊಳಿಸು** 'ಪೊಗೆಗೊಳಿಸು' ನೋ.

**ಹೊಗೆದಟ್ಟಿ** (ನಾ). (ಅಡಕೆ ಮುಂತಾದುವನ್ನು) ಹೊಗೆಯ ಸಹಾಯದಿಂದ ಒಣಗಿಸಲು ಅನುಕೂಲವಾಗಿರುವ ಬಿದಿರಿನ ತಟ್ಟಿ,– ತಟ್ಟೆ: ಆ ರಾತ್ರಿ ಬೇಯಿಸಿದ ಅಡಕೆಯನ್ನು ಒಣಗಿಸಲು 'ಹೊಗೆದಟ್ಟಿ'ಯೂ ಸಿದ್ಧವಾಗಿದ್ದಿತು (ಕಾನೂರು. ೩೯೫).
[ಹೊಗೆ$_{2}$ (< ಪೊಗೆ$_{2}$) + ತಟ್ಟಿ$_{1}$]

**ಹೊಗೆದೆಗೆ** (ಕ್ರಿ). ಹೊಗೆಯನ್ನು ತೆಗೆ: ಸೇನೆಯಲಱಸಿ ತೆಗೆದಾಯತ ಚತುರ್ಬಲ ಹೊಱಗೆ ನಿಂದುದು ಹೊಗೆದೆಗೆದ ಕೇಸುರಿಯ ತಿರುಳಂತೆ (ಕುಮ್ಮಾಶ. ೨-೬).
[ಹೊಗೆ$_{2}$ (< ಪೊಗೆ$_{2}$) + ತೆಗೆ$_{1}$]

**ಹೊಗೆದೆಱಿಗೆ** (ನಾ). = ಹೊಗೆಕಾಣಿಕೆ: ತಳವಾಱಿಕೆಯಿಂದ ಗ ೨೬ ಹೊಗೆದೆಱಿಗೆ ಯಿಂದ ಗ ೩ ಉಭಯಂ ಗ ೨೯ (ಎಕ. VI(R). ಪಾಂಡವ. ೧೩೪-೫; 1528).
[ಹೊಗೆ$_{2}$ (< ಪೊಗೆ$_{2}$) + ತೆಱಿಗೆ]

**ಹೊಗೆದೆಱೆ** (ನಾ). = ಹೊಗೆಕಾಣಿಕೆ: ಆ ಸ್ಥಳಂಗಳಿಗೆ ಹೊಗದೆಱೆ ಮಗ್ಗದೆಱೆ ಕಾ XXXಆಡುದೆಱೆ . . . ಆಚಂದ್ರಾರ್ಕಸ್ಥಾಯಿ ಆಗಿ ಸಲುವಂತಾಗಿ ಧಾರಾಪೂರ್ವಕಂ ಮಾಡಿ ಕೊಟ್ಟರು (ಎಕ. III, ಶ್ರೀರಂಗ. ೧೦೪-೪೧; ಸು. 1200); ಸೋಮೆಯ ದಣ್ಣಾಯ್ಕರು ಕೇಶವನಾಥಂಗೆ ಅಂಗಭೋಗ ಅಮ್ರಿತಪಡಿಗೆ ಬಿಟ್ಟ ಸೀಗೆನಾಡಸೆಟ್ಟಿಯ ಹಳ್ಳಿ ಕುಳದ ಸಿದ್ದಾಯಂ ಗ ೩೬೧ . . . ಹೊಗೆದೆಱೆ ಮಗ್ಗದೆಱೆ . . .ಗುತ್ತಗೆಯ ಸಿದ್ದಾಯ ಗದ್ಯಾಣ ನೂಱು ಗ ೧೦೦ (ಎಕ. XV, ಬೇಲೂರು. ೨೫೨-೬; 1298). [ಹೊಗೆ$_{2}$ (< ಪೊಗೆ$_{2}$) + ತೆಱೆ$_{3}$]

**ಹೊಗೆದೋಱು** (ಕ್ರಿ). ೧. ಹೊಗೆಯಾಡು; ಹೊಗೆಯುಗುಳು. ೨. (ಆಲಂ) ಸಿಟ್ಟನ್ನು ಪ್ರದರ್ಶಿಸು; ಕೋಪವನ್ನು ತೋರ್ಪಡಿಸು: ಇತ್ತ ದುಗುಡವ ಹಿಡಿದ ರಾಯನ ಕೆತ್ತ ಮುಖವನು ಕಂಡು ಭಟರೆದೆ ಹೊತ್ತಿದವು ಹೊಗೆದೋಱಿ [ಪಾಠಾಂ. ಹೊಗರೇಱಿದವು] ಮೋಱೆಗಳು ಪಟುಭಟರ (ಕುಮ್ಮಾದ್ರೋ. ೧೫-೫).
[ಹೊಗೆ$_{2}$ (< ಪೊಗೆ$_{2}$) + ತೋಱು]

**ಹೊಗೆನಳಿಗೆ** (ನಾ). = ಹೊಗೆಕೊಳವಿ ೧: ಯಾವ ರೀತಿಯ ಒಲೆ ಅಥವಾ ಉರುವಲನ್ನೇ ಉಪಯೋಗಿಸಲಿ, ವಿದ್ಯುಚ್ಛಕ್ತಿಯಲ್ಲದಿದ್ದರೆ, ಹೊಗೆಯನ್ನು ಹೊರಬಿಡಲು ಒಲೆಯಿರುವಲ್ಲಿ ಒಂದು ಹೊಗೆನಳಿಗೆ ತೀರ ಅವಶ್ಯ (ಅಡುಸಾ. ೧೫); ಬೆಂಕಿಗೂಡಿನಿಂದ ಹೊರಟ ಹೊಗೆಯು ಕೂಡಾ ಆ ನಳಿಗೆಗಳ ಮುಖಾಂತರವೇ ಹೊಗೆಪೆಟ್ಟಿಗೆಗೆ ಬಂದು ಅಲ್ಲಿಂದ ಹೊಗೆನಳಿಗೆಯ ಮೂಲಕ ಹೊರಹೋಗುವುದು (ವಿಜ್ಞಾವಿ. ೪೭).
[ಹೊಗೆ$_{2}$ (< ಪೊಗೆ$_{2}$) + ನಳಿಗೆ (< ನಳಿಕೆ)]

**ಹೊಗೆಪೆಟ್ಟಿಗೆ** (ನಾ). ಉಗಿಬಂಡಿಯ ಎಂಜಿನಿನ ಒಂದು ಭಾಗ; ಹಬೆಯು ಸಂಗ್ರಹವಾಗುವ ಭಾಗ: ಬೆಂಕಿಗೂಡಿನಿಂದ ಹೊರಟು ಕಡಾಯಿಯ ನೀರಿನ ನಡುವಿನಿಂದ ಹೊಗೆಪೆಟ್ಟಿಗೆಗೆ ಹೋಗುವ ಐದಾರು ದಪ್ಪವಾದ ಲೋಹನಳಿಗೆಗಳಿರುತ್ತವೆ (ವಿಜ್ಞಾವಿ. ೪೭). [ಹೊಗೆ$_{2}$ (< ಪೊಗೆ$_{2}$) + ಪೆಟ್ಟಿಗೆ]

**ಹೊಗೆಬಂಡಿ** 'ಪೊಗೆವಂಡಿ' ನೋ.

**ಹೊಗೆಬತ್ತಿ** (ನಾ). ಹೊಗೆ ಸೇದಲು ಹೊಗೆಸೊಪ್ಪಿನಿಂದ ಮಾಡಿದ ಸುರುಳಿ; ಚುಟ್ಟಾ, ಸಿಗರೇಟು ಮುಂತಾದುವು: ನಾನು ಹೊಗೆಬತ್ತಿ ಎಳೆಯುವವನು. ಸಿಗರೆಟ್ ಪ್ಯಾಕ್ ಸದಾ ನನ್ನ ಬಳಿ ಇದ್ದು ತೀರಬೇಕು (ಜೀವಾತ್ಮ. ೨೫೫); ಹೊಗೆಬತ್ತಿಯ ಚಟದಿಂದ ಜನತೆಯಲ್ಲಿ ಸಖ್ಯ-ಪ್ರೇಷ್ಠಗಳು ಹೊಗೆಗಿಂತಲೂ ಬಹುಬೇಗನೆ ಪ್ರಸಾರವಾಗುತ್ತಲಿವೆ (ಕೃತಕೃ. ೧೩೫). [ಹೊಗೆ$_{2}$ (< ಪೊಗೆ$_{2}$) + ಬತ್ತಿ]

**ಹೊಗೆಭಂಡಿ** 'ಪೊಗೆವಂಡಿ' ನೋ.

**ಹೊಗೆಮೊಗ** 'ಪೊಗೆಮೊಗ' ನೋ.

**ಹೊಗೆಯಲೆ** (ಕ್ರಿ). ಹೊಗೆಯು ತಾಗು,– ಸುತ್ತಿಕೊಳ್ಳು: ಹೊಗೆಯಲEಲೆ3ದ ಪುತ್ತಳಿಯವೊಲು . . . ಗೂಢದರ್ಥವ ತೆಗೆಯಬಾರದ ಕಾವ್ಯದವೊಲಿರ್ದಗಣಿತಾಮಲ

ಪುಣ್ಯಚರಿತೆಯ ಕಂಡನಾ ಹನುಮ (ತೊರರಾ. ೫-೩-೨೪). 'ಹೊಗೆಸುತ್ತು' ನೋ.

[ಹೊಗೆ$_2$ (< ಪೊಗೆ$_2$) + ಅಲೆ$_1$]

**ಹೊಗೆಯಾಡು** (ಕ್ರಿ). ೧. (ಕಾಯ್ದ ಎಣ್ಣೆ, ತುಪ್ಪ ಮೊದಲಾದುವು ಹಾಗೂ ಬೆಂಕಿಯು) ಹೊಗೆಯನ್ನು ಸೂಸು; ಹೊಗೆಯುಗುಳು: ಕವಿಯುತ್ತಿದ್ದ ಮಂಜಿನ ನಡುವೆ ಹೊಗೆಯಾಡುವ ಬೆಂಕಿಯಂತೆ ಪದ್ಮರಾಗವು ಉರಿಯುತ್ತಿತ್ತು (ಯೋಧಪು. ೬೯): ಎಲ್ಲರ ಮನಸ್ಸಿನಲ್ಲೂ ಅತೃಪ್ತಭಾವನೆಗಳ ಕಿಡಿಗಳು ಒಳಗಿಂದೊಳಗೇ ಹೊಗೆಯಾಡುತ್ತಿದ್ದವು (ಚತಸ. ೮೫); ಎಣ್ಣೆಯನ್ನು ಉಪಯೋಗಿಸುವಾಗ ಅದು ತುಂಬಾ ಹೊಗೆಯಾಡುವ ತನಕ ಕಾಯಿಸಕೂಡದು (ಗೃಹವಿ. ೫೧). ೨. (ಕೋಪ, ರೋಷ, ದ್ವೇಷ ಮುಂತಾದುವು) ಒಳಗೊಳಗೇ ಹೆಚ್ಚಾಗು,– ವೃದ್ಧಿಯಾಗು: ಅಪ್ಪನ ಬಾಯಿಂದ ಮಾತು ಕೇಳಿಸಿದ್ದೇ ಒಳಗೊಳಗೇ ಹೊಗೆಯಾಡುತ್ತಿದ್ದ ಸಿಟ್ಟು ಭುಗ್ಗನೆ ಹೊತ್ತಿಕೊಂಡಿತ್ತು (ಮೂರುದಾ. ೨೬೪); ಭೀಮನಿಗೂ . . . ಮನಸ್ಸಿನಲ್ಲಿಯೇ ರೋಷವು ಹೊಗೆಯಾಡುತ್ತಿತ್ತು (ವಚಭಾ. ೩೬೭). ೩. (ಆಲಂ) ಕ್ಷೋಭೆಯಾಗು; ಶಾಂತಿಯನ್ನು ಕಳೆದುಕೊಳ್ಳು: ದರಬಾರವೆಲ್ಲವೂ ಹೊಗೆಯಾಡುತ್ತಲಿದೆ (ದೌಲತ್. ೩೯೫). [ಹೊಗೆ$_2$ (< ಪೊಗೆ$_2$) + ಆಡು$_1$]

**ಹೊಗೆಸು** (ಕ್ರಿ). ಹೊಗೆಯಾಡುವಂತೆ ಮಾಡು; ಜ್ವಲಿಸುವಂತೆ ಮಾಡು: ನಂದಬಾರದ ಹೋಮದಗ್ನಿಯ ನಂದಲೀಯದೆ ಶುಷ್ಕ ಸಮಿಧೆಯ ತಂದು ನೆಱೆ ಹೊತ್ತಿಕ್ಕಿ ಹೊಗೆಸುವ ವೃದ್ಧಕಪಿಗಳಲಿ . . . ಒಪ್ಪಿತಾ ವನವು (ಪ್ರಭುಲೀ. ೨೦-೨೫).

[ಹೊಗೆ$_1$ (< ಪೊಗೆ$_1$) + - ಸು$_1$]

**ಹೊಗೆಸುತ್ತು** (ಕ್ರಿ). ಹೊಗೆಯಿಂದ ಮಸಕಾಗು: ಚಾತುರಂಗಮಂ ಜಾನಿಸಿ ನೋಡಿ ನೋಡಿ ಹೊಗೆಸು[ಪಾಠಾಂ. ಹ]ತ್ತಿದ ಪುತ್ತಳಿಯಂತೆ ಬಂದನುದ್ಯಾನವನೊಪ್ಪದಿಂ ಕಳೆದು ರಾಜಕುಮಾರನಪಾರಚಿಂತೆಯಿಂ (ನಂಬಿರ. ೭ ಪೀಠಿಕಾಪದ್ಯ).

[ಹೊಗೆ$_2$ (< ಪೊಗೆ$_2$) + ಸುತ್ತು$_1$]

**ಹೊಗೆಸೊಪ್ಪು** (ನಾ). ಒಂದು ಬಗೆಯ ಗಿಡ ಮತ್ತು ಅದರ ಎಲೆ; ತಂಬಾಕು; ☞ ಇದರ ಒಣಗಿದ ಸೊಪ್ಪನ್ನೂ ಮತ್ತು ಇದರ ಕಡ್ಡಿಯನ್ನು ಒಣಗಿಸಿ ಮಾಡಿದ ಕಡ್ಡಿಪುಡಿಯನ್ನೂ ಕೆಲವರು ತಾಂಬೂಲದ ಜೊತೆಗೆ ಸೇವಿಸುತ್ತಾರೆ. ಇದರ ಒಣಗಿದ ಎಲೆಯಿಂದ ನಶ್ಯವನ್ನು ತಯಾರಿಸುತ್ತಾರೆ. ಇವಲ್ಲದೆ ಮುಖ್ಯವಾಗಿ ಬೀಡಿ, ಸಿಗರೇಟು, ಚುಟ್ಟಾ ಮುಂತಾದ ಹೊಗೆಬತ್ತಿಗಳನ್ನು ಇದರಿಂದ ತಯಾರಿಸುತ್ತಾರೆ. ಇದೊಂದು ಅತ್ಯುತ್ತಮವಾದ ವಾಣಿಜ್ಯ ಬೆಳೆ: ಯಾ ಯೆತ್ತಿನಲು ತಾವು ಜಿನಿಸು ಅಡಕೆ ಮೆಣಸು . . . ಕತ್ತ ಹೊಗೆಸೊಪ್ಪು ಜವಳಿ ಮುಂತಾಗಿ . . . ಹೇರಿಕೊಣ್ಡು ಷಡ್ವರುಸನ XXX ಧರ್ಮವನು ನಡಸಿಕೊಣ್ಡು . . . ಬಹುದು (ಎಕ. VII. ಶಿವಮೊ. ೨೪-೧೭; 1670); ಮಾನ್ಯದ ಯೆತ್ತು ನಡ್ತೆರ ಮೇಲೆ . . . ಜವಳಿ ಕಬುನ ಹೊಗೆಸೊಪ್ಪು ಉತ್ತುತ್ತೆ ಖರ್ಜೂರ . . . ಮುಂತ್ತಾದ ಜಿನಿಸನು ಹೇರಿಕೊಂಡು (ಮೈಆರಿ. ೧೯೩೭. ೨೬-೩೭: 1708); ಹೊಗೆಸೊಪ್ಪಿನಲ್ಲಿ ನಿಕೋಟಿನ್ ಅನ್ನುವ ವಿಷದ ಪದಾರ್ಥವಿದೆ (ಮಗಮೂಂ. ೫೭).

**ಹೊಗೆಸೊಪ್ಪಿನ ಪೊಮ್ಮು** = ಹಿಂದೆ ಹೊಗೆಸೊಪ್ಪಿನ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ: ಆ ಸಕಲ ಪೈರು ಪೊಂಮಿಗೆ ಸಲುವ ಜವಳಿ ಲಾಭಾದಾಯದ ಪೊಂಮು ಕಬ್ಬಿನದ ಪೊಂಮು ಹೊಗೆಸೊಪ್ಪಿನ ಪೊಂಮು ಮುಂತ್ತಾದ ಆ ಸಕ[ಲ]ಸ್ವಾಮ್ಯ (ಎಕ. VI(R). ಪಾಂಡವ. ೨೧೫-೧೭೯; 1724). [ಹೊಗೆ$_2$ (< ಪೊಗೆ$_2$) + ಸೊಪ್ಪು$_2$]

**ಹೊಗೆಹಣ** 'ಪೊಗೆವಣ' ನೋ.

**ಹೊಗೆಹಿಡಿ** (ಕ್ರಿ). ಹೊಗೆಯು ಕವಿ,– ಮುತ್ತು: ಆ ಕೊಠಡಿಯ ಚಾವಣಿ ಹೊಗೆಹಿಡಿದು ಕಪ್ಪಾಗಿದೆ (ರೂಢಿ). [ಹೊಗೆ$_2$ (< ಪೊಗೆ$_2$) + ಹಿಡಿ$_1$ (< ಪಿಡಿ$_1$)]

**ಹೊಗೆಹುಡಿ** (ನಾ). (ತಾಂಬೂಲದೊಂದಿಗೆ ಕೆಲವರು ಸೇವಿಸುವ) ಹೊಗೆಸೊಪ್ಪಿನ ಅಥವಾ ಅದರ ಕಡ್ಡಿಯ ಪುಡಿ: ಬೇಗನೆ ತಾರೆ ಗೊಂಗಟೆ ಗೊರಗ ಕೋಲ್ಹೊಗೆಹುಡಿಯಡಿಕೆಯಲೆಯ (ಅರ್ಜಾವಿ. ೩೧-೩೩).

[ಹೊಗೆ$_2$ (< ಪೊಗೆ$_2$) + ಹುಡಿ (< ಪುಡಿ)]

**ಹೊಗ್ಗು** (ಕ್ರಿ). (ತಮಟೆ ಮೊದಲಾದ ವಾದ್ಯಗಳನ್ನು) ಹೊಡೆ; ಬಾರಿಸು: ಅಂಣನೊಡವೆ ತಂಮಂಗೆ ತಂಮನೊಡವೆ ಅಣ್ಣಂಗೆ ಆರು ಇಲ್ಲದಿದವ ಕಲಿಗೆ ಸಿವಾಲಯಕೆ ತಪ್ಪು ತಬುಡಿ ಇಲ್ಲ ಗಂಡನು ಹೋದ ಹೆಂಡತಿ (ನೇಡು?) ತಿಂದುಕೊಂಡು ಸತ್ತಡೆ ಹಱೆಯ ಹೊಗ್ಗಿ ನಡೆಸುವುದು ತೊತ್ತು ಸತ್ತಡೆ ಎಳೆದು ಬಿಸಾಡು (ಎಕ. IX (S). ಕಾನಕಾ. ೬೯-೧೮; 1319). [?]

**ಹೊಚ್ಚ** 'ಪೊಚ್ಚ$_1$' ನೋ.

**ಹೊಚ್ಚನೆ** (ಗು). ಹೊಸದಾದ; ತಾಜಾ: ಕಣ್ಣನು ಮುಚ್ಚುತ ಹುಲ್ಲನು ಕಚ್ಚುತ ಹೊಚ್ಚನೆ ಸೊಗವನನುಭವಿಸು (ಇಂಚಾಪ. ೧೧೦-೧೧).

[ಹೊಚ್ಚ (< ಪೊಚ್ಚ$_1$) + - ಅನೆ$_2$ (< - ಅನೆಯ್$_2$)]

**ಹೊಚ್ಚಲ** 'ಪೊಸಂತಿಲ್' ನೋ.

**ಹೊಚ್ಚು** 'ಪೊದೆಯಿಸು' ನೋ.

**ಹೊಚ್ಚುಮೊಲೆ** (ನಾ). (?): ಚೆಂಡುಮೊಲೆ ದುಂಡುಮೊಲೆ ಹಿಡಿಕೆಮೊಲೆ ಹೊಚ್ಚುಮೊಲೆಯೂ ಪೊಳೆವ ತೆಂಗಾಯ ಮೊಲೆ . . . ಬಟ್ಟಮೊಲೆ ಪುರುಷಮೃಗ ಕುಲಗಳೆಗೆವಡ್ಡಿದಂತಾ ಬಲೆಯ ಮೊಲೆವರು ವಪ್ಪಿರ್ದರು (ನವಮೋ. ೨೪-೧೪).

[ಹೊಚ್ಚು$_?$ + ಮೊಲೆ$_1$]

**ಹೊಟಾರ** 'ಹೋಟಾರ' ನೋ.

**ಹೊಟೇಲು** 'ಹೋಟಲು' ನೋ.

**ಹೊಟ್ಟ** (ನಾ). ಕಿವುಡುಮನುಷ್ಯ; ಕಿವುಡ: (೬).

[ದೇ. ‖ ತಮಿ. ಪೊಟ್ಟೈ = ಕುರುಡುತನ; ತುಳು. ಪೊಟ್ಟೆ]

**ಹೊಟ್ಟಳಿಸು** 'ಪೊಟ್ಟಳಿಸು' ನೋ.

**ಹೊಟ್ಟೆ** 'ಪೋಟೆ$_1$' ನೋ.

**ಹೊಟ್ಟಿಗ** (ನಾ). ಹೊಟ್ಟೆಬಾಕ; ತಿಂಡಿಪೋತ: ದಿಟ್ಟರಾದವರೆನ್ನ ಜತೆಯೊಳು ಬಿಟ್ಟು ಸಕಲವನೀಗಳೈದುವುದಟ್ಟ ಬೋನವ ಬಿಟ್ಟು ಕಡೆಯದ ಹೊಟ್ಟಿಗರು ನಿಲಲಿ (ರಾಮಾಸಂ. ೬-೮-೭); ಈ ಹೊಟ್ಟಿಗನಿಗೆ ಅಷ್ಟು ಧೈರ್ಯ ಬಂತಾ ನಂಜಣ್ಣ (ಶನಿಸಂ. ೨೦೦). 'ಹೊಟ್ಟೆಗ' ಪರಾ. [ಹೊಟ್ಟೆ (< ಪೊಟ್ಟೆ$_1$) + - ಇಗ]

**ಹೊಟ್ಟಿಹೋಗು** 'ಪೋಟೆಹೋಗು' ನೋ.

**ಹೊಟ್ಟು$_1$** (ಕ್ರಿ). ಒಡೆದು ಹೋಗು; ಸಿಡಿ: ಕೋಟಿ ಡಿಂಡಿಮಗಳನು ಬಾರಿಸೆ ಗೋಟು ತುಂಬಿತು ಜಗದ ಕಿವಿಗಳ ಪಾಟಿ ಹೊಟ್ಟಿತು ಕೇಳನಾ ಖಳಗೊರೆದು ತೆಕ್ಕುತಿರೆ (ಕೌಶಿರಾ. ೨೪-೪); ದೇವರಿಗೆ ಕಿವಿ ಇದೆಯೋ ಇಲ್ಲವೋ! ಇದ್ದರೆ ಹೊಟ್ಟಿಯೇ ಹೋದೀತು ಈ ಪಾಟಿ ಗದ್ದಲಕ್ಕೆ (ಸ್ವಪ್ನಹೊ. ೧೫). [ದೇ. ‖ ತಮಿ. ಮಲ. ಪೊಟ್ಟು$_2$; ತುಳು. ಪೊಟ್ಟು$_2$ ವುಡಪು, ಪುಡಾವು; ತೆಲು. ಪೂಟ್ಲು, ಪೊಟ್; ಕೊಡ. ಪೊಟ್ಟ್$_1$]

**ಹೊಟ್ಟು$_2$** 'ಪೊಟ್ಟು' ನೋ.

**ಹೊಟ್ಟುಕುಟ್ಟು** 'ಹೊಟ್ಟುಗುಟ್ಟು' ನೋ.

**ಹೊಟ್ಟುಗ** 'ಪೊಟ್ಟುಗ' ನೋ.

**ಹೊಟ್ಟುಗುಟ್ಟು, ಹೊಟ್ಟುಕುಟ್ಟು** (ಕ್ರಿ). ೧. (ಆಲಂ) ಹುಡಿಗುಟ್ಟು; ಧೂಳೀಪಟಮಾಡು: ಇಟ್ಟಣಿಸಿ ಬಹ ತೇಜಿಗಳ ನೆಱೆಯಟ್ಟಿ ಬಂಡಿಸಿ ಸುಭಟರನು ಬೆನ್ನಟ್ಟಿ ತಿವಿದರು ಮನ್ನೆಯರು ಹದವಱಿದು ನಾಯಕರ ಹೊಟ್ಟುಗುಟ್ಟಿದರು (ನಳಚ. ೯-೨೫); ಪವನಜನೆಬಗಿ ಬಂಡೆಗಳಿಂದಮವರನು ಹೊಟ್ಟುಗುಟ್ಟುತೆ (ರಾಮಾಸಂ. ೫-೩-೪೧). ೨. ಹರಟು; ಗಳಹು; ಜಂಬಹೊಡೆ: ದಿಟ್ಟತನ ಮಿಗೆ ಹೆಂಗಳೆದಿರಲಿ ಹೊಟ್ಟುಗುಟ್ಟದೆ ಹಗೆಗಳೆದಿರಲಿ ಬಿಟ್ಟು ಕೊಂಡೆ ದುರಾತ್ಮ ಮುಱಿದೆ ವಿರಾಟನನ್ವಯವ (ಕುಮ್ವಾವಿ. ೬-೧೭). **ಹೊಟ್ಟುಕುಟ್ಟು**: ೩. ವ್ಯರ್ಥವಾದ ಕೆಲಸದಲ್ಲಿ ತೊಡಗು; ಉಪಯೋಗವಿಲ್ಲದ ಕೆಲಸಕ್ಕೆ ಕೈಹಾಕು: ಹೊಟ್ಟುಕುಟ್ಟೋ ಕೈಗೆ ದಣಿವು; ಹೋಗಿಬನ್ನಿ (ಚಿಕರಾ. ೩೯೯). [ಹೊಟ್ಟು$_2$ (< ಪೊಟ್ಟು) + ಕುಟ್ಟು$_1$]

**ಹೊಟ್ಟುಗೆಱೆ** (ನಾ). ನೀರಿಲ್ಲದೆ, ಹಾಳುಬಿದ್ದ ಕೆರೆ: ಇನಿಯಳ್ವೊದ ಬಟಿಕ್ಕಮೆನ್ನಿರವು . . . ತೀವಿರ್ದ ಜೀವನಮೆಲ್ಲಂ ನೆಱೆ ಪೋದ ಹೊಟ್ಟು [ಪಾಠಾಂ. ಪೊಟ್ಟು] ಗೆಱೆ ತಾನಿರ್ಪಂತೆ (ಅನಂಪು. ೧೨-೨೪; ಕಾವ್ಯಸಾ. ೫೭೩ ನೋ).

[ಹೊಟ್ಟು$_2$ (< ಪೊಟ್ಟು) + ಕೆಱೆ]

**ಹೊಟ್ಟುಬಾವಿ** 'ಪೊಟ್ಟುಬಾವಿ' ನೋ.

**ಹೊಟ್ಟುಹಂಬು** (ನಾ). ಒಂದು ಬಗೆಯ ಬಳ್ಳಿ: (ಮೃಔಗಿ. ೨೨-೪೧೪).
[ಹೊಟ್ಟು$_{?}$ + ಹಂಬು (< ಪರಪು)]

**ಹೊಟ್ಟೆ** 'ಪೊಟ್ಟೆ$_1$' ನೋ.

**ಹೊಟ್ಟೆಉರಿ$_1$** 'ಹೊಟ್ಟೆಯುರಿ$_1$' ನೋ.

**ಹೊಟ್ಟೆಉರಿ$_2$** 'ಹೊಟ್ಟೆಯುರಿ$_2$' ನೋ.

**ಹೊಟ್ಟೆಉರಿಸು** 'ಹೊಟ್ಟೆಯುರಿಸು' ನೋ.

**ಹೊಟ್ಟೆಕಟ್ಟು** (ಕ್ರಿ). ೧. ಮಲಬದ್ಧತೆಯುಂಟಾಗು: ಹಚ್ಚು ನೀರು ಕುಡಿಯದಿದ್ದರೆ ಹೊಟ್ಟೆಕಟ್ಟುತ್ತದೆ (ರೂಢಿ). ೨. (ಆಲಂ) ಅರೆಹೊಟ್ಟೆ ತಿಂದು ಬದುಕು,– ಜೀವಿಸು: ಹೊಟ್ಟೆಕಟ್ಟಿ ಮಕ್ಕಳಿಗೆ ವಿದ್ಯೆ ಕಲಿಸುತ್ತಾನೆ (ಭಾರದ. ೬); ವೊಟ್ಟೆ ಕಟ್ಟಲಿಕೆ ತಿಳಿಯದವ ಹೊಟ್ಟೆ ಕಟ್ಟ್ಯಾನೆ ? (ಗಾದ).
[ಹೊಟ್ಟೆ (< ಪೊಟ್ಟೆ) + ಕಟ್ಟು]

**ಹೊಟ್ಟೆಕಡಿತ** (ನಾ). ೧. ಹೊಟ್ಟೆ ನುಲಿಯುವಿಕೆ: ಕಾಲುಧೂಳು ಹಾಕಿಸಿಕೊಂಡ ಮೇಲ ಹೊಟ್ಟೆಕಡಿತ ನಿಂತಿತು (ರೂಢಿ). ೨. ಹೊಟ್ಟೆನೋವು; ಹೊಟ್ಟೆಶೂಲೆ: ಒಂದು ದಿನ ಹೊಟ್ಟೆಕಡಿತ ಎದ್ದು ಆ ಸೆಟ್ಟಿಯು ಒಮ್ಮಿಂದೊಮ್ಮೆ ಸತ್ತನು (ಮುಂಬಯಿ. ೨-೩೨); ಸಿಕ್ಕಾಬಟ್ಟೆ ತಿಂದು ಈ ಮನುಷ್ಯನಿಗೆ ಹೊಟ್ಟೆಕಡಿತ ಎಂದು ಔಡಲ ಎಣ್ಣೆಯ ಆಶ್ರಯ ಪಡೆಯುವ ಅವಸ್ಥೆ ಬಂದಿರಬೇಕು (ಪ್ರಹಾರ. ೨೬). ೩. (ಆಲಂ) ಚಿಂತೆ; ಕಳವಳ: ಟಿಳಕರ ಹೊಟ್ಟೆ ಕಡಿಯಹತ್ತಿತು. ಆದರೆ ಹೊಟ್ಟೆಕಡಿತದಿಂದೇನಾಗುವಂತಿದೆ? (ಸ್ಮೃತಿಚಿ. ೩೪೬). ೪. ಹೊಟ್ಟೆಕಿಚ್ಚು; ಅಸೂಯೆ: ಅವರವರ ಹೊಟ್ಟೆಕಡಿತ ಅವರವರನ್ನೇ ಸುಡುತ್ತದೆ (ರೂಢಿ). [ಹೊಟ್ಟೆ (< ಪೊಟ್ಟೆ$_1$) + ಕಡಿತ$_1$]

**ಹೊಟ್ಟೆಕಡುಬು** (ನಾ). ಒಳಗೆ ಹೂರಣವನ್ನು ತುಂಬಿ ಮಾಡುವ ಕಡುಬು: ಸಂಜೆಯ ತಿಂಡಿಗೆ ಹೊಟ್ಟೆಕಡುಬನ್ನೇ ಮಾಡಿಬಿಡು (ರೂಢಿ).
[ಹೊಟ್ಟೆ (< ಪೊಟ್ಟೆ$_1$) + ಕಡುಬು (< ಕಡುಂಬು)]

**ಹೊಟ್ಟೆಕಳೆ** (ಕ್ರಿ). ಭೇದಿಯಾಗು; ವಿರೇಚನವಾಗು: ಕೊಳವಳಿಕೆ ಬೀಜ, ಹಂಗರೇಬೀಜ ೧ ಸೊಲ್ಲಗೆ ಪುರುಷರತ್ನ . . . ಇವೆಲ್ಲವನ್ನು ಅರೆದು ರೊಟ್ಟಿಯಂ ಸುಟ್ಟು ಅಡಿಕೆಗಾತ್ರವ ಮೆದ್ದು, ಹೊಟ್ಟೆಕಳೆದವರಿಗೆ . . . ಸರಿಯಾಗಿ ಕೊಡುವುದು (ವಿವೈವಿ. ೬೭); ನಾಯಿಬೇಲದ ಬೇರು, ಬಿಲ್ವದ ಬೇರು, ಹಿಪ್ಪಲಿಮೂಲ ಇಷ್ಟನ್ನೂ ಸಮಾಂಶ ಸೇರಿಸಿ ಕಷಾಯ ಕಾಯಿಸಿ ಕೊಟ್ಟರೆ ಹೊಟ್ಟೆಕಳೆಯುವುದು ಗ್ರಹಣಿ ಸಹ ಮಾಣುವುವು (ಸಕವ್ಯ. ೪೬೮ ಪಂ). [ಹೊಟ್ಟೆ (< ಪೊಟ್ಟೆ$_1$) + ಕಳೆ$_1$]

**ಹೊಟ್ಟೆಕಿಚ್ಚು** 'ಪೊಟ್ಟೆಕಿರ್ಚು' ನೋ.

**ಹೊಟ್ಟೆಕುಟ್ಟು** (ನಾ). ಹೊಟ್ಟೆಯು ನುಲಿಯುವಿಕೆ: ಈ ಲೋಹಸಿಂಧೂರದ ಹತ್ತು ತೂಕಕ್ಕೆ ಶುಂಠಿ, ಹಿಪ್ಪಲಿ . . . ಲವಂಗ ಇವುಗಳನ್ನು ಪ್ರತ್ಯೇಕ ಹನ್ನೆರಡು ವರಹಾ ತೂಕ ಮಾಡಿ. ಜೇನುತುಪ್ಪದಿಂದ ಮರ್ದಿಸಿ, ಅಡಿಕೆ ಪ್ರಮಾಣ ಗುಳಿಗೆಯನ್ನು ಮಾಡಿ ನಿತ್ಯವೂ ಸೇವಿಸೆ ವಾತಪಿತ್ತಜ್ವರ, ಶ್ಲೇಷ್ಮ, ಹೊಟ್ಟೆಕುಟ್ಟು . . . ವಾತರೋಗಗಳು ಸಹ ಗುಣವಾಗುವುವು (ಸಕವ್ಯ. ೯೫). [ಹೊಟ್ಟೆ (< ಪೊಟ್ಟೆ$_1$) + ಕುಟ್ಟು$_2$]

**ಹೊಟ್ಟೆಕೋಲು** (ನಾ). = ಹೊಟ್ಟೆಕಡಿತ ೨: ಹೊಟ್ಟೆಹೋಗುತ್ತ ಇದ್ದುದಕ್ಕೆ:- ಸಜ್ಜರಸವನ್ನು ಪುಡಿಮಾಡಿ ಗಟ್ಟಿಮೊಸರಲ್ಲಿ ಕೊಡಲು ಹೊಟ್ಟೆಕೋಲು, ಆಮರಕ್ತ, ಇವು ಗುಣವಾಗುವುವು (ವಿವೈವಿ. ೧೦೦). [ಹೊಟ್ಟೆ (< ಪೊಟ್ಟೆ$_1$) + ಕೋಲು$_0$ (< ಕೋಳ್)]

**ಹೊಟ್ಟೆಗ** (ನಾ). ದೊಡ್ಡದಾದ ಹೊಟ್ಟೆಯನ್ನು ಉಳ್ಳವನು: "ಪಿಚಂಡಿಳಃ, ಬೃಹತ್ಕುಕ್ಷಿಃ, ತುಂಡಿಳಃ, ಉದರಿಳಃ - ಈ ೪ ಹೊಟ್ಟೆಗಂ" (ಹಲಾಯು. ೯೯-೪೫೪). 'ಹೊಟ್ಟಗ' ಪರಾ. [ಹೊಟ್ಟೆ (< ಪೊಟ್ಟೆ$_1$) + - ಗ$_2$]

**ಹೊಟ್ಟೆಗಟ್ಟು** (ನಾ). ಮಲಬದ್ಧತೆ: ಆದಿತ್ಯಭಕ್ತ:- ಈ ಸಮೂಲವನ್ನು ಅಕ್ಕಿಗಚ್ಚಿನಲ್ಲಿ ಕುಡಿಯಲು ಹೊಟ್ಟೆಗಟ್ಟು ಮಾಣ್ಗುಂ (ವಿವೈವಿ. ೧). [< ಹೊಟ್ಟೆಕಟ್ಟು]

**ಹೊಟ್ಟೆಗಿಚ್ಚು** 'ಪೊಟ್ಟೆಕಿರ್ಚು' ನೋ.

**ಹೊಟ್ಟೆಗೋದಿ** (ನಾ). ದಪ್ಪನಾಗಿರುವ ಒಂದು ಬಗೆಯ ಉತ್ತಮಜಾತಿಯ ಗೋದಿ: (೬). [ಹೊಟ್ಟೆ (< ಪೊಟ್ಟೆ$_1$) + ಗೋದಿ$_1$ (< ಗೋದುವೆ)]

**ಹೊಟ್ಟೆಜಾಡಿಸು** (ಕ್ರಿ). ಭೇದಿಯಾಗು; ಹೊಟ್ಟೆಕಳೆ: ಹೊಟ್ಟೆಜಾಡಿಸುವುದು ನಿಲ್ಲುವುದಕ್ಕಾಗಿ ಔಷಧವೆಂದು ತುಸು ಅಫು ತಕ್ಕೊಂಡರೆ ಅಡ್ಡಿಯಿಲ್ಲ (ಮುಂಬಯಿ. ೪-೪೧). [ಹೊಟ್ಟೆ (< ಪೊಟ್ಟೆ$_1$) + ಜಾಡಿಸು]

**ಹೊಟ್ಟೆಜಾಲಿ** (ನಾ). ಒಂದು ಬಗೆಯ ಜಾಲಿಮರ: ಬಟ್ಟೆಬಟ್ಟೆಯೊಳೆಲ್ಲ ಹೊಟ್ಟೆಜಾಲಿಯ ಮುಳ್ಳು ಹುಟ್ಟಿದವರೆಲ್ಲ ಗಿಜವಾಯಿ ಮೂಡಲ ಬಟ್ಟೆ ಬೇಡೆಂದ (ಸರ್ವಜ್ಞ. ೧೬೦೮); ಹೊಟ್ಟೆಜಾಲಿ, ದೊಡ್ಡಮುಳ್ಳಿನ ಜಾಲಿ, ಆನೆಗೊಬ್ಬಿ, ಗಬ್ಬುಜಾಲಿ (ಮೃಔಗಿ. ೧-೧೫). 'ಹೊದೆಜಾಲಿ' ಪರಾ. [ಹೊಟ್ಟೆ$_{?}$ + ಜಾಲಿ$_1$]

**ಹೊಟ್ಟೆತುಂಬು** (ಕ್ರಿ). ೧. ಉದರವು ಭರ್ತಿಯಾಗು: ಬಟ್ಟಲೊಳಗಿದೆ ಹುಗ್ಗಿಯಂ ಕೈಯಿಟ್ಟು ಕೊಳ್ಳೆ ಎನುತ ನೀಡಿದಡಟ್ಟಹಾಸಂ ಸೂಸೆ ಭೀಮೇಶ್ವರನದಂ ಕೊಂಡು ಹೊಟ್ಟೆತುಂಬಲು ಸವಿದು . . . ತಟ್ಟೆಯಂ ದೇಗುಲದ ಹೊಱಯಿಕೆ ಹಾಯಿಕಿದನು (ಬಸವು. ೩೩-೧೮). ೨. (ಆಲಂ) ಹೊಟ್ಟೆಹೊರೆ; ಹೊಟ್ಟೆಪಾಡು ನೋಡಿಕೊಳ್ಳು: ಎಲ್ಲಿಯಾದರೂ ಕೂಲಿ-ನಾಲಿ ಮಾಡಿ ನಾನೂ ಗೌರಿಯೂ ಹೊಟ್ಟೆತುಂಬಿಕೊಂಡೇವು (ತೇವರೋಡ. ೪೨). ೩. ಊಟ, ತಿಂಡಿ ಮುಂತಾದುವು ದೊರಕಿ ಸಾಕೆನಿಸು; ಸಂತೃಪ್ತಿಯಾಗು: ದೇವರು ನಮಗೆ ಹೊಟ್ಟೆತುಂಬುವಷ್ಟು ಅನುಕೂಲ ಮಾಡಿ ಕೊಟ್ಟಿದ್ದಾನೆ (ರೂಢಿ). [ಹೊಟ್ಟೆ (< ಪೊಟ್ಟೆ$_1$) + ತುಂಬು$_1$]

**ಹೊಟ್ಟೆತೊಳಸು** (ಕ್ರಿ). ಓಕರಿಕೆ ಬರುವಂತಾಗು: ಬೆಳ್ಳಗಿದ್ದದ್ದೆಲ್ಲ ಹಾಲೆಂದು ಕುಡಿದೆವೋ-ಹೊಟ್ಟೆ ತೊಳಸುತ್ತಿಹುದು (ನಲಮು. ೬೭-೨); ಮನೆಯಿಂದ ಹೊರಟು ತೋಟದ ಸುತ್ತಿಗೆ ಬಂದಾಗ ಏಕೋ ಹೊಟ್ಟೆತೊಳಸಿತು (ದೇವಹಂ. ೧೬೧).
[ಹೊಟ್ಟೆ (< ಪೊಟ್ಟೆ$_1$) + ತೊಳಸು$_2$ (< ತೊಟಸು$_1$)]

**ಹೊಟ್ಟೆನುಲಿ$_1$** (ಕ್ರಿ). ಹೊಟ್ಟೆಯೊಳಗೆ ತಿರುಚಿದಂತಾಗು,– ಹಿಂಡಿದಂತಾಗು: ಹೊಟ್ಟೆನುಲಿಯುವುದಕ್ಕೆ: - ದೇವಗಂಟೆಯ ರಸದಲ್ಲಿ ಉಳ್ಳಿ, ಮೆಣಸು ಅರೆದು . . . ಮೂಱು ದಿನ ಕೊಳ್ಳಲು ಹೊಟ್ಟೆಕಚ್ಚುವುದು ಮಾಣ್ಗುಂ (ವಿವೈವಿ. ೬೬).
[ಹೊಟ್ಟೆ (< ಪೊಟ್ಟೆ$_1$) + ನುಲಿ$_1$]

**ಹೊಟ್ಟೆನುಲಿ$_2$** (ನಾ). ಹೊಟ್ಟೆಯೊಳಗೆ ತಿರುಚಿದಂತಾಗುವಿಕೆ,– ಹಿಂಡಿದಂತಾಗುವಿಕೆ: ಅಫೀಮನ್ನು ಸೇರಿಸಿಕೊಂಡು ಒಂದು ಗುಳಿಗೆಯನ್ನು ಅನುಪಾನವರಿತು ತೆಗೆದುಕೊಂಡರೆ ರಕ್ತಗ್ರಹಣೀ, ಹೊಟ್ಟೆನುಲಿ, ಸಂಗ್ರಹಣಿ ಸಹ ನಿಲ್ಲುವುವು (ಸಕವ್ಯ. ೪೮೪ ಪಂ). [ಹೊಟ್ಟೆ (< ಪೊಟ್ಟೆ$_1$) + ನುಲಿ$_2$]

**ಹೊಟ್ಟೆನೆತ್ತರು** (ನಾ). ರಕ್ತಭೇದಿ; ರಕ್ತಾತಿಸಾರ: ಸುಣ್ಣ ಒಂದು ಭಾಗ, ಬೆಲ್ಲ ಎರಡು ಭಾಗ, ಇವಂ ಎಣ್ಣೆಯಲ್ಲಿ ಕಲಸಿ ಲೇಪನಂ ಮಾಡೆ ಹೊಟ್ಟೆನೆತ್ತರು ಮಾಣ್ಗುಂ (ವಿವೈವಿ. ೧೨೨). [ಹೊಟ್ಟೆ (< ಪೊಟ್ಟೆ$_1$) + ನೆತ್ತರು (< ನೆತ್ತರ್)]

**ಹೊಟ್ಟೆನೊಳ** (ನಾ). ಒಂದು ಬಗೆಯ ಸಸ್ಯ: ಹೊಟ್ಟೆನೊಳ, ತೊಟ್ಟಿಲೆ (ಮೃಔಗಿ. ೬-೯೯). [?]

**ಹೊಟ್ಟೆನೋಯು** (ಕ್ರಿ). ೧. ಹೊಟ್ಟೆಯಲ್ಲಿ ನೋವುಂಟಾಗು,– ಶೂಲೆಯೇಳು: ಇಕ್ಕಲಾಚೆ ಕೈ ಎಂಜಲು ಚಿಕ್ಕ ಮಕ್ಕಳು ಅಳುತಾರೆ ಹೋಗೋ ದಾಸಯ್ಯ . . . ಹೊಟ್ಟೆನೋಯುತಲಿದೆ ಹೋಗೋ ದಾಸಯ್ಯ (ಪುರಂದ. ೧-೧೩೧-೨); ಹೊಟ್ಟೆನೋಯುವುದಕ್ಕೆ:- ಮಾವಿನ ಬೀಜದ ತಿರುಳಂ ಪುಡಿಮಾಡಿ ಅಂಬಿಲ, ಮಜ್ಜಿಗೆಯಲ್ಲಿ ಅರೆದು ಕುಡಿಯೆ ಆಗಲೇ ನಿಲ್ಲುವುದು (ವಿವೈವಿ. ೧೨೯). ೨. (ಆಲಂ) ಅಸೂಯೆಯುಂಟಾಗು; ಹೊಟ್ಟೆಯುರಿಯುಂಟಾಗು: ಒಬ್ಬರ ಏಳಿಗೆಯನ್ನು ಕಂಡು ಹೊಟ್ಟೆನೋಯುವುದಾದರೆ ಮನಸ್ಸಿನ ಆರೋಗ್ಯಹಾಳು (ರೂಢಿ).
[ಹೊಟ್ಟೆ (< ಪೊಟ್ಟೆ$_1$) + ನೋಯು (< ನೋ)]

**ಹೊಟ್ಟೆನೋವು** (ನಾ). ೧. = ಹೊಟ್ಟೆನುಲಿ$_2$: ಹರಳ ಬೇರನ್ನು ಹಾಲಿನಲ್ಲಿ ಹಾಕಿ ಕಾಯಿಸಿ, ಆ ಹಾಲಂ ಕುಡಿಯಲು ವಾತಜ್ವರ, ಹೊಟ್ಟೆನೋವು ಸಹ ಮಾಣ್ಗುಂ (ಸಕವ್ಯ. ೬೬); ಹೊಟ್ಟೆನೋವಿಳಿಯುತಿರೆ ರಟ್ಟೆ ನೋವೆನ್ನುವುದು ಮಟ್ಟಸವೆ ತಿರೆಹರವು? (ಮಂಕುಕ. ೩೫೯). ೨. (ಆಲಂ) ಹೊಟ್ಟೆಯುರಿ; ಅಸೂಯೆ: ಮತ್ತೊಬ್ಬರ ಏಳಿಗೆಯನ್ನು ಕಂಡು ಹೊಟ್ಟೆನೋವನ್ನು ತಂದುಕೊಂಡರೆ ಅವರ ಮನಸ್ಸಿನ ನೆಮ್ಮದಿಗೇ ಭಂಗ (ರೂಢಿ). [ಹೊಟ್ಟೆ (< ಪೊಟ್ಟೆ$_1$) + ನೋವು]

**ಹೊಟ್ಟೆಪಾಡು** (ನಾ). (ಆಲಂ) ಊಟಕ್ಕಾಗಿ ಪಡುವ ಪಾಡು; ಜೀವನೋಪಾಯ; ಬದುಕು: ಹೊಟ್ಟೆಪಾಡಿಗೆ, ನಾನು ಕೈಹಾಕಿದ ಕಸಬಿಗೆ ಲೆಕ್ಕವಿಲ್ಲ! (ವೀರಯೋ. ೮೪); ಅಪರು ಹೊಟ್ಟೆಪಾಡಿಗಾಗಿ ವಿದ್ಯೆ ಹೇಳಿಕೊಡೋ ನಾಡಾಡಿ ಗುರುಗಳಲ್ಲ (ಹೇಮಕೂ. ೧೦); ಹೊಟ್ಟೆಪಾಡಿಗೋಸ್ಕರ ನಾನು ಗುಮಾಸ್ತಗಿರಿಯ ಶಿಖರವನ್ನೇರಿದ್ದೆ (ರಾಯಕ. ೩೭). [ಹೊಟ್ಟೆ (< ಪೊಟ್ಟೆ$_1$) + ಪಾಡು$_3$]

**ಹೊಟ್ಟೆಬಾಕ** (ನಾ). ಮಿತಿಮೀರಿ ತಿನ್ನುವವನು; ತಿನ್ನಾಳಿ: ಗಟ್ಟಿಯಾಗಿ ಎರಡು ಮೂಱು ಬಾರಿಯುಂಡರೆ ಹೊಟ್ಟೆಬಾಕನೆಂದು ತೆಗಳಾಡುವರಯ್ಯ (ಪುರಂದ. ಧಾ. ೨-೪೦-೩); ಹೊಟ್ಟೆಬಾಕರು ಸುಳ್ಳುಮಾತುಗಳಿಂದಲೇ ಹೊಟ್ಟೆಹೊರೆದುಕೊಳ್ಳುವರು (ಕಥಾಮಂ. IV, ೩). [ಹೊಟ್ಟೆ (< ಪೊಟ್ಟೆ$_1$) + - ಬಾಕ]

**ಹೊಟ್ಟೆಬಾಕತನ** (ನಾ). ಮಿತಿಮೀರಿ ತಿನ್ನುವಿಕೆ: ಹೋಟೆಲ್‌ಗಳಲ್ಲಿ ಊಟಮಾಡುತ್ತ ಹೋದಲ್ಲಿ ಹೊಟ್ಟೆಬಾಕತನ ಕಡಿಮೆಯಾಗುತ್ತೆ (ನಾಡಿಗೇ. ೨೦೦).
[ಹೊಟ್ಟೆಬಾಕ + - ತನ]

**ಹೊಟ್ಟೆಬಾಗೆ** (ನಾ). ಒಂದು ಬಗೆಯ ಸಸ್ಯ: ಹೊಟ್ಟೆಬಾಗೆ, ಕಲ್ಬಾಗೆ (ಮೈಔಗಿ. ೪-೬೫). [ಹೊಟ್ಟೆ$_?$ + ಬಾಗೆ$_1$]

**ಹೊಟ್ಟೆಬೇನೆ** 'ಪೊಟ್ಟೆಬೇನೆ' ನೋ.

**ಹೊಟ್ಟೆಮರ** (ನಾ). ಗಾಡಿಯ ಚಕ್ರದ ಸುತ್ತ ಇರುವ ಮರದ ಪಟ್ಟಿ: ಗಾಡಿಯ ಚಕ್ರದ ಹೊಟ್ಟೆಮರ ಸೀಳಿಹೋಯಿತು (ರೂಢಿ). [ಹೊಟ್ಟೆ (< ಪೊಟ್ಟೆ$_1$) + ಮರ$_1$]

**ಹೊಟ್ಟೆಯಂಬಲಿ** (ನಾ). ೧. ಹೊಟ್ಟೆಗೆ ಬೇಕಾಗುವ ಅಂಬಲಿ. ೨. (ಆಲಂ) ಜೀವಿಸಲು ಬೇಕಾಗುವ ಊಟ,— ಆಹಾರ: ಕಟ್ಟಕಡೆಯಲಿ ಭೀಮನಿಕ್ಕುವ ಹೊಟ್ಟೆಯಂಬಲಿ ತಪ್ಪಲರಿಯದೆನುತ್ತ ಹೊಱವಂಟ (ನಿಭಾಗ. ೩-೧-೨೧).
[ಹೊಟ್ಟೆ (< ಪೊಟ್ಟೆ$_1$) + ಅಂಬಲಿ$_1$]

**ಹೊಟ್ಟೆಯಿಳಿ** (ಕ್ರಿ). ಗರ್ಭಸ್ರಾವವಾಗು; ಮೈಯಿಳಿ: "ಅಪತೋಕಾ, ಸ್ರವದ್ಗರ್ಭಾ- ಹೊಟ್ಟೆಯಿಳಿದ ಆಕಳು, ಗರ್ಭಸ್ರಾವವಾದ ಆಕಳು, ಕಂದು ಹಾಕಿದ ಹಸುವು" (ಸಿದ್ಧಾಂತಿ. ೨೯೪). [ಹೊಟ್ಟೆ (< ಪೊಟ್ಟೆ$_1$) + ಇಳಿ$_1$ (< ಇೞಿ$_1$)]

**ಹೊಟ್ಟೆಯುಬ್ಬರ** (ನಾ). ಉದರವು ಊದಿಕೊಳ್ಳುವಿಕೆ; ಹೊಟ್ಟೆಯ ಊತ: ಚಿತ್ರಮೂಲದ ರಸದಿಂ ಇಂಗು, ಗರುಗದ ರಸದಲ್ಲಿ ಕೊಡಲು, ಹೊಟ್ಟೆಯುಬ್ಬರ, ಸರ್ವಶೂಲೆಗಳು ಮಾಣುವುವು (ವಿಷ್ವವಿ. ೪೭); ಕ್ಷೀರಧಾರಾ(ನೊರೆಹಾಲು) ಗುಣ- ಇದನ್ನು ಸೇವಿಸಲು . . . ಹೊಟ್ಟೆಯುಬ್ಬರ, ಉದರಶೂಲೆ, ಅತಿಸಾರ, ಗುಲ್ಮ ಮೊದಲಾದ ವ್ಯಾಧಿಗಳು ಗುಣವಾಗಿ ಅಗ್ನಿಯುಂಟಾಗುವುದು (ಸಕವೈ. ೨೮).
[ಹೊಟ್ಟೆ (< ಪೊಟ್ಟೆ$_1$) + ಉಬ್ಬರ (< ಉರ್ವರ)]

**ಹೊಟ್ಟೆಯುರಕ** (ನಾ). ಹೊಟ್ಟೆಯುರಿಪಡುವವನು; ಕರುಬುವವನು: ಹೊಟ್ಟೆಯುರಕರು ಅವರನ್ನು ನಿಂದಿಸತೊಡಗಿದರು (ರೂಢಿ).
[< ಹೊಟ್ಟೆಯುರಿ$_2$ + - ಕ$_2$]

**ಹೊಟ್ಟೆಯುರಿ$_1$, ಹೊಟ್ಟೆಉರಿ$_1$** (ಕ್ರಿ). ೧. (ಅನಾರೋಗ್ಯದಿಂದ) ಹೊಟ್ಟೆಯೊಳಗೆ ಸಂಕಟ ಅಥವಾ ಉರಿಯುಂಟಾಗು: ಬೆಳಗಿನಿಂದ ಯಾಕೋ ಹೊಟ್ಟೆಯುರಿಯುತ್ತಿದೆ (ರೂಢಿ). ೨. (ಆಲಂ) ಕರುಬು; ಅಸೂಯೆಪಡು: ಆ ದಿನ ಅವನ ರೂಪನ್ನು ಕಂಡು ಕಾಲೇಜಿನ ಹುಡುಗಿಯರೆಲ್ಲ ಹೊಟ್ಟೆಯುರಿದುಕೊಂಡರು (ಆಲಹೂ. ೯). **ಹೊಟ್ಟೆಉರಿ$_1$** : ೧. ಹೊಟ್ಟೆಉರಿಯುವುದಕ್ಕೆ:- ಈಶ್ವರೀಬೇರು, ಅಗಳುಶುಂಠಿಯ ಬೇರು, ಇವಂ ನೀರಲ್ಲಿ ಅರೆದು ಕುಡಿಯೆ ಹೊಟ್ಟೆಉರಿ ಮಾಣ್ಗುಂ (ವಿಷ್ವವಿ. ೧೨೫). [ಹೊಟ್ಟೆ (< ಪೊಟ್ಟೆ$_1$) + ಉರಿ$_1$]

**ಹೊಟ್ಟೆಯುರಿ$_2$, ಹೊಟ್ಟೆಉರಿ$_2$** (ನಾ). ೧. (ಅನಾರೋಗ್ಯದಿಂದ) ಹೊಟ್ಟೆಯೊಳಗೆ ಉಂಟಾಗುವ ಉರಿ,— ಸಂಕಟ: ಯಾವ ಔಷಧವೂ ಅವರ ಹೊಟ್ಟೆಯುರಿಯನ್ನು ಗುಣಮಾಡಲಿಲ್ಲ (ರೂಢಿ). ೨. (ಆಲಂ) ಅಸೂಯೆ; ಹೊಟ್ಟೆಕಿಚ್ಚು: ಮತ್ತೊಬ್ಬರು ಏನಾದರೂ ಹೆಸರು ಮಾಡಿಕೊಂಡರೆ ಸಾಕು. ಅವರ ವಿಷಯಕ್ಕೆ ಇಲ್ಲದ ಹೊಟ್ಟೆಯುರಿ ಬಂದುಬಿಡುತ್ತ (ಆಲಹೂ. ೪೫). **ಹೊಟ್ಟೆಉರಿ$_2$**: ೧. ಈಶ್ವರೀಬೇರು, ಅಗಳು ಶುಂಠಿಯ ಬೇರು, ಇವಂ ನೀರಲ್ಲಿ ಅರೆದು ಕುಡಿಯೆ ಹೊಟ್ಟೆಉರಿ ಮಾಣ್ಗುಂ (ವಿಷ್ವವಿ. ೧೨೫). ೨. ಅಲ್ಲಿ ಮೇಷ್ಟ್ರುಗಳಿಗೆಲ್ಲಾ ನನ್ನ ಮೇಲೆ ಹೊಟ್ಟೆಉರಿ (ನಿರಾತ. ೮೫). [ಹೊಟ್ಟೆ (< ಪೊಟ್ಟೆ$_1$) + ಉರಿ$_2$]

**ಹೊಟ್ಟೆಯುರಿಸು, ಹೊಟ್ಟೆಉರಿಸು** (ಕ್ರಿ). (ಆಲಂ) ನೋಯುವಂತೆ ಮಾಡು; ನೋಯಿಸು: ಎಷ್ಟು ಸಲ ನನ್ನ ಕಣ್ಣ ಮುಂದೆಯೆ ಅವಳು . . . ಶ್ರೀಪತಿಯ ಸಂಗಡ ಬಿನ್ನಾಣ ಬೀರುತ್ತ ನಡೆದು ಹೋಗಿಲ್ಲ! ಬರೀ ನನ್ನ ಹೊಟ್ಟೆಯುರಿಸುವುದಕ್ಕಾಗಿಯೆ (ಹೂಸಕ್ಕಿ. ೧೩). **ಹೊಟ್ಟೆಉರಿಸು:** ಅವರ ಹೊಟ್ಟೆಉರಿಸುವುದು ಹೊರತು ನಮಗೆ ದ್ವೈತವನದಲ್ಲಿ ಬೇರೆ ಕೆಲಸವಿಲ್ಲ (ವಚಭಾ. ೧೫೯). [ಹೊಟ್ಟೆ (< ಪೊಟ್ಟೆ$_1$) + ಉರಿಸು]

**ಹೊಟ್ಟೆಶೂಲೆ** (ನಾ). ಉದರದೊಳಗೆ ಉಂಟಾಗುವ ತೀವ್ರವಾದ ನೋವು,— ವೇದನೆ; ಹೊಟ್ಟೆನೋವು: ಸುಣ್ಣವನ್ನು ಬೆಣ್ಣೆಯನ್ನು ಕೂಡಿ ಕಲಸಿ ನುಂಗಲು ಹೊಟ್ಟೆಶೂಲೆ ಹರ (ವಿಷ್ವವಿ. ೧೨೫). [ಹೊಟ್ಟೆ (< ಪೊಟ್ಟೆ$_1$) + ಶೂಲೆ]

**ಹೊಟ್ಟೆಸಂಕಟ** (ನಾ). ತನ್ನ ಸ್ವಂತ ಮಕ್ಕಳು ಹಾಗೂ ತನಗೆ ಸಂಬಂಧಿಸಿದವರ ಬಗ್ಗೆ ಉಂಟಾಗುವ ದುಃಖ,— ಅಳಲು: ನಾನು ನನ್ನ ಹೊಟ್ಟೆಸಂಕಟಕ್ಕೆ ಅಂದರೆ, ಇವರಿಬ್ಬರು ನನ್ನ ಮೇಲೆ ಉರಿದು ಬಿದ್ದಿದ್ದಾರೆ (ಮರಮ. ೧೪೭).
[ಹೊಟ್ಟೆ (< ಪೊಟ್ಟೆ$_1$) + ಸಂಕಟ]

**ಹೊಟ್ಟೆಹರಿ** 'ಹೊಟ್ಟೆಹಱಿ' ನೋ.

**ಹೊಟ್ಟೆಹಱಿ, ಹೊಟ್ಟೆಹರಿ** (ಕ್ರಿ). ಉದರವನ್ನು ಸೀಳಿದಂತಾಗು; ಹೊಟ್ಟೆಯಲ್ಲಿ ತೀವ್ರವಾದ ವೇದನೆಯಾಗು,-ಸಂಕಟವಾಗು: ನಾಲ್ಕುವರುಷದ ಕೂಸಂ ಶಂಕಿನಿಯೆಂಬ ದೇವತೆ ಪಿಡಿದೊಡೆ . . . ನಾಲಗೆ ಪೊಣಗುಗುಂ ಹೊಟ್ಟೆಹಱಿವುದುಂ ಮೂಗನೊರಸಿ ಕೊಳ್ಳುಗುಂ (ಬಾಲಚ. ೧೩೨-೭). **ಹೊಟ್ಟೆಹರಿ:** ಮೈಭಾರವು . . . ಜಾಡ್ಯವು, ಹೊಟ್ಟೆಹರಿವುದು ಇವು ಮುಂತಾದುಪದ್ರವಂಗಳಿಂದೊಡಗೂಡಿದುದೆ ಶ್ಲೇಷ್ಮಜನ್ಯ ವಿಷೂಚಿಯೆಂದರಿವುದು (ಸಕವೈ. ೩೫೮).
[ಹೊಟ್ಟೆ (< ಪೊಟ್ಟೆ$_1$) + ಹಱಿ$_1$ (< ಪಱಿ$_1$)]

**ಹೊಟ್ಟೆಹೊರಕ, ಹೊಟ್ಟೆಹೊರೆಕ** (ನಾ). ೧. ತನ್ನ ಹೊಟ್ಟೆಯನ್ನು ತುಂಬಿಕೊಳ್ಳುವುದರಲ್ಲಿಯೇ ಆಸಕ್ತನಾದವನು: ಚಕ್ರವರ್ತಿಗೆ ಸೇರಿದ ಕಾಡುಗಳಲ್ಲಿ ಹುಲ್ಲುಪುಳ್ಳೆಗಳನ್ನು ಶೇಖರಿಸಿಕೊಳ್ಳುತ್ತಿದ್ದ ಹೊಟ್ಟೆಹೊರಕರು, ಗುಡ್ಡಗಾಡಿನ ದರೋಡೆಕೋರರು (ಪುನರು. ೪೧೩). ೨. (ಆಲಂ) ಸ್ವಾರ್ಥಿ: ಮೆಟ್ಟಿ ನಡೆದು ಬಹ ಪಗೆವಡೆಗಂಡು ಕಣ್ಗೆಟ್ಟೆಡಬಲಕೆ ತೊಲಗುವ ಹೊಟ್ಟೆಹೊರಕ ರಾವುತರ ಗಂಡನಾ ದೇವಿಸೆಟ್ಟಿಯ ಲಿಂಗನೆಯ್ದಿದನು (ಕುರಾಸಾಂ. ೧೧-೫೬). **ಹೊಟ್ಟೆಹೊರೆಕ:** ೨. ರಾಯ ನೊಂದನು ಹರಿಬಕಿಲ್ಲದ ನಾಯಕರ ಸುಡು ಹೊಟ್ಟೆಹೊರಕರ ವಾಯಕಿವದಿರ ಸಂತವಿಟ್ಟನು ಸ್ವಾಮಿಕಂಟಕರ (ಕುವ್ಯಾದ್ರೋ. ೧೦-೫೮).
[ಹೊಟ್ಟೆಹೊರೆ + - ಕ$_2$]

**ಹೊಟ್ಟೆಹೊರೆ** (ಕ್ರಿ). (ಆಲಂ) ಜೀವನಕ್ಕೆ ಮಾರ್ಗವನ್ನು ಕಂಡುಕೊಳ್ಳು; ಬದುಕು: ಕೂಳಿನಾಸೆಗೆ ಹೊಟ್ಟೆಹೊರೆವುತಲಿರ್ದರು (ಅಬ್ಬಲೂ. ೩-೧೨೨); ಚಂದ್ರನ ಅಳಿಯನ ಮಗನ ಮಾವನ ದ್ವಾರ ಹೊಂದಿ ಕಾಯಿದು ಹೊಟ್ಟೆಹೊರೆದು ಚಂದ್ರಗುಪ್ತನ ಮಗಳಿಗೆ ಪೊಲಿದವ (ಸೌಂದಕಾ. ೬-೨); ಒಂದು ಗುಡಿಸಿಲಿನಲ್ಲಿ ಮಗಳೊಡನೆ ವಾಸ ಮಾಡಿಕೊಂಡು ಕೂಲಿಯಿಂದ ಹೊಟ್ಟೆಹೊರೆದುಕೊಳ್ಳುತ್ತಿದ್ದಳು (ಬಂಕಿಮ. ೧೩೨).
[ಹೊಟ್ಟೆ (< ಪೊಟ್ಟೆ$_1$) + ಹೊರೆ$_1$ (< ಪೊರೆ$_1$)]

**ಹೊಟ್ಟೆಹೊರೆಕ** 'ಹೊಟ್ಟೆಹೊರಕ' ನೋ.

**ಹೊಟ್ಟೆಹೋಗು** (ಕ್ರಿ). ಭೇದಿಯಾಗು; ವಿರೇಚನವಾಗು: ಬಾಯಾರಿಕೆಯು, ಜ್ವರವು, ಒಳತಾಪವು, ಮೂರ್ಛೆಯು ವೆಗ್ಗಳವಾಗಿ ಹೊಟ್ಟೆಹೋಗುವುದು, ಪ್ರಲಾಪವು ಇನಿತು ಉಂಟಾಗಿರ್ಪುದೇ ಪಿತ್ತಜವಿಷೂಚಿಯೆಂದು ತಿಳಿವುದು (ಸಕವೈ. ೩೫೮).
[ಹೊಟ್ಟೆ (< ಪೊಟ್ಟೆ$_1$) + ಹೋಗು$_1$ (< ಪೋ$_1$)]

**ಹೊಟ್ಟೇಳು** (ಕ್ರಿ). (ಆಲಂ) ನಾಶವಾಗು; ಹಾಳಾಗು: ಏಕಾದಶಕ್ಷೋಹಿಣಿ ಜನಪದಂ ನಿನ್ನನುಜರಾತ್ಮಜರು ಗಜಹಯರಥಂ ಬಿರಿದು ಬಾವುಲಿಗಳು ಹೊಟ್ಟೆದ್ದು ಪೆಗಲ ಗದೆಯಿಂದೋರ್ವನಾಗಿ ಕಂಗೆಟ್ಟು ಕಾಲ್ನಡೆಗಳಿಂದೈತಂದೆ (ತುರಂಗ. ೭೩-೫೨).
[ಹೊಟ್ಟು$_2$ (< ಪೊಟ್ಟು) + ಏಳು$_1$ (< ಏೞ್$_1$)]

**ಹೊಟ್ಲು** (ನಾ). ಬೀಡು; ನೆಲೆ (?): ಭದ್ರಪ್ಪನಾಯಕರ ಪುತ್ರರಾದ ವೀರಭದ್ರ ನಾಯಕರು ಕೊಟ್ಟ ಭೂದಾನ ಧರ್ಮದ ತಾಂಮ್ರಶಾಸನದ ಕ್ರಮವೆಂತ್ತೆಂದರೆ ಮಂತಸಾಲೆಯ ಸೀಮೆವಳಗಣ ಬ್ರಾಂಹ್ಮಣವಾಡದ ಹೊಟ್ಲು ಸರುಹಿನ ಗ್ರಾಮ ೧ ಕೆ . . . ಅಯಿವತ್ತು ವಂದು ವರಹನು . . . ಪ್ರಾಕು ಮರಿಯಾದೇಲಿ ಆಗುಮಾಡಿಕೊಂಡು . . . ಮಠಧರ್ಮಕೆ ನಡಸಿಕೊಂಡು ಸುಖದಿಂ ಅನುಭವಿಸಿ ಬಹಿರಿ ಎಂದು ಕೊಟ್ಟ ಧರ್ಮಶಾಸನ (ಎಕ. VIII. ತೀರ್ಥಹ. ೫೮-೧೨; 1630). [?]

**ಹೊಡಕಣೆ** (ನಾ). ಹೊಡೆತ; ಏಟು; ಪೆಟ್ಟು: ಈತಗಳ್ಪೊಡಿದರು ಭೀಮಸೇನನ ಗದಾಘಾತದೋಳ್ಪೊಡೆಯುಡಿದು ರಕ್ತಪ್ರವಾಹದೋಳ್ಪೂತಳಂ ಕೆಸರೆದ್ದಿರಲ್ಕದರ ಮೇಲ್ಬಿದ್ದು ನರಳುತಂ ಹೊಡಕಣೆಯೊಳು ಧಾತುಗಳ್ಸೆಪ್ಪಿರ್ದ ನೃಪತಿ ಕೆಲಬಲದಿ ಖಗಜಾತಗಳ್ಜಂಬುಕಾದಿಗಳು ತಿನ್ನಲಿಕೆ ಬಂದಾತುಕೊಂಡಿಹ ಕಾಲಮಂ ನೋಡಿ ಶೋಕಮಂ ಮಾಡಿದರು (ತುರಂಗ. ೭೭-೫೧). [ಹೊಡಕು$_1$ + - ಅಣೆ$_4$]

**ಹೊಡಕರಿಸು** 'ಪೊಡಕರಿಸು' ನೋ.

**ಹೊಡಕಿಸು** (ಕ್ರಿ). ಹೊಡೆದು ಬೀಳಿಸು: ಹೊಡಕಿಸಿದನೊಂಭತ್ತುಶರದಿ ಸಹದೇವನಂ . . . ಕಲಿಕರ್ಣನು (ತುರಂಗ. ೬೨-೧೭). [ಹೊಡಕು$_1$ + - ಇಸು$_3$]

**ಹೊಡಕು$_1$** (ಕ್ರಿ). ೧. ಹೊಡೆ; ಬಡಿ: ಒಡನೆ ಧೀರವರಾಹನಸುರನ ತುಡುಕಿ ಮೇಲ್ಪರಿದಾರ್ದು ನೆತ್ತಿಯ ಹೊಡಕಿದರೆ ಧಿಮ್ಮಿಟ್ಟು ಬಿದ್ದನು ಶೈಲಸದೃಶದಲಿ (ಆಸಂರಾ. ೧-೪-೩೦). ೨. ಪೆಟ್ಟಿನಿಂದ ನರಳು: ಕಡಿದ ಕಾಲ್ಗಳು ಉಡಿದ ಮುಂಡಗಳು ಮಿಡಿಮಿಡಿದು ಮಿಡಿಕುತಿರ್ದವು ಕೆಲವು ಖಂಡೆಯದ ಘಾಯದಿಂ ಹೊಡಕುತಿರ್ದವು ಕೆಲವು (ತುರಂಗ. ೪೭-೩೦); ಒಡೆದ ಮೈರಕ್ತದಿಂ ಬಿಡುದಲೆಯ ಕೇಶದಿಂ ಹೊಡಕುತಿರ್ದುದು ಬಲಂ (ತುರಂಗ. ೭೧-೩೮). [ಹೊಡ್ಡೆ$_1$ + - ಕು$_0$]

**ಹೊಡಕು$_2$** (ನಾ). ಹೊಡೆದಾಟ; ಜಗಳ: "ಹೊಡಕೆಂದೊಡೆ [ಪಾಠಾಂ. ತೊಡರೆಂದೊಡೆ] ಕೋಟಿಯಕ್ಕುಂ" (ಭಾರನಿ. ೨೨). [< ಹೊಡಕು$_1$]

**ಹೊಡಕೆ, ಹೊಡ್ಡೆ$_5$** (ನಾ). ಒಂದು ಬಗೆಯ ಜೊಂಡುಹುಲ್ಲು: ಘಟ್ಟಿವಾಳಯ್ಯಗಳು ಅಲ್ಲಿಂದ ಪೋಗಿ ಒಂದು ಪಿರಿದಪ್ಪ ಗುಂಡಂ ತಂದು ಬಸವರಾಜದೇವರ ಮಠದ ಬಾಗಿಲಲ್ಲಿ ನಿಲಿಸ ಹೊಡಕೆಯ ಕಣ್ಣೆಯಿಂದ ತಮ್ಮ ಕೊರಳಿಗೆ ಧರಿಸಿಕೊಂಡು ಆ ಜಂಗಮದೇವರುಗಳ ಮರಳಿ ವಿಡಂಬಿಸುವ ಪ್ರಸ್ತಾವದ ವಚನ (ಶೂನ್ಯಸಂ. ೨೬೮-೧೮); ಮದ್ದಾನೆಯು ಹೊಡಕೇಮಡುವನ್ನು ಹೊಕ್ಕು ತುಳಿಯುವ ಚಂದದಿಂದ (ಕೃವಾವಿ. ೧೦೭). **ಹೊಡ್ಕೆ**: ಹೊಡೆ, ಹೊಡಕೆ (ಮೈಶಿಗಿ. ೪೭-೧೧೪೦). [?]

**ಹೊಡಕೆಹುಲ್ಲು** (ನಾ). ಜೊಂಡುಹುಲ್ಲು: ಮುಂಜಿಹುಲ್ಲು, ಹೊಡಕೆಹುಲ್ಲು (ಮೈಶಿಗಿ. ೭೭-೧೩೬೭). [ಹೊಡಕೆ + ಹುಲ್ಲು (< ಪುಲ್)]

**ಹೊಡಗೆಡಹು** 'ಹೊಡೆಗೆಡಹು' ನೋ.

**ಹೊಡಚು** (ಕ್ರಿ). (ಹತ್ತಿ ಮೊದಲಾದುವನ್ನು ಬಡಿದು) ಶುದ್ಧಿಗೊಳಿಸು: ಕರಣಾದಿ ಗುಣ ಕಸವ ಕಳೆದು ಭೂರುಹ ಹಿಂಜಿ ಅರಳೆಯಂ ಹೊಡಚಿ ಹೊಸೆದನು ಮಾಡಿದಾ ಹಂಜಿ (ತರಚ. ೪೭); ಎಡೆಗೆಡೆಗೆ ಹತ್ತಿಗಳ ಹೊಜೆಗಳ ಹೊಡಚಿದರಳೆಯ ಸುತ್ತಿದರು (ತೂರರಾ. ೯-೮-೮). [ಹೊಡ್ಡೆ$_1$ (< ಪೊಡ್ಡೆ$_1$) + - ಚು$_1$]

**ಹೊಡಬಾಳು** 'ಹೊಡಬಾಳು' ನೋ.

**ಹೊಡಮಗುಚು** 'ಪೊಡೆಮಗುಚು' ನೋ.

**ಹೊಡಮಡು** 'ಪೊಡೆವಡು' ನೋ.

**ಹೊಡಮರಳು** 'ಪೊಡೆಮರಳ್' ನೋ.

**ಹೊಡಮೊಗೆ** (ನಾ). ಹೊಟ್ಟೆಯನ್ನು ಕೆಳಗೆ ಮಾಡುವಿಕೆ; ಬೋರಲು ಬೀಳುವಿಕೆ: ಹೊಡಮೊಗEಗೆತೆಯ ಕಲಿಯೆ ಜತಿಗಳಿಗೆ ದೃಢವಾಯ್ತು ಮನ (ಪ್ರಭುಪು. ೪-೧೨). [< ಪೊಡ್ಡೆ$_3$ + ಮೊಗೆ$_1$]

**ಹೊಡಯ್ಸು** 'ಪೊಡೆಯಿಸು' ನೋ.

**ಹೊಡಲು** (ನಾ). ಬೀಡು; ನೆಲೆ (?): ಒಡಲಂ . . . ಸುಖಮುಖಮುದ್ರೆಯ ಹೊಡಲಂ ಬಿಡಲಜಿಯದಂಗೆ ನಿರ್ವೃತಿಯುಂಟೇ (ಪುಷ್ಪಪು. ೧೩-೩೩). 'ಹೊಟ್ಲು' ಪರಾ. [< ಪೊಟ್ಟಳ ?]

**ಹೊಡವಂಡಿಸು** 'ಪೊಡೆವಡಿಸು' ನೋ.

**ಹೊಡವಂಡು** 'ಪೊಡೆವಡು' ನೋ.

**ಹೊಡವಡಿಸು** 'ಪೊಡೆವಡಿಸು' ನೋ.

**ಹೊಡವಡು** 'ಪೊಡೆವಡು' ನೋ.

**ಹೊಡಸೆಂಡು** 'ಪೊಡೆಸೆಂಡು' ನೋ.

**ಹೊಡಹು** (ಕ್ರಿ). ಹೊಡೆ; ಬಡಿ: ಕಾರುಕನ ಬುದ್ಧಿಯಂತೆ ಅಡಿಗೆ ನೀನಾಗಿ ಹೊಡಹುದಕ್ಕೆ ನೀನಾಗಿ ಎರಡಟಿ ನಡುವೆ ಹೊಡಿಸಿಕೊಂಬುದಕ್ಕೆ ನೀನಾಗಿ ತನ್ನ ವಂಶ ತನಗೆ ಹಗೆಯಾಗಿ ಕೊಡಲಿಯ ಕಾವು ಕುಲಕ್ಕೆ ಮೃತ್ಯುವಾದಂತೆ ಇವೆಲ್ಲವು ನಿನಗಾಗಿ (ಮೋಳಿಮಾ. ೧೨-೪೫). [ಹೊಡ್ಡೆ$_1$ (< ಪೊಡ್ಡೆ$_1$) + - ಹು$_1$(<- ಪು$_1$)]

**ಹೊಡಹೊಮ್ಮು$_1$** (ಕ್ರಿ). (ಸಾಷ್ಟಾಂಗವಾಗಿ) ನಮಸ್ಕರಿಸು; ವಂದಿಸು: ಅರಳೆಯ ಮರನು ವಿಷ್ಣುಕಾಂತಿ ಬನ್ನಿ ಮುತ್ತಕ ತೊಳಚ ಹರಿಹರಿಯೆಂದು ಹೊಡಹೊಮ್ಮು [ಪಾಠಾಂ. ಹೊಡಹೊಂದು]ವಿರಿ (ಸಕವ. ಕ. I, ೪೦೭-೧೫೪೦). [ಹೊಡ್ಡೆ$_3$ + ಹೊಮ್ಮು$_1$ (< ಪೊಣ್ಮು)]

**ಹೊಡಿಸು** 'ಪೊಡೆಯಿಸು' ನೋ.

**ಹೊಡ್ಡೆ$_1$** 'ಪೊಡ್ಡೆ$_1$' ನೋ.

**ಹೊಡ್ಡೆ$_2$** 'ಪೊಡ್ಡೆ$_2$' ನೋ.

**ಹೊಡ್ಡೆ$_3$** 'ಪೊಡ್ಡೆ$_3$' ನೋ.

**ಹೊಡ್ಡೆ$_4$** (ನಾ). ೧. ಮೇಲ್ಹಾವಣಿಯ ಮುಖ್ಯವಾದ ತೊಲೆ: (ಶಿ). ೨. ಪಕ್ಕ; ಬದಿ: (ಶಿ). [?/ ತುಳು. ಪುಡೆ = ಅಂಚು]

**ಹೊಡ್ಡೆ$_5$** 'ಹೊಡಕೆ' ನೋ.

**ಹೊಡೆಕುಚುಕ** (ನಾ). ೧. ತೆನೆ ಬಿಟ್ಟ ಹುಲ್ಲು. ೨. (ಆಲಂ) ವ್ಯರ್ಥವಾದುದು; ನಿಷ್ಪ್ರಯೋಜಕವಾದುದು: ಮೃಡರೂಪ ಜಂಗಮನ ದಿವ್ಯಕಾರುಣ್ಯಮಂ ಪಡೆದು ಬಿತ್ತಿದ ಬೆಳೆಯು ಕನಕವಹುದಲ್ಲದೇ ಹೊಡೆಕುಚುಕವಾಗುತಿಹುದುಂಟೆ (ಮಲ್ಲಚ. ೧೨-೧೩). [ಹೊಡ್ಡೆ$_3$ (< ಪೊಡ್ಡೆ$_3$) + ಕುಚುಕ ? (IP ← ಸಂ. ಕೂರ್ಚಕ)]

**ಹೊಡೆಕೆಡೆ** 'ಪೊಡೆಗೆಡೆ' ನೋ.

**ಹೊಡೆಗಚ್ಚು** (ಕ್ರಿ). ತೆನೆಯಾಗು; ತೆನೆತುಂಬು: ಗೋದಿ ಹೊಡೆಗಚ್ಚಿರಲು ಕಡಲೆಯ ಮಡಿಲು ಹೂಮಿಡಿ ತುಂಬಿತು (ನೆಲಮು. ೧೨-೧೨). [ಹೊಡ್ಡೆ$_3$ (< ಪೊಡ್ಡೆ$_3$) + ಕಚ್ಚು$_1$ (< ಕರ್ಚು$_1$)]

**ಹೊಡೆಗಣೆ** (ನಾ). ಒಂದು ಬಗೆಯ ಬಾಣ: ತಿರು ಗರಿಗಟ್ಟುವ ಹೊಡೆ ಹೊಡೆಗಣೆ ಗಾಜನಿರದೆ ಮಾಡುವ ಬಿಲ್ಲನೊರೆವ ಸರಳ ತಿದ್ದುವ ಪಿಳ್ಳುಗೊಯ್ಯ ಸಂದಣಿ ಕೂಡೆ ಕರಮೆಸೆದುದು ದುರ್ಗದೊಳಗೆ (ಕುರಾಸಾಂ. ೩೭-೫೭)). [IP ಇದು 'ಹೊದೆಗಣೆ' ಎಂಬುದರ ಅಪಲಿಖಿತವಿರಬಹುದು]

**ಹೊಡೆಗಲ್ಲು** 'ಪೊಡೆಗಲ್ಲು' ನೋ.

**ಹೊಡೆಗಳ್ಳ** (ನಾ). ತೆನೆಯ ಕಾಳನ್ನು ಕದಿಯುವ ಒಂದು ಬಗೆಯ ಹಕ್ಕಿ (?): ಹರಡೆ ಚಿಲುಮಿಲಿಗನು ಚಿಲುವೆ ಗಿಜುಗಿರಳೆ ಕಮ್ಮರನಸಗ ಕೊಟ್ಟುಳಿ ಹೊರಸು ಹೊಡೆಗಳ್ಳೆಂಬ ಪಕ್ಕಿಗಳವಜೊಳೊಪ್ಪಿದವು (ಸಾಳ್ವಭಾ. ೫-೨೧). [ಹೊಡ್ಡೆ$_3$ (< ಪೊಡ್ಡೆ$_3$) + ಕಳ್ಳ$_1$]

**ಹೊಡೆಗಾಳಿ** (ನಾ). ಬಲವಾಗಿ ಬೀಸುವ ಗಾಳಿ: ಹೊಡೆಗಾಳಿಗುದುರ್ವ ಬದಿರ ಮುತ್ತು ಹಾವಿನ ಹೆಡೆವಣವೆಳಗಾ ಬನದ ಒಡತಿ ನೃಪತಿಗೆ ಸೇಸೆಯ ತಳಿದಾರತಿವಿಡಿದೆತ್ತುವ ತೆಜನಾಯ್ತು (ಶ್ರೀಪಾಲ. ೭-೨೬). [ಹೊಡ್ಡೆ$_1$ (< ಪೊಡ್ಡೆ$_1$) + ಗಾಳಿ$_1$]

**ಹೊಡೆಗಿಚ್ಚು** 'ಪೊಡೆಗಿರ್ಚು' ನೋ.

**ಹೊಡೆಗುಳು** (ನಾ). ೧. ಏಟು; ಹೊಡೆತ. ೨. ಧಾಳಿ; ಆಕ್ರಮಣ: ನಡುಗಿತವನಿಯಜಾಂಡ ಖರ್ಪರವೊಡೆಯಲವನಿಯ ಲಗ್ಗೆ ಸೂಳಿನ ಹೊಡೆಗುಳಿ ನೊಳಬ್ಬರಿಸಿದವು ನಿಸ್ಸಾಳಕೋಟಿಗಳು (ಕುವ್ಯಾಉ. ೧೧-೩೯). 'ತಿವಿಗುಳು' ಪರಾ. [ಹೊಡ್ಡೆ$_1$ (< ಪೊಡ್ಡೆ$_1$) + - ಗುಳು$_0$ (< - ಗುಳ್$_2$)]

**ಹೊಡೆಗೆಡಹು, ಹೊಡಗೆಡಹು** (ಕ್ರಿ). ಹೊಡೆದು ಬೀಳಿಸು: ಅರರೆ ಕವಿ

ಕವಿದಂಬು ಕಡಿದವು ಕೊರಳನುಗಿದವು ಪೋಡನೊಡಲೊಳು ಹೊರಳಿದವು ಹೊಡೆಗೆಡಹಿದವು ಹೊಕ್ಕೆಸೆವ ಹೂಣಿಗರ (ಕುವ್ಯಾಭೀ. ೪-೧೩). **ಹೊಡಗೆಡಹು:** ಅಲುಗಾಡಿ ತುಂಬಿದ ಕೊಡನ ಹೊಡಗೆಡಪ[ಪಾಠಾಂ. ಹೊಡೆಗೆಡಹ]ಲೆತಕ್ಕೆ (ಮದೇವ. ೨೫೬-೨೭); (ಶೂನ್ಯಸಂ. ೨೪೬-೨೭ ನೋ.): ಪಿಡಿದು ಹೊಡಗೆಡಹಿ ಕಡಿ ಕೊಲ್ಲೆಂಬ ಧನಿಗಳು ಪೊಡವಿಯೊಳಗಿಲ್ಲ (ಬಸವು. ೩೭-೭೦); ತುಡುಕುವಾನೆಗಳ ಸುಂಡಿಲ ಕಡಿಯೆಚ್ಚನು ಬಿಡದೆ ಮೇಲ್ವಾಯ್ವ ಕುದುರೆಯ ಹೊಡಗೆಡಹಿದನು (ಕುರಾಸಾಂ. ೨೦-೩೧).

[ಹೊಡ$_1$ (< ಪೊಡ$_1$) + ಕೆಡಹು (< ಕೆಡಪು)]

**ಹೊಡೆಗೆಡಿಸು** (ಕ್ರಿ). ೧. ಹೊಡೆದು ಬೀಳಿಸು. ೨. (ಆಲಂ) ಹಾಳುಮಾಡು: ಹೊರಗಣ್ಣನು ಮುತ್ತಿದ ಮಾಯೆ ಕಾಡಿಸಿ ಹೊಡೆಗೆಡಿಸಿತ್ತು (ಅಂತರಾ. ೧೮).

[ಹೊಡೆ$_1$ (< ಪೊಡೆ$_1$) + ಕೆಡ$_1$ + - ಇಸು$_3$]

**ಹೊಡೆಗೆಡೆ** 'ಪೊಡೆಗೆಡ' ನೋ.

**ಹೊಡೆಗೊಳಿಸು** (ಕ್ರಿ). ಸೀಳು; ಭೇದಿಸು: ಸಿಡಿಲ ಹೆತ್ತುದೊ ಜಡಿವ ನಿಸ್ಸನ ಕಡುಹೊಗರು ಬೆಸಲಾಯ್ತೊ ನಭವನು ಹೊಡೆಗೊಳಿಸಲುಚ್ಚಳಿಪ ಕಿಡಿ ವಡಬಂಗೆ ಪಿತನೆನಲು . . . ಕೃಪಾಣದ ಕಡುಹು ಕೌತುಕಮಾಯ್ತು ಖಂಡೆಯಕಾಱ ಮೋಹರದ (ಕುವ್ಯಾಭೀ. ೪-೨೭). [ಹೊಡೆ$_2$ (< ಪೊಡೆ$_2$) + ಕೊಳಿಸು]

**ಹೊಡೆಗೊಳು** 'ಪೊಡೆಗೊಳ್' ನೋ.

**ಹೊಡೆಚಂಡು** 'ಪೊಡೆಸೆಂಡು' ನೋ.

**ಹೊಡೆಚೆಂಡಾಡು** 'ಪೊಡೆಸೆಂಡಾಡು' ನೋ.

**ಹೊಡೆಚೆಂಡು** 'ಪೊಡೆಸೆಂಡು' ನೋ.

**ಹೊಡೆಜಾಲಿ** (ನಾ). ಒಂದು ಬಗೆಯ ಜಾಲಿಮರ; ದೊಡ್ಡ ದೊಡ್ಡ ಬಿಳಿಯ ಮುಳ್ಳುಗಳಿಂದ ಕೂಡಿದ, ಕುಳ್ಳಾದ ಮರ ಅಥವಾ ಕುರುಚಲು: ಬುಡ್ಡಜಾಲಿ, ಕೊಡೆಮುಳ್ಳುಜಾಲಿ, ಹೊಡೆಜಾಲಿ (ಮೃಡಿಗಿ. ೨-೧೮). 'ಹೊಟ್ಟೆಜಾಲಿ' ಪರಾ.

[ಹೊಡೆ$_1$ + ಜಾಲಿ$_1$]

**ಹೊಡೆತ** 'ಪೊಡೆತ' ನೋ.

**ಹೊಡೆತರ್** (ಕ್ರಿ). ಹೊಡೆದುಕೊಂಡು ತರು: ದೇವರೆಲ್ಲರ ಹೊಡೆತಂದು ದೇವಿಯರೊಳಗೆ ಕೂಡಿತ್ತು ಮಾಯೆ (ಅವಚಂ. ೭-೨೩).

[ಹೊಡೆ$_1$ (< ಪೊಡೆ$_1$) + ತರ್]

**ಹೊಡೆಪ** (ನಾ). ಹೊಡೆತ; ಬಡಿತ: ಸಿಡಿಲ ಹೊಡೆಪಕಂಚೆ [ಪಾಠಾಂ. ಹೊಡೆಯಲಂಜಿ] . . . ಸುಗಿವಂತಾ ಹಂದೆ ಕಡು ಬೆರ್ಚಿ ಬೆಬ್ಬಳವೋದ (ಶ್ರೀಪಾಲ. ೮-೬೧).

[ಹೊಡೆ$_1$ (< ಪೊಡೆ$_1$) + - ಪ$_2$]

**ಹೊಡೆಬಳ್ಳಿ** (ನಾ). ಒಂದು ಬಗೆಯ ಬಳ್ಳಿ: ಹೊಡೆಬಳ್ಳಿಯೊಂದರ ಗಂಟುಗಂಟಿ ಕುಡಿಯೊಡೆದೆಂಟುದೆಸೆಗೆ ಪೋಪಂತೆ ನಿಡುಸರಪಣಿಯೊಂದು . . . ಹಬ್ಬಿತು ಕಂಡ ಕಡೆಗೆ (ಭರಚ. ೪೯-೧೧೦). [ಹೊಡೆ$_1$ + ಬಳ್ಳಿ]

**ಹೊಡೆಬಾಳು, ಹೊಡಬಾಳು** (ನಾ). ಹೋರಾಟದ ಬದುಕು; ಜಂಜಾಟದ ಬದುಕು: ಅನ್ನ ಕೊಡುವ ಧನಿಗೆ ದೊರೆಗೆ ಹೀಗೆ ಅನ್ಯಾಯ ಮಾಡಿ ಹೊಡೆಬಾಳು ಬದುಕಬೇಕಾ (ಬೆಟ್ಟಳಿ. ೧೦೭-೧೩). **ಹೊಡಬಾಳು:** ಕಲ್ಲು ಪೊಟ್ಟರೆ, ಗುಹ, ದೊಡ್ಡ ದೊಡ್ಡ ಮರಗಳ ಪೊಟರೆಗಳು ಅವುಗಳ ವಾಸಸ್ಥಳಗಳಾದುವು. ಹೀಗೆ ಜೀವನದ ಹೊಡಬಾಳು ಹೆಚ್ಚಾಯಿತು (ಪ್ರಪಂಚ. ೬೬); ನಮ್ಮ ಹೊಡಬಾಳು ಸಾಯೋವರ್ಗೂ ತಪ್ಪಿದ್ದಲ್ಲ (ಅವತಾ. ೧೯೨); ಇನ್ನೇನು ದೇವರ ಮೇಲೆ ಭಾರ ಹಾಕಿ ಈ ಪ್ರಪಂಚದ ಹೊಡಬಾಳನ್ನು ತಳ್ಳಬೇಕು (ಚಂಗಾಳ್ಯ. ೨೬೩). [ಹೊಡೆ$_1$ (< ಪೊಡೆ$_1$) + ಬಾಳು$_2$ (< ಬಾೞ್$_2$)]

**ಹೊಡೆಮಂಚ** (ನಾ). (ಕರಾ) ಕಾಳು ಮತ್ತು ಹುಲ್ಲುಗಳನ್ನು ಬೇರೆ ಬೇರೆಯಾಗಿ ಮಾಡುವ ಸಾಧನ; IP ಬತ್ತದ ಪೈರನ್ನು ಕತ್ತರಿಸಿದ ಬಳಿಕ, ಮಂಚದ ಆಕಾರದ ಈ ಸಾಧನದ ಮೇಲೆ ತೆನೆಸಹಿತವಾದ ಹುಲ್ಲನ್ನು ಸೂಡಿಮಾಡಿ ಬಡಿಯುತ್ತಾರೆ. ಈ ಕಾರಣದಿಂದ ಇದಕ್ಕೆ 'ಹೊಡೆಮಂಚ' ಎಂಬ ಹೆಸರು ಬಂದಿದೆ. ಇದಕ್ಕೆ ಹಿಂದೆ ಹೊಡೆಮಣೆಯೆಂಬ ಹೆಸರೂ ರೂಢಿಯಲ್ಲಿ ಇತ್ತು. ಬಯಲಾಟ ನೋಡಲು ದೂರದಲ್ಲಿ ಇಂಥ ಮಂಚ ಇರಿಸಿ ಕುಳಿತುಕೊಳ್ಳುತ್ತಿದ್ದರು: ಆ ಶಾಲೆಯವರ ಹಾಗೆ ಒಂದು ಹೊಡೆಮಂಚ ನನಗೂ ತಂದುಹಾಕಲಿಕ್ಕೆ ಬರುವುದಿಲ್ಲವೆ? ಹೊಡೆಮಂಚದ ಮೇಲೆ ಕುಳಿತು, ತಮಾಷೆ ನೋಡಲಿಕ್ಕೆ ಅದೇನು ದಶಾವತಾರದ ಆಟವೇ? (ಮರಮ. ೧೮೯).

[ಹೊಟ್ಟೆ$_1$ (< ಪೊಟ್ಟೆ$_1$) + ಮಂಚ]

**ಹೊಡೆಮಗುಚು** 'ಪೊಡೆಮಗುಚು' ನೋ.

**ಹೊಡೆಮಗ್ಗು** (ಕ್ರಿ). ಹೊಟ್ಟೆಕೆಳಗಾಗುವಂತೆ ಬೀಳು; ಬೋರಲು ಬೀಳು: ತೊಟೆಗಿಕ್ಕಿ ಬಿಲ್ಲಳನೇಟಿಸಿ ಹೆದೆಯ ಜೇವೊಡೆಯಲ್ಕೆ ಮಿಗವಿಂಡು ಬೆದಱಿ ಹೊಡೆಮಗ್ಗಿದೊಡಲನಡ್ಡೈಸಿ ಕೂರ್ಗಣೆಯಿಂದೆ ಕೆಡೆಯೆಂದು ಬೀಳಲಿಕ್ಕಿದರು (ಮೋಹತ. ೧೯-೨೨); ಒಡಮುರಿದೊಳವೊಕ್ಕು ಬಿಱುಗಾಳಿ ಬೀಸಲು ಮೃಡನಾಸ್ಥಾನದಿಂ ಸುರರು ಹೊಡೆಮಗ್ಗಿದರು ಗದ್ದುಗೆಯಿಂದೆ (ಮೋಹತ. ೩೬-೫೮).

[ಹೊಡೆ$_3$ (< ಪೊಡೆ$_3$) + ಮಗ್ಗು$_1$ (< ಮಱ್ಗು)]

**ಹೊಡೆಮರಳ್** 'ಪೊಡೆಮರಳ್' ನೋ.

**ಹೊಡೆಮರಳು** 'ಪೊಡೆಮರಳ್' ನೋ.

**ಹೊಡೆಮುರಿ** (ಕ್ರಿ). (ತೆನೆಯಂತೆ) ಹೊರಹೊಮ್ಮು; ಕಾಣಿಸಿಕೊಳ್ಳು: ಗಳಬಳಿಪ ಗದ್ಗದಂ ದಳವರಿವ ಮೋಹಲತೆ ತುಳುಕಿ ತುಂತುರುಗದರ್ವ ಘರ್ಮಂ ಮಾನವಾ ಕಳೆಯೇಱುತಿಹ ಕರಣವಿಳಿವಶ್ರುಜಳದ ಝುರಿ ಸುಳಿದಿರುಗಿ ಹೊಡೆಮುರಿವ ಪುಳಕಂ (ಕೃಕವ. ೧-೫-೪). [ಹೊಡೆ$_3$ (< ಪೊಡೆ$_3$) + ಮುರಿ$_1$]

**ಹೊಡೆಯಕ್ಕಿದುಯ್ಯಲು** (ನಾ). ಪೂರ್ಣವಾಗಿ ಬಲಿಯದ (ಅಕ್ಕಿ) ಕಾಳಿನ ತಿರುಳಿನಿಂದ ಮಾಡುವ ಒಂದು ಬಗೆಯ ಭಕ್ಷ್ಯ,– ಪಾಯಸ: ಮಿಕ್ಕ ಹೆಮ್ಮರವಾಲುವಂ ಹೊಡೆಯ [ಪಾಠಾಂ. ಯಿ]ಕ್ಕಿದುಯ್ಯಲುವಾಯ್ದೆಯಿದ ಬದಿರಕ್ಕಿಯೋಗರವೊಲಿಬಡುಡುವಿನ ತುಪ್ಪವುಂಟಲ್ಲಿ (ಬಸವು. ೧೮-೧೭).

[ಹೊಡೆ$_3$ (< ಪೊಡೆ$_3$) + ಅಕ್ಕಿ$_1$ + ತುಯ್ಯಲು (< ತುಯ್ಯಲ್)]

**ಹೊಡೆಯಿಸು** 'ಪೊಡೆಯಿಸು' ನೋ.

**ಹೊಡೆಯುರ್ಚು** (ಕ್ರಿ). ತೆನೆಯು ಕಾಣಿಸಿಕೊಳ್ಳು; ತೆನೆ ಹೊರಡು: ಮೊದಲು ಬಿತ್ತಿದ ಬೆಳೆಯು ಹೊಡೆಯುರ್ಚದನಿತಕೊಣಗಲ್ಕರುಗಿ ದಂಪತಿಗಳಾ ಶರಣೆಯನು ಕೇಳ್ದರದರ ಕಾರಣವಾವುದೆಂದು (ಮಲ್ಲಚ. ೧೨-೧೨). [ಹೊಡೆ$_3$ (< ಪೊಡೆ$_3$) + ಉರ್ಚು]

**ಹೊಡೆವಡು** 'ಪೊಡೆವಡು$_2$' ನೋ.

**ಹೊಡೆವಲೆ** (ನಾ). ಒಂದು ಬಗೆಯ ಬಲೆ: ಕಣ್ಣವಲೆ ಹೊಡೆವಲೆ ಹೊಸೆದ ಹಾಲ್ಗಣ್ಣವಲೆ ತಳ್ಳುವಲೆ . . . ಪೇರ್ವಲೆಯ ಪೊಱೆಗಳು ವಿಂಧ್ಯಕನ ಕೂಡೆ (ಸಾಳ್ವಭಾ. ೫-೧೮). [ಹೊಡೆ$_1$ (< ಪೊಡೆ$_1$) + ಬಲೆ$_1$]

**ಹೊಡೆಸು** 'ಪೊಡೆಯಿಸು' ನೋ.

**ಹೊಡೆಸೆಂಡಾಡು** 'ಪೊಡೆಸೆಂಡಾಡು' ನೋ.

**ಹೊಡೆಸೆಂಡು** 'ಪೊಡೆಸೆಂಡು' ನೋ.

**ಹೊಡೆಹು** (ನಾ). ೧. ಪೆಟ್ಟು; ಹೊಡೆತ. ೨. ವಾದ್ಯದ ಹೊಡೆತ. ೧, ೨: ಜಡತೆ ವಾರಿಯೊಳುಗ್ರವೀಶನೊಳುದಿತ ರಂಭಾವನದಿ ಸಂತತ ಹೊಡೆಹು ವಾದ್ಯದ ರವದೊಳ[ಪಾಠಾಂ. ಹೊಡಗುಳಾ ವಾದ್ಯದೊಳಗ]ಲ್ಲದೆ ನಾಡೊಳಿಲ್ಲೆಂದ (ಜೀವಂಚ. ೨-೧೩). [ಹೊಡೆ$_1$ (< ಪೊಡೆ$_1$) + - ಹು$_2$ (< - ಪು$_2$)]

**ಹೊಡೆಹುಲ್, ಹೊಡೆಹುಲ್ಲು** (ನಾ). ೧. (ಕಾಡುನವಣೆ ಅಥವಾ ಕಾಡು ನೆಲ್ಲಿನ) ತೆನೆಯ ಹುಲ್ಲು. ೨. ಕಾಡುನವಣೆ; ಕಾಡುನೆಲ್ಲು: "ತೃಣಧಾನ್ಯಂ, ನೀವಾರಃ - ಈ ೨ ಹೊಡೆಹುಲ್" (ಹಲಾಯು. ೯೬-೪೩೦). **ಹೊಡೆಹುಲ್ಲು:** ೧. ಕಾಡಮರಂಗಳ ನೆಳಲೊಳ್ನಿಂದು ಫಲಂಗೊಳ್ಳುತುಂ ಹೊಡೆಹುಲ್ಲ ಬತ್ತವ ನುಣುತುಂ (ಓಹಿರ. ಹ. ೨೦೦-೯); ಧರಣಿ ಬೋಯಿತಿ ಧರೆಯೊಳು ಹೊಡೆಹುಲ್ಲ ಬೀಸಿ ಪೂಡಿಸಿ ಪಡೆದಳು ತುಂಗಭದ್ರಮಧ್ಯದ ಮೊಟಿನಂ (ಎಕ. VII. ಹೊನ್ನಾಳಿ. ೮-೧೫; 1238); ಈತನೇ ದೋಹಾರ ಕಕ್ಕಯ್ಯನೆಂಬಾತನೀತನೇ ಹೊಡೆಹುಲ್ಲ ಬಂಕಯ್ಯನು (ಚೆಬಪು. ೫೭-೫೭)

**ಹೊಡೆಹುಲ್ಲಾಗು** = (ಆಲಂ) ಚೂರುಚೂರಾಗು ; ಧ್ವಂಸವಾಗು: ಲಯದಿಂದು

ಮುಂದುಗೆಟ್ಟಂ ಸ್ಥಿತಿಯೊಳು ಹೊಡೆಹುಲ್ಲಾದೆನುತ್ಪತ್ತಿಯೊಳ್ನಿಶ್ಚಯಮಂ ಹೋಗಾಡಿ ನಾನಾ ಭವರುಜೆಯೊಳು ಬಿದ್ದೆಂ (ಶಂಕಶ. XV, ೬೦೩೪).

[ಹೊಡೆ$_3$ (< ಪೊಡೆ$_3$) + ಹುಲ್$_{\circ}$ (< ಪುಲ್)]

**ಹೊಡೆಹುಲ್ಲು** 'ಹೊಡೆಹುಲ್' ನೋ.

**ಹೊಡ್ಡೆಲೆನಗೆ** (ನಾ). ಒಂದು ಬಗೆಯ ಸಸ್ಯ: ಆದಿರಾಜ, ಪೊಳೆತುಂಬೆ . . . ಹೊಡ್ಡೆಲೆನಗೆ (ಮೃಜಿಗಿ. ೨೫-೧೬೬). [?]

**ಹೊಣಕಿಗ** (ನಾ). ಯುದ್ಧವೀರ; ಕಲಿ: ಹೊಣಕಿಗರು ರಣದವಕಿಗರು ಬಿಱುಗಣೆ ಸವೆಯಲಚ್ಚಾಡಿದರು (ಕುವ್ಯಾಭೀ. ೪-೨೦). 'ಹೊಳಕೆಗ' ಪರಾ.

[ಹೊಣಕೆ (< ಪೊಣರ್ಕೆ) + - ಇಗ]

**ಹೊಣಕಿಸು** (ಕ್ರಿ). ತಿನ್ನು; ಅಗಿ: ದ್ರಾಕ್ಷಿಹಣ್ಣಿನ ಗುಣವನ್ನು ತಕ್ಷಣವೇ ಬಾಯಿಗೆ ಹಾಕಿಕೊಂಡು ಹೊಣಕಿಸಿ ಹೇಳಬಹುದು, ಹಲಸಿನ ಹಣ್ಣನ್ನು ರುಚಿಯೂ ತೆಂಗಿನಕಾಯಿಯ ರುಚಿಯೂ ಸ್ವಲ್ಪಕಾಲ ವ್ಯವಧಾನದಿಂದ ಹೊರತು ಹೇಳುವುದಕ್ಕಾಗುವುದಿಲ್ಲ (ಕಾಂಪೂಚಿ. ೩೭). [ಹೊಣಕು (< ಪೊಳಂಕು) + - ಇಸು$_1$]

**ಹೊಣಕು** 'ಪೊಳಂಕು' ನೋ.

**ಹೊಣಕೆ** 'ಪೊಣರ್ಕೆ' ನೋ.

**ಹೊಣಕೆಗಾರ, ಹೊಳಕೆಗಾಱ** (ನಾ). = **ಹೊಣಕಿಗ**: ಹೊಣಕೆಗಾರರು ಹೆಣಗಿಯಿರಿದರು ಕಠಾರಿಯಿಂ ತಿವಿತಿವಿದು ಕಾಲ್ವಲವನು (ತುರಂಗ. ೫೯-೧೬). **ಹೊಳಕೆಗಾಱ**: ಹೊಳಕೆಗಾಱರು ನಾವು ನಮ್ಮಗ್ಗಳಿಕೆಯನು ಸುರರೀಕ್ಷಿಸಲಿ (ತೊರರಾ. ೭-೨೩-೯).

[ಹೊಣಕೆ (< ಪೊಣರ್ಕೆ) + - ಗಾರ (< - ಕಾಱ)]

**ಹೊಣಕೆಗೈ** (ಕ್ರಿ).ಸಮನಾಗು; ಸಾಟಿಯಾಗು: ರಣದೊಳಾ ಗಾಂಗೇಯಗಿಮ್ಮಡಿ ಗುಣವ ತೋಱುವೆನು . . . ಮಾದ್ರರಾಜನ ಹೊಣಕೆಗೈದು ಸುಶರ್ಮ ಶಕುನಿ ಗಳಣಿಸುವಡೆ ಪಾಡಲ್ಲ ನೋಡೇಳೆಂದನಾ ದ್ರೌಣಿ (ಕುವ್ಯಾಗ. ೪-೩೮).

[ಹೊಣಕೆ (< ಪೊಣರ್ಕೆ) + ಗೈ (< ಕೆಯ್$_1$)]

**ಹೊಣಕೆವಿಡಿ** (ಕ್ರಿ). ಹಟತೊಡು; ಶಪಥ ಹಿಡಿ: ಹರಿವಿರಿಂಚಗಳಣಿಕೆಗಡಿಮುಡಿ ದೋಱದಾ ಮಹಿಮಾವಲಂಬಂಗೆ ಉಣಿಸುಗಳ ತಂದೊಟ್ಟಿ ಮುಟ್ಟಿಸಿ ತಣಿಸುವೆನು ನೋಡೆನುತ ಪುನರಪಿ ಹೊಣಕವಿಡಿದನು ತಾನೆ ತನ್ನಲಿ ಮತ್ತೆ ಬಸವಣ್ಣ (ಪ್ರಭುಲೀ. ೨೩-೩೭). [ಹೊಣಕೆ (< ಪೊಣರ್ಕೆ) + ಪಿಡಿ$_1$]

**ಹೊಣಚು** 'ಪಳಂಚು$_1$' ನೋ .

**ಹೊಣತಿ** (ನಾ). ಸಮವಾದುದು; ಸಾದೃಶ್ಯತೆಯನ್ನು ಹೊಂದಿರುವಂತಹುದು: ಫಣಿಯ ತರಕ್ಷುವ ಕುಕ್ಕುರದ ದರಕ್ಕೆಣೆಯಕ್ಕೆಂಬರು ಸರಿಯೆಂದೆಂಬರು ಹೊಣತಿಗಳೆಂಬರು ಕುಟಿಲತೆಯಿಂ ಕಲುಷತೆಯಿಂ ವಿಷಮತೆಯಿಂ ಕೆಣಕಿದೊಡಲ್ಲದೊಡೇಂ ಗಳ ಪಿಡಿವುದೆ (ಕುಮುರಾ . ೧-೩೭). [**P** ಇದು 'ಹೊಣಕೆ' ಯೆಂಬುದರ ಅಪಲಿಖಿತ]

**ಹೊಣರು** 'ಪೊಣರ್$_1$' ನೋ.

**ಹೊಣರ್ಕೆ** 'ಪೊಣರ್ಕೆ' ನೋ.

**ಹೊಣೆ** 'ಪೊಣ್ಣೆ$_2$' ನೋ.

**ಹೊಣೆಕಾರ** 'ಪೊಣೆಕಾಱ' ನೋ.

**ಹೊಣೆಕಾಱ** 'ಪೊಣೆಕಾಱ' ನೋ.

**ಹೊಣೆಗಾರ** 'ಪೊಣೆಕಾಱ' ನೋ.

**ಹೊಣೆಗಾರಿಕೆ** (ನಾ). ಜವಾಬ್ದಾರಿಯನ್ನು ವಹಿಸುವಿಕೆ; ಜವಾಬ್ದಾರನಾಗುವಿಕೆ: ನನ್ನ ದಾಂಪತ್ಯಜೀವನದ ರೂಪರೇಖೆಯನ್ನು ರೂಪಿಸಿಕೊಳ್ಳುವುದು ನನ್ನ ಸ್ವಂತ ಹೊಣೆಗಾರಿಕೆಯ ವಿಷಯವು (ಹೇಮಂತ. ೪೭೪); ಈ ಶಾಂತಿಪಾಠವನ್ನು ಜಗತ್ತಿಗೆ ಬೋಧಿಸುವ ಗುರುತರ ಹೊಣೆಗಾರಿಕೆ ಪ್ರತಿಯೊಬ್ಬ ಭಾರತೀಯನ ಮೇಲೂ ಇದೆ (ಭಾರದ.೫೮೧). [ಹೊಣೆಗಾರ (< ಪೊಣೆಕಾಱ) + - ಇಕೆ ]

**ಹೊಣೆಗಾಱ** 'ಪೊಣೆಕಾಱ' ನೋ.

**ಹೊಣೆಗುಂಡು** 'ಪೊಣೆಗುಂಡು' ನೋ.

**ಹೊಣೆಗೆಡು** (ಕ್ರಿ). ಜವಾಬ್ದಾರಿಯನ್ನು ಹೊರದಿರು, –ಪೂರೈಸದಿರು: ಹೊಣೆಗೆಟ್ಟ ಸಮಾಜದ ಮಕ್ಕಳು ಹೊಣೆಗೇಡಿಗಳಾಗಲು ಈ ಹಬ್ಬ ಒಂದು ಅನುಕೂಲವೇ ಅಲ್ಲವೇ (ರಂಗರೂ. ೪೫). [ಹೊಣೆ (< ಪೊಣ್ಣೆ$_2$) + ಕೆಡು$_1$]

**ಹೊಣೆಗೇಡಿ** (ನಾ). ೧. ಬೇಜವಾಬ್ದಾರಿ ಮನುಷ್ಯ; ಜವಾಬ್ದಾರಿಯನ್ನು ಪೂರೈಸದೆ ಇರುವವನು: ಹೊಣೆಗೆಟ್ಟ ಸಮಾಜದ ಮಕ್ಕಳು ಹೊಣೆಗೇಡಿಗಳಾಗಲು ಈ ಹಬ್ಬ ಒಂದು ಅನುಕೂಲವೇ ಅಲ್ಲವೇ (ರಂಗರೂ. ೪೫). ೨. ಬೇಜವಾಬ್ದಾರಿ ಯಾದುದು; ಜವಾಬ್ದಾರಿಯನ್ನು ಪೂರೈಸದೆ ಇರುವಂತಹುದು: ತನಗ ಅಧಿಕಾರ ಸಿಗಲಾರದೆಂದು ನಿಶ್ಚಿತವಾದ ಪಕ್ಷವು ಹೊಣೆಗೇಡಿಯಾಗಿ ವರ್ತಿಸ ತೊಡಗಿರುತ್ತದೆ (ಅಮುಗಾಂ.೬೩). [ಹೊಣೆ( < ಪೊಣ್ಣೆ$_2$) + ಕೆ ]

**ಹೊಣೆಗೊಡು** (ಕ್ರಿ). ಹೊಣೆಗಾರನನ್ನಾಗಿ ಮಾಡು; ಹೊಣೆ ನಿಲ್ಲುವಂತೆ ಮಾಡು: ನಿಮ್ಮ ನಂಬುವರಮ್ಮೆಯೆಂದರೆ ಮುನ್ನ ನೊಂದವರಳುಕುವರು ದಿಟ ಎನ್ನ ಪತಿ ತರಣಿಜನ ನುಡಿಸುವೆ ಹರನ ಹೊಣೆಗೊಡುವೆ (ಕಾಶಿರಾ. ೭-೬).

[ಹೊಣೆ (< ಪೊಣ್ಣೆ$_2$) + ಕೊಡು$_1$ ]

**ಹೊಣೆಗೊಳ್** (ಕ್ರಿ). ಜವಾಬ್ದಾರಿಯನ್ನು ಹೊರು; ಹೊಣೆಯಾಗು: ಕೊಂದೆ ನಾನೆನಗಾಯ್ತು ಪಾತಕವೆಂದು ಮನದಲಿ ಮಱುಗುವಾತನ ಬಂದಿಯಲಿ ಹೊಣೆಗೊಂಬ ವಾಹಂಕಾರ ಮಮಕಾರ (ಕುವ್ಯಾಭೀ. ೩-೪೯). [ಹೊಣೆ (<ಪೊಣ್ಣೆ$_2$) + ಕೊಳ್$_1$ ]

**ಹೊಣೆಹೊರು** (ಕ್ರಿ). ಜವಾಬ್ದಾರಿಯನ್ನು ವಹಿಸು: ಮುಂದಿನ ಶಿಕ್ಷಣಸಂಸ್ಥೆಗಳಲ್ಲಿ ತೋರಬಹುದಾದ ಅಶಿಸ್ತಿಗೆ ಪ್ರಾಥಮಿಕಶಾಲೆ ಸ್ವಲ್ಪಮಟ್ಟಿಗಾದರೂ ಹೊಣೆಹೊರ ಬೇಕಾಗುತ್ತದೆ (ಶಿಕ್ಷದ. ೩೧೦). [ಹೊಣೆ (< ಪೊಣ್ಣೆ$_2$) + ಹೊರು (< ಪೊಱು)]

**ಹೊಣ್ಮು** 'ಪೊಣ್ಮು' ನೋ.

**ಹೊತ್ತ** 'ಪೊಱು' ಪರಾ.

**ಹೊತ್ತಗೆ** 'ಪೊಸ್ತಕ' ನೋ.

**ಹೊತ್ತರು** 'ಪೊಟ್ಟಱ್' ನೋ.

**ಹೊತ್ತಲು, ಹೊತ್ತಲೆ, ಹೊತ್ತಳ** (ನಾ). ೧. (ವೀಳ್ಯದ) ಎಲೆಯ ಕಟ್ಟು,– ಪಿಂಡಿ: ಚಿಕ್ಕರಸನ ಎಲೆಯ ಸುಂಕ ಹೇಱಿಂಗೆ XXX ಹೊಱೆಗೆ ನೂಱು ಹೊತ್ತಲಿಂಗೆ ಅಯಿವತ್ತು ಮಾನಕ್ಕಿ ಗದ್ಯಾಣಂ ನಾಲ್ವತ್ತಯಿದು ಹೊನ್ನಂ ಕೊ XXX (ಎಕ.XVIII , ೧೮೭-೫೫; 1097); ಎಲೆಯ ಹೇಱಿಂಗೆ ನೂಱೆಲೆಯ ಕೊಟ್ಟರು [ಹೊ]ತ್ತಲಿಂಗಯ್ವತ್ತೆಲೆಯ ಕೊಟ್ಟರು (ಸೌಇಇ. XX.೨೪೮-೭೨: 1228). **ಹೊತ್ತಲೆ**: ೧. 'ಹೊತ್ತಲೆವರಾಡ' ಪರಾ. **ಹೊತ್ತಳ**: ೧. ಕಲ್ಲಿದೇವಸ್ವಾಮಿಗಂ ಮಾದೇಸ್ವರದೇವರ್ಗ್ಗಂ ಕಾಮೇಸ್ವರ ದೇ[ವ]ರ್ಗ್ಗಂ ಅ(ಂ)ನ್ತು ಮೂಱುಸ್ಥಾನಕಂ ಸಾಸಿರ್ವ್ವರುಂ ಬಿಟ್ಟ ಧರ್ಮ ಎಲೆಯ ಹೇಱಿಂಗೆ ಬೇಳೆ ಹೊಱೆಗೆ ಬೇಳೆ ಹೊತ್ತಳಕ್ಕೆ ವೀಸಂ ಕಾಣೆ ಸೊಪ್ಪಿಂಗೆ ಅರವೀಸ (ಸೌಇಇ. XI-ii. ೧೨೨-೧೨: 1072) ; ಹೇಱಿಂಗೆ ೧೦೦ ಎಲೆಹೊತ್ತಳಕ್ಕೆ ೫೦ ಮಂ ಬಿಟ್ಟರು (ಕಇ.V. ೪೭-೫; 1288): ಬಿಳಿಯೆಲೆಯ ಹೇಱುಗಳ ಬಲು ಹೊತ್ತಳವನಾ ರಜನೀಚರನ ಬಾಯೊಳಗೆ ಸುರಿದರು ಲಕ್ಕಲೆಕ್ಕದಲಱೆದ ಸುಣ್ಣಗಳ ಹಲವು ಮುದ್ದೆಯ ಹಾಯ್ಕಿದರು (ತೊರರಾ. ೬-೨೭-೬೦). ೨. ಮೊತ್ತ;ರಾಶಿ :ಪ್ರಳಯಾಗ್ನಿ ನರರೂಪ ತಾಳ್ದುದೊ ಸಿಡಿಲ ಹೊತ್ತಳಮೆ ಮಾನವನಾಗಿ ಬಂದುದೋ (ನವಮೋ. ೧೨-೩೭). [?]

**ಹೊತ್ತಲೆ** 'ಹೊತ್ತಲು' ನೋ.

**ಹೊತ್ತಲೆವರಾಡ** (ನಾ). (ವೀಳ್ಯದ) ಎಲೆಗಳ ಕಟ್ಟು ಅಥವಾ ಪಿಂಡಿಯ ಮೇಲೆ ಹಾಕುವ ತೆರಿಗೆ,–ಸುಂಕ: ಸಪ್ಪವರಾಡದಿಂದಲ್ಲೂ ಗ ೭॥ಂ ಹೊತ್ತಲೆ ವರಾಡದಿಂದ ಗ ೪॥ಂ . . . ಗೋಪಾಲಕೃಷ್ಣದೇವರಿಗೆ ಯಾ ಅಕಲಾಪುರದ ಗ್ರಾಮದಿಂದ ಪ್ರಾಕಾರಭ್ಯ ನಡದು ಬಾಹ ಉತ್ತಾರ ಭತ್ತ ಖ ೩೭ ನೂ (ಎಕ.VIII , ತೀರ್ಥಪ. ೧೧೭-೨೭; 1702). [ಹೊತ್ತಲೆ (< ಹೊತ್ತಲು) + ವರಾಡ]

**ಹೊತ್ತಳ** 'ಹೊತ್ತಲು' ನೋ.

**ಹೊತ್ತಱು** 'ಪೊಟ್ಟಱ್' ನೋ.

**ಹೊತ್ತಱ್** 'ಪೊಟ್ಟಱ್' ನೋ.

**ಹೊತ್ತಾರೆ** 'ಪೊಟ್ಟಱ್' ನೋ.

**ಹೊತ್ತಾಱ್** 'ಪೊಟ್ಟಿಱ್' ನೋ.

**ಹೊತ್ತಿಕ್ಕು** (ಕ್ರಿ). (ಬೆಂಕಿ ಮೊದಲಾದುವನ್ನು) ಹತ್ತಿಸಿ ಇಡು; ಪುಟಗೊಳಿಸು; ಉರಿಸು: ಗುಹೇಶ್ವರನಿಕ್ಕಿದ ಕಿಚ್ಚು ಹೊತ್ತಿಕ್ಕಲುಂಟು ಅಟ್ಟುಣ್ಣಲಿಲ್ಲ (ಅವಚಂ. ೧೧-೪೪); ನಂದಬಾರದ ಹೋಮದಗ್ನಿಯ ನಂದಲೀಯದೆ ಶುಷ್ಕ ಸಮಿಧೆಯ ತಂದು ನೆಱೆ ಹೊತ್ತಿಕ್ಕಿ ಹೊಗೆಸುವ ವೃದ್ಧ ಕಪಿಗಳಲಿ ಬಂದು ಪಕ್ಕವ ಬೀಸಿ ಮಾರುತಸಿಂದಲಗ್ನಿಯ ಪಟುವ ಮಾಡುತ ಸಿಂದು ನರ್ತಿಸಿ ನಲಿವ ನವಿಲಿನಲೊಪ್ಪಿತಾ ವನವು (ಪ್ರಭುಲೀ. ೨೦-೨೫).
[ಹೊತ್ತು$_1$ (< ಪೊತ್ತು$_1$) + ಇಕ್ಕು]

**ಹೊತ್ತಿಗೆ** 'ಪೊತ್ತಿಗೆ' ನೋ.

**ಹೊತ್ತಿಡು** (ಕ್ರಿ). = ಹೊತ್ತಿಕ್ಕು : ನೋಡ ಬನ್ನಿರೊ ಜನರು ... ಹೊತ್ತಿಟ್ಟ ಆರತಿ ಶ್ರೇಷ್ಠರೆತ್ತುವುದನ್ನು (ಪುರಂದ. ೨-೪೨-೪). [ಹೊತ್ತು$_1$ (< ಪೊತ್ತು$_1$) + ಇಡು$_1$]

**ಹೊತ್ತಿರುಗ, ಹೊತ್ತುತಿರುಗ** (ನಾ). ಸೂರ್ಯನಿರುವ ಕಡೆಗೆ ಅರಳುವ ಹೂವು; ಸೂರ್ಯಕಾಂತಿ; ಸೂರ್ಯಪಾನ: ಸೂರ್ಯನಿದ್ದ ಕಡೆಗೆ ತಿರುಗಿ ನಿಲ್ಲುವ ಹೊತ್ತಿರುಗನ ಗಿಡದಂತೆ ಮನ ಮೈ ಕಣ್ಣುಗಳು ಆಕೆಯ ಕಡೆಗೆ ತಿರುಗಿದುವು (ಬಳುಮ. ೧೬೫). **ಹೊತ್ತುತಿರುಗ**: ಸೂರ್ಯಕಾಂತಿ, ಹೊತ್ತುತಿರುಗಹೂ, ಅರ್ಕಪುಷ್ಪ (ಮೈಔಗಿ. ೪೨-೮೨೯).
[ಹೊತ್ತು$_5$ (< ಪೊೞ್ತು) + ತಿರುಗು$_1$ + - ಅ$_7$]

**ಹೊತ್ತಿಸು** 'ಪೊತ್ತಿಸು' ನೋ.

**ಹೊತ್ತು$_1$** 'ಪೊತ್ತು$_1$' ನೋ.

**ಹೊತ್ತು$_2$** (ಕ್ರಿ). ಏರಿ ನಿಲ್ಲು; ಹೊರೆಯಾಗು: ನಿಂದೆಯು ವಧೂವರರ ತಲೆಯ ಮೇಲೆ ಹೊತ್ತಿತು (ದೇವೀಚಾ ೧೭೭). 'ಹೊತ್ತುಗಲ್ಲು' ಪರಾ. [< ಪೊಱು]

**ಹೊತ್ತು$_3$** 'ಪೊಱು' ಪರಾ.

**ಹೊತ್ತು$_4$** 'ಪೊತ್ತು$_3$' ನೋ.

**ಹೊತ್ತು$_5$** 'ಪೊೞ್ತು' ನೋ.

**ಹೊತ್ತುಕಳೆ** 'ಪೊೞ್ತುಗಳೆ' ನೋ.

**ಹೊತ್ತುಗಲ್ಲು** (ನಾ). ೧. ಭಾರವಾದ ಕಲ್ಲು. ೨. (ಆಲಂ) ಅತಿಶಯವಾಗಿ ಹೊರಿಸುವ ನಿಂದೆ, – ದೂರು: ನೀನೊಲಿದಡೆ ಜಗವೆಲ್ಲ ಕೊಂಡಾಡುತಿರ್ಪುದು ನೋಡಾ ನೀನೊಲಿಯದಿರ್ದಡೆ ಜಗವೆಲ್ಲ ಹೊತ್ತುಗಲ್ಲ ಹೊತ್ತಿರ್ಪುದು ನೋಡಾ (ಅಖಂಡೇ .೭೮-೫೯). 'ಎತ್ತುಗಲ್ಲು' ಹೋ.

**ಹೊತ್ತುಗಲ್ಲು ಹಾಕು** = (ಆಲಂ) ಅಡ್ಡಿಯನ್ನುಂಟು ಮಾಡು: ನಮ್ಮ ತರಲ ಅವಳನ್ನು ಮದುವೆಯಾಗುತ್ತೇನೆಂದರೆ ಸಿಟ್ಟಿಗೆದ್ದು ಹಾಗೇಕೆ ಎತ್ತುಗಲ್ಲು ಹೊತ್ತುಗಲ್ಲು ಹಾಕಿದಿರಿ? (ಏರಸ. ೭೪.). [ಹೊತ್ತು$_2$ + ಕಲ್ಲು (< ಕಲ್$_3$)]

**ಹೊತ್ತುಗಳೆ** 'ಪೊೞ್ತುಗಳೆ' ನೋ.

**ಹೊತ್ತುಗಳ್ಳ** (ನಾ). ಸಮಯವನ್ನು ವ್ಯರ್ಥವಾಗಿ ಕಳೆಯುವವನು; ಕಾಲಹರಣ ಮಾಡುವವನು: ಕೆಲವರು ಹೊತ್ತುಗಳ್ಳರು ಜಗಲಿಯ ಹಾಸುಹಲಗೆಗಳ ಮೇಲೆ ರಪರಪನೆ ಶಬ್ದಮಾಡುತ್ತ ಗಡಿಬಿಡಿಯಿಂದ ಭೋಗಿಗಳೊಳಗೆ ನುಗ್ಗುತ್ತಿದ್ದರು (ಪುನರು. ೪೬೩). [ಹೊತ್ತು$_5$ (< ಪೊೞ್ತು) + ಕಳ್ಳ$_1$]

**ಹೊತ್ತುತಿರುಗ** 'ಹೊತ್ತಿರುಗ' ನೋ.

**ಹೊತ್ತುಹೋಕ** 'ಪೊತ್ತುಪೋಕ' ನೋ.

**ಹೊತ್ತುಹೋಕು** (ನಾ). (ವ್ಯರ್ಥವಾಗಿ) ಸಮಯವನ್ನು ಕಳೆಯುವಿಕೆ; (ವೃಥಾ) ಕಾಲಹರಣ ಮಾಡುವಿಕೆ: ಸತ್ತಮರಾಂಗನೆಯರ ಕೂಡುವೆನೆಂಬ ಹೊತ್ತು ಹೋಕಿನ ಮಾತು ಬೇಡ (ಕುರಾಸಾಂ. ೪೩-೪೯).
[ಹೊತ್ತುಹೋಕ (< ಪೊತ್ತುಪೋಕ) + - ಉ$_4$]

**ಹೊತ್ತುಹೋಗು** (ಕ್ರಿ). ೧. ಸಮಯ ಕಳೆ, – ತೀರು: "ನಂಗೇನು ಕೆಲಸ, ಹೊತ್ತು ಹೋಗ ಬೇಕೋ ಇಲ್ಲವೋ?" ಎನ್ನುತ್ತಿದ್ದಳು (ರಂಗನಾ. ೭೭).. ೨. (ಆಯುಷ್ಯದ) ಸಮಯವು ತೀರು, – ಮುಗಿ: ಹೊತ್ತುಹೋಗದ ಮುನ್ನ ಮೃತ್ಯುವೊಯ್ಯದ ಮುನ್ನ ತೊತ್ತುಗೆಲಸವ ಮಾಡು ಕೂಡಲಸಂಗಮದೇವನ (ಬಸವ. ೧೭೨).
[ಹೊತ್ತು$_5$ (< ಪೊೞ್ತು) + ಪೋಗು$_1$ (< ಪೋ$_1$)]

**ಹೊತ್ತೇರು** 'ಹೊತ್ತೇಱು' ನೋ.

**ಹೊತ್ತೇಱು, ಹೊತ್ತೇರು** (ಕ್ರಿ). (ಆಕಾಶದಲ್ಲಿ) ಸೂರ್ಯನು ನಟ್ಟ ನಡುವಿಗೆ ಏರು; ಮಧ್ಯಾಹ್ನವಾಗು: ನಚ್ಚಿದಂತರಸಿನ ಇಚ್ಛೆಯಂತಿರುವುದು ಒಚ್ಚೊತ್ತಿ ತಪ್ಪಿ ನಡೆದಿಹರೆ ಹೊತ್ತೇಱಿ [ಪಾಠಾಂ. ಹೊತ್ತಾಱಿ] ಕಿಚ್ಚು ಕಾದಂತೆ (ಸರ್ವಜ್ಞ. ೭೩೦). **ಹೊತ್ತೇರು**: ರಾತ್ರಿ ಮಲಗುವುದು ತೀಲಾ ತಡವಾಗಿ. ಬೆಳಗ್ಗೆ ಎಚ್ಚರವಾದಾಗ ಹೊತ್ತೇರಿಬಿಟ್ಟಿತು (ರೂಢಿ). [ಹೊತ್ತು$_5$ (< ಪೊೞ್ತು) + ಏಱು$_1$ (< ಏಱ್$_1$)]

**ಹೊದಕ** (ನಾ). (?): ಗರಗರನಾದುದು ಕೂೞ್ ನೆಯ್ ಸುರಯಿಯ ಕಂಪಾಯ್ತು ಸಟ್ಟುಗಕ್ಕಂ ಮೊಸರ್ಗಂ ಪಿರಿದು ಪೋರ್ಕುಳಿಯಾದುದು ಕರಮಿನಿದಾಯ್ತುಱಿಕೆ ಹೊದಕ ನಲ್ಲದ ಹೊರಕಂ (ಸೂಕ್ತಿಸು. ೧೧-೯೦). [?]

**ಹೊದಕುಳ** 'ಪೊದಕುಳಿ' ನೋ.

**ಹೊದಕುಳಿ** 'ಪೊದಕುಳಿ' ನೋ.

**ಹೊದಕುಳಿಗುಟ್ಟು** (ಕ್ರಿ). ಸಂಕಟಿಪಡು; ತಾಪವನ್ನು ಹೊಂದು: ಕೊಟ್ಟ ವರವೆರಡುಂಟು ಬೇಡಲು ಕೊಟ್ಟರವರಿಂದೀಗ ಹೊದಕುಳಿಗುಟ್ಟುತಿಹರಿದನಱಿಯೆ ನೀ ಕೇಳೆಂದಳಾ ಕೈಕೆ (ತೊರರಾ. ೨-೨-೩೯). [ಹೊದಕುಳಿ (< ಪೊದಕುಳಿ) + ಕುಟ್ಟು$_1$]

**ಹೊದಕುಳಿಗೊಳ್** 'ಪೊದಕುಳಿಗೊಳ್' ನೋ.

**ಹೊದಕುಳಿಗೊಳಿಸು** (ಕ್ರಿ). ದುಃಖಪಡಿಸು; ಸಂತಾಪಗೊಳಿಸು : ತೂರಲಿರುವುದನಂತ ಕಾಲವು ಹೋರಿ ಹೊದಕುಳಿಗೊಳಿಸುತಿದೆ ತಾನಾರೆ ಧರ್ಮವ ತಿಳಿದು ಸ್ವಸ್ಥ್ಯವ ಮಾಡು (ಉತ್ತಕ. ೪೮-೧೭). [ಹೊದಕುಳಿ (< ಪೊದಕುಳಿ) + ಕೊಳ್$_1$ + - ಇಸು$_3$]

**ಹೊದಕುಳಿಗೊಳು** 'ಪೊದಕುಳಿಗೊಳ್' ನೋ.

**ಹೊದಕುಳಿಸು** (ಕ್ರಿ). ದುಃಖಕ್ಕೀಡಾಗು; ಸಂತಾಪಪಡು: ಮರಣವಿಧಿಕೃತ ಜನನವಿದನಾದರಿಸಲಱಿಯದೆ ಬಯಲ ಹಮ್ಮಿನ ಹರುಹಿನಲಿ ಹೊದಕುಳಿಸುವುದು ಜನವೆಂದನಾ ರಾಮ (ತೊರರಾ. ೪-೫-೨೪). [ಹೊದಕುಳಿ (< ಪೊದಕುಳಿ) + - ಇಸು$_3$]

**ಹೊದಕುಳು** (ಕ್ರಿ). ಸಂಕಟಪಡು: ಅಱಿದು ಮಱೆದೊಮ್ಮೊಮ್ಮೆ ಘಾಸಿಯಲುರಿದು ಜೀವುತ ಹೊದಕುಳುತ್ತಲೆ ಮಱುಗಿ ಮನದಲಿ ಹೊರಳಿ ಕೆಡವುತಲಿ . . . ಬಱಿಸಿಡಿಲ ಮಾಯಾಂಗನೆಯ ಮೈಗೊಱಗುವನು ಬಲೆಯಲ್ಲಿ ಕಂಟಕಪ್ರಾಣಗತನಾಗಿ (ನಿಭಾಗ. ೫-೮-೧೫). [< ಹೊದಕುಳಿ ?./ IP ಕವಿಯು ಈ ಪ್ರಯೋಗದಲ್ಲಿ 'ಹೊದಕುಳಿಗೊಳ್' ಎಂಬುದನ್ನು ಹ್ರಸ್ವಗೊಳಿಸಿ 'ಹೊದಕುಳ' ಎಂದು ಮಾಡಿಕೊಂಡಂತೆ ತೋರುತ್ತದೆ]

**ಹೊದಕೆ$_1$** 'ಪೊದಕೆ$_1$' ನೋ.

**ಹೊದಕೆ$_2$** 'ಹೊದ್ದಿಕೆ' ನೋ.

**ಹೊದಕೆ$_3$** 'ಪೊದಕೆ$_2$' ನೋ.

**ಹೊದಕೆ$_4$** (ನಾ). ವಿಜ್ಞಾಪನೆ (?): ಶ್ರೀಮನುಮಹಾಪ್ರಧಾನಂ ಅದ್ದುರೆಯ ಅಲ್ಲಪ್ಪ ದಂಣ್ನಾಯಕರು ಶ್ರೀವೀರಬಲ್ಲಾಳದೇವರಿಗೆ ಹೊದಕೆಯನು ಮಾಡಿ ಶ್ರೀವೀರಬಲ್ಲಾಳ ದೇವರು ಹುಳಿಯಱ ನಾಡೊಳಗಣ ಚಳ್ಳಕೆಱೆಯನು ಕಲ್ಲಗೌಡಂಗೆ ಕೊಡಗಿಯಾಗಿ ಕೊಟ್ಟು (ಎಕ.XI ಹಿರಿಯೂ. ೮೭-೧೧; 1313); ಶ್ರೀಮನುಮಹಾಮಂಡಳೇಶ್ವರಂ . . . ವೀರಬಲ್ಲಾಳದೇವರಿಗೆ ಹೊದಕೆಯ ಮಾಡ್ಸಿದಲ್ಲಿ ಶ್ರೀಬೀರಬಲ್ಲಾಳದೇವರು ಹುಳಿಯಱನಾಡೊಳಗಣ ಬರಿಗೆಯ ಹಳ್ಳಿಯನು ಕಲ್ಲಗೌಡಂಗೆ ಕೊಡಗಿಯಾಗಿ ಕೊಟ್ಟು (ಎಕ.XVI, ಚಿಕ್ಕನಾ. ೭೮-೧೨; 1318). [?]

**ಹೊದಟು, ಹೊದಡು** (ಕ್ರಿ). (ತರಕಾರಿಪದಾರ್ಥಗಳನ್ನು, ಮಸಾಲೆಪದಾರ್ಥಗಳಲ್ಲಿ) ಹೊರಳಿಸಿ ಬೇಯಿಸು – ತಾಳಿಸು: ಮೊದಲು ತುಪ್ಪದೊಳು[ವು]ಕ್ಕರಿಸಿ ಹದನಾದ ಬದನೆಯ ಕಾಯ ಹೊದಟಿಯಗ್ಗರಣೆಯಂ ಮಾಡಿ ಪರಿಮಳವಿಕ್ಕಲದು ತುಳುವ ಬದನೆಕಾಯ್ಸೆಸರಾದುದು (ಸೂಪಶಾ. ೪-೭); ಕೆಲ ಹೋಳುಗಳ ಚಂದಗೆಡಿಸದೆ ಶುಂಠಿಯುಳ್ಳಿಗಳನಿಕ್ಕಿ ಯೇಲಕ್ಕಿಯಂ ತಳಿದುಕೊಂಡು ಮಂದನಪ್ಪಂತಕ್ಕಿಯರೆದು ಕಾಯಂ ಹೊದಟಿಯೊಂದಿನಿಸು ಕೆಂಪಾಗುವಂತಟ್ಟು (ಸೂಪಶಾ. ೪-೭೯). **ಹೊದಡು** : ಉಂಡೆಹಲಸಿನ ಕಾಯ ಮೇಲಣಸೋಟೆಯ ಕೆತ್ತಿ . . . ಹಸನಾಗಿ ಮುಳ್ಳಿಱಿದುಕೊಂಡದಕೆ ಮೊಸರ ಸಂಭಾರಮಂ ತುಂಬಿ ಮತ್ತದಱೊಳಗೆ ಹೊದಡಿಕೊಂಡು (ಸೂಪಶಾ. ೫-೪೩).
[< ಪೊದಟ್? ]

**ಹೊದಡು** 'ಹೊದಟು' ನೋ.

**ಹೊದನಾಡು** 'ಪೊದಲ್ನಾಡು' ನೋ.

**ಹೊದಪು** 'ಪೊದಪು' ನೋ.

**ಹೊದರ್** 'ಪೊದಱ್' ನೋ.

**ಹೊದರು**$_1$ 'ಪೊದಱ್' ನೋ.

**ಹೊದರು**$_2$ 'ಪೊದರು$_2$' ನೋ.

**ಹೊದಸು** 'ಪೊದೆಯಿಸು' ನೋ.

**ಹೊದಳು**$_1$ 'ಪೊದಟ್' ನೋ.

**ಹೊದಳು**$_2$ (ನಾ). ಹುರಿದು ಅರಳಿಸಿದ ಕಾಳು; ಅರಳು: ಬತ್ತ ಜೋಳ ಮುಂತಾದವನ್ನು ಹುರಿದಾಗ, ಅದು ವಿಸ್ತೃತವಾಗಿ "ಹೊದಳು" ಆಗುತ್ತದೆ (ಸಂಶೋಧ. ೧೮೧). [< ಪೊದಟ್]

**ಹೊದಱ್** 'ಪೊದಱ್' ನೋ.

**ಹೊದಱಡಸು** (ಕ್ರಿ). ರಾಶಿಯಾಗು; ಗುಂಪಾಗು: ಹೊದಱಡಸಿ ಕಿಡಿಯೆದ್ದು ದೆಸೆಗಳ ಹೊದಿಸಿದವು ಹೊಳೆದರ್ಜುನನ ಮುತ್ತಿದವು ಕೆತ್ತಿದವರಿಯ ಸೀಸಕ ಜೋಡು ಮೊಚ್ಚೆಯವ (ಕುವ್ಯಾಭೀ. ೯-೩೭). [ಹೊದಱು (< ಪೊದಱ್) + ಅಡಸು]

**ಹೊದಱಾನ್** (ಕ್ರಿ). ದಟ್ಟವಾಗು; ಒತ್ತಾಗು: ಹೊದಱಾಂತ ಕೊನೆಮಿಸೆಯೆಲ್ಲಿ ಪವಳವ ಪೋಲ್ವಧರವದೆಲ್ಲಿ (ಮೋಹತ. ೮-೧೧).

[ಹೊದಱು$_2$ (< ಪೊದಱ್)+ ಆನ್$_1$]

**ಹೊದಱಿಕ್ಕು** (ಕ್ರಿ). ಗುಂಪಾಗು; ಗುಂಪುಗೂಡು: ಖಿಳಿ ಲೂಲಾಯ ಸಾರಂಗ ಮದದ ರಹಿಯಲಿ ಮಾನಿಸರು ಸೋಂಕಿದೊಡೆ ಸೆಡೆಯವು ಹೊಲನ ಹೊದಱಿಕ್ಕಿದವು ದೀಹದ ಹಿಂಡಿನಂತಿರೆ (ಕುವ್ಯಾಅ. ೧೩-೧೭).

[ಹೊದಱು (< ಪೊದಱ್)+ ಇಕ್ಕು]

**ಹೊದಱು** 'ಪೊದಱ್' ನೋ.

**ಹೊದಱುಗಂಕಣ** (ನಾ). ಹಲವು ಬಳೆಗಳನ್ನು ಒತ್ತಾಗಿ ಸೇರಿಸಿದ ಬಳೆ: ಹೊದಱು [ಪಾಠಾಂ.ಹದರು] ಗಂಕಣ ಖಡೆಯ ಪಂಡೆಯದೊದವಿನಿಂ ನಿಗ್ಗವದ ಬಡಿಕೋಲ್ವಡೆದ ಬಿಲ್ಲಂಬು ಬಲೆವಿಡಿದಿಹರು ಬಿಯದರು (ಸಾಳ್ವಭಾ.೫-೭).

[ಹೊದಱು (< ಪೊದಱ್) + ಕಂಕಣ]

**ಹೊದಱುಗಟ್ಟು** 'ಪೊದಱುಗಟ್ಟು' ನೋ.

**ಹೊದಱುಗಣ್, ಹೊದಱುಗಣ್ಣು** (ನಾ). (ಪೊದೆಯಂತಿರುವ) ಹುಬ್ಬಿನಿಂದ ಆವೃತವಾದ ಕಣ್ಣು: ಮನದ ಝೊಮ್ಮಿನ ಜಡಿವ ರೋಮಾಂಚನದ ಹುದುಗುವ ಹೊದಱುಗಂಗಳ ಜಿನುಗುವಾತಿನ ಹೂತ ಹರುಷದ ಹೊಂಗಿದುತ್ಸವದ . . . ರಾಗ ರಸದುಬ್ಬಿನಲಿ ಪೊಂಪುಳಿಹೋದನಿವರನು ಕಂಡು ಪಾಂಚಾಲ (ಕುವ್ಯಾಅ. ೧೭-೬೨). **ಹೊದಱುಗಣ್ಣು**: ಹೊದಱುಗಣ್ಣಿನ ತೆಕ್ಕುತಿಹ ಕಿಬ್ಬದಿಯ . . . ಬತ್ತಿದ ಬಸುಱ ಚಿಂತಾ ಹೃದಯ ನೋಡುತ ಮಱೆಯ ಹೊಕ್ಕನು ದೈತ್ಯದಲಪತಿಯ (ಕೌಶಿರಾ. ೩೨-೨೮).

[ಹೊದಱು (< ಪೊದಱ್) + ಕಣ್]

**ಹೊದಱುಗಣ್ಣು** 'ಪೊದಱುಗಣ್' ನೋ.

**ಹೊದಱುಗಿಡಿ** (ನಾ). ದಟ್ಟವಾಗಿ ಹೊರಸೂಸುವ ಕಿಡಿ: ಹೊದಱುಗಿಡಿಗಳ ಹೊಗೆಯ ಹೇರಾಳದಲಿ ಬಹ ದಿವ್ಯಾಯುಧಕೆ ಚಾಚಿದನು ವಕ್ಷಸ್ಥಳವನಸುರಾರಾತಿ ಯಡಹಾಯ್ದು (ಕುವ್ಯಾದ್ರೋ. ೩-೭೦); ಉದುರಿದವು ತಾರೆಗಳು ಕೆಂEಕಂತೆಗಳ ಹೊದಱು ಗಿಡಿಗಳ ಹೊಯ್ಲಿನಲಿ ಕೋEಕೂತೆಲ್ಲುದಿದವೇಳಂಬುಧಿಗಳು (ನಿಭಾಗ. ೭-೮-೪).

[ಹೊದಱು (< ಪೊದಱ್)+ ಕಿಡಿ]

**ಹೊದಱುಗೊಳ್** 'ಪೊದಱುಗೊಳ್' ನೋ.

**ಹೊದಱುದಲೆ** 'ಪೊದರ್ದಲೆ' ನೋ.

**ಹೊದಱುದಿವಿ** (ನಾ).(ಆಲಂ) ಭಾರಿಯಾದ ಹೊಡೆತ,- ಪೆಟ್ಟು: ಸುಯ್ಲ ಹೊಗೆಗಳ ಹೊದಱುದಿವಿಗ[ಪಾಠಾಂ. ಗು]ಳ ಮಯ್ಯುಳಿಯ ಮುಱಿವುಗಳ ದೃಢ ವೇಗಾಯ್ಲರಿಕ್ಕಿದ ಗಾಯ ಗಾಯಕೆ ಮುಷ್ಟಿ ಕಿಡಿಯೇಳೆ (ಕುವ್ಯಾಅ .೭-೩೩); ಹಬ್ಬುಗಿಡಿಗಳ ಹೊದಱುದಿವಿಗಳ [ಪಾಠಾಂ. ತಿವಿಗುಳ, ತಿವಿಗುಳಿ, ದಿವಿಗುಳ, ದಿವಿಗುಳಿ] ಗುಬ್ಬರದ ಸಬುದದಲಿ ತಾಯ್‌ಮಳಲುಬ್ಬುತಿರ್ದುದು ಶರಧಿಯಲಿ (ತೊರರಾ. ೪-೩-೯).

[ಹೊದಱು (< ಪೊದಱ್) + ತಿವಿ$_2$]

**ಹೊದಱುದುಱುಗಲು** (ನಾ). ಪೊದೆಗಳ ಗುಂಪು, - ಸಮೂಹ: ಮಳೆಯ ಮಂಟಪ ಹೊದಱುದುಱುಗಲು ನಳಲ ಚೌಕಿಗೆ ವಿಪುಳ ವಟಸಂಕುಲದೊಳೋಲಗಶಾಲೆ ಮೆಱೆದುದು ಧರ್ಮನಂದನನ (ಕುವ್ಯಾಅ. ೧-೩೫).

[ಹೊದಱು (< ಪೊದಱ್) + ತುಱುಗಲು (< ತುಱುಂಗಲ್)]

**ಹೊದಱುದೆಗೆ** (ಕ್ರಿ).ಗುಂಪಾಗು; ಗುಂಪುಗೂಡು: ಸುತ್ತುಝಳ್ಳಿಯ ಬಲು ಹತ್ತುಗೆಯ ಬಿಱುಬುಗಳ ತೇರಿನ ಹತ್ತುಸಾವಿರ ಹೊದಱುದೆಗೆದವು ಶಲ್ಯನೆಡಬಲಕೆ (ಕುವ್ಯಾಶ. ೨-೨೭).

[ಹೊದಱು (< ಪೊದಱ್) + ತೆಗೆ$_1$]

**ಹೊದಱುದೇಗು** (ನಾ).ಭಾರಿಯಾದ ತೇಗು: ತ್ರಿದಶರುಱ ಬಾಯಾಡಿಸಿದರಗ್ಗದ ಧ್ರುವಾದಿಗಳನು ಸುತೃಪ್ತಿಯ ಹೊದಱುದೇಗಿನ ಹೊಟ್ಟೆ ನೂಕಿತು ಹರಿಹಯಾದಿಗಳ (ಕುವ್ಯಾಸ. ೭-೩೪). [ಹೊದಱು (< ಪೊದಱ್) + ತೇಗು$_3$]

**ಹೊದಱುವನೆ** 'ಪೊದರ್ವನೆ' ನೋ.

**ಹೊದಱುವೆಳಗು** 'ಪೊದಱುವೆಳಗು' ನೋ.

**ಹೊದಱೆಡೆ** (ನಾ). ಪೊದೆಗಳಿರುವ ಸ್ಥಳ,- ಜಾಗ: ಮಾರ್ದನಿಗೊಡುವ ಗುಹೆಗುಹೆಗಳ ನಡುವೆ ಹೊಕ್ಕಯ್ಯ ಮಲ್ಲಯ್ಯ ಮಲ್ಲಯ್ಯ ಹೊದೆಱೆಡೆಯ ಹೊಕ್ಕಯ್ಯ ಮಲ್ಲಯ್ಯ ಮಲ್ಲಯ್ಯ . . . ಎಂದೊದಱಿ ಕರೆಕರೆದತ್ತನು (ಸಿದ್ಧರಾ. ೨-೫೯).

[ಹೊದಱು (< ಪೊದಱ್) + ಎಡೆ$_3$]

**ಹೊದಱೇಳ್** 'ಪೊದಱೇಳ್' ನೋ.

**ಹೊದಱೊಡೆ** 'ಪೊದಱೊಡೆ' ನೋ.

**ಹೊದಿ**$_1$ 'ಪೊದೆ$_1$' ನೋ.

**ಹೊದಿ**$_2$ 'ಪುದಿ$_2$' ನೋ.

**ಹೊದಿಕೆ**$_1$ 'ಪೊದಕೆ$_1$' ನೋ.

**ಹೊದಿಕೆ**$_2$ 'ಪೊದಕೆ$_2$' ನೋ.

**ಹೊದಿಕೆದೆಱೆ** (ನಾ).ಒಂದು ಬಗೆಯ ತೆರಿಗೆ: ತಳಸಾರಿಗೆ ಆಲದೆಱೆ ತೋಟದೆಱೆ ಹೊದಿಕೆದೆಱೆ ಮೊದಲಾದಯೇನುಳ್ಳ ಸುಂಕ ಕಾರುಕವನೂ ನಂಮು ನಾಡುಗಳ ಮೇಲುವದಿಕೆಯಾಗಿಯಿಕ್ಕಿಕೊಂಡು . . . ವಿಠಪ್ಪಗಳಿಗೆ ಧಾರೆಯನೆಱೆದು ಕೊಟ್ಟೆವಾಗಿ (ಎಕ.VIII. ತೀರ್ಥಹ. ೧೩೩-೨೫; 1414). [ಹೊದಿಕೆ$_2$ (<ಪೊದಕೆ$_2$) + ತೆಱೆ$_3$]

**ಹೊದಿಯಿಸು** 'ಪೊದೆಯಿಸು' ನೋ.

**ಹೊದಿಸು** 'ಪೊದೆಯಿಸು' ನೋ.

**ಹೊದುಸು** 'ಪೊದೆಯಿಸು' ನೋ.

**ಹೊದೆ**$_1$ 'ಪೊದೆ$_1$' ನೋ.

**ಹೊದೆ**$_2$ 'ಪೊದೆ$_2$' ನೋ.

**ಹೊದೆಗಡಿ** (ಕ್ರಿ). ಪೊದರನ್ನು ಕತ್ತರಿಸು: ಹೊದೆಗಡಿದು ಹತ್ತಿ ಹುತ್ತವ ಸುತ್ತಿದೆಳ ಹುಲ್ಲ ಹೊದಱ ಹಿಡಿದಡಸಿ ಬಿಡದರಿದು ಸೆಳೆಯಲ್ ಕಯ್ಯ ಹದರನೊಡೆಗಚ್ಚೆ ಜಡಿಯುತ್ತ ಭೋಂಕನ ಬಂದ ರೌದ್ರಸರ್ಪನನು ಕಂಡು ಹೆದಱ . . . ಕೊರಳಡಿಯಾಗಿ ಕೆಡೆದನು (ಹಚಕಾ. ೧೨-೯). [ಹೊದೆ$_2$ (< ಪೊದೆ$_2$) + ಕಡಿ$_2$]

**ಹೊದೆಗೆದಱು** 'ಪೊದೆಗೆದಱು' ನೋ.

**ಹೊದೆಗೋಲು** (ನಾ). ಬತ್ತಳಿಕೆಯಲ್ಲಿರುವ ಬಾಣ: ಭ್ರೂಲತೆಯ ಹದವಿಲ್ಲುಗಳ ಹೊಳೆವಾಲಿಗಳ ಹೊದೆಗೋಲುಗಳ ನಳಿತೋಳ ಬಡಿಗೋಲುಗಳ ಸೆಳ್ಳುಗುರ್ಗೊನೆ ಗಳಂಟುಗಳ . . . ಬೇಟೆಕಾತಿಯರ್ಯೆದಿಹರು ವನವ (ತೊರರಾ. ೧-೫-೩೯); ಹೊದೆಗೋಲಿನಿಂದ ಮನ್ಮಥನೆಚ್ಚ ಮಾತ್ರದೆ ಸೊದೆಗೂಳು ಶೋಧಿಸಿತವಗೆ (ಮೋಹತ. ೨೫-೩೯).

[ಹೊದ್ದ$_2$ (< ಪೊದ್ದ$_2$) + ಕೋಲು$_1$ (< ಕೋಲ್$_1$)]

**ಹೊದೆನಾಡು** 'ಪೊದಲ್ನಾಡು' ನೋ.

**ಹೊದೆಪು** 'ಪೊದಪು' ನೋ.

**ಹೊದೆವುಡೆ** (ನಾ). ಹೊದೆಯುವ ವಸ್ತ್ರ: ಹಾಸಲರುವೆಗಳೆಲ್ಲಿ? ಚಳಿವೊಳ್ತು ತಾನಡಿಯಿಡಲ್ ಹೊದೆವುಡೆಗಳೆಲ್ಲಿ? (ಶ್ರೀರಾಮಾ. ೮೯-೩೦೫). [ಹೊದೆ$_1$ (< ಪೊದೆ$_1$) + ಉಡ$_2$]

**ಹೊದೆಸು** 'ಪೊದೆಯಿಸು' ನೋ.

**ಹೊದ್ದ** 'ಪೊದೆ$_1$' ಪರಾ.

**ಹೊದ್ದಿಕೆ$_1$** 'ಪೊದಕೆ$_1$' ನೋ.

**ಹೊದ್ದಿಕೆ$_2$,ಹೊದಕೆ$_2$** (ನಾ). ಸೇರುವಿಕೆ;ಕೂಡುವಿಕೆ;ಹೊಂದಾಣಿಕೆ: ಪಾರ್ತಿಸುಬ್ಬನ ಕಾಲವಾದರೂ . . . ಸುಬ್ಬರಾಯನ ಕಾಲಕ್ಕೆ ಹೊದ್ದಿಕೆಯಾಗುತ್ತದೆ(ಪಾರ್ತಿಸು.೬). **ಹೊದಕೆ$_2$** : ನಿಷ್ಪತಿ ಬಂದು ಒಳಕೊಂಡಲ್ಲಿ ನಿರಾಶ್ರಯ ಬಂದು ಹೊದಕೆಯಾದಲ್ಲಿ ನಿರಾಲಂಬನವಾಯಿತಲ್ಲಾ ಎನ್ನ ಬಹುರೂಪು (ಸರ್ವವ.೪೪-೨೩೭). 'ಪೊರ್ದುಗೆ' ಪರಾ. [ಹೊದ್ದು$_1$(< ಪೊರ್ದು) + - ಇಕೆ]

**ಹೊದ್ದಿಗ** (ನಾ). ಹತ್ತಿರದವನು; ಬಂಧು: ಇದ್ದರೆಯು ರಣವಿಜಯವನಿತೆಗೆ ಹೊದ್ದಿಗರು ದ್ರುಪದಾದಿರಾಯರ ಹೊದ್ದಿಸಲು ಬೇಡವರಿಗಂಜುವೆವೆನುತ ನೂಕಿದರು (ಕುಮ್ಯಾಭೀ. ೮-೨೧). [ಹೊದ್ದು (< ಪೊರ್ದು) + - ಇಗ]

**ಹೊದ್ದಿಗೆ** 'ಪೊರ್ದುಗೆ' ನೋ.

**ಹೊದ್ದಿಸು$_1$** 'ಪೊರ್ದಿಸು' ನೋ.

**ಹೊದ್ದಿಸು$_2$** 'ಪೊದೆಯಿಸು' ನೋ.

**ಹೊದ್ದು$_1$** 'ಪೊರ್ದು' ನೋ.

**ಹೊದ್ದು$_2$** 'ಪೊದೆ' ನೋ.

**ಹೊದ್ದುಗೆ** 'ಪೊರ್ದುಗೆ' ನೋ.

**ಹೊದ್ದು** (ನಾ). ಸ್ಥಳ; ಪ್ರದೇಶ: ಯಿಾ ಪೂರ್ವದಿಕ್ಕಿಗೆ ವೇದಾವತೀನದೀತೀರದ ಹೊದ್ದು ದಕ್ಷಿಣದಿಕ್ಕಿಗೆ ಭಾತ್ತದ ರಾಸೆಯಾ ಬೆಟ್ಟದ ಹೊದ್ದು ಯಿಾ ಪಶ್ಚಿಮದಿಕ್ಕಿಗೆ ದೊಡ್ಡಕಾಪ್ಲೆ ಮುಂದಣ ಗುಡದ ಹಂಬಗೆಯ ಹೊದ್ದು ಉತ್ತರದಿಕ್ಕಿಗೆ ಕದೂವುರ ಕಾಪ್ಲೆ ಹುಲಿಹೊದ್ದು (ಎಕ. VI, ಕಡೂರು. ೧೭೮-೧೪; 1813). 'ಹೊಟ್ಲು' ಪರಾ. [< ಪುದಿ$_2$]

**ಹೊನ್** 'ಪೊನ್' ನೋ.

**ಹೊನಗನೆ** 'ಪೊನ್ನಗನ್ನೆ' ನೋ.

**ಹೊನಗನ್ನೆ** 'ಪೊನ್ನಗನ್ನೆ' ನೋ.

**ಹೊನಗೆ, ಹೊನಗ್ಯಾ, ಹೊನಿಗ್ಯಾ** (ನಾ). ಮಾಂಸಾಹಾರಿಯಾದ ಒಂದು ಕಾಡುಪ್ರಾಣಿ; ಚಿರತೆ: ಅಡವೀ ಚಂಚೇರು . . . ಇವರು ಒಮ್ಮೊಮ್ಮೆ ಹೊನಗೆಗಳನ್ನು ಸಹ ತಮ್ಮ ಬಲೆಯಲ್ಲಿ ಜೀವದಿಂದ ಹಿಡಿದು ತಂದು ಮಾರಿಕೊಳ್ಳುವರು (ಕಭಾಗ. ೨೦೮). **ಹೊನಗ್ಯಾ:** ಚಿರ್ಚು, ಹೊನಗ್ಯಾ, ತೋಳ, ಮೊಲ, ಅಷ್ಟೇ ಬೇಟೆಯಾಡಿದ್ದರು (ದೀಪಹ. I ,೧೫). **ಹೊನಿಗ್ಯಾ:** ಹಳ್ಳಿಗೆ ಬರುವ ಸರ್ಕಸ್ ಎಂಥದಿರಬೇಕು? ಸಿಂಹ ಅನಿಸಿಕೊಳ್ಳುವ ಒಂದು ಹೊನಿಗ್ಯಾ, ಸಾಯಲಾರದ ಒಂದು ಹುಲಿ . . . ತಟ್ಟೂ ಕೆಲವು ಇದ್ದವು (ನಿರಾಭ. ೭೪). [?]

**ಹೊನಗೊನೆ** 'ಪೊನ್ನಗನ್ನೆ' ನೋ.

**ಹೊನಗೊನ್ನೆ** 'ಪೊನ್ನಗನ್ನೆ' ನೋ.

**ಹೊನಗೋನೆ** 'ಪೊನ್ನಗನ್ನೆ' ನೋ.

**ಹೊನಗ್ಯಾ** 'ಹೊನಗೆ' ನೋ.

**ಹೊನರು** (ನಾ). ೧. ಚರ್ಚೆ; ಮೇಲಾಟ: ಇನತನುಜ ಗುರು ಭೀಷ್ಮ ಗುರುಸುತ ಕೃಪರು ಮೊದಲಾದ ಘನರಥಿಕರಧಿಕಪ್ರತಾಪರು ಹೊನರಿನಲಿ ರಣರಂಗಕೈದಿದರನುಗೊಳಿಸಿ ಸಕಲಾಯುಧದ ಸಂವರಣೆಯಲಿ ನಡೆದು (ಕೋಗಯ.೧೬-೧೩). **೨. (?):** ಹೊನರಲ್ಲಿ ಹೋಗುವನು ಅನಸವಿಲ್ಲದೆ ಮೊನೆಗೊಂಡು ಕಲ್ಲಪಕೋರೆಯೋ ಬಸವಲಿಂಗ (ಗುರುಬ. ೬೬-೧೨). [< ಪೊಣರ್$_2$]

**ಹೊನಲ್** 'ಪೊನಲ್' ನೋ.

**ಹೊನಲಿಡು** 'ಪೊನಲಿಡು' ನೋ.

**ಹೊನಲು** 'ಪೊನಲ್' ನೋ.

**ಹೊನಲುಗಿಡಿ** (ನಾ). ಪ್ರವಾಹದಂತೆ ಸೂಸಿ ಬರುವ ಕಿಡಿ: ಉರಿಮುಖದ ಕಾರ್ಬೊಗೆಯ ಮೊಬ್ಬಿನಲಿ ಹೊನಲುಗಿಡಿಗಳ ತಗಡುರಿಯ ಕೊಂಡಿನಲಿ ಮುತ್ತಿತು ರಥವನಾತನ ಧನುವನಾತನ ತನುವನಾತನ ಸರಳ ಸಾರಥಿಯ (ಕುಮ್ಯಾಕ. ೧೧-೩೩). [ಹೊನಲು (< ಪೊನಲ್) + ಕಿಡಿ]

**ಹೊನಲುಲಿ** (ನಾ). ನದಿಯ ಮೊರೆತ,- ಸದ್ದು : ಪ್ರಕೃತಿಯ ಅಳಲಿನಲ್ಲಿ ತಮ್ಮ ಅಳಲ ಹಾಡನ್ನು ಹೊನಲುಲಿಯಂತೆ ಬೆರಸುತ್ತಾರೆ (ಬಧ್ವಪ್ರ. XVIII). [ಹೊನಲು (< ಪೊನಲ್ ) + ಉಲಿ$_2$]

**ಹೊನಲುವರಿ** 'ಪೊನಲ್ವರಿ$_1$' ನೋ.

**ಹೊನಲೇರು** 'ಹೊನಲೇಱು' ನೋ.

**ಹೊನಲೇಳು** 'ಪೊನಲೇಳ್' ನೋ.

**ಹೊನಲೇಱು,** ಹೊನಲೇರು (ಕ್ರಿ). ಪ್ರವಾಹ ಉಕ್ಕಿ ಹರಿ,-ಹೊರಸೂಸು: ಒಡೆಯೆ ತಟಾಕರಾಜಿ ಹೊನಲೇಱೆ ಧರಿತ್ರಿಸಮಸ್ತಸಿಂಧುಗಳ್ ತಡಿಯನೆ ಮಿಾಱೆ ತಾಂ ಪರಿಯೆ ಬೆಂಚೆಗಳುರ್ವಿರೆ ನಿರ್ಝರಾಳಿ ಭೋರಿಡುತೆ ಮಹೀಧ್ರದಿಂ ಜಗುೞೆ . . . ಕಟ್ಟಿ ಕಱೆದತ್ತು ಸುವೃಷ್ಟಿ (ಉದ್ಭಟ. ೯-೧೪೦). **ಹೊನಲೇರು:** ಕೋಪಾಗ್ನಿ ಒಡಲೊಳಂ ಯಿರದೆ ಹೊತ್ತುತ್ತ ಹೊನಲೇರಿ ಭುಗಿಭುಗಿಸುತ್ತೆ (ನವಮೋ. ೬-೪೪). [ಹೊನಲ್ (< ಪೊನಲ್) + ಏಱು$_1$ (< ಏಱ್$_1$)]

**ಹೊನಹು** (ನಾ). ಒನಪು; ಒಯ್ಯಾರ: ಈ ನನ್ನ ಕಟ್ಟುಗಡಸಿನ ಮೆಯ್ಯೆಂಬ ಹೊನಹಿನ ಪಾತರದಲ್ಲಿ ಎಸರಿಟ್ಟಿರುವ ರೂಪ ಸೌಂದರ್ಯ ಯೌವನ ಶೃಂಗಾರ ಕಲೆಗಳೆಂಬ ಪಂಚಾಸವಗಳನ್ನು (ಮಂತ್ರಶ. ೨೯-೧೫). 'ಕೊನಬು' ಪರಾ. [< ಒನಪು?]

**ಹೊನಹುಗಾರ್ತಿ** (ನಾ). ಒನಪುಗಾರ್ತಿ; ಒಯ್ಯಾರಿ: " ಪದಹುಗಾರ್ತಿಯೆಂದು ಹೊನಹುಗಾರ್ತಿಯೆಂದು ಸಂರಂಭವತಿ" (ಕಕಸಾ. ೧೯-೩೬೨); ಆ ಹೊನಹುಗಾರ್ತಿ ಬಾಂಗುರುಳನ ಮುಂಗುರುಳನೊಪ್ಪದಿಂ ಸೈತು ನೇವರಿಸಿ (ರಾಮಾಶ್ವ. ೧೩೧-೭); ಪರಮ ಸುಂದರಿಯರಾದ ಹೊನಹುಗಾರ್ತಿಯರು . . . ನಾನಾ ಅವಸ್ಥೆಗಳಲ್ಲಿರುವರು (ವಿಗಡ. ೭-೧೬).'ಕೊನಬುಗಾರ್ತಿ' ಪರಾ. [< ಒನಪುಗಾರ್ತಿ ?]

**ಹೊನಾಲ್** (ನಾ). ಒಂದು ಬಗೆಯ ಔಷಧೀಸಸ್ಯ: ಹೊನಾಲ್,ಹುಲುವೆ, ಹುನಗಲು (ವೃಜಿಗಿ. ೭೪-೧೫೧೪). [?]

**ಹೊನಿಗ್ಯಾ** 'ಹೊನಗೆ' ನೋ.

**ಹೊನ್ನಂಡೆ** 'ಪೊನ್ನಂಡೆ' ನೋ.

**ಹೊನ್ನಂಡೆಗಾತಿ** (ನಾ). ಚಿನ್ನದ ಜೀರ್ಕೊಳವಿಯನ್ನು ಹಿಡಿದು ಓಕುಳಿ ಯಾಡುವವಳು: ಬಿಡಯವಿಲ್ಲದ ಹೊನ್ನಂಡೆಗಾತಿಯರು ಬೆಂಗಡೆಯ ಸಾರಿದರು ರುಕ್ಮಿಣಿಯ (ಮೋಹತ.೧೪-೬೧). [ಹೊನ್ನಂಡೆ (< ಪೊನ್ನಂಡೆ) + - ಕಾತ್ತಿ]

**ಹೊನ್ನಂಡೆದಳೆ** (ಕ್ರಿ) .ಚಿನ್ನದ ಜೀರ್ಕೊಳವಿಯನ್ನು ಹಿಡಿದಿರು:ವರವಿಲಾಸಿನಿಯರು ಹೊನ್ನಂಡೆದಳೆದು ತನಿಮೋಹರಸವೊಸರ್ವಂತೆ ಪೊಯ್ದಾಡಿದರನಿಬರು (ಮೋಹತ. ೧೪-೮೪). [ಹೊನ್ನಂಡೆ (< ಪೊನ್ನಂಡೆ) + ತಳೆ$_1$]

**ಹೊನ್ನಂದಣ** 'ಪೊನ್ನಂದಳ' ನೋ.

**ಹೊನ್ನಂಬು** 'ಪೊನ್ನಂಬು' ನೋ.

**ಹೊನ್ನಗನ್ನೆ** 'ಪೊನ್ನಗನ್ನೆ' ನೋ.

**ಹೊನ್ನಗಸೆ** (ನಾ). ಚಿನ್ನದ ಹೆಬ್ಬಾಗಿಲು; ಸುವರ್ಣದ ಮಹಾದ್ವಾರ : ಕುಂಭಿಣಿ ಬೆಸಲಾದುದೆಂಬಂತೆ ಜನರು ತುಱುಂಬಿತು ಹೊನ್ನಗಸೆಯೊಳು (ಮೋಹತ.೧೦-೩೯). [ಹೊನ್ನು (< ಪೊನ್) + ಅಗಸೆ (< ಅಗುಸೆ)]

**ಹೊನ್ನಗಾಲೆ** (ನಾ). ಒಂದು ಬಗೆಯ ಪಕ್ಷಿ: ಹೊನ್ನಗಾಲೆ ಶಕುನಿ ಶುನಿಗಿಲು . . . ಸಕಲಖಗಕಧಿಕ ನಾಗರಪಕ್ಷಿಮುಖ್ಯಗಳ್ ಸುಖಿಮಿಪ್ಪವಾ ವನದೊಳು (ವಿಕೋಪು. ೧೦-೩೧). [?]

**ಹೊನ್ನಗೊನ್ನೆ** 'ಪೊನ್ನಗನ್ನೆ' ನೋ.

**ಹೊನ್ನಣಗೌಡ** (ನಾ). ಒಬ್ಬಾತನ ಹೆಸರು: ಆತನ ತಮ್ಮ ಚಿಕ್ಕತಂಮ್ಮಗೌಡರು

ಆತನ ಅನುಜ ಹೊಂನಣಗೌಡರು (ಎಕ. Vii, ಶಿವಮೊ. ೧೧೪-೧೭ ; 950 ?).

[ಹೊನ್ (< ಪೊನ್) + < ಅಣ್ಣ$_1$ + ಗೌಡ (< ಗಾಮುಂಡ)]

**ಹೊನ್ನಣೆ** (ನಾ). ಚಿನ್ನದ ಆಣೆ,-ಕಾಸು (?): ವಾದ್ಯತಾಳ ೧ ಕೊಳಹರ ಬಳಿಯ ಚಿಮ್ಮಣಗೆ ಮು ೮ ಗದ್ದೆ ಹೊನ್ನಣೆ ೧ ಕೆ ಮಕ್ಕಿಯ ಒಳಗೆ ಮು ೩ ಗದ್ದೆಯಿಂದ ನಿತ್ಯ ನಾಲ್ವಾನೆ ಅಕ್ಕಿ ನೈವೇದ್ಯ (ಸೌಇಇ.IX-II. ೪೭೦-೫೭; 1482).

[ℙ ಇದು 'ಹೊನ್ನಾಣೆ' ಎಂದಿರಬಹುದೆ ?]

**ಹೊನ್ನಯ್ಯ** 'ಪೊನ್ನಯ್ಯ' ನೋ.

**ಹೊನ್ನರಮನೆ** (ನಾ). ಚಿನ್ನದ ಅರಮನೆ; ಸುವರ್ಣಭವನ: ಹೊನ್ನರಮನೆಯೊಳೆಲ್ಲರಿಗೆ ನಿನ್ನನುಜರ್ಗೆ ಸನ್ನುತ ಸಂತೋಷವೆಂದ (ಭರಚ. ೫೭-೨೧).

[ಹೊನ್ನು (< ಪೊನ್) + ಅರಮನೆ]

**ಹೊನ್ನರಳಿ**(ನಾ).ಒಂದು ಬಗೆಯ ಅರಳಿಮರ: ಕರಿ ಬೆಂದು ಗಿರಿ ಬೆಂದು ಹೊನ್ನರಳಿಯ ಮರನುಳಿದು ಹಿರಿಯತನಗೆಡಿಸಿ ನೆರೆವನು (ಮಹಾದೇ.ಬಿ. ೧೪೩-೩೨೫); ಉನ್ನತಚರಿತನಾಗ ಹೊನ್ನರಳಿಯ ಮರಕ್ಕೆ ಮಿಗೆ ಚಿನ್ನದುಯ್ಯಾಲೆಯನ್ನು ಬಂಧಿಸುತೆ (ಮಹಾಪಿ. ೧೩-೪೨).

[ಹೊನ್ನು(< ಪೊನ್)+ ಅರಳಿ$_1$]

**ಹೊನ್ನಾಂಬರ** (ನಾ). ಪೀತಾಂಬರಧಾರಿ; ಕೃಷ್ಣ: ಚಿನ್ನದ ಕಾಲ ಬೆಳ್ಳಿಯ ಕಾಲ ಮಂಚ ಸುವರ್ಣದಡ್ಡಣಿ ಸುಪ್ಪತಿಗೆ . . . ಹೊನ್ನಾಂಬರನಿತ್ತ ಮಗಗೆ (ಮೋಹತ. ೧೫-೧೭).

ℙ ಇದು 'ಪೀತಾಂಬರ' ಎಂಬ ಶಬ್ದದ ಸಾದೃಶ್ಯದ ಮೇಲೆ ಮಾಡಿಕೊಂಡಿರುವ ರೂಪ. [ಹೊನ್ನು (< ಪೊನ್) + ಅಂಬರ]

**ಹೊನ್ನಾಗರ** (ನಾ). ಚಿನ್ನದ ನಗರ; ಲಂಕೆ: ಸಾಗರವ ದಾಂಟಿ ಹೊನ್ನಾಗರಕೆ ಹಾರಿದ ರಾಘವನ ಬಂಟ ಹನುಮಂಗೆ ಕಚ್ಚುಟಿಯು ಹೋಗದೇಕೆಂದ (ಸರ್ವಜ್ಞ. ೮೫೫).

[ℙ ಇಲ್ಲಿ ಛಂದಸ್ಸಿಗಾಗಿ 'ಹೊನ್ನಗರ' ಎಂಬುದನ್ನು 'ಹೊನ್ನಾಗರ' ಎಂದು ಮಾಡಿಕೊಳ್ಳಲಾಗಿದೆ]

**ಹೊನ್ನಾಯುಗ** 'ಪೊನ್ನಾಯುಗ' ನೋ.

**ಹೊನ್ನಾಯುಧ** (ನಾ). ಚಿನ್ನದ ಹಿಡಿಕೆಯುಳ್ಳ ಆಯುಧ: ತೆಗೆಸಿದನು ಭಂಡಾರದಲಿ ಬಗೆಬಗೆಯ ವಸ್ತುವ ಸುಭಟರಿಗೆ ಝುಗಝುಗಿಪ ಹೊನ್ನಾಯುಧವ ನವರತ್ನಗಳ ತೊಡಿಗೆಗಳ ಸುಗುಣಿಯರು ಮೊದಲಾದ ಪರಿವಾರಗಳಿಗಿತ್ತನು (ನಳಚ. ೯-೫೭).

[ಹೊನ್ನು (< ಪೊನ್)+ಆಯುಧ]

**ಹೊನ್ನಾರತಿ** (ನಾ). ಚಿನ್ನದ ತಟ್ಟೆಯಲ್ಲಿಟ್ಟು ಬೆಳಗುವ ಆರತಿ: ಹೊನ್ನಾರತಿಗಳಂ ತರತರದ ಪರಿಯಾಣಂಗಳಂ ನೀಡುವ ಸಮಯದಲ್ಲಿ (ಬಸಪು. ೧೨-೩೫).

[ಹೊನ್ನು (< ಪೊನ್)+ ಆರತಿ$_1$]

**ಹೊನ್ನಾರಿ** (ನಾ). ಒಂದು ಬಗೆಯ ಔಷಧೀಸಸ್ಯ : ಹೊನ್ನಾರಿಯ ಬೇರ ತಿಗಡು ವಜ್ರನೀಲಿಯ ಸೊಪ್ಪು ಇವಂ ಚೂರ್ಣವಂ ಮಾಡಿ (ವಿಷ್ಯವಿ. ೨೦೦). 'ಹೊನ್ನಾವರೆ' ಪರಾ. [ಹೊನ್ನು (< ಪೊನ್) + ?]

**ಹೊನ್ನಾರು** (ನಾ). ಮುಂಗಾರಿನ ಮೊಟ್ಟಮೊದಲಿನ ಉಳುಮೆ; ಮೊದಲು ಕಟ್ಟುವ ಆರು : ಬುದ್ಧೀ ಹೊನ್ನಾರು ಕಟ್ಟುವುದಕ್ಕೆ ದಿನ ಯಾವತ್ತು ಚಂದಾಗದೆ? (ಹುಟ್ಟಿಪ.೬೧); ಹೊನ್ನಾರು ಕಟ್ಟುವ ಚರ್ಚೆ ಬಂತು (ನಮ್ಮೂರ. ೧೩೯).

[ಹೊನ್ನು (< ಪೊನ್) + ಆರು$_5$ (< ಆರ್$_3$)]

**ಹೊನ್ನಾವರಿಕೆ** (ನಾ). ೧. ಹಳದಿ ಹೂಗಳನ್ನು ಬಿಡುವ ಒಂದು ಬಗೆಯ ಗಿಡ; ತಂಗಡಿಗಿಡ: ನದಿಯ ಗುಂಪ ತಾವರೆ ಬಲ್ಲುದಲ್ಲದೆ ತಡಿಯಲ್ಲಿದ್ದ ಹೊನ್ನಾವರಿಕೆ ಬಲ್ಲುದೆ ಅಯ್ಯ (ಮಹಾದೇ.ಬಿ.೩೭-೭೭). ೨. ಒಂದು ಬಗೆಯ ಎತ್ತರವಾದ ಮರ:(ಕ).

[ಹೊನ್ನು (< ಪೊನ್) +ಆವರಿಕೆ]

**ಹೊನ್ನಾವರೆ** (ನಾ) = ಹೊನ್ನಾವರಿಕೆ· "ಕಾಂಚನಪುಷ್ಪಕಃ - ಹೊನ್ನಾವರೆ" (ಓಷಧಿ .೩೨). [ಹೊನ್ನು (< ಪೊನ್) + ಆವರೆ]

**ಹೊನ್ನಾಳ** (ನಾ). ಚಿನ್ನದ ಹಿಡಿ,– ಹಿಡಿಕೆ: ಮಿಸುನಿಯ ಕರು ತೊಟ್ಟನೆ ಹೊನ್ನಾಳದ ಕೈದಂ ಪಿಡಿವಂದದಿನಮರ್ದಟ್ಟಿ . . . ಕೊಡಿದರು (ಜಯಕಾ.೨-೫೩); ಲಲನೆಯಲ್ಲವರಿ ದರ್ಂತಿಭ್ಯಕೇತುವಿಗೆಳಸಿ ಮಾಲೆಯನಿಕ್ಕಿದಳು ಉಳಿದ ಲೋಹವ ಬಿಟ್ಟು ಹೊನ್ನಾಳ ದಸಿ ಪಜ್ಜಳಿಸುವ ಪಣವಿಡಿವಂತೆ (ನೇಮಿಸಂ.೨-೧೨೧).

[ಹೊನ್ನು (< ಪೊನ್)+ ನಾಳ$_1$ (= ನಾಲ$_1$)]

**ಹೊನ್ನಿಗ** 'ಪೊನ್ನಿಗ' ನೋ.

**ಹೊನ್ನೀರು** 'ಪೊನ್ನೀರ್' ನೋ.

**ಹೊನ್ನು** 'ಪೊನ್' ನೋ.

**ಹೊನ್ನುಂಗುರ** (ನಾ). ಚಿನ್ನದ ಉಂಗುರ : ತಾಳಿ ಹೊನ್ನುಂಗುರದವ ಬರೆ . . . ಮೇಲಾದೊಡವೆಯ ಸೆಳೆಕೊಂಡಾತನ ಚಾಳಿಸಿ ಬಿಡು ನೀ ಮಗಳೆ (ಕುಸವಿ.೬-೧೫೭).

[ಹೊನ್ನು (< ಪೊನ್ ) + ಉಂಗುರ]

**ಹೊನ್ನುಗುಬ್ಬಿ** 'ಹೊಂಗುಬ್ಬಿ' ನೋ.

**ಹೊನ್ನುಡೆನೂಲು** (ನಾ). ಚಿನ್ನದ ಉಡಿದಾರ: ಮಿಗಿಲು ಶೋಭಿಸುವ ಹೊನ್ನುಡೆನೂಲು ಕಾಲಂದುಗೆ ಗೆಜ್ಜೆ ಘಣರೆಂಬ ರವದಿ ಪಗೆವನೆಯೊಳಗೆ ನರ್ತಿಸುತಿಹ ಬಾಲನ ಬಗೆ ಲೇಸಾಯ್ತು ನೋಳ್ಪರಿಗೆ (ಮೋಹತ. ೧೧-೬೦).

[ಹೊನ್ನು (< ಪೊನ್)+ ಉಡೆನೂಲು (< ಉಡೆನೂಲ್)]

**ಹೊನ್ನುಬಾಕಿ** (ನಾ). ಹಣದ ಮೇಲೆ ವಿಪರೀತ ಲೋಭವುಳ್ಳವಳು: ಹಾದರಗಿತ್ತಿಯರು ಬ್ರಹ್ಮೇತಿಕಾತಿಯರನವರತಮುಂ ಹೊನ್ನುಬಾಕಿಯರು (ಬಸಪು . ೪೦-೫೫).

[ಹೊನ್ನು (< ಪೊನ್)+ - ಬಾಕ + - ಇ$_2$]

**ಹೊನ್ನುಮ್ಮತ** (ನಾ). ದತ್ತೂರದಲ್ಲಿ ಒಂದು ಬಗೆ: ದಿವಿಜಾಲಯಂ ಮೂಱು ನೆಲೆಯ ಹೊನ್ನುಮ್ಮತದ ಕುಸುಮದಾಕಾರದಲ್ಲಿ . . . ಮೆಱೆವ ಮೇರುವಿನ ದಕ್ಷಿಣ ದಿಶಾಭಾಗ ಭಾರತಖಂಡದವನಿಯೊಪ್ಪುತ್ತಿಹುದು (ಗುರುಬಾ. ೧-೧೪).

[ಹೊನ್ನು (< ಪೊನ್) + ಉಮ್ಮತ (< ಉಮ್ಮತ್ತ)]

**ಹೊನ್ನುಯ್ಯಲ್** 'ಪೊನ್ನುಯ್ಯಲ್' ನೋ.

**ಹೊನ್ನುಹಾವಿಗೆ** 'ಪೊಂಬಾವುಗೆ' ನೋ.

**ಹೊನ್ನೆ** 'ಪೊನ್ನೆ' ನೋ.

**ಹೊನ್ನೆದೆಱೆ** (ನಾ).ಒಂದು ಸ್ಥಳದ ಹೆಸರು: ಹೊನ್ನೆದೆಱೆ ಆಳಗನ ಹಳ್ಳ ಎತ್ತುರುಳಿ ನರಿಗನ ಗಟ್ಟ ಮತ್ತರನಱೆ ನಿಱೆಯಿಂಗಲು (ಎಕ.VI, ತರೀಕೆ. ೭೭-೧೧; 888).

[ℙ ಇದು 'ಹೊನ್ನೆಗೆಱೆ' ಎಂಬುದರ ಅಪಲಿಖಿತವಿರಬಹುದು]

**ಹೊನ್ನೆಹೂಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಮೃಬಿಗಿ. ೨೮-೫೩೮).

[ಹೊನ್ನೆ? + ಹೂ$_2$ (< ಪೂ$_2$)+ ಹುಲ್ಲು (< ಪುಲ್)]

**ಹೊನ್ನೊಡಲ** (ನಾ). ಹಿರಣ್ಯಗರ್ಭ; ಬ್ರಹ್ಮ: ಹೊನ್ನೊಡಲನ ಪುತ್ರ ಕೇಳು ಖೇಚರದಿಂದಲೇನಾತ್ಮಜ ಬಂದ ಮನೆಗೆ ನಿನ್ನಿಂದೆ ಕೈಸಾರಿದುದು ನಿಶ್ಚಯವೆಂದು ಬಿನ್ನಯಿಸಿದಳು ನಾರದಗೆ (ಮೋಹತ .೧೩-೭೬).

[ಹೊನ್ನು(< ಪೊನ್) + ಒಡಲ್+ -ಅ$_7$]

**ಹೊನ್ನೊಡ್ಡಿಯಾಣ** (ನಾ). ಚಿನ್ನದ ನಡುಕಟ್ಟು: ಎತ್ತಿದ ಭುಜಕೀರ್ತಿ ಹೊನ್ನೊಡ್ಡಿಯಾಣ ಸುಚಿತ್ತಗೊಪ್ಪಿದುವು ಶೋಭೆಯೊಳು (ಭರಚ. ೧೭-೧೭).

[ಹೊನ್ನು (< ಪೊನ್) + ಒಡ್ಡಿಯಾಣ$_0$ (< ಒಡ್ಯಾಣ)]

**ಹೊನ್ನೊರಲು** (ನಾ).ಬಂಗಾರದ ಒರಳು: ಬಾಲೆಯ ಕೊರಲು ಹೊನ್ನೊರಲು ಸುಸ್ವರ ಕಣ ಲೀಲೆಗತ್ತರಿ ಕುರುಳ್ಕೊಂಕು ಪಾಲಿರ್ದು ಕುಚ ಕೊಪ್ಪರಿಗೆ ನಿಟ್ಟೆಸಳ್ಗಣ್ಣಾಲೆಯ ಮನೆಗಳೊಪ್ಪಿದುವು (ಮೋಹತ . ೨-೫೦).

[ಹೊನ್ನು (< ಪೊನ್) + ಒರಲು$_3$ (< ಒರಲ್$_1$)]

**ಹೊನ್ನೊಱೆ** 'ಪೊನ್ನೊಱೆ' ನೋ.

**ಹೊನ್ನೋಲೆ** 'ಪೊನ್ನೋಲೆ' ನೋ.

**ಹೊಪ್ಪಳಿಕೆ**(ನಾ). ಉಷ್ಣ ಅಥವಾ ಶಾಖವು ತಾಗಿ, ಚರ್ಮದ ಮೇಲುಂಟಾಗುವ ಬೊಬ್ಬೆ, – ಗುಳ್ಳೆ: ಕಾಲಿನ ಮೇಲೆ ಬಿಸಿನೀರು ಬಿದ್ದು ಕಾಲುಪೂರ್ತಿ ಹೊಪ್ಪಳಿಕೆ ಯೆದ್ದಿದ್ದವು (ರೂಢಿ). [< ಹೊಪ್ಪಳಿ]

**ಹೊಪ್ಪಳಿಸು** (ಕ್ರಿ). ೧. ತೀವ್ರವಾದ ಉಷ್ಣಬಾಧೆಯಿಂದ ಅಥವಾ ಬೆಂಕಿ, ಬಿಸಿನೀರು ಮೊದಲಾದುವು ಚರ್ಮದ ಮೇಲೆ ಬಿದ್ದು ಬೊಬ್ಬೆಯೇಳು,–

ಗುಳ್ಳೆಯೇಳು: ಬೆನ್ನೊಣಗಿ ಚರ್ಮಂ ಹೊಪ್ಪಳಿಸಿ ಸೀಳ್ದು ಬೀಡೆ ನಾಡೆ ನೋಯಿಸಿ ನೀರಡಿಕೆ ನೆರೆದು (ಗಿರಿಕ.೯-೨೭ವ); ಬಿಸಿಯ ಹುಡಿಯಿಂದ ಹೊಪ್ಪಳಿಸಿ ಪದತಳದ ರಕ್ತಂ ದಾರಿಯೊಳು ವ್ರಣದ ಚಳೆಯಗೊಡುವಂತೆ ನೆಚಿ ಸುರಿದೊಡಂ ಬಗೆಯದಾದಯ್ಯ ನೈತರುತಿರ್ದನು (ಸೋಮಚ.೩-೫೪). **೨.** ಪದರಪದರವಾಗು; ಬಿರುಕುಬಿಡು: ಖರಕರತಾಪದಿಂದವನಿ ಹೊಪ್ಪಳಿಸಿ (ವಶಕು. ೬-೨೨). [ಹೊಪ್ಪಳೆ + - ಇಸು$_3$]

**ಹೊಪ್ಪಳೆ** (ನಾ). ಉಷ್ಣತೆಯು ತಾಗಿ ಚರ್ಮದ ಮೇಲೇಳುವ ಗುಳ್ಳೆ; ಬೊಬ್ಬೆ: ''ಸ್ಫೋಟಾ - ಹೊಪ್ಪಳೆ'' (ಕಾಶಕ್ಯ.೨೫೩); ಚರ್ಮದ ಮೇಲೆ ವಿವಿಧಾಕಾರದ ಹೊಪ್ಪಳೆಗಳೆದ್ದಿದ್ದವು (ಪುನರು. ೮೮); ದೇಹದ ಯಾವ ಭಾಗವಾದರೂ ಬೆಂಕಿಯಿಂದ ಸುಟ್ಟು ಹೊಪ್ಪಳೆಗಳುಂಟಾದರೆ . . . ಹಸುರು ಅಗಸೀತ್ಯೆಲವನ್ನು ಲೇಪಿಸಬೇಕು (ಬಿಚಿಕಿ. ೫೨).
[ದೇ. ‖ **ತಮಿ.** ಕೊಪ್ಪಳ, ಕೊಪ್ಪುಳ್, ಕೊಪ್ಪುಳ; **ಮಲ.** ಕೊಪ್ಪುಳ; **ಗೊಂಡಿ**. ಪೊಪ್ಪುಲ್./ **ಸಂ.**ಸ್ಫೋಟಕ].

**ಹೊಪ್ಪೆ** (ನಾ). ಹಣ್ಣಿನ ಅಥವಾ ಕಾಯಿಯ ಹೋಳು : (ಕ). [?]

**ಹೊಮ್ಮಂಚಗಾಱ** (ನಾ). ಅಕ್ಕಸಾಲಿಗ: ಕಂಚಗಾಱರು ಕೈದುಗಾಱರು ಹೊಳೆವ ಹೊಮ್ಮಂಚಗಾಱರು ಶಿಲ್ಪಿಗರು . . . ಪಾಂಚಾಳರಿರ್ದರಿಕ್ಕೆಲದಿ (ಮೋಹತ.೩-೨೨). 'ಮಚ್ಚಗಾಱ' ಪರಾ. [☞ ಇದು 'ಹೊಮ್ಮಚ್ಚಗಾಱ' ಎಂಬುದರ ಅಪಲಿಖಿತ]

**ಹೊಮ್ಮಚ್ಚು** (ನಾ). ಕುದುರೆಯ ನಡಗೆಗಳಲ್ಲಿ ಒಂದು : ದಾಟು ದೀಟು ಹೊಳಹು ಹೊಮ್ಮಚ್ಚುವೆಡೆವೋಡಿ ಭವರಿ ಭಂಜನೆ ಅಳಿಲುಳಿತ ವರತರಹಮೆಂಬ ನವೀನ [ಪಾಠಾಂ. ನವ] ಗತಿಗಳೊಳು ತನ್ನ ಮನಮ ಹಯದ ತನುಗತಿಗಳಾದಂತೆ ವಾಹಕವಿನ್ನಾಣಂಗಳಂ ತೋಱುತ (ಪುಣ್ಯಾಸ್ರ. ೭-೫೧ ವ). [?]

**ಹೊಮ್ಮಣ್ಣು** (ನಾ). ಚಿನ್ನದ ಹುಡಿ; ಚಿನ್ನದಿಂದ ಕೂಡಿದ ಮಣ್ಣು : ಈ ಮಿಸುಪ ಹೊಮ್ಮಣ್ಣನಾದಡೆ ಕಾಮಿಪಡೆ ಕೆಲ ಹೇಱುಗಳನುದ್ದಾಮಮತಿ ನೀಂ ಕೊಂಡು ಹೋಗೈ (ಬಸಪು. ೨೩-೩೯). [ಹೊಂ (< ಪೊನ್) + ಮಣ್ಣು (< ಮಣ್)]

**ಹೊಮ್ಮತ್ತಿ** (ನಾ). ಒಂದು ಬಗೆಯ ಮತ್ತಿಮರ: ''ಸರ್ಜಕ - ಹೊಮ್ಮತ್ತಿ'' (ಓಷಧಿ. ೧೭೪). [ಹೊಂ (< ಪೊನ್) +ಮತ್ತಿ$_1$ (< ಪುಟ್ಟಿ$_1$)]

**ಹೊಮ್ಮರ** (ನಾ). ಒಂದು ಬಗೆಯ ವೃಕ್ಷ: ಬೆಲ್ಲವತ್ತದ ಬೇರು, ನರುವಲದ ಬೇರು, ಹೊಮ್ಮರದ ಬೇರು . . . ಕಷಾಯವಿಕ್ಕಿ ಕೊಡಲು ಶೀತಜ್ವರಂ ಕೆಡುಗುಂ (ಸಕವ್ಯ.೬೬).
[ಹೊಂ (ಪೊನ್) ? + ಮರ$_1$]

**ಹೊಮ್ಮರಾಲ** (ನಾ). **೧.** ಚಿನ್ನದ ವರ್ಣದ ಹಂಸ. **೨.** ಹಂಸವಾಹನ; ಬ್ರಹ್ಮ: ಕರ್ಮದಿಂದವೆ ಹರನು ಚರ್ಮವನು ತಾನುಟ್ಟ ಹೊಮ್ಮರಾಲನಜನಾದ ಗೋವಿಂದನೆಮ್ಮೆಯನು ಕಾದ (ಸರ್ವಜ್ಞ.೮೪೪). [ಹೊಂ (< ಪೊನ್) + ಮರಾಲ]

**ಹೊಮ್ಮರೆ** 'ಪೊಮ್ಮರೆ' ನೋ.

**ಹೊಮ್ಮಳೆ** 'ಪೊಮ್ಮಱೆ' ನೋ.

**ಹೊಮ್ಮಳೆಗಱ** (ಕ್ರಿ). ಚಿನ್ನದ ಮಳೆಯನ್ನು ಸುರಿಸು; ಸುವರ್ಣವೃಷ್ಟಿಯನ್ನು ಮಾಡು: ದುಸ್ತರಗೀತ ಶಬ್ದವ ಕೊಂಬ ಪಾತ್ರಸಮಸ್ತ ವಿದ್ವಜ್ಜನರಿಂಗೆ ಹಸ್ತದಿ ಹೊಮ್ಮಳೆ ಗಱೆದನು ಯಾದವಮಸ್ತಕಮಣಿ ಕೃಷ್ಣನೊಲಿದು (ಮೋಹತ . ೧೫-೨೯).
[ಹೊಮ್ಮಳೆ (< ಪೊಮ್ಮಱೆ)+ ಕಱೆ$_1$]

**ಹೊಮ್ಮಾಡ** (ನಾ). ಚಿನ್ನದ ವಿಮಾನ : ಹೊಮ್ಮಾಡದಲಿ ರಜತಾಚಲಕೆ ಕಾಯಂವೆರಸಿ ನಡೆದಣುಮೂರ್ತಿಯರ ಬಂಟ (ಬಸಪು. ೨೭-೬). [< ಪೊಮ್ಮಾಡ]

**ಹೊಮ್ಮಿ** (ನಾ). ರಥದ ಒಂದು ಭಾಗ: ವಜ್ರದ ಘಾಲಿಗೆ ವಜ್ರದ ಚಂಕಿಲು ವಜ್ರದ ನೊಗ ಹೊಮ್ಮಿಗಳು ವಜ್ರದಾಯುಧನ ವಾಹನದಂತೆ ವಾಜಿಯು (ದೇವಾಂಪು.೩-೧೭೯).
[?]

**ಹೊಮ್ಮಿಂಚು** (ನಾ). ಹೊಂಬಣ್ಣದ ಮಿಂಚು: ಕೆಮ್ಮಿಂಚು ಹೊಮ್ಮಿಂಚು ಕುಡುಮಿಂಚು ಕುಡಿಮಿಂಚು ಗೆರೆಬೆಳ್ಳಿಮಿಂಚುಗಳ ಗೊಂಚಲ್ಗಳೆತ್ತಲುಂ . . . ರಂಜಿಸಿದುವು (ಚಿತ್ರಾಂಗ. ೮೮-೧೩.೨೩); ಬಾನ ಬಿರಸಿಡಿಲಲ್ಲಿ ಕೆಮ್ಮಿಂಚು ಹೊಮ್ಮಿಂಚು ಅಬ್ಬ! ವಜ್ರದ ಮಿಂಚು, ನೇತ್ರಪಲ್ಲವಿಯ ಈ ತಂತ್ರ ಬಲ್ಲವರಾರು? (ಸೂರ್ಯಪಾ. ೧೧೧-೧).
[ಹೊಂ (< ಪೊನ್) + ಮಿಂಚು$_2$]

**ಹೊಮ್ಮಿಗ** 'ಪೊಮ್ಮಿಗ' ನೋ.

**ಹೊಮ್ಮಿಗಮಱಿ** (ನಾ). ಹೊಂಬಣ್ಣದ ಜಿಂಕೆಮರಿ; ಕಾಂಚನಮೃಗದ ಮರಿ: ಪಡೆದೊಡನೆಸವ ಹೊಮ್ಮಿಗಮಱಿ ಮುಸುಡಿನೊಳ್ ಮಡಶೃಂಗದೇಳ್ಗೆ ತತ್ಪರಡು ಜಡಗಂಧರಹಿತ ಕಮ್ಮಿನ್ನಗಳಂದದಿ ಕಿಱುದೊಡೆ ಮೆಱೆದುವು ಕುಮಾರತಿಯ (ಮೋಹತ. ೨೩-೧೫). [ಹೊಮ್ಮಿಗ (< ಪೊಮ್ಮಿಗ) + ಮಱಿ]

**ಹೊಮ್ಮಿಗಾಜಿನ** (ನಾ). ಚಿನ್ನದ ಬಣ್ಣದ ಜಿಂಕೆಯ ಚರ್ಮ: ಮದಗಜದ ಮುತ್ತಿನೇಕಾವಳಿಯ ಹೊಮ್ಮಿಗಾಜಿನದ ಱವಕೆಯ ದಂತದ ಹದವಿಲ್ಲ ಬೆನ್ನ ಬತ್ತಳಿಕೆಗಳ . . . ಜವ್ವನದ ಶಬರಿಯರು (ಹಚಕಾ. ೫-೪೭). [ಹೊಮ್ಮಿಗ (< ಪೊಮ್ಮಿಗ )+ ಅಜಿನ]

**ಹೊಮ್ಮಿಟಿಲ** (ನಾ). ಒಂದು ಬಗೆಯ ಗಂಧದ್ರವ್ಯ: ''ಚರ್ಮಕಸಾ-ಮಾದಿಗಾವರ, ಹೊಮ್ಮಿಟಿಲ'' (ಓಷಧಿ. ೫೫). [ಹೊಂ (< ಪೊನ್) + ಮಿಟಿಲ (< ಮಿಟಲಿ)]

**ಹೊಮ್ಮಿಣಿ** 'ಪೊಮ್ಮಿಣಿ' ನೋ.

**ಹೊಮ್ಮಿಸು** 'ಪೊಣ್ಮಿಸು' ನೋ.

**ಹೊಮ್ಮಿಳಿ** 'ಪೊಮ್ಮಿಣಿ' ನೋ.

**ಹೊಮ್ಮಿಱಿ** (ಕ್ರಿ). (ದುಃಖ, ಸಂತೋಷ ಮುಂತಾದುವುಗಳ ಆಧಿಕ್ಯವನ್ನು ಸೂಚಿಸುವುದಕ್ಕಾಗಿ ಅಥವಾ ಪ್ರಕಟಿಸಲು) ಹೊಮ್ಮೆಂದು ಕೂಗು: ಅಲರಂಬ ಹೊತ್ತು ಹೊಮ್ಮಿಱಿದು ಬಿಳ್ದೆಳ್ದು ನಿಜನಿಲಯಕ್ಕೆ ಬಂದು . . . ವಿರಹದಿಂದಾದ ವಸ್ಥೆಯೊಳ್ ಪೊರಳುತುಮಿರ್ದನು (ಸಮ್ಯಕಾ. ೯-೧೩); ಖೇಟಕನೆಂಬ ಗಂಧರ್ವ ತೋಹಿನೊಳ್ ನಿಂದೊಂದು ಹುಲ್ಲೆಯನೆಸಲು ನೊಂದು ಹೊಮ್ಮಿಱಿದೋಡಿ ಪಿಂದೈದಿ ಬರಲವನಂದು ಬಿದ್ದುದು ಮುನಿಯಿದಿರ (ಭೈರವೇ.೩-೧೪೩); ಎಱೆಯನಿದಿರೊಳಿಪ್ಪು ನಾಣ್ಚುತ ನಗುತ ಹೊಮ್ಮಿಱಿದಾಡುತಿರ್ದಳು ತರುಣಿ (ಭರಚ. ೮-೩೯). [ಹೊಮ್$_0$ + ಇಱಿ$_1$]

**ಹೊಮ್ಮು$_1$** 'ಪೊಣ್ಮು' ನೋ.

**ಹೊಮ್ಮು$_2$** 'ಪೊಮ್ಮು$_1$' ನೋ.

**ಹೊಮ್ಮುಗಳು** 'ಹೊಮ್ಮುಗುಳ್' ನೋ.

**ಹೊಮ್ಮುಗುಳ್, ಹೊಮ್ಮುಗಳು, ಹೊಮ್ಮುಗುಳು** (ನಾ). **೧.** ಚಿನ್ನದ ಮೊಗ್ಗು: 'ಹೊಮ್ಮುಗುಳ್ಮಾಲೆ' ಪರಾ . **೨.** ಹಳದಿಯ ಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಔಷಧೀಸಸ್ಯ ಮತ್ತು ಅದರ ಬೇರು: ಬೆಳುಗಾರ ಹೊಮ್ಮುಗುಳ್ಗಳ . . . ಮಧುವಿಂದೆ ಕಲಸಿ (ಜನವ. ೧೩-೪೬). **ಹೊಮ್ಮುಗಳು:** **೨.** ಮೆಣಸು ಹೊಮ್ಮುಗಳ ಬೇರು ಇವೆರಡನೂ ಕೂಡಿಸಿ ನೀರಿಂದ ಅರೆದು ನೊಣ ಕಚ್ಚಿದ ಠಾವಿಗೆ ಹಚ್ಚಲು ಅದರ ವಿಷ ಶಮನವಹುದು (ವೈದ್ಯಸಾ. II,೨೨೨); ಹೊಮ್ಮುಗಳು ಇದಂ ನಿಂಬೇಹುಳಿಯಲ್ಲಿ ತೇದು ತೊಡೆಯಲು ಬಾಯಬಸಲೆ(?) ಮಾಣ್ಗುಂ (ವಿವ್ಯಪಿ. ೮). **ಹೊಮ್ಮುಗುಳು:** **೨.** ''ವಸುಜಾಲಕಂ . ಹೊಮ್ಮುಗುಳು'' (ಮಂಗರಾ. ೪೨-೩೯); ಹೊಮ್ಮುಗುಳಿನ [ಪಾಠಾಂ.ಯ] ಪಂಚಾಂಗಸಮೇತಂ ಕಟುತ್ರಿಕಮುಂ ತತ್ಸಂಚಿತ ಚೂರ್ಣಮನೂದುಗೆ ಸಂಚಳನಾಸಿಕದೊಳಹಿವಿಷಾಪಹಮಕ್ಕುಂ (ಖಪುದ. ೭-೪೫); ಹೊಮ್ಮುಗುಳು, ವಿಷ್ಣುಕ್ರಾಂತಿ ಸಹ ಕಷಾಯವಿಕ್ಕಿ . . . ತೆಗೆದುಕೊಳ್ಳಲು ಜ್ವರಂ ಮಾಣ್ಗುಂ (ಸಕವ್ಯ. ೧೦೯). [ಹೊಂ (< ಪೊನ್) + ಮುಗುಳ್$_2$]

**ಹೊಮ್ಮುಗುಳು** 'ಹೊಮ್ಮುಗುಳ್' ನೋ.

**ಹೊಮ್ಮುಗುಳ್ಮಾಲೆ** (ನಾ). ಚಿನ್ನದ ಮೊಗ್ಗುಗಳಿರುವ ಸರ ,– ಹಾರ: ಪೊಮ್ಮಡಿ ಬೆಳ್ಳಿಯ ಪೂಮಾಲೆ ಮಿಸುನಿಯ ಹೊಮ್ಮುಗುಳ್ಮಾಲೆಯ ನಿನ್ನ ತಮ್ಮಂದಿರೇನು ಕಳುಹಿದರೂ (ಭರಚ. ೧೦-೭). [ಹೊಮ್ಮುಗುಳು + ಮಾಲೆ]

**ಹೊಮ್ಮುಗೆ** (ನಾ). ಅಭಿವೃದ್ಧಿ; ಏಳಿಗೆ: ಹೊಸಹೊಸತು ಕಣ್ಣಾಗಿ, ಬೆಳಕಾಗಿ, ಬೆಳೆಯಾಗಿ ಕೂಡುತಿಹ ಕನ್ನಡದ ಹೊಮ್ಮುಗೆಯ ಕಾವಾಗಿ . . . ಬಾಳು ಎಲೆ ಬಾವುಟ! (ಹೂಂಗಳು. ೨೪-೨೩). [ಹೊಮ್ಮು$_2$ (< ಪೊಮ್ಮು$_1$)+ - ಗೆ]

**ಹೊಮ್ಮುಡಿ** 'ಪೊನ್ಮುಡಿ' ನೋ.

**ಹೊಮ್ಮುನುಡಿ** (ಕ್ರಿ). ಜಂಬದ ಮಾತನ್ನಾಡು; ಸೊಕ್ಕಿನ ಮಾತನ್ನಾಡು: ಈ ಮಾತುಗಳ್ಯಾವತ್ತು ನೀನು ಯೋಚಿಸಿ ಹೊಮ್ಮುನುಡಿಯದೆ ಯಮ್ಮ ರಮಣಿಯ ಬಿಟ್ಟು ಆ ಕಡೆಗೆ ಸಾರೋ (ದುಶ್ಯಾಕ. ೪೬). [ಹೊಮ್ಮು$_2$ (< ಪೊಮ್ಮು$_1$) + ನುಡಿ$_1$]

**ಹೊಮ್ಮೊಡಿಗೆ** 'ಪೊಮ್ಮೊಡಿಗೆ' ನೋ.

**ಹೊಮ್ಮೃಗ** (ನಾ). ಕಾಂಚನಮೃಗ; ಸುವರ್ಣಮೃಗ: ಹೊಮ್ಮೃಗವೆತ್ತ ವಾನರರ ಸೇರುಪಡಿ ತಾನೆತ್ತ ದೈವಪ್ರೇರಣೆಯದ್ದೆ ಸಲ್ಲದಿದು (ತೊರರಾ. ೬-೫೧-೮೪). 'ಹೊಮ್ಮಿಗ' ಪರಾ. [ಹೊಂ (< ಪೊನ್) + ಮೃಗ]

**ಹೊಮ್ಮೇಳ** (ನಾ). ಚಿನ್ನದಿಂದ ಕೂಡಿದುದು; ಸ್ವರ್ಣಖಚಿತವಾದುದು: ಹೊಂಗಂಟೆ ಹೊಮ್ಮೇಳದ ಕಠಾರಿಗಳು . . . ಬೇಡರಿಮ್ಮೆಯ್ಯೊಳೊದವಿತೊಗ್ಗಿನಲಿ (ಮೋಹತ. ೧೯-೧೧). [ಹೊಂ (< ಪೊನ್) + ಮೇಳ (= ಮೇಲ)]

**ಹೊಮ್ಮೇಱು** (ಕ್ರಿ). ಉತ್ಸಾಹ ಅಧಿಕವಾಗು: ಹೊಗರೇಱೆ ಹೊಮ್ಮೇಱಿದೊಡನೆ ಹಾಡುವಳಾಕೆ (ಭರಚ. ೧೧-೮೬). [ಹೊಮ್ಮು$_2$ (< ಪೊಮ್ಮು$_1$) + ಏಱು$_1$ (< ಏಱ್$_1$)]

**ಹೊಮ್ಮೊನೆ** (ನಾ). ಹೊಂಬಣ್ಣದ ತುದಿ,– ಕೊನೆ: ಹಸುರಂಗಿಯು ಮೊಗ್ಗೆಯ ಮೈಮುಚ್ಚಿ ತುದಿಮೊಗದಾ ಹೊಮ್ಮೊನೆಯನ ಬಿಚ್ಚಿ ಮೆರೆವೊಲೆ, ಹಸಿಹೊದಿಕೆಯು ಮೈಹೊಚ್ಚಿ ಮೆರೆದಿದೆ ಮಗುಮೊಗದಿನಿವಾಯಿ! (ಕೋಗಿಲೆ. ೫೬-೧೪).
[ಹೊಂ (< ಪೊನ್) + ಮೊನೆ]

**ಹೊಯ್$_1$** 'ಪೊಯ್$_1$' ನೋ.

**ಹೊಯ್$_2$** 'ಪೊಯ್$_2$' ನೋ.

**ಹೊಯ್$_3$** 'ಪೊಯ್$_3$' ನೋ.

**ಹೊಯ್‌ಕಯ್** 'ಹೊಯ್ಕೈ$_1$' ನೋ.

**ಹೊಯ್‌ಕಯ್ಯಿ** 'ಹೊಯ್ಕೈ$_1$' ನೋ.

**ಹೊಯ್‌ಕೈ** 'ಹೊಯ್ಕೈ$_1$' ನೋ.

**ಹೊಯಲು** 'ಪೊಯಲ್' ನೋ.

**ಹೊಯಸಣ** 'ಪೊಯ್ಸಳ' ನೋ.

**ಹೊಯಸಳ** 'ಪೊಯ್ಸಳ' ನೋ.

**ಹೊಯಿ$_1$** 'ಪೊಯ್$_1$' ನೋ.

**ಹೊಯಿ$_2$** 'ಪೊಯ್$_2$' ನೋ.

**ಹೊಯಿಕಯ್** 'ಹೊಯ್ಕೈ$_1$' ನೋ.

**ಹೊಯಿಕುಟ್ಟು** (ನಾ). ಕಾದಾಟ; ಯುದ್ಧ; ಹೋರಾಟ: ಮಸಣಿತಂಮ್ಮನ ಮಗ ವೀರಮಸಣನು ಹೊಯಿದು ಹೊಯಿಕುಟ್ಟಾಡಿ ಉಭಯ ಬಿಲ್ಲಣೆ ಬಹರಿಯಯೇಱಿದ ಕುದುರೆಯನುಮಿಱಿದ ಕಾಲಾಳನು ತಿವಿದು ಸುರಲೋಕಪ್ರಾಪ್ತನಾದನು (ಎಕ.VI. ಚಿಕ್ಕಮ .೩೬-೧೦; 1292). [ಹೊಯಿ$_1$ (< ಪೊಯ್$_1$) + ಕುಟ್ಟು$_2$]

**ಹೊಯಿಕೆಯ್$_1$** 'ಹೊಯ್ಕೈ$_1$' ನೋ.

**ಹೊಯಿಕೆಯ್$_2$** (ನಾ). ಎರಕ ಹೊಯ್ಯುವಿಕೆ: (ಶ).
[ಹೊಯಿ$_2$ (< ಪೊಯ್$_2$) + ಕೆಯ್$_2$ ?]

**ಹೊಯಿಕೈ** 'ಹೊಯ್ಕೈ$_1$' ನೋ.

**ಹೊಯಿಗಡುಬು** 'ಹೊಯ್ಗಡುಬು' ನೋ.

**ಹೊಯಿಗಲ, ಹೊಯಿಗಿಲ** (ನಾ). ೧. ಒಂದು ಬಗೆಯ ಭಕ್ಷ್ಯ: "ತುಪ್ಪ ಹಾಲೆರಡಱಲಿ ತಾಳಿಸಿದ ಹೊಯಿಗಲ [ಪಾಠಾಂ.ಯ್ಗಲಿ ನಿಲ]ವು ಕ್ಷೀರಸಂ ಕೀಲಸಾಖ್ಯಂ" (ಮಂಗರಾ. ೬೪-೩); ಹೊಯ್ದುರಿಸಿದ ಹೊಯಿಗಲದಂತೆ ಭೋಗಿಸಿಹೆನೆಂದಡೆ ಕರ್ತೃತ್ವವಿಲ್ಲ (ವೋಳಿಮಾ. ೧೯೩-೭೨೬). **ಹೊಯಿಗಿಲ:** ೨. (?) : ಬೀಜ ಹುಟ್ಟುವ ತತ್ಕಾಲವೆಂತೆಂದಡೆ ಹೊಯ್ದಿದ್ದ ಹೊಯಿಗಿ[ಪಾಠಾಂ.ನಿ]ಲದಲ್ಲಿಯೆ ಬೇರು ಬಿಟ್ಟು ಸಸಿ ಬೆಳೆದು ಎಲೆ ನೀಡಿ ಫಲ ಬೆಳೆದುದುಂಟೆ (ಸಕವ.ಸ. II, ೫೫೪-೧೫೬೯). [?]

**ಹೊಯಿಗಿಲ** 'ಹೊಯಿಗಲ' ನೋ.

**ಹೊಯಿಗೆ$_1$** (ನಾ). ಕಾಯಿಸಿದ ಲೋಹದ ದ್ರವವನ್ನು ಅಚ್ಚಿಗೆ ಎರೆದುದು,– ಎರಕಕ್ಕೆ ಹಾಕಿದುದು: ಗೋಕಾವಿಯಲ್ಲಿ ಸಮಯಿ, ಪಂಚಪಾತ್ರೆ ಮುಂತಾದ ಹೊಯಿಗೆಯ ಪಾತ್ರೆಗಳು ಸರಸಾಗಿ ಹುಟ್ಟುತ್ತವೆ (ಕಭಾಗ. ೩೧೨).
[ಹೊಯಿ$_2$ (< ಪೊಯ್$_2$) + – ಗೆ]

**ಹೊಯಿಗೆ$_2$, ಹೊಯ್ಗೆ** (ನಾ). ಮರಳು; ಉಸುಕು; ಉಸುಬು: ಮನೆಯ ಹಿಂದಿನ ಹೊಯಿಗೆದಿನ್ನೆ ಕಳೆದರೆ ವಿಶಾಲವಾದ ಬೆಟ್ಟು ಬರುತ್ತದೆ (ಮರಮ. ೨೪); ಮಂಗಳೂರ ಕಡೆಯ ಸಮುದ್ರತೀರದಲ್ಲಿ ಹೊಯಿಗೆ, ಹಾಯಿ, ಬಹು ಸಾಮಾನ್ಯವಾಗಿ ಕೇಳಬರುವ ಪದ (ನಮ್ಮನು. ೧೯೯); ಹೊಯಿಗೇಲಿ ಬರೆದು ಉಡೀಲಿ ಹಾಕಿಕೊಂಡ ಹಾಗೆ (ಗಾದೆ). **ಹೊಯ್ಗೆ:** ಹೊಯ್ಗೆಯಲ್ಲಿ ಒದ್ದಾಡಿ ಅವನ ಕೈಕಾಲೆಲ್ಲಾ ಧೂಳಿನಿಂದ ತುಂಬಿತ್ತು (ಪತಂಗ. ೪೩).

**ಹೊಯಿಗೆಕೊತ್ತಳ** = ಮರಳಿನ ಕೋಟೆ: ಬನ್ನಿರೋ ಬನ್ನಿ ತೆರೆತೆರೆಯಾಗಿ ಭೋರ್ಗರೆದು ನುಗ್ಗಿ ಕೊಚ್ಚಿರಿ ಹೊಯಿಗೆಕೊತ್ತಳಗಳ (ನಡಬಂ. ೬೪-೧೫). **ಹೊಯ್ಗೆಹಿಡಿಯಿಸು** = (ವಿದ್ಯಾಭ್ಯಾಸದ ಪ್ರಾರಂಭದಲ್ಲಿ) ಮರಳಿನ ಮೇಲೆ ಅಕ್ಷರವನ್ನು ಬರೆಯಿಸು; ಓನಾಮ ಹಾಕಿಸು: ಐದು ವರ್ಷ ತುಂಬಿ ಪ್ರಾಪ್ತವಾಗುವ ವಿದ್ಯಾದಶಮಿಯ ದಿನದಲ್ಲಿ ಹುಡುಗರಿಗೆ 'ಹೊಯ್ಗೆ ಹಿಡಿಯಿಸುವ' ಎಂದರೆ – ಕೈಹಿಡಿದು ಮರಳಿನಲ್ಲಿ ಬಳ್ಳಿ ಬರೆಯಿಸುವ ವಿದ್ಯಾರಂಭವನ್ನು ಮಾಡಿಸುತ್ತಾರೆ (ಕನ್ನಿ. ೧೨೪). [← ತುಳು. ಪೊಯ್ಯೆ]

**ಹೊಯಿತ** 'ಹೊಯ್ತ$_1$' ನೋ.

**ಹೊಯಿಲ್** 'ಪೊಯಿಲ್' ನೋ.

**ಹೊಯಿಲು$_1$** 'ಪೊಯಿಲ್' ನೋ.

**ಹೊಯಿಲು$_2$** (ನಾ). (ಸೂಸಿದಂತೆ) ಹರಡಿರುವಿಕೆ , – ಹಬ್ಬಿರುವಿಕೆ: ಕಾಣರುಳಿದವರೀತನೊಬ್ಬನ ಕಾಣಿಕೆಗೆ ಕೌತುಕವ ಕಱೆದನು ಶೋಣಿತಾಮಲಬಹಳತೇಜದ ಹೊದಱ ಹೊಯಿಲಿನಲಿ (ಕುವ್ಯಾಭೀ. ೩-೭೬).
[ಹೊಯಿ$_2$ (< ಪೊಯ್$_2$) + – ಅಲು (< – ಅಲ್$_2$)]

**ಹೊಯಿಸಣ** 'ಪೊಯ್ಸಳ' ನೋ.

**ಹೊಯಿಸಳ** 'ಪೊಯ್ಸಳ' ನೋ.

**ಹೊಯಿಸು$_1$** 'ಪೊಯಿಸು$_1$' ನೋ.

**ಹೊಯಿಸು$_2$** (ಕ್ರಿ). ಹೊಯ್ಯುವಂತೆ ಮಾಡು; ಸುರಿಸು: ಗುರುಹಿರಿಯರ ನಿಂದೆಯಲ್ಲಿ ಬಾಯೊಳೆಱೆದು ಸೀಸವ ಕಾಸಿ ಹೊಯಿಸುವರಲ್ಲಿ (ಪುರಂದ. ೨-೩೯-೧). 'ಪೊಯ್ಸು$_2$' ಪರಾ. [ಹೊಯ್$_2$ (< ಪೊಯ್$_2$) + – ಇಸು$_3$]

**ಹೊಯಿಸೆಂಡು** 'ಪೊಯ್ಸೆಂಡು' ನೋ.

**ಹೊಯ್ಕ** (ನಾ). (ಉಕ) ಬಡಿವಾರ; ಒಣಜಂಬದ ಮಾತು: ಇಂಥಾ ಹೊಯ್ಕದ ಮಾತು ನಾ ಎಲ್ಲಿ ಕೇಳಿಲ್ಲವ್ವ (ನಿಸರ್ಗ. ೩೪೮); ನನ್ಮುಂದ ಹೇಳಬ್ಯಾಡ ಇಂಥಾ ಹೊಯ್ಕಾ (ಕನ್ನಜಾ. ೫೯). [ಹೊಯ್$_1$ (< ಪೊಯ್$_1$) + – ಕ$_3$]

**ಹೊಯ್ಕಂಬಿ** (ನಾ). (ಜನಸಮೂಹವನ್ನು) ನಿಯಂತ್ರಿಸುವ ದಂಡ ಮತ್ತು ಆ ದಂಡವನ್ನು ಹಿಡಿದವನು: ಸಂದಣಿಸಿ ನೃಪರಾಣಿವಾಸದ ಗೊಂದಣದ ದಂಡಿಗೆಗಳಿಳಿದವು ಮುಂದೆ ಹೊಯ್ಕಂಬಿ[ಪಾಠಾಂ.ಕೈಗಂಬಿ]ಗಳ ಜೋಡಿಯು ಜನಪಲಾಯನದEದಿತೆ (ಕುವ್ಯಾಆ . ೭-೧೭). [ಹೊಯ್$_1$ (< ಪೊಯ್$_1$) + ಕಂಬಿ$_1$]

**ಹೊಯ್ಕಯ್** 'ಹೊಯ್ಕೈ$_1$' ನೋ.

**ಹೊಯ್ಕೈ$_1$, ಹೊಯ್‌ಕಯ್, ಹೊಯ್‌ಕಯ್ಯಿ, ಹೊಯ್‌ಕೈ, ಹೊಯಿಕಯ್. ಹೊಯಿಕೆಯ್$_1$, ಹೊಯಿಕೈ, ಹೊಯ್ಕಯ್** (ನಾ). ೧. ಎಣೆ; ಸರಿಸಮಾನ; ಸಾಟಿ: "ಪಡಿ ದೂರೆ . . . ಹೊಯ್ಕೈ ಹೋಟೆಯು ಸಂಗಡಮುಂ ಪಟಿ ಜೋಳಿ ಬುಧರಿನಕ್ಕುಂ ಸಮನುಂ" (ಕವಿಕಂ. ೧೩೬); ಸತ್ಯಸಾಹಿತ್ಯಗುಣಗಾಂಭೀರ್ಯವಿಸ್ತರಂ ಆ ಪ್ರವರಸೇನರಾಜಂಗೆ ಹೊಯ್ಕೈಯೆ [ಪಾಠಾಂ.ಹೊಯಿಕಯ್ಯಿ]ನಿಸಿ ವಿಪ್ರನೊಪ್ಪುವನಾ ಪುರಕ್ಕೆ ಧನಪತಿಯೆನಿಸಿ (ನುಲುರ. ಪ. ೧೬೩-೪). ೨. ಸಮಾನವಾದ ವ್ಯಕ್ತಿ; ಸರಿಸಾಟಿಯಾದ ವ್ಯಕ್ತಿ: ಕಡುಚಲುವಿಕೆಯೊಳಚ್ಚರಿಯರಿಗೆ ಹೊಯ್ಕೈಗಳೆನಿಸುವ ತರಳನಯನೆಯರೊಪ್ಪಿದರು ಕರ್ಣಾಟವನಿತೆಯರು (ಕುವ್ಯಾಉ.ಓ೧೪.೮-೫೦). ೩. ಸ್ಪರ್ಧೆ; ಪೈಪೋಟಿ: ಹಗಗಳಲ್ಲಿಯ ಇತ್ತಂಡಕ್ಕೂ ಹೊಯ್ಕೈಯಾಗಿ, ಎರಡೂ ನಾಮಾವಶೇಷವಾದಂತೆಯೆ ಆಯಿತು (ಹಗಲಿ. ೩೯). **ಹೊಯ್‌ಕಯ್:** ೧. ಕುರುಸಭೆಯು ವೈಭವದಲ್ಲಿ ಪಾಂಡವಸಭೆಗೆ ಹೊಯ್‌ಕಯ್ ಆಗಿ ಪರಿಶೋಭಿಸುತ್ತಿತ್ತು (ರಾಜಸೂ. ೮೮). **ಹೊಯ್‌ಕಯ್ಯಿ:** ೧. ಕಾವ್ಯಕಲಾದೃಷ್ಟಿಯಿಂದ ಪಂಪಭಾರತಕ್ಕೆ ಹೊಯ್‌ಕಯ್ಯಾಗಿ ನಿಲ್ಲಲಾರದು ಆತನ ಆದಿಪುರಾಣ ಬಹುವಿಷಯಗಳಲ್ಲಿ (ಕಸಾಚ. ೯೨). **ಹೊಯ್‌ಕೈ:** ೧ . ತನಗೆ ಹೊಯ್‌ಕೈ [ಪಾಠಾಂ.ಹೊಯ್ಕೈ]ಯಪ್ಪ ಭೂಭುಜರನೋಲೈಸಿ ಧನವನಾರ್ಜಿಸಿ ಸೆಱೆಯ ಬಿಡಿಸುವನೆಮ್ಮ

ಜನಪನು (ಪಚಕಾ.೧೨-೯೭); ಸುರಪನ ಗಜದ ಹೊಯ್‌ಕೈಯಾನೆ ಹೆಣಗಿತು ಭೀಮಸೇನನಲಿ (ಕುಮಾವ್ಯಾದ್ರೋ. ೩-೩೪); ನಿಮ್ಮ ಮುತ್ತಯ ದಶರಥನು ಮಾಡಿದ ಮಹಾಧ್ವರದೆಸಕಕಿದು ಹೊಯ್‌ಕೈಯೆನಲು ಮಾಡಿದನು ಸತ್ಕ್ರತುವ (ತೊರರಾ.೧-೧೨-೨೭); ಸಾರ್ವಜನಿಕರೊಂದಿಗೆ ಸರಕಾರವೂ ಹೊಯ್‌ಕೈಯಾಗಿ, ಕ್ಷಾಮನಿವಾರಣೆಗಾಗಿ ದುಡಿದಿದ್ದರೆ ಬರಗಾಲದ ಬೇಗೆಯಿಂದ ಜನರಿಗೆ ಮುಕ್ತಿ ದೊರೆಯುತ್ತಿತ್ತೋ ಏನೋ (ವಿದ್ಯಾರ.೧೪೯). **ಹೊಯಿಕಯ್:** ೧. ನುಡಿ ಹೊಯಿಕಯ್ಯಿ xxx ಕಲಿತನಕ್ಕೆಂಬಂತು (ಮೈಆರ್. ೧೯೩೭, ೨೭-೨೯: 1196). **ಹೊಯಿಕೆಯ್$_1$:** (೬). **ಹೊಯಿಕೈ:** ೧. ಇವರಜುವರ ಕೂಡಿ ಹೊಯಿಕೈಯಾಗಿಪ್ಪವನ ಕಂಡು (ಶೂನ್ಯಸಂ.೨೮೪-೭೬೦); ವರರೂಪಿನೊಳು ರತಿಗೆ ಹೊಣಕೆ ಸೌಭಾಗ್ಯದೊಳು ಸಿರಿಗೆ ಹೊಯಿಕೈ . . . ಎನಿಸಿ ಮೆರೆವಳು ಹರಿಶ್ಚಂದ್ರನೃಪನರಸಿ (ಹಚಕಾ. ೧-೪೪). **ಹೊಯ್ಕಯ್:** ೧.''ಸರಿ ದೊರೆ . . . ಹೊಯ್ಕ [ಪಾಠಾಂ.ಯ್ಕೆ]ಯ್, ಹೋಟ, ಸಂಗಡಂ,- ಈ ೧೮ ಸಮಾನಕ್ಕೆ ಪೆಸರ್''(ಕಶಸಾ. ೫೯-೨೯೧); ಗಂಗೆಗೆ ಪವಿತ್ರತೆಯೊಳೆಣೆಮಿಗಿಲರುಂಧತಿಗೆ ಹೊಯ್ಕಯ್ ಪತಿವ್ರತದೊಳ್ (ಪದ್ಮರಾ. ೩-೭೯).

[ಹೊಯ್$_1$(< ಪೊಯ್$_1$) + ಕೈ$_1$ (< ಕೆಯ್$_2$)]

**ಹೊಯ್ಗಡುಬು, ಹುಯಿಗಡುಬು, ಹುಯ್ಗಡುಬು** (ನಾ). ೧. (ಹೂರಣ ಅಥವಾ ಮಸಾಲೆಯನ್ನು ಕಣಕದ ಹಾಳೆಯಲ್ಲಿಟ್ಟು) ಇಡ್ಲಿಯಂತೆ ಹಬೆಯಲ್ಲಿ ಬೇಯಿಸಿ ಮಾಡುವ ಒಂದು ಬಗೆಯ ಸಿಹಿ ಅಥವಾ ಖಾರದ ಭಕ್ಷ್ಯ. ೨. ಹುದುಗನ್ನು ತಟ್ಟೆಯಲ್ಲಿ ಹೊಯ್ದು ಆವಿಯಲ್ಲಿ ಬೇಯಿಸಿ ಮಾಡುವ ಇಡ್ಲಿ; ತಟ್ಟೆ ಇಡ್ಲಿ: ಅಡುಗೂಳವರ್ ದೋಸೆ ಕಜ್ಜಾಯ ರೊಟ್ಟ ಹೊಯ್ಗಡು [ಪಾಠಾಂ. ಹೊಯಿಗಡು] ಬತಿರಸಂಗಳುಪ್ಪಿನಕಾಯಿ . . . ಮಾಜುವರ್ ಬರುತಿರ್ದರು (ಚಿಬಪು. ೯೭-೯೨). **ಹುಯಿಗಡುಬು:** ೨. ಬಿಳಿಗಣಜಲಬೇರಂ ನೆಳಲಲ್ಲಿ ಒಣಗಿಸಿ . . . ಹುಯಿಗಡುಬ ಬೇಯಿಸುವಂತೆ ಬೇಯಿಸಿ (ಸಕವೈ. ೧೩೪). **ಹುಯ್ಗಡುಬು:** ೨. ಅವರು ಹುಯ್ಗಡುಬು ಮಾಡುವುದರಲ್ಲಿ ಎತ್ತಿದ ಕೈ (ರೂಢಿ).

[ಹೊಯ್$_2$ (< ಪೊಯ್$_2$) + ಕಡುಬು (< ಕಡುಂಬು)]

**ಹೊಯ್ಗುಳ್, ಹೋಗುಳು** (ನಾ). ಹೊಡೆತ; ಏಟು; ಪ್ರಹಾರ: ಬರಬರಲು ರಿಪುಭಟನ ಹೊಯ್ಗುಳ ಧರಧುರಕೆ ಕಲಿ ಸಾತ್ಯಕಿಯ ತರಹರಣೆ ತಗ್ಗಿತು (ಕುಮಾವ್ಯಾದ್ರೋ. ೧೪-೧೦); ಅಮರಾಳಿ ಹೊಗಳಲು ಹೊಯ್ಗಳಿನ ಹೊಸನಾಟಕವನಭಿನಯಿಸಿ ಕಾದಿದರು (ಕುಮಾವ್ಯಾಕ. ೧೯-೧೫); ಎಡದ ದಂಡೆಯೊಳೊತ್ತಿ ಹೊಯ್ಗುಳ ಕಡುಹ ತಪ್ಪಿಸಿ ಕೌರವೇಂದ್ರನ ಮುಡುಹ ಹೊಯ್ದನು ಭೀಮ (ಕುಮಾವ್ಯಾಗ. ೭-೨೪). 'ಹೊಡೆಗುಳ್', 'ತಿವಿಗುಳ್' ಪರಾ. **ಹೋಗುಳು:** ಇಬ್ಬರ ಬಿಟ್ಟು ಒಬ್ಬನ ಹಿಡಿದು ಅಬ್ಬರಿಸಲಾಗಿ ಅವನೆದ್ದುಬ್ಬಿ ಹೊರುವ ಹೊಯಿದ ಹೋಗುಳಿನಲ್ಲಿ ಅತ್ತೆ ತಂದ ಅಳಿಯನ ನಾಮ ನಷ್ಟವಾಯಿತ್ತು (ಮೋಳಮಾ. ೧೭೭-೬೬೮). [ಹೊಯ್$_1$ (< ಪೊಯ್$_1$) + - ಗುಳ್$_2$]

**ಹೊಯ್ಗೆ** 'ಹೊಯಿಗೆ$_2$' ನೋ.

**ಹೊಯ್ಸೆಂಡಾಡು** 'ಪೊಯ್ಸೆಂಡಾಡು' ನೋ.

**ಹೊಯ್ಸೆಂಡು** 'ಪೊಯ್ಸೆಂಡು' ನೋ.

**ಹೊಯ್ತ, ಹೊಯಿತ** (ನಾ). ೧. ಹೊಡೆತ; ಏಟು; ಪ್ರಹಾರ: ಅವರೆಲ್ಲರು ಕಾಲನ ಭಯಂಕರವಾದ ಹೊಯ್ತದಲ್ಲಿ ಮಣ್ಣುಗೂಡಿಹೋಗಿ ಕೀರ್ತಿರೂಪದಿಂದ ಮಾತ್ರ ಉಳಿದಿರುವರು (ಭಾಮೃತ.೫೦೦). ೨. ಕತ್ತರಿಸುವಿಕೆ (?): ಛೋಟನಂ, ಛೋಟನೀಯಂ, ಈ ೨ ಹೊಯ್ತಂ (ಕಾಶಕ್ಕ. ೨೨೮). **ಹೊಯಿತ:** (೬).

[ಹೊಯ್$_1$(< ಪೊಯ್$_1$) + - ತ$_2$]

**ಹೊಯ್ದಲೆ** (ನಾ). ಕತ್ತರಿಸಿದ ತಲೆ; ಕಡಿದ ಶಿರಸ್ಸು: ಹೊಯ್ದಲೆ ಚಿಗಿತು ಹೊಸತಾದುದು (ಶಿವಗೀ. ೧೯೩-೯೭೦). [ಹೊಯ್$_1$ (< ಪೊಯ್$_1$) + ತಲೆ$_1$]

**ಹೊಯ್ದಾಣೆ** (ನಾ). ಹೊಡೆಯುವ ದೊಣ್ಣೆ, - ಬಡಿಗೆ: ಖಣಖಟಲ ಹೊಯ್ದಾಣೆಗಳ ಬಿಜುಗಿಡಿಯ ಹಿರಿಯಬ್ಬಣದ ಹೊಯ್ಲುಗಳ ಹೂಣಿಕೆಯ ಸಬಳಿಗರ . . . ಧಾಳಾಧೂಳಿ ಬಲುಹಾಯ್ತು (ಕುಮಾವ್ಯಾಶ. ೨-೧೪).

[ಹೊಯ್$_1$ (< ಪೊಯ್$_1$) + ದಾಣೆ$_3$ (< ಥಾಣೆ$_1$)]

**ಹೊಯ್ದು$_1$** 'ಪೊಯ್$_1$' ನೋ.

**ಹೊಯ್ದು$_2$** 'ಪೊಯ್$_2$' ಪರಾ.

**ಹೊಯ್ನಾರು** 'ಪೊಯ್ನಾರ್' ನೋ.

**ಹೊಯ್ಮಳೆ** (ನಾ). (ಧಾರಾಕಾರವಾಗಿ) ಸುರಿಯುವ ಮಳೆ: ಸ್ವಲ್ಪ ಕಾಲ ವಿರಮಿಸಿದ್ದ ಮಳೆಗಾಲದ ಹೊಯ್ಮಳೆ ಮತ್ತೆ ಸುರಿಯತೊಡಗಿದಾಗ ಗುತ್ತಿ ಎದ್ದು ಹೊರಟನು (ಮಲಮ. ೫೭೬). [ಹೊಯ್$_2$ (< ಪೊಯ್$_2$) + ಮಳೆ (< ಮೞೆ)]

**ಹೊಯ್ಮಾಲಿ** 'ಹೊಯ್ಮಾಲೆ' ನೋ.

**ಹೊಯ್ಮಾಲಿತನ** (ನಾ). ೧. ಸೋಗಲಾಡಿತನ: ವಾಡಿಕೆಯಾಗಿ ಹೆಂಗಸರಲ್ಲಿರತಕ್ಕ ಹೊಯ್ಮಾಲಿತನದ ಗಂಧವು ಕೂಡ ಆಕೆಯಲ್ಲಿ ಇದ್ದಿಲ್ಲ (ಕುಮುದಿ. ೩೩). ೨. ಮನಬಂದಂತೆ ನಡೆಯುವಿಕೆ; ಸ್ವಚ್ಛಂದಪ್ರವೃತ್ತಿ: ಮೈಮರೆತು ಮಲಗುವುದೆ ಧರಣಿಗೆ ನಮಸ್ಕಾರ . . . ಹೊಯ್ಮಾಲಿತನವೆಲ್ಲ ಹರಿಯ ವಿಹಾರ (ವಿದಾಕ್ಕ. ೨೫-೩).

[ಹೊಯ್ಮಾಲಿ (< ಹೊಯ್ಮಾಲೆ) + - ತನ]

**ಹೊಯ್ಮಾಲೆ, ಹೊಯ್ಮಾಲಿ** (ನಾ). ೧. ಸೋಗು; ಒಯ್ಯಾರ; ವಿಲಾಸ: ಹೊಯ್ಮಾಲೆಯ ಪೊಳಲು ಹದಿರಿನ ಹಕ್ಕೆಯನ್ಯಾಯದಂಗಡಿಯನಲೆಡೆಗೊಂಡುದಾ ಸೂಳೆಗೇರಿ (ಕುರಾಸಾಂ. ೨೮-೨೫); ಏನಾದರೂ ಹೊಯ್ಮಾಲೆಯ ಮಾತನ್ನಾಡಿ ಆಕೆಯನ್ನು ರೇಗಿಸದಿದ್ದರೆ ಇವನಿಗೆ ಸಮಾಧಾನವಿರದು (ಚಿಕುಮ. ೧೨೮). ೨. ಗೊಂದಲ; ಕ್ಷೋಭೆ: ನಿನ್ನಿಂದ ನನಗೆ ನನ್ನಿಂದ ನಿನಗೆ ತಾಪ ಮುನ್ನುಕ್ಕಿ ಹೊಯ್ಮಾಲೆಯಾಯ್ತು ಇನ್ನಿಲ್ಲ ಹೊಯ್ಮಾಲೆ ಹೂಮಾಲೆಯಾಯ್ತೆಂಬ ಗನ್ನದೊಳ್ಮಾಲೆಯಿಕ್ಕಿದಳು (ಭರಚ. ೪೧-೨೫); ನಮಗೊದಗಿಹುದು ಕಲಹವ ಮಾಡಲಿವನಲ್ಲಿ ಯಾತಕೀ ಹೊಯ್ಮಾಲೆ . . . ಎಂದು ಖಚರವ್ರಾತ ತಿರುಗಿದರು (ಜನಭಾ. ೫೦-೫೯); ಎಲ್ಲವೂ ಸರಿಗಟ್ಟಾದರೆ ಹೊಯ್ಮಾಲೆ ತಪ್ಪಿದ ಹಾಗಾಯಿತಲ್ಲ (ಕುರುಕಾ.೧೭). ೩. ಹೊಡೆತದ ಸರಣಿ: ಕಾಲದ ಹೆಚ್ಚು ಕುಂದಲ್ಲದೆ ಮೃತಿಯ ಹೊಯ್ಮಾಲೆ [ಪಾಠಾಂ. ಹೊಯಿಮಾಲೆ] ಬಿಡದು ಬೊಮ್ಮನನು (ಕುರಾಸಾಂ. ೩೩-೧೦೨). ೪. ಸ್ವೇಚ್ಛಾಪ್ರವೃತ್ತಿ; ಸ್ವಚ್ಛಂದವರ್ತನೆ: ಪ್ರತಾಪರಾಜ ಇಂಥ ಹೊಯ್ಮಾಲೆಗಳಿಗೆ ತಕ್ಕವನಲ್ಲವೆಂದು ಅವನನ್ನು ಬಲ್ಲ ಜನರು ನುಡಿಯುತ್ತಾರೆ (ಗೊಂಡಾರ. ೪). **ಹೊಯ್ಮಾಲಿ:** ೫. ಸೋಗಲಾಡಿ; ಒಯ್ಯಾರಿ; ಒನಪುಗಾತಿ: ಒಮ್ಮೊಮ್ಮೆ ಹೆಣ್ಣು ಹೊಯ್ಮಾಲಿಯಾಗಿ ಒಣಸೋಗು ಮಾಡಿ ಹಾಸ್ಯಕ್ಕೆ ಗುರಿಯಾಗುವುದೂ ಉಂಟು (ಕನ್ನಚಾ. ೫೯). ೬. ಜಾರೆ; ಹಾದರಗಿತ್ತಿ: ಹೋದರ್ಹೋದಳು ಆ ಹೊಯ್ಮಾಲಿ (ನಡದಾ.I, ೩೨೦); ಆ ಹೊಯ್ಮಾಲಿಯಿಂದ ನನಗೆ ಅಂಜಿಕೆ ಏನು (ಮುತ್ತೈದ. ೧೭೬).

[← ತುಳು. ಒಯ್ಮಾಲೆ, ಒಯಿಮಾಲೆ]

**ಹೊಯ್ಯಲು** 'ಪೊಯಲ್' ನೋ.

**ಹೊಯ್ಯಿ** 'ಪೊಯ್$_2$' ನೋ.

**ಹೊಯ್ಯು$_1$** 'ಪೊಯ್$_1$' ನೋ.

**ಹೊಯ್ಯು$_2$** 'ಪೊಯ್$_2$' ನೋ.

**ಹೊಯ್ಲಾಟ** (ನಾ). ಅಲುಗಾಟ; ಹೊಯ್ದಾಟ: ಓಟ ಭರತದ ಭರವಸದ ಹೊಯ್ಲಾಟ ದುರುಲಹರಿಗಳ . . . ರೌದ್ರದಿಂದ ಸಮುದ್ರ ರಂಜಿಸಿತು (ತೊರರಾ. ೪-೧೨-೨).

[ಹೊಯ್ಲು (< ಪೊಯಲ್) + ಆಟ]

**ಹೊಯ್ಲಿಡು** 'ಪುಯ್ಯಲಿಡು' ನೋ.

**ಹೊಯ್ಲು** 'ಪೊಯಲ್' ನೋ.

**ಹೊಯ್ವಡೆ** 'ಪೊಯ್ವಡೆ' ನೋ.

**ಹೊಯ್ವಲೆ** (ನಾ). ಬೀಸಿ ಒಗೆಯುವ ಬಲೆ: ಹೊಯ್ವಲೆ [ಪಾಠಾಂ. ಹೊಯಿವಲೆ] ಹರಹುವಲೆಗಳೆಳೆವಲೆ . . : ಮೊಕರವಲೆ ಬೇಡರ ಸಿರದೊಳೊಪ್ಪಿದುದು (ಸಾಳ್ವಭಾ. ೫-೧೪).

[ಹೊಯ್$_1$ (< ಪೊಯ್$_1$) + ಬಲೆ$_1$]

**ಹೊಯ್ಸಣ** 'ಪೊಯ್ಸಳ' ನೋ.

**ಹೊಯ್ಸಳ** 'ಪೊಯ್ಸಳ' ನೋ.

**ಹೊಯ್ಸು$_1$** 'ಪೊಯ್ಸು$_1$' ನೋ.

**ಹೊಯ್ಸು$_2$** 'ಪೊಯ್ಸು$_2$' ನೋ.

**ಹೊಯ್ಹಾಲು, ಹುಯ್ಹಾಲು** (ನಾ). ತಾಯಿಹಾಲು ಸಾಲದೆ ಇದ್ದಾಗ

ಎಳೆಮಗುವಿಗೆ ಹಾಕುವ ಹಸುವಿನ ಹಾಲು ಮುಂತಾದುವು; ಮೇಲುಹಾಲು: ಮೊಲೆದುಂಬಿರುವ ಹಾಲು ನಿನಗಾಗಿ ಸುರಿಯುತಿವೆ; ಅಲ್ಲ! ಹೊಯ್ಹಾಲಲ್ಲ! ಎದ್ದು ಏಳು! (ಚಿಂತನ. ೭-೨೧); ತಮ್ಮ ಮಗುವಿಗೆ ತಾವೇ ಹೊಯ್ಹಾಲು ಹಾಕಿದರೂ ಸರಿ; ಸವತಿಯ ಮೊಲೆ ಬೇಡ ಎಂದರು (ಗಳಗ. ೫೨). **ಹುಯ್ಹಾಲು** : ತನಗೆ ಎದೆ ಹಾಲಿರದೆ ಮಕ್ಕಳಿಗೆ ಹುಯ್ಹಾಲು (ಏಳಜೀ. ೧೭೧). [ಹೊಯ್$_{2}$ (< ಪೊಯ್$_{2}$) + ಹಾಲು$_{1}$ (< ಪಾಲ್$_{1}$)]

**ಹೊರ** 'ಪೊಱ' ನೋ.

**ಹೊರಅಂಕ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ: ಮೇಲುಕಡೆಯಲ್ಲಿ ಹೊರಗೆ ವಳಗೂ ವಂದು ಏಟು ಕೆಳಗಡೆಯಲ್ಲಿ ಹೊರಗೆ ವಳಗೂ ಯರಡು ಏಟು ಮೇಲಗಡೆಯಲ್ಲಿ ಹೊರಗೆ ವಳಗೆ ಯರಡು ಏಟು ಆವುದಕ್ಕೆ ಉಂಟು ಅದು ಹೊರಅಂಕಯೆಂದು ನುಡಿಯಲ್ಪಡುವುದು (ಖಡ್ಗಟೀ. ೫-೪೩). 'ಒಳಅಂಕ' ಪರಾ.

[ಹೊರ (< ಪೊಱಗು) + ಅಂಕ$_{2}$]

**ಹೊರಕ$_{1}$** (ನಾ). ಪೋಷಿಸಿಕೊಳ್ಳುವವನು; ಕಾಪಾಡಿಕೊಳ್ಳುವವನು: ಮಾಡಿ ಮಱುಗುವ . . . ಕೊಟ್ಟು ಹೊಟ್ಟೆರೋಗವಿಕ್ಕುವ ಘಟ್ಟಿಗನಿರವು ಬಟ್ಟೆಯ ಬಡಿದುಂಬ ಹೊಟ್ಟೆಯ ಹೊರಕರಂತೆ (ಮೋಳಮಾ. ೪೮-೧೯೬).

[ಹೊರೆ$_{1}$ (< ಪೊರೆ$_{1}$) + - ಕ$_{3}$]

**ಹೊರಕ$_{2}$** (ನಾ). ನಂಜಿಕೊಳ್ಳುವ ಪದಾರ್ಥ,- ಉಪ್ಪಿನಕಾಯಿ(?): ಗರಗರನಾದುದು ಕೂೞ್ನೆಯ್ ಸುರಯಿಯ ಕಂಪಾಯ್ತು ಸಟ್ಟುಗಕ್ಕಂ ಮೊಸರ್ಗಂ ಪಿರಿದುಂ ಪೋರ್ಕುೞಿಯಾದುದು ಕರಮಿನಿದಾಯ್ತುಱಿಕೆ ಹೊದಕನಲ್ಲದೆ ಹೊರಕಂ (ಸೂಕ್ತಿಸು. ೧೧-೯೦); ಬೆಣ್ಣೆಕಾಸಿದ ತುಪ್ಪ ಹಪ್ಪಳಂ ನಸುನಿಂಬೆವಣ್ಣನಿಕ್ಕಿದ ಹಲವು ಪರಿಯ ಹೊರಕಂ ಶಾಕ ಬಾಳು ಕದಳಿಯ ಪಳಿದ್ಯ . . . ಕೊಳ್ಳುತ್ತಿರ್ದುದಾ ಭೂಸುರಾಳಿ (ಸಮ್ಯಕೌ. ೭-೨೪). [?]

**ಹೊರಕಟ್ಟು** 'ಹೊಱಕಟ್ಟು' ನೋ.

**ಹೊರಕಡೆ** 'ಪೊಱಗಡೆ' ನೋ.

**ಹೊರಕಾಲು** 'ಪೊಱಕಾಲ್' ನೋ.

**ಹೊರಕೆಡವು** 'ಹೊರಗೆಡಹು' ನೋ.

**ಹೊರಕೆಯ್ಮೆ** (ನಾ). ಸುತ್ತಮುತ್ತಲಿನ ಕೆಲಸ; ಹೊರಗಿನ ಕೆಲಸ: ಸುಡುವಳು ತಣಿಸಲೆನೆ ಮಾಳ್ಪ ಹೊರಕೆಯ್ಮೆಯೆನೆ ಕಂಬನಿಯ ಬೇಳ್ಪಂ . . . ಪಡೆದರ್ (ಕಾಲೂರ. ೧೫೫-೩೪೧). [ಹೊರ (< ಪೊಱಗು) + ಕೆಯ್ಮೆ (< ಕೈಮೆ$_{1}$)]

**ಹೊರಕೆಲಸ** 'ಹೊಱಗೆಲಸ' ನೋ.

**ಹೊರಕೋಟೆ** 'ಪೊಱಗೋಟೆ' ನೋ.

**ಹೊರಕೋಣೆ** (ನಾ). ಮನೆಯ ಹೊರಭಾಗದಲ್ಲಿ (ಪ್ರತ್ಯೇಕವಾಗಿರುವ) ಕೊಟಡಿ: ಬಲಗಡೆ ಗಂಡಸರ ಹೊರಕೋಣೆ ಇರಬಹುದು (ಬಾಣಂತ. ೩೪). 'ಒಳಕೋಣೆ' ಪರಾ. [ಹೊರ (< ಪೊಱಗು) + ಕೋಣೆ$_{2}$ (< ಕೋಣ್)]

**ಹೊರಗಟ್ಟು$_{1}$** (ಕ್ರಿ). ಹೊರಗೆ ಕಳುಹಿಸು, —ದೂಡು: ಅವಳ ತಂದೆಯು ವಿರಕ್ತನಾಗಿ ಅವಳನ್ನು ತನ್ನ ಮನೆಯಿಂದ ಹೊರಗಟ್ಟಿ ಬಿಟ್ಟನು (ಕವಾಕುಂ. ೬೪).

[ಹೊರಗೆ (< ಪೊಱಗೆ) + ಅಟ್ಟು$_{2}$]

**ಹೊರಗಟ್ಟು$_{2}$** 'ಹೊಱಕಟ್ಟು' ನೋ.

**ಹೊರಗಡೆ** 'ಪೊಱಗಡೆ' ನೋ.

**ಹೊರಗಣ** 'ಪೊಱಗು' ಪರಾ.

**ಹೊರಗಣಿಸು** (ಕ್ರಿ). ಅಲಕ್ಷಿಸು: ಸುತೆಯ ನೋಡುವಡರಮನೆಗೆ ಮುನಿಪತಿಯ ಕಳುಹಲು . . . ಆತನ ರೂಹೀಕ್ಷಿಸುತ ಭಯದುದ್ಧತದಿ ತಗುಲೆನಲಾಳಿಯರು ನೂಕುತಲಿ ಹೊರಗಣಿಸಿದರು ಸೀತೆಯ ಬೆಸದಿ ನಾರದನಾ (ಜರಾಮಾ. ೧೩೮-೧೭).

[ಹೊರ (< ಪೊಱಗು) + ಗಣಿಸು]

**ಹೊರಗಲು** 'ಪೊಱಗು' ಪರಾ.

**ಹೊರಗು** 'ಪೊಱಗು' ನೋ.

**ಹೊರಗೆ** 'ಪೊಱಗೆ' ನೋ.

**ಹೊರಗೆಡವು** 'ಹೊರಗೆಡಹು' ನೋ.

**ಹೊರಗೆಡೆಹು, ಹೊರಕೆಡವು, ಹೊರಗೆಡವು** (ಕ್ರಿ). ೧. ಹೊರನೂಕು; ಆಚೆಗೆ ತಳ್ಳು. ೨. ಹೊರಬೀಳುವಂತೆ ಮಾಡು; ಪ್ರಕಟಿಸು; ಬಹಿರಂಗಗೊಳಿಸು: ಮಹಾವ್ಯಕ್ತಿಗಳು . . . ರಂಗಭೂಮಿಯ ಕುಶಲತೆಯನ್ನು ಯಾತಕ್ಕೆ ಹೊರಗೆಡಹ ಬಾರದು? (ರಾಯಕ. ೬೫); ಅವಳು ತನ್ನ ಭಾವಾಲೋಚನೆಗಳನ್ನು ಹೊರಗೆಡಹ ಲಾರಳೊ? ಅಥವಾ ಹೊರಗೆಡಹಲು ಅವಳಿಗಿಷ್ಟವಿಲ್ಲವೊ? (ಪುನರು. ೩೨೨). **ಹೊರಕೆಡವು: ೨.** ಉತ್ತಮ ಬರಹಗಳನ್ನು ಹೊರಕೆಡವಿ ಕನ್ನಡ ನುಡಿ ಸೇವೆ ಸಲ್ಲಿಸಲು ನಿರ್ಧರಿಸಿ (ಜೀವನ . ೧ ಅಂಕ). **ಹೊರಗೆಡವು: ೨.** ನಿಮ್ಮ ಸೋಗನ್ನು ಇಂದು ಹರಿದು ಸುಟ್ಟು ನಿಮ್ಮ ಆಟವನ್ನು ಹೊರಗೆಡವಬೇಕಾಗಿದೆ (ಕಮನೆ. ೨೨೨); ಈ ರೀತಿಯ ಭಾವನೆಯನ್ನು . . . ಹೊರಗೆಡವಿದ್ದಾನೆ (ತತ್ವಪ್ರಾ. ೫೦೧).

[ಹೊರ (< ಪೊಱಗು) + ಕೆಡಹು (< ಕೆಡಪು)]

**ಹೊರಗೆಲಸ** 'ಹೊಱಗೆಲಸ' ನೋ.

**ಹೊರಗೇರಿ** 'ಹೊಱಗೇರಿ' ನೋ.

**ಹೊರಗೋಡೆ** (ನಾ). ಗೋಡೆಯ ಹೊರಭಾಗ,- ಹೊರಪಾರ್ಶ್ವ: ಪಡಸಾಲೆಯ ಬಾಗಿಲು ದಡಾರನೆ ಹೊರಗೋಡೆಗೆ ಅಪ್ಪಳಿಸಿದ ಸದ್ದು ಕೇಳಿ . . . ಹೆದರಿದಳು (ದೇವಹಂ. ೩೩). [ಹೊರ (< ಪೊಱಗು) + ಗೋಡೆ]

**ಹೊರಚಕ್ರಮಂಡಿಗಾಲು** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ,- ಭಂಗಿ: ಮೊಳಕಾಲ್ಗಳ ಪಾರ್ಶ್ವಗಳ ಬಾಹ್ಯಪ್ರದೇಶಗಳು ಭೂಮಿಯನ್ನು ಬೇರೆ ಬಾಹ್ಯಪ್ರದೇಶ ಹೊಂದಿದ್ದಾದರೆ ಅದರ ಹೆಸರು ಹೊರಚಕ್ರಮಂಡಿಗಾಲುಯೆಂದೂ ಹೇಳುವರು (ಖಡ್ಗಟೀ. ೪-೬೪). 'ಚಕ್ರಮಂಡಿಗಾಲು' ಪರಾ.

[ಹೊರ (< ಪೊಱಗು) + ಚಕ್ರ$_{1}$ + ಮಂಡಿ$_{1}$ + ಕಾಲು$_{1}$ (< ಕಾಲ್$_{1}$)]

**ಹೊರಚಾಚು** (ಕ್ರಿ). ಹೊರಕ್ಕೆ ನೀಡು: ಕೊರಳನ್ನು ಹೊರಚಾಚಿ ಮೇವಿಗಾಗಿ ದಂಡೆಯ ಮೇಲಿದ್ದ ಒಣಹುಲ್ಲನ್ನು ಎಳೆಯುವಾಗ ಕಪಿಲೆಯ ಕೋಡು ತಾಗುವ ಸಪ್ಪಳ ಮಾತ್ರ ಚೆನ್ನಾಗಿ ಕೇಳಿಸುತ್ತಿತ್ತು (ದೇವಹಂ. ೧೩). [ಹೊರ (< ಪೊಱಗು) + ಚಾಚು$_{1}$]

**ಹೊರಚಾವಡಿ** 'ಹೊಱಚಾವಡಿ' ನೋ.

**ಹೊರಚಾಳಿ** (ನಾ). ೧. ಹೊರಗಿನ ನಡವಳಿಕೆ; ವರ್ತನೆ. ೨. (ಆಲಂ) ವ್ಯಭಿಚಾರ: ಮಾವನ ಹೊರಚಾಳಿಯ ಸಂಗತಿ ನಿಮ್ಮ ಗಮನಕ್ಕೆ ಬರುವುದೇ ಇಲ್ಲ (ಒಡ್ಡಿಉ. ೮೦). [ಹೊರ (< ಪೊಱಗು) + ಚಾಳಿ$_{2}$ (< ಚಾಲು)]

**ಹೊರಚಿಮ್ಮು** (ಕ್ರಿ). ಹೊರಕ್ಕೆ ಪುಟಿದು ಬರು; ಹೊರಹೊಮ್ಮು: ಭೂಮಿ ಮತ್ತಿತರ ಗ್ರಹಗಳು . . . ಸೂರ್ಯನಿಂದ ಅಗಾಧವಾಗಿ ಹೊರಚಿಮ್ಮಿದ ವಸ್ತುವೊಂದು ತಂಪಾಗುತ್ತಿರುವಾಗ ಉತ್ಪತ್ತಿಯಾದವು (ಭೂಹುಟ್ಟು. ೨೭).

[ಹೊರ (< ಪೊಱಗು) + ಚಿಮ್ಮು$_{1}$]

**ಹೊರಚೆಲ್ಲು** (ಕ್ರಿ). ೧. ಹೊರಗೆ ಸುರಿ, - ಎರೆ: ಈ ಪಾತ್ರೆಯಲ್ಲಿರುವ ನೀರನ್ನು ಹೊರಚೆಲ್ಲು (ರೂಢಿ). ೨. ಹೊರಸೂಸು; ವ್ಯಕ್ತಗೊಳಿಸು: ರಾಜಣ್ಣನ ಮಾತಿಗೆ ಗದ್ಗದಿತನಾಗಿ ಉತ್ತರಕೊಟ್ಟ ಆನಂದ - ಹೃದಯದ ಮಾರ್ದವತೆಯನ್ನೆಲಾ ಹೊರಚೆಲ್ಲಿ (ಮುರಳಿ. ೧೬೧); ಆ ವಿಷಜ್ವಾಲೆಯನ್ನು ಆತ ನಾಲಗೆತುದಿಯಲ್ಲಿ ಕುಣಿಸಿ, ಹೊರಚೆಲ್ಲಬೇಕಾಗಿತ್ತು (ನವನೀ. ೧೫). [ಹೊರ (< ಪೊಱಗು) + ಚೆಲ್ಲು$_{1}$ (< ಚಲ್ಲು$_{1}$)]

**ಹೊರಚ್ಚು** (ನಾ). ೧. ಬೇರೆ; ಪ್ರತ್ಯೇಕ: ಸ್ವಸ್ಥಾನಗಳಲ್ಲಿಯೂ ಸ್ಥಾನವಂ ಬಿಟ್ಟು ಹೊರಚ್ಚಾಗಿಯೂಯಿರುವ ಧ್ರುವಗಳೆಂಬ ಹತ್ತು ಸುಳಿಗಳು ನಿರೂಪಿಸಲ್ಪಟ್ಟವು (ಸೌಗಂಧಿ. ೩೧೯-೧೦); ಯಾವ ಶಾಸ್ತ್ರಜ್ಞನೂ . . . ಹೊರಚ್ಚಾಗಿದ್ದುಕೊಂಡು ತನ್ನದೇ ಆದ ಸಿದ್ಧಾಂತವನ್ನು ಹೊಸದಾಗಿ ಸ್ಥಾಪಿಸಿರುವ ಉದಾಹರಣೆಯು ಸಿಕ್ಕಲಾರದು (ಭಾತವಿ. ೬೦); ಅದು ಹೆಚ್ಚುಕಡಮೆ ಕಾವ್ಯದಿಂದ ಹೊರಚ್ಚಾಗಿ ನಿಲ್ಲುತ್ತದೆ (ನಂಜುಂಡ. ೮೦). ೨. ದೂರ; ಅಂತರ: ವಿರಾಟನು . . . ದ್ರೋಣನ ಕಣ್ಣುಮುಂದೆ ನಿಲ್ಲಲಾರದೆ ಹೊರಚ್ಚಾಗಿ ಹೋದನು (ಕೃವಾಭೀ. ೧೨೫); ತಾನು ಲೋಕಕ್ಕೆ ಹೊರಚ್ಚಾಗಿರಬೇಕೆಂದು ಯುಧಿಷ್ಠಿರನು ಅರಣ್ಯವಾಸವನ್ನು ಬಯಸುತ್ತಿದ್ದನು (ಭೀಷ್ಮಚ. ೨೦೭). ೩. ಹೊರಗಡೆ: (ಕ).

**ಹೊರಚ್ಚಾಸಿ** = ಬೇರೆಯ ದಿಕ್ಕಿನಿಂದ; ಹೊರಗಿನ ಮಾರ್ಗವಾಗಿ: ಬೆಂಗಳೂರಿಗೆ

ಹೋಗದೆ ಹೊರಚ್ಚಾಸೆ ಹೊಸಕೋಟೆಯಿಂದ ಬೆಂಗಳೂರಿಗೆ ಬರುವ ಮಾರ್ಗದಲ್ಲಿ ೪೦ ಜನ ಸವಾರರಿಂದ ಅಡಗಿಯಿದ್ದು (ಹೃದರ. ೪೦).

[ಹೊರ (< ಪೊಱಗು) + ಅಚ್ಚು₃ ?]

**ಹೊರಜಿ** 'ಪೊರಜೆ' ನೋ.

**ಹೊರಜಿಹಗ್ಗ, ಹೊರ್ಜಿಹಗ್ಗ** (ನಾ). ಹೊಸೆದ ದಪ್ಪವಾದ ಹಗ್ಗ: ಸುವರ್ಣಮಯವಾದ ಹೊರಜಿಹಗ್ಗಗಳೂ . . . ಒಂದೊಂದು ಸಾವಿರವನ್ನು ತಂದು ಬಾಗಿಲಲ್ಲಿರುವ ಅಧಿಕಾರಿಗಳ ಸಮೀಪದಲ್ಲಿ ಕಾದಿದ್ದರು (ಕೃವಾಸ. ೧೨೦). **ಹೊರ್ಜಿಹಗ್ಗ:** ಗೌಡರು ಹೊಸದಾಗಿ ಭಾರಿ ಹೊರ್ಜಿಹಗ್ಗ ಬಿಗಿಸಿದರು (ನಮ್ಮೂರು. ೧೧೯); ಅವರ ಮೈಕಟ್ಟು ತೇರಿನ ಹೊರ್ಜಿಹಗ್ಗದಂತೆ ಗಟ್ಟಿಯಾಗಿಯೂ . . . ಪುಷ್ಟವಾಗಿಯೂ ಇತ್ತು (ಹುಟ್ಟಿಹ. ೬).

[ಹೊರಜಿ (< ಪೊರಜೆ) + ಹಗ್ಗ (< ಪಗ್ಗ)]

**ಹೊರಜೀಬಿ** (ನಾ). ಊರಿನ ಹೆಬ್ಬಾಗಿಲಿನ ಆಚೆಯ ಪ್ರದೇಶದ ಭಾಗ: ಮೇಲೆ ಹೇಳಿದವುಗಳಲ್ಲಿ ಮೊದಲಿನ ೧೧ ಒಳಕೋಟೆ ಕೊತ್ತಲಗಳಲ್ಲಿಯೂ ಆಮೇಲೆ ೧೯ ಹೊರಜೀಬಿಯಲ್ಲಿಯೂ ಇರಿಸಿ ಇದ್ದವುಗಳು (ಚಾಮವಂ. ೧೦೬).

[ಹೊರ (< ಪೊಱಗು) + ಜೀಬಿ₂]

**ಹೊರಜೆ** 'ಪೊರಜೆ' ನೋ.

**ಹೊರಜೆಗಟ್ಟು** (ನಾ). ದಪ್ಪವಾಗಿರುವ ಸರಪಳಿಯನ್ನು ಕಟ್ಟು: ಬಂದುದವನ ವರೂಥ ಕಬ್ಬಿಣದಿಂದ ರಚಿಸಿದ ಹೊರಜೆಗ[ಪಾಠಾಂ. ಕ]ಟ್ಟುಕ್ಕಿಂದ ಕೀಲಿಚಿದಚ್ಚ ಲೋಹದ ಘಾಲಿ (ತೊರರಾ. ೬-೨೭-೪). [ಹೊರಜೆ (< ಪೊರಜೆ) + ಕಟ್ಟು₂]

**ಹೊರಟು** 'ಪೊಱಮಡು' ಪರಾ.

**ಹೊರಡಿಸು** 'ಪೊಱಮಡಿಸು' ನೋ.

**ಹೊರಡು₁** 'ಪೊಱಮಡು' ನೋ.

**ಹೊರಡು₂** 'ಪೊರಳ್' ನೋ.

**ಹೊರಣಿ** 'ಹೊರಣೆ' ನೋ.

**ಹೊರಣೆ, ಹೊರಣಿ** (ನಾ). ಒಂದು ಬಗೆಯ ತೆರಿಗೆ: ಆ ಸೋಮನಾಥಪುರಕ್ಕೆ ಉರುತ್ಕವಾಗಿ ಬಂದ ಹದಿಕೆ ಹೊರಣೆ ಹೊದಿಕೆ ಮಳಬ್ರಯವೊಳಗಾಯಿತ್ತು (ಎಕ. III, ತಿರುಮ. ೯೮-೧೦; 1300). **ಹೊರಣಿ:** ಹೊರಣಿ ಕೋಳು ಖಾಣವೆಂದು ಬೇಡಿದಂತಾಗಿ ಆ ನಾರಸಿಂಹದೇವರಸರು ಆ ಮಹಾಜನಂಗಳಿಗೆ ಕಾರುಣ್ಯಂ ಮಾಡಿ ದಾನವಾಗಿ ಧಾರೆಯ ನೆಱದು ಬರಸಿಕೊಟ್ಟ ಶಿಲಾಶಾಸನ (ಎಕ. XIV, ತಿರುಮ. ೩೦-೧೩; 1288). [?]

**ಹೊರತನ** (ನಾ). ಅನ್ಯತನ; ಪರಕೀಯತೆ: ಹೊರತನದ ಹೆದರಿಕೆಯು ಹೃದಯದೊಳು ಹೊಕ್ಕಿಹುದು . . . ಹೊರತನದ ಬಲೆಯೊಳಗೆ ಬುದ್ಧಿ ಬಳಲಾಡುವದು (ಗರಿ. ೨೨-೫).

[ಹೊರ (< ಪೊಱಗು) + - ತನ]

**ಹೊರತರ** (ನಾ). (ದೇವಾಲಯದ) ಸುತ್ತು ಗೋಡೆ; ಪ್ರಾಕಾರ: ಹಸುಕಲಿಯ ಮಂಚ ಮರಡಿಯ ಮಗ ಕಲಿ ರಾಮನಾಥದೇವರ ಗುಡಿಯ ಶ್ರೀ ಹೊರತರದ ಕಲುಗೆಲಸಕೆ ಕೊಟ್ಟ ಗ ೧ (ಮೈಆರಿ. ೧೯೩೫, ೨೪-೭; 1287).

[ಹೊರ (< ಪೊಱಗು) + ತರ₄ (< ಥರ₃)]

**ಹೊರತರು** (ಕ್ರಿ). ಪ್ರಕಾಶಕ್ಕೆ ಬರುವಂತೆ ಮಾಡು; ಪ್ರಕಟಿಸು: ಅನೇಕ ಉಪಯುಕ್ತ ಪ್ರಕಟಣೆಗಳನ್ನೂ ಹೊತ್ತಗೆಗಳನ್ನೂ ಹೊರತಂದಿದೆ (ಕವಿಕೋ. I, ೧೬೬).

[ಹೊರ (< ಪೊಱಗು) + ತರು₁ (< ತರ್)]

**ಹೊರತು₁** 'ಪೊಱತು' ನೋ.

**ಹೊರತು₂, ಹೊರ್ತು** (ಅ). ೧. ಅಲ್ಲದೆ; ವಿನಾ: ಆ ಕಾಲದ ಸ್ವಾತಂತ್ರ್ಯವೆನ್ನುವುದು ಪಾರತಂತ್ರಕ್ಕೆ ಬೇರೆ ಹೆಸರೇ ಹೊರತು ಬೇರೆಯಲ್ಲ (ಸಾಹಿಜೀ. ೯೮); ದಾಸ-ವ್ಯಾಸಕೂಟಗಳ ಸಾಮರಸ್ಯದ ಸಮಾವೇಶವಾಗದ ಹೊರತು ನಿಜವಾದ ಭಕ್ತಿ ಬರಲಾರದು (ಜಗದಾ. ೫೯). ೨. ಬಿಟ್ಟು; ಉಳಿದು; ಬೇರೆಮಾಡಿ: ಅವನು ಹೊರತು ಇನ್ನೊಬ್ಬರು ಈ ಕೊಠಡಿಗೆ ಕಾಲಿಟ್ಟಿಲ್ಲ (ಮಧ್ಯಮ. ೧೪೯). **ಹೊರ್ತು:** ೧. ಹೊಸದಾಗಿ ಬಹವೊಕ್ಕಲುಗಳಿಗೆ . . . ಬಿಟ್ಟು ಹೋಹ ವೊಕ್ಕಲಿಗೆ ಹೊರ್ತು ಹಾದಿಗೊಳವೊಕ್ಕಲಿಗೆ (ಎಕ. IX(S), ಕಾನಕ. ೧೨೬-೨೦; 1370); ನೂರು ಜನರಲ್ಲಿ ಶೂರನಾದವನು ಒಬ್ಬನೇ ಹೊರ್ತು ಎಲ್ಲರಿಗೂ ಪೂರ್ಣಪಾಂಡಿತ್ಯವಿರಲಾರದು (ಕಥಾಮಂ. IV. ೭). ೨. ಕಿರಾಣೆಯ ಹೊರ್ತು ಇತರ ಮಾಲಿನ ದೆಶೆಯಿಂದ ಅಡತಿ ಮಜೂರಿಯ ನಿಯಮವು ಈ ಭಾಗದ ಎರಡನೇ ಪ್ರಕರಣದಲ್ಲಿ ದಾಖಲು ಅವೆ (ಮುಂಬವ್ಯಾ. ೧೮೫). [< ಪೊಱತು]

**ಹೊರತೆಗೆ** 'ಪೊಱತೆಗೆ' ನೋ.

**ಹೊರತೆರಿಗೆ** (ನಾ). ಒಂದು ಬಗೆಯ ತೆರಿಗೆ: ತ್ರಿಯಂಬಕದೇವರಿಗೆ ಸಲುವ ಗ್ರಾಮಗಳ ಹೊರತೆರಿಗೆಯ ಬಿಟ್ಟು (ಎಕ. XIV, ಗುಂಡ್ಲುಪೇ. ೧೨೯-೮೩; 1521).

[ಹೊರ₇ + ತೆರಿಗೆ (< ತೆಱಗೆ)]

**ಹೊರತೋಟಿ** (ನಾ). ಹೊರಗೆ ಆಗುವ ಕಲಹ – ಸಂಘರ್ಷ: ಬೇವಿನಹಳ್ಳಿ ಮತ್ತು ಇಂಚಲಾಪುರ-ಇವುಗಳ ನಡುವಿನ ಸಂಘರ್ಷಣವು ನಾಟಕದಲ್ಲಿಯ ಹೊರತೋಟಿಯನ್ನು ಸೂಚಿಸುತ್ತದೆ (ಜನನಾ. XX, ಪ್ರಸ್ತಾವನೆ). 'ಒಳತೋಟಿ' ಪರಾ.

[ಹೊರ (< ಪೊಱಗು) + ತೋಟಿ₁]

**ಹೊರತೋರಿಕೆ** (ನಾ). ಹೊರನೋಟ; ಮೇಲುನೋಟ: ಹೊರತೋರಿಕೆಗೆ ತತ್ತ್ವಗಳನ್ನು ಎತ್ತಿಕೊಂಡು ವಾದಮಾಡುವ ಕೆಲವರು . . . ವಿಮರ್ಶೆ ಮಾಡುವುದುಂಟು (ವ್ಯಾಸಪ್ರ. ೧೪೦). [ಹೊರ (< ಪೊಱಗು) + ತೋರಿಕೆ (< ತೋಱಕೆ)]

**ಹೊರದೂಡು** (ಕ್ರಿ). ಹೊರಕ್ಕೆ ದಬ್ಬು,-ನೂಕು: ಅವಳು . . . ಹೊಟ್ಟೆಯನ್ನು ಹೊಸೆದುಕೊಂಡು ಗರ್ಭವನ್ನು ಹೊರದೂಡಿದಳು (ವಚಭಾ. ೧೨); ಆ ವಜ್ರವ್ಯಾಪಾರಿಯು ಅಲಿಕಾದರನನ್ನು ಮನೆಯಿಂದ ಹೊರದೂಡಿದನು (ಮಣಿಸ. ೨೮). 'ಒಳದೂಡು' ಪರಾ.

[ಹೊರ (< ಪೊಱಗು) + ದೂಡು (< ದೂಂಟು₁)]

**ಹೊರದೆಗೆ** 'ಪೊಱತೆಗೆ' ನೋ.

**ಹೊರದ್ವಾರ** 'ಹೊಱದ್ವಾರ' ನೋ.

**ಹೊರನಾಡು** (ನಾ). ಹೊರದೇಶ; ಬೇರೆಯ ಪ್ರಾಂತ: ಅಶೋಕನ ಕಾಲದಲ್ಲಿ ಹೊರನಾಡುಗಳೊಡನಿದ್ದ ಸಂಬಂಧವು ಕಳೆಗೊಂಡಿತು (ಕಪವು. ೬-೮೩). 'ಒಳನಾಡು' ಪರಾ. [ಹೊರ (< ಪೊಱಗು) + ನಾಡು]

**ಹೊರನಿಲ** (ನಾ). ರಾಜ್ಯದ ಹಣವನ್ನು ಹೊರಗೆ ಇಟ್ಟಿರುವುದು(?): ನೆರವರಿ ವರಾಡ ಕಡುಮಸವರಿ ವಂಚನೆ ವಟ್ಟ ಲಂಚ ಹೊರನಿಲ ಹಸ್ತಾಂತರ ಸಂಜಾಯಿತನಿಲಗಳ ಪರಿವಿಡಿಯಂ ನಿಲಿಸಿ ಸೀಮೆಯಂ ರಕ್ಷಿಸಿದಂ (ಕೆಳನೃ. ೭-೨೯).

[ಹೊರ (< ಪೊಱಗು) + ನಿಲ ₇]

**ಹೊರನುಡಿ** (ನಾ). ೧. ಹೊರಗಿನ ಮಾತು; ಬಹಿರಂಗದ ನುಡಿ: ನೀನು ಅವರ ಹೊರನುಡಿ ಕೇಳುತ್ತೀಯೆ (ಇಸ್ಲಾಂಸಂ. ೨೯೦). ೨. ಪರಭಾಷೆ: ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ, ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ! (ಕೋಗಿಲ. ೪೧-೩); ನೆವವು ಏನಾದರೇನ್, ಹೊರನುಡಿಯು ಹೊರೆಯ್ಮೆ . . . ಕನ್ನಡದ ನಾಡಿನಲಿ ಕನ್ನಡವ ಮೆರೆಸ್ವೆ (ಕಪವು. ೬-೧೪೪). 'ಒಳನುಡಿ' ಪರಾ. [ಹೊರ (< ಪೊಱಗು) + ನುಡಿ₂]

**ಹೊರನೂಕು** 'ಹೊಱನೂಂಕು' ನೋ.

**ಹೊರನೋಟ** 'ಪೊಱನೋಟ' ನೋ.

**ಹೊರಪಡಿಸು** (ಕ್ರಿ). ಬಹಿರಂಗಪಡಿಸು; ಪ್ರಕಟಗೊಳಿಸು: ದೇವವ್ರತನು . . . ವಿಷಯವನ್ನು ಒಂದು ಸ್ವಲ್ಪ ಹೊರಪಡಿಸುವಂತೆ ಮಾಡಿದನು (ವ್ಯಾಸಪ್ರ. ೧೧). 'ಒಳಪಡಿಸು' ಪರಾ. [ಹೊರಪಡು + - ಇಸು₃]

**ಹೊರಪಡು** (ಕ್ರಿ). ಪ್ರಕಟಗೊಳ್ಳು; ಬಹಿರಂಗವಾಗು: ಮುಕ್ತಾಂಬೆಯ ಮೂಲಕ ನಮ್ಮ ಗುಟ್ಟು ಹೊರಪಟ್ಟಿತು (ರಾವಿಜ. ೧೪); ಸೂರ್ಯನು ಪೃಥ್ವೀಸಮೇತನಾಗಿ . . . ಓಡುತ್ತಿರುವನೆಂಬ ವಿಷಯವು ಹೊರಪಡುತ್ತದೆ (ಜ್ಯೋತಿರ್ವಿ. ೬೯).

[ಹೊರ (< ಪೊಱಗು) + ಪಡು₁]

**ಹೊರಪದರ** 'ಹೊರಪದರು' ನೋ.

**ಹೊರಪದರು, ಹೊರಪದರ** (ನಾ). ಮೇಲಿನ ಪೊರೆ; ಹೊರಗಿನ ಮಡಿಕೆ: ಈ ಒಳಚರ್ಮದ ಜೀವಕಣಗಳ ಸ್ರವಣಗಳಿಂದ (Secretions) ಚರ್ಮದ ಹೊರಪದರುಗಳು ಮತ್ತು ಪೊರೆಬಿಡುವ ದ್ರವಗಳಾಗುತ್ತವೆ (ಕೀಟಜ. ೮). **ಹೊರಪದರ:** ಸಿಂಹಾವಲೋಕನ ಕ್ರಮದಿಂದ ಹೊರಪದರವನ್ನು ನೋಡಿದಾಗ . . . ಅಮೂಲ್ಯವಾದ ಆಧಾರಸಾಮಗ್ರಿಗಳು

ದೊರಕಿವೆ ಎಂಬುದನ್ನು ತೋರಿಸುವುದೇ ಈ ಉಪನ್ಯಾಸದ ಮುಖ್ಯಉದ್ದೇಶ (ಶಾಸಗಿ. ೩ನ್ನುಡಿ). 'ಒಳಪದರು' ಪರಾ. [ಹೊರ (< ಪೊಱಗು) + ಪದರು$_3$]

**ಹೊರಪು$_1$** (ನಾ). ಮಳೆಯ ಮೋಡಗಳಿಲ್ಲದೆ ಆಕಾಶವು ನಿರ್ಮಲವಾಗಿ ಕಾಂತಿಯುಕ್ತವಾಗಿರುವುದು: ಬಹಳ ದಿವಸ ಹೊರಪಾಯಿತೆಂದರೆ, ಬೆಳೆಗಳು ಒಣಗಹತ್ತುತ್ತವೆ (ಬಳವ. ೨೬); ಹೊದ್ದ ಮೋಡ ಹೊರಪಾಗಿ ಬಿದ್ದ ಬೆಳದಿಂಗಳಿಂದ ಕುಸುರಿಚಿಕ್ಕಿ ಚುಕ್ಕಿ ಸುರಿದಂತೆ (ಕಮೇಘ. ೨೦-೭). 'ಪೊರಪು', 'ಪೊರೆಪು' ಪರಾ. [ಹೊರ್$_4$ (< ಪೊರ್$_4$) + - ಪು$_2$]

**ಹೊರಪು$_2$** (ನಾ). ಪದರ; ಮಡಿಕೆ: ಮುತ್ತುಗಳಿಗೆ . . . ಚಿಪ್ಪಿನ ಹೊರಪಾಗಿಂ ಕರಡಾಗಿಯು . . . ಪ್ರಬಲದೋಷಂಗಳು (ಸೌಗಂಧಿ. ೩೬೫-೨೮). [ಹೊರ್$_5$ (< ಪೊರ್$_5$) + - ಪು$_2$]

**ಹೊರಬದಿ** (ನಾ). ಹೊರಮಗ್ಗುಲು; ಹೊರಪಾರ್ಶ್ವ: ಇಬ್ಬರು ಹೋಗಿ ಹೊರಬದಿಯಲ್ಲಿಯ . . . ಮೇಜಿನ ಎದುರಿನಲ್ಲಿ ಕುಳಿತರು (ಚಿಂದುಟ. ೬೫). 'ಒಳಬದಿ' ಪರಾ. [ಹೊರ (< ಪೊಱಗು) + ಬದಿ$_1$]

**ಹೊರಬರು** 'ಪೊಱವರ್' ನೋ.

**ಹೊರಬಾಗಿಲು** 'ಹೊಱಬಾಗಿಲು' ನೋ.

**ಹೊರಬಿಗ** 'ಪೊಱಬಿಗ' ನೋ.

**ಹೊರಬೀಳು** 'ಹೊಱಬೀಳ್' ನೋ.

**ಹೊರಬುದ್ಧಿ** (ನಾ). = ಹೊರಚಾಳಿ ೨: ಕುಡಿತ ಹೊರಬುದ್ಧಿ ಮೊದಲಾದವು ಒಳಗೊಳಗೆ ಪಸರಿಸುತ್ತಿದ್ದವೆಂದು ಹೇಳಬೇಕಾದುದಿಲ್ಲ (ಬಟ್ಟಹೊ .೩೦). [ಹೊರ (< ಪೊಱಗು) + ಬುದ್ಧಿ]

**ಹೊರಬೆದ್ದಲೆ** (ನಾ). (ಊರಿನ) ಹೊರಭಾಗದಲ್ಲಿರುವ ಹೊಲ: ಅನ್ತು ಗಟ್ಟೆ ಮತ್ತ ೧ ಊರಿಂ ಹೊರಬೆದ್ದಲೆ ಮತ್ತ XXX ರ ೫ ಹುಡುವರ್ಗ್ಗಂ ಪಟೆಕೆಟೆಗೆ ತೆಂಕಣ ಕೋಡಿಯಲಿ ಗಟ್ಟೆ ಮತ್ತರ್ ೧ (ಎಕ. VII,ಹೊನ್ನಾಳಿ. ೧೦೭-೧೬; 1048). [ಹೊರ (< ಪೊಱಗು) + ಬೆದ್ದಲೆ (< ಬೆದ್ದಲ್)]

**ಹೊರಮಗ್ಗಲು** 'ಹೊರಮಗ್ಗುಲು' ನೋ.

**ಹೊರಮಗ್ಗುಲು, ಹೊರಮಗ್ಗಲು** (ನಾ). ೧. ಹೊರಗಿನ ಪಾರ್ಶ್ವ,– ಬದಿ: ಅವರ ಮನೆಯ ಹೊರಮಗ್ಗುಲಿನಲ್ಲಿಯೇ ದೊಡ್ಡದೊಂದು ಆಲದ ಮರವಿದೆ (ರೂಢಿ). **ಹೊರಮಗ್ಗಲು**: ೧. ಹೊರಮಗ್ಗಲಿಗೆ ಅರಬ ಜನರ ಪಹಾರೆಯದೆ (ಮಂಜುಕ. ೪). ೨. ಹೊರಮೈ; ಮೇಲುಭಾಗ: ಗಿಡದ ತೋಟೆ ಹೊರಮಗ್ಗಲು ಹುರುಬರಕು ಇರುವದು (ಮುಂಬಯಿ. ೪-೭೧).'ಒಳಮಗ್ಗುಲು' ಪರಾ. [ಹೊರ (< ಪೊಱಗು) + ಮಗ್ಗುಲು (< ಮಗ್ಗುಲ್)]

**ಹೊರಮಡು** 'ಪೊಱಮಡು' ನೋ.

**ಹೊರಮಾಟ** (ನಾ). ಇತರರ ಕೈವಾಡ ,– ಹಸ್ತಕ್ಷೇಪ: ಬೊಮ್ಮಿದೇವರಸರು ಕಿ[ಲ್ಲೋ]ಗು ನಡಿಸಿದ ಮರ್ಯ್ಯಾದೆ [ಯೆಂದಿಂದೆ]ಗಂ ಹೊರಮಾಟವಿಲ್ಲದಿದ X ಸಿಗೆ ಕೆಟೆ ನೇಜಿಲ ಕೆಟೆಯ ನಡುಸ್ಥಳಕಂ . . . ಕೊಂಡ ಮರ್ಯಾದೆಯುಉವಣಗದ್ಯಾಣಂ ನಾಲ್ಕು (ಕಲ. IV, ೪೮-೪೩; 1247). [ಹೊರ (< ಪೊಱಗು) + ಮಾಟ$_1$]

**ಹೊರಮಾರು** 'ಪೊಱಮಾಱು$_3$' ನೋ.

**ಹೊರಮುಖ** (ನಾ). ಹೊರಭಾಗ;ಹೊರಆವರಣ: ಮಡಕೆಯಂ ಶುದ್ಧೋದಕದಿಂದ ಒಳಮುಖವಂ ಚೆನ್ನಾಗಿ ತೊಳೆದು . . . ಹೊರಮುಖವಂ ಪಾವಡೆಯಿಂದೊರಸಿ (ಸಕವ್ಯ. ೩೯೩). 'ಒಳಮುಖ' ಪರಾ. [ಹೊರ (< ಪೊಱಗು) + ಮುಖ]

**ಹೊರಮುಚುಕ** 'ಹೊರಮುಚ್ಚಗ' ನೋ.

**ಹೊರಮುಚ್ಚಗ, ಹೊರಮುಚುಕ** (ನಾ). ಮುಟ್ಟಿದ ಕೂಡಲೇ ಎಲೆಗಳನ್ನು ಮುಚ್ಚಿಕೊಳ್ಳುವ ಒಂದು ಬಗೆಯ ಗಿಡ; ಮುಟ್ಟಿದರೆ ಮುನಿ: ಹೊರಮುಚ್ಚಗ ಒಳಮುಚ್ಚಗಗಳೆಂಬ ವನಸ್ಪತಿಗಳು ಕೈಹಚ್ಚಿದ ಕೂಡಲೆ ಎಲೆಗಳನ್ನು ಮುಚ್ಚಿಕೊಳ್ಳುತ್ತವೆ (ಮುಂಬಯಿ. ೬-೨೭೫). **ಹೊರಮುಚುಕ**: ಹೊರಮುಚುಕವು ಹಳ್ಳಿಗಳ ನುಡಿಯಲ್ಲಿ 'ಅಂತರ್ದರ್ಶನ'; ಕೇವಲ ಸ್ಪರ್ಶದಿಂದ ಒಳಮೈ ತೋರಿಸುವ ಒಂದು ಗಿಡಮೂಲಿಕೆ (ಲೋಕಗೀ. ೧೧೫ ಅಡಿಟ).'ಒಳಮುಚ್ಚುಗ' ಪರಾ. [ಹೊರ (< ಪೊಱಗು) + ಮುಚ್ಚಗ$_1$ (< ಮುಚುಗ)]

**ಹೊರಮುನಿ** (ನಾ). = ಹೊರಮುಚ್ಚಗ: (ಮೈಔಗಿ. ೧೩-೨೨೩).'ಒಳಮುನಿಗಿಡ' ಪರಾ. [ಹೊರ (< ಪೊಱಗು) + ಮುನಿ$_2$]

**ಹೊರಮೈ** 'ಪೊಱಮೆಯ್' ನೋ.

**ಹೊರಮೊಳೆ** (ನಾ). ಮೂಲವ್ಯಾಧಿಯಲ್ಲಿ ಗುದಪ್ರದೇಶದ ಹೊರಗೆ ಕಾಣಿಸಿಕೊಳ್ಳುವ ಮುಳ್ಳು,–ಮೊಳಕೆ: ಮೈಲತುತ್ತವಂ ಬೋಗುಡಿಚೆಸೊಪ್ಪಿನ ರಸದಲ್ಲಿ ತೇದು ಹೊರಮೊಳೆಗೆ ತೊಡೆಯೆ ಮೊಳೆ ಮಾಣುವುದು (ಸಕವ್ಯ. ೨೯೩). 'ಒಳಮೊಳೆ' ಪರಾ. [ಹೊರ (< ಪೊಱಗು) + ಮೊಳೆ$_2$]

**ಹೊರಯಿಂಕೆ** 'ಪೊಱಯಿಂಕೆ' ನೋ.

**ಹೊರಯಿಕೆ** 'ಪೊಱಯಿಂಕೆ' ನೋ.

**ಹೊರಲಂಚ**(ನಾ). ಬಹಿರಂಗವಾಗಿ ಪಡೆಯುವ ಲಂಚ: ಸ್ವಾಮಿಕಾರ್ಯಕೊಂಚನೆಯ ಮಾಡಿ ಹೊರಲಂಚಮಂ ಕೊಂಡು (ಕೃಷ್ಣವಿ. ೨-೯೮). 'ಒಳಲಂಚ' ಪರಾ. [ಹೊರ (< ಪೊಱಗು) + ಲಂಚ]

**ಹೊರಲಿಗ** (ನಾ). ಒಂದು ಬಗೆಯ ಮೂಲಿಕೆ: ಹೊರಲಿಗ, ಚಿಕ್ಕ ಹೊರಲಿಗನ ಸಮೂಲ,ಭಂಗಿಯ ಪುಡಿ . . . ಇಷ್ಟನ್ನೂ ಕೂಡಿ ಅರೆದು (ವಿಷ್ಣುವಿ. ೨೧೫). [?]

**ಹೊರವಡು** 'ಪೊಱಮಡು' ನೋ.

**ಹೊರವಯ್ಯ** (ನಾ). ಒಬ್ಬಾತನ ಹೆಸರು: ಕುಬುವರ ಗಾಯಿಗ ಹೊರವಯ್ಯಂ ಸತ್ತು ಸುರಲೋಕಕ್ಕೆ ಪೋದ (ಎಕ. VIII,ಸೊರಬ. ೪೫೪-೫; 973). [ಹೊರವ$_2$ + ಅಯ್ಯ$_1$]

**ಹೊರವಲಯ** 'ಪೊಱವಲಯ' ನೋ.

**ಹೊರವಳಯ** 'ಪೊಱವಲಯ' ನೋ.

**ಹೊರವಾಗಿಲು** 'ಪೊಱಬಾಗಿಲು' ನೋ.

**ಹೊರವಾಱು** 'ಪೊಱಮಾಱು$_3$' ನೋ.

**ಹೊರವು** (ನಾ). ಸೊಂಪು; ಹುಲುಸು: ಕೊಂಬೆಕೊಂಬೆಗು ಹೂವು,ಹಣ್ಣನ್ನು ಹೊತ್ತು ಹೊರವಾಗಬೇಕು (ನಡೆದಾ I, ೩೮೪); ತೋಟ ಮಾತ್ರ ಪಾಳುಬೀಳದೆ ದಟ್ಟವಾಗಿಯೂ ಹೊರವಾಗಿಯೂ ಬೆಳೆದಿತ್ತು (ಪುನರು. ೨೮೩). [ಹೊರ್$_4$ (< ಪೊರ್$_4$) + - ವು]

**ಹೊರಸಂಚಾರ** (ನಾ). ಹೊರಗಿನ ತಿರುಗಾಟ; ವಾಯುವಿಹಾರ: ಒಂದು ಭಾನುವಾರ ನದಿಯ ಬಳಿಗೆ ಹೊರಸಂಚಾರ ಹೋಗೋಣ ಎಂದು ಗುರುಗಳು ಹೇಳಿದರು (ಕಪಪು. ೨-೪೦). [ಹೊರ (< ಪೊಱಗು) + ಸಂಚಾರ]

**ಹೊರಸರಿ** (ಕ್ರಿ). ಹೊರಕ್ಕೆ ಹೋಗು ,– ಸಾಗು: ಹೃದಯಕ್ಕಾದ ತೃಪ್ತಿಯ ಭಾವನೆ ತುಳುಕಿ ಹೊರಸರಿದಂತೆ ನದಿಯ ಜಲ . . . ಹರಿಯುತ್ತಿದೆ (ಚಿತಂಬಾ. ೧). 'ಒಳಸರಿ' ಪರಾ. [ಹೊರ (< ಪೊಱಗು) + ಸರಿ$_1$]

**ಹೊರಸಲು** (ನಾ). ೧. ಹಗ್ಗವನ್ನು ಹೆಣೆದು ಮಾಡಿದ ಮಂಚ; ಹೊರಸು: ಬಾಣಂತಿಯು ಹೊರಸಲ ಮೇಲೆ ಮಲಗಿದ್ದಾಳೆ (ರೂಢಿ). ೨. ಬಿದಿರಿನ ಬುಟ್ಟಿ; ಹೆಡಗೆ: ಆ ಪಡಸಾಲೆಯೊಳಗೆ ಎಂಟೇ ಒಲೆ ಹೂಡಿರುವರಂದರ ಈಗ ಒಂದು ಹೊರಸಲು ತುಂಬ ಹೋಳಿಗೆ ಮಾಡಿದರು(ಅಶೋಕ. ೨). [ಹೊರಸು$_3$ (< ಪೊರಸು) + - ಅಲು (<- ಅಲ್$_2$)]

**ಹೊರಸಲುಹಕ್ಕಿ** (ನಾ). ಪಾರಿವಾಳ; ಹೊರಸು: ಪಿಕಳಾರಗಳ ಸಿಳ್ಳುಲಿಯಾಗಲಿ ಹೊರಸಲು ಹಕ್ಕಿಗಳ ಗುಬ್ಬಳಿಕೆಗಳಾಗಲಿ. . . ಅವನಿಗೆ ಕೇಳಿಸುತ್ತಿರಲಿಲ್ಲ (ಮಲೆಮ. ೬೪). [< ಹೊರಸು$_2$ (< ಪೊಱಸು) + ಹಕ್ಕಿ (< ಪಕ್ಕಿ)]

**ಹೊರಸೀರೆ** (ನಾ). ಒಂದು ಬಗೆಯ ಔಷಧದ ಮೂಲಿಕೆ ,– ಬೇರು: ಒಳಸೀರೆ ೩, ಹೊರಸೀರೆ ೩, ಜೋಳ, ಮೂಱುಹಿಡಿ ಬನ್ನಿಸೊಪ್ಪು ಇವನ್ನು ಕೂಡಿಹಾಕಿ ಇಡಿದು . . ಮೂಱುದಿನ ಮೆಲ್ಲಲು ಕಣ್ಣು ಕಾಂಬದು (ವಿಷ್ಣುವಿ. ೬೩). 'ಒಳಸೀರೆ' ಪರಾ. [ಹೊರ$_1$ + ಸೀರೆ$_1$]

**ಹೊರಸು$_1$** (ಕ್ರಿ). ಲೇಪಿಸು; ಬಳಿ: ಆ ಬೆಂದ ಕಾಯ ಮೇಲೆ ಹೊರಸಿ ತುಪ್ಪವನೆಱೆದು ಸಲಗೆಯಿಂದವೆ ಚುಚ್ಚಿ (ಸೂಪಶಾ. ೫-೪೫). [ಹೊರ್$_4$(< ಪೊರ್$_4$) + - ಸು$_1$]

**ಹೊರಸು₂** 'ಪೊಱಸು' ನೋ.

**ಹೊರಸು₃** 'ಪೊರಸು'ನೋ.

**ಹೊರಸುತ್ತು** 'ಹೊಱಸುತ್ತು' ನೋ.

**ಹೊರಸೂರು** (ನಾ). (ಮನೆಯ ಸುತ್ತಲೂ) ಹೊರಚಾಚಿಕೊಂಡಿರುವ ಛಾವಣಿಯ ಭಾಗ: ಗರಡಿಮನೆ ಹೊರಸೂರಿನಲ್ಲಿ ಬೆಂಕಿ ಉರಿ ಎದ್ದದ್ದ ಕಂಡು ಪುಕಾರು ಮಾಡಿದ್ದರಿಂದಾ ಬೆಂಕೆ ಹಾಕಿದವನು ಕಾಡ ಒಳಗೆ ಓಡಿಹೋದ (ರಾಜೇಂದ್ರ. ೨೬೫). [ಹೊರ (< ಪೊಱಗು) + ಸೂರು₂ (< ಸೂರ್)]

**ಹೊರಸೂಸು** 'ಪೊಱಸೂಸು' ನೋ.

**ಹೊರಸೆಳೆತ** (ನಾ). ಹೊರಗಿನಿಂದುಂಟಾಗುವ ಆಕರ್ಷಣೆ,– ಎಳೆತ: ಇಂಗ್ಲೀಷು ಬೆಂಗಾಲೀ ಮರಾಠೀ ತೆಲಗು ಮುಂತಾದ ಸಾಹಿತ್ಯಗಳ ಹೊರಸೆಳೆತದಿಂದಲೂ . . . ನಮ್ಮ ಸಾಹಿತ್ಯವು ಇದೀಗ ಹೊಸದಾಗಿ ಹೊಳಪುಗೊಳ್ಳುತ್ತಲಿದೆ (ತಿಡುಗು. ೮ ಪೀಠಿಕೆ). 'ಒಳಸೆಳೆತ' ಪರಾ. [ಹೊರ (< ಪೊಱಗು) + ಸೆಳತ (< ಸೆಳೆತ₁)]

**ಹೊರಹಾಕು** 'ಹೊಱಹಾಕು' ನೋ.

**ಹೊರಹಾಯು** 'ಪೊಱವಾಯ್' ನೋ.

**ಹೊರಹು** 'ಪೊರೆಪ್ಪು₁' ನೋ.

**ಹೊರಹುಂಡಿ** (ನಾ). ಊರ ಹೊರಗಿನ ಸಣ್ಣ ಹಳ್ಳಿ,– ಗ್ರಾಮ: ಗೋಪುಯಿಲ್ಲದವಂಗೆ ಹೊರಹುಂಡಿಯುಂಟೆ (ಕಲಕ. ೧೦೨-೫). [ಹೊರ (< ಪೊಱಗು) + ಹುಂಡಿ₁]

**ಹೊರಹೊಂಚು** (ಕ್ರಿ). ಹೊರಭಾಗವನ್ನು ಲಕ್ಷಿಸಿ ನೋಡು: ಮುಚ್ಚಿದ ಕೋಳಿ ಹೊರಹೊಂಚಿ ಮುಂಬೆಳಕೊಳಂತೆ ಕೂಗಿತು (ಗೊಲ್ಲೂಥಾ. ೧೪-೨). [ಹೊರ (< ಪೊಱಗು) + ಹೊಂಚು₁ (< ಪೊಂಚು₁)]

**ಹೊರಹೊಂಡು** 'ಪೊಱಮಡು' ನೋ.

**ಹೊರಹೊಮ್ಮಿಸು** 'ಹೊಱಹೊಮ್ಮಿಸು' ನೋ.

**ಹೊರಹೊಮ್ಮು** 'ಪೊಱಪೊಣ್ಮು' ನೋ.

**ಹೊರಹೊರಡಿಸು** 'ಹೊಱಹೊಱಡಿಸು'ನೋ.

**ಹೊರಹೊರಡು** 'ಹೊಱಹೊಱಡು' ನೋ.

**ಹೊರಳ್** 'ಪೊರಳ್' ನೋ.

**ಹೊರಳಾಟ** (ನಾ). ಉರುಳಾಡುವುದು: ಸಕೆಯಿಂದಾಗಿ ರಾತ್ರೆಯಲ್ಲಾ ನಿದ್ದೆ ಬರದೆ ಬರಿ ಹೊರಳಾಟವೇ ಆಯ್ತು (ರೂಢಿ). [ಹೊರಳು₁ (< ಪೊರಳ್) + ಆಟ]

**ಹೊರಳಾಡಿಸು** (ಕ್ರಿ). ೧. ಹೊರಳುವಂತೆ ಮಾಡು; ಉರುಳಿಸು: ಮಗು ತನ್ನ ಗೊಂಬೆಯನ್ನು ಮಣ್ಣಿನಲ್ಲಿ ಹೊರಳಾಡಿಸುತ್ತಾ ಆಡುತ್ತಿತ್ತು (ರೂಢಿ). ೨. ಮತ್ತೆ ಮತ್ತೆ ನೆನಪಿಗೆ ತಂದುಕೊಳ್ಳು,– ತಿರುವಿಹಾಕು: ಚೆಲುವಾಂಬಾ ಗುಣದೋಷಗಳನ್ನು ನನ್ನ ಮನಸಿನಲ್ಲಿ ಹೊರಳಾಡಿಸಿದೆ (ಚಿಂಗಾಳ್ಳ. ೪೮೯). [ಹೊರಳಾಡು + - ಇಸು₃]

**ಹೊರಳಾಡು** (ಕ್ರಿ). (ಹಸಿವು, ನೋವು, ದುಃಖ ಮುಂತಾದುವುಗಳನ್ನು ಸಹಿಸಲಾರದೆ) ಉರುಳು; ಅತ್ತಿಂದಿತ್ತ ದೇಹವನ್ನು ತಿರುಗಿಸು; ಹೊರಳು: ಆ ಬಟ್ಟೆ ಬೇಗ ಕಳೆಯಲಿಕ್ಕೆ ಬಾರದಿದ್ದರೆ ನೆಲದ ಮೇಲೆ ಬಿದ್ದು ಹೊರಳಾಡಬೇಕು (ಮುಂಬಯಿ.೪-೬೧); ನಾನೂ ಬರಿಯ ಹೊಟ್ಟೆಯಲ್ಲಿ ಹೊರಳಾಡಿದೆ (ನಂಟರು. ೩೮). [ಹೊರಳು₁ (< ಪೊರಳ್) + ಆಡು₁]

**ಹೊರಳಿ** 'ಪೊರಳಿ' ನೋ.

**ಹೊರಳಿಗಟ್ಟು** (ಕ್ರಿ). ಗುಂಪಾಗು; ಒಟ್ಟಾಗು: ಗಿರಿಯ ಮುತ್ತಿದ ಮುಗಿಲವೊಲು ಹೊಗೆ ಹೊರಳಿಗಟ್ಟಿತು ಮೇಲೆ ದಳ್ಳುರಿ ಧರಧುರದಲೊಳಬೀಳುತಿದ್ದವು ಕಿಡಿಯ ಚೂಣಿಯಲಿ (ಕುವ್ಯಾದ್ರೋ. ೧೯-೪೫). [ಹೊರಳಿ (< ಪೊರಳಿ) + ಕಟ್ಟು₁]

**ಹೊರಳಿಗಡಿ, ಹೊರಳೆಗಡಿ** (ಕ್ರಿ). ಗುಂಪುಗುಂಪಾಗಿ ಕತ್ತರಿಸು; ಒಟ್ಟಿಗೆ ಬೀಳುವಂತೆ ಕಡಿ: ಎಡಬಲವಂಕದವರನು ಹೊರಳಿ [ಪಾಠಾಂ.ಳೆ]ಗಡಿದಸುರಾರಿ ಶಂಖೋತ್ತಮವ ಮೊಳಗಿಸಿದ (ನಿಭಾಗ.೧೦-೪೯-೩೫). **ಹೊರಳೆಗಡಿ:** ಅನಿಬರ ಕೊರಳುಗಳ ಕಾನನದ ಕುಮ್ಮರಿಯ ಹೊರಳೆಗಡಿವಂದದಲಿ ತಲೆಗಳ ಗಿರಿಗಳನು ಮಾಡಿದನು (ನಿಭಾಗ. ೯-೧೫-೨೫). [ಹೊರಳಿ (< ಪೊರಳಿ) + ಕಡಿ₁]

**ಹೊರಳಿಗಳೆ** (ಕ್ರಿ). ಮುದ್ದೆಯನ್ನು ದಾಟು: ನೂರರಕುತ ಉಳಿಮಸಗಿ ಮಿದುಳಿನ ಹೊರಳಿಗಳೆದು . . . ಶಿರದ ತಡಿಗಳಲಡಸಿ ಹರಿದುದು ವೈರಿಸೇನೆಯಲಿ (ಕುವ್ಯಾದ್ರೋ. ೨-೫೭). [ಹೊರಳಿ (< ಪೊರಳಿ) + ಕಳೆ₁]

**ಹೊರಳಿಗಿಡಿ** (ನಾ). ಗುಂಪುಗುಂಪಾಗಿ ಸಿಡಿಯುವ ಕಿಡಿ: ಭೀಮಸೇನನ ಧರಧುರದ ಹೊಯ್ಲುಗಳ ಗದೆಯಲಿ ಹೊರಳಿಗಿಡಿ ಝೊಂಪಿಸಿದುವುರು ಖದ್ಯೋತಮಂಡಲಪ (ಕುವ್ಯಾಗ. ೭-೧೭); ಹೊರಳಿಗಿಡಿ ಹೊದಚೆದ್ದು ವಿಕ್ರಾಲರ ಪುರಂಗಳ ಸರಕುವೆಗಸಿದವು (ತೊರರಾ. ೪-೪-೧೯). [ಹೊರಳಿ (< ಪೊರಳಿ) + ಕಿಡಿ]

**ಹೊರಳಿಚು** 'ಪೊರಳ್ಚು₁' ನೋ.

**ಹೊರಳಿದೆಗೆ** (ಕ್ರಿ). ಒಟ್ಟಾಗು; ದಟ್ಟೈಸು: ತರಳಿದುದು ಕಪಿಸೇನೆ ಸಾಗರ ಹೊರಳಿದೆಗೆ ವಂದದಲಿ ನಾಲ್ದೆಸೆಗೆ (ತೊರರಾ. ೪-೮-೨೦). [ಹೊರಳಿ (< ಪೊರಳಿ) + ತೆಗೆ₁]

**ಹೊರಳಿಮಂಡಿ** (ನಾ). ಖಡ್ಗಯುದ್ಧದಲ್ಲಿಯ ಒಂದು ಭಂಗಿ,– ವರಸೆ: ಪಾದವನ್ನು ಮುಂದೆ ಶೀಘ್ರವಾಗಿ ಚಾಚಿ ಹಿಂದಕ್ಕೆ ಪುನಃ ತಿರುಗಿ ಭೂಮಿಯಲ್ಲಿ ಇಡಬೇಕು ಕಡಮೆಪಾದಕ್ಕೂ ಯಿ ಪ್ರಕಾರವನ್ನೆ ಮಾಡಿದರೆ ಹೊರಳಿಮಂಡಿ ಮುರಿವದುಯಂಬುದು (ಖಡ್ಗಟೀ. ೪-೩೩). [ಹೊರಳಿ₁ + ಮಂಡಿ₁]

**ಹೊರಳಿಯೊಡೆ** (ಕ್ರಿ). ಗುಂಪು ಚೆದರು; ಚೆಲ್ಲಾಪಿಲ್ಲಿಯಾಗು: ಹೊರಳಿಯೊಡದು ಮಹಾಪ್ರಧಾನರು ಮುರಳಿದರಲಾ (ಕುವ್ಯಾಭೀ.೮-೬೫); ರಘುನಾಥ ಕೈಯಿಕ್ಕಿದನು ಕಾರ್ಮುಕಕೆ ತೆಱವೆಯಾದುದು ಭೀತಿ . . . ಹೊರಳಿಯೊಡೆದುದು ಮಿಕ್ಕ ರಕ್ಕಸರ (ತೊರರಾ. ೩-೬-೫೧). [ಹೊರಳಿ (< ಪೊರಳಿ) + ಒಡೆ₁]

**ಹೊರಳಿಯೊಡೆಯಿಸು** (ಕ್ರಿ). ಗುಂಪನ್ನು ಚೆದರಿಸು; ಗುಂಪು ಚೆಲ್ಲಾಪಿಲ್ಲಿಯಾಗುವಂತೆ ಮಾಡು: ಹೊಕ್ಕನು ಹೊರಳಿ[ಪಾಠಾಂ.ಳೆ]ಯೊಡಯಿಸಿದನಾ ಪೌಜಿನೆಕ್ಕತುಳದ ರಾವುತರನು ಒಕ್ಕಲಿಕ್ಕಿದನು (ಕುರಾಸಾಂ. ೪೦-೨೮). [ಹೊರಳಿಯೊಡೆ + - ಇಸು₃]

**ಹೊರಳಿವೆಣ** (ನಾ). ರಾಶಿರಾಶಿಯಾಗಿರುವ ಹೆಣ: ಮುರಿಯಲಾಗದು ಕೊಂದ ಹಚ್ಚಗಳ ಹೊರಳಿವೆಣನುಪ್ಪರಿಸಿದುದು ತಾಳೇಳಬುದ್ದದಲಿ (ತೊರರಾ. ೬-೩೦-೮). [ಹೊರಳಿ (< ಪೊರಳಿ) + ಪೆಣ]

**ಹೊರಳಿವೆಳಗು** (ನಾ). ದಟ್ಟವಾದ ಬೆಳಕು; ಸಾಂದ್ರವಾದ ಕಾಂತಿ: ಹೊರಳಿವೆಳಗಿನ ಹೊಗರ ಧಾರೆಯ ಸುರುಚಿರದ ಮೋಹರದ ಮಣಿಬಂಧುರದ ಖಂಡೆಯವಿರಲು ಕೈಯಿಕ್ಕಿದನು ಕಲಿಹನುಮ (ತೊರರಾ. ೫-೨-೮೪). [ಹೊರಳಿ (< ಪೊರಳಿ) + ಬೆಳಗು₂]

**ಹೊರಳಿಸು** 'ಪೊರಳಿಸು' ನೋ.

**ಹೊರಳು₁** 'ಪೊರಳ್' ನೋ.

**ಹೊರಳು₂** (ನಾ). ೧. ತಿರುವು; ಬಾಗು: ಬಾಬೂ ದಾರಿಯ ಹೊರಳನ್ನು ಸುತ್ತಿ ಮರೆಯಾದನು (ರಕ್ತದ್ವ. ೩೪೩). ೨. ಬದಲಾವಣೆ; ಮಾರ್ಪಾಡು: ೧೯೧೦೫ ರಿಂದ ಇತ್ತೀಚಿನ ಜಾಗೃತ ಹಿಂದುಸ್ತಾನದ ಹೊರಳುಗಳನ್ನೂ ಚೆನ್ನಾಗಿ ಅಭ್ಯಾಸಮಾಡಿದನು (ಬಿಟ್ಟಸೂ. ೭೭). ೩. ಒಂದು ಬಗೆಯ ತಿರುಗುವ ಯಂತ್ರ: ಹಪ್ಪಾದ ಸೊನೆಯನ್ನು ಬೇರೆ ಬೇರೆ ವೇಗದಿಂದ ತಿರುಗುವ ಎರಡು ಹೊರಳುಗಳ (Rollers) ಎಡೆಗೆ ಕೊಡುತ್ತಾರೆ (ಬಾಲಪ್ರ. I. ೫೧). [< ಪೊರಳ್]

**ಹೊರಳೆ₁** (ನಾ). ೧. ಚಕ್ರಾಕಾರವಾದ ಚಲನೆ; ಸುತ್ತಾಟ; ತಿರುಗಾಟ: ಆವೆಡೆಯೊಳುಮಿಲ್ಲ ಸುಖಂ ಕೈವಲ್ಯದೊಳಲ್ಲದನ್ನೆಗಂ ದೇಹಿಗಳಂ ತೀವುವ ಕೆಡಹುವ ಯಂತ್ರ ಘಟಾವಳಿಗಳ ಹೊರಳೆಯಂತೆ ವಿಧಿ ತಿರಿಗಿಸುಗುಂ (ಅನಂಪು. ೯-೩೪). ೨. ಒಂದು ಲೆಕ್ಕದ ಹಣವನ್ನು ಇನ್ನೊಂದು ಲೆಕ್ಕಕ್ಕೆ ಮರುಪಾವತಿಯ ಆಧಾರದ ಮೇಲೆ ವರ್ಗಾಯಿಸುವುದು: (ಕ).

ಹೊರಳೆಯಮಾತು = (ವಿಷಯವನ್ನು) ಹೊರಳಿಸಿ ಆಡುವ ಮಾತು: ನಿಜ ತಿಳಿದವರುಗಳೆಲ್ಲ ಹೊರಳೆಯ ಮಾತನಾಡುವುದಕೆ ಬಾರದು ಅಱಿಯರು ತಾ ಲೌಕಿಕವನು (ಜ್ಞಾನಚ. ೯-೧೩೪). [ಹೊರಳ್ (< ಪೊರಳ್) + - ಎ₄]

**ಹೊರಳೆ₂** 'ಪೊರಳಿ' ನೋ.

**ಹೊರಳೆ₃** 'ಹೊಳ್ಳೆ₁' ನೋ.

**ಹೊರಳೆ$_4$** 'ಹೊಳ್ಳೆ$_2$' ನೋ.

**ಹೊರಳೆಗಡಿ** 'ಹೊರಳಿಗಡಿ' ನೋ.

**ಹೊರಳ್ಚು** 'ಪೊರಳ್ಚು' ನೋ.

**ಹೊರಾಂಗಣ** (ನಾ). (ಕಟ್ಟಡದ) ಬಾಹ್ಯ ಆವರಣ,– ಬಯಲು ಜಾಗ.

**ಹೊರಾಂಗಣಕ್ರೀಡೆ** = (ಕಟ್ಟಡದ) ಹೊರಗಿನ ಆವರಣದಲ್ಲಿ ಆಡುವ ಆಟ,– ಬಯಲುಜಾಗದಲ್ಲಿ ಆಡುವ ಆಟ: ಈ ಹುಡುಗನಿಗೆ ಹೊರಾಂಗಣ ಕ್ರೀಡೆಯಲ್ಲಿ ಬಹಳ ಆಸಕ್ತಿಯಿದೆ (ರೂಢಿ). [ಹೊರ (< ಪೊಱಗು) + ಅಂಗಣ]

**ಹೊರಾದಾಯ** (ನಾ). ಹೊರಗಿನಿಂದ ಬರುವ ಆದಾಯ: ಗ್ರಾಮಾದಾಯ ಚರಾದಾಯ ಹೊರಾದಾಯ ಊಳಿಗಮಾನ್ಯ ಇವು ಮೊದಲಾದ ಸಕಲ ಸ್ವಾಮ್ಯವನು . . . ಅನುಭವಿಸಿಕೊಂಡು ಬಹರು (ಎಕ. XIV, ನಂಜನ. ೨೯೫, ಪುಟ ೧೫೧; 1756); ಹುಲ್ಲು ಹಣ ಚರಾದಾಯ ಹೊರಾದಾಯ ಶೀಗೇಮಡಿ . . . ರೂಢಿಸಿಕ್ಕೊಂಡು (ಹುಟ್ಟಹ. ೩). [ಹೊರ (< ಪೊಱಗು) + ಆದಾಯ]

**ಹೊರಿಗೆ** 'ಪೊಱಿಗೆ' ನೋ.

**ಹೊರಿಗೆವಾಳ** 'ಹೊಱಿಗೆವಾಳ' ನೋ.

**ಹೊರಿಯೊಟ್ಟೆ** 'ಹುರಿಯೊಟ್ಟೆ' ನೋ.

**ಹೊರಿಸು** 'ಪೊಱಿಸು' ನೋ.

**ಹೊರು** 'ಪೊಱು' ನೋ.

**ಹೊರೆ$_1$** 'ಪೊರ$_1$' ನೋ.

**ಹೊರೆ$_2$** 'ಪೊರೆ$_2$' ನೋ.

**ಹೊರೆ$_3$** 'ಪೊರೆ$_3$' ನೋ.

**ಹೊರೆ$_4$** 'ಪೊರೆ$_4$' ನೋ.

**ಹೊರೆ$_5$** 'ಪೊರೆ$_5$' ನೋ.

**ಹೊರೆ$_6$** 'ಪೊಱೆ' ನೋ.

**ಹೊರೆಕಟ್ಟು** 'ಪೊಱೆಗಟ್ಟು' ನೋ.

**ಹೊರೆಕಾರ** 'ಪೊಱೆಕಾಱ' ನೋ.

**ಹೊರೆಕಾಱ** (ನಾ). ೧. ಪಕ್ಕದಲ್ಲಿರುವವನು; ಸಮೀಪದಲ್ಲಿರುವವನು. ೨. ಪರಿಚಾರಕ; ಆಜ್ಞಾಧಾರಕ: ನಮಸ್ಕಾರಕುಳಿದ ದೇವವ್ರಾತಮರುಹಮಲ್ಲಂ ಮಮ ಕರ್ತು ಶಿವನ ಹೊರೆಕಾಱರೆನಲರ್ಪಿಪರು ಕಮಲಾಕ್ಷಮುಖ್ಯರು (ವೀಶೈಪು. ೩-೨೧-೩೬). [ಹೊರ್$_4$ (< ಪೊರ್$_4$) + - ಕಾಱ]

**ಹೊರೆಗಳೆ** 'ಪೊರೆಗಳೆ' ನೋ.

**ಹೊರೆಗಾಣ್** (ಕ್ರಿ). ಸಲಿಗೆಯಿಂದಿರು; ಲಘುವಾಗಿರು: ಹೊರೆಗಾಣದಿಹ ನೇಹಗಲಹದ ಮೊಗಂಗೊಡದ ಗಿರಿಸುತಯ ಬೆಂಗಡೆಗೆ ಸೊಪ್ಪುಳಾಗದ ತೆಱದೊಳಿರದೆ ಬಳಿಸಂದು . . . ಆಲಿಂಗನಂಗಯ್ವ ಪಂಪಾವಿರೂಪಾಕ್ಷ ಸಲಹೆಮ್ಮನು (ಚಬಪು. ೩೮-೧). [ಹೊರ್$_4$ (< ಪೊರ್$_4$) + ಕಾಣ್]

**ಹೊರೆಗುಂದು** (ಕ್ರಿ). ಉತ್ಸಾಹವನ್ನು ಕಳೆದುಕೊಳ್ಳು; ನಿರುತ್ಸಾಹವನ್ನು ತಾಳು: ಭಾರಿಧನುವಿದೆ ಭಾಮಿನಿಯ ಮುಂದೆ ಎವಗೆ ತವಗಿದು ವಶವೆ ಬಾವನ್ನವನು ವೇಷ್ಟಿಸಿ ಭುಜಗವಿದೆಯೆಂದವನಿಪರು ಹೊರೆ [ಪಾಠಾಂ.ರೆ] ಗುಂದಿದರು ಭಯಮುಖದ ದುಗುಡದಲಿ (ಕುವ್ಯಾಆ. ೧೪-೨೫). [ಹೊರ್$_4$(< ಪೊರ್$_4$) + ಕುಂದು$_1$]

**ಹೊರೆಗೆಲಸ** (ನಾ). ರಾಶಿಕೆಲಸ; ಹೆಚ್ಚುಕೆಲಸ: ಹೊತ್ತಾರೆ ಹೊರೆಗೆಲಸ ಮಿಕ್ಕರ ಮಿಗಲಿ ಘಿಕ್ಕಾದ ನೆರೆಹೊರೆ ನಕ್ಕರ ನಗಲಿ (ಗೋಕುನಿ. ೪-೧೧). [ಹೊರ್$_6$ (< ಪೊಱೆ) + ಕೆಲಸ]

**ಹೊರೆಗೊಳಿಸು** (ಕ್ರಿ). ಬೆರಸು; ಸೇರಿಸು: ಕೆಂಡಧೂಪವ ಕೊಟ್ಟು ಹುರಿದ ನೆಲ್ಲಿಯಕಾಯನು ಬಳಿಕದಱೊಳಿಕ್ಕಿಯೊಗ್ಗರಿಸಿ ಪರಿಮಳವ ಹೊ [ಪಾಠಾಂ. ದಹೋ] ರಗೊಳಿಸಿ ಮಾಡುವುದು (ಸೂಪಶಾ. ೬-೧೯). [ಹೊರ್$_4$ (< ಪೊರ್$_4$) + ಕೊಳ್$_1$ + - ಇಸು$_3$]

**ಹೊರೆದೋಱು** 'ಪೊರೆದೋಱು' ನೋ.

**ಹೊರೆಬಿಡು** 'ಪೊರೆವಿಡು' ನೋ.

**ಹೊರೆಯ** (ನಾ). ಬಳಿ; ಸಮೀಪ; ಹತ್ತಿರ: ಬರಲು ಕಂಡಳು ಹರುಷ ಪುಳಕದಿ ವರಸುತೆಯನಾ ಪತಿಯ ಹೊರೆಯಕ್ಕಿರುಳು ಕಳುಹಲು ಕಂಡು ಪತಿಯಾ ಚರಣಕೆಱಗಿದಳು (ಸಂಭಪ. ೨೫-೪೬). [< ಹೊರ್$_4$ (< ಪೊರ್$_4$)]

**ಹೊರೆಯಾಲ** (ನಾ). ಒಂದು ಊರಿನ ಹೆಸರು: ಅಯ್ಯಪಯ್ಯXಣರ ಸತ್ತಹಾಲೆಯರ ಕಣವೊಂಗೆ ಕೊಟ್ಟ ಮಣ್ಣ ಖ ೧ ಹೊರೆಯಾಲದೇವವರಿಯರು (ಎಕ. III(R). ಗುಂಡ್ಲುಪೇ. ೫೯-೧೩; 975). [?]

**ಹೊರೆಯಾಳ್** 'ಪೊಱೆಯಾಳ್' ನೋ.

**ಹೊರೆಯಿಡು** 'ಪೊರೆಯಿಡು' ನೋ.

**ಹೊರೆಯೆತ್ತು** 'ಪೊರೆಯೆತ್ತು$_2$' ನೋ.

**ಹೊರೆಯೇರು** 'ಪೊರೆಯೇಱು' ನೋ.

**ಹೊರೆಯೇಱು** 'ಪೊರೆಯೇಱು' ನೋ.

**ಹೊರೆವೆಣ್ಣು** (ನಾ). ಪಕ್ಕದಲ್ಲಿರುವ ಹೆಣ್ಣು,– ಸ್ತ್ರೀ: ಉಱುಬಿ ಹೇಳುವ ಮಂತ್ರಿ ಸಖರನಂಜಿಸಿ ಹೊರEರೆ3ವೆಣ್ಣುಗಳ ಮೇಲೆ ಮುನಿದು (ಭರಚ. ೭೮-೯೩). [ಹೊರ್$_4$ (< ಪೊರ್$_4$) + ಪೆಣ್ಣು (< ಪೆಣ್)]

**ಹೊರೆಹ** (ನಾ). ಹೊರಸೂಸುವಿಕೆ; ಬೀರುವಿಕೆ: ಪ್ರಬೋಧನ, ಅನುಬೋಧ-ಕೆಟ್ಟ ಗಂಧವ ಹೊರೆಹ (ನಾಚರಾ. ೬). [ಹೊರ್$_2$ (< ಪೊರ್$_2$)+ - ಹ$_2$ (< - ಪ$_2$)]

**ಹೊರೆಹುಟ್ಟು** (ಕ್ರಿ). ಭೇದಭಾವವುಂಟಾಗು; ವ್ಯತ್ಯಾಸ ಉಂಟಾಗು: ಲಿಂಗವ ಜಂಗಮ ಜಂಗಮವ ಲಿಂಗವೆಂದು ನಂಬಿದಲ್ಲಿ ಹೊರೆಹುಟ್ಟಿದ ಬಳಿಕ ಹಾಲ ಹರವಿಯೊಳಗೆ ಹುಳಿ ಹೊಕ್ಕಂತೆ ನೋಡಯ್ಯಾ (ಚನ್ನವ.ಕ.೧೩೪-೩೦೩); ಆ ನೃಪಂ ಮಂತ್ರಿಗಂ ತಮ್ಮೊಳಗೆ ಹೊರೆಹುಟ್ಟಿದಂತೆ . . . ತರುಣಿ ನೀಲಾಂಬಿಕೆಯನೊಲಿದಿತ್ತು ಬಸವಗಂ ಹಿರಿದು ವಿಭವದಿ ಮದುವೆಯ ಮಾಡಿ (ಲಶಿಚಂ. ೩೧-೭೭). [ಹೊರ್$_5$ (< ಪೊರ್$_5$) + ಹುಟ್ಟು$_1$(< ಪುಟ್ಟು$_1$)]

**ಹೊರೆಹೆಚ್ಚು** (ಕ್ರಿ). ಉತ್ಸಾಹಗೊಳ್ಳು; ಹಿಗ್ಗು: ಹರಭಕ್ತರಂ ಕಂಡು ಹೊರೆಹೆಚ್ಚಿ ಭಕ್ತಿಯಿಂದಿರದೆದ್ದು ವಂದಿಸುತ ಮಧುರವಾಕ್ಯಂಗಳಿಂದಿರುಳು ಪಗಲೆನ್ನದತಿ ಸೇವೆಯಂ ಮಾಡುವವನಜ್ಞಾನಿ ತಾನಾದಡು ಪರದೊಳಗೆ ಮುಕ್ತನಹ (ಲಶಿಚಂ. ೪೩-೨೪); ನನೆದು ದಂತಃಕರಣ ರೋಮಾಂಚನದಲಾನಂದಾಶ್ರುಜಲದಲಿ ನನೆದು ಹೊಂಪುಳಿಯೋಗಿ ಕಣ್ಣವೆ ಮುಚ್ಚಿ ಹೊರೆಹೆಚ್ಚಿ ನೆನೆದನು (ಕುವ್ಯಾದ್ರೋ. ೧೮-೬೦); ದಶಕಂಧರನು ಹೊರೆಹೆಚ್ಚಿದನು ಮೊನೆಗಣೆಗಳಿಂದವೆ ಮುಚ್ಚಿದನು ಬೊಬ್ಬಿಱಿದು ಭೂಪಾಲನನು (ಉತ್ತರಾ. ೧೭-೩೫). [ಹೊರ್$_4$ (< ಪೊರ್$_4$) + ಹೆಚ್ಚು$_1$(< ಪೆರ್ಚು$_1$) ]

**ಹೊರೆಹೊಗು** (ಕ್ರಿ). ೧. ಮೋಸಕ್ಕೆ ಒಳಗಾಗು; ವಂಚಿತವಾಗು: ಎರಡು ಭಾಗವ ಮಾಡಿ ವಿಶ್ವಂಭರೆಯ ರಾಜ್ಯವನುಭಯರಾಯರು ಹೊರೆಹೊಗದೆ ಪಾಲಿಸಲಿ ಪಂಥದೊಳೆಂದನಂಧನೃಪ (ಕುವ್ಯಾಆ. ೧೮-೨). ೨. ಮರೆಮಾಚು: ಮೆಚ್ಚಿದುದ ನುಡಿ ಬೇಡತನವೇಕೆ ಹೊರೆಹೊಗದೆ ಹೇಳೆನಲು ನಗೆಮೊಗವರಳಿ ಹೊಂಪುಳಿಯೋಗಿ ಕೌರವರರಸ ನುಡಿದನು (ಕುವ್ಯಾದ್ರೋ. ೧-೩೯); ಹೊರೆಹೊ[ಪಾಠಾಂ.ಹು]ಗದೆ ಬಳಿಕರಸ ವಾನರರರಸಗೆಂದನು ರವಿಜನೆಂಬೀ ದೊರೆವೆಸರು ಬಂದಂದವಾವುದು (ತೊರರಾ. ೪-೨-೧೨). [ಹೊರ್$_5$(< ಪೊರ್$_5$) + ಹೊಗು (< ಪೊಗು) ]

**ಹೊರೆಹೊರು** (ಕ್ರಿ). ಭಾರವನ್ನು ಹೊರು,– ಸಾಗಿಸು: ನೆರವಿಮಾವ ಮಿತ್ರನ್ನೆ ಜೊತೆದುಡಿವ ಪುತ್ರನ್ನೆ, ಯಜಮಾನನಿಗೆ ನೀನು ಹೊರೆಹೊರುವ ಕತ್ತೆಯೊಲು ದಾಸನಲ್ಲ ! (ಪಾಂಚಜ. ೪೩-೩). [ಹೊರ್$_6$ (< ಪೊಱೆ)+ ಹೊರು (< ಪೊಱು)]

**ಹೊರ್ಕುಳಿ** 'ಪೊರ್ಕುಳಿ' ನೋ.

**ಹೊರ್ಜೆ** 'ಪೊರಜೆ' ನೋ.

**ಹೊರ್ಜೆಹಗ್ಗ** 'ಹೊರಜೆಹಗ್ಗ' ನೋ.

**ಹೊರ್ತು** 'ಹೊಱತು$_2$' ನೋ.

**ಹೊಲ** 'ಪೊಲ' ನೋ.

**ಹೊಲಗಾಹಿ** 'ಪೊಲಗಾಹಿ' ನೋ.

**ಹೊಲಗುಲ** (ನಾ). ಹೀನಕುಲ; ಚಂಡಾಲಜಾತಿ: ಎಲವೊ ತ್ರಿಶಂಕು ನೀ ಗುರುವಿನಾಜ್ಞೆಯ ಮೀಱಿ ಬಲುಪಿಂದ ಬಂದ ಕಾರಣದಿ ಹೊಲಗುಲವಾಗಿ ಎಱುತೆ ನೀನೆಂದು ಶಾಪವನಿತ್ತು ಇಳೆಗೆ ನೂಕಿದರು ಪೀಠದಿಂದ (ನನ್ನಕಾ. ೯-೯೭).

[< ಹೊಲೆ (< ಪೊಲೆ) + ಕುಲ]

**ಹೊಲಗೆಡು** 'ಪೊಲಗೆಡು' ನೋ.

**ಹೊಲಗೆಯ್ಮೆ** (ನಾ). ಹೊಲದ ಕೆಲಸ; ವ್ಯವಸಾಯ: ಎಳೆಮುದಿಯರೊಂದಾಗಿ ಕಲೆತು ಹೊಲಗೆಯ್ಮೆಯೊಳು ನಲಿದುಲಿವ ನಗೆಮಾತು ಕಿವಿಗೆಸೆವುದು (ಇಂಗೀತ. ೭-೧೪).

[ಹೊಲ (< ಪೊಲ) + ಗೆಯ್ಮೆ (< ಕೈಮೆ$_{1}$)]

**ಹೊಲಗೇರಿ** 'ಪೊಲೆಗೇರಿ' ನೋ.

**ಹೊಲತಿ** 'ಪೊಲತಿ' ನೋ.

**ಹೊಲಥರ** (ನಾ). (ದೇವಾಲಯದ) ಸುತ್ತುಗೋಡೆ; ಪ್ರಾಕಾರ: ಚಿಕ್ಕಬೇರುಂಡನ ಮಾಠದ ಸಮಸ್ತ ಕೂಸುಗಳು ಸೋಮನಾಥದೇವರ ದೇವಾಲ್ಯದ ಹೊಲಥರದ ಕಲಕೆಲಸಕೆ ಗದ್ಯಾಣ ಹತ ಕೊಟರು (ಮೈಆರಿ. ೧೯೪೨. ೪೭-೮; 1228).

[IP ಇದು 'ಹೊರತರ' ಎಂಬುದರ ಅಪಲಿಖಿತ]

**ಹೊಲದಕೊಗ್ಗೆಬೇರು** (ನಾ). ಔಷಧೀಯ ಗುಣವುಳ್ಳ ಒಂದು ಬಗೆಯ ಬೇರು: ಹೊಲದಕೊಗ್ಗೆಬೇರು, ಕೆಂಪುಸೀಗೆಬೇರು, ಮಂಜಿಷ್ಠೆ ಇವು ಪ್ರತ್ಯೇಕ ಸಮತೂಕ ಹಾಕಿ ಚೂರ್ಣಮಾಡಿ . . . ಕೊಡಬೇಕು (ಸಕವ್ಯ. ೪೦೫ ಪರಿ).

[< ಹೊಲ (< ಪೊಲ) + ಕೊಗ್ಗೆ (< ಕೊಗ್ಗಿ$_{1}$) + ಬೇರು (< ಬೇರ್$_{1}$)]

**ಹೊಲದಪುಂಡ್ರಿಕೆ** (ನಾ). ಒಂದು ಬಗೆಯ ಸಸ್ಯ; ಪುಂಡಿಸೊಪ್ಪು: ಹೊಲದಪುಂಡ್ರಿಕೆ, ಪುಂಡ್ರಿಕೆ, ಗೋಗು, ಪುಂಡಿ (ಮೈಔಗಿ. ೪೩-೮೫೦). [< ಹೊಲ (< ಪೊಲ) + ಪುಂಡ್ರಿಕೆ]

**ಹೊಲದಬಟಾಣಿ** (ನಾ). ಒಂದು ಬಗೆಯ ಬಟಾಣಿ: "ಬಟ್ಟಗಡಲೆ, ಕಡಲೆ, ಹೊಲದಬಟಾಣಿ" (ಸಸ್ಯನಿ. ೧೦೭); (ಮೈಔಗಿ. ೭೨-೧೨೩೦).

[< ಹೊಲ (< ಪೊಲ) + ಬಟಾಣಿ]

**ಹೊಲದಮೆಣಸಿನಗಿಡ** (ನಾ). ಒಂದು ಬಗೆಯ ಮೆಣಸಿನ ಗಿಡ: (ಮೈಔಗಿ. ೧೭-೩೧೨). [< ಹೊಲ (< ಪೊಲ) + ಮೆಣಸಿನಗಿಡ$_{1}$]

**ಹೊಲದವರೆ** (ನಾ). ಒಂದು ಬಗೆಯ ಅವರೆ: ಹೊಲದವರೆಯ ನೆಟ್ಟು ಸೊಡಗೆಯ ಸುಲಿದಲ್ಲಿ ತಳಲು ಬಲಿದು ಒಡೆದುದಿಲ್ಲ (ಮೋಳಿಮಾ. ೨೬೫-೮೧೭).

[< ಹೊಲ (< ಪೊಲ) + ಅವರೆ$_{1}$]

**ಹೊಲದೆಱೆ** (ನಾ). ಹೊಲದ ಮೇಲೆ ಹಾಕುವ ಒಂದು ಬಗೆಯ ತೆರಿಗೆ: ತಂಮ್ಮ ಸೆಳಬುಕುಲದ ಮನೆಯ ಸಂ[ತ]ವಣ ಆಯದಾಯ ಕಾಣಿಕೆ ಹೊಲದೆಱೆ ಕುಱಿದೆಱೆ ಸಮಸ್ತ ಕೊಳ್ಳಿ ಇನ್ನು ಹುಟ್ಟುವ ಸಂತವಣ ಇಂತಿನಿತು ಸಮಸ್ತಾಯವೆಲ್ಲಮ ಹುಗದಂತಾಗಿ ಹೊಲೆಗೆಱೆ ಮಾಡಿ . . . ಕೊಟ್ಟ ಶಿಲಾಸಾಸನ (ಸೌಇ. XX, ೯೧-೪೫; ?).

[ಹೊಲ (< ಪೊಲ) + ತೆಱೆ$_{1}$]

**ಹೊಲಬಳಿ** (ಕ್ರಿ). ದಾರಿ ತಪ್ಪು; ದಿಕ್ಕುಗೆಡು: ಉಬ್ಬಿದನು ಹರುಷದಲಿ ಕಂಗಳ ಗಬ್ಬ ಮುಱಿದುದು ಮದದ ನಿಗುರಿನ ಹಬ್ಬುಗೆಯ ಹೊಲಬಳಿಯೆ ನಾಲಗೆಯುಡುಗೆ . . . ಬೆಱಗಾದ (ಕುಪ್ಪಾಭಿ. ೩-೭೭); ಬೆಳಗಹನ್ನಗ ಕತ್ತಲೆಯ ಮಳೆಗಳ ಮಹಾವಾತಾಂಬುಪೂರದ ಹಳುವದಲಿ ಹೊಲಬಳಿದು ಕೈವಿಡಿದೊಬ್ಬರೊಬ್ಬರನು ತಿಳಿಯಬಾರದ ಮರದ ಕಳೆವರದಳತೆಯಲಿ ಮತಿನಿಂದುದಜ್ಞರ ಕಳವಳಿಕೆಯಂತೇಕದೇಶನಿಜಾತ್ಮಭಾವದಲಿ (ನಿಭಾಗ. ೧೦-೯೭-೧೫); ಸಲೆ ಮಿಡುಗುವ ಬಾಯ್ಮಡುಗುವ ತೊಡೆ ಬಿಡದೊಲವದಟಳಿಯದ ಸಾಸವಳಬುವೆರ್ದೆ ಹೊಲಬಳಿದಿರವೆಸೆಯಲ್ ಸುಸಿಲಿಂ ನಱುಜೋಡೆಯರಗಲಿದರು (ಉದ್ಭದೇ. ೪-೧೮); ಶಾಂತಿರಾಜ್ಯದ ಬಹಿಷ್ಕೃತ ನಾಗರಿಕನಂತೆ ಚಿಂತೆಗಳ ಹಳುವದಲಿ ಹೊಲಬಳಿದನು (ಭಾರಂಗ. ೭೦-೧೨). [ಹೊಲಬು (< ಪೊಲಂಬು) + ಅಳಿ$_{1}$ (< ಅಟಿ$_{1}$)]

**ಹೊಲಬಿಗ** 'ಪೊಲಂಬಿಗ' ನೋ.

**ಹೊಲಬು** 'ಪೊಲಂಬು' ನೋ.

**ಹೊಲಬುಕೆಡು** 'ಪೊಲಂಬುಗೆಡು' ನೋ.

**ಹೊಲಬುಗಾಱ** (ನಾ). ದಾರಿಯನ್ನು ತಿಳಿದವನು; ಮಾರ್ಗವನ್ನು ಅರಿತವನು: ಹೊಲಬುಗಾಱರ ಹೆಜ್ಜೆದೆಗಹಿನ ಚಲಿತ ಚಪಳದ ಚಾಳಿಯವೊಲಗ್ಗಳ ಬಲಾಸ್ಥಿತ ರೈದಿದರು ಬಳಿಕವರ ಬಳಿವಿಡಿದು (ತೊರರಾ. ೩-೧೨-೨).

[ಹೊಲಬು (< ಪೊಲಂಬು) + - ಗಾಱ (<- ಕಾಱ)]

**ಹೊಲಬುಗಿಡು** 'ಪೊಲಂಬುಗೆಡು' ನೋ.

**ಹೊಲಬುಗೆಡಿಸು** 'ಪೊಲಂಬುಗಿಡಿಸು' ನೋ.

**ಹೊಲಬುಗೆಡು** 'ಪೊಲಂಬುಗೆಡು' ನೋ.

**ಹೊಲಬುಗೇಡಿ** (ನಾ). ಮಾರ್ಗ ತಪ್ಪಿದವನು; ದಾರಿ ತಪ್ಪಿದವನು: ಹಲಬರು ಛಲವಿಡಿದುವಿಡಿದು ಹೊಲಬುಗೇಡಿಯಾದರು ನೋಡಾ (ಸಿದ್ಧವ. ಕ. ೧೭೨-೫೭೨).

[ಹೊಲಬು (< ಪೊಲಂಬು) + ಕೇಡಿ$_{1}$]

**ಹೊಲಬುಗೊಳ್** (ಕ್ರಿ). ಮಾರ್ಗವನ್ನು ಹಿಡಿ; ದಾರಿಯನ್ನು ಅನುಸರಿಸು: ಹೊಲಬುಗೊಂಡಱಸ ಬೇಡ ಬಲಿತು ತರಬೇಡ ಒಲಿದೊಮ್ಮೆ ಶಿವಶರಣೆನ್ನಿರಯ್ಯಾ ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ (ಬಸವ. ೧೮೦). [ಹೊಲಬು (< ಪೊಲಂಬು) + ಕೊಳ್$_{1}$]

**ಹೊಲಬುತಪ್ಪು** 'ಪೊಲಂಬುದಪ್ಪು' ನೋ.

**ಹೊಲಬುದಪ್ಪು** 'ಪೊಲಂಬುದಪ್ಪು' ನೋ.

**ಹೊಲಮದ್ದು** (ನಾ). ಗಿಡಮೂಲಿಕೆಗಳಿಂದ ತಯಾರಿಸಿದ ಮದ್ದು; ಹಸಿರೌಷಧಿ: ಅಜ್ಜಿ ತನಗರಿತ ಹೊಲಮದ್ದುಗಳನ್ನು ರೋಗಪೀಡಿತರಾದ ಹಲವಾರು ಹಳ್ಳಿಗರಿಗೂ ಕೊಡುತ್ತಿದ್ದಳು (ಕುರುಕಾ. ೩೦). [ಹೊಲ (< ಪೊಲ) +ಮದ್ದು (< ಮರ್ದು)]

**ಹೊಲಮೇರೆ** 'ಪೊಲಮೇರೆ' ನೋ.

**ಹೊಲವರೆ** 'ಪೊಲಮೇರೆ' ನೋ.

**ಹೊಲವೇರಿ** 'ಪೊಲಮೇರೆ' ನೋ.

**ಹೊಲವೇರೆ** 'ಪೊಲಮೇರೆ' ನೋ.

**ಹೊಲಸು$_{1}$** 'ಪೊಲಸು$_{1}$' ನೋ.

**ಹೊಲಸು$_{2}$** 'ಪೊಲಸು$_{2}$' ನೋ.

**ಹೊಲಸುಜೀವನ** (ನಾ). ಕೊಳಕು ಜೀವನ; ಮಲಿನವಾದ ಜೀವನ: ರಾಯರು ತಮ್ಮ ಹಿಂದಿನವರ ಹೊಲಸುಜೀವನಕ್ಕೆ ಹೇಗೆ, ಉತ್ತಮಜೀವನವನ್ನು ಆಚರಣೆಯಲ್ಲಿ, ನಡೆಯಲ್ಲಿ, ನುಡಿಯಲ್ಲಿ ಮತ್ತೆಲ್ಲದರಲ್ಲೂ ತಂದಿದ್ದರು (ಮರಳಿ.೫).

[ಹೊಲಸು$_{1}$ (< ಪೊಲಸು$_{1}$) + ಜೀವನ]

**ಹೊಲಸುದೋಱು** (ಕ್ರಿ). ಕೊಳಕಾಗಿ ತೋರು; ಮಲಿನವಾಗಿರು: ಹೊಲಸು[ಪಾಠಾಂ. ಬು] ದೋಱಿದೆ ಮಗನೆ ಜಲವೆಮಗಲಸಿದೆಯಲಾ ಸೇವೆಯಲಿ . . . ಎನುತೂಕ್ಕರಾ ಜಲವ (ತೊರರಾ. ೨-೫-೨೩). [ಹೊಲಸು$_{1}$ (< ಪೊಲಸು$_{1}$) + ತೋಱು]

**ಹೊಲಸುನಾತ** (ನಾ). ಕೆಟ್ಟವಾಸನೆ; ದುರ್ಗಂಧ: ಮಲ್ಲಿನಾಥನನದರಿ ನೋಡಿ ನಮಿಸಿ ಉರದ ಮಾನಂ ಹೊಲಸುನಾತಮಂ ನೀಗಿ ಹೊಸಪರಿಮಳದ ಕರುವಾಗಿ ನಡೆತಂದು (ಸಿದ್ಧರಾ. ೪-೪೮); ಎಲ್ಲ ಜಾತಿಯ ಅಡಿಕೆಗಳಲ್ಲಿ . . . ಹುಳಕ ಮತ್ತು ತಿನ್ನುವಾಗ್ಗೆ ಹೊಲಸುನಾತ ಬರೋಣ ಇಂಥಾ ಪ್ರಕಾರಗಳಿರಲಿಕ್ಕೆ ಬಾರದು (ಮುಂಬವ್ಯಾ. ೫೦).

[ಹೊಲಸು$_{1}$ (< ಪೊಲಸು$_{1}$) + ನಾತ]

**ಹೊಲಸುನಾರು** 'ಪೊಲಸುನಾಱು' ನೋ.

**ಹೊಲಸುನಾಱು** 'ಪೊಲಸುನಾಱು' ನೋ.

**ಹೊಲಸುಮಾತು** (ನಾ). ಅಸಭ್ಯವಾದ ನುಡಿ; ಕೀಳುನುಡಿ: ಹೊಲಸುಮಾತುಗಳನ್ನು ಕೇಳಲು ಅಸಹ್ಯವಾಗುತ್ತದೆ (ರೂಢಿ). [ಹೊಲಸು$_{1}$ (< ಪೊಲಸು$_{1}$) + ಮಾತು$_{1}$]

**ಹೊಲಸೂಳೆ** (ನಾ). ಕೀಳಾದ ಸೂಳೆ: ಬೀದಿನಾಯಿ ರಾಧಿಯು ಮೊನ್ನೆ ಹೇಗೂ ಸತ್ತಳು. ದುರುಳನೊಬ್ಬ ಏಕೊ ನಕ್ಕ, ಹೊಲಸೂಳೆಯು ಅತ್ತಳು (ಸೂರ್ಯಪಾ. ೭೫-೧೨).

[< ಹೊಲೆ (< ಪೊಲೆ) + ಸೂಳೆ$_{1}$]

**ಹೊಲಸೇಳ್** 'ಪೊಲಸೇಳು' ನೋ.

**ಹೊಲಸೇಳು** 'ಪೊಲಸೇಳು' ನೋ.

**ಹೊಲಿ$_{1}$** 'ಪೊಲ್' ನೋ.

**ಹೊಲಿ$_{2}$** 'ಪೊಲಿ$_{2}$' ನೋ.

**ಹೊಲಿಗೆ** 'ಪೊಲ್ಗೆ' ನೋ.

**ಹೊಲಿಗೆಯಂತ್ರ** (ನಾ). (ಬಟ್ಟೆ ಮೊದಲಾದುವುಗಳನ್ನು) ಹೊಲಿಯುವ ಯಂತ್ರ: ಅವಳು ಕಂತಿನ ಮೇಲೆ ಹೊಲಿಗೆಯಂತ್ರ ತೆಗೆದುಕೊಂಡಿದ್ದಾಳೆ (ರೂಢಿ).
[ಹೊಲಿಗೆ (< ಪೊಲ್ಗೆ) + ಯಂತ್ರ]

**ಹೊಲಿಗೆರಾಟೆ** (ನಾ). = ಹೊಲಿಗೆಯಂತ್ರ: ನನ್ನನ್ನು ಸಿಂಪಿಗನ ಕಡೆಗೆ ಒಯ್ದರು . . . ನನ್ನನ್ನು ಹೊಲಿಗೆರಾಟೆಯ ಬಾಯಿಗೆ ಕೊಟ್ಟನು. ಸೂಜಿಯಿಂದ ಚುಚ್ಚಿ ಚುಚ್ಚಿ ಹೊಲಿದು, ನನ್ನನ್ನು ಈ ರೂಪಕ್ಕೆ ತಂದನು (ಕಪಪು. ೪-೬೮).
[ಹೊಲಿಗೆ (< ಪೊಲ್ಗೆ) + ರಾಟೆ (< ಱಾಟ್ಟ)]

**ಹೊಲಿಸು** 'ಪೊಲಿಸು' ನೋ.

**ಹೊಲೆ** 'ಪೊಲೆ' ನೋ.

**ಹೊಲೆಗಂಪು** (ನಾ). ಹೊಲಸುನಾತ; ದುರ್ವಾಸನೆ: ದೇಹವನು . . . ಇಂಪಾಗಿದೆಯೆಂದು ಹಿಗ್ಗುದಿರಲವೊ ಹೊಲೆಗಂಪು ನಾರುವುದು ತೊಳೆಯದೆ ಇರಲು (ವಿದಾಕ್ಯ. ೪೮-೧). [ಹೊಲೆ (< ಪೊಲೆ) + ಕಂಪು]

**ಹೊಲೆಗಲಸು** 'ಪೊಲೆಗಲಸು' ನೋ.

**ಹೊಲೆಗಾಣ್** (ಕ್ರಿ). ರಜಸ್ವಲೆಯಾಗು; ಮುಟ್ಟಾಗು: ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ (ಬಸವ. ೫೯೧); ಗುರು ಕರುಣಿಸಿ ಪ್ರತ್ಯಕ್ಷಲಿಂಗವ ಪರುಷವ ಮಾಡಿ ತೋಱಿದ ಬಳಿಕ ಹೊಲೆಗಂಡೆನೆಂದು ತೊಲಗಲಾಗದು (ಸರ್ವವ. ೨೧೧-೯೪೮).
[ಹೊಲೆ (< ಪೊಲೆ) + ಕಾಣ್]

**ಹೊಲೆಗೆಡಿಸು** 'ಪೊಲೆಗೆಡಿಸು' ನೋ.

**ಹೊಲೆಗೆಡು** 'ಪೊಲೆಗೆಡು' ನೋ.

**ಹೊಲೆಗೆಲಸ** (ನಾ). ಕೆಟ್ಟಕೆಲಸ; ನೀಚಕಾರ್ಯ: ಜಲದೊಳಗೆ ಮುಳುಗಿದರೆ ತೊಲಗದು ಹೊಲೆಗೆ[ಪಾಠಾಂ. ಕೆ]ಲಸವೀ ದೇಹದೊಳು ನೀ ನೆಲಸಿರಲು ಹೊಲೆಯುಂಟೆ (ಹರಿಸಾ. ೯೯). [ಹೊಲೆ (< ಪೊಲೆ) + ಕೆಲಸ ]

**ಹೊಲೆಗೆಸರು** (ನಾ). ಹೊಲಸಾದ ರಾಡಿ,– ಕೊಚ್ಚೆ: ಶ್ರೀಗಂಧದನುಲೇಪನಕ್ಕೆಣೆ ರಘೂದ್ವಹಂ; ಹೊಲೆಗೆಸರಿಗೆಣೆ ನೀನ್! (ಶ್ರೀರಾಮಾ. ೨೪೬-೪).
[ಹೊಲೆ (< ಪೊಲೆ) + ಕೆಸರು (< ಕೆಸಱ್)]

**ಹೊಲೆಗೆಱೆ** (ನಾ). ಒಂದು ಬಗೆಯ ತೆರಿಗೆ: ದೊಣ್ಣವಟ್ಟಯೂರೊಡೆಯ ಪಾಲಿಮಯ್ಯ ದೊಣ್ಣವಟ್ಟಯಲು . . . ಧಾರಾಪೂರ್ವಕಂಗೆಯ್ದು ಚಂದ್ರಾರ್ಕ ತಾರಬರಂ ಸಿನ್ದರ ಹೊಲೆಗೆಱೆಯೆನ್ನು ಬಿಟ್ಟು ಕೊಟ್ಟರ್ (ಸೌಇಇ. IX-i, ೧೦೦-೨೦; 1045); ಸಮಸ್ತಾಯವೆಲ್ಲಮು ಹುಗದಂತಾಗಿ ಹೊಲೆಗೆಱೆ ಮಾಡಿ ಸರ್ವನಮಸ್ಯವಾಗಿ ಧಾರಪೂರ್ವಕವಾಗಿ ಬಿಟ್ಟ ಶ್ರಮತು ಗೋವಣದೇವ ಕೊಟ್ಟ ಶಿಳಾಸಾಸನ (ಸೌಇಇ. XX, ೯೧-೪೭; ?). 'ಹೊಲೆಗೊಱೆ', 'ಪೊಲೆತೆಱೆ' ಪರಾ. [?]

**ಹೊಲೆಗೇರಿ** 'ಪೊಲೆಗೇರಿ' ನೋ.

**ಹೊಲೆಗೊಱೆ** (ನಾ). ಒಂದು ಬಗೆಯ ತೆರಿಗೆ: ತಿಪ್ಪಸುಂಕ ಮನೆದೆಱೆ ಪಾರಿಖಾಯ ಹೊಲೆಗೊಱೆ ಮಱವ ಈಂತಿನಿತುವಂ ಸರ್ವನಮಶ್ಯವಾಗಿ . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಸೌಇಇ. XX. ೧೫೮-೪೩; 1176). 'ಹೊಲೆಗೆಱೆ', 'ಪೊಲೆತೆಱೆ' ಪರಾ. [?]

**ಹೊಲೆಜೋಗಿ** (ನಾ). ಕೀಳಾದ ಜೋಗಿ,– ಬೈರಾಗಿ: ಶಿವನೇ ನಿಮ್ಮನಱಿಯದ ಮನುಜನ ಒಡಲೆಂಬುದು ಹೊಲೆಜೋಗಿಯ ಕೆಯ್ಯ ಒಡೆದ ಸೋರೆಯಂತೆ ಕಾಣಾ (ಮಡಿಮಾ. ೧೩-೧೭). [ಹೊಲೆ (< ಪೊಲೆ) + ಜೋಗಿ$_1$]

**ಹೊಲೆತಡೆ** (ಕ್ರಿ). ಮುಟ್ಟಾಗದಿರು; ಗರ್ಭಿಣಿಯಾಗು: ನಿನ್ನೀ ತಂಗಿ ದೇವಕಿ ಹೊಲೆ ತಡೆದೆಂತಪ್ಪ ಮಗನ ಹಡೆವಳೆನಲು (ನೇಮಿಸಂ. ೧೪-೧೫); ಓಡಾಡಿ ಸೌರಣಿಯನ್ನು ಮಾಡುವ ಗಂಡನನ್ನು ಅದೇ ತಿಂಗಳ ಹೊಲೆತಡೆದ ಹೆಂಡತಿಯು . . . ಎಂದು ಗಾಬರಿಯಾಗಿ (ಕಸ್ತಚಾ. ೬೦). [ಹೊಲೆ (< ಪೊಲೆ) + ತಡೆ$_1$]

**ಹೊಲೆತನ** (ನಾ). ನೀಚತನ; ಕೀಳುತನ: ಹುಟ್ಟು ಬ್ರಾಹ್ಮಣಜಾತಿಯಾದರೂ ನಡತೆ ಹೊಲೆತನವನ್ನು ಮೀರಿಸಿತ್ತು (ಮರಳಿ. ೪). [ಹೊಲೆ (< ಪೊಲೆ) + - ತನ]

**ಹೊಲೆದೆಱೆ** 'ಪೊಲೆತೆಱೆ' ನೋ.

**ಹೊಲೆಪಾಟು** 'ಹೊಲೆಪಾಡು' ನೋ.

**ಹೊಲೆಪಾಡು, ಹೊಲೆಪಾಟು** (ನಾ). ಕೆಟ್ಟಪರಿಸ್ಥಿತಿ; ಕಠಿಣಸ್ಥಿತಿ: ಸರ್ವ ಕಾಯ್ದು ಧನಮುಂ ಲಬ್ಧಾರ್ಜಿತೈಶ್ವರ್ಯಮುಂ ಹೊಲೆಪಾಡಿಂದಲೆ ಕೂಡಲಿಕ್ಕಿ ಪೆಱರ್ಗಂ ತಾನಾಗದೇ ಪೋಗುವೊಲ್ ಗಟಿಸೇನುಣ್ಣದೆ ಪೋಪುದೈ (ಸೋಮೇಶ. ೯೦). ಹೊಲೆಪಾಟು: ಇಲ್ಲಿ ಸಾಕಷ್ಟು ಸ್ಥಳವಿದ್ದರೆ . . . ಅಡುಗೆಮನೆಯೊಳಗಿನ ಹೊಲೆಪಾಟನ್ನು ಬಹಳವಾಗಿ ಕಡಿಮೆ ಮಾಡಬಹುದು (ಆಡುಸಾ. ೧೪). [ಹೊಲೆ (< ಪೊಲೆ) + ಪಾಡು$_1$]

**ಹೊಲೆಬೊಟ್ಟು** (ನಾ). ಅವಲಕ್ಷಣವಾದ ಲಾಂಛನ,– ಗುರುತು: ನೋಡವರ ಹಣೆಯ ಹೊಲೆಬೊಟ್ಟನೆಂತೀಕ್ಷಿಪೆಂ ನೋಡವಂದಿರು ಮಾಳ್ಪ ತಪ್ಪನೇನೆಂದಪೆಂ (ಇಜೇರ. ದೇ. ೧೦೯-೯). [ಹೊಲೆ (< ಪೊಲೆ) + ಬೊಟ್ಟು$_2$ (< ಬಟ್ಟು)]

**ಹೊಲೆಮಗ್ಗ** (ನಾ). ಮಗ್ಗದ ಮೇಲೆ ಹಾಕುವ ಒಂದು ಬಗೆಯ ತೆರಿಗೆ: ತೊರೆಮಗ್ಗ ಹೊಲೆಮಗ್ಗಯನಿತುಮಂ ಧಾರಾಪೂರ್ವಕ ಮಾಡಿ ಕೊಟ್ಟ ದತ್ತಿ (ಎಕ. VI. (S), ಕೃಷ್ಣರಾ. ೧೦೭-೯; 1165). [ಹೊಲೆ$_1$ + ಮಗ್ಗ]

**ಹೊಲೆಮನ** (ನಾ). ಕೆಟ್ಟ ಮನಸ್ಸು; ಅಶುದ್ಧವಾದ ಮನಸ್ಸು: ಹೊಲೆಮನ ಬಿಡದವರಿಗೆ ಗುರುಲಿಂಗವಿಲ್ಲೆಂದ ಬಸವಪ್ರಿಯಕೂಡಲಚೆನ್ನಸಂಗಮದೇವ (ಸರ್ವವ. ೨೧೧-೯೪೮); ಭ್ರಮೆಯೊಳೊಂದಿದ ಹೊಲೆಮನಕೆ ಹೋಲಿಕೆಯ ಪೇಳುವೆ (ಅಮೃತ. ೨-೮೨).
[ಹೊಲೆ (< ಪೊಲೆ) + ಮನ]

**ಹೊಲೆಮನೆ** 'ಪೊಲೆಮನೆ' ನೋ.

**ಹೊಲೆಮಾತು** 'ಪೊಲೆವಾತು' ನೋ.

**ಹೊಲೆಯ** 'ಪೊಲೆಯ' ನೋ.

**ಹೊಲೆಯಕುದುರೆ** (ನಾ). ಒಂದು ಜಾತಿಯ ಕುದುರೆ (?): ಹೊಲೆಯ ಕುದುರೆ ಶೆಡಿಲೆಯ ಕುದುರೆ ನಾಡ ಕುದುರೆಗೆ ಪ್ರತಿಗದ್ಯಾಣ ಒಂದಕ್ಕಂ ಬೇಳೆ ಆನೆಗೆ ಪ್ರತಿಗದ್ಯಾಣ ಒಂದಕ್ಕಂ ಹಾಗ (ಎಕ. V. ಬೇಲೂರು. ೭೫-೧೧೧;1382). [ಹೊಲೆಯ? + ಕುದುರೆ]

**ಹೊಲೆಯಮ** 'ಪೊಲೆಯಮ್ಮ' ನೋ.

**ಹೊಲೆಯರಸು** (ನಾ). ಚಾಂಡಾಲರ ಅಧಿಪತಿ, – ಒಡೆಯ: ಓಹೋಹೊ ದೂರ ದೂರಿರು ಬಾಹದ ನೀನಿಲ್ಲಿಗಿಂದು ಯೆಲೆ ಹೊಲೆಯರಸೆ . . . ವೀರಬಾಹು ದೂರದಿ ನಿಲ್ಲೆ (ಹಮಚ. ೧೧೭). [ಹೊಲೆಯ (< ಪೊಲೆಯ) + ಅರಸು$_2$ (< ಅರಸ$_1$)]

**ಹೊಲೆಯಾಳು** (ನಾ). ಕೀಳುವರ್ಗದ ಸೇವಕ: ಆ ಬಾಳಿಂಗೆ ಉಳ್ಳ ಹೊಲೆಯಾಳು ಹೆಂಣಾಳು ಗಂಡಾಳು ಕುಱುಟಗ[ಳು] ಸಹ. . . ಆ ಬಾಳ ಸ್ಥಾನಕ್ಕೆ ಉಳ್ಳಂಥಾ ಮೂ[ೂ]ನ್ನ ದೀಪಮಾಲೆಯ ಕಂಭ ಹೊಲೆಯರ XX ಬಳ (ಸೌಇಇ. IX-ii, ೪೧೭-೧೦; 1377); ಹೊಲೆಯಾಳಿಗೆ ಒಂದು ಮನೆಯಾಳು ಸೆರೆಯಾಯಿತು (ಗಾದ).
[ಹೊಲೆ (< ಪೊಲೆ) + ಆಳು$_3$ (< ಆಳ್$_3$)]

**ಹೊಲೆಯಿಸು** (ಕ್ರಿ). ಕೊಳಕುಮಾಡು; ಮಲಿನಗೊಳಿಸು: ನಿಮ್ಮ ಪಟ್ಟೆಯ ಬಟ್ಟೆಯನ್ನವನ ನೆತ್ತರಲಿ ನನಸಿ ಹೊಲೆಯಿಸದಿರೈ! (ಹಬ್ಬರ. ೪೦-೧೨೭).
[ಹೊಲೆ (< ಪೊಲೆ) + - ಇಸು$_3$]

**ಹೊಲೆಯೊಡಲು** (ನಾ). ಮಲಿನವಾದ ಶರೀರ; ಅಶುದ್ಧವಾದ ದೇಹ: ಹೊಲೆಯೊಡಲೊಳ್ ಮಲರಹಿತ ಸಕಲಗುಣಗಣನಿಲಯಂ ಶುದ್ಧಾತ್ಮನಿಪ್ಪುದೆಂಬುದೆ ಯುಕ್ತಂ (ಉಸಾರ. ೨೪೫). [ಹೊಲೆ (< ಪೊಲೆ) + ಒಡಲು (< ಒಡಲ್)]

**ಹೊಲೆವನೆ** 'ಪೊಲೆಮನೆ' ನೋ.

**ಹೊಲೆವೆಣ್** 'ಪೊಲೆವೆಣ್' ನೋ.

**ಹೊಲೆಸುಂಕ** (ನಾ). ಒಂದು ಬಗೆಯ ತೆರಿಗೆ: ಒಳವಾಱು ಹೊರವಾಱು ಹೊಲೆಸುಂಕ ಮಗ್ಗತೆಂ ಚನ್ದ್ರತಾರಾರ್ಕ್ಕಂಬರಂ ಸಲುವಂತಾಗಿ ಧಾರಾಪೂರ್ವಕಂ XXX ಸುಂಕಗಳಂ ಸಲಿಸುವರು (ಎಕ. VI, (R), ಪಾಂಡವ. ೮೧-೩; 1223). 'ಹೊಲೆದೆಱೆ', 'ಹೊಲೆಮಗ್ಗ' ಪರಾ. [ಹೊಲೆ$_1$ + ಸುಂಕ$_1$]

**ಹೊಲೆಹಲಸು** (ನಾ). ಒಂದು ಬಗೆಯ ಹಲಸು: ಉಬಲು, ಹಸ್ಸರೆ, ಹೊಲೆಹಲಸು, ಅನವು (ಮೈಡಿಗಿ. ೫೭-೧೧೨೩). [ಹೊಲೆ$_1$ + ಹಲಸು (< ಪಲಸು)]

**ಹೊಲೆಹುಟ್ಟು** (ಕ್ರಿ). ರಜಸ್ಸು ಕಾಣಿಸಿಕೊಳ್ಳು; ಮುಟ್ಟಾಗು: ಹೊಲೆಹುಟ್ಟಿದ ಮೂಱುದಿನಕ್ಕೆ ಪಿಂಡಕ್ಕೆ ನೆಲೆಯಾಯಿತ್ತು (ಚನ್ನವ. ಕ. ೧೮೧-೩೬೭). [ಹೊಲೆ (< ಪೊಲೆ) + ಹುಟ್ಟು$_1$(< ಪುಟ್ಟು$_1$)]

**ಹೊಲೆಹೊರೆ** (ಕ್ರಿ). ಮಲಿನತೆಯುಂಟಾಗು; ಅಶುದ್ಧಿಯನ್ನು ಹೊಂದು: ಸೂರ್ಯನ ಕಿರಣ ಹೊಲೆಯನ ಚರಿಸಿದರ ಹೊಲೆಹೊರೆ[ಪಾಠಾಂ. ರು]ವುದೇ (ಕುವ್ಯಾಭೀ. ೩-೪೮). [ಹೊಲೆ (< ಪೊಲೆ) + ಹೊರ್$_2$ (< ಪೊರ್$_2$)]

**ಹೊಲ್ಲ** 'ಪೊಲ್ಲ' ನೋ.

**ಹೊಲ್ಲತೆ** (ನಾ). ಕೆಟ್ಟತನ; ಕ್ಷುಲ್ಲಕಸ್ವಭಾವ: ಶಿಕ್ಷೆ ಕೊಟ್ಟದ್ದು ಹೀರೋಯಿಗಳ್ಳ. ಅವಳಲ್ಲಿ ಕಂಡಂತೆ ತೋರಿದ ಹೂಲ್ಲತೆಗೆ ಎಂದು ಸಮಾಧಾನ ಹೇಳುವುದು ಕಷ್ಟ (ಷೇಕ್ಸ್‌ಪಿ. ೨೯೨). [ಹೊಲ್ಲ (< ಪೊಲ್ಲ) + - ತೆ$_3$]

**ಹೊಲ್ಲದು** 'ಪೊಲ್ಲದು' ನೋ.

**ಹೊಲ್ಲದೈವ** (ನಾ). ಕೆಟ್ಟದೇವತೆ; ಕ್ಷುದ್ರದೇವತೆ: ಪ್ರಹ್ಲಾದದೇವನು ಜನಕಗೆಂದನು ಹೊಲ್ಲದೈವವನಿನಿತು ನೀ ನೋಡುವೆನದೆಂದರೆ ಕರವ ನಾನೀಗ (ಸಂಭಪ. ೮-೬೫). [ಹೊಲ್ಲ (< ಪೊಲ್ಲ) + ದೈವ]

**ಹೊಲ್ಲನಡೆ** (ನಾ). ಕೆಟ್ಟನಡತೆ; ಹೀನವಾದ ನಡವಳಿಕೆ: ಅವಳ ಪಾಪಗಳೇನೊ, ಹೊಲ್ಲನಡೆಯೇನೊ, ಅದರೆಣಿಕೆಗಿದೆ ಹೊತ್ತು? (ಇಂಗೀತ. ೬೧-೨೩). [ಹೊಲ್ಲ (< ಪೊಲ್ಲ) + ನಡೆ$_2$]

**ಹೊಲ್ಲನುಡಿ** 'ಪೊಲ್ಲನುಡಿ' ನೋ.

**ಹೊಲ್ಲಮನುಜ** (ನಾ). ಕೀಳಾದ ಮನುಷ್ಯ; ಕ್ಷುಲ್ಲಕ ವ್ಯಕ್ತಿ: ಕಲ್ಲಿನಲ್ಲಿ ವಲ್ಲಭನ ಕಂಡೆವೆಂದು ಬಡಿದಾಡುತ್ತಾರೆ ನೋಡಾ ಅಲ್ಲಯ್ಯಾ ಈ ಹೊಲ್ಲಮನುಜರು (ಸಿದ್ಧವ. ಕ. ೨೦೩-೬೮೦). [ಹೊಲ್ಲ (< ಪೊಲ್ಲ) + ಮನುಜ]

**ಹೊಲ್ಲಮೆ** 'ಪೊಲ್ಲಮೆ' ನೋ.

**ಹೊಲ್ಲಯಿಸು, ಹೊಲ್ಲೈಸು** (ಕ್ರಿ). ಕೆಟ್ಟುದನ್ನು ಮಾಡು: ಐಕಾರಕ್ಕೆ . . . ಹೊಲ್ಲಯಿಸಿದಂ, ಹೊಲ್ಲೈಸಿದಂ (ಶಮದ. ೧೫೭ ಪ್ರಯೋ). **ಹೊಲ್ಲೈಸು:** ಮೇಲಿನ 'ಶಮದ' ಪ್ರಯೋಗವನ್ನು ನೋಡಿ. [ಹೊಲ್ಲ (< ಪೊಲ್ಲ) + - ಇಸು$_1$]

**ಹೊಲ್ಲವೆ** (ನಾ). ೧. ಕೆಟ್ಟುದು; ಹೀನವಾದುದು: (ಸ). ೨. ಅಪಕಾರ; ಕೆಡುಕು: "ಅಪಕಾರಃ, ದ್ರೋಹಃ - ಈ ೨ ಹೊಲ್ಲವೆ" (ಹಲಾಯು. ೧೨೭-೮೬). 'ಹೊಲ್ಲಮೆ' ಪರಾ. [ಹೊಲ್ಲ (< ಪೊಲ್ಲ) + - ವೆ]

**ಹೊಲ್ಲಹ** (ನಾ). ೧. ಕೆಟ್ಟುದು; ಕೆಡುಕು: (ಸ). ೨. ದೂರು; ನಿಂದೆ: "ಮಿಥ್ಯಾಭಿಶಂಸನ, ಅಭಿಶಾಪ - ಇಲ್ಲದ ಹೊಲ್ಲಹಂ ಮೇಲಿಕ್ಕಿ ನುಡಿಹ" (ನಾಚಿರಾ. ಸ). ೩. ಕಾಠಿಣ್ಯ; ಕಠಿಣತೆ: 'ಹೊಲ್ಲಹಂದೋಱು' ಪರಾ. ೪. ಕೆಟ್ಟವನು; ದುಷ್ಟ: ಆರಾರ ಮನದಲ್ಲಿ ಏನೇನಿಹುದೆಂದಱಿಯೆ ಒಳ್ಳಿಹರೆಂದೆನಲಮ್ಮೆ ಹೊಲ್ಲಹರೆಂದೆನಲಮ್ಮೆ (ಬಸವ. ೪೦೨); ನಿಮ್ಮ ಪಟ್ಟಣದಲ್ಲಿ ಹೊಲ್ಲಹನಸಗನೊಬ್ಬನು ಬಲ್ಲ ಭಕ್ತನೆನುತ್ತ ಗರ್ವಿಸಿ ತೊಲಗನಾರಿಗೆಯು (ಬಸಪು. ೨೧-೧೪); ಹೊಲ್ಲಹನು ಒಳ್ಳಿದನು ಎಲ್ಲ ಶಾವಿನೊಳುಂಟು ಹೊಲ್ಲಹನ ಹೊಲ್ಲನೆನಬೇಡ (ಸರ್ವಜ್ಞ. ೧೪೪೦). 'ಹೊಲ್ಲೆಹ' ಪರಾ. [ಹೊಲ್ಲ (< ಪೊಲ್ಲ) + - ಹ$_2$(< - ಪ$_2$)]

**ಹೊಲ್ಲಹಂದೋಱು** (ಕ್ರಿ). ಕಾಠಿಣ್ಯವನ್ನು ತೋರು: ಎಂದುವುಂ ಹೊಲ್ಲಹಂ ದೋಱಿನಾತನ ಕಣ್ಗೆ ಎಂದುವುಂ ಚೆಲ್ವನಾಗಿರ್ಪನಾತನ ಕಣ್ಗೆ (ರುದ್ರರ.ಹ. ೧೭-೧೭). [ಹೊಲ್ಲಹ + ತೋಱು]

**ಹೊಲ್ಲಿ** (ನಾ). (?): ಹೊಲ್ಲಿ[ಪಾಠಾಂ. ವಹಿಲಿ]ಯ ಭಂಡಿ ಕೊಲ್ಹಾರಿ ರಥಂಗಳು ಮೇಲಾನೆ ಕುದುರೆ ವೈಯಾಳಿ ಬಾಲಕರೇಱಿ ಕೊಂಡಾಡುವೆಳಗಿನಿಂದ ಮಾಲೆಗಾರ್ತಿಯರ ಕೇರಿಗಳು (ಅಮುಸಾಂ. ೧-೮೧). [?]

**ಹೊಲ್ಲೆ** (ನಾ). ೧. ಕೆಟ್ಟುದು; ಕೆಡುಕುಂಟುಮಾಡುವಂತಹುದು: ಬ್ರಾಹ್ಮಣರ ಶಾಪ ಹೊಲ್ಲೆಯದು (ಸಂಭಪ. ೫-೭೭); ಬಗೆಯಲಾತನು ಹೊಲ್ಲೆಯನು ಹೊಲ್ಲಗೆ ಮಹಾಸಲ್ಲಕನು (ನಿಭಾಗ. ೧೨-೧-೧೫). ೨. ಅಡ್ಡಿ; ತೊಡಕು: ಸಂತೋಷವೇ ಸುತಲಾಭವಾದರೆ ಹೊಲ್ಲೆಯೇ[ಪಾಠಾಂ. ಲ್ಲವೇ]ನಿದಕೆ (ಕುವ್ಯಾಸ. ೨-೪೦). ೩. ದುಃಸ್ಥಿತಿ; ದುರವಸ್ಥೆ: ಇತ್ತಲಾ ದ್ವಾರಕೆಯೊಳಗೆ ವರಸತ್ಯಭಾಮಾಭವನದೊಳು ನರವೃತ್ತಿಯಿಂದಿರುತ ಕೇಳಿದ ಸತಿಯ ಹೊಲ್ಲೆಯನು ಕೆತ್ತ ದುಮ್ಮಾನದಲಿ (ಕುವ್ಯಾಸ. ೬೦೧. ೧೫-೧೩೪). ೪. ಹೀನತೆ: 'ಹೊಲ್ಲೆತನ' ಪರಾ.

**ಹೊಲ್ಲೆಯಾಗು** = ವ್ಯರ್ಥವಾಗು; ನಿಷ್ಫಲವಾಗು: ತಪವ ಮಾಡಿದುದು ಹೊಲ್ಲೆಯಾಯಿತು ತನಗೆ ಕಮಲಜನಲ್ಲಿ (ಸಂಭಪ. ೧೫-೧೭). [< ಪೊಲ್ಲ]

**ಹೊಲ್ಲೆತನ** (ನಾ). ಕೀಳುತನ; ಹೀನವೃತ್ತಿ: ಹೊಲ್ಲೆತನವ ಪೆರ್ಮೆಯೆಂದು ಎಲ್ಲ ಗುಣವ ಹೇಳಿಕೊಂಡು ಕಳ್ಳನಂತೆ ಅಡಗಿಕೊಂಡು ಕೈಗೆ ಸಿಕ್ಕದೆ. . . ಗೋಚರಿಸದ ತಿರುಗುತಿರುವ ಲೋಕವರಿಯಲು (ಕವಿಸೋ. ೩೫-೫). [ಹೊಲ್ಲೆ + - ತನ]

**ಹೊಲ್ಲೆಯ** 'ಹೊಲ್ಲೆಹ' ನೋ.

**ಹೊಲ್ಲೆಹ, ಹೊಲ್ಲೆಯ** (ನಾ). ೧. ಕೆಟ್ಟುದು; ಕೆಡುಕು: ಆವನಾವನೊರ್ವಂಗೆ ಹೊಲ್ಲೆಹಮಂ ಬಯಸುವಾತನಾತಂಗನುಕೂಲಮಾಗಿಯೆ ಪೇೞ್ಪುದು (ಪಂಚತಂ. ೯೪-೮); ಲಿಂಗವ ಕುಱಿತಲ್ಲಿ ಒಳಿತು ಹೊಲ್ಲೆಹ ಉಂಟೇ ಜಂಗಮನ ಕುಱಿತಲ್ಲಿ ಒಳಿತು ಹೊಲ್ಲೆಹ ಉಂಟೇ (ಪ್ರೋಆಮಾ. ೪೦-೧೭೬); ಆತನಿಂದೇನಹುದು ಹೊಲ್ಲೆಹವಾತನಿಂದೇನಹುದು ಲೇಸುಗಳ್ (ಕುವ್ಯಾಉ. ೨-೪೪). ೨. ತಪ್ಪು ; ದೋಷ; ಅಪರಾಧ: ಈಶ್ವರ ಮೂರ್ತಿಯೆನ್ನಲ್ಲಿ ಹೊಲ್ಲೆಹವನಱಿದಿಂತು ಬಡಿದಹನು (ಬಸಪು. ೩೮-೩೨); ನಾವು ಮಾಡಿದ ಹೊಲ್ಲೆವಾEಹಾತಿವುದು ನೀವು ನಮ್ಮನು ಕಟ್ಟಿ ಕೊಲುವುದಿದಾವ ರಾಯರ ರಾಜಪದ್ಧತಿಯೆಂದನಾ ಹನುಮ (ತೊರರಾ. ೫-೭-೨೨); ಪುಲ್ಲದಳಾಕ್ಷ ನೀನತಿದ್ಧವವೆಂಬುದ ಬಲ್ಲ ಮತ್ತಿತನು ನಾನಱಿಯೆ ಹೊಲ್ಲೆಹವನು ತೀರ್ಕಣಿಸೆಂದುಭಯಪಾಣಿಪಲ್ಲವದಿಂದೆ ವಂದಿಸಿದ (ಮೋಹತ. ೪೦-೯೦). ೩. ತುಚ್ಛವಾದುದು; ಕೀಳಾದುದು: ನೀನು ಕುವರನ ಕೈಯಾಱಿ ಕೊಲ್ಲದೆ ಕಡಲೊಳು ಬಿಸುಟೆ ಹೊಲ್ಲೆಹದೊಂದು ಪೆಣ್ಣೇನು ಕಂಪಱಿಗಿ ಪೂವಿಲ್ಲನ ನೆಱೆ ನುಂಗಿತಾಗ (ಮೋಹತ. ೧೨-೭). ೪. ನಿಷ್ಠುರತೆ; ಕಠಿಣತೆ: "ನಿಟ್ಟುರ ಹೊಲ್ಲೆಹ[ಪಾಠಾಂ. ಪೊಲ್ಲಣ, ಹಲ್ಲಣ, ಹೊಲ್ಲಿಯ]ಮೆನಲ್ಕೆ ನಿಟ್ಟುರಮೆನಿಕ್ಕು" (ಕಬ್ಬಿಕೈ. ೫೭). **ಹೊಲ್ಲೆಯ:** ೧. ಆ ಕೆಱೆಗೆ ಲೇಸು ಹೊಲ್ಲೆಯವಾದರೆ (ಸೌಇಎ. ೧೯೩೪. ಪುಂಗನೂರು. ೧೫೭-೧೩; 1419); ಹೊಲ್ಲೆಯಕಳುಕಿ ಸೈರಿಸಲೀ ವಿಕಲ್ಪವು ಕಡೆಗೆ ತೋಱಿತು ತಾನೆ ಹಗೆಯೆಂದ (ಅಂಬಿಕಾ. ೩೭-೭). ೪. "ಹೊಲ್ಲೆಯಮೆನಲ್ ನಿಷ್ಠೂರಕಭಿಧಾನವು" (ಕಶರ. ೧೧೭). ೫. ಕೆಟ್ಟವನು; ದುಷ್ಟ: ಬಗೆಯಲಾತನು ಹೊಲ್ಲೆಯನು ಹೊಲ್ಲಗೆ ಮಹಾಸಲ್ಲಕನು (ನಿಭಾಗ. ೧೨-೧-೧೫). 'ಹೊಲ್ಲಹ' ಪರಾ. [ಹೊಲ್ಲೆ + - ಹ$_2$(< - ಪ$_2$)]

**ಹೊಲ್ಲೆಹಂಗೆಯ್, ಹೊಲ್ಲೆಹಗೆಯ್** (ಕ್ರಿ). ಕೆಟ್ಟದ್ದನ್ನು ಮಾಡು; ಕೇಡನ್ನು ಮಾಡು: ಇಂತಪ್ಪ ಸೇವಾಧರ್ಮಮನಾಂ ಮುನ್ನಱಿವಾತನಾಗಿಯುಮೇನಾನುಮೊಂದು ತೆಱದಿಂ ಹೊಲ್ಲೆಹಂಗೆಯ್ದನಕ್ಕುಂ (ಪಂಚತಂ. ೧೩೮-೨). **ಹೊಲ್ಲೆಹಗೆಯ್:** ನೃಶಂಸಃ, ಕ್ರೂರಕರ್ಮಕೃತ್ - ಈ ೨ ಹೊಲ್ಲೆಹಗೆಯ್ವವಂ (ಹಲಾಯು. ೬೧-೨೧೭). [ಹೊಲ್ಲೆಹ + ಕೆಯ್$_1$]

**ಹೊಲ್ಲೆಹಗೆಯ್** 'ಹೊಲ್ಲೆಹಂಗೆಯ್' ನೋ.

**ಹೊಲ್ಲೈಸು** 'ಹೊಲ್ಲಯಿಸು' ನೋ.

**ಹೊವಿಸಳ** 'ಪೊಯ್ಸಳ' ನೋ.

**ಹೊಸ** 'ಪೊಸ' ನೋ.

**ಹೊಸಇಕ್ಕೇರಿ** (ನಾ). (ಬ್ರಿಟಿಷರ ಆಳ್ವಿಕೆಯು ಆರಂಭವಾಗುವ ಮುನ್ನ ಈ ದೇಶದಲ್ಲಿ ಬಳಕೆಯಾಗುತ್ತಿದ್ದ) ಹದಿನೆಂಟು ಬಗೆಯ ಚಿನ್ನದ ನಾಣ್ಯಗಳಲ್ಲಿ ಒಂದು; ಇಕ್ಕೇರಿಯ ನಾಡಿನಲ್ಲಿ ಬಳಕೆಯಿದ್ದ ಒಂದು ನಾಣ್ಯ: ಮಲಾಪಹಾರಿಯ ದಕ್ಷಿಣದಲ್ಲಿ, ೧೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡಿಯುತ್ತಿದ್ದವು. ಅವುಗಳ ವಿವರ - ೧. ಗಜಪತಿ . . . ೩. ಹೊಸಇಕ್ಕೇರಿ (ಇಕ್ಕೇರಿ ಅರಸರದು) ರೂ. ೪, ಆ. ೮ (ಕಭಾಗ. ೨೮೦). 'ಇಕ್ಕೇರಿವರಹ' ಪರಾ. [ಹೊಸ (< ಪೊಸ) + ಇಕ್ಕೇರಿ$_1$]

**ಹೊಸಂತಿಲ್** 'ಪೊಸಂತಿಲ್' ನೋ.

**ಹೊಸಂತಿಲು** 'ಪೊಸಂತಿಲ್' ನೋ.

**ಹೊಸಕಳೆ** (ನಾ). ನವೀನವಾದ ಕಾಂತಿ, – ತೇಜಸ್ಸು: ಅವನ ಕುಲುಮಗೆ ಬಿದ್ದ ಶಾಕುಂತಲೋಪಾಖ್ಯಾನಕ್ಕೆ ಅಭೂತಪೂರ್ವವಾದ ಹೊಸಕಳೆ ಬಂದಿತು (ಶಾವ್ಯಸ. ೪೦). [ಹೊಸ (< ಪೊಸ) + ಕಳ್ಳೆ$_6$ ( = ಕಲೆ$_3$)]

**ಹೊಸಕಾಡು** (ಕ್ರಿ). ಹೊಸೆ; ಹೊರಳಾಡು: ದುಃಶಾಸನನ ತೋಳು ಕತ್ತರಿಸಿ ಬಿದ್ದು ಧೂಳಿನಲ್ಲಿ ಹೊಸಕಾಡುವುದನ್ನು ನೋಡದೇ ಹೋದರೆ ನನ್ನ ಹೊಟ್ಟೆ ಹೇಗೆ ತಣ್ಣಗಾದೀತು? (ಪಚಭಾ. ೨೪೬). [ಹೊಸಕು + ಆಡು$_1$]

**ಹೊಸಕಾಲ** 'ಹೊಸಗಾಲ' ನೋ.

**ಹೊಸಕು,** ಹೊಸಗು (ನಾ). ಉಜ್ಜು; ತಿಕ್ಕು; ತೀಡು: ಲಿಂಗಗಳ ಕೀಳಿಸಿ ಚರಣದಸಿಯೊಳು ಹೊಸಕಿ ತಿಪ್ಪೆಯೊಳಗಿಸಿ ತುಳಿಸುತಲಿ (ಬಿಜ್ಜಪು. ೬೫-೧೦); ಕೆಲವು ಸೊಪ್ಪುಗಳನ್ನು ಕಿತ್ತು ಹೊಸಕಿ ತನ್ನ ಸೆರಗಿನಲ್ಲಿ ಕಟ್ಟಿಕೊಂಡಳು (ಚಿಕರಾ. ೪೩೬); ನೀವು ನಮ್ಮನ್ನು ಕಾಲಿನಿಂದ ಹೊಸಕಿ ಹಾಕುವ ಕೀಟಗಳೆಂದೇನಾದರೂ ಭಾವಿಸಿರುವಿರಾ ಹೇಗೆ? (ಪಸ್ತಪ. ೫೬). **ಹೊಸಗು:** ಸರ್ಪಗಳು ಎಷ್ಟು ಇದ್ದವೊ ತನ್ನ ಕೈಗಳಿಂದ ನಿದ್ರೆಯಲ್ಲಿ ಹೊಸಗಿ ಬಿಟ್ಟನು (ತಾತ್ಪ. ೮೪-೫): ಆ ಗಜವು ತನ್ನಯ ಪದದಿಂದ ಹೊಸಗಿತಾ ಸರವ (ಸೌಗಂಪ. ೬-೩): ಅವನು ಕಣ್ಣನ್ನು ಹೊಸಗಿಕೊಳ್ಳುತ್ತಾ ಎದ್ದನು (ಚಿತ್ರಪಾ. ೧೧).

[< ಪೊಸ$_1$?./ ತಮಿ. ಪೊಚಙ್ಕು; ತೆಲು. ಪೊಸಗು ]

**ಹೊಸಕೆರೆ** 'ಪೊಸಗೆಱೆ' ನೋ.

**ಹೊಸಕೆಱೆ** 'ಪೊಸಗೆಱೆ' ನೋ.

**ಹೊಸಕೈದು** (ನಾ). ನವೀನವಾದ ಆಯುಧ: ಬಿಗಿದ ಝಲ್ಲರಿ ಮುಗಿಲ ಹೊಸಕೈದುಗಳ ಮಿಂಚಿನ . . . ವಿಗಡಕುಂಭಜ ಮೇಘಋತು ತನಿಹೊಗರಿಡೆದು ಪರಬಲದ ಕಡುವೇಸಗೆಗೆ ಕವಿದುದು ರಾಜಹಂಸಪ್ರಕರವೋಸರಿಸೆ (ಕುವ್ಯಾದ್ರೋ. ೧-೪೮).

[ಹೊಸ (< ಪೊಸ) + ಕೈದು$_2$(< ಕೆಯ್ದು)]

**ಹೊಸಗಣೆ** (ನಾ). ಹೊಸತಾಗಿ ಮಸೆದ ಬಾಣ: ಇಕ್ಕೆಲದ ಸೇಸೆಯಂ ಸವರಿದುವು ಹೊಗರುಗುವ ಹೊಸಗ[ಪಾಠಾಂ. ಕ]ಣೆಗಳು (ಜೈಮಿಭಾ. ೧೩-೨೦).

[ಹೊಸ (< ಪೊಸ) + ಕಣೆ$_1$]

**ಹೊಸಗನ್ನಡ** 'ಪೊಸಗನ್ನಡ' ನೋ.

**ಹೊಸಗವಲು** 'ಪೊಸಗವಲು' ನೋ.

**ಹೊಸಗಾಲ,** ಹೊಸಕಾಲ (ನಾ). ನವೀನವಾದ ಸಮಯ; ನವಯುಗ: ಈ ಧಾರ್ಮಿಕ ಚಳುವಳಿಯ ಹೊಸಗಾಲದಲ್ಲಿ . . . ಅನೇಕ ಜಾತಿಯವರು ವಿರಕ್ತರಾಗಿ ಮಠಗಳಲ್ಲಿ ವಾಸಮಾಡುತ್ತಿರುವಾಗ (ಕರ್ನಾಸಂ. ೯೬). **ಹೊಸಕಾಲ:** ಕುಣಿವುದು ಹಗಲಿರುಳು ಬೆಳಗಾಲದ ಕುರುಹು ಹೊಸಕಾಲದ ನವಿಲು (ಬಾಸಿಗ. ೩೦-೨೧); ಹೋಗುತಿದೆ ಹಳೆಕಾಲ, ಹೊಸಕಾಲ ಬರುತಲಿದೆ (ಕೋಗಿಲೆ. ೨೬-೧). [ಹೊಸ (< ಪೊಸ ) + ಕಾಲ]

**ಹೊಸಗು** 'ಹೊಸಕು' ನೋ.

**ಹೊಸಗೆ** (ನಾ). ನವೀನತೆ; ನಾವೀನ್ಯ: ದಿನದಿನವು ಒಸಗೆ ಚಂದಿರನ ಹೊಸಗೆ, ಪೂರ್ಣಿಮೆಯ ಚಂದ್ರ ಬೇರೆ (ಅರಳು. ೧೦೩-೧೭); ಹೊಸ ಹೊಸಗೆಯಂತ ಹೊಸ ಚಂದ್ರನುದಯಿಸಿದಂತೆ ಸತ್ಯಸ್ವರೂಪ ಪ್ರೇಮಾ! (ಕೃಷ್ಣಾಕು. ೮-೧೯).

[ಹೊಸ (< ಪೊಸ ) + - ಗೆ]

**ಹೊಸಗೆಯ್,** ಹೊಸಗೈ (ಕ್ರಿ). ಹೊಸತುಗೊಳಿಸು; ನವೀಕರಿಸು: ಬೆಳಗಿ ಊರ, ನಾಡ, ಹಸಗೆಯ್ಯೆ ಹೊಸಗೆಯ್ಯೆನೆಂಬೊಲುಮೆ (ಹೂಂಗಳು. ೬-೧೪). **ಹೊಸಗೈ:** ಹೊಸಲೋಕದೊಳು ಹೊಗಿಸುತನ್ನನೀ ಜಗವನ್ನು ಹೊಸದಾಗಿಸುತ, ಜನರನೆಲ್ಲ ಹೊಸಗೈಯುತ್ತ (ಕೃಷ್ಣಾಕು. ೮-೨೨). [ಹೊಸ (< ಪೊಸ) + ಕೆಯ್$_1$]

**ಹೊಸಗೆಱೆ** 'ಪೊಸಗೆಱೆ' ನೋ.

**ಹೊಸಗೈ** 'ಹೊಸಗೆಯ್' ನೋ.

**ಹೊಸಚಟ್ಟು** (ನಾ). (?): ಅದು ಹೊಸಚಟ್ಟು ಹೊಸಸೀರೆ ತೆಗೆದುಕೊಂಡು ಸುಮಾರು ಒಂದು ತಿಂಗಳಾಗಿತ್ತು (ಮಾಮರಾ. ೯೮). [?]

**ಹೊಸಜವ್ವನ** 'ಪೊಸಜವ್ವನ' ನೋ.

**ಹೊಸಜೀವ** (ನಾ). (ಅಲಂ) ಹೊಸ ಉತ್ಸಾಹ; ನವಚೈತನ್ಯ: ಮಿತ್ರರು ತಂದೆಯ ಜತೆಗೂಡಿ ನಿಂತು ಯಕ್ಷಗಾನದ ಒಂದು ಮೇಳವ ತೆರೆದರು – ತಂದೆಗೆ ಹೊಸಜೀವ ಬಂತು (ಇಂಚಾಪ. ೧೧-೪೨). [ಹೊಸ (< ಪೊಸ) + ಜೀವ]

**ಹೊಸತನ** (ನಾ). = **ಹೊಸಗೆ:** ಈ ಕೃತಿಗೆ ಒಂದು ಹೊಸತನವೂ ಸೊಗಸೂ ಬಂದಿವೆ (ಸಮಾಲೋ. ೬೬); ಅವನ ಉಳಿದ ಸಂಪ್ರದಾಯವಂತಿಕೆಯನ್ನು ಈ ಹೊಸತನದಿಂದ ಬೆಳಗಿದಂತಾಯಿತು (ತವಾ. ೩೧). [ಹೊಸ (< ಪೊಸ) + - ತನ]

**ಹೊಸತಳಿರು** 'ಪೊಸದಳಿರ್' ನೋ.

**ಹೊಸತಿಡು** (ಕ್ರಿ). (?): ಆದಿತ್ಯವಾರ ಸೋಮವಾರ ಮಂಗಳವಾರವ ಹೊಸತಿಟ್ಟು ನುಡಿವರು ನಾವಿದನಱಿಯೆವು (ಅವಚಂ. ೧೯೩-೮೭೫); ''ಬಣ್ಣಾದ್ದನ್ನವನ್ನು ಬಲಿಯಾಗಿ ಚೆಲ್ಲು'' (ಅವಚಂ. ಕೋಶ). 'ಪೊಸತಿಕ್ಕು' ಪರಾ. [?]

**ಹೊಸತಿಲ್** 'ಪೊಸಂತಿಲ್' ನೋ.

**ಹೊಸತಿಲು** 'ಪೊಸಂತಿಲ್' ನೋ.

**ಹೊಸತಿಲುಗನ್ನ** (ನಾ). ಹೊಸ್ತಿಲ ಬಳಿ ಕೊರೆದು ಬಾಗಿಲು ತೆಗೆಯಲು ಅನುಕೂಲವಾಗುವಂತೆ ಹಾಕುವ ಕನ್ನ: ಘನದ ಹೊಸತಿಲುಗನ್ನವಂ ಘಮ್ಮನೆಯಗಿದಗುಳಿಗನ್ನವಂ ಸುಮ್ಮನೆಯಗಿದು ನೆಲಗನ್ನವಂ ಬಲುಗೋಡೆಗನ್ನವನು ತೋಡಿ (ಬಸಪು. ೩೦-೫). [ಹೊಸತಿಲು (< ಪೊಸಂತಿಲ್) + ಕನ್ನ$_1$]

**ಹೊಸತಿಲುವಣ** (ನಾ). ಒಂದು ಬಗೆಯ ತೆರಿಗೆ: ಬಸದಿಯ ಕೇರಿಯ ಮನ್ನೆಯದ ಹೊಸತಿಲುವಣಂ ಧಾರಾಪೂರ್ವಕಂ ಮಾಡಿ (ಸೌಇಇ. XV. ೧೦೮-೬; 1167).

[ಹೊಸತಿಲು$_1$ + ಪಣ$_3$]

**ಹೊಸತು** 'ಪೊಸತು' ನೋ.

**ಹೊಸತುಪ್ಪ** 'ಪೊಸತುಪ್ಪ' ನೋ.

**ಹೊಸದು$_1$** 'ಪೊಸೆ$_1$' ಪರಾ.

**ಹೊಸದು$_2$** 'ಪೊಸತು' ನೋ.

**ಹೊಸದೇವಾರ** (ನಾ). ಹೊಸ ದೇವಾಲಯ: ಹೊಸದೇವಾರಕ್ಕೆ ಬಿಜಯ ಮಾಡಿದಾಗ ನಾನು ಗರುಡಗಂಬದ ನೆರೆಯ ಜನಸಂದಣಿಯ ಚೂಣಿಯಲ್ಲಿ . . . ಪರಿರಂಜಿಸುತ್ತಿದ್ದನು (ಮಂತ್ರಶ. ೨೮-೧೮). [ಹೊಸ (< ಪೊಸ) + ದೇವಾರ]

**ಹೊಸದೇಸೆ** 'ಪೊಸದೇಸಿ' ನೋ.

**ಹೊಸನೀರು** 'ಪೊಸನೀರ್' ನೋ.

**ಹೊಸನೋಟ** 'ಪೊಸನೋಟ' ನೋ.

**ಹೊಸಪರಿ** (ನಾ). ನವವಿಧಾನ; ಹೊಸರೀತಿ: ಹೊಸಪರಿಯ ಗತಿಗಳಂ ನಟಿಸಿ ತೋಱುತ್ತಮಿರ (ಬಸರ. ೧-೨೫): ಭುಜಪ್ರತಾಪದ ಹೊಗರು ಹೊಸಪರಿ (ಕುವ್ಯಾದ್ರೋ. ೫-೩೬). [ಹೊಸ (< ಪೊಸ) + ಪರಿ$_3$)]

**ಹೊಸಪರಿಮಳ** 'ಪೊಸಪರಿಮಳ' ನೋ.

**ಹೊಸಪಾಕ** 'ಪೊಸಪಾಕ' ನೋ.

**ಹೊಸಪುರ** 'ಪೊಸವುರ' ನೋ.

**ಹೊಸಪೊಡೆ** 'ಪೊಸಪೊಡೆ' ನೋ.

**ಹೊಸಬ** 'ಪೊಸಂಬ' ನೋ.

**ಹೊಸಬಗೆ** 'ಪೊಸವಗೆ' ನೋ.

**ಹೊಸಬಟ್ಟೆ** 'ಪೊಸವಟ್ಟೆ' ನೋ.

**ಹೊಸಬಣ್ಣ** 'ಪೊಸಬಣ್ಣ' ನೋ.

**ಹೊಸಬತನ** (ನಾ). ಹೊಸಬನಾಗಿರುವಿಕೆ; ಪರಿಚಯವಿಲ್ಲದಿರುವಿಕೆ: ತನ್ನ ಕಾಲುರಿಚಿನ ಹೊಸಬತನವನ್ನಿಲ್ಲಿ ಡಂಗುರಿಸಿಕೊಳ್ಳುತ್ತಿರುವ ಈತನಿಗೆ ಮೊತ್ತಮೊದಲು ಓಲಗದ ಉಚಿತಾಚರಣಪದ್ಧತಿಗಳ ಬಾಲಬೋಧೆಯಾಗಲಿ (ಬಿಟ್ಟಿಆ. ೪೩-೧೧).

[ಹೊಸಬ (< ಪೊಸಂಬ) + - ತನ]

**ಹೊಸಬಿ** (ನಾ). (ಒಂದು ಸ್ಥಳಕ್ಕೆ ಅಥವಾ ಪರಿಸರಕ್ಕೆ) ಹೊಸಬಳಾಗಿರುವವಳು: ಈ ಹೊಸಬಿ ಇದೆ ತಾನೆ ಹಳ್ಳಿಯಿಂದ ಬಂದಿದ್ದಾಳೆ (ಪುನರು. ೧೧); ಆ ಹೊಸಬಿ ಅಪ್ಪಯ್ಯನ ಹೆಂಡತಿಯೇ! (ಕಾನೂರು. ೧೮೦). [ಹೊಸಬ (< ಪೊಸಂಬ) + - ಇ$_2$]

**ಹೊಸಬಿಗ** (ನಾ). ಅಪರಿಚಿತ; ಹೊಸಬ: ಕೃತಾಂತನ ಹೋಲುವೆಯ ಹೊಸಬಿಗನು ಹೊಕ್ಕನು ಭೀಮನುರವಣಿಸಿ (ಕುವ್ಯಾದ್ರೋ. ೨-೭೯). [ಹೊಸಬ (< ಪೊಸಂಬ) + -ಇಗ]

**ಹೊಸಬಿರುದು** (ನಾ). ನವೀನವಾದ ಬಿರುದು.

**ಹೊಸಬಿರುದರ ಗಂಡ** = ನವೀನವಾದ ಬಿರುದುಗಳನ್ನು ತಾಳಿದವರನ್ನು ಸದೆ ಬಡಿಯುವವನು; ಒಂದು ಬಿರುದು: ಹೊಸಬಿರುದರ ಗಂಡೋ ರಾಯರಾಹುತ್ತ ಮಿಂಡಃ (ಎಕ. XII. ತುಮಕೂ. ೧-೮೪; 1571). [ಹೊಸ (< ಪೊಸ) + ಬಿರುದು]

**ಹೊಸಬೆಣ್ಣೆ** 'ಪೊಸಬೆಣ್ಣೆ' ನೋ.

**ಹೊಸಬೆಳುವಟ್ಟೆ** (ನಾ). ನವೀನವಾದ ಬಿಳಿಬಟ್ಟೆ: ಉಟ್ಟ ಹೊಸಬೆಳುವಟ್ಟೆ ಹೊಮ್ಮಚೆ ಘುಟ್ಟವಿಸೆ ಹೊಂಬಣ್ಣವಾದುದು (ತೊರರಾ. ೩-೮-೩೦).

[ಹೊಸ (< ಪೊಸ) + ಬೆಳುವಟ್ಟೆ$_1$ (< ಬೆಳ್ವಟ್ಟೆ)]

**ಹೊಸಬೇಟ** 'ಪೊಸವೇಟ' ನೋ.

**ಹೊಸಭಂಗಿ** (ನಾ). ಹೊಸತಾದ ಭಂಗಿಸೊಪ್ಪು: ಹುರಿದ ಹೊಸಭಂಗಿ ಹದ ಗೆಯ್ದುಪಿನಿಕೂಟದೊಳ್ ಬೆರೆದಮಲ್ ಜಾಯಿಕಾಯ್ ಪತ್ರೆ . . . ಪರಿಪರಿಯ ಭೋಜನ ದ್ರವ್ಯಂಗಳಿಡಿದ ಭಂಡಿಗಳೈದೆ ಬರುತಿರ್ದುವು (ಚಿಬಪು. ೪೭-೪೫).

[ಹೊಸ (< ಪೊಸ) + ಭಂಗಿ$_1$]

**ಹೊಸಮಡಿ** (ನಾ). ಅದೆ ತಾನೆ ಒಗೆದು ಮಡಿ ಮಾಡಿದುದು: ಮುಂಗಡೆಯ ಬೀದಿಯಲಿ ಭವಿಗಳು ಲಿಂಗವಂತರ ಹೊಸಮಡಿಯ ವಸ್ತ್ರಂಗಳಂ ಸಂಧಿಸಿದರಾದಡೆ ಇಚಿದು ಕೆಡಹುವೆನು (ಬಸವು. ೨೦-೯). [ಹೊಸ (< ಪೊಸ) + ಮಡಿ$_2$]

**ಹೊಸಮದ** 'ಪೊಸಮದ' ನೋ.

**ಹೊಸಮನೆ** 'ಪೊಸಮನೆ' ನೋ.

**ಹೊಸಮಸೆ** 'ಪೊಸಮಸೆ' ನೋ.

**ಹೊಸಮಾಟ** (ನಾ). (?): ಯಿಾ ನಾಲುಕು ಗಡಿಯಿಂದೊಳಗುಳ ಹೊಸಮಾಟದ ಬಾಳು ನಾಘಂಡುಗದಲು (ಸೌಇ. IX-ii, ೫೦೦-೧೨; 1519). 'ಹೊರಮಾಟ' ಹೋ. [?]

**ಹೊಸಮಾತು** (ನಾ). ೧. ಹಿಂದೆ ಬಳಕೆಯಲ್ಲಿ ಇಲ್ಲದೆ ಈಗ ರೂಪುಗೊಂಡ ಮಾತು; ಹೊಸತಾಗಿ ಬಂದ ನುಡಿ: ಆಧುನಿಕ ನಾಗರಿಕತೆಯ ಪರಿಣಾಮವಾಗಿ ಭಾಷೆಯಲ್ಲಿ ಎಷ್ಟೊ ಹೊಸಮಾತುಗಳು ಬರುವುದುಂಟು (ರೂಢಿ). ೨. ಹಿಂದೆ ಹೇಳಿದ ಮಾತಿಗೆ ವಿರುದ್ಧವಾದ ಮಾತು; ಬದಲಾದ ಮಾತು: ಇದೇನು ಹೊಸಮಾತು ಹೇಳುತ್ತಿರುವೆ? ಹಿಂದೆ ಮಾತು ಕೊಟ್ಟುದು ಮರೆತುಹೋಯಿತೆ? (ರೂಢಿ).

[ಹೊಸ (< ಪೊಸ) + ಮಾತು$_1$]

**ಹೊಸಮಾದರಿ** (ನಾ). ನವೀನ ರೀತಿ; ಹೊಸದಾದ ನಮೂನೆ: ರತ್ನನ ಪದಗಳು ನಾಗನ ಪದಗಳು ಕಾವ್ಯದ ಹೊಸಮಾದರಿಗಳು (ಇಂಚಾಪ. ೪-೮).

[ಹೊಸ (< ಪೊಸ) + ಮಾದರಿ]

**ಹೊಸಮಿಸುನಿ** 'ಪೊಸಮಿಸುನಿ' ನೋ.

**ಹೊಸಮುತ್ತು** 'ಪೊಸಮುತ್ತು' ನೋ.

**ಹೊಸಮೆಳೆ** (ನಾ). ಹೊಸದಾದ ಗಿಡಗಳ ಗುಂಪು: ಮುಚಿದರರಿಗಳ ಹೊದಟಿ ಹೊಸಮೆಳೆಯ (ಕುವ್ಯಾದ್ರೋ. ೨-೭೦); ಆ ಹಂಸೆ . . . ಹೊಕ್ಕುದು ಹೊದಟಿ ಹೊಸಮೆಳೆಯ (ಸಳಚ. ೨-೩೩). [ಹೊಸ (< ಪೊಸ) + ಮೆಳೆ$_1$]

**ಹೊಸಮೋಹ** (ನಾ). ಹೊಸದಾಗಿ ಹುಟ್ಟಿದ (ಪ್ರಣಯದ) ಮರುಳು: ಮಲ್ಲಿಗೆಯರಳ ತನಿಗಂಪು ಹೊಸಮೋಹ ನಿಲ್ಲವಿವು ನೋಡ (ಸರ್ವಜ್ಞ. ೧೫೨೭).

[ಹೊಸ (< ಪೊಸ) + ಮೋಹ]

**ಹೊಸರಕ್ತ** 'ಪೊಸರಕ್ತ' ನೋ.

**ಹೊಸಲು** 'ಪೊಸಂತಿಲ್' ನೋ.

**ಹೊಸವರಿ** (ನಾ). ಹೊಸತಾಗಿ ಹಾಕಿರುವ ತೆರಿಗೆ; ಹೊಸ ತೆರಿಗೆ: ಏನುಳ್ಳಂತಾ ಹೊಸವರಿ ಹಳೆವರಿ ಮುಂತಾದ ಸಕಲಸುವರ್ನಾದಾಯ ಸಕಲಭತಾದಾಯ . . . ಸೇರಿಸಿ ಕೊಟೆವಾಗಿ (ಎಇ. XVII, ೧೧೫-೭೭; 1427). [ಹೊಸ (< ಪೊಸ) + ವರಿ$_1$]

**ಹೊಸವರು** (ಕ್ರಿ). ಹೊಸತಾಗಿ ಬರು; ಆಗ ತಾನೇ ಬರು: ಗೌತಮಕ್ಷೇತ್ರವೀ ಪಟ್ಟಣಕ್ಕೆ ಹೊಸವಂದಿರುವ ನಿಮಗೆ ಕಾವೇರಿಯ ಜಲಪಾನದಿಂದ ಪಿತ್ತಪ್ರಕೋಪವಾಗಿ ತಲೆದಿರುಗಿಯೋ, ಮದವೇರಿಯೋ, ಕುಣಿಯುತ್ತಿರುವಂತಿದೆ! (ಚಿಟ್ಟಳ. ೫೫-೨೦).

[ಹೊಸ (< ಪೊಸ) + ಬರು$_1$ (< ವರ್)]

**ಹೊಸವಸುಗೆ** (ನಾ). ಹೊಸಬಗೆಯ ತೆರಿಗೆ,–ಸುಂಕ: ಧಾರಾಪೂರ್ವ್ವಕಂ ಮಾಡಿ ಬಿಟ್ಟ ಹೊಸವಸುಗೆಯ XXX ವಿನ ಮೂಡಲ ತೋಂಟ ಕಮ್ಮ ೪೦ (ಸೌಇ. IX-i, ೧೮೨-೫; 1110). [ಹೊಸ (< ಪೊಸ) + ಪಸುಗೆ]

**ಹೊಸವಳಿ** 'ಪೊಸವಳ್ಳಿ' ನೋ.

**ಹೊಸವಳ್ಳಿ** 'ಪೊಸವಳ್ಳಿ' ನೋ.

**ಹೊಸವೂರು** 'ಪೊಸವೂರ್' ನೋ.

**ಹೊಸವೆಣ್** 'ಪೊಸವೆಣ್' ನೋ.

**ಹೊಸಸಕ್ಕರೆ** 'ಪೊಸಸಕ್ಕರೆ' ನೋ.

**ಹೊಸಸುಣ್ಣ** 'ಪೊಸಸುಣ್ಣ' ನೋ.

**ಹೊಸಹರೆಯ** 'ಪೊಸವರೆಯ' ನೋ.

**ಹೊಸಹರೆಯಂಬಡೆ** (ಕ್ರಿ). ನವಯೌವನವನ್ನು ಹೊಂದು; ನವತಾರುಣ್ಯವನ್ನು ತಾಳು: ಹೊಸಹರೆಯಂಬಡೆದ ಕೆಳೆಯರಿಂ ಕುಕ್ಕುಟ ಮಲ್ಲ ಮಹಿಷ ಮೇಷಂಗಳನು ಗಡಣದಿ ಕಾದಿಪ ಬಿನದದಿಂ . . . ದಿನಮಂ ನೂಂಕುತ್ತಿಹನು (ಜಯಕಾ. ೨-೭೭).

[ಹೊಸಹರೆಯ (< ಪೊಸವರೆಯ) + ಪಡೆ$_1$]

**ಹೊಸಹಸೆ** 'ಪೊಸವಸೆ' ನೋ.

**ಹೊಸಹಳಿ** 'ಪೊಸವಳ್ಳಿ' ನೋ.

**ಹೊಸಹಳ್ಳಿ** 'ಪೊಸವಳ್ಳಿ' ನೋ.

**ಹೊಸಹುಟ್ಟು** 'ಪೊಸಪುಟ್ಟು' ನೋ.

**ಹೊಸಹೂ** 'ಪೊಸವೂ' ನೋ.

**ಹೊಸಹೊಗರು** 'ಪೊಸವೊಗರ್' ನೋ.

**ಹೊಸಹೊನ್ನು** 'ಪೊಸವೊನ್' ನೋ.

**ಹೊಸಳ್ಳಿ** 'ಪೊಸವಳ್ಳಿ' ನೋ.

**ಹೊಸಿಲು** 'ಪೊಸಂತಿಲ್' ನೋ.

**ಹೊಸೂರು** 'ಪೊಸವೂರ್' ನೋ.

**ಹೊಸೆ** 'ಪೊಸೆ$_1$' ನೋ.

**ಹೊಸೆಬಿಡು** (ಕ್ರಿ). (ಆಲಂ) ಘರ್ಷಿಸುವಂತೆ ಮಾಡು: ಹರಿತಿಂದುಳ್ಳ ಸುವಸ್ತುವಂ ಕಡೆಯೊಳೊರ್ವಗಿತ್ತು ತಾಂ ಭಾಷೆಯಂ ಬಟಿ ಗಂಟಿಕ್ಕುವನೆಂದು ತಾಯ ಹೊಸೆಬಿಟ್ಟೆಳ್ಪಟ್ಟೆ ಕೊಂಡಾಡುತಂತಿರುವಳ್ ತಾಂ ನೆಚಿ ಸೂಳೆಯ್ಮೆ (ಸೋಮೇಶ. ೭೩).

[ಹೊಸೆ (< ಪೊಸೆ$_1$) + ಬಿಡು$_1$]

**ಹೊಸೆಹ** (ನಾ). ಹೊಸೆಯುವಿಕೆ; ಹುರಿಗೊಳಿಸುವಿಕೆ: ಧಾನ್ಯದಂತೆ ಹಗೇವಕ್ಕೆ ವಂದು ನಾರಂತೆ ಹೊಸೆಹಕ್ಕೆ ವಂದು (ಧರ್ಮಾಮೃ. ೩-೭೭).

[ಹೊಸೆ (< ಪೊಸೆ$_1$) + -ಹ$_2$ (< -ಪ$_2$)]

**ಹೊಸ್ತಲು** 'ಪೊಸಂತಿಲ್' ನೋ.

**ಹೊಸ್ತಿಲ್** 'ಪೊಸಂತಿಲ್' ನೋ.

**ಹೊಸ್ತಿಲ** 'ಪೊಸಂತಿಲ್' ನೋ.

**ಹೊಸ್ತಿಲು** 'ಪೊಸಂತಿಲ್' ನೋ.

**ಹೊಸ್ತು** 'ಪೊಸತು' ನೋ.

**ಹೊಳಕಿಸು** 'ಪೊಳಕಿಸು' ನೋ.

**ಹೊಳಕು$_1$** 'ಪೊಳಂಕು' ನೋ.

**ಹೊಳಕು$_2$** (ನಾ). ಪ್ರಕಾಶ; ಹೊಳಪು: ಬೆಳಕು ಇಲ್ಲದೆ ಹೊಳಕು ಕಂಡೀತೆ? (ಗಾದೆ).

[< ಪೊಳಂಕು]

**ಹೊಳಕೆ$_1$** 'ಪೊಣರ್ಕೆ' ನೋ.

**ಹೊಳಕೆ$_2$** (ನಾ). ಹೋಳು; ಚೂರು: ಅಗಿವ ವಜ್ರದ ಹೊಳಕೆಗಳೂ ದಿಟ ಹಗಲ

ತಗಡೋ ಮೇಣು ಮಿಂಚಿನ ಬಗೆಯ ಸೆಕ್ಕೆಯೊ (ಕುವ್ಯಾಭೀ. ೧-೪೭); ಗೊಂಗಡಿಯ ಮೂಲಿಯ ಕುಂಚಿಗೆಯಲ್ಲಿ ತೆಂಗಿನ ಕಾಯಿಯ ಹೊಳಕೆಗಳನ್ನು ಹಾಕಿಕೊಂಡು ಊರಿಗೆ ಮರಳಿದ್ದ (ಗಂಗಾಸಾ. ೧೦೭). [< ಹೋಳು$_{2}$]

**ಹೊಳಕೆಗಟ್ಟು$_{2}$** (ಕ್ರಿ). ಪೈಪೋಟಿ ಮಾಡು; ಸ್ಪರ್ಧಿಸು: ತಳಿತುದೋ ಪರಿಮಳಿತ ಧೂಮಾವಳಿ ವಿಯದ್ಭಾಗದಲಿ . . . ಧ್ರುವನ ನಿಳಯದಲಿ ಲಂಬಿಸಿತು ಸುಧೆಯಲಿ ಹೊಳಕೆಗಟ್ಟಿತು ಸುರಕುಜದ ಹಂಬಲನು ಬಿಡಿಸಿತು (ತೊರರಾ. ೧-೭-೫೦).

[ಹೊಳಕೆ$_{1}$ (< ಪೊಣರ್ಕೆ) + ಕಟ್ಟು$_{1}$]

**ಹೊಳಕೆಗಾಱ** 'ಹೊಣಕೆಗಾರ' ನೋ.

**ಹೊಳಚಿಕೆ** (ನಾ). ತುಂಡುಮಾಡುವುದು; ಚೂರುಮಾಡುವುದು: ''ಹೋ- ಅವಖಂಡನೇ, ಹೊಳಚಿಕೆಯೊಳ್'' (ಕಾಶಕ್ಯ. ೧೮೭).

[ಹೊಳಚು (< ಪೊಳಚು) + - ಇಕೆ]

**ಹೊಳಚು** 'ಪೊಳಚು' ನೋ.

**ಹೊಳಪಿಸು** (ಕ್ರಿ). ೧. ಮಿಂಚುವಂತೆ ಅಲುಗಿಸು; ಹೊಳೆಯುವಂತೆ ಮಾಡು: ಈ ಶಸ್ತ್ರಧಾರಿಗಳು ಖಡ್ಗಗಳನ್ನು ಹೊಳಪಿಸುತ್ತಾ ನಿನ್ನನ್ನು ಬೆದರಿಸುತ್ತಾರೆ (ಉರಾಚ. ೧೨೭). **೨. ಪ್ರಕಟಿಪಡಿಸು:** ಆಂಗ್ಲಸಂತತಿಯು ಶೇಕ್ಸಪೀಯರನಿಂದ ತುಂಬಿ ತುಳುಕುತ್ತಲಿದೆ ಎಂಬ ವರ್ಣನೆಯನ್ನು ಕಾರ್ಲಾಯಿಲನು . . . ಹುಮ್ಮಸದಿಂದ ಹೊಳಪಿಸಿರುವನು (ಪ್ರಬಂಧ. ೪೩). [ಹೊಳಪು (< ಪೊಳಪು) + - ಇಸು$_{3}$]

**ಹೊಳಪು** 'ಪೊಳಪು' ನೋ.

**ಹೊಳಪುಗುಂದು** (ಕ್ರಿ). ಕಾಂತಿಯು ಕಡಮೆಯಾಗು; ಪ್ರಕಾಶವು ಕ್ಷೀಣಿಸು: ಅಷ್ಟುದೂರದಲ್ಲಿ ವರ್ಷಿಸುವ ಹೊಳಪುಗುಂದಿದ ಮತ್ತು ಚುರುಕು ಕಡಿಮೆಯಾದ ಸೂರ್ಯರಶ್ಮಿಯಲ್ಲಿ ಈ ಪ್ರಪಂಚವು ಮುಣಿಗಿ . . . ಸೂರ್ಯನ ಸುತ್ತಲೂ ಮೆಲ್ಲನೆ ಸುತ್ತುತ್ತಲಿರುವುದು (ಜ್ಯೋತಿರ್ವಿ. ೧೪೭). [ಹೊಳಪು (< ಪೊಳಪು) + ಕುಂದು$_{1}$]

**ಹೊಳಪೇರು** 'ಪೊಳಪೇಱು' ನೋ.

**ಹೊಳಲಿಡು** (ಕ್ರಿ). ಪ್ರತಿಧ್ವನಿಸು; ಮಾರ್ದ್ರನಿ ಕೊಡು: ಚೆಲುವು ಮುನ್ನ ಹೊಳಲಿಟ್ಟಿತು ನನ್ನ ಇಂದು ಚೆಲುವು ಹೊಳಲಿಡುವುದು ನಿನ್ನ (ಗೋಕುನಿ. ೨೫-೧೫); ಈ ಕೂಗು ಕಾಡಿನಲ್ಲೆಲ್ಲ ಮತ್ತೆಮತ್ತೆ ಹೊಳಲಿಟ್ಟಿತು (ಪುಟ್ಟರ. ೪೪); ಮಲೆದಾಣಮಾವುದು ತಾನೆ ಹೊಳಲಿಟ್ಟು ಮಾರ್ದನಿಸದಾ ನಿನ್ನ ಹುಯಿಲುಗಳ (ಮೂರುನಾ. ೧೧೨-೪೮೭).

[ಹೊಳಲು$_{3}$ + ಇಡು$_{1}$]

**ಹೊಳಲು$_{1}$** 'ಪೋಟಿಲ್' ನೋ.

**ಹೊಳಲು$_{2}$** 'ಪೊಟಿಲ್' ನೋ.

**ಹೊಳಲು$_{3}$** (ನಾ). ಪ್ರತಿಧ್ವನಿ; ಮಾರ್ದನಿ: ತೆಂಗಿನ ಮರ್ಮರಗಳಲ್ಲಿ ವೇದಘೋಷದ ಹೊಳಲಿದೆ (ಈಚಕ. ೩); ಕೂಗಿದರೆ ಆ ಶಬ್ದದ ಪ್ರತಿಧ್ವನಿ ಮನೆಯಲ್ಲೆಲ್ಲ ಸುತ್ತಿ ಮತ್ತೆ ಇವಳ ಕಿವಿಗೇ ಬಂದಿತು . . . ಅದೇ ಹೊಳಲೇ ಉತ್ತರ (ರಂಗನಾ. ೧೩೩); ಕ್ರಮಕ್ರಮವಾಗಿ ಆ ಹೊಳಲು ನಿಲ್ಲುವುದು (ತುಂಗಭ. ೬೯). 'ಹೊಳಲುಗೊಡು' ಪರಾ. [?]

**ಹೊಳಲುಕೊಡು** 'ಹೊಳಲುಗೊಡು' ನೋ.

**ಹೊಳಲುಗೊಡು, ಹೊಳಲುಕೊಡು** (ಕ್ರಿ). ಪ್ರತಿಧ್ವನಿಯನ್ನುಂಟುಮಾಡು; ಮಾರ್ದನಿಗೊಡು: ಸ್ವಗತವಿಲ್ಲದ ಮೋಡ ಹೊಳಲುಗೊಡದು (ಸೂರ್ಯಪಾ. ೨೫-೧೦); ದಂಡೆಮಳಲಿಗೆ ಹೊಳಲುಗೊಟ್ಟಿವೆ ನೂರು ನೆನಪಿನ ಝರಿಗಳು (ನೆಲಮು. ೫೩-೪). **ಹೊಳಲುಕೊಡು:** ಕೂಗಿದರೆ ಹಾಗೇ ಹೊಳಲುಕೊಡುವ ಧ್ವನಿಯಂತೆ . . . ಹೌದು ಬುದ್ಧೀ ಎಂದು ನುಡಿವರು (ಮುದ್ರಾಮಂ. ೨೯). [ಹೊಳಲು$_{3}$ + ಕೊಡು$_{1}$]

**ಹೊಳಲೇಳು** (ಕ್ರಿ). ಡೊಗರು ಬೀಳು; ಪೊಳ್ಳು ಬೀಳು: ರುಧಿರವಾರ್ಧಿಯ ಕಟ್ಟೆವೊಡೆವಂತಾಯ್ತು ಹೋರಲು ಕೆಡೆದ ಭಟರುಗಳು ಅಟ್ಟೆಗಳು ಹೊಳಲೇಳೆ ಪಡೆ ನಡೆಗೆಟ್ಟು ಕಾಡುವ ಭರವು ನಿಂದುದು (ಶಾಶಿರಾ. ೩೪-೮).

[ಹೊಳಲು$_{1}$ (< ಪೋಟಿಲ್) + ಏಳು$_{1}$ (< ಏಟ್$_{1}$)]

**ಹೊಳವಳಿ** (ನಾ). ಚಟುವಟಿಕೆ: ಸತ್ತ ಹೆಣಕ್ಕೆ ಎವೆಹಳಚುವ ಹೊಳವಳಿಯುಂಟೇ (ಸರ್ವವ. ೩೭-೧೭೮). [?]

**ಹೊಳವು$_{1}$** (ಕ್ರಿ). ಹೊಳವಾಗು; ನಿರ್ಮಲವಾಗು: ಕಿಡಕಿಯೊಳಗಿಂದ ಚೆನ್ನಾಗಿ ಬಿಸಿಲು ಬಿದ್ದದ್ದು ಕಂಡು, ಇಂದು ಹಗಲೆಲ್ಲ ಹೀಗೇ ಹೊಳವೀತೆಂದು ಹಿಗ್ಗಿದನು (ಮುಂಬಯಿ. ೫-೪೯). [< ಹೊಳವು$_{2}$]

**ಹೊಳವು$_{2}$, ಹೊಳುವು** (ನಾ). ೧. ತೇಜಸ್ಸು; ಕಾಂತಿ: ವಜ್ರಗಳಲ್ಲಿ . . . ಹೊಳವು ನಾಲ್ಕು ಬಗೆಯಾಗಿಯಿರುವುದು (ಸೌಗಂಧಿ. ೩೭೪-೨೭); ಸಾಲವೆನ್ನುತ್ತಲೂ ಅಜ್ಜನ ಮುಖದಲ್ಲಿನ ಹೊಳವೇ ಮಾಂಗುವಾದಂತಾಯಿತು (ಮಣ್ಣುಹ. ೧೧೭). **೨. ಸ್ವರೂಪ;** ಲಕ್ಷಣ: ಚಿತ್ತದ ನೆಲೆಯಱಿದು ನೆಮ್ಮುವುದು ಮುರಿಪಿನ ಹೊಳವಱಿದು ಹಿಂಗುವದು (ಕುವ್ಯಾಅ. ೧೫-೨೪); ಈ ಪುನರ್ಘಟನೆಯ ರೀತಿ ಯಾವುದು? ಅದರ ಹೊಳವೇನು? (ನವ್ಯಕಾ. ೧೭). ೩. ಮಳೆ ನಿಂತ ನಂತರ ಉಂಟಾಗುವ ಬೆಳಕು; ಹೊರಪು: ಈಗೇನೋ ಎರಡು ದಿನ ಹೊಳವು ಬಿದ್ದಿದೆ, ನಾಳೆ ಮಳೆ ಬಂದರೆ ನಿಮ್ಮ ಗತಿಯೇನು? (ಬೆಳುಮ. ೪೭). **ಹೊಳುವು:** ೪. ಸೂಚನೆ; ಸುಳಿವು: ಕಳ್ಳರಿಗೆ ಹೊಳುವಿಲ್ಲ ಸುಳ್ಳರಿಗೆ ತಳವಿಲ್ಲ ಗೊಳ್ಳುಮಾತಿಗದು ಸದರಲ್ಲ (ಕನ್ನಜಾ. ೨೭೩). 'ಪೊಳಪು' ಪರಾ.

[ಹೊಳೆ$_{1}$ (< ಪೊಳೆ$_{1}$) + - ವು]

**ಹೊಳವು$_{3}$** (ನಾ). ರಂಧ್ರ; ತೂತು: ತನ್ನ ಕರವರಿದು ಹೊಳವಂ ಮಾಡಿ ತತ್ತಲೆಗಡಿದು ಬುರುಡೆ ನರ ತಂತಿ ಬೆರಳ್ಬಿರಡಿ ಸಪ್ತಸ್ವರವಿಡಿದು ನುಡಿಸೆ (ಪ್ರಾಢರಾ. ೪-೪೭); ಹಲಸಿನ ಮರದ ದಿಮ್ಮಿಯನ್ನು ಕೊರೆದು ಹೊಳವು ಮಾಡಿ, ಅದರ ಎರಡೂ ಕಡೆಗೂ ಚರ್ಮದ ಪೊರೆಗಳನ್ನು ಚರ್ಮದ ಪಟ್ಟಿಯಿಂದ ಬಿಗಿದು (ಸಂಗೀಚಂ. ೧೨೦). [?]

**ಹೊಳಸು** 'ಪೊಳೆಯಿಸು' ನೋ.

**ಹೊಳಹು** 'ಪೊಳಪು' ನೋ.

**ಹೊಳಹುಗಳಿ** (ಕ್ರಿ). ಬೆಳಕು ಇಲ್ಲವಾಗು; ಮಬ್ಬಾಗು: ಹೊಳಹುಗಳಿದುದು ಕಾಲವಿಸ್ನರೆಫಳಿಗೆ ಸ್ಮರಿಸಿ ಶಿವಶಿವಾಯೆಂದೊಳಗೊಳಗೆ ಮೂದಲಿಸುತಿರ್ದರು ಭಟರು ತಮ್ಮೊಳಗೆ (ಕುವ್ಯಾದ್ರೋ. ೧೪-೨೯). [ಹೊಳಹು (< ಪೊಳಪು) + ಕಳಿ$_{1}$ (< ಕಟಿ$_{1}$)]

**ಹೊಳಹುಗಾಣು** (ಕ್ರಿ). ಗೋಚರವಾಗು; ಪ್ರಕಟವಾಗು: ಪ್ರಳಯಕೋಟಿ ಪ್ರಾಣಗಳಿಗೆ ಹೊಳಹುಗಾಣಲೀಸದಂತೆ ಬೆಳೆದು (ಕನಕ. ೨೦೮-೭).

[ಹೊಳಹು (< ಪೊಳಪು) + ಕಾಣು (< ಕಾಣ್)]

**ಹೊಳಹುದೋಱು** (ಕ್ರಿ). ೧. ಕಾಂತಿಯನ್ನು ಹೊಮ್ಮಿಸು; ಬೆಳಕು ಚೆಲ್ಲು: ಬೆರಳ ಮುದ್ರಿಕೆಯ ಹೊಳಹುದೋಱುತ ಶುಭ್ರಚಮರವ ಜಾಳಿಸುತೆಳೆವೆಂಗಳೆಸೆದರರ್ತಿಯಲಿ (ಕಂನವಿ. ೮-೨೪). **೨. ಪ್ರಕಟಗೊಳ್ಳು ; ಕಾಣಿಸಿಕೊಳ್ಳು:** ಪೃಥ್ವಿ ಅಪ್ಪುವಿನ ಸಂಗದಲ್ಲಿ ಅನಲ ಅನಿಲನೆಂಬ ಪುತ್ಥಳಿ ಹುಟ್ಟಿತ್ತು . . . ಅದು ನಾದಪೀತ ಬಿಂದುಲಿಂಗ ಕಳೆವಸ್ತುವಾಗಿ ಹೊಳಹುದೋಱುತ್ತದೆ (ಮೋಳಮಾ. ೮-೨೭).

[ಹೊಳಹು (< ಪೊಳಪು) + ತೋಱು]

**ಹೊಳಿ** (ನಾ). ಒಂದು ಬಗೆಯ ಗೋಧಿ: ಗೋಧಿ . . . ಕೆಂಪು, ಖಪಲಿ, ಹೊಳಿಯೆಂಬ ಮೂರು ಜಾತಿಗಳು ಈ ಜಿಲ್ಲೆಯಲ್ಲಿ ಬೆಳೆಯುತ್ತವೆ (ಕಭಾಗ. ೨೭೧). [?]

**ಹೊಳುವು** 'ಹೊಳವು$_{2}$' ನೋ.

**ಹೊಳೆ$_{1}$** 'ಪೊಳೆ$_{1}$' ನೋ.

**ಹೊಳೆ$_{2}$** 'ಪೊಳೆ$_{2}$' ನೋ.

**ಹೊಳೆ$_{3}$** 'ಪೊಟೆ' ನೋ.

**ಹೊಳೆಇಪ್ಪೆ** (ನಾ). ಒಂದು ಬಗೆಯ ಇಪ್ಪೆಮರ: ಹೊಳೆಇಪ್ಪೆ, ಹುಳಿನಾನೆಲೆ (ಮೈಔಗಿ. ೧೨-೨೦೭). [ಹೊಳೆ$_{3}$ (< ಪೊಟೆ) + ಇಪ್ಪೆ$_{1}$ (< ಇರ್ಪೆ)]

**ಹೊಳೆಕೌವ** (ನಾ). ಒಂದು ಬಗೆಯ ಮರ: ಹೊಳೆಕೌವಮರ, ಧಾತ್ರೀಫಲ, ನೀರುಗಣಿಗಲು (ಮೈಔಗಿ. ೧೨-೨೦೦). [ಹೊಳೆ$_{3}$ (< ಪೊಟೆ) + ಕೌವ$_{1}$]

**ಹೊಳೆಗಣ್ಣು** (ನಾ). ಹೊಳೆಯುವ ಕಣ್ಣು; ಕಾಂತಿ ಸೂಸುವ ನೇತ್ರ: ಅವನನ್ನು ಹೊಳೆಗಣ್ಣುಗಳಿಂದ ನೋಡಿ, ಮುಗುಳ್ನಗೆಯನ್ನು ನಕ್ಕುದುಂಟು (ಸ್ವಪ್ನಹೊ. ೧೮೨).

[ಹೊಳೆ$_{1}$ (< ಪೊಳೆ$_{1}$) + ಕಣ್ಣು (< ಕಣ್)]

**ಹೊಳೆಗರ** (ನಾ). ಒಂದು ಬಗೆಯ ಮರ: ಹೊಳೆಗರ (ಶೂದ್ರಬಿಮೊ)- ದೊಡ್ಡವೃಕ್ಷ. ಕಟ್ಟಿಗೆ ಮಿದು (ಕಭಾಗ. ೫೧). [?]

**ಹೊಳೆಗಾಲುವೆ** (ನಾ). ನದಿಯಿಂದ ನೀರು ಹಾಯಿಸುವ ಕಾಲುವೆ: ಕೋಸಲದ ರುಂಹರಿ ವಿರಾಜಿಸಿತಮಮ ಹರಿಪಿನ ಹರಿವ ಹೊಳೆಗಾಲುವೆಯ ಕೆಟೆದುಂಬುಗಳ ನೀರುಗಳ . . . ಧವಳೇಕ್ಷುಗಳಿನನುಪಮನಂದನಂಗಳಲಿ (ತೊರರಾ. ೧-೯-೫). [ಹೊಳ್$_3$ (< ಪೊಟ್) + ಕಾಲುವೆ (< ಕಾಲ್ವಾಯ್)]

**ಹೊಳೆಚುಳ್ಳಿ** (ನಾ). ಒಂದು ಬಗೆಯ ಮುಳ್ಳುಪೊದೆ: ಹೊಳೆಚುಳ್ಳಿ, ಮುಳ್ಳಿಚುಳ್ಳಿ, ಹರಿಕುಶ, ತುಡೆಚುಳ್ಳಿ (ಮೃಔಗಿ. ೨-೨೪). [ಹೊಳ್$_3$ (< ಪೊಟ್) + ಚುಳ್ಳಿ$_1$]

**ಹೊಳೆತುಂಬೆ** (ನಾ). ಒಂದು ಬಗೆಯ ತುಂಬೆಗಿಡ: ಆದಿರಾಜ, ಹೊಳೆತುಂಬೆ, ನೆರ್ವಾಳ . . . ದೊಡ್ಡೆಲೆನಗೆ (ಮೃಔಗಿ. ೨೫-೪೭೭). [ಹೊಳ್$_3$ (< ಪೊಟ್) + ತುಂಬೆ$_2$]

**ಹೊಳೆತುಮ್ರಿ** (ನಾ). ಒಂದು ಬಗೆಯ ಸಸ್ಯ: ಕುಶರಥ, ಹಿಂಗೆ, ತುಮಕಿ, ತಿಂಡುಕ, ಹೊಳೆತುಮ್ರಿ, ಬಂಧ (ಮೃಔಗಿ. ೩೧-೪೭೭). [ಹೊಳ್$_3$ (< ಪೊಟ್) + ತುಮ್ರಿ$_1$ (< ತುಂಬುರ್)]

**ಹೊಳೆದಾಸವಾಳ** (ನಾ). ಒಂದು ಬಗೆಯ ಸಸ್ಯ: ಚೆಲ್ಲ, ಚೆಳ್ಳಿ, ಮರವಾಚಲುಮರ, ಹೊಳದಾಸವಾಳ (ಮೃಔಗಿ. ೪೯-೯೭೩). [ಹೊಳ್$_1$ (< ಪೊಟ್) + ದಾಸವಾಳ (< ದಾಸವಣ)]

**ಹೊಳೆನಗೆ** (ನಾ). ಒಂದು ಬಗೆಯ ಸಸ್ಯ: ಹೊಳೆನಗೆ, ನೀರಗನಿಗಲು (ಮೃಔಗಿ. ೪೪-೮೭೨). [ಹೊಳ್$_3$ (< ಪೊಟ್) + ನಗೆ?]

**ಹೊಳೆನೆಕ್ಕಿ** 'ಹೊಳೆಲಕ್ಕಿ' ನೋ.

**ಹೊಳೆಬೋಸಿ** (ನಾ). ಒಂದು ಬಗೆಯ ಸಸ್ಯ: ನೀರವಂಜಿ, ನೀರಂಬಿ, ಹೊಳೆಬೋಸಿ (ಮೃಔಗಿ. ೭೭-೧೩೭೭). [ಹೊಳ್$_3$ (< ಪೊಟ್) + ಬೋಸಿ?]

**ಹೊಳೆಮತ್ತಿ** (ನಾ). ಒಂದು ಬಗೆಯ ಮತ್ತಿಮರ: ಹೊಳೆಮತ್ತಿ . . . ಬಹುದೊಡ್ಡ ಮರ, ಹೊಳೆಗಳಲ್ಲಿ ಹುಟ್ಟುತ್ತದೆ (ಕಭಾಗ. ೫೧). [ಹೊಳ್$_3$ (< ಪೊಟ್) + ಮತ್ತಿ$_1$ (< ಮಟ್ಟಿ)]

**ಹೊಳೆಮೆಟ್ಟು** 'ಪೊಟೆಮೆಟ್ಟು' ನೋ.

**ಹೊಳೆಯಿಸು** 'ಪೊಳೆಯಿಸು' ನೋ.

**ಹೊಳೆಲಕ್ಕಿ, ಹೊಳೆನೆಕ್ಕಿ** (ನಾ). ಒಂದು ಬಗೆಯ ಔಷಧೀಸಸ್ಯ: ಹೊಳೆಲಕ್ಕಿ, ಸಂಗನಿ (ಮೃಔಗಿ. ೭೮-೧೫೯೭). **ಹೊಳೆನೆಕ್ಕಿ:** ಆದಿರಾಜ, ಹೊಳೆತುಂಬೆ . . . ಹೊಳೆನೆಕ್ಕಿ, ನೆರವಂಬಳೆ (ಮೃಔಗಿ. ೨೫-೪೭೭). [ಹೊಳ್$_3$ (< ಪೊಟ್) + ಲಕ್ಕಿ$_1$ (< ಲೊಕ್ಕಿ$_1$)]

**ಹೊಳೆವಳಿಗೆ** 'ಪಳವಳಿಗೆ' ನೋ.

**ಹೊಳೆಸಾಲು** (ನಾ). ಹೊಳೆಯ ದಂಡೆ; ನದಿಯ ತೀರ: ತಾಮ್ರಪರ್ಣಿಯ ಹುಡುಕಿ ಹೊಳೆಸಾಲಿನಲಿ ತಿರುಗಿತು ಬಲವು ಬಲಿಮುಖರ (ತೊರರಾ. ೪-೧೦-೫): ಹೊಳೆಸಾಲಿನೆತ್ತಂಬ ಕೃಷ್ಣಾತೀರದ ಯೆತ್ತುಗಳಿಗಾದರೂ ಧಾರವಾಡಜಿಲ್ಲೆಯಲ್ಲಿ ತಕ್ಕಮಟ್ಟಿಗೆ ಮಾನವಿರುತ್ತದೆ (ಕಭಾಗ. ೫೭). [ಹೊಳ್$_3$ (< ಪೊಟ್) + ಸಾಲು$_2$ (< ಸಾಲ್$_3$)]

**ಹೊಳೆಸು** 'ಪೊಳೆಯಿಸು' ನೋ.

**ಹೊಳೆಹೊನ್ನೆ** (ನಾ). ಒಂದು ಬಗೆಯ ಹೊನ್ನೆಮರ: ಹೊಳೆಹೊನ್ನೆ, ಶ್ರೀಹೊನ್ನೆ ಕೂವೆ, ಬೊಪ್ಪೆ (ಮೃಔಗಿ. ೧೭-೨೮೮). [ಹೊಳ್$_3$ (< ಪೊಟ್) + ಹೊನ್ನೆ (< ಪೊನ್ನೆ)]

**ಹೊಳ್ಳ** (ನಾ). ೧. ಡೊಗರು; ಪೊಟರೆ (?): ಹೊಳ್ಳದೊಳೊರಗಿ ಇಳ್ಳುಗಳೆವಗೆ ಜಗವು ಸುಳ್ಳೆಂದ ಗುರುವ ಕೃಪೆಯಾಗಿ (ಮೈಲಾರ. ೭೧-೨೪೧). ೨. ನಿಷ್ಪ್ರಯೋಜಕತೆ; ಹುರುಳಿಲ್ಲದಿರುವಿಕೆ (?): ಹೊಳ್ಳದ ಬಿಚ್ಚೇರು ತಾವು ಸುಳ್ಳರೆಲ್ಲರ ಕೂಡಿಕೊಂಡು ಬೆಳ್ಳನ ಬೆಳತನಕ ನೀರ ತಡಿಯಲ್ಲಿ ಕುಳಿತು ಗುಳ್ಳ ಗೊರಜೆ ಕೂಡಿ ತಿಂದು (ಕನಕ. ೧೪೨-೪). 'ಹೊಳ್ಳು' ಪರಾ. [< ಪೊಳ್ಳು?]

**ಹೊಳ್ಳಿಸು** (ಕ್ರಿ). ೧. ಟೊಳ್ಳುಮಾಡು; ಪೊಳ್ಳಾಗಿಸು: ವಿರಾಟನ ತನುವ ಹೊಳ್ಳಿಸಿ ರಕುತವನು ಶಾಕಿನಿಯರಿಗೆ ಹೊಯಿಸುವೆನು (ಕುವ್ಯಾವಿ. ೯-೩೫); ಹೊಳ್ಳಿಸಿದನಂಗಮಂ . . . ಬಾಯ್ಬಿರದು ರಕ್ತಗಳ ಹಳ್ಳದಿಂ ಸೇದಿದನು ಮನದಣಿಯೆ ಭೀಮ (ತುರಂಗ. ೭೭-೩೮). ೨. ಚೂರುಮಾಡು; ಹೋಳುಮಾಡು: ಹರಿಗೆ ಹೊಳ್ಳಿಸೆ ಖಡುಗ ಖಂಡಿಸೆ ಕೊರಳರಿಯೆ . . . ತಿವಿದರು (ಕುವ್ಯಾಭೀ. ೪-೩೨). ೩. ಬರಿದುಮಾಡು; ಖಾಲಿ ಮಾಡು: ಕಲೆಯಿಲ್ಲದೆ ಮನ್ನಿಪ ಸೂಳೆಗೇನನಾದೊಡವಟಿನೇಹಮಂ ಮೆಚ್ಚಿದು ಹೊಳ್ಳಿಸಿ ಬಿಟ್ಟಪನೆಂಬ ಡಾಳೆಯಂ ಸುಡುವುದು (ಅನಂಪು. ೮-೫೭); ನಾನಾಮುಖದ ದಾನಕೆ ತಂದ ಪಸ್ಸುವ ಬಾಚಿ ಹೊಳ್ಳಿಸಿ ತಿಂದು ಕೊಬ್ಬಿದ ನಿಮಗೆ ಸುಭಟರ ಮಾತದೇಕೆಂದ (ಕುವ್ಯಾವಿ. ೭-೧೩); ಕುಡುವುದು ಕೂರ್ಮೆಯುಳ್ಳವಳಿಗೇನನು ಬೇಡೆ ಕುಡದೆ ಹೊಳ್ಳಿಸಿ ಬಿಟ್ಟವಳ ಸುಡುವುದು (ಅನಂಚ. ೧೧-೧೩೩). ೪. ನಾಶಮಾಡು (?): ಒಳಗೆ ಹೊಳ್ಳಿಸಿಯನಲ ತನ್ನನು ಬೆಳಗಿ ಕುಡಿವುತ್ತಿರ್ದಡಾ ತಾನಳುಕದಿಹ ಜಲನಿಧಿ ಸಕಲಸತ್ವಗಳ ರಕ್ಷಿಸುತ (ನಿಭಾಗ. ೧೧-೧೪-೭); ಡಿಳ್ಳಿಯ ಖಾನರೆಂದೆಂಬ ಮೆದೆಗೆ ಬಲುಗೊಳ್ಳಿಯೆಂದೆಂಬ ಬಿರುದನು ಹೊಳ್ಳಿಸುವರ ಗಂಡನೆನಿಸಿಕೊಳುತ ಬೇಗ ಕೊಳ್ಳಿಯ ನಾಗನೆಯ್ದಿದನು (ಕುರಾಸಾಂ. ೧೧-೫೫). 'ಪೊಳ್ಳಯಿಸು' ಪರಾ. [ಹೊಳ್ಳು (< ಪೊಳ್ಳು) + -ಇಸು$_3$]

**ಹೊಳ್ಳಿಚಿತ** (ನಾ). (ಆಲಂ) ಪೊಳ್ಳಾದ ಆಲಾಪ; ವ್ಯರ್ಥಾಲಾಪ: ಹೋರೆಗರ ಹೊಳ್ಳಿಚಿತ ಜೋಯಿಸರಾರುಭಟೆಗಳ ಬಿಂಕ ಮಾಂತ್ರಿಕರೋರೆಮುಸುಕಿನ ಜಾಳುಜಪವೀ ನೃಪರ ಚಾಳ್ಪೆಸೆ (ಕುವ್ಯಾಅ. ೧೩-೫). [ಹೊಳ್ಳು (< ಪೊಳ್ಳು) + ಇಚಿತ]

**ಹೊಳ್ಳು** 'ಪೊಳ್ಳು' ನೋ.

**ಹೊಳ್ಳುಗ** (ನಾ). ನಿಷ್ಪ್ರಯೋಜಕನಾದವನು: ಈ ಹೊಳ್ಳುಗರ ಮಾತಿಗೆ ಬಲ್ಲವನಲ್ಲಿ ಸಿಕ್ಕುವನೆ (ಮೋಳಿಮಾ. ೧೭೩-೭೫೩); ಕೊಂತದ ಹೊಳ್ಳುಗರೆನಗಾಂತು ನಿಲ್ಲುದಚ್ಚರಿ (ಉದ್ಭಟ. ೪-೭೩); ಹೊದಚಿನ ಹೊಳ್ಳುಗರನೊಡೆಹಾಯ್ದು . . . ರಥವ ಹರಿಸೆಂದ (ಕುವ್ಯಾದ್ರೋ. ೨-೩೦). [ಹೊಳ್ಳು (< ಪೊಳ್ಳು) + -ಗ$_2$]

**ಹೊಳ್ಳುಗಣೆ** (ನಾ). ನಿಷ್ಪ್ರಯೋಜಕವಾದ ಬಾಣ; ಹುಸಿಬಾಣ: ಸೂತತನಯನ ತಲೆಯ ಬೆಸುಗೆಯ ಬಿಡಿಸುವಂಬಿನ ಹಿಳುಕನುಗಿಯಾ ಹೊಳ್ಳುಗಣೆಯೇಕೆ (ಕುವ್ಯಾಕ. ೨೩-೪೩). [ಹೊಳ್ಳು (< ಪೊಳ್ಳು) + ಕಣೆ$_1$]

**ಹೊಳ್ಳುಗಳೆ** 'ಪೊಳ್ಳುಗಳೆ' ನೋ.

**ಹೊಳ್ಳುಧೂಳಿ** (ನಾ). ಒಣ ಧೂಳು; ಶುಷ್ಕವಾದ ಧೂಳು: ಬಿಜುಗಾಳಿ ಬೀಸಿತ್ತು ವನದ ತಬಗೆಲ ಹೊಳ್ಳುಧೂಳಿಯಂ ನೆಗಪಿತ್ತು (ಅರಿರ. ದೇ. ೧೭೭-೧೮). [ಹೊಳ್ಳು (< ಪೊಳ್ಳು) + ಧೂಳಿ (= ಧೂಲಿ)]

**ಹೊಳ್ಳುನುಡಿ** 'ಪೊಳ್ಳುನುಡಿ' ನೋ.

**ಹೊಳ್ಳುಮಾನಸ** (ನಾ). ಕ್ಷುಲ್ಲಕಮನುಷ್ಯ; ಹುಲುಮನುಜ: ನಾನೆ ಧನ್ಯ ಹೊ[ಪಾಠಾಂ. ಡೊ]ಳ್ಳುಮಾನಸನಲ್ಲ ಬಂದ ಕಾರ್ಯವ ನೀವು ತೆಳ್ಳನೆ ತಿಳಿವೊಲು ಪೇಳಿ (ವರ್ಧಚ. ೬-೧೪). [ಹೊಳ್ಳು (< ಪೊಳ್ಳು) + ಮಾನಸ$_1$ (< ಮಾನುಸ)]

**ಹೊಳ್ಳುಮಾತು** 'ಪೊಳ್ಳುಮಾತು' ನೋ.

**ಹೊಳ್ಳುವಾಚಿಸು** (ಕ್ರಿ). ಜೊಳ್ಳನ್ನು ಹಾರಿಸುವಂತೆ ತೂರು: ದ್ರೋಹಿ ರಕ್ಕಸನ ಎಳ್ಳೆಸಿತು ಕಡಿಖಂಡಮಾಡಿಯೆ ಹೊಳ್ಳುವಾಚಿಸಲೂದುವೆನು (ತೊರರಾ. ೫-೭-೩೭). [ಹೊಳ್ಳುವಾಚು + -ಇಸು$_3$]

**ಹೊಳ್ಳುವಾಚು, ಹೊಳ್ಳುಹಾಚು** (ಕ್ರಿ). ವಿಫಲವಾಗಿ ಹೋಗು; ನಿಷ್ಪ್ರಯೋಜಕವಾಗು: ಕೊರಳಿಗೊಡ್ಡಲು ಹೊಳ್ಳುವಾಚಿದ ಸರಳು ಮಕುಟವ ತಾಗುವುದು (ಕುವ್ಯಾಕ. ೨೫-೧೭). **ಹೊಳ್ಳುಹಾಚು:** ತಲಹಿಲ್ಲದ ಕೋಲು ಹೊಳ್ಳುಹಾಚುವುದಲ್ಲದೆ ಗುಚಿಯ ತಾಗಬಲ್ಲುದೆ (ಬಸವ. ೨೦೨). [ಹೊಳ್ಳು (< ಪೊಳ್ಳು) + ಪಾಚು$_1$]

**ಹೊಳ್ಳುಹಾಚು** 'ಹೊಳ್ಳುವಾಚು' ನೋ.

**ಹೊಳ್ಳುಹೊಟ್ಟೆ** (ನಾ). ಒಂದು ಬಗೆಯ ಸಸ್ಯ: ತುಂದಿಲ: – ಮಲೆಸೌತೆ, . ಹೊಳ್ಳುಹೊಟ್ಟೆ (ಓಷಧಿ. ೭೧). [?]

**ಹೊಳ್ಳೆ$_1$, ಹೊರಳೆ$_3$** (ನಾ). ಮೂಗಿನ ಸೊಳ್ಳೆ; ನಾಸಾರಂಧ್ರ: ಮೂಗಿನ ಹೊಳ್ಳೆಯರಳಿ ಬುರುಬುರು ಬುಸಟಾಗಿ ತೇಜಿಗಳು ತೆಗೆದುವು (ಭರಚ. ೨೪-೭೭); ಮೂಗಿನ ಹೊಳ್ಳೆಗಳಲ್ಲಿ . . . ಹಾಲಿನಂತೆಯು ವಾಸನೆಯುಳ್ಳ ಕುದುರೆಗಳು (ಸೌಗಂಧಿ. ೩೦೩- ೧೩). **ಹೊರಳೆ$_3$:** ಸೊಂಡೆಯ ತುದಿಗೆ ಎರಡು ಹೊರಳೆಗಳು ಇರುವವು (ಮುಂಬಯಿ. ೪-೨೨); ಸಿಟ್ಟಿನಿಂದ ಮೂಗಿನ ಹೊರಳೆಗಳೂ ಅರಳಿದ್ದುವು (ಅಶೋಕ. ೬೩). [< ಪೊಳ್ಳು]

**ಹೊಳ್ಳೆ$_2$, ಹೊರಳೆ$_4$** (ನಾ). ನೀರುಹಾವು; ಒಳ್ಳೆ: ಗರುತ್ಮಂತನೇಂ ಪೋಗುವನೆ ಹೊಳ್ಳೆಗಳನಿಕ್ಕುವುದಕೆ (ಶ್ರೀರಾಚ. ೨-೨೭). **ಹೊರಳೆ** .

**ಹೊರಳೆಯ ಹಾವು** = ನೀರುಹಾವು: ದೇಶಗಟ್ಟವರೆಲ್ಲ ಸೇರುವ ವಾಸ ಸರಿ ವಾರಾಶಿ ಮಧ್ಯದಿ ಲೇಸಿನೊಳಗೊಪ್ಪಿಹರೆ ಹೊರಳೆಯ ಹಾವಿನಂದದಲಿ (ಜನಭಾ. ೬೩-೧೪). [< ಒಳ್ಳೆ$_2$]

**ಹೊಳ್ಳೆದೆ** (ನಾ). ಸತ್ವಹೀನವಾದ ಹೃದಯ; ಅಳ್ಳೆದೆ: ಹೊಳ್ಳೆದೆಯ ಹೊಱಬಿಗರೊಳೆಂಬುದೀ ನುಡಿಗಳಂ ತಳ್ಳಂಕದಿಂದೆ ನೀನಾಹವದೊಳಿಂತೆಣಿಕೆಗೊಳ್ಳ ಲೇಕಿವನ ಬಿಂಕವನೀಗ ಮುಱಿವೆನೆನ್ನಂ ಕಳುಹಿ ನೋಡು (ಜೈಮಿಭಾ. ೨೮-೧೦).
[ಹೊಳ್ಳು (< ಪೊಳ್ಳು) + ಎದೆ (< ಎರ್ದೆ)]

**ಹೊಱ** 'ಪೊಱ' ನೋ.

**ಹೊಱಂಗ** (ನಾ). ಹೊರಗಿನ ಪ್ರದೇಶ; ಬಹಿರಂಗ: ಮಿಸುಗುವಾಧಾರಚಕ್ರದ ವಿಶುದ್ಧಿಗಳಾದಿಯಸಕದ ಹೊಱಂಗದೊಳಗಿರ್ಪವೊಂದೊಂದು ಸಂತಸ ಕಂಕಣಂ ತೋಱಿದಾ ಮೇರುವಳಹೊಱಗಿನಂತಕೋಟಿಗಣಂಗಳು (ವೀಶೈಪು. ೮-೨೦-೪೬).
[ಹೊಱ (< ಪೊಱಗು) + ಅಂಗ$_2$]

**ಹೊಱಂಡು** 'ಪೊಱಮಡು' ನೋ.

**ಹೊಱಕಂಪಣ** (ನಾ). ನಾಡಿನ ಒಂದು ಭಾಗದ ಹೊರಗಿನ ಪ್ರದೇಶ; ಕಂಪಣದ ಹೊರಭಾಗ: ನಾಡೊಳಗೆ ವೊಳಕಂಪಣ ಹೊಱಕಂಪಣವೆಂನದೆ ಏನು ನಾಡೊಳಗೆ ಹುಟ್ಟಿದಡೆಉ ಸಮಾನಭಾಗಿಯಲು ಹಚ್ಚುಕೊಂಡುಂಬರ ಮಂಗಳಮಹಾಶ್ರೀ (ಎಕ. VI. ಕಡೂರು. ೧೫೬-೬೪; 1191). [ಹೊಱ (< ಪೊಱಗು) + ಕಂಪಣ$_1$]

**ಹೊಱಕಟ್ಟು, ಹೊರಕಟ್ಟು, ಹೊರಗಟ್ಟು$_2$** (ನಾ). ೧. ಪ್ರವೇಶದ್ವಾರ; ತಲೆಬಾಗಿಲು: ತುಂಟ ಮನೆಯ ಪೊಱಮಟ್ಟು ಹೊಱಕಟ್ಟ ಕಟ್ಟಿ ಮತ್ತಾ ಮನೆಯವರಾರಱಿಯದಂದದಿನಾ ಗೃಹದ ಹೊಱಗಣ ಬಯಲಿಗೆ ಬಲುಗಿಚ್ಚನಿಕ್ಕಿ (ಪ್ರಭಂಜ. ೩-೧೧೮). **ಹೊರಕಟ್ಟು:** ೨. ಬಾಹ್ಯದ ಆವರಣ: ನೂರಾರು ಲಕ್ಷೋಪಲಕ್ಷ ಒತ್ತಡ ಸಂಮರ್ದದಲ್ಲಿ, ಪರಮಾಣುಗಳ ಋಣವಿದ್ಯುತ್ಕಣದ ಹೊರಕಟ್ಟು ಸಂಪೂರ್ಣವಾಗಿ ಸುಟ್ಟುಹೋಗಿರುತ್ತದೆ (ಭೂಹುಟ್ಟು. ೭೦). ೩. ಪುಸ್ತಕದ ಹೊರಕವಚ,— ಮೇಲುಹೊದಿಕೆ: ಮುಂಬಯಿಸರಕಾರದವರ ಸಹಾಯಕಥನದಿಂದ ಪ್ರಕಟವಾದ ಉದ್ಗ್ರಂಥಗಳು ಕಾಗದ, ಅಚ್ಚು, ಹೊರಕಟ್ಟು ಇವುಗಳಲ್ಲಿಯೂ ಶ್ರೇಷ್ಠತರಗತಿಯವಾಗಿವೆ (ಶಾಸಮಾ. ೪೯). **ಹೊರಗಟ್ಟು$_2$:** ೨. ದರ್ಶನದ ಹೊರಗಟ್ಟು ಹೇಗಿದ್ದರೂ ಕಾವ್ಯದ ಪ್ರಧಾನಶಕ್ತಿ ಇದ್ದ ಹಾಗೇ ಇರುತ್ತದೆ (ಸವ್ಯಕಾ. ೧೧೪).
[ಹೊಱ (< ಪೊಱಗು) + ಕಟ್ಟು$_2$]

**ಹೊಱಕತ್ತರ** 'ಪೊಱಕತ್ತರ' ನೋ.

**ಹೊಱಕಯ್** 'ಪೊಱಕೆಯ್' ನೋ.

**ಹೊಱಕಾಲ್** 'ಪೊಱಕಾಲ್' ನೋ.

**ಹೊಱಕಾಲು** 'ಪೊಱಕಾಲ್' ನೋ.

**ಹೊಱಕಾಲುಗೊಳ್** 'ಪೊಱಕಾಲ್ಗೊಳ್' ನೋ.

**ಹೊಱಕಾಲ್ಗೊಳು** 'ಪೊಱಕಾಲ್ಗೊಳ್' ನೋ.

**ಹೊಱಕಾಹು** (ನಾ). (ಕೋಟೆ, ಪಟ್ಟಣ ಮುಂತಾದುವುಗಳ) ಹೊರಗಿನ ಆವರಣದಲ್ಲಿರುವ ಕಾವಲು: ಖಳರ ವಿಭಾಡಿಸಿ ತಲೆಗಳ ಹೊಯ್ದು ಕೂಡೆ ಬೊಬ್ಬಿಱಿದಾಗ ಹೊಱಕಾಹಿನಧಟರು ಪಾಡುಪಂಥಗಳ ಮಱೆದರು (ಕಂಸವಿ. ೧೪-೯೪).

**ಹೊಱಕಾಹಿನವರು** = (ಕೋಟೆ, ಪಟ್ಟಣ ಮುಂತಾದುವುಗಳ) ಹೊರಗಿನ ಆವರಣದಲ್ಲಿ ಕಾವಲು ಕಾಯುತ್ತಿರುವವರು,— ಕಾವಲುಪಡೆ: ಸಲೆ ಸುರಂಗಗಳ ಘಾತವ ಹೂಳಿದರಾಗ ತಳುವದೆ ಹೊಱಕಾಹಿನವರು (ಕಂಸವಿ. ೧೪-೯೩).
[ಹೊಱ (< ಪೊಱಗು) + ಕಾಹು$_1$ (< ಕಾಪು)]

**ಹೊಱಕುಳಿ** 'ಪೊಱಕುಳಿ' ನೋ.

**ಹೊಱಕೂಟ** (ನಾ). ಹೊರಗಿನ ಸಂಬಂಧ; ಬಹಿರ್ಯೋಗ: "ಮಱಹಿನಲಿ ಒಳಗುಡುವ ಸೀರೆಯಲಿ . . . ಹೊಱಕೂಟದಲಿ . . . ಅಂತರಾಪ್ಯಯಮೆನಿಕ್ಕುಂ" (ಮಂಗರಾ. ೧೫೦-೬೬). [ಹೊಱ (< ಪೊಱಗು) + ಕೂಟ$_1$]

**ಹೊಱಕೆಯ್** 'ಪೊಱಕೆಯ್' ನೋ.

**ಹೊಱಕೇರಿ** 'ಹೊಱಗೇರಿ' ನೋ.

**ಹೊಱಕ್ಕೆ** 'ಪೊಱಕೆಯ್' ನೋ.

**ಹೊಱಕೋಟೆ** 'ಪೊಱಗೋಟೆ' ನೋ.

**ಹೊಱಗಡೆ** 'ಪೊಱಗಡೆ' ನೋ.

**ಹೊಱಗಣ** 'ಪೊಱಗು' ಪರಾ.

**ಹೊಱಗಾಡು** (ಕ್ರಿ). ಬಾಹ್ಯದಲ್ಲಿ ವರ್ತಿಸು; ಬಹಿರಂಗದಲ್ಲಿ ವ್ಯವಹರಿಸು: ಹೊಱಗಾಡಿ ಬಂದನೆಂದು ನುಡಿಸಲೊಲ್ಲದೆ ಸುಮ್ಮನಿದ್ದನು (ಅವಚಿಂ. ೨೦೭-೯೬೨); ಹೊಳೆವ ಕನ್ನಡಿ ಕೈಯೊಳಿರ್ದು ನೋಡದೆ ನೀರ ನೆಳಲಲ್ಲಿ ಮೊಗವ ನೋಳ್ಪಂತೆ ಒಳಗಿದ್ದ ಚಿದ್ರೂಪ ನೋಡದೆ ಜಗವೆಲ್ಲ ಬಳಲುತಿಹುದು ಹೊಱಗಾಡಿ (ಭರಚ. ೧-೧೦೩).

**ಹೊಱಹೊಱಗಾಡು** (ದ್ವಿರುಕ್ತಿ): ಆರು ಬಲ್ಲರು ಹಂಸತತ್ವವ ತಮ್ಮ ಶರೀರ ತುಂಬಿರುತಿಹುದದನು ಹಾಱದೆ ಸಾಱದೆ ಹೊಱಹೊಱಗಾಡಿ ಸಂಸಾರದುಃಖವನುಣುತಿಹರು (ಭರಚ. ೧-೧೦೨). [ಹೊಱಗೆ (< ಪೊಱಗೆ) + ಆಡು$_1$]

**ಹೊಱಗು** 'ಪೊಱಗು' ನೋ.

**ಹೊಱಗುಂಡ** 'ಪೊಱಗುಂಡ' ನೋ.

**ಹೊಱಗುಡಿ$_1$** (ನಾ). (ಆಲಂ) ಹೊರಹೊಮ್ಮುವಿಕೆ; ಪ್ರಕಟಣೆ: ಘುಡುಘುಡಿಸಿ ರೋಮಾಂಚನದ ಹೊಱಗುಡಿಯ ಸೊಂಪಿನ ಮೆಯ್ಯ ಕಡುಗಲಿ ತಡೆದನೇಕಾಂಗದಲಿ ಸಾತ್ಯಕಿ ಶಲ್ಯಭೂಪತಿಯ (ಕುವ್ಯಾ.ಕ. ೪-೧). [ಹೊಱ (< ಪೊಱಗು) + ಗುಡಿ$_2$]

**ಹೊಱಗುಡಿ$_2$** (ನಾ). (ಯುದ್ಧ ಮುಂತಾದ ಕಾರಣದಿಂದ ಪಟ್ಟಣ ಅಥವಾ ಕೋಟೆಯ) ಹೊರಭಾಗದಲ್ಲಿ ರಚಿತವಾಗಿರುವ ಡೇರೆ,—ಶಿಬಿರ; ಹೊರವಲಯದಲ್ಲಿ ನಿರ್ಮಿತವಾಗಿರುವ ಪಾಳೆಯ: ಬಳಿಕ ಸುಮುಹೂರ್ತದಲಿ ಹೊಱಗುಡಿ ಬಳಸಿ ಹೊಯಿದವು (ಕುವ್ಯಾ.ಆ. ೧೮-೭). [ಹೊಱ (< ಪೊಱಗು) + ಗುಡಿ$_3$]

**ಹೊಱಗೂಲಿ** (ನಾ). ಹೊರಗಿನ ಕಾರ್ಯ,—ಕೆಲಸ: ಅಕ್ಕಿ ಮೂ ೭೦ ಹೊಱಗೂಲಿಗೆ ಅಡಿಗೆಯ ಬ್ರಾಹ್ಮಣಗೆ (ಸೌಇಇ. ೧೯೩೨, ಉಡುಪಿ. ೨೬೩-೧೭; 1359).
[ಹೊಱ (< ಪೊಱಗು) + ಕೂಲಿ$_1$]

**ಹೊಱಗೆ** 'ಪೊಱಗೆ' ನೋ.

**ಹೊಱಗೆಲಸ, ಹೊರಕೆಲಸ, ಹೊರಗೆಲಸ** (ನಾ). ಹೊರಗಿನ ಕಾರ್ಯ; ಸುತ್ತುಕೆಲಸ: ಧರಣಿಪತಿ ಕೇಳವರ ತೊತ್ತಿರ ಹೊಱಗೆಲಸದವದಿರ ಪಸಾಯಿತೆಯರಿಗೆ ಪಡಿಗವ ನೀಡ ಸಲ್ಲರು ಸೋಮಯಾಜಿಗಳು (ಕುವ್ಯಾ.ಆ. ೮-೯). **ಹೊರಕೆಲಸ:** ನಿನಗೂ ಹೊರಕೆಲಸಕ್ಕೆ ಬೇರೆ ಜನರಿರಲಿಲ್ಲ . . . ಇವನ್ನೆಲ್ಲಾ ಯೋಚಿಸಿದ ಮೇಲೆ . . . ಈ ವ್ಯವಸ್ಥೆ (ದೇವಹಂ. ೧೩೫). **ಹೊರಗೆಲಸ:** ಹೊರಗೆಲಸಕ್ಕೆ ಹೆಣ್ಣಾಳೊಬ್ಬಳನ್ನು ಗೊತ್ತು ಮಾಡಬೇಕು (ರೂಢಿ). [ಹೊಱ (< ಪೊಱಗು) + ಕೆಲಸ]

**ಹೊಱಗೇರಿ, ಹೊರಗೇರಿ, ಹೊಱಕೇರಿ** (ನಾ). (ಊರಿನ) ಹೊರಭಾಗದಲ್ಲಿರುವ ಬೀದಿ; (ಪಟ್ಟಣದ) ಹೊರಪ್ರದೇಶಕ್ಕೆ ಸೇರಿರುವ ದಾರಿ: ಊರ ನೋಡುವೆನೆಂದು ಹೊಱಗೇರಿಗೆಯ್ತಂದು ಊರೆಂತುಟೆಹುದೊಯೆಂಬಂತೆ (ಭರಚ. ೬೬-೧೨). **ಹೊರಗೇರಿ:** ಹೊರಗೇರಾಗ್ಗಾದ ಬರಬ್ಯಾಡೋ ನೆರಮನಿಯ ಹರಲಿ ಏನೇನ ಹೂಡಬ್ಯಾಡೊ (ಕಜಾಗೀ. ೬೪). **ಹೊಱಕೇರಿ:** ಅದಕ್ಕಿಮ್ಮಿಗಿಲಾದ ಒಳಕೇರಿ ಹೊಱಕೇರಿಗೆ ಗಣನೆ ಇಲ್ಲ (ಶೂನ್ಯಸಂ. ೮೪-೧೪); ಯಮನವರಾಱದೊಯ್ಯಲು ನಾಕದಲಿ ಹೊಱಕೇರಿಗಟ್ಟಿದುದೆನಲು ಕೊಂದನು ರಿಪುಚತುರ್ಬಲವ (ಕುವ್ಯಾದ್ರೋ. ೧೮-೫೧).
[ಹೊಱ (< ಪೊಱಗು) + ಕೇರಿ]

**ಹೊಱಚಾವಡಿ, ಹೊರಚಾವಡಿ** (ನಾ). ೧. ಅರಮನೆಯ ಹೊರಭಾಗದಲ್ಲಿರುವ ಓಲಗಶಾಲೆ,— ಸಭಾಮಂದಿರ: ಇದಿರಾಗಿ ಹೋಗು ಜಯಂತಾಂಕಯೆಂದಟ್ಟಿ ಪದೆದಿರ್ದ ಹೊಱಚಾವಡಿಯೊಳು (ಭರಚ. ೩೯-೫೧). **ಹೊರಚಾವಡಿ:** ೨. ಮನೆಯ ಹೊರಭಾಗದಲ್ಲಿರುವ ಜಗುಲಿ: ಹೊರಚಾವಡಿಯಲ್ಲಿ ಮಕ್ಕಳೆಲ್ಲ ಸೇರಿಕೊಂಡು ಗದ್ದಲ ಮಾಡುತ್ತಿದ್ದಾರೆ (ರೂಢಿ). [ಹೊಱ (< ಪೊಱಗು) + ಚಾವಡಿ]

**ಹೊಱಟು** 'ಪೊಱಂಡು$_2$' ನೋ.

**ಹೊಱಮಡಿಸು** 'ಪೊಱಮಡಿಸು' ನೋ.

**ಹೊಱಡು₁** 'ಪೊಱಮಡು' ನೋ.

**ಹೊಱಡು₂** 'ಪೊಱಂಡು₂' ನೋ.

**ಹೊಱಡುಬೆನ್ನು** (ನಾ). ಬಾಗಿದ ಬೆನ್ನು; ಗೂನುಬೆನ್ನು: ಹೊಱಡುಬೆನ್ನಿನ ಹೊಲತಿ ಹೋಗದಿರೆನುತ ಬರೆ ದೂರದಲಿ ಬಲವೈರಿ (ನಿಭಾಗ. ೬-೧೨-೯).

[ಹೊಱಡು₂ (< ಪೊಱಂಡು₂) + ಬೆನ್ನು (< ಬೆನ್)]

**ಹೊಱಡುಮ್ಮೆ** (ನಾ). ಗೂನುದೇಹ; ವಕ್ರವಾದ ಶರೀರ: ಹೊಱಡುಮ್ಮೆಗಳ . . . ಭೀಕರಾಂಗದ ಕಿತ್ತ ಖಡುಗದ ಕರಕಪಾಲದಲೊತ್ತರಿಸಿದುದು ಮುಂದ ಶಾಕಿನಿ ಡಾಕಿನೀನಿವಹ (ನಿಭಾಗ. ೩-೯-೨೫).

[ಹೊಱಡು₂ (< ಪೊಱಂಡು₂) + ಮ್ಮೆ (< ಮೆಯ್₂)]

**ಹೊಱತು** 'ಪೊಱತು' ನೋ.

**ಹೊಱತೆ** (ನಾ). ಹೊರತು; ಹೊರಗಾದುದು: ಪ್ರೇತಾಂಗಕ್ಕೆ ವಿಭೂತಿ ರುದ್ರಾಕ್ಷಿಯ ಕಟ್ಟಬಹುದೇ ಶಿವಲಿಂಗ ಹೊಱತೆಯಾಗಿ (ಮೋಳಿಮಾ. ೧೬೬-೬೨೧); ಸಾರಸ್ವಾದು ಲೇಸೆಂದಡ ಜಿಹ್ವೆ ಹೊಱತೆಯಾಗಿ ಕುಱುಹುಗೊಂಡಿತ್ತೆ (ಮದೇವ. ೨೮೨-೪೯). [< ಪೊಱತು]

**ಹೊಱದೆಗೆ** 'ಪೊಱತೆಗೆ' ನೋ.

**ಹೊಱದ್ವಾರ, ಹೊರದ್ವಾರ** (ನಾ). ಹೊರಗಿನ ಬಾಗಿಲು; ಮುಂಬಾಗಿಲು: ಹೊಱದ್ವಾರ ಒಂಬತ್ತು ಒಳದ್ವಾರ ಸರ್ವಾಂಗಮಯ (ಸರ್ಪವ. ೨೩-೧೦೬). **ಹೊರದ್ವಾರ:** ಅರಮನೆಯ ಹೊರದ್ವಾರದಲ್ಲಿ ಜನರು ಗುಂಪುಗೂಡಿದ್ದಾರೆ (ರೂಢಿ).

[ಹೊಱ (< ಪೊಱಗು) + ದ್ವಾರ]

**ಹೊಱನಿವಾಳಿ** (ನಾ). (ಮನೆ, ಭವನ ಮುಂತಾದುವುಗಳ) ಹೊರಆವರಣದಲ್ಲಿ ತೆಗೆಯುವ ನಿವಾಳಿ: ವಾದ್ಯಕುಳ ನಾದ ಸೂಸುತಿರ್ದವು ಹೊಱನಿವಾಳಿ ಮಂಗಳವುಘೆಯಲಿಡಿದಿಡಿದು ಚಲುವು ಮಿಗಲು (ಸಿದ್ಧರಾ. ೮-೭೮).

[ಹೊಱ (< ಪೊಱಗು) + ನಿವಾಳಿ]

**ಹೊಱನೂಂಕು, ಹೊರನೂಕು** (ಕ್ರಿ). ಹೊರಗೆ ಹೋಗುವಂತೆ ತಳ್ಳು,—ದೂಡು: ಕೊಳುವ ಕೊಡುವೆಡೆಯಲಿಯಱಿಯದ ಮೊಳೆಗಳಂ ಹೊಱ[ಪಾಠಾಂ. ಹೆಱ, ಹೆಱ್, ಹೊಱ್]ನೂಂಕಿ ವೊಳ್ಳಿದ ಮೊಳೆಯನೊಳಕೊಂಬಕ್ಕಸಾಲೆಯು ತಾನೆ (ಬಸಪು. ೨೧-೩೦). **ಹೊರನೂಕು:** ಆ ಬಂಗಲೆಯ ಜವಾನನು ಬಾಗಿಲಲ್ಲಿ ನಿಂತ ಭಿಕ್ಷುಕನನ್ನು ಹೊರನೂಕಿದನು (ರೂಢಿ). [ಹೊಱ (< ಪೊಱಗು) + ನೂಂಕು₁]

**ಹೊಱಪ?** (ನಾ). (?): ಹರಿಯಂ [ತೆ]ಱುವರ್ಸ್ವಾಲಿಗವನೆಯಬ್ಬಿಡ ಹರಸಲ್ಲ ಹೊಱಪ ತೆಗೆಯ ಸಲ್ಲ (ಕಇಆ. ೨೬-೩೯-೩೮; 1110). [?]

**ಹೊಱಪಾಳೆಯ** 'ಪೊಱಪಾಳೆಯ' ನೋ.

**ಹೊಱಬಾಗಿಲು, ಹೊರಬಾಗಿಲು, ಹೊರವಾಗಿಲು** (ನಾ). = ಹೊರದ್ವಾರ: ಹೊಱಬಾಗಿಲುಪ್ಪರಿಗೆಯ ಚಂದ್ರಶಾಲೆಗೆ ಪಿರಿದು ಚಿಕ್ಕೊಳಿಗದವರ ನೆರವಿಯೊಳರಸನ್ನೆ ತರುತಿರೆ (ಕಂನವಿ. ೨೫-೨).**ಹೊರಬಾಗಿಲು:** ತೋಟದ ಹೊರಬಾಗಿಲವರೆಗೆ ಬಂದು ಪಂಡಿತನು ಆಕೆಯನ್ನು ಕಳಿಸಿಕೊಟ್ಟ (ಚದೇವ. ೧೪೯); ಗುರುರಾಜರಾಯರು ಹೊರಬಾಗಿಲಲ್ಲಿ ಸದ್ದಾದುದು ತಿಳಿದು ಕತ್ತೆತ್ತಿ ನೋಡಿದರು (ಮರಳಿ. ೯). **ಹೊರವಾಗಿಲು:** ಹೊರವಾಗಿಲ ಕಾವಲ ಪಡೆಯ ನಾಯಕನಿಗೆ ಹೇಳು (ಸಪತಿ. ೨೧).

[ಹೊಱ (< ಪೊಱಗು) + ಬಾಗಿಲು (< ಬಾಗಿಲ್)]

**ಹೊಱಬಾಡಗೆ(?).** (?). (?): ಅಕ್ಕಿಯ ಹೊಱಬಾಡಗೆ ಉತ್ತರಿಸಿದನಂ (ಬೊಂಶಾ. ೧೪೪೦, ಕುಮಟ. ೧೧೩-೩೦; 1475). [?]

**ಹೊಱಬಾಹೆ** (ನಾ). ಹೊರಗಡೆ; ಹೊರಭಾಗ: ಪುರದ ಹೊಱಬಾಹೆಯಲಿ ತಾವ್ವೆವರು ಮಹಾಸನ್ನಾಹಚಾಪಸ್ಫುರಿತತೂಣೀಬದ್ಧಕಂಪಿತಖಡ್ಗಪಾಣಿಗಳು ಗುರುಸಹಿತಲಿವರಿದ್ದರು (ಶುವ್ಯಾಆ. ೭-೬೫); ಪುರದ ಹೊಱಬಾಹೆಯಲಿ ಶಂಖವನಿರದೆ ಮೊಳಗಿಸಿ . . . ನೃಪನನು ಕರೆದರು (ನಿಭಾಗ. ೧೦-೬೫-೨೦). [ಹೊಱ (< ಪೊಱಗು) + ಬಾಹೆ]

**ಹೊಱಬಿಗ** 'ಪೊಱಬಿಗ' ನೋ.

**ಹೊಱಬೀಡು** 'ಪೊಱವೀಡು' ನೋ.

**ಹೊಱಬೀಸು** (ಕ್ರಿ.). ೧. ಹೊರಗೆ ಎಸೆ; ಆಚೆಗೆ ಒಗೆ: ಮುಸುಕುವರಿಶರವೀಧಿಯನು ಖಂಡಿಸುವನೀ ರಘುನಾಥನವ ನಿಪ್ಪಸರದಲಿ ಹೂಳುವನು ಹೊಱಬೀಸು [ಪಾಠಾಂ. ಳು]ವನು ರಘುನಾಥ (ತೊರರಾ. ೬-೫೦-೩೩); ಮೂಱಂಬಿನಲಿ ಹೊಱಬೀಸಿದನು ಬಹುಬಾಣ ನಿಕರವನು (ನಿಭಾಗ. ೧೦-೭೧-೩೮). ೨. ದೂರಮಾಡು; ನಿವಾರಿಸು: ಸುಜನರು ಬಹುಪರಾಕ್ರಮರಾರವರ ಹೊಱಬೀಸಿ ಕಾಬುದು ನಿನ್ನ ಮಹಿಮೆಂದ (ಕವ್ಯಾದ್ರೌ. ೧-೬); ವಾಸುದೇವಾಖ್ಯರನು ತಾ ಹೊಱಬೀಸುವೆನು ಗಡ ಮರುಳೆ (ನಿಭಾಗ. ೮-೧೯-೩೬). ೩. ಹೊರಗೆ ಎಸೆಯಲಾಗು; ಬೇರೆ ಕಡೆಗೆ ಒಗೆಯಲ್ಪಡು: ಬೀಸಿದುದು ಬಱುಗಾಳಿ ರಾಮಶರಾಸನದ ಸರಳೋಟದಲಿ ಹೊಱಬೀಸಿ[ಪಾಠಾಂ. ಸೂಸಿ]ಬಿದ್ದವು ಬಿರುದಿನಸುರಗ ಸಾಲುದಲೆ ನೆಲಕೆ (ತೊರರಾ. ೩-೬-೧೦).

[ಹೊಱ (< ಪೊಱಗು) + ಬೀಸು₂]

**ಹೊಱಬೀಳ್, ಹೊರಬೀಳು, ಹೊಱಬೀಳು** (ಕ್ರಿ). ೧. ಹೊರಗಡೆಗೆ ಬೀಳು; ಹೊರಭಾಗಕ್ಕೆ ಕೆಡೆ: ಉಸುರ ಬಿಡೆ ಹೊಱಬೀಳ್ವನೊಳದಗದುಸುರಿನಲಿ ಮುಳುಗುವನು (ತೊರರಾ. ೫-೨-೪೪). **ಹೊರಬೀಳು:** ೨. ಆಚೆಗೆ ನಡೆ; ಹೊರಗೆ ಹೊರಡು: ಇದನ್ನು ಕಟ್ಟಿಕೊಂಡು ಹೊರಬೀಳು ಇಲ್ಲಿಂದ (ಕಂಬಹು. ೫೪). ೩. ಹೊರಹೊಮ್ಮು; ಹೊರಸೂಸು: ಮಾತಿನ ಭರದಲ್ಲಿ ಒಮ್ಮೊಮ್ಮೆ ಅಸತ್ಯವೂ ಕೀಳುನುಡಿಗಳೂ ಹೊರಬೀಳುವವು (ಮುಂಬಯಿ. ೪-೪೯). **ಹೊಱಬೀಳು:** ೪. ಪಾರಾಗು; ತಪ್ಪಿಸಿಕೊಳ್ಳು: ಕಱುಬರಹ ಪಾಂಡವರಿಗೀಗಲೆ ಹಱುವ ನೆನೆ ಹೊಱಬಿದ್ದರಾದೊಡೆ ತಱಿದು ಬಿಸುಡದೆ ಮಾಣ್ಬರೇ (ಶುವ್ಯಾಆ. ೮-೨೧).

[ಹೊಱ (< ಪೊಱಗು) + ಬೀಳ್₁ (< ಬೀೞ್₁)]

**ಹೊಱಬೀಳು** 'ಹೊಱಬೀಳ್' ನೋ.

**ಹೊಱಮಟ್ಟ** (ನಾ). ಒಂದು ಅಳತೆ (?): ಸರ್ವ್ವನಮಶ್ಯವಾಗಿ ಹೊಱಮಟ್ಟದ ಕೋಲಲೊಂದು ಮತ್ತರು (ಇಏ. ೧೯೪೭, ಬೈಲ್‌ಹಾನಗಲ್. ೩೪೯-೩೯; 1086). [?]

**ಹೊಱಮಡಿಸು** 'ಪೊಱಮಡಿಸು' ನೋ.

**ಹೊಱಮಿಂಚು** 'ಪೊಱಮಿಂಚು' ನೋ.

**ಹೊಱಮೈ** 'ಪೊಱಮೆಯ್' ನೋ.

**ಹೊಱಮೊಳೆ** (ನಾ). (?): ನೆರವಿ ನಗದೇನಮ್ಮ ನಿಹಪರವೆರಡಱಿ ಹೊಱ ಮೊಳೆಯಹುದು[ಪಾಠಾಂ. ಕೇಡಹುದು ಕಷ್ಟವು] ನಿಷ್ಕರುಣಿಯಕಟಾ ತಾಯೆ ನೀ ದಿಟ ಮನುಜೆಯಲ್ಲೆಂದ (ಸಂಭಪ. ೨೩-೪೨). [?]

**ಹೊಱಯಿಂಕೆ** 'ಪೊಱಯಿಂಕೆ' ನೋ.

**ಹೊಱಯಿಕೆ** 'ಪೊಱಯಿಂಕೆ' ನೋ.

**ಹೊಱವಂಡಿಸು** 'ಪೊಱಮಡಿಸು' ನೋ.

**ಹೊಱವಂಡು** 'ಪೊಱಮಡು' ನೋ.

**ಹೊಱವಡಿಸು** 'ಪೊಱಮಡಿಸು' ನೋ.

**ಹೊಱವಡು** 'ಪೊಱಮಡು' ನೋ.

**ಹೊಱವಳಯ** 'ಪೊಱವಲಯ' ನೋ.

**ಹೊಱವಳಸು** 'ಪೊಱಬಳಸು' ನೋ.

**ಹೊಱವಾಱ್** 'ಪೊಱಮಾಱು₂' ನೋ.

**ಹೊಱವಾಱು** 'ಪೊಱಮಾಱು₃' ನೋ.

**ಹೊಱವೇಲಿ** (ನಾ). ಹೊರಭಾಗಕ್ಕೆ ಹಾಕಿರುವ ಬೇಲಿ; ಹೊರಗಿನ ಆವರಣಕ್ಕೆ ಹಾಕಿರುವ ಬೇಲಿ: ಒಳಕೋಂಟೆ, ಹೊಱವೇಲಿ (ಶಮದ. ೧೭೬ ಪ್ರಯೋ).

[ಹೊಱ (< ಪೊಱಗು) + ಬೇಲಿ₁]

**ಹೊಱವೇಷ** (ನಾ). ಬಾಹ್ಯಾಲಂಕಾರ; ಬಹಿರಂಗದ ಅಲಂಕಾರ: ಹೊಱವೇಷದಲ್ಲಿ ವಿಭೂತಿ ರುದ್ರಾಕ್ಷಿಯನಳವಡಿಸಿಕೊಂಡು . . . ಹೊನ್ನ ದಾನವನೀವನ ಬಾಗಿಲ ಮುಂದೆ ಮಣ್ಣ ಪುತ್ಥಳಿಯಂತಿಹರು (ಚನ್ನವ. ಕ. ೩೪೪-೭೨೧); ಟೊಪ್ಪಿಗೆಯ ಹೊಱವೇಷದಿಹಪರದ ಲೆಕ್ಕಿಗಂ ನಡೆನಡೆದು ಕರಣಸಾಲೆಗೆ ಬಂದು ಕುಳ್ಳಿರ್ದು (ಬಸರ. ೫-೭೦).

[ಹೊಱ (< ಪೊಱಗು) + ವೇಷ]

**ಹೊಱವೊಳಲು** 'ಪೊಱವೊೞಲ್' ನೋ.

**ಹೊಱವೃತ್ತಿ** (ನಾ). ಒಂದು ಬಗೆಯ ತೆರಿಗೆ, — **ವೃತ್ತಿ:** ಪುರದ ಸ್ಥಳದ ಹೊಱವೃತ್ತಿಯ ಹಟ್ಟಿ XXX ೞ ಮುದಸಮುದ್ರದ ಗ್ರಾಮವನೂ ಕೊ XXX (ಎಕ.XIV. ನಾಗಮಂ. ೧೧೪-೧೦; ಸು 1444). [ಹೊಱ (< ಪೊಱಗು) + ವೃತ್ತಿ]

**ಹೊಱಶೂಲ** (ನಾ). (ಊರಿನ) ಹೊರಗಿರುವ ವಧಾಸ್ಥಾನದಲ್ಲಿ ನೆಡಿಸಿರುವ ದಸಿ,— **ಶೂಲ:** ಹೊಳಲು ಹೊಱಶೂಲದಲಿ ರಿಪುಗಳ ಸೆಳಸುವನು (ಕುವ್ಯಾಭೀ. ೧-೭).
[ಹೊಱ (< ಪೊಱಗು) + ಶೂಲ]

**ಹೊಱಸು** 'ಪೊಱಸು' ನೋ.

**ಹೊಱಸುತ್ತು,** ಹೊರಸುತ್ತು (ನಾ). ಹೊರಭಾಗ; ಹೊರವಲಯ: ಇಡಿದ ತಳಪಟವರಿಗೆ ಹೊಱಸುತ್ತಡಿಸಿ ಕವಿವಾ ಬಿಲ್ಲು (ಕುವ್ಯಾದ್ರೋ. ಪರಿ. ೨೭೫); ಹೊಱಸುತ್ತು ಪ್ರಾಕಾರವ ಸುತ್ತಿ ನಾ ಬರುವೆ (ಕನಕ. ೨೨-೧). **ಹೊರಸುತ್ತು:** ಹೊರಸುತ್ತು ಕೆಂಪಾಗಿ ನಡುವು ಬೆಳ್ಳಗಾಗಿ ಹಬ್ಬುತ್ತಿರುವುದಕ್ಕೆ ಲಿಂಬೆಹಣ್ಣಿನ ರಸ ಆಗಾಗ ಹಚ್ಚುವುದು ಒಳ್ಳೆಯ ಗುಣಕಾರಿ (ಮನೆಮ. ೧೩೫). [ಹೊಱ (< ಪೊಱಗು) + ಸುತ್ತು$_2$]

**ಹೊಱಸೂಸು** 'ಪೊಱಸೂಸು' ನೋ.

**ಹೊಱಸೊಪ್ಪು** (ನಾ). ಮರದ ಹೊರಭಾಗದಲ್ಲಿರುವ ತೊಗಟೆ: "ತ್ವಕ್, ವಲ್ಕಾ, ವಲ್ಕಲಂ – ಈ ೩ ಮರದ ಹೊಱಸೊಪ್ಪು" (ಹಲಾಯು. ೩೦-೨೯).
[ಹೊಱ (< ಪೊಱಗು) + ಸೊಪ್ಪು$_1$]

**ಹೊಱಹಚ್ಚ** 'ಪೊಱಪಚ್ಚ' ನೋ.

**ಹೊಱಹಾಕು,** ಹೊರಹಾಕು (ಕ್ರಿ). ಹೊರಕ್ಕೆತಳ್ಳು; ಹೊರಗೆದೂಡು: ಬೆರಸು ವಡೆ ಬೇಗತೋಱ ಹೊಱಹಾಕದಿರಯ್ಯ (ಮಹಾದೇ.ಬ.೩೨-೭೦); ಒಳ್ಳಿದನಾದೊಡೊಳ ಕೊಳ್ಳಬೇಕು ದುರ್ಜನನಾದೊಡೆ ಓವದೇ ಹೊಱಹಾಕಬೇಕು (ಸಮ್ಯಕ್ತ. ೧೧-೫೧). **ಹೊರಹಾಕು:** ಅವನ ಸಹೋದ್ಯೋಗಿಗಳು ಹೇಡಿಯೆಂದು ಭಂಗಿಸಿ, ಅವನನ್ನು ಸೈನ್ಯದಿಂದ ಹೊರಹಾಕುತ್ತಿದ್ದರೆಂದೂ ವಾದಿಸಿದನು (ಪುನರು. ೩೪೪).
[ಹೊಱ (< ಪೊಱಗು) + ಹಾಕು (< ಪಾಯ್ಕು$_1$)]

**ಹೊಱಹುಯ್ಯಲ್** (ನಾ). ಹೊರಗಿನ ಆವರಣದಲ್ಲಿ ನಡೆಸುವ ಸೂರೆ, — **ಲೂಟಿ:** ಧರಣೀಧರಂ ದ್ರುಹಿಣನಷ್ಟದಿಕ್ಪಾಲಕರ್ ಭರದಿಂದ ಬಂದು ಹೊಱಹುಯ್ಯಲಂ ತಾಗೆ (ಲಶಿಚಿಂ. ೧೭-೧೪). [ಹೊಱ (< ಪೊಱಗು) + ಹುಯ್ಯಲ್ (< ಪೊಯಲ್)]

**ಹೊಱಹೊಮ್ಮಿಸು,** ಹೊರಹೊಮ್ಮಿಸು (ಕ್ರಿ). ಹೊರಸೂಸುವಂತೆ ಮಾಡು; ಹೊರಕ್ಕೆ ಬರುವಂತೆ ಮಾಡು: ಸುಖಮುಖವ ಹೊಱಹೊಮ್ಮಿಸುತ ನೆಱೆ ಬಾಲಲೀಲೆಯ ಸೊಮ್ಮು ಸೂಱೆಯ ಕೊಡುತಲಿರ್ದಳು ಮಾಯೆ ಮಹಿಯೊಳಗೆ (ಪ್ರಭುಲೀ. ೩-೩೦). **ಹೊರಹೊಮ್ಮಿಸು:** ಯಾರ ರಾಗದ ಕುಲಿಮೆಯನ್ನ ಹೊರ ಹೊಮ್ಮಿಸಿತೊ, ಅದು ಆರಿ ತಣ್ಣಗಿಹುದು? (ನೆಲಮು. ೮೭-೧೯).
[ಹೊಱಹೊಮ್ಮು (< ಪೊಱಪೊಣ್ಮು) + - ಇಸು$_3$]

**ಹೊಱಹೊಮ್ಮು** 'ಪೊಱಪೊಣ್ಮು' ನೋ.

**ಹೊಱಹೊಱಡಿಸು,** ಹೊರಹೊರಡಿಸು (ಕ್ರಿ). ೧. ಹೊರಗೆ ಬರುವಂತೆ ಮಾಡು; **ಆಚೆಗೆ ಬರಿಸು:** ನಿನ್ನ ಬಿಸಿಬಿಸಿಖಂಡವ ಹೊಱಹೊಱಡಿಸಿ ಹಸಿಯ ನೆತ್ತರು ಬಸಿದು ಹೋಗುವಾಗ ಕುಸುಮನಾಭನ ನಾಮ ನೆನೆಗೊಡದೆಲೆ ಮನ (ಪುರಂದ. ೧-೧೪೨-೪). **ಹೊರಹೊರಡಿಸು:** ೨. ಹೊರಗೆ ಕಳುಹಿಸು; ಆಚೆಗೆ ಕಳುಹಿಸು: ಅವರನು ಬಂಧನದಿ ಹೊರಹೊರಡಿಸಲು (ಬಿಜ್ಜಪು. ೧೦೮-೭೭).
[ಹೊಱ (< ಪೊಱಗು) + ಹೊಱಡಿಸು (< ಪೊಱಮಡಿಸು)]

**ಹೊಱಹೊಱಡು,** ಹೊರಹೊರಡು (ಕ್ರಿ). ಹೊರಗೆ ನಡೆ; ಹೊರಬೀಳು: ಪುರದ ಲಗ್ಗೆಗೆ ನೊಂದ ಬಲವೆಂದು ಹೊಱಹೊಱಟಿರದೆ ನೀವೆಮ್ಮ ಮೇಲುಱುಬೆ ನೆಱೆ ತಲೆ ಪಱಿದೊಡಟ್ಟೆಯಲಿ ಕಾದುವ ಕಲಿತುರುಕರೆಂದುಱೆ ಗರ್ಜಿಸಿದರು (ಕಂನವಿ. ೧೫-೭೩). **ಹೊರಹೊರಡು:** ಹೀಗೆ ಮುಚ್ಚದಿದ್ದರೆ ಕೆಲವು ವಿಟಮಿನ್ನುಗಳು ಹಬೆಯೊಡನೆ ಹೊರಹೊರಟು ನಷ್ಟವಾಗುವುವು (ಗೃಹವಿ. ೫೧).
[ಹೊಱ (< ಪೊಱಗು) + ಹೊಱಡು$_1$ (< ಪೊಱಮಡು)]

**ಹೊಱಿಗೆ$_1$** 'ಪೊಱಿಗೆ' ನೋ.

**ಹೊಱಿಗೆ$_2$** (ನಾ). ಸಂಬಂಧ; ಸಂಪರ್ಕ; ನಂಟು: ಮಱೆಯ ಮಾತೇಕಿನ್ನು ದೈತ್ಯರ ಹೊಱಿಗೆಯನು ನೀ ಮಾಱಿದೆ ನಿನ್ನವರಱಿಯೆಲಾ ಜಯವಿಜಯರೆಂಬವರು (ಕೌಶಿರಾ. ೧೩-೫೧). P ಪ್ರಾಸಸ್ಥಾನದಲ್ಲಿ 'ಱ' ಬಂದಿರುವುದರಿಂದ ಈ ಶಬ್ದವನ್ನು 'ರ' ರೂಪಕ್ಕೆ ತಿದ್ದಿಕೊಂಡಿರುವುದಿಲ್ಲ. [< ಪೊರ್$_4$]

**ಹೊಱಿಗೆಕಾಱ** (ನಾ). ಹೊಣೆಯನ್ನು ಹೊರುವವನು; ಜವಾಬ್ದಾರಿಯನ್ನು ವಹಿಸಿಕೊಳ್ಳುವವನು: ಬಱಿಯ ನುಡಿಯೇಕಕಟ ನಿಮ್ಮಯ ಹೊಱಿಗೆಕಾಱ [ಪಾಠಾಂ. ವಾಳ]ನು ಕೃಷ್ಣನು (ಕುವ್ಯಾಅ. ೧೭-೧೪).
[ಹೊಱಿಗೆ$_1$ (< ಪೊಱಿಗೆ) + - ಕಾಱ]

**ಹೊಱಿಗೆವಾಳ,** ಹೊರಿಗೆವಾಳ (ನಾ). ೧. ಭಾರವನ್ನು ಹೊರುವವನು; ಹೊರೆಯನ್ನು ಹೊತ್ತುಕೊಳ್ಳುವವನು: ಎಂತು ಹೊತ್ತುದೊ ಧರಣಿ ದಿಗ್ಗಜವೆಂತು ತಾಳ್ದವೊ ಭಾರಕರಲಿ ಮಹಾಂತನ್ಹೆ ಭುಜಗೇಂದ್ರ ಕೂರ್ಮನು ಹೊಱಿಗೆವಾಳನಲೆ (ತೊರರಾ. ೪-೭-೨೬). ೨.= **ಹೊಱಿಗೆಕಾಱ:** ಆತನಲ್ಲದೆ ಕಾರ್ಯದ ಹೊಱಿಗೆವಾಳರೆಲ್ಲರೂ . . . ರ್ಮಸಚಿವರೆನಿಸುಗುಂ (ನಾಚಿರಾ. ೧೩೧); ಮಱೆ ಮಱೆಯಲಿಱಿಗಾಱನಸುರರ ಮುಱಿದನೆಂಬರು ಕುಹಕತಂತ್ರದ ಹೊಱಿಗೆವಾಳನ ಸಂಗದಲಿ ನೀವ್ ಕೆಟ್ಟಿರಕಟ (ಕುವ್ಯಾದ್ರೋ. ೧೪-೧೭); ಕಪಿಕದಂಬದ ಹೊಱಿಗೆವಾಳನು ಸಿಕ್ಕಿದನು (ತೊರರಾ. ೬-೩೭-೧೪); ಕಪಟದ ಹೊಱಿಗೆವಾಳನ ಮಾತಿನಲಿ ದಿಟ ಸಾರವೇನುಂಟು (ನಿಭಾಗ. ೧೦-೪೩-೨೯). **ಹೊರಿಗೆವಾಳ:** ೨. ನರನ ಕೂಡಣ ಹಾಡಿ ಹರಿಯದ ಹೊರಿಗೆವಾಳರು ಧರ್ಮನಂದನ ಮರುತಸುತ ಮಾದ್ರೀಕುಮಾರರು (ಕೋಗಯ. ೧೭-೨೪); ಹೊರಿಗೆವಾಳನು ಕೃಷ್ಣನಿರಲು ಮರೆಹೊಕ್ಕವರಿಗುಂಟೆ ದೋಷ ದಾರಿದ್ರ್ಯ ಮೃತ್ಯುಗಳು (ತುರಂಗ. ೩೩-೯).
[ಹೊಱಿಗೆ$_1$ (< ಪೊಱಿಗೆ) + - ವಾಳ$_3$ (< - ವಳ)]

**ಹೋಱಿಸು** 'ಪೊಱಿಸು' ನೋ.

**ಹೊಱು** 'ಪೊಱು' ನೋ.

**ಹೊಱುಗಡೆ** (ನಾ). ಒಂದು ಬಗೆಯ ತೆರಿಗೆ: ಆ ಖಂಡಿಕದ ವೃತ್ತಿಗೆ ತೆಱುಗಡೆ ಹೊಱುಗಡೆ ನಿಮಿತ್ತವಾಗಿ ಆ ಮಹಾಜನಂಗಳು ಕೊಟ್ಟ ನಾಗಣ್ಣಾಗ ಗದ್ದೆ (ಎಕ. XII, ಚಿಕ್ಕನಾ. ೨-೨೦; 1261). 'ತೆಱುಗಡೆ' ಪರಾ. [?]

**ಹೊಱೆ** 'ಪೊಱೆ' ನೋ.

**ಹೊಱೆಕಾಱ** 'ಪೊಱೆಕಾಱ' ನೋ.

**ಹೊಱೆಗಟ್ಟು** 'ಪೊಱೆಗಟ್ಟು' ನೋ.

**ಹೊಱೆಗಾಱ** 'ಪೊಱೆಕಾಱ' ನೋ.

**ಹೊಱೆತಲೆ** 'ಹೊಱೆದಲೆ' ನೋ.

**ಹೊಱೆದಲೆ,** ಹೊಱೆತಲೆ (ನಾ). ೧. ಅಧಿಕವಾದ ಕೂದಲಿರುವ ತಲೆ: ಅರದಲೆಯು ಮೂಡಲೊಳು ಹೊಱೆದಲೆಯು ಬಡಗಲೊಳು ಸರಿದಲೆಯುಬ್ಬ ಪಡುವಲೊಳು ತೆಂಕಲಲಿ ಬಱಿದಲೆಯಱಿಹರು (ಸರ್ವಜ್ಞ. ೧೭೧೭). **ಹೊಱೆತಲೆ:** ೨. ಭಾರವನ್ನು ಹೊತ್ತಿರುವ ತಲೆ: ವಿಪತ್ತಿನೊಳೊಡೆಯನಿರೆ ಕೈದುಗಳ ಹೊಱೆತಲೆಯೊಡನೆ ಬಿಟ್ಟೆಯ ಭಂಡರಾಹೆಂದುದು ಭಟವ್ರಾತ (ಕುವ್ಯಾಕ. ೧೩-೫).
[ಹೊಱೆ (< ಪೊಱೆ) + ತಲೆ$_1$]

**ಹೊಱೆಯಾಳು** 'ಪೊಱೆಯಾಳ್' ನೋ.

**ಹೋ** 'ಅಹೋ' ನೋ.

**ಹೋಕ** 'ಪೋಕ' ನೋ.

**ಹೋಕಾಯಂತ್ರ** (ನಾ). ೧. (ನಾವಿಕರು ಸಮುದ್ರದಲ್ಲಿ) ಹಡಗನ್ನು ನಡೆಸುವಾಗ ಮಾರ್ಗ ಅಥವಾ ದಿಕ್ಕನ್ನು ತಿಳಿಯಲು ಉಪಯೋಗಿಸುವ ಒಂದು ಬಗೆಯ ಯಂತ್ರ, — ಉಪಕರಣ; ದಿಕ್ಸೂಚಿ: ಸಮುದ್ರದಲ್ಲಿ ಹಡಗುಗಳನ್ನು ನಡಿಸುವದಕ್ಕೋಸ್ಕರ ಒಂದು ದಿಕ್ಕು ತೋರಿಸುವ ಯಂತ್ರವನ್ನು ಮಾಡಿಕೊಳ್ಳುತ್ತಾರೆ. ಅದೇ ಹೋಕಾಯಂತ್ರವು (ಮುಂಬಯಿ. ೫-೨೩೦); ಹೋಕಾಯಂತ್ರವು ೧೨೬೦ರಲ್ಲಿ ಉಪಯೋಗದಲ್ಲಿ ಬಂದುದರಿಂದ ಜನರಿಗೆ ಸಮುದ್ರಗಳಲ್ಲಿ ದಿಕ್ಕುಗಳನ್ನು ತಿಳಕೊಳ್ಳಲು ಮಾರ್ಗವಾಗಿ ದೂರದೂರದೇಶಗಳಿಗೆ ಪ್ರವಾಸ ಮಾಡಲಿಕ್ಕೂ

ಸುಲಭವಾಯಿತು (ಇಂಗ್ಲಇ. ೫). ೨. (ಆಲಂ) ಮಾರ್ಗದರ್ಶಿ: ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವನ್ನು ಹೇಗಾದರೂ ಕಾಪಾಡಿ ಕೆಟ್ಟಕಣ್ಣು ತಪ್ಪಿಸಿ ಒಯ್ಯುವಂತೆ, ನಾವು ಬುದ್ಧಿಯ ಈ ಪುಟ್ಟ ಸೂಜಿಗಲ್ಲನ್ನು – ಹೋಕಾಯಂತ್ರವನ್ನು – ಭದ್ರವಾಗಿ ಉತ್ತಮವಾಗಿ ಇಟ್ಟುಕೊಂಡು ಸಾಗಬೇಕಾಗಿದೆ (ವಿಚಾಪಾ. ೬೮). [<– ಮರಾ. ಹೋಕಾಯಂತ್ರ]

**ಹೋಕು** (ನಾ). ೧. ಹೋಗುವುದು; ನಿರ್ಗಮನ; ಹೋಗುವಿಕೆ: ನಿಮ್ಮ ನಚ್ಚುಮಚ್ಚಿನ ಶರಣರನಗಲುವ ಅಗಲಿಕೆ ಎನ್ನ ಪ್ರಾಣದ ಹೋಕು ನೋಡಯ್ಯಾ (ಚನ್ನವ.ಕ. ೬೧೪-೧೩೬೮). ೨. ತೆರಳುವಿಕೆ; ಚಾಲನೆ: ಗುರು ಬಸವೇಶ ನಿಮ್ಮನಘಮಾಂಗಲ್ಯ ನಾಮಾಂಕಿತಾತ್ಮಜನ ಪೊಳೆ ಹೋಕಡಂಗಿ ನುಂಗುತ್ತಲಿದೆ . . . ಪಾಲಿಸುವುದೆನ್ನ ಕುವರನ (ಕೊಟ್ಟೂಬ. ೧೨-೨೨); ಅದಕಿದಕೆ ಜೋತು ಸಂಶಯವೆ ಸೋತು ತಿಳಿಯಿತೋ ಕಣ್ಣ ಹೋಕು (ವಲಾನ. ೯೨-೧೫). ೩. ನಿವಾರಣೆ; ನೀಗುವಿಕೆ: "ಕಿತ – ನಿವಾಸೇ, ರೋಗಾಪನಯೇ ಚ, ಮನೆಯೊಳ್, ಬೇನೆಯ ಹೋಕಿನೊಳಂ" (ಕಾಶಕ್ಯ. ೮೦); ನೋಕರ್ಮಗಾಣದಂತಾ ದ್ರವ್ಯಕರ್ಮವಾಲೋಕಿಸೆ ಹಿಂಡಿಯುಂತಿಹುವು ಹೋಕಿನ ಭಾವಕರ್ಮಗಳೆಣ್ಣೆಯಂತೊಳಗಾಕಾಶದಂತಾತ್ಮನಿಹನು (ಭರಚ. ೬೭-೧೧೨). ೪. ಇಲ್ಲವಾಗುವುದು; ಶೂನ್ಯ: ಆ ಠಾವಿನಲ್ಲಿಯೊಗೆದಾ ಗಣನೆಗಳ ಸುಖದುಃಖದನುಭವವದೇ ಹೋಕು (ವೀಶ್ವಪು. ೫-೫-೨೩). 'ಪೋಗು$_2$' ಪರಾ. [< ಪೋ$_1$]

**ಹೋಕುಳಿ** 'ಪೋರ್ಕುಳಿ' ನೋ.

**ಹೋಕುಳಿಸು** (ಕ್ರಿ). ಕಾದಾಡು; ಹೋರಾಡು: ಕುಲಿಶದೇಹಿಗಳು ನೀವಿಬ್ಬರಿನ್ನಂಕದ ತಳದಲ್ಲಿ ಕಾಲಿಕ್ಕುವಾಗ ಬಳಿಗಾಬವಸರದೊಳೆರಡಾನೆ ಹೊಕ್ಕು ಹೋಕುಳಿಸಿದಂತಹುದು (ಭರಚ. ೫೧-೧೧). [ಹೋಕುಳಿ (< ಪೋರ್ಕುಳಿ) + - ಇಸು$_3$]

**ಹೋಕೆ** (ನಾ). ೧. ಹೋಗುವುದು; ಹೋಗುವಿಕೆ: (೬). ೨. ದಾರಿ; ಮಾರ್ಗ: ಹೋದ ದಾರಿಯೆ ಹೋಕೆ! (ಹಬ್ಬರ. ೧೭-೪೨). ೩. ಯುಕ್ತಿ; ತಂತ್ರ; ಕಪಟ: ಲೋಕ ಡಾಂಭಿಕನಾಗಿ ಇಲ್ಲದ ಹೋಕೆಗಳನೇ ಕಲಿತು . . . ಶೋಕ ಮೋಹಂಗಳಲಿ ಬಳಲಿ (ಗಗತಾ. ೧೮-೩೪); ಈಕೆ ಅಷ್ಟೊಂದು ಹೋಕೆಯನ್ನು ಅರಿತ ಪ್ರಾಣಿಯಲ್ಲ (ಮಾಮರಾ. ೬೮); ಇವನ ವಿನಯ . . . ಹೋಕೆ ಇಲ್ಲದೆ ಧಾರಾಳವಾದ ಮನಸ್ಸುಳ್ಳ ಹನುಮಂತರಾಯನ ಮನಸ್ಸನ್ನು ಜೈಸಿತು (ಮುಸುಗ. ೬೪). 'ಪೋಗು$_2$' ಪರಾ.

[ದೇ. ‖ ತಮಿ. ಪೋಕ್ಕೈ; ತೆಲು. ಪೋಕ]

**ಹೋಕೆತನ** (ನಾ). ಠಕ್ಕು; ಕಪಟತನ: ಗೋಕುಲದೊಳು ಪುಟ್ಟಿ ಆಕಾರವಡಗಿಸಿ, ಹೋಕೆತನದಲ್ಲಿ ಹಾಕ್ಯಾಡುತ ಗೊಲ್ಲರ ಕೂಡಲಿ ಬೆಳದು (ಮೋಕ್ಷದೀ. ೨೧-೨).

[ಹೋಕೆ + - ತನ]

**ಹೋಗಾಡಿಸು** (ಕ್ರಿ). ೧. ಕಳೆದುಕೊಳ್ಳು; ನಷ್ಟಹೊಂದು: ಉಭಯತರು ಹೆಂಡರ ಹೋಗಾಡಿಸಿಕೊಂಡು ರಾಜ್ಯ ಐಶ್ವರ್ಯ ಕಳಕೊಂಡು (ತಾತ್ವನಿ. ೩೧-೨೩); ಮಕ್ಕಕ್ಕೆ ಹೋದ, ಮದೀನಕ್ಕೆ ಹೋಜ, ಇದ್ದ ಮಕ್ಕಳನ್ನು ಹೋಗಾಡಿಸಿ ಬಂದ (ಗಾದೆ). ೨. ಇಲ್ಲವಾಗಿಸು; ನಾಶಗೊಳಿಸು: ಧುರದಿ ತಾ ಮೈದೆಗೆದು ಹಗೆಗಳ ಶಿರವ ಹೋಗಾಡಿಸುವ ನೀತಿಯನೊರೆದು ನಮ್ಮನು ಕರೆಯ ಬಂದಿಹನಣ್ಣ ಕೇಳೆಂದ (ಕೃಷ್ಣಾಕಾ. ೧೭-೫೪). [ಹೋಗಾಡು (< ಪೋಗಾಡು) + - ಇಸು$_3$]

**ಹೋಗಾಡು** 'ಪೋಗಾಡು' ನೋ.

**ಹೋಗಿಪ್ಪಣ** (ನಾ). ಒಂದು ಬಗೆಯ ತೆರಿಗೆ (?): ಹೋಗಿಪ್ಪಣ ಹೊಬಳಿ ಹೊದಕೆ ಕಾಣಿಕೆ ಪೊಸಗೆ ಉತ್ಸಾಹಪಟ್ಟ . . . ತೆತ್ತು ಪರಿಹರಿಸಿ ಕೊಟ್ಟು . . . ಯಿಾ ಧರ್ಮವ ನಡೆಸಿಕೊಡುವರು (ಎಕ. III, ತಿರುಮ. ೨೭-೪೭; 1290). 'ಪೊಗೆವಣ' ಪರಾ.

[?]

**ಹೋಗಿಸು** 'ಪೋಗಿಸು' ನೋ.

**ಹೋಗು$_1$** 'ಪೋ$_1$' ನೋ.

**ಹೋಗು$_2$** 'ಪೋಗು$_2$' ನೋ.

**ಹೋಗು$_3$** 'ಪೋ$_2$' ನೋ.

**ಹೋಗು$_4$** (ನಾ). ಒಂದೇ ಜಗಲಿಯಲ್ಲಿ ಮೂರು ಅಥವಾ ನಾಲ್ಕು ಒಲೆಗಳಿದ್ದು ಮಧ್ಯದ ಒಲೆಯ ಮೂಲಕ ಉಳಿದ ಒಲೆಗಳಿಗೆ ಉರಿ ಹೋಗುವಂತೆ ಮಾಡಿರುವ ಒಲೆ: ಕೋಣೆಯಲ್ಲಿ ಹೋಗಿನ ಮೇಲೆ ಎರಡು ಚಟ್ಟಿಗಳಿದ್ದವು (ಚಿಂಗಾಳ್ಳ. ೧೬). [?]

**ಹೋಗುಎಳೆ** (ನಾ). ನೇಯ್ಗೆಯಲ್ಲಿ ಅಡ್ಡಡ್ಡವಾಗಿ ಬರುವ ನೂಲು: ಈ ನೆಯ್ಗೆಯ ಬಟ್ಟೆಗಳಲ್ಲಿ . . . ಹೋಗುಎಳೆಗಳು ೩ ಅಥವಾ ೪ ಹಾಸುಎಳೆಗಳ ಕೆಳಗಾಗಲೀ ಮೇಲಾಗಲೀ ತೂರಿ ಹೋಗುತ್ತವೆ (ಗೃಹವಿ. ೬೪).

[ಹೋಗು$_1$ (< ಪೋ$_1$) + ಎಳೆ$_2$ (< ಎೞೆ$_2$)]

**ಹೋಗುಳು** 'ಹೊಯ್ಗುಳ್' ನೋ.

**ಹೋಗೊಳಿಸು** 'ಪೋಗೊಳಿಸು' ನೋ.

**ಹೋಟಲು, ಹೊಟೇಲು, ಹೋಟೆಲು, ಹೋಟ್ಲು** (ನಾ). (ಪ್ರಯಾಣಿಕರು ಮುಂತಾದವರಿಂದ) ಹಣ ಪಡೆದು ಊಟ, ತಿಂಡಿ, ವಸತಿಗಳನ್ನು ಒದಗಿಸುವ ಸ್ಥಳ; ಭೋಜನಗೃಹ; ಉಪಹಾರಮಂದಿರ: ಹೋಟಲು ಬಾಗಿಲು ಹಾಕಿ ಮನೆಯ ಕಡೆ ಹೊರಟರು (ಮುಂಗಾಮು. ೨); ಆ ಊರಿಗಾ ಕಾಲಕಂಟೆಯ ಮನೆ ಬಂತು . . . ಹೋಟಲು ಸಹ ಬಂತು ಕೊನೆಗೆ (ಇಂಚಾಪ. ೭-೨೪). **ಹೊಟೇಲು:** ತನ್ನ ಹೊಟೇಲಿನಿಂದಾಗಿ ಅಣ್ಣನ ಹೊಟೇಲಿಗೆ ನೊಣಗಳು ಸಹ ಹೋಗುವುದಿಲ್ಲವೆಂದೂ ಅವನು ಬಡಾಯಿ ಕೊಚ್ಚುತ್ತಿದ್ದನು (ಮರಮು. ೩೩೩). **ಹೋಟೆಲು:** ಮುಂಬಯಿಯಲ್ಲಿ ತೀರ ಅಗ್ಗಕ್ಕೆ ಹೊಟ್ಟೆ ತುಂಬಿಸುವಂಥ ನೂರಾರು ಹೋಟೆಲುಗಳಿವೆ (ಒಂಟದ. ೧). **ಹೋಟ್ಲು:** ಹೊಸದಾಗಿ ಆರಂಭವಾಗಿರುವ ಈ ಹೋಟ್ಲಿನಲ್ಲಿ ತಿಂಡಿಗಳು ರುಚಿಯಾಗಿವೆ (ರೂಢಿ).

[<– ಇಂ. Hotel]

**ಹೋಟಾರ, ಹೊಟಾರ** (ನಾ). "ಗಿಡದ ಹೊದರು" (ಮೋಳಿಮಾ. ಕೋಶ): ಘಟವೆಂಬ ಹೋಟಾರ ಜೀವನವೆಂಬ ವೇತಾಳ ಅಱಿವೆಂಬ ಶಿಶು ಅದಱಿಂದುದಿಸಿದ ದಿವ್ಯಜ್ಞಾನ ಕುಱುಹುಗೊಂಡು ತ್ರಿವಿಧ ಕುಱುಹುಗೆಟ್ಟಿತ್ತು (ಮೋಳಿಮಾ. ೧೮೭-೭೦೦); ಹೋಟಾರದಲ್ಲಿ ಒಂದು ವೇತಾಳ ಹುಟ್ಟಿತ್ತು (ಮೋಳಿಮಾ. ೨೦೩-೨೫೭). **ಹೊಟಾರ:** ಹುಟ್ಟಿ ಹೊಟಾರದಲ್ಲಿ ಒಂದಾವೆ ಕೋಟಿಮಱಿಯನಿಕ್ಕಿತ್ತು (ಸಕವ.ಕ. II, ೬೨೭-೧೭೭೩).

[< ಪೊಟ್ಟರೆ?]

**ಹೋಟಿ** 'ಪೋಟಿ$_1$' ನೋ.

**ಹೋಟಿಗ** (ನಾ). ಪೈಪೋಟಿಗೆ ನಿಂತವನು; ಸ್ಪರ್ಧಿಸುವವನು: ಓವೊ! ಹೋಟಿಗರಿತ್ತಲಿರ್ಪರೆ! ಬವರಿಗರ ಬಲ್ಪುಳ್ಳರ್ ನಿಮಗವಿಾಗಡೆಯಡೆಯಾಯ್ತೇ (ರಾಮಾಶ್ವ. ೧೪೫-೧೦). [ಹೋಟಿ (< ಪೋಟಿ$_1$) + - ಗ$_2$]

**ಹೋಟೆ$_1$** 'ಪೋಟೆ$_1$' ನೋ.

**ಹೋಟೆ$_2$** (ನಾ). ಹೆಣ್ಣು ಮತ್ತು ಗಂಡು ಇಬ್ಬರ ಲಕ್ಷಣಗಳನ್ನೂ ಹೊಂದಿರುವ ವ್ಯಕ್ತಿ; ಉಭಯಲಿಂಗಿ: ನೋಟಬೇಟಗಳಿಂದ ಹೋಟೆ ಸಂಗವು ಲೇಸು (ಸರ್ವಜ್ಞ. ೧೮೦೯).

**ಹೋಟೆಹೋಗು** = ಉಭಯಲಿಂಗಿಯೊಂದಿಗೆ ಸಂಬಂಧವನ್ನು ಬೆಳೆಸು: ಗೋಟುಹೋಹುದಱಿಂದ ಹೋಟೆಹೋಹುದು ಲೇಸು (ಸರ್ವಜ್ಞ. ೧೮೧೧).

[< ಸಂ. ಪೋಟಾ]

**ಹೋಟೆಲು** 'ಹೋಟಲು' ನೋ.

**ಹೋಟ್ಲು** 'ಹೋಟಲು' ನೋ.

**ಹೋಡ** (ನಾ). ನಾವೆ; ದೋಣಿ: ಬಾಲ, ಹೋಡ, ಪಾಕ, ವತ್ಸ, ಮಂದಾ ಇತ್ಯಾದಿಗಳು ಅಜಾದಿಗಳು (ಹೊನುಗ. ೧೦೯). [ಸಂ.]

**ಹೋಡು** (ನಾ). ಈಡು; ಜೋಡು; ಸಮಾನ: "ಹೋಡುಃ = ಹೋಲು" (ಕಾಶಕ್ಯ. ೧೦೨); ಹೋಡಿನವ ನಾನಲ್ಲ ಪಡಿಹೊತ್ತಿನ ತೊತ್ತಿನ ದಾಸ (ವಿಸ್ತೋಸು. ೬೨-೩); ಉರಗನಿಕರಾ ವಾಸುಕೀಗೆ ಹೋಡೆ (ಶ್ರೀಕೃಪಾ. ೧೧೧). [< ಪೋಟಿ$_1$]

**ಹೋತ$_1$** 'ಪೋಲ್$_1$' ಪರಾ.

**ಹೋತ$_2$** 'ಪೋಂತು' ನೋ.

**ಹೋತ$_3$** (ನಾ). ಹೋಮಕಾಲದಲ್ಲಿ (ದೇವತೆಗಳನ್ನು ಆಹ್ವಾನಿಸಲು) ಋಗ್ವೇದವನ್ನು ಪಠಿಸುವ ಯಜ್ಞಪುರೋಹಿತ; ಹೋತೃ: "ಅಧ್ವರ್ಯುಃ, ಉದ್ಗಾತಾ, ಹೋತಾ . . . ಋಗ್ವೇದಪ್ರಯೋಗಜ್ಞನೆ ಹೋತೃ" (ಸಿದ್ಧಾಂತಿ. ೨೧೭);

ಯಾಗದಲ್ಲಿ ನಾಲ್ಕು ಋತ್ವಿಕ್ಕುಗಳು ಮುಖ್ಯವಾಗಿರಬೇಕು. ಹೋತನೆಂಬವನು ಋಗ್ವೇದವನ್ನು ಹೇಳುತ್ತಾನೆ (ಹಿಂದಸಾ. ೧೫೭). [< ಸಂ. ಹೋತೃ]

**ಹೋತಕರಿ** (ನಾ). ಪ್ರಗತಿಪರನಾದವನು; ಏಳಿಗೆಯಾಗುವವನು: ಆ ಮಗಾ ಏನು ಹೋತಕರೀ ಅಂತ ಅವಗ ಕೊಡಬೇಕಂತಾರ ನಿಮ್ಮ ತಂಗಿನ್ನ? (ಸಮಜೀ. ೨೪೭). [<— ಮರಾ. ಹೋತಕರ್]

**ಹೋತವ್ಯ** (ನಾ). ಯಜ್ಞಕಾಲದಲ್ಲಿ ಅರ್ಪಿಸುವ ಹವಿಸ್ಸು; ಹೋಮದಲ್ಲಿ ಅರ್ಪಿಸುವ ತುಪ್ಪ ಮೊದಲಾದ ವಸ್ತು: ಹೋತವ್ಯನುಮಗ್ನಿಯುಮಾ ಹೋತೃವು ಮುದ್ದೇಶ್ಯನಾಗಿಯುಂ ನೀನೆ ಪರಂಜ್ಯೋತಿ (ವಂಕಮು. ೯-೧೫). [ಸಂ.]

**ಹೋತಾರ** (ನಾ). = ಹೋತೃ$_3$: ದಾತಾರಂ, ದಾತೃ, ಹೋತಾರಂ, ಹೋತೃ (ಭಾಷಾಭೂ. ೧೧೩); ಆರಾದೇಶಕ್ಕೆ - ಸವಿತಾರ . . . ಹೋತಾರ, ದುಹಿತಾರ (ಶಮದ. ೮೪ ಪ್ರಯೋ); ಋಷಿಗಳ್ ಅಧ್ವರ್ಯುರ್ಉದ್ಗಾತೃ ಹೋತಾರರುಂ ಋತ್ವಿಜರುಂ ಸಾಮಾಜಿಕ ರುಮಾಗೆಸೆದರ್ (ರಾಮಾಶ್ವ. ೪೭-೨೭). [ಸಂ. ಹೋತೃ]

**ಹೋತು$_1$** 'ಪೋಲ್$_1$' ಪರಾ.

**ಹೋತು$_2$** 'ಪೋಂತು' ನೋ.

**ಹೋತುದಱಿಹಿ** (ನಾ). (ಹೋತವನ್ನು ಕತ್ತರಿಸುವಂತೆ) ತುಂಡುತುಂಡಾಗಿ ತರಿಯುವವನು: ಹೊಳ್ಳುವಾತಿನ ಹೋತುದಱಿಹಿ[ಪಾಠಾಂ. ಹೇತುದರುಹಿ]ಗಳಿವರು ಪಾಧ್ಯರು ನಾವು ಸೂಳೆಯರು (ಕುಪ್ಪಾಕ. ೨೨-೨೫). [ಹೋತು$_2$ (< ಪೋಂತು) + ತಱಿಹ + -ಇ$_3$]

**ಹೋತೃ** (ನಾ). ೧. ಹೋಮದ್ರವ್ಯವನ್ನು ಅರ್ಪಿಸುವವನು; ಹವಿಸ್ಸನ್ನು ನೀಡುವವನು. ೨. ಹೋಮಕಾಲದಲ್ಲಿ (ದೇವತೆಗಳನ್ನು ಆಹ್ವಾನಿಸಲು) ಋಗ್ವೇದವನ್ನು ಪಠಿಸುವ ಯಜ್ಞಪುರೋಹಿತ; ಋತ್ವಿಕ್ಕುಗಳಲ್ಲಿ ಒಬ್ಬ: ಹೋತೃ ಜಮದಗ್ನ್ಯಾದಿಗಳಪ್ಪ ಷೋಡಶರ್ತ್ವಿಜರ್ಕಳಿಂ ಬೇಳಲ್ವೇೞ್ದು ಧರ್ಮಪುತ್ರಂ ಸಪತ್ನಿ ಯಜಮಾನನಾಗಿರ್ದಾಗಳ್ (ಪಂಪಭಾ. ೬-೩೩ ವ); ಹೋತೃವೆ ನಾನಧ್ವರಿಯಯ್ ಭ್ರಾತೃವೆ ನೀನು (ಶಾಪ್ವಾವ. ೧೭೭); ಕರೆಸಿದರು ಋತ್ವಿಕ್ಕುಗಳನಧ್ವರಿಯನಾದನು ಯಾಜ್ಞವಲ್ಕ್ಯನು ವರಸುಮಿತ್ರಾಂಗಿರಸರುಗಳುದ್ಗಾತೃಹೋತೃಗಳು (ಕುಮ್ವಾಸ. ೭-೨೩). [ಸಂ.]

**ಹೋತ್ರ** (ನಾ). ೧. ಯಜ್ಞದಲ್ಲಿ ಅಗ್ನಿಗೆ ಅರ್ಪಿಸುವ ತುಪ್ಪ ಮೊದಲಾದುವು; ಹವಿಸ್ಸು; ಹೋಮದ್ರವ್ಯ. ೨. ಹೋಮ; ಯಜ್ಞ: ಗೋತ್ರ ಹೋತ್ರವು ನಮ್ಮ ಗೋವಿಂದ ಪುಣ್ಯಕ್ಷೇತ್ರಯಾತ್ರೆಗಳೆಲ್ಲ ಗೋವಿಂದ (ಶರಚ. ೭೮೭). 'ಅಗ್ನಿಹೋತ್ರ' ಪರಾ. [ಸಂ.]

**ಹೋತ್ರಿ** (ನಾ). ಹೋಮಕಾಲದಲ್ಲಿ ಹವಿಸ್ಸನ್ನು ಅರ್ಪಿಸುವ ಯಜ್ಞ ಪುರೋಹಿತ: 'ಅಗ್ನಿಹೋತ್ರಿ' ಪರಾ. [ಸಂ. ಹೋತ್ರಿನ್]

**ಹೋಪುರೆ** (ಅ). ಹೊಗಳಿಕೆಯನ್ನು ಸೂಚಿಸುವ ಒಂದು ಅವ್ಯಯ: ಸಂತುಷ್ಟ ರಾದರೆಲ್ಲರು ಮಂತ್ರಿ ಮಿತ್ರರೋರಂತೆ ಹೋಪುರೆ ಸ್ವಾಮಿಯೆಂದು ಮುಂತೆ ನಿವಾಳಿಯಿಟ್ಟಡಿ ಗೆಱಗಿದರು (ಭರಚ. ೬೦-೬೮). 'ಪುರೆ$_4$' ಪರಾ.

**ಹೋಬಳಿ$_1$** 'ಪೋಬಟಿ' ನೋ.

**ಹೋಬಳಿ$_2$**, ಹೋಬ್ಳಿ (ನಾ). (ಕೆಲವು ಹಳ್ಳಿಗಳನ್ನು ಹೊಂದಿರುವ) ತಾಲ್ಲೂಕಿನ ಒಂದು ಮುಖ್ಯ ಉಪವಿಭಾಗ, — ಕೇಂದ್ರ ಕಾರ್ಯಸ್ಥಾನ, — ಆಡಳಿತಘಟಕ: ಲಕುಮರಸನಾಯಕ್ಕನ ಮಳಿಗೆಯ ಹೋಬಳಿಗೆ ಸಲುವ ಆ ಮಳಿಗೆಯ ಹಿಂದಣ ಗದ್ದೆ ಸ್ಥಳ (ಸೌಇಇ. IV, ೨೪೫-೨೪; 1541); ಕೊಪ್ಪದ ಹೋಬಳಿ ಸರಕಾರ . . . ಬರಸಿ ಕಳುಹಿಸ್ತ ನಿರೂಪ (ಎಕ. VI, ಕೊಪ್ಪ. ೪೮-೨೨; 1811); ಇವಳು ಲಿಂಗರಾಜನ ಕಾಲದಿಂದ ಈ ಹೋಬಳಿಯ ಯಜಮಾನತಿ (ಚಿಕರಾ. ೧೧೯). **ಹೋಬ್ಳಿ**: (ಕೃಸ್‌ಗ. II, ೫೪೯). [ದೇ. II ತಮಿ. ಓಮ್ಬುಟ್ಟೈ = ರಕ್ಷಣೆ, ರಕ್ಷಣೆಯ ಸ್ಥಳ; ಮಲ. ಹೋಬಳಿ]

**ಹೋಬಳಿದಾರ** (ನಾ). ಹೋಬಳಿಯ ಅಧಿಕಾರಿ: ಕಳ್ಳರು ಮುಂತಾದ ತುಂಟಜನರು ಗಳಿಗೆ ಅವಕಾಶವಿಲ್ಲದಂತೆ ಠಾಣೆದಾರ ಹೋಬಳಿದಾರ ಓಲೆಕಾರ ಮುಂತಾದ ಜನರನ್ನೂ ನೇಮಿಸಿ . . . ಧರ್ಮದಿಂದ ರಾಜ್ಯಪರಿಪಾಲನೆಯಂ ಮಾಡುತ್ತಿದ್ದರು (ಮಹಾವಂ. I, ೪೫). [ಹೋಬಳಿ$_2$ + -ದಾರ$_4$]

**ಹೋಬ್ಳಿ** 'ಹೋಬಳಿ$_2$' ನೋ.

**ಹೋಮ** (ನಾ). ೧. (ದೇವತೆಗಳ ಪ್ರೀತ್ಯರ್ಥವಾಗಿ) ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ತುಪ್ಪ ಮುಂತಾದ ಹವಿಸ್ಸು ಹಾಗೂ ಸಮಿತ್ತುಗಳನ್ನು ಅರ್ಪಣೆಮಾಡುವುದು; ಯಜ್ಞ; ಯಾಗ: ಹೋಮದ ನೆವದಲ್ಲಿ ಹೋತನ ತಿಂಬ ಅನಾಮಿಕರೊಡನಾಡಿ ಗೆಲುವುದೇನು (ಬಸವ. ೫೭೮); ಹೋಮದ ಧೂಮಲೇಖೆ ನೆಗೆಯುತ್ತಿರೆ (ಮಹಾನೇ. ೩-೧೦೩). ೨. (ತುಪ್ಪ ಮೊದಲಾದ); ಹೋಮದ್ರವ್ಯ; ಹವಿಸ್ಸು. ೩. ಬಲಿ; ಆಹುತಿ: ಒಬ್ಬ ನಾಯಕನ ಸಹನೆಯೇ ಮೊದಲಾದ ಸಾತ್ವಿಕ ಗುಣ ಜನಾಂಗವೊಂದರ ದಾರುಣಹೋಮವನ್ನು ನಿವಾರಿಸಬಹುದು (ಶಿಕ್ಷದ. ೬೪೪). 'ಹೋಮಂಗೊಳ್' ಪರಾ. [ಸಂ.]

**ಹೋಮಂಗೊಳ್** (ಕ್ರಿ). ಆಹುತಿಯಾಗಿ ಹೊಂದು; ಬಲಿಯಾಗಿ ಪಡೆ: ರಾಮನಂ ರಣಕೆ ಹೋಮಂಗೊಳ್ಳವದು ದಿಟಂ ನಾಳಿನ ಮಹೋಗ್ರಸಂಗ್ರಾಮಯಜ್ಞದಲಿ! (ಶ್ರೀರಾಮಾ. ೭೦೦-೨೭). [ಹೋಮ + ಕೊಳ್$_1$]

**ಹೋಮಕುಂಡ** (ನಾ). ಯಜ್ಞಯಾಗಾದಿಗಳಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಲು ನೆಲದಲ್ಲಿ ಮಾಡಿದ ಕುಳಿ; ಹೋಮಕಾರ್ಯಕ್ಕಾಗಿ ಭೂಮಿಯಲ್ಲಿ ನಿರ್ಮಿಸಿದ ತಗ್ಗು; ಅಗ್ನಿಕುಂಡ: ಹೋಮಕುಂಡದಲ್ಲಿ ಧಗಧಗಿಸುವ ಜ್ವಾಲಾಮಾಲೆಗಳೊಳ್ . . . ಧೃಷ್ಟದ್ಯುಮ್ನನೆಂಬ ಮಗನುಮಂ . . . ಪಡೆದಂ (ಪಂಪಭಾ. ೩-೩೨ ವ). [ಸಂ.]

**ಹೋಮದ್ರವ್ಯ** (ನಾ). ಯಜ್ಞದಲ್ಲಿ ಅಗ್ನಿಗೆ ಆಹುತಿ ಕೊಡುವ ಹಾಲು, ತುಪ್ಪ ಮೊದಲಾದ ವಸ್ತು; ಹವಿಸ್ಸು: "ಬರ್ಹಿಸ್ - ಹೋಮದ್ರವ್ಯಂ" (ಕಾಶಕ್ಕ. ೬೭). [ಸಂ.]

**ಹೋಮಧೇನು** (ನಾ). ಯಜ್ಞಕಾರ್ಯಗಳಿಗಾಗಿ ಮಾತ್ರ ಉಪಯೋಗಿಸುವ ಹಾಲಿಗಾಗಿ ಸಾಕಿರುವ ಹಸು; ಹೋಮಸಾಧನವಾದ ಹಸು: "ಹೋಮ [ಪಾಠಾಂ. ಹೆಮ್ಮ]ಧೇನು ಮಾಹೇಯಿಯೆಂಬುದು" (ಹಲಾಯು. ೪೫-೧೧೩); ಹೋಮ ಧೇನುವಿನೊಡನೆ ಕೂಡಿದ ಹೋಮಶಾಲೆಯ ಹೊಸಲು . . . ಶೋಭಿಸುತ್ತಿರುವುದು (ಶಾಕುಂತ. ೬೩-೧೫). [ಸಂ.]

**ಹೋಮಾಗ್ನಿ** (ನಾ). ೧. ಯಜ್ಞ ಯಾಗಾದಿಗಳನ್ನು ನೆರವೇರಿಸಲು ಸಿದ್ಧಪಡಿಸಿದ ಬೆಂಕಿ: ಹೋಮಾಗ್ನಿಯೊಳ್ ಪುಟ್ಟಿದೊಂದು ದಿವ್ಯಚಾಪಮುಂ (ಪಂಪಭಾ. ೩-೩೨ ವ). ೨. (ಆಲಂ) ಉಜ್ವಲಿಸುವ ಸ್ಫುರಣೆ: ಪ್ರತಿಭೆಯ ಹೋಮಾಗ್ನಿಯ ಮೇಲೆ ಕವಿಮನ ತಾನುರಿದೇಳೆ . . . ಸ್ಪಂದಿಸುತಿದೆ ಭಾವಜ್ವಾಲೆ! (ಪಕ್ಷಿಕಾ. ೨೪-೯). [ಸಂ.]

**ಹೋಮಾತು** (ನಾ). "ಆಗದ ಮಾತು" (ಅವಚಂ. ಕೋಶ): ಆ ಮಾತು ಈ ಮಾತು ಹೋಮಾತಲ್ಲವು ನೆರೆದುಹೋಯಿತ್ತಲ್ಲಾ (ಅವಚಂ. ೩೦-೧೩೩). [ಹೋ$_1$ + ಮಾತು$_1$]

**ಹೋಮಾನಲ** (ನಾ). = ಹೋಮಾಗ್ನಿ ೧: ಸುಳಿದರಾ ದಂಪತಿಗಳುರುಮಂಜುಳದ ಮಣಿವೇದಿಕೆಗೆ ಹೋಮಾನಲನ ಬಲವಂದೆಡಕೆ ಸಾರಿದರವರ ಪತ್ನಿಯರು (ತೊರರಾ. ೧-೧೭-೪೭). [ಸಂ.]

**ಹೋಮಿಯೋಪತಿ** (ನಾ). [ವೈದ್ಯಶಾ] ನಿರ್ದಿಷ್ಟವಾದ ಒಂದು ರೋಗದ ಚಿಕಿತ್ಸೆಯಲ್ಲಿ, ಯಾವ ಔಷಧವಸ್ತುವನ್ನು ಆರೋಗ್ಯವಾಗಿರುವವನಿಗೆ ಕೊಟ್ಟರೆ ಆತನಲ್ಲಿ ಆ ರೋಗವು ಕಂಡುಬರುವುದೋ ಅದೇ ಔಷಧವನ್ನು ಅತ್ಯಲ್ಪಪ್ರಮಾಣದಲ್ಲಿ ಆ ನಿರ್ದಿಷ್ಟ ರೋಗವಿರುವವನಿಗೆ ಕೊಟ್ಟು ಚಿಕಿತ್ಸೆ ಮಾಡುವ ಒಂದು ಬಗೆಯ ವೈದ್ಯಪದ್ಧತಿ: ಅಲೋಪತಿ . . . ಹೋಮಿಯೋಪತಿ . . . ಯುನಾನಿ . . . ಇದು ತಿನ್ನಬೇಡಿ . . . ಅದು ತಿನ್ನಬೇಡಿ (ಏಳಜೀ. ೫೦). [<— ಇಂ. Homoeopathy]

**ಹೋಮಿಸು** (ಕ್ರಿ). ೧. ಯಜ್ಞಕಾಲದಲ್ಲಿ ಹವಿಸ್ಸನ್ನು ಮಂತ್ರಪೂರ್ವಕವಾಗಿ ಅರ್ಪಣೆ ಮಾಡು; ಹೋಮ ಮಾಡು: ಭೂಮಿಸುರರೀತನ ನಿದೇಶವ ನೇಮದಲಿ ಕೈಕೊಳ್ಳದಾಪನು ಹೋಮಿಸುವನಾ ದ್ವಿಜನ ಹೋಮವು ಹೋಮವಲ್ಲ (ಸಂಭಪ. ೨೫-೫೪); ಇಂದ್ರನನು ಕೊಲುವ ಪುತ್ರನನು ಬೇಡಿದನು ಮಾರಣಕೃತ್ಯದಲಿ ಹೋಮಿಸಲು ಭುಗಿಭುಗಿಸುತ್ತ ಜನಿಸಿದನೊಬ್ಬ ಸುತನಾ ಕುಂಡವನು ಬಗಿದು (ನಿಭಾಗ. ೬-೯-೭).

೨. (ಆಲಂ) ಬಲಿಕೊಡು; ಆಹುತಿಮಾಡು: ಆ ಮಹಾಸಮ್ಮೋಹನಾಸ್ತ್ರವ ನೇಮಿಸಿಯೆ ಕಲಿಭೀಷ್ಮ ಭಾರ್ಗವ ರಾಮಚಂದ್ರಂಗಾಗ ಭಾರ್ಗವನದಕೆ ನಾಭಿಯನು ಹೋಮಿಸಿದಂ (ಸಂಭಪ. ೧೩-೪೮); ಬಹುಸಂಶಯವು ನಿರ್ನಾಮವಾಗಲಿ ಜನ್ಮ ಬರೆ ಮರಣಾದಿಗಳು ಸಹಿತ ಹೋಮಿಸುವೆ ಜ್ಞಾನಾಗ್ನಿಯಲಿ (ಜ್ಞಾನಸಿಂ. ೧೩-೨); ನಿನ್ನನ್ನು ಹೋಮಿಸಿದರೌ ಕುಸುಮಸುಕುಮಾರಕುವರಿಯೇ ಕಾಮಾಗ್ನಿಹೋತ್ರದಲ್ಲಿ (ಕೃಷ್ಣಾಕು. ೧೧-೧೪). ೩. ಆಹುತಿ ತೆಗೆದುಕೊಳ್ಳು; ಬಲಿ ತೆಗೆದುಕೊಳ್ಳು: ನನ್ನನ್ನು ನೀನು ಹೀಗೆಯೇ ತಿರಸ್ಕರಿಸಿದರೆ ನಿನ್ನ ಜೀವನವನ್ನೇ ನಾನು ಹೋಮಿಸಬಲ್ಲೆ (ಸಮಜೀ. ೨೬೫); ಅವನ ಕೈಯಲಿದೆ ಅಂಗೈಹುಣ್ಣು,— ಅವನ ಬಾಳನೇ ಹೋಮಿಸಿದ ಒಗಟ, ದೈವ ತೊಡಿಸಿರುವ ಮುಳ್ಳಿನ ಮುಕುಟ (ಚಿಂತನ. ೭೪-೭). [ಹೋಮ + - ಇಸು$_1$]

**ಹೋಯಿ** (ಅ). (ಮಕ್ಕಳನ್ನು ಮಲಗಿಸಲು) ಜೋಗುಳ ಹಾಡುವಾಗ ಬಳಸುವ ಒಂದು ಮಾತು: ಹೋಯಿ ಹೋಯಿ ಹಸುಳೆ ಮುದ್ದು . . . ಹೋಯಿ ಹೋಯಿ ಶ್ರೀಪ್ರಸನ್ನೆಂಕಟ ದೊರೆಯೆ (ಪ್ರಸಭಾ. ೧೪-೪). 'ಜೋ' ಪರಾ.

**ಹೋರ್$_1$** 'ಪೋರ್$_1$' ನೋ.

**ಹೋರ್$_2$** 'ಪೋರ್$_3$' ನೋ.

**ಹೋರಟೆ** 'ಪೋರಟೆ' ನೋ.

**ಹೋರಟೆಗುಟ್ಟು** (ಕ್ರಿ). ೧. ಘರ್ಷಣೆಯಾಗು; ತಾಕಲಾಡು: ಹೊಸ ನೋಟಂ ಹೋರಟೆಗುಟ್ಟ ತೈತಿಕ್ಕಿ ತಳರದೆ ತಂತಮ್ಮೊಳಪೊಕ್ಕ ರೂಪು ಮಗುಳಲಾಱದೆ ನಟ್ಟು ನೋಡುತ್ತಿರಲ್ (ನಂಬಿರ. ೧೨-೫೩). ೨. ಪ್ರಯಾಸಪಡು; ಶ್ರಮಪಡು: ಹುಲುವೊದ ಬುಗಲೊಳಗಲಕೆ ಹರಿದು ಹೋರಟೆಗುಟ್ಟಿದನು ಹೊಮ್ಮರೆಯ ಬೆನ್ನಿನಲಿ (ತೊರರಾ. ೩-೮-೫೭). [ಹೋರಟೆ (< ಪೋರಟೆ) + ಕುಟ್ಟು$_1$]

**ಹೋರಟೆಗೊಳ್, ಹೋರಟೆಗೊಳ್ಳು** (ಕ್ರಿ). ಹೋರಾಡು; ಕಲಹಮಾಡು: ಮಕ್ಕಳ ಮದುವೆಯ ಚಿಕ್ಕಲ್ಲಿ ಮಾಡಿದಡೆ ಯೌವನ ತೋಱೆ ಆ ವಿಷಯಕ್ಕೆ ಹೊಕ್ಕು ಹೋರಟೆ ಗೊಂಬುದ ಮಱೆದಡೆ ಇಷ್ಟವ ಮಱೆಯಬೇಕು (ಮೋಳಮಾ. ೮೧-೩೧೯); ನೀನಾ ವಿಧಿಯ ಪರಿಗಳಲಿ ಹೊಕ್ಕು ಹೋರಟೆಗೊಂಡು ಕಾಮದಲುಕ್ಕಿ ಬಳಿಕಿನ್ನೇನ ಕೃಪೆಯನು ಲೆಕ್ಕಿಸಲು ಕೈಸಾರಬಲ್ಲುದೆ (ಪ್ರಭುಲೀ. ೭-೬೫). **ಹೋರಟೆಗೊಳ್ಳು**: ಮುನಿದೊಡೆ ತಿದ್ದಬಲ್ಲತಿ ರಸಿಕನೊಳು ಹೊದ್ದಿ ಹೋರಟೆಗೊಳ್ಳದವಳಿಗೆ ಲಾವಣ್ಯವಿದ್ದೇನು ಫಲ (ಕುರಾಸಾಂ. ೨೨-೨೭). [ಹೋರಟೆ (< ಪೋರಟೆ) + ಕೊಳ್$_1$]

**ಹೋರಟೆಗೊಳ್ಳು** 'ಹೋರಟೆಗೊಳ್' ನೋ.

**ಹೋರಾಟ** 'ಪೋರಾಟ' ನೋ.

**ಹೋರಾಟಗೆಯ್** (ಕ್ರಿ). ಹೋರಾಡು; ಸೆಣಸು : ಕುರಿಯ ಹಿಂಡಿನಲ್ಲಿ ಮೇಷಗಳಾಗಿ ಜನಿಸಿ ಬಲ್ಲಿದವಾಗಿ ಬೆಳೆದು ತಂತಮ್ಮೊಳು ನಿಲ್ಲದೆ ಹೋರಾಟಗೆಯ್ದು (ನೇಮಿಸಂ. ೭-೨೦). [ಹೋರಾಟ (< ಪೋರಾಟ) + ಕೆಯ್$_1$]

**ಹೋರಾಟಗೊಳ್** (ಕ್ರಿ). ಹೆಣಗಾಡು; ಒದ್ದಾಡು: ರುದ್ರನ ದೇವರೆಂದಾರಾಧಿಸಿ ಶಿಲೆಯೊಳಗೆ ಹೋರಾಟಗೊಂಡು ಕೆಟ್ಟರಲ್ಲಾ ಭಕ್ತಜನಂಗಳು (ಮೋಳಮಾ. ೧೦೪-೪೧೭).

[ಹೋರಾಟ (< ಪೋರಾಟ) + ಕೊಳ್$_1$]

**ಹೋರಾಡು** (ಕ್ರಿ). ಸೆಣಸು; ಹೋರಾಟ ಮಾಡು: ಕಾಲದೊಡನೆ ಸ್ಪರ್ಧೆ ಕಟ್ಟಿ, ಅದರೊಡನೆ ಹೋರಾಡಿ . . . ನಾಡಿನ ಪ್ರಗತಿಕಾರ್ಯಗಳು ನಡೆಯುತ್ತಿವೆ (ಹಣಪ್ರ. V, ಮುನ್ನುಡಿ); ಸಾವು ಬರುವದು ಎಲ್ಲರಿಗೂ ಸಮನಾಗಿ ಸಂಧ್ಯಾರಾಗದಿ ಜೀವ ಹೋರಾಡು ವದು ತನ್ನಯ ಗುರಿಯ ಮುಟ್ಟುವ ಜಾವದಿ (ನಲಮು. ೫೨-೨೨).

[ಹೋರ್$_1$ (< ಪೋರ್$_1$) + ಆಡು$_1$]

**ಹೋರಾಯಂತ್ರ** (ನಾ). ಸಮಯವನ್ನು ಸೂಚಿಸುವ ಒಂದು ಬಗೆಯ ಯಂತ್ರ; ಗಡಿಯಾರ: ಎದುರಿಗಿದ್ದ ಹೋರಾಯಂತ್ರವು ಫಲಹಾರದ ಸಮಯವನ್ನು ಸೂಚಿಸಿದ್ದ ರಿಂದ ಎಲ್ಲರೂ ಕೂಡಿಕೊಂಡು ಆನಂದದಿಂದ ಫಲಹಾರ ಮಾಡಿದರು (ದೇವೀಪ್ರ. ೧೮೩).

[ಸಂ.]

**ಹೋರಾಶಾಸ್ತ್ರ** (ನಾ). [ಜ್ಯೋತಿ] ಗ್ರಹ, ನಕ್ಷತ್ರಗಳ ಚಲನೆ, ಅವುಗಳ ಸ್ಥಾನ, ಅವುಗಳಿಂದುಂಟಾಗುವ ಫಲ ಇತ್ಯಾದಿಗಳನ್ನು ತಿಳಿಸುವ ಶಾಸ್ತ್ರ; ಜ್ಯೋತಿಶ್ಶಾಸ್ತ್ರ: ಹೋರಾಶಾಸ್ತ್ರ ಸರ್ವಜ್ಞಕಂ ನಯಯುಕ್ತಂ . . . ಪುಸ್ತಕಗಚ್ಛ ಪೂರ್ಣತಿಳಕಂ ಶ್ರೀಕೊಂಡಕುಂದಾನ್ವಯಂ (ಬಾಧಪು. ೧-೪೫). [ಸಂ.]

**ಹೋರಾಹೋರಿ** (ನಾ). ರಭಸ; ವೇಗ: ಹೋರಾಹೋರಿಯಲಿ ಬಲಸಹಿತ ಬಂದು ಕುಠಾರ ಸೆಣಸಿದನು (ಉತ್ತರಾ. ೧೧-೫೮).

[< ಪೋರ್$_1$ ./ ತೆಲು. ಹೋರಾಹೋರಿ = ಜಗಳ]

**ಹೋರಾಳು** 'ಪೋರಾಳ್' ನೋ.

**ಹೋರಿ** 'ಪೋರಿ$_2$' ನೋ.

**ಹೋರಿಕ** (ನಾ). ಜ್ಯೋತಿಷಿ: ಹೋರಿಕ - ಹೋರಿಗ (ಶಮದ. ೨೫೫ ಪ್ರಯೋ). [ಸಂ.]

**ಹೋರಿಕೆ** (ನಾ). ಹೋರಾಟ; ಯುದ್ಧ: ಅಕಟ ನೀನೇಕಾಂಗದಲಿ ಹೋರಿಕೆ [ಪಾಠಾಂ. ವಾರುವ, ಬಾಳಿಕೆ]ಗೆ ಬಂದೈ ಗರುವ ಗುರುಸುತ ಭೋಜ ಗೌತಮರು ಸಕಲಬಲ ನುಗ್ಗಾಯ್ತು (ಕುವ್ಯಾಗ. ೧-೭೪). 'ಪೋರ್ಕೆ' ಪರಾ.

[ಹೋರ್$_1$ (< ಪೋರ್$_1$) + - ಇಕೆ]

**ಹೋರಿಗ$_1$** (ನಾ). = ಹೋರಿಕ: ಹೋರಿಕ - ಹೋರಿಗ (ಶಮದ. ೨೫೫ ಪ್ರಯೋ).

[< ಹೋರಿಕ]

**ಹೋರಿಗ$_2$** (ನಾ). ಆಳು; ಕಿಂಕರ: ಕೌಸಲೆಯ ಚರಣದೊಳ್ ತಲೆಯಿಕ್ಕಿ ಹೋರಿಗಂ ತಾನಾಗುತನಿಬರಂ ಬೆರಸಿ ಬನಕಿಂದೆ ನಡೆದಂ ಭರತನು (ಪರಶು. ೨-೨೮).

[ಹೋರ್$_2$ + - ಇಗ]

**ಹೋರಿಗೋಡು** (ನಾ). ಗಂಡು ಜಿಂಕೆಯ ಕೊಂಬು: ಏಣಶಾಬಮಂ ಪುಟ್ಟ ತೋಳಿಂದಪ್ಪಿ ಸುತ್ತಿ ಪೊತ್ತದರ ತಾಯ್ ಹೋರಿಗೋಡುಗಳಿಂದೆ ಮೆಯ್ಯ ಕಂಡೂತಿಯಂ ತೀರ್ಚಿಕೊಳುತಿರ್ಪ ತಾಣಕೆ ನಡೆದು (ಶ್ರೀರಾಮಾ. ೧೩೨-೧೫೪).

[ಹೋರಿ (< ಪೋರಿ$_2$) + ಕೋಡು$_5$]

**ಹೋರಿಮಿಗ** (ನಾ). ಗಂಡು ಜಿಂಕೆ; ಸಾರಂಗ: ಬಿಡುಗಣ್ಣಾಗಿ ನೋಡುತ್ತಿದ್ದಂತೆಯ ಒಂದು ಹೋರಿಮಿಗ ಮರಗಳ ಸಂದಿ ಹಳುವಿನಲ್ಲಿ ಕವಣೆಕಲ್ಲೆಸೆದಂತೆ ಹಾರಿ ಬಂದು . . . ಕಣ್ಮರೆಯಾಯಿತು (ಮಲೆಮ. ೭೭). [ಹೋರಿ (< ಪೋರಿ$_2$) + ಮಿಗ]

**ಹೋರಿಯಡೆ** (ನಾ). ಗೋಮಯ; ಸಗಣಿ: "ಹೋರಿಯಡೆಯೆಂದೆನಲ್ಕಱಿ ಗೋಮಯವದೆಂದು" (ಶಬ್ದಮಂ. ೩೪). [ಹೋರಿ (< ಪೋರಿ$_2$) + ಅಡ್ಕೆ$_6$]

**ಹೋರಿಸು** 'ಪೋರಿಸು' ನೋ.

**ಹೋರು$_1$** 'ಪೋರ್$_1$' ನೋ.

**ಹೋರು$_2$** 'ಪೋರ್$_2$' ನೋ.

**ಹೋರು$_3$** 'ಪೋರ್$_3$' ನೋ.

**ಹೋರುಗಳೆ** (ಕ್ರಿ). ತೂತು ಮಾಡು; ರಂಧ್ರ ಕೊರೆ: ಕೂರಲಗು ಸೀಸಕವ ಕವಚವ ಹೋರುಗಳೆದವು (ಕುವ್ಯಾಶ. ೩-೩೮). [ಹೋರು$_3$ (< ಪೋರ್$_3$) + ಕಳೆ$_1$]

**ಹೋರುಗೆಡವು** (ಕ್ರಿ). = ಹೋರುಗಳೆ: ತನ್ನ ಮಹಾಧನುವಿಗೆ ವಜ್ರಾಸ್ತ್ರವನ್ನು ಹೂಡಿ ಹೊಡೆದು ನೆಲವನ್ನು ಹೋರುಗೆಡವಿದ (ಬಿದುರ. ೧೦೭).

[ಹೋರು$_3$ (< ಪೋರ್$_3$) + ಕೆಡವು (< ಕೆಡಪು)]

**ಹೋರೆ$_1$** (ನಾ). ೧. [ಜ್ಯೋತಿ] ಮೇಷ, ವೃಷಭ ಮುಂತಾದ (ಹನ್ನೆರಡು) ರಾಶಿಗಳ ಉದಯ ; ಲಗ್ನ: ತಿಥಿ ವಾರ ನಕ್ಷತ್ರಯೋಗ ಕರಣ ಹೋರೆಗಳನಾರ್ಮದು ನಿಶ್ಚಯಿಸಲು (ಸೌಂದಪು. ೩-೩೯). ೨. ಲಗ್ನದ ಅರ್ಧಭಾಗ; ಲಗ್ನದ ಎರಡನೆಯ ಒಂದು ಭಾಗ: ಗೃಹಮೆರಡು ಹೋರೆ ಸಮದಾದಿ ಹೋರೆಗುಡುನಾಥನಿತರ ಹೋರೆಗೆ ಪಂಕೇರುಹಮಿತ್ರನಸಮಗ್ರಹದಾದಿ ಹೋರೆ[ಗಿನನಿತರ ಹೋರೆ] ಗುರುಪತಿಯಧಿಪಂ (ಜಾತತಿ.೧-೨೮); ಮಾಸದ ಬಹುಳ ತದಿಗೆಯ ಕರ್ಕಾಟಕಲಗ್ನಾ ಶಶಿ ಹೋರೆ ವೇಳೆಯದಿ ಈ ಸೇವ್ಯ ವರ್ಧಮಾನೇಶಚರಿತ್ರನಿವಾಸ ಮತ್ಕೃತಿ ನೆಲೆಯಾಯ್ತು (ವರ್ಧಚ. ೧೨-೧೫೫). ೩. ಅಹೋರಾತ್ರಿಯ ಇಪ್ಪತ್ತನಾಲ್ಕನೆಯ ಒಂದು ಭಾಗ; ಎರಡೂವರೆ ಘಳಿಗೆಯಷ್ಟು ಕಾಲ; ಒಂದು ಘಂಟೆ,— ತಾಸು. ೪. ಜ್ಯೋತಿಶ್ಶಾಸ್ತ್ರದ ಗಣಿತ, ಹೋರೆ, ಸಂಹಿತೆ ಎಂಬ ಮೂರು ಭಾಗಗಳಲ್ಲಿ ಒಂದು; ಫಲಭಾಗವನ್ನು ಹೇಳುವ ವಿಭಾಗ; ಹೋರಾಶಾಸ್ತ್ರ: ಪಾದಚ್ಛಾಯೆಯನಿಟ್ಟು ಜೋಯಿಸದ

ಭಿಪ್ರಾಯಂಗಳಿಂ ಹೋರೆಯಿಂದೋದಿಂ . . . ಭೋಂಕನೆ ಪೇಟ್ಟು ಜೋಯಿಸಮದಾರ್ಗಂ ಮರ್ತ್ಯರೊಳ್ ದುರ್ಲಭಂ (ಸುಕುಮಾ. ೩-೨೦); ನ್ಯಾಯ ವೈಶೇಷಿಕ . . . ಹೋರಾ . . . ಧರ್ಮವೇದಾಂತಸಿದ್ಧಾಂತಗಳಲ್ಲಿ ಪ್ರಮಾಣ ಪ್ರಮೇಯೋಪನ್ಯಾಸದೃಷ್ಟಾಂತ ಸಮನ್ವಯಾದಿಸದ್ಯುಕ್ತಿನಿರೂಪಕರಾದ ವಾದಿಗಳಿಂ (ವಿವೇ. ೨೨೬). [ಸಂ. ಹೋರಾ]

**ಹೋರೆ$_3$** (ನಾ). ೧. ಉದ್ಯೋಗ; ಕಸುಬು: ದನಕಾರಿಕೆಯೇ ಒಮ್ಮೆ ಮನುಷ್ಯ ಸಮಾಜದ ಮುಖ್ಯ ಹೋರೆಯಾಗಿತ್ತು (ಕರ್ಣಾಪೂ. ೩); ಕಳ್ಳತನವೇ ಅವನ ಹೆಸರಾದ ಹೋರೆಯು (ಕಳ್ಳಕಾ. ೨೨). ೨. ಕೆಲಸ; ದುಡಿತ; ದುಡಿಮೆ: ಹೊಲದ ಹೋರೆಯನ್ನು ಮುಗಿಯಿಸಿ ದೀಪ ಹಚ್ಚುವ ಹೊತ್ತಿಗೆ . . . ಮನೆಯನ್ನು ಸೇರಿದನು (ಮೂಪಾಸಾ. ೮); ಒಕ್ಕುವುದು ಮೊದಲಾದ ಒಕ್ಕಲತನದ ಹೋರೆಗಳಲ್ಲಿ ಗಂಡು ಹೆಣ್ಣು ಕೂಡಿಯೇ ದುಡಿಯಬೇಕಾಗುವುದು (ಕನ್ನಜಾ. ೧೧೫). ೩. ಕ್ರಿಯೆ; ವ್ಯವಹಾರ; ಚಟುವಟಿಕೆ: ಆರು ಬಲ್ಲರು ನಾರಿಯರಂತರಂಗದ ಹೋರೆಯನು (ಕುರಾಸಾಂ. ೩೨-೯೨). [?]

**ಹೋರೆಗ** (ನಾ). ಹೋರಾಶಾಸ್ತ್ರವನ್ನು ಬಲ್ಲವನು; ಜ್ಯೋತಿಷಿ: ಹೋರೆಗರ ಹೊಳ್ಳುಜಿತ ಜೋಯಿಸರಾರುಭಟೆಗಳ ಬಿಂಕ (ಕುವ್ಯಾಆ. ೧೩-೫). [ಹೋರೆ$_1$ + - ಗ$_2$]

**ಹೋರ್ಕೆ** 'ಪೋರ್ಕೆ' ನೋ.

**ಹೋಲ್** 'ಪೋಲ್$_1$' ನೋ

**ಹೋಲಿಕೆ** (ನಾ). ಸಾದೃಶ್ಯ; ಸಾಮ್ಯ: ಯಮನಂದನನ ಭಾಗ್ಯದ ಹೋಲಿಕೆಗೆ ಬಹರುಂಟೆ ನಳ ನಹುಷಾದಿ ರಾಯರಲಿ (ಕುವ್ಯಾಸ. ೪-೧); ಈಗ ಅಸ್ತಿತ್ವದಲ್ಲಿರುವ ಎಲ್ಲ ದ್ರಾವಿಡಭಾಷೆಗಳಲ್ಲಿನ ಪದಗಳ ಹೋಲಿಕೆಯಿಂದ . . . ಊಹಿಸಬಹುದು (ದ್ರಾವಿ. ೩೨). 'ಪೋಲ್ಕೆ' ಪರಾ. [ಹೋಲು$_1$ (< ಪೋಲ್$_1$) + - ಇಕೆ]

**ಹೋಲಿಸು** 'ಪೋಲಿಸು' ನೋ.

**ಹೋಲು$_1$** 'ಪೋಲ್$_1$' ನೋ.

**ಹೋಲು$_2$** 'ಪೋಲು$_2$' ನೋ.

**ಹೋಲುವೆ** 'ಪೋಲ್ವೆ' ನೋ.

**ಹೋಲ್ವೆ** 'ಪೋಲ್ವೆ' ನೋ.

**ಹೋಷಿಯಾರ್** 'ಹುಷಾರ್' ನೋ.

**ಹೋಸ** 'ಪೋಸ' ನೋ

**ಹೋಸಣ** 'ಪೊಯ್ಸಳ' ನೋ

**ಹೋಸಲ** 'ಪೊಯ್ಸಳ' ನೋ.

**ಹೋಸಳ** 'ಪೊಯ್ಸಳ' ನೋ.

**ಹೋಸಾಲ** 'ಪೊಯ್ಸಳ' ನೋ.

**ಹೋಹು$_1$** 'ಪೋಪು$_1$' ನೋ

**ಹೋಹು$_2$** 'ಪೋಪು$_2$' ನೋ.

**ಹೋಳ್** 'ಪೋಟ್$_1$' ನೋ.

**ಹೋಳಕ** (ನಾ). ಒಂದು ಬಗೆಯ ಪಕ್ಷಿ: (೬). 'ಕಲ್ಲುಹೋಳಕ' ಪರಾ.

[?./ ಮರಾ. ಹೋಲಗಾ, ಹೋಲಾ ./ ತೆಲು. ಪೋಲಕ, ಪೋಲಂಕ, ಪೋಲ್ಕ, ಪೋಲುಕ]

**ಹೋಳಿ** (ನಾ). ೧. ಮನ್ಮಥನ ಪ್ರೇಯಸಿ, — ಉಪಪತ್ನಿ: (೬). ೨. ಕಾಮದಹನವನ್ನಾಚರಿಸುವ ಫಾಲ್ಗುಣಮಾಸದ ಹುಣ್ಣಿಮೆಯ ಮೂರು ಅಥವಾ ನಾಲ್ಕು ದಿನಗಳ ಹಿಂದೆ, ಕಾಮನ ಉಪಪತ್ನಿಯ ಸಾವಿನ ಸಂಕೇತವಾಗಿ ಆಚರಿಸುವ ಹಬ್ಬ ಮತ್ತು ಆ ಉತ್ಸವಕಾಲದಲ್ಲಿ ಪರಸ್ಪರ ಮೈಮೇಲೆ ಎರಚುವ (ಕೆಂಪು) ಬಣ್ಣದ ನೀರು; ಓಕುಳಿ: (೬). ೩. ಶಿವನು ಮನ್ಮಥನನ್ನು ಸುಟ್ಟುದರ ಸಂಕೇತವಾಗಿ ಫಾಲ್ಗುಣಪೌರ್ಣಿಮೆಯಂದು ಮನ್ಮಥನ ಪ್ರತಿಮೆಯನ್ನು ಸುಡುವ ಸಾಂಪ್ರದಾಯಿಕವಾದ ಕ್ರಿಯೆ ಮತ್ತು ಅಂದು ಆಚರಿಸುವ ಓಕುಳಿಯನ್ನು ಪರಸ್ಪರ ಎರಚುವ ಹಬ್ಬ: ಹೋಳಿಯು ಕನ್ನಡಿಗರಿಗೆ ಆರ್ಯಸಂಸ್ಕೃತಿಯ ಸಂಸ್ಕಾರ. ಹೋಳಿಯನ್ನು ಆಚರಿಸಿ, ಹಾಡಿ ಕುಣಿಯುವುದೇ ಹೆಚ್ಚು (ಕನ್ನಜಾ. ೩೦). 'ಕಾಮದಹನ' ಪರಾ. ೪. (ಆಲಂ) ಎಸೆಯುವಿಕೆ; ತೂರಾಟ: ಸುಮಾರು ಅರ್ಧತಾಸು ಮಿಠಾಯಿಯ ಹೋಳಿ ನಡೆಯಿತು (ಜಮಿಖಾನ್ಯಾ. ೨೨). ೫. ಬೆಂಕಿ; ಜ್ವಾಲೆ: ಹೇಗೆ . . . ಕಾಮದ ಹೋಳಿಯಲ್ಲಿ ಪ್ರೇಮವೂ ಬೂದಿಯಾಗುವುದೋ, ಹಾಗೆಯೇ ಶಬ್ದಜನಿತವಾದ ವಿಕಲ್ಪದಿಂದಲೂ ವಿತರ್ಕದಿಂದಲೂ ವಿಚಾರದಲ್ಲಿ ಪ್ರಳಯವುಂಟಾಗುವುದು (ಪ್ರಬಂಧ. ೫೦); ತಿರುಕರ ಕುಲವು . . . ಧರ್ಮದ ಹೋಳಿಯನ್ನು ಹೊತ್ತಿಸುತ್ತಿತ್ತು (ರಕ್ತಧ್ವ. ೩೨೨). ೬. ಬಲಿ; ಆಹುತಿ: ಇದು ಸನ್ನ ಜೀವನದ ಹೋಳಿ ಮಾಸ್ತರರೆ! (ರಂಗರೂಿ. ೧೨೩); ಸಮಾಜಭಗ್ನಯಕ್ಕೆ ಪ್ರೇಮದ ಹೋಳಿಯಾಗಬೇಕು (ರಕ್ತಧ್ವ. ೨೫೪).

ಹೋಳಿಯ ಹಬ್ಬ= (ಶಿವನು ಮನ್ಮಥನನ್ನು ಸುಟ್ಟ ಸಂಕೇತವಾಗಿ) ಫಾಲ್ಗುಣದ ಹುಣ್ಣಿಮೆಯಂದು ಆಚರಿಸುವ ಹಬ್ಬ, — ಉತ್ಸವ; ಕಾಮನ ಹಬ್ಬ: ಆ ಕಾಲದಲ್ಲಿ ಭರತಖಂಡದ ರಾಜಮನೆತನಗಳು ಆಡಿದ ಹೋಳಿಯ ಹಬ್ಬದ ಚಿತ್ರಗಳನ್ನು ಸಂಸ್ಕೃತಕವಿಗಳ ನಾಟಕಗಳ 'ವಸಂತಮಹೋತ್ಸವ' ವರ್ಣನೆಗಳಲ್ಲಿ ಕಾಣಬಹುದಾಗಿದೆ (ಕನ್ನಜಾ. ೧೭೨); **ಹೋಳಿಯ ಹುಣ್ಣಿಮೆ, ಹೋಳಿಯ ಹುಣ್ಣಿವೆ, ಹೋಳಿಹುಣ್ಣಿಮೆ**= (ಕಾಮದಹನದ ಹಬ್ಬವನ್ನು ಆಚರಿಸುವ) ಫಾಲ್ಗುಣ ಮಾಸದ ಹುಣ್ಣಿಮೆ; ಕಾಮನ ಹುಣ್ಣಿಮೆ: ಹೋಳಿಯ ಹುಣ್ಣಿಮೆಯ ದಿವಸ ಕಾಮನ ಸುಂದರವಾದ ಪ್ರತಿಮೆಯನ್ನು ಮಾಡಿಸಿ . . . ಹಂದರದಲ್ಲಿ ಬಲುಡೌಲಿನಿಂದ ಕಾಮನನ್ನಿಡುವ ವಾಡಿಕೆಯಿದೆ (ಕನ್ನಜಾ. ೧೭೨); ಫಾಲ್ಗುಣಶುದ್ಧ ೧೫ನೆಯ ತಿಥಿಗೆ ಹುತಾಶನೀಪೌರ್ಣಿಮಾ ಎಂದು ಹೆಸರಿಸಿದೆ . . . ಇದನ್ನೇ ಹೋಳಿಯ ಹುಣ್ಣಿವೆ, ಕಾಮನ ಹುಣ್ಣಿವೆ, ವಸಂತಪೌರ್ಣಿಮಾ ಎಂದು ಹೇಳುವುದೂ ಉಂಟು (ಭಾಹಬ್ಬ. ೧೮೬); "ಹೋಳಿಹುಣ್ಣಿಮೆ = ಕಾಮದಹನದ ಹುಣ್ಣಿಮೆ" (ಸಿರಿಕೋ. ೫೮೦).

[ಸಂ. ಹೋಲೀ, ಹೋಲಾ./ ಹಿಂ. ಹೋಲೀ; ಮರಾ. ಗುಜ. ಹೋಳೀ]

**ಹೋಳಿಗೆ$_1$** 'ಪೋಳಿಗೆ$_1$' ನೋ.

**ಹೋಳಿಗೆ$_2$** 'ಪೋಳಿಗೆ$_2$' ನೋ.

**ಹೋಳಿಗೆವಡೆ** (ಕ್ರಿ). ಹೊಪ್ಪಳೆಯುಂಟಾಗು; ಬೊಕ್ಕೆಯೇಳು: ಕೂರ್ಮನ ಬೆನ್ನು ಹೋಳಿಗೆವಡದುದು ಬಲುಬಿಸಿಲೊಂದು ಚಡಾಳಿಕೆ ಜಗವ ಭಂಗಿಸಿತು (ಮೋಹತ. ೧೮-೪೬). [ಹೋಳಿಗೆ$_2$ (< ಪೋಳಿಗೆ$_2$) + ಪಡೆ$_1$]

**ಹೋಳಿಸು** 'ಪೋಟಿಸು' ನೋ.

**ಹೋಳಿಹಬ್ಬ** (ನಾ).= ಹೋಳಿ ೩: ಹೋಳಿಹಬ್ಬದ ಓಕುಳಿ ಚೆಲ್ಲುವುದಕ್ಕೆ ಆಳನಿಂದ ಅರಸರವರೆಗೂ, ಎಳೆಯರಿಂದ ಹಳೆಯರವರೆಗೂ ಎಲ್ಲರೂ ಕೂಡುತ್ತಾರೆ (ಭಾಹಬ್ಬ. ೧೮೯).

[ಹೋಳಿ + ಹಬ್ಬ (< ಪರ್ಬ)]

**ಹೋಳು$_1$** 'ಪೋಟ್$_1$' ನೋ

**ಹೋಳು$_2$** 'ಪೋಟ್$_2$' ನೋ.

**ಹೋಳುಕರ್ಪೂರ** (ನಾ). ಕರ್ಪೂರದ ಹಳುಕು, — ಹರಳು: ಹೋಳು [ಪಾಠಾಂ. ಳ] ಕರ್ಪೂರವಿಮಿಶ್ರಿತ ವೀಟಿಕಾವಳಿಯನಿತ್ತನೊಲವಿಂದಲಿ (ನಂದಿಮಾ. ೧೭-೫೦).

[ಹೋಳು$_2$ (< ಪೋಟ್$_2$) + ಕರ್ಪೂರ (< ಕಪ್ಪುರ)]

**ಹೋಳುಗಡಿ** 'ಪೋಟ್ಗಡಿ' ನೋ

**ಹೋಳುಗಳೆ** 'ಪೋಳ್ಗಳೆ' ನೋ.

**ಹೋಳುಗುಟ್ಟು** 'ಪೋಳ್ಗುಟ್ಟು' ನೋ.

**ಹೋಳುಶರ್ಕರೆ** (ನಾ). ಸಕ್ಕರೆಯ ಹಳುಕು, — ಹರಳು: ಹುಣಸೆಸೊಪ್ಪು . . . ಮೊಸರಿಂದರೆದು ಮೊಸರಲ್ಲಿ ಹೋಳುಶರ್ಕರೆವೆರಸಿ ಮೂರು ದಿನ ಕೊಳ್ಳಲು ಪ್ರಮೇಹದ ಕಲ್ಲುಕಟ್ಟು ಬೀಳುವುದು (ಸಕವೈ. ೩೭೯). [ಹೋಳು$_2$ (< ಪೋಟ್$_2$) + ಶರ್ಕರೆ]

**ಹೋಳುಸೇರೆ** (ನಾ). ಅರ್ಧಬೊಗಸೆ: ಬೂರುಗದ ಮೇಣ, ದಾಳಿಂಬದ ವಾಟೆ ಇವಂ ಸಮಾನವಾಗಿ ಎಮ್ಮೆಯ ಮಜ್ಜಿಗೆಯೊಳರೆದು ಅದರಲ್ಲೆ ಕದಡಿ ಪ್ರಾತಃಕಾಲ ಹೋಳುಸೇರೆಯ ತೆಗೆದುಕೊಂಡು . . . ಊಟವ ಮಾಡಲು ಸರ್ವಾತಿಸಾರಂ ಮಾಣು ವುದು (ಸಕವೈ. ೩೨೪). [ಹೋಳು$_2$ (< ಪೋಟ್$_2$) + ಸೇರೆ$_1$]

**ಹೌತ್ರ** (ನಾ). ಯಜ್ಞ, ಯಾಗಾದಿಗಳಲ್ಲಿ (ಋಗ್ವೇದದ)ಮಂತ್ರಪೂರ್ವಕವಾಗಿ ಹೋಮ ಮಾಡುವಿಕೆ; ಋತ್ವಿಜತನ: ಪ್ರಾಣದೇವನು 'ಹೌತ್ರವನ್ನು ಒಪ್ಪಿಕೊಳ್ಳಬಹುದು' ಎಂದು ಅಪ್ಪಣೆ ಕೊಟ್ಟಿದ್ದಾನೆ (ಮಹಾಉ. ೨೪೭). [ಸಂ.]

**ಹೌದ$_1$** 'ಹೌದು$_2$' ನೋ.

**ಹೌದ$_2$** 'ಹೌದಾ' ನೋ.

**ಹೌದಪ್ಪ** (ನಾ). ಎಲ್ಲಕ್ಕೂ ಹೌದೆಂದು ಹೇಳುವವನು: ಅಲ್ಲಪ್ಪನ ಚಾವಡಿಯಲ್ಲಿ ಅಲ್ಲಪ್ಪ, ಹೌದಪ್ಪನ ಚಾವಡಿಯಲ್ಲಿ ಹೌದಪ್ಪ (ಗಾದೆ). 'ಅಲ್ಲಪ್ಪ' ಪರಾ.

[ಹೌದು$_1$ (< ಅಹುದು$_2$) + ಅಪ್ಪ$_1$]

**ಹೌದಾ, ಹೌದ$_2$, ಹೌಗೆ** (ನಾ). ಆನೆಯ ಮೇಲೆ ಕುಳಿತುಕೊಳ್ಳಲು ಬಳಸುವ ಮಂಟಪದಂತಹ ಆಸನ; ಅಂಬಾರಿ: ಹೌದಾಸಮೇತವಾದ ಆನೆಗಾಗಿ ರುಜುವೂ ಏರ್ಪಟ್ಟು (ಮಹಾಪಂ. I, ೧೭); ಪಟ್ಟದಾನೆಯು ಭಗದಿಂದ ಬಂದಿತು . . . ಹೌದಾದಲ್ಲಿ ಮಹಾಪುರುಷನೊಬ್ಬನು ಕುಳಿತಿದ್ದಾನೆ (ದೌಲತ್. ೮೭). **ಹೌದ$_2$:** ರನ್ನದ ಹೌದ ರಂಜಿಪ ಮದಗಜವೇರಿ ಚೆನ್ನೆಯರಿಕ್ಕೆ ಚಾಮರವ (ಗೂಮ್ಮ.ಚ. ೩-೧೧೭); ಅಂಬಾರಿ, ಹೌದ, ಲಗಾಮು ಮುಂತಾದವುಗಳನ್ನು ಬೆಳ್ಳಿ ಭಂಗಾರದಿಂದ ತಯಾರಿಸಿದನು (ಝಾರಾಣಿ. ೭೭). **ಹೌದೆ:** ಎಸೆದೊಪ್ಪವೆತ್ತ ಸಿಂಹನ ಮಿಸುನಿಯ ಚೂಡಾಲ ಹೌದೆಯಂ ಪಾ[ವುಡ]ಮಂ . . . ಇತ್ತರ್ (ಬೀಳವಂ. ೧- ೧೧೦); ಸೌದೇ ಹೊರೆ ಹೊತ್ತುಕೊಂಡು ಹೌದೇಲಿ ಕೂತ ಹಾಗೆ (ಗಾದೆ). [<— ಅರ. ಪಾರ. ಹೌದಜ್; ಹಿಂ. ಹೌದಾ; ಮರಾ. ಹೌದಾ, ಹವದಾ]

**ಹೌದು$_1$** 'ಅಹುದು$_2$' ನೋ.

**ಹೌದು$_2$, ಹವುದ, ಹೌದ$_1$** (ನಾ). (ನೀರನ್ನು ಸಂಗ್ರಹಿಸಲು ಕಲ್ಲು, ಗಚ್ಚು ಇತ್ಯಾದಿಗಳಿಂದ ನಿರ್ಮಿಸಿದ) ದೊಡ್ಡ ಬಾನಿ; ತೊಟ್ಟಿ: ಪೂರ್ವದಿಕ್ಕಿನ ಮಹಾದ್ವಾರದ ವೊಳಮೈಯಲ್ಲಿ ವಿಸ್ತಾರವಾದ ಅಂಗಳಿನೊಳಗೆ ಕಾರಂಜಿಯ ಹೌದು ಇರುವದು (ಕಭಾಗ. ೫೩೭); ಪಡಸಾಲೆಯ ಅಂಚಿನಲ್ಲಿ ಘನವಾದ ನೀರಿನ 'ಹೌದು' ನೀರು ತುಂಬಿಕೊಂಡು ನಿಂತಿದೆ (ಹಬ್ಬಪ. ೧೯); ಉದ್ಯಾನದಲ್ಲಿ ಕಟ್ಟಿದ ಒಂದು ಗಚ್ಚಿನ ಹೌದಿನೊಳಗೆ ಮೀನಗಳಿದ್ದವು (ಇಪ್ಪಕ. ೩೦೭). **ಹವುದ:** ಒಳ್ಳಿತಹ ಮಿಸುನಿ ರಜತ ಹವುದಗಳ ಬಹಳ ಪಲ್ಲಿವಲ್ಲಿಗೆ ರಮ್ಯಗೊಳಿಸಿರಿಸಿರಿ (ಕೃಷ್ಣವಿ. ೩-೧೭). **ಹೌದ$_1$:** ಆಶಯ – ನೀರಿನ ಹೌದ ಮುಂತಾದುವು (ಗಂಗಾಮ.೬). [<— ಹಿಂ. ಹೌದ್, ಹೌಜ್, ಹೌದೀ; ಮರಾ. ಹೌದ]

**ಹೌದೆ** 'ಹೌದಾ' ನೋ.

**ಹೌರಿ** (ನಾ). "ಮಹಮದೀಯಸ್ವರ್ಗದ ಅಪ್ಸರೆ" (ನಗೆಹೊ. ೧೭೫ ಅಡಿಟ): ಹೌರಿಯರಿಂದ ಸುತ್ತುವರಿಯಲ್ಪಟ್ಟೇ ಸದಾಕಾಲವೂ ಕೂತಿರುವುದೆಂದರೆ ಆ ಸ್ವರ್ಗದಲ್ಲಿ ಬೇಜಾರು ಹಿಡಿದುಬಿಡುತ್ತದೆ (ನಗೆಹೊ. ೩೨೭). [?]

**ಹೌವನೆ** 'ಪವ್ವನೆ' ನೋ.

**ಹೌಸ$_1$** 'ಪೋಸ' ನೋ.

**ಹೌಸ$_2$** 'ಹೌಸು' ನೋ.

**ಹೌಸು, ಹೌಸ$_2$** (ನಾ). (ಉಕ) ೧. ಉತ್ಸಾಹ; ಸಡಗರ; ಹುರುಪು: ಅವನಿಗೆ ಮನ ತುಂಬಿ ಹೌಸಾದರೆ ಚಿಮ್ಮಿ ಚಿಮ್ಮಿ ರಾಗವು ಹರಿದೇ ಬಿಡುವುದು (ಕನ್ನಜಾ. ೧೮೦); ಹೌಸೆಲ್ಲಾ ಕುಸಿದು ಅಪ್ರತಿಭನಾದೆ! (ಮುಂಗಾಪು. ೧೦೫); ಯಜಮಾನರಾದರೂ ಅವಳ ಹೌಸಿಗೆ ಒಂದಿಷ್ಟೂ ಅಡ್ಡ ಬರಲಿಲ್ಲ (ಗಂಪಯಾಯಿ. ೧೩೩). **೨.** ತೀವ್ರವಾದ ಆಸೆ; ಹೆಬ್ಬಯಕೆ: ಹೀಗೆ ಎಲ್ಲರು ಎಂತೋ ತಮ್ಮ ಮನದ ಹೌಸುಗಳನ್ನೆಲ್ಲ ತೀರಿಸಿಕೊಂಡರು (ಭದ್ರಾಯು. ೫೭); ಅವನ ತಂದೆಯಾಗುವ ಹೌಸು ಬಲ್ಲ ಅವಳಿಗೆ ನಿಜವಾಗಿಯೂ ದುಃಖ ಒತ್ತರಿಸಿ ಬಂತು (ಆಪನಾ. ೧೯೪). **ಹೌಸ$_2$:** ೧. ಅಷ್ಟೊಂದು ಹೌಸವಿದ್ದರೆ ಆಗಲಿ ನಮ್ಮ ಪರೀಕ್ಷೆ (ಉದವ್ವ. ೬೦). **೨.** ಹಂತೀಯ ಕಟ್ಟವನ, ಹೌಸ ಹುರುಪನು ನೋಡೊ (ಕನ್ನಜಾ. ೨೭). **೩.** ಲಾಲಸೆ; ಕಾಮನೆ: (೬).

[<— ಪಾರ. ಹೋಸ್; ಅರ. ಹವಸ್ ; ಹಿಂ. ಹವಸ್, ಹೌಸ್; ಮರಾ. ಹೌಸ್]

**ಹೌಹಾರು** (ಕ್ರಿ). ಬೆದರು; ಗಾಬರಿಯಾಗು: ಆಗ ಬಗೆಯೊಳ್ಬೆದರಿ ಹೌಹಾರಿ (ಮಹಾಂತೇ. ೫-೪); ಚಿತ್ತದುದ್ವೇಗದೊಳನ್ನಪಾನಗಳನು ಮರೆತಳು ಈಕೆ ಹೌಹಾರಿ (ಇಂಚಾಪ. ೪೩-೪); ಚಿದಾನಂದನ ಪತ್ರವನ್ನು ಓದಿ ಮಾಸ್ತರರು ಹೌಹಾರಿದರು (ಮುತ್ತೈದ. ೧೧). 'ಪವ್ವನೆಪಾಟು' ಪರಾ. [?]

**ಹೌಳಿಗೆ** (ನಾ). ಒಂದು ಬಗೆಯ ಸಸ್ಯ: ನಾರುಬೇರು, ಹಾವುಲಿಗೆ, ಹಂಟಗೆ, ಹೌಳಿಗೆ, ಬೆಳಂಗಿ (ಮೈಡಿಗಿ. ೨-೩೨). [?]

**ಹ್ಯಸ್ತನ** (ಗು). ಹಿಂದಿನ ದಿನಕ್ಕೆ ಸಂಬಂಧಪಟ್ಟ: 'ಹ್ಯಸ್ತನದಿನ' ಪರಾ. [ಸಂ.]

**ಹ್ಯಸ್ತನದಿನ** (ನಾ). ಹಿಂದಿನ ದಿನ; ನೆನ್ನೆ. [ಸಂ.]

**ಹ್ಯಾಪ** 'ಹೇಪ' ನೋ.

**ಹ್ಯಾಪು** (ನಾ). ಪೆಚ್ಚುತನ; ಮಂಕುತನ: 'ಹ್ಯಾಪುಮೋರೆ' ಪರಾ.

[ಹ್ಯಾಪ (< ಹೇಪ) + - ಉ$_4$]

**ಹ್ಯಾಪುಮೋರೆ** (ನಾ). ಪೆಚ್ಚುಮುಖ; ಜೋಲುಮೋರೆ: ಹ್ಯಾಪುಮೋರೆ ಹಾಕಿ ಕೈಹಾಕಿದ್ದರಲ್ಲಿ ಜಯ ಸಂಪಾದಿಸಿದ ಖದೀಮ ಪ್ರಾಣೇಶ (ವೃದ್ಧವಿ. ೮೧).

[ಹ್ಯಾಪು + ಮೋರೆ (< ಮೋಜೆ)]

**ಹ್ರದ** (ನಾ). ೧. ಆಳವಾದ ನೀರಿರುವ ಪ್ರದೇಶ; ಮಡು: ಅತಿಮನೋಹರಮಾದ ಯಮುನಾಹ್ರದಪರಿಸರಪ್ರದೇಶದೊಳಕ್ರೂರಂ ನಿಜವರೂಥಮಂ ನಿಲಿಸಿ (ಜಗಎ. ೫-೧೦೨ ವ); ಹ್ರದದೊಳ್ ಮಿಂದಲಂಕರಿಸಿ . . . ಕಮಳೋದರಸಭೆಯ ಸಂಪದದಿಂದ ಪೊಕ್ಕನಾ ಸುರನು (ವರ್ಧಚ. ೯-೩೩). **೨.** ಬೆಳಕಿನ ಕಿರಣ. [ಸಂ.]

**ಹ್ರದಿನಿ** (ನಾ). ೧. ತೊರೆ; ನದಿ: ಹ್ರದಿನೀಸರ್ವಾಂಬುವಂ ಪೀರ್ದನಿತನೆ ದಿವದೊಳ್ ಕಾಣಿಸುತ್ತುಂ . . . ಪೊದಟ್ಟೇಗೆಯಿಂ ಬಂದುದು ತಾಂ ಸಂತಪ್ತತಿಗ್ಮಾತಪವಿಪುಳ ತರಜ್ವಾಲಮಾ ಗ್ರೀಷ್ಮಕಾಲಂ (ಕುಸುಮಾ. ೮-೧೧೩). **೨.** ಮಿಂಚು; ವಿದ್ಯುತ್ತು.

[ಸಂ. ಹ್ರದಿನೀ]

**ಹ್ರಸ್ವ** (ಗು). ೧. ಚಿಕ್ಕದಾದ; ಪುಟ್ಟದಾಗಿರುವ; ಕಿರಿದಾದ: ವಿನುತಸುಜಾತಹ್ರಸ್ವಸ್ತನಚೂಚಕನಂ . . . ಸಂಪದುಪೇತಮಂ ತರಿಸಿ ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇವಂ ಪೊಱಮಟ್ಟನೇಱಿ ಜಯವಂ ಜಯಪರ್ವತಯಾನನಾಗವಂ (ಶಾಂತಿಪು. ೧೦-೧೪೩). (ನಾ). **೨.** ಚಿಕ್ಕದು; ಪುಟ್ಟದಾಗಿರುವುದು; ಕಿರಿದು: "ಸೂಕ್ಷ್ಮಃ, ಲೇಶಃ . . . ಹ್ರಸ್ವಃ, ಅಲ್ಪಃ, ತ್ರುಟಿಃ– ಈ ೧೫ ಕಿಱಿದು" (ಹಲಾಯು. ೧೧೪-೩). **೩.** ಕುಳ್ಳಾಗಿರುವುದು; ಗಿಡ್ಡಾಗಿರುವಿಕೆ: "ಖರ್ವಂ ಕುಬ್ಜಮಾನತಂ ತಾನದೆಂಬುದಕ್ಕುಂ ಹ್ರಸ್ವಂ" (ವಸ್ತುಕೋ. ೧೧೪-೩೭). **೪.** ಚಿಕ್ಕದಾದ ಆಕೃತಿಯುಳ್ಳವನು; ಕುಳ್ಳ; ಕುಬ್ಜ. **೫.** [ಛಂದ]ಒಂದು ಮಾತ್ರೆಯ ಅವಧಿಯಲ್ಲಿ ಉಚ್ಚರಿಸುವ ಅಕ್ಷರ; ಒಂದು ಮಾತ್ರೆಯನ್ನು ಹೊಂದಿರುವ ಸ್ವರ; ಲಘು: ಸ್ವರದೊಳಗಮೇಕಮಾತ್ರಾಸಿರತಂ ಹ್ರಸ್ವಂ (ಕಾವ್ಯಾವ. ೧೦); ಸ್ವರವ್ಯಂಜನದಿನೇಕಮಾತ್ರಮಾದೊಡೆ ಹ್ರಸ್ವಂ (ಶಮದ. ೧೦ವೃತ್ತಿ). 'ಹ್ರಸ್ವಾಕ್ಷರ' ಪರಾ. [ಸಂ.]

**ಹ್ರಸ್ವಕಾಕು** (ನಾ). [ಛಂದ]ಒಂದು ಮಾತ್ರೆಯ ಕಾಲದಲ್ಲಿ ಉಚ್ಚರಿಸುವ ಸಂಬೋಧನೆಯ ಸ್ವರ: ಹ್ರಸ್ವಕಾಕುವಿಂಗೆ – ಎಲೆ ಗಣಪ . . . ಎಲೆ ಎಲೆ ರಂಭೆ (ಶಮದ. ೧೨೩ ಪ್ರಯೋ). [ಸಂ.]

**ಹ್ರಸ್ವಗ್ರೀವ** (ನಾ). ೧. ಚಿಕ್ಕದಾಗಿರುವ ಕತ್ತು. **೨.** ಚಿಕ್ಕದಾದ ಕೊರಳನ್ನುಳ್ಳುದು: [ಋಜು]ಪರಿಪೂರ್ಣಹ್ರಸ್ವಗ್ರೀವನುಂ ಮಹಾವ್ಯೂಢೋರಸ್ಕನುಂ . . . ಸಪ್ತದ್ವ್ಯಾಸ್ಥಿತ ನುಮಪ್ಪ ವಿಜಯಪರ್ವತಗಜೇಂದ್ರಂ ಬಂದು ಮುಂದೆ ನಿಲ್ವುದುಂ (ಆದಿಪು. ೧೨-೫೭ವ). [ಸಂ.]

**ಹ್ರಸ್ವಚೂಚುಕ** (ನಾ). ಚಿಕ್ಕದಾಗಿರುವ ಚೂಚುಕವನ್ನುಳ್ಳುದು: ಮೋಹಜಘನಾಪರನುಮನಿಮ್ನನಾಭಿಯುಂ ಹ್ರಸ್ವಚೂಚುಕನುಂ . . . ಸಪ್ತದ್ವ್ಯಾಸ್ಥಿತನುಮಪ್ಪ ವಿಜಯಪರ್ವತಗಜೇಂದ್ರಂ ಬಂದು ಮುಂದೆ ನಿಲ್ವುದುಂ (ಆದಿಪು. ೧೨-೫೭ ವ). [ಸಂ.]

**ಹ್ರಸ್ವತೆ** (ನಾ).೧. ಚಿಕ್ಕದಾಗಿರುವಿಕೆ; ಸಂಕ್ಷೇಪವಾಗಿರುವಿಕೆ; ಅಡಕ: ಕಥೆಯ ನಿರೂಪಣೆಯಲ್ಲಿ ಎಂತಹ ಹ್ರಸ್ವತೆಯನ್ನು ಸಾಧಿಸಿದ್ದಾರೆ ಕವಿ ಎಂಬುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ (ಭಾವಗೀ. ೩೫೯). **೨.** [ಛಂದ] ಸ್ವರದ ಹ್ರಸ್ವತ್ವ; ಲಘುವಾಗಿರುವಿಕೆ : ಪರದೊಳ್ ಪ ಬ ಮಂಗಳ್ ನೆಲಸಿರೆ ವತ್ವಂ ಪೀನಮಾ ಪಕಾರಮದೂತ್ವಂ ಬೆರಸಿರೆ ತಾಂ ಹ್ರಸ್ವತೆಯಂತರೆಂಬ ಶಬ್ದಾಂತರೇಫೆಗಕ್ಕುಂ ಲೋಪಂ (ಶಮದ. ೨೯೨). [ಸಂ. ಹ್ರಸ್ವತಾ]

**ಹ್ರಸ್ವಮತಿ** (ನಾ). ಬುದ್ಧಿ ಕಡಮೆಯಾದವನು; ಮಂದಮತಿ: ನಂಜುದಿಸಲೇನು ಗತಿ? ಅಂಜುವರೆ ಹ್ರಸ್ವಮತಿ? (ಪಾಂಚಜ. ೪೪-೫). [ಸಂ.]

**ಹ್ರಸ್ವಸ್ವರ** (ನಾ).= ಹ್ರಸ್ವ ೫: ಹ್ರಸ್ವಸ್ವರಗಳಿಗೆ ಲಘುವೆಂತಲೂ . . . ಸಂಜ್ಞೆ

(ಕೈಪಿಡಿ. ೬೯); ಉಚ್ಚಾರಣೆಗೆ ಕಡಮೆ ಕಾಲ ಬೇಕಾಗುವ ಅ, ಇ, ಉ, ಋ, ಎ, ಒ, ಎಂಬುವಕ್ಕೆ ಹ್ರಸ್ವಸ್ವರಗಳೆಂದೂ . . . ಹೆಸರು (ಮಧ್ಯಮ. ೧೩). 'ದೀರ್ಘಸ್ವರ' ಪರಾ. [ಸಂ.]

**ಹ್ರಸ್ವಾಕ್ಷರ** (ನಾ). = ಹ್ರಸ್ವ ೫: ಸ್ವರಮಮರ್ದಿರೆ ಮುಂದೇಕಸ್ವರದೊಳ್ ನಣಲಯಳಕಾರಮಾನಿತುಂ ಪ್ರಸ್ವಾಕ್ಷರಪೂರ್ವಮಾಗೆ ಪೀನಂ ಸ್ವರೂಪದಿಂ ದ್ವಿತ್ವವೃತ್ತಿಯಂ ತಾಳ್ದಿರ್ಕುಂ (ಕಾವ್ಯಾವ. ೭೯); ಪರಪದಪೂರ್ವಂ ದ್ವಿತ್ವಾಕ್ಷರಮಾಗಿರೆ ಪೂರ್ವಪದದ ಚರಮಂ ಹ್ರಸ್ವಾಕ್ಷರಮಾಗ ಸಂಧಿದೋಷಂ ಸರೇಫಮಿದಿರಾಗೆ ಶಿಥಿಲಮೆಂದನುಸರಿಪರ್ (ಶಮದ. ೫೯). 'ದೀರ್ಘಾಕ್ಷರ' ಪರಾ. [ಸಂ.]

**ಹ್ರಸ್ವಿ** (ನಾ). ಬಹಳ ಸಣ್ಣದೇಹದ ಒಂದು ಬಗೆಯ ಪಕ್ಷಿ: "ಹ್ರಸ್ವಿ ಕಿಱುಪಕ್ಕಿಯಕ್ಕುಂ" (ಮಂಗರಾ. ೫೨-೯). [ಸಂ. ಹ್ರಸ್ವಿನ್]

**ಹ್ರಾದ** (ನಾ). ಧ್ವನಿ; ಶಬ್ದ: "ನಾದಂ ಶಬ್ದಂ ಧ್ವಾನಂ ಹ್ರಾದಂ . . . ಘೋಷಂ" (ವಸ್ತುಕೋ. ೭೯-೨೭). [ಸಂ.]

**ಹ್ರಾದಿನಿ** (ನಾ). ೧. ಮಿಂಚು; ವಿದ್ಯುತ್ತು: "ಉದ್ಯತ್ಸೌದಾಮಿನಿಯೊಳಭಿದ್ಯೋತಿಸುಗುಂ . . . ಶತಹ್ರದಾ ಹ್ರಾದಿನಿಗಳ್" (ವಸ್ತುಕೋ. ೧೧-೫೯). ೨. ಸಿಡಿಲು; ಅಶನಿ. ೧,೨: "ಹ್ರಾದಿನಿ ಮಿಂಚುಂ ಸಿಡಿಲುಂ" (ವಸ್ತುಕೋ. ೧೨೧-೨೨). ೩. ಇಂದ್ರನ ವಜ್ರಾಯುಧ; ಕುಳಿಶ: "ಹ್ರಾದಿನೀ, ವಜ್ರಂ, ಕುಲಿಶಂ, ಭಿದುರಂ, ಪವಿಃ . . . ವಜ್ರಾಯುಧದ ಹೆಸರುಗಳು" (ಸಿದ್ಧಾಂತಿ. ೨೧). ೪. ನದಿ; ಹೊಳೆ; ತೊರೆ: ಸಲೆ ಕಲ್ಯಾಣದ ತೀರ್ಥದೊಳ್ ನಿಜಮಶೇಷಹ್ರಾದಿನೀಸಂಚಯಕ್ಕೆಲ ವಿಪ್ರೋತ್ತಮ ಸನ್ನಿಧಾನಮೆಸಗುಂ (ಯಾದಚಂ. ೯-೨೪). ೫. ಒಂದು ಬಗೆಯ ಮರ; ಆನೆಬೇಲ: "ಗಜಭಕ್ಷ್ಯಾ, ಸುವಹಾ . . . ಸಲ್ಲಕೀ, ಹ್ರಾದಿನೀ - ಈ ೮ ತರುಕು" (ನಾಚಿರಾ. ೧೧೧). [ಸಂ. ಹ್ರಾದಿನೀ]

**ಹ್ರಾಸ** (ನಾ). ೧. ಶಬ್ದ; ಸದ್ದು. ೨. ಕಡಮೆಯಾಗುವಿಕೆ; ಕ್ಷೀಣವಾಗುವಿಕೆ: ನಿರುತಂ ವೃದ್ಧಿ ಹ್ರಾಸಾ[ಪಾಠಾಂ. ಹ್ರಸ್ವಾ]ದಿರಹಿತನಾದ್ಯಾದಿ ಶೂನ್ಯನಭಯಕ್ರೋಧಂ (ವಿಷ್ಣುಪು. ೫-೧-೬೨); ಅದರ ವೃದ್ಧಿ ಮತ್ತು ಹ್ರಾಸಗಳಿಗೆ ಅವರು ನೇರವಾಗಿ ಸಂಬಂಧಪಟ್ಟವರು (ಕಾವ್ಯಕು. ೩). ೩. ಕೊರತೆ; ಅಭಾವ: ರಾಜಕೀಯಭಾಂಡಾರದಲ್ಲಿ ದ್ರವ್ಯವು ಹೆಚ್ಚುತ್ತ ಹೋಗದಿದ್ದರೆ ರಾಜನ ವೈಭವವೂ ಅಧಿಕಾರವೂ ಹೆಚ್ಚದೆ ಅವಕ್ಕೆ ಹ್ರಾಸವು ಒದಗುವ ಸಂಭವವಿರುವದು (ಮಭಾರ. ೧೭); ನಮ್ಮ ಈ ಭೀಷಣಪತನದ ಮುಖ್ಯಕಾರಣವು ನಮ್ಮ ಬ್ರಹ್ಮಚರ್ಯದ ಹ್ರಾಸವೇ ಸರಿ (ಬ್ರಹ್ಮಜೀ. ೧೫). [ಸಂ.]

**ಹ್ರಾಸನ** (ನಾ). ಕಡಮೆಯಾಗುವುದು: ಶಶ್ವದ್ವಿಕಾಸನಹ್ರಾಸನಕ್ರಮಗಳಿಂ . . . ಸ್ವಸ್ವರೂಪವನರಸುವಾಟ ಪರಚೇತನದ ಹೃಷ್ಯದ್ವಿಲಾಸವೆಲೊ (ಮಂಕುತ. ೫೩೧). [ಸಂ.]

**ಹ್ರಿದ್ದೇಶ** (ನಾ). ಮನಸ್ಸು; ಅಂತರಂಗ: ತಂನ ಹ್ರಿದ್ದೇಶದೊಳ್ ಹರಿಯಿರ್ಕುಂ (ಕಶಿ. IV. ೧-೧೦: 1204). [< ಸಂ. ಹೃದ್ದೇಶ]

**ಹ್ರೀ** (ನಾ). ೧. ಲಜ್ಜೆ; ಸಂಕೋಚ: ಸುದತೀಸಂತತಿ ಪೊರ್ದಿಯುಂ ತ್ರಿದಿವಮಂ ದೇವೇಂದ್ರನಿರ್ಪಲ್ಲಿಗೆಯ್ದದೆ ತನ್ನಂದನಮಧ್ಯದಲ್ಲಿ ನೆಲಸಿರ್ದಹ್ರೀಸಮಾಯುಕ್ತೆಯರ್ (ಯಾದಚಂ. ೧೪-೩೯); ಹ್ರೀ ಎಂದರೆ ಅಕಾರ್ಯವನ್ನು ಮಾಡುವುದರಲ್ಲಿ ಲಜ್ಜೆ (ಭಾತತ್ತ್ವ. ೧೪೦). ೨. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಎಲ ಚಂದ್ರ ನಿನ್ನ ಕಲೆಯೆಲ್ಲ ಸವದುಹೋಹುದಕೆ ಬಗೆದೆಯೆನೆ ಸವವುತಿರ್ದವು ಕಣಾ ಬೇಹಸುತ ಕೇಳವರ ಪೆಸರಮೃತಮಾನಸಿ . . . ಹ್ರೀ ಶ್ರೀಯೊಳಾ ಕಾಂತಿಯಾ (ವೀಶ್ವಪು. ೨-೧-೩೧). ೩. [ಜೈನ]ಒಬ್ಬ ದೇವತೆಯ ಹೆಸರು: ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಱುವರುಮನಾತ್ಮೀಯಗುಣಗಣಮಣಿವಿಭೂಷಣಂಗಳಿಂ ಜಿನಜನನಿಯನಲಂಕರಿಸಲುಂ . . . ಸೌಧರ್ಮೇಂದ್ರಂ ಬೆಸಸುವುದುಂ (ಆದಿಪು. ೭-೩ ವ); ಶ್ರೀ ಹ್ರೀ . . . ಲಕ್ಷ್ಮಿಯರೆಂಬ ದೇವಿಯರಂ ತೀರ್ಥಂಕರಜನನಿಗೆ ಪಸದನಮಂ ಪುದುಂಗೊಳಿಸಲುಂ . . . ಯೋಚಿಸಿ (ಪುಣ್ಯಾಸ್ರ. ೧೦-೧೪ ವ). [ಸಂ.]

**ಹ್ರೀಂ** (ನಾ). ಒಂದು ಬೀಜಾಕ್ಷರ: ಹ್ರೀಮೆಂಬೇಕಾಕ್ಷರಂ ತಾಂ ಪರತರಗುಣಗೌರೀಮಹಾಬೀಜಮೇ ತತ್ಪ್ರೇಮಾಂಚನ್ಮಂತ್ರಕಂ ಚಿದ್ವರ ವರದದಯ್ಯಂ (ಹಾಲಾಸ್ಯ. ೨-೭-೨೨). [ಸಂ.]

**ಹ್ರೀಂಕಾರಿ** (ನಾ). ಹ್ರೀಂಕಾರವೆಂಬ ಮಂತ್ರಸ್ವರೂಪಳಾದವಳು; ಹ್ರೀಂಕಾರವೆಂಬ ಮಂತ್ರದ ಅಧಿದೇವತೆ: ಓಂಕಾರರೂಪಿಣಿಗೆ ಹ್ರೀಂಕಾರಿ ವಾಣಿಗೆ ಸೌಂಕಾರಸದನೆ ಶಾಂಭವಿಗೆ ನೈಯಕ್ಕೆ ಶಾಂಕರಿಗೆ ಹಚ್ಚಲು ಬನ್ನೀರೆ (ಸಿದ್ಧಪು. ೧೯-೯೯ ನೈಯಕ್ಕಪದ). [ಸಂ.]

**ಹ್ರೀಣ** (ಗು). ೧. ನಾಚಿದ; ಸಂಕೋಚಗೊಂಡ. (ನಾ). ೨. ನಾಚಿಕೊಂಡವನು; ಲಜ್ಜಿತನಾದವನು: "ಹ್ರೀಣಂ ಹ್ರೀತಂ ವಿಲಜ್ಜಿತಂ ತಾನಕ್ಕುಂ" (ವಸ್ತುಕೋ. ೧೦೫-೪೩). [ಸಂ.]

**ಹ್ರೀತ** (ಗು). ೧.= ಹ್ರೀಣ ೧. (ನಾ). ೨. = ಹ್ರೀಣ ೨: "ಹ್ರೀಣಂ ಹ್ರೀತಂ ವಿಲಜ್ಜಿತಂ ತಾನಕ್ಕುಂ" (ವಸ್ತುಕೋ. ೧೦೫-೪೩). [ಸಂ.]

**ಹ್ರೀಬೇರ** (ನಾ). ಒಂದು ಬಗೆಯ ಸುಗಂಧದ್ರವ್ಯ; ಕರಿಯ ಬಾಳದ ಬೇರು: "ಹ್ರೀಬೇ[ಪಾಠಾಂ. ವೇ] ರಂ, ಬಾಳಕಂ, ಜಳಂ - ಈ ೩ ಕರಿಯ ಬಾಳಂ" (ಹಲಾಯು. ೧೦೨-೪೬೪); "ಬಾಳಮಾ ಹ್ರೀಬೇರಮೆನಲು ಲಾಮಂಚಮಕ್ಕು" (ಮಂಗರಾ. ೩೯-೨೯). [ಸಂ.]

**ಹ್ರೀವೇರ** (ನಾ). = ಹ್ರೀಬೇರ. [ಸಂ.]

**ಹ್ರೇಷೆ** (ನಾ). ಕುದುರೆಯ ಕೆನೆತ; ಹೇಷಾರವ: "ಹೇಷಾ, ಹ್ರೇಷಾ - ಈ ೨ ಕುದುರೆಗಳ ಧ್ವನಿ" (ಹಲಾಯು. ೨೪-೧೫೦). [ಸಂ. ಹ್ರೇಷಾ]

**ಹ್ಲಾದ** (ನಾ). ಸಂತೋಷ; ಆನಂದ. [ಸಂ.]

**ಹ್ಲಾದಿನಿ** (ನಾ). ೧. ಇಂದ್ರನ ವಜ್ರಾಯುಧ; ಕುಲಿಶ. ೨.ಮಿಂಚು; ವಿದ್ಯುತ್ತು. ೩. ಸಲ್ಲಕೀವೃಕ್ಷ; ಆನೆಬೇಲ. ೪. ಸಂತೋಷವನ್ನು ಕೊಡುವವಳು; ಆಹ್ಲಾದವನ್ನು ನೀಡುವವಳು: ನೆರೆಮಗಳ ಸೊಸೆಯಾದರೆ ಹ್ಲಾದಿನಿಯಾಗಬಾರದೇ? (ಹೊಸಕ್ಕಿ. ೧೭೫). ೫. [ವೇದಾಂತ] ವೈಷ್ಣವಮತದ ಒಂದು ತತ್ತ್ವ: ಭಕ್ತನಿಗೆ ಸುಖ ಕೊಡಲು ಹ್ಲಾದಿನಿ ಸೃಷ್ಟಿಯಾಗಿದೆ. ಹ್ಲಾದಿನಿಯ ತಿರುಳೇ ಪ್ರೇಮ (ಭಾರದ. ೨೯೯). [ಸಂ. ಹ್ಲಾದಿನೀ]

*

# ೞ

ೞ (ನಾ). ೧. ಕನ್ನಡವರ್ಣಮಾಲೆಯ ಐವತ್ತುನಾಲ್ಕನೆಯ ಅಕ್ಷರ; P ದೇಶೀಯಪಾದಾಗ ಇದಕ್ಕೆ 'ಕುೞ' ವೆಂದೂ ಸಂಸ್ಕೃತ ಲಕಾರಕ್ಕೆ ವಿಕಲ್ಪವಾಗಿ ಬಂದಾಗ 'ಕ್ಷೞ'ವೆಂದೂ ಹೆಸರು. ೨. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ: ''ಅಜಿ ಝ ಧ ೞಮೊಂಬತ್ತು'' (ಮಂಗರಾ. ೧೦೪-೧೦).

**ೞಕಾರ** (ನಾ). 'ೞ' ಎಂಬ ಅಕ್ಷರ: ವರ್ಣಂಗಳೞಕಾರಾದ್ಯಾಪೂರ್ಣತೆಯಂ ಪಡೆವುವಾ ೞಕಾರಂಬರೆಗಂ (ಶಮದ. ೪). [ೞ + ಕಾರ$_4$]

**ೞತಾಂಗಿ** 'ಲತಾಂಗಿ' ನೋ.

**ೞತಾನೀಕ** (ನಾ). ಬಳ್ಳಿಗಳ ಗುಂಪು : ತದ್ವನಾಂತ ೞತಾನೀಕದಿನುಣ್ಮುತಿರ್ಪ ಕಳಕಂಠಧ್ವಾನ ಸಂತಾನಮೆಂದಿಟಿಕೆಯ್ದೆಂತುಮಗಲ್ದು ಪೋಗವು ರುವತ್ಕೀರಾಳೀ ಕೇದಾರದಿಂ (ಜಗವಿ.೨-೬). [ಸಂ. ಲತಾನೀಕ]

**ೞತೆ** 'ಲತೆ' ನೋ.

**ೞತ್ವ** (ನಾ). = ೞಕಾರ: ಸಮನಿಸುಗುಂ ಗತ್ವಂ ಶಬ್ದಮಧ್ಯಮತ್ವಕ್ಕಮಂತೆ ೞತ್ವಕ್ಕಂ (ಶಮದ. ೨೭೬). [ೞ + - ತ್ವ]

**ೞಾಂತ** (ನಾ). ೞಕಾರದಿಂದ ಕೊನೆಗೊಳ್ಳುವ ಶಬ್ದ: ಗದವಜಕಾರಮವಿದಿರೆ ಪದಮಧ್ಯಂ ವಿಷಯಮಾಗನೇಕಾಕ್ಷರದೊಳ್ ಪುದಿಯೆ ಲಘೂಪಧೆ ಕೆಲಕೆಲವೊದವಿರ್ಕುಂ ರಾಂತ ೞಾಂತಮವು ಶಿಥಿಲತೆಯಂ (ಶಮದ. ೪೩). [ೞ + ಅಂತ$_2$]

**ೞೊೞ್** (ನಾ). ಒಂದು ಅನುಕರಣ ಶಬ್ದ: ನಾಯಿ 'ೞೊೞ್' 'ೞೊೞ್' ಎಂದು ಒಂದೇಸಮನೆ ಬಗುಳುತ್ತಿದೆ (ರೂಢಿ).

✱

# ಱ

ಱ (ನಾ). ಕನ್ನಡ ವರ್ಣಮಾಲೆಯ ಐವತ್ತೈದನೆಯ ಅಕ್ಷರ; P ಈ ಅಕ್ಷರದ ಆಕಾರವನ್ನು ಗಮನಿಸಿ ಇದನ್ನು 'ಶಕಟರೇಫ' ಎಂದೂ 'ಬಂಡಿಯ ರ' ಎಂದೂ ಹೇಳುತ್ತಾರೆ: ಯರಲಣನಳ ಱಟ ವರ್ಣೋತ್ಕರಮ ವಲಂ ಪದದ ಕಡೆಯೊಳಸ್ವರವಿಧಿಯಂ ಪಿರಿದುಂ ತಾಳ್ದುಗುಂ (ಶಮದ. ೪೮).

**ಱಂಚಿಕೆ$_1$, ಱಂಚಿಗೆ, ಱಂಜಿಕೆ$_1$** (ನಾ). ಸವಾರಿಗಾಗಿ ಆನೆಯ ಮೇಲೆ ರಚಿಸಿದ ಪೀಠ; ಅಂಬಾರಿ; ಹೌದ: ''ಱಂಚಿಕೆ ಮಹಾಸನಮಕ್ಕು'' (ಮಂಗರಾ. ೪೭-೬); ವಿಧಿವಶದಿಂದಾನೆ ಹೊಱುವ ಱಂಚಿಕೆಯ ಸನ್ನಿಧಿಯಶ್ವ ಹೊತ್ತು ಹೋಯ್ತೆನಲು ಅಧಿಕರು ಧರಿಸುವ ಜೈನಧರ್ಮವ ಕಡೆಗಧಮರೆ ಧರಿಸುವರೆಂದ (ಭರಚ. ೬೧-೪೧); ವಾಜಿಗಳಸಿರದೆ ಹಲ್ಲಣಿಸಿದರ್ ಮತ್ತಗಜರಾಜಿಗಂ ಱಂಚಿಕೆಯನಿಕ್ಕಿದರ್ (ಚೆಬಪು. ೨೩-೨೫); ಹಿಂಚಿತು ಮಾತು ಮುಂಚಿದವಾಗ ಮದಗಜ ಱಂಚಿಕೆ ಸೂನಂಗಿ ಸಿರಿಯ ಕಂಚಿನ ತೊಟ್ಟಿಲು ಕೈಗತ್ತಿ ಸರಪಣಿ ಅಂಚೆಯಂಚೆಯಲೊದಗಿದವು (ಅಮುಸಾಂ. ೬-೭೮). **ಱಂಚಿಗೆ:** ಗಗನಕರಟಿಯ ಭಲ್ಲೂಕ ಚರ್ಮಗಳ ಱಂಚಿಗೆಯೊ ಭೂದೇವಿಗೆ ಪಿಡಿದು ನೆಗಪಿದ ಪೀಲಿದಳೆಯೊ ಪಗಲ್ಗತ್ತಲೆ ಸೊಗಸೊ ಕಾರಿನ ಮುಗಿಲೊಡ್ಡೊ (ವರ್ಧಚ. ೯-೭೭). **ಱಂಜಿಕೆ$_1$:** ಭೇರಿಗೆ ಱಂಜಿಕೆಯಿಕ್ಕಿಯಂಕುಶದೊಳು ವಾರಣವೆಂದು ಕಡಿದರು ವಾರಣಗಳ ಹಿಂಭಾಗವ ಕುದುಹತ್ತಿ ಭೇರಿಯನುತ ಬಾರಿಸಿದರು (ನಾಗಕು. ೧೭-೩೯); ಸೀಸಕ ತನುತ್ರ ಱಂಜಿಕೆ . . . ಯುಗಾಕ್ಷಂಗಳುರಿಗೊಳೆ ಪಾಂಡುಪುತ್ರಸೇನೆಯೊಳೆಲ್ಲರುಂ ಬೆದಱಿದರ್ (ಜೈಮಿಭಾ. ೮-೩೮); ಸಕಲಾತಿಯ ಱಂಜಿಕೆಯ ನಿಕರದ ಕರಿ ಕಾಲಾಳುಗೂಡಿದ ಪೌಜ ಯಕಲಾಸಖಾನ ತೋಱಿದನು (ಕಂನವಿ. ೧೧-೮೮).

**ಱಂಚಿಕೆ$_2$, ರಂಜಿಕೆ, ಱಂಚಿಕೆ$_2$, ಱಂಜಿಗೆ** (ನಾ). ಒಂದು ಬಗೆಯ ಸಸ್ಯ: ಮೂಲಫಲಪತ್ರಸಂಭವ ಹಾಲಾಹಲ ಮುಖ್ಯಜಾತಿಯಂ ಸಂಹರಿಸಲ್ ನೀಲಿ ಹಯಗಂಧಿ ಱಂಱಂಚಿಕೆ ಸಾಲದೆಯೊಂದೊಂದೆ ಧರೆಯೊಳಂ (ಖಮದ. ೨-೧೯). **ರಂಜಿಕೆ:** ತಾವರೆ ಎಲೆ, ರಂಜಿಕೆ . . . ಬಜೆ ಇವಂ ಸಮಭಾಗ ಕಷಾಯವಿಕ್ಕಿ ಸೇವಿಸೆ, ರಕ್ತಗತಜ್ವರ ಗುಣವಹುದು (ಸಕವೈ. ೧೦೭). **ಱಂಜಿಕೆ$_2$:** ''ನಂಜು ಱಂ[ಪಾಠಾಂ. ಅಂ] ಜಿಕೆ ತೊಟ್ಟ ತುಷ್ಟೆಯುಕ್ಕುಂ'' (ಮಂಗರಾ. ೪೨-೩೭); ''ಶಕುಲಾಕ್ಷಕಃ- ಗಂಧರ್ವದೂರ್ವೆ, ಱಂಜಿಕೆ, ಬಿಳಿಯ ಗಱುಕೆ'' (ಓಷಧಿ. ೧೬೨); ನೆಲದಾಟು(ದೊಳು) ಱಂಜಿಕೆ ಕಕ್ಕೆಯುಂ ಬಗೆಯೆ ನೀರ್ಗಡರಿ(ವಿ)ನ ಪೊದಱಿಂ ಪುತ್ತಿನ ಮೇಗೊಂದುತ್ತರದೊಳ್ ಬಗೆದು ಮೂಗೆಯ್ಯಂ ಮಾಣ್ದಗುಟ್ ಬಾವಿಯಂ ಮೂಱುಾಳ ಮಟ್ಟದೊಳ್ ನೀರ ಧಾರೆಗಳಕ್ಕುಂ (ಜಟ್ಟಮ. ೧೧-೫೫). **ಱಂಜಿಗೆ:** ಗಿರಿ (ಸಿರ) ಕರ್ಣಿ ನೀಲಿ ಱಂಜಿಗೆ ಸುರದಾಳಿಯ ಬಿತ್ತು ಗುರ್ದುಗಿ ನೆಲೆಯಂಬಿವನೊಂದಿರೆ ಕೂಡಿ ತಿಂದೊಡಾತನೆ ಗರುಡನವಂಗಟ್ಟಿ ಬಳ್ಳಿ ಮಣಿಗುಂ ಫಣಿಗಳ್ (ಲೋಕೋಪ. ೧೦-೧೮); ಸುರದಾಳಿ ನೀಲಿ ಱಂ(ಚಿ)ಜಿಗೆ ಕ(ಖ)ರ ಕರ್ಣಿಕೆಯಂಬಿನಿತಱೊಳೊಪ್ಪುವ ಬೇರಂ ಬೆರಸಂಬಿಲದಿಂದರೆದೀಗರಿಂದೆನಿಸುವ ಫಣಿವಿಷಂಗಳಂ ಪರಿಹರಿಕುಂ (ಖಮದ. ೫-೬೦). [?]

**ಱಂಚಿಗೆ** 'ಱಂಚಿಕೆ$_1$' ನೋ.

**ಱಂಚೆ, ರಂಚೆ, ರೆಂಚೆ, ಱಂಚೆಯ, ಱೆಂಚೆ$_1$, ಱೆಂಚೆಯ** (ನಾ). ಆನೆ, ಕುದುರೆಗಳ ಪಕ್ಕರಕ್ಕೆ; ಜೂಲು: ''ಱಂಚೆ ಗುಱಗಳು ಕುದುರೆಯಾನೆಗಳ ಪಕ್ಕರಿಕೆ'' (ಶಬ್ದಮಂ. ೪೨); ಪೊಸಪೊಸಬಣ್ಣದಿಂದಂಚಿತ ಱಂಚೆಯಂ ಪಣ್ಣಿದ ಪಟ್ಟವರ್ಧನಗಜೇಂದ್ರಮನೇಱಿ (ಬಾಧಪು. ೧೦-೨೧ ವ); ಹಣ್ಣಿದ ಱಂಚೆಯ ಹರಹಿದ ರನ್ನಗಂಬಳಿಯ ಕಟ್ಟಿದ ಕೊಂಬುಗತ್ತಿಯ ಕರದ ಸರಪಳಿಯ ಒಟ್ಟಿದ ನಟ್ಟನಡುನೆತ್ತಿಯ ನವಸಿಂಧೂರದ ಗಂಡಸ್ಥಳದೊಳ್ (ಹಮ್ಮೀರ. ೩-೩೩ ವ). **ರಂಚೆ:** ಆನೆಗಳ ರಂಚೆಗಳಖಿಲ ಖೇಟಗಳಾ ಸಲ್ಲಲಿತ ರಥಪಾಶಗಳನುಂ ನಿಲ್ಲದೇ ಭೇರ್ಯಾದಿ ವಾದ್ಯಗಳಲ್ಲಿ ನೋಡಿದರೊಂದುಮಿಲ್ಲದ ತೆರದಿ ಖಂಡಿಸುತ (ಅರ್ಜಾವಿ. ೯-೫೫). **ರೆಂಚೆ:** ''ರೆಂಚೆ - ಜೂಲ; ಆನೆಯ ಜೂಲ'' (ಜಾನಕೋ. ೪೦). **ಱಂಚೆಯ:** ಮಣಿಯ ಱಂ[ಪಾಠಾಂ. ಱೆಂ] ಚೆಯದಂಜನದ್ವಿಪದಂತೆ ಹಗೆಗಳ ನಂಜು ಪುಗುತಂದಂ . . . ಲಕ್ಷ್ಮಣನು (ಕುಮುರಾ. ೬-೩). **ಱೆಂಚೆ$_1$:** ''ಗುಱಮೆಂದು ಱೆಂಚೆಯೆಂದೊಡಮಾನೆಗಳ ಕುದುರೆಗಳ ಪಕ್ಕರಿಕೆ'' (ಕಬ್ಬಕೈ. ೪೧); ಸಿಂಧುರದೊಳ್ ಱೆಂಚೆಯುಮಂ ಮಲಂಗಿ ಜಿನನಾಥಂಗಿಕ್ಕಿದರ್ ಚಾರುಚಾಮರಮಂ ನಿಂದು ಸನತ್ಕುಮಾರನುಂ . . . ಮಾಹೇಂದ್ರನುಂ (ಅನಂಪು. ೫-೩೫); ಬಿಡು ಗಜವ ಬಿಗಿ ಱೆಂಚೆಗಳ ತೆಗೆ ದಡಿಯ ಹಾಯಿಕು ಗುಳವ (ಕುವ್ಯಾಕ. ೮-೧೧); ಮೇಳವಿಸಿದನು ಬಲವ ಮಣಿಗಣದೋಳಿವೆಳಗಿನ ಱೆಂಚೆ [ಪಾಠಾಂ. ಜೆ] ಹಣ್ಣಿದ . . . ಮದೇಭವ ಜೋದರೋಜೆಯಲಿ (ತೊರರಾ. ೬-೨೦-೭); ಕೊರಲೊಳ್ ಸ್ವರ್ಣದ ಱೆಂಚೆಗಳ್ ಮಿನುಗೆ ಘಂಟಾಧಾನಮಿಂಬಾಗೆ . . . ಸಿಂಧುರಯೂಥಂ ಚಿಕದೇವರಾಯ ನಿದಿರೊಳ್ ಕಣ್ಗೊಪ್ಪುಗುಂ ಚೆಲ್ವಿನಿಂ (ಯಾದಚಂ. ೪-೧೭). **ಱೆಂಚೆಯ:** ಹಮ್ಮಿದ ಗುಳದ ಹೂಡಿದ ಱೆಂಚೆಯದ . . . ನಿಂದ ಗಜಘಟಾಪಟಲದೊಳಂ (ಗಿರಿಕ. ೬-೫೫ ವ);

ಅಡರಿದನು ನಿಜಸತಿಸಹಿತ ಹೊಂಗದ್ದುಗೆಯ ಹೊಂಬೆಸದ ಱಂಚೆಯದ . . . ಮತಂಗದ ಕಂಧರವ (ತೊರರಾ. ೨-೨-೨೧).

**ಱಂಚೆಯ** 'ಱಂಚೆ' ನೋ.

**ಱಂಜಿಕೆ$_1$** 'ಱಂಚಿಕೆ$_1$' ನೋ.

**ಱಂಜಿಕೆ$_2$** 'ಱಂಚಿಕೆ$_2$' ನೋ.

**ಱಂಜಿಗೆ** 'ಱಂಚಿಕೆ$_2$' ನೋ.

**ಱಕಾರ** (ನಾ). 'ಱ' ಎಂಬ ಅಕ್ಷರ: ಪಲ್ಲಟಿಸಿ ಡಕಾರದ ನೆಲೆಯಲ್ಲಿ ಱಕಾರಂ ಱಕಾರದೊಳ್ ರೇಫಂ ತಾನೆಲ್ಲಿಯುಮಕ್ಕುಂ ಪದವಿಧಿಯಲ್ಲಿ ಪರಂ ವ್ಯಂಜನಾದಿಯಾಗಿರೆ ಬಹುಳಂ (ಕಾವ್ಯಾವ. ೨೯೬); ಪದದ ಕಡೆಯಣ ಡಕಾರಕ್ಕುದಯಿಪುದು ಱಕಾರಮಾ ಱಕಾರಕ್ಕೊದವಿರ್ಪುದು ರೇಫಂ ವ್ಯಂಜನಪದಮಿದಿರೊಳ್ ಸಂದಿಸೆ ಸಮಾಸದೊಳ್ ಬಹುಳತೆಯಿಂ (ಶಮದ. ೧೮೩). [ಱ + ಕಾರ$_4$]

**ಱಕ್ಕೆ** (ನಾ). (ಹಾರುವುದಕ್ಕೆ ಸಹಾಯವಾಗುವ ಪಕ್ಷಿಗಳ) ರೆಕ್ಕೆ; ಪಕ್ಕ: ಅಲ್ಲಿಂ ತಳರ್ದು ಹಿಮವದ್ಗಿರಿಯ ಸಮೀಪಕ್ಕೆ ಪೋಗೆವೋಗೆ ಮುನ್ನ ಪರ್ವತಂಗಳ್ಗೆ ಱಕ್ಕೆಯುಳ್ಳುದಱಿಂದಖಿಳಧಾತ್ರಿಯಂ ತೊಟಲ್ದು (ಧರ್ಮಪ. ೩-೫೭ ವ); ಆ ನೃಸಿಂಹನಂ ಹೊಡದೆತ್ತಿ ಱಕ್ಕೆಯಿಂದೌಂಕಿ ಪಾಱಿದನಹೋಧವಮಂಡಲಕ್ಕೆ ವೀರಂ (ವೀಶೈಪು. ೩-೬-೧೯); ಱಕ್ಕೆಗಳನುಱೆ ಜೋಲಿಸುತ್ತ ಜೊಂಪಿಪುದೊಮ್ಮೆ . . . ಪತಿವಿರಹ ದಿಂದಮಾ ಪೆಣ್ಗಿಳಿ (ಚಿಬಪು. ೪೬-೬); ಱಕ್ಕೆಯಂ ಬಿದಿರ್ಚಿ ಮೊರೆದೆಟ್ದು ಮೇಣುಂ ಮುಂಬರಿವ ಬವರಿವಿಂಡಿಂ . . . ಬನಂ ಮನಂಗೊಂಡುದು (ರಾಮಾಶ್ವ. ೫೪-೪). 'ಎಱಂಕೆ' ಪರಾ. [< ಎಱಂಕೆ]

**ಱಚ್ಚೆ, ರಚ್ಚು, ರಚ್ಚೆ$_1$, ರೊಚ್ಚು, ರೊಚ್ಚೆ, ರೊಜ್ಜು, ಱೊಜ್ಜು** (ನಾ). ೧. ಕೆಸರು; ಪಂಕ: ತಿರಿದುಂಡು ಕಚ್ಚುಟವುನುಟ್ಟು ಱಚ್ಚೆಯೊಳ್ಪಟ್ಟು ಮುಟ್ಟುಗೆಟ್ಟುಬ್ಬೆಗಮುಬ್ಬರಿಸಿ ನಮೆದುದನದಂ ಮಱೆದಿರೆ (ಸುಕುಮಾ. ೪-೩೦). ೨. (ಆಲಂ) ಮಾತ್ಸರ್ಯ; ದ್ವೇಷ; ಹಗೆ: ನೆಱಗಡೆಯೊರ್ವಳ್ ಱಚ್ಚೆಗೆ ಬಂದರ ಕಂಡುಡುಪಾನನೆಯೊರ್ವಳ್ ತನ್ನೋರಗೆಯಬಲೆಯೊಳುಸಿರಿದಳು (ಜಯಕಾ. ೧೪-೪೪); ಲವಮಾತ್ರ ಱಚ್ಚೆಯಿಕ್ಕಿದಗೆ ಬಹುಹುಚ್ಚೆಂಬುದಂ ಈಗ ನಿಚ್ಚಯದಿ ತಿಳಿಯಬಂದಿತ್ತು (ಪ್ರಭುಪು. ೯-೨೯); ಅಚ್ಚು ಇಲ್ಲದ ಬಂಡಿ ಮೆಚ್ಚು ಇಲ್ಲದ ದೊರೆಯು ಱಚ್ಚೆಯಲಿಹನ ಜ್ಜೆಸವಿಮಾತು ಎಂದಿಗು ನಚ್ಚಬೇಡೆಂದ (ಸರ್ವಜ್ಞ. ೧೪೮೬). ೩. ದೂಷಣೆ; ನಿಂದೆ; ಅಪವಾದ: ಮಾತಿನಂತುಟಲ್ಲ ಶಿವಾಚಾರದ ಸರಿದೊಡಕು ಕಾಣಿರಣ್ಣಾ ಱಚ್ಚೆಯ ಮಾತಲ್ಲ ಬೀದಿಯ ಮಾತಲ್ಲ ಏಕೋರಾತ್ರಿಯ ಬಿಂದು ನೋಡಣ್ಣಾ (ಅವಚಂ.ಕ. ೧೮೩-೫೦೦); ಮರ್ತ್ಯದೊಳಗೆ ಈಶಲಾಂಛನವ ಹೊತ್ತವರಿಗೆಲ್ಲ ನಿತ್ಯತ್ವ ಉಂಟೇ ಇದಱ ಱಚ್ಚೆಯ ಹೊಱಲಾಱದೆ ಮರ್ತ್ಯಕ್ಕೆ ಹೊಱಗೆಂದ (ಮೋಳಮಾ. ೧೮೭-೭೦೩). 'ಱಚ್ಚೆವಾತು' ಪರಾ. ೪. ರಗಳೆ; ಹಗರಣ; ಗೊಂದಲ: ಕೊಱಚಾಡೆಲ್ಲರ ಮುಂದೆ ಱಚ್ಚೆಗೆಳೆಯುತ್ತಂ ಕಿತ್ತು ಮೆಯ್ಯೆಲ್ಲವಂ ಹಱಿತಿಂದು (ಸೋಮೇಶ. ೭೩); ಹಱಲೆಯೊಳು ತಂದಿಕ್ಕಿತೆನ್ನ ಡಂಬಿನ ಭಕ್ತಿ . . . ಱಚ್ಚೆಗಂ ಬೀದಿಗಂ ಬರಿಸಿತೆನ್ನಯ ಭಕ್ತಿ (ತಿರುನ. ದೇ. ೨೧-೧೯). ೫. ಚಂಡಿ; ಛಲ; ಹಟಮಾರಿತನ: ಬಾರದುದಂ ಕಡುಬಯಸಿ ಬ್ರತಂಗೆಟ್ಟೇ ಱಚ್ಚೆಯೊಳಿರ್ದೊಡೆ ನಿನ್ನಾತಂ ಕೂರಿದಂ (ಜಯಕಾ. ೧೦-೬೦). ೬. (?): ಮಚ್ಚರಿಸುವಂ ಪಳಿದು ಬಚ್ಚೆಯಪ್ಪಂ ಬಿಡದೆ ಱಚ್ಚೆಯ ವಿದೂಷಕನದೊರ್ವ ಕೆಳೆಯಂ (ಜನವ. ೮-೯); ಱಚ್ಚೆಯ ವಿಟರೆದೆಯೊಡೆವಂತೆ ಸ್ತ್ರೀಯರು ಮೆಚ್ಚಿನುಯ್ಯಲೆಯಾಡಿದರು (ಅಮುಸಾಂ. ೩-೭೭). **ರಚ್ಚು**: ೭. ಸೇಡು; ಮುಯ್ಯಿ: ಮಹಾಬಲ ಮೋಸ ಮಾಡಿದ - ನಾರಣಪ್ಪ ರಚ್ಚು ತೀರಿಸಿಕೊಂಡ (ಸಂಸ್ಕಾರ. ೧೩೨); ಹಾವಿಗೆ ಹನ್ನೆರಡು ವರ್ಷ ರಚ್ಚಿರುತ್ತದೆ (ಪ್ರಶ್ನ. ೧೭೩). ೮. ರೋಷ; ಕೋಪ: ಹುಲಿಯ ರಚ್ಚನು ತಾಳಲಾಪುದೆ ಮೊಲನು (ಅಂಬಿಕಾ. ೬-೪೧); ರಚ್ಚಿನೋಳ್ ಗಿರಿಗೆ ವಜ್ರ ಪೊಡೆದಂತೆ ರಿಪುಬಲ ಬೆಚ್ಚಿದುದು (ತುರಂಗ. ೫೦-೪೫). **ರಚ್ಚೆ$_1$**: ೩. ಶ್ರೀರಾಮಾನುಜರ ದೃಷ್ಟಾಂತಗಳು ಸಮಸ್ಯೆಯನ್ನು ಮತ್ತಿಷ್ಟು ಕ್ಲಿಷ್ಟ ಮಾಡಿದುವು, ಕಕಮಕ ಹಿಡಿಸಿದವು, ರಚ್ಚೆಗೆಳೆದವು (ಜೀವಾತ್ಮ.೩೦೬). **ರೊಚ್ಚು**: ೧. ಧ್ಯಾನಕ್ಕೆ ಕುಳಿತಾಗಲೆಲ್ಲ ಅವರ ಮೇಲೆ ಕಸವನ್ನೂ ಕೊಚ್ಚೆಯನ್ನೂ ರೊಚ್ಚನ್ನೂ ತಂದು ಸುರಿಯುವರು (ಪೈಗಂಬ. ೨೨). ೭. ಕಲಿ ಬಭ್ರುವಾಹನಂ ಬಿಲ್ಗೊಂಡು ರೊಚ್ಚಿನೋಳ್ ತೆಗೆದೆಸೆಯಲಾ ಶರಂ ಫಲುಗುಣನ ಹೃದಯದೋಳ್ ಥಟ್ಟುಚ್ಚಿತು (ತುರಂಗ. ೮೨-೨೮). ೮. ರೋಹಿಣಿಯ ಮೇಲೆ ಆ ಗುಂಡನಿಗೆ ಬಹಳ ರೊಚ್ಚು (ರಂಗರೋ. ೧೯); ಎಷ್ಟು ದಿವಸ ರೊಚ್ಚು, ಏನು ನಿಷ್ಕಾರಣ ದ್ವೇಷ! (ಗಂಮಾಯಿ. ೧೧೦). **ರೊಚ್ಚೆ**: ೯. ಬಗ್ಗಡ; ರಾಡಿ: ಬಚ್ಚಲಲ್ಲಿ ಕೊಚ್ಚೆಯು ರೊಚ್ಚೆಯೋ ರೊಚ್ಚೆಯು! (ನಡಬಂ. ೮-೬). **ರೊಜ್ಜು**: ೯. ಎತ್ತುಗಳ ಕಾಲಿನಲ್ಲಿ ಮತ್ತು ಅವುಗಳು ಮಲಗುವ ಸ್ಥಳವಲ್ಲಿ ಕೆಸರು ಹುದಲು ರಾಡಿನೀರು ರೊಜ್ಜು ಆಗದ ಹಾಗೆ . . . ಸಗಣಿಯನ್ನು ಮೂತ್ರವನ್ನು ಬಳಿದು ಹಸನು ಮಾಡುತ್ತಿರಬೇಕು (ಕೃಷಿಪ್ರ. ೧೯). **ಱೊಜ್ಜು**: ೧. ಸಜ್ಜನರ ಸಂಗವದು ಹೆಜ್ಜೇನುಕೊಡದಂತೆ ದುರ್ಜನರ ಸಂಗದೊಡನಾಟ ಬಚ್ಚಲಿನ ಱೊಜ್ಜಿನಂತಿಹುದು (ಸರ್ವಜ್ಞ. ೮೧೯).

**ರಚ್ಚೆಗಿಕ್ಕು** = ರಗಳೆ ಮಾಡು; ರಂಪಮಾಡು; ಗೊಂದಲವನ್ನುಂಟುಮಾಡು: ತುಚ್ಛದಾನವನ ದುರ್ಮತಿಯಿಂದಮಿವರೆಲ್ಲ ರಚ್ಚೆಗಿಕ್ಕುವರಲ್ಲದೇನುಂಟು (ವಂಕಾರಾ. ೬-೬೨-೪೨); ಮೆಚ್ಚಿ ಸೂಳೆಯ ಮನೆಯ ಹೆಂಡಿರ ರಚ್ಚೆಗಿಕ್ಕುವ ರಾಪುಮಾಡುತ (ಕಂಕ. ೮೬-೨). **ರಚ್ಚೆಹಿಡಿ** = ಹಟಹಿಡಿ; ಚಂಡಿಮಾಡು: ನರಸಿಂಹ ರಚ್ಚೆಹಿಡಿದು ಅಳುತ್ತಿದ್ದರೆ . . . ಸಮಾಧಾನ ಮಾಡುತ್ತಿದ್ದರು (ತಾಯಿಕ. ೭೯); ರಚ್ಚೆ ಹಿಡಿದ ಮಗುವನ್ನು ಸಮಾಧಾನಗೊಳಿಸುವುದು ಎಷ್ಟು ಕಷ್ಟವೆಂದು ನನಗೆ ಆಗ ಗೊತ್ತಾಯಿತು (ಸನ್ನಪ. ೧೦೬). **ರೊಚ್ಚಿಗೆಬ್ಬಿಸು** = ರೇಗಿಸು; ಕೆರಳಿಸು: ಪ್ರಜೆಗಳನ್ನು ಕೆಣಕಿ ರೊಚ್ಚಿಗೆಬ್ಬಿಸಿದಂತಾಗುವುದು (ಕೃಷ್ಣಭೂ. ೨೧೮); ತಾನು ಹಿಂದೆ ಪಟ್ಟ ಸುಖದ ನೆನಪು ಬಂದು ದೇಹವನ್ನು ರೊಚ್ಚಿಗೆಬ್ಬಿಸಿದರೂ ಸೋಜಿಗವೇನಿಲ್ಲ (ಭೀಮಕಾ. ೨೩೧). **ರೊಚ್ಚಿಗೇಳಿಸು** = ರೊಚ್ಚಿಗೆಬ್ಬಿಸು: ನನ್ನ ಮನಸ್ಸನ್ನು ರೊಚ್ಚಿಗೇಳಿಸಬೇಡಿ (ದೇವಹಂ. ೨೦೪). **ರೊಚ್ಚಿಗೇಳು** = ರೇಗು; ಕೆರಳು; ವ್ಯಗ್ರವಾಗು: ಜನನಾಯಕರನ್ನು ಬಂಧಿಸಿದುದರಿಂದಾಗಿ ಜನತೆ ರೊಚ್ಚಿಗೆದ್ದಿತು (ಕುರುಕಾ. ೧೪೯); ರೊಚ್ಚಿಗೆದ್ದ ಹುಡುಗರು ಮಚ್ಚರವಿಟ್ಟ ಸರ್ಪದ ಹಾಗೆ (ಮರಳಿ. ೧೮೭). **ಱಚ್ಚೆಮಾಡು, ರಚ್ಚೆಮಾಡು, ರೊಚ್ಚೆ ಮಾಡು** = ರಗಳೆ ಮಾಡು; ರಂಪಮಾಡು: ಅಚ್ಚ ಪಾಲ್ಮೊಸರು ನವನೀತವು ಮಜ್ಜಿಗೆ ಱಚ್ಚೆಮಾಡಿ ಕುಡಿವ (ಪುರಂದ. ೨-೯೩-೫); ಪದಗಳನ್ನು ಹೇಳದಿದ್ದರೆ ಮಗು ತೊಟ್ಟಿಲಲ್ಲಿ ಸುಖವಾಗಿ ಮಲಗಿ ನಿದ್ರಿಸುವುದಿಲ್ಲ, ರಚ್ಚೆಮಾಡುತ್ತದೆ (ಹಳ್ಳಿಬಾ. ೧೧); ತನ್ನ ತಾಯಿಯ ಕೈಗಾಗಲಿ ಅಜ್ಜಿಯ ಕೈಗಾಗಲಿ ಹೋಗಲೊಲ್ಲದೆ ರೊಚ್ಚೆಮಾಡುತ್ತಿರಲು . . . ಎಳೆದೆತ್ತಿಕೊಂಡಾಗ ಅವನು ಅಳತೊಡಗಿದನು (ಮಲಮ. ೫೨೮). [ದೇ. ‖ ತೆಲು. ಱೊಚ್ಚು, ರೊಚ್ಚು, ರೊಚ್ಚೆ]

**ಱಚ್ಚೆಗೆಯ್** (ಕ್ರಿ). ಹಟಹಿಡಿ; ಚಂಡಿಮಾಡು: ಇದಿರ್ಗೆ ಬಾರಳು ಬೆಚ್ಚಿ ನೋಳ್ಪಳೊತ್ತಿನಿಂದೆ ಮಚ್ಚಿ ಪೆಱನ ನಡೆವಳುಲಿದು ಱಚ್ಚೆಗೆಯ್ವಳ್ (ಜನವ. ೧೧-೬೨). [ಱಚ್ಚೆ + ಕೆಯ್$_1$]

**ಱಚ್ಚೆವಾತು** (ನಾ). ನಿಂದೆಯ ಮಾತು; ಅಪವಾದ: "ವಿಗಾನಂ, ವಚನೀಯತಾ - ಈ ೨ ಱಚ್ಚೆವಾತು" (ಹಲಾಯು. ೨೪-೧೪೬). [ಱಚ್ಚೆ + ಮಾತು$_1$]

**ಱಟ್ಟ** 'ರಟ್ಟ' ನೋ.

**ಱಟ್ಟಕುಳ** 'ರಟ್ಟಕುಳ' ನೋ.

**ಱಟ್ಟಡಿ** (ನಾ). ಬಯ್ಗುಳು; ನಿಂದೆ: 'ಱಟ್ಟಡಿಕಾತಿ' ಪರಾ. [← ತೆಲು. ಱಟ್ಟಡಿ, ರಟ್ಟಡಿ]

**ಱಟ್ಟಡಿಕಾತಿ** (ನಾ). ಮಾತಿನಲ್ಲಿ ಗಡುಸುತನ ತೋರುವವಳು; ಗಡುಸುಗಾತಿ: ಪತಿಭಕ್ತೆ ಧೀರೆ ಶೃಂಗಾರೆ . . . ಱಟ್ಟಡಿಕಾತಿ ನುಡಿದಳು ರತಿದೇವಿರಮಣನೊಳಾಗ (ಭರಚ. ೫೦-೫೦). [ಱಟ್ಟಡಿ + - ಕಾತಿ$_5$]

**ಱಟ್ಟಡಿಕಾರ್ತಿ** (ನಾ). = ಱಟ್ಟಡಿಕಾತಿ: ಮೇಲ್ವಾಯ್ದುಂ ವಿಟನ ಕೇಶಾಗ್ರಮಂ ಪಿಡಿವುತಡಿಕಿಲ್ವಾಸಿನೊಳ್ಕೆಡಂಪುತ್ತೆ . . . ಬಲ್ಪಿನ್ನಣದ ಗಳರವಂಗಳಿಂ ಝುಂಕಿಸುತರಲ್ವ ಪೂಮಾಲೆಯಿಂ ಪೊಯ್ಯುತ್ತಲೊರ್ವ ಱಟ್ಟಡಿಕಾರ್ತಿಯೆಸೆದಿರ್ದಳು (ಚೇರಮ. ೮-೫೨). [ಱಟ್ಟಡಿಕಾಱ + - ತಿ$_1$ (< - ಇತ್ತಿ)]

**ಱಟ್ಟಡಿಕಾಱ** (ನಾ). ಶತ್ರುಗಳನ್ನು ಮೂದಲಿಸುವವನು: ಬಿಟ್ಟಲ್ಲಿ ಬಿಡದೆ ದಂಡೆತ್ತಿ ನಡೆದು ರಿಪು ಱಟ್ಟಡಿಕಾಱನೆಯ್ತಂದು . . . ಬೆಳ್ಳಿಯ ಬೆಟ್ಟವ ಕಂಡನಿದಿರೊಳು (ಭರಚ. ೨೮-೬೧). [ಱಟ್ಟಡಿ + - ಕಾಱ]

**ಱಟ್ಟಡಿತನ** (ನಾ). ಗಡುಸುತನ; ದಿಟ್ಟತನ: ಅಡಿ ಮುಡಿ ಸಂಚು ವಂಚನೆ ವಿಡಾಯಮಡರ್ವು ತೊಡರ್ವು ತೋಟಿ ಱಟ್ಟಡಿತನಂ . . . ಮಸುಳ್ಗಣಿಕಾಂಗನೆಯರ್ಗೆ ಶಾಶ್ವತಂ (ವೃಷವಿ. ೨೮-೬೩). [ಱಟ್ಟಡಿ + - ತನ]

**ಱಟ್ಟೆ, ರಟ್ಟೆ, ರೆಟ್ಟೆ** (ನಾ). ೧. ಪಕ್ಷಿಯ ರೆಕ್ಕೆ, - ಪಕ್ಕ: "ಎಱಂಕೆಯೊಳು ಱಟ್ಟೆ" (ಶಬ್ದಮಂ. ೩೧); ಮೂಱುವರ್ಣದ ಗಿಣಿ ಮಱಿಯನಿಕ್ಕಿತ್ತು ಱಟ್ಟೆ ಬಲಿದು ಹಾಱಲಾಱದು (ಕಲ್ಯಾಶಾಂ. ೩೬); ಱಟ್ಟೆ ಮುಱಿದು ಪಕ್ಷಿ ಹಾಱಿತ್ತು ಹಾಱುವ ಪಕ್ಷಿಯ ಮೀಱಿ ನುಂಗಿತ್ತು ಬಯಲು (ಮೋಳಿಮಾ. ೨೨೨-೬೬೪); ಸುರಪತಿ ತಮ್ಮ ಱಟ್ಟೆಯ ಕಡಿವಂದಂಜಿ ಶರಧಿಯ ಹೊಕ್ಕ ಶೈಲಗಳು ಇರದಲ್ಲಿಂ ಪೋಱಮಡುವಂತೆಯ್ದಿದವುರುತರಮೆಂಟು ಭೇರುಂಡ (ನೇಮಿಸಂ. ೧೦-೨೮೨). ೨. ತೋಳು; ಬಾಹು: ದೈತ್ಯ ಬಂದಡಹಾಯ್ದು ಱಟ್ಟೆಯು ಹಿಡಿದಿಡಲಾಗಿ ಕಂದರ್ಪ ನಿಂದನಾಗಸದೆ (ಮೋಹತ. ೧೨-೯೩); ಕುಟ್ಟುವ ನೆವದಿಂದ ಱಟ್ಟೆಯನು ತಿರುಹುವಳು (ಸರ್ವಜ್ಞ. ೧೮೪೧). **ರಟ್ಟೆ:** ೨. ವಿದೂಷಕನು . . . ರಟ್ಟೆಗಳಿಗೆ ಹಿಂಗಟ್ಟುಗಳಂ ಕಟ್ಟುತ್ತ (ಸೌಗಂಧಿ. ೫೦೩-೧೬); ಹೊಟ್ಟೆಯಲ್ಲಿದ್ದ ಸಿಟ್ಟು ರಟ್ಟೆಯಲ್ಲಿಲ್ಲ (ಕಗದ್ಯ. II, ೫೧); ರಟ್ಟೆ ಮುರಿಯಬೇಕು, ರೊಟ್ಟಿ ತಿನ್ನಬೇಕು (ಗಾದೆ). **ರೆಟ್ಟೆ:** ೨. ಮೃದುವಾಗಿ ರೆಟ್ಟೆಯ ಮೇಲೆ ಕೈಯಾಡಿಸಿದಳು (ದೀಪದ. ೧೦೫); ಮೊಂಡಕೊಡಲಿ ರೆಟ್ಟೆಗೆ ಮೂಲ (ಗಾದೆ).

[ದೇ. ‖ ತುಳು. ಕೊಡ. ರಟ್ಟೆ; ತೆಲು. ರೆಟ್ಟ]

**ಱಟ್ಟೆಗಡಿ** (ಕ್ರಿ). ರೆಕ್ಕೆಗಳನ್ನು ಕತ್ತರಿಸು, - ತುಂಡರಿಸು: ಸುರಪತಿ ಱಟ್ಟೆಗಡಿಯೆ ನಭದಿಂ ನೆಲಕುರುಳುವ ಬೆಟ್ಟಗಳಂತೆ ಭರದಿ ತಿರುಗುವ ಡೆಂಕಣಿಯ ಬಲ್ಗುಂಡುಗಳರಿಗಳ ಮೇಲುದುರಿದುವು (ಚಂಪ್ರಸಾಂ. ೮-೬೧). [ಱಟ್ಟೆ + ಕಡಿ$_2$]

**ಱತ್ವ** (ನಾ). = ಱಕಾರ: ಱಕಾರಕ್ಕೆ = ಱತ್ವಕ್ಕೆ (ಶಮದ. ೬೬ ಟೀಕೆ). [ಱ + - ತ್ವ]

**ಱಪಱಪನೆ, ರಪರಪನೆ** (ಅ). ಒಂದು ಅನುಕರಣ ಶಬ್ದ: ಪಟಪಟನಿಕ್ಕುವ ಪಕ್ಕಗಳಿಂದಂ ಱಪಱಪನದಿರ್ಗುಂ ಬಾನ್ ಬಯಲೆಲ್ಲಂ (ಬಧ್ವಪ್ರ. ೮-೧೬೨). **ರಪರಪನೆ:** ಆತನಿಗೆ ಬಂದ ಕೋಪದಲ್ಲಿ ಜಗಳವಾಡುತ್ತಿದ್ದವನ ಕೆನ್ನೆಗೆ ರಪರಪನೆ ಬಾರಿಸಿದನು (ರೂಢಿ). [ಱಪಱಪ್$_0$ + - ಅನ್$_1$]

**ಱಪ್ಪು** 'ಱೊಬ್ಬು' ನೋ.

ಱವಕೆ 'ಱವಿಕೆ' ನೋ.

**ಱವಿಕೆ, ರವಕೆ, ರವಿಕೆ, ಱವಕೆ** (ನಾ). ೧. ಹೆಂಗಸರು ತೊಡುವ ಕುಪ್ಪುಸ: ಕಿಱಿಗೆ ಱವಿಕೆಯುಂ ಬೊಂಬೆದೊಟ್ಟಿಲು ಮೊದಲಿವೆಲ್ಲವನು ತಂದುಕೊಡುವರು ನಾಳೆ (ಬಸವು. ೧೪-೧೫); ಮುಸುಕಿ ಱವಿಕೆಯೊಳಡಸಿ ಜೋಲ್ವ ಪೆರ್ಮೊಲೆಗಳಂ . . . ಲೋಲೆಯರ್ ಮೆಱೆದರ್ (ಚಬಪು. ೧೦-೬೫); ಎನಗೆಱಕವಾಗಿರುವನ ಕರೆತಂದರೆ ನೀಱೆ ನಿನಗೆ ಪರಿಪರಿ ಸೀರೆ ಱವಿಕೆಯಿತ್ತು ಪೊರೆವೆನು (ಕಂನವಿ. ೯-೪೩). **ರವಕೆ:** ೧. ರವಕೆಯಂದೊಟ್ಟು ಕುಂಕುಮಬೊಟ್ಟನಿಟ್ಟು (ಮುಹಾವಿ. ೨೨-೫೪); ಬೆಳ್ಳುಡೆಯನುಡಿಸಿದರ್ ರವಕೆಯಂ ತೊಡಿಸಿ (ಕಾಲೂರ. ೧೮೩-೪೧೪); ಇಂದುಮತಿ . . . ಸಿಲ್ಕ ರವಕೆ ತೊಟ್ಟುಕೊಂಡು ತಯಾರಾದಳು (ಆಪನಾ. ೨೪೮). ೨. ಮೈಜೋಡು; ಕವಚ: (ಃ). **ರವಿಕೆ:** ೧. ಬಿಗಿಯಾಗಿ ರವಿಕೆಗಳಂ ತೊಟ್ಟು (ಸೌಗಂಧಿ. ೧೯೧-೧೫); ಸುನಂದಳ ತಾಯಿ ಸುಂದರಮ್ಮ . . . ರವಿಕೆಯೊಂದಕ್ಕೆ ಗುಂಡಿ ಹಾಕುತ್ತಾ ಹೊರಗೆ ಬಂದರು (ಮೂಬಟ್ಟ. ೧); ಉಟುಕೊಳ್ಳೆ ಸೀರೆಯ ತೊಟುಕೊಳ್ಳೆ ಸಣ್ಣರವಿಕೆಯ (ನಾಪದ. ೨೩). **ಱವಕೆ:** ೧. ಜಾಱೆ ಬೀಳುವ ಮೊಲೆಗಳನು ಸೇರಿಸಿ ಱವಕೆಯಿಂದೆತ್ತಿ ಕಟ್ಟಿಯೆ ವೃದ್ಧವಾರವನಿತೆಯರೊಪ್ಪಿದರು (ಜೀವಂಸಾಂ. ೧೯-೯೫); ಅಂಜನವರ್ಣದ ಸಣ್ಣ ಱವಕೆಯಪರಂಜಿಯಂದದ ಮೈಗೆ ಮೆಱೆಯೆ ಮಂಜುವಸ್ತ್ರದ ಮೇಲುಸೆಱಗು ಬೆಡಂಗಿಳಿದೇಂ ಜಾಣೆ ದಿಟ್ಟಗೊಪ್ಪಿದಳೊ (ಭರಚ. ೪೦-೬೩); ಬೆಮರ್ದಂಗಂ ಪತ್ತಿದತ್ತೀ ಱವಕೆಯನುಗಿ ನೀಂ (ರಾಜಶೇ. ೧೧-೧೪೧).

[ದೇ. ‖ ತಮಿ. ರವಿಕ್ಕೈ, ಇರವಿಕ್ಕೈ; ತುಳು. ರವಕೆ; ತೆಲು. ಱವಿಕ, ರವಿಕ, ಱಯಿಕ, ಱೈಕ]

**ಱಳ** 'ಱಟ' ನೋ.

**ಱಟ, ರಳ, ಱಳ** (ನಾ). 'ೞ' ಎಂಬ ಅಕ್ಷರವನ್ನು ಗುರುತಿಸಲು ಉಪಯೋಗಿಸುವ ಸಂಜ್ಞೆ; ℙ ಕುಳ, ಕ್ಷಳಗಳಿಂದ ಬೇರೆಯಾದ 'ೞ' ಕಾರವನ್ನು ಅದರ ಆಕಾರದಿಂದ ಈ ರೀತಿ ಗುರುತಿಸುತ್ತಾರೆ: ಸ್ಫಟಿಕಂ ಪೇಟಿಕೆ . . . ಲಂಪಟ ಶಬ್ದಯುಗಂ ಱಟಕ್ಕೆ ನೆಱೆ ಸಂದೇಹಂ (ಶಮದ. ೨೨); ಕುಳ ಱಟಂಗಳೊಳ್ವರ್ತಿಸಿರ್ಕುಂ (ಸಂಜೀವ. ೧೦). **ರಳ:** 'ೞ' ಕ್ಕೆ ರಳ ಎಂದೂ 'ಱ' ಕ್ಕೆ ಶಕಟರೇಫ ಅಥವಾ ಬಂಡಿಯ ರ ಎಂದೂ ಹೆಸರಾಯಿತು (ಕೈಪಿಡಿ. ೪); ಹನ್ನೊಂದನೆಯ ಶತಮಾನದವರೆಗೂ ಈ ರಳ (< ಱಟ) ಅದು ಹೇಗೋ ಉಸಿರಾಡುತ್ತಿದ್ದು . . . ಈಚೆಗೆ ನಶಿಸತೊಡಗಿತು (ದ್ರಾವಿವಿ. ೩೨೬). **ಱಳ:** ಕವಿತತಿ ವಿಚಾರಿಸಬೇಡದೆಱಿಂ ಱಳ ಕುಳ ಕ್ಷಳಂಗಳನಿದಱೊಳ್ (ಗಿರಿಕ. ೧-೩೨); ಱಳ ಕುಳ ಶಿಥಿಲಸಮಾಸ ಮುಂತಾದವಱೊಳಗಿಲ್ಲಿ ಕೆಲವುಳ್ಳರುಂಟು (ಭರಚ. ೧-೮).

**ಱಟಾಂತ** (ನಾ). 'ೞ'ಕಾರದಿಂದ ಕೊನೆಯಾಗುವ ಶಬ್ದ: ಱಟಾಂತಕ್ಕೆ - ಅಗಟ್ಗಳ್, ಎಸಟ್ಗಳ್ (ಶಮದ. ೪೨ ಪ್ರಯೋ). [ಱಟ + ಅಂತ$_2$]

**ಱಾಂತ** (ನಾ). 'ಱ'ಕಾರದಿಂದ ಕೊನೆಯಾಗುವ ಶಬ್ದ: ಱಾಂತದೊಳಂ ಮೃತಿದಾನಾರ್ಥಾಂತದೊಳಂ ವ್ಯಂಜನದ ತಕಾರಂ ದೀರ್ಘಂ ಪಿಂತಿರೆ ಬರ್ಕುಂ ಹ್ರಸ್ವತೆ ಱಾಂತಕ್ಕಂ ರೇಫಮೊರ್ಮೆ ತವುಗೆ ಪಕಾರಂ (ಶಮದ. ೨೪೦). [ಱ + ಅಂತ$_2$]

**ಱಾಟಣ, ರಾಟಣ, ರಾಟಣೆ, ರಾಟವಾಣ, ರಾಟವಾಳ, ರಾಟವಾಳೆ, ರಾಟಳ, ರಾಟಾಣ, ರಾಟಾಲ, ರಾಟಾಳ, ರಾಟೆವಾಳೆ, ಱಾಟವಳ, ಱಾಟಳ, ಱಾಟಾಳ** (ನಾ). ೧. ಬಾವಿಯಿಂದ ನೀರೆತ್ತುವ ಗಾಲಿಯ ಯಂತ್ರ; ಚಕ್ರ; ಅರಘಟ್ಟಕ: "ಉದ್ಘಾಟಕಂ, ಘಟೀಯಂತ್ರಂ, ಪಾದಾವರ್ತಃ, ಅರಘಟ್ಟಕಃ- ಈ ೪ ಱಾಟಣಂ" (ಹಲಾಯು. ೧೧೩-೬೩); ನಿನಗೀ ಖಳಸಂಸ್ಸೃತಿಯೆಂಬುದೊಂದು ಱಾಟಣದೊಳಗಮ್ಮ ನೀಂ ಮೊಗವೆಯಾಗದೆ ತಾಳ್ದಪವರ್ಗಮಾರ್ಗಮಂ (ಆದಿಪು. ೩-೭೧); ಱಾಟಣದ ಮೊಗವೆಯಂತೆ ಕಡೆವ ಕಡೆಗೋಲಂತೆ . . . ಮಾಣದೆ ತಿರುಗುವ ಬಾಱುಮಂ ನಂಬಿ ಮೆಯ್ಮಱಿಯದೆ ಭೋಗಕಾಂಕ್ಷೆಯಿಂದಿರ್ದಂ (ಧರ್ಮಾಮೃ. ೯-೨೩); ಱಾಟಣದ ಗುಂಡಿಗೆಯೊಲಾದಂ ಧರ್ಮಮನಱಿಯದೆ (ಕುಮುರಾ. ೬-೧೧). **ರಾಟಣ:** ೧. ಅಯ್ಯೂರ್ಬ್ಬರುಂ ರಾಟಣದ ಬಾವಿಯ ಧರ್ಮ್ಮಕ್ಕೆತಕ್ಕೆ . . . ಕೊಣ್ಡು ಬಿಟ್ಟ ಎರೆ ಮತ್ತರೆರಡು (ಸೌಇಇ. XX, ೫೫-೪೨; 1082); ಅಲ್ಲಿಯೆ ನೀರ್ಗಿಕ್ಕಿದ ರಾಟಣಂಗಳೊಳಂ ಮತ್ತಱಜೊಳ್ಪತ್ತುಕೊಳಗ ಭತ್ತವಾಗೆ ಮತ್ತರ ಲೆಕ್ಕದಿಂ (ಕಇಆ. ೮೮-೧೯-೩೪; ಸು. 12ನೆಯ ಶತ). **ರಾಟಣೆ:** ೨. ಯಂತ್ರದಲ್ಲಿ ಉಪಯೋಗಿಸುವ ಚಕ್ರ,—ಗಾಲಿ: ಹಡಗಿನ ಪಟ, ಪಟದ ಅಡ್ಡದಿಮ್ಮಿ, ಮೊ.ವನ್ನು ಎತ್ತುವ ಅಥವಾ ಇಳಿಸುವ ಹಗ್ಗ, ರಾಟಣೆಯ ಸಲಕರಣೆ (Halyard. ಇಂಕಸ). **ರಾಟವಾಣ:** ೧. "ರಾಟಣ - ನೀರೆಳೆಯುವ ಗಾಳಿರಾಟೆ (ರಾಟವಾಣ; ರಾಟವಾಳ; ರಾಟಾಳ)" (ಜಾನಕೋ. ೪೦). **ರಾಟವಾಳ:** ೧. ರಾಟವಾಳದ ಭಾಂಡದಂತೆ ಲೆಕ್ಕವಿಲ್ಲದೆ ತಿರುಗುತ್ತ (ತತ್ವಚಿಂ. ೨-೧೨); ಮಾಯಾಬದ್ಧನಾಗಿ ರಾಟವಾಳಕ್ಕೆ ಬಿಗಿದ ಭಾಂಡದೋಪಾದಿಯಲ್ಲಿ ತಿರುಗುತ್ತ (ನಾನಾಗು. ೧೪-೪). ೩. ಮರದ ಕುದುರೆಗಳೂ ತೊಟ್ಟಿಲುಗಳೂ ಇದ್ದು ಚಕ್ರಾಕಾರವಾಗಿ ತಿರುಗುವ ಆಟದ ಯಂತ್ರ: ಹೆಣ್ಣು ಗಂಡು ಹುಡುಗರೆಲ್ಲಾ ಒಂದೊಂದು ಪೈಸಾ ಕೊಟ್ಟು ರಾಟವಾಳದಲ್ಲಿ ಸುತ್ತಿದುವು (ನಿಬಂಧ. II, ೧೧೯). **ರಾಟವಾಳೆ:** ೩. ರಾಟವಾಳೆಗೆ ಪುರುಸತ್ತೇ ಇಲ್ಲ. ತೆಪ್ಪೋತ್ಸವದ ದಿನವೂ ಅದು ತಿರುಗಿತು (ದಿನಾರಿ. ೮೫). **ರಾಟಳ:** ೧. ಎಸಗುವದು ರಾಟಳದಂತೆ ಸೂಕ್ಷ್ಮತನುವು (ಚಿದಾವ. ೧೩೭-೬). **ರಾಟಾಣ:** ೧. "ರಾಟಣ(೪, ರಾಟಾಣ), ರಾಟಾಳ, ರಾಟೆ - ಅರಘಟ್ಟ= ಜಲಯಂತ್ರ" (ತದ್ಭಕೋ. ೩೮). **ರಾಟಾಲ:** ೧. ತೊಟ್ಟಿಲ ಜೀಕವ ತೂಗಿ ಕೈಬಿಟ್ಟರೆ ಗಾಳಿಯ ರಾಟಾಲದೊಳು ಪ್ರಾಣವು ತಿರುತಿರುಗಿ ಬಂದರು ತೆಳಗೆ ಮೇಲೆಂದರು ಮುಂದಿಲ್ಲ ಹಿಂದಿಲ್ಲ ಹಾಗೆ ಇದೆ (ಸಖೀಗೀ. ೩೧-೫೮೮). **ರಾಟಾಳ:** ೧. ಸೋಜಿಗದ ರಾಟಾಳ ಸೂತ್ರದ ವಿವಿಧ ನೂತನದ ಭೋಜನದ ಶಾಲೆಗಳ . . . ಪುರ ರವಿತೇಜದಲಿ ಜಗಜಗಿಸುತಿರ್ದುದು (ಅಂಬಿಕಾ. ೮-೧೩); ಜೀವ ಹಂಕಾರದೊಡವೆರದು ಜನನಮರಣಾದಿಗಳನನುಕರಿಸಿದವನಂತೆ . . . ರಾಟಾಳದೊಳ್ ತಿರುಗುವಂ (ವಂಕಾರಾ. ೪-೮-೩೨); ಈ ರಾಟಾಳವು ಎಂದೆಂದಿಗೂ ಸುತ್ತುತ್ತಲಿದೆ (ವಿಚಾಮಂ. ೫೩). **ರಾಟೆವಾಳೆ:** ೩. ಒಂದು ರಾಟೆವಾಳೆ! ಒಂದೇ ರಾಟೆವಾಳೆಯಾದರೆ ಆಯಿತು! ಕುದುರೆ ಇರುತ್ತೆ; ಆನೆ ಇರುತ್ತೆ; ಕುರ್ಚಿ ಇರುತ್ತೆ (ದಿನಾರಿ. ೮೨). **ಱಾಟವಳ:** ೨. ಹತ್ತಿ ನೋಡಿದೊಡಿನ್ನೆರಡು ಸುತ್ತಿನ ಕೋಟೆಯೊತ್ತಿನಲಗಳು ಕಂದುಕವ ಮತ್ತೆ ಱಾಟವಳ ಸೂತ್ರದ ಯಂತರಗಳ ಬಿತ್ತರವನು ಕಂಡರಾಗ (ಕಂನವಿ. ೧೪-೨೬). **ಱಾಟಳ:** ೧. ಱಾಟಳದಂದದಿಂ ತಿರಿವ ಸಂಸ್ಸೃತಿದುಃಖದಿಂ ಪೊಱಮಟ್ಟು ಶಾಶ್ವತಸೌಖ್ಯದೊಳ್ ನೆರೆವುಪಾಯಮನಱ್ತಿಯಿಂ

ಬೆಸಸಲ್ಕೆವೇೞ್ಕು (ಧರ್ಮಾಮೃ. ೧-೬೫); ಱಾಟಳ ಮುಱಿದು ಸೂತ್ರ ಹಱಿದು ನಿಶ್ಶೂನ್ಯವಾದಡೆ ಕೂಡಲಚೆನ್ನಸಂಗಯ್ಯನಲ್ಲಿ ಮಹಾಪ್ರಸಾದಿಯೆಂಬೆ (ಚನ್ನವ.ಕ. ೫೭೧-೧೨೫೮); ವಸಂತರಾಜಂ . . . ಗಿಡುವಂ ನಟ್ಟು ಱಾಟಳಮನೆತ್ತಿ ಬೆಳೆಯಿಸಿದಂ (ಗಿರಿಕ. ೨-೭೧ ವ); ಜ್ಯೋತಿಶ್ಚಕ್ರಂ ತುದಿಯೊಳ್ ಮಾತೇಂ ಱಾಟಳದ ತೆಱದೆ ತಿರುಗುತ್ತಿರ್ಕುಂ (ದಶಕು.೭-೨೦); ರಿಪು ಕೌರವರ ರಕುತದ ಱಾಟಳವನೆತ್ತುವೆನು (ಪವ್ಯಾಅ. ೮-೪೯). ೩. ಸಿಂಗಾರವಡೆದ ಱಾಟಳದುಯ್ಯಾಲೆಯ ಮಂಗಳವಿಭವದಿನಡರ್ದು . . . ತುಂಗಯೌವನೆಯರಾಡಿದರು (ಮೋಹತ. ೧೪-೮೮). **ಱಾಟಾಳ: ೧.** ''ಅರಘಟ್ಟ ಮುದ್ಘಾಟಕಂ ಘಟೀಯಂತ್ರಮನೆ ತಿರಿಗಿ ಬಹ ಱಾಟಾಳಮೆನಿಕು'' (ಮಂಗರಾ. ೧೨೫-೧೯); ಅಖಂಡಮಂಡಲವೆಂಬ ಭಾವಿಪ ವನವೆ ಱಾಟಾಳ (ಅವಚಂ. ೧೮೦-೮೧೨); ಪರುಠವಿಸಿದರು . . . ಕೊಪ್ಪರಿಗೆ ಯಂತ್ರದ್ರೋಣಿಗಳ ಱಾಟಾಳಸೂತ್ರಗಳ (ತೊರರಾ. ೧-೭-೮). ೩. ಸುರುಚಿರ ದಿವ್ಯವಿಮಾನಗಳೆನಲಾಗ ಮೆಱೆದುವು ಱಾಟಾಳಗಳು (ಕಂನವಿ. ೨೦-೩೫).

[ದೇ. ॥ ತಮಿ. ಇರಾಟ್ಟಿನಮ್; ತೆಲು. ರಾಟನ, ರಾಟ್ನ]

**ಱಾಟವಳ** 'ಱಾಟಣ' ನೋ.

**ಱಾಟಳ** 'ಱಾಟಣ' ನೋ.

**ಱಾಟಾಳ** 'ಱಾಟಣ' ನೋ.

**ಱಾಟ್ಟ, ಅರಟೆ, ರಹಟ, ರಹಾಟ, ರಾಟೆ** (ನಾ). ೧.= ಱಾಟಣ ೧: ''ಅಂಧುಃ, ಕೂಪಃ- ಈ ೨ ಬಾವಿ. ಪ್ರಧೀಃ, ನೇಮಿಃ, (ಅದಱ ಱಾಟ್ಟ) [ಪಾಠಾಂ. ಱ್ಯಾಟ]'' (ಪಲಾಯು. ೧೧೩-೬೨). **ಅರಟೆ: ೨.** ನೂಲು ತೆಗೆಯುವ ಸಾಧನ; ಚರಕ: ''ತ್ರಸರಃ, ಸೂತ್ರವೇಷ್ಟನಂ - ೨ ನೇಯಿಗೆಯವರು, ನೂಲುಸುತ್ತುವ ಅರಟ Eಟ೩ ''(ಸಿದ್ಧಾಂತಿ. ೩೬೪). **ರಹಟ: ೧.** 'ರಹಟಘಟಿಕಾನ್ಯಾಯ', 'ರಹಟಘಟೀಯಂತ್ರ' ಪರಾ. **ರಹಾಟ:** (೩). **ರಾಟೆ: ೧.** ರಾಯರು . . . ಹಿತ್ತಿಲಲ್ಲಿದ್ದ ಬಾವಿ ತೋರಿಸಿದರು. ಹೊಸತಾದ ಹುರಿಹಗ್ಗ ರಾಟೆಯ ಕೊರಳಿಗೆ ಆತುಕೊಂಡಿತ್ತು (ಬನಶಂ. ೧೪೭). ೨. ಮೇಟಿಯಿಂ ರಾಟೆ ನಡೆದುದಲ್ಲದೆ ದೇಶದಾಟವೆ ಕೆಡುಗು (ಸರ್ವಜ್ಞ. ೧೩೫೭); ಎಲ್ಲೋ ಒಂದೊಂದು ಮನೆಯ ಅಟ್ಟದ ಮೇಲೆ ಓಬೀರಾಯನ ಕಾಲದ ರಾಟೆಗಳಿದ್ದವು (ಹುಟ್ಟಿಹ.೭). ೩. ಯಂತ್ರದಲ್ಲಿ ಉಪಯೋಗಿಸುವ ಚಕ್ರ, — ಗಾಲಿ; ಈತನು . . . ರಾಟೆ (Wheel and Axle), ಕಪ್ಪಿ (Pulley), ತಿರುಪು (Screw), ಈ ಸರಳಯಂತ್ರಗಳ ಉಪಯೋಗವನ್ನು ವಿಸ್ತಾರವಾಗಿ ತಿಳಿಸಿದ್ದಾನೆ (ಶಿಲ್ಪನಾ. ೯೦).

[ದೇ. ॥ ತಮಿ. ರಾಟ್ಟೈ; ತುಳು. ರಾಟೆ; ತೆಲು. ರಾಟ್ನ./ ಸಂ. ಅರಘಟ್ಟ./ ಪ್ರಾ. ರಹಟ್ಟ, ಅರಹಟ್]

**ಱಾಮಡಿ** (ನಾ). ಒಂದು ಊರಿನ ಹೆಸರು (?): ಶ್ರೀಚೋಟಮಹಾರಾಜಜ್ಗೆ ಬಾತೆಯಪರಸಿನ XX ಕಣ್ಣ ಕೊಟ್ಟ ಱಾಮಡಿಯ ತಳಾಱುಮಿಣ್ಣ ಪೋದಿಯ ಪಿಳ್ಳಯತಲೆದ್ XX ಗಾರಮುಂ (ಎಕ.X. ಗೌರೀಬಿ. ೭೩-೩; ಸು. 900). [?]

**ಱಿಂಚೆಯ** 'ಱುಂಚೆ' ನೋ.

**ಱಿಕ್ಕಟ**$_1$ (ನಾ). ೧. ಬರಿದಾದುದು; ವ್ಯರ್ಥವಾದುದು; ಪ್ರಯೋಜನ ವಿಲ್ಲದುದು: ''ಱಿಕ್ಕಟಮೆಂದೆನಲ್ಕೆ ಬಱಿದೆಂಬುದು'' (ಕರ್ಣಾನಿ.೫೦); ಮರುಳಾಗಿ ಕೆಮ್ಮನೀತನನುರಿಯಂ ಕಾಣ್ಬಂತೆ ಕಂಡು ಱಿಕ್ಕಟಮುನಿಸಿಂ ಹರಿಯಿಸುವೆನೆಂದು ಪಾಪದ ಭರದಿಂ ನರಕಕ್ಕೆ ಜಗುಳ್ವನೆನ್ನಾತ್ಮೇಶಂ (ಧರ್ಮಾಮೃ. ೧೦-೨೧೭); ಱಿಕ್ಕಟದ ಶಕ್ತಿಯಂ ಮುಂದಿಕ್ಕಿಯುಮಪಾತ್ಮಾಂತರಂಗದೊಳ್ ಮುಳಿಸಂ ಪಿಂದಿಕ್ಕಿಯುಮಿಾ ಫಣಿಯಂ ಕೊಂದಿಕ್ಕದಿರ್ (ಜಗಪಿ. ೩-೧೧೧); ಱಿಕ್ಕಟಮಾದುದೀ ಬಱಿಯೇೞ್ಗೆ (ರಾಮಾಶ್ವ. ೧೩-೨೫). ೨. ಮೌನ: ''ಱಿಕ್ಕಟಮೆಂದುಂ ಮೂಗುವಟ್ಟುದೆಂದುಂ ಮೌನಂ'' (ಕಶಸಾ. ೫೮-೨೮೭). [?]

**ಱಿಕ್ಕಟ**$_2$ 'ಱಿಕ್ಕಟಂ' ನೋ.

**ಱಿಕ್ಕಟಂ, ಱಿಕ್ಕಟ**$_2$ (ಅ). ನಿಷ್ಕಾರಣವಾಗಿ; ಸುಮ್ಮನೆ: ''ಱಿಕ್ಕಟಂ, ಬಿನ್ನನೆ, ಬಿನ್ನಗೆ- ಈ ೩ ಸುಮ್ಮನೆಯೆಂಬರ್ಥಂ'' (ಕಶಸಾ. ೫೮-೨೮೫); ಆ ದೆಸೆಯನಣಂ ನೋಡಲ್ವಂಕಿಸು ವೆನಗೆ ಮದಾಳಿ ಱಿಕ್ಕಟಂ ಪಲ್ಮೊರೆವಾ (ಮಲ್ಲಿಪು. ೩-೪೧); ಪೊಲ್ಲಮೆಯಿಲ್ಲದೆ ಕಳ ವಿನಿಸಿಲ್ಲದೆ ಱಿಕ್ಕಟಮದೇಕೆ ಭೂಪಾಲಂ ನಮ್ಮೆಲ್ಲರುಮಂ ಸೆಱೆವೊಯ್ದಪಂ (ಧರ್ಮಾಮೃ. ೨-೫೦); ಱಿ [ಪಾಠಾಂ. ಅ] ಕ್ಕಟಮೆ ನಿಂದಿಸದೊರ್ಮೆ ಪರಿಕಿಸುವುದು (ಪದ್ಮರಾ. ೮-೩೩). **ಱಿಕ್ಕಟ**$_1$: ''ಱಿಕ್ಕಟ ಬಿನ್ನನೆಯೆನೆ ಸುಮ್ಮನೆಂಬ ಪರಿ'' (ಕವಿಕಂ. ೧೩೧); ಘಟಕುಚೆಯುಗೆ ವಲ್ಲಭನುಂಗುಟದೊಳ್ ತನ್ನಕ್ಷಿಯುಗಳಮಂ ಕಂಡೊರ್ಬಳ್ ಜಟಿಮಿಾನ್ನಳಿಲ್ಲಿಗೇಕಕಟ ಱಿಕ್ಕಟ ಬಂದುವೆಂದು ನೋಡುತ್ತಿರ್ದಳ್ (ಧರ್ಮಾಮೃ. ೭-೨೧೯). [< ಱಿಕ್ಕಟ$_1$]

**ಱುಂಚೆ, ರಂಚೆ, ಱಿಂಚೆಯ, ಱುಂಜೆ** (ನಾ). ಒಂದು ಬಗೆಯ ಚರ್ಮವಾದ್ಯ: ಪೊಯ್ವಕ್ಕವ[...]ಳೆಯ ದನಿಯುಂ ಉದ್ದುವ ಱುಂಚೆ [ಪಾಠಾಂ. ಜೆ] ಯ [...]ಮುಂ ಬಾಜಿಪ ಜಿಂಕರಮ[...]ರವಳಿಯಂ ನೆರಪೆ (ಅರ್ಧನೇ. ೮-೭೫ ವ); ಱುಂಚೆ ಹತ್ತು ಬೀರಣಾವಜ ಹತ್ತು ಹತ್ತು ಡಮರು . . . ಇನಿತು ವಾದ್ಯಂಗಳ ವೃಂದ ಮೊಱೆವವು (ಕುರಾಸಾಂ. ೪೧-೭೭); ಗೋವಳರು ಬಾಜಿಪ ತಿತ್ತಿರಿಯ ಕೊಂಬುಗಳ . . . ಱುಂಚೆಯ ಎಕ್ಕಮೆದ್ದಳೆಯೂ ಒತ್ತರಿಪ ದನಿಗೇಳುತಾ ಪುರುಷೋತ್ತಮನು . . . ಬರುತ (ಸಾಳ್ವಭಾ. ೨೨-೫೮). **ರಂಚೆ:** ಚೀರಿದುವು ನಿಸ್ಸಾಳತತಿ; ಅಂಚೆ ಗಜಘಟೆ ಗಜರಿದುವು ರಂಚೆ (ಶ್ರೀರಾಮಾ. ೬೮೧-೮೭). **ಱಿಂಚೆಯ:** ಡೌಡೆ ಕುಕ್ಕುರು ತುಡುಮು ಱಿಂಚೆಯವಾ . . . ಕೇಳಿಸಿದರು (ಭರಚ. ೧೨-೪೦). **ಱುಂಜೆ:** ಱುಂಜೆಯ ದನಿ ದಿಕ್ಪಾಲರನಂಜಿಸೆ . . . ನಭಮಂ ಚೇವೊಡೆಯುಲಿವು ಸುತ್ತಿ ಮುತ್ತಿತ್ತಾಗಳ್ (ಪಂರಾಮಾ. ೪-೫೭); ಒತ್ತುವ ಕೋಡ ಕಾಳೆ ಕುಣಿವೋಜೆಗೆ ಬಾಜಿಪ ಱುಂಜೆ . . . ಮತ್ತೊತ್ತುವ ಗರ್ಜಿತಂ ಮೆಱೆವ ಬೆಟ್ಟದ ಬೇಡರ ಪಳ್ಳಿಪಳ್ಳಿಯೊಳ್ (ಸೂಕ್ತಿಸು. ೩-೨೦೧); ಕರಿಯ ಬೃಂಹಿತ ಹರಿ ಹೇಷಾರವ ಜೇಂಕರಣ ಬಾಜಿಸಿ ಱುಂಜೆಗಳ ಅರದ ಚೀತ್ಕೃತ ನುಡಿಸುವ ವಾದ್ಯಕಾ ಸಿಂಗ ಕೆರಳ್ದು ಮೇಲೆಯ್ತಂದುದಾಗ (ವರ್ಧಚ. ೪-೪೧); ಕೊಳಲು ತಪ್ಪಟೆ ಱುಂಜೆ ಚಿನ್ನಗಾಳೆಯು ಭೇರಿ . . . ಭೋರೆಂದು ಮೊಱೆಯೆ (ಜ್ಞಾನಚ. ೪-೪೮). [ದೇ. ॥ ತೆಲು. ರುಂಜೆ]

**ಱುಂಜೆ** 'ಱುಂಚೆ' ನೋ.

**ಱುಂಜೆಯುರ್ದು** (ಕ್ರಿ). 'ಱುಂಜೆ' ವಾದ್ಯವನ್ನು ಬಾರಿಸಿದಂತೆ ಬಾರಿಸು,— ಏಟು ಹಾಕು: ರಾಜಕುಮಾರರ್ ಪಲರುಂ . . . ಕಲ್ಮೆಲೆ ನಿಂದ ಮುನಿಯಂ ಕಂಡು ಮುನಿದು ಗುಂಡುಗಳಂ ಕೊಂಡಿಟ್ಟು ತಣಿಯದೆ ಕಲ್ಲುಗಳನಡಕಿ ತಂದೊಟ್ಟಿ ಕೊರಳ್ವರಂ ಪೂೞ್ದಿರ್ದಡದನೇಱಿ ತಲೆಯಂ ಱುಂಜೆಯುರ್ದಿ ಬಾಜಿಸಿ ಪಾಡುತ್ತಿರೆ (ಬಂಹರಿ. ೧೪-೨೫ ವ); ಆ ಪೊಟಲ ಪೊಲೆಯನೊರ್ವಂ . . . ಮಹರ್ಷಿಯಂ ಜೋಡಾಡಿ ಕಾಡಿ ಪೆಗಲನೇಱಿರ್ದು ತಲೆಯಂ ಱುಂಜೆಯುರ್ದುತ್ತುಂ ಬಾಜಿಸಿದೊಡೆ (ಜೀವಸಂ. ೧೪೪-೨೧ ವ).

[ಱುಂಜೆ (< ಱುಂಚೆ) + ಉರ್ದು$_1$]

**ಱುಂಜೆವಾರಿಸು** (ಕ್ರಿ). = ಱುಂಜೆಯುರ್ದು: ಅವಂದಿರ್ . . . ಆ ಮುನಿಯ ತಲೆಯನಂಜದೆ ಱುಂಜೆವಾರಿಸಿ [ಪಾಠಾಂ. ವಾಸಿ] ಪೋಪುದುಂ (ನೇಮಿಪು. ೧೪-೭೦ ವ); ಆ ತಪಸ್ವಿಯಂ ಕೈಗಲ್ಗಳಿಂದಿಟ್ಟು . . . ತಲೆಯೊಳ್ ತಳಂಗಳಿಂ ಱುಂಜೆವಾರಿಸಿ ಪೋಪುದುಂ (ಮಹಾನೇ. ೧೭-೩೭ ವ). [ಱುಂಜೆ (< ಱುಂಚೆ) + ಬಾರಿಸು$_1$]

**ಱೆಂಕೆ** 'ಎಱಂಕೆ' ನೋ.

**ಱೆಂಚೆ**$_1$ 'ಱಂಚೆ' ನೋ.

**ಱೆಂಚೆ**$_2$ (ನಾ). ಒಂದು ಬಗೆಯ ವಿಲಾಸಗೃಹ (?): ಮಾಡಮಂ ಪತ್ತಿ ಸುತ್ತಿಱಿದ ಕರಗದಡಪದ ಡವಕೆಯ ಮಡಿಯ ಪರಿಯಣದ ಬಾಣಸಿನ ಗುಣನೆಯ ಮಜ್ಜನದ ದೇಹಾರದ ಱೆಂ[ಪಾಠಾಂ. ರೆಂ]ಚೆಯ ಕೊಂಚೆಯದ . . . ಮಂಡವಿಗೆಯ ವಿಳಾಸ ನಿವಾಸಂಗಳಿಂದಂ (ಶಾಂತಿಪು. ೧೦-೧೪೭ ವ). [?]

**ಱೆಂಚೆಯ** 'ಱಂಚೆ' ನೋ.

**ಱೆಕ್ಕೆ** 'ಎಱಂಕೆ' ನೋ.

**ಱೆಪ್ಪು, ರಪ್ಪು** (ಕ್ರಿ). ೧. ಹೊಡೆ; ಬಡಿ: ''ಱೆಪ್ಪು- ಪ್ರಹರಣೇ'' (ಶಮಧಾ); ಮಱೆಯುಗೆ ಕಾವನುಂ ತಪ್ಪೆ ತಪ್ಪುವನುಂ ಮಗಳುದಡೆ ಱೆಪ್ಪುವನುಂ ಅದೆಂತು ಮೊಪ್ಪುವನುಂ (ಎಕ.VI, ತರೀಕೆ. ೬೧-೩೭; 1154?); ತಗುರ್ದಟ್ಟಿ ಱೆಪ್ಪುವ ಮಾಚೆಯನಾಯಕ (ಮೈಆರಿ. ೧೯೩೭, ೧೭-೨೯; 1196); ದೈತ್ಯರಂ ಱೆಪ್ಪಿ ಸೊಪ್ಪಿ ಸೋಏದ ಶ್ರೀರಾಮಂ ಬೇಳ್ವ ಜನ್ನದ ಹಸುವಂ ಕಳ್ಬಯ್ಯುಂ ಬಾೞ್ವೆನೆಂದು ಬಗೆವ ನೀನಾವೊಂ? (ರಾಮಾಶ್ವ.

೧೨-೨೦). **ರೆಪ್ಪು**: ೨. ಹಾಕು; ಎಸೆ: ಕಣ್ಣಾ ರೆಪ್ಪೆ ತೆರೆಯದಲಿರಲು ಹೇಲನು ರೆಪ್ಪುವರು ದೇಹಕ್ಕೆ ನೊಸಲಿಗೆ ಕಸವ ತೆಗತೆಗದು ಕುಪ್ಪಳಿಸುವರು (ಜ್ಞಾನಸಿಂ. ೪೨-೩೮).
[ದೇ. ‖ ತೆಲು. ಱೊಪ್ಪು; ಗೊಂಡಿ. ರೇಹ್]

**ಱೆಪ್ಪೆ, ರಪ್ಪೆ, ರೆಪ್ಪೆ$_1$** (ನಾ). ಕಣ್ಣಿನ ಎವೆ, — ಎಮೆ: ಱೆಪ್ಪೆಯಂ ತೆಗೆದೀಕ್ಷಿಪಂ ಕಣ್ಣಪ್ಪುವಂ ತೊಡೆವಂ ಬಿಡದೆ ಕಣ್ಣಪ್ಪದೇವನು (ಬಸಪು. ೧೮-೫೭); ಲೋಚನಯುಗಳಕ್ಕೆ ಹೊಗಸುತ್ತಿ ಱೆಪ್ಪೆ ಮುಚ್ಚಿದುವೇ (ಮೋಹತ. ೯-೧೪). **ರಪ್ಪೆ**: ರಪ್ಪೆ ಬಡಿಯದೆ ಒಂದೇ ಸಮನೆ ಅವಳನ್ನು ನೋಡಿದಳು (ರೂಢ). **ರೆಪ್ಪೆ$_1$**: ಥಳಥಳನೆ ಹೊಳೆಯುವುದನ್ನು ರೆಪ್ಪೆ ಮುಚ್ಚದೆ ನೋಡಲು ಧೈರ್ಯವಿರಬೇಕು (ಆರ್ಯಕ. ೮೪); ರೋಗಿಗೆ . . . ಮೇಲಿನ ರೆಪ್ಪೆಯನ್ನು ಸ್ವತಃ ಮೇಲಕ್ಕೆತ್ತಲಾಗುವುದಿಲ್ಲ (ಕೆಲರೋ. ೨೨); ಕಣ್ಣಿನ ಕಡೆ ಕೈಬೀಸಿದಾಗ ತಕ್ಷಣ ರೆಪ್ಪೆಗಳು ಮುಚ್ಚಿಕೊಳ್ಳುತ್ತವೆ (ಶಿಕ್ಷದ. ೭೩). [ದೇ. ‖ ತಮಿ. ರೆಪ್ಪೈ, ರಪ್ಪೈ, ಇರಪ್ಪೈ; ತುಳು. ರೆಪ್ಪೆ, ರಂಪೆ; ತೆಲು. ಱೆಪ್ಪ, ರೆಪ್ಪ; ಕುವಿ. ರೆಪ್ಪ]

**ಱೊಂಕಿಡು** 'ಱೌಂಕಿಡು' ನೋ.

**ಱೊಂಕು** 'ಱೌಂಕು' ನೋ.

**ಱೊಂಪೆ, ಱೊಬ್ಬೆ$_2$** (ನಾ). ೧. ಕೆಸರು; ರಾಡಿ: ಕಾಮಸಂಗಮಂ ಬಿಟ್ಟು ಕ್ರೋಧಕಂಬದ ಕೆಚ್ಚ ಮುಱಿದು ಲೋಭಱೊಂಪೆಯ ಕೆದಱಿ ಮೋಹದ ಮುಳ್ಳಿನ ಮನೆಯ ಮೆಟ್ಟಿ (ಗಣಭಾ. ೩೪೦-೭); ಗುಡುಬೆ ಕಾಳವ್ವೆ ಕಪಿಲೇಶ್ವರನನೊರ್ವ ತಾಪಸಿಯಾ ದಿನಂ ಒಗುಮಿಗೆಯ ಹಾಲ ಮಜ್ಜನಗೆಯ್ಯೆ ಸೂಸಿ ಬೀದಿಗಳಲ್ಲಿ ಪರಿದು ಜೌಗೇಱಿಯಾ ಱೊಂಪೆಯೊಳಗಗಣಿತಮಹಿಮ ಬಸವಯಿಂದು ಬೀಳಲ್ (ಪಾಸೋಪು. ೪-೧೭). **ಱೊಬ್ಬೆ$_2$**: ೨. ಹೊಲಸು: ಸೋಱುವ ಜೊಲ್ಲೊಸರರ್ಬಿಯ ಮೊದಲಾಗೆ, ಱೊಬ್ಬೆಯ ನೀಟದ ತಳರ್ನಾಲಗೆ ಕೀಟಿಲಾಗೆ . . . ಪೇರೊಡಲ ಗೋರರೂಪಿನ ದಾನವಂ . . . ಬೊಬ್ಬಿಱಿದು (ರಾಮಾಶ್ವ. ೧೧೧-೨೯). [<— ತೆಲು. ರೊಂಪಿ]

**ಱೊಜ್ಜು** 'ಱಚ್ಚೆ' ನೋ.

**ಱೊಟ್ಟ** (ನಾ). ಒಬ್ಬಾತನ ಹೆಸರು (?): ಮಹಾಸಾಮನ್ತ ಬಿರುದರ ಱೊಟ್ಟ ಬಿರುದರ ಮೈಕುತ್ತಿ ಶ್ರೀಮತ್ ಬಿಜ್ಜ . . . ಆಳುತ್ತಿರೆ (ಸೌಇಇ. IX, - i, ೫೭-೬; ಸು. 922); ಒಡ್ಡವಡಱ್ಗಲ ಅಮೃತ ಅಜವರ್ಮ್ಮ ಱೊಟ್ಟ ಭುವಣ್ಣ ಅಜವರ್ಮ್ಮ ಊರ್ಗ್ಗೆ ಪಡೆದೊರ್ (ಸೌಇಇ. IX-i, ೬೪-೧೦; 944).

[IP ಇದು 'ಱಟ್ಟ' ಶಬ್ದಕ್ಕೆ ಸಂಬಂಧಿಸಿರಬಹುದೇ?]

**ಱೊಟ್ಟಯ್ಯ** (ನಾ). ಒಬ್ಬಾತನ ಹೆಸರು: ನುಡಿದನ್ತೆ ಗಣ್ಡ ಕೃತಯುಗಗಳ್ಳಂ ಶ್ರೀಮತ್ ಱೊಟ್ಟಯ್ಯಂ (ಸೌಇಇ. IX-i, ೬೬-೭; ಸು. 956). [ಱೊಟ್ಟ + ಅಯ್ಯ$_1$]

**ಱೊಟ್ಟು** (ನಾ). ರಭಸ; ಜೋರು; ವೇಗ: 'ಱೊಟ್ಟುವಾಯ್' ಪರಾ.

[< ಒಱಂಟು]

**ಱೊಟ್ಟುವಾಯ್** (ಕ್ರಿ). ರಭಸದಿಂದ ಹಾಯು; ಜೋರಿನಿಂದ ಮುನ್ನುಗ್ಗು: ಮುಳಿದಿದಿರಾದುದಾದೊಡಿದಿರಂ ಮುಳಿಸಿಂದಮನನ್ತಪಾಳನಾಗಳೆ . . . ತಱುಂಪುಗುಮಾಗಳೆ ಱೊಟ್ಟುವಾಯ್ಗುಮಾಗಳೆ ಪಡೆ ಪೊಯ್ಗುಮಾಗಳೆ ಪೊರಳ್ಚುಗುಮಾಗಳೆ ಕೊಂದು ಕೂಗುಗು (ಸೌಇಇ. XI-ii, ೧೪೫-೭; 1099). [ಱೊಟ್ಟು + ಪಾಯ್$_1$]

**ಱೊಪ್ಪ, ರೊಪ್ಪ, ಱೊಪ್ಪು$_2$** (ನಾ). ೧. ಪ್ರಾಣಿಗಳು ಇರುವ ನೆಲೆ; ಹಕ್ಕೆ: ಕುಪ್ಪಳಿಸಿ ತುಱುಗಿ ಪರ್ವಿದ ಱೊಪ್ಪವನಿರದಂಡುಗೊಂಡು ಪಂದಿಯ ಬಳಿಯೊಳ್ ನೊಪ್ಪು ನೆಗೆದುರ್ಬಿ ಪಾಯುತೆ ಚಪ್ಪರಿಸುತ್ತುಗಿದು ಬಗಿದು ತೆಗೆದುವು ನಾಯ್ಗಳ್ (ಗಿರಿಕ. ೧-೧೦೩); ಹಳ್ಳದೊತ್ತಿನ ಹೊದಱ ಹೊಸಮೆಳೆಯ ಱೊಪ್ಪದಿಂ . . . ಎಕ್ಕಲಂ ಬೀದಿವರಿದುದು ಬೇಂಟೆಕಾಱರೊಳಗೆ (ಹಚಕಾ. ೬-೧೧); ಪೆರ್ಬುಲಿ ಱೊಪ್ಪವನೊತ್ತಿಗೊಂಡವಲ್ಲಲ್ಲಿ ಮೃಗಂಗಳುಂ ಮಿಡುಕುಗೆಟ್ಟಿರುತಿರ್ದುದು ಕೂಡೆ ಬೇಂಟೆಯೊಳ್ (ಸೂಕ್ತಿಸು. ೩-೧೧೭). ೨. ಗಲಭೆ: "ಱೊಪ್ಪಂ = ಗಲಭೆ" (ಶಮದ. ಸ.೪೬ ವೃತ್ತಿ). **ರೊಪ್ಪ**: ೩. ಕುರಿ, ಹಂದಿ ಮುಂತಾದುವುಗಳನ್ನು ಕೂಡುವ ಜಾಗ; ದೊಡ್ಡಿ: ಬಂದರೆ ನುಡಿಸದೆ ರೊಪ್ಪದ ಹಂದಿಯವೋಲಿಪ್ಪರೆಡೆಗೆ ಪೋಗದೆ ವಿನಯಂಗುಂದದೆ ಸಜ್ಜನರೆಡೆಗಾನಂದದಿ ಪೋಗುವದು ತಿಳಿದು ಬುಧಜನರೊಲವಿಂ (ನೀತಿಸಾ. ೧೪೭); ಕುರಿಗಳೆಲ್ಲಾ ರೊಪ್ಪದಲ್ಲಿ, ದನಗಳೆಲ್ಲಾ ತೊಟ್ಟಿಯಲ್ಲಿ, ಜನಗಳೆಲ್ಲಾ ಹಟ್ಟಿಯಲ್ಲಿ ಬಳಲಿ ಕೆಡೆದರು ತೆಪ್ಪಗೆ (ಇಂಗೀತ. ೫೨-೧); ಮೇಯುವ ತುರುಗಳು ಬಾಲವನೆತ್ತಿ ರೊಪ್ಪಕೆ ಭರದಲಿ ಹಾರುವುವು (ಕದಕೆ.೬-೪). ೪. "ದನ ಕುರಿಗಳ ಕೊಟ್ಟಿಗೆಯ ಬಳಿ ಕಾವಲ ಜನ ಹಾಕಿಕೊಂಡ ಕೆಲವು ಮನೆಗಳ ಗುಂಪು" (ನಮ್ಮನು. ೨೪೧): ಮೂರುಜನ ನಾಯಕರೂ ಬಿಳಿಚೋಡಿಗೆ ಬಂದು ರೊಪ್ಪ ಹಾಕಿಕೊಂಡು ಮೂರು ತಿಂಗಳು ಇದ್ದರು (ಚಿತ್ರಪಾ. ೪). **ಱೊಪ್ಪು$_2$**: ೧. 'ಱೊಪ್ಪುಗೊಳ್' ಪರಾ.

**ಱೊಪ್ಪಂಗೊಳ್, ಱೊಪ್ಪುಗೊಳ್** (ಕ್ರಿ). ಆಶ್ರಯಹೊಂದು; ನೆಲಸು: ಬಸಿಱ ಕುತ್ತದಂತೆ ನಮೆಯಿಸುವುದು ಪಂದಿಯಂತೆ ಱೊಪ್ಪಂಗೊಳ್ಳುದು . . . ಬಗೆವಂದೀ ಶರೀರಂ ಕಷ್ಟಂ (ಧರ್ಮಾಮೃ. ೪-೧೭೫). **ಱೊಪ್ಪುಗೊಳ್**: ಮೂರ್ತ್ತಿಗೊಂಡುದು ಸಿರಿ [ಱೊಪ್ಪು] ಗೊಂಡುದು ನಯಂ (ಸೌಇಇ. XV, ೨೦೭-೧೪; 1205); ಅಟ್ಟಿ ಕುನುಂಗಿ ಪೊಂಗಿ ಮೆಳೆಯಂ ಸಂರಂಭದಿಂ ಱೊಪ್ಪುಗೊಂಡಿರುತಂ ಗರ್ಜಿಸಿ ಬಾಡೆಗುಟ್ಟಿದುದು . . . ಸೂಕರಂ (ಪುಷ್ಪಪು. ೫-೭೪). [ಱೊಪ್ಪ + ಕೊಳ್$_1$]

**ಱೊಪ್ಪವಿಡಿ** (ಕ್ರಿ).= ಱೊಪ್ಪಂಗೊಳ್: ದರಿಗೆಡಹು ಕರಿಯಂ ಱೊಪ್ಪವಿಡಿದ ಹಂದಿಗೆ ತಡವಿ ಬಿಡು ನಾಯನು . . . ಎಂಬ ಬೇಡರ ಬೊಬ್ಬೆಯಿಂದಡವಿ ಘೀಳಿಟ್ಟುದು (ಹಚಕಾ.೫-೨೩). [ಱೊಪ್ಪ + ಪಿಡಿ$_1$]

**ಱೊಪ್ಪು$_1$** (ಕ್ರಿ). ಗುರುಗುಟ್ಟು; ಗರ್ಜಿಸು: ಮಲೆವ ಮುರಳ್ವ ಱೊಪ್ಪುವ ಮಲಂಗುವ ಪೊಂಗುವ ತಳ್ತು ಪಾಯ್ವ . . . ಧರಿತ್ರಿಯಂ ಟೋಣೆವ ಸೂಕರನಾಟಮದೇನಳುಂಬಮೋ (ಶಬಶಂ. ೪-೧೨). [ದೇ. ‖ ತಮಿ. ಉಱುಮ್ಮು, ಉಱುಮು; ಮಲ. ಉಱುಮ್ಮು; ತೆಲು. ಱೊಪ್ಪು, ರೊಪ್ಪು; ಕುಯಿ. ರೂಂಬ]

**ಱೊಪ್ಪು$_2$** 'ಱೊಪ್ಪ' ನೋ.

**ಱೊಪ್ಪುಗೊಳ್** 'ಱೊಪ್ಪಂಗೊಳ್' ನೋ.

**ಱೊಬ್ಬು, ರಬ್ಬು, ಱಪ್ಪು, ಱೊಬ್ಬೆ$_1$** (ನಾ). ೧. ಹಳುಕು; ಚೂರು: ಕರ್ಪೂರ ರಜದೊಳ್ ಪೊರೆದ ಹಿಮದ ಱೊಬ್ಬುಗಳೊಳಮುರದೊಳಿಕ್ಕಿದಾಲಿಗೋಡುವ ಹಾರಂಗಳೊಳಂ . . . ಜಲಮಂಟಪಂಗಳೊಳಮೆಂತುಮಾ ಸಂತಾಪಮಂ ಸಂತಯಿಸಲಾಱದೆ (ಕಾದಂಉ. ೭೭೩); ಕಪ್ಪುರದ ಱೊಬ್ಬಿನೊಳುರ್ವಿದ ಜಗತಿಯೊಳಸುಕೆಯ ಪೊಸದಳಿರ ಪಾಸಿನೊಳ್ ಪಸರಿಸಿದ ಕುಸುಮಸಂಚಯದೊಳ್ (ಸುರಾ) ಸುರೇಂದ್ರವಂದ್ಯನನಿರಿಸಿ (ನೇಮಿಪು. ೧೩-೨೦ ವ); ಘನಸಾರದ ಱೊಬ್ಬಿನ ಮೃಗಜನಿತದ ಘುಟಿಕೆಗಳ ಪುಷ್ಪದಾಮಂಗಳ ಬಾಯಿನಮಂ . . . ಇತ್ತು ಸಂಭ್ರಮದಿಂದಂ (ಮಹಾನೇ. ೧೪-೬೬). ೨. ಪ್ರಕಾಶ; ಕಾಂತಿ: ಱೊಬ್ಬಿನ ಸೊಡರಿಂ ಚರುವಿಂ ಚಿಬ್ಬಂಬೊಯ್ದಲೆಯಿನಲರಿನಕ್ಷತೆಯಿಂ . . . ಜಿನರನರ್ಚಿಸೆ ನಿಬ್ಬರಮಾಗಿರ್ದ ನರಕಗತಿಯೊಳ್ ಬೀೞಂ (ಜಿನಾಲ. ೩೭); ಱೊಬ್ಬಿನ ಸೊಡರ್ಗುಡಿಯಿಂ ಕಾಳಾಗರುವಿನ ಧೂಪದ ಕರ್ಬೊಗೆಯಿನೆಸೆವ ದಿವ್ಯಶಯನಗೃಹದ ವೈಡೂರ್ಯಪರ್ಯಂಕದೊಳ್ ಪವಡಿಸಿರ್ದು (ಅಜಿಪು. ೩-೧೧ ವ). ೩. (ಅಲಂ) ಪರಾಕ್ರಮ; ಶೌರ್ಯ: ಱೊಬ್ಬಿನ ದನುಜನ ಬಿಲ್ಲಂ ತಿಬ್ಬಂ ಮುಱಿದಸುವನಂತಕಂಗಿತ್ತು ಸುರರ್ಗುಬ್ಬನೆಸಗಿದನುದಾರಂ (ಕವಿಚ. III, ೨೬೮, ಪರ್ಯಕ್ಷರಮಾಲೆ). **ರಬ್ಬು**: ೪. ಆಡಂಬರ; ವೈಭವ: ರಬ್ಬಿಲಿ ಬಂದನು ನೋಡುವೆನೆನುತಲಿ ರವಿ ಶಶಿನೇತ್ರ ಸಮೀಪದಲಿ (ಚಿದಾವ. ೧೧೦-೭); ಪೋಷಾಕಿನ ರಬ್ಬು ಮನಸ್ಸನ್ನು ಆವರಿಸಿದ್ದ ಮಬ್ಬಿಗೆ ಮದ್ದಾಗಲು ಸಾಧ್ಯವೇ? (ದಾಕೂಟ. ೭೩). **ಱಪ್ಪು**: ೧. ಸುಳಿದವಾರತಿ ಕರ್ಪೂರದ ಪ್ರಜ್ವಲಿಪ ಮಾಣಿಕದೀಪ್ತಿಗಳ ಪಸ್ರುಗಳವೆಗೂಳಿನ ಬಳುವೆಗಳ ಱ[ಪಾಠಾಂ. ಲು]ಪ್ಪುಗಳ ಸೂಸಿಕೆಯ ಕಳಕಳದೊಳೊಪ್ಪಿದುದು (ತೊರರಾ. ೬-೫೫-೧೭). **ಱೊಬ್ಬೆ$_1$**: ೧. "ಱೊಬ್ಬೆ (ಱಣಬ್ಬೆ)- ಹಟಕು" (ಶಮದ. ಪರಿ.೨); "ಱೊಬ್ಬೆಯೆನಲ್ ಹಳುಕು" (ಕಬ್ಬಕ್ಕೆ. ೯೦). ೨. "ಹಳುಕು ಱೊಬ್ಬೆಯೆನಲ್ಕದು ತಾಂ ಪ್ರಕಾಶದೊಳ್" (ಕರ್ಣಾನಿ. ೨೨).

ರಬ್ಬುರಬ್ಬು (ದ್ವಿರುಕ್ತಿ): ಅಲ್ಲಿಯ ಮಾತಿನ ಶಕ್ತಿಗಾಗಿ, ಚಿತ್ರಗಳ ರಬ್ಬು ರಬ್ಬು ಬಣ್ಣಕ್ಕಾಗಿ, ಲಯಕ್ಕಾಗಿ ಕವಿತೆಗಳನ್ನೇನೊ ಮೆಚ್ಚುತ್ತೇವೆ (ಸುವರ್ಣ. ೧೯೨).

**ಱೊಬ್ಬೆ$_1$** 'ಱೊಬ್ಬು' ನೋ.

**ಱೊಬ್ಬೆ$_2$** 'ಱೊಂಪೆ' ನೋ.

**ಜೋಂಕಿಡು** 'ಜೌಂಕಿಡು' ನೋ.

**ಜೋಂಕು** 'ಜೌಂಕು' ನೋ.

**ಜೋಡಗ, ರೋಡಿಗ, ರೋಡೆಗ, ಜೋಡೆಗ** (ನಾ). ೧. ಪರಿಹಾಸಕ; ವಿದೂಷಕ: ಕೋಡಗಂಗಳೆ ಜೋಡಗವಾEರಾತೆಗೆ ಹರಿಣಂಗಳೆ ಹರಿಕಾಱರಾಗೆ ಪರ್ವತಂಗಳೆ ಪ್ರತಿಗಜಂಗಳಾಗುರುಳೆ ನೂಂಕಿಯುಂ ಸುರುಳಿ ನೂಂಕಿಯುಂ . . . ಅಳವಡಿಸಿದ ರಾಜಪುತ್ರನ ಬಲ್ಪಿಂಗಂ ಬಿನ್ನಣಕಂ ಬೆಕ್ಕಸಂಬಟ್ಟು (ಅರ್ಥನೇ. ೫-೧೧೩ ವ); ಪಟಗಬ್ಬಿಗರ್ನುಡಿದ ಮಾತನೆ ಪಲ್ಲಟವಿಟ್ಟು ಕಟ್ಟುವಂ ಕವಿಗಳ ವೇಷದಿಂದೆ ಕುಣಿದೇಡಿಪ ಜೋಡಗನೆಂದು ನಕ್ಕಪೆಂ (ಅನಂಪು. ೧-೪೭). ೨. ದಡ್ಡ; ಅವಿವೇಕಿ; ಮೂರ್ಖ: ವಿರಹಿಯೆಂಬ ಜೋಡಗಂಗವುಗುರ್ವಿನವುಗುರ್ವಪ್ಪನಂಗವಾತಂಗದ ದೆವಸ ಮಿದೆಂದಪೂರ್ವೋಕ್ತಿಯಂ ನುಡಿವುತ್ತುಂ ಪೋಗಿ (ಶಾಂತಿಪು. ೮-೪೯ ವ); ಕೋಡಗದೆರ್ದೆ ಮರ್ದೆಂದಲೆ ಜೋಡಗ ನೀನೆನಗೆ ಪೇಟ್ದಿಯಾಗಳೆ ದೆಸೆಗೆಟ್ಟೋಡಿತ್ತೆನ್ನೆರ್ದೆಯುಂ ನೀಂ ಮಾಡ್ದ ನಿನ್ನೆರ್ದೆಯನೆನ್ನ ತಂಗಿಗೆ ಮರ್ದಂ (ಪಂಚತಂ. ೨೮೧-೧೭); ಕೂಡಿರಿಸಿ ಮರ್ದನೆಲ್ಲವ ಬೇಡಿದ ಪದದೊಳಗಮೊಲಿದು ಕುಡು ಹಯಕುಲಕಂ ಜೋಡಗನಕ್ಕಲ್ಲದೊಡಂ ಕಾಡೊಳ್ ತಿರಿತಿಂಬೆನೆಂಬ ಹೆಡ್ಡನ ತೆಱದಿಂ (ಅಶ್ವಶಾ. ೧೦-೧೦). ೩. ನಾಚಿಕೆಗೆಟ್ಟವನು; ಲಜ್ಜೆಗೇಡಿ: ಬಡಿದೊಡೆ ನೀರೇಱುವನೊದೆದೊಡೆ ನಲಿವಂ ಪೊಯ್ದೊಡೊಂದು ರೂಪಪ್ಪಂ ನಾಣ್ಗೆಡೆ ನುಡಿಯೆ ರಾಗಿಯಕ್ಕುಂ ಕಡುಜೋಡಗನಬ್ಬೆ ಗಂಡರೊಳ್ ಕವಿಕಾಮಂ (ಶೃಂಗಾರ.೩-೧೭). **ರೋಡಿಗ:** ೩. ಹೇಡಿಗಳು ಬರಿಹೇವಮಾರಿಗಳು ಬಿರಿಸಾದ ರೋಡಿ [ಪಾಠಾಂ. ಡು]ಗರು ನಿಮ್ಮ ಸೇನೆಯೊಳಿರ್ದ ಭಟರು (ತುರಂಗ. ೭೩-೧೩). **ರೋಡೆಗ:** ೪. ವಿಕಾರವಾದ ದೇಹವುಳ್ಳವನು: ಪುರುಷಂ ಪೆಣ್ ಮುದುಗಣ್ತನಂ ಶಿಶುತೆಯೇರುಂಜವ್ವನಂ ಪಾಪಿ ಸಚ್ಚರಿತಾತ್ಮಂ ಧನಿ ದೀನ ರೋಡೆಗ ಶುಭಾಂಗಂ ಬಿತ್ತಗಂ ಪಾಮರಂ (ಸಂಸಪ. ೪೪-೮೧). **ಜೋಡೆಗ:** ೪. ''ಜೋಡೆಗಂ ವಿಕೃತದೇಹಿಯೊಳಂ''(ಕರ್ಣಾನಿ.೯೩); ಜನಕರಾಜಂ. . .ವೇಸಿಕೆಯ ಜೋಡೆಗರ ಪಾಪಾತ್ಮರ ಬಾಟ್ಟನೆಯೆನಿಪ್ಪ ಯಮಲೋಕಮಂ ಮುಟ್ಟಯಿಸಿ ಬರ್ಪುದುಂ (ರಾಮಾಶ್ವ. ೧೦೫-೨೭). [< ಜೋಡು + - ಗ₂]

**ಜೋಡಗತನ** (ನಾ). ಪರಿಹಾಸ್ಯ: 'ಜೋಡಗತನಂಗೆಯ್' ಪರಾ.

[ಜೋಡಗ + - ತನ]

**ಜೋಡಗತನಂಗೆಯ್** (ಕ್ರಿ). ಪರಿಹಾಸ್ಯ ಮಾಡು; ಅಪಹಾಸ್ಯ ಮಾಡು: ಏಂ ಗಡ ಭಾವಾ ನೀನಿದೇಂ ನಿಂದಿಲ್ಲಿ ಜೋಡಗತನಂಗೆಯ್ದಾಡುತ್ತಿರ್ಪೆ ಅತ್ತ ನಿನ್ನ ತಂಗಿಗವಸ್ಥೆ ಪಿರಿದು (ಪಂಚತಂ. ೨೮೧-೧೧). [ಜೋಡಗತನ + ಕೆಯ್₁]

**ಜೋಡಗವಂತ** (ನಾ). ನಾಚಿಕೆಯಿಲ್ಲದವನು; ಲಜ್ಜೆಗೇಡಿ: ಜೋಡಗವಂತನಂತೆ ಕಂಡ ಕಂಡವರಲ್ಲಿ ಹಿಂಡಿನೊಳಗೆ ಹೊಕ್ಕು ಭಂಡುಗೆಲೆಯಲೇತಕ್ಕೋ (ಮೋಳಿಮಾ. ಕ. ೬೧೭-೩೮೭); ಕಾಡಿ ಬೇಡಿ ಉಂಬರೆಲ್ಲರೂ ಜಗದ ಜೋಡಗವಂತರು (ಗುಪ್ತಮಂ. ೧೩).

[ಜೋಡಗ + - ವಂತ]

**ಜೋಡಾಡಿಸು, ರೋಡಾಡಿಸು** (ಕ್ರಿ). ಅಪಹಾಸ್ಯಮಾಡು; ಹೀಯಾಳಿಸು: ಸಿಂಹಮಂ ನಾಯ್ ಕೆಣಕಿತೆಂಬ ಶರಭನನೆರಲೆ ಜೋಡಾಡಿಸಿತೆಂಬ ಮಾತಿನಂತೆ ಬಟ್ಟೆವೋಪ ತಿರಿಕನೊರ್ವಂ . . . ಗಂಡಿಂಗಾನೆ ಪಿರಿಯನೆಂದಿರ್ದಪಂ (ಧರ್ಮಾಮೃ. ೧೩-೧೨೨); ವನಜಭವಲೋಕವುಂ ಕಂಡೆವಲ್ಲಿಯು ಪುಣ್ಯಜನರೆಮ್ಮನೆತ್ತಣ ವಿಕಾರಿಗಳ್ಳೀವೆಂದು ನಗುತೆ ಜೋಡಾಡಿಸಿದರು (ಜೈಮಿಭಾ. ೩೨-೪೨). **ರೋಡಾಡಿಸು:** ನರನಿಂದಂ ಘನಶೌರ್ಯನಂಗಭವನಂ ರೋಡಾಡಿಪಂ ರೂಪಿನಿಂ ಪಿರಿಯಾಳ್ . . . ಕಲಿಗಜ್ಜನ್ (ಎಕ. XII, ತುಮಕೂ.೯-೩೪; 1151); ಕರಿಪತಿ ಕಪಿಲೇಶ್ವರನನ್ನು ರೋಡಾಡಿಸಿ, ತಾರಾಡಿಸಿ, ಬಂದ ದಾರಿಗೆ ಸುಂಕವಿಲ್ಲದ ಹಾಗೆ ಹಿಮ್ಮೆಟ್ಟುವಂತೆ ರಾಮು ಕಾದಾಡಿದನು (ನಂಜುಂಡ. ೪೫). [ಜೋಡಾಡು + - ಇಸು₃]

**ಜೋಡಾಡು, ರೋಡಾಡು** (ಕ್ರಿ). ಹೀಯಾಳಿಸು; ಅಪಹಾಸ್ಯಮಾಡು: ''ಜೋಡಾಡು -ವಿಕೃತಾಂಗಾಪಹಸನೇ (ಮುಖವಿಕಾರ ಮೊದಲಾದುವುಗಳಿಂದ ಹಿಯ್ಯಾಳಿಸು)'' (ಶಮಧಾ); ನಿನ್ನೊಡನೆನಗೇಗೆಟ್ಟಪುದಿದೆಂದು ಜೋಡಾಡಲ್ ಕೆಮ್ಮನೆ ನುಡಿದೊಡೆನ್ನ ಕಣ್ಗಂ ಮನಕ್ಕೆವಂದಿರ್ದ ನಿನ್ನೊಳೆನಗೆರಡುಂಟೇ (ಪಂಪಭಾ. ೮-೭೮); ಒಂದು ಸಿಂಹಂ . . . ನಿಮ್ಮಡಿಯನನೇಕಪ್ರಕಾರದಿಂ ಜೋಡಾಡಿ ಬಯ್ಯುತೆನ್ನಂ ಬರಲೀಯದೆ ಕಾಡುತ್ತಿರ್ದ ಕಾರಣದಿನಿನ್ನೆಗಂ ತಡೆದೆಂ (ಪಂಚತಂ. ೯೦-೯); ಎಳಲತೆಯಂ ಜೋಡಾಡುವ ನಳಿತೋಳ್ (ಗಿರಿಕ.೯-೧೦೪); ಜೋಡಾಡಿ ಹೋದಿರಿ ನಿನ್ನೆ ನೀವಿಂದೇನ ಮಾಡಬೇಕೆಂದೆಣಿಸಿದಿರಿ ನೋಡ ಬಂದಿರೊ ಕಾಡ ಬಂದಿರೊ ಹೇಳಿರಿ (ಭರಚ. ೪೨-೧೫). **ರೋಡಾಡು:** ಧಿಕ್ಕರಿಸಿ ಕೆಣಕಿ ರೋಡಾಡಿ ಹಗರಣವಡಿಸುತ್ತಿದ್ದುದನ್ನು ಶ್ರೀಮನ್ತರು ಕಂಡು (ಚಟ್ಟಅ. ೧೪-೧೫); ಮಾತೆಲ್ಲಮಂ ಬರೆದು ಅರದ ಪೊಸನೇಣ್ಗಳಿಗೆ ಪೊಸೆಯಿಾಯದವರಿರವ ರೋಡಾಡುತಿಹುದು (ಕಾಲೂರ. ೨೮-೧೮).

[ಜೋಡು + ಆಡು₁]

**ಜೋಡಿಸು, ರೋಡಿಸು** (ಕ್ರಿ). = ಜೋಡಾಡು: ಅಂತುಪೊರುವಾಯ್ದುಂ ಕುಂಬಕಂಬಾಯ್ದುವೇಡಿಸಿಯುಂ ಜೋಡಿಸಿಯುಂ ಏಟಿಸಿಯುಂ ಬಂದಾಡಿಯುಂ ಮಿಡುಕಾಡಿಯುಂ ಪಾಱುಗೆಡೆವ ಕಾಳ ಮಹಾಕಾಳರ ಗೆಡವೊಕ್ಕಿರೆ (ಶಾಂತಿಪು. ೯-೮೦ ವ); ರಾಜ್ಯಾರ್ಧಮನಾಂ ಬೇಡಿಯವರಲ್ಲಿಗಟ್ಟಿದೊಡೇಡಿಸಿ ಜೋಡಿಸನೆ ಪವನನಂದನನೆನ್ನಂ (ಗದಾಯು. ೫-೫೦); ಓಡಿಸಿದಾತನೀತನಿದಿರಾದ ವಿರೋಧಿಗಳಂ ವಿಲಾಸದಿಂ ಜೋಡಿಸಿದಾತನೀತನಸಮಾಯುಧನಂ (ಪಂರಾಮಾ. ೩-೬೧); ಮೇಳದೊಡನಾಡಿಗಳೆನ್ನ ಮರುಳ್ತನಕ್ಕೆ ಜೋಡಿಸಿ ನಗುವಂತುಟಾದುದು ಮನಃಪ್ರಿಯ ನೀಂ ಮುನಿದಿರ್ದ ದೂಸಱಿಂ (ರಸರ. ೨-೭೭). **ರೋಡಿಸು:** ಎಸೆವೆನ್ನುನ್ನತಿ ನಿನ್ನುದುಂಟೆ ಪುದಿದೆನ್ನೀ ಸೌಧಶುಂಭತ್ಪ್ರಭಾಪ್ರಸರಶ್ರೀ ನಿನಗುಂಟೆ ಚೆಲ್ವು ನಿನಗೆನ್ನಂತುಂಟೆ ಪೇಳೆಂದು ರೋಡಿಸಿ ರೌಪ್ಯಾಚಳಕೂಟಮಂ . . .ಆಗಡುಂ ನಗುವವೋಲಿರ್ಕ್ಕುಂ ತದೀಶಾಲಯಮ್ (ಎಇ. XII, ೨೮೨-೧೯೧; 1077); ಇಂಧ್ರುವರೆಗೀ ತ್ರಿಶೂಲಮಂ ವ್ಯರ್ಥಂಗೈದ ಸಮರ್ಥರಂ ಕಂಡರಿಯೆನಾಂ . . . ಗೆಲ್ದುದು ಕುಬೇರನಂ ಯಮನನೋಡಿಸಿತಮರರಾಜನಂ ರೋಡಿಸಿತು ಬರ್ದಿಲನಾಡಿನ ಪಸಲೆಯಲಿ ಮೂರು ಸೂಳಟ್ಟೆ (ಶ್ರೀರಾಮಾ. ೮೦೭-೧೭೨).

[ಜೋಡು + - ಇಸು₃]

**ಜೋಡು** (ಕ್ರಿ). ಅಪಹಾಸ್ಯಮಾಡು; ಅವಹೇಳನಮಾಡು: 'ಜೋಡಾಡು' ಪರಾ. [< ಪ್ರಾ. ರೋಡ]

**ಜೋಡೆಗ** 'ಜೋಡಗ' ನೋ.

**ಜೌಂಕಿಡು, ಜೊಂಕಿಡು, ಜೋಂಕಿಡು** (ಕ್ರಿ). ಗುಟುರು ಹಾಕು; ಡುರುಕಿಡು: ಕೋಡಂ ಜಡಿದು ತನುವ ಝಾಡಿಸಿ ಹಿಂಡ ಬಿಟ್ಟು ಜೌಂ[ಪಾಠಾಂ. ಜೊಂಯ]ಕಿಟ್ಟು ಹರಿಯಿತ್ತು ಕಾನನದೊಳು (ಹಚಕಾ. ೫-೪೦). **ಜೊಂಕಿಡು:** ಅದಿರದಿದಿರಾಂತು ಜೊಂಕಿಟ್ಟೊದಱುತ್ತುಂ ಬರ್ಪ ಕಾಡ ಕೋಣನ ಗೋಣಂ ಮದಯುತನೊರ್ವಂ ತಱಿದಿಕ್ಕಿದಂ (ಶಬಶಂ. ೩-೫೭). **ಜೋಂಕಿಡು:** ದಿಟ್ಟಿಸುವ ಕಣ್ ನಟ್ಟ ಕಿವಿ ಮರಳ್ದ ಮುಸುಡು . . . ಕೋಡಂ ಜಡಿದು ತನುವ ಝಾಡಿಸಿ ಹಿಂಡ ಬಿಟ್ಟು ಜೋಂಕಿಟ್ಟು ಹರಿಯಿತ್ತು ಕಾನನದೊಳು (ಆಸಪು.೩-೨೮); (ಸೋಮಚ. ಪರಿ.೨೧೪ ನೋ).

[ಜೌಂಕು + ಇಡು₁]

**ಜೌಂಕು, ರಂಕೆ, ರೊಂಕೆ, ರೋಂಕು, ಜೊಂಕು, ಜೋಂಕು** (ನಾ). ೧. ಗೂಳಿ, ಕೋಣ ಮೊದಲಾದ ಪ್ರಾಣಿಗಳ ಗುಟುರು,—ಡುರುಕು: 'ಜೌಂಕಿಡು' ಪರಾ. **ರಂಕೆ :** (೬). **ರೊಂಕೆ :** (ಪ್ರಭಣ್ಣ). **ರೋಂಕು:** ೨. ಆರ್ಭಟ; ಗರ್ಜನೆ: 'ರೋಂಕಿಸು' ಪರಾ. **ಜೊಂಕು:** ೧ 'ಜೊಂಕಿಡು' ಪರಾ. **ಜೋಂಕು:** ೧. 'ಜೋಂಕಿಡು' ಪರಾ. [ದೇ. ‖ ತೆಲು. ಱಂಕೆ, ರಂಕೆ]

✷